THE

# HOLY BIBLE

CONTAINING

## THE OLD AND NEW TESTAMENTS

**TRANSLATED INTO KANARESE OUT OF THE ORIGINAL TONGUES**





PRINTED FOR THE
BRITISH AND FOREIGN BIBLE SOCIETY
BANGALORE AUXILIARY
1936

*Large Post 8vo.*] [*Brevier.*

# ಹಳೆ ಹೊಸ

# ಒಡಂಬಡಿಕೆಗಳು

ಅಡಗಿರುವ




ಬೆಂಗಳೂರಿನಲ್ಲಿರುವ ಸತ್ಯವೇದಪ್ರಸರಣಸಮಾಜದವರ

ಅಪ್ಪಣೆಯಿಂದ ಛಾಪಿಸಿದ್ದು



KANARESE

ಮಂಗಳೂರು

ಬಾಸೆಲ್ ಮಿಶ್ಯನ್ ಪ್ರೆಸ್

೧೯೩೭

## OLD VERSION

| | | | | |
|---|---|---|---|---|
| First edition | 1865 | Demy 4o. | Pica | 2500 copies. |
| Second ,, | 1877 | Demy 8vo. | Long Primer | 2000 ,, |
| Third ,, | 1884 | Crown 8vo. | Brevier | 5000 ,, |
| Fourth ,, | 1905 | Crown 8vo. | Brevier | 3000 ,, |

## OLD AND NEW VERSIONS COMBINED

| | | | | |
|---|---|---|---|---|
| Fifth edition | 1915 | Large Post 8vo. | Brevier | 3500 ,, |
| Sixth ,, | 1922 | ,, ,, ,, | ,, | 5000 ,, |



## NEW VERSION

Seventh edition 1934, (Dec.) (With references) Large Post 8vo.
Brevier 5000 copies.

Eighth ,, 1936, (Sept.) (Without references) Large Post 8vo.
Brevier 7500 copies.

# THE BOOKS OF THE OLD TESTAMENT

## ಹಳೇ ಒಡಂಬಡಿಕೆಯ ಪುಸ್ತಕಗಳ ಕ್ರಮವು

# THE BOOKS OF THE NEW TESTAMENT

## ಹೊಸ ಒಡಂಬಡಿಕೆಯ ಪುಸ್ತಕಗಳ ಕ್ರಮವು

# ಹಳೆಯ ಒಡಂಬಡಿಕೆ

# GENESIS

## ಮೋಶೆಯ ಧರ್ಮಶಾಸ್ತ್ರದಲ್ಲಿ ಆದಿಕಾಂಡ ಎಂಬ ಪ್ರಥಮಭಾಗವು



ಆದಿಕಾಲದ ಚರಿತ್ರೆ 1. 1—11. 26.

ದೇವರು ಲೋಕವನ್ನು ಸೃಷ್ಟಿಸಿದ್ದು.



ದಿಯಲ್ಲಿ ದೇವರು
ಆಕಾಶವನ್ನೂ ಭೂಮಿ
ಯನ್ನೂ ಉಂಟುಮಾಡಿ
2 ದನು. ಭೂಮಿಯು
ಕ್ರಮವಿಲ್ಲದೆಯೂ ಬರಿ
ದಾಗಿಯೂ ಇತ್ತು; ಆದಿ
ಸಾಗರದ ಮೇಲೆ ಕತ್ತ
ಲಿತ್ತು; ದೇವರಾತ್ಮವು
ಜಲಸಮೂಹಗಳ ಮೇಲೆ
ಚಲಿಸುತ್ತಿತ್ತು.
3 ಆಗ ದೇವರು—ಬೆಳಕಾಗಲಿ ಅನ್ನಲು ಬೆಳ
4 ಕಾಯಿತು. ದೇವರು ಆ ಬೆಳಕನ್ನು ಒಳ್ಳೇದೆಂದು
ನೋಡಿದನು. ದೇವರು ಬೆಳಕನ್ನೂ ಕತ್ತಲೆಯನ್ನೂ
ಬೇರೆ ಬೇರೆ ಮಾಡಿ ಬೆಳಕಿಗೆ ಹಗಲೆಂದೂ ಕತ್ತಲೆಗೆ
5 ಇರುಳೆಂದೂ ಹೆಸರಿಟ್ಟನು. ಹೀಗೆ ಸಾಯಂಕಾಲವೂ
ಪ್ರಾತಃಕಾಲವೂ ಆಗಿ ಮೊದಲನೆಯ ದಿನವಾಯಿತು.
6 ಬಳಿಕ ದೇವರು—ಜಲಸಮೂಹಗಳ ನಡುವೆ
ವಿಸ್ತಾರವಾದ ಗುಮಟವು ಉಂಟಾಗಲಿ; ಅದು ಕೆಳಗಣ
ನೀರುಗಳನ್ನೂ ಮೇಲಣ ನೀರುಗಳನ್ನೂ ಬೇರೆ ಬೇರೆ
7 ಮಾಡಲಿ ಅಂದನು. ದೇವರು ವಿಸ್ತಾರವಾದ ಗುಮಟ
ವನ್ನು ಮಾಡಿ ಅದರ ಕೆಳಗಿದ್ದ ನೀರುಗಳನ್ನು ಅದರ
ಮೇಲಿದ್ದ ನೀರುಗಳಿಂದ ವಿಂಗಡಿಸಿದನು; ಹಾಗೆಯೇ
8 ಆಯಿತು. ದೇವರು ಆ ಗುಮಟಕ್ಕೆ ಆಕಾಶವೆಂದು
ಹೆಸರಿಟ್ಟನು. ಹೀಗೆ ಸಾಯಂಕಾಲವೂ ಪ್ರಾತಃಕಾಲವೂ
ಆಗಿ ಎರಡನೆಯ ದಿನವಾಯಿತು.
9 ಅನಂತರ ದೇವರು—ಆಕಾಶದ ಕೆಳಗಿರುವ
ನೀರೆಲ್ಲಾ ಒಂದೇ ಸ್ಥಳದಲ್ಲಿ ಕೂಡಿಕೊಳ್ಳಲಿ, ಒಣನೆಲವು
10 ಕಾಣಿಸಲಿ ಅಂದನು; ಹಾಗೆಯೇ ಆಯಿತು. ದೇವರು
ಒಣನೆಲಕ್ಕೆ ಭೂಮಿಯೆಂದೂ ಜಲಸಮೂಹಕ್ಕೆ ಸಮುದ್ರ
ವೆಂದೂ ಹೆಸರಿಟ್ಟನು. ಆತನು ಅದನ್ನು ಒಳ್ಳೇದೆಂದು
ನೋಡಿದನು. ತರುವಾಯ ದೇವರು—ಭೂಮಿಯು 11
ಹುಲ್ಲನ್ನೂ ಬೀಜಬಿಡುವ ಕಾಯಿಪಲ್ಯದ ಗಿಡಗಳನ್ನೂ
ಬೆಳಿಸಲಿ; ಮತ್ತು ಬೀಜವುಳ್ಳ ಹಣ್ಣಿನ ಮರಗಳನ್ನೂ
ಅವುಗಳ ಜಾತಿಗನುಸಾರವಾಗಿ ಹುಟ್ಟಿಸಲಿ ಎಂದು
ಹೇಳಿದನು; ಹಾಗೆಯೇ ಆಯಿತು. ಭೂಮಿಯಲ್ಲಿ 12
ಹುಲ್ಲು ಬೆಳೆಯಿತು; ತಮ್ಮತಮ್ಮ ಜಾತಿಯ ಪ್ರಕಾರ
ಬೀಜಬಿಡುವ ಕಾಯಿಪಲ್ಯದ ಗಿಡಗಳು ಉಂಟಾದವು;
ತಮ್ಮತಮ್ಮ ಜಾತಿಗನುಸಾರವಾಗಿ ಬೀಜವುಳ್ಳ ಹಣ್ಣಿನ
ಮರಗಳು ಕಾಣಿಸಿದವು. ದೇವರು ಅದನ್ನು ಒಳ್ಳೇ
ದೆಂದು ನೋಡಿದನು. ಹೀಗೆ ಸಾಯಂಕಾಲವೂ 13
ಪ್ರಾತಃಕಾಲವೂ ಆಗಿ ಮೂರನೆಯ ದಿನವಾಯಿತು.
ಬಳಿಕ ದೇವರು—ಆಕಾಶಮಂಡಲದಲ್ಲಿ ಬೆಳಕು 14
ಗಳು ಉಂಟಾಗಲಿ; ಅವು ಹಗಲಿರುಳುಗಳನ್ನು ಬೇರೆ
ಬೇರೆ ಮಾಡಲಿ; ಇದಲ್ಲದೆ ಅವು ಗುರುತುಗಳಾಗಿದ್ದು
ಸಮಯಗಳನ್ನೂ ದಿನಸಂವತ್ಸರಗಳನ್ನೂ ತೋರಿಸಲಿ;
ಮತ್ತು ಭೂಮಿಯ ಮೇಲೆ ಬೆಳಕುಕೊಡುವದಕ್ಕೆ 15
ಅವು ಆಕಾಶಮಂಡಲದಲ್ಲಿ ದೀಪಗಳಂತಿರಲಿ ಅಂದನು;
ಹಾಗೆಯೇ ಆಯಿತು. ದೇವರು ಹಗಲನ್ನಾಳುವದಕ್ಕೆ 16
ದೊಡ್ಡ ಬೆಳಕನ್ನೂ ಇರುಳನ್ನಾಳುವದಕ್ಕೆ ಚಿಕ್ಕ ಬೆಳ
ಕನ್ನೂ, ಈ ಎರಡು ದೊಡ್ಡ ಬೆಳಕುಗಳನ್ನು ಉಂಟು
ಮಾಡಿದನು. ಆತನು ನಕ್ಷತ್ರಗಳನ್ನು ಸಹ ಉಂಟು
ಮಾಡಿದನು. ದೇವರು ಆ ಬೆಳಕುಗಳನ್ನು ಆಕಾಶ 17
ದಲ್ಲಿಟ್ಟು ಭೂಮಿಯ ಮೇಲೆ ಬೆಳಕುಕೊಡುವದಕ್ಕೂ
ಹಗಲಿರುಳುಗಳನ್ನು ಆಳುವದಕ್ಕೂ ಬೆಳಕನ್ನು ಕತ್ತ 18
ಲನ್ನು ಬೇರೆ ಬೇರೆ ಮಾಡುವದಕ್ಕೂ ಅವುಗಳನ್ನು
ನೇಮಿಸಿದನು. ಆತನು ಅದನ್ನು ಒಳ್ಳೇದೆಂದು
ನೋಡಿದನು. ಹೀಗೆ ಸಾಯಂಕಾಲವೂ ಪ್ರಾತಃಕಾಲವೂ 19
ಆಗಿ ನಾಲ್ಕನೆಯ ದಿನವಾಯಿತು.

20 ತರುವಾಯ ದೇವರು—ಗುಂಪುಗುಂಪಾಗಿ ಚಲಿಸುವ
ಜಲಜಂತುಗಳು ನೀರಿನಲ್ಲಿ ತುಂಬಿಕೊಳ್ಳಲಿ; ಪಕ್ಷಿಗಳು
ಭೂಮಿಯ ಮೇಲೆ ಅಂತರಿಕ್ಷದೊಳಗೆ ಹಾರಾಡಲಿ
21 ಎಂದು ಹೇಳಿದನು. ಹೀಗೆ ದೇವರು ಮಹಾಜಲ
ಚರಗಳನ್ನೂ ನೀರಿನಲ್ಲಿ ತುಂಬಿರುವ ಸಕಲವಿಧವಾದ
ಜೀವಿಗಳನ್ನೂ ರೆಕ್ಕೆಗಳುಳ್ಳ ಸಕಲವಿಧವಾದ ಪಕ್ಷಿ
ಗಳನ್ನೂ ಅವುಗಳ ಜಾತಿಗನುಸಾರವಾಗಿ ಉಂಟು
ಮಾಡಿದನು. ಆತನು ಅದನ್ನು ಒಳ್ಳೇದೆಂದು ನೋಡಿ
22 ದನು. ಇದಲ್ಲದೆ ದೇವರು ಅವುಗಳಿಗೆ—ನೀವು ಅಭಿ
ವೃದ್ಧಿಯಾಗಿ ಹೆಚ್ಚಿರಿ; ಜಲಚರಗಳು ಸಮುದ್ರದ ನೀರಿ
ನಲ್ಲಿ ತುಂಬಿಕೊಳ್ಳಲಿ; ಪಕ್ಷಿಗಳು ಭೂಮಿಯ ಮೇಲೆ
23 ಹೆಚ್ಚಲಿ ಎಂದು ಹೇಳಿ ಆಶೀರ್ವದಿಸಿದನು. ಹೀಗೆ
ಸಾಯಂಕಾಲವೂ ಪ್ರಾತಃಕಾಲವೂ ಆಗಿ ಐದನೆಯ
ದಿನವಾಯಿತು.

24 ಮತ್ತು ದೇವರು—ಭೂಮಿಯಿಂದ ಜೀವಜಂತು
ಗಳು ಉಂಟಾಗಲಿ; ಪಶುಕ್ರಿಮಿಗಳೂ ಕಾಡುಮೃಗ
ಗಳೂ ತಮ್ಮತಮ್ಮ ಜಾತಿಗನುಸಾರವಾಗಿ ಹುಟ್ಟಲಿ
25 ಅಂದನು; ಹಾಗೆಯೇ ಆಯಿತು. ದೇವರು ಕಾಡು
ಮೃಗಗಳನ್ನೂ ಪಶುಗಳನ್ನೂ ನೆಲದ ಮೇಲೆ ಹರಿ
ದಾಡುವ ಕ್ರಿಮಿಕೀಟಗಳನ್ನೂ ಅವುಗಳ ಜಾತಿಗನು
ಸಾರ ಉಂಟುಮಾಡಿದನು. ಆತನು ಅದನ್ನು ಒಳ್ಳೇ
ದೆಂದು ನೋಡಿದನು.

26 ಆ ಮೇಲೆ ದೇವರು—ನಮ್ಮ ಸ್ವರೂಪದಲ್ಲಿ
ನಮ್ಮ ಹೋಲಿಕೆಗೆ ಸರಿಯಾಗಿ ಮನುಷ್ಯರನ್ನು ಉಂಟು
ಮಾಡೋಣ; ಅವರು ಸಮುದ್ರದಲ್ಲಿರುವ ಮೀನು
ಗಳ ಮೇಲೆಯೂ ಅಂತರಿಕ್ಷದಲ್ಲಿ ಹಾರಾಡುವ ಪಕ್ಷಿಗಳ
ಮೇಲೆಯೂ ಪಶುಗಳ ಮೇಲೆಯೂ ನೆಲದ ಮೇಲೆ
ಹರಿದಾಡುವ ಎಲ್ಲಾ ಕ್ರಿಮಿಕೀಟಗಳ ಮೇಲೆಯೂ
ಎಲ್ಲಾ ಭೂಮಿಯ ಮೇಲೆಯೂ ದೊರೆತನಮಾಡಲಿ
ಅಂದನು.

27 ಹೀಗೆ ದೇವರು ಮನುಷ್ಯನನ್ನು ತನ್ನ ಸ್ವರೂಪದಲ್ಲಿ
ಉಂಟುಮಾಡಿದನು;
ದೇವಸ್ವರೂಪದಲ್ಲಿ ಅವನನ್ನು ಉಂಟುಮಾಡಿದನು;
ಅವರನ್ನು ಗಂಡುಹೆಣ್ಣಾಗಿ ನಿರ್ಮಿಸಿದನು.
28 ಇದಲ್ಲದೆ ದೇವರು ಅವರನ್ನು ಆಶೀರ್ವದಿಸಿ—ನೀವು
ಬಹುಸಂತಾನವುಳ್ಳವರಾಗಿ ಹೆಚ್ಚಿರಿ; ಭೂಮಿಯಲ್ಲಿ
ತುಂಬಿಕೊಂಡು ಅದನ್ನು ವಶಮಾಡಿಕೊಳ್ಳಿರಿ. ಸಮು
ದ್ರದ ಮೀನುಗಳ ಮೇಲೆಯೂ ಆಕಾಶದ ಪಕ್ಷಿಗಳ
ಮೇಲೆಯೂ ಭೂಮಿಯಲ್ಲಿ ಚಲಿಸುವ ಎಲ್ಲಾ ಜೀವಿ
ಗಳ ಮೇಲೆಯೂ ದೊರೆತನಮಾಡಿರಿ ಅಂದನು.

29 ಮತ್ತು ದೇವರು—ಇಗೋ, ಸಮಸ್ತಭೂಮಿಯ
ಮೇಲೆ ಬೀಜವುಳ್ಳ ಎಲ್ಲಾ ಪೈರುಗಳನ್ನೂ ಬೀಜವುಳ್ಳ
ಎಲ್ಲಾ ಹಣ್ಣಿನ ಮರಗಳನ್ನೂ ನಿಮಗೆ ಆಹಾರಕ್ಕಾಗಿ
30 ಕೊಟ್ಟಿದ್ದೇನೆ. ಇದಲ್ಲದೆ ಭೂಮಿಯ ಮೇಲೆ ತಿರು
ಗಾಡುವ ಮೃಗಗಳು, ಆಕಾಶದಲ್ಲಿ ಹಾರಾಡುವ ಪಕ್ಷಿ
ಗಳು, ನೆಲದಲ್ಲಿ ಹರಿದಾಡುವ ಕ್ರಿಮಿಕೀಟಗಳು ಎಂಬ
ಜೀವಿಗಳಿಗೆ ಎಲ್ಲಾ ಹುಲ್ಲು ಸೊಪ್ಪುಗಳನ್ನು ಆಹಾರ
ಕ್ಕಾಗಿ ಕೊಟ್ಟಿದ್ದೇನೆ ಎಂದು ಹೇಳಿದನು; ಅದು
ಹಾಗೆಯೇ ಆಯಿತು. ದೇವರು ತಾನು ಉಂಟು
ಮಾಡಿದ್ದನ್ನೆಲ್ಲಾ ನೋಡಲಾಗಿ ಅದು ಬಹು ಒಳ್ಳೇ
ದಾಗಿತ್ತು. ಸಾಯಂಕಾಲವೂ ಪ್ರಾತಃಕಾಲವೂ ಆಗಿ
ಆರನೆಯ ದಿನವಾಯಿತು.

ಹೀಗೆ ಭೂಮ್ಯಾಕಾಶಗಳೂ ಅವುಗಳಲ್ಲಿರುವ ಸಮು 2
ಸ್ತವೂ ನಿರ್ಮಿತವಾದವು. ದೇವರು ತನ್ನ ಸೃಷ್ಟಿ 2
ಕಾರ್ಯವನ್ನು ಮುಗಿಸಿಬಿಟ್ಟು ಏಳನೆಯ ದಿನ
ದಲ್ಲಿ ವಿಶ್ರಮಿಸಿಕೊಂಡನು. ದೇವರು ತನ್ನ ಸೃಷ್ಟಿ
ಕಾರ್ಯವನ್ನು ಮುಗಿಸಿ ಆ ಏಳನೆಯ ದಿನದಲ್ಲಿ
ವಿಶ್ರಮಿಸಿಕೊಂಡದ್ದರಿಂದ ಆ ದಿನವನ್ನು ಪರಿಶುದ್ಧದಿನ
ವಾಗಿರಲಿ ಎಂದು ಆಶೀರ್ವದಿಸಿದನು.

ಇದೇ ಭೂಮ್ಯಾಕಾಶಗಳ ನಿರ್ಮಾಣಚರಿತ್ರೆ.

ಏದೆನ್ ವನವೂ ಪಾಪೋತ್ಪತ್ತಿಯೂ.

ಯೆಹೋವದೇವರು ಭೂಮ್ಯಾಕಾಶಗಳನ್ನು ಉಂಟು
ಮಾಡಿದಾಗ ಯಾವ ಗಿಡವಾದರೂ ಭೂಮಿಯಲ್ಲಿ
ಇರಲಿಲ್ಲ, ಯಾವ ಪಲ್ಯವೂ ಹುಟ್ಟಿರಲಿಲ್ಲ. ಯಾ
ಕಂದರೆ ಯೆಹೋವದೇವರು ಭೂಮಿಯ ಮೇಲೆ
ಮಳೆಯನ್ನು ಸುರಿಸಿರಲಿಲ್ಲ; ಭೂಮಿಯನ್ನು ವ್ಯವ
ಸಾಯಮಾಡುವದಕ್ಕೆ ಮನುಷ್ಯನೂ ಇರಲಿಲ್ಲ.
ಆದರೂ ಭೂಮಿಯಿಂದ ಮಂಜು ಹಬ್ಬಿ ನೆಲವನ್ನೆಲ್ಲಾ
ತೋಯಿಸುತ್ತಿತ್ತು.

ಹೀಗಿರಲು ಯೆಹೋವದೇವರು ನೆಲದ ಮಣ್ಣಿ
ನಿಂದ ಮನುಷ್ಯನನ್ನು ರೂಪಿಸಿ ಅವನ ಮೂಗಿನಲ್ಲಿ
ಜೀವಶ್ವಾಸವನ್ನು ಊದಿದನು; ಆಗ ಮನುಷ್ಯನು
ಬದುಕುವ ಪ್ರಾಣಿಯಾದನು. ಇದಲ್ಲದೆ ಯೆಹೋವ
ದೇವರು ಮೂಡಣ ದಿಕ್ಕಿನಲ್ಲಿರುವ ಏದೆನ್ ಸೀಮೆ
ಯಲ್ಲಿ ಒಂದು ಉದ್ಯಾನವನವನ್ನು ಮಾಡಿ ತಾನು
ರೂಪಿಸಿದ ಮನುಷ್ಯನನ್ನು ಅದರಲ್ಲಿ ಇರಿಸಿದನು.
ಮತ್ತು ಯೆಹೋವದೇವರು ನೋಟಕ್ಕೆ ರಮ್ಯ
ವಾಗಿಯೂ ಊಟಕ್ಕೆ ಅನುಕೂಲವಾಗಿಯೂ ಇರುವ
ಎಲ್ಲಾ ತರದ ಮರಗಳನ್ನು ಆ ಭೂಮಿಯಲ್ಲಿ ಬೆಳೆಯ
ಮಾಡಿದನು. ಅದಲ್ಲದೆ ಆ ವನಮಧ್ಯದಲ್ಲಿ ಜೀವ
ದಾಯಕವೃಕ್ಷವನ್ನೂ ಒಳ್ಳೇದರ ಕೆಟ್ಟದ್ದರ ಅರುಹನ್ನು
ಹುಟ್ಟಿಸುವ ವೃಕ್ಷವನ್ನೂ ಬೆಳೆಯಿಸಿದನು.

ಏದೆನ್ ಸೀಮೆಯಲ್ಲಿ ಒಂದು ನದಿ ಹುಟ್ಟಿ ಆ 1
ವನವನ್ನು ತೋಯಿಸುತ್ತಿತ್ತು. ಅದು ಆಚೇ ಕಡೆ
ಯಲ್ಲಿ ಒಡೆದು ನಾಲ್ಕು ಶಾಖೆಗಳಾಯಿತು. ಮೊದ 1
ಲನೆಯದರ ಹೆಸರು ಪೀಶೋನ್; ಅದು ಬಂಗಾರ
ದೊರಕುವ ಹವೀಲ ದೇಶವನ್ನೆಲ್ಲಾ ಸುತ್ತುವದು. ಆ 1
ದೇಶದ ಬಂಗಾರವು ಶ್ರೇಷ್ಠವಾದದ್ದು; ಅಲ್ಲಿ ಬದೋಲಖ
ಧೂಪವೂ ಗೋಮೇಧಿಕರತ್ನವೂ ಸಿಕ್ಕುತ್ತವೆ. ಎರಡನೆ 1
ಯ ನದಿಯ ಹೆಸರು ಗೀಹೋನ್; ಅದು ಕೂಷ್ ದೇಶ
ವನ್ನೆಲ್ಲಾ ಸುತ್ತುವದು. ಮೂರನೆಯ ನದಿಯ ಹೆಸರು 1
1)ಹಿದ್ದೆಕೆಲ್; ಅದು ಅಶ್ಶೂರ್ ದೇಶದ ಮುಂದೆ
ಹರಿಯುವದು. ನಾಲ್ಕನೆಯದು ಯೂಫ್ರೇಟೀಸ್ ನದಿ.
ಯೆಹೋವದೇವರು ಆ ಮನುಷ್ಯನನ್ನು ಕರ 1

1) ಹಿದ್ದೆಕೆಲ್ ಎಂಬದು ಟೈಗ್ರಿಸ್ ನದಿ.

ಕೊಂಡು ಹೋಗಿ ಏದೆನ್ ತೋಟವನ್ನು ವ್ಯವಸಾಯ
ಮಾಡುವದಕ್ಕೂ ಕಾಯುವದಕ್ಕೂ ಅದರಲ್ಲಿ ಇಟ್ಟ
16 ನು. ಇದಲ್ಲದೆ ಯೆಹೋವದೇವರು ಆ ಮನುಷ್ಯ
ನಿಗೆ—ನೀನು ತೋಟದಲ್ಲಿರುವ ಎಲ್ಲಾ ಮರಗಳ
17 ಹಣ್ಣುಗಳನ್ನು ಯಥೇಚ್ಛವಾಗಿ ತಿನ್ನಬಹುದು; ಒಳ್ಳೇ
ದರ ಕೆಟ್ಟದ್ದರ ಅರುಹನ್ನು ಹುಟ್ಟಿಸುವ ಮರದ
ಹಣ್ಣನ್ನು ಮಾತ್ರ ತಿನ್ನಬಾರದು; ತಿಂದ ದಿನ ಸತ್ತೇ
ಹೋಗುವಿ ಎಂದು ವಿಧಿಸಿದನು.
18 ಮತ್ತು ಯೆಹೋವದೇವರು—ಮನುಷ್ಯನು ಒಂಟಿ
ಗನಾಗಿರುವದು ಒಳ್ಳೇದಲ್ಲ; ಅವನಿಗೆ ಸರಿಬೀಳುವ
ಸಹಕಾರಿಯನ್ನು ಉಂಟುಮಾಡುವೆನು ಅಂದನು.
19 ಆಗ ಆತನು ಎಲ್ಲಾ ಭೂಜಂತುಗಳನ್ನೂ ಆಕಾಶದ
ಪಕ್ಷಿಗಳನ್ನೂ ಮಣ್ಣಿನಿಂದ ನಿರ್ಮಿಸಿ—ಇವುಗಳಿಗೆ
ಆ ಮನುಷ್ಯನು ಏನೇನು ಹೆಸರಿಡುವನು ನೋ
ಡೋಣ ಎಂದು ಅವನ ಬಳಿಗೆ ಬರಮಾಡಿದನು.
ಮನುಷ್ಯನು ಒಂದೊಂದು ಪ್ರಾಣಿಗೆ ಯಾವ ಯಾವ
20 ಹೆಸರಿಟ್ಟನೋ ಅದೇ ಹೆಸರಾಯಿತು. ಹೀಗೆ ಆ
ಮನುಷ್ಯನು ಎಲ್ಲಾ ಪಶುಗಳಿಗೂ ಆಕಾಶದ ಪಕ್ಷಿ
ಗಳಿಗೂ ಕಾಡುಮೃಗಗಳಿಗೂ ಹೆಸರಿಟ್ಟನು. ಆದರೆ
ಆ ಮನುಷ್ಯನಿಗೆ ಸರಿಬೀಳುವ ಸಹಕಾರಿ ಕಾಣಿಸ
21 ಲಿಲ್ಲ. ಹೀಗಿರುವಲ್ಲಿ ಯೆಹೋವದೇವರು ಆ ಮನು
ಷ್ಯನಿಗೆ ಗಾಢನಿದ್ರೆಯನ್ನು ಬರಮಾಡಿ ಅವನ
ಪಕ್ಕೆಯ ಎಲುಬುಗಳಲ್ಲಿ ಒಂದನ್ನು ತೆಗೆದುಕೊಂಡು
22 ಅದರ ಸ್ಥಳವನ್ನು ಮಾಂಸದಿಂದ ಮುಚ್ಚಿ ತಾನು
ಮನುಷ್ಯನಿಂದ ತೆಗೆದಿದ್ದ ಎಲುಬನ್ನು ಸ್ತ್ರೀಯಾಗ
ಮಾಡಿ ಆಕೆಯನ್ನು ಅವನ ಬಳಿಗೆ ಕರತಂದನು.
23 ಅವನು ಆಕೆಯನ್ನು ನೋಡಿ—
ಈಗ ಸರಿ; ಈಕೆಯು ನನ್ನ ಎಲುಬುಗಳಿಂದ
ಬಂದ ಎಲುಬೂ
ನನ್ನ ಮಾಂಸದಿಂದ ಬಂದ ಮಾಂಸವೂ ಆಗಿದ್ದಾಳೆ;
ಈಕೆಯು ನರನಿಂದ ಉತ್ಪತ್ತಿಯಾದ ಕಾರಣ ನಾರೀ
ಎನ್ನಿಸಿಕೊಳ್ಳುವಳು
24 ಅಂದನು. ಈ ಕಾರಣದಿಂದ ಪುರುಷನು ತಂದೆ
ತಾಯಿಗಳನ್ನು ಬಿಟ್ಟು ತನ್ನ ಹೆಂಡತಿಯನ್ನು ಸೇರಿ
ಕೊಳ್ಳುವನು; ಅವರಿಬ್ಬರು ಒಂದೇ ಶರೀರವಾಗಿರು
25 ವರು. ಆ ಸ್ತ್ರೀಪುರುಷರಿಬ್ಬರು ಬೆತ್ತಲೆಯಾಗಿದ್ದರೂ
ನಾಚಿಕೊಳ್ಳಲಿಲ್ಲ.

3 ಯೆಹೋವದೇವರು ಉಂಟುಮಾಡಿದ ಎಲ್ಲಾ ಭೂ
ಜಂತುಗಳಲ್ಲಿ ಸರ್ಪವು ಯುಕ್ತಿಯುಳ್ಳದ್ದಾಗಿತ್ತು.
ಅದು ಸ್ತ್ರೀಯ ಬಳಿಗೆ ಬಂದು—ಏನಮ್ಮಾ, ತೋಟ
ದಲ್ಲಿರುವ ಯಾವ ಮರದ ಹಣ್ಣನ್ನೂ ನೀವು ತಿನ್ನ
ಬಾರದೆಂದು ದೇವರು ಅಪ್ಪಣೆಕೊಟ್ಟಿರುವದು ನಿಜವೋ
2 ಎಂದು ಕೇಳಲು ಸ್ತ್ರೀಯು—ತೋಟದಲ್ಲಿರುವ ಮರ
3 ಗಳ ಹಣ್ಣುಗಳನ್ನು ನಾವು ತಿನ್ನಬಹುದು; ಆದರೆ
ತೋಟದ ಮಧ್ಯದಲ್ಲಿರುವ ಈ ಮರದ ಫಲದ ವಿಷ
ಯವಾಗಿ—ಇದನ್ನು ತಿನ್ನಲೂ ಕೂಡದು, ಮುಟ್ಟಲೂ
ಕೂಡದು; ತಿಂದರೆ ಸಾಯುವಿರಿ ಎಂದು ದೇವರು
4 ಹೇಳಿದ್ದಾನೆ ಅಂದಳು. ಆಗ ಸರ್ಪವು ಸ್ತ್ರೀಗೆ—
ನೀವು ಹೇಗೂ ಸಾಯುವದಿಲ್ಲ; ನೀವು ಇದರ 5
ಹಣ್ಣನ್ನು ತಿಂದಾಗಲೇ ನಿಮ್ಮ ಕಣ್ಣುಗಳು ತೆರೆಯು
ವವು; ನೀವು ದೇವರಂತೆ ಆಗಿ ಒಳ್ಳೇದರ ಕೆಟ್ಟದ್ದರ
ಭೇದವನ್ನು ಅರಿತವರಾಗುವಿರಿ; ಇದು ದೇವರಿಗೆ
ಚೆನ್ನಾಗಿ ಗೊತ್ತುಂಟು ಅಂದಿತು. ಆಗ ಸ್ತ್ರೀಯು— 6
ಆ ಮರದ ಹಣ್ಣು ತಿನ್ನುವದಕ್ಕೆ ಉತ್ತಮವಾಗಿಯೂ
ನೋಡುವದಕ್ಕೆ ರಮ್ಯವಾಗಿಯೂ ಜ್ಞಾನೋದಯಕ್ಕೆ
ಅಪೇಕ್ಷಿಸತಕ್ಕದ್ದಾಗಿಯೂ ಇದೆ ಎಂದು ತಿಳಿದು
ಅದನ್ನು ತೆಗೆದುಕೊಂಡು ತಿಂದಳು. ಸಂಗಡ ಇದ್ದ
ಗಂಡನಿಗೂ ಕೊಡಲು ಅವನೂ ತಿಂದನು. ಕೂಡಲೆ 7
ಅವರಿಬ್ಬರ ಕಣ್ಣುಗಳು ತೆರೆದವು; ತಾವು ಬೆತ್ತಲೆಯಾ
ಗಿದ್ದೇವೆಂದು ತಿಳಿದು ಅಂಜೂರದ ಎಲೆಗಳನ್ನು ಹೊಲಿದು
ಉಟ್ಟುಕೊಂಡರು.
ತರುವಾಯ ಯೆಹೋವದೇವರು ಸಂಜೆಯ ತಂಗಾ 8
ಳಿಯಲ್ಲಿ ತೋಟದೊಳಗೆ ಸಂಚರಿಸುತ್ತಿರುವಾಗ ಆ
ಸ್ತ್ರೀಪುರುಷರು ಆತನ ಸಪ್ಪಳವನ್ನು ಕೇಳಿ ಆತನಿಗೆ
ಕಾಣಿಸಬಾರದೆಂದು ತೋಟದ ಮರಗಳ ಹಿಂದೆ ಅಡಗಿ
ಕೊಂಡರು. ಯೆಹೋವದೇವರು ಮನುಷ್ಯನನ್ನು— 9
ನೀನು ಎಲ್ಲಿರುತ್ತೀ ಎಂದು ಕೂಗಿ ಕೇಳಲು ಅವನು— 10
ನೀನು ತೋಟದಲ್ಲಿ ಸಂಚರಿಸುವ ಸಪ್ಪಳವನ್ನು ನಾನು
ಕೇಳಿ ಬೆತ್ತಲೆಯಾಗಿದ್ದೇನಲ್ಲಾ ಎಂದು ಹೆದರಿ ಅಡಗಿ
ಕೊಂಡೆನು ಅಂದನು. ಅದಕ್ಕಾತನು—ನೀನು ಬೆತ್ತಲೆ 11
ಯಾಗಿದ್ದೀ ಎಂದು ನಿನಗೆ ತಿಳಿಸಿದವರಾರು? ತಿನ್ನ
ಬಾರದೆಂದು ನಾನು ನಿನಗೆ ಅಜ್ಞಾಪಿಸಿದ ಮರದ
ಹಣ್ಣನ್ನು ತಿಂದಿಯಾ ಎಂದು ಕೇಳಲು ಆ ಮನು 12
ಷ್ಯನು—ನನ್ನ ಜೊತೆಯಲ್ಲಿರುವದಕ್ಕೆ ನೀನು ಕೊಟ್ಟ
ಸ್ತ್ರೀಯು ಆ ಮರದ ಹಣ್ಣನ್ನು ನನಗೆ ಕೊಟ್ಟಳು;
ನಾನು ತಿಂದೆನು ಎಂದು ಹೇಳಿದನು. ಯೆಹೋವ 13
ದೇವರು ಸ್ತ್ರೀಯನ್ನು—ಇದೇನು ನೀನು ಮಾಡಿದ್ದು
ಎಂದು ಕೇಳಲು ಸ್ತ್ರೀಯು—ಸರ್ಪವು ನನ್ನನ್ನು
ವಂಚಿಸಿತು. ನಾನು ತಿಂದೆನು ಎಂದು ಉತ್ತರ
ಕೊಟ್ಟಳು. ಆಗ ಯೆಹೋವದೇವರು ಸರ್ಪಕ್ಕೆ— 14
ನೀನು ಈ ಕಾರ್ಯವನ್ನು ಮಾಡಿದ್ದರಿಂದ ಎಲ್ಲಾ
ಪಶುಗಳಲ್ಲಿಯೂ ಅಡವಿಯ ಎಲ್ಲಾ ಮೃಗಗಳ
ಲ್ಲಿಯೂ ಶಾಪಗ್ರಸ್ತನಾದಿ; ನೀನು ಹೊಟ್ಟೆ
ಯಿಂದ ಹರಿದು ನಿನ್ನ ಜೀವಮಾನದ ದಿನಗಳ
ಲ್ಲೆಲ್ಲಾ ಮಣ್ಣೇ ತಿನ್ನುವಿ.
ನಿನಗೂ ಈ ಸ್ತ್ರೀಗೂ, ನಿನ್ನ ಸಂತಾನಕ್ಕೂ ಈ 15
ಸ್ತ್ರೀಯ ಸಂತಾನಕ್ಕೂ ಹಗೆತನವಿರುವ ಹಾಗೆ
ಮಾಡುವೆನು. ಈಕೆಯ ಸಂತಾನವು ನಿನ್ನ
ತಲೆಯನ್ನು ಜಜ್ಜುವದು, ನೀನು ಅದರ ಹಿಮ್ಮ
ಡಿಯನ್ನು [1]ಕಚ್ಚುವಿ
ಎಂದು ಹೇಳಿದನು. ಆ ಮೇಲೆ ಸ್ತ್ರೀಗೆ— 16
ನೀನು ಗರ್ಭಿಣಿಯಾಗಿರುವ ಕಾಲದಲ್ಲಿ ಬಹು
ಸಂಕಟಪಡಬೇಕೆಂದು ನಾನು ನೇಮಿಸಿದ್ದೇನೆ;
ಕಷ್ಟದಿಂದಲೇ ಮಕ್ಕಳನ್ನು ಹೆರುವಿ; ಗಂಡನ
ಮೇಲೆ ನಿನಗೆ ಆಶೆಯಿರುವದು; ಅವನು
ನಿನಗೆ ಒಡೆಯನಾಗುವನು

1) ಮೂಲ: ಜಜ್ಜುವಿ.

17 ಎಂದು ಹೇಳಿದನು. ಮತ್ತು ಪುರುಷನಿಗೆ—
ತಿನ್ನಬಾರದೆಂದು ನಾನು ನಿನಗೆ ಆಜ್ಞಾಪಿಸಿದ
ಮರದ ಫಲವನ್ನು ನೀನು ಹೆಂಡತಿಯ ಮಾತು
ಕೇಳಿ ತಿಂದ ಕಾರಣ ನಿನ್ನ ನಿಮಿತ್ತ ಭೂಮಿಗೆ
ಶಾಪ ಬಂತು. ನಿನ್ನ ಜೀವಮಾನವೆಲ್ಲಾ
ದುಡಿದು ದುಡಿದು ಭೂಮಿಯ ಹುಟ್ಟುವಳಿ
18 ಯನ್ನು ತಿನ್ನಬೇಕು; ಆ ಭೂಮಿಯಲ್ಲಿ
ಮುಳ್ಳುಗಿಡಗಳೂ ಕಳೆಗಳೂ ಬಹಳವಾಗಿ
ಹುಟ್ಟುವವು. ಹೊಲದ ಬೆಳೆಯನ್ನು ಅನು
19 ಭವಿಸುವಿ. ನೀನು ತಿರಿಗಿ ಮಣ್ಣಿಗೆ ಸೇರುವ
ತನಕ ಬೆವರಿಡುತ್ತಾ ಬೇಕಾದ ಆಹಾರವನ್ನು
ಸಂಪಾದಿಸಬೇಕು. ನೀನು ಮಣ್ಣಿನಿಂದ ತೆಗೆ
ಯಲ್ಪಟ್ಟವನಲ್ಲವೋ; ನೀನು ಮಣ್ಣೇ; ಪುನಃ
ಮಣ್ಣಿಗೆ ಸೇರತಕ್ಕವನಾಗಿದ್ದೀ
ಎಂದು ಹೇಳಿದನು.
20 ಆ ಮನುಷ್ಯನು ತನ್ನ ಹೆಂಡತಿಗೆ [1]ಹವ್ವ ಎಂದು
ಹೆಸರಿಟ್ಟನು; ಯಾಕಂದರೆ ಬದುಕುವವರೆಲ್ಲರಿಗೂ
21 ಅವಳೇ ಮೂಲಮಾತೆ. ಯೆಹೋವದೇವರು ಆದಾ
ಮನಿಗೂ ಅವನ ಹೆಂಡತಿಗೂ ಚರ್ಮದ ಅಂಗಿಗಳನ್ನು
22 ಮಾಡಿ ತೊಡಿಸಿದನು. ಮತ್ತು ಯೆಹೋವ
ದೇವರು—ಈ ಮನುಷ್ಯನು ಒಳ್ಳೇದರ ಕೆಟ್ಟದ್ದರ
ಭೇದವನ್ನರಿತು ನಮ್ಮಲ್ಲಿ ಒಬ್ಬನಂತಾದನಲ್ಲಾ. ಇದ
ರಿಂದ ಇವನು ಕೈಚಾಚಿ ಜೀವವೃಕ್ಷದ ಫಲವನ್ನು
ಸಹ ತೆಗೆದು ತಿಂದು ಶಾಶ್ವತವಾಗಿ ಬದುಕುವವನಾಗ
23 ಬಾರದು ಅಂದುಕೊಂಡು ಅವನು ಉತ್ಪತ್ತಿಯಾದ
ಭೂಮಿಯನ್ನೇ ವ್ಯವಸಾಯಮಾಡುವದಕ್ಕಾಗಿ ಅವ
24 ನನ್ನು ಏದೆನ್ ತೋಟದಿಂದ ಹೊರಡಿಸಿಬಿಟ್ಟನು. ಆದ
ಲ್ಲದೆ ಜೀವವೃಕ್ಷಕ್ಕೆ ಹೋಗುವ ದಾರಿಯನ್ನು ಕಾಯು
ವದಕ್ಕೆ ಆತನು ಏದೆನ್ ವನದ ಪೂರ್ವದಿಕ್ಕಿನಲ್ಲಿ
ಕೆರೂಬಿಯರನ್ನೂ ಧಗಧಗನೆ ಪ್ರಜ್ವಲಿಸುತ್ತಾ ಸು
ತ್ತುವ ಕತ್ತಿಯನ್ನೂ ಇರಿಸಿದನು.

### ಕಾಯಿನನು ತಮ್ಮನನ್ನು ಕೊಂದದ್ದು.

4 ಆ ಪುರುಷನು ತನ್ನ ಹೆಂಡತಿಯಾದ ಹವ್ವಳನ್ನು
ಕೂಡಲು ಆಕೆ ಗರ್ಭಿಣಿಯಾಗಿ ಕಾಯಿನನನ್ನು
ಹೆತ್ತು—ಯೆಹೋವನ ಅನುಗ್ರಹದಿಂದ ಗಂಡುಮಗು
2 ವನ್ನು [2]ಪಡೆದಿದ್ದೇನೆ ಎಂದು ಹೇಳಿದಳು. ತರು
ವಾಯ ಅವನ ತಮ್ಮನಾದ ಹೇಬೆಲನನ್ನು ಹೆತ್ತಳು.
ಹೇಬೆಲನು ಕುರಿಕಾಯುವವನಾದನು; ಕಾಯಿನನು
ವ್ಯವಸಾಯಮಾಡುವವನಾದನು.
3 ಕಾಲಾಂತರದಲ್ಲಿ ಕಾಯಿನನು ಹೊಲದ ಬೆಳೆ
ಯಲ್ಲಿ ಕೆಲವನ್ನು ತಂದು ಯೆಹೋವನಿಗೆ ಕಾಣಿಕೆ
4 ಯಾಗಿ ಸಮರ್ಪಿಸಿದನು. ಹೇಬೆಲನು ಹಾಗೆಯೇ
ತನ್ನ ಹಿಂಡಿನಿಂದ ಚೊಚ್ಚಲ ಕುರಿಗಳನ್ನು ಕಾಣಿಕೆ
ಯಾಗಿ ತಂದು ಅವುಗಳ ಕೊಬ್ಬನ್ನು ಹೋಮಮಾಡಿ
5 ದನು. ಯೆಹೋವನು ಹೇಬೆಲನನ್ನೂ ಅವನ ಕಾಣಿಕೆ
ಯನ್ನೂ ಮೆಚ್ಚಿ ಕಾಯಿನನನ್ನೂ ಅವನ ಕಾಣಿಕೆ
ಯನ್ನೂ ಮೆಚ್ಚಲಿಲ್ಲ. ಇದರಿಂದ ಕಾಯಿನನು ಬಹು
ಕೋಪಗೊಂಡನು; ಅವನ ಮುಖವು ಕಳೆಗುಂದಿತು. ಆಗ
ಯೆಹೋವನು ಅವನಿಗೆ—ಯಾಕೆ ಕೋಪಿಸಿಕೊಂಡಿ?
ನಿನ್ನ ತಲೆ ಯಾಕೆ ಬೊಗ್ಗಿತು? ಒಳ್ಳೇ ಕೆಲಸ ಮಾಡಿ
ದರೆ ನಿನ್ನ ತಲೆ ಎತ್ತಲ್ಪಡುವದಲ್ಲವೇ; ಅಲ್ಲದಿದ್ದರೆ
ಪಾಪವು ನಿನ್ನನ್ನು ಹಿಡಿಯಬೇಕೆಂದು ಬಾಗಲಲ್ಲಿ
ಹೊಂಚಿಕೊಂಡಿರುವದು; ಆದರೂ ನೀನು ಅದನ್ನು
ವಶಮಾಡಿಕೊಳ್ಳಬೇಕು ಎಂದು ಹೇಳಿದನು.
ತರುವಾಯ ಕಾಯಿನನು ತನ್ನ ತಮ್ಮನಾದ ಹೇಬೆ
ಲನಿಗೆ—ಅಡವಿಗೆ ಹೋಗೋಣ ಬಾ ಎಂದನು. ಅಡ
ವಿಗೆ ಬಂದಾಗ ಕಾಯಿನನು ತನ್ನ ತಮ್ಮನ ಮೇಲೆ
ಬಿದ್ದು ಅವನನ್ನು ಕೊಂದನು. ಯೆಹೋವನು
ಕಾಯಿನನನ್ನು—ನಿನ್ನ ತಮ್ಮನಾದ ಹೇಬೆಲನು ಎಲ್ಲಿ
ಎಂದು ಕೇಳಲು ಅವನು—ನಾನರಿಯೆ; ನನ್ನ ತಮ್ಮ
ನನ್ನು ಕಾಯುವವನು ನಾನೋ ಎಂದು ಉತ್ತರ
ಕೊಟ್ಟನು. ಆದಕ್ಕೆ ಯೆಹೋವನು—ನೀನು ಏನು
ಮಾಡಿದಿ? ನಿನ್ನ ತಮ್ಮನ ರಕ್ತವು ಭೂಮಿಯ ಕಡೆ
ಯಿಂದ ನನ್ನನ್ನು ಕೂಗುತ್ತದೆ, ಕೇಳು. ನೀನು ಸುರಿ
ಸಿದ ನಿನ್ನ ತಮ್ಮನ ರಕ್ತವನ್ನು ಕುಡಿದ ಈ ಭೂಮಿ
ಯನ್ನು ಬಿಟ್ಟುಹೋಗಬೇಕೆಂದು ನಿನಗೆ ಶಾಪ
ಬಂತು. ನೀನು ಭೂಮಿಯನ್ನು ವ್ಯವಸಾಯಮಾಡಿ
ದರೂ ಇದು ಇನ್ನು ಮುಂದೆ ನಿನಗೆ ಫಲಿಸುವದಿಲ್ಲ.
ನೀನು ಭೂಲೋಕದಲ್ಲಿ ಅಲೆಯುವವನೂ ದೇಶ
ಭ್ರಷ್ಟನೂ ಆಗಿರುವಿ ಅಂದನು. ಕಾಯಿನನು
ಯೆಹೋವನಿಗೆ—ನನ್ನ ಅಪರಾಧಫಲ ತಾಳಕೂಡ
ದಷ್ಟಾಗಿದೆ. ನೀನು ಈ ಹೊತ್ತು ನನ್ನನ್ನು ಸ್ವದೇಶ
ದಿಂದ ಹೊರಡಿಸುತ್ತೀಯಲ್ಲಾ; ನಿನ್ನ ಸಾನ್ನಿಧ್ಯವು
ತಪ್ಪಿತು; ನಾನು ಲೋಕದಲ್ಲಿ ಅಲೆಯುವವನೂ ದೇಶ
ಭ್ರಷ್ಟನೂ ಆಗಬೇಕಾಯಿತು. ಇದಲ್ಲದೆ ನನ್ನನ್ನು
ಕಂಡವರು ಕೊಲ್ಲುವರು ಎಂದು ಹೇಳಿದನು.
ಆದಕ್ಕೆ ಯೆಹೋವನು—ಕಾಯಿನನ ಪ್ರಾಣವನ್ನು
ತೆಗೆದವನಿಗೆ ಏಳರಷ್ಟು ಪ್ರತಿದಂಡನೆಯಾಗುವದು
ಎಂದು ಹೇಳಿ ಅವನನ್ನು ಕಂಡವರು ಕೊಲ್ಲಕೂಡ
ದಂತೆ ಅವನ ಮೇಲೆ ಒಂದು ಗುರುತಿಟ್ಟನು. ಕಾಯಿ
ನನು ಯೆಹೋವನ ಸನ್ನಿಧಾನದಿಂದ ಹೊರಟು
ನೋದು ಎಂಬ ದೇಶದಲ್ಲಿ ವಾಸಿಸಿದನು; ಅದು
ಏದೆನ್ ಸೀಮೆಗೆ ಮೂಡಲಲ್ಲಿರುವದು.

### ಕಲೆಗಳ ಉತ್ಪತ್ತಿ.

ಕಾಯಿನನು ತನ್ನ ಹೆಂಡತಿಯನ್ನು ಕೂಡಲು
ಅವಳು ಗರ್ಭಿಣಿಯಾಗಿ ಹನೋಕನನ್ನು ಹೆತ್ತಳು.
ಇದಲ್ಲದೆ ಕಾಯಿನನು ಒಂದು ಊರನ್ನು ಕಟ್ಟಿ
ಅದಕ್ಕೆ ಹನೋಕ ಎಂದು ತನ್ನ ಮಗನ ಹೆಸರಿಟ್ಟನು.
ಹನೋಕನಿಂದ ಈರಾದನು ಹುಟ್ಟಿದನು. ಈರಾದನು
ಮೆಹೂಯಾಯೇಲನನ್ನು ಪಡೆದನು. ಮೆಹೂಯಾ
ಯೇಲನು ಮೆತೂಷಾಯೇಲನನ್ನು ಪಡೆದನು.
ಮೆತೂಷಾಯೇಲನು ಲೆಮೆಕನನ್ನು ಪಡೆದನು.

1) ಹವ್ವ ಅಂದರೆ ಜೀವ. 2) ಪಡೆದಿದ್ದೇನೆ ಎಂಬದಕ್ಕೆ ಮೂಲಭಾಷೆಯಲ್ಲಿ ಕಾನೀತಿ.

19 ಲೆಮೆಕನು ಆದಾ ಚಿಲ್ಲಾ ಎಂಬ ಇಬ್ಬರು ಹೆಂಡ
20 ರನ್ನು ಮಾಡಿಕೊಂಡನು. ಆದಳು ಯಾಬಾಲನನ್ನು
ಹೆತ್ತಳು; ದನಕರುಗಳನ್ನು ಸಾಕುವವರಾಗಿದ್ದು
ಗುಡಾರಗಳಲ್ಲಿ ವಾಸಿಸುವವರೆಲ್ಲರ ಮೂಲಪುರು
21 ಷನು ಇವನೇ. ಅವನ ತಮ್ಮನ ಹೆಸರು ಯೂಬಾ
ಲನು; ಇವನು ಕಿನ್ನರಿಕೊಳಲುಗಳನ್ನು ನುಡಿ
22 ಸುವವರ ಮೂಲಪುರುಷನು. ಚಿಲ್ಲಾ ಎಂಬವಳು
ತೂಬಲ್‌ಕಾಯಿನನನ್ನು ಹೆತ್ತಳು; ಅವನು ಕುಲಿಮೆ
ಮಾಡಿ ಕಬ್ಬಿಣ ತಾಮ್ರದ ಆಯುಧಗಳನ್ನು ಕಲ್ಪಿಸಿ
ದವನು. ತೂಬಲ್‌ಕಾಯಿನನ ತಂಗಿ ನಯಮಾ.
23 ಲೆಮೆಕನು ತನ್ನ ಹೆಂಡತಿಯರಿಗೆ ಹೀಗೆಂದನು—
ಆದಾ, ಚಿಲ್ಲಾ, ನನ್ನ ಮಾತಿಗೆ ಕಿವಿಗೊಡಿರಿ;
ಲೆಮೆಕನ ಹೆಂಡತಿಯರೇ, ನಾನು ಹೇಳುವದನ್ನು
ಕೇಳಿರಿ.
ನನಗೆ ಗಾಯಮಾಡಿದ ಒಬ್ಬ ಮನುಷ್ಯನನ್ನು
ಕೊಂದೆನು;
ನನ್ನನ್ನು ಹೊಡೆದ ಒಬ್ಬ ಪ್ರಾಯಸ್ಥನನ್ನು ಹತ
ಮಾಡಿದೆನು.
24 ಕಾಯಿನನನ್ನು ಕೊಂದವನಿಗೆ ಏಳರಷ್ಟು ಪ್ರತಿ
ದಂಡನೆ ಬರುವದಾದರೆ
ಲೆಮೆಕನನ್ನು ಹೊಡೆಯುವವನಿಗೆ ಎಪ್ಪತ್ತೇಳ
ರಷ್ಟಾಗುವದಲ್ಲವೇ.
25 ಆದಾಮನು ತಿರಿಗಿ ತನ್ನ ಹೆಂಡತಿಯನ್ನು ಕೂಡಲು
ಆಕೆ ಗಂಡುಮಗುವನ್ನು ಹೆತ್ತು—ಕಾಯಿನನು
ಕೊಂದುಹಾಕಿದ ಹೇಬೆಲನಿಗೆ ಬದಲಾಗಿ ದೇವರು
ನನಗೆ ಬೇರೆ ಸಂತಾನವನ್ನು ನೇಮಿಸಿದನೆಂದು ಆ
26 ಮಗುವಿಗೆ 1)ಸೇತನೆಂಬ ಹೆಸರಿಟ್ಟಳು. ತರುವಾಯ
ಸೇತನು ಸಹ ಮಗುವನ್ನು ಪಡೆದು ಅವನಿಗೆ ಎನೋಷ್
ಎಂಬ ಹೆಸರಿಟ್ಟನು; ಆ ಕಾಲದಲ್ಲಿ ಯೆಹೋವ ಎಂಬ
ಹೆಸರನ್ನು ಹೇಳಿಕೊಂಡು ಆರಾಧಿಸುವದಕ್ಕೆ ಪ್ರಾರಂಭ
ವಾಯಿತು.

ಜಲಪ್ರಳಯಕ್ಕೆ ಮುಂಚೆ ಬದುಕಿದ ಹತ್ತು ಮಂದಿ
ಮಹಾಪುರುಷರ ಚರಿತ್ರೆ.

5 ಆದಾಮನ ವಂಶದವರ ಚರಿತ್ರೆಯು—ದೇವರು ಸೃಷ್ಟಿ
ಕಾಲದಲ್ಲಿ ಮನುಷ್ಯನನ್ನು ತನ್ನ ಹೋಲಿಕೆಗೆ ಸರಿ
2 ಯಾಗಿ ಉಂಟುಮಾಡಿದನು. ಅವರನ್ನು ಗಂಡು
ಹೆಣ್ಣಾಗಿ ಉಂಟುಮಾಡಿದನು. ಇದಲ್ಲದೆ ಅದೇ
ದಿವಸದಲ್ಲಿ ಅವರನ್ನು ಆಶೀರ್ವದಿಸಿ ಅವರಿಗೆ
ಮನುಷ್ಯ ಎಂದು ಹೆಸರಿಟ್ಟನು.
3 ಆದಾಮನು ನೂರಮೂವತ್ತು ವರುಷದವನಾದಾಗ
ರೂಪದಲ್ಲಿ ತನ್ನ ಹೋಲಿಕೆಗೆ ಸರಿಯಾದ ಮಗನನ್ನು
4 ಪಡೆದು ಅವನಿಗೆ ಸೇತನೆಂದು ಹೆಸರಿಟ್ಟನು. ಸೇತನು
ಹುಟ್ಟಿದ ಮೇಲೆ ಆದಾಮನು ಗಂಡು ಹೆಣ್ಣು ಮಕ್ಕ
ಳನ್ನು ಪಡೆದು ಎಂಟುನೂರು ವರುಷ ಬದುಕಿದನು.
5 ಅವನು ಒಟ್ಟು ಒಂಭೈನೂರ ಮೂವತ್ತು ವರುಷ
ಬದುಕಿ ಸತ್ತನು.

ಸೇತನು ನೂರ ಐದು ವರುಷದವನಾದಾಗ ಎನೋ 6
ಷನನ್ನು ಪಡೆದನು. ಎನೋಷನು ಹುಟ್ಟಿದ ಮೇಲೆ 7
ಸೇತನು ಗಂಡು ಹೆಣ್ಣು ಮಕ್ಕಳನ್ನು ಪಡೆದು ಎಂಟು
ನೂರ ಏಳು ವರುಷ ಬದುಕಿದನು. ಅವನು ಒಟ್ಟು 8
ಒಂಭೈನೂರ ಹನ್ನೆರಡು ವರುಷ ಬದುಕಿ ಸತ್ತನು.
ಎನೋಷನು ತೊಂಭತ್ತು ವರುಷದವನಾದಾಗ 9
ಕೇನಾನನನ್ನು ಪಡೆದನು. ಕೇನಾನನು ಹುಟ್ಟಿದ 10
ಮೇಲೆ ಎನೋಷನು ಗಂಡು ಹೆಣ್ಣು ಮಕ್ಕಳನ್ನು
ಪಡೆದು ಎಂಟುನೂರ ಹದಿನೈದು ವರುಷ ಬದುಕಿ
ದನು. ಅವನು ಒಟ್ಟು ಒಂಭೈನೂರ ಐದು ವರುಷ 11
ಬದುಕಿ ಸತ್ತನು.
ಕೇನಾನನು ಎಪ್ಪತ್ತು ವರುಷದವನಾದಾಗ ಮಹಲ 12
ಲೇಲನನ್ನು ಪಡೆದನು. ಮಹಲಲೇಲನು ಹುಟ್ಟಿದ 13
ಮೇಲೆ ಕೇನಾನನು ಗಂಡು ಹೆಣ್ಣು ಮಕ್ಕಳನ್ನು
ಪಡೆದು ಎಂಟುನೂರ ನಾಲ್ವತ್ತು ವರುಷ ಬದುಕಿ
ದನು. ಅವನು ಒಟ್ಟು ಒಂಭೈನೂರ ಹತ್ತು ವರುಷ 14
ಬದುಕಿ ಸತ್ತನು.
ಮಹಲಲೇಲನು ಅರುವತ್ತೈದು ವರುಷದವ 15
ನಾದಾಗ ಯೆರೆದನನ್ನು ಪಡೆದನು. ಯೆರೆದನು 16
ಹುಟ್ಟಿದ ಮೇಲೆ ಮಹಲಲೇಲನು ಗಂಡು ಹೆಣ್ಣು
ಮಕ್ಕಳನ್ನು ಪಡೆದು ಎಂಟುನೂರ ಮೂವತ್ತು ವರುಷ
ಬದುಕಿದನು. ಅವನು ಒಟ್ಟು ಎಂಟುನೂರ ತೊಂಭ 17
ತ್ತೈದು ವರುಷ ಬದುಕಿ ಸತ್ತನು.
ಯೆರೆದನು ನೂರ ಅರುವತ್ತೆರಡು ವರುಷದವ 18
ನಾದಾಗ ಹನೋಕನನ್ನು ಪಡೆದನು. ಹನೋಕನು 19
ಹುಟ್ಟಿದ ಮೇಲೆ ಯೆರೆದನು ಎಂಟುನೂರು ವರುಷ
ಬದುಕಿದನು. ಅವನು ಒಟ್ಟು ಒಂಭೈನೂರ ಅರುವ 20
ತ್ತೆರಡು ವರುಷ ಬದುಕಿ ಸತ್ತನು.
ಹನೋಕನು ಅರುವತ್ತೈದು ವರುಷದವನಾದಾಗ 21
ಮೆತೂಷೆಲಹನನ್ನು ಪಡೆದನು. ಮೆತೂಷೆಲಹನು 22
ಹುಟ್ಟಿದ ಮೇಲೆ ಹನೋಕನು ಗಂಡು ಹೆಣ್ಣು ಮಕ್ಕ
ಳನ್ನು ಪಡೆದು ದೇವರ ಅನ್ಯೋನ್ಯತೆಯಲ್ಲಿ
ಮುನ್ನೂರು ವರುಷ ಬದುಕಿದನು. ಅವನು ಬದು 23
ಕಿದ ಕಾಲವೆಲ್ಲಾ ಮುನ್ನೂರ ಅರುವತ್ತೈದು ವರುಷ.
ಹನೋಕನು ದೇವರೊಂದಿಗೆ ಅನ್ಯೋನ್ಯವಾಗಿ ನಡೆದು 24
ಕೊಳ್ಳುತ್ತಾ ಇರುವಾಗ ದೇವರು ಅವನನ್ನು ಕರೆದು
ಕೊಂಡದ್ದರಿಂದ ಕಾಣದೆಹೋದನು.
ಮೆತೂಷೆಲಹನು ನೂರ ಎಂಭತ್ತೇಳು ವರುಷದವ 25
ನಾದಾಗ ಲೆಮೆಕನನ್ನು ಪಡೆದನು. ಲೆಮೆಕನು 26
ಹುಟ್ಟಿದ ಮೇಲೆ ಮೆತೂಷೆಲಹನು ಗಂಡು ಹೆಣ್ಣು
ಮಕ್ಕಳನ್ನು ಪಡೆದು ಏಳುನೂರ ಎಂಭತ್ತೆರಡು
ವರುಷ ಬದುಕಿದನು. ಅವನು ಒಟ್ಟು ಒಂಭೈನೂರ 27
ಅರುವತ್ತೊಂಭತ್ತು ವರುಷ ಬದುಕಿ ಸತ್ತನು.
ಲೆಮೆಕನು ನೂರ ಎಂಬತ್ತೆರಡು ವರುಷದವ 28
ನಾದಾಗ ಒಬ್ಬ ಮಗನನ್ನು ಪಡೆದು—ಯೆಹೋವನು 29
ಶಪಿಸಿದ ಭೂಮಿಯಿಂದ ನಮಗೆ ಉಂಟಾದ ಕೈಕಷ್ಟ
ದಲ್ಲಿಯೂ ಶ್ರಮೆಯಲ್ಲಿಯೂ ಈ ಮಗನು ನಮ್ಮನ್ನು
ಉಪಶಮನಗೊಳಿಸುವನು ಎಂದು ಹೇಳಿ ಅವನಿಗೆ

1) ಸೇತ್ ಅಂದರೆ ನೇಮಿಸಲ್ಪಟ್ಟವನು.

30 1)ನೋಹ ಎಂದು ಹೆಸರಿಟ್ಟನು. ನೋಹನು ಹುಟ್ಟಿದ
ಮೇಲೆ ಲೆಮೆಕನು ಗಂಡು ಹೆಣ್ಣು ಮಕ್ಕಳನ್ನು
ಪಡೆದು ಐನೂರ ತೊಂಭತ್ತೈದು ವರುಷ ಬದುಕಿದನು.
31 ಅವನು ಒಟ್ಟು ಏಳುನೂರ ಎಪ್ಪತ್ತೇಳು ವರುಷ
ಬದುಕಿ ಸತ್ತನು.
32 ನೋಹನು ಐನೂರು ವರುಷದವನಾದಾಗ ಶೇಮ್,
ಹಾಮ್, ಯೆಫೆತ್ ಎಂಬ ಮೂರು ಮಂದಿ ಮಕ್ಕ
ಳನ್ನು ಪಡೆದನು.

ಜಲಪ್ರಳಯ.

6 ಭೂಮಿಯ ಮೇಲೆ ಜನರು ಹೆಚ್ಚುತ್ತಾ ಅವರಿಗೆ
ಹೆಣ್ಣು ಮಕ್ಕಳು ಹುಟ್ಟಲು ದೇವಪುತ್ರರು ಮನುಷ್ಯ
2 ಪುತ್ರಿಯರ ಸೌಂದರ್ಯವನ್ನು ನೋಡಿ ತಮಗೆ ಇಷ್ಟ
ರಾದವರನ್ನು ಹೆಂಡರನ್ನಾಗಿ ಮಾಡಿಕೊಂಡರು.
3 ಆಗ ಯೆಹೋವನು—2)ನನ್ನ ಆತ್ಮವು ಮನುಷ್ಯ
ರಲ್ಲಿ ಶಾಶ್ವತವಾಗಿರುವದಿಲ್ಲ; ಅವರು ಭ್ರಷ್ಟರಾದದ
ರಿಂದ ಮರ್ತ್ಯರೇ. ಅವರ ಆಯುಷ್ಯವು ನೂರ
ಇಪ್ಪತ್ತು ವರುಷವಾಗಿರಲಿ ಅಂದನು.
4 ಆ ಕಾಲದಲ್ಲಿ ಅಂದರೆ ದೇವಪುತ್ರರು ಮನುಷ್ಯ
ಪುತ್ರಿಯರನ್ನು ಕೂಡಿ ಅವರಲ್ಲಿ ಮಕ್ಕಳನ್ನು ಪಡೆ
ಯುವ ಕಾಲದಲ್ಲಿ 3)ಮಹಾಶರೀರಿಗಳು ಭೂಮಿಯ
ಮೇಲಿದ್ದರು; ಅನಂತರದಲ್ಲಿಯೂ ಇದ್ದರು, ಪೂರ್ವ
ದಲ್ಲಿ ಹೆಸರುಗೊಂಡ ಪರಾಕ್ರಮಶಾಲಿಗಳು ಇವರೇ.
5 ಮನುಷ್ಯರ ಕೆಟ್ಟತನವು ಭೂಮಿಯ ಮೇಲೆ ಹೆಚ್ಚಾ
ಗಿರುವದನ್ನೂ ಅವರು ಹೃದಯದಲ್ಲಿ ಯೋಚಿಸುವ
ದೆಲ್ಲವು ಯಾವಾಗಲೂ ಬರೀ ಕೆಟ್ಟದ್ದಾಗಿರುವದನ್ನೂ
6 ಯೆಹೋವನು ನೋಡಿ ತಾನು ಭೂಮಿಯ ಮೇಲೆ
ಮನುಷ್ಯರನ್ನು ಉಂಟುಮಾಡಿದ್ದಕ್ಕೆ ಪಶ್ಚಾತ್ತಾಪ
ಪಟ್ಟು ತನ್ನ ಹೃದಯದಲ್ಲಿ ನೊಂದುಕೊಂಡನು.
7 ಮತ್ತು ಯೆಹೋವನು—ನಾನು ಸೃಷ್ಟಿಸಿದ ಮನುಷ್ಯ
ಜಾತಿಯನ್ನು ಭೂಮಿಯ ಮೇಲಿನಿಂದ ಅಳಿಸಿಬಿಡು
ವೆನು; ಅದನ್ನು ಉಂಟುಮಾಡಿದ್ದಕ್ಕೆ ನನ್ನಲ್ಲಿ ಪಶ್ಚಾ
ತ್ತಾಪಹುಟ್ಟಿತು; ಮನುಷ್ಯರೊಂದಿಗೆ ಸಕಲಮೃಗ
ಕ್ರಿಮಿಪಕ್ಷಿಗಳನ್ನೂ ಅಳಿಸಿಬಿಡುವೆನು ಅಂದುಕೊಂಡನು.
8 ಆದರೆ ನೋಹನಿಗೆ ಯೆಹೋವನ ದಯವು ದೊರಕಿತು.
9 ನೋಹನ ಚರಿತ್ರೆಯು—ನೋಹನು ನೀತಿವಂತ
ನೂ ತನ್ನ ಕಾಲದವರಲ್ಲಿ ತಪ್ಪಿಲ್ಲದವನೂ ಆಗಿದ್ದನು;
ಅವನು ದೇವರೊಂದಿಗೆ ಅನ್ಯೋನ್ಯವಾಗಿ ನಡೆದು
10 ಕೊಂಡನು. ಶೇಮ್, ಹಾಮ್, ಯೆಫೆತ್ ಎಂಬ
11 ಮೂರು ಮಂದಿ ಮಕ್ಕಳನ್ನು ಪಡೆದನು. ಭೂಲೋಕ
ದವರು ದೇವರ ದೃಷ್ಟಿಗೆ ಕೆಟ್ಟುಹೋಗಿದ್ದರು;
ಅನ್ಯಾಯವು ಲೋಕವನ್ನು ತುಂಬಿಕೊಂಡಿತು.
12 ದೇವರು ಲೋಕವನ್ನು ನೋಡಿದಾಗ ಅದು ಕೆಟ್ಟು
ಹೋಗಿತ್ತು; ಭೂನಿವಾಸಿಗಳೆಲ್ಲರೂ ತಮ್ಮ ನಡವಳಿಕೆ
ಯನ್ನು ಕೆಡಿಸಿಕೊಂಡಿದ್ದರು.
13 ಆಗ ದೇವರು ನೋಹನಿಗೆ—ಎಲ್ಲಾ ದೇಹಿಗಳಿಗೂ

ಅಂತ್ಯವನ್ನು ತೀರ್ಮಾನಿಸಿದ್ದೇನೆ; ಭೂಲೋಕ
ಅವರ ಅನ್ಯಾಯದಿಂದ ತುಂಬಿ ಅದೆ; ನಾನು ಅ
ರನ್ನೂ ಭೂಮಿಯ ಮೇಲಿರುವದೆಲ್ಲವನ್ನೂ ಅಳಿ
ಬಿಡುತ್ತೇನೆ. ನೀನು ತುರಾಯಿ ಮರದಿಂದ ನಾ
ಯನ್ನು ಮಾಡಿಕೋ; ಅದರಲ್ಲಿ ತುಂಬ ಕೋ
ಗಳು ಇರಬೇಕು; ಒಳಕ್ಕೂ ಹೊರಕ್ಕೂ ರಾಳವನ
ಹಚ್ಚು. ನೀನು ಅದನ್ನು ಮಾಡಬೇಕಾದ ವಿಧಾ
ಹೇಗಂದರೆ—ಅದು ಮುನ್ನೂರು ಮೊಳ ಉದ್ದ
ಐವತ್ತು ಮೊಳ ಅಗಲವೂ ಮೂವತ್ತು ಮೊಳ ಎ
ರವೂ ಉಳ್ಳದ್ದಾಗಿರಬೇಕು. ಅದರ ಚಾವಣಿ
ಕೆಳಗೆ ಸುತ್ತಲೂ ಒಂದು ಮೊಳ ಎತ್ತರದ ಬೆಳಕ
ಕಂಡಿಯನ್ನು ಮಾಡಬೇಕು; ಪಕ್ಕದಲ್ಲಿ ಬಾಗಲನ್ನಿ
ಬೇಕು. ನಾವೆಯಲ್ಲಿ ಒಂದರ ಮೇಲೆ ಒಂದಾ
ಮೂರು ಅಂತಸ್ತುಗಳನ್ನು ಮಾಡಬೇಕು. ನಾನಂತ
ಭೂಮಿಯ ಮೇಲೆ ಜಲಪ್ರಳಯವನ್ನು ಬರಮಾ
ಆಕಾಶದ ಕೆಳಗಿರುವ ಸಕಲಪ್ರಾಣಿಗಳನ್ನೂ ಅಳಿ
ಬಿಡುವೆನು; ಭೂಮಿಯಲ್ಲಿರುವ ಸಮಸ್ತವೂ ಲಯ
ವಾಗುವದು. ಆದರೆ ನಿನ್ನ ಕೂಡ ನನ್ನ ನಿಬಂಧ
ಯನ್ನು ಮಾಡುತ್ತೇನೆ. ನೀನು ಹೆಂಡತಿ ಮಕ್ಕಳ
ಸೊಸೆಯರು ಸಹಿತವಾಗಿ ನಾವೆಯಲ್ಲಿ ಸೇರಬೇಕ
ಇದಲ್ಲದೆ ಜೀವಿಗಳ ಪ್ರತಿಜಾತಿಯಲ್ಲಿಯೂ ಒಂದ
ಗಂಡು ಒಂದು ಹೆಣ್ಣು ಹೀಗೆ ಎರಡೆರಡನ್ನು ನಾ
ಯಲ್ಲಿ ಸೇರಿಸಿ ನಿನ್ನೊಂದಿಗೆ ಉಳಿಸಿ ಕಾಪಾಡಬೇಕು
ಪಶು, ಪಕ್ಷಿ, ಕ್ರಿಮಿ ಇವುಗಳ ಸಕಲಜಾತಿಗ
ಲ್ಲಿಯೂ ಎರಡೆರಡು ಬದುಕುವದಕ್ಕಾಗಿ ನಿನ್ನ ಬಳಿ
ಬರುವವು. ಮತ್ತು ನಿನಗೂ ಅವುಗಳಿಗೂ ಪೋಷ
ಯಾಗುವಂತೆ ಸಕಲವಿಧವಾದ ಆಹಾರಪದಾರ್ಥ
ಗಳನ್ನು ನಿನ್ನ ಬಳಿಯಲ್ಲಿ ಕೂಡಿಸಿಡಬೇಕು ಎಂದ
ಹೇಳಿದನು. ದೇವರು ಅಪ್ಪಣೆಕೊಟ್ಟ ಪ್ರಕಾರವ
ನೋಹನು ಮಾಡಿದನು.
ಆಗ ಯೆಹೋವನು ನೋಹನಿಗೆ—ನೀನೂ ನಿನ್ನ
ಮನೆಯವರೆಲ್ಲರೂ ನಾವೆಯಲ್ಲಿ ಸೇರಿರಿ; ಈಗಿನವರಲ್ಲಿ
ನೀನೊಬ್ಬನೇ ನನ್ನ ಮುಂದೆ ನೀತಿವಂತನಾಗಿ ನಡೆಯು
ವದನ್ನು ನೋಡಿದ್ದೇನೆ. ಎಲ್ಲಾ ಶುದ್ಧಪಶುಗಳಲ್ಲಿ
ಏಳೇಳು ಗಂಡುಹೆಣ್ಣುಗಳನ್ನೂ ಶುದ್ಧವಲ್ಲದ ಪಶು
ಳಲ್ಲಿ ಎರಡೆರಡು ಗಂಡುಹೆಣ್ಣುಗಳನ್ನೂ ನಿನ್ನೊಂದಿಗೆ ತೆ
ದುಕೋ. ಪಕ್ಷಿಗಳಲ್ಲಿಯೂ ಏಳೇಳು ಗಂಡುಹೆಣ್ಣು
ಳನ್ನು ತೆಗೆದುಕೋ. ಹೀಗೆ ಆಯಾ ಜಾತಿಯನ್ನು ಭೂ
ಮಿಯ ಮೇಲೆ ಉಳಿಸಿ ಕಾಪಾಡಬೇಕು. ಏಳು ದಿ
ಗಳನಂತರ ನಾನು ಭೂಮಿಯ ಮೇಲೆ ನಾಲ್ವತ್ತು ದಿವ
ಹಗಲಿರುಳು ಮಳೆಯನ್ನು ಸುರಿಸಿ ನನ್ನಿಂದಾದ ಜೀ
ರಾಶಿಗಳನ್ನೆಲ್ಲಾ ಭೂಮಿಯ ಮೇಲಿನಿಂದ ಅಳಿಸಿಬಿಡು
ತ್ತೇನೆ ಎಂದು ಹೇಳಿದನು. ಯೆಹೋವನು ಆಜ್ಞಾ
ಸಿದ್ದನ್ನೆಲ್ಲಾ ನೋಹನು ಮಾಡಿದನು.
ಭೂಮಿಯ ಮೇಲೆ ಜಲಪ್ರಳಯವುಂಟಾದಾ
ನೋಹನು ಆರುನೂರು ವರುಷದವನಾಗಿದ್ದನ
ಆಗ ನೋಹನು ಪ್ರಳಯವನ್ನು ತಪ್ಪಿಸಿಕೊಳ್ಳ

1) ನೋಹ ಅಂದರೆ ಉಪಶಮನ. 2) ಅಥವಾ : ನನ್ನ ಆತ್ಮವು ಮನುಷ್ಯರೊಡನೆ ಯಾವಾಗಲೂ ವಾದಿಸುವದಿಲ್ಲ. 3) ನ
ನೆಫೀಲಿಯರು.

ದಕ್ಕೆ ಹೆಂಡತಿ ಮಕ್ಕಳು ಸೊಸೆಯರು ಸಹಿತವಾಗಿ
8 ನಾವೆಯಲ್ಲಿ ಸೇರಿದನು. ದೇವರು ನೋಹನಿಗೆ
ಅಪ್ಪಣೆಕೊಟ್ಟಂತೆ ಶುದ್ಧಾಶುದ್ಧ ಪಶುಗಳಲ್ಲಿಯೂ
9 ಪಕ್ಷಿಗಳಲ್ಲಿಯೂ ಕ್ರಿಮಿಕೀಟಗಳಲ್ಲಿಯೂ ಗಂಡು
ಹೆಣ್ಣುಗಳು ಜೋಡಿಜೋಡಿಯಾಗಿ ಬಂದು ನೋಹನ
10 ಬಳಿಗೆ ನಾವೆಯಲ್ಲಿ ಸೇರಿದವು. ಆ ಏಳು ದಿವಸ
ಗಳಾದನಂತರ ಜಲಪ್ರಳಯವು ಭೂಮಿಯ ಮೇಲೆ
11 ಬಂತು. ನೋಹನ ಜೀವಮಾನದ ಆರುನೂರನೆಯ
ವರುಷದ ಎರಡನೆಯ ತಿಂಗಳಿನ ಹದಿನೇಳನೆಯ ದಿನ
ದಲ್ಲಿ ಭೂಮಿಯ ಕೆಳಗಿರುವ ಸಾಗರದ ಸೆಲೆಗಳು ಒಡೆ
12 ದವು; ಆಕಾಶದ ತೂಬುಗಳು ತೆರೆದವು. ನಾಲ್ವತ್ತು
ದಿನವೂ ಹಗಲಿರುಳು ಭೂಮಿಯ ಮೇಲೆ ದೊಡ್ಡ
13 ಮಳೆ ಸುರಿಯಿತು. ಆ ದಿನದಲ್ಲಿ ನೋಹನೂ
ಶೇಮ್ ಹಾಮ್ ಯೆಫೆತರೆಂಬ ಅವನ ಮಕ್ಕಳೂ
ಅವನ ಹೆಂಡತಿಯೂ ಮೂರು ಮಂದಿ ಸೊಸೆಯರೂ
14 ನಾವೆಯಲ್ಲಿ ಸೇರಿದರು. ಎಲ್ಲಾ ಪ್ರಾಣಿಗಳಲ್ಲಿ
ಅಂದರೆ ಸಕಲವಿಧವಾದ ಮೃಗಪಶುಕ್ರಿಮಿಕೀಟಗಳ
ಲ್ಲಿಯೂ ಪಕ್ಷಿ ಮೊದಲಾದ ರೆಕ್ಕೆಯಿರುವ ಎಲ್ಲಾ
15 ಜೀವಿಗಳಲ್ಲಿಯೂ ಎರಡೆರಡು ತಮ್ಮ ತಮ್ಮ ಜಾತಿ
ಗನುಸಾರವಾಗಿ ನೋಹನ ಬಳಿಗೆ ಬಂದು ನಾವೆ
16 ಯಲ್ಲಿ ಸೇರಿದವು. ದೇವರು ನೋಹನಿಗೆ ಅಪ್ಪಣೆ
ಕೊಟ್ಟಂತೆ ಎಲ್ಲಾ ಪ್ರಾಣಿಗಳಲ್ಲಿ ಒಂದು ಗಂಡು
ಒಂದು ಹೆಣ್ಣು ಈ ಮೇರೆಗೆ ಸೇರಿದವು. ಯೆಹೋವ
17 ನು ನೋಹನನ್ನು ಒಳಗಿಟ್ಟು ಮುಚ್ಚಿದನು. ಜಲ
ಪ್ರಳಯವು ನಾಲ್ವತ್ತು ದಿನ ಭೂಮಿಯ ಮೇಲೆ
ಇದ್ದು ನೀರು ಹೆಚ್ಚುತ್ತಾ ನಾವೆಯನ್ನು ಎತ್ತಲು
18 ಅದು ನೀರಿನ ಮೇಲೆ ತೇಲಾಡಿತು. ನೀರು ಪ್ರಬಲ
ವಾಗಿ ಬಲು ಹೆಚ್ಚಲು ನಾವೆಯು ಅದರ ಮೇಲೆ
19 ಚಲಿಸಿತು. ನೀರು ಭೂಮಿಯ ಮೇಲೆ ಅತ್ಯಧಿಕ
ವಾಗಿ ಪ್ರಬಲವಾದ್ದರಿಂದ ಆಕಾಶಮಂಡಲದ ಕೆಳಗಿರುವ
20 ಎಲ್ಲಾ ದೊಡ್ಡ ಬೆಟ್ಟಗಳೂ ಮುಚ್ಚಿಹೋದವು. ನೀರು
ಆ ಬೆಟ್ಟಗಳಿಗಿಂತಲೂ ಹದಿನೈದು ಮೊಳ ಹೆಚ್ಚಲು
ಅವುಗಳು ಸಂಪೂರ್ಣವಾಗಿ ಮುಚ್ಚಿಹೋದದರಿಂದ
21 ಪಶುಪಕ್ಷಿಮೃಗಕ್ರಿಮಿಗಳು ಮನುಷ್ಯರು ಸಹಿತವಾಗಿ
ಭೂಮಿಯ ಮೇಲೆ ಸಂಚರಿಸುವ ಸಕಲಪ್ರಾಣಿಗಳೂ
22 ಲಯವಾದವು. ಮೂಗಿನಿಂದ ಶ್ವಾಸಬಿಡುವ ಭೂ
23 ಜಂತುಗಳೆಲ್ಲಾ ಸತ್ತವು. ಮನುಷ್ಯರು ಮೊದಲು
ಗೊಂಡು ಪಶುಪಕ್ಷಿಕ್ರಿಮಿಗಳ ವರೆಗೂ ಭೂಮಿಯ
ಮೇಲಿದ್ದದ್ದೆಲ್ಲಾ ನಾಶವಾಯಿತು; ಅವು ಭೂಮಿಯ
ಮೇಲಿನಿಂದ ಲಯವಾಗಿ ಹೋದವು. ನೋಹನೂ
ಅವನೊಂದಿಗೆ ನಾವೆಯಲ್ಲಿದ್ದ ಜೀವಿಗಳೂ ಮಾತ್ರ
ಉಳಿದರು.

24 ಪ್ರಳಯದ ನೀರು ಭೂಮಿಯ ಮೇಲೆ ನೂರೈವತ್ತು
8 ದಿನ ಪ್ರಬಲವಾಯಿತು. ತರುವಾಯ ದೇವರು
ನೋಹನನ್ನೂ ಅವನ ಸಂಗಡ ನಾವೆಯಲ್ಲಿದ್ದ ಎಲ್ಲಾ
ಮೃಗಪಶುಗಳನ್ನೂ ನೆನಪಿಗೆ ತಂದುಕೊಂಡು ಭೂ
ಲೋಕದ ಮೇಲೆ ಗಾಳಿಬೀಸುವಂತೆ ಮಾಡಲಾಗಿ
2 ನೀರು ತಗ್ಗಿತು. ಭೂಮಿಯ ಕೆಳಗಿರುವ ಸಾಗರದ
ಸೆಲೆಗಳೂ ಆಕಾಶದ ತೂಬುಗಳೂ ಮುಚ್ಚಿಹೋದವು.
ಆಕಾಶದಿಂದ ಸುರಿಯುತ್ತಿದ್ದ ಮಳೆ ನಿಂತು
ಹೋಯಿತು. ಆಗ ಭೂಮಿಯ ಮೇಲಿದ್ದ ನೀರು
ಕ್ರಮವಾಗಿ ತಗ್ಗುತ್ತಾ ಬಂತು. ಹೀಗೆ ನೂರೈವತ್ತು 3
ದಿನಗಳಾದ ಮೇಲೆ ನೀರು ಕಡಿಮೆಯಾಯಿತು.

ಏಳನೆಯ ತಿಂಗಳಿನ ಹದಿನೇಳನೆಯ ದಿನದಲ್ಲಿ 4
ನಾವೆಯು ಅರಾರಾಟ್ ಸೀಮೆಯ ಬೆಟ್ಟಗಳಲ್ಲಿ
ನಿಂತಿತು. ಹತ್ತನೆಯ ತಿಂಗಳಿನ ವರೆಗೂ ನೀರು 5
ಕಡಿಮೆ ಕಡಿಮೆಯಾಗುತ್ತಾ ಬಂತು. ಹತ್ತನೆಯ
ತಿಂಗಳಿನ ಮೊದಲನೆಯ ದಿನದಲ್ಲಿ ಬೆಟ್ಟಗಳ ಶಿಖರಗಳು
ಕಾಣಬಂದವು.

ನಾಲ್ವತ್ತು ದಿನಗಳಾದ ಮೇಲೆ ನೋಹನು ತಾನು 6
ಮಾಡಿದ ನಾವೆಯ ಕಿಟಿಕಿಯನ್ನು ತೆರೆದು ಕಾಗೆ
ಯನ್ನು ಹೊರಕ್ಕೆ ಬಿಟ್ಟನು. ಭೂಮಿಯ ಮೇಲಿದ್ದ 7
ನೀರು ಒಣಗುವ ತನಕ ಆ ಕಾಗೆ ಹೋಗುತ್ತಾ
ಬರುತ್ತಾ ಇತ್ತು. ಹೀಗಿರಲಾಗಿ ನೀರು ಇಳಿಯಿತೋ 8
ಇಲ್ಲವೋ ಎಂದು ತಿಳುಕೊಳ್ಳುವದಕ್ಕೆ ನೋಹನು
ಪಾರಿವಾಳವನ್ನು ಹೊರಕ್ಕೆ ಬಿಟ್ಟನು. ನೀರು 9
ಭೂಮಿಯ ಮೇಲೆಲ್ಲಾ ಇರುವದರಿಂದ ಪಾರಿವಾಳವು
ಕಾಲಿಡುವದಕ್ಕೆ ಸ್ಥಳವನ್ನು ಎಲ್ಲಿಯೂ ಕಾಣದೆ
ತಿರಿಗಿ ನಾವೆಗೆ ಬಂತು. ನೋಹನು ಕೈಚಾಚಿ
ಅದನ್ನು ಹಿಡಿದು ನಾವೆಯಲ್ಲಿ ತನ್ನ ಬಳಿಗೆ ತೆಗೆದು
ಕೊಂಡನು. ಅವನು ಇನ್ನೂ ಏಳು ದಿವಸ ತಡೆದು 10
ಪಾರಿವಾಳವನ್ನು ತಿರಿಗಿ ಹೊರಕ್ಕೆ ಬಿಟ್ಟನು. ಸಂಜೆ 11
ಯಲ್ಲಿ ಆ ಪಾರಿವಾಳವು ಅವನ ಬಳಿಗೆ ತಿರಿಗಿ ಬರಲು,
ಆಹಾ, ಅದರ ಬಾಯಲ್ಲಿ ಎಣ್ಣೇಮರದ ಹೊಸ
ಚಿಗುರು ಇತ್ತು. ನೋಹನು ಅದನ್ನು ನೋಡಿ
ನೀರು ಭೂಮಿಯ ಮೇಲಿಂದ ಹರಿದು ಇಳಿದು
ಹೋಯಿತೆಂದು ತಿಳುಕೊಂಡನು. ಮತ್ತೇಳು ದಿವ 12
ಸದ ಮೇಲೆ ಪಾರಿವಾಳವನ್ನು ಬಿಡಲು ಅದು ಅವನ
ಬಳಿಗೆ ತಿರಿಗಿ ಬರಲೇ ಇಲ್ಲ. ಆರುನೂರ ಒಂದನೆಯ 13
ವರುಷದ ಮೊದಲನೆಯ ತಿಂಗಳಿನ ಮೊದಲನೆಯ
ದಿನದಲ್ಲಿ ಭೂಮಿಯ ಮೇಲಿದ್ದ ನೀರು ಇಳಿದಿತ್ತು.
ನೋಹನು ನಾವೆಯ ಗವಸಣಿಗೆಯನ್ನು ತೆಗೆದು
ನೋಡಲಾಗಿ, ಆಹಾ, ಭೂಮಿಯು ಆರಿಹೋಗಿತ್ತು.
ಎರಡನೆಯ ತಿಂಗಳಿನ ಇಪ್ಪತ್ತೇಳನೆಯ ದಿನದಲ್ಲಿ 14
ಭೂಮಿಯು ಒಣಗಿತ್ತು.

ಆಗ ದೇವರು ನೋಹನಿಗೆ—ನೀನು ಹೆಂಡತಿ 15, 16
ಮಕ್ಕಳು ಸೊಸೆಯರು ಸಹಿತವಾಗಿ ನಾವೆಯನ್ನು
ಬಿಟ್ಟು ಹೊರಗೆ ಬಾ; ನಿನ್ನ ಬಳಿಯಲ್ಲಿರುವ ಪಶು, 17
ಪಕ್ಷಿ, ಕ್ರಿಮಿ ಮುಂತಾದ ಎಲ್ಲಾ ಜೀವಿಗಳೂ ಹೊರಗೆ
ಬರಲಿ; ಅವುಗಳಿಗೆ ಭೂಮಿಯ ಮೇಲೆ ಬಹುಸಂತಾ
ನವಾಗಲಿ; ಅವು ಅಭಿವೃದ್ಧಿಯಾಗಿ ಹೆಚ್ಚಲಿ ಎಂದು
ಆಜ್ಞಾಪಿಸಲು ನೋಹನು ಹೆಂಡತಿ ಮಕ್ಕಳು ಸೊಸೆ 18
ಯರು ಸಹಿತವಾಗಿ ಹೊರಗೆ ಬಂದನು. ಮೃಗ 19
ಪಶುಪಕ್ಷಿಕ್ರಿಮಿಗಳೆಲ್ಲವು ತಮ್ಮತಮ್ಮ ಜಾತಿಗನುಸಾರ
ವಾಗಿ ನಾವೆಯಿಂದ ಹೊರಗೆ ಬಂದವು.

ಆಗ ನೋಹನು ಯೆಹೋವನಿಗೋಸ್ಕರ ಯಜ್ಞ 20
ವೇದಿಯನ್ನು ಮಾಡಿ ಅದರ ಮೇಲೆ ಶುದ್ಧವಾದ
ಎಲ್ಲಾ ಪಶುಪಕ್ಷಿಜಾತಿಗಳಲ್ಲಿ ಸರ್ವಾಂಗಹೋಮ
ಮಾಡಿದನು. ಅದರ ಸುವಾಸನೆಯು ಯೆಹೋವ 21
ನಿಗೆ ಗಮಗಮಿಸಲು ಆತನು ಹೃದಯದೊಳಗೆ—

ಮನುಷ್ಯರ ಮನಸ್ಸಂಕಲ್ಪವು ಚಿಕ್ಕಂದಿನಿಂದಲೇ
ಕೆಟ್ಟದ್ದು; ಆದರೂ ನಾನು ಇನ್ನು ಮೇಲೆ ಅವರ
ನಿಮಿತ್ತವಾಗಿ ಭೂಮಿಯನ್ನು ಶಪಿಸುವದಿಲ್ಲ; ನಾನು
ಎಲ್ಲಾ ಜೀವಿಗಳನ್ನೂ ಈಗ ಸಂಹರಿಸಿದಂತೆ ಇನ್ನು
22 ಮೇಲೆ ಸಂಹರಿಸುವದಿಲ್ಲ. ಭೂಮಿಯು ಇರುವ
ತನಕ ಬಿತ್ತನೆಯೂ ಕೊಯಿಲೂ, ಚಳಿಯೂ
ಸೆಕೆಯೂ, ಬೇಸಿಗೆಕಾಲವೂ ಹಿಮಕಾಲವೂ, ಹಗಲೂ
ಇರುಳೂ ಇವುಗಳ ಕ್ರಮ ತಪ್ಪುವದೇ ಇಲ್ಲ ಅಂದು
ಕೊಂಡನು.

9 ದೇವರು ನೋಹನನ್ನೂ ಅವನ ಮಕ್ಕಳನ್ನೂ
ಆಶೀರ್ವದಿಸಿ ಅವರಿಗೆ—ನೀವು ಬಹುಸಂತಾನವುಳ್ಳ
ವರಾಗಿ ಹೆಚ್ಚಿರಿ; ಭೂಲೋಕದಲ್ಲೆಲ್ಲಾ ತುಂಬಿ
2 ಕೊಳ್ಳಿರಿ. ಭೂಮಿಯ ಮೇಲಿರುವ ಎಲ್ಲಾ ಮೃಗ
ಗಳೂ ಆಕಾಶದ ಎಲ್ಲಾ ಪಕ್ಷಿಗಳೂ ನೆಲದ ಮೇಲೆ
ಹರಿದಾಡುವ ಎಲ್ಲಾ ಕ್ರಿಮಿಗಳೂ ಸಮುದ್ರದ
ಮೀನುಗಳೂ ನಿಮಗೆ ಬೆದರಿ ಅಂಜಿಕೊಳ್ಳುವವು;
ನಾನು ಅವುಗಳನ್ನೆಲ್ಲಾ ನಿಮ್ಮ ಸ್ವಾಧೀನಕ್ಕೆ ಕೊಟ್ಟಿ
3 ದ್ದೇನೆ. ಭೂಮಿಯ ಮೇಲೆ ತಿರುಗುವ ಎಲ್ಲಾ ಜೀವ
ಜಂತುಗಳೂ ನಿಮಗೆ ಆಹಾರವಾಗಿರುವವು. ನಾನು
ನಿಮ್ಮ ಆಹಾರಕ್ಕೆ ಪೈರುಗಳನ್ನು ಕೊಟ್ಟಂತೆ ಇವು
4 ಗಳನ್ನೂ ಕೊಟ್ಟಿದ್ದೇನೆ. ಆದರೆ ರಕ್ತದಿಂದ ಕೂಡಿ
ರುವ ಮಾಂಸವನ್ನು ನೀವು ತಿನ್ನಬಾರದು; ರಕ್ತವು
ಜೀವವಷ್ಟೆ.
5 ಇದಲ್ಲದೆ ನಿಮ್ಮ ರಕ್ತವನ್ನು ಸುರಿಸಿ ಜೀವತೆಗೆ
ಯುವವರಿಗೆ ಮುಯ್ಯಿತೀರಿಸುವೆನು. ಮೃಗವಾಗಿ
ದ್ದರೆ ಅದಕ್ಕೂ ಮನುಷ್ಯನಾಗಿದ್ದರೆ, ಹತವಾದವನು
ಅವನ ಸಹೋದರನಾಗಿರುವದರಿಂದ ಅವನಿಗೂ
ಮುಯ್ಯಿತೀರಿಸುವೆನೆಂದು ತಿಳಿದುಕೊಳ್ಳಿರಿ. ನರ
6 ಹತ್ಯವು ಸಹೋದರಹತ್ಯವಲ್ಲವೇ. ದೇವರು ಮನುಷ್ಯ
ರನ್ನು ತನ್ನ ಸ್ವರೂಪದಲ್ಲಿಯೇ ಉಂಟುಮಾಡಿದನಾದ್ದ
ರಿಂದ ಯಾರು ಮನುಷ್ಯನ ರಕ್ತವನ್ನು ಸುರಿಸುತ್ತಾ
ರೋ ಅವರ ರಕ್ತವನ್ನು ಮನುಷ್ಯರೇ ಸುರಿಸುವರು.
7 ನೀವು ಅಭಿವೃದ್ಧಿಯಾಗಿ ಹೆಚ್ಚಿರಿ; ಭೂಮಿಯ
ಮೇಲೆ ನಿಮಗೆ ಬಹುಸಂತಾನವಾಗಲಿ ಎಂದು
ಹೇಳಿದನು.
8 ಇದಲ್ಲದೆ ದೇವರು ನೋಹನಿಗೂ ಅವನ ಮಕ್ಕಳಿ
9 ಗೂ—ಕೇಳಿರಿ, ನಾನು ನಿಮ್ಮನ್ನೂ ನಿಮ್ಮ ಸಂತತಿಯ
10 ವರನ್ನೂ ನಿಮ್ಮ ಕೂಡ ನಾವೆಯಿಂದ ಹೊರಟುಬಂದ
ಪಶುಪಕ್ಷಿಮೃಗಾದಿ ಸಕಲಭೂಜಂತುಗಳನ್ನೂ ಕುರಿ
11 ತು ಸ್ಥಿರಪ್ರತಿಜ್ಞೆಮಾಡುತ್ತೇನೆ; ಆ ಪ್ರತಿಜ್ಞೆ ಯಾವ
ದಂದರೆ—ಇನ್ನು ಮೇಲೆ ಎಲ್ಲಾ ಪ್ರಾಣಿಗಳು ಪ್ರಳಯ
ದಿಂದ ನಾಶವಾಗುವದಿಲ್ಲ; ಇನ್ನು ಮುಂದೆ ಭೂಮಿ
ಯನ್ನು ಹಾಳುಮಾಡುವ ಪ್ರಳಯವು ಬರುವದೇ
12 ಇಲ್ಲ ಎಂದು ಹೇಳಿದನು. ದೇವರು ಮತ್ತೂ ಹೇಳಿ
ದ್ದೇನಂದರೆ—ನಾನು ನಿಮ್ಮನ್ನೂ ನಿಮ್ಮ ಸಂಗಡ
ಇರುವ ಸಮಸ್ತಜೀವರಾಶಿಗಳನ್ನೂ ಕುರಿತು ಎಲ್ಲಾ
ತಲತಲಾಂತರಗಳಲ್ಲಿಯೂ ಮಾಡುವ ಈ ಪ್ರತಿಜ್ಞೆಗೆ
13 ಮೇಘಗಳಲ್ಲಿ ನಾನಿಟ್ಟಿರುವ ಮುಗಿಲುಬಿಲ್ಲೇ ಗುರು
ತಾಗಿರುವದು. ನನಗೂ ಭೂಪ್ರಾಣಿಗಳಿಗೂ ಆದ
ಒಡಂಬಡಿಕೆಗೆ ಇದೇ ಗುರುತಾಗಿರಲಿ. ನಾನು ಭೂ
ಲೋಕದ ಮೇಲೆ ಮೇಘಗಳನ್ನು ಕವಿಸುವಾಗ ಆ
ಬಿಲ್ಲು ಮೇಘಗಳಲ್ಲಿ ಕಂಡುಬರುವದು. ಆಗ ನಾನು
ನಿಮ್ಮನ್ನೂ ಎಲ್ಲಾ ಜೀವರಾಶಿಗಳನ್ನೂ ಕುರಿತು ಮಾ
ಡಿದ ಪ್ರತಿಜ್ಞೆಯನ್ನು ಜ್ಞಾಪಕಮಾಡಿಕೊಳ್ಳುವೆನು.
ಇನ್ನು ಮುಂದೆ ನೀರು ಹೆಚ್ಚಿ ಎಲ್ಲಾ ಭೂಪ್ರಾಣಿಗಳನ್ನು
ಹಾಳುಮಾಡುವ ಪ್ರಳಯವಾಗುವದಿಲ್ಲ. ಆ ಬಿಲ್ಲು
ಮೇಘಗಳಲ್ಲಿ ಕಾಣಿಸುವಾಗ ನಾನು ಅದನ್ನು ನೋಡಿ
ದೇವರಾದ ನನಗೂ ಭೂಮಿಯ ಮೇಲಿರುವ ಎಲ್ಲಾ
ಜೀವಜಂತುಗಳಿಗೂ ಆದ ಶಾಶ್ವತವಾದ ಒಡಂಬಡಿಕೆ
ಯನ್ನು ಜ್ಞಾಪಕಮಾಡಿಕೊಳ್ಳುವೆನು ಅಂದನು.
ಮತ್ತು ದೇವರು ನೋಹನಿಗೆ—ನನಗೂ ಎಲ್ಲಾ ಭೂ
ಜೀವಿಗಳಿಗೂ ಆದ ಒಡಂಬಡಿಕೆಗೆ ಇದೇ ಗುರುತು
ಎಂದು ಹೇಳಿದನು.

ಕಾನಾನ್ಯರಿಗೆ ಶಾಪವೂ ಶೇಮ್ ಯೆಫೆತರಿಗೆ ಆಶೀರ್ವಾದವೂ ಬಂದದ್ದು.

ನಾವೆಯಿಂದ ಹೊರಟುಬಂದ ನೋಹನ ಮಕ್ಕಳು
ಶೇಮ್ ಹಾಮ್ ಯೆಫೆತ್ ಎಂಬವರೇ (ಹಾಮನು
ಕಾನಾನನ ತಂದೆಯು). ಈ ಮೂವರು ನೋಹನ
ಮಕ್ಕಳು; ಇವರಿಂದಲೇ ಭೂಮಿಯಲ್ಲೆಲ್ಲಾ ಹರಡಿ
ಕೊಂಡಿರುವ ಜನರು ಉತ್ಪತ್ತಿಯಾದರು.
ನೋಹನು ವ್ಯವಸಾಯಗಾರನಾಗಿದ್ದನು; ಅವನೇ
ದ್ರಾಕ್ಷೇತೋಟವನ್ನು ಪ್ರಾರಂಭಿಸಿದನು. ಅವನು
ದ್ರಾಕ್ಷಾರಸವನ್ನು ಕುಡಿಯಲು ಅಮಲೇರಿದ್ದರಿಂದ
ಗುಡಾರದಲ್ಲಿ ಬೆತ್ತಲೆಯಾಗಿ ಬಿದ್ದಿದ್ದನು. ಕಾನಾನನ
ತಂದೆಯಾದ ಹಾಮನು ತಂದೆಯು ಬೆತ್ತಲೆಯಾಗಿರು
ವದನ್ನು ಕಂಡು ಹೊರಗಿದ್ದ ಅಣ್ಣತಮ್ಮಂದಿರಾದ
ಶೇಮ್ ಯೆಫೆತರಿಗೆ ತಿಳಿಸಿದನು. ಇವರಿಬ್ಬರು ಕಂಬ
ಳಿಯನ್ನು ತೆಗೆದುಕೊಂಡು ತಮ್ಮಿಬ್ಬರ ಬೆನ್ನಿನ ಮೇಲೆ
ಹಾಕಿಕೊಂಡು ಹಿಂಧಿಂದಕ್ಕೆ ನಡೆದು ತಂದೆಗೆ ಹೊದಿಸಿ
ಅವನ ಮಾನವನ್ನು ಕಾಪಾಡಿದರು; ಅವರು ಹಿಮ್ಮುಖ
ರಾಗಿದ್ದದರಿಂದ ತಂದೆಯು ಬೆತ್ತಲೆಯಾಗಿದ್ದದ್ದನ್ನು
ನೋಡಲಿಲ್ಲ. ನೋಹನು ಅಮಲಿಳಿದೆದ್ದು ಕಿರೀ
ಮಗನು ಮಾಡಿದ್ದನ್ನು ತಿಳಿದು—

ಕಾನಾನನು ಶಾಪಗ್ರಸ್ತನಾಗಲಿ. ಅವನು ತನ್ನ
ಅಣ್ಣತಮ್ಮಂದಿರಿಗೆ ದಾಸಾನುದಾಸನಾಗಲಿ

ಅಂದನು. ಅವನು ಇನ್ನೂ ನುಡಿದದ್ದೇನಂದರೆ—

ಶೇಮನ ದೇವರಾದ ಯೆಹೋವನಿಗೆ ಸ್ತೋತ್ರ
ವಾಗಲಿ; ಕಾನಾನನು ಅವರಿಗೆ ದಾಸನಾಗಲಿ.
1)ಯೆಫೆತನನ್ನು ದೇವರು ವಿಸ್ತರಿಸಲಿ. ಅವನು
ಶೇಮನ ಗುಡಾರಗಳಲ್ಲಿ ವಾಸವಾಗಿರಲಿ. ಕಾ
ನಾನನು ಅವರಿಗೆ ದಾಸನಾಗಿರಲಿ ಎಂಬದು

ಪ್ರಳಯವಾದ ಮೇಲೆ ನೋಹನು ಮುನ್ನೂ
ರೈವತ್ತು ವರುಷ ಬದುಕಿದನು. ಅವನು ಒಟ್ಟು
ಒಂಭೈನೂರೈವತ್ತು ವರುಷ ಬದುಕಿ ಸತ್ತನು.

1) ಯೆಫೆತ್ ಅಂದರೆ ವಿಸ್ತೀರ್ಣ.

ನೋಹನ ಮಕ್ಕಳಿಂದ ಉತ್ಪತ್ತಿಯಾದ ಜನಾಂಗಗಳ ಪಟ್ಟಿ.

10 ನೋಹನ ಮಕ್ಕಳಾದ ಶೇಮ್ ಹಾಮ್ ಯೆಫೆತರ
ವಂಶದವರ ಚರಿತ್ರೆಯು—ಜಲಪ್ರಳಯವಾದ ಮೇಲೆ
ಅವರಿಗೆ ಮಕ್ಕಳು ಹುಟ್ಟಿದರು.
2 ಯೆಫೆತನ ಸಂತಾನದವರು ಯಾರಂದರೆ—ಗೋ
ಮೆರ್, ಮಾಗೋಗ್, ಮಾದಯ್, ಯಾವಾನ್,
ತೂಬಲ್, ಮೆಷೆಕ್, ತೀರಾಸ್ ಎಂಬವರೇ.
3 ಗೋಮೆರನ ಸಂತಾನದವರು—ಅಷ್ಕೆನಸ್, ರೀಫತ್,
ತೋಗರ್ಮ ಎಂಬವರು.
4 ಯಾವಾನನ ಸಂತಾನದವರು—ಎಲೀಷಾ, ತಾ
ರ್ಷೀಷ್, ಕಿತ್ತೀಮ್, ದೋದಾ ಎಂಬ ಸ್ಥಳಗಳ
ವರು; ಇವರು ಸಮುದ್ರದ ರೇವುಗಳಲ್ಲಿ ಹರಡಿ
ಕೊಂಡರು.
5 ದೇಶಭಾಷಾಕುಲಜನಾಂಗಗಳ ಪ್ರಕಾರ [ಇವರೇ
ಯೆಫೆತನ ವಂಶದವರು].
6 ಹಾಮನ ಸಂತಾನದವರು ಯಾರಂದರೆ—ಕೂಷ್,
1)ಮಿಚ್ರಯಿಮ್, ಪೂತ್, ಕಾನಾನ್ ಎಂಬವರೇ.
7 ಕೂಷನ ಸಂತಾನದವರು—ಸೆಬಾ, ಹವೀಲ, ಸಬ್ತಾ,
ರಗ್ಮ, ಸಬ್ತೆಕಾ ಎಂಬ ಜನಾಂಗಗಳು. ರಗ್ಮ ಸಂತಾ
ನದವರು—ಶೆಬಾ, ದೆದಾನ್ ಎಂಬ ಜನಾಂಗಗಳು.
8 ಕೂಷನು ನಿಮ್ರೋದನನ್ನು ಪಡೆದನು. ಅವನು
ಪರಾಕ್ರಮದಿಂದ ಮೊದಲನೆಯ ಭೂರಾಜನಾದನು.
9 ಅವನು ಅತಿಸಾಹಸಿಯಾದ ಬೇಟೆಗಾರನು.
ನಿಮ್ರೋದನಂತೆ ಅತಿಸಾಹಸಿಯಾದ ಬೇಟೆಗಾರ
10 ನೆಂದು ಈಗಲೂ ಹೇಳುವದುಂಟಲ್ಲಾ. ಶಿನಾರ್
ದೇಶದಲ್ಲಿರುವ ಬಾಬೆಲ್, ಯೆರೆಕ್, ಅಕ್ಕದ್, ಕಲ್ನೇ
ಎಂಬ ಪಟ್ಟಣಗಳೇ ಅವನ ರಾಜ್ಯದ ಮೂಲ ಪಟ್ಟಣ
11 ಗಳು. ಅವನು ಆ ದೇಶದಿಂದ ಹೊರಟು ಅಶ್ಶೂರ್
ದೇಶಕ್ಕೆ ಬಂದು ನಿನೆವೆ, ರೆಹೋಬೋತೀರ್, ಕೆಲಹ
12 ಎಂಬ ಪಟ್ಟಣಗಳನ್ನೂ ನಿನೆವೆಗೂ ಕೆಲಹಕ್ಕೂ ನಡುವೆ
ಇರುವ ರೆಸೆನ್ ಪಟ್ಟಣವನ್ನೂ ಕಟ್ಟಿಸಿದನು. ಇದೆಲ್ಲಾ
ಒಟ್ಟಾಗಿ ಮಹಾಪಟ್ಟಣವೆಂದು ಪ್ರಸಿದ್ಧವಾಗಿದೆ.
13 ಮಿಚ್ರಯಿಮ್ಯರಿಂದ ಲೂದ್ಯರೂ ಅನಾಮ್ಯರೂ
ಲೆಹಾಬ್ಯರೂ ನಫ್ತುಹ್ಯರೂ ಪತ್ರುಸ್ಯರೂ ಕಸ್ಲುಹ್ಯರೂ
14 ಕಫ್ತೋರ್ಯರೂ ಹುಟ್ಟಿದರು. ಕಸ್ಲುಹ್ಯರ ಬಳಿ
ಯಿಂದ ಫಿಲಿಷ್ಟಿಯರು ಹೊರಟುಬಂದರು.
15 ಕಾನಾನ್ ವಂಶದಲ್ಲಿ ಮೊದಲು ಹುಟ್ಟಿದವನು
16 ಸೀದೋನ್; ಆ ಮೇಲೆ ಹೇತ್ ಹುಟ್ಟಿದನು. ಇದ
ಲ್ಲದೆ ಯೆಬೂಸಿಯರೂ ಅಮೋರಿಯರೂ ಗಿರ್ಗಾಷಿ
17 ಯರೂ ಹಿವ್ವಿಯರೂ ಅರ್ಕಿಯರೂ ಸೀನಿಯ
18 ರೂ ಅರ್ವಾದಿಯರೂ ಚೆಮಾರಿಯರೂ ಹಮಾತಿ
ಯರೂ ಕಾನಾನನಿಂದ ಹುಟ್ಟಿದರು. ಕಾಲಕ್ರಮ
ದಿಂದ ಈ ಕಾನಾನ್ ಕುಲಗಳವರು ಹರಡಿಕೊಂಡರು.
19 ಕಾನಾನ್ಯರ ಸೀಮೆಯು ಸೀದೋನ್ ಪಟ್ಟಣದಿಂದ
ಗೆರಾರಿಗೆ ಹೋಗುವ ದಾರಿಯಲ್ಲಿರುವ ಗಾಜಾ ಪಟ್ಟ
ಣದ ವರೆಗೂ ಮತ್ತು ಸೊದೋಮ್, ಗೊಮೋರ,
ಅದ್ಮಾ, ಚೆಬೋಯಿಮ್ ಎಂಬ ಪಟ್ಟಣಗಳಿಗೆ ಹೋ
ಗುವ ದಾರಿಯಲ್ಲಿರುವ ಲೆಷಾ ಊರಿನ ವರೆಗೂ ಇತ್ತು.
ಕುಲಭಾಷಾದೇಶಜನಾಂಗಗಳ ಪ್ರಕಾರ ಇವರೇ 20
ಹಾಮನ ವಂಶದವರು.
ಇಬ್ರಿಯರೆಲ್ಲರಿಗೆ ಮೂಲಪುರುಷನೂ ಯೆಫೆತನ 21
ಅಣ್ಣನೂ ಆಗಿದ್ದ ಶೇಮನಿಗೆ ಸಹ ಸಂತಾನವಾಯಿತು.
ಶೇಮನ ಸಂತಾನದವರು—ಏಲಾಮ್, ಅಶ್ಶೂರ್, 22
ಅರ್ಪಕ್ಷದ್, ಲೂದ್, ಅರಾಮ್ ಎಂಬವರೇ.
ಅರಾಮ್ ಸಂತಾನದವರು—ಊಸ್ ಹೂಲ್ 23
ಗೆತೆರ್ ಮಷ್ ಎಂಬವರೇ.
ಅರ್ಪಕ್ಷದನಿಂದ ಶೆಲಹನೂ ಶೆಲಹನಿಂದ ಎಬ 24
ರನೂ ಹುಟ್ಟಿದರು.
ಎಬರನಿಗೆ ಇಬ್ಬರು ಮಕ್ಕಳು ಹುಟ್ಟಿದರು. ಒಬ್ಬ 25
ನಿಗೆ ಪೆಲೆಗೆಂಬ ಹೆಸರು; ಅವನ ಕಾಲದಲ್ಲಿ
ಭೂಮಿಯ ಜನಗಳು ವಿಂಗಡವಾದವು. ಅವನ
ತಮ್ಮನ ಹೆಸರು ಯೊಕ್ತಾನ್. ಯೊಕ್ತಾನನ ಸಂತಾನ 26
ದವರು—ಅಲ್ಮೋದಾದ್ ಶೆಲೆಪ್ ಹಚರ್ಮಾವೆತ್
ಯೆರಹ ಹದೋರಾಮ್ ಊಜಾಲ್ ದಿಕ್ಲಾ ಓಬಾ 27, 28
ಲ್ ಅಬೀಮಯೇಲ್ ಶೆಬಾ ಓಫೀರ್ ಹವೀಲ 29
ಯೋಬಾಬ್ ಎಂಬ ಸ್ಥಳಗಳವರು. ಈ ಕುಲಗಳೆಲ್ಲಾ
ಯೊಕ್ತಾನನಿಂದ ಹುಟ್ಟಿದವು. ಇವರ ನಿವಾಸವು 30
ಮೇಶಾಸೀಮೆ ಮೊದಲುಗೊಂಡು ಮೂಡಲಲ್ಲಿರುವ
ಸೆಫಾರ್ ಎಂಬ ಬೆಟ್ಟದ ವರೆಗೂ ಇತ್ತು.
ಕುಲಭಾಷಾಜನಾಂಗಗಳ ಪ್ರಕಾರ ಇವರೇ ಶೇಮನ 31
ವಂಶದವರು.
ಸಂತತಿಜನಾಂಗಗಳ ಪ್ರಕಾರ ಇವರೇ ನೋಹನ 32
ವಂಶದವರು. ಜಲಪ್ರಳಯವಾದನಂತರ ಭೂಮಿಯ
ಮೇಲೆ ಹರಡಿಕೊಂಡ ಜನಾಂಗಗಳವರು ಇವರೇ.

ಭಾಷಾಭೇದವುಂಟಾದದ್ದು.

ಲೋಕದವರೆಲ್ಲರಿಗೂ ಒಂದೇ ಭಾಷೆ ಇತ್ತು; 11
ಭಾಷಾಭೇದವೇನೂ ಇರಲಿಲ್ಲ. ಅವರು ಪೂರ್ವ 2
ದಿಕ್ಕಿಗೆ ಮುಂದೆ ಮುಂದೆ ಪ್ರಯಾಣಮಾಡುತ್ತಿರುವಾಗ
ಶಿನಾರ್ ದೇಶದಲ್ಲಿ ಬೈಲುಸೀಮೆ ಸಿಕ್ಕಲು ಅಲ್ಲೇ
ವಾಸಮಾಡಿಕೊಂಡು ತಮ್ಮತಮ್ಮೊಳಗೆ—ಬನ್ನಿ, ಒಳ್ಳೊ 3
ಳ್ಳೇ ಸುಟ್ಟ ಇಟ್ಟಿಗೆಗಳನ್ನು ಮಾಡೋಣ; ಒಂದು 4
ಪಟ್ಟಣವನ್ನೂ ಆಕಾಶವನ್ನು ಮುಟ್ಟುವ ಗೋಪುರ
ವನ್ನೂ ಕಟ್ಟಿ ದೊಡ್ಡ ಹೆಸರನ್ನು ಪಡೆಯೋಣ; ಹೀಗೆ
ಮಾಡಿದರೆ ಭೂಮಿಯ ಮೇಲೆಲ್ಲಾ ಚದರುವದಕ್ಕೆ
ಆಸ್ಪದವಾಗುವದಿಲ್ಲ ಅಂದುಕೊಂಡರು. ಕಟ್ಟುವಾಗ
ಕಲ್ಲಿಗೆ ಬದಲಾಗಿ ಇಟ್ಟಿಗೆಯನ್ನೂ ಸುಣ್ಣಕ್ಕೆ ಬದ
ಲಾಗಿ ಕಲ್ಲರಗನ್ನೂ ಉಪಯೋಗಿಸಿದರು.
ನರಪುತ್ರರು ಕಟ್ಟುತ್ತಿದ್ದ ಆ ಪಟ್ಟಣವನ್ನೂ 5
ಗೋಪುರವನ್ನೂ ನೋಡುವದಕ್ಕೆ ಯೆಹೋವನು
ಇಳಿದು ಬಂದನು. ನೋಡಿದ ಮೇಲೆ ಆತನು— 6
ಇವರು ಒಂದೇ ಜನಾಂಗ; ಇವರೆಲ್ಲರಿಗೂ ಒಂದೇ
ಭಾಷೆ. ಪ್ರಾರಂಭದಲ್ಲೇ ಇಷ್ಟು ದೊಡ್ಡ ಕೆಲಸ

1) ಮಿಚ್ರಯಿಮ್ ಅಂದರೆ ಐಗುಪ್ತ.

ಮಾಡುವವರಾಗಿರಲು ಮುಂದೆ ಏನು ಆಲೋಚಿಸಿದರೂ
7 ಇವರಿಗೆ ಅಸಾಧ್ಯವಲ್ಲ. ನಾವು ಇಳಿದು ಇವರಲ್ಲಿ ಒಬ್ಬರ
ಮಾತು ಒಬ್ಬರಿಗೆ ತಿಳಿಯದಂತೆ ಇವರ ಭಾಷೆಯನ್ನು
8 ತಾರುಮಾರುಮಾಡೋಣ ಬನ್ನಿ ಅಂದನು. ಹಾಗೆಯೇ
ಮಾಡಿ ಯೆಹೋವನು ಅವರನ್ನು ಅಲ್ಲಿಂದ ಭೂಲೋ
ಕದಲ್ಲೆಲ್ಲಾ ಚದರಿಸಿದನು. ಅವರು ಆ ಪಟ್ಟಣ ಕಟ್ಟು
9 ವದನ್ನು ನಿಲ್ಲಿಸಿಬಿಟ್ಟರು. ಸಮಸ್ತಲೋಕದ ಭಾಷೆ
ಯನ್ನು ಯೆಹೋವನು ಅಲ್ಲಿ ತಾರುಮಾರುಮಾಡಿ
ಅವರನ್ನು ಅಲ್ಲಿಂದ ಭೂಲೋಕದಲ್ಲೆಲ್ಲಾ ಚದರಿಸಿದ್ದ
ರಿಂದ ಆ ಪಟ್ಟಣಕ್ಕೆ [1]ಬಾಬೆಲ್ ಎಂಬ ಹೆಸರಾಯಿತು.

ಅಬ್ರಾಮನ ತನಕ ಶೇಮನ ವಂಶದವರ ಚರಿತ್ರೆ.

10 ಶೇಮನ ವಂಶದವರ ಚರಿತ್ರೆಯು.
ಜಲಪ್ರಳಯವು ಕಳೆದು ಎರಡು ವರುಷಗಳಾದ
ಮೇಲೆ ಶೇಮನು ನೂರು ವರುಷದವನಾಗಿ ಅರ್ಪಕ್ಷದ
11 ನನ್ನು ಪಡೆದನು. ಅವನು ಅರ್ಪಕ್ಷದನನ್ನು ಪಡೆದ
ಮೇಲೆ ಗಂಡು ಹೆಣ್ಣು ಮಕ್ಕಳನ್ನು ಪಡೆದು ಐನೂರು
ವರುಷ ಬದುಕಿದನು.
12 ಅರ್ಪಕ್ಷದನು ಮೂವತ್ತೈದು ವರುಷದವನಾಗಿ
13 ಶೆಲಹನನ್ನು ಪಡೆದನು. ಅವನು ಶೆಲಹನನ್ನು ಪಡೆದ
ಮೇಲೆ ಗಂಡು ಹೆಣ್ಣು ಮಕ್ಕಳನ್ನು ಪಡೆದು ನಾನೂರ
ಮೂರು ವರುಷ ಬದುಕಿದನು.
14 ಶೆಲಹನು ಮೂವತ್ತು ವರುಷದವನಾಗಿ ಏಬರ
15 ನನ್ನು ಪಡೆದನು. ಅವನು ಏಬರನನ್ನು ಪಡೆದ
ಮೇಲೆ ಗಂಡು ಹೆಣ್ಣು ಮಕ್ಕಳನ್ನು ಪಡೆದು ನಾನೂರ
ಮೂರು ವರುಷ ಬದುಕಿದನು.
16 ಏಬರನು ಮೂವತ್ತುನಾಲ್ಕು ವರುಷದವನಾಗಿ
17 ಪೆಲೆಗನನ್ನು ಪಡೆದನು. ಅವನು ಪೆಲೆಗನನ್ನು ಪಡೆದ
ಮೇಲೆ ಗಂಡು ಹೆಣ್ಣು ಮಕ್ಕಳನ್ನು ಪಡೆದು ನಾನೂರ
ಮೂವತ್ತು ವರುಷ ಬದುಕಿದನು.
18 ಪೆಲೆಗನು ಮೂವತ್ತು ವರುಷದವನಾಗಿ ರೆಗೂವ
19 ನನ್ನು ಪಡೆದನು. ಅವನು ರೆಗೂವನನ್ನು ಪಡೆದ
ಮೇಲೆ ಗಂಡು ಹೆಣ್ಣು ಮಕ್ಕಳನ್ನು ಪಡೆದು ಇನ್ನೂರ
ಒಂಭತ್ತು ವರುಷ ಬದುಕಿದನು.
20 ರೆಗೂವನು ಮೂವತ್ತೆರಡು ವರುಷದವನಾಗಿ
21 ಸೆರೂಗನನ್ನು ಪಡೆದನು. ಅವನು ಸೆರೂಗನನ್ನು
ಪಡೆದ ಮೇಲೆ ಗಂಡು ಹೆಣ್ಣು ಮಕ್ಕಳನ್ನು ಪಡೆದು
ಇನ್ನೂರ ಏಳು ವರುಷ ಬದುಕಿದನು.
22 ಸೆರೂಗನು ಮೂವತ್ತು ವರುಷದವನಾಗಿ ನಾಹೋ
23 ರನನ್ನು ಪಡೆದನು. ಅವನು ನಾಹೋರನನ್ನು ಪಡೆದ
ಮೇಲೆ ಗಂಡು ಹೆಣ್ಣು ಮಕ್ಕಳನ್ನು ಪಡೆದು ಇನ್ನೂರು
ವರುಷ ಬದುಕಿದನು.
24 ನಾಹೋರನು ಇಪ್ಪತ್ತೊಂಭತ್ತು ವರುಷದವನಾಗಿ
25 ತೆರಹನನ್ನು ಪಡೆದನು. ಅವನು ತೆರಹನನ್ನು ಪಡೆದ
ಮೇಲೆ ಗಂಡು ಹೆಣ್ಣು ಮಕ್ಕಳನ್ನು ಪಡೆದು ನೂರ
ಹತ್ತೊಂಭತ್ತು ವರುಷ ಬದುಕಿದನು.

ತೆರಹನು ಎಪ್ಪತ್ತು ವರುಷದವನಾಗಿ ಅಬ್ರಾಮ
ನಾಹೋರ, ಹಾರಾನ ಎಂಬ ಮಕ್ಕಳನ್ನು ಪಡೆದನು.

ಅಬ್ರಹಾಮನ ಚರಿತ್ರೆ 11. 27 — 25. 18.

ಅಬ್ರಾಮನ ತಂದೆಯನ್ನು ಕುರಿತದ್ದು.

ತೆರಹನ ವಂಶದವರ ಚರಿತ್ರೆ.
ತೆರಹನು ಅಬ್ರಾಮ ನಾಹೋರ ಹಾರಾನರನ
ಪಡೆದನು. ಹಾರಾನನು ಲೋಟನನ್ನು ಪಡೆದನ
ಹಾರಾನನು ತಾನು ಹುಟ್ಟಿದ ದೇಶದೊಳಗೆ ಕಲ್ದಿ
ಯರ ಊರ್ ಎಂಬ ಪಟ್ಟಣದಲ್ಲಿ ತನ್ನ ತಂದೆಯಾ
ತೆರಹನ ಹತ್ತಿರವೇ ಸತ್ತನು. ಅಬ್ರಾಮನ
ನಾಹೋರನೂ ಮದುವೆಮಾಡಿಕೊಂಡರು. ಅಬ
ಮನ ಹೆಂಡತಿಯ ಹೆಸರು ಸಾರಯಳು, ನಾಹೋರ
ಹೆಂಡತಿಯ ಹೆಸರು ಮಿಲ್ಕಾ; ಈಕೆಯು ಹಾರಾನ
ಮಗಳು; ಹಾರಾನನು ಮಿಲ್ಕಳಿಗೂ ಇಸ್ಕಳಿಗೂ ತಂ
ಸಾರಯಳು ಬಂಜೆಯಾಗಿದ್ದದರಿಂದ ಆಕೆಗೆ ಮ
ಇರಲಿಲ್ಲ.
ತೆರಹನು ತನ್ನ ಮಗನಾದ ಅಬ್ರಾಮನನ್ನೂ ತನ
ಮೊಮ್ಮಗನೂ ಹಾರಾನನಿಗೆ ಮಗನೂ ಆಗಿರು
ಲೋಟನನ್ನೂ ತನಗೆ ಸೊಸೆಯೂ ಅಬ್ರಾಮನಿ
ಹೆಂಡತಿಯೂ ಆಗಿರುವ ಸಾರಯಳನ್ನೂ ಕರಕೊಂ
ಕಾನಾನ್‌ದೇಶಕ್ಕೆ ಹೋಗಬೇಕೆಂದು ಕಲ್ದೀಯ
ಊರ್ ಎಂಬ ಪಟ್ಟಣವನ್ನು ಬಿಟ್ಟನು. ಅವ
ಖಾರಾನ್ ಪಟ್ಟಣಕ್ಕೆ ಬಂದು ಅಲ್ಲೇ ವಾಸಮಾ
ಕೊಂಡರು. ತೆರಹನು ಇನ್ನೂರ ಐದು ವರುಷದವನಾ
ಖಾರಾನಿನಲ್ಲಿ ಸತ್ತನು.

ಅಬ್ರಾಮನು ದೇವರ ಆಜ್ಞೆಯನ್ನು ಹೊಂದಿ ಸ್ವದೇಶದಿಂದ
ಕಾನಾನ್‌ದೇಶಕ್ಕೆ ಬಂದದ್ದು.

ಯೆಹೋವನು ಅಬ್ರಾಮನಿಗೆ—ನೀನು ಸ್ವದೇಶ
ವನ್ನೂ ಬಂಧುಬಳಗವನ್ನೂ ತಂದೆಯ ಮನೆಯನ್ನೂ
ಬಿಟ್ಟು ನಾನು ತೋರಿಸುವ ದೇಶಕ್ಕೆ ಹೊರಟುಹೋಗ
ನಾನು ನಿನ್ನನ್ನು ದೊಡ್ಡ ಜನಾಂಗವಾಗುವಂತೆ ಮಾ
ಆಶೀರ್ವದಿಸಿ ನಿನ್ನ ಹೆಸರನ್ನು ಪ್ರಖ್ಯಾತಿಗೆ ತರುವೆನ
ನೀನು ಆಶೀರ್ವಾದನಿಧಿಯಾಗುವಿ. ನಿನ್ನನ್ನು ಹರ
ವವರನ್ನು ಹರಸುವೆನು; ನಿನ್ನನ್ನು ಶಪಿಸುವವರನ
ಶಪಿಸುವೆನು. [2]ನಿನ್ನ ಮೂಲಕ ಭೂಲೋಕದ ಎಲ
ಕುಲದವರಿಗೂ ಆಶೀರ್ವಾದವುಂಟಾಗುವದು ಎಂ
ಹೇಳಿದನು.
ಯೆಹೋವನು ಹೇಳಿದ ಮೇರೆಗೆ ಅಬ್ರಾಮ
ಹೊರಟುಹೋದನು; ಲೋಟನೂ ಸಂಗಡ ಹೋದನ
ಅಬ್ರಾಮನು ಖಾರಾನ್ ಪಟ್ಟಣವನ್ನು ಬಿಟ್ಟು ಹೊ
ಟಾಗ ಎಪ್ಪತ್ತೈದು ವರುಷದವನಾಗಿದ್ದನು. ಅವ
ತನ್ನ ಹೆಂಡತಿಯಾದ ಸಾರಯಳನ್ನೂ ತನ್ನ ತಮ
ಮಗನಾದ ಲೋಟನನ್ನೂ ತಾನೂ ಲೋಟನ

---

1) ತಾರುಮಾರು ಎಂಬರ್ಥವಿದ್ದಂತೆ. 2) ಅಥವಾ: ಭೂಲೋಕದ ಎಲ್ಲಾ ಕುಲದವರೂ ನಿನಗಿರುವಂಥ ಆಶೀರ್ವಾದವೇ
ಆಗ ಬೇಕೆಂದು ಕೋರುವರು.

ಖಾರಾನಿನಲ್ಲಿ ಸಂಪಾದಿಸಿದ್ದ ಎಲ್ಲಾ ಸೊತ್ತನ್ನೂ ದಾಸ
ದಾಸಿಯರನ್ನೂ ತೆಗೆದುಕೊಂಡು ಹೋಗಿ ಕಾನಾನ್
ದೇಶಕ್ಕೆ ಸೇರಿದನು.
6 ಅಬ್ರಾಮನು ಆ ದೇಶದಲ್ಲಿ ಸಂಚರಿಸುತ್ತಾ ಶೆಕೆಮ್
ಕ್ಷೇತ್ರದಲ್ಲಿರುವ [1]ಮೋರೆಯೆಂಬ ವೃಕ್ಷದ ಬಳಿಗೆ
ಬಂದನು. ಆ ಕಾಲದಲ್ಲಿ ಕಾನಾನ್ಯರು ದೇಶದಲ್ಲಿ
7 ದ್ದರು. ಅಲ್ಲಿ ಯೆಹೋವನು ಅಬ್ರಾಮನಿಗೆ ದರ್ಶನ
ಕೊಟ್ಟು—ನಾನು ಈ ದೇಶವನ್ನು ನಿನ್ನ ಸಂತಾನಕ್ಕೆ
ಕೊಡುವೆನು ಅಂದನು. ತನಗೆ ದರ್ಶನಕೊಟ್ಟ
ಯೆಹೋವನಿಗೆ ಅಬ್ರಾಮನು ಯಜ್ಞವೇದಿಯನ್ನು
ಕಟ್ಟಿಸಿದನು.
8 ಅವನು ಅಲ್ಲಿಂದ ಹೊರಟು ಬೇತೇಲಿಗೆ ಮೂಡ
ಲಲ್ಲಿರುವ ಗುಡ್ಡಕ್ಕೆ ಬಂದು ತನ್ನ ಗುಡಾರವನ್ನು
ಹಾಕಿಸಿ ಇಳುಕೊಂಡನು; ಪಶ್ಚಿಮಕ್ಕೆ ಬೇತೇಲೂ
ಪೂರ್ವಕ್ಕೆ ಆಯಿ ಎಂಬ ಊರೂ ಇದ್ದವು. ಅಲ್ಲಿಯೂ
ಯೆಹೋವನಿಗೋಸ್ಕರ ಯಜ್ಞವೇದಿಯನ್ನು ಕಟ್ಟಿಸಿ
ಆತನ ಹೆಸರನ್ನು ಹೇಳಿಕೊಂಡು ಆರಾಧಿಸಿದನು.

### ಐಗುಪ್ತದೇಶದಲ್ಲಿ ಅಬ್ರಾಮನ ಹೆಂಡತಿಯ ವಿಷಯವಾಗಿ ನಡೆದ ಸಂಗತಿ.

9 ತರುವಾಯ ಅಬ್ರಾಮನು ಅಲ್ಲಿಂದ ಹೊರಟು
ಕಾನಾನ್‌ದೇಶದ ದಕ್ಷಿಣಸೀಮೆಗೆ ಮುಂದೆ ಮುಂದೆ
10 ಹೋಗುತ್ತಾ ಇದ್ದನು. ಆ ದೇಶದಲ್ಲಿ ಘೋರಕ್ಷಾಮ
ವಿದ್ದದರಿಂದ ಅಲ್ಲಿರದೆ, ಐಗುಪ್ತದೇಶದಲ್ಲಿ ಕೆಲವು
ಕಾಲ ಇರಬೇಕೆಂದು ಆ ಬೆಟ್ಟದ ಸೀಮೆಯಿಂದ
11 ಇಳಿದು ಹೋದನು. ಅವನು ಐಗುಪ್ತದೇಶದ ಹತ್ತಿ
ರಕ್ಕೆ ಬಂದಾಗ ತನ್ನ ಹೆಂಡತಿಯಾದ ಸಾರಯಳಿಗೆ—
ಕೇಳು, ನೀನು ಸುಂದರಿ ಎಂದು ನಾನು ಬಲ್ಲೆ;
12 ಐಗುಪ್ತದೇಶದವರು ನಿನ್ನನ್ನು ಕಂಡು—ಈಕೆಯು
ಇವನ ಹೆಂಡತಿ ಎಂದು ನನ್ನನ್ನು ಕೊಂದು ನಿನ್ನನ್ನು
13 ಉಳಿಸಾರು. ಆದಕಾರಣ ನೀನು ನನಗೆ ತಂಗಿಯಾಗ
ಬೇಕೆಂದು ಅವರಿಗೆ ಹೇಳು; ಹೀಗೆ ಹೇಳಿದರೆ ನಿನ್ನ
ನಿಮಿತ್ತ ನನಗೆ ಹಿತವಾಗುವದು, ನಾನು ನಿನ್ನ ದೆಸೆ
ಯಿಂದ ಸಾಯದೆ ಬದುಕುವೆನು ಎಂದು ಹೇಳಿದನು.
14 ಅಬ್ರಾಮನು ಐಗುಪ್ತದೇಶಕ್ಕೆ ಬಂದಾಗ ಐಗುಪ್ತ್ಯರು
ಅವನ ಸಂಗಡ ಇದ್ದ ಸ್ತ್ರೀಯನ್ನು ನೋಡಿ ಬಹು
15 ಸುಂದರಿಯೆಂದರು. ಫರೋಹನ ಪ್ರಧಾನರು ಆಕೆ
ಯನ್ನು ನೋಡಿ ಬಂದು ಅವನ ಮುಂದೆ ಹೊಗಳ
ಲಾಗಿ ಫರೋಹನು ಆ ಸ್ತ್ರೀಯನ್ನು ಅರಮನೆಗೆ ಕರ
16 ತರಿಸಿ ಆಕೆಯ ನಿಮಿತ್ತ ಅಬ್ರಾಮನಿಗೆ ಉಪಕಾರ
ಮಾಡಿದನು. ಆಗ ಅಬ್ರಾಮನಿಗೆ ಕುರಿದನಗಳೂ
ಗಂಡು ಹೆಣ್ಣು ಕತ್ತೆಗಳೂ ದಾಸದಾಸಿಯರೂ ಒಂಟೆ
17 ಗಳೂ ದೊರೆತವು. ಆದರೆ ಯೆಹೋವನು ಫರೋಹ
ನಿಗೂ ಅವನ ಮನೆಯವರಿಗೂ ಅಬ್ರಾಮನ ಹೆಂಡತಿ
ಯಾದ ಸಾರಯಳ ನಿಮಿತ್ತ ಬಹಳ ಉಪದ್ರವಗಳನ್ನು
18 ಉಂಟುಮಾಡಿ ಬಾಧಿಸಿದನು. ಆಗ ಫರೋಹನು
ಅಬ್ರಾಮನನ್ನು ಕರಿಸಿ—ಯಾಕೆ ಹೀಗೆ ಮಾಡಿದೆ?
ಹೆಂಡತಿಯೆಂದು ಯಾಕೆ ನನಗೆ ತಿಳಿಸಲಿಲ್ಲ? ತಂಗಿ 19
ಯೆಂದು ಯಾಕೆ ಹೇಳಿದೆ? ಹೀಗೆ ಹೇಳಿದ್ದರಿಂದ ಆಕೆ
ಯನ್ನು ಹೆಂಡತಿಯಾಗಲಿಕ್ಕೆ ತೆಗೆದುಕೊಂಡೆನಲ್ಲಾ.
ಇಗೋ ನಿನ್ನ ಹೆಂಡತಿ; ಕರೆದುಕೊಂಡು ಹೋಗು
ಎಂದು ಹೇಳಿ ಅವನ ವಿಷಯವಾಗಿ ತನ್ನ ಸೇವಕರಿಗೆ 20
ಅಪ್ಪಣೆಕೊಡಲು ಅವರು ಅಬ್ರಾಮನನ್ನೂ ಅವನ
ಹೆಂಡತಿಯನ್ನೂ ಅವನಿಗಿದ್ದ ಸರ್ವಸ್ವಸಹಿತವಾಗಿ
ಸಾಗಕಳುಹಿಸಿದರು. ಹೀಗೆ ಅಬ್ರಾಮನು ತನ್ನ 13
ದನ್ನೆಲ್ಲಾ ತೆಗೆದುಕೊಂಡು ಹೆಂಡತಿಯನ್ನೂ ಲೋಟನ
ನ್ನೂ ಸಂಗಡ ಕರಕೊಂಡು ಐಗುಪ್ತದೇಶವನ್ನು ಬಿಟ್ಟು
ಕಾನಾನ್‌ದೇಶದ ದಕ್ಷಿಣಪ್ರಾಂತ್ಯಕ್ಕೆ ಏರಿ ಬಂದನು.

### ಅಬ್ರಾಮನೂ ಲೋಟನೂ ಅಗಲಿದ್ದು.

ಅಬ್ರಾಮನು ಬಹು ಐಶ್ವರ್ಯವಂತನಾಗಿದ್ದನು; 2
ಅವನಿಗೆ ಪಶುಗಳೂ ಬೆಳ್ಳಿಬಂಗಾರವೂ ಇದ್ದವು.
ಅವನು ದಕ್ಷಿಣದೇಶವನ್ನು ಬಿಟ್ಟು ಮುಂದೆ ಮುಂದೆ 3
ಪ್ರಯಾಣಮಾಡುತ್ತಾ ಬೇತೇಲಿನ ವರೆಗೆ ಅಂದರೆ
ಬೇತೇಲಿಗೂ ಆಯಿ ಎಂಬ ಊರಿಗೂ ನಡುವೆ ತಾನು 4
ಪೂರ್ವದಲ್ಲಿ ಗುಡಾರಹಾಕಿಸಿ ಯಜ್ಞವೇದಿಯನ್ನು
ಕಟ್ಟಿದ್ದ ಕ್ಷೇತ್ರಕ್ಕೆ ತಿರಿಗಿ ಬಂದು ಅಲ್ಲಿ ಯೆಹೋವನ
ಹೆಸರನ್ನು ಹೇಳಿಕೊಂಡು ಆರಾಧಿಸಿದನು. ಅವನ ಜೊತೆ 5
ಯಲ್ಲಿದ್ದ ಲೋಟನಿಗೂ ಕುರಿದನಗುಡಾರಗಳಿದ್ದವು.
ಆ ಸ್ಥಳವು ಅವರಿಬ್ಬರ ಜೀವನಕ್ಕೆ ಸಾಲದೆ ಹೋಯಿತು. 6
ಅವರಿಬ್ಬರ ಆಸ್ತಿ ಬಹಳವಾದದರಿಂದ ಒಂದೇ ಸ್ಥಳ
ದಲ್ಲಿ ವಾಸವಾಗಿರುವದು ಅಸಾಧ್ಯವಾಯಿತು. ಇದ 7
ರಿಂದ ಅಬ್ರಾಮನ ದನಕಾಯುವವರಿಗೂ ಲೋಟನ
ದನಕಾಯುವವರಿಗೂ ಜಗಳ ಹುಟ್ಟಿತು. ಇದಲ್ಲದೆ
ಕಾನಾನ್ಯರೂ ಪೆರಿಜೀಯರೂ ಆ ಕಾಲದಲ್ಲಿ ದೇಶ
ದೊಳಗೆ ಇದ್ದರು. ಹೀಗಿರಲು ಅಬ್ರಾಮನು ಲೋಟ 8
ನಿಗೆ—ನನಗೂ ನಿನಗೂ, ನನ್ನ ದನಕಾಯುವವ
ರಿಗೂ ನಿನ್ನ ದನಕಾಯುವವರಿಗೂ ಜಗಳವಿರಬಾ
ರದು; ನಾವು ಸಹೋದರರಲ್ಲವೇ. ದೇಶವೆಲ್ಲಾ ನಿನ್ನೆ 9
ದುರಿಗೆ ಇದೆ; ದಯವಿಟ್ಟು ನನ್ನನ್ನು ಬಿಟ್ಟು
ಪ್ರತ್ಯೇಕ ಹೋಗು. ನೀನು ಎಡಗಡೆಗೆ ಹೋದರೆ
ನಾನು ಬಲಗಡೆಗೆ ಹೋಗುವೆನು; ನೀನು ಬಲಗಡೆಗೆ
ಹೋದರೆ ನಾನು ಎಡಗಡೆಗೆ ಹೋಗುವೆನು ಎಂದು
ಹೇಳಿದನು. ಲೋಟನು ಕಣ್ಣೆತ್ತಿ ನೋಡಲಾಗಿ 10
ಯೊರ್ದನ್ ಹೊಳೆಯ ಸುತ್ತಲಿನ ಪ್ರದೇಶವು ಚೋಗ
ರೂರಿನ ತನಕ ಎಲ್ಲಾ ಕಡೆಯಲ್ಲಿಯೂ ನೀರಾವರಿಯ
ಸ್ಥಳವೆಂದು ತಿಳುಕೊಂಡನು. ಯೆಹೋವನು ಸೊ
ದೋಮ್ ಗೊಮೋರ ಪಟ್ಟಣಗಳನ್ನು ನಾಶಮಾಡು
ವದಕ್ಕಿಂತ ಮುಂಚೆ ಆ ಸೀಮೆಯು ಯೆಹೋವನ
ವನದಂತೆಯೂ ಐಗುಪ್ತದೇಶದಂತೆಯೂ ನೀರಾವರಿ
ಯಾಗಿತ್ತು. ಆದದರಿಂದ ಲೋಟನು ಯೊರ್ದನ್ 11
ಹೊಳೆಯ ಸುತ್ತಣ ಪ್ರದೇಶವನ್ನು ಆದುಕೊಂಡು
ಮೂಡಣ ಕಡೆಗೆ ಹೊರಟನು. ಹೀಗೆ ಅವರಿಬ್ಬರೂ
ಪ್ರತ್ಯೇಕವಾದರು; ಅಬ್ರಾಮನು ಕಾನಾನ್‌ದೇಶದಲ್ಲಿ 12

1) ಅಂದರೆ. ಬೋಧಕನ ವೃಕ್ಷದ.

ವಾಸಮಾಡಿದನು; ಲೋಟನು ಯೊರ್ದನ್ ಹೊಳೆಯ
ಸುತ್ತಣ ಊರುಗಳಲ್ಲಿ ಗುಡಾರಹಾಕಿಸಿ ವಸತಿ
13 ಮಾಡುತ್ತಾ ಸೊದೋಮಿಗೆ ಬಂದನು. ಆದರೆ
ಸೋದೋಮ್ ಪಟ್ಟಣದವರು ದುಷ್ಟರೂ ಯೆಹೋವ
ನಿಗೆ ಮಹಾಪರಾಧಿಗಳೂ ಆಗಿದ್ದರು.

ದೇವರು ಅಬ್ರಾಮನ ಸಂತತಿಯವರಿಗೆ ಕಾನಾನ್‌ದೇಶವನ್ನು ವಾಗ್ದಾನಮಾಡಿದ್ದು.

14 ಲೋಟನು ಅಬ್ರಾಮನನ್ನು ಬಿಟ್ಟು ಬೇರೆಯಾದ
ನಂತರ ಯೆಹೋವನು ಅಬ್ರಾಮನಿಗೆ—ನೀನಿರುವ
ಸ್ಥಳದಿಂದ ದಕ್ಷಿಣೋತ್ತರಪೂರ್ವಪಶ್ಚಿಮಗಳಿಗೆ ಕಣ್ಣೆ
15 ತ್ತಿ ನೋಡು. ನೀನು ನೋಡುವ ಈ ದೇಶವನ್ನೆಲ್ಲಾ
ನಿನಗೂ ನಿನ್ನ ಸಂತತಿಗೂ ಶಾಶ್ವತವಾಗಿ ಕೊಡು
16 ವೆನು. ನಿನ್ನ ಸಂತಾನದವರನ್ನು ಭೂಮಿಯ ಧೂಳಿ
ನಷ್ಟು ಅಸಂಖ್ಯವಾಗಿ ಮಾಡುವೆನು. ಭೂಮಿಯಲ್ಲಿ
ರುವ ಧೂಳನ್ನು ಲೆಕ್ಕಮಾಡುವದಾದರೆ ನಿನ್ನ ಸಂತಾ
17 ನವನ್ನೂ ಲೆಕ್ಕಿಸಲಾದೀತು. ನೀನೆದ್ದು ಈ ದೇಶದ
ಎಲ್ಲಾ ಕಡೆಯಲ್ಲಿಯೂ ತಿರುಗಾಡು; ಇದನ್ನು
ನಿನಗೆ ಕೊಡುವೆನು ಎಂದು ಹೇಳಿದನು.
18 ತರುವಾಯ ಅಬ್ರಾಮನು ಅಲ್ಲಿಂದ ಹೊರಟು
ಅಲ್ಲಲ್ಲಿ ಗುಡಾರಹಾಕಿಸಿಕೊಳ್ಳುತ್ತಾ ಹೆಬ್ರೋನಿನ
ಲ್ಲಿರುವ ಮಮ್ರೆ ತೋಪಿಗೆ ಬಂದು ಅಲ್ಲೇ ವಾಸ
ಮಾಡಿಕೊಂಡು ಯೆಹೋವನಿಗೆ ಯಜ್ಞವೇದಿಯನ್ನು
ಕಟ್ಟಿಸಿದನು.

ಅಬ್ರಾಮನು ಲೋಟನನ್ನು ಸೆರೆಯಿಂದ ಬಿಡಿಸಿದ್ದು.

14 ಆ ದಿವಸಗಳಲ್ಲಿ ಶಿನಾರಿನ ಅರಸನಾದ ಅಮ್ರಾ
ಫೆಲನು, ಎಲ್ಲಸಾರಿನ ಅರಸನಾದ ಅರಿಯೋಕನು,
ಏಲಾಮಿನ ಅರಸನಾದ ಕೆದೊರ್ಲಗೋಮರನು,
ಗೋಯಿಮದ ಅರಸನಾದ ತಿದ್ಗಾಲನು ಈ ನಾಲ್ವರು
2, 3 ಈಗ ಲವಣಸಮುದ್ರವಾಗಿರುವ ಸಿದ್ದೀಮ್ ತಗ್ಗಿ
ನೊಳಗೆ ಕೂಡಿದ್ದ ಸೊದೋಮಿನ ಅರಸನಾದ ಬೆರ
ಗನು, ಗೊಮೋರದ ಅರಸನಾದ ಬಿರ್ಶಗನು, ಅದ್ಮಾ
ಹದ ಅರಸನಾದ ಶಿನಾಬನು, ಚೆಬೋಯಿಮಿನ ಅರ
ಸನಾದ ಶೆಮೇಬರನು, ಬೇಲಗಿನ ಅಂದರೆ ಚೋಗ
ರದ ಅರಸನು ಇವರೊಡನೆ ಯುದ್ಧಮಾಡಿದರು.
4 ಬೆರಗ ಮೊದಲಾದ ಇವರು ಹನ್ನೆರಡು ವರುಷ
ಕೆದೊರ್ಲಗೋಮರನಿಗೆ ಅಧೀನರಾಗಿದ್ದು ಹದಿಮೂ
5 ರನೆಯ ವರುಷದಲ್ಲಿ ತಿರುಗಿ ಬಿದ್ದರು. ಹದಿನಾಲ್ಕನೆಯ
ವರುಷದಲ್ಲಿ ಕೆದೊರ್ಲಗೋಮರನೂ ಅವನಿಗೆ
ಸೇರಿದ್ದ ರಾಜರೂ ಬಂದು ಅಷ್ಟರೋತ್ ಕರ್ನಯಿ
ಮಿನಲ್ಲಿ ರೆಫಾಯರನ್ನೂ ಹಾಮಿನಲ್ಲಿ ಜೂಜ್ಯರನ್ನೂ
ಶಾವೆಕಿರ್ಯಾತಯಿಮಿನಲ್ಲಿ ಏಮಿಯರನ್ನೂ ಸೋಲಿ
6 ಸಿದರು. ಇದಲ್ಲದೆ ಸೇಯಿರೆಂಬ ಬೆಟ್ಟದ ಸೀಮೆ
ಯಲ್ಲಿ ವಾಸವಾಗಿದ್ದ ಹೋರಿಯರನ್ನು ಅಲ್ಲೇ
ಸೋಲಿಸಿ ಮರಳುಕಾಡಿನ ಹತ್ತಿರವಿರುವ ಏಲ್ಪಾ
7 ರಾನಿನ ವರೆಗೂ ಹಿಂದಟ್ಟಿದರು. ಆ ಮೇಲೆ ಅವರು
ಹಿಂದಿರುಗಿಕೊಂಡು ಕಾದೇಶ್ ಎನ್ನುವ ಎನ್ಮಿಷ್ಪಾಟಿಗೆ
ಬಂದು ಅಮಾಲೇಕ್ಯರ ಸಮಸ್ತದೇಶವನ್ನೂ ಹಚ
ಚೋನ್‌ತಾಮರಿನಲ್ಲಿ ವಾಸವಾಗಿದ್ದ ಅಮೋರಿಯ
ರನ್ನೂ ಜಯಿಸಿದರು. ಆಗ ಸೊದೋಮ್, ಗೊಮೋರ,
ಅದ್ಮಾಹ, ಚೆಬೋಯಿಮ್, ಚೋಗರೆಂಬ ಬೇಲಗ
ಈ ಪಟ್ಟಣಗಳ ರಾಜರು ಹೊರಟು ಅವರಿಗೆದುರಾಗಿ,
ಅಂದರೆ ಏಲಾಮಿನ ಅರಸನಾದ ಕೆದೊರ್ಲಗೋ
ಮರ್, ಗೋಯಿಮದ ಅರಸನಾದ ತಿದ್ಗಾಲ, ಶಿನಾ
ರಿನ ಅರಸನಾದ ಅಮ್ರಾಫೆಲ, ಎಲ್ಲಸಾರಿನ ಅರಸ
ನಾದ ಅರಿಯೋಕ ಇವರಿಗೆ ವಿರೋಧವಾಗಿ ಸಿದ್ದೀ
ಮೆಂಬ ತಗ್ಗುಮೈದಾನದಲ್ಲಿ ತಮ್ಮ ದಂಡನ್ನು ನಿಲ್ಲಿ
ಸಿದರು. ಹೀಗೆ ನಾಲ್ಕು ಮಂದಿ ರಾಜರು ಐದು
ಮಂದಿ ರಾಜರನ್ನು ಎದುರಿಸಿದರು. ಆದರೆ ಸಿದ್ದೀಮ್
ತಗ್ಗಿನಲ್ಲಿ ಕಲ್ಲರಗಿನ ಕೆಸರುಕುಣಿಗಳು ತುಂಬಾ
ಇದ್ದವು. ಸೊದೋಮ್ ಗೊಮೋರಗಳ ರಾಜರ ಕಡೆ
ಯವರು ಓಡಿಹೋಗುವಾಗ ಆ ಕುಣಿಗಳಲ್ಲಿ ಬಿದ್ದು
ಸತ್ತರು; ಉಳಿದವರು ಬೆಟ್ಟಗಳಿಗೆ ಓಡಿಹೋದರು
ಗೆದ್ದವರು ಸೊದೋಮ್ ಗೊಮೋರ ಪಟ್ಟಣಗಳನ್ನು
ಸೂರೆಮಾಡಿ ಅವುಗಳಲ್ಲಿದ್ದ ಎಲ್ಲಾ ಆಸ್ತಿಯನ್ನೂ
ದವಸವನ್ನೂ ತೆಗೆದುಕೊಂಡು ಹೋದರು. ಸೊದೋ
ಮಿನಲ್ಲಿ ವಾಸವಾಗಿದ್ದ ಅಬ್ರಾಮನ ತಮ್ಮನ ಮಗ
ನಾದ ಲೋಟನನ್ನೂ ಅವನ ಆಸ್ತಿ ಸಹಿತ ಹಿಡಿದು
ಕೊಂಡು ಹೋದರು.
ತಪ್ಪಿಸಿಕೊಂಡವನೊಬ್ಬನು ಇಬ್ರಿಯನಾದ ಅಬ್ರಾ
ಮನ ಬಳಿಗೆ ಬಂದು ಇದನ್ನು ತಿಳಿಸಿದನು. ಅಬ್ರಾ
ಮನು ಅಮೋರಿಯನಾದ ಮಮ್ರೆಯನ ತೋಪಿನ
ಬಳಿಯಲ್ಲಿ ವಾಸವಾಗಿದ್ದನು. ಮಮ್ರೆಯನು
ಎಷ್ಕೋಲ ಆನೇರರಿಗೆ ಸಹೋದರನು; ಇವರಿಬ್ಬ
ರಿಗೂ ಅಬ್ರಾಮನಿಗೂ ಒಡಂಬಡಿಕೆಯಿತ್ತು. ಅಬ್ರಾ
ಮನು ತನ್ನ ತಮ್ಮನ ಮಗನು ಸೆರೆಗೆ ಸಿಕ್ಕಿದ್ದನ್ನು
ಕೇಳಿ ತನ್ನ ಮನೆಯಲ್ಲೇ ಹುಟ್ಟಿ ಬೆಳೆದ ಶಿಕ್ಷಿತರಾದ
ಮುನ್ನೂರಹದಿನೆಂಟು ಮಂದಿ ಆಳುಗಳನ್ನು ಯುದ್ಧ
ಕ್ಕೆ ಸಿದ್ಧಮಾಡಿಕೊಂಡು ಹೊರಟು ಆ ರಾಜರನ್ನು
ದಾನೂರಿನ ವರೆಗೆ ಹಿಂದಟ್ಟಿದನು. ಆಗ ಅವನು
ರಾತ್ರಿವೇಳೆಯಲ್ಲಿ ತನ್ನ ದಂಡನ್ನು ಎರಡು ಭಾಗ
ಮಾಡಿ ತನ್ನ ಭಟರೊಡನೆ ಅವರ ಮೇಲೆ ಬಿದ್ದು
ಹೊಡೆದು ದಮಸ್ಕ ಪಟ್ಟಣದ ಉತ್ತರಕಡೆಯಲ್ಲಿರುವ
ಹೋಬಾ ಊರಿನ ತನಕ ಹಿಂದಟ್ಟಿದನು. ರಾಜರು
ಅಪಹರಿಸಿದ್ದ ಎಲ್ಲಾ ವಸ್ತುಗಳನ್ನು ಅವನು ತೆಗೆದು
ಕೊಂಡನು. ತನ್ನ ತಮ್ಮನ ಮಗನಾದ ಲೋಟ
ನನ್ನೂ ಅವನ ಆಸ್ತಿಯನ್ನೂ ಬಿಡಿಸಿಕೊಂಡದ್ದಲ್ಲದೆ
ಸೆರೆಯಲ್ಲಿದ್ದ ಸ್ತ್ರೀಯರನ್ನೂ ಮಿಕ್ಕಾದವರನ್ನೂ ತೆಗೆ
ದುಕೊಂಡು ಬಂದನು.
ಅವನು ಕೆದೊರ್ಲಗೋಮರನನ್ನೂ ಅವನೊಂದಿಗೆ
ಇದ್ದ ರಾಜರನ್ನೂ ಹೊಡೆದು ಬಂದ ಮೇಲೆ ಸೊದೋ
ಮಿನ ಅರಸನು ಅವನನ್ನು ಅರಸನ ತಗ್ಗು ಎನ್ನಿಸಿ
ಕೊಳ್ಳುವ ಶಾವೆ ತಗ್ಗಿನಲ್ಲಿ ಎದುರುಗೊಂಡನು
ಸಾಲೇಮಿನ ಅರಸನಾದ ಮೆಲ್ಕೀಚೆದೆಕನು ಸಹ ಬಂದು
ರೊಟ್ಟಿಯನ್ನೂ ದ್ರಾಕ್ಷಾರಸವನ್ನೂ ಕೊಟ್ಟನು. ಇವ
ನು ಪರಾತ್ಪರನಾದ ದೇವರ ಯಾಜಕನಾಗಿದ್ದು
ಅಬ್ರಾಮನನ್ನು ಆಶೀರ್ವದಿಸಿ—ಭೂಮ್ಯಾಕಾಶಗಳನ್ನು

ನಿರ್ಮಾಣಮಾಡಿದ ಪರಾತ್ಪರನಾದ ದೇವರ ಆಶೀರ್ವಾ
ದವು ಅಬ್ರಾಮನಿಗೆ ಆಗಲಿ; ಪರಾತ್ಪರನಾದ ದೇವರು
ನಿನ್ನ ಶತ್ರುಗಳನ್ನು ನಿನ್ನ ಕೈಗೆ ಒಪ್ಪಿಸಿದ್ದಕ್ಕಾಗಿ ಆತ
ನಿಗೆ ಸ್ತೋತ್ರ ಎಂದು ಹೇಳಿದನು. ಅಬ್ರಾಮನು
ತಾನು ಗೆದ್ದು ತಂದಿದ್ದ ಎಲ್ಲಾ ವಸ್ತುಗಳಲ್ಲಿ ಹತ್ತನೆಯ
ಒಂದು ಭಾಗವನ್ನು ಅವನಿಗೆ ಕೊಟ್ಟನು.
ಸೊದೋಮಿನ ಅರಸನು ಅಬ್ರಾಮನಿಗೆ— ನೀನು
ಬಿಡಿಸಿದ ಜನರನ್ನು ನನಗೆ ಒಪ್ಪಿಸು; ಆಸ್ತಿಯನ್ನು
23 ನೀನೇ ತಕ್ಕೋ ಎಂದು ಹೇಳಲು ಅಬ್ರಾಮನು ಅವ
ನಿಗೆ—ಒಂದು ದಾರವನ್ನಾಗಲಿ ಕೆರದ ಬಾರನ್ನಾಗಲಿ
ನಿನ್ನದರಲ್ಲಿ ಯಾವದನ್ನೂ ತೆಗೆದುಕೊಳ್ಳುವದಿಲ್ಲ
ವೆಂದು ಭೂಮ್ಯಾಕಾಶಗಳನ್ನು ನಿರ್ಮಾಣಮಾಡಿದ
ಪರಾತ್ಪರದೇವರಾಗಿರುವ ಯೆಹೋವನ ಕಡೆಗೆ ಕೈ
ಯೆತ್ತಿ ಪ್ರಮಾಣಮಾಡುತ್ತೇನೆ. ಅಬ್ರಾಮನು ನನ್ನ
ಸೊತ್ತಿನಿಂದಲೇ ಐಶ್ವರ್ಯವಂತನಾದನೆಂದು ಹೇಳಿ
ಕೊಳ್ಳುವದಕ್ಕೆ ನಿನಗೆ ಆಸ್ಪದವಾಗಬಾರದು, ನನಗೆ
ಏನೂ ಬೇಡ. ಆಳುಗಳು ತಿಂದದ್ದು ಹೊರತು ನನ್ನ
ಜೊತೆಯವರಾದ ಆನೇರ ಎಷ್ಕೋಲ ಮಮ್ರೆಯರಿಗೆ
ಬರತಕ್ಕ ಪಾಲು ಮಾತ್ರ ಇರಲಿ ಎಂದು ಹೇಳಿದನು.

ದೇವರು ಅಬ್ರಾಮನಿಗೆ ಸಂತತಿಯನ್ನೂ ಆ ಸಂತತಿಗೆ
ಕಾನಾನ್‌ದೇಶವನ್ನೂ ವಾಗ್ದಾನಮಾಡಿದ್ದು.

15 ಈ ಸಂಗತಿಗಳು ನಡೆದ ಮೇಲೆ ಅಬ್ರಾಮನಿಗೆ
ದರ್ಶನದಲ್ಲಿ ಯೆಹೋವನ ವಾಕ್ಯವುಂಟಾಯಿತು;
ಏನಂದರೆ—ಅಬ್ರಾಮನೇ, ಭಯಪಡಬೇಡ, ನಾನು
ನಿನಗೆ ಗುರಾಣಿಯಾಗಿದ್ದೇನೆ; ನಿನಗೋಸ್ಕರ ಅತ್ಯ
ಧಿಕಬಹುಮಾನವು ಇಟ್ಟದೆ ಎಂಬುದೇ. ಅದಕ್ಕೆ
ಅಬ್ರಾಮನು—ಕರ್ತನಾದ ಯೆಹೋವನೇ, ನನಗೆ
ಏನು ಕೊಟ್ಟರೇನು? ನಾನು ಸಂತಾನವಿಲ್ಲದವನಾಗಿ
ಹೋಗುವೆನಾದದರಿಂದ ನನ್ನ ಆಸ್ತಿಯೆಲ್ಲಾ ದಮ
ಸ್ಕದ ಎಲೀಯೆಜರನ ಪಾಲಾಗುವದಲ್ಲಾ ಅಂದನು.
ತಿರಿಗಿ ಅಬ್ರಾಮನು—ನೀನು ನನಗೆ ಸಂತಾನಕೊಡ
ಲಿಲ್ಲವಾದ್ದರಿಂದ ನನ್ನ ಮನೆಯಲ್ಲಿ ಹುಟ್ಟಿದವನೇ
ನನಗೆ ಬಾಧ್ಯಸ್ಥನಾಗಬೇಕಾಯಿತು ಎಂದು ಹೇಳಲು
ಯೆಹೋವನು ಅವನ ಸಂಗಡ ಮಾತಾಡಿ—ಇವನು
ನಿನಗೆ ಬಾಧ್ಯಸ್ಥನಾಗುವದಿಲ್ಲ; ನಿನ್ನ ಹೊಟ್ಟೆಯಲ್ಲೇ
ಹುಟ್ಟುವವನು ನಿನಗೆ ಬಾಧ್ಯಸ್ಥನಾಗುವನು ಎಂದು
ಹೇಳಿ ಅವನನ್ನು ಹೊರಗೆ ಕರತಂದು—ಆಕಾಶದ
ಕಡೆಗೆ ನೋಡು, ನಕ್ಷತ್ರಗಳನ್ನು ಲೆಕ್ಕಿಸುವದು
ನಿನ್ನಿಂದಾದರೆ ಲೆಕ್ಕಿಸು; ನಿನ್ನ ಸಂತಾನವು ಅಷ್ಟಾಗು
ವದು ಅಂದನು. ಅಬ್ರಾಮನು ಯೆಹೋವನನ್ನು
ನಂಬಿದನು; ಯೆಹೋವನು ಅವನ ನಂಬಿಕೆಯನ್ನು
ಅವನ ಲೆಕ್ಕಕ್ಕೆ ನೀತಿಯೆಂದು ಎಣಿಸಿದನು.
ಆ ಮೇಲೆ ಆತನು ಅವನಿಗೆ—ಈ ದೇಶದ ಬಾಧ್ಯತೆ
ಯನ್ನು ನಿನಗೆ ಕೊಡುವದಕ್ಕೋಸ್ಕರ ನಿನ್ನನ್ನು
ಊರ್ ಎಂಬ ಕಲ್ದೀಯರ ಪಟ್ಟಣದಿಂದ ಬರಮಾಡಿದ
ಯೆಹೋವನೇ ನಾನು ಎಂದು ಹೇಳಲು ಅವನು—
ಕರ್ತನಾದ ಯೆಹೋವನೇ, ನಾನು ಇದನ್ನು ಬಾಧ್ಯ
ನಾಗಿ ಹೊಂದುವೆನೆಂದು ತಿಳುಕೊಳ್ಳುವದು ಹೇಗೆ
ಎಂದು ಕೇಳಿದನು. ಅದಕ್ಕೆ ಆತನು—ನೀನು 9
ಮೂರು ಮೂರು ವರುಷಗಳ ಮಣಕ, ಆಡು, ಟಗ
ರು ಇವುಗಳನ್ನೂ ಬೆಳವಕ್ಕಿಯನ್ನೂ ಪಾರಿವಾಳದ
ಮರಿಯನ್ನೂ ತೆಗೆದುಕೊಂಡು ಬಾ ಅಂದನು. ಅವನು 10
ಇವುಗಳನ್ನೆಲ್ಲಾ ತೆಗೆದುಕೊಂಡು ಬಂದು ಪಶುಗ
ಳನ್ನು ಕಡಿದು ಎರಡೆರಡು ಹೋಳುಮಾಡಿ ತುಂಡಿಗೆ
ತುಂಡನ್ನು ಎದುರಾಗಿ ಇಟ್ಟನು; ಪಕ್ಷಿಗಳನ್ನು ಮಾತ್ರ
ಕಡಿಯಲಿಲ್ಲ. ಆ ಶವಗಳ ಮೇಲೆ ಹದ್ದುಗಳು ಎರ 11
ಗಲು ಅಬ್ರಾಮನು ಅವುಗಳನ್ನು ಓಡಿಸಿಬಿಟ್ಟನು.
ಹೊತ್ತು ಮುಣುಗುತ್ತಿರುವಾಗ ಅಬ್ರಾಮನಿಗೆ 12
ಗಾಢನಿದ್ರೆ ಹತ್ತಿತು; ಕಾರ್ಗತ್ತಲು ಅವನ ಮೇಲೆ ಕವಿ
ಯಿತು; ಅವನು ಭಯಭ್ರಾಂತನಾದನು. ಆಗ 13
ಯೆಹೋವನು ಅವನಿಗೆ—ನೀನು ಚೆನ್ನಾಗಿ ತಿಳಿಯ
ತಕ್ಕದ್ದೇನಂದರೆ—ನಿನ್ನ ಸಂತತಿಯವರು ಅನ್ಯದೇಶ
ದಲ್ಲಿ ಕೆಲವು ಕಾಲ ವಾಸವಾಗಿದ್ದು ಆ ದೇಶದವರಿಗೆ
ದಾಸರಾಗುವರು. ನಾನೂರು ವರುಷ ಆ ದೇಶದವ
ರಿಂದ ಬಾಧೆಪಡುವರು. ಅವರಿಂದ ಬಿಟ್ಟೀಕೆಲಸ 14
ಮಾಡಿಸಿಕೊಂಡ ಜನಾಂಗವನ್ನು ನಾನು ಶಿಕ್ಷಿಸಿದ
ನಂತರ ಅವರು ಬಹಳ ಆಸ್ತಿವಂತರಾಗಿ ಆ ದೇಶದಿಂದ
ಬಿಡುಗಡೆಯಾಗಿ ಬರುವರು. ನೀನಂತೂ ಸಮಾಧಾನ 15
ದೊಡನೆ ಪಿತೃಗಳ ಬಳಿಗೆ ಸೇರುವಿ; ತುಂಬಾ ವೃದ್ಧ
ನಾಗಿ ಉತ್ತರಕ್ರಿಯೆಯನ್ನು ಹೊಂದುವಿ. ನಿನ್ನ ಸಂತ 16
ತಿಯವರು ನಾಲ್ಕನೆಯ ತಲಾಂತರದಲ್ಲಿ ಇಲ್ಲಿಗೆ ತಿರಿಗಿ
ಬರುವರು; ಅಮೋರಿಯರ ಅಪರಾಧವು ಇನ್ನೂ
ಪೂರ್ಣಸ್ಥಿತಿಗೆ ಬರಲಿಲ್ಲ ಎಂದು ಹೇಳಿದನು.
ಹೊತ್ತು ಮುಣುಗಿ ಕಾರ್ಗತ್ತಲಾದಾಗ ಇಗೋ 17
ಹೊಗೆಹಾಯುವ ಒಲೆಯೂ ಉರಿಯುವ ದೀವಟಿಗೆ
ಯೂ ಕಾಣಿಸಿ ಆ ತುಂಡುಗಳ ನಡುವೆ ಹೋದವು.
ಆ ದಿನದಲ್ಲಿ ಯೆಹೋವನು ಅಬ್ರಾಮನ ಸಂಗಡ 18
ಒಡಂಬಡಿಕೆಮಾಡಿಕೊಂಡು — ಐಗುಪ್ತದೇಶದ ನದಿ
ಯಿಂದ ಯೂಫ್ರೇಟೀಸ್ ಮಹಾನದಿಯ ವರೆಗೂ ಈ
ದೇಶವನ್ನೆಲ್ಲಾ ನಿನ್ನ ಸಂತತಿಯವರಿಗೆ ಕೊಟ್ಟಿದ್ದೇನೆ
ಅಂದನು; ಅಂದರೆ ಕೇನಿಯರೂ ಕೆನಿಜೀಯರೂ ಕದ್ಮೋ 19
ನಿಯರೂ ಹಿತ್ತಿಯರೂ ಪೆರಿಜೀಯರೂ ರೆಫಾಯರೂ 20
ಅಮೋರಿಯರೂ ಕಾನಾನ್ಯರೂ ಗಿರ್ಗಾಷಿಯರೂ 21
ಯೆಬೂಸಿಯರೂ ವಾಸವಾಗಿರುವ ದೇಶವನ್ನು ಕೊ
ಡುವೆನೆಂದು ವಾಗ್ದಾನಮಾಡಿದನು.

ಇಷ್ಮಾಯೇಲನ ಜನನವು.

ಅಬ್ರಾಮನ ಹೆಂಡತಿಯಾದ ಸಾರಯಳಿಗೆ ಮಕ್ಕ 16
ಳಿರಲಿಲ್ಲ. ಆಕೆಗೆ ಐಗುಪ್ತದೇಶದವಳಾದ ಹಾಗ
ರಳೆಂಬ ದಾಸಿಯಿದ್ದಳು. ಹೀಗಿರಲಾಗಿ ಸಾರಯಳು 2
ಅಬ್ರಾಮನಿಗೆ—ಯೆಹೋವನು ನನಗೆ ಮಕ್ಕಳನ್ನು
ಕೊಡಲಿಲ್ಲವಷ್ಟೆ; ನೀನು ನನ್ನ ದಾಸಿಯ ಬಳಿಗೆ
ಹೋಗಬೇಕು; ಒಂದು ವೇಳೆ ಅವಳ ಮೂಲಕ
ನನಗೆ ಸಂತಾನವಾದೀತು ಎಂದು ಹೇಳಲು ಅಬ್ರಾ
ಮನು ಆಕೆಯ ಮಾತಿಗೆ ಸಮ್ಮತಿಸಿದನು. ಅಬ್ರಾ 3
ಮನು ಹತ್ತು ವರುಷ ಕಾನಾನ್‌ದೇಶದಲ್ಲಿ ವಾಸಿಸಿದ
ಮೇಲೆ ಅವನ ಹೆಂಡತಿಯಾದ ಸಾರಯಳು ಐಗುಪ್ತ

ಳಾದ ಹಾಗರಳೆಂಬ ದಾಸಿಯನ್ನು ಕರೆದು ತನ್ನ
4 ಗಂಡನಿಗೆ ಹೆಂಡತಿಯಾಗಿ ಒಪ್ಪಿಸಿದಳು. ಅವನು
ಹಾಗರಳನ್ನು ಕೂಡಲು ಬಸುರಾದಳು. ತಾನು
ಬಸುರಾದೆನೆಂದು ತಿಳುಕೊಂಡಾಗ ಅವಳು ಯಜ
5 ಮಾನಿಯನ್ನು ತಾತ್ಸಾರಮಾಡಿದಳು. ಆಗ ಸಾರ
ಯಳು ಅಬ್ರಾಮನಿಗೆ—ನನ್ನ ಗೋಳು ನಿನಗೆ ತಗ
ಲಲಿ; ನನ್ನ ದಾಸಿಯನ್ನು ನಿನಗೆ ಹೆಂಡತಿಯಾಗಿ
ಒಪ್ಪಿಸಿದೆನಷ್ಟೆ; ಅವಳು ತಾನು ಬಸುರಾದೆನೆಂದು
ತಿಳಿದು ನನ್ನನ್ನು ತಾತ್ಸಾರಮಾಡುತ್ತಾಳೆ; ನಿನಗೂ
ನನಗೂ ಯೆಹೋವನೇ ನ್ಯಾಯತೀರಿಸಲಿ ಎಂದು
6 ಹೇಳಲು ಅಬ್ರಾಮನು—ನಿನ್ನ ದಾಸಿಯು ನಿನ್ನ
ಕೈಯಲ್ಲೇ ಇದ್ದಾಳೆ; ಮನಸ್ಸುಬಂದಂತೆ ಮಾಡು
ಅಂದನು. ಆಗ ಸಾರಯಳು ಅವಳನ್ನು ಬಾಧಿಸಲು
ಅವಳು ಓಡಿಹೋದಳು.

7 ಅವಳು ಮರಳುಕಾಡಿನಲ್ಲಿ ಶೂರಿನ ಮಾರ್ಗದ
ಒರತೆಯ ಹತ್ತಿರ ಇರುವಾಗ ಯೆಹೋವನ ದೂತನು
8 ಅವಳನ್ನು ಕಂಡು—ಸಾರಯಳ ದಾಸಿಯಾದ ಹಾಗ
ರಳೇ, ಎಲ್ಲಿಂದ ಬಂದಿ? ಎಲ್ಲಿಗೆ ಹೋಗುತ್ತೀ
ಎಂದು ಕೇಳಲು ಅವಳು—ನನ್ನ ಯಜಮಾನಿಯಾದ
ಸಾರಯಳ ಬಳಿಯಿಂದ ಓಡಿಹೋಗುತ್ತಾ ಇದ್ದೇನೆ
9 ಅಂದಳು. ಅದಕ್ಕೆ ಯೆಹೋವನ ದೂತನು—
ನೀನು ಯಜಮಾನಿಯ ಬಳಿಗೆ ಹಿಂದಿರುಗಿ ಹೋಗಿ
10 ಅವಳಿಗೆ ತಗ್ಗಿ ನಡೆದುಕೋ ಅಂದನು. ಅದಲ್ಲದೆ
ಯೆಹೋವನ ದೂತನು ಅವಳಿಗೆ—ನಿನಗೆ ಬಹು
ಸಂತಾನವಾಗಮಾಡುವೆನು; ಅದು ಲೆಕ್ಕಿಸಕೂಡದಷ್ಟು
11 ಅಪರಿಮಿತವಾಗುವದು ಎಂದು ಹೇಳಿದನು. ಮತ್ತು
ಯೆಹೋವನ ದೂತನು ಅವಳಿಗೆ—

ನೀನು ಬಸುರಾಗಿದ್ದೀಯಷ್ಟೆ; ನಿನಗೆ ಮಗನು
ಹುಟ್ಟುವನು; ಯೆಹೋವನು ನಿನ್ನ ಕಷ್ಟದ
ಕೂಗಿಗೆ ಕಿವಿಗೊಟ್ಟದ್ದರಿಂದ ಆ ಮಗನಿಗೆ
12 ಇಷ್ಮಾಯೇಲ್ ಎಂದು ಹೆಸರಿಡಬೇಕು. ಅವನು
ಕಾಡುಗತ್ತೆಯಂತೆ ಇರುವನು. ಅವನು ಎಲ್ಲರ
ಮೇಲೆ ಕೈಯೆತ್ತುವನು; ಹಾಗೆಯೇ ಅವನ
ಮೇಲೆ ಎಲ್ಲರೂ ಕೈಯೆತ್ತುವರು. ತನ್ನ
ಅಣ್ಣತಮ್ಮಂದಿರ [1]ಎದುರುಗಡೆಯೇ ವಾಸವಾ
ಗಿರುವನು

13 ಎಂದು ಹೇಳಿ ಹೋದನು. ಅವಳು—ನನ್ನನ್ನು
ನೋಡುವಾತನನ್ನು ನಾನು ಇಲ್ಲಿಯೂ ನೋಡಿದ್ದೇ
ನಲ್ಲಾ ಅಂದುಕೊಂಡು ತನ್ನ ಸಂಗಡ ಮಾತಾಡಿದ್ದ
ಯೆಹೋವನಿಗೆ [ಎಲ್ಲವನ್ನೂ] ನೋಡುವ ದೇವ
14 ರೆಂದು ಹೆಸರಿಟ್ಟಳು. ಈ ಸಂಗತಿಯಿಂದ ಅಲ್ಲಿರುವ
ಬಾವಿಗೆ [2]ಲಹೈರೋಯಿ ಬಾವಿ ಎಂದು ಹೆಸರಾ
ಯಿತು; ಅದು ಕಾದೇಶಿಗೂ ಬೆರೆದಿಗೂ ನಡುವೆ
15 ಅದೆ. ಹಾಗರಳು ಅಬ್ರಾಮನಿಂದ ಮಗನನ್ನು
ಹೆತ್ತಳು; ಅಬ್ರಾಮನು ಅವನಿಗೆ ಇಷ್ಮಾಯೇಲ್ ಎಂದು
16 ಹೆಸರಿಟ್ಟನು. ಅವಳು ಇಷ್ಮಾಯೇಲನನ್ನು ಹೆತ್ತಾಗ
ಅಬ್ರಾಮನು ಎಂಭತ್ತಾರು ವರುಷದವನಾಗಿದ್ದನು.

ದೇವರು ಅಬ್ರಹಾಮನ ಸಂಗಡ ಒಡಂಬಡಿಕೆಮಾಡಿಕೊಂಡು
ಸುನ್ನತಿಸಂಸ್ಕಾರವನ್ನು ನೇಮಿಸಿದ್ದೂ ಇಸಾಕನ ಜನನವನ್ನು
ಮುಂತಿಳಿಸಿದ್ದೂ.

ಅಬ್ರಾಮನು ತೊಂಭತ್ತೊಂಭತ್ತು ವರುಷದವನಾ
ದಾಗ ಯೆಹೋವನು ಅವನಿಗೆ ದರ್ಶನಕೊಟ್ಟು—
ನಾನು ಸರ್ವಶಕ್ತನಾದ ದೇವರು; ನನಗೆ ನಡಕೊಂಡ
ದೋಷವಿಲ್ಲದವನಾಗಿರು. ನಾನು ನಿನ್ನ ಸಂಗ
ಒಡಂಬಡಿಕೆಮಾಡಿಕೊಳ್ಳುತ್ತೇನೆ; ಅತ್ಯಧಿಕವಾದ ಸಂತ
ಯನ್ನು ಕೊಡುವೆನು ಅಂದನು. ಅಬ್ರಾಮನ
ಅಡ್ಡಬೀಳಲು ದೇವರು ಅವನ ಸಂಗಡ ಮಾತಾಡಿ—
ನಾನಂತೂ ನಿನಗೆ ವಾಗ್ದಾನಮಾಡುತ್ತೇನೆ; ಏನಂದ
ನೀನು ಅನೇಕಜನಾಂಗಗಳಿಗೆ ಮೂಲಪುರುಷನಾಗುವಿ
ಇನ್ನು ಮುಂದೆ ನಿನಗೆ ಅಬ್ರಾಮ ಎಂದು ಹೆಸರಿರು
ದಿಲ್ಲ. ನಿನ್ನನ್ನು ಅನೇಕಜನಾಂಗಗಳಿಗೆ ಮೂಲಪಿತ
ವಾಗಿ ನೇಮಿಸಿರುವದರಿಂದ ನಿನಗೆ ಅಬ್ರಹಾಮನೆಂದ
ಹೆಸರಿರುವದು. ನಿನಗೆ ಅತ್ಯಧಿಕವಾದ ಸಂತಾನವನ್ನ
ಕೊಡುವೆನು; ನಿನ್ನಿಂದ ಜನಾಂಗಗಳು ಉತ್ಪತ್ತಿಯಾಗ
ಅರಸರೂ ಹುಟ್ಟುವರು. ನಿನಗೂ ನಿನ್ನ ಸಂತತಿಗ
ದೇವರಾಗಿರುವೆನೆಂದು ನಾನು ನಿನಗೋಸ್ಕರವೂ ನಿನ್ನ
ಸಂತತಿಯ ಎಲ್ಲಾ ತಲಾಂತರಗಳಿಗೋಸ್ಕರವೂ ಮಾ
ಕೊಂಡ ನನ್ನ ಒಡಂಬಡಿಕೆಯನ್ನು ಸ್ಥಿರಪಡಿಸುವೆನು
ನೀನು ಪ್ರವಾಸವಾಗಿರುವ ಕಾನಾನ್‌ದೇಶವನ್ನೆಲ್ಲಾ
ನಿನಗೂ ನಿನ್ನ ಸಂತತಿಗೂ ಶಾಶ್ವತಸ್ವಾಸ್ತ್ಯವನ್ನಾ
ಕೊಟ್ಟು ಅವರಿಗೆ ದೇವರಾಗಿರುವೆನು ಅಂದನು.

ಇದಲ್ಲದೆ ದೇವರು ಅಬ್ರಹಾಮನಿಗೆ—ನೀನಂತ
ನನ್ನ ಒಡಂಬಡಿಕೆಯನ್ನು ಕೈಕೊಂಡು ನಡೆಯಬೇಕ
ನೀನು ಮಾತ್ರವಲ್ಲದೆ ನಿನ್ನ ಸಂತತಿಯವರೂ ಎಲ್ಲಾ
ತಲಾಂತರಗಳಲ್ಲಿ ಅದನ್ನು ಕೈಕೊಂಡು ನಡೆಯಬೇಕ
ನೀನೂ ನಿನ್ನ ಹಿಂದೆ ಬರುವ ಸಂತತಿಯವರ
ಕೈಕೊಳ್ಳಬೇಕಾದ ನನ್ನ ನಿಬಂಧನೆಯು ಯಾ
ದಂದರೆ—ನಿಮ್ಮಲ್ಲಿ ಪ್ರತಿಯೊಬ್ಬ ಗಂಡಸಿಗೂ ಸುನ್ನ
ಯಾಗಬೇಕೆಂಬದೇ. ನೀವು ಮಾನಸ್ಥಾನದಲ್ಲಿ ಸುನ್ನ
ಮಾಡಿಸಿಕೊಳ್ಳಬೇಕು; ಅದೇ ನಿಮಗೂ ನನಗ
ಉಂಟಾದ ಒಡಂಬಡಿಕೆಗೆ ಗುರುತು. ಎಲ್ಲಾ ತಲಾಂ
ರಗಳಲ್ಲಿ ನಿಮ್ಮಲ್ಲಿರುವ ಪ್ರತಿಯೊಬ್ಬ ಗಂಡಸೂ
ಮನೆಯಲ್ಲಿ ಹುಟ್ಟಿದವನಾದರೂ ನಿನ್ನ ಸಂತತಿಯಲ್ಲಿ
ಹುಟ್ಟದೆ ಅನ್ಯರಿಂದ ಕ್ರಯಕ್ಕೆ ತೆಗೆದುಕೊಂಡವನಾ
ದರೂ ಎಂಟು ದಿನಗಳ ವಯಸ್ಸುಳ್ಳವನಾದಾಗ ಅವನಿ
ಸುನ್ನತಿಮಾಡಿಸಬೇಕು. ನಿನ್ನ ಮನೆಯಲ್ಲಿ ಹುಟ್ಟಿದ
ರಿಗೂ ನೀನು ಕ್ರಯಕ್ಕೆ ತೆಗೆದುಕೊಂಡವರಿಗೂ ತಪ್ಪ
ಸುನ್ನತಿಯಾಗಬೇಕು. ಹೀಗೆ ನಾನು ಮಾಡುವ
ನಿಬಂಧನೆಯ ಗುರುತು ನಿಮ್ಮ ಶರೀರದಲ್ಲೇ ಇದ್ದು
ಶಾಶ್ವತವಾದ ಒಡಂಬಡಿಕೆಯನ್ನು ಸೂಚಿಸುವದು
ಸುನ್ನತಿಮಾಡಿಸಿಕೊಳ್ಳದ ಗಂಡಸು ನನ್ನ ಒಡಂಬಡಿ
ಯನ್ನು ಮೀರಿದವನಾದ ಕಾರಣ ಅವನು [3]ಕುಲದಿಂ
ತೆಗೆದುಹಾಕಲ್ಪಡಬೇಕು ಎಂದು ಹೇಳಿದನು.

---

1) ಅಥವಾ: ಪೂರ್ವದಿಕ್ಕಿನಲ್ಲಿ. 2) ಅಂದರೆ, ನನ್ನನ್ನು ನೋಡುವ ಜೀವಸ್ವರೂಪನ. 3) ಈ ಪದಪ್ರಯೋಗ ಸ್ಥಳಗಳ
ಕೆಲವರು ಮರಣಶಿಕ್ಷೆಗೆ ಗುರಿಯಾಗಬೇಕು ಎಂದು ಅರ್ಥಮಾಡುವರು.

ಇದಲ್ಲದೆ ದೇವರು ಅಬ್ರಹಾಮನಿಗೆ—ನೀನು
ಇನ್ನು ಮುಂದೆ ನಿನ್ನ ಪತ್ನಿಯನ್ನು ಸಾರಯಳೆಂದು
ಕರೆಯದೆ ಸಾರಾ ಎಂದು ಕರೆಯಬೇಕು. ನಾನು
ಆಕೆಯನ್ನು ಆಶೀರ್ವದಿಸಿ ಆಕೆಯಲ್ಲಿ ನಿನಗೆ ಮಗ
ನನ್ನು ಕೊಡುವೆನು. ನಾನು ಆಕೆಯನ್ನು ಆಶೀರ್ವ
ದಿಸಿದ್ದರಿಂದ ಆಕೆಯಿಂದ ಅನೇಕಜನಾಂಗಗಳೂ
ಅರಸರೂ ಉತ್ಪತ್ತಿಯಾಗುವರು ಎಂದು ಹೇಳಲು
ಅಬ್ರಹಾಮನು ಅಡ್ಡಬಿದ್ದು ನಕ್ಕು—ನೂರು ವರುಷ
ದವನಿಗೆ ಮಗ ಹುಟ್ಟುವದುಂಟೇ? ತೊಂಭತ್ತು
ವರುಷದವಳಾದ ಸಾರಳು ಹೆತ್ತಾಳೇ ಎಂದು ಮನಸ್ಸಿ
ನಲ್ಲಿ ಅಂದುಕೊಂಡು ದೇವರಿಗೆ—ಇಷ್ಮಾಯೇಲ
ನಿದ್ದಾನಲ್ಲಾ, ಅವನೇ ನಿನ್ನ ದಯೆ ಹೊಂದಿ ಬಾಳಲಿ
ಎನ್ನಲು ದೇವರು—ಹಾಗಲ್ಲ, ನಿನ್ನ ಪತ್ನಿಯಾದ
ಸಾರಳಲ್ಲಿಯೇ ನಿನ್ನಿಂದ ಮಗನು ಹುಟ್ಟುವನು. ಅವ
ನಿಗೆ [1]ಇಸಾಕನೆಂದು ಹೆಸರಿಡಬೇಕು. ಅವನ ಸಂಗಡ
ನನ್ನ ಒಡಂಬಡಿಕೆಯನ್ನು ಸ್ಥಾಪಿಸಿಕೊಳ್ಳುವೆನು; ಅದು
ಅವನ ಸಂತತಿಯವರಲ್ಲಿಯೂ ಶಾಶ್ವತವಾಗಿರಬೇಕು.
ಇಷ್ಮಾಯೇಲನ ವಿಷಯದಲ್ಲಿ ನೀನು ಮಾಡಿದ ಬಿನ್ನಹ
ವನ್ನು ಕಿವಿಗೊಟ್ಟು ಕೇಳಿದ್ದೇನೆ. ಅವನನ್ನೂ ಆಶೀರ್ವ
ದಿಸಿದ್ದೇನೆ; ಅವನನ್ನು ಅಭಿವೃದ್ಧಿಮಾಡಿ ಅವನಿಗೆ ಅತ್ಯ
ಧಿಕವಾದ ಸಂತಾನವನ್ನು ಕೊಡುವೆನು. ಅವನು ಹನ್ನೆ
ರಡು ಮಂದಿ ಅರಸರನ್ನು ಪಡೆಯುವನು; ಅವನಿಂದ
ದೊಡ್ಡ ಜನಾಂಗವಾಗುವಂತೆ ಮಾಡುವೆನು. ಆದರೆ ಆ
ನನ್ನ ಒಡಂಬಡಿಕೆಯನ್ನು ಇಸಾಕನ ಸಂಗಡಲೇ ಸ್ಥಾಪಿ
ಸಿಕೊಳ್ಳುತ್ತೇನೆ; ಬರುವ ವರುಷ ಇದೇ ಕಾಲದಲ್ಲಿ
ಸಾರಳು ಅವನನ್ನು ಹೆರುವಳು ಅಂದನು. ಆಗ ದೇವರು
ಅಬ್ರಹಾಮನ ಸಂಗಡ ಮಾತಾಡುವದನ್ನು ಮುಗಿಸಿ
ಅವನ ಬಳಿಯಿಂದ ಮೇಲಕ್ಕೆ ಹೋದನು.

ಅದೇ ದಿನದಲ್ಲಿ ಅಬ್ರಹಾಮನು ತನ್ನ ಮಗನಾದ
ಇಷ್ಮಾಯೇಲನಿಗೂ ತನ್ನ ಮನೆಯಲ್ಲಿದ್ದ ಎಲ್ಲಾ ಗಂಡಸ
ರಿಗೂ, ಅಂದರೆ ಮನೆಯಲ್ಲಿ ಹುಟ್ಟಿದವರಿಗೆ ಮಾತ್ರವ
ಲ್ಲದೆ, ತಾನು ಕ್ರಯಕ್ಕೆ ತೆಗೆದುಕೊಂಡವರಿಗೂ ದೇವರ
ಅಪ್ಪಣೆಯಂತೆ ಸುನ್ನತಿಮಾಡಿಸಿದನು. ಅಬ್ರಹಾಮನಿಗೆ
ಸುನ್ನತಿಯಾದಾಗ ಅವನಿಗೆ ತೊಂಭತ್ತೊಂಭತ್ತು ವರು
ಷವಾಗಿತ್ತು. ಇಷ್ಮಾಯೇಲನಿಗೆ ಸುನ್ನತಿಯಾದಾಗ
ಅವನಿಗೆ ಹದಿಮೂರು ವರುಷವಾಗಿತ್ತು. ಅಬ್ರಹಾಮ
ನಿಗೂ ಅವನ ಮಗನಾದ ಇಷ್ಮಾಯೇಲನಿಗೂ ಒಂದೇ
ದಿನದಲ್ಲಿ ಸುನ್ನತಿಯಾಯಿತು. ಅವನ ಮನೆಯಲ್ಲಿದ್ದ
ಗಂಡಸರೆಲ್ಲರಿಗೂ ಅಂದರೆ ಮನೆಯಲ್ಲಿ ಹುಟ್ಟಿದವರಿಗೆ
ಮಾತ್ರವಲ್ಲದೆ ಅನ್ಯರಿಂದ ಕ್ರಯಕ್ಕೆ ತೆಗೆದುಕೊಂಡವ
ರಿಗೂ ಅವನೊಂದಿಗೆ ಸುನ್ನತಿಯಾಯಿತು.

ಅಬ್ರಹಾಮನ ಹೆಂಡತಿಗೆ ವೃದ್ಧಾಪ್ಯದಲ್ಲಿ ಮಗನು
ಹುಟ್ಟುವನೆಂದು ದೇವರು ವಾಗ್ದಾನಮಾಡಿದ್ದು.

8 ಅಬ್ರಹಾಮನು ಮಧ್ಯಾಹ್ನದಲ್ಲಿ ಮಮ್ರೇತೋಪಿನ
ತನ್ನ ಗುಡಾರದ ಬಾಗಲಲ್ಲಿ ಕೂತಿರುವಾಗ ಯೆಹೋ
ವನು ಅವನಿಗೆ ದರ್ಶನಕೊಟ್ಟನು. ಹೇಗಂದರೆ,
ಅಬ್ರಹಾಮನು ಕಣ್ಣೆತ್ತಿ ನೋಡಲು ಅವನೆದುರಿ
ನಲ್ಲಿ ಯಾರೋ ಮೂರು ಮಂದಿ ಪುರುಷರು ನಿಂತಿ
ದ್ದರು. ಕೂಡಲೆ ಅವರನ್ನು ಎದುರುಗೊಳ್ಳುವದಕ್ಕೆ
ಅವನು ಗುಡಾರದ ಬಾಗಲಿನಿಂದ ಓಡಿ ಹೋಗಿ
ಬೊಗ್ಗಿ ನಮಸ್ಕರಿಸಿ—ಸ್ವಾಮೀ, ದಯವಿರಲಿ; 3
ದಾಸನ ಬಳಿಗೆ ದಯಮಾಡದೆ ಮುಂದೆ ಹೋಗ
ಬೇಡಿರಿ. ನೀವು ದಾಸನಿರುವ ಸ್ಥಳದ ಹತ್ತಿರ ಹಾದು
ಹೋಗುತ್ತೀರಲ್ಲಾ. ನೀರು ತರಿಸಿಕೊಡುತ್ತೇನೆ; ನಿಮ್ಮ 4
ಕಾಲುಗಳನ್ನು ತೊಳೆದುಕೊಂಡು ಮರದ ನೆರಳಿನಲ್ಲಿ
ವಿಶ್ರಮಿಸಿಕೊಳ್ಳಿರಿ. ಸ್ವಲ್ಪ ಆಹಾರ ತರುತ್ತೇನೆ, 5
ಊಟವಾದ ಮೇಲೆ ನೀವು ಮುಂದಕ್ಕೆ ಪ್ರಯಾಣ
ಬೆಳಿಸಬಹುದು ಎನ್ನಲು ಅವರು—ನೀನು ಹೇಳಿದಂತೆ
ಮಾಡಬಹುದು ಅಂದರು. ಆಗ ಅಬ್ರಹಾಮನು 6
ಗುಡಾರದಲ್ಲಿದ್ದ ಸಾರಳ ಬಳಿಗೆ ಓಡಿಹೋಗಿ ಆಕೆಗೆ—
ಹಸನಾದ ಮೂರು ಸೇರು ಹಿಟ್ಟನ್ನು ನಾದಿ ಬೇಗ
ರೊಟ್ಟಿಗಳನ್ನು ಮಾಡು ಎಂದು ಹೇಳಿದನು. ಆ 7
ಮೇಲೆ ಅವನು ದನಗಳ ಕಡೆಗೆ ಓಡಿಹೋಗಿ ಕೊಬ್ಬಿದ
ಎಳೇ ಕರುವನ್ನು ತೆಗೆದು ಆಳಿನ ಕೈಗೆ ಕೊಟ್ಟನು.
ಆಳು ಬೇಗನೆ ಅಡಿಗೆಮಾಡಿದನು. ತರುವಾಯ ಅಬ್ರ 8
ಹಾಮನು ಹಾಲುಮೊಸರನ್ನೂ ಅಟ್ಟ ಮಾಂಸವನ್ನೂ
ತೆಗೆದುಕೊಂಡು ಬಂದು ಆ ಮನುಷ್ಯರಿಗೆ ಬಡಿಸಿದನು.
ಅವರು ಮರದ ಕೆಳಗೆ ಊಟಮಾಡುವ ವರೆಗೂ
ಅವನು ಹತ್ತಿರ ನಿಂತುಕೊಂಡು ಉಪಚಾರ ಮಾಡಿದನು.
ಬಳಿಕ ಅವರು ಅವನನ್ನು—ನಿನ್ನ ಪತ್ನಿಯಾದ ಸಾರ 9
ಳು ಎಲ್ಲಿದ್ದಾಳೆ ಎಂದು ಕೇಳಲು ಅವನು—ಅಗೋ,
ಗುಡಾರದಲ್ಲಿದ್ದಾಳೆ ಅಂದನು. ಅದಕ್ಕಾತನು—ಬರುವ 10
ವರುಷದ ಇದೇ ಕಾಲದಲ್ಲಿ ನಾನು ತಪ್ಪದೆ ತಿರಿಗಿ ನಿನ್ನ ಬ
ಳಿಗೆ ಬರುತ್ತೇನೆ; ಬಂದಾಗ ನಿನ್ನ ಪತ್ನಿಯಾದ ಸಾರಳಿಗೆ
ಮಗನಿರುವನು ಅಂದನು. ಆ ಮಾತು ಹಿಂದೆ ಗುಡಾರದ
ಬಾಗಲಲ್ಲಿ ನಿಂತಿದ್ದ ಸಾರಳ ಕಿವಿಗೆ ಬಿತ್ತು. ಅಬ್ರಹಾ 11
ಮನೂ ಸಾರಳೂ ಬಹುವೃದ್ಧರಾಗಿದ್ದರು; ಸಾರಳಿಗೆ
ಮುಟ್ಟು ನಿಂತುಹೋಗಿತ್ತು. ಹೀಗಿರಲಾಗಿ ಆಕೆ— 12
ನನ್ನಂಥ ಮುದುಕಿಗೆ ಭೋಗವಾದೀತೇ? ನನ್ನ ಯಜ
ಮಾನನೂ ಮುದುಕನಲ್ಲವೇ ಎಂದು ತನ್ನೊಳಗೆ
ನಕ್ಕಳು. ಯೆಹೋವನು ಅಬ್ರಹಾಮನಿಗೆ—ಸಾರಳು 13
ನಕ್ಕು ಮುದುಕಿಯಾದ ನಾನು ಮಗುವನ್ನು ಹೆರುವ
ದಾದೀತೇ ಎಂದು ಹೇಳಿದ್ದೇನು? ಯೆಹೋವನಿಗೆ 14
ಅಸಾಧ್ಯವಾದದ್ದುಂಟೋ? ನಾನು ಹೇಳಿದಂತೆಯೇ
ಬರುವ ವರುಷದ ಇದೇ ಕಾಲದಲ್ಲಿ ನಾನು ನಿನ್ನ
ಬಳಿಗೆ ಬಂದಾಗ ಸಾರಳಿಗೆ ಮಗನಿರುವನು ಎಂದು
ಹೇಳಿದನು. ಆಗ ಸಾರಳು ಭಯಪಟ್ಟು—ನಾನು 15
ನಗಲಿಲ್ಲ ಎಂದು ಬೊಂಕಲು ಆತನು—ಹಾಗನ್ನ
ಬೇಡಮ್ಮಾ, ನೀನು ನಕ್ಕದ್ದುಂಟು ಅಂದನು.

ಸೊದೋಮ್ ಪಟ್ಟಣವನ್ನು ನಾಶಮಾಡಬೇಡವೆಂದು
ಅಬ್ರಹಾಮನು ದೇವರನ್ನು ಬೇಡಿಕೊಂಡದ್ದು.

ಆ ಮನುಷ್ಯರು ಅಲ್ಲಿಂದ ಹೊರಟು ಸೊದೋಮಿನ 16
ಕಡೆಗೆ ನೋಡಿದರು; ಅಬ್ರಹಾಮನು ಅವರನ್ನು
ಸಾಗಕಳುಹಿಸುತ್ತಾ ಅವರ ಜೊತೆಯಲ್ಲೇ ಬಂದಿದ್ದನು.

1) ಇಸಾಕ ಅಂದರೆ ನಗುತ್ತಾನೆ.

17 ಆಗ ಯೆಹೋವನು ತನ್ನೊಳಗೆ—ನಾನು ಮಾಡ
ಬೇಕೆಂದಿರುವ ಕಾರ್ಯವನ್ನು ಅಬ್ರಹಾಮನಿಗೆ ಮರೆ
18 ಮಾಡುವದು ಸರಿಯೋ? ಅವನಿಂದ ಬಲಿಷ್ಠವಾದ
ಮಹಾಜನಾಂಗವು ಹುಟ್ಟಬೇಕಲ್ಲಾ; 1)ಅವನ ಮೂಲಕ
ಭೂಮಿಯ ಎಲ್ಲಾ ಜನಾಂಗಗಳಿಗೂ ಆಶೀರ್ವಾದ
19 ಉಂಟಾಗುವದಲ್ಲಾ; ಅವನು ತನ್ನ ಪುತ್ರಪೌತ್ರ
ರಿಗೆ—ನೀವು ನ್ಯಾಯನೀತಿಗಳನ್ನು ನಡಿಸಿ ಯೆಹೋ
ವನ ಮಾರ್ಗವನ್ನು ಅನುಸರಿಸಬೇಕೆಂದು ಬೋಧಿಸು
ವಂತೆ ಅವನನ್ನು ನಾನು ಆದುಕೊಂಡೆನಲ್ಲಾ; ಅವನು
ಹೀಗೆ ಮಾಡುವದರಿಂದ ಯೆಹೋವನಾದ ನನ್ನ
20 ವಾಗ್ದಾನವು ನೆರವೇರುವದು ಅಂದುಕೊಂಡನು. ಇದ
ಲ್ಲದೆ ಯೆಹೋವನು—ಸೊದೋಮ್ ಗೊಮೋರಗಳ
ವಿಷಯವಾಗಿ ಎಷ್ಟೋ ದೊಡ್ಡ ಮೊರೆ ನನಗೆ
ಮುಟ್ಟಿತು; ಆ ಊರಿನವರ ಮೇಲೆ ಹೊರಿಸಿರುವ
21 ಪಾಪವು ಎಷ್ಟೋ ಘೋರವಾದದ್ದು; ನಾನು ಇಳಿದು
ಹೋಗಿ ನನಗೆ ಮುಟ್ಟಿದ ಮೊರೆಯಂತೆಯೇ ಅವರು
ಮಾಡಿದರೋ ಇಲ್ಲವೋ ಎಂದು ನೋಡಿ ತಿಳುಕೊಳ್ಳು
ತ್ತೇನೆ ಅಂದನು.
22 ಆ ಮನುಷ್ಯರು ಅಲ್ಲಿಂದ ಸೊದೋಮಿನ ಕಡೆಗೆ
ಹೋದರು; ಆದರೆ ಅಬ್ರಹಾಮನು ಯೆಹೋವನ
ಎದುರಾಗಿ ಇನ್ನೂ ನಿಂತನು.
23 ಆಗ ಅಬ್ರಹಾಮನು ಹತ್ತಿರಕ್ಕೆ ಬಂದು—ನೀನು
ದುಷ್ಟರ ಸಂಗಡ ನೀತಿವಂತರನ್ನೂ ನಾಶಮಾಡು
24 ವಿಯಾ? ಒಂದು ವೇಳೆ ಆ ಊರೊಳಗೆ ಐವತ್ತು
ಮಂದಿ ನೀತಿವಂತರಿದ್ದಾರು; ಅದರಲ್ಲಿ ಐವತ್ತು
ಮಂದಿ ನೀತಿವಂತರಿದ್ದರೂ ಆ ಸ್ಥಳವನ್ನು ಉಳಿಸದೆ
25 ನಾಶಮಾಡುವಿಯಾ? ಆ ರೀತಿಯಾಗಿ ದುಷ್ಟರಿಗೂ
ಶಿಷ್ಟರಿಗೂ ಭೇದಮಾಡದೆ ದುಷ್ಟರ ಸಂಗಡ ನೀತಿ
ವಂತರನ್ನೂ ಸಂಹರಿಸುವದು ನಿನ್ನಿಂದ ಎಂದಿಗೂ
ಆಗಬಾರದು; ಸರ್ವಲೋಕಕ್ಕೆ ನ್ಯಾಯತೀರಿಸುವ
ವನು ನ್ಯಾಯವನ್ನೇ ನಡಿಸುವನಲ್ಲವೇ ಎಂದು ಹೇಳ
26 ಲು ಯೆಹೋವನು—ಸೊದೋಮಿನಲ್ಲಿ ಐವತ್ತು
ಮಂದಿ ನೀತಿವಂತರು ನನಗೆ ಸಿಕ್ಕಿದರೆ ಅವರ ನಿಮಿತ್ತ
27 ಊರನ್ನೆಲ್ಲಾ ಉಳಿಸುವೆನು ಅಂದನು. ಅದಕ್ಕೆ ಅಬ್ರ
ಹಾಮನು—ಇಗೋ, ಮಣ್ಣೂ ಬೂದಿಯೂ ಆಗಿ
ರುವ ನಾನು ಸ್ವಾಮಿಯ ಸಂಗಡ ವಾದಿಸುವದಕ್ಕೆ
28 ಧೈರ್ಯಗೊಂಡಿದ್ದೇನೆ; ಒಂದು ವೇಳೆ ಐವತ್ತು ಮಂದಿ
ನೀತಿವಂತರಿಗೆ ಐದು ಮಂದಿ ಕಡಿಮೆಯಾಗಿದ್ದಾರು;
ಐದು ಮಂದಿ ಕಡಿಮೆಯಾದದ್ದಕ್ಕೆ ಪಟ್ಟಣವನ್ನೆಲ್ಲಾ
ನಾಶಮಾಡುವಿಯಾ ಎಂದು ಹೇಳಲು ಯೆಹೋವ
ನು—ಅಲ್ಲಿ ನಾಲ್ವತ್ತೈದು ಮಂದಿ ಸಿಕ್ಕಿದರೆ ಅದನ್ನು
29 ನಾಶಮಾಡುವದಿಲ್ಲ ಅಂದನು. ಅಬ್ರಹಾಮನು
ಆತನ ಸಂಗಡ ಇನ್ನೂ ಮಾತಾಡಿ—ಒಂದು ವೇಳೆ
ಅಲ್ಲಿ ನಾಲ್ವತ್ತು ಮಂದಿ ಸಿಕ್ಕಾರು ಎನ್ನಲು ಆತನು—
ನಾಲ್ವತ್ತು ಮಂದಿ ಸಿಕ್ಕಿದರೆ ಆ ಪಟ್ಟಣವನ್ನು ನಾಶ
30 ಮಾಡುವದಿಲ್ಲ ಅಂದನು. ಅಬ್ರಹಾಮನು—ಸ್ವಾ
ಮಿಾ, ಕೋಪಮಾಡಬಾರದು; ಇನ್ನೂ ಮಾತಾಡು
ತ್ತೇನೆ; ಒಂದು ವೇಳೆ ಮೂವತ್ತು ಮಂದಿ ಅಲ್ಲಿ

ಸಿಕ್ಕಾರು ಎನ್ನಲು ಆತನು—ಅಲ್ಲಿ ಮೂವತ್
ಮಂದಿ ಸಿಕ್ಕಿದರೆ ಅದನ್ನು ನಾಶಮಾಡುವದಿಲ್ಲ ಅಂ
ನು. ಅವನು—ಇಗೋ, ಸ್ವಾಮಿಯ ಸಂಗ
ಮಾತಾಡುವದಕ್ಕೆ ಧೈರ್ಯಗೊಂಡಿದ್ದೇನೆ; ಒಂದ
ವೇಳೆ ಇಪ್ಪತ್ತು ಮಂದಿ ಅಲ್ಲಿ ಸಿಕ್ಕಾರು ಎನ್ನಲ
ಆತನು—ಇಪ್ಪತ್ತು ಮಂದಿಯಿದ್ದರೆ ಅವರ ನಿಮಿ
ಅದನ್ನು ಉಳಿಸುವೆನು, ನಾಶಮಾಡುವದಿಲ್ಲ ಅಂ
ನು. ಅಬ್ರಹಾಮನು—ಸ್ವಾಮಿಾ, ನಿನಗೆ ಸಿಟ್ಟ
ಬಾರದು; ಇನ್ನು ಒಂದೇ ಸಾರಿ ಮಾತಾಡುತ್ತೇನ
ಒಂದು ವೇಳೆ ಹತ್ತು ಮಂದಿ ಸಿಕ್ಕಾರು ಎನ್ನಲ
ಆತನು—ಹತ್ತು ಮಂದಿಯ ನಿಮಿತ್ತವೂ ಅದನ
ಉಳಿಸುವೆನು, ನಾಶಮಾಡುವದಿಲ್ಲ ಅಂದನು. ಯ
ಹೋವನು ಅಬ್ರಹಾಮನ ಸಂಗಡ ಮಾತಾಡು
ದನ್ನು ಮುಗಿಸಿ ಹೊರಟುಹೋದನು; ಅಬ್ರಹಾಮನ
ತನ್ನ ಸ್ಥಳಕ್ಕೆ ಹಿಂದಿರುಗಿ ಹೋದನು.

ದೇವರು ಸೊದೋಮ್ ಗೊಮೋರ ಪಟ್ಟಣಗಳನ್ನು ನಾಶಮಾ
ಲೋಟನನ್ನು ತಪ್ಪಿಸಿದ್ದು.

ಆ ದೂತರಿಬ್ಬರು ಸಾಯಂಕಾಲದಲ್ಲಿ ಸೊದೋ
ಮಿಗೆ ಬಂದಾಗ ಲೋಟನು ಸೊದೋಮಿನ ಊರು
ಬಾಗಲಲ್ಲಿ ಕೂತುಕೊಂಡಿದ್ದನು. ಅವನು ಅವರನ
ಕಂಡಾಗ ಎದ್ದು ಎದುರುಗೊಂಡು ಬೊಗ್ಗಿ ನಮ
ಸ್ಕರಿಸಿ—ಸ್ವಾಮಿಗಳೇ, ನಿಮ್ಮ ದಾಸನ ಮನ
ಬಂದು ಇಳುಕೊಂಡು ಕಾಲುಗಳನ್ನು ತೊಳಕೊಳ್ಳಿ
ಬೆಳಿಗ್ಗೆ ನಿಮ್ಮ ಮಾರ್ಗ ಹಿಡುಕೊಂಡು ಹೋ
ಬಹುದು ಅಂದನು. ಅವರು—ಹಾಗಲ್ಲ, ಬೀ
ಯಲ್ಲೇ ರಾತ್ರಿಕಳೆಯುತ್ತೇವೆ ಅನ್ನಲು ಅವನ
ಅವರನ್ನು ಬಹಳ ಬಲವಂತ ಮಾಡಿದ್ದರಿಂದ ಅವರ
ಅವನ ಬಳಿಯಲ್ಲಿ ಇಳುಕೊಳ್ಳುವದಕ್ಕೆ ಒಪ್ಪಿದರ
ಅವರು ಮನೆಗೆ ಬಂದಾಗ ಅವನು ಹುಳಿಯಿಲ್ಲ
ರೊಟ್ಟಿಗಳನ್ನು ಸುಡಿಸಿ ಔತಣವನ್ನು ಮಾಡಿಸ
ಅವರು ಊಟಮಾಡಿದರು.
ಅವರು ಮಲಗುವದಕ್ಕಿಂತ ಮುಂಚೆ ಹುಡುಗರ
ಮುದುಕರು ಸಹಿತವಾಗಿ ಸೊದೋಮಿನ ಪಟ್ಟ
ದವರೆಲ್ಲರೂ ಒಗ್ಗಟ್ಟಾಗಿ ಮನೆಯನ್ನು ಸುತ್ತಿಕೊಂ
ಲೋಟನಿಗೆ—ಈ ರಾತ್ರಿ ನಿನ್ನ ಬಳಿಗೆ ಬಂದ ಮನ
ಷ್ಯರು ಎಲ್ಲಿ? ಅವರನ್ನು ಹೊರಕ್ಕೆ ತೆಗೆದುಕೊಂ
ಬಾ; ಅವರೊಡನೆ ನಮಗೆ ಸಂಗಮವಾಗಬೇಕೆಂದ
ಕೂಗಿ ಹೇಳಿದರು. ಲೋಟನು ಅವರ ಬಳ
ಹೊರಕ್ಕೆ ಬಂದು ತನ್ನ ಹಿಂದೆ ಕದಹಾಕಿ—ಅಣ್ಣಂದಿರ
ಈ ಪಾತಕವನ್ನು ಮಾಡಬೇಡಿರಿ. ಕೇಳಿರಿ, ನನ
ಪುರುಷರನ್ನರಿಯದ ಇಬ್ಬರು ಹೆಣ್ಣುಮಕ್ಕಳು ಇದ
ರೆ; ಅವರನ್ನಾದರೂ ನಿಮಗೆ ತಂದು ಒಪ್ಪಿಸೇನ
ಮನಸ್ಸು ಬಂದಂತೆ ಮಾಡಬಹುದು; ಆದರೆ ಆ ಮನ
ಷ್ಯರು ನನ್ನ ಆಶ್ರಯಕ್ಕೆ ಬಂದವರು; ಅವರಿಗೆ ಏನ
ಮಾಡಕೂಡದು ಎಂದು ಹೇಳಲು ಅವರು—ದಾ
ಜಿಡು ಎಂದು ಹೇಳಿ—ಇವನು ಯಾರೋ ಒಬ್ಬ ಪ

1) ಅಥವಾ: ಭೂಮಿಯ ಎಲ್ಲಾ ಜನಾಂಗಗಳವರೂ ಅವನಿಗಿರುವಂಥ ಆಶೀರ್ವಾದವೇ ತಮಗೂ ಆಗಬೇಕೆಂದು ಕೋರುವರಲ್ಲಾ

ವೇತಿಯಾಗಿ ಬಂದು ಈಗ ನ್ಯಾಯ ಹೇಳುವವನಾಗ
ಬೇಕೋ; ಆ ಮನುಷ್ಯರಿಗೆ ಕೇಡು ಮಾಡುವದಕ್ಕಿಂತ
ಹೆಚ್ಚಾಗಿ ನಿನಗೇ ಕೇಡು ಮಾಡುತ್ತೇವೆ ಎಂದು ಹೇಳಿ
ಲೋಟನ ಮೇಲೆ ಬಿದ್ದು ಬಹಳವಾಗಿ ಇರುಕಿಸಿ ಕದ
10 ವನ್ನು ಒಡೆದುಬಿಡಬೇಕೆಂದಿದ್ದರು. ಆದರೆ ಒಳಗಿದ್ದ
ಆ ಮನುಷ್ಯರು ಕೈಚಾಚಿ ಲೋಟನನ್ನು ತಮ್ಮ ಕಡೆಗೆ
11 ಮನೆಯೊಳಗೆ ಸೇರಿಸಿ ಕದ ಮುಚ್ಚಿದರು. ಇದಲ್ಲದೆ
ಅವರು ಮನೆಯ ಹೊರಗಿದ್ದ ಮನುಷ್ಯರಿಗೆ ಚಿಕ್ಕವ
ರಿಗೂ ದೊಡ್ಡವರಿಗೂ ಕೂಡ ಕಣ್ಣು ಮೊಬ್ಬಾಗುವಂತೆ
ಮಾಡಿದ್ದರಿಂದ ಇವರು ಬಾಗಿಲು ಯಾವದೆಂದು ತಿಳಿ
ಯದೆ ಬೇಸರಗೊಂಡರು.
12 ಆಗ ಆ ದೂತರು ಲೋಟನಿಗೆ—ಇಲ್ಲಿ ನಿನಗೆ
ಇನ್ನಾರಿದ್ದಾರೆ? ಅಳಿಯಂದಿರನ್ನೂ ಗಂಡುಹೆಣ್ಣುಮಕ್ಕ
ಳನ್ನೂ ಪಟ್ಟಣದಲ್ಲಿ ನಿನಗಿರುವ ಬೇರೆ ಎಲ್ಲರನ್ನೂ
13 ಊರ ಹೊರಕ್ಕೆ ಕರದುಕೊಂಡು ಬಾ. ನಾವು ಈ
ಸ್ಥಳವನ್ನು ನಾಶಮಾಡುವದಕ್ಕೆ ಬಂದವರು. ಇಲ್ಲಿ
ಯವರ ವಿಷಯವಾಗಿ ಬಲು ದೊಡ್ಡ ಮೊರೆಯು
ಯೆಹೋವನಿಗೆ ಮುಟ್ಟಿದ್ದರಿಂದ ಇವರನ್ನು ನಾಶ
ಮಾಡುವದಕ್ಕಾಗಿ ಆತನು ನಮ್ಮನ್ನು ಕಳುಹಿಸಿದ್ದಾನೆ
14 ಎಂದು ಹೇಳಿದರು. ಆಗ ಲೋಟನು ಹೊರಕ್ಕೆ ಹೋಗಿ
ತನ್ನ ಹೆಣ್ಣುಮಕ್ಕಳನ್ನು ಗೊತ್ತುಮಾಡಿಕೊಂಡಿದ್ದ
ಅಳಿಯಂದಿರಿಗೆ ಈ ಸಂಗತಿಯನ್ನು ತಿಳಿಸಿ—ನೀವೆದ್ದು
ಈ ಸ್ಥಳವನ್ನು ಬಿಟ್ಟು ಹೋಗಿರಿ, ಯೆಹೋವನು ಈ
ಊರನ್ನು ನಾಶಮಾಡುತ್ತಾನೆ ಎಂದು ಹೇಳಿದನು.
ಆದರೆ ಅವನು ಅವರಿಗೆ ಗೇಲಿಮಾಡುವವನಾಗಿ
15 ಕಾಣಿಸಿದನು. ಹೊತ್ತು ಮೂಡುವದಕ್ಕೆ ಮುಂಚೆ
ಆ ದೂತರು ಲೋಟನಿಗೆ—ನೀನೆದ್ದು ಇಲ್ಲಿರುವ ನಿನ್ನ
ಹೆಂಡತಿಯನ್ನೂ ನಿನ್ನ ಇಬ್ಬರು ಹೆಣ್ಣುಮಕ್ಕಳನ್ನೂ
ಬೇಗ ಕರಕೊಂಡು ಹೋಗು; ಊರಿಗೆ ಉಂಟಾಗುವ
ದಂಡನೆಯಿಂದ ನಿನಗೂ ನಾಶವುಂಟಾದೀತು ಎಂದು
16 ಹೇಳಿ ತ್ವರೆಪಡಿಸಿದರು. ಅವನು ತಡಮಾಡಲು
ಯೆಹೋವನು ಅವನನ್ನು ಕನಿಕರಿಸಿದ್ದರಿಂದ ಆ
ಮನುಷ್ಯರು ಅವನನ್ನೂ ಅವನ ಹೆಂಡತಿ ಮಕ್ಕಳನ್ನೂ
ಕೈಹಿಡಿದು ಹೊರಗೆ ತಂದು ಊರಾಚೆಗೆ ಬಿಟ್ಟರು.
17 ಹೊರಗೆ ತಂದ ಮೇಲೆ ಆತನು—ಓಡಿಹೋಗು,
ಪ್ರಾಣವನ್ನು ಉಳಿಸಿಕೋ; ಹಿಂದಕ್ಕೆ ನೋಡಬೇಡ;
ಈ ಪ್ರದೇಶದೊಳಗೆ ಎಲ್ಲಿಯೂ ನಿಲ್ಲದೆ ಬೆಟ್ಟದ
ಸೀಮೆಗೆ ಓಡಿಹೋಗು; ನಿನಗೂ ನಾಶವುಂಟಾದೀತು
18 ಅಂದನು. ಅದಕ್ಕೆ ಲೋಟನು—ಸ್ವಾಮೀ, ಅದು
19 ನನ್ನಿಂದಾಗದು; ನೀನು ನಿನ್ನ ದಾಸನ ಮೇಲೆ
ದಯವಿಟ್ಟು ನನ್ನ ಪ್ರಾಣವನ್ನು ಉಳಿಸಿದ್ದು ಬಹು
ವಿಶೇಷವಾದ ಉಪಕಾರವೇ; ಆದರೆ ಬೆಟ್ಟಕ್ಕೆ ಓಡಿ
ಹೋಗಲಾರೆನು; ನಾನು ಹೋಗುತ್ತಿರುವಾಗ ಆ
20 ವಿಪತ್ತು ನನಗೂ ಉಂಟಾಗಿ ಸತ್ತೇನು. ಅಗೋ,
ಅಲ್ಲಿ ಒಂದು ಊರು ಹತ್ತಿರವಾಗಿದೆ; ಅದು ಸಣ್ಣದು;
ಅಲ್ಲಿಗಾದರೂ ಹೋಗುವದಕ್ಕೆ ಅಪ್ಪಣೆಯಾದರೆ ನನ್ನ
ಪ್ರಾಣ ಉಳಿಯುವದು; ಆ ಊರು ಸಣ್ಣದಲ್ಲವೇ
21 ಅಂದನು. ಅದಕ್ಕಾತನು—ಈ ವಿಷಯದಲ್ಲಿಯೂ
ನಿನಗೆ ಅನುಗ್ರಹಮಾಡಿದ್ದೇನೆ, ನೋಡು; ನೀನು
ಹೇಳಿದ ಊರನ್ನು ನಾನು ಕೆಡಹುವದಿಲ್ಲ. ಬೇಗ 22
ಅಲ್ಲಿಗೆ ಹೋಗಿ ತಪ್ಪಿಸಿಕೋ; ನೀನು ಅಲ್ಲಿಗೆ
ಮುಟ್ಟುವ ತನಕ ನಾನೇನೂ ಮಾಡುವದಕ್ಕಾಗುವ
ದಿಲ್ಲ ಅಂದನು. ಇದರಿಂದ ಆ ಊರಿಗೆ [1]ಚೋಗರ್
ಎಂದು ಹೆಸರಾಯಿತು. ಲೋಟನು ಚೋಗರಿಗೆ 23
ಮುಟ್ಟುವಷ್ಟರಲ್ಲಿ ಸೂರ್ಯನು ಮೂಡಿದನು. ಆಗ 24
ಯೆಹೋವನು ಸೊದೋಮ್ ಗೊಮೋರಗಳ ಮೇಲೆ
ಆಕಾಶದಿಂದ ಅಗ್ನಿಗಂಧಕಗಳನ್ನು ಸುರಿಸಿ ಆ 25
ಪಟ್ಟಣಗಳನ್ನೂ ಸುತ್ತಲಿರುವ ಸೀಮೆಯೆಲ್ಲವನ್ನೂ
ಊರುಗಳಲ್ಲಿದ್ದ ಜನರೆಲ್ಲರನ್ನೂ ಭೂಮಿಯ ಮೇಲಣ
ಎಲ್ಲಾ ಬೆಳೆಯನ್ನೂ ಹಾಳುಮಾಡಿದನು. ಲೋಟನ 26
ಹೆಂಡತಿ ಅವನ ಹಿಂದೆ ಬರುತ್ತಿರುವಾಗ ಹಿಂದಿರುಗಿ
ನೋಡಿದ್ದರಿಂದ ಉಪ್ಪಿನ ಕಂಬವಾದಳು.
ಇತ್ತಲಾಗಿ ಅಬ್ರಹಾಮನು ಬೆಳಿಗ್ಗೆ ಎದ್ದು ತಾನು 27
ಯೆಹೋವನ ಸನ್ನಿಧಿಯಲ್ಲಿ ನಿಂತಿದ್ದ ಸ್ಥಳಕ್ಕೆ ತಿರಿಗಿ
ಬಂದು ಸೊದೋಮ್ ಗೊಮೋರಗಳ ಕಡೆಗೂ ಆ 28
ಎಲ್ಲಾ ಸೀಮೆಯ ಕಡೆಗೂ ನೋಡಿದಾಗ, ಅಯ್ಯೋ, ಆ
ಪ್ರದೇಶದಿಂದ ಹೊಗೆಯು ಆವಿಗೆಯ ಹೊಗೆಯಂತೆ
ಏರಿತು. ದೇವರು ಆ ಸೀಮೆಯ ಪಟ್ಟಣಗಳನ್ನು 29
ನಾಶಮಾಡಿದಾಗ ಲೋಟನು ವಾಸವಾಗಿದ್ದ ಊರು
ಗಳನ್ನು ಕೆಡವಿದರೂ ಅಬ್ರಹಾಮನನ್ನು ನೆನಸಿ
ಲೋಟನನ್ನು ತಪ್ಪಿಸಿ ಕಾಪಾಡಿದನು.

ಮೋವಾಬ್ಯರೂ ಅಮ್ಮೋನಿಯರೂ ಲೋಟನಿಂದ
ಉತ್ಪತ್ತಿಯಾದದ್ದು.

ಲೋಟನು ಚೋಗರಿನಲ್ಲಿರುವದಕ್ಕೆ ಅಂಜಿ ತನ್ನಿ 30
ಬ್ಬರು ಹೆಣ್ಣುಮಕ್ಕಳನ್ನು ಕರಕೊಂಡು ಬೆಟ್ಟವನ್ನು
ಹತ್ತಿ ಅಲ್ಲಿ ವಾಸಮಾಡಿದನು. ಅವನೂ ಅವನ
ಇಬ್ಬರು ಹೆಣ್ಣುಮಕ್ಕಳೂ ಒಂದು ಗವಿಯಲ್ಲಿ
ವಾಸಿಸಿದರು. ಹೀಗಿರುವಲ್ಲಿ ಹಿರೀಮಗಳು ತನ್ನ 31
ತಂಗಿಗೆ—ನಮ್ಮ ತಂದೆ ಮುದುಕನಷ್ಟೆ; ಸರ್ವ
ಲೋಕದ ಪದ್ಧತಿಯ ಮೇರೆಗೆ ನಮ್ಮನ್ನು ಮದುವೆ
ಮಾಡಿಕೊಳ್ಳುವ ಪುರುಷರು ಎಲ್ಲಿಯೂ ಇಲ್ಲ; ನಾವು 32
ತಂದೆಗೆ ದ್ರಾಕ್ಷಾರಸವನ್ನು ಕುಡಿಸಿ, ಅವನ ಸಂಗಡ
ಮಲಗಿಕೊಂಡು ತಂದೆಯಿಂದ ಸಂತಾನವನ್ನು ಪಡ
ಕೊಳ್ಳೋಣ ಎಂದು ಹೇಳಿದಳು. ಆ ರಾತ್ರಿ ಅವರು 33
ತಂದೆಗೆ ದ್ರಾಕ್ಷಾರಸವನ್ನು ಕುಡಿಸಿದಾಗ ಹಿರೀ ಮ
ಗಳು ಅವನ ಸಂಗಡ ಮಲಗಿಕೊಂಡಳು; ಯಾವಾಗ
ಮಲಗಿಕೊಂಡಳೋ ಯಾವಾಗ ಎದ್ದು ಹೋದಳೋ
ಅವನಿಗೇನೂ ತಿಳಿಯಲಿಲ್ಲ. ಮಾರಣೇ ದಿನ ಹಿರಿಯ 34
ವಳು ಕಿರಿಯವಳಿಗೆ—ನಿನ್ನೆಯ ರಾತ್ರಿ ನಾನೇ ಅಪ್ಪನ
ಸಂಗಡ ಮಲಗಿಕೊಂಡೆನು; ಈ ರಾತ್ರಿಯೂ ಅವನಿಗೆ
ದ್ರಾಕ್ಷಾರಸವನ್ನು ಕುಡಿಸೋಣ; ಆ ಮೇಲೆ ನೀನು
ಅವನ ಸಂಗಡ ಮಲಗಿಕೋ; ಹೀಗೆ ನಮ್ಮ ತಂದೆ
ಯಿಂದ ಸಂತಾನವನ್ನು ಪಡೆದುಕೊಳ್ಳೋಣ ಎಂದು
ಹೇಳಿದಳು. ಆ ರಾತ್ರಿಯೂ ಅವರು ತಂದೆಗೆ ದ್ರಾಕ್ಷಾ 35

1) ಚೋಗರ್ ಅಂದರೆ ಸಣ್ಣ ಊರು.

ರಸವನ್ನು ಕುಡಿಸಿದ ಮೇಲೆ ಕಿರೀ ಮಗಳು ಅವನ
ಸಂಗಡ ಮಲಗಿಕೊಂಡಳು; ಅವಳು ಯಾವಾಗ ಮಲ
ಗಿದಳೋ ಯಾವಾಗ ಎದ್ದು ಹೋದಳೋ ಅವನಿ
36 ಗೇನೂ ತಿಳಿಯಲಿಲ್ಲ. ಹೀಗೆ ಲೋಟನ ಇಬ್ಬರು
37 ಹೆಣ್ಣುಮಕ್ಕಳು ತಂದೆಯಿಂದ ಬಸುರಾದರು. ಹಿರಿ
ಯವಳು ಗಂಡು ಮಗುವನ್ನು ಹೆತ್ತು ಅದಕ್ಕೆ
1)ಮೋವಾಬ್ ಎಂದು ಹೆಸರಿಟ್ಟಳು. ಇಂದಿನ ವರೆ
ಗೂ ಇರುವ ಮೋವಾಬ್ಯರಿಗೆ ಅವನೇ ಮೂಲಪುರು
38 ಷನು. ಕಿರೀಮಗಳು ಗಂಡು ಮಗುವನ್ನು ಹೆತ್ತು
ಅದಕ್ಕೆ 2)ಬೆನಮ್ಮಿ ಎಂದು ಹೆಸರಿಟ್ಟಳು. ಇಂದಿನ
ವರೆಗೂ ಇರುವ ಅಮ್ಮೋನಿಯರಿಗೆ ಇವನೇ ಮೂಲ
ಪುರುಷನು.

ಗೆರಾರಿನ ಅರಸನು ಸಾರಳನ್ನು ಮನೆಯಲ್ಲಿ ಸೇರಿಸಿಕೊಂಡು
ತರುವಾಯ ಕಳುಹಿಸಿಬಿಟ್ಟದ್ದು.

20 ಅಬ್ರಹಾಮನು ಅಲ್ಲಿಂದ ಕಾನಾನ್‌ದೇಶದ ದಕ್ಷಿಣ
ಸೀಮೆಗೆ ಹೋಗುತ್ತಾ ಹೋಗುತ್ತಾ ಕಾದೇಶಿಗೂ
ಶೂರಿಗೂ ನಡುವೆ ವಾಸಮಾಡಿಕೊಂಡು ಕೆಲವು ಕಾಲ
2 ಗೆರಾರಿನಲ್ಲಿ ಇದ್ದನು. ಅವನು ತನ್ನ ಹೆಂಡತಿಯಾದ
ಸಾರಳನ್ನು ತಂಗಿಯೆಂದು ಹೇಳಿದನಾದ್ದರಿಂದ ಗೆರಾ
ರಿನ ಅರಸನಾದ ಅಬೀಮೆಲೆಕನು ಕರೇಕಳುಹಿಸಿ ಆಕೆ
3 ಯನ್ನು ತನ್ನ ಮನೆಯಲ್ಲಿ ಸೇರಿಸಿಕೊಂಡನು. ಆದರೆ
ರಾತ್ರಿಯಲ್ಲಿ ದೇವರು ಅಬೀಮೆಲೆಕನ ಕನಸಿನಲ್ಲಿ
ಬಂದು—ನೀನು ಆ ಸ್ತ್ರೀಯನ್ನು ಸೇರಿಸಿಕೊಂಡದ
ರಿಂದ ಸಾಯತಕ್ಕವನಾಗಿದ್ದೀ; ಆಕೆ ಮುತ್ತೈದೆ
4 ಅಂದನು. ಅಬೀಮೆಲೆಕನು ಆಕೆಯನ್ನು ಕೂಡಲಿಲ್ಲ
ವಾದ್ದರಿಂದ ಅವನು—ಸ್ವಾಮೀ, ನಿರಪರಾಧಿಯಾದ
5 ಜನವನ್ನೂ ನಾಶಮಾಡುವಿಯಾ? ಆ ಮನುಷ್ಯನು
ಈಕೆ ತನಗೆ ತಂಗಿಯಾಗಬೇಕೆಂದು ತಾನೇ ಹೇಳ
ಲಿಲ್ಲವೇ. ಈಕೆಯೂ ಅವನು ತನಗೆ ಅಣ್ಣನಾಗ
ಬೇಕೆಂದು ಹೇಳಿದಳು. ನಾನು ಯಥಾರ್ಥಮನಸ್ಸಿ
ನಿಂದಲೂ ಶುದ್ಧಹಸ್ತದಿಂದಲೂ ಇದನ್ನು ಮಾಡಿ
6 ದೆನು ಅಂದನು. ಅದಕ್ಕೆ ದೇವರು—ನೀನು ಇದನ್ನು
ಯಥಾರ್ಥಮನಸ್ಸಿನಿಂದ ಮಾಡಿದೆ ಎಂಬುದನ್ನು
ನಾನು ಬಲ್ಲೆ; ಆದಕಾರಣ ನಾನಂತೂ ನೀನು ನನಗೆ
ವಿರುದ್ಧವಾಗಿ ಪಾಪಮಾಡದಂತೆ ನಿನ್ನನ್ನು ತಡೆದು
7 ಆಕೆಯನ್ನು ಮುಟ್ಟಗೊಡಿಸಲಿಲ್ಲ. ಹೀಗಿರುವಲ್ಲಿ ಆ
ಮನುಷ್ಯನ ಹೆಂಡತಿಯನ್ನು ತಿರಿಗಿ ಅವನಿಗೆ ಒಪ್ಪಿಸಿ
ಬಿಡು. ಅವನು ಪ್ರವಾದಿ, ನಿನಗೋಸ್ಕರ ನನಗೆ
ಪ್ರಾರ್ಥಿಸುವನು, ಮತ್ತು ನೀನು ಬದುಕುವಿ. ಆಕೆ
ಯನ್ನು ಒಪ್ಪಿಸುವದಿಲ್ಲವೆಂದರೆ ನೀನೂ ನಿನ್ನವರೆಲ್ಲ
ರೂ ಸತ್ತೇ ಸಾಯುವಿರೆಂದು ತಿಳಿದುಕೋ ಎಂದು
8 ಕನಸಿನಲ್ಲಿ ಹೇಳಿದನು. ಬೆಳಿಗ್ಗೆ ಅಬೀಮೆಲೆಕನು
ತನ್ನ ಸೇವಕರೆಲ್ಲರನ್ನು ಕೂಡಿಸಿ ಈ ಸಂಗತಿಗಳನ್ನೆಲ್ಲಾ
9 ತಿಳಿಸಲು ಅವರು ಬಹು ಭಯಪಟ್ಟರು. ಆ ಮೇಲೆ
ಅವನು ಅಬ್ರಹಾಮನನ್ನು ಕರಿಸಿ—ನೀನು ನಮಗೆ
ಮಾಡಿದ್ದೇನು? ನಾನು ಯಾವ ತಪ್ಪು ಮಾಡಿದ್ದರಿಂ
ನೀನು ನನ್ನನ್ನೂ ನನ್ನ ರಾಜ್ಯವನ್ನೂ ಮಹಾಪಾ
ಕಕ್ಕೆ ಒಳಪಡಿಸಿದಿ? ಮಾಡಬಾರದ ಕಾರ್ಯಗಳನ
ನನಗೆ ಮಾಡಿದೆ ಎಂದು ಹೇಳಿ—ನೀನು ಯಾ
ಉದ್ದೇಶದಿಂದ ಈ ಕಾರ್ಯವನ್ನು ಮಾಡಿದೆ ಎಂ
ಅಬ್ರಹಾಮನನ್ನು ಕೇಳಿದನು. ಅದಕ್ಕೆ ಅಬ್ರಹಾಮ
ನು—ಈ ಸ್ಥಳದವರು ದೇವರ ಭಯವಿಲ್ಲದವರಾ
ನನ್ನ ಹೆಂಡತಿಯ ನಿಮಿತ್ತ ನನ್ನನ್ನು ಕೊಂದಾರೆಂ
ನೆನಸಿದೆನು. ಅದಲ್ಲದೆ ಆಕೆ ನಿಜವಾಗಿ ನನ್ನ ತಂ
ನನ್ನ ತಂದೆಯ ಮಗಳೇ; ಆದರೆ ನನ್ನ ತಾಯಿ
ಮಗಳಲ್ಲವಾದದರಿಂದ ನನಗೆ ಹೆಂಡತಿಯಾದಳ
ನಾನು ದೇವಸಂಕಲ್ಪದಿಂದ ತಂದೆಯ ಮನೆಯನ್ನು
ಬಿಟ್ಟು ದೇಶಾಂತರ ಹೋಗುವದಕ್ಕೆ ಹೊರಟಾ
ನಾನು ಆಕೆಗೆ—ನಾವು ಹೋಗುವ ಎಲ್ಲಾ ಸ್ಥಳಗ
ಲ್ಲಿಯೂ ನನಗೆ ನಿನ್ನಿಂದ ಒಂದು ಉಪಕಾರವಾ
ಬೇಕು, ಏನಂದರೆ ನೀನು ನನ್ನನ್ನು ಅಣ್ಣನೆಂಬದಾ
ಹೇಳಬೇಕೆಂದು ಬೋಧಿಸಿದೆನು ಅಂದನು. ಆ
ಅಬೀಮೆಲೆಕನು ಅಬ್ರಹಾಮನಿಗೆ ಕುರಿದನಗಳನ್ನು
ದಾಸದಾಸಿಯರನ್ನೂ ಕೊಟ್ಟು ಅವನ ಹೆಂಡತಿಯಾ
ಸಾರಳನ್ನು ಅವನಿಗೆ ಒಪ್ಪಿಸಿ—ಇಗೋ ನನ್ನ ದೇಶವ
ಇದರೊಳಗೆ ನಿನಗೆ ಇಷ್ಟವಿದ್ದ ಕಡೆಯಲ್ಲಿ ವಾ
ಮಾಡಬಹುದು ಅಂದನು. ಇದಲ್ಲದೆ ಅವನು ಸಾ
ಳಿಗೆ—ನಿನ್ನ ಅಣ್ಣನಿಗೆ ಸಾವಿರ ರೂಪಾಯಿ ಕೊಟ್ಟಿ
ದ್ದೇನೆ; ನಡೆದದ್ದನ್ನು ನಿನ್ನ ಕಡೆಯವರು ಲಕ್ಷ್ಯಕ
ತೆಗೆದುಕೊಳ್ಳದಂತೆ ಇದು ಪ್ರಾಯಶ್ಚಿತ್ತವಾಗಿರಲಿ
ನೀನು ಮಾನಸ್ಥಳೆಂದು ಇದರಿಂದ ಎಲ್ಲರೂ ತಿಳಿದ
ಕೊಳ್ಳುವರು ಎಂದು ಹೇಳಿದನು. ತರುವಾಯ ಅಬ್
ಹಾಮನು ದೇವರನ್ನು ಬೇಡಿಕೊಳ್ಳಲು ದೇವರ
ಅಬೀಮೆಲೆಕನನ್ನೂ ಅವನ ಪತ್ನಿಯನ್ನೂ ದಾಸಿಯ
ರನ್ನೂ ವಾಸಿಮಾಡಿದ್ದರಿಂದ ಅವರಿಗೆ ಮಕ್ಕಳಾದರು.
ಮುಂಚೆ ಅಬ್ರಹಾಮನ ಹೆಂಡತಿಯಾದ ಸಾರಳ ನಿಮಿ
ತ್ತ ಯೆಹೋವನು ಅಬೀಮೆಲೆಕನ ಮನೆಯಲ್ಲಿದ್ದ
ಸ್ತ್ರೀಯರೆಲ್ಲರೂ ಬಂಜೆಯರಾಗುವಂತೆ ಮಾಡಿದ್ದನು.

ಇಸಾಕನು ಹುಟ್ಟಿದ್ದು; ಅಬ್ರಹಾಮನು ಇಷ್ಮಾಯೇಲನನ್ನು
ಕಳುಹಿಸಿಬಿಟ್ಟದ್ದು.

ಯೆಹೋವನು ತಾನು ಹೇಳಿದ್ದಂತೆಯೇ ಸಾರಳ
ಮೇಲೆ ದಯವಿಟ್ಟು ಆಕೆಗೆ ಕೊಟ್ಟ ಮಾತನ್ನು ನೆರ
ವೇರಿಸಿದನು. ಹೇಗಂದರೆ ಸಾರಳು ಬಸುರಾ
ದೇವರು ಮೊದಲು ಸೂಚಿಸಿದ ಕಾಲದಲ್ಲಿ ಅಬ್
ಹಾಮನಿಂದ ಅವನ ಮುಪ್ಪಿನಲ್ಲೇ ಮಗನನ್ನು ಹೆತ್ತ
ಳು. ಅಬ್ರಹಾಮನು ಸಾರಳಲ್ಲಿ ತನ್ನಿಂದ ಹುಟ್ಟಿದ
ಮಗನಿಗೆ ಇಸಾಕನೆಂದು ಹೆಸರಿಟ್ಟು ಎಂಟನೆಯ
ದಿನದಲ್ಲಿ ದೇವರ ಅಪ್ಪಣೆಯ ಮೇರೆಗೆ ಸುನ್ನತಿಮಾ
ದನು. ಇಸಾಕನು ಹುಟ್ಟಿದಾಗ ಅಬ್ರಹಾಮನು
ನೂರು ವರುಷದವನಾಗಿದ್ದನು. ಸಾರಳು—ದೇವರ

1) ಮೋವಾಬ್ ಅಂದರೆ ತಂದೆಯಿಂದ ಉಂಟಾದವನು. 2) ಬೆನಮ್ಮಿ ಅಂದರೆ ರಕ್ತಸಂಬಂಧಿಕನ ಮಗ.

ನನ್ನನ್ನು ನಗುವಂತೆ ಮಾಡಿದ್ದಾನೆ; ಕೇಳುವವರೆಲ್ಲರೂ
ನನ್ನೊಡನೆ ನಗುವರು. ಸಾರಳೂ ಮಕ್ಕಳಿಗೆ ಮೊಲೆ
ಕುಡಿಸುವಳೆಂದು ಯಾರಾದರೂ ಅಬ್ರಹಾಮನಿಗೆ
ಹೇಳುತ್ತಿದ್ದರೋ? ಆದರೂ ಅವನ ಮುಪ್ಪಿನಲ್ಲೇ
ಅವನಿಗೆ ಮಗನನ್ನು ಹೆತ್ತಿದ್ದೇನಷ್ಟೆ ಎಂದು ಹೇಳಿ
ಕೊಂಡಳು. ಆ ಕೂಸು ಬೆಳೆದು ಮೊಲೆಬಿಟ್ಟಿತು.
ಇಸಾಕನು ಮೊಲೆಬಿಟ್ಟ ದಿನದಲ್ಲಿ ಅಬ್ರಹಾಮನು
ದೊಡ್ಡ ಔತಣವನ್ನು ಮಾಡಿಸಿದನು.
ಆದರೆ ಐಗುಪ್ತ್ಯಳಾದ ಹಾಗರಳಲ್ಲಿ ಅಬ್ರಹಾಮ
ನಿಗೆ ಹುಟ್ಟಿದ್ದ ಮಗನು 1)ನಗುವದನ್ನು ಸಾರಳು
ಕಂಡು ಅಬ್ರಹಾಮನಿಗೆ—ಈ ದಾಸಿಯನ್ನೂ ಅವಳ
ಮಗನನ್ನೂ ಹೊರಗೆ ಹಾಕು; ಈ ದಾಸಿಯ ಮಗನು
ನನ್ನ ಮಗನಾದ ಇಸಾಕನೊಂದಿಗೆ ಬಾಧ್ಯನಾಗ
ಬಾರದು ಎಂದು ಹೇಳಿದಳು. ಮಗನ ದೆಸೆಯಿಂದ
ಈ ಮಾತು ಅಬ್ರಹಾಮನಿಗೆ ಬಹುದುಃಖವನ್ನು
ಹುಟ್ಟಿಸಿತು. ಆದರೆ ದೇವರು ಅವನಿಗೆ—ಮಗನ
ಮತ್ತು ದಾಸಿಯ ದೆಸೆಯಿಂದ ನಿನಗೆ ಕರಕರೆಯಾಗ
ಬಾರದು; ಸಾರಳು ಹೇಳಿದಂತೆಯೇ ಮಾಡು; ಇಸಾಕ
ನಿಂದ ಹುಟ್ಟುವವರೇ ನಿನ್ನ ಸಂತತಿ ಅನ್ನಿಸಿಕೊಳ್ಳು
ವರು; ಈ ದಾಸಿಯ ಮಗನು ನಿನ್ನಿಂದ ಹುಟ್ಟಿದವ
ನಾದ್ದರಿಂದ ಅವನಿಂದಲೂ ಜನಾಂಗವಾಗುವಂತೆ
ಮಾಡುವೆನು ಎಂದು ಹೇಳಿದನು. ಮಾರಣೇ ದಿನ
ಬೆಳಿಗ್ಗೆ ಅಬ್ರಹಾಮನು ಎದ್ದು ಹಾಗರಳಿಗೆ ಬುತ್ತಿ
ಯನ್ನೂ ಒಂದು ತಿತ್ತಿ ತಣ್ಣೀರನ್ನೂ ಕೊಟ್ಟು ಅವಳ
ಹೆಗಲಿನ ಮೇಲೆ ಇಟ್ಟು ಮಗುವನ್ನು ಒಪ್ಪಿಸಿ ಕಳು
ಹಿಸಿಬಿಟ್ಟನು. ಅವಳು ಹೊರಟು ಬೇರ್ಷೆಬದ ಕಾಡಿ
ನಲ್ಲಿ ಅಲೆಯುತ್ತಿದ್ದಳು. ತಿತ್ತಿಯಲ್ಲಿದ್ದ ನೀರು
ಮುಗಿದ ಮೇಲೆ ಅವಳು ಮಗುವನ್ನು ಒಂದು ಗಿಡದ
ನೆರಳಿನಲ್ಲಿ ಹಾಕಿ ಮಗುವು ಸಾಯುವದನ್ನು ನೋಡ
ಲಾರೆನು ಅಂದುಕೊಂಡು ಬಿಲ್ಲೆಸುಗೆಯಷ್ಟು ದೂರ
ಹೋಗಿ ಅವನೆದುರಾಗಿ ಕೂತುಕೊಂಡು ಗಟ್ಟಿಯಾಗಿ
ಅತ್ತಳು. ಆ ಹುಡುಗನ ಮೊರೆಯು ದೇವರಿಗೆ ಕೇಳಿ
ಸಿತು; ದೇವದೂತನು ಆಕಾಶದಿಂದ ಹಾಗರಳನ್ನು
ಕರೆದು—ಹಾಗರಳೇ, ನಿನಗೇನಾಯಿತು? ಅಂಜ
ಬೇಡ; ಆ ಹುಡುಗನು ಬಿದ್ದಿರುವ ಸ್ಥಳದಿಂದಲೇ
ಅವನ ಶಬ್ದವು ದೇವರಿಗೆ ಕೇಳಿಸಿತು; ನೀನೆದ್ದು ಅವ
ನನ್ನು ಎತ್ತಿಕೊಂಡು ಕೈಬಿಡದೆ ಇರು; ಅವನಿಂದ
ದೊಡ್ಡ ಜನಾಂಗವಾಗುವಂತೆ ಮಾಡುವೆನು ಎಂದು
ಹೇಳಿದನು. ಇದಲ್ಲದೆ ದೇವರು ಅವಳ ಕಣ್ಣನ್ನು
ತೆರೆದದರಿಂದ ಅವಳು ನೀರಿನ ಬಾವಿಯನ್ನು ಕಂಡು
ತಿತ್ತಿಯಲ್ಲಿ ನೀರನ್ನು ತುಂಬಿಕೊಂಡು ಹುಡುಗನಿಗೆ
ಕುಡಿಸಿದಳು.
ದೇವರು ಆ ಹುಡುಗನ ಸಂಗಡ ಇದ್ದನು; ಅವನು
ಬೆಳೆದು ಕಾಡಿನಲ್ಲಿ ವಾಸವಾಗಿದ್ದು ಬಿಲ್ಲುಗಾರ
ನಾದನು. ಅವನು ಪಾರಾನಿನ ಅರಣ್ಯದಲ್ಲಿ ವಾಸ
ಮಾಡಿದನು. ಅವನ ತಾಯಿ ಐಗುಪ್ತದೇಶದಿಂದ
ಕನ್ನಿಕೆಯನ್ನು ತರಿಸಿ ಮದುವೆಮಾಡಿಸಿದಳು.

ಅಬ್ರಹಾಮನು ಅಬೀಮೆಲೆಕನ ಸಂಗಡ ಬೇರ್ಷೆಬದಲ್ಲಿ
ಒಪ್ಪಂದಮಾಡಿಕೊಂಡದ್ದು.

ಆ ಕಾಲದಲ್ಲಿ ಅಬೀಮೆಲೆಕನು ತನ್ನ ಸೇನಾಪತಿ 22
ಯಾದ ಫೀಕೋಲನ ಸಮೇತ ಅಬ್ರಹಾಮನಿಗೆ—
ನೀನು ಮಾಡುವ ಎಲ್ಲಾ ಕೆಲಸಗಳಲ್ಲಿಯೂ ದೇವರು
ನಿನ್ನ ಸಂಗಡ ಇದ್ದಾನಾದ್ದರಿಂದ ನೀನು ಈ ಸ್ಥಳ 23
ದಲ್ಲಿ ನನ್ನೊಂದಿಗೆ [ಒಡಂಬಡಿಕೆಮಾಡಿಕೊಂಡು] ನೀನು
ನನಗಾಗಲಿ ನನ್ನ ಪುತ್ರಪೌತ್ರರಿಗಾಗಲಿ ಏನೂ ಅನ್ಯಾಯ
ಮಾಡದೆ ನಾನು ನಿನಗೆ ಹಿತವನ್ನು ಮಾಡಿದಂತೆಯೇ
ನನಗೂ ನೀನು ಇಳುಕೊಂಡಿರುವ ಈ ದೇಶಕ್ಕೂ ಹಿತ
ವನ್ನು ಮಾಡುವದಾಗಿ ದೇವರ ಮೇಲೆ ಪ್ರಮಾಣ
ಮಾಡಬೇಕೆಂದು ಹೇಳಿದನು. ಅದಕ್ಕೆ ಅಬ್ರಹಾ 24
ಮನು—ಹಾಗೆಯೇ ಪ್ರಮಾಣಮಾಡುತ್ತೇನೆ ಅಂದ
ನು. ಅಬೀಮೆಲೆಕನ ಆಳುಗಳು ಒಂದು ಬಾವಿ 25
ಯನ್ನು ಬಲಾತ್ಕಾರದಿಂದ ಸ್ವಾಧೀನಪಡಿಸಿಕೊಂಡದ
ರಿಂದ ಅಬ್ರಹಾಮನು ಅಬೀಮೆಲೆಕನ ಮೇಲೆ ತಪ್ಪು
ಹೊರಿಸಲು ಅಬೀಮೆಲೆಕನು—ಈ ಕೆಲಸವನ್ನು 26
ಮಾಡಿದವರು ಯಾರೋ ನಾನರಿಯೆ; ನೀನು ನನಗೆ
ತಿಳಿಸಲೂ ಇಲ್ಲ, ಈಗಿನ ವರೆಗೆ ನಾನು ಈ ಸಂಗತಿ
ಯನ್ನು ಕೇಳಲೂ ಇಲ್ಲ ಅಂದನು. ಆಗ ಅಬ್ರ 27
ಹಾಮನು ಅಬೀಮೆಲೆಕನಿಗೆ ಕುರಿದನಗಳನ್ನು ದಾನ
ಮಾಡಿದನು. ಹೀಗೆ ಅವರಿಬ್ಬರೂ ಒಡಂಬಡಿಕೆ
ಮಾಡಿಕೊಂಡರು. ತರುವಾಯ ಅಬ್ರಹಾಮನು 28
ಹಿಂಡಿನ ಏಳು ಕುರಿಗಳನ್ನು ಪ್ರತ್ಯೇಕವಾಗಿ ಇರಿಸಲು
ಅಬೀಮೆಲೆಕನು ಅವನನ್ನು—ನೀನು ಪ್ರತ್ಯೇಕವಾಗಿ 29
ಇರಿಸಿರುವ ಈ ಏಳು ಕುರಿಗಳು ಯಾತಕ್ಕೆ ಎಂದು
ಕೇಳಿದನು. ಅದಕ್ಕೆ ಅಬ್ರಹಾಮನು—ಈ ಬಾವಿ 30
ಯನ್ನು ತೋಡಿಸಿದವನು ನಾನೇ ಎಂಬದಕ್ಕೆ
ಸಾಕ್ಷಿಯಾಗಿ ನೀನು ಈ ಏಳು ಕುರಿಗಳನ್ನು ನನ್ನ
ಕೈಯಿಂದ ತೆಗೆದುಕೊಳ್ಳಬೇಕು ಅಂದನು. ಅವ 31
ರಿಬ್ಬರು ಅಲ್ಲಿ ಪ್ರಮಾಣಮಾಡಿದ್ದರಿಂದ ಆ ಸ್ಥಳಕ್ಕೆ
2)ಬೇರ್ಷೆಬ ಎಂದು ಹೆಸರಾಯಿತು. ಬೇರ್ಷೆಬದಲ್ಲಿ 32
ಅವರು ಒಡಂಬಡಿಕೆಯನ್ನು ಮಾಡಿಕೊಂಡರು. ತರು
ವಾಯ ಅಬೀಮೆಲೆಕನೂ ಅವನ ಸೇನಾಪತಿಯಾದ
ಫೀಕೋಲನೂ ಫಿಲಿಷ್ಟಿಯರ ದೇಶಕ್ಕೆ ತಿರಿಗಿ ಹೊರಟು
ಹೋದರು.
ಅಬ್ರಹಾಮನು ಬೇರ್ಷೆಬದಲ್ಲಿ ಪಿಚುಲವೃಕ್ಷವನ್ನು 33
ನೆಟ್ಟು ನಿತ್ಯದೇವರಾದ ಯೆಹೋವನ ಹೆಸರನ್ನು
ಹೇಳಿಕೊಂಡು ಆರಾಧಿಸಿದನು.
ಅಬ್ರಹಾಮನು ಫಿಲಿಷ್ಟಿಯರ ದೇಶದಲ್ಲಿ ಬಹು 34
ದಿವಸ ಇಳುಕೊಂಡಿದ್ದನು.

ಅಬ್ರಹಾಮನು ತನ್ನ ಮಗನನ್ನು ಅರ್ಪಿಸುತ್ತಿರುವಾಗ
ದೇವರು ಅವನನ್ನು ತಡೆದು ಆಶೀರ್ವದಿಸಿದ್ದು.

22 ಈ ಸಂಗತಿಗಳು ಆದ ಮೇಲೆ ದೇವರು ಅಬ್ರ
ಹಾಮನನ್ನು ಪರಿಶೋಧಿಸಿದನು. ಹೇಗಂದರೆ

1) ಅಥವಾ: ಆಡುವದನ್ನು. 2) ಬೇರ್ಷೆಬ ಅಂದರೆ ಪ್ರಮಾಣದ ಬಾವಿ.

ಆತನು ಅವನನ್ನು—ಅಬ್ರಹಾಮನೇ ಎಂದು ಕರೆ
ಯಲು ಅವನು—ಇಗೋ, ಇದ್ದೇನೆ ಅಂದನು.
2 ಆಗಲಾತನು — ನಿನಗೆ ಪ್ರಿಯನಾಗಿರುವ ಒಬ್ಬನೇ
ಮಗನಾದ ಇಸಾಕನನ್ನು ತೆಗೆದುಕೊಂಡು ಮೋರೀಯ
ದೇಶಕ್ಕೆ ಹೋಗಿ ಅಲ್ಲಿ ಅವನನ್ನು ನಾನು ಹೇಳುವ
ಒಂದು ಬೆಟ್ಟದ ಮೇಲೆ ಸರ್ವಾಂಗಹೋಮವಾಗಿ
3 ಅರ್ಪಿಸಬೇಕು ಅಂದನು. ಬೆಳಿಗ್ಗೆ ಅಬ್ರಹಾಮನು
ಎದ್ದು ಕತ್ತೆಗೆ ತಡಿಹಾಕಿಸಿ ಯಜ್ಞಕ್ಕೆ ಬೇಕಾದ
ಕಟ್ಟಿಗೆಯನ್ನು ಒಡಿಸಿ ತನ್ನ ಸೇವಕರಲ್ಲಿ ಇಬ್ಬರನ್ನೂ
ತನ್ನ ಮಗನಾದ ಇಸಾಕನನ್ನೂ ಕರೆದುಕೊಂಡು
4 ದೇವರು ಹೇಳಿದ ಸ್ಥಳಕ್ಕೆ ಹೊರಟನು. ಮೂರನೆಯ
ದಿನದಲ್ಲಿ ಅಬ್ರಹಾಮನು ಕಣ್ಣೆತ್ತಿ ನೋಡುವಾಗ ಆ
5 ಸ್ಥಳವು ದೂರದಲ್ಲಿ ಕಾಣಿಸಲು ಅವನು ತನ್ನ ಸೇವಕ
ರಿಗೆ— ನೀವು ಇಲ್ಲೇ ಕತ್ತೆಯ ಬಳಿಯಲ್ಲಿರ್ರಿ; ನಾನೂ
ನನ್ನ ಮಗನೂ ಅಲ್ಲಿಗೆ ಹೋಗಿ ದೇವಾರಾಧನೆಮಾಡಿ
ಕೊಂಡು ನಿಮ್ಮ ಬಳಿಗೆ ತಿರಿಗಿ ಬರುತ್ತೇವೆ ಎಂದು
6 ಹೇಳಿದನು. ಆಗ ಅಬ್ರಹಾಮನು ಯಜ್ಞಕ್ಕೆ ಬೇಕಾದ
ಕಟ್ಟಿಗೆಯನ್ನು ತನ್ನ ಮಗನಾದ ಇಸಾಕನ ಮೇಲೆ
ಹೊರಿಸಿ ತನ್ನ ಕೈಯಲ್ಲೇ ಬೆಂಕಿಯನ್ನೂ ಕತ್ತಿಯನ್ನೂ
ತೆಗೆದುಕೊಂಡನಂತರ ಅವರಿಬ್ಬರೂ ಹೊರಟುಹೋದ
7 ರು. ಹೋಗುವಾಗ ಇಸಾಕನು ತನ್ನ ತಂದೆಯಾದ
ಅಬ್ರಹಾಮನಿಗೆ—ಅಪ್ಪಾ ಎಂದು ಕರೆಯಲು ಅಬ್ರ
ಹಾಮನು—ಏನು ಮಗನೇ ಅಂದನು. ಇಸಾಕನು—
ಇಗೋ, ಬೆಂಕಿಯೂ ಕಟ್ಟಿಗೆಯೂ ಉಂಟು; ಆದರೆ
ಹೋಮಕ್ಕೆ ಬೇಕಾದ ಕುರಿ ಎಲ್ಲಿ ಎಂದು ಕೇಳಿದ್ದಕ್ಕೆ
8 ಅಬ್ರಹಾಮನು—ಮಗನೇ, ಹೋಮಕ್ಕೆ ಬೇಕಾದ
ಕುರಿಯನ್ನು ದೇವರೇ ಒದಗಿಸುವನು ಅಂದನು.
9 ಹೀಗೆ ಅವರಿಬ್ಬರೂ ಹೋದರು. ದೇವರು ಹೇಳಿದ
ಸ್ಥಳಕ್ಕೆ ಅವರು ಸೇರಿದಾಗ ಅಬ್ರಹಾಮನು ಯಜ್ಞ
ವೇದಿಯನ್ನು ಕಟ್ಟಿ ಕಟ್ಟಿಗೆಯನ್ನು ಒಟ್ಟಿ ತನ್ನ ಮಗ
ನಾದ ಇಸಾಕನ ಕೈಕಾಲುಗಳನ್ನು ಬಿಗಿದು ಅವ
ನನ್ನು ವೇದಿಯಲ್ಲಿ ಕಟ್ಟಿಗೆಯ ಮೇಲೆ ಇಟ್ಟನು.
10 ಆದರೆ ತನ್ನ ಮಗನನ್ನು ವಧಿಸುವದಕ್ಕೆ ಅವನು
11 ಕೈಚಾಚಿ ಕತ್ತಿಯನ್ನು ಹಿಡಿದುಕೊಳ್ಳಲು ಯೆಹೋ
ವನ ದೂತನು ಆಕಾಶದೊಳಗಿಂದ—ಅಬ್ರಹಾಮನೇ,
ಅಬ್ರಹಾಮನೇ ಎಂದು ಅವನನ್ನು ಕರೆದನು.
ಅದಕ್ಕೆ ಅಬ್ರಹಾಮನು—ಇಗೋ, ಇದ್ದೇನೆ ಅಂದನು.
12 ಆ ದೂತನು ಅವನಿಗೆ—ನಿನ್ನ ಹುಡುಗನ ಮೇಲೆ
ಕೈಹಾಕಬೇಡ, ಅವನಿಗೆ ಏನೂ ಮಾಡಬೇಡ. ನೀನು
ನಿನ್ನ ಒಬ್ಬನೇ ಮಗನನ್ನಾದರೂ ನನಗೆ ಸಮರ್ಪಿಸು
ವದಕ್ಕೆ ಹಿಂದೆಗೆಯಲಿಲ್ಲವಾದ್ದರಿಂದ ನೀನು ದೇವ
ರಲ್ಲಿ ಭಯಭಕ್ತಿಯುಳ್ಳವನೆಂಬದು ಈಗ ತೋರ
13 ಬಂತು ಎಂದು ಹೇಳಿದನು. ಅಬ್ರಹಾಮನು ಕಣ್ಣೆತ್ತಿ
ನೋಡುವಾಗ ತನ್ನ ಹಿಂದುಗಡೆ ಒಂದು ಟಗರು
ಪೊದೆಯಲ್ಲಿ ಕೊಂಬುಗಳಿಂದ ಸಿಕ್ಕಿಕೊಂಡಿತ್ತು.
ಅವನು ಹೋಗಿ ಅದನ್ನು ಹಿಡಿದುತಂದು ತನ್ನ ಮಗ
14 ನಿಗೆ ಬದಲಾಗಿ ಹೋಮಮಾಡಿದನು. ಆ ಸ್ಥಳಕ್ಕೆ
ಯೆಹೋವ ಯಿರೆ ಎಂದು ಹೆಸರಿಟ್ಟನು. ಯೆಹೋ
ವನ ಬೆಟ್ಟದಲ್ಲಿ ಒದಗುವದು ಎಂಬದಾಗಿ ಇಂದಿನ
ವರೆಗೂ ಹೇಳುವದುಂಟಲ್ಲಾ.
ಯೆಹೋವನ ದೂತನು ಆಕಾಶದೊಳಗಿಂದ ಎ
ಡನೆಯ ಸಾರಿ ಅಬ್ರಹಾಮನನ್ನು ಕರೆದು ಅವನಿಗೆ—
ಯೆಹೋವನು ನುಡಿದದ್ದನ್ನು ಕೇಳು; ನೀನು ನಿನ್ನ
ಒಬ್ಬನೇ ಮಗನನ್ನು ಸಮರ್ಪಿಸುವದಕ್ಕೆ ಹಿಂದೆಗೆಯ
ಹೋದದ್ದರಿಂದ ನಾನು ನಿನ್ನನ್ನು ಆಶೀರ್ವದಿಸೇ ಆಶಿ
ರ್ವದಿಸುವೆನು; ನಿನ್ನ ಸಂತತಿಯನ್ನು ಹೆಚ್ಚಿಸೇ ಹೆಚ್ಚಿಸ
ವೆನು; ಅದನ್ನು ಆಕಾಶದ ನಕ್ಷತ್ರಗಳಂತೆಯ
ಸಮುದ್ರತೀರದಲ್ಲಿರುವ ಉಸುಬಿನಂತೆಯೂ ಅಸಂಖ
ವಾಗಿ ಮಾಡುವೆನು; ಅವರು ಶತ್ರುಗಳ ಪಟ್ಟಣಗಳನ್
ಸ್ವಾಧೀನಮಾಡಿಕೊಳ್ಳುವರು. ನೀನು ನನ್ನ ಮಾತನ್
ಕೇಳಿದ್ದರಿಂದ [1]ಭೂಮಿಯ ಎಲ್ಲಾ ಜನಾಂಗಗಳಿಗ
ನಿನ್ನ ಸಂತತಿಯ ಮೂಲಕ ಆಶೀರ್ವಾದವುಂಟಾಗ
ವದು ಎಂಬದಾಗಿ ಯೆಹೋವನು ತನ್ನಾಣೆಯಿಟ್ಟು
ಹೇಳಿದ್ದಾನೆ ಅಂದನು.
ತರುವಾಯ ಅಬ್ರಹಾಮನು ತನ್ನ ಸೇವಕ
ಬಳಿಗೆ ತಿರಿಗಿ ಬಂದನು. ಅವರು ಹೊರಟು ಅವ
ಜೊತೆಯಲ್ಲಿ ಬೇರ್ಷೆಬಕ್ಕೆ ಹೋದರು. ಅಬ್ರಹಾಮನ
ಬೇರ್ಷೆಬದಲ್ಲಿ ವಾಸವಾಗಿದ್ದನು.

ಅಬ್ರಹಾಮನ ತಮ್ಮನ ಮಕ್ಕಳು.

ಇವುಗಳಾದ ಮೇಲೆ ಅಬ್ರಹಾಮನು ತನ್ನ ತಮ
ನಾದ ನಾಹೋರನಿಗೆ ಮಿಲ್ಕಳಲ್ಲಿ ಮಕ್ಕಳು ಹುಟ್ಟಿ
ರೆಂದು ವರ್ತಮಾನವನ್ನು ಕೇಳಿದನು. ಅವರು ಯ
ರಾರಂದರೆ—ಅವನ ಚೊಚ್ಚಲನಾದ ಊಚ್, ಇವ
ತಮ್ಮನಾದ ಬೂಜ್, ಅರಾಮನ ತಂದೆಯಾದ ಕೆಮ
ವೇಲ್, ಕೆಸೆದ್, ಹಜೋ, ಪಿಲ್ದಾಷ್, ಇದ್ಲಾಫ್, ಬೆತ
ವೇಲ್ ಎಂಬಿವರೇ. ಬೆತೂವೇಲನು ರೆಬೆಕ್ಕಳನ್ನು ಪ
ದನು. ಈ ಎಂಟು ಮಂದಿಯನ್ನು ಮಿಲ್ಕಳು ಅಬ್
ಹಾಮನ ತಮ್ಮನಾದ ನಾಹೋರನಿಗೆ ಹೆತ್ತಳು. ಇ
ಲ್ಲದೆ ಅವನ ಉಪಪತ್ನಿಯಾದ ರೂಮಳೆಂಬವಳ
ಟೆಬಹ, ಗಹಮ್, ತಹಷ್, ಮಾಕಾ ಎಂಬವರನ
ಹೆತ್ತಳು.

ಸಾರಳು ಸತ್ತಾಗ ಅಬ್ರಹಾಮನು ಮಕ್ಪೇಲದ ಗವಿಯನ್ನು
ಶ್ಮಶಾನಕ್ಕಾಗಿ ಕೊಂಡುಕೊಂಡದ್ದು.

ಸಾರಳ ಜೀವಮಾನಕಾಲವು ನೂರಿಪ್ಪತ್ತೇಳು
ವರುಷ; ಇಷ್ಟು ವರುಷ ಬದುಕಿದ ಮೇಲೆ ಆಕೆ 2
ಕಾನಾನ್‌ದೇಶದಲ್ಲಿರುವ ಹೆಬ್ರೋನೆಂಬ ಕಿರ್ಯತಬ
ದಲ್ಲಿ ಸತ್ತಳು. ಅಬ್ರಹಾಮನು ಬಂದು ಆಕೆಯ
ನಿಮಿತ್ತ ಗೋಳಾಡಿ ಕಣ್ಣೀರುಸುರಿಸಿದನು. ಆ ಮೇ
ಆಕೆಯ ಶವದ ಬಳಿಯಿಂದ ಎದ್ದು ಹಿತ್ತಿಯರ ಬಳಿ
ಹೋಗಿ ಅವರಿಗೆ—ನಾನು ನಿಮ್ಮಲ್ಲಿ ಪರದೇಶದವನ
ಪರವಾಸಿಯೂ ಆಗಿದ್ದೇನಷ್ಟೆ. ತೀರಿಹೋಗಿರುವ ನನ್
ಪತ್ನಿಯ ಸಮಾಧಿಗೋಸ್ಕರ ನಿಮ್ಮಲ್ಲಿ ನನ್ನ ಸ್ವಂತಕ
ಭೂಮಿಯನ್ನು ಕೊಡಬೇಕೆಂದು ಕೇಳಿಕೊಂಡನ

[1] ಅಥವಾ: ಎಲ್ಲಾ ಜನಾಂಗಗಳೂ ನಿನ್ನ ಸಂತತಿಯು ಭಾಗ್ಯವೇ ತಮಗೂ ಆಗಬೇಕೆಂದು ಕೋರುವವು.

6 ಹಿತ್ತಿಯರು ಅವನಿಗೆ—ಸ್ವಾಮಿಾ, ನಮ್ಮ ಮಾತನ್ನು
ಕೇಳು; ನೀನು ನಮಗೆ ಮಹಾಪ್ರಭುವಾಗಿದ್ದೀಯಷ್ಟೆ.
ತೀರಿಹೋದ ನಿನ್ನ ಪತ್ನಿಯ ದೇಹವನ್ನು ನಮಗಿರುವ
ಸಮಾಧಿಗಳೊಳಗೆ ಶ್ರೇಷ್ಠವಾದದ್ದರಲ್ಲಿ ಇಡಬಹುದು.
ನಿನ್ನ ಹೆಂಡತಿಯ ಶವವನ್ನು ಇಡುವದಕ್ಕೆ ನಮ್ಮೊಳಗೆ
ಒಬ್ಬನಾದರೂ ತನಗಿರುವ ಶ್ಮಶಾನಭೂಮಿಯನ್ನು ಕೊ
ಡುವದಕ್ಕೆ ಹಿಂದೆಗಿಯುವದಿಲ್ಲವೆಂದು ಉತ್ತರಕೊಡಲು
ಅಬ್ರಹಾಮನು ಎದ್ದು ಹಿತ್ತಿಯರಾಗಿದ್ದ ಆ ದೇಶದವ
ರಿಗೆ ಬೊಗ್ಗಿ ನಮಸ್ಕರಿಸಿ ಅವರ ಸಂಗಡ ಇನ್ನೂ
ಮಾತಾಡಿ—ನಾನು ನಿಮ್ಮಲ್ಲಿ ನನ್ನ ಪತ್ನಿಯ ಶವವನ್ನು
ಸಮಾಧಿಮಾಡುವದು ನಿಮಗೆ ಒಪ್ಪಿಗೆಯಾಗಿದ್ದರೆ
ಒಂದು ವಿಜ್ಞಾಪನೆಯುಂಟು. ನೀವು ಚೋಹರನ ಮಗ
ನಾದ ಎಫ್ರೋನನ ಸಂಗಡ ನನಗೋಸ್ಕರ ಮಾತಾಡಿ
ಅವನ ಭೂಮಿಯ ಅಂಚಿನಲ್ಲಿರುವ ಮಕ್ಪೇಲದ ಗವಿ
ಯನ್ನು ನನಗೆ ಕೊಡಿಸಬೇಕೆಂದು ಬೇಡಿಕೊಳ್ಳುತ್ತೇನೆ.
ಅವನು ಸಮಾಧಿಯ ಸ್ಥಳವನ್ನು ನನ್ನ ಸ್ವಂತಕ್ಕಾಗಿ
ನಿಮ್ಮೆದುರಿನಲ್ಲಿ ಕೊಟ್ಟರೆ ಪೂರ್ಣಕ್ರಯವನ್ನು ಕೊಡು
ತ್ತೇನೆ ಅಂದನು. ಇಷ್ಟರಲ್ಲಿ ಎಫ್ರೋನನೇ ಅಲ್ಲಿ ಹಿತ್ತಿ
ಯರ ನಡುವೆ ಕೂತಿದ್ದನು. ಹೀಗಿರಲಾಗಿ ಹಿತ್ತಿಯ
ನಾದ ಎಫ್ರೋನನು ಹಿತ್ತಿಯರಾಗಿದ್ದ [1]ಆ ಊರಿನವ
ರೆಲ್ಲರ ಎದುರಿನಲ್ಲಿ ಅಬ್ರಹಾಮನಿಗೆ—ಹಾಗಲ್ಲ
ಸ್ವಾಮಿಾ, ನನ್ನ ಮಾತನ್ನು ಲಾಲಿಸು. ಆ ಭೂಮಿ
ಯನ್ನೂ ಅದರಲ್ಲಿರುವ ಗವಿಯನ್ನೂ ನಿನಗೆ ಸುಮ್ಮನೆ
ಕೊಡುತ್ತೇನೆ; ನನ್ನ ಜನರ ಮುಂದೆಯೇ ಕೊಡುತ್ತೇನೆ;
ತೀರಿಹೋದ ನಿನ್ನ ಪತ್ನಿಗೆ ಅದರಲ್ಲಿ ಸಮಾಧಿಮಾಡ
ಬಹುದು ಎಂದು ಹೇಳಲು ಅಬ್ರಹಾಮನು ಆ ದೇಶದ
ಜನರಿಗೆ ಬೊಗ್ಗಿ ನಮಸ್ಕರಿಸಿ ಅವರೆಲ್ಲರ ಮುಂದೆ
ಎಫ್ರೋನನಿಗೆ—ಕೊಡಲಿಕ್ಕೆ ಮನಸ್ಸಿದ್ದರೆ ದಯವಿಟ್ಟು
ನಾನು ಅರಿಕೆಮಾಡುವದನ್ನು ಕೇಳು; ಆ ಭೂಮಿಗೆ
ಕ್ರಯವನ್ನು ಕೊಡುತ್ತೇನೆ. ನನ್ನಿಂದ ಕ್ರಯತೆಗೆದು
ಕೊಂಡರೆ ಅದರಲ್ಲಿ ನನ್ನ ಪತ್ನಿಗೆ ಸಮಾಧಿಮಾಡು
ವೆನು ಎಂದು ಹೇಳಿದನು. ಅದಕ್ಕೆ ಎಫ್ರೋನನು—
ಸ್ವಾಮಿಾ, ನನ್ನ ಮಾತನ್ನು ಲಾಲಿಸು; ನಾನೂರು
ರೂಪಾಯಿ ಬಾಳುವ ಭೂಮಿಯ ವಿಷಯದಲ್ಲಿ ನಿನ
ಗೂ ನನಗೂ ವಾದವೇತಕ್ಕೆ? ಸಮಾಧಿಮಾಡಬಹುದು
ಅಂದನು. ಅಬ್ರಹಾಮನು ಎಫ್ರೋನನ ಮಾತಿಗೆ
ಒಪ್ಪಿದನು. ಎಫ್ರೋನನು ಹಿತ್ತಿಯರ ಎದುರಿನಲ್ಲಿ
ಹೇಳಿದ ನಾನೂರು ರೂಪಾಯಿಗಳನ್ನು ಅಬ್ರಹಾಮನು
ಸಾಹುಕಾರರಲ್ಲಿ ಸಲ್ಲುವ ಬೆಳ್ಳಿಯಿಂದ ತೂಕಮಾಡಿ
ಕೊಟ್ಟನು. ಹೀಗೆ ಮಮ್ರೆಗೆ ಎದುರಾಗಿರುವ ಮಕ್ಪೇ
ಲಕ್ಕೆ ಸೇರಿದ ಎಫ್ರೋನನ ಭೂಮಿಯು, ಅದಕ್ಕೆ
ಸೇರಿದ ಗವಿಯೂ ಅದರಲ್ಲಿ ಮತ್ತು ಅದರ ಸುತ್ತಣ
ಅಂಚಿನಲ್ಲಿ ಇದ್ದ ಮರಗಳೂ ಸಹಿತವಾಗಿ, ಅಬ್ರಹಾ
ಮನ ಸ್ವಂತ ಭೂಮಿಯೆಂದು ಹಿತ್ತಿಯರಾಗಿದ್ದ ಆ
ಊರಿನವರೆಲ್ಲರ ಮುಂದೆ ದೃಢವಾಯಿತು. ಇದಾದ
ಮೇಲೆ ಅಬ್ರಹಾಮನು ತನ್ನ ಹೆಂಡತಿಯಾದ ಸಾರಳ
ಶವವನ್ನು ಕಾನಾನ್‍ದೇಶದಲ್ಲಿ ಹೆಬ್ರೋನೆಂಬ ಮಮ್ರೆ
ಗೆ ಎದುರಾಗಿರುವ ಮಕ್ಪೇಲದ ಭೂಮಿಯಲ್ಲಿರುವ
ಗವಿಯೊಳಗೆ ಹೂಣಿಟ್ಟನು. ಹಿತ್ತಿಯರು ಆ ಭೂಮಿ 20
ಯನ್ನೂ ಅದರಲ್ಲಿರುವ ಗವಿಯನ್ನೂ ಸ್ವಂತವಾದ
ಶ್ಮಶಾನಭೂಮಿಯಾಗುವದಕ್ಕೆ ಅಬ್ರಹಾಮನಿಗೆ ಕೊ
ಟ್ಟು ನಿರ್ಣಯಿಸಿದರು.

ಅಬ್ರಹಾಮನು ತನ್ನ ಮಗನಾದ ಇಸಾಕನಿಗೆ ಸ್ವದೇಶದಿಂದ
ಹೆಣ್ಣು ತರಿಸಿದ್ದು.

**24** ಅಬ್ರಹಾಮನು ಬಹುದಿನದ ವೃದ್ಧನಾದನು.
ಯೆಹೋವನು ಅವನನ್ನು ಸಕಲವಿಷಯಗಳಲ್ಲಿ
ಅಭಿವೃದ್ಧಿಪಡಿಸಿದ್ದನು. ಹೀಗಿರಲು ಅವನು ತನಗಿದ್ದ 2
ಆಸ್ತಿಯ ಮೇಲೆ ಆಡಳಿತಮಾಡುತ್ತಿದ್ದ ಹಿರೀ ಸೇವಕ
ನಿಗೆ—ನಾನು ವಾಸವಾಗಿರುವ ಕಾನಾನ್ಯರಲ್ಲಿ ನೀನು 3
ನನ್ನ ಮಗನಿಗೋಸ್ಕರ ಹೆಣ್ಣನ್ನು ತೆಗೆದುಕೊಳ್ಳದೆ
ನನ್ನ ಸ್ವದೇಶಕ್ಕೂ ನನ್ನ ಬಂಧುಗಳ ಬಳಿಗೂ ಹೋಗಿ 4
ಅವರಲ್ಲೇ ನನ್ನ ಮಗನಾದ ಇಸಾಕನಿಗೆ ಹೆಣ್ಣನ್ನು
ತೆಗೆದುಕೊಳ್ಳಬೇಕು. ಹಾಗೆ ತೆಗೆದುಕೊಳ್ಳುತ್ತೇ
ನೆಂಬದಕ್ಕೆ ನೀನು ನನ್ನ ತೊಡೆಯ ಕೆಳಗೆ ಕೈ
ಯಿಟ್ಟು ಭೂಲೋಕಪರಲೋಕಗಳ ದೇವರಾಗಿರುವ
ಯೆಹೋವನ ಮೇಲೆ ಪ್ರಮಾಣಮಾಡಬೇಕು ಎಂದು
ಹೇಳಿದನು. ಅದಕ್ಕೆ ಆ ಸೇವಕನು—ಒಂದು ವೇಳೆ 5
ನನ್ನ ಹಿಂದೆ ಈ ದೇಶಕ್ಕೆ ಬರುವದಕ್ಕೆ ಆ ಕನ್ಯೆಗೆ
ಇಷ್ಟವಿಲ್ಲದೆ ಹೋದೀತು; ನೀನು ಬಿಟ್ಟುಬಂದ ಆ
ದೇಶಕ್ಕೆ ನಾನು ನಿನ್ನ ಮಗನನ್ನು ತಿರಿಗಿ ಕರಕೊಂಡು
ಹೋಗಬೇಕನ್ನುತ್ತೀಯೋ ಎಂದು ಕೇಳಲು ಅಬ್ರ 6
ಹಾಮನು ಅವನಿಗೆ—ಎಂದಿಗೂ ಬೇಡ; ಅಲ್ಲಿಗೆ
ನನ್ನ ಮಗನನ್ನು ಕರಕೊಂಡು ಹೋಗಲೇ ಕೂಡದು.
ನನ್ನ ತಂದೆಯ ಮನೆಯಿಂದಲೂ ನಾನು ಹುಟ್ಟಿದ 7
ದೇಶದಿಂದಲೂ ನನ್ನನ್ನು ಕರತಂದು—ನಿನ್ನ ಸಂತತಿಗೆ
ಈ ದೇಶವನ್ನು ಕೊಡುವೆನೆಂದು ಪ್ರಮಾಣಮಾಡಿ
ಹೇಳಿದ ಪರಲೋಕದೇವರಾದ ಯೆಹೋವನು ನಿನ್ನ
ಮುಂದೆ ತನ್ನ ದೂತನನ್ನು ಕಳುಹಿಸಿ ನೀನು ಅಲ್ಲಿಂದ
ನನ್ನ ಮಗನಿಗೋಸ್ಕರ ಹೆಣ್ಣನ್ನು ತೆಗೆದುಕೊಳ್ಳು
ವಂತೆ ಅನುಕೂಲಮಾಡುವನು. ನಿನ್ನ ಹಿಂದೆ ಬರು 8
ವದಕ್ಕೆ ಆ ಕನ್ಯೆಗೆ ಇಷ್ಟವಿಲ್ಲದೆ ಹೋದರೆ ನಾನು
ಮಾಡಿಸಿದ ಪ್ರಮಾಣದಿಂದ ನೀನು ಬಿಡುಗಡೆಯಾ
ಗಿರುವಿ. ಹೇಗೂ ನನ್ನ ಮಗನನ್ನು ತಿರಿಗಿ ಅಲ್ಲಿಗೆ
ಕರಕೊಂಡು ಹೋಗಕೂಡದು ಎಂದು ಹೇಳಿದನು.
ಆಗ ಆ ಸೇವಕನು ತನ್ನ ದಣಿಯಾದ ಅಬ್ರಹಾಮನ 9
ತೊಡೆಯ ಕೆಳಗೆ ಕೈಯಿಟ್ಟು ಅವನು ಹೇಳಿದ್ದಂತೆಯೇ
ಪ್ರಮಾಣಮಾಡಿದನು.
ತರುವಾಯ ಆ ಸೇವಕನು ತನ್ನ ದಣಿಯ ಒಂಟೆ 10
ಗಳಲ್ಲಿ ಹತ್ತು ಒಂಟೆಗಳನ್ನು ಸಿದ್ಧಮಾಡಿ ದಣಿಯ
ಆಸ್ತಿಯಿಂದ ಶ್ರೇಷ್ಠವಾದ ಒಡವೆಗಳನ್ನು ತನ್ನ ವಶಕ್ಕೆ
ತೆಗೆದುಕೊಂಡು ಹೊರಟು ಎರಡು ನದಿಗಳ ಮಧ್ಯ
ದಲ್ಲಿರುವ ಅರಾಮ್‍ಸೀಮೆಗೆ ಬಂದು ನಾಹೋರನು
ವಾಸಿಸಿದ ಊರನ್ನು ಮುಟ್ಟಿದನು. ಸಾಯಂಕಾಲ 11
ದಲ್ಲಿ ಸ್ತ್ರೀಯರು ನೀರುತರುವದಕ್ಕೆ ಹೋಗುವಾಗ

[1]) ಮೂಲ: ಊರುಬಾಗಿಲಲ್ಲಿ ಹೋಗುವವರೆಲ್ಲರ.

ಅವನು ಊರಿನ ಹೊರಗಡೆ ಬಾವಿಯ ಹತ್ತಿರ ಒಂಟೆ
12 ಗಳನ್ನು ಮಲಗಿಸಿ—ನನ್ನ ದಣಿಯಾದ ಅಬ್ರಹಾಮನ
ದೇವರಾಗಿರುವ ಯೆಹೋವನೇ, ಈ ಹೊತ್ತು ನಾನು
ಬಂದ ಕಾರ್ಯವನ್ನು ನೀನು ಅನುಕೂಲಪಡಿಸಿ ನನ್ನ
ದಣಿಯಾದ ಅಬ್ರಹಾಮನಿಗೆ ಉಪಕಾರಮಾಡಬೇ
13 ಕೆಂದು ಬೇಡುತ್ತೇನೆ. ಇಗೋ, ನೀರಿನ ಬುಗ್ಗೆಯ
ಬಳಿಯಲ್ಲಿ ನಿಂತಿದ್ದೇನೆ; ಈ ಊರಿನ ಹೆಣ್ಣುಮಕ್ಕಳು
14 ನೀರಿಗೆ ಬರುತ್ತಾರೆ. ನಾನು ಯಾವ ಹುಡುಗಿಗೆ—
ನೀನು ದಯವಿಟ್ಟು ನಿನ್ನ ಕೊಡವನ್ನು ಇಳಿಸಿ ನನಗೆ
ಕುಡಿಯುವದಕ್ಕೆ ಕೊಡು ಎಂದು ಹೇಳುವಾಗ—
ನೀನು ಕುಡಿಯಬಹುದು, ಮತ್ತು ನಿನ್ನ ಒಂಟೆಗಳಿಗೂ
ನೀರುಕೊಡುತ್ತೇನೆ ಅನ್ನುವಳೋ, ಅವಳೇ ನಿನ್ನ
ದಾಸನಾದ ಇಸಾಕನಿಗೆ ನೀನು ನೇಮಿಸಿರುವ ಕನ್ಯೆ
ಯಾಗಲಿ. ನನ್ನ ದಣಿಯ ಮೇಲೆ ನಿನ್ನ ದಯವದೆ
ಎಂದು ಇದರಿಂದ ನನಗೆ ಗೊತ್ತಾಗುವದು ಅಂದನು.
15 ಅವನು ಹೀಗೆ ಅಂದುಕೊಳ್ಳುತ್ತಿರುವಾಗಲೇ ಅಬ್ರ
ಹಾಮನ ತಮ್ಮನಾದ ನಾಹೋರನ ಹೆಂಡತಿಯಾಗಿ
ರುವ ಮಿಲ್ಕಳ ಮಗನಾದ ಬೆತೂವೇಲನಿಗೆ ಹುಟ್ಟಿದ
ರೆಬೆಕ್ಕಳು ಹೆಗಲಿನ ಮೇಲೆ ಕೊಡವನ್ನಿಟ್ಟುಕೊಂಡು
16 ಊರ ಹೊರಗೆ ಬರುವದನ್ನು ಕಂಡನು. ಆ ಹುಡುಗಿ
ಬಹು ಸುಂದರಿಯಾಗಿಯೂ ಇನ್ನೂ ಮದುವೆಯಿ
ಲ್ಲದ ಕನ್ನಿಕೆಯಾಗಿಯೂ ಇದ್ದಳು. ಆಕೆ ಬುಗ್ಗೆಯ
ಬಳಿಗೆ ಇಳಿದು ಕೊಡದಲ್ಲಿ ನೀರುತುಂಬಿಕೊಂಡು
17 ಮೇಲಕ್ಕೆ ಬಂದಾಗ ಆ ಸೇವಕನು ಓಡಿಬಂದು ಎದು
ರುಗೊಂಡು—ಅಮ್ಮಾ, ದಯಮಾಡಿ ನಿನ್ನ ಕೊಡ
ದಿಂದ ನನಗೆ ಸ್ವಲ್ಪ ನೀರನ್ನು ಕುಡಿಯುವದಕ್ಕೆ
18 ಕೊಡು ಎಂದು ಕೇಳಿಕೊಳ್ಳಲು ಆಕೆ—ಕುಡಿಯಪ್ಪಾ
ಎಂದು ಹೇಳಿ ತತ್‌ಕ್ಷಣವೇ ಕೊಡವನ್ನು ತನ್ನ ಕೈಯ
19 ಮೇಲೆ ಇಳಿಸಿ ಕುಡಿಯ ಕೊಟ್ಟಳು. ನೀರುಕುಡಿ
ಸಿದ ಮೇಲೆ—ನಾನು ನಿನ್ನ ಒಂಟೆಗಳಿಗೂ ಬೇಕಾ
ದಷ್ಟು ನೀರುತಂದುಕೊಡುತ್ತೇನೆ ಎಂದು ಹೇಳಿ
20 ಕೊಡದಲ್ಲಿದ್ದ ನೀರನ್ನು ದೋಣಿಯೊಳಗೆ ಹೊಯಿದು
ತಿರಿಗಿ ತರುವದಕ್ಕೆ ಬಾವಿಗೆ ತ್ವರೆಯಾಗಿ ಹೋದಳು.
ಹೀಗೆ ಅವನ ಎಲ್ಲಾ ಒಂಟೆಗಳಿಗೂ ತಂದು ಕೊಟ್ಟಳು.
21 ಅಷ್ಟರಲ್ಲಿ ಆ ಮನುಷ್ಯನು ಏನೂ ಮಾತಾಡದೆ ಆಕೆ
ಯನ್ನು ದೃಷ್ಟಿಸಿ ನೋಡುತ್ತಾ—ಯೆಹೋವನು ನನ್ನ
ಪ್ರಯಾಣವನ್ನು ಸಫಲಮಾಡಿದನೋ ಇಲ್ಲವೋ
ಎಂದು ತಿಳಿಯುವದಕ್ಕಾಗಿ ಕಾದುಕೊಂಡಿದ್ದನು.
22 ಒಂಟೆಗಳು ಕುಡಿದನಂತರ ಅವನು ಆಕೆಯ ಮೂಗಿಗೆ
ಅರ್ಧ ತೊಲೆಯ ತೂಕವುಳ್ಳ ಒಂದು ಚಿನ್ನದ ಮೂಗು
ತಿಯನ್ನೂ ಆಕೆಯ ಕೈಗಳಿಗೆ ಹತ್ತು ತೊಲೆಯ
ತೂಕವುಳ್ಳ ಎರಡು ಚಿನ್ನದ ಬಳೆಗಳನ್ನೂ ಇಟ್ಟು—
23 ನೀನು ಯಾರ ಮಗಳು? ದಯವಿಟ್ಟು ನನಗೆ ಹೇಳು.
ನಿನ್ನ ತಂದೆಯ ಮನೆಯಲ್ಲಿ ನಾವು ಇಳುಕೊಳ್ಳು
24 ವದಕ್ಕೆ ಸ್ಥಳವಿದೆಯೋ ಎಂದು ಕೇಳಲು ಆಕೆ ಅವ
ನಿಗೆ—ನಾನು ನಾಹೋರನಿಗೆ ಮಿಲ್ಕಳಲ್ಲಿ ಹುಟ್ಟಿದ
ಬೆತೂವೇಲನ ಮಗಳು ಎಂದು ಉತ್ತರಕೊಟ್ಟು—
25 ಹುಲ್ಲೂ ಮೇವೂ ನಮ್ಮಲ್ಲಿ ಬಹಳ ಉಂಟು, ಮತ್ತು
26 ಇಳುಕೊಳ್ಳುವದಕ್ಕೆ ಸ್ಥಳವದೆ ಅಂದಳು. ಆ ಮನು
ಷ್ಯನು ಇದನ್ನು ಕೇಳಿ ಬೊಗ್ಗಿಕೊಂಡು ಯೆಹೋವ

ನಿಗೆ ನಮಸ್ಕರಿಸಿ—ನನ್ನ ದಣಿಯಾದ ಅಬ್ರಹಾ
ದೇವರಾಗಿರುವ ಯೆಹೋವನಿಗೆ ಸ್ತೋತ್ರವಾ
ಆತನು ತನ್ನ ಪ್ರೀತಿಯನ್ನೂ ಸತ್ಯತೆಯನ್ನೂ
ದಣಿಯಿಂದ ತೆಗೆಯಲಿಲ್ಲ; ನನ್ನನ್ನು ನನ್ನ ದ
ಬಂಧುಗಳ ಮನೆಗೆ ನೀಟಾದ ದಾರಿಯಿಂದಲೇ
ಕೊಂಡು ಬಂದಿದ್ದಾನೆ ಅಂದನು. ಆ ಹುಡುಗಿ
ಹೋಗಿ ನಡೆದ ಸಂಗತಿಯನ್ನು ತಾಯಿಯ ಮ
ಲ್ಲಿದ್ದವರೆಲ್ಲರಿಗೆ ತಿಳಿಸಿದಳು.
ರೆಬೆಕ್ಕಳಿಗೆ ಲಾಬಾನನೆಂಬ ಅಣ್ಣನಿದ್ದ
ಅವನು ತನ್ನ ತಂಗಿಯ ಮೇಲಿದ್ದ ಮೂಗುತಿಯ
ಬಳೆಗಳನ್ನೂ ನೋಡಿ ಆ ಮನುಷ್ಯನು ನನ್ನ ಸ
ಹೀಗೆ ಹೀಗೆ ಮಾತಾಡಿದನೆಂದು ತಂಗಿ ಹೇಳಿದ
ತನ್ನು ಕೇಳಿ ಬುಗ್ಗೆಯ ಹತ್ತಿರ ಒಂಟೆಗಳ ಬಳಿ
ನಿಂತಿದ್ದ ಆ ಮನುಷ್ಯನ ಬಳಿಗೆ ಓಡಿಬಂ
ಬಂದಾಗ ಅವನಿಗೆ—ಯೆಹೋವನ ದಯೆಯ
ಹೊಂದಿದವನೇ, ಒಳಕ್ಕೆ ಬಾ; ಯಾಕೆ ಹೊರಗೆ
ರುತ್ತೀ? ನಿನಗೋಸ್ಕರ ನನ್ನ ಮನೆಯನ್ನೂ
ಗಳಿಗೆ ಸ್ಥಳವನ್ನೂ ಸಿದ್ಧಮಾಡಿದ್ದೇನೆ ಎಂದು
ದನು. ಆ ಮನುಷ್ಯನು ಮನೆಯೊಳಕ್ಕೆ ಬಂ
ಲಾಬಾನನು ಒಂಟೆಗಳ ಹೊರೆಗಳನ್ನು ಇಳಿಸಿ
ಗಳಿಗೆ ಹುಲ್ಲನ್ನೂ ಮೇವನ್ನೂ ಕೊಡಿಸಿ ಆ ಮ
ಷ್ಯನ ಮತ್ತು ಅವನ ಸಂಗಡಿದ್ದವರ ಕಾಲುಗ
ತೊಳೆಯುವದಕ್ಕೆ ನೀರನ್ನು ತರಿಸಿದನು.
ಅವನಿಗೆ ಊಟಕ್ಕೆ ಬಡಿಸಿದಾಗ ಅವನು—ನ
ಬಂದ ಕೆಲಸವನ್ನು ಹೇಳದೆ ಊಟಮಾಡುವ
ಅನ್ನಲು ಲಾಬಾನನು—ಹೇಳು ಅಂದನು.
ಅವನು ಹೇಳಿದ್ದೇನಂದರೆ—ನಾನು ಅಬ್ರಹಾ
ಸೇವಕನು. ಯೆಹೋವನು ನನ್ನ ದಣಿಯನ್ನು ಬ
ನಾಗಿ ಅಭಿವೃದ್ಧಿಪಡಿಸಿ ಅವನಿಗೆ ಕುರಿದನಗಳ
ಬೆಳ್ಳಿಬಂಗಾರವನ್ನೂ ದಾಸದಾಸಿಯರನ್ನೂ ಒ
ಳನ್ನೂ ಕತ್ತೆಗಳನ್ನೂ ಕೊಟ್ಟದ್ದರಿಂದ ಅವನು
ವಂತನಾದನು. ನನ್ನ ದಣಿಯ ಪತ್ನಿಯಾದ ಸಾ
ವೃದ್ಧಾಪ್ಯದಲ್ಲಿ ಅವನಿಗೆ ಮಗನನ್ನು ಹೆತ್ತಳು
ಮಗನಿಗೆ ನನ್ನ ದಣಿಯು ತನಗಿರುವದನ್ನೆಲ್ಲಾ ಕೆ
ದ್ದಾನೆ. ಇದಲ್ಲದೆ ನನ್ನ ದಣಿಯು ನನಗೆ—ನ
ವಾಸವಾಗಿರುವ ಕಾನಾನ್‌ದೇಶದವರಿಂದ ನನ್ನ
ನಿಗೆ ಹೆಣ್ಣನ್ನು ತೆಗೆದುಕೊಳ್ಳದೆ ನನ್ನ ತಂ
ಮನೆಗೂ ನನ್ನ ಬಂಧುಗಳ ಬಳಿಗೂ ಹೋಗಿ
ರಲ್ಲೇ ಹೆಣ್ಣನ್ನು ತೆಗೆದುಕೊಳ್ಳಬೇಕೆಂದು
ನನ್ನಿಂದ ಪ್ರಮಾಣಮಾಡಿಸಿದನು. ನಾನು
ನಿಗೆ—ಒಂದು ವೇಳೆ ನನ್ನ ಹಿಂದೆ ಬರುವದಕ್ಕೆ
ಕನ್ಯೆಗೆ ಮನಸ್ಸಿಲ್ಲದೆ ಹೋದೀತು ಎಂದು ಹೇ
ಅವನು ನನಗೆ—ನಾನು ಯೆಹೋವನಿಗೆ ನ
ಕೊಳ್ಳುತ್ತೇನಲ್ಲಾ; ಅತನು ತನ್ನ ದೂತ
ನಿನ್ನೊಂದಿಗೆ ಕಳುಹಿಸಿ ನೀನು ನನ್ನ ತಂದೆಯ
ತನಕ್ಕೆ ಸೇರಿರುವ ಬಂಧುಗಳಲ್ಲಿ ನನ್ನ ಮ
ಹೆಣ್ಣು ತೆಗೆದುಕೊಳ್ಳುವಂತೆ ಅನುಕೂಲಮಾಡು
ಆ ಮೇಲೆ ನಾನು ಮಾಡಿಸಿದ ಪ್ರಮಾಣದಿಂದ
ಬಿಡುಗಡೆಯಾಗಿರುವಿ. ನೀನು ನನ್ನ ಜನರ
ಹೋದಾಗ ಅವರು ಹೆಣ್ಣನ್ನು ಕೊಡದಿದ್ದರೆ

ಮಾಡಿಸಿದ ಪ್ರಮಾಣದಿಂದ ನೀನು ಬಿಡುಗಡೆಯಾಗಿ
42 ರುವಿ ಎಂದು ಹೇಳಿದನು. ನಾನು ಈ ಹೊತ್ತು ಈ
ಊರಿನ ಬುಗ್ಗೆಯ ಬಳಿಗೆ ಬಂದಾಗ—ನನ್ನ ದಣಿ
ಯಾದ ಅಬ್ರಹಾಮನ ದೇವರಾಗಿರುವ ಯೆಹೋವ
ನೇ, ನೀರಿನ ಬುಗ್ಗೆಯ ಬಳಿಯಲ್ಲಿ ನಿಂತಿದ್ದೇನಷ್ಟೆ;
ನೀನು ನನ್ನ ಪ್ರಯಾಣವನ್ನು ಸಫಲಮಾಡಿದ್ದಾದರೆ
43 ನೀರಿಗೆ ಬರುವ ಯಾವ ಹುಡುಗಿಗೆ—ನೀನು ದಯ
ವಿಟ್ಟು ನಿನ್ನ ಕೊಡದಿಂದ ನನಗೆ ಸ್ವಲ್ಪ ನೀರನ್ನು
ಕುಡಿಯುವದಕ್ಕೆ ಕೊಡಮ್ಮಾ ಎಂದು ನಾನು ಹೇಳು
44 ವಾಗ ಅವಳು—ಕುಡಿಯಪ್ಪಾ ಮತ್ತು ನಿನ್ನ ಒಂಟೆ
ಗಳಿಗೂ ನೀರು ತಂದುಕೊಡುತ್ತೇನೆ ಅನ್ನುವಳೋ,
ಅವಳೇ ಯೆಹೋವನಿಂದ ನನ್ನ ದಣಿಯ ಮಗನಿಗೆ
45 ನೇಮಕವಾದ ಕನ್ನಿಕೆಯಾಗಿರಲಿ ಅಂದೆನು. ನಾನು
ಹೀಗೆ ಮನಸ್ಸಿನೊಳಗೆ ಮಾತಾಡಿಕೊಳ್ಳುತ್ತಿರುವಾ
ಗಲೇ ರೆಬೆಕ್ಕಳು ಹೆಗಲಿನ ಮೇಲೆ ಕೊಡವನ್ನು
ಹೊತ್ತುಕೊಂಡು ಬರುವದನ್ನು ಕಂಡೆನು. ಆಕೆ
ಬುಗ್ಗೆಗೆ ಇಳಿದು ನೀರನ್ನು ತೆಗೆದುಕೊಂಡು ಬಂದಾಗ
ನಾನು ಆಕೆಗೆ—ನನಗೆ ನೀರನ್ನು ಕುಡಿಯುವದಕ್ಕೆ
46 ಕೊಡಬೇಕಮ್ಮಾ ಎಂದು ಹೇಳಿದೆನು. ತತ್‌ಕ್ಷಣವೇ
ಆಕೆ ಕೊಡವನ್ನು ಹೆಗಲಿನಿಂದ ಇಳಿಸಿ—ಕುಡಿಯಪ್ಪಾ,
ನಿನ್ನ ಒಂಟೆಗಳಿಗೂ ತಂದುಕೊಡುತ್ತೇನೆ ಅಂದಳು.
ನಾನು ಕುಡಿದ ಮೇಲೆ ಆಕೆ ಒಂಟೆಗಳಿಗೂ ನೀರು
47 ತಂದುಕೊಟ್ಟಳು. ನೀನು ಯಾರ ಮಗಳೆಂದು ನಾನು
ಕೇಳಿದ್ದಕ್ಕೆ ಆಕೆ—ನಾಹೋರನಿಗೆ ಮಿಲ್ಕಳಲ್ಲಿ ಹುಟ್ಟಿದ
ಬೆತೂವೇಲನ ಮಗಳು ಅಂದಳು. ಅದನ್ನು ಕೇಳಿ
ನಾನು ಆಕೆಯ ಮೂಗಿಗೆ ಮೂಗುತಿಯನ್ನೂ ಕೈಗ
48 ಳಿಗೆ ಬಳೆಗಳನ್ನೂ ಇಟ್ಟು ನನ್ನ ದಣಿಯಾದ ಅಬ್ರ
ಹಾಮನ ದೇವರಾದ ಯೆಹೋವನಿಗೆ ಬೊಗ್ಗಿ ನಮ
ಸ್ಕರಿಸಿ ಆತನು ನನ್ನ ದಣಿಯ ಮಗನಿಗೋಸ್ಕರ
ಅವನ ತಮ್ಮನ ಮಗಳನ್ನೇ ತೆಗೆದುಕೊಳ್ಳುವಂತೆ
ನನ್ನನ್ನು ನೀಟಾದ ದಾರಿಯಲ್ಲಿ ಕರದುಕೊಂಡು ಬಂದ
49 ದ್ದಕ್ಕಾಗಿ ಆತನನ್ನು ಕೊಂಡಾಡಿದೆನು. ಹೀಗಿರುವಲ್ಲಿ
ನೀವು ನನ್ನ ದಣಿಗೆ ಪ್ರೀತಿಯಿಂದಲೂ ನಂಬಿಕೆಯಿಂದ
ಲೂ ನಡೆಯುವದಕ್ಕೆ ಒಪ್ಪಿದರೆ ನನಗೆ ಹೇಳಿರಿ;
ಇಲ್ಲವಾದರೆ ಇಲ್ಲವೆನ್ನಿರಿ; ಆಗ ನಾನು ಬಲಗಡೆ
ಗಾಗಲಿ ಎಡಗಡೆಗಾಗಲಿ ತಿರುಗಿಕೊಂಡು ಹೋಗು
ವೆನು ಅಂದನು.
50 ಅದಕ್ಕೆ ಲಾಬಾನನೂ ಬೆತೂವೇಲನೂ—ಈ ಕಾ
ರ್ಯವು ಯೆಹೋವನಿಂದಲೇ ಉಂಟಾಯಿತು; ನಾ
ವಂತೂ ಹೌದೆಂದೂ. ಅಲ್ಲವೆಂದೂ ಹೇಳಲಾರೆವು.
51 ರೆಬೆಕ್ಕಳನ್ನು ನಿನ್ನ ವಶಕ್ಕೆ ಕೊಡುತ್ತೇವೆ; ಕರೆದು
ಕೊಂಡು ಹೋಗಬಹುದು; ಯೆಹೋವನು ಹೇಳಿ
ದಂತೆಯೇ ಆಕೆ ನಿನ್ನ ದಣಿಯ ಮಗನಿಗೆ ಹೆಂಡತಿ
52 ಯಾಗಲಿ ಅಂದರು. ಅಬ್ರಹಾಮನ ಸೇವಕನು
ಅವರ ಮಾತನ್ನು ಕೇಳಿದಾಗ ಯೆಹೋವನಿಗೆ ಬೊಗ್ಗಿ
53 ನಮಸ್ಕರಿಸಿದನು. ಆ ಮೇಲೆ ತಾನು ತಂದಿದ್ದ ಬೆಳ್ಳಿ
ಬಂಗಾರದ ಒಡವೆಗಳನ್ನೂ ವಸ್ತ್ರಗಳನ್ನೂ ತೆಗೆದು
ರೆಬೆಕ್ಕಳಿಗೆ ಕೊಟ್ಟನು. ಆಕೆಯ ಅಣ್ಣನಿಗೂ ತಾಯಿ
ಗೂ ಸಹ ಬೆಲೆಯುಳ್ಳ ಉಡುಗೆರೆಗಳನ್ನು ಕೊಟ್ಟನು.
54 ಬಳಿಕ ಅವನೂ ಅವನ ಸಂಗಡ ಬಂದ ಮನುಷ್ಯರೂ
ಊಟ ಉಪಚಾರಗಳನ್ನು ತೀರಿಸಿಕೊಂಡು ರಾತ್ರಿ
ಯೆಲ್ಲಾ ಅಲ್ಲೇ ಇದ್ದರು. ಬೆಳಿಗ್ಗೆ ಎದ್ದಾಗ ಅವ
ನು—ನನ್ನ ದಣಿಯ ಬಳಿಗೆ ಹೊರಡುವದಕ್ಕೆ ನನಗೆ
ಅಪ್ಪಣೆಯಾಗಲಿ ಎಂದು ಕೇಳಲು ರೆಬೆಕ್ಕಳ ಅಣ್ಣನೂ 55
ತಾಯಿಯೂ ಅವನಿಗೆ—ಹುಡುಗಿಯು ಇನ್ನು ಎಂಟು
ಹತ್ತು ದಿನವಾದರೂ ನಮ್ಮಲ್ಲಿರಲಿ; ಆ ಮೇಲೆ ಆಕೆ
ಹೋಗಬಹುದು ಎಂದು ಹೇಳಿದರು. ಅವನು ಅವ 56
ರಿಗೆ—ಯೆಹೋವನು ನನ್ನ ಪ್ರಯಾಣವನ್ನು ಸಫಲ
ಮಾಡಿದ್ದಾನೆ; ಆದದರಿಂದ ನನ್ನನ್ನು ತಡೆಯಬೇಡಿರಿ;
ನನ್ನ ದಣಿಯ ಬಳಿಗೆ ಹೋಗುವದಕ್ಕೆ ನನಗೆ ಅಪ್ಪಣೆ
ಯಾಗಬೇಕೆಂದು ಹೇಳಲು ಅವರು—ನಾವು ಹುಡುಗಿ 57
ಯನ್ನು ಕರೆದು ಆಕೆಯ ಅಭಿಪ್ರಾಯ ತಿಳಿದುಕೊಳ್ಳು
ತ್ತೇವೆ ಎಂದು ಹೇಳಿ ರೆಬೆಕ್ಕಳನ್ನು ಕರೆದು—ಈ ಮನು 58
ಷ್ಯನ ಜೊತೆಯಲ್ಲಿ ಹೋಗುವಿಯಾ ಎಂದು ಕೇಳಿ
ದರು. ಆಕೆ—ಹೋಗುತ್ತೇನೆ ಅನ್ನಲು ಅವರು ತಮ್ಮ 59
ತಂಗಿಯಾದ ರೆಬೆಕ್ಕಳನ್ನೂ ಆಕೆಯ ದಾದಿಯನ್ನೂ
ಅಬ್ರಹಾಮನ ಸೇವಕನನ್ನೂ ಅವನ ಸಂಗಡ ಬಂದ
ಮನುಷ್ಯರನ್ನೂ ಸಾಗಕಳುಹಿಸಿದರು. ಮತ್ತು ರೆಬೆ 60
ಕ್ಕಳಿಗೆ—ತಂಗಿಯೇ, ನಿನ್ನಿಂದ ಲಕ್ಷಾಂತರ ಸಂತಾನ
ವಾಗಲಿ; ನಿನ್ನ ಸಂತಾನದವರು ತಮ್ಮ ವೈರಿಗಳ
ಪಟ್ಟಣಗಳನ್ನು ಸ್ವಾಧೀನಮಾಡಿಕೊಳ್ಳಲಿ ಎಂದು
ಹೇಳಿ ಹರಸಿದರು. ರೆಬೆಕ್ಕಳೂ ಆಕೆಯ ದಾಸಿಯರೂ 61
ಒಂಟೆಗಳ ಮೇಲೆ ಹತ್ತಿದವರಾಗಿ ಅಬ್ರಹಾಮನ ಸೇವ
ಕನ ಹಿಂದೆ ಹೋದರು. ಹೀಗೆ ಆ ಸೇವಕನು ರೆಬೆಕ್ಕ
ಳನ್ನು ಕರಕೊಂಡು ಹೊರಟನು.
ಅಷ್ಟರಲ್ಲಿ ಇಸಾಕನು ಲಹೈರೋಯಿ ಬಾವಿಗೆ 62
ಹೋಗಿ ಬಂದಿದ್ದನು; ಕಾನಾನ್ ದೇಶದ ದಕ್ಷಿಣ
ಸೀಮೆಯಲ್ಲಿ ವಾಸವಾಗಿದ್ದನು. ಅವನು ಸಂಜೇ 63
ವೇಳೆಯಲ್ಲಿ ಧ್ಯಾನ ಮಾಡುವದಕ್ಕೋಸ್ಕರ ಅಡವಿಗೆ
ಹೋಗಿದ್ದಾಗ ಕಣ್ಣೆತ್ತಿ ನೋಡಲಾಗಿ ಒಂಟೆಗಳು
ಬರುವದನ್ನು ಕಂಡನು. ರೆಬೆಕ್ಕಳು ಕಣ್ಣೆತ್ತಿ ಇಸಾಕ 64
ನನ್ನು ನೋಡಿ ಒಂಟೆಯಿಂದ ಬೇಗ ಇಳಿದು—ನಮ್ಮನ್ನು 65
ಎದುರುಗೊಳ್ಳುವದಕ್ಕೆ ಅಡವಿಯಲ್ಲಿ ನಡೆದು ಬರುವ
ಆ ಮನುಷ್ಯನು ಯಾರೆಂದು ಆ ಸೇವಕನನ್ನು ಕೇಳಿ
ದಳು. ಅವನೇ ನನ್ನ ದಣಿಯೆಂದು ಅವನು ಹೇಳಿ
ದಾಗ ಆಕೆ ಮುಸುಕುಹಾಕಿಕೊಂಡಳು. ಆ ಸೇವ 66
ಕನು ತಾನು ಮಾಡಿದ ಕಾರ್ಯಗಳನ್ನೆಲ್ಲಾ ಇಸಾಕ
ನಿಗೆ ತಿಳಿಸಿದನಂತರ ಇಸಾಕನು ಆಕೆಯನ್ನು ತಾಯಿ 67
ಯಾದ ಸಾರಳ ಗುಡಾರಕ್ಕೆ ಕರೆದುಕೊಂಡು ಹೋದನು.
ಈ ರೀತಿಯಾಗಿ ಅವನು ರೆಬೆಕ್ಕಳನ್ನು ವರಿಸಿದನು.
ಆಕೆ ಅವನ ಹೆಂಡತಿಯಾದಳು. ಅವನು ಆಕೆಯನ್ನು
ಪ್ರೀತಿಸಿ ತನ್ನ ತಾಯಿ ಸತ್ತ ದುಃಖವನ್ನು ಶಮನ
ಮಾಡಿಕೊಂಡನು.

ಅಬ್ರಹಾಮನ ಎರಡನೆಯ ಹೆಂಡತಿಯಿಂದಾದ ಸಂತಾನವನ್ನು
ಕುರಿತದ್ದು.

25 ಅಬ್ರಹಾಮನು ಕೆಟೂರಳೆಂಬ ಇನ್ನೊಬ್ಬ ಹೆಂಡತಿ
ಯನ್ನು ಮದುವೆಮಾಡಿಕೊಂಡನು. ಆಕೆ ಅವ 2
ನಿಗೆ ಜಿಮ್ರಾನ್, ಯೊಕ್ಷಾನ್, ಮೆದಾನ್, ಮಿದ್ಯಾನ್,

3 ಇಷ್ಬಾಕ್, ಶೂಹ ಇವರನ್ನು ಹೆತ್ತಳು. ಯೊಕ್ಷಾ
ನನು ಶೆಬಾ, ದೆದಾನ್ ಎಂಬಿವರನ್ನು ಪಡೆದನು.
ಅಶ್ಶೂರ್ಯರರೂ ಲೆಟೂಶ್ಯರೂ ಲೆಯುಮ್ಯರೂ ದೆದಾನ
4 ನಿಂದ ಹುಟ್ಟಿದವರು. ಗೇಫಾ, ಗೇಫೆರ್, ಹನೋಕ್,
ಅಬೀದಾ, ಎಲ್ದಾಗ ಎಂಬಿವರು ಮಿದ್ಯಾನನಿಂದ
ಹುಟ್ಟಿದರು. ಇವರೆಲ್ಲರು ಕೆಟೂರಳ ಸಂತತಿಯವರು.
5 ಅಬ್ರಹಾಮನು ತನಗಿದ್ದ ಆಸ್ತಿಯನ್ನೆಲ್ಲಾ ಇಸಾಕ
6 ನಿಗೆ ಕೊಟ್ಟನು. ತನ್ನ ಉಪಪತ್ನಿಯರ ಮಕ್ಕಳಿಗೆ
ಕೆಲವು ಸೊತ್ತುಗಳನ್ನು ದಾನಮಾಡಿ ತಾನು ಇನ್ನೂ
ಜೀವದಿಂದಿರುವಾಗ ಅವರನ್ನು ತನ್ನ ಮಗನಾದ ಇಸಾ
ಕನ ಬಳಿಯಿಂದ ಪೂರ್ವದಿಕ್ಕಿನಲ್ಲಿರುವ ಕೆದೆಮ್
ದೇಶಕ್ಕೆ ಕಳುಹಿಸಿದನು.

### ಅಬ್ರಹಾಮನು ಮೃತಪಟ್ಟದ್ದು.

7 ಅಬ್ರಹಾಮನು ನೂರೆಪ್ಪತ್ತೈದು ವರುಷ ಬದುಕಿ
8 ದನು. ಅವನು ಪೂರ್ಣಾಯುಷ್ಯದಿಂದ ದಿನತುಂಬಿದ
ಮುದುಕನಾಗಿ ಪ್ರಾಣಬಿಟ್ಟು ತನ್ನ ಪಿತೃಗಳ ಬಳಿಗೆ
9 ಸೇರಿದನು. ಅವನ ಮಕ್ಕಳಾದ ಇಸಾಕ್ ಇಷ್ಮಾ
ಯೇಲರು ಹಿತ್ತಿಯನಾದ ಚೋಹರನ ಮಗ ಎಫ್ರೋ
ನನ ಭೂಮಿಯಲ್ಲಿರುವ ಮಕ್ಪೇಲದ ಗವಿಯಲ್ಲಿ
ಅವನಿಗೆ ಸಮಾಧಿಮಾಡಿದರು. ಅದು ಮಮ್ರೆಗೆ
10 ಪೂರ್ವದಿಕ್ಕಿನಲ್ಲಿರುವದು; ಅಬ್ರಹಾಮನು ಅದನ್ನು
ಹಿತ್ತಿಯರಿಂದ ಕೊಂಡುಕೊಂಡಿದ್ದನು; ಅದರಲ್ಲಿ
ಅಬ್ರಹಾಮನಿಗೂ ಅವನ ಹೆಂಡತಿಯಾದ ಸಾರಳಿಗೂ
ಸಮಾಧಿ ಆಯಿತು.
11 ಅಬ್ರಹಾಮನು ತೀರಿಹೋದನಂತರ ದೇವರ ಅನು
ಗ್ರಹವು ಅವನ ಮಗನಾದ ಇಸಾಕನಿಗೂ ಉಂಟಾ
ಯಿತು. ಇಸಾಕನು ಲಹೈರೋಯಿ ಎಂಬ ಬಾವಿಯ
ಹತ್ತರ ವಾಸವಾಗಿದ್ದನು.

### ಇಷ್ಮಾಯೇಲನ ವಂಶಸ್ಥರನ್ನು ಕುರಿತದ್ದು.

12 ಅಬ್ರಹಾಮನಿಗೆ ಸಾರಳ ದಾಸಿಯಾದ ಐಗುಪ್ತ್ಯ
ಳಾದ ಹಾಗರಳಲ್ಲಿ ಹುಟ್ಟಿದ ಇಷ್ಮಾಯೇಲನ ವಂಶದ
13 ಚರಿತ್ರೆ. ಇಷ್ಮಾಯೇಲನ ಮಕ್ಕಳಿಗೂ ಇವರಿಂದ
ಹುಟ್ಟಿದ ಕುಲಗಳಿಗೂ ಇರುವ ಹೆಸರುಗಳು ಯಾವ
ವಂದರೆ—ಮೊದಲು ಹುಟ್ಟಿದವನು ನೆಬಾಯೋತ್;
ಆ ಮೇಲೆ ಹುಟ್ಟಿದವರು ಕೇದಾರ್, ಅದ್ಬಯೇಲ್,
14, 15 ಮಿಬ್ಸಾಮ್, ಮಿಷ್ಮಾ, ದೂಮಾ, ಮಸ್ಸಾ, ಹದದ್,
ತೇಮಾ, ಯಟೂರ್, ನಾಫೀಷ್, ಕೇದ್ಮಾ ಎಂಬವರೇ.
16 ಈ ಹೆಸರುಗಳು ಊರುಗಳಲ್ಲಿಯೂ ಪಾಳೆಯ
ಗಳಲ್ಲಿಯೂ ವಾಸಿಸುವ ಇಷ್ಮಾಯೇಲನ ಸಂತಾನ
ದವರಿಗೆ ಇರುವವು. ಇವರ ಕುಲಗಳ ಸಂಖ್ಯೆಗೆ ಸರಿ
ಯಾಗಿ ಹನ್ನೆರಡು ಮಂದಿ ಅರಸರಿರುತ್ತಾರೆ.
17 ಇಷ್ಮಾಯೇಲನು ನೂರಮೂವತ್ತೇಳು ವರುಷ
ಬದುಕಿದನು; ಆ ವಯಸ್ಸಿನಲ್ಲಿ ಅವನು ಪ್ರಾಣ
ಬಿಟ್ಟು ತನ್ನ ಪಿತೃಗಳ ಬಳಿಗೆ ಸೇರಿದನು.
18 ಇಷ್ಮಾಯೇಲ್ಯರು ಹವೀಲದಿಂದ ಐಗುಪ್ತದೇಶದ
ಮೂಡಲಲ್ಲಿರುವ ಅಶ್ಶೂರಿನ ದಾರಿಯಲ್ಲಿರುವ ಶೂರಿನ ತನಕ ವಾಸಮಾಡಿದರು. ಹೀಗೆ ಅವರಿಗೆ ತಮ್ಮ ಸಂಬಂಧಿಕರ ಎದುರಿನಲ್ಲಿಯೇ ವಾಸಸ್ಥಳ ಸಿಕ್ಕಿತು.

## ಇಸಾಕ, ಯಾಕೋಬ, ಏಸಾವ ಇವರ ಚರಿತ್ರೆ.
## 25. 19—37. 1.

### ಇಸಾಕನಿಗೆ ಅವಳಿಮಕ್ಕಳು ಹುಟ್ಟಿದ್ದು.

ಅಬ್ರಹಾಮನ ಮಗನಾದ ಇಸಾಕನ ಚರಿತ್ರೆ. ಅಬ್ರಹಾಮನು ಇಸಾಕನನ್ನು ಪಡೆದನು. ಇಸಾಕನು ನಾಲ್ವತ್ತು ವರುಷದವನಾದಾಗ ಅರಾಮ್ಯನಾದ ಬೆತೂವೇಲನ ಮಗಳಾಗಿಯೂ ಅರಾಮ್ಯನಾದ ಲಾಬಾನನ ತಂಗಿಯಾಗಿಯೂ ಇದ್ದ ರೆಬೆಕ್ಕಳನ್ನು ಪದ್ದನ್ ಅರಾಮಿನಿಂದ ತರಿಸಿ ಹೆಂಡತಿಯಾಗಿ ಮಾಡಿಕೊಂಡನು. ಆಕೆ ಬಂಜೆಯಾಗಿರಲಾಗಿ ಅವನು ಆಕೆಗೋಸ್ಕರ ಯೆಹೋವನನ್ನು ಬೇಡಿಕೊಂಡನು. ಯೆಹೋವನು ಅವನ ವಿಜ್ಞಾಪನೆಯನ್ನು ಲಾಲಿಸಿದ್ದರಿಂದ ರೆಬೆಕ್ಕಳು ಬಸುರಾದಳು. ಆಕೆಯ ಗರ್ಭದಲ್ಲಿ ಶಿಶುಗಳು ಒಂದನ್ನೊಂದು ನೂಕಿಕೊಂಡಾಗ ಆಕೆಯು—ಹೀಗಾದರೆ ನಾನು ಯಾಕೆ ಬದುಕಬೇಕು ಎಂದು ಹೇಳಿ ಇದರ ವಿಷಯದಲ್ಲಿ ಯೆಹೋವನ ಸನ್ನಿಧಿಯಲ್ಲಿ ವಿಚಾರಿಸುವದಕ್ಕೆ ಹೋದಳು. ಯೆಹೋವನು ಆಕೆಗೆ—

ನಿನ್ನ ಗರ್ಭದಲ್ಲಿ ಎರಡು ಜನಾಂಗಗಳು ಅವೆ;
ಆ ಎರಡು ಜನಾಂಗಗಳು ಜನ್ಮಾರಭ್ಯ ವಿರೋಧದಿಂದ ಭೇದವಾಗುವವು; ಅವುಗಳಲ್ಲಿ ಒಂದು ಮತ್ತೊಂದಕ್ಕಿಂತ ಬಲಿಷ್ಠವಾಗುವದು; ಹಿರಿಯದು ಕಿರಿಯದಕ್ಕೆ ಸೇವೆಮಾಡುವದು

ಎಂದು ಹೇಳಿದನು.

ಆಕೆ ದಿನತುಂಬಿದಾಗ ಅವಳಿಮಕ್ಕಳನ್ನು ಹೆತ್ತಳು. ಮೊದಲು ಹುಟ್ಟಿದ್ದು ಕೆಂಪಾಗಿಯೂ ಮೈಮೇಲೆಲ್ಲಾ ಕೂದಲಿನ ವಸ್ತ್ರದಂತೆ ರೋಮವುಳ್ಳದ್ದಾಗಿಯೂ ಇತ್ತು; ಅದಕ್ಕೆ [1]ಏಸಾವ ಎಂದು ಹೆಸರಿಟ್ಟರು. ಎರಡನೆಯ ಶಿಶುವು ಏಸಾವನ ಹಿಮ್ಮಡಿಯನ್ನು ಕೈಯಿಂದ ಹಿಡುಕೊಂಡು ಹುಟ್ಟಿದ್ದರಿಂದ ಅದಕ್ಕೆ [2]ಯಾಕೋಬ ಎಂದು ಹೆಸರಿಟ್ಟರು. ಇವರು ಹುಟ್ಟಿದಾಗ ಇಸಾಕನು ಅರುವತ್ತು ವರುಷದವನಾಗಿದ್ದನು.

### ಏಸಾವನು ತನ್ನ ಚೊಚ್ಚಲತನದ ಹಕ್ಕನ್ನು ಯಾಕೋಬನಿಗೆ ಮಾರಿಬಿಟ್ಟದ್ದು.

ಆ ಹುಡುಗರಿಬ್ಬರೂ ಬೆಳೆದಾಗ ಅವರಲ್ಲಿ ಏಸಾವನೆಂಬವನು ಬೇಟೆಯಾಡುವದರಲ್ಲಿ ಜಾಣನಾದನು; ಅವನು ಅರಣ್ಯವಾಸಿ. ಯಾಕೋಬನು ಸಾಧುಮನುಷ್ಯನಾಗಿ ಗುಡಾರಗಳಲ್ಲೇ ವಾಸಿಸಿದನು. ಬೇಟೆಯ ಮಾಂಸವು ಇಸಾಕನಿಗೆ ಇಷ್ಟವಾದದರಿಂದ ಅವನು ಏಸಾವನನ್ನು ಪ್ರೀತಿಸಿದನು; ರೆಬೆಕ್ಕಳು ಯಾಕೋಬನನ್ನು ಪ್ರೀತಿಸಿದಳು.

1) ಏಸಾವ ಅಂದರೆ ರೋಮವುಳ್ಳದ್ದು. 2) ಯಾಕೋಬ ಅಂದರೆ ಹಿಮ್ಮಡಿಹಿಡಿದವ.

9 ಒಂದು ದಿನ ಯಾಕೋಬನು ಅಡಿಗೆಮಾಡುತ್ತಿರು
ವಾಗ ಏಸಾವನು ಕಾಡಿನಿಂದ ದಣಿದು ಬಂದು
0 ಅವನಿಗೆ—ನಾನು ಬಹು ದಣಿದು ಬಂದಿದ್ದೇನೆ; ಆ
ಕೆಂಪಾದ ರುಚಿ ಪದಾರ್ಥವನ್ನು ಈಗಲೇ ತಿನ್ನು
ವದಕ್ಕೆ ಕೊಡಪ್ಪಾ ಎಂದು ಹೇಳಿದನು. (ಈ ಸಂಗತಿ
ಯಿಂದ ಏಸಾವನಿಗೆ 1)ಎದೋಮ್ ಎಂದು ಹೆಸ
1 ರಾಯಿತು.) ಯಾಕೋಬನು ಅವನಿಗೆ—ನೀನು ಮೊ
ದಲು ನಿನ್ನ ಚೊಚ್ಚಲತನದ ಹಕ್ಕನ್ನು ನನಗೆ ಮಾರಿ
2 ಬಿಡು ಅನ್ನಲು ಏಸಾವನು—ಆಗಲಿ, ನನ್ನಂಥ
ಸಾಯುವವನಿಗೆ ಚೊಚ್ಚಲತನದಿಂದ ಪ್ರಯೋಜನ
3 ವೇನು ಅಂದನು. ಯಾಕೋಬನು—ಮೊದಲು ಪ್ರ
ಮಾಣಮಾಡು ಅಂದಾಗ ಏಸಾವನು ಪ್ರಮಾಣ
ಮಾಡಿ ಅವನಿಗೆ ತನ್ನ ಚೊಚ್ಚಲತನದ ಹಕ್ಕನ್ನು
4 ಕೊಟ್ಟುಬಿಟ್ಟನು. ಆಗ ಯಾಕೋಬನು ಏಸಾವನಿಗೆ
ರೊಟ್ಟಿಯನ್ನೂ ಅಲಸಂದಿಗುಗ್ಗರಿಯನ್ನೂ ಕೊಟ್ಟನು.
ಏಸಾವನು ತಿಂದು ಕುಡಿದು ಎದ್ದು ಹೋದನು. ಹೀಗೆ
ಅವನು ತನ್ನ ಚೊಚ್ಚಲತನದ ಹಕ್ಕನ್ನು ತಾತ್ಸಾರ
ಮಾಡಿದನು.

ದೇವರು ಅಬ್ರಹಾಮನಿಗೆ ಮಾಡಿದ ವಾಗ್ದಾನಗಳನ್ನು
ಇಸಾಕನಿಗೂ ಮಾಡಿದ್ದು.

26 ಅಬ್ರಹಾಮನ ಕಾಲದಲ್ಲಿ ಬಂದ ಮೊದಲನೆಯ
ಬರವಲ್ಲದೆ ಇನ್ನೊಂದು ಬರವು ಕಾನಾನ್‌ದೇಶಕ್ಕೆ
ಬಂತು. ಆಗ ಇಸಾಕನು ಫಿಲಿಷ್ಟಿಯರ ಅರಸನಾದ
2 ಅಬೀಮೆಲೆಕನ ಬಳಿಗೆ ಗೆರಾರಿಗೆ ಹೋದನು. ಅಲ್ಲಿ
ಯೆಹೋವನು ಅವನಿಗೆ ದರ್ಶನಕೊಟ್ಟು—ನೀನು
ಐಗುಪ್ತದೇಶಕ್ಕೆ ಇಳಿದುಹೋಗಬೇಡ; ನಾನು ಹೇ
3 ಳುವ ದೇಶದಲ್ಲಿ ನೀನು ವಾಸಮಾಡಬೇಕು. ನೀನು
ಈ ದೇಶದಲ್ಲಿ ಪ್ರವಾಸಿಯಾಗಿರು; ನಾನು ನಿನ್ನ
ಬಳಿಯಲ್ಲಿದ್ದು ನಿನ್ನನ್ನು ಅಭಿವೃದ್ಧಿಪಡಿಸಿ ನಿನಗೂ
ನಿನ್ನ ಸಂತತಿಯವರಿಗೂ ಈ ಪ್ರದೇಶಗಳನ್ನೆಲ್ಲಾ
ಕೊಡುವೆನು. ನಿನ್ನ ತಂದೆಯಾದ ಅಬ್ರಹಾಮನು
ನನ್ನ ಮಾತನ್ನು ಕೇಳಿ ನಾನು ಹೇಳಿದಂತೆ ಮಾಡಿ
ನನ್ನ ಆಜ್ಞಾನೇಮವಿಧಿಗಳನ್ನು ಕೈಕೊಂಡು ನಡೆದದ
ರಿಂದ ನಾನು ಅವನಿಗೆ ಮಾಡಿದ ಪ್ರಮಾಣವನ್ನು
ನೆರವೇರಿಸಿ ನಿನ್ನ ಸಂತತಿಯವರನ್ನು ಆಕಾಶದಲ್ಲಿರುವ
ನಕ್ಷತ್ರಗಳಷ್ಟಾಗಿ ಮಾಡಿ ಅವರಿಗೆ ಈ ಪ್ರದೇಶಗಳ
ನ್ನೆಲ್ಲಾ ಕೊಡುವೆನು. 2)ಭೂಮಿಯ ಎಲ್ಲಾ ಜನಾಂಗ
ಗಳಿಗೂ ನಿನ್ನ ಸಂತತಿಯ ಮೂಲಕ ಆಶೀರ್ವಾದ
ವುಂಟಾಗುವದು ಅಂದನು.

ಇಸಾಕನು ಗೆರಾರಿನಲ್ಲಿ ತನ್ನ ಹೆಂಡತಿಯನ್ನು ತಂಗಿಯೆಂದು
ಹೇಳಿದ್ದು.

7 ಇಸಾಕನು ಗೆರಾರಿನಲ್ಲಿ ವಾಸವಾಗಿದ್ದಾಗ ಆ ಸ್ಥಳ
ದ ಜನರು ಅವನ ಹೆಂಡತಿಯನ್ನು ನೋಡಿ ಆಕೆಯ
ವಿಷಯದಲ್ಲಿ ವಿಚಾರಿಸಿದಾಗ ಅವನು—ರೆಬೆಕ್ಕಳು
ಸುಂದರಿಯಾಗಿರುವದರಿಂದ ಈ ಸ್ಥಳದ ಜನರು
ಈಕೆಯ ನಿಮಿತ್ತ ನನ್ನನ್ನು ಕೊಂದಾರು ಅಂದು
ಕೊಂಡು ಆಕೆಯನ್ನು ತನ್ನ ಹೆಂಡತಿ ಎಂದು ಹೇಳು
ವದಕ್ಕೆ ಭಯಪಟ್ಟು ತಂಗಿಯಾಗಬೇಕು ಎಂದು
ಹೇಳಿದನು. ಅವನು ಆ ಸ್ಥಳದಲ್ಲಿ ಬಹಳ ದಿವಸ 8
ಇದ್ದ ಮೇಲೆ ಒಂದು ದಿನ ಫಿಲಿಷ್ಟಿಯರ ಅರಸನಾದ
ಅಬೀಮೆಲೆಕನು ಕಿಟಕಿಯಿಂದ ನೋಡಿದಾಗ ಇಸಾ
ಕನು ತನ್ನ ಹೆಂಡತಿಯಾದ ರೆಬೆಕ್ಕಳ ಸಂಗಡ ಸರಸ
ವಾಡುವದನ್ನು ಕಂಡನು. ಆಗ ಅವನು ಇಸಾಕ 9
ನನ್ನು ಕರಸಿ—ನಿಶ್ಚಯವಾಗಿ ಈಕೆಯು ನಿನ್ನ ಹೆಂಡತಿ
ಯಲ್ಲವೇ, ತಂಗಿ ಅಂತ ಯಾಕೆ ಹೇಳಿದಿ ಎಂದು
ಕೇಳಲು ಇಸಾಕನು—ಜನರು ಈಕೆಯ ನಿಮಿತ್ತ
ನನ್ನನ್ನು ಕೊಂದಾರೆಂದು ಹಾಗೆ ಹೇಳಿದೆನು ಅಂದನು.
ಅದಕ್ಕೆ ಅಬೀಮೆಲೆಕನು—ನೀನು ನಮಗೆ ಹೀಗೆ 10
ಯಾಕೆ ಮಾಡಿದಿ? ಜನರಲ್ಲಿ ಒಬ್ಬನು ನಿನ್ನ ಹೆಂಡತಿ
ಯೊಡನೆ ಕೂಡುವದಕ್ಕೆ ಆಸ್ಪದವಾಗಿತ್ತು. ನಿನ್ನ
ಮೂಲಕ ನನಗೆ ದೋಷ ಪ್ರಾಪ್ತವಾಗುತ್ತಿತ್ತಲ್ಲಾ
ಎಂದು ಹೇಳಿ ತನ್ನ ಪ್ರಜೆಗಳಿಗೆ—ಈ ಮನುಷ್ಯನಿ 11
ಗಾಗಲಿ ಇವನ ಹೆಂಡತಿಗಾಗಲಿ ಕೇಡುಮಾಡುವವನಿಗೆ
ತಪ್ಪದೆ ಮರಣದಂಡನೆಯಾಗುವದು ಎಂದು ಆಜ್ಞೆ
ಮಾಡಿದನು.

ಫಿಲಿಷ್ಟಿಯರು ಹೊಟ್ಟೆಕಿಚ್ಚುಪಟ್ಟು ಇಸಾಕನನ್ನು ತಮ್ಮ
ದೇಶದಿಂದ ಹೊರಡಿಸಿದ್ದು.

ಇಸಾಕನು ಆ ದೇಶದಲ್ಲಿ ಬೀಜವನ್ನು ಬಿತ್ತಿ ಅದೇ 12
ವರುಷದಲ್ಲಿ ನೂರರಷ್ಟು ಬೆಳೆಯನ್ನು ಹೊಂದಿದನು;
ಯೆಹೋವನು ಅವನನ್ನು ಅಭಿವೃದ್ಧಿಪಡಿಸಿದನು;
ಅವನ ಐಶ್ವರ್ಯವು ದಿನೇ ದಿನೇ ಹೆಚ್ಚಿದ್ದರಿಂದ ಬಹು 13
ಧನವಂತನಾದನು; ಅವನಿಗೆ ದನಕುರಿಗಳ ಸಂಪತ್ತೂ 14
ಅನೇಕ ಸೇವಕಜನವೂ ಇದ್ದವು. ಇದನ್ನು ನೋಡಿ
ಫಿಲಿಷ್ಟಿಯರು ಹೊಟ್ಟೆಕಿಚ್ಚುಪಟ್ಟರು. (ಅವನ ತಂದೆ 15
ಯಾದ ಅಬ್ರಹಾಮನ ಸೇವಕರು ಅಬ್ರಹಾಮನ
ಕಾಲದಲ್ಲೇ ತೋಡಿದ್ದ ಬಾವಿಗಳನ್ನು ಫಿಲಿಷ್ಟಿಯರು
ಮಣ್ಣುಹಾಕಿ ಮುಚ್ಚಿದ್ದರು.) ಹೀಗಿರಲಾಗಿ ಅಬೀ 16
ಮೆಲೆಕನು ಇಸಾಕನಿಗೆ—ನೀನು ನಮಗಿಂತ ಬಹು
ಬಲಿಷ್ಠನಾಗಿದ್ದೀ; ಆದದರಿಂದ ನಮ್ಮ ಬಳಿಯಿಂದ 17
ಹೊರಟುಹೋಗಬೇಕು ಎಂದು ಹೇಳಲು ಇಸಾಕನು
ಅಲ್ಲಿಂದ ಹೋಗಿ ಗೆರಾರ್ ತಗ್ಗಿನ ಬೈಲಿನಲ್ಲಿ ಬಿಡಾರ
ಮಾಡಿಕೊಂಡು ಅಲ್ಲಿ ವಾಸವಾಗಿದ್ದನು. ಅಬ್ರ 18
ಹಾಮನು ತೋಡಿಸಿದ್ದ ಬಾವಿಗಳನ್ನು ಅವನು ಸತ್ತ
ಮೇಲೆ ಫಿಲಿಷ್ಟಿಯರು ಮುಚ್ಚಿಹಾಕಿದ್ದರಿಂದ ಇಸಾ
ಕನು ಅವುಗಳನ್ನು ತಿರಿಗಿ ತೆಗಿಸಿ ತಂದೆ ಇಟ್ಟಿದ್ದ
ಹೆಸರುಗಳನ್ನೇ ಇಟ್ಟನು. ಇಸಾಕನ ಸೇವಕರು 19
ತಗ್ಗಿನಲ್ಲಿ ಅಗಿಯುವಾಗ ಅವರಿಗೆ ಸೆಲೆ ನೀರಿನ
ಬಾವಿಯು ಸಿಕ್ಕಿತು. ಗೆರಾರಿನ ದನಕಾಯುವವರು 20
ಬಂದು ಆ ನೀರು ತಮ್ಮದು ಎಂದು ಹೇಳಿ ಇಸಾಕನ

1) ಎದೋಮ್ ಅಂದರೆ ಕೆಂಪು. 2) ಅಥವಾ: ಎಲ್ಲಾ ಜನಾಂಗಗಳೂ ನಿನ್ನ ಸಂತತಿಗಿರುವಂಥ ಆಶೀರ್ವಾದವೇ ತಮಗೂ ಆಗಲೆಂದು ಕೋರುವವು.

ದನಕಾಯುವವರ ಸಂಗಡ ಜಗಳವಾಡಿದ್ದರಿಂದ
ಇಸಾಕನು ಆ ಬಾವಿಗೆ [1]ಏಸೆಕ್ ಎಂದು ಹೆಸ
21 ರಿಟ್ಟನು. ತರುವಾಯ ಅವನ ಜನರು ಬೇರೊಂದು
ಬಾವಿಯನ್ನು ತೋಡಿದಾಗ ಆ ದೇಶದವರು ಅದ
ಕ್ಕಾಗಿಯೂ ಜಗಳವಾಡಿದ್ದರಿಂದ ಅವನು ಅದಕ್ಕೆ
22 [2]ಸಿಟ್ನಾ ಎಂದು ಹೆಸರಿಟ್ಟನು. ಅವನು ಅಲ್ಲಿಂದ
ಹೊರಟು ಮತ್ತೊಂದು ಬಾವಿಯನ್ನು ಅಗಿಸಿದಾಗ
ಅದರ ವಿಷಯದಲ್ಲಿ ಯಾರೂ ಜಗಳವಾಡದೆ
ಹೋದದರಿಂದ ಅವನು— ಈಗ ಯೆಹೋವನು ನಮ
ಗೋಸ್ಕರ ಸ್ಥಳ ಮಾಡಿದ್ದಾನಾದದರಿಂದ ಅಭಿವೃದ್ಧಿ
ಯಾಗುವೆವು ಎಂದು ಹೇಳಿ ಅದಕ್ಕೆ [3]ರೆಹೋಬೋತ್
ಎಂದು ಹೆಸರಿಟ್ಟನು.

ಇಸಾಕನು ಬೇರ್ಷೆಬದಲ್ಲಿ ತಿರಿಗಿ ದೇವರಿಂದ ವಾಗ್ದಾನವನ್ನು
ಹೊಂದಿದ್ದು; ಅಬೀಮೆಲೆಕನು ಅವನ ಸಂಗಡ
ಒಡಂಬಡಿಕೆಯನ್ನು ಮಾಡಿಕೊಂಡದ್ದು.

23 ಇಸಾಕನು ಅಲ್ಲಿಂದ ಹೊರಟು ಗಟ್ಟಾ ಹತ್ತಿ ಬೇರ್ಷೆ
24 ಬಕ್ಕೆ ಬಂದನು. ಆ ರಾತ್ರಿ ಯೆಹೋವನು ಅವನಿಗೆ
ಕಾಣಿಸಿಕೊಂಡು— ನಾನು ನಿನ್ನ ತಂದೆಯಾದ ಅಬ್ರ
ಹಾಮನ ದೇವರು; ನೀನು ಭಯಪಡಬೇಡ; ನಾನು
ನಿನ್ನ ಬಳಿಯಲ್ಲಿದ್ದೇನೆ; ನನ್ನ ಸೇವಕನಾದ ಅಬ್ರ
ಹಾಮನ ನಿಮಿತ್ತ ನಿನ್ನನ್ನು ಆಶೀರ್ವದಿಸಿ ನಿನ್ನ ಸಂತ
25 ತಿಯನ್ನು ಹೆಚ್ಚಿಸುವೆನು ಎಂದು ಹೇಳಲಾಗಿ ಇಸಾ
ಕನು ಯಜ್ಞವೇದಿಯನ್ನು ಕಟ್ಟಿಸಿ ಯೆಹೋವನ
ಹೆಸರನ್ನು ಹೇಳಿಕೊಂಡು ಆರಾಧಿಸಿ ಅಲ್ಲಿ ತನ್ನ ಗುಡಾ
ರವನ್ನು ಹಾಕಿಸಿಕೊಂಡನು.
26 ಅಲ್ಲಿಯೂ ಅವನ ಸೇವಕರು ಬಾವಿಯನ್ನು ಅಗಿ
ದರು. ಆ ಸಮಯದಲ್ಲಿ ಅಬೀಮೆಲೆಕನು ತನ್ನ
ಮಂತ್ರಿಯಾದ ಅಹುಜ್ಜತನನ್ನೂ ಸೇನಾಪತಿಯಾದ
ಫೀಕೋಲನನ್ನೂ ಸಂಗಡ ಕರೆದುಕೊಂಡು ಗೆರಾರಿ
27 ನಿಂದ ಇಸಾಕನ ಬಳಿಗೆ ಬರಲು ಇಸಾಕನು— ನೀವು
ನನ್ನನ್ನು ದ್ವೇಷಿಸಿ ನಿಮ್ಮ ಬಳಿಯಿಂದ ಕಳುಹಿಸಿ
ಬಿಟ್ಟಿರಲ್ಲಾ; ಈಗ ನನ್ನ ಬಳಿಗೆ ಯಾಕೆ ಬಂದಿರಿ
28 ಎಂದು ಅವರನ್ನು ಕೇಳಿದ್ದಕ್ಕೆ ಅವರು— ಯೆಹೋವನು
ನಿನ್ನ ಸಂಗಡ ಇದ್ದಾನೆ ಎಂದು ನಮಗೆ ಸ್ಪಷ್ಟವಾಗಿ
ಕಂಡುಬಂದದರಿಂದ ನೀನೂ ನಾವೂ ಒಬ್ಬರಿಗೊಬ್ಬರು
ಪ್ರಮಾಣಪೂರ್ವಕವಾಗಿ ಒಡಂಬಡಿಕೆ ಮಾಡಿಕೊ
29 ಳ್ಳೋಣವೆಂದು ಆಲೋಚಿಸಿದೆವು. ನಾವು ನಿನಗೆ
ಯಾವ ಕೇಡನ್ನೂ ಮಾಡದೆ ಹಿತವನ್ನೇ ಮಾಡಿ
ನಿನ್ನನ್ನು ಸಮಾಧಾನದೊಡನೆ ಕಳುಹಿಸಿದೆವಲ್ಲಾ;
ಅದರಂತೆ ನೀನು ನಮಗೆ ಕೇಡನ್ನು ಮಾಡುವದಿಲ್ಲ
ವೆಂಬದಾಗಿ ಪ್ರಮಾಣಮಾಡಬೇಕು. ನೀನು ಈಗ
ಯೆಹೋವನ ದಯೆಯನ್ನು ಹೊಂದಿದವನಾಗಿದ್ದೀ
30 ಯಷ್ಟೆ ಎಂದು ಹೇಳಿದರು. ಆಗ ಇಸಾಕನು ಅವರಿಗೆ
ಔತಣವನ್ನು ಮಾಡಿಸಿದನು; ಅವರೆಲ್ಲರೂ ಭೋಜ
31 ನೋಪಚಾರಗಳನ್ನು ತೀರಿಸಿಕೊಂಡು ಬೆಳಿಗ್ಗೆ ಎದ್ದು
ಒಬ್ಬರಿಗೊಬ್ಬರು ಪ್ರಮಾಣಮಾಡಿಕೊಂಡರು. ಇಸಾ
ಕನು ಅವರನ್ನು ಸಾಗಕಳುಹಿಸಲು ಅವರು ಸಮ
ಧಾನದೊಡನೆ ಹೊರಟುಹೋದರು.
ಅದೇ ದಿನದಲ್ಲಿ ಇಸಾಕನ ಸೇವಕರು ಬಂದು—
ನಮಗೆ ನೀರು ಸಿಕ್ಕಿತು ಎಂದು ಹೇಳಿ ತಾವು ತೋ
ಡಿದ್ದ ಬಾವಿಯ ಸಂಗತಿಯನ್ನು ತಿಳಿಸಲು ಅವನ
ಆ ಬಾವಿಗೆ ಷಿಬಾ ಎಂದು ಹೆಸರಿಟ್ಟನು. ಆದ
ರಿಂದ ಅಲ್ಲಿರುವ ಊರಿಗೆ ಇಂದಿನ ವರೆಗೂ ಬೇರ್ಷೆ
ಎಂದು ಹೆಸರಾಯಿತು.

ಏಸಾವನು ಹಿತ್ತಿಯರಲ್ಲಿ ಹೆಣ್ಣು ತೆಗೆದುಕೊಂಡದ್ದು.

ಏಸಾವನು ನಾಲ್ವತ್ತು ವರುಷದವನಾದಾಗ ಹಿತ್ತಿ
ಯನಾದ ಬೇರಿಯ ಮಗಳಾದ ಯೆಹೂದೀತಳನ್ನೂ
ಹಿತ್ತಿಯನಾದ ಏಲೋನನ ಮಗಳಾದ ಬಾಸೆಮತ
ಳನ್ನೂ ಮದುವೆಮಾಡಿಕೊಂಡನು. ಇವರ ದೆಸೆ
ಯಿಂದ ಇಸಾಕನಿಗೂ ರೆಬೆಕ್ಕಳಿಗೂ ಮನೋವ್ಯಥೆ
ಯುಂಟಾಯಿತು.

ಯಾಕೋಬನು ತನ್ನ ಅಣ್ಣನಿಗೆ ಆಗಬೇಕಾದ ಆಶೀರ್ವಾದವನ್ನು
ಮೋಸದಿಂದ ಪಡಕೊಂಡದ್ದು.

2

ಇಸಾಕನಿಗೆ ಮುಪ್ಪಿನಿಂದ ಕಣ್ಣು ಕಾಣಲಾರದಷ್ಟು
ಮೊಬ್ಬಾಗಿರಲು ಅವನು ತನ್ನ ಹಿರೀಮಗನಾದ
ಏಸಾವನನ್ನು ಕರದು— ಮಗನೇ ಅನ್ನಲು ಏಸಾ
ವನು— ಇದ್ದೇನೆ ಅಂದನು. ಇಸಾಕನು ಅವನಿಗೆ—
ನಾನು ಮುದುಕನಾದೆನಷ್ಟೆ; ಯಾವಾಗ ಸಾಯು
ವೆನೋ ಗೊತ್ತಿಲ್ಲ; ಆದದರಿಂದ ನೀನು ಬಿಲ್ಲು ಬತ್ತ
ಳಿಕೆ ಮುಂತಾದ ಆಯುಧಗಳನ್ನು ತೆಗೆದುಕೊಂಡು
ಕಾಡಿಗೆ ಹೋಗಿ ಬೇಟೆಯಾಡಿ ಬೇಟೇ ಮಾಂಸದಿಂದ
ನನಗೆ ಇಷ್ಟವಾಗಿರುವ ರುಚಿಪದಾರ್ಥವನ್ನು ನನ್ನ
ಊಟಕ್ಕೆ ಸಿದ್ಧಪಡಿಸಿಕೊಡು; ಸಾವು ಬರುವದಕ್ಕಿಂತ
ಮುಂಚೆ ನಾನು ನಿನ್ನನ್ನು ಆಶೀರ್ವದಿಸುತ್ತೇನೆ ಎಂದು
ಹೇಳಿದನು. ಇಸಾಕನು ತನ್ನ ಮಗನಾದ ಏಸಾವ
ನಿಗೆ ಹೇಳಿದ ಮಾತು ರೆಬೆಕ್ಕಳ ಕಿವಿಗೆ ಬಿತ್ತು. ಏಸಾ
ವನು ಬೇಟೆಯಾಡುವದಕ್ಕೆ ಕಾಡಿಗೆ ಹೋಗಿದ್ದಾಗ
ರೆಬೆಕ್ಕಳು ತನ್ನ ಮಗನಾದ ಯಾಕೋಬನನ್ನು ಬೋ
ಧಿಸಿ— ನಿನ್ನ ತಂದೆಯು ನಿನ್ನಣ್ಣನಾದ ಏಸಾವನ
ಸಂಗಡ ಮಾತಾಡಿ— ನೀನು ಹೋಗಿ ಬೇಟೆಯಾಡಿ
ಬೇಟೇ ಮಾಂಸದಿಂದ ನನ್ನ ಊಟಕ್ಕೆ ರುಚಿಪದಾರ್ಥ
ವನ್ನು ಸಿದ್ಧಮಾಡು; ಸಾವು ಬರುವದಕ್ಕಿಂತ ಮುಂಚೆ
ನಾನು ನಿನ್ನನ್ನು ಯೆಹೋವನ ಸನ್ನಿಧಿಯಲ್ಲಿ ಆಶೀರ್ವ
ದಿಸುತ್ತೇನೆಂದು ಹೇಳುವದನ್ನು ಕೇಳಿದೆನು. ಆದದ
ರಿಂದ ಮಗನೇ, ನೀನು ನನ್ನ ಮಾತಿಗೆ ಕಿವಿಗೊಟ್ಟು
ನನ್ನಪ್ಪಣೆಯಂತೆ ಮಾಡು. ಆಡಿನ ಹಿಂಡಿಗೆ ಹೋಗಿ
ಎರಡು ಒಳ್ಳೇ ಆಡಿನ ಮರಿಗಳನ್ನು ಬೇಗ ತೆಗೆದು
ಕೊಂಡು ಬಾ; ಅವುಗಳಿಂದ ನಿನ್ನ ತಂದೆಗೆ ಇಷ್ಟವಾಗಿ
ರುವ ರುಚಿಪದಾರ್ಥವನ್ನು ನಾನೇ ಸಿದ್ಧಮಾಡು
ತ್ತೇನೆ; ನೀನು ಅದನ್ನು ಅವನ ಬಳಿಗೆ ತೆಗೆದು

1) ಏಸೆಕ್ ಅಂದರೆ ಜಗಳ. 2) ಸಿಟ್ನಾ ಅಂದರೆ ದ್ವೇಷ. 3) ರೆಹೋಬೋತ್ ಅಂದರೆ ವಿಶಾಲಸ್ಥಳ.

ಕೊಂಡು ಹೋಗಿ ಬಡಿಸಬೇಕು; ಹೀಗೆ ಮಾಡಿದರೆ
ಅವನು ಸಾಯುವದಕ್ಕಿಂತ ಮೊದಲು ನಿನ್ನನ್ನೇ
11 ಆಶೀರ್ವದಿಸುವನು ಅಂದಳು. ಅದಕ್ಕೆ ಯಾಕೋಬ
ನು—ನನ್ನ ಅಣ್ಣನ ಮೈ ಬಹಳ ರೋಮವುಳ್ಳದ್ದು,
12 ನನ್ನ ಮೈ ನುಣ್ಣಗದೆ; ಒಂದು ವೇಳೆ ತಂದೆಯು
ನನ್ನನ್ನು ಮುಟ್ಟಿ ನೋಡಿದರೆ ನಾನು ಅವನಿಗೆ ಗೇಲಿ
ಮಾಡುವವನಾಗಿ ತೋರಿಬಂದು ನನ್ನ ಮೇಲೆ ಶಾಪ
ವನ್ನು ಬರಮಾಡಿಕೊಳ್ಳುವೆನೇ ಹೊರತು ಆಶೀರ್ವಾ
13 ದವನ್ನು ಬರಮಾಡಿಕೊಳ್ಳುವದಿಲ್ಲ ಅನ್ನಲು ಅವನ
ತಾಯಿ—ಮಗನೇ, ಅವನು ನಿನಗೆ ಶಾಪಕೊಟ್ಟರೆ
ಆ ಶಾಪ ನನಗಿರಲಿ; ನೀನು ನನ್ನ ಮಾತನ್ನು ಕೇಳಿ
ಆ ಮರಿಗಳನ್ನು ತೆಗೆದುಕೊಂಡು ಬಾ ಎಂದು ಹೇಳ
14 ಲು ಅವನು ಹೋಗಿ ಅವುಗಳನ್ನು ತಂದು ತಾಯಿಗೆ
ಕೊಟ್ಟನು. ರೆಬೆಕ್ಕಳು ಅವನ ತಂದೆಗೆ ಇಷ್ಟವಾಗಿದ್ದ
15 ಸವಿಯೂಟವನ್ನು ಸಿದ್ಧಪಡಿಸಿದ ಮೇಲೆ ಮನೆಯಲ್ಲಿ
ತನ್ನ ವಶದಲ್ಲಿದ್ದ ಹಿರೀಮಗನಾದ ಏಸಾವನ ಶ್ರೇಷ್ಠ
ವಸ್ತ್ರಗಳನ್ನು ತೆಗೆದು ತನ್ನ ಕಿರೀ ಮಗನಾದ ಯಾ
16 ಕೋಬನಿಗೆ ಹೊದ್ದಿಸಿ ಆ ಆಡಿನ ಮರಿಗಳ ಚರ್ಮ
ಗಳನ್ನು ಅವನ ಕೈಗಳಿಗೂ ನುಣುಪಾದ ಕೊರಳಿಗೂ
17 ಸುತ್ತಿ ತಾನು ಸಿದ್ಧಮಾಡಿದ್ದ ರುಚಿಪದಾರ್ಥವನ್ನೂ
ರೊಟ್ಟಿಯನ್ನೂ ತನ್ನ ಮಗನಾದ ಯಾಕೋಬನ
18 ಕೈಗೆ ಕೊಟ್ಟಳು. ಅವನು ತಂದೆಯ ಬಳಿಗೆ ಹೋಗಿ—
ಅಪ್ಪಾ ಎಂದು ಹೇಳಲು ತಂದೆಯು—ಏನು ಮಗನೇ,
19 ನೀನು ಯಾರು ಎಂದು ಕೇಳಿದನು. ಯಾಕೋಬನು
ಅವನಿಗೆ—ನಾನು ನಿನ್ನ ಹಿರೀ ಮಗನಾದ ಏಸಾ
ವನು; ನಿನ್ನ ಅಪ್ಪಣೆಯಂತೆ ಮಾಡಿಕೊಂಡು ಬಂದಿ
ದ್ದೇನೆ. ಎದ್ದು ಕೂತುಕೊಂಡು ನಾನು ತಂದಿರುವ
ಬೇಟೇ ಮಾಂಸವನ್ನು ಊಟಮಾಡಿ ನನ್ನನ್ನು ಆಶೀ
20 ರ್ವದಿಸು ಎಂದು ಹೇಳಲು ಇಸಾಕನು—ಏನು ಮ
ಗನೇ, ಇಷ್ಟು ಬೇಗ ಹೇಗೆ ಸಿಕ್ಕಿತು ಎಂದು ಕೇಳಿ
ದ್ದಕ್ಕೆ ಅವನು—ನಿನ್ನ ದೇವರಾದ ಯೆಹೋವನು
ಅದನ್ನು ನನ್ನೆದುರಿಗೆ ಬರಮಾಡಿದನು ಅಂದನು.
21 ಇಸಾಕನು ಅವನಿಗೆ—ಕಂದಾ, ನನ್ನ ಬಳಿಗೆ ಬಾ;
ನೀನು ನನ್ನ ಮಗನಾದ ಏಸಾವನೋ ಅಲ್ಲವೋ
ನಿನ್ನನ್ನು ಮುಟ್ಟಿ ತಿಳುಕೊಳ್ಳಬೇಕು ಎಂದು ಹೇಳಿ
22 ದನು. ಯಾಕೋಬನು ತನ್ನ ತಂದೆಯ ಹತ್ತರಕ್ಕೆ
ಬಂದಾಗ ಇಸಾಕನು ಅವನನ್ನು ಮುಟ್ಟಿ ನೋಡಿ—
ಸ್ವರವೇನೋ ಯಾಕೋಬನ ಸ್ವರ, ಕೈ ಏಸಾವನ
23 ಕೈ ಅಂದುಕೊಂಡನು. ಯಾಕೋಬನ ಕೈಗಳು
ಅವನ ಅಣ್ಣನ ಕೈಗಳಂತೆ ರೋಮವುಳ್ಳವುಗಳಾಗಿದ್ದ
ದರಿಂದ ಇಸಾಕನು ಇವನ ಗುರುತನ್ನು ತಿಳಿಯ
24 ಲಾರದೆ ಅವನನ್ನು ಆಶೀರ್ವದಿಸಿದನು. ಅವನು—
ನೀನು ನಿಜವಾಗಿ ನನ್ನ ಮಗನಾದ ಏಸಾವನೋ
ಎಂದು ಕೇಳಿದ್ದಕ್ಕೆ ಯಾಕೋಬನು—ಹೌದು ಅನ್ನಲು
25 ಇಸಾಕನು—ಆ ಪದಾರ್ಥವನ್ನು ಹತ್ತರಕ್ಕೆ ತೆಗೆದು
ಕೊಂಡು ಬಾ; ನೀನು ತಂದ ಬೇಟೇ ಮಾಂಸವನ್ನು
ನಾನು ಊಟಮಾಡಿದ ಮೇಲೆ ನಿನ್ನನ್ನು ಆಶೀರ್ವ
ದಿಸುವೆನೆಂದು ಹೇಳಿದನು. ಯಾಕೋಬನು ಅದನ್ನು

ಅವನ ಹತ್ತರಕ್ಕೆ ತರಲು ಅವನು ತಿಂದನು; ದ್ರಾಕ್ಷಾ
ರಸವನ್ನು ಕೊಡಲು ಕುಡಿದನು. ಆ ಮೇಲೆ ಅವನ 26
ತಂದೆಯಾದ ಇಸಾಕನು ಅವನಿಗೆ—ಮಗನೇ, ನೀನು
ಹತ್ತರ ಬಂದು ನನಗೆ ಮುದ್ದಿಡು ಎಂದು ಹೇಳಲು
ಅವನು ಹತ್ತರ ಬಂದು ಅವನಿಗೆ ಮುದ್ದಿಟ್ಟನು. 27
ಇಸಾಕನು ಅವನ ವಸ್ತ್ರಗಳ ವಾಸನೆಯನ್ನು ನೋಡಿ
ದಾಗ ಅವನನ್ನು ಆಶೀರ್ವದಿಸಿ—

ಆಹಾ, ನನ್ನ ಮಗನ ಸುವಾಸನೆಯು ಯೆಹೋ
ವನು ಆಶೀರ್ವದಿಸಿದ ಹೊಲದ ಸುವಾಸನೆ
ಯಂತಿರುವದು. ದೇವರು ನಿನಗೆ ಆಕಾಶದ 28
ಮಂಜನ್ನೂ ಸಾರವುಳ್ಳ ಭೂಮಿಯನ್ನೂ ಕೊಟ್ಟು
ದವಸಧಾನ್ಯಗಳನ್ನೂ ದ್ರಾಕ್ಷಾರಸವನ್ನೂ ಹೇರಳ
ವಾಗಿ ಅನುಗ್ರಹಿಸಲಿ.

ಪರಜನಗಳು ನಿನ್ನನ್ನು ಸೇವಿಸಲಿ; ಪರಕುಲಗಳು 29
ನಿನಗೆ ಅಡ್ಡಬೀಳಲಿ. ನಿನ್ನ ಅಣ್ಣತಮ್ಮಂದಿರಲ್ಲಿ
ನೀನು ದೊರೆಯಾಗು, ನಿನ್ನ ತಾಯಿಯ ಮಕ್ಕ
ಳು ನಿನಗೆ ಅಡ್ಡಬೀಳಲಿ.

ನಿನ್ನನ್ನು ಶಪಿಸುವವರಿಗೆ ಶಾಪವೂ ನಿನ್ನನ್ನು ಆಶೀ
ರ್ವದಿಸುವವರಿಗೆ ಆಶೀರ್ವಾದವೂ ಉಂಟಾಗಲಿ

ಅಂದನು. ಇಸಾಕನು ಅವನನ್ನು ಆಶೀರ್ವದಿಸಿದ 30
ಮೇಲೆ ಯಾಕೋಬನು ತನ್ನ ತಂದೆಯ ಬಳಿಯಿಂದ
ಹೊರಟುಹೋದ ಕ್ಷಣವೇ ಅವನಣ್ಣನಾದ ಏಸಾವನು
ಬೇಟೆಯಿಂದ ಬಂದನು. ಅವನೂ ಸವಿಯೂಟವನ್ನು 31
ಸಿದ್ಧಮಾಡಿ ತನ್ನ ತಂದೆಯ ಬಳಿಗೆ ತಂದು ಅವನಿಗೆ—
ಅಪ್ಪಾ, ನೀನು ಎದ್ದು ನಿನ್ನ ಮಗನಾದ ನಾನು ಬೇಟೆ
ಯಿಂದ ತಂದಿರುವ ಮಾಂಸವನ್ನು ಊಟಮಾಡಿ
ನನ್ನನ್ನು ಆಶೀರ್ವದಿಸು ಎಂದು ಹೇಳಿದನು. ಅವನ 32
ತಂದೆಯಾದ ಇಸಾಕನು—ನೀನು ಯಾರು ಎಂದು
ಅವನನ್ನು ಕೇಳಲು ಅವನು—ನಾನು ನಿನ್ನ ಚೊಚ್ಚಲ
ಮಗನಾದ ಏಸಾವನು ಅಂದನು. ಅದಕ್ಕೆ ಇಸಾ 33
ಕನು ಬಹಳವಾಗಿ ಗಡಗಡನೆ ನಡುಗುತ್ತಾ—ಯಾ
ರೋ ಬೇರೊಬ್ಬನು ಬೇಟೆ ಮಾಂಸವನ್ನು ತಂದು
ನನಗೆ ಕೊಟ್ಟುಹೋದನಲ್ಲಾ. ನೀನು ಬರುವದ
ಕ್ಕಿಂತ ಮುಂಚೆ ಅವನು ತಂದದ್ದರಲ್ಲಿ ನಾನು ಊಟ
ಮಾಡಿ ಅವನನ್ನೇ ಆಶೀರ್ವದಿಸಿದೆನು; ಅವನಿಗೆ
ಮಾಡಿದ ಆಶೀರ್ವಾದ ತಪ್ಪಲಾರದು ಅಂದನು.
ಏಸಾವನು ತನ್ನ ತಂದೆಯ ಮಾತುಗಳನ್ನು ಕೇಳಿ 34
ದಾಗ ದುಃಖಾಕ್ರಾಂತನಾಗಿ ಬಹಳ ಅಳುತ್ತಾ—ಅಪ್ಪಾ
ತಂದೆಯೇ, ನನ್ನನ್ನು, ನನ್ನನ್ನು ಸಹ ಆಶೀರ್ವದಿಸು
ಎಂದು ಬೇಡಿಕೊಳ್ಳಲು ಇಸಾಕನು—ನಿನ್ನ ತಮ್ಮನು 35
ಮೋಸದಿಂದ ಬಂದು ನಿನಗಾಗಬೇಕಾಗಿದ್ದ ಆಶೀರ್ವಾ
ದವನ್ನು ಪಡಕೊಂಡನು ಅಂದನು. ಅದಕ್ಕೆ ಏಸಾ 36
ವನು—1)ಯಾಕೋಬನೆಂಬ ಹೆಸರು ಅವನಿಗೆ ಉಂಟಾ
ದದ್ದು ನ್ಯಾಯವಲ್ಲವೋ? ಎರಡು ಸಾರಿ ನನ್ನನ್ನು
ವಂಚಿಸಿದ್ದಾನೆ. ಹಿಂದೆ ನನ್ನ ಚೊಚ್ಚಲತನದ ಹಕ್ಕನ್ನು
ಅಪಹರಿಸಿದನು; ಈಗ ಬಂದು ನನಗಾಗಬೇಕಾಗಿದ್ದ
ಆಶೀರ್ವಾದವನ್ನೂ ತೆಗೆದುಕೊಂಡಿದ್ದಾನೆ ಎಂದು
ಹೇಳಿ ತನ್ನ ತಂದೆಯನ್ನು—ನನಗೋಸ್ಕರವೂ ನಿನ್ನಲ್ಲಿ

1) ಯಾಕೋಬನು ಅಂದರೆ ವಂಚಕ.

37 ಆಶೀರ್ವಾದವಿಲ್ಲವೋ ಎಂದು ಕೇಳಲು ಇಸಾಕನು—
ನನ್ನ ಮಗನೇ, ಅವನನ್ನು ನಿನ್ನ ದೊರೆಯನ್ನಾಗಿ
ನೇಮಿಸಿದ್ದೇನೆ; ಅವನ ಅಣ್ಣತಮ್ಮಂದಿರನ್ನು ಅವನಿಗೆ
ಸೇವಕರನ್ನಾಗಿ ಕೊಟ್ಟಿದ್ದೇನೆ; ದವಸಧಾನ್ಯಗಳನ್ನೂ
ದ್ರಾಕ್ಷಾರಸವನ್ನೂ ಅವನ ಪೋಷಣೆಗಾಗಿ ಕೊಟ್ಟಿ
ದ್ದೇನೆ ನೋಡು. ಹೀಗಿರುವಲ್ಲಿ ನಾನು ನಿನಗೋಸ್ಕರ
38 ಏನು ಮಾಡಲಿ ಅಂದನು. ಏಸಾವನು ಅವನಿಗೆ—
ಅಪ್ಪಾ, ತಂದೆಯೇ, ನಿನ್ನಲ್ಲಿ ಆ ಒಂದೇ ಆಶೀರ್ವಾದ
ವಿತ್ತೋ? ಅಪ್ಪಾ, ನನ್ನನ್ನು, ನನ್ನನ್ನೂ ಆಶೀರ್ವದಿಸ
39 ಬೇಕು ಎಂದು ಹೇಳಿ ಗೋಳಾಡುತ್ತಾ ಅಳಲು ಅವನ
ತಂದೆಯಾದ ಇಸಾಕನು ಅವನಿಗೆ—

ಸಾರವುಳ್ಳ ಭೂಮಿಯೂ ಮೇಲಿನಿಂದ ಬೀಳುವ
ಆಕಾಶದ ಮಂಜೂ ಇರುವ ಸ್ಥಳದಲ್ಲಿ ನಿನ್ನ
40 ನಿವಾಸವಿರುವದು. ನೀನು ಕತ್ತಿಯಿಂದಲೇ ಜೀವ
ನಮಾಡುವಿ.
ನಿನ್ನ ತಮ್ಮನಿಗೆ ಸೇವಕನಾಗಿರುವಿ. ಆದರೂ ನೀನು
ಕೊಸರಿಕೊಳ್ಳುವಾಗ ಅವನು ನಿನ್ನ ಹೆಗಲಿನ ಮೇ
ಲೆ ಹಾಕಿರುವ ನೊಗವನ್ನು ಮುರಿದುಹಾಕುವಿ

ಎಂದು ಹೇಳಿದನು.
41 ತಂದೆಯು ಯಾಕೋಬನಿಗೆ ಮಾಡಿದ ಆಶೀರ್ವಾ
ದದ ನಿಮಿತ್ತ ಏಸಾವನು ಯಾಕೋಬನನ್ನು ಹಗೆ ಮಾಡಿ
ತನ್ನ ಮನಸ್ಸಿನೊಳಗೆ— ತಂದೆಗೋಸ್ಕರ ದುಃಖಿ
ಸುವ ಕಾಲ ಸಮೀಪಿಸಿತು; ಆಗ ನನ್ನ ತಮ್ಮನಾದ
ಯಾಕೋಬನನ್ನು ಕೊಲ್ಲುವೆನು ಅಂದುಕೊಂಡನು.
42 ಹಿರೀ ಮಗನಾದ ಏಸಾವನು ಹೇಳಿದ ಮಾತು ರೆಬೆಕ್ಕ
ಳಿಗೆ ತಿಳಿದುಬಂದಾಗ ಆಕೆಯು ತನ್ನ ಕಿರೀ ಮಗನಾದ
ಯಾಕೋಬನನ್ನು ಕರೆದು ಅವನಿಗೆ—ನೋಡು, ನಿನ್ನ
ಅಣ್ಣನಾದ ಏಸಾವನು ನಿನ್ನನ್ನು ಕೊಲ್ಲಬೇಕೆಂದು
ಯೋಚಿಸಿ ತನ್ನ ಹೊಟ್ಟೆಯ ಉರಿಯನ್ನು ಆರಿಸಿ
43 ಕೊಳ್ಳುತ್ತಾನೆ. ಆದದರಿಂದ ಮಗನೇ, ನನ್ನ ಮಾ
ತನ್ನು ಕೇಳು; ನೀನು ಎದ್ದು ಖಾರಾನ್ ಊರಿನಲ್ಲಿ
ರುವ ನನ್ನಣ್ಣನಾದ ಲಾಬಾನನ ಬಳಿಗೆ ಓಡಿಹೋಗಿ
44 ಕೆಲವು ಕಾಲ, ಅಂದರೆ ನಿನ್ನಣ್ಣನ ಕೋಪವು ಶಮನ
45 ವಾಗುವ ವರೆಗೂ, ಅವನ ಬಳಿಯಲ್ಲಿರು. ನಿನ್ನಣ್ಣನು
ನೀನು ಮಾಡಿರುವದನ್ನು ಮರೆತು ತನ್ನ ಕೋಪವನ್ನು
ಬಿಟ್ಟಾಗ ನಾನು ನಿನ್ನನ್ನು ಅಲ್ಲಿಂದ ಕರಸುತ್ತೇನೆ.
ನಾನು ಒಂದೇ ದಿನದಲ್ಲಿ ನಿಮ್ಮಿಬ್ಬರನ್ನೂ ಕಳಕೊಳ್ಳು
ವದು ಯಾತಕ್ಕೆ ಎಂದು ಹೇಳಿದಳು.

ಯಾಕೋಬನು ಖಾರಾನಿನಲ್ಲಿರುವ ತನ್ನ ಬಂಧುಗಳಲ್ಲಿ
ಹೆಣ್ಣು ತೆಗೆದುಕೊಳ್ಳುವದಕ್ಕೆ ಹೊರಟದ್ದು.

46 ರೆಬೆಕ್ಕಳು ಇಸಾಕನಿಗೆ—ಹಿತ್ತಿಯರಾದ ಈ ಸ್ತ್ರೀ
ಯರ ದೆಸೆಯಿಂದ ನನಗೆ ಬೇಸರವಾಯಿತು. ಯಾ
ಕೋಬನೂ ಈ ದೇಶದವರಲ್ಲಿ ಹೆಣ್ಣನ್ನು ಆದುಕೊಂಡು
ಇಂಥಾ ಹಿತ್ತಿಯಸ್ತ್ರೀಯನ್ನು ಮದುವೆಮಾಡಿಕೊಂ
ಡರೆ ನಾನು ಇನ್ನೂ ಬದುಕುವದರಿಂದ ಪ್ರಯೋಜನ
28 ವೇನು ಎಂದು ಹೇಳಿದಳು. ಆಗ ಇಸಾಕನು
ಯಾಕೋಬನನ್ನು ಕರೆದು ಅವನಿಗೆ— ನೀನು
ಕಾನಾನ್ಯರ ಹೆಣ್ಣನ್ನು ಮದುವೆಮಾಡಿಕೊಳ್ಳ ಬೇಡ;
ಪದ್ದನ್‌ಅರಾಮ್ ದೇಶದಲ್ಲಿರುವ ನಿನ್ನ ತಾಯಿಯ
ತಂದೆಯಾದ ಬೆತೂವೇಲನ ಮನೆಗೆ ಹೊರಟುಹೋಗಿ
ಅಲ್ಲಿ ನಿನ್ನ ಸೋದರಮಾವನಾದ ಲಾಬಾನನ ಹೆಣ್ಣು
ಮಕ್ಕಳಲ್ಲಿ ಒಬ್ಬಳನ್ನು ಮದುವೆಮಾಡಿಕೋ ಎಂದು
ಅಪ್ಪಣೆಕೊಟ್ಟು—ಸರ್ವಶಕ್ತನಾದ ದೇವರು ನಿನ್ನನ್ನು
ಆಶೀರ್ವದಿಸಿ ನಿನಗೆ ಬಹಳ ಸಂತತಿಯನ್ನು ಕೊಟ್ಟು
ನಿನ್ನಿಂದ ಅನೇಕ ಜನಾಂಗಗಳು ಹುಟ್ಟುವಂತೆ ಅನು
ಗ್ರಹಿಸಲಿ; ಆತನು ಅಬ್ರಹಾಮನಿಗೆ ಕೊಟ್ಟ ಆಶೀ
ರ್ವಾದವನ್ನು ನಿನಗೂ ನಿನ್ನ ಸಂತತಿಗೂ ಕೊಟ್ಟು
ತಾನು ಅಬ್ರಹಾಮನಿಗೆ ವಾಗ್ದಾನ ಮಾಡಿದ್ದೂ ನೀನು
ಪ್ರವಾಸವಾಗಿರುವಂಥದೂ ಆಗಿರುವ ಈ ದೇಶವನ್ನು
ನೀನು ಬಾಧ್ಯನಾಗಿ ಹೊಂದುವಂತೆ ಮಾಡಲಿ ಎಂದು
ಹೇಳಿ ಆಶೀರ್ವದಿಸಿ ಕಳುಹಿಸಿಬಿಟ್ಟನು. ಯಾಕೋ
ಬನು ಪದ್ದನ್‌ಅರಾಮಿಗೆ ಹೊರಟು ಅರಾಮ್ಯನಾದ
ಬೆತೂವೇಲನ ಮಗನಾಗಿಯೂ ಯಾಕೋಬನಿಗೂ
ಏಸಾವನಿಗೂ ತಾಯಿಯಾದ ರೆಬೆಕ್ಕಳ ಅಣ್ಣನಾಗಿ
ಯೂ ಇದ್ದ ಲಾಬಾನನ ಬಳಿಗೆ ಹೋದನು.
ಇಸಾಕನು ಯಾಕೋಬನನ್ನು ಆಶೀರ್ವದಿಸಿ ಪ
ದ್ದನ್‌ಅರಾಮಿನಲ್ಲಿ ಹೆಣ್ಣನ್ನು ತೆಗೆದುಕೊಳ್ಳುವದಕ್ಕೆ
ಕಳುಹಿಸಿದ್ದನ್ನೂ ಅವನು ಯಾಕೋಬನನ್ನು ಆಶೀ
ರ್ವದಿಸುವಾಗ ಅವನಿಗೆ—ನೀನು ಕಾನಾನ್ಯರ ಹೆಣ್ಣ
ನ್ನು ತೆಗೆದುಕೊಳ್ಳಬೇಡವೆಂದು ಅಪ್ಪಣೆಕೊಟ್ಟದ್ದನ್ನೂ
ಯಾಕೋಬನು ತನ್ನ ತಂದೆತಾಯಿಗಳು ಹೇಳಿದಂತೆ
ಪದ್ದನ್‌ಅರಾಮಿಗೆ ಹೋದದ್ದನ್ನೂ ಏಸಾವನು ನೋಡಿ
ದಾಗ ಕಾನಾನ್ಯರ ಹೆಣ್ಣುಮಕ್ಕಳು ತನ್ನ ತಂದೆಯಾದ
ಇಸಾಕನಿಗೆ ಇಷ್ಟವಿಲ್ಲವೆಂದು ತಿಳುಕೊಂಡು ಇಷ್ಮಾಯೇ
ಲನ ಬಳಿಗೆ ಹೋಗಿ ಅಬ್ರಹಾಮನ ಮಗನಾದ ಇಷ್ಮಾ
ಯೇಲನ ಮಗಳೂ ನೆಬಾಯೋತನ ತಂಗಿಯೂ
ಆಗಿದ್ದ ಮಹಲತ್ ಎಂಬಾಕೆಯನ್ನು ಮದುವೆಮಾಡಿ
ಕೊಂಡು ತನ್ನ ಹೆಂಡರಲ್ಲಿ ಸೇರಿಸಿದನು.

ಯಾಕೋಬನು ಬೇತೇಲಿನಲ್ಲಿ ಕನಸುಕಂಡು
ಹರಕೆಮಾಡಿಕೊಂಡದ್ದು.

ಯಾಕೋಬನು ಖಾರಾನಿಗೆ ಹೋಗಬೇಕೆಂದು
ಬೇರ್ಷೆಬದಿಂದ ಹೊರಟನು. ಅವನು ಹೋಗುತ್ತಿರಲು
ಒಂದು ಸ್ಥಳಕ್ಕೆ ಸೇರಿದಾಗ ಹೊತ್ತು ಮುಣುಗಿದ್ದ
ರಿಂದ ಆ ರಾತ್ರಿ ಅಲ್ಲಿಯೇ ಇಳಿದುಕೊಂಡನು.
ಅವನು ಅಲ್ಲಿದ್ದ ಕಲ್ಲುಗಳಲ್ಲಿ ಒಂದು ಕಲ್ಲನ್ನು
ತಲೆದಿಂಬಾಗಿ ಇಟ್ಟುಕೊಂಡು ಆ ಸ್ಥಳದಲ್ಲಿ ಮಲಗಿ
ಕೊಂಡನು. ಆ ರಾತ್ರಿ ಅವನು ಕನಸುಕಂಡನು.
ಆ ಕನಸಿನಲ್ಲಿ ಒಂದು ನಿಚ್ಚಣಿಗೆ ನೆಲದ ಮೇಲೆ
ನಿಂತಿತ್ತು; ಅದರ ತುದಿ ಆಕಾಶವನ್ನು ಮುಟ್ಟಿತ್ತು;
ಅದರ ಮೇಲೆ ದೇವದೂತರು ಹತ್ತುತ್ತಾ ಇಳಿಯುತ್ತಾ
ಇದ್ದರು. ಇದಲ್ಲದೆ ಯೆಹೋವನು ಅವನ ಬಳಿ
ಯಲ್ಲಿ ನಿಂತು—ನಾನು ನಿನ್ನ ತಂದೆಯಾದ ಅಬ್ರ
ಹಾಮನ ದೇವರೂ ಇಸಾಕನ ದೇವರೂ ಆಗಿರುವ
ಯೆಹೋವನು. ನೀನು ಮಲಗಿಕೊಂಡಿರುವ ಈ
ದೇಶವನ್ನು ನಿನಗೂ ನಿನ್ನ ಸಂತತಿಗೂ ಕೊಡುತ್ತೇನೆ.
ನಿನ್ನ ಸಂತತಿಯು ಭೂಮಿಯ ಧೂಳಿನಂತೆ ಅಸಂಖ್ಯ

ವಾಗುವದು; ನೀನು ಪೂರ್ವಪಶ್ಚಿಮದಕ್ಷಿಣೋತ್ತರ
ದಿಕ್ಕುಗಳಿಗೆ ಹರಡಿಕೊಳ್ಳುವಿ. 1)ನಿನ್ನ ಮೂಲಕವೂ
ನಿನ್ನ ಸಂತತಿಯ ಮೂಲಕವೂ ಭೂಮಿಯ ಎಲ್ಲಾ
15 ಕುಲದವರಿಗೂ ಆಶೀರ್ವಾದವುಂಟಾಗುವದು. ಇದ
ಲ್ಲದೆ ನಾನು ನಿನ್ನ ಸಂಗಡ ಇದ್ದು ನೀನು ಹೋಗುವ
ಎಲ್ಲಾ ಸ್ಥಳಗಳಲ್ಲಿ ನಿನ್ನನ್ನು ಕಾಪಾಡಿ ತಿರಿಗಿ ಈ
ದೇಶಕ್ಕೆ ಬರಮಾಡುತ್ತೇನೆ. ನಾನು ನಿನಗೆ ಹೇಳಿದ್ದ
ನ್ನೆಲ್ಲಾ ನೆರವೇರಿಸಿದ ಹೊರತು ಬಿಡುವದಿಲ್ಲ ಅಂದನು.
16 ಯಾಕೋಬನು ನಿದ್ದೆಯಿಂದ ಎಚ್ಚತ್ತು— ನಿಜ
ವಾಗಿ ಯೆಹೋವನು ಈ ಸ್ಥಳದಲ್ಲಿ ಇದ್ದಾನೆ; ಅದು
17 ನನಗೆ ತಿಳಿಯದೆ ಹೋಯಿತು ಅಂದುಕೊಂಡು ಭಯ
ಪಟ್ಟವನಾಗಿ— ಈ ಸ್ಥಳವು ಎಷ್ಟೋ ಭಯಂಕರವಾದ
ದ್ದು; ಇದು ದೇವರ ಮನೆಯೇ ಹೊರತು ಬೇರೆಯಲ್ಲ;
ಇದು ಪರಲೋಕದ ಬಾಗಿಲು ಎಂದು ಹೇಳಿದನು.
18 ಹೊತ್ತಾರೆ ಅವನು ಎದ್ದಾಗ ತಾನು ತಲೆದಿಂಬಿಗೆ
ಇಟ್ಟುಕೊಂಡಿದ್ದ ಕಲ್ಲನ್ನು ಕಂಬವಾಗಿ ನಿಲ್ಲಿಸಿ ಅದರ
19 ತುದಿಯಲ್ಲಿ ಎಣ್ಣೇ ಹೊಯಿದನು. ಆ ಸ್ಥಳಕ್ಕೆ
2)ಬೇತೇಲ್ ಎಂದು ಹೆಸರಿಟ್ಟನು. ಅಲ್ಲಿರುವ
ಊರಿಗೆ ಮೊದಲು ಲೂಜ್ ಎಂದು ಹೆಸರಿತ್ತು.
20 ಯಾಕೋಬನು ಅಲ್ಲಿ— ದೇವರು ನನ್ನ ಸಂಗಡ
ಇದ್ದು ನಾನು ಹೋಗುವ ಈ ಮಾರ್ಗದಲ್ಲಿ ನನ್ನನ್ನು
ಕಾಪಾಡಿ ತಿನ್ನುವದಕ್ಕೆ ಆಹಾರವನ್ನೂ ಉಡುವದಕ್ಕೆ
21 ವಸ್ತ್ರವನ್ನೂ ಕೊಟ್ಟು ತಿರಿಗಿ ನನ್ನನ್ನು ತಂದೆಯ
ಮನೆಗೆ ಸುರಕ್ಷಿತವಾಗಿ ಬರಮಾಡಿದರೆ ಯೆಹೋ
22 ವನೇ ನನ್ನ ದೇವರಾಗಿರುವನು. ಮತ್ತು ನಾನು
ಕಂಬವಾಗಿ ನಿಲ್ಲಿಸಿರುವ ಈ ಕಲ್ಲು ದೇವರ ಮನೆ
ಯಾಗುವದು. ಇದಲ್ಲದೆ ನಿನ್ನಿಂದ ನನಗೆ ಬರುವ
ಎಲ್ಲಾ ಆಸ್ತಿಯಲ್ಲಿ ಹತ್ತರಲ್ಲೊಂದು ಪಾಲನ್ನು
ನಿನಗೆ ಸಮರ್ಪಿಸುವೆನೆಂಬದಾಗಿ ಮಾತುಕೊಡು
ತ್ತೇನೆ ಎಂದು ಹರಕೆಮಾಡಿಕೊಂಡನು.

ಯಾಕೋಬನು ಹದಿನಾಲ್ಕು ವರುಷ ಲಾಬಾನನ ಸೇವೆಮಾಡಿ
ಅವನ ಇಬ್ಬರು ಹೆಣ್ಣುಮಕ್ಕಳನ್ನು ಮದುವೆಮಾಡಿಕೊಂಡದ್ದು.

29 ಆ ಮೇಲೆ ಯಾಕೋಬನು ದಾರಿ ಹಿಡಿದು ಮೂ
2 ಡಲ ದೇಶದವರ ಸೀಮೆಗೆ ಬಂದನು. ಅಲ್ಲಿಗೆ
ಬಂದಾಗ ಅಡವಿಯೊಳಗೆ ಬಾವಿಯನ್ನು ಕಂಡನು.
ಬಾವಿಯ ಹತ್ತರ ಮೂರು ಕುರಿಹಿಂಡುಗಳು ಮಲ
ಗಿದ್ದವು. ಕುರಿಗಳನ್ನು ನೀರು ಕುಡಿಸುವದಕ್ಕಾಗಿ
ಆ ಬಾವಿಗೆ ಹೊಡಕೊಂಡು ಹೋಗುವ ಪದ್ಧತಿ
ಯಿತ್ತು. ಬಾವಿಯ ಮೇಲೆ ಮುಚ್ಚಿದ್ದ ಕಲ್ಲು
3 ದೊಡ್ಡದಾಗಿತ್ತು. ಹಿಂಡುಗಳೆಲ್ಲಾ ಅಲ್ಲಿ ಕೂಡಿದಾಗ
ಕಾಯುವವರು ಬಾವಿಯ ಮೇಲೆ ಮುಚ್ಚಿದ್ದ ಕಲ್ಲನ್ನು
ಸರಿಸಿ ಕುರಿಗಳಿಗೆ ನೀರು ಕುಡಿಸಿ ತಿರಿಗಿ ಕಲ್ಲನ್ನು
4 ಬಾವಿಯ ಮೇಲೆ ಮುಚ್ಚುವರು. ಯಾಕೋಬನು
ಅವರಿಗೆ— ಅಣ್ಣಂದಿರಾ, ನೀವು ಯಾವ ಊರಿನವರು
ಎಂದು ಕೇಳಲು— ನಾವು ಖಾರಾನ್ ಊರಿನವರು
ಅಂದರು. ಅವನು ಅವರನ್ನು— ನಾಹೋರನ ಮಗ 5
ನಾದ ಲಾಬಾನನನ್ನು ಬಲ್ಲಿರಾ ಎಂದು ಕೇಳಿದ್ದಕ್ಕೆ—
ಬಲ್ಲೆವು ಅಂದರು. ಅವನಿಗೆ ಕ್ಷೇಮವೋ ಎಂದು 6
ಕೇಳಲು ಅವರು— ಕ್ಷೇಮ; ಅಗೋ, ಅವನ ಮಗ
ಳಾದ ರಾಹೇಲಳು ಕುರಿಗಳ ಸಂಗಡ ಬರುತ್ತಾಳೆ
ಅಂದರು. ಯಾಕೋಬನು— ಇನ್ನೂ ಬಹಳ ಹೊತ್ತು 7
ಇದೆ; ಕುರಿಗಳನ್ನು ಕೂಡಿಸುವ ಸಮಯವಾಗಿಲ್ಲ;
ನೀರು ಕುಡಿಸಿ ಅವುಗಳನ್ನು ಮೇಯಿಸಿರಿ ಅನ್ನಲು
ಅವರು— ಹಿಂಡುಗಳೆಲ್ಲಾ ಕೂಡಿ ಬಂದಾಗ ಕಾಯು 8
ವವರು ಬಾವಿಯ ಮೇಲೆ ಮುಚ್ಚಿರುವ ಕಲ್ಲನ್ನು ತೆಗೆ
ಯುವ ತನಕ ಕುಡಿಸಕೂಡದು; ಅನಂತರ ಕುರಿ
ಗಳಿಗೆ ನೀರು ಕುಡಿಸುತ್ತೇವೆ ಅಂದರು. ಅವನು 9
ಅವರೊಂದಿಗೆ ಮಾತಾಡುತ್ತಿರುವಾಗಲೇ ರಾಹೇಲಳು
ತನ್ನ ತಂದೆಯ ಕುರಿಗಳನ್ನು ಹೊಡಕೊಂಡು
ಬಂದಳು; ಆಕೆಯೇ ಅವುಗಳನ್ನು ಮೇಯಿಸುವವ
ಳಾಗಿದ್ದಳು. ಯಾಕೋಬನು ತನ್ನ ಸೋದರಮಾವ 10
ನಾದ ಲಾಬಾನನ ಮಗಳಾಗಿರುವ ರಾಹೇಲಳನ್ನೂ
ತನ್ನ ಸೋದರಮಾವನ ಕುರಿಗಳನ್ನೂ ಕಂಡಾಗ
ಬಾವಿಯ ಹತ್ತರಕ್ಕೆ ಹೋಗಿ ಅದರ ಮೇಲೆ ಮುಚ್ಚಿದ್ದ
ಕಲ್ಲನ್ನು ಸರಿಸಿ ತನ್ನ ಸೋದರಮಾವನ ಕುರಿಗಳಿಗೆ
ನೀರು ಕುಡಿಸಿದನು. ಅವನು ರಾಹೇಲಳಿಗೆ 11
ಮುದ್ದಿಟ್ಟು ಸ್ವರವೆತ್ತಿ ಕಣ್ಣೀರುಸುರಿಸಿ ಆಕೆಗೆ—
ನಾನು ನಿನ್ನ ತಂದೆಗೆ ಸೋದರಳಿಯನೂ ರೆಬೆಕ್ಕಳ 12
ಮಗನೂ ಆಗಿದ್ದೇನೆ ಎಂದು ಹೇಳಿದಾಗ ರಾಹೇಲಳು
ಓಡಿಹೋಗಿ ಆ ಮಾತನ್ನು ತನ್ನ ತಂದೆಗೆ ತಿಳಿಸಿದಳು.
ಲಾಬಾನನು ತನ್ನ ಸೋದರಳಿಯನು ಬಂದ ವರ್ತ 13
ಮಾನವನ್ನು ಕೇಳಿದಾಗ ಅವನನ್ನು ಎದುರುಗೊಳ್ಳು
ವದಕ್ಕೆ ಓಡಿಬಂದು ಅಪ್ಪಿಕೊಂಡು ಮುದ್ದಿಟ್ಟು ತನ್ನ
ಮನೆಗೆ ಕರಕೊಂಡು ಬಂದನು. ಯಾಕೋಬನು
ಲಾಬಾನನಿಗೆ ಎಲ್ಲಾ ಸಂಗತಿಗಳನ್ನು ತಿಳಿಸಲು
ಲಾಬಾನನು ಅವನಿಗೆ— ನಿಜವಾಗಿ ನೀನು ನನ್ನ ರಕ್ತ 14
ಸಂಬಂಧಿಯಾಗಿದ್ದೀ ಎಂದು ಹೇಳಿದನು. ಅವನು
ಒಂದು ತಿಂಗಳಿನ ವರೆಗೂ ಲಾಬಾನನ ಬಳಿಯಲ್ಲಿ
ವಾಸಮಾಡಿದನು.
ಆ ಮೇಲೆ ಲಾಬಾನನು ಅವನನ್ನು— ನೀನು 15
ನನ್ನನ್ನು ಸಂಬಂಧಿಯೆಂದು ಸುಮ್ಮನೆ ಸೇವಿಸುವದು
ನ್ಯಾಯವೋ? ನಿನ್ನ ಕೆಲಸಕ್ಕಾಗಿ ನಾನು ನಿನಗೆ
ಏನು ಕೊಡಲಿ ಎಂದು ಕೇಳಿದನು. ಲಾಬಾನನಿಗೆ 16
ಇಬ್ಬರು ಹೆಣ್ಣುಮಕ್ಕಳಿದ್ದರು; ದೊಡ್ಡವಳ ಹೆಸರು
ಲೇಯಾ, ಚಿಕ್ಕವಳ ಹೆಸರು ರಾಹೇಲ್. ಲೇಯಾ 17
ಎಂಬಾಕೆಯ ಕಣ್ಣುಗಳು ಕಾಂತಿಹೀನವಾಗಿದ್ದವು;
ರಾಹೇಲಳು ರೂಪವತಿಯೂ ಲಾವಣ್ಯವತಿಯೂ ಆಗಿ
ದ್ದಳು. ಯಾಕೋಬನು ರಾಹೇಲಳನ್ನು ಮೆಚ್ಚಿ 18
ಕೊಂಡು— ನಿನ್ನ ಕಿರೀ ಮಗಳಾದ ರಾಹೇಲಳಿ
ಗೋಸ್ಕರ ನಿನ್ನಲ್ಲಿ ಏಳು ವರುಷ ಸೇವೆಮಾಡುವೆನು
ಎಂದು ಹೇಳಲು ಲಾಬಾನನು— ಆಕೆಯನ್ನು ಬೇರೊ 19
ಬ್ಬನಿಗೆ ಕೊಡುವದಕ್ಕಿಂತ ನಿನಗೆ ಕೊಡುವದೇ

1) ಅಥವಾ: ಭೂಮಿಯ ಎಲ್ಲಾ ಕುಲದವರು ನಿನಗೂ ನಿನ್ನ ಸಂತತಿಗೂ ಇರುವಂಥ ಆಶೀರ್ವಾದವೇ ತಮಗೂ ಆಗಬೇಕೆಂದು ಕೋರುವರು. 2) ಬೇತೇಲ್ ಅಂದರೆ ದೇವರ ಮನೆ.

20 ಉಚಿತ; ನನ್ನ ಬಳಿಯಲ್ಲಿರು ಅಂದನು. ಆದದರಿಂದ
ಯಾಕೋಬನು ರಾಹೇಲಳಿಗೋಸ್ಕರ ಏಳು ವರುಷ
ಸೇವೆಮಾಡಿದನು; ಆದರೂ ಆಕೆಯಲ್ಲಿ ಬಹಳ
ಪ್ರೀತಿಯನ್ನಿಟ್ಟಿದ್ದದರಿಂದ ಅದು ಅವನಿಗೆ ಸ್ವಲ್ಪ
ದಿವಸದಂತೆ ಕಾಣಿಸಿತು.
21 ತರುವಾಯ ಯಾಕೋಬನು ಲಾಬಾನನಿಗೆ—
ಗೊತ್ತುಮಾಡಿದ ಕಾಲವು ಮುಗಿದುಹೋಯಿತು;
ಆಕೆಯನ್ನು ನನ್ನ ಹೆಂಡತಿಯಾಗುವಂತೆ ನನ್ನ
22 ಸ್ವಾಧೀನಕ್ಕೆ ಕೊಡು ಎಂದು ಹೇಳಿದನು. ಆಗ
ಲಾಬಾನನು ಆ ಸ್ಥಳದವರೆಲ್ಲರನ್ನು ಕರಸಿ ಔತಣ
23 ವನ್ನು ಮಾಡಿಸಿದನು. ಸಾಯಂಕಾಲದಲ್ಲಿ ತನ್ನ
ಹಿರೀ ಮಗಳಾದ ಲೇಯಳನ್ನೇ ಯಾಕೋಬನಿಗೆ
ಒಪ್ಪಿಸಿಕೊಟ್ಟನು. ಅವನು ಆಕೆಯನ್ನು ಕೂಡಿದನು.
24 (ಲಾಬಾನನು ತನ್ನ ಮಗಳಾದ ಲೇಯಳಿಗೆ ಜಿಲ್ಪಾ
25 ಎಂಬ ಒಬ್ಬ ದಾಸಿಯನ್ನು ಕೊಟ್ಟನು.) ಬೆಳಿಗ್ಗೆ ಆಕೆ
ಲೇಯಳೆಂದು ಯಾಕೋಬನಿಗೆ ತಿಳಿದುಬರಲು
ಅವನು ಲಾಬಾನನಿಗೆ—ಇದೇನು ನೀನು ನನಗೆ
ಮಾಡಿದ್ದು? ರಾಹೇಲಳಿಗೋಸ್ಕರ ನಿನಗೆ ಸೇವೆ
ಮಾಡಿದೆನಲ್ಲಾ; ಯಾಕೆ ನನಗೆ ಮೋಸಮಾಡಿದಿ
26 ಎಂದು ಕೇಳಿದ್ದಕ್ಕೆ ಲಾಬಾನನು—ಹಿರೀ ಮಗಳಿಗಿಂತ
ಮೊದಲು ಕಿರೀ ಮಗಳನ್ನು ಮದುವೆಮಾಡಿಸಿ
27 ಕೊಡುವದು ನಮ್ಮ ದೇಶದ ಪದ್ಧತಿಯಲ್ಲ. ಆಕೆಯ
[ಮದುವೆಯ] ವಾರವನ್ನು ಪೂರೈಸು; ಅನಂತರ
ಈ ನನ್ನ ಕಿರೀ ಮಗಳನ್ನೂ ನಿನಗೆ ಕೊಡುತ್ತೇವೆ;
ಈಕೆಗೋಸ್ಕರ ನೀನು ಇನ್ನೂ ಏಳು ವರುಷ ಸೇವೆ
28 ಮಾಡು ಅಂದನು. ಯಾಕೋಬನು ಅದಕ್ಕೆ ಒಪ್ಪಿ
ಹಿರಿಯುವಳ [ಮದುವೆಯ] ವಾರವನ್ನು ತೀರಿಸಿದನು.
ಆಗ ಲಾಬಾನನು ತನ್ನ ಮಗಳಾದ ರಾಹೇಲಳನ್ನು
29 ಯಾಕೋಬನಿಗೆ ಹೆಂಡತಿಯಾಗಿ ಕೊಟ್ಟು ಆಕೆಗೆ
ಬಿಲ್ಹಾ ಎಂಬ ಒಬ್ಬ ದಾಸಿಯನ್ನು ಕೊಟ್ಟನು.
30 ಯಾಕೋಬನು ರಾಹೇಲಳನ್ನೂ ಕೂಡಿ ಆಕೆಯನ್ನು
ಲೇಯಳಿಗಿಂತ ಹೆಚ್ಚಾಗಿ ಪ್ರೀತಿಸಿದನು. ಆಕೆ
ಗೋಸ್ಕರ ಲಾಬಾನನ ಬಳಿಯಲ್ಲಿ ಇನ್ನೂ ಏಳು
ವರುಷ ಸೇವೆಮಾಡಿದನು.

### ಯಾಕೋಬನಿಗೆ ಮಕ್ಕಳು ಹುಟ್ಟಿದ್ದು.

31 ಲೇಯಳು ಯಾಕೋಬನಿಗೆ ಅಲಕ್ಷ್ಯವಾದಳೆಂದು
ಯೆಹೋವನು ನೋಡಿ ಆಕೆಯನ್ನು ಬಸುರಾಗುವಂತೆ
ಮಾಡಿದನು; ಆದರೆ ರಾಹೇಲಳು ಬಂಜೆಯಾಗಿದ್ದಳು.
32 ಲೇಯಳು ಗರ್ಭಿಣಿಯಾಗಿ ಗಂಡು ಮಗುವನ್ನು
ಹೆತ್ತು—ಯೆಹೋವನು ನನ್ನ ವ್ಯಥೆಯನ್ನು ನೋಡಿ
ದ್ದಾನೆ; ಇನ್ನು ಮುಂದೆ ನನ್ನ ಗಂಡನು ನನ್ನನ್ನು
ಪ್ರೀತಿಸುವನು ಎಂದು ಹೇಳಿ ಅದಕ್ಕೆ 1)ರೂಬೇನೆಂದು
33 ಹೆಸರಿಟ್ಟಳು. ಆಕೆ ತಿರಿಗಿ ಗರ್ಭಿಣಿಯಾಗಿ ಗಂಡು
ಮಗುವನ್ನು ಹೆತ್ತು—ನಾನು ಗಂಡನ ಅಲಕ್ಷ್ಯಕ್ಕೆ ಗುರಿ
ಯಾದೆನೆಂದು ಯೆಹೋವನು ತಿಳಿದಿದ್ದರಿಂದ ಈ ಮಗು
ವನ್ನೂ ದಯಪಾಲಿಸಿದನೆಂದು ಹೇಳಿ ಅದಕ್ಕೆ 2)ಸಿಮೆ
ಯೋನ್ ಎಂದು ಹೆಸರಿಟ್ಟಳು. ಆಕೆಯು ತಿರಿಗಿ
ಗರ್ಭಧರಿಸಿ ಗಂಡು ಮಗುವನ್ನು ಹೆತ್ತು—ಈಗಲಾದ
ರೂ ನನ್ನ ಗಂಡನೂ ನಾನೂ ಒಂದಾಗುವೆವು; ಅವನಿಗೆ
ಮೂರು ಮಂದಿ ಗಂಡು ಮಕ್ಕಳನ್ನು ಹೆತ್ತಿದ್ದೇನಲ್ಲಾ
ಎಂದು ಹೇಳಿ ಅದಕ್ಕೆ 3)ಲೇವಿಯೆಂದು ಹೆಸರಿಟ್ಟಳು.
ಆಕೆಯು ತಿರಿಗಿ ಗರ್ಭಿಣಿಯಾಗಿ ಗಂಡು ಮಗುವನ್ನು
ಹೆತ್ತು—ಈಗ ಯೆಹೋವನಿಗೆ ಉಪಕಾರಸ್ತುತಿಮಾಡು
ವೆನು ಎಂದು ಹೇಳಿ ಅದಕ್ಕೆ 4)ಯೆಹೂದಾ ಎಂದು
ಹೆಸರಿಟ್ಟಳು. ಆ ಮೇಲೆ ಆಕೆಗೆ ಗರ್ಭಧಾರಣೆಯಾ
ಗುವದು ತಡವಾಯಿತು.

ರಾಹೇಲಳು ತಾನು ಮಕ್ಕಳನ್ನು ಹೆರದೆ ಇರುವ 3
ದನ್ನು ನೋಡಿ ತನ್ನ ಅಕ್ಕನ ಮೇಲೆ ಹೊಟ್ಟೆಕಿಚ್ಚು
ಪಟ್ಟು ಯಾಕೋಬನಿಗೆ—ಮಕ್ಕಳನ್ನು ನನಗೆ ಕೊಡು;
ಇಲ್ಲದಿದ್ದರೆ ಸಾಯುವೆನು ಎಂದು ಹೇಳಲು ಅವನು
ಆಕೆಯ ಮೇಲೆ ಕೋಪಗೊಂಡು—ದೇವರು ನಿನಗೆ
ಮಕ್ಕಳನ್ನು ಕೊಡದೆ ಹೋದ ಮೇಲೆ ಕೊಡಲಿಕ್ಕೆ
ನನ್ನಿಂದಾದೀತೋ ಅಂದನು. ಅದಕ್ಕೆ ಆಕೆಯು—
ನನ್ನ ದಾಸಿಯಾದ ಬಿಲ್ಹಾ ಇದ್ದಾಳಲ್ಲಾ; ಅವಳನ್ನು
ಕೂಡು; ಅವಳು ಬಸುರಾದರೆ ನನ್ನ ತೊಡೆಯ
ಮೇಲೆ ಹೆರಿಸುವೆನು; ಹಾಗೆ ನನಗೂ ಸಂತಾನವಾಗು
ವದು ಎಂದು ಹೇಳಿ ಅವನಿಗೆ ತನ್ನ ದಾಸಿಯಾದ
ಬಿಲ್ಹಳನ್ನು ಹೆಂಡತಿಯಾಗುವದಕ್ಕೆ ಒಪ್ಪಿಸಿದಳು.
ಅವನು ಅವಳನ್ನು ಕೂಡಲು ಬಿಲ್ಹಳು ಗರ್ಭಿಣಿಯಾಗಿ
ಗಂಡು ಮಗುವನ್ನು ಹೆರಲು ರಾಹೇಲಳು—ದೇವರು
ನನ್ನ ಕಡೆಗೆ ನ್ಯಾಯತೀರಿಸಿದ್ದಾನೆ; ಆತನು ನನ್ನ
ಮೊರೆಯನ್ನು ಕೇಳಿ ನನಗೆ ಮಗನನ್ನು ಅನುಗ್ರಹಿಸಿ
ದ್ದಾನೆ ಎಂದು ಹೇಳಿ ಅದಕ್ಕೆ 5)ದಾನ್ ಎಂದು ಹೆಸ
ರಿಟ್ಟಳು. ರಾಹೇಲಳ ದಾಸಿಯಾದ ಬಿಲ್ಹಳು ತಿರಿಗಿ
ಬಸುರಾಗಿ ಯಾಕೋಬನಿಗೆ ಎರಡನೆಯ ಗಂಡು ಮಗು
ವನ್ನು ಹೆರಲು ರಾಹೇಲಳು—ನನ್ನ ಅಕ್ಕನ ಸಂಗಡ
ಬಲವಾಗಿ ಹೋರಾಡಿ ಗೆದ್ದಿದ್ದೇನೆ ಎಂದು ಹೇಳಿ
ಅದಕ್ಕೆ 6)ನಫ್ತಾಲಿ ಎಂದು ಹೆಸರಿಟ್ಟಳು.

ಲೇಯಳು ತನಗೆ ಹೆರಿಗೆ ನಿಂತುಹೋಗಿರುವದನ್ನು
ತಿಳಿದು ತನ್ನ ದಾಸಿಯಾದ ಜಿಲ್ಪಳನ್ನು ಯಾಕೋಬನ
ಹೆಂಡತಿಯಾಗುವದಕ್ಕೆ ಒಪ್ಪಿಸಿದಳು. ಲೇಯಳ
ದಾಸಿಯಾದ ಜಿಲ್ಪಳು ಯಾಕೋಬನಿಗೆ ಗಂಡು
ಮಗುವನ್ನು ಹೆರಲು ಲೇಯಳು—ನನಗೆ ಶುಭವಾ
ಯಿತೆಂದು ಹೇಳಿ ಅದಕ್ಕೆ 7)ಗಾದ್ ಎಂದು ಹೆಸ
ರಿಟ್ಟಳು. ಲೇಯಳ ದಾಸಿಯಾದ ಜಿಲ್ಪಳು ಯಾ
ಕೋಬನಿಗೆ ಇನ್ನೊಂದು ಗಂಡು ಮಗುವನ್ನು ಹೆರಲು
ಲೇಯಳು—ನಾನು ಧನ್ಯಳಾದೆ; ಸ್ತ್ರೀಯರು ನನ್ನನ್ನು
ಧನ್ಯಳೆಂದು ಹೊಗಳುವರು ಎಂದು ಹೇಳಿ ಅದಕ್ಕೆ
8)ಆಶೇರೆಂದು ಹೆಸರಿಟ್ಟಳು.

ಗೋದೀ ಸುಗ್ಗಿಯ ಕಾಲದಲ್ಲಿ ರೂಬೇನನು ಅಡ

1) ವ್ಯಥೆ ನೋಡಿದನು ಎಂದರ್ಥವಿದ್ದ ಹಾಗೆ. 2) [ದೇವರು] ಕೇಳಿ ತಿಳುಕೊಂಡನು ಎಂದರ್ಥವಿದ್ದ ಹಾಗೆ. 3) ಒಂದಾಗು ಎಂದರ್ಥವಿದ್ದ ಹಾಗೆ. 4) ಸ್ತೋತ್ರ ಎಂದರ್ಥವಿದ್ದ ಹಾಗೆ 5) ದಾನ್ ಅಂದರೆ ನ್ಯಾಯತೀರ್ಪಿಕೆ. 6) ಹೋರಾಟ ಎಂ ವಿದ್ದಂತೆ. 7) ಗಾದ್ ಅಂದರೆ ಒಳ್ಳೇ ಅದೃಷ್ಟ. 8) ಆಶೇರ್ ಅಂದರೆ ಧನ್ಯನು.

ಏಗೆ ಹೋಗಿದ್ದಾಗ ಕಾಮಜನಕ ಫಲಗಳನ್ನು ಕಂಡು
ತನ್ನ ತಾಯಿಯಾದ ಲೇಯಳಿಗೆ ತಂದು ಕೊಡಲು
ರಾಹೇಲಳು ಆಕೆಗೆ—ನಿನ್ನ ಮಗನು ತಂದಿರುವ ಕಾಮ
ಜನಕ ಫಲಗಳಲ್ಲಿ ಕೆಲವನ್ನು ನನಗೆ ಕೊಡಮ್ಮಾ
ಎಂದು ಕೇಳಿಕೊಂಡಳು. ಅದಕ್ಕೆ ಲೇಯಳು--ನೀನು
ನನ್ನ ಗಂಡನನ್ನು ಅಪಹರಿಸಿದ್ದು ಸಾಲದೋ? ನನ್ನ
ಮಗನು ತಂದ ಕಾಮಜನಕ ಫಲಗಳನ್ನೂ ತೆಗೆದು
ಕೊಳ್ಳಬೇಕೆಂದು ಅಪೇಕ್ಷಿಸುತ್ತೀಯಾ ಎಂದು ಹೇಳ
ಲು ರಾಹೇಲಳು—ಒಳ್ಳೇದು, ನೀನು ನಿನ್ನ ಮಗನ
ಹಣ್ಣುಗಳನ್ನು ನನಗೆ ಕೊಟ್ಟರೆ ಗಂಡನು ಈ ಹೊತ್ತು
ರಾತ್ರಿ ನಿನ್ನಲ್ಲೇ ಇರಲಿ ಅಂದಳು. ಸಾಯಂಕಾಲದಲ್ಲಿ
ಯಾಕೋಬನು ಅಡವಿಯಿಂದ ಬರುವಾಗ ಲೇಯಳು
ಅವನೆದುರಿಗೆ ಹೋಗಿ—ನೀನು ನನ್ನಲ್ಲಿ ಬರಬೇಕು;
ನಾನು ನನ್ನ ಮಗನ ಕಾಮಜನಕ ಫಲಗಳನ್ನು ಕೊಟ್ಟು
ನಿನ್ನನ್ನು ಸಂಪಾದಿಸಿಕೊಂಡಿದ್ದೇನೆ ಅಂದಳು. ಆ
ಹೊತ್ತು ರಾತ್ರಿ ಅವನು ಆಕೆಯೊಂದಿಗೆ ಇದ್ದನು.
ದೇವರು ಲೇಯಳ ಪ್ರಾರ್ಥನೆಯನ್ನು ಕೇಳಿದನು;
ಆಕೆಯು ಗರ್ಭಿಣಿಯಾಗಿ ಯಾಕೋಬನಿಗೆ ಐದನೆಯ
ಗಂಡು ಮಗುವನ್ನು ಹೆತ್ತು—ನಾನು ನನ್ನ ದಾಸಿ
ಯನ್ನು ನನ್ನ ಗಂಡನ ವಶಕ್ಕೆ ಒಪ್ಪಿಸಿದ್ದರಿಂದ ದೇವರು
ನನಗೆ ಪ್ರತಿಫಲವನ್ನು ಕೊಟ್ಟಿದ್ದಾನೆಂದು ಹೇಳಿ
ಅದಕ್ಕೆ [1]ಇಸ್ಸಾಕಾರೆಂದು ಹೆಸರಿಟ್ಟಳು. ಲೇಯಳು
ತಿರಿಗಿ ಗರ್ಭಿಣಿಯಾಗಿ ಯಾಕೋಬನಿಗೆ ಆರನೆಯ
ಗಂಡು ಮಗುವನ್ನು ಹೆತ್ತಳು. ಆಕೆಯು—ದೇವರು
ನನಗೆ ಒಳ್ಳೇ ಬಳುವಳಿಯನ್ನು ಕೊಟ್ಟಿದ್ದಾನೆ; ನಾನು
ನನ್ನ ಗಂಡನಿಗೆ ಆರು ಮಂದಿ ಗಂಡು ಮಕ್ಕಳನ್ನು
ಹೆತ್ತದ್ದರಿಂದ ಅವನು ನನ್ನೊಡನೆಯೇ ವಾಸಿಸುವನು
ಎಂದು ಹೇಳಿ ಅದಕ್ಕೆ [2]ಜೆಬುಲೂನ್ ಎಂದು ಹೆಸರಿ
ಟ್ಟಳು. ತರುವಾಯ ಆಕೆಯು ಹೆಣ್ಣು ಮಗುವನ್ನು
ಹೆತ್ತು ಅದಕ್ಕೆ ದೀನಾ ಎಂದು ಹೆಸರಿಟ್ಟಳು.
ಆ ಮೇಲೆ ದೇವರು ರಾಹೇಲಳನ್ನು ನೆನಸಿಕೊಂಡು
ಆಕೆಯ ಮೊರೆಯನ್ನು ಕೇಳಿ ಆಕೆಗೆ ಮಕ್ಕಳಾಗು
ವಂತೆ ಮಾಡಿದನು. ಆಕೆಯು ಗರ್ಭಿಣಿಯಾಗಿ
ಗಂಡು ಮಗುವನ್ನು ಹೆತ್ತು ದೇವರು ನನಗಿದ್ದ
ಅವಮಾನವನ್ನು ಪರಿಹರಿಸಿದ್ದಾನೆ ಅಂದಳು. ಇದ
ಲ್ಲದೆ ಆಕೆಯು—ಯೆಹೋವನು ಇನ್ನೊಂದು ಗಂಡು
ಮಗುವನ್ನು ನನಗೆ ದಯಪಾಲಿಸಬೇಕೆಂದು ಅದಕ್ಕೆ
[3]ಯೋಸೇಫನೆಂದು ಹೆಸರಿಟ್ಟಳು.

ಯಾಕೋಬನು ಇನ್ನೂ ಆರು ವರುಷ ಲಾಬಾನನ ಸೇವೆಮಾಡಿ
ಆಡು ಕುರಿ ಮುಂತಾದ ಸಂಪತ್ತನ್ನು ಸಂಪಾದಿಸಿಕೊಂಡದ್ದು.

ರಾಹೇಲಳು ಯೋಸೇಫನನ್ನು ಹೆತ್ತನಂತರ ಯಾ
ಕೋಬನು ಲಾಬಾನನಿಗೆ—ನನಗೆ ಅಪ್ಪಣೆಕೊಡ
ಬೇಕು; ನಾನು ನನ್ನ ದೇಶದಲ್ಲಿರುವ ಸ್ವಂತ ಊರಿಗೆ
ಹೋಗಬೇಕು. ನಾನು ಸೇವೆಮಾಡಿ ಪಡಕೊಂಡ
ಹೆಂಡತಿಯರನ್ನೂ ನನ್ನ ಮಕ್ಕಳನ್ನೂ ನನಗೆ ಒಪ್ಪಿಸು;
ನಾನು ಹೋಗುತ್ತೇನೆ. ನಾನು ನಿನಗೆ ಮಾಡಿದ
ಸೇವೆ ನಿನಗೆ ತಿಳಿದೇ ಅದೆ ಎಂದು ಹೇಳಲು ಲಾಬಾ 27
ನನು ಅವನಿಗೆ—ನನ್ನ ಮೇಲೆ ದಯವಿಟ್ಟು ನನ್ನ
ಬಳಿಯಲ್ಲೇ ಇರು; ಯೆಹೋವನು ನಿನ್ನ ನಿಮಿತ್ತ
ನನ್ನನ್ನು ಅಭಿವೃದ್ಧಿಪಡಿಸಿದ್ದಾನೆಂದು ಚೆನ್ನಾಗಿ ತಿಳಿ
ದಿದ್ದೇನೆ. ನಾನು ನಿನಗೆ ಏನು ಕೊಡಬೇಕು ಹೇಳು, 28
ಕೊಡುತ್ತೇನೆ ಎಂದು ಹೇಳಿದನು. ಅದಕ್ಕೆ ಯಾಕೋ 29
ಬನು—ನಾನು ನಿನಗೆ ಮಾಡಿದ ಸೇವೆಯನ್ನೂ ನನ್ನ
ವಶದಲ್ಲಿದ್ದ ನಿನ್ನ ಪಶುಗಳು ಅಭಿವೃದ್ಧಿಯಾದ
ದ್ದನ್ನೂ ನೀನು ಬಲ್ಲೆ. ನಾನು ಬರುವದಕ್ಕೆ ಮೊದಲು 30
ನಿನಗಿದ್ದದ್ದು ಸ್ವಲ್ಪವೇ; ಈಗ ಬಹಳವಾಗಿ ಹೆಚ್ಚಾ
ಯಿತು. ನಾನು ಕೈಹಾಕಿದ ಎಲ್ಲಾ ಕೆಲಸದಲ್ಲಿಯೂ
ಯೆಹೋವನು ನಿನ್ನನ್ನು ಅಭಿವೃದ್ಧಿಪಡಿಸಿದ್ದಾನೆ.
ನಾನು ಸ್ವಂತ ಮನೆಗೋಸ್ಕರ ಯಾವಾಗ ಸಂಪಾದನೆ
ಮಾಡಿಕೊಳ್ಳಲಿ ಎಂದು ಹೇಳಿದನು. ಲಾಬಾನನು— 31
ನಿನಗೆ ನಾನೇನು ಕೊಡಬೇಕು ಹೇಳು ಅನ್ನಲು
ಯಾಕೋಬನು—ನನಗೆ ಏನೂ ಕೊಡಬೇಡ; ಒಂದು
ಕೆಲಸ ಮಾತ್ರ ಮಾಡಿದರೆ ನಾನು ತಿರಿಗಿ ನಿನ್ನ
ಹಿಂಡನ್ನು ಮೇಯಿಸಿ ಕಾಯುವೆನು. ಅದೇನಂದರೆ, 32
ಈ ಹೊತ್ತು ನಾನು ನಿನ್ನ ಹಿಂಡಿನೊಳಗೆ ಹೋಗಿ
ವಿಕಾರವರ್ಣವುಳ್ಳವುಗಳನ್ನೆಲ್ಲಾ ಅಂದರೆ ಕುರಿಗಳಲ್ಲಿ
ಕಪ್ಪಾಗಿರುವವುಗಳನ್ನೂ ಆಡುಗಳಲ್ಲಿ ಚುಕ್ಕೆ ಅಥವಾ
ಮಚ್ಚೆ ಉಳ್ಳವುಗಳನ್ನೂ ವಿಂಗಡಿಸುವೆನು; [ಮುಂದೆ
ಅಂಥಾದ್ದು ಹುಟ್ಟಿದರೆ] ಅದೇ ನನ್ನ ಸಂಬಳವೆಂದು
ನೀನು ಭಾವಿಸಬೇಕು. ನೀನು ಇನ್ನು ಮೇಲೆ ಬಂದು 33
ನಾನು ಪಡೆದದ್ದನ್ನು ಪರೀಕ್ಷಿಸುವಾಗ ನಾನು ಪ್ರ
ಮಾಣಿಕನೋ ಅಪ್ರಮಾಣಿಕನೋ ಎಂಬದು ಪ್ರತ್ಯಕ್ಷ
ವಾಗುವದು. ಆಡುಗಳಲ್ಲಿ ಚುಕ್ಕೆ ಮಚ್ಚೆಯಿಲ್ಲದ್ದೂ
ಕುರಿಗಳಲ್ಲಿ ಕಪ್ಪಲ್ಲದ್ದೂ ನನ್ನ ಬಳಿಯಲ್ಲಿ ಸಿಕ್ಕಿದರೆ
ಅದನ್ನು ಕದ್ದದ್ದೆಂದು ಎಣಿಸಬಹುದು ಅಂದನು.
ಅದಕ್ಕೆ ಲಾಬಾನನು—ಒಳ್ಳೇದು, ನೀನು ಹೇಳಿದಂತೆ 34
ಯೇ ಆಗಲಿ ಅಂದನು. ಅದೇ ದಿನ ಲಾಬಾನನು 35
ಹೋತಗಳಲ್ಲಿ ರೇಖೆ ಮಚ್ಚೆ ಇದ್ದವುಗಳನ್ನೂ ಮೇಕೆ
ಗಳಲ್ಲಿ ಚುಕ್ಕೆ ಮಚ್ಚೆ ಇದ್ದವುಗಳನ್ನೂ ಅಂದರೆ ಸ್ವಲ್ಪ
ಬಿಳುಪಾದ ಬಣ್ಣವು ತೋರಿದ ಎಲ್ಲವುಗಳನ್ನೂ ಕುರಿ
ಗಳಲ್ಲಿ ಕಪ್ಪಾಗಿದ್ದವುಗಳನ್ನೂ ವಿಂಗಡಿಸಿ ತನ್ನ ಮ
ಕ್ಕಳ ವಶಕ್ಕೆ ಒಪ್ಪಿಸಿ ತನಗೂ ಯಾಕೋಬನಿಗೂ 36
ಮೂರು ದಿನದ ಪ್ರಯಾಣದಷ್ಟು ದೂರ ಅಂತರವನ್ನು
ಬಿಟ್ಟನು. ಯಾಕೋಬನು ಲಾಬಾನನ ಹಿಂಡಿನಲ್ಲಿ
ಮಿಕ್ಕಾದವುಗಳನ್ನು ಮೇಯಿಸಿದನು.
ಹೀಗಿರುವಲ್ಲಿ ಯಾಕೋಬನು ಲಿಬ್ನೆ, ಲೂಜು, 37
ಅರ್ಮೋನ್ ಎಂಬೀ ಮರಗಳಲ್ಲಿ ಹಸಿ ಕೋಲುಗ
ಳನ್ನು ತೆಗೆದುಕೊಂಡು ಪಟ್ಟೆಪಟ್ಟೆಯಾಗಿ ತೊಗಟೆ
ಯನ್ನು ಸುಲಿದು ಅವುಗಳಲ್ಲಿರುವ ಬಿಳೀ ಬಣ್ಣವು
ಕಾಣಿಸುವಂತೆ ಮಾಡಿ ಅವುಗಳನ್ನು ಆಡುಕುರಿಗಳ 38
ಹಿಂಡು ನೀರುಕುಡಿಯುವ ದೋಣಿಗಳಲ್ಲಿ ಇಟ್ಟನು.
ಆಡುಕುರಿಗಳು ಕುಡಿಯುವದಕ್ಕೆ ಬಂದ ಸಮಯವೇ

[1] ಪ್ರತಿಫಲವಾಗಿರುವವನು ಎಂದರ್ಥವಿದ್ದ ಹಾಗೆ. [2] ಜೆಬುಲೂನ್ ಎಂಬದಕ್ಕೆ ವಾಸವೆಂತಲೂ ಬಳುವಳಿ ಎಂತಲೂ ಎರಡರ್ಥ ಉಂಟು. [3] ಯೋಸೇಫ ಎಂಬದಕ್ಕೆ ಪರಿಹಾರ ಎಂತಲೂ ಹೆಚ್ಚಾಗಿ ದಯಪಾಲಿಸಲಿ ಎಂತಲೂ ಎರಡರ್ಥ ಉಂಟು.

39 ಅವುಗಳಿಗೆ ಸಂಗಮಕಾಲವಾಗಿತ್ತು. ಅವು ಕೋಲು
ಗಳನ್ನು ನೋಡುತ್ತಾ ಸಂಗಮಮಾಡಿದ್ದರಿಂದ ರೇಖೆ
40 ಚುಕ್ಕೆ ಮಚ್ಚೆಗಳುಳ್ಳ ಮರಿಗಳನ್ನು ಈದವು. ಯಾ
ಕೋಬನು ಆ ಮರಿಗಳನ್ನು ಲಾಬಾನನ ಹಿಂಡಿಗೆ
ಸೇರಿಸದೆ ತನ್ನವೆಂದು ಪ್ರತ್ಯೇಕಿಸಿದನು; ಮತ್ತು ಲಾ
ಬಾನನ ಆಡುಕುರಿಗಳ ಮುಖಗಳನ್ನು ರೇಖೆಯುಳ್ಳ
ಆ ಆಡುಗಳ ಮತ್ತು ಕಪ್ಪಾದ ಕುರಿಗಳ ಕಡೆಗೆ ತಿರು
41 ಗಿಸಿದನು. ಇದಲ್ಲದೆ ಬಲಿಷ್ಠವಾದ ಆಡುಕುರಿಗಳು
ಸಂಗಮಮಾಡುವಾಗ ಆ ಕೋಲುಗಳನ್ನು ನೋ
ಡುತ್ತಾ ಸಂಗಮಮಾಡಲಿ ಎಂದು ಯಾಕೋಬನು
ದೋಣಿಗಳಲ್ಲಿ ಕೋಲುಗಳನ್ನಿಟ್ಟನು; ಬಲಹೀನ
42 ಆಡುಕುರಿಗಳ ಎದುರಾಗಿ ಇಡಲಿಲ್ಲ. ಹೀಗೆ ಬಲ
ವಿಲ್ಲದವುಗಳು ಲಾಬಾನನ ಪಾಲಿಗೆ ಬಿದ್ದವು, ಬಲಿಷ್ಠ
ವಾದವುಗಳು ಯಾಕೋಬನ ಪಾಲಿಗೆ ಬಿದ್ದವು.
43 ಯಾಕೋಬನು ಬಹಳ ಸಂಪತ್ತುಳ್ಳವನಾದನು;
ಅವನಿಗೆ ದೊಡ್ಡ ದೊಡ್ಡ ಹಿಂಡುಗಳೂ ದಾಸದಾಸಿ
ಯರೂ ಒಂಟೆಕತ್ತೆಗಳೂ ಹೇರಳವಾಗಿದ್ದವು.

ಯಾಕೋಬನು ಸ್ವದೇಶಕ್ಕೆ ಓಡಿಬಂದದ್ದು; ಲಾಬಾನನ
ಸಂಗಡ ಒಡಂಬಡಿಕೆಮಾಡಿಕೊಂಡದ್ದು.

31 ನಮ್ಮ ತಂದೆಯ ಆಸ್ತಿಯೆಲ್ಲಾ ಯಾಕೋಬನ
ಪಾಲಾಯಿತು; ನಮ್ಮ ತಂದೆಯ ಆಸ್ತಿಯಿಂದಲೇ
ಅವನಿಗೆ ಇಷ್ಟು ಐಶ್ವರ್ಯವುಂಟಾಯಿತು ಎಂಬದಾಗಿ
ಲಾಬಾನನ ಮಕ್ಕಳು ಹೇಳಿಕೊಳ್ಳುವ ಮಾತುಗಳು
2 ಯಾಕೋಬನ ಕಿವಿಗೆ ಬಿದ್ದವು. ಇದಲ್ಲದೆ ಅವನು
ಲಾಬಾನನ ಮುಖಭಾವವನ್ನು ನೋಡಿದಾಗ ಅದು
3 ಮೊದಲಿದ್ದಂತೆ ತೋರಲಿಲ್ಲ. ಮತ್ತು ಯೆಹೋವನು
ಅವನಿಗೆ—ನಿನ್ನ ತಂದೆತಾತಂದಿರ ದೇಶಕ್ಕೂ ನಿನ್ನ
ಬಂಧುಗಳ ಬಳಿಗೂ ತಿರಿಗಿ ಹೋಗು; ನಾನು
4 ನಿನ್ನೊಂದಿಗೆ ಇರುವೆನು ಎಂದು ಹೇಳಿದನು. ಹೀಗಿ
ರುವದರಿಂದ ಯಾಕೋಬನು ರಾಹೇಲಳನ್ನೂ ಲೇಯ
ಳನ್ನೂ ತಾನು ಆಡುಕುರಿಗಳನ್ನು ಮೇಯಿಸುತ್ತಿದ್ದ
5 ಅಡವಿಗೆ ಕರಸಿಕೊಂಡು ಅವರಿಗೆ ಹೇಳಿದ್ದೇನಂದರೆ—
ನಿಮ್ಮ ತಂದೆಯ ಮುಖಭಾವವು ನನ್ನ ವಿಷಯದಲ್ಲಿ
ಮೊದಲಿದ್ದಂತೆ ಇಲ್ಲವೆಂದು ತೋರಬಂತು. ಆದರೂ
ನನ್ನ ತಂದೆಯ ದೇವರು ನನ್ನೊಂದಿಗೆ ಇದ್ದಾನೆ.
6 ನಾನು ನಿಮ್ಮ ತಂದೆಯ ಸೇವೆಯನ್ನು ಸಾಹಸದಿಂದ
7 ಮಾಡಿದ್ದೇನೆ; ನೀವೂ ಅದನ್ನು ಬಲ್ಲಿರಿ. ಅವನು
ಚಪಲಚಿತ್ತನಾಗಿ ಹತ್ತು ಸಾರಿ ನನ್ನ ಸಂಬಳವನ್ನು
ಬದಲಾಯಿಸಿ ವಂಚಿಸಿದರೂ ನನಗೆ ಕೇಡುಮಾಡು
ವದಕ್ಕೆ ದೇವರು ಅವನಿಗೆ ಅವಕಾಶಕೊಡಲಿಲ್ಲ.
8 ಚುಕ್ಕೆಯುಳ್ಳವುಗಳನ್ನು ನಿನ್ನ ಸಂಬಳಕ್ಕೆ ತಕ್ಕೋ
ಎಂದು ಅವನು ಹೇಳಿದಾಗ ಹಿಂಡಿನ ಆಡುಕುರಿಗಳೆ
ಲ್ಲವೂ ಚುಕ್ಕೆಯುಳ್ಳ ಮರಿಗಳನ್ನೇ ಈದವು. ರೇಖೆ
ಗಳಿರುವವುಗಳನ್ನು ಸಂಬಳಕ್ಕೆ ತಕ್ಕೋ ಎಂದು ಹೇಳಿ
ದಾಗ ಆಡುಕುರಿಗಳೆಲ್ಲವೂ ರೇಖೆಯುಳ್ಳ ಮರಿಗ
9 ಳನ್ನು ಈದವು. ಹೀಗೆ ದೇವರು ನಿಮ್ಮ ತಂದೆಯ
ಆಡುಕುರಿಗಳನ್ನು ಅವನಿಂದ ತೆಗೆದು ನನಗೆ ಕೊಟ್ಟ
ನು. ಕುರಿಗಳು ಸಂಗಮಮಾಡುವ ಕಾಲದಲ್ಲಿ ನಾನು
ಕನಸಿನಲ್ಲಿ ಕಣ್ಣೆತ್ತಿ ನೋಡಿದಾಗ ಕುರಿಗಳ ಮೇಲೆ
ಹಾರಿದ ಟಗರುಗಳೆಲ್ಲವೂ ರೇಖೆ ಚುಕ್ಕೆ ಮಚ್ಚೆಗಳು
ಳ್ಳವುಗಳಾಗಿ ಕಾಣಿಸಿದವು. ಆ ಕನಸಿನಲ್ಲಿ ದೇವ
ದೂತನು—ಯಾಕೋಬನೇ ಎಂದು ಕರೆಯಲು
ನಾನು—ಇದ್ದೇನೆ ಎಂದು ಹೇಳಿದಾಗ ಆತನು ನನಗೆ—
ಲಾಬಾನನು ನಿನ್ನ ವಿಷಯದಲ್ಲಿ ನಡಕೊಂಡ ರೀತಿ
ಯನ್ನು ನಾನು ನೋಡಿದ್ದೇನೆ; ಆದದರಿಂದ ನೀನು
ಕಣ್ಣೆತ್ತಿ ನೋಡು; ಕುರಿಗಳ ಮೇಲೆ ಹಾರುವ ಟಗರು
ಗಳೆಲ್ಲವೂ ರೇಖೆ ಚುಕ್ಕೆ ಮಚ್ಚೆಗಳುಳ್ಳವುಗಳಾಗಿವೆ.
ಬೇತೇಲಿನಲ್ಲಿ ನಿನಗೆ ಕಾಣಿಸಿದ ದೇವರು ನಾನೇ;
ಅಲ್ಲಿ ಕಂಬದ ಮೇಲೆ ಎಣ್ಣೆಹೊಯಿದು ನನಗೆ ಹರಕೆ
ಮಾಡಿಕೊಂಡಿಯಷ್ಟೆ. ಈಗ ನೀನೆದ್ದು ಈ ದೇಶ
ವನ್ನು ಬಿಟ್ಟು ನೀನು ಹುಟ್ಟಿದ ದೇಶಕ್ಕೆ ತಿರಿಗಿ
ಹೋಗು ಎಂದು ಹೇಳಿದನು.
ಯಾಕೋಬನು ಈ ಮಾತುಗಳನ್ನಾಡಿದಾಗ ರಾಹೇ
ಲಳು ಮತ್ತು ಲೇಯಳು—ನಮ್ಮ ತಂದೆಯ ಮನೆ
ಯಲ್ಲಿ ನಮಗೆ ಪಾಲೂ ಬಾಧ್ಯತೆಯೂ ಇನ್ನೇನದೆ?
ಅವನು ನಮ್ಮನ್ನು ಅನ್ಯರೆಂದು ಎಣಿಸುತ್ತಾನಲ್ಲಾ;
ಅವನು ನಮ್ಮನ್ನು ಮಾರಿ ನಮ್ಮ ಮೂಲಕ ಸಿಕ್ಕಿದ
ದ್ರವ್ಯವನ್ನು ತಾನೇ ನುಂಗಿಬಿಟ್ಟನು. ಆಗಲಿ; ದೇವರು
ನಮ್ಮ ತಂದೆಯಿಂದ ತೆಗೆದ ಆಸ್ತಿಯೆಲ್ಲಾ ನಮಗೂ
ನಮ್ಮ ಮಕ್ಕಳಿಗೂ ಬಂತಲ್ಲಾ; ಆದದರಿಂದ ದೇವರು
ನಿನಗೆ ಹೇಳಿದಂತೆಯೇ ಮಾಡು ಎಂದು ಉತ್ತರ
ಕೊಟ್ಟರು. ಆಗ ಯಾಕೋಬನು ತನ್ನ ಮಕ್ಕಳನ್ನೂ
ಹೆಂಡತಿಯರನ್ನೂ ಒಂಟೆಗಳ ಮೇಲೆ ಹತ್ತಿಸಿ ತಾನು
ಗಳಿಸಿಕೊಂಡಿದ್ದ ಎಲ್ಲಾ ಆಸ್ತಿಯನ್ನೂ ಪದ್ದನ್‌ಅರಾಮ್
ದೇಶದಲ್ಲಿ ಸಂಪಾದಿಸಿಕೊಂಡಿದ್ದ ಎಲ್ಲಾ ಪಶುಗಳನ್ನೂ
ತೆಗೆದುಕೊಂಡು ಕಾನಾನ್‌ದೇಶಕ್ಕೆ ತನ್ನ ತಂದೆಯಾದ
ಇಸಾಕನ ಬಳಿಗೆ ಹೋಗುವದಕ್ಕಾಗಿ ಹೊರಟನು.
ಲಾಬಾನನು ತನ್ನ ಕುರಿಗಳ ಉಣ್ಣೆಯನ್ನು ಕತ್ತ
ರಿಸುವದಕ್ಕೋಸ್ಕರ ಹೋಗಿದ್ದನು. ಹೀಗಿರುವಲ್ಲಿ ರಾ
ಹೇಲಳು ತನ್ನ ತಂದೆಯ ಮನೆಯಲ್ಲಿದ್ದ ವಿಗ್ರಹಗಳನ್ನು
ಕದ್ದುಕೊಂಡಳು. ಅದಲ್ಲದೆ ಯಾಕೋಬನು ತಾನು
ಹೋಗುತ್ತೇನೆಂದು ಅರಾಮ್ಯನಾದ ಲಾಬಾನನಿಗೆ ತಿಳಿ
ಸದೆ ಅವನನ್ನು ಮೋಸಗೊಳಿಸಿ ಓಡಿಹೋದನು. ಹೀಗೆ
ಅವನು ತನ್ನ ಆಸ್ತಿಯನ್ನೆಲ್ಲಾ ತೆಗೆದುಕೊಂಡು ಓಡಿ
ಹೋಗಿ ಯೂಫ್ರೇಟೀಸ್ ಮಹಾನದಿಯನ್ನು ದಾಟಿ
ಗಿಲ್ಯಾದೆಂಬ ಬೆಟ್ಟದ ಸೀಮೆಯ ದಾರಿಯನ್ನು ಹಿಡಿದನು.
ಯಾಕೋಬನು ಓಡಿಹೋದ ವರ್ತಮಾನವು ಮೂ
ರನೆಯ ದಿನದಲ್ಲಿ ಲಾಬಾನನಿಗೆ ತಿಳಿದುಬರಲು ಅವನು
ತನ್ನ ಬಂಧುಜನರನ್ನು ಕೂಡಿಕೊಂಡು, ಏಳು ದಿನ
ಪ್ರಯಾಣಮಾಡಿ ಯಾಕೋಬನನ್ನು ಹಿಂದಟ್ಟಿ, ಗಿಲ್ಯಾ
ದ್ ಬೆಟ್ಟದ ಸೀಮೆಯಲ್ಲಿ ಅವನನ್ನು ಸಂಧಿಸಿದನು.
ಆದರೆ ರಾತ್ರಿಯಲ್ಲಿ ದೇವರು ಅರಾಮ್ಯನಾದ ಲಾಬಾ
ನನ ಕನಸಿನಲ್ಲಿ ಬಂದು—ನೋಡಿಕೋ, ನೀನು
ಯಾಕೋಬನಿಗೆ [1]ಏನೂ ಅನ್ನಬೇಡ ಎಂದು ಹೇಳಿ

1) ಮೂಲ: ಒಳ್ಳೇದನ್ನಾಗಲಿ ಕೆಟ್ಟದ್ದನ್ನಾಗಲಿ.

25 ದನು. ಲಾಬಾನನು ಯಾಕೋಬನನ್ನು ಸಂಧಿಸಿ
ದಾಗ ಯಾಕೋಬನು ಬೆಟ್ಟದಲ್ಲಿ ತನ್ನ ಗುಡಾರ
ವನ್ನು ಹಾಕಿಸಿದ್ದನು. ಲಾಬಾನನೂ ತನ್ನವರೊಡನೆ
ಅದೇ ಗಿಲ್ಯಾದ್ ಬೆಟ್ಟದಲ್ಲಿ ಗುಡಾರವನ್ನು ಹಾಕಿಸಿ
ದನು.
26 ಲಾಬಾನನು ಯಾಕೋಬನಿಗೆ—ಇದೇನು ನೀನು
ಮಾಡಿದ್ದು? ನೀನು ನನ್ನ ಹೆಣ್ಣುಮಕ್ಕಳನ್ನು ಯುದ್ಧ
ದಲ್ಲಿ ಸೆರೆಹಿಡಿದವರಂತೆ ತೆಗೆದುಕೊಂಡು ನನಗೆ
27 ಏನೂ ಹೇಳದೆ ಓಡಿಬಂದಿಯಲ್ಲಾ. ಯಾಕೆ ನನ್ನನ್ನು
ಮೋಸಗೊಳಿಸಿ ಕಳ್ಳತನದಿಂದ ಬಂದಿ? ನನಗೆ ತಿಳಿಸಿ
ದ್ದರೆ ನಾನು ಸಂಗೀತಮಾಡಿಸಿ ಮದ್ದಲೆ, ವೀಣೆ
ಮುಂತಾದ ವಾದ್ಯಗಳೊಡನೆ ಸಂತೋಷದಿಂದ ನಿನ್ನ
28 ನ್ನು ಸಾಗಕಳುಹಿಸುತ್ತಿದ್ದೆನು. ನನ್ನ ಹೆಣ್ಣುಮಕ್ಕ
ಳಿಗೂ ಮೊಮ್ಮಕ್ಕಳಿಗೂ ಮುದ್ದಿಡುವದಕ್ಕಾದರೂ ಆಗ
ದಂತೆ ಮಾಡಿದಿ. ನೀನು ಮಾಡಿದ್ದು ಹುಚ್ಚು ಕೆಲ
29 ಸವೇ ಸರಿ. ನಿಮಗೆ ಕೇಡುಮಾಡುವದಕ್ಕೆ ನನ್ನಲ್ಲಿ
ಸಾಮರ್ಥ್ಯವುಂಟು; ಆದರೆ ಹೋದ ರಾತ್ರಿಯಲ್ಲಿ
ನಿಮ್ಮ ತಂದೆಯ ದೇವರು—ಯಾಕೋಬನಿಗೆ ಏನೂ
ಅನ್ನಬೇಡ ನೋಡಿಕೋ ಎಂದು ನನಗೆ ಎಚ್ಚರಿಸಿ
30 ದನು. ಆದರೆ ತಂದೆಯ ಮನೆಗೆ ಹೋಗುವದಕ್ಕೆ
ನಿನಗೆ ಬಹಳ ಆಶೆಯಿರುವದರಿಂದ ಹೋಗಬೇಕಾ
ಯಿತು. ಆದಿರಲಿ; ನನ್ನ ದೇವರುಗಳನ್ನು ಕದ್ದದ್ದು
31 ಯಾಕೆ ಎಂದು ಹೇಳಿದನು. ಅದಕ್ಕೆ ಯಾಕೋಬ
ನು—ನೀನು ನಿನ್ನ ಹೆಣ್ಣುಮಕ್ಕಳನ್ನು ಬಲಾತ್ಕಾರ
ದಿಂದ ತೆಗೆದುಕೊಳ್ಳುವಿ ಎಂದು ಭಯಪಟ್ಟು [ಹೀಗೆ
32 ಹೊರಟು ಬಂದೆನು]. ನಿನ್ನ ದೇವರುಗಳು ಯಾರ
ಬಳಿಯಲ್ಲಿ ಸಿಕ್ಕುತ್ತವೆಯೋ ಅವನು ಸಾಯಲಿ.
ನಮ್ಮ ಬಂಧುಗಳ ಎದುರಾಗಿ ನನ್ನ ಸೊತ್ತನ್ನು
ಪರೀಕ್ಷಿಸಬಹುದು; ಅದರಲ್ಲಿ ನಿನ್ನದೇನಾದರೂ ಸಿಕ್ಕಿ
ದರೆ ಅದನ್ನು ತೆಗೆದುಕೋ ಎಂದು ಹೇಳಿದನು.
ರಾಹೇಲಳು ಆ ದೇವರುಗಳನ್ನು ಕದ್ದದ್ದು ಯಾಕೋ
33 ಬನಿಗೆ ತಿಳಿದಿರಲಿಲ್ಲ. ಲಾಬಾನನು ಯಾಕೋಬನ
ಗುಡಾರದಲ್ಲಿಯೂ ಲೇಯಳ ಗುಡಾರದಲ್ಲಿಯೂ ಆ
ಇಬ್ಬರು ದಾಸಿಯರ ಗುಡಾರದಲ್ಲಿಯೂ ಹುಡುಕಿ
ದನು. ಆದರೂ ಅವನಿಗೇನೂ ಸಿಕ್ಕಲಿಲ್ಲ. ಲೇಯಳ
ಗುಡಾರವನ್ನು ಬಿಟ್ಟು ರಾಹೇಲಳ ಗುಡಾರಕ್ಕೆ ಬಂದ
34 ನು. ರಾಹೇಲಳು ಆ ವಿಗ್ರಹಗಳನ್ನು ತೆಗೆದುಕೊಂಡು
ಒಂಟೆಯ ಸಬರದೊಳಗಿಟ್ಟು ಅವುಗಳ ಮೇಲೆ ಕೂತಿ
ದ್ದಳು. ಲಾಬಾನನು ಗುಡಾರದಲ್ಲಿದ್ದ ಸಾಮಾನ
ನ್ನೆಲ್ಲಾ ಮುಟ್ಟಿಮುಟ್ಟಿ ನೋಡಿದರೂ ಅವುಗಳನ್ನು
35 ಕಾಣಲಿಲ್ಲ. ರಾಹೇಲಳು ತನ್ನ ತಂದೆಗೆ—ಅಪ್ಪಾ
ನಾನು ನಿನ್ನ ಮುಂದೆ ಎದ್ದು ನಿಂತುಕೊಳ್ಳದೆ ಹೋದ
ರೂ ಕೋಪಿಸಿಕೊಳ್ಳಬೇಡ; ನಾನು ಮುಟ್ಟಾಗಿದ್ದೇನೆ
ಎಂದು ಹೇಳಿದ್ದರಿಂದ ಅವನು ಚೆನ್ನಾಗಿ ಹುಡುಕಿ
ದರೂ ಆ ವಿಗ್ರಹಗಳನ್ನು ಕಂಡುಕೊಳ್ಳಲಿಲ್ಲ.
36 ಆಗ ಯಾಕೋಬನು ಕೋಪಿಸಿಕೊಂಡು ಲಾಬಾನ
ನನ್ನು ಗದರಿಸಿ—ನೀನು ಇಷ್ಟು ಆತುರಪಟ್ಟು
ನನ್ನನ್ನು ಹಿಂದಟ್ಟಿ ಬರುವಂತೆ ನಾನೇನು ದ್ರೋಹ
ಮಾಡಿದೆನು? ನನ್ನ ಸಾಮಾನನ್ನೆಲ್ಲಾ ಪರೀಕ್ಷಿಸಿ 37
ನೋಡುವಂತೆ ನಾನೇನು ತಪ್ಪುಮಾಡಿದೆನು? ನಿನ್ನ
ಸೊತ್ತು ಏನಾದರೂ ನನ್ನಲ್ಲಿ ಸಿಕ್ಕಿದೆಯೋ? ನನ್ನ
ವರ ಮುಂದೆಯೂ ನಿನ್ನವರ ಮುಂದೆಯೂ ಅದನ್ನು
ತಂದಿಡು ನೋಡೋಣ; ಇವರೇ ನಮ್ಮಿಬ್ಬರ ನ್ಯಾಯ
ವನ್ನು ತೀರಿಸಲಿ. ನಾನು ಇಪ್ಪತ್ತು ವರುಷ ನಿನ್ನ 38
ಬಳಿಯಲ್ಲಿದ್ದೆನಲ್ಲಾ. ನಿನ್ನ ಆಡುಕುರಿಗಳು ಕಂದು
ಹಾಕಲಿಲ್ಲ; ನಿನ್ನ ಹಿಂಡಿನ ಟಗರುಗಳನ್ನು ನಾನೇನೂ
ತಿಂದುಬಿಡಲಿಲ್ಲ; ಕಾಡುಮೃಗಗಳು ಕೊಂದ ಪಶು 39
ಗಳನ್ನು ನಿನ್ನ ಭಾಗಕ್ಕೆ ಹಾಕದೆ ನಾನೇ ಬದಲು
ಕೊಟ್ಟೆನು; ಹಗಲಾಗಲಿ ಇರುಳಾಗಲಿ ಕದ್ದು ಹೋದ
ದ್ದರ ಲೆಕ್ಕವನ್ನು ನನ್ನಿಂದಲೇ ತೆಗೆದುಕೊಂಡಿ; ಹಗ 40
ಲಲ್ಲಿ ಬಿಸಿಲಿನಿಂದಲೂ ಇರುಳಲ್ಲಿ ಚಳಿಯಿಂದಲೂ
ಬಾಧೆಪಟ್ಟೆನು; ನಿದ್ದೆಮಾಡುವದಕ್ಕಾದರೂ ಅವಕಾಶ
ವಾಗಲಿಲ್ಲ; ನನ್ನ ಸ್ಥಿತಿ ಹೀಗಿತ್ತು. ಇಪ್ಪತ್ತು ವರುಷ 41
ನಿನ್ನ ಮನೆಯಲ್ಲಿದ್ದೆನು; ನಿನ್ನಿಬ್ಬರ ಹೆಣ್ಣುಮಕ್ಕಳಿ
ಗಾಗಿ ಹದಿನಾಲ್ಕು ವರುಷವೂ ನಿನ್ನ ಆಡುಕುರಿಗಳಿ
ಗಾಗಿ ಆರು ವರುಷವೂ ಸೇವೆಮಾಡಿದೆನು. ನೀನು
ಹತ್ತು ಸಾರಿ ನನ್ನ ಸಂಬಳವನ್ನು ಬದಲಾಯಿಸಿದಿ.
ನನ್ನ ಹಿರಿಯರ ದೇವರು, ಅಂದರೆ ಅಬ್ರಹಾಮನ 42
ದೇವರೂ ಇಸಾಕನು ಭಯಭಕ್ತಿಯಿಂದ ಸೇವಿಸುವ
ದೇವರೂ ಆಗಿರುವಾತನು, ನನ್ನ ಪಕ್ಷದಲ್ಲಿ ಇರ
ದಿದ್ದರೆ ನಿಶ್ಚಯವಾಗಿ ನೀನು ನನ್ನನ್ನು ಬರಿಗೈಯಾಗಿ
ಕಳುಹಿಸುತ್ತಿದ್ದಿ. ದೇವರು ನನ್ನ ಕಷ್ಟವನ್ನೂ ನಾನು
ಪಟ್ಟ ಪ್ರಯಾಸವನ್ನೂ ನೋಡಿದ್ದರಿಂದಲೇ ನಿನ್ನೆಯ
ರಾತ್ರಿ ನಿನ್ನನ್ನು ಗದರಿಸಿದನು ಅಂದನು.
ಅದಕ್ಕೆ ಲಾಬಾನನು ಯಾಕೋಬನಿಗೆ—ಈ ಹೆಂಗ 43
ಸರು ನನ್ನ ಕುಮಾರ್ತೆಗಳಲ್ಲವೇ, ಈ ಮಕ್ಕಳು ನನ್ನ
ಮೊಮ್ಮಕ್ಕಳಲ್ಲವೇ, ಈ ಹಿಂಡುಗಳೂ ನನ್ನವೇ, ನಿನ್ನ
ಕಣ್ಣಮುಂದೆ ಇರುವದೆಲ್ಲವೂ ನನ್ನದಲ್ಲವೇ. ಆದರೆ
ಈ ನನ್ನ ಕುಮಾರ್ತೆಗಳಿಗೋಸ್ಕರವೂ ಇವರು ಹೆತ್ತ
ಮಕ್ಕಳಿಗೋಸ್ಕರವೂ ಈಗ ನಾನೇನು ಮಾಡುವೆನು?
ನಾವಿಬ್ಬರು ಸೇರಿ ಒಂದು ಒಡಂಬಡಿಕೆಯನ್ನು 44
ಮಾಡಿಕೊಳ್ಳೋಣ ಬಾ; ಅದಕ್ಕೆ ಒಂದು ಸಾಕ್ಷಿ
ಯಿರಲಿ ಎಂದು ಹೇಳಿದನು.
ಆಗ ಯಾಕೋಬನು ಕಲ್ಲನ್ನು ತೆಗೆದುಕೊಂಡು 45
ಕಂಬವಾಗಿ ನಿಲ್ಲಿಸಿದನು. ಯಾಕೋಬನು ತನ್ನ 46
ಕಡೆಯವರಿಗೆ—ಕಲ್ಲುಗಳನ್ನು ಕೂಡಿಸಿರಿ ಎಂದು
ಹೇಳಲು ಅವರು ಕಲ್ಲುಗಳನ್ನು ಕೂಡಿಸಿ ಕುಪ್ಪೆ
ಯನ್ನು ಮಾಡಿದಾಗ ಅವರೆಲ್ಲರೂ ಆ ಕುಪ್ಪೆಯ
ಬಳಿಯಲ್ಲಿ ಸಹಭೋಜನವನ್ನು ಮಾಡಿದರು. ಆ 47
ಕುಪ್ಪೆಗೆ ಲಾಬಾನನು 1)ಯಗರಸಾಹದೂತ
ಎಂದೂ ಯಾಕೋಬನು 1)ಗಲೇದ್ ಎಂದೂ ಹೆಸ
ರಿಟ್ಟರು. ಲಾಬಾನನು—ಈ ಹೊತ್ತು ನಿನಗೂ 48
ನನಗೂ ಆದ ಒಡಂಬಡಿಕೆಗೆ ಈ ಕುಪ್ಪೆಯೇ ಸಾಕ್ಷಿ
ಎಂದು ಹೇಳಿದ್ದರಿಂದ ಅದಕ್ಕೆ ಗಲೇದೆಂದು ಹೆಸರಾ
ಯಿತು. ಅದಲ್ಲದೆ ಅವನು—ನಾವು ಒಬ್ಬರಿಗೊಬ್ಬರು 49
ಅಗಲಿರುವಾಗ ಯೆಹೋವನೇ ನಮ್ಮುಭಯರನ್ನೂ

1) ಈ ಎರಡು ಹೆಸರುಗಳಿಗೂ—ಸಾಕ್ಷಿಗಾಗಿ ಹಾಕಿರುವ ಕುಪ್ಪೆ ಎಂಬದು ಅರ್ಥ.

ನೋಡಿಕೊಳ್ಳುತ್ತಾ ಇರುವನು ಎಂದು ಹೇಳಿದ್ದರಿಂದ
50 ಅದಕ್ಕೆ [1])ಮಿಚ್ಪಾ ಎಂದು ಹೆಸರಾಯಿತು. ಮತ್ತು
ಲಾಬಾನನು—ನೀನು ನನ್ನ ಹೆಣ್ಣುಮಕ್ಕಳನ್ನು
ನೋಯಿಸಿದರೆ ಅಥವಾ ಬೇರೆ ಸ್ತ್ರೀಯರನ್ನು ಮದುವೆ
ಮಾಡಿಕೊಂಡರೆ ವಿಚಾರಿಸುವವರು ಮನುಷ್ಯರೊಳಗೆ
ಯಾರೂ ಇಲ್ಲದಿದ್ದರೂ ದೇವರೇ ನಮ್ಮ ಒಡಂಬಡಿ
51 ಕೆಗೆ ಸಾಕ್ಷಿ ಅಂದನು. ಇದಲ್ಲದೆ ಲಾಬಾನನು
ಯಾಕೋಬನಿಗೆ—ನಿನಗೂ ನನಗೂ ನಡುವೆ ನಾನು
ನಿಲ್ಲಿಸಿರುವ ಈ ಕಂಬವನ್ನು ನೋಡು, ಈ ಕುಪ್ಪೆ
52 ಯನ್ನೂ ನೋಡು. ಕೇಡುಮಾಡುವದಕ್ಕೋಸ್ಕರ
ನಾನಂತೂ ಈ ಕುಪ್ಪೆಯನ್ನು ದಾಟಿ ನಿನ್ನ ಬಳಿಗೆ
ಬರಕೂಡದು; ಹಾಗೆಯೇ ನೀನು ಈ ಕುಪ್ಪೆಯನ್ನೂ
ಈ ಕಂಬವನ್ನೂ ದಾಟಿ ನನ್ನ ಬಳಿಗೆ ಬರಕೂಡದು;
ಇದಕ್ಕೆ ಕುಪ್ಪೆಯೂ ಕಂಬವೂ ಈ ಎರಡೇ ಸಾಕ್ಷಿ.
53 ಅಬ್ರಹಾಮ ನಾಹೋರರ ದೇವರು ಅಂದರೆ ಅವರ
ತಂದೆಯ ದೇವರು ನಿನಗೂ ನನಗೂ ನ್ಯಾಯತೀರಿ
ಸಲಿ ಅಂದನು. ಆದೇ ಮೇರೆಗೆ ಯಾಕೋಬನು
ತನ್ನ ತಂದೆಯಾದ ಇಸಾಕನು ಭಯಭಕ್ತಿಯಿಂದ
ಸೇವಿಸುವ ದೇವರ ಮೇಲೆ ಆಣೆಯಿಟ್ಟು ಪ್ರಮಾಣ
54 ಮಾಡಿದನು. ಇದಲ್ಲದೆ ಯಾಕೋಬನು ಆ ಬೆಟ್ಟದ
ಮೇಲೆ ಯಜ್ಞವನ್ನು ಮಾಡಿ ತನ್ನ ಬಂಧುಗಳನ್ನು
ತನ್ನೊಡನೆ ಸಹಭೋಜನಕ್ಕೆ ಕರಸಿದನು. ಅವರು ಸಹ
ಭೋಜನಮಾಡಿ ಆ ರಾತ್ರಿಯೆಲ್ಲಾ ಬೆಟ್ಟದ ಮೇಲೆ
55 ಇದ್ದರು. ಬೆಳಿಗ್ಗೆ ಲಾಬಾನನು ಎದ್ದು ತನ್ನ ಹೆಣ್ಣು
ಮಕ್ಕಳಿಗೂ ಮೊಮ್ಮಕ್ಕಳಿಗೂ ಮುದ್ದಿಟ್ಟು ಅವರನ್ನು
ಆಶೀರ್ವದಿಸಿ ತನ್ನ ಊರಿಗೆ ಹೊರಟುಹೋದನು.

ಯಾಕೋಬನು ಏಸಾವನ ದಾರೀ ನೋಡುತ್ತಿರಲು ದೇವರಿಗೆ
ಪ್ರಾರ್ಥಿಸಿದ್ದೂ ದೈವಪುರುಷನ ಸಂಗಡ ಹೋರಾಡಿದ್ದೂ.

**32** ಯಾಕೋಬನು ಮುಂದೆ ಪ್ರಯಾಣಮಾಡಲು
2 ದೇವದೂತರು ಅವನೆದುರಿಗೆ ಬಂದರು. ಅವನು
ಅವರನ್ನು ನೋಡಿದಾಗ—ಅದು ದೇವರ ಪಾಳೆಯ
ಎಂದು ಹೇಳಿ ಆ ಸ್ಥಳಕ್ಕೆ [2])ಮಹನಯಿಮ್ ಎಂದು
ಹೆಸರಿಟ್ಟನು.
3 ಬಳಿಕ ಯಾಕೋಬನು ಎದೋಮ್ಯರ ದೇಶವಾಗಿ
ರುವ ಸೇಯಿರ್‌ಸೀಮೆಗೆ ತನ್ನ ಅಣ್ಣನಾದ ಏಸಾ
ವನ ಬಳಿಗೆ ದೂತರನ್ನು ಮುಂದೆ ಕಳುಹಿಸಿದನು.
4 ಕಳುಹಿಸುವಾಗ ಅವರಿಗೆ—ನೀವು ನನ್ನ ಪ್ರಭುವಾದ
ಏಸಾವನ ಬಳಿಗೆ ಹೋಗಿ ಅವನಿಗೆ—ನಿನ್ನ ಸೇವಕ
ನಾದ ಯಾಕೋಬನು ಇಷ್ಟು ದಿವಸ ಲಾಬಾನನ
5 ಬಳಿಯಲ್ಲಿ ವಾಸವಾಗಿದ್ದನು; ಅವನಿಗೆ ಎತ್ತು, ಕತ್ತೆ
ಮುಂತಾದ ಪಶುಗಳ ಹಿಂಡುಗಳೂ ದಾಸದಾಸೀ
ಜನವೂ ಉಂಟಾದವು; ತಮ್ಮ ದಯವಿರಬೇಕೆಂದು
ಪ್ರಭುಗಳಿಗೆ ತಿಳಿಸುವದಕ್ಕೆ ನಮ್ಮನ್ನು ಕಳುಹಿಸಿದ್ದಾ
6 ನೆಂದು ಹೇಳಿರಿ ಅಂದನು. ತರುವಾಯ ಆ ದೂತರು
ಯಾಕೋಬನ ಬಳಿಗೆ ತಿರಿಗಿ ಬಂದು—ನಾವು ನಿನ್ನ
ಅಣ್ಣನಾದ ಏಸಾವನ ಹತ್ತಿರಕ್ಕೆ ಹೋಗಿ ಬಂದಿದ್ದೇವೆ.

ಅವನು ನಾನೂರು ಜನರ ಸಮೇತ ನಿನ್ನನ್ನು ಎದುರು
ಗೊಳ್ಳುವದಕ್ಕೆ ಬರುತ್ತಾನೆಂದು ಹೇಳಿದಾಗ ಯಾಕೋ
ಬನಿಗೆ ಬಹು ಭಯವೂ ಕಳವಳವೂ ಉಂಟಾದವು.
ಅವನು ತನ್ನೊಂದಿಗಿದ್ದ ಜನರನ್ನೂ ಕುರಿ ದನ ಒಂಟೆ
ಗಳನ್ನೂ ಎರಡು ಪಾಳೆಯ ಮಾಡಿ—ಏಸಾವನು
ಒಂದು ಪಾಳೆಯದ ಮೇಲೆ ಬಿದ್ದರೂ ಮತ್ತೊಂದು
ಪಾಳೆಯವು ತಪ್ಪಿಸಿಕೊಂಡು ಹೋಗುವದು ಅಂದು
ಕೊಂಡನು. ಇದಲ್ಲದೆ ಅವನು ದೇವರನ್ನು ಪ್ರಾರ್ಥಿಸಿ—
ಯೆಹೋವನೇ, ನನ್ನ ತಂದೆತಾತಂದಿರಾದ ಇಸಾಕ ಅಬ್ರ
ಹಾಮರ ದೇವರೇ, ಸ್ವದೇಶಕ್ಕೆ ಬಂಧುಗಳ ಬಳಿಗೆ ತಿರಿಗಿ
ಹೋಗಬೇಕೆಂದು ನನಗೆ ಆಜ್ಞಾಪಿಸಿ ನಿನಗೆ ಒಳ್ಳೇ
ದನ್ನು ಮಾಡುವೆನೆಂದು ನನಗೆ ವಾಗ್ದಾನಮಾಡಿದವನು
ನೀನೇ ಅಲ್ಲವೇ. ನೀನು ನಿನ್ನ ದಾಸನಾದ ನನ್ನ ಮೇಲೆ
ಎಷ್ಟೋ ಪ್ರೀತಿಯನ್ನಿಟ್ಟು ನಿನ್ನ ವಾಗ್ದಾನವನ್ನು ನೆರ
ವೇರಿಸಿದ್ದೀಯಲ್ಲಾ. ನಾನು ಅದಕ್ಕೆ ಕೇವಲ ಅಪಾತ್ರ
ನಾಗಿದ್ದೇನೆ. ನಾನು ಮೊದಲು ಈ ಯೊರ್ದನ್
ನದಿಯನ್ನು ದಾಟಿದಾಗ ನನಗೆ ಕೋಲು ಮಾತ್ರವೇ
ಇತ್ತು; ಈಗ ಎರಡು ಪಾಳೆಯಗಳಿಗೆ ಒಡೆಯನಾಗಿ
ದ್ದೇನೆ. ನನ್ನ ಅಣ್ಣನಾದ ಏಸಾವನು ಬಂದು
ನನ್ನನ್ನೂ ನನ್ನ ಮಕ್ಕಳನ್ನೂ ಅವರ ತಾಯಿಯನ್ನೂ
ಕೊಲ್ಲುವನೋ ಏನೋ ಎಂದು ನನಗೆ ಭಯವದೆ.
ಅವನ ಕೈಗೆ ಸಿಕ್ಕದಂತೆ ನಮ್ಮನ್ನು ಕಾಪಾಡಬೇಕೆಂದು
ನಿನ್ನನ್ನು ಬೇಡಿಕೊಳ್ಳುತ್ತೇನೆ. ನಿನಗೆ ಒಳ್ಳೇದನ್ನು
ಮಾಡಿ ನಿನ್ನ ಸಂತತಿಯನ್ನು ಸಮುದ್ರದ ಉಸುಬಿ
ನಂತೆ ಅಸಂಖ್ಯವಾಗಿ ಅಭಿವೃದ್ಧಿಮಾಡುವೆನೆಂದು
ನೀನು ನನಗೆ ಹೇಳಿದಿಯಲ್ಲವೇ ಅಂದನು.
ಅವನು ಆ ರಾತ್ರಿ ಅಲ್ಲೇ ಇಳುಕೊಂಡು ಇನ್ನೂ 13,
ರು ಆಡು, ಇಪ್ಪತ್ತು ಹೋತ, ಇನ್ನೂರು ಕುರಿ, ಇಪ್ಪ
ತ್ತು ಟಗರು, ಮರಿಯೊಡನೆ ಹಾಲು ಕರೆಯುವ
ಮೂವತ್ತು ಒಂಟೆ, ನಾಲ್ವತ್ತು ಆಕಳು, ಹತ್ತು ಹೋರಿ,
ಇಪ್ಪತ್ತು ಹೆಣ್ಣುಕತ್ತೆ, ಹತ್ತು ಕತ್ತೇಮರಿ ಇವುಗಳನ್ನು
ತನ್ನ ಅಣ್ಣನಾದ ಏಸಾವನಿಗೆ ಕಾಣಿಕೆಗಾಗಿ ತೆಗೆದು
ಕೊಂಡನು. ಇವುಗಳ ಪ್ರತಿಯೊಂದು ಹಿಂಡನ್ನು
ತನ್ನ ಸೇವಕರ ವಶಕ್ಕೆ ಒಪ್ಪಿಸಿ—ನೀವು ನನಗಿಂತ
ಮುಂಚಿತವಾಗಿ ನದಿಯನ್ನು ದಾಟಿಹೋಗಿರಿ, ಮತ್ತು
ಹಿಂಡು ಹಿಂಡಿಗೆ ಬಿಡುವು ಇರಲಿ ಅಂದನು. ಮೊದ
ಲನೆಯ ಹಿಂಡಿನ ಮೇಲಿದ್ದವನಿಗೆ—ನನ್ನ ಅಣ್ಣನಾದ
ಏಸಾವನು ನಿನ್ನೆದುರಿಗೆ ಬಂದು—ನೀನು ಯಾರ
ಸೇವಕನು? ಎಲ್ಲಿಗೆ ಹೋಗುತ್ತೀ? ನಿನ್ನ ಮುಂದೆ
ಇರುವ ಇವೆಲ್ಲಾ ಯಾರವು ಎಂದು ಕೇಳಿದರೆ
ನೀನು—ಇವು ನಿಮ್ಮ ಸೇವಕನಾದ ಯಾಕೋಬನವು;
ತನ್ನ ಪ್ರಭುಗಳಾದ ನಿಮಗೆ ಇವುಗಳನ್ನು ಕಾಣಿಕೆ
ಯಾಗಿ ಕಳುಹಿಸಿಕೊಟ್ಟಿದ್ದಾನೆ; ತಾನೂ ನಮ್ಮ
ಹಿಂದೆ ಬರುತ್ತಾನೆ ಎಂದು ಉತ್ತರಕೊಡಬೇಕು ಎಂಬ
ದಾಗಿ ಅಪ್ಪಣೆಕೊಟ್ಟನು. ಹಾಗೆಯೇ ಎರಡನೆಯವ
ನಿಗೂ ಮೂರನೆಯವನಿಗೂ ಹಿಂಡುಗಳ ಹಿಂದೆ
ಹೋದವರೆಲ್ಲರಿಗೂ—ನೀವು ಏಸಾವನನ್ನು ಕಾಣು
ವಾಗ ಇದೇ ರೀತಿಯಾಗಿ ಮಾತಾಡಿ—ನಿನ್ನ ಸೇವಕ

1) ಮಿಚ್ಪಾ ಅಂದರೆ ಕಾವಲುಸ್ಥಳ.
2) ಮಹನಯಿಮ್ ಅಂದರೆ ಎರಡು ಪಾಳೆಯಗಳು.

ನಾದ ಯಾಕೋಬನೇ ನಮ್ಮ ಹಿಂದೆ ಬರುತ್ತಾನೆ
ಅನ್ನಿರಿ ಎಂದು ಅಪ್ಪಣೆಕೊಟ್ಟನು. ಯಾಕೋಬನು
ತನ್ನೊಳಗೆ—ನನ್ನ ಮುಂದೆ ಹೋಗುವ ಈ ಕಾಣಿಕೆ
ಯಿಂದ ಏಸಾವನನ್ನು ಸಮಾಧಾನಪಡಿಸಿದ ಮೇಲೆ
ಅವನ ಸನ್ನಿಧಿಗೆ ಸೇರುವೆನು; ಒಂದು ವೇಳೆ ನನ್ನನ್ನು
ಪ್ರೀತಿಯಿಂದ ಅಂಗೀಕರಿಸುವನು ಅಂದುಕೊಂಡನು.
ಆದಕಾರಣ ಅವನು ಆ ಕಾಣಿಕೆಯನ್ನು ತನಗೆ
ಮುಂಚಿತವಾಗಿ ಹೊಳೆಯಿಂದಾಚೆಗೆ ದಾಟಿಸಿ ತಾನು
ಆ ರಾತ್ರಿ ತನ್ನ ಪಾಳೆಯದೊಳಗೆ ಇದ್ದನು.

ಆ ರಾತ್ರಿ ಅವನು ತನ್ನ ಇಬ್ಬರು ಹೆಂಡರನ್ನೂ
ಇಬ್ಬರು ದಾಸಿಯರನ್ನೂ ಹನ್ನೊಂದು ಮಂದಿ ಮಕ್ಕ
ಳನ್ನೂ ಕರೆದುಕೊಂಡು 1)ಯಬ್ಬೋಕ್ ಹೊಳೆಯನ್ನು
ದಾಟುವ ಸ್ಥಳದಲ್ಲಿ ದಾಟಿದನು. ಅವರನ್ನೂ ತನ್ನ
ಆಸ್ತಿಯೆಲ್ಲವನ್ನೂ ದಾಟಿಸಿದ ಮೇಲೆ ಯಾಕೋಬನು
ಒಂಟಿಗನಾಗಿ ಹಿಂದೆ ನಿಂತಿರಲು ಯಾರೋ ಒಬ್ಬ
ಪುರುಷನು ಬೆಳಗಾಗುವ ತನಕ ಅವನ ಸಂಗಡ
ಹೋರಾಡಿದನು. ಆ ಪುರುಷನು ತಾನು ಗೆಲ್ಲದೆ
ಇರುವದನ್ನು ಕಂಡು ಯಾಕೋಬನ ತೊಡೆಯ ಕೀಲ
ನ್ನು ಮುಟ್ಟಿದ್ದರಿಂದ ಯಾಕೋಬನು ಅವನ ಸಂಗಡ
ಹೋರಾಡುತ್ತಿರುವಾಗಲೇ ಅವನ ತೊಡೆಯ ಕೀಲು
ತಪ್ಪಿತು. ಆ ಪುರುಷನು—ನನ್ನನ್ನು ಬಿಡು, ಬೆಳಗಾ
ಗುತ್ತದೆ ಅನ್ನಲು, ಯಾಕೋಬನು—ನೀನು ನನ್ನನ್ನು
ಆಶೀರ್ವದಿಸಿದ ಹೊರತು ನಿನ್ನನ್ನು ಬಿಡುವದಿಲ್ಲ
ಅಂದನು. ಆ ಪುರುಷನು—ನಿನ್ನ ಹೆಸರೇನು ಎಂದು
ಕೇಳಿದ್ದಕ್ಕೆ ಅವನು—ಯಾಕೋಬನು ಅಂದಾಗ,
ಅವನು ಯಾಕೋಬನಿಗೆ—ಇನ್ನು ಮೇಲೆ ನೀನು
ಯಾಕೋಬನೆನ್ನಿಸಿಕೊಳ್ಳುವದಿಲ್ಲ; ದೇವರ ಸಂಗಡ
ಲೂ ಮನುಷ್ಯರ ಸಂಗಡಲೂ ಹೋರಾಡಿ ಗೆದ್ದವನಾ
ದ್ದರಿಂದ ನಿನಗೆ 2)ಇಸ್ರಾಯೇಲೆಂದು ಹೆಸರುಂಟಾಗು
ವದು ಎಂದು ಹೇಳಿದನು. ಯಾಕೋಬನು—ನಿನ್ನ
ಹೆಸರನ್ನು ನನಗೆ ತಿಳಿಸಬೇಕು ಸ್ವಾಮಿ ಅಂದಾಗ
ಆ ಪುರುಷನು—ನನ್ನ ಹೆಸರನ್ನು ವಿಚಾರಿಸುವದೇಕೆ
ಎಂದು ಹೇಳಿ ಅಲ್ಲಿ ಅವನನ್ನು ಆಶೀರ್ವದಿಸಿದನು.
ಯಾಕೋಬನು—ನಾನು ದೇವರನ್ನೇ ಪ್ರತ್ಯಕ್ಷವಾಗಿ
ನೋಡಿದ್ದೇನಲ್ಲಾ; ಆದರೂ ನನ್ನ ಪ್ರಾಣ ಉಳಿದದೆ
ಅಂದುಕೊಂಡು ಆ ಸ್ಥಳಕ್ಕೆ ಪೆನೀಯೇಲ್ ಎಂದು
ಹೆಸರಿಟ್ಟನು. ಅವನು ಪೆನೂವೇಲನ್ನು ದಾಟುತ್ತಿರು
ವಾಗ ಸೂರ್ಯೋದಯವಾಯಿತು. ಅವನು ತೊಡೆಯ
ನಿಮಿತ್ತ ಕುಂಟಿಕೊಂಡು ನಡೆದನು. ಆ ಪುರುಷನು
ಯಾಕೋಬನ ತೊಡೆಯ ಕೀಲನ್ನು ಮುಟ್ಟಿದ್ದರಿಂದ
ಇಸ್ರಾಯೇಲ್ಯರು ಇಂದಿನ ವರೆಗೂ ತೊಡೆಯ ಕೀಲಿನ
ಮೇಲಿರುವ ಸೊಂಟದ ಮಾಂಸವನ್ನು ತಿನ್ನುವದಿಲ್ಲ.

ಯಾಕೋಬನು ಏಸಾವನನ್ನು ಸಂಧಿಸಿದ್ದು.

3 ಯಾಕೋಬನು ಕಣ್ಣೆತ್ತಿ ನೋಡಿದಾಗ ಏಸಾ
ವನು ನಾನೂರು ಮಂದಿ ಮನುಷ್ಯರ ಸಮೇತ
ಬರುವದನ್ನು ಕಂಡನು. ಆಗ ಅವನು ಲೇಯಳಿಗೂ
ರಾಹೇಲಳಿಗೂ ಇಬ್ಬರು ದಾಸಿಯರಿಗೂ ಅವರವರ
ಮಕ್ಕಳನ್ನು ಒಪ್ಪಿಸಿ ಅವರನ್ನು ಬೇರೆ ಬೇರೆ ಮಾಡಿ
ಮುಂದುಗಡೆಯಲ್ಲಿ ದಾಸಿಯರನ್ನೂ ಅವರ ಮಕ್ಕ 2
ಳನ್ನೂ ಅವರ ಹಿಂದೆ ಲೇಯಳನ್ನೂ ಆಕೆಯ ಮಕ್ಕ
ಳನ್ನೂ ಕಟ್ಟಕಡೆಯಲ್ಲಿ ರಾಹೇಲಳನ್ನೂ ಯೋಸೇಫ
ನನ್ನೂ ಬರಮಾಡಿದನು. ತಾನೇ ಅವರ ಮುಂದಾಗಿ 3
ಹೋಗಿ ತನ್ನ ಅಣ್ಣನಿಗೆ ಸಮೀಪಿಸುತ್ತಿರುವಾಗ ಏಳು
ಸಾರಿ ನೆಲದ ತನಕ ಬೊಗ್ಗಿ ನಮಸ್ಕರಿಸಿದನು. ಆದರೆ 4
ಏಸಾವನು ಅವನನ್ನು ಎದುರುಗೊಳ್ಳುವದಕ್ಕೆ ಓಡಿ
ಬಂದು ಅವನ ಕೊರಳನ್ನು ಅಪ್ಪಿಕೊಂಡು ಮುದ್ದಿ
ಟ್ಟನು. ಅವರಿಬ್ಬರೂ ಕಣ್ಣೀರುಸುರಿಸಿದರು. ತರು 5
ವಾಯ ಏಸಾವನು ಕಣ್ಣೆತ್ತಿ ಆ ಸ್ತ್ರೀಯರನ್ನೂ ಮಕ್ಕ
ಳನ್ನೂ ಕಂಡು—ನಿನ್ನ ಜೊತೆಯಲ್ಲಿರುವ ಇವರು
ಯಾರೆಂದು ಕೇಳಲು ಯಾಕೋಬನು ಅವನಿಗೆ—
ದೇವರು ನಿನ್ನ ಸೇವಕನಿಗೆ ಅನುಗ್ರಹಿಸಿಕೊಟ್ಟ ಮಕ್ಕ
ಳೇ ಇವರು ಎಂದು ಹೇಳಿದನು. ಆಗ ಅವನ ದಾಸಿ 6
ಯರಿಬ್ಬರೂ ತಮ್ಮ ಮಕ್ಕಳನ್ನು ಕರಕೊಂಡು ಹತ್ತಿ
ರಕ್ಕೆ ಬಂದು ನಮಸ್ಕಾರಮಾಡಿದರು; ಆ ಮೇಲೆ 7
ಲೇಯಳು ತನ್ನ ಮಕ್ಕಳೊಡನೆ ಬಂದು ಅಡ್ಡಬಿದ್ದಳು;
ಕಡೆಯಲ್ಲಿ ಯೋಸೇಫನೂ ರಾಹೇಲಳೂ ಬಂದು
ಎರಗಿದರು. ಏಸಾವನು—ನಾನು ದಾರಿಯಲ್ಲಿ ಕಂಡ 8
ಆ ಪಶುಗಳ ಹಿಂಡುಗಳು ಯಾತಕ್ಕೆ ಎಂದು ಕೇಳ
ಲು ಯಾಕೋಬನು—ಸ್ವಾಮಿಯವರ ದಯ ನನಗೆ
ದೊರಕಬೇಕೆಂದು ನಾನು ತಮಗೆ ಕಳುಹಿಸಿಕೊಟ್ಟೆನು
ಅಂದನು. ಏಸಾವನು—ತಮ್ಮನೇ, ನನಗೆ ಬೇಕಾ 9
ದಷ್ಟು ಆಸ್ತಿಯುಂಟು; ನಿನ್ನದು ನಿನಗೇ ಇರಲಿ
ಅನ್ನಲು ಯಾಕೋಬನು—ಹಾಗೆ ಅಪ್ಪಣೆಕೊಡಕೂ 10
ಡದು; ನೀನು ನನ್ನ ಮೇಲೆ ಕಟಾಕ್ಷವಿಟ್ಟು ನಾನು
ಸಮರ್ಪಿಸುವ ಕಾಣಿಕೆಯನ್ನು ಅಂಗೀಕರಿಸಬೇಕು.
ನಿನ್ನನ್ನು ನೋಡಿದ್ದು ದೇವರನ್ನು ನೋಡಿದ ಹಾಗಾ
ಯಿತು. ನನ್ನನ್ನು ಪ್ರೀತಿಯಿಂದ ಅಂಗೀಕರಿಸಿದ್ದೇ
ವಿಶೇಷ. ದೇವರು ನನಗೆ ಕೃಪೆಯನ್ನು ಮಾಡಿದ್ದ 11
ರಿಂದ ನನಗೆ ಸಮೃದ್ಧಿಯುಂಟು; ಆದಕಾರಣ ನಾನು
ಸಮರ್ಪಿಸುವ ಕಾಣಿಕೆಯನ್ನು ನೀನು ದಯವಿಟ್ಟು
ಅಂಗೀಕರಿಸಬೇಕು ಎಂದು ಹೇಳಿ ಏಸಾವನನ್ನು ಬಲ
ವಂತಮಾಡಿದ್ದರಿಂದ ಅವನು ಆ ಕಾಣಿಕೆಯನ್ನು ತೆಗೆ
ದುಕೊಂಡನು. ತರುವಾಯ ಏಸಾವನು—ನಾವು 12
ಮುಂದಕ್ಕೆ ಪ್ರಯಾಣವನ್ನು ಬೆಳಿಸೋಣ; ನಾನು
ಮುಂದಾಗಿ ಹೋಗುತ್ತೇನೆ ಅಂದನು. ಅದಕ್ಕೆ ಯಾ 13
ಕೋಬನು—ನನ್ನ ಮಕ್ಕಳು ಎಳೇ ಪ್ರಾಯದವರು;
ಅದಲ್ಲದೆ ಈದಿರುವ ದನಕುರಿಗಳು ನನ್ನ ಬಳಿಯಲ್ಲಿ
ರುವದು ಪ್ರಭುವಿಗೆ ತಿಳಿದಿದೆ; ಒಂದೇ ದಿನ ಹೆಚ್ಚಾಗಿ
ದಾರಿನಡಿಸಿದರೆ ಆಡುಕುರಿಗಳೆಲ್ಲವೂ ಸತ್ತುಹೋದಾವು.
ತಾವು ದಯವಿಟ್ಟು ಸೇವಕನಿಗಿಂತಲೂ ಮುಂಚೆ 14
ಹೊರಡಬಹುದು. ನಾನು ನನ್ನ ಮುಂದಿರುವ ಆಡು
ಕುರಿಗಳ ನಡಿಗೆಗೂ ಮಕ್ಕಳ ಶಕ್ತಿಗೂ ಸರಿಯಾಗಿ
ಮೆಲ್ಲಮೆಲ್ಲನೆ ನಡೆದು ನನ್ನ ಪ್ರಭುವಿನ ಸೀಮೆಯಾಗಿ
ರುವ ಸೇಯೀರಿಗೆ ಬರುತ್ತೇನೆ ಅಂದನು. ಏಸಾ 15

1) ಯಬ್ಬೋಕ್ ಅಂದರೆ ಹೋರಾಟ. 2) ದೇವರ ಸಂಗಡ ಹೋರಾಡಿದ ಮನುಷ್ಯ ಎಂಬರ್ಥವಿದ್ದ ಹಾಗೆ.

ವನು—ನನ್ನ ಆಳುಗಳಲ್ಲಿ ಕೆಲವರನ್ನು ನಿನ್ನ ಸಂಗಡ
ಬಿಟ್ಟು ಹೋಗುತ್ತೇನೆ ಅನ್ನಲು ಯಾಕೋಬನು—
ಅದೇಕೆ, ತಮ್ಮ ದಯ ನನ್ನ ಮೇಲಿದ್ದರೆ ಸಾಕು
16 ಎಂದು ಹೇಳಿದನು. ಏಸಾವನು ಆ ದಿವಸವೇ
17 ಸೇಯಿರ್ ಸೀಮೆಗೆ ಹೊರಟುಹೋದನು. ಯಾ
ಕೋಬನು ಪ್ರಯಾಣಮಾಡಿ ಸುಕ್ಕೋತಿಗೆ ಬಂದನು.
ಅಲ್ಲಿ ತನಗೋಸ್ಕರ ಮನೆಯನ್ನೂ ದನಗಳಿಗೆ ಚಪ್ಪರ
ಗಳನ್ನೂ ಮಾಡಿಸಿದನು; ಆದದರಿಂದ ಆ ಸ್ಥಳಕ್ಕೆ
1)ಸುಕ್ಕೋತ್ ಎಂದು ಹೆಸರಾಯಿತು.

ಯಾಕೋಬನ ಮಗಳಿಗೆ ಶೆಕೆಮಿನ ಪಟ್ಟಣದಲ್ಲಿ
ಮಾನಭಂಗವಾದ್ದರಿಂದ ಆಕೆಯ ಅಣ್ಣಂದಿರು ಆ
ಪಟ್ಟಣದವರನ್ನು ಸಂಹರಿಸಿದ್ದು.

18 ಯಾಕೋಬನು ಪದ್ದನ್‍ಅರಾಮಿನಿಂದ ಬಂದ
ಮೇಲೆ ಕಾನಾನ್‍ದೇಶದ 2)ಶೆಕೆಮ್ ಪಟ್ಟಣಕ್ಕೆ ಸುರಕ್ಷಿ
ತವಾಗಿ ಸೇರಿದನು. ಆ ಊರಿನ ಮುಂದೆ ತನ್ನ
19 ಗುಡಾರಗಳನ್ನು ಹಾಕಿಸಿಕೊಂಡನು. ಅವನು ತನ್ನ
ಗುಡಾರಗಳನ್ನು ಹಾಕಿಸಿದ ಭೂಮಿಯನ್ನು ಹಮೋರನ
ಮಕ್ಕಳಿಗೆ ನೂರು ವರಹಾ ಕೊಟ್ಟು ಅವರಿಂದ ಕೊಂಡು
20 ಕೊಂಡನು. ಹಮೋರನು ಶೆಕೆಮನ ತಂದೆ. ಅಲ್ಲಿ
ಯಾಕೋಬನು ಯಜ್ಞವೇದಿಯನ್ನು ಕಟ್ಟಿಸಿ ಅದಕ್ಕೆ
3)ಏಲೆಲೋಹೇ ಇಸ್ರಾಯೇಲ್ ಎಂದು ಹೆಸರಿಟ್ಟನು.

34 ಯಾಕೋಬನಿಗೆ ಲೇಯಳಲ್ಲಿ ಹುಟ್ಟಿದ ದೀನಳು
ಬಂದಾನೊಂದು ದಿವಸ ಆ ದೇಶದ ಸ್ತ್ರೀಯರನ್ನು
2 ನೋಡುವದಕ್ಕೆ ಹೊರಗೆ ಬಂದಾಗ ದೇಶಾಧಿಪತಿಯಾ
ಗಿರುವ ಹಿವ್ವಿಯನಾದ ಹಮೋರನ ಮಗ ಶೆಕೆಮನು
ಆಕೆಯನ್ನು ನೋಡಿ ತೆಗೆದುಕೊಂಡುಹೋಗಿ ಕೂಡಿ
3 ಮಾನಭಂಗಪಡಿಸಿದನು. ಅವನ ಮನಸ್ಸು ಯಾ
ಕೋಬನ ಮಗಳಾದ ದೀನಳ ಮೇಲೆಯೇ ಇತ್ತು;
ಆ ಹುಡುಗಿಯನ್ನು ಮೋಹಿಸಿ ಆಕೆಯ ಸಂಗಡ
4 ಮನವೊಲಿಸುವ ಮಾತುಗಳನ್ನಾಡಿದನು. ಅವನು
ತನ್ನ ತಂದೆಯಾದ ಹಮೋರನನ್ನು—ನೀನು ಆ
ಹುಡುಗಿಯನ್ನು ನನಗೆ ಮದುವೆಮಾಡಿಸಬೇಕೆಂದು
5 ಕೇಳಿಕೊಂಡನು. ಯಾಕೋಬನು ತನ್ನ ಮಗಳಾದ
ದೀನಳಿಗೆ ಶೆಕೆಮನಿಂದ ಮಾನಭಂಗವಾದ ವರ್ತಮಾನ
ವನ್ನು ಕೇಳಿದಾಗ ಅವನ ಗಂಡುಮಕ್ಕಳು ಅಡವಿ
ಯಲ್ಲಿ ದನಗಳನ್ನು ಕಾಯುತ್ತಿದ್ದರು. ಅವರು
6 ಬರುವ ತನಕ ಅವನು ಸುಮ್ಮನೇ ಇದ್ದನು. ಅಷ್ಟ
ರಲ್ಲಿ ಶೆಕೆಮನ ತಂದೆಯಾದ ಹಮೋರನು ಯಾಕೋ
ಬನ ಸಂಗಡ ಮಾತಾಡುವದಕ್ಕೆ ಊರಿಂದ ಹೊರಗೆ
7 ಬಂದನು. ಯಾಕೋಬನ ಗಂಡುಮಕ್ಕಳು ತಂಗಿಯ
ಸಂಗತಿಯನ್ನು ಕೇಳಿ ಅಡವಿಯಿಂದ ಬಂದಾಗ ವ್ಯಥೆ
ಪಟ್ಟು ಬಹಳ ಕೋಪಗೊಂಡರು. ಶೆಕೆಮನು ಯಾ
ಕೋಬನ ಮಗಳನ್ನು ಕೂಡಿ ಇಸ್ರಾಯೇಲ್ಯರೊಳಗೆ
ಬಹಳ ಅವಮಾನಕರವಾದ ಕೆಲಸವನ್ನು ನಡಿಸಿದನು;
ಅದು ಆಗಬಾರದ ಕಾರ್ಯ.

ಹಮೋರನು ಅವರಿಗೆ—ನನ್ನ ಮಗನಾದ ಶೆಕೆಮ
ನು ನಿಮ್ಮ ಹುಡುಗಿಯನ್ನು ಬಹಳ ಅಪೇಕ್ಷೆಯಿಂ
ಮೋಹಿಸಿದ್ದಾನೆ; ಆಕೆಯನ್ನು ಅವನಿಗೆ ಮದು
ಮಾಡಿಕೊಡಬೇಕೆಂದು ಕೇಳಿಕೊಳ್ಳುತ್ತೇನೆ. ಇ
ಲ್ಲದೆ ನೀವು ನಮ್ಮಲ್ಲೀ ವಾಸವಾಗಿದ್ದು ನಿಮ್ಮ ಹೆಣ್ಣು
ಮಕ್ಕಳನ್ನು ನಮಗೆ ಕೊಡುತ್ತಾ ನಮ್ಮ ಹೆಣ್ಣುಮ
ಳನ್ನು ನೀವು ತೆಗೆದುಕೊಳ್ಳುತ್ತಾ ಬೀಗರಾಗಿರಬೇಕ
ದೇಶವೆಲ್ಲಾ ನಿಮ್ಮ ಮುಂದೆ ಅದೆ; ಅದರಲ್ಲಿ ವಾಸಿ
ವ್ಯಾಪಾರಮಾಡಿ ಆಸ್ತಿಯನ್ನು ಸಂಪಾದಿಸಿಕೊ
ಬಹುದು ಎಂದು ಹೇಳಿದನು. ಶೆಕೆಮನು ಆ ಹುಡು
ಗಿಯ ತಂದೆಗೂ ಅಣ್ಣಂದಿರಿಗೂ—ನಿಮ್ಮ ದಯೆ
ನನ್ನ ಮೇಲೆ ಇರಲಿ; ನೀವು ಹೇಳುವಷ್ಟು ಕೊಡು
ತ್ತೇನೆ; ಹೆಣ್ಣಿಗಾಗಿ ತೆರವನ್ನೂ ಕಾಣಿಕೆಯನ್ನೂ ನೀ
ಹೇಳುವ ಮೇರೆಗೆ ಎಷ್ಟಾದರೂ ಕೊಡುತ್ತೇನೆ. ಹೇಗ
ಆ ಹುಡುಗಿಯನ್ನು ನನಗೆ ಮದುವೆಮಾಡಿಕೊ
ಬೇಕು ಎಂದು ಹೇಳಿದನು.

ಶೆಕೆಮನು ತಮ್ಮ ತಂಗಿಯಾದ ದೀನಳನ್ನು ಕೆ
ಸಿದ್ದರಿಂದ ಯಾಕೋಬನ ಮಕ್ಕಳು ಅವನಿಗೂ ಅವ
ತಂದೆಯಾದ ಹಮೋರನಿಗೂ ಕಪಟದಿಂದ ಉತ್ತ
ಕೊಟ್ಟು—ಸುನ್ನತಿಯಿಲ್ಲದವನಿಗೆ ನಮ್ಮ ತಂಗಿಯನ
ಕೊಡುವದಕ್ಕಾಗುವದಿಲ್ಲ; ಹಾಗೆ ಕೊಡುವದ
ನಮಗೆ ಅಪಮಾನ. ನಿಮ್ಮಲ್ಲಿ ಪುರುಷರೆಲ್ಲರು
ಸುನ್ನತಿಮಾಡಿಸಿಕೊಂಡು ನಮ್ಮಂತೆ ಆಗಬೇಕು. ಹಿ
ಗಾಗುವ ಪಕ್ಷದಲ್ಲಿ ಮಾತ್ರ ನಾವು ನಿಮ್ಮ ಮಾತಿ
ಒಪ್ಪಿ ನಮ್ಮ ಹೆಣ್ಣುಮಕ್ಕಳನ್ನು ನಿಮಗೆ ಕೊಡುತ್ತಾ
ನಿಮ್ಮ ಹೆಣ್ಣುಮಕ್ಕಳನ್ನು ನಾವು ತೆಗೆದುಕೊಳ್ಳುತ್ತಾ
ನಿಮ್ಮಲ್ಲಿ ವಾಸಮಾಡಿ ನಿಮ್ಮೊಂದಿಗೆ ಒಂದೇ ಕುಲವ
ಗಿರುವೆವು. ನೀವು ನಮ್ಮ ಮಾತಿಗೆ ಒಪ್ಪದೆ ಸುನ್ನ
ಮಾಡಿಸಿಕೊಳ್ಳದೆ ಹೋದರೆ ನಾವು ನಮ್ಮ ಹುಡು
ಯನ್ನು ಕರೆದುಕೊಂಡು ಹೊರಟುಹೋಗುತ್ತೇ
ಅಂದರು.

ಅವರು ಹೇಳಿದ್ದು ಹಮೋರನಿಗೂ ಅವನ ಮ
ನಾದ ಶೆಕೆಮನಿಗೂ ಒಳ್ಳೇದೆಂದು ತೋಚಿತು.
ಯೌವನಸ್ಥನು ಯಾಕೋಬನ ಮಗಳಲ್ಲಿ ಅನುರ
ನಾಗಿದ್ದದರಿಂದ ಅವರು ಹೇಳಿದಂತೆ ಮಾಡುವದ
ತಡೆಮಾಡಲಿಲ್ಲ. ಅವನೇ ತನ್ನ ತಂದೆಯ ಮನೆಯ
ವರೆಲ್ಲರಲ್ಲಿ ಘನವಂತನಾಗಿದ್ದನು. ಹಮೋರನು
ಅವನ ಮಗನಾದ ಶೆಕೆಮನೂ ಊರುಬಾಗಲಿ
ಹೋಗಿ ಊರಿನವರೆಲ್ಲರ ಸಂಗಡ ಮಾತಾಡಿ—
ಜನರು ನಮ್ಮೊಡನೆ ಸಮಾಧಾನದಿಂದಿದ್ದಾರೆ; ಅವರ
ನಮ್ಮ ದೇಶದಲ್ಲೇ ವಾಸಮಾಡಿಕೊಂಡು ವ್ಯಾಪಾ
ಮಾಡಲಿ; ಈ ದೇಶವು ಅವರಿಗೂ ನಮಗೂ ಸಾಕ
ಗುವಷ್ಟು ವಿಸ್ತಾರವಾಗಿದೆಯಷ್ಟೆ; ನಾವು ಅವ
ಹೆಣ್ಣುಮಕ್ಕಳನ್ನು ಮದುವೆಮಾಡಿಕೊಳ್ಳೋಣ, ನಮ
ಹೆಣ್ಣುಮಕ್ಕಳನ್ನು ಅವರಿಗೆ ಕೊಡೋಣ. ಆದ
ಅವರು ಸುನ್ನತಿಮಾಡಿಸಿಕೊಂಡವರಾದ್ದರಿಂದ ನಮ
ಲ್ಲಿಯೂ ಪುರುಷರೆಲ್ಲರು ಸುನ್ನತಿಮಾಡಿಸಿಕೊಳ್ಳಬ

1) ಸುಕ್ಕೋತ್ ಅಂದರೆ ಚಪ್ಪರಗಳು. 2) ಪಾಠಾಂತರ: ಶೆಕೆಮಿಗೆ ಸೇರಿರುವ ಸಾಲೆಮ್ ಎಂಬ ಊರಿಗೆ ಬ
3) ಏಲೆಲೋಹೇ ಇಸ್ರಾಯೇಲ್ ಅಂದರೆ ದೇವರೇ ಇಸ್ರಾಯೇಲನ ದೇವರು.

ಕನ್ನುತ್ತಾರೆ; ಹೀಗಾದರೆ ಮಾತ್ರ ಅವರು ನಮ್ಮಲ್ಲಿ ವಾಸಿಸುವದಕ್ಕೂ ನಮ್ಮ ಸಂಗಡ ಒಂದೇ ಕುಲವಾಗುವದಕ್ಕೂ ಒಪ್ಪುವರು. ಅವರ ಕುರಿದನಗಳೂ ಅವರ ಆಸ್ತಿಯೂ ಅವರ ಎಲ್ಲಾ ಪಶುಗಳೂ ನಮ್ಮವುಗಳೇ ಆಗುವವಲ್ಲವೇ. ಅವರು ನಮ್ಮಲ್ಲಿ ವಾಸಮಾಡುವ ಹಾಗೆ ನಾವು ಅವರ ಮಾತಿಗೆ ಒಪ್ಪಿಕೊಳ್ಳೋಣ ಎಂದು ಹೇಳಿದರು. ಹಮೋರನೂ ಅವನ ಮಗನಾದ ಶೆಕೆಮನೂ ಹೇಳಿದ ಮಾತಿಗೆ ಊರಿನವರೆಲ್ಲರೂ ಸಮ್ಮತಿಪಟ್ಟದ್ದರಿಂದ ಅವರಲ್ಲಿದ್ದ ಪುರುಷರೆಲ್ಲರೂ ಸುನ್ನತಿಮಾಡಿಸಿಕೊಂಡರು.

ಮೂರನೆಯ ದಿನದಲ್ಲಿ ಅವರು ಗಾಯದಿಂದ ಬಹು ಬಾಧೆಪಡುತ್ತಿರುವಾಗ ಯಾಕೋಬನ ಮಕ್ಕಳಲ್ಲಿ ದೀನಳ ಅಣ್ಣಂದಿರಾದ ಸಿಮೆಯೋನ್, ಲೇವಿ ಎಂಬ ಇಬ್ಬರು ಕೈಯಲ್ಲಿ ಕತ್ತಿಹಿಡುಕೊಂಡು ನಿರ್ಭಯವಾಗಿದ್ದ ಆ ಊರಿನವರ ಮೇಲೆ ಬಿದ್ದು ಹಮೋರ್ ಮತ್ತು ಅವನ ಮಗನಾದ ಶೆಕೆಮ್ ಸಹಿತವಾಗಿ ಪುರುಷರೆಲ್ಲರನ್ನೂ ದಾಕ್ಷಿಣ್ಯವಿಲ್ಲದೆ ಕೊಂದು ಶೆಕೆಮನ ಮನೆಯಿಂದ ದೀನಳನ್ನು ಕರೆದುಕೊಂಡು ಹೊರಟುಹೋದರು. ಅವರು ಹತವಾದನಂತರ ಯಾಕೋಬನ ಮಕ್ಕಳು ಬಂದು—ಇವರು ನಮ್ಮ ತಂಗಿಯನ್ನು ಅವಮಾನಪಡಿಸಿದರಲ್ಲಾ ಎಂದು ಹೇಳಿ ಊರನ್ನು ಸೂರೆಮಾಡಿಬಿಟ್ಟರು. ಅವರ ಕುರಿ ದನ ಕತ್ತೆಗಳನ್ನೂ ಊರಲ್ಲಿಯೂ ಅಡವಿಯಲ್ಲಿಯೂ ಇದ್ದ ಅವರ ಆಸ್ತಿಯೆಲ್ಲವನ್ನೂ ಸುಲುಕೊಂಡು ಅವರ ಮಕ್ಕಳನ್ನೂ ಹೆಂಡರನ್ನೂ ಸೆರೆಹಿಡಿದು ಮನೆಯಲ್ಲಿದ್ದದ್ದನ್ನೆಲ್ಲಾ ಬಾಚಿಕೊಂಡರು.

ಯಾಕೋಬನು ಸಿಮೆಯೋನ್ ಲೇವಿಯರಿಗೆ—ನೀವು ಈ ದೇಶದ ನಿವಾಸಿಗಳಾದ ಕಾನಾನ್ಯರಲ್ಲಿಯೂ ಪೆರಿಜೀಯರಲ್ಲಿಯೂ ನನ್ನ ಹೆಸರು ದುರ್ವಾಸನೆಯಾಗುವಂತೆ ಮಾಡಿ ನನ್ನನ್ನು ಅಪಾಯಕ್ಕೆ ಗುರಿಮಾಡಿದ್ದೀರಿ. ನನಗಿರುವ ಜನರು ಸ್ವಲ್ಪವೇ; ಈ ದೇಶದವರು ಒಟ್ಟಾಗಿ ನನ್ನ ಮೇಲೆ ಬಂದು ನನ್ನನ್ನು ಹೊಡೆದರೆ ನಾನೂ ನನ್ನ ಮನೆಯವರೆಲ್ಲರೂ ನಾಶವಾಗುವೆವು ಅಲ್ಲವೇ ಎಂದು ಹೇಳಲು ಅವರು—ನಮ್ಮ ತಂಗಿಯನ್ನು ಸೂಳೆಯಂತೆ ನಡಿಸಬಹುದೋ ಎಂದು ಹೇಳಿದರು.

ಯಾಕೋಬನು ತನ್ನ ಮನೆಯಲ್ಲಿ ಅನ್ಯದೇವರುಗಳ ಪೂಜೆಯನ್ನು ತಪ್ಪಿಸಿ ಬೇತೇಲಿಗೆ ಬಂದದ್ದು.

5 ದೇವರು ಯಾಕೋಬನಿಗೆ—ನೀನು ಈ ಸ್ಥಳವನ್ನು ಬಿಟ್ಟು ಗಟ್ಟಾ ಹತ್ತಿ ಬೇತೇಲಿಗೆ ಹೋಗಿ ಅಲ್ಲೇ ವಾಸಮಾಡು. ನೀನು ನಿನ್ನ ಅಣ್ಣನಾದ ಏಸಾವನ ಬಳಿಯಿಂದ ಓಡಿಹೋದ ಕಾಲದಲ್ಲಿ ದೇವರು ಅಲ್ಲಿ ನಿನಗೆ ದರ್ಶನಕೊಟ್ಟನಲ್ಲಾ; ಆತನಿಗಾಗಿ ಯಜ್ಞವೇದಿಯನ್ನು ಕಟ್ಟಿಸು ಎಂದು ಹೇಳಿದನು. ಆಗ ಯಾಕೋಬನು ತನ್ನ ಮನೆಯವರಿಗೂ ತನ್ನ ಸಂಗಡ ಇದ್ದವರೆಲ್ಲರಿಗೂ—ನಿಮ್ಮಲ್ಲಿರುವ
ಅನ್ಯದೇವರುಗಳನ್ನು ತಳ್ಳಿಬಿಟ್ಟು ನಿಮ್ಮನ್ನು ಶುದ್ಧೀ
ಕರಿಸಿಕೊಂಡು ಮಡಿವಸ್ತ್ರಗಳನ್ನು ಹಾಕಿಕೊಳ್ಳಿರಿ;
ನಾವು ಬೇತೇಲಿಗೆ ಹೊರಟುಹೋಗೋಣ. ಕಷ್ಟಕಾಲ 3
ದಲ್ಲಿ ನನ್ನ ವಿಜ್ಞಾಪನೆಯನ್ನು ಲಾಲಿಸಿ ನಾನು
ಹೋದ ಮಾರ್ಗದಲ್ಲೆಲ್ಲಾ ನನ್ನ ಸಂಗಡ ಇದ್ದ
ದೇವರಿಗೆ ಅಲ್ಲಿ ಯಜ್ಞವೇದಿಯನ್ನು ಕಟ್ಟಿಸುತ್ತೇನೆ
ಎಂದು ಹೇಳಿದನು. ಆಗ ಅವರು ತಮ್ಮಲ್ಲಿದ್ದ 4
ಎಲ್ಲಾ ಅನ್ಯದೇವರುಗಳನ್ನೂ ತಮ್ಮ ಕಿವಿಗಳಲ್ಲಿದ್ದ
ಮುರುವುಗಳನ್ನೂ ಯಾಕೋಬನಿಗೆ ಒಪ್ಪಿಸಲು ಅವನು
ಅವುಗಳನ್ನು ಶೆಕೆಮ್ ಪಟ್ಟಣದ ಹತ್ತರವಿರುವ
ಏಲಾವೃಕ್ಷದ ಬುಡದಲ್ಲಿ ಹೂಳಿಟ್ಟನು. ಆ ಮೇಲೆ 5
ಅವರು ಪ್ರಯಾಣಮಾಡುತ್ತಿರುವಾಗ ದೇವರು ಹುಟ್ಟಿ
ಸಿದ ಭಯವು ಸುತ್ತುಮುತ್ತಣ ಊರುಗಳಲ್ಲಿ ಇದ್ದ
ದರಿಂದ ಆ ಊರುಗಳವರು ಯಾಕೋಬನ ಮಕ್ಕ
ಳನ್ನು ಹಿಂದಟ್ಟಿ ಬರಲಿಲ್ಲ. ಯಾಕೋಬನೂ ಅವನ 6
ಸಂಗಡ ಇದ್ದ ಜನರೆಲ್ಲರೂ ಕಾನಾನ್‌ದೇಶದಲ್ಲಿರುವ
ಬೇತೇಲೆಂಬ ಲೂಜಿಗೆ ಮುಟ್ಟಿದರು. ಅವನು ತನ್ನ 7
ಅಣ್ಣನ ಬಳಿಯಿಂದ ಓಡಿಹೋಗಲು ದೇವರು ಅಲ್ಲೇ
ಅವನಿಗೆ ಪ್ರತ್ಯಕ್ಷನಾದದರಿಂದ ಅವನು ಅಲ್ಲಿ ಯಜ್ಞ
ವೇದಿಯನ್ನು ಕಟ್ಟಿಸಿ ಆ ಸ್ಥಳಕ್ಕೆ 1)ಏಲ್ ಬೇತೇಲ್
ಎಂದು ಹೆಸರಿಟ್ಟನು.
ಅಲ್ಲಿ ರೆಬೆಕ್ಕಳ ದಾದಿಯಾದ ದೆಬೋರಳು ಸತ್ತು 8
ಹೋಗಲು ಅವರು ಆಕೆಗೆ ಬೇತೇಲಿನ ತಗ್ಗಿನಲ್ಲಿರುವ
ಅಲ್ಲೋನ್ ಮರದ ಬುಡದಲ್ಲಿ ಸಮಾಧಿಮಾಡಿ
ಅದಕ್ಕೆ 2)ಅಲ್ಲೋನ್ ಬಾಕೂತ್ ಎಂದು ಹೆಸರಿಟ್ಟರು.

ದೇವರು ಅಬ್ರಹಾಮ್ ಇಸಾಕರಿಗೆ ಮಾಡಿದ್ದ ವಾಗ್ದಾನಗಳನ್ನು ಯಾಕೋಬನಿಗೂ ಮಾಡಿದ್ದು.

ಯಾಕೋಬನು ಪದ್ದನ್‌ಅರಾಮಿನಿಂದ ಬಂದಾಗ 9
ದೇವರು ತಿರಿಗಿ ಅವನಿಗೆ ದರ್ಶನಕೊಟ್ಟು ಅವನನ್ನು
ಆಶೀರ್ವದಿಸಿದನು. ದೇವರು ಅವನಿಗೆ—ನಿನ್ನ ಹೆಸರು 10
ಯಾಕೋಬನಲ್ಲವೇ; ಇನ್ನು ಮೇಲೆ ನೀನು ಯಾ
ಕೋಬನೆನಿಸಿಕೊಳ್ಳದೆ ಇಸ್ರಾಯೇಲನೆನಿಸಿಕೊಳ್ಳಬೇಕು
ಎಂದು ಹೇಳಿ ಅವನಿಗೆ ಇಸ್ರಾಯೇಲ ಎಂದು
ಹೆಸರಿಟ್ಟನು. ಇದಲ್ಲದೆ ನಾನು ಸರ್ವಶಕ್ತನಾದ 11
ದೇವರು. ನೀನು ಬಹುಸಂತಾನವುಳ್ಳವನಾಗಿ ಹೆಚ್ಚು.
ನಿನ್ನಿಂದ ಜನಾಂಗವುಂಟಾಗುವದು; ಅನೇಕ ಜನಾಂಗ
ಗಳೂ ಅರಸರೂ ನಿನ್ನಿಂದ ಹುಟ್ಟುವರು. ನಾನು 12
ಅಬ್ರಹಾಮ್ ಇಸಾಕರಿಗೆ ವಾಗ್ದಾನಮಾಡಿದ ದೇಶ
ವನ್ನು ನಿನಗೂ ನಿನ್ನ ತರುವಾಯ ಬರುವ ನಿನ್ನ
ಸಂತತಿಗೂ ಕೊಡುವೆನು ಎಂದು ಹೇಳಿ ತಾನು ಅವನ 13
ಸಂಗಡ ಮಾತಾಡಿದ ಸ್ಥಳದಿಂದ ಮೇಲಕ್ಕೇರಿ ಹೋ
ದನು. ಯಾಕೋಬನು ತನ್ನ ಸಂಗಡ ದೇವರು 14
ಮಾತಾಡಿದ ಸ್ಥಳದಲ್ಲಿ ಕಲ್ಲಿನ ಕಂಬವನ್ನು ನಿಲ್ಲಿಸಿ
ಅದರ ಮೇಲೆ ಪಾನಕಾಭಿಷೇಕಮಾಡಿ ಎಣ್ಣೇ ಹೊಯಿ
ದನು. ಅವನು ತನ್ನ ಸಂಗಡ ದೇವರು ಮಾತಾಡಿದ 15
ಸ್ಥಳಕ್ಕೆ ಬೇತೇಲೆಂದು ಹೆಸರಿಟ್ಟನು.

1) ಏಲ್ ಬೇತೇಲ್ ಅಂದರೆ ಬೇತೇಲಿನ ದೇವರು. 2) ಅಲ್ಲೋನ್ ಬಾಕೂತ್ ಅಂದರೆ ಗೋಳಾಟದ ಮರ.

ರಾಹೇಲಳು ಮೃತಪಟ್ಟದ್ದು; ಯಾಕೋಬನ ಮಕ್ಕಳ ವಿವರ;
ಇಸಾಕನು ಮೃತಪಟ್ಟದ್ದು.

16 ಅವರು ಬೇತೇಲಿನಿಂದ ಪ್ರಯಾಣಮಾಡುತ್ತಿರಲು
ಎಫ್ರಾತೂರಿಗೆ ಸೇರುವದಕ್ಕೆ ಇನ್ನೂ ಸ್ವಲ್ಪ ದೂರ
17 ವಿದ್ದಾಗ ರಾಹೇಲಳಿಗೆ ಹೆರಿಗೇ ಕಾಲ ಬಂತು. ಆಕೆ
ಹೆರಿಗೆಯ ಬೇನೆಯಿಂದ ಬಹು ಕಷ್ಟಪಡುತ್ತಿರುವಾಗ
ಸೂಲಗಿತ್ತಿಯು ಆಕೆಗೆ—ಅಂಜಬೇಡ; ಇನ್ನೊಂದು
ಗಂಡುಮಗುವು ಹುಟ್ಟುವದಲ್ಲಾ ಎಂದು ಹೇಳಿದಳು.
18 ಆದರೆ ರಾಹೇಲಳು ಸತ್ತುಹೋದಳು; ಪ್ರಾಣಹೋಗು
ತ್ತಿರುವಾಗ ಆಕೆಯು ಆ ಮಗುವಿಗೆ [1]ಬೆನೋನಿ ಎಂದು
ಹೆಸರಿಟ್ಟಳು; ಆದರೆ ಅದರ ತಂದೆಯು ಅದಕ್ಕೆ [2]ಬೆನ್ಯಾ
19 ಮೀನ್ ಎಂದು ಹೆಸರಿಟ್ಟನು. ಹಾಗೆ ರಾಹೇಲಳು ಮೃತ
ಪಟ್ಟಳು. ಬೇತ್ಲೆಹೇಮೆಂಬ ಎಫ್ರಾತಿಗೆ ಹೋಗುವ
20 ದಾರಿಯಲ್ಲಿ ಆಕೆಗೆ ಸಮಾಧಿಮಾಡಿದರು. ಯಾಕೋ
ಬನು ಆಕೆಯ ಸಮಾಧಿಯ ಮೇಲೆ ಕಂಬವನ್ನು ನಿಲ್ಲಿ
ಸಿದನು; ಅದು ಇಂದಿನ ವರೆಗೂ ರಾಹೇಲಳ ಸಮಾಧಿ
ಸ್ತಂಭವೆನಿಸಿಕೊಳ್ಳುತ್ತದೆ.
21 ಅಲ್ಲಿಂದ ಇಸ್ರಾಯೇಲನು ಪ್ರಯಾಣಮಾಡಿ
[3]ಮಿಗ್ದಲ್‌ಏದರಿನ ಆಚೆಯಲ್ಲಿ ತನ್ನ ಗುಡಾರವನ್ನು
22 ಹಾಕಿಸಿದನು. ಇಸ್ರಾಯೇಲನು ಆ ದೇಶದಲ್ಲಿ ವಾಸ
ವಾಗಿದ್ದಾಗ ರೂಬೇನನು ತನ್ನ ತಂದೆಯ ಉಪಪತ್ನಿ
ಯಾದ ಬಿಲ್ಹಳಲ್ಲಿ ಸಂಗಮಿಸಿದನು; ಮತ್ತು ಆ ಸಂಗ
ತಿಯು ಇಸ್ರಾಯೇಲನಿಗೆ ತಿಳಿದುಬಂತು.
ಯಾಕೋಬನ ಗಂಡು ಮಕ್ಕಳು ಹನ್ನೆರಡು ಮಂದಿ.
23 ಅವರು ಯಾರಾರಂದರೆ—ಯಾಕೋಬನ ಚೊಚ್ಚಲಮ
ಗನಾದ ರೂಬೇನ್; ಆ ಮೇಲೆ ಸಿಮೆಯೋನ್, ಲೇವಿ,
ಯೆಹೂದಾ, ಇಸ್ಸಾಕಾರ್, ಜೆಬುಲೂನ್; ಇವರು
24 ಲೇಯಳಲ್ಲಿ ಹುಟ್ಟಿದವರು. ಯೋಸೇಫ, ಬೆನ್ಯಾಮೀನ್
25 ಇವರಿಬ್ಬರು ರಾಹೇಲಳಲ್ಲಿ ಹುಟ್ಟಿದವರು. ದಾನ್,
ನಫ್ತಾಲಿಯರು ರಾಹೇಲಳ ದಾಸಿಯಾದ ಬಿಲ್ಹಳಲ್ಲಿ
26 ಹುಟ್ಟಿದವರು. ಗಾದ್, ಆಶೇರ್ ಇವರಿಬ್ಬರು ಲೇಯಳ
ದಾಸಿಯಾದ ಜಿಲ್ಪಳಲ್ಲಿ ಹುಟ್ಟಿದವರು. ಪದ್ದನ್‌ಅರಾ
ಮಿನಲ್ಲಿ ಯಾಕೋಬನಿಗೆ ಹುಟ್ಟಿದ ಮಕ್ಕಳು ಇವರೇ.
27 ಯಾಕೋಬನು ತನ್ನ ತಂದೆಯಾದ ಇಸಾಕನ ಬಳಿಗೆ
ಮಮ್ರೆಗೆ ಬಂದನು. ಮಮ್ರೆಯು ಹೆಬ್ರೋನೆಂಬ
ಕಿರ್ಯತರ್ಬಕ್ಕೆ ಸೇರಿರುವದು; ಅದೇ ಅಬ್ರಹಾಮ್
ಇಸಾಕರು ಪರದೇಶಸ್ಥರಾಗಿ ವಾಸವಾಗಿದ್ದ ಸ್ಥಳ.
28 ಇಸಾಕನು ದಿನತುಂಬಿದ ಮುದುಕನಾಗಿದ್ದು
ನೂರ ಎಂಭತ್ತನೆಯ ವರುಷದಲ್ಲಿ ಪ್ರಾಣಬಿಟ್ಟು ತನ್ನ
29 ಪಿತೃಗಳ ಬಳಿಗೆ ಸೇರಿದನು. ಅವನ ಮಕ್ಕಳಾದ
ಏಸಾವ ಯಾಕೋಬರು ಅವನಿಗೆ ಸಮಾಧಿಮಾಡಿದರು.

ಏಸಾವ್ಯರ ಕುಲಾಧಿಪತಿಗಳೂ ಅರಸರೂ.

36 ಎದೋಮನೆಂಬ ಏಸಾವನ ವಂಶಸ್ಥರು.
2 ಏಸಾವನು ಕಾನಾನ್ಯರ ಸ್ತ್ರೀಯರನ್ನು ಮದುವೆ
ಮಾಡಿಕೊಂಡಿದ್ದನು. ಅವರು ಯಾರಾರಂದರೆ—
ಹಿತ್ತಿಯನಾದ ಏಲೋನನ ಮಗಳಾಗಿದ್ದ ಆದಾ,
[4]ಹಿವ್ವಿಯನಾದ ಸಿಬೆಯೋನನ ಮಗಳಾದ ಅನಾ
ಹಳ ಮಗಳಾಗಿದ್ದ ಒಹೊಲೀಬಾಮ; ಮತ್ತು ಇಷ್ಮಾ
ಯೇಲನ ಮಗಳೂ ನೆಬಾಯೋತನ ತಂಗಿಯೂ
ಆಗಿದ್ದ ಬಾಸೆಮತ್ ಇವರೇ.
ಆದಾ ಎಂಬಾಕೆಯು ಏಸಾವನಿಗೆ ಎಲೀಫಜನನ್ನು
ಹೆತ್ತಳು. ಬಾಸೆಮತಳು ರೆಗೂವೇಲನನ್ನು ಹೆತ್ತಳು.
ಒಹೊಲೀಬಾಮಳು ಯೆಗೂಷನನ್ನೂ ಯಳಾಮ
ನನ್ನೂ ಕೋರಹನನ್ನೂ ಹೆತ್ತಳು. ಕಾನಾನ್ ದೇಶದಲ್ಲಿ
ಏಸಾವನಿಗೆ ಹುಟ್ಟಿದ ಮಕ್ಕಳು ಇವರೇ.
ಏಸಾವನು ತನ್ನ ಹೆಂಡರನ್ನೂ ಗಂಡು ಹೆಣ್ಣು
ಮಕ್ಕಳನ್ನೂ ತನ್ನ ಮನೆಗೆ ಸೇರಿದ ಸೇವಕರೆಲ್ಲರನ್ನೂ
ತನಗಿದ್ದ ಎಲ್ಲಾ ಪಶುಗಳ ಹಿಂಡುಗಳನ್ನೂ ತಾನು
ಕಾನಾನ್‌ದೇಶದಲ್ಲಿ ಸಂಪಾದಿಸಿದ್ದ ಆಸ್ತಿಯೆಲ್ಲವನ್ನೂ
ತೆಗೆದುಕೊಂಡು ತನ್ನ ತಮ್ಮನಾದ ಯಾಕೋಬನ
ಬಳಿಯಿಂದ ಪರದೇಶಕ್ಕೆ ಹೊರಟುಹೋದನು. ಅವರ
ಸಂಪತ್ತು ಹೆಚ್ಚಿದ್ದರಿಂದ ಅವರಿಬ್ಬರೂ ಒಂದೇ ಸ್ಥಳ
ದಲ್ಲಿರುವದಕ್ಕೆ ಅನುಕೂಲವಿರಲಿಲ್ಲ; ಅವರ ಪಶು
ಗಳು ಬಹಳವಾಗಿದ್ದದರಿಂದ ಅವರು ಪ್ರವಾಸವಾಗಿದ್ದ
ದೇಶವು ಅವರಿಗೆ ಸಾಲದೆಹೋಯಿತು. ಹೀಗಿರಲಾಗಿ
ಏಸಾವನು ಸೇಯಿರ್‌ಬೆಟ್ಟದ ಸೀಮೆಗೆ ಹೋಗಿ
ಅಲ್ಲೇ ವಾಸವಾಗಿದ್ದನು. ಏಸಾವನಂದರೆ ಎದೋಮನು.
ಸೇಯಿರ್ ಬೆಟ್ಟದ ಸೀಮೆಯಲ್ಲಿದ್ದ ಎದೋಮ್ಯರ
ಮೂಲಪುರುಷನಾದ ಏಸಾವನ ವಂಶಸ್ಥರ ಚರಿತ್ರೆ.
ಏಸಾವನ ಮಕ್ಕಳ ಹೆಸರುಗಳು ಯಾವವಂದರೆ—
ಎಲೀಫಜನು ಏಸಾವನ ಹೆಂಡತಿಯಾದ ಆದಾ ಎಂಬಾ
ಕೆಯ ಮಗನು; ರೆಗೂವೇಲನು ಏಸಾವನ ಹೆಂಡತಿ
ಯಾದ ಬಾಸೆಮತಳ ಮಗನು.
ಎಲೀಫಜನ ಮಕ್ಕಳು ಯಾರಂದರೆ—ತೇಮಾನ್,
ಓಮಾರ್, ಚೆಫೋ, ಗತಾಮ್, ಕೆನಜ್. ತಿಮ್ನ
ಎಂಬವಳು ಏಸಾವನ ಮಗನಾದ ಎಲೀಫಜನಿಗೆ
ಉಪಪತ್ನಿಯಾಗಿದ್ದು ಅವನಿಗೆ ಅಮಾಲೇಕನನ್ನು
ಹೆತ್ತಳು. ಇವರೇ ಏಸಾವನ ಹೆಂಡತಿಯಾದ ಆದಾ
ಎಂಬಾಕೆಯ ಸಾಲಿನವರು.
ರೆಗೂವೇಲನ ಮಕ್ಕಳು ಯಾರಂದರೆ—ನಹತ್,
ಜೆರಹ, ಶಮ್ಮಾ, ಮಿಜ್ಜಾ. ಇವರು ಏಸಾವನ ಹೆಂಡತಿ
ಯಾದ ಬಾಸೆಮತಳ ಸಾಲಿನವರು.
ಏಸಾವನ ಹೆಂಡತಿಯಾಗಿಯೂ ಸಿಬೆಯೋನನ
ಮಗಳಾದ ಅನಾಹಳ ಮಗಳಾಗಿಯೂ ಇದ್ದ ಒಹೊ
ಲೀಬಾಮಳ ಮಕ್ಕಳು ಯಾರಂದರೆ—ಯೆಗೂಷ್,
ಯಳಾಮ್, ಕೋರಹ ಇವರೇ.
ಏಸಾವನ ವಂಶಸ್ಥರ ಕುಲಪತಿಗಳು. ಏಸಾವನ
ಚೊಚ್ಚಲಮಗನಾದ ಎಲೀಫಜನಿಂದ ಹುಟ್ಟಿದವರು
ಯಾರಂದರೆ—ತೇಮಾನಕುಲಪತಿ, ಓಮಾರಕುಲ
ಪತಿ, ಚೆಫೋಕುಲಪತಿ, ಕೆನಜ್‌ಕುಲಪತಿ, ಕೋರಹ
ಕುಲಪತಿ, ಗತಾಮಕುಲಪತಿ, ಅಮಾಲೇಕಕುಲಪತಿ

1) ಬೆನೋನಿ ಅಂದರೆ ನನ್ನ ದುಃಖದ ಮಗನು. 2) ಬೆನ್ಯಾಮೀನ್ ಅಂದರೆ ಬಲಭುಜವು. 3) ಮಿಗ್ದಲ್‌ಏದರ್ ಅಂ
ಹಿಂಡನ್ನು ಕಾಯುವದಕ್ಕಾಗಿ ಇಟ್ಟಿರುವ ಕೊಡೆ. 4) ಪಾಠಾಂತರ: ಹೋರಿಯನಾದ.

ಇವರೇ. ಈ ಕುಲಪತಿಗಳು ಎದೋಮ್ಯರ ದೇಶದಲ್ಲಿ
ಆದಾ ಎಂಬಾಕೆಯ ಸಂತತಿಯಲ್ಲಿ ಹುಟ್ಟಿದವರು.
7 ಏಸಾವನ ಮಗನಾದ ರೆಗೂವೇಲನಿಗೆ ಹುಟ್ಟಿ
ದವರು ಯಾರಂದರೆ—ನಹತಕುಲಪತಿ, ಜೆರಹಕುಲ
ಪತಿ, ಶಮ್ಮಾಕುಲಪತಿ, ಮಿಜ್ಜಾಕುಲಪತಿ ಇವರೇ.
ಇವರು ಎದೋಮ್ಯರ ದೇಶದಲ್ಲಿ ಏಸಾವನ ಹೆಂಡತಿ
ಯಾದ ಬಾಸೆಮತಳ ಸಂತತಿಯೊಳಗೆ ಹುಟ್ಟಿದವರು.
8 ಏಸಾವನ ಹೆಂಡತಿಯಾದ ಒಹೊಲೀಬಾಮಳ
ಸಂತಾನದವರು ಯಾರಂದರೆ—ಯೆಗೂಷ್‌ಕುಲಪತಿ,
ಯಳಾಮಕುಲಪತಿ, ಕೋರಹಕುಲಪತಿ ಇವರೇ.
ಇವರು ಅನಾಹನ ಮಗಳಾಗಿಯೂ ಏಸಾವನ ಹೆಂಡತಿ
ಯಾಗಿಯೂ ಇದ್ದ ಒಹೊಲೀಬಾಮಳ ಸಂತಾನ
ದವರು.
ಎದೋಮನೆನಿಸಿಕೊಳ್ಳುವ ಏಸಾವನಿಂದ ಹುಟ್ಟಿದ
ಕುಲಗಳಿಗೆ ಇವರೇ ಕುಲಪತಿಗಳು.
ಆ ಸೀಮೆಯ ಮೂಲನಿವಾಸಿಗಳು ಹೋರಿಯ
ನಾದ ಸೇಯೀರನಿಂದ ಹುಟ್ಟಿದವರು; ಅವರು
ಯಾರಂದರೆ—ಲೋಟಾನ್, ಶೋಬಾಲ್, ಸಿಬೆ
ಯೋನ್, ಅನಾಹ, ದೀಶೋನ್, ಏಜೆರ್, ದೀಶಾನ್
ಇವರೇ. ಇವರು ಎದೋಮ್ಯರ ದೇಶದಲ್ಲಿ ಸೇಯೀ
ರನ ಸಂತತಿಯವರಾದ ಹೋರಿಯರಲ್ಲಿ ಹುಟ್ಟಿದ
ಕುಲಪತಿಗಳು.
ಲೋಟಾನನ ಮಕ್ಕಳು—ಹೋರಿ, ಹೇಮಾಮ್;
ಲೋಟಾನನ ತಂಗಿಯು ತಿಮ್ನಾ.
ಶೋಬಾಲನ ಮಕ್ಕಳು—ಅಲ್ವಾನ್, ಮಾನಹತ್,
ಗೇಬಾಲ್, ಶೆಫೋ, ಓನಾಮ್.
ಸಿಬೆಯೋನನ ಮಕ್ಕಳು—ಅಯ್ಯಾ, ಅನಾಹ.
ಈ ಅನಾಹನೇ ತನ್ನ ತಂದೆಯಾದ ಸಿಬೆಯೋನನ
ಕತ್ತೆಗಳನ್ನು ಮೇಯಿಸುತ್ತಿದ್ದಾಗ ಕಾಡಿನಲ್ಲಿ ಬಿಸಿ
ನೀರಿನ ಒರತೆಗಳನ್ನು ಕಂಡುಕೊಂಡವನು.
ಅನಾಹನ ಮಕ್ಕಳು—ದೀಶೋನ್ ಮತ್ತು ಅನಾ
ಹನ ಮಗಳಾದ ಒಹೊಲೀಬಾಮ.
ದೀಶೋನನ ಮಕ್ಕಳು—ಹೆಮ್ದಾನ್, ಎಷ್ಬಾನ್,
ಇತ್ರಾನ್, ಕೆರಾನ್.
ಏಜೆರನ ಮಕ್ಕಳು—ಬಿಲ್ಹಾನ್, ಜಾವಾನ್,
ಅಕಾನ್.
ದೀಶಾನನ ಮಕ್ಕಳು—ಊಚ್, ಅರಾನ್.
ಹೋರಿಯರಿಂದ ಹುಟ್ಟಿದ ಕುಲಪತಿಗಳು—
ಲೋಟಾನ್‌ಕುಲಪತಿ, ಶೋಬಾಲ್‌ಕುಲಪತಿ, ಸಿಬೆ
ಯೋನ್‌ಕುಲಪತಿ, ಅನಾಹಕುಲಪತಿ, ದೀಶೋನ್‌ಕುಲ
ಪತಿ, ಏಜೆರ್‌ಕುಲಪತಿ, ದೀಶಾನ್‌ಕುಲಪತಿ ಇವರೇ.
ಇವರು ಹೋರಿಯರಿಂದ ಹುಟ್ಟಿದವರಾಗಿ ಸೇಯೀರ್
ಸೀಮೆಯಲ್ಲಿ ಆಧಿಪತ್ಯನಡಿಸಿದ ಕುಲಪತಿಗಳು.
ಇಸ್ರಾಯೇಲ್ಯರ ಅರಸರು ಆಳುವದಕ್ಕಿಂತ ಮುಂಚೆ
ಎದೋಮ್ಯರ ದೇಶದಲ್ಲಿ ಆಳುತ್ತಿದ್ದ ಅರಸರ ಚರಿತ್ರೆ
ಹೇಗಂದರೆ—ಬೆಯೋರನ ಮಗನಾದ ಬೆಲಗನು ಎದೋ
ಮ್ಯರಲ್ಲಿ ಆಳಿದನು; ಅವನ ರಾಜಧಾನಿಯ ಹೆಸರು
ದಿನ್ಹಾಬಾ. ಬೆಲಗನು ಸತ್ತ ಮೇಲೆ ಬೊಚ್ರದವ
ನಾದ ಜೆರಹನ ಮಗನಾಗಿದ್ದ ಯೋಬಾಬನು ಆಧಿ
ಪತ್ಯಕ್ಕೆ ಬಂದನು. ಯೋಬಾಬನು ಸತ್ತ ಮೇಲೆ
ತೇಮಾನೀಯರ ದೇಶದವನಾದ ಹುಷಾಮನು ಅವ
ನಿಗೆ ಬದಲಾಗಿ ಆಳಿದನು. ಹುಷಾಮನು ಸತ್ತ 35
ಮೇಲೆ ಮೊವಾಬ್ಯರ ಬೈಲಿನಲ್ಲಿ ಮಿದ್ಯಾನರನ್ನು ಸೋಲಿ
ಸಿದ ಬೆದದನ ಮಗನಾದ ಹದದನು ಅರಸನಾದನು;
ಅವನ ರಾಜಧಾನಿಯ ಹೆಸರು ಅವೀತ್. ಹದದನು 36
ಸತ್ತ ಮೇಲೆ ಮಸ್ರೇಕದವನಾದ ಸಮ್ಲಾಹನು ಪಟ್ಟಕ್ಕೆ
ಬಂದನು. ಸಮ್ಲಾಹನು ಸತ್ತ ಮೇಲೆ ನದೀತೀರ 37
ದಲ್ಲಿರುವ ರೆಹೋಬೋತೂರಿನ ಸೌಲನು ಅರಸನಾ
ದನು. ಸೌಲನು ಸತ್ತ ಮೇಲೆ ಅಕ್ಬೋರನ ಮಗ 38
ನಾದ ಬಾಳ್ಹಾನಾನನು ಅರಸನಾದನು. ಅಕ್ಬೋರನ 39
ಮಗನಾದ ಬಾಳ್ಹಾನಾನನು ಸತ್ತ ಮೇಲೆ ಹದರನು
ಅರಸನಾದನು; ಅವನ ರಾಜಧಾನಿಯ ಹೆಸರು ಪಾಗು:
ಅವನ ಹೆಂಡತಿಯ ಹೆಸರು ಮಹೇಟಬೇಲ್; ಆಕೆ
ಮೇಜಾಹಾಬನ ಮಗಳಾದ ಮಟ್ರೇದಳ ಮಗಳು.
ಸ್ಥಳಕುಲನಾಮಗಳ ಪ್ರಕಾರ ಏಸಾವನಿಂದ 40
ಹುಟ್ಟಿದ ಕುಲಪತಿಗಳ ಹೆಸರುಗಳು ಯಾವವಂದರೆ—
ತಿಮ್ನಕುಲಪತಿ, ಅಲ್ವಾಕುಲಪತಿ, ಯೆತೇತಕುಲಪತಿ,
ಒಹೊಲೀಬಾಮಾಕುಲಪತಿ, ಏಲಾಕುಲಪತಿ, ಪೀನೋ 41
ನ್‌ಕುಲಪತಿ, ಕೆನಜ್‌ಕುಲಪತಿ, ತೇಮಾನ್‌ಕುಲ 42
ಪತಿ, ಮಿಪ್ಸಾರಕುಲಪತಿ, ಮಗ್ದೀಯೇಲ್‌ಕುಲಪತಿ, 43
ಗೀರಾಮ್‌ಕುಲಪತಿ ಇವೇ. ಇವರು ತಮ್ಮ ದೇಶದೊಳ
ಗಣ ನಿವಾಸಸ್ಥಳಗಳ ಪ್ರಕಾರ ಎದೋಮ್ಯರ ಕುಲ
ಪತಿಗಳು.
ಮೇಲೆ ಹೇಳಿರುವದು ಎದೋಮ್ಯರ ಮೂಲ
ಪುರುಷನಾದ ಏಸಾವನ ವಂಶಸ್ಥರ ಚರಿತ್ರೆ.

## ಯೋಸೇಫನ ಚರಿತ್ರೆ 37—50.

### ಯೋಸೇಫನನ್ನು ಅವನ ಅಣ್ಣಂದಿರು ಅನ್ಯಜನರಿಗೆ ಗುಲಾಮನಾಗಿ ಮಾರಿದ್ದು.

37
ಆದರೆ ಯಾಕೋಬನು ತನ್ನ ತಂದೆ ಪ್ರವಾಸ
ವಾಗಿದ್ದ ಕಾನಾನ್‌ದೇಶದಲ್ಲಿಯೇ ವಾಸವಾಗಿದ್ದನು.
ಯಾಕೋಬನ ಮಕ್ಕಳ ಚರಿತ್ರೆ. ಯೋಸೇಫನು 2
ಹದಿನೇಳು ವರುಷದವನಾಗಿ ಇನ್ನೂ ಹುಡುಗನಾಗಿದ್ದು
ತನ್ನ ಅಣ್ಣಂದಿರ ಜೊತೆಯಲ್ಲಿ ಅಂದರೆ ತನ್ನ ಮಲ
ತಾಯಿಗಳಾದ ಬಿಲ್ಹಾ, ಜಿಲ್ಪಾ ಎಂಬವರ ಮಕ್ಕಳ
ಜೊತೆಯಲ್ಲಿ ಆಡುಕುರಿಗಳನ್ನು ಮೇಯಿಸುತ್ತಿದ್ದನು.
ಅವರು ಏನಾದರೂ ಕೆಟ್ಟ ಕೆಲಸ ಮಾಡುವಾಗ
ಅವನು ತಂದೆಗೆ ತಿಳಿಸುತ್ತಿದ್ದನು. ಯೋಸೇಫನು 3
ಇಸ್ರಾಯೇಲನಿಗೆ ಮುಪ್ಪಿನಲ್ಲಿ ಹುಟ್ಟಿದವನಾದ್ದರಿಂದ
ಇಸ್ರಾಯೇಲನು ಅವನನ್ನು ತನ್ನ ಎಲ್ಲಾ ಮಕ್ಕಳಿ
ಗಿಂತ ಹೆಚ್ಚಾಗಿ ಪ್ರೀತಿಸಿ ಅವನಿಗೆ ನಿಲುವಂಗಿಯನ್ನು
ಮಾಡಿಸಿಕೊಟ್ಟಿದ್ದನು. ಅವನ ಅಣ್ಣತಮ್ಮಂದಿರು— 4
ನಮ್ಮ ತಂದೆ ತನ್ನ ಎಲ್ಲಾ ಮಕ್ಕಳಿಗಿಂತಲೂ ಇವನನ್ನೇ
ಹೆಚ್ಚಾಗಿ ಪ್ರೀತಿಸುತ್ತಾನೆಂದು ನೋಡಿ ಯೋಸೇಫನನ್ನು
ಹಗೆಮಾಡಿ ಅವನೊಡನೆ ಸ್ನೇಹಭಾವದಿಂದ ಮಾತಾಡ
ಲಾರದೆ ಹೋದರು.
ಒಂದು ದಿನ ಯೋಸೇಫನು ಕನಸುಕಂಡು ಅದನ್ನು 5
ತನ್ನ ಅಣ್ಣಂದಿರಿಗೆ ತಿಳಿಸಲು ಅವರು ಅವನನ್ನು

6 ಇನ್ನೂ ಹೆಚ್ಚಾಗಿ ದ್ವೇಷಿಸಿದರು. ಅವನು ಅವರಿಗೆ—
ನಾನು ಕನಸಿನಲ್ಲಿ ಕಂಡದ್ದನ್ನು ಹೇಳುತ್ತೇನೆ, ಕೇಳಿರಿ.
7 ಆ ಕನಸಿನಲ್ಲಿ ನಾವು ಹೊಲದಲ್ಲಿ ಸಿವುಡುಗಳನ್ನು
ಕಟ್ಟುತ್ತಾ ಇದ್ದೆವು; ಆಗ ನನ್ನ ಸಿವುಡು ಎದ್ದು
ನಿಲ್ಲಲು ನಿಮ್ಮ ಸಿವುಡುಗಳು ಸುತ್ತಲೂ ಬಂದು ನನ್ನ
ಸಿವುಡಿಗೆ ಅಡ್ಡಬಿದ್ದದ್ದನ್ನು ಕಂಡೆನು ಎಂದು ಹೇಳಿ
8 ದನು. ಅದಕ್ಕೆ ಅವನ ಅಣ್ಣಂದಿರು—ನೀನು ನಿಜ
ವಾಗಿ ನಮ್ಮನ್ನು ಆಳುವಿಯೋ? ನೀನು ನಮ್ಮ ಮೇಲೆ
ದೊರೆತನಮಾಡುವಿಯೋ ಎಂದು ಅವನಿಗೆ ಹೇಳಿ
ಅವನ ಕನಸುಗಳಿಗಾಗಿಯೂ ಮಾತುಗಳಿಗಾಗಿಯೂ
9 ಮತ್ತಷ್ಟು ಹಗೆಮಾಡಿದರು. ಅವನು ಇನ್ನೊಂದು
ಕನಸು ಕಂಡು ಅದನ್ನೂ ತನ್ನ ಅಣ್ಣಂದಿರಿಗೆ ತಿಳಿಸಿ
ದನು. ಅವನು ಅವರಿಗೆ—ಇನ್ನೊಂದು ಕನಸು ಕಂಡಿ
ದ್ದೇನೆ; ಅದರಲ್ಲಿ ಸೂರ್ಯಚಂದ್ರರೂ ಹನ್ನೊಂದು
ನಕ್ಷತ್ರಗಳೂ ನನಗೆ ಅಡ್ಡಬಿದ್ದವು ಎಂದು ಹೇಳಿ
10 ದನು. ಅವನು ಈ ಕನಸನ್ನು ತನ್ನ ತಂದೆಗೂ
ಅಣ್ಣಂದಿರಿಗೂ ತಿಳಿಸಿದಾಗ ತಂದೆಯು ಅವನಿಗೆ—
ಇದು ಎಂಥಾ ಕನಸು ನೀನು ಕಂಡದ್ದು? ನಾನೂ
ನಿನ್ನ ತಾಯಿಯೂ ಅಣ್ಣತಮ್ಮಂದಿರೂ ನಿನ್ನ ಮುಂದೆ
ಅಡ್ಡಬೀಳುವದಕ್ಕೆ ಬಂದೇವೋ ಎಂದು ಹೇಳಿ ಗದರಿಸಿ
11 ದನು. ಯೋಸೇಫನ ಅಣ್ಣಂದಿರು ಅವನ ಮೇಲೆ
ಹೊಟ್ಟೆಕಿಚ್ಚುಪಟ್ಟರು; ಆದರೆ ಅವನ ತಂದೆಯು ಅವನ
ಮಾತನ್ನು ಮನಸ್ಸಿನಲ್ಲಿಟ್ಟುಕೊಂಡನು.
12 ಬಂದಾನೊಂದು ಕಾಲದಲ್ಲಿ ಅವನ ಅಣ್ಣಂದಿರು
ತಂದೆಯ ಆಡುಕುರಿಗಳನ್ನು ಶೆಕೆಮಿನಲ್ಲಿ ಮೇಯಿ
13 ಸುವದಕ್ಕೆ ಹೋಗಿದ್ದಾಗ ಇಸ್ರಾಯೇಲನು ಯೋ
ಸೇಫನಿಗೆ—ನಿನ್ನ ಅಣ್ಣಂದಿರು ಶೆಕೆಮಿನಲ್ಲಿ ಆಡುಕುರಿ
ಗಳನ್ನು ಮೇಯಿಸುತ್ತಿದ್ದಾರಲ್ಲಾ; ಅವರ ಬಳಿಗೆ
ನಿನ್ನನ್ನು ಕಳುಹಿಸುತ್ತೇನೆ ಬಾ ಎಂದು ಹೇಳಲು
14 ಅವನು—ಇಗೋ ಇದ್ದೇನೆ ಅಂದನು. ಇಸ್ರಾ
ಯೇಲನು ಅವನಿಗೆ—ನೀನು ಹೋಗಿ ನಿನ್ನ ಅಣ್ಣಂದಿರ
ಯೋಗಕ್ಷೇಮವನ್ನೂ ಆಡುಕುರಿಗಳ ಯೋಗಕ್ಷೇಮ
ವನ್ನೂ ವಿಚಾರಿಸಿಕೊಂಡು ಬಾ ಎಂದು ಅಪ್ಪಣೆ
ಕೊಟ್ಟು ಅವನನ್ನು ಹೆಬ್ರೋನಿರುವ ತಗ್ಗಿನಿಂದ ಕಳು
15 ಹಿಸಲು ಯೋಸೇಫನು ಹೊರಟನು. ಅವನು ಶೆಕೆ
ಮಿಗೆ ಬಂದು ಅಲ್ಲಿ ಅಡವಿಯೊಳಗೆ ತಿರುಗಾಡುತ್ತಿರು
ವಾಗ ಒಬ್ಬ ಮನುಷ್ಯನು ಅವನನ್ನು ಕಂಡು—ಏನು
16 ಹುಡುಕುತ್ತೀ ಎಂದು ವಿಚಾರಿಸಲು ಅವನು—ನನ್ನ
ಅಣ್ಣಂದಿರನ್ನು ಹುಡುಕುತ್ತಾ ಇದ್ದೇನೆ; ಅವರು ಆಡು
ಕುರಿಗಳನ್ನು ಎಲ್ಲಿ ಮೇಯಿಸುತ್ತಾರೆ? ದಯವಿಟ್ಟು
17 ಹೇಳು ಅಂದನು. ಅದಕ್ಕೆ ಆ ಮನುಷ್ಯನು—ಅವರು
ಇಲ್ಲಿಂದ ಹೊರಟುಹೋದರು; ದೋತಾನಿಗೆ ಹೋ
ಗೋಣ ಎಂಬದಾಗಿ ಮಾತಾಡುವದನ್ನು ಕೇಳಿದೆನು
ಎಂದು ಹೇಳಲು ಯೋಸೇಫನು ಅವರನ್ನು ಹುಡು
ಕುತ್ತಾ ಹೋಗಿ ದೋತಾನಿನಲ್ಲಿ ಅವರನ್ನು ಕಂಡನು.
18 ಅವರು ಅವನನ್ನು ದೂರದಿಂದ ನೋಡಿ ಅವನು
ತಮ್ಮ ಬಳಿಗೆ ಬರುವಷ್ಟರೊಳಗೆ ಅವನನ್ನು ಕೊಲ್ಲು
19 ವದಕ್ಕೆ ಒಳಸಂಚುಮಾಡಿಕೊಂಡರು. ಅವರು ಒಬ್ಬರಿ
ಗೊಬ್ಬರು—ಅಗೋ, ಆ ಕನಸಿನವನು ಬರುತ್ತಾನೆ;
20 ನಾವು ಅವನನ್ನು ಕೊಂದು ಈ ಗುಂಡಿಗಳಲ್ಲಿ ಒಂದ
ರೊಳಗೆ ಹಾಕಿ ದುಷ್ಟಮೃಗವು ಅವನನ್ನು ತಿಂದು
ಬಿಟ್ಟಿತೆಂದು ಹೇಳೋಣ ಬನ್ನಿ; ಆಗ ಅವನ ಕನಸು
ಗಳು ಏನಾಗುವವೋ ನೋಡೋಣ ಎಂದು ಮಾತಾ
ಡಿಕೊಂಡರು. ರೂಬೇನನು ಈ ಮಾತನ್ನು ಕೇಳಿ—
ನಾವು ಅವನ ಪ್ರಾಣವನ್ನು ತೆಗೆಯಬಾರದು ಎಂದು
ಹೇಳಿ ಅವನನ್ನು ಅವರ ಕೈಗೆ ತಪ್ಪಿಸಿದನು. ರೂಬೇ
ನನು ಅವನನ್ನು ಅವರ ಕೈಯಿಂದ ತಪ್ಪಿಸಿ ತಂದೆಗೆ
ತಿರಿಗಿ ಒಪ್ಪಿಸಬೇಕೆಂದು ಅವರಿಗೆ—ಪ್ರಾಣಹತ್ಯಮಾಡ
ಬೇಡಿರಿ; ಅವನನ್ನು ಕಾಡಿನಲ್ಲಿರುವ ಈ ಗುಂಡಿಯೊ
ಳಗೆ ಹಾಕಬಹುದು; ಅವನ ಮೇಲೆ ಕೈಹಾಕಬೇಡಿರಿ
ಎಂದು ಹೇಳಿದನು. ಯೋಸೇಫನು ತನ್ನ ಅಣ್ಣಂದಿರ
ಹತ್ತರಕ್ಕೆ ಬಂದಾಗ ಅವರು ಅವನ ಮೇಲಿದ್ದ ನಿಲು
ವಂಗಿಯನ್ನು ತೆಗೆದುಬಿಟ್ಟು ಅವನನ್ನು ಹಿಡಿದು ಆ
ಗುಂಡಿಯೊಳಗೆ ಹಾಕಿದರು. ಆ ಗುಂಡಿ ನೀರಿಲ್ಲದೆ
ಬರಿದಾಗಿತ್ತು. ಆ ಮೇಲೆ ಅವರು ಊಟಕ್ಕೆ ಕೂತು
ಕೊಂಡರು.

ಅಷ್ಟರಲ್ಲಿ ಅವರು ಕಣ್ಣೆತ್ತಿನೋಡಿ ಇಷ್ಮಾಯೇಲ್ಯರ
ಗುಂಪು ಒಂಟೆಗಳ ಮೇಲೆ ಹಾಲುಮಡ್ಡಿ, ಸುಗಂಧ
ತೈಲ, ರಕ್ತಬೋಳ ಇವುಗಳನ್ನು ಹೇರಿಕೊಂಡು
ಗಿಲ್ಯಾದಿನಿಂದ ಐಗುಪ್ತದೇಶಕ್ಕೆ ಪ್ರಯಾಣಮಾಡುತ್ತಾ
ಬರುವದನ್ನು ಕಂಡರು. ಯೆಹೂದನು ತನ್ನ ಅಣ್ಣ
ತಮ್ಮಂದಿರಿಗೆ—ನಾವು ನಮ್ಮ ತಮ್ಮನನ್ನು ಕೊಂದು
ಆ ಕೊಲೆಯನ್ನು ಮರೆಮಾಡಿದರೆ ಪ್ರಯೋಜನ
ವೇನು? ಅವನನ್ನು ಆ ಇಷ್ಮಾಯೇಲ್ಯರಿಗೆ ಮಾರಿ
ಬಿಡೋಣ ಬನ್ನಿ; ನಾವು ಅವನ ಮೇಲೆ ಕೈಹಾಕಬಾ
ರದು; ಅವನು ನಮ್ಮ ಒಡಹುಟ್ಟಿದ ತಮ್ಮನಲ್ಲವೇ
ಎಂದು ಹೇಳಿದನು. ಆ ಮಾತಿಗೆ ಅವನ ಅಣ್ಣಂದಿರು
ಒಪ್ಪಿದರು. (ಅಷ್ಟರಲ್ಲಿ ಮಿದ್ಯಾನ್ಯರಾದ ವರ್ತಕರು
ಹಾದುಹೋಗುತ್ತಿದ್ದರು.) ಅವರು ಯೋಸೇಫನನ್ನು
ಗುಂಡಿಯೊಳಗಿಂದ ಎತ್ತಿ ಆ ಇಷ್ಮಾಯೇಲ್ಯರಿಗೆ
ಇಪ್ಪತ್ತು ರೂಪಾಯಿಗಳಿಗೆ ಮಾರಿಬಿಟ್ಟರು. ಇವರು
ಅವನನ್ನು ಐಗುಪ್ತದೇಶಕ್ಕೆ ತೆಗೆದುಕೊಂಡುಹೋದರು.

ರೂಬೇನನು ತಿರಿಗಿ ಆ ಗುಂಡಿಯ ಹತ್ತರಕ್ಕೆ
ಬಂದು ಅದರಲ್ಲಿ ಯೋಸೇಫನಿಲ್ಲದ್ದನ್ನು ಕಂಡು
ತನ್ನ ಬಟ್ಟೆಗಳನ್ನು ಹರಿದುಕೊಂಡು ತನ್ನ ತಮ್ಮಂದಿರ
ಬಳಿಗೆ ಬಂದು—ಆ ಹುಡುಗನು ಇಲ್ಲವಲ್ಲಾ;
ಅಯ್ಯೋ, ನಾನೆಲ್ಲಿಗೆ ಹೋಗಲಿ ಎಂದು ಗೋಳಾಡಿ
ದನು. ಆ ಮೇಲೆ ಅವರು ಒಂದು ಹೋತುವನ್ನು
ಕೊಯಿದು ಅದರ ರಕ್ತದಲ್ಲಿ ಯೋಸೇಫನ ಅಂಗಿ
ಯನ್ನು ಅದ್ದಿ ಆ ನಿಲುವಂಗಿಯನ್ನು ತಮ್ಮ ತಂದೆಗೆ
ಕಳುಹಿಸಿದರು; ತಂದವರು—ಇದು ನಮಗೆ ಸಿಕ್ಕಿತು;
ಇದು ನಿನ್ನ ಮಗನ ಅಂಗಿ ಹೌದೋ ಅಲ್ಲವೋ
ನೋಡು ಎಂದು ಅವನಿಗೆ ಹೇಳಲು ಅವನು ಅದರ
ಗುರುತನ್ನು ಹಿಡಿದು—ಈ ಅಂಗಿ ನನ್ನ ಮಗನದೇ
ಹೌದು; ದುಷ್ಟಮೃಗವು ಅವನನ್ನು ಕೊಂದು ತಿಂದಿರ
ಬೇಕು; ಯೋಸೇಫನು ಸಂದೇಹವಿಲ್ಲದೆ ಸೀಳಿಹಾ
ಕಲ್ಪಟ್ಟಿರಬೇಕು ಎಂದು ಹೇಳಿ ತನ್ನ ಬಟ್ಟೆಗಳನ್ನು
ಹರಿದುಕೊಂಡು ನಡುವಿನ ಮೇಲೆ ಗೋಣೀತಟ್ಟು
ಸುತ್ತಿಕೊಂಡು ತನ್ನ ಮಗನಿಗಾಗಿ ಬಹುದಿನಗಳ
ವರೆಗೂ ಹಂಬಲಿಸುತ್ತಿದ್ದನು. ಅವನ ಗಂಡುಮಕ್ಕಳೂ

ಹೆಣ್ಣುಮಕ್ಕಳೂ ಎಲ್ಲರೂ ದುಃಖಶಮನಮಾಡುವದಕ್ಕೆ
ಪ್ರಯತ್ನಿಸಿದಾಗ್ಯೂ ಅವನು ಶಾಂತಿಯನ್ನು ಹೊಂದ
ಲೊಲ್ಲದೆ—ನಾನು ಹೀಗೇ ಹಂಬಲಿಸುತ್ತಾ ನನ್ನ ಮಗ
ನಿರುವ ಪಾತಾಳವನ್ನು ಸೇರುವೆನು ಅಂದನು. ಹೀಗೆ
ತಂದೆಯು ಮಗನಿಗೋಸ್ಕರ ಅಳುತ್ತಿದ್ದನು.
36 ಮಿದ್ಯಾನ್ಯರು ಯೋಸೇಫನನ್ನು ಐಗುಪ್ತದೇಶಕ್ಕೆ
ತೆಗೆದುಕೊಂಡುಹೋಗಿ ಫರೋಹನ ಬಳಿಯಲ್ಲಿದ್ದ
ದೊಡ್ಡ ಉದ್ಯೋಗಸ್ಥನಾದ ಪೋಟೀಫರನಿಗೆ ಮಾರಿ
ದರು; ಇವನು ಮೈಗಾವಲಿನವರ ದಳವಾಯಿ.

ಯೆಹೂದನ ಕುಟುಂಬದಲ್ಲಿ ನಡೆದ ಕೆಲವು ಸಂಗತಿಗಳು.

38 ಆ ಕಾಲದಲ್ಲಿ ಯೆಹೂದನು ತನ್ನ ಅಣ್ಣತಮ್ಮಂದಿ
ರನ್ನು ಬಿಟ್ಟು ಗಟ್ಟಾ ಇಳಿದು ಅದುಲ್ಲಾಮೂರಿನ
ವನಾದ ಹೀರಾ ಎಂಬವನ ಹತ್ತರ ಇದ್ದುಕೊಂಡನು.
2 ಅಲ್ಲಿ ಅವನು ಶೂಗನೆಂದು ಹೆಸರುಳ್ಳ ಒಬ್ಬ ಕಾನಾ
ನ್ಯನ ಮಗಳನ್ನು ಕಂಡು ಅವಳನ್ನು ವರಿಸಿ ಅವಳ
3 ಸಹವಾಸಮಾಡಿದನು. ಅವಳು ಬಸುರಾಗಿ ಗಂಡು
ಮಗುವನ್ನು ಹೆತ್ತಳು; ಅದಕ್ಕೆ ಅವನು ಏರನೆಂದು
4 ಹೆಸರಿಟ್ಟನು. ಅವಳು ಎರಡನೆಯ ಸಾರಿ ಬಸುರಾಗಿ
ಗಂಡು ಮಗುವನ್ನು ಹೆರಲು ಅದಕ್ಕೆ ಅವನು ಓನಾನ
5 ನೆಂದು ಹೆಸರಿಟ್ಟನು. ಅವಳು ಮತ್ತೊಂದು ಸಾರಿ
ಗರ್ಭಿಣಿಯಾಗಿ ಗಂಡು ಮಗುವನ್ನು ಹೆತ್ತು ಅದಕ್ಕೆ
ಶೇಲಹನೆಂದು ಹೆಸರಿಟ್ಟಳು; ಅವಳು ಆ ಮಗುವನ್ನು
ಹೆರುವಾಗ ಯೆಹೂದನು ಕಜೀಬೂರಿನಲ್ಲಿದ್ದನು.
6 ಯೆಹೂದನು ತನ್ನ ಚೊಚ್ಚಲಮಗನಾದ ಏರನಿಗೆ
7 ತಾಮಾರೆಂಬ ಹೆಣ್ಣನ್ನು ಮದುವೆಮಾಡಿದನು. ಆದರೆ
ಯೆಹೂದನ ಚೊಚ್ಚಲಮಗನಾದ ಏರನು ಯೆಹೋ
ವನ ದೃಷ್ಟಿಯಲ್ಲಿ ಕೆಟ್ಟವನಾದ್ದರಿಂದ ಯೆಹೋವನು
8 ಅವನನ್ನು ಸಾಯಿಸಿದನು. ಬಳಿಕ ಯೆಹೂದನು
ಓನಾನನಿಗೆ—ನೀನು ನಿನ್ನ ಅತ್ತಿಗೆಯನ್ನು ಮದುವೆ
ಮಾಡಿಕೊಂಡು ಮೈದುನಧರ್ಮಕ್ಕೆ ಸರಿಯಾಗಿ ನಡೆ
ದು ನಿನ್ನ ಅಣ್ಣನಿಗೆ ಸಂತತಿಯನ್ನು ಹುಟ್ಟಿಸು ಅಂದ
9 ನು. ಆದರೆ ಓನಾನನು ಈ ರೀತಿಯಾಗಿ ಆಗುವ
ಸಂತಾನವು ತನ್ನದಾಗುವದಿಲ್ಲವೆಂದು ತಿಳಿದು ಅಣ್ಣ
ನಿಗೆ ಸಂತತಿಯನ್ನು ಹುಟ್ಟಿಸಲೊಲ್ಲದೆ ತನ್ನ ಅತ್ತಿಗೆ
ಯಲ್ಲಿ ಸಂಗಮಮಾಡುವಾಗೆಲ್ಲಾ ತನ್ನ ವೀರ್ಯ
10 ವನ್ನು ನೆಲದ ಪಾಲು ಮಾಡುತ್ತಿದ್ದನು. ಈ ನಡತೆ
ಯೆಹೋವನ ದೃಷ್ಟಿಯಲ್ಲಿ ಕೆಟ್ಟದ್ದಾಗಿದ್ದದರಿಂದ
11 ಆತನು ಅವನನ್ನೂ ಸಾಯಿಸಿದನು. ಆ ಮೇಲೆ
ಯೆಹೂದನು—ಒಂದು ವೇಳೆ ಶೇಲಹನೂ ತನ್ನ
ಅಣ್ಣಂದಿರಂತೆಯೇ ಸತ್ತಾನೆಂದು ಯೋಚಿಸಿ ತನ್ನ
ಸೊಸೆಯಾದ ತಾಮಾರಳಿಗೆ—ನನ್ನ ಮಗನಾದ ಶೇಲ
ಹನು ಪ್ರಾಯಸ್ಥನಾಗುವ ತನಕ ನೀನು ವಿಧವೆಯಾಗಿ
ತೌರಮನೆಯಲ್ಲಿರು ಎಂದು ನೆವಹೇಳಿದನು. ಅವಳು
ತೌರಮನೆಗೆ ಹೋಗಿ ಅಲ್ಲೇ ವಾಸಮಾಡಿದಳು.
12 ಬಹಳ ದಿನಗಳಾದ ಮೇಲೆ ಯೆಹೂದನ ಹೆಂಡತಿ
ಯಾಗಿದ್ದ ಶೂಗನ ಮಗಳು ತೀರಿಹೋದಳು. ಯೆ
ಹೂದನು ತನಗೆ ದುಃಖಶಮನವಾದ ಮೇಲೆ ತನ್ನ
ಕುರಿಗಳ ಉಣ್ಣೇ ಕತ್ತರಿಸುವವರ ಬಳಿಗೆ ತನ್ನ ಸ್ನೇಹಿ
ತನಾದ ಹೀರಾ ಎಂಬ ಅದುಲ್ಲಾಮ್ಯನ ಜೊತೆಯಲ್ಲಿ
ಗಟ್ಟಾ ಹತ್ತಿ ತಿಮ್ನಾ ಊರಿಗೆ ಹೋದನು. ಮಾವನು 13
ತನ್ನ ಕುರಿಗಳ ಉಣ್ಣೇ ಕತ್ತರಿಸುವದಕ್ಕೋಸ್ಕರ
ತಿಮ್ನಾ ಊರಿಗೆ ಹೋಗುತ್ತಾನೆಂಬ ವರ್ತಮಾನವು
ತಾಮಾರಳಿಗೆ ತಿಳಿದುಬಂತು. ಆಗ ಆಕೆ—ಶೇಲಹನು 14
ಪ್ರಾಯಸ್ಥನಾದಾಗ್ಯೂ ನನ್ನನ್ನು ಅವನಿಗೆ ಮದುವೆ
ಮಾಡಿಸಲಿಲ್ಲವಲ್ಲಾ ಅಂದುಕೊಂಡು ತನ್ನ ವಿಧವಾ
ವಸ್ತ್ರಗಳನ್ನು ತೆಗೆದಿಟ್ಟು ಮುಸುಕನ್ನು ಹಾಕಿಕೊಂಡು
[ವೇಶ್ಯಾಸ್ತ್ರೀಯಂತೆ] ಅಲಂಕೃತಳಾಗಿ ತಿಮ್ನಾವೂರಿನ
ದಾರಿಯಲ್ಲಿರುವ ಏನಯಿಮೂರಿನ ಬಾಗಿಲ ಬಳಿ
ಯಲ್ಲಿ ಕೂತುಕೊಂಡಳು. ಯೆಹೂದನು ಆಕೆಯನ್ನು 15
ಕಂಡಾಗ ಆಕೆಯ ಮುಖದ ಮೇಲೆ ಮುಸುಕು
ಇದ್ದದರಿಂದ ಸೊಸೆ ಎಂದು ತಿಳಿಯದೆ ಸೂಳೆಯೆಂದು
ಭಾವಿಸಿ ಮಾರ್ಗದಿಂದ ಓರೆಯಾಗಿ ಆಕೆಯ ಬಳಿಗೆ 16
ಹೋಗಿ—ನಾನು ನಿನ್ನ ಸಂಗಮಮಾಡುವದಕ್ಕೆ ಒಪ್ಪು
ತ್ತೀಯಾ ಅನ್ನಲು ಆಕೆ—ನನ್ನಲ್ಲಿ ಬರಬೇಕಾದರೆ
ನೀನು ಏನು ಕೊಡುತ್ತೀ ಎಂದು ಕೇಳಿದಳು.
ಅವನು—ಹಿಂಡಿನಿಂದ ಒಂದು ಹೋತಮರಿಯನ್ನು 17
ಕಳುಹಿಸಿಕೊಡುತ್ತೇನೆ ಅಂದಾಗ ಆಕೆ—ನೀನು ಅದ
ನ್ನು ಕೊಡುವ ತನಕ ನನ್ನಲ್ಲಿ ಏನಾದರೂ ಒತ್ತೆಯಿಡ
ಬೇಕು ಎಂದು ಹೇಳಿದ್ದಕ್ಕೆ ಅವನು—ಏನು ಒತ್ತೆ 18
ಇಡಲಿ ಎಂದು ಕೇಳಲು ಆಕೆ—ನಿನ್ನ ಮುದ್ರೆ, ದಾರ,
ಕೈಕೋಲು ಈ ಮೂರನ್ನು ಇಡು ಅಂದಳು. ಅವನು
ಅವುಗಳನ್ನು ಕೊಟ್ಟು ಆಕೆಯ ಸಂಗಮಮಾಡಲು
ಆಕೆ ಅವನಿಗೆ ಬಸುರಾದಳು. ಆಕೆ ಎದ್ದು ಹೋದ 19
ಮೇಲೆ ತಾನು ಹಾಕಿಕೊಂಡಿದ್ದ ಮುಸುಕನ್ನು ತೆಗೆ
ದಿಟ್ಟು ತಿರಿಗಿ ವಿಧವಾವಸ್ತ್ರಗಳನ್ನು ಉಟ್ಟುಕೊಂಡಳು.
ಯೆಹೂದನು ತಾನು ಇಟ್ಟಿದ್ದ ಒತ್ತೆಯನ್ನು ಆ 20
ಹೆಂಗಸಿನಿಂದ ಬಿಡಿಸಿಕೊಳ್ಳುವದಕ್ಕೋಸ್ಕರ ತನ್ನ
ಸ್ನೇಹಿತನಾದ ಆ ಅದುಲ್ಲಾಮ್ಯನ ಕೈಯಲ್ಲಿ ಹೋತ
ಮರಿಯನ್ನು ಕಳುಹಿಸಲು ಆಕೆ ಅವನಿಗೆ ಸಿಕ್ಕಲಿಲ್ಲ.
ಅವನು ಅವಳ ಊರಿನವರನ್ನು—ಏನಯಿಮಿನ ಸಮೀ 21
ಪದಲ್ಲಿ ದಾರಿಯ ಬಳಿಯಲ್ಲಿ ಕೂತಿದ್ದ ದೇವದಾಸಿ
ಎಲ್ಲಿರುವಳು ಎಂದು ಕೇಳಿದ್ದಕ್ಕೆ ಅವರು—ಇಲ್ಲಿ
ಯಾವ ದೇವದಾಸಿಯೂ ಇಲ್ಲ ಅಂದರು. ಅವನು 22
ಯೆಹೂದನ ಬಳಿಗೆ ಹಿಂದಿರುಗಿಬಂದು—ನಾನು ಅವ
ಳನ್ನು ಕಾಣಲಿಲ್ಲ. ಮತ್ತು ವಿಚಾರಿಸಿದಾಗ ಆ
ಊರಿನವರು ಅಲ್ಲಿ ಯಾವ ದೇವದಾಸಿಯೂ ಇಲ್ಲ
ವೆಂದರು ಎಂದು ತಿಳಿಸಿದನು. ಅದಕ್ಕೆ ಯೆಹೂದನು— 23
ಇನ್ನು ಹಾಸ್ಯಕ್ಕೆ ಗುರಿಯಾದೇವು; ನಾನಿಟ್ಟ ಒತ್ತೆ
ಯನ್ನು ಅವಳೇ ಇಟ್ಟುಕೊಳ್ಳಲಿ; ನಾನಂತೂ ಹೋತ
ಮರಿಯನ್ನು ಕಳುಹಿಸಿಕೊಟ್ಟೆನು; ಅವಳು ನಿನಗೆ
ಸಿಕ್ಕಲಿಲ್ಲವಷ್ಟೆ ಅಂದನು.
ಸುಮಾರು ಮೂರು ತಿಂಗಳಾದ ಮೇಲೆ ಯೆಹೂ 24
ದನು ತನ್ನ ಸೊಸೆಯಾದ ತಾಮಾರಳು ವ್ಯಭಿಚಾರ
ದಿಂದ ಬಸುರಾಗಿದ್ದಾಳೆ ಎಂಬ ವರ್ತಮಾನವನ್ನು
ತಿಳಿದು—ಅವಳನ್ನು ಹೊರಗೆ ತನ್ನಿರಿ, ಸುಡಬೇಕಾಗಿದೆ
ಎಂದು ಹೇಳಿದನು. ಅವರು ಆಕೆಯನ್ನು ಹೊರಕ್ಕೆ 25
ತಂದಾಗ ಆಕೆ ತನ್ನ ಮಾವನಿಗೆ ಆ ಒತ್ತೆಯ ಸಾಮಾ
ನುಗಳನ್ನು ಕಳುಹಿಸಿ—ಇವು ಯಾವನವೋ ಆ

ಮನುಷ್ಯನಿಂದಲೇ ನಾನು ಬಸುರಾಗಿದ್ದೇನೆ; ಮುದ್ರೆ,
ದಾರ, ಕೋಲು ಇವುಗಳ ಗುರುತನ್ನು ತಿಳಿಯ
26 ಬಹುದು ಎಂದು ಹೇಳಿಸಿದಳು. ಯೆಹೂದನು ಅವು
ಗಳ ಗುರುತನ್ನು ತಿಳಿದು—ನಾನು ನನ್ನ ಮಗನಾದ
ಶೇಲಹನನ್ನು ಆಕೆಗೆ ಮದುವೆಮಾಡಿಸಲಿಲ್ಲವಾದ್ದರಿಂದ
ಆಕೆ ನನಗಿಂತಲೂ ನ್ಯಾಯವಾಗಿ ನಡೆದಳು ಎಂದು
ಹೇಳಿದನು. ಅವನು ತಿರಿಗಿ ಆಕೆಯ ಸಹವಾಸ
ಮಾಡಲಿಲ್ಲ.
27 ತಾಮಾರಳಿಗೆ ಹೆರಿಗೆ ಕಾಲ ಬಂದಾಗ ಆಕೆಯ
28 ಗರ್ಭದಲ್ಲಿ ಅವಳಿಮಕ್ಕಳಿರುವದು ಕಂಡುಬಂತು. ಆಕೆ
ಹೆರುವಾಗ ಒಂದು ಮಗುವು ಕೈಚಾಚಲು ಸೂಲ
ಗಿತ್ತಿಯು—ಇದು ಮೊದಲಾಗಿ ಬಂದದ್ದು ಎಂದು
ಹೇಳಿ ಅದರ ಕೈಗೆ ಕೆಂಪು ನೂಲನ್ನು ಕಟ್ಟಿದಳು.
29 ಅದು ಕೈಯನ್ನು ಹಿಂದಕ್ಕೆ ತೆಗೆಯಲು ಅದರೊಡನೆ
ಇದ್ದ ಮತ್ತೊಂದು ಶಿಶುವು ಹೊರಗೆ ಬಂತು. ಸೂಲ
ಗಿತ್ತಿಯು ಇದನ್ನು ಕಂಡು—ನೀನು ಭೇದಿಸಿಕೊಂಡು
ಬಂದದ್ದೇನು ಎಂದು ಹೇಳಿದ್ದರಿಂದ ಅದಕ್ಕೆ [1]ಪೆರೆಚ್
30 ಎಂದು ಹೆಸರಾಯಿತು. ತರುವಾಯ ಕೈಗೆ ಕೆಂಪು
ನೂಲು ಕಟ್ಟಿಸಿಕೊಂಡ ಶಿಶುವು ಹುಟ್ಟಿತು; ಅದಕ್ಕೆ
ಜೆರಹ ಎಂದು ಹೆಸರಾಯಿತು.

ಯೋಸೇಫ ನಂಬಿಗಸ್ತನಾದ್ದರಿಂದ ವೃದ್ಧಿಗೆ ಬಂದದ್ದು;
ತರುವಾಯ ಅನ್ಯಾಯವಾಗಿ ಸೆರೆಯಲ್ಲಿ ಬಿದ್ದದ್ದು.

39 ಯೋಸೇಫನನ್ನು ತೆಗೆದುಕೊಂಡುಹೋದ ಇಷ್ಮಾ
ಯೇಲ್ಯರು ಐಗುಪ್ತದೇಶಕ್ಕೆ ಸೇರಿದಾಗ ಒಬ್ಬ
ಐಗುಪ್ತದವನು ಅವನನ್ನು ಅವರಿಂದ ಕ್ರಯಕ್ಕೆ
ತೆಗೆದುಕೊಂಡನು; ಇವನು ಯಾರಂದರೆ ಫರೋಹನ
ಉದ್ಯೋಗಸ್ಥನೂ ಮೈಗಾವಲಿನವರ ದಳವಾಯಿಯೂ
2 ಆಗಿದ್ದ ಪೋಟೀಫರನು. ಯೆಹೋವನು ಯೋಸೇ
ಫನ ಸಂಗಡ ಇದ್ದದರಿಂದ ಅವನು ಏಳಿಗೆಯಾಗಿ
ಐಗುಪ್ತ್ಯನಾದ ತನ್ನ ದಣಿಯ ಮನೆಯೊಳಗೆ ಸೇವಕ
3 ನಾದನು. ಯೆಹೋವನು ಯೋಸೇಫನ ಸಂಗಡ
ವಿದ್ದು ಅವನು ಮಾಡುವ ಕೆಲಸವನ್ನೆಲ್ಲಾ ಸಫಲ
ವಾಗುವಂತೆ ಮಾಡುತ್ತಾನೆಂದು ಅವನ ದಣಿಯು
4 ತಿಳಿದು ಅವನ ಮೇಲೆ ದಯೆ ಇಟ್ಟು ಅವನನ್ನು
ಸ್ವಂತ ಸೇವಕನನ್ನಾಗಿ ನೇಮಿಸಿಕೊಂಡನು. ಇದ
ಲ್ಲದೆ ಆ ದಣಿಯು ಅವನಿಗೆ ತನ್ನ ಮನೆಯಲ್ಲಿ ಪಾರು
ಪತ್ಯವನ್ನು ಕೊಟ್ಟು ತನ್ನ ಆಸ್ತಿಯನ್ನೆಲ್ಲಾ ಅವನ
5 ವಶಕ್ಕೆ ಒಪ್ಪಿಸಿದನು. ಅವನು ಯೋಸೇಫನನ್ನು ತನ್ನ
ಮನೆಯ ಮೇಲೆಯೂ ಆಸ್ತಿಯ ಮೇಲೆಯೂ ಅಧ್ಯ
ಕ್ಷನಾಗಿ ಇಟ್ಟಂದಿನಿಂದ ಯೆಹೋವನು ಯೋಸೇಫನ
ನಿಮಿತ್ತವಾಗಿ ಆ ಐಗುಪ್ತ್ಯನ ಮನೆಯನ್ನು ಅಭಿ
ವೃದ್ಧಿಗೆ ತಂದನು. ಮನೆಯಲ್ಲಾಗಲಿ ಹೊಲದಲ್ಲಾ
ಗಲಿ ಅವನಿಗಿದ್ದ ಎಲ್ಲಾದರ ಮೇಲೆ ಯೆಹೋವನ
6 ಆಶೀರ್ವಾದವುಂಟಾಯಿತು. ಅವನು ತನ್ನ ಆಸ್ತಿಯ
ನ್ನೆಲ್ಲಾ ಯೋಸೇಫನ ವಶಕ್ಕೆ ಒಪ್ಪಿಸಿದನು; ಇವನು
ತನ್ನ ಬಳಿಯಲ್ಲೇ ಇದ್ದದರಿಂದ ತಾನು ತಿನ್ನುವ
ಆಹಾರ ಒಂದನ್ನೇ ಹೊರತು ಬೇರೆ ಯಾವದನ್ನೂ
ಚಿಂತಿಸಲಿಲ್ಲ. ಇದಲ್ಲದೆ ಯೋಸೇಫನು ರೂಪದ
ಲ್ಲಿಯೂ ಮುಖಭಾವದಲ್ಲಿಯೂ ಸುಂದರನಾಗಿದ್ದನು.
ಹೀಗಿರುವಲ್ಲಿ ಅವನ ದಣಿಯ ಹೆಂಡತಿಯು ಅವನ
ಮೇಲೆ ಕಣ್ಣುಹಾಕಿ ತನ್ನೊಡನೆ ಸಂಗಮಕ್ಕೆ ಕರೆದಳು.
ಆದರೆ ಅವನು ಒಪ್ಪದೆ—ನನ್ನ ದಣಿಯು ತನ್ನ ಆಸ್ತಿ
ಯನ್ನೆಲ್ಲಾ ನನ್ನ ವಶಕ್ಕೆ ಒಪ್ಪಿಸಿ ನಾನು ಇರುವದ
ರಿಂದ ಮನೆಯೊಳಗೆ ನಡೆಯುವ ಯಾವ ಕೆಲಸ
ವನ್ನೂ ಚಿಂತಿಸದೆ ಇದ್ದಾನೆ; ಈ ಮನೆಯಲ್ಲಿ ಅವನೂ
ನನಗಿಂತ ದೊಡ್ಡವನಲ್ಲ; ನೀನು ಅವನ ಧರ್ಮಪತ್ನಿ
ಯಾದದರಿಂದ ನಿನ್ನನ್ನು ಮಾತ್ರ ನನಗೆ ಅಧೀನ
ಮಾಡಲಿಲ್ಲ; ಹೀಗಿರುವಲ್ಲಿ ನಾನು ಇಂಥಾ ಮಹಾ
ದುಷ್ಕೃತ್ಯವನ್ನು ನಡಿಸಿ ದೇವರಿಗೆ ವಿರುದ್ಧವಾಗಿ
ಹೇಗೆ ಪಾಪಮಾಡಲಿ ಎಂದು ತನ್ನ ದಣಿಯ ಹೆಂಡತಿಗೆ
ಉತ್ತರಕೊಟ್ಟನು. ಆಕೆ ಯೋಸೇಫನ ಸಂಗಡ ಪ್ರತಿ
ದಿನವೂ ಈ ಮಾತನ್ನು ಆಡಿದಾಗ್ಯೂ ಅವನು ಅದಕ್ಕೆ
ಕಿವಿಗೊಡದೆ ಆಕೆಯಲ್ಲಿ ಸಂಗಮಮಾಡುವದಕ್ಕಾಗಲಿ
ಆಕೆಯ ಬಳಿಯಲ್ಲಿರುವದಕ್ಕಾಗಲಿ ಒಪ್ಪಿಕೊಳ್ಳಲೇ
ಇಲ್ಲ. ಹೀಗಿರಲು ಒಂದು ದಿನ ಅವನು ತನ್ನ ಕೆಲ
ಸದ ಮೇಲೆ ಮನೆಗೆ ಬಂದಾಗ ಮನೆಯವರಲ್ಲಿ
ಯಾರೂ ಒಳಗೆ ಇಲ್ಲದಿರುವಲ್ಲಿ ಆಕೆ ಅವನ ಬಟ್ಟೆ
ಯನ್ನು ಹಿಡಿದುಕೊಂಡು—ನನ್ನ ಸಂಗಮಕ್ಕೆ ಬಾ
ಅನ್ನಲು ಅವನು ತನ್ನ ಬಟ್ಟೆಯನ್ನು ಆಕೆಯ ಕೈ
ಯಲ್ಲೇ ಬಿಟ್ಟು ತಪ್ಪಿಸಿಕೊಂಡು ಓಡಿಹೋದನು.
ಅವನು ತನ್ನ ಬಟ್ಟೆಯನ್ನು ನನ್ನ ಕೈಯಲ್ಲಿ ಬಿಟ್ಟು
ತಪ್ಪಿಸಿಕೊಂಡು ಹೋದನಲ್ಲಾ ಎಂದು ಆಕೆ ನೋಡಿ
ಮನೆಯ ಸೇವಕರನ್ನು ಕರೆದು ಅವರಿಗೆ—ನೋಡಿರಿ,
ನನ್ನ ಯಜಮಾನರು ಒಬ್ಬ ಇಬ್ರಿಯನನ್ನು ನಮ್ಮೊ
ಳಗೆ ಸೇರಿಸಿ ನಮ್ಮನ್ನು ಅವಮಾನಕ್ಕೆ ಗುರಿಮಾಡಿ
ದ್ದಾರೆ. ಅವನು ನನ್ನನ್ನು ಮಾನಭಂಗಪಡಿಸುವದಕ್ಕೆ
ನನ್ನ ಹತ್ತರ ಬಂದನು; ನಾನು ಗಟ್ಟಿಯಾಗಿ ಕೂಗಿ
ಕೊಂಡೆನು. ನಾನು ಕೂಗುವದನ್ನು ಕೇಳಿ ಅವನು
ತನ್ನ ಬಟ್ಟೆಯನ್ನು ನನ್ನ ಬಳಿಯಲ್ಲೇ ಬಿಟ್ಟು ತಪ್ಪಿಸಿ
ಕೊಂಡು ಓಡಿಹೋದನು ಎಂದು ಹೇಳಿ ಅವನ
ದಣಿಯು ಮನೆಗೆ ಬರುವ ತನಕ ಆ ಬಟ್ಟೆಯನ್ನು
ತನ್ನ ಬಳಿಯಲ್ಲಿ ಇಟ್ಟುಕೊಂಡಳು. ಪತಿಯು ಬಂದಾಗ
ಆಕೆ ಅದೇ ಮಾತನ್ನು ಹೇಳಿ ಅವನಿಗೆ—ನೀನು
ನಮ್ಮಲ್ಲಿ ಸೇರಿಸಿಕೊಂಡ ಆ ಇಬ್ರಿಯಸೇವಕನು
ನನ್ನನ್ನು ಮಾನಭಂಗಪಡಿಸುವದಕ್ಕೆ ನನ್ನ ಬಳಿಗೆ
ಬಂದನು. ನಾನು ಕೂಗಿಕೊಂಡೆನು. ಕೂಗುತ್ತಲೇ
ಅವನು ತನ್ನ ಬಟ್ಟೆಯನ್ನು ಬಿಟ್ಟು ತಪ್ಪಿಸಿಕೊಂಡು
ಓಡಿಹೋದನು ಎಂದು ಹೇಳಿದಳು. ನಿನ್ನ ಸೇವ
ಕನು ಈ ಮೇರೆಗೆ ನನಗೆ ಮಾಡಿದನೆಂಬದಾಗಿ ಆಕೆ
ಹೇಳಿದ ಮಾತುಗಳನ್ನು ಯೋಸೇಫನ ದಣಿಯು
ಕೇಳಿ ಬಹಳ ಸಿಟ್ಟುಗೊಂಡು ಅವನನ್ನು ಹಿಡಿಸಿ
ಅರಸನು ಸೆರೆಯವರನ್ನು ಕಟ್ಟಿಹಾಕಿಸುತ್ತಿದ್ದ ಸೆರೆ
ಮನೆಯಲ್ಲಿ ಹಾಕಿಸಿದನು. ಅಲ್ಲಿ ಯೋಸೇಫನು
ಸೆರೆಯಲ್ಲಿ ಇರಬೇಕಾಯಿತು.

1) ಪೆರೆಚ್ ಅಂದರೆ ಭೇದಿಸುವಿಕೆ.

21 ಆದರೂ ಯೆಹೋವನು ಯೋಸೇಫನ ಸಂಗಡ
ಇದ್ದು ಅವನ ಮೇಲೆ ಕೃಪೆಯನ್ನಿಟ್ಟು ಅವನಿಗೆ ಸೆರೆ
ಯಜಮಾನನ ಬಳಿಯಲ್ಲಿ ದಯೆದೊರಕುವಂತೆ
22 ಮಾಡಿದನು. ಸೆರೆಮನೆಯ ಯಜಮಾನನು ಸೆರೆಯ
ಲ್ಲಿದ್ದವರೆಲ್ಲರನ್ನೂ ಯೋಸೇಫನ ವಶಕ್ಕೆ ಕೊಟ್ಟು
ಬಿಟ್ಟನು. ಅಲ್ಲಿ ಮಾಡಬೇಕಾದದ್ದನ್ನೆಲ್ಲಾ ಯೋಸೇ
23 ಫನೇ ಮಾಡಿಸಿದನು. ಯೆಹೋವನು ಅವನ ಸಂಗಡ
ಇದ್ದು ಅವನು ನಡಿಸಿದ್ದೆಲ್ಲವನ್ನು ಕೈಗೂಡಿಸಿದ್ದ
ರಿಂದ ಅವನ ವಶದಲ್ಲಿದ್ದ ಯಾವದೊಂದರ ವಿಷಯ
ದಲ್ಲಿಯೂ ಸೆರೆಮನೆಯ ಯಜಮಾನನು ಏನೂ
ಚಿಂತಿಸಲಿಲ್ಲ.

ಯೋಸೇಫನು ಅರಸನ ಇಬ್ಬರು ಉದ್ಯೋಗಸ್ಥರ ಕನಸುಗಳ
ಅರ್ಥವನ್ನು ತಿಳಿಸಿದ್ದು.

40 ಈ ಸಂಗತಿಗಳಾದ ಮೇಲೆ ಐಗುಪ್ತದೇಶದ ಅರಸ
ನಾದ ಫರೋಹನಿಗೆ ಪಾನಕ ಕೊಡುವವನೂ ಭಕ್ಷ್ಯ
ಗಳನ್ನು ಮಾಡಿಕೊಡುವವನೂ ತಮ್ಮ ದಣಿಗೆ ವಿರೋ
2 ಧವಾಗಿ ಯಾವದೋ ತಪ್ಪು ಮಾಡಿದ್ದರಿಂದ ಫರೋ
ಹನು ಆ ಇಬ್ಬರು ಉದ್ಯೋಗಸ್ಥರ ಮೇಲೆ, ಅಂದರೆ
ಪಾನದಾಯಕರಲ್ಲಿ ಮುಖ್ಯಸ್ಥನ ಮೇಲೆಯೂ ಭಕ್ಷ್ಯ
ಕಾರರಲ್ಲಿ ಮುಖ್ಯಸ್ಥನ ಮೇಲೆಯೂ ಕೋಪಮಾಡಿ
3 ಅವರನ್ನು ಮೈಗಾವಲಿನವರ ದಳವಾಯಿಯ ಮನೆ
ಯೊಳಗೆ ಕಾವಲಲ್ಲಿರಿಸಿದನು. ಅದು ಯೋಸೇಫನು
4 ಬಿದ್ದಿದ್ದ ಸೆರೆಮನೆಯೇ. ದಳವಾಯಿಯು ಯೋಸೇ
ಫನನ್ನು ಅವರ ಉಪಚಾರಕ್ಕೆ ನೇಮಿಸಿದ್ದರಿಂದ ಯೋ
ಸೇಫನು ಅವರಿಗೆ ಸೇವೆ ಮಾಡುವವನಾದನು. ಹೀಗೆ
5 ಅವರು ಕೆಲವು ಕಾಲ ಕಾವಲಲ್ಲಿದ್ದ ಮೇಲೆ ಅವರಿಬ್ಬ
ರಿಗೂ, ಅಂದರೆ ಐಗುಪ್ತದೇಶದ ಅರಸನು ಸೆರೆಯಲ್ಲಿ
ಹಾಕಿಸಿದ್ದ ಪಾನದಾಯಕನಿಗೂ ಭಕ್ಷ್ಯಕಾರನಿಗೂ,
ಒಂದೇ ರಾತ್ರಿ ಕನಸುಬಿತ್ತು; ಅವರವರ ಕನಸಿಗೆ
6 ಬೇರೆ ಬೇರೆ ಅರ್ಥವಿತ್ತು. ಬೆಳಿಗ್ಗೆ ಯೋಸೇಫನು
ಅವರ ಬಳಿಗೆ ಬಂದಾಗ ಅವರು ಚಿಂತೆಯುಳ್ಳವರಾಗಿ
7 ಕಾಣಿಸಿದರು. ಅದನ್ನು ಅವನು ನೋಡಿ—ನಿಮ್ಮ
ಮುಖವು ಈ ಹೊತ್ತು ಯಾಕೆ ಕಳೆಗುಂದಿತು ಎಂದು
ತನ್ನ ದಣಿಯ ಮನೆಯೊಳಗೆ ತನ್ನೊಂದಿಗೆ ಕಾವಲ
ಲ್ಲಿದ್ದ ಫರೋಹನ ಉದ್ಯೋಗಸ್ಥರನ್ನು ಕೇಳಿದನು.
8 ಅವರು ಅವನಿಗೆ—ನಮಗೆ ಸ್ವಪ್ನಬಿತ್ತು; ಅದರ
ಅರ್ಥವನ್ನು ಹೇಳುವವರು ಯಾರೂ ಇಲ್ಲ ಎಂದು
ಹೇಳಲು ಯೋಸೇಫನು ಅವರಿಗೆ—ಸ್ವಪ್ನಗಳ ಅರ್ಥ
ವು ದೇವರಿಂದ ದೊರಕಬಹುದಲ್ಲವೇ; ದಯ
ಮಾಡಿ ನಿಮ್ಮ ಸ್ವಪ್ನವನ್ನು ನನಗೆ ತಿಳಿಸಿರಿ ಎಂದು
ಹೇಳಿದನು.
9 ಆಗ ಪಾನದಾಯಕರಲ್ಲಿ ಮುಖ್ಯಸ್ಥನು ಯೋಸೇ
ಫನಿಗೆ—ನನ್ನ ಕನಸಿನಲ್ಲಿ ಒಂದು ದ್ರಾಕ್ಷಾಲತೆ
10 ಯನ್ನು ನನ್ನೆದುರಾಗಿ ಕಂಡೆನು; ಅದಕ್ಕೆ ಮೂರು
ಕವಲುಗಳಿದ್ದವು. ಅದು ಚಿಗುರುತ್ತಲೇ ಹೂವು
ಗಳನ್ನು ಬಿಟ್ಟಿತು; ಆ ಹೂವುಗಳು ಗೊಂಚಲುಗಳಾಗಿ
11 ಹಣ್ಣಾದವು. ಫರೋಹನ ಪಾನಪಾತ್ರೆಯು ನನ್ನ
ಕೈಯಲ್ಲಿದ್ದದರಿಂದ ನಾನು ಆ ಗೊಂಚಲುಗಳನ್ನು
ಕೊಯಿದು ಪಾತ್ರೆಯಲ್ಲಿ ಹಿಂಡಿ ಪಾತ್ರೆಯನ್ನು
ಫರೋಹನ ಕೈಗೆ ಒಪ್ಪಿಸಿದೆನು ಎಂದು ಹೇಳಿದನು.
ಅದಕ್ಕೆ ಯೋಸೇಫನು—ಆ ಕನಸಿನ ಅರ್ಥವೇನಂದರೆ— 12
ಆ ಮೂರು ಕೊಂಬೆಗಳೇ ಮೂರು ದಿನಗಳು; ಈ 13
ಹೊತ್ತಿಗೆ ಮೂರು ದಿನಗಳೊಳಗೆ ಫರೋಹನು ನಿನ್ನ
ನ್ನು ಮೇಲಕ್ಕೆ ಎತ್ತಿ ನಿನ್ನ ಉದ್ಯೋಗಕ್ಕೆ ತಿರಿಗಿ ನೇಮಿ
ಸುವನು. ನೀನು ಮುಂಚೆ ಫರೋಹನ ಪಾನದಾಯ
ಕನಾಗಿದ್ದು ಅವನ ಕೈಗೆ ಪಾನಪಾತ್ರೆಯನ್ನು ಒಪ್ಪಿಸು
ತ್ತಿದ್ದಂತೆಯೇ ಮುಂದೆಯೂ ಒಪ್ಪಿಸುವಿ. ಆದರೆ 14
ನೀನು ಸುಖದಿಂದಿರುವಾಗ ನನ್ನನ್ನು ಜ್ಞಾಪಕಮಾಡಿ
ಕೊಂಡು ನನಗೆ ಉಪಕಾರಮಾಡಿ ಫರೋಹನಿಗೆ ನನ್ನ
ಸಂಗತಿಯನ್ನು ತಿಳಿಸಿ ನನ್ನನ್ನು ಈ ಸೆರೆಯಿಂದ ಬಿಡಿಸ
ಬೇಕು. ನಾನು ಇಬ್ರಿಯದೇಶಸ್ಥನು; ಕೆಲವರು 15
ನನ್ನನ್ನು ಕದ್ದು ಈ ದೇಶಕ್ಕೆ ತಂದರು. ಇಲ್ಲಿಯೂ
ನಾನೇನೂ ತಪ್ಪಿಲ್ಲದವನಾಗಿ ಸೆರೆಯಲ್ಲಿ ಬಿದ್ದೆನು
ಅಂದನು.
ಅವನು ಹೇಳಿದ ಅರ್ಥವು ಶುಭಕರವಾದದ್ದೆಂದು 16
ಭಕ್ಷ್ಯಕಾರರಲ್ಲಿ ಮುಖ್ಯಸ್ಥನು ತಿಳಿದು ಯೋಸೇಫ
ನಿಗೆ—ನಾನೂ ಕಂಡ ಕನಸನ್ನು ಹೇಳುತ್ತೇನೆ ಕೇಳು.
ನನಗೆ ಬಿದ್ದ ಕನಸಿನಲ್ಲಿ ಸೊಗಸಾದ ಭಕ್ಷ್ಯಗಳು
ತುಂಬಿದ್ದ ಮೂರು ಪುಟ್ಟಿಗಳು ನನ್ನ ತಲೆಯ ಮೇಲಿ
ದ್ದವು. ಮೇಲಣ ಪುಟ್ಟಿಯಲ್ಲಿ ಫರೋಹನಿಗೋಸ್ಕರ 17
ನಾನಾ ವಿಧವಾದ ಭಕ್ಷ್ಯಗಳು ಇದ್ದವು; ಪಕ್ಷಿಗಳು
ಬಂದು ಅವುಗಳನ್ನು ನನ್ನ ತಲೆಯ ಮೇಲಿದ್ದ ಪುಟ್ಟಿ
ಯೊಳಗಿಂದಲೇ ತಿನ್ನುತ್ತಿದ್ದವು ಎಂದು ಹೇಳಿದನು.
ಅದಕ್ಕೆ ಯೋಸೇಫನು—ನಿನ್ನ ಕನಸಿನ ಅರ್ಥವೇ 18
ನಂದರೆ—ಆ ಮೂರು ಪುಟ್ಟಿಗಳೇ ಮೂರು ದಿನಗಳು;
ಈ ಹೊತ್ತಿಗೆ ಮೂರು ದಿನಗಳೊಳಗೆ ಫರೋಹನು 19
ನಿನ್ನ ತಲೆಯನ್ನು ಎತ್ತಿಸುವನು; ನಿನ್ನನ್ನು ಮರಕ್ಕೆ
ತೂಗಹಾಕಿಸುವನು; ಹಕ್ಕಿಗಳು ಬಂದು ನಿನ್ನ
ಮಾಂಸವನ್ನು ತಿಂದುಬಿಡುವವು ಅಂದನು.
ಮೂರನೆಯ ದಿನದಲ್ಲಿ ಫರೋಹನ ಜನ್ಮದಿನವಾದ್ದ 20
ರಿಂದ ಅವನು ತನ್ನ ಸೇವಕರೆಲ್ಲರಿಗೆ ಔತಣವನ್ನು
ಮಾಡಿಸಿ ಮುಖ್ಯಪಾನದಾಯಕನನ್ನೂ ಮುಖ್ಯಭಕ್ಷ್ಯ
ಕಾರನನ್ನೂ ಬಿಡಿಸಿ ಸೇವಕರ ಮಧ್ಯದಲ್ಲಿ ನಿಲ್ಲಿಸಿ
ದನು. ಪಾನದಾಯಕರ ಮುಖ್ಯಸ್ಥನನ್ನು ತಿರಿಗಿ 21
ಅವನ ಉದ್ಯೋಗಕ್ಕೆ ನೇಮಿಸಿದನು; ಅವನು ಪಾನ
ಪಾತ್ರೆಯನ್ನು ಫರೋಹನ ಕೈಗೆ ಕೊಡುವವನಾದನು;
ಆದರೆ ಮುಖ್ಯಭಕ್ಷ್ಯಕಾರನನ್ನು ಫರೋಹನು ಗಲ್ಲಿಗೆ 22
ಹಾಕಿಸಿದನು. ಹೀಗೆ ಯೋಸೇಫನು ಹೇಳಿದ್ದಂತೆಯೇ
ಆಯಿತು. ಆದಾಗ್ಯೂ ಮುಖ್ಯಪಾನದಾಯಕನು 23
ಯೋಸೇಫನನ್ನು ನೆನಪುಮಾಡದೆ ಮರೆತುಬಿಟ್ಟನು.

ಯೋಸೇಫನು ಅರಸನಿಗೆ ಬಿದ್ದ ಕನಸಿನ ಅರ್ಥವನ್ನು ಹೇಳಿ
ಅವನಿಗೆ ಮಂತ್ರಿಯಾದದ್ದು.

ಎರಡು ವರುಷಗಳಾದ ಮೇಲೆ ಫರೋಹನಿಗೆ 41
ಕನಸುಬಿತ್ತು. ಆ ಕನಸು ಏನಂದರೆ—ಅವನು
ನೈಲ್‌ನದೀತೀರದಲ್ಲಿ ನಿಂತಿದ್ದನು. ಅಷ್ಟರಲ್ಲಿ ಲಕ್ಷಣ 2
ವಾದ ಏಳು ಕೊಬ್ಬಿದ ಆಕಳುಗಳು ಆ ನದಿಯೊಳ

3 ಗಿಂದ ಬಂದು ಆಪುಹುಲ್ಲಿನಲ್ಲಿ ಮೇಯುತ್ತಿದ್ದವು. ಅವು
ಗಳ ಹಿಂದೆ ಮೈಯೊಣಗಿ ಬಡವಾದ ಏಳು ಆಕಳು
ಗಳು ನದಿಯೊಳಗಣಿಂದ ಬಂದು ಮೊದಲು ಕಾಣಿಸಿದ
4 ಆಕಳುಗಳ ಹತ್ತಿರ ನದೀತೀರದಲ್ಲಿ ನಿಂತವು. ಮೈಯೊ
ಣಗಿದ ಈ ಬಡ ಆಕಳುಗಳು ಲಕ್ಷಣವಾದ ಆ ಕೊಬ್ಬಿದ
ಆಕಳುಗಳನ್ನು ತಿಂದುಬಿಟ್ಟವು. ಹೀಗೆ ಕಾಣಿಸುವಷ್ಟ
ರಲ್ಲಿ ಫರೋಹನಿಗೆ ಎಚ್ಚರವಾಯಿತು.
5 ಅವನು ತಿರಿಗಿ ನಿದ್ರೆಮಾಡಿದಾಗ ಮತ್ತೊಂದು ಕನ
ಸುಬಿತ್ತು. ಅದೇನಂದರೆ—ಒಳ್ಳೇ ಪುಷ್ಟಿಯುಳ್ಳ ಏಳು
6 ತೆನೆಗಳು ಒಂದೇ ದಂಟಿನಲ್ಲಿ ಹುಟ್ಟಿದವು. ಅವುಗಳ ಹಿಂದೆ
ಮೂಡಣ ಗಾಳಿಯಿಂದ ಕೆಟ್ಟು ಬತ್ತಿಹೋಗಿದ್ದ ಬೇರೆ
7 ಏಳು ತೆನೆಗಳು ಮೊಳೆತು ಬಂದವು; ಬತ್ತಿಹೋಗಿದ್ದ
ಈ ತೆನೆಗಳು ಆ ಏಳು ಒಳ್ಳೇ ಪುಷ್ಟಿಯುಳ್ಳ ತೆನೆಗಳನ್ನು
ನುಂಗಿಬಿಟ್ಟವು. ಹೀಗೆ ಕಾಣಿಸುವಷ್ಟರಲ್ಲಿ ಫರೋಹನು
ಎಚ್ಚತ್ತು ಅದನ್ನು ಕನಸೆಂದು ತಿಳುಕೊಂಡನು.
8 ಬೆಳಿಗ್ಗೆ ಅವನು ಮನದಲ್ಲಿ ಕಳವಳಗೊಂಡು
ಐಗುಪ್ತದೇಶದಲ್ಲಿದ್ದ ಎಲ್ಲಾ ಜೋಯಿಸರನ್ನೂ
ವಿದ್ವಾಂಸರನ್ನೂ ಕರಸಿ ಅವರಿಗೆ ತನ್ನ ಕನಸನ್ನು
ತಿಳಿಸಲಾಗಿ ಅದರ ಅರ್ಥವನ್ನು ಅವನಿಗೆ ಹೇಳಬಲ್ಲ
9 ವರು ಅವರಲ್ಲಿ ಒಬ್ಬರೂ ಸಿಕ್ಕಲಿಲ್ಲ. ಹೀಗಿರುವಾಗ
ಪಾನದಾಯಕರಲ್ಲಿ ಮುಖ್ಯಸ್ಥನು ಫರೋಹನಿಗೆ—
[ಅರಸನೇ,] ಈ ಹೊತ್ತು ನನ್ನ ತಪ್ಪುಗಳನ್ನು ನೆನಸಿ
10 ಸನ್ನಿಧಿಯಲ್ಲಿ ಅರಿಕೆಮಾಡುತ್ತೇನೆ. ತಾವು ತಮ್ಮ
ಸೇವಕರ ಮೇಲೆ ಸಿಟ್ಟುಗೊಂಡು ನನ್ನನ್ನೂ ಭಕ್ಷ್ಯ
ಕಾರರಲ್ಲಿ ಮುಖ್ಯಸ್ಥನನ್ನೂ ದಳವಾಯಿಯ ಮನೆ
ಯೊಳಗೆ ಕಾವಲಲ್ಲಿರಿಸಿದಾಗ ನಮ್ಮಿಬ್ಬರಿಗೂ ಒಂದೇ
11 ರಾತ್ರಿಯಲ್ಲಿ ಕನಸುಬಿತ್ತು. ಒಬ್ಬೊಬ್ಬನ ಕನಸಿಗೆ ಬೇರೆ
12 ಬೇರೆ ಅರ್ಥವಿತ್ತು. ಅಲ್ಲಿ ನಮ್ಮ ಸಂಗಡ ಇಬ್ರಿಯನಾದ
ಒಬ್ಬ ಪ್ರಾಯಸ್ಥನಿದ್ದನು; ಅವನು ದಳವಾಯಿಯ
ದಾಸನು. ನಾವು ಅವನಿಗೆ ನಮ್ಮ ಕನಸುಗಳನ್ನು ತಿಳಿಸಿ
ದಾಗ ಅವನು ಅವುಗಳ ಅರ್ಥವನ್ನು ನಮಗೆ ಹೇಳಿ
ದನು; ನಮ್ಮ ನಮ್ಮ ಕನಸಿನ ಪ್ರಕಾರ ಅರ್ಥವನ್ನು
13 ಹೇಳಿದನು. ಮಾತ್ರವಲ್ಲದೆ ಅವನು ನಮಗೆ ಹೇಳಿದ
ಅರ್ಥಕ್ಕೆ ಸರಿಯಾಗಿ ಕಾರ್ಯವು ನಡೆಯಿತು; ಅವನು
ಹೇಳಿದಂತೆಯೇ ನನ್ನ ಉದ್ಯೋಗವು ತಿರಿಗಿ ನನಗೆ ದೊರ
ಕಿತು; ಭಕ್ಷ್ಯಕಾರರಲ್ಲಿ ಮುಖ್ಯಸ್ಥನೋ ಗಲ್ಲಿಗೆ ಹಾಕ
14 ಲ್ಪಟ್ಟನು ಅಂದನು. ಫರೋಹನು ಇದನ್ನು ಕೇಳಿ
ಯೋಸೇಫನನ್ನು ಕರೇಕಳುಹಿಸಿದನು. ಯೋಸೇಫನು
ಬೇಗನೆ ಸೆರೆಮನೆಯಿಂದ ಬಿಡಿಸಲ್ಪಟ್ಟವನಾಗಿ ಕ್ಷೌರ
ಮಾಡಿಸಿಕೊಂಡು ಬೇರೆ ವಸ್ತ್ರಗಳನ್ನು ಹಾಕಿಕೊಂಡು
ಫರೋಹನ ಸನ್ನಿಧಿಗೆ ಬಂದನು.
15 ಆಗ ಫರೋಹನು ಯೋಸೇಫನಿಗೆ—ನಾನು ಒಂದು
ಕನಸು ಕಂಡಿದ್ದೇನೆ; ಅದರ ಅರ್ಥವನ್ನು ಹೇಳಬಲ್ಲ
ವರು ಯಾರೂ ಇಲ್ಲ. ಆದರೆ ನೀನು ಕನಸನ್ನು
ಕೇಳುತ್ತಲೇ ಅದರ ಅರ್ಥವನ್ನು ಹೇಳಬಲ್ಲವನೆಂದು
16 ವರ್ತಮಾನಕೇಳಿದ್ದೇನೆ ಎಂದು ಹೇಳಲು ಯೋಸೇ
ಫನು—ನನ್ನಲ್ಲಿ ಅಂಥ ಸಾಮರ್ಥ್ಯವೇನೂ ಇಲ್ಲ;
ಆದರೆ ದೇವರು ಫರೋಹನಿಗೆ ಶುಭಕರವಾದ ಉತ್ತರ
ವನ್ನು ಕೊಡಬಲ್ಲನೆಂದು ಹೇಳಿದನು.
17 ಆಗ ಫರೋಹನು ಯೋಸೇಫನಿಗೆ—ನನ್ನ ಕನಸಿ

ನೊಳಗೆ ನಾನು ನೈಲ್‌ನದೀತೀರದಲ್ಲಿ ನಿಂತಿದ್ದೆನು.
ನದಿಯೊಳಗಿಂದ ಲಕ್ಷಣವಾದ ಏಳು ಕೊಬ್ಬಿದ ಆಕಳು
ಗಳು ಬಂದು ಆಪುಹುಲ್ಲಿನಲ್ಲಿ ಮೇಯುತ್ತಿದ್ದವು.
ಅವುಗಳ ಹಿಂದೆ ಅವಲಕ್ಷಣವಾದ ಕೊಬ್ಬಿಲ್ಲದ ಬಡ
ವಾದ ಬೇರೆ ಏಳು ಆಕಳುಗಳು ಬಂದವು; ಅಂಥ
ಬಡವಾದ ಆಕಳುಗಳನ್ನು ನಾನು ಐಗುಪ್ತದೇಶದಲ್ಲಿ
ಎಲ್ಲಿಯೂ ನೋಡಿದ್ದಿಲ್ಲ. ಅದಲ್ಲದೆ ಕೃಶವಾಗಿದ್ದ
ಆ ಬಡ ಆಕಳುಗಳು ಮೊದಲು ಕಾಣಿಸಿದ ಆ ಏಳು
ಕೊಬ್ಬಿದ ಆಕಳುಗಳನ್ನು ತಿಂದುಬಿಟ್ಟವು; ತಿಂದಾಗ್ಯೂ
ತಿಂದವೆಂಬದು ತೋರಲಿಲ್ಲ; ಅವು ಮೊದಲಿದ್ದಂತೆ
ಬಡವಾಗಿಯೇ ಇದ್ದವು. ಅಲ್ಲಿಗೆ ಎಚ್ಚರವಾಯಿತು.
ನನಗೆ ಬಿದ್ದ ಇನ್ನೊಂದು ಕನಸಿನೊಳಗೆ ಏಳು ಒಳ್ಳೇ
ಪುಷ್ಟಿಯುಳ್ಳ ತೆನೆಗಳು ಒಂದೇ ದಂಟಿನಲ್ಲಿ ಹುಟ್ಟಿ
ಬಂದವು. ಅವುಗಳ ಹಿಂದೆ ಮೂಡಣ ಗಾಳಿಯಿಂದ
ಕೆಟ್ಟು ಬತ್ತಿ ಒಣಗಿಹೋಗಿದ್ದ ಬೇರೆ ಏಳು
ತೆನೆಗಳು ಮೊಳೆತು ಬಂದವು. ಬತ್ತಿಹೋಗಿದ್ದ ತೆನೆಗಳು
ಆ ಏಳು ಒಳ್ಳೇ ತೆನೆಗಳನ್ನು ನುಂಗಿಬಿಟ್ಟವು. ಈ
ಕನಸುಗಳನ್ನು ಜೋಯಿಸರಿಗೆ ತಿಳಿಸಿದೆನು, ಆದರೆ
ಅವುಗಳ ಅರ್ಥವನ್ನು ಬಿಚ್ಚಿಹೇಳುವದಕ್ಕೆ ಅವರಲ್ಲಿ
ಯಾರಿಂದಲೂ ಆಗಲಿಲ್ಲ.
ಯೋಸೇಫನು ಫರೋಹನಿಗೆ—ತಾವು ಕಂಡ ಎರ
ಡು ಕನಸುಗಳೂ ಒಂದೇ ವಿಷಯವಾದವುಗಳು.
ದೇವರು ತಾನು ಮಾಡಬೇಕೆಂದಿರುವದನ್ನು ಇವುಗಳ
ಮೂಲಕ ತಮಗೆ ತಿಳಿಸಿದ್ದಾನೆ. ಆ ಏಳು ಒಳ್ಳೆಯ
ಆಕಳುಗಳೇ ಏಳು ವರುಷಗಳು; ಆ ಏಳು ಒಳ್ಳೆಯ
ತೆನೆಗಳೂ ಏಳು ವರುಷಗಳು; ಎರಡು ಕನಸುಗಳ
ಅರ್ಥವೊಂದೇ. ಒಳ್ಳೇ ಆಕಳುಗಳ ಹಿಂದೆ ಬಂದ
ಅವಲಕ್ಷಣವಾದ ಆ ಬಡ ಆಕಳುಗಳೂ ಮೂಡಣ
ಗಾಳಿಯಿಂದ ಕೆಟ್ಟುಹೋಗಿದ್ದ ಆ ಏಳು ಕಾಳಿಲ್ಲದ
ತೆನೆಗಳೂ ಬರವುಂಟಾಗುವ ಏಳು ವರುಷಗಳನ್ನು
ಸೂಚಿಸುತ್ತವೆ. ದೇವರು ತಾನು ಮಾಡಬೇಕೆಂದಿರು
ವದನ್ನು ತಮಗೆ ತಿಳಿಸಿದ್ದಾನೆಂಬದಾಗಿ ನಾನು ಅರಿಕೆ
ಮಾಡಿದೆನಷ್ಟೆ. ಕೇಳಯ್ಯಾ, ಐಗುಪ್ತದೇಶದಲ್ಲೆಲ್ಲಾ
ಬಹುವಿಶೇಷವಾದ ಏಳು ಸುಭಿಕ್ಷವರುಷಗಳೂ ಅವು
ಗಳ ತರುವಾಯ ಏಳು ದುರ್ಭಿಕ್ಷವರುಷಗಳೂ
ಬರುವವು. ಆಗ ಐಗುಪ್ತದೇಶದವರು ಮೊದಲಿದ್ದ
ಸುಭಿಕ್ಷವನ್ನು ಮರೆತುಬಿಡುವರು; ಆ ಬರದಿಂದ
ದೇಶವು ಹಾಳಾಗಿ ಹೋಗುವದು. ಮುಂದೆ ಬರುವ
ಕ್ಷಾಮವು ಅತ್ಯಂತಘೋರವಾಗಿರುವದರಿಂದ ಮೊದ
ಲಿದ್ದ ಸಮೃದ್ಧಿಯ ಗುರುತೇ ಕಾಣಿಸದೆ ಹೋಗು
ವದು. ಫರೋಹನಿಗೆ ಕನಸು ಎರಡು ವಿಧವಾಗಿ
ಬಿದ್ದದ್ದರಿಂದ ದೇವರು ಈ ಕಾರ್ಯವನ್ನು ನಿಶ್ಚಯಿಸಿ
ಇದನ್ನು ಬೇಗ ಮಾಡುವನೆಂಬದಾಗಿ ತಿಳುಕೊಳ್ಳ
ಬೇಕು. ಆದದರಿಂದ ತಾವು ವಿವೇಕಿಯೂ ಬುದ್ಧಿ
ವಂತನೂ ಆಗಿರುವ ಪುರುಷನನ್ನು ಆರಿಸಿಕೊಂಡು
ಅವನನ್ನು ಐಗುಪ್ತದೇಶದ ಮೇಲೆ ಅಧಿಕಾರಿಯಾಗಿ
ನೇಮಿಸಬೇಕು. ಮತ್ತು ತಾವು ಒಂದು ಕೆಲಸ
ಮಾಡಬೇಕು; ದೇಶದ ಎಲ್ಲಾ ಭಾಗಗಳಲ್ಲಿಯೂ
ಕರಣೀಕರನ್ನು ನೇಮಿಸಿ ಅವರ ಕೈಯಿಂದ ಸುಭಿಕ್ಷ
ವಾದ ಏಳು ವರುಷಗಳಲ್ಲಿ ದೇಶದ ಬೆಳೆಯೊಳಗೆ

ಐದನೆಯ ಪಾಲನ್ನು ಕಂದಾಯವಾಗಿ ಎತ್ತಿಸಬೇಕು.
35 ಅವರು ಮುಂದಣ ಒಳ್ಳೇ ವರುಷಗಳಲ್ಲಿ ಆಹಾರ
ಪದಾರ್ಥಗಳನ್ನೂ ದವಸಧಾನ್ಯಗಳನ್ನೂ ಕೂಡಿಸಿ
ಫರೋಹನ ವಶದೊಳಗೆ ಪಟ್ಟಣಗಳಲ್ಲಿಟ್ಟು ಜೋ
36 ಪಾನಮಾಡಲಿ. ಆ ಆಹಾರಪದಾರ್ಥಗಳನ್ನು ಇಟ್ಟು
ಕೂಡಿಸಿಕೊಳ್ಳುವದರಿಂದ ಐಗುಪ್ತದೇಶದಲ್ಲಿ ದುರ್ಭಿ
ಕ್ಷವುಂಟಾಗುವ ಏಳು ವರುಷಗಳಲ್ಲಿ ಜನರು ಕ್ಷಾಮ
ದಿಂದ ಸಾಯುವದಿಲ್ಲ ಎಂದು ಹೇಳಿದನು.
37 ಆ ಮಾತು ಫರೋಹನಿಗೂ ಅವನ ಪರಿವಾರದವ
38 ರಿಗೂ ಒಳ್ಳೇದಾಗಿ ತೋಚಿದ್ದರಿಂದ ಫರೋಹನು ತನ್ನ
ಪರಿವಾರದವರಿಗೆ—ಈತನಲ್ಲಿ ದೇವರ ಆತ್ಮ ಉಂಟ
39 ಲ್ಲಾ; ಈತನಿಗಿಂತ ಯೋಗ್ಯನಾದ ಪುರುಷನು ನಮಗೆ
ಸಿಕ್ಕಾನೇ ಎಂದು ಹೇಳಿ ಯೋಸೇಫನಿಗೆ—ದೇವರು
ಇದನ್ನೆಲ್ಲಾ ನಿನಗೇ ತಿಳಿಸಿರುವದರಿಂದ ನಿನಗೆ ಸಮಾ
ನನಾದ ಬುದ್ಧಿವಿವೇಕಗಳುಳ್ಳ ಪುರುಷನು ಯಾವನೂ
40 ಇಲ್ಲ; ನೀನೇ ಅರಮನೆಯಲ್ಲಿ ಸರ್ವಾಧಿಕಾರಿಯಾಗಿ
ರಬೇಕು; ನಿನ್ನ ಅಪ್ಪಣೆಯ ಮೇರೆಗೆ ಪ್ರಜೆಗಳೆಲ್ಲರೂ
ನಡೆದುಕೊಳ್ಳಬೇಕು; ಸಿಂಹಾಸನದ ವಿಷಯದಲ್ಲಿ
ಮಾತ್ರ ನಾನು ನಿನಗಿಂತ ದೊಡ್ಡವನಾಗಿರುವೆನು
41 ಎಂದು ಹೇಳಿದನು. ಫರೋಹನು ಯೋಸೇಫನಿಗೆ—
ನೋಡು, ಐಗುಪ್ತದೇಶದ ಮೇಲೆಲ್ಲಾ ನಿನ್ನನ್ನು
42 ಅಧಿಕಾರಿಯನ್ನಾಗಿ ಇಟ್ಟಿದ್ದೇನೆ ಎಂದು ಹೇಳಿ ತನ್ನ
ಕೈಯಿಂದ ಮುದ್ರಿಕೆಯನ್ನು ತೆಗೆದು ಯೋಸೇಫನ
ಕೈಗೆ ಇಟ್ಟು ಅವನಿಗೆ ನಾರುಮಡಿಯನ್ನು ಹೊದಿಸಿ
ಅವನ ಕೊರಳಿಗೆ ಚಿನ್ನದ ಸರಪಣಿಯನ್ನು ಹಾಕಿಸಿ
43 ತನಗಿದ್ದ ಎರಡನೆಯ ರಥದಲ್ಲಿ ಕುಳ್ಳಿರಿಸಿ ಅವನ
ಮುಂದೆ [1]ಅಡ್ಡಬೀಳಿರಿ ಎಂದು ಪ್ರಕಟಣೆಮಾಡಿಸಿ
ಅವನನ್ನು ಐಗುಪ್ತದೇಶಕ್ಕೆ ಸರ್ವಾಧಿಕಾರಿಯನ್ನಾಗಿ
44 ಇಟ್ಟನು. ಇನ್ನೂ ಫರೋಹನು ಅವನಿಗೆ—ನಾನು
ಫರೋಹನು; ನಿನ್ನ ಅಪ್ಪಣೆಯಿಲ್ಲದೆ ಐಗುಪ್ತದೇಶ
ದಲ್ಲೆಲ್ಲಾ ಒಬ್ಬನೂ ಕೈಯನ್ನಾಗಲಿ ಕಾಲನ್ನಾಗಲಿ ಕದ
45 ಲಿಸಕೂಡದು ಎಂದು ಹೇಳಿದನು. ಮತ್ತು ಫರೋ
ಹನು ಯೋಸೇಫನಿಗೆ ಸಾಫ್ನತ್ಪನ್ನೇಹ ಎಂದು ಹೆಸರಿಟ್ಟು
ಓನ್ ಎಂಬ ಗುರುಕ್ಷೇತ್ರದ ಆಚಾರ್ಯನಾಗಿದ್ದ ಪೋಟೀ
ಫೆರನ ಮಗಳಾದ ಆಸನತ್ ಎಂಬಾಕೆಯನ್ನು ಅವನಿಗೆ
ಮದುವೆಮಾಡಿಸಿದನು. ಯೋಸೇಫನು ಐಗುಪ್ತದೇಶದ
ಮೇಲೆ ಅಧಿಕಾರಿಯಾಗಿ ಹೊರಟನು.

ಏಳು ವರುಷದ ಸುಭಿಕ್ಷವು ಕಳೆದ ಮೇಲೆ ದೊಡ್ಡ ಬರ
ಉಂಟಾದದ್ದು.

46 ಯೋಸೇಫನು ಐಗುಪ್ತದೇಶದ ಅರಸನಾದ ಫರೋ
ಹನ ಸನ್ನಿಧಿಯಲ್ಲಿ ನಿಂತಾಗ ಮೂವತ್ತು ವರುಷ
ದವನಾಗಿದ್ದನು. ಅವನು ಫರೋಹನ ಸನ್ನಿಧಿಯಿಂದ
ಹೊರಟು ಐಗುಪ್ತದೇಶವನ್ನೆಲ್ಲಾ ಸಂಚಾರಮಾಡಿ
47 ದನು. ಸುಭಿಕ್ಷವಾದ ಏಳು ವರುಷಗಳಲ್ಲಿ
48 ಭೂಮಿಯು ಹೇರಳವಾಗಿ ಫಲಕೊಟ್ಟಿತು. ಐಗುಪ್ತ
ದೇಶದಲ್ಲಿ ಸುಭಿಕ್ಷವಾದ ಆ ಏಳು ವರುಷಗಳ
ಬೆಳೆಯನ್ನು ಯೋಸೇಫನು ಕೂಡಿಸಿ ಪಟ್ಟಣಗಳಲ್ಲಿ
ಇರಿಸಿದನು; ಒಂದೊಂದು ಪಟ್ಟಣದ ಸುತ್ತಲಿದ್ದ
ಹೊಲಗಳ ಬೆಳೆಯನ್ನು ಆಯಾ ಪಟ್ಟಣದಲ್ಲಿಯೇ
ಕೂಡಿಸಿಟ್ಟನು. ಅವನು ದವಸಧಾನ್ಯವನ್ನು ಸಮು 49
ದ್ರದ ಉಸುಬಿನಷ್ಟು ರಾಶಿರಾಶಿಯಾಗಿ ಕೂಡಿಸಿ ಲೆಕ್ಕ
ಮಾಡುವದನ್ನು ಬಿಟ್ಟುಬಿಟ್ಟನು; ಅದನ್ನು ಲೆಕ್ಕ
ಮಾಡುವದಕ್ಕೆ ಆಗದೆಹೋಯಿತು.
ಬರಗಾಲ ಬರುವದಕ್ಕಿಂತ ಮುಂಚೆ ಯೋಸೇಫನಿಗೆ 50
ಇಬ್ಬರು ಗಂಡು ಮಕ್ಕಳು ಹುಟ್ಟಿದರು. ಇವರು
ಓನ್ ಪಟ್ಟಣದ ಆಚಾರ್ಯನಾಗಿದ್ದ ಪೋಟೀಫೆರನ
ಮಗಳಾದ ಆಸನತೆಂಬಾಕೆಯಲ್ಲಿ ಅವನಿಗೆ ಹುಟ್ಟಿ
ದರು. ಚೊಚ್ಚಲುಮಗನು ಹುಟ್ಟಿದಾಗ ಯೋಸೇ 51
ಫನು—ನಾನು ನನ್ನ ಎಲ್ಲಾ ಕಷ್ಟವನ್ನೂ ತಂದೆಯ
ಮನೆಯವರನ್ನೂ ಮರೆತುಬಿಡುವಂತೆ ದೇವರು ಮಾಡಿ
ದ್ದಾನಲ್ಲಾ ಎಂದು ಹೇಳಿ ಅವನಿಗೆ [2]ಮನಸ್ಸೆ ಎಂದು
ಹೆಸರಿಟ್ಟನು. ಎರಡನೆಯ ಮಗನು ಹುಟ್ಟಿದಾಗ 52
ಅವನು—ನನಗೆ ಸಂಕಟ ಬಂದ ದೇಶದಲ್ಲೇ ದೇವರು
ಅಭಿವೃದ್ಧಿಯನ್ನು ದಯಪಾಲಿಸಿದ್ದಾನೆಂದು ಹೇಳಿ
ಆ ಮಗನಿಗೆ [3]ಎಫ್ರಾಯಿಮ್ ಎಂದು ಹೆಸರಿಟ್ಟನು.
ಐಗುಪ್ತದೇಶದಲ್ಲಿ ಸುಭಿಕ್ಷದ ಏಳು ವರುಷಗಳು 53
ಮುಗಿದ ಮೇಲೆ ಯೋಸೇಫನು ಹೇಳಿದ್ದ ಪ್ರಕಾರ 54
ಕ್ಷಾಮದ ಏಳು ವರುಷಗಳಿಗೆ ಪ್ರಾರಂಭವಾಯಿತು.
ಬರವು ಸುತ್ತಲಿದ್ದ ಎಲ್ಲಾ ದೇಶಗಳಲ್ಲಿಯೂ ಹಬ್ಬಿತು:
ಐಗುಪ್ತದೇಶದಲ್ಲಿ ಮಾತ್ರ ಆಹಾರದೊರಕುವದು.
ಐಗುಪ್ತದೇಶಕ್ಕೆಲ್ಲಾ ಬರಬಂದಾಗ ಪ್ರಜೆಗಳು ಆಹಾರ 55
ಬೇಕೆಂದು ಫರೋಹನಿಗೆ ಮೊರೆಯಿಟ್ಟುಕೊಂಡರು.
ಅವನು ಅವರಿಗೆ—ಯೋಸೇಫನ ಬಳಿಗೆ ಹೋಗಿರಿ,
ಅವನ ಮಾತಿನ ಮೇರೆಗೆ ಮಾಡಿರಿ ಎಂದು ಹೇಳಿ
ದನು. ಬರವು ಲೋಕದಲ್ಲೆಲ್ಲಾ ಹರಡಿಕೊಂಡಿರುವಾಗ 56
ಯೋಸೇಫನು ಕಣಜಗಳನ್ನೆಲ್ಲಾ ತೆಗಿಸಿ ಐಗುಪ್ತ್ಯ
ರಿಗೆ ಧಾನ್ಯವನ್ನು ಮಾರಿಸಿದನು. ಐಗುಪ್ತದೇಶದಲ್ಲಿ
ಬರವು ಬಹುಘೋರವಾಗಿತ್ತು. ಇದಲ್ಲದೆ ಭೂಲೋಕ 57
ದಲ್ಲೆಲ್ಲಾ ಬರವು ಭಯಂಕರವಾಗಿದ್ದದರಿಂದ ಎಲ್ಲಾ
ದೇಶದವರೂ ಧಾನ್ಯವನ್ನು ಕೊಂಡುಕೊಳ್ಳುವದಕ್ಕಾಗಿ
ಐಗುಪ್ತಕ್ಕೆ ಯೋಸೇಫನ ಬಳಿಗೆ ಬಂದರು.

ಯೋಸೇಫನ ಅಣ್ಣಂದಿರು ಧಾನ್ಯಕೊಂಡುಕೊಳ್ಳುವದಕ್ಕೆ
ಯೋಸೇಫನ ಬಳಿಗೆ ಬಂದು ಅವನ ಗುರುತನ್ನು ತಿಳಿಯದೆ
ಹೋದದ್ದು.

42
ಐಗುಪ್ತದೇಶದಲ್ಲಿ ದವಸಧಾನ್ಯವುಂಟೆಂದು ಯಾ
ಕೋಬನು ಕೇಳಿ ತನ್ನ ಮಕ್ಕಳಿಗೆ—ನೀವು ಒಬ್ಬ
ರನ್ನೊಬ್ಬರು ನೋಡುತ್ತಿರುವದೇಕೆ? ಐಗುಪ್ತದೇಶ 2
ದಲ್ಲಿ ದವಸಧಾನ್ಯ ಉಂಟೆಂಬದನ್ನು ಕೇಳಿದ್ದೇನೆ;
ನಾವು ಸಾಯದೆ ಬದುಕುವಂತೆ ನೀವು ಅಲ್ಲಿಗೆ ಹೋಗಿ
ಬೇಕಾದ ದವಸವನ್ನು ಕೊಂಡುಕೊಂಡು ಬನ್ನಿರಿ 3
ಎಂದು ಹೇಳಿದ್ದರಿಂದ ಯೋಸೇಫನ ಹತ್ತು ಮಂದಿ
ಅಣ್ಣಂದಿರು ಧಾನ್ಯವನ್ನು ತರುವದಕ್ಕೋಸ್ಕರ ಐಗುಪ್ತ

1) ಮೂಲ: ಅಬ್ರೇಕ್. 2) ಮನಸ್ಸೆ ಅಂದರೆ ಮರೆಸುವವನು. 3) ಎಫ್ರಾಯಿಮ್ ಅಂದರೆ ಅಭಿವೃದ್ಧಿ.

4 ದೇಶಕ್ಕೆ ಹೊರಟರು. ಆದರೆ ಯಾಕೋಬನು ಯೋ
ಸೇಫನ ಒಡಹುಟ್ಟಿದ ತಮ್ಮನಾದ ಬೆನ್ಯಾವಿಾನನನ್ನು
ಅವನಿಗೆ ಕೇಡುಕುಂಟಾದೀತೆಂದು ಹೇಳಿ ಅಣ್ಣಂದಿರ
ಜೊತೆಯಲ್ಲಿ ಕಳುಹಿಸಲಿಲ್ಲ.
5 ಧಾನ್ಯವನ್ನು ಕೊಂಡುಕೊಳ್ಳುವದಕ್ಕೋಸ್ಕರ ಐಗು
ಪ್ತದೇಶಕ್ಕೆ ಬಂದವರಲ್ಲಿ ಇಸ್ರಾಯೇಲನ ಮಕ್ಕಳೂ
ಇದ್ದರು; ಕಾನಾನ್ ದೇಶದಲ್ಲಿಯೂ ಬರವಿತ್ತಷ್ಟೆ.
6 ಐಗುಪ್ತದೇಶದ ಮೇಲೆ ಅಧಿಕಾರವನ್ನು ನಡಿಸಿ ಜನ
ರಿಗೆ ಧಾನ್ಯವನ್ನು ಮಾರಿಸುವವನು ಯೋಸೇಫನೇ.
ಹೀಗಿರುವದರಿಂದ ಅವನ ಅಣ್ಣಂದಿರು ಬಂದು ಅವನ
7 ಮುಂದೆಯೇ ಅಡ್ಡಬಿದ್ದರು. ಯೋಸೇಫನು ಅವ
ರನ್ನು ಕಂಡಾಗ ಅವರ ಗುರುತುಹಿಡಿದು ತನ್ನ ಅಣ್ಣಂದಿ
ರೆಂದು ತಿಳಿದಾಗ್ಯೂ ಅವರಿಗೆ ಅನ್ಯನಂತೆ ತೋರ್ಪಡಿಸಿ
ಕೊಂಡು ಬಿರುನುಡಿಯಿಂದ—ನೀವು ಎಲ್ಲಿಂದ ಬಂದ
ವರು ಎಂದು ಕೇಳಿದನು. ಅವರು—ಧಾನ್ಯವನ್ನು
ಕೊಂಡುಕೊಳ್ಳುವದಕ್ಕೋಸ್ಕರ ಕಾನಾನ್ ದೇಶದಿಂದ
8 ಬಂದಿದ್ದೇವೆ ಅಂದರು. ಅಣ್ಣಂದಿರ ಗುರುತು ಯೋ
ಸೇಫನಿಗೆ ತಿಳಿದಾಗ್ಯೂ ಅವನ ಗುರುತು ಅವರಿಗೆ ತಿಳಿ
9 ಯಲಿಲ್ಲ. ಅವನು ಅವರ ವಿಷಯ ತನಗೆ ಬಿದ್ದ
ಕನಸುಗಳನ್ನು ನೆನಪಿಗೆ ತಂದುಕೊಂಡು ಅವರಿಗೆ—
ನೀವು ಗೂಢಚಾರರು; ನಮ್ಮ ದೇಶದ ದುರ್ಬಲಸ್ಥಳ
ಗಳನ್ನು ನೋಡಿಕೊಳ್ಳುವದಕ್ಕಾಗಿ ಬಂದವರು ಎಂದು
10 ಹೇಳಲು, ಅವರು—ಅಲ್ಲ, ಸ್ವಾಮಿಾ, ತಮ್ಮ ಸೇವಕ
ರಾದ ನಾವು ಆಹಾರಪದಾರ್ಥಗಳನ್ನು ಕೊಂಡು
11 ಕೊಳ್ಳುವದಕ್ಕೆ ಬಂದಿದ್ದೇವೆ. ನಾವೆಲ್ಲರೂ ಒಬ್ಬನೇ
ತಂದೆಯ ಮಕ್ಕಳು; ನಾವು ಯಥಾರ್ಥವಾಗಿ ಬಂದ
12 ವರೇ ಹೊರತು ಗೂಢಚಾರರಲ್ಲ ಅಂದರು. ಅವನು
ಅವರಿಗೆ—ಸುಳ್ಳು, ನಮ್ಮ ದೇಶದ ದುರ್ಬಲಸ್ಥಳ
ಗಳನ್ನು ತಿಳಿದುಕೊಳ್ಳುವದಕ್ಕೆ ಬಂದಿರಿ ಎಂದು
13 ಹೇಳಲು ಅವರು—ತಮ್ಮ ಸೇವಕರಾದ ನಾವು ಹನ್ನೆ
ರಡು ಮಂದಿ ಅಣ್ಣತಮ್ಮಂದಿರು; ನಾವು ಕಾನಾನ್
ದೇಶದವರು, ಒಬ್ಬ ತಂದೆಯ ಮಕ್ಕಳು; ನಮ್ಮಲ್ಲಿ
ಚಿಕ್ಕವನು ತಂದೆಯ ಬಳಿಯಲ್ಲಿದ್ದಾನೆ; ಒಬ್ಬನಿಲ್ಲ
14 ಅಂದರು. ಯೋಸೇಫನು ಅವರಿಗೆ—ನೀವು ಗೂಢ
15 ಚಾರರೆಂದು ನಾನು ಹೇಳಿದೆನಷ್ಟೆ; ಅದು ಹೌದೋ
ಅಲ್ಲವೋ ಗೊತ್ತಾಗುವದಕ್ಕಾಗಿ ನಿಮ್ಮ ತಮ್ಮನು
ಬರಬೇಕು; ಅವನು ಬಂದ ಹೊರತು ಫರೋಹನ
ಜೀವದಾಣೆ ನೀವು ಇಲ್ಲಿಂದ ಹೊರಟು ಹೋಗ
16 ಕೂಡದು. ಅವನನ್ನು ಕರದುಕೊಂಡು ಬರುವದಕ್ಕೆ
ನಿಮ್ಮಲ್ಲಿ ಒಬ್ಬನನ್ನು ಕಳುಹಿಸಿರಿ; ಅವನು ಬರುವ
ವರೆಗೂ ನಿಮ್ಮನ್ನು ಸೆರೆಯಲ್ಲಿ ಇಡಿಸುತ್ತೇನೆ. ಹೀಗೆ
ನಾನು ನಿಮ್ಮ ಮಾತುಗಳನ್ನು ಪರೀಕ್ಷಿಸಿ ನೀವು
ಸತ್ಯವಂತರೋ ಅಲ್ಲವೋ ಎಂದು ತಿಳಿದುಕೊಳ್ಳು
ತ್ತೇನೆ. ನಿಮ್ಮ ತಮ್ಮನು ಬಾರದೆ ಹೋದರೆ, ಫರೋ
ಹನ ಜೀವದಾಣೆ, ನೀವು ಗೂಢಚಾರರೇ ಎಂದು
17 ಹೇಳಿ ಅವರೆಲ್ಲರನ್ನೂ ಮೂರು ದಿನಗಳ ವರೆಗೂ
ಕಾವಲಲ್ಲಿರಿಸಿದನು.
18 ಮೂರನೆಯ ದಿನದಲ್ಲಿ ಯೋಸೇಫನು ಅವರನ್ನು
ಕರಸಿ—ನಾನು ದೇವರಿಗೆ ಭಯಪಡುವವನು; ನೀವು
ಸತ್ಯವಂತರಾಗಿದ್ದರೆ ಒಂದು ಕೆಲಸವನ್ನು ಮಾಡಿ

ಬದುಕಿಕೊಳ್ಳಿರಿ. ನಿಮ್ಮಲ್ಲಿ ಒಬ್ಬನನ್ನು ಮಾತ್ರ
ಸೆರೆಯಲ್ಲಿರಿಸುತ್ತೇನೆ; ಮಿಕ್ಕಾದವರು ನಿಮ್ಮ ಮನೆ
ಯವರ ಅವಸರಕ್ಕೆ ಧಾನ್ಯವನ್ನು ತೆಗೆದುಕೊಂಡು
ಹೋಗಿ ನಿಮ್ಮ ತಮ್ಮನನ್ನು ನನ್ನ ಬಳಿಗೆ ಕರದು
ಕೊಂಡು ಬರಬೇಕು; ಕರದುಕೊಂಡು ಬಂದರೆ,
ನಿಮ್ಮ ಮಾತನ್ನು ಸತ್ಯವೆಂದು ನಾನು ತಿಳಿದುಕೊಳ್ಳು
ವದರಿಂದ ನೀವು ಸಾಯುವದಿಲ್ಲ ಅಂದನು. ಅವರು
ಆ ಮಾತಿಗೆ ಒಪ್ಪಿದರು. ಆದರೆ ಅವರು ತಮ್ಮ
ತಮ್ಮೊಳಗೆ—ನಾವು ನಮ್ಮ ತಮ್ಮನಿಗೆ ಮಾಡಿದ್ದು
ದ್ರೋಹವೇ ಸರಿ; ಅವನು ನಮ್ಮನ್ನು ಬೇಡಿಕೊಂಡಾಗ
ನಾವು ಅವನ ಪ್ರಾಣಸಂಕಟವನ್ನು ತಿಳಿದರೂ ಅವನ
ಮೊರೆಗೆ ಕಿವಿಗೊಡಲಿಲ್ಲ; ಆ ಕಾರಣದಿಂದಲೇ ಈ
ಸಂಕಟವು ನಮಗೆ ಪ್ರಾಪ್ತವಾಗಿದೆ ಎಂದು ಮಾತಾಡಿ
ಕೊಂಡರು. ಅದಕ್ಕೆ ರೂಬೇನನು—ಆ ಹುಡುಗನಿಗೆ
ಏನೂ ಕೇಡು ಮಾಡಬೇಡಿರಿ ಎಂದು ನಾನು ಹೇಳಿದೆ
ನಲ್ಲವೇ; ನೀವು ಕೇಳಲಿಲ್ಲ. ಆದದರಿಂದ ಅವನಿಗಾದ
ಪ್ರಾಣಹಾನಿಯ ವಿಷಯದಲ್ಲಿ ನಾವು ಉತ್ತರ ಹೇಳ
ಬೇಕಾಗಿ ಬಂತು ಅಂದನು. ಯೋಸೇಫನು ದ್ವಿಭಾ
ಷಿಯ ಮುಖಾಂತರ ಅವರ ಸಂಗಡ ಮಾತಾಡಿದದ
ರಿಂದ, ಅವರು ತಮ್ಮ ಮಾತು ಅವನಿಗೆ ಗೊತ್ತಾಗು
ವದೆಂದು ನೆನಸಲೇ ಇಲ್ಲ, ಯೋಸೇಫನಾದರೋ
ಅವರ ಬಳಿಯಿಂದ ಒಂದು ಕಡೆಗೆ ಹೋಗಿ ಕಣ್ಣೀರು
ಸುರಿಸಿದನು. ತರುವಾಯ ಅವರ ಬಳಿಗೆ ತಿರಿಗಿ
ಬಂದು ಅವರ ಸಂಗಡ ಮಾತಾಡಿ ಅವರೊಳಗೆ ಸಿಮೆ
ಯೋನನನ್ನು ಹಿಡಿಸಿ ಅವರ ಕಣ್ಣೆದುರಾಗಿ ಅವನಿಗೆ
ಬೇಡಿಗಳನ್ನು ಹಾಕಿಸಿದನು. ಆ ಮೇಲೆ ಯೋಸೇ
ಫನು ತನ್ನ ಆಳುಗಳಿಗೆ—ಆ ಮನುಷ್ಯರ ಚೀಲಗಳಲ್ಲಿ
ಧಾನ್ಯವನ್ನು ತುಂಬಿಸಿ ಒಬ್ಬೊಬ್ಬನ ಚೀಲದಲ್ಲಿ ಅವ
ನವನ ಹಣವನ್ನು ತಿರಿಗಿ ಇಟ್ಟು ಅವರ ಪ್ರಯಾಣಕ್ಕೆ
ಬೇಕಾದ ಆಹಾರವನ್ನು ಕೊಡಬೇಕೆಂದು ಅಪ್ಪಣೆ
ಮಾಡಲು ಅವರು ಹಾಗೆಯೇ ಮಾಡಿದರು. ಇವರು
ತಾವು ಕೊಂಡುಕೊಂಡ ಧಾನ್ಯವನ್ನು ಕತ್ತೆಗಳ ಮೇಲೆ
ಹೇರಿಕೊಂಡು ಹೊರಟುಹೋದರು.
ದಾರಿಯಲ್ಲಿ ಅವರು ಒಂದು ಸ್ಥಳದಲ್ಲಿ ಇಳಿದು
ಕೊಂಡಾಗ ಅವರಲ್ಲಿ ಒಬ್ಬನು ತನ್ನ ಕತ್ತೆಗೆ ದಾಣಿ
ಕೊಡಬೇಕೆಂದು ತನ್ನ ಚೀಲವನ್ನು ಬಿಚ್ಚಿದಾಗ ಅದರ
ಬಾಯಲ್ಲೇ ತಾನು ತಂದಿದ್ದ ಹಣವನ್ನು ಕಂಡನು.
ಅವನು ಅಣ್ಣತಮ್ಮಂದಿರಿಗೆ—ನಾನು ಕೊಟ್ಟ ಹಣವು
ಹಿಂದಕ್ಕೆ ಬಂದದೆ; ಇಗೋ ನನ್ನ ಚೀಲದಲ್ಲಿದೆ
ಎಂದು ಹೇಳಲು ಅವರು ಧೈರ್ಯಗೆಟ್ಟು ನಡುಗುತ್ತಾ
ಒಬ್ಬರನ್ನೊಬ್ಬರು ನೋಡಿ—ದೇವರು ನಮಗೆ ಮಾ
ಡಿದ್ದು ಇದೇನು ಅಂದರು.
ಅವರು ಕಾನಾನ್‌ದೇಶಕ್ಕೆ ತಮ್ಮ ತಂದೆಯಾದ
ಯಾಕೋಬನ ಬಳಿಗೆ ಬಂದು ನಡೆದದ್ದನ್ನೆಲ್ಲಾ
ತಿಳಿಸಿ—ಆ ದೇಶಾಧಿಪತಿ ನಮ್ಮ ಸಂಗಡ ಬಿರಿಸಿನಿಂದ
ಮಾತಾಡಿ ನಮ್ಮನ್ನು ಗೂಢಚಾರರೆಂದು ಹೇಳಿದನು.
ನಾವು ಅವನಿಗೆ—ನಾವು ಸತ್ಯವಂತರೇ ಹೊರತು
ಗೂಢಚಾರರಲ್ಲ; ನಾವು ಒಬ್ಬ ತಂದೆಯಿಂದಲೇ
ಹುಟ್ಟಿದ ಹನ್ನೆರಡು ಮಂದಿ ಅಣ್ಣತಮ್ಮಂದಿರಾಗಿದ್ದೇವೆ;
ನಮ್ಮಲ್ಲಿ ಒಬ್ಬನಿಲ್ಲ; ಚಿಕ್ಕವನೋ ಈಗ ಕಾನಾನ್

ದೇಶದಲ್ಲಿ ನಮ್ಮ ತಂದೆಯು ಬಳಿಯಲ್ಲಿದ್ದಾನೆ ಎಂದು
ಹೇಳಿದೆವು. ಅದಕ್ಕೆ ದೇಶಾಧಿಪತಿ—ನೀವು ಸತ್ಯವಂತ
ರೋ ಅಲ್ಲವೋ ಎಂಬದು ಗೊತ್ತಾಗುವದಕ್ಕಾಗಿ
ನಿಮ್ಮೊಳಗೆ ಒಬ್ಬನನ್ನು ನನ್ನ ಬಳಿಯಲ್ಲಿ ಬಿಟ್ಟು
ನಿಮ್ಮ ಮನೆಯವರ ಕ್ಷಾಮನಿವಾರಣೆಗೆ ಬೇಕಾದ
ದ್ದನ್ನು ತೆಗೆದುಕೊಂಡು ಹೋಗಿ ನಿಮ್ಮ ತಮ್ಮನನ್ನು
ನನ್ನ ಬಳಿಗೆ ಕರಕೊಂಡು ಬರಬೇಕು; ಕರಕೊಂಡು
ಬಂದರೆ ನೀವು ಗೂಢಚಾರರಲ್ಲ, ಸತ್ಯವಂತರೇ ಎಂದು
ತಿಳಿದುಕೊಂಡು ನಿಮ್ಮ ಅಣ್ಣನನ್ನು ಬಿಡಿಸಿಬಿಡುತ್ತೇನೆ,
ಮತ್ತು ನೀವು ಈ ದೇಶದಲ್ಲಿ ವ್ಯಾಪಾರ ನಡಿಸಬಹು
ದೆಂದು ಹೇಳಿದನು ಅಂದರು. ಅವರು ತಮ್ಮ ಚೀಲ
ಗಳನ್ನು ಬಿಚ್ಚಿ ನೋಡಿದಾಗ ಪ್ರತಿಯೊಬ್ಬನ ಚೀಲ
ದಲ್ಲಿಯೂ ಅವನವನ ಹಣದ ಗಂಟು ಸಿಕ್ಕಿತು. ಅವರೂ
ಅವರ ತಂದೆಯೂ ಹಣದ ಗಂಟುಗಳನ್ನು ಕಂಡಾಗ
ಭಯಪಟ್ಟರು. ಆಗ ಅವರ ತಂದೆಯಾದ ಯಾಕೋ
ಬನು ಅವರಿಗೆ—ನನ್ನನ್ನು ಮಕ್ಕಳಿಲ್ಲದವನಂತೆ
ಮಾಡಿದ್ದೀರಿ; ಯೋಸೇಫನೂ ಇಲ್ಲ, ಸಿಮೆಯೋನನೂ
ಇಲ್ಲ; ಬೆನ್ಯಾಮೀನನನ್ನೂ ಕರಕೊಂಡು ಹೋಗ
ಬೇಕೆಂದಿದ್ದೀರಿ, ಈ ಕಷ್ಟವೆಲ್ಲಾ ನನ್ನ ಮೇಲೆಯೇ
ಬಂತು ಎಂದು ಹೇಳಲು ರೂಬೇನನು ಅವನಿಗೆ--
ನಾನು ಈ ಹುಡುಗನನ್ನು ತಿರಿಗಿ ತಂದು ಒಪ್ಪಿಸದೆ
ಹೋದರೆ ನನ್ನಿಬ್ಬರು ಗಂಡುಮಕ್ಕಳನ್ನು ಕೊಂದು
ಹಾಕಬಹುದು; ಇವನನ್ನು ನನ್ನ ವಶಕ್ಕೆ ಕೊಟ್ಟರೆ
ನಾನು ತಪ್ಪದೆ ಇವನನ್ನು ನಿನ್ನ ಬಳಿಗೆ ಕರಕೊಂಡು
ಬರುತ್ತೇನೆ ಎಂದು ಹೇಳಿದನು. ಆದರೆ ಯಾಕೋ
ಬನು ಅವರಿಗೆ—ನನ್ನ ಮಗನು ನಿಮ್ಮ ಸಂಗಡ ಹೋಗ
ಬಾರದು; ಇವನ ಒಡಹುಟ್ಟಿದವನು ಸತ್ತುಹೋದನು;
ಇವನೊಬ್ಬನೇ ಉಳಿದಿದ್ದಾನೆ; ಮಾರ್ಗದಲ್ಲಿ ಇವನಿ
ಗೇನಾದರೂ ಕೇಡಾದರೆ ಈ ಮುದಿತಲೆ ದುಃಖ
ದಿಂದಲೇ ಪಾತಾಳಕ್ಕೆ ಸೇರಲು ನೀವು ಕಾರಣ
ವಾಗುವಿರಿ ಎಂದು ಹೇಳಿದನು.

ಯೋಸೇಫನ ಅಣ್ಣಂದಿರು ಬೆನ್ಯಾಮೀನನನ್ನು ಕರಕೊಂಡು
ಎರಡನೆಯ ಸಾರಿ ಯೋಸೇಫನ ಬಳಿಗೆ ಬಂದಾಗ ಯೋಸೇಫನು
ತಾನು ಅವರ ತಮ್ಮನೆಂದು ತಿಳಿಸಿದ್ದು.

3 ಆ ದೇಶದಲ್ಲಿ ಬರವು ಬಹುಘೋರವಾಗಿತ್ತು.
2 ಅವರು ಐಗುಪ್ತದೇಶದಿಂದ ತಂದಿದ್ದ ದವಸವು
ಮುಗಿದನಂತರ ಅವರ ತಂದೆಯು ಅವರಿಗೆ—ನೀವು
ತಿರಿಗಿ ಹೋಗಿ ಇನ್ನು ಸ್ವಲ್ಪ ಧಾನ್ಯವನ್ನು ಕೊಂಡು
ಕೊಂಡು ಬನ್ನಿರಿ ಅಂದನು. ಅದಕ್ಕೆ ಯೆಹೂದನು—
ಆ ಮನುಷ್ಯನು ನಮಗೆ, ನಿಮ್ಮ ತಮ್ಮನನ್ನು ಕರ
ಕೊಂಡುಬಂದ ಹೊರತು ನನ್ನ ಮುಖವನ್ನು ನೋಡ
ಕೂಡದು ಎಂದು ಖಂಡಿತವಾಗಿ ಹೇಳಿದನಲ್ಲಾ.
ನೀನು ನಮ್ಮ ತಮ್ಮನನ್ನು ನಮ್ಮ ಜೊತೆಯಲ್ಲಿ ಕಳು
ಹಿಸುವರೆ ನಾವು ಹೋಗಿ ನಿನಗೆ ಧಾನ್ಯವನ್ನು ಕೊಂಡು
ಕೊಂಡು ಬರುತ್ತೇವೆ; ಅವನನ್ನು ಕಳುಹಿಸಿಕೊಡ
ದಿದ್ದರೆ ನಾವು ಹೋಗುವದಿಲ್ಲ. ಆ ಮನುಷ್ಯನು
ನಮಗೆ—ನಿಮ್ಮ ತಮ್ಮನು ನಿಮ್ಮ ಸಂಗಡ ಇಲ್ಲ
ದಿದ್ದರೆ ನನ್ನ ಮುಖವನ್ನು ನೋಡಲೇಕೂಡದೆಂದು
ಹೇಳಿದ್ದಾನೆ ಅಂದನು. ಅದಕ್ಕೆ ಇಸ್ರಾಯೇಲನು— 6
ಇನ್ನೊಬ್ಬ ತಮ್ಮನಿದ್ದಾನೆಂದು ಆ ಮನುಷ್ಯನಿಗೆ ಹೇಳಿ
ನೀವು ಯಾಕೆ ನನಗೆ ಈ ಅಪಕಾರ ಮಾಡಿದಿರಿ
ಎಂದು ಹೇಳಲು ಅವರು—ನಮ್ಮ ವಿಷಯದಲ್ಲಿಯೂ 7
ನಮ್ಮ ಮನೆಯವರ ವಿಷಯದಲ್ಲಿಯೂ ಆ ಮನು
ಷ್ಯನು ಸೂಕ್ಷ್ಮವಾಗಿ ವಿಚಾರಿಸಿ, ನಿಮ್ಮ ತಂದೆಯು
ಇನ್ನೂ ಜೀವದಿಂದಿದ್ದಾನೋ? ನಿಮಗೆ ತಮ್ಮನಿದ್ದಾ
ನೋ? ಎಂದು ಕೇಳಿದನು. ಆ ಪ್ರಶ್ನೆಗಳಿಗೆ ತಕ್ಕಂತೆ
ಉತ್ತರಕೊಟ್ಟೆವು. ಅವನು—ನಿಮ್ಮ ತಮ್ಮನನ್ನು
ಕರದುಕೊಂಡು ಬನ್ನಿರಿ ಎಂದು ಹೇಳುವನೆಂಬದು
ನಮಗೆ ಹೇಗೆ ತಿಳಿಯುವದು ಅಂದರು. ಆಗ 8
ಯೆಹೂದನು ತನ್ನ ತಂದೆಯಾದ ಇಸ್ರಾಯೇಲ
ನಿಗೆ—ನೀನೂ ನಾವೂ ನಮ್ಮ ಮಕ್ಕಳೂ ಎಲ್ಲರೂ
ಸಾಯದೆ ಬದುಕಿಕೊಳ್ಳುವಂತೆ ಆ ಹುಡುಗನನ್ನು
ನನ್ನ ಜೊತೆಯಲ್ಲಿ ಕಳುಹಿಸಿಕೊಡಪ್ಪಾ; ನಾವು
ಹೊರಟುಹೋಗುವೆವು. ನಾನೇ ಅವನಿಗೆ ಹೊಣೆ; 9
ಅವನ ವಿಷಯ ನನ್ನನ್ನೇ ಕೇಳಬಹುದು. ನಾನು
ಅವನನ್ನು ತಿರಿಗಿ ಕರಕೊಂಡುಬಂದು ನಿನ್ನೆದುರಿನಲ್ಲಿ
ನಿಲ್ಲಿಸದೆ ಹೋದರೆ ಆ ದೋಷ ಎಂದೆಂದಿಗೂ ನನ್ನ
ಮೇಲೆ ಇರಲಿ. ನಾವು ತಡಮಾಡದಿದ್ದರೆ ಇಷ್ಟ 10
ರೊಳಗೆ ಎರಡನೆಯ ಸಾರಿ ಹೋಗಿ ಬರುತ್ತಿದ್ದೆವು ಎಂದು
ಹೇಳಿದನು. ಅದಕ್ಕೆ ಅವರ ತಂದೆಯಾದ ಇಸ್ರಾ 11
ಯೇಲನು ಅವರಿಗೆ—ನೀವು ಹೋಗಲೇ ಬೇಕಾಗಿದ್ದರೆ
ಒಂದು ಕೆಲಸ ಮಾಡಿರಿ; ಈ ದೇಶದಲ್ಲಿ ದೊರಕುವ
ಶ್ರೇಷ್ಠವಾದ ವಸ್ತುಗಳಲ್ಲಿ ಕೆಲವನ್ನು ನಿಮ್ಮ ಸಾಮಾ
ನಿನಲ್ಲಿಟ್ಟು ಆ ಮನುಷ್ಯನಿಗೆ ಕಾಣಿಕೆಯಾಗಿ ತೆಗೆದು
ಕೊಂಡು ಹೋಗಿರಿ; ಸ್ವಲ್ಪ ತೈಲ, ಸ್ವಲ್ಪ ದ್ರಾಕ್ಷಾ
ರಸದ ಕಾಕಂಬಿ, ಹಾಲುಮಡ್ಡಿ, ರಕ್ತಬೋಳ, ಅ
ಕ್ರೋಡು, ಬಾದಾಮಿ ಇವುಗಳನ್ನು ತೆಗೆದುಕೊಂಡು
ಹೋಗಿ ಕೊಡಿರಿ. ಅದಲ್ಲದೆ ಎರಡಷ್ಟು ಹಣವನ್ನು 12
ಕೈಯಲ್ಲಿ ತೆಗೆದುಕೊಂಡುಹೋಗಿರಿ; ಅವರು ನಿಮ್ಮ
ಚೀಲಗಳ ಬಾಯಲ್ಲಿ ಹಾಕಿ ಹಿಂದಕ್ಕೆ ಕಳುಹಿಸಿದ
ಹಣವನ್ನು ತೆಗೆದುಕೊಂಡು ಹೋಗಿರಿ; ಒಂದು ವೇಳೆ
ಅದು ಅವರಿಗೆ ತಿಳಿಯದೆ ನಿಮ್ಮ ಕೈಗೆ ಬಂದಿರ
ಬಹುದು. ನಿಮ್ಮ ತಮ್ಮನನ್ನೂ ಕರದುಕೊಂಡು 13
ಹೊರಟು ತಿರಿಗಿ ಆ ಮನುಷ್ಯನ ಬಳಿಗೆ ಹೋಗಿರಿ.
ಅವನು ನಿಮ್ಮ ಮೇಲೆ ಕನಿಕರವಿಟ್ಟು ನಿಮ್ಮ ಅಣ್ಣ 14
ನನ್ನೂ ಬೆನ್ಯಾಮೀನನನ್ನೂ ನಿಮ್ಮೊಂದಿಗೆ ಕಳುಹಿಸಿ
ಬಿಡುವಂತೆ ಸರ್ವಶಕ್ತನಾದ ದೇವರು ಅನುಗ್ರಹಿಸಲಿ;
ನಾನಂತೂ ಮಕ್ಕಳನ್ನು ಕಳಕೊಂಡವನಾಗಬೇಕಾದರೆ
ಹಾಗೆಯೇ ಆಗಲಿ ಎಂದು ಹೇಳಿದನು.

ಆ ಮನುಷ್ಯರು ಆ ಕಾಣಿಕೆಯ ವಸ್ತುಗಳನ್ನು 15
ಸಿದ್ಧಪಡಿಸಿ ಎರಡಷ್ಟು ಹಣವನ್ನು ತೆಗೆದುಕೊಂಡು
ಬೆನ್ಯಾಮೀನನನ್ನು ತಮ್ಮ ಜೊತೆಯಲ್ಲಿ ಕರದು
ಕೊಂಡು ಹೊರಟು ಐಗುಪ್ತದೇಶಕ್ಕೆ ಸೇರಿ ಯೋಸೇ
ಫನೆದುರಿನಲ್ಲಿ ನಿಂತುಕೊಂಡರು. ಬೆನ್ಯಾಮೀನನು 16
ಅವರ ಸಂಗಡ ಇರುವದನ್ನು ಯೋಸೇಫನು ಕಂಡು
ತನ್ನ ಮನೆವಾರ್ತೆಯವನನ್ನು ಕರಸಿ—ಈ ಮನು
ಷ್ಯರು ಈ ಹೊತ್ತು ಮಧ್ಯಾಹ್ನ ನನ್ನ ಸಂಗಡ ಊಟ
ಮಾಡಬೇಕಾಗಿದೆ; ಇವರನ್ನು ಮನೆಯೊಳಗೆ ಕರದು

ಕೊಂಡು ಹೋಗಿ ಪಶುವನ್ನು ಕೊಯಿಸಿ ಎಲ್ಲಾ
17 ಸಿದ್ಧಪಡಿಸು ಎಂದು ಅಪ್ಪಣೆಕೊಟ್ಟನು. ಅಪ್ಪಣೆಯ
ಮೇರೆಗೆ ಮನೆವಾರ್ತೆಯವನು ಅವರನ್ನು ಯೋಸೇ
ಫನ ಮನೆಯೊಳಕ್ಕೆ ಕರದುಕೊಂಡು ಹೋಗಲು
18 ಅವರು ಅದಕ್ಕೆ ಭಯಪಟ್ಟು—ಮುಂಚೆ ನಾವು ಚೀಲ
ಗಳಲ್ಲಿ ಹಿಂದಕ್ಕೆ ತೆಗೆದುಕೊಂಡು ಹೋದ ಹಣದ
ನಿಮಿತ್ತವೇ ಅವನು ನಮ್ಮನ್ನು ತನ್ನ ಮನೆಯೊಳಗೆ
ಕರಸಿದ್ದಾನೆ; ನಮ್ಮ ಮೇಲೆ ಫಕ್ಕನೆ ಬಿದ್ದು ನಮ್ಮನ್ನು
ಕತ್ತೆಗಳ ಸಹಿತವಾಗಿ ಹಿಡಿಸಿ ಗುಲಾಮರನ್ನಾಗಿ ಮಾಡಿ
ಕೊಳ್ಳಬೇಕೆಂದಿದ್ದಾನೆ ಎಂಬದಾಗಿ ತಮ್ಮತಮ್ಮೊಳಗೆ
19 ಮಾತಾಡಿಕೊಂಡು ಮನೇಬಾಗಲಲ್ಲಿದ್ದ ಮನೆವಾರ್ತೆ
20 ಯವನ ಬಳಿಗೆ ಹೋಗಿ ಅವನಿಗೆ—ಅಯ್ಯಾ, ಮೊದಲು
ಒಂದು ಸಾರಿ ಆಹಾರಪದಾರ್ಥಗಳನ್ನು ಕೊಂಡು
21 ಕೊಳ್ಳುವದಕ್ಕೆ ಬಂದಿದ್ದೆವು. ನಾವು ಹೊರಟುಹೋದ
ನಂತರ ಇಳಿದುಕೊಂಡಿದ್ದ ಒಂದು ಸ್ಥಳದಲ್ಲಿ ನಮ್ಮ
ಚೀಲಗಳನ್ನು ಬಿಚ್ಚಿ ನೋಡಿದಾಗ ಪ್ರತಿಯೊಬ್ಬನ
ಹಣವು ತೂಕದಲ್ಲಿ ಏನೂ ಕಡಿಮೆಯಿಲ್ಲದೆ ಅವನವನ
ಚೀಲದಲ್ಲೇ ಇತ್ತು; ಅದನ್ನು ತಿರಿಗಿ ತಂದಿದ್ದೇವೆ.
22 ದವಸವನ್ನು ಕೊಂಡುಕೊಳ್ಳುವದಕ್ಕೆ ಬೇರೆ ಹಣ
ವನ್ನೂ ತಂದಿದ್ದೇವೆ. ಆ ಹಣವನ್ನು ನಮ್ಮ ಚೀಲ
ಗಳಲ್ಲಿ ಯಾರು ಇಟ್ಟರೋ ನಮಗೆ ತಿಳಿಯದು
23 ಎಂದು ಹೇಳಿದರು. ಅದಕ್ಕೆ ಅವನು—ಸಮಾಧಾನ
ವಾಗಿರ್ರಿ, ನೀವೇನೂ ಹೆದರಬೇಡಿರಿ; ನಿಮ್ಮ ತಂದೆಗೂ
ನಿಮಗೂ ದೇವರಾಗಿರುವಾತನು ನಿಮ್ಮ ಚೀಲಗಳ
ಲ್ಲಿಯೇ ನಿಕ್ಷೇಪ ಸಿಕ್ಕುವಂತೆ ಅನುಗ್ರಹಿಸಿದ್ದಾನೆ;
ನಿಮ್ಮ ಹಣವು ನನಗೆ ಮುಟ್ಟಿತು ಎಂದು ಹೇಳಿ
ಸಿಮೆಯೋನನನ್ನು ಅವರ ಬಳಿಗೆ ಕರದುಕೊಂಡು
24 ಬಂದು ಅವರೆಲ್ಲರನ್ನೂ ಯೋಸೇಫನ ಮನೆಯೊಳಗೆ
ಸೇರಿಸಿ ಕಾಲುಗಳನ್ನು ತೊಳೆಯುವದಕ್ಕೆ ನೀರನ್ನು
ಕೊಡಿಸಿ ಅವರ ಕತ್ತೆಗಳಿಗೆ ಮೇವು ಹಾಕಿಸಿದನು.
25 ತಾವು ಅಲ್ಲೇ ಊಟಮಾಡಬೇಕೆಂಬುವ ಸಂಗತಿ
ಯನ್ನು ಅವರು ಕೇಳಿದ್ದರಿಂದ ತಾವು ತಂದಿದ್ದ ಕಾಣಿ
ಕೆಯನ್ನು ಸಿದ್ಧವಾಗಿ ಇಟ್ಟುಕೊಂಡು ಯೋಸೇಫನು
ಮಧ್ಯಾಹ್ನದಲ್ಲಿ ಬರುವ ತನಕ ಕಾದುಕೊಂಡಿದ್ದರು.
26 ಯೋಸೇಫನು ಮನೆಗೆ ಬಂದಾಗ ಅವರು ಕಾಣಿಕೆ
ಯನ್ನು ಮನೆಯೊಳಕ್ಕೆ ತಂದುಕೊಟ್ಟು ಅವನ ಮುಂದೆ
27 ಅಡ್ಡಬಿದ್ದರು. ಅವನು ಅವರ ಯೋಗಕ್ಷೇಮವನ್ನು
ವಿಚಾರಿಸಿ—ನೀವು ಹೇಳಿದ ಮುದುಕನಾಗಿರುವ
ನಿಮ್ಮ ತಂದೆಗೆ ಕ್ಷೇಮವೋ? ಅವನು ಇನ್ನೂ ಬದು
28 ಕಿದ್ದಾನೋ ಎಂದು ಕೇಳಲು ಅವರು ಬೊಗ್ಗಿ ನಮ
ಸ್ಕಾರಮಾಡಿ—ನಿನ್ನ ಸೇವಕನಾದ ನಮ್ಮ ತಂದೆಗೆ
29 ಕ್ಷೇಮ; ಅವನು ಇನ್ನೂ ಇದ್ದಾನೆ ಅಂದರು. ಆಗ
ಅವನು ಕಣ್ಣೆತ್ತಿ ತನ್ನ ಒಡಹುಟ್ಟಿದ ತಮ್ಮನಾದ ಬೆನ್ಯಾ
ಮೀನನನ್ನು ನೋಡಿ—ನೀವು ಹೇಳಿದ ನಿಮ್ಮ ಕಿರೀ
ತಮ್ಮನು ಇವನೋ ಎಂದು ಕೇಳಿ ಅವನಿಗೆ—ಮಗನೇ,
ದೇವರ ದಯೆ ನಿನ್ನ ಮೇಲಿರಲಿ ಎಂದು ಹೇಳಿದನು.
30 ಯೋಸೇಫನಿಗೆ ತಮ್ಮನ ಮೇಲೆ ಕರುಳು ಮರಗಿದ್ದ
ರಿಂದ ಅವನು ಬೇಗನೆ ಎದ್ದು ಅಳುವದಕ್ಕೆ ಸ್ಥಳವನ್ನು
ನೋಡಿಕೊಂಡು ತನ್ನ ಕೋಣೆಯೊಳಗೆ ಹೋಗಿ ಅಲ್ಲಿ
31 ಅತ್ತನು. ಆ ಮೇಲೆ ಮುಖವನ್ನು ತೊಳಕೊಂಡು

ಹೊರಗೆ ಬಂದು ಮನಸ್ಸನ್ನು ಬಿಗಿಹಿಡಿದು ಊ
ಬಡಿಸಿರಿ ಎಂದು ಅಪ್ಪಣೆಕೊಟ್ಟನು. ಪರಿಚಾರ
ಅವನಿಗೂ ಅವನ ಅಣ್ಣತಮ್ಮಂದಿರಿಗೂ ಅವನ ಸಂ
ವಿದ್ದ ಐಗುಪ್ತ್ಯರಿಗೂ ಬೇರೆ ಬೇರೆಯಾಗಿ ಊ
ಬಡಿಸಿದರು. ಐಗುಪ್ತ್ಯರು ಇಬ್ರಿಯರ ಸಹಪ
ಯಲ್ಲಿ ಊಟಮಾಡುವದಿಲ್ಲ; ಅದು ಅವರಿಗೆ ಅಸ
ಯೋಸೇಫನು ತನ್ನ ಅಣ್ಣತಮ್ಮಂದಿರನ್ನು ಹಿರಿ
ವನು ಮೊದಲುಗೊಂಡು ಕಿರಿಯವನ ವರೆಗೂ ಅ
ವರ ವಯಸ್ಸಿನ ಪ್ರಕಾರವೇ ಕುಳ್ಳಿರಿಸಿದ್ದರಿಂದ ಅ
ಒಬ್ಬರನ್ನೊಬ್ಬರು ನೋಡುತ್ತಾ ಆಶ್ಚರ್ಯಪಟ್ಟ
ಯೋಸೇಫನು ತನ್ನ ಮುಂದೆ ಬಡಿಸಿದ್ದ ಪದಾ
ಗಳಲ್ಲಿ ಅವರಿಗೆ ಭಾಗಗಳನ್ನು ಕಳುಹಿಸಿದ
ಆದರೆ ಬೆನ್ಯಾಮೀನನಿಗೆ ಬಂದ ಭಾಗವು ಮಿ
ದವರ ಭಾಗಗಳಿಗಿಂತ ಐದರಷ್ಟು ಹೆಚ್ಚಾಗಿತ್ತು. ಅ
ಯಥೇಚ್ಛವಾಗಿ ಪಾನಮಾಡಿ ಅವನ ಸಂಗಡ ಸ
ಮದಿಂದಿದ್ದರು.

ತರುವಾಯ ಯೋಸೇಫನು ತನ್ನ ಮನೆವಾರ್ತೆ
ಯವನಿಗೆ—ಆ ಮನುಷ್ಯರ ಚೀಲಗಳಲ್ಲಿ ಹೊರು
ವಷ್ಟು ಧಾನ್ಯವನ್ನು ತುಂಬಿಸಿ ಒಬ್ಬೊಬ್ಬನ ಚೀ
ಬಾಯಲ್ಲಿ ಅವನವನ ಹಣದ ಗಂಟನ್ನಿಟ್ಟು
ಯವನ ಚೀಲದ ಬಾಯೊಳಗೆ ಅವನು ದವ
ತಂದ ಹಣವನ್ನಲ್ಲದೆ ನನ್ನ ಬೆಳ್ಳಿಯ ಪಾನಪ
ಯನ್ನೂ ಇಡಬೇಕೆಂದು ಅಪ್ಪಣೆಕೊಡಲು
ವಾರ್ತೆಯವನು ಹಾಗೆಯೇ ಮಾಡಿದನು. ಬೆ
ಹೊತ್ತು ಮೂಡುವಾಗ ಆ ಮನುಷ್ಯರು ಅ
ಪಡೆದು ಕತ್ತೆಗಳನ್ನು ಹೊಡಕೊಂಡು ಹೊ
ಹೋದರು. ಅವರು ಪಟ್ಟಣವನ್ನು ಬಿಟ್ಟು ಸ
ದೂರ ಹೋಗುವಷ್ಟರಲ್ಲಿ ಯೋಸೇಫನು ತನ್ನ
ವಾರ್ತೆಯವನಿಗೆ—ನೀನೆದ್ದು ಆ ಮನುಷ್ಯರನ್ನು
ದಟ್ಟಿ ಸಂಧಿಸಿ—ನೀವು ಉಪಕಾರಕ್ಕೆ ಪ್ರತಿಯ
ಯಾಕೆ ಅಪಕಾರಮಾಡಿದ್ದೀರಿ? ಆ ಪಾತ್ರೆಯಲ್ಲಿ
ದಣಿಯು ಪಾನಮಾಡುತ್ತಾನಲ್ಲವೇ. ಅದ
ನೋಡಿ ಶಕುನಹೇಳುವದಿಲ್ಲವೇ. ನೀವು ಮಾಡಿ
ಬಹಳ ಕೆಟ್ಟದ್ದು ಅನ್ನಬೇಕೆಂದು ಹೇಳಿದನು.
ವಾರ್ತೆಯವನು ಅವರನ್ನು ಹಿಂದಟ್ಟಿ ಸಂಧಿಸಿ
ರಿಗೆ ಆ ಮಾತುಗಳನ್ನು ಹೇಳಿದಾಗ ಅವರು
ನಿಗೆ—ನಮ್ಮ ಸ್ವಾಮಿಯು ಇಂಥಾ ಮಾತುಗಳ
ಹೇಳುವದೇನು! ನಿನ್ನ ಸೇವಕರು ಇಂಥ
ವನ್ನು ಎಂದಿಗೂ ಮಾಡುವವರಲ್ಲ. ಮೊದಲು ನ
ಚೀಲಗಳ ಬಾಯಲ್ಲಿ ನಮಗೆ ಸಿಕ್ಕಿದ ಹಣ
ನಾವು ಕಾನಾನ್‌ದೇಶದಿಂದ ತಿರಿಗಿ ತಂದು
ಕೊಟ್ಟೆವಲ್ಲವೇ. ಹೀಗಿರುವಾಗ ನಾವು ನಿನ್ನ ದ
ಮನೆಯೊಳಗಿಂದ ಬೆಳ್ಳಿಬಂಗಾರವನ್ನು ಹೇಗೆ ಕ
ಕೊಂಡೇವು. ಆ ಪಾತ್ರೆಯು ನಿನ್ನ ಸೇವಕರೊ
ಯಾರ ಬಳಿಯಲ್ಲಿ ಸಿಕ್ಕುತ್ತದೋ ಅವನು ಮ
ದಂಡನೆಯನ್ನು ಹೊಂದಲಿ; ಅದಲ್ಲದೆ ನಾವೆಲ್ಲ
ನಮ್ಮ ಸ್ವಾಮಿಗೆ ದಾಸರಾಗುವೆವು ಅಂದರು. ಅ
ಅವನು—ಒಳ್ಳೇದು, ನೀವು ಹೇಳಿದಂತೆ ಆಗಲಿ;
ಪಾತ್ರೆ ಯಾವನ ಬಳಿಯಲ್ಲಿ ಸಿಕ್ಕುತ್ತದೋ ಅ
ನನಗೆ ದಾಸನಾಗಬೇಕು; ಉಳಿದವರು ತಪ್ಪಿಲ್ಲದ

ಎಂದು ಹೇಳಿದಾಗ, ಅವರು ತ್ವರೆಪಟ್ಟು ಪ್ರತಿಯೊಬ್ಬ
ನೂ ತನ್ನ ತನ್ನ ಚೀಲವನ್ನು ನೆಲಕ್ಕಿಳಿಸಿ ಬಿಚ್ಚಿದರು.
12 ಅವನು ಹಿರಿಯವನಿಂದ ಹಿಡಿದು ಕಿರಿಯವನ ತನಕ
ಪರೀಕ್ಷಿಸಿ ನೋಡಿದನು. ಆ ಪಾತ್ರೆಯು ಬೆನ್ಯಾವಿಾ
13 ನನ ಚೀಲದಲ್ಲಿ ಸಿಕ್ಕಿತು. ಸಿಕ್ಕಿದಾಗ ಅವರು [ದುಃಖಾ
ಕ್ರಾಂತರಾಗಿ] ತಮ್ಮ ಬಟ್ಟೆಗಳನ್ನು ಹರಿದುಕೊಂಡು
ಕತ್ತೆಗಳ ಮೇಲೆ ಚೀಲಗಳನ್ನು ಹೇರಿ ಪಟ್ಟಣಕ್ಕೆ
14 ಹಿಂದಿರುಗಿ ಬಂದರು. ಯೆಹೂದನೂ ಅವನ ಅಣ್ಣ
ತಮ್ಮಂದಿರೂ ಯೋಸೇಫನ ಮನೆಗೆ ಬಂದಾಗ ಅವನು
ಇನ್ನೂ ಅಲ್ಲೇ ಇದ್ದನು. ಅವರು ಅವನೆದುರಿಗೆ
15 ಅಡ್ಡಬೀಳಲು ಯೋಸೇಫನು ಅವರನ್ನು—ನೀವು ಮಾ
ಡಿರುವ ಈ ಕೃತ್ಯವು ಏನು! ನನ್ನಂಥವನು ಶಕುನ
ನೋಡಿ ಗುಟ್ಟನ್ನು ಬಿಚ್ಚುವನೆಂಬದು ನಿಮಗೆ ತಿಳಿ
16 ಯಲಿಲ್ಲವೋ ಎಂದು ಕೇಳಲು ಯೆಹೂದನು—ನಾವು
ನಮ್ಮ ಸ್ವಾಮಿಗೆ ಏನು ಹೇಳೋಣ? ನಾವು ಹೇಗೆ
ಮಾತಾಡೇವು? ನಾವು ನಿರ್ದೋಷಿಗಳಾಗಿ ತೋರು
ವಂತೆ ಏನು ಮಾಡಬೇಕು? ನಿನ್ನ ಸೇವಕರ ಪಾಪ
ಕೃತ್ಯವನ್ನು ದೇವರು ಹೊರಪಡಿಸಿದ್ದಾನೆ. ಈ ಪಾತ್ರೆ
ಯು ಯಾರ ಬಳಿಯಲ್ಲಿ ಸಿಕ್ಕಿತೋ ಅವನು ಮಾತ್ರ
ವಲ್ಲದೆ ನಾವೆಲ್ಲರೂ ನಮ್ಮ ಸ್ವಾಮಿಗೆ ಗುಲಾಮರಾದೆ
17 ವಲ್ಲವೇ ಅನ್ನಲು ಯೋಸೇಫನು—ಹಾಗೆ ಎಂದಿಗೂ
ಆಗಬಾರದು; ಈ ಪಾತ್ರೆಯು ಯಾರ ಬಳಿಯಲ್ಲಿ
ಸಿಕ್ಕಿತೋ ಅವನು ಮಾತ್ರವೇ ನನಗೆ ಗುಲಾಮನಾಗ
ಬೇಕು; ನೀವಾದರೋ ಅಡ್ಡಿಯಿಲ್ಲದೆ ನಿಮ್ಮ ತಂದೆಯ
ಬಳಿಗೆ ಹೋಗಬಹುದು ಅಂದನು.
18 ಆಗ ಯೆಹೂದನು ಹತ್ತಿರಕ್ಕೆ ಬಂದು—ನಿನ್ನ
ಸೇವಕನಾದ ನಾನು ಒಂದು ಮಾತನ್ನು ಅರಿಕೆಮಾಡಿ
ಕೊಳ್ಳುತ್ತೇನೆ, ನನ್ನ ಮೇಲೆ ಸಿಟ್ಟುಮಾಡಬಾರದು;
ನೀನು ಫರೋಹನಿಗೆ ಸಮಾನನಾಗಿದ್ದೀಯೆಂದು
19 ನಾನು ಬಲ್ಲೆ. ಸ್ವಾಮಿಯು ಸೇವಕರನ್ನು—ನಿಮಗೆ
ತಂದೆಯಾಗಲಿ ತಮ್ಮನಾಗಲಿ ಇದ್ದಾನೋ ಎಂದು
20 ಕೇಳಲು ನಾವು—ತಂದೆಯಿದ್ದಾನೆ, ಅವನು ಮುದು
ಕನು; ಅವನಿಗೆ ಮುಪ್ಪಿನಲ್ಲಿ ಹುಟ್ಟಿದ ಒಬ್ಬ ಚಿಕ್ಕ
ಹುಡುಗನೂ ಇದ್ದಾನೆ. ಅವನ ಒಡಹುಟ್ಟಿದವನು
ಸತ್ತುಹೋದನು; ಅವನ ತಾಯಿಯಲ್ಲಿ ಹುಟ್ಟಿದವ
ರೊಳಗೆ ಅವನೊಬ್ಬನೇ ಉಳಿದಿದ್ದಾನೆ, ಅವನ ಮೇಲೆ
ತಂದೆಗೆ ಬಹಳ ಪ್ರೀತಿಯುಂಟು ಎಂದು ಹೇಳಿದೆವು.
21 ಅದಕ್ಕೆ ನೀನು ಸೇವಕರಾದ ನಮಗೆ—ನಾನು ಆ
ಹುಡುಗನನ್ನು ನೋಡಬೇಕು, ಅವನನ್ನು ನನ್ನ ಬಳಿಗೆ
22 ಕರಕೊಂಡು ಬನ್ನಿರಿ ಎಂದು ಅಪ್ಪಣೆಕೊಡಲು ನಾವು
ಸ್ವಾಮಿಯವರಿಗೆ—ಆ ಹುಡುಗನು ತನ್ನ ತಂದೆಯನ್ನು
ಅಗಲುವದಕ್ಕಾಗುವದಿಲ್ಲ; ಅಗಲಿದರೆ ತಂದೆ ಸತ್ತಾನು
23 ಅಂದೆವು. ಅದಕ್ಕೆ—ನಿಮ್ಮ ತಮ್ಮನು ಸಂಗಡ ಬಾರ
ದಿದ್ದರೆ ನೀವು ಇನ್ನೊಂದು ಸಾರಿ ನನ್ನ ಮುಖವನ್ನು
ನೋಡಕೂಡದು ಎಂದು ಅಪ್ಪಣೆ ಕೊಟ್ಟೆಯಷ್ಟೆ.
24 ನಾವು ನಿನ್ನ ಸೇವಕನಾದ ನಮ್ಮ ತಂದೆಯ ಬಳಿಗೆ
25 ಬಂದಾಗ ಸ್ವಾಮಿಯ ಮಾತನ್ನು ತಿಳಿಸಿದೆವು. ನಮ್ಮ
ತಂದೆ—ನೀವು ತಿರಿಗಿ ಹೋಗಿ ನಮಗೆ ಧಾನ್ಯವನ್ನು
26 ಕೊಂಡುಕೊಂಡು ಬನ್ನಿರಿ ಎಂದು ಹೇಳಿದಾಗ ನಾವು
ಅವನಿಗೆ—ಹೇಗೆ ಹೋಗುವದು? ತಮ್ಮನು ನಮ್ಮ
ಜೊತೆಯಲ್ಲಿ ಇಲ್ಲವಾದರೆ ಆ ಮನುಷ್ಯನ ಮುಖ
ವನ್ನು ನೋಡಲಾಗದು; ತಮ್ಮನು ನಮ್ಮ ಸಂಗಡ
ಬಂದರೆ ಹೋಗುತ್ತೇವೆ ಎಂದು ಹೇಳಿದ್ದಕ್ಕೆ ನಿನ್ನ 27
ಸೇವಕನಾದ ನಮ್ಮ ತಂದೆಯು—ನನ್ನ ಪತ್ನಿಯಲ್ಲಿ
ನನಗೆ ಇಬ್ಬರೇ ಗಂಡು ಮಕ್ಕಳು ಹುಟ್ಟಿದರೆಂಬದು
ನಿಮಗೆ ತಿಳಿದೇ ಇದೆಯಷ್ಟೆ; ಅವರಲ್ಲಿ ಒಬ್ಬನು 28
ನನ್ನ ಬಳಿಯಿಂದ ಹೊರಟುಹೋದನು; ಅವನು
ಸಂದೇಹವಿಲ್ಲದೆ ಮೃಗದಿಂದ ಸೀಳಿಹಾಕಲ್ಪಟ್ಟಿರಬೇ
ಕೆಂದು ತಿಳುಕೊಂಡೆನು; ಅಂದಿನಿಂದ ನಾನು ಅವ
ನನ್ನು ಕಾಣಲಿಲ್ಲ. ಈಗ ಇವನನ್ನೂ ನನ್ನ ಬಳಿಯಿಂದ 29
ತೆಗೆದುಕೊಂಡು ಹೋಗಬೇಕೆಂದಿದ್ದೀರಿ. ಇವನಿಗೂ
ಕೇಡು ಬಂದರೆ ಈ ಮುದಿತಲೆ ದುಃಖದಿಂದಲೇ ಪಾತಾ
ಳಕ್ಕೆ ಸೇರಲು ನೀವು ಕಾರಣರಾಗುವಿರಿ ಅಂದನು.
ನಮ್ಮ ತಂದೆಯ ಪ್ರಾಣವೂ ಇವನ ಪ್ರಾಣವೂ ಒಂದೇ 30
ಯಾಗಿರುವದರಿಂದ ನಾನು ನಿನ್ನ ಸೇವಕನಾದ ನನ್ನ
ತಂದೆಯ ಬಳಿಗೆ ಸೇರಿದಾಗ ಈ ಹುಡುಗನು ಸಂಗಡ
ಇಲ್ಲದೆ ಹೋದರೆ ಹುಡುಗನು ಬರಲಿಲ್ಲವೆಂದು ಅವನು
ತಿಳಿದ ಕೂಡಲೆ ಸಾಯುವನು. ಹೀಗೆ ಸ್ವಾಮಿಯ 31
ಸೇವಕರಾದ ನಾವು ನಿನ್ನ ಸೇವಕನಾದ ನಮ್ಮ ತಂದೆ
ಯ ಮುದಿತಲೆ ದುಃಖದಿಂದಲೇ ಪಾತಾಳಕ್ಕೆ ಸೇರಲು
ಕಾರಣರಾಗುವೆವು. ಸೇವಕನಾದ ನಾನು ನನ್ನ 32
ತಂದೆಯ ಬಳಿಯಲ್ಲಿ ಈ ಹುಡುಗನಿಗೆ ಹೊಣೆ
ಯಾಗಿ—ನಾನು ಇವನನ್ನು ನಿನ್ನ ಬಳಿಗೆ ಕರೆದು
ಕೊಂಡು ಬಾರದಿದ್ದರೆ ತಂದೆಗೆ ತಪ್ಪಿದವನ ದೋಷ
ಎಂದೆಂದಿಗೂ ನನಗಿರಲಿ ಎಂದು ಮಾತುಕೊಟ್ಟೆನು.
ಆದದರಿಂದ ಸೇವಕನಾದ ನಾನು ಈ ಹುಡುಗನಿಗೆ 33
ಬದಲಾಗಿ ಸ್ವಾಮಿಗೆ ಗುಲಾಮನಾಗುವಂತೆಯೂ
ಇವನು ತನ್ನ ಅಣ್ಣಂದಿರ ಸಂಗಡ ಹೋಗುವಂತೆಯೂ
ಅನುಗ್ರಹಮಾಡಬೇಕೆಂದು ನಿನ್ನನ್ನು ಬೇಡಿಕೊಳ್ಳು
ತ್ತೇನೆ. ಈ ಹುಡುಗನನ್ನು ಬಿಟ್ಟು ನಾನು ನನ್ನ 34
ತಂದೆಯ ಬಳಿಗೆ ಹೇಗೆ ಹೋಗುವದಕ್ಕಾದೀತು?
ತಂದೆಗೆ ಮಹಾ ಶೋಕವುಂಟಾಗುವದನ್ನು ನಾನು
ನೋಡಕೂಡದು ಅಂದನು.

**45** ಯೋಸೇಫನು ಇದನ್ನು ಕೇಳಿ ತನ್ನ ಎದುರಿ
ನಲ್ಲಿದ್ದವರ ಮುಂದೆ ತಾಳಲಾರದೆ—ನನ್ನ ಬಳಿ
ಯಿಂದ ಎಲ್ಲರನ್ನೂ ಆಚೆಗೆ ಕಳುಹಿಸಿರಿ ಎಂದು
ಬಾಯಿಬಿಟ್ಟು ಹೇಳಿದನು. ಯೋಸೇಫನು ಅಣ್ಣ
ತಮ್ಮಂದಿರಿಗೆ ತನ್ನ ಗುರುತು ಸಿಕ್ಕುವಂತೆ ಮಾಡುವ
ವೇಳೆಯಲ್ಲಿ ಇತರರು ಯಾರೂ ಹತ್ತರ ಇರಲಿಲ್ಲ.
ಅವನು ಗಟ್ಟಿಯಾಗಿ ಅತ್ತದ್ದರಿಂದ ಐಗುಪ್ತ್ಯರಿಗೂ 2
ಫರೋಹನ ಮನೆಯವರಿಗೂ ಆ ಶಬ್ದವು ಕೇಳಿಸಿತು.
ಅವನು ತನ್ನ ಅಣ್ಣಂದಿರಿಗೆ—ನಾನು ಯೋಸೇಫನು; 3
ನನ್ನ ತಂದೆ ಇನ್ನೂ ಇದ್ದಾನೋ ಎಂದು ಹೇಳಲು
ಅವರು ಅವನ ಮುಂದೆ ತತ್ತರಗೊಂಡು ಉತ್ತರಕೊಡ
ಲಾರದೆ ಹೋದರು. ಯೋಸೇಫನು—ನನ್ನ ಹತ್ತ 4
ರಕ್ಕೆ ಬನ್ನಿರಿ ಎಂದು ತನ್ನಣ್ಣಂದಿರಿಗೆ ಹೇಳಲು ಅವರು
ಹತ್ತಿರಕ್ಕೆ ಬಂದರು. ಅವನು ಅವರಿಗೆ—ಐಗುಪ್ತ
ದೇಶಕ್ಕೆ ಸೇರುವಂತೆ ನೀವು ಮಾರಿಬಿಟ್ಟ ನಿಮ್ಮ ತಮ್ಮ
ನಾದ ಯೋಸೇಫನೇ ನಾನು. ನೀವು ನನ್ನನ್ನು 5
ಹಾಗೆ ಮಾರಿದ್ದಕ್ಕಾಗಿ ವ್ಯಸನಪಟ್ಟು ದುಃಖಿಸಬೇಡಿರಿ.

ಪ್ರಾಣಸಂರಕ್ಷಣೆಗಾಗಿ ದೇವರು ನನ್ನನ್ನು ನಿಮ್ಮ
6 ಮುಂದೆ ಕಳುಹಿಸಿದನು. ದೇಶಕ್ಕೆ ಬರಬಂದು
ಎರಡು ವರುಷವಾಗಿದೆಯಷ್ಟೆ; ಇನ್ನೂ ಐದು ವರುಷ
ಗಳ ಪರ್ಯಂತರ ಬಿತ್ತುವದಕ್ಕಾಗಲಿ ಕೊಯ್ಯುವದ
7 ಕ್ಕಾಗಲಿ ಅವಕಾಶವಿಲ್ಲ. ನಿಮ್ಮ ಜನವು ಭೂಮಿಯ
ಮೇಲೆ ಉಳಿಯುವಂತೆಯೂ ನೀವು ಈ ವಿಪತ್ತಿಗೆ
ಸಿಕ್ಕದೆ ಬಹುಜನವಾಗುವಂತೆಯೂ ದೇವರು ನನ್ನನ್ನು
8 ನಿಮ್ಮ ಮುಂದೆ ಕಳುಹಿಸಿದನು. ದೇವರೇ ನನ್ನನ್ನು
ಇಲ್ಲಿಗೆ ಕಳುಹಿಸಿದನಲ್ಲದೆ ನೀವು ಕಳುಹಿಸಲಿಲ್ಲ;
ಆತನು ನನ್ನನ್ನು ಫರೋಹನ ಮಂತ್ರಿಯನ್ನಾಗಿಯೂ
ಫರೋಹನ ಅರಮನೆಯಲ್ಲಿ ಅಧಿಪತಿಯನ್ನಾಗಿಯೂ
ಐಗುಪ್ತದೇಶಕ್ಕೆ ಸರ್ವಾಧಿಕಾರಿಯನ್ನಾಗಿಯೂ ಮಾಡಿ
9 ದ್ದಾನೆ. ನೀವು ಬೇಗ ನನ್ನ ತಂದೆಯ ಬಳಿಗೆ ಹೋಗಿ
ಅವನಿಗೆ—ನಿನ್ನ ಮಗನಾದ ಯೋಸೇಫನು ಹೀಗನ್ನು
ತ್ತಾನೆ—ದೇವರು ನನ್ನನ್ನು ಐಗುಪ್ತದೇಶಕ್ಕೆ ಸರ್ವಾಧಿ
ಕಾರಿಯನ್ನಾಗಿ ನೇಮಿಸಿದ್ದಾನೆ; ನೀನು ತಡಮಾಡದೆ
10 ನನ್ನ ಬಳಿಗೆ ಬಾ; ಗೋಷೆನ್ ಸೀಮೆಯಲ್ಲಿ ನೀನು
ವಾಸಮಾಡಬಹುದು; ನೀನೂ ನಿನ್ನ ಮಕ್ಕಳೂ ಮೊಮ್ಮ
ಕ್ಕಳೂ ಕುರಿ ದನ ಮೊದಲಾದ ಸ್ವಾಸ್ತ್ಯಸಹಿತರಾಗಿ
11 ನನ್ನ ಬಳಿಯಲ್ಲೇ ಇರಬಹುದು; ಈ ಬರಗಾಲ ತೀರು
ವದಕ್ಕೆ ಇನ್ನೂ ಐದು ವರುಷ ಹೋಗಬೇಕು; ಆದದ
ರಿಂದ ನಿನಗೂ ನಿನ್ನ ಮನೆಯವರಿಗೂ ನಿನಗಿರುವ
ಎಲ್ಲವುಗಳಿಗೂ ಬಡತನವುಂಟಾಗದಂತೆ ಇಲ್ಲಿ ನಿನ್ನನ್ನು
ಪೋಷಿಸುವೆನೆಂದು ಹೇಳುತ್ತಾನೆಂಬದಾಗಿ ತಿಳಿಸಿರಿ.
12 ನಾನು ಸ್ವತಃ ನಿಮ್ಮ ಸಂಗಡ ಮಾತಾಡಿದ್ದೇನಲ್ಲಾ;
ಅದಕ್ಕೆ ನೀವೇ ಸಾಕ್ಷಿ, ನನ್ನ ಒಡಹುಟ್ಟಿದವನಾದ
13 ಬೆನ್ಯಾಮೀನನೂ ಸಾಕ್ಷಿ. ಐಗುಪ್ತದೇಶದಲ್ಲಿ ನನ
ಗಿರುವ ಎಲ್ಲಾ ವೈಭವವನ್ನೂ ನೀವು ಕಂಡದ್ದೆಲ್ಲ
ವನ್ನೂ ತಂದೆಗೆ ತಿಳಿಸಿ ಬೇಗನೆ ಅವನನ್ನು ಇಲ್ಲಿಗೆ
14 ಕರಕೊಂಡುಬರಬೇಕೆಂದು ಹೇಳಿ ತನ್ನ ತಮ್ಮನಾದ
ಬೆನ್ಯಾಮೀನನ ಕೊರಳನ್ನು ಅಪ್ಪಿಕೊಂಡು ಅತ್ತನು.
ಬೆನ್ಯಾಮೀನನೂ ಅವನ ಕೊರಳನ್ನು ಅಪ್ಪಿಕೊಂಡು
15 ಅತ್ತನು. ಇದಲ್ಲದೆ ಅವನು ತನ್ನ ಅಣ್ಣಂದಿರಲ್ಲಿ ಪ್ರತಿ
ಯೊಬ್ಬನಿಗೂ ಮುದ್ದಿಟ್ಟು ಅವರನ್ನು ಅಪ್ಪಿಕೊಂಡು
ಅತ್ತನು. ತರುವಾಯ ಅವರು ಅವನ ಸಂಗಡ ಮಾ
ತಾಡಿದರು.
16 ಯೋಸೇಫನ ಅಣ್ಣತಮ್ಮಂದಿರು ಬಂದ ಸಮಾ
ಚಾರವು ಫರೋಹನ ಮನೆಯವರಿಗೆ ತಿಳಿದಾಗ
ಫರೋಹನಿಗೂ ಅವನ ಪರಿವಾರದವರಿಗೂ ಸಂತೋಷ
17 ವಾಯಿತು. ಫರೋಹನು ಯೋಸೇಫನನ್ನು ಕರಿಸಿ—
ನೀನು ನಿನ್ನ ಅಣ್ಣತಮ್ಮಂದಿರಿಗೆ ತಿಳಿಸಬೇಕಾದ ನನ್ನ
ಆಜ್ಞೆಯೇನಂದರೆ—ನೀವು ನಿಮ್ಮ ಪಶುಗಳ ಮೇಲೆ
ಸಾಮಾನುಗಳನ್ನು ಹೇರಿ ಕಾನಾನ್‍ದೇಶಕ್ಕೆ ಹೋಗಿ
18 ನಿಮ್ಮ ತಂದೆಯನ್ನೂ ಮನೆಯವರನ್ನೂ ನನ್ನ ಬಳಿಗೆ
ಕರಕೊಂಡು ಬನ್ನಿರಿ; ಐಗುಪ್ತದೇಶದಲ್ಲಿ ದೊರಕುವ
ಉತ್ತಮವಸ್ತುಗಳನ್ನು ನಿಮಗೆ ಕೊಡುವೆನು, ಮತ್ತು
ನೀವು ಈ ದೇಶದ ಸುಖವನ್ನು ಅನುಭವಿಸಬಹುದು.
19 ಮತ್ತು ನಿಮ್ಮ ಹೆಂಡತಿ ಮಕ್ಕಳಿಗೋಸ್ಕರ ಐಗುಪ್ತ
ದೇಶದಿಂದ ರಥಗಳನ್ನು ತೆಗೆದುಕೊಂಡು ಹೋಗಿ
20 ನಿಮ್ಮ ತಂದೆಯನ್ನು ಕರಕೊಂಡು ಬನ್ನಿರಿ. ಐಗುಪ್ತ
ದೇಶದಲ್ಲೆಲ್ಲಾ ಇರುವ ಉತ್ತಮವಸ್ತುಗಳು ನಿಮ್ಮ
ಪಾಲಿಗೆ ಬಂದದರಿಂದ ನಿಮಗಿರುವ ಸೊತ್ತಿನ ವಿಷಯ
ಚಿಂತೆಪಡಬೇಕಾದ ಅವಶ್ಯವಿಲ್ಲ ಎಂಬದೇ ಅಂದನು.
ಇಸ್ರಾಯೇಲನ ಮಕ್ಕಳು ಅದೇ ಮೇರೆಗೆ ಮಾಡಿ
ದರು. ಫರೋಹನ ಅಪ್ಪಣೆಯ ಪ್ರಕಾರ ಯೋಸೇಫ
ನು ಅವರಿಗೆ ರಥಗಳನ್ನೂ ಮಾರ್ಗಕ್ಕೆ ಬೇಕಾದ
ಆಹಾರವನ್ನೂ ಕೊಡಿಸಿದನು. ಇದಲ್ಲದೆ ಪ್ರತಿಯೊಬ್ಬ
ನಿಗೂ ಶ್ರೇಷ್ಠ ವಸ್ತ್ರಗಳನ್ನು ಕೊಟ್ಟನು; ಬೆನ್ಯಾಮೀನ
ನಿಗೋ ಮುನ್ನೂರು ರೂಪಾಯಿಗಳನ್ನೂ ಐದು
ಶ್ರೇಷ್ಠ ವಸ್ತ್ರಗಳನ್ನೂ ಕೊಟ್ಟನು. ತನ್ನ ತಂದೆ
ಗೋಸ್ಕರ ಐಗುಪ್ತದೇಶದ ಒಳ್ಳೇ ವಸ್ತುಗಳನ್ನು
ಹತ್ತು ಕತ್ತೆಗಳ ಮೇಲೆ ಹೇರಿಸಿ ಹತ್ತು ಹೆಣ್ಣುಕತ್ತೆಗಳ
ಮೇಲೆ ತನ್ನ ತಂದೆಯ ಪ್ರಯಾಣಕ್ಕೆ ಬೇಕಾದ ದವಸ
ಧಾನ್ಯಗಳನ್ನೂ ಬೇರೆ ತಿನ್ನುವ ಪದಾರ್ಥಗಳನ್ನೂ
ಕಟ್ಟಿಸಿಕೊಟ್ಟನು. ಆಗ ತನ್ನ ಅಣ್ಣತಮ್ಮಂದಿರಿಗೆ—
ನೀವು ದಾರಿಯಲ್ಲಿ ಜಗಳಮಾಡಬೇಡಿರಿ ಎಂದು
ಬುದ್ಧಿ ಹೇಳಿ ಅವರಿಗೆ ಹೋಗುವದಕ್ಕೆ ಅಪ್ಪಣೆ
ಕೊಟ್ಟನು; ಅವರು ಹೊರಟುಹೋದರು.

ಅವರು ಐಗುಪ್ತದೇಶವನ್ನು ಬಿಟ್ಟು ಕಾನಾನ್
ದೇಶಕ್ಕೆ ಸೇರಿ ತಂದೆಯಾದ ಯಾಕೋಬನ ಬಳಿಗೆ
ಬಂದು ಅವನಿಗೆ—ಯೋಸೇಫನು ಇನ್ನೂ ಜೀವ
ದಿಂದಿದ್ದಾನೆ; ಅವನು ಐಗುಪ್ತದೇಶದ ಸರ್ವಾಧಿಕಾರಿ
ಯಾಗಿದ್ದಾನೆ ಎಂದು ತಿಳಿಸಲು ಅವನು ಸ್ತಬ್ಧನಾಗಿ
ನಂಬಲಿಲ್ಲ. ತರುವಾಯ ಯೋಸೇಫನು ಹೇಳಿಕಳು
ಹಿಸಿದ್ದ ಎಲ್ಲಾ ಮಾತುಗಳನ್ನು ಕೇಳಿ ತನ್ನ ಪ್ರಯಾಣ
ಕ್ಕೋಸ್ಕರ ಯೋಸೇಫನ ಕಡೆಯಿಂದ ಬಂದ ರಥ
ಗಳನ್ನು ನೋಡಿ ಇಸ್ರಾಯೇಲನೆನಿಸಿಕೊಳ್ಳುವ ಅವರ
ತಂದೆ ಯಾಕೋಬನು ಚೇತರಿಸಿಕೊಂಡು—ಸಾಕು,
ನನ್ನ ಮಗನಾದ ಯೋಸೇಫನು ಸಜೀವನಾಗಿದ್ದಾನೆ;
ನಾನು ಸಾಯುವದಕ್ಕಿಂತ ಮುಂಚೆ ಹೋಗಿ ಅವನನ್ನು
ನೋಡುವೆನು ಅಂದನು.

ಯಾಕೋಬನು ಐಗುಪ್ತದೇಶದಲ್ಲಿ ಇರುವದಕ್ಕೆ ಹೋದದ್ದು;
ಅವನ ಜೊತೆಯಲ್ಲಿ ಹೋದವರ ವಿವರಣೆ.

ಇಸ್ರಾಯೇಲನು ತನಗಿದ್ದ ಸರ್ವಸ್ವವನ್ನು ತೆಗೆದು 4
ಕೊಂಡು ಪ್ರಯಾಣಮಾಡಿ ಬೇರ್ಷೆಬಕ್ಕೆ ಬಂದು
ತನ್ನ ತಂದೆಯಾದ ಇಸಾಕನ ದೇವರಿಗೆ ಯಜ್ಞಗಳನ್ನು
ಮಾಡಿದನು. ಅಲ್ಲಿ ದೇವರು ರಾತ್ರಿಯ ಸ್ವಪ್ನದಲ್ಲಿ
ಇಸ್ರಾಯೇಲನನ್ನು—ಯಾಕೋಬನೇ, ಯಾಕೋಬ
ನೇ ಎಂದು ಕರೆಯಲು, ಅವನು—ಇದ್ದೇನೆ ಅಂದನು.
ಆತನು—ನಾನು ದೇವರು, ನಿನ್ನ ತಂದೆ ಆರಾಧಿಸಿದ
ದೇವರು; ನೀನು ಗಟ್ಟಾ ಇಳಿದು ಹೆದರದೆ ಐಗುಪ್ತ
ದೇಶಕ್ಕೆ ಹೋಗು; ಅಲ್ಲಿ ನಿನ್ನಿಂದ ಮಹಾಜನಾಂಗ
ವುಂಟಾಗುವಂತೆ ಮಾಡುವೆನು. ನಾನೇ ನಿನ್ನೊಂದಿಗೆ
ಐಗುಪ್ತಕ್ಕೆ ಬರುವೆನು; ಅಲ್ಲಿಂದ ನಿಶ್ಚಯವಾಗಿ
ನಿನ್ನನ್ನು ತಿರುಗಿ ಕರೆದುಕೊಂಡು ಬರುವೆನು; [ನಿನ್ನ
ಅವಸಾನಕಾಲದಲ್ಲಿ] ಯೋಸೇಫನು ನಿನ್ನ ಕಣ್ಣುಗಳ
ಮೇಲೆ ಕೈಯಿಡುವನು ಅಂದನು.

ಬಳಿಕ ಯಾಕೋಬನು ಬೇರ್ಷೆಬದಿಂದ ಹೊರ

ಟನು. ಫರೋಹನು ಅವನನ್ನು ಕರಕೊಂಡು ಬರು
ವದಕ್ಕೆ ಕಳುಹಿಸಿದ್ದ ರಥಗಳ ಮೇಲೆ ಇಸ್ರಾಯೇಲನ
ಮಕ್ಕಳು ತಮ್ಮ ತಂದೆಯಾದ ಯಾಕೋಬನನ್ನೂ
ಹೆಂಡತಿಮಕ್ಕಳನ್ನೂ ಕುಳ್ಳಿರಿಸಿಕೊಂಡು ಹೊರಟರು.
6 ಯಾಕೋಬನೂ ಅವನ ಮನೆತನದವರೆಲ್ಲರೂ ತಮ್ಮ
ದನಕುರಿಗಳನ್ನೂ ತಾವು ಕಾನಾನ್‍ದೇಶದಲ್ಲಿ ಸಂಪಾ
ದಿಸಿಕೊಂಡಿದ್ದ ಸೊತ್ತುಗಳನ್ನೂ ತೆಗೆದುಕೊಂಡು
7 ಐಗುಪ್ತದೇಶವನ್ನು ತಲಪಿದರು. ಹೀಗೆ ಯಾಕೋಬ
ನು ತನ್ನ ಗಂಡು ಹೆಣ್ಣು ಮಕ್ಕಳನ್ನೂ ಮೊಮ್ಮಕ್ಕ
ಳನ್ನೂ ತನ್ನ ಮನೆತನದವರೆಲ್ಲರನ್ನೂ ತನ್ನ ಸಂಗಡಲೇ
ಐಗುಪ್ತದೇಶಕ್ಕೆ ಕರಕೊಂಡು ಹೋದನು.
8 ಇಸ್ರಾಯೇಲನೆಂಬ ಯಾಕೋಬನು ತನ್ನ ಮಕ್ಕ
ಳೊಡನೆ ಐಗುಪ್ತದೇಶಕ್ಕೆ ಬಂದಾಗ ಅವನಿಗಿದ್ದ
ಸಂತಾನದವರ ವಿವರಣೆ. ಯಾಕೋಬನ ಚೊಚ್ಚಲ
ಮಗನು ರೂಬೇನನು.
9 ರೂಬೇನನ ಮಕ್ಕಳಾದ ಹನೋಕ್ ಫಲ್ಲೂ
10 ಹೆಚ್ರೋನ್ ಕರ್ಮೀ; ಸಿಮೆಯೋನನ ಮಕ್ಕಳಾದ
ಯೆಮೂವೇಲ್ ಯಾಮೀನ್ ಓಹದ್ ಯಾಕೀನ್
ಚೋಹರ್ ಮತ್ತು ಕಾನಾನ್ಯ ಹೆಂಗಸಿನಲ್ಲಿ ಹುಟ್ಟಿದ
11 ಸೌಲ; ಲೇವಿಯ ಮಕ್ಕಳಾದ ಗೇರ್ಷೋನ್ ಕೆಹಾತ್
12 ಮೆರಾರೀ; ಯೆಹೂದನ ಮಕ್ಕಳಾದ ಏರ್ ಓನಾನ್
ಶೇಲಾಹ ಪೆರೆಚ್ ಜೆರಹ (ಇವರಲ್ಲಿ ಏರ್ ಓನಾನ್
ಎಂಬವರು ಕಾನಾನ್‍ದೇಶದಲ್ಲೇ ಸತ್ತರು); ಪೆರೆಚನ
13 ಮಕ್ಕಳಾದ ಹೆಚ್ರೋನ್ ಹಾಮೂಲ್; ಇಸ್ಸಾಕಾರನ
ಮಕ್ಕಳಾದ ತೋಲಾ ಪುವ್ವಾ ಯೋಬ್ ಶಿಮ್ರೋನ್;
14 ಜೆಬುಲೂನನ ಮಕ್ಕಳಾದ ಸೆರೆದ್ ಏಲೋನ್ ಯಹ್ಲೇ
15 ಲ್;—ಇವರೆಲ್ಲರು ಲೇಯಳ ಸಂತತಿಯವರು. ಆಕೆ
ಯು ಯಾಕೋಬನಿಗೆ ಇವರನ್ನೂ ದೀನಳೆಂಬ ಹೆಣ್ಣು
ಮಗಳನ್ನೂ ಪದ್ದನ್‍ಅರಾಮಿನಲ್ಲಿ ಪಡೆದಳು. ಆಕೆ
ಯಿಂದಾದ ಗಂಡು ಹೆಣ್ಣು ಮಕ್ಕಳು ಮೂವತ್ತು
ಮೂರು ಮಂದಿ.
16 ಗಾದನ ಮಕ್ಕಳಾದ ಚಿಪ್ಯೋನ್ ಹಗ್ಗೀ ಶೂನೀ
17 ಎಚ್ಬೋನ್ ಏರೀ ಅರೋದೀ ಅರೇಲೀ; ಆಶೇರನ
ಮಕ್ಕಳಾದ ಇಮ್ನಾ ಇಷ್ವಾ ಇಷ್ವೀ ಬೆರೀಗಾ ಇವರ
ತಂಗಿಯಾದ ಸೆರಹ; ಬೆರೀಗನ ಮಕ್ಕಳಾದ ಹೆಬೆರ್
18 ಮಲ್ಕೀಯೇಲ್,—ಇವರು ಲಾಬಾನನು ತನ್ನ ಮಗ
ಳಾದ ಲೇಯಳಿಗೆ ಕೊಟ್ಟ ಜಿಲ್ಪಳ ಸಂತತಿಯವರು.
ಈಕೆಯಿಂದ ಯಾಕೋಬನಿಗಾದ ಮಕ್ಕಳೂ ಮೊಮ್ಮ
ಕ್ಕಳೂ ಹದಿನಾರು ಮಂದಿ.
19 ಯಾಕೋಬನ ಹೆಂಡತಿಯಾದ ರಾಹೇಲಳ ಮಕ್ಕಳು
20 ಯೋಸೇಫ್ ಬೆನ್ಯಾಮೀನ್. ಐಗುಪ್ತದೇಶದಲ್ಲಿ
ಯೋಸೇಫನಿಗೆ ಓನ್ ಪಟ್ಟಣದ ಆಚಾರ್ಯನಾದ
ಪೋಟೀಫೆರನ ಮಗಳಾದ ಆಸನತ್ ಎಂಬಾಕೆಯಲ್ಲಿ
21 ಹುಟ್ಟಿದ ಮನಸ್ಸೆ ಎಫ್ರಾಯೀಮ್; ಬೆನ್ಯಾಮೀನನ
ಮಕ್ಕಳಾದ ಬೆಳಾ ಬೆಕೆರ್ ಅಷ್ಬೇಲ್ ಗೇರಾ ನಾಮಾನ್
ಏಹೀರೋಷ್ ಮುಪ್ಪೀಮ್ ಹುಪ್ಪೀಮ್ ಆರ್ದ್;—
22 ಈ ಹದಿನಾಲ್ಕು ಮಂದಿಯು ...
ಯಾಕೋಬನಿಂದಾದ ಸಂತ...
23, 24 ದಾನನ ಮಗನಾದ ...
ಮಕ್ಕಳಾದ ಯಹೇಲ್ ...

ವ್;—ಇವರು ಲಾಬಾನನು ತನ್ನ ಮಗಳಾದ 25
ರಾಹೇಲಳಿಗೆ ಕೊಟ್ಟ ಬಿಲ್ಹಳ ಸಂತತಿಯವರು. ಈಕೆ
ಯಿಂದ ಯಾಕೋಬನಿಗಾದ ಮಕ್ಕಳೂ ಮೊಮ್ಮಕ್ಕಳೂ
ಏಳು ಮಂದಿ.
ಯಾಕೋಬನ ಸೊಸೆಯರಲ್ಲದೆ ಯಾಕೋಬ 26
ನಿಂದಲೇ ಹುಟ್ಟಿ ಅವನೊಂದಿಗೆ ಐಗುಪ್ತದೇಶಕ್ಕೆ
ಹೋದವರು ಒಟ್ಟು ಅರುವತ್ತಾರು ಮಂದಿ. ಅವ 27
ರಲ್ಲದೆ ಐಗುಪ್ತದೇಶದಲ್ಲಿ ಯೋಸೇಫನಿಗೆ ಹುಟ್ಟಿದ
ವರು ಇಬ್ಬರು. ಐಗುಪ್ತದೇಶಕ್ಕೆ ಹೋದ ಯಾಕೋ
ಬನ ಕುಟುಂಬದವರೆಲ್ಲರು ಒಟ್ಟಾಗಿ ಎಪ್ಪತ್ತು
ಮಂದಿ.



ಯಾಕೋಬನು ಗೋಷೆನ್‍ಸೀಮೆಯ ದಾರೀ ವಿಚಾ 28
ರಿಸುವದಕ್ಕೆ ಯೆಹೂದನನ್ನು ಮುಂದಾಗಿ ಯೋಸೇ
ಫನ ಬಳಿಗೆ ಕಳುಹಿಸಿದನು. ಅವರು ಗೋಷೆನ್
ಸೀಮೆಗೆ ಬಂದಾಗ ಯೋಸೇಫನು ತನ್ನ ರಥವನ್ನು 29
ಸಿದ್ಧಪಡಿಸಿಕೊಂಡು ತನ್ನ ತಂದೆಯಾದ ಇಸ್ರಾಯೇಲ
ನನ್ನು ಎದುರುಗೊಳ್ಳುವದಕ್ಕೋಸ್ಕರ ಗೋಷೆನಿಗೆ
ಹೋಗಿ ಅವನಿಗೆ ಕಾಣಿಸಿಕೊಂಡು ತಂದೆಯನ್ನು
ಬಹಳ ಹೊತ್ತಿನ ವರೆಗೆ ಅಪ್ಪಿಕೊಂಡು ಅತ್ತನು.
ಇಸ್ರಾಯೇಲನು ಯೋಸೇಫನಿಗೆ—ನಾನು ನಿನ್ನ 30
ಮುಖವನ್ನು ಕಂಡು ನೀನು ಇನ್ನೂ ಜೀವದಿಂದಿರುವ
ದನ್ನು ತಿಳುಕೊಂಡದ್ದರಿಂದ ಸಂತೃಪ್ತನಾಗಿ ಸಾಯು
ವೆನು ಎಂದು ಹೇಳಿದನು. ಯೋಸೇಫನು ತನ್ನ ಅಣ್ಣ 31
ತಮ್ಮಂದಿರಿಗೂ ತಂದೆಯ ಮನೆಯವರೆಲ್ಲರಿಗೂ—
ನಾನು ಹೋಗಿ ಫರೋಹನ ಸನ್ನಿಧಾನದಲ್ಲಿ ನೀವು
ಬಂದ ವರ್ತಮಾನವನ್ನು ತಿಳಿಸಿ—ಕಾನಾನ್‍ದೇಶದ
ಲ್ಲಿದ್ದ ನನ್ನ ಅಣ್ಣತಮ್ಮಂದಿರೂ ನನ್ನ ತಂದೆಯ ಮನೆ
ಯವರೂ ನನ್ನ ಬಳಿಗೆ ಬಂದಿದ್ದಾರೆ; ಅವರು ಪಶು 32
ಪಾಲಕರಾದದ್ದರಿಂದ ಕುರಿಕಾಯುವವರಿಗೆ ಸಂಬಂಧ
ಪಟ್ಟವರು; ಅವರು ತಮ್ಮ ಕುರಿದನಗಳನ್ನೂ ತಮ
ಗಿರುವ ಸರ್ವಸ್ವವನ್ನೂ ತಂದಿದ್ದಾರೆ ಎಂದು ಹೇಳು
ತ್ತೇನೆ. ಫರೋಹನು ನಿಮ್ಮನ್ನು ಕರಸಿ—ನಿಮ್ಮ 33
ಕೆಲಸವೇನು ಎಂದು ಕೇಳಿದರೆ ನೀವು—ಚಿಕ್ಕಂದಿನಿಂದ 34
ಇದು ವರೆಗೂ ನಿನ್ನ ಸೇವಕರಾದ ನಾವು ನಮ್ಮ
ಪೂರ್ವಿಕರ ಪದ್ಧತಿಯ ಮೇರೆಗೆ ಪಶುಪಾಲಕರು
ಅನ್ನಿರಿ. ಪಶುಪಾಲಕರು ಐಗುಪ್ತ್ಯರಿಗೆ ಅಸಹ್ಯವಾಗಿ
ರುವದರಿಂದ ಗೋಷೆನ್‍ಸೀಮೆಯನ್ನು ನಿಮ್ಮ ನಿವಾಸಕ್ಕೆ
ನೇಮಿಸುವನು ಅಂದನು.

ಆಗ ಯೋಸೇಫನು ಫರೋಹನ ಬಳಿಗೆ ಹೋಗಿ—
ನನ್ನ ತಂದೆಯೂ ಅಣ್ಣತಮ್ಮಂದಿರೂ ದನಕುರಿಗಳ **47**
ನ್ನೂ ಸಮಸ್ತ ಆಸ್ತಿಯನ್ನೂ ತೆಗೆದುಕೊಂಡು ಕಾನಾ
ನ್‍ದೇಶದಿಂದ ಬಂದು ಗೋಷೆನ್‍ಸೀಮೆಯಲ್ಲಿದ್ದಾ
ರೆಂದು ಹೇಳಿ ತನ್ನ ಅಣ್ಣತಮ್ಮಂದಿರಲ್ಲಿ ಐದು ಮಂದಿ 2
ಯನ್ನು ಕರೆದುಕೊಂಡು ಬಂದು ಫರೋಹನ ಸನ್ನಿಧಿ
ಯಲ್ಲಿ ನಿಲ್ಲಿಸಿದನು. ಫರೋಹನು—ನಿಮ್ಮ ಕೆಲಸ 3
... ವರನ್ನು ಕೇಳಲು ಅವರು—ನಿನ್ನ
... ವು ನಮ್ಮ ಪೂರ್ವಿಕರ ಪದ್ಧತಿಯ
... ಯುವವರು ಎಂದು ಹೇಳಿದರು.
... ಅವನಿಗೆ—ಕಾನಾನ್‍ದೇಶದಲ್ಲಿ 4

ಬರವು ಘೋರವಾದ್ದರಿಂದ ನಿನ್ನ ಸೇವಕರ ದನಕುರಿ
ಗಳಿಗೆ ಮೇವು ಸಿಕ್ಕಲಿಲ್ಲ; ಆದದರಿಂದ ಈ ದೇಶದಲ್ಲಿ
ಸ್ವಲ್ಪಕಾಲ ಇರಬೇಕೆಂದು ಬಂದಿದ್ದೇವೆ. ಸೇವಕರು
ಗೋಷೆನ್‌ಸೀಮೆಯಲ್ಲಿ ವಾಸಮಾಡುವಂತೆ ಅಪ್ಪಣೆ
5 ಯಾಗಬೇಕು ಎಂದು ಹೇಳಿಕೊಂಡರು. ಆಗ ಫರೋ
ಹನು ಯೋಸೇಫನಿಗೆ— ನಿನ್ನ ತಂದೆಯೂ ಅಣ್ಣ
6 ತಮ್ಮಂದಿರೂ ನಿನ್ನ ಬಳಿಗೆ ಬಂದಿದ್ದಾರಷ್ಟೆ; ಐಗುಪ್ತ
ದೇಶವು ನಿನ್ನೆದುರಿನಲ್ಲಿ ಅದೆ, ಅದರೊಳಗಣ ಉತ್ತಮ
ಭಾಗದಲ್ಲಿ ನಿನ್ನ ತಂದೆಗೂ ನಿನ್ನ ಅಣ್ಣತಮ್ಮಂದಿರಿಗೂ
ವಾಸಸ್ಥಾನವನ್ನು ನೇಮಿಸಬಹುದು. ಅವರು ಗೋ
ಷೆನ್‌ಸೀಮೆಯಲ್ಲಿ ವಾಸಮಾಡಲಿ; ಅವರಲ್ಲಿ ಯಾರಾ
ದರೂ ಯೋಗ್ಯರಾಗಿ ತೋರಿದರೆ ಅವರನ್ನು ನನ್ನ
ದನಗಳ ಮೇಲ್ವಿಚಾರಣೆಗೆ ನೇಮಿಸು ಎಂದು ಹೇಳಿದನು.
7 ಯೋಸೇಫನು ತನ್ನ ತಂದೆಯಾದ ಯಾಕೋಬ
ನನ್ನು ಕರಕೊಂಡು ಫರೋಹನ ಸನ್ನಿಧಿಯಲ್ಲಿ ನಿಲ್ಲಿ
ಸಲು ಯಾಕೋಬನು ಫರೋಹನನ್ನು ಆಶೀರ್ವದಿಸಿ
8 ದನು. ಫರೋಹನು— ನಿನಗೆಷ್ಟು ವರುಷಗಳು ಎಂದು
9 ಕೇಳಲು ಯಾಕೋಬನು— ನಾನು ಲೋಕದಲ್ಲಿ
ಸಂಚಾರಮಾಡಿದ್ದು ನೂರಮೂವತ್ತು ವರುಷಗಳೇ;
ನಾನು ಜೀವಿಸಿರುವ ಕಾಲವು ಸ್ವಲ್ಪವಾಗಿಯೂ ದುಃಖ
ಕರವಾಗಿಯೂ ಇತ್ತು; ನನ್ನ ಪಿತೃಗಳು ಲೋಕ
ಯಾತ್ರೆಮಾಡಿದಷ್ಟು ವರುಷಗಳು ನನಗಾಗಿಲ್ಲ ಎಂದು
10 ಹೇಳಿ ಫರೋಹನನ್ನು ಆಶೀರ್ವದಿಸಿ ಅವನ ಸನ್ನಿಧಿ
ಯಿಂದ ಹೊರಟುಹೋದನು.
11 ಫರೋಹನ ಅಪ್ಪಣೆಯ ಮೇರೆಗೆ ಯೋಸೇಫನು
ತನ್ನ ತಂದೆಗೂ ಅಣ್ಣತಮ್ಮಂದಿರಿಗೂ ಐಗುಪ್ತದೇಶ
ದಲ್ಲಿ ವಾಸಸ್ಥಾನವನ್ನು ನೇಮಿಸಿ ಅದರೊಳಗೆ ಉತ್ತ
ಮವಾಗಿದ್ದ ರಮ್ಸೇಸ್ ಪ್ರದೇಶದಲ್ಲಿ ಸ್ವಾಸ್ತಿಯನ್ನು
12 ಕೊಟ್ಟನು. ಯೋಸೇಫನು ತನ್ನ ತಂದೆಗೂ ಅಣ್ಣ
ತಮ್ಮಂದಿರಿಗೂ ತಂದೆಯ ಮನೆಯವರೆಲ್ಲರಿಗೂ ಅವ
ರವರ ಕುಟುಂಬಗಳಿಗೆ ಸೇರಿದವರ ಲೆಕ್ಕದ ಪ್ರಕಾರ
ಆಹಾರಕ್ಕೆ ಕೊಟ್ಟು ಅವರನ್ನು ಸಂರಕ್ಷಿಸಿದನು.

### ಏಳು ವರುಷದ ಬರಗಾಲದಲ್ಲಿ ಯೋಸೇಫನು ಮಾಡಿದ ಆಡಳಿತ.

13 ಬರವು ಬಹು ಘೋರವಾಗಿದ್ದದರಿಂದ ದೇಶದ ಯಾವ
ಭಾಗದಲ್ಲಿಯೂ ಆಹಾರ ಸಿಕ್ಕುತ್ತಿರಲಿಲ್ಲ. ಆ ಬರದ
ನಿಮಿತ್ತ ಐಗುಪ್ತದೇಶದವರಿಗೂ ಕಾನಾನ್‌ದೇಶದವ
14 ರಿಗೂ ದಿಕ್ಕುತೋರದೆ ಹೋಯಿತು. ಯೋಸೇಫನು
ಜನರಿಗೆ ಧಾನ್ಯವನ್ನು ಮಾರುತ್ತಾ ಐಗುಪ್ತದೇಶದ
ಲ್ಲಿಯೂ ಕಾನಾನ್‌ದೇಶದಲ್ಲಿಯೂ ಇದ್ದ ಎಲ್ಲಾ
ಹಣವನ್ನು ಸೆಳಕೊಂಡು ಫರೋಹನ ಬೊಕ್ಕಸದೊಳಗೆ
15 ತುಂಬಿದನು. ಐಗುಪ್ತದೇಶದಲ್ಲಿಯೂ ಕಾನಾನ್
ದೇಶದಲ್ಲಿಯೂ ಇದ್ದ ಹಣವೆಲ್ಲಾ ಮುಗಿದುಹೋದ
ನಂತರ ಐಗುಪ್ತ್ಯರೆಲ್ಲರೂ ಯೋಸೇಫನ ಬಳಿಗೆ
ಬಂದು— ನಮ್ಮ ಹಣವು ಮುಗಿದುಹೋಯಿತು;
ನೀನು [ಧರ್ಮವಾಗಿಯೇ] ಆಹಾರಕೊಡಬೇಕು;

ನಾವು ನಿನ್ನ ಮುಂದೆ ಸತ್ತರೆ ಪ್ರಯೋಜನವೇನ
ಎಂದು ಹೇಳಿದರು. ಅದಕ್ಕೆ ಯೋಸೇಫನು— ನಿಮ
ದನಗಳನ್ನು ತನ್ನಿರಿ; ಹಣವಿಲ್ಲದಿದ್ದರೆ ದನಗಳನ್ನು
ತೆಗೆದುಕೊಂಡು ಧಾನ್ಯವನ್ನು ಕೊಡಿಸುತ್ತೇನೆ ಅಂದ
ನು. ಅವರು ತಮ್ಮ ಪಶುಗಳನ್ನು ಯೋಸೇಫನ
ಬಳಿಗೆ ತರಲು ಅವನು ಅವರ ಕುದುರೆಗಳನ್ನೂ
ಕುರಿದನಕತ್ತೆಗಳನ್ನೂ ತೆಗೆದುಕೊಂಡು ಅವರಿಗೆ
ಧಾನ್ಯವನ್ನು ಕೊಡಿಸಿದನು. ಆ ವರುಷದಲ್ಲಿ ಅವರ
ದನಕುರಿಗಳನ್ನೆಲ್ಲಾ ತೆಗೆದುಕೊಂಡು ಧಾನ್ಯವನ್ನು
ಕೊಟ್ಟು ಅವರನ್ನು ಸಂರಕ್ಷಿಸಿದನು. ಆ ವರುಷ
ಕಳೆದನಂತರ ಅವರು ಎರಡನೆಯ ವರುಷದಲ್ಲಿ ಅವನ
ಬಳಿಗೆ ಬಂದು— ನಮ್ಮ ಹಣವೆಲ್ಲಾ ವೆಚ್ಚವಾಗಿ
ಹೋಗಿದೆ; ನಮ್ಮ ಕುರಿದನಗಳು ಸ್ವಾಮಿಯ ವ
ವಾದವು; ಹೀಗಿರುವದರಿಂದ ನಮ್ಮ ಭೂಮಿಯೂ
ನಮ್ಮ ದೇಹಗಳೂ ಹೊರತು ಬೇರೆ ಇನ್ನೇನೂ ಉಳ
ದಿಲ್ಲವೆಂದು ನಮ್ಮ ಸ್ವಾಮಿಗೆ ಮರೆಮಾಜದೆ ತಿಳಿಸ
ಬೇಕಾಯಿತು. ನಿನ್ನ ಕಣ್ಣೆದುರಿಗೆ ನಾವು ಯಾಕ
ಸಾಯಬೇಕು; ನಮ್ಮ ಭೂಮಿಯು ಯಾಕೆ ಹಾಳಾಗ
ಬೇಕು; ನಮ್ಮನ್ನೂ ನಮ್ಮ ಭೂಮಿಯನ್ನೂ ತೆಗೆದು
ಕೊಂಡು ಧಾನ್ಯವನ್ನು ಕೊಡು; ನಾವು ನಮ್ಮ ಭೂಮಿ
ಯನ್ನು ಫರೋಹನಿಗೆ ಕೊಟ್ಟುಬಿಟ್ಟು ಅವನಿಗೆ
ಗುಲಾಮರಾಗುವೆವು. ನಾವು ಸಾಯದೆ ಬದುಕ
ಬೇಕಾದರೆ ಮತ್ತು ಭೂಮಿಯು ಹಾಳು ಬೀ
ಬಾರದಿದ್ದರೆ ನೀನು ಬೀಜವನ್ನು ಕೊಡಬೇಕೆಂದ
ಹೇಳಲು ಯೋಸೇಫನು ಐಗುಪ್ತದೇಶದ ಎಲ್ಲಾ
ಸಾಗುವಳಿಯ ಭೂಮಿಯನ್ನು ಫರೋಹನಿಗೋಸ್ಕರ
ಕೊಂಡುಕೊಂಡನು. ಬರವು ಐಗುಪ್ತ್ಯರಿಗೆ ಘೋರ
ವಾಗಿದ್ದದರಿಂದ ಅವರೆಲ್ಲರೂ ತಮ್ಮ ತಮ್ಮ ಹೊ
ಗದ್ದೆಗಳನ್ನು ಮಾರಿಬಿಟ್ಟರು. ಹೀಗೆ ಸಾಗುವಳಿಯ
ಭೂಮಿಯೆಲ್ಲಾ ಫರೋಹನದಾಯಿತು. ಯೋಸೇ
ನು ಐಗುಪ್ತದೇಶದ ಒಂದು ಮೇರೆಯಿಂದ ವ
ತ್ತೊಂದು ಮೇರೆಯ ವರೆಗೂ ಪ್ರಜೆಗಳನ್ನು 1)ದಾಸ
ರನ್ನಾಗಿ ಮಾಡಿದನು. ವೈದಿಕರ ಭೂಮಿಯನ್ನು
ಮಾತ್ರ ಅವನು ಕೊಂಡುಕೊಳ್ಳಲಿಲ್ಲ. ವೈದಿಕರಿಗೆ
ಫರೋಹನ ಕಡೆಯಿಂದ ಆಯವು ಸಿಕ್ಕಿದ್ದರಿಂ
ಅವರು ಫರೋಹನು ಕೊಟ್ಟ ಆಯದಿಂದ ಜೀವನ
ಮಾಡುತ್ತಿದ್ದರು; ಆದದರಿಂದ ತಮ್ಮ ಭೂಮಿಯನ್ನು
ಮಾರಲಿಲ್ಲ. ಯೋಸೇಫನು ಪ್ರಜೆಗಳಿಗೆ— ನಾನ
ಈ ಹೊತ್ತು ನಿಮ್ಮನ್ನೂ ನಿಮ್ಮ ಭೂಮಿಯನ್ನೂ
ಫರೋಹನಿಗೋಸ್ಕರ ಕೊಂಡುಕೊಂಡಿದ್ದೇನೆಂದು ತಿ
ದುಕೊಳ್ಳಿರಿ. ಇಗೋ, ಬಿತ್ತನೆಗಾಗಿ ನಿಮಗೆ ಬೀ
ವನ್ನು ಕೊಟ್ಟಿದ್ದೇನೆ; ಭೂಮಿಯಲ್ಲಿ ಬಿತ್ತಿರಿ. ಪೈರ
ಕೊಯ್ಯುವ ಕಾಲದಲ್ಲಿ ಐದರಲ್ಲೊಂದು ಪಾಲ
ಫರೋಹನಿಗೆ ಸಲ್ಲಬೇಕು; ಮಿಕ್ಕ ನಾಲ್ಕು ಪಾಲ
ನಿಮ್ಮದು; ಅದು ಬೀಜಕ್ಕೆ ಆಗುತ್ತದೆ, ಮತ್ತ
ನಿಮಗೂ ನಿಮ್ಮ ಮನೆಯವರಿಗೂ ನಿಮ್ಮ ಕುಟುಂ
ಕ್ಕೆ ಸೇರಿದವರೆಲ್ಲರಿಗೂ ಜೀವನಕ್ಕಾಗುತ್ತದೆ ಎಂದ
ಹೇಳಿದನು. ಅದಕ್ಕೆ ಅವರು— ನಮ್ಮ ಪ್ರಾಣಗಳನ್ನು

1) ಪಾಠಾಂತರ: ಪಟ್ಟಣಗಳೊಳಗೆ ಬರಮಾಡಿದನು.

ಉಳಿಸಿದ್ದೀ; ನಮ್ಮ ಸ್ವಾಮಿಯ ದಯೆ ನಮ್ಮ ಮೇಲಿ
ರಲಿ; ನಾವು ಫರೋಹನಿಗೆ ಗುಲಾಮರಾಗಿದ್ದೇವೆ
6 ಅಂದರು. ಬೆಳೆಯಲ್ಲಿ ಐದನೆಯ ಒಂದು ಪಾಲು
ಫರೋಹನಿಗೆ ಸಲ್ಲಬೇಕೆಂಬದನ್ನು ಯೋಸೇಫನು
ಐಗುಪ್ತದೇಶದಲ್ಲಿ ಕಟ್ಟಳೆಯಾಗಿ ನೇಮಿಸಿದನು.
ಈ ದಿನದ ವರೆಗೂ ಹಾಗೆಯೇ ಇದೆ. ವೈದಿಕರ
ಭೂಮಿಯು ಮಾತ್ರ ಫರೋಹನಿಗೆ ಸ್ವಾಧೀನವಾಗ
ಲಿಲ್ಲ.

ಯಾಕೋಬನು ತನ್ನ ಉತ್ತರಕ್ರಿಯೆಗಳ ವಿಷಯದಲ್ಲಿ
ಆಜ್ಞೆಕೊಟ್ಟು ಯೋಸೇಫನ ಇಬ್ಬರು ಮಕ್ಕಳನ್ನು
ದತ್ತುತೆಗೆದುಕೊಂಡು ಆಶೀರ್ವದಿಸಿದ್ದು.

7 ಇಸ್ರಾಯೇಲ್ಯರು ಐಗುಪ್ತದೇಶಕ್ಕೆ ಸೇರಿರುವ ಗೋ
ಷೆನ್‌ಸೀಮೆಯಲ್ಲಿ ವಾಸಮಾಡಿದರು. ಅದರಲ್ಲಿ
ಅವರು ಆಸ್ತಿಯನ್ನು ಸಂಪಾದಿಸಿ ಬಹುಸಂತಾನ
8 ವಾಗಿ ಬಹಳವಾಗಿ ಹೆಚ್ಚಿದರು. ಯಾಕೋಬನು
ಐಗುಪ್ತದೇಶದಲ್ಲಿ ಹದಿನೇಳು ವರುಷ ಇದ್ದನು.
ಅವನ ಜೀವಿತಕಾಲವು ಒಟ್ಟಿಗೆ ನೂರ ನಾಲ್ವತ್ತೇಳು
ವರುಷಗಳು.
9 ಇಸ್ರಾಯೇಲನಿಗೆ ಅವಸಾನಕಾಲ ಸಮೀಪಿಸಿ
ದಾಗ ಅವನು ತನ್ನ ಮಗನಾದ ಯೋಸೇಫನನ್ನು
ಕರಸಿ—ನಿನಗೆ ನನ್ನ ಮೇಲೆ ಪ್ರೀತಿಯಿದ್ದರೆ ನೀನು
ನಂಬಿಕೆಯಿಂದಲೂ ಪ್ರೀತಿಯಿಂದಲೂ ನನ್ನ ಮಾತನ್ನು
ನಡಿಸಬೇಕು; ಏನಂದರೆ, ನನಗೆ ಐಗುಪ್ತದೇಶ
ದಲ್ಲಿ ಸಮಾಧಿಮಾಡಬೇಡವೆಂದು ಕೇಳಿಕೊಳ್ಳುತ್ತೇನೆ.
0 ನಾನು ಪಿತೃಗಳಲ್ಲಿ ಸೇರಿದಾಗ ನನ್ನ ಶವವನ್ನು
ಐಗುಪ್ತದೇಶದಿಂದ ತೆಗೆದುಕೊಂಡು ಹೋಗಿ ಆ ಪಿತೃ
ಗಳ ಶ್ಮಶಾನಭೂಮಿಯಲ್ಲಿಯೇ ಸಮಾಧಿಮಾಡ
ಬೇಕು. ಹಾಗೆ ಮಾಡುತ್ತೇನೆಂಬದಾಗಿ ನೀನು ನನ್ನ
ತೊಡೆಯ ಕೆಳಗೆ ಕೈಯಿಟ್ಟು ಪ್ರಮಾಣಮಾಡಬೇ
ಕೆಂದು ಹೇಳಲು ಅವನು—ನೀನು ಹೇಳಿದಂತೆಯೇ
1 ಮಾಡುತ್ತೇನೆ ಅಂದನು. ಇಸ್ರಾಯೇಲನು—ಪ್ರಮಾ
ಣಮಾಡು ಅನ್ನಲು ಅವನು ಪ್ರಮಾಣಮಾಡಿದನು.
ಆಗ ಇಸ್ರಾಯೇಲನು 1)ಮಂಚದ ತಲೆದೆಸೆಯಲ್ಲಿ
ಬಾಗಿ ದೇವರಿಗೆ ನಮಸ್ಕಾರಮಾಡಿದನು.

48 ಕೆಲವು ಕಾಲವಾದ ಮೇಲೆ ತಂದೆಯು ಬಹಳ
ಬಲಹೀನನಾಗಿ ಬಿದ್ದಿದ್ದಾನೆಂಬ ವರ್ತಮಾನವು
ಯೋಸೇಫನಿಗೆ ಬರಲು ಅವನು ಮನಸ್ಸೆ ಎಫ್ರಾ
ಯಿಮರೆಂಬ ತನ್ನಿಬ್ಬರು ಮಕ್ಕಳನ್ನು ಸಂಗಡ ಕರ
2 ದುಕೊಂಡು ಅವನ ಬಳಿಗೆ ಬಂದನು. ನಿನ್ನ ಮಗ
ನಾದ ಯೋಸೇಫನು ಬಂದನೆಂದು ಯಾಕೋಬನಿಗೆ
ಒಬ್ಬನು ತಿಳಿಸಲು ಅವನು ಚೇತರಿಸಿಕೊಂಡು
3 ಮಂಚದ ಮೇಲೆ ಕೂತುಕೊಂಡನು. ಯಾಕೋಬ
ನು ಯೋಸೇಫನಿಗೆ—ಸರ್ವಶಕ್ತನಾದ ದೇವರು
ಕಾನಾನ್‌ದೇಶದ ಲೂಜಿನಲ್ಲಿ ನನಗೆ ದರ್ಶನ ಕೊಟ್ಟು
4 ಆಶೀರ್ವದಿಸಿ—ನಾನು ನಿನ್ನನ್ನು ಅಭಿವೃದ್ಧಿಪಡಿಸಿ
ನಿನ್ನ ಸಂತತಿಯನ್ನು ಹೆಚ್ಚಿಸುವೆನು; ಅನೇಕಜನಾಂಗ
ಗಳು ನಿನ್ನಿಂದುಂಟಾಗುವಂತೆ ಮಾಡುವೆನು; ನಿನ್ನ
ತರುವಾಯ ನಿನ್ನ ಸಂತತಿಗೆ ಈ ದೇಶವನ್ನು ಶಾಶ್ವತ
ಸ್ವಾಸ್ತ್ಯವನ್ನಾಗಿ ಕೊಡುವೆನು ಎಂದು ಹೇಳಿದನು.
ನಾನು ಐಗುಪ್ತದೇಶಕ್ಕೆ ನಿನ್ನ ಬಳಿಗೆ ಬರುವದ 5
ಕ್ಕಿಂತ ಮುಂಚೆ ಇಲ್ಲಿ ಹುಟ್ಟಿದ ನಿನ್ನಿಬ್ಬರು ಮಕ್ಕಳು
ನನ್ನ ಮಕ್ಕಳಾಗಿರಬೇಕು. ರೂಬೇನ್ ಸಿಮೆಯೋನ
ರು ನನ್ನ ಮಕ್ಕಳಾಗಿರುವಂತೆಯೇ ಎಫ್ರಾಯಿಮ್
ಮನಸ್ಸೆಯರೂ ನನ್ನ ಮಕ್ಕಳಾಗಿರಲಿ. ಅವರ ತರು 6
ವಾಯ ನೀನು ಪಡೆದ ಮಕ್ಕಳು ನಿನ್ನವರಾಗಲಿ,
ಅವರು ತಮ್ಮ ಅಣ್ಣಂದಿರ ಸ್ವಾಸ್ತ್ಯದಲ್ಲಿ ಬಾಧ್ಯತೆ
ಹೊಂದಿ ಅವರ ಕುಲದ ಹೆಸರನ್ನೇ ಇಟ್ಟುಕೊಳ್ಳಲಿ.
ನಾನು ಪದ್ದನ್‌ಅರಾಮಿನಿಂದ ಬರುತ್ತಿರಲು ಕಾನಾನ್ 7
ದೇಶದಲ್ಲಿ ಎಫ್ರಾತನ್ನು ಸೇರುವದಕ್ಕೆ ಇನ್ನೂ
ಸ್ವಲ್ಪದೂರವಿದ್ದಾಗ ರಾಹೇಲಳು ದಾರಿಯಲ್ಲೇ ಸತ್ತು
ನನ್ನನ್ನು ಅಗಲಿಹೋದಳು. ಬೇತ್ಲೆಹೇಮೆಂಬ ಎಫ್ರಾ
ತಿಗೆ ಹೋಗುವ ಮಾರ್ಗದಲ್ಲಿ ಆಕೆಗೆ ಸಮಾಧಿ
ಮಾಡಿದೆನು ಎಂದು ಹೇಳಿದನು.
ಇಸ್ರಾಯೇಲನು ಯೋಸೇಫನ ಮಕ್ಕಳನ್ನು 8
ನೋಡಿ—ಇವರು ಯಾರೆಂದು ಕೇಳಲು ಯೋಸೇಫ 9
ನು ತನ್ನ ತಂದೆಗೆ—ಇವರು ಈ ದೇಶದಲ್ಲಿ ನನಗೆ
ದೇವರು ಅನುಗ್ರಹಿಸಿದ ಮಕ್ಕಳು ಎಂದು ಹೇಳಿ
ದನು. ಅದಕ್ಕವನು—ಇವರನ್ನು ನಾನು ಆಶೀರ್ವದಿ
ಸುತ್ತೇನೆ; ನನ್ನ ಹತ್ತಿರಕ್ಕೆ ಕರಕೊಂಡು ಬಾ ಅಂದನು.
ಇಸ್ರಾಯೇಲನು ವೃದ್ಧಾಪ್ಯದಿಂದ ಮೊಬ್ಬು ಕಣ್ಣುಳ್ಳ 10
ವನಾಗಿ ನೋಡಲಾರದೆ ಇದ್ದನು. ಯೋಸೇಫನು
ಅವರನ್ನು ಅವನ ಬಳಿಗೆ ಕರಕೊಂಡು ಬರಲು ಅವನು
ಅವರನ್ನು ಮುದ್ದಿಟ್ಟು ಅಪ್ಪಿಕೊಂಡನು. ಆಗ ಇಸ್ರಾ 11
ಯೇಲನು ಯೋಸೇಫನಿಗೆ—ನಿನ್ನ ಮುಖವನ್ನು
ತಿರಿಗಿ ನೋಡುವೆನೆಂದು ನಾನು ನೆನಸಿರಲಿಲ್ಲ; ಆದರೆ
ನಾನು ನಿನ್ನನ್ನು ಮಾತ್ರವಲ್ಲದೆ ನಿನ್ನ ಸಂತಾನವನ್ನೂ
ನೋಡುವಂತೆ ದೇವರು ಅನುಗ್ರಹಿಸಿದ್ದಾನಲ್ಲಾ ಅಂದ
ನು. ಆಗ ಯೋಸೇಫನು ಅವರನ್ನು ತಂದೆಯ 12
ಮೊಣಕಾಲಿನ ಕಡೆಯಿಂದ ಬರಮಾಡಿ [ಅವನಿಗೆ] ಅಡ್ಡ
ಬಿದ್ದನು. ತರುವಾಯ ಯೋಸೇಫನು ತನ್ನ ಬಲ 13
ಗಡೆಯಲ್ಲಿ ಇಸ್ರಾಯೇಲನ ಎಡಗೈಗೆ ಎದುರಾಗಿ
ಎಫ್ರಾಯಿಮನನ್ನೂ ತನ್ನ ಎಡಗಡೆಯಲ್ಲಿ ಇಸ್ರಾ
ಯೇಲನ ಬಲಗೈಗೆ ಎದುರಾಗಿ ಮನಸ್ಸೆಯನ್ನೂ
ನಿಲ್ಲಿಸಿ ಅವರಿಬ್ಬರನ್ನೂ ತಂದೆಯ ಬಳಿಗೆ ಬರಮಾಡಿ
ದನು. ಮನಸ್ಸೆಯು ಚೊಚ್ಚಲಮಗನಾಗಿದ್ದರೂ 14
ಇಸ್ರಾಯೇಲನು ತನ್ನ ಕೈಗಳನ್ನು ಅಡ್ಡವಾಗಿ ಚಾಚಿ
ಕಿರಿಯವನಾದ ಎಫ್ರಾಯಿಮನ ತಲೆಯ ಮೇಲೆ ಬಲ
ಗೈಯನ್ನೂ ಮನಸ್ಸೆಯ ತಲೆಯ ಮೇಲೆ ಎಡ
ಗೈಯನ್ನೂ ಇಟ್ಟು ಯೋಸೇಫನನ್ನು ಆಶೀರ್ವದಿಸಿ— 15
ನನ್ನ ಪಿತೃಗಳಾದ ಅಬ್ರಹಾಮ್ ಇಸಾಕರು ಸೇವಿ
ಸಿದ ದೇವರಾಗಿಯೂ ನನ್ನನ್ನು ಚಿಕ್ಕಂದಿನಿಂದ
ಈ ದಿನದ ವರೆಗೂ ಪರಾಂಬರಿಸುತ್ತಾ ಬಂದ
ದೇವರಾಗಿಯೂ ನನ್ನನ್ನು ಎಲ್ಲಾ ಕೇಡುಗಳಿಂದ 16
ತಪ್ಪಿಸಿ ಕಾಪಾಡುತ್ತಾ ಬಂದ ದೂತನಾಗಿ

1) ಪಾಠಾಂತರ: ತನ್ನ ಕೋಲಿನ ಮೇಲೆ ಬಾಗಿಕೊಂಡು.

ಯೂ ಇರುವಾತನು ಈ ಹುಡುಗರನ್ನು ಆಶೀರ್ವ
ದಿಸಲಿ; ಇವರು ನನ್ನ ಹೆಸರನ್ನೂ ನನ್ನ ಪಿತೃ
ಗಳಾದ ಅಬ್ರಹಾಮ್ ಇಸಾಕರ ಹೆಸರುಗಳ
ನ್ನೂ ಮುಂದಕ್ಕೆ ತರಲಿ; ಇವರು ಭೂಮಿಯ
ಮೇಲೆ ಹೆಚ್ಚಿ ಬಹುಸಂತಾನವನ್ನು ಪಡೆಯಲಿ
17 ಅಂದನು. ತನ್ನ ತಂದೆಯು ಬಲಗೈಯನ್ನು ಎಫ್ರಾ
ಯಿಮುನ ತಲೆಯ ಮೇಲೆ ಇಡುವದನ್ನು ಯೋಸೇ
ಫನು ಕಂಡು ಅಸಮಾಧಾನಪಟ್ಟು ಅವನ ಕೈಯನ್ನು
ಎಫ್ರಾಯಿಮುನ ತಲೆಯಿಂದ ಎತ್ತಿ ಮನಸ್ಸೆಯ ತಲೆ
18 ಯ ಮೇಲೆ ಇಡುವದಕ್ಕಾಗಿ ಹಿಡಿದು ತಂದೆಗೆ—
ಹಾಗಲ್ಲಪ್ಪಾ; ಇವನೇ ಚೊಚ್ಚಲಮಗನು; ಬಲಗೈ
ಯನ್ನು ಇವನ ತಲೆಯ ಮೇಲೆ ಇಡಬೇಕು ಎಂದು
19 ಹೇಳಿದನು. ಆದರೆ ಅವನ ತಂದೆ ಒಪ್ಪದೆ— ಮಗನೇ,
ನಾನು ಬಲ್ಲೆ, ಬಲ್ಲೆ; ಇವನಿಂದಲೂ ಜನಾಂಗವುಂಟಾ
ಗುವದು; ಇವನೂ ಬಲಿಷ್ಠನಾಗುವನು; ಆದರೂ
ಇವನಿಗಿಂತಲೂ ಇವನ ತಮ್ಮನು ಬಲಿಷ್ಠನಾಗುವನು;
ತಮ್ಮನ ಸಂತತಿಯಲ್ಲಿಯೇ ಜನರು ಹೇರಳವಾಗಿ
20 ಹುಟ್ಟುವರು ಎಂದು ಹೇಳಿದನು. ಆ ಕಾಲದಲ್ಲಿ
ಅವನು ಅವರನ್ನು ಆಶೀರ್ವದಿಸಿ—

ಇಸ್ರಾಯೇಲ್ಯರು ಯಾರನ್ನಾದರೂ ಆಶೀರ್ವದಿಸು
ವಾಗ— ಎಫ್ರಾಯಿಮುನಿಗೂ ಮನಸ್ಸೆಗೂ ಉಂ
ಟಾದ ಸಂತತಿಯಂತೆ ದೇವರು ನಿನಗೂ ಸಂತಾ
ನವನ್ನು ಅನುಗ್ರಹಿಸಲಿ ಎಂದು ನಿಮ್ಮನ್ನು
ದೃಷ್ಟಾಂತಮಾಡಿ ಹೇಳುವರು

ಅಂದನು. ಹೀಗೆ ಹೇಳಿದ್ದರಿಂದ ಎಫ್ರಾಯಿಮುನನ್ನು
21 ಮನಸ್ಸೆಗೆ ಮುಂದಾಗಿ ಇಟ್ಟನು. ಇಸ್ರಾಯೇಲನು
ಯೋಸೇಫನಿಗೆ— ನನಗೆ ಮರಣ ಸಮೀಪಿಸಿದೆ; ಆದರೆ
ದೇವರು ನಿಮ್ಮೊಂದಿಗಿದ್ದು ನಿಮ್ಮನ್ನು ಪಿತೃಗಳ ದೇಶಕ್ಕೆ
22 ತಿರಿಗಿ ಬರಮಾಡುವನು. ಇದಲ್ಲದೆ ನಾನು ನಿನ್ನ
ಅಣ್ಣಂದಿರಿಗೆ ಕೊಟ್ಟ ಪಾಲಿಗಿಂತ ಹೆಚ್ಚಾಗಿ ನಾನು
ಕತ್ತಿಬಿಲ್ಲುಗಳಿಂದ ಅಮೋರಿಯರ ವಶದಿಂದ ತಪ್ಪಿಸಿ
ಪಡೆದ ಬೆಟ್ಟದ ತಪ್ಪಲನ್ನು ನಿನಗೆ ಕೊಟ್ಟಿದ್ದೇನೆ
ಎಂದು ಹೇಳಿದನು.

### ಇಸ್ರಾಯೇಲನು ತನ್ನಿಂದುಂಟಾಗುವ ಹನ್ನೆರಡು ಕುಲಗಳ ವಿಷಯವಾಗಿ ಕಾಲಜ್ಞಾನಹೇಳಿದ್ದು.

49 ಯಾಕೋಬನು ತನ್ನ ಮಕ್ಕಳನ್ನು ಕರಿಸಿ—
ನೀವೆಲ್ಲರೂ ಕೂಡಿ ಬನ್ನಿರಿ; ಮುಂದಿನ ಕಾಲದಲ್ಲಿ
ನಿಮಗೆ ಸಂಭವಿಸುವದನ್ನು ತಿಳಿಸುತ್ತೇನೆ.

2 ಯಾಕೋಬನ ಮಕ್ಕಳೇ, ನೀವೆಲ್ಲರೂ ಕೂಡಿ
ಬಂದು ಕೇಳಿರಿ; ನಿಮ್ಮ ತಂದೆಯಾದ ಇಸ್ರಾ
ಯೇಲನ ಮಾತನ್ನು ಲಾಲಿಸಿರಿ.

3 ರೂಬೇನನೇ, ನೀನು ನನ್ನ ಚೊಚ್ಚಲಮಗನೂ,
ನನ್ನ ಚೈತನ್ಯಸ್ವರೂಪನೂ ನನ್ನ ವೀರ್ಯಕ್ಕೆ
ಪ್ರಥಮಫಲವೂ ಗೌರವದಲ್ಲಿಯೂ ಅಧಿಕಾರ
ದಲ್ಲಿಯೂ ಪ್ರಮುಖನೂ ಆಗಿದ್ದೀ.

4 ಆದರೂ ದಡವನ್ನು ಮೀರಿದ ಪ್ರವಾಹದಂತಿರುವ
ನೀನು ಇನ್ನು ಪ್ರಮುಖನ ಸ್ಥಾನದಲ್ಲಿ ಇರುವ
ದಿಲ್ಲ. ನಿನ್ನ ತಂದೆಯ ಹಾಸಿಗೆಯನ್ನು ಹತ್ತಿ
ಅದನ್ನು ಹೊಲೆಮಾಡಿದಿಯಲ್ಲಾ. ಇವನ
ನನ್ನ ಮಂಚವನ್ನು ಹತ್ತಿದನು!

ಸಿಮೆಯೋನನೂ ಲೇವಿಯೂ ಅಣ್ಣತಮ್ಮಂದಿರೆ
ಸರಿ; ಇವರ ಕತ್ತಿಗಳು ಬಲಾತ್ಕಾರದ ಆಯು
ಧಗಳೇ.

ನನ್ನ ಪ್ರಾಣವೇ, ಅವರ ಗುಪ್ತವಾದ ದುರಾಲೋ
ಚನೆಗೆ ನೀನು ಒಳಪಡಬಾರದು; ನನ್ನ ಮನವೇ
ಅವರ ಗುಂಪಿಗೆ ನೀನು ಸೇರಬೇಡ.

ಅವರು ಕೋಪೋದ್ರೇಕದಿಂದ ಮನುಷ್ಯರನ್ನು
ಸಂಹರಿಸಿದರು; ಮದದಿಂದ ಎತ್ತುಗಳನ್ನು
ಊನಪಡಿಸಿದರು.

ಅವರ ಕೋಪವು ಭಯಂಕರವಾಗಿಯೂ ಅವರ
ರೌದ್ರವು ಕ್ರೂರವಾಗಿಯೂ ಇದೆ; ಅದಕ್ಕೆ ಶಾಪ
ವುಂಟಾಗಲಿ.

ಯಾಕೋಬನ ಕುಲದವರಲ್ಲಿ ಅವರನ್ನು ವಿಭಾಗಿ
ಸುವೆನು; ಇಸ್ರಾಯೇಲ್ಯರಲ್ಲಿ ಅವರನ್ನು ಚದ
ರಿಸುವೆನು.

ಯೆಹೂದನೇ, ನಿನ್ನ ಅಣ್ಣತಮ್ಮಂದಿರು ನಿನ್ನನ್ನೇ
ಸ್ತುತಿಸುವರು.

ನಿನ್ನ ಕೈ ನಿನ್ನ ಶತ್ರುಗಳ ಕುತ್ತಿಗೆಯ ಮೇಲಿರು
ವದು; ನಿನ್ನ ಸಹೋದರರು ನಿನಗೇ ಎರಗು
ವರು.

ಯೆಹೂದನು ಪ್ರಾಯದ ಸಿಂಹದಂತಿದ್ದಾನೆ; ನನ್ನ
ಪುತ್ರನೇ, ನೀನು ಮೃಗವನ್ನು ಹಿಡಿದು ಕೊಂದು
ಬೆಟ್ಟವನ್ನು ಸೇರಿದ ಸಿಂಹದೋಪಾದಿಯಲ್ಲಿದ್ದೀ
ಅವನು ಸಿಂಹದಂತೆ ಕಾಲುಮುದುರಿ ಹೊಂಚು
ಹಾಕಿಕೊಂಡಿದ್ದಾನೆ; ಮೃಗೇಂದ್ರನಿಗೆ ಸಮಾನ
ನಾದ ಇವನನ್ನು ಕೆಣಕುವದು ಯಾರಿಂದಾ
ದೀತು?

ರಾಜದಂಡವನ್ನು ಹಿಡಿಯತಕ್ಕವನು ಬರುವ ತನಕ
ಆ ದಂಡವು ಯೆಹೂದನ ಕೈಯಿಂದ ತಪ್ಪ
ವದಿಲ್ಲ, ಮುದ್ರೆಕೋಲು ಅವನ ಪಾದಗಳ ಬ
ಯಿಂದ ಕದಲುವದಿಲ್ಲ; ಅವನಿಗೆ ಅನ್ಯಜನ
ಗಳೂ ವಿಧೇಯರಾಗಿರುವರು.

ಅವನು ತನ್ನ ವಾಹನಪಶುವನ್ನು ದ್ರಾಕ್ಷಾಲತೆಗೆ
ಕಟ್ಟುವನು, ರಾಜದ್ರಾಕ್ಷೆಗೆ ತನ್ನ ಕತ್ತೆಯನ್ನು
ಬಿಗಿಯುವನು; ದ್ರಾಕ್ಷಾರಸದಲ್ಲಿ ತನ್ನ ಬಟ್ಟೆ
ಗಳನ್ನು ಒಗೆಯುವನು, ದ್ರಾಕ್ಷಾರಸದಲ್ಲಿಯೆ
ತನ್ನ ವಸ್ತ್ರಗಳನ್ನು ಅದ್ದಿ ತೊಳೆಯುವನು;
ದ್ರಾಕ್ಷಾರಸದ ಸಮೃದ್ಧಿಯಿಂದ ಅವನ ಕಣ್ಣು
ಗಳು ಕೆಂಪಾಗಿಯೇ ಇರುವವು. ಹಾಲಿನ
ಸಮೃದ್ಧಿಯಿಂದ ಅವನ ಹಲ್ಲುಗಳು ಬೆಳ್ಳಗಾ
ಗಿಯೇ ಇರುವವು.

ಜೆಬುಲೂನನು ಸಮುದ್ರದ ಕರಾವಳಿಯಲ್ಲಿ ವಾಸ
ಮಾಡುವನು; ಅವನಿಗೆ ಹಡಗುಗಳು ಸೇರುವ
ರೇವು ಇರುವದು. ಅವನ ಸೀಮೆಯ ಒಂದು
ಮೇರೆ ಚೀದೋನಿಗೆ ಮುಟ್ಟುವದು.

ಇಸ್ಸಾಕಾರನು ಕುರೀಹಟ್ಟಿಗಳ ನಡುವೆ ಮಲಗಿ
ಕೊಂಡಿರುವ ಬಲವುಳ್ಳ ಕತ್ತೆಯಂತಿರುವನು.
ತಾನು ಸೇರಿದ ಪ್ರದೇಶವು ವಿಶ್ರಾಂತಿಗೆ ಅನು
ಕೂಲವೂ ಸುಖಾಸ್ಪದವೂ ಆಗಿರುವದನ್ನು
ನೋಡಿ ಅವನು ಹೊರೆಯನ್ನು ಹೊರುವದಕ್ಕೆ
ಬೆನ್ನು ಬೊಗ್ಗಿಸಿಕೊಂಡು ಬಿಟ್ಟೀ ಕೆಲಸವನ್ನು
ಮಾಡುವವನಾದನು.

ದಾನನು ಇಸ್ರಾಯೇಲ್ಯರ ಕುಲಗಳಿಗೆ ಯೋಗ್ಯ
ವಾಗುವ ರೀತಿಯಲ್ಲಿ ತನ್ನ ಜನರ ವ್ಯಾಜ್ಯ
ವನ್ನು ಜಯಕ್ಕೆ ತರುವನು.
ದಾನನು ದಾರಿಯಲ್ಲಿರುವ ಹಾವಿನಂತೆಯೂ ಮಾ
ರ್ಗದಲ್ಲಿ ಕುದುರೆಯ ಹಿಮ್ಮಡಿಯನ್ನು ಕಚ್ಚಿ
ಸವಾರನನ್ನು ಕೆಡಹುವ ವಿಷಸರ್ಪದಂತೆಯೂ
ಆಗಿರುವನು.

ಯೆಹೋವನೇ, ನಿನ್ನಿಂದುಂಟಾಗುವ ರಕ್ಷಣೆಯು
ಯಾವಾಗ ಆಗುವದೋ ಎಂದು ನಿರೀಕ್ಷಿಸಿ
ಕೊಂಡಿದ್ದೇನೆ.

ಗಾದನ ಸಂಗತಿ—ಸುಲಿಗೆಮಾಡುವವರು ದಂಡೆತ್ತಿ
ಅವನ ಮೇಲೆ ಬೀಳಲು ಇವನು ಅವರನ್ನು
ಹಿಮ್ಮೆಟ್ಟಿಸಿಕೊಂಡು ಹೋಗುವನು.

ಆಶೇರನಿಗೆ ಧಾನ್ಯಸಮೃದ್ಧಿಯಾಗುವದು; ಅವ
ನಲ್ಲಿ ರಾಜಭೋಗ್ಯವಾದ ಪದಾರ್ಥಗಳು ದೊರ
ಕುವವು.

ನಫ್ತಾಲಿ ಬಿಡಿಸಿಕೊಂಡಿರುವ ಜಿಂಕೆಯಂತಿದ್ದಾನೆ.
ಅವನಿಂದ ಇಂಪಾದ ಮಾತುಗಳುಂಟಾಗುತ್ತವೆ.

ಯೋಸೇಫನು ಬಹುಫಲವನ್ನು ಬಿಡುವ ವೃಕ್ಷಕ್ಕೆ
ಸಮಾನನಾಗಿದ್ದಾನೆ, ಒರತೆಯ ಬಳಿಯಲ್ಲಿ
ಬೆಳೆದು ರೆಂಬೆಗಳನ್ನು ಗೋಡೆಯ ಆಚೆಗೆ
ಚಾಚಿರುವ ಫಲವೃಕ್ಷದಂತಿದ್ದಾನೆ.
ಬಿಲ್ಲುಗಾರರು ಬಂದು ಅವನನ್ನು ಕೆಣಕಿ ಬಾಣ
ಎಸೆದು ಕವಿದುಕೊಂಡರು.
ಆದರೂ ಯಾಕೋಬನ ವಂಶಸ್ಥರನ್ನು ರಕ್ಷಿ
ಸುವ ಪರಾಕ್ರಮಿಯ ಭುಜಬಲದಿಂದಲೂ
ಇಸ್ರಾಯೇಲನಿಗೆ ಪಾಲಕನೂ ಬಂಡೆಯೂ
ಆಗಿರುವಾತನ ಕಡೆಯಿಂದಲೂ ಅವನ ಬಿಲ್ಲು
ಸ್ಥಿರವಾಗಿ ನಿಂತಿತು, ಅವನ ಕೈಗಳು ಚುರು
ಕಾಗಿ ಮಾಡಲ್ಪಟ್ಟವು.
ಇದು ನಿನ್ನ ತಂದೆಯ ದೇವರಿಂದಾಯಿತು, ಆತನು
ನಿನಗೆ ಸಹಾಯಮಾಡಲಿ; ಸರ್ವಶಕ್ತನಾದ
ದೇವರಿಂದಾಯಿತು, ಆತನು ನಿನ್ನನ್ನು ಆಶೀರ್ವ
ದಿಸಲಿ. ಆತನು ಮೇಲಣ ಆಕಾಶದಿಂದಲೂ
ಕೆಳಗಣ ಸಾಗರದ ಸೆಲೆಗಳಿಂದಲೂ ಸ್ತನ್ಯ
ದಿಂದಲೂ ಗರ್ಭದಿಂದಲೂ ಉಂಟಾಗುವ
ಸೌಭಾಗ್ಯಗಳನ್ನು ಕೊಟ್ಟು ನಿನ್ನನ್ನು ಆಶೀರ್ವ
ದಿಸಲಿ.
ನಿನ್ನ ತಂದೆಯ ಆಶೀರ್ವಾದಗಳು ಆದಿಯಿಂದಿದ್ದ 26
1)ಪರ್ವತಗಳಿಂದುಂಟಾಗುವ ಮೇಲುಗಳಿಗಿಂತ
ಲೂ ಸದಾಕಾಲವಾಗಿರುವ ಬೆಟ್ಟಗಳಿಂದುಂಟಾ
ಗುವ ಉತ್ತಮವಸ್ತುಗಳಿಗಿಂತಲೂ ವಿಶೇಷ
ವಾಗಿವೆ. ಇವೆಲ್ಲಾ ಯೋಸೇಫನ ಪಾಲಿಗೆ
ಬರಲಿ; ಅಣ್ಣತಮ್ಮಂದಿರಲ್ಲಿ ಪ್ರಭುವಾಗಿರುವ
ವನ ಶಿರಸ್ಸಿನ ಮೇಲುಂಟಾಗಲಿ.

ಬೆನ್ಯಾಮೀನನು ಕುರಿಗಳನ್ನು ಹಿಡಿದುಕೊಳ್ಳುವ 27
ತೋಳದಂತಿದ್ದಾನೆ. ಹಿಡಿದುಕೊಂಡದ್ದನ್ನು ಬೆ
ಳಿಗ್ಗೆ ಉಣ್ಣುವನು, ಕೊಳ್ಳೆಮಾಡಿದ್ದನ್ನು ಸಂಜೆ
ಯಲ್ಲಿ ಹಂಚಿಕೊಳ್ಳುವನು.
ಇವರೆಲ್ಲರೂ ಇಸ್ರಾಯೇಲನಿಂದುಂಟಾದ ಹನ್ನೆರಡು 28
ಕುಲಗಳು. ಇದೇ ಅವರ ತಂದೆ ಅವರಿಗೆ ಹೇಳಿದ
ಆಶೀರ್ವಾದ. ಒಂದೊಂದು ಕುಲಕ್ಕೆ ಒಂದೊಂದು
ಆಶೀರ್ವಚನವನ್ನು ನುಡಿದನು.

### ಇಸ್ರಾಯೇಲನ ಮರಣವೂ ಉತ್ತರಕ್ರಿಯೆಯೂ.

ಇಸ್ರಾಯೇಲನು ತನ್ನ ಮಕ್ಕಳಿಗೆ ಆಜ್ಞಾಪಿಸಿ ಹೇಳಿ 29
ದ್ದೇನಂದರೆ—ನಾನು ನನ್ನ ಪಿತೃಗಳ ಬಳಿಗೆ ಸೇರ
ಬೇಕಾದ ಕಾಲ ಸಮೀಪಿಸಿತು. ಹಿತ್ತಿಯನಾದ
ಎಫ್ರೋನನ ಭೂಮಿಯಲ್ಲಿರುವ ಗವಿಯೊಳಗೆ ನನಗೆ
ಪಿತೃಗಳ ಬಳಿಯಲ್ಲಿ ಸಮಾಧಿಮಾಡಬೇಕು. ಆ 30
ಗವಿಯು ಕಾನಾನ್‍ದೇಶದ ಮಮ್ರೆಗೆದುರಾಗಿರುವ
ಮಕ್ಪೇಲ ಎಂಬ ಬೈಲಿನಲ್ಲಿ ಅದೆ. ಅದನ್ನು ಅಬ್ರ
ಹಾಮನು ಅದರ ಸುತ್ತಲಿರುವ ಭೂಮಿಸಹಿತವಾಗಿ
ಹಿತ್ತಿಯನಾದ ಎಫ್ರೋನನಿಂದ ಸ್ವಕೀಯಶ್ಮಶಾನ
ಭೂಮಿಯಾಗುವದಕ್ಕೆ ಕೊಂಡುಕೊಂಡನು. ಅಲ್ಲಿ 31
ಅಬ್ರಹಾಮನಿಗೂ ಅವನ ಪತ್ನಿಯಾದ ಸಾರಳಿಗೂ
ಸಮಾಧಿಯಾಯಿತು; ಅಲ್ಲಿ ಇಸಾಕನಿಗೂ ಅವನ
ಹೆಂಡತಿಯಾದ ರೆಬೆಕ್ಕಳಿಗೂ ಸಮಾಧಿಯಾಯಿತು;
ಅಲ್ಲಿ ನಾನು ಲೇಯಳನ್ನೂ ಹೂಣಿಟ್ಟೆನು. ಹೊಲದ 32
ಕೂಡ ಹಿತ್ತಿಯರಿಂದ ಕ್ರಯಕ್ಕೆ ತೆಗೆದುಕೊಂಡ ಆ
ಗವಿಯೊಳಗೆ ನನಗೂ ಸಮಾಧಿಮಾಡಬೇಕು ಅಂದನು.
ಯಾಕೋಬನು ತನ್ನ ಮಕ್ಕಳಿಗೆ ಅಪ್ಪಣೆಕೊಡುವ 33
ದನ್ನು ಮುಗಿಸಿದನಂತರ ಹಾಸಿಗೆಯ ಮೇಲೆ ತನ್ನ
ಕಾಲುಗಳನ್ನು ಮುದುರಿಕೊಂಡು ಪ್ರಾಣಬಿಟ್ಟು ಪಿತೃ
ಗಳ ಬಳಿಗೆ ಸೇರಿದನು.

**50** ಆಗ ಯೋಸೇಫನು ತನ್ನ ತಂದೆಯ ಮುಖದ
ಮೇಲೆ ಬಿದ್ದು ಕಣ್ಣೀರು ಸುರಿಸುತ್ತಾ ಅವನಿಗೆ
ಮುದ್ದಿಟ್ಟನು. ತರುವಾಯ ಅವನು ತನ್ನ ಸೇವಕ 2
ರಾದ ವೈದ್ಯರಿಗೆ—ನನ್ನ ತಂದೆಯ ಶವವನ್ನು ಸುಗಂಧ
ದ್ರವ್ಯಗಳಿಂದ ತುಂಬಿ ಸಿದ್ಧಪಡಿಸಿರಿ ಎಂದು ಅಪ್ಪಣೆ
ಕೊಡಲು ಅವರು ಹಾಗೆಯೇ ಮಾಡಿದರು. ನಾಲ್ವ 3

1) ಪಾಠಾಂತರ: ನಿನ್ನ ಹೆತ್ತವರು ಹೊಂದಿದ.

ತ್ತು ದಿನಗಳು ಸುಗಂಧದ್ರವ್ಯಗಳನ್ನು ತುಂಬುವ
ಪದ್ಧತಿಯಿರುವದರಿಂದ ಅಷ್ಟು ದಿವಸ ಸಿದ್ಧಪಡಿಸುತ್ತಾ
ಇದ್ದರು. ಐಗುಪ್ತ್ಯರು ಅವನಿಗೋಸ್ಕರ ಎಪ್ಪತ್ತು
ದಿನಗಳ ವರೆಗೂ ಗೋಳಾಡಿದರು.
4-5 ಗೋಳಾಡುವ ದಿನಗಳು ಮುಗಿದನಂತರ ಯೋ
ಸೇಫನು ಫರೋಹನ ಮನೆಯವರ ಬಳಿಗೆ ಹೋಗಿ—
ನನ್ನ ತಂದೆಯು ತಾನು ಕಾನಾನ್‌ದೇಶದಲ್ಲಿ ಸಿದ್ಧ
ಮಾಡಿಕೊಂಡಿರುವ ಸ್ಥಳದಲ್ಲಿಯೇ ತನಗೆ ಸಮಾಧಿ
ಮಾಡಬೇಕೆಂದು ಸಾಯುವದಕ್ಕಿಂತ ಮೊದಲು ನನ್ನಿಂ
ದ ಪ್ರಮಾಣಮಾಡಿಸಿದನು. ಆದದರಿಂದ ನನ್ನ ಮೇಲೆ
ಕಟಾಕ್ಷವಿದ್ದರೆ ನೀವು ಈ ಸಂಗತಿಯನ್ನು ಫರೋಹ
ನಿಗೆ ತಿಳಿಸಿ ನಾನು ಹೋಗಿ ತಂದೆಗೆ ಸಮಾಧಿಮಾಡಿ
ಬರುವದಕ್ಕೆ ಅಪ್ಪಣೆಕೊಡಿಸಬೇಕೆಂದು ಬೇಡಿಕೊಳ್ಳು
6 ತ್ತೇನೆ ಅಂದನು. ಫರೋಹನು ಈ ಸಂಗತಿಯನ್ನು
ಕೇಳಿ ಯೋಸೇಫನಿಗೆ—ನಿನ್ನ ತಂದೆ ಪ್ರಮಾಣಮಾಡಿ
ಸಿದ ಮೇರೆಗೆ ನೀನು ಹೋಗಿ ಅವನಿಗೆ ಸಮಾಧಿ
7 ಮಾಡಿಬರಬಹುದೆಂದು ಅಪ್ಪಣೆಕೊಟ್ಟನು. ಯೋಸೇ
ಫನು ತಂದೆಗೆ ಸಮಾಧಿಮಾಡುವದಕ್ಕೆ ಹೊರಟು
ಹೋದಾಗ ಅವನ ಜೊತೆಯಲ್ಲಿ ಫರೋಹನ ಪರಿವಾರ
ದವರೆಲ್ಲರೂ ಅರಮನೆಯ ಮುಖಂಡರೆಲ್ಲರೂ ಐಗು
8 ಪ್ತದೇಶದ ಮುಖ್ಯಸ್ಥರೆಲ್ಲರೂ ಯೋಸೇಫನ ಮನೆಯು
ವರೆಲ್ಲರೂ ಅಣ್ಣತಮ್ಮಂದಿರೂ ತಂದೆಯ ಮನೆಯುವ
ರೆಲ್ಲರೂ ಹೋದರು. ಅವರು ತಮ್ಮ ಹೆಂಡತಿಮಕ್ಕ
ಳನ್ನೂ ಕುರಿದನಗಳನ್ನೂ ಮಾತ್ರ ಗೋಷೆನ್ ಸೀಮೆ
9 ಯಲ್ಲಿ ಬಿಟ್ಟುಹೋದರು. ಇದಲ್ಲದೆ ಅವನ ಸಂಗಡ
ರಥಗಳೂ ಕುದುರೆಗಳೂ ಸಹ ಹೋದವು. ಹೊರಟು
10 ಹೋದವರು ಬಹು ಮಂದಿ. ಅವರು ಯೊರ್ದನ್
ಹೊಳೆಯಿಂದಾಚೆ ಇರುವ ಆಟಾದ್ ಎಂಬ ಕಣಕ್ಕೆ
ಬಂದು ಅಲ್ಲಿ ಅತ್ಯಧಿಕವಾಗಿ ಗೋಳಾಡಿದರು. ಯೋ
ಸೇಫನು ತನ್ನ ತಂದೆಗೋಸ್ಕರ ಏಳು ದಿನಗಳ ತನಕ
11 ಗೋಳಾಡಿಸಿದನು. ಆ ದೇಶದ ಜನರಾಗಿದ್ದ ಕಾನಾ
ನ್ಯರು ಆಟಾದ್ ಎಂಬ ಕಣದಲ್ಲಿ ನಡೆದ ಗೋಳಾಟ
ವನ್ನು ನೋಡಿ—ಐಗುಪ್ತ್ಯರಿಗೆ ಬಂದಿರುವ ಈ ಶೋ
ಕವು ಬಹುವಿಶೇಷವಾಗಿದೆ ಎಂದು ಹೇಳಿದ್ದರಿಂದ ಆ
ಸ್ಥಳಕ್ಕೆ [1]ಆಬೇಲ್ ಮಿಚ್ರಯಿಮ್ ಎಂದು ಹೆಸರಾ
ಯಿತು. ಇದು ಯೊರ್ದನ್ ಹೊಳೆಯಿಂದ ಆಚೆಯಿದೆ.
12 ಯಾಕೋಬನ ಮಕ್ಕಳು ತಂದೆಯ ಅಪ್ಪಣೆಯ
13 ಮೇರೆಗೆ ಅವನ ಶವವನ್ನು ಕಾನಾನ್‌ದೇಶಕ್ಕೆ ಹೊತ್ತು
ಕೊಂಡುಹೋಗಿ ಮಕ್ಪೇಲ ಎಂಬ ಬೈಲಿನಲ್ಲಿರುವ
ಗವಿಯೊಳಗೆ ಸಮಾಧಿಮಾಡಿದರು. ಅಬ್ರಹಾಮನು
ಹಿತ್ತಿಯನಾದ ಎಫ್ರೋನನಿಂದ ಮಮ್ರೆಗೆದುರಿನಲ್ಲಿ
ರುವ ಆ ಗವಿಯನ್ನು ಸುತ್ತಲಿರುವ ಭೂಮಿಸಹಿತ
ಸ್ವಕೀಯಶ್ಮಶಾನಭೂಮಿಯಾಗುವದಕ್ಕೆ ಕೊಂಡು
ಕೊಂಡಿದ್ದನು.
14 ತಂದೆಗೆ ಸಮಾಧಿಮಾಡಿದ ಮೇಲೆ ಯೋಸೇಫನೂ
ಅವನ ಅಣ್ಣತಮ್ಮಂದಿರೂ ಅವನ ತಂದೆಯ ಉತ್ತರ
ಕ್ರಿಯೆಗೋಸ್ಕರ ಜೊತೆಯಲ್ಲಿ ಹೋಗಿದ್ದವರೆಲ್ಲರೂ
ಐಗುಪ್ತಕ್ಕೆ ಹಿಂದಿರುಗಿ ಬಂದರು.

ಯೋಸೇಫನು ತನ್ನ ಅಣ್ಣಂದಿರನ್ನು ಕ್ಷಮಿಸಿದ್ದು.

ಯೋಸೇಫನ ಅಣ್ಣತಮ್ಮಂದಿರು ತಂದೆಸತ್ತದ್ದನ್ನು
ಕಂಡು—ಒಂದು ವೇಳೆ ಯೋಸೇಫನು ನಮ್ಮನ್ನು
ದ್ವೇಷಿಸಿ ನಾವು ಅವನಿಗೆ ಮಾಡಿದ ಎಲ್ಲಾ ಕೇಡಿ
ಪ್ರತಿಯಾಗಿ ಪೂರಾ ಶಿಕ್ಷೆಯನ್ನು ಕೊಟ್ಟಾನು ಎಂದ
ತಮ್ಮತಮ್ಮೊಳಗೆ ಮಾತಾಡಿಕೊಂಡು ಯೋಸೇ
ನಿಗೆ—ನಿನ್ನ ತಂದೆಯು ಸಾಯುವದಕ್ಕಿಂತ ಮುಂ
ನಮಗೆ ಅಪ್ಪಣೆಮಾಡಿದ್ದೇನಂದರೆ, ನೀವು ಯೋಸೇ
ನಿಗೆ—ನಿನ್ನ ಅಣ್ಣಂದಿರಾದ ನಾವು ನಿನಗೆ ಕೇಡ
ಮಾಡಿದ್ದು ನಿಜವೇ; ಆದರೂ ನಮ್ಮ ಅಪರಾ
ವನ್ನೂ ಪಾಪವನ್ನೂ ಕ್ಷಮಿಸು ಎಂಬದಾಗಿ ಹೇ
ಕೊಳ್ಳಬೇಕು; ಹೀಗೆ ಅವನು ಅಪ್ಪಣೆಮಾಡಿದ್ದರಿಂ
ನೀನು ಈಗ ನಿನ್ನ ತಂದೆಯ ದೇವರಿಗೆ ಭಕ್ತರಾ
ರುವ ನಾವು ಮಾಡಿದ ಅಪರಾಧವನ್ನು ಕ್ಷಮಿಸಬೇ
ಕೆಂದು ಬೇಡಿಕೊಳ್ಳುತ್ತೇವೆಂದು ಹೇಳಿಕಳುಹಿಸಿದರ
ಯೋಸೇಫನು ಈ ಮಾತುಗಳನ್ನು ಕೇಳಿ ಕಣ್ಣೀರ
ಸುರಿಸಿದನು. ಇದಲ್ಲದೆ ಅಣ್ಣಂದಿರು ತಾವೇ ಬಂದ
ಅವನ ಮುಂದೆ ಅಡ್ಡಬಿದ್ದು—ಇಗೋ, ನಾವು ನಿನ
ಗುಲಾಮರು ಅಂದರು. ಯೋಸೇಫನು ಅವರಿಗೆ—
ಹೆದರಬೇಡಿರಿ; ನಾನೇನು ದೇವರ ಪ್ರತಿನಿಧಿಯೇ
ನೀವಂತೂ ನನಗೆ ಕೇಡಾಗಬೇಕೆಂದು ಎಣಿಸಿದ್ದಿರಿ
ಆದರೆ ದೇವರು ಮೇಲಾಗಬೇಕೆಂದು ಸಂಕಲ್ಪಿಸಿದನು
ಈಗ ಅನುಭವಕ್ಕೆ ಬಂದ ಪ್ರಕಾರವೇ ಅನೇಕ ಪ್ರಾ
ಗಳಿಗೆ ಸಂರಕ್ಷಣೆಯುಂಟಾಗುವಂತೆ ಮಾಡಿದನು
ಆದದರಿಂದ ನೀವು ಸ್ವಲ್ಪವೂ ಭಯಪಡಬೇಡಿರಿ
ನಾನು ನಿಮ್ಮನ್ನೂ ನಿಮಗೆ ಸೇರಿದವರೆಲ್ಲರನ್ನೂ ಪೋ
ಷಿಸುವೆನು ಎಂದು ಹೇಳಿ ಅವರನ್ನು ಸಂತೈಸಿ ಅವ
ಸಂಗಡ ಪ್ರೀತಿಯಿಂದ ಮಾತಾಡಿದನು.

ಯೋಸೇಫನು ಮೃತಪಟ್ಟದ್ದು.

ಹೀಗೆ ಯೋಸೇಫನೂ ಅವನ ತಂದೆಯ ಮನೆಯ
ವರೂ ಐಗುಪ್ತದೇಶದಲ್ಲಿ ವಾಸಮಾಡಿದರು. ಯೋಸ
ಫನು ನೂರಹತ್ತು ವರುಷ ಬದುಕಿದನು. ಅವನ
ಎಫ್ರಾಯಿಮನ ಮಕ್ಕಳ ಮೊಮ್ಮಕ್ಕಳನ್ನು ನೋ
ದನು; ಮತ್ತು ಮನಸ್ಸೆಯ ಮಗನಾದ ಮಾಕೀ
ನಿಗೂ ಮಕ್ಕಳು ಹುಟ್ಟಿದಾಗ ಯೋಸೇಫನು ಅ
ರನ್ನು ತನ್ನ ತೊಡೆಯ ಮೇಲೆ ಮಲಗಿಸಿಕೊಂಡನ
ಯೋಸೇಫನು ತನ್ನ ಅಣ್ಣತಮ್ಮಂದಿರಿಗೆ—ನನ
ಅವಸಾನಕಾಲ ಸಮೀಪಿಸಿತು. ಆದರೆ ದೇವರ
ನಿಶ್ಚಯವಾಗಿ ನಿಮ್ಮನ್ನು ಪರಾಂಬರಿಸಿ ಈ ದೇಶದಿಂ
ತಾನು ಅಬ್ರಹಾಮ್ ಇಸಾಕ್ ಯಾಕೋಬರಿ
ಕೊಡುತ್ತೇನೆಂದು ಪ್ರಮಾಣವಾಗಿ ಹೇಳಿದ ದೇಶ
ನೀವು ಹೋಗಿ ಸೇರುವಂತೆ ಮಾಡುವನೆಂದು ತಿಳಿದ
ಕೊಳ್ಳಿರಿ ಎಂದು ಹೇಳಿದನು. ಇದಲ್ಲದೆ ಯೋಸೇ
ನು ಇಸ್ರಾಯೇಲನ ಮಕ್ಕಳಿಗೆ—ದೇವರು ನಿಸ್ಸಂದೇ
ವಾಗಿ ನಿಮ್ಮನ್ನು ಪರಾಂಬರಿಸುವನು; ಆಗ ನೀವು ನ

[1] ಆಬೇಲ್ ಮಿಚ್ರಯಿಮ್ ಅಂದರೆ ಐಗುಪ್ತ್ಯರು ಗೋಳಾಡಿದ ಸ್ಥಳ.

ಶವವನ್ನು ನಿಮ್ಮ ಸಂಗಡ ಹೊತ್ತುಕೊಂಡುಹೋಗ
ಬೇಕೆಂದು ಹೇಳಿ, ಹಾಗೆಯೇ ಮಾಡುತ್ತೇವೆಂಬದಾಗಿ
ಆವರಿಂದ ಪ್ರಮಾಣಮಾಡಿಸಿದನು. ಯೋಸೇಫನು
ನೂರಹತ್ತು ವರುಷದವನಾಗಿ ಸತ್ತನು. ಅವನ ಶವಕ್ಕೆ
ಸುಗಂಧದ್ರವ್ಯಗಳನ್ನು ತುಂಬಿ ಐಗುಪ್ತದೇಶದೊಳಗೆ
ಅದನ್ನು ಪೆಟ್ಟಿಗೆಯಲ್ಲಿ ಇರಿಸಿದರು.

---

# EXODUS

---

## ಮೋಶೆಯ ಧರ್ಮಶಾಸ್ತ್ರದಲ್ಲಿ ವಿಮೋಚನಕಾಂಡ ಎಂಬ ದ್ವಿತೀಯಭಾಗವು

---

### ಐಗುಪ್ತದಲ್ಲಿ ಹಿಂಸೆಪಟ್ಟ ಇಸ್ರಾಯೇಲ್ಯರನ್ನು ದೇವರು ಮೋಶೆಯ ಮುಖಾಂತರ ಬಿಡಿಸಿದ್ದು.

**1. 1—15. 21.**

ಇಸ್ರಾಯೇಲ್ಯರಿಗಾದ ಹಿಂಸೆ.

ಐಗುಪ್ತದೇಶಕ್ಕೆ ಬಂದ ಇಸ್ರಾಯೇಲನ ಮಕ್ಕಳ
2 ಹೆಸರುಗಳು—ರೂಬೇನ್ ಸಿಮೆಯೋನ್ ಲೇವಿ
ಯೆಹೂದ ಇಸ್ಸಾಕಾರ್ ಜೆಬುಲೂನ್ ಬೆನ್ಯಾಮೀನ್
ದಾನ್ ನಫ್ತಾಲಿ ಗಾದ್ ಆಶೇರ್ ಎಂಬಿವುಗಳೇ. ಇವ
ರೆಲ್ಲರೂ ತಮ್ಮ ತಮ್ಮ ಮನೆಯವರ ಕೂಡ ಯಾಕೋ
ಬನ ಜೊತೆಯಲ್ಲಿ ಬಂದರು. ಯಾಕೋಬನಿಂದ
ಹುಟ್ಟಿದವರೆಲ್ಲರು ಎಪ್ಪತ್ತು ಮಂದಿ. ಯೋಸೇಫನು
ಮೊದಲೇ ಐಗುಪ್ತದೇಶದಲ್ಲಿದ್ದನು.
ಬಳಿಕ ಯೋಸೇಫನೂ ಅವನ ಅಣ್ಣತಮ್ಮಂದಿರೂ
ಆ ಕಾಲದಲ್ಲಿದ್ದವರೆಲ್ಲರೂ ಗತಿಸಿಹೋದರು. ಆದರೆ
ಇಸ್ರಾಯೇಲ್ಯರು ಅಭಿವೃದ್ಧಿಯಾಗಿ ಅತ್ಯಧಿಕವಾಗಿ
ಹೆಚ್ಚಿ ಬಹಳ ಬಲಗೊಂಡರು; ಆ ದೇಶದಲ್ಲೆಲ್ಲಾ
ತುಂಬಿಕೊಂಡರು.
ತರುವಾಯ ಯೋಸೇಫನನ್ನು ಅರಿಯದ ಬೇರೊಬ್ಬ
ಅರಸನು ಐಗುಪ್ತದೇಶದ ಆಳಿಕೆಗೆ ಬಂದನು. ಅವನು
ತನ್ನ ಜನರಿಗೆ—ಇಸ್ರಾಯೇಲ್ಯರು ನಮ್ಮ ಅಧೀನದಲ್ಲಿ
ರದಷ್ಟು ಬಹಳವಾಗಿಯೂ ಬಲವಾಗಿಯೂ ಇದ್ದಾರೆ
ನೋಡಿರಿ. ನಮಗೆ ಯುದ್ಧವೇನಾದರೂ ಸಂಭವಿಸಿ
ದರೆ ಅವರು ನಮ್ಮ ಶತ್ರುಗಳೊಂದಿಗೆ ಕೂಡಿಕೊಂಡು
ನಮಗೆ ವಿರೋಧವಾಗಿ ಕಾದಾಡಿ ದೇಶವನ್ನು ಬಿಟ್ಟು
ಹೋದಾರು. ಅವರು ವೃದ್ಧಿಯಾಗದಂತೆ ನಾವು
ಉಪಾಯಮಾಡೋಣ ಎಂದು ಹೇಳಿದನು. ಆದ
ಕಾರಣ ಅವನ ಜನರು ಇಸ್ರಾಯೇಲ್ಯರನ್ನು ಬಿಟ್ಟೀ
ಕೆಲಸದಿಂದ ಉಪದ್ರವಪಡಿಸುವದಕ್ಕಾಗಿ ಬಿಟ್ಟೀಮಾಡಿ
ಸುವ ಅಧಿಕಾರಿಗಳನ್ನು ಅವರ ಮೇಲೆ ಇಟ್ಟು ಫರೋ
ಹನಿಗೆ ಪಿತೋಮ್ ರಾಮ್ಸೇಸ್ ಎಂಬ ಉಗ್ರಾಣ
ಪಟ್ಟಣಗಳನ್ನು ಕಟ್ಟಿಸಿದರು. ಐಗುಪ್ತ್ಯರು ಅವ
ರನ್ನು ಎಷ್ಟು ಉಪದ್ರವಪಡಿಸಿದರೂ ಅವರು ಅತ್ಯಧಿಕ
ವಾಗಿ ಹೆಚ್ಚಿ ಹರಡಿಕೊಂಡದ್ದರಿಂದ ಐಗುಪ್ತ್ಯರು ಇಸ್ರಾ
ಯೇಲ್ಯರ ವಿಷಯದಲ್ಲಿ ಸಹಿಸಲಾರದಷ್ಟು ಹೆದರಿಕೆ
ಯುಳ್ಳವರಾದರು. ಐಗುಪ್ತ್ಯರು ಇಸ್ರಾಯೇಲ್ಯರ 13
ಕೈಯಿಂದ ಕ್ರೂರವಾಗಿ ಸೇವೆಮಾಡಿಸಿಕೊಂಡು ಮಣ್ಣಿನ 14
ಕೆಲಸದಲ್ಲಿಯೂ ಇಟ್ಟಿಗೆಮಾಡುವ ಕೆಲಸದಲ್ಲಿಯೂ
ವ್ಯವಸಾಯದ ಎಲ್ಲಾ ವಿಧವಾದ ಕೆಲಸಗಳಲ್ಲಿಯೂ
ಕಠಿಣವಾಗಿ ದುಡಿಸಿಕೊಂಡು ಅವರ ಜೀವಗಳನ್ನು
ಬೇಸರಪಡಿಸಿದರು. ಅವರು ಅವರಿಂದ ಮಾಡಿಸಿದ
ಎಲ್ಲಾ ಸೇವೆಯೂ ಬಹುಕಠೋರವಾಗಿತ್ತು.
ಇದಲ್ಲದೆ ಐಗುಪ್ತದೇಶದ ಅರಸನು ಶಿಪ್ರಾ ಪೂಗಾ 15
ಎಂಬ ಇಬ್ರಿಯ ಸೂಲಗಿತ್ತಿಯರ ಸಂಗಡ ಮಾತಾಡಿ
ಅವರಿಗೆ—ನೀವು ಇಬ್ರಿಯ ಹೆಂಗಸರಿಗೆ ಹೆರಿಗೆ ಮಾಡಿ 16
ಸುವಾಗ ಅವರು ಹೆರುವದು ಗಂಡುಮಗುವಾಗಿದ್ದರೆ
ಕೊಲ್ಲಬೇಕು, ಹೆಣ್ಣಾಗಿದ್ದರೆ ಉಳಿಸಬೇಕು ಎಂದು
ಹೇಳಿದನು. ಆದರೆ ಸೂಲಗಿತ್ತಿಯರು ದೇವರಿಗೆ 17
ಭಯಪಡುವವರಾದದರಿಂದ ಐಗುಪ್ತ್ಯರ ಅರಸನ
ಮಾತಿನಂತೆ ಮಾಡದೆ ಗಂಡುಮಕ್ಕಳನ್ನೂ ಉಳಿಸಿ
ದರು. ಆಗ ಐಗುಪ್ತ್ಯರ ಅರಸನು ಅವರನ್ನು 18
ಕರಸಿ—ನೀವು ಅವರ ಗಂಡುಮಕ್ಕಳನ್ನು ಉಳಿಸಿ
ದ್ದೇನು? ಹೀಗೆ ಯಾಕೆ ಮಾಡಿದಿರಿ ಎಂದು ಕೇಳಲು
ಸೂಲಗಿತ್ತಿಯರು ಫರೋಹನಿಗೆ—ಇಬ್ರಿಯರ ಸ್ತ್ರೀ 19
ಯರು ಐಗುಪ್ತ ಸ್ತ್ರೀಯರಂತಲ್ಲ; ಅವರು ಚುರುಕಾ
ಗಿದ್ದಾರೆ; ಅವರು ಸೂಲಗಿತ್ತಿಯು ತಮ್ಮ ಹತ್ತಿರ
ಬರುವದಕ್ಕೆ ಮುಂಚೆಯೇ ಹೆರುವರು ಎಂದು ಹೇಳಿ
ದರು. ದೇವರು ಆ ಸೂಲಗಿತ್ತಿಯರಿಗೆ ಹಿತವನ್ನು 20
ಮಾಡಿದನು. ಅವರು ದೇವರಿಗೆ ಭಯಪಟ್ಟದ್ದರಿಂದ 21
ಆತನು ಅವರಿಗೆ ವಂಶಾಭಿವೃದ್ಧಿಯನ್ನುಂಟುಮಾಡಿ
ದನು. ಇದಲ್ಲದೆ ಇಸ್ರಾಯೇಲ್ಯರು ಹೆಚ್ಚಿ ಬಲ
ಗೊಂಡರು.
ತರುವಾಯ ಫರೋಹನು ತನ್ನ ಜನರಿಗೆಲ್ಲಾ— 22
[ಇಬ್ರಿಯರ] ಗಂಡುಕೂಸುಗಳನ್ನೆಲ್ಲಾ ನೈಲ್ ನದಿ

ಯಲ್ಲಿ ಹಾಕಬೇಕು; ಹೆಣ್ಣುಕೂಸುಗಳನ್ನೆಲ್ಲಾ ಉಳಿಸಬೇಕು ಎಂದು ಆಜ್ಞೆಮಾಡಿದನು.

### ಮೋಶೆಯ ಜನನವೂ ಬಾಲ್ಯವೂ.

2 ಹೀಗಿರುವಲ್ಲಿ ಲೇವಿಯ ವಂಶಸ್ಥನಾದ ಒಬ್ಬ ಮನು
ಷ್ಯನು ಲೇವಿಯ ಕುಲದ ಕನ್ನಿಕೆಯನ್ನು ಮದುವೆ
2 ಮಾಡಿಕೊಂಡನು. ಆಕೆ ಗರ್ಭಿಣಿಯಾಗಿ ಗಂಡು
ಮಗುವನ್ನು ಹೆತ್ತು ಅದು ಚೆಲುವಾದ ಕೂಸೆಂದು
3 ತಿಳಿದು ಮೂರು ತಿಂಗಳು ಬಚ್ಚಿಟ್ಟಳು. ಆಕೆ ಅದನ್ನು
ಇನ್ನು ಹೆಚ್ಚುಕಾಲ ಮರೆಮಾಡಲಾರದೆ ಆಪಿನ ಪೆಟ್ಟಿ
ಗೆಯನ್ನು ತೆಗೆದುಕೊಂಡು ಜೇಡಿಮಣ್ಣನ್ನೂ ರಾಳ
ವನ್ನೂ ಹಚ್ಚಿ ಕೂಸನ್ನು ಅದರಲ್ಲಿ ಮಲಗಿಸಿ ನೈಲ್
ನದಿಯ ಅಂಚಿನಲ್ಲಿರುವ ಜಂಬುಹುಲ್ಲಿನಲ್ಲಿಟ್ಟಳು.
4 ಕೂಸಿಗೆ ಏನಾಗುವದೆಂದು ತಿಳುಕೊಳ್ಳುವದಕ್ಕೆ
ಅದರ ಅಕ್ಕನು ಸ್ವಲ್ಪದೂರದಲ್ಲಿ ನಿಂತುಕೊಂಡಳು.
5 ಅಷ್ಟರಲ್ಲಿ ಫರೋಹನ ಕುಮಾರ್ತೆಯು ಸ್ನಾನ
ಕ್ಕಾಗಿ ಆ ನದಿಯ ಬಳಿಗೆ ಇಳಿದು ಬಂದಳು;
ಆಕೆಯ ಗೆಣತಿಯರು ನದಿಯ ದಡದಲ್ಲಿ ತಿರುಗಾಡು
ತ್ತಿದ್ದರು. ಆಕೆ ಜಂಬುಹುಲ್ಲಿನಲ್ಲಿ ಪೆಟ್ಟಿಗೆಯನ್ನು
6 ಕಂಡು ದಾಸಿಯನ್ನು ಕಳುಹಿಸಿ ತರಿಸಿದಳು. ಅದನ್ನು
ತೆರೆದು ನೋಡುವಾಗ ಅಹಾ, ಅಳುವ ಕೂಸು.
ಆಕೆ ಅದರ ಮೇಲೆ ಕನಿಕರಪಟ್ಟು—ಇದು ಇಬ್ರಿ
ಯರ ಮಕ್ಕಳಲ್ಲಿ ಒಂದಾಗಿರಬಹುದೆಂದು ಹೇಳಿದಳು.
7 ಆಗಲೇ ಅದರ ಅಕ್ಕ ಬಂದು ಫರೋಹನ ಕುಮಾರ್ತೆ
ಗೆ—ನಿನಗೋಸ್ಕರ ಈ ಕೂಸನ್ನು ಮೊಲೆಕೊಟ್ಟು
ಸಾಕುವದಕ್ಕೆ ಇಬ್ರಿಯ ಸ್ತ್ರೀಯರಲ್ಲಿ ಒಬ್ಬ ದಾದಿ
ಯನ್ನು ನಾನು ಕರೆದುಕೊಂಡು ಬರಲೋ ಎಂದು
8 ಕೇಳಲು ಫರೋಹನ ಕುಮಾರ್ತೆ—ಹಾಗೇ ಮಾಡು
ಅಂದಳು. ಆ ಹುಡುಗಿ ಹೋಗಿ ಕೂಸಿನ ತಾಯಿ
9 ಯನ್ನೇ ಕರತಂದಳು. ಫರೋಹನ ಕುಮಾರ್ತೆ
ಅವಳಿಗೆ—ನೀನು ಈ ಮಗುವನ್ನು ತೆಗೆದುಕೊಂಡು
ಹೋಗಿ ನನಗೋಸ್ಕರ ಸಾಕಮ್ಮಾ; ನಾನೇ ನಿನಗೆ
ಸಂಬಳವನ್ನು ಕೊಡುವೆನು ಎಂದು ಹೇಳಲಾಗಿ ಆ
ಸ್ತ್ರೀಯು ಕೂಸನ್ನು ತೆಗೆದುಕೊಂಡು ಸಾಕಿದಳು.
10 ಆ ಹುಡುಗನು ಬೆಳೆದಾಗ ಅವನನ್ನು ಫರೋಹನ
ಕುಮಾರ್ತೆಯ ಬಳಿಗೆ ತೆಗೆದುಕೊಂಡು ಬಂದಳು;
ಅವನು ಆಕೆಗೆ ಮಗನಾದನು. ಇವನನ್ನು ನೀರಿ
ನೊಳಗಿಂದ ಎಳೆದಿದ್ದೇನೆಂದು ಹೇಳಿ ಆಕೆ ಅವನಿಗೆ
1)ಮೋಶೆ ಎಂದು ಹೆಸರಿಟ್ಟಳು.

### ಮೋಶೆಯು ಮಿದ್ಯಾನ್‌ದೇಶಕ್ಕೆ ಓಡಿಹೋದದ್ದು.

11 ಮೋಶೆ ದೊಡ್ಡವನಾದ ಮೇಲೆ ಸ್ವಜನರ ಬಳಿಗೆ
ಹೋಗಿ ಇವರ ಬಿಟ್ಟೀಕೆಲಸಗಳನ್ನು ನೋಡುತ್ತಿ
ದ್ದನು. ಒಂದು ದಿವಸ ಅವನು ತನ್ನ ಜನರಾದ
ಇಬ್ರಿಯರೊಳಗೆ ಒಬ್ಬನನ್ನು ಐಗುಪ್ತ್ಯನೊಬ್ಬನು
12 ಹೊಡೆಯುವದನ್ನು ಕಂಡು ಮೋಶೆ ಅತ್ತಿತ್ತ ನೋಡಿ

ಯಾರೂ ಇಲ್ಲವೆಂದು ತಿಳಿದು ಆ ಐಗುಪ್ತ್ಯನನ್ನು
ಹೊಡೆದುಹಾಕಿ ಅವನ ಶವವನ್ನು ಮರಳಿನಲ್ಲಿ ಮುಚ್ಚಿ
ಟ್ಟನು. ಮರುದಿವಸ ಅವನು ಹೊರಟುಹೋ
ನೋಡಿದಾಗ ಇಬ್ಬರು ಇಬ್ರಿಯರೇ ಜಗಳವಾಡು
ತ್ತಿದ್ದರು. ಅನ್ಯಾಯಮಾಡುತ್ತಿದ್ದವನಿಗೆ ಅವನು—ಏ
ಯ್ಯಾ, ನೀನು ಯಾಕೆ ಸ್ವಕುಲದವನನ್ನು ಹೊ
ಯುತ್ತೀ ಎಂದು ಕೇಳಿದಾಗ ಆ ಮನುಷ್ಯನು—
ನಿನ್ನನ್ನು ನಮ್ಮ ಮೇಲೆ ಅಧಿಕಾರಿಯನ್ನಾಗಿಯೂ ನ್ಯಾ
ಯಾಧಿಪತಿಯನ್ನಾಗಿಯೂ ಇಟ್ಟವರು ಯಾರು? ಆ
ಐಗುಪ್ತ್ಯನನ್ನು ಕೊಂದುಹಾಕಿದಂತೆ ನನ್ನನ್ನೂ
ಕೊಂದುಹಾಕಬೇಕೆಂದಿದ್ದೀಯೋ ಅಂದನು.
ಮಾತನ್ನು ಕೇಳಿ ಮೋಶೆ—ಈ ಕಾರ್ಯವು ಬೈಲಿ
ಬಂತಲ್ಲಾ ಅಂದುಕೊಂಡು ಅಂಜಿದನು. ನಡೆ
ಸಂಗತಿಯು ಫರೋಹನಿಗೆ ತಿಳಿದುಬಂದಾಗ ಅವನ
ಮೋಶೆಯನ್ನು ಕೊಲ್ಲಿಸಬೇಕೆಂದು ಆಲೋಚಿಸಿದ್ದ
ರಿಂದ ಮೋಶೆ ಫರೋಹನ ಬಳಿಯಿಂದ ಓಡಿಹೋ
ಮಿದ್ಯಾನ್ ದೇಶವನ್ನು ಸೇರಿದನು.
ಅಲ್ಲಿ ಒಂದು ಬಾವಿಯ ಹತ್ತಿರ ಕೂತುಕೊಂ
ರಲು ಮಿದ್ಯಾನ್ಯರ ಆಚಾರ್ಯನ ಏಳು ಮಂ
ಹೆಣ್ಣುಮಕ್ಕಳು ಬಂದು ತಂದೆಯ ಕುರಿಗಳಿಗೆ ಕು
ಸುವದಕ್ಕೋಸ್ಕರ ನೀರು ಸೇದಿ ದೋಣಿಗಳಲ್ಲಿ ಹಾಕ
ತ್ತಿದ್ದರು. ಕುರುಬರು ಬಂದು ಅವರನ್ನು ಬಾವಿಯ
ಬಳಿಯಿಂದ ಓಡಿಸಲು ಮೋಶೆ ಅವರಿಗೆ ಸಹಾಯ
ವಾಗಿ ಬಂದು ಅವರ ಕುರಿಗಳಿಗೆ ಕುಡಿಸಿದನು
ತರುವಾಯ ಅವರು ತಮ್ಮ ತಂದೆಯಾದ ರೆಗು
ವೇಲನ ಬಳಿಗೆ ಬಂದಾಗ ಅವನು—ನೀವು
ಹೊತ್ತು ಬೇಗ ಬಂದಿರಿ, ಇದು ಹೇಗೆ ಎಂದು ಕೇ
ಲಾಗಿ ಅವರು—ಐಗುಪ್ತ್ಯನಾದ ಒಬ್ಬ ಮನುಷ್ಯನ
ನಮ್ಮನ್ನು ಕುರುಬರ ಕೈಗೆ ತಪ್ಪಿಸಿದನು; ಇಷ್ಟು
ಮಾತ್ರವಲ್ಲದೆ ಅವನು ನಮಗೋಸ್ಕರ ನೀರು ಸೇ
ಕುರಿಗಳಿಗೆ ಕುಡಿಸಿದನು ಅಂದರು. ಅವರ ತಂ
ಅವರಿಗೆ—ಆ ಮನುಷ್ಯನೆಲ್ಲಿ? ಅವನನ್ನು ಯಾ
ಬಿಟ್ಟು ಬಂದಿರಿ? ಊಟಮಾಡುವದಕ್ಕೆ ಕರೆಯಿ
ಎಂದು ಹೇಳಿದನು.
ಮೋಶೆಯು ಆ ಮನುಷ್ಯನ ಸಂಗಡ ವಾಸಮಾಡು
ವದಕ್ಕೆ ಒಪ್ಪಿಕೊಂಡನು. ಅವನು ತನ್ನ ಮಗಳಾ
ಚಿಪ್ಪೋರಳನ್ನು ಮೋಶೆಗೆ ಕೊಟ್ಟನು. ಆಕೆ ಗಂಡ
ಮಗುವನ್ನು ಹೆರಲು, ಮೋಶೆ—ನಾನು ಅನ್ಯದೇ
ದಲ್ಲಿ ಪ್ರವಾಸಿಯಾಗಿದ್ದೇನೆ ಎಂದು ಹೇಳಿ ಅದಕ
2)ಗೇರ್ಷೋಮ್ ಎಂದು ಹೆಸರಿಟ್ಟನು.

### ದೇವರು ಇಸ್ರಾಯೇಲ್ಯರನ್ನು ಬಿಡಿಸುವದಕ್ಕೆ ಮೋಶೆಯನ್ನು ನೇಮಿಸಿದ್ದು.

ಈ ಮೇರೆಗೆ ಬಹಳ ದಿನಗಳು ಕಳೆದ ಮೇಲೆ ಐಗುಪ್ತ
ದೇಶದ ಅರಸನು ಸತ್ತನು. ಇಸ್ರಾಯೇಲ್ಯರು ತಾಕ
ಮಾಡಬೇಕಾದ ಬಿಟ್ಟೀಕೆಲಸಕ್ಕಾಗಿ ಸಿಟ್ಟುಸುರ
ಬಿಟ್ಟು ಗೋಳಾಡುತ್ತಾ ಇದ್ದರು. ಆ ಗೋಳು ದೇವ

1) ಮೂಲಧಾತುವಿಗೆ ಎಳೆಯುವದು ಎಂಬ ಅರ್ಥವಿದೆ.

2) ಮೂಲಭಾಷೆಯಲ್ಲಿ ಪ್ರವಾಸಿ ಎಂಬದಕ್ಕೆ ಗೇರ್.

24 ರಿಗೆ ಮುಟ್ಟಿತು. ದೇವರು ಅವರ ನರಳಾಟವನ್ನು
ಕೇಳಿ ತಾನು ಅಬ್ರಹಾಮ ಇಸಾಕ ಯಾಕೋಬರಿಗೆ
ಮಾಡಿದ ವಾಗ್ದಾನವನ್ನು ನೆನಪಿಗೆ ತಂದುಕೊಂಡು
25 ಇಸ್ರಾಯೇಲ್ಯರನ್ನು ನೋಡಿ ಅವರಲ್ಲಿ ಲಕ್ಷ್ಯವಿಟ್ಟನು.
3 ಮೋಶೆ ತನ್ನ ಮಾವನಾಗಿರುವ ಮಿದ್ಯಾನ್ಯರ ಆಚಾ
ರ್ಯನಾದ ಇತ್ರೋನನ ಮಂದೆಯನ್ನು ಮೇಯಿಸು
ತ್ತಿರುವಾಗ ಆ ಮಂದೆಯನ್ನು ಕಾಡಿನ 1)ಹಿಂಭಾಗಕ್ಕೆ
ನಡಿಸಿಕೊಂಡು ಹೋರೇಬ್ ಎಂಬ ದೇವರ ಬೆಟ್ಟಕ್ಕೆ
2 ಬಂದನು. ಅಲ್ಲಿ ಮುಳ್ಳಿನ ಪೊದೆಯೊಳಗೆ ಉರಿಯುವ
ಬೆಂಕಿಯಲ್ಲಿ ಯೆಹೋವನ ದೂತನು ಅವನಿಗೆ
ಕಾಣಿಸಿಕೊಂಡನು. ಹೇಗಂದರೆ ಅವನು ಒಂದು
ಮುಳ್ಳಿನ ಪೊದೆಯನ್ನು ಕಂಡನು. ಆ ಪೊದೆಯು ಬೆಂಕಿ
ಯಿಂದ ಉರಿಯುತ್ತಿದ್ದರೂ ಅದು ಸುಟ್ಟುಹೋಗದೆ
3 ಇತ್ತು. ಆಗ ಮೋಶೆ— ನಾನು ದಾರಿಬಿಟ್ಟು ಈ
ಆಶ್ಚರ್ಯವನ್ನು ನೋಡಿ ಪೊದೆಯು ಸುಟ್ಟುಹೋಗದೆ
ಇರುವದಕ್ಕೆ ಕಾರಣವನ್ನು ತಿಳುಕೊಳ್ಳುವೆನು ಅಂದು
4 ಕೊಂಡನು. ನೋಡುವದಕ್ಕೆ ಅವನು ದಾರಿಬಿಟ್ಟ
ದ್ದನ್ನು ಯೆಹೋವನು ಕಂಡನು. ದೇವರು ಆ ಪೊದೆ
ಯೊಳಗಿಂದ— ಮೋಶೆಯೇ, ಮೋಶೆಯೇ ಎಂದು ಕರೆ
ದನು. ಅದಕ್ಕವನು — ಇಗೋ, ಇದ್ದೇನೆ ಅಂದನು.
5 ದೇವರು ಅವನಿಗೆ— ನೀನು ಹತ್ತಿರ ಬರಬೇಡ; ನಿನ್ನ
ಕಾಲಿನ ಕೆರಗಳನ್ನು ತೆಗೆದುಹಾಕು; ನೀನು ನಿಂತಿ
ರುವ ಸ್ಥಳವು ಪರಿಶುದ್ಧಭೂಮಿ ಎಂದು ಹೇಳಿದನು.
6 ಅದಲ್ಲದೆ ಆತನು— ನಾನು ನಿನ್ನ ತಂದೆಯ ದೇವರು,
ಅಬ್ರಹಾಮನ ದೇವರು, ಇಸಾಕನ ದೇವರು, ಯಾಕೋ
ಬನ ದೇವರು ಅಂದಾಗ ಮೋಶೆ ದೇವರನ್ನು ನೋಡು
ವದಕ್ಕೆ ಭಯಪಟ್ಟು ಮುಖವನ್ನು ಮುಚ್ಚಿಕೊಂಡನು.
7 ಆಗ ಯೆಹೋವನು ಐಗುಪ್ತದೇಶದಲ್ಲಿರುವ ನನ್ನ
ಜನರ ದುರವಸ್ಥೆಯನ್ನು ನೋಡೇ ನೋಡಿದ್ದೇನೆ.
ಬಿಟ್ಟೀಮಾಡಿಸುವವರ ವಿಷಯದಲ್ಲಿ ಅವರು ಇಟ್ಟ
ಮೊರೆಯು ನನಗೆ ಕೇಳಿಸಿತು; ಅವರ ದುಃಖವನ್ನೆಲ್ಲಾ
8 ನಾನು ಬಲ್ಲೆನು. ಆದಕಾರಣ ಅವರನ್ನು ಐಗುಪ್ತ್ಯರ
ಕೈಯೊಳಗಿಂದ ತಪ್ಪಿಸುವದಕ್ಕೂ ಆ ದೇಶದಿಂದ ಬಿಡಿಸಿ
ಹಾಲೂ ಜೇನೂ ಹರಿಯುವ ವಿಸ್ತಾರವಾದ ಒಳ್ಳೇ
ದೇಶಕ್ಕೆ ಅಂದರೆ ಕಾನಾನ್ಯರೂ ಹಿತ್ತಿಯರೂ ಅಮೋ
ರಿಯರೂ ಪೆರಿಜೀಯರೂ ಹಿವ್ವಿಯರೂ ಯೆಬೂಸಿ
ಯರೂ ವಾಸವಾಗಿರುವ ದೇಶಕ್ಕೆ ನಡಿಸಿಕೊಂಡು
9 ಹೋಗುವದಕ್ಕೂ ಇಳಿದುಬಂದಿದ್ದೇನೆ. ಈಗ ಕೇಳು,
ಇಸ್ರಾಯೇಲ್ಯರ ಕೂಗು ನನಗೆ ಮುಟ್ಟಿತು; ಐಗು
ಪ್ತ್ಯರು ಅವರಿಗೆ ಕೊಡುವ ಉಪದ್ರವವನ್ನು ನಾನು
10 ನೋಡಿದ್ದೇನೆ. ಆದದರಿಂದ ನನ್ನ ಜನರಾಗಿರುವ
ಇಸ್ರಾಯೇಲ್ಯರನ್ನು ಐಗುಪ್ತದೇಶದಿಂದ ಹೊರಗೆ
ಬರಮಾಡುವದಕ್ಕೆ ನಿನ್ನನ್ನು ಫರೋಹನ ಬಳಿಗೆ
ಕಳುಹಿಸುತ್ತೇನೆ ಬಾ ಅಂದನು.
11 ಮೋಶೆ ದೇವರಿಗೆ— ಫರೋಹನ ಸನ್ನಿಧಾನಕ್ಕೆ
ಹೋಗುವದಕ್ಕೂ ಇಸ್ರಾಯೇಲ್ಯರನ್ನು ಐಗುಪ್ತದೇಶ
ದಿಂದ ಕರೆದುಕೊಂಡುಬರುವದಕ್ಕೂ ನಾನು ಎಷ್ಟ
ರವನು ಎಂದು ಹೇಳಿದನು. ಅದಕ್ಕೆ ದೇವರು— 12
ನಾನೇ ನಿನ್ನ ಸಂಗಡ ಇರುವೆನು; ಮತ್ತು ನೀನು
ನನ್ನ ಜನರನ್ನು ಐಗುಪ್ತದೇಶದಿಂದ ಹೊರಗೆ ತಂದಾಗ
ನೀವು ಈ ಬೆಟ್ಟದಲ್ಲೇ ದೇವರನ್ನು ಆರಾಧಿಸುವಿರಿ;
ನಿನ್ನನ್ನು ಕಳುಹಿಸಿದವನು ನಾನೇ ಎಂಬದಕ್ಕೆ ಇದೇ
ನಿನಗೆ ಗುರುತಾಗಿರುವದು ಅಂದನು.
ಮೋಶೆ ದೇವರಿಗೆ— ನಾನು ಇಸ್ರಾಯೇಲ್ಯರ ಬಳಿಗೆ 13
ಬಂದು ನಿಮ್ಮ ಪಿತೃಗಳ ದೇವರು ನನ್ನನ್ನು ನಿಮ್ಮ
ಬಳಿಗೆ ಕಳುಹಿಸಿದ್ದಾನೆಂದು ಹೇಳಿದಾಗ ಒಂದು ವೇಳೆ
ಅವರು— ಆತನ ಹೆಸರೇನೆಂದು ನನ್ನನ್ನು ಕೇಳಿದರೆ
ನಾನೇನು ಉತ್ತರಕೊಡಬೇಕು ಎನ್ನಲು ದೇವರು 14
ಅವನಿಗೆ— 2)ಇರುವಾತನೇ ಆಗಿದ್ದೇನೆ. ನೀನು ಇಸ್ರಾ
ಯೇಲ್ಯರಿಗೆ— 3)ಇರುವಾತನೆಂಬವನು ನನ್ನನ್ನು ನಿಮ್ಮ
ಬಳಿಗೆ ಕಳುಹಿಸಿದನು ಎಂದು ಹೇಳಬೇಕು.
ದೇವರು ಮೋಶೆಗೆ ಮತ್ತೂ ಹೇಳಿದ್ದೇನಂದರೆ— 15
ನೀನು ಇಸ್ರಾಯೇಲ್ಯರಿಗೆ ನಿಮ್ಮ ಪಿತೃಗಳಾದ ಅಬ್ರ
ಹಾಮ ಇಸಾಕ ಯಾಕೋಬರ ದೇವರಾಗಿರುವ ಯೆ
ಹೋವನು ನನ್ನನ್ನು ನಿಮ್ಮ ಬಳಿಗೆ ಕಳುಹಿಸಿದ್ದಾನೆ
ಎಂದು ಹೇಳಬೇಕು. ಇದು ಸದಾಕಾಲಕ್ಕೂ ನನ್ನ
ಹೆಸರು; ಇದು ತಲತಲಾಂತರಕ್ಕೂ ನನ್ನನ್ನು ಸ್ಮರಿಸ
ಬೇಕಾದ ನಾಮ. ನೀನು ಹೋಗಿ ಇಸ್ರಾಯೇಲ್ಯರ 16
ಹಿರಿಯರನ್ನು ಕೂಡಿಸಿ ಅವರಿಗೆ— ನಿಮ್ಮ ಪಿತೃಗಳ
ದೇವರು ಅಂದರೆ ಅಬ್ರಹಾಮ ಇಸಾಕ ಯಾಕೋಬರ
ದೇವರು ಆಗಿರುವ ಯೆಹೋವನು ನನಗೆ ದರ್ಶನ
ಕೊಟ್ಟು ನಿಮ್ಮ ವಿಷಯದಲ್ಲಿ — ನಾನು ನಿಮ್ಮಲ್ಲಿ
ಲಕ್ಷ್ಯವಿಟ್ಟು ಐಗುಪ್ತದೇಶದಲ್ಲಿ ನಿಮಗೆ ಸಂಭವಿಸಿದ್ದ
ನ್ನೆಲ್ಲಾ ತಿಳುಕೊಂಡಿದ್ದೇನೆ; ಐಗುಪ್ತದೇಶದಲ್ಲಿ ನಿಮ 17
ಗುಂಟಾಗಿರುವ ದುರವಸ್ಥೆಯಿಂದ ನಿಮ್ಮನ್ನು ತಪ್ಪಿಸಿ
ಹಾಲೂ ಜೇನೂ ಹರಿಯುವ ದೇಶಕ್ಕೆ ಅಂದರೆ ಕಾನಾ
ನ್ಯರೂ ಹಿತ್ತಿಯರೂ ಅಮೋರಿಯರೂ ಪೆರಿಜೀಯರೂ
ಹಿವ್ವಿಯರೂ ಯೆಬೂಸಿಯರೂ ವಾಸವಾಗಿರುವ
ದೇಶಕ್ಕೆ ಬರಮಾಡುವೆನೆಂದು ನಿರ್ಣಯಿಸಿದ್ದೇನೆ
ಎಂಬದಾಗಿ ನನಗೆ ಹೇಳಿದನೆಂದು ತಿಳಿಸು. ಅವರು 18
ನಿನ್ನ ಮಾತಿಗೆ ಕಿವಿಗೊಡುವರು. ನೀನೂ ಇಸ್ರಾ
ಯೇಲ್ಯರ ಹಿರಿಯರೂ ಐಗುಪ್ತದೇಶದ ಅರಸನ
ಬಳಿಗೆ ಹೋಗಿ ಅವನಿಗೆ— ಇಬ್ರಿಯರ ದೇವರಾಗಿರುವ
ಯೆಹೋವನು ನಮಗೆ ಪ್ರತ್ಯಕ್ಷನಾದನು; ಆದದ
ರಿಂದ ನಾವು ಅರಣ್ಯದಲ್ಲಿ ಮೂರು ದಿನದ ಪ್ರಯಾ
ಣದಷ್ಟು ದೂರ ಹೋಗಿ ನಮ್ಮ ದೇವರಾದ
ಯೆಹೋವನಿಗೋಸ್ಕರ ಯಜ್ಞಮಾಡಬೇಕಾಗಿದೆ, ಅ
ಪ್ಪಣೆಯಾಗಬೇಕೆಂದು ಕೇಳಿಕೊಳ್ಳಿರಿ. ಐಗುಪ್ತದ 19
ಅರಸನೋ, ಎಷ್ಟು ಬಲಾತ್ಕಾರಮಾಡಿದರೂ ನಿಮ್ಮ
ನ್ನು ಬಿಡುವದಿಲ್ಲವೆಂದು ತಿಳಿದಿದ್ದೇನೆ. ಆದಕಾರಣ 20
ನಾನು ಕೈಚಾಚಿ ಐಗುಪ್ತದೇಶದ ಮಧ್ಯದಲ್ಲಿ ಮಹ
ತ್ಕಾರ್ಯಗಳನ್ನು ಮಾಡಿ ಅದನ್ನು ನಾನಾ ವಿಧವಾಗಿ
ಬಾಧಿಸುವೆನು; ಆ ಮೇಲೆ ಅರಸನು ನಿಮ್ಮನ್ನು
ಬಿಡುವನು. ಅದಲ್ಲದೆ ಈ ನನ್ನ ಜನರಿಗೆ ಐಗುಪ್ತ್ಯರ 21

1) ಅಥವಾ, ಪಶ್ಚಿಮಭಾಗಕ್ಕೆ. 2) ಅಥವಾ: ಎಂಥವನಾಗಿರುವೆನೋ ಅಂಥವನಾಗಿರುವೆನು. 3) ಅಥವಾ: ಅಂಥವನಾಗಿರುವೆನು ಎಂಬಾತನು.

ದಯೆ ದೊರಕುವಂತೆ ಮಾಡುವೆನು; ಆದದರಿಂದ
ನೀವು ಹೊರಡುವಾಗ ಬರಿಗೈಲಿ ಹೋಗುವದಿಲ್ಲ.
22 ನಿಮ್ಮಲ್ಲಿ ಪ್ರತಿಸ್ತ್ರೀಯು ನೆರೇ ಹೆಂಗಸರಿಂದಲೂ ನಿಮ್ಮ
ಮನೆಯಲ್ಲಿ ಇಳುಕೊಂಡ ಹೆಂಗಸರಿಂದಲೂ ಬೆಳ್ಳಿ
ಬಂಗಾರದ ಒಡವೆಗಳನ್ನೂ ಬಟ್ಟೆಗಳನ್ನೂ ಕೇಳಿಕೊ
ಳ್ಳಲಿ. ನೀವು ಅವುಗಳನ್ನು ನಿಮ್ಮ ಗಂಡು ಹೆಣ್ಣು
ಮಕ್ಕಳಿಗೆ ಇಡಿರಿ; ಇದರಿಂದ ಐಗುಪ್ತ್ಯರನ್ನು ಸೂರೆ
ಮಾಡುವಿರಿ ಅಂದನು.

4 ಅದಕ್ಕೆ ಮೋಶೆ—ಚಿತ್ತೈಸು; ಅವರು ನನ್ನನ್ನು
ನಂಬದೆ ನನ್ನ ಮಾತಿಗೆ ಕಿವಿಗೊಡದೆ ಹೋದಾರು;
ಯೆಹೋವನು ನಿನಗೆ ಕಾಣಿಸಿಕೊಂಡೇ ಇಲ್ಲವೆಂದು
2 ಹೇಳಾರು ಎನ್ನಲು, ಯೆಹೋವನು ಅವನನ್ನು—
ಅದೇನು ನಿನ್ನ ಕೈಯಲ್ಲಿರುವದು ಎಂದು ಕೇಳಿದನು.
3 ಅವನು—ಇದು ಕೋಲು ಅಂದನು. ಯೆಹೋವನು
ಅವನಿಗೆ—ಅದನ್ನು ನೆಲದಲ್ಲಿ ಬೀಸಾಡು ಎಂದು
ಹೇಳಿದನು. ನೆಲದಲ್ಲಿ ಬೀಸಾಡುತ್ತಲೇ ಅದು ಹಾವಾ
ಯಿತು; ಮೋಶೆ ಅದಕ್ಕೆ ಭಯಪಟ್ಟು ಓಡಿಹೋದನು.
4 ಯೆಹೋವನು ಅವನಿಗೆ—ನಿನ್ನ ಕೈ ಚಾಚಿ ಅದರ
ಬಾಲವನ್ನು ಹಿಡಿ ಎಂದು ಹೇಳಿದನು. ಹಿಡಿದಾಗ
5 ಅದು ಕೋಲಾಯಿತು. ಆಗ ಯೆಹೋವನು ಅವ
ನಿಗೆ—ಇದರಿಂದ ಅವರು ತಮ್ಮ ಪಿತೃಗಳಾದ ಅಬ್ರ
ಹಾಮ ಇಸಾಕ ಯಾಕೋಬರ ದೇವರಾಗಿರುವ
ಯೆಹೋವನು ನಿನಗೆ ಕಾಣಿಸಿದ್ದು ನಿಜ ಎಂಬದನ್ನು
6 ನಂಬುವರು ಎಂದು ಹೇಳಿದನು. ಮತ್ತೆ ಯೆಹೋ
ವನು ಅವನಿಗೆ—ನಿನ್ನ ಕೈಯನ್ನು ಉಡಿಯಲ್ಲಿ ಇಟ್ಟು
ಕೋ ಎಂದು ಹೇಳಿದನು. ಅವನು ಉಡಿಯಲ್ಲಿ
ಇಟ್ಟುಕೊಂಡು ಹೊರಗೆ ತೆಗೆಯಲು ಅದು
7 ತೊನ್ನುಹತ್ತಿ ಹಿಮದಂತೆ ಬೆಳ್ಳಗಾಗಿತ್ತು. ಯೆಹೋ
ವನು ಅವನಿಗೆ—ನಿನ್ನ ಕೈಯನ್ನು ತಿರಿಗಿ ಉಡಿ
ಯಲ್ಲಿ ಸೇರಿಸು ಎಂದು ಹೇಳಿದನು. ಅವನು
ಅದನ್ನು ತಿರಿಗಿ ಉಡಿಯಲ್ಲಿ ಸೇರಿಸಿ ತೆಗೆದು ನೋಡಿ
8 ದಾಗ ಅದು ಉಳಿದ ಮೈಯಂತೆ ಆಗಿತ್ತು. ಆಗ
ಯೆಹೋವನು ಅವನಿಗೆ—ಅವರು ನಿನ್ನನ್ನು ನಂಬದೆ
ಮೊದಲನೆಯ ಮಹತ್ಕಾರ್ಯವನ್ನು ತಿರಸ್ಕರಿಸಿದರೂ
9 ಎರಡನೆಯದನ್ನು ಲಕ್ಷ್ಯವಿಟ್ಟು ನಂಬುವರು. ಈ ಎರಡು
ಮಹತ್ಕಾರ್ಯಗಳನ್ನೂ ಅವರು ಮನಸ್ಸಿಗೆ ತೆಗೆದು
ಕೊಳ್ಳದೆಯೂ ನಿನ್ನ ಮಾತನ್ನು ನಂಬದೆಯೂ ಹೋ
ದರೆ, ನೀನು ನೈಲ್ ನದಿಯಿಂದ ನೀರನ್ನು ತೆಗೆದು
ಕೊಂಡು ಒಣಗಿದ ನೆಲದಲ್ಲಿ ಸುರಿಯಬೇಕು; ಆಗ
ನೆಲದಲ್ಲಿ ಸುರಿದ ನೀರು ರಕ್ತವಾಗುವದು ಎಂದು
ಹೇಳಿದನು.
10 ಆದರೆ ಮೋಶೆ ಯೆಹೋವನಿಗೆ—ಸ್ವಾಮೀ, ನಾನು
ಮೊದಲಿನಿಂದಲೂ ನೀನು ದಾಸನ ಸಂಗಡ ಮಾತಾಡಿದ
ಮೇಲೆಯೂ ವಾಕ್ಚಾತುರ್ಯವಿಲ್ಲದವನು; ನನ್ನ
ಮಾತೂ ನಾಲಿಗೆಯೂ ಮಂದವಾಗಿವೆ ಎಂದು ಹೇಳ
11 ಲು ಯೆಹೋವನು ಅವನಿಗೆ—ಮನುಷ್ಯರಿಗೆ ಬಾಯಿ
ಕೊಟ್ಟವರಾರು? ಒಬ್ಬನು ಮೂಕನಾಗಿ ಮತ್ತೊ
ಬ್ಬನು ಕಿವಡನಾಗಿ ಒಬ್ಬನು ಕಣ್ಣುಳ್ಳವನಾಗಿ ಮತ್ತೊ
ಬ್ಬನು ಕಣ್ಣಿಲ್ಲದವನಾಗಿ ಇರಬೇಕೆಂದು ನೇಮಿಸಿ
ದವರಾರು? ಯೆಹೋವನಾಗಿರುವ ನಾನಲ್ಲವೇ.

ಹೀಗಿರುವದರಿಂದ ನೀನು ಹೊರಟುಹೋಗು; ನಾನ
ನಿನ್ನ ಬಾಯಿಗೆ ಸಹಾಯವಾಗಿದ್ದು ನೀನು ಮಾತಾ
ಬೇಕಾದದ್ದನ್ನು ಬೋಧಿಸುವೆನು ಎಂದು ಹೇಳಿದನು
ಅದಕ್ಕೆ ಮೋಶೆ—ಸ್ವಾಮೀ, ಈ ಕಾರ್ಯಕ್ಕೆ
ಬೇರೊಬ್ಬನನ್ನು ನೇಮಿಸಬೇಕು ಎನ್ನಲು ಯೆಹೋ
ವನು ಅವನ ಮೇಲೆ ಕೋಪಗೊಂಡು—ನಿನ್ನ ಅಣ್ಣ
ನಾಗಿರುವ ಲೇವಿಯನಾದ ಆರೋನನಿದ್ದಾನಲ್ಲಾ
ಅವನು ಚೆನ್ನಾಗಿ ಮಾತಾಡಬಲ್ಲವನೆಂದು ನನಗೆ ಗೊ
ತ್ತದೆ; ಅವನೇ ನಿನ್ನನ್ನು ಎದುರುಗೊಳ್ಳುವದಕ್ಕೆ ಬರು
ತ್ತಾನೆ; ನಿನ್ನನ್ನು ಕಂಡು ಸಂತೋಷಿಸುವನು. ನೀನು
ಅವನ ಸಂಗಡ ಮಾತಾಡಿ ಹೇಳಬೇಕಾದ ಮಾತು
ಗಳನ್ನು ಅವನಿಗೆ ತಿಳಿಸಬೇಕು. ನಿನ್ನ ಬಾಯಿಗೂ
ಅವನ ಬಾಯಿಗೂ ಸಹಾಯವಾಗಿದ್ದು ನೀವು ಮಾ
ಬೇಕಾದದ್ದನ್ನು ಬೋಧಿಸುವೆನು. ಅವನೇ ನಿನ
ಗೋಸ್ಕರ ಜನರ ಸಂಗಡ ಮಾತಾಡುವನು. ಅವನು
ನಿನಗೆ ಬಾಯಂತಿರುವನು; ನೀನು ಅವನಿಗೆ ದೇ
ರಂತಿರುವಿ. ಇದಲ್ಲದೆ ಈ ಕೋಲನ್ನು ಕೈಯಲ್ಲಿ
ತೆಗೆದುಕೊಂಡು ಹೋಗಬೇಕು; ಇದರಿಂದಲೇ
ಮಹತ್ಕಾರ್ಯಗಳನ್ನು ಮಾಡುವಿ ಅಂದನು.

ಮೋಶೆ ಐಗುಪ್ತದೇಶಕ್ಕೆ ಇಸ್ರಾಯೇಲ್ಯರ ಬಳಿಗೆ ಬಂದದ್ದು.

ಆ ಮೇಲೆ ಮೋಶೆ ತನ್ನ ಮಾವನಾದ ಇತ್ರೋನನ
ಬಳಿಗೆ ಹಿಂದಿರುಗಿ ಬಂದು—ಅಪ್ಪಣೆಯಾದರೆ ನಾನು
ಐಗುಪ್ತದೇಶದಲ್ಲಿರುವ ಸ್ವಜನರ ಬಳಿಗೆ ತಿರಿಗಿ ಹೋಗಿ
ಅವರು ಜೀವದಿಂದಿದ್ದಾರೋ ಏನೋ ನೋಡುವೆನು
ಎಂಬದಾಗಿ ಅವನಿಗೆ ಹೇಳಲು ಇತ್ರೋನನು—ನೀನು
ಹೋಗಿ ಬರಬಹುದು ಅಂದನು.
ಮಿದ್ಯಾನ್‌ದೇಶದಲ್ಲಿ ಯೆಹೋವನು ಮೋಶೆಗೆ—
ನೀನು ಐಗುಪ್ತದೇಶಕ್ಕೆ ತಿರಿಗಿ ಹೋಗು; ನಿನ್ನ ಪ್ರಾ
ವನ್ನು ತೆಗೆಯಬೇಕೆಂದಿದ್ದವರೆಲ್ಲರೂ ಸತ್ತುಹೋದರ
ಎಂದು ಹೇಳಿದ್ದರಿಂದ ಮೋಶೆ ತನ್ನ ಹೆಂಡತಿಯನ್ನೂ
ಮಕ್ಕಳನ್ನೂ ಕತ್ತೆಯ ಮೇಲೆ ಹತ್ತಿಸಿ ಕರೆದ
ಕೊಂಡು ಐಗುಪ್ತದೇಶಕ್ಕೆ ಹೊರಟುಹೋದನು. ಅ
ನು ದೇವದಂಡವನ್ನು ಕೈಯಲ್ಲಿ ತೆಗೆದುಕೊಂಡನು
ಯೆಹೋವನು ಮೋಶೆಗೆ ಇಂತೆಂದನು—ನೀನು
ಐಗುಪ್ತದೇಶಕ್ಕೆ ತಿರಿಗಿ ಬಂದಾಗ ನಾನು ನಿನ
ತೋರಿಸಿಕೊಟ್ಟ ಮಹತ್ಕಾರ್ಯಗಳನ್ನೆಲ್ಲಾ ಫರೋಹನ
ಮುಂದೆ ಮಾಡಬೇಕು. ಆದರೂ ನಾನು ಅವನ
ಹೃದಯವನ್ನು ಕಠಿಣಪಡಿಸುವೆನಾದದರಿಂದ ಅವನು
ಜನರನ್ನು ಹೋಗಗೊಡಿಸುವದಿಲ್ಲ. ಆದಕಾರಣ
ನೀನು ಫರೋಹನಿಗೆ—ಇಸ್ರಾಯೇಲ್‌ಜನವು ನನಗ
ಚೊಚ್ಚಲಮಗನಂತೆ ಇದೆ ಎಂದು ತಿಳುಕೋ
ನನ್ನ ಮಗನು ನಿನ್ನ ದೇಶದಿಂದ ಹೊರಟು ನನ್ನನ್ನು
ಆರಾಧಿಸುವದಕ್ಕೆ ಅವನಿಗೆ ಅಪ್ಪಣೆಕೊಡಬೇಕು
ಅದಕ್ಕೆ ನೀನು ಒಪ್ಪದೆ ಹೋದರೆ ನಾನು ನಿನಗಿರು
ಚೊಚ್ಚಲಮಗನನ್ನು ಸಾಯಿಸುವೆನೆಂದು ಯೆಹೋವನ
ಹೇಳುತ್ತಾನೆಂದು ತಿಳಿಸಬೇಕು.
ಹೋಗುವ ದಾರಿಯಲ್ಲಿ ಮೋಶೆ ಛತ್ರದಲ್ಲಿ ಪ್ರಾ
ಯೆಹೋವನು ಅವನೆದುರಿಗೆ ಬಂದು ಅವನ ಪ್ರಾ

ವನ್ನು ತೆಗೆಯಬೇಕೆಂದಿದ್ದನು. ಹೀಗಿರುವಾಗ ಚಿಪ್ಪೋರಳು ಕಲ್ಲಿನ ಚೂರಿಯಿಂದ ತನ್ನ ಮಗನಿಗೆ ಸುನ್ನತಿ ಮಾಡಿ, ಮೋಶೆಗೆ—ನೀನು ನನಗೆ ರಕ್ತಧಾರೆಯಿಂದಾದ ಮದಲಿಂಗನಾದಿ ಎಂದು ಹೇಳಿ ಕತ್ತರಿಸಿದ್ದನ್ನು ಅವನ ಪಾದಗಳಿಗೆ ಮುಟ್ಟಿಸಲು ಯೆಹೋವನು ಅವನನ್ನು ಉಳಿಸಿದನು. ಆಕೆ ಸುನ್ನತಿಯ ನಿಮಿತ್ತವೇ—ನೀನು ನನಗೆ ರಕ್ತಧಾರೆಯಿಂದಾದ ಮದಲಿಂಗನು ಎಂಬ ಮಾತನ್ನು ಹೇಳಿದಳು.

ಇದಲ್ಲದೆ ಯೆಹೋವನು ಆರೋನನಿಗೆ—ನೀನು ಮೋಶೆಯನ್ನು ಎದುರುಗೊಳ್ಳುವದಕ್ಕೆ ಅರಣ್ಯಕ್ಕೆ ಹೊರಟುಹೋಗು ಎಂದು ಹೇಳಲಾಗಿ ಅವನು ಹೋಗಿ ದೇವರ ಬೆಟ್ಟದಲ್ಲೇ ಅವನನ್ನು ಎದುರುಗೊಂಡು ಮುದ್ದಿಟ್ಟನು. ಆಗ ಮೋಶೆ, ತನ್ನನ್ನು ಯೆಹೋವನು ಯಾವ ಮಾತುಗಳನ್ನು ಹೇಳುವದಕ್ಕೆ ಕಳುಹಿಸಿದನೋ ಯಾವ ಮಹತ್ಕಾರ್ಯಗಳನ್ನು ಮಾಡುವದಕ್ಕೆ ಆಜ್ಞಾಪಿಸಿದನೋ ಅವುಗಳನ್ನೆಲ್ಲಾ ಆರೋನನಿಗೆ ತಿಳಿಸಿದನು.

ತರುವಾಯ ಮೋಶೆ ಆರೋನರು ಹೋಗಿ ಇಸ್ರಾಯೇಲ್ಯರ ಹಿರಿಯರನ್ನೆಲ್ಲಾ ಕೂಡಿಸಿದರು. ಯೆಹೋವನು ಮೋಶೆಗೆ ಹೇಳಿದ ಮಾತುಗಳನ್ನೆಲ್ಲಾ ಆರೋನನು ಅವರಿಗೆ ತಿಳಿಸಿ ಜನರ ಮುಂದೆ ಆ ಮಹತ್ಕಾರ್ಯಗಳನ್ನು ಮಾಡಲು ಜನರು ನಂಬಿದರು. ಯೆಹೋವನು ತಮ್ಮನ್ನು ಕಟಾಕ್ಷಿಸಿ ತಮ್ಮ ದುರವಸ್ಥೆಯನ್ನು ಮನಸ್ಸಿಗೆ ತೆಗೆದುಕೊಂಡನೆಂಬದನ್ನು ಇಸ್ರಾಯೇಲ್ಯರು ಕೇಳಿದಾಗ ತಲೆಬಾಗಿ ನಮಸ್ಕರಿಸಿದರು.

ಅರಸನು ಮೋಶೆಯ ಮಾತನ್ನು ಲಕ್ಷಿಸದೆ ಇಸ್ರಾಯೇಲ್ಯರನ್ನು ಹೆಚ್ಚಾಗಿ ಬಾಧಿಸಿದ್ದು.

ಬಳಿಕ ಮೋಶೆ ಆರೋನರು ಫರೋಹನ ಸನ್ನಿಧಿಗೆ ಹೋಗಿ—ಇಸ್ರಾಯೇಲ್ಯರ ದೇವರಾದ ಯೆಹೋವನು—ನನ್ನ ಜನರು ನನಗಾಗಿ ಅರಣ್ಯದೊಳಗೆ ಜಾತ್ರೆ ನಡಿಸುವಂತೆ ಅವರಿಗೆ ಅಪ್ಪಣೆಕೊಡಬೇಕೆಂದು ಹೇಳಿದ್ದಾನೆ ಅಂದರು. ಅದಕ್ಕೆ ಫರೋಹನು—ಯೆಹೋವನೆಂಬವನು ಯಾರು? ನಾನು ಅವನ ಮಾತನ್ನು ಕೇಳಿ ಇಸ್ರಾಯೇಲ್ಯರನ್ನು ಹೋಗಗೊಡಿಸುವದೇಕೆ? ಯೆಹೋವನು ಯಾರೋ ನನಗೆ ಗೊತ್ತಿಲ್ಲ. ಇದು ಮಾತ್ರವಲ್ಲದೆ ಇಸ್ರಾಯೇಲ್ಯರು ಹೊರಟುಹೋಗುವದಕ್ಕೆ ನಾನು ಒಪ್ಪುವದೇ ಇಲ್ಲ ಅಂದನು. ಅವರು ಅವನಿಗೆ—ಇಬ್ರಿಯರ ದೇವರು ನಮ್ಮನ್ನು ಎದುರುಗೊಂಡನು; ಅಪ್ಪಣೆಯಾದರೆ ನಾವು ಅರಣ್ಯದಲ್ಲಿ ಮೂರು ದಿವಸ ಪ್ರಯಾಣದಷ್ಟು ದೂರ ಹೋಗಿ ನಮ್ಮ ದೇವರಾದ ಯೆಹೋವನಿಗೋಸ್ಕರ ಯಜ್ಞಮಾಡಿ ಬರುವೆವು; ಮಾಡದೆ ಹೋದರೆ ಆತನು ನಮ್ಮನ್ನು ವ್ಯಾಧಿಯಿಂದಲೋ ಕತ್ತಿಯಿಂದಲೋ ಸಂಹಾರಮಾಡಾನು ಎಂದು ಹೇಳಿದರು.

ಐಗುಪ್ತ್ಯರ ಅರಸನು ಅವರಿಗೆ—ಮೋಶೆಯೇ, ಆ
ರೋನನೇ, ಈ ಜನರು ತಮ್ಮ ಕೆಲಸವನ್ನು ಬಿಡುವಂತೆ
ನೀವು ಯಾಕೆ ಮಾಡುತ್ತೀರಿ? ನಿಮ್ಮ ಬಿಟ್ಟೀ ಕೆಲಸಕ್ಕೆ
ನಡೆಯಿರಿ ಎಂದು ಹೇಳಿದನು. ಫರೋಹನು—ಈ 5
ಜನರು ಬಲು ಹೆಚ್ಚಾದರು, ನೋಡಿರಿ; ಅವರು ತಮ್ಮ
ಬಿಟ್ಟೀಕೆಲಸವನ್ನು ಬಿಟ್ಟುಬಿಡುವದಕ್ಕೆ ನೀವು ಆಸ್ಪದ
ಕೊಟ್ಟಿದ್ದೀನು ಅಂದನು. ಆ ದಿನದಲ್ಲಿ ಫರೋಹನು 6
ಬಿಟ್ಟೀಮಾಡಿಸುವ ಅಧಿಕಾರಿಗಳಿಗೂ ಮೇಸ್ತ್ರಿಗಳಿಗೂ—
ಇನ್ನು ಮೇಲೆ ನೀವು ಆ ಜನರಿಗೆ ಇಟ್ಟಿಗೆಮಾಡುವದಕ್ಕೆ 7
ಹುಲ್ಲನ್ನು ಕೊಡಕೂಡದು; ಅವರೇ ಹೋಗಿ ಹುಲ್ಲ
ನ್ನು ಕೂಡಿಸಿಕೊಳ್ಳಲಿ; ಆದರೂ ಅವರು ಈ ವರೆಗೆ ಮಾ 8
ಡಿದ ಇಟ್ಟಿಗೆಗಳ ಲೆಕ್ಕವನ್ನು ಮುಂದೆಯೂ ಒಪ್ಪಿಸಬೇ
ಕು; ಅದನ್ನು ಕಡಿಮೆಮಾಡಕೂಡದು. ಅವರು ಮೈ
ಗಳ್ಳರಾದದರಿಂದ—ನಾವು ಹೋಗಿ ನಮ್ಮ ದೇವರಿಗೆ ಯ
ಜ್ಞವನ್ನು ಮಾಡಿ ಬರುವದಕ್ಕೆ ಅಪ್ಪಣೆಯಾಗಬೇಕೆಂದು
ಕೂಗಿಕೊಳ್ಳುತ್ತಾರೆ. ನೀವು ಅವರಿಂದ ಕಷ್ಟವಾದ 9
ಬಿಟ್ಟೀಕೆಲಸವನ್ನು ಮಾಡಿಸಬೇಕು. ಅವರಿಗೆ ಕಷ್ಟ
ವಾದ ಕೆಲಸವಿದ್ದರೆ ಸುಳ್ಳುಮಾತುಗಳಿಗೆ ಲಕ್ಷ್ಯಕೊಡು
ವದಕ್ಕೆ ಮಾರ್ಗವಿಲ್ಲ ಎಂದು ಆಜ್ಞೆಮಾಡಿದನು.
ಆದದರಿಂದ ಬಿಟ್ಟೀಮಾಡಿಸುವ ಅಧಿಕಾರಿಗಳೂ ಮೇ 10
ಸ್ತ್ರಿಗಳೂ ಆ ಜನರಿಗೆ—ನಿಮಗೆ ಹುಲ್ಲನ್ನು ಕೊಡಕೂ
ಡದೆಂದು ಫರೋಹನ ಅಪ್ಪಣೆಯಾಗಿದೆ; ನೀವೇ ಹೋಗಿ 11
ಎಲ್ಲಿಂದಾದರೂ ತಂದುಕೊಳ್ಳಬೇಕು; ಆದರೂ ನೀವು
ಮಾಡಬೇಕಾದ ಕೆಲಸ ಸ್ವಲ್ಪವೂ ಕಡಿಮೆಯಾಗಕೂಡ
ದು ಎಂದು ಹೇಳಿದರು. ಹೀಗಿರಲಾಗಿ ಜನರು ಐಗು 12
ಪ್ತದೇಶದಲ್ಲೆಲ್ಲಾ ತಿರುಗಿ ಹುಲ್ಲು ಸಿಕ್ಕದೆ ಕೂಳೆಕಿತ್ತು
ಕೂಡಿಸಿದರು. ಬಿಟ್ಟೀಮಾಡಿಸುವವರು—ನಿಮಗೆ ಹು 13
ಲ್ಲಿದ್ದ ಕಾಲದಲ್ಲಿ ಹೇಗೋ ಹಾಗೆ ಪ್ರತಿದಿನದ ಕೆಲಸ
ವನ್ನು ಆಯಾ ದಿನದಲ್ಲೇ ಮುಗಿಸಬೇಕೆಂದು ಹೇಳಿ
ಅವರನ್ನು ತ್ವರೆಪಡಿಸಿದರು. ಫರೋಹನ ಅಧಿಕಾರಿ 14
ಗಳು ತಾವೇ ನೇಮಿಸಿದ ಇಸ್ರಾಯೇಲ್ ಮೇಸ್ತ್ರಿಗಳಿಗೆ—
ನೀವು ಮುಂಚೆ ಇಟ್ಟಿಗೆಗಳ ಲೆಕ್ಕವನ್ನು ಒಪ್ಪಿಸಿದಂತೆ
ನಿನ್ನೆ ಈ ಹೊತ್ತು ಯಾಕೆ ಒಪ್ಪಿಸಲಿಲ್ಲ ಎಂದು ಹೇಳಿ
ಅವರನ್ನು ಹೊಡಿಸಿದರು.
ಹೀಗಿರಲು ಇಸ್ರಾಯೇಲ್ ಮೇಸ್ತ್ರಿಗಳು ಫರೋಹನ 15
ಸಮ್ಮುಖಕ್ಕೆ ಬಂದು—ತಾವು ತಮ್ಮ ದಾಸರಿಗೆ ಹೀಗೆ
ಮಾಡುವದು ಯಾಕೆ ಸ್ವಾಮೀ? ದಾಸರಿಗೆ ಅಧಿಕಾರಿ 16
ಗಳು ಹುಲ್ಲುಕೊಡದೆ ಇಟ್ಟಿಗೆಗಳನ್ನು ಮಾಡಬೇಕು
ಅನ್ನುತ್ತಾರೆ; ಆದದರಿಂದ ದಾಸರು ಏಟುಗಳನ್ನು ತಿನ್ನಬೇ
ಕಾಯಿತು; ತಪ್ಪು ಖಾವಂದರ ಜನರದೇ ಅಂದರು. ಅದ 17
ಕ್ಕವನು—ನೀವು ಬಹಳ ಮೈಗಳ್ಳರು, ನಾವು ಹೋಗಿ
ಯೆಹೋವನಿಗೆ ಯಜ್ಞಮಾಡಿ ಬರಬೇಕೆನ್ನುವದಕ್ಕೆ
ಇದೇ ಕಾರಣ. ಕೆಲಸಕ್ಕೆ ನಡೆಯಿರಿ, ನಿಮಗೆ ಹುಲ್ಲ 18
ನ್ನು ಕೊಡಿಸುವದಿಲ್ಲ; ಆದರೂ ಇಟ್ಟಿಗೆಗಳ ಲೆಕ್ಕವನ್ನು
ತಪ್ಪದೆ ಒಪ್ಪಿಸಬೇಕು ಅಂದನು.
ದಿನದಿನವೂ ಒಪ್ಪಿಸಬೇಕಾದ ಇಟ್ಟಿಗೆಗಳ ಲೆಕ್ಕ 19
ಕಡಿಮೆಯಾಗಬಾರದೆಂದು [1]ಅಪ್ಪಣೆಯಾದದರಿಂದ
ಇಸ್ರಾಯೇಲ್ ಮೇಸ್ತ್ರಿಗಳು ತಮಗೆ ದುರವಸ್ಥೆಯುಂ
ಟಾಯಿತು ಎಂದು ತಿಳಿದುಕೊಂಡರು. ಅವರು ಫರೋ 20

1) ಅಥವಾ: ಸ್ವಜನರಿಗೆ ಹೇಳಬೇಕಾದದರಿಂದ.

ಹನ ಬಳಿಯಿಂದ ಬಂದಾಗ ತಮ್ಮನ್ನು ಎದುರುಗೊಳ್ಳು
21 ವದಕ್ಕೆ ನಿಂತಿದ್ದ ಮೋಶೆ ಆರೋನರನ್ನು ಕಲೆತು ಅವ
ರಿಗೆ—ಫರೋಹನೂ ಅವನ ಸೇವಕರೂ ನಮ್ಮನ್ನು ನೋ
ಡಿ ಹೇಸಿಕೊಳ್ಳುವಂತೆ ನೀವು ಮಾಡಿದಿರಿ; ನಮ್ಮನ್ನು
ಸಂಹಾರಮಾಡುವದಕ್ಕೆ ಅವರ ಕೈಗೆ ಕತ್ತಿಯನ್ನು ಕೊ
ಟ್ಟ ಹಾಗಾಯಿತು; ಯೆಹೋವನು ನಿಮ್ಮ ತಪ್ಪನ್ನು ವಿ
ಚಾರಿಸಿ ತಕ್ಕ ಶಿಕ್ಷೆಯನ್ನು ವಿಧಿಸಲಿ ಎಂದು ಹೇಳಿದರು.

ದೇವರು ಮೋಶೆಯನ್ನು ಧೈರ್ಯಪಡಿಸಿದ್ದು.

22 ಆಗ ಮೋಶೆ ಯೆಹೋವನ ಬಳಿಗೆ ತಿರಿಗಿ ಬಂದು—
ಸ್ವಾಮೀ, ಈ ಜನರಿಗೆ ಯಾಕೆ ಕೇಡನ್ನು ಮಾಡಿದಿ?
23 ನನ್ನನ್ನು ಕಳುಹಿಸಿದ್ದು ಯಾಕೆ? ನಾನು ಫರೋಹನ
ಬಳಿಗೆ ಹೋಗಿ ನಿನ್ನ ಹೆಸರಿನಲ್ಲಿ ಮಾತಾಡಿದಂದಿನಿಂದ
ಅವನು ಈ ಜನರಿಗೆ ಕೇಡನ್ನೇ ಮಾಡುತ್ತಾನಲ್ಲಾ;
ನೀನು ನಿನ್ನ ಜನರನ್ನು ಎಷ್ಟು ಮಾತ್ರವೂ ತಪ್ಪಿಸಲೇ
ಇಲ್ಲ ಅಂದನು.

6 ಅದಕ್ಕೆ ಯೆಹೋವನು—ನಾನು ಫರೋಹನಿಗೆ
ಮಾಡುವದನ್ನು ನೀನು ಈಗ ನೋಡುವಿ. ಅವನು
ನನ್ನ ಭುಜಬಲದಿಂದ ಅವರನ್ನು ಹೋಗಗೊಡಿಸುವನು;
ನನ್ನ ಭುಜಬಲದಿಂದ ಪೀಡಿತನಾಗಿ ಅವರನ್ನು ತನ್ನ
ದೇಶದಿಂದ ಹೊರಡಿಸುವನು ಅಂದನು.
2 ಇದಲ್ಲದೆ ದೇವರು ಮೋಶೆಯ ಸಂಗಡ ಮಾತಾಡಿ
3 ಇಂತೆಂದನು—ನಾನು ಯೆಹೋವನು; ಅಬ್ರಹಾಮ
ಇಸಾಕ ಯಾಕೋಬರಿಗೆ ನಾನು ಸರ್ವಶಕ್ತನಾದ
ದೇವರೆಂಬ ಹೆಸರುಳ್ಳವನಾಗಿ ಕಾಣಿಸಿಕೊಂಡೆನೇ ಹೊ
ರತು ಯೆಹೋವನು ಎಂಬ ನನ್ನ ಹೆಸರಿನಿಂದ ಅವ
4 ರಿಗೆ ಗೋಚರವಾಗಲಿಲ್ಲ. ನಾನು ಅವರಿಗೆ—ನೀವು
ಪ್ರವಾಸವಾಗಿರುವ ಕಾನಾನ್‌ದೇಶವನ್ನು ನಿಮಗೇ ಕೊ
ಡುವೆನೆಂಬದಾಗಿ ದೃಢವಾಗಿ ವಾಗ್ದಾನಮಾಡಿದೆನಷ್ಟೆ.
5 ಐಗುಪ್ತ್ಯರು ದಾಸರನ್ನಾಗಿ ಮಾಡಿಕೊಂಡಿರುವ ಇಸ್ರಾ
ಯೇಲ್ಯರ ಗೋಳು ಈಗ ನನಗೆ ಕೇಳಿಸಿತು. ನಾನು
6 ಮಾಡಿದ ವಾಗ್ದಾನವನ್ನು ನೆನಸಿಕೊಂಡೆನು. ಆದದ
ರಿಂದ ನೀನು ಇಸ್ರಾಯೇಲ್ಯರಿಗೆ [ನನ್ನ ಹೆಸರಿನಲ್ಲಿ]
ಹೇಳಬೇಕಾದದ್ದೇನಂದರೆ—ನಾನು ಯೆಹೋವನು;
ಐಗುಪ್ತ್ಯರು ನಿಮ್ಮಿಂದ ಮಾಡಿಸುವ ಬಿಟ್ಟೀಕೆಲಸಗಳ
ನ್ನು ನಾನು ತಪ್ಪಿಸಿ ಅವರಲ್ಲಿ ನಿಮಗಿರುವ ದಾಸತ್ವವ
ನ್ನು ತೊಲಗಿಸಿ ನನ್ನ ಕೈ ಚಾಚಿ ಅವರಿಗೆ ಮಹಾಶಿಕ್ಷೆಗ
7 ಳನ್ನು ವಿಧಿಸಿ ನಿಮ್ಮನ್ನು ರಕ್ಷಿಸುವೆನು. ನಾನು ನಿ
ಮ್ಮನ್ನು ನನ್ನ ಪ್ರಜೆಯೆಂದು ಆರಿಸಿಕೊಂಡು ನಿಮ
ಗೆ ದೇವರಾಗಿರುವೆನು. ಐಗುಪ್ತ್ಯರು ಮಾಡಿಸುವ
ಬಿಟ್ಟೀಸೇವೆಯನ್ನು ನಾನು ನಿಮಗೆ ತಪ್ಪಿಸಿದಾಗ ಯೆ
ಹೋವನು ಎಂಬ ನಾನೇ ನಿಮ್ಮ ದೇವರಾಗಿದ್ದೇನೆಂ
8 ಬದು ನಿಮಗೆ ತಿಳಿದುಬರುವದು. ಇದಲ್ಲದೆ ಅಬ್ರ
ಹಾಮ ಇಸಾಕ ಯಾಕೋಬರಿಗೆ ಕೊಡುವೆನೆಂದು
ನಾನು ಪ್ರಮಾಣವಾಗಿ ಹೇಳಿದ ದೇಶಕ್ಕೆ ನಿಮ್ಮನ್ನು
ಸೇರಿಸಿ ಅದನ್ನು ನಿಮಗೆ ಸ್ವದೇಶವನ್ನಾಗಿ ಕೊಡುವೆನು;
ಯೆಹೋವನೇ ನಾನು; ಹೀಗೆ ಅವರಿಗೆ ಹೇಳು ಅಂ
9 ದನು. ಮೋಶೆ ಈ ಮಾತುಗಳನ್ನು ಇಸ್ರಾಯೇಲ್ಯರಿಗೆ
ತಿಳಿಸಿದನು. ಆದರೂ ಅವರ ಮನಸ್ಸು ಕುಗ್ಗಿಹೋದ

ದರಿಂದಲೂ ಕಠಿಣವಾಗಿ ಸೇವೆಮಾಡಬೇಕಾದದರಿಂ
ಲೂ ಅವರು ಅವನ ಮಾತಿಗೆ ಕಿವಿಗೊಡಲೇ ಇಲ್ಲ.
ಆಗ ಯೆಹೋವನು ಮೋಶೆಯ ಸಂಗಡ ಮಾತ
ಡಿ—ನೀನು ಐಗುಪ್ತ್ಯರ ಅರಸನಾದ ಫರೋಹನ ಸ
ಧಿಗೆ ಹೋಗಿ ಅವನಿಗೆ—ಇಸ್ರಾಯೇಲ್ಯರು ನಿನ್ನ ದೇ
ದಿಂದ ಹೊರಟು ಹೋಗುವಂತೆ ಅಪ್ಪಣೆಕೊಡಬೇಕೆಂದ
ಹೇಳು ಅಂದನು. ಅದಕ್ಕೆ ಮೋಶೆ ಯೆಹೋವನ ಸ
ಧಿಯಲ್ಲಿ—ಇಗೋ, ಇಸ್ರಾಯೇಲ್ಯರೇ ನನ್ನ ಮಾತನ
ಕೇಳಲಿಲ್ಲ, ಫರೋಹನು ಕಿವಿಗೊಟ್ಟಾನೇ? ನಾ
ಮಾತಾಡುವದರಲ್ಲಿ ಜಾಣನಲ್ಲ ಅಂದನು. ಯೆಹೋ
ವನು ಮೋಶೆ ಆರೋನರ ಸಂಗಡ ಮಾತಾಡಿ ಇಸ
ಯೇಲ್ಯರನ್ನು ಐಗುಪ್ತದೇಶದೊಳಗಿಂದ ಬರಮಾಡಬ
ಕೆಂದು ಅವರಿಗೆ ಆಜ್ಞಾಪಿಸಿ ಅವರನ್ನು ಇಸ್ರಾಯೇಲ್ಯ
ಬಳಿಗೂ ಐಗುಪ್ತದ ಅರಸನಾದ ಫರೋಹನ ಬಳಿಗ
ಕಳುಹಿಸಿದನು

ಮೋಶೆ ಆರೋನರ ವಂಶಾವಳಿ.

ಅವರ ಗೋತ್ರಗಳ ಪ್ರಧಾನಪುರುಷರು.
ಇಸ್ರಾಯೇಲನ ಚೊಚ್ಚಲಮಗನಾದ ರೂಬೇನನಿ
ಹನೋಕ್ ಫಲ್ಲು ಹೆಚ್ರೋನ್ ಕರ್ಮಿ ಎಂಬವ
ಮಕ್ಕಳು. ಇವರೇ ರೂಬೇನನಿಂದುಂಟಾದ ಗೋ
ಗಳಿಗೆ ಮೂಲಪುರುಷರು.
ಸಿಮೆಯೋನನಿಗೆ ಯೆಮೂಯೇಲ್ ಯಾಮೀ
ಓಹದ್ ಯಾಕೀನ್ ಚೋಹರ್ ಮತ್ತು ಕಾನಾನ್ಯ ಸ್ತ್ರಿ
ಯಲ್ಲಿ ಹುಟ್ಟಿದ ಸೌಲ ಎಂಬವರು ಮಕ್ಕಳು. ಇ
ರೇ ಸಿಮೆಯೋನನಿಂದುಂಟಾದ ಗೋತ್ರಗಳಿಗೆ ಮೂ
ಪುರುಷರು.
ವಂಶಾವಳಿಗಳ ಪ್ರಕಾರ ಲೇವಿಯ ಮಕ್ಕ
ಯಾರಂದರೆ—ಗೇರ್ಷೋನ್ ಕೆಹಾತ್ ಮೆರಾರೀ ಇ
ರೇ. ಲೇವಿಯು ನೂರಮೂವತ್ತೇಳು ವರು
ಬದುಕಿದನು. ಗೋತ್ರಗಳನ್ನು ಸ್ಥಾಪಿಸಿದ ಗೇರ್ಷೋ
ನನ ಮಕ್ಕಳು—ಲಿಬ್ನೀ ಶಿಮ್ಮೀ. ಕೆಹಾತನ ಮ
ಳು—ಅಮ್ರಾಮ್ ಇಚ್ಹಾರ್ ಹೆಬ್ರೋನ್ ಉಜ್ಜೀಯೆ
ಲ್. ಕೆಹಾತನು ನೂರಮೂವತ್ತುಮೂರು ವರು
ಬದುಕಿದನು. ಮೆರಾರೀಯ ಮಕ್ಕಳು—ಮಹ್ಲಿ
ಮೂಷೀ. ವಂಶಾವಳಿಗಳ ಪ್ರಕಾರ ಲೇವಿಯಿಂದ
ಟಾದ ಗೋತ್ರಗಳು ಇವೇ.
ಅಮ್ರಾಮನು ತನ್ನ ಸೋದರತ್ತೆಯಾದ ಯೋ
ಬೆದಳನ್ನು ಮದುವೆಮಾಡಿಕೊಂಡನು. ಆಕೆ ಅವನಿ
ಆರೋನನನ್ನೂ ಮೋಶೆಯನ್ನೂ ಹೆತ್ತಳು. ಅವ
ಮನು ನೂರಮೂವತ್ತೇಳು ವರುಷ ಬದುಕಿದನು.
ಇಚ್ಹಾರನ ಮಕ್ಕಳು—ಕೋರಹ ನೆಫೆಗ್ ಜಿಕ್ರಿ
ಉಜ್ಜೀಯೇಲನ ಮಕ್ಕಳು—ಮೀಷಾಯೇಲ್
ಲ್ಸಾಫಾನ್ ಸಿತ್ರೀ.
ಆರೋನನು ಅಮ್ಮೀನಾದಾಬನ ಮಗಳಾಗಿಯ
ನಹಶೋನನ ತಂಗಿಯಾಗಿಯೂ ಇರುವ ಎಲೀಶೇಬ
ನ್ನು ಮದುವೆಮಾಡಿಕೊಂಡನು; ಆಕೆಯಲ್ಲಿ ಅವನಿ
ನಾದಾಬ್ ಅಬೀಹೂ ಎಲ್ಲಾಜಾರ್ ಈತಾಮಾ
ಎಂಬವರು ಹುಟ್ಟಿದರು.

ಕೋರಹನ ಮಕ್ಕಳು—ಅಸ್ಸೀರ್ ಎಲ್ಕಾನಾ ಅಬೀಯಾಸಾಫ್. ಇವರೇ ಕೋರಹೀಯರ ಗೋತ್ರ ಸ್ಥಾಪಕರು.

ಆರೋನನ ಮಗನಾದ ಎಲ್ಲಾಜಾರನು ಪೂಟಿಯೇಲನ ಹೆಣ್ಣುಮಕ್ಕಳೊಳಗೆ ಒಬ್ಬಾಕೆಯನ್ನು ಮದುವೆ ಮಾಡಿಕೊಂಡನು. ಆಕೆ ಅವನಿಗೆ ಫೀನೆಹಾಸನನ್ನು ಹೆತ್ತಳು.

ಅವರವರ ಗೋತ್ರದ ಮೇರೆಗೆ ಇವರೇ ಲೇವಿಯರ ಪೂರ್ವಿಕರು.

ಇಸ್ರಾಯೇಲ್ಯರ ಸೈನ್ಯವನ್ನೆಲ್ಲಾ ಐಗುಪ್ತದೇಶದಿಂದ ನಡಿಸಿಕೊಂಡು ಬರುವದಕ್ಕೆ ಯೆಹೋವನಿಂದ ಅಜ್ಞೆಹೊಂದಿದ ಆರೋನ ಮೋಶೆಯರು ಇವರೇ. ಇಸ್ರಾಯೇಲ್ಯರನ್ನು ಐಗುಪ್ತದೇಶದಿಂದ ಹೊರಗೆ ಬರಮಾಡುವದಕ್ಕಾಗಿ ಐಗುಪ್ತ್ಯರ ಅರಸನಾದ ಫರೋಹನ ಸಂಗಡ ಮಾತಾಡಿದಂಥ ಮೋಶೆ ಆರೋನರು ಇವರೇ.

ಮೋಶೆ ಆರೋನರು ಫರೋಹನ ಮುಂದೆ
ಮಹತ್ಕಾರ್ಯ ಮಾಡಿದ್ದು.

ಯೆಹೋವನು ಐಗುಪ್ತದೇಶದಲ್ಲಿ ಮೋಶೆಯ ಸಂಗಡ ಮಾತಾಡಿದಾಗ ಆತನು ಅವನಿಗೆ—ನಾನು ಯೆಹೋವನು; ನಾನು ನಿನಗೆ ಹೇಳುವದನ್ನೆಲ್ಲಾ ನೀನು ಐಗುಪ್ತ್ಯರ ಅರಸನಾದ ಫರೋಹನ ಸನ್ನಿಧಿಯಲ್ಲಿ ಹೇಳಬೇಕೆಂದು ಹೇಳಲಾಗಿ ಮೋಶೆ ಯೆಹೋವನಿಗೆ—ಸ್ವಾಮಿಾ, ನಾನು ಮಾತಾಡುವದರಲ್ಲಿ ಜಾಣನಲ್ಲ. ಫರೋಹನು ನನ್ನ ಮಾತನ್ನು ಹೇಗೆ ಕೇಳಾನು ಅಂದನು.

ಆಗ ಯೆಹೋವನು ಮೋಶೆಗೆ ಇಂತೆಂದನು—ನಿನ್ನನ್ನು ಫರೋಹನಿಗೆ ದೇವರ ಸ್ಥಾನದಲ್ಲಿ ನೇಮಿಸಿದ್ದೇನೆ, ನೋಡು. ನಿನ್ನ ಅಣ್ಣನಾದ ಆರೋನನು ನಿನಗೋಸ್ಕರ ಪ್ರವಾದಿಯಾಗಿರುವನು; ನಾನು ನಿನಗೆ ಆಜ್ಞಾಪಿಸುವದನ್ನೆಲ್ಲಾ ನೀನು ಹೇಳಬೇಕು. ಇಸ್ರಾಯೇಲ್ಯರು ದೇಶದಿಂದ ಹೊರಟುಹೋಗುವದಕ್ಕೆ ಅಪ್ಪಣೆಕೊಡಬೇಕೆಂಬದಾಗಿ ನಿನ್ನ ಅಣ್ಣನಾದ ಆರೋನನೇ ಫರೋಹನ ಮುಂದೆ ಮಾತಾಡಬೇಕು. ಆದರೂ ನಾನು ಫರೋಹನ ಮನಸ್ಸಿನಲ್ಲಿ ಹಟವನ್ನು ಹುಟ್ಟಿಸಿ ಐಗುಪ್ತದೇಶದಲ್ಲಿ ಅನೇಕ ಸೂಚಕಕಾರ್ಯಗಳನ್ನೂ ಅದ್ಭುತಕಾರ್ಯಗಳನ್ನೂ ನಡಿಸಿ ನನ್ನ ಶಕ್ತಿಯನ್ನು ತೋರಿಸುವೆನು. ಫರೋಹನು ನಿಮ್ಮ ಮಾತನ್ನು ಕೇಳುವದಿಲ್ಲ; ಆಗ ನಾನು ಐಗುಪ್ತದೇಶದವರನ್ನು ಬಾಧಿಸಿ ಅವರಿಗೆ ಮಹಾಶಿಕ್ಷೆಗಳನ್ನು ವಿಧಿಸಿ ನನ್ನ ಜನರಾಗಿರುವ ಇಸ್ರಾಯೇಲ್ಯರ ಸೈನ್ಯವನ್ನೆಲ್ಲಾ ಐಗುಪ್ತದೇಶದಿಂದ ಹೊರತರುವೆನು. ನಾನು ಐಗುಪ್ತ್ಯರಿಗೆ ವಿರೋಧವಾಗಿ ಕೈಚಾಚಿ ಅವರ ಮಧ್ಯದಿಂದ ಇಸ್ರಾಯೇಲ್ಯರನ್ನು ಹೊರತಂದಾಗ ನಾನು ಯೆಹೋವನೆಂಬದನ್ನು ಐಗುಪ್ತ್ಯರು ತಿಳಿದುಕೊಳ್ಳುವರು ಅಂದನು.

ಯೆಹೋವನ ಆಜ್ಞೆಯಂತೆಯೇ ಮೋಶೆ ಆರೋನರು ಮಾಡಿದರು. ಅವರು ಫರೋಹನ ಹತ್ತಿರ ಮಾತಾಡಿದ ಕಾಲದಲ್ಲಿ ಮೋಶೆ ಎಂಭತ್ತು ವರುಷದವನೂ ಆರೋನನು ಎಂಭತ್ತುಮೂರು ವರುಷದವನೂ ಆಗಿದ್ದರು.

ಯೆಹೋವನು ಮೋಶೆ ಆರೋನರ ಸಂಗಡ ಮಾ 8
ತಾಡಿ—ಫರೋಹನು ನಿಮಗೆ—ನಾನು ನಿಮ್ಮ ಮಾ 9
ತನ್ನು ನಂಬುವಂತೆ ನೀವು ಮಹತ್ಕಾರ್ಯವನ್ನು ನನ್ನ
ಮುಂದೆ ಮಾಡಬೇಕೆಂದು ಹೇಳಿದರೆ ಮೋಶೆಯು ಆರೋ
ನನಿಗೆ—ನಿನ್ನ ಕೈಯಲ್ಲಿರುವ ಕೋಲನ್ನು ಫರೋಹನ
ಮುಂದೆ ನೆಲದಲ್ಲಿ ಬೀಸಾಡು ಎಂದು ಹೇಳಬೇಕು,
ಅದು ಸರ್ಪವಾಗುವದು ಎಂದು ಆಜ್ಞಾಪಿಸಿದನು.
ಮೋಶೆ ಆರೋನರು ಫರೋಹನ ಬಳಿಗೆ ಹೋಗಿ ಯೆ 10
ಹೋವನು ತಮಗೆ ಆಜ್ಞಾಪಿಸಿದಂತೆಯೇ ಮಾಡಿದರು.
ಆರೋನನು ತನ್ನ ಕೋಲನ್ನು ಫರೋಹನ ಮತ್ತು
ಅವನ ಪರಿವಾರದವರ ಮುಂದೆ ನೆಲದಲ್ಲಿ ಬೀಸಾಡಿ
ದಾಗ ಅದು ಸರ್ಪವಾಯಿತು. ಫರೋಹನು ಐಗುಪ್ತ 11
ದೇಶದ ವಿದ್ವಾಂಸರನ್ನೂ ಮಂತ್ರಗಾರರನ್ನೂ ಕರಿಸಿದಾಗ
ಆ ಜೋಯಿಸರೂ ತಮ್ಮ ಗುಪ್ತ ವಿದ್ಯೆಗಳಿಂದ ಅದೇ ರೀತಿ
ಯಾಗಿ ಮಾಡಿದರು. ಅವರು ತಮ್ಮ ತಮ್ಮ ಕೋಲು 12
ಗಳನ್ನು ನೆಲಕ್ಕೆ ಬೀಸಾಡಲು ಅವು ಸರ್ಪಗಳಾದವು.
ಆದರೆ ಆರೋನನ ಕೋಲು ಅವರ ಕೋಲುಗಳನ್ನು
ನುಂಗಿಬಿಟ್ಟಿತು. ಯೆಹೋವನು ಮೊದಲು ಹೇಳಿದ್ದಂತೆ 13
ಯೇ ಫರೋಹನ ಹೃದಯವು ಕಠಿಣವಾಯಿತು;
ಅವನು ಅವರ ಮಾತಿಗೆ ಕಿವಿಗೊಡದೆ ಹೋದನು.

ನೈಲ್‌ನದಿಯ ನೀರು ರಕ್ತವಾದದ್ದು.

ತರುವಾಯ ಯೆಹೋವನು ಮೋಶೆಗೆ—ಫರೋಹನ 14
ಹೃದಯವು ಮೊಂಡಾಗಿದೆ; ತಾನು ಜನರಿಗೆ ಅಪ್ಪಣೆಕೊ
ಡುವದಿಲ್ಲವೆನ್ನುತ್ತಾನೆ. ಬೆಳಿಗ್ಗೆ ಫರೋಹನ ಬಳಿಗೆ 15
ಹೋಗು; ಅವನು ನದಿಗೆ ಹೋಗುತ್ತಾನಲ್ಲಾ. ಸರ್ಪ
ವಾಗಿ ಮಾಡಲ್ಪಟ್ಟ ಆ ಕೋಲನ್ನು ನೀನು ಕೈಯಲ್ಲಿ
ಹಿಡಿದುಕೊಂಡು ಅವನನ್ನು ಎದುರುಗೊಳ್ಳುವದಕ್ಕೆ
ನೈಲ್ ನದೀತೀರದಲ್ಲಿ ನಿಂತುಕೊಂಡು ಹೀಗನ್ನಬೇಕು—
ಇಬ್ರಿಯರ ದೇವರಾದ ಯೆಹೋವನು ನನ್ನನ್ನು 16
ನಿನ್ನ ಬಳಿಗೆ ಕಳುಹಿಸಿ ಅರಣ್ಯದಲ್ಲಿ ತನ್ನನ್ನು ಆರಾಧಿಸು
ವಂತೆ ತನ್ನ ಜನರಿಗೆ ಅಪ್ಪಣೆಕೊಡಬೇಕೆಂದು ನಿನಗೆ ಆ
ಜ್ಞಾಪಿಸಿದನಷ್ಟೆ; ಈ ವರೆಗೂ ನೀನು ಲಕ್ಷ್ಯಕ್ಕೆ ತರಲಿಲ್ಲ.
ಆದದರಿಂದ ಯೆಹೋವನು ಮತ್ತೆ ಹೇಳುವದೇನಂದ 17
ರೆ—ನೀನು ನನ್ನನ್ನು ಯೆಹೋವನೆಂದು ತಿಳಿದುಕೊ
ಳ್ಳುವದಕ್ಕಾಗಿ ನನ್ನ [ಸೇವಕನ] ಕೈಯಲ್ಲಿರುವ ಕೋ
ಲಿನಿಂದ ನೈಲ್ ನದಿಯ ನೀರನ್ನು ಹೊಡಿಸುವೆನು; ಆಗ
ಅದು ರಕ್ತವಾಗುವದು. ನದಿಯಲ್ಲಿರುವ ಮಿಾನು 18
ಗಳು ಸಾಯುವವು; ನದಿಯು ಹೊಲಸುನಾರುವದು;
ಅದರಲ್ಲಿ ಕುಡಿಯುವದಕ್ಕೆ ಐಗುಪ್ತ್ಯರಿಗೆ ಹೇಸಿಗೆಯಾ
ಗುವದು ಎಂದು ಹೇಳಬೇಕು ಅಂದನು.
ಯೆಹೋವನು ಮೋಶೆಯ ಸಂಗಡ ಮಾತಾಡಿ— 19
ನೀನು ಆರೋನನಿಗೆ—ನಿನ್ನ ಕೋಲನ್ನು ತೆಗೆದುಕೊಂ
ಡು ಐಗುಪ್ತದೇಶದಲ್ಲಿರುವ ಹೊಳೆ ಕಾಲಿವೆ ಕೆರೆ ಕೊಳ
ಮೊದಲಾದ ನೀರಿರುವ ಎಲ್ಲಾ ಸ್ಥಳಗಳ ಮೇಲೆ ಅದ
ನ್ನು ಚಾಚು ಎಂದು ಹೇಳಬೇಕು; ಅವನು ಚಾಚು
ವಾಗ ಆ ನೀರೆಲ್ಲಾ ರಕ್ತವಾಗುವದು; ಐಗುಪ್ತದೇಶದ

ಲ್ಲೆಲ್ಲಾ ಮರದ ಪಾತ್ರೆಗಳಲ್ಲಿಯೂ ಕಲ್ಲಿನ ಪಾತ್ರೆಗಳಲ್ಲಿ
ಯೂ ಇರುವ ನೀರೂ ರಕ್ತವಾಗುವದು ಅಂದನು.
20 ಮೋಶೆ ಆರೋನರು ಯೆಹೋವನು ತಮಗೆ ಆಜ್ಞಾಪಿ
ಸಿದಂತೆಯೇ ಮಾಡಿದರು. ಆರೋನನು ಫರೋಹನ
ಮತ್ತು ಅವನ ಪರಿವಾರದ ಮುಂದೆ ಕೋಲನ್ನು ಎತ್ತಿ
ನದಿಯಲ್ಲಿರುವ ನೀರನ್ನು ಹೊಡೆಯಲು ಅದೆಲ್ಲಾ ರಕ್ತ
21 ವಾಯಿತು. ಅದರಲ್ಲಿದ್ದ ಮೀನುಗಳು ಸತ್ತುಹೋ
ದವು; ನದಿಯು ಹೊಲಸುನಾರಿದ್ದರಿಂದ ಐಗುಪ್ತ್ಯರು
ಅದರಲ್ಲಿ ಕುಡಿಯಲಾರದೆ ಹೋದರು. ಐಗುಪ್ತದೇಶ
ದಲ್ಲೆಲ್ಲಾ ರಕ್ತವೇ ಆಗಿತ್ತು.
22 ಆದರೆ ಐಗುಪ್ತದೇಶದ ಜೋಯಿಸರು ತಮ್ಮ ಗುಪ್ತ
ವಿದ್ಯೆಗಳಿಂದ ಅದೇ ರೀತಿಯಾಗಿ ಮಾಡಿದ್ದರಿಂದ ಫರೋ
ಹನ ಹೃದಯವು ಕಠಿಣವಾಯಿತು. ಯೆಹೋವನು ಹೇಳಿ
ದ್ದಂತೆಯೇ ಅವನು ಮೋಶೆ ಆರೋನರ ಮಾತನ್ನು ಕೇ
23 ಳದೆ ಹೋದನು. ಫರೋಹನು ಆ ಮಹತ್ಕಾರ್ಯವ
ನ್ನಾದರೂ ಲಕ್ಷ್ಯಕ್ಕೆ ತೆಗೆದುಕೊಳ್ಳದೆ ತನ್ನ ಮನೆಗೆ
24 ಹೊರಟುಹೋದನು. ಐಗುಪ್ತ್ಯರೆಲ್ಲರೂ ನದಿಯ
ನೀರನ್ನು ಕುಡಿಯಲಾರದೆ ಕುಡಿಯುವ ನೀರಿಗೋಸ್ಕರ
25 ನದಿಯ ಸುತ್ತಲು ಅಗಿದರು. ಯೆಹೋವನು ನೈಲ್
ನದಿಯನ್ನು ಹೊಡೆದ ಮೇಲೆ ಏಳು ದಿನಗಳು ತುಂಬಿದವು.

ಕಪ್ಪೆಗಳಿಂದ ಬಾಧೆಯುಂಟಾದದ್ದು.

8 ತರುವಾಯ ಯೆಹೋವನು ಮೋಶೆಗೆ ಇಂತೆಂದನು—
ನೀನು ಫರೋಹನ ಬಳಿಗೆ ಹೋಗಿ ಹೀಗನ್ನಬೇಕು—
ಯೆಹೋವನು ಆಜ್ಞಾಪಿಸುವದೇನಂದರೆ — ನನ್ನನ್ನು ಆ
ರಾಧಿಸುವಂತೆ ನನ್ನ ಜನರಿಗೆ ಅಪ್ಪಣೆಕೊಡಬೇಕು.
2 ಅಪ್ಪಣೆಕೊಡದೆಹೋದರೆ ನಾನು ನಿನ್ನ ದೇಶಕ್ಕೆಲ್ಲಾ
3 ಕಪ್ಪೆಗಳಿಂದ ಉಪದ್ರವಕೊಡುವೆನು. ನೈಲ್‌ನದಿಯಲ್ಲಿ
ಕಪ್ಪೆಗಳು ಅಸಂಖ್ಯವಾಗಿ ಹುಟ್ಟುವವು; ಅವು ಹೊರ
ಟುಬಂದು ನಿನ್ನ ಅರಮನೆಯಲ್ಲಿಯೂ ಮಲಗುವ
ಕೋಣೆಯಲ್ಲಿಯೂ ಮಂಚದ ಮೇಲೆಯೂ ಬರುವದ
ಲ್ಲದೆ ನಿನ್ನ ಪರಿವಾರದವರ ಮನೆಗಳಲ್ಲಿಯೂ ನಿನ್ನ
ಪ್ರಜೆಗಳ ಮೇಲೆಯೂ ಒಲೆಗಳಲ್ಲಿಯೂ ಹಿಟ್ಟುನಾದು
4 ವ [1]ಕೊಣವಿಗೆಗಳಲ್ಲಿಯೂ ಬರುವವು; ನಿನ್ನ ಮೇಲೆ
ಯೂ ನಿನ್ನ ಪ್ರಜೆಗಳ ಮೇಲೆಯೂ ಪರಿವಾರದವರ
ಮೇಲೆಯೂ ಕಪ್ಪೆಗಳು ಹರಡಿಕೊಳ್ಳುವವು.
5 ಯೆಹೋವನು ಮೋಶೆಯ ಸಂಗಡ ಮಾತಾಡಿ—
ನೀನು ಆರೋನನಿಗೆ—ನೀನು ಕೋಲನ್ನು ಹಿಡಿದುಕೊಂ
ಡು ಹೊಳೆ ಕಾಲಿವೆ ಕೆರೆ ಇವುಗಳ ಮೇಲೆ ಕೈಚಾಚು;
ಆಗ ಐಗುಪ್ತದೇಶದ ಮೇಲೆಲ್ಲಾ ಕಪ್ಪೆಗಳು ಬರುವವು
6 ಎಂದು ಹೇಳಬೇಕು ಅಂದನು. ಆರೋನನು ಐಗುಪ್ತ
ದೇಶದಲ್ಲಿ ನೀರಿರುವ ಎಲ್ಲಾ ಸ್ಥಳಗಳ ಮೇಲೆ ಕೈಚಾ
ಚಲು ಕಪ್ಪೆಗಳು ಹೊರಟು ಬಂದು ದೇಶವನ್ನೆಲ್ಲಾ
7 ಮುಚ್ಚಿಕೊಂಡವು. ಜೋಯಿಸರು ತಮ್ಮ ಗುಪ್ತ
ವಿದ್ಯೆಗಳಿಂದ ಹಾಗೆಯೇ ಮಾಡಿ ಐಗುಪ್ತದೇಶದ
ಮೇಲೆ ಕಪ್ಪೆಗಳನ್ನು ಬರಮಾಡಿದರು.
8 ಆಗ ಫರೋಹನು ಮೋಶೆ ಆರೋನರನ್ನು ಕರಿಸಿ—

ನೀವು ಯೆಹೋವನನ್ನು ಬೇಡಿಕೊಂಡು ಈ ಕಪ್ಪೆ
ಳನ್ನು ನನ್ನ ಬಳಿಯಿಂದಲೂ ನನ್ನ ಪ್ರಜೆಗಳ ಬಳಿಯಿ
ದಲೂ ತೊಲಗಿಸಬೇಕು; ಹಾಗೆ ಮಾಡಿದರೆ ನಿವ
ಜನರು ಯೆಹೋವನಿಗೋಸ್ಕರ ಯಜ್ಞಮಾಡುವ
ಅವರಿಗೆ ನಾನು ಅಪ್ಪಣೆಕೊಡುವೆನು ಅಂದನು. ಮೋಶೆ
ಘನಚಿತ್ತಕ್ಕೆ ತೋರಿದಂತೆ ನೀನೇ ಅದಕ್ಕೊಂದು
ಲವನ್ನು ನೇಮಿಸಬೇಕು. ಈ ಕಪ್ಪೆಗಳು ಯಾವಾ
ನಿನ್ನ ಬಳಿಯಿಂದಲೂ ನಿನ್ನ ಮನೆಗಳಿಂದಲೂ ತೊಲ
ನದಿಯಲ್ಲಿ ಮಾತ್ರ ಉಳಿಯುವಂತೆ ನಾನು ನಿನಗೋ
ರವೂ ನಿನ್ನ ಪ್ರಜಾಪರಿವಾರದವರಿಗೋಸ್ಕರವೂ ಬೇಡಿಕ
ಳ್ಳಲಿ ಎಂದು ಫರೋಹನನ್ನು ಕೇಳಲು ಅವನು—ನಾ
ಅಂದನು. ಅದಕ್ಕೆ ಮೋಶೆ—ನಿನ್ನ ಮಾತಿನ ಪ್ರಕಾ
ವೇ ಆಗುವದು; ಕಪ್ಪೆಗಳು ನಿನ್ನನ್ನೂ ನಿನ್ನ ಮನೆಗ
ನ್ನೂ ನಿನ್ನ ಪ್ರಜಾಪರಿವಾರದವರನ್ನೂ ಬಿಟ್ಟು ನದಿ
ಲ್ಲಿ ಮಾತ್ರ ಇರುವವು; ಇದರಿಂದ ನಮ್ಮ ದೇವರಾ
ರುವ ಯೆಹೋವನಿಗೆ ಸಮಾನರು ಬೇರೆ ಯಾರ
ಇಲ್ಲವೆಂದು ತಿಳಿದುಕೊಳ್ಳುವಿ ಅಂದನು. ಮೋ
ಆರೋನರು ಫರೋಹನ ಬಳಿಯಿಂದ ಹೊರಟುಹೋ
ದಾಗ ಮೋಶೆ ಯೆಹೋವನಿಗೆ—ನೀನು ಫರೋಹ
ಮೇಲೆ ಬರಮಾಡಿರುವ ಕಪ್ಪೆಗಳನ್ನು ತೊಲಗಿಸಬೇಕ
ದು ಪ್ರಾರ್ಥನೆಮಾಡಿಕೊಂಡನು. ಯೆಹೋವ
ಮೋಶೆಯ ಮಾತಿನ ಪ್ರಕಾರ ಮಾಡಿದನು; ಮನೆ
ಳಲ್ಲಿಯೂ ಅಂಗಳಗಳಲ್ಲಿಯೂ ಬೈಲಿನಲ್ಲಿಯೂ ಇ
ಕಪ್ಪೆಗಳು ಸತ್ತುಹೋದವು. ಜನರು ಅವುಗಳನ್ನು ರಾ
ರಾಶಿಯಾಗಿ ಕೂಡಿಸಲು ದೇಶದಲ್ಲೆಲ್ಲಾ ದುರ್ವಾಸ
ತುಂಬಿತು. ಆದರೆ ಫರೋಹನು ಉಪಶಮನವಾ
ತೆಂದು ತಿಳಿದಾಗ ತನ್ನ ಹೃದಯವನ್ನು ಮೊಂ
ಮಾಡಿಕೊಂಡನು. ಯೆಹೋವನು ಹೇಳಿದ್ದಂತೆಯೆ
ಅವನು ಅವರ ಮಾತನ್ನು ಕೇಳದೆ ಹೋದನು.

ಹೇನು ಮುಂತಾದ ಹುಳಗಳ ಕಾಟವುಂಟಾದದ್ದು.

ತರುವಾಯ ಯೆಹೋವನು ಮೋಶೆಯ ಸಂಗಡ ಮ
ತಾಡಿ—ನೀನು ಆರೋನನಿಗೆ—ನಿನ್ನ ಕೋಲನ್ನು ಚಾ
ಭೂಮಿಯ ಧೂಳನ್ನು ಹೊಡೆ; ಹೊಡೆಯಲು ಐಗು
ದೇಶದಲ್ಲೆಲ್ಲಾ ಧೂಳು [2]ಹೇನುಗಳಾಗುವದು ಎಂ
ಹೇಳು ಅಂದನು. ಅವರು ಹಾಗೆಯೇ ಮಾಡಿದರು
ಆರೋನನು ಕೋಲನ್ನು ಹಿಡುಕೊಂಡು ಕೈಚಾಚಿ ಭ
ಮಿಯ ಧೂಳನ್ನು ಹೊಡೆಯಲು ಮನುಷ್ಯರ ಮೇ
ಯೂ ಪಶುಗಳ ಮೇಲೆಯೂ ಹೇನುಗಳು ಬಂದವ
ಐಗುಪ್ತದೇಶದಲ್ಲೆಲ್ಲಾ ಭೂಮಿಯಲ್ಲಿರುವ ಧೂಳ
ಹೇನುಗಳಾಯಿತು. ಜೋಯಿಸರು ತಮ್ಮ ಗುಪ
ವಿದ್ಯೆಯಿಂದ ಹಾಗೆಯೇ ಹೇನುಗಳನ್ನು ಉಂ
ಮಾಡುವದಕ್ಕೆ ಪ್ರಯತ್ನಮಾಡಿದಾಗ್ಯೂ ಆಗ
ಹೋಯಿತು. ಆ ಹೇನುಗಳು ಮನುಷ್ಯರ ಮೇ
ಯೂ ಪಶುಗಳ ಮೇಲೆಯೂ ಇದ್ದವು. ಆಗ
ಜೋಯಿಸರು—ಇದು ದೇವರ ಕೈಕೆಲಸವೇ ಸ
ಎಂದು ಫರೋಹನಿಗೆ ಹೇಳಿದರು. ಆದರೂ ಫರೋ

1) ಅಂದರೆ ತಪ್ಪಿಗೆಗಳಲ್ಲಿಯೂ.

2) ಅಥವಾ: ಗುಂಗಾಡಿ; ಅಥವಾ: ಸೊಳ್ಳೆ.

ಹನ ಹೃದಯವು ಕಠಿಣವಾಗಿತ್ತು; ಯೆಹೋವನು
ಮೋಶೆಗೆ ಮುಂತಿಳಿಸಿದಂತೆಯೇ ಅವನು ಅವರ
ಮಾತನ್ನು ಕೇಳದೆ ಹೋದನು.
20 ತರುವಾಯ ಯೆಹೋವನು ಮೋಶೆಗೆ—ನೀನು
ಬೆಳಿಗ್ಗೆ ಎದ್ದು ಫರೋಹನ ಮುಂದೆ ನಿಂತುಕೋ;
ಅವನು ನದಿಗೆ ಹೋಗುತ್ತಾನಲ್ಲಾ. ನೀನು ಅವನಿಗೆ
ಹೀಗನ್ನಬೇಕು—ಯೆಹೋವನು ಆಜ್ಞಾಪಿಸುವದೇ
ನಂದರೆ, ನನ್ನನ್ನು ಆರಾಧಿಸುವಂತೆ ನನ್ನ ಜನ
21 ರಿಗೆ ಅಪ್ಪಣೆಕೊಡಬೇಕು. ಅಪ್ಪಣೆಕೊಡದೆಹೋದರೆ
ನಾನು ನಿನಗೂ ನಿನ್ನ ಪ್ರಜಾಪರಿವಾರದವರಿಗೂ
ನಿನ್ನ ಮನೆಗಳಿಗೂ ವಿಷದ ಹುಳಗಳ ಕಾಟವುಂಟಾಗು
ವಂತೆ ಮಾಡುವೆನು. ಐಗುಪ್ತ್ಯರ ಮನೆಗಳಲ್ಲಿಯೂ
ಅವರು ಇರುವ ಎಲ್ಲಾ ಭೂಮಿಯಲ್ಲಿಯೂ ಆ ಹುಳ
22 ಗಳು ತುಂಬಿಕೊಳ್ಳುವವು. ಆದರೆ ನನ್ನನ್ನೇ ಭೂಲೋ
ಕದಲ್ಲಿ ಆಳುವ ಯೆಹೋವನು ಎಂದು ನೀನು ತಿಳು
ಕೊಳ್ಳುವಂತೆ ನಾನು ಆ ದಿನದಲ್ಲಿ ನನ್ನ ಜನರು
ವಾಸವಾಗಿರುವ ಗೋಷೆನ್ ಸೀಮೆಯನ್ನು ವಿಶೇಷಿ
23 ಸುವೆನು; ಅಲ್ಲಿ ಆ ಕಾಟವಿರುವದಿಲ್ಲ. ನನ್ನ ಜನಕ್ಕೂ
ನಿನ್ನ ಜನಕ್ಕೂ ವ್ಯತ್ಯಾಸಮಾಡುವೆನು. ನಾಳೆಯೇ
ಈ ಮಹತ್ಕಾರ್ಯವುಂಟಾಗುವದು ಅನ್ನಬೇಕೆಂದು
24 ಹೇಳಿದನು. ಯೆಹೋವನು ಹಾಗೆಯೇ ಮಾಡಿ
ದನು; ವಿಷದ ಹುಳಗಳು ಫರೋಹನ ಅರಮನೆ
ಯಲ್ಲಿಯೂ ಅವನ ಪರಿವಾರದವರ ಮನೆಗಳಲ್ಲಿ
ಯೂ ಸಮಸ್ತ ಐಗುಪ್ತದೇಶದಲ್ಲಿಯೂ ವಿಪರೀತವಾಗಿ
ತುಂಬಿಕೊಂಡವು; ಅವುಗಳಿಂದ ದೇಶವು ಹಾಳಾ
ಯಿತು.
25 ಆಗ ಫರೋಹನು ಮೋಶೆ ಆರೋನರನ್ನು ಕರಿಸಿ—
ನೀವು ಹೋಗಿ ಈ ದೇಶದೊಳಗೇ ನಿಮ್ಮ ದೇವರಿಗೆ
26 ಯಜ್ಞಮಾಡಬಹುದು ಅಂದನು. ಆದರೆ ಮೋಶೆ—
ಹಾಗೆ ಮಾಡುವದು ಯುಕ್ತವಲ್ಲ. ನಮ್ಮ ದೇವರಾದ
ಯೆಹೋವನಿಗೆ ನಾವು ಯಜ್ಞದಲ್ಲಿ ಕೊಡುವ ಆಹುತಿ
ಐಗುಪ್ತ್ಯರಿಗೆ ನಿಷೇಧ. ನಿಷಿದ್ಧವೆಂದು ಐಗುಪ್ತ್ಯರು
ತಿಳುಕೊಂಡಿರುವ ಆಹುತಿಯನ್ನು ನಾವು ಅವರ ಕಣ್ಣಿನ
ಮುಂದೆ ಮಾಡಿದರೆ ಅವರು ನಮ್ಮನ್ನು ಕೊಲ್ಲುವದಕ್ಕೆ
ಕಲ್ಲೆಸೆಯುವರಲ್ಲವೇ. ನಾವು ಅರಣ್ಯದಲ್ಲಿ ಮೂರು
ದಿವಸದ ಪ್ರಯಾಣದಷ್ಟು ದೂರ ಹೋಗಿ ನಮ್ಮ
ದೇವರಾದ ಯೆಹೋವನು ಆಜ್ಞಾಪಿಸುವ ಪ್ರಕಾರ
28 ಯಜ್ಞಮಾಡಬೇಕು ಅಂದನು. ಅದಕ್ಕೆ ಫರೋ
ಹನು—ಒಳ್ಳೇದು, ಅರಣ್ಯದಲ್ಲಿ ನಿಮ್ಮ ದೇವರಾದ
ಯೆಹೋವನಿಗೆ ಯಜ್ಞಮಾಡುವಂತೆ ನಿಮಗೆ ಅಪ್ಪಣೆ
ಕೊಡುತ್ತೇನೆ; ಆದರೆ ದೂರ ಹೋಗಕೂಡದು; ನನ
29 ಗೋಸ್ಕರ ಪ್ರಾರ್ಥನೆಮಾಡಿರಿ ಅಂದನು. ಅದಕ್ಕೆ
ಮೋಶೆ—ನಾನು ನಿನ್ನ ಬಳಿಯಿಂದ ಹೊರಟಾಗ ಫರೋ
ಹನಾದ ನಿನಗೂ ನಿನ್ನ ಪ್ರಜಾಪರಿವಾರದವರಿಗೂ
ಹುಳಗಳ ಬಾಧೆಯು ನಾಳೆಯಿಂದ ಇರಬಾರದೆಂಬ
ದಾಗಿ ಯೆಹೋವನಿಗೆ ಪ್ರಾರ್ಥನೆಮಾಡುವೆನು. ಆದರೆ
ಯೆಹೋವನಿಗೆ ಯಜ್ಞಮಾಡಲಿಕ್ಕೆ ನೀನು ಜನರಿಗೆ
ಅಪ್ಪಣೆಕೊಡದೆ ಇನ್ನು ಮುಂದೆ ವಂಚನೆಮಾಡ
30 ಬಾರದು ಅಂದನು. ಮೋಶೆಯು ಫರೋಹನ ಬಳಿ
ಯಿಂದ ಹೊರಟು ಯೆಹೋವನಿಗೆ ಪ್ರಾರ್ಥನೆಮಾಡ
ಲು, ಅವನ ಪ್ರಾರ್ಥನೆಯ ಮೇರೆಗೆ ಯೆಹೋವನು 31
ಮಾಡಿದನು. ಆ ಹುಳಗಳೆಲ್ಲಾ ಫರೋಹನ ಬಳಿ
ಯಿಂದಲೂ ಅವನ ಪ್ರಜಾಪರಿವಾರದವರ ಬಳಿಯಿಂದ
ಲೂ ತೊಲಗಿಹೋದವು; ಒಂದೂ ಉಳಿಯಲಿಲ್ಲ.
ಆದರೂ ಫರೋಹನು ಆಗಲೂ ತನ್ನ ಹೃದಯ 32
ವನ್ನು ಮೊಂಡಮಾಡಿಕೊಂಡು ಜನರಿಗೆ ಅಪ್ಪಣೆ
ಕೊಡದೆಹೋದನು.

ಐಗುಪ್ತ್ಯರಿಗೆ ಶರೀರದಲ್ಲಿ ಹುಣ್ಣುಬೊಕ್ಕೆಗಳೂ ಅವರ
ದನಗಳಿಗೆ ವ್ಯಾಧಿಯೂ ಉಂಟಾದದ್ದು.

ತರುವಾಯ ಯೆಹೋವನು ಮೋಶೆಗೆ ಹೇಳಿದ್ದೇ **9**
ನಂದರೆ—ನೀನು ಫರೋಹನ ಬಳಿಗೆ ಹೋಗಿ ಅವ
ನಿಗೆ—ಇಬ್ರಿಯರ ದೇವರಾದ ಯೆಹೋವನು ತನ್ನನ್ನು
ಆರಾಧಿಸುವಂತೆ ತನ್ನ ಜನರಿಗೆ ಅಪ್ಪಣೆಕೊಡಬೇಕೆಂಬ
ದಾಗಿ ಹೇಳಿದ್ದಾನಷ್ಟೆ. ನೀನು ಅವರಿಗೆ ಅಪ್ಪಣೆ 2
ಕೊಡದೆ ಇನ್ನೂ ಅವರನ್ನು ತಡೆದರೆ ಯೆಹೋವನು 3
ಅಡವಿಯಲ್ಲಿರುವ ನಿನ್ನ ಎಲ್ಲಾ ಪಶುಗಳಿಗೂ ಕುದುರೆ
ಕತ್ತೆ ಒಂಟೆ ದನ ಕುರಿ ಆಡು ಇವೆಲ್ಲವುಗಳಿಗೂ
ವಿರೋಧವಾಗಿ ತನ್ನ ಕೈಯತ್ತಿ ಘೋರವ್ಯಾಧಿ
ಯನ್ನುಂಟುಮಾಡುವನೆಂದು ತಿಳುಕೋ. ಇಸ್ರಾ 4
ಯೇಲ್ಯರ ಪಶುಗಳಿಗೂ ಐಗುಪ್ತ್ಯರ ಪಶುಗಳಿಗೂ
ಆತನು ವ್ಯತ್ಯಾಸಮಾಡುವನು; ಇಸ್ರಾಯೇಲ್ಯರಿ
ಗಿರುವ ಪಶುಗಳಲ್ಲಿ ಒಂದೂ ಸಾಯುವದಿಲ್ಲವೆಂದು
ಹೇಳಬೇಕು. ಇದಲ್ಲದೆ ಯೆಹೋವನು ಕಾಲವನ್ನು 5
ನಿರ್ಣಯಿಸಿ—ನಾಳೆಯೇ ಈ ಕಾರ್ಯವನ್ನು ನಡಿಸು
ವೆನು ಎಂದು ಹೇಳಿದನು.
ಮಾರಣೆಯದಿನ ಯೆಹೋವನು ಆ ಕಾರ್ಯವುಂಟಾ 6
ಗುವಂತೆ ಮಾಡಿದನು. ಐಗುಪ್ತ್ಯರ ಪಶುಗಳೆಲ್ಲಾ
ಸಾಯುತ್ತಾ ಬಂದವು; ಇಸ್ರಾಯೇಲ್ಯರ ಪಶುಗಳಲ್ಲಿ
ಒಂದೂ ಸಾಯಲಿಲ್ಲ. ಫರೋಹನು ವಿಚಾರಿಸಿದಾಗ 7
ಇಸ್ರಾಯೇಲ್ಯರ ಪಶುಗಳಲ್ಲಿ ಒಂದೂ ಸಾಯಲಿಲ್ಲ
ವೆಂದು ತಿಳುಕೊಂಡನು. ಆದಾಗ್ಯೂ ಫರೋಹನ
ಹೃದಯವು ಮೊಂಡವಾಗಿದ್ದದರಿಂದ ಆ ಜನರಿಗೆ ಹೊರ
ಡಲಿಕ್ಕೆ ಅಪ್ಪಣೆಕೊಡದೆಹೋದನು.
ಯೆಹೋವನು ಮೋಶೆ ಆರೋನರಿಗೆ—ನೀವು ಆವಿ 8
ಗೆಯ ಬೂದಿಯನ್ನು ಕೈತುಂಬ ತೆಗೆದುಕೊಳ್ಳಿರಿ;
ಮೋಶೆ ಅದನ್ನು ಫರೋಹನ ಕಣ್ಣಿನ ಮುಂದೆ ಆಕಾ
ಶಕ್ಕೆ ತೂರಲಿ. ಅದು ಸಣ್ಣ ಪುಡಿಯಾಗಿ ಐಗುಪ್ತದೇಶ 9
ದಲ್ಲೆಲ್ಲಾ ಹಬ್ಬಿ ಮನುಷ್ಯರಲ್ಲಿಯೂ ಪಶುಗಳಲ್ಲಿಯೂ
ಹುಣ್ಣಾಗುವ ಬೊಕ್ಕೆಗಳನ್ನುಂಟುಮಾಡುವದು ಎಂದು
ಹೇಳಿದನು. ಮೋಶೆ ಆರೋನರು ಆವಿಗೆಯ ಬೂದಿ 10
ಯನ್ನು ತೆಗೆದುಕೊಂಡು ಫರೋಹನ ಮುಂದೆ ನಿಂತು
ಕೊಂಡರು; ಮೋಶೆಯು ಆ ಬೂದಿಯನ್ನು ಆಕಾ
ಶಕ್ಕೆ ತೂರಲಾಗಿ ಅದು ಮನುಷ್ಯರಲ್ಲಿಯೂ ಪಶುಗಳ
ಲ್ಲಿಯೂ ಹುಣ್ಣಾಗುವ ಬೊಕ್ಕೆಗಳನ್ನೆಬ್ಬಿಸಿತು. ಆ 11
ಹುಣ್ಣುಗಳು ಜೋಯಿಸರಲ್ಲಿಯೂ ಐಗುಪ್ತ್ಯರೆಲ್ಲರಲ್ಲಿ
ಯೂ ಇದ್ದದರಿಂದ ಆ ಜೋಯಿಸರು ಹುಣ್ಣುಗಳ ದೆಸೆ
ಯಿಂದ ಮೋಶೆಯ ಮುಂದೆ ನಿಲ್ಲಲಾರದೆಹೋದರು.
ಆದರೂ ಯೆಹೋವನು ಮೋಶೆಗೆ ಹೇಳಿದ್ದಂತೆಯೇ 12

ಆಯಿತು; ಯೆಹೋವನು ಫರೋಹನ ಹೃದಯವನ್ನು
ಕಠಿಣಮಾಡಿದ್ದರಿಂದ ಅವನು ಅವರ ಮಾತಿಗೆ ಕಿವಿ
ಗೊಡದೆಹೋದನು.

ವಿಪರೀತವಾದ ಆನೆಕಲ್ಲಿನ ಮಳೆಯಿಂದ ಐಗುಪ್ತದೇಶವು
ಹಾಳಾದದ್ದು.

13 ತರುವಾಯ ಯೆಹೋವನು ಮೋಶೆಗೆ—ನೀನು
ಬೆಳಿಗ್ಗೆ ಎದ್ದು ಫರೋಹನ ಮುಂದೆ ನಿಂತುಕೊಂಡು
ಹೀಗನ್ನ ಬೇಕು—ಇಬ್ರಿಯರ ದೇವರಾದ ಯೆಹೋ
ವನು ಆಜ್ಞಾಪಿಸುವದೇನಂದರೆ—ನನ್ನನ್ನು ಆರಾಧಿಸು
14 ವಂತೆ ನನ್ನ ಜನರಿಗೆ ಅಪ್ಪಣೆಕೊಡಬೇಕು. ಈ ಸಾರಿ
ನಾನು ನನ್ನ ವಶದಲ್ಲಿರುವ ಈತಿಬಾಧೆಗಳನ್ನು ನಿನ್ನ
ಪ್ರಜಾಪರಿವಾರದವರಿಗೆ ಉಂಟಾಗುವಂತೆಯೂ ನಿನ್ನ
ಹೃದಯಕ್ಕೂ ತಗಲುವಂತೆಯೂ ಮಾಡುವೆನು.
ಅದರಿಂದ ಸಮಸ್ತಲೋಕದಲ್ಲಿ ನನಗೆ ಸಮಾನರು
ಬೇರೆ ಯಾರೂ ಇಲ್ಲವೆಂದು ನನ್ನ ವಿಷಯದಲ್ಲಿ ತಿಳು
15 ಕೊಳ್ಳುವಿ. ನಾನು ಕೈಯೆತ್ತಿ ನಿನ್ನನ್ನೂ ನಿನ್ನ ಪ್ರಜೆ
ಗಳನ್ನೂ ಅಂಟುರೋಗದಿಂದ ಸಾಯಿಸಬಹುದಾಗಿತ್ತು;
ಆಗ ನೀನು ಈ ವರೆಗೆ ಭೂಮಿಯಲ್ಲಿ ಇರದಂತೆ
16 ನಿರ್ಮೂಲವಾಗುತ್ತಿದ್ದಿ. ಆದರೆ ನಾನು ನಿನ್ನಲ್ಲಿ
ನನ್ನ ಶಕ್ತಿಯನ್ನು ತೋರಿಸಿ ನನ್ನ ಹೆಸರನ್ನು ಲೋಕ
ದಲ್ಲೆಲ್ಲಾ ಪ್ರಸಿದ್ಧಿಪಡಿಸಬೇಕೆಂಬ ಉದ್ದೇಶದಿಂದಲೇ
17 ನಿನ್ನನ್ನು ಸಾಯಿಸದೆ ಉಳಿಸಿದೆನು. ನೀನು ನನ್ನ
ಜನರನ್ನು ಇನ್ನೂ ಹೋಗಗೊಡಿಸದೆ ನಿನ್ನನ್ನು ಅವರ
18 ಮುಂದೆ ಆಟಂಕವಾಗಿ ಒಡ್ಡುತ್ತೀಯಾ? ಹಾಗಾದರೆ
ನಾಳೆ ಇಷ್ಟು ಹೊತ್ತಿಗೆ ವಿಪರೀತವಾದ ಆನೆಕಲ್ಲಿನ
ಮಳೆ ಬೀಳುವಂತೆ ಮಾಡುವೆನು; ಐಗುಪ್ತರಾಜ್ಯವು
ಸ್ಥಾಪಿಸಲ್ಪಟ್ಟ ದಿನ ಮೊದಲುಗೊಂಡು ಇಂದಿನ ವರೆ
19 ಗೂ ಅಂಥ ಕಲ್ಲಿನ ಮಳೆ ಬಿದ್ದಿಲ್ಲ. ಆದಕಾರಣ
ನೀನು ಆಳುಗಳನ್ನು ಕಳುಹಿಸಿ ನಿನ್ನ ಪಶುಗಳನ್ನೂ
ನಿನಗೆ ಅಡವಿಯಲ್ಲಿರುವದೆಲ್ಲವನ್ನೂ ಬೇಗ ಭದ್ರ
ಮಾಡಿಸು. ಮನೆಯೊಳಗೆ ಬಾರದೆ ಬೈಲಿನಲ್ಲೇ
ಇರುವ ಎಲ್ಲಾ ಮನುಷ್ಯರೂ ಪಶುಗಳೂ ಆ ಕಲ್ಲಿನ
ಮಳೆಯ ಹೊಡೆತದಿಂದ ಸಾಯುವರು ಎಂದು ಹೇಳಿ
ದನು.
20 ಆಗ ಫರೋಹನ ಸೇವಕರಲ್ಲಿ ಯಾರಾರು ಯೆ
ಹೋವನ ಮಾತಿಗೆ ಹೆದರಿದರೋ ಅವರು ತಮ್ಮ
ಆಳುಗಳನ್ನೂ ಪಶುಗಳನ್ನೂ ಬೇಗ ಮನೆಗೆ ಬರ
21 ಮಾಡಿಕೊಂಡರು; ಯಾರು ಯೆಹೋವನ ಮಾತನ್ನು
ಮನಸ್ಸಿಗೆ ತೆಗೆದುಕೊಳ್ಳಲಿಲ್ಲವೋ ಅವರು ತಮ್ಮ
ಆಳುಗಳನ್ನೂ ಪಶುಗಳನ್ನೂ ಅಡವಿಯಲ್ಲೇ ಬಿಟ್ಟರು.
22 ಯೆಹೋವನು ಮೋಶೆಗೆ—ಆಕಾಶಕ್ಕೆ ನಿನ್ನ ಕೈ
ಚಾಚು; ಆಗ ಐಗುಪ್ತದೇಶದಲ್ಲೆಲ್ಲಾ ಮನುಷ್ಯರ
ಮೇಲೆಯೂ ಪಶುಗಳ ಮೇಲೆಯೂ ಹೊಲದಲ್ಲಿರುವ
ಎಲ್ಲಾ ಪೈರುಗಳ ಮೇಲೆಯೂ ಆನೆಕಲ್ಲಿನ ಮಳೆ
23 ಬೀಳುವದು ಎಂದು ಹೇಳಿದನು. ಮೋಶೆಯು ತನ್ನ
ಕೋಲನ್ನು ಆಕಾಶಕ್ಕೆ ಚಾಚಿದಾಗ ಯೆಹೋವನು
ಗುಡುಗನ್ನೂ ಆನೆಕಲ್ಲಿನ ಮಳೆಯನ್ನೂ ಉಂಟುಮಾಡಿ
ದನು. ಸಿಡಿಲುಗಳು ನೆಲಕ್ಕೆ ಬಿದ್ದವು. ಯೆಹೋವನು

ಐಗುಪ್ತದೇಶದ ಮೇಲೆ ಕಲ್ಲಿನ ಮಳೆಯನ್ನು ಸುರಿಸಿ
ದನು. ಕಲ್ಲಿನ ಮಳೆಯು ಬಹುಬಲವಾಗಿತ್ತು. ಝುಗ
ಝುಗಿಸುವ ಮಿಂಚೂ ಅದರೊಂದಿಗಿತ್ತು. ಐಗು
ಪ್ತ್ಯರು ಜನಾಂಗವಾದಂದಿನಿಂದಲೂ ಆ ದೇಶದಲ್ಲಿ
ಅಂಥ ಘೋರವಾದ ಕಲ್ಲಿನ ಮಳೆ ಆಗಿರಲಿಲ್ಲ. ಆ
ಕಲ್ಲಿನ ಮಳೆ ಐಗುಪ್ತದೇಶದ ಎಲ್ಲಾ ಕಡೆಯಲ್ಲಿ
ಮನುಷ್ಯರನ್ನೂ ಪಶುಗಳನ್ನೂ ಬೈಲಿನಲ್ಲಿದ್ದ ಎಲ್ಲ
ವನ್ನೂ ನಷ್ಟಪಡಿಸಿತು. ಆ ಕಲ್ಲಿನ ಮಳೆಯಿಂದ
ಹೊಲಗಳಲ್ಲಿದ್ದ ಎಲ್ಲಾ ಪೈರುಗಳು ಹಾಳಾದವು
ಅಡವಿಯಲ್ಲಿದ್ದ ಮರಗಳು ಮುರಿದುಹೋದವು
ಇಸ್ರಾಯೇಲ್ಯರು ಇದ್ದ ಗೋಷೆನ್‌ಸೀಮೆಯಲ್ಲಿ
ಮಾತ್ರ ಕಲ್ಲಿನ ಮಳೆ ಬೀಳಲಿಲ್ಲ.
ಆಗ ಫರೋಹನು ಮೋಶೆ ಆರೋನರನ್ನು ಕರಿಸಿ
ಅವರಿಗೆ—ನಾನು ಅಪರಾಧಿಯೆಂದು ಈಗ ಒಪ್ಪಿ
ಕೊಂಡೆನು; ಯೆಹೋವನು ನ್ಯಾಯವಂತನು, ನಾನೂ
ನನ್ನ ಜನರೂ ದೋಷಿಗಳು. ಈ ಭಯಂಕರವಾದ
ಗುಡುಗೂ ಕಲ್ಲಿನ ಮಳೆಯೂ ಬಹು ಹೆಚ್ಚಾದವು.
ಇವುಗಳನ್ನು ನಿಲ್ಲಿಸುವದಕ್ಕೆ ಯೆಹೋವನನ್ನು ಪ್ರಾ
ರ್ಥಿಸಿರಿ. ದೇಶವನ್ನು ಬಿಟ್ಟು ಹೊರಡುವದಕ್ಕೆ ನಿಮಗೆ
ಅಪ್ಪಣೆಕೊಡುತ್ತೇನೆ, ನಿಮ್ಮನ್ನು ತಡೆಯುವದಿಲ್ಲ
ಎಂದು ಹೇಳಿದನು. ಅದಕ್ಕೆ ಮೋಶೆ—ನಾನು ಪಟ್ಟ
ಣದಿಂದಾಚೆಗೆ ಹೋದಕೂಡಲೇ ಕೈಯೆತ್ತಿ ಯೆಹೋ
ವನನ್ನು ಪ್ರಾರ್ಥಿಸುವೆನು; ಆಗ ಗುಡುಗೂ ಕಲ್ಲಿನ
ಮಳೆಯೂ ನಿಂತುಹೋಗುವವು. ಇದರಿಂದ ಸಮಸ್ತ
ಭೂಲೋಕವು ಯೆಹೋವನ ಅಧಿಕಾರದೊಳಗೆ ಇದೆ
ಎಂದು ನೀನು ತಿಳಿದುಕೊಳ್ಳುವಿ. ಆದರೂ ನೀನಾ
ಗಲಿ ನಿನ್ನ ಪರಿವಾರದವರಾಗಲಿ ದೇವರಾಗಿರುವ ಯೆ
ಹೋವನಿಗೆ ಅಗಲೂ ಭಯಪಡುವದಿಲ್ಲವೆಂದು ಬಲ್ಲೆ
ನು ಅಂದನು.
ಜವೆಗೋದಿಗೆ ತೆನೆಯೂ ಅಗಸೆಗೆ ಮೊಗ್ಗೆಯೂ
ಆಗಿದ್ದದರಿಂದ ಆ ಎರಡು ಬೆಳೆಗೂ ನಷ್ಟವಾಯಿತು.
ಗೋದಿಯೂ ಕಡಲೆಯೂ ಹಿಂದಿನ ಬೆಳೆಯಾದದರಿಂದ
ಅದಕ್ಕೆ ನಷ್ಟವಾಗಲಿಲ್ಲ.
ಮೋಶೆಯು ಫರೋಹನನ್ನು ಬಿಟ್ಟು ಪಟ್ಟಣದಿಂದ
ಹೊರಗೆ ಬಂದು ಕೈಯೆತ್ತಿ ಯೆಹೋವನನ್ನು ಪ್ರಾರ್ಥ
ಸಿದಾಗ ಗುಡುಗೂ ಕಲ್ಲಿನ ಮಳೆಯೂ ನಿಂತುಹೋದ
ವು, ಮಳೆಯು ನಿಂತಿತು. ಆದರೆ ಆ ಬಿರುಮಳೆ
ಯೂ ಕಲ್ಲಿನ ಮಳೆಯೂ ಗುಡುಗೂ ನಿಂತುಹೋದ
ದ್ದನ್ನು ಫರೋಹನು ಕಂಡಾಗ ಅವನೂ ಅವನ ಪರಿ
ವಾರದವರೂ ಇನ್ನೂ ಪಾಪಿಷ್ಠರಾಗಿ ತಮ್ಮ ಹೃದಯ
ಗಳನ್ನು ಮೊಂಡಮಾಡಿಕೊಂಡರು. ಯೆಹೋವನು
ಮೋಶೆಯಿಂದ ಹೇಳಿಸಿದಂತೆಯೇ ಆಯಿತು; ಫರೋ
ಹನ ಹೃದಯವು ಕಠಿಣವಾಗಿತ್ತು. ಅವನು ಇಸ್ರಾ
ಯೇಲ್ಯರನ್ನು ಹೋಗಗೊಡಿಸಲೇ ಇಲ್ಲ.

ಮಿಡಿತೆಗಳಿಂದುಂಟಾದ ಬಾಧೆ.

ತರುವಾಯ ಯೆಹೋವನು ಮೋಶೆಗೆ ಇಂತೆಂದ
ನು—ಫರೋಹನ ಬಳಿಗೆ ತಿರಿಗಿ ಹೋಗು. ನಾನು
ಫರೋಹನ ಮತ್ತು ಅವನ ಪರಿವಾರದವರ ಮುಂದೆ

ಈ ಮಹತ್ಕಾರ್ಯಗಳನ್ನು ನಡಿಸುವದಕ್ಕೆ ಆಸ್ಪದವಾ
2 ಗುವದಕ್ಕೂ ಇಸ್ರಾಯೇಲ್ಯರು ತಮ್ಮ ಮಕ್ಕಳಿಗೂ
ಮೊಮ್ಮಕ್ಕಳಿಗೂ ನಾನು ಐಗುಪ್ತ್ಯರ ನಡುವೆ ನಡಿಸಿ
ರುವ ಮಹತ್ಕಾರ್ಯಗಳನ್ನು ವಿವರಿಸಿ—ಯೆಹೋವ
ನು ಐಗುಪ್ತ್ಯರನ್ನು ತನಗೆ ಇಷ್ಟ ಬಂದಂತೆ ಆಡಿಸಿ
ಶಿಕ್ಷಿಸಿದನು ಎಂಬದಾಗಿ ತಿಳಿಸುವದಕ್ಕೂ ನಾನು
ಫರೋಹನ ಹೃದಯವನ್ನೂ ಅವನ ಪರಿವಾರದವರ
ಹೃದಯಗಳನ್ನೂ ಮೊಂಡಮಾಡಿದ್ದೇನೆ. ಇದಲ್ಲದೆ ಈ
ಮಹತ್ಕಾರ್ಯಗಳಿಂದ ನೀವು ನನ್ನನ್ನೇ ಯೆಹೋವ
ನೆಂದು ತಿಳುಕೊಳ್ಳುವಿರಿ.
3 ಮೋಶೆ ಆರೋನರು ಫರೋಹನ ಬಳಿಗೆ ಹೋಗಿ
ಅವನಿಗೆ—ಇಬ್ರಿಯರ ದೇವರಾಗಿರುವ ಯೆಹೋವನು
ಆಜ್ಞಾಪಿಸುವದೇನಂದರೆ—ನೀನು ನನ್ನ ಮುಂದೆ ತಗ್ಗಿ
ಸಿಕೊಳ್ಳದೆ ಇರುವದು ಇನ್ನು ಎಲ್ಲಿಯ ವರೆಗೋ?
ನನ್ನನ್ನು ಆರಾಧಿಸುವಂತೆ ನನ್ನ ಜನರಿಗೆ ಅಪ್ಪಣೆ
4 ಕೊಡು. ಅಪ್ಪಣೆಕೊಡದೆಹೋದರೆ ನಾಳೆ ನಿನ್ನ ರಾಜ್ಯ
ದೊಳಕ್ಕೆ ಮಿಡಿತೆಗಳನ್ನು ಬರಮಾಡುವೆನು. ಅವು
ಭೂಮಿಯನ್ನೆಲ್ಲಾ ಮುಚ್ಚಿಕೊಳ್ಳುವವು; ನೆಲವೇ
ಕಾಣಿಸದೆ ಹೋಗುವದು. ಆನೆಕಲ್ಲಿನ ಮಳೆಯಿಂದ
ನಾಶವಾಗದೆ ಉಳಿದದ್ದೆಲ್ಲವನ್ನು ಮಿಡಿತೆಗಳು ತಿಂದು
ಬಿಡುವವು; ಹೊಲದಲ್ಲಿರುವ ನಿಮ್ಮ ಎಲ್ಲಾ ಮರಗಳ
ಎಲೆಚಿಗುರುಗಳನ್ನೂ ತಿಂದುಬಿಡುವವು. ಅವು ನಿನ್ನ
ಮನೆಗಳಲ್ಲಿಯೂ ನಿನ್ನ ಪರಿವಾರದವರ ಮನೆಗಳ
ಲ್ಲಿಯೂ ಐಗುಪ್ತ್ಯರೆಲ್ಲರ ಮನೆಗಳಲ್ಲಿಯೂ ತುಂಬಿ
ಕೊಂಡಿರುವವು. ನಿಮ್ಮ ತಂದೆತಾತಂದಿರು ಹುಟ್ಟಿ
ದಂದಿನಿಂದ ಇಂದಿನ ವರೆಗೂ ಅಂಥ ಮಿಡಿತೇ ದಂಡನ್ನು
ಎಂದೂ ನೋಡಿಲ್ಲ ಎಂದು ಹೇಳಿದರು. ಇದನ್ನು ಹೇಳಿ
ಮೋಶೆ ತಿರುಗಿಕೊಂಡು ಫರೋಹನ ಬಳಿಯಿಂದ
ಹೊರಟುಹೋದನು.
ಆಗ ಫರೋಹನ ಪರಿವಾರದವರು ಅವನಿಗೆ—ಈ
ಮನುಷ್ಯನು ಇನ್ನು ಎಷ್ಟು ದಿವಸ ನಮಗೆ ಉರು
ಲಾಗಿರಬೇಕು? ಆ ಜನರು ಹೋಗಿ ತಮ್ಮ ದೇವರಾದ
ಯೆಹೋವನನ್ನು ಆರಾಧಿಸುವದಕ್ಕೆ ಅಪ್ಪಣೆಕೊಡು.
ಐಗುಪ್ತದೇಶವು ಹಾಳಾಯಿತೆಂದು ಇನ್ನೂ ನಿನ್ನ ಮನ
ಸ್ಸಿಗೆ ಬರಲಿಲ್ಲವೋ ಎಂದು ಹೇಳಿದರು. ಅದನ್ನು
ಕೇಳಿ ಫರೋಹನು ಮೋಶೆ ಆರೋನರನ್ನು ತಿರಿಗಿ
ಕರಿಸಿ ಅವರಿಗೆ—ನೀವು ಹೋಗಿ ನಿಮ್ಮ ದೇವರಾದ
ಯೆಹೋವನನ್ನು ಆರಾಧಿಸಿ ಬರಬಹುದು; ಆದರೆ
ಯಾರಾರು ಹೋಗಬೇಕೆನ್ನುತ್ತೀರಿ ಎಂದು ಕೇಳ
ಲಾಗಿ ಮೋಶೆ ಅವನಿಗೆ—ನಾವು ಯೆಹೋವನಿಗೆ
ಜಾತ್ರೆಯನ್ನು ನಡಿಸಬೇಕಾಗಿದೆ; ಆದಕಾರಣ ಹುಡು
ಗರು, ಮುದುಕರು ಎಲ್ಲರು ಹೋಗುತ್ತೇವೆ; ಗಂಡು
ಹೆಣ್ಣು ಮಕ್ಕಳನ್ನೂ ದನಕುರಿಗಳನ್ನೂ ತೆಗೆದು
ಕೊಂಡು ಹೋಗುತ್ತೇವೆ ಎಂದು ಉತ್ತರಕೊಟ್ಟನು.
ಅದಕ್ಕೆ ಫರೋಹನು—ನೀವು ನಿಮ್ಮ ಮನೆಯವರೆಲ್ಲ
ರನ್ನು ಕರೆದುಕೊಂಡು ಹೋಗುವದಕ್ಕೆ ನಾನು ಎಂದಿ
ಗೂ ಅಪ್ಪಣೆಕೊಡುವದಿಲ್ಲ; ನಾನು ಅಪ್ಪಣೆಕೊಟ್ಟರೆ
ಯೆಹೋವನ ದಯವು ನಿಮಗುಂಟಾಗಬಹುದು, ಸರಿ.
ನೋಡಿಕೊಳ್ಳಿರಿ, ನೀವು ದುರಾಲೋಚನೆ ಮಾಡಿ
ಕೊಂಡವರು. ನಿಮ್ಮಲ್ಲಿ ಗಂಡಸರು ಮಾತ್ರ ಹೋಗಿ
ಯೆಹೋವನನ್ನು ಆರಾಧಿಸಿ ಬರಬಹುದು; ನೀವು
ಕೇಳಿಕೊಂಡದ್ದು ಅಷ್ಟೇ ಅಲ್ಲವೇ ಎಂದು ಹೇಳಿ ಅವ
ರನ್ನು ತನ್ನ ಸನ್ನಿಧಿಯಿಂದ ಹೊರಡಿಸಿಬಿಟ್ಟನು.
ಆಗ ಯೆಹೋವನು ಮೋಶೆಗೆ—ಐಗುಪ್ತದೇಶದ 12
ಮೇಲೆ ನಿನ್ನ ಕೈ ಚಾಚಿ ಮಿಡಿತೆಗಳನ್ನು ಬರಮಾಡು;
ಕಲ್ಲಿನ ಮಳೆಯಿಂದ ನಾಶವಾಗದೆ ಉಳಿದಿರುವ ಪೈರು
ಗಳನ್ನೆಲ್ಲಾ ಮಿಡಿತೆಗಳು ತಿಂದುಬಿಡಲಿ ಎಂದು ಹೇಳಿ
ದನು. ಮೋಶೆ ತನ್ನ ಕೋಲನ್ನು ಐಗುಪ್ತದೇಶದ 13
ಮೇಲೆ ಚಾಚಿದಾಗ ಯೆಹೋವನು ಆ ಹಗಲಿರುಳು
ಮೂಡಣದಿಕ್ಕಿನಿಂದ ಗಾಳಿಯನ್ನು ಬೀಸಮಾಡಿದನು.
ಹೊತ್ತಾರೆ ಆ ಗಾಳಿಯ ದೆಸೆಯಿಂದ ಮಿಡಿತೆಗಳು
ಬಂದಿದ್ದವು. ಮಿಡಿತೆಗಳು ಐಗುಪ್ತದೇಶದಲ್ಲೆಲ್ಲಾ 14
ಬಂದು ಐಗುಪ್ತದೇಶದ ಎಲ್ಲಾ ಕಡೆಯಲ್ಲಿಯೂ ಅಪ
ರಿಮಿತವಾಗಿ ಇಳಿದವು. ಅಂಥ ಮಿಡಿತೆಯ ದಂಡು
ಹಿಂದೆಂದೂ ಬಂದಿರಲಿಲ್ಲ, ಮುಂದೆಯೂ ಬರಲಿಕ್ಕಿಲ್ಲ.
ಅವು ಭೂಮಿಯನ್ನೆಲ್ಲಾ ಮುಚ್ಚಿಕೊಂಡದ್ದರಿಂದ ನೆಲ 15
ವು ಕಾಣದೆಹೋಯಿತು. ಆನೆಕಲ್ಲಿನ ಮಳೆಯಿಂದ
ನಾಶವಾಗದೆ ಉಳಿದಿದ್ದ ಎಲ್ಲಾ ಪೈರುಗಳನ್ನೂ ಮರ
ಗಳಲ್ಲಿದ್ದ ಎಲ್ಲಾ ಕಾಯಿಗಳನ್ನೂ ತಿಂದುಬಿಟ್ಟವು.
ಐಗುಪ್ತದೇಶದಲ್ಲೆಲ್ಲಾ ಮರಗಳಲ್ಲಾಗಲಿ ಅಡವಿಯ
ಗಿಡಗಳಲ್ಲಾಗಲಿ ಹಸುರಾದದ್ದು ಒಂದೂ ಉಳಿಯ
ಲಿಲ್ಲ.
ಆಗ ಫರೋಹನು ಮೋಶೆ ಆರೋನರನ್ನು ತ್ವರೆ 16
ಯಾಗಿ ಕರಿಸಿ—ನಾನು ನಿಮ್ಮ ದೇವರಾದ ಯೆಹೋ
ವನಿಗೂ ನಿಮಗೂ ಪಾಪಮಾಡಿದ್ದೇನೆ; ಆದರೂ ಈ 17
ಒಂದೇ ಸಾರಿ ನನ್ನ ಪಾಪವನ್ನು ಕ್ಷಮಿಸಬೇಕು.
ನಿಮ್ಮ ದೇವರಾದ ಯೆಹೋವನು ಈ ಮರಣಕರ
ವಿಪತ್ತನ್ನು ನನ್ನ ಬಳಿಯಿಂದ ತೊಲಗಿಸುವಂತೆ ಆತ
ನನ್ನು ಪ್ರಾರ್ಥಿಸಬೇಕು ಅಂದನು. ಮೋಶೆ ಫರೋ 18
ಹನ ಬಳಿಯಿಂದ ಹೊರಟು ಯೆಹೋವನನ್ನು ಬೇಡಿ
ಕೊಂಡನು. ಯೆಹೋವನು ಪಶ್ಚಿಮದಿಂದ ಬಿರು 19
ಗಾಳಿಬೀಸುವಂತೆ ಮಾಡಿದನು; ಅದು ಆ ಮಿಡಿತೆಗ
ಳನ್ನು ಎತ್ತಿಕೊಂಡುಹೋಗಿ ಕೆಂಪುಸಮುದ್ರದೊಳಗೆ
ಹಾಕಿಬಿಟ್ಟಿತು. ಐಗುಪ್ತದೇಶದ ಮೇರೆಗಳೊಳಗೆ
ಒಂದು ಮಿಡಿತೆಯೂ ನಿಲ್ಲಲಿಲ್ಲ. ಆದರೂ ಯೆಹೋ 20
ವನು ಫರೋಹನ ಹೃದಯವನ್ನು ಕಠಿಣಮಾಡಿದ್ದ
ದರಿಂದ ಅವನು ಇಸ್ರಾಯೇಲ್ಯರನ್ನು ಹೋಗಗೊಡಿ
ಸಲೇ ಇಲ್ಲ.

ಮೂರು ದಿನ ಕಾರ್ಗತ್ತಲೆಯುಂಟಾದದ್ದು.

ತರುವಾಯ ಯೆಹೋವನು ಮೋಶೆಗೆ—ಆಕಾಶಕ್ಕೆ 21
ನಿನ್ನ ಕೈ ಚಾಚು; ಆಗ ಐಗುಪ್ತದೇಶದಲ್ಲೆಲ್ಲಾ ಕತ್ತ
ಲುಂಟಾಗುವದು; ಆ ಕತ್ತಲಿನಿಂದ ಜನರು ತಡವರಿ
ಸುತ್ತಾ ನಡೆಯುವರೆಂದು ಹೇಳಿದನು. ಮೋಶೆ ಆಕಾ 22
ಶಕ್ಕೆ ಕೈಚಾಚಿದಾಗ ಐಗುಪ್ತದೇಶದಲ್ಲೆಲ್ಲಾ ಮೂರು
ದಿವಸ ಕಾರ್ಗತ್ತಲು ಮುಚ್ಚಿಕೊಂಡಿತು. ಮೂರು 23
ದಿವಸವೂ ಒಬ್ಬರಿಗೊಬ್ಬರು ಕಾಣಿಸಲಿಲ್ಲ; ಯಾವನೂ
ತಾನಿರುವ ಸ್ಥಳದಿಂದ ಏಳಲಿಲ್ಲ. ಆದರೆ ಇಸ್ರಾ
ಯೇಲ್ಯರು ವಾಸವಾಗಿದ್ದ ಸ್ಥಳಗಳಲ್ಲಿ ಬೆಳಕೇ ಇತ್ತು.

24 ಆಗ ಫರೋಹನು ಮೋಶೆಯನ್ನು ಕರಸಿ—ನೀವು
ಹೋಗಿ ಯೆಹೋವನಿಗೆ ಆರಾಧನೆ ಮಾಡಿ ಬರ
ಬಹುದು; ನಿಮ್ಮ ಮನೆಗಳಿಗೆ ಸೇರಿದವರೂ ಹೋಗ
ಬಹುದು; ನಿಮ್ಮ ಕುರಿದನಗಳನ್ನು ಮಾತ್ರ ಇಲ್ಲೇ
25 ಬಿಟ್ಟುಹೋಗಬೇಕು ಅಂದನು. ಅದಕ್ಕೆ ಮೋಶೆ—
ನಮ್ಮ ದೇವರಾದ ಯೆಹೋವನಿಗೆ ನಾವು ಯಜ್ಞ
ಹೋಮಗಳನ್ನು ಮಾಡುವಂತೆ ಬೇಕಾದ ಪಶುಗ
26 ಳನ್ನು ಮಾತ್ರವಲ್ಲದೆ ನಮ್ಮ ಎಲ್ಲಾ ಪಶುಗಳನ್ನೂ
ಸಹ ತೆಗೆದುಕೊಂಡು ಹೋಗುವ ಹಾಗೆ ನಮಗೆ
ಅಪ್ಪಣೆಕೊಡಬೇಕು; ಒಂದು ಗೊರಸೆಯನ್ನಾದರೂ
ನಾವು ಬಿಟ್ಟು ಹೋಗುವದಕ್ಕಾಗದು; ಆ ಪಶುಗ
ಳಿಂದಲೇ ನಮ್ಮ ದೇವರಾದ ಯೆಹೋವನಿಗೆ ಯಜ್ಞ
ಮಾಡಬೇಕಲ್ಲವೇ; ಯಾವ ಪಶುಗಳನ್ನು ಅರ್ಪಿಸ
ಬೇಕೋ ಅದು ನಾವು ಅಲ್ಲಿಗೆ ಸೇರುವದಕ್ಕೆ ಮುಂಚೆ
27 ನಮಗೆ ತಿಳಿಯದು ಅಂದನು. ಆದರೂ ಯೆಹೋ
ವನು ಫರೋಹನ ಹೃದಯವನ್ನು ಕಠಿಣಪಡಿಸಿದದ
ರಿಂದ ಅವರಿಗೆ ಅಪ್ಪಣೆಕೊಡುವದಕ್ಕೆ ಫರೋಹನು
28 ಒಪ್ಪಲಿಲ್ಲ. ಅವನು ಮೋಶೆಗೆ—ನನ್ನ ಬಳಿಯಿಂದ
ಹೋಗು; ಇನ್ನು ಮುಂದೆ ನನ್ನ ಮುಖದೆದುರಿಗೆ
ಬರಲೇ ಕೂಡದು; ಎಚ್ಚರ; ತಿರಿಗಿ ಸನ್ನಿಧಿಗೆ ಬಂದರೆ
29 ಮರಣದಂಡನೆ ಆಗುವದು ಎಂದು ಹೇಳಿದನು. ಅದಕ್ಕೆ
ಮೋಶೆ—ಅಪ್ಪಣೆ; ಇನ್ನು ಮುಂದೆ ನಾನು ಸಮ್ಮುಖಕ್ಕೆ
ಬರುವದೇ ಇಲ್ಲ ಅಂದನು.

ಯೆಹೋವನು ಘೋರವಾದ ಇನ್ನೊಂದು ಉಪದ್ರವವನ್ನು
ಐಗುಪ್ತ್ಯರಿಗೆ ಬರಮಾಡುವೆನೆಂದು ಮುಂತಿಳಿಸಿದ್ದು.

11 ಯೆಹೋವನು ಮೋಶೆಗೆ ಇಂತೆಂದನು—ಫರೋ
ಹನಿಗೂ ಐಗುಪ್ತ್ಯರಿಗೂ ಇನ್ನೊಂದು ಉಪದ್ರವ
ವನ್ನು ಬರಮಾಡುತ್ತೇನೆ; ಅದು ಬಂದನಂತರ ಅವನು
ನಿಮಗೆ ಇಲ್ಲಿಂದ ಹೋಗುವದಕ್ಕೆ ಅಪ್ಪಣೆಕೊಡು
ವದು ಮಾತ್ರವಲ್ಲದೆ ನಿಮ್ಮೆಲ್ಲರನ್ನು ಅಟ್ಟಿಬಿಡು
2 ವನು. ಆದದರಿಂದ ಸ್ತ್ರೀಪುರುಷರೆಲ್ಲರೂ ತಮ್ಮತಮ್ಮ
ನೆರೆಹೊರೆಯವರಿಂದ ಬೆಳ್ಳಿಬಂಗಾರದ ಒಡವೆಗಳನ್ನು
ಕೇಳಿಕೊಳ್ಳಬೇಕೆಂಬದಾಗಿ ಜನರಿಗೆ ಸ್ಪಷ್ಟವಾಗಿ ಹೇಳು
3 ಅಂದನು. ಯೆಹೋವನು ಇಸ್ರಾಯೇಲ್ಯರ ಮೇಲೆ
ಐಗುಪ್ತ್ಯರಲ್ಲಿ ದಯೆಯನ್ನು ಹುಟ್ಟಿಸಿದನು. ಇದ
ಲ್ಲದೆ ಐಗುಪ್ತದೇಶದಲ್ಲಿ ಫರೋಹನ ಪ್ರಜಾಪರಿವಾರ
ದವರು ಆ ಮೋಶೆಯನ್ನು ಮಹಾಪುರುಷನೆಂದು ತಿಳಿ
ದುಕೊಂಡರು.
4 ಮೋಶೆ ಫರೋಹನಿಗೆ—ಯೆಹೋವನು ಅಪ್ಪಣೆ
ಮಾಡುವದೇನಂದರೆ—ನಾನು ಮಧ್ಯರಾತ್ರಿಯಲ್ಲಿ ಐಗು
5 ಪ್ತ್ಯರ ನಡುವೆ ಹಾದುಹೋಗುವೆನು; ಆಗ ಸಿಂಹಾ
ಸನದ ಮೇಲೆ ಕೂತಿರುವ ಫರೋಹನ ಚೊಚ್ಚಲು
ಮಗನು ಮೊದಲುಗೊಂಡು ಬೀಸುವಕಲ್ಲಿನ ಹಿಂದೆ
ಕೂತಿರುವ ದಾಸಿಯ ಚೊಚ್ಚಲುಮಗನ ವರೆಗೂ
ಐಗುಪ್ತದೇಶದಲ್ಲಿ ಚೊಚ್ಚಲು ಮಕ್ಕಳೆಲ್ಲರೂ ಸಾಯು
ವರು; ಪಶುಗಳಲ್ಲೂ ಚೊಚ್ಚಲಾದವುಗಳೆಲ್ಲಾ ಸಾಯು
6 ವವು. ಆಗ ಐಗುಪ್ತದೇಶದಲ್ಲೆಲ್ಲಾ ದೊಡ್ಡ ಗೋಳಾಟ
ವುಂಟಾಗುವದು; ಅಂಥ ಗೋಳಾಟ ಈ ವರೆಗೆ
ಎಂದೂ ಆಗಿಲ್ಲ, ಮುಂದೆಯೂ ಆಗುವದಿಲ್ಲ
ಆದರೆ ಐಗುಪ್ತ್ಯರಿಗೂ ಇಸ್ರಾಯೇಲ್ಯರಿಗೂ ಯೆ
ಹೋವನು ವ್ಯತ್ಯಾಸಮಾಡಿದ್ದಾನೆಂಬದು ನಿಮಗ
ತಿಳಿಯುವಂತೆ ಇಸ್ರಾಯೇಲ್ಯರಲ್ಲಿರುವ ಮನುಷ್ಯ
ಮೇಲಾಗಲಿ ಪಶುಗಳ ಮೇಲಾಗಲಿ ಒಂದು ನಾಯಿ
ಯಾದರೂ ಬೊಗಳುವದಿಲ್ಲ. ಆಗ ನಿನ್ನ ಪರಿವಾ
ದವರಾದ ಇವರೆಲ್ಲರೂ ನನ್ನ ಬಳಿಗೆ ಬಂದು ಅಡ್ಡ
ಬಿದ್ದು—ನೀನೂ ನಿನ್ನ ಅಧೀನದಲ್ಲಿರುವ ಜನರೆಲ್ಲರೂ
ನಮ್ಮನ್ನು ಬಿಟ್ಟುಹೋಗಬೇಕೆಂದು ಬೇಡುವರು; ಆ
ಮೇಲೆ ನಾನು ಹೊರಟುಹೋಗುವೆನು ಎಂದು ಹೇ
ದನು. ಮೋಶೆ ಈ ಮಾತನ್ನು ಹೇಳಿ ಕಡಿಕಡಿಯಾ
ಫರೋಹನನ್ನು ಬಿಟ್ಟು ಹೊರಟುಹೋದನು.
ಯೆಹೋವನು ಮೋಶೆಗೆ—ಫರೋಹನು ನಿಮ್ಮ
ಮಾತನ್ನು ಕೇಳುವದಿಲ್ಲವಾದದರಿಂದ ಐಗುಪ್ತದೇ
ದಲ್ಲಿ ಮಹತ್ಕಾರ್ಯಗಳನ್ನು ಹೆಚ್ಚಾಗಿ ನಡಿಸುವದಕ್ಕೆ
ನನಗೆ ಆಸ್ಪದವಾಗುವದೆಂಬದಾಗಿ ಹೇಳಿದ್ದನಷ್ಟೆ
ಮೋಶೆ ಆರೋನರು ಫರೋಹನ ಮುಂದೆ ಆ ಮಹ
ತ್ಕಾರ್ಯಗಳನ್ನೆಲ್ಲಾ ಮಾಡಿದಾಗ್ಯೂ ಯೆಹೋವನು
ಫರೋಹನ ಹೃದಯವನ್ನು ಕಠಿಣಮಾಡಿದ್ದದರಿಂದ
ಫರೋಹನು ಇಸ್ರಾಯೇಲ್ಯರಿಗೆ ತನ್ನ ದೇಶವನ್ನು ಬಿಟ್ಟು
ಹೊರಡುವದಕ್ಕೆ ಅಪ್ಪಣೆಕೊಡದೆಹೋದನು.

ಯೆಹೋವನು ಪಸ್ಕಹಬ್ಬವನ್ನೂ ಹುಳಿಯಿಲ್ಲದ ರೊಟ್ಟಿಗಳನ
ತಿನ್ನಬೇಕಾದ ಆಚರಣೆಯನ್ನೂ ವಿಧಿಸಿದ್ದು.

ಐಗುಪ್ತದೇಶದಲ್ಲಿ ಯೆಹೋವನು ಮೋಶೆ ಆರೋ
ನರ ಸಂಗಡ ಮಾತಾಡಿ ಇಂತೆಂದನು—ಎಲ್ಲಾ 2
ಮಾಸಗಳಲ್ಲಿ ಇದೇ ನಿಮಗೆ ಆದಿಮಾಸವಾಗಿರಬೇಕು
ಇದೇ ನಿಮಗೆ ಪ್ರತಿ ವರುಷದ ಮೊದಲನೆಯ ತಿಂಗಳಾ
ಗಿರಬೇಕು. ಇದರ ವಿಷಯದಲ್ಲಿ ನೀವು ಇಸ್ರಾಯೇಲ್ಯ
ಸಮೂಹಕ್ಕೆಲ್ಲಾ ಅಪ್ಪಣೆಮಾಡಬೇಕಾದದ್ದೇನಂದರೆ—
ಈ ತಿಂಗಳಿನ ಹತ್ತನೆಯ ದಿನದಲ್ಲಿ ನಿಮ್ಮ ನಿಮ್ಮ
ಗೋತ್ರಗಳ ಪ್ರತಿಯೊಂದು ಮನೆಯವರು ಒಂದೊಂದು
ಕುರಿಮರಿಯನ್ನಾಗಲಿ ಆಡುಮರಿಯನ್ನಾಗಲಿ ತೆಗೆದು
ಕೊಳ್ಳಬೇಕು. ಕುಟುಂಬವು ಚಿಕ್ಕದಾಗಿದ್ದು ಪೂರಾ
ಒಂದು ಮರಿಯನ್ನು ತಿನ್ನುವದಕ್ಕೆ ಆಗದೆ ಹೋದ
ಪಕ್ಷಕ್ಕೆ ನೆರೆಮನೆಯ ಕುಟುಂಬದೊಂದಿಗೆ ಸೇರಿ ಒಬ್ಬೊ
ಬ್ಬನು ಇಷ್ಟಿಷ್ಟು ತಿನ್ನುವನೆಂದು ಗೊತ್ತುಮಾಡಿಕೊಂ
ಡು ಜನಗಳ ಸಂಖ್ಯಾನುಸಾರ ಮರಿಗಳನ್ನು ತೆಗೆದು
ಕೊಳ್ಳಲಿ. ಆ ಮರಿಯು ಪೂರ್ಣಾಂಗವಾದ ಒಂದು
ವರುಷದ ಗಂಡಾಗಿರಬೇಕು; ಕುರಿಗಳಿಂದಾಗಲಿ ಆಡು
ಗಳಿಂದಾಗಲಿ ಅದನ್ನು ತೆಗೆದುಕೊಳ್ಳಬಹುದು. ಈ
ತಿಂಗಳಿನ ಹದಿನಾಲ್ಕನೆಯ ದಿನದ ವರೆಗೆ ಅವುಗಳ
ನ್ನು ಇಟ್ಟುಕೊಂಡಿದ್ದು ಆ ದಿನದ ಸಂಜೇ ವೇಳೆಯಲ್ಲಿ
ಇಸ್ರಾಯೇಲ್ಯರ ಸಮೂಹದವರೆಲ್ಲರು ತಮ್ಮತಮ್ಮ
ಕೂಟಗಳಲ್ಲಿ ಕೊಯ್ಯಬೇಕು. ಅವರು ಅವುಗಳ ರಕ್ತ
ದಲ್ಲಿ ಸ್ವಲ್ಪ ತೆಗೆದು ತಾವು ಆ ಭೋಜನವನ್ನು ಮಾಡು
ವ ಮನೇಬಾಗಲಿನ ಎರಡು ನಿಲುವು ಕಂಬಗಳಿಗೂ
ಮೇಲಿನ ಪಟ್ಟಿಗೂ ಹಚ್ಚಬೇಕು. ಆ ರಾತ್ರಿಯ
ಲ್ಲಿಯೇ ಆ ಮಾಂಸವನ್ನು ಭೋಜನಮಾಡಬೇಕು

ಅದನ್ನು ಬೆಂಕಿಯಲ್ಲಿ ಸುಟ್ಟು ಹುಳಿಯಿಲ್ಲದ ರೊಟ್ಟಿಗಳ ಮತ್ತು ಕಹಿಯಾದ ಪಲ್ಯಗಳ ಸಂಗಡ ಊಟ ಮಾಡಬೇಕು. ಅದನ್ನು ಹಸಿಯಾಗಿಯೂ ನೀರಿನಲ್ಲಿ ಬೇಯಿಸಿಯೂ ತಿನ್ನಕೂಡದು; ಅದನ್ನೆಲ್ಲಾ ತಲೆ ತೊಡೆ ಹೊಟ್ಟೆಯೊಳಗಣವುಗಳು ಸಹಿತವಾಗಿ ಬೆಂಕಿಯಲ್ಲಿ ಸುಟ್ಟೇ ತಿನ್ನಬೇಕು. ಮರುದಿನದ ಬೆಳಗಿನ ವರೆಗೆ ಅದರಲ್ಲಿ ಸ್ವಲ್ಪವನ್ನಾದರೂ ಮಿಗಿಸಕೂಡದು; ಬೆಳಗಿನ ವರೆಗೆ ಮಿಕ್ಕದ್ದನ್ನು ಬೆಂಕಿಯಿಂದ ಸುಟ್ಟುಬಿಡಬೇಕು. ಆ ಭೋಜನವನ್ನು ಮಾಡಬೇಕಾದ ಕ್ರಮ ಹೇಗಂದರೆ—ನೀವು ನಡುವನ್ನು ಕಟ್ಟಿ ಕೆರವನ್ನು ಮೆಟ್ಟಿಕೊಂಡು ಕೋಲುಹಿಡಿದು ತ್ವರೆಯಾಗಿ ಮಾಡಬೇಕು. ಇದು ಯೆಹೋವನಿಗೆ ಆಚರಿಸತಕ್ಕ ಪಸ್ಕಹಬ್ಬವು. ಆ ರಾತ್ರಿ ನಾನು ಐಗುಪ್ತದೇಶದ ನಡುವೆ ಹಾದುಹೋಗಿ ಮನುಷ್ಯರಲ್ಲಾಗಲಿ ಪಶುಗಳಲ್ಲಾಗಲಿ ಚೊಚ್ಚಲಾಗಿರುವದನ್ನೆಲ್ಲಾ ಸಂಹರಿಸುವೆನು; ಐಗುಪ್ತದೇಶದ ಸಮಸ್ತದೇವತೆಗಳಿಗೂ ಶಿಕ್ಷೆಮಾಡುವೆನು; ನಾನು ಯೆಹೋವನು. [ನೀವು ಬಾಗಲಿಗೆ ಹಚ್ಚಿದ] ಆ ರಕ್ತವು ನೀವಿರುವ ಮನೆಗಳನ್ನು ಸೂಚಿಸುವದಾದ ಕಾರಣ ನಾನು ಅದನ್ನು ಕಂಡು ನಿಮಗೆ ಯಾವ ನಷ್ಟವನ್ನೂ ಮಾಡದೆ ಮುಂದಕ್ಕೆ ದಾಟಿ ಹೋಗುವೆನು. ನಾನು ಐಗುಪ್ತದವರನ್ನು ಸಂಹರಿಸುವಾಗ ನಿಮಗೆ ಯಾವ ಹಾನಿಯೂ ಉಂಟಾಗುವದಿಲ್ಲ.

ಆ ದಿನವು ನಿಮಗೆ ಜ್ಞಾಪಕಾರ್ಥವಾಗಿರುವದು. ಅದರಲ್ಲಿ ಯೆಹೋವನ ಘನಕ್ಕಾಗಿ ಹಬ್ಬವನ್ನು ಮಾಡಬೇಕು. ಅದನ್ನು ಶಾಶ್ವತನಿಯಮವೆಂದು ತಲತಲಾಂತರಕ್ಕೂ ಆಚರಿಸಬೇಕು. ಏಳು ದಿವಸ ನೀವು ಹುಳಿಯಿಲ್ಲದ ರೊಟ್ಟಿಗಳನ್ನು ತಿನ್ನಬೇಕು. ಮೊದಲನೆಯ ದಿನದಲ್ಲಿಯೇ ಹುಳಿಹಿಟ್ಟನ್ನೆಲ್ಲಾ ನಿಮ್ಮ ಮನೆಗಳೊಳಗಿಂದ ತೆಗೆದುಬಿಡಬೇಕು. ಆ ದಿವಸ ಮೊದಲುಗೊಂಡು ಏಳು ದಿವಸಗಳೊಳಗೆ ಯಾವನಾದರೂ ಹುಳಿಬೆರಸಿದ್ದನ್ನು ತಿಂದರೆ ಅವನು 1)ಇಸ್ರಾಯೇಲ್ಯರಿಂದ ತೆಗೆದುಹಾಕಲ್ಪಡಬೇಕು. ಮೊದಲನೆಯ ದಿವಸದಲ್ಲಿ ದೇವಾರಾಧನೆಗಾಗಿ ಸಭೆಕೂಡಬೇಕು; ಏಳನೆಯ ದಿನದಲ್ಲಿಯೂ ದೇವಾರಾಧನೆಗಾಗಿ ಸಭೆಕೂಡಬೇಕು. ಈ ಎರಡು ದಿವಸಗಳಲ್ಲಿ ಯಾವ ಕೆಲಸವನ್ನೂ ಮಾಡಕೂಡದು. ಊಟಕ್ಕೆ ಬೇಕಾದದ್ದನ್ನು ಅಡಬಹುದೇ ಹೊರತು ಬೇರೆ ಯಾವ ಕೆಲಸವನ್ನೂ ಮಾಡಕೂಡದು. ಹುಳಿಯಿಲ್ಲದ ರೊಟ್ಟಿಗಳನ್ನು ತಿನ್ನಬೇಕಾದ ಆಚರಣೆಯನ್ನು ನೀವು ಕೈಕೊಳ್ಳಬೇಕು. ಈ ದಿನದಲ್ಲಿಯೇ ನಾನು ನಿಮ್ಮ ಸೈನ್ಯಗಳನ್ನು ಐಗುಪ್ತದೇಶದೊಳಗಿಂದ ಹೊರಗೆ ಬರಮಾಡಿದ್ದರಿಂದ ನೀವೂ ನಿಮ್ಮ ಸಂತತಿಯವರೂ ಈ ದಿನವನ್ನು ಆಚರಣೆಗೆ ತರಬೇಕು; ಇದು ಶಾಶ್ವತವಾದ ನಿಯಮ. ಮೊದಲನೆಯ ತಿಂಗಳಿನ ಹದಿನಾಲ್ಕನೆಯ ದಿವಸದ ಸಾಯಂಕಾಲ ಮೊದಲುಗೊಂಡು ಅದೇ ತಿಂಗಳಿನ ಇಪ್ಪತ್ತೊಂದನೆಯ ದಿನದ ಸಾಯಂಕಾಲದ ವರೆಗೂ ನೀವು ಹುಳಿಯಿಲ್ಲದ ರೊಟ್ಟಿಗಳನ್ನೇ ತಿನ್ನಬೇಕು. ಆ ಏಳು ದಿನಗಳೂ ನಿಮ್ಮ
ಮನೆಗಳಲ್ಲಿ ಹುಳಿಹಿಟ್ಟೇ ಇರಕೂಡದು. ಹುಳಿ ಬೆರಸಿ
ದ್ದನ್ನು ತಿನ್ನುವವನು ಪರದೇಶದವನಾಗಲಿ ಸ್ವದೇಶ
ದವನಾಗಲಿ ಇಸ್ರಾಯೇಲ್ ಜನರೊಳಗಿಂದ ತೆಗೆದುಹಾ
ಕಲ್ಪಡಬೇಕು. ನೀವು ನಿಮ್ಮ ಎಲ್ಲಾ ಮನೆಗಳಲ್ಲಿ 20
ಹುಳಿಯಿಲ್ಲದ ರೊಟ್ಟಿಗಳನ್ನು ತಿನ್ನಬೇಕೇ ಹೊರತು
ಹುಳಿಗೂಡಿದ ಯಾವದನ್ನೂ ತಿನ್ನಕೂಡದು ಎಂದು
ಆಜ್ಞಾಪಿಸಿದನು.

ಆಗ ಮೋಶೆಯು ಇಸ್ರಾಯೇಲ್ಯರ ಹಿರಿಯರೆಲ್ಲರ 21
ನ್ನೂ ಕೂಡ ಕರಸಿ ಅವರಿಗೆ—ನೀವು ನಿಮ್ಮ ನಿಮ್ಮ
ಕುಟುಂಬಗಳಿಗೋಸ್ಕರ ಹಿಂಡಿನಿಂದ ಮರಿಗಳನ್ನು ತೆಗೆ
ದುಕೊಂಡು ಪಸ್ಕಹಬ್ಬಕ್ಕೆ ಕೊಯ್ಯಿರಿ. ಮತ್ತು 22
ಹಿಸ್ಸೋಪ್‌ಗಿಡದ ಬರಲನ್ನು ತೆಗೆದುಕೊಂಡು ಬಟ್ಟ
ಲಿನಲ್ಲಿರುವ ಆ ರಕ್ತದಲ್ಲಿ ಅದ್ದಿ ಬಾಗಲಿನ ಮೇಲಣ
ಪಟ್ಟಿಗೂ ಎರಡು ನಿಲುವುಕಂಬಗಳಿಗೂ ಹಚ್ಚಬೇಕು.
ತರುವಾಯ ನಿಮ್ಮಲ್ಲಿ ಒಬ್ಬರೂ ಸೂರ್ಯೋದಯದೊ
ಳಗಾಗಿ ಬಾಗಲಿನಿಂದ ಹೊರಗೆ ಹೋಗಕೂಡದು.
ಯೆಹೋವನು ಐಗುಪ್ತ್ಯರನ್ನು ಹತಮಾಡುವದಕ್ಕೆ 23
ದೇಶದ ನಡುವೆ ಹಾದುಹೋಗುವಾಗ ನಿಮ್ಮ ನಿಮ್ಮ
ಮನೇಬಾಗಲಿನ ಮೇಲಣ ಪಟ್ಟಿಯಲ್ಲಿಯೂ ಎರಡು
ನಿಲುವುಕಂಬಗಳಲ್ಲಿಯೂ ಆ ರಕ್ತವನ್ನು ಕಂಡು ಮುಂ
ದಕ್ಕೆ ದಾಟಿ ಹೋಗುವನು. ನಿಮ್ಮ ಪ್ರಾಣ ತೆಗೆಯು
ವದಕ್ಕೆ ಸಂಹಾರಕನನ್ನು ನಿಮ್ಮ ಮನೆಗಳಲ್ಲಿ ಬರಗೊ
ಡಿಸುವದೇ ಇಲ್ಲ. ಇದು ನಿಮಗೂ ನಿಮ್ಮ ಸಂತತಿ 24
ಯವರಿಗೂ ಶಾಶ್ವತವಾದ ನಿಯಮವೆಂದು ಆಚರಿಸ
ಬೇಕು. ಯೆಹೋವನು ತನ್ನ ಮಾತಿನ ಮೇರೆಗೆ ನಿಮ 25
ಗೆ ಕೊಡುವ ದೇಶಕ್ಕೆ ನೀವು ಬಂದಾಗ ಈ ಆಚಾರ
ವನ್ನು ನಡಿಸಬೇಕು. ಮುಂದೆ ನಿಮ್ಮ ಮಕ್ಕಳು— 26
ನೀವು ನಡಿಸುವ ಈ ಆಚಾರವೇನೆಂದು ನಿಮ್ಮನ್ನು ಕೇಳು
ವಾಗ ನೀವು ಅವರಿಗೆ—ಯೆಹೋವನು ಐಗುಪ್ತ್ಯ 27
ರನ್ನು ಸಂಹರಿಸಿದಾಗ ಐಗುಪ್ತದೇಶದಲ್ಲಿದ್ದ ಇಸ್ರಾ
ಯೇಲ್ಯರ ಮನೆಗಳಲ್ಲಿ ಪ್ರವೇಶಿಸದೆ ಮುಂದಕ್ಕೆ ದಾಟಿ
ನಮ್ಮವರನ್ನು ಉಳಿಸಿದದರಿಂದ ನಾವು ಯೆಹೋವನ
ಪಸ್ಕವೆಂಬ ಈ ಯಜ್ಞಾಚಾರವನ್ನು ನಡಿಸುವದುಂಟು
ಎಂದು ಹೇಳಬೇಕು ಅಂದನು.

ಜನರು ತಲೆಬಾಗಿ ನಮಸ್ಕರಿಸಿದರು. ಇಸ್ರಾಯೇ 28
ಲ್ಯರು ಅಲ್ಲಿಂದ ಹೊರಟು ಯೆಹೋವನು ಮೋಶೆ ಆರೋ
ನರಿಗೆ ಆಜ್ಞಾಪಿಸಿದ ಪ್ರಕಾರವೇ ನಡಿಸಿದರು.

ಐಗುಪ್ತ್ಯರ ಚೊಚ್ಚಲುಮಕ್ಕಳು ಸತ್ತುಹೋದದ್ದು;
ಅರಸನು ಇಸ್ರಾಯೇಲ್ಯರನ್ನು ತ್ವರೆಯಾಗಿ ಕಳುಹಿಸಿಬಿಟ್ಟದ್ದು.

ಅರ್ಧರಾತ್ರಿಯಲ್ಲಿ ಯೆಹೋವನು ಸಿಂಹಾಸನದಲ್ಲಿ 29
ರುವ ಫರೋಹನ ಚೊಚ್ಚಲುಮಗನು ಮೊದಲುಗೊಂ
ಡು ಸೆರೆಯಲ್ಲಿದ್ದ ಬಂದಿವಾನನ ಚೊಚ್ಚಲುಮಗನ ವರೆ
ಗೂ ಐಗುಪ್ತದೇಶದಲ್ಲಿದ್ದ ಎಲ್ಲಾ ಚೊಚ್ಚಲು ಮಕ್ಕ
ಳನ್ನೂ ಪಶುಗಳ ಚೊಚ್ಚಲುಮರಿಗಳನ್ನೂ ಸಂಹಾರ
ಮಾಡಿದನು. ಆ ರಾತ್ರಿಯಲ್ಲಿ ಫರೋಹನೂ ಅವನ 30
ಪರಿವಾರದವರೂ ಐಗುಪ್ತ್ಯರೆಲ್ಲರೂ ಎದ್ದು ನೋಡ

1) ಈ ಪದಪ್ರಯೋಗಸ್ಥಳಗಳಲ್ಲೆಲ್ಲಾ ಕೆಲವರು ಮರಣಶಿಕ್ಷೆಗೆ ಗುರಿಯಾಗಬೇಕು ಎಂದು ಅರ್ಥಮಾಡುವರು.

ಲಾಗಿ ಶವವಿಲ್ಲದ ಮನೆ ಒಂದೂ ಇರಲಿಲ್ಲವಾದದ
ರಿಂದ ಐಗುಪ್ತದೇಶದಲ್ಲಿ ದೊಡ್ಡ ಗೋಳಾಟವುಂಟಾ
ಯಿತು.
31 ಫರೋಹನು ಆ ರಾತ್ರಿಯಲ್ಲೇ ಮೋಶೆ ಆರೋನ
ರನ್ನು ಕರಿಸಿ—ನೀವೂ ಇಸ್ರಾಯೇಲ್ಯರೆಲ್ಲರೂ ನನ್ನ ಜನರ
ಮಧ್ಯದಿಂದ ಹೊರಟುಹೋಗಿರಿ; ನೀವು ಕೇಳಿಕೊಂಡ
32 ಮೇರೆಗೆ ಯೆಹೋವನನ್ನು ಆರಾಧಿಸಿರಿ. ನೀವು ಕೇಳಿ
ಕೊಂಡಂತೆ ನಿಮ್ಮ ಕುರಿದನಗಳನ್ನೂ ತೆಗೆದುಕೊಂಡು
ಹೋಗಬಹುದು; ಅದಲ್ಲದೆ ನನ್ನ ಹಿತಕ್ಕಾಗಿಯೂ ಪ್ರಾ
ರ್ಥಿಸಿರಿ ಅಂದನು.
33 ಐಗುಪ್ತ್ಯರು—ನಾವೆಲ್ಲರು ಸಾಯುತ್ತೇವಲ್ಲಾ
ಅಂದುಕೊಂಡು ಇಸ್ರಾಯೇಲ್ಯರನ್ನು ತಮ್ಮ ದೇಶದಿಂದ
ತ್ವರೆಯಾಗಿ ಕಳುಹಿಸಿಬಿಡುವದಕ್ಕೆ ಅಪೇಕ್ಷೆಪಟ್ಟು
34 ಅವರನ್ನು ಬಲಾತ್ಕರಿಸಿದರು. ಆದದರಿಂದ ಆ ಜನ
ರು ತಮ್ಮ ಹಿಟ್ಟಿಗೆ ಹುಳಿಹಾಕುವದಕ್ಕಿಂತ ಮೊದಲೇ
ನಾದುವ 1)ಕೊಣವಿಗೆಗಳಲ್ಲಿ ಇದ್ದ ಕಣಕದ ಮುದ್ದೆ
ಯನ್ನು ಗಂಟುಕಟ್ಟಿ ಹೆಗಲಿನ ಮೇಲೆ ಹಾಕಿಕೊಂಡು
ಹೊರಟುಹೋದರು.
35 ಇಸ್ರಾಯೇಲ್ಯರು ಮೋಶೆಯ ಮಾತಿನ ಮೇರೆಗೆ
ಐಗುಪ್ತ್ಯರಿಂದ ಬೆಳ್ಳಿಬಂಗಾರದ ಒಡವೆಗಳನ್ನೂ ಬಟ್ಟೆ
36 ಗಳನ್ನೂ ಕೇಳಿಕೊಂಡರು. ಯೆಹೋವನು ಅವರ
ಮೇಲೆ ಐಗುಪ್ತ್ಯರಲ್ಲಿ ದಯೆಯನ್ನು ಹುಟ್ಟಿಸಿದ್ದ
ರಿಂದ ಅವರು ಕೇಳಿಕೊಂಡದನ್ನು ಕೊಟ್ಟರು. ಹೀಗೆ
ಇಸ್ರಾಯೇಲ್ಯರು ಐಗುಪ್ತ್ಯರ ಸೊತ್ತನ್ನು ಸುಲು
ಕೊಂಡರು.
37 ಇಸ್ರಾಯೇಲ್ಯರು ರಮ್ಸೇಸ್ ಪಟ್ಟಣದಿಂದ ಹೊ
ರಟು ಸುಕ್ಕೋತಿಗ ಬಂದರು. ಹೆಂಗಸರೂ ಮಕ್ಕಳೂ
ಅಲ್ಲದೆ ಅವರ ಕಾಲ್ಬಲವೇ ಸುಮಾರು ಆರು ಲಕ್ಷ
38 ಗಂಡಸರು. ಅವರೊಂದಿಗೆ ಬಹು ಮಂದಿ ಅನ್ಯರೂ
ಹೊರಟುಹೋದರು; ಕುರಿ ದನ ಮೊದಲಾದ ಪಶು
39 ಗಳೂ ಬಹಳವಾಗಿದ್ದವು. ಅವರು ಐಗುಪ್ತದೇಶ
ದಿಂದ ತಂದ ಕಣಕದ ಮುದ್ದೆಯಿಂದ ಹುಳಿಯಿಲ್ಲದ
ರೊಟ್ಟಿಗಳನ್ನು ಮಾಡಿ ಸುಟ್ಟರು. ಅವರು ಐಗುಪ್ತ
ದೇಶದಿಂದ ಹೊರಡಿಸಲ್ಪಟ್ಟು ಸ್ವಲ್ಪವಾದರೂ ಸಮಯ
ಸಿಕ್ಕದೆಹೋದದರಿಂದ ಕಣಕದಲ್ಲಿ ಹುಳಿಯನ್ನು ಕಲಸಿ
ದ್ದಿಲ್ಲ, ಮತ್ತು ಬೇರೆ ಯಾವ ಆಹಾರವನ್ನೂ ಸಿದ್ಧಪಡಿಸಿ
ಕೊಂಡಿರಲಿಲ್ಲ.
40 ಇಸ್ರಾಯೇಲ್ಯರು ಐಗುಪ್ತದೇಶದಲ್ಲಿ ವಾಸವಾಗಿ
41 ದ್ದದ್ದು ನಾನೂರಮೂವತ್ತು ವರುಷ. ನಾನೂರಮೂ
ವತ್ತು ವರುಷಗಳು ಕಳೆದನಂತರ ಅದೇ ದಿವಸದಲ್ಲಿ
ಯೆಹೋವನ ಸೈನ್ಯಗಳೆಲ್ಲಾ ಐಗುಪ್ತದೇಶವನ್ನು ಬಿಟ್ಟು
42 ಹೊರಟುಹೋದವು. ಯೆಹೋವನು ಆ ರಾತ್ರಿಯಲ್ಲಿ
ಯೇ ಅವರನ್ನು ಐಗುಪ್ತದೇಶದಿಂದ ಹೊರಗೆ ಬರಮಾ
ಡಿದ್ದರಿಂದ ಅವರು ಈ ರಾತ್ರಿಯಲ್ಲಿ ಆತನ ಘನ
ಕ್ಕಾಗಿ ಜಾಗರಣೆಯನ್ನು ಮಾಡಬೇಕು. ಇಸ್ರಾ
ಯೇಲ್ಯರೆಲ್ಲರೂ ತಲತಲಾಂತರಕ್ಕೂ ಯೆಹೋವನಿಗೆ
ಈ ಜಾಗರಣೆಯನ್ನು ಮಾಡಬೇಕು.

ಪಸ್ಕಹಬ್ಬವೂ ಪ್ರಥಮಗರ್ಭವನ್ನು ದೇವರಿಗೆ ಸಮರ್ಪಿಸ
ಬೇಕಾದದ್ದೂ ಹುಳಿಯಿಲ್ಲದ ರೊಟ್ಟಿಯ ಆಚರಣೆಯೂ.

ಯೆಹೋವನು ಮೋಶೆ ಆರೋನರಿಗೆ ಹೇಳಿದ್ದೆ
ನಂದರೆ—ಪಸ್ಕವನ್ನು ಆಚರಿಸಬೇಕಾದ ಕ್ರಮ
ಹೇಗಂದರೆ—ಅನ್ಯನೊಬ್ಬನೂ ಅದರಲ್ಲಿ ಭೋಜನ
ಮಾಡಬಾರದು. ಆದರೂ ನೀವು ಕ್ರಯಕ್ಕೆ ತೆಗೆದು
ಕೊಂಡ ದಾಸನು ಸುನ್ನತಿಮಾಡಿಸಿಕೊಂಡವನಾದರೆ
ಮಾಡಬಹುದು. ಪರವಾಸಿಯೂ ಕೂಲಿಯವನು
ಮಾಡಕೂಡದು. ಒಂದೇ ಮನೆಯಲ್ಲಿ ಅದನ್ನು
ಊಟಮಾಡಬೇಕು; ಅದರಲ್ಲಿ ಸ್ವಲ್ಪವನ್ನಾದರೂ
ಮನೆಯಿಂದ ಹೊರಗೆ ತೆಗೆದುಕೊಂಡು ಹೋಗ
ಕೂಡದು. ಆ ಪಶುವಿನ ಒಂದು ಎಲುಬನ್ನಾದರೂ
ಮುರಿಯಕೂಡದು. ಇಸ್ರಾಯೇಲ್ಯರೆಲ್ಲರೂ ಆ
ಹಬ್ಬವನ್ನು ಆಚರಿಸಬೇಕು. ನಿಮ್ಮ ಬಳಿಯಲ್ಲಿ
ವಾಸವಾಗಿರುವ ಪರದೇಶದವನು ಯೆಹೋವನಿಗೆ
ಈ ಪಸ್ಕಹಬ್ಬವನ್ನು ಆಚರಿಸಬೇಕೆಂದು ಅಪೇಕ್ಷಿಸಿದರೆ
ಅವನೂ ಅವನಿಗೆ ಸೇರಿರುವ ಗಂಡಸರೆಲ್ಲರೂ ಸುನ್ನತಿ
ಮಾಡಿಸಿಕೊಳ್ಳಬೇಕು; ತರುವಾಯ ಅವನು ಹತ್ತಿರ
ಬಂದು ಈ ಹಬ್ಬವನ್ನು ಆಚರಿಸಬಹುದು. ಅಂಥ
ವನು ಸ್ವದೇಶದವನಂತೆಯೇ ಇರುವನು; ಆದರೆ
ಸುನ್ನತಿಮಾಡಿಸಿಕೊಳ್ಳದವನು ಆ ಭೋಜನವನ್ನು
ಮಾಡಲೇ ಕೂಡದು. ಸ್ವದೇಶದವನಿಗೂ ನಿಮ್ಮಲ್ಲಿ
ವಾಸವಾಗಿರುವ ಪರದೇಶದವನಿಗೂ ಒಂದೇ ವಿಧಿ
ಯಿರಬೇಕು ಅಂದನು.
ಯೆಹೋವನು ಮೋಶೆ ಆರೋನರಿಗೆ ಆಜ್ಞಾಪಿಸಿದ
ಮೇರೆಗೆ ಇಸ್ರಾಯೇಲ್ಯರೆಲ್ಲರೂ ಮಾಡಿದರು. ಆ
ದಿನದಲ್ಲಿ ಯೆಹೋವನು ಇಸ್ರಾಯೇಲ್ಯರನ್ನು ಸೈನ್ಯ
ಸೈನ್ಯವಾಗಿ ಐಗುಪ್ತದೇಶದಿಂದ ಹೊರಗೆಬರಮಾಡಿ
ದನು.

1 ಯೆಹೋವನು ಮೋಶೆಗೆ—ಇಸ್ರಾಯೇಲ್ಯರು 1, 2
ತಮ್ಮೊಳಗಾಗಲಿ ತಮ್ಮ ಪಶುಗಳೊಳಗಾಗಲಿ ಪ್ರಥ
ಮಗರ್ಭವನ್ನು ಅಂದರೆ ಚೊಚ್ಚಲಾಗಿ ಹುಟ್ಟಿದ್ದೆಲ್ಲ
ವನ್ನೂ ನನಗೆ ಮೀಸಲಾಗಿಡಬೇಕು; ಅದು ನನ್ನದೇ
ಎಂದು ಹೇಳಿದನು.

ಮೋಶೆ ಇಸ್ರಾಯೇಲ್ಯರಿಗೆ—ನೀವು ದಾಸತ್ವದ
ಲ್ಲಿದ್ದ ಐಗುಪ್ತದೇಶದೊಳಗಿಂದ ಬಿಡುಗಡೆಯಾದ
ಈ ದಿನವನ್ನು ನೆನಪಿನಲ್ಲಿಟ್ಟುಕೊಳ್ಳಿರಿ. ಯೆಹೋ
ವನು ತನ್ನ ಭುಜಬಲದಿಂದ ನಿಮ್ಮನ್ನು ಆ ಸ್ಥಳದಿಂದ
ಬಿಡಿಸಿದನಲ್ಲಾ. ಈ ದಿನದಲ್ಲಿ ನೀವು ಹುಳಿಬೆರತ
ದ್ದನ್ನು ತಿನ್ನಕೂಡದು. ಚೈತ್ರಮಾಸದ ಈ ದಿನ
ದಲ್ಲೇ ಹೊರಡುವವರಾಗಿದ್ದೀರಷ್ಟೆ. ಯೆಹೋವನು
ನಿಮ್ಮ ಪಿತೃಗಳಿಗೆ ಪ್ರಮಾಣವಾಗಿ ಹೇಳಿದಂತೆ ನಿಮ್ಮ
ನ್ನು ಹಾಲೂ ಜೇನೂ ಹರಿಯುವ ದೇಶಕ್ಕೆ ಅಂದರೆ
ಕಾನಾನ್ಯರೂ ಹಿತ್ತಿಯರೂ ಅಮೋರಿಯರೂ ಹಿವ್ವಿ

1) ಬಟ್ಟಲುಗಳಲ್ಲಿ.

ಯರೂ ಯೆಬೂಸಿಯರೂ ವಾಸವಾಗಿರುವ ದೇಶಕ್ಕೆ
ಕರತಂದು ಅದನ್ನು ನಿಮಗೆ ಕೊಟ್ಟಾಗ ನೀವು ಈ
ತಿಂಗಳಲ್ಲಿ ಈ ಆಚಾರವನ್ನು ನಡಿಸಬೇಕು. ಏಳು
ದಿವಸ ನೀವು ಹುಳಿಯಿಲ್ಲದ ರೊಟ್ಟಿಗಳನ್ನು ತಿನ್ನ
ಬೇಕು; ಏಳನೆಯ ದಿನದಲ್ಲಿ ಯೆಹೋವನ ಘನಕ್ಕಾಗಿ
ಹಬ್ಬಮಾಡಬೇಕು. ಆ ಏಳು ದಿವಸವೂ ಹುಳಿ
ಯಿಲ್ಲದ ರೊಟ್ಟಿಗಳನ್ನು ತಿನ್ನಬೇಕೇ ಹೊರತು ನಿಮ್ಮ
ದೇಶದಲ್ಲೆಲ್ಲಾ ಹುಳಿಹಿಟ್ಟಾಗಲಿ ಹುಳಿಯಾಗಲಿ ನಿಮ್ಮ
ಬಳಿಯಲ್ಲಿ ಇರಲೇ ಕೂಡದು. ಆ ದಿನದಲ್ಲಿ ನೀವು
ನಿಮ್ಮ ಮಕ್ಕಳಿಗೆ—ನಮ್ಮ ಜನವು ಐಗುಪ್ತದೇಶದಿಂದ
ಹೊರಟುಬಂದಾಗ ಯೆಹೋವನು ನಮಗೋಸ್ಕರ
ಮಾಡಿದ್ದನ್ನು ನೆನಸುವದಕ್ಕಾಗಿ ಈ ಆಚರಣೆಯನ್ನು
ನಡಿಸುತ್ತೇವೆಂಬದಾಗಿ ತಿಳಿಸಬೇಕು. ಯೆಹೋವನು
ತನ್ನ ಭುಜಬಲದಿಂದ ನಿಮ್ಮನ್ನು ಐಗುಪ್ತದೇಶದಿಂದ
ಬಿಡಿಸಿದನಾದದರಿಂದ ಆತನ ನಿಯಮವನ್ನು ಕುರಿತು
ನೀವು ಮಾತಾಡಬೇಕೆಂಬದಕ್ಕಾಗಿ ಈ ಆಚಾರವು
ನಿಮಗೆ ಕೈಯಲ್ಲಿ ಕಟ್ಟಿಕೊಂಡಿರುವ ದಾರದಂತೆಯೂ
ಹುಬ್ಬುಗಳ ನಡುವೆ ಕಟ್ಟಿಕೊಂಡಿರುವ ಜ್ಞಾಪಕಪಟ್ಟಿ
ಯಂತೆಯೂ ಇರುವದು. ವರುಷ ವರುಷಕ್ಕೆ ನಿಯ
ಮಿತವಾದ ಕಾಲದಲ್ಲಿ ನೀವು ಈ ಆಚಾರವನ್ನು
ನಡಿಸಬೇಕು.

ಯೆಹೋವನು ತಾನು ನಿಮಗೂ ನಿಮ್ಮ ಪಿತೃ
ಗಳಿಗೂ ಕೊಟ್ಟ ಪ್ರಮಾಣವಚನದ ಮೇರೆಗೆ ನಿಮ್ಮ
ನ್ನು ಕಾನಾನ್ಯರ ದೇಶಕ್ಕೆ ಬರಮಾಡಿ ಆ ದೇಶವನ್ನು
ನಿಮಗೆ ಕೊಟ್ಟನಂತರ ನಿಮ್ಮಲ್ಲಿಯೂ ನಿಮ್ಮ ಪಶು
ಗಳಲ್ಲಿಯೂ ಹುಟ್ಟುವ ಪ್ರಥಮಗರ್ಭವನ್ನೆಲ್ಲಾ
ಗಂಡಾದ ಪಕ್ಷಕ್ಕೆ ಯೆಹೋವನ ಭಾಗವೆಂದು ತಿಳಿದು
ಕೊಂಡು ಆತನಿಗೆ ಸಮರ್ಪಿಸಬೇಕು. ಕತ್ತೆಯ
ಚೊಚ್ಚಲುಮರಿಗೆ ಬದಲಾಗಿ ಕುರಿಮರಿಯನ್ನು
ಕೊಟ್ಟು ಆ ಕತ್ತೇಮರಿಯನ್ನು ಬಿಡಿಸಿಕೊಳ್ಳ
ಬಹುದು; ಹಾಗೆ ಬಿಡಿಸಲೊಲ್ಲದೆ ಹೋದರೆ ಅದರ
ಕುತ್ತಿಗೆ ಮುರಿದು ಕೊಲ್ಲಬೇಕು. ಮನುಷ್ಯರ
ಚೊಚ್ಚಲಗಂಡನ್ನಾದರೋ ಬದಲುಕೊಟ್ಟು ಬಿಡಿಸಿ
ಕೊಳ್ಳಲೇ ಬೇಕು. ಇನ್ನು ಮೇಲೆ ನಿಮ್ಮ ಮಕ್ಕ
ಳು—ಇದು ಯಾತಕ್ಕೆ ಎಂದು ವಿಚಾರಿಸುವಾಗ
ನೀವು ಅವರಿಗೆ—ನಾವು ದಾಸತ್ವದಲ್ಲಿದ್ದ ಐಗುಪ್ತ
ದೇಶದೊಳಗಿಂದ ಯೆಹೋವನು ಭುಜಬಲದಿಂದ
ನಮ್ಮನ್ನು ಬಿಡಿಸಿದನು. ಫರೋಹನು ಹಟಹಿಡಿದು
ನಮ್ಮನ್ನು ಹೋಗಗೊಡಿಸದೆ ಇದ್ದಾಗ ಯೆಹೋ
ವನು ಐಗುಪ್ತದೇಶದಲ್ಲಿದ್ದ ಮನುಷ್ಯರ ಚೊಚ್ಚಲು
ಮಕ್ಕಳನ್ನೂ ಪಶುಗಳ ಚೊಚ್ಚಲುಮರಿಗಳನ್ನೂ
ಅಂತೂ ಆ ದೇಶದ ಚೊಚ್ಚಲಾಗಿದ್ದದ್ದನ್ನೆಲ್ಲಾ ಸಂಹಾರ
ಮಾಡಿದನು. ಆದಕಾರಣ ಗಂಡಾದ ಪ್ರಥಮಗರ್ಭ
ವನ್ನೆಲ್ಲಾ ನಾವು ಯೆಹೋವನಿಗೆ ಸಮರ್ಪಿಸುವ
ದುಂಟು; ಮನುಷ್ಯರಿಂದಾದ ಪ್ರಥಮಗರ್ಭವನ್ನಾ
ದರೋ ಬದಲುಕೊಟ್ಟು ಬಿಡಿಸುತ್ತೇವೆ ಎಂದು ಹೇಳ
ಬೇಕು. ಯೆಹೋವನು ಭುಜಬಲದಿಂದ ನಮ್ಮನ್ನು
ಐಗುಪ್ತದೇಶದಿಂದ ಬಿಡಿಸಿದ ಸಂಗತಿಯನ್ನು ನೀವು
ಜ್ಞಾಪಕದಲ್ಲಿಟ್ಟುಕೊಳ್ಳುವದಕ್ಕೆ ಈ ಪದ್ಧತಿಯು
ಕೈಗೆ ಕಟ್ಟಿಕೊಂಡಿರುವ ದಾರದಂತೆಯೂ ಹುಬ್ಬುಗಳ
ನಡುವೆ ಕಟ್ಟಿಕೊಂಡಿರುವ ಜ್ಞಾಪಕಪಟ್ಟಿಯಂತೆಯೂ
ಇರುವದು.

ಇಸ್ರಾಯೇಲ್ಯರು ಐಗುಪ್ತದೇಶವನ್ನು ಬಿಟ್ಟುಹೋದದ್ದು;
ಫರೋಹನ ಸೈನ್ಯವು ಸಮುದ್ರದಲ್ಲಿ ಮುಣುಗಿಹೋದದ್ದು.

ಫರೋಹನು ಇಸ್ರಾಯೇಲ್ಯರಿಗೆ ಹೋಗುವದಕ್ಕೆ 17
ಅಪ್ಪಣೆ ಕೊಟ್ಟಾಗ ಫಿಲಿಷ್ಟಿಯರ ದೇಶದೊಳಗಣ
ಮಾರ್ಗ ಹತ್ತಿರವಿದ್ದರೂ ದೇವರು ಆ ದಾರಿಯಲ್ಲಿ
ಅವರನ್ನು ನಡಿಸದೆ ಕೆಂಪು ಸಮುದ್ರದ ಬಳಿಯಲ್ಲಿ
ರುವ ಮರಳುಕಾಡಿನ ದಾರಿಯಲ್ಲಿಯೇ ಸುತ್ತಾಗಿ
ನಡಿಸಿಕೊಂಡುಹೋದನು. ಆತನು—ಈ ಜನರಿಗೆ 18
ಯುದ್ಧಪ್ರಾಪ್ತವಾದರೆ ಅವರು ಧೈರ್ಯಗೆಟ್ಟು
ಐಗುಪ್ತದೇಶಕ್ಕೆ ಹಿಂದಿರುಗಾರು ಅಂದುಕೊಂಡನು.
ಇಸ್ರಾಯೇಲ್ಯರು ಯುದ್ಧಸನ್ನದ್ಧರಾಗಿ ಐಗುಪ್ತದೇಶ
ದಿಂದ ಹೊರಟರು.

ಇದಲ್ಲದೆ ಯೋಸೇಫನು ಇಸ್ರಾಯೇಲ್ಯರಿಗೆ— 19
ದೇವರು ನಿಸ್ಸಂದೇಹವಾಗಿ ನಿಮ್ಮನ್ನು ಪರಾಂಬರಿಸಿ
ತನ್ನ ವಾಗ್ದಾನವನ್ನು ನೆರವೇರಿಸುವನಾದದರಿಂದ
ನೀವು ಹೋಗುವಾಗ ನನ್ನ ಶವವನ್ನು ನಿಮ್ಮ ಸಂಗಡ
ತೆಗೆದುಕೊಂಡು ಹೋಗಬೇಕೆಂದು ಹೇಳಿ ಖಂಡಿತ
ವಾದ ಪ್ರಮಾಣವನ್ನು ಮಾಡಿಸಿದ್ದದರಿಂದ ಮೋಶೆಯು
ಅವನ ಶವವನ್ನು ಸಂಗಡ ತೆಗೆದುಕೊಂಡು ಹೋ
ದನು.

ಅವರು ಸುಕ್ಕೋತಿನಿಂದ ಪ್ರಯಾಣಮಾಡಿ 20
ಮರಳುಕಾಡಿನ ಅಂಚಿನಲ್ಲಿರುವ ಏತಾಮಿನಲ್ಲಿ ಇಳಿದು
ಕೊಂಡರು.

ಯೆಹೋವನು ಹಗಲುಹೊತ್ತಿನಲ್ಲಿ ದಾರಿತೋರಿ 21
ಸುವದಕ್ಕೆ ಮೇಘಸ್ತಂಭದಲ್ಲಿಯೂ ರಾತ್ರಿವೇಳೆಯಲ್ಲಿ
ಬೆಳಕುಕೊಡುವದಕ್ಕೆ ಅಗ್ನಿಸ್ತಂಭದಲ್ಲಿಯೂ ಇದ್ದು
ಅವರ ಮುಂಭಾಗದಲ್ಲಿ ಹೋದನು. ಈ ರೀತಿಯಲ್ಲಿ
ಅವರು ಹಗಲಿರುಳು ಪ್ರಯಾಣಮಾಡಿದರು. ಹಗ 22
ಲಲ್ಲಿ ಮೇಘಸ್ತಂಭವೂ ರಾತ್ರಿಯಲ್ಲಿ ಅಗ್ನಿಸ್ತಂಭವೂ
ಜನರ ಮುಂದೆ ತಪ್ಪದೆ ಕಾಣಿಸಿದವು.

**14**

ಯೆಹೋವನು ಮೋಶೆಗೆ—ಇಸ್ರಾಯೇಲ್ಯ 1, 2
ರು ಅಡ್ಡತಿರುಗಿ ಪೀಹಹೀರೋತಿನ ಪೂರ್ವಕಡೆಯಲ್ಲಿ
ಮಿಗ್ದೋಲಿಗೂ ಸಮುದ್ರಕ್ಕೂ ನಡುವೆ ಬಾಳ್ಚೆಫೋನಿಗೆ
ಎದುರಾಗಿ ಇಳುಕೊಳ್ಳಬೇಕೆಂದು ಅವರಿಗೆ ಆಜ್ಞಾ
ಪಿಸು; ಅದರ ಎದುರಾಗಿಯೇ ಸಮುದ್ರದ ಬಳಿ
ಯಲ್ಲಿ ಅವರು ಇಳಿದುಕೊಳ್ಳಬೇಕು. ಫರೋಹನು 3
ಅದನ್ನು ಕಂಡು—ಇಸ್ರಾಯೇಲ್ಯರಿಗೆ ದಾರಿ ತಪ್ಪಿತು,
ಎಲ್ಲಾ ಕಡೆಯಲ್ಲಿಯೂ ಅರಣ್ಯವು ಅವರನ್ನು ಸುತ್ತಿ
ಕೊಂಡದೆ ಅಂದುಕೊಳ್ಳುವನು. ನಾನು ಫರೋಹನ 4
ಹೃದಯವನ್ನು ಕಠಿಣಪಡಿಸುವೆನಾದದರಿಂದ ಅವನು
ಅವರನ್ನು ಬೆನ್ನಟ್ಟಿ ಬರುವನು; ಆಗ ನಾನು ಫರೋಹ
ನಲ್ಲಿಯೂ ಅವನ ಸೈನ್ಯದಲ್ಲಿಯೂ ಪ್ರಖ್ಯಾತಿಗೊಳ್ಳು
ವೆನು. ನಾನೇ ಯೆಹೋವನೆಂಬದು ಐಗುಪ್ತ್ಯ
ರಿಗೆ ತಿಳಿದುಬರುವದು ಎಂದು ಹೇಳಿದನು. ಯೆಹೋ
ವನು ಆಜ್ಞಾಪಿಸಿದಂತೆಯೇ ಇಸ್ರಾಯೇಲ್ಯರು ನಡೆ
ದರು.

5 ಇಸ್ರಾಯೇಲ್ಯರು ಓಡಿಹೋದರೆಂಬ ವರ್ತಮಾನವು
ಫರೋಹನಿಗೆ ತಿಳಿದುಬಂದಾಗ ಅದರ ವಿಷಯದಲ್ಲಿ
ಫರೋಹನ ಮನಸ್ಸೂ ಅವನ ಪರಿವಾರದವರ ಮನ
ಸ್ಸೂ ಬೇರೆಯಾಯಿತು. ಅವರು—ಇದೇನು ನಾವು
ಮಾಡಿದ್ದು? ನಮಗೆ ದಾಸರಾಗಿದ್ದ ಇಸ್ರಾಯೇಲ್ಯ
ರನ್ನು ಯಾತಕ್ಕೆ ಹೋಗಗೊಡಿಸಿದೆವು ಅಂದುಕೊಂಡ
6 ರು. ಆಗ ಫರೋಹನು ತನ್ನ ರಥಬಲವನ್ನು ಸಿದ್ಧ
ಪಡಿಸಿಕೊಂಡು ತನ್ನ ಭಟರೊಡನೆ ಹೊರಟನು.
7 ಶ್ರೇಷ್ಠವಾದ ಆರುನೂರು ರಥಗಳನ್ನೂ ಐಗುಪ್ತ
ದೇಶದ ಎಲ್ಲಾ ರಥಗಳನ್ನೂ ತೆಗೆದುಕೊಂಡು ಹೋದ
8 ನು; ಆ ಎಲ್ಲಾ ರಥಗಳಲ್ಲಿ ಭಟರಿದ್ದರು. ಯೆಹೋ
ವನು ಐಗುಪ್ತದೇಶದ ಅರಸನಾದ ಫರೋಹನ ಹೃದ
ಯವನ್ನು ಕಠಿಣಪಡಿಸಿದ್ದದರಿಂದ ಅವನು ಇಸ್ರಾ
ಯೇಲ್ಯರನ್ನು ಬೆನ್ನಟ್ಟಿಹೋದನು. ಇಸ್ರಾಯೇಲ್ಯರು
9 ಅಟ್ಟಹಾಸದಿಂದ ಹೊರಟರು. ಐಗುಪ್ತ್ಯರು ಅಂದರೆ
ಫರೋಹನ ಕುದುರೆಗಳೂ ರಥಗಳೂ ಅವನ ರಾಹು
ತರೂ ಸೈನ್ಯದವರೆಲ್ಲರೂ ಅವರ ಹಿಂದೆ ಹೊರಟು
ಇಸ್ರಾಯೇಲ್ಯರು ಪೀಹಹೀರೋತಿನ ಹತ್ತಿರ ಬಾಳ್ಚೆ
ಫೋನಿನ ಎದುರಾಗಿ ಸಮುದ್ರತೀರದಲ್ಲಿ ಇಳಿದು
ಕೊಳ್ಳುವಾಗಲೇ ಅವರ ಹತ್ತಿರಕ್ಕೆ ಬಂದರು.
10 ಫರೋಹನು ಸಮೀಪಿಸುತ್ತಿರುವಾಗ ಇಸ್ರಾಯೇ
ಲ್ಯರು ಕಣ್ಣೆತ್ತಿ ತಮ್ಮ ಹಿಂದೆ ಹೊರಟುಬಂದಿದ್ದ
ಐಗುಪ್ತ್ಯರನ್ನು ಕಂಡು ಬಹಳ ಭಯಪಟ್ಟವರಾಗಿ
11 ಯೆಹೋವನಿಗೆ ಮೊರೆಯಿಟ್ಟರು. ಅವರು ಮೋಶೆಗೆ—
ಐಗುಪ್ತದೇಶದಲ್ಲಿ ಸಮಾಧಿಗಳಿಲ್ಲವಾದದರಿಂದ ಅರ
ಣ್ಯದಲ್ಲಿ ಸಾಯಲಿ ಎಂಬದಾಗಿ ನಮ್ಮನ್ನು ಇಲ್ಲಿಗೆ
ಕರಕೊಂಡು ಬಂದಿಯೇನು? ಯಾಕೆ ನಮಗೆ ಈ
ಪ್ರಕಾರ ಮಾಡಿ ಐಗುಪ್ತದೇಶದಿಂದ ಕರಕೊಂಡು
12 ಬಂದಿ? ನಾವು ಐಗುಪ್ತದೇಶದಲ್ಲಿದ್ದಾಗಲೇ—ನೀನು
ನಮ್ಮ ಗೊಡವೆಗೆ ಬರಬೇಡ; ನಾವು ಐಗುಪ್ತ್ಯರಿಗೆ
ದಾಸರಾಗಿಯೇ ಇರುವೆವು ಎಂಬದಾಗಿ ನಿನಗೆ ಹೇಳ
ಲಿಲ್ಲವೇ. ನಾವು ಅರಣ್ಯದಲ್ಲಿ ಸಾಯುವದಕ್ಕಿಂತ
ಐಗುಪ್ತ್ಯರಿಗೆ ದಾಸರಾಗಿರುವದೇ ವಾಸಿಯಲ್ಲವೇ
ಎಂದು ಹೇಳಿದರು.
13 ಆದರೆ ಮೋಶೆ ಆ ಜನರಿಗೆ—ನೀವು ಅಂಜಬೇಡಿರಿ;
ಸುಮ್ಮನೆ ನಿಂತುಕೊಂಡಿದ್ದು ಯೆಹೋವನು ಈ
ಹೊತ್ತು ನಿಮ್ಮನ್ನು ರಕ್ಷಿಸುವ ರೀತಿಯನ್ನು ನೋಡಿರಿ.
ನೀವು ಈ ಹೊತ್ತು ನೋಡುವ ಐಗುಪ್ತ್ಯರನ್ನು
14 ಇನ್ನು ಮುಂದೆ ಎಂದಿಗೂ ನೋಡುವದಿಲ್ಲ. ಯೆಹೋ
ವನೇ ನಿಮಗಾಗಿ ಯುದ್ಧಮಾಡುವನು; ನೀವಂತು
ಸುಮ್ಮನೇ ಇರ್ರಿ ಎಂದು ಹೇಳಿದನು.
15 ಆಗ ಯೆಹೋವನು ಮೋಶೆಗೆ ಹೇಳಿದ್ದೇನಂದರೆ—
ನೀನು ನನಗೆ ಮೊರೆಯಿಡುವದೇನು? ಮುಂದಕ್ಕೆ
16 ಹೊರಡಬೇಕೆಂದು ಇಸ್ರಾಯೇಲ್ಯರಿಗೆ ಹೇಳು. ಮತ್ತು
ನೀನು ನಿನ್ನ ಕೋಲನ್ನು ಎತ್ತಿ ಸಮುದ್ರದ ಮೇಲೆ
ಕೈಚಾಚಿ ಅದನ್ನು ವಿಭಾಗಿಸು; ಆಗ ಇಸ್ರಾಯೇ
ಲ್ಯರು ಸಮುದ್ರದ ಮಧ್ಯದಲ್ಲಿ ಒಣಗಿದ ನೆಲದ
17 ಮೇಲೆ ನಡೆದುಹೋಗುವರು. ನಾನಂತೂ ಐಗು
ಪ್ತ್ಯರ ಹೃದಯಗಳನ್ನು ಕಠಿಣಪಡಿಸುವೆನಾದದರಿಂದ
ಅವರು ಇವರ ಹಿಂದೆ ಸಮುದ್ರದೊಳಗೆ ಹೋಗು
ವರು; ಆಗ ನಾನು ಫರೋಹನಲ್ಲಿಯೂ ಅವನ
ಸಮಸ್ತಸೈನ್ಯದಲ್ಲಿಯೂ ರಥಗಳಲ್ಲಿಯೂ ಕುದುರೆ
ಗಳಲ್ಲಿಯೂ ಪ್ರಖ್ಯಾತಿಗೊಳ್ಳುವೆನು. ನಾನು ಫರೋ
ಹನಲ್ಲಿಯೂ ಅವನ ರಥಗಳಲ್ಲಿಯೂ ಕುದುರೆಗಳ
ಲ್ಲಿಯೂ ಪ್ರಖ್ಯಾತಿಹೊಂದಿದನಂತರ ನಾನು ಯೆಹೋ
ವನು ಎಂಬದನ್ನು ಐಗುಪ್ತ್ಯರು ತಿಳುಕೊಳ್ಳುವರು
ಅಂದನು.
ಆಗ ಇಸ್ರಾಯೇಲ್ಯರ ದಂಡಿನ ಮುಂದೆ ಹೋಗು
ತ್ತಿದ್ದ ದೇವದೂತನು ತನ್ನ ಸ್ಥಳವನ್ನು ಬಿಟ್ಟು ಅವರ
ಹಿಂದಕ್ಕೆ ಬಂದನು; ಅವರ ಮುಂದಾಗಿದ್ದ ಮೇಘ
ಸ್ತಂಭವು ಅಲ್ಲಿಂದ ಬಂದು ಅವರ ಹಿಂದೆ ನಿಂತು
ಕೊಂಡಿತು. ಆ ಮೇಘಸ್ತಂಭವು ಐಗುಪ್ತ್ಯರ ಪಾಳೆ
ಯಕ್ಕೂ ಇಸ್ರಾಯೇಲ್ಯರ ಪಾಳೆಯಕ್ಕೂ ನಡುವೆ
ಬಂದು [ಐಗುಪ್ತ್ಯರಿಗೆ] ಕತ್ತಲನ್ನು ಉಂಟುಮಾಡಿ
ದರೂ [ಇಸ್ರಾಯೇಲ್ಯರಿಗೋಸ್ಕರ] ರಾತ್ರಿಯನ್ನು
ಬೆಳಕುಮಾಡಿತು. ಆ ರಾತ್ರಿಯೆಲ್ಲಾ ಒಬ್ಬರ ಹತ್ತಿರ
ಕ್ಕೆ ಒಬ್ಬರು ಬರಲಿಲ್ಲ.
ಮೋಶೆ ಸಮುದ್ರದ ಮೇಲೆ ಕೈ ಚಾಚಿದಾಗ ಯೆ
ಹೋವನು ಆ ರಾತ್ರಿಯೆಲ್ಲಾ ಮೂಡಣ ದಿಕ್ಕಿನಿಂದ
ಬಲವಾದ ಬಿರುಗಾಳಿಯನ್ನು ಬೀಸುವಂತೆ ಮಾಡಿ
ಸಮುದ್ರದ ನೀರನ್ನು ಒಂದು ಕಡೆಗೆ ನೂಕಿ ಅದರ
ತಳದಲ್ಲಿ ಒಣನೆಲವು ಕಾಣಿಸುವಂತೆ ಮಾಡಿದನು.
ನೀರು ವಿಭಾಗವಾಯಿತು. ಇಸ್ರಾಯೇಲ್ಯರು ಸಮು
ದ್ರದ ಮಧ್ಯದಲ್ಲಿ ಒಣನೆಲದಲ್ಲೇ ನಡೆದುಹೋದರು.
ನೀರು ಅವರ ಎಡಗಡೆ ಬಲಗಡೆಗಳಲ್ಲಿ ಗೋಡೆಯಂತೆ
ನಿಂತಿತು.
ಐಗುಪ್ತ್ಯರೂ ಅಂದರೆ ಫರೋಹನ ಕುದುರೆಗಳೂ
ರಥಗಳೂ ರಾಹುತರೂ ಅವರನ್ನು ಬೆನ್ನಟ್ಟುವವರಾಗಿ
ಅವರ ಹಿಂದೆಯೇ ಸಮುದ್ರದೊಳಗೆ ಹೋದರು.
ಬೆಳಗಿನ ಜಾವದಲ್ಲಿ ಯೆಹೋವನು ಆ ಅಗ್ನಿಮೇಘ
ಸ್ತಂಭದೊಳಗಿಂದ ಐಗುಪ್ತ್ಯರ ದಂಡಿನ ಕಡೆಗೆ ನೋಡಿ
ಅದನ್ನು ಗಲಿಬಿಲಿಮಾಡಿದನು. ಆತನು ಅವರ ರಥ
ಗಳ ಚಕ್ರಗಳನ್ನು [1]ತೆಗೆದುಬಿಟ್ಟದ್ದರಿಂದ ಐಗುಪ್ತ್ಯರು
ಬಹುಕಷ್ಟದಿಂದ ಹೊಡಕೊಂಡುಹೋದರು. ಆಗ
ಐಗುಪ್ತ್ಯರು—ನಾವು ಇಸ್ರಾಯೇಲ್ಯರ ಮುಂದೆ ನಿಲ್ಲ
ಲಾರೆವು, ಓಡಿ ಹೋಗೋಣ; ಯೆಹೋವನು ಅವರಿ
ಗೋಸ್ಕರ ನಮಗೆ ವಿರೋಧವಾಗಿ ಯುದ್ಧಮಾಡು
ತ್ತಾನೆ ಎಂದು ಹೇಳಿಕೊಂಡರು.
ಅಷ್ಟರಲ್ಲಿ ಯೆಹೋವನು ಮೋಶೆಗೆ—ಸಮುದ್ರದ
ಮೇಲೆ ನಿನ್ನ ಕೈ ಚಾಚು; ಆಗ ಅದರ ನೀರು ಮೊದಲಿ
ನಂತೆ ಬಂದು ಐಗುಪ್ತ್ಯರನ್ನೂ ಅವರ ರಥಗಳನ್ನೂ
ರಾಹುತರನ್ನೂ ಮುಣುಗಿಸುವದೆಂದು ಹೇಳಿದನು.
ಮೋಶೆ ಸಮುದ್ರದ ಮೇಲೆ ಕೈಚಾಚಿದನು. ಬೆಳ
ಗಾಗುವಾಗಲೇ ಸಮುದ್ರದ ನೀರು ಮೊದಲಿದ್ದಂತೆ
ಯೇ ತುಂಬಿಕೊಳ್ಳಲು ಐಗುಪ್ತ್ಯರು ಓಡಿಹೋಗುತ್ತಾ
ಅದರ ಎದುರಾಗಿಯೇ ಬಂದರು. ಹೀಗೆ ಯೆಹೋ

1) ಪಾಠಾಂತರ: ಕಡೆದದ್ದರಿಂದ.

ವನು ಐಗುಪ್ತ್ಯರನ್ನು ಸಮುದ್ರದೊಳಗೆ ಕೆಡವಿ ಬಿಟ್ಟನು. ನೀರು ಮೊದಲಿನಂತೆ ಬಂದು ಆ ರಥಗಳನ್ನೂ ರಾಹುತರನ್ನೂ ಅವರ ಹಿಂದೆ ಸಮುದ್ರದೊಳಗೆ ಹೋಗಿದ್ದ ಫರೋಹನ ಸೈನ್ಯದವರೆಲ್ಲರನ್ನೂ ಮುಣುಗಿಸಿತು. ಅವರಲ್ಲಿ ಒಬ್ಬರಾದರೂ ಉಳಿಯಲಿಲ್ಲ. ಇಸ್ರಾಯೇಲ್ಯರೋ ಸಮುದ್ರದೊಳಗೆ ಒಣನೆಲದಲ್ಲೇ ನಡೆದುಹೋದರು; ನೀರು ಅವರ ಎಡಗಡೆ ಬಲಗಡೆಗಳಲ್ಲಿ ಗೋಡೆಯಂತೆ ನಿಂತಿತ್ತು.
ಆ ದಿನದಲ್ಲಿ ಯೆಹೋವನು ಇಸ್ರಾಯೇಲ್ಯರನ್ನು ಐಗುಪ್ತ್ಯರ ಕೈಗೆ ತಪ್ಪಿಸಿದನು. ಐಗುಪ್ತ್ಯರು ಸತ್ತು ಸಮುದ್ರತೀರದಲ್ಲಿ ಬಿದ್ದಿರುವದನ್ನು ಇಸ್ರಾಯೇಲ್ಯರು ಕಂಡರು. ಯೆಹೋವನು ಐಗುಪ್ತ್ಯರಲ್ಲಿ ಮಾಡಿದ ಈ ಪರಾಕ್ರಮಕಾರ್ಯವನ್ನು ಇಸ್ರಾಯೇಲ್ಯರು ನೋಡಿ ಯೆಹೋವನಿಗೆ ಭಯಪಟ್ಟು ಆತನಲ್ಲಿಯೂ ಆತನ ಸೇವಕನಾದ ಮೋಶೆಯಲ್ಲಿಯೂ ನಂಬಿಕೆಯಿಟ್ಟರು.

ಇಸ್ರಾಯೇಲ್ಯರು ಹಾಡಿದ ಜಯಗೀತ.

15 ಆಗ ಮೋಶೆಯೂ ಇಸ್ರಾಯೇಲ್ಯರೂ ಯೆಹೋವನ ಸ್ತೋತ್ರಕ್ಕಾಗಿ ಈ ಕೀರ್ತನೆಯನ್ನು ಹಾಡಿದರು—

ಯೆಹೋವನ ಸ್ತೋತ್ರವನ್ನು ಗಾನಮಾಡೋಣ;
ಆತನು ಮಹಾಜಯಶಾಲಿಯಾದನು;
ಕುದುರೆಗಳನ್ನೂ ರಾಹುತರನ್ನೂ ಸಮುದ್ರದಲ್ಲಿ ಕೆಡವಿ ನಾಶಮಾಡಿದ್ದಾನೆ.

ನನ್ನ ಬಲವೂ ಕೀರ್ತನೆಯೂ 1)ಯಾಹುವೇ,
ಆತನಿಂದ ನನಗೆ ರಕ್ಷಣೆಯುಂಟಾಯಿತು.
ನಮ್ಮ ದೇವರು ಆತನೇ, ಆತನನ್ನು ವರ್ಣಿಸುವೆವು;
ನಮ್ಮ ಪಿತೃಗಳ ದೇವರು ಆತನೇ, ಆತನ ಮಹಿಮೆಯನ್ನು ಪ್ರಖ್ಯಾತಿಪಡಿಸುವೆವು.

ಯೆಹೋವನು ಯುದ್ಧಶೂರನು; ಆತನ ನಾಮಧೇಯವು ಯೆಹೋವನೇ.
ಆತನು ಫರೋಹನ ರಥಗಳನ್ನೂ ಸೈನಿಕರನ್ನೂ ಸಮುದ್ರದಲ್ಲಿ ಕೆಡವಿದನು;
ಆತನ ಶ್ರೇಷ್ಠವೀರರನ್ನು ಕೆಂಪು ಸಮುದ್ರದಲ್ಲಿ ಮುಳುಗಿಸಿಬಿಟ್ಟನು.
ಸಾಗರವು ಅವರನ್ನು ಮುಚ್ಚಿಬಿಟ್ಟಿತು;
ಕಲ್ಲಿನಂತೆ ಥಡಲ್ಲೆಂದು ಸಮುದ್ರದ ತಳವನ್ನು ಸೇರಿದರು.

ಯೆಹೋವನೇ, ನಿನ್ನ ಭುಜಬಲವು ಎಷ್ಟೋ ಘನವಾದದ್ದು;
ಯೆಹೋವನೇ, ನಿನ್ನ ಭುಜಬಲವು ನಿನ್ನ ಶತ್ರುಗಳನ್ನು ಪುಡಿಪುಡಿಮಾಡುತ್ತದೆ.

ನೀನು ಅತ್ಯಧಿಕಮಹತ್ವವುಳ್ಳವನಾಗಿ 7
ನಿನಗೆದುರಾಗಿ ನಿಲ್ಲುವವರನ್ನು ಕೆಡವಿಬಿಡುತ್ತೀ.
ನಿನ್ನ ಕೋಪಾಗ್ನಿಯು ಹೊರಟು
ಅವರನ್ನು ಒಣಗಿದ ಹುಲ್ಲನ್ನೋ ಎಂಬಂತೆ ಭಸ್ಮಮಾಡುತ್ತದೆ.
ನೀನು ಸಿಟ್ಟಿನಿಂದ ಮುಸುಗರೆದಾಗ ಸಮುದ್ರದ 8
ನೀರು ಒಟ್ಟಿನಂತಾಯಿತು.
ಪ್ರವಾಹವು ಗೋಡೆಯೋಪಾದಿಯಲ್ಲಿ ನಿಂತುಕೊಂಡಿತು.
ಸಾಗರಗರ್ಭದೊಳಗಣ ಜಲವು ಗಟ್ಟಿಯಾಯಿತು.

ನಾವು ಇವರನ್ನು ಹಿಂದಟ್ಟಿ ಹಿಡಿಯುವೆವು, 9
ಅವರ ಸೊತ್ತನ್ನು ಅಪಹರಿಸಿ ಹಂಚಿಕೊಳ್ಳುವೆವು,
ಅವರಲ್ಲಿ ನಮ್ಮ ಕೋರಿಕೆಯನ್ನು ತೀರಿಸಿಕೊಳ್ಳುವೆವು,
ನಾವು ಕತ್ತಿಯನ್ನು ಹಿರಿದು ಭುಜಬಲದಿಂದ ಅವರನ್ನು ಸಂಹಾರಮಾಡುವೆವು
ಎಂಬದಾಗಿ ನಮ್ಮ ಶತ್ರುಗಳು ಮಾತಾಡಿಕೊಳ್ಳುತ್ತಿದ್ದರು.
ಆದರೆ ನೀನು ಉಸುರುಗಾಳಿಯಿಂದ ಊದಲು 10
ಸಮುದ್ರವು ಅವರನ್ನು ಮುಚ್ಚಿತು,
ಅವರು ಮಹಾಸಾಗರದೊಳಗೆ ಸೀಸದ ಗುಂಡಿನಂತೆ ಮುಳುಗಿಹೋದರು.

ಯೆಹೋವನೇ, ದೇವರುಗಳಲ್ಲಿ ನಿನ್ನ ಸಮಾನನು ಯಾವನು? 11
ಪರಿಶುದ್ಧತ್ವದಿಂದ ಸರ್ವೋತ್ತಮನೂ
ಪ್ರಖ್ಯಾತಕೃತ್ಯಗಳನ್ನು ಮಾಡಿರುವದರಿಂದ ಭಯಂಕರನೂ
ಅದ್ಭುತಗಳನ್ನು ನಡಿಸುವವನೂ ಆಗಿರುವ ನಿನಗೆ ಸಮಾನನು ಎಲ್ಲಿ?
ನೀನು ನಿನ್ನ ಬಲಗೈಯನ್ನು ಚಾಚಿದಾಗ 12
ಭೂಮಿಯು ಬಾಯ್ತೆರೆದು ಶತ್ರುಗಳನ್ನು ನುಂಗಿಬಿಟ್ಟಿತಲ್ಲಾ;
ನೀನು ಬಿಡುಗಡೆ ಮಾಡಿದ ಪ್ರಜೆಯನ್ನೋ ಪ್ರೀತಿಯಿಂದ ನಡಿಸಿಕೊಂಡು 13
ನಿನ್ನ ಪರಿಶುದ್ಧನಿವಾಸಸ್ಥಾನದ ತನಕ ನಿನ್ನ ಶಕ್ತಿಯಿಂದ ಬರಮಾಡಿದಿ.

ಜನಾಂಗಗಳು ಇದನ್ನು ಕೇಳಿ ನಡುಗುತ್ತಿರುವವು; 14
ಫಿಲಿಷ್ಟಿಯರಿಗೆ ಸಂಕಟವಾಯಿತು;
ಎದೋಮ್ಯರ ಕುಲಪತಿಗಳು ಕಳವಳಗೊಂಡರು; 15
ಮೋವಾಬ್ಯರ ಮುಖಂಡರು ಗಡಗಡನೆ ನಡುಗುತ್ತಾರೆ;
ಕಾನಾನ್ ದೇಶದವರು ಕರಗಿಹೋದರು;
ಗಾಬರಿಯೂ ಹೆದರಿಕೆಯೂ ಅವರನ್ನು ಹಿಡಿದವೆ. 16

1) ಯಾಹು ಎಂಬದು ಯೆಹೋವನಾಮದ ಸಂಕ್ಷಿಪ್ತರೂಪ.

ನಿನ್ನ ಭುಜಬಲದ ದೆಸೆಯಿಂದ ಅವರು ಕಲ್ಲಿನಂತೆ
ಸ್ತಬ್ಧರಾಗಿದ್ದಾರೆ.

ಅಷ್ಟರಲ್ಲಿ ಯೆಹೋವನೇ, ನೀನು ಸಂಪಾದಿಸಿ
ಕೊಂಡ ನಿನ್ನ ಪ್ರಜೆಗಳು ಸಾಗಿಹೋಗಿ
ದೇಶವನ್ನು ಸೇರುವರು.
17 ನೀನು ಅವರನ್ನು ನಿನ್ನ ಸ್ವಕೀಯದೇಶವಾಗಿರುವ
ಬೆಟ್ಟದ ಸೀಮೆಗೆ ತಂದು ಸ್ಥಾಪಿಸುವಿ.
ಯೆಹೋವನೇ, ನೀನು ಸ್ವಂತ ನಿವಾಸಕ್ಕಾಗಿ
ಏರ್ಪಡಿಸಿಕೊಂಡಿರುವ ಸ್ಥಾನವಾಗಿಯೂ
ಕರ್ತನೇ, ನೀನು ಸಿದ್ಧಪಡಿಸಿಕೊಂಡಿರುವ ಪವಿ
ತ್ರಾಲಯವಾಗಿಯೂ
ಇರುವಲ್ಲಿಗೆ ಅವರನ್ನು ಬರಮಾಡುವಿ.
18 ಯೆಹೋವನೇ ಯುಗಯುಗಾಂತರಗಳಲ್ಲಿಯೂ
ಆಳುವನು.

19 [ಈ ಜಯಗೀತಕ್ಕೆ ಕಾರಣವೇನಂದರೆ—]ಫರೋ
ಹನ ಕುದುರೆಗಳೂ ರಥಗಳೂ ರಾಹುತರೂ ಸಮು
ದ್ರದಲ್ಲಿ ಹೊಕ್ಕು ನಡೆಯಲು ಯೆಹೋವನು ಸಮು
ದ್ರದ ನೀರನ್ನು ಅವರ ಮೇಲೆ ತಿರಿಗಿ ಬರಮಾಡಿ
ಮುಳುಗಿಸಿಬಿಟ್ಟನು; ಇಸ್ರಾಯೇಲ್ಯರಾದರೋ ಸಮು
ದ್ರದ ಮಧ್ಯದೊಳಗೆ ಒಣನೆಲದಲ್ಲಿ ನಡೆದುಹೋದರು.
20 ಆರೋನನ ಅಕ್ಕನಾದ ಮಿರ್ಯಾಮಳು ಪ್ರವಾ
ದಿನಿಯಾಗಿದ್ದು ದಮ್ಮಡಿಯನ್ನು ಕೈಯಲ್ಲಿ ತೆಗೆದು
ಕೊಂಡಳು. ಸ್ತ್ರೀಯರೆಲ್ಲರೂ ದಮ್ಮಡಿಗಳನ್ನು ಹಿಡಿ
ದು ನಾಟ್ಯವಾಡುತ್ತಾ ಆಕೆಯ ಹಿಂದೆ ಹೋಗುತ್ತಿ
21 ರಲು ಮಿರ್ಯಾಮಳು ಅವರ ಹಾಡಿಗೆ ಹೀಗೆ ಪಲ್ಲವಿ
ಹಾಡಿದಳು—
ಯೆಹೋವನನ್ನು ಗಾನಮಾಡಿರಿ;
ಆತನು ಮಹಾಜಯಶಾಲಿಯಾದನು;
ಕುದುರೆಗಳನ್ನೂ ರಾಹುತರನ್ನೂ ಸಮುದ್ರದಲ್ಲಿ
ಕೆಡವಿ ನಾಶಮಾಡಿದ್ದಾನೆ.

ಇಸ್ರಾಯೇಲ್ಯರು ಸೀನಾಯಿಬೆಟ್ಟಕ್ಕೆ
ಯಾತ್ರೆಹೋದದ್ದು.
15. 22—18. 27.

ಅರಣ್ಯದಲ್ಲಿ ಅವರಿಗೋಸ್ಕರ ಕಹಿನೀರು ಸಿಹಿಯಾದದ್ದು.

22 ಒಳಿಕ ಮೋಶೆಯು ಇಸ್ರಾಯೇಲ್ಯರನ್ನು ಕೆಂಪು ಸಮು
ದ್ರದ ಬಳಿಯಿಂದ ಪ್ರಯಾಣ ಮಾಡಿಸಲು ಅವರು
ಶೂರಿನ ಅರಣ್ಯದೊಳಗೆ ಮೂರು ದಿನ ನಡೆದುಹೋ
23 ದರು. ಅಲ್ಲಿ ಅವರಿಗೆ ನೀರು ಸಿಕ್ಕಲೇ ಇಲ್ಲ. ತರು
ವಾಯ ಮಾರಾ ಎಂಬ ಸ್ಥಳವನ್ನು ಸೇರಿದರು; ಆದರೆ
ಆ ಸ್ಥಳದ ನೀರು ಕಹಿಯಾಗಿದ್ದದರಿಂದ ಅವರಿಗೆ
ಅದನ್ನು ಕುಡಿಯುವದಕ್ಕಾಗದೆ ಹೋಯಿತು. ಅದ
ರಿಂದಲೇ ಆ ಸ್ಥಳಕ್ಕೆ ಮಾರಾ ಎಂದು ಹೆಸರಾಯಿತು.
24 ಜನರು—ನಾವೇನು ಕುಡಿಯಬೇಕೆಂದು ಮೋಶೆಯ
25 ಮೇಲೆ ಗುಣುಗುಟ್ಟುತ್ತಿರಲು ಮೋಶೆಯು ಯೆಹೋವ
ನನ್ನು ಪ್ರಾರ್ಥಿಸಿದನು. ಆಗ ಯೆಹೋವನು ಅವ

ನಿಗೆ ಒಂದು ಗಿಡವನ್ನು ತೋರಿಸಿದನು. ಅದನ
ಆ ನೀರಿನಲ್ಲಿ ಹಾಕಿದಾಗ ನೀರು ಸಿಹಿಯಾಯಿತು.
ಅಲ್ಲಿ ಯೆಹೋವನು ಇಸ್ರಾಯೇಲ್ಯರಿಗಾಗಿ ಒಂ
ನಿಯಮವನ್ನು ನಿರ್ಣಯಮಾಡಿ ಅವರನ್ನು ಪ
ಕ್ಷಿಸಿ ಹೀಗಂದನು—ನೀವು ನಿಮ್ಮ ದೇವರಾದ ಯ
ಹೋವನ ಮಾತನ್ನು ಶ್ರದ್ಧೆಯಿಂದ ಕೇಳಿ ಆತನ ದೃಷ್ಟಿ
ಸರಿಬೀಳುವದನ್ನು ಮಾಡಿ ಆತನ ಆಜ್ಞೆಗಳಿಗೆ ವಿಧೇಯ
ರಾಗಿದ್ದು ಆತನ ಕಟ್ಟಳೆಗಳನ್ನೆಲ್ಲಾ ಅನುಸರಿಸಿ ನಡೆದ
ನಾನು ಐಗುಪ್ತ್ಯರಿಗೆ ಉಂಟುಮಾಡಿದ ವ್ಯಾಧಿಗಳ
ಒಂದನ್ನೂ ನಿಮಗೆ ಬರಗೊಡಿಸುವದಿಲ್ಲ. ಯೆಹ
ವನೆಂಬ ನಾನೇ ನಿಮಗೆ ಆರೋಗ್ಯದಾಯಕನು.
ತರುವಾಯ ಅವರು ಏಲೀಮಿಗೆ ಬಂದರು. ಅ
ಹನ್ನೆರಡು ನೀರಿನ ಒರತೆಗಳೂ ಎಪ್ಪತ್ತು ಖರ್ಜೂರ
ಮರಗಳೂ ಇದ್ದದರಿಂದ ಆ ನೀರಿನ ಬಳಿಯಲ್ಲಿ ಇ
ಕೊಂಡರು.

ದೇವರು ಇಸ್ರಾಯೇಲ್ಯರಿಗೆ ಅರಣ್ಯದಲ್ಲಿ ಲಾವಕ್ಕಿಗಳನ್ನೂ
ಮನ್ನವನ್ನೂ ಕೊಟ್ಟದ್ದು.

೧೬ ಇಸ್ರಾಯೇಲ್ಯರ ಸಮೂಹವೆಲ್ಲಾ ಏಲೀಮಿ
ನಿಂದ ಹೊರಟ ಮೇಲೆ ಅವರು ಐಗುಪ್ತದೇಶವನ್ನು
ಬಿಟ್ಟ ಎರಡನೆಯ ತಿಂಗಳಿನ ಹದಿನೈದನೆಯ ದಿನದ
ಏಲೀಮಿಗೂ ಸೀನಾಯಿಬೆಟ್ಟಕ್ಕೂ ನಡುವೆಯಿರು
ಸೀನೆಂಬ ಅರಣ್ಯಕ್ಕೆ ಬಂದರು.
ಅರಣ್ಯದಲ್ಲಿ ಇಸ್ರಾಯೇಲ್ಯರ ಸಮೂಹವೆ
ಮೋಶೆ ಆರೋನರ ಮೇಲೆ ಗುಣುಗುಟ್ಟಿ ಅವರಿಗೆ
ಈ ಸಮೂಹವನ್ನೆಲ್ಲ ಹಸಿವೆಯಿಂದ ಸಾಯಿಸಬೇಕೆಂ
ನೀವು ಈ ಅರಣ್ಯದೊಳಕ್ಕೆ ನಮ್ಮನ್ನು ಕರಕೊಂ
ಬಂದಿರಷ್ಟೆ. ನಾವು ಐಗುಪ್ತದೇಶದಲ್ಲಿದ್ದಾಗ ಯ
ಹೋವನ ಕೈಯಿಂದ ಸತ್ತಿದ್ದರೆ ಎಷ್ಟೋ ಮೇಲಾಗಿತ್ತು
ಆಗ ಮಾಂಸಪಾತ್ರೆಗಳ ಬಳಿಯಲ್ಲಿ ಕೂತು ಹೊಟ್ಟ
ತುಂಬ ಊಟಮಾಡುತ್ತಿದ್ದೆವಲ್ಲಾ ಎಂದು ಹೇಳಿದರ
ಆಗ ಯೆಹೋವನು ಮೋಶೆಗೆ—ಇಗೋ ನಾ
ಆಕಾಶದಿಂದ ನಿಮಗೋಸ್ಕರ ಆಹಾರವನ್ನು ಸುರಿ
ವೆನು. ಈ ಜನರು ಪ್ರತಿದಿನವೂ ಹೊರಗೆ ಹೋಗಿ ಆಯ
ದಿನಕ್ಕೆ ಬೇಕಾದಷ್ಟು ಮಾತ್ರ ಕೂಡಿಸಿಕೊಳ್ಳಬೇಕ
ಇದರಿಂದ ಇವರು ನನ್ನ ಬೋಧನೆಯನ್ನು ಅನುಸರ
ನಡೆಯುವವರೋ ಅಲ್ಲವೋ ಎಂದು ಪರೀಕ್ಷಿಸಿ
ಯುತ್ತೇನೆ. ಆರನೆಯ ದಿನದಲ್ಲಿ ಮಾತ್ರ ಅವ
ತಂದದ್ದನ್ನು ಸಿದ್ಧಪಡಿಸಿಕೊಳ್ಳುವಾಗ ಅದು ಪ್ರತಿದಿ
ಕೂಡಿಸಿಕೊಂಡದ್ದಕ್ಕಿಂತಲೂ ಎರಡರಷ್ಟಾಗಿರುವ
ಎಂದು ಹೇಳಿದನು.
ಮೋಶೆ ಆರೋನರು ಇಸ್ರಾಯೇಲ್ಯರೆಲ್ಲರಿಗೆ
ನಿಮ್ಮನ್ನು ಐಗುಪ್ತದೇಶದಿಂದ ಬಿಡಿಸಿದವನು ಯೆಹ
ವನೇ ಎಂಬುದು ಸಾಯಂಕಾಲದಲ್ಲಿ ನಿಮಗೆ ಗೊತ
ಗುವದು; ಹೊತ್ತಾರೆಯಲ್ಲಿಯೂ ಆತನ ಮಹಿ
ಯು ನಿಮಗೆ ಕಾಣಬರುವದು. ನೀವು ಯೆಹೋ
ಮೇಲೆ ಗುಣುಗುಟ್ಟುವ ಮಾತುಗಳು ಆತನಿಗೆ ಕೇ
ದವು; ನಮ್ಮ ಮೇಲೆ ನೀವು ಗುಣುಗುಟ್ಟುವದೇನ
ನಾವು ಎಷ್ಟು ಮಾತ್ರದವರು ಎಂದು ಹೇಳಿದ

ೋಶೆ—ಯೆಹೋವನು ಸಾಯಂಕಾಲದ ಹೊತ್ತಿನಲ್ಲಿ
ಮಗೆ ಮಾಂಸಾಹಾರವನ್ನೂ ಹೊತ್ತಾರೆಯಲ್ಲಿ ಬೇಕಾ
ವಷ್ಟು ರೊಟ್ಟಿಯನ್ನೂ ಕೊಡುವನು. ನೀವು ಗುಣು
ಗುಟ್ಟುವ ಮಾತುಗಳು ಯೆಹೋವನಿಗೆ ಕೇಳಿಸಿದವು;
ಆ ಗುಣುಗುಟ್ಟುವಿಕೆ ಯೆಹೋವನಿಗೇ ಹೊರತು ನಮ
ಗಲ್ಲ; ನಾವು ಎಷ್ಟು ಮಾತ್ರದವರು ಎಂದನು.
ಮತ್ತು ಮೋಶೆಯು ಆರೋನನಿಗೆ—ನೀನು
ಇಸ್ರಾಯೇಲ್ಯರ ಸಮೂಹದ ಬಳಿಗೆ ಹೋಗಿ ಅವರಿಗೆ—
ಯೆಹೋವನು ನಿಮ್ಮ ಗುಣುಗುಟ್ಟುವಿಕೆಯನ್ನು ಕೇಳಿ
ಸ್ದಾನಾದದರಿಂದ ನೀವೆಲ್ಲರೂ ಆತನ ಸನ್ನಿಧಿಗೆ ಕೂಡಿ
ಬರಬೇಕೆಂದು ಆಜ್ಞಾಪಿಸು ಎಂದು ಹೇಳಿದನು. ಆರೋ
ನನು ಇಸ್ರಾಯೇಲ್ಯರ ಸಮೂಹಕ್ಕೆಲ್ಲಾ ಈ ಮಾತು
ಗಳನ್ನು ತಿಳಿಸುತ್ತಿರುವಾಗ ಅವರು ಅರಣ್ಯದ ಕಡೆಗೆ
ನೋಡಲಾಗಿ ಮೇಘದಲ್ಲಿ ಯೆಹೋವನ ತೇಜಸ್ಸು
ಅವರಿಗೆ ಕಾಣಿಸಿತು.
ಯೆಹೋವನು ಮೋಶೆಯ ಸಂಗಡ ಮಾತಾಡಿ
ಹೇಳಿದ್ದೇನಂದರೆ—ಇಸ್ರಾಯೇಲ್ಯರ ಗುಣುಗುಟ್ಟುವಿ
ಕೆಯು ನನಗೆ ಕೇಳಿಸಿತು. ನೀನು ಅವರಿಗೆ—ಸಾಯಂ
ಕಾಲದಲ್ಲಿ ಮಾಂಸವನ್ನೂ ಹೊತ್ತಾರೆಯಲ್ಲಿ ಬೇಕಾ
ದಷ್ಟು ರೊಟ್ಟಿಯನ್ನೂ ತಿನ್ನುವಿರಿ; ಇದರಿಂದ ನಾನು
ನಿಮ್ಮ ದೇವರಾದ ಯೆಹೋವನೆಂಬದು ನಿಮಗೆ ಗೊತ್ತಾ
ಗುವದೆಂದು ಹೇಳಬೇಕು ಎಂಬದೇ.
ಸಾಯಂಕಾಲವಾಗುತ್ತಲೇ [1]ಲಾವಕ್ಕಿಗಳು ಬಂದು
ಅವರ ಪಾಳೆಯವನ್ನು ಮುಚ್ಚಿಕೊಂಡವು. ಅದಲ್ಲದೆ
ಹೊತ್ತಾರೆಯಲ್ಲಿ ಮಂಜು ಪಾಳೆಯ ಸುತ್ತಲೂ
ಬಿದ್ದಿತು; ಆ ಮಂಜು ಆರಿಹೋದನಂತರ ಅರಣ್ಯದ ನೆಲ
ದಲ್ಲಿ ಮಂಜಿನ ಹನಿಗಳಂತೆ ಏನೋ ಸಣ್ಣಸಣ್ಣ ರವೆ
ಗಳು ಕಾಣಿಸಿದವು. ಇಸ್ರಾಯೇಲ್ಯರು ಅದನ್ನು
ಕಂಡು ಇಂಥದೆಂದು ತಿಳಿಯದೆ ಒಬ್ಬರಿಗೊಬ್ಬರು
[2]ಇದೇನಿರಬಹುದು ಎಂದು ಹೇಳಿಕೊಂಡರು. ಮೋಶೆ
ಅವರಿಗೆ—ಇದು ಯೆಹೋವನು ನಿಮಗೋಸ್ಕರ ಕೊಟ್ಟ
ಆಹಾರವು; ಯೆಹೋವನು ಇದರ ವಿಷಯದಲ್ಲಿ ಆಜ್ಞಾ
ಪಿಸಿದ್ದೇನಂದರೆ—ಪ್ರತಿಯೊಬ್ಬನು ತನ್ನ ಕುಟುಂಬದ
ವರ ಸಂಖ್ಯಾನುಸಾರ ತಲೆಗೆ ಒಂದು [3]ಗೋಮೆರಿನ
ಮೇರೆಗೆ ತನ್ನ ಡೇರೆಯವರಿಗೋಸ್ಕರ ಕೂಡಿಸಿಕೊಳ್ಳಲಿ;
ಒಬ್ಬೊಬ್ಬನು ಅಷ್ಟೇ ಸರಾಸರಿಯಾಗಿ ತಿನ್ನುವದುಂಟ
ಲ್ಲವೇ ಎಂದು ಹೇಳಿದನು. ಇಸ್ರಾಯೇಲ್ಯರು ಹಾಗೆ
ಯೇ ಮಾಡಿ ಕೆಲವರು ಹೆಚ್ಚಾಗಿ ಕೆಲವರು ಕಡಿಮೆ
ಯಾಗಿ ಕೂಡಿಸಿಕೊಂಡು ಗೋಮೆರಿನಿಂದ ಅಳತೆ
ಮಾಡಿದರು. ಬಹಳ ಕೂಡಿಸಿದವನಿಗೆ ಏನೂ ಹೆಚ್ಚಾ
ಗಲಿಲ್ಲ, ಸ್ವಲ್ಪವಾಗಿ ಕೂಡಿಸಿದವನಿಗೆ ಏನೂ ಕಡಿಮೆ
ಯಾಗಲಿಲ್ಲ; ಪ್ರತಿಯೊಬ್ಬನು ತನ್ನ ಭೋಜನಕ್ಕೆ ಸರಿ
ಯಾಗಿಯೇ ಕೂಡಿಸಿಕೊಂಡಿದ್ದನು.
ಅದಲ್ಲದೆ ಮೋಶೆ ಅವರಿಗೆ—ಯಾರೂ ಇದನ್ನು
ಮಾರಣೆ ದಿನದ ತನಕ ಇಟ್ಟುಕೊಳ್ಳಕೂಡದು ಎಂದು
ಹೇಳಿದನು. ಆದಾಗ್ಯೂ ಅವರಲ್ಲಿ ಕೆಲವರು ಮೋಶೆ
ಯ ಮಾತನ್ನು ಕೇಳದೆ ಅದರಲ್ಲಿ ಸ್ವಲ್ಪವನ್ನು ಮರು
ದಿವಸದ ತನಕ ಇಟ್ಟುಕೊಂಡಾಗ ಅದು ಹುಳಬಿದ್ದು
ನಾತಹಿಡಿದು ಕೆಟ್ಟುಹೋಯಿತು. ಅದಕ್ಕೆ ಮೋಶೆ
ಅವರ ಮೇಲೆ ಸಿಟ್ಟುಗೊಂಡನು.
ಜನರು ದಿನದಿನಕ್ಕೆ ಹೊತ್ತಾರೆಯಲ್ಲಿ ತಮ್ಮ ತಮ್ಮ 21
ಭೋಜನಕ್ಕೆ ತಕ್ಕಷ್ಟು ಕೂಡಿಸಿಕೊಂಡರು. ಬಿಸಲು
ಹೆಚ್ಚಿದಾಗ ಅದು ಕರಗಿಹೋಯಿತು.
ಆರನೆಯ ದಿನ ಕೂಡಿಸಿಕೊಳ್ಳುವಲ್ಲಿ ಎರಡರಷ್ಟು 22
ಆಹಾರವು ಅಂದರೆ ಒಬ್ಬೊಬ್ಬನಿಗೆ ಎರಡೆರಡು ಗೋಮೆ
ರಿನ ಮೇರೆಗೆ ದೊರೆತದರಿಂದ ಸಮೂಹದ ಅಧಿಕಾರಿಗ
ಳೆಲ್ಲರು ಮೋಶೆಯ ಬಳಿಗೆ ಬಂದು ಈ ಸಂಗತಿ
ಯನ್ನು ತಿಳಿಸಿದರು. ಅದಕ್ಕೆ ಅವನು—ಇದು ಯೆ 23
ಹೋವನು ಹೇಳಿದ ಮಾತು; ನಾಳೆ ವಿರಾಮಮಾಡಿ
ಕೊಳ್ಳತಕ್ಕ ಯೆಹೋವನ ಪರಿಶುದ್ಧ ಸಬ್ಬತ್ ದಿನವಾ
ಗಿದೆ. [ಈ ಹೊತ್ತಿಗೆ] ಸುಡಬೇಕಾದದ್ದನ್ನು ಸುಟ್ಟು ಬೇ
ಯಿಸಬೇಕಾದದ್ದನ್ನು ಬೇಯಿಸಿದನಂತರ ಮಿಕ್ಕದ್ದನ್ನು
ನಾಳೆಯ ತನಕ ಇಟ್ಟುಕೊಳ್ಳಿರಿ ಅಂದನು. ಮೋಶೆ ಆಜ್ಞಾ 24
ಪಿಸಿದಂತೆ ಅವರು ಮರುದಿನದ ತನಕ ಅದನ್ನು ಇಟ್ಟು
ಕೊಂಡರು; ಅದು ನಾರಲಿಲ್ಲ, ಹುಳವೂ ಬೀಳಲಿಲ್ಲ.
ಆಗ ಮೋಶೆ ಅವರಿಗೆ—ಈ ಹೊತ್ತು ಅದನ್ನು ಊಟ 25
ಮಾಡಿರಿ; ಈ ದಿನವು ಯೆಹೋವನ ಸಬ್ಬತ್ ದಿನ
ವಾದದರಿಂದ ಈ ಹೊತ್ತು ಅದು ಅಡವಿಯಲ್ಲಿ ದೊರೆ
ಯುವದಿಲ್ಲ. ಆರು ದಿವಸ ಅದನ್ನು ಕೂಡಿಸ 26
ಬಹುದು; ಏಳನೆಯ ದಿನ ಸಬ್ಬತಾದದರಿಂದ ಅದು
ದೊರೆಯುವದೇ ಇಲ್ಲ ಎಂದು ಹೇಳಿದನು. ಹಾಗೆಯೇ 27
ಆಯಿತು. ಜನರಲ್ಲಿ ಕೆಲವರು ಏಳನೆಯ ದಿನದಲ್ಲಿ
ಅದನ್ನು ಕೂಡಿಸಿಕೊಳ್ಳುವದಕ್ಕೆ ಹೋದಾಗ ಅವರಿಗೆ
ಏನೂ ಸಿಕ್ಕಲಿಲ್ಲ. ಆಗ ಯೆಹೋವನು ಮೋಶೆಗೆ— 28
ನೀವು ಎಲ್ಲಿಯ ವರೆಗೂ ನನ್ನ ಆಜ್ಞೆಯನ್ನೂ ನಾನು
ಮಾಡಿರುವ ನಿಯಮವನ್ನೂ ಅನುಸರಿಸದೆ ಅಲಕ್ಷ್ಯ
ಮಾಡುವಿರೋ; ನೋಡಿರಿ, ನೀವು ಸಬ್ಬತ್ ದಿನವನ್ನು 29
ಆಚರಿಸಬೇಕೆಂದು ನಾನು ಅಪ್ಪಣೆಮಾಡಿರುವದರಿಂದಲೇ
ಆರನೆಯ ದಿನದಲ್ಲಿ ಎರಡು ದಿನದ ಆಹಾರವು ನಿಮಗೆ
ದೊರಕುವಂತೆ ಅನುಗ್ರಹಿಸಿದ್ದೇನೆ. ನಿಮ್ಮಲ್ಲಿ ಪ್ರತಿ
ಯೊಬ್ಬನು ತಾನಿರುವಲ್ಲಿಯೇ ಇರಬೇಕು; ಏಳನೆಯ
ದಿನದಲ್ಲಿ ಒಬ್ಬನೂ ತನ್ನ ಸ್ಥಳವನ್ನು ಬಿಟ್ಟು ಹೊರಗೆ
ಹೋಗಕೂಡದು ಎಂದು ಹೇಳಿದನು. ಆದದರಿಂದ ಏಳ 30
ನೆಯ ದಿನದಲ್ಲಿ ಜನರು ಕೆಲಸವನ್ನು ಮಾಡದೆ ಇದ್ದರು.
ಇಸ್ರಾಯೇಲ್ಯರು ಆ ಆಹಾರಕ್ಕೆ ಮನ್ನ ಎಂದು 31
ಹೆಸರಿಟ್ಟರು. ಅದು ಬಿಳೀ ಕೊತ್ತುಂಬರಿ ಕಾಳಿನಂತಿ
ದ್ದು ರುಚಿಯಲ್ಲಿ ಜೇನುತುಪ್ಪ ಕಲಸಿದ ದೋಸೆಗಳ
ಹಾಗಿತ್ತು.
ಮೋಶೆಯು ಜನರಿಗೆ—ಯೆಹೋವನು ಇದರ ವಿಷ 32
ಯದಲ್ಲಿ ಆಜ್ಞಾಪಿಸಿದ್ದೇನಂದರೆ—ನಾನು ಐಗುಪ್ತ ದೇಶ
ದಿಂದ ನಿಮ್ಮನ್ನು ಹೊರಗೆ ಬರಮಾಡಿದಾಗ ಅರಣ್ಯ
ದಲ್ಲಿ ತಿನ್ನುವದಕ್ಕೆ ಕೊಟ್ಟ ಆಹಾರವನ್ನು ನಿಮ್ಮ
ಸಂತಾನದವರು ನೋಡುವ ಹಾಗೆ ಅವರಿಗೋಸ್ಕರ
ನೀವು ಒಂದು ಗೋಮೆರ್ ತುಂಬಾ ಮನ್ನವನ್ನು ಇಟ್ಟು
ಕೊಳ್ಳಬೇಕು ಎಂದು ಹೇಳಿದನು. ಆದಕಾರಣ ಮೋಶೆ 33
ಯು ಆರೋನನಿಗೆ—ನೀನು ಒಂದು ಪಾತ್ರೆ

1) ಅಥವಾ: ಬುರಲಿಗಳು. 2) ಅಥವಾ: ಇದು ಮನ್ನ; ಮೂಲ: ಮಾನ್‌ಹೂ. 3) ಸುಮಾರು ಮೂರು ಸೇರು.

ಯನ್ನು ತೆಗೆದುಕೊಂಡು ಅದರಲ್ಲಿ ಒಂದು ಗೋಮೆರಿ
ನಷ್ಟು ಮನ್ನವನ್ನು ಹಾಕಿ ನಿಮ್ಮ ಸಂತತಿಯವರು
ನೋಡುವದಕ್ಕೋಸ್ಕರ ಅದನ್ನು ಯೆಹೋವನ ಸನ್ನಿ
34 ಧಿಯಲ್ಲಿ ಇಡು ಎಂದು ಹೇಳಿದನು. ಯೆಹೋ
ವನು ಮೋಶೆಗೆ ಆಜ್ಞಾಪಿಸಿದಂತೆ ಆರೋನನು
ಮಾಡಿ ಆಜ್ಞಾಶಾಸನಮಂಜೂಷದ ಮುಂದೆ ಅದನ್ನು
ಇಟ್ಟನು.
35 ಇಸ್ರಾಯೇಲ್ಯರು ಜನವಾಸವಿರುವ ಪ್ರದೇಶಕ್ಕೆ
ಬರುವ ತನಕ ಅಂದರೆ ಕಾನಾನ್‍ದೇಶದ ಮೇರೆಯನ್ನು
ಸೇರುವ ತನಕ ನಾಲ್ವತ್ತು ವರುಷ ಮನ್ನವನ್ನೇ
ಊಟಮಾಡುತ್ತಿದ್ದರು.
36 ಗೋಮೆರೆಂಬದು 1)ಏಫಾದಲ್ಲಿ ಹತ್ತನೆಯ ಒಂದು
ಪಾಲು ಹಿಡಿಯುವದು.

ದೇವರು ಬಂಡೆಯೊಳಗಿಂದ ನೀರು ಬರಮಾಡಿದ್ದು.

17 ತರುವಾಯ ಇಸ್ರಾಯೇಲ್ಯರ ಸಮೂಹವೆಲ್ಲಾ
ಯೆಹೋವನ ಅಪ್ಪಣೆಯ ಪ್ರಕಾರ ಸೀನ್ ಎಂಬ
ಅರಣ್ಯದಿಂದ ಹೊರಟು ಮುಂದೆ ಪ್ರಯಾಣಮಾಡಿ
ರೆಫೀದೀಮಿನಲ್ಲಿ ಇಳುಕೊಂಡರು.
2 ಕುಡಿಯುವದಕ್ಕೆ ನೀರಿಲ್ಲದ ಕಾರಣ ಜನರು
ಮೋಶೆಯ ಸಂಗಡ ವಾದಿಸುತ್ತಾ—ನಮಗೆ ಕುಡಿಯು
ವದಕ್ಕೆ ನೀರುದೊರಕಿಸಿಕೊಡಬೇಕು ಎಂದು ಹೇಳಿ
ದಾಗ ಮೋಶೆ—ನೀವು ನನ್ನ ಸಂಗಡ ವಾದಿಸುವ
ದೇನು? ಯೆಹೋವನನ್ನು ಯಾಕೆ ಪರೀಕ್ಷಿಸುತ್ತೀರಿ
ಎಂದು ಅವರಿಗೆ ಹೇಳಿದನು.
3 ಅಲ್ಲಿ ಜನರು ನೀರಿಲ್ಲದೆ ಬಾಯಾರಿಕೆಯ ಸಂಕಟ
ದಿಂದ ಮೋಶೆಯ ಮೇಲೆ ಗುಣುಗುಟ್ಟುತ್ತಾ—ನೀನು
ನಮ್ಮನ್ನೂ ನಮ್ಮ ಮಕ್ಕಳನ್ನೂ ದನಗಳನ್ನೂ ಐಗುಪ್ತ
ದೇಶದಿಂದ ಕರತಂದು ಈಗ ನೀರಿಲ್ಲದೆ ಸಾಯುವ
ಹಾಗೆ ಮಾಡಿದ್ದೇಕೆ ಎಂದರು.
4 ಆಗ ಮೋಶೆಯು ಯೆಹೋವನಿಗೆ ಮೊರೆಯಿಟ್ಟು—
ಈ ಜನರಿಗೋಸ್ಕರ ನಾನೇನು ಮಾಡಲಿ? ಅವರು
ನನ್ನನ್ನು ಕಲ್ಲೆಸೆದು ಕೊಲ್ಲುವ ಹಾಗಿದ್ದಾರಲ್ಲಾ
5 ಅಂದನು. ಅದಕ್ಕೆ ಯೆಹೋವನು—ನೀನು ನೈಲ್
ನದಿಯನ್ನು ಹೊಡೆದ ಕೋಲನ್ನು ಕೈಯಲ್ಲಿ ಹಿಡಿದು
ಕೊಂಡು ಇಸ್ರಾಯೇಲ್ಯರ ಹಿರಿಯರಲ್ಲಿ ಕೆಲವರನ್ನು
ಕರಕೊಂಡು ಜನರ ಮುಂದೆ ಹೊರಟು [ನಾನು
6 ತೋರಿಸುವ ಸ್ಥಳಕ್ಕೆ] ಹೋಗು. ಅಲ್ಲಿ ಹೋರೇಬಿ
ನಲ್ಲಿರುವ ಬಂಡೆಯ ಮೇಲೆ ನಾನೇ ನಿನ್ನೆದುರಾಗಿ
ನಿಲ್ಲುವೆನು. ನೀನು ಆ ಬಂಡೆಯನ್ನು ಹೊಡೆದಾಗ
ಅದರಿಂದ ನೀರು ಹೊರಡುವದು, ಜನರು ಕುಡಿಯು
ವರು ಎಂದು ಮೋಶೆಗೆ ಅಪ್ಪಣೆಕೊಡಲಾಗಿ ಮೋಶೆ
ಇಸ್ರಾಯೇಲ್ಯರ ಹಿರಿಯರ ಎದುರಿನಲ್ಲಿ ಹಾಗೆಯೇ
7 ಮಾಡಿದನು. ಇಸ್ರಾಯೇಲ್ಯರು—ಯೆಹೋವನು
ನಮ್ಮ ಮಧ್ಯದಲ್ಲಿ ಇದ್ದಾನೋ ಇಲ್ಲವೋ ಎಂದು
ಯೆಹೋವನನ್ನು ಅಲ್ಲಿ ಪರೀಕ್ಷಿಸಿದ್ದರಿಂದ ಮೋಶೆ
ಆ ಸ್ಥಳಕ್ಕೆ 2)ಮಸ್ಸಾ ಎಂತಲೂ ಅವರು ವಿವಾದ
ಮಾಡಿದ್ದರಿಂದ 3)ಮೆರೀಬಾ ಎಂತಲೂ ಹೆಸರಿಟ್ಟನು.

ಇಸ್ರಾಯೇಲ್ಯರು ದೇವರ ಸಹಾಯದಿಂದ ಅಮಾಲೇಕ್ಯರನ್ನು
ಜಯಿಸಿದ್ದು.

ಆಗ ಅಮಾಲೇಕ್ಯರು ರೆಫೀದೀಮಿನಲ್ಲಿ ಇಸ್ರಾಯೇ
ಲ್ಯರ ಮೇಲೆ ಯುದ್ಧಮಾಡುವದಕ್ಕೆ ಬರಲು ಮೋಶೆ
ಯು ಯೆಹೋಶುವನಿಗೆ—ನೀನು ಭಟರನ್ನು ಆದು
ಕೊಂಡು ನಾಳೆ ನಮ್ಮ ಮುಂದೆ ಹೊರಟು ಅಮಾ
ಲೇಕ್ಯರೊಡನೆ ಯುದ್ಧಮಾಡಬೇಕು; ನಾನು ದೇವ
ದಂಡವನ್ನು ಕೈಯಲ್ಲಿ ಹಿಡುಕೊಂಡು ಗುಡ್ಡದ ತುದಿ
ಯಲ್ಲಿ ನಿಂತುಕೊಳ್ಳುವೆನು ಎಂದು ಹೇಳಿದನು.
ಮೋಶೆಯ ಅಪ್ಪಣೆಯ ಮೇರೆಗೆ ಯೆಹೋಶುವನು
ಅಮಾಲೇಕ್ಯರ ಸಂಗಡ ಯುದ್ಧಮಾಡುವದಕ್ಕೆ ಹೊರ
ಟನು; ಮೋಶೆಯೂ ಆರೋನನೂ ಹೂರನೂ ಈ
ಮೂವರು ಗುಡ್ಡದ ತುದಿಗೆ ಏರಿದರು. ಮೋಶೆಯು
ತನ್ನ ಕೈಗಳನ್ನು ಮೇಲಕ್ಕೆ ಎತ್ತಿರುವಾಗ ಇಸ್ರಾಯೇ
ಲ್ಯರು ಬಲವಾಗುವರು; ಇಳಿಸುವಾಗ ಅಮಾಲೇ
ಕ್ಯರು ಬಲವಾಗುವರು. ಹೀಗಿರಲು ಮೋಶೆಯ
ಕೈಗಳು ಭಾರವಾದದರಿಂದ ಆರೋನ ಹೂರರು
ಒಂದು ಕಲ್ಲನ್ನು ತಂದಿಟ್ಟು ಅದರ ಮೇಲೆ ಅವನನ್ನು
ಕೂಡ್ರಿಸಿ ಬಲಗಡೆ ಒಬ್ಬನು ಎಡಗಡೆ ಒಬ್ಬನು ಅವನ
ಕೈಗಳಿಗೆ ಆಧಾರಕೊಟ್ಟರು. ಈ ರೀತಿಯಲ್ಲಿ ಅವನ
ಕೈಗಳು ಹೊತ್ತು ಮುಣುಗುವ ತನಕ ಇಳಿಯದ
ನಿಂತೇ ಇದ್ದವು. ಹೀಗಿರುವದರಿಂದ ಯೆಹೋಶು
ವನು ಅಮಾಲೇಕ್ಯರನ್ನೂ ಅವರ ಭಟರನ್ನೂ ಕತ್ತಿ
ಯಿಂದ ಕೆಡವಿಬಿಟ್ಟನು.
ಆಗ ಯೆಹೋವನು ಮೋಶೆಗೆ—ಭೂಮಿಯ
ಮೇಲೆ ಅಮಾಲೇಕ್ಯರ ಹೆಸರೇ ಇಲ್ಲದಂತೆ ಮಾಡು
ವೆನು; ಈ ಮಾತನ್ನು ಜ್ಞಾಪಕಾರ್ಥವಾಗಿ ಪುಸ್ತಕದಲ್ಲಿ
ಬರೆ, ಮತ್ತು ಯೆಹೋಶುವನಿಗೆ ಮಂದಟ್ಟುಮಾಡಿ
ಕೊಡು ಎಂದು ಹೇಳಿದನು.
ಆ ಸ್ಥಳದಲ್ಲಿ ಮೋಶೆಯು ಯಜ್ಞವೇದಿಯನ್ನು
ಕಟ್ಟಿಸಿ ಅದಕ್ಕೆ 4)ಯೆಹೋವ ನಿಸ್ಸಿ ಎಂದು ಹೆಸ
ರಿಟ್ಟು—

ಯಾಹುವಿನ ಸಿಂಹಾಸನದ ಆಣೆ, ಅಮಾಲೇಕ್ಯ
ಮೇಲೆ ಯೆಹೋವನಿಗೆ ತಲತಲಾಂತರಕ್ಕೂ ಯುದ್ಧ
ವಿರುವದು

ಅಂದನು.

ಮೋಶೆ ತನ್ನ ಮಾವನ ಆಲೋಚನೆಯಂತೆ ನ್ಯಾಯಾಧಿಪತಿಗಳನ್ನು
ನೇಮಿಸಿದ್ದು.

ದೇವರು ಮೋಶೆಗೂ ತನ್ನ ಜನರಾದ ಇಸ್ರಾ
ಯೇಲ್ಯರಿಗೂ ಮಹೋಪಕಾರಗಳನ್ನು ಮಾಡಿದ್ದ
ನ್ನೂ ಯೆಹೋವನು ಇಸ್ರಾಯೇಲ್ಯರನ್ನೂ ಐಗುಪ್ತ
ದೇಶದಿಂದ ಕರತಂದದ್ದನ್ನೂ ಮಿದ್ಯಾನ್ಯರ ಆಚಾರ್ಯ

1) ಸುಮಾರು ಮೂವತ್ತು ಸೇರು. 2) ಅಂದರೆ ಪರೀಕ್ಷೆ. 3) ಅಂದರೆ ವಿವಾದ. 4) ಅಂದರೆ ಯೆಹೋವನೇ ನಮ್ಮ ಜಯ

ನೂ ಮೋಶೆಯ ಮಾವನೂ ಆಗಿದ್ದ ಇತ್ರೋವನು
ಕೇಳಿದಾಗ ಆವನು ತನ್ನ ಬಳಿಗೆ ಕಳುಹಿಸಲ್ಪಟ್ಟ
ಮೋಶೆಯ ಹೆಂಡತಿಯಾದ ಚಿಪ್ಪೋರಳನ್ನೂ ಆಕೆಯ
ಇಬ್ಬರು ಗಂಡುಮಕ್ಕಳನ್ನೂ ಕರಕೊಂಡು ಬಂದನು.
ಮೋಶೆ—ನಾನು ಅನ್ಯದೇಶದ ಪ್ರವಾಸಿಯಾಗಿದ್ದೇ
ನೆಂದು ಹೇಳಿ ತನ್ನ ಹಿರೀ ಮಗನಿಗೆ ಗೇರ್ಷೋಮೆಂದು
ಹೆಸರಿಟ್ಟಿದ್ದನು; ನನ್ನ ತಂದೆಯ ದೇವರು ನನಗೆ ಸಹಾ
ಯಕನಾಗಿದ್ದು ನನ್ನನ್ನು ಫರೋಹನ ಕತ್ತಿಗೆ ತಪ್ಪಿಸಿ
ಕಾಪಾಡಿದನು ಎಂದು ಹೇಳಿ ಕಿರೀ ಮಗನಿಗೆ [1]ಎಲೀ
ಯೆಜೆರ್ ಎಂದು ಹೆಸರಿಟ್ಟಿದ್ದನು. ಮೋಶೆಯ ಮಾವ
ನಾದ ಇತ್ರೋವನು ಮೋಶೆಯ ಮಕ್ಕಳನ್ನೂ ಹೆಂಡತಿ
ಯನ್ನೂ ಕರೆದುಕೊಂಡು ಅರಣ್ಯದಲ್ಲಿ ದೇವರ ಬೆಟ್ಟದ
ಹತ್ತರ ಇಳುಕೊಂಡಿದ್ದ ಮೋಶೆಯ ಬಳಿಗೆ ಬಂದನು.
ಅವನು ಮೋಶೆಗೆ—ನಿನ್ನ ಮಾವನಾದ ನಾನೂ ನಿನ್ನ
ಹೆಂಡತಿಯೂ ಆಕೆಯ ಇಬ್ಬರು ಮಕ್ಕಳೂ ಬಂದಿದ್ದೇ
ವೆಂದು ಹೇಳಿಕಳುಹಿಸಿದಾಗ ಅವನು ತನ್ನ ಮಾವನನ್ನು
ಎದುರುಗೊಳ್ಳುವದಕ್ಕೆ ಹೊರಟು ವಂದಿಸಿ ಮುದ್ದಿಟ್ಟ
ನು. ಅವರು ಪರಸ್ಪರ ಯೋಗಕ್ಷೇಮವನ್ನು ವಿಚಾರಿ
ಸಿದ ಮೇಲೆ ಡೇರೆಯೊಳಕ್ಕೆ ಬಂದರು.
ತರುವಾಯ ಮೋಶೆಯು—ಯೆಹೋವನು ಇಸ್ರಾ
ಯೇಲ್ಯರಿಗೋಸ್ಕರ ಫರೋಹನಿಗೂ ಐಗುಪ್ತ್ಯರಿಗೂ
ಮಾಡಿದ್ದೆಲ್ಲವನ್ನೂ ದಾರಿಯಲ್ಲಿ ತಮಗುಂಟಾದ
ಎಲ್ಲಾ ಕಷ್ಟಗಳನ್ನೂ ಯೆಹೋವನು ಆ ಕಷ್ಟಗಳಿಂದ
ತಪ್ಪಿಸಿದ್ದನ್ನೂ ಮಾವನಿಗೆ ವಿವರಿಸಲಾಗಿ ಯೆಹೋ
ವನು ಐಗುಪ್ತ್ಯರ ಕೈಯಿಂದ ಇಸ್ರಾಯೇಲ್ಯರನ್ನು
ಬಿಡಿಸಿ ಅವರಿಗೆ ಇಷ್ಟೆಲ್ಲಾ ಉಪಕಾರವನ್ನು ಮಾಡಿದ್ದ
ಕ್ಕಾಗಿ ಇತ್ರೋವನು ಸಂತೋಷಿಸಿ—ಐಗುಪ್ತ್ಯರ
ಕೈಯಿಂದಲೂ ಫರೋಹನ ಕೈಯಿಂದಲೂ ನಿಮ್ಮನ್ನು
ಬಿಡುಗಡೆಮಾಡಿದ ಯೆಹೋವನಿಗೆ ಸ್ತೋತ್ರವಾಗಲಿ.
ಆತನು ತನ್ನ ಜನರನ್ನು ಅವರ ಕೈಯಿಂದ ಬಿಡಿಸಿ ಆ
ಐಗುಪ್ತ್ಯರು ಯಾವ ವಿಷಯದಲ್ಲಿ ಗರ್ವಪಡು
ತ್ತಿದ್ದರೋ ಆ ವಿಷಯದಲ್ಲಿ ಅವರನ್ನು ತಗ್ಗಿಸಿದ್ದ
ರಿಂದ ಯೆಹೋವನೇ ಎಲ್ಲಾ ದೇವರುಗಳಿಗಿಂತಲೂ
ದೊಡ್ಡವನೆಂದು ಈಗ ತಿಳಿದುಕೊಂಡಿದ್ದೇನೆ ಅಂದನು.
ಅದಲ್ಲದೆ ಮೋಶೆಯ ಮಾವನಾದ ಇತ್ರೋವನು
ದೇವರಿಗೆ ಸರ್ವಾಂಗಹೋಮಯಜ್ಞಗಳನ್ನು ಸಮ
ರ್ಪಿಸಲಾಗಿ ಆರೋನನೂ ಇಸ್ರಾಯೇಲ್ಯರ ಹಿರಿಯ
ರೆಲ್ಲರೂ ಅವನ ಸಂಗಡ ದೇವರ ಸನ್ನಿಧಿಯಲ್ಲಿ ಸಹ
ಭೋಜನವನ್ನು ಮಾಡುವದಕ್ಕೆ ಬಂದರು.
ಮಾರಣೆದಿನ ಮೋಶೆ ಜನರಿಗೆ ನ್ಯಾಯತೀರಿಸುವದ
ಕ್ಕಾಗಿ ಕೂತಿರಲು ಪ್ರಾತಃಕಾಲದಿಂದ ಸಾಯಂಕಾ
ಲದ ವರೆಗೂ ಜನರು ಅವನ ಹತ್ತಿರ ನಿಂತಿದ್ದರು.
ಮೋಶೆಯು ಜನರಿಗೋಸ್ಕರ ಮಾಡಿದ್ದೆಲ್ಲವನ್ನೂ
ಅವನ ಮಾವನು ನೋಡಿ ಅವನಿಗೆ—ನೀನು
ಯಾತಕ್ಕೆ ಜನರಿಗೋಸ್ಕರ ಇಷ್ಟು ಪ್ರಯಾಸ
ಪಡುತ್ತೀ? ಪ್ರಾತಃಕಾಲ ಮೊದಲುಗೊಂಡು ಸಾಯಂ
ಕಾಲದ ವರೆಗೂ ಜನರು ನಿನ್ನ ಹತ್ತಿರ ನಿಲ್ಲುತ್ತಾ
ರಲ್ಲಾ; ಯಾತಕ್ಕೆ ನೀನೊಬ್ಬನೇ ನ್ಯಾಯತೀರಿಸು

ವದಕ್ಕೆ ಕೂತಿರುತ್ತೀ ಎಂದು ಕೇಳಲು ಮೋಶೆ ಅವ 15
ನಿಗೆ—ದೇವರ ತೀರ್ಪನ್ನು ತಿಳುಕೊಳ್ಳುವದಕ್ಕಾಗಿ
ಜನರು ನನ್ನ ಹತ್ತಿರ ಬರುತ್ತಾರೆ; ಅವರೊಳಗೆ 16
ವ್ಯಾಜ್ಯವೇನಾದರೂ ಉಂಟಾಗಿದ್ದರೆ ನನ್ನ ಬಳಿಗೆ
ಬರುತ್ತಾರೆ; ನಾನು ವಿಚಾರಣೆಮಾಡಿ ಅವರಿಗೆ
ನ್ಯಾಯತೀರಿಸಿ ದೇವರ ಆಜ್ಞಾವಿಧಿಗಳನ್ನು ಬೋಧಿಸು
ತ್ತೇನೆ ಎಂದು ಹೇಳಿದನು.
ಅದನ್ನು ಕೇಳಿ ಮೋಶೆಯ ಮಾವನು ಅವನಿಗೆ— 17
ನೀನು ಮಾಡುವ ಕಾರ್ಯಕ್ರಮವು ಒಳ್ಳೇದಲ್ಲ.
ಈ ಕೆಲಸ ಬಹುಕಷ್ಟವಾದದ್ದು; ನೀನೊಬ್ಬನೇ 18
ಅದನ್ನು ನಡಿಸಲಾರಿ; ನೀನೂ ನಿನ್ನ ಸಂಗಡ ಇರುವ
ಜನರೂ ನಿಶ್ಚಯವಾಗಿ ಬಳಲಿಹೋಗುವಿರಿ. ನನ್ನ 19
ಮಾತನ್ನು ಕೇಳು, ನಾನು ನಿನಗೆ ಒಂದು ಆಲೋಚನೆ
ಯನ್ನು ಹೇಳುತ್ತೇನೆ; ಮತ್ತು ದೇವರು ನಿನ್ನ ಸಂಗಡ
ಇರಲಿ. ನೀನು ಜನರಿಗೂ ದೇವರಿಗೂ ಮಧ್ಯಸ್ಥ
ನಾಗಿದ್ದು ಜನರ ವ್ಯಾಜ್ಯಗಳನ್ನು ದೇವರ ಹತ್ತಿರಕ್ಕೆ
ತರಬೇಕು; ಮತ್ತು ನೀನು ದೇವರ ಆಜ್ಞಾವಿಧಿಗಳನ್ನು 20
ಬೋಧಿಸಿ ಅವರು ನಡೆಯಬೇಕಾದ ಮಾರ್ಗವನ್ನೂ
ಮಾಡಬೇಕಾದ ಕಾರ್ಯಗಳನ್ನೂ ಅವರಿಗೆ ತಿಳಿಯ
ಪಡಿಸಬೇಕು. ಆದರೆ ನೀನು ಸಮಸ್ತಜನರೊಳಗೆ 21
ಸಮರ್ಥರೂ ದೇವಭಕ್ತರೂ ನಂಬಿಗಸ್ತರೂ ಲಂಚ
ಮುಟ್ಟದವರೂ ಆಗಿರುವ ಪುರುಷರನ್ನು ಆರಿಸಿ
ಕೊಂಡು ಅವರನ್ನು ಸಾವಿರ ಮಂದಿಯ ಮೇಲೆ
ಯೂ ನೂರು ಮಂದಿಯ ಮೇಲೆಯೂ ಐವತ್ತು
ಮಂದಿಯ ಮೇಲೆಯೂ ಹತ್ತು ಮಂದಿಯ
ಮೇಲೆಯೂ ಅಧಿಕಾರಿಗಳನ್ನಾಗಿ ನೇಮಿಸಬೇಕು.
ಅವರೇ ಯಾವಾಗಲೂ ಜನರಿಗೆ ನ್ಯಾಯವನ್ನು 22
ತೀರಿಸಲಿ. ಅವರು ದೊಡ್ಡ ವ್ಯಾಜ್ಯಗಳನ್ನು
ನಿನ್ನ ಮುಂದೆ ತರಲಿ; ಸಣ್ಣ ವ್ಯಾಜ್ಯಗಳನ್ನೆಲ್ಲಾ
ತಾವೇ ತೀರಿಸಲಿ. ಅವರು ನಿನ್ನೊಂದಿಗೆ ಈ ಭಾರ
ವನ್ನು ಹೊರುವದರಿಂದ ನಿನಗೆ ಸುಲಭವಾಗಿರುವದು.
ದೇವರು ಹೀಗೆ ಮಾಡುವದಕ್ಕೆ ನಿನಗೆ ಅಪ್ಪಣೆ 23
ಕೊಡುವದಾದರೆ ನೀನು ಈ ಕೆಲಸದ ಭಾರವನ್ನು
ನಿರ್ವಹಿಸಲಾಗುವದು; ಇದು ಮಾತ್ರವಲ್ಲದೆ ಈ ಜನ
ರೆಲ್ಲರೂ ತಮ್ಮ ತಮ್ಮ ಮನೆಗಳಿಗೆ ಸಂತೋಷವಾಗಿ
ಹೋಗುವರು ಎಂದು ಹೇಳಿದನು.
ಮೋಶೆ ತನ್ನ ಮಾವನ ಮಾತಿಗೆ ಒಪ್ಪಿಕೊಂಡು 24
ಅವನು ಹೇಳಿದಂತೆಯೇ ಮಾಡಿದನು. ಅವನು 25
ಇಸ್ರಾಯೇಲ್ಯರೆಲ್ಲರಲ್ಲಿ ಸಮರ್ಥರಾದವರನ್ನು ಆರಿಸಿ
ಕೊಂಡು ಸಾವಿರ ಮಂದಿಯ ಮೇಲೆಯೂ ನೂರು
ಮಂದಿಯ ಮೇಲೆಯೂ ಐವತ್ತು ಮಂದಿಯ ಮೇಲೆ
ಯೂ ಹತ್ತು ಮಂದಿಯ ಮೇಲೆಯೂ ಅಧಿಕಾರಿಗಳ
ನ್ನಾಗಿ ನೇಮಿಸಿದನು. ಇವರು ಯಾವಾಗಲೂ ಜನ 26
ರಿಗೆ ನ್ಯಾಯತೀರಿಸುವವರಾಗಿ ಕಠಿನವ್ಯಾಜ್ಯಗಳನ್ನು
ಮೋಶೆಯ ಬಳಿಗೆ ತರುತ್ತಾ ಸುಲಭವ್ಯಾಜ್ಯಗಳನ್ನು
ತಾವೇ ತೀರಿಸುತ್ತಾ ಬಂದರು.
ತರುವಾಯ ಮೋಶೆ ತನ್ನ ಮಾವನಿಗೆ ಅಪ್ಪಣೆ 27
ಕೊಡಲಾಗಿ ಅವನು ಸ್ವದೇಶಕ್ಕೆ ಹೊರಟುಹೋದನು.

1) ಅಂದರೆ ನನ್ನ ದೇವರೇ ನನ್ನ ಸಹಾಯಕನು.

## ದೇವರು ಸೀನಾಯಿ ಬೆಟ್ಟದ ಬಳಿಯಲ್ಲಿ ಇಸ್ರಾಯೇಲ್ಯರಿಗೆ ಆಜ್ಞಾವಿಧಿಗಳನ್ನು ನೇಮಿಸಿದ್ದು. 19. 1—24. 18.

### ಇಸ್ರಾಯೇಲ್ಯರು ಸೀನಾಯಿ ಬೆಟ್ಟಕ್ಕೆ ಬಂದದ್ದೂ ದೇವರು ಅವರಿಗೆ ಭಯಂಕರ ರೀತಿಯಿಂದ ಪ್ರತ್ಯಕ್ಷನಾದದ್ದೂ.

19 ಇಸ್ರಾಯೇಲ್ಯರು ಐಗುಪ್ತದೇಶದಿಂದ ಹೊರಟ
ಮೂರನೆಯ ತಿಂಗಳಿನ ಅದೇ ದಿವಸದಲ್ಲಿ ಸೀನಾಯಿ
2 ಅರಣ್ಯಕ್ಕೆ ಬಂದರು. ಅವರು ರೆಫೀದೀಮನ್ನು ಬಿಟ್ಟು
ಆ ಅರಣ್ಯಕ್ಕೆ ಬಂದಾಗ ಅಲ್ಲಿ ಬೆಟ್ಟಕ್ಕೆ ಎದುರಾಗಿ
ಇಳುಕೊಂಡರು.
3 ಮೋಶೆ ಬೆಟ್ಟವನ್ನೇರಿ ದೇವರ ಸನ್ನಿಧಿಗೆ ಹೋದಾಗ
ಯೆಹೋವನು ಅವನಿಗೆ ಬೆಟ್ಟದ ಮೇಲಿನಿಂದ ಕೂಗಿ—
ನೀನು ಯಾಕೋಬನ ಮನೆತನದವರಾದ
ಇಸ್ರಾಯೇಲ್ಯರಿಗೆ ಈ ಮಾತುಗಳನ್ನು ಹೇಳ
4 ಬೇಕು; ಏನಂದರೆ—ನಾನು ಐಗುಪ್ತ್ಯರಿಗೆ ಏನು
ಮಾಡಿದೆನೋ, ಹದ್ದು ತನ್ನ ಮರಿಗಳನ್ನು ರೆಕ್ಕೆ
ಗಳ ಮೇಲೆ ಹೊತ್ತುಕೊಳ್ಳುವಂತೆ ನಾನು ನಿಮ್ಮ
ನ್ನು ಹೊತ್ತುಕೊಂಡು ನನ್ನ ಸ್ಥಳಕ್ಕೆ ಹೇಗೆ ಸೇರಿ
ಸಿದೆನೋ ಇದನ್ನೆಲ್ಲಾ ನೀವು ನೋಡಿದ್ದೀರಷ್ಟೆ.
5 ಹೀಗಿರಲಾಗಿ ನೀವು ನನ್ನ ಮಾತನ್ನು ಶ್ರದ್ಧೆ
ಯಿಂದ ಕೇಳಿ ನಾನು ಮಾಡುವ ನಿಬಂಧನೆಯನ್ನು
ಅನುಸರಿಸಿ ನಡೆದರೆ ನೀವು ಎಲ್ಲಾ [1]ಜನಾಂಗಗ
ಳಲ್ಲಿ ನನಗೆ ಸ್ವಕೀಯಜನರಾಗುವಿರಿ; ಸಮಸ್ತ
6 ಭೂಮಿಯೂ ನನ್ನದಷ್ಟೆ. ನೀವು ನನಗೆ ಯಾಜ
ಕರಾಜ್ಯವೂ ಪರಿಶುದ್ಧಜನವೂ ಆಗಿರುವಿರಿ. ಇವೇ
ನೀನು ಇಸ್ರಾಯೇಲ್ಯರಿಗೆ ಹೇಳಬೇಕಾದ ಮಾತು
ಗಳು ಎಂದನು.
7 ಆಗ ಮೋಶೆ ಬಂದು ಜನರ ಹಿರಿಯರನ್ನು ಕೂಡಿಸಿ
ಯೆಹೋವನು ಆಜ್ಞಾಪಿಸಿದ್ದ ಈ ಮಾತುಗಳನ್ನೆಲ್ಲಾ
8 ಅವರಿಗೆ ತಿಳಿಸಿದನು. ಜನರೆಲ್ಲರೂ—ಯೆಹೋವನು
ಹೇಳಿದಂತೆಯೇ ಮಾಡುವೆವು ಎಂದು ಒಗ್ಗಟ್ಟಾಗಿ
ಪ್ರತ್ಯುತ್ತರಕೊಡಲಾಗಿ ಮೋಶೆ ಯೆಹೋವನ ಬಳಿಗೆ
ಹೋಗಿ ಅವರ ಮಾತುಗಳನ್ನು ಆತನಿಗೆ ಅರಿಕೆ
ಮಾಡಿದನು.
9 ಯೆಹೋವನು ಮೋಶೆಗೆ—ಇಗೋ ನಾನು ನಿನ್ನ
ಸಂಗಡ ಮಾತಾಡುವಾಗ ಜನರು ಕೇಳಿ ಯಾವಾ
ಗಲೂ ನಿನ್ನನ್ನು ನಂಬುವಂತೆ ನಾನು ಕಾರ್ಮುಗಿ
ಲಲ್ಲಿ ನಿನ್ನ ಬಳಿಗೆ ಬರುವೆನು ಎಂದು ಹೇಳಿದನು.
10 ಮೋಶೆ ಜನರ ಮಾತುಗಳನ್ನು ಯೆಹೋವನಿಗೆ
ಅರಿಕೆಮಾಡಲಾಗಿ ಯೆಹೋವನು ಅವನಿಗೆ ಹೇಳಿದ್ದೇ
ನಂದರೆ—ನೀನು ಜನರ ಬಳಿಗೆ ಹೋಗಿ ಈ ಹೊತ್ತು
ನಾಳೆ ಅವರನ್ನು ಪರಿಶುದ್ಧಗೊಳಿಸು; ಅವರು ತಮ್ಮ
11 ಬಟ್ಟೆಗಳನ್ನು ಮಡಿಮಾಡಿಕೊಂಡು ಮೂರನೆಯ ದಿನ
ದಲ್ಲಿ ಸಿದ್ಧರಾಗಿರಬೇಕು. ಮೂರನೆಯ ದಿನದಲ್ಲಿ
ಯೆಹೋವನು ಸಮಸ್ತಜನರಿಗೂ ಪ್ರತ್ಯಕ್ಷನಾಗಿ
ಸೀನಾಯಿಬೆಟ್ಟದ ಮೇಲಕ್ಕೆ ಇಳಿದುಬರುವನು
ಜನರು ಹತ್ತಿರ ಬಾರದಂತೆ ನೀನು ಬೆಟ್ಟದ ಸುತ್ತಲ
ಮೇರೆಯನ್ನು ಮಾಡಿಸಿ ಜನರಿಗೆ—ಎಚ್ಚರಿಕೆಯಾಗಿರ್ರಿ
ನೀವು ಈ ಬೆಟ್ಟವನ್ನು ಏರಲೂ ಕೂಡದು ಅದರ ಅಂ
ನ್ನು ಮುಟ್ಟಲೂ ಕೂಡದು. ಮುಟ್ಟಿದವನಿಗೆ ಅಗತ
ವಾಗಿ ಪ್ರಾಣಶಿಕ್ಷೆಯಾಗಬೇಕು. ಅಂಥವನನ್ನು
ಯಾರೂ ಮುಟ್ಟಕೂಡದು; ಕಲ್ಲುಗಳನ್ನಾದರು
ಬಾಣಗಳನ್ನಾದರೂ ಎಸೆದು ಅವನನ್ನು ಕೊಲ್ಲಬೇಕು
ಮನುಷ್ಯನಾಗಲಿ ಪಶುವಾಗಲಿ ಬೆಟ್ಟವನ್ನು ಮುಟ್
ದರೆ ಉಳಿಯಬಾರದು. ಕೊಂಬಿನ ಧ್ವನಿ ಕೇಳಿ
ದಾಗ ಬೆಟ್ಟದ ಸಮೀಪಕ್ಕೆ ಬರಬೇಕು ಎಂದು ಹೇಳ
ಅಂದನು.
ಮೋಶೆ ಬೆಟ್ಟದಿಂದಿಳಿದು ಜನರ ಬಳಿಗೆ ಬಂದ
ಅವರನ್ನು ಪರಿಶುದ್ಧಗೊಳಿಸಿದನು; ಅವರು ತಮ್ಮ ಬಟ್
ಗಳನ್ನು ಮಡಿಮಾಡಿಕೊಂಡರು. ಆಗ ಮೋಶೆ ಜ
ರಿಗೆ—ಮೂರನೆಯ ದಿನದಲ್ಲಿ ಸಿದ್ಧವಾಗಿರ್ರಿ; ಯಾ
ಪುರುಷನೂ ಸ್ತ್ರೀಸಂಗಮಾಡಬಾರದು ಎಂದು ಹೇ
ದನು.
ಮೂರನೆಯ ದಿನದಲ್ಲಿ ಸೂರ್ಯೋದಯವಾಗುವಾ
ಗ ಆ ಬೆಟ್ಟದ ಮೇಲೆ ಗುಡುಗೂ ಮಿಂಚೂ ಕಾಮು
ಗಿಲೂ ತುತೂರಿಯ ಮಹಾಧ್ವನಿಯೂ ಉಂಟಾಗಲ
ಪಾಳೆಯದಲ್ಲಿದ್ದ ಜನರೆಲ್ಲರೂ ನಡುಗಿದರು. ದೇ
ದರ್ಶನಕ್ಕಾಗಿ ಮೋಶೆ ಜನರನ್ನು ಪಾಳೆಯದ ಹೊರಕ್ಕೆ
ಬರಮಾಡಲು ಅವರು ಬೆಟ್ಟದ ಬುಡದಲ್ಲಿ ನಿಂತ
ಕೊಂಡರು. ಯೆಹೋವನು ಬೆಂಕಿಯೊಳಗೆ ಸೀನಾ
ಯಿಬೆಟ್ಟದ ಮೇಲಕ್ಕೆ ಇಳಿದುಬಂದದರಿಂದ ಆ ಬೆಟ್
ವೆಲ್ಲಾ ಹೊಗೆಯಿಂದ ಆವರಿಸಿಕೊಂಡಿತು. ಆ ಹೊ
ಆವಿಗೆಯ ಹೊಗೆಯಂತೆ ಏರಿತು; ಅದಲ್ಲದೆ [2]ಬೆಟ್
ವೆಲ್ಲಾ ಬಹಳವಾಗಿ ಕಂಪಿಸಿತು.
ತುತೂರಿಯ ಧ್ವನಿ ಹೆಚ್ಚಾಗುತ್ತಾ ಬಂದಾ
ಮೋಶೆಯು [ದೇವರ ಸಂಗಡ] ಮಾತಾಡಿದನು
ಆಗ ದೇವರು ಬಾಯಿಮಾತಿನಿಂದ ಉತ್ತರಕೊಟ್ಟನು
ಯೆಹೋವನು ಸೀನಾಯಿಬೆಟ್ಟದ ಶಿಖರಕ್ಕೆ ಇ
ದುಬಂದನು. ಆತನು—ಬೆಟ್ಟದ ತುದಿಗೆ ಬಾ ಎಂದ
ಮೋಶೆಯನ್ನು ಕರೆಯಲು ಅವನು ಬೆಟ್ಟವನ್ನೇ
ದನು. ಆಗ ಯೆಹೋವನು ಮೋಶೆಗೆ—ನೀನಿಳಿದ
ಹೋಗಿ ಜನರನ್ನು ಎಚ್ಚರಿಸಬೇಕು; ಅವರು ನೋ
ಬೇಕೆಂಬ ಆಶೆಯಿಂದ ಯೆಹೋವನ ಹತ್ತಿರಕ್ಕೆ ಮೇ
ಯನ್ನು ದಾಟಿ ಬಂದಾರು; ಹಾಗೆ ಬಂದರೆ ಬಹುಜ
ನಾಶವಾಗುವರು. ಯೆಹೋವಸನ್ನಿಧಿಗೆ ಸೇರು
ಯಾಜಕರೂ ತಮ್ಮನ್ನು ಶುದ್ಧಪಡಿಸಿಕೊಳ್ಳಬೇಕು
ಇಲ್ಲವಾದರೆ ಅವರನ್ನೂ ಯೆಹೋವನು ಫಕ್ಕ
ಸಂಹಾರಮಾಡಾನು ಎಂದು ಹೇಳಿದನು. ಅದಕ್ಕೆ
ಮೋಶೆ—ಸೀನಾಯಿಬೆಟ್ಟವನ್ನೇರುವದಕ್ಕೆ ಜನರಿಂದಾ
ಗದು; ಬೆಟ್ಟದ ಸುತ್ತಲೂ ಮೇರೆಯನ್ನು ಹಾಕಿ ನಿ
ಗಾಗಿ ಪ್ರತ್ಯೇಕಿಸಲಿಕ್ಕೆ ನೀನು ಆಜ್ಞಾಪಿಸಿದಿಯಲ್ಲಾ
ಅಂದನು. ಯೆಹೋವನು ಅವನಿಗೆ—ನೀನು ಇಳಿದ
ಹೋಗಿ ಆರೋನನನ್ನು ಕರೆದುಕೊಂಡು ಮೇಲಕ್ಕೆ

1) ಅಥವಾ: ಜನಾಂಗಗಳಿಗಿಂತಲೂ.   2) ಪಾಠಾಂತರ: ಜನರೆಲ್ಲರು ಗಡಗಡನೆ ನಡುಗಿದರು.

ವಾ; ಆದರೆ ಯಾಜಕರೂ ಜನರೂ ಆ ಮೇರೆಯನ್ನು ದಾಟಿ ಯೆಹೋವನ ಹತ್ತಿರ ಬರಕೂಡದು; ದಾಟಿದರೆ ಯೆಹೋವನು ಅವರನ್ನು ಫಕ್ಕನೆ ಸಂಹಾರಮಾಡಾನು ಎಂದು ಹೇಳಿದನು. ಮೋಶೆ ಜನರ ಬಳಿಗೆ ಇಳಿದು ಹೋಗಿ [ಆ ಮಾತುಗಳನ್ನು] ಅವರಿಗೆ ತಿಳಿಸಿದನು.

### ದಶಾಜ್ಞೆಗಳು.

ದೇವರು ಮುಂದಣ ಆಜ್ಞೆಗಳನ್ನೆಲ್ಲಾ ಕೊಟ್ಟನು—

ನೀನು ದಾಸತ್ವದಲ್ಲಿದ್ದ ಐಗುಪ್ತದೇಶದೊಳಗಿಂದ ನಿನ್ನನ್ನು ಬಿಡುಗಡೆ ಮಾಡಿದ ಯೆಹೋವನು ಎಂಬ ನಿನ್ನ ದೇವರು ನಾನೇ. ನಾನಲ್ಲದೆ ನಿನಗೆ ಬೇರೆ ದೇವರುಗಳು ಇರಬಾರದು.

ಯಾವ ಮೂರ್ತಿಯನ್ನೂ ಮಾಡಿಕೊಳ್ಳಬಾರದು. ಆಕಾಶದಲ್ಲಾಗಲಿ ಭೂಮಿಯಲ್ಲಾಗಲಿ ಭೂಮಿಯ ಕೆಳಗಣ ನೀರಿನಲ್ಲಾಗಲಿ ಇರುವ ಯಾವದರ ರೂಪವನ್ನೂ ಮಾಡಿಕೊಳ್ಳಬಾರದು. ಅವುಗಳಿಗೆ ಅಡ್ಡಬೀಳಲೂ ಬಾರದು ಪೂಜೆಮಾಡಲೂ ಬಾರದು. ನಿನ್ನ ದೇವರಾದ ಯೆಹೋವನೆಂಬ ನಾನು ನನಗೆ ಸಲ್ಲತಕ್ಕ ಗೌರವವನ್ನು ಮತ್ತೊಬ್ಬನಿಗೆ ಸಲ್ಲಗೊಡಿಸದವನಾದದರಿಂದ ನನ್ನನ್ನು ದ್ವೇಷಿಸುವವರ ವಿಷಯದಲ್ಲಿ ತಂದೆಗಳ ದೋಷಫಲವನ್ನು ಮಕ್ಕಳ ಮೇಲೆ ಮೂರು ನಾಲ್ಕು ತಲೆಗಳ ವರೆಗೆ ಬರಮಾಡುವವನಾಗಿಯೂ ನನ್ನನ್ನು ಪ್ರೀತಿಸಿ ನನ್ನ ಆಜ್ಞೆಗಳನ್ನು ಕೈಕೊಳ್ಳುವವರಿಗೋ ಸಾವಿರ ತಲೆಗಳ ವರೆಗೆ ದಯೆತೋರಿಸುವವನಾಗಿಯೂ ಇದ್ದೇನೆ.

ನಿನ್ನ ದೇವರಾದ ಯೆಹೋವನ ಹೆಸರನ್ನು ಅಯೋಗ್ಯಕಾರ್ಯಕ್ಕಾಗಿ ಎತ್ತಬಾರದು. ಯೆಹೋವನು ತನ್ನ ಹೆಸರನ್ನು ಅಯೋಗ್ಯಕಾರ್ಯಕ್ಕಾಗಿ ಎತ್ತುವವನನ್ನು ಶಿಕ್ಷಿಸದೆ ಬಿಡುವದಿಲ್ಲ.

ಸಬ್ಬತ್ ದಿನವನ್ನು ದೇವರ ದಿನವೆಂದು ಆಚರಣೆಗೆ ತರುವದಕ್ಕೆ ಜ್ಞಾಪಕದಲ್ಲಿಟ್ಟುಕೊಳ್ಳಬೇಕು. ಆರು ದಿವಸಗಳಲ್ಲಿ ನೀನು ದುಡಿದು ನಿನ್ನ ಕೆಲಸವನ್ನೆಲ್ಲಾ ಮಾಡಬೇಕು. ಏಳನೆಯ ದಿನವು ನಿನ್ನ ದೇವರಾದ ಯೆಹೋವನಿಗೆ ಮೀಸಲಾದ ವಿಶ್ರಾಂತಿದಿನವಾಗಿದೆ; ಅದರಲ್ಲಿ ನೀನು ಯಾವ ಕೆಲಸವನ್ನೂ ಮಾಡಬಾರದು. ನಿನ್ನ ಗಂಡುಮಕ್ಕಳು ಹೆಣ್ಣುಮಕ್ಕಳು ಗಂಡಾಳು ಹೆಣ್ಣಾಳು ಪಶುಗಳು ನಿನ್ನ ಊರಲ್ಲಿರುವ ಅನ್ಯದೇಶದವರು ಯಾವ ಕೆಲಸವನ್ನೂ ಮಾಡಬಾರದು. ಆರು ದಿನಗಳಲ್ಲಿ ಯೆಹೋವನು ಭೂಮ್ಯಾಕಾಶಗಳನ್ನೂ ಸಮುದ್ರವನ್ನೂ ಅವುಗಳಲ್ಲಿರುವ ಸಮಸ್ತವನ್ನೂ ನಿರ್ಮಾಣಮಾಡಿ ಏಳನೆಯ ದಿನದಲ್ಲಿ ವಿಶ್ರಮಿಸಿಕೊಂಡನು. ಆದದರಿಂದ ಯೆಹೋವನು ಸಬ್ಬತ್ ದಿನವನ್ನು ತನ್ನ ದಿನವಾಗಿರಲಿ ಎಂದು ಆಶೀರ್ವದಿಸಿದನು.

ನಿನ್ನ ತಂದೆತಾಯಿಗಳನ್ನು ಸನ್ಮಾನಿಸ 12
ಬೇಕು; ಸನ್ಮಾನಿಸಿದರೆ ನಿನ್ನ ದೇವರಾದ ಯೆಹೋವನು ನಿನಗೆ ಅನುಗ್ರಹಿಸುವ ದೇಶದಲ್ಲಿ ನೀನು ಬಹುಕಾಲ ಇರುವಿ.

ನರಹತ್ಯ ಮಾಡಬಾರದು. 13

ವ್ಯಭಿಚಾರ ಮಾಡಬಾರದು. 14

ಕದಿಯಬಾರದು. 15

ಮತ್ತೊಬ್ಬನ ಮೇಲೆ ಸುಳ್ಳುಸಾಕ್ಷಿ ಹೇಳ 16
ಬಾರದು.

ಮತ್ತೊಬ್ಬನ ಮನೆಯನ್ನು ಆಶಿಸಬಾರದು; 17
ಮತ್ತೊಬ್ಬನ ಹೆಂಡತಿ ಗಂಡಾಳು ಹೆಣ್ಣಾಳು ಎತ್ತು ಕತ್ತೆ ಮುಂತಾದ ಯಾವದನ್ನೂ ಆಶಿಸಬಾರದು.

ಆ ಗುಡುಗುಮಿಂಚುಗಳನ್ನೂ ತುತೂರಿಧ್ವನಿಯಾಗು 18
ತ್ತಿರುವದನ್ನೂ ಬೆಟ್ಟದಿಂದ ಹೊಗೆ ಹೊರಡುವದನ್ನೂ
ಜನರೆಲ್ಲರು ನೋಡಿ ನಡುಗುತ್ತಾ ದೂರದಲ್ಲಿ ನಿಂತು
ಕೊಂಡರು. ಅವರು ಮೋಶೆಗೆ—ನೀನೇ ನಮ್ಮ 19
ಸಂಗಡ ಮಾತಾಡು; ನಾವು ಕೇಳುವೆವು. ದೇವರು
ನಮ್ಮ ಸಂಗಡ ಮಾತಾಡಿದರೆ ನಾವು ಸತ್ತೇವು ಎಂದು
ಹೇಳಿದರು. ಅದಕ್ಕೆ ಮೋಶೆ—ಭಯಪಡಬೇಡಿರಿ. 20
ದೇವರು ನಿಮ್ಮನ್ನು ಪರೀಕ್ಷಿಸಬೇಕೆಂತಲೂ ತನಗೆ
ಭಯಪಟ್ಟು ನೀವು ಪಾಪವನ್ನು ಮಾಡದೆ ಇರಬೇ
ಕೆಂತಲೂ ಬಂದಿದ್ದಾನೆ ಅಂದನು. ಜನರು ದೂರ 21
ದಲ್ಲಿ ನಿಂತಿದ್ದರು; ಮೋಶೆಯೋ ದೇವರಿರುವ ಆ
ಕಾರ್ಗತ್ತಲಿನ ಸಮೀಪಕ್ಕೆ ಸೇರಿದನು.

### ನಿಬಂಧನಗ್ರಂಥವೆಂಬ ಧರ್ಮಶಾಸ್ತ್ರವು.

ಯೆಹೋವನು ಮೋಶೆಗೆ ಹೀಗಂದನು—ನೀನು 22
ಇಸ್ರಾಯೇಲ್ಯರಿಗೆ ಹೇಳಬೇಕಾದದ್ದೇನಂದರೆ—

ನಾನು ಆಕಾಶದಿಂದ ನಿಮ್ಮ ಸಂಗಡ ಮಾತಾಡಿ
ದ್ದನ್ನು ನೋಡಿದ್ದೀರಷ್ಟೆ. ಆದದರಿಂದ ನೀವು ಬೆಳ್ಳಿ 23
ಬಂಗಾರಗಳಿಂದ ದೇವರುಗಳನ್ನು ಮಾಡಿಕೊಂಡು
ನನ್ನ ಜೊತೆಯಲ್ಲಿ ಸೇರಿಸಕೂಡದು.

ನೀವು ನನ್ನ ಯಜ್ಞವೇದಿಯನ್ನು ಮಣ್ಣಿನಿಂದ 24
ಮಾಡಬೇಕು. ನೀವು ಸರ್ವಾಂಗಹೋಮಮಾಡು
ವಾಗಲೂ ಸಮಾಧಾನಯಜ್ಞಮಾಡುವಾಗಲೂ ನಿಮ್ಮ
ಕುರಿದನಗಳನ್ನು ಅಂಥ ವೇದಿಯಲ್ಲಿಯೇ ಸಮ
ರ್ಪಿಸಬೇಕು. ನಾನು ನನ್ನ ಹೆಸರನ್ನು ನಿಮ್ಮ ನೆನ
ಪಿಗೆ ಬರಮಾಡುವ ಎಲ್ಲಾ ಸ್ಥಳಗಳಲ್ಲಿಯೂ ನಿಮ್ಮ
ಬಳಿಗೆ ಬಂದು ನಿಮ್ಮನ್ನು ಆಶೀರ್ವದಿಸುವೆನು.
ನೀವು ನನಗಾಗಿ ಕಲ್ಲಿನಿಂದ ಯಜ್ಞವೇದಿಯನ್ನು 25
ಕಟ್ಟಬೇಕಾದರೆ ಕೆತ್ತಿರುವ ಕಲ್ಲುಗಳಿಂದ ಕಟ್ಟ
ಕೂಡದು; ಅದಕ್ಕೆ ಉಳಿ ಮುಂತಾದದ್ದನ್ನು ಉಪ
ಯೋಗಿಸಿದರೆ ಅದು ಅಪರಿಶುದ್ಧವಾಗುವದು. ಅದ 26
ಲ್ಲದೆ ನನ್ನ ಯಜ್ಞವೇದಿಯನ್ನು ಮೆಟ್ಟಲುಗಳಿಂದ

ಏರಕೂಡದು; ಹಾಗೆ ಏರಿದರೆ ನಿಮ್ಮ ರಹಸ್ಯಾಂಗವು
ಕಾಣಿಸೀತು.

**21** ಮತ್ತು ನೀನು ಅವರಿಗೆ ನೇಮಿಸಬೇಕಾದ
ನ್ಯಾಯವಿಧಿಗಳು ಯಾವವಂದರೆ—
2 ನಿಮ್ಮಲ್ಲಿ ಯಾವನಾದರೂ ಇಬ್ರಿಯನನ್ನು ದಾಸತ್ವ
ಕ್ಕಾಗಿ ಕೊಂಡುಕೊಂಡರೆ ಆ ಇಬ್ರಿಯನು ಆರು
ವರುಷ ದಾಸನಾಗಿದ್ದು ಏಳನೆಯ ವರುಷದಲ್ಲಿ ಏನೂ
3 ಕೊಡದೆ ಬಿಡುಗಡೆಯಾಗಿ ಹೋಗಬೇಕು. ಅವನು
ಮದುವೆಯಿಲ್ಲದವನಾಗಿ ಬಂದಿದ್ದರೆ ಒಂಟಿಗ
ನಾಗಿಯೇ ಹೊರಟುಹೋಗಬೇಕು. ಹೆಂಡತಿಯುಳ್ಳ
ವನಾಗಿ ಬಂದಿದ್ದರೆ ಹೆಂಡತಿಯೂ ಅವನ ಜೊತೆ
4 ಯಲ್ಲಿ ಹೋಗಬೇಕು. ಅವನ ಯಜಮಾನನು
ಅವನಿಗೆ ಮದುವೆಮಾಡಿಸಿದ ಪಕ್ಷದಲ್ಲಿ ಆ ಹೆಂಡತಿ
ಯಲ್ಲಿ ಗಂಡು ಇಲ್ಲವೆ ಹೆಣ್ಣು ಮಕ್ಕಳು ಹುಟ್ಟಿದ್ದರೆ
ಆ ಹೆಂಡತಿಯೂ ಅವಳ ಮಕ್ಕಳೂ ಯಜಮಾನನ
ಸೊತ್ತಾಗುವರು; ದಾಸನು ಒಂಟಿಗನಾಗಿಯೇ
5 ಹೊರಟುಹೋಗಬೇಕು. ಆದರೆ ಆ ದಾಸನು—
ನಾನು ನನ್ನ ಯಜಮಾನನನ್ನೂ ನನ್ನ ಹೆಂಡತಿ
ಮಕ್ಕಳನ್ನೂ ಪ್ರೀತಿಸುತ್ತೇನಾದದರಿಂದ ಅವರನ್ನು
ಅಗಲಿ ಬಿಡುಗಡೆಯಾಗಿ ಹೋಗಲೊಲ್ಲೆನೆಂದು ದೃಢ
6 ವಾಗಿ ಹೇಳಿದರೆ ಅವನ ಯಜಮಾನನು ದೇವರ
ಬಳಿಗೆ ಅವನನ್ನು ಕರಕೊಂಡು ಬಂದು ಕದದ ಹತ್ತಿರ
ಅಥವಾ ಬಾಗಲಿನ ನಿಲುವು ಪಟ್ಟಿಗಳ ಹತ್ತಿರ ನಿಲ್ಲಿಸಿ
ಅವನ ಕಿವಿಯನ್ನು ಸಲಾಕೆಯಿಂದ ಚುಚ್ಚಬೇಕು.
ಆ ಹೊತ್ತಿನಿಂದ ಇವನು ಶಾಶ್ವತವಾಗಿ ಅವನಿಗೆ
ದಾಸನಾಗಿರಬೇಕು.
7 ಯಾವನಾದರೂ ತನ್ನ ಮಗಳನ್ನು ದಾಸಿಯಾಗು
ವದಕ್ಕೆ ಮಾರಿದರೆ ಪುರುಷರಾದ ದಾಸರು ಬಿಡುಗಡೆ
ಯಾಗಿ ಹೋಗುವ ಪ್ರಕಾರ ಅವಳು ಬಿಡುಗಡೆ
8 ಯಾಗಿ ಹೋಗಕೂಡದು. ಅವಳನ್ನು ಗೊತ್ತು
ಮಾಡಿಕೊಂಡ ಯಜಮಾನನಿಗೆ ಅವಳಲ್ಲಿ ಇಷ್ಟ
ವಿಲ್ಲದೆ ಹೋದರೆ ಬಿಡಿಸಿಕೊಳ್ಳಲಿಕ್ಕೆ ಅವಳಿಗೆ ಅನು
ಕೂಲಕೊಡಬೇಕು. ಅವನು ಕೊಟ್ಟ ಮಾತನ್ನು
ತಪ್ಪಿದವನಾದದರಿಂದ ಅನ್ಯಜನರಿಗೆ ಅವಳನ್ನು
9 ಮಾರುವದಕ್ಕೆ ಅವನಿಗೆ ಅಧಿಕಾರವಿಲ್ಲ. ಅವನು
ತನ್ನ ಮಗನಿಗೆ ಅವಳನ್ನು ಗೊತ್ತುಮಾಡಿಕೊಂಡರೆ
10 ಸೊಸೆಯಂತೆ ಭಾವಿಸಬೇಕು. ಯಜಮಾನನು
ಇನ್ನೊಬ್ಬಳನ್ನು ಸೇರಿಸಿಕೊಂಡರೂ ಮೊದಲನೆಯವ
ಳಿಗೆ ಅನ್ನವಸ್ತ್ರಸಹವಾಸಗಳನ್ನು ಕಡಿಮೆಮಾಡ
11 ಕೂಡದು. ಈ ಮೂರರಲ್ಲಿ ಯಾವದನ್ನೂ ನಡಿಸದೆ
ಹೋದರೆ ಅವಳು ಏನೂ ಕೊಡದೆ ಬಿಡುಗಡೆಯಾಗಿ
ಹೋಗಬಹುದು.
12 ಮನುಷ್ಯನನ್ನು ಹೊಡೆದು ಕೊಂದವನಿಗೆ ಮರಣ
13 ಶಿಕ್ಷೆಯಾಗಬೇಕು. ಆದರೆ ಕೊಲ್ಲಬೇಕೆಂಬ ಅಭಿ
ಪ್ರಾಯವಿಲ್ಲದೆ ದೇವರ ಸಂಕಲ್ಪದಿಂದ ಹತ್ಯನಡೆದರೆ ಆ
ಹತ್ಯಮಾಡಿದವನು ನಾನು ನೇಮಿಸುವ ಆಶ್ರಯಸ್ಥಳಕ್ಕೆ
14 ಓಡಿಹೋಗಿ ಬದುಕಬಹುದು. ಕೊಲ್ಲಬೇಕೆಂಬ ಉದ್ದೇಶ
ದಿಂದಲೇ ಮತ್ತೊಬ್ಬನನ್ನು ಮೋಸದಿಂದ ಕೊಂದವ
ನನ್ನು ನನ್ನ ಯಜ್ಞವೇದಿಯ ಬಳಿಯಿಂದಲೂ ಎಳೆದು
ಅವನಿಗೆ ಮರಣಶಿಕ್ಷೆಯನ್ನು ಕೊಡಬೇಕು.

ತಂದೆಯನ್ನಾಗಲಿ ತಾಯಿಯನ್ನಾಗಲಿ ಹೊಡೆ
ನಿಗೆ ಮರಣಶಿಕ್ಷೆಯಾಗಬೇಕು.
ಮನುಷ್ಯನನ್ನು ಕದ್ದವನಿಗೆ ಅವನನ್ನು ಮ
ದರೂ ತನ್ನಲ್ಲಿಯೇ ಇಟ್ಟುಕೊಂಡರೂ ಮರಣಶಿ
ಯಾಗಬೇಕು.
ತಂದೆಯನ್ನಾಗಲಿ ತಾಯಿಯನ್ನಾಗಲಿ ದೂಷಿ
ವವನಿಗೆ ಮರಣಶಿಕ್ಷೆಯಾಗಬೇಕು.
ಇಬ್ಬರು ಜಗಳವಾಡುತ್ತಿರಲಾಗಿ ಒಬ್ಬನು ಮತ
ಬ್ಬನನ್ನು ಕಲ್ಲಿನಿಂದಾಗಲಿ ಮುಷ್ಟಿಯಿಂದಾಗಲಿ ಹ
ದದರಿಂದ ಗಾಯಪಟ್ಟವನು ಸಾಯದೆ ಕೆಲವು ಕ
ಹಾಸಿಗೆಯಲ್ಲಿ ಬಿದ್ದುಕೊಂಡು ತರುವಾಯ ಎ
ಕೋಲೂರಿಕೊಂಡು ತಿರುಗಾಡಿದರೆ ಹೊಡೆದವ
ಶಿಕ್ಷೆಯನ್ನು ವಿಧಿಸಕೂಡದು; ಆದರೂ ಆ ಮ
ಷ್ಯನು ಕೆಲಸಮಾಡಲಾರದೆ ಹೋದ ಕಾಲಕ್ಕೆ ಅವ
ತಕ್ಕಷ್ಟು ಹಣಕೊಟ್ಟು ಅವನನ್ನು ಪೂರ್ಣವಾಗಿ ಸ್ವ
ಪಡಿಸಬೇಕು.
ಒಬ್ಬನು ತನ್ನ ದಾಸನನ್ನಾಗಲಿ ದಾಸಿಯನ್ನಾಗ
ಕೋಲಿನಿಂದ ಹೊಡೆದು ಸಾಯುವಂತೆ ಮಾಡಿ
ಅವನಿಗೆ ತಕ್ಕ ಶಿಕ್ಷೆಯಾಗಬೇಕು. ಆ ದಾಸ
ಆಗಲೇ ಸಾಯದೆ ಒಂದೆರಡು ದಿವಸ ಉಳಿ
ಯಜಮಾನನಿಗೆ ಶಿಕ್ಷೆಯನ್ನು ವಿಧಿಸಕೂಡದು;
ದಾಸನು ಅವನ ಸೊತ್ತಷ್ಟೆ.
ಮನುಷ್ಯರು ಜಗಳವಾಡುತ್ತಿರಲಾಗಿ ಗರ್ಭಿ
ಯಾದ ಹೆಂಗಸಿಗೆ ಏಟು ತಗಲಿದದರಿಂದ ಅವ
ಗರ್ಭಸ್ರಾವವೇ ಹೊರತಾಗಿ ಬೇರೆ ಯಾವ ಹಾ
ಯೂ ಆಗದೆ ಹೋದರೆ ಹೆಂಗಸಿನ ಗಂಡ
ನ್ಯಾಯಾಧಿಪತಿಗಳ ಸಮ್ಮತಿಯಿಂದ ಎಷ್ಟು
ವನ್ನು ಗೊತ್ತುಮಾಡುತ್ತಾನೋ ಹೊಡೆದವ
ಅಷ್ಟನ್ನು ಕೊಡಬೇಕು. ಬೇರೆ ಹಾನಿಯಾದ ಪಕ್ಷ
ಪ್ರಾಣಕ್ಕೆ ಪ್ರತಿಯಾಗಿ ಪ್ರಾಣವನ್ನು ಕೊಡಿಸಬೇಕ
ಕಣ್ಣಿಗೆ ಕಣ್ಣು, ಹಲ್ಲಿಗೆ ಹಲ್ಲು, ಕೈಗೆ ಕೈ, ಕಾಲಿ
ಕಾಲು, ಬರೆಗೆ ಬರೆ, ಗಾಯಕ್ಕೆ ಗಾಯ, ಏಟ
ಏಟು, ಈ ಮೇರೆಗೆ ಪ್ರತಿದಂಡನೆಯಾಗಬೇಕು.
ಯಾವನಾದರೂ ತನ್ನ ದಾಸನ ಅಥವಾ ದಾಸಿ
ಕಣ್ಣನ್ನು ಹೊಡೆದು ನಷ್ಟಪಡಿಸಿದರೆ ಅದಕ್ಕಾಗಿ
ದಾಸನನ್ನು ಬಿಡುಗಡೆಯಾಗಿ ಹೋಗಗೊಡಿಸಬೇಕ
ದಾಸನ ಅಥವಾ ದಾಸಿಯ ಹಲ್ಲನ್ನು ಉದರಬ
ದರೆ ಅದಕ್ಕಾಗಿ ಆ ದಾಸನನ್ನು ಬಿಡುಗಡೆಯಾ
ಹೋಗಗೊಡಿಸಬೇಕು.
ಎತ್ತು ಪುರುಷನನ್ನಾಗಲಿ ಸ್ತ್ರೀಯನ್ನಾಗಲಿ ಹಾ
ಕೊಂದರೆ ಆ ಎತ್ತನ್ನು ಕಲ್ಲುಗಳಿಂದ ಹೊಡೆ
ಕೊಲ್ಲಬೇಕು; ಅದರ ಮಾಂಸವನ್ನು ತಿನ್ನಕೂಡದ
ಆ ಎತ್ತಿನ ಒಡೆಯನೋ ನಿರ್ದೋಷಿ. ಆದರೆ
ಎತ್ತು ತತ್ಪೂರ್ವದಲ್ಲಿ ಹಾಯುವ ಸ್ವಭಾವದ್ದೆಂ
ಒಡೆಯನು ಎಚ್ಚರಿಕೆಯನ್ನು ಹೊಂದಿದಾಗ್ಯೂ ಅವನ
ಕಟ್ಟಿಹಾಕದೆ ಹೋದದರಿಂದ ಅದು ಪುರುಷನನ್ನಾಗ
ಸ್ತ್ರೀಯನ್ನಾಗಲಿ ಸಾಯಿಸಿದ್ದಾದರೆ ಆ ಎತ್ತನ್ನು ಕ
ಸೆದು ಕೊಲ್ಲಬೇಕಲ್ಲದೆ ಒಡೆಯನೂ ಮರಣಶಿಕ್ಷೆ
ಗುರಿಯಾಗುವನು. ಆದರೆ ಆ ಒಡೆಯನು ತನ
ಪ್ರಾಣವನ್ನು ಬಿಡಿಸಿಕೊಳ್ಳುವದಕ್ಕೆ ಹಣವನ್ನು ಈಡಾ

ಕೊಡಬಹುದೆಂದು [ನ್ಯಾಯಾಧಿಪತಿಗಳು] ತೀರ್ಮಾ
ನಿಸಿದರೆ ನೇಮಕವಾದ ಹಣವನ್ನು ಅವನು ಕೊಟ್ಟು
ತನ್ನ ಪ್ರಾಣವನ್ನು ಉಳಿಸಿಕೊಳ್ಳಬಹುದು. ಆ ಎತ್ತಿ
ನಿಂದ ತಿವಿಸಿಕೊಂಡು ಸತ್ತವನು ಹುಡುಗನಾದರೆ
ಅಥವಾ ಹುಡುಗಿಯಾದರೆ ಇದೇ ರೀತಿಯಾಗಿ ನ್ಯಾ
ಯಾಧಿಪತಿಗಳು ತೀರ್ಮಾನಿಸಬೇಕು. ತಿವಿಸಿಕೊಂಡು
ಸತ್ತವನು ದಾಸನು ಅಥವಾ ದಾಸಿಯು ಆಗಿದ್ದ
ರಕ್ಷಕ್ಕೆ ಅವರ ಯಜಮಾನನಿಗೆ ಮೂವತ್ತು ರೂಪಾ
ಯಿ ಈಡುಕೊಡಿಸಬೇಕು, ಮತ್ತು ಆ ಎತ್ತನ್ನು
ಕಲ್ಲೆಸೆದು ಕೊಲ್ಲಿಸಬೇಕು.
ಒಬ್ಬನು ಕುಣಿತೆಗೆದದರಿಂದ ಇಲ್ಲವೆ ಕುಣಿ
ಅಗಿದು ಮುಚ್ಚದೆಹೋದದರಿಂದ ಮತ್ತೊಬ್ಬನ ಎತ್ತಾ
ಗಲಿ ಕತ್ತೆಯಾಗಲಿ ಅದರಲ್ಲಿ ಬಿದ್ದು ಸತ್ತರೆ ಆ ಕುಣಿ
ಅಗಿಸಿದವನು ಉಂಟಾದ ನಷ್ಟಕ್ಕೆ ಪ್ರತಿಯಾಗಿ ಈಡು
ಕೊಡಬೇಕು. ಆ ದನದ ಒಡೆಯನಿಗೆ ಅದರ ಕ್ರಯ
ವನ್ನು ಕೊಡಬೇಕು. ಸತ್ತ ದನವನ್ನು ತಾನೇ ತೆಗೆ
ದುಕೊಳ್ಳಬಹುದು.
ಒಬ್ಬನ ಎತ್ತು ಮತ್ತೊಬ್ಬನ ಎತ್ತನ್ನು ಹಾದು
ಕೊಂದರೆ ಜೀವದಿಂದಿರುವ ಎತ್ತನ್ನು ಮಾರಿ ಅದರ
ಕ್ರಯವನ್ನು ಸಮವಾಗಿ ಹಂಚಬೇಕು; ಸತ್ತ ಎತ್ತನ್ನೂ
ಸಮವಾಗಿ ಹಂಚಬೇಕು. ಆದರೆ ಅದಕ್ಕೆ ಮುಂಚಿತ
ವಾಗಿ ಆ ಎತ್ತು ಹಾಯುವಂಥದೇ ಎಂದು ತಿಳಿದಿ
ದ್ದಾಗ್ಯೂ ಅದರ ಒಡೆಯನು ಅದನ್ನು ಕಟ್ಟಿಹಾಕದೆ
ಹೋದದ್ದಾದರೆ ಅವನು ಎತ್ತಿಗೆ ಪ್ರತಿಯಾಗಿ ಎತ್ತನ್ನು
ಕೊಡಬೇಕು; ಸತ್ತ ಎತ್ತನ್ನು ತಾನೇ ತೆಗೆದುಕೊಳ್ಳ
ಬಹುದು.
2 ಒಬ್ಬನು ಎತ್ತನ್ನಾಗಲಿ ಕುರಿಯನ್ನಾಗಲಿ ಕದ್ದು
ಕೊಂಡು ಕೊಯಿದರೆ ಇಲ್ಲವೆ ಮಾರಿದರೆ ಅವನು
ಎತ್ತಿಗೆ ಪ್ರತಿಯಾಗಿ ಐದು ಎತ್ತುಗಳನ್ನು, ಕುರಿಗೆ
ಪ್ರತಿಯಾಗಿ ನಾಲ್ಕು ಕುರಿಗಳನ್ನು ಕೊಡಬೇಕು.
ಕಳ್ಳನು ಕನ್ನಕೊರೆಯುತ್ತಿರುವಾಗಲೇ ಕೈಗೆ ಸಿಕ್ಕಿ
ಕೊಲ್ಲಲ್ಪಟ್ಟರೆ ಅದನ್ನು ನರಹತ್ಯವೆಂದು ಎಣಿಸ
ಕೂಡದು, ಸೂರ್ಯೋದಯವಾದನಂತರ ಒಬ್ಬನು
ಕಳ್ಳನನ್ನು ಹೊಡೆದು ಕೊಂದರೆ ಅದು ನರಹತ್ಯವೇ
ಸರಿ.) ಅವನು ಪೂರ್ತಿಯಾಗಿ ಸಲ್ಲಿಸಬೇಕು. ಅವ
ನಲ್ಲಿ ಏನೂ ಇಲ್ಲದ ಪಕ್ಷಕ್ಕೆ ಅವನು ಆ ಕಳ್ಳತನ
ಮಾಡಿದ್ದರಿಂದ ದಾಸನಾಗಿ ಮಾರಲ್ಪಡಬೇಕು.
ಕದ್ದದ್ದು ಎತ್ತಾದರೂ ಕತ್ತೆಯಾದರೂ ಆಡುಕುರಿಯಾ
ದರೂ ಸರಿಯೇ ಅದು ಜೀವದಿಂದಲೇ ಕಳ್ಳನ ಬಳಿ
ಯಲ್ಲಿ ಸಿಕ್ಕಿದರೆ ಅವನು ಎರಡರಷ್ಟು ಈಡುಕೊಡ
ಬೇಕು.
ಒಬ್ಬನು ತನ್ನ ಹೊಲದಲ್ಲಾಗಲಿ ದ್ರಾಕ್ಷೇತೋಟದ
ಲ್ಲಾಗಲಿ ದನಗಳನ್ನು ಮೇಯಿಸಿ ಅವು ಮತ್ತೊಬ್ಬನ
ಹೊಲಕ್ಕೂ ಹೋಗಿ ಮೇಯುವಂತೆ ಮಾಡಿದರೆ ತನ್ನ
ಹೊಲದ ಅಥವಾ ದ್ರಾಕ್ಷೇತೋಟದ ಉತ್ತಮಭಾಗ
ದಲ್ಲಿ ಅವನಿಗೆ ಈಡುಕೊಡಬೇಕು.
ಒಬ್ಬನು ಹೊತ್ತಿಸಿದ ಬೆಂಕಿ ಆಕಸ್ಮಾತ್ತಾಗಿ
ಮುಳ್ಳಿನ ಗಿಡಗಳಿಗೆ ಹತ್ತಿದ್ದರಿಂದ ಮತ್ತೊಬ್ಬನ ದನ
ಸದ ರಾಶಿಗಳಾಗಲಿ ಬೆಳೆಯಾಗಲಿ ಹೊಲವಾಗಲಿ
ಸುಟ್ಟುಹೋದರೆ, ಬೆಂಕಿ ಹೊತ್ತಿಸಿದವನು ಈಡುಕೊಡ
ಬೇಕು.
ಒಬ್ಬನು ಹಣವನ್ನಾದರೂ ಒಡವೆಗಳನ್ನಾದರೂ 7
ಕಾಪಾಡುವದಕ್ಕೆ ಮತ್ತೊಬ್ಬನಿಗೆ ಒಪ್ಪಿಸಿದಾಗ ಅದು
ಆ ಮನುಷ್ಯನ ಮನೆಯಲ್ಲಿ ಕಳವಾಗಿ ಹೋದರೆ
ಕಳ್ಳನು ಸಿಕ್ಕುವ ಪಕ್ಷಕ್ಕೆ ಎರಡರಷ್ಟು ಕೊಡಬೇಕು.
ಕಳ್ಳನು ಸಿಕ್ಕದೆಹೋದರೆ ಆ ಮನೆಯ ಯಜಮಾನನು 8
ತಾನೇ ಆ ಒಡವೆಗಳನ್ನು ಕದ್ದನೋ ಏನೋ ಎಂಬ
ದನ್ನು ನಿಶ್ಚಯಿಸುವದಕ್ಕಾಗಿ [1]ದೇವರ ಸನ್ನಿಧಿಯಲ್ಲಿ
ಕಾಣಿಸಿಕೊಳ್ಳಬೇಕು. ವಂಚನೆಯಾಯಿತೆಂಬ ಅನು 9
ಮಾನ ಹುಟ್ಟಿದ ಪ್ರತಿಯೊಂದು ವಿಷಯದಲ್ಲಿಯೂ,
ಅದು ಎತ್ತು ಕತ್ತೆ ಕುರಿ ಬಟ್ಟೆಗಳ ವಿಷಯವಾದರೂ
ಸರಿಯೇ ಕಳಕೊಂಡ ಬೇರೆ ಯಾವ ವಸ್ತುವಿನ
ವಿಷಯವಾದರೂ ಸರಿಯೇ [ಒಬ್ಬನು ಇನ್ನೊಬ್ಬನ
ಬಳಿಯಲ್ಲಿ ಅದನ್ನು ಕಂಡು] ಇದು ತನ್ನದೆಂದು
ಹೇಳುವ ಪಕ್ಷಕ್ಕೆ ಆ ಇಬ್ಬರ ವ್ಯಾಜ್ಯವು ದೇವರ
ಸನ್ನಿಧಿಗೆ ಬರಬೇಕು. [2]ದೇವರು ಯಾರನ್ನು ದ್ರೋಹಿ
ಯೆಂದು ನಿರ್ಣಯಿಸುವನೋ ಅವನು ಆ ಮತ್ತೊ
ಬ್ಬನಿಗೆ ಎರಡರಷ್ಟು ಕೊಡಬೇಕು.
ಒಬ್ಬನು ಕತ್ತೆಯನ್ನಾಗಲಿ ಎತ್ತನ್ನಾಗಲಿ ಕುರಿಯ 10
ನ್ನಾಗಲಿ ಬೇರೆ ಯಾವ ಪಶುವನ್ನಾಗಲಿ ಕಾಪಾಡು
ವದಕ್ಕೆ ಮತ್ತೊಬ್ಬನ ವಶಕ್ಕೆ ಕೊಟ್ಟಮೇಲೆ ಅದು
ಸತ್ತರೆ ಇಲ್ಲವೆ ಊನವಾದರೆ ಇಲ್ಲವೆ ಯಾರೂ ತಿಳಿ
ಯದಂತೆ ಸುಲಿಗೆಯಾದರೆ ಆ ಮನುಷ್ಯನು ತಾನೇ 11
ಆ ಸೊತ್ತಿನ ವಿಷಯದಲ್ಲಿ ಮೋಸಮಾಡಲಿಲ್ಲವೆಂಬ
ದನ್ನು ದೃಢಪಡಿಸುವದಕ್ಕೆ ಯೆಹೋವನ ಮೇಲೆ
ಪ್ರಮಾಣಮಾಡಬೇಕು. ಪಶುವಿನ ಒಡೆಯನು ಆ
ಪ್ರಮಾಣವಾಕ್ಯವನ್ನು ನಂಬಬೇಕು; ಪ್ರಮಾಣಮಾಡಿ
ದವನು ಈಡುಕೊಡಬೇಕಾದ ಅಗತ್ಯವಿಲ್ಲ. ಆದರೆ 12
ಆ ಪಶುವು ಅವನ ಬಳಿಯಿಂದ ಕಳವಾಗಿ ಹೋಗಿ
ದ್ದರೆ ಅದರ ಒಡೆಯನಿಗೆ ಅವನು ಈಡುಕೊಡಬೇಕು.
ಕಾಡುಮೃಗವು ಕೊಂದಿದ್ದರೆ ಅದರ ಹೆಣವನ್ನು ತೋರಿ 13
ಸಲಿ; ಕಾಡುಮೃಗವು ಕೊಂದದ್ದಕ್ಕೆ ಬದಲುಕೊಡ
ಬೇಕಾದ ಅವಶ್ಯವಿಲ್ಲ.
ಒಬ್ಬನು ಮತ್ತೊಬ್ಬನಿಂದ ಪಶುವನ್ನು ಸ್ವಲ್ಪ 14
ಕಾಲಕ್ಕೆ ತೆಗೆದುಕೊಂಡಿರಲಾಗಿ ಆ ಪಶುವಿನ ಒಡೆ
ಯನು ಅದರ ಹತ್ತಿರವಿಲ್ಲದ ಸಮಯದಲ್ಲಿ ಅದು
ಊನವಾದರೆ ಇಲ್ಲವೆ ಸತ್ತರೆ ಕೇಳಿಕೊಂಡವನು
ಈಡುಕೊಡಬೇಕು. ಒಡೆಯನು ಅದರ ಹತ್ತಿರದಲ್ಲೇ 15
ಇದ್ದರೆ ಅವನಿಗೆ ಈಡುಕೊಡಬೇಕಾದ ಅಗತ್ಯವಿಲ್ಲ.
ಅದನ್ನು ಬಾಡಿಗೆಗೆ ತೆಗೆದುಕೊಂಡ ಪಕ್ಷಕ್ಕೆ ಅದಕ್ಕೆ
ಉಂಟಾದ ನಷ್ಟವು ಬಾಡಿಗೆಯ ಲೆಕ್ಕಕ್ಕೆ ಎಣಿಕೆಯಾ
ಗಿರಬೇಕು.
ಗೊತ್ತುಮಾಡದ ಹೆಣ್ಣನ್ನು ಒಬ್ಬನು ಮರುಳು 16
ಗೊಳಿಸಿ ಕೂಡಿದರೆ ಅವಳಿಗೋಸ್ಕರ ತೆರವನ್ನು
ಕೊಟ್ಟು ಅವಳನ್ನು ಮದುವೆಮಾಡಿಕೊಳ್ಳಬೇಕು.
ಅವಳ ತಂದೆ ಅವಳನ್ನು ಅವನಿಗೆ ಕೊಡುವದಕ್ಕೆ 17

1) ನ್ಯಾಯಾಧಿಪತಿಗಳ. 2) ನ್ಯಾಯಾಧಿಪತಿಗಳು.

ಒಪ್ಪದೆಹೋದರೆ ಆ ಮನುಷ್ಯನು ತಕ್ಕ ತೆರವನ್ನು
ಹೇಗೂ ಕೊಡಬೇಕು.
18 ಮಾಟಗಾರ್ತಿಯನ್ನು ಬದುಕಲೀಸಬಾರದು.
19 ಪಶುಸಂಗ ಮಾಡಿದವನಿಗೆ ಮರಣಶಿಕ್ಷೆಯಾಗ
ಬೇಕು.
20 ಯೆಹೋವನೊಬ್ಬನಿಗೆ ಹೊರತಾಗಿ ಬೇರೊಬ್ಬ ದೇವ
ರಿಗೆ ಯಜ್ಞಮಾಡುವವನನ್ನು ನಾಶನಪಡಿಸಬೇಕು.
21 ಪರದೇಶಸ್ಥನಿಗೆ ಅನ್ಯಾಯಮಾಡಬಾರದು, ಉಪ
ದ್ರವಕೊಡಲೂ ಬಾರದು. ನೀವೂ ಐಗುಪ್ತದೇಶ
22 ದಲ್ಲಿ ಪರದೇಶಸ್ಥರಾಗಿದ್ದಿರಲ್ಲವೇ. ವಿಧವೆಯರನ್ನಾ
ಗಲಿ ದಿಕ್ಕಿಲ್ಲದ ಮಕ್ಕಳನ್ನಾಗಲಿ ಬಾಧಿಸಬಾರದು.
23 ನೀವು [1]ಇಂಥವರನ್ನು ಬಾಧಿಸಿದರೆ ಅವರು ನನಗೆ
ಮೊರೆಯಿಡುವರು; ಆ ಮೊರೆಗೆ ನಾನು ಕಿವಿಗೊಡುವೆ
24 ನೆಂದು ತಿಳಿದುಕೊಳ್ಳಿರಿ. ನಾನು ಕೋಪಿಸಿಕೊಂಡು
ನಿಮ್ಮನ್ನು ಶತ್ರುಗಳ ಕತ್ತಿಯಿಂದ ಸಂಹಾರಮಾಡಿಸು
ವೆನು; ನಿಮ್ಮ ಹೆಂಡತಿಯರು ವಿಧವೆಗಳಾಗುವರು,
ನಿಮ್ಮ ಮಕ್ಕಳು ದಿಕ್ಕಿಲ್ಲದವರಾಗುವರು.
25 ನನ್ನ ಜನರಲ್ಲಿ ಒಬ್ಬ ಬಡವನಿಗೆ ನೀನು ಸಾಲ
ಕೊಟ್ಟರೆ ಅವನನ್ನು ಸಾಲಗಾರನಂತೆ ನಡಿಸಬಾರದು;
ಅವನಿಂದ ಬಡ್ಡಿಯನ್ನು ಕೇಳಬಾರದು.
26 ನೀನು ಒಬ್ಬನ ಕಂಬಳಿಯನ್ನು ಅಡವು ಇಟ್ಟು
ಕೊಂಡರೆ ಸೂರ್ಯನು ಮುಣುಗುವಷ್ಟರಲ್ಲಿ ಅದನ್ನು
27 ಹಿಂದಕ್ಕೆ ಕೊಡಬೇಕು. ಅವನಿಗೆ ಬೇರೆ ಯಾವ
ಹೊದಿಕೆಯಿಲ್ಲವಲ್ಲಾ; ಅದನ್ನೇ ಮೈಗೆ ಕಟ್ಟಿಕೊಳ್ಳ
ಬೇಕು; ಬೇರೆ ಯಾವದನ್ನು ಸುತ್ತಿಕೊಂಡು ಮಲ
ಗಾನು? ಅವನು ನನಗೆ ಮೊರೆಯಿಟ್ಟರೆ ಕೇಳುವೆನು;
ನಾನು ದಯಾಪರನೇ.
28 ದೇವರನ್ನು ದೂಷಿಸಬಾರದು; ನಿಮ್ಮ ಜನರಲ್ಲಿ
ಅಧಿಪತಿಯಾಗಿರುವವನನ್ನು ಶಪಿಸಬಾರದು.
29 ಕಣದಿಂದಲೂ ಆಲೆಯಿಂದಲೂ ನನಗೆ ಸಲ್ಲಿಸ
ತಕ್ಕದ್ದನ್ನು ಸಮರ್ಪಿಸುವದಕ್ಕೆ ತಡಮಾಡಬಾರದು.
ನಿಮ್ಮ ಚೊಚ್ಚಲು ಗಂಡುಮಕ್ಕಳನ್ನು ನನಗೆ
30 ಸಮರ್ಪಿಸಬೇಕು. ಅದೇ ಮೇರೆಗೆ ನಿಮ್ಮ ಕುರಿದನ
ಗಳ ಚೊಚ್ಚಲುಮರಿಗಳನ್ನು ನನಗೆ ಸಮರ್ಪಿಸ
ಬೇಕು. ಏಳು ದಿವಸ ಆ ಮರಿ ತಾಯಿಯ ಹತ್ತಿರ
ಇರಲಿ; ಎಂಟನೆಯ ದಿನದಲ್ಲಿ ಅದನ್ನು ನನಗೆ ಸಮ
ರ್ಪಿಸಬೇಕು.
31 ನೀವು ನನಗೆ ಪರಿಶುದ್ಧಜನರಾಗಿರಬೇಕು; ಆದದ
ರಿಂದ ಕಾಡುಮೃಗಕೊಂದದ್ದನ್ನು ತಿನ್ನಬಾರದು;
ಅದನ್ನು ನಾಯಿಗಳಿಗೆ ಬಿಡಬೇಕು.

**23** ಆಧಾರವಿಲ್ಲದ ಸುದ್ದಿಯನ್ನು ಹಬ್ಬಿಸಬಾರದು.
ದುಷ್ಟರ ಸಹಾಯಕ್ಕಾಗಿ ನ್ಯಾಯವಿರುದ್ಧವಾದ
2 ಸಾಕ್ಷಿಯನ್ನು ನುಡಿಯಬಾರದು. ದುಷ್ಕಾರ್ಯ
ವನ್ನು ಮಾಡುವವರು ಬಹು ಮಂದಿ ಆದಾಗ್ಯೂ ಅವರ
ಜೊತೆಯಲ್ಲಿ ಸೇರಬಾರದು. ಬಹು ಮಂದಿಯ
ಮಾತಿಗೆ ಒಪ್ಪಿ ನ್ಯಾಯವನ್ನು ಕೆಡಿಸುವ ಸಾಕ್ಷಿಯನ್ನು
3 ಹೇಳಬಾರದು. ಅದಲ್ಲದೆ ಬಡವನನ್ನು ಕರುಣಿಸಿ
ಪಕ್ಷಪಾತದಿಂದ ತೀರ್ಮಾನಮಾಡಬಾರದು.

ನಿನ್ನ ವೈರಿಯ ಎತ್ತಾಗಲಿ ಕತ್ತೆಯಾಗಲಿ ತಪ್ಪಿ
ಕೊಂಡು ಹೋಗಿರಲಾಗಿ ಅದು ನಿನಗೆ ಸಿಕ್ಕಿದ
ಅದನ್ನು ಅವನ ಬಳಿಗೆ ಹೊಡಕೊಂಡು ಹೋ
ಒಪ್ಪಿಸಬೇಕು. ನಿನ್ನ ಹಗೆಯವನ ಕತ್ತೆ ಹೊರೆಯ
ಕೆಳಗೆ ಬಿದ್ದಿರುವದನ್ನು ಕಂಡರೆ ಅದನ್ನು ಎಬ್ಬಿಸ
ವದಕ್ಕೆ ಮನಸ್ಸಿಲ್ಲದೆ ಹೋದಾಗ್ಯೂ ಅವನಿಗೆ ಸಹ
ಯಮಾಡಿ ಎಬ್ಬಿಸಲೇ ಬೇಕು.
ನಿಮ್ಮಲ್ಲಿರುವ ಬಡವರು ವ್ಯಾಜ್ಯವಾಡಿದಾಗ ನೀ
ನ್ಯಾಯವನ್ನು ಬಿಟ್ಟು ತೀರ್ಮಾನಮಾಡಬಾರದು
ಮೋಸದ ಕಾರ್ಯಕ್ಕೆ ದೂರವಾಗಿರಬೇಕು. ನಿರ
ರಾಧಿಯಾಗಿಯೂ ಸನ್ಮಾರ್ಗಸ್ಥನಾಗಿಯೂ ಇರು
ಮನುಷ್ಯನಿಗೆ ಮರಣದಂಡನೆಯನ್ನು ವಿಧಿಸಲೇ ಬ
ರದು; ಅಂಥ ದುಷ್ಟತ್ವವನ್ನು ಮಾಡಿದವನಿಗೆ ನಾನ
ಶಿಕ್ಷೆಯನ್ನು ವಿಧಿಸದೆ ಬಿಡುವದಿಲ್ಲ. ಲಂಚವನ
ತೆಗೆದುಕೊಳ್ಳಬಾರದು; ಲಂಚವು ಕಣ್ಣುಳ್ಳವರನ
ಕುರುಡರಂತೆ ಮಾಡುತ್ತದೆ, ನಿರಪರಾಧಿಯಾದವ
ನ್ಯಾಯವನ್ನು ಕೆಡಿಸುತ್ತದೆ.
ಪರದೇಶಸ್ಥರಿಗೆ ಉಪದ್ರವಕೊಡಬಾರದು. ನೀನ
ಐಗುಪ್ತದೇಶದಲ್ಲಿ ಪರದೇಶಸ್ಥರಾಗಿದ್ದಿರಷ್ಟೆ; ಅಂ
ವರ ಮನೋವ್ಯಥೆಯನ್ನು ತಿಳಿದೇ ಇರುತ್ತೀರಿ.
ಆರು ವರುಷ ನಿಮ್ಮ ಹೊಲದಲ್ಲಿ ಬೀಜಬಿ
ಅದರ ಬೆಳೆಯನ್ನು ತೆಗೆದುಕೊಂಡು ಏಳನೆಯ ವರು
ದಲ್ಲಿ ಆ ಭೂಮಿಯನ್ನು ಬೀಳುಬಿಡಬೇಕು. ನಿಮ
ದೇಶದ ಬಡವರು ಅದರಲ್ಲಿ ಬೆಳೆಯುವದನ್ನು ತಿನ್ನಲಿ
ಮಿಕ್ಕದ್ದನ್ನು ಕಾಡುಮೃಗಗಳು ಮೇಯಲಿ. ನಿಮ
ದ್ರಾಕ್ಷೇತೋಟಗಳ ವಿಷಯದಲ್ಲಿಯೂ ಎಣ್ಣೇಮ
ಗಳ ತೋಪುಗಳ ವಿಷಯದಲ್ಲಿಯೂ ಅದೇ ರೀ
ಯಲ್ಲಿ ಮಾಡಬೇಕು.
ಆರು ದಿವಸಗಳು ನಿಮ್ಮ ಕೆಲಸವನ್ನು ನಡಿ
ಏಳನೆಯ ದಿನದಲ್ಲಿ ಯಾವ ಕೆಲಸವನ್ನೂ ಮಾಡ
ಇರಬೇಕು. ಆ ಹೊತ್ತು ನಿಮ್ಮ ಎತ್ತುಗಳೂ ಕ
ಗಳೂ ದಾಸದಾಸಿಯರೂ ಪರದೇಶಸ್ಥರೂ ವಿಶ್ರಮಿ
ಕೊಳ್ಳಲಿ.
ನಾನು ನಿಮಗೆ ಹೇಳಿದ್ದನ್ನೆಲ್ಲಾ ಜಾಗರೂಕ
ಯಾಗಿ ಕೈಕೊಳ್ಳಬೇಕು. ಬೇರೆ ಯಾವ ದೇವ
ಹೆಸರನ್ನು ಸ್ಮರಿಸಲೂ ಕೂಡದು; ಉಚ್ಚರಿಸಲ
ಕೂಡದು.
ನೀವು ವರುಷಕ್ಕೆ ಮೂರಾವರ್ತಿ ನನಗೆ ಜಾ
ಮಾಡಬೇಕು. ಹುಳಿಯಿಲ್ಲದ ರೊಟ್ಟಿಗಳನ್ನು ತಿ
ಬೇಕಾದ ಜಾತ್ರೆ ಒಂದು. ನಾನು ನಿಮಗೆ ಆಜ್ಞ
ಪಿಸಿದಂತೆ ನೀವು [2]ಚೈತ್ರಮಾಸದ ನೇಮಕವಾ
ಕಾಲದಲ್ಲಿ ಏಳು ದಿವಸವೂ ಹುಳಿಯಿಲ್ಲದ ರೊ
ಗಳನ್ನು ತಿನ್ನಬೇಕು. ಆ ಮಾಸದಲ್ಲೇ ಐಗುಪ್ತದೇ
ದಿಂದ ಹೊರಟುಬಂದಿರಲ್ಲಾ. ಒಬ್ಬನೂ ಕೈಯ
ಕಾಣಿಕೆಯಿಲ್ಲದೆ ನನ್ನ ಸನ್ನಿಧಿಯಲ್ಲಿ ಕಾಣಿಸಿಕೊ
ಕೂಡದು. ಅದಲ್ಲದೆ ನೀವು ಬಿತ್ತಿದ ಹೊಲದ
ಪ್ರಥಮಫಲವು ದೊರೆತಾಗ ಸುಗ್ಗಿಯ ಜಾತ್ರೆಯನು
ಹೊಲತೋಟಗಳ ಬೆಳೆಯನ್ನು ಕೂಡಿಸುವಾ

1) ಅಥವಾ: ಪರದೇಶಸ್ಥರನ್ನು. 2) ಮೂಲ: ಅಬೀಬ್.

ಅಂದರೆ ವರುಷದ ಕೊನೆಯಲ್ಲಿ ಫಲಸಂಗ್ರಹ ಜಾತ್ರೆ ಯನ್ನೂ ಆಚರಿಸಬೇಕು. ವರುಷಕ್ಕೆ ಮೂರಾವರ್ತಿ ನಿಮ್ಮಲ್ಲಿರುವ ಗಂಡಸರೆಲ್ಲರು ಕರ್ತನಾದ ಯೆಹೋ ವನ ಸನ್ನಿಧಿಗೆ ಬರಬೇಕು.

ನನಗೆ ಯಜ್ಞವನ್ನು ಮಾಡುವಾಗ ಆ ಯಜ್ಞ ಪಶುವಿನ ರಕ್ತದೊಡನೆ ಹುಳಿಯಾದ ಹಿಟ್ಟನ್ನು ಸಮರ್ಪಿಸಬಾರದು. ನನ್ನ ಜಾತ್ರೆಯಲ್ಲಿ ನೀವು ನನಗೆ ಸಮರ್ಪಿಸಬೇಕಾದ ಪಶುವಿನ ಪಶುವಿನ ವಪೆಯನ್ನು ಮಾರಣೆ ದಿನದ ವರೆಗೂ ಇಡಲೇ ಬಾರದು.

ನಿಮ್ಮ ಬೆಳೆಯ ಪ್ರಥಮಫಲದಲ್ಲಿ ಉತ್ಕೃಷ್ಟವಾದ ದ್ದನ್ನು ನಿಮ್ಮ ದೇವರಾದ ಯೆಹೋವನ ಮಂದಿರಕ್ಕೆ ತರಬೇಕು.

ಆಡುಮರಿಯನ್ನು ಅದರ ತಾಯಿಯ ಹಾಲಿನಲ್ಲಿ ಬೇಯಿಸಬಾರದು.

ಇಗೋ, ದಾರಿಯಲ್ಲಿ ನಿಮ್ಮನ್ನು ಕಾಪಾಡು ವದಕ್ಕೂ ನಾನು ಗೊತ್ತುಮಾಡಿರುವ ಸ್ಥಳಕ್ಕೆ ಕರ ತರುವದಕ್ಕೂ ದೂತನನ್ನು ನಿಮ್ಮ ಮುಂದುಗಡೆ ಯಲ್ಲಿ ಕಳುಹಿಸುತ್ತೇನೆ. ನೀವು ಆತನಲ್ಲಿ ಲಕ್ಷ್ಯ ವಿಟ್ಟು ಆತನ ಮಾತಿಗೆ ಕಿವಿಗೊಡಬೇಕು; ಆತನಿಗೆ ಅವಿಧೇಯರಾಗಿರಬಾರದು; ಅವಿಧೇಯರಾದರೆ ನಿಮ್ಮ ನ್ನು ಕ್ಷಮಿಸಲಾರನು; ನನ್ನ ನಾಮಮಹಿಮೆ ಆತ ನಲ್ಲಿ ಇರುವದು. ನೀವು ಆತನ ಮಾತನ್ನು ಶ್ರದ್ಧೆ ಯಿಂದ ಲಾಲಿಸಿ ನನ್ನ ಆಜ್ಞೆಗಳನ್ನೆಲ್ಲಾ ನಡಿಸಿದರೆ ನಾನು ನಿಮ್ಮ ಶತ್ರುಗಳಿಗೆ ಶತ್ರುವಾಗಿಯೂ ನಿಮ್ಮನ್ನು ಪೀಡಿಸುವವರನ್ನು ಪೀಡಿಸುವವನಾಗಿಯೂ ಇರುವೆನು. ನನ್ನ ದೂತನು ನಿಮ್ಮ ಮುಂದೆ ಮುಂದೆ ನಡೆದು ಅಮೋರಿಯರೂ ಹಿತ್ತಿಯರೂ ಪೆರಿಜ್ಜೀಯರೂ ಕಾನಾ ನ್ಯರೂ ಹಿವ್ವಿಯರೂ ಯೆಬೂಸಿಯರೂ ಇರುವ ದೇಶಕ್ಕೆ ನಿಮ್ಮನ್ನು ಸೇರಿಸುವನು; ಅವರನ್ನಾದರೋ ನಾನು ನಿರ್ಮೂಲಮಾಡುವೆನು.

ಅವರ ದೇವತೆಗಳನ್ನು ನೀವು ನಮಸ್ಕರಿಸಲೂ ಬಾರದು, ಪೂಜಿಸಲೂ ಬಾರದು; ಅವರ ಆಚರಣೆ ಗಳನ್ನು ಅನುಸರಿಸಲೇ ಬಾರದು. ಆ ಜನಗಳನ್ನು ನಿರ್ಮೂಲ ಮಾಡಿ ವಿಗ್ರಹಸ್ತಂಭಗಳನ್ನು ನಾಶನ ಮಾಡಬೇಕು. ನಿಮ್ಮ ದೇವರಾದ ಯೆಹೋವ ನೊಬ್ಬನನ್ನೇ ಆರಾಧಿಸಬೇಕು; ಆಗ ಆತನು ನಿಮ್ಮ ಅನ್ನಪಾನಗಳನ್ನು ಆಶೀರ್ವದಿಸುವನು. ನಿಮ್ಮೊಳಗೆ ಯಾವ ವ್ಯಾಧಿಯೂ ಉಂಟಾಗದಂತೆ ಮಾಡು ವೆನು: ನಿಮ್ಮ ದೇಶದಲ್ಲಿ ಗರ್ಭಸ್ರಾವವಾಗಲಿ ಬಂಜೇ ತನವಾಗಲಿ ಇರುವದೇ ಇಲ್ಲ: ನಿಮಗೆ ಸಂಪೂರ್ಣ ವಾದ ಆಯುಸ್ಸನ್ನು ಕೊಡುವೆನು.

ನೀವು ಹೋಗುವ ಎಲ್ಲಾ ಕಡೆಯಲ್ಲಿಯೂ ನಾನು ಜನಗಳ ಮನಸ್ಸಿನಲ್ಲಿ ಹೆದರಿಕೆಯನ್ನು ಹುಟ್ಟಿಸಿ ಕಳ ವಳವನ್ನು ಉಂಟುಮಾಡಿ ನಿಮ್ಮನ್ನು ವಿರೋಧಿಸು ವವರನ್ನು ಓಡಿಹೋಗುವಂತೆ ಮಾಡುವೆನು. ಅದ ಲ್ಲದೆ 1)ಕಡಜದ ಹುಳಗಳನ್ನು ನಿಮ್ಮ ಮುಂಚಿತ ವಾಗಿ ಕಳುಹಿಸುವೆನು; ಹಿವ್ವಿಯರೂ ಕಾನಾನ್ಯರೂ ಹಿತ್ತಿಯರೂ ನಿಮ್ಮ ಮುಂದೆ ನಿಲ್ಲದಂತೆ ಅವು ಅವ
ರನ್ನು ಓಡಿಸಿಬಿಡುವವು. ಆದರೆ ನಾನು ಒಂದೇ 29
ವರುಷದೊಳಗೆ ಅವರೆಲ್ಲರನ್ನೂ ಅಲ್ಲಿಂದ ಹೊರಡಿಸು
ವದಿಲ್ಲ; ಯಾಕಂದರೆ ದೇಶದಲ್ಲಿ ಜನರು ಕಡಿಮೆ
ಯಾಗುವದರಿಂದ ಕಾಡುಮೃಗಗಳು ಹೆಚ್ಚಿ ನಿಮಗೆ
ತೊಂದರೆಗೆ ಕಾರಣವಾದೀತು. ನೀವು ಅಭಿವೃದ್ಧಿ 30
ಯಾಗಿ ದೇಶದಲ್ಲೆಲ್ಲಾ ತುಂಬಿಕೊಳ್ಳುವ ತನಕ ಅವ
ರನ್ನು ಸ್ವಲ್ಪಸ್ವಲ್ಪವಾಗಿ ಹೊರಡಿಸುತ್ತಿರುವೆನು.
ಕೆಂಪುಸಮುದ್ರದಿಂದ ಫಿಲಿಷ್ಟಿಯರ ದೇಶದ ಬಳಿ 31
ಯಲ್ಲಿರುವ ಸಮುದ್ರದ ವರೆಗೂ ಮತ್ತು ಈ ಅರಣ್ಯ
ದಿಂದ ಯೂಫ್ರೇಟೀಸ್ ಮಹಾನದಿಯ ವರೆಗೂ
ಇರುವ ದೇಶವನ್ನೆಲ್ಲಾ ನಿಮಗೆ ನೇಮಿಸಿ ಅದರಲ್ಲಿ
ರುವ ನಿವಾಸಿಗಳನ್ನು ನಿಮಗೆ ಅಧೀನಪಡಿಸುವೆನು;
ನೀವು ಅವರನ್ನು ಹೊರಡಿಸುವಿರಿ. ನೀವು ಅವ 32
ರೊಡನೆಯಾಗಲಿ ಅವರ ದೇವತೆಗಳೊಡನೆಯಾಗಲಿ
ಯಾವ ವಿಧವಾದ ಒಡಂಬಡಿಕೆಯನ್ನೂ ಮಾಡಿಕೊಳ್ಳ
ಬಾರದು. ಅವರು ನಿಮ್ಮ ದೇಶದಲ್ಲೇ ವಾಸವಾಗಿರ 33
ಬಾರದು; ವಾಸವಾಗಿದ್ದರೆ ನನಗೆ ವಿರೋಧವಾಗಿ
ನಿಮ್ಮಲ್ಲಿ ದ್ರೋಹಬುದ್ಧಿಯನ್ನು ಹುಟ್ಟಿಸಾರು; ನೀವು
ಅವರ ದೇವತೆಗಳನ್ನು ಪೂಜಿಸಿದರೆ ಆ ಪೂಜೆಯು
ನಿಮಗೆ ಉರುಲಾಗುವದು.

ನಿಬಂಧನೆಯನ್ನು ದೃಢೀಕರಿಸಿದ್ದು.

24
ಯೆಹೋವನು ಮೋಶೆಗೆ—ನೀನೂ ಆರೋನ
ನಾದಾಬ್ ಅಬೀಹೂ ಎಂಬವರೂ ಇಸ್ರಾಯೇಲ್ಯರ
ಹಿರಿಯರಲ್ಲಿ ಎಪ್ಪತ್ತು ಮಂದಿಯೂ ಈ ಬೆಟ್ಟವನ್ನು
ಹತ್ತಿ ಯೆಹೋವನ ಬಳಿಗೆ ಬಂದು ದೂರದಲ್ಲಿ ನಿಂತು
ಅಡ್ಡಬೀಳಬೇಕು. ಮೋಶೆ ಒಬ್ಬನೇ ಯೆಹೋವನ 2
ಸಮೀಪಕ್ಕೆ ಬರಬೇಕೇ ಹೊರತು ಅವನ ಜೊತೆಯವ
ರಲ್ಲಿ ಸಮೀಪಕ್ಕೆ ಯಾರೂ ಬರಬಾರದು; ಮಿಕ್ಕ
ಜನರು ಬೆಟ್ಟವನ್ನು ಹತ್ತಬಾರದು ಎಂದು ಹೇಳಿ
ದನು.
ಮೋಶೆ ಜನರ ಬಳಿಗೆ ಬಂದು ಯೆಹೋವನ 3
ಎಲ್ಲಾ ಮಾತುಗಳನ್ನೂ ನ್ಯಾಯವಿಧಿಗಳನ್ನೂ ವಿವ
ರಿಸಲು ಜನರೆಲ್ಲರು—ಯೆಹೋವನ ಮಾತುಗಳ
ನ್ನೆಲ್ಲಾ ಅನುಸರಿಸಿ ನಡೆಯುವೆವು ಎಂದು ಒಕ್ಕಟ್ಟಾಗಿ
ಉತ್ತರಕೊಟ್ಟರು.
ಮೋಶೆಯು ಯೆಹೋವನ ಆಜ್ಞೆಗಳನ್ನೆಲ್ಲಾ ಬರೆ 4
ದು ಬೆಳಿಗ್ಗೆ ಎದ್ದು ಆ ಬೆಟ್ಟದ ಬುಡದಲ್ಲಿ ಯಜ್ಞವೇದಿ
ಯನ್ನು ಕಟ್ಟಿಸಿ ಇಸ್ರಾಯೇಲ್ಯರ ಹನ್ನೆರಡು ಕುಲ
ಗಳಿಗೆ ಹನ್ನೆರಡು ಕಲ್ಲಿನ ಕಂಬಗಳನ್ನು ಸ್ಥಾಪನೆ
ಮಾಡಿಸಿ ಇಸ್ರಾಯೇಲ್ಯರ ಯೌವನಸ್ಥರಿಗೆ—ನೀವು 5
ಯೆಹೋವನಿಗೋಸ್ಕರ ಸರ್ವಾಂಗಹೋಮಗಳನ್ನು
ಮಾಡಿ ಸಮಾಧಾನಯಜ್ಞಕ್ಕಾಗಿ ಹೋರಿಗಳನ್ನು
ಸಮರ್ಪಿಸಬೇಕೆಂದು ಅಪ್ಪಣೆಕೊಟ್ಟನು. ಆಗ 6
ಮೋಶೆ ಆ ರಕ್ತದಲ್ಲಿ ಅರ್ಧವನ್ನು ತೆಗೆದುಕೊಂಡು
ಬಟ್ಟಲುಗಳಲ್ಲಿ ತುಂಬಿ ಅರ್ಧವನ್ನು ಯಜ್ಞವೇದಿಯ

1) ಕಡಜೀರಿಗೆ

7 ಮೇಲೆ ಪ್ರೋಕ್ಷಿಸಿದನು. ತರುವಾಯ ನಿಬಂಧನ
ಗ್ರಂಥವನ್ನು ತೆಗೆದುಕೊಂಡು ಜನರಿಗೆ ಕೇಳಿಸು
ವಂತೆ ಓದಿದನು. ಅವರು ಕೇಳಿ—ಯೆಹೋವನ
ಆಜ್ಞೆಗಳನ್ನೆಲ್ಲಾ ನಾವು ಅನುಸರಿಸಿ ವಿಧೇಯ
8 ರಾಗಿರುವೆವು ಅಂದರು. ಆಗ ಮೋಶೆ ಆ ರಕ್ತ
ವನ್ನು ತೆಗೆದುಕೊಂಡು ಜನರ ಮೇಲೆ ಚಿಮಿಕಿಸಿ—
ಇಗೋ, ಈ ಗ್ರಂಥದಲ್ಲಿ ಹೇಳಿರುವ ಎಲ್ಲಾ ಆಜ್ಞೆಗಳ
ಪ್ರಕಾರ ಯೆಹೋವನು ನಿಮ್ಮ ಸಂಗಡ ಮಾಡಿಕೊಂಡ
ಒಡಂಬಡಿಕೆಯನ್ನು ಸ್ಥಿರಪಡಿಸುವ ರಕ್ತವು ಇದೇ
ಅಂದನು.
9 ಮೋಶೆ ಆರೋನ್ ನಾದಾಬ್ ಅಬೀಹೂ ಎಂಬ
ವರೂ ಇಸ್ರಾಯೇಲ್ಯರ ಹಿರಿಯರಲ್ಲಿ ಎಪ್ಪತ್ತು
10 ಮಂದಿಯೂ ಬೆಟ್ಟವನ್ನು ಹತ್ತಿದರು; ಅವರಿಗೆ ಇಸ್ರಾ
ಯೇಲ್ಯರ ದೇವರ ದರ್ಶನವಾಯಿತು. ಆಕಾಶಮಂಡ
ಲದಂತೆ ಅತಿನಿರ್ಮಲವಾದ ಇಂದ್ರನೀಲಮಣಿಯ
11 ನೆಲಗಟ್ಟು ಆತನ ಪಾದಪೀಠವಾಗಿತ್ತು. ಆತನು
ಇಸ್ರಾಯೇಲ್ಯರ ಆ ಮುಖಂಡರಿಗೆ ಯಾವ ಕೇಡೂ
ಮಾಡಲಿಲ್ಲ; ಅವರು ದೇವರ ದರ್ಶನಮಾಡಿ ಅನ್ನ
ಪಾನಗಳನ್ನು ತೆಗೆದುಕೊಂಡರು.

### ಶಿಲಾಶಾಸನಗಳನ್ನು ಹೊಂದುವದಕ್ಕೆ ಮೋಶೆ ಸೀನಾಯಿ ಬೆಟ್ಟವನ್ನು ಹತ್ತಿದ್ದು; ಯೆಹೋವನ ತೇಜಸ್ಸು ಜನರಿಗೆ ಕಾಣಿಸಿದ್ದು.

12 ಯೆಹೋವನು ಮೋಶೆಗೆ—ನೀನು ಬೆಟ್ಟವನ್ನು ಹತ್ತಿ
ಬಂದು ನನ್ನ ಹತ್ತಿರದಲ್ಲೇ ಇರು; ನೀನು ಆ ಧರ್ಮ
ಶಾಸ್ತ್ರವನ್ನೂ ಆಜ್ಞೆಗಳನ್ನೂ ಜನರಿಗೆ ಬೋಧಿಸುವಂತೆ
ನಾನು ಅವುಗಳನ್ನು ಬರೆದಿರುವ ಶಿಲಾಶಾಸನಗಳನ್ನು
13 ನಿನಗೆ ಕೊಡುತ್ತೇನೆ ಎಂದು ಹೇಳಲಾಗಿ ಮೋಶೆ ತನ್ನ
ಶಿಷ್ಯನಾದ ಯೆಹೋಶುವನ ಸಮೇತ ಎದ್ದು ದೇವರ
14 ಬೆಟ್ಟದ ಮೇಲಕ್ಕೆ ಹೋದನು. ಮೊದಲು ಅವನು
ಹಿರಿಯರಿಗೆ—ನಾವು ತಿರಿಗಿ ನಿಮ್ಮ ಬಳಿಗೆ ಬರುವ
ತನಕ ನೀವು ಇಲ್ಲೇ ಕಾದುಕೊಂಡಿರ್ರಿ; ಆರೋನನೂ
ಹೂರನೂ ನಿಮ್ಮ ಬಳಿಯಲ್ಲಿದ್ದಾರಷ್ಟೆ; ಯಾವನಿಗಾ
ದರೂ ವ್ಯಾಜ್ಯವಿದ್ದ ಪಕ್ಷಕ್ಕೆ ಅವರ ಹತ್ತರಕ್ಕೆ ಹೋಗಲಿ
ಎಂದು ಹೇಳಿದನು.
15 ಮೋಶೆ ಬೆಟ್ಟವನ್ನು ಹತ್ತಿದಾಗ ಮೇಘವು ಅದನ್ನು
16 ಮುಚ್ಚಿಕೊಂಡಿತು. ಯೆಹೋವನ ತೇಜಸ್ಸು ಸೀನಾ
ಯಿಬೆಟ್ಟದ ಮೇಲೆ ನಿಂತಿತು, ಮತ್ತು ಆ ಮೇಘವು
ಆರು ದಿನಗಳ ವರೆಗೂ ಬೆಟ್ಟವನ್ನು ಮುಚ್ಚಿಕೊಂಡಿತ್ತು.
ಏಳನೆಯ ದಿನದಲ್ಲಿ ಯೆಹೋವನು ಮೇಘದೊಳಗಿಂದ
17 ಕೂಗಿ ಮೋಶೆಯನ್ನು ಕರೆದನು. ಯೆಹೋವನ
ತೇಜಸ್ಸು ಬೆಟ್ಟದ ಶಿಖರದ ಮೇಲೆ ಪ್ರಜ್ವಲಿಸುವ
ಬೆಂಕಿಯೋಪಾದಿಯಲ್ಲಿ ಇಸ್ರಾಯೇಲ್ಯರಿಗೆ ಕಾಣಿಸಿತು.
18 ಮೋಶೆ ಆ ಮೇಘದೊಳಗೆ ಪ್ರವೇಶಿಸಿ ಬೆಟ್ಟವನ್ನೇರಿ
ದನು. ಅವನು ಆ ಬೆಟ್ಟದಲ್ಲಿ ಹಗಲಿರುಳು ನಾಲ್ವತ್ತು
ದಿವಸ ಇದ್ದನು.

## ದೇವದರ್ಶನದ ಗುಡಾರವೂ ಅದರ ಯಾಜಕರೂ.

## 25. 1—31. 18.

### ಗುಡಾರವನ್ನೂ ಅದರೊಳಗಣ ಸಾಮಾನುಗಳನ್ನೂ ಮಾಡಬೇಕಾದ ಕ್ರಮ.

ಯೆಹೋವನು ಮೋಶೆಗೆ ಹೇಳಿದ್ದೇನಂದರೆ— 2
ಇಸ್ರಾಯೇಲ್ಯರು ನನಗೋಸ್ಕರ ಕಾಣಿಕೆಯ 2
ನ್ನು ಮೀಸಲಿಡಬೇಕೆಂದು ಅವರಿಗೆ ಹೇಳು. ಮನಃಪೂ
ರ್ವಕವಾಗಿ ಕೊಡುವವರಿಂದಲೇ ಆ ಕಾಣಿಕೆಯನ್ನು ತೆಗೆ
ದುಕೊಳ್ಳಬೇಕು. ನೀನು ಅವರಿಂದ ತೆಗೆದುಕೊಳ್ಳ
ಬೇಕಾದ ಕಾಣಿಕೆಗಳು ಯಾವವಂದರೆ—ಚಿನ್ನ ಬೆಳ್ಳಿ
ತಾಮ್ರ ಎಂಬ ಲೋಹಗಳೂ ನೀಲಿ ಧೂಮ್ರ ರಕ್ತ
ವರ್ಣಗಳುಳ್ಳ ದಾರಗಳೂ ನಾರುಬಟ್ಟೆಗಳೂ ಆಡು
ಕೂದಲಿನ ಬಟ್ಟೆಗಳೂ ಹದಮಾಡಿರುವ ಕೆಂಪುಬಣ್ಣದ
ಕುರಿದೊಗಲುಗಳೂ ಕಡಲುಹಂದಿಯ ತೊಗಲು
ಗಳೂ ಜಾಲೀಮರನೂ ದೀಪಕ್ಕೆ ಬೇಕಾದ ಎಣ್ಣೆ
ಯೂ ಅಭಿಷೇಕತೈಲಕ್ಕೆ ಮತ್ತು ಪರಿಮಳಧೂಪಕ್ಕೆ
ಬೇಕಾದ ಸುವಾಸನಾದ್ರವ್ಯಗಳೂ ಮಹಾಯಾಜಕನ
ಕವಚಕ್ಕೆ ಬೇಕಾಗಿರುವ ಗೋಮೇಧಕರತ್ನಗಳು
ಪದಕದ ಚೀಲದಲ್ಲಿ ಕೆತ್ತಬೇಕಾದ ನಾನಾ ರತ್ನಗಳು
ಇವೇ.
ನಾನು ಅವರ ಮಧ್ಯದಲ್ಲಿ ವಾಸಿಸುವದಕ್ಕೆ ನನಗೆ
ಒಂದು ದೇವಸ್ಥಾನವನ್ನು ಕಟ್ಟಿಸಬೇಕು. ನಾನು
ನಿನಗೆ ತೋರಿಸುವ ಮಾದರಿಯ ಪ್ರಕಾರವೇ ಗುಡಾ
ರವನ್ನೂ ಅದರಲ್ಲಿರುವ ಎಲ್ಲಾ ಸಾಮಾನುಗಳನ್ನೂ
ಮಾಡಿಸಬೇಕು.
ನೀನು ಜಾಲೀಮರದಿಂದ ಒಂದು 1)ಮಂಜೂಷ
ವನ್ನು ಮಾಡಿಸಬೇಕು. ಅದು ಎರಡುವರೆ ಮೊಳ
ಉದ್ದವೂ ಒಂದುವರೆ ಮೊಳ ಅಗಲವೂ ಒಂದುವರೆ
ಮೊಳ ಎತ್ತರವೂ ಆಗಿರಬೇಕು. ಚೊಕ್ಕಬಂಗಾರದ
ತಗಡುಗಳನ್ನು ಅದರ ಹೊರಗಡೆಯೂ ಒಳಗಡೆಯೂ
ಹೊದಿಸಬೇಕು. ಅದರ ಮೇಲೆ ಸುತ್ತಲೂ ಚಿನ್ನದ
ಗೋಟು ಕಟ್ಟಿಸಬೇಕು. ನಾಲ್ಕು ಬಂಗಾರದ ಬಳೆ
ಗಳನ್ನು ಎರಕಹೊಯಿಸಿ ಅದರ ನಾಲ್ಕು ಮೂಲೆಗ
ಳಲ್ಲಿ ಅಂದರೆ ಒಂದೊಂದು ಕಡೆಯಲ್ಲಿ ಎರಡೆರಡು
ಬಳೆಗಳನ್ನು ಇಡಬೇಕು. ಆ ಮಂಜೂಷವನ್ನು
ಹೊರುವದಕ್ಕಾಗಿ ನೀನು ಜಾಲೀಮರದ ಕೋಲು
ಗಳನ್ನು ಮಾಡಿಸಿ ಅವುಗಳಿಗೆ ಚಿನ್ನದ ತಗಡುಗಳನ್ನು
ಹೊದಿಸಿ ಮಂಜೂಷದ ಎರಡು ಕಡೆಗಳಲ್ಲಿರುವ ಬಳೆ
ಗಳಲ್ಲಿ ಸೇರಿಸಬೇಕು. ಆ ಕೋಲುಗಳನ್ನು ಮಂಜೂ
ಷದ ಬಳೆಗಳಿಂದ ತೆಗೆಯದೆ ಅವುಗಳಲ್ಲಿಯೇ ಇಟ್ಟಿರ
ಬೇಕು. ಆ ಮಂಜೂಷದಲ್ಲಿ ನಾನು ನಿನಗೆ ಕೊಡುವ
ಆಜ್ಞಾಶಾಸನವನ್ನು ಇಡಬೇಕು.
ಅದಲ್ಲದೆ ಚೊಕ್ಕಬಂಗಾರದ ಕೃಪಾಸನವನ್ನು
ಮಾಡಿಸಬೇಕು. ಅದು ಎರಡುವರೆ ಮೊಳ ಉದ್ದವೂ
ಒಂದುವರೆ ಮೊಳ ಅಗಲವೂ ಆಗಿರಬೇಕು. ಕೃಪಾ
ಸನದ ಎರಡು ಕೊನೆಗಳಲ್ಲಿ ಕೆರೂಬಿಯರ ಎರಡು

1) ಅಂದರೆ ಪೆಟ್ಟಿಗೆ.

ಬಂಗಾರದ ಆಕಾರಗಳನ್ನು ನಕಾಸಿಕೆಲಸದಿಂದ ಮಾಡಿಸಬೇಕು. ಕೃಪಾಸನದ ಒಂದೊಂದು ಕೊನೆಯಲ್ಲಿ ಒಂದೊಂದು ಕೆರೂಬಿಯನ್ನು ಮಾಡಿಸಿ ಕೃಪಾಸನಕ್ಕೆ ಜೋಡಿಸಬೇಕು. ಆ ಕೆರೂಬಿಗಳು ಮೇಲಕ್ಕೆ ರೆಕ್ಕೆಗಳನ್ನು ಚಾಚಿರುವಂತೆಯೂ ಕೃಪಾಸನವನ್ನು ತಮ್ಮ ರೆಕ್ಕೆಗಳಿಂದ ಮುಚ್ಚುವಂತೆಯೂ ಇರಬೇಕು. ಅವುಗಳ ಮುಖಗಳು ಎದುರುಬದುರಾಗಿ ಕೃಪಾಸನವನ್ನು ನೋಡುತ್ತಿರಬೇಕು. ಆ ಕೃಪಾಸನವನ್ನು ಮಂಜೂಷದ ಮೇಲಿಡಬೇಕು. ನಾನು ನಿನಗೆ ಕೊಡುವ ಆಜ್ಞಾಶಾಸನಗಳನ್ನು ಆ ಮಂಜೂಷದೊಳಗೆ ಇಡಬೇಕು. ಅಲ್ಲಿಯೇ ನಾನು ನಿನಗೆ ದರ್ಶನವನ್ನು ಕೊಡುವೆನು; ಕೃಪಾಸನದ ಮೇಲೆ ಆಜ್ಞಾಶಾಸನಗಳನ್ನು ಇಟ್ಟಿರುವ ಮಂಜೂಷದ ಮೇಲಣ ಎರಡು ಕೆರೂಬಿಗಳ ನಡುವೆಯೇ ನಾನು ಇದ್ದು ನಿನ್ನ ಸಂಗಡ ಮಾತಾಡಿ ನೀನು ಇಸ್ರಾಯೇಲ್ಯರಿಗೆ ಆಜ್ಞಾಪಿಸಬೇಕಾಗಿರುವ ಎಲ್ಲಾ ಸಂಗತಿಗಳನ್ನು ತಿಳಿಸುವೆನು.

ನೀನು ಜಾಲೀಮರದಿಂದ ಮೇಜನ್ನು ಮಾಡಿಸಬೇಕು. ಅದು ಎರಡು ಮೊಳ ಉದ್ದವಾಗಿಯೂ ಒಂದು ಮೊಳ ಅಗಲವಾಗಿಯೂ ಒಂದುವರೆ ಮೊಳ ಎತ್ತರವಾಗಿಯೂ ಇರಬೇಕು. ಅದಕ್ಕೆ ಚೊಕ್ಕಬಂಗಾರದ ತಗಡುಗಳನ್ನು ಹೊದಿಸಿ ಸುತ್ತಲೂ ಚಿನ್ನದ ಗೋಟು ಕಟ್ಟಿಸಬೇಕು. ಮೇಜಿನ ಸುತ್ತಲೂ ಅಂಗೈ ಅಗಲದ ಅಡ್ಡಪಟ್ಟಿಯನ್ನು ಮಾಡಿಸಿ ಅದಕ್ಕೂ ಚಿನ್ನದ ಗೋಟು ಕಟ್ಟಿಸಬೇಕು. ನಾಲ್ಕು ಚಿನ್ನದ ಬಳೆಗಳನ್ನು ಮಾಡಿಸಿ ಮೇಜಿನ ನಾಲ್ಕು ಕಾಲುಗಳಲ್ಲಿ ಹಚ್ಚಬೇಕು. ಆ ಬಳೆಗಳು ಅಡ್ಡಪಟ್ಟಿಗೆ ಹತ್ತಿಕೊಂಡಿರಬೇಕು. ಮೇಜನ್ನು ಎತ್ತುವದಕ್ಕಾಗಿ ಕೋಲುಗಳನ್ನು ಅವುಗಳಲ್ಲಿ ಸೇರಿಸಬೇಕು. ಆ ಕೋಲುಗಳನ್ನು ಜಾಲೀಮರದಿಂದ ಮಾಡಿಸಿ ಅವುಗಳಿಗೆ ಚಿನ್ನದ ತಗಡುಗಳನ್ನು ಹೊದಿಸಬೇಕು. ಇವುಗಳಿಂದಲೇ ಮೇಜನ್ನು ಎತ್ತಬೇಕು. ಮೇಜಿನ ಮೇಲಿಡಬೇಕಾದ ಹರಿವಾಣಗಳನ್ನೂ ಧೂಪಾರತಿಗಳನ್ನೂ ಹೂಜೆಗಳನ್ನೂ ಪಾನದ್ರವ್ಯವನ್ನರ್ಪಿಸುವದಕ್ಕೆ ಬೇಕಾದ ಬಟ್ಟಲುಗಳನ್ನೂ ಚೊಕ್ಕಬಂಗಾರದಿಂದಲೇ ಮಾಡಿಸಬೇಕು. ನೈವೇದ್ಯವಾದ ರೊಟ್ಟಿಗಳು ಯಾವಾಗಲೂ ಆ ಮೇಜಿನ ಮೇಲೆ ನನ್ನ ಸಮ್ಮುಖದಲ್ಲಿಯೇ ಇಟ್ಟಿರಬೇಕು.

ಮತ್ತು ಚೊಕ್ಕಬಂಗಾರದ ದೀಪಸ್ತಂಭವನ್ನು ಮಾಡಿಸಬೇಕು. ಅದರ ಬುಡವನ್ನೂ ಕಂಬವನ್ನೂ ನಕಾಸಿಕೆಲಸದಿಂದ ಮಾಡಿಸಬೇಕು. ಆ ದೀಪಸ್ತಂಭವೆಲ್ಲಾ ಅಖಂಡವಾಗಿ ಪುಷ್ಪಪಾತ್ರೆಗಳಂತೆಯೂ ಪುಷ್ಪಗಳಂತೆಯೂ ಅಲಂಕಾರವಾಗಿ ಕೆತ್ತಿರಬೇಕು. ಕಂಬದ ಒಂದೊಂದು ಪಾರ್ಶ್ವದಲ್ಲಿ ಮೂರು ಮೂರು ಕೊಂಬೆಗಳು ಅಂತೂ ಆರು ಕೊಂಬೆಗಳು ಇರಬೇಕು. ಪ್ರತಿಯೊಂದು ಕೊಂಬೆಯಲ್ಲಿ ಬಾದಾಮಿ ಹೂವುಗಳಂತಿರುವ ಮೂರು ಮೂರು ಪುಷ್ಪಾಲಂಕಾರಗಳಿರಬೇಕು; ಒಂದೊಂದು ಅಲಂಕಾರಕ್ಕೆ ಒಂದು ಪುಷ್ಪಪಾತ್ರೆಯೂ
ಒಂದು ಪುಷ್ಪವೂ ಇರಬೇಕು; ಆರು ಕೊಂಬೆಗಳನ್ನೂ
ಹಾಗೇ ಮಾಡಿಸಬೇಕು. ದೀಪಸ್ತಂಭದ ಕಡ್ಡಿಯಲ್ಲಿ 34
ಪುಷ್ಪಪಾತ್ರೆಗಳೂ ಪುಷ್ಪಗಳೂ ಇರುವ ಬಾದಾಮಿ
ಹೂವುಗಳಂತೆ ನಾಲ್ಕು ಪುಷ್ಪಾಲಂಕಾರಗಳು ಇರ
ಬೇಕು. ಎರಡೆರಡು ಕೊಂಬೆಗಳು ಕವಲು ಒಡೆ 35
ದಿರುವ ಸ್ಥಳಗಳಲ್ಲೆಲ್ಲಾ ಒಂದೊಂದು ಪುಷ್ಪಪಾತ್ರೆಯಿರ
ಬೇಕು. ಪುಷ್ಪಪಾತ್ರೆಗಳೂ ಕೊಂಬೆಗಳೂ ಸಹಿತ 36
ವಾದ ದೀಪಸ್ತಂಭವನ್ನೆಲ್ಲಾ ಒಟ್ಟಿಗೆ ಚೊಕ್ಕಬಂಗಾರ
ದಿಂದ ನಕಾಸಿಕೆಲಸದಿಂದ ಮಾಡಿಸಬೇಕು. ಅದಕ್ಕೆ 37
ಏಳು ಹಣತೆಗಳನ್ನು ಮಾಡಿಸಬೇಕು; ಆ ಹಣತೆ
ಗಳಲ್ಲಿ ದೀಪಹಚ್ಚಲು ಎದುರಾಗಿ ಬೆಳಕು ಉಂಟಾಗು
ವದು. ಅದರ ಕತ್ತರಿಗಳನ್ನೂ ದೀಪದ ಕುಡಿತೆಗೆ 38
ಯುವ ಬಟ್ಟಲುಗಳನ್ನೂ ಚೊಕ್ಕಬಂಗಾರದಿಂದ ಮಾ
ಡಿಸಬೇಕು. ದೀಪಸ್ತಂಭವೂ ಅದರ ಎಲ್ಲಾ ಉಪ 39
ಕರಣಗಳೂ 1)ಒಂದು ತಲಾಂತು ಚೊಕ್ಕಬಂಗಾರ
ವಾಗಿರಬೇಕು. ಬೆಟ್ಟದಲ್ಲಿ ನಾನು ನಿನಗೆ ತೋರಿ 40
ಸಿದ ಮಾದರಿಯ ಪ್ರಕಾರವೇ ಎಲ್ಲವನ್ನು ಮಾಡಿಸ
ಬೇಕು, ನೋಡು.

**26**
[ನನ್ನ ನಿವಾಸಕ್ಕಾಗಿ] ಒಂದು ಗುಡಾರವನ್ನು
ಹತ್ತು ತಾನು ಬಟ್ಟೆಗಳಿಂದ ಮಾಡಿಸಬೇಕು. ಅವು
ಹೊಸೆದ ನಾರಿನ ಬಟ್ಟೆಗಳಾಗಿರಬೇಕು. ಅವುಗಳಲ್ಲಿ
ನೀಲಿ ಧೂಮ್ರ ರಕ್ತವರ್ಣಗಳ ದಾರದಿಂದ ಕೆರೂಬಿ
ಗಳನ್ನೂ ಚಮತ್ಕಾರವಾಗಿ ಕಸೂತಿಹಾಕಿಸಬೇಕು.
ಪ್ರತಿಯೊಂದು ಬಟ್ಟೆಯು ಇಪ್ಪತ್ತೆಂಟು ಮೊಳ ಉದ್ದ 2
ವಾಗಿಯೂ ನಾಲ್ಕು ಮೊಳ ಅಗಲವಾಗಿಯೂ ಇರ
ಬೇಕು; ಎಲ್ಲಾ ಬಟ್ಟೆಗಳು ಒಂದೇ ಅಳತೆಯಾಗಿರ
ಬೇಕು. ಐದೈದು ಬಟ್ಟೆಗಳನ್ನು ಒಂದೊಂದಾಗಿ 3
ಜೋಡಿಸಬೇಕು; ಈ ಎರಡು ಜೋಡನೆಗಳಲ್ಲಿ 4
ಒಂದೊಂದರ ಕೊನೇ ಬಟ್ಟೆಯ ಅಂಚಿನಲ್ಲಿ ನೀಲಿ
ದಾರದಿಂದ ಕುಣಿಕೆಗಳನ್ನು ಮಾಡಿಸಬೇಕು; ಆ 5
ಕುಣಿಕೆಗಳು ಐವತ್ತೈವತ್ತರ ಮೇರೆಗೆ ಒಂದಕ್ಕೊಂದು
ಎದುರಾಗಿರಬೇಕು. ಅದಲ್ಲದೆ ಐವತ್ತು ಚಿನ್ನದ 6
ಕೊಂಡಿಗಳನ್ನು ಮಾಡಿಸಿ ಆ ಬಟ್ಟೆಗಳನ್ನು ಒಂದ
ಕ್ಕೊಂದು ಕೂಡಿಸಬೇಕು; ಹೀಗೆ ಒಂದೇ ಗುಡಾರ
ವಾಗುವದು.

ಈ ಗುಡಾರದ ಮೇಲೆ ಹೊದಿಸುವದಕ್ಕಾಗಿ ಆಡು 7
ಕೂದಲಿನ ಹನ್ನೊಂದು ತಾನು ಬಟ್ಟೆಗಳನ್ನು ಮಾಡಿಸ
ಬೇಕು. ಒಂದೊಂದು ಬಟ್ಟೆಯು ಮೂವತ್ತು ಮೊಳ 8
ಉದ್ದವಾಗಿಯೂ ನಾಲ್ಕು ಮೊಳ ಅಗಲವಾಗಿಯೂ
ಇರಬೇಕು; ಎಲ್ಲಾ ಬಟ್ಟೆಗಳೂ ಒಂದೇ ಅಳತೆಯಾ
ಗಿರಬೇಕು. ಐದು ಬಟ್ಟೆಗಳನ್ನು ಒಂದಾಗಿ ಜೋಡಿಸಿ 9
ಮಿಕ್ಕ ಆರು ಬಟ್ಟೆಗಳನ್ನೂ ಒಂದಾಗಿ ಜೋಡಿಸಿ
ಆರನೆಯ ಬಟ್ಟೆಯನ್ನು ಡೇರೆಯ ಮುಂಭಾಗದಲ್ಲಿ
ಮಡಿಸಿ ತೂಗಾಡುವಂತೆ ಬಿಡಬೇಕು. ಒಂದೊಂದರ 10
ಕೊನೆಯ ಬಟ್ಟೆಯ ಅಂಚಿನಲ್ಲಿ ಐವತ್ತೈವತ್ತು ಕುಣಿಕೆ
ಗಳನ್ನು ಮಾಡಿಸಬೇಕು. ತಾಮ್ರದ ಐವತ್ತು 11
ಕೊಂಡಿಗಳನ್ನು ಮಾಡಿಸಿ ಒಂದೇ ಡೇರೆಯಾಗುವಂತೆ
ಆ ಕೊಂಡಿಗಳನ್ನು ಕುಣಿಕೆಗಳಲ್ಲಿ ಸಿಕ್ಕಿಸಿ ಸಮಸ್ತ

1) ಅಂದರೆ ಮೂರು ಸಾವಿರ ತೊಲೆ.

12 ವನ್ನು ಕೂಡಿಸಬೇಕು. ಹೊದಿಕೆಯ ಬಟ್ಟೆಗಳಲ್ಲಿ
ಅರ್ಧ ಬಟ್ಟೆ ಹೆಚ್ಚಾಗಿರುವದಷ್ಟೆ; ಆ ಹೆಚ್ಚಿನ ಭಾಗವು
ಗುಡಾರದ ಹಿಂಭಾಗದಲ್ಲಿ ಮುಚಿಸಿ ತೂಗಾಡುವಂತೆ
13 ಬಿಡಬೇಕು. ಹೊದಿಕೆಯ ಬಟ್ಟೆಗಳ ಉದ್ದದಲ್ಲಿ ಈ
ಕಡೆ ಒಂದು ಮೊಳವೂ ಆ ಕಡೆ ಒಂದು ಮೊಳವೂ
ಹೆಚ್ಚಾಗಿರುವದಷ್ಟೆ; ಅದು ಒಳಗಣ ಗುಡಾರವನ್ನು
ಮುಚ್ಚುವಂತೆ ಈ ಕಡೆಯೂ ಆ ಕಡೆಯೂ ಇರಲಿ;
14 ಈ ಹೊದಿಕೆಗೆ ಹೊದಿಸುವದಕ್ಕಾಗಿ ಹದಮಾಡಿರುವ
ಕೆಂಪುಬಣ್ಣದ ಕುರಿದೊಗಲುಗಳಿಂದ ಒಂದು ಮೇ
ಲ್ಹೊದಿಕೆಯನ್ನೂ ಕಡಲುಹಂದಿಯ ತೊಗಲುಗಳಿಂದ
ಮತ್ತೊಂದು ಮೇಲ್ಹೊದಿಕೆಯನ್ನೂ ಮಾಡಿಸಬೇಕು.
15 ಗುಡಾರಕ್ಕೆ ಬೇಕಾದ ಚೌಕಟ್ಟುಗಳನ್ನು ಜಾಲೀ
16 ಮರದಿಂದ ಮಾಡಿಸಬೇಕು. ಪ್ರತಿಯೊಂದು ಚೌಕ
ಟ್ಟೂ ಹತ್ತು ಮೊಳ ಉದ್ದವಾಗಿಯೂ ಒಂದುವರೆ
17 ಮೊಳ ಅಗಲವಾಗಿಯೂ ಇರಬೇಕು. ಪ್ರತಿಯೊಂದು
ಚೌಕಟ್ಟೂ ಅಡ್ಡಪಟ್ಟಿಗಳಿಂದ ಜೋಡಿಸಲ್ಪಟ್ಟ ಎರಡು
ನಿಲುವು ಪಟ್ಟಿಗಳುಳ್ಳದ್ದಾಗಿರಬೇಕು. ಗುಡಾರದ
ಎಲ್ಲಾ ಚೌಕಟ್ಟುಗಳನ್ನೂ ಹಾಗೆ ಮಾಡಿಸಬೇಕು.
18 ಗುಡಾರದ ದಕ್ಷಿಣದಿಕ್ಕಿನಲ್ಲಿ ಇಪ್ಪತ್ತು ಚೌಕಟ್ಟುಗ
19 ಳನ್ನು ನಿಲ್ಲಿಸಬೇಕು. ನಾಲ್ವತ್ತು ಬೆಳ್ಳಿಯ ಗದ್ದಿಗೇ
ಕಲ್ಲುಗಳನ್ನು ಮಾಡಿಸಿ ಆ ಇಪ್ಪತ್ತು ಚೌಕಟ್ಟುಗಳ
ಕೆಳಗೆ ಇಡಬೇಕು. ಒಂದೊಂದು ಚೌಕಟ್ಟಿನಲ್ಲಿರುವ
ಎರಡು ಪಟ್ಟಿಗಳಿಗೆ ಒಂದೊಂದು ಗದ್ದಿಗೇಕಲ್ಲು
20 ಇರಬೇಕು. ಹಾಗೆಯೇ ಗುಡಾರದ ಉತ್ತರದಿಕ್ಕಿ
21 ನಲ್ಲಿಯೂ ಇಪ್ಪತ್ತು ಚೌಕಟ್ಟುಗಳೂ ಮತ್ತು ಪ್ರತಿ
ಯೊಂದು ಚೌಕಟ್ಟಿಗೆ ಎರಡೆರಡು ಗದ್ದಿಗೇಕಲ್ಲುಗಳೂ
22 ಇರಬೇಕು. ಗುಡಾರದ ಹಿಂಭಾಗಕ್ಕೆ ಅಂದರೆ
ಪಶ್ಚಿಮದಿಕ್ಕಿನಲ್ಲಿ ಆರು ಚೌಕಟ್ಟುಗಳನ್ನು ಮಾಡಿಸ
23 ಬೇಕು. ಗುಡಾರದ ಹಿಂಭಾಗದ ಎರಡು ಮೂಲೆ
ಗಳಿಗೆ ಬೇರೆ ಎರಡು ಚೌಕಟ್ಟುಗಳನ್ನು ಮಾಡಿಸ
24 ಬೇಕು. ಅವು ಬುಡದಿಂದ ತುದಿಯ ವರೆಗೂ
ಅಂದರೆ ಮೊದಲನೆಯ ಬಳೆಯ ತನಕ ಜೋಡಿಸಿರ
ಬೇಕು. ಹಾಗೆ ಎರಡು ಮೂಲೆಗಳಿಗೂ ಮಾಡಿಸ
25 ಬೇಕು. ಹೀಗೆ ಹಿಂಭಾಗದಲ್ಲಿ ಎಂಟು ಚೌಕಟ್ಟು
ಗಳೂ ಮತ್ತು ಪ್ರತಿಯೊಂದು ಚೌಕಟ್ಟಿಗೆ ಎರಡೆರಡು
ಬೆಳ್ಳಿಯ ಗದ್ದಿಗೇಕಲ್ಲುಗಳೂ ಅಂತೂ ಹದಿನಾರು
26 ಗದ್ದಿಗೇಕಲ್ಲುಗಳೂ ಇರುವವು. ಜಾಲೀಮರದಿಂದ
ಅಗುಳಿಗಳನ್ನು ಮಾಡಿಸಬೇಕು. ಗುಡಾರದ ಎರಡು
27 ಕಡೆಗಳ ಚೌಕಟ್ಟುಗಳಿಗೂ ಅದರ ಹಿಂದುಗಡೆಯ
ಅಂದರೆ ಪಶ್ಚಿಮ ಕಡೆಯ ಚೌಕಟ್ಟುಗಳಿಗೂ ಐದೈದು
28 ಅಗುಳಿಗಳನ್ನು ಮಾಡಿಸಬೇಕು. ಚೌಕಟ್ಟುಗಳ ನಟ್ಟ
ನಡುವೆಯಲ್ಲಿರುವ ಅಗುಳಿಯು ಒಂದು ಕೊನೆ
ಯಿಂದ ಮತ್ತೊಂದು ಕೊನೆಯ ವರೆಗೂ ಮುಟ್ಟ
29 ಬೇಕು. ಆ ಚೌಕಟ್ಟುಗಳಿಗೆ ಚಿನ್ನದ ತಗಡುಗಳನ್ನು
ಹೊದಿಸಿ ಅವುಗಳಲ್ಲಿ ಆ ಅಗುಳಿಗಳಿಗಾಗಿ ಚಿನ್ನದ
ಬಳೆಗಳನ್ನು ಮಾಡಿಸಬೇಕು. ಆ ಅಗುಳಿಗಳನ್ನೂ
30 ಚಿನ್ನದ ತಗಡುಗಳಿಂದ ಹೊದಿಸಬೇಕು. ನಾನು
ಬೆಟ್ಟದಲ್ಲಿ ನಿನಗೆ ತೋರಿಸಿಕೊಟ್ಟ ರೀತಿಯಲ್ಲೇ
ಗುಡಾರವನ್ನು ನಿಲ್ಲಿಸಬೇಕು.
31 ಹುರಿನಾರಿನ ಬಟ್ಟೆಯಲ್ಲಿ ನೀಲಿ ಧೂಮ್ರ ರಕ್ತ
ವರ್ಣಗಳುಳ್ಳ ದಾರದಿಂದ ಕೆರೂಬಿಗಳನ್ನು ಚಮ
ತ್ಕಾರವಾಗಿ ಕಸೂತಿಹಾಕಿ ಒಂದು ತೆರೆಯನ್ನು
ಮಾಡಿಸಬೇಕು. ಜಾಲೀಮರದಿಂದ ನಾಲ್ಕು ಕಂಬ
ಗಳನ್ನು ಮಾಡಿಸಿ ಚಿನ್ನದ ತಗಡುಗಳನ್ನು ಹೊದಿಸಿ
ನಾಲ್ಕು ಬೆಳ್ಳಿಯ ಗದ್ದಿಗೇಕಲ್ಲುಗಳ ಮೇಲೆ ನಿಲ್ಲಿಸಿ
ಚಿನ್ನದ ಕೊಂಡಿಗಳಿಂದ ಆ ತೆರೆಯನ್ನು ಆ ನಾಲ್ಕು
ಕಂಬಗಳಿಗೆ ಸಿಕ್ಕಿಸಬೇಕು.

ಆ ತೆರೆಯನ್ನು ಕೊಂಡಿಗಳಿಗೆ ಸಿಕ್ಕಿಸಿದಾಗ ಅದ
ರೊಳಗೆ ಆಜ್ಞಾಶಾಸನಗಳ ಮಂಜೂಷವನ್ನು ತರಿಸಿಡ
ಬೇಕು. ಆ ತೆರೆಯು ಪವಿತ್ರಸ್ಥಾನವೆಂಬದನ್ನೂ
ಮಹಾಪವಿತ್ರಸ್ಥಾನವೆಂಬದನ್ನೂ ಬೇರೆ ಬೇರೆ ಮಾಡು
ವದು. ಮಹಾಪವಿತ್ರಸ್ಥಾನದಲ್ಲಿ ಆಜ್ಞಾಶಾಸನಗಳ
ಮಂಜೂಷದ ಮೇಲೆ ಕೃಪಾಸನವನ್ನು ತಂದಿಡಬೇಕು.
ತೆರೆಯ ಹೊರಗಡೆಯಲ್ಲಿ ಮೇಜನ್ನೂ ಮೇಜಿನ ಎದು
ರಾಗಿ ಗುಡಾರದ ದಕ್ಷಿಣದಿಕ್ಕಿನಲ್ಲಿ ದೀಪಸ್ತಂಭವನ್ನೂ
ಇಡಬೇಕು; ಮೇಜು ಉತ್ತರ ಕಡೆಯಲ್ಲಿರಬೇಕು.

ಡೇರೆಯ ಬಾಗಲಿಗೆ ಹುರಿನಾರಿನ ಬಟ್ಟೆಯಲ್ಲಿ
ನೀಲಿ ಧೂಮ್ರ ರಕ್ತವರ್ಣಗಳುಳ್ಳ ದಾರದಿಂದ
ವಿಚಿತ್ರವಾಗಿ ಕಸೂತಿಹಾಕಿ ಪರದೆಯನ್ನು ಮಾಡಿಸ
ಬೇಕು. ಆ ಪರದೆ ತೂಗಿಸುವದಕ್ಕಾಗಿ ಜಾಲೀಮರ
ದಿಂದ ಐದು ಕಂಬಗಳನ್ನು ಮಾಡಿಸಿ ಚಿನ್ನದ ತಗಡು
ಗಳನ್ನು ಹೊದಿಸಬೇಕು. ಅವುಗಳ ಕೊಂಡಿಗಳನ್ನು
ಚಿನ್ನದಿಂದ ಮಾಡಿಸಿ ಅವುಗಳಿಗೋಸ್ಕರ ಐದು ತಾಮ್ರದ
ಗದ್ದಿಗೇಕಲ್ಲುಗಳನ್ನು ಎರಕಹೊಯಿಸಬೇಕು.

ಯಜ್ಞವೇದಿಯನ್ನು ಜಾಲೀಮರದಿಂದ ಐದು 2
ಮೊಳ ಉದ್ದವಾಗಿಯೂ ಐದು ಮೊಳ ಅಗಲ
ವಾಗಿಯೂ ಚಚ್ಚೌಕವಾಗಿ ಮಾಡಿಸಬೇಕು; ಅದರ
ಎತ್ತರ ಮೂರು ಮೊಳವಿರಬೇಕು. ಅದರ ನಾಲ್ಕು
ಮೂಲೆಗಳಲ್ಲಿ ನಾಲ್ಕು ಕೊಂಬುಗಳನ್ನು ಮಾಡಿಸ
ಬೇಕು; ಅವು ಯಜ್ಞವೇದಿಗೆ ಏಕವಾಗಿರಬೇಕು.
ಆ ವೇದಿಗೆ ತಾಮ್ರದ ತಗಡುಗಳನ್ನು ಹೊದಿಸಬೇಕು.
ಅದರಲ್ಲಿರುವ ಬೂದಿಯನ್ನು ತೆಗೆಯುವದಕ್ಕಾಗಿ
ಬಟ್ಟಲುಗಳನ್ನು ಮಾಡಿಸಬೇಕು; ಸಲಿಕೆಗಳನ್ನೂ
ಬೋಗುಣಿಗಳನ್ನೂ ಮುಳ್ಳುಗಳನ್ನೂ ಅಗ್ಗಿಷ್ಟಿಗೆ
ಗಳನ್ನೂ ಮಾಡಿಸಬೇಕು. ಆ ಉಪಕರಣಗಳೆಲ್ಲಾ
ತಾಮ್ರದವುಗಳಾಗಿರಬೇಕು. ವೇದಿಗೆ ಹೆಣಿಗೇ ಕೆಲಸ
ದಿಂದ ತಾಮ್ರದ ಜಾಳಿಗೆಯನ್ನು ಮಾಡಿಸಬೇಕು.
ಆ ಜಾಳಿಗೆಯ ನಾಲ್ಕು ಮೂಲೆಗಳಲ್ಲಿ ತಾಮ್ರದ
ಬಳೆಗಳನ್ನು ಹಾಕಿಸಬೇಕು. ಆ ಜಾಳಿಗೆಯು ವೇದಿ
ಯ ಸುತ್ತಲಿರುವ ಕಟ್ಟೆಯ ಕೆಳಗೆ ಇದ್ದು, ವೇದಿಯ
ಬುಡದಿಂದ ನಡುವಿನ ತನಕ ಇರುವಂತೆ ಹಾಕಿಸ
ಬೇಕು. ವೇದಿಯನ್ನು ಹೊರುವ ಕೋಲುಗಳನ್ನು
ಜಾಲೀಮರದಿಂದ ಮಾಡಿಸಿ ತಾಮ್ರದ ತಗಡುಗಳನ್ನು
ಹೊದಿಸಬೇಕು. ಆ ಕೋಲುಗಳನ್ನು ಆ ಬಳೆಗಳಲ್ಲಿ
ಸೇರಿಸಿದಾಗ ಅವು ಯಜ್ಞವೇದಿಯನ್ನು ಹೊರುವದ
ಕ್ಕಾಗಿ ಅದರ ಎರಡು ಕಡೆಗಳಲ್ಲಿ ಇರುವವು. ಆ
ವೇದಿಯನ್ನು ಹಲಿಗೆಗಳಿಂದ ಪೆಟ್ಟಿಗೆಯಂತೆ ಮಾಡಿಸ
ಬೇಕು. ನಾನು ಬೆಟ್ಟದಲ್ಲಿ ನಿನಗೆ ತೋರಿಸಿದಂತೆ
ಯೇ ಅದನ್ನು ಮಾಡಿಸಬೇಕು.

ಗುಡಾರಕ್ಕೆ ಅಂಗಳವನ್ನು ಏರ್ಪಡಿಸಬೇಕು.

ಆ ಅಂಗಳದ ತೆಂಕಣ ಕಡೆಯಲ್ಲಿ ತೆರೆಗಳು ಇರ
ಬೇಕು. ಆ ತೆರೆಗಳು ಹುರಿನಾರಿನ ಬಟ್ಟೆಯಿಂದ
ಉಂಟಾಗಿ ನೂರು ಮೊಳ ಉದ್ದವಾಗಿರಬೇಕು.
ಆ ಕಡೆಯಲ್ಲಿ ಇಪ್ಪತ್ತು ಕಂಬಗಳೂ ಅವುಗಳಿಗೆ
ಇಪ್ಪತ್ತು ತಾಮ್ರದ ಗದ್ದಿಗೇಕಲ್ಲುಗಳೂ ಇರಬೇಕು.
ಕಂಬಗಳಿಗೆ ಬೆಳ್ಳಿಯ ಕೊಂಡಿಗಳೂ ಕಟ್ಟುಗಳೂ
ಇರಬೇಕು. ಅದೇ ರೀತಿಯಾಗಿ ಉತ್ತರ ಕಡೆಯಲ್ಲಿ
ಯೂ ನೂರು ಮೊಳ ಉದ್ದವಾದ ತೆರೆಗಳೂ ಇಪ್ಪತ್ತು
ಕಂಬಗಳೂ ಇಪ್ಪತ್ತು ತಾಮ್ರದ ಗದ್ದಿಗೇಕಲ್ಲುಗಳೂ
ಇರಬೇಕು. ಕಂಬಗಳ ಕೊಂಡಿಗಳೂ ಕಟ್ಟುಗಳೂ
ಬೆಳ್ಳಿಯವಾಗಿರಬೇಕು. ಪಶ್ಚಿಮ ಕಡೆಯಲ್ಲಿ ಅಂಗ
ಳದ ಅಗಲಕ್ಕೆ ಐವತ್ತು ಮೊಳ ಉದ್ದವಾದ ತೆರೆಗಳೂ
ಹತ್ತು ಕಂಬಗಳೂ ಹತ್ತು ಗದ್ದಿಗೇಕಲ್ಲುಗಳೂ
ಇರಬೇಕು. ಪೂರ್ವದಿಕ್ಕಿನಲ್ಲಿಯೂ ಅಂಗಳದ ಅಗ
15 ಲವು ಐವತ್ತು ಮೊಳವಿರಬೇಕು. ಅಲ್ಲಿ ಬಾಗಲಿನ
ಎರಡು ಕಡೆಗಳಲ್ಲಿಯೂ ಹದಿನೈದು ಮೊಳ ಉದ್ದ
ವಾದ ತೆರೆಗಳೂ ಅವುಗಳಿಗೆ ಮೂರು ಮೂರು ಕಂಬ
ಗಳೂ ಮೂರು ಮೂರು ಗದ್ದಿಗೇಕಲ್ಲುಗಳೂ ಇರ
ಬೇಕು. ಅಂಗಳದ ಬಾಗಲಲ್ಲೇ ಇಪ್ಪತ್ತು ಮೊಳದ
ಪರದೆಯು ಇರಬೇಕು. ಅದನ್ನು ಹುರಿನಾರಿನ ಬಟ್ಟೆ
ಯಲ್ಲಿ ನೀಲಿ ಧೂಮ್ರ ರಕ್ತವರ್ಣಗಳುಳ್ಳ ದಾರದಿಂದ
ಬುಟೇದಾರೀ ಕೆಲಸದವರ ಕೈಯಿಂದ ಮಾಡಿಸ
ಬೇಕು. ಬಾಗಲಿಗೆ ನಾಲ್ಕು ಕಂಬಗಳೂ ನಾಲ್ಕು
ಗದ್ದಿಗೇಕಲ್ಲುಗಳೂ ಇರಬೇಕು. ಅಂಗಳದ ಸುತ್ತ
ಲಿರುವ ಎಲ್ಲಾ ಕಂಬಗಳಿಗೂ ಬೆಳ್ಳಿಯ ಕಟ್ಟುಗಳೂ
ಬೆಳ್ಳಿಯ ಕೊಂಡಿಗಳೂ ತಾಮ್ರದ ಗದ್ದಿಗೇಕಲ್ಲು
ಗಳೂ ಇರಬೇಕು. ಅಂಗಳವು ನೂರು ಮೊಳ ಉದ್ದ
ವಾಗಿಯೂ ಐವತ್ತು ಮೊಳ ಅಗಲವಾಗಿಯೂ ಇರ
ಬೇಕು. ಅದರ ಸುತ್ತಲಿರುವ ಪರದೆಯು ಹುರಿನಾ
ರಿನ ಬಟ್ಟೆಯಿಂದುಂಟಾಗಿ ಐದು ಮೊಳ ಎತ್ತರವಿರ
ಬೇಕು. ಅದಕ್ಕೆ ಸೇರಿದ ಗದ್ದಿಗೇಕಲ್ಲುಗಳು ತಾಮ್ರ
ದವುಗಳಾಗಿರಬೇಕು. ಗುಡಾರದ ಸಕಲವಿಧವಾದ
ಕೆಲಸಕ್ಕೆ ಬೇಕಾದ ಉಪಕರಣಗಳೂ ಗುಡಾರದ
ಗೂಟಗಳೂ ಅಂಗಳದ ಗೂಟಗಳೂ ತಾಮ್ರದವು
ಗಳಾಗಿರಬೇಕು.

ದೀಪವು ಯಾವಾಗಲೂ ಉರಿಯುವಂತೆ ಇಸ್ರಾ
ಯೇಲ್ಯರು ಎಣ್ಣೇಮರದ ಕಾಯಿಗಳನ್ನು ಕುಟ್ಟಿ
ನಿರ್ಮಲವಾದ ಎಣ್ಣೆಯನ್ನು ತೆಗೆದುಕೊಡಬೇಕೆಂದು
ಅವರಿಗೆ ಅಪ್ಪಣೆಯನ್ನು ಮಾಡು. ದೇವದರ್ಶನದ
ಗುಡಾರದಲ್ಲಿ ಆಜ್ಞಾಶಾಸನಗಳ ಮಂಜೂಷದ ಮುಂದಿ
ರುವ ತೆರೆಯ ಹೊರಗೆ ಆರೋನನೂ ಅವನ ಮಕ್ಕಳೂ
ಸಾಯಂಕಾಲದಿಂದ ಉದಯದ ವರೆಗೂ ಯೆಹೋ
ವನ ಸನ್ನಿಧಿಯಲ್ಲಿ ಆ ದೀಪವನ್ನು ಸರಿಪಡಿಸುತ್ತಿರ
ಬೇಕು. ಇಸ್ರಾಯೇಲ್ಯರೂ ಅವರ ಸಂತತಿಯವರೂ
ಈ ನಿಯಮವನ್ನು ಶಾಶ್ವತವಾಗಿ ಅನುಸರಿಸಬೇಕು.

ಯಾಜಕರು ಧರಿಸಬೇಕಾದ ದೀಕ್ಷಾವಸ್ತ್ರಗಳ ವಿವರ.

8 ಇದಲ್ಲದೆ ನನಗೆ ಯಾಜಕಸೇವೆಮಾಡುವದಕ್ಕೆ
ನೀನು ನಿನ್ನ ಅಣ್ಣನಾದ ಆರೋನನನ್ನೂ ಅವನ
ಮಕ್ಕಳಾದ ನಾದಾಬ್ ಅಬೀಹೂ ಎಲ್ಲಾಜಾರ್ ಈತಾ
ಮಾರ್ ಎಂಬವರನ್ನೂ ಇಸ್ರಾಯೇಲ್ಯರಲ್ಲಿಂದ ನಿನ್ನ
ಹತ್ತಿರಕ್ಕೆ ಕರಿಸಬೇಕು. ನಿನ್ನ ಅಣ್ಣನಾದ ಆರೋನ 2
ನಿಗೆ ತಕ್ಕ ಗೌರವವೂ ಅಲಂಕಾರವೂ ಉಂಟಾಗುವಂತೆ
ಅವನಿಗೆ ದೀಕ್ಷಾವಸ್ತ್ರಗಳನ್ನು ಮಾಡಿಸಬೇಕು.
ಯಾರಿಗೆ ನಾನು ಜಾಣತನದ ವರವನ್ನು ಪರಿಪೂರ್ತಿ 3
ಯಾಗಿ ಅನುಗ್ರಹಿಸಿದ್ದೇನೋ ಅಂಥ ಜಾಣರೆಲ್ಲರ
ಸಂಗಡ ನೀನು ಮಾತಾಡಿ ಅವರ ಕೈಯಿಂದ ಆ
ವಸ್ತ್ರಗಳನ್ನು ಸಿದ್ಧಪಡಿಸಬೇಕು. ಆರೋನನು ಅವು
ಗಳನ್ನು ಧರಿಸಿಕೊಂಡು ನನ್ನ ಯಾಜಕನಾಗುವದಕ್ಕೆ
ಪ್ರತಿಷ್ಠಿತನಾಗುವನು. ಮಾಡಬೇಕಾದ ವಸ್ತ್ರಗಳು 4
ಯಾವವಂದರೆ—ಪದಕದ ಚೀಲ ಮಹಾಯಾಜಕ
ಕವಚ ಮೇಲಂಗಿ ವಿಚಿತ್ರವಾದ ನಿಲುವಂಗಿ ಮುಂ
ಡಾಸ ನಡುಕಟ್ಟು ಇವುಗಳೇ. ನಿನ್ನ ಅಣ್ಣನಾದ ಆರೋ
ನನೂ ಅವನ ಮಕ್ಕಳೂ ನನ್ನ ಯಾಜಕರಾಗುವದಕ್ಕೆ
ಅವರಿಗೋಸ್ಕರ ಈ ದೀಕ್ಷಾವಸ್ತ್ರಗಳನ್ನು ಮಾಡಿಸ
ಬೇಕು. ಜನರು ಕಾಣಿಕೆಯಾಗಿ ಕೊಡುವ ಚಿನ್ನ 5
ವನ್ನೂ ನೀಲಿ ಧೂಮ್ರ ರಕ್ತವರ್ಣಗಳುಳ್ಳ ದಾರವನ್ನೂ
ನಾರಿನ ಬಟ್ಟೆಯನ್ನೂ ಆ ಕೆಲಸಕ್ಕಾಗಿ ಉಪಯೋಗಿಸ
ಬೇಕು.

ಏಫೋದೆಂಬ ಮಹಾಯಾಜಕಕವಚವನ್ನು ಹುರಿ 6
ನಾರಿನ ಬಟ್ಟೆಯಿಂದ ಮಾಡಿಸಿ ಚಿನ್ನದ ದಾರದಿಂದಲೂ
ನೀಲಿ ಧೂಮ್ರ ರಕ್ತವರ್ಣಗಳುಳ್ಳ ದಾರದಿಂದಲೂ
ಬುಟೇದಾರೀ ಕೆಲಸದವರ ಕೈಯಿಂದ ಅಲಂಕರಿಸ
ಬೇಕು. ಆ ಕವಚಕ್ಕೆ ಹೆಗಲಿನ ಮೇಲೆ ಎರಡು 7
ಪಟ್ಟಿಗಳು ಇರಬೇಕು. ಅದರ ಎರಡು ಕೊನೆಗಳು
ಜೋಡಿಸಲ್ಪಡಬೇಕು. ಕವಚದ ಮೇಲಿರುವ ವಿಚಿತ್ರ 8
ವಾದ ಬುಟೇದಾರಿಯ ನಡುಕಟ್ಟು ಕವಚಕ್ಕೆ ಏಕ
ವಾಗಿದ್ದು ಅದರಂತೆಯೇ ಹುರಿನಾರಿನ ಬಟ್ಟೆಯಿಂದ
ಮಾಡಲ್ಪಟ್ಟು ಚಿನ್ನದ ದಾರದಿಂದಲೂ ನೀಲಿ ಧೂಮ್ರ
ರಕ್ತವರ್ಣಗಳುಳ್ಳ ದಾರದಿಂದಲೂ ಅಲಂಕರಿಸಲ್ಪಡ
ಬೇಕು. ಮತ್ತು ನೀನು ಎರಡು ಗೋಮೇಧಕರತ್ನ 9
ಗಳನ್ನು ತೆಗೆದುಕೊಂಡು ಅವುಗಳಲ್ಲಿ ಇಸ್ರಾಯೇ
ಲ್ಯರ ಕುಲಗಳ ಹೆಸರುಗಳನ್ನು ಕೆತ್ತಿಸಬೇಕು ಒಂದು 10
ರತ್ನದಲ್ಲಿ ಆರು ಹೆಸರುಗಳನ್ನು ಮತ್ತೊಂದು ರತ್ನ
ದಲ್ಲಿ ಮಿಕ್ಕ ಆರು ಹೆಸರುಗಳನ್ನು ಅವರವರ ಜನನ
ಕ್ರಮದ ಮೇರೆಗೆ ಕೆತ್ತಿಸಬೇಕು. ಮುದ್ರಾರತ್ನವನ್ನು 11
ಕೆತ್ತುವ ರೀತಿಯಲ್ಲಿ ಆ ಎರಡು ರತ್ನಗಳಲ್ಲಿ ಇಸ್ರಾ
ಯೇಲ್ಯರ ಕುಲಗಳ ಹೆಸರುಗಳನ್ನು ಕೆತ್ತಿಸಿ ಆ
ರತ್ನಗಳನ್ನು ಕುಂದಣದಲ್ಲಿ ಕಟ್ಟಿಸಬೇಕು. ಆ 12
ಎರಡು ರತ್ನಗಳನ್ನು ಹೆಗಲಿನ ಮೇಲಿರುವ ಕವಚದ
ಪಟ್ಟಿಗಳಲ್ಲಿ ಬಿಗಿಸಬೇಕು. ಅವು ಇಸ್ರಾಯೇಲ್ಯರ
ಜ್ಞಾಪಕಾರ್ಥವಾದ ರತ್ನಗಳಾಗಿರುವವು. ಆರೋನನು
ಯೆಹೋವನ ಸನ್ನಿಧಿಗೆ ಹೋಗುವಾಗೆಲ್ಲಾ ಇಸ್ರಾ
ಯೇಲ್ಯರ ಕುಲಗಳ ಹೆಸರುಗಳನ್ನು ಆತನ ನೆನ
ಪಿಗೆ ತರುವದಕ್ಕಾಗಿ ತನ್ನ ಎರಡು ಭುಜಗಳ
ಮೇಲೆ ಧರಿಸಿಕೊಂಡು ಹೋಗುವನು.

[ಆ ರತ್ನಗಳನ್ನು ಖಚಿಸಿಡುವದಕ್ಕೆ] ಚಿನ್ನದ ಸರಿಗೆ 13
ಯನ್ನು ಹೆಣೆದು ಗೂಡುಗಳನ್ನು ಮಾಡಿಸಬೇಕು.
ಅದಲ್ಲದೆ ಹೆಣಿಗೆಕೆಲಸದಿಂದ ಹುರಿಗಳಂತಿರುವ 14

ಎರಡು ಚೊಕ್ಕಬಂಗಾರದ ಸರಪಣಿಗಳನ್ನು ಮಾಡಿಸಿ
ರತ್ನಗಳ ಗೂಡುಗಳಿಗೆ ಸಿಕ್ಕಿಸಬೇಕು.
15 ಮತ್ತು ದೈವನಿರ್ಣಯದ ಚೀಲದ ಪದಕವನ್ನು
ಬುಟೇದಾರೀ ಕೆಲಸದಿಂದ ಮಾಡಿಸಬೇಕು. ಅದನ್ನು
ಕವಚದ ಕೆಲಸದಂತೆಯೇ ಚಿನ್ನದ ದಾರದಿಂದಲೂ
ನೀಲಿ ಧೂಮ್ರ ರಕ್ತವರ್ಣಗಳುಳ್ಳ ದಾರದಿಂದಲೂ
16 ಹುರಿನಾರಿನ ಬಟ್ಟೆಯಲ್ಲಿ ಮಾಡಿಸಬೇಕು. ಅದು
ಒಂದು ಗೇಣುದ್ದವಾಗಿಯೂ ಒಂದು ಗೇಣಗಲ
ವಾಗಿಯೂ ಎರಡು ಪದರುಳ್ಳದ್ದಾಗಿ ಚಚ್ಚೌಕವಾಗಿರ
17 ಬೇಕು; ಅದರ ಮುಂಭಾಗದಲ್ಲಿ ನಾಲ್ಕು ಸಾಲು
ಗಳಾಗಿ ಜವೆಯ ಕಲ್ಲಿಗಳಲ್ಲಿ ರತ್ನಗಳನ್ನು ಸೇರಿಸ
ಬೇಕು. ಮೊದಲನೆಯ ಸಾಲಿನಲ್ಲಿ ಮಾಣಿಕ್ಯ ಪುಷ್ಯ
18 ರಾಗ ಸ್ಫಟಿಕಗಳನ್ನೂ; ಎರಡನೆಯ ಸಾಲಿನಲ್ಲಿ ಕೆಂಪ
19 ರಲು ನೀಲ ಪಚ್ಚೆಗಳನ್ನೂ; ಮೂರನೆಯ ಸಾಲಿನಲ್ಲಿ
ಸುವರ್ಣರತ್ನ ಗೋಮೇಧಕ ಧೂಮ್ರ ಮಣಿಗಳನ್ನೂ;
20 ನಾಲ್ಕನೆಯ ಸಾಲಿನಲ್ಲಿ ಪೀತರತ್ನ ಬೆರುಲ್ಲ ವೈದೂರ್ಯ
ಗಳನ್ನೂ ಚಿನ್ನದ ಜವೆಯ ಕಲ್ಲಿಗಳಲ್ಲಿ ಸೇರಿಸ
21 ಬೇಕು. ಇಸ್ರಾಯೇಲ್ಯರ ಕುಲಗಳ ಸಂಖ್ಯಾಪ್ರಕಾರ
ಹನ್ನೆರಡು ರತ್ನಗಳಿರಬೇಕು. ಮುದ್ರಾರತ್ನದಲ್ಲಿ ಕೆತ್ತು
ವ ರೀತಿಯಲ್ಲಿ ಒಂದೊಂದು ರತ್ನದಲ್ಲಿ ಒಂದೊಂದು
ಕುಲದ ಹೆಸರನ್ನು ಕೆತ್ತಿಸಬೇಕು.
22 ಅದಲ್ಲದೆ ಆ ಪದಕದ ಮೇಲ್ಗಡೆಯಲ್ಲಿ ಹುರಿ
ಗಳಂತಿರುವ ಚೊಕ್ಕಬಂಗಾರದ ಸರಪಣಿಗಳನ್ನು
23 ಹೆಣಿಗೇಕೆಲಸದಿಂದ ಮಾಡಿಸಿಡಬೇಕು. ಎರಡು ಚಿನ್ನದ
ಉಂಗರಗಳನ್ನು ಮಾಡಿಸಿ ಪದಕದ ಎರಡು ಮೂಲೆ
24 ಗಳಿಗೆ ಹಚ್ಚಬೇಕು. ಆ ಎರಡು ಸರಪಣಿಗಳನ್ನು
ಪದಕದ ಮೂಲೆಗಳಲ್ಲಿರುವ ಉಂಗರಗಳಿಗೆ ಸಿಕ್ಕಿ
25 ಸಬೇಕು. ಆ ಸರಪಣಿಗಳ ಕೊನೆಗಳನ್ನು ಕವಚದ
ಹೆಗಲಿನ ಪಟ್ಟಿಗಳಲ್ಲಿರುವ ಎರಡು ಜವೆಗಳ ಮುಂಭಾ
26 ಗಕ್ಕೆ ಸಿಕ್ಕಿಸಬೇಕು. ಅದಲ್ಲದೆ ಎರಡು ಚಿನ್ನದ
ಉಂಗರಗಳನ್ನು ಮಾಡಿಸಿ ಪದಕದ ಒಳಗಣ
ಅಂಚಿನ ಮೂಲೆಗಳಲ್ಲಿ ಕವಚದ ಹತ್ತಿರದಲ್ಲೇ ಇಡಿಸ
27 ಬೇಕು. ಮತ್ತು ಬೇರೆ ಎರಡು ಚಿನ್ನದ ಉಂಗರ
ಗಳನ್ನು ಮಾಡಿಸಿ ಕವಚದ ಎರಡು ಹೆಗಲಿನ ಪಟ್ಟಿ
ಗಳ ಮುಂಭಾಗದ ಕೆಳಗೆ, ಕವಚವನ್ನು ಜೋಡಿ
ಸಿರುವ ಸ್ಥಳದ ಹತ್ತಿರ, ಆ ವಿಚಿತ್ರವಾದ ನಡುಕಟ್ಟಿನ
28 ಮೇಲ್ಗಡೆಯಲ್ಲಿ ಇರಿಸಬೇಕು. ಪದಕವು ವಿಚಿತ್ರ
ವಾದ ನಡುಕಟ್ಟಿನ ಮೇಲ್ಗಡೆಯಲ್ಲಿ ಬಿಗಿಯಾಗಿರು
ವಂತೆಯೂ ಕವಚದಿಂದ ಕಳಚಿಬೀಳದಂತೆಯೂ ಅದರ
ಉಂಗರಗಳನ್ನು ಕವಚದ ಉಂಗರಗಳಿಗೆ ನೀಲಿ ದಾರ
ದಿಂದ ಕಟ್ಟಿಸಬೇಕು.
29 ದೈವನಿರ್ಣಯದ ಪದಕದ ಮೇಲೆ ಇಸ್ರಾಯೇ
ಲ್ಯರ ಕುಲಗಳ ಹೆಸರುಗಳು ಬರೆದಿರುವದರಿಂದ
ಆರೋನನು ಪವಿತ್ರಸ್ಥಾನದೊಳಗೆ ಹೋಗುವಾಗೆಲ್ಲಾ
ಆ ಹೆಸರುಗಳನ್ನು ನಿತ್ಯವಾಗಿ ಯೆಹೋವನ ನೆನಪಿಗೆ
ತರುವದಕ್ಕಾಗಿ ತನ್ನ ಹೃದಯದ ಮೇಲೆ ವಹಿಸು
30 ವನು. ದೈವನಿರ್ಣಯವನ್ನು ತಿಳಿಸುವ ಊರೀಮ್
ತುಮ್ಮೀಮ್ ಎಂಬ ವಸ್ತುಗಳನ್ನು ಆ ಚೀಲದ ಪದಕ
ದಲ್ಲಿ ಇಡಬೇಕು. ಆರೋನನು ಯೆಹೋವನ ಸನ್ನಿ
ಧಿಗೆ ಹೋಗುವಾಗ ಅವು ಅವನ ಎದೆಯ ಮೇಲೆ

ಇರುವವು. ಇಸ್ರಾಯೇಲ್ಯರು ಕೈಕೊಳ್ಳಬೇಕಾದ
ದೈವನಿರ್ಣಯವನ್ನು ಆರೋನನು ಹೀಗೆ ತನ್ನ ಹೃದ
ಯದ ಮೇಲೆ ಯೆಹೋವನ ಸನ್ನಿಧಿಯಲ್ಲಿ ಯಾವಾ
ಗಲೂ ಧರಿಸಿಕೊಂಡಿರುವನು.
ಮಹಾಯಾಜಕನು ಕವಚದ ಸಂಗಡ ತೊಟ್ಟು
ಕೊಳ್ಳಬೇಕಾದ ಮೇಲಂಗಿಯನ್ನು ನೀನು ನೀಲಿ
ಬಣ್ಣದ ಬಟ್ಟೆಯಿಂದಲೇ ಮಾಡಿಸಬೇಕು. ತಲೆದೂರಿ
ಸುವದಕ್ಕೆ ಅದರಲ್ಲಿ ಸಂದು ಇರಬೇಕು. ಅದು ಹರಿ
ಯದಂತೆ ಯುದ್ಧದ ಕವಚದೋಪಾದಿಯಲ್ಲಿ ಆ
ಸಂದಿನ ಸುತ್ತಲು ನೇಯಿಗೇ ಕಸೂತಿಯನ್ನು ಹಾಕಿ
ಸಬೇಕು. ಮೇಲಂಗಿಯ ಅಂಚಿನ ಸುತ್ತಲೂ ನೀಲಿ
ಧೂಮ್ರ ರಕ್ತವರ್ಣಗಳುಳ್ಳ ದಾರದಿಂದ ದಾಳಿಂಬ
ಹಣ್ಣಿನಂತೆ ಚೆಂಡುಗಳನ್ನೂ ಅವುಗಳ ನಡುವೆ ಚಿನ್ನದ
ಗೆಜ್ಜೆಗಳನ್ನೂ ತಗಲಿಸಬೇಕು. ಚಿನ್ನದ ಗೆಜ್ಜೆಯೂ
ದಾಳಿಂಬದಂತಿರುವ ಚೆಂಡೂ ಒಂದಾದ ಮೇಲೆ ಒಂದು
ಆ ಮೇಲಂಗಿಯ ಅಂಚಿನ ಸುತ್ತಲೂ ಇರಬೇಕು.
ಆರೋನನು ಸೇವೆಮಾಡುವ ಸಮಯದಲ್ಲಿ ಅದನ್ನು
ಧರಿಸಿಕೊಳ್ಳಬೇಕು. ಅವನು ಯೆಹೋವನ ಸನ್ನಿಧಿಗೆ
ಪವಿತ್ರಸ್ಥಾನದೊಳಗೆ ಹೋಗುವಾಗಲೂ ಬರುವಾ
ಗಲೂ ಸಾಯದ ಹಾಗೆ ಆ ಗೆಜ್ಜೆಗಳ ಶಬ್ದವು ಕೇಳಿಸ
ಬೇಕು.
ಚೊಕ್ಕಬಂಗಾರದ ಪಟ್ಟವನ್ನು ಮಾಡಿಸಿ ಮುದ್ರೆ
ಯನ್ನು ಕೆತ್ತುವ ರೀತಿಯಾಗಿ ಅದರಲ್ಲಿ ಯೆಹೋ
ವನಿಗೆ ಮೀಸಲು ಎಂಬ ಲಿಪಿಯನ್ನು ಕೆತ್ತಿಸಬೇಕು.
ಅದನ್ನು ಮುಂಡಾಸಕ್ಕೆ ಬಿಗಿಯುವದಕ್ಕಾಗಿ ನೀಲಿದಾರ
ವನ್ನು ಅದಕ್ಕೆ ಕಟ್ಟಿಸಬೇಕು; ಅದು ಮುಂಡಾಸದ
ಮುಂಭಾಗದಲ್ಲಿ ಇರಬೇಕು. ಇಸ್ರಾಯೇಲ್ಯರು
ಕಾಣಿಕೆಯಾಗಿ ಸಮರ್ಪಿಸುವ ದೇವರ ಎಲ್ಲಾ ವಸ್ತು
ಗಳ ವಿಷಯದಲ್ಲಿ ದೋಷವೇನಾದರೂ ಇದ್ದರೆ
ಆರೋನನು ಆ ಪಟ್ಟವನ್ನು ಯಾವಾಗಲೂ ಹಣೆಯ
ಮೇಲೆ ಧರಿಸಿ ಆ ದೋಷವನ್ನು ವಹಿಸಿಕೊಂಡದರಿಂದ
ಅವರು ಯೆಹೋವನ ಸನ್ನಿಧಿಯಲ್ಲಿ ಅಂಗೀಕರಿಸಲ್ಪ
ಡುವರು.
ಆರೋನನು ಧರಿಸಬೇಕಾದ ನಿಲುವಂಗಿಯನ್ನು
ನಾರಿನಿಂದ ವಿಚಿತ್ರವಾಗಿ ನೇಯಿಸಬೇಕು; ಅವನ
ಮುಂಡಾಸವನ್ನು ನಾರಿನಿಂದ ಮಾಡಿಸಬೇಕು; ಅವನ
ನಡುಕಟ್ಟನ್ನು ಬುಟೇದಾರೀ ಕೆಲಸದಿಂದ ಮಾಡಿಸ
ಬೇಕು.
ಆರೋನನ ಮಕ್ಕಳಿಗೆ ತಕ್ಕ ಗೌರವವೂ ಅಲಂಕಾರ
ವೂ ಉಂಟಾಗುವಂತೆ ಅವರಿಗೆ ನಿಲುವಂಗಿಗಳನ್ನೂ ನಡು
ಕಟ್ಟುಗಳನ್ನೂ ಮುಂಡಾಸಗಳನ್ನೂ ಮಾಡಿಸಬೇಕು.
ಆ ವಸ್ತ್ರಗಳನ್ನು ನಿನ್ನ ಅಣ್ಣನಾದ ಆರೋನನಿಗೂ
ಅವನ ಮಕ್ಕಳಿಗೂ ತೊಡಿಸಿ ಅವರನ್ನು ಅಭಿಷೇಕಿಸಿ
ಉದ್ಯೋಗಕ್ಕೆ ಸೇರಿಸಿ ಪ್ರತಿಷ್ಠಿಸಬೇಕು; ಆಗ ಅವರು
ನನಗೆ ಯಾಜಕರಾಗಿರುವರು.
ಅದಲ್ಲದೆ ಅವರ ರಹಸ್ಯಾಂಗವು ಕಾಣಿಸದಂತೆ
ಸೊಂಟದಿಂದ ತೊಡೆಯ ತನಕ ಇರುವ ನಾರಿನ
ಚಡ್ಡಿಗಳನ್ನು ಮಾಡಿಸಬೇಕು. ಆರೋನನೂ ಅವನ
ಮಕ್ಕಳೂ ದೇವದರ್ಶನದ ಗುಡಾರದೊಳಗೆ ಹೋಗು
ವಾಗಲೂ ಪವಿತ್ರಸ್ಥಾನದಲ್ಲಿ ಸೇವೆಮಾಡುವದಕ್ಕೆ

ಯಜ್ಞವೇದಿಯ ಹತ್ತಿರಕ್ಕೆ ಬರುವಾಗಲೂ ಇವುಗಳನ್ನು ಹಾಕಿಕೊಂಡಿರಬೇಕು. ಇಲ್ಲವಾದರೆ ಅವರು ಆ ಅಪರಾಧದ ಫಲವನ್ನು ಅನುಭವಿಸಿ ಸತ್ತಾರು. ಅವನಿಗೂ ಅವನ ವಂಶಸ್ಥರಿಗೂ ಇದು ಶಾಶ್ವತವಾದ ನಿಯಮ.

ಯಾಜಕರನ್ನು ಪ್ರತಿಷ್ಠಿಸಬೇಕಾದ ಕ್ರಮ.

9 ಅವರು ನನಗೆ ಯಾಜಕರಾಗುವಂತೆ ಅವರನ್ನು ಪ್ರತಿಷ್ಠಿಸುವದಕ್ಕೆ ನೀನು ಮಾಡಬೇಕಾದ ಕಾರ್ಯ ಯಾವದಂದರೆ—ಒಂದು ಹೋರಿಕರುವನ್ನೂ ಪೂರ್ಣಾಂಗವಾದ ಎರಡು ಟಗರುಗಳನ್ನೂ ತೆಗೆದುಕೊಳ್ಳಬೇಕು; ಮತ್ತು ಹುಳಿಯಿಲ್ಲದ ರೊಟ್ಟಿಗಳನ್ನೂ ಎಣ್ಣೆ ಮಿಶ್ರವಾದ ಹುಳಿಯಿಲ್ಲದ ಹೋಳಿಗೆಗಳನ್ನೂ ಎಣ್ಣೆಹೊಯಿದ ಹುಳಿಯಿಲ್ಲದ ಕಡುಬುಗಳನ್ನೂ ಗೋದಿಯ ಹಿಟ್ಟಿನಿಂದ ಮಾಡಿಸಿ ಒಂದೇ ಪುಟ್ಟಿಯಲ್ಲಿ ತುಂಬಿಸಬೇಕು. ಆ ಮೇಲೆ ಆ ಪುಟ್ಟಿಯನ್ನೂ ಆ ಹೋರಿಯನ್ನೂ ಟಗರುಗಳನ್ನೂ ತಂದಿಡಬೇಕು. ಆಗ ಆರೋನನನ್ನೂ ಅವನ ಮಕ್ಕಳನ್ನೂ ದೇವದರ್ಶನದ ಗುಡಾರದ ಬಾಗಲಿಗೆ ಕರಕೊಂಡು ಬಂದು ನೀರಿನಲ್ಲಿ ಸ್ನಾನಮಾಡಿಸಿ ಆ ವಸ್ತ್ರಗಳನ್ನು ಅಂದರೆ ನಿಲುವಂಗಿಯನ್ನೂ ಕವಚದ ಸಂಗಡ ತೊಟ್ಟುಕೊಳ್ಳತಕ್ಕ ಮೇಲಂಗಿಯನ್ನೂ ಕವಚವನ್ನೂ ಚೀಲದ ಪದಕವನ್ನೂ ಆರೋನನಿಗೆ ತೊಡಿಸಿ ಕವಚದ ವಿಚಿತ್ರವಾದ ನಡುಕಟ್ಟನ್ನು ಕಟ್ಟಿಸಿ ಅವನ ತಲೆಗೆ ಮುಂಡಾಸವನ್ನು ಹಾಕಿಸಿ ಮುಂಡಾಸದ ಮೇಲೆ ಪವಿತ್ರ ಪಟ್ಟವನ್ನು ಕಟ್ಟಿಸಿ ಅಭಿಷೇಕತೈಲವನ್ನು ಅವನ ತಲೆಯ ಮೇಲೆ ಅಭ್ಯಂಜನಮಾಡಿ ಅವನನ್ನು ಅಭಿಷೇಕಿಸಬೇಕು.

ತರುವಾಯ ಅವನ ಮಕ್ಕಳನ್ನು ಹತ್ತಿರಕ್ಕೆ ಕರೆದು ಅವರಿಗೆ ನಿಲುವಂಗಿಗಳನ್ನು ತೊಡಿಸಿ ಆರೋನನಿಗೂ ಅವನ ಮಕ್ಕಳಿಗೂ ನಡುಕಟ್ಟುಗಳನ್ನು ಕಟ್ಟಿಸಿ ಮುಂಡಾಸಗಳನ್ನು ಸುತ್ತಿಸಬೇಕು. ಆ ಹೊತ್ತಿನಿಂದ ಯಾಜಕತ್ವವು ಶಾಶ್ವತವಾದ ನಿಯಮದಿಂದ ಅವರಿಗೆ ಉಂಟಾಗುವದು. ಹೀಗೆ ಆರೋನನನ್ನೂ ಅವನ ಮಕ್ಕಳನ್ನೂ ಯಾಜಕೋದ್ಯೋಗಕ್ಕೆ ಸೇರಿಸಬೇಕು.

ತರುವಾಯ ನೀನು ಆ ಹೋರಿಯನ್ನು ದೇವದರ್ಶನದ ಗುಡಾರದ ಎದುರಿಗೆ ತರಿಸಿ; ಆರೋನನೂ ಅವನ ಮಕ್ಕಳೂ ಅದರ ತಲೆಯ ಮೇಲೆ ತಮ್ಮ ಕೈಗಳನ್ನಿಟ್ಟನಂತರ ನೀನು ಅದನ್ನು ಯೆಹೋವನ ಸನ್ನಿಧಿಯಲ್ಲಿ ದೇವದರ್ಶನದ ಗುಡಾರದ ಬಾಗಲಲ್ಲಿ ವಧಿಸಬೇಕು. ಆ ಹೋರಿಯ ರಕ್ತದಲ್ಲಿ ಸ್ವಲ್ಪವನ್ನು ತೆಗೆದುಕೊಂಡು ಬೆರಳಿನಿಂದ ಯಜ್ಞವೇದಿಯ ಕೊಂಬುಗಳಿಗೆ ಹಚ್ಚಿ ಮಿಕ್ಕ ರಕ್ತವನ್ನೆಲ್ಲಾ ಯಜ್ಞವೇದಿಯ ಬುಡಕ್ಕೆ ಹೊಯ್ಯಬೇಕು. ಅದರ ವಪೆಯನ್ನೂ ಕಾಳಿಜದ ಮೇಲಿರುವ ಕೊಬ್ಬನ್ನೂ ಎರಡು ಹುರುಳಿಕಾಯಿಗಳನ್ನೂ ಅವುಗಳ ಮೇಲಿರುವ ಕೊಬ್ಬನ್ನೂ ತೆಗೆದುಕೊಂಡು ಯಜ್ಞವೇದಿಯ ಮೇಲೆ ಹೋಮಮಾಡಬೇಕು. ಹೋರಿಯ ಮಾಂಸವನ್ನೂ ಚರ್ಮವನ್ನೂ ಕಲ್ಮಷವನ್ನೂ ಪಾಳೆಯದ ಹೊರಗೆ ಬೆಂಕಿಯಿಂದ ಸುಟ್ಟುಬಿಡಬೇಕು. ಇದು ದೋಷಪರಿಹಾರಕಯಜ್ಞ.

ತರುವಾಯ ನೀನು ಆ ಟಗರುಗಳಲ್ಲಿ ಒಂದನ್ನು 15
ತೆಗೆದುಕೊಂಡು ಆರೋನನೂ ಅವನ ಮಕ್ಕಳೂ
ಅದರ ತಲೆಯ ಮೇಲೆ ತಮ್ಮ ಕೈಗಳನ್ನು ಇಟ್ಟನಂತರ
ನೀನು ಅದನ್ನು ವಧಿಸಿ ಅದರ ರಕ್ತವನ್ನು ಯಜ್ಞ 16
ವೇದಿಯ ನಾಲ್ಕು ಕಡೆಗಳಿಗೆ ಚೆಲ್ಲಬೇಕು. ಆಗ 17
ನೀನು ಆ ಟಗರನ್ನು ತುಂಡುತುಂಡಾಗಿ ಕಡಿದು ಅದರ
ಕರುಳುಗಳನ್ನೂ ಕಾಲುಗಳನ್ನೂ ತೊಳಿಸಿ ಅವುಗಳನ್ನೂ
ಆ ತುಂಡುಗಳನ್ನೂ ತಲೆಯನ್ನೂ ಒಟ್ಟಿಗೆ ಇಟ್ಟು
ಅದನ್ನೆಲ್ಲಾ ಯಜ್ಞವೇದಿಯ ಮೇಲೆ ಯೆಹೋವನಿಗೆ 18
ಸರ್ವಾಂಗಹೋಮವಾಗಿ ಸಮರ್ಪಿಸಬೇಕು. ಇದು
ಯೆಹೋವನಿಗೆ ಸುಗಂಧಹೋಮವಾಗಿದೆ.

ಆ ಮೇಲೆ ನೀನು ಎರಡನೆಯ ಟಗರನ್ನು ತೆಗೆದು 19
ಕೊಂಡು ಆರೋನನೂ ಅವನ ಮಕ್ಕಳೂ ಅದರ
ತಲೆಯ ಮೇಲೆ ತಮ್ಮ ಕೈಗಳನ್ನು ಇಟ್ಟನಂತರ
ಅದನ್ನು ವಧಿಸಿ ಅದರ ರಕ್ತದಲ್ಲಿ ಸ್ವಲ್ಪವನ್ನು ಆರೋ 20
ನನ ಮತ್ತು ಅವನ ಮಕ್ಕಳ ಬಲಗಿವಿಯ ತುದಿಗೂ
ಬಲಗೈಯ ಹೆಬ್ಬೆರಳಿಗೂ ಬಲಗಾಲಿನ ಹೆಬ್ಬೊಟ್ಟಿಗೂ
ಸೋಂಕಿಸಿ ಮಿಕ್ಕ ರಕ್ತವನ್ನು ಯಜ್ಞವೇದಿಯ ನಾಲ್ಕು
ಕಡೆಗಳಿಗೆ ಚೆಲ್ಲಬೇಕು. ಅದಲ್ಲದೆ ನೀನು ಯಜ್ಞ 21
ವೇದಿಯ ಮೇಲಿರುವ ರಕ್ತದಲ್ಲಿಯೂ ಅಭಿಷೇಕತೈಲ
ದಲ್ಲಿಯೂ ಸ್ವಲ್ಪವನ್ನು ತೆಗೆದುಕೊಂಡು ಆರೋನನ
ಮತ್ತು ಅವನ ವಸ್ತ್ರಗಳ ಮೇಲೆಯೂ ಅವನ ಮಕ್ಕಳ
ಮತ್ತು ಅವರ ವಸ್ತ್ರಗಳ ಮೇಲೆಯೂ ಚಿಮಿಕಿಸಬೇಕು.
ಹೀಗೆ ಅವನೂ ಅವನ ಮಕ್ಕಳೂ ಅವರ ವಸ್ತ್ರಗಳು
ಸಹಿತವಾಗಿ ಪರಿಶುದ್ಧರಾಗುವರು.

ಬಳಿಕ ಪಟ್ಟಾಭಿಷೇಕಕ್ಕಾಗಿ ಸಮರ್ಪಿಸಲ್ಪಟ್ಟ ಆ 22
ಟಗರಿನ ಕೊಬ್ಬನ್ನೆಲ್ಲಾ ಅಂದರೆ ಬಾಲದ ಕೊಬ್ಬನ್ನೂ
ವಪೆಯನ್ನೂ ಕಾಳಿಜದ ಮೇಲಿರುವ ಕೊಬ್ಬನ್ನೂ
ಎರಡು ಹುರುಳಿಕಾಯಿಗಳನ್ನೂ ಅವುಗಳ ಮೇಲಿ
ರುವ ಕೊಬ್ಬನ್ನೂ ಬಲದೊಡೆಯನ್ನೂ ಮತ್ತು ಯೆಹೋ 23
ವನಿಗೆದುರಾಗಿ ಪುಟ್ಟಿಯಲ್ಲಿ ಇಟ್ಟಿದ್ದ ಹುಳಿಯಿಲ್ಲದ
ಪದಾರ್ಥಗಳಲ್ಲಿ ಒಂದು ರೊಟ್ಟಿಯನ್ನೂ ಎಣ್ಣೆಮಿಶ್ರ
ವಾದ ಒಂದು ಹೋಳಿಗೆಯನ್ನೂ ಒಂದು ಕಡುಬನ್ನೂ
ತೆಗೆದುಕೊಂಡು ಅವುಗಳನ್ನೆಲ್ಲಾ ಆರೋನನ ಮತ್ತು 24
ಅವನ ಮಕ್ಕಳ ಕೈಗೆ ಕೊಟ್ಟು ಯೆಹೋವನ ಸನ್ನಿಧಿ
ಯಲ್ಲಿ ನೈವೇದ್ಯವಾಗಿ ನಿವಾಳಿಸಬೇಕು. ಆ ಮೇಲೆ 25
ಅವುಗಳನ್ನು ಅವರ ಕೈಯಿಂದ ತೆಗೆದುಕೊಂಡು ಯಜ್ಞ
ವೇದಿಯ ಮೇಲೆ ಸರ್ವಾಂಗಹೋಮದ್ರವ್ಯದ ಸಂಗಡ
ಯೆಹೋವನಿಗೆ ಆಹುತಿಕೊಡಬೇಕು. ಅದು ಯೆಹೋ
ವನಿಗೆ ಸುಗಂಧಹೋಮವಾಗಿದೆ.

ಮತ್ತು ಆರೋನನ ಪಟ್ಟಾಭಿಷೇಕಕ್ಕಾಗಿ ಸಮರ್ಪಿ 26
ಸಿದ ಟಗರಿನ ಎದೆಯ ಭಾಗವನ್ನು ತೆಗೆದುಕೊಂಡು
ಅದನ್ನೂ ನೈವೇದ್ಯವಾಗಿ ಯೆಹೋವನ ಸನ್ನಿಧಿಯಲ್ಲಿ
ನಿವಾಳಿಸಬೇಕು. ಅದು ನಿನಗೇ ಸಲ್ಲತಕ್ಕ ಪಾಲು.
ಆರೋನನಿಗೂ ಅವನ ಮಕ್ಕಳಿಗೂ ಯಾಜಕದೀಕ್ಷೆ 27
ಯನ್ನು ಕೊಡುವಾಗ ಸಮರ್ಪಿಸಿದ ಟಗರಿನ ಮಾಂಸ
ದಲ್ಲಿ ನೈವೇದ್ಯವಾಗಿ ನಿವಾಳಿಸಿದ ಎದೆಯ ಭಾಗ

ವನ್ನೂ ಯಾಜಕರ ಭಾಗಕ್ಕೆ ಪ್ರತ್ಯೇಕಿಸಿದ ತೊಡೆ
28 ಯನ್ನೂ ದೇವರದೆಂದು ಭಾವಿಸಬೇಕು. ಶಾಶ್ವತನಿಯ
ಮವಾಗಿ ಇಸ್ರಾಯೇಲ್ಯರು ಅವುಗಳನ್ನು ಆರೋನ
ನಿಗೂ ಅವನ ವಂಶಸ್ಥರಿಗೂ ಕೊಡತಕ್ಕದ್ದು; ಅವು
ಯಾಜಕರ ಭಾಗಕ್ಕಾಗಿ ಪ್ರತ್ಯೇಕಿಸಲ್ಪಟ್ಟವೆ. ಇಸ್ರಾ
ಯೇಲ್ಯರು ಸಮಾಧಾನ ಯಜ್ಞಕ್ಕಾಗಿ ಪಶುಗಳನ್ನು
ವಧಿಸಿ ಯೆಹೋವನಿಗೆ ನೈವೇದ್ಯ ಮಾಡುವಾಗೆಲ್ಲಾ
ಆ ಭಾಗಗಳನ್ನು ಯಾಜಕರಿಗೋಸ್ಕರ ಪ್ರತ್ಯೇಕಿಸ
ಬೇಕು.
29 ಆರೋನನ ಯಾಜಕದೀಕ್ಷಾವಸ್ತ್ರಗಳೇ ಅವನ
ತರುವಾಯ ಅವನ ವಂಶಸ್ಥರಿಗೂ ಉಪಯೋಗ
ವಾಗಬೇಕು. ಅವರೂ ಪಟ್ಟಾಭಿಷಿಕ್ತರಾಗಿ ಮಹಾ
ಯಾಜಕೋದ್ಯೋಗಕ್ಕೆ ಬಂದಾಗ ಅವುಗಳನ್ನು ಧರಿಸಿ
30 ಕೊಳ್ಳಬೇಕು. ಅವನ ಮಕ್ಕಳಲ್ಲಿ ಅವನಿಗೆ ಪ್ರತಿ
ಯಾಗಿ ಮಹಾಯಾಜಕನಾಗುವವನು ಪವಿತ್ರಸ್ಥಾನ
ದಲ್ಲಿ ದೇವರ ಸೇವೆಯನ್ನು ನಡಿಸುವದಕ್ಕೆ ದೇವ
ದರ್ಶನದ ಗುಡಾರದೊಳಗೆ ಪ್ರವೇಶಿಸಿದಂದಿನಿಂದ ಏಳು
ದಿವಸಗಳ ವರೆಗೆ ಆ ವಸ್ತ್ರಗಳನ್ನು ಧರಿಸಿಕೊಂಡಿರ
ಬೇಕು.
31 ಆರೋನನ ಪಟ್ಟಾಭಿಷೇಕಕ್ಕಾಗಿ ಸಮರ್ಪಿಸಿದ
ಟಗರಿನ ಮಾಂಸವನ್ನು ದೇವದರ್ಶನದ ಗುಡಾರದ
32 ಪ್ರಾಕಾರದಲ್ಲಿ ಬೇಯಿಸಬೇಕು. ಆರೋನನೂ ಅವನ
ಮಕ್ಕಳೂ ಆ ಟಗರಿನ ಮಾಂಸವನ್ನೂ ಪುಟ್ಟಿಯಲ್ಲಿ
ರುವ ರೊಟ್ಟಿಯನ್ನೂ ದೇವದರ್ಶನದ ಗುಡಾರದ
33 ಬಾಗಲೊಳಗೆ ಊಟಮಾಡಬೇಕು. ಅವರನ್ನು
ಯಾಜಕೋದ್ಯೋಗಕ್ಕೆ ಸೇರಿಸುವದಕ್ಕೂ ದೇವರ
ಸೇವೆಗೆ ಪ್ರತಿಷ್ಠಿಸುವದಕ್ಕೂ ಯಾವ ಪದಾರ್ಥಗಳು
ದೋಷಪರಿಹಾರಕ್ಕಾಗಿ ಸಮರ್ಪಿಸಲ್ಪಟ್ಟವೋ ಅವುಗ
ಳನ್ನು ಅವರೇ ಭೋಜನಮಾಡಬೇಕೇ ಹೊರತು
34 ಇತರರು ತಿನ್ನಕೂಡದು; ಅವು ಮೀಸಲು. ಪಟ್ಟಾಭಿ
ಷೇಕಕ್ಕೆ ಸಂಬಂಧಪಟ್ಟ ಮಾಂಸದಲ್ಲಿಯಾಗಲಿ
ರೊಟ್ಟಿಯಲ್ಲಿಯಾಗಲಿ ಏನಾದರೂ ಮರುದಿನದ
ಉದಯದ ವರೆಗೆ ಉಳಿದರೆ ಅದನ್ನು ಸುಟ್ಟುಬಿಡ
ಬೇಕು; ಅದು ದೇವರ ವಸ್ತುವಾದದರಿಂದ ಯಾರೂ
ತಿನ್ನಕೂಡದು.
35 ನಾನು ನಿನಗೆ ಆಜ್ಞಾಪಿಸಿದ ರೀತಿಯಲ್ಲಿ ಏಳು
ದಿವಸದ ಆಚಾರವನ್ನು ನಡಿಸಿ ಆರೋನನನ್ನೂ ಅವನ
36 ಮಕ್ಕಳನ್ನೂ ಉದ್ಯೋಗಕ್ಕೆ ಸೇರಿಸಬೇಕು; ಪ್ರತಿದಿನ
ದಲ್ಲಿಯೂ ದೋಷಪರಿಹಾರಕ್ಕಾಗಿ ಒಂದು ಹೋರಿ
ಯನ್ನು ಯಜ್ಞಮಾಡಬೇಕು.
ಅದಲ್ಲದೆ ಯಜ್ಞವೇದಿಯನ್ನು ಶುದ್ಧಿಮಾಡುವದ
ಕ್ಕಾಗಿ ಅದರ ಮೇಲೆ ದೋಷಪರಿಹಾರಕಯಜ್ಞ
ವನ್ನು ಸಮರ್ಪಿಸಿ ಅದನ್ನು ದೇವರ ಸೇವೆಗೋಸ್ಕರ
37 ಅಭಿಷೇಕಿಸಬೇಕು. ಹೀಗೆ ಏಳು ದಿನಗಳ ವರೆಗೂ
ಯಜ್ಞವೇದಿಯ ನಿಮಿತ್ತವಾಗಿ ದೋಷಪರಿಹಾರಕಾ
ಚಾರವನ್ನು ನಡಿಸಿ ಅದನ್ನು ಪ್ರತಿಷ್ಠಿಸಬೇಕು. ಯಜ್ಞ
ವೇದಿಯು ಅತಿಪರಿಶುದ್ಧವಾಗಿರಬೇಕು; 1)ಯಜ್ಞವೇ
ದಿಗೆ ಸೋಂಕಿದ್ದೆಲ್ಲವು ಪರಿಶುದ್ಧವಾಗಿರಬೇಕು.

ಪ್ರತಿನಿತ್ಯವೂ ಮಾಡಬೇಕಾದ ಸರ್ವಾಂಗಹೋಮದ ಕ್ರಮ.

ಯಜ್ಞವೇದಿಯ ಮೇಲೆ ನಿತ್ಯವೂ ಸಮರ್ಪಿಸಬೇಕಾ
ದದ್ದೇನಂದರೆ—ಒಂದು ವರುಷದ ಎರಡು ಕುರಿ
ಗಳನ್ನು ದಿನಂಪ್ರತಿಯೂ ಹೋಮಮಾಡಬೇಕು.
ಅವುಗಳಲ್ಲಿ ಒಂದನ್ನು ಪ್ರಾತಃಕಾಲದಲ್ಲಿ ಮತ್ತೊಂದ
ನ್ನು ಸಾಯಂಕಾಲದಲ್ಲಿ ಸಮರ್ಪಿಸಬೇಕು. ಒಂದು
ವರೆ ಸೇರು ಶ್ರೇಷ್ಠವಾದ ಎಣ್ಣೆಯನ್ನೂ ಮೂರು
ಸೇರು ಗೋದಿಹಿಟ್ಟನ್ನೂ ಬೆರಸಿ ಧಾನ್ಯಸಮ
ರ್ಪಣೆಗಾಗಿ ಆ ಮೊದಲನೆಯ ಕುರಿಯ ಸಂಗಡ ಹೋಮ
ಮಾಡಬೇಕು. ಪಾನದ್ರವ್ಯಾರ್ಪಣೆಗಾಗಿ ಒಂದುವರೆ
ಸೇರು ದ್ರಾಕ್ಷಾರಸವನ್ನು ಹೋಮಮಾಡಬೇಕು.
ಸಾಯಂಕಾಲದಲ್ಲಿ ಎರಡನೆಯ ಕುರಿಯನ್ನು ಹೋಮ
ಮಾಡುವಾಗ ಹೊತ್ತಾರೆಯಲ್ಲಿ ಮಾಡಿದ ಪ್ರಕಾರವೇ
ಅದರೊಂದಿಗೆ ಧಾನ್ಯವನ್ನೂ ಪಾನದ್ರವ್ಯವನ್ನೂ ಸಮ
ರ್ಪಿಸಬೇಕು. ಅದು ಯೆಹೋವನಿಗೆ ಸುಗಂಧಹೋ
ಮವಾಗಿರುವದು.
ಈ ಸರ್ವಾಂಗಹೋಮವನ್ನು ನೀವೂ ನಿಮ್ಮ
ಸಂತತಿಯವರೂ ಪ್ರತಿನಿತ್ಯವೂ ಯೆಹೋವನ ಸನ್ನಿಧಿ
ಯಲ್ಲಿ ದೇವದರ್ಶನದ ಗುಡಾರದ ಬಾಗಲಿನ ಎದುರಿ
ನಲ್ಲಿ ಮಾಡಬೇಕು. ಆ ಗುಡಾರದಲ್ಲಿ ನಾನು ನಿಮಗೆ
ದರ್ಶನವನ್ನು ಕೊಟ್ಟು ನಿನ್ನ ಸಂಗಡ ಮಾತಾಡು
ವೆನು. ಅಲ್ಲಿಯೇ ನಾನು ಇಸ್ರಾಯೇಲ್ಯರಿಗೆ ದರ್ಶ
ನವನ್ನು ಕೊಡುವೆನು; ಅಲ್ಲಿ ಕಾಣಿಸುವ ನನ್ನ
ಪ್ರಭಾವದಿಂದ ಆ ಸ್ಥಳವು ಪರಿಶುದ್ಧವಾಗಿರುವದು.
ನಾನು ದೇವದರ್ಶನದ ಗುಡಾರವನ್ನೂ ಯಜ್ಞವೇದಿ
ಯನ್ನೂ ಪರಿಶುದ್ಧಸ್ಥಳಗಳಾಗುವಂತೆ ಮಾಡುವೆನು;
ಆರೋನನನ್ನೂ ಅವನ ಮಕ್ಕಳನ್ನೂ ನನಗೆ ಯಾಜಕ
ರಾಗುವಂತೆ ಪ್ರತಿಷ್ಠಿಸಿಕೊಳ್ಳುವೆನು. ನಾನು ಇಸ್ರಾ
ಯೇಲ್ಯರ ಮಧ್ಯದಲ್ಲಿ ವಾಸವಾಗಿದ್ದು ಅವರಿಗೆ
ದೇವರಾಗಿರುವೆನು. ತಮ್ಮ ಮಧ್ಯದಲ್ಲಿ ವಾಸವಾಗು
ವದಕ್ಕಾಗಿಯೇ ತಮ್ಮನ್ನು ಐಗುಪ್ತದೇಶದಿಂದ ಹೊರ
ಗೆ ಬರಮಾಡಿದ ತಮ್ಮ ದೇವರಾದ ಯೆಹೋವನು
ನಾನೇ ಎಂದು ಅವರು ತಿಳುಕೊಳ್ಳುವರು. ನಾನು
ಅವರ ದೇವರಾದ ಯೆಹೋವನೇ.

ಧೂಪವೇದಿಯ ಕ್ರಮ.

3 ಸುಗಂಧದ್ರವ್ಯಗಳಿಂದ ಧೂಪಹಾಕುವದಕ್ಕೆ ಜಾ
ಲೀಮರದ ಧೂಪವೇದಿಯನ್ನು ಮಾಡಿಸಬೇಕು.
ಅದು ಒಂದು ಮೊಳ ಉದ್ದವಾಗಿಯೂ ಒಂದು
ಮೊಳ ಅಗಲವಾಗಿಯೂ ಚಚ್ಚೌಕವಾಗಿರಬೇಕು
ಅದರ ಎತ್ತರವು ಎರಡು ಮೊಳವಾಗಿರಬೇಕು. ಅದರ
ಕೊಂಬುಗಳು ಅದರೊಂದಿಗೆ ಏಕವಾಗಿರಬೇಕು
ಅದರ ಮೇಲ್ಭಾಗಕ್ಕೂ ನಾಲ್ಕು ಪಕ್ಕಗಳಿಗೂ ಕೊಂಬು
ಗಳಿಗೂ ಚೊಕ್ಕಬಂಗಾರದ ತಗಡುಗಳನ್ನು ಹೊದಿಸ
ಬೇಕು. ಸುತ್ತಲೂ ಚಿನ್ನದ ಗೋಟು ಕಟ್ಟಿಸಬೇಕು
ಅದರ ಕೆಳಗೆ ವೇದಿಯ ಎರಡು ಪಾರ್ಶ್ವಗಳಲ್ಲಿ ಎ

---

1) ಅಥವಾ: ಯಜ್ಞವೇದಿಯನ್ನು ಮುಟ್ಟಿದವರೆಲ್ಲರೂ ಪರಿಶುದ್ಧರಾಗಿರಬೇಕು.

ಡೆರಡು ಚಿನ್ನದ ಬಳೆಗಳನ್ನು ಮೂಲೆಗಳಲ್ಲಿಯೇ ಹಾಕಿಸಬೇಕು. ವೇದಿಯನ್ನು ಹೊರುವದಕ್ಕೆ ಕೋಲುಗಳನ್ನು ಅವುಗಳಲ್ಲಿ ಸೇರಿಸಬೇಕು. ಆ ಕೋಲುಗಳನ್ನು ಜಾಲೀಮರದಿಂದ ಮಾಡಿಸಿ ಅವುಗಳಿಗೆ ಚಿನ್ನದ ತಗಡುಗಳನ್ನು ಹೊದಿಸಬೇಕು. ಆಜ್ಞಾಶಾಸನಗಳ ಮಂಜೂಷದ ಮುಂದಣ ತೆರೆಗೆ ಎದುರಾಗಿ, ಅಂದರೆ ಆಜ್ಞಾಶಾಸನಗಳ ಮೇಲಿರುವಂಥ ಮತ್ತು ನಾನು ನಿನಗೆ ದರ್ಶನಕೊಡುವಂಥ ಕೃಪಾಸನದ ಮುಂದೆ ಅದನ್ನು ಇರಿಸಬೇಕು.

ಆರೋನನು ಪ್ರತಿನಿತ್ಯವೂ ಹೊತ್ತಾರೆಯಲ್ಲಿ ದೀಪಗಳನ್ನು ಸರಿಪಡಿಸುವಾಗಲೂ ಸಾಯಂಕಾಲದಲ್ಲಿ ದೀಪಗಳನ್ನು ಹೊತ್ತಿಸುವಾಗಲೂ ಅದರ ಮೇಲೆ ಸುಗಂಧದ್ರವ್ಯಗಳಿಂದ ಧೂಪವನ್ನು ಹಾಕಬೇಕು. ಹೀಗೆ ನಿಮ್ಮಿಂದಲೂ ನಿಮ್ಮ ಸಂತತಿಯವರಿಂದಲೂ ಯೆಹೋವನ ಸನ್ನಿಧಿಯಲ್ಲಿ ನಿತ್ಯವಾದ ಧೂಪಸಮರ್ಪಣೆಯು ಇರಬೇಕು. ಆ ವೇದಿಯ ಮೇಲೆ ಬೇರೆ ಯಾವ ಧೂಪವನ್ನೂ ಹಾಕಕೂಡದು; ಅದರ ಮೇಲೆ ಹೋಮವನ್ನಾಗಲಿ ಧಾನ್ಯದ್ರವ್ಯವನ್ನಾಗಲಿ ಪಾನದ್ರವ್ಯವನ್ನಾಗಲಿ ಸಮರ್ಪಿಸಕೂಡದು.

ಆರೋನನೂ ಅವನ ಸಂತತಿಯವರೂ ವರುಷಕ್ಕೊಮ್ಮೆ ದೋಷಪರಿಹಾರಕಯಜ್ಞಪಶುವಿನ ರಕ್ತವನ್ನು ಆ ವೇದಿಯ ಕೊಂಬುಗಳಿಗೆ ಹಚ್ಚಿ ಅದರ ವಿಷಯವಾಗಿ ದೋಷಪರಿಹಾರವನ್ನು ಮಾಡಬೇಕು. ಅದು ಯೆಹೋವನಿಗೆ ಅತಿಪರಿಶುದ್ಧವಾಗಿದೆ.

ಇಸ್ರಾಯೇಲ್ಯರೆಲ್ಲರು ಪ್ರಾಣರಕ್ಷಣೆಗಾಗಿ ಕೊಡಬೇಕಾದ ಕಪ್ಪವನ್ನು ಕುರಿತದ್ದು.

ಯೆಹೋವನು ಮೋಶೆಗೆ ಹೇಳಿದ್ದೇನಂದರೆ—ನೀನು ಖಾನೇಷುಮಾರಿಯಾಗತಕ್ಕ ಇಸ್ರಾಯೇಲ್ಯರನ್ನು ಲೆಕ್ಕಿಸುವಾಗ ಅವರೊಳಗೆ ವ್ಯಾಧಿಸಂಭವಿಸದಂತೆ ಪ್ರತಿಯೊಬ್ಬನು ತನ್ನ ತನ್ನ ಪ್ರಾಣಕ್ಕೆ ಈಡಾಗಿ ಯೆಹೋವನಿಗೆ ಕಪ್ಪವನ್ನು ಕೊಡಬೇಕು. ಲೆಕ್ಕಿಸಲ್ಪಟ್ಟವರಲ್ಲಿ ಸೇರುವ ಪ್ರತಿಯೊಬ್ಬನು ಯೆಹೋವನಿಗೆ ಅರ್ಧ ರೂಪಾಯಿಯ ಮೇರೆಗೆ ಕಪ್ಪ ಕೊಡಬೇಕು. ದೇವರ ಸೇವೆಗೆ ನೇಮಕವಾದ ಇಪ್ಪತ್ತು ಗೇರಾ ತೂಕದ ರೂಪಾಯಿಯ ಮೇರೆಗೆ ಅರ್ಧಾರ್ಧ ರೂಪಾಯಿ ಕಪ್ಪವಾಗಿ ಕೊಡಬೇಕು. ಲೆಕ್ಕಿಸಲ್ಪಟ್ಟವರಲ್ಲಿ ಸೇರಿದವರೊಳಗೆ ಇಪ್ಪತ್ತು ವರುಷದವರೂ ಅದಕ್ಕೆ ಹೆಚ್ಚಿನ ವಯಸ್ಸುಳ್ಳವರೂ ಆ ಕಪ್ಪವನ್ನು ಯೆಹೋವನಿಗೆ ಕೊಡಬೇಕು. ಪ್ರಾಣರಕ್ಷಣೆಯ ಕಪ್ಪವನ್ನು ಯೆಹೋವನಿಗೆ ಕೊಡುವದರಲ್ಲಿ ಐಶ್ವರ್ಯವಂತರು ಅರ್ಧ ರೂಪಾಯಿಗಿಂತ ಹೆಚ್ಚು ಕೊಡಬಾರದು, ಬಡವರು ಕಮ್ಮಿ ಕೊಡಬಾರದು. ನೀನು ಪ್ರಾಣರಕ್ಷಣೆಯ ಹಣವನ್ನು ಇಸ್ರಾಯೇಲ್ಯರಿಂದ ತೆಗೆದುಕೊಂಡು ದೇವದರ್ಶನದ ಗುಡಾರದ ಸೇವೆಗೆ ಉಪಯೋಗಿಸಬೇಕು. ಇಸ್ರಾಯೇಲ್ಯರ ಪ್ರಾಣಗಳನ್ನು ಉಳಿಸಬೇಕೆಂಬದಾಗಿ ಆ ಕಪ್ಪವು ಯೆಹೋವನ ಸನ್ನಿಧಿಯಲ್ಲಿ ಜ್ಞಾಪಕಕೊಡುವದು.

ಗುಡಾರದ ಸೇವೆಗೆ ಬೇಕಾದ ಗಂಗಾಳವೂ ಅಭಿಷೇಕತೈಲವೂ ಧೂಪದ್ರವ್ಯವೂ.

ಯೆಹೋವನು ಮೋಶೆಗೆ ಮತ್ತೂ ಹೇಳಿದ್ದೇನಂದರೆ— 17
ಸ್ನಾನಕ್ಕೋಸ್ಕರ ಒಂದು ತಾಮ್ರದ ಗಂಗಾಳವನ್ನೂ 18
ಅದಕ್ಕೆ ತಾಮ್ರದ ಪೀಠವನ್ನೂ ಮಾಡಿಸಿ ದೇವದರ್ಶ
ನದ ಗುಡಾರಕ್ಕೂ ಯಜ್ಞವೇದಿಗೂ ನಡುವೆ ಇಟ್ಟು
ಅದರಲ್ಲಿ ನೀರನ್ನು ತುಂಬಿಸಬೇಕು. ಆರೋನನೂ 19
ಅವನ ಮಕ್ಕಳೂ ಅದರಿಂದ ಕೈಕಾಲುಗಳನ್ನು ತೊಳೆ
ದುಕೊಳ್ಳಬೇಕು. ಅವರು ದೇವದರ್ಶನದ ಗುಡಾರ 20
ದೊಳಗೆ ಹೋಗುವಾಗೆಲ್ಲಾ ಆ ನೀರಿನಿಂದ ಕೈಕಾಲು
ಗಳನ್ನು ತೊಳೆದುಕೊಂಡು ಹೋಗಬೇಕು; ತೊಳೆ
ಯದೆ ಹೋದರೆ ಸತ್ತಾರು. ಹಾಗೆಯೇ ಅವರು
ದೇವರ ಸೇವೆಯನ್ನು ನಡಿಸುವವರಾಗಿ ಯೆಹೋವ
ನಿಗೆ ಹೋಮಸಮರ್ಪಣೆಗಾಗಿ ಯಜ್ಞವೇದಿಯ ಬಳಿಗೆ
ಬರುವಾಗಲೂ ಕೈಕಾಲುಗಳನ್ನು ತೊಳೆದುಕೊಂಡು
ಬರಬೇಕು; ತೊಳುಕೊಳ್ಳದೆ ಬಂದರೆ ಸತ್ತಾರು. ಇದು 21
ಅವನಿಗೂ ಅವನ ಸಂತತಿಯವರಿಗೂ ಶಾಶ್ವತ ನಿಯಮ.
ಅದಲ್ಲದೆ ಯೆಹೋವನು ಮೋಶೆಗೆ ಹೇಳಿದ್ದೇ 22
ನಂದರೆ—ನೀನು ಮುಖ್ಯವಾದ ಸುಗಂಧದ್ರವ್ಯಗಳಲ್ಲಿ 23
ದೇವರ ಸೇವೆಗೆ ನೇಮಕವಾದ ತೂಕದ ಮೇರೆಗೆ
ಐನೂರು ತೊಲೆ ಅಚ್ಚರಕ್ತಬೋಳ, ಇನ್ನೂರೈವತ್ತು
ತೊಲೆ ಶ್ರೇಷ್ಠವಾದ ಲವಂಗಚಕ್ಕೆ, ಇನ್ನೂರೈವತ್ತು
ತೊಲೆ ಸುಗಂಧವಾದ ಬಜೆ, ಐನೂರು ತೊಲೆ 24
ದಾಲ್ಚಿನ್ನಿ, ಆರುವರೆ ಸೇರು ಒಲೀವ ತೈಲ ಇವು
ಗಳನ್ನೆಲ್ಲಾ ತೆಗೆದುಕೊಂಡು ಬುಕ್ಕಿಟ್ಟುಗಾರರ ಪದ್ಧ 25
ತಿಯ ಮೇರೆಗೆ ಮಿಶ್ರಮಾಡಿ ದೇವರ ಸೇವೆಗಾಗಿ
ಅಭಿಷೇಕತೈಲವನ್ನು ಮಾಡಿಸಬೇಕು. ಅದರಿಂದ ದೇವ 26
ದರ್ಶನದ ಗುಡಾರ, ಆಜ್ಞಾಶಾಸನಗಳ ಮಂಜೂಷ,
ಮೇಜು, ಮೇಜಿನ ಉಪಕರಣಗಳು, ದೀಪಸ್ತಂಭ, 27
ದೀಪಸ್ತಂಭದ ಉಪಕರಣಗಳು, ಧೂಪವೇದಿ, ಯಜ್ಞ 28
ವೇದಿ, ಯಜ್ಞವೇದಿಯ ಉಪಕರಣಗಳು, ಗಂಗಾಳ,
ಅದರ ಪೀಠ ಇವುಗಳನ್ನೆಲ್ಲಾ ಅಭಿಷೇಕಿಸಿ ಅವು ಅತಿ 29
ಪರಿಶುದ್ಧವಾಗುವಂತೆ ಪ್ರತಿಷ್ಠಿಸಬೇಕು. 1)ಅವುಗಳಿಗೆ
ಸೋಂಕಿದೆಲ್ಲವು ಪರಿಶುದ್ಧವಾಗಿರುವದು. ಅದಲ್ಲದೆ 30
ಆರೋನನೂ ಅವನ ಮಕ್ಕಳೂ ನನಗೆ ಯಾಜಕ
ರಾಗುವಂತೆ ಅವರನ್ನು ಅಭಿಷೇಕಿಸಿ ಪ್ರತಿಷ್ಠಿಸಬೇಕು.
ನೀನು ಇಸ್ರಾಯೇಲ್ಯರಿಗೆ ಆಜ್ಞಾಪಿಸತಕ್ಕದ್ದೇ 31
ನಂದರೆ—ನೀವೂ ನಿಮ್ಮ ಸಂತತಿಯವರೂ ಈ ತೈಲ
ವನ್ನು ನನ್ನ ಸೇವೆಗೆ ನೇಮಕವಾದ ಅಭಿಷೇಕತೈಲ
ವೆಂದು ತಿಳಿದುಕೊಳ್ಳಬೇಕು. ಮೈಗೆ ಹಚ್ಚಿಕೊಳ್ಳು 32
ವದಕ್ಕೆ ಇದನ್ನು ಉಪಯೋಗಿಸಬಾರದು. ಇದರ
ಲ್ಲಿರುವ ಜಿನಸುಗಳ ಮೇರೆಗೆ ಬೇರೆ ಕೆಲಸಕ್ಕೆ ತೈಲ
ವನ್ನು ಮಾಡಲೇ ಬಾರದು. ಇದು ದೇವರ ವಸ್ತು;
ಇದನ್ನು ಮೀಸಲೆಂದು ನೀವು ತಿಳಿದುಕೊಳ್ಳಬೇಕು.
ಇದರಂತೆ ತೈಲವನ್ನು ಮಾಡುವವನಾಗಲಿ ಇದನ್ನು 33
ಯಾಜಕನಲ್ಲದವನ ಮೇಲೆ ಹಚ್ಚುವವನಾಗಲಿ ತನ್ನ
ಕುಲದಿಂದ ತೆಗೆದುಹಾಕಲ್ಪಡಬೇಕು.

1) ಅಥವಾ: ಅವುಗಳನ್ನು ಮುಟ್ಟಿದವರೆಲ್ಲರೂ ಪರಿಶುದ್ಧರಾಗಿರುವರು.

34 ಅದಲ್ಲದೆ ಯೆಹೋವನು ಮೋಶೆಗೆ ಆಜ್ಞಾಪಿಸಿದ್ದೇ
ನಂದರೆ—ನೀನು ಹಾಲುಮಡ್ಡಿ, ಗುಗ್ಗುಲ, ಗಂಧದ
ಚೆಕ್ಕೆ ಎಂಬ ಪರಿಮಳದ್ರವ್ಯಗಳನ್ನೂ ಸ್ವಚ್ಛವಾದ
1)ಧೂಪವನ್ನೂ ಸಮಭಾಗವಾಗಿ ತೆಗೆದುಕೊಂಡು
35 ಸುವಾಸನೆಯುಳ್ಳ ಬುಕ್ಕಿಟ್ಟಾಗಿರುವಂತೆ ಸುಗಂಧ
ದ್ರವ್ಯಕಾರರ ವಿದ್ಯೆಯ ಮೇರೆಗೆ ಕಲಿಸಿ ಉಪ್ಪು ಹಾಕಿ
ದೇವರ ಸೇವೆಗೆ ಸ್ವಚ್ಛವಾದ ಧೂಪದ್ರವ್ಯವನ್ನು
36 ಮಾಡಿಸಬೇಕು. ಅದರಲ್ಲಿ ಸ್ವಲ್ಪವನ್ನು ಪುಡಿಮಾಡಿಸಿ
ದೇವದರ್ಶನದ ಗುಡಾರದೊಳಗೆ ಆಜ್ಞಾಶಾಸನಗಳ
ಮಂಜೂಷದ ಎದುರಾಗಿ, ನಾನು ನಿನಗೆ ದರ್ಶನ
ಕೊಡುವ ಸ್ಥಳದಲ್ಲಿ ಇರಿಸಬೇಕು. ಅದು ಅತಿಪರಿ
37 ಶುದ್ಧವಾದದ್ದೆಂದು ನೀವು ತಿಳುಕೊಳ್ಳಬೇಕು. ನೀವು
ಆ ಧೂಪದ್ರವ್ಯದ ಜೀನಸುಗಳ ಮೇರೆಗೆ ನಿಮ್ಮ
ಸ್ವಂತಕ್ಕೋಸ್ಕರ ಧೂಪದ್ರವ್ಯವನ್ನು ಮಾಡಿಸಲೇ
ಬಾರದು. ಅದು ಯೆಹೋವನ ಸೇವೆಗೆ ಮಾತ್ರ
ಉಪಯೋಗಿಸಬೇಕಾದ ಮೀಸಲಾದ ಪದಾರ್ಥವೆಂದು
38 ಭಾವಿಸಬೇಕು. ಸುವಾಸನೆಗೋಸ್ಕರ ಅಂಥದನ್ನು
ಮಾಡಿಕೊಳ್ಳುವವನು ತನ್ನ ಕುಲದಿಂದ ತೆಗೆದು
ಹಾಕಲ್ಪಡಬೇಕು.

ಗುಡಾರವನ್ನೂ ಅದರ ಉಪಕರಣಗಳನ್ನೂ ಮಾಡುವದಕ್ಕೆ
ಕೆಲಸಗಾರರನ್ನು ನೇಮಿಸಿದ್ದು.

31 2 ಯೆಹೋವನು ಮೋಶೆಗೆ ಹೀಗಂದನು—ವಿಚಿತ್ರ
ವಾಗಿ ನಯವಾದ ಕೆಲಸಗಳನ್ನು ಕಲ್ಪಿಸುವದಕ್ಕೂ
ಚಿನ್ನ ಬೆಳ್ಳಿ ತಾಮ್ರಗಳಿಂದ ಕೆಲಸನಡಿಸುವದಕ್ಕೂ
3 ರತ್ನಗಳನ್ನು ಕೆತ್ತುವದಕ್ಕೂ ಮರದಲ್ಲಿ ವಿಚಿತ್ರವಾಗಿ
4 ಕೆತ್ತನೇಕೆಲಸವನ್ನು ಮಾಡುವದಕ್ಕೂ ಇವೇ ಮೊದ
ಲಾದ ಸಮಸ್ತ ಶೃಂಗಾರವಾದ ಕೆಲಸವನ್ನು ಮಾಡು
ವದಕ್ಕೂ ನಾನು ಯೆಹೂದಕುಲದವನಾದ ಹೂರನ
ಮೊಮ್ಮಗನೂ ಊರಿಯ ಮಗನೂ ಆಗಿರುವ ಬೆಚ
5 ಲೇಲನೆಂಬವನನ್ನು ಗೊತ್ತುಮಾಡಿದ್ದೇನೆ. ಅವನಿಗೆ
ದಿವ್ಯಾತ್ಮವನ್ನು ಕೊಟ್ಟು ಬೇಕಾದ ಜ್ಞಾನ ವಿದ್ಯಾ
ವಿವೇಕಗಳನ್ನೂ ಸಕಲಶಿಲ್ಪಶಾಸ್ತ್ರಜ್ಞಾನವನ್ನೂ ಅನು
6 ಗ್ರಹಿಸಿದ್ದೇನೆ. ಅವನೊಂದಿಗೆ ದಾನ್ ಕುಲದವ
ನಾದ ಅಹೀಸಾಮಾಕನ ಮಗನಾದ ಒಹೊಲೀಯಾಬ
ನನ್ನೂ ನೇಮಿಸಿದ್ದೇನೆ. ಅದಲ್ಲದೆ ನಾನು ನಿನಗೆ
ಆಜ್ಞಾಪಿಸಿದ್ದೆಲ್ಲವನ್ನು ಮಾಡುವದಕ್ಕೆ ಜಾಣರೆಲ್ಲರ
7 ಹೃದಯದಲ್ಲಿ ಜ್ಞಾನವನ್ನುಂಟುಮಾಡಿದ್ದೇನೆ. ದೇವ
ದರ್ಶನದ ಗುಡಾರ, ಆಜ್ಞಾಶಾಸನಗಳನ್ನು ಇಟ್ಟಿರುವ
ಮಂಜೂಷ, ಅದರ ಮೇಲಿರುವ ಕೃಪಾಸನ, ಗುಡಾ
8 ರದ ಎಲ್ಲಾ ಉಪಕರಣಗಳು, ಮೇಜು ಅದರ ಉಪ
ಕರಣಗಳು, ಚೊಕ್ಕಬಂಗಾರದ ದೀಪಸ್ತಂಭ, ಅದರ
9 ಉಪಕರಣಗಳು, ಧೂಪವೇದಿ, ಯಜ್ಞವೇದಿ, ಅದರ
10 ಉಪಕರಣಗಳು, ಗಂಗಾಳ, ಅದರ ಪೀಠ, ಅಲಂ
ಕಾರವಾದ ದೀಕ್ಷಾವಸ್ತ್ರಗಳು ಅಂದರೆ ಮಹಾಯಾಜಕ
ನಾದ ಆರೋನನಿಗೂ ಅವನ ಮಕ್ಕಳಿಗೂ ಬೇಕಾದ
11 ಯಾಜಕವಸ್ತ್ರಗಳು, ಪಟ್ಟಾಭಿಷೇಕತೈಲ, ಪವಿತ್ರ
ಸ್ಥಾನದ ಸೇವೆಗೆ ಬೇಕಾದ ಪರಿಮಳಧೂಪ ಇವು
ಗಳನ್ನೆಲ್ಲಾ ನಾನು ನಿನಗೆ ಆಜ್ಞಾಪಿಸಿದಂತೆಯೇ ಅವರು
ಮಾಡುವರು.

ಸಬ್ಬತ್‌ದಿನವನ್ನು ಆಚರಿಸಲೇ ಬೇಕೆಂಬದೂ
ಆಜ್ಞಾಶಾಸನಗಳೂ.

ಯೆಹೋವನು ಮೋಶೆಗೆ ಹೀಗಂದನು—ನೀನು 12
ಇಸ್ರಾಯೇಲ್ಯರಿಗೆ ಆಜ್ಞಾಪಿಸ ಬೇಕಾದದ್ದೇನಂದರೆ—
ನಾನು ನೇಮಿಸಿರುವ ಸಬ್ಬತ್ ದಿನಗಳನ್ನು ನೀವು
ತಪ್ಪದೆ ಆಚರಿಸಬೇಕು. ನಿಮ್ಮನ್ನು ದೇವಜನರನ್ನಾಗಿ
ಮಾಡಿರುವ ಯೆಹೋವನು ನಾನೇ ಎಂದು ನೀವು
ತಿಳುಕೊಳ್ಳುವಂತೆ ಇದೇ ನನಗೂ ನಿಮಗೂ ನಿಮ್ಮ
ಸಂತತಿಯವರಿಗೂ ಇರುವ ಗುರುತು.
ಆದಕಾರಣ ನೀವು ಸಬ್ಬತ್‌ದಿನವನ್ನು ದೇವರ ದಿನ
ವೆಂದು ಭಾವಿಸಿ ಆಚರಿಸಬೇಕು. ಅದನ್ನು ಅಪರಿಶುದ್ಧ
ವಾದದ್ದೆಂದು ಎಣಿಸಿ ನಡೆದವನಿಗೆ ಮರಣಶಿಕ್ಷೆಯಾಗ
ಬೇಕು. ಆ ದಿನದಲ್ಲಿ ಕೆಲಸವೇನಾದರೂ ಮಾಡು
ವವನು ತನ್ನ ಕುಲದಿಂದ ತೆಗೆದುಹಾಕಲ್ಪಡಬೇಕು.
ಆರು ದಿನಗಳು ಕೆಲಸಮಾಡಬೇಕು; ಏಳನೆಯ
ದಿವಸ ಸಂಪೂರ್ಣವಾಗಿ ಕೆಲಸವನ್ನು ನಿಲ್ಲಿಸಬೇಕಾದ
ಸಬ್ಬತ್‌ದಿನವಾಗಿದೆ. ಅದು ಯೆಹೋವನಿಗೆ ಪರಿ
ಶುದ್ಧವಾದ ದಿನ; ಇಂಥ ಸಬ್ಬತ್‌ದಿನದಲ್ಲಿ ಕೆಲಸ
ವೇನಾದರೂ ಮಾಡುವವನಿಗೆ ಮರಣಶಿಕ್ಷೆಯಾಗ
ಬೇಕು; ಆದದರಿಂದ ಇಸ್ರಾಯೇಲ್ಯರು ಸಬ್ಬತ್ ದಿವಸ
ವನ್ನು ಆಚರಿಸಬೇಕು. ಈ ಆಚರಣೆಯು ಅವರಿಗೂ
ಅವರ ಸಂತತಿಯವರಿಗೂ ಶಾಶ್ವತವಾದ ನಿಬಂಧನ
ನನಗೂ ಇಸ್ರಾಯೇಲ್ಯರಿಗೂ ನಡುವೆ ಇದು ಸದಾ
ಕಾಲವೂ ಗುರುತು. ಆರು ದಿನಗಳಲ್ಲಿ ಯೆಹೋ
ವನು ಭೂಮ್ಯಾಕಾಶಗಳನ್ನು ಉಂಟುಮಾಡಿ ಏಳ
ನೆಯ ದಿನದಲ್ಲಿ ಕೆಲಸವನ್ನು ಮಾಡದೆ ವಿಶ್ರಮಿಸಿ
ಕೊಂಡನಲ್ಲವೇ.
ಯೆಹೋವನು ಸೀನಾಯಿಬೆಟ್ಟದಲ್ಲಿ ಮೋಶೆಯ
ಸಂಗಡ ಮಾತಾಡುವದನ್ನು ಮುಗಿಸಿದ ಮೇಲೆ ಅವ
ನಿಗೆ ಆ ಎರಡು ಆಜ್ಞಾಶಾಸನಗಳನ್ನು ಕೊಟ್ಟನು
ಅವು ದೇವರ ಕೈಯಿಂದ ಕೆತ್ತಲ್ಪಟ್ಟ ಶಿಲಾಶಾಸನ
ಗಳೇ.

ಇಸ್ರಾಯೇಲ್ಯರು ದ್ರೋಹಿಗಳಾದದ್ದು;
ದೇವರು ಮೋಶೆಯ ಬಿನ್ನಹವನ್ನು ಲಾಲಿಸಿ
ಅವರನ್ನು ತಿರಿಗಿ ಸ್ವೀಕರಿಸಿದ್ದು.

32—34.

ಬಸವನ ಪೂಜೆಯೂ ಅದರ ಫಲವೂ.

ಮೋಶೆ ಬೆಟ್ಟದಿಂದ ಇಳಿಯದೆ ತಡಮಾಡಿ
ದ್ದನ್ನು ಇಸ್ರಾಯೇಲ್ಯರು ನೋಡಿ ಆರೋನನ
ಬಳಿಗೆ ಕೂಡಿಬಂದು—ಏಳು; ನಮ್ಮ ಮುಂದುಗ
ಯಲ್ಲಿ ಹೋಗುವದಕ್ಕೆ ನಮಗೆ 2)ದೇವರುಗಳನ್ನು
ಮಾಡಿಕೊಡು; ಐಗುಪ್ತದೇಶದಿಂದ ನಮ್ಮನ್ನು ಕ

1) ಸಾಂಬ್ರಾಣಿಯನ್ನೂ.

2) ಅಥವಾ: ಒಂದು ದೇವರನ್ನು.

ಕೊಂಡು ಬಂದ ಆ ಮೋಶೆಯು ಏನಾದನೋ ಗೊತ್ತಿಲ್ಲ
ಎಂದು ಹೇಳಿದರು. ಅದಕ್ಕೆ ಆರೋನನು—ನಿಮ್ಮ
ಹೆಂಡರೂ ಗಂಡುಮಕ್ಕಳೂ ಹೆಣ್ಣುಮಕ್ಕಳೂ ಕಿವಿಗೆ
ಹಾಕಿಕೊಂಡಿರುವ ಚಿನ್ನದ ಮುರುವುಗಳನ್ನು ನೀವು
ಕಿತ್ತು ನನಗೆ ಒಪ್ಪಿಸಿರಿ ಎಂದು ಹೇಳಲಾಗಿ ಜನರೆಲ್ಲರು
ತಮ್ಮ ಕಿವಿಗಳಲ್ಲಿದ್ದ ಚಿನ್ನದ ಮುರುವುಗಳನ್ನು
ಕಿತ್ತು ಆರೋನನ ಬಳಿಗೆ ತಂದು ಕೊಟ್ಟರು.
ಅವನು ಆ ಚಿನ್ನವನ್ನು ತನ್ನ ವಶಕ್ಕೆ ತೆಗೆದುಕೊಂಡು
ಬಸವನ ಆಕಾರವನ್ನು ಉಳಿಯಿಂದ ರೂಪಿಸಿ ಎರಕ
ಹೊಯಿಸಲಾಗಿ ಅವರು—ಇಸ್ರಾಯೇಲ್ಯರೇ, ನೋಡಿ
ರಿ; 1)ಇದೇ ನಿಮ್ಮನ್ನು ಐಗುಪ್ತದೇಶದಿಂದ ಕರ
ಕೊಂಡುಬಂದ ದೇವರು ಎಂದು ಹೇಳಿದರು.
ಆರೋನನು ಅದನ್ನು ನೋಡಿ ಬಸವನಿಗೆ ಎದು
ರಾಗಿ ಯಜ್ಞವೇದಿಯನ್ನು ಕಟ್ಟಿಸಿ—ನಾಳೆ ಯೆಹೋ
ವನಿಗೆ ಉತ್ಸವವಾಗಬೇಕು ಎಂದು ಪ್ರಕಟಿಸಿದನು.
ಆದದರಿಂದ ಮರುದಿನದಲ್ಲಿ ಜನರು ಬೆಳಿಗ್ಗೆ ಎದ್ದು
ಸರ್ವಾಂಗಹೋಮಗಳನ್ನೂ ಸಮಾಧಾನಯಜ್ಞಗ
ಳನ್ನೂ ಸಮರ್ಪಿಸಿದರು. ಜನರು ಉಣ್ಣುವದಕ್ಕೂ
ಕುಡಿಯುವದಕ್ಕೂ ಕೂತುಕೊಂಡರು; ಆ ಮೇಲೆ
ಎದ್ದು ಕುಣಿದಾಡಿದರು.
ಹೀಗಿರಲಾಗಿ ಯೆಹೋವನು ಮೋಶೆಗೆ—ನೀನು
ಬೆಟ್ಟದಿಂದ ಇಳಿದುಹೋಗು; ಐಗುಪ್ತದೇಶದಿಂದ
ನೀನು ಕರಕೊಂಡುಬಂದ ನಿನ್ನ ಜನರು ಕೆಟ್ಟು
ಹೋದರು. ನಾನು ಅವರಿಗೆ ಆಜ್ಞಾಪಿಸಿದ ಮಾರ್ಗ
ವನ್ನು ಅವರು ಬೇಗನೆ ಬಿಟ್ಟುಹೋಗಿ ತಮಗೆ
ಲೋಹದ ಬಸವನನ್ನು ಮಾಡಿಸಿಕೊಂಡು ಅದಕ್ಕೆ
ಅಡ್ಡಬಿದ್ದು ಯಜ್ಞಗಳನ್ನು ಅರ್ಪಿಸಿ—ಇಸ್ರಾಯೇ
ಲ್ಯರೇ, ನೋಡಿರಿ; ಇದೇ ನಿಮ್ಮನ್ನು ಐಗುಪ್ತದೇಶ
ದಿಂದ ಕರಕೊಂಡು ಬಂದ ದೇವರು ಎಂದು ಹೇಳಿ
ಕೊಳ್ಳುತ್ತಿದ್ದಾರೆ ಎಂದು ಹೇಳಿದನು.
ಅದಲ್ಲದೆ ಯೆಹೋವನು ಮೋಶೆಗೆ—ಈ ಜನರ
ಸ್ವಭಾವವನ್ನು ನಾನು ನೋಡಿದ್ದೇನೆ; ಇವರು ನನ್ನ
ಆಜ್ಞೆಗೆ ಬೊಗ್ಗದವರಾಗಿದ್ದಾರೆ; ಆದಕಾರಣ ನೀನು
ನನ್ನನ್ನು ತಡೆಯಬೇಡ; ನನ್ನ ಕೋಪಾಗ್ನಿ ಉರಿ
ಯಲಿ, ಅವರನ್ನು ಭಸ್ಮಮಾಡುವೆನು. ತರುವಾಯ
ನಿನ್ನಿಂದಲೇ ಬೇರೆ ಒಂದು ದೊಡ್ಡ ಜನಾಂಗವುಂಟಾಗು
ವಂತೆ ಮಾಡುವೆನು ಎಂದು ಹೇಳಿದನು.
ಆಗ ಮೋಶೆ ತನ್ನ ದೇವರಾದ ಯೆಹೋವನನ್ನು
ಬೇಡಿಕೊಂಡು—ಯೆಹೋವನೇ, ನೀನು ಮಹಾ
ಶಕ್ತಿಯಿಂದಲೂ ಭುಜಬಲದಿಂದಲೂ ಐಗುಪ್ತದೇಶ
ದಿಂದ ಬಿಡಿಸಿದ ನಿನ್ನ ಪ್ರಜೆಗಳ ಮೇಲೆ ಕೋಪ
ದಿಂದುರಿಯುವದೇಕೆ? ಐಗುಪ್ತ್ಯರು ನಿನ್ನ ವಿಷಯ
ದಲ್ಲಿ—ಯೆಹೋವನು ಕೇಡುಮಾಡಬೇಕೆಂಬ ಅಭಿ
ಪ್ರಾಯದಿಂದಲೇ ಇಸ್ರಾಯೇಲ್ಯರನ್ನು ಇಲ್ಲಿಂದ ಕರ
ಕೊಂಡು ಹೋದನಲ್ಲಾ; ಅವರನ್ನು ಬೆಟ್ಟಗಳಲ್ಲಿ
ಸಾಯಿಸಿ ಭೂಮಿಯಲ್ಲಿ ಉಳಿಯದಂತೆ ನಿರ್ಮೂಲ
ಮಾಡುವದಕ್ಕೇನೇ ಅವರನ್ನು ಕರಕೊಂಡು ಹೋದ
ನೆಂದು ಹೇಳುವದಕ್ಕೆ ಆಸ್ಪದವಾಗಬೇಕೇ? ನೀನು

ಕೋಪಾಗ್ನಿಯನ್ನು ಬಿಟ್ಟು ನಿನ್ನ ಪ್ರಜೆಗಳಿಗೆ ಕೇಡುಕನ್ನು
ಮಾಡದೆ ಮನಸ್ಸನ್ನು ಬೇರೆ ಮಾಡಿಕೋ. ನಿನ್ನ 13
ಸೇವಕರಾದ ಅಬ್ರಹಾಮ್ ಇಸಾಕ್ ಯಾಕೋಬ
ರನ್ನು ನೆನಪಿಗೆ ತಂದುಕೋ. ನೀನು ನಿನ್ನ ಜೀವ
ದಾಣೆ ಪ್ರಮಾಣಮಾಡಿ ಅವರಿಗೆ—ನಾನು ನಿಮ್ಮ
ಸಂತತಿಯನ್ನು ಹೆಚ್ಚಿಸಿ ಆಕಾಶದ ನಕ್ಷತ್ರಗಳಷ್ಟು
ಅಸಂಖ್ಯವಾಗಿ ಮಾಡುವೆನೆಂದೂ ನಾನು ಸೂಚಿ
ಸಿರುವ ಈ ಪ್ರದೇಶಗಳನ್ನೆಲ್ಲಾ ನಿಮ್ಮ ಸಂತತಿಯವ
ರಿಗೆ ಕೊಡುವೆನೆಂದೂ ಅವರು ಈ ದೇಶವನ್ನು ಶಾಶ್ವತ
ವಾಗಿ ಸ್ವಾಧೀನದಲ್ಲಿಟ್ಟುಕೊಳ್ಳುವರೆಂದೂ ಮಾತು
ಕೊಡಲಿಲ್ಲವೇ ಅಂದನು.
ಆಗ ಯೆಹೋವನು ತನ್ನ ಪ್ರಜೆಗಳಿಗೆ ಮಾಡುವೆ 14
ನೆಂದು ತಾನು ಹೇಳಿದ ಕೇಡಿನ ವಿಷಯದಲ್ಲಿ ಮನ
ಸ್ಸನ್ನು ಬೇರೆ ಮಾಡಿಕೊಂಡನು.
ಆಜ್ಞಾಶಾಸನಗಳಾದ ಆ ಎರಡು ಕಲ್ಲಿನ ಹಲಿಗೆ 15
ಗಳನ್ನು ಮೋಶೆಯು ಕೈಯಲ್ಲಿ ಹಿಡಿದುಕೊಂಡು
ಬೆಟ್ಟದಿಂದ ಇಳಿದುಬಂದನು. ಆ ಹಲಿಗೆಗಳ ಎರಡು
ಪಕ್ಕಗಳಲ್ಲಿಯೂ ಅಕ್ಷರಗಳು ಬರೆದಿದ್ದವು; ಈ ಕಡೆ
ಯೂ ಆ ಕಡೆಯೂ ಬರಹವಿತ್ತು. ಆ ಶಿಲಾಶಾಸನ 16
ಗಳು ದೇವರ ಕೆಲಸವೇ; ಅವುಗಳಲ್ಲಿ ಬರೆದದ್ದು
ದೇವರು ಕೆತ್ತಿದ ಅಕ್ಷರಗಳೇ.
ಇಸ್ರಾಯೇಲ್ಯರು ಉತ್ಸಾಹದಿಂದ ಕೂಗಾಡುತ್ತಾ 17
ಇರಲಾಗಿ ಯೆಹೋಶುವನು ಆ ಶಬ್ದವನ್ನು ಕೇಳಿ—
ಪಾಳೆಯದ ಕಡೆಯಿಂದ ಯುದ್ಧಧ್ವನಿ ಕೇಳಿಸುತ್ತದೆ
ಎಂದು ಮೋಶೆಗೆ ಹೇಳಿದನು. ಅದಕ್ಕವನು—ನನಗೆ 18
ಕೇಳಿಸುವದು ಜಯಧ್ವನಿಯೂ ಅಲ್ಲ, ಅಪಜಯ
ಧ್ವನಿಯೂ ಅಲ್ಲ, ಉತ್ಸವಧ್ವನಿಯೇ ಅಂದನು.
ಅವನು ಪಾಳೆಯದ ಹತ್ತಿರಕ್ಕೆ ಬಂದು ಆ ಬಸವ 19
ನನ್ನೂ ಜನರು ಕುಣಿದಾಡುವದನ್ನೂ ಕಂಡಾಗ ಬಹು
ಕೋಪಗೊಂಡು ಕೈಯಲ್ಲಿದ್ದ ಶಿಲಾಶಾಸನಗಳನ್ನು
ಬೆಟ್ಟದ ಬುಡದಲ್ಲಿ ನೆಲಕ್ಕೆ ಹಾಕಿ ಒಡೆದುಬಿಟ್ಟನು.
ಜನರು ಮಾಡಿಸಿಕೊಂಡಿದ್ದ ಬಸವನನ್ನು ಅವನು 20
ಹಿಡಿದು ಬೆಂಕಿಯಿಂದ ಸುಟ್ಟು ಅರೆದು ಪುಡಿಪುಡಿ
ಮಾಡಿ ನೀರಿನ ಮೇಲೆ ಚೆಲ್ಲಿ ಇಸ್ರಾಯೇಲ್ಯರಿಗೆ ಆ
ನೀರನ್ನು ಕುಡಿಸಿದನು.
ಆಗ ಅವನು ಆರೋನನನ್ನು—ನೀನು ಈ ಜನ 21
ರಿಂದ ಮಹಾಪರಾಧವನ್ನು ಮಾಡಿಸಿದಿಯಲ್ಲಾ; ಹೀಗೆ
ಮಾಡಿಸುವದಕ್ಕೆ ಇವರು ನಿನಗೇನು ಮಾಡಿದರು
ಎಂದು ವಿಚಾರಿಸಲು ಆರೋನನು—ಸ್ವಾಮಿಯವರು 22
ರೋಷಗೊಳ್ಳಬಾರದು; ಈ ಜನರು ದುಷ್ಟಸ್ವಭಾವಿ
ಗಳೆಂಬದನ್ನು ಬಲ್ಲಿರಷ್ಟೆ. ಅವರು ನನ್ನ ಬಳಿಗೆ 23
ಬಂದು—ನಮ್ಮ ಮುಂದುಗಡೆಯಲ್ಲಿ ಹೋಗುವದಕ್ಕೆ
ದೇವರುಗಳನ್ನು ಮಾಡಿಸಿಕೊಡು; ಐಗುಪ್ತದೇಶದಿಂದ
ನಮ್ಮನ್ನು ಕರಕೊಂಡುಬಂದ ಮೋಶೆಯು ಏನಾ
ದನೋ ಗೊತ್ತಿಲ್ಲ ಅಂದರು. ಅದಕ್ಕೆ ನಾನು— 24
ಯಾರಲ್ಲಿ ಚಿನ್ನದ ಒಡವೆಯಿದೆಯೋ ಅವರೆಲ್ಲರು
ಅದನ್ನು ತೆಗೆದು ನನಗೆ ಕೊಡಬೇಕು ಅಂದೆನು
ಅವರು ಹಾಗೆ ಕೊಡಲಾಗಿ ನಾನು ಆ ಚಿನ್ನವನ್ನು

1) ಅಥವಾ: ಇವೇ . . . ದೇವರುಗಳು.

ಬೆಂಕಿಯಲ್ಲಿ ಹಾಕಿದಾಗ ಈ ಬಸವ ಉಂಟಾಯಿತು
ಅಂದನು.
25 ಜನರು ಅಂಕೆತಪ್ಪಿ ತಮ್ಮ ಇಷ್ಟ ಬಂದಂತೆ ಮಾಡು
ವದಕ್ಕೆ ಆರೋನನು ಅವರನ್ನು ಬಿಟ್ಟದ್ದರಿಂದ ಅವರ
ವಿರೋಧಿಗಳು ಅಪಹಾಸ್ಯಮಾಡುವದಕ್ಕೆ ಆಸ್ಪದ
26 ವಾಯಿತು. ಅವರು ಕ್ರಮವಿಲ್ಲದೆ ಸ್ವೇಚ್ಛೆಯಾಗಿ
ನಡೆದುಕೊಳ್ಳುವದನ್ನು ಮೋಶೆ ನೋಡಿ ಪಾಳೆಯದ
ಬಾಗಲಲ್ಲಿ ನಿಂತುಕೊಂಡು— ಯೆಹೋವನ ಪಕ್ಷದವ
ರೆಲ್ಲರು ನನ್ನ ಬಳಿಗೆ ಬರಬೇಕು ಎಂದು ಹೇಳಿದನು.
ಆಗ ಲೇವಿಯ ಕುಲದವರೆಲ್ಲರು ಅವನ ಬಳಿಗೆ
27 ಕೂಡಿ ಬಂದರು. ಮೋಶೆ ಅವರಿಗೆ— ಇಸ್ರಾಯೇ
ಲ್ಯರ ದೇವರಾದ ಯೆಹೋವನು ಅಪ್ಪಣೆಮಾಡುವದೇ
ನಂದರೆ— ನಿಮ್ಮಲ್ಲಿ ಪ್ರತಿಯೊಬ್ಬನು ಕತ್ತಿಯನ್ನು
ಸೊಂಟಕ್ಕೆ ಕಟ್ಟಿಕೊಂಡು ಪಾಳೆಯದ ಮಧ್ಯದಲ್ಲಿ
ಒಂದು ಬಾಗಲಿನಿಂದ ಮತ್ತೊಂದು ಬಾಗಲಿನ ವರೆಗೂ
ಹೋಗುತ್ತಾ ಬರುತ್ತಾ ಅಣ್ಣ ತಮ್ಮ ಗೆಳೆಯ ನೆರೆ
ಯವ ಎಂದು ಲಕ್ಷಿಸದೆ ಜನರನ್ನು ಸಂಹರಿಸಬೇಕು
ಎಂದು ಹೇಳಿದನು.
28 ಲೇವಿಯ ಕುಲದವರು ಮೋಶೆಯ ಆಜ್ಞೆಯ
ಮೇರೆಗೆ ಮಾಡಿದರು. ಆ ದಿನದಲ್ಲಿ ಜನರೊಳಗೆ
ಹೆಚ್ಚುಕಡಿಮೆ ಮೂರು ಸಾವಿರ ಮಂದಿ ಕೊಲ್ಲಲ್ಪ
29 ಟ್ಟರು. ಮೋಶೆ [ಲೇವಿಯರಿಗೆ]— ಈ ಹೊತ್ತು
ನಿಮ್ಮಲ್ಲಿ ಪ್ರತಿಯೊಬ್ಬನು ಮಗನನ್ನಾದರೂ ಅಣ್ಣ
ತಮ್ಮಂದಿರನ್ನಾದರೂ ಲಕ್ಷ್ಯಕ್ಕೆ ತೆಗೆದುಕೊಳ್ಳದೆ
ನಿಮ್ಮನ್ನು ಯೆಹೋವನ ಸೇವೆಗೇ ಪ್ರತಿಷ್ಠಿಸಿಕೊಳ್ಳ
ಬೇಕು; ಹಾಗಾದರೆ ಆತನು ಈ ಹೊತ್ತೇ ನಿಮ್ಮನ್ನು
ಆಶೀರ್ವದಿಸುವನು ಎಂದು ಹೇಳಿದನು.

ಮೋಶೆಯು ಇಸ್ರಾಯೇಲ್ಯರಿಗಾಗಿ ದೇವರನ್ನು ಬೇಡಿಕೊಂಡದ್ದು.

30 ಮರುದಿನದಲ್ಲಿ ಮೋಶೆ ಜನರಿಗೆ— ನೀವು ಮಹಾ
ಪಾಪವನ್ನು ಮಾಡಿದಿರಿ. ಆದರೂ ನಾನು ಬೆಟ್ಟವನ್ನು
ಹತ್ತಿ ಯೆಹೋವನ ಸನ್ನಿಧಿಗೆ ಹೋಗುವೆನು; ಒಂದು
ವೇಳೆ ನೀವು ಮಾಡಿದ ಪಾಪಕೃತ್ಯಕ್ಕೆ ಕ್ಷಮಾಪ
ಣೆಯು ನನ್ನ ಮೂಲಕ ದೊರಕೀತು ಎಂದು ಹೇಳಿ
ದನು.
31 ಆಗ ಮೋಶೆ ಯೆಹೋವನ ಬಳಿಗೆ ತಿರಿಗಿ ಹೋ
ಗಿ— ಅಯ್ಯೋ ಅಯ್ಯೋ, ಈ ಜನರು ಮಹಾಪಾಪ
ವನ್ನು ಮಾಡಿದ್ದಾರೆ; ಚಿನ್ನದ [1]ದೇವರನ್ನು ಮಾಡಿ
ಕೊಂಡಿದ್ದಾರೆ. ಆದರೂ ನೀನು ಕರುಣವಿಟ್ಟು
32 ಅವರ ಪಾಪವನ್ನು ಕ್ಷಮಿಸಬೇಕು. ಇಲ್ಲವಾದರೆ
ನೀನು ಬರೆದಿರುವ [ಜೀವಿತರ] ಪಟ್ಟಿಯಿಂದ ನನ್ನ
ಹೆಸರನ್ನೂ ಅಳಿಸಿಬಿಡಬೇಕೆಂದು ಕೇಳಿಕೊಳ್ಳುತ್ತೇನೆ
ಎಂದು ಪ್ರಾರ್ಥಿಸಿದನು.
33 ಅದಕ್ಕೆ ಯೆಹೋವನು— ಯಾರಾರು ನನ್ನ ಮಾ
ತನ್ನು ಮೀರಿ ಪಾಪಮಾಡಿದ್ದಾರೋ ಅವರ ಹೆಸರು
ಗಳನ್ನೇ ನನ್ನ ಬಳಿಯಲ್ಲಿರುವ ಪಟ್ಟಿಯಿಂದ ನಾನು
34 ಅಳಿಸಿಬಿಡುವೆನು. ನೀನು ಇಲ್ಲಿಂದ ಹೊರಟು
ನಾನು ನಿನಗೆ ಹೇಳಿದ ದೇಶಕ್ಕೆ ಈ ಜನರನ್ನು ನಡಿಸಿ
ಕೊಂಡು ಹೋಗು. ನನ್ನ ದೂತನು ನಿನ್ನ ಮುಂದು
ಗಡೆಯಲ್ಲಿ ನಡೆಯುವನು. ಆದರೂ ನಾನು ಅವ
ರನ್ನು ಶಿಕ್ಷಿಸುವಾಗ ಅವರ ಪಾಪಕ್ಕೆ ತಕ್ಕಂತೆ ಶಿಕ್ಷಿಸು
ವೆನು.
ಇಸ್ರಾಯೇಲ್ಯರು ಆರೋನನ ಕೈಯಿಂದ ಆ ಬಸ
ವನನ್ನು ಮಾಡಿಸಿಕೊಂಡದ್ದರಿಂದ ಯೆಹೋವನು ಅವ
ರನ್ನು ದಂಡಿಸಿದನು.
3 ಯೆಹೋವನು ಮೋಶೆಗೆ ಹೇಳಿದ್ದೇನಂದರೆ—
ನೀನು ಐಗುಪ್ತದೇಶದಿಂದ ಕರತಂದ ಜನರನ್ನು
ನಿನ್ನ ಸಂಗಡ ಕರಕೊಂಡು ಈ ಸ್ಥಳವನ್ನು ಬಿಟ್ಟು
ನಾನು ಅಬ್ರಹಾಮ್ ಇಸಾಕ್ ಯಾಕೋಬರಿಗೆ—
ನಿಮ್ಮ ಸಂತತಿಯವರಿಗೆ ಕೊಡುವೆನೆಂದು ಪ್ರಮಾಣ
ಮಾಡಿ ಕೊಟ್ಟ ದೇಶಕ್ಕೆ ಹೊರಟುಹೋಗು. ನಾನು
ನಿನ್ನ ಮುಂದುಗಡೆಯಲ್ಲಿ ದೂತನನ್ನು ಕಳುಹಿಸಿ
ಕಾನಾನ್ಯರನ್ನೂ ಅಮೋರಿಯರನ್ನೂ ಹಿತ್ತಿಯರನ್ನೂ
ಪೆರಿಜ್ಜೀಯರನ್ನೂ ಹಿವ್ವಿಯರನ್ನೂ ಯೆಬೂಸಿಯ
ರನ್ನೂ ಹೊರಡಿಸುವೆನು. ಅದು ಹಾಲೂ ಜೇನು
ಹರಿಯುವ ದೇಶವೇ. ಆದರೆ ನಾನೇ ನಿಮ್ಮ ಸಂಗಡ
ಬರುವದಿಲ್ಲ; ನೀವು ನನ್ನ ಆಜ್ಞೆಗೆ ಬೊಗ್ಗದವರಾದ್ದ
ರಿಂದ ನಾನು ದಾರಿಯಲ್ಲಿ ನಿಮ್ಮನ್ನು ಸಂಹರಿಸೇನು
ಅಂದನು.
ಇಸ್ರಾಯೇಲ್ ಜನರು ಈ ದುಃಖಕರವಾದ ವಾಕ್ಯ
ವನ್ನು ಕೇಳಿ ಮನಗುಂದಿದವರಾದರು; ಅವರಲ್ಲಿ
ಒಬ್ಬರೂ ಆಭರಣಗಳನ್ನು ಧರಿಸಿಕೊಳ್ಳಲಿಲ್ಲ.
ಯೆಹೋವನು ಮೋಶೆಗೆ ಹೀಗಂದನು— ನೀನು
ಇಸ್ರಾಯೇಲ್ಯರಿಗೆ ಹೇಳಬೇಕಾದದ್ದೇನಂದರೆ— ನೀವು
ನನ್ನ ಆಜ್ಞೆಗಳಿಗೆ ಬೊಗ್ಗದವರೇ. ನಾನು ಒಂದು
ಕ್ಷಣಮಾತ್ರ ನಿಮ್ಮ ಮಧ್ಯದಲ್ಲಿ ಬರುವದಾದರೆ ನೀವು
ನಿರ್ಮೂಲವಾಗಿ ಹೋದೀರಿ, ನೋಡಿಕೊಳ್ಳಿರಿ. ಆದ
ಕಾರಣ ನಿಮ್ಮ ಆಭರಣಗಳನ್ನು ಈಗ ತೆಗೆದುಬಿಡಿರಿ
ನಿಮಗೆ ನಾನು ಏನು ಮಾಡಬೇಕೆಂಬದನ್ನು
ಆಲೋಚಿಸಿಕೊಳ್ಳುವೆನು ಅಂದನು. ಆದದರಿಂದ
ಇಸ್ರಾಯೇಲ್ಯರು ಹೋರೆಬ್ ಬೆಟ್ಟದಿಂದೀಚೆಗೆ ಆಭ
ರಣಗಳನ್ನು ಧರಿಸಿಕೊಳ್ಳದೆ ಇದ್ದರು.
ಮೋಶೆ ಡೇರೆಯನ್ನು ಪಾಳೆಯದ ಹೊರಗೆ ದೂರ
ವಾಗಿ ಹಾಕಿಸುತ್ತಿದ್ದನು. ಅದಕ್ಕೆ ದೇವದರ್ಶನದ
ಡೇರೆ ಎಂದು ಹೆಸರಿಟ್ಟನು. ಯೆಹೋವನ ಉತ್ತರ
ವನ್ನು ಬಯಸಿದವರೆಲ್ಲರು ಪಾಳೆಯದ ಹೊರಗಿದ್ದ
ದೇವದರ್ಶನದ ಡೇರೆಗೆ ಹೋಗುತ್ತಿದ್ದರು. ಮೋಶೆ ಆ
ಡೇರೆಗೆ ಹೋಗುವಾಗೆಲ್ಲಾ ಜನರೆಲ್ಲರು ಎದ್ದು ತಮ
ತಮ್ಮ ಡೇರೆಗಳ ಬಾಗಲಲ್ಲಿ ನಿಂತು ಮೋಶೆಯು ಆ
ಡೇರೆಯೊಳಕ್ಕೆ ಹೋಗುವ ತನಕ ಅವನ ಹಿಂದೆ
ನೋಡುತ್ತಿದ್ದರು. ಮೋಶೆ ಆ ಡೇರೆಯೊಳಕ್ಕೆ ಹೋಗ
ಕೂಡಲೆ ಮೇಘಸ್ತಂಭವು ಇಳಿದು ಆ ಡೇರೆಯ
ಬಾಗಲಲ್ಲಿ ನಿಲ್ಲುತ್ತಿತ್ತು. ಆಗ ಯೆಹೋವನು
ಮೋಶೆಯ ಸಂಗಡ ಮಾತಾಡುವನು. ಆ ಮೇಘ
ಸ್ತಂಭವು ಡೇರೆಯ ಬಾಗಲಲ್ಲಿ ನಿಂತದ್ದನ್ನು ಜನರೆಲ್ಲರು

1) ಅಥವಾ: ದೇವರುಗಳನ್ನು.

ನೋಡಿ ಎದ್ದು ತಮ್ಮ ತಮ್ಮ ಡೇರೆಗಳ ಬಾಗ
ಲಲ್ಲೇ ಅಡ್ಡಬೀಳುವರು. ಮನುಷ್ಯರೊಳಗೆ ಒಬ್ಬನು
ತನ್ನ ಸ್ನೇಹಿತನೊಡನೆ ಹೇಗೆ ಮಾತಾಡುವನೋ
ಹಾಗೆಯೇ ಯೆಹೋವನು ಮೋಶೆಯ ಸಂಗಡ
ಮುಖಾಮುಖಿಯಾಗಿ ಮಾತಾಡುತ್ತಿದ್ದನು; ತರು
ವಾಯ ಮೋಶೆ ಪಾಳೆಯಕ್ಕೆ ತಿರಿಗಿ ಬರುವನು. ಆದರೆ
ನೂನನ ಮಗನಾದ ಯೆಹೋಶುವನೆಂಬ ಹೆಸರುಳ್ಳ
ಯೌವನಸ್ಥನಾದ ಅವನ ಶಿಷ್ಯನು ಆ ಡೇರೆಯಲ್ಲೇ
ಇದ್ದನು; ಅದರ ಬಳಿಯಿಂದ ಹೋಗಲೇ ಇಲ್ಲ.

ಮೋಶೆ ಯೆಹೋವನಿಗೆ—ಈ ಜನರನ್ನು ಆ
ಸೀಮೆಗೆ ನಡಿಸಿಕೊಂಡುಹೋಗಬೇಕೆಂದು ನೀನು
ನನಗೆ ಆಜ್ಞಾಪಿಸಿದಿಯಷ್ಟೆ; ನನ್ನ ಸಂಗಡ ಯಾರನ್ನು
ಕಳುಹಿಸುವಿಯೋ ಅದನ್ನು ನನಗೆ ತಿಳಿಸಲಿಲ್ಲ. ನಿನ್ನ
ಹೆಸರನ್ನು ಗೊತ್ತುಮಾಡಿದ್ದೇನೆಂದೂ ನಿನಗೆ ನನ್ನ
ದಯೆ ದೊರಕಿತೆಂದೂ ನೀನು ನನಗೆ ಹೇಳಿದಿ
ಯಲ್ಲಾ. ನನಗೆ ನಿನ್ನ ದಯೆ ದೊರಕಿದ್ದಾದರೆ
ನಾನು ನಿನ್ನನ್ನು ಬಲ್ಲವನಾಗಿರುವಂತೆ ನಿನ್ನ ಮಾರ್ಗ
ವನ್ನು ನನಗೆ ತೋರಿಸು; ಆಗ ನಿನ್ನ ದಯೆ ನನಗೆ
ದೊರೆಯಿತೆಂದು ನನಗೆ ತಿಳಿದಿರುವದು; ಈ ಜನವು
ನಿನ್ನ ಪ್ರಜೆಯೆಂದು ಜ್ಞಾಪಕಮಾಡಿಕೋ ಎಂದು
ಅರಿಕೆಮಾಡಿದನು.

ಅದಕ್ಕೆ ಯೆಹೋವನು—ನಾನೇ ನಿಮ್ಮ ಜೊತೆ
ಯಲ್ಲಿ ಬಂದು ನಿಮಗೆ ವಿಶ್ರಾಂತಿಯನ್ನು ಉಂಟು
ಮಾಡುವೆನು ಅಂದನು.

ಅದಕ್ಕೆ ಮೋಶೆ—ನೀನೇ ನಮ್ಮ ಸಂಗಡ ಬಾರದೆ
ಹೋದರೆ ನಮ್ಮನ್ನು ಇಲ್ಲಿಂದ ಹೋಗಗೊಡಿಸಬಾ
ರದು. ನನಗೂ ನಿನ್ನ ಪ್ರಜೆಗಳಾದ ಇವರಿಗೂ ನಿನ್ನ
ಅನುಗ್ರಹ ದೊರಕಿತೆಂಬದು ನೀನೇ ನಮ್ಮ ಸಂಗಡ
ಬರುವದರಿಂದಲೇ ಹೊರತು ಬೇರೆ ಯಾತರಿಂದ ತಿಳಿ
ದುಬರುವದು? ಇದರಿಂದ ನಾನೂ ನಿನ್ನ ಪ್ರಜೆಗಳಾದ
ಇವರೂ ಭೂಮಿಯಲ್ಲಿರುವ ಬೇರೆ ಎಲ್ಲಾ ಜನಗಳಿ
ಗಿಂತಲೂ ವಿಶೇಷವಾಗಿದ್ದೇವೆಂಬದು[1] ತೋರುವದು
ಅಂದನು.

ಯೆಹೋವನು ಮೋಶೆಗೆ—ನಿನಗೆ ನನ್ನ ಅನು
ಗ್ರಹ ದೊರಕಿದ್ದರಿಂದಲೂ ನಾನು ನಿನ್ನ ಹೆಸರನ್ನು
ಗೊತ್ತುಮಾಡಿದ್ದರಿಂದಲೂ ನಿನಗೋಸ್ಕರ ಈ ಕಾರ್ಯ
ವನ್ನೂ ಮಾಡುವೆನು ಎಂದು ಹೇಳಿದನು.

ಅದಕ್ಕೆ ಮೋಶೆ—ನಿನ್ನ ಮಹಿಮೆಯನ್ನು ದಯ
ಮಾಡಿ ನನಗೆ ತೋರಿಸು ಎಂದು ಕೇಳಲಾಗಿ ಆತ
ನು—ನನ್ನ ಸರ್ವೋತ್ತಮತ್ವವನ್ನು ನಿನ್ನೆದುರಾಗಿ
ದಾಟಿಹೋಗುವಂತೆ ಮಾಡುವೆನು; ಯೆಹೋವನ
ನಾಮದ ಮಹತ್ವವನ್ನು ನಿನ್ನೆದುರಾಗಿ ಪ್ರಕಟಿಸು
ವೆನು. ಯಾವನ ಮೇಲೆ ದಯೆಯಿಡುವೆನೋ ಅವನ
ಮೇಲೆ ದಯೆಯಿಡುವೆನು; ಯಾರನ್ನು ಕರುಣಿಸು
ವೆನೋ ಅವರನ್ನು ಕರುಣಿಸುವೆನು ಅಂದನು. ಆದರೆ
ಆತನು ಅವನಿಗೆ—ನೀನು ನನ್ನ ಮುಖವನ್ನು
ನೋಡುವದಕ್ಕಾಗದು; ಮನುಷ್ಯರಲ್ಲಿ ಯಾವನೂ
ನನ್ನನ್ನು ನೋಡಿ ಜೀವಿಸಲಾರನು ಎಂದು ಹೇಳಿ
ದನು. ಮತ್ತು ಯೆಹೋವನು ಅವನಿಗೆ—ಇಲ್ಲಿ 21
ನನ್ನ ಸಮೀಪದಲ್ಲೇ ಒಂದು ಸ್ಥಳವಿದೆ; ನೀನು
ಈ ಬಂಡೆಯ ಮೇಲೆಯೇ ನಿಂತಿರಬೇಕು. ನನ್ನ 22
ಪ್ರಭಾವವು ನಿನ್ನೆದುರಾಗಿ ದಾಟಿಹೋಗುವ ಕಾಲ
ದಲ್ಲಿ ನಾನು ಈ ಬಂಡೆಯ ಸಂದಿನಲ್ಲಿ ನಿನ್ನನ್ನು
ಇರಿಸಿ ನಿನ್ನ ಮುಂದೆ ದಾಟಿಹೋಗುವ ತನಕ ನಿನ್ನ
ಮೇಲೆ ಕೈ ಮುಚ್ಚುವೆನು; ತರುವಾಯ ನಾನು ಕೈ 23
ತೆಗೆದಾಗ ನೀನು ನನ್ನ ಹಿಂಭಾಗವನ್ನು ನೋಡು
ವಿಯೇ ಹೊರತು ನನ್ನ ಮುಖವು ನಿನಗೆ ಕಾಣಿಸು
ವದಿಲ್ಲ ಎಂದು ಹೇಳಿದನು.

ದೇವರು ಇಸ್ರಾಯೇಲ್ಯರಿಗೆ ದಶಾಜ್ಞೆಗಳನ್ನು ತಿರಿಗಿ
ಬರಿಸಿಕೊಟ್ಟದ್ದು.

34 ಯೆಹೋವನು ಮೋಶೆಗೆ—ನೀನು ಮೊದಲಿನ
ಕಲ್ಲಿನ ಹಲಿಗೆಗಳಂತೆ ಇನ್ನು ಎರಡು ಕಲ್ಲಿನ
ಹಲಿಗೆಗಳನ್ನು ಸಿದ್ಧಪಡಿಸಿಕೋ. ನೀನು ಒಡೆದು
ಬಿಟ್ಟ ಆ ಮೊದಲನೆಯ ಹಲಿಗೆಗಳ ಮೇಲಿದ್ದ ವಾಕ್ಯ
ಗಳನ್ನು ನಾನು ಈ ಹಲಿಗೆಗಳ ಮೇಲೆ ಬರೆಯುವೆನು.
ಬೆಳಿಗ್ಗೆ ನೀನು ಸಿದ್ಧವಾಗಿದ್ದು ಸೀನಾಯಿಬೆಟ್ಟವನ್ನು 2
ಹತ್ತಿ ಅಲ್ಲಿ ಬೆಟ್ಟದ ತುದಿಯ ಮೇಲೆ ನನ್ನ ಸನ್ನಿಧಿ
ಯಲ್ಲಿ ನಿಂತಿರಬೇಕು. ಯಾರೂ ನಿನ್ನ ಜೊತೆಯಲ್ಲಿ 3
ಮೇಲಕ್ಕೆ ಬರಕೂಡದು. ಈ ಬೆಟ್ಟದ ಪ್ರದೇಶದಲ್ಲಿ
ಯಾರೂ ಎಲ್ಲಿಯೂ ಕಾಣಿಸಕೂಡದು; ಕುರಿದನ
ಗಳೂ ಬೆಟ್ಟದ ಮುಂದೆ ಮೇಯಕೂಡದು ಎಂದು
ಹೇಳಿದನು. ಆದಕಾರಣ ಮೋಶೆ ಮೊದಲಿದ್ದ ಹಲಿಗೆ 4
ಗಳಂತೆ ಎರಡು ಕಲ್ಲಿನ ಹಲಿಗೆಗಳನ್ನು ಸಿದ್ಧಪಡಿಸಿ
ಕೊಂಡು ಯೆಹೋವನ ಅಪ್ಪಣೆಯ ಮೇರೆಗೆ ಬೆಳಿಗ್ಗೆ
ಎದ್ದು ಆ ಎರಡು ಕಲ್ಲಿನ ಹಲಿಗೆಗಳನ್ನು ಕೈಯಲ್ಲಿ
ತೆಗೆದುಕೊಂಡು ಸೀನಾಯಿಬೆಟ್ಟವನ್ನು ಹತ್ತಿದನು.
ಆಗ ಯೆಹೋವನು ಮೇಘದಿಂದ ಆವರಿಸಲ್ಪಟ್ಟವ 5
ನಾಗಿ ಇಳಿದು ಬಂದು ಅಲ್ಲಿ ಅವನ ಹತ್ತಿರ ನಿಂತು[2]
ಯೆಹೋವನೆಂಬ ನಾಮವನ್ನು ಪ್ರಕಟಿಸಿದನು.

ಯೆಹೋವನು ಮೋಶೆಯ ಎದುರಾಗಿ ಹೋಗು 6
ತ್ತಾ ಪ್ರಕಟವಾಗಿ ಹೇಳಿದ್ದೇನಂದರೆ:—

ಯೆಹೋವ, ಯೆಹೋವ ಕನಿಕರವೂ ದಯೆ
ಯೂ ಉಳ್ಳ ದೇವರು; ದೀರ್ಘಶಾಂತನೂ ಪ್ರೀತಿ
ಯೂ ನಂಬಿಕೆಯೂ ಉಳ್ಳವನು; ಸಾವಿರಾರು 7
ತಲೆಗಳ ವರೆಗೂ ದಯೆತೋರಿಸುವವನು; ದೋ
ಷಾಪರಾಧಪಾಪಗಳನ್ನು ಕ್ಷಮಿಸುವವನು; ಆದ
ರೂ [ಅಪರಾಧಗಳನ್ನು] ಶಿಕ್ಷಿಸದೆ ಬಿಡದವನು;
ತಂದೆಗಳ ದೋಷಫಲವನ್ನು ಮಕ್ಕಳ ಮೇಲೆ
ಮೂರು ನಾಲ್ಕು ತಲೆಗಳ ವರೆಗೆ ಬರಮಾಡುವವ
ನು ಎಂಬದೇ.

ಮೋಶೆ ತ್ವರೆಪಟ್ಟು ನೆಲದಲ್ಲಿ ಅಡ್ಡಬಿದ್ದು ನಮಸ್ಕ 8
ರಿಸಿ—ಕರ್ತನೇ, ನಿನ್ನ ಅನುಗ್ರಹವು ನನಗೆ ದೊರಕಿ 9

1) ಅಥವಾ: ಪ್ರತ್ಯೇಕವಾಗಿದ್ದೇವೆಂಬದು. 2) ಅಥವಾ: ಇಳಿದು ಬಂದಾಗ ಮೋಶೆ ಅಲ್ಲಿ ಯೆಹೋವನ ಸನ್ನುಖದಲ್ಲೇ ನಿಂತು
ನ ಹೆಸರನ್ನು ಹೇಳಿಕೊಂಡು ಆರಾಧಿಸಿದನು.

ಡ್ವಾದರೆ ನೀನೇ ನಮ್ಮ ಜೊತೆಯಲ್ಲಿ ಬರಬೇಕು.
ನಮ್ಮ ಜನರು ಮೊಂಡರೇ; ಆದಾಗ್ಯೂ ನೀನು ನಮ್ಮ
ಪಾಪಗಳನ್ನೂ ಅಧರ್ಮಗಳನ್ನೂ ಕ್ಷಮಿಸಿ ನಿನ್ನ ಜನ
ರಾಗುವಂತೆ ನಮ್ಮನ್ನು ಸ್ವೀಕರಿಸಬೇಕೆಂದು ಪ್ರಾರ್ಥಿಸಿ
ದನು.
10 ಯೆಹೋವನು ಹೇಳಿದ್ದೇನಂದರೆ—ನಾನು ಒಂದು
ನಿಬಂಧನವನ್ನು ಸ್ಥಾಪಿಸುತ್ತೇನೆ, ಕೇಳು; ಲೋಕದಲ್ಲಿ
ಎಲ್ಲಿಯೂ ಯಾವ ಜನಾಂಗದಲ್ಲಿಯಾದರೂ ನಡೆ
ಯದಂಥ ಮಹತ್ಕಾರ್ಯಗಳನ್ನು ನಿನ್ನ ಜನರೆಲ್ಲರು
ನೋಡುವಂತೆ ನಡಿಸುವೆನು. ನಿಮ್ಮ ಸುತ್ತಮುತ್ತ
ಲಿರುವ ಎಲ್ಲಾ ಜನರೂ ಯೆಹೋವನು ಮಾಡುವ
ಮಹತ್ಕಾರ್ಯವನ್ನು ನೋಡುವರು. ನಾನು ನಿಮ್ಮ
ವಿಷಯದಲ್ಲಿ ಮಾಡಬೇಕೆಂದಿರುವದು ಭಯಂಕರವಾ
ದದ್ದು.
11 ನಾನು ಈ ಹೊತ್ತು ನಿಮಗೆ ಆಜ್ಞಾಪಿಸುವದನ್ನು
ನೀವು ಅನುಸರಿಸಿ ನಡೆಯಬೇಕು. ಇಗೋ, ನಾನು
ಅಮೋರಿಯರನ್ನೂ ಕಾನಾನ್ಯರನ್ನೂ ಹಿತ್ತಿಯರನ್ನೂ
ಪೆರಿಜೀಯರನ್ನೂ ಹಿವ್ವಿಯರನ್ನೂ ಯೆಬೂಸಿಯರ
12 ನ್ನೂ ನಿಮ್ಮ ಮುಂದೆ ಹೊರಡಿಸುವೆನು. ನೀವು
ಸೇರುವ ದೇಶದ ನಿವಾಸಿಗಳ ಸಂಗಡ ಯಾವ ಒಡಂಬ
ಡಿಕೆಯನ್ನೂ ಮಾಡಿಕೊಳ್ಳಬಾರದು ನೋಡಿಕೊಳ್ಳಿರಿ;
ಮಾಡಿಕೊಂಡರೆ ಅದು ನಿಮ್ಮ ಮಧ್ಯದಲ್ಲಿ ಉರುಲಿನಂತಿ
13 ರುವದು. [ಆದದರಿಂದ] ನೀವು ಅವರ ಬಲಿಪೀಠಗ
ಳನ್ನು ಕೆಡವಿ ಅವರ ಕಲ್ಲುಕಂಬಗಳನ್ನು ಒಡೆದು
ಅಶೇರವೆಂಬ ವಿಗ್ರಹಸ್ತಂಭಗಳನ್ನು ಕಡಿದುಬಿಡಬೇಕು.
14 ಸ್ವಗೌರವವನ್ನು ಕಾಪಾಡಿಕೊಳ್ಳುವವನು ಎಂಬ
ಹೆಸರುಳ್ಳ ಯೆಹೋವನು ತನಗೆ ಸಲ್ಲಬೇಕಾದ
ಗೌರವವನ್ನು ಮತ್ತೊಬ್ಬನಿಗೆ ಸಲ್ಲಗೊಡಿಸದ್ದರಿಂದ
ನೀವು ಬೇರೆ ಯಾವ ದೇವರ ಮುಂದೆಯೂ ಅಡ್ಡ
15 ಬೀಳಬಾರದು. ನೀವು ಆ ದೇಶದ ನಿವಾಸಿಗಳ ಸಂಗಡ
ಒಡಂಬಡಿಕೆಮಾಡಿಕೊಳ್ಳದಂತೆ ಜಾಗರೂಕರಾಗಿರಿ, ಮಾ
ಡಿಕೊಂಡರೆ ಅವರು ತಮ್ಮ ದೇವತೆಗಳನ್ನು ಪೂಜಿಸಿ ಯ
ಜ್ಞಗಳನ್ನು ಮಾಡುವಾಗ ಅವರಲ್ಲಿ ಒಬ್ಬನು ಯಜ್ಞ
ಭೋಜನಕ್ಕೆ ನಿಮ್ಮನ್ನೂ ಕರೆದಾನು, ನೀವು ಹೋಗಿ
16 ಭೋಜನ ಮಾಡೀರಿ; ಅದಲ್ಲದೆ ನೀವು ನಿಮ್ಮ ಗಂಡು
ಮಕ್ಕಳಿಗೆ ಅವರಲ್ಲಿ ಕನ್ನಿಕೆಗಳನ್ನು ತೆಗೆದುಕೊಳ್ಳುವ
ದಕ್ಕೆ ಆಸ್ಪದವುಂಟಾಗುವದು; ತರುವಾಯ ಆ ಸೊಸೆ
ಯರು ತೌರಮನೆಯ ದೇವತೆಗಳನ್ನು ಪೂಜಿಸುವವ
ರಾಗಿ ನಿಮ್ಮ ಮಕ್ಕಳನ್ನೂ ಅನ್ಯದೇವರುಗಳ ಪೂಜೆ
ಎಂಬ ವ್ಯಭಿಚಾರಕ್ಕೆ ಎಳೆದಾರು, ಎಚ್ಚರ.
17 ದೇವರೆಂದು ಎರಕದ ವಿಗ್ರಹಗಳನ್ನು ಮಾಡಿಸಿ
ಕೊಳ್ಳಬಾರದು.
18 ಹುಳಿಯಿಲ್ಲದ ರೊಟ್ಟಿಗಳನ್ನು ತಿನ್ನಬೇಕಾದ ಜಾತ್ರೆ
ಯನ್ನು ಆಚರಿಸಬೇಕು. ನಾನು ನಿಮಗೆ ಆಜ್ಞಾಪಿಸಿ
ದಂತೆ ನೀವು 1)ಚೈತ್ರಮಾಸದ ನೇಮಕವಾದ ಕಾಲದಲ್ಲಿ
ಏಳು ದಿವಸ ಹುಳಿಯಿಲ್ಲದ ರೊಟ್ಟಿಗಳನ್ನು ತಿನ್ನಬೇಕು.
ನೀವು ಚೈತ್ರಮಾಸದಲ್ಲಿಯೇ ಐಗುಪ್ತದೇಶದಿಂದ ಬಿಡು
ಗಡೆಯಾಗಿ ಬಂದಿರಲ್ಲಾ.

ಪ್ರಥಮಗರ್ಭವೆಲ್ಲಾ ಅಂದರೆ ನಿಮ್ಮ ದನಕು
ಗಳಲ್ಲಿ ಹುಟ್ಟುವ ಚೊಚ್ಚಲುಮರಿಗಳೆಲ್ಲಾ ಗಂಡಾ
ಪಕ್ಷಕ್ಕೆ ನನ್ನದೇ. ಕತ್ತೆಯ ಮರಿಗೆ ಬದಲಾಗಿ ಕು
ಮರಿಯನ್ನು ಕೊಟ್ಟು ಆ ಕತ್ತೆಮರಿಯನ್ನು ಬಿಡಿ
ಬಹುದು; ಹಾಗೆ ಬಿಡಿಸಲೊಲ್ಲದೆ ಹೋದರೆ ಅದ
ಕುತ್ತಿಗೆ ಮುರಿದು ಕೊಂದುಬಿಡಬೇಕು. ಆದರೆ ನಿಮ್
ಚೊಚ್ಚಲು ಗಂಡುಮಗುವನ್ನು ಕೊಲ್ಲದೆ ಬದಲ
ಕೊಟ್ಟು ಬಿಡಿಸಲೇ ಬೇಕು.
ಒಬ್ಬರೂ ಕೈಯಲ್ಲಿ ಕಾಣಿಕೆಯಿಲ್ಲದೆ ನನ್ನ ಸನ್ನಿಧಿ
ಯಲ್ಲಿ ಕಾಣಿಸಿಕೊಳ್ಳಬಾರದು.
ಆರು ದಿವಸಗಳು ನಿಮ್ಮ ಕೆಲಸವನ್ನು ನಡಿಸಿ ಏ
ನೆಯ ದಿನದಲ್ಲಿ ಯಾವ ಕೆಲಸವನ್ನೂ ಮಾಡದೆ ಇ
ಬೇಕು. 2)ಉಳುವ ಕಾಲದಲ್ಲಿಯೂ ಕೊಯ್ಯು
ಕಾಲದಲ್ಲಿಯೂ ಹಾಗೆಯೇ ಏಳನೆಯ ದಿನದಲ್ಲಿ ಕೆಲ
ಮಾಡದೆ ಇರಬೇಕು.
[ಪಸ್ಕವಾದ ಏಳು] ವಾರಗಳ ಮೇಲೆ ನಡೆಯುವ
ಜಾತ್ರೆ ಅಂದರೆ ಗೋದೀ ಬೆಳೆಯ ಪ್ರಥಮ ಸಮಪ
ಣದ ಸುಗ್ಗಿಜಾತ್ರೆಯನ್ನೂ ಸಂವತ್ಸರದ ಅಂತ್ಯದಲ್ಲಿ
ಫಲಸಂಗ್ರಹದ ಜಾತ್ರೆಯನ್ನೂ ಆಚರಿಸಬೇಕು. ವರು
ಷಕ್ಕೆ ಮೂರಾವರ್ತಿ ನಿಮ್ಮಲ್ಲಿರುವ ಗಂಡಸರೆಲ್ಲರೂ
ಇಸ್ರಾಯೇಲ್ಯರ ದೇವರಾಗಿರುವ ಕರ್ತನಾದ ಯೆ
ಹೋವನ ಸನ್ನಿಧಿಯಲ್ಲಿ ನೆರೆಯಬೇಕು. ನಾನು
ನಿಮ್ಮ ಎದುರಿನಿಂದ ಅನ್ಯಜನಗಳನ್ನು ಹೊರಡಿಸಿ ನಿಮ್ಮ
ದೇಶವನ್ನು ವಿಸ್ತರಿಸುವೆನು. ಅಷ್ಟೇ ಅಲ್ಲದೆ ನೀವು
ವರುಷಕ್ಕೆ ಮೂರಾವರ್ತಿ ನಿಮ್ಮ ದೇವರಾದ ಯೆಹೋ
ವನ ಸನ್ನಿಧಿಗೆ ಹೋಗುವಾಗ ಯಾರೂ ನಿಮ್ಮ
ಭೂಮಿಯನ್ನು ಅಪಹರಿಸುವದಕ್ಕೆ ಅಪೇಕ್ಷಿಸುವದಿಲ್ಲ
ನನಗೆ ಯಜ್ಞವನ್ನು ಮಾಡುವಾಗ ಆ ಯಜ್ಞ
ಪಶುವಿನ ರಕ್ತದೊಡನೆ ಹುಳಿಹಿಟ್ಟನ್ನು ಸಮರ್ಪಿಸ
ಕೂಡದು. ಪಸ್ಕದಲ್ಲಿ ನೀವು ಸಮರ್ಪಿಸಿದ ಯಜ್ಞ
ಮಾಂಸವನ್ನು ಮರುದಿನದ ವರೆಗೂ ಉಳಿಸಬಾರದು
ಭೂಮಿಯ ಪ್ರಥಮ ಫಲಗಳಲ್ಲಿ ಶ್ರೇಷ್ಠವಾದದ್ದನ್ನು
ನಿಮ್ಮ ದೇವರಾದ ಯೆಹೋವನ ಮಂದಿರಕ್ಕೆ ತ
ಬೇಕು.
ಆಡುಮರಿಯನ್ನು ಅದರ ತಾಯಿಯ ಹಾಲಿನಲ್ಲಿ
ಬೇಯಿಸಕೂಡದು.
ಯೆಹೋವನು ಮೋಶೆಗೆ—ನೀನು ಈ ವಾಕ್ಯಗಳ
ನ್ನು ಬರೆ. ಈ ವಾಕ್ಯಗಳ ಮೇರೆಗೆ ನಿನ್ನ ಸಂಗಡಲೂ
ಇಸ್ರಾಯೇಲ್ಯರ ಸಂಗಡಲೂ ನಿಬಂಧನಮಾಡಿದ್ದೇನೆ
ಎಂದು ಹೇಳಿದನು. ಮೋಶೆ ಆ ಬೆಟ್ಟದಲ್ಲಿ ಯೆಹೋ
ವನ ಸನ್ನಿಧಿಯಲ್ಲಿ ಹಗಲಿರುಳು ನಾಲ್ವತ್ತು ದಿನ ಇದ್ದ
ನು. ಅವನು ಏನೂ ಊಟಮಾಡಲಿಲ್ಲ, ಏನೂ ಕುಡಿ
ಯಲಿಲ್ಲ. ಆತನು ನಿಬಂಧನದ ವಾಕ್ಯಗಳನ್ನು ಅಂದರೆ
ಹತ್ತು ಆಜ್ಞೆಗಳನ್ನು ಆ ಕಲ್ಲಿನ ಹಲಿಗೆಗಳ ಮೇಲೆ ಬರೆ
ದನು.
ಮೋಶೆ ಆಜ್ಞಾಶಾಸನಗಳಾದ ಆ ಎರಡು ಕಲ್ಲಿನ
ಹಲಿಗೆಗಳನ್ನು ಕೈಯಲ್ಲಿ ಹಿಡಿದುಕೊಂಡು ಸೀನಾಯಿ
ಬೆಟ್ಟದಿಂದ ಇಳಿದುಬಂದಾಗ ಅವನು ಯೆಹೋವನ

1) ಮೂಲ: ಅಬೀಬ್.

೨) ಅಥವಾ: ರಂಟೆ ಹೊಡೆಯುವ.

ಸಂಗಡ ಸಂಭಾಷಿಸಿದ್ದರಿಂದ ಅವನ ಮುಖವು ಪ್ರಕಾಶಮಾನವಾಗಿತ್ತು; ಆದರೆ ಆ ಸಂಗತಿ ಅವನಿಗೆ ತಿಳಿಯಲಿಲ್ಲ. ಮೋಶೆಯ ಮುಖವು ಪ್ರಕಾಶವಾಗಿರುವದನ್ನು ಆರೋನನೂ ಇಸ್ರಾಯೇಲ್ಯರೆಲ್ಲರೂ ನೋಡಿ ಅವನ ಹತ್ತಿರಕ್ಕೆ ಬರುವದಕ್ಕೆ ಭಯಪಟ್ಟರು. ಆದರೆ ಮೋಶೆ ಅವರನ್ನು ಕರೆಯಲು ಆರೋನನೂ ಸಮೂಹದ ಅಧಿಪತಿಗಳೆಲ್ಲರೂ ಅವನ ಬಳಿಗೆ ಬಂದರು; ಮೋಶೆ ಅವರ ಸಂಗಡ ಮಾತಾಡಿದನು. ತರುವಾಯ ಇಸ್ರಾಯೇಲ್ಯರೆಲ್ಲರೂ ಹತ್ತಿರಕ್ಕೆ ಬಂದರು. ಮೋಶೆ ತಾನು ಸೀನಾಯಿಬೆಟ್ಟದಲ್ಲಿ ಯೆಹೋವನಿಂದ ಹೊಂದಿದ ಆಜ್ಞೆಗಳನ್ನೆಲ್ಲಾ ಅವರಿಗೆ ತಿಳಿಸಿದನು. ಮೋಶೆ ಅವರ ಸಂಗಡ ಮಾತಾಡುವದನ್ನು ಮುಗಿಸಿದಾಗ ತನ್ನ ಮುಖದ ಮೇಲೆ ಮುಸುಕುಹಾಕಿಕೊಂಡನು. ಅವನು ಯೆಹೋವನ ಸಂಗಡ ಮಾತಾಡಬೇಕೆಂದು ಸನ್ನಿಧಿಗೆ ಹೋಗುವಾಗೆಲ್ಲಾ ಹೊರಗೆ ಬರುವ ತನಕ ಆ ಮುಸುಕನ್ನು ತೆಗೆದಿಡುವನು. ಅವನು ಹೊರಗೆ ಬಂದಾಗ ಯೆಹೋವನು ಆಜ್ಞಾಪಿಸಿದ್ದನ್ನೆಲ್ಲಾ ಇಸ್ರಾಯೇಲ್ಯರಿಗೆ ತಿಳಿಸುವನು. ಮೋಶೆಯ ಮುಖವು ಪ್ರಕಾಶಮಾನವಾಗಿರುವದನ್ನು ಇಸ್ರಾಯೇಲ್ಯರು ನೋಡುತ್ತಿದ್ದರು. ಆದಕಾರಣ ಅವನು ಯೆಹೋವನ ಸಂಗಡ ಮಾತಾಡುವದಕ್ಕೆ ಹೋಗುವ ವರೆಗೆ ತನ್ನ ಮುಖದ ಮೇಲೆ ಆ ಮುಸುಕನ್ನು ತಿರಿಗಿ ಹಾಕಿಕೊಂಡಿರುವನು.

### ಇಸ್ರಾಯೇಲ್ಯರು ದೇವದರ್ಶನದ ಗುಡಾರವನ್ನೂ ಯಾಜಕವಸ್ತ್ರಗಳನ್ನೂ ಮಾಡಿದ್ದು.
### 35—40.

ಸಬ್ಬತ್‌ದಿನವನ್ನು ಖಂಡಿತವಾಗಿ ಆಚರಿಸಬೇಕೆಂಬದು.

ಮೋಶೆ ಇಸ್ರಾಯೇಲ್ಯರ ಸಮೂಹವನ್ನೆಲ್ಲಾ ಕೂಡ ಕರಿಸಿ ಅವರಿಗೆ— ನೀವು ಅನುಸರಿಸಬೇಕೆಂದು ಯೆಹೋವನು ನಿಮಗೆ ಹೀಗೆ ಅಪ್ಪಣೆಮಾಡಿದ್ದಾನೆ— ಆರು ದಿನಗಳು ಕೆಲಸನಡೆಯಬೇಕು; ಏಳನೆಯ ದಿನವು ಪರಿಶುದ್ಧವಾದ ದಿನ; ಅದು ಯೆಹೋವನಿಗೆ ಮೀಸಲಾದ ಸಬ್ಬತ್ ದಿನವಾದ್ದರಿಂದ ಅದರಲ್ಲಿ ನೀವು ಸಂಪೂರ್ಣವಾಗಿ ಕೆಲಸವನ್ನು ನಿಲ್ಲಿಸಿಬಿಡಬೇಕು; ಆ ದಿನದಲ್ಲಿ ಕೆಲಸಮಾಡುವವನಿಗೆ ಮರಣದಂಡನೆಯಾಗಬೇಕು; ನೀವು ವಾಸಿಸುವ ಯಾವ ಸ್ಥಳದಲ್ಲಿಯಾದರೂ ಸಬ್ಬತ್ ದಿನದಲ್ಲಿ ಬೆಂಕಿಯನ್ನೂ ಹೊತ್ತಿಸಬಾರದು ಎಂದು ಹೇಳಿದನು.

ಗುಡಾರವನ್ನು ಮಾಡುವದಕ್ಕೆ ಬೇಕಾದ ಪದಾರ್ಥಗಳನ್ನು ಇಸ್ರಾಯೇಲ್ಯರು ಕಾಣಿಕೆಯಾಗಿ ತಂದುಕೊಟ್ಟರು.

ಮೋಶೆಯು ಇಸ್ರಾಯೇಲ್ಯರ ಸರ್ವಸಮೂಹಕ್ಕೆ ಹೀಗಂದನು:— ಯೆಹೋವನು ಆಜ್ಞಾಪಿಸಿದ್ದೇನಂದರೆ— ನೀವು ನಿಮ್ಮನಿಮ್ಮೊಳಗೆ ಯೆಹೋವನಿಗೆ ಕಾಣಿಕೆಯನ್ನು ಎತ್ತಿ ಕೊಡಬೇಕು; ಮನಃಪೂರ್ವಕವಾಗಿ ಕಾಣಿಕೆಯನ್ನು ಕೊಡುವವರೇ ತರಬೇಕು. ಯೆಹೋವನಿಗೆ ತರಬೇಕಾದ ಆ ಕಾಣಿಕೆಯು ಎಂಥವಾಗಿರ
ಬೇಕಂದರೆ— ಚಿನ್ನ, ಬೆಳ್ಳಿ, ತಾಮ್ರ ಎಂಬ ಲೋಹ
ಗಳೂ ನೀಲಿ ಧೂಮ್ರ ರಕ್ತವರ್ಣಗಳುಳ್ಳ ದಾರಗ 6
ಳೂ ನಾರುಬಟ್ಟೆಗಳೂ ಆಡುಕೂದಲಿನ ಬಟ್ಟೆಗಳೂ
ಹದಮಾಡಿರುವ ಕೆಂಪುಬಣ್ಣದ ಕುರಿದೊಗಲುಗಳೂ 7
ಕಡಲುಹಂದಿಯ ತೊಗಲುಗಳೂ ಜಾಲೀಮರವೂ
ದೀಪಕ್ಕೆ ಬೇಕಾದ ಎಣ್ಣೆಯೂ ಅಭಿಷೇಕತೈಲಕ್ಕೆ 8
ಮತ್ತು ಪರಿಮಳಧೂಪಕ್ಕೆ ಬೇಕಾದ ಸುಗಂಧದ್ರವ್ಯ
ಗಳೂ ಮಹಾಯಾಜಕನ ಕವಚಕ್ಕೆ ಬೇಕಾಗಿರುವ ರತ್ನ 9
ಗಳೂ ಚೀಲದ ಪದಕದಲ್ಲಿ ಕೆತ್ತಬೇಕಾದ ನಾನಾ ರತ್ನ
ಗಳೂ ಇವೇ.

ನಿಮ್ಮಲ್ಲಿರುವ ಜಾಣರೆಲ್ಲರು ಬಂದು ಯೆಹೋ 10
ವನು ಆಜ್ಞಾಪಿಸಿದವುಗಳನ್ನೆಲ್ಲಾ ಮಾಡಬೇಕು. ಅವ 11
ರು ಮಾಡಬೇಕಾದವುಗಳು ಯಾವವಂದರೆ—ದೇವ
ದರ್ಶನದ ಗುಡಾರ, ಅದರ ಮೇಲ್ಹೊದಿಕೆಗಳು, ಅದರ
ಕೊಂಡಿಗಳು, ಚೌಕಟ್ಟುಗಳು, ಅಗುಳಿಗಳು, ಕಂಬ
ಗಳು, ಗದ್ದಿಗೇಕಲ್ಲುಗಳು, ಆಜ್ಞಾಶಾಸನಗಳ ಮಂ 12
ಜೂಷ, ಅದನ್ನು ಹೊರುವ ಕೋಲುಗಳು, ಕೃಪಾ
ಸನ, ಅದನ್ನು ಮರೆಮಾಡುವ ತೆರೆ, ಮೇಜು, ಅದರ 13
ಕೋಲುಗಳು, ಅದರ ಉಪಕರಣಗಳು, ಅದರ ಮೇಲೆ
ಇಡತಕ್ಕ ನೈವೇದ್ಯದ ರೊಟ್ಟಿಗಳು, ದೀಪಸ್ತಂಭ, 14
ಅದರ ಉಪಕರಣಗಳು, ಹಣತೆಗಳು, ದೀಪಕ್ಕೆ ಬೇಕಾದ
ಎಣ್ಣೆ, ಧೂಪವೇದಿ, ಅದರ ಕೋಲುಗಳು, ಅಭಿಷೇಕ 15
ತೈಲ, ಪರಿಮಳಧೂಪದ್ರವ್ಯ, ಗುಡಾರದ ಬಾಗಲಿನ
ಪರದೆ, ಯಜ್ಞವೇದಿ, ಅದರ ತಾಮ್ರದ ಜಾಳಿಗೆ, 16
ಕೋಲುಗಳು, ಉಪಕರಣಗಳು, ಗಂಗಾಳ, ಅದರ
ಪೀಠ, ಅಂಗಳದ ತೆರೆಗಳು, ಕಂಬಗಳು, ಗದ್ದಿಗೇಕಲ್ಲು 17
ಗಳು, ಅಂಗಳದ ಬಾಗಲಿನ ಪರದೆ, ಗುಡಾರದ ಗೂಟ 18
ಗಳು, ಅಂಗಳದ ಗೂಟಗಳು, ಇವುಗಳ ಹಗ್ಗಗಳು,
ಪವಿತ್ರಸ್ಥಾನದ ಸೇವೆಗೆ ಬೇಕಾದ ಸುಂದರವಾದ 19
ದೀಕ್ಷಾವಸ್ತ್ರಗಳು ಅಂದರೆ ಮಹಾಯಾಜಕನಾದ
ಆರೋನನಿಗೂ ಅವನ ಮಕ್ಕಳಿಗೂ ಬೇಕಾದ ಯಾಜಕ
ವಸ್ತ್ರಗಳು ಇವೇ ಅಂದನು.

ಇಸ್ರಾಯೇಲ್ಯರ ಸಮೂಹದವರೆಲ್ಲರೂ ಮೋಶೆಯ 20
ಎದುರಿನಿಂದ ಹೋದನಂತರ ಯಾರಾರನ್ನು ಹೃದ 21
ಯವು ಪ್ರೇರಿಸಿತೋ ಯಾರಾರ ಮನಸ್ಸು ಸಿದ್ಧ
ವಾಗಿತ್ತೋ ಅವರೆಲ್ಲರೂ ಬಂದು ದೇವದರ್ಶನದ
ಗುಡಾರದ ಕೆಲಸಕ್ಕೋಸ್ಕರವೂ ಅದರ ಸಮಸ್ತಸೇವೆ
ಗೋಸ್ಕರವೂ ದೀಕ್ಷಾವಸ್ತ್ರಗಳಿಗೋಸ್ಕರವೂ ಯೆಹೋ
ವನಿಗೆ ಕಾಣಿಕೆಗಳನ್ನು ತಂದರು. ಸಿದ್ಧಚಿತ್ತರಾದ 22
ಗಂಡಸರೂ ಹೆಂಗಸರೂ ಬಂದು ಯೆಹೋವನಿಗೆ
ಚಿನ್ನದ ಕಾಣಿಕೆಗಳನ್ನು ಅಂದರೆ ಕಡಗ, ಮೂಗುತಿ,
ಮುದ್ರೆಯುಂಗರ, ಕಂಠಮಾಲೆ ಮೊದಲಾದ ಚಿನ್ನದ
ಒಡವೆಗಳನ್ನು ಸಮರ್ಪಿಸಿದರು. ಯಾರಲ್ಲಿ ನೀಲಿ 23
ಧೂಮ್ರ ರಕ್ತವರ್ಣಗಳುಳ್ಳ ದಾರಗಳೂ ನಾರು
ಬಟ್ಟೆಯೂ ಆಡುಕೂದಲಿನ ಬಟ್ಟೆಯೂ ಹದಮಾಡಿದ
ಕೆಂಪುಬಣ್ಣದ ಕುರಿದೊಗಲುಗಳೂ ಕಡಲುಹಂದಿಯ
ತೊಗಲುಗಳೂ ಇದ್ದವೋ ಅವರು ಅವುಗಳನ್ನು
ತಂದುಕೊಟ್ಟರು. ಯಾರಲ್ಲಿ ಬೆಳ್ಳಿ ಇಲ್ಲವೇ ತಾಮ್ರ 24
ಇತ್ತೋ ಅವರು ಅವುಗಳನ್ನೇ ತಂದು ಯೆಹೋವ
ನಿಗೆ ಸಮರ್ಪಿಸಿದರು. ಯಾರ ಬಳಿಯಲ್ಲಿ ಗುಡಾ

ರದ ಕೆಲಸಕ್ಕೆ ಬೇಕಾದ ಜಾಲೀಮರವಿತ್ತೋ ಅವರು
25 ಅದನ್ನು ತಂದುಕೊಟ್ಟರು. ಜಾಣೆಯರಾದ ಸ್ತ್ರೀಯರು
ತಮ್ಮ ಕೈಗಳಿಂದ ನೀಲಿ ಧೂಮ್ರ ರಕ್ತವರ್ಣಗಳುಳ್ಳ
ನೂಲನ್ನೂ ನಾರಿನ ನೂಲನ್ನೂ ನೂತು ಆ ನೂಲನ್ನು
26 ತಂದುಕೊಟ್ಟರು. ಬೇರೆ ಜಾಣೆಯರಾದ ಸ್ತ್ರೀಯರು
ಆಡಿನ ಕೂದಲುಗಳನ್ನು ನೂತು ತಂದುಕೊಟ್ಟರು.
27 ಅಧಿಪತಿಗಳು ಮಹಾಯಾಜಕನ ಕವಚಕ್ಕೆ ಬೇಕಾದ
ಗೋಮೇಧಕ ರತ್ನಗಳನ್ನೂ ಚೀಲದ ಪದಕದಲ್ಲಿ ಕೆತ್ತ
28 ಬೇಕಾದ ರತ್ನಗಳನ್ನೂ ದೀಪಕ್ಕೆ ಬೇಕಾದ ಎಣ್ಣೆಯ
ನ್ನೂ ಅಭಿಷೇಕತೈಲಕ್ಕೆ ಮತ್ತು ಪರಿಮಳಧೂಪಕ್ಕೆ
ಬೇಕಾದ ಸುಗಂಧದ್ರವ್ಯಗಳನ್ನೂ ತಂದುಕೊಟ್ಟರು.
29 ಮೋಶೆಯ ಮೂಲಕ ಯೆಹೋವನು ಆಜ್ಞಾಪಿಸಿದ
ಎಲ್ಲಾ ಕೆಲಸಗಳಿಗೋಸ್ಕರ ಆತನಿಗೆ ಕಾಣಿಕೆಗಳನ್ನು
ತಂದುಕೊಟ್ಟ ಇಸ್ರಾಯೇಲ್ಯರ ಸ್ತ್ರೀಪುರುಷರೆಲ್ಲರೂ
ಮನಃಪೂರ್ವಕವಾಗಿಯೇ ಕೊಟ್ಟರು.
30 ಮತ್ತು ಮೋಶೆಯು ಇಸ್ರಾಯೇಲ್ಯರಿಗೆ ಹೀಗಂದ
ನು—ವಿಚಿತ್ರವಾಗಿ ನಯವಾದ ಕೆಲಸಗಳನ್ನು ಕಲ್ಪಿ
31 ಸುವದಕ್ಕೂ ಚಿನ್ನ ಬೆಳ್ಳಿ ತಾಮ್ರಗಳಿಂದ ಕೆಲಸನಡಿ
ಸುವದಕ್ಕೂ ರತ್ನಗಳನ್ನು ಕೆತ್ತುವದಕ್ಕೂ ಮರದಲ್ಲಿ
ವಿಚಿತ್ರವಾಗಿ ಕೆತ್ತನೇ ಕೆಲಸವನ್ನು ಮಾಡುವದಕ್ಕೂ
32 ಬೇರೆ ಸಕಲವಿಧವಾದ ಶೃಂಗಾರವಾದ ಕೆಲಸವನ್ನು
ಮಾಡುವದಕ್ಕೂ ಯೆಹೋವನು ಯೆಹೂದಕುಲದವ
ನಾದ ಹೂರನ ಮೊಮ್ಮಗನೂ ಊರಿಯ ಮಗ
ನೂ ಆಗಿರುವ ಬೆಚಲೇಲನೆಂಬವನನ್ನು ಗೊತ್ತಾಗಿ
33 ನೇಮಿಸಿ ಅವನಿಗೆ ದಿವ್ಯಾತ್ಮನನ್ನು ಕೊಟ್ಟು ಬೇಕಾದ
ಜ್ಞಾನವಿದ್ಯಾವಿವೇಕಗಳನ್ನೂ ಸಕಲಶಿಲ್ಪಶಾಸ್ತ್ರಜ್ಞಾನ
34 ವನ್ನೂ ಅನುಗ್ರಹಿಸಿದ್ದಾನೆ. ಅದಲ್ಲದೆ ಮತ್ತೊಬ್ಬರಿಗೆ
ಕಲಿಸಿಕೊಡುವದಕ್ಕೆ ಸಹ ಅವನಿಗೂ ದಾನ್ ಕುಲದ
ಅಹೀಸಾಮಾಕನ ಮಗನಾದ ಒಹೊಲೀಯಾಬನಿಗೂ
35 ವರಕೊಟ್ಟಿದ್ದಾನೆ. ಶಿಲ್ಪಿಗಳು, ಚಮತ್ಕಾರವಾದ ಕೆಲಸ
ಕಲ್ಪಿಸುವವರು, ನೀಲಿ ಧೂಮ್ರ ರಕ್ತವರ್ಣದ ದಾರದಿಂ
ದಲೂ ನಾರುಬಟ್ಟೆಯಿಂದಲೂ ಬುಟೇದಾರೀ ಕೆಲಸ
ಮಾಡುವವರು, ನೇಯುವವರು, ಅಂತೂ ಎಲ್ಲಾ
ಕಸಬುದಾರರು ನಡಿಸುವ ಕೆಲಸಗಳನ್ನು ಕಲ್ಪಿಸುವ
ದಕ್ಕೂ ಮಾಡುವದಕ್ಕೂ ಯೆಹೋವನು ಅವರಿಗೆ
ಜ್ಞಾನವನ್ನು ಪರಿಪೂರ್ಣವಾಗಿ ಅನುಗ್ರಹಿಸಿದ್ದಾನೆ.
36 ಬೆಚಲೇಲನೂ ಒಹೊಲೀಯಾಬನೂ ಎಲ್ಲವನ್ನು
ಯೆಹೋವನು ಆಜ್ಞಾಪಿಸಿದ ಪ್ರಕಾರವೇ ಮಾಡುವ
ರು; ಮತ್ತು ಬೇರೆ ಜಾಣರೆಲ್ಲರು, ಅಂದರೆ ಯೆಹೋ
ವನಿಂದ ಜ್ಞಾನವಿವೇಕಗಳನ್ನು ಹೊಂದಿ ದೇವಮಂದಿರ
ವನ್ನು ನಿರ್ಮಿಸುವ ಕೆಲಸಕ್ಕೋಸ್ಕರ ಬೇಕಾದ
ಸಕಲವಿಧವಾದ ವಸ್ತುಗಳನ್ನು ಮಾಡುವ ಕ್ರಮತಿಳಿ
ದಿರುವವರು, ಅವರೊಂದಿಗೆ ಕೆಲಸಮಾಡುವರು
ಅಂದನು.

ಇಸ್ರಾಯೇಲ್ಯರು ಗುಡಾರವನ್ನೂ ಅದರ ಎಲ್ಲಾ
ಸಾಮಾನುಗಳನ್ನೂ ಮಾಡಿದ್ದು.

2 ಬೆಚಲೇಲನನ್ನೂ ಒಹೊಲೀಯಾಬನನ್ನೂ ಮತ್ತು
ಯಾರಾರ ಹೃದಯದಲ್ಲಿ ಯೆಹೋವನು ಜ್ಞಾನವನ್ನು
ಇಟ್ಟಿದ್ದನೋ ಯಾರಾರನ್ನು ಈ ಕೆಲಸಮಾಡುವದ
ಹೃದಯಪ್ರೇರಿಸಿತೋ ಆ ಜಾಣರೆಲ್ಲರನ್ನೂ ಮೋ
ತನ್ನ ಹತ್ತಿರಕ್ಕೆ ಕರಿಸಿದನು. ಅವರು ದೇವಮಂ
ವನ್ನು ನಿರ್ಮಿಸುವ ಕೆಲಸಕ್ಕೆ ಇಸ್ರಾಯೇಲ್ಯರು
ದಿದ್ದ ಕಾಣಿಕೆಗಳನ್ನೆಲ್ಲಾ ಮೋಶೆಯ ಕೈಯಿಂದ ತೆಗೆ
ಕೊಂಡರು. ಇಸ್ರಾಯೇಲ್ಯರು ಪ್ರತಿದಿನದ ಹೊತ್ತಾ
ಯಲ್ಲಿ ಮೋಶೆಯ ಬಳಿಗೆ ಬಂದು ಹೆಚ್ಚು ಕಾಣಿಕೆ
ಳನ್ನು ಮನಃಪೂರ್ವಕವಾಗಿ ಕೊಡುತ್ತಿದ್ದರು. ಆ
ದೇವಮಂದಿರದ ಕೆಲಸವನ್ನು ನಡಿಸುತ್ತಿದ್ದ ಆ ಜಾ
ರೆಲ್ಲರು ತಮ್ಮತಮ್ಮ ಕೆಲಸವನ್ನು ಬಿಟ್ಟು ಮೋಶೆ
ಬಳಿಗೆ ಬಂದು ಅವನಿಗೆ—ಯೆಹೋವನು ಆಜ್ಞಾ
ಸಿದ ಕೆಲಸಕ್ಕೆ ಬೇಕಾದದ್ದಕ್ಕಿಂತಲೂ ಬಹಳ ಹೆಚ್ಚಾ
ಜನರು ಕಾಣಿಕೆಗಳನ್ನು ತರುತ್ತಿರುತ್ತಾರೆಂದು ಹೇ
ಲಾಗಿ ಮೋಶೆ—ದೇವಮಂದಿರದ ಕೆಲಸಕ್ಕಾಗಿ ಯಾ
ಪುರುಷನಾಗಲಿ ಸ್ತ್ರೀಯಾಗಲಿ ಇನ್ನು ಮುಂದೆ ಯಾ
ದನ್ನೂ ಸಿದ್ಧಪಡಿಸಬಾರದೆಂದು ಅಪ್ಪಣೆಮಾಡಿ ಪಾಳೆಂ
ದಲ್ಲಿ ಪ್ರಕಟಿಸಿ ಜನರ ಕಾಣಿಕೆಗಳನ್ನು ನಿಲ್ಲಿಸಿಬಿಟ್ಟನ
ಕೆಲಸವನ್ನೆಲ್ಲಾ ಮಾಡುವದಕ್ಕೆ ಸಾಕಾಗುವದಕ್ಕಿಂ
ಲೂ ಹೆಚ್ಚಾದ ಸಾಮಗ್ರಿಯಿತ್ತು.
ಆ ಕೆಲಸದವರಲ್ಲಿದ್ದ ಜಾಣರೆಲ್ಲರು ಹೊಸೆ
ನಾರಿನ ಹತ್ತು ತಾನು ಬಟ್ಟೆಗಳಿಂದ ಗುಡಾರವನ
ಮಾಡಿ ಆ ಬಟ್ಟೆಗಳಲ್ಲಿ ನೀಲಿ ಧೂಮ್ರ ರಕ್ತವರ್ಣಗ
ದಾರದಿಂದ ಕೆರೂಬಿಗಳನ್ನು ಚಮತ್ಕಾರವಾಗಿ ಕಸೂ
ಹಾಕಿ ಮಾಡಿದರು. ಪ್ರತಿಯೊಂದು ಬಟ್ಟೆಯು ಇ
ತ್ತೆಂಟು ಮೊಳ ಉದ್ದವಾಗಿಯೂ ನಾಲ್ಕು ಮೊಳ ಅಗ
ವಾಗಿಯೂ ಇತ್ತು. ಎಲ್ಲಾ ಬಟ್ಟೆಗಳು ಒಂದ
ಅಳತೆಯಾಗಿದ್ದವು. ಐದೈದು ಬಟ್ಟೆಗಳನ್ನು ಒ
ದೊಂದಾಗಿ ಜೋಡಿಸಿದರು. ಈ ಎರಡು ಜೋಡ
ಗಳಲ್ಲಿ ಒಂದೊಂದರ ಕೊನೇ ಬಟ್ಟೆಯ ಅಂಚಿನಲ
ನೀಲಿ ದಾರದಿಂದ ಕುಣಿಕೆಗಳನ್ನು ಮಾಡಿದರು;
ಕುಣಿಕೆಗಳನ್ನು ಐವತ್ತೈವತ್ತರ ಮೇರೆಗೆ ಒಂ
ಕ್ಕೊಂದು ಎದುರಾಗಿ ಇರಿಸಿದರು. ಅದಲ್ಲದೆ ಐವತ
ಚಿನ್ನದ ಕೊಂಡಿಗಳನ್ನು ಮಾಡಿ ಆ ಬಟ್ಟೆಗಳನ್ನು ಒಂ
ಕ್ಕೊಂದು ಕೂಡಿಸಿದರು; ಹೀಗೆ ಒಂದೇ ಗುಡಾ
ಆಯಿತು.
ಈ ಗುಡಾರದ ಮೇಲೆ ಹೊದಿಸುವದಕ್ಕಾಗಿ ಆಡ
ಕೂದಲಿನ ಹನ್ನೊಂದು ತಾನು ಬಟ್ಟೆಗಳಿಂದ
ಗುಡಾರಕ್ಕೆ ಮೇಲಣ ಡೇರೆಯನ್ನು ಮಾಡಿದರ
ಒಂದೊಂದು ಬಟ್ಟೆಯು ಮೂವತ್ತು ಮೊಳ ಉ
ವಾಗಿಯೂ ನಾಲ್ಕು ಮೊಳ ಅಗಲವಾಗಿಯೂ ಇತ್ತು
ಎಲ್ಲಾ ಬಟ್ಟೆಗಳೂ ಒಂದೇ ಅಳತೆಯಾಗಿದ್ದವು. ಐದ
ಬಟ್ಟೆಗಳನ್ನು ಒಂದಾಗಿ ಜೋಡಿಸಿ ಮಿಕ್ಕ ಆರು ಬಟ
ಗಳನ್ನೂ ಒಂದಾಗಿ ಜೋಡಿಸಿದರು. ಒಂದೊಂದ
ಕೊನೇ ಬಟ್ಟೆಯ ಅಂಚಿನಲ್ಲಿ ಐವತ್ತೈವತ್ತು ಕುಣಿ
ಗಳನ್ನು ಮಾಡಿದರು. ಒಂದೇ ಡೇರೆಯಾಗುವಂ
ಸಮಸ್ತವನ್ನು ಕೂಡಿಸುವದಕ್ಕಾಗಿ ತಾಮ್ರದ ಐವತ್
ಕೊಂಡಿಗಳನ್ನು ಮಾಡಿದರು. ಅದಲ್ಲದೆ ಹದಮಾ
ರುವ ಕುರಿದೊಗಲುಗಳಿಂದ ಒಂದು ಮೇಲ್ಹೊದಿ
ಯನ್ನೂ ಕಡಲುಹಂದಿಯ ತೊಗಲುಗಳಿಂದ ಮತ್ತೊ
ದು ಮೇಲ್ಹೊದಿಕೆಯನ್ನೂ ಮಾಡಿದರು.

ಗುಡಾರಕ್ಕೆ ಚೌಕಟ್ಟುಗಳನ್ನು ಜಾಲೀಮರದಿಂದ ಮಾಡಿದರು. ಪ್ರತಿಯೊಂದು ಚೌಕಟ್ಟು ಹತ್ತು ಮೊಳ ಉದ್ದವಾಗಿಯೂ ಒಂದುವರೆ ಮೊಳ ಅಗಲವಾಗಿಯೂ ಇತ್ತು; ಪ್ರತಿಯೊಂದು ಚೌಕಟ್ಟೂ ಅಡ್ಡಪಟ್ಟಿಗಳಿಂದ ಜೋಡಿಸಲ್ಪಟ್ಟ ಎರಡು ನಿಲುವುಪಟ್ಟಿಗಳುಳ್ಳದ್ದಾಗಿತ್ತು; ಗುಡಾರದ ಎಲ್ಲಾ ಚೌಕಟ್ಟುಗಳನ್ನೂ ಹಾಗೆ ಮಾಡಿದರು. ಗುಡಾರದ ದಕ್ಷಿಣದಿಕ್ಕಿನಲ್ಲಿ ಇಪ್ಪತ್ತು ಚೌಕಟ್ಟುಗಳನ್ನು ಮಾಡಿದರು; ನಾಲ್ವತ್ತು ಬೆಳ್ಳಿಯ ಗದ್ದಿಗೇಕಲ್ಲುಗಳನ್ನು ಮಾಡಿ ಆ ಇಪ್ಪತ್ತು ಚೌಕಟ್ಟುಗಳ ಕೆಳಗೆ ಇಟ್ಟರು; ಒಂದೊಂದು ಚೌಕಟ್ಟಿನಲ್ಲಿರುವ ಎರಡು ನಿಲುವುಪಟ್ಟಿಗಳ ಕೆಳಗೆ ಒಂದೊಂದು ಗದ್ದಿಗೇಕಲ್ಲನ್ನು ಇಟ್ಟರು. ಹಾಗೆಯೇ ಗುಡಾರದ ಉತ್ತರ ದಿಕ್ಕಿನಲ್ಲಿ ಇಪ್ಪತ್ತು ಚೌಕಟ್ಟುಗಳನ್ನು ಮತ್ತು ಪ್ರತಿಯೊಂದು ಚೌಕಟ್ಟಿಗೆ ಎರಡೆರಡು ಗದ್ದಿಗೇಕಲ್ಲುಗಳ ಮೇರೆಗೆ ನಾಲ್ವತ್ತು ಬೆಳ್ಳಿಯ ಗದ್ದಿಗೇಕಲ್ಲುಗಳನ್ನು ಮಾಡಿದರು. ಗುಡಾರದ ಹಿಂಭಾಗಕ್ಕೆ ಅಂದರೆ ಪಶ್ಚಿಮ ದಿಕ್ಕಿನಲ್ಲಿ ಆರು ಚೌಕಟ್ಟುಗಳನ್ನು ಮಾಡಿದರು. ಗುಡಾರದ ಹಿಂಭಾಗದ ಎರಡು ಮೂಲೆಗಳಿಗೆ ಬೇರೆ ಎರಡು ಚೌಕಟ್ಟುಗಳನ್ನು ಮಾಡಿದರು; ಅವು ಬುಡದಿಂದ ತುದಿಯ ವರೆಗೂ ಅಂದರೆ ಮೊದಲನೆಯ ಬಳೆಯ ತನಕ ಜೋಡಿಸಿದ್ದವು; ಹಾಗೆ ಎರಡು ಮೂಲೆಗಳಿಗೂ ಮಾಡಿದರು. ಹೀಗೆ ಎಂಟು ಚೌಕಟ್ಟುಗಳೂ ಮತ್ತು ಪ್ರತಿಯೊಂದು ಚೌಕಟ್ಟಿಗೆ ಎರಡೆರಡು ಬೆಳ್ಳಿಯ ಗದ್ದಿಗೇಕಲ್ಲುಗಳೂ ಅಂತೂ ಹದಿನಾರು ಗದ್ದಿಗೇಕಲ್ಲುಗಳೂ ಇದ್ದವು. ಜಾಲೀಮರದಿಂದ ಅಗುಳಿಗಳನ್ನು ಮಾಡಿದರು. ಗುಡಾರದ ಎರಡು ಕಡೆಗಳ ಚೌಕಟ್ಟುಗಳಿಗೂ ಅದರ ಹಿಂದುಗಡೆಯ ಅಂದರೆ ಪಶ್ಚಿಮ ಕಡೆಯ ಚೌಕಟ್ಟುಗಳಿಗೂ ಐದೈದು ಅಗುಳಿಗಳನ್ನು ಮಾಡಿದರು. ಚೌಕಟ್ಟುಗಳ ನಟ್ಟನಡುವೆಯಲ್ಲಿರುವ ಅಗುಳಿಯು ಒಂದು ಕೊನೆಯಿಂದ ಮತ್ತೊಂದು ಕೊನೆಯ ವರೆಗೂ ಮುಟ್ಟುವಂತೆ ಮಾಡಿದರು. ಆ ಚೌಕಟ್ಟುಗಳಿಗೆ ಚಿನ್ನದ ತಗಡುಗಳನ್ನು ಹೊದಿಸಿ ಅವುಗಳಲ್ಲಿ ಆ ಅಗುಳಿಗಳಿಗಾಗಿ ಚಿನ್ನದ ಬಳೆಗಳನ್ನು ಮಾಡಿದರು. ಆ ಅಗುಳಿಗಳನ್ನೂ ಚಿನ್ನದ ತಗಡುಗಳಿಂದ ಹೊದಿಸಿದರು.

ಹುರಿನಾರಿನ ಬಟ್ಟೆಯಲ್ಲಿ ನೀಲಿ ಧೂಮ್ರ ರಕ್ತ ವರ್ಣಗಳುಳ್ಳ ದಾರದಿಂದ ಕೆರೂಬಿಗಳನ್ನು ಚಮತ್ಕಾರವಾಗಿ ಕಸೂತಿಹಾಕಿ ಒಂದು ತೆರೆಯನ್ನು ಮಾಡಿದರು. ಅದಕ್ಕೆ ಜಾಲೀಮರದಿಂದ ನಾಲ್ಕು ಕಂಬಗಳನ್ನು ಮಾಡಿ ಚಿನ್ನದ ತಗಡುಗಳನ್ನು ಹೊದಿಸಿದರು; ಅವುಗಳಿಗೆ ಚಿನ್ನದ ಕೊಂಡಿಗಳನ್ನು ಮಾಡಿ ನಾಲ್ಕು ಬೆಳ್ಳಿಯ ಗದ್ದಿಗೇಕಲ್ಲುಗಳನ್ನು ಎರಕಹೊಯಿಸಿದರು.

ಡೇರೆಯ ಬಾಗಲಿಗೆ ಹುರಿನಾರಿನ ಬಟ್ಟೆಯಲ್ಲಿ ನೀಲಿ ಧೂಮ್ರ ರಕ್ತವರ್ಣಗಳುಳ್ಳ ದಾರದಿಂದ ವಿಚಿತ್ರವಾಗಿ ಕಸೂತಿಹಾಕಿ ಪರದೆಯನ್ನು ಮಾಡಿದರು. ಆ ಪರದೆ ತೂಗಿಸುವದಕ್ಕಾಗಿ ಐದು ಕಂಬಗಳನ್ನೂ ಅವುಗಳ ಕೊಂಡಿಗಳನ್ನೂ ಮಾಡಿ ಅವುಗಳ ಬೋದಿಗೆಗಳಿಗೂ ಕಟ್ಟುಗಳಿಗೂ ಚಿನ್ನದ ತಗಡುಗಳನ್ನು ಹೊದಿಸಿದರು. ಅವುಗಳ ಐದು ಗದ್ದಿಗೇಕಲ್ಲುಗಳನ್ನು ತಾಮ್ರದಿಂದ ಮಾಡಿದರು.

37 ಬೆಚಲೇಲನು ಜಾಲೀಮರದಿಂದ ಮಂಜೂಷ
ವನ್ನು ಮಾಡಿದನು. ಅದು ಎರಡುವರೆ ಮೊಳ
ಉದ್ದವೂ ಒಂದುವರೆ ಮೊಳ ಅಗಲವೂ ಒಂದುವರೆ
ಮೊಳ ಎತ್ತರವೂ ಆಗಿತ್ತು. ಚೊಕ್ಕಬಂಗಾರದ ತಗಡು 2
ಗಳನ್ನು ಅದರ ಹೊರಗಡೆಯೂ ಒಳಗಡೆಯೂ ಹೊದಿ
ಸಿದನು; ಅದರ ಮೇಲೆ ಸುತ್ತಲೂ ಚಿನ್ನದ ಗೋಟು
ಕಟ್ಟಿಸಿದನು. ನಾಲ್ಕು ಬಂಗಾರದ ಬಳೆಗಳನ್ನು 3
ಎರಕಹೊಯಿಸಿ ಅದರ ನಾಲ್ಕು ಮೂಲೆಗಳಲ್ಲಿ
ಅಂದರೆ ಒಂದೊಂದು ಕಡೆಯಲ್ಲಿ ಎರಡೆರಡು ಬಳೆಗ
ಳನ್ನು ಇರಿಸಿದನು. ಮತ್ತು ಜಾಲೀಮರದ ಕೋಲು 4
ಗಳನ್ನು ಮಾಡಿ ಅವುಗಳಿಗೆ ಚಿನ್ನದ ತಗಡುಗಳನ್ನು
ಹೊದಿಸಿ ಮಂಜೂಷದ ಎರಡು ಕಡೆಗಳಲ್ಲಿರುವ ಬಳೆ 5
ಗಳಲ್ಲಿ ಅದನ್ನು ಹೊರುವದಕ್ಕಾಗಿ ಸೇರಿಸಿದನು.
ಅದಲ್ಲದೆ ಚೊಕ್ಕಬಂಗಾರದ ಕೃಪಾಸನವನ್ನು 6
ಮಾಡಿದನು. ಅದು ಎರಡುವರೆ ಮೊಳ ಉದ್ದವೂ ಒಂದು
ವರೆ ಮೊಳ ಅಗಲವೂ ಆಗಿತ್ತು. ಕೃಪಾಸನದ ಎರಡು 7
ಕೊನೆಗಳಲ್ಲಿ ಕೆರೂಬಿಯರ ಎರಡು ಬಂಗಾರದ ಆಕಾ
ರಗಳನ್ನು ನಕಾಸಿಕೆಲಸದಿಂದ ಮಾಡಿದನು. ಕೃಪಾಸ 8
ನದ ಒಂದೊಂದು ಕೊನೆಯಲ್ಲಿ ಒಂದೊಂದು ಕೆರೂಬಿ
ಯನ್ನು ಮಾಡಿ ಕೃಪಾಸನಕ್ಕೆ ಜೋಡಿಸಿದನು. ಆ 9
ಕೆರೂಬಿಗಳು ಮೇಲಕ್ಕೆ ರೆಕ್ಕೆಗಳನ್ನು ಚಾಚಿರುವಂತೆ
ಯೂ ಕೃಪಾಸನವನ್ನು ತಮ್ಮ ರೆಕ್ಕೆಗಳಿಂದ ಮುಚ್ಚು
ವಂತೆಯೂ ಇದ್ದವು. ಅವುಗಳ ಮುಖಗಳು ಎದುರು
ಬದುರಾಗಿ ಕೃಪಾಸನವನ್ನು ನೋಡುತ್ತಿದ್ದವು.
ಅವನು ಜಾಲೀಮರದಿಂದ ಮೇಜನ್ನು ಮಾಡಿ 10
ದನು. ಅದು ಎರಡು ಮೊಳ ಉದ್ದವೂ ಒಂದು
ಮೊಳ ಅಗಲವೂ ಒಂದುವರೆ ಮೊಳ ಎತ್ತರವೂ
ಆಗಿತ್ತು. ಅದಕ್ಕೆ ಚೊಕ್ಕಬಂಗಾರದ ತಗಡುಗಳನ್ನು 11
ಹೊದಿಸಿ ಸುತ್ತಲೂ ಚಿನ್ನದ ಗೋಟು ಕಟ್ಟಿದನು.
ಮೇಜಿನ ಸುತ್ತಲು ಅಂಗೈ ಅಗಲದ ಅಡ್ಡಪಟ್ಟಿಯನ್ನು 12
ಮಾಡಿ ಅದಕ್ಕೂ ಚಿನ್ನದ ಗೋಟು ಕಟ್ಟಿದನು.
ಮೇಜನ್ನು ಎತ್ತುವ ಕೋಲುಗಳನ್ನು ಸೇರಿಸುವದ 13
ಕ್ಕಾಗಿ ಅದಕ್ಕೆ ನಾಲ್ಕು ಚಿನ್ನದ ಬಳೆಗಳನ್ನು ಎರಕ
ಹೊಯಿಸಿ ಅದರ ನಾಲ್ಕು ಕಾಲುಗಳಲ್ಲಿ ಹಚ್ಚಿ
ದನು. ಆ ಬಳೆಗಳು ಅಡ್ಡಪಟ್ಟಿಗೆ ಹತ್ತಿಕೊಂಡಿದ್ದವು. 14
ಮೇಜನ್ನು ಹೊರುವದಕ್ಕೆ ಕೋಲುಗಳನ್ನು ಜಾಲೀ 15
ಮರದಿಂದ ಮಾಡಿ ಅವುಗಳಿಗೆ ಚಿನ್ನದ ತಗಡು
ಗಳನ್ನು ಹೊದಿಸಿದನು. ಮೇಜಿನ ಮೇಲೆ ಇಡ 16
ಬೇಕಾದ ಉಪಕರಣಗಳನ್ನು ಅಂದರೆ ಹರಿವಾಣಗಳು,
ಧೂಪಾರತಿಗಳು, ಹೂಜೆಗಳು, ಪಾನದ್ರವ್ಯವನ್ನು ಅರ್ಪಿ
ಸುವದಕ್ಕೆ ಬೇಕಾದ ಬಟ್ಟಲುಗಳು ಇವುಗಳನ್ನು ಚೊಕ್ಕ
ಬಂಗಾರದಿಂದ ಮಾಡಿದನು.
ಮತ್ತು ಚೊಕ್ಕಬಂಗಾರದ ದೀಪಸ್ತಂಭವನ್ನು 17
ಮಾಡಿದನು. ಅದರ ಬುಡವನ್ನೂ ಕಂಬವನ್ನೂ
ನಕಾಸಿಕೆಲಸದಿಂದ ಮಾಡಿದನು. ಆ ದೀಪಸ್ತಂಭ
ವೆಲ್ಲಾ ಅಖಂಡವಾಗಿ ಪುಷ್ಪಪಾತ್ರೆಗಳಂತೆಯೂ ಪುಷ್ಪ
ಗಳಂತೆಯೂ ಅಲಂಕಾರವಾಗಿ ಕೆತ್ತಿತ್ತು. ಕಂಬದ 18
ಒಂದೊಂದು ಪಾರ್ಶ್ವದಲ್ಲಿ ಮೂರು ಮೂರು ಕೊಂಬೆ
ಗಳು ಅಂತೂ ಆರು ಕೊಂಬೆಗಳು ಇದ್ದವು. ಪ್ರತಿ 19
ಯೊಂದು ಕೊಂಬೆಯಲ್ಲಿ ಬಾದಾಮಿ ಹೂವುಗಳಂತಿ

ರುವ ಮೂರು ಮೂರು ಪುಷ್ಪಾಲಂಕಾರಗಳಿದ್ದವು;
ಒಂದೊಂದು ಅಲಂಕಾರಕ್ಕೆ ಒಂದು ಪುಷ್ಪಪಾತ್ರೆಯೂ
ಒಂದು ಪುಷ್ಪವೂ ಇದ್ದವು. ಆರು ಕೊಂಬೆಗಳನ್ನೂ
20 ಹಾಗೆಯೇ ಮಾಡಿದನು. ದೀಪಸ್ತಂಭದ ಕಡ್ಡಿಯಲ್ಲಿ
ಪುಷ್ಪಪಾತ್ರೆಗಳೂ ಪುಷ್ಪಗಳೂ ಇರುವ ಬಾದಾಮಿ
ಹೂವುಗಳಂತೆ ನಾಲ್ಕು ಪುಷ್ಪಾಲಂಕಾರಗಳು ಇದ್ದವು.
21 ಎರಡೆರಡು ಕೊಂಬೆಗಳು ಕವಲು ಒಡೆದಿರುವ ಸ್ಥಳ
22 ಗಳಲ್ಲೆಲ್ಲಾ ಒಂದೊಂದು ಪುಷ್ಪಪಾತ್ರೆ ಇತ್ತು. ಪುಷ್ಪ
ಪಾತ್ರೆಗಳೂ ಕೊಂಬೆಗಳೂ ಸಹಿತವಾದ ದೀಪಸ್ತಂಭ
ವನ್ನೆಲ್ಲಾ ಒಟ್ಟಿಗೆ ಚೊಕ್ಕಬಂಗಾರದಿಂದ ನಕಾಸಿ
23 ಕೆಲಸದಿಂದ ಮಾಡಿದನು. ಅದರ ಏಳು ಹಣತೆ
ಗಳನ್ನೂ ಅದರ ಕತ್ತರಿಗಳನ್ನೂ ದೀಪದ ಕುಡಿತೆಗೆ
ಯುವ ಬಟ್ಟಲುಗಳನ್ನೂ ಚೊಕ್ಕಬಂಗಾರದಿಂದ ಮಾಡಿ
24 ದನು. ದೀಪಸ್ತಂಭವೂ ಅದರ ಎಲ್ಲಾ ಉಪಕರಣ
ಗಳೂ ಒಂದು ತಲಾಂತು ಚೊಕ್ಕಬಂಗಾರದವುಗಳಾ
ಗಿದ್ದವು.
25 ಅವನು ಜಾಲೀಮರದಿಂದ ಧೂಪವೇದಿಯನ್ನು
ಮಾಡಿದನು. ಅದು ಒಂದು ಮೊಳ ಉದ್ದವಾಗಿಯೂ
ಒಂದು ಮೊಳ ಅಗಲವಾಗಿಯೂ ಚಚ್ಚೌಕವಾಗಿತ್ತು;
ಅದರ ಎತ್ತರವು ಎರಡು ಮೊಳವಾಗಿತ್ತು. ಅದರ
26 ಕೊಂಬುಗಳು ಅದರೊಂದಿಗೆ ಏಕವಾಗಿದ್ದವು. ಅದರ
ಮೇಲ್ಭಾಗಕ್ಕೂ ನಾಲ್ಕು ಪಕ್ಕಗಳಿಗೂ ಕೊಂಬು
ಗಳಿಗೂ ಚೊಕ್ಕಬಂಗಾರದ ತಗಡುಗಳನ್ನು ಹೊದಿಸಿ
ದನು. ಸುತ್ತಲೂ ಚಿನ್ನದ ಗೋಟು ಕಟ್ಟಿದನು.
27 ಅದನ್ನು ಎತ್ತುವ ಕೋಲುಗಳನ್ನು ಸೇರಿಸುವದ
ಕ್ಕಾಗಿ ಆ ಗೋಟಿನ ಕೆಳಗೆ ವೇದಿಯ ಎರಡು ಪಾರ್ಶ್ವ
ಗಳ ಮೂಲೆಗಳಲ್ಲಿ ಎರಡೆರಡು ಚಿನ್ನದ ಬಳೆಗಳನ್ನು
28 ಬಿಗಿಸಿದನು. ವೇದಿಯನ್ನು ಹೊರುವದಕ್ಕೆ ಕೋಲು
ಗಳನ್ನು ಜಾಲೀಮರದಿಂದ ಮಾಡಿ ಅವುಗಳಿಗೆ ಚಿನ್ನದ
ತಗಡುಗಳನ್ನು ಹೊದಿಸಿದನು.
29 ಆದಲ್ಲದೆ ಅವನು ದೇವರ ಸೇವೆಗೆ ನೇಮಕವಾದ
ಪಟ್ಟಾಭಿಷೇಕತೈಲವನ್ನೂ ಪರಿಮಳದ್ರವ್ಯಗಳಿಂದುಂಟಾ
ದ ಸ್ವಚ್ಛವಾದ ಧೂಪದ್ರವ್ಯವನ್ನೂ ಸುಗಂಧದ್ರವ್ಯ
ಕಾರರ ವಿದ್ಯೆಯ ಮೇರೆಗೆ ಮಾಡಿದನು.

38 ಅವನು ಯಜ್ಞವೇದಿಯನ್ನು ಜಾಲೀಮರ
ದಿಂದ ಮಾಡಿದನು. ಅದು ಐದು ಮೊಳ ಉದ್ದ
ವಾಗಿಯೂ ಐದು ಮೊಳ ಅಗಲವಾಗಿಯೂ ಚಚ್ಚೌಕ
ವಾಗಿತ್ತು; ಅದರ ಎತ್ತರ ಮೂರು ಮೊಳವಾಗಿತ್ತು.
2 ಅದರ ನಾಲ್ಕು ಮೂಲೆಗಳಲ್ಲಿ ನಾಲ್ಕು ಕೊಂಬು
ಗಳನ್ನು ಮಾಡಿದನು; ಅವು ಯಜ್ಞವೇದಿಗೆ ಏಕ
ವಾಗಿದ್ದವು. ಆ ವೇದಿಗೆ ತಾಮ್ರದ ತಗಡುಗಳನ್ನು
3 ಹೊದಿಸಿದನು. ವೇದಿಯ ಉಪಕರಣಗಳನ್ನೆಲ್ಲಾ
ಅಂದರೆ ಅದರ ಬಟ್ಟಲುಗಳು, ಸಲಿಕೆಗಳು, ಬೋಗು
ಣಿಗಳು, ಮುಳ್ಳುಗಳು, ಅಗ್ಗಿಷ್ಟಿಗೆಗಳು ಇವುಗಳ
4 ನ್ನೆಲ್ಲಾ ತಾಮ್ರದಿಂದ ಮಾಡಿದನು. ವೇದಿಗೆ ಹೆಣಿಗೆ
ಕೆಲಸದಿಂದ ತಾಮ್ರದ ಜಾಳಿಗೆಯನ್ನು ಮಾಡಿದನು.
ಅದು ವೇದಿಯ ಸುತ್ತಲಿರುವ ಕಟ್ಟೆಯ ಕೆಳಗೆ
ವೇದಿಯ ಬುಡದಿಂದ ನಡುವಿನ ತನಕ ಇರುವಂತೆ
5 ಹಾಕಿದನು. ವೇದಿಯನ್ನು ಎತ್ತುವ ಕೋಲುಗಳನ್ನು
ಸೇರಿಸುವದಕ್ಕಾಗಿ ಆ ತಾಮ್ರದ ಜಾಳಿಗೆಯ ನಾಲ್ಕು

ಮೂಲೆಗಳಲ್ಲಿ ನಾಲ್ಕು ಬಳೆಗಳನ್ನು ಎರಕಹೊ
ದನು. ವೇದಿಯನ್ನು ಹೊರುವ ಕೋಲುಗಳನ್
ಜಾಲೀಮರದಿಂದ ಮಾಡಿ ತಾಮ್ರದ ತಗಡುಗಳನ
ಹೊದಿಸಿ ಅದರ ಎರಡು ಪಕ್ಕಗಳಲ್ಲಿರುವ ಬಳೆಗಳ
ಸೇರಿಸಿದನು. ಆ ವೇದಿಯನ್ನು ಹಲಿಗೆಗಳಿಂದ ಪೆಟ್ಟಿ
ಯಂತೆ ಮಾಡಿದನು.
ದೇವದರ್ಶನದ ಗುಡಾರದ ಬಾಗಲಲ್ಲಿ ಸೇವೆಮಾ
ತ್ತಿದ್ದ ಸ್ತ್ರೀಯರು ಕೊಟ್ಟ ತಾಮ್ರದ ದರ್ಪಣಗಳಿ
ಗಂಗಾಳವನ್ನೂ ಅದರ ಪೀಠವನ್ನೂ ಮಾಡಿದನ
ಗುಡಾರಕ್ಕೆ ಅಂಗಳವನ್ನು ಮಾಡಿದನು.
ಅಂಗಳದ ತೆಂಕಣ ಕಡೆಯಲ್ಲಿ ಇದ್ದ ತೆರೆಗಳು ಹ
ನಾರಿನ ಬಟ್ಟೆಯಿಂದ ಉಂಟಾಗಿ ನೂರುಮೊಳ ಉ
ವಾಗಿದ್ದವು. ಆ ಕಡೆಯಲ್ಲಿ ಇಪ್ಪತ್ತು ಕಂಬಗಳ
ಅವುಗಳಿಗೆ ಇಪ್ಪತ್ತು ತಾಮ್ರದ ಗದ್ದಿಗೇಕಲ್ಲುಗಳ
ಇದ್ದವು; ಕಂಬಗಳ ಕೊಂಡಿಗಳೂ ಕಟ್ಟುಗಳೂ ಬೆ
ಯವು. ಉತ್ತರ ಕಡೆಯಲ್ಲಿಯೂ ನೂರು ಮೊ
ಉದ್ದವಾದ ತೆರೆಗಳೂ ಇಪ್ಪತ್ತು ಕಂಬಗಳೂ ಇಪ್ಪತ
ತಾಮ್ರದ ಗದ್ದಿಗೇಕಲ್ಲುಗಳೂ ಇದ್ದವು; ಕಂಬ
ಕೊಂಡಿಗಳೂ ಕಟ್ಟುಗಳೂ ಬೆಳ್ಳಿಯವು. ಪಶ್ಚಿ
ಕಡೆಯಲ್ಲಿ ಐವತ್ತು ಮೊಳ ಉದ್ದವಾದ ತೆರೆಗಳ
ಹತ್ತು ಕಂಬಗಳೂ ಹತ್ತು ಗದ್ದಿಗೇಕಲ್ಲುಗಳ
ಇದ್ದವು; ಕಂಬಗಳ ಕೊಂಡಿಗಳೂ ಕಟ್ಟುಗಳೂ ಬೆ
ಯವು. ಪೂರ್ವದಿಕ್ಕಿನಲ್ಲಿಯೂ ಅಂಗಳದ ಅಗಲ
ಐವತ್ತು ಮೊಳವಾಗಿತ್ತು. ಅಲ್ಲಿ ಬಾಗಲಿನ ಎರಡು
ಕಡೆಗಳಲ್ಲಿಯೂ ಹದಿನೈದು ಮೊಳ ಉದ್ದವಾದ
ಗಳೂ ಅವುಗಳಿಗೆ ಮೂರು ಮೂರು ಕಂಬಗಳ
ಮೂರು ಮೂರು ಗದ್ದಿಗೇಕಲ್ಲುಗಳೂ ಇದ್ದ
ಅಂಗಳದ ಸುತ್ತಲಿರುವ ತೆರೆಗಳೆಲ್ಲಾ ಹುರಿನಾ
ಬಟ್ಟೆಯೇ; ಕಂಬಗಳ ಗದ್ದಿಗೇಕಲ್ಲುಗಳು ತಾ
ದವುಗಳು; ಕಂಬಗಳ ಕೊಂಡಿಗಳೂ ಕಟ್ಟುಗಳ
ಬೆಳ್ಳಿಯವು; ಅವುಗಳ ಬೋದಿಗೆಗಳು ಬೆಳ್ಳಿ
ತಗಡುಗಳಿಂದ ಹೊದಿಸಲ್ಪಟ್ಟವು. ಅಂಗಳದ ಎ
ಕಂಬಗಳಿಗೂ ಬೆಳ್ಳಿಯ ಕಟ್ಟುಗಳಿದ್ದವು. ಅಂಗಳ
ಬಾಗಲಲ್ಲಿದ್ದ ಪರದೆಯು ಹುರಿನಾರಿನ ಬಟ್ಟೆಯಿ
ಲೂ ನೀಲಿ ಧೂಮ್ರ ರಕ್ತವರ್ಣಗಳುಳ್ಳ ದಾರದಿ
ಲೂ ಬುಟೇದಾರೀ ಕೆಲಸದವರ ಕೈಯಿಂದ ಮಾ
ಲ್ಪಟ್ಟಿತು. ಅದರ ಉದ್ದವು ಇಪ್ಪತ್ತು ಮೊ
ವಾಗಿತ್ತು; ಅದರ ಅಗಲವು ಅಂಗಳದ ಮಿಕ್ಕ ತ
ಗಳಂತೆ ಐದು ಮೊಳ. ಬಾಗಲಿಗೆ ನಾಲ್ಕು ಕಂ
ಗಳೂ ನಾಲ್ಕು ತಾಮ್ರದ ಗದ್ದಿಗೇಕಲ್ಲುಗಳ
ಇದ್ದವು. ಕಂಬಗಳ ಕೊಂಡಿಗಳೂ ಕಟ್ಟುಗಳ
ಬೋದಿಗೆಗಳಿಗೆ ಹೊದಿಸಲ್ಪಟ್ಟ ತಗಡುಗಳೂ ಬೆ
ಯವು. ಗುಡಾರದ ಗೂಟಗಳೂ ಅಂಗಳದ ಗೂ
ಗಳೂ ಎಲ್ಲಾ ತಾಮ್ರದವುಗಳು.

ಗುಡಾರವನ್ನು ನಿರ್ಮಿಸುವದರಲ್ಲಿ ಉಪಯೋಗವಾದ
ಚಿನ್ನ ಬೆಳ್ಳಿ ತಾಮ್ರಗಳ ಒಟ್ಟು ಲೆಕ್ಕ.

ದೇವದರ್ಶನದ ಗುಡಾರವನ್ನು ಮಾಡುವದರ
ಉಪಯೋಗಿಸಿದ್ದ ಪದಾರ್ಥಗಳ ಲೆಕ್ಕ. ಮೋಶೆ

ಜ್ಞೆಯ ಮೇರೆಗೆ ಮಹಾಯಾಜಕನಾದ ಆರೋನನ
ಗ ಈತಾಮಾರನು ಲೇವಿಯರ ಕೈಯಿಂದ ಲೆಕ್ಕ
ಾಡಿಸಿದ್ದು.
ಯೆಹೋವನು ಮೋಶೆಗೆ ಆಜ್ಞಾಪಿಸಿದ್ದನ್ನೆಲ್ಲಾ
ಾಡಿದವರು ಯಾರಂದರೆ—ಯೆಹೂದ ಕುಲದ
ೂರನ ಮೊಮ್ಮಗನೂ ಊರಿಯ ಮಗನೂ ಆಗಿದ್ದ
ಜಲೇಲನೇ; ಅವನ ಜೊತೆಯಲ್ಲಿ ದಾನ್ ಕುಲದ
ಹೀಸಾಮಾಕನ ಮಗನಾದ ಒಹೊಲೀಯಾಬನು
ಿದ್ದನು; ಇವನು ಶಿಲ್ಪವಿದ್ಯೆ ಬಲ್ಲವನೂ ವಿಚಿತ್ರವಾದ
ಲಸವನ್ನು ಕಲ್ಪಿಸುವವನೂ ನಾರಿನ ಬಟ್ಟೆಯಲ್ಲಿ
ಲಿ ಧೂಮ್ರ ರಕ್ತವರ್ಣಗಳುಳ್ಳ ನೂಲಿನಿಂದ ಬುಟೇ
ಾರೀ ಕೆಲಸಮಾಡುವವನೂ ಆಗಿದ್ದನು.
ದೇವಮಂದಿರದ ಸಕಲವಿಧವಾದ ಕೆಲಸದಲ್ಲಿ
ಪಯೋಗಿಸಿದ ಕಾಣಿಕೆಯ ಬಂಗಾರವು ದೇವರ
ೇವೆಗೆ ನೇಮಕವಾದ 1)ಶೆಕೆಲಿನ ಮೇರೆಗೆ 2)ಇಪ್ಪ
ತ್ತೊಂಬತ್ತು ತಲಾಂತು ಏಳುನೂರಮೂವತ್ತು ಶೆಕೆಲ್.
28 ಬೆಳ್ಳಿಯ ಲೆಕ್ಕ. ಲೆಕ್ಕಿಸಲ್ಪಟ್ಟವರಲ್ಲಿ ಇಪ್ಪತ್ತು
ರುಷದವರೂ ಹೆಚ್ಚಿನ ವಯಸ್ಸುಳ್ಳವರೂ ದೇವರ
ೇವೆಗೆ ನೇಮಕವಾದ ರೂಪಾಯಿಯ ಮೇರೆಗೆ
ಂದೊಂದು ಬೆಕಾ ಅಂದರೆ ಅರ್ಧ ಅರ್ಧ ರೂಪಾಯಿ
ಪ್ಪವನ್ನು ಕೊಡಬೇಕಾದದರಿಂದ ಸಮೂಹದಲ್ಲಿ
ಕ್ಕಿಸಲ್ಪಟ್ಟ ಆರು ಲಕ್ಷ ಮೂರು ಸಾವಿರದ ಐನೂರ
ವತ್ತು ಮಂದಿಯಿಂದ ವಸೂಲಾದದ್ದು—3)ನೂರು
ಲಾಂತು ಸಾವಿರದ ಏಳುನೂರ ಎಪ್ಪತ್ತೈದು ಶೆಕೆ
ಲ್. ದೇವಮಂದಿರದ ಗದ್ದಿಗೇಕಲ್ಲುಗಳನ್ನೂ ತೆರೆ
ಯ ಕಂಬಗಳ ಗದ್ದಿಗೇಕಲ್ಲುಗಳನ್ನೂ ಎರಕಹೊಯ್ಯು
ದರಲ್ಲಿ ಒಂದೊಂದು ಗದ್ದಿಗೇಕಲ್ಲಿಗೆ ಒಂದೊಂದು
ಲಾಂತಿನ ಮೇರೆಗೆ ನೂರು ತಲಾಂತು ಬೆಳ್ಳಿಯು
ಪಯೋಗವಾಯಿತು. ಮಿಕ್ಕ ಸಾವಿರದ ಏಳು
ೂರ ಎಪ್ಪತ್ತೈದು ತೊಲೆಯಿಂದ ಕಂಬಗಳಿಗೆ
ೊಂಡಿಗಳನ್ನೂ ಕಟ್ಟುಗಳನ್ನೂ ಮಾಡಿ ಅವುಗಳ
ೋಡಿಗೆಗಳಿಗೆ ತಗಡುಗಳನ್ನು ಹೊದಿಸಿದರು.
ಜನರು ಕಾಣಿಕೆಯಾಗಿ ಕೊಟ್ಟ ತಾಮ್ರದ ಲೆಕ್ಕ —
)ಎಪ್ಪತ್ತು ತಲಾಂತು ಎರಡು ಸಾವಿರದ ನಾನೂರು
ೆಕೆಲ್. ಇದರಿಂದ ದೇವದರ್ಶನದ ಗುಡಾರದ
ಾಗಲಿನ ಗದ್ದಿಗೇಕಲ್ಲುಗಳನ್ನೂ ತಾಮ್ರದ ಯಜ್ಞ
ೇದಿಯನ್ನೂ ಅದರ ತಾಮ್ರದ ಜಾಳಿಗೆಯನ್ನೂ
ಯಜ್ಞವೇದಿಯ ಎಲ್ಲಾ ಉಪಕರಣಗಳನ್ನೂ ಅಂಗ
ಳದ ಸುತ್ತಲಿನ ಗದ್ದಿಗೇಕಲ್ಲುಗಳನ್ನೂ ಅಂಗಳದ
ಬಾಗಲಿನ ಗದ್ದಿಗೇಕಲ್ಲುಗಳನ್ನೂ ಗುಡಾರದ ಮತ್ತು
ಅಂಗಳದ ಎಲ್ಲಾ ಗೂಟಗಳನ್ನೂ ಮಾಡಿದನು.

ಯಾಜಕರಿಗೆ ದೀಕ್ಷಾವಸ್ತ್ರಗಳನ್ನು ಮಾಡಿದ್ದು.

9 ಯೆಹೋವನು ಮೋಶೆಗೆ ಆಜ್ಞಾಪಿಸಿದಂತೆ ಅ
ನೀಲಿ ಧೂಮ್ರ ರಕ್ತವರ್ಣಗಳುಳ್ಳ ದಾರದಿಂದ
ದೇವಮಂದಿರದ ಸೇವೆಗೆ ಅಲಂಕಾರವಾದ ವಸ್ತ್ರಗಳ
ನ್ನೂ ಆರೋನನಿಗೆ ದೀಕ್ಷಾವಸ್ತ್ರಗಳನ್ನೂ ಮಾಡಿದರು.
ಮಹಾಯಾಜಕನ ಎಫೋದೆಂಬ ಕವಚವನ್ನು ಹುರಿ 2
ನಾರಿನ ಬಟ್ಟೆಯಿಂದಲೂ ಚಿನ್ನದ ದಾರದಿಂದಲೂ
ನೀಲಿ ಧೂಮ್ರ ರಕ್ತವರ್ಣಗಳುಳ್ಳ ದಾರದಿಂದಲೂ
ಮಾಡಿದನು. ನೀಲಿ ಧೂಮ್ರ ರಕ್ತವರ್ಣಗಳುಳ್ಳ 3
ದಾರದೊಡನೆಯೂ ನಾರಿನ ಬಟ್ಟೆಯೊಡನೆಯೂ ವಿಚಿ
ತ್ರವಾದ [ಕಸೂತಿ] ಕೆಲಸದವರ ಪದ್ಧತಿಯ ಮೇರೆಗೆ
ಬುಟೇದಾರಿಯ ಕೆಲಸವನ್ನು ಮಾಡುವದಕ್ಕಾಗಿ
ಬಂಗಾರವನ್ನು ಹೊಡೆದು ತಗಡುಗಳನ್ನು ಮಾಡಿ
ಸಣ್ಣ ಸಣ್ಣ ಎಳೆಗಳಾಗಿ ಕತ್ತರಿಸಿದರು. ಆ ಕವಚಕ್ಕೆ 4
ಹೆಗಲಿನ ಮೇಲೆ ಎರಡು ಪಟ್ಟಿಗಳನ್ನು ಮಾಡಿದರು;
ಅದರ ಎರಡು ಕೊನೆಗಳು ಜೋಡಿಸಲ್ಪಟ್ಟವು.
ಕವಚದ ಮೇಲಿರುವ ವಿಚಿತ್ರವಾದ ಬುಟೇದಾರಿಯ 5
ನಡುಕಟ್ಟು ಕವಚಕ್ಕೆ ಏಕವಾಗಿದ್ದು ಅದರಂತೆಯೇ
ಹುರಿನಾರಿನ ಬಟ್ಟೆಯಿಂದಲೂ ಚಿನ್ನದ ದಾರದಿಂದಲೂ
ನೀಲಿ ಧೂಮ್ರ ರಕ್ತವರ್ಣಗಳುಳ್ಳ ದಾರದಿಂದಲೂ
ಉಂಟಾಗಿತ್ತು. ಯೆಹೋವನು ಮೋಶೆಗೆ ಆಜ್ಞಾಪಿಸಿ
ದಂತೆಯೇ ಅದನ್ನು ಮಾಡಿದರು.
ಮುದ್ರಾರತ್ನವನ್ನು ಕೆತ್ತುವ ರೀತಿಯಲ್ಲಿ [ಎರಡು] 6
ಗೋಮೇಧಕರತ್ನಗಳಲ್ಲಿ ಇಸ್ರಾಯೇಲ್ಯರ ಹನ್ನೆರಡು
ಕುಲಗಳ ಹೆಸರುಗಳನ್ನು ಕೆತ್ತಿ ಆ ರತ್ನಗಳನ್ನು
ಕುಂದಣದಲ್ಲಿ ಕಟ್ಟಿದರು. ಆ ಎರಡು ರತ್ನಗಳು 7
ಇಸ್ರಾಯೇಲ್ಯರ ಜ್ಞಾಪಕಾರ್ಥವಾದ ರತ್ನಗಳಾಗು
ವಂತೆ ಅವುಗಳನ್ನು ಕವಚದ ಹೆಗಲಿನ ಮೇಲಿರುವ
ಪಟ್ಟಿಗಳಲ್ಲಿ ಬಿಗಿಸಿದನು. ಯೆಹೋವನು ಮೋಶೆಗೆ
ಹಾಗೆಯೇ ಆಜ್ಞಾಪಿಸಿದ್ದನು.
ಕವಚದಂತೆಯೇ ಬುಟೇದಾರಿಯ ಕೆಲಸದಿಂದ 8
ಚಿನ್ನದ ದಾರದಿಂದಲೂ ನೀಲಿ ಧೂಮ್ರ ರಕ್ತವರ್ಣ
ಗಳುಳ್ಳ ದಾರದಿಂದಲೂ ಹುರಿನಾರಿನ ಬಟ್ಟೆಯಲ್ಲಿ
ಚೀಲದ ಪದಕವನ್ನು ಮಾಡಿದನು. ಅದು ಚಚ್ಚೌಕ 9
ವಾಗಿತ್ತು. ಆ ಚೀಲದ ಪದಕವು ಎರಡು ಪದರುಳ್ಳ
ದ್ದಾಗಿತ್ತು; ಅದು ಒಂದು ಗೇಣುದ್ದವೂ ಒಂದು
ಗೇಣಗಲವೂ ಆಗಿತ್ತು. ಅದರ ಮುಂಭಾಗದಲ್ಲಿ 10
ನಾಲ್ಕು ಸಾಲುಗಳಾಗಿ ರತ್ನಗಳನ್ನು ಖಚಿಸಿದರು.
ಮೊದಲನೆಯ ಸಾಲಿನಲ್ಲಿ ಮಾಣಿಕ್ಯ ಪುಷ್ಯರಾಗ ಸ್ಫಟಿ
ಕಗಳೂ, ಎರಡನೆಯ ಸಾಲಿನಲ್ಲಿ ಕೆಂಪರಲು ನೀಲ 11
ಪಚ್ಚೆಗಳೂ, ಮೂರನೆಯ ಸಾಲಿನಲ್ಲಿ ಸುವರ್ಣರತ್ನ 12
ಗೋಮೇಧಕ ಧೂಮ್ರಮಣಿಗಳೂ, ನಾಲ್ಕನೆಯ ಸಾಲಿ 13
ನಲ್ಲಿ ಪೀತರತ್ನ ಬೆರುಲ್ಲ ವೈದೂರ್ಯಗಳೂ ಚಿನ್ನದ
ಜವೆಯ ಕಲ್ಲಿಗಳಲ್ಲಿ ಸೇರಿಸಲ್ಪಟ್ಟವು. ಇಸ್ರಾಯೇಲ್ಯರ 14
ಕುಲಗಳ ಸಂಖ್ಯೆದ ಪ್ರಕಾರ ಹನ್ನೆರಡು ರತ್ನಗಳಿದ್ದವು;
ಮುದ್ರಾರತ್ನದಲ್ಲಿ ಕೆತ್ತುವ ರೀತಿಯಲ್ಲಿ ಒಂದೊಂದು
ರತ್ನದಲ್ಲಿ ಒಂದೊಂದು ಕುಲದ ಹೆಸರು ಕೆತ್ತಲ್ಪ
ಟ್ಟಿತು. ಪದಕದ ಮೇಲ್ಗಡೆಯಲ್ಲಿ ಹುರಿಗಳಂತಿರುವ 15
ಚೊಕ್ಕಬಂಗಾರದ ಸರಪಣಿಗಳನ್ನು ಹೆಣಿಗೇಕೆಲಸ

1) ಒಂದು ಶೆಕೆಲ್ ಅಂದರೆ ಒಂದು ತೊಲೆ. 2) ಅಂದರೆ ಸುಮಾರು ಎಂಭತ್ತೇಳು ಸಾವಿರದ ಏಳುನೂರನೂರವತ್ತು ತೊಲೆ.
ಅಂದರೆ ಸುಮಾರು ಮೂರು ಲಕ್ಷ ಸಾವಿರದ ಏಳುನೂರೆಪ್ಪತ್ತೈದು ತೊಲೆ. 4) ಅಂದರೆ ಸುಮಾರು ಎರಡು ಲಕ್ಷ ಹನ್ನೆರಡು
ಸಾವಿರದ ನಾನೂರು ತೊಲೆ.

16 ದಿಂದ ಮಾಡಿದರು. ಎರಡು ಚಿನ್ನದ ಜವೆಗಳನ್ನೂ
ಎರಡು ಚಿನ್ನದ ಉಂಗರಗಳನ್ನೂ ಮಾಡಿ ಆ ಉಂಗರ
ಗಳನ್ನು ಪದಕದ ಎರಡು ಮೂಲೆಗಳಿಗೆ ತಗಲಿಸಿದರು.
17 ಹೆಣಿಗೇಕೆಲಸದ ಆ ಎರಡು ಚಿನ್ನದ ಸರಪಣಿಗಳನ್ನು
ಪದಕದ ಮೂಲೆಗಳಲ್ಲಿರುವ ಉಂಗರಗಳಿಗೆ ಸಿಕ್ಕಿಸಿ
18 ದರು. ಹೆಣಿಗೇಕೆಲಸದ ಆ ಸರಪಣಿಗಳ ಕೊನೆಗಳನ್ನು
ಕವಚದ ಹೆಗಲಿನ ಪಟ್ಟಿಗಳಲ್ಲಿರುವ ಎರಡು ಜವೆಗಳ
19 ಮುಂಭಾಗಕ್ಕೆ ಸಿಕ್ಕಿಸಿದರು. ಅದಲ್ಲದೆ ಎರಡು ಚಿನ್ನದ
ಉಂಗರಗಳನ್ನು ಮಾಡಿ ಪದಕದ ಒಳಗಣ ಅಂಚಿನ
20 ಮೂಲೆಗಳಲ್ಲಿ ಕವಚದ ಹತ್ತಿರದಲ್ಲೇ ಇಟ್ಟರು. ಮತ್ತು
ಬೇರೆ ಎರಡು ಚಿನ್ನದ ಉಂಗರಗಳನ್ನು ಮಾಡಿ ಕವಚದ
ಎರಡು ಹೆಗಲಿನ ಪಟ್ಟಿಗಳ ಮುಂಭಾಗದ ಕೆಳಗೆ,
ಕವಚವನ್ನು ಜೋಡಿಸಿರುವ ಸ್ಥಳದ ಹತ್ತಿರ ಆ ವಿಚಿತ್ರ
ವಾದ ನಡುಕಟ್ಟಿನ ಮೇಲ್ಗಡೆಯಲ್ಲಿ ಇರಿಸಿದರು.
21 ಪದಕವು ವಿಚಿತ್ರವಾದ ನಡುಕಟ್ಟಿನ ಮೇಲ್ಗಡೆಯಲ್ಲಿ
ಬಿಗಿಯಾಗಿರುವಂತೆಯೂ ಕವಚದಿಂದ ಕಳಚಿಬೀಳ
ದಂತೆಯೂ ಅದರ ಉಂಗರಗಳನ್ನು ಕವಚದ ಉಂಗರ
ಗಳಿಗೆ ನೀಲಿದಾರದಿಂದ ಕಟ್ಟಿದರು. ಯೆಹೋವನು
ಮೋಶೆಗೆ ಹಾಗೆಯೇ ಆಜ್ಞಾಪಿಸಿದ್ದನು.
22 ಕವಚದ ಸಂಗಡ ತೊಟ್ಟುಕೊಳ್ಳಬೇಕಾದ ಮೇ
ಲಂಗಿಯನ್ನು ನೀಲಿಬಣ್ಣದ ಬಟ್ಟೆಯಿಂದಲೇ ನೇತ
23 ಕೆಲಸದಿಂದ ಮಾಡಿದನು. [ತಲೆದೂರಿಸುವದಕ್ಕೆ]
ಅದರಲ್ಲಿ ಸಂದು ಮಾಡಿ ಅದು ಹರಿಯದಂತೆ
ಯುದ್ಧದ ಕವಚದೋಪಾದಿಯಲ್ಲಿ ಆ ಸಂದಿನ ಸುತ್ತ
24 ಲು ನೇಯಿಗೇಕಸೂತಿಯನ್ನು ಹಾಕಿದನು. ಮೇ
ಲಂಗಿಯ ಅಂಚಿನ ಸುತ್ತಲೂ ನೀಲಿ ಧೂಮ್ರ ರಕ್ತ
ವರ್ಣಗಳುಳ್ಳ ದಾರದಿಂದ ದಾಳಿಂಬ ಹಣ್ಣಿನಂತೆ
25 ಚಂಡುಗಳನ್ನು ಮಾಡಿದರು. ಮತ್ತು ಚೊಕ್ಕಬಂಗಾ
ರದಿಂದ ಗೆಜ್ಜೆಗಳನ್ನು ಮಾಡಿ ಮೇಲಂಗಿಯ ಅಂಚಿ
26 ನಲ್ಲಿ ದಾಳಿಂಬ ಚಂಡುಗಳ ಸಂಗಡ ಇಟ್ಟರು. ಚಿನ್ನದ
ಗೆಜ್ಜೆಯೂ ದಾಳಿಂಬದಂತಿರುವ ಚಂಡೂ ಒಂದಾದ
ಮೇಲೆ ಒಂದು ದೇವರ ಸೇವೆಗೋಸ್ಕರವಾದ ಆ ಮೇ
ಲಂಗಿಯ ಅಂಚಿನ ಸುತ್ತಲೂ ಇದ್ದವು. ಯೆಹೋವನು
ಮೋಶೆಗೆ ಆಜ್ಞಾಪಿಸಿದಂತೆಯೇ ಅದನ್ನು ಮಾಡಿದನು.
27 ಆರೋನನಿಗೂ ಅವನ ಮಕ್ಕಳಿಗೂ ಸಣ್ಣ ನಾರಿ
ನಿಂದ ಹೆಣಿಗೇಕೆಲಸದ ರೀತಿಯಲ್ಲಿ ಅಂಗಿಗಳನ್ನೂ
28 ನಾರಿನಿಂದ ಮಹಾಯಾಜಕನ ಮುಂಡಾಸವನ್ನೂ
ನಾರಿನಿಂದ ಯಾಜಕರ ಅಲಂಕಾರವಾದ ಮುಂಡಾಸ
29 ಗಳನ್ನೂ ಹುರಿನಾರಿನಿಂದ ಚಡ್ಡಿಗಳನ್ನೂ ಹುರಿನಾರಿ
ನಿಂದಲೂ ನೀಲಿ ಧೂಮ್ರ ರಕ್ತವರ್ಣಗಳುಳ್ಳ ದಾರ
ದಿಂದಲೂ ಬುಟೇದಾರೀ ಕೆಲಸದ ರೀತಿಯಲ್ಲಿ ನಡು
ಕಟ್ಟನ್ನೂ ಮಾಡಿದರು. ಯೆಹೋವನು ಮೋಶೆಗೆ
ಆಜ್ಞಾಪಿಸಿದಂತೆಯೇ ಅದನ್ನು ಮಾಡಿದರು.
30 ಮತ್ತು ಚೊಕ್ಕಬಂಗಾರದಿಂದ ಪರಿಶುದ್ಧಕಿರೀಟ
ವಾಗಿರುವ ಪಟ್ಟವನ್ನು ಮಾಡಿ ಮುದ್ರೆಯನ್ನು
ಕೆತ್ತುವ ರೀತಿಯಲ್ಲಿ ಅದರಲ್ಲಿ—ಯೆಹೋವನಿಗೆ
31 ಮೀಸಲು ಎಂಬ ಲಿಪಿಯನ್ನು ಬರೆದರು. ಅದನ್ನು
ಮುಂಡಾಸಕ್ಕೆ ಬಿಗಿಸುವದಕ್ಕಾಗಿ ನೀಲಿದಾರವನ್ನು
ಅದಕ್ಕೆ ಕಟ್ಟಿದರು. ಯೆಹೋವನು ಮೋಶೆಗೆ ಆಜ್ಞಾ
ಪಿಸಿದಂತೆಯೇ ಅದನ್ನು ಮಾಡಿದರು.

ಇಸ್ರಾಯೇಲ್ಯರು ಕೆಲಸವನ್ನು ತೀರಿಸಿದಾಗ ಸಮಸ್ತವನ್ನು
ಮೋಶೆಯ ವಶಕ್ಕೆ ಕೊಟ್ಟದ್ದು.

ಈ ರೀತಿಯಲ್ಲಿ ದೇವದರ್ಶನದ ಗುಡಾರದ ಕೆಲ
ವೆಲ್ಲಾ ಸಂಪೂರ್ತಿಯಾಯಿತು. ಯೆಹೋವನ
ಮೋಶೆಗೆ ಆಜ್ಞಾಪಿಸಿದಂತೆಯೇ ಇಸ್ರಾಯೇಲ್ಯ
ಅದನ್ನು ಮಾಡಿದ್ದರು.
ಆಗ ಅವರು ಆ ಗುಡಾರವನ್ನು ಮೋಶೆಯ ಬಳಿ
ತೆಗೆದುಕೊಂಡು ಬಂದರು. ಏನಂದರೆ—ಡೇರೆಯನ
ಅದಕ್ಕೆ ಸಂಬಂಧಪಟ್ಟದ್ದೆಲ್ಲವನ್ನೂ ಅಂದರೆ ಅದ
ಕೊಂಡಿಗಳು, ಚೌಕಟ್ಟುಗಳು, ಅಗುಳಿಗಳು, ಕಂ
ಗಳು, ಗದ್ದಿಗೇಕಲ್ಲುಗಳು ಇವುಗಳನ್ನೂ; ಹದಮಾ
ರುವ ಕೆಂಪುಬಣ್ಣದ ಕುರಿದೊಗಲುಗಳಿಂದುಂಟಾ
ಮೇಲ್ಹೊದಿಕೆಯು, ಕಡಲುಹಂದಿಯ ತೊಗಲು
ಳಿಂದುಂಟಾದ ಮೇಲ್ಹೊದಿಕೆಯು, [ಮಹಾಪವಿ
ಸ್ಥಾನವನ್ನು] ಮರೆಮಾಡುವ ತೆರೆಯು ಇವುಗಳನ್ನೂ
ಆಜ್ಞಾಶಾಸನಗಳ ಮಂಜೂಷವು, ಅದರ ಕೋ
ಗಳು, ಕೃಪಾಸನವು ಇವುಗಳನ್ನೂ; ಮೇಜು, ಅದ
ಎಲ್ಲಾ ಉಪಕರಣಗಳು, ನೈವೇದ್ಯದ ರೊಟ್ಟಿ ಇ
ಗಳನ್ನೂ; ಚೊಕ್ಕಬಂಗಾರದ ದೀಪಸ್ತಂಭವು, ಅದ
ಮೇಲಿಡಬೇಕಾದ ಹಣತೆಗಳು, ಅದರ ಉಪಕರ
ಗಳು, ದೀಪಕ್ಕೆ ಬೇಕಾದ ಎಣ್ಣೆಯು ಇವುಗಳನ್ನೂ
ಚಿನ್ನದ ಧೂಪವೇದಿಯು, ಅಭಿಷೇಕತೈಲವು, ಸುವ
ಸನೆಯುಳ್ಳ ಧೂಪವು ಇವುಗಳನ್ನೂ; ಡೇರೆಯ
ಬಾಗಲಿನ ಪರದೆಯನ್ನೂ; ತಾಮ್ರದ ಯಜ್ಞ
ವೇದಿಯು, ಅದರ ತಾಮ್ರದ ಜಾಳಿಗೆಯು, ಅದ
ಕೋಲುಗಳು, ಉಪಕರಣಗಳು ಇವುಗಳನ್ನೂ
ಗಂಗಾಳವು, ಅದರ ಪೀಠವು ಇವುಗಳನ್ನೂ; ಅಂ
ಳದ ತೆರೆಗಳು, ಕಂಬಗಳು, ಗದ್ದಿಗೇಕಲ್ಲುಗಳ
ಇವುಗಳನ್ನೂ; ಅಂಗಳದ ಬಾಗಲಿನ ಪರದೆಯ
ಅದರ ಹಗ್ಗಗಳು, ಗೂಟಗಳು ಇವುಗಳನ್ನೂ; ದೇ
ದರ್ಶನದ ಗುಡಾರದ ಸೇವೆಗೆ ಬೇಕಾದ ಎಲ್ಲಾ ಉ
ಕರಣಗಳನ್ನೂ; ದೇವಮಂದಿರದೊಳಗೆ ನಡೆಯು
ಸೇವೆಗೋಸ್ಕರ ಬೇಕಾದ ಅಲಂಕಾರವಸ್ತ್ರ ಅಂದ
ಆರೋನನಿಗೆ ಬೇಕಾದ ದೀಕ್ಷಾವಸ್ತ್ರ ಯಾಜಕಸೇ
ಮಾಡುವವರಾದ ಅವನ ಮಕ್ಕಳಿಗೆ ಬೇಕಾದ ವಸ್ತ್ರ
ಇವುಗಳನ್ನೂ ತಂದರು.
ಯೆಹೋವನು ಮೋಶೆಗೆ ಆಜ್ಞಾಪಿಸಿದ್ದಂತೆಯೆ
ಇಸ್ರಾಯೇಲ್ಯರು ಆ ಕೆಲಸವನ್ನೆಲ್ಲಾ ಮಾಡಿದ್ದರ
ಅವರು ಮಾಡಿದ್ದ ಕೆಲಸವನ್ನು ಮೋಶೆ ಪರೀಕ್ಷಿ
ಲಾಗಿ ಯೆಹೋವನ ಅಪ್ಪಣೆಯಂತೆಯೇ ಅವರ
ಎಲ್ಲವನ್ನು ಮಾಡಿ ಮುಗಿಸಿದರೆಂದು ತಿಳುಕೊಂಡ
ಅವರನ್ನು ಆಶೀರ್ವದಿಸಿದನು.

ಮೋಶೆ ಆ ಗುಡಾರವನ್ನು ಎತ್ತಿ ನಿಲ್ಲಿಸಿ ಪ್ರತಿಷ್ಠಿಸಿದಾಗ
ಯೆಹೋವನ ತೇಜಸ್ಸು ಅದರ ಮೇಲೆ ಕಾಣಿಸಿ
ನೆಲೆಯಾಗಿದ್ದದ್ದು.

ಯೆಹೋವನು ಮೋಶೆಗೆ—ಮೊದಲನೆಯ 2
ತಿಂಗಳಿನ ಪ್ರಥಮದಿನದಲ್ಲಿ ನೀನು ದೇವದರ್ಶನದ

ಗುಡಾರವನ್ನು ಎತ್ತಿ ನಿಲ್ಲಿಸಬೇಕು. ಆಜ್ಞಾಶಾಸನಗಳ ಮಂಜೂಷವನ್ನು ಅದರಲ್ಲಿ ಇಟ್ಟು ಆ ಮಂಜೂಷವನ್ನು ತೆರೆಯಿಂದ ಮರೆಮಾಡಬೇಕು. ಆ ಮೇಲೆ ಮೇಜನ್ನು ತರಿಸಿ ಅದರ ಮೇಲಿಡಬೇಕಾದದ್ದನ್ನು ಸರಿಯಾಗಿ ಇಡಬೇಕು; ದೀಪಸ್ತಂಭವನ್ನು ತರಿಸಿ ಅದರ ಹಣತೆಗಳನ್ನು ಸರಿಯಾಗಿ ಇಡಬೇಕು. ಆಜ್ಞಾಶಾಸನಗಳ ಮಂಜೂಷದ ಎದುರಾಗಿ ಚಿನ್ನದ ಧೂಪವೇದಿಯನ್ನು ಇಟ್ಟು ಗುಡಾರದ ಬಾಗಲಲ್ಲಿ ಪರದೆಯನ್ನು ಕಟ್ಟಬೇಕು. ದೇವದರ್ಶನದ ಗುಡಾರದ ಬಾಗಲಿನ ಮುಂದುಗಡೆಯಲ್ಲಿ ಯಜ್ಞವೇದಿಯನ್ನು ಇಡಬೇಕು. ದೇವದರ್ಶನದ ಗುಡಾರಕ್ಕೂ ಯಜ್ಞವೇದಿಗೂ ನಡುವೆ ಗಂಗಾಳವನ್ನು ಇಟ್ಟು ಅದರಲ್ಲಿ ನೀರನ್ನು ತುಂಬಿಸಬೇಕು. ಅಂಗಳದ ಸುತ್ತಲೂ ಆವರಣವನ್ನು ನಿಲ್ಲಿಸಿ ಅಂಗಳದ ಬಾಗಲಿಗೆ ಪರದೆಯನ್ನು ತೂಗಬಿಡಬೇಕು.

ಆಗ ಅಭಿಷೇಕತೈಲವನ್ನು ತೆಗೆದುಕೊಂಡು ಗುಡಾರವನ್ನೂ ಅದರಲ್ಲಿರುವದೆಲ್ಲವನ್ನೂ ಅದರ ಎಲ್ಲಾ ಉಪಕರಣಗಳನ್ನೂ ಅಭಿಷೇಕಿಸಿ ಪ್ರತಿಷ್ಠಿಸಬೇಕು; ಅಂದಿನಿಂದ ಅದು ಪರಿಶುದ್ಧವಾಗಿರುವದು. ಯಜ್ಞವೇದಿಯನ್ನೂ ಅದರ ಉಪಕರಣಗಳನ್ನೂ ಅಭಿಷೇಕಿಸಿ ಯಜ್ಞವೇದಿಯನ್ನು ಪ್ರತಿಷ್ಠಿಸಬೇಕು; ಆ ಯಜ್ಞವೇದಿ ಅತ್ಯಂತಪರಿಶುದ್ಧವಾಗಿರಬೇಕು. ಗಂಗಾಳವನ್ನೂ ಅದರ ಪೀಠವನ್ನೂ ಅಭಿಷೇಕಿಸಿ ಪ್ರತಿಷ್ಠಿಸಬೇಕು.

ಅದಲ್ಲದೆ ಆರೋನನನ್ನೂ ಅವನ ಮಕ್ಕಳನ್ನೂ ದೇವದರ್ಶನದ ಗುಡಾರದ ಬಾಗಲಿನ ಹತ್ತಿರಕ್ಕೆ ಬರಮಾಡಿ ಅವರನ್ನು ಸ್ನಾನಮಾಡಿಸಿ ಆರೋನನು ನನಗೆ ಯಾಜಕನಾಗುವಂತೆ ಅವನಿಗೆ ಆ ದೀಕ್ಷಾವಸ್ತ್ರಗಳನ್ನು ತೊಡಿಸಿ ಅವನನ್ನು ಅಭಿಷೇಕಿಸಿ ಪ್ರತಿಷ್ಠಿಸಬೇಕು. ಆ ಮೇಲೆ ನೀನು ಅವನ ಮಕ್ಕಳನ್ನು ಬರಮಾಡಿ ಅವರಿಗೆ ಅಂಗಿಗಳನ್ನು ತೊಡಿಸಿ ಅವರು ನನಗೋಸ್ಕರ ಯಾಜಕರಾಗುವದಕ್ಕಾಗಿ ನೀನು ಅವರ ತಂದೆಯನ್ನು ಅಭಿಷೇಕಿಸಿದಂತೆಯೇ ಅವರನ್ನೂ ಅಭಿಷೇಕಿಸಬೇಕು. ಈ ಅಭಿಷೇಕದಿಂದ ಯಾಜಕತ್ವವು ಅವರಿಗೂ ಅವರ ಸಂತತಿಯವರಿಗೂ ಶಾಶ್ವತವಾಗಿರುವದು ಎಂದು ಹೇಳಿದನು. ಯೆಹೋವನು ಆಜ್ಞಾಪಿಸಿದಂತೆಯೇ ಮೋಶೆ ಎಲ್ಲವನ್ನು ಮಾಡಿದನು.

ಎರಡನೆಯ ವರುಷದ ಮೊದಲನೆಯ ತಿಂಗಳಿನ ಪ್ರಥಮದಿನದಲ್ಲಿ ಮೋಶೆ ಗುಡಾರವನ್ನು ಎತ್ತಿ ನಿಲ್ಲಿಸಿದನು. ಅವನು ಗುಡಾರವನ್ನು ಎತ್ತಿಸಿ ಅದರ ಗದ್ದಿಗೇಕಲ್ಲುಗಳನ್ನು ಹಾಕಿ ಚೌಕಟ್ಟುಗಳನ್ನು ನಿಲ್ಲಿಸಿ ಅಗುಳಿಗಳನ್ನು ಕೊಟ್ಟು ಕಂಬಗಳನ್ನು ನಿಲ್ಲಿಸಿದನು. ಗುಡಾರದ ಮೇಲೆ ಡೇರೆಯ ಬಟ್ಟೆಯನ್ನು ಹಾಸಿ ಆ ಡೇರೆಗೆ ಮೇಲ್ಹೊದಿಕೆಯನ್ನು ಹಾಕಿದನು. ಯೆಹೋವನು ಆಜ್ಞಾಪಿಸಿದಂತೆಯೇ ಮೋಶೆ ಅದನ್ನೆಲ್ಲಾ ಮಾಡಿದನು.

ಅವನು ಆಜ್ಞಾಶಾಸನಗಳನ್ನು ಮಂಜೂಷದಲ್ಲಿಟ್ಟು ಮಂಜೂಷಕ್ಕೆ ಕೋಲುಗಳನ್ನು ಕೊಟ್ಟು ಅದರ ಮೇಲೆ ಕೃಪಾಸನವನ್ನಿಟ್ಟು ಮಂಜೂಷವನ್ನು ಗುಡಾರದೊಳಕ್ಕೆ ತಂದು ಅದರ ಮುಂದೆ ತೆರೆಯನ್ನು ಇರಿಸಿ
ಯೆಹೋವನು ಆಜ್ಞಾಪಿಸಿದಂತೆಯೇ ಆಜ್ಞಾಶಾಸನ
ಗಳ ಮಂಜೂಷವನ್ನು ಮರೆಮಾಡಿದನು.
ಅದಲ್ಲದೆ ಯೆಹೋವನು ಆಜ್ಞಾಪಿಸಿದಂತೆಯೇ 22
ಮೋಶೆ ದೇವದರ್ಶನದ ಗುಡಾರದೊಳಗೆ ಉತ್ತರ
ಕಡೆಯಲ್ಲಿ ತೆರೆಯ ಹೊರಗಡೆ ಮೇಜನ್ನು ಇಟ್ಟು
ಅದರ ಮೇಲೆ ಯೆಹೋವನ ಸನ್ನಿಧಿಯಲ್ಲಿ ರೊಟ್ಟಿ 23
ಗಳನ್ನು ಕ್ರಮವಾಗಿ ಇರಿಸಿದನು.
ಮತ್ತು ಯೆಹೋವನು ಆಜ್ಞಾಪಿಸಿದಂತೆಯೇ 24
ಅವನು ದೀಪಸ್ತಂಭವನ್ನು ದೇವದರ್ಶನದ ಗುಡಾರ
ದೊಳಗೆ ಮೇಜಿನ ಎದುರಾಗಿ ಗುಡಾರದ ದಕ್ಷಿಣ
ಕಡೆಯಲ್ಲಿ ಇಟ್ಟು ಅದರ ಹಣತೆಗಳನ್ನು ಯೆಹೋ 25
ವನ ಸನ್ನಿಧಿಯಲ್ಲಿ ಕ್ರಮವಾಗಿ ಇರಿಸಿದನು.
ಮತ್ತು ಯೆಹೋವನು ಆಜ್ಞಾಪಿಸಿದಂತೆ ಚಿನ್ನದ 26
ಧೂಪವೇದಿಯನ್ನು ದೇವದರ್ಶನದ ಗುಡಾರದಲ್ಲಿ
ತೆರೆಯ ಮುಂದೆ ಇಟ್ಟು ಅದರ ಮೇಲೆ ಪರಿಮಳ 27
ದ್ರವ್ಯಗಳ ಧೂಪವನ್ನು ಹಾಕಿದನು. ಮತ್ತು ಮೋಶೆ 28
ಗುಡಾರದ ಬಾಗಲಿಗೆ ಪರದೆಯನ್ನು ಹಾಕಿದನು.
ಯೆಹೋವನು ಆಜ್ಞಾಪಿಸಿದಂತೆಯೇ ದೇವದರ್ಶನದ 29
ಗುಡಾರದ ಬಾಗಲಿನ ಮುಂದೆ ಯಜ್ಞವೇದಿಯನ್ನು
ಇಟ್ಟು ಅದರ ಮೇಲೆ ಸರ್ವಾಂಗಹೋಮವನ್ನೂ
ಧಾನ್ಯಸಮರ್ಪಣೆಯನ್ನೂ ಮಾಡಿದನು.
ಯೆಹೋವನು ಆಜ್ಞಾಪಿಸಿದಂತೆ ಮೋಶೆ ದೇವ 30
ದರ್ಶನದ ಗುಡಾರಕ್ಕೂ ಯಜ್ಞವೇದಿಗೂ ನಡುವೆ
ಗಂಗಾಳವನ್ನು ಇರಿಸಿ ತೊಳಕೊಳ್ಳುವದಕ್ಕೋಸ್ಕರ
ಅದರಲ್ಲಿ ನೀರು ತುಂಬಿಸಿದನು. ಅದರಲ್ಲಿ ಮೋಶೆ 31
ಯೂ ಆರೋನನೂ ಅವನ ಮಕ್ಕಳೂ ದೇವದರ್ಶ 32
ನದ ಗುಡಾರದೊಳಗೆ ಹೋಗುವಾಗಲೂ ಯಜ್ಞ
ವೇದಿಯ ಸೇವೆಗೆ ಬಂದಾಗಲೂ ಕೈಕಾಲುಗಳನ್ನು
ತೊಳಕೊಳ್ಳುವರು.
ಗುಡಾರಕ್ಕೂ ಯಜ್ಞವೇದಿಗೂ ಸುತ್ತಲು ಅಂಗ 33
ಳದ ಆವರಣವನ್ನು ಎತ್ತಿ ನಿಲ್ಲಿಸಿ ಅಂಗಳದ ಬಾಗ
ಲಿಗೆ ಪರದೆಯನ್ನು ಹಾಕಿದನು. ಹೀಗೆ ಮೋಶೆ ಆ
ಕೆಲಸವನ್ನೆಲ್ಲಾ ಮುಗಿಸಿದನು.
ಆಗ ಮೇಘವು ದೇವದರ್ಶನದ ಗುಡಾರವನ್ನು 34
ಮುಚ್ಚಿತು; ಯೆಹೋವನ ತೇಜಸ್ಸು ಗುಡಾರವನ್ನು
ತುಂಬಿತು. ಮೇಘವು ದೇವದರ್ಶನದ ಗುಡಾರದ 35
ಮೇಲೆ ನೆಲೆಯಾಗಿರುವದರಿಂದಲೂ ಯೆಹೋವನ
ತೇಜಸ್ಸು ಗುಡಾರದೊಳಗೆ ತುಂಬಿರುವದರಿಂದಲೂ
ಮೋಶೆ ಗುಡಾರದಲ್ಲಿ ಹೋಗಲಾರದೆ ಇದ್ದನು.
ಆ ಮೇಘವು ಗುಡಾರವನ್ನು ಬಿಟ್ಟು ಮೇಲಕ್ಕೆ 36
ಹೋದಾಗ ಇಸ್ರಾಯೇಲ್ಯರು ಮುಂದೆ ಪ್ರಯಾಣ
ಮಾಡುವರು; ಆ ಮೇಘವು ಬಿಡದೆ ಇರುವಾಗ 37
ಅದು ಬಿಡುವ ತನಕ ಪ್ರಯಾಣಮಾಡದೆ ಇರುವರು.
ಇಸ್ರಾಯೇಲ್ಯರ ಎಲ್ಲಾ ಪ್ರಯಾಣಗಳಲ್ಲಿಯೂ 38
ಅವರ ಕಣ್ಣ ಮುಂದೆ ಹಗಲುಹೊತ್ತಿನಲ್ಲಿ ಯೆಹೋ
ವನ ಮೇಘವು ಗುಡಾರದ ಮೇಲೆ ಇತ್ತು; ರಾತ್ರಿ
ವೇಳೆಯಲ್ಲಿ ಆ ಮೇಘದೊಳಗೆ ಅಗ್ನಿಯು ಪ್ರಕಾಶಿ
ಸುತ್ತಿತ್ತು.

# LEVITICUS

## ಮೋಶೆಯ ಧರ್ಮಶಾಸ್ತ್ರದಲ್ಲಿ ಯಾಜಕಕಾಂಡ ಎಂಬ ತೃತೀಯಭಾಗವು

### ಯಜ್ಞಸಮರ್ಪಣೆಯ ಕ್ರಮ.

1—7.

ಸರ್ವಾಂಗಹೋಮವಿಧಾನ.

1 ಯೆಹೋವನು ಮೋಶೆಯನ್ನು ಕರೆದು ದೇವದರ್ಶ
ನದ ಗುಡಾರದೊಳಗಿಂದ ಅವನ ಸಂಗಡ ಮಾತಾಡಿ
2 ಹೀಗಂದನು— ನೀನು ಇಸ್ರಾಯೇಲ್ಯರಿಗೆ ಆಜ್ಞಾಪಿಸ
ಬೇಕಾದದ್ದೇನಂದರೆ — ನಿಮ್ಮಲ್ಲಿ ಯಾವನಾದರೂ
ಯೆಹೋವನಿಗೆ ಪಶುವನ್ನು ಕಾಣಿಕೆಯಾಗಿ ಸಮ
ರ್ಪಿಸಬೇಕೆಂದಿದ್ದರೆ ಅದನ್ನು ದನಗಳಿಂದಾಗಲಿ ಆಡು
ಕುರಿಗಳಿಂದಾಗಲಿ ತೆಗೆದುಕೊಂಡು ಸಮರ್ಪಿಸಬೇಕು.
3 ಅವನು ದನವನ್ನು ಸರ್ವಾಂಗಹೋಮವಾಗಿ
ಸಮರ್ಪಿಸುವದಾದರೆ ಪೂರ್ಣಾಂಗನಾದ ಗಂಡನ್ನು
ತರಬೇಕು. ತನಗೆ ಯೆಹೋವನು ಒಲಿಯುವಂತೆ
ದೇವದರ್ಶನದ ಗುಡಾರದ ಬಾಗಲಿಗೆ ಅದನ್ನು ತರ
4 ಬೇಕು. ಅವನು ಆ ಪಶುವಿನ ತಲೆಯ ಮೇಲೆ
ಕೈಯಿಡಬೇಕು; ಆಗ ಅದು ಅವನಿಗೋಸ್ಕರ
ದೋಷಪರಿಹಾರವನ್ನು ಮಾಡುವದಕ್ಕಾಗಿ ಅಂಗೀ
5 ಕಾರವಾಗುವದು. ಅವನು ಆ ಹೋರಿಯನ್ನು
ಯೆಹೋವನ ಎದುರಿನಲ್ಲಿ ವಧಿಸಿದ ಮೇಲೆ ಆರೋ
ನನ ವಂಶದವರಾದ ಯಾಜಕರು ಅದರ ರಕ್ತವನ್ನು
ತೆಗೆದುಕೊಂಡು ದೇವದರ್ಶನದ ಗುಡಾರದ ಬಾಗ
ಲಿಗೆ ಎದುರಾಗಿರುವ ಯಜ್ಞವೇದಿಗೆ ಸುತ್ತಲೂ
6 [1]ಎರಚಬೇಕು. ಮತ್ತು ಅವನು ಆ ಪಶುವಿನ
ಚರ್ಮವನ್ನು ಸುಲಿದು ಅದರ ದೇಹವನ್ನು ತುಂಡು
7 ತುಂಡಾಗಿ ಕಡಿಯಬೇಕು. ಆರೋನನ ವಂಶದವ
ರಾದ ಯಾಜಕರು ಯಜ್ಞವೇದಿಯ ಮೇಲೆ ಬೆಂಕಿ
8 ಯನ್ನಿಟ್ಟು ಅದರ ಮೇಲೆ ಕಟ್ಟಿಗೆಯನ್ನು ಒಟ್ಟಿ ಆ
ತುಂಡುಗಳನ್ನೂ ತಲೆಯನ್ನೂ ಕೊಬ್ಬನ್ನೂ ಅದರ
9 ಮೇಲೆ ಕ್ರಮವಾಗಿ ಇಡಬೇಕು. ಅದರ ಕರುಳು
ಗಳನ್ನೂ ಕಾಲುಗಳನ್ನೂ ನೀರಿನಲ್ಲಿ ತೊಳೆದನಂತರ
ಯಾಜಕನು ಅದನ್ನು ಪೂರ್ತಿಯಾಗಿ ಯಜ್ಞವೇದಿಯ
ಮೇಲೆ ಹೋಮಮಾಡಬೇಕು. ಅದು ಅಗ್ನಿಯ
ಮೂಲಕ ಯೆಹೋವನಿಗೆ ಸುವಾಸನೆಯನ್ನುಂ
ಮಾಡುವ ಸರ್ವಾಂಗಹೋಮವಾಗಿದೆ.
ಒಬ್ಬನು ಆಡನ್ನಾಗಲಿ ಕುರಿಯನ್ನಾಗಲಿ ಸರ್ವಾಂ
ಹೋಮಮಾಡಬೇಕೆಂದಿದ್ದರೆ ಅವನು ಪೂರ್ಣಾಂ
ನಾದ ಗಂಡನ್ನು ತರಬೇಕು. ಅದನ್ನು ಯೆಹೋವ
ಸನ್ನಿಧಿಯಲ್ಲಿ ಯಜ್ಞವೇದಿಯ ಉತ್ತರಕಡೆ ವಧಿ
ಬೇಕು. ತರುವಾಯ ಆರೋನನ ವಂಶದವರಾ
ಯಾಜಕರು ಅದರ ರಕ್ತವನ್ನು ಯಜ್ಞವೇದಿ
ಸುತ್ತಲೂ [1]ಎರಚಬೇಕು. ಅವನು ಆ ಪಶುವಿನ ದೇ
ವನ್ನು ತುಂಡುತುಂಡಾಗಿ ಕಡಿದ ಮೇಲೆ ಯಾಜಕನ
ಆ ತುಂಡುಗಳನ್ನೂ ತಲೆಯನ್ನೂ ಕೊಬ್ಬನ್ನೂ ಯ
ವೇದಿಯ ಮೇಲಣ ಬೆಂಕಿಯಲ್ಲಿ ಕಟ್ಟಿಗೆಯ ಮೇ
ಕ್ರಮವಾಗಿ ಇಡಬೇಕು. ಅದರ ಕರುಳುಗಳನ
ಕಾಲುಗಳನ್ನೂ ನೀರಿನಲ್ಲಿ ತೊಳಿಸಿದನಂತರ ಯಾ
ಕನು ಅದನ್ನು ಪೂರ್ತಿಯಾಗಿ ಯಜ್ಞವೇದಿಂ
ಮೇಲೆ ಹೋಮಮಾಡಬೇಕು. ಅದು ಅಗ್ನಿಂ
ಮೂಲಕ ಯೆಹೋವನಿಗೆ ಸುವಾಸನೆಯನ್ನುಂ
ಮಾಡುವ ಸರ್ವಾಂಗಹೋಮವಾಗಿದೆ.
ಯೆಹೋವನಿಗೆ ಸರ್ವಾಂಗಹೋಮವಾಗಿ ಅ
ಸುವಂಥದು ಪಕ್ಷಿಜಾತಿಯಾಗಿದ್ದರೆ ಅದು ಬೆಳವ
ಯಾಗಲಿ ಪಾರಿವಾಳದ ಮರಿಯಾಗಲಿ ಇರಬೇಕ
ಯಾಜಕನು ಅದನ್ನು ಯಜ್ಞವೇದಿಯ ಬಳಿಗೆ ತಂ
ಕುತ್ತಿಗೆ ಮುರಿದು ಯಜ್ಞವೇದಿಯ ಮೇಲೆ ಹೋ
ಮಾಡಬೇಕು. ಅವನು ಅದರ ರಕ್ತವನ್ನು ಯ
ವೇದಿಯ ಪಕ್ಕದ ಮೇಲೆ ಹಿಂಡಬೇಕು; ಅದ
ಕರುಳುಗಳನ್ನೂ ಗರಿಗಳನ್ನೂ ತೆಗೆದುಬಿಟ್ಟು ಯ
ವೇದಿಯ ಪೂರ್ವದಿಕ್ಕಿನಲ್ಲಿರುವ ಬೂದಿಯ ಸ್ಥಳದ
ಬೀಸಾಡಬೇಕು. ಅವನು ಆ ಪಕ್ಷಿಯನ್ನು ರೆಕ್ಕೆಗ
ಸಂದುಗಳಲ್ಲಿ ಹರಿಯಬೇಕು, ಆದರೆ ರೆಕ್ಕೆಗಳನ
ಪೂರಾ ಕಿತ್ತುಹಾಕಕೂಡದು. ಅನಂತರ ಅವನ
ಅದನ್ನು ಯಜ್ಞವೇದಿಯ ಮೇಲಣ ಬೆಂಕಿಯಲ್ಲಿರು
ಕಟ್ಟಿಗೆಯ ಮೇಲೆ ಹೋಮಮಾಡಬೇಕು. ಅದ
ಅಗ್ನಿಯ ಮೂಲಕ ಯೆಹೋವನಿಗೆ ಸುವಾಸನೆ
ನ್ನುಂಟುಮಾಡುವ ಸರ್ವಾಂಗಹೋಮವಾಗಿದೆ.

1) ಅಂದರೆ ಉಗ್ಗಬೇಕು.

### ಧಾನ್ಯಸಮರ್ಪಣಕ್ರಮ.

ಯಾವನಾದರೂ ಯೆಹೋವನಿಗೆ ಧಾನ್ಯ ನೈ
ವೇದ್ಯ ಮಾಡಬೇಕೆಂದಿದ್ದರೆ ಅದು ಗೋದಿಹಿಟ್ಟಾ
ಗಿರಬೇಕು. ಅವನು ಅದರ ಮೇಲೆ ಎಣ್ಣೆಯನ್ನು
ಹೊಯಿದು ಧೂಪವನ್ನಿಟ್ಟು ಅದನ್ನು ಆರೋ
ನನ ವಂಶದವರಾದ ಯಾಜಕರ ಬಳಿಗೆ ತರ
ಬೇಕು. ಯಾಜಕನು ದೇವರಿಗೆ ನೈವೇದ್ಯವಾದ
ದ್ದನ್ನು ಸೂಚಿಸುವದಕ್ಕಾಗಿ ಆ ಎಣ್ಣೆ ಬೆರಸಿದ ಹಿಟ್ಟಿ
ನಲ್ಲಿ ಒಂದು ಹಿಡಿಯನ್ನೂ ಧೂಪವೆಲ್ಲವನ್ನೂ
ತೆಗೆದುಕೊಂಡು ಯಜ್ಞವೇದಿಯ ಮೇಲೆ ಹೋಮ
ಮಾಡಬೇಕು. ಅದು ಅಗ್ನಿಯ ಮೂಲಕ ಯೆಹೋವ
ನಿಗೆ ಸುವಾಸನೆಯನ್ನುಂಟುಮಾಡುವದು. ಆ ನೈ
ವೇದ್ಯದಲ್ಲಿ ಮಿಕ್ಕದ್ದು ಆರೋನನಿಗೂ ಅವನ ವಂಶ
ದವರಿಗೂ ಆಗಬೇಕು; ಅದು ಯೆಹೋವನಿಗೆ
ಅರ್ಪಿತವಾದ ಹೋಮಶೇಷವಾದದರಿಂದ ಮಹಾಪರಿ
ಶುದ್ಧವಾಗಿದೆ.
ನೀವು ಒಲೆಯಲ್ಲಿ ಅಡಿಗೆಮಾಡಿದ್ದನ್ನು ನೈವೇದ್ಯ
ವಾಗಿ ಸಮರ್ಪಿಸಬೇಕಾದರೆ ಅದು ಎಣ್ಣೆ ಬೆರಸಿದ
ಹುಳಿಯಿಲ್ಲದ ಗೋದಿಹಿಟ್ಟಿನ ಹೋಳಿಗೆಗಳಾದರೂ
ಎಣ್ಣೆ ಹಾಕಿದ ಹುಳಿಯಿಲ್ಲದ ಕಡುಬುಗಳಾದರೂ
ಆಗಿರಬೇಕು. ನೀವು ಅರ್ಪಿಸುವದು ಕಬ್ಬಿಣದ
ಹಂಚಿನ ಮೇಲೆ ಸುಟ್ಟದ್ದಾದರೆ ಅದು ಎಣ್ಣೆ ಬೆರಸಿದ
ಹುಳಿಯಿಲ್ಲದ ಗೋದಿಹಿಟ್ಟಿನದಾಗಿರಬೇಕು. ಅದನ್ನು
ಚೂರುಚೂರಾಗಿ ಮುರಿದು ಅದರ ಮೇಲೆ ಎಣ್ಣೆ
ಹೊಯಿದು ನೈವೇದ್ಯಮಾಡಬೇಕು. ನೀವು ಅರ್ಪಿ
ಸುವದು ಬಾಂಡ್ಲೆಯಲ್ಲಿ ಪಕ್ವಮಾಡಿದ್ದಾದರೆ ಅದು
ಎಣ್ಣೆ ಹೊಯಿದ ಗೋದಿಹಿಟ್ಟಿನದಾಗಿರಬೇಕು.
ನೀವು ಈ ಮೂರು ವಿಧವಾದ ನೈವೇದ್ಯವನ್ನು
ಯೆಹೋವನಿಗೆ ಸಮರ್ಪಿಸುವದಾದರೆ ಯಾಜಕನಿಗೆ
ಒಪ್ಪಿಸಬೇಕು; ಅವನೇ ಅದನ್ನು ಯಜ್ಞವೇದಿಯ
ಬಳಿಗೆ ತರಬೇಕು. ಯಾಜಕನು ನೈವೇದ್ಯವನ್ನು
ಸೂಚಿಸುವದಕ್ಕಾಗಿ ಅದರಲ್ಲಿ ಸ್ವಲ್ಪಭಾಗವನ್ನು
ಪ್ರತ್ಯೇಕಿಸಿ ಯಜ್ಞವೇದಿಯ ಮೇಲೆ ಹೋಮಮಾಡ
ಬೇಕು. ಅದು ಅಗ್ನಿಯ ಮೂಲಕ ಯೆಹೋವನಿಗೆ
ಸುವಾಸನೆಯನ್ನುಂಟುಮಾಡುವದು. ನೈವೇದ್ಯದಲ್ಲಿ
ಮಿಕ್ಕದ್ದು ಆರೋನನಿಗೂ ಅವನ ವಂಶದವರಿಗೂ
ಆಗಬೇಕು; ಅದು ಯೆಹೋವನಿಗೆ ಅರ್ಪಿತವಾದ
ಹೋಮಶೇಷವಾದದರಿಂದ ಮಹಾಪರಿಶುದ್ಧವಾಗಿದೆ.
ನೀವು ಯೆಹೋವನಿಗೆ ನೈವೇದ್ಯವಾಗಿ ಸಮರ್ಪಿ
ಸುವ ಯಾವ ಪದಾರ್ಥವನ್ನಾಗಲಿ ಹುಳಿಹಿಟ್ಟಿನಿಂದ
ಮಾಡಬಾರದು. ಯಾವ ಹುಳಿಪದಾರ್ಥವನ್ನಾಗಲಿ
1)ಸಿಹಿಪದಾರ್ಥವನ್ನಾಗಲಿ ಯೆಹೋವನಿಗೆ ಹೋಮ
ಮಾಡಕೂಡದು. ಅವುಗಳನ್ನು ಪ್ರಥಮಫಲವಾಗಿ
ಯೆಹೋವನಿಗೆ ಸಮರ್ಪಿಸಬಹುದೇ ಹೊರತು ಯಜ್ಞ
ವೇದಿಯ ಮೇಲೆ ಸುವಾಸನೆಯನ್ನುಂಟುಮಾಡುವದ
ಕ್ಕಾಗಿ ಹೋಮಮಾಡಕೂಡದು. ಎಲ್ಲಾ ನೈವೇದ್ಯ
ಪದಾರ್ಥಗಳಿಗೂ ಉಪ್ಪುಹಾಕಿ ಸಮರ್ಪಿಸಬೇಕು.
ಉಪ್ಪು ಯೆಹೋವನ ಸಂಗಡ ನಿಮಗಿರುವ ಒಡಂಬಡಿಕೆ
ಯನ್ನು ಸೂಚಿಸುವದರಿಂದ ಅದು ಯಾವ ನೈವೇದ್ಯ
ದ್ರವ್ಯವಾದರೂ ಉಪ್ಪಿಲ್ಲದೆ ಇರಬಾರದು. ನೀವು ಅರ್ಪಿ
ಸುವ ಎಲ್ಲಾ ಪದಾರ್ಥಗಳಲ್ಲಿಯೂ ಉಪ್ಪು ಸೇರೇ ಇರ
ಬೇಕು.
ನೀವು ಯೆಹೋವನಿಗೆ ಪ್ರಥಮಫಲನೈವೇದ್ಯವನ್ನು 14
ಮಾಡಬೇಕಾದರೆ ಗೋದಿಯ ಹಸೀ ತೆನೆಗಳನ್ನು
ಬೆಂಕಿಯಲ್ಲಿ ಸುಟ್ಟು ಉಮ್ಮಿಗೆ ಸಮರ್ಪಿಸಬೇಕು.
ಅದು ನೈವೇದ್ಯವಸ್ತುವಾದದರಿಂದ ಅದರ ಮೇಲೆ 15
ಎಣ್ಣೆಹೊಯಿದು ಧೂಪವಿಡಬೇಕು. ಯಾಜಕನು 16
ನೈವೇದ್ಯವನ್ನು ಸೂಚಿಸುವದಕ್ಕಾಗಿ ಆ ಉಮ್ಮಿ
ಗೆಯಲ್ಲಿಯೂ ಎಣ್ಣೆಯಲ್ಲಿಯೂ ಸ್ವಲ್ಪಭಾಗವನ್ನು
ತೆಗೆದುಕೊಂಡು ಧೂಪವೆಲ್ಲವನ್ನು ಅದಕ್ಕೆ ಸೇರಿಸಿ
ಅಗ್ನಿಯ ಮೂಲಕ ಯೆಹೋವನಿಗೆ ಹೋಮಮಾಡ
ಬೇಕು.

### ಸಮಾಧಾನಯಜ್ಞಕ್ರಮ.

3 ಯಾವನಾದರೂ ಸಮಾಧಾನಯಜ್ಞಮಾಡಬೇಕಾ
ದರೆ ಅವನು ಸಮರ್ಪಿಸುವ ಪಶುವು ದನವಾಗಿದ್ದ
ಪಕ್ಷಕ್ಕೆ ಅದು ಗಂಡಾಗಲಿ ಹೆಣ್ಣಾಗಲಿ ಪೂರ್ಣಾಂಗ
ವಾಗಿಯೇ ಇರಬೇಕು. ಅವನು ಅದನ್ನು ಯೆಹೋ 2
ವನ ಸನ್ನಿಧಿಗೆ ತಂದು ಅದರ ತಲೆಯ ಮೇಲೆ ಕೈ
ಯಿಟ್ಟು ದೇವದರ್ಶನದ ಗುಡಾರದ ಬಾಗಲಲ್ಲಿ ವಧಿ
ಸಬೇಕು. ಆರೋನನ ವಂಶದವರಾದ ಯಾಜಕ
ರು ಅದರ ರಕ್ತವನ್ನು ಯಜ್ಞವೇದಿಗೆ ಸುತ್ತಲೂ
2)ಎರಚಬೇಕು. ಆ ಯಜ್ಞಪಶುವಿನ ವಪೆಯನ್ನೂ 3
ಕರುಳುಗಳ ಮೇಲಣ ಎಲ್ಲಾ ಕೊಬ್ಬನ್ನೂ ಎರಡು 4
ಹುರುಳಿಕಾಯಿಗಳನ್ನೂ ಇವುಗಳ ಮೇಲೆ ಸೊಂಟ
ದಲ್ಲಿರುವ ಕೊಬ್ಬನ್ನೂ ಕಾಳಿಜದ ಹತ್ತಿರ ಹುರುಳಿ
ಕಾಯಿಗಳ ತನಕ ಇರುವ ಕೊಬ್ಬನ್ನೂ ತೆಗೆದು
ಯೆಹೋವನಿಗೆ ಹೋಮಮಾಡಬೇಕು. ಆರೋನನ 5
ವಂಶದವರಾದ ಯಾಜಕರು ಅದನ್ನು ಯಜ್ಞವೇದಿ
ಯಲ್ಲಿ ಉರಿಯುವ ಕಟ್ಟಿಗೆಯ ಮೇಲಿರುವ ಸರ್ವಾಂಗ
ಹೋಮದ್ರವ್ಯದ ಮೇಲೆಯೇ ಹೋಮಮಾಡಬೇಕು.
ಅದು ಯೆಹೋವನಿಗೆ ಸುಗಂಧಹೋಮವಾಗಿರು
ವದು.
ಸಮಾಧಾನಯಜ್ಞಕ್ಕಾಗಿ ಯೆಹೋವನಿಗೆ ಸಮರ್ಪಿ 6
ಸುವಂಥದು ಕುರಿ ಅಥವಾ ಆಡು ಆಗಿರುವ ಪಕ್ಷ
ದಲ್ಲಿ ಅದು ಗಂಡಾಗಲಿ ಹೆಣ್ಣಾಗಲಿ ಪೂರ್ಣಾಂಗವಾಗಿ
ರಬೇಕು.
ಅದು ಕುರಿಯಾಗಿದ್ದರೆ ತಂದವನು ಅದನ್ನು 7
ಯೆಹೋವನ ಸನ್ನಿಧಿಗೆ ತೆಗೆದುಕೊಂಡು ಬಂದು ಅದರ 8
ತಲೆಯ ಮೇಲೆ ಕೈಯಿಟ್ಟು ದೇವದರ್ಶನದ ಗುಡಾರದ
ಎದುರಾಗಿ ಅದನ್ನು ವಧಿಸಬೇಕು. ಆರೋನನ ವಂಶ
ದವರಾದ ಯಾಜಕರು ಅದರ ರಕ್ತವನ್ನು ಯಜ್ಞವೇ
ದಿಗೆ ಸುತ್ತಲೂ 2)ಎರಚಬೇಕು. ಆ ಸಮಾಧಾನಯಜ್ಞ 9

1) ಅಥವಾ: ಜೇನನ್ನಾಗಲಿ. 2) ಅಂದರೆ ಉಗ್ಗಬೇಕು.

ಪಶುವಿನ ಕೊಬ್ಬನ್ನು ಯೆಹೋವನಿಗೋಸ್ಕರ ಹೋಮ
ವಾಗಿ ಸಮರ್ಪಿಸಬೇಕು. ಹೇಗಂದರೆ, ಬಾಲದ ಕೊ
ಬ್ಬನ್ನೆಲ್ಲಾ ಬೆನ್ನೆಲುಬಿನ ಬಳಿಯಿಂದ ತೆಗೆದುಬಿಟ್ಟು
ಅದನ್ನೂ ವಪೆಯನ್ನೂ ಕರುಳುಗಳ ಮೇಲಣ ಎಲ್ಲಾ
10 ಕೊಬ್ಬನ್ನೂ ಎರಡು ಹುರುಳಿಕಾಯಿಗಳನ್ನೂ ಇವುಗಳ
ಮೇಲೆ ಸೊಂಟದಲ್ಲಿರುವ ಕೊಬ್ಬನ್ನೂ ಕಾಳಿಜದ ಮೇಲೆ
11 ಹುರುಳಿಕಾಯಿಗಳ ತನಕ ಇರುವ ಕೊಬ್ಬನ್ನೂ ಯಾ
ಜಕನು ಯಜ್ಞವೇದಿಯ ಮೇಲೆ ಹೋಮವಮಾಡಬೇಕು.
ಅದು ಅಗ್ನಿಮೂಲಕವಾಗಿ ಯೆಹೋವನಿಗೆ ಆಹಾರವಾ
ಗುವದು.
12 ಸಮರ್ಪಿಸುವಂಥದು ಆಡಾಗಿದ್ದರೆ ಅರ್ಪಿಸುವ
ವನು ಅದನ್ನು ಯೆಹೋವನ ಸನ್ನಿಧಿಗೆ ತೆಗೆದು
13 ಕೊಂಡು ಬಂದು ಅದರ ತಲೆಯ ಮೇಲೆ ಕೈಯಿಟ್ಟು
ದೇವದರ್ಶನದ ಗುಡಾರದ ಎದುರಾಗಿ ವಧಿಸಬೇಕು.
ಆರೋನನ ವಂಶದವರಾದ ಯಾಜಕರು ಅದರ ರಕ್ತ
14 ವನ್ನು ಯಜ್ಞವೇದಿಗೆ ಸುತ್ತಲೂ ಎರಚಬೇಕು. ಅದರ
ವಪೆಯನ್ನೂ ಕರುಳುಗಳ ಮೇಲಣ ಎಲ್ಲಾ ಕೊಬ್ಬನ್ನೂ
15 ಎರಡು ಹುರುಳಿಕಾಯಿಗಳನ್ನೂ ಇವುಗಳ ಮೇಲೆ
ಸೊಂಟದಲ್ಲಿರುವ ಕೊಬ್ಬನ್ನೂ ಕಾಳಿಜದ ಹತ್ತಿರ
ಹುರುಳಿಕಾಯಿಗಳ ತನಕ ಇರುವ ಕೊಬ್ಬನ್ನೂ ಯೆ
ಹೋವನಿಗೋಸ್ಕರ ಅಗ್ನಿಯ ಮೂಲಕ ಸಮರ್ಪಿಸ
16 ಬೇಕು. ಯಾಜಕನು ಅದನ್ನು ಯಜ್ಞವೇದಿಯ ಮೇಲೆ
ಹೋಮಮಾಡಬೇಕು. ಅದು ಸುಗಂಧಹೋಮ
ರೂಪವಾಗಿ ಯೆಹೋವನಿಗೆ ಆಹಾರವಾಗಿರುವದು.
17 ಯಜ್ಞಪಶುಗಳ ಕೊಬ್ಬೆಲ್ಲವೂ ಯೆಹೋವನದು. ಕೊ
ಬ್ಬನ್ನಾಗಲಿ ರಕ್ತವನ್ನಾಗಲಿ ತಿನ್ನಕೂಡದೆಂಬದು ನಿಮ
ಗೂ ನಿಮ್ಮ ಸಂತತಿಯವರಿಗೂ ನೀವು ವಾಸಿಸುವ ಎಲ್ಲಾ
ಸ್ಥಳಗಳಲ್ಲಿಯೂ ಶಾಶ್ವತನಿಯಮ.

ತಿಳಿಯದೆ ತಪ್ಪುಮಾಡಿದವನಿಗೆ ದೋಷಪರಿಹಾರ
ಮಾಡುವ ಕ್ರಮ.

4 2 ಯೆಹೋವನು ಮೋಶೆಗೆ ಇಂತೆಂದನು—ನೀನು
ಇಸ್ರಾಯೇಲ್ಯರ ಸಂಗಡ ಮಾತಾಡಿ ಹೇಳಬೇಕಾದ
ದ್ದೇನಂದರೆ—ಯಾವನೇ ಆಗಲಿ ತಿಳಿಯದೆ ಯೆಹೋ
ವನು ನಿಷೇಧಿಸಿದ ಕಾರ್ಯಗಳಲ್ಲಿ ಯಾವದನ್ನಾದರೂ
ಮಾಡಿ ದೋಷಿಯಾದರೆ [ಅವನಿಗೆ ದೋಷಪರಿಹಾರ
ಮಾಡುವ ಕ್ರಮ ಹೇಗಂದರೆ—]
3 1)ಅಭಿಷಿಕ್ತನಾದ ಯಾಜಕನೇ ದೋಷಿಯಾಗಿ ಜನರೆ
ಲ್ಲರನ್ನೂ ಅಪರಾಧಕ್ಕೆ ಒಳಪಡಿಸಿದರೆ ತನ್ನ ದೋಷಪರಿ
ಹಾರಕ್ಕಾಗಿ ಅವನು ಪೂರ್ಣಾಂಗವಾದ ಹೋರಿಯನ್ನು
4 ಯೆಹೋವನಿಗೆ ಸಮರ್ಪಿಸಬೇಕು. ಅವನು ಆ ಹೋ
ರಿಯನ್ನು ಯೆಹೋವನ ಸನ್ನಿಧಿಗೆ ದೇವದರ್ಶನದ
ಗುಡಾರದ ಬಾಗಲಿಗೆ ತಂದು ಅದರ ತಲೆಯ ಮೇಲೆ
ಕೈಯಿಟ್ಟು ಯೆಹೋವನ ಸನ್ನಿಧಿಯಲ್ಲಿ ಅದನ್ನು ವಧಿ
5 ಸಬೇಕು. ಅಭಿಷಿಕ್ತಯಾಜಕನು ಆ ಹೋರಿಯ ರಕ್ತದಲ್ಲಿ
ಸ್ವಲ್ಪವನ್ನು ತೆಗೆದುಕೊಂಡು ದೇವದರ್ಶನದ ಗುಡಾರ

ದೊಳಗೆ ಬಂದು ಅದರಲ್ಲಿ ಬೆರಳನ್ನು ಅದ್ದಿ ಮಹಾ
ಪವಿತ್ರಸ್ಥಾನದ ಮುಂದಣ ತೆರೆಯ ಎದುರಾಗಿ ಯೆ
ಹೋವನ ಸನ್ನಿಧಿಯಲ್ಲಿ ಏಳು ಸಾರಿ ಚಿಮಿಕಿಸಬೇಕು.
ಆಗ ಯಾಜಕನು ದೇವದರ್ಶನದ ಗುಡಾರದೊಳಗೆ
ಯೆಹೋವನ ಸನ್ನಿಧಿಯಲ್ಲಿರುವ ಪರಿಮಳಧೂಪವೇ
ದಿಯ ಕೊಂಬುಗಳಿಗೆ ಆ ರಕ್ತವನ್ನು ಹಚ್ಚಿ ಹೋರಿ
ಯ ಮಿಕ್ಕ ರಕ್ತವನ್ನೆಲ್ಲಾ ದೇವದರ್ಶನದ ಗುಡಾರದ
ಬಾಗಲಿಗೆ ಎದುರಾಗಿ ಸರ್ವಾಂಗಹೋಮಮಾಡುವ
ಯಜ್ಞವೇದಿಯ ಬುಡದಲ್ಲಿ ಸುರಿದುಬಿಡಬೇಕು. ಆ
ದೋಷಪರಿಹಾರಕಯಜ್ಞದ ಹೋರಿಯ ಕೊಬ್ಬನ್ನೆಲ್ಲಾ
ಅಂದರೆ ವಪೆಯನ್ನೂ ಕರುಳುಗಳ ಮೇಲಣ ಕೊಬ್ಬ
ನ್ನೂ ಎರಡು ಹುರುಳಿಕಾಯಿಗಳನ್ನೂ ಇವುಗಳ
ಮೇಲೆ ಸೊಂಟದ ಹತ್ತಿರ ಇರುವ ಕೊಬ್ಬನ್ನೂ ಕಾಳಿ
ಜದ ಹತ್ತಿರ ಹುರುಳಿಕಾಯಿಗಳ ತನಕ ಇರುವ
ಕೊಬ್ಬನ್ನೂ ಅದನ್ನೆಲ್ಲಾ ಸಮಾಧಾನಯಜ್ಞದ ಹೋರಿ
ಯಲ್ಲಿ ಪ್ರತ್ಯೇಕಿಸಿದಂತೆಯೇ ಇದರಲ್ಲಿಯೂ ಪ್ರತ್ಯೇ
ಕಿಸಿ ಸರ್ವಾಂಗಹೋಮವೇದಿಯ ಮೇಲೆ ಹೋಮ
ಮಾಡಬೇಕು. ಆ ಹೋರಿಯಲ್ಲಿ ಮಿಕ್ಕದ್ದನ್ನೆಲ್ಲಾ
ಅಂದರೆ ಅದರ ಚರ್ಮ, ಮಾಂಸ, ತಲೆ, ಕಾಲುಗಳು
ಕರುಳುಗಳು, ಕರುಳುಗಳಲ್ಲಿರುವ ಕಲ್ಮಷ ಇವುಗಳ
ನ್ನೆಲ್ಲಾ ಪಾಳೆಯದ ಹೊರಗೆ ವೇದಿಯ ಬೂದಿಯನ್ನು
ಹಾಕುವ ಶುದ್ಧವಾದ ಸ್ಥಳಕ್ಕೆ ತೆಗೆದುಕೊಂಡುಹೋಗಿ
ಕಟ್ಟಿಗೆಯ ಮೇಲಿರಿಸಿ ಬೆಂಕಿಯಲ್ಲಿ ಸುಡಿಸಿಬಿಡಬೇಕು
ಬೂದಿಯನ್ನು ಹಾಕುವ ಸ್ಥಳದಲ್ಲೇ ಅದನ್ನು ಸುಡಿಸಿ
ಬಿಡಬೇಕು.
ಇಸ್ರಾಯೇಲ್ಯರ ಸಮೂಹವೆಲ್ಲಾ ತಿಳಿಯದೆ ದೋ
ಷಿಗಳಾದರೆ ಅಂದರೆ ಯೆಹೋವನು ನಿಷೇಧಿಸಿದ ಕಾ
ರ್ಯಗಳಲ್ಲಿ ಅವರು ಯಾವದನ್ನಾದರೂ ಮಾಡಿ
ದೋಷಕ್ಕೆ ಗುರಿಯಾದರೆ ಮೊದಲು ತಮಗೂ ಮ
ಯಾಗಿದ್ದು ಆ ದೋಷವು ತಿಳಿದುಬಂದನಂತರ ಅದನ್ನು
ಪರಿಹರಿಸಿಕೊಳ್ಳುವದಕ್ಕಾಗಿ [ಪೂರ್ಣಾಂಗವಾದ] ಹೋ
ರಿಯನ್ನು ಸಮರ್ಪಿಸಬೇಕು. ಆ ಹೋರಿಯನ್ನು
ದೇವದರ್ಶನದ ಗುಡಾರದ ಬಾಗಲಿಗೆ ತರಿಸಿದಾ
ಸಮೂಹದ ಹಿರಿಯರು ಯೆಹೋವನ ಸನ್ನಿಧಿಯಲ್ಲಿ
ಅದರ ತಲೆಯ ಮೇಲೆ ತಮ್ಮ ಕೈಗಳನ್ನಿಟ್ಟು ಯೆಹೋ
ವನ ಸನ್ನಿಧಿಯಲ್ಲಿ ಅದನ್ನು ವಧಿಸಬೇಕು. ಅಭಿಷಿಕ್ತ
ಯಾಜಕನು ಅದರ ರಕ್ತದಲ್ಲಿ ಸ್ವಲ್ಪವನ್ನು ದೇವ
ದರ್ಶನದ ಗುಡಾರದೊಳಗೆ ತಂದು ಅದರಲ್ಲಿ ಬೆರಳನ್ನು
ಅದ್ದಿ ತೆರೆಯ ಮುಂದೆ ಯೆಹೋವನ ಸನ್ನಿಧಿಯಲ್ಲಿ
ಅದನ್ನು ಏಳು ಸಾರಿ ಚಿಮಿಕಿಸಬೇಕು. ಆ ರಕ್ತದಲ್ಲಿ
ಸ್ವಲ್ಪವನ್ನು ದೇವದರ್ಶನದ ಗುಡಾರದೊಳಗೆ ಯೆ
ಹೋವನ ಸನ್ನಿಧಿಯಲ್ಲಿರುವ ಧೂಪವೇದಿಯ ಕೊಂಬು
ಗಳಿಗೆ ಹಚ್ಚಿ ಮಿಕ್ಕದ್ದನ್ನೆಲ್ಲಾ ದೇವದರ್ಶನದ ಗುಡಾ
ರದ ಬಾಗಲಿಗೆದುರಾಗಿರುವ ಯಜ್ಞವೇದಿಯ ಬುಡ
ಲ್ಲಿ ಸುರಿದುಬಿಡಬೇಕು. ಅವನು ಹೋರಿಯ ಕೊಬ್ಬ
ನ್ನೆಲ್ಲಾ ಪ್ರತ್ಯೇಕಿಸಿ ಯಜ್ಞವೇದಿಯ ಮೇಲೆ ಹೋಮ
ಮಾಡಬೇಕು. ಅವನು [ಅಭಿಷಿಕ್ತಯಾಜಕನು] ದೋ
ಷಪರಿಹಾರಕಯಜ್ಞದ ಹೋರಿಯ ವಿಷಯದಲ್ಲಿ ಹೇ

1) ಅಂದರೆ ಮಹಾಯಾಜಕನು.

ಮಾಡಬೇಕೆಂದು ವಿಧಿಸಲ್ಪಟ್ಟಿತೋ ಇದರ ವಿಷಯದಲ್ಲಿಯೂ ಹಾಗೆಯೇ ಮಾಡಬೇಕು. ಯಾಜಕನು ಅವರಿಗೋಸ್ಕರ ದೋಷಪರಿಹಾರಮಾಡಿದನಂತರ ಅವರಿಗೆ ಕ್ಷಮಾಪಣೆಯಾಗುವದು. ಆ ಮೊದಲನೆಯ ಹೋರಿಯನ್ನು ಪಾಳೆಯದ ಹೊರಗೆ ತೆಗೆದುಕೊಂಡುಹೋಗಿ ಸುಡಿಸಿಬಿಟ್ಟ ಪ್ರಕಾರ ಈ ಹೋರಿಯನ್ನೂ ಸುಡಿಸಿಬಿಡಬೇಕು. ಇದು ಜನಸಮೂಹದ ದೋಷಪರಿಹಾರಕಯಜ್ಞ.

ಮುಖ್ಯಾಧಿಕಾರಿ ತನ್ನ ದೇವರಾಗಿರುವ ಯೆಹೋವನು ನಿಷೇಧಿಸಿದ ಕಾರ್ಯಗಳಲ್ಲಿ ಯಾವದನ್ನಾದರೂ ತಿಳಿಯದೆ ಮಾಡಿ ದೋಷಿಯಾದರೆ ತನ್ನ ತಪ್ಪು ತನಗೆ ತಿಳಿದುಬಂದಾಗ ಅವನು ಪೂರ್ಣಾಂಗವಾದ ಹೋತವನ್ನು ತಂದು ಸಮರ್ಪಿಸಬೇಕು. ಅವನು ಆ ಹೋತದ ತಲೆಯ ಮೇಲೆ ಕೈಯಿಟ್ಟು ಯೆಹೋವನ ಸನ್ನಿಧಿಯಲ್ಲಿ ಸರ್ವಾಂಗಹೋಮದ ಪಶುಗಳನ್ನು ವಧಿಸುವ ಸ್ಥಳದಲ್ಲೇ ಅದನ್ನು ವಧಿಸಬೇಕು. ಅದು ದೋಷಪರಿಹಾರಕಯಜ್ಞ. ಯಾಜಕನು ಆ ಪಶುರಕ್ತದಲ್ಲಿ ಸ್ವಲ್ಪವನ್ನು ಬೆರಳಿನಿಂದ ತೆಗೆದುಕೊಂಡು ಯಜ್ಞವೇದಿಯ ಕೊಂಬುಗಳಿಗೆ ಹಚ್ಚಿ ಮಿಕ್ಕ ರಕ್ತವನ್ನು ಯಜ್ಞವೇದಿಯ ಬುಡದಲ್ಲಿ ಸುರಿದುಬಿಡಬೇಕು. ಸಮಾಧಾನಯಜ್ಞದ ಪಶುವಿನ ಕೊಬ್ಬನ್ನು ಅವನು ಹೋಮಮಾಡುವ ಪ್ರಕಾರವೇ ಇದರ ಎಲ್ಲಾ ಕೊಬ್ಬನ್ನೂ ಹೋಮಮಾಡಬೇಕು. ಹೀಗೆ ಯಾಜಕನು ಅವನಿಗೋಸ್ಕರ ದೋಷಪರಿಹಾರವನ್ನು ಮಾಡುವದರಿಂದ ಅವನಿಗೆ ಕ್ಷಮಾಪಣೆಯಾಗುವದು.

ನಿಮ್ಮ ದೇಶಸ್ಥರಲ್ಲಿ ಬೇರೆ ಯಾವನಾದರೂ ಯೆಹೋವನು ನಿಷೇಧಿಸಿದ ಕಾರ್ಯಗಳಲ್ಲಿ ಯಾವದನ್ನಾದರೂ ತಿಳಿಯದೆ ಮಾಡಿ ದೋಷಿಯಾದರೆ ತನ್ನ ತಪ್ಪು ತನಗೆ ತಿಳಿದುಬಂದಾಗ ಆ ದೋಷಪರಿಹಾರಕ್ಕಾಗಿ ಪೂರ್ಣಾಂಗವಾದ ಹೆಣ್ಣು ಮೇಕೆಯನ್ನು ತಂದು ಸಮರ್ಪಿಸಬೇಕು. ಅವನು ಅದರ ತಲೆಯ ಮೇಲೆ ಕೈಯಿಟ್ಟನಂತರ ಸರ್ವಾಂಗಹೋಮದ ಪಶುಗಳನ್ನು ವಧಿಸುವ ಸ್ಥಳದಲ್ಲೇ ಅದನ್ನು ವಧಿಸಬೇಕು. ಯಾಜಕನು ಅದರ ರಕ್ತದಲ್ಲಿ ಸ್ವಲ್ಪವನ್ನು ಬೆರಳಿನಿಂದ ತೆಗೆದುಕೊಂಡು ಯಜ್ಞವೇದಿಯ ಕೊಂಬುಗಳಿಗೆ ಹಚ್ಚಿ ಮಿಕ್ಕ ರಕ್ತವನ್ನೆಲ್ಲಾ ಯಜ್ಞವೇದಿಯ ಬುಡದಲ್ಲಿ ಸುರಿದುಬಿಡಬೇಕು. ಸಮಾಧಾನಯಜ್ಞಪಶುಗಳ ಕೊಬ್ಬನ್ನು ಪ್ರತ್ಯೇಕಿಸುವ ಪ್ರಕಾರ ಯಾಜಕನು ಇದರ ಎಲ್ಲಾ ಕೊಬ್ಬನ್ನೂ ಪ್ರತ್ಯೇಕಿಸಿ ಯೆಹೋವನಿಗೆ ಸುವಾಸನೆಯನ್ನುಂಟುಮಾಡುವದಕ್ಕೆ ಯಜ್ಞವೇದಿಯ ಮೇಲೆ ಹೋಮಮಾಡಬೇಕು. ಹೀಗೆ ಯಾಜಕನು ಅವನಿಗೋಸ್ಕರ ದೋಷಪರಿಹಾರವನ್ನು ಮಾಡುವದರಿಂದ ಅವನಿಗೆ ಕ್ಷಮಾಪಣೆಯಾಗುವದು.

ಅವನು ತನ್ನ ದೋಷಪರಿಹಾರಾರ್ಥವಾಗಿ ತರುವದು ಕುರಿಯಾದರೆ ಅದು ಪೂರ್ಣಾಂಗವಾದ ಹೆಣ್ಣಾಗಿರಬೇಕು. ಅವನು ಅದರ ತಲೆಯ ಮೇಲೆ ಕೈಯಿಟ್ಟನಂತರ ಸರ್ವಾಂಗಹೋಮದ ಪಶುಗಳನ್ನು ವಧಿಸುವ ಸ್ಥಳದಲ್ಲೇ ಅದನ್ನು ದೋಷಪರಿಹಾರಾರ್ಥವಾಗಿ ವಧಿಸಬೇಕು. ಯಾಜಕನು ಅದರ ರಕ್ತದಲ್ಲಿ ಸ್ವಲ್ಪವನ್ನು ಬೆರಳಿನಿಂದ ತೆಗೆದುಕೊಂಡು ಯಜ್ಞ
ವೇದಿಯ ಕೊಂಬುಗಳಿಗೆ ಹಚ್ಚಿ ಮಿಕ್ಕ ರಕ್ತವನ್ನೆಲ್ಲಾ
ಯಜ್ಞವೇದಿಯ ಬುಡದಲ್ಲಿ ಸುರಿದುಬಿಡಬೇಕು.
ಸಮಾಧಾನಯಜ್ಞಪಶುಗಳ ಕೊಬ್ಬನ್ನು ಪ್ರತ್ಯೇಕಿಸುವ 35
ಪ್ರಕಾರ ಯಾಜಕನು ಇದರ ಎಲ್ಲಾ ಕೊಬ್ಬನ್ನೂ
ಪ್ರತ್ಯೇಕಿಸಿ ಯಜ್ಞವೇದಿಯಲ್ಲಿ ಉರಿಯುವ ಹೋಮ
ದ್ರವ್ಯಗಳ ಮೇಲೆ ಯೆಹೋವನಿಗೆ ಹೋಮಮಾಡ
ಬೇಕು. ಅವನ ತಪ್ಪಿನ ನಿಮಿತ್ತ ಯಾಜಕನು ಹೀಗೆ
ಅವನಿಗೋಸ್ಕರ ದೋಷಪರಿಹಾರವನ್ನು ಮಾಡುವದ
ರಿಂದ ಅವನಿಗೆ ಕ್ಷಮಾಪಣೆಯಾಗುವದು.

ನ್ಯಾಯಾಧಿಕಾರಿಯು ತಿಳಿಸಬೇಕೆಂದು ಆಣೆ 5
ಇಟ್ಟರೂ ಯಾವನಾದರೂ ತಾನು ಕಂಡು ಕೇಳಿ
ದ್ದನ್ನು ತಿಳಿಸದೆಹೋದರೆ ಅವನು ಪಾಪಕ್ಕೆ ಗುರಿ
ಯಾಗುವನು. ಯಾವನಿಗಾದರೂ ಅಶುದ್ಧವಾದ 2
ಕಾಡುಮೃಗ, ಪಶು, ಜಂತು ಇವುಗಳ ಹೆಣವಾಗಲಿ
ಬೇರೆ ಯಾವ ಅಶುದ್ಧವಸ್ತುವಾಗಲಿ ತಗಲಿದರೆ ಅವ
ನಿಗೆ ತಿಳಿಯದೆಹೋದರೂ ಅವನು ಅಶುದ್ಧನೂ
ದೋಷಿಯೂ ಆಗಿರುವನು. ಮನುಷ್ಯದೇಹದಿಂದುಂ 3
ಟಾದ ಯಾವದಾದರೂ ಒಂದು ಅಶುದ್ಧವಸ್ತು ತಗ
ಲಿದ್ದು ಅವನಿಗೆ ತಿಳಿಯದೆಹೋದರೂ ತಿಳಿದು
ಬಂದಾಗ ಅವನು ದೋಷಿಯಾಗುವನು. ಯಾವ 4
ನಾದರೂ ಆಲೋಚಿಸದೆ ಮೇಲಿಗಾಗಲಿ ಕೇಡಿಗಾಗಲಿ
ಯಾವದಾದರೂ ಆಣೆಯಿಟ್ಟುಕೊಂಡರೆ ಅದು ಅವ
ನಿಗೆ ತಿಳಿಯದೆಹೋದರೂ ತಿಳಿದುಬಂದಾಗ ಅವನು
ಅದರಿಂದಲೂ ದೋಷಿಯಾಗುವನು. ಅವನು ಈ 5
ವಿಷಯಗಳಲ್ಲಿ ಯಾವದಾದರೂ ಒಂದರಲ್ಲಿ ದೋಷಿ
ಯಾದಾಗ ತಾನು ಮಾಡಿದ ತಪ್ಪನ್ನು ಒಪ್ಪಿಕೊಳ್ಳ
ಬೇಕು; ಮತ್ತು ದೋಷದ ಪ್ರಾಯಶ್ಚಿತ್ತಕ್ಕಾಗಿ ಹೆಣ್ಣು 6
ಕುರಿಯನ್ನಾಗಲಿ ಹೆಣ್ಣು ಮೇಕೆಯನ್ನಾಗಲಿ ಯೆಹೋ
ವನಿಗೆ ಸಮರ್ಪಿಸಬೇಕು. ಯಾಜಕನು ಅವನಿಗೋ
ಸ್ಕರ ದೋಷಪರಿಹಾರಮಾಡುವನು.

ಕುರಿಯನ್ನು ಕೊಡುವದಕ್ಕೆ ಅವನಿಗೆ ಗತಿಯಿಲ್ಲದ 7
ಪಕ್ಷದಲ್ಲಿ ದೋಷದ ಪ್ರಾಯಶ್ಚಿತ್ತಕ್ಕಾಗಿ ಎರಡು
ಬೆಳವಕ್ಕಿಗಳನ್ನಾಗಲಿ ಎರಡು ಪಾರಿವಾಳದ ಮರಿಗಳ
ನ್ನಾಗಲಿ ತೆಗೆದುಕೊಂಡು ಒಂದು ಸರ್ವಾಂಗಹೋಮ
ವಾಗಿ ಒಂದನ್ನೂ ದೋಷಪರಿಹಾರಕಯಜ್ಞವಾಗಿ
ಮತ್ತೊಂದನ್ನೂ ಯೆಹೋವನಿಗೆ ಸಮರ್ಪಿಸಬೇಕು.
ಅವನು ಅವುಗಳನ್ನು ಯಾಜಕನ ಬಳಿಗೆ ತಂದಾಗ 8
ಯಾಜಕನು ಮೊದಲು ದೋಷಪರಿಹಾರಾರ್ಥವಾದ
ದ್ದನ್ನು ಸಮರ್ಪಿಸಬೇಕು. ಅವನು ಅದರ ಕುತ್ತಿಗೆ
ಮುರಿಯಬೇಕು; ಆದರೆ ತಲೆಯನ್ನು ಪೂರಾ ತೆಗೆದು
ಬಿಡಕೂಡದು. ಆಗ ದೋಷಪರಿಹಾರಾರ್ಥವಾದ 9
ಆ ಪಕ್ಷಿಯ ರಕ್ತದಲ್ಲಿ ಸ್ವಲ್ಪವನ್ನು ಯಜ್ಞವೇದಿಯ
ಪಕ್ಕಕ್ಕೆ ಚಿಮಿಕಿಸಿ ಮಿಕ್ಕ ರಕ್ತವನ್ನು ಯಜ್ಞವೇದಿಯ
ಬುಡದಲ್ಲಿ ಹಿಂಡಬೇಕು. ಅದು ದೋಷಪರಿಹಾರಕ
ಯಜ್ಞ. ಮತ್ತೊಂದನ್ನು ಯಥಾವಿಧಿಯಾಗಿ ಸರ್ವಾಂಗ 10
ಹೋಮಮಾಡಿಬಿಡಬೇಕು. ಅವನ ತಪ್ಪಿನ ನಿಮಿತ್ತ
ಯಾಜಕನು ಹೀಗೆ ದೋಷಪರಿಹಾರವನ್ನು ಮಾಡಿ
ದಾಗ ಅವನಿಗೆ ಕ್ಷಮಾಪಣೆಯಾಗುವದು.

ಎರಡು ಬೆಳವಕ್ಕಿಗಳನ್ನಾಗಲಿ ಎರಡು ಪಾರಿವಾಳದ 11
ಮರಿಗಳನ್ನಾಗಲಿ ಕೊಡುವದಕ್ಕೂ ಗತಿಯಿಲ್ಲದೆ

ಹೋದರೆ ಅವನು ದೋಷಪರಿಹಾರಕ್ಕಾಗಿ 1)ಮೂರು
ಸೇರು ಗೋದಿಹಿಟ್ಟನ್ನು ತರಬೇಕು. ಆ ಹೋಮ
ದ್ರವ್ಯವು ದೋಷಪರಿಹಾರಾರ್ಥವಾದ್ದರಿಂದ ಅದರ
ಮೇಲೆ ಎಣ್ಣೆಯನ್ನು ಹೊಯ್ಯಕೂಡದು, ಧೂಪ
12 ವನ್ನು ಇಡಕೂಡದು. ಅವನು ಯಾಜಕನ ಬಳಿಗೆ
ಅದನ್ನು ತಂದನಂತರ ಅದು ದೇವಾರ್ಪಿತವೆಂದು
ಸೂಚಿಸುವದಕ್ಕಾಗಿ ಯಾಜಕನು ಅದರಲ್ಲಿ ಒಂದು
ಹಿಡಿಯನ್ನು ತೆಗೆದುಕೊಂಡು ಯೆಹೋವನಿಗೆ ಸಮರ್ಪಿ
ಸಿದ ಹೋಮದ್ರವ್ಯಗಳ ಮೇಲೆ ಯಜ್ಞವೇದಿಯಲ್ಲಿ
ಹೋಮಮಾಡಬೇಕು; ಅದು ದೋಷಪರಿಹಾರಕ
13 ಯಜ್ಞ. ಮೇಲೆ ಕಂಡ ವಿಷಯಗಳಲ್ಲಿ ಯಾವ
ವಿಧವಾಗಿ ಅವನು ದೋಷಿಯಾದರೂ ಯಾಜಕನು
ಅವನಿಗೋಸ್ಕರ ಹೀಗೆ ದೋಷಪರಿಹಾರವನ್ನು ಮಾಡಿದ
ನಂತರ ಅವನಿಗೆ ಕ್ಷಮಾಪಣೆಯಾಗುವದು. ನೈವೇದ್ಯ
ದ್ರವ್ಯದಲ್ಲಿ ಮಿಕ್ಕದ್ದು ಹೇಗೆ ಯಾಜಕನಿಗೆ ಆಗು
ತ್ತದೋ ಇದರಲ್ಲಿಯೂ ಮಿಕ್ಕದ್ದು ಯಾಜಕನಿಗೆ
ಆಗಬೇಕು.

ಪ್ರಾಯಶ್ಚಿತ್ತ ಯಜ್ಞಕ್ರಮ.

14 ಯೆಹೋವನು ಮೋಶೆಗೆ ಹೇಳಿದ್ದೇನಂದರೆ—
15 ಯಾವನಾದರೂ ಯೆಹೋವನಿಗೆ ಸಲ್ಲಿಸಬೇಕಾದ
ದೇವರ ವಸ್ತುಗಳನ್ನು ಸಮರ್ಪಿಸುವದರಲ್ಲಿ ಅಜಾ
ಗ್ರತೆಯಿಂದ ದ್ರೋಹಮಾಡಿ ದೋಷಕ್ಕೆ ಒಳಗಾದರೆ
ಅವನು ಆ ಅಪರಾಧಪ್ರಾಯಶ್ಚಿತ್ತಕ್ಕಾಗಿ ದೇವರ
ಸೇವೆಗೆ ನೇಮಕವಾದ ರೂಪಾಯಿಯ ಮೇರೆಗೆ
ಎರಡು ಅಥವಾ ಹೆಚ್ಚು ರೂಪಾಯಿ ಬಾಳುವದೆಂದು
ನಿಮಗೆ ತೋರುವ ಪೂರ್ಣಾಂಗವಾದ ಟಗರನ್ನು
ಆಡುಕುರಿಗಳ ಹಿಂಡಿನಿಂದ ತೆಗೆದುಕೊಂಡು ಬಂದು
16 ಯೆಹೋವನಿಗೆ ಸಮರ್ಪಿಸಬೇಕು. ಮತ್ತು ತಾನು
ಅನ್ಯಾಯವಾಗಿ ಇಟ್ಟುಕೊಂಡಿರುವ ದೇವರ ವಸ್ತು
ಗಳನ್ನು ಅಲ್ಲದೆ ಐದನೆಯ ಒಂದು ಭಾಗವನ್ನು
ಹೆಚ್ಚಾಗಿ ಯಾಜಕನಿಗೆ ತಂದುಕೊಡಬೇಕು. ಅವನು
ಪ್ರಾಯಶ್ಚಿತ್ತಕ್ಕಾಗಿ ತಂದ ಟಗರಿನಿಂದ ಯಾಜಕನು
ಅವನಿಗೋಸ್ಕರ ದೋಷಪರಿಹಾರಮಾಡಿದಾಗ ಅವನಿಗೆ
ಕ್ಷಮಾಪಣೆಯಾಗುವದು.
17 ಯಾವನಾದರೂ ಯೆಹೋವನು ನಿಷೇಧಿಸಿದ
ಕಾರ್ಯಗಳಲ್ಲಿ ಯಾವದನ್ನಾದರೂ ಮಾಡಿ ದೋಷಕ್ಕೆ
ಒಳಗಾದರೆ ಅದು ಅವನಿಗೆ ತಿಳಿಯದೆಹೋದರೂ
ಅವನು ಅದರಿಂದ ಅಪರಾಧಿಯಾಗಿ ತನ್ನ ಪಾಪಫಲ
18 ವನ್ನು ಅನುಭವಿಸಬೇಕು. ಅವನು ಪ್ರಾಯಶ್ಚಿತ್ತ
ಕ್ಕಾಗಿ ಹಿಂಡಿನಿಂದ ನಿಮಗೆ ಯೋಗ್ಯವಾಗಿ ತೋರುವ
ಪೂರ್ಣಾಂಗವಾದ ಟಗರನ್ನು ಯಾಜಕನ ಬಳಿಗೆ
ತೆಗೆದುಕೊಂಡು ಬರಬೇಕು. ಅವನು ತಿಳಿಯದೆ
ಮಾಡಿದ ತಪ್ಪನ್ನು ಪರಿಹರಿಸುವದಕ್ಕಾಗಿ ಯಾಜಕನು
ಅವನಿಗೋಸ್ಕರ ದೋಷಪರಿಹಾರಮಾಡಬೇಕು; ಆಗ
19 ಅವನಿಗೆ ಕ್ಷಮಾಪಣೆಯಾಗುವದು. ಅವನು ಅಪ
ರಾಧಿಯಾದದರಿಂದ ಯೆಹೋವನ ಸನ್ನಿಧಿಯಲ್ಲಿ, ಈ
ಪ್ರಾಯಶ್ಚಿತ್ತಯಜ್ಞವನ್ನು ಮಾಡಬೇಕು.

ಯೆಹೋವನು ಮೋಶೆಗೆ ಹೇಳಿದ್ದೇನಂದರೆ—
ಯಾವನಾದರೂ ಮತ್ತೊಬ್ಬನಿಂದ ತನ್ನ ವಶಕ್ಕೆ 2
ಕೊಡಲ್ಪಟ್ಟ ವಸ್ತುವಿನ ವಿಷಯದಲ್ಲಾಗಲಿ ತನ್ನ ಬಳಿ
ಯಲ್ಲಿ ಇಡಲ್ಪಟ್ಟ ಅಡವಿನ ವಿಷಯದಲ್ಲಾಗಲಿ ತಾನು
ಮಾಡಿದ ಕಳವಿನ ವಿಷಯದಲ್ಲಾಗಲಿ ಸುಳ್ಳಾಡುವ
ದರಿಂದಲೋ ಮತ್ತೊಬ್ಬನನ್ನು ಮೋಸಗೊಳಿಸಿದ್ದ
ರಿಂದಲೋ ಮತ್ತೊಬ್ಬನು ಕಳಕೊಂಡದ್ದನ್ನು ತಾನು
ಕಂಡು ಬೊಂಕ ಸುಳ್ಳಾಣೆಯಿಟ್ಟದ್ದರಿಂದಲೋ ಇವು
ಗಳಲ್ಲಿ ಯಾವ ವಿಷಯದಲ್ಲಾದರೂ ಒಬ್ಬನು ಪಾಪ
ಮಾಡಿ ಯೆಹೋವನಿಗೆ ದ್ರೋಹಿಯಾಗಿ ದೋಷಕ್ಕೆ
ಒಳಗಾದರೆ ಅವನು ಆಯಾ ವಸ್ತುಗಳನ್ನೇ ಅಂದರೆ
ಕದ್ದದ್ದನ್ನೂ ಮೋಸದಿಂದ ಪಡೆದದ್ದನ್ನೂ ತನ್ನ ವಶಕ್ಕೆ
ತೆಗೆದುಕೊಂಡದ್ದನ್ನೂ ತಾನು ಕಂಡುಕೊಂಡದ್ದನ್ನೂ
ಬೇರೆ ಯಾವದರ ವಿಷಯದಲ್ಲಿ ಅವನು ಸುಳ್ಳಾಣೆ
ಯಿಟ್ಟನೋ ಅದನ್ನೂ ಪೂರ್ತಿಯಾಗಿ ತಂದುಕೊಡ
ಬೇಕಲ್ಲದೆ ಐದನೆಯ ಒಂದು ಪಾಲನ್ನು ಹೆಚ್ಚಾಗಿ
ಕೊಡಬೇಕು. ಅವನು ಪ್ರಾಯಶ್ಚಿತ್ತಯಜ್ಞವನ್ನು
ಮಾಡುವ ದಿನದಲ್ಲೇ ಅದನ್ನು ಅದರ ನ್ಯಾಯವಾದ
ಒಡೆಯನಿಗೆ ಹಿಂದಕ್ಕೆ ಕೊಡಬೇಕು. ಮತ್ತು
ಅವನು ಪ್ರಾಯಶ್ಚಿತ್ತಕ್ಕಾಗಿ ನಿನಗೆ ಸರಿಯೆಂದು
ತೋರುವ ಪೂರ್ಣಾಂಗವಾದ ಟಗರನ್ನು ಹಿಂಡಿನಿಂದ
ತಂದು ಯಾಜಕನಿಗೆ ಒಪ್ಪಿಸಬೇಕು. ಯಾಜಕನು
ಅವನಿಗೋಸ್ಕರ ಯೆಹೋವನ ಸನ್ನಿಧಿಯಲ್ಲಿ ದೋಷ
ಪರಿಹಾರವನ್ನು ಮಾಡಿದಾಗ ಅವನು ಯಾವ ವಿಷಯ
ದಲ್ಲಿ ಅಪರಾಧಕ್ಕೆ ಒಳಗಾಗಿದ್ದನೋ ಆ ವಿಷಯ
ದಲ್ಲಿ ಅವನಿಗೆ ಕ್ಷಮಾಪಣೆಯಾಗುವದು.

ಯಜ್ಞಗಳ ವಿಷಯದಲ್ಲಿ ಯಾಜಕರು
ತಿಳಿದುಕೊಳ್ಳಬೇಕಾದದ್ದು.

ಯೆಹೋವನು ಮೋಶೆಗೆ ಹೇಳಿದ್ದೇನಂದರೆ—ನೀ 8
ನು ಆರೋನನಿಗೂ ಅವನ ವಂಶದವರಿಗೂ ಮುಂದಿನ
ಸಂಗತಿಗಳನ್ನು ಆಜ್ಞಾಪಿಸಬೇಕು; ಯಾವವಂದರೆ—
ಸರ್ವಾಂಗಹೋಮವಿಷಯವಾದ ನಿಯಮ
ಗಳು. ಸರ್ವಾಂಗಹೋಮದ್ರವ್ಯವು ರಾತ್ರಿಯೆಲ್ಲಾ
ಮರುದಿನದ ಬೆಳಗಿನ ವರೆಗೂ ಯಜ್ಞವೇದಿಯ ಮೇಲೆ
ಉರಿಯುತ್ತಾ ಇರಬೇಕು. ಅದರಿಂದಲೇ ಯಜ್ಞ
ವೇದಿಯ ಮೇಲಣ ಬೆಂಕಿ ಉರಿಯುತ್ತಿರಬೇಕು.
ಯಾಜಕನು ನಾರಿನ ನಿಲುವಂಗಿಯನ್ನು ಧರಿಸಿ
ಕೊಂಡು ಮಾನರಕ್ಷಕವಾದ ನಾರಿನ ಚಡ್ಡಿಯನ್ನು
ಹಾಕಿಕೊಂಡು ಯಜ್ಞವೇದಿಯ ಮೇಲಣ ಸರ್ವಾಂಗ
ಹೋಮದ್ರವ್ಯದ ಬೂದಿಯನ್ನು ಎತ್ತಿ ವೇದಿಯ ಬಳಿ
ಯಲ್ಲಿ ಇಡಬೇಕು. ಅನಂತರ ಆ ವಸ್ತ್ರಗಳನ್ನು ತೆಗೆ
ದಿಟ್ಟು ಬೇರೆ ವಸ್ತ್ರಗಳನ್ನು ಹಾಕಿಕೊಂಡು ಆ ಬೂದಿ
ಯನ್ನು ಪಾಳೆಯದ ಹೊರಗೆ ಶುದ್ಧವಾದ ಒಂದು
ಸ್ಥಳಕ್ಕೆ ತೆಗೆದುಕೊಂಡು ಹೋಗಬೇಕು. ಯಜ್ಞ
ವೇದಿಯ ಮೇಲಣ ಬೆಂಕಿ ಸರ್ವಾಂಗಹೋಮದ್ರವ್ಯ
ದಿಂದ ಉರಿಯುತ್ತಲೇ ಇರಬೇಕು; ಅದು ಆರಿಹೋಗ

1) ಮೂಲ: ಏಫದಲ್ಲಿ ಹತ್ತನೆಯ ಒಂದು ಪಾಲು.

ಬಾರದು. ಪ್ರತಿದಿನವೂ ಹೊತ್ತಾರೆಯಲ್ಲಿ ಯಾಜಕನು ಕಟ್ಟಿಗೆಯನ್ನು ತಂದುಹಾಕಿ ಬೆಂಕಿ ಉರಿಸಿ ಅದರ ಮೇಲೆ ಹೋಮದ್ರವ್ಯವನ್ನು ಕ್ರಮಪಡಿಸಿ ಸಮಾಧಾನಯಜ್ಞಪಶುಗಳ ಕೊಬ್ಬನ್ನು ಅದರ ಮೇಲೆ ಹೋಮಮಾಡಬೇಕು. ಬೆಂಕಿಯು ಯಜ್ಞವೇದಿಯ ಮೇಲೆ ಯಾವಾಗಲೂ ಉರಿಯುತ್ತಿರಬೇಕು; ಆರಿ ಹೋಗಬಾರದು.

ಧಾನ್ಯನೈವೇದ್ಯವಿಷಯವಾದ ನಿಯಮಗಳು. ಆರೋನನ ವಂಶದವರು ನೈವೇದ್ಯದ್ರವ್ಯವನ್ನು ಯೆಹೋವನ ಸನ್ನಿಧಿಯಲ್ಲಿ ಯಜ್ಞವೇದಿಯ ಎದುರಾಗಿಯೇ ಸಮರ್ಪಿಸಬೇಕು. ಅವರಲ್ಲಿ ಒಬ್ಬನು ನೈವೇದ್ಯವಾದದ್ದನ್ನು ಸೂಚಿಸುವದಕ್ಕಾಗಿ ಎಣ್ಣೆ ಹೊಯಿದ ಹಿಟ್ಟಿನಲ್ಲಿ ಒಂದು ಹಿಡಿಯನ್ನೂ ಅದರ ಮೇಲಿರುವ ಧೂಪವೆಲ್ಲವನ್ನೂ ತೆಗೆದುಕೊಂಡು ಯಜ್ಞವೇದಿಯ ಮೇಲೆ ಹೋಮಮಾಡಿ ಯೆಹೋವನಿಗೆ ಸುವಾಸನೆಯನ್ನುಂಟುಮಾಡಬೇಕು. ಮಿಕ್ಕದ್ದನ್ನು ಆರೋನನೂ ಅವನ ವಂಶದವರೂ ತಿನ್ನಬಹುದು; ಅವರು ಅದರಿಂದ ಹುಳಿಯಿಲ್ಲದ ರೊಟ್ಟಿಗಳನ್ನು ಮಾಡಿಸಿಕೊಂಡು ಪವಿತ್ರಸ್ಥಳದೊಳಗೆ ಅಂದರೆ ದೇವದರ್ಶನದ ಗುಡಾರದ ಅಂಗಳದಲ್ಲಿ ತಿನ್ನಬೇಕು. ಅದಕ್ಕೆ ಹುಳಿಕಲಸಿ ಸುಡಕೂಡದು. ನನಗೆ ಹೋಮರೂಪವಾಗಿ ಸಮರ್ಪಿಸಿದ ದ್ರವ್ಯಗಳಲ್ಲಿ ಅದನ್ನು ಅವರ ಪಾಲಿಗೆ ಬಿಟ್ಟಿದ್ದೇನೆ. ದೋಷಪರಿಹಾರಕಯಜ್ಞದ್ರವ್ಯದಂತೆಯೂ ಪ್ರಾಯಶ್ಚಿತ್ತಯಜ್ಞದ್ರವ್ಯದಂತೆಯೂ ಅದು ಮಹಾಪರಿಶುದ್ಧವಾದದ್ದು. ಆರೋನನ ವಂಶದವರಾದ ಗಂಡಸರೆಲ್ಲರೂ ಅದನ್ನು ತಿನ್ನಬಹುದು. ಯೆಹೋವನಿಗೆ ಹೋಮವಾಗಿ ಅರ್ಪಿತವಾದ ದ್ರವ್ಯಗಳಲ್ಲಿ ಅದು ನಿಮಗೂ ನಿಮ್ಮ ಸಂತತಿಯವರಿಗೂ ಸಲ್ಲತಕ್ಕದ್ದೆಂಬದು ಶಾಶ್ವತನಿಯಮ. ಆ 1)ದ್ರವ್ಯಗಳಿಗೆ ತಗಲಿದ್ದೆಲ್ಲಾ ಪರಿಶುದ್ಧವಾಗುವದು.

ಯೆಹೋವನು ಮೋಶೆಗೆ ಹೇಳಿದ್ದೇನಂದರೆ— ಆರೋನನಿಗೆ ಅಭಿಷೇಕವಾದ ದಿನ ಮೊದಲುಗೊಂಡು ಅವನೂ ಅವನ ವಂಶದವರೂ ಯೆಹೋವನಿಗೆ ಸಮರ್ಪಿಸಬೇಕಾದ ಧಾನ್ಯನೈವೇದ್ಯ ಕ್ರಮ ಹೇಗಂದರೆ— ಅವರು ನಿತ್ಯವೂ ಮೂರು ಸೇರು ಗೋದಿ ಹಿಟ್ಟನ್ನು, ಹೊತ್ತಾರೆ ಅರ್ಧವನ್ನೂ ಸಾಯಂಕಾಲ ಅರ್ಧವನ್ನೂ ಸಮರ್ಪಿಸಬೇಕು. ಕಬ್ಬಿಣದ ಹಂಚಿನ ಮೇಲೆ ಎಣ್ಣೆ ಸವರಿ ಅದನ್ನು ಸುಡಬೇಕು. ಅದನ್ನು ತರುವಾಗ ಅದು ಎಣ್ಣೆಯಿಂದ ನೆನೆದೇ ಇರಬೇಕು. ಅದನ್ನು ಭಾಗಭಾಗವಾಗಿ ಮಾಡಿ ಯೆಹೋವನಿಗೆ ಸುವಾಸನೆಯುಳ್ಳ ನೈವೇದ್ಯವನ್ನಾಗಿ ಸಮರ್ಪಿಸಬೇಕು. ಆರೋನನ ಸಂತತಿಯವರಲ್ಲಿ ಯಾವನು ಅವನ ತರುವಾಯ ಅಭಿಷಿಕ್ತಯಾಜಕನ ಪಟ್ಟಕ್ಕೆ ಬರುವನೋ ಅವನೇ ಅದನ್ನು ಸಮರ್ಪಿಸಬೇಕು; ಇದು ಶಾಶ್ವತನಿಯಮ. ಅದನ್ನು ನಿಶ್ಶೇಷವಾಗಿ ಹೋಮಮಾಡಿಬಿಡಬೇಕು. ಯಾಜಕರು ತಮಗೋಸ್ಕರ ಸಮರ್ಪಿಸುವ ನೈವೇದ್ಯದ್ರವ್ಯಗಳನ್ನು ನಿಶ್ಶೇಷವಾಗಿ ಹೋಮಮಾಡಿಬಿಡಬೇಕು; ಅದನ್ನು ತಿನ್ನಲೇ ಬಾರದು.

ಯೆಹೋವನು ಮೋಶೆಗೆ ಹೇಳಿದ್ದೇನಂದರೆ— 24
ನೀನು ಆರೋನನಿಗೂ ಅವನ ವಂಶದವರಿಗೂ ಹೀಗೆ ಆ 25
ಜ್ಞಾಪಿಸು — ದೋಷಪರಿಹಾರಕಯಜ್ಞನಿಯಮ
ಗಳು. ಸರ್ವಾಂಗಹೋಮದ ಪಶುವನ್ನು ವಧಿಸುವ
ಸ್ಥಳದಲ್ಲೇ ದೋಷಪರಿಹಾರಕಯಜ್ಞಪಶುವನ್ನೂ ಯೆ
ಹೋವನ ಸನ್ನಿಧಿಯಲ್ಲಿ ವಧಿಸಬೇಕು. ಅದು
ಮಹಾಪರಿಶುದ್ಧವಾದದ್ದರಿಂದ ಸಮರ್ಪಿಸುವ ಯಾಜ 26
ಕನು ಅದರ ಮಾಂಸವನ್ನು ಊಟಮಾಡಬೇಕು.
ಪವಿತ್ರಸ್ಥಳದೊಳಗೆ ಅಂದರೆ ದೇವದರ್ಶನದ ಗುಡಾ
ರದ ಅಂಗಳದಲ್ಲಿ ಅದನ್ನು ಊಟಮಾಡಬೇಕು. ಆ 27
ಪಶುವಿನ ಮಾಂಸಕ್ಕೆ សೋಂಕಿದ್ದೆಲ್ಲಾ ಪರಿಶುದ್ಧವಾಗು
ವದು. ಅದರ ರಕ್ತದಲ್ಲಿ ಸ್ವಲ್ಪವಾದರೂ ಬಟ್ಟೆಯ
ಮೇಲೆ ಬಿದ್ದರೆ ಆ ಬಟ್ಟೆಯನ್ನು ಪವಿತ್ರಸ್ಥಳದೊಳಗೆ
ಒಗೆದುಕೊಳ್ಳಬೇಕು. ಅದನ್ನು ಬೇಯಿಸಿದ ಮಣ್ಣಿನ 28
ಪಾತ್ರೆಯನ್ನು ಒಡೆದುಬಿಡಬೇಕು. ತಾಮ್ರದ ಪಾತ್ರೆ
ಯಲ್ಲಿ ಬೇಯಿಸಿದ್ದಾದರೆ ಆ ಪಾತ್ರೆಯನ್ನು ಬೆಳಗಿ
ನೀರಿನಿಂದ ತೊಳೆಯಬೇಕು. ಯಾಜಕರಲ್ಲಿ ಗಂಡಸ 29
ರೆಲ್ಲರೂ ಅದನ್ನು ತಿನ್ನಬಹುದು; ಅದು ಮಹಾಪರಿ
ಶುದ್ಧವಾದದ್ದು. ಆದರೆ ದೋಷಪರಿಹಾರಕಯಜ್ಞ 30
ಪಶುಗಳಲ್ಲಿ ಯಾವ ಪಶುವಿನ ರಕ್ತವು ದೋಷಪರಿ
ಹಾರಕ್ಕಾಗಿ ದೇವದರ್ಶನದ ಗುಡಾರದೊಳಗೆ ತಂದಿರ
ಬೇಕೋ ಅದರ ಮಾಂಸವನ್ನು ತಿನ್ನಲೇ ಬಾರದು.
ಬೆಂಕಿಯಲ್ಲಿ ಸುಟ್ಟುಬಿಡಬೇಕು.

7 ಪ್ರಾಯಶ್ಚಿತ್ತಯಜ್ಞನಿಯಮಗಳು. ಆ
ಯಜ್ಞವು ಮಹಾಪರಿಶುದ್ಧವಾದದ್ದು. ಸರ್ವಾಂಗ 2
ಹೋಮಪಶುವನ್ನು ವಧಿಸುವ ಸ್ಥಳದಲ್ಲೇ ಪ್ರಾಯಶ್ಚಿತ್ತ
ಯಜ್ಞಪಶುವನ್ನೂ ವಧಿಸಬೇಕು. ಯಾಜಕನು
ಅದರ ರಕ್ತವನ್ನು ಯಜ್ಞವೇದಿಗೆ ಸುತ್ತಲೂ 2)ಎರಚ
ಬೇಕು. ಅವನು ಅದರ ಕೊಬ್ಬನ್ನೆಲ್ಲಾ ಅಂದರೆ 3
ಬಾಲದ ಕೊಬ್ಬನ್ನೂ ವಪೆಯನ್ನೂ ಎರಡು ಹುರುಳಿ 4
ಕಾಯಿಗಳನ್ನೂ ಇವುಗಳ ಮೇಲೆ ಸೊಂಟದಲ್ಲಿರುವ
ಕೊಬ್ಬನ್ನೂ ಕಾಳಿಜದ ಮೇಲೆ ಹುರುಳಿಕಾಯಿಗಳ
ತನಕ ಇರುವ ಕೊಬ್ಬನ್ನೂ ತೆಗೆದು ಯಜ್ಞವೇದಿಯ 5
ಮೇಲೆ ಯೆಹೋವನಿಗೆ ಹೋಮಮಾಡಬೇಕು. ಅದು
ಪ್ರಾಯಶ್ಚಿತ್ತಯಜ್ಞವಾಗಿದೆ. ಹೋಮಶೇಷವನ್ನು ಯಾ 6
ಜಕರಲ್ಲಿ ಗಂಡಸರೆಲ್ಲರೂ ತಿನ್ನಬಹುದು; ಅದು
ಮಹಾಪರಿಶುದ್ಧವಾದದ್ದರಿಂದ ಪವಿತ್ರಸ್ಥಳದೊಳಗೆ
ಅದನ್ನು ತಿನ್ನಬೇಕು. ಪ್ರಾಯಶ್ಚಿತ್ತಯಜ್ಞದ ಹೋಮ 7
ಶೇಷದ ವಿಷಯದಲ್ಲಿಯೂ ದೋಷಪರಿಹಾರಕಯಜ್ಞದ
ಹೋಮಶೇಷದ ವಿಷಯದಲ್ಲಿಯೂ ಒಂದೇ ವಿಧಿ
ಯುಂಟು; ಹೇಗಂದರೆ ಆ ಹೋಮಶೇಷವು ದೋಷ
ಪರಿಹಾರವನ್ನು ಮಾಡಿಸುವ ಯಾಜಕನಿಗೆ ಸಲ್ಲ
ತಕ್ಕದ್ದು; ಯಾರಾದರೂ ಸರ್ವಾಂಗಹೋಮಕ್ಕಾಗಿ 8
ಪಶುವನ್ನು ತಂದಾಗ ಅದರ ಚರ್ಮವು ಆ ಪಶುವನ್ನು
ಸಮರ್ಪಿಸುವ ಯಾಜಕನದಾಗಿಯೇ ಇರಬೇಕು.
ಒಲೆಯಲ್ಲಾಗಲಿ ಕಬ್ಬಿಣದ ಹಂಚಿನಲ್ಲಾಗಲಿ ಬಾಂಡ್ಲೆ 9

1) ಅಥವಾ: ದ್ರವ್ಯಗಳನ್ನು ಮುಟ್ಟಿದವರೆಲ್ಲರೂ ಪರಿಶುದ್ಧರಾಗುವರು. 2) ಅಂದರೆ ಉಗ್ಗಬೇಕು.

ಯುಲ್ಲಾಗಲಿ ಬೇಯಿಸಿದ ನೈವೇದ್ಯಪದಾರ್ಥವೆಲ್ಲಾ
ಅದನ್ನು ಸಮರ್ಪಿಸುವ ಯಾಜಕನಿಗೆ ಆಗಬೇಕು.
10 ಆದರೆ ಎಣ್ಣೆ ಹೊಯಿದ ಹಿಟ್ಟನ್ನಾಗಲಿ ಬರೀ ಹಿಟ್ಟ
ನ್ನಾಗಲಿ ಯಾರಾದರೂ ನೈವೇದ್ಯಕ್ಕಾಗಿ ತಂದಾಗ
ಅದನ್ನು ಆರೋನನ ವಂಶದವರೆಲ್ಲರೂ ಸಮವಾಗಿ
ಅನುಭವಿಸಬೇಕು.
11, 12 ಸಮಾಧಾನ ಯಜ್ಞನಿಯಮಗಳು. ಯಾರಾ
ದರೂ ಕೃತಜ್ಞತೆಯನ್ನು ತೋರಿಸುವದಕ್ಕಾಗಿ ಸಮಾ
ಧಾನಯಜ್ಞವನ್ನು ಯೆಹೋವನಿಗೆ ಮಾಡುವದಾದರೆ
ಅದರೊಡನೆ ಎಣ್ಣೆ ಮಿಶ್ರವಾದ ಹುಳಿಯಿಲ್ಲದ ಹೋಳಿ
ಗೆಗಳನ್ನೂ ಎಣ್ಣೆ ಹಾಕಿದ ಹುಳಿಯಿಲ್ಲದ ಕಡುಬು
ಗಳನ್ನೂ ಎಣ್ಣೆಯಿಂದ ಪೂರಾ ನೆನಸಿದ ಗೋದಿ
13 ಹಿಟ್ಟಿನ ಹೋಳಿಗೆಗಳನ್ನೂ ಸಮರ್ಪಿಸಬೇಕು. ಕೃತಜ್ಞತೆ
ಯನ್ನು ತೋರಿಸುವದಕ್ಕಾಗಿ ಸಮಾಧಾನಯಜ್ಞದಲ್ಲಿ
ಒಪ್ಪಿಸುವ ಪಶುವಿನೊಡನೆ ಹುಳಿರೊಟ್ಟಿಗಳನ್ನೂ
14 ಸಮರ್ಪಿಸಬೇಕು. ಸಮರ್ಪಿಸಿದ ಪ್ರತಿಯೊಂದು
ವಿಧವಾದ ಪದಾರ್ಥಗಳಲ್ಲಿಯೂ ಒಂದೊಂದನ್ನು
ಯೆಹೋವನಿಗೋಸ್ಕರ ಪ್ರತ್ಯೇಕಿಸಬೇಕು. ಅವು
ವೇದಿಗೆ ಯಜ್ಞಪಶುವಿನ ರಕ್ತವನ್ನು ಎರಚಿದ ಯಾಜ
15 ಕನಿಗೆ ಆಗಬೇಕು. ಕೃತಜ್ಞತಾಯಜ್ಞಪಶುವಿನ
ಮಾಂಸವನ್ನು ಯಜ್ಞವು ನಡೆದ ದಿನದಲ್ಲೇ ಭೋಜನ
ಮಾಡಬೇಕು; ಮರುದಿನದ ವರೆಗೆ ಸ್ವಲ್ಪವನ್ನಾದರೂ
ಉಳಿಸಕೂಡದು.
16 ಯಾರಾದರೂ ಹರಕೆಯನ್ನು ಸಲ್ಲಿಸುವದಕ್ಕಾಗಲಿ
ಸ್ವೇಚ್ಛೆಯಿಂದಾಗಲಿ ಅಂಥ ಯಜ್ಞವನ್ನು ಮಾಡಿಸಿ
ದರೆ ಅದನ್ನು ಸಮರ್ಪಿಸಿದ ದಿನದಲ್ಲೇ ಅದರ
ಮಾಂಸವನ್ನು ಊಟಮಾಡಬೇಕು; ಆದರೆ ಮಿಕ್ಕ
17 ದ್ದನ್ನು ಮರುದಿನದಲ್ಲಿ ತಿನ್ನಬಹುದು. ಮೂರನೆಯ
ದಿನದ ವರೆಗೆ ಉಳಿದದ್ದನ್ನು ಬೆಂಕಿಯಿಂದ ಸುಟ್ಟು
18 ಬಿಡಬೇಕು. ಆ ಯಜ್ಞಪಶುವಿನ ಮಾಂಸದಲ್ಲಿ ಸ್ವಲ್ಪ
ವನ್ನಾದರೂ ಮೂರನೆಯ ದಿನದಲ್ಲಿ ಊಟಮಾಡಿದರೆ
ಆ ಯಜ್ಞವೇ ಸಮರ್ಪಕವಾದದ್ದಲ್ಲ; ಅರ್ಪಿಸಿದವ
ನಿಗೆ ಅದರಿಂದ ಫಲವೇನೂ ದೊರೆಯುವದಿಲ್ಲ. ಅದು
ಹೇಯವಾದದ್ದರಿಂದ ಅದನ್ನು ತಿಂದವನು ಆ ಪಾಪದ
19 ಫಲವನ್ನು ಅನುಭವಿಸಬೇಕು. ಅಶುದ್ಧವಾದ ವಸ್ತು
ವಿಗೆ ಸೋಂಕಿದ ಮಾಂಸವನ್ನು ತಿನ್ನದೆ ಬೆಂಕಿ
ಯಲ್ಲಿ ಸುಟ್ಟುಬಿಡಬೇಕು. ಶುದ್ಧರಾಗಿರುವವರೆ
ಲ್ಲರೂ [ಯಜ್ಞಪಶುವಿನ] ಮಾಂಸವನ್ನು ತಿನ್ನಬಹು
20 ದು. ಯಾವನಾದರೂ ಅಶುದ್ಧನಾಗಿದ್ದು ಯೆಹೋವ
ನಿಗೆ ಸಮರ್ಪಿತವಾದ ಸಮಾಧಾನಯಜ್ಞಪಶುವಿನ
ಮಾಂಸವನ್ನು ತಿಂದರೆ ಅವನು ತನ್ನ ಕುಲದಿಂದ
21 ತೆಗೆದುಹಾಕಲ್ಪಡಬೇಕು. ಯಾವನಿಗಾದರೂ ಮನು
ಷ್ಯದೇಹದಿಂದುಂಟಾದ ಅಶುದ್ಧವಸ್ತು, ಅಶುದ್ಧಮೃಗ,
ನಿಷಿದ್ಧವಸ್ತು ಇವುಗಳಲ್ಲಿ ಯಾವದಾದರೂ ಸೋಂಕಿ
ದರೆ ಅವನು ಯೆಹೋವನಿಗೆ ಸಮರ್ಪಿತವಾದ ಯಜ್ಞ
ಪಶುವಿನ ಮಾಂಸವನ್ನು ತಿಂದರೆ ಕುಲದಿಂದ ತೆಗೆದು
ಹಾಕಲ್ಪಡಬೇಕು.
22 ಯೆಹೋವನು ಮೋಶೆಗೆ ಹೇಳಿದ್ದೇನಂದರೆ—
23 ನೀನು ಇಸ್ರಾಯೇಲ್ಯರಿಗೆ ಹೀಗೆ ಆಜ್ಞಾಪಿಸು—
ನೀವು ಎತ್ತು ಕುರಿ ಆಡುಗಳ ಕೊಬ್ಬನ್ನು ತಿನ್ನ

ಬಾರದು. ಅಂಥ ಪಶುವು ರೋಗದಿಂದ ಸತ್ತದ್ದಾ
ದರೆ ಇಲ್ಲವೇ ಕಾಡುಮೃಗವು ಕೊಂದದ್ದಾದರೆ ಅದರ
ಕೊಬ್ಬನ್ನು ಬೇರೆ ಕೆಲಸಕ್ಕೆ ಉಪಯೋಗಿಸಬಹುದೇ
ಹೊರತು ಎಷ್ಟು ಮಾತ್ರವೂ ತಿನ್ನಬಾರದು. ಮನು
ಷ್ಯರು ಯೆಹೋವನಿಗೆ ಹೋಮಮಾಡುವಂಥ ಪಶು
ಜಾತಿಯ ಕೊಬ್ಬನ್ನು ಯಾವನಾದರೂ ತಿಂದರೆ
ಅವನು ಕುಲದಿಂದ ತೆಗೆದುಹಾಕಲ್ಪಡಬೇಕು.
ಪಕ್ಷಿಯದಾಗಲಿ ಪಶುವಿನದಾಗಲಿ ಯಾವ ರಕ್ತ
ವನ್ನೂ ನೀವು ಎಲ್ಲಿಯೂ ಊಟಮಾಡಬಾರದು.
ರಕ್ತಭೋಜನಮಾಡಿದವನು ಕುಲದಿಂದ ತೆಗೆದು
ಹಾಕಲ್ಪಡಬೇಕು.
ಯೆಹೋವನು ಮೋಶೆಗೆ ಹೇಳಿದ್ದೇನಂದರೆ—
ನೀನು ಇಸ್ರಾಯೇಲ್ಯರಿಗೆ ಹೀಗೆ ಆಜ್ಞಾಪಿಸು—
ಸಮಾಧಾನಯಜ್ಞಪಶುಗಳನ್ನು ಯೆಹೋವನಿಗೆ ಸಮ
ರ್ಪಿಸುವವನು ಆ ಯಜ್ಞದ್ರವ್ಯಗಳಲ್ಲಿ ಯೆಹೋ
ವನಿಗೆ ಸಲ್ಲಬೇಕಾದದ್ದನ್ನು ತಂದುಕೊಡಬೇಕು.
ಯೆಹೋವನಿಗೆ ಹೋಮರೂಪವಾಗಿ ಸಮರ್ಪಿಸ
ಬೇಕಾದದ್ದನ್ನು ಅಂದರೆ ಪಶುವಿನ ಕೊಬ್ಬನ್ನು ತನ್ನ
ಕೈಯಿಂದಲೇ ಕೊಡಬೇಕು. ಅದರೊಂದಿಗೆ ಅದರ
ಎದೆಯ ಭಾಗವನ್ನೂ ನೈವೇದ್ಯರೂಪವಾಗಿ ಯೆಹೋ
ವನ ಸನ್ನಿಧಿಯಲ್ಲಿ ನಿವಾಳಿಸುವದಕ್ಕಾಗಿ ತಂದು
ಸಮರ್ಪಿಸಬೇಕು. ಯಾಜಕನು ಆ ಕೊಬ್ಬನ್ನು
ಯಜ್ಞವೇದಿಯ ಮೇಲೆ ಹೋಮಮಾಡಬೇಕು;
ಎದೆಯ ಭಾಗವು ಆರೋನನಿಗೂ ಅವನ ವಂಶದವ
ರಿಗೂ ಆಗಬೇಕು. ನೀವು ಸಮಾಧಾನಯಜ್ಞದ್ರವ್ಯ
ಗಳಲ್ಲಿ ಬಲದೊಡೆಯನ್ನು ಯಾಜಕನಿಗೋಸ್ಕರ
ಪ್ರತ್ಯೇಕಿಸಿ ಕೊಡಬೇಕು. ಆರೋನನ ವಂಶದವರಲ್ಲಿ
ಯಾವನು ಆ ಯಜ್ಞಪಶುವಿನ ರಕ್ತವನ್ನೂ ಕೊಬ್ಬ
ನ್ನೂ ಸಮರ್ಪಿಸುತ್ತಾನೋ ಅದರ ಬಲದೊಡೆಯು
ಅವನ ಭಾಗವಾಗಿರಬೇಕು. ಇಸ್ರಾಯೇಲ್ಯರು ಸಮಾ
ಧಾನಯಜ್ಞಪಶುವಿನ ಮಾಂಸದಲ್ಲಿ ನೈವೇದ್ಯರೂಪ
ವಾಗಿ ನಿವಾಳಿಸುವ ಎದೆಯ ಭಾಗವನ್ನೂ ಯಾಜಕನಿ
ಗೋಸ್ಕರ ಪ್ರತ್ಯೇಕಿಸುವ ತೊಡೆಯನ್ನೂ ನಾನು
ತೆಗೆದುಕೊಂಡು ಮಹಾಯಾಜಕನಾದ ಆರೋನ
ನಿಗೂ ಅವನ ವಂಶದವರಿಗೂ ಕೊಟ್ಟು ಇವು ಇಸ್ರಾ
ಯೇಲ್ಯರಿಂದ ಯಾಜಕರಿಗೆ ಯಾವಾಗಲೂ ಸಲ್ಲ
ಬೇಕೆಂದು ಶಾಶ್ವತನಿಯಮಮಾಡಿದ್ದೇನೆ. ಯೆಹೋ
ವನಿಗೆ ಹೋಮರೂಪವಾಗಿ ಅರ್ಪಿತವಾದ ದ್ರವ್ಯ
ಗಳಲ್ಲಿ ಇವೇ ಆರೋನನಿಗೂ ಅವನ ವಂಶದವರಿಗೂ
ಶಾಶ್ವತವಾಗಿ ಸಲ್ಲತಕ್ಕ ಭಾಗಗಳಾಗಿರುವವು.
[ಮೋಶೆ] ಅವರನ್ನು ಯೆಹೋವನ ಸನ್ನಿಧಿಯಲ್ಲಿ
ಯಾಜಕೋದ್ಯೋಗಕ್ಕಾಗಿ ಪ್ರತಿಷ್ಠಿಸಿದ ದಿನದಲ್ಲೇ
ಇದು ನೇಮಕವಾಯಿತು. ಇಸ್ರಾಯೇಲ್ಯರು ಇವು
ಗಳನ್ನು ಯಾಜಕರಿಗೆ ಸಲ್ಲಿಸಬೇಕೆಂದು ಯೆಹೋ
ವನು [ಮೋಶೆಯ ಕೈಯಿಂದ] ಅವರನ್ನು ಪ್ರತಿಷ್ಠಿಸಿ
ಅಭಿಷೇಕಿಸಿದ ದಿನದಲ್ಲಿ ಅಪ್ಪಣೆಮಾಡಿದನು.
ಸರ್ವಾಂಗಹೋಮ, ಧಾನ್ಯನೈವೇದ್ಯ, ದೋಷ
ಪರಿಹಾರಕಯಜ್ಞ, ಪ್ರಾಯಶ್ಚಿತ್ತಯಜ್ಞ, ಯಾಜಕ
ಪ್ರತಿಷ್ಠೆ, ಸಮಾಧಾನಯಜ್ಞ ಎಂಬಿವುಗಳ ವಿಷಯದಲ್ಲಿ
ಮೇಲೆ ಕಂಡದ್ದೇ ವಿಧಿ. ಯೆಹೋವನು ಸೀನಾಯಿ

ಬೆಟ್ಟದಲ್ಲಿ ಮೋಶೆಗೆ ಈ ಆಜ್ಞೆಗಳನ್ನು ಕೊಟ್ಟನು. ಮೋಶೆ ಸೀನಾಯಿ ಅರಣ್ಯದಲ್ಲಿ--ಇಸ್ರಾಯೇಲ್ಯರು ಅರ್ಪಿಸಬೇಕಾದದ್ದನ್ನು ಯೆಹೋವನಿಗೆ ಸಮರ್ಪಿಸಬೇಕೆಂದು ಆಜ್ಞಾಪಿಸಿ ಅವರಿಗೆ ಮೇಲೆ ಕಂಡ ವಿಧಿಗಳನ್ನು ಕೊಟ್ಟನು.

### ಆರೋನನೂ ಅವನ ಮಕ್ಕಳೂ ಯಾಜಕೋದ್ಯೋಗವನ್ನು ವಹಿಸಿಕೊಂಡದ್ದು.

8—10.

ಆರೋನನೂ ಅವನ ಮಕ್ಕಳೂ ಯಾಜಕೋದ್ಯೋಗದಲ್ಲಿ ಪ್ರತಿಷ್ಠಿತರಾದದ್ದು.

2 ಯೆಹೋವನು ಮೋಶೆಗೆ—ನೀನು ಆರೋನನನ್ನೂ ಅವನ ಗಂಡು ಮಕ್ಕಳನ್ನೂ ಕರಕೊಂಡು ಅವರಿಗೆ ಬೇಕಾದ ದೀಕ್ಷಾವಸ್ತ್ರಗಳನ್ನೂ ಅಭಿಷೇಕತೈಲವನ್ನೂ ದೋಷಪರಿಹಾರಕ್ಕಾಗಿ ಸಮರ್ಪಿಸಬೇಕಾದ ಹೋರಿಯನ್ನೂ ಎರಡು ಟಗರುಗಳನ್ನೂ ಹುಳಿಯಿಲ್ಲದ ಭಕ್ಷ್ಯಗಳು ತುಂಬಿರುವ ಪುಟ್ಟಿಯನ್ನೂ ತೆಗೆದುಕೊಂಡುಬಂದು ಜನಸಮೂಹವನ್ನೆಲ್ಲಾ ದೇವದರ್ಶನದ ಗುಡಾರದ ಬಾಗಲಿನ ಹತ್ತಿರಕ್ಕೆ ಕರಿಸು ಎಂದು ಆಜ್ಞಾಪಿಸಲಾಗಿ ಯೆಹೋವನು ಹೇಳಿದಂತೆಯೇ ಮೋಶೆ ಮಾಡಿದನು. ಜನಸಮೂಹವೆಲ್ಲಾ ದೇವದರ್ಶನದ ಗುಡಾರದ ಬಾಗಲಿನ ಹತ್ತಿರ ಕೂಡಿದಾಗ ಮೋಶೆ ಅವರಿಗೆ—ನಾನು ಈಗ ಮಾಡುವ ಕಾರ್ಯವು ಯೆಹೋವನು ಆಜ್ಞಾಪಿಸಿದ್ದು ಎಂದು ಹೇಳಿದನು.

ಆಗ ಮೋಶೆ ಆರೋನನನ್ನೂ ಅವನ ಮಕ್ಕಳನ್ನೂ ಹತ್ತಿರಕ್ಕೆ ಬರಮಾಡಿಕೊಂಡು ಸ್ನಾನಮಾಡಿಸಿದನು. ಆ ಮೇಲೆ ಯೆಹೋವನು ಆಜ್ಞಾಪಿಸಿದಂತೆ ಆರೋನನಿಗೆ ನಿಲುವಂಗಿಯನ್ನು ತೊಡಿಸಿ ನಡುಕಟ್ಟನ್ನು ಸುತ್ತಿ ಮೇಲಂಗಿಯನ್ನು ತೊಡಿಸಿ ಕವಚವನ್ನು ಹಾಕಿಸಿ ಕವಚದ ಮೇಲಣ ವಿಚಿತ್ರವಾದ ನಡುಕಟ್ಟನ್ನು ಕಟ್ಟಿ ಅದರಿಂದ ಕವಚವನ್ನು ಅವನಿಗೆ ಬಂಧಿಸಿ ಚೀಲದ ಪದಕವನ್ನು ಅವನಿಗೆ ಬಿಗಿಸಿ ಅದರೊಳಗೆ ಊರೀಮ್ ತುಮ್ಮೀಮ್ ಎಂಬ ವಸ್ತುಗಳನ್ನು ಹಾಕಿ ಅವನ ತಲೆಗೆ ಮುಂಡಾಸವನ್ನು ಇಟ್ಟು ಅದರ ಮುಂಭಾಗದಲ್ಲಿ ಬಂಗಾರದ ಪಟ್ಟವನ್ನು ಕಟ್ಟಿದನು; ಅದೇ ಅವನಿಗೆ ಪರಿಶುದ್ಧ ಕಿರೀಟವು.

ಅನಂತರ ಮೋಶೆ ಅಭಿಷೇಕತೈಲವನ್ನು ತೆಗೆದುಕೊಂಡು ದೇವದರ್ಶನದ ಗುಡಾರವನ್ನೂ ಅದರಲ್ಲಿದ್ದ ಎಲ್ಲವನ್ನೂ ಅಭಿಷೇಕಿಸಿ ಪ್ರತಿಷ್ಠಿಸಿದನು. ಯಜ್ಞವೇದಿಯ ಮೇಲೆ ಏಳುಸಾರಿ ಆ ತೈಲವನ್ನು ಚಿಮುಕಿಸಿ ವೇದಿಯನ್ನೂ ಅದರ ಎಲ್ಲಾ ಉಪಕರಣಗಳನ್ನೂ ಗಂಗಾಳವನ್ನೂ ಅದರ ಪೀಠವನ್ನೂ ಅಭಿಷೇಕಿಸಿ ಪ್ರತಿಷ್ಠಿಸಿದನು. ಅದರಲ್ಲಿ ಸ್ವಲ್ಪವನ್ನು ಆರೋನನ ತಲೆಯ ಮೇಲೆ ಹೊಯಿದು ಅವನನ್ನು ಅಭಿಷೇಕಿಸಿ ಪ್ರತಿಷ್ಠಿಸಿದನು.

ಆ ಮೇಲೆ ಯೆಹೋವನು ಆಜ್ಞಾಪಿಸಿದಂತೆ ಮೋಶೆ ಆರೋನನ ಮಕ್ಕಳನ್ನು ಹತ್ತಿರಕ್ಕೆ ಕರೆದು
ಅವರಿಗೆ ನಿಲುವಂಗಿಗಳನ್ನು ತೊಡಿಸಿ ನಡುಕಟ್ಟು
ಗಳನ್ನು ಸುತ್ತಿ ಮುಂಡಾಸಗಳನ್ನು ಇಟ್ಟನು.
ಅನಂತರ ಅವನು ದೋಷಪರಿಹಾರಾರ್ಥವಾದ 14
ಹೋರಿಯನ್ನು ತರಿಸಿದನು. ಆರೋನನೂ ಅವನ
ಮಕ್ಕಳೂ ತಮ್ಮ ಕೈಗಳನ್ನು ಅದರ ತಲೆಯ ಮೇಲೆ
ಇಟ್ಟರು. ಆ ಹೋರಿಯನ್ನು ವಧಿಸಿದ ಮೇಲೆ 15
ಮೋಶೆ ಅದರ ರಕ್ತವನ್ನು ತನ್ನ ಬೆರಳಿನಿಂದ ಯಜ್ಞ
ವೇದಿಯ ಕೊಂಬುಗಳಿಗೆ ಸುತ್ತಲೂ ಹಚ್ಚಿ ಯಜ್ಞ
ವೇದಿಯನ್ನು ಶುದ್ಧಪಡಿಸಿ ಮಿಕ್ಕ ರಕ್ತವನ್ನು ಯಜ್ಞ
ವೇದಿಯ ಬುಡದಲ್ಲಿ ಸುರಿದುಬಿಟ್ಟನು. ಹೀಗೆ
ಯಜ್ಞವೇದಿಯ ನಿಮಿತ್ತ ದೋಷಪರಿಹಾರಕಾಚಾರ
ವನ್ನು ನಡಿಸಿ ಅದನ್ನು ಪ್ರತಿಷ್ಠಿಸಿದನು. ಆ ಹೋರಿ 16
ಯ ಕರುಳುಗಳ ಮೇಲಣ ಕೊಬ್ಬನ್ನೂ ಕಾಳಿಜದ
ಹತ್ತಿರವಿರುವ ಕೊಬ್ಬನ್ನೂ ಎರಡು ಹುರುಳಿಕಾಯಿ
ಗಳನ್ನೂ ಅವುಗಳ ಮೇಲಿರುವ ಕೊಬ್ಬನ್ನೂ ಮೋಶೆ
ತೆಗೆದುಕೊಂಡು ಯಜ್ಞವೇದಿಯ ಮೇಲೆ ಹೋಮ
ಮಾಡಿದನು. ಯೆಹೋವನು ಆಜ್ಞಾಪಿಸಿದಂತೆ ಅದ 17
ರಲ್ಲಿ ಮಿಕ್ಕದ್ದನ್ನೆಲ್ಲಾ ಅಂದರೆ ಅದರ ಚರ್ಮವನ್ನೂ
ಮಾಂಸವನ್ನೂ ಕಲ್ಮಷವನ್ನೂ ಪಾಳೆಯದ ಹೊರಗೆ
ಬೆಂಕಿಯಿಂದ ಸುಡಿಸಿಬಿಟ್ಟನು.
ತರುವಾಯ ಅವನು ಸರ್ವಾಂಗಹೋಮಕ್ಕಾಗಿ 18
ಟಗರನ್ನು ತರಿಸಿದನು. ಆರೋನನೂ ಅವನ ಮಕ್ಕ
ಳೂ ಅದರ ತಲೆಯ ಮೇಲೆ ತಮ್ಮ ಕೈಗಳನ್ನು ಇಟ್ಟರು.
ಅದನ್ನು ವಧಿಸಿದ ಮೇಲೆ ಮೋಶೆ ಅದರ ರಕ್ತವನ್ನು 19
ಯಜ್ಞವೇದಿಗೆ ಸುತ್ತಲೂ ಎರಚಿದನು. ಆ ಟಗರನ್ನು 20
ತುಂಡುತುಂಡಾಗಿ ಕಡಿದ ಮೇಲೆ ಮೋಶೆ ಅದರ ತಲೆ
ಯನ್ನೂ ಮಾಂಸಖಂಡಗಳನ್ನೂ ಕೊಬ್ಬನ್ನೂ ಹೋಮ
ಮಾಡಿದನು. ಅದರ ಕರುಳುಗಳನ್ನೂ ಕಾಲು 21
ಗಳನ್ನೂ ನೀರಿನಿಂದ ತೊಳಿಸಿ ಮೋಶೆ ಆ ಟಗರನ್ನು
ಯಜ್ಞವೇದಿಯ ಮೇಲೆ ಪೂರ್ತಿಯಾಗಿ ಹೋಮ
ಮಾಡಿಬಿಟ್ಟನು. ಯೆಹೋವನು ಮೋಶೆಗೆ ಆಜ್ಞಾಪಿಸಿ
ದಂತೆಯೇ ಅದು ಅಗ್ನಿಯ ಮೂಲಕ ಯೆಹೋವನಿಗೆ
ಸುಗಂಧಕರವಾದ ಸರ್ವಾಂಗಹೋಮವಾಗಿತ್ತು.
ಆ ಮೇಲೆ ಅವನು ಪಟ್ಟಾಭಿಷೇಕಕ್ಕಾಗಿ ಸಮ 22
ರ್ಪಿಸಬೇಕಾದ ಎರಡನೆಯ ಟಗರನ್ನು ತರಿಸಿದನು.
ಆರೋನನೂ ಅವನ ಮಕ್ಕಳೂ ಅದರ ತಲೆಯ
ಮೇಲೆ ತಮ್ಮ ಕೈಗಳನ್ನಿಟ್ಟರು. ಅದನ್ನು ವಧಿಸಿದ 23
ನಂತರ ಮೋಶೆ ಅದರ ರಕ್ತದಲ್ಲಿ ಸ್ವಲ್ಪ ತೆಗೆದು
ಕೊಂಡು ಆರೋನನ ಬಲಗಿವಿಯ ತುದಿಗೂ ಬಲ
ಗೈಯ ಹೆಬ್ಬೆರಳಿಗೂ ಬಲಗಾಲಿನ ಹೆಬ್ಬೊಟ್ಟಿಗೂ
ಹಚ್ಚಿದನು. ಆಗ ಮೋಶೆ ಆರೋನನ ಮಕ್ಕಳನ್ನು 24
ಹತ್ತಿರಕ್ಕೆ ಕರೆದು ಆ ರಕ್ತದಲ್ಲಿ ಸ್ವಲ್ಪವನ್ನು ಅವರವರ
ಬಲಗಿವಿಯ ತುದಿಗೂ ಬಲಗೈಯ ಹೆಬ್ಬೆರಳಿಗೂ
ಬಲಗಾಲಿನ ಹೆಬ್ಬೊಟ್ಟಿಗೂ ಹಚ್ಚಿ ಉಳಿದ ರಕ್ತವನ್ನು
ಯಜ್ಞವೇದಿಗೆ ಸುತ್ತಲೂ 1)ಎರಚಿದನು. ಅವನು 25
ಆ ಟಗರಿನ ಕೊಬ್ಬನ್ನೂ ಅಂದರೆ ಬಾಲದ ಕೊಬ್ಬು,
ಕರುಳುಗಳ ಮೇಲಣ ಎಲ್ಲಾ ಕೊಬ್ಬು, ಕಾಳಿಜದ
ಹತ್ತಿರವಿರುವ ಕೊಬ್ಬು, ಎರಡು ಹುರುಳಿಕಾಯಿಗಳು,

1) ಅಂದರೆ ಉಗ್ಗಿದನು.

ಅವುಗಳ ಮೇಲಿದ್ದ ಕೊಬ್ಬು ಇವುಗಳನ್ನೂ ಬಲ
26 ದೊಡೆಯನ್ನೂ ಯೆಹೋವನ ಸನ್ನಿಧಿಯಲ್ಲಿ ಪುಟ್ಟಿ
ಯಲ್ಲಿ ಇಟ್ಟಿದ್ದ ಹುಳಿಯಿಲ್ಲದ ಭಕ್ಷ್ಯಗಳಲ್ಲಿ ಒಂದು
ರೊಟ್ಟಿಯನ್ನೂ ಎಣ್ಣೆಮಿಶ್ರವಾದ ಒಂದು ಹೋಳಿಗೆ
ಯನ್ನೂ ಒಂದು ಕಡುಬನ್ನೂ ತೆಗೆದುಕೊಂಡು ಈ
ಭಕ್ಷ್ಯಗಳನ್ನು ಆ ಕೊಬ್ಬಿನ ಮತ್ತು ಬಲದೊಡೆಯ
27 ಮೇಲೆ ಇಟ್ಟು ಎಲ್ಲವುಗಳನ್ನು ಆರೋನನ ಮತ್ತು
ಅವನ ಮಕ್ಕಳ ಕೈಗಳಿಗೆ ಕೊಟ್ಟು ನೈವೇದ್ಯವೆಂದು
ಸೂಚಿಸುವದಕ್ಕೆ ಯೆಹೋವನ ಸನ್ನಿಧಿಯಲ್ಲಿ ನಿವಾಳಿ
28 ಸಿದನು. ಆ ಮೇಲೆ ಮೋಶೆ ಅವುಗಳನ್ನು ಅವರ
ಕೈಯಿಂದ ತೆಗೆದುಕೊಂಡು ಯಜ್ಞವೇದಿಯಲ್ಲಿ
ಸರ್ವಾಂಗಹೋಮದ್ರವ್ಯದ ಮೇಲಿಟ್ಟು ಹೋಮ
ಮಾಡಿದನು. ಅದು ಅಗ್ನಿಯ ಮೂಲಕ ಯೆಹೋವ
ನಿಗೆ ಸುಗಂಧಕರವಾದ ಪಟ್ಟಾಭಿಷೇಕಯಜ್ಞವಾಗಿತ್ತು.
29 ಮೋಶೆ ಅದರ ಎದೆಯ ಭಾಗವನ್ನು ತೆಗೆದುಕೊಂಡು
ನೈವೇದ್ಯವಾಗಿ ಯೆಹೋವನ ಸನ್ನಿಧಿಯಲ್ಲಿ ನಿವಾಳಿಸಿ
ದನು. ಯೆಹೋವನು ಆಜ್ಞಾಪಿಸಿದಂತೆ ಆ ಪಟ್ಟಾಭಿ
ಷೇಕಯಜ್ಞದ ಟಗರಿನಲ್ಲಿ ಆ ಎದೆಯ ಭಾಗವೇ
ಮೋಶೆಗೆ ಸಲ್ಲಬೇಕಾದದ್ದು.
30 ಆಗ ಮೋಶೆ ಅಭಿಷೇಕತೈಲದಲ್ಲಿಯೂ ಯಜ್ಞ
ವೇದಿಯ ಮೇಲಿದ್ದ ರಕ್ತದಲ್ಲಿಯೂ ಸ್ವಲ್ಪ ತೆಗೆದು
ಕೊಂಡು ಆರೋನನ ಮತ್ತು ಅವನ ವಸ್ತ್ರಗಳ ಮೇಲೆ
ಯೂ ಅವನ ಮಕ್ಕಳ ಮತ್ತು ಅವರ ವಸ್ತ್ರಗಳ
ಮೇಲೆಯೂ ಚಿಮಿಕಿಸಿದನು. ಹೀಗೆ ಆರೋನನನ್ನೂ
ಅವನ ವಸ್ತ್ರಗಳನ್ನೂ ಅವನ ಮಕ್ಕಳನ್ನೂ ಅವರ
ವಸ್ತ್ರಗಳನ್ನೂ ಪ್ರತಿಷ್ಠಿಸಿದನು.
31 ಮತ್ತು ಮೋಶೆ ಆರೋನನಿಗೂ ಅವನ ಮಕ್ಕ
ಳಿಗೂ ಹೀಗಂದನು— ಮಾಂಸವನ್ನು ನೀವು ದೇವ
ದರ್ಶನದ ಗುಡಾರದ ಬಾಗಲಿನ ಹತ್ತಿರ ಬೇಯಿಸಿ
ಅದನ್ನೂ ಪಟ್ಟಾಭಿಷೇಕಕ್ಕಾಗಿ ಪುಟ್ಟಿಯಲ್ಲಿ ಇಟ್ಟಿ
ರುವ ಭಕ್ಷ್ಯಗಳನ್ನೂ ಅಲ್ಲೇ ಊಟಮಾಡಬೇಕು.
ಆರೋನನೂ ಅವನ ಮಕ್ಕಳೂ ಅದನ್ನು ತಿನ್ನಬೇ
32 ಕೆಂಬದೇ ನನಗಾದ ಅಪ್ಪಣೆ. ಆ ಮಾಂಸದಲ್ಲಿಯೂ
ಭಕ್ಷ್ಯಗಳಲ್ಲಿಯೂ ಮಿಕ್ಕದ್ದನ್ನು ನೀವು ಬೆಂಕಿಯಿಂದ
33 ಸುಟ್ಟುಬಿಡಬೇಕು. ಇದಲ್ಲದೆ ಈ ನಿಮ್ಮ ಯಾಜ
ಕೋದ್ಯೋಗದ ದೀಕ್ಷೆಯು ಪೂರೈಸುವದಕ್ಕೆ ಏಳು
ದಿವಸ ಹಿಡಿಯುವದಾದದರಿಂದ ಆ ವರೆಗೂ ನೀವು
ದೇವದರ್ಶನದ ಗುಡಾರದ ಬಾಗಲಿನ ಆಚೆಗೆ ಹೋಗ
34 ಬಾರದು. ನಿಮ್ಮ ದೋಷಪರಿಹಾರಕ್ಕಾಗಿ ಈ ಹೊತ್ತು
ಏನೇನು ನಡೆಯಿತೋ ಅದನ್ನು [ಏಳು ದಿನವೂ]
ನಡಿಸಬೇಕೆಂದು ಯೆಹೋವನು ಆಜ್ಞಾಪಿಸಿದ್ದಾನೆ.
35 ಆದದರಿಂದ ನೀವು ಯೆಹೋವನ ಆಜ್ಞೆಯ ಮೇರೆಗೆ
ಏಳು ದಿನವೂ ಹಗಲಿರುಳು ದೇವದರ್ಶನದ ಗುಡಾ
ರದ ಬಾಗಲಿನ ಹತ್ತಿರ ಇರಬೇಕು: ಇಲ್ಲದಿದ್ದರೆ
ಸಾಯುವಿರಿ; ಹೀಗೆಯೇ ನನಗೆ ಅಪ್ಪಣೆಯಾಯಿತು.
36 ಯೆಹೋವನು ಮೋಶೆಯ ಮೂಲಕವಾಗಿ ಆಜ್ಞಾಪಿಸಿ
ದ್ದನ್ನೆಲ್ಲಾ ಆರೋನನೂ ಅವನ ಮಕ್ಕಳೂ ಮಾಡಿ
ದರು.

ಆರೋನನು ಪ್ರಥಮಯಜ್ಞವನ್ನು ಸಮರ್ಪಿಸಿದ್ದು.

ಎಂಟನೆಯ ದಿನದಲ್ಲಿ ಮೋಶೆ ಆರೋನನನ್ನೂ ಅವನ
ಮಕ್ಕಳನ್ನೂ ಇಸ್ರಾಯೇಲ್ಯರ ಹಿರಿಯರನ್ನೂ ಕರೆದು
ಆರೋನನಿಗೆ ಹೀಗಂದನು— ನೀನು ದೋಷಪರಿಹಾರ
ಕಯಜ್ಞಕ್ಕಾಗಿ ಪೂರ್ಣಾಂಗವಾದ ಹೋರಿಕರುವನ್ನೂ
ಸರ್ವಾಂಗಹೋಮಕ್ಕಾಗಿ ಪೂರ್ಣಾಂಗವಾದ ಟಗ
ರನ್ನೂ ನಿನಗೋಸ್ಕರ ತೆಗೆದುಕೊಂಡು ಯೆಹೋವನ
ಸನ್ನಿಧಿಯಲ್ಲಿ ಸಮರ್ಪಿಸಬೇಕು. ಮತ್ತು ನೀನು
ಇಸ್ರಾಯೇಲ್ಯರ ಸಂಗಡ ಮಾತಾಡಿ ಅವರಿಗೆ— ಈ
ಹೊತ್ತು ಯೆಹೋವನು ಪ್ರತ್ಯಕ್ಷನಾಗುತ್ತಾನಾದದ
ರಿಂದ ನೀವು ಆತನ ಸನ್ನಿಧಿಯಲ್ಲಿ ಸಮರ್ಪಿಸುವದ
ಕ್ಕೋಸ್ಕರ ದೋಷಪರಿಹಾರಕ್ಕಾಗಿ ಹೋತವನ್ನೂ
ಸರ್ವಾಂಗಹೋಮಕ್ಕಾಗಿ ಒಂದು ವರುಷದ ಪೂರ್ಣಾಂ
ಗವಾದ ಕರುವನ್ನೂ ಕುರಿಯನ್ನೂ ಸಮಾಧಾನಯಜ್ಞ
ಕ್ಕಾಗಿ ಒಂದು ಹೋರಿಯನ್ನೂ ಟಗರನ್ನೂ ನೈವೇದ್ಯ
ಕ್ಕಾಗಿ ಎಣ್ಣೆಮಿಶ್ರವಾದ ಪದಾರ್ಥವನ್ನೂ ತೆಗೆದು
ಕೊಂಡು ಬರಬೇಕೆಂದು ಆಜ್ಞಾಪಿಸು ಅಂದನು.
ಮೋಶೆ ಆಜ್ಞಾಪಿಸಿದ ಮೇರೆಗೆ ಅವರು ದೇವದರ್ಶ
ನದ ಗುಡಾರದ ಹತ್ತಿರಕ್ಕೆ ತಂದರು. ಸಮೂಹದವ
ರೆಲ್ಲರೂ ಹತ್ತಿರಕ್ಕೆ ಬಂದು ಯೆಹೋವನ ಸನ್ನಿಧಿ
ಯಲ್ಲಿ ನಿಂತಿರಲಾಗಿ ಮೋಶೆ ಅವರಿಗೆ— ನೀವು ಮಾಡ
ಬೇಕೆಂದು ಯೆಹೋವನು ಆಜ್ಞಾಪಿಸಿದ್ದು ಇದೇ;
ಅದರಂತೆ ನಡೆದರೆ ಯೆಹೋವನ ಮಹಿಮೆ ನಿಮಗೆ
ಪ್ರತ್ಯಕ್ಷವಾಗುವದು ಎಂದು ಹೇಳಿದನು.
ಆಗ ಮೋಶೆ ಆರೋನನಿಗೆ— ಯಜ್ಞವೇದಿಯ
ಹತ್ತಿರಕ್ಕೆ ಬಂದು ನೀನು ಮಾಡಬೇಕಾದ ದೋಷ
ಪರಿಹಾರಕಯಜ್ಞವನ್ನೂ ಸರ್ವಾಂಗಹೋಮವನ್ನೂ
ಸಮರ್ಪಿಸಿ ನಿನಗೋಸ್ಕರವೂ ಜನರಿಗೋಸ್ಕರವೂ
ದೋಷವನ್ನು ಪರಿಹರಿಸು; ಜನರು ತಂದದ್ದನ್ನು ಸಮ
ರ್ಪಿಸಿ ಯೆಹೋವನ ಆಜ್ಞೆಯಂತೆ ಅವರಿಗೋಸ್ಕರ
ದೋಷಪರಿಹಾರವನ್ನು ಮಾಡು ಎಂದು ಹೇಳಿದನು.
ಆರೋನನು ಯಜ್ಞವೇದಿಯ ಹತ್ತಿರಕ್ಕೆ ಹೋಗಿ ತನ
ಗೋಸ್ಕರ ದೋಷಪರಿಹಾರಕಯಜ್ಞದ ಹೋರಿಯನ್ನು
ವಧಿಸಿದನು. ಆರೋನನ ಮಕ್ಕಳು ಅದರ ರಕ್ತವನ್ನು
ಅವನಿಗೆ ಒಪ್ಪಿಸಿದಾಗ ಅವನು ಅದರಲ್ಲಿ ತನ್ನ ಬೆರ
ಳನ್ನು ಅದ್ದಿ ಯಜ್ಞವೇದಿಯ ಕೊಂಬುಗಳಿಗೆ ಹಚ್ಚಿ
ಮಿಕ್ಕ ರಕ್ತವನ್ನು ಯಜ್ಞವೇದಿಯ ಬುಡದಲ್ಲಿ
ಹೊಯಿದುಬಿಟ್ಟನು. ಆ ದೋಷಪರಿಹಾರಕಯಜ್ಞ
ಪಶುವಿನ ಕೊಬ್ಬನ್ನೂ ಹುರುಳಿಕಾಯಿಗಳನ್ನೂ ಕಾಳಿ
ಜದ ಹತ್ತಿರವಿರುವ ಕೊಬ್ಬನ್ನೂ ಯೆಹೋವನು ಮೋ
ಶೆಯ ಮೂಲಕ ಆಜ್ಞಾಪಿಸಿದಂತೆ ಯಜ್ಞವೇದಿಯ
ಮೇಲೆ ಹೋಮಮಾಡಿದನು. ಅದರ ಮಾಂಸವನ್ನೂ
ಚರ್ಮವನ್ನೂ ಪಾಳೆಯದ ಹೊರಗೆ ಬೆಂಕಿಯಿಂದ
ಸುಡಿಸಿಬಿಟ್ಟನು. ತರುವಾಯ ಸರ್ವಾಂಗಹೋಮ
ಪಶುವನ್ನು ವಧಿಸಿದನು. ಆರೋನನ ಮಕ್ಕಳು
ಅದರ ರಕ್ತವನ್ನು ಅವನಿಗೆ ತಂದು ಒಪ್ಪಿಸಿದಾಗ
ಅವನು ಅದನ್ನು ಯಜ್ಞವೇದಿಗೆ ಸುತ್ತಲೂ [1]ಎರಚಿ

1) ಅಂದರೆ ಉಗ್ಗಿದನು.

ದನು. ಅವರು ಆ ಪಶುವಿನ ಮಾಂಸಖಂಡಗ
ಳನ್ನೂ ತಲೆಯನ್ನೂ ಒಂದೊಂದಾಗಿ ಒಪ್ಪಿಸಿದಾಗ
ಅವನು ಅವುಗಳನ್ನು ಯಜ್ಞವೇದಿಯ ಮೇಲೆ ಹೋಮ
ಮಾಡಿದನು. ಅದರ ಕರುಳುಗಳನ್ನೂ ಕಾಲುಗಳನ್ನೂ
ತೊಳೆಸಿ ಯಜ್ಞವೇದಿಯಲ್ಲಿ ಸರ್ವಾಂಗಹೋಮ
ದ್ರವ್ಯದ ಮೇಲಿಟ್ಟು ಹೋಮಮಾಡಿದನು.
ತರುವಾಯ ಜನಸಮೂಹವು ಸಮರ್ಪಿಸುವ ಪಶು
ಗಳನ್ನು ಆರೋನನು ತರಿಸಿ ಅವುಗಳಲ್ಲಿ ದೋಷಪರಿ
ಹಾರಕವಾದ ಹೋತವನ್ನು ಮೊದಲನೆಯ ಪಶುವಿನಂತೆ
ವಧಿಸಿ ಅವರಿಗೋಸ್ಕರ ದೋಷಪರಿಹಾರಕ್ಕಾಗಿ ಸಮ
ರ್ಪಿಸಿದನು. ಸರ್ವಾಂಗಹೋಮಪಶುವನ್ನೂ ಯಥಾ
ವಿಧಿಯಾಗಿ ಸಮರ್ಪಿಸಿದನು. ಅವರು ತಂದ ನೈವೇದ್ಯ
ದ್ರವ್ಯಗಳಲ್ಲಿ ಒಂದು ಹಿಡಿಯನ್ನು ತೆಗೆದುಕೊಂಡು
ಹೊತ್ತಾರೆಯ ಸರ್ವಾಂಗಹೋಮವನ್ನಲ್ಲದೆ ಅದನ್ನೂ
ಯಜ್ಞವೇದಿಯ ಮೇಲೆ ಹೋಮಮಾಡಿದನು. ಬಳಿಕ
ಜನರಿಗೋಸ್ಕರ ಸಮಾಧಾನಯಜ್ಞಕ್ಕಾಗಿ ನೇಮಕ
ವಾದ ಹೋರಿಯನ್ನೂ ಟಗರನ್ನೂ ವಧಿಸಿದನು.
ಆರೋನನ ಮಕ್ಕಳು ಅವುಗಳ ರಕ್ತವನ್ನು ಒಪ್ಪಿಸ
ಲಾಗಿ ಅವನು ಅದನ್ನು ಯಜ್ಞವೇದಿಗೆ ಸುತ್ತಲೂ
ಎರಚಿದನು. ಅವರು ಹೋರಿಯ ಕೊಬ್ಬನ್ನೂ ಟಗ
ರಿನ ಬಾಲದ ಕೊಬ್ಬನ್ನೂ ವಪೆಯನ್ನೂ ಹುರುಳಿ
ಕಾಯಿಗಳನ್ನೂ ಕಾಳಿಜದ ಹತ್ತಿರವಿರುವ ಕೊಬ್ಬನ್ನೂ
ಎದೆಯ ಭಾಗಗಳ ಮೇಲೆ ಇಟ್ಟು ಒಪ್ಪಿಸಲಾಗಿ
ಅವನು ಆ ಕೊಬ್ಬನ್ನು ಯಜ್ಞವೇದಿಯ ಮೇಲೆ
ಹೋಮಮಾಡಿದನು. ಮೋಶೆಯು ಆಜ್ಞಾಪಿಸಿದಂತೆ
ಆರೋನನು ಅವುಗಳ ಎದೆಯ ಭಾಗಗಳನ್ನೂ ಬಲ
ತೊಡೆಗಳನ್ನೂ ನೈವೇದ್ಯವಾಗಿ ಯೆಹೋವನ ಸನ್ನಿಧಿ
ಯಲ್ಲಿ ನಿವಾಳಿಸಿದನು. ಆರೋನನು ಆ ದೋಷಪರಿ
ಹಾರಕಯಜ್ಞವನ್ನೂ ಸರ್ವಾಂಗಹೋಮವನ್ನೂ ಸಮಾ
ಧಾನಯಜ್ಞಗಳನ್ನೂ ಸಮರ್ಪಿಸಿದನಂತರ ತನ್ನ ಕೈಗ
ಳನ್ನು ಜನರ ಕಡೆಗೆ ಎತ್ತಿ ಅವರನ್ನು ಆಶೀರ್ವದಿಸಿ
ಇಳಿದು ಬಂದನು.

ತರುವಾಯ ಮೋಶೆಯೂ ಆರೋನನೂ ದೇವ
ದರ್ಶನದ ಗುಡಾರದೊಳಗೆ ಹೋದರು. ಅವರು
ಅಲ್ಲಿಂದ ಹೊರಗೆ ಬಂದಾಗ ಜನರನ್ನು ಆಶೀರ್ವದಿಸಿ
ದರು. ಆಗ ಯೆಹೋವನ ಮಹಿಮೆಯು ಜನರೆಲ್ಲ
ರಿಗೆ ಪ್ರತ್ಯಕ್ಷವಾಯಿತು. ಯೆಹೋವನ ಸನ್ನಿಧಿ
ಯಿಂದ ಬೆಂಕಿಯು ಹೊರಟು ಯಜ್ಞವೇದಿಯ ಮೇಲಿ
ದ್ದ ಸರ್ವಾಂಗಹೋಮದ್ರವ್ಯವನ್ನೂ ಕೊಬ್ಬನ್ನೂ ದಹಿ
ಸಿಬಿಟ್ಟಿತು. ಜನರೆಲ್ಲರೂ ಅದನ್ನು ಕಂಡು ಉತ್ಸಾ
ಹದಿಂದ ಆರ್ಭಟಿಸಿ ಅಡ್ಡಬಿದ್ದು ನಮಸ್ಕರಿಸಿದರು.

ನಾದಾಬ್ ಅಬೀಹು ಎಂಬ ಆರೋನನ ಮಕ್ಕಳಿಬ್ಬರು ಯೆಹೋವನ
ಆಜ್ಞೆಯನ್ನು ಅನುಸರಿಸದೆ ಕೋಪದಿಂದ ನಾಶವಾದದ್ದು.
ಯಾಜಕರಿಗೆ ನಿಷಿದ್ಧವಾದ ಕಾರ್ಯಗಳನ್ನು ಕುರಿತದ್ದು.

10 ಆರೋನನ ಮಕ್ಕಳಲ್ಲಿ ನಾದಾಬ್ ಅಬೀಹು ಎಂಬಿ
ಬ್ಬರು ತಮ್ಮ ತಮ್ಮ ಧೂಪಾರತಿಗಳಲ್ಲಿ ಯೆಹೋ
ವನು ಆಜ್ಞಾಪಿಸದೆ ಇದ್ದ ಬೇರೆ ಬೆಂಕಿಯನ್ನಿಟ್ಟು
ಅದರ ಮೇಲೆ ಧೂಪದ್ರವ್ಯವನ್ನು ಹಾಕಿ ಆತನ
ಸನ್ನಿಧಿಯಲ್ಲಿ ಸಮರ್ಪಿಸಲಾಗಿ ಯೆಹೋವನ ಸನ್ನಿಧಿ 2
ಯಿಂದ ಬೆಂಕಿ ಹೊರಟು ಅವರನ್ನು ನಾಶಮಾಡಿತು;
ಅವರು ಯೆಹೋವನ ಸನ್ನಿಧಿಯಲ್ಲಿಯೇ ಸತ್ತರು.
ಆಗ ಮೋಶೆ ಆರೋನನಿಗೆ—ಯೆಹೋವನು ಹೇಳಿದ 3
ಮಾತಿಗೆ ಇದೇ ದೃಷ್ಟಾಂತ; ಆ ಮಾತು ಏನಂದರೆ—
ನಾನು ಪರಿಶುದ್ಧನೆಂಬದನ್ನು ನನ್ನ ಬಳಿಯಲ್ಲಿರು
ವವರ ಮೂಲಕವಾಗಿಯೇ ತೋರ್ಪಡಿಸುವೆನು, ಜನ
ರೆಲ್ಲರಿಗೆ ತಿಳಿಯುವಂತೆ ನನ್ನ ಘನತೆಯನ್ನು ಸ್ಥಾಪಿ
ಸುವೆನು ಎಂಬದೇ ಎಂದು ಹೇಳಿದನು. ಅದಕ್ಕೆ
ಆರೋನನು ಮೌನವಾಗಿದ್ದನು. ಮೋಶೆ ಆರೋನನ 4
ಚಿಕ್ಕಪ್ಪನಾದ ಉಜ್ಜೀಯೇಲನ ಮಕ್ಕಳಾದ ಮೀಶಾ
ಯೇಲನನ್ನೂ ಎಲ್ಸಾಫಾನನನ್ನೂ ಕರಿಸಿ—ನೀವು
ಸಮೀಪಕ್ಕೆ ಬಂದು ನಿಮ್ಮ ಅಣ್ಣಂದಿರ ಶವಗಳನ್ನು
ದೇವಮಂದಿರದ ಎದುರಿನಿಂದ ಪಾಳೆಯದ ಹೊರಕ್ಕೆ
ಹೊತ್ತುಕೊಂಡು ಹೋಗಬೇಕು ಅಂದನು. ಮೋಶೆ 5
ಯ ಅಪ್ಪಣೆಯ ಮೇರೆಗೆ ಅವರು ಸಮೀಪಕ್ಕೆ
ಬಂದು ಸತ್ತವರು ತೊಟ್ಟುಕೊಂಡಿದ್ದ ನಿಲುವಂಗಿ
ಗಳನ್ನು ತೆಗೆದುಬಿಡದೆ ಅವರ ಶವಗಳನ್ನು ಎತ್ತಿ
ಪಾಳೆಯದ ಹೊರಕ್ಕೆ ಹೊತ್ತುಕೊಂಡುಹೋದರು.
ಮೋಶೆ ಆರೋನನಿಗೂ ಅವನ ಮಕ್ಕಳಾದ ಎಲ್ಲಾ 6
ಜಾರ್ ಈತಾಮಾರ್ ಎಂಬವರಿಗೂ—ನೀವು [1])ತಲೆ
ಯನ್ನು ಕೆದರಿಕೊಳ್ಳಬಾರದು; ಬಟ್ಟೆಗಳನ್ನು ಹರಿ
ದುಕೊಳ್ಳಬಾರದು. ಹಾಗೆ ಮಾಡಿದರೆ ನೀವೂ
ಸತ್ತೀರಿ; ಅದಲ್ಲದೆ ಯೆಹೋವನಿಗೆ ಜನಸಮೂಹ
ದವರೆಲ್ಲರ ಮೇಲೆ ಸಿಟ್ಟು ಉಂಟಾದೀತು. ಯೆಹೋ
ವನು ಹೊತ್ತಿಸಿದ ಈ ಬೆಂಕಿಯ ದೆಸೆಯಿಂದ ನಿಮ್ಮ
ಸಹೋದರರಾಗಿರುವ ಎಲ್ಲಾ ಇಸ್ರಾಯೇಲ್ಯರ ಮನೆ
ತನದವರೇ ದುಃಖಿಸಲಿ. ಯೆಹೋವನ ಅಭಿಷೇಕ 7
ತೈಲವು ನಿಮ್ಮ ಮೇಲಿರುವದರಿಂದ ನೀವು ದೇವದರ್ಶ
ನದ ಗುಡಾರದ ಬಾಗಲನ್ನು ಬಿಟ್ಟು ಹೋಗಬಾರದು;
ಹೋದರೆ ಸತ್ತೀರಿ ಎಂದು ಹೇಳಿದನು. ಮೋಶೆಯ
ಮಾತಿನಂತೆಯೇ ಅವರು ನಡಕೊಂಡರು.
ಯೆಹೋವನು ಆರೋನನಿಗೆ--ನೀನೂ ನಿನ್ನ 8, 9
ಮಕ್ಕಳೂ ದ್ರಾಕ್ಷಾರಸವನ್ನಾಗಲಿ ಮದ್ಯವನ್ನಾಗಲಿ
ಕುಡಿದು ದೇವದರ್ಶನದ ಗುಡಾರದೊಳಗೆ ಬರ
ಬಾರದು; ಹಾಗೆ ಬಂದರೆ ಸತ್ತೀರಿ. ಇದು ನಿನಗೂ
ನಿನ್ನ ಸಂತತಿಯವರೆಲ್ಲರಿಗೂ ಶಾಶ್ವತವಿಧಿ. ಅದಲ್ಲದೆ 10
ದೇವರಿಗೆ ಮೀಸಲಾದ ವಸ್ತುಗಳನ್ನೂ ಅಲ್ಲದ ವಸ್ತು
ಗಳನ್ನೂ ಶುದ್ಧವಾದವುಗಳನ್ನೂ ಅಶುದ್ಧವಾದವು
ಗಳನ್ನೂ ವಿವೇಚಿಸುವದೂ ಯೆಹೋವನು ಮೋಶೆ 11
ಯ ಮೂಲಕ ಇಸ್ರಾಯೇಲ್ಯರಿಗೆ ಮಾಡಿದ ಎಲ್ಲಾ
ಆಜ್ಞೆಗಳನ್ನು ಜನರಿಗೆ ಬೋಧಿಸುವದೂ ನಿಮ್ಮ ಕರ್ತ
ವ್ಯವಾಗಿದೆ ಎಂದು ಹೇಳಿದನು.
ಮೋಶೆ ಆರೋನನಿಗೂ ಅವನ ಉಳಿದ ಮಕ್ಕ 12
ಳಾದ ಎಲ್ಲಾಜಾರ್ ಈತಾಮಾರ್ ಎಂಬವರಿಗೂ—
ಯೆಹೋವನಿಗೆ ಅಗ್ನಿಯ ಮೂಲಕ ಸಮರ್ಪಿತವಾದ

[1]) ಅಂದರೆ ತಲೆಯ ಕೂದಲನ್ನು ಹರವಿಕೊಳ್ಳಬಾರದು.

ದ್ರವ್ಯಗಳಲ್ಲಿ ಮಿಕ್ಕಿರುವ ನೈವೇದ್ಯದ್ರವ್ಯವನ್ನು ತೆಗೆದು
ಕೊಂಡು ಅದರಿಂದ ಹುಳಿಯಿಲ್ಲದ ರೊಟ್ಟಿಗಳನ್ನು
ಮಾಡಿಸಿ ಯಜ್ಞವೇದಿಯ ಬಳಿಯಲ್ಲಿ ಊಟಮಾಡ
13 ಬೇಕು. ಅದು ಮಹಾಪರಿಶುದ್ಧವಾಗಿರುವದರಿಂದ
ಪವಿತ್ರಸ್ಥಳದೊಳಗೇ ಅದನ್ನು ಊಟಮಾಡಬೇಕು.
ಜನರು ಯೆಹೋವನಿಗೆ ಸಮರ್ಪಿಸುವ ಹೋಮ
ದ್ರವ್ಯಗಳಲ್ಲಿ ಅದು ನಿನಗೂ ನಿನ್ನ ಮಕ್ಕಳಿಗೂ ಸಲ್ಲ
14 ತಕ್ಕದ್ದೆಂದು ಅಪ್ಪಣೆಯಾಗಿದೆ. ನೀವು ನೈವೇದ್ಯ
ಮಾಡಿದ ಎದೆಯ ಭಾಗವನ್ನೂ ಯಾಜಕರಿಗೋಸ್ಕರ
ಪ್ರತ್ಯೇಕಿಸಿದ ತೊಡೆಯನ್ನೂ ಯಾವದಾದರೂ
ಒಂದು ಶುದ್ಧಸ್ಥಳದಲ್ಲಿ ಊಟಮಾಡಬಹುದು.
ನೀನೂ ನಿನ್ನ ಗಂಡುಮಕ್ಕಳೂ ಹೆಣ್ಣುಮಕ್ಕಳೂ
ಅದನ್ನು ತಿನ್ನಬಹುದು. ಯಾಕಂದರೆ ಇಸ್ರಾಯೇ
ಲ್ಯರು ಸಮರ್ಪಿಸುವ ಸಮಾಧಾನಯಜ್ಞದ್ರವ್ಯಗಳಲ್ಲಿ
ಇವೇ ನಿನಗೂ ನಿನ್ನ ಮಕ್ಕಳಿಗೂ ಸಲ್ಲಬೇಕೆಂದು
15 ನೇಮಕವಾಗಿದೆ. ಜನರು ಹೋಮಕ್ಕಾಗಿ ಕೊಬ್ಬನ್ನು
ತಂದು ಸಮರ್ಪಿಸುವಾಗೆಲ್ಲಾ ಯಾಜಕರಿಗೋಸ್ಕರ
ಪ್ರತ್ಯೇಕಿಸಬೇಕಾದ ಆ ತೊಡೆಯನ್ನೂ ನೈವೇದ್ಯ
ವಾಗಿ ನಿವಾಳಿಸಬೇಕಾದ ಆ ಎದೆಯ ಭಾಗವನ್ನೂ
ಯೆಹೋವನ ಸನ್ನಿಧಿಯಲ್ಲಿ ತರಬೇಕು. ಯೆಹೋ
ವನು ಆಜ್ಞಾಪಿಸಿದಂತೆ ಅವು ನಿನಗೂ ನಿನ್ನ ವಂಶ
ದವರಿಗೂ ಸಲ್ಲತಕ್ಕದ್ದು; ಇದು ಶಾಶ್ವತನಿಯಮ
ಎಂದು ಹೇಳಿದನು.
16 [ಜನರೆಲ್ಲರಿಗೋಸ್ಕರ] ದೋಷಪರಿಹಾರಕ್ಕಾಗಿ
ಸಮರ್ಪಿತವಾದ ಹೋತನ ವಿಷಯದಲ್ಲಿ ಅದು
ಏನಾಯಿತೆಂದು ಮೋಶೆ ವಿಚಾರಿಸಲಾಗಿ ಅದನ್ನು
ಸುಟ್ಟುಬಿಟ್ಟರೆಂದು ತಿಳಿಯಬಂತು. ಇದನ್ನು ಕೇಳಿ
ದಾಗ ಅವನು ಆರೋನನ ಉಳಿದ ಮಕ್ಕಳಾದ
ಎಲ್ಲಾಜಾರ್ ಈತಾಮಾರ್ ಎಂಬವರ ಮೇಲೆ ಸಿಟ್ಟು
17 ಗೊಂಡು—ಆ ದೋಷಪರಿಹಾರಕಯಜ್ಞದ್ರವ್ಯವು
ಮಹಾಪರಿಶುದ್ಧವಾದದ್ದಲ್ಲವೇ; ನೀವು ಜನಸಮೂ
ಹದ ಪಾಪಗಳನ್ನು ಪರಿಹಾರಮಾಡುವಂತೆಯೂ ಅವ
ರಿಗೋಸ್ಕರ ಯೆಹೋವನ ಸನ್ನಿಧಿಯಲ್ಲಿ ದೋಷಪರಿ
ಹಾರವನ್ನು ಮಾಡುವಂತೆಯೂ ಅದು ನಿಮ್ಮ ಭಾಗ
ವಾಗಿ ನೇಮಕವಾಗಿದೆಯಲ್ಲಾ. ನೀವು ಯಾಕೆ
ಅದನ್ನು ಪವಿತ್ರಸ್ಥಳದೊಳಗೆ ಊಟಮಾಡಲಿಲ್ಲ?
18 ಅದರ ರಕ್ತವು ಪವಿತ್ರಸ್ಥಾನದೊಳಕ್ಕೆ ತರಬೇಕಾದ
ದ್ದಲ್ಲವಲ್ಲಾ; ಆದಕಾರಣ ನಾನು ಆಜ್ಞಾಪಿಸಿದಂತೆ
ನೀವು ದೇವಸ್ಥಾನದ ಪ್ರಾಕಾರದೊಳಗೆ ಅದನ್ನು ತಿನ್ನ
19 ಬೇಕಾಗಿತ್ತು ಅಂದನು. ಅದಕ್ಕೆ ಆರೋನನು ಮೋಶೆ
ಗೆ—ಇವರು ಈ ಹೊತ್ತು ಯೆಹೋವನ ಸನ್ನಿಧಿ
ಯಲ್ಲಿ ತಮಗೋಸ್ಕರ ದೋಷಪರಿಹಾರಕಯಜ್ಞ
ವನ್ನೂ ಸರ್ವಾಂಗಹೋಮವನ್ನೂ ಸಮರ್ಪಿಸಿದ್ದರೂ
ಈ ಆಪತ್ತು ನನಗೆ ಸಂಭವಿಸಿತು; ಹೀಗಿರುವಾಗ ನಾನು
ದೋಷಪರಿಹಾರಕಯಜ್ಞದ್ರವ್ಯವನ್ನು ಈ ಹೊತ್ತು
ಊಟಮಾಡಿದ್ದರೆ ಅದು ಯೆಹೋವನಿಗೆ ಒಳ್ಳೇದಾಗಿ
20 ತೋಚುತ್ತಿತ್ತೋ ಎಂದು ಉತ್ತರಕೊಡಲಾಗಿ ಮೋಶೆ
ಆ ಮಾತನ್ನು ಕೇಳಿ ಒಪ್ಪಿಕೊಂಡನು.

ಅಪರಿಶುದ್ಧತ್ವಕ್ಕೆ ಕಾರಣ; ಶುದ್ಧೀಕರಣಕ್ರಮ.

11—15.

ಮೃಗ ಮತ್ಸ್ಯ ಪಕ್ಷಿ ಕ್ರಿಮಿಕೀಟಗಳಲ್ಲಿ ಶುದ್ಧಾಶುದ್ಧ
ಭೇದವನ್ನು ಕುರಿತದ್ದು.

ಯೆಹೋವನು ಮೋಶೆ ಆರೋನರ ಸಂಗಡ ಮಾ
ತಾಡಿ ಆಜ್ಞಾಪಿಸಿದ್ದೇನಂದರೆ—ನೀವು ಇಸ್ರಾಯೇ 2
ಲ್ಯರಿಗೆ ಹೀಗೆ ಹೇಳಬೇಕು—ಭೂಮಿಯ ಮೇಲಿರುವ
ಚತುಷ್ಪಾದ ಪ್ರಾಣಿಗಳಲ್ಲಿ ಇವುಗಳ ಮಾಂಸವನ್ನು
ನೀವು ತಿನ್ನಬಹುದು. ಯಾವವಂದರೆ—ಯಾವ
ಪ್ರಾಣಿಯು 1)ಕಾಲ್ಗೊರಸು ಸೀಳಿದೆಯೋ ಅದು
ಮೆಲಕುಹಾಕುವಂಥದಾದರೆ ಅದರ ಮಾಂಸವನ್ನು
ತಿನ್ನಬಹುದು. ಆದರೆ ಯಾವ ಪ್ರಾಣಿಯು ಮೆಲಕು
ಹಾಕಿದರೂ ಗೊರಸುಸೀಳಿರುವದಿಲ್ಲವೋ ಮತ್ತು
ಯಾವ ಪ್ರಾಣಿಯು ಗೊರಸುಸೀಳಿದರೂ ಮೆಲಕು
ಹಾಕುವದಿಲ್ಲವೋ ಅವುಗಳ ಮಾಂಸವನ್ನು ನೀವು ತಿನ್ನ
ಬಾರದು. ದೃಷ್ಟಾಂತ, ಒಂಟೆಯು ಮೆಲಕುಹಾಕು
ವಂಥದು ಸರಿ; ಆದರೂ ಅದಕ್ಕೆ ಸೀಳುಗೊರಸು
ಇಲ್ಲವಾದದರಿಂದ ನೀವು ಅದರ ಮಾಂಸವನ್ನು
ಅಶುದ್ಧವೆಂದೆಣಿಸಬೇಕು. ಬೆಟ್ಟದ ಮೊಲವೂ ಮೆಲಕು
ಹಾಕುವಂಥದು; ಆದರೂ ಸೀಳುಗೊರಸು ಇಲ್ಲ
ವಾದದರಿಂದ ಅದು ನಿಮಗೆ ಅಶುದ್ಧ. ಮೊಲವೂ
ಮೆಲಕುಹಾಕುವಂಥದು; ಆದರೂ ಸೀಳುಗೊರಸು
ಇಲ್ಲವಾದ ಕಾರಣ ಅದೂ ನಿಮಗೆ ಅಶುದ್ಧ. ಹಂ
ಯು ಗೊರಸು ಸೀಳಿಯದೆ; ಆದರೂ ಅದು ಮೆಲಕು
ಹಾಕುವದಿಲ್ಲವಾದದರಿಂದ ಅದು ನಿಮಗೆ ಅಶುದ್ಧ.
ಇವುಗಳ ಮಾಂಸವನ್ನು ನೀವು ತಿನ್ನಬಾರದು; ಇವು
ಗಳ ಹೆಣವನ್ನು ಮುಟ್ಟಬಾರದು; ಇವುಗಳನ್ನು
ಅಶುದ್ಧವೆಂದೆಣಿಸಬೇಕು.
ಜಲಜಂತುಗಳಲ್ಲಿ ನೀವು ತಿನ್ನಬಹುದಾದವುಗಳು
ಯಾವವಂದರೆ—ಸಮುದ್ರದಲ್ಲಿಯಾಗಲಿ ನದಿಯಲ್ಲಿ
ಯಾಗಲಿ ಬೇರೆ ಜಲಾಶಯದಲ್ಲಿಯಾಗಲಿ ಯಾವ
ಜಾತಿಯ ಪ್ರಾಣಿಗೆ ರೆಕ್ಕೆ ಇದ್ದು ಮೈಯೆಲ್ಲಾ ಪರೆಪರೆ
ಯಾಗಿರುವದೋ ಅದರ ಮಾಂಸವನ್ನು ತಿನ್ನಬಹುದು.
ಆದರೆ ಸಮುದ್ರದಲ್ಲಿದ್ದರೂ ನದಿಯಲ್ಲಿದ್ದರೂ ಜಲ
ಚರಗಳಾದ ಸಕಲವಿಧವಾದ ಜೀವಜಂತುಗಳಲ್ಲಿ
ಯಾವ ಜಾತಿಗೆ ರೆಕ್ಕೆಯೂ ಪರೆಪರೆಯಾದ ಮೈಯೂ
ಇರುವದಿಲ್ಲವೋ ಅದು ನಿಮಗೆ ನಿಷಿದ್ಧವಾದದ್ದು.
ಅಂಥವು ಸಂಪೂರ್ಣವಾಗಿ ನಿಷಿದ್ಧವಾಗಿರುವದರಿಂದ
ಅವುಗಳ ಮಾಂಸವನ್ನು ನೀವು ತಿನ್ನಬಾರದು; ಅವು
ಗಳ ಹೆಣಗಳು ನಿಮಗೆ ಹೇಯವಾಗಿರಬೇಕು. ಜಲ
ಜಂತುಗಳಲ್ಲಿ ಯಾವದಕ್ಕೆ ರೆಕ್ಕೆಗಳೂ ಪರೆಪರೆಯಾದ
ಮೈಯೂ ಇಲ್ಲವೋ ಅವು ನಿಮಗೆ ಹೇಯವಾಗಿರ
ಬೇಕು.
ಪಕ್ಷಿಗಳಲ್ಲಿ ಇವುಗಳು ನಿಮಗೆ ನಿಷಿದ್ಧವು; ಇವು
ಗಳ ಮಾಂಸವನ್ನು ತಿನ್ನಬಾರದು; ಇವು ಹೇಯವಾಗಿ
ರಬೇಕು. ಯಾವವಂದರೆ—ಗರುಡ, ಬೆಟ್ಟದ ಹದ್ದು

1) ಅಂದರೆ ಕೊಳಗ.

15 ಕ್ರೌಂಚ, ಹದ್ದು, ಸಕಲವಿಧವಾದ ಗಿಡಗ, ಸಕಲ
ವಿಧವಾದ ಕಾಗೆ, ಉಷ್ಟ್ರಪಕ್ಷಿ, ಉಲೂಕ, ಕಡಲ್ಹಕ್ಕಿ,
ಸಕಲವಿಧವಾದ ಡೇಗೆ, ಗೂಬೆ, ಹೆಗ್ಗೂಬೆ, ಕರೇಟು,
19 ಚೀಲಮೂಗಿ, ರಣಹದ್ದು, ನೀರುಕಾಗೆ, ಕೊಕ್ಕರೆ,
ಸಕಲವಿಧವಾದ ಬಕ, ಹಡೆಹಕ್ಕಿ, ಕಣ್ಣ ಕಪಡಿ.

ರೆಕ್ಕೆಯುಳ್ಳವುಗಳಾಗಿ ಕಾಲುಗಳಿಂದ ಹರಿದಾಡುವ
ಕ್ರಿಮಿಕೀಟಗಳೆಲ್ಲವೂ ನಿಮಗೆ ಹೇಯವಾಗಿರಬೇಕು.
ಆದರೆ ಕಾಲುಳ್ಳ ಯಾವ ಕ್ರಿಮಿಕೀಟಗಳಿಗೆ ನೆಲದ
ಮೇಲೆ ಹಾರುವದಕ್ಕೋಸ್ಕರ ಮುದುರಿಕೊಂಡಿರುವ
ತೊಡೆಗಳು ಇರುತ್ತವೆಯೋ ಅವುಗಳನ್ನು ನೀವು ತಿನ್ನ
ಬಹುದು. ಸಕಲವಿಧವಾದ ಮಿಡತೆಗಳನ್ನೂ ಬೋಳ
ಮಿಡತೆಗಳನ್ನೂ ಚಿಟ್ಟೆಮಿಡತೆಗಳನ್ನೂ ಸಣ್ಣಮಿಡತೆಗ
ಳನ್ನೂ ಇವುಗಳನ್ನೆಲ್ಲಾ ತಿನ್ನಬಹುದು. ರೆಕ್ಕೆಯುಳ್ಳ
ವುಗಳಾಗಿ ಕಾಲುಗಳಿಂದ ಹರಿದಾಡುವ ಸಕಲವಿಧವಾದ
ಕ್ರಿಮಿಕೀಟಗಳು ನಿಮಗೆ ನಿಷಿದ್ಧವು.

ಅದಲ್ಲದೆ ಮುಂದೆ ಹೇಳಿರುವ ಜಂತುಗಳಿಂದ
ನಿಮಗೆ ಅಪವಿತ್ರತೆಯುಂಟಾಗುತ್ತದೆ. ಅವುಗಳ ಹೆಣ
ಯಾವನಿಗೆ ಸೋಂಕುವದೋ ಅವನು ಆ ದಿನದ
ಸಾಯಂಕಾಲದ ವರೆಗೂ ಅಶುದ್ಧನಾಗಿರುವನು.
ಅವುಗಳ ಹೆಣವನ್ನು ಎತ್ತಿದವನು ತನ್ನ ಬಟ್ಟೆಗಳನ್ನು
ಒಗೆದುಕೊಳ್ಳಬೇಕು, ಮತ್ತು ಸಾಯಂಕಾಲದ ವರೆ
ಗೂ ಅಶುದ್ಧನಾಗಿರುವನು. ಅವು ಯಾವವಂದರೆ,
ಯಾವ ಪಶುವು ಗೊರಸು ಸ್ವಲ್ಪ ಸೀಳಿದ್ದರೂ ಇಗ್ಗೊರ
ಸಾಗಿಲ್ಲವೋ ಮತ್ತು ಮೆಲಕುಹಾಕುವದಿಲ್ಲವೋ ಅದು
ನಿಮಗೆ ಅಶುದ್ಧ. ಅವುಗಳು ಯಾವನಿಗೆ ಸೋಂಕು
ವವೋ ಅವನು ಅಶುದ್ಧನಾಗುವನು. ಚತುಷ್ಪಾದ
ಪ್ರಾಣಿಗಳಲ್ಲಿ ಅಂಗಾಲುಗಳಿಂದ ನಡೆಯುವವುಗಳೆಲ್ಲಾ
ನಿಮಗೆ ಅಶುದ್ಧನಾಗಿರುವವು; ಅವುಗಳ ಹೆಣ ಯಾವ
ನಿಗೆ ಸೋಂಕುವದೋ ಅವನು ಆ ದಿನದ ಸಾಯಂಕಾ
ಲದ ವರೆಗೂ ಅಶುದ್ಧನಾಗಿರುವನು. ಅವುಗಳ ಹೆಣ
ವನ್ನು ಎತ್ತಿದವನು ತನ್ನ ಬಟ್ಟೆಗಳನ್ನು ಒಗೆದುಕೊಳ್ಳ
ಬೇಕು ಮತ್ತು ಆ ಸಾಯಂಕಾಲದ ವರೆಗೂ ಅಶುದ್ಧ
ನಾಗಿರುವನು. ಅವು ನಿಮಗೆ ಅಶುದ್ಧ.

ನೆಲದ ಮೇಲೆ ಸಂಚರಿಸುವ ಸಣ್ಣ ಜಂತುಗಳಲ್ಲಿ
ಇವು ನಿಮಗೆ ಅಶುದ್ಧವಾಗಿರಬೇಕು. ಯಾವವಂ
ದರೆ—ಮುಂಗಿಸಿ, ಇಲಿ, ಸಕಲವಿಧವಾದ ಉಡು,
ಹಾವರಾಣಿ, [1]ಊಸರವಳ್ಳಿ, ಹಲ್ಲಿ, ಬಸವನಹುಳ,
ಚಿಟ್ಟೆಲಿ ಇವೇ. ನೆಲದ ಮೇಲೆ ಸಂಚರಿಸುವ ಈ
ಅಶುದ್ಧವಾದ ಸಣ್ಣ ಜಂತುಗಳ ಹೆಣವು ಯಾರಿಗೆ
ಸೋಂಕುವದೋ ಅವರು ಆ ಸಾಯಂಕಾಲದ ವರೆಗೂ
ಅಶುದ್ಧರಾಗಿರುವರು. ಇವುಗಳ ಹೆಣವು ಯಾವ
ವಸ್ತುವಿನ ಮೇಲೆ ಬೀಳುವದೋ ಆ ವಸ್ತುವು ಅಶುದ್ಧ
ವಾಗಿರುವದು. ಅದು ಮರದ ವಸ್ತುವಾಗಲಿ ಬಟ್ಟೆ
ಯಾಗಲಿ ಚರ್ಮವಾಗಲಿ ಗೋಣಿಯಾಗಲಿ ಅದು ಎಂಥ
ದಾದರೂ ಯಾವ ಕೆಲಸಕ್ಕೆ ಉಪಯೋಗವಾಗಿದ್ದರೂ
ಅದನ್ನು ನೀರಿನಲ್ಲಿ ನೆನಸಬೇಕು; ಅದು ಆ ಸಾಯಂ
ಕಾಲದ ವರೆಗೂ ಅಶುದ್ಧವಾಗಿರುವದು; ತರುವಾಯ
ಶುದ್ಧಿಯಾಗುವದು. ಆ ಜಂತುಗಳ ಹೆಣ ಮಣ್ಣಿನ
ಪಾತ್ರೆಯಲ್ಲಿ ಬಿದ್ದರೆ ಆ ಪಾತ್ರೆಯಲ್ಲಿರುವದೆಲ್ಲಾ ಅಶು
ದ್ಧವಾಗಿರುವದು, ಮತ್ತು ಆ ಪಾತ್ರೆಯನ್ನು ನೀವು
ಒಡೆದುಬಿಡಬೇಕು. ಅದರಲ್ಲಿರುವ ತಿನ್ನತಕ್ಕ ಪದಾ 34
ರ್ಥವೆಲ್ಲಾ ನೀರಿನಿಂದ ನೆನದದ್ದಾಗಿದ್ದರೆ ಅಶುದ್ಧವಾಗು
ವದು. ಪಾನದ್ರವ್ಯವು ಆ ಪಾತ್ರೆಯಲ್ಲಿದ್ದರೆ ಅದೂ
ಅಶುದ್ಧವಾಗುವದು. ಆ ಜಂತುಗಳ ಹೆಣ ಯಾವ 35
ಸಾಮಾನಿನ ಮೇಲೆ ಬಿದ್ದರೂ ಆ ಸಾಮಾನು ಅಶುದ್ಧ
ವಾಗುವದು. ಒಲೆಗಳಲ್ಲಿ ಅದು [2]ಒಂಟೊಲೆಯಾಗಿದ್ದ
ರೂ ಜೋಡೊಲೆಯಾಗಿದ್ದರೂ ಅದು ಅಶುದ್ಧವಾದದ
ರಿಂದ ಅದನ್ನು ಒಡೆದುಬಿಡಬೇಕು; ಅದು ಅಶುದ್ಧವೇ.
ಒರತೆ ಮೊದಲಾದ ಜಲಾಶಯಗಳನ್ನು ಮಾತ್ರ ನೀವು 36
ಶುದ್ಧವೆಂದೆಣಿಸಬೇಕು. ಆದರೆ ಇವುಗಳೊಳಗಿಂದ ಆ
ಹೆಣವನ್ನು ಎತ್ತಿದವನು ಅಶುದ್ಧನಾಗುವನು. ಬಿತ್ತ 37
ಬೇಕಾದ ಬೀಜದ ಮೇಲೆ ಈ ಜಂತುಗಳ ಹೆಣ ಬಿದ್ದರೆ
ಆ ಬೀಜವು ಅಶುದ್ಧವಾಗುವದಿಲ್ಲ. ನೀರು ಹಾಕಿ 38
ನೆನಸಿದ ಬೀಜದ ಮೇಲೆ ಆ ಹೆಣ ಬಿದ್ದರೆ ಅದು ನಿಮಗೆ
ಅಶುದ್ಧ.

ಆಹಾರಕ್ಕೆ ಯೋಗ್ಯವಾಗಿರುವ ಪಶುವು ಸತ್ತರೆ 39
ಅದರ ಹೆಣವನ್ನು ಮುಟ್ಟಿದವನು ಆ ದಿನದ ಸಾಯಂ
ಕಾಲದ ವರೆಗೂ ಅಶುದ್ಧನಾಗಿರುವನು. ಆ ಹೆಣದಲ್ಲಿ 40
ಸ್ವಲ್ಪವಾಗಿ ತಿಂದವನು ತನ್ನ ಬಟ್ಟೆಗಳನ್ನು ಒಗೆದು
ಕೊಳ್ಳಬೇಕು. ಅವನು ಆ ದಿನದ ಸಾಯಂಕಾಲದ
ವರೆಗೂ ಅಶುದ್ಧನಾಗಿರುವನು. ಆ ಹೆಣವನ್ನು ಹೊ
ತ್ತವನೂ ತನ್ನ ಬಟ್ಟೆಗಳನ್ನು ಒಗೆದುಕೊಳ್ಳಬೇಕು;
ಅವನು ಆ ಸಾಯಂಕಾಲದ ವರೆಗೂ ಅಶುದ್ಧನಾಗಿರು
ವನು.

ನೆಲದ ಮೇಲೆ ಹರಿದಾಡುವ ಕ್ರಿಮಿಕೀಟಗಳೆಲ್ಲಾ 41
ಹೇಯವಾಗಿವೆ; ಅವುಗಳ ಮಾಂಸವನ್ನು ತಿನ್ನಬಾ
ರದು. ಹೊಟ್ಟೆಯಿಂದ ನಡೆಯುವಂಥದನ್ನೂ ಕಾಲಿ 42
ನಿಂದ ಹರಿದಾಡುವಂಥದನ್ನೂ ಬಹಳ ಕಾಲುಳ್ಳದ್ದನ್ನೂ
ಅಂತೂ ನೆಲದ ಮೇಲೆ ಹರಿದಾಡುವ ಯಾವ ಸಣ್ಣ ಜೀ
ವಿಯನ್ನೂ ನೀವು ತಿನ್ನಬಾರದು; ಅವು ಹೇಯವಾ
ಗಿವೆ. ನೀವು ಅಂಥ ಯಾವ ಸಣ್ಣ ಜೀವಿಯನ್ನೂ 43
ತಿಂದು ನಿಮ್ಮನ್ನು ನೀವೇ ಹೇಸಿಕೆಮಾಡಿಕೊಂಡು ಅಶು
ದ್ಧರಾಗಬಾರದು. ಯಾಕಂದರೆ ನಾನು ನಿಮ್ಮ ದೇವ 44
ರಾದ ಯೆಹೋವನು; ನೀವು ದೇವಜನರಿಗೆ ತಕ್ಕಂ
ತಿರಬೇಕು. ನಾನು ಪರಿಶುದ್ಧನಾಗಿರುವದರಿಂದ
ನೀವೂ ಪರಿಶುದ್ಧರಾಗಿರಬೇಕು. ನೆಲದ ಮೇಲೆ ಹರಿ
ದಾಡುವ ಯಾವ ಜಂತುವಿನಿಂದಾದರೂ ನೀವು ನಿಮ್ಮ
ನ್ನು ಅಶುದ್ಧಮಾಡಿಕೊಳ್ಳಬಾರದು. ನಿಮ್ಮ ದೇವರಾ 45
ಗಿರುವದಕ್ಕೆ ನಿಮ್ಮನ್ನು ಐಗುಪ್ತದೇಶದೊಳಗಿಂದ
ಬರಮಾಡಿದ ಯೆಹೋವನೇ ನಾನು; ನಾನು ಪರಿ
ಶುದ್ಧನಾಗಿರುವದರಿಂದ ನೀವೂ ಪರಿಶುದ್ಧರಾಗಿರ
ಬೇಕು.

ಇದೇ ಪಶು ಪಕ್ಷಿ ಜಲಚರ ಕ್ರಿಮಿಕೀಟಗಳ ವಿಷ 46
ಯವಾದ ವಿಧಿ. ಇದರಿಂದ ಶುದ್ಧಾಶುದ್ಧಗಳನ್ನೂ 47
ಭಕ್ಷ್ಯಾಭಕ್ಷ್ಯಗಳನ್ನೂ ವಿವೇಚಿಸುವದಕ್ಕೆ ನಿಮ್ಮಿಂದಾ
ಗುವದು.

1) ಅಥವಾ: ಜೊಣ್ಣೆಕಟ.
2) ಅಥವಾ: ಹಂಡೂರಾಗಿದ್ದರೂ ಒಲೆಯಾಗಿದ್ದರೂ.

ಬಾಣಂತಿಯರ ಶುದ್ಧೀಕರಣವಿಷಯ.

12 ಯೆಹೋವನು ಮೋಶೆಗೆ ಹೇಳಿದ್ದೇನಂದರೆ—
2 ನೀನು ಇಸ್ರಾಯೇಲ್ಯರಿಗೆ ಹೀಗೆ ಆಜ್ಞಾಪಿಸ
ಬೇಕು—
ಒಬ್ಬ ಸ್ತ್ರೀ ಗಂಡುಮಗುವನ್ನು ಹೆತ್ತರೆ ತಾನು ತಿಂಗಳ
ಮುಟ್ಟಿನಿಂದ ಹೇಗೆ ಅಶುದ್ಧಳಾಗುವಳೋ ಹಾಗೆ
ಯೇ ಏಳು ದಿನಗಳ ತನಕ ಅಶುದ್ಧಳಾಗಿರಬೇಕು.
3 ಎಂಟನೆಯ ದಿನದಲ್ಲಿ ಆ ಮಗುವಿಗೆ ಸುನ್ನತಿಮಾಡಿಸ
4 ಬೇಕು. ಆ ಮೇಲೆ ಅವಳ ಶುದ್ಧೀಕರಣಪೂರ್ತಿಗೆ
ಇನ್ನೂ ಮೂವತ್ತುಮೂರು ದಿವಸ ಹಿಡಿಯುವದು.
ಅದು ಪೂರೈಸುವ ತನಕ ಅವಳು ದೇವರ ವಸ್ತು
ವನ್ನು ಮುಟ್ಟಕೂಡದು, ದೇವಸ್ಥಾನಕ್ಕೆ ಬರಕೂಡದು.
5 ಹೆಣ್ಣುಮಗುವನ್ನು ಹೆತ್ತರೆ ತಾನು ತಿಂಗಳ ಮುಟ್ಟಿ
ನಿಂದ ಹೇಗೆ ಅಶುದ್ಧಳಾಗುವಳೋ ಹಾಗೆಯೇ
ಎರಡು ವಾರಗಳು ಅಶುದ್ಧಳಾಗಿರಬೇಕು: ಮತ್ತು
ಶುದ್ಧೀಕರಣಪೂರ್ತಿಗೆ ಅರುವತ್ತಾರು ದಿವಸ ಹಿಡಿಯು
ವದು.
6 ಗಂಡುಮಗುವನ್ನು ಹೆತ್ತರೂ ಹೆಣ್ಣುಮಗುವನ್ನು
ಹೆತ್ತರೂ ಅವಳ ಶುದ್ಧೀಕರಣದ ದಿನಗಳು ಪೂರೈಸಿ
ದಾಗ ಅವಳು ಸರ್ವಾಂಗಹೋಮಕ್ಕಾಗಿ ಒಂದು ವರು
ಷದ ಕುರಿಯನ್ನು, ದೋಷಪರಿಹಾರಕ್ಕಾಗಿ ಪಾರಿವಾ
ಳದ ಮರಿಯನ್ನು ಇಲ್ಲವೆ ಬೆಳವಕ್ಕಿಯನ್ನು ದೇವ
ದರ್ಶನದ ಗುಡಾರದ ಬಾಗಲಿಗೆ ತಂದು ಯಾಜಕ
7 ನಿಗೆ ಒಪ್ಪಿಸಬೇಕು. ಅವನು ಅವುಗಳನ್ನು ಯೆಹೋ
ವನ ಸನ್ನಿಧಿಯಲ್ಲಿ ಸಮರ್ಪಿಸಿ ಅವಳಿಗೋಸ್ಕರ ದೋಷ
ಪರಿಹಾರವನ್ನು ಮಾಡಿದಾಗ ಅವಳಿಗೆ ರಕ್ತಸ್ರಾವದಿಂ
ದುಂಟಾದ ಅಪರಿಶುದ್ಧತೆ ನಿವೃತ್ತಿಯಾಗಿ ಶುದ್ಧಳಾ
ಗುವಳು. ಗಂಡುಮಗುವನ್ನಾಗಲಿ ಹೆಣ್ಣುಮಗು
8 ವನ್ನಾಗಲಿ ಹೆತ್ತವಳಿಗೆ ಇದೇ ವಿಧಿ. ಕುರಿಯನ್ನು
ಕೊಡುವದಕ್ಕೆ ಗತಿಯಿಲ್ಲದಿದ್ದರೆ ಎರಡು ಬೆಳವಕ್ಕಿ
ಗಳನ್ನಾಗಲಿ ಎರಡು ಪಾರಿವಾಳದ ಮರಿಗಳನ್ನಾಗಲಿ
ತಂದು ಸರ್ವಾಂಗಹೋಮಕ್ಕಾಗಿ ಒಂದನ್ನೂ ದೋಷ
ಪರಿಹಾರಕ್ಕಾಗಿ ಒಂದನ್ನೂ ಸಮರ್ಪಿಸಬೇಕು. ಯಾ
ಜಕನು ಅವಳಿಗೋಸ್ಕರ ದೋಷಪರಿಹಾರವನ್ನು ಮಾಡಿ
ದಾಗ ಶುದ್ಧಳಾಗುವಳು.

ಕುಷ್ಠರೋಗದಿಂದುಂಟಾಗುವ ಅಪವಿತ್ರತೆಯನ್ನೂ ಅದರ
ಶುದ್ಧೀಕರಣವನ್ನೂ ಕುರಿತದ್ದು.

13 ಯೆಹೋವನು ಮೋಶೆ ಆರೋನರಿಗೆ ಹೇಳಿದ್ದೇ
2 ನಂದರೆ—ಒಬ್ಬ ಮನುಷ್ಯನ ಮೈಮೇಲೆ ಬಾವಾ
ಗಲಿ ಗುಳ್ಳೆಯಾಗಲಿ ಹೊಳೆಯುವ ಮಚ್ಚೆಯಾಗಲಿ
ಉಂಟಾಗಿ ಅದರಲ್ಲಿ ಕುಷ್ಠರೋಗದ ಲಕ್ಷಣಗಳು ತೋ
ರಿದರೆ ಅವನನ್ನು ಮಹಾಯಾಜಕನಾದ ಆರೋನನ
ಬಳಿಗೆ ಇಲ್ಲವೆ ಆರೋನನ ಮಕ್ಕಳಾದ ಯಾಜಕರಲ್ಲಿ
3 ಒಬ್ಬನ ಬಳಿಗೆ ಕರಕೊಂಡು ಬರಬೇಕು. ಯಾಜಕ
ನು ಅವನ ಚರ್ಮದಲ್ಲಿರುವ ಮಚ್ಚೆಯನ್ನು ನೋಡು
ವಾಗ ಆ ಮಚ್ಚೆಯಲ್ಲಿರುವ ರೋಮ ಬೆಳ್ಳಗಾಗಿ

ಹೋಗಿದ್ದರೆ ಮತ್ತು ಆ ಮಚ್ಚೆ ಮಿಕ್ಕ ಚರ್ಮಕ್ಕಿಂತ ತಗ್ಗಾಗಿದ್ದರೆ ಅದು ಕುಷ್ಠರೋಗ. ಯಾಜಕನು ಅದನ್ನು ಪರೀಕ್ಷಿಸಿ ಅವನನ್ನು ಅಶುದ್ಧನೆಂದು ನಿರ್ಣಯಿಸಬೇಕು. ಆ ಹೊಳೆಯುವ ಮಚ್ಚೆ ಬೆಳ್ಳಗಾಗಿದ್ದು ಮಿಕ್ಕ ಚರ್ಮಕ್ಕಿಂತ ತಗ್ಗಾಗಿರದೆಹೋದರೆ ಮತ್ತು ಅಲ್ಲಿರುವ ರೋಮ ಬೆಳ್ಳಗಾಗದಿದ್ದರೆ ಯಾಜಕನು ಆ ಮಚ್ಚೆಯಿದ್ದವನನ್ನು ಏಳು ದಿನಗಳ ವರೆಗೆ ಪ್ರತ್ಯೇಕವಾಗಿ ಇರಿಸಬೇಕು. ಏಳನೆಯ ದಿನದಲ್ಲಿ ಯಾಜಕನು ಅವನನ್ನು ಪರೀಕ್ಷಿಸುವಾಗ ಆ ಮಚ್ಚೆ ದೇಹದ ಚರ್ಮದಲ್ಲಿ ಹರಡಿಕೊಳ್ಳದೆ ಮೊದಲು ಇದ್ದಂತೆಯೇ ತೋರಿದರೆ ಯಾಜಕನು ಇನ್ನು ಏಳು ದಿನಗಳ ವರೆಗೂ ಅವನನ್ನು ಪ್ರತ್ಯೇಕವಾಗಿ ಇರಿಸಬೇಕು. ಆ ಏಳು ದಿನಗಳಾದ ಮೇಲೆ ಯಾಜಕನು ತಿರಿಗಿ ಅವನನ್ನು ಪರೀಕ್ಷಿಸುವಾಗ ಆ ಮಚ್ಚೆ ದೇಹದ ಚರ್ಮದಲ್ಲಿ ಹರಡಿಕೊಳ್ಳದೆ ಮೊಬ್ಬಾಗಿದ್ದರೆ ಯಾಜಕನು ಅದು ಬರೀ ಗುಳ್ಳೆಯೆಂದು ತಿಳಿದು ಅವನನ್ನು ಶುದ್ಧನೆಂದು ನಿರ್ಣಯಿಸಬೇಕು: ಅವನು ತನ್ನ ಬಟ್ಟೆಗಳನ್ನು ಒಗೆದುಕೊಂಡು ಶುದ್ಧನಾಗುವನು. ಆದರೆ ಅವನು ತನ್ನ ಶುದ್ಧಿಯ ವಿಷಯದಲ್ಲಿ ತನ್ನನ್ನು ಯಾಜಕನಿಗೆ ತೋರಿಸಿಕೊಂಡನಂತರ ಆ ಗುಳ್ಳೆ ದೇಹದ ಚರ್ಮದಲ್ಲಿ ಹರಡಿಕೊಂಡರೆ ಅವನು ತಿರಿಗಿ ಯಾಜಕನಿಗೆ ತೋರಿಸಿಕೊಳ್ಳಬೇಕು. ಯಾಜಕನು ನೋಡುವಾಗ ಆ ಮಚ್ಚೆ ದೇಹದ ಚರ್ಮದಲ್ಲಿ ಹರಡಿಕೊಂಡಿದ್ದರೆ ಅದು ಕುಷ್ಠವೆಂದು ತಿಳಿದು ಅವನನ್ನು ಅಶುದ್ಧನೆಂದು ನಿರ್ಣಯಿಸಬೇಕು.

ಕುಷ್ಠರೋಗದ ಚಿಹ್ನೆಗಳು ಯಾವನಲ್ಲಾದರೂ ಕಾಣಬಂದರೆ ಅವನನ್ನು ಯಾಜಕನ ಬಳಿಗೆ ಕರಕೊಂಡು ಬರಬೇಕು. ಯಾಜಕನು ಅವನನ್ನು ನೋಡುವಾಗ ದೇಹದ ಚರ್ಮದಲ್ಲಿ ಬೆಳ್ಳಗಾದ ಬಾವು ಇದ್ದರೆ ಮತ್ತು ಅಲ್ಲಿರುವ ರೋಮವೂ ಬೆಳ್ಳಗಾಗಿಹೋಗಿದ್ದರೆ ಮತ್ತು ಆ ಬಾವಿನಲ್ಲಿ ಮಾಂಸ ಕಾಣಿಸಿದರೆ ಅದು ಹಳೇ ಕುಷ್ಠರೋಗದ ಗುರುತು. ಅವನು ಅಶುದ್ಧನಾದದರಿಂದ ಯಾಜಕನು ಅವನನ್ನು ಪ್ರತ್ಯೇಕಿಸದೆ ಆಗಲೇ ಅಶುದ್ಧನೆಂದು ನಿರ್ಣಯಿಸಬೇಕು.

ಆದರೆ ಒಬ್ಬನ ಚರ್ಮದಲ್ಲಿ ತೊನ್ನುಹತ್ತಿ ಯಾಜಕನು ನೋಡುವ ಎಲ್ಲಾ ಕಡೆಯಲ್ಲಿಯೂ ತಲೆ ಮೊದಲುಗೊಂಡು ಅಂಗಾಲಿನ ವರೆಗೂ ಹರಡಿಕೊಂಡಿದ್ದರೆ ಯಾಜಕನು ನೋಡುವಾಗ ಆ ತೊನ್ನು ದೇಹದಲ್ಲೆಲ್ಲಾ ವ್ಯಾಪಿಸಿಕೊಂಡಿದ್ದರೆ ಅಂಥವನನ್ನು ಶುದ್ಧನೆಂದು ಯಾಜಕನು ನಿರ್ಣಯಿಸಬೇಕು. ಅವನ ಚರ್ಮವೆಲ್ಲಾ ಬೆಳ್ಳಗಾಗಿ ಹೋದದರಿಂದ ಅವನು ಶುದ್ಧನು. ಆದರೆ ಅಂಥವನ ದೇಹದಲ್ಲಿ ಯಾವಾಗಲಾದರೂ ಮಾಂಸಕಾಣಬಂದರೆ ಅವನು ಅಶುದ್ಧನಾಗುವನು. ಯಾಜಕನು ಆ ಮಾಂಸವನ್ನು ನೋಡಿ ಅವನನ್ನು ಅಶುದ್ಧನೆಂದು ನಿರ್ಣಯಿಸಬೇಕು. ಅಂಥ ಮಾಂಸವು ಅಶುದ್ಧವೇ; ಅದು ಕುಷ್ಠವು. ಆದರೆ ಆ ಮಾಂಸವು ಅದೇ ಪ್ರಕಾರವಾಗಿ ಇರದೆ ತಿರಿಗಿ ಬೆಳ್ಳಗಾದರೆ ಅವನು ಯಾಜಕನ ಬಳಿಗೆ ಬರಬೇಕು. ಯಾಜಕನು ನೋಡುವಾಗ ಆ ಮಚ್ಚೆಯು ಬೆಳ್ಳಗಾಗಿಹೋಗಿದ್ದರೆ ಆ ಮನು-

ವನನ್ನು ಶುದ್ಧನೆಂದು ನಿರ್ಣಯಿಸಬೇಕು; ಅವನು ಶುದ್ಧನೇ.

ಒಬ್ಬನ ದೇಹದ ಚರ್ಮದಲ್ಲಿ ಹುಣ್ಣು ಆಗಿದ್ದು ವಾಸಿಯಾದ ಮೇಲೆ ಅದು ಇದ್ದ ಸ್ಥಳದಲ್ಲಿ ಬಿಳೀ ಬಾವಾಗಲಿ ಕೆಂಪು ಬಿಳುಪು ಮಿಶ್ರವಾಗಿ ಹೊಳೆಯುವ ಕಲೆಯಾಗಲಿ ಉಂಟಾದರೆ ಅವನು ತನ್ನನ್ನು ಯಾಜಕನಿಗೆ ತೋರಿಸಿಕೊಳ್ಳಬೇಕು. ಯಾಜಕನು ನೋಡುವಾಗ ಆ ಕಲೆ ಮಿಕ್ಕ ಚರ್ಮಕ್ಕಿಂತ ತಗ್ಗಾಗಿ ತೋರಿದರೆ ಮತ್ತು ಅದರಲ್ಲಿರುವ ರೋಮ ಬೆಳ್ಳಗಾಗಿ ಹೋಗಿದ್ದರೆ ಆ ಹುಣ್ಣಿನಲ್ಲಿ ಕುಷ್ಠ ಹುಟ್ಟಿದದರಿಂದ ಅವನು ಅಶುದ್ಧನೆಂದು ಯಾಜಕನು ನಿರ್ಣಯಿಸಬೇಕು. ಆದರೆ ಯಾಜಕನು ನೋಡುವಾಗ ಅದರಲ್ಲಿ ಬಿಳೀ ರೋಮವಿಲ್ಲದೆ ಹೋದರೆ ಮತ್ತು ಆ ಕಲೆ ಮಿಕ್ಕ ಚರ್ಮಕ್ಕಿಂತ ತಗ್ಗಾಗದೆ ಮೊಬ್ಬಾಗಿದ್ದರೆ ಯಾಜಕನು ಅವನನ್ನು ಏಳು ದಿನಗಳು ಪ್ರತ್ಯೇಕವಾಗಿ ಇರಿಸಬೇಕು. ತರುವಾಯ ಅದು ಚರ್ಮದಲ್ಲಿ ಹರಡಿಕೊಂಡಿದ್ದರೆ ಯಾಜಕನು ಅವನನ್ನು ಅಶುದ್ಧನೆಂದು ನಿರ್ಣಯಿಸಬೇಕು; ಅದು ಕುಷ್ಠರೋಗವೇ. ಆದರೆ ಆ ಹೊಳೆಯುವ ಕಲೆ ಹರಡಿಕೊಳ್ಳದೆ ಮೊದಲಿದ್ದಂತೆಯೇ ಇದ್ದರೆ ಅದು ಆ ಹುಣ್ಣಿನ ಕಲೆಯೆಂದು ತಿಳುಕೊಂಡು ಯಾಜಕನು ಅವನನ್ನು ಶುದ್ಧನೆಂದು ನಿರ್ಣಯಿಸಬೇಕು.

ಒಬ್ಬನ ದೇಹದ ಚರ್ಮದಲ್ಲಿ ಬೆಂಕಿಯಿಂದುಂಟಾದ ಬೊಬ್ಬೆ ಇರಲಾಗಿ ಆ ಬೊಬ್ಬೆಯ ಸ್ಥಳವು ಹೊಳೆಯುವ ಕಲೆಯಾಗಿ ಬೆಳ್ಳಗಾಗಿಯಾಗಲಿ ಕೆಂಪು ಬಿಳುಪು ಮಿಶ್ರವಾಗಿಯಾಗಲಿ ಇದ್ದರೆ ಯಾಜಕನು ಅದನ್ನು ನೋಡಬೇಕು. ಅವನು ನೋಡುವಾಗ ಆ ಹೊಳೆಯುವ ಕಲೆಯಲ್ಲಿರುವ ರೋಮವು ಬೆಳ್ಳಗಾಗಿಹೋಗಿದ್ದರೆ ಮತ್ತು ಆ ಕಲೆಯು ಮಿಕ್ಕ ಚರ್ಮಕ್ಕಿಂತ ತಗ್ಗಾಗಿ ತೋರಿದರೆ ಅದು ಆ ಬೊಬ್ಬೆಯಲ್ಲಿ ಹುಟ್ಟಿದ ಕುಷ್ಠವೆಂದು ತಿಳಿದು ಯಾಜಕನು ಅವನನ್ನು ಅಶುದ್ಧನೆಂದು ನಿರ್ಣಯಿಸಬೇಕು. ಆದರೆ ಯಾಜಕನು ನೋಡುವಾಗ ಆ ಹೊಳೆಯುವ ಕಲೆಯಲ್ಲಿ ಬಿಳೀ ರೋಮವಿಲ್ಲದೆ ಹೋದರೆ ಮತ್ತು ಅದು ಮಿಕ್ಕ ಚರ್ಮಕ್ಕಿಂತ ತಗ್ಗಾಗಿ ತೋರದೆ ಮೊಬ್ಬಾಗಿಹೋಗಿದ್ದರೆ ಯಾಜಕನು ಅವನನ್ನು ಏಳು ದಿನಗಳ ತನಕ ಪ್ರತ್ಯೇಕವಾಗಿ ಇರಿಸಬೇಕು. ಏಳನೆಯ ದಿನದಲ್ಲಿ ಯಾಜಕನು ಅವನನ್ನು ನೋಡುವಾಗ ಅದು ಚರ್ಮದಲ್ಲಿ ಹರಡಿಕೊಂಡಿದ್ದರೆ ಅದು ಕುಷ್ಠರೋಗವೆಂದು ತಿಳಿದು ಅವನನ್ನು ಅಶುದ್ಧನೆಂದು ನಿರ್ಣಯಿಸಬೇಕು. ಆ ಹೊಳೆಯುವ ಕಲೆಯು ಚರ್ಮದಲ್ಲಿ ಹರಡಿಕೊಳ್ಳದೆ ಮೊದಲಿನಂತೆಯೇ ಇದ್ದು ಮೊಬ್ಬಾಗಿಹೋಗಿದ್ದರೆ ಅದು ಬೆಂಕಿಸುಟ್ಟ ಬೊಬ್ಬೆಯೆಂದು ತಿಳಿದು ಯಾಜಕನು ಅವನನ್ನು ಶುದ್ಧನೆಂದು ನಿರ್ಣಯಿಸಬೇಕು.

ಹೆಂಗಸಿನ ತಲೆಯಲ್ಲಿ ಆಗಲಿ ಗಂಡಸಿನ ತಲೆಯಲ್ಲಿ ಅಥವಾ ಗಡ್ಡದಲ್ಲಿ ಆಗಲಿ ಕಲೆಯುಂಟಾದರೆ ಯಾಜಕನು ಅದನ್ನು ನೋಡಬೇಕು. ಆಗ ಅದು ಮಿಕ್ಕ ಚರ್ಮಕ್ಕಿಂತ ತಗ್ಗಾಗಿ ತೋರಿದರೆ ಮತ್ತು ಅದರಲ್ಲಿ ಹಳದಿಬಣ್ಣವುಳ್ಳ ಸಣ್ಣ ಕೂದಲು ಇದ್ದರೆ
ಅದು ತಲೆಯಲ್ಲಾಗಲಿ ಗಡ್ಡದಲ್ಲಾಗಲಿ ಉಂಟಾದ
ಕುಷ್ಠವನ್ನು ಸೂಚಿಸುವ ದದ್ದು ಆಗಿರುವದರಿಂದ
ಯಾಜಕನು ಅಂಥವನನ್ನು ಅಶುದ್ಧನೆಂದು ನಿರ್ಣ
ಯಿಸಬೇಕು. ಯಾಜಕನು ಆ ದದ್ದನ್ನು ನೋಡು 31
ವಾಗ ಅದು ಮಿಕ್ಕ ಚರ್ಮಕ್ಕಿಂತ ತಗ್ಗಾಗಿ ತೋರದೆ
ಹೋದಾಗ್ಯೂ ಅದು ಇರುವ ಕಡೆ ಕರೇಕೂದಲು
ಇಲ್ಲದಿದ್ದರೆ ಯಾಜಕನು ಅವನನ್ನು ಏಳು ದಿನಗಳ
ತನಕ ಪ್ರತ್ಯೇಕವಾಗಿ ಇರಿಸಬೇಕು. ಏಳನೆಯ ದಿನ 32
ದಲ್ಲಿ ಯಾಜಕನು ನೋಡುವಾಗ ಆ ದದ್ದು ಹರಡಿ
ಕೊಳ್ಳದೆ ಇದ್ದರೆ ಮತ್ತು ಅದು ಇರುವ ಕಡೆ ಹಳದಿ
ಬಣ್ಣದ ಕೂದಲು ಇಲ್ಲದಿದ್ದರೆ ಮತ್ತು ಅದು ಮಿಕ್ಕ
ಚರ್ಮಕ್ಕಿಂತ ತಗ್ಗಾಗಿ ತೋರದೆಹೋದರೆ ಅವನು 33
ಕ್ಷೌರಮಾಡಿಸಿಕೊಳ್ಳಬೇಕು. ಆ ದದ್ದು ಇರುವ
ಭಾಗವನ್ನು ಮಾತ್ರ ಕ್ಷೌರಮಾಡಿಸಿಕೊಳ್ಳಬಾರದು.
ಯಾಜಕನು ಅವನನ್ನು ಇನ್ನು ಏಳು ದಿನಗಳ
ವರೆಗೂ ಪ್ರತ್ಯೇಕಿಸಬೇಕು. ಏಳನೆಯ ದಿನದಲ್ಲಿ 34
ಯಾಜಕನು ತಿರಿಗಿ ಆ ದದ್ದನ್ನು ನೋಡುವಾಗ
ಅದು ಚರ್ಮದಲ್ಲಿ ಹರಡಿಕೊಳ್ಳದೆ ಹೋಗಿದ್ದರೆ
ಮಿಕ್ಕ ಚರ್ಮಕ್ಕಿಂತ ತಗ್ಗಾಗಿ ತೋರದೆ ಇದ್ದರೆ
ಯಾಜಕನು ಅವನನ್ನು ಶುದ್ಧನೆಂದು ನಿರ್ಣಯಿಸ
ಬೇಕು. ಅವನು ತನ್ನ ಬಟ್ಟೆಗಳನ್ನು ಒಗೆದು
ಕೊಂಡಾಗ ಶುದ್ಧನಾಗುವನು. ಆದರೆ ಅವನು 35
ಶುದ್ಧನೆಂದು ನಿರ್ಣಯಿಸಲ್ಪಟ್ಟ ಮೇಲೆ ಆ ದದ್ದು
ಚರ್ಮದಲ್ಲಿ ಹರಡಿಕೊಂಡರೆ ಯಾಜಕನು ಅವನನ್ನು 36
ನೋಡಬೇಕು; ಆದರೆ ಹಳದಿಬಣ್ಣದ ಕೂದಲು
ಇದೆಯೋ ಇಲ್ಲವೋ ಎಂದು ನೋಡಬೇಕಾದ
ಅಗತ್ಯವಿಲ್ಲ; ಅವನು ಅಶುದ್ಧನೇ. ಆ ದದ್ದು 37
ಮೊದಲು ಇದ್ದಂತೆಯೇ ಇದ್ದು ಅದರಲ್ಲಿ ಕರೇ
ಕೂದಲು ಹುಟ್ಟಿದ್ದರೆ ಅದು ವಾಸಿಯಾಯಿತು.
ಅವನು ಶುದ್ಧನು; ಯಾಜಕನು ಅವನನ್ನು ಶುದ್ಧ
ನೆಂದು ನಿರ್ಣಯಿಸಬೇಕು.

ಗಂಡಸಿಗಾಗಲಿ ಹೆಂಗಸಿಗಾಗಲಿ ಚರ್ಮದಲ್ಲಿ 38
ಹೊಳೆಯುವ ಬಿಳುಪಾದ ಕಲೆಗಳು ಅಲ್ಲಲ್ಲಿ ಹುಟ್ಟಿ
ದ್ದರೆ ಯಾಜಕನು ಅವುಗಳನ್ನು ನೋಡಬೇಕು. 39
ಆ ಹೊಳೆಯುವ ಕಲೆಗಳು ಮೊಬ್ಬಾದ ಬಿಳೀ ಬಣ್ಣ
ವಾಗಿದ್ದರೆ ಅದು ದೇಹದ ಚರ್ಮದಲ್ಲಿ ಹುಟ್ಟಿದ
ಚಿಬ್ಬು; ಅವನು ಶುದ್ಧನು.

ಯಾವನಾದರೂ ತಲೆಯ ಕೂದಲು ಉದುರಿ 40
ಹೋದದರಿಂದ ಬೋಳತಲೆಯವನಾದರೂ ಅವನು
ಶುದ್ಧನೇ. ಮುಂದಲೆಯ ಕೂದಲು ಉದುರಿದರೆ 41
ಅವನು ಪಟ್ಟೆತಲೆಯವನಾದರೂ ಶುದ್ಧನೇ. ಆದರೆ 42
ಬೋಳತಲೆಯಲ್ಲಾಗಲಿ ಪಟ್ಟೆತಲೆಯಲ್ಲಾಗಲಿ ಕೆಂಪು
ಬಿಳುಪು ಮಿಶ್ರವಾದ ಮಚ್ಚೆ ಹುಟ್ಟಿದರೆ ಅದು
ಕುಷ್ಠವೇ. ಯಾಜಕನು ಅವನನ್ನು ನೋಡಬೇಕು. 43
ಆಗ ಅದರಿಂದುಂಟಾದ ಬಾವು ಕೆಂಪು ಬಿಳುಪು ಮಿಶ್ರ
ವಾಗಿ ಚರ್ಮದಲ್ಲಿನ ಕುಷ್ಠದಂತೆ ತೋರಿದರೆ ಅವನು 44
ಕುಷ್ಠರೋಗಿ; ಅಶುದ್ಧನು. ಅವನ ತಲೆಯ ಮೇಲೆ
ಕುಷ್ಠದ ಗುರುತು ಕಾಣಿಸಿದದರಿಂದ ಅವನು
ಅಶುದ್ಧನೆಂದು ಯಾಜಕನು ನಿರ್ಣಯಿಸಬೇಕು.

ಯಾರಲ್ಲಿ ಕುಷ್ಠದ ಗುರುತು ಕಾಣಬಂತೋ 45

ಅವನು ತನ್ನ ಬಟ್ಟೆಗಳನ್ನು ಹರಿದುಕೊಂಡು ತಲೆ
ಯನ್ನು ಕೆದರಿಕೊಂಡು ಬಾಯಿಯನ್ನು ಬಟ್ಟೆಯಿಂದ
ಮುಚ್ಚಿಕೊಂಡು—ನಾನು ಅಶುದ್ಧನು ಅಶುದ್ಧನು
46 ಎಂದು ಕೂಗಿಕೊಳ್ಳಬೇಕು. ಆ ರೋಗದ ಗುರುತು
ಗಳು ಅವನಲ್ಲಿ ಇರುವ ದಿನಗಳೆಲ್ಲಾ ಅವನು
ಅಶುದ್ಧನಾಗಿರುವನು. ಅವನು ಅಶುದ್ಧನಾದದರಿಂದ
ಪ್ರತ್ಯೇಕವಾಗಿಯೇ ವಾಸವಾಗಿರಬೇಕು; ಅವನ
ನಿವಾಸವು ಪಾಳೆಯದ ಹೊರಗೆ ಇರಬೇಕು.
47 ಕುಷ್ಠರೋಗದ ಗುರುತು ಬಟ್ಟೆಯಲ್ಲಿ ಕಂಡು
ಬಂದಾಗ ಅದು ಉಣ್ಣೆಯ ಬಟ್ಟೆಯಾಗಲಿ ನಾರಿನ
48 ಬಟ್ಟೆಯಾಗಲಿ, ನಾರಿನ ಅಥವಾ ಉಣ್ಣೆಯ ಹಾಸಿ
ನಲ್ಲಾಗಲಿ ಹೊಕ್ಕಿನಲ್ಲಾಗಲಿ, ಇಲ್ಲವೆ ತೊಗಲಿನಲ್ಲಾ
ಗಲಿ ತೊಗಲಿನಿಂದ ಮಾಡಲ್ಪಟ್ಟ ವಸ್ತುವಿನಲ್ಲಾಗಲಿ,
49 ಆ ಬಟ್ಟೆ ತೊಗಲು ಹಾಸು ಹೊಕ್ಕು ತೊಗಲಿನ
ಸಾಮಾನುಗಳಲ್ಲಿ ಹಸುರಾಗಿ ಇಲ್ಲವೆ ಕೆಂಪಾಗಿ
ಮಚ್ಚೆ ಕಾಣಿಸಿದರೆ ಅದು ಕುಷ್ಠದ ಗುರುತು; ಅದನ್ನು
50 ಯಾಜಕನಿಗೆ ತೋರಿಸಬೇಕು. ಯಾಜಕನು ಅದ
ನ್ನು ನೋಡಿ ಏಳು ದಿನಗಳ ವರೆಗೆ ಪ್ರತ್ಯೇಕವಾಗಿ
51 ಇಡಿಸಬೇಕು. ಏಳನೆಯ ದಿನದಲ್ಲಿ ಅವನು ಅದನ್ನು
ನೋಡುವಾಗ ಆ ಬಟ್ಟೆಯ ಹಾಸಿನಲ್ಲಾಗಲಿ ಹೊಕ್ಕಿ
ನಲ್ಲಾಗಲಿ ಇಲ್ಲವೆ ಯಾವದಾದರೂ ಒಂದು ಕೆಲಸಕ್ಕೆ
ಉಪಯೋಗವಾಗಿರುವ ಆ ತೊಗಲಿನಲ್ಲಿ ಆ ಮಚ್ಚೆ
ಹರಡಿಕೊಂಡಿದ್ದರೆ ಅದು ಪ್ರಾಣಕ್ಕೆ ಅಪಾಯಕರ
52 ವಾದ ಕುಷ್ಠವೇ; ಆ ವಸ್ತು ಅಶುದ್ಧ. ಆ ವಸ್ತುವು
ಬಟ್ಟೆಯಾದರೂ ಹಾಸಾದರೂ ಹೊಕ್ಕಾದರೂ ಉಣ್ಣೆ
ಯವಾದರೂ ನಾರಿನದಾದರೂ ತೊಗಲಿನವಾದರೂ
ಅದರಲ್ಲಿ ಪ್ರಾಣಕ್ಕೆ ಅಪಾಯಕರವಾದ ಕುಷ್ಠವಿರು
ವದರಿಂದ ಅದನ್ನು ಬೆಂಕಿಯಿಂದ ಸುಡಿಸಿಬಿಡಬೇಕು.
53 ಆದರೆ ಯಾಜಕನು ನೋಡುವಾಗ ಆ ವಸ್ತುವಿನಲ್ಲಿ
ಅಂದರೆ ಆ ಬಟ್ಟೆ, ಹಾಸು, ಹೊಕ್ಕು, ತೊಗಲಿನ
ಸಾಮಾನು ಇವುಗಳಲ್ಲಿ ಆ ಮಚ್ಚೆ ಹರಡಿಕೊಳ್ಳ
54 ದಿದ್ದರೆ ಅದನ್ನು ನೀರಿನಿಂದ ತೊಳೆಯಬೇಕೆಂದು
ಯಾಜಕನು ಅಪ್ಪಣೆಕೊಟ್ಟು ಇನ್ನೂ ಏಳು ದಿನಗಳ
55 ತನಕ ಅದನ್ನು ಪ್ರತ್ಯೇಕವಾಗಿ ಇಡಿಸಬೇಕು. ಆ
ಮಚ್ಚೆ ಇದ್ದ ವಸ್ತುವನ್ನು ತೊಳೆಸಿದ ಮೇಲೆ ಯಾಜ
ಕನು ನೋಡುವಾಗ ಆ ಮಚ್ಚೆಯು ಹರಡಿಕೊಳ್ಳದೆ
ಇದ್ದಾಗ್ಯೂ ಅದರ ಬಣ್ಣ ಮೊದಲಿದ್ದಂತೆಯೇ ಇದ್ದರೆ
ಆ ವಸ್ತು ಅಶುದ್ಧ. ಕುಷ್ಠರೋಗದ ಗುರುತು
ಅದರ ಮೇಲಣ ಕಡೆಯಿಂದಾಗಲಿ ಕೆಳಗಣ ಕಡೆ
ಯಿಂದಾಗಲಿ ಆ ವಸ್ತುವಿನೊಳಗೆ ವ್ಯಾಪಿಸಿದದರಿಂದ
56 ಅದನ್ನು ಬೆಂಕಿಯಿಂದ ಸುಟ್ಟುಬಿಡಬೇಕು. ಆದರೆ
ತೊಳೆದ ಬಟ್ಟೆಯನ್ನು ಯಾಜಕನು ನೋಡುವಾಗ
ಅದರಲ್ಲಿದ್ದ ಮಚ್ಚೆ ಮೊಬ್ಬಾಗಿಹೋಗಿದ್ದರೆ ಅವನು
ಆ ಮಚ್ಚೆ ಇರುವ ಭಾಗವನ್ನು ಆ ಬಟ್ಟೆಯಿಂದಾಗಲಿ
ತೊಗಲಿನಿಂದಾಗಲಿ ಹಾಸಿನಿಂದಾಗಲಿ ಹೊಕ್ಕಿನಿಂದಾಗ
57 ಗಲಿ ಕತ್ತರಿಸಿಬಿಡಬೇಕು. ಆ ಮೇಲೆಯೂ ಕುಷ್ಠದ
ಮಚ್ಚೆ ಆ ಬಟ್ಟೆಯಲ್ಲಾಗಲಿ ಹಾಸಿನಲ್ಲಾಗಲಿ ಹೊಕ್ಕಿ
ನಲ್ಲಾಗಲಿ ತೊಗಲಿನ ಸಾಮಾನಿನಲ್ಲಾಗಲಿ ಕಂಡು

ಬಂದರೆ ಕುಷ್ಠರೋಗವು ಇನ್ನೂ ಅದರಲ್ಲಿ ಉಂಟೆಂ
ತಿಳಿದುಕೊಳ್ಳಬೇಕು. ಆ ಮಚ್ಚೆ ಇರುವ ವಸ್ತುವನ್
ಬೆಂಕಿಯಿಂದ ಸುಟ್ಟುಬಿಡಬೇಕು. ಆ ಬಟ್ಟೆಯನ
ಗಲಿ ಹಾಸನ್ನಾಗಲಿ ಹೊಕ್ಕನ್ನಾಗಲಿ ತೊಗಲಿನ ಸಾಮ
ನನ್ನಾಗಲಿ ತೊಳೆದನಂತರ ಆ ಮಚ್ಚೆ ಕಾಣದೆಹೋದ
ಅದನ್ನು ಎರಡನೆಯ ಸಾರಿ ತೊಳೆಯಬೇಕು; ಆ
ಅದು ಶುದ್ಧವಾಗುವದು.
ಉಣ್ಣೇ ಬಟ್ಟೆಯಲ್ಲಾಗಲಿ ನಾರಿನ ಬಟ್ಟೆಯಲ
ಗಲಿ ಹಾಸಿನಲ್ಲಾಗಲಿ ಹೊಕ್ಕಿನಲ್ಲಾಗಲಿ ತೊಗಲಿ
ಸಾಮಾನಿನಲ್ಲಾಗಲಿ ಕಾಣಬಂದ ಕುಷ್ಠರೋಗ
ಗುರುತಿನ ವಿಷಯವಾದ ವಿಧಿ ಇದೇ. ಅದು ಶು
ವೆಂದು ನಿರ್ಣಯಿಸಬೇಕೋ ಅಶುದ್ಧವೆಂದು ನಿರ
ಯಿಸಬೇಕೋ ಎಂಬದು ಇದರಿಂದ ತಿಳಿಯುವದು.
ಯೆಹೋವನು ಮೋಶೆಗೆ ಹೇಳಿದ್ದೇನಂದರೆ—
ಕುಷ್ಠರೋಗಿ ಶುದ್ಧನಾಗುವ ದಿನದಲ್ಲಿ ಅವನ 2
ವಿಷಯವಾಗಿ ನಡಿಸಬೇಕಾದ ಕ್ರಮ ಹೇಗಂದರೆ-
ಅವನನ್ನು ಯಾಜಕನಿಗೆ ತೋರಿಸಬೇಕು. ಯಾ
ಕನು ಪಾಳೆಯದ ಹೊರಕ್ಕೆ ಹೋಗಿ ಅವನನ
ನೋಡಬೇಕು. ಆಗ ಅವನಲ್ಲಿದ್ದ ಕುಷ್ಠವು ವಾ
ಯಾಯಿತೆಂದು ಕಂಡರೆ ಶುದ್ಧಮಾಡಿಸಿಕೊಳ್ಳುವವ
ಗೋಸ್ಕರ ಸಜೀವವಾದ ಎರಡು ಶುದ್ಧಪಕ್ಷಿಗಳನು
ದೇವದಾರಿನ ಕಟ್ಟಿಗೆಯನ್ನೂ ರಕ್ತವರ್ಣವುಳ್ಳ ದಾ
ವನ್ನೂ ಹಿಸ್ಸೋಪ್‌ಗಿಡದ ಬರಲನ್ನೂ ತರಬೇಕೆಂ
ಯಾಜಕನು ಆಜ್ಞಾಪಿಸಬೇಕು. ಆ ಪಕ್ಷಿಗಳ
ಒಂದನ್ನು 1)ಸೆಲೇ ನೀರಿನ ಮೇಲೆ ಮಣ್ಣಿನ ಪಾ
ಯಲ್ಲಿ ವಧಿಸಬೇಕೆಂದು ಯಾಜಕನು ಆಜ್ಞಾಪಿ
ಮತ್ತೊಂದು ಪಕ್ಷಿಯನ್ನೂ ಆ ದೇವದಾರಿನ ಕಟ್ಟಿ
ಯನ್ನೂ ರಕ್ತವರ್ಣವುಳ್ಳ ದಾರವನ್ನೂ ಹಿಸ್ಸೋ
ಗಿಡದ ಬರಲನ್ನೂ ತೆಗೆದುಕೊಂಡು 1)ಸೆಲೇ ನೀರ
ಮೇಲೆ ವಧಿಸಿದ ಆ ಮೊದಲನೆಯ ಪಕ್ಷಿಯ ರಕ್ತದ
ಅವುಗಳನ್ನೆಲ್ಲಾ ಆ ಪಕ್ಷಿಯನ್ನೂ ಸಜೀವವಾಗಿಯೆ
ಅದ್ದಿ ಕುಷ್ಠರೋಗದ ವಿಷಯವಲ್ಲಿ ಶುದ್ಧಮಾಡಿ
ಕೊಳ್ಳುವವನ ಮೇಲೆ ಏಳು ಸಾರಿ ಆ ರಕ್ತವನ
ಚಿಮಿಕಿಸಿ ಅವನನ್ನು ಶುದ್ಧನೆಂದು ನಿರ್ಣಯಿಸಿ
ಜೀವವುಳ್ಳ ಪಕ್ಷಿಯನ್ನು ಅಡವಿಯ ಕಡೆಗೆ ಬಿಟ
ಬಿಡಬೇಕು. ಆಗ ಶುದ್ಧಮಾಡಿಸಿಕೊಳ್ಳುವವನು ತ
ಬಟ್ಟೆಗಳನ್ನು ಒಗೆದುಕೊಂಡು ಸರ್ವಾಂಗಕ್ಷೌ
ಮಾಡಿಸಿಕೊಂಡು ಸ್ನಾನಮಾಡಿದ ಮೇಲೆ ಶುದ
ನಾಗುವನು; ತರುವಾಯ ಅವನು ಪಾಳೆಯದೊಳ
ಬರಬಹುದು; ಆದರೂ ಏಳು ದಿನಗಳ ತನಕ ತ
ಡೇರೆಯ ಹೊರಗೇ ಇರಬೇಕು. ಏಳನೆಯ ದಿನದ
ತನ್ನ ತಲೆಗೂದಲು, ಗಡ್ಡ, ಹುಬ್ಬು, ಮೈಗೂದ
ಇವುಗಳನ್ನೆಲ್ಲಾ ಕ್ಷೌರಮಾಡಿಸಿಕೊಂಡು ತನ್ನ ಬ
ಗಳನ್ನು ಒಗೆದುಕೊಂಡು ಜಲಸ್ನಾನಮಾಡಬೇಕ
ಆಗಿನಿಂದ ಶುದ್ಧನಾಗುವನು.
ಎಂಟನೆಯ ದಿನದಲ್ಲಿ ಅವನು ಪೂರ್ಣಾಂಗವಾ
ಎರಡು ಟಗರುಗಳನ್ನೂ ಪೂರ್ಣಾಂಗವಾದ ಒಂದು ವರ
ಷದ ಕುರಿಯನ್ನೂ ನೈವೇದ್ಯಕ್ಕಾಗಿ ಎಣ್ಣೇ ಕಲಸಿ

1) ಅಥವಾ: ಹರಿಯುವ ನೀರಿನ ಬಳಿಯಲ್ಲಿ.

ಂಭತ್ತು ಸೇರು ಗೋದಿಹಿಟ್ಟನ್ನೂ ಒಂದು ಸೇರು
ಎಣ್ಣೆಯನ್ನೂ ತೆಗೆದುಕೊಂಡು ಬರಬೇಕು. ಶುದ್ಧಿ
ಮಾಡುವ ಯಾಜಕನು ಶುದ್ಧಮಾಡಿಸಿಕೊಳ್ಳುವವ
ನನ್ನು ಇವುಗಳೊಂದಿಗೆ ದೇವದರ್ಶನದ ಗುಡಾರದ
ಬಾಗಿಲಲ್ಲಿ ಯೆಹೋವನ ಸನ್ನಿಧಿಯಲ್ಲಿ ನಿಲ್ಲಿಸಿ ಆ
ಟಗರುಗಳಲ್ಲಿ ಒಂದನ್ನೂ ಆ ಸೇರು ಎಣ್ಣೆಯನ್ನೂ
ಪ್ರಾಯಶ್ಚಿತ್ತಯಜ್ಞವಾಗಿ ಸಮರ್ಪಿಸಬೇಕು; ಅವು
ಗಳನ್ನು ನೈವೇದ್ಯವಾಗಿ ಯೆಹೋವನ ಸನ್ನಿಧಿಯಲ್ಲಿ
ನಿವಾಳಿಸಬೇಕು. ದೋಷಪರಿಹಾರಕಯಜ್ಞಪಶುವ
ನ್ನೂ ಸರ್ವಾಂಗಹೋಮಪಶುವನ್ನೂ ವಧಿಸುವ ಸ್ಥಳ
ದಲ್ಲೇ ಅಂದರೆ ದೇವಸ್ಥಾನದ ಪ್ರಾಕಾರದೊಳಗೆ ಆ
ಟಗರು ವಧಿಸಲ್ಪಡಬೇಕು. ಯಾಕಂದರೆ ದೋಷ
ಪರಿಹಾರಕಯಜ್ಞದ್ರವ್ಯದಂತೆಯೇ ಪ್ರಾಯಶ್ಚಿತ್ತಯ
ಜ್ಞದ್ರವ್ಯವೂ ಯಾಜಕನಿಗೆ ಸಲ್ಲತಕ್ಕದ್ದು; ಅದು
ಮಹಾಪರಿಶುದ್ಧವಾದದ್ದು. ಆಗ ಯಾಜಕನು ಆ
ಪ್ರಾಯಶ್ಚಿತ್ತಯಜ್ಞಪಶುವಿನ ರಕ್ತದಲ್ಲಿ ಸ್ವಲ್ಪ ತೆಗೆದು
ಕೊಂಡು ಶುದ್ಧಮಾಡಿಸಿಕೊಳ್ಳುವವನ ಬಲಗಿವಿಯ
ತುದಿಗೂ ಬಲಗೈಯ ಹೆಬ್ಬೆರಳಿಗೂ ಬಲಗಾಲಿನ
ಹೆಬ್ಬೊಟ್ಟಿಗೂ ಹಚ್ಚಬೇಕು. ಆಗ ಯಾಜಕನು ಆ
ಸೇರು ಎಣ್ಣೆಯಲ್ಲಿ ಸ್ವಲ್ಪವನ್ನು ತನ್ನ ಎಡಗೈಯಲ್ಲಿ
ಹೊಯಿದುಕೊಂಡು ತನ್ನ ಬಲಗೈಯ ಬೆರಳನ್ನು
ಅದರಲ್ಲಿ ಅದ್ದಿ ಯೆಹೋವನ ಸನ್ನಿಧಿಯಲ್ಲಿ ಏಳು
ಸಾರಿ ಬೆರಳಿನಿಂದ ಚಿಮಿಕಿಸಬೇಕು. ಅವನು ತನ್ನ
ಕೈಯಲ್ಲಿರುವ ಮಿಕ್ಕ ಎಣ್ಣೆಯಲ್ಲಿ ಸ್ವಲ್ಪವನ್ನು ಶುದ್ಧ
ಮಾಡಿಸಿಕೊಳ್ಳುವವನ ಬಲಗಿವಿಯ ತುದಿಗೂ ಬಲ
ಗೈಯ ಹೆಬ್ಬೆರಳಿಗೂ ಬಲಗಾಲಿನ ಹೆಬ್ಬೊಟ್ಟಿಗೂ
ಪ್ರಾಯಶ್ಚಿತ್ತಯಜ್ಞಪಶುವಿನ ರಕ್ತವನ್ನು ಹಚ್ಚಿದ
ಸ್ಥಳಗಳಲ್ಲಿಯೇ ಹಚ್ಚಿ ಕೈಯಲ್ಲಿರುವ ಮಿಕ್ಕ ಎಣ್ಣೆ
ಯನ್ನು ಶುದ್ಧಮಾಡಿಸಿಕೊಳ್ಳುವವನ ತಲೆಯ ಮೇಲೆ
ಹೊಯಿದುಬಿಡಬೇಕು. ಹೀಗೆ ಯಾಜಕನು ಯೆಹೋ
ವನ ಸನ್ನಿಧಿಯಲ್ಲಿ ಅವನ ದೋಷವನ್ನು ಪರಿಹರಿಸುವನು.
ಅದಲ್ಲದೆ ಯಾಜಕನು ಶುದ್ಧಮಾಡಿಸಿಕೊಳ್ಳುವ
ವನ ಅಪವಿತ್ರತೆಯನ್ನು ಹೋಗಲಾಡಿಸುವದಕ್ಕೆ [ಆ
ಕುರಿಯನ್ನು] ದೋಷಪರಿಹಾರಕಯಜ್ಞವಾಗಿ ಸಮ
ರ್ಪಿಸಿ ಅವನ ದೋಷವನ್ನು ಪರಿಹರಿಸುವನು. ಆ
ಮೇಲೆ ಯಾಜಕನು [ಆ ಎರಡನೆಯ ಟಗರುಮರಿ
ಯನ್ನು] ಸರ್ವಾಂಗಹೋಮಕ್ಕಾಗಿ ವಧಿಸಬೇಕು.
ಅವನು ಆ ಸರ್ವಾಂಗಹೋಮವನ್ನೂ ನೈವೇದ್ಯವನ್ನೂ
ಯಜ್ಞವೇದಿಯ ಮೇಲೆ ಸಮರ್ಪಿಸಬೇಕು. ಯಾಜ
ಕನು ಅವನಿಗೋಸ್ಕರ ಹೀಗೆ ದೋಷಪರಿಹಾರಮಾಡಿ
ದಾಗ ಅವನು ಶುದ್ಧನಾಗುವನು.
ಅವನು ಅಷ್ಟನ್ನು ಸಮರ್ಪಿಸುವದಕ್ಕೆ ಬಡವ
ನಾಗಿದ್ದರೆ ಪ್ರಾಯಶ್ಚಿತ್ತಯಜ್ಞಕ್ಕಾಗಿ ಒಂದು ಟಗರು
ಮರಿಯನ್ನು ತಂದು ದೋಷಪರಿಹಾರಮಾಡಿಸಿಕೊಳ್ಳು
ವದಕ್ಕೋಸ್ಕರ [ಯಾಜಕನ ಕೈಯಿಂದ] ನೈವೇದ್ಯ
ವಾಗಿ ನಿವಾಳಿಸಬೇಕು; ಮತ್ತು ಧಾನ್ಯನೈವೇದ್ಯಕ್ಕಾಗಿ
ಎಣ್ಣೆ ಕಲಸಿದ ಮೂರು ಸೇರು ಗೋದಿಹಿಟ್ಟನ್ನೂ
ಒಂದು ಸೇರು ಎಣ್ಣೆಯನ್ನೂ ತರಬೇಕು. ಅದಲ್ಲದೆ
ತನ್ನ ಸ್ಥಿತಿಗೆ ತಕ್ಕಂತೆ ಎರಡು ಬೆಳವಕ್ಕಿಗಳನ್ನಾಗಲಿ
ಎರಡು ಪಾರಿವಾಳದ ಮರಿಗಳನ್ನಾಗಲಿ ತಂದು ದೋಷ
ಪರಿಹಾರಕಯಜ್ಞವಾಗಿ ಒಂದನ್ನೂ ಸರ್ವಾಂಗ
ಹೋಮವಾಗಿ ಮತ್ತೊಂದನ್ನೂ ಸಮರ್ಪಿಸಬೇಕು.
ಅವನು ತನ್ನ ಶುದ್ಧೀಕರಣಕ್ಕೋಸ್ಕರವಾಗಿ ಎಂಟನೆಯ 23
ದಿನದಲ್ಲಿ ಇವುಗಳನ್ನು ದೇವದರ್ಶನದ ಗುಡಾರದ
ಬಾಗಲಿಗೆ ಯೆಹೋವನ ಸನ್ನಿಧಿಗೆ ತಂದು ಯಾಜ
ಕನಿಗೆ ಒಪ್ಪಿಸಬೇಕು. ಯಾಜಕನು ಪ್ರಾಯಶ್ಚಿತ್ತ 24
ಯಜ್ಞದ ಕುರಿಯನ್ನೂ ಆ ಸೇರು ಎಣ್ಣೆಯನ್ನೂ
ಯೆಹೋವನ ಸನ್ನಿಧಿಯಲ್ಲಿ ನೈವೇದ್ಯವಾಗಿ ನಿವಾಳಿ
ಸಬೇಕು. ಪ್ರಾಯಶ್ಚಿತ್ತಯಜ್ಞದ ಕುರಿಯನ್ನು ವಧಿ 25
ಸಿದನಂತರ ಯಾಜಕನು ಅದರ ರಕ್ತದಲ್ಲಿ ಸ್ವಲ್ಪ
ತೆಗೆದುಕೊಂಡು ಶುದ್ಧಮಾಡಿಸಿಕೊಳ್ಳುವವನ ಬಲ
ಗಿವಿಯ ತುದಿಗೂ ಬಲಗೈಯ ಹೆಬ್ಬೆರಳಿಗೂ ಬಲ
ಗಾಲಿನ ಹೆಬ್ಬೊಟ್ಟಿಗೂ ಹಚ್ಚಬೇಕು. ಮತ್ತು ಯಾಜ 26
ಕನು ಆ ಎಣ್ಣೆಯಲ್ಲಿ ಸ್ವಲ್ಪವನ್ನು ತನ್ನ ಎಡಗೈಯಲ್ಲಿ
ಹೊಯಿದುಕೊಂಡು ಅದರಲ್ಲಿ ಸ್ವಲ್ಪವನ್ನು ಬಲ 27
ಗೈಯ ಬೆರಳಿನಿಂದ ಏಳು ಸಾರಿ ಯೆಹೋವನ ಸನ್ನಿಧಿ
ಯಲ್ಲಿ ಚಿಮಿಕಿಸಬೇಕು. ಮತ್ತು ಯಾಜಕನು ತನ್ನ 28
ಕೈಯಲ್ಲಿರುವ ಎಣ್ಣೆಯಲ್ಲಿ ಸ್ವಲ್ಪವನ್ನು ಶುದ್ಧಮಾಡಿ
ಸಿಕೊಳ್ಳುವವನ ಬಲಗಿವಿಯ ತುದಿಗೂ ಬಲಗೈಯ
ಹೆಬ್ಬೆರಳಿಗೂ ಬಲಗಾಲಿನ ಹೆಬ್ಬೊಟ್ಟಿಗೂ ಪ್ರಾಯ
ಶ್ಚಿತ್ತಯಜ್ಞಪಶುವಿನ ರಕ್ತವನ್ನು ಹಚ್ಚಿದ ಸ್ಥಳಗಳ
ಲ್ಲಿಯೇ ಹಚ್ಚಬೇಕು. ಶುದ್ಧಮಾಡಿಸಿಕೊಳ್ಳುವವ 29
ನಿಗೋಸ್ಕರ ಯೆಹೋವನ ಸನ್ನಿಧಿಯಲ್ಲಿ ದೋಷ
ಪರಿಹಾರವನ್ನು ಮಾಡುವದಕ್ಕಾಗಿ ಯಾಜಕನು ತನ್ನ
ಕೈಯಲ್ಲಿರುವ ಮಿಕ್ಕ ಎಣ್ಣೆಯನ್ನೆಲ್ಲಾ ಅವನ ತಲೆಯ
ಮೇಲೆ ಹೊಯ್ಯಬೇಕು. ತರುವಾಯ ಅವನು ತನ್ನ 30
ಸ್ಥಿತಿಗೆ ತಕ್ಕಂತೆ ತಂದ ಎರಡು ಬೆಳವಕ್ಕಿಗಳಲ್ಲಿ
ಯಾಗಲಿ ಪಾರಿವಾಳದ ಮರಿಗಳಲ್ಲಿಯಾಗಲಿ ದೋಷ 31
ಪರಿಹಾರಕಯಜ್ಞವಾಗಿ ಒಂದನ್ನೂ ಸರ್ವಾಂಗ
ಹೋಮವಾಗಿ ಒಂದನ್ನೂ ನೈವೇದ್ಯದ್ರವ್ಯವನ್ನೂ
ಸಮರ್ಪಿಸಬೇಕು. ಹೀಗೆ ಯಾಜಕನು ಶುದ್ಧಮಾಡಿ
ಸಿಕೊಳ್ಳುವವನಿಗೋಸ್ಕರ ಯೆಹೋವನ ಸನ್ನಿಧಿ
ಯಲ್ಲಿ ದೋಷಪರಿಹಾರವನ್ನು ಮಾಡುವನು.
ಶುದ್ಧೀಕರಣಯಜ್ಞಗಳನ್ನು ಮಾಡುವದಕ್ಕೆ ಗತಿ 32
ಯಿಲ್ಲದ ಕುಷ್ಠರೋಗಿಯ ವಿಷಯದಲ್ಲಿ ಇದೇ ವಿಧಿ.
ಯೆಹೋವನು ಮೋಶೆ ಆರೋನರಿಗೆ ಹೇಳಿದ್ದೇ 33
ನಂದರೆ—ನಿಮಗೆ ಸ್ವದೇಶವಾಗಿರುವದಕ್ಕೋಸ್ಕರ 34
ನಾನು ಕೊಡುವ ಕಾನಾನ್‍ದೇಶಕ್ಕೆ ನೀವು ಬಂದ
ನಂತರ ಆ ದೇಶದ ಯಾವ ಮನೆಯ ಗೋಡೆ
ಗಳಲ್ಲಿ ನಾನು ಕುಷ್ಠದ ಗುರುತನ್ನು ಉಂಟುಮಾಡು
ವೆನೋ ಆ ಮನೆಯ ಒಡೆಯನು ಯಾಜಕನ ಬಳಿಗೆ 35
ಬಂದು—ನನ್ನ ಮನೆಯಲ್ಲಿ ಕುಷ್ಠರೋಗದ ಗುರುತು
ಉಂಟಾದಂತೆ ತೋರುತ್ತದೆ ಎಂದು ಅವನಿಗೆ ತಿಳಿಸ
ಬೇಕು. ಯಾಜಕನು ತಾನು ಆ ರೋಗದ ಗುರು 36
ತನ್ನು ನೋಡಲು ಬರುವದಕ್ಕೆ ಮುಂಚೆ ಆ ಮನೆ
ಯನ್ನು ಬರಿದುಮಾಡಲಾಜ್ಞಾಪಿಸಬೇಕು. ಹಾಗೆ
ಬರಿದುಮಾಡದಿದ್ದರೆ ಆ ಮನೆಯಲ್ಲಿರುವ ಎಲ್ಲಾ
ವಸ್ತುಗಳೂ ಅಶುದ್ಧವಾದಾವು. ಬರಿದುಮಾಡಿದ
ಮೇಲೆ ಯಾಜಕನು ಆ ಮನೆಯನ್ನು ನೋಡುವದಕ್ಕೆ
ಒಳಗೆ ಹೋಗಬೇಕು. ಅವನು ಮನೆಯ ಗೋಡೆ 37

ಗಳಲ್ಲಿರುವ ರೋಗದ ಗುರುತುಗಳನ್ನು ನೋಡುವಾಗ
ಆ ಗುರುತುಗಳು ಹಸುರಾಗಿ ಅಥವಾ ಕೆಂಪಾಗಿ
ಇದ್ದು ಗೋಡೆಯ ಮಟ್ಟಕ್ಕಿಂತ ತಗ್ಗಾಗಿ ತೋರಿದರೆ
38 ಯಾಜಕನು ಹೊರಗೆ ಬಂದು ಆ ಮನೆಯನ್ನು
39 ಏಳು ದಿನಗಳ ವರೆಗೂ ಮುಚ್ಚಿಸಿಬಿಡಬೇಕು. ಏಳನೆಯ
ದಿನದಲ್ಲಿ ಯಾಜಕನು ಬಂದು ನೋಡುವಾಗ ಆ
ಗುರುತು ಮನೆಯ ಗೋಡೆಗಳಲ್ಲಿ ಹಬ್ಬಿಕೊಂಡಿದ್ದರೆ
40 ಆ ಗುರುತುಗಳು ಇರುವ ಕಲ್ಲುಗಳನ್ನು ತೆಗಿಸಿ
ಬಿಟ್ಟು ಊರಿನ ಹೊರಗೆ ಅಪವಿತ್ರವಾದ ಸ್ಥಳದಲ್ಲಿ
41 ಹಾಕಿಸಿಬಿಡಬೇಕು. ಅದಲ್ಲದೆ ಅವನು ಆ ಮನೆಯ
ಗೋಡೆಗಳ ಒಳಗಡೆಯನ್ನೆಲ್ಲಾ ಗೀಚಿಸಿ ಗೀಚಿದ
ಮಣ್ಣನ್ನು ಊರಿನ ಹೊರಗೆ ಅಪವಿತ್ರ ಸ್ಥಳದಲ್ಲಿ
42 ಹಾಕಿಸಬೇಕು. ಆಗ ಬೇರೆ ಕಲ್ಲುಗಳನ್ನು ತರಿಸಿ
ಮೊದಲಿದ್ದ ಕಲ್ಲುಗಳ ಸ್ಥಳದಲ್ಲಿ ಹಾಕಿಸಿ ಹೊಸ ಮಣ್ಣ
ನ್ನು ತರಿಸಿ ಆ ಗೋಡೆಗಳಿಗೆ ಗಿಲಾವುಮಾಡಿಸಬೇಕು.
43 ಅವನು ಆ ಕಲ್ಲುಗಳನ್ನು ತೆಗಿಸಿ ಮನೆಯ
ಗೋಡೆಗಳನ್ನು ಗೀಚಿಸಿ ಗಿಲಾವು ಮಾಡಿಸಿದ
ಮೇಲೆ ಆ ರೋಗದ ಗುರುತು ತಿರಿಗಿ ಕಾಣಬಂದರೆ
44 ಯಾಜಕನು ಬಂದು ನೋಡಬೇಕು. ಆ ಗುರುತು
ಮನೆಯ ಗೋಡೆಗಳಲ್ಲಿ ಹಬ್ಬಿಕೊಂಡಿದ್ದರೆ ಅದು
ಪ್ರಾಣಹಾನಿಕರವಾದ ಕುಷ್ಠವೇ; ಆ ಮನೆ ಅಶುದ್ಧ
45 ವಾಗಿರುವದು. ಅವನು ಆ ಮನೆಯನ್ನು ಕೆಡಹಿಸಿ
ಅದರ ಎಲ್ಲಾ ಕಲ್ಲುಗಳನ್ನೂ ತೊಲೆಗಳನ್ನೂ
ಮಣ್ಣನ್ನೂ ಊರಿನ ಹೊರಗೆ ಅಪವಿತ್ರಸ್ಥಳದಲ್ಲಿ
46 ಹಾಕಿಸಿಬಿಡಬೇಕು. ಆ ಮನೆಯು ಮುಚ್ಚಿರುವ
ದಿನಗಳಲ್ಲಿ ಯಾವನಾದರೂ ಒಳಕ್ಕೆ ಹೋದರೆ
ಅವನು ಆ ದಿನದ ಸಾಯಂಕಾಲದ ವರೆಗೆ ಅಶುದ್ಧ
47 ನಾಗಿರುವನು. ಆ ಮನೆಯಲ್ಲಿ ಮಲಗಿಕೊಂಡ
ವನು ತನ್ನ ಬಟ್ಟೆಗಳನ್ನು ಒಗೆದುಕೊಳ್ಳಬೇಕು;
ಅಲ್ಲಿ ಊಟಮಾಡಿದವನೂ ಬಟ್ಟೆಗಳನ್ನು ಒಗೆದು
ಕೊಳ್ಳಬೇಕು.
48 ಆದರೆ ತಾನು ಆ ಮನೆಗೆ ಹೊಸದಾಗಿ ಗಿಲಾವು
ಮಾಡಿಸಿದ ಮೇಲೆ ಯಾಜಕನು ಬಂದು ನೋಡು
ವಾಗ ಆ ರೋಗದ ಗುರುತು ಕಾಣಿಸದೆಹೋದರೆ
ರೋಗಪರಿಹಾರವಾಗಿ ಆ ಮನೆ ಶುದ್ಧವಾಯಿತೆಂದು
49 ನಿರ್ಣಯಿಸಬೇಕು. ಆ ಮನೆಯ ಶುದ್ಧೀಕರಣ
ಕ್ಕಾಗಿ ಅವನು ಎರಡು ಪಕ್ಷಿಗಳನ್ನೂ ದೇವದಾರಿನ
ಕಟ್ಟಿಗೆಯನ್ನೂ ರಕ್ತವರ್ಣವುಳ್ಳ ದಾರವನ್ನೂ
ಹಿಸ್ಸೋಪ್‌ಗಿಡದ ಬರಲನ್ನೂ ತೆಗೆದುಕೊಂಡು
50 ಒಂದು ಪಕ್ಷಿಯನ್ನು 1)ಸೆಲೇ ನೀರಿನ ಮೇಲೆ ಮಣ್ಣಿನ
51 ಪಾತ್ರೆಯಲ್ಲಿ ವಧಿಸಿ ಆ ದೇವದಾರಿನ ಕಟ್ಟಿಗೆಯನ್ನೂ
ಹಿಸ್ಸೋಪಿನ ಬರಲನ್ನೂ ರಕ್ತವರ್ಣವುಳ್ಳ ದಾರವನ್ನೂ
ಸಜೀವವಾದ ಮತ್ತೊಂದು ಪಕ್ಷಿಯನ್ನೂ ತೆಗೆದು
ಕೊಂಡು ತಾನು ವಧಿಸಿದ ಪಕ್ಷಿಯ ರಕ್ತದಲ್ಲಿಯೂ
1)ಸೆಲೇ ನೀರಿನಲ್ಲಿಯೂ ಅದ್ದಿ ಏಳು ಸಾರಿ ಆ ಮನೆಯ
52 ಗೋಡೆಗಳಿಗೆ ಪ್ರೋಕ್ಷಿಸಬೇಕು. ಹಾಗೆ ಆ ಪಕ್ಷಿಯ
ರಕ್ತ, 1)ಸೆಲೇ ನೀರು, ಸಜೀವಪಕ್ಷಿ, ದೇವದಾರಿನ
ಕಟ್ಟಿಗೆ, ಹಿಸ್ಸೋಪು, ರಕ್ತವರ್ಣದ ದಾರ ಇವುಗಳಿಂದ
ಆ ಮನೆಯನ್ನು ಶುದ್ಧಿಮಾಡುವನು. ಅವನು
ಜೀವವುಳ್ಳ ಪಕ್ಷಿಯನ್ನು ಊರ ಹೊರಕ್ಕೆ ಅಡವಿಯ
ಕಡೆಗೆ ಬಿಟ್ಟುಬಿಡಬೇಕು. ಹೀಗೆ ಅವನು ಆ ಮ
ಗೋಸ್ಕರ ದೋಷಪರಿಹಾರಮಾಡಿದಾಗ ಅದು ಶುದ್ಧ
ವಾಗಿರುವದು.

ನಾನಾ ವಿಧವಾದ ಕುಷ್ಠರೋಗದ ಗುರುತುಗಳ
ಅಂದರೆ ಕೂದಲುಬಿಳಿಯದ ದದ್ದು, ಬಟ್ಟೆಯಲ್ಲ
ಅಥವಾ ಮನೆಯ ಗೋಡೆಯಲ್ಲಿ ಕಾಣಿಸುವ ಕುಷ
ರೋಗದ ಗುರುತು, ಶರೀರದ ಚರ್ಮದ ಮೋ
ಉಂಟಾಗುವ ಬಾವು, ಗುಳ್ಳೆ, ಹೊಳೆಯುವ ಕಲೆ ಇ
ಗಳಲ್ಲಿ ಶುದ್ಧಾಶುದ್ಧಭೇದವನ್ನು ತಿಳಿಸುವ ವಿಧಿ ಇದೇ

ರಹಸ್ಯಾಂಗದಲ್ಲಿ ಸ್ರಾವದಿಂದುಂಟಾಗುವ ಅಪರಿಶುದ್ಧತೆ.

ಯೆಹೋವನು ಮೋಶೆ ಆರೋನರಿಗೆ ಹೀಗಂದನು —
ನೀವು ಇಸ್ರಾಯೇಲ್ಯರಿಗೆ ಆಜ್ಞಾಪಿಸಬೇಕಾದ 2
ದ್ದೇನಂದರೆ— ಒಬ್ಬನ ರಹಸ್ಯಾಂಗದಲ್ಲಿ ಮೇಹಸ್ರಾ
ವಾದರೆ ಅದರ ದೆಸೆಯಿಂದ ಅವನು ಅಶುದ್ಧನಾಗ
ವನು. ಆ ಸ್ರಾವವು ಹರಿಯುತ್ತಿದ್ದರೂ ನಿಂತ
ಹೋಗಿದ್ದರೂ ಆ ದೇಹಸ್ಥಿತಿಯಿಂದ ಅವನು ಅಶ
ದ್ಧನು. ಅಂಥವನು ಮಲಗಿರುವ ಪ್ರತಿಯೊಂದ
ಹಾಸಿಗೆಯೂ ಕೂತಿರುವ ಪ್ರತಿಯೊಂದು ಆಸನವ
ಅಶುದ್ಧವು. ಅವನ ಹಾಸಿಗೆಯನ್ನು ಮುಟ್ಟಿದವನ
ತನ್ನ ಬಟ್ಟೆಗಳನ್ನು ಒಗೆದುಕೊಂಡು ಸ್ನಾನಮಾ
ಬೇಕು; ಅವನು ಆ ದಿನದ ಸಾಯಂಕಾಲದ ವರೆ
ಅಶುದ್ಧನಾಗಿರುವನು. ಸ್ರಾವವುಳ್ಳವನು ಕೂತಿದ್ದ
ಆಸನದ ಮೇಲೆ ಕೂತುಕೊಂಡವನು ತನ್ನ ಬಟ
ಗಳನ್ನು ಒಗೆದುಕೊಂಡು ಸ್ನಾನಮಾಡಬೇಕು
ಅವನು ಆ ಸಾಯಂಕಾಲದ ವರೆಗೆ ಅಶುದ್ಧನಾಗಿರ
ವನು. ಅವನ ಶರೀರವನ್ನು ಮುಟ್ಟಿದವನು ತನ್ನ
ಬಟ್ಟೆಗಳನ್ನು ಒಗೆದುಕೊಂಡು ಸ್ನಾನಮಾಡಬೇಕು
ಅವನು ಆ ಸಾಯಂಕಾಲದ ವರೆಗೆ ಅಶುದ್ಧನಾಗಿರ
ವನು. ಶುದ್ಧನಾಗಿರುವವನ ಮೇಲೆ ಸ್ರಾವವುಳ್ಳವನ
ಉಗುಳಿದರೆ ಅವನು ತನ್ನ ಬಟ್ಟೆಗಳನ್ನು ಒಗೆದ
ಕೊಂಡು ಸ್ನಾನಮಾಡಬೇಕು; ಅವನು ಆ ಸಾಯಂಕ
ಲದ ವರೆಗೆ ಅಶುದ್ಧನಾಗಿರುವನು. ಸ್ರಾವವುಳ್ಳವನ
ಕೂತಿದ್ದ ತಡಿಯು ಅಶುದ್ಧವು. ಅವನ ಕೆಳಗಿದ್ದ
ಯಾವ ವಸ್ತುವನ್ನಾದರೂ ಮುಟ್ಟಿದವನು
ಸಾಯಂಕಾಲದ ವರೆಗೆ ಅಶುದ್ಧನಾಗಿರುವನು. ಅಂ
ವಸ್ತುವನ್ನು ಎತ್ತಿದವನು ತನ್ನ ಬಟ್ಟೆಗಳನ್ನು ಒಗೆದ
ಕೊಂಡು ಸ್ನಾನಮಾಡಬೇಕು; ಅವನು ಆ ಸಾಯಂಕ
ಲದ ವರೆಗೆ ಅಶುದ್ಧನಾಗಿರುವನು. ಸ್ರಾವವು
ವನು ಕೈಗಳನ್ನು ತೊಳೆದುಕೊಳ್ಳದೆ ಯಾವನನ್ನು
ಮುಟ್ಟಿದರೂ ಆ ಮನುಷ್ಯನು ತನ್ನ ಬಟ್ಟೆಗಳನ್ನು
ಒಗೆದುಕೊಂಡು ಸ್ನಾನಮಾಡಬೇಕು; ಅವನು
ಸಾಯಂಕಾಲದ ವರೆಗೆ ಅಶುದ್ಧನಾಗಿರುವನು
ಸ್ರಾವವುಳ್ಳವನು ಮುಟ್ಟಿದ ಮಣ್ಣಿನ ಪಾತ್ರೆಯನ್ನು
ಒಡೆದುಬಿಡಬೇಕು. ಅವನು ಮರದ ಪಾತ್ರೆಯನ್ನು
ಮುಟ್ಟಿದರೆ ಅದನ್ನು ನೀರಿನಿಂದ ತೊಳೆಯಬೇಕು

1) ಅಥವಾ: ಹರಿಯುವ ನೀರಿನ ಬಳಿಯಲ್ಲಿ.

ಸ್ರಾವವುಳ್ಳವನ ಸ್ರಾವವು ನಿಂತು ವಾಸಿಯಾದಾಗ
ಅವನು ಶುದ್ಧಮಾಡಿಸಿಕೊಳ್ಳುವದಕ್ಕೆ ಆಗಿನಿಂದ
ಳು ದಿನಗಳನ್ನು ಲೆಕ್ಕಿಸಿಕೊಂಡು ತನ್ನ ಬಟ್ಟೆಗ
ನ್ನು ಒಗೆದುಕೊಂಡು [1]ಸೆಲೇ ನೀರಿನಿಂದ ತನ್ನ
ರೀರವನ್ನು ತೊಳೆದುಕೊಂಡು ಶುದ್ಧನಾಗುವನು.
ಎಂಟನೆಯ ದಿನದಲ್ಲಿ ಎರಡು ಬೆಳವಕ್ಕಗಳನ್ನಾಗಲಿ
ರಡು ಪಾರಿವಾಳದ ಮರಿಗಳನ್ನಾಗಲಿ ತೆಗೆದು
ಕೊಂಡು ದೇವದರ್ಶನದ ಗುಡಾರದ ಬಾಗಲಿಗೆ
ಯೆಹೋವನ ಸನ್ನಿಧಿಗೆ ಬಂದು ಯಾಜಕನಿಗೆ
ಒಪ್ಪಿಸಬೇಕು. ಯಾಜಕನು ದೋಷಪರಿಹಾರಕ
ಯಜ್ಞಕ್ಕಾಗಿ ಒಂದನ್ನೂ ಸರ್ವಾಂಗಹೋಮಕ್ಕಾಗಿ
ಇನ್ನೊಂದನ್ನೂ ಸಮರ್ಪಿಸಬೇಕು. ಹೀಗೆ ಯಾಜ
ಕನು ಅವನ ಸ್ರಾವದ ವಿಷಯದಲ್ಲಿ ಯೆಹೋವನ
ಸನ್ನಿಧಿಯಲ್ಲಿ ಅವನಿಗೋಸ್ಕರ ದೋಷಪರಿಹಾರ
ಮಾಡುವನು.
ಒಬ್ಬನಿಗೆ ವೀರ್ಯಸ್ಖಲನವಾದರೆ ಅವನು ಸರ್ವಾಂಗ
ಸ್ನಾನಮಾಡಬೇಕು; ಅವನು ಆ ಸಾಯಂಕಾಲದ
ವರೆಗೆ ಅಶುದ್ಧನಾಗಿರುವನು. ಯಾವ ಬಟ್ಟೆಯ
ಮೇಲಾಗಲಿ ತೊಗಲಿನ ಮೇಲಾಗಲಿ ವೀರ್ಯವು ಬಿದ್ದರೆ
ಅದನ್ನು ನೀರಿನಿಂದ ತೊಳೆಯಬೇಕು. ಅದು
ಸಾಯಂಕಾಲದ ವರೆಗೆ ಅಶುದ್ಧವಾಗಿರುವದು.
ಪುರುಷನಿಗೆ ಸ್ತ್ರೀಸಂಗದಿಂದ ವೀರ್ಯಸ್ಖಲನವಾದರೆ
ಅವರಿಬ್ಬರೂ ಸ್ನಾನಮಾಡಿಕೊಳ್ಳಬೇಕು; ಅವರು
ಸಾಯಂಕಾಲದ ವರೆಗೆ ಅಶುದ್ಧರಾಗಿರುವರು.
ಸ್ತ್ರೀಗೆ ರಕ್ತಸ್ರಾವವಾದರೆ ಅವಳು ಏಳು ದಿನಗಳ
ತನಕ ಪ್ರತ್ಯೇಕವಾಗಿರಬೇಕು. ಅವಳನ್ನು ಮುಟ್ಟಿ
ದವರು ಆ ದಿನದ ಸಾಯಂಕಾಲದ ವರೆಗೆ ಅಶುದ್ಧ
ರಾಗುವರು. ಅವಳು ಮುಟ್ಟಾಗಿರುವಾಗ ಯಾವ
ದರ ಮೇಲೆ ಮಲಗಿದರೂ ಕೂತುಕೊಂಡರೂ ಅದು
ಅಶುದ್ಧವಾಗಿರುವದು. ಅವಳ ಹಾಸಿಗೆಯನ್ನು
ಮುಟ್ಟಿದವನು ತನ್ನ ಬಟ್ಟೆಗಳನ್ನು ಒಗೆದುಕೊಂಡು
ಸ್ನಾನಮಾಡಬೇಕು; ಅವನು ಸಾಯಂಕಾಲದ ವರೆಗೆ
ಅಶುದ್ಧನಾಗಿರುವನು. ಅವಳು ಯಾವದರ ಮೇಲೆ
ಕೂತಿದ್ದಳೋ ಅದನ್ನು ಮುಟ್ಟಿದವನು ತನ್ನ ಬಟ್ಟೆ
ಗಳನ್ನು ಒಗೆದುಕೊಂಡು ಸ್ನಾನಮಾಡಬೇಕು; ಅವ
ನು ಸಾಯಂಕಾಲದ ವರೆಗೆ ಅಶುದ್ಧನಾಗಿರುವನು.
ಅವಳು ಮಲಗಿದ್ದ ಹಾಸಿಗೆಯ ಮೇಲಾಗಲಿ ಕೂತಿದ್ದ
ಸ್ಥಳದ ಮೇಲಾಗಲಿ ಇದ್ದ ಯಾವದನ್ನಾದರೂ
ಮುಟ್ಟಿದವನು ಸಾಯಂಕಾಲದ ವರೆಗೆ ಅಶುದ್ಧ
ನಾಗಿರುವನು. ಪುರುಷನು ಒಂದು ವೇಳೆ ಅಂಥವ
ಳೊಡನೆ ಸಂಗಮಿಸಿದದರಿಂದ ಅವಳ ರಜಸ್ಸು ಅವನಿಗೆ
ತಗಲಿದರೆ ಅವನು ಏಳು ದಿನಗಳ ತನಕ ಅಶುದ್ಧ
ನಾಗಿರುವನು. ಅಷ್ಟರಲ್ಲಿ ಅವನು ಯಾವ ಹಾಸಿ
ಗೆಯ ಮೇಲೆ ಮಲಗಿಕೊಂಡರೂ ಅದು ಅಶುದ್ಧ
ವಾಗಿರುವದು.
ಸ್ತ್ರೀಗೆ ಮುಟ್ಟಿನ ಕಾಲದಲ್ಲಿ ಮಾತ್ರವಲ್ಲದೆ
ಬೇರೆ ದಿನಗಳಲ್ಲಿಯೂ ರಕ್ತಸ್ರಾವವಾದರೆ ಇಲ್ಲವೆ
ಮುಟ್ಟಿನ ಕಾಲಕ್ಕೆ ತಕ್ಕದ್ದಕ್ಕಿಂತ ಹೆಚ್ಚು ದಿನಗಳು
ರಕ್ತಸ್ರಾವವಾದರೆ ಅವಳು ತಿಂಗಳಿನ ಮುಟ್ಟಿನಿಂದ
ಹೇಗೆ ಅಶುದ್ಧಳೋ ಹಾಗೆಯೇ ಆ ಸ್ರಾವವಾಗುವ
ದಿನಗಳಲ್ಲೆಲ್ಲಾ ಅಶುದ್ಧಳಾಗಿರುವಳು. ಆ ಸ್ರಾವ 26
ವಿರುವ ತನಕ ಅವಳು ಯಾವ ಹಾಸಿಗೆಯ ಮೇಲೆ
ಮಲಗಿದರೂ ಅದು ಮುಟ್ಟಿನ ಕಾಲದಲ್ಲಿ ಮಲಗಿದ
ಹಾಸಿಗೆಯಂತೆಯೇ ಅಶುದ್ಧವಾಗುವದು. ಅವಳು
ಯಾವದರ ಮೇಲೆ ಕೂತುಕೊಂಡರೂ ಅದು ಮುಟ್ಟಿನ
ಕಾಲದಲ್ಲಿ ಕೂತುಕೊಂಡ ವಸ್ತುವಿನಂತೆ ಅಶುದ್ಧ
ವಾಗಿರುವದು. ಆ ವಸ್ತುಗಳನ್ನು ಮುಟ್ಟಿದವನು 27
ಅಶುದ್ಧನಾದದರಿಂದ ತನ್ನ ಬಟ್ಟೆಗಳನ್ನು ಒಗೆದು
ಕೊಂಡು ಸ್ನಾನಮಾಡಬೇಕು; ಅವನು ಸಾಯಂಕಾ
ಲದ ವರೆಗೆ ಅಶುದ್ಧನಾಗಿರುವನು. ಅವಳಿಗೆ ರಕ್ತ 28
ಸ್ರಾವ ನಿಂತ ದಿನದಿಂದ ಅವಳು ಏಳು ದಿನಗಳನ್ನು
ಲೆಕ್ಕಿಸಿಕೊಂಡು ತರುವಾಯ ಶುದ್ಧಳಾಗುವಳು.
ಎಂಟನೆಯ ದಿನದಲ್ಲಿ ಅವಳು ಎರಡು ಬೆಳವಕ್ಕಗಳ 29
ನ್ನಾಗಲಿ ಎರಡು ಪಾರಿವಾಳದ ಮರಿಗಳನ್ನಾಗಲಿ
ದೇವದರ್ಶನದ ಗುಡಾರದ ಬಾಗಲಿಗೆ ಯಾಜಕನ
ಬಳಿಗೆ ತರಬೇಕು. ಯಾಜಕನು ದೋಷಪರಿಹಾರಕ 30
ಯಜ್ಞಕ್ಕಾಗಿ ಒಂದನ್ನೂ ಸರ್ವಾಂಗಹೋಮಕ್ಕಾಗಿ
ಇನ್ನೊಂದನ್ನೂ ಸಮರ್ಪಿಸಬೇಕು. ಹೀಗೆ ಯಾಜ
ಕನು ಅವಳ ಸ್ರಾವದಿಂದುಂಟಾದ ಅಪರಿಶುದ್ಧತೆಯ
ವಿಷಯವಾಗಿ ಯೆಹೋವನ ಸನ್ನಿಧಿಯಲ್ಲಿ ಅವಳಿ
ಗೋಸ್ಕರ ದೋಷಪರಿಹಾರಮಾಡುವನು.
ಇಸ್ರಾಯೇಲ್ಯರು ಅಶುದ್ಧತೆಗೆ ದೂರವಾಗಿರು 31
ವಂತೆ ನೀವು ಅವರನ್ನು ಈ ರೀತಿಯಾಗಿ ಕಾಪಾಡ
ಬೇಕು. ಅವರು ಅಪವಿತ್ರರಾಗಿದ್ದು ತಮ್ಮ ಮಧ್ಯ
ದಲ್ಲಿರುವ ನನ್ನ ಗುಡಾರವನ್ನು ಹೊಲೆಮಾಡಿದರೆ
ನಾಶವಾದಾರು.
ಮೇಹಸ್ರಾವವುಳ್ಳವನು, ವೀರ್ಯಸ್ಖಲನದಿಂದ ಅಶು 32
ದ್ಧನಾದವನು, ಮುಟ್ಟಾದ ಸ್ತ್ರೀಯು, ಸ್ರಾವವುಂಟಾ 33
ಗುವ ಸ್ತ್ರೀಪುರುಷರು, ಅಶುದ್ಧಳಾದ ಸ್ತ್ರೀಯನ್ನು
ಸಂಗಮಿಸಿದವನು ಇವರ ವಿಷಯವಾಗಿ ಇದೇ ವಿಧಿ.

ದೋಷಪರಿಹಾರಕವಾದ ಮಹಾದಿನ.

16
ಆರೋನನ ಇಬ್ಬರು ಮಕ್ಕಳು ಯೆಹೋವನ ಸನ್ನಿ
ಧಿಗೆ ಬಂದು ನಾಶವಾದ ಮೇಲೆ ಯೆಹೋ 2
ವನು ಮೋಶೆಯ ಸಂಗಡ ಮಾತಾಡಿ ಹೇಳಿದ್ದೇನಂದರೆ—
ನಿನ್ನ ಅಣ್ಣನಾದ ಆರೋನನು ಮನಸ್ಸಿಗೆ ಬಂದಾ
ಗೆಲ್ಲಾ ತೆರೆಯನ್ನು ದಾಟಿ ಮಹಾಪವಿತ್ರಸ್ಥಾನದೊಳಕ್ಕೆ
ಮಂಜೂಷದ ಮೇಲಣ ಕೃಪಾಸನದ ಹತ್ತಿರಕ್ಕೆ ಬರ
ಬಾರದೆಂದು ಅವನಿಗೆ ಹೇಳು. ನಾನು ಕೃಪಾಸನದ
ಮೇಲೆ ಮೇಘದಲ್ಲಿ ಕಾಣಿಸಿಕೊಳ್ಳುವದರಿಂದ ಅವನು
ನಾಶವಾದಾನು. ಆರೋನನು ಮಹಾಪವಿತ್ರಸ್ಥಾನ 3
ದೊಳಗೆ ಬರುವಾಗ ಮುಂದೆ ಹೇಳುವ ರೀತಿಯಾಗಿ
ಬರಬೇಕು. ಅವನು ದೋಷಪರಿಹಾರಕಯಜ್ಞಕ್ಕಾಗಿ
ಹೋರಿಯನ್ನೂ ಸರ್ವಾಂಗಹೋಮಕ್ಕಾಗಿ ಟಗರನ್ನೂ
ತರಬೇಕು. ಅವನು ಪರಿಶುದ್ಧವಾದ ನಾರಿನ ನಿಲು 4

[1] ಅಥವಾ: ಹರಿಯುವ ನೀರಿನ ಬಳಿಯಲ್ಲಿ.

ವಂಗಿಯನ್ನು ತೊಟ್ಟುಕೊಂಡು ನಾರಿನ ಚಡ್ಡಿಯನ್ನು
ಹಾಕಿಕೊಂಡು ನಾರಿನ ನಡುಕಟ್ಟನ್ನು ಕಟ್ಟಿಕೊಂಡು
ತಲೆಗೆ ಮುಂಡಾಸವನ್ನು ಸುತ್ತಿಕೊಳ್ಳಬೇಕು. ಅವು
ದೀಕ್ಷಾವಸ್ತ್ರಗಳಾದದರಿಂದ ಅವನು ಅವುಗಳನ್ನು
ಧರಿಸಿಕೊಳ್ಳುವದಕ್ಕೆ ಮುಂಚೆ ಸ್ನಾನಮಾಡಬೇಕು.
5 ಇಸ್ರಾಯೇಲ್ಯರ ಜನಸಮೂಹದಿಂದ ದೋಷಪರಿಹಾ
ರಕಯಜ್ಞಕ್ಕಾಗಿ ಎರಡು ಹೋತಗಳನ್ನೂ ಸರ್ವಾಂಗ
ಹೋಮಕ್ಕಾಗಿ ಒಂದು ಟಗರನ್ನೂ ತೆಗೆದುಕೊಂಡು
6 ಬರಬೇಕು. ಆರೋನನು ತನಗೋಸ್ಕರವಾಗಿ ತಂದ
ಹೋರಿಯನ್ನು ಸಮರ್ಪಿಸಿ ತನಗೋಸ್ಕರವೂ ತನ್ನ
ಮನೆತನದವರಿಗೋಸ್ಕರವೂ ದೋಷಪರಿಹಾರಮಾಡ
7 ಬೇಕು. ಆ ಎರಡು ಹೋತಗಳನ್ನು ಅವನು ದೇವ
ದರ್ಶನದ ಗುಡಾರದ ಬಾಗಲಲ್ಲಿ ಯೆಹೋವನ
8 ಸನ್ನಿಧಿಯಲ್ಲಿ ನಿಲ್ಲಿಸಬೇಕು. ಆಗ ಅವನು ಆ
ಹೋತಗಳ ವಿಷಯವಾಗಿ ಯೆಹೋವನಿಗೋಸ್ಕರ
ವೆಂದೂ 1)ಅಜಾಜೇಲನಿಗೋಸ್ಕರವೆಂದೂ ಚೀಟು
9 ಗಳನ್ನು ಬರೆದು ಹಾಕಬೇಕು. ಯಾವ ಹೋತ
ಯೆಹೋವನದೆಂದು ಗೊತ್ತಾಗುವದೋ ಅದನ್ನು
ಆರೋನನು ದೋಷಪರಿಹಾರಕಯಜ್ಞರೂಪವಾಗಿ
10 ಸಮರ್ಪಿಸಬೇಕು. ಯಾವ ಹೋತ ಅಜಾಜೇಲನ
ದೆಂದು ಗೊತ್ತಾಗುವದೋ ಅದನ್ನು ಯೆಹೋವನ
ಸನ್ನಿಧಿಯಲ್ಲಿ ಸಜೀವವಾಗಿಯೇ ನಿಲ್ಲಿಸಿ ಅದರ ಮೇಲೆ
ದೋಷಹೊರಿಸಿ ಅರಣ್ಯಕ್ಕೆ ಅಜಾಜೇಲನಿಗಾಗಿ ಬಿಡಿಸಿ
ಬಿಡಬೇಕು.
11 ಆರೋನನು ತನಗೋಸ್ಕರವಾದ ದೋಷಪರಿ
ಹಾರಕಯಜ್ಞದ ಹೋರಿಯನ್ನು ಸಮರ್ಪಿಸಿ ತನ
ಗೋಸ್ಕರವೂ ತನ್ನ ಮನೆತನದವರಿಗೋಸ್ಕರವೂ
12 ದೋಷಪರಿಹಾರವನ್ನು ಮಾಡಬೇಕು. ಅವನು ತನ
ಗೋಸ್ಕರವಾದ ಹೋರಿಯನ್ನು ವಧಿಸಿದ ಮೇಲೆ
ಯೆಹೋವನ ಸನ್ನಿಧಿಯಲ್ಲಿರುವ ವೇದಿಯಿಂದ ಕೆಂಡ
ಗಳನ್ನು ಧೂಪಾರತಿಯಲ್ಲಿ ತುಂಬಿಸಿ ಪರಿಮಳಧೂಪ
ದ್ರವ್ಯದ ಚೂರ್ಣದಲ್ಲಿ ಎರಡು ಹಿಡಿ ತೆಗೆದುಕೊಂಡು
13 ತೆರೆಯನ್ನು ದಾಟಿ ಆ ಧೂಪವನ್ನು ಯೆಹೋವನ
ಸನ್ನಿಧಿಯಲ್ಲಿಯೇ ಕೆಂಡಗಳ ಮೇಲೆ ಹಾಕಬೇಕು.
ಅವನಿಗೆ ಪ್ರಾಣನಷ್ಟವಾಗದಂತೆ ಧೂಪದ ಹೊಗೆ
ಮೇಘದೋಪಾದಿಯಲ್ಲಿ ಆಜ್ಞಾಶಾಸನಗಳ ಮೇಲಣ
14 ಕೃಪಾಸನವನ್ನು ಮುಚ್ಚುವದು. ಆಗ ಆ ಹೋರಿ
ಯ ರಕ್ತದಲ್ಲಿ ಸ್ವಲ್ಪ ತೆಗೆದುಕೊಂಡು ಕೃಪಾಸನದ
ಪೂರ್ವಭಾಗದ ಮೇಲೆ ಬೆರಳಿನಿಂದ ಚಿಮಿಕಿಸಿ ಕೃಪಾ
ಸನದ ಎದುರಾಗಿಯೂ ಏಳು ಸಾರಿ ಚಿಮಿಕಿಸಬೇಕು.
15 ತರುವಾಯ ಅವನು ಜನರಿಗೋಸ್ಕರವಾದ ದೋ
ಷಪರಿಹಾರಕಯಜ್ಞದ ಹೋತವನ್ನು ವಧಿಸಿ ಅದರ ರಕ್ತ
ವನ್ನು ತೆರೆಯೊಳಗೆ ತಂದು ಹೋರಿಯ ರಕ್ತದಿಂದ
ಮಾಡಿದಂತೆಯೇ ಇದರ ರಕ್ತದಿಂದಲೂ ಮಾಡಿ
ಕೃಪಾಸನದ ಮೇಲೆಯೂ ಎದುರಾಗಿಯೂ ಚಿಮಿಕಿಸ
16 ಬೇಕು. ಹೀಗೆ ಇಸ್ರಾಯೇಲ್ಯರು ನಾನಾ ವಿಧವಾದ
ಅಪರಿಶುದ್ಧತ್ವ, ಅಪರಾಧ, ದ್ರೋಹ ಇವುಗಳಿಂದ

ಮಹಾಪವಿತ್ರಸ್ಥಾನಕ್ಕೆ ಉಂಟುಮಾಡಿದ ದೋಷವನ್ನು
ಆರೋನನು ಪರಿಹರಿಸುವನು. ಅಶುದ್ಧರಾದ ಅವ
ನಡುವೆ ಇರುವ ದೇವದರ್ಶನದ ಗುಡಾರಕ್ಕೋಸ
ರವೂ ಹಾಗೆಯೇ ದೋಷಪರಿಹಾರಮಾಡುವನು
ಅವನು ದೋಷಪರಿಹಾರಮಾಡುವದಕ್ಕಾಗಿ ಮಹಾ
ಪವಿತ್ರಸ್ಥಾನದೊಳಗೆ ಹೋಗಿ ಹೊರಗೆ ಬರುವ ತನಕ
ಯಾರೂ ದೇವದರ್ಶನದ ಗುಡಾರದಲ್ಲಿ ಹೋಗ
ಕೂಡದು. ಹಾಗೆ ತನಗೋಸ್ಕರವಾಗಿಯೂ ತನ್ನ
ಮನೆತನದವರಿಗೋಸ್ಕರವಾಗಿಯೂ ಇಸ್ರಾಯೇಲ್ಯ
ಎಲ್ಲಾ ಜನಸಮೂಹಕ್ಕೋಸ್ಕರವಾಗಿಯೂ ದೋಷ
ಪರಿಹಾರಮಾಡುವನು. ತರುವಾಯ ಅವನು ಹೊರ
ಬಂದು ಯೆಹೋವನ ಸನ್ನಿಧಿಯಲ್ಲಿರುವ ಯಜ್ಞವೇ
ಯ ಬಳಿಗೆ ಹೋಗಿ ಅದಕ್ಕಾಗಿ ದೋಷಪರಿಹಾರಮಾ
ಬೇಕು. ಆ ಹೋರಿಯ ರಕ್ತದಲ್ಲಿಯೂ ಆ ಹೋತ
ರಕ್ತದಲ್ಲಿಯೂ ಸ್ವಲ್ಪ ಸ್ವಲ್ಪ ತೆಗೆದುಕೊಂಡ
ವೇದಿಯ ಕೊಂಬುಗಳಿಗೆ ಸುತ್ತಲೂ ಹಚ್ಚಬೇಕು
ಅವನು ಆ ರಕ್ತದಲ್ಲಿ ಸ್ವಲ್ಪವನ್ನು ಅದರ ಮೇ
ಏಳು ಸಾರಿ ಬೆರಳಿನಿಂದ ಚಿಮಿಕಿಸಿ ಇಸ್ರಾಯೇಲ
ರಿಂದ ಅದಕ್ಕುಂಟಾದ ಅಶುದ್ಧತ್ವವನ್ನು ಹೋಗಲಾಡಿ
ಅದನ್ನು ಪರಿಶುದ್ಧಪಡಿಸಬೇಕು.
ಆರೋನನು ಮಹಾಪವಿತ್ರಸ್ಥಾನ, ದೇವದರ್ಶನ
ಗುಡಾರ, ವೇದಿ ಇವುಗಳಿಗೋಸ್ಕರ ದೋಷಪರಿಹಾ
ಮಾಡಿ ಮುಗಿಸಿದ ಮೇಲೆ ಆ ಸಜೀವವಾದ ಹೋ
ವನ್ನು ತರಿಸಿ ಅದರ ತಲೆಯ ಮೇಲೆ ಎರಡು ಕೈಗ
ನ್ನೂ ಇಟ್ಟು ಇಸ್ರಾಯೇಲ್ಯರ ಎಲ್ಲಾ ಪಾಪಗಳನ್ನೂ
ದ್ರೋಹಗಳನ್ನೂ ಅಪರಾಧಗಳನ್ನೂ ಯೆಹೋವನಿ
ಅರಿಕೆಮಾಡಿ ಆ ಹೋತನ ತಲೆಯ ಮೇಲೆ ಹೊರಿ
ಅದನ್ನು ಆ ಕೆಲಸಕ್ಕೆ ನೇಮಕವಾದವನ ಕೈಯಿಂ
ಅರಣ್ಯಕ್ಕೆ ಕಳುಹಿಸಿಬಿಡಬೇಕು. ಆ ಹೋತ ಅವ
ಎಲ್ಲಾ ಪಾಪಗಳನ್ನೂ ತನ್ನ ಮೇಲೆ ಹೊತ್ತುಕೊಂಡ
ದುರ್ಗಮವಾದ ಪ್ರದೇಶಕ್ಕೆ ಒಯ್ಯುವಂತೆ ಆ ಮನು
ಷ್ಯನು ಅದನ್ನು ಅರಣ್ಯಕ್ಕೆ ತೆಗೆದುಕೊಂಡುಹೋ
ಅಲ್ಲೇ ಬಿಟ್ಟುಬಿಡಬೇಕು.
ತರುವಾಯ ಆರೋನನು ದೇವದರ್ಶನದ ಗುಡಾ
ದೊಳಗೆ ಬಂದು ತಾನು ಮಹಾಪವಿತ್ರಸ್ಥಾನದೊಳ
ಹೋಗುವದಕ್ಕಾಗಿ ಧರಿಸಿಕೊಂಡಿದ್ದ ನಾರುಮ
ಗಳನ್ನು ತೆಗೆದು ಅಲ್ಲೇ ಇಟ್ಟುಬಿಟ್ಟು ಪ್ರಾಕಾರದಲ್ಲಿ
ಸ್ನಾನಮಾಡಿ ತನ್ನ ವಸ್ತ್ರಗಳನ್ನು ಧರಿಸಿಕೊಳ್ಳಬೇಕು
ಆಗ ಅವನು ಹೊರಗೆ ಬಂದು ತನಗೋಸ
ರವೂ ಜನಸಮೂಹಕ್ಕೋಸ್ಕರವೂ ಸರ್ವಾಂಗಹೋಮ
ಗಳನ್ನು ಸಮರ್ಪಿಸಿ ತನಗೋಸ್ಕರವಾಗಿಯೂ ಜನ
ಗೋಸ್ಕರವಾಗಿಯೂ ದೋಷಪರಿಹಾರಮಾಡಬೇಕು
ಅವನು ದೋಷಪರಿಹಾರಕಯಜ್ಞಪಶುಗಳ ಕೊಬ್ಬನ್ನು
ಯಜ್ಞವೇದಿಯ ಮೇಲೆ ಹೋಮಮಾಡಬೇಕು.
ಅಜಾಜೇಲನಿಗೆ ಹೋತವನ್ನು ಬಿಟ್ಟುಬಂದವನು
ತನ್ನ ಬಟ್ಟೆಗಳನ್ನು ಒಗೆದುಕೊಂಡು ಸ್ನಾನಮಾಡಿಯೆ
ಪಾಳೆಯಕ್ಕೆ ಬರಬೇಕು. ದೋಷಪರಿಹಾರಕಯಜ್ಞ

1) ಅಜಾಜೇಲ್ ಎಂಬ ಪದದ ಅರ್ಥವು ಅಸ್ಪಷ್ಟ; ಕೆಲವರು ದೆವ್ವಗಳ ಅಧಿಪತಿ ಎಂದೂ ಇನ್ನು ಕೆಲವರು ಬಹಿಷ್ಕಾರ ಎಂದೂ
ಮಾಡಿಕೊಳ್ಳುತ್ತಾರೆ.

ಪಶುಗಳಾದ ಹೋರಿಹೋತಗಳ ರಕ್ತವನ್ನು ಮಹಾ
ಪವಿತ್ರಸ್ಥಾನದಲ್ಲಿ ದೋಷಪರಿಹಾರಮಾಡುವದಕ್ಕಾಗಿ
ತಂದ ಮೇಲೆ ಅವುಗಳ ಶರೀರಗಳನ್ನು ಪಾಳೆಯದ
ಆಚೆಗೆ ತೆಗೆದುಕೊಂಡು ಹೋಗಿ ಚರ್ಮಮಾಂಸ ಕಲ್ಮಷ
ಗಳೆಲ್ಲವನ್ನೂ ಬೆಂಕಿಯಿಂದ ಸುಡಿಸಿಬಿಡಬೇಕು. ಅವು
ಗಳನ್ನು ಸುಟ್ಟವನು ತನ್ನ ಬಟ್ಟೆಗಳನ್ನು ಒಗೆದುಕೊಂಡು
ಸ್ನಾನಮಾಡಿಯೇ ಪಾಳೆಯದೊಳಗೆ ಬರಬೇಕು.

ಇದು ನಿಮಗೆ ಶಾಶ್ವತವಾದ ನಿಯಮ; ಯಾವ
ದಂದರೆ ಸ್ವದೇಶಸ್ಥರಾದ ನೀನೂ ನಿಮ್ಮಲ್ಲಿ ಇಳು
ಕೊಂಡಿರುವ ಅನ್ಯದೇಶದವರೂ ಎಲ್ಲರೂ ಏಳನೆಯ
ತಿಂಗಳಿನ ಹತ್ತನೆಯ ದಿನದಲ್ಲಿ ಸಕಲ ವಿಧವಾದ ಕೆಲಸ
ಗಳನ್ನು ಬಿಟ್ಟು [ಉಪವಾಸಮಾಡಿ] ಪ್ರಾಣವನ್ನು
ಕುಂದಿಸಿಕೊಳ್ಳಬೇಕು. ಯಾಕಂದರೆ ನೀವು ಪರಿ
ಶುದ್ಧರಾಗುವದಕ್ಕಾಗಿ ಈ ದಿನದಲ್ಲಿ ನಿಮಗೋಸ್ಕರ
ದೋಷಪರಿಹಾರವಾಗುವದು, ಯೆಹೋವನ ದೃಷ್ಟಿ
ಯಲ್ಲಿ ನಿಮ್ಮ ಎಲ್ಲಾ ದೋಷಗಳು ನಿವಾರಣೆಯಾಗು
ವವು. ಇದು ನಿಮಗೆ ಸಂಪೂರ್ಣವಾಗಿ ಕೆಲಸವನ್ನ
ನಿಲ್ಲಿಸಬೇಕಾದ ಸಬ್ಬತ್‌ದಿನವಾಗಿರಬೇಕು; ಇದರಲ್ಲಿ
ನೀವು ಉಪವಾಸವಾಗಿರಬೇಕು; ಇದೇ ನಿಮಗೆ
ಶಾಶ್ವತನಿಯಮ.

[ಆರೋನನ ವಂಶದವರಲ್ಲಿ] ಯಾವನಿಗೆ ಪಿತೃ
ಸ್ಥಾನದಲ್ಲಿ ಮಹಾಯಾಜಕನ ಉದ್ಯೋಗವನ್ನು ನಡೆ
ಸುವದಕ್ಕೆ ಪಟ್ಟಾಭಿಷೇಕವಾಗುವದೋ ಅವನೇ
ಈ ದೋಷಪರಿಹಾರಕಾರ್ಯವನ್ನು ಆಚರಿಸಬೇಕು;
ಅವನೇ ಆ ನಾರುಮಡಿಗಳನ್ನು ಧರಿಸಿಕೊಂಡು ಪರಿ
ಶುದ್ಧವಾದ ದೇವಸ್ಥಾನ, ದೇವದರ್ಶನದ ಗುಡಾರ,
ಯಜ್ಞವೇದಿ, ಯಾಜಕರು, ಜನಸಮೂಹದವರು
ಈ ಎಲ್ಲರಿಗೋಸ್ಕರ ದೋಷಪರಿಹಾರವನ್ನು ಮಾಡ
ಬೇಕು. ಇಸ್ರಾಯೇಲ್ಯರ ಎಲ್ಲಾ ದೋಷಗಳನ್ನು
ನಿವಾರಣೆಮಾಡುವದಕ್ಕಾಗಿ ಅವರಿಗೋಸ್ಕರ ವರು
ಷಕ್ಕೆ ಒಂದಾವರ್ತಿ ದೋಷಪರಿಹಾರವನ್ನು ಮಾಡ
ಬೇಕೆಂಬದೇ ನಿಮಗೆ ಶಾಶ್ವತನಿಯಮ.

ಯೆಹೋವನು ಮೋಶೆಗೆ ಆಜ್ಞಾಪಿಸಿದಂತೆಯೇ
ಆರೋನನು ಮಾಡಿದನು.

ಇಸ್ರಾಯೇಲ್ಯರು ಯಾವ ದುರಾಚಾರಕ್ಕೂ ಒಳಗಾಗದೆ
ದೇವಜನರಿಗೆ ತಕ್ಕಂತೆಯೇ ನಡೆದುಕೊಳ್ಳಬೇಕೆಂಬದು.

17 – 26.

ಯಜ್ಞಪಶುಗಳನ್ನು ದೇವಸ್ಥಾನದಲ್ಲಿಯೇ ವಧಿಸಬೇಕೆಂದೂ
ರಕ್ತವನ್ನು ಭುಜಿಸಲೇ ಬಾರದೆಂದೂ ವಿಧಿಸುವದು.

17 ಯೆಹೋವನು ಮೋಶೆಗೆ ಹೇಳಿದ್ದೇನಂದರೆ—
2 ನೀನು ಆರೋನನಿಗೂ ಅವನ ಮಕ್ಕಳಿಗೂ
ಇಸ್ರಾಯೇಲ್ಯರಿಗೂ ಹೀಗೆ ಹೇಳಬೇಕು. ಯೆಹೋ
ವನು ಆಜ್ಞಾಪಿಸುವದೇನಂದರೆ— ಇಸ್ರಾಯೇಲ್ಯರಲ್ಲಿ
ಯಾವನಾದರೂ ಹೋರಿಯನ್ನಾಗಲಿ ಕುರಿಯನ್ನಾಗಲಿ
ಆಡನ್ನಾಗಲಿ ಕೊಯ್ಯುವಾಗ ಅದನ್ನು ಯೆಹೋ
ವನಿಗೆ ಸಮರ್ಪಿಸುವದಕ್ಕಾಗಿ ಆತನ ಗುಡಾರದ ಬಾಗ
ಲಿಗೆ ತಾರದೆ ಪಾಳೆಯದ ಒಳಗಾಗಲಿ ಹೊರಗಾಗಲಿ 4
ಕೊಯಿದರೆ ಅವನನ್ನು ಕೊಲೆಪಾತಕಮಾಡಿದವ
ನೆಂದು ನೀವು ನಿರ್ಣಯಿಸಬೇಕು. ಅವನು ರಕ್ತ
ವನ್ನು ಸುರಿಸಿದವನಾದದರಿಂದ ಕುಲದಿಂದ ತೆಗೆದು
ಹಾಕಲ್ಪಡಬೇಕು. ಯಾಕಂದರೆ ಯಜ್ಞಪಶುಗಳನ್ನು 5
ಬೈಲಿನಲ್ಲಿ ವಧಿಸುತ್ತಿದ್ದ ಇಸ್ರಾಯೇಲ್ಯರು ಇನ್ನು
ಮೇಲೆ ಅವುಗಳನ್ನು ದೇವದರ್ಶನದ ಗುಡಾರದ
ಬಾಗಲಿಗೆ ಯಾಜಕನ ಬಳಿಗೆ ತಂದು ಯೆಹೋ
ವನ ಮುಂದೆ ಸಮಾಧಾನಯಜ್ಞರೂಪವಾಗಿ ಯೆಹೋ
ವನಿಗೆ ಸಮರ್ಪಿಸಬೇಕು. ಯಾಜಕನು ಅವು 6
ಗಳ ರಕ್ತವನ್ನು ದೇವದರ್ಶನದ ಗುಡಾರದ ಬಾಗ
ಲಿನ ಮುಂದಿರುವ ಯಜ್ಞವೇದಿಗೆ ಎರಚಿ ಅವು
ಗಳ ಕೊಬ್ಬನ್ನು ಹೋಮಮಾಡಿ ಯೆಹೋವನಿಗೆ
ಸುವಾಸನೆಯನ್ನುಂಟುಮಾಡಬೇಕು. ಅವರು ಇದು 7
ವರೆಗೆ ಪೂಜಿಸುತ್ತಿದ್ದ ಅಜದೇವತೆಗಳಿಗೆ ಇನ್ನು ಮುಂದೆ
ಬಲಿಕೊಟ್ಟು ದೇವದ್ರೋಹಿಗಳಾಗಬಾರದು. ಅವ
ರಿಗೂ ಅವರ ಸಂತತಿಯವರಿಗೂ ಇದು ಶಾಶ್ವತ
ನಿಯಮ.

ಮತ್ತು ನೀನು ಅವರಿಗೆ ಹೀಗೆ ಆಜ್ಞಾಪಿಸು— 8
1)ಇಸ್ರಾಯೇಲ್ಯರಲ್ಲಿ ಆಗಲಿ ಅವರ ನಡುವೆ ಇಳು
ಕೊಂಡಿರುವ ಅನ್ಯದೇಶದವರಲ್ಲಿಯಾಗಲಿ ಯಾವ
ನಾದರೂ ಸರ್ವಾಂಗಹೋಮವನ್ನು ಅಥವಾ ಬೇರೆ
ವಿಧವಾದ ಯಜ್ಞವನ್ನು ಮಾಡುವಾಗ ಅದರ ಪಶು 9
ವನ್ನು ಯೆಹೋವನಿಗೆ ಸಮರ್ಪಿಸುವದಕ್ಕಾಗಿ ದೇವ
ದರ್ಶನದ ಗುಡಾರದ ಬಾಗಲಿಗೆ ತಾರದಿದ್ದರೆ ಅವನು
ಕುಲದಿಂದ ತೆಗೆದುಹಾಕಲ್ಪಡಬೇಕು.

ಇದಲ್ಲದೆ 2)ಇಸ್ರಾಯೇಲ್ಯರಲ್ಲಿಯಾಗಲಿ ಅವರ 10
ನಡುವೆ ಇಳುಕೊಂಡಿರುವ ಅನ್ಯದೇಶದವರಲ್ಲಿಯಾ
ಗಲಿ ಯಾವನಾದರೂ 3)ರಕ್ತಭೋಜನಮಾಡಿದರೆ
ನಾನು ಆತನ ಮೇಲೆ ಉಗ್ರವಾದ ಕೋಪವನ್ನು
ಮಾಡಿ ಅವನನ್ನು ಕುಲದಿಂದ ತೆಗೆದುಹಾಕು
ವೆನು. ಯಾಕಂದರೆ ಪ್ರತಿದೇಹಿಗೂ ರಕ್ತವೇ 11
ಪ್ರಾಣಾಧಾರ. ಅಂಥ ರಕ್ತವನ್ನು ನೀವು ಯಜ್ಞ
ವೇದಿಗೆ ಎರಚಿ ನಿಮಗೋಸ್ಕರ ದೋಷಪರಿಹಾರ
ಮಾಡಿಕೊಳ್ಳಬೇಕೆಂದು ನಿಮಗೆ ಅನುಗ್ರಹ ಮಾಡಿ
ದ್ದೇನೆ. ರಕ್ತವು ಪ್ರಾಣಾಧಾರವಾಗಿರುವ ಕಾರಣ
ಅದರಿಂದ ದೋಷಪರಿಹಾರವಾಗುತ್ತದಷ್ಟೆ. ಆದದ 12
ರಿಂದ— ನಿಮ್ಮಲ್ಲಿಯಾಗಲಿ ನಿಮ್ಮ ನಡುವೆ ಇಳುಕೊಂಡಿ
ರುವ ಅನ್ಯದೇಶದವರಲ್ಲಿಯಾಗಲಿ ಯಾರೂ ರಕ್ತಭೋ
ಜನ ಮಾಡಬಾರದೆಂದು ಇಸ್ರಾಯೇಲ್ಯರಿಗೆ ಆಜ್ಞಾ
ಪಿಸಿದ್ದೇನೆ.

ಇಸ್ರಾಯೇಲ್ಯರಲ್ಲಿಯಾಗಲಿ ಅವರ ನಡುವೆ ಇಳು 13
ಕೊಂಡಿರುವ ಅನ್ಯದೇಶದವರಲ್ಲಿಯಾಗಲಿ ಯಾವ
ನಾದರೂ ಬೇಟೆಯಾಡಿ ತಿನ್ನತಕ್ಕ ಮೃಗವನ್ನು ಇಲ್ಲವೆ
ಪಕ್ಷಿಯನ್ನು ಹಿಡಿದರೆ ಅವನು ಅದರ ರಕ್ತವನ್ನು
ಸುರಿಸಿ ಮಣ್ಣಿನಿಂದ ಮುಚ್ಚಿಬಿಡಬೇಕು. ಯಾಕಂದರೆ 14

1) ಮೂಲ: ಇಸ್ರಾಯೇಲನ ಮನೆತನದವರಲ್ಲಿಯಾಗಲಿ. 2) ಮೂಲ: ಇಸ್ರಾಯೇಲನ ಮನೆತನದವರಲ್ಲಿ. 3) ಅಂದರೆ ...
ದಿಂದ ಕೂಡಿರುವ ಮಾಂಸವನ್ನು.

ಪ್ರತಿದೇಹಿಗೂ ರಕ್ತವೇ ಪ್ರಾಣಾಧಾರವು. ಆದಕಾರಣ
ನಾನು ಇಸ್ರಾಯೇಲ್ಯರಿಗೆ—ಪ್ರತಿಪ್ರಾಣಿಗೂ ರಕ್ತವೇ
ಪ್ರಾಣಾಧಾರವಾದದರಿಂದ ನೀವು ಯಾವ ವಿಧವಾದ
ಪ್ರಾಣಿಯ ರಕ್ತವನ್ನೂ ಉಣ್ಣಬಾರದು; ರಕ್ತಭೋಜನ
ಮಾಡಿದವನಿಗೆ ಬಹಿಷ್ಕಾರವಾಗಬೇಕೆಂದು ಆಜ್ಞಾ
ಪಿಸಿದ್ದೇನೆ.
15 ತಾನಾಗಿ ಸತ್ತುಬಿದ್ದದ್ದನ್ನಾಗಲಿ ಕಾಡುಮೃಗ
ಕೊಂದದ್ದನ್ನಾಗಲಿ ತಿಂದವನು ಸ್ವದೇಶದವನಾದರೂ
ಅನ್ಯದೇಶದವನಾದರೂ ಅವನು ತನ್ನ ಬಟ್ಟೆಗಳನ್ನು
ಒಗೆದುಕೊಂಡು ಸ್ನಾನಮಾಡಬೇಕು; ಆ ಸಾಯಂಕಾ
ಲದ ವರೆಗೆ ಅಶುದ್ಧನಾಗಿದ್ದು ಬಳಿಕ ಶುದ್ಧನಾಗುವನು.
16 ಅವನು ತನ್ನ ಬಟ್ಟೆಗಳನ್ನು ಒಗೆದುಕೊಳ್ಳದೆಯೂ ಸ್ನಾನ
ಮಾಡದೆಯೂ ಹೋದರೆ ತನ್ನ ಪಾಪದ ಫಲವನ್ನು
ಅನುಭವಿಸಬೇಕು.

ಧರ್ಮವಿರುದ್ಧವಾದ ಮದುವೆಗಳನ್ನೂ ಕಾಮುಕವ್ಯಾಪಾರ
ಗಳನ್ನೂ ಮಾಡಕೂಡದೆಂಬುವ ವಿಧಿ.

18 2 ಯೆಹೋವನು ಮೋಶೆಗೆ ಹೇಳಿದ್ದೇನಂದರೆ—ನೀ
ನು ಇಸ್ರಾಯೇಲ್ಯರಿಗೆ ಹೀಗೆ ಆಜ್ಞಾಪಿಸಬೇಕು—
ನಾನು ನಿಮ್ಮ ದೇವರಾಗಿರುವ ಯೆಹೋವನು.
3 ನೀವು ವಾಸವಾಗಿದ್ದ ಐಗುಪ್ತದೇಶದ ಆಚಾರಗಳನ್ನು
ಅನುಸರಿಸಬಾರದು; ನಾನು ನಿಮ್ಮನ್ನು ಬರಮಾಡುವ
ಕಾನಾನ್‌ದೇಶದ ಆಚರಣೆಗಳನ್ನೂ ನೀವು ಅನು
ಸರಿಸಬಾರದು; ಅವರಲ್ಲಿರುವ ನಿಯಮಗಳಿಗೆ ನೀವು
4 ಒಳಗಾಗಬಾರದು. ಯೆಹೋವನೆಂಬ ನಾನೇ ನಿಮ್ಮ
ದೇವರಾಗಿರುವದರಿಂದ ನನ್ನ ನಿರ್ಣಯಗಳ ಪ್ರಕಾ
ರವೇ ನೀವು ನಡೆಯಬೇಕು, ನನ್ನ ವಿಧಿಗಳನ್ನು ಅನು
5 ಸರಿಸಬೇಕು. ನನ್ನ ಆಜ್ಞಾವಿಧಿಗಳ ಪ್ರಕಾರ ನಡೆದು
ಕೊಳ್ಳುವವರು ಆ ಆಜ್ಞಾವಿಧಿಗಳ ಮೂಲಕ ಬದುಕು
ವರು. ಆದದರಿಂದ ನೀವು ಅವುಗಳನ್ನೇ ಅನುಸರಿಸ
ಬೇಕು; ನಾನು ಯೆಹೋವನು.
6 ನಿಮ್ಮಲ್ಲಿ ಯಾರೂ ರಕ್ತಸಂಬಂಧವುಳ್ಳ ಸ್ತ್ರೀಯ
ಸಹವಾಸವನ್ನು ಮಾಡಬಾರದು; ನಾನು ಯೆಹೋ
7 ವನು. ತಾಯಿಯನ್ನು ಎಷ್ಟು ಮಾತ್ರವೂ ಸಂಗ
ಮಿಸಬಾರದು; ಆಕೆ ಹೆತ್ತವಳಲ್ಲವೇ; ಸಂಗಮಿಸಿದರೆ
8 ತಂದೆಗೆ ಮಾನಭಂಗವಾಗುವದು. ಮಲತಾಯಿಯ
ಸಂಗ ಮಾಡಬಾರದು; ಆಕೆ ತಂದೆಗೆ ಹೆಂಡತಿಯಾದವ
9 ಳಲ್ಲವೇ. ತಂದೆಯ ಮಗಳನ್ನಾಗಲಿ ತಾಯಿಯ
ಮಗಳನ್ನಾಗಲಿ ಇಟ್ಟುಕೊಳ್ಳಬಾರದು: ಅವರು 1)ಒಡ
ಹುಟ್ಟಿದವರಾದರೂ ಪರಸ್ತ್ರೀಯಲ್ಲಿ ಹುಟ್ಟಿದವರಾದ
10 ರೂ ನಿಮಗೆ ಅಕ್ಕತಂಗಿಯರಲ್ಲವೇ. ಮಗನ ಮಗಳ
ನ್ನಾಗಲಿ ಮಗಳ ಮಗಳನ್ನಾಗಲಿ ಇಟ್ಟುಕೊಳ್ಳಬಾ
11 ರದು; ಅವರು ನಿಮಗೆ ಮಕ್ಕಳಂತಲ್ಲವೇ. ತಂದೆಯ
ಮತ್ತೊಬ್ಬ ಹೆಂಡತಿಯಲ್ಲಿ ಹುಟ್ಟಿದವಳ ಸಂಗ ಮಾಡ
12 ಬಾರದು; ಆಕೆ ಸಹೋದರಿ. ತಂದೆಯ ಒಡಹುಟ್ಟಿದ
ವಳ ಸಂಗ ಮಾಡಬಾರದು; ಆಕೆ ತಂದೆಯ ರಕ್ತ
13 ಸಂಬಂಧಿ. ತಾಯಿಯ ಒಡಹುಟ್ಟಿದವಳ ಸಂಗ

ಮಾಡಬಾರದು; ಆಕೆ ತಾಯಿಯ ರಕ್ತಸಂಬಂಧಿ
ತಂದೆಯ ಅಣ್ಣತಮ್ಮಂದಿರ ಹೆಂಡತಿಯರ ಸಂಗ ಮಾ
ಬಾರದು; ಅವರು ದೊಡ್ಡತಾಯಿ ಚಿಕ್ಕತಾಯಿ
ಸೊಸೆಯ ಸಹವಾಸ ಮಾಡಬಾರದು; ಆಕೆ ಮಗ
ಹೆಂಡತಿಯಾದವಳಲ್ಲವೇ. ಅತ್ತಿಗೆ ನಾದಿನಿಯ
ಸಂಗ ಮಾಡಬಾರದು; ಅವರು ಅಣ್ಣ ತಮ್ಮಂದಿ
ಹೆಂಡತಿಯರಲ್ಲವೇ. ಒಬ್ಬ ಸ್ತ್ರೀಯನ್ನು ಮದು
ಮಾಡಿಕೊಂಡರೆ ಆಕೆಯ ಮಗಳನ್ನಾಗಲಿ ಮೊಮ್ಮಗ
ನ್ನಾಗಲಿ ಸಂಗಮಿಸಬಾರದು; ಅವರು ರಕ್ತಸಂಬಂ
ಗಳಾದದರಿಂದ ಅದು ದುಷ್ಕಾರ್ಯ. ಹೆಂಡತಿ ಜೀ
ದಿಂದಿರುವಾಗಲೇ ಆಕೆಯ ಒಡಹುಟ್ಟಿದವಳನ್ನೂ ಮದ
ವೆಮಾಡಿಕೊಂಡು ಹೆಂಡತಿಗೆ ಮನಸ್ತಾಪವನ್ನುಂಟು
ಮಾಡಬಾರದು.
ಮುಟ್ಟಿನಿಂದ ಅಶುದ್ಧಳಾದ ಸ್ತ್ರೀಯನ್ನು ಸಂಗ
ಮಿಸಬಾರದು. ಪರಸ್ತ್ರೀಗಮನದಿಂದ ಅಪರಿಶುದ್ಧರಾ
ಬಾರದು.
ನಿಮ್ಮ ಮಕ್ಕಳಲ್ಲಿ ಯಾರನ್ನಾದರೂ ಮೋಲೆಕನಿ
ಸಮರ್ಪಿಸಿ ನಿಮ್ಮ ದೇವರ ಹೆಸರನ್ನು ಅಪಕೀರ್ತಿ
ಗುರಿಮಾಡಬಾರದು; ನಾನು ಯೆಹೋವನು.
ಸ್ತ್ರೀಯನ್ನು ಸಂಗಮಿಸುವಂತೆ ಪುರುಷನನ್ನು ಸಂಗ
ಮಿಸಬಾರದು; ಅದು ಹೇಸಿಗೆಯಾದ ಕೆಲಸ
ಪಶುಸಂಗಮವನ್ನು ಮಾಡಿ ಅಶುದ್ಧರಾಗಬಾರದು
ಯಾವ ಸ್ತ್ರೀಯೂ ಸಂಗಮಕ್ಕಾಗಿ ಪಶುವಿನ ಮುಂ
ನಿಲ್ಲಬಾರದು; ಅದು ಸ್ವಭಾವಕ್ಕೆ ವಿರುದ್ಧವಾ
ದದ್ದು.
ಈ ದುರಾಚಾರಗಳಲ್ಲಿ ಯಾವದರಿಂದಲೂ ನೀ
ಅಶುದ್ಧರಾಗಬಾರದು. ನಾನು ನಿಮ್ಮ ಎದುರಿನಿಂ
ಹೊರಡಿಸುವ ಜನಾಂಗಗಳವರು ಇಂಥ ದುರಾಚಾ
ಗಳಿಂದ ಅಶುದ್ಧರಾದರು. ಅವರ ದೇಶವು ಅಶುದ್ಧ
ವಾಗಿ ಹೋದದರಿಂದ ಅವರ ಪಾಪಕೃತ್ಯಗಳಿಗಾ
ಅವರನ್ನು ಶಿಕ್ಷಿಸಿದ್ದೇನೆ; ಆ ದೇಶವು ತನ್ನಲ್ಲಿ ವಾಸಿ
ದವರನ್ನು ಕಾರಿಬಿಟ್ಟಿತು. ಆದದರಿಂದ ಸ್ವದೇಶದ
ರಾದ ನಿಮ್ಮಲ್ಲಿಯೂ ನಿಮ್ಮ ನಡುವೆ ಇಳುಕೊಂ
ರುವ ಅನ್ಯದೇಶದವರಲ್ಲಿಯೂ ಯಾರೂ ಈ ಹೇಸಿ
ಯಾದ ಕಾರ್ಯಗಳಲ್ಲಿ ಒಂದನ್ನಾದರೂ ನಡಿಸ
ಎಲ್ಲರೂ ನನ್ನ ಆಜ್ಞಾವಿಧಿಗಳನ್ನು ಅನುಸರಿಸಿ ನಡೆಯ
ಬೇಕು. ನಿಮಗಿಂತ ಮುಂಚೆ ಆ ದೇಶದಲ್ಲಿ ಇದ್ದ
ವರು ಇಂಥ ಹೇಸಿಗೆಯಾದ ಕೆಲಸಗಳನ್ನು ಮಾಡಿದ
ರಿಂದ ಆ ದೇಶವು ಅಶುದ್ಧವಾಗಿ ಹೋಯಿತಲ್ಲಾ.
ದೇಶವು ನಿಮಗಿಂತ ಮುಂಚೆ ಇದ್ದ ಜನಾಂಗಗಳನ
ಕಾರಿಬಿಟ್ಟ ಪ್ರಕಾರವೇ ನಿಮ್ಮಿಂದ ಅಶುದ್ಧವಾದರೆ ನಿಮ
ನ್ನೂ ಕಾರಿಬಿಟ್ಟೀತು. ಯಾವನಾದರೂ ಈ ಹೇಸಿ
ಯಾದ ಕೆಲಸಗಳಲ್ಲಿ ಒಂದನ್ನಾದರೂ ಮಾಡಿದ
ಅವನು 2)ಕುಲದಿಂದ ತೆಗೆದುಹಾಕಲ್ಪಡಬೇಕು. ಆ
ದರಿಂದ ನಿಮಗಿಂತ ಮುಂಚೆ ನಡೆಯುತ್ತಿದ್ದ ಅಸಹ
ವಾದ ಆಚರಣೆಗಳನ್ನು ನಡಿಸಿ ನಿಮ್ಮನ್ನು ಅಶುದ
ಮಾಡಿಕೊಳ್ಳದೆ ನನ್ನ ವಿಧಿಗಳನ್ನೇ ಅನುಸರಿಸಿ ನ
ಯಬೇಕು; ನಾನು ನಿಮ್ಮ ದೇವರಾದ ಯೆಹೋವನು

1) ಮೂಲ: ಮನೆಯಲ್ಲಿ; ಅಂದರೆ ಧರ್ಮದ ತಾಯಿಯಲ್ಲಿ.

2) ಅಥವಾ: ಮರಣಶಿಕ್ಷೆಗೆ ಗುರಿಯಾಗಬೇಕು.

ದೇವಜನರಾದ ಇಸ್ರಾಯೇಲ್ಯರು ಅನುಸರಿಸಬೇಕಾದ
ಧರ್ಮವಿಧಿಗಳು.

ಯೆಹೋವನು ಮೋಶೆಗೆ ಹೇಳಿದ್ದೇನಂದರೆ—
2 ನೀನು ಇಸ್ರಾಯೇಲ್ಯರ ಸಮೂಹದವರಿಗೆ ಹೀಗೆ
ಜ್ಞಾಪಿಸಬೇಕು—
ನಿಮ್ಮ ದೇವರಾದ ಯೆಹೋವನೆಂಬ ನಾನು ಪರಿ
ದ್ಧನಾಗಿರುವದರಿಂದ ನೀವೂ ಪರಿಶುದ್ಧರಾಗಿರಬೇಕು.
ಪ್ರತಿಯೊಬ್ಬನು ತನ್ನ ತಾಯಿತಂದೆಗಳ ವಿಷಯ
ಲ್ಲಿ ಭಯಭಕ್ತಿಯಿಂದ ನಡೆದುಕೊಳ್ಳಬೇಕು.
ನು ನೇಮಿಸಿರುವ ಸಬ್ಬತ್‌ದಿನಗಳನ್ನು ಆಚರಿಸ
ಬೇಕು. ನಾನು ನಿಮ್ಮ ದೇವರಾದ ಯೆಹೋವನು.
ಸುಳ್ಳುದೇವರುಗಳ ಕಡೆಗೆ ತಿರುಗಿಕೊಳ್ಳಬಾರದು;
ದೇವರೆಂದು ಎರಕದ ವಿಗ್ರಹಗಳನ್ನು ಮಾಡಿಕೊಳ್ಳಬಾ
ದು. ನಾನು ನಿಮ್ಮ ದೇವರಾದ ಯೆಹೋವನು.
ಸಮಾಧಾನಯಜ್ಞಗಳನ್ನು ಯೆಹೋವನಿಗೆ ಸಮ
ರ್ಪಿಸುವಾಗ ಆತನಿಗೆ ಮೆಚ್ಚಿಕೆಯಾದ ರೀತಿಯಲ್ಲಿ
ಮರ್ಪಿಸಬೇಕು. ನೀವು ಮಾಡುವ ಯಜ್ಞದ ಮಾಂ
ವನ್ನು ಆ ದಿನದಲ್ಲಿಯಾಗಲಿ ಮರುದಿನದಲ್ಲಿಯಾಗಲಿ
ಜನಮಾಡಬೇಕು. ಮೂರನೆಯ ದಿನದ ವರೆಗೆ
ನಾದರೂ ಮಿಕ್ಕಿದ್ದರೆ ಅದನ್ನು ಬೆಂಕಿಯಿಂದ ಸುಟ್ಟು
ಡಬೇಕು. ಮೂರನೆಯ ದಿನದ ತನಕ ಮಿಕ್ಕಿದ್ದು
ಹೇಯವಾದದರಿಂದ ಅದರಲ್ಲಿ ಏನಾದರೂ ತಿಂದರೆ ಆ
ಯಜ್ಞವು ಯೆಹೋವನಿಗೆ ಅಂಗೀಕಾರವಾಗುವದೇ
ಲ್ಲ. ಅದರಲ್ಲಿ ಏನಾದರೂ ತಿಂದವನು ಯೆಹೋ
ನ ದ್ರವ್ಯವನ್ನು ಹೊಲೆಮಾಡಿದವನಾದದರಿಂದ ತನ್ನ
ಪಾಪದ ಫಲವನ್ನು ಅನುಭವಿಸಬೇಕು; ಅವನು 1)ಕುಲ
ದಿಂದ ತೆಗೆದುಹಾಕಲ್ಪಡಬೇಕು.
ನೀವು ಪೈರುಗಳನ್ನು ಕೊಯ್ಯುವಾಗ ಹೊ
ಳ ಮೂಲೆಗಳಲ್ಲಿರುವದನ್ನೆಲ್ಲಾ ಕೊಯ್ಯಬಾರದು;
ತ್ತು ಕೊಯ್ದಾಗ ಹಕ್ಕಲಾಯಬಾರದು. ದ್ರಾಕ್ಷೆ
ಯ ತೋಟಗಳಲ್ಲಿಯೂ ಹಕ್ಕಲಾಯಕೂಡದು;
ದುರಿದ ಹಣ್ಣುಗಳನ್ನು ಆರಿಸಿಕೊಳ್ಳದೆ ಬಡವರಿಗೂ
ರದೇಶಿಗಳಿಗೂ ಬಿಟ್ಟುಬಿಡಬೇಕು. ನಾನು ನಿಮ್ಮ
ದೇವರಾದ ಯೆಹೋವನು.
ಕದಿಯಬಾರದು; ಮೋಸಮಾಡಬಾರದು; ಒಬ್ಬ
ಗೊಬ್ಬರು ಸುಳ್ಳಾಡಬಾರದು. ನನ್ನ ಹೆಸರಿನ ಮೇಲೆ
ಳ್ಳಾಣೆಯಿಟ್ಟು ನಿಮ್ಮ ದೇವರ ನಾಮವನ್ನು ಅಪ
ಕೀರ್ತಿಗೆ ಒಳಪಡಿಸಬಾರದು. ನಾನು ಯೆಹೋವನು.
ಮತ್ತೊಬ್ಬನನ್ನು ಬಲಾತ್ಕರಿಸಬಾರದು; ಅವನ
ೊತ್ತನ್ನು ಅಪಹರಿಸಬಾರದು. ಕೂಲಿಯವನ ಕೂಲಿ
ಯನ್ನು ಮರುದಿನದ ವರೆಗೆ ನಿನ್ನ ಬಳಿಯಲ್ಲಿ ಇಟ್ಟು
ಕೊಳ್ಳಬಾರದು. ಕಿವುಡರನ್ನು ದೂಷಿಸಬಾರದು; ಕುರು
ಡರು ನಡೆಯುವ ದಾರಿಯಲ್ಲಿ ಕಾಲು ಎಡವುವಂತೆ
ಕಲ್ಲನ್ನು ಇಡಬಾರದು; ನಿಮ್ಮ ದೇವರಿಗೆ ಭಯಭಕ್ತಿ
ಯಿಂದ ನಡೆದುಕೊಳ್ಳಬೇಕು. ನಾನು ಯೆಹೋವನು.
ನ್ಯಾಯವನ್ನು ವಿಚಾರಿಸುವಾಗ ಅನ್ಯಾಯವಾದ
ತೀರ್ಪನ್ನು ಮಾಡಬಾರದು. ಬಡವನ ಬಡತನವನ್ನಾ
ಗಲಿ ದೊಡ್ಡ ಮನುಷ್ಯನ ಘನತೆಯನ್ನಾಗಲಿ ಲಕ್ಷ್ಯ
ಮಾಡದೆ ಪಕ್ಷಪಾತವಿಲ್ಲದೆ ತೀರ್ಪನ್ನು ಕೊಡಬೇಕು.
ಪರಿಚಯವುಳ್ಳವರಲ್ಲಿ ಒಬ್ಬರ ಮೇಲೊಬ್ಬರು ಚಾಡಿಹೇಳ 16
ಬಾರದು. ಮತ್ತೊಬ್ಬನಿಗೆ ಮರಣಶಿಕ್ಷೆಯಾಗಲೇಬೇ
ಕೆಂದು ಛಲಹಿಡಿಯಬಾರದು. ನಾನು ಯೆಹೋವನು.
ಸಹೋದರನ ವಿಷಯವಾಗಿ ಮನಸ್ಸಿನಲ್ಲಿ ದ್ವೇಷ 17
ವನ್ನು ಇಟ್ಟುಕೊಳ್ಳಬಾರದು. ನೆರೆಯವನ ದೋಷಕ್ಕೆ
ನೀವು ಒಳಗಾಗದಂತೆ ಅವನ ತಪ್ಪನ್ನು ಅವನಿಗೆ ತಿಳಿ
ಸಲೇ ಬೇಕು. ನಿಮ್ಮ ಸ್ವಜನರಲ್ಲಿ ಯಾರಿಗಾದರೂ 18
ಕೇಡಿಗೆ ಕೇಡನ್ನು ಮಾಡದೆ ಮನಸ್ಸಿನಲ್ಲಿ ಮತ್ಸರವನ್ನು
ಇಟ್ಟುಕೊಳ್ಳದೆ ನಿಮ್ಮ ನೆರೆಯವರನ್ನು ನಿಮ್ಮಂತೆಯೇ
ಪ್ರೀತಿಸಬೇಕು. ನಾನು ಯೆಹೋವನು.
ನನ್ನ ಆಜ್ಞೆಗಳನ್ನು ನೀವು ಅನುಸರಿಸಿ ನಡೆಯ 19
ಬೇಕು. ಪಶುಗಳಿಗೆ ಬೇರೆ ಜಾತಿಯ ಪಶುಗಳನ್ನು
ಹಾರಿಸಬಾರದು; ನಿಮ್ಮ ಹೊಲಗಳಲ್ಲಿ ಮಿಶ್ರಬೀಜಗಳ
ನ್ನು ಬಿತ್ತಬಾರದು; ನಾರೂ ಉಣ್ಣೆಯೂ ಕೂಡಿರುವ
ಬಟ್ಟೆಯನ್ನು ಹಾಕಿಕೊಳ್ಳಬಾರದು.
ಒಬ್ಬನ ಆಧೀನದಲ್ಲಿರುವ ದಾಸಿ ಹಣಕೊಡುವದ 20
ರಿಂದಾಗಲಿ ಉಚಿತವಾಗಿಯಾಗಲಿ ಬಿಡುಗಡೆಯನ್ನು
ಹೊಂದದೆ ಇರುವಲ್ಲಿ ಯಾವನಾದರೂ ಅವಳಲ್ಲಿ ಕೂಡಿ
ದರೆ ಅವರಿಗೆ ವಿಧಿಸಬೇಕಾದ ಶಿಕ್ಷೆಯ ವಿಷಯವಾಗಿ
ನ್ಯಾಯವಿಚಾರಣೆಯಾಗಬೇಕು. ಅವಳು ಸ್ವತಂತ್ರ
ಳಲ್ಲವಾದದರಿಂದ ಅವರಿಗೆ ಮರಣಶಿಕ್ಷೆಯನ್ನು ವಿಧಿಸ
ಬಾರದು. ಆ ಪುರುಷನು ಪ್ರಾಯಶ್ಚಿತ್ತಯಜ್ಞಕ್ಕಾಗಿ 21
ಯೆಹೋವನ ಸನ್ನಿಧಿಗೆ ದೇವದರ್ಶನದ ಗುಡಾರದ
ಬಾಗಲಿಗೆ ಒಂದು ಟಗರನ್ನು ತರಬೇಕು. ಅವನ ದೋಷ 22
ಪರಿಹಾರಕ್ಕಾಗಿ ಯಾಜಕನು ಆ ಟಗರನ್ನು ಪ್ರಾಯ
ಶ್ಚಿತ್ತಯಜ್ಞವಾಗಿ ಯೆಹೋವನಿಗೆ ಸಮರ್ಪಿಸಿ ಅವನಿ
ಗೋಸ್ಕರ ದೋಷಪರಿಹಾರವನ್ನು ಮಾಡಿದಾಗ ಅವನಿಗೆ
ಕ್ಷಮಾಪಣೆಯಾಗುವದು.
ನೀವು ಆ ದೇಶದಲ್ಲಿ ಸೇರಿದಾಗ ಆಹಾರಕ್ಕಾಗಿ 23
ಯಾವ ಜಾತಿಯ ಹಣ್ಣಿನ ಸಸಿಯನ್ನು ನೆಟ್ಟರೂ ಅದರ
ಫಲವನ್ನು ಮೂರು ವರುಷದ ತನಕ ಅಶುದ್ಧವೆಂದೆಣಿಸಿ
ತಿನ್ನದಿರಬೇಕು. ನಾಲ್ಕನೆಯ ವರುಷದಲ್ಲಿ ಅದರ 24
ಎಲ್ಲಾ ಹಣ್ಣುಗಳೂ ದೇವರವಾಗಿರಬೇಕು; ಅವುಗಳನ್ನು
ಯೆಹೋವನಿಗೆ ಕೃತಜ್ಞತೆಯ ಕಾಣಿಕೆಯನ್ನಾಗಿ ಸಮ
ರ್ಪಿಸಬೇಕು. ಐದನೆಯ ವರುಷದಲ್ಲಿ ಅದರಿಂದುಂ 25
ಟಾಗುವ ಆದಾಯವು ನಿಮ್ಮದೇ ಆಗಿರುವದು; ಅದರ
ಫಲಗಳನ್ನು ನೀವು ತಿನ್ನಬಹುದು. ನಾನು ನಿಮ್ಮ
ದೇವರಾದ ಯೆಹೋವನು.
ರಕ್ತಸಹಿತವಾದ ಯಾವ ಮಾಂಸವನ್ನೂ ತಿನ್ನ 26
ಬಾರದು. ಯಂತ್ರಮಂತ್ರಗಳನ್ನು ಮಾಡಬಾರದು,
ಶಕುನಗಳನ್ನು ನೋಡಬಾರದು. ಚಂಡಿಕೆ ಬಿಡ 27
ಬಾರದು, ಗಡ್ಡವನ್ನು ವಿಕಾರಗೊಳಿಸಬಾರದು.
ಸತ್ತವರಿಗೋಸ್ಕರ ದುಃಖವನ್ನು ಸೂಚಿಸುವದಕ್ಕಾಗಿ 28
ದೇಹವನ್ನು ಗಾಯಮಾಡಿಕೊಳ್ಳಬಾರದು. ಶರೀರದ
ಮೇಲೆ ಹಚ್ಚೆ ಚುಚ್ಚಿಸಿಕೊಳ್ಳಬಾರದು. ನಾನು
ಯೆಹೋವನು.

1) ಅಥವಾ: ಮರಣಶಿಕ್ಷೆಗೆ ಗುರಿಯಾಗಬೇಕು.

29 ಮಗಳನ್ನು ಬಸವಿಬಿಟ್ಟು ಸೂಳೆಯನ್ನಾಗಿ ಮಾಡ
ಬಾರದು. ಹಾಗೆ ಮಾಡಿದರೆ ಸೂಳೆಗಾರಿಕೆ ಪ್ರಬಲ
30 ವಾಗಿ ದೇಶದಲ್ಲೆಲ್ಲಾ ತುಂಬಿಹೋಗುವದು. ನಾನು
ನೇಮಿಸಿರುವ ಸಬ್ಬತ್‍ದಿನಗಳನ್ನು ಆಚರಿಸಬೇಕು; ನನ್ನ
ದೇವಸ್ಥಾನದ ವಿಷಯದಲ್ಲಿ ಭಯಭಕ್ತಿಯುಳ್ಳವರಾಗಿರ
ಬೇಕು. ನಾನು ಯೆಹೋವನು.
31 ಸತ್ತವರಲ್ಲಿ ವಿಚಾರಿಸುವವರ ಮತ್ತು ಬೇತಾಳಿಕರ
ಹತ್ತಿರ ಹೋಗಬಾರದು; ಅವರ ಆಲೋಚನೆಯನ್ನು
ಕೇಳಿ ಅಶುದ್ಧರಾಗಬಾರದು. ನಾನು ನಿಮ್ಮ ದೇವ
ರಾದ ಯೆಹೋವನು.
32 ತಲೆನರೆತ ವೃದ್ಧರ ಮುಂದೆ ಎದ್ದು ನಿಂತು ಅವ
ರನ್ನು ಸನ್ಮಾನಿಸಬೇಕು. ನಿಮ್ಮ ದೇವರಲ್ಲಿ ಭಯ
ಭಕ್ತಿಯುಳ್ಳವರಾಗಿರಬೇಕು; ನಾನು ಯೆಹೋವನು.
33 ನಿಮ್ಮ ದೇಶದಲ್ಲಿ ಇಳುಕೊಂಡಿರುವ ಪರದೇಶದವ
34 ರಿಗೆ ಅನ್ಯಾಯವೇನೂ ಮಾಡಬಾರದು. ಅವರು
ನಿಮಗೆ ಸ್ವದೇಶದವರಂತೆಯೇ ಇರಬೇಕು; ಅವರನ್ನು
ನಿಮ್ಮಂತೆಯೇ ಪ್ರೀತಿಸಬೇಕು- ಐಗುಪ್ತದೇಶದಲ್ಲಿ
ದ್ದಾಗ ನೀವೂ ಅನ್ಯರಾಗಿದ್ದಿರಲ್ಲವೇ. ನಾನು ನಿಮ್ಮ
ದೇವರಾದ ಯೆಹೋವನು.
35 ನ್ಯಾಯವಿಚಾರಣೆ, ತೂಕ, ಅಳತೆ, ಪರಿಮಾಣ
ಇವುಗಳಲ್ಲಿ ನೀವು ನ್ಯಾಯವಿರುದ್ಧವಾಗಿ ನಡೆಯ
36 ಬಾರದು. ತಕ್ಕಡಿ, ತೂಕದ ಕಲ್ಲು, ಕೊಳಗ, ಸೇರು
ಇವುಗಳೆಲ್ಲಾ ನ್ಯಾಯವಾಗಿಯೇ ಇರಬೇಕು. ನಾನು
ನಿಮ್ಮನ್ನು ಐಗುಪ್ತದೇಶದಿಂದ ಬರಮಾಡಿದ ನಿಮ್ಮ
37 ದೇವರಾದ ಯೆಹೋವನು. ಆದದರಿಂದ ನನ್ನ ಆಜ್ಞಾ
ವಿಧಿಗಳನ್ನೆಲ್ಲಾ ನೀವು ಅನುಸರಿಸಿ ನಡೆಯಬೇಕು.
ನಾನು ಯೆಹೋವನು.

ಹಿಂದಿನ ಎರಡು ಅಧ್ಯಾಯಗಳಲ್ಲಿ ಹೇಳಲ್ಪಟ್ಟ ದುರಾಚಾರಗಳಿಗೆ
ನೇಮಕವಾದ ಶಿಕ್ಷೆಗಳು.

20 ಯೆಹೋವನು ಮೋಶೆಗೆ ಹೇಳಿದ್ದೇನಂದರೆ—
2 ನೀನು ಇಸ್ರಾಯೇಲ್ಯರಿಗೆ ಹೀಗೆ ಹೀಗೆ ಆಜ್ಞಾ
ಪಿಸಬೇಕು—
ಇಸ್ರಾಯೇಲ್ಯರಲ್ಲಾಗಲಿ ಅವರ ನಡುವೆ ಇಳು
ಕೊಂಡಿರುವ ಪರದೇಶದವರಲ್ಲಾಗಲಿ ಯಾವನಾದರೂ
ತನ್ನ ಮಕ್ಕಳಲ್ಲಿ ಯಾರನ್ನಾದರೂ ಮೋಲೆಕನಿಗೆ
ಕೊಟ್ಟರೆ ಅವನಿಗೆ ಮರಣಶಿಕ್ಷೆಯಾಗಬೇಕು; ದೇಶದ
3 ಜನರು ಅವನನ್ನು ಕಲ್ಲೆಸೆದು ಕೊಲ್ಲಬೇಕು. ಅವನು
ತನ್ನ ಮಕ್ಕಳಲ್ಲಿ ಯಾರನ್ನಾದರೂ ಮೋಲೆಕನಿಗೆ
ಕೊಟ್ಟು ನನ್ನ ದೇವಸ್ಥಾನವನ್ನು ಅಶುದ್ಧಮಾಡಿ
ನನ್ನ ಪರಿಶುದ್ಧವಾದ ಹೆಸರನ್ನು ಅಪಕೀರ್ತಿಗೆ ಒಳ
ಪಡಿಸಿದದರಿಂದ ನಾನು ಅವನಿಗೆ ವಿಮುಖನಾಗಿ
ಅವನನ್ನು ಕುಲದಿಂದ ತೆಗೆದುಹಾಕುವೆನು.
4 ಆ ಮನುಷ್ಯನು ತನ್ನ ಮಕ್ಕಳಲ್ಲಿ ಯಾರ
ನ್ನಾದರೂ ಮೋಲೆಕನಿಗೆ ಕೊಡಲಾಗಿ ದೇಶದವರು
ಅವನನ್ನು ಕೊಲ್ಲದೆ ಅವನು ಮಾಡಿದ ಕೆಲಸವನ್ನು
5 ನೋಡಿಯೂ ನೋಡದವರಂತಿದ್ದರೆ ನಾನಂತೂ ಆ
ಮನುಷ್ಯನಿಗೂ ಅವನ ಕುಟುಂಬದವರಿಗೂ ವಿಮುಖ
ನಾಗಿ ಅವನನ್ನು ಮಾತ್ರವಲ್ಲದೆ ಅವನನ್ನು ಹೊಂದಿ

ಕೊಂಡು ದೇವದ್ರೋಹಿಗಳಾಗಿ ಮೋಲೆಕನಿಗೆ ಸೇ
ಮಾಡಿದವರೆಲ್ಲರನ್ನೂ ಕುಲದಿಂದ ತೆಗೆದುಹಾಕ
ವೆನು.
ಯಾವನಾದರೂ ಸತ್ತವರಲ್ಲಿ ವಿಚಾರಿಸುವವ
ಅಥವಾ ಬೇತಾಳಿಕರ ಬಳಿಗೆ ಹೋಗಿ ಅವರ ಆಲೋಚ
ಕೇಳಿಕೊಂಡು ದೇವದ್ರೋಹಿಯಾದರೆ ನಾನು ಅ
ಮನುಷ್ಯನಿಗೆ ವಿಮುಖನಾಗಿ ಅವನನ್ನು ಕುಲದಿಂ
ತೆಗೆದುಹಾಕುವೆನು. ನಾನು ನಿಮ್ಮ ದೇವರಾ
ಯೆಹೋವನಾಗಿರುವದರಿಂದ ನೀವು ನನ್ನವರಾಗಿ ಪ
ಶುದ್ಧರಾಗಿರಬೇಕು. ನನ್ನ ಆಜ್ಞೆಗಳನ್ನು ಅನುಸರಿ
ನಡೆಯಬೇಕು. ನಾನು ನಿಮ್ಮನ್ನು ಪರಿಶುದ್ಧಜನವಾಗ
ವಂತೆ ಮಾಡುವ ಯೆಹೋವನು.
ತಂದೆಯನ್ನಾಗಲಿ ತಾಯಿಯನ್ನಾಗಲಿ ದೂಷಿಸ
ವವನಿಗೆ ಮರಣಶಿಕ್ಷೆಯಾಗಬೇಕು. ತಂದೆತಾಯಿ
ಗಳನ್ನು ದೂಷಿಸಿದದರಿಂದ ಅವನಿಗೆ ಸಂಭವಿಸಿ
ಮರಣಶಿಕ್ಷೆಗೆ ಅವನೇ ಕಾರಣನು.
ಯಾವನಾದರೂ ಪರಪತ್ನಿಯನ್ನು ಸಂಗಮಿಸಿದ
ಅವರಿಬ್ಬರಿಗೂ ಮರಣಶಿಕ್ಷೆಯಾಗಬೇಕು. ಯಾ
ನಾದರೂ ಮಲತಾಯಿಯನ್ನು ಕೂಡಿದರೆ ಅವನ
ತಂದೆಗೇ ಮಾನಭಂಗಮಾಡಿದ ಹಾಗಾಯಿತು; ಅ
ರಿಬ್ಬರಿಗೂ ಮರಣಶಿಕ್ಷೆಯಾಗಬೇಕು; ಆ ಶಿಕ್ಷೆಗ
ಅವರೇ ಕಾರಣರು. ಯಾವನಾದರೂ ಸೊಸೆಯನ್ನು
ಸಂಗಮಿಸಿದರೆ ಅವರಿಬ್ಬರಿಗೂ ಮರಣಶಿಕ್ಷೆಯಾಗ
ಬೇಕು; ಅವರು ಧರ್ಮವಿರುದ್ಧವಾದ ಕಾರ್ಯವನ್ನು
ಮಾಡಿದದರಿಂದ ಆ ಶಿಕ್ಷೆಗೆ ಅವರೇ ಕಾರಣರು
ಯಾವನಾದರೂ ಸ್ತ್ರೀಯನ್ನು ಸಂಗಮಿಸುವಂತ
ಪುರುಷನನ್ನು ಸಂಗಮಿಸಿದರೆ ಅವರಿಬ್ಬರೂ ಹೇಸಿಗೆಯ
ಕೆಲಸವನ್ನು ಮಾಡಿದದರಿಂದ ಅವರಿಗೆ ಮರಣಶಿಕ್ಷೆ
ಯಾಗಬೇಕು; ಆ ಶಿಕ್ಷೆಗೆ ಅವರೇ ಕಾರಣರು. ಯಾವ
ನಾದರೂ ಒಬ್ಬ ಸ್ತ್ರೀಯನ್ನೂ ಅವಳ ತಾಯಿಯನ್ನೂ
ಇಟ್ಟುಕೊಂಡರೆ ಅದು ಅತಿದುಷ್ಟಕಾರ್ಯವಾದದ
ರಿಂದ ಆ ಮೂರು ಮಂದಿಯನ್ನೂ ಬೆಂಕಿಯಿಂದ
ಸುಡಿಸಿಬಿಡಬೇಕು; ಅಂಥ ದುರಾಚಾರವು ನಿಮ್ಮಲ್ಲಿ
ಎಷ್ಟುಮಾತ್ರವೂ ನಡೆಯಬಾರದು. ಯಾವನಾ
ದರೂ ಪಶುಸಂಗಮಾಡಿದರೆ ಅವನಿಗೆ ಮರಣ
ಶಿಕ್ಷೆಯಾಗಬೇಕು; ಆ ಪಶುವನ್ನೂ ಕೊಲ್ಲಿಸಬೇಕು.
ಯಾವ ಸ್ತ್ರೀಯಾದರೂ ಪಶುವಿನಿಂದ ಸಂಗಮಮಾಡಿಸಿ
ಕೊಂಡರೆ ಆ ಸ್ತ್ರೀಯನ್ನೂ ಪಶುವನ್ನೂ ಕೊಲ್ಲಿಸಬೇಕು.
ಅವಳಿಗೂ ಅದಕ್ಕೂ ಮರಣವೇ ವಿಧಿ; ಆ ಮರಣ
ಶಿಕ್ಷೆಗೆ ತಾವೇ ಕಾರಣರು. ಯಾವನಾದರೂ ತನ್ನ
ಒಡಹುಟ್ಟಿದವಳನ್ನು ಅಂದರೆ ತಂದೆಯ ಮಗಳನ್ನಾ
ಗಲಿ ತಾಯಿಯ ಮಗಳನ್ನಾಗಲಿ ಕರೆದುಕೊಂಡು
ಅವಳ ಮಾನವನ್ನು ಇವನೂ ಇವನ ಮಾನವನ್ನು
ಅವಳೂ ನೋಡಿದರೆ ಅದು ನಾಚಿಕೆಗೇಡಾದ ಕೆಲಸ
ವಾಗಿರುವದರಿಂದ ಅವರ ಕುಲದವರ ಎದುರಾಗಿಯೇ
ಅವರಿಗೆ ಮರಣಶಿಕ್ಷೆಯನ್ನು ಮಾಡಿಸಬೇಕು. ಆ
ಮನುಷ್ಯನು ಒಡಹುಟ್ಟಿದವಳನ್ನು ಸಂಗಮಿಸಿದದ
ರಿಂದ ತನ್ನ ಪಾಪದ ಫಲವನ್ನು ಅನುಭವಿಸಬೇಕು.
ಯಾವನಾದರೂ ಮುಟ್ಟಾದ ಸ್ತ್ರೀಯನ್ನು ಸಂಗಮಿಸಿ
ದರೆ ಅವನು ಅವಳ ಶೋಣಿತಸ್ಥಾನವನ್ನು ಬೈಲು

ಡಿಸಿದವನು, ಅವಳು ಬೈಲುಪಡಿಸಿಕೊಂಡವಳು;
ದದರಿಂದ ಅವರಿಬ್ಬರೂ ಕುಲದಿಂದ ತೆಗೆದುಹಾಕ
ಡಬೇಕು. ತಂದೆಯ ಅಥವಾ ತಾಯಿಯ ಒಡ
ಹುಟ್ಟಿದವಳ ಸಂಗಮಾಡಬಾರದು; ಹಾಗೆ ಮಾಡಿ
ವನು ರಕ್ತಸಂಬಂಧಿಯನ್ನು ಸಂಗಮಿಸಿದವನಾದದ
ಂದ ಅವರಿಬ್ಬರೂ ತಮ್ಮ ಪಾಪದ ಫಲವನ್ನು ಅನು
ಭವಿಸಬೇಕು. ಯಾವನಾದರೂ ದೊಡ್ಡ ತಾಯಿಯ
ನ್ನಾಗಲಿ ಚಿಕ್ಕ ತಾಯಿಯನ್ನಾಗಲಿ ಸಂಗಮಿಸಿದರೆ
ವನು ದೊಡ್ಡಪ್ಪ ಚಿಕ್ಕಪ್ಪನವರ ಮಾನವನ್ನು ಭಂಗ
ಡಿಸಿದವನಾದದರಿಂದ ಆ ಸ್ತ್ರೀಪುರುಷರು ಆ ಪಾಪದ
ಲವನ್ನು ಅನುಭವಿಸಬೇಕು; ಅವರು ಸಂತಾನವಿಲ್ಲದೆ
ಾಯುವರು. ಯಾವನಾದರೂ ಅತ್ತಿಗೆನಾದಿನಿಯ
ನ್ನು ಇಟ್ಟುಕೊಂಡರೆ ಅದು ಅಶುದ್ಧವಾದ ಕೆಲಸ;
ವನು ಅಣ್ಣತಮ್ಮಂದಿರ ಮಾನವನ್ನೇ ಭಂಗಪಡಿಸಿ
ವನು; ಅವರಿಗೆ ಸಂತಾನವಿರುವದಿಲ್ಲ.

ಈ ನನ್ನ ಆಜ್ಞಾವಿಧಿಗಳನ್ನೆಲ್ಲಾ ನೀವು ಅನುಸರಿಸಿ
ಡೆಯಬೇಕು; ಹಾಗೆ ನಡೆದರೆ ನಾನು ನಿಮ್ಮನ್ನು
ಾವ ದೇಶಕ್ಕೆ ಬರಮಾಡಿ ಅದನ್ನು ನಿವಾಸಕ್ಕಾಗಿ
ಡುತ್ತೇನೋ ಆ ದೇಶವು ನಿಮ್ಮನ್ನು ಕಾರಿಬಿಡುವ
ಲ್ಲ. ನಾನು ನಿಮ್ಮ ಎದುರಿನಿಂದ ಹೊರಡಿಸುವ
ನಾಂಗದ ಆಚಾರಗಳನ್ನು ನೀವು ಅನುಸರಿಸ
ಾರದು; ಅವರು ಈ ದುರಾಚಾರಗಳನ್ನೆಲ್ಲಾ ನಡಿಸಿ
ದರಿಂದ ನನಗೆ ಹೇಸಿಗೆಯಾದರು. ನಿಮಗಾದ
ೋ—ನೀವು ಅವರ ದೇಶವನ್ನು ಸ್ವಾಧೀನಪಡಿಸಿ
ಾಳ್ಳುವಿರಿ; ಹಾಲೂ ಜೇನೂ ಹರಿಯುವಂಥ ಆ
ೇಶವನ್ನು ನಿಮಗೆ ಸ್ವದೇಶವಾಗುವದಕ್ಕೆ ಕೊಡು
ನು ಎಂದು ನಾನು ಮಾತುಕೊಟ್ಟೆನಲ್ಲವೇ. ನಾನು
ಮ್ಮನ್ನು ಇತರ ಜನಾಂಗಗಳಿಂದ ಪ್ರತ್ಯೇಕಿಸಿದ ನಿಮ್ಮ
ೇವರಾದ ಯೆಹೋವನು.

ನೀವು ಶುದ್ಧಾಶುದ್ಧ ಜಂತುಗಳನ್ನೂ ಪಕ್ಷಿಗಳನ್ನೂ
ವೇಚನೆಮಾಡಿ ನಾನು ಅಶುದ್ಧವೆಂದು ನಿರ್ಣಯಿಸಿ
ುವ ಯಾವ ಪಶುಪಕ್ಷಿಕ್ರಿಮಿಕೀಟಗಳಿಂದಲೂ ನಿಮ್ಮ
್ನ ಹೇಯಮಾಡಿಕೊಳ್ಳಬಾರದು. ಯೆಹೋವನೆಂಬ
ಾನು ಪರಿಶುದ್ಧನಾಗಿದ್ದೇನೆ, ಮತ್ತು ನೀವು ನನ್ನ
ನರಾಗುವಂತೆ ನಿಮ್ಮನ್ನು ಇತರ ಜನಾಂಗಗಳಿಂದ
ತ್ಯೇಕಿಸಿದ್ದೇನೆ; ಆದದರಿಂದ ನೀವು ನನಗೆ ಮೀಸ
ಾಗಿರಬೇಕು.

ಸತ್ತವರಲ್ಲಿ ವಿಚಾರಿಸುವವರೂ ಬೇತಾಳಿಕರೂ ಸ್ತ್ರೀ
ಯರಾಗಲಿ ಪುರುಷರಾಗಲಿ ಮರಣಶಿಕ್ಷೆ ಹೊಂದಬೇಕು.
ಲ್ಲೆಸೆದು ಅವರನ್ನು ಕೊಲ್ಲಬೇಕು; ಆ ಶಿಕ್ಷೆಗೆ
ವರೇ ಕಾರಣರು.

ತಮ್ಮ ದೇವರ ಗೌರವಕ್ಕೆ ಕುಂದುಬಾರದಂತೆ ಯಾಜಕರು
ಎಚ್ಚರಿಕೆಯುಳ್ಳವರಾಗಿರಬೇಕು. ಮತ್ತು ಅಂಗಹೀನರು
ಯಾಜಕೋದ್ಯೋಗವನ್ನು ನಡಿಸಕೂಡದು ಎಂಬ
ವಿಧಿಗಳು.

ಯೆಹೋವನು ಮೋಶೆಗೆ ಹೇಳಿದ್ದೇನಂದರೆ—ನೀನು
ಆರೋನನ ಮಕ್ಕಳಾದ ಯಾಜಕರಿಗೆ ಹೀಗೆ ಆಜ್ಞಾ
ಸಬೇಕು—

ಕುಲದಲ್ಲಿ ಸತ್ತವರಿಗೋಸ್ಕರ ಯಾವ ಯಾಜ
ಕನೂ ತನ್ನನ್ನು ಅಪವಿತ್ರಮಾಡಿಕೊಳ್ಳಬಾರದು.
(ಆದರೂ ಸಮೀಪರಕ್ತಸಂಬಂಧಿಗಳಾದ ತಾಯಿ, 2
ತಂದೆ, ಮಕ್ಕಳು, ಅಣ್ಣತಮ್ಮಂದಿರು ಇವರಿಗೋಸ್ಕರ
ಈ ವಿಧಿ ಇರುವದಿಲ್ಲ. ಇದಲ್ಲದೆ ಕನ್ನಿಕೆಯಾಗಿರುವ 3
ತಂಗಿ ಇನ್ನೂ ಮದುವೆಯಾಗದೆ ಅವನ ಆಶ್ರಯ
ದಲ್ಲಿರುವದರಿಂದ ಅವಳಿಗೋಸ್ಕರ ಅವನು ಅಪವಿತ್ರ
ಮಾಡಿಕೊಳ್ಳಬಹುದು.) ಅವನು ಕುಲದಲ್ಲಿ ನಾಯಕ 4
ನಾಗಿರುವದರಿಂದ ತನ್ನನ್ನು ಅಪವಿತ್ರಮಾಡಿಕೊಳ್ಳ
ಕೂಡದು; ಮಾಡಿದರೆ ಯಾಜಕಸೇವೆಗೆ ಅಯೋಗ್ಯ
ನಾದಾನು. ಅವರು ತಲೆಬೋಳಿಸಿಕೊಳ್ಳಬಾರದು; 5
ಗಡ್ಡವನ್ನು ಕತ್ತರಿಸಿ ವಿಕಾರಗೊಳಿಸಬಾರದು; ದೇಹ
ವನ್ನು ಗಾಯಮಾಡಿಕೊಳ್ಳಬಾರದು. ಅವರು ದೇವ 6
ರಿಗೆ ಮೀಸಲಾಗಿರಬೇಕು; ತಾವು ಸೇವಿಸುವ ದೇವರ
ಹೆಸರನ್ನು ಅಪಕೀರ್ತಿಗೆ ಗುರಿಪಡಿಸಬಾರದು. ತಮ್ಮ
ದೇವರ ಆಹಾರವನ್ನು ಅಂದರೆ ಯೆಹೋವನ
ಹೋಮದ್ರವ್ಯಗಳನ್ನು ಅವರು ಸಮರ್ಪಿಸುವವರಾಗಿ
ರುವದರಿಂದ ಪವಿತ್ರರಾಗಿರಬೇಕು. ಯಾಜಕರು ತಮ್ಮ 7
ದೇವರಿಗೆ ಮೀಸಲಾದವರಾಗಿರುವದರಿಂದ ವೇಶ್ಯಾ
ಸ್ತ್ರೀಯನ್ನಾಗಲಿ ಮಾನವನ್ನು ಭಂಗಪಡಿಸಿಕೊಂಡ
ಸ್ತ್ರೀಯನ್ನಾಗಲಿ ಗಂಡನಿಂದ ಬಿಡಲ್ಪಟ್ಟವಳನ್ನಾಗಲಿ
ಹೆಂಡತಿಯನ್ನಾಗಿ ತೆಗೆದುಕೊಳ್ಳಬಾರದು. ಅವರು 8
ನಿಮ್ಮ ದೇವರ ಆಹಾರವನ್ನು ಸಮರ್ಪಿಸುವವರಾದ
ಕಾರಣ ಅವರನ್ನು ದೇವರ ಸೇವಕರೆಂದು ಭಾವಿಸ
ಬೇಕು. ನಿಮ್ಮನ್ನು ನನ್ನ ಸೇವೆಗೆ ಪ್ರತಿಷ್ಠಿಸಿಕೊಂಡಿ
ರುವ ಯೆಹೋವನೆಂಬ ನಾನು ಪರಿಶುದ್ಧನಾಗಿರು
ವದರಿಂದ ಅವರನ್ನೂ ಪರಿಶುದ್ಧರೆಂದು ನೀವು
ಭಾವಿಸಬೇಕು. ಯಾಜಕನ ಮಗಳು ಸೂಳೆತನ 9
ದಿಂದ ನಿಂದೆಗೆ ಒಳಗಾದರೆ ತನ್ನ ತಂದೆಯನ್ನೂ
ನಿಂದೆಗೆ ಒಳಪಡಿಸಿದವಳಾದಳು; ಅವಳನ್ನು ಬೆಂಕಿ
ಯಿಂದ ಸುಟ್ಟುಬಿಡಬೇಕು.

ಯಾಜಕರಲ್ಲಿ ಪ್ರಧಾನನು ಅಂದರೆ ಯಾವನು 10
ತೈಲಾಭಿಷೇಕಹೊಂದಿ ದೀಕ್ಷಾವಸ್ತ್ರಗಳನ್ನು ಧರಿಸಿ
ಪಟ್ಟಕ್ಕೆ ಬರುವನೋ ಅವನು [ದುಃಖಸೂಚನೆಗಾಗಿ]
ತನ್ನ ತಲೆಯ ಕೂದಲನ್ನು ಕೆದರಿಕೊಳ್ಳಬಾರದು;
ಬಟ್ಟೆಗಳನ್ನು ಹರಿದುಕೊಳ್ಳಬಾರದು. ಅವನು ಶವ 11
ವಿರುವ ಯಾವ ಸ್ಥಳಕ್ಕೂ ಹೋಗಬಾರದು.
ತಂದೆತಾಯಿಗಳ ಮರಣದ ನಿಮಿತ್ತ ತನ್ನನ್ನು ಅಪ
ವಿತ್ರಮಾಡಿಕೊಳ್ಳಬಾರದು. ಇದಕ್ಕಾಗಿ ದೇವಸ್ಥಾನ 12
ವನ್ನು ಬಿಡಲೇ ಬಾರದು; ಬಿಟ್ಟುಹೋದರೆ ತಾನು
ಸೇವಿಸುವ ದೇವರ ಮಂದಿರದ ಗೌರವಕ್ಕೆ ಕುಂದು
ಬರುವದು. ತನ್ನ ದೇವರ ಅಭಿಷೇಕತೈಲವನ್ನು
ತಲೆಯ ಮೇಲೆ ಹೊಯಿಸಿಕೊಂಡು ಪ್ರತಿಷ್ಠಿತನಾಗಿ
ದ್ದಾನಷ್ಟೆ; ನಾನು ಯೆಹೋವನು. ಅವನು ಪುರುಷ 13
ಸಂಪರ್ಕವೇ ಇಲ್ಲದ ಯುವತಿಯನ್ನು ಮದುವೆ
ಮಾಡಿಕೊಳ್ಳಬೇಕೇ ಹೊರತು ವಿಧವೆಯನ್ನಾಗಲಿ 14
ಗಂಡನಿಂದ ಬಿಡಲ್ಪಟ್ಟವಳನ್ನಾಗಲಿ ಮಾನವನ್ನು
ಭಂಗಪಡಿಸಿಕೊಂಡವಳನ್ನಾಗಲಿ ವೇಶ್ಯಾಸ್ತ್ರೀಯನ್ನಾ
ಗಲಿ ಹೆಂಡತಿಯನ್ನಾಗಿ ಮಾಡಿಕೊಳ್ಳಬಾರದು.
ಸ್ವದೇಶದವರಲ್ಲಿಯೇ ಹೆಣ್ಣನ್ನು ಪರಿಗ್ರಹಿಸಬೇಕು;

15 ಇಲ್ಲವಾದರೆ ಅವನ ಸಂತತಿಯು ಸ್ವಜನರೊಳಗೆ
ಅಪವಾದಕ್ಕೆ ಗುರಿಯಾದೀತು. ಅವನನ್ನು ನನ್ನ
ಸೇವೆಗೆ ಪ್ರತಿಷ್ಠಿಸಿಕೊಂಡ ಯೆಹೋವನು ನಾನು.
16 ಯೆಹೋವನು ಮೋಶೆಗೆ ಹೇಳಿದ್ದೇನಂದರೆ—
17 ನೀನು ಆರೋನನಿಗೆ ಹೀಗೆ ಆಜ್ಞಾಪಿಸು—ನಿನ್ನ
ಸಂತತಿಯವರ ಎಲ್ಲಾ ತಲಾಂತರಗಳಲ್ಲಿಯೂ ಯಾವ
ಅಂಗಹೀನನೂ ದೇವರ ಆಹಾರವನ್ನು ಸಮರ್ಪಿಸುವ
ವಕ್ಕೆ ಸನ್ನಿಧಿಗೆ ಬರಬಾರದು; ಅಂಗಹೀನನು ಈ
18 ಕಾರ್ಯವನ್ನು ವಹಿಸಿಕೊಳ್ಳಲೇ ಕೂಡದು. ಅವನು
ಕುರುಡನಾಗಲಿ ಕುಂಟನಾಗಲಿ ಕೊರೆಮೂಗನಾಗಲಿ
19 ವಿಪರೀತ ಅವಯವಗಳುಳ್ಳವನಾಗಲಿ ಕೈಕಾಲು ಮುರ
20 ಕನಾಗಲಿ ಗೂನು ಗುಜ್ಜಾರಿಯಾಗಲಿ ಹೂಗಣ್ಣು ಕಾಯಿ
ಗಣ್ಣನಾಗಲಿ ಕಜ್ಜಿ ತುರಿಗಳುಳ್ಳವನಾಗಲಿ ಬೀಜದೋಷ
21 ವುಳ್ಳವನಾಗಲಿ ಬೇರೆ ಯಾವ ಕಳಂಕವಿದ್ದವನಾಗಲಿ
ಯೆಹೋವನಿಗೆ ಹೋಮದ್ರವ್ಯಗಳನ್ನು ಸಮರ್ಪಿಸು
ವದಕ್ಕೆ ಸನ್ನಿಧಿಗೆ ಬರಬಾರದು. ಅಂಥವನು ದೇಹ
ದಲ್ಲಿ ದೋಷವಿರುವದರಿಂದ ದೇವರ ಆಹಾರವನ್ನು
22 ಸಮರ್ಪಿಸಲೇ ಬಾರದು. ದೇವರಿಗೆ ನೈವೇದ್ಯವಾದ
ಆಹಾರದಲ್ಲಿ ಪರಿಶುದ್ಧವಾದದ್ದನ್ನೂ ಮಹಾಪರಿಶುದ್ಧ
ವಾದದ್ದನ್ನೂ ಅವನು ಊಟಮಾಡಬಹುದೇ ಹೊರ
23 ತು ಅವನಿಗೆ ಕಳಂಕವಿರುವದರಿಂದ ತೆರೆಯನ್ನು
ದಾಟಿ ಒಳಗೆ ಬರಬಾರದು; ಯಜ್ಞವೇದಿಯ ಬಳಿಗೆ
ಬರಬಾರದು. ನನ್ನ ಪವಿತ್ರಸ್ಥಾನಗಳ ಗೌರವಕ್ಕೆ ಅವ
ನಿಂದ ಕುಂದು ಉಂಟಾಗಬಾರದು; ಆ ಸ್ಥಾನಗಳನ್ನು
ನನ್ನ ಸೇವೆಗೆ ಪ್ರತಿಷ್ಠಿಸಿಕೊಂಡ ಯೆಹೋವನು ನಾನು.
24 ಮೋಶೆಯು ಆರೋನನಿಗೂ ಅವನ ಮಕ್ಕಳಿಗೂ
ಇಸ್ರಾಯೇಲ್ಯರೆಲ್ಲರಿಗೂ ಈ ಆಜ್ಞೆಗಳನ್ನು ತಿಳಿಸಿದನು.

ದೇವಾರ್ಪಿತಪದಾರ್ಥಗಳನ್ನು ಸಾಧಾರಣವೆಂದೆಣಿಸಿ ಯೆಹೋವನ
ಗೌರವಕ್ಕೆ ಕುಂದುತರಬಾರದು ಎಂಬ ವಿಧಿ.

22 ಯೆಹೋವನು ಮೋಶೆಗೆ ಹೇಳಿದ್ದೇನಂದರೆ—
2 ಆರೋನನೂ ಅವನ ಮಕ್ಕಳೂ [ತಾವು ಅಶುದ್ಧ
ರಾಗಿರುವಾಗ] ಇಸ್ರಾಯೇಲ್ಯರಿಂದ ನನಗೆ ಸಮರ್ಪಿ
ಸಲ್ಪಡುವ ಪರಿಶುದ್ಧದ್ರವ್ಯಗಳನ್ನು ಮುಟ್ಟಬಾರದೆಂದು
ಅವರಿಗೆ ಆಜ್ಞಾಪಿಸು. ಅವರು ನನ್ನ ಪರಿಶುದ್ಧ
ನಾಮದ ಘನತೆಗೆ ಕುಂದನ್ನು ತರಬಾರದು; ನಾನು
3 ಯೆಹೋವನು. ಅವರಿಗೆ ನೀನು ಹೀಗೆ ಆಜ್ಞಾಪಿಸ
ಬೇಕು—ನಿಮ್ಮಲ್ಲಿಯಾಗಲಿ ನಿಮ್ಮ ಸಂತತಿಯವರಲ್ಲಿ
ಯಾಗಲಿ ಯಾವನಾದರೂ ಅಶುದ್ಧನಾಗಿರುವಾಗ
ಇಸ್ರಾಯೇಲ್ಯರು ಯೆಹೋವನಿಗೆ ಮೀಸಲೆಂದು
ಸಮರ್ಪಿಸುವ ದ್ರವ್ಯಗಳ ಬಳಿಗೆ ಬಂದರೆ ಅವನು
ನನ್ನ ಸಾನ್ನಿಧ್ಯಸೇವೆಯಿಂದ ತೆಗೆಯಲ್ಪಡಬೇಕು; ನಾನು
4 ಯೆಹೋವನು. ಆರೋನನ ಸಂತತಿಯವರಲ್ಲಿ ಯಾ
ವನಿಗಾದರೂ ಕುಷ್ಠರೋಗವಾಗಲಿ ಮೇಹವಾಗಲಿ
ಇದ್ದರೆ ಅವನು ಶುದ್ಧನಾಗುವ ತನಕ ದೇವರಿಗೆ
ನೈವೇದ್ಯವಾದ ಪದಾರ್ಥಗಳನ್ನು ಉಣ್ಣಕೂಡದು.
ಹೆಣದ ಸಂಪರ್ಕದಿಂದ ಅಶುದ್ಧವಾದದ್ದನ್ನು ಮುಟ್ಟಿದ
ವನಾಗಲಿ ವೀರ್ಯಸ್ಖಲನ ಮಾಡಿಕೊಂಡವನಾಗಲಿ ಅಶು
ದ್ಧವಾದ ಕ್ರಿಮಿಕೀಟಮೂಷಕಾದಿಗಳನ್ನು ಅಥವಾ
ಅಶುದ್ಧನಾದ ಮನುಷ್ಯನನ್ನು ಮುಟ್ಟಿದವನಾಗಲಿ
ದಿನದ ಸಾಯಂಕಾಲದ ವರೆಗೆ ಅಶುದ್ಧನಾಗಿರುವನು
ಆದದರಿಂದ ಸ್ನಾನಮಾಡುವ ತನಕ ಅವನು ನೈವೇ
ದ್ರವ್ಯವನ್ನು ತಿನ್ನಕೂಡದು. ಹೊತ್ತುಮುಣುಗಿ
ನಂತರ ಅವನು ಶುದ್ಧನಾಗಿ ನೈವೇದ್ಯದ್ರವ್ಯವನ
ಊಟಮಾಡಬಹುದು; ಅದು ಅವನ ಜೀವನವಸ್ತು
ತಾನಾಗಿ ಸತ್ತುಬಿದ್ದದ್ದನ್ನಾಗಲಿ ಕಾಡುಮೃಗದಿಂ
ಕೊಲ್ಲಲ್ಪಟ್ಟದ್ದನ್ನಾಗಲಿ ತಿಂದು ತನ್ನನ್ನು ಅಪವಿ
ಮಾಡಿಕೊಳ್ಳಬಾರದು; ನಾನು ಯೆಹೋವನ
ಈ ನನ್ನ ಆಜ್ಞೆಗಳನ್ನು ಅವರು ಅನುಸರಿಸಿ ನಡೆಂ
ಬೇಕು. ಇವುಗಳನ್ನು ಮೀರಿ ನನ್ನ ನೈವೇದ್ಯವನ
ಅಪವಿತ್ರಪಡಿಸಿದರೆ ಆ ದೋಷದ ಫಲವನ್ನು ಅನ
ಭವಿಸಿ ಸತ್ತಾರು. ಅವರನ್ನು ನನ್ನ ಸೇವೆಗೆ ಪ್ರತಿಷ್ಠಿ
ಕೊಂಡ ಯೆಹೋವನು ನಾನು.
ಯಾಜಕನಲ್ಲದ ಇತರನು ನೈವೇದ್ಯಪದಾರ್ಥ
ವನ್ನು ಊಟಮಾಡಕೂಡದು. ಯಾಜಕನ ಬ
ಯಲ್ಲಿ ಇಳುಕೊಂಡವನಾಗಲಿ ಕೂಲಿಯಾಳಾಗ
ಅದನ್ನು ಊಟಮಾಡಬಾರದು. ಆದರೆ ಯಾಜಕನ
ಕ್ರಯಕ್ಕೆ ತೆಗೆದುಕೊಂಡ ದಾಸರೂ ಅವನ ಮ
ಯಲ್ಲಿ ಹುಟ್ಟಿದ ದಾಸರೂ ಅದನ್ನು ಊಟಮಾ
ಬಹುದು. ಯಾಜಕನ ಮಗಳು ಯಾಜಕನಲ್ಲ
ಇತರನಿಗೆ ಮದುವೆಯಾದರೆ ಅವಳು ನೈವೇದ್ಯಪದ
ರ್ಥಗಳನ್ನು ಊಟಮಾಡಕೂಡದು. ಯಾಜಕ
ಮಗಳು ವಿಧವೆಯಾಗಿಯಾಗಲಿ ಗಂಡನಿಂದ ಬಿ
ಲ್ಪಟ್ಟವಳಾಗಿಯಾಗಲಿ ಮಕ್ಕಳಿಲ್ಲದ ಪಕ್ಷಕ್ಕೆ ಬಾ
ದಲ್ಲಿ ತಂದೆಯ ಬಳಿಯಲ್ಲಿ ಇದ್ದಂತೆಯೇ ತಿ
ತಂದೆಯ ಮನೆ ಸೇರಿ ತಂದೆಯ ಆಹಾರದಲ್ಲಿ ಭಾ
ಯಾಗಬಹುದು. ಯಾಜಕರಲ್ಲದ ಇತರರು ಅದನ
ಉಣ್ಣಲೇಬಾರದು. ಯಾವನಾದರೂ ತಿಳಿಯ
ನೈವೇದ್ಯವಾದದ್ದನ್ನು ಊಟಮಾಡಿದರೆ ಅಷ್ಟನ
ಅದರ ಐದನೆಯ ಭಾಗವನ್ನೂ ಯಾಜಕನಿಗೆ ತ
ಬೇಕು. ಇಸ್ರಾಯೇಲ್ಯರು ಯೆಹೋವನಿಗೆ ಮೀ
ಲೆಂದು ಇಟ್ಟ ನೈವೇದ್ಯಪದಾರ್ಥಗಳನ್ನು [ಯಾ
ಕರು] ಸಾಧಾರಣವೆಂದೆಣಿಸಬಾರದು. ಹಾಗೆ ಎಣಿ
ದರೆ ತಾವು ಆ ನೈವೇದ್ಯಪದಾರ್ಥಗಳನ್ನು ಊ
ಮಾಡುವದರಿಂದ ಪಾಪಕ್ಕೆ ಒಳಗಾಗಿ ತಿಕ್ಷೆ ಹೊಂದಾರ
ನನ್ನ ಸೇವೆಗೆ ಅವರನ್ನು ಪ್ರತಿಷ್ಠಿಸಿಕೊಂಡ ಯೆಹೋ
ವನು ನಾನು.

ಯೆಹೋವನ ಗೌರವಕ್ಕೆ ಯಾವ ಕುಂದೂ ಉಂಟಾಗದಂತೆ
ಪೂರ್ಣಾಂಗವಾದ ಪಶುಗಳನ್ನೇ ಮೆಚ್ಚಿಗೆಯಾದ ರೀತಿಯಲ್ಲಿ
ಸಮರ್ಪಿಸಬೇಕೆಂಬ ವಿಧಿ.

ಯೆಹೋವನು ಮೋಶೆಗೆ ಹೇಳಿದ್ದೇನಂದರೆ
ನೀನು ಆರೋನನಿಗೂ ಅವನ ಮಕ್ಕಳಿಗೂ ಇಸ
ಯೇಲ್ಯರೆಲ್ಲರಿಗೂ ಹೀಗೆ ಆಜ್ಞಾಪಿಸಬೇಕು—1)ಇಸ

1) ಮೂಲ: ಇಸ್ರಾಯೇಲನ ಮನೆತನದವರಲ್ಲಿ.

ಯೇಲ್ಯರಲ್ಲಿ ಆಗಲಿ ಅವರ ನಡುವೆ ವಾಸಿಸುವ
ಇತರರಲ್ಲಿಯಾಗಲಿ ಯಾವನಾದರೂ ಹರಕೆಯಾಗಿ
ಅಥವಾ ಕಾಣಿಕೆಯಾಗಿ ಯೆಹೋವನಿಗೆ ಸರ್ವಾಂಗ
ಹೋಮಮಾಡುವಾಗ ಅದು ಸಮರ್ಪಕವಾಗುವಂತೆ
ದನಗಳಿಂದಾಗಲಿ ಆಡುಕುರಿಗಳಿಂದಾಗಲಿ ಪೂರ್ಣಾಂಗ
ವಾದ ಗಂಡನ್ನೇ ಒಪ್ಪಿಸಬೇಕು. ಕುಂದುಕೊರತೆ
ಇರುವಂಥದನ್ನು ತರಬಾರದು; ಅಂಥದು ಸಮರ್ಪಕ
ವಾಗುವದಿಲ್ಲ. ಯಾವನಾದರೂ ಸಮಾಧಾನಯಜ್ಞ
ಕ್ಕಾಗಿ ಹರಕೆಯಾಗಿಯಾಗಲಿ ಕಾಣಿಕೆಯಾಗಿಯಾ
ಗಲಿ ದನವನ್ನು ಅಥವಾ ಆಡುಕುರಿಗಳನ್ನು ತಂದರೆ
ಅವು ಸಮರ್ಪಕವಾಗುವದಕ್ಕೆ ಪೂರ್ಣಾಂಗವಾಗಿಯೇ
ಇರಬೇಕು; ಅದರಲ್ಲಿ ಯಾವ ಕುಂದುಕೊರತೆಯೂ
ಇರಬಾರದು. ಕುರುಡಾದದ್ದು ಕುಂಟಾದದ್ದು ಗಾಯ
ವಾದದ್ದು ಹುಣ್ಣುಳ್ಳದ್ದು ಕಜ್ಜಿ ತುರಿಯುಳ್ಳದ್ದು
ಇಂಥವುಗಳನ್ನು ಯೆಹೋವನಿಗೆ ಸಮರ್ಪಿಸಲೂ
ಬಾರದು, ಯಜ್ಞವೇದಿಯ ಮೇಲೆ ಹೋಮ
ಮಾಡಲೂ ಬಾರದು. ಹೋರಿಯ ಇಲ್ಲವೆ ಕುರಿಯ
ಅವಯವಗಳಲ್ಲಿ ಏನಾದರೂ ಹೆಚ್ಚುಕಡಿಮೆ ಇದ್ದರೆ
ಅದನ್ನು ಕಾಣಿಕೆಯಾಗಿ ಸಮರ್ಪಿಸಬಹುದೇ ಹೊರತು
ಹರಕೆಯಾಗಿ ಒಪ್ಪಿಸಿದರೆ ಅದು ಸಮರ್ಪಕವಾಗು
ವದಿಲ್ಲ. ಬೀಜಹೊಡೆದ ಕುಟ್ಟಿದ ಒಡೆದ ಕೊಯಿದ
ಪಶುವನ್ನೂ ಯೆಹೋವನಿಗೆ ಸಮರ್ಪಿಸಕೂಡದು;
ಮತ್ತು ನಿಮ್ಮ ದೇಶದಲ್ಲಿ [ಪಶುಗಳಿಗೆ] ಹಾಗೆ
ಮಾಡಲೇ ಬಾರದು. ಅನ್ಯದೇಶದವನಿಂದ ತೆಗೆದು
ಕೊಂಡ ಅಂಥ ಪಶುವನ್ನು ನಿಮ್ಮ ದೇವರಿಗೆ ಆಹಾರ
ವಾಗಿ ಒಪ್ಪಿಸಬಾರದು; ಅದು ಕುಂದುಳ್ಳದ್ದು,
ಪೂರ್ಣಾಂಗವಾದದ್ದಲ್ಲ; ಆದಕಾರಣ ಸಮರ್ಪಕ
ವಾಗುವದಿಲ್ಲ.
ಯೆಹೋವನು ಮೋಶೆಗೆ ಹೇಳಿದ್ದೇನಂದರೆ—
ಕರುವಾಗಲಿ ಕುರಿಮರಿಯಾಗಲಿ ಆಡುಮರಿಯಾಗಲಿ
ಹುಟ್ಟಿದಾಗ ಅದು ಏಳು ದಿವಸ ತಾಯಿಯ ಬಳಿ
ಯಲ್ಲಿ ಇರಬೇಕು. ಎಂಟನೆಯ ದಿವಸ ಮೊದಲು
ಗೊಂಡು ಅದನ್ನು ಯೆಹೋವನಿಗೆ ಹೋಮವಾಗಿ
ಸಮರ್ಪಿಸಿದರೆ ಅಂಗೀಕಾರವಾಗುವದು. ಈದ ಆಕ
ಳನ್ನೂ ಅದರ ಕರುವನ್ನೂ ಇಲ್ಲವೆ ಈದ ಆಡು
ಕುರಿಗಳನ್ನೂ ಅವುಗಳ ಮರಿಗಳನ್ನೂ ಒಂದೇ ದಿನ
ದಲ್ಲಿ ವಧಿಸಬಾರದು.
ನೀವು ಕೃತಜ್ಞತೆಯನ್ನು ತೋರಿಸುವದಕ್ಕಾಗಿ
ಯೆಹೋವನಿಗೆ ಮಾಡುವ ಯಜ್ಞವನ್ನು ಮೆಚ್ಚಿಗೆ
ಯಾದ ರೀತಿಯಲ್ಲೇ ಸಮರ್ಪಿಸಬೇಕು. ಅದೇ
ದಿವಸದಲ್ಲಿ ಅದನ್ನು ಊಟಮಾಡಬೇಕು; ಮರು
ದಿನದ ವರೆಗೆ ಸ್ವಲ್ಪವನ್ನಾದರೂ ಮಿಗಿಸಬಾರದು.
ನಾನು ಯೆಹೋವನು.
ಈ ನನ್ನ ಆಜ್ಞೆಗಳನ್ನು ನೀವು ಅನುಸರಿಸಿ ನಡೆಯ
ಬೇಕು; ನಾನು ಯೆಹೋವನು. ನನ್ನ ಪರಿಶುದ್ಧ
ನಾಮದ ಘನತೆಗೆ ಕುಂದುತರಬಾರದು; ಇಸ್ರಾ
ಯೇಲ್ಯರಲ್ಲಿ ನಾನು ಪರಿಶುದ್ಧನೆಂದೆಣಿಸಲ್ಪಡಬೇಕು:
ನಾನು ನಿಮ್ಮನ್ನು ನನ್ನ ಸೇವೆಗೆ ಪ್ರತಿಷ್ಠಿಸಿಕೊಂಡ
ಯೆಹೋವನು. ನಿಮ್ಮ ದೇವರಾಗುವದಕ್ಕೆ ನಿಮ್ಮನ್ನು 33
ಐಗುಪ್ತದೇಶದಿಂದ ಬರಮಾಡಿದೆನಲ್ಲಾ; ನಾನು
ಯೆಹೋವನು.

ಇಸ್ರಾಯೇಲ್ಯರು ಆಚರಿಸಬೇಕಾದ ಹಬ್ಬಗಳ ವಿವರಣೆ.

23
ಯೆಹೋವನು ಮೋಶೆಗೆ ಹೇಳಿದ್ದೇನಂದರೆ—
ನೀನು ಇಸ್ರಾಯೇಲ್ಯರಿಗೆ ಹೀಗೆ ಆಜ್ಞಾಪಿಸ 2
ಬೇಕು — ಯೆಹೋವನಿಂದ ನೇಮಕವಾದ ಹಬ್ಬಗಳ
ದಿನಗಳು ಇವೇ; ಈ ದಿನಗಳಲ್ಲಿ ದೇವಾರಾಧನೆಗಾಗಿ
ಸಭೆಕೂಡಬೇಕೆಂಬದಾಗಿ ಸಾರಬೇಕು. ನಾನು ನೇಮಿ
ಸಿರುವ ಹಬ್ಬದ ದಿನಗಳು ಯಾವವಂದರೆ—
ಆರು ದಿನಗಳಲ್ಲಿ ನೀವು ಕೆಲಸವನ್ನು ನಡಿಸ 3
ಬೇಕು; ಏಳನೆಯ ದಿನವು ಯಾವ ಕೆಲಸವನ್ನೂ ಮಾಡ
ಕೂಡದ ಸಬ್ಬತ್ ದಿನವಾಗಿದೆ. ಅದರಲ್ಲಿ ದೇವಾ
ರಾಧನೆಗಾಗಿ ಸಭೆಕೂಡಬೇಕು. ಆ ದಿನದಲ್ಲಿ ಯಾವ
ವಿಧವಾದ ಕೆಲಸವನ್ನೂ ಮಾಡಕೂಡದು. ನಿಮ್ಮ
ಎಲ್ಲಾ ನಿವಾಸಸ್ಥಳಗಳಲ್ಲಿ ಅದು ಯೆಹೋವನಿಗೆ
ಮೀಸಲಾದ ವಿಶ್ರಾಂತಿದಿನವಾಗಿದೆ.
ಯೆಹೋವನಿಂದ ನೇಮಕವಾದ ಹಬ್ಬದ ಕಾಲ 4
ಗಳು ಇವೇ; ಈ ಕಾಲಗಳಲ್ಲಿ ದೇವಾರಾಧನೆಗಾಗಿ
ಸಭೆಕೂಡಬೇಕು. ನೇಮಕವಾದ ದಿನಗಳಲ್ಲಿ ಇವು
ಗಳನ್ನು ಪ್ರಸಿದ್ಧಪಡಿಸಬೇಕು.
1)ಮೊದಲನೆಯ ತಿಂಗಳಿನ ಹದಿನಾಲ್ಕನೆಯ ದಿನದ 5
ಸಂಜೇವೇಳೆಯಲ್ಲಿ ಯೆಹೋವನು ನೇಮಿಸಿದ ಪಸ್ಕ
ಹಬ್ಬವಾಗಬೇಕು. ಅದೇ ತಿಂಗಳಿನ ಹದಿನೈದನೆಯ 6
ದಿನದಲ್ಲಿ ಹುಳಿಯಿಲ್ಲದ ರೊಟ್ಟಿಗಳನ್ನು ತಿನ್ನ
ಬೇಕಾದ ಜಾತ್ರೆಯನ್ನು ಯೆಹೋವನಿಗೋಸ್ಕರ
ಆಚರಿಸಬೇಕು. ಅದು ಮೊದಲುಗೊಂಡು ಏಳು
ದಿನಗಳಲ್ಲಿಯೂ ಹುಳಿಯಿಲ್ಲದ ರೊಟ್ಟಿಗಳನ್ನು
ಊಟಮಾಡಬೇಕು. ಮೊದಲನೆಯ ದಿನದಲ್ಲಿ ದೇವಾ 7
ರಾಧನೆಗಾಗಿ ಸಭೆಕೂಡಬೇಕು; ಆ ದಿನದಲ್ಲಿ ಯಾವ
ಉದ್ಯೋಗವನ್ನೂ ನಡಿಸಬಾರದು. ಏಳು ದಿನಗಳ 8
ಲ್ಲಿಯೂ ನೀವು ಯೆಹೋವನಿಗೆ ಹೋಮವನ್ನು
ಸಮರ್ಪಿಸಬೇಕು. ಏಳನೆಯ ದಿನದಲ್ಲಿ ದೇವಾರಾಧನೆ
ಗಾಗಿ ಸಭೆಕೂಡಬೇಕು. ಅದರಲ್ಲಿ ಯಾವ ಉದ್ಯೋಗ
ವನ್ನೂ ನಡಿಸಬಾರದು.
ಯೆಹೋವನು ಮೋಶೆಗೆ ಹೇಳಿದ್ದೇನಂದರೆ— 9
ನೀನು ಇಸ್ರಾಯೇಲ್ಯರಿಗೆ ಹೀಗೆ ಆಜ್ಞಾಪಿಸಬೇಕು— 10
ನಾನು ನಿಮಗೆ ಕೊಡುವ ದೇಶದಲ್ಲಿ ನೀವು ಸೇರಿದ
ನಂತರ ಅಲ್ಲಿನ [ಜವೆಗೋದಿಯ] ಪೈರನ್ನು ಕೊಯ್ಯು
ವಾಗ ಪ್ರಥಮಫಲದ ಸಿವುಡನ್ನು ಯಾಜಕನ ಬಳಿಗೆ
ತಂದು ಒಪ್ಪಿಸಬೇಕು. ನೀವು ಅಂಗೀಕಾರವಾಗು
ವಂತೆ ಅವನು ಅದನ್ನು ಯೆಹೋವನ ಸನ್ನಿಧಿಯಲ್ಲಿ
ನೈವೇದ್ಯವಾಗಿ ನಿವಾಳಿಸಬೇಕು. ಸಬ್ಬತ್‌ದಿನದ 11
ಮಾರಣೆಯ ದಿನದಲ್ಲಿಯೇ ಅದನ್ನು ನಿವಾಳಿಸಬೇಕು.
ಆ ಸಿವುಡನ್ನು ನೈವೇದ್ಯವಾಗಿ ನಿವಾಳಿಸುವ ದಿನದಲ್ಲಿ
ನೀವು ಒಂದು ವರುಷದ ಪೂರ್ಣಾಂಗವಾದ ಟಗರನ್ನು 12

1) ಚೈತ್ರ ಶುದ್ಧ ಚತುರ್ದಶಿಯು.

ಸರ್ವಾಂಗಹೋಮವಾಗಿ ಯೆಹೋವನಿಗೆ ಸಮರ್ಪಿಸ
13 ಬೇಕು. ಅದರೊಂದಿಗೆ ಮಾಡಬೇಕಾದ ಧಾನ್ಯ
ನೈವೇದ್ಯವು ಯಾವದಂದರೆ ಎಣ್ಣೆಬೆರೆತ ಆರು ಸೇರು
ಗೋದಿಯ ಹಿಟ್ಟೇ. ಯೆಹೋವನಿಗೆ ಸುವಾಸನೆ
ಯನ್ನುಂಟುಮಾಡುವದಕ್ಕೆ ಇದನ್ನು ಬೆಂಕಿಯಲ್ಲಿ
ಹೋಮವಮಾಡಬೇಕು. ಅದರೊಂದಿಗೆ ಸಮರ್ಪಿಸ
ಬೇಕಾದ ಪಾನದ್ರವ್ಯವು ಒಂದುವರೆ ಸೇರು ದ್ರಾಕ್ಷಾ
14 ರಸ. ನೀವು ನಿಮ್ಮ ದೇವರಿಗೆ ಸಲ್ಲಿಸಬೇಕಾದದ್ದನ್ನು
ತಂದು ಕೊಡುವ ವರೆಗೂ [ಆ ವರುಷದ ಬೆಳೆಯ]
ರೊಟ್ಟಿಯನ್ನಾಗಲಿ ಸುಟ್ಟ ತೆನೆಗಳನ್ನಾಗಲಿ ಹಸಿ
ತೆನೆಗಳನ್ನಾಗಲಿ ತಿನ್ನಲೇ ಕೂಡದು. ನಿಮಗೂ ನಿಮ್ಮ
ಸಂತತಿಯವರಿಗೂ ನಿಮ್ಮ ಎಲ್ಲಾ ನಿವಾಸಸ್ಥಾನಗಳ
ಲ್ಲಿಯೂ ಇದು ಶಾಶ್ವತನಿಯಮ.
15 ಸಬ್ಬತ್‌ದಿನದ ಮಾರಣೆಯ ದಿನ ಮೊದಲುಗೊಂಡು
ಅಂದರೆ ಆ ಪ್ರಥಮ ಸಿವುಡನ್ನು ನೈವೇದ್ಯವಾಗಿ ನಿವಾ
ಳಿಸಿದ ದಿನ ಮೊದಲುಗೊಂಡು ಪೂರ್ಣವಾಗಿ ಏಳು ವಾರ
ಗಳು ಮುಗಿಯುವಂತೆ ಐವತ್ತು ದಿನಗಳನ್ನು ಲೆಕ್ಕಿಸ
16 ಬೇಕು. 1)ಏಳನೆಯ ಸಬ್ಬತ್ ದಿನದ ಮರುದಿನ
ದಲ್ಲಿ ಯೆಹೋವನಿಗೆ ಹೊಸಬೆಳೆಯ 2)ನೈವೇದ್ಯ
17 ದ್ರವ್ಯವನ್ನು ಸಮರ್ಪಿಸಬೇಕು. ನಿಮ್ಮ ನಿವಾಸ
ಗಳಿಂದ [ತಂದ ಹಿಟ್ಟಿನಲ್ಲಿ] ಆರು ಸೇರು ಹಿಟ್ಟಿ
ನಿಂದ ಎರಡು ನೈವೇದ್ಯದ ರೊಟ್ಟಿಗಳನ್ನು ಮಾಡ
ಬೇಕು. ಇವುಗಳನ್ನು ಹುಳಿಹಾಕಿದ ಗೋದಿಯ
ಹಿಟ್ಟಿನಿಂದ ಮಾಡಿ ಪ್ರಥಮಫಲವಾಗಿ ಯೆಹೋವ
18 ನಿಗೆ ಸಮರ್ಪಿಸಬೇಕು. ಆ ರೊಟ್ಟಿಗಳೊಡನೆ ಒಂದು
ವರುಷದ ಪೂರ್ಣಾಂಗವಾದ ಏಳು ಕುರಿಗಳನ್ನೂ
ಒಂದು ಹೋರಿಯನ್ನೂ ಎರಡು ಟಗರುಗಳನ್ನೂ
ಸಮರ್ಪಿಸಬೇಕು. ಇವು ಧಾನ್ಯದ್ರವ್ಯದೊಡನೆಯೂ
ಪಾನದ್ರವ್ಯದೊಡನೆಯೂ ಅಗ್ನಿಮೂಲಕ ಯೆಹೋವ
ನಿಗೆ ಸುವಾಸನೆಯನ್ನುಂಟುಮಾಡುವ ಸರ್ವಾಂಗ
19 ಹೋಮವಾಗುವವು. ಅದಲ್ಲದೆ ದೋಷಪರಿಹಾರಕ
ಯಜ್ಞವಾಗಿ ಒಂದು ಹೋತವನ್ನೂ ಸಮಾಧಾನ
ಯಜ್ಞಕ್ಕಾಗಿ ಒಂದು ವರುಷದ ಎರಡು ಟಗರುಗಳನ್ನೂ
20 ಸಮರ್ಪಿಸಬೇಕು. ಯಾಜಕನು ಇವುಗಳನ್ನೂ
ಪ್ರಥಮಫಲದ ರೊಟ್ಟಿಗಳನ್ನೂ ಎರಡು ಕುರಿಗಳನ್ನೂ
ಯೆಹೋವನ ಸನ್ನಿಧಿಯಲ್ಲಿ ನೈವೇದ್ಯವಾಗಿ ನಿವಾಳಿಸ
ಬೇಕು. ಅವು ಯೆಹೋವನಿಗೆ ಮೀಸಲಾಗಿ ಯಾಜ
21 ಕನಿಗೆ ಸಲ್ಲಬೇಕು. ಆ ದಿವಸದಲ್ಲಿ ದೇವಾರಾಧನೆ
ಗಾಗಿ ಸಭೆಕೂಡಬೇಕೆಂಬದಾಗಿ ಪ್ರಸಿದ್ಧಪಡಿಸಬೇಕು.
ಅದರಲ್ಲಿ ಯಾವ ಉದ್ಯೋಗವನ್ನೂ ನಡಿಸಬಾರದು.
ಇದು ನಿಮಗೂ ನಿಮ್ಮ ಸಂತತಿಯವರಿಗೂ ನಿಮ್ಮ
ಎಲ್ಲಾ ನಿವಾಸಗಳಲ್ಲಿ ಶಾಶ್ವತನಿಯಮ.
22 ನಿಮ್ಮ ದೇಶದ ಪೈರನ್ನು ಕೊಯ್ಯುವಾಗ ಹೊಲ
ಗಳ ಮೂಲೆಗಳಲ್ಲಿರುವದನ್ನೆಲ್ಲಾ ಕೊಯ್ಯಬಾರದು,
ಮತ್ತು ಹಕ್ಕಲಾಯಬಾರದು. ಇವನ್ನು ಬಡವರಿಗೋಸ್ಕ
ರವೂ ಪರದೇಶದವರಿಗೋಸ್ಕರವೂ ಬಿಟ್ಟುಬಿಡಬೇಕು.
ನಾನು ನಿಮ್ಮ ದೇವರಾಗಿರುವ ಯೆಹೋವನು.

ಯೆಹೋವನು ಮೋಶೆಗೆ ಹೇಳಿದ್ದೇನಂದರೆ—
ನೀನು ಇಸ್ರಾಯೇಲ್ಯರಿಗೆ ಹೀಗೆ ಆಜ್ಞಾಪಿಸಬೇಕು—
3)ಏಳನೆಯ ತಿಂಗಳಿನ ಮೊದಲನೆಯ ದಿನದಲ್ಲಿ
ನಿಮಗೆ ಸಂಪೂರ್ಣವಿರಾಮವಿರಬೇಕು. ಅದನ್ನು
ತುತೂರಿಗಳ ಧ್ವನಿಯಿಂದ ಪ್ರಕಟಪಡಿಸಬೇಕು. ದೇವಾ
ರಾಧನೆಗಾಗಿ ಸಭೆಕೂಡಬೇಕು. ಆ ದಿನದಲ್ಲಿ ಯಾವ
ಉದ್ಯೋಗವನ್ನೂ ನಡಿಸಬಾರದು; ಯೆಹೋವನಿಗೆ
ಹೋಮವನ್ನು ಮಾಡಬೇಕು.

ಯೆಹೋವನು ಮೋಶೆಗೆ ಹೇಳಿದ್ದೇನಂದರೆ—
4)ಅದೇ ಏಳನೆಯ ತಿಂಗಳಿನ ಹತ್ತನೆಯ ದಿನವು
ಸರ್ವದೋಷಪರಿಹಾರಕದಿನ. ಅದರಲ್ಲಿ ದೇವಾ
ರಾಧನೆಗಾಗಿ ಸಭೆಕೂಡಬೇಕು; ನೀವು ಪೂರ್ಣವಾಗಿ
ಉಪವಾಸಮಾಡಬೇಕು, ಮತ್ತು ಯೆಹೋವನ ಸನ್ನಿಧಿ
ಯಲ್ಲಿ ಹೋಮವನ್ನು ಮಾಡಬೇಕು. ಆ ದಿನದಲ್ಲಿ
ಯಾವ ಉದ್ಯೋಗವನ್ನೂ ನಡಿಸಬಾರದು. ಅದು
ದೋಷಪರಿಹಾರಕದಿವಸ; ಅದರಲ್ಲಿ ನಿಮಗೋಸ್ಕರ
ಯೆಹೋವನ ಸನ್ನಿಧಿಯಲ್ಲಿ ದೋಷಪರಿಹಾರಕ
ಚಾರವು ನಡೆಯುವದು. ಯಾವನಾದರೂ ಆ ದಿನ
ದಲ್ಲಿ ಉಪವಾಸಮಾಡದೆಹೋದರೆ ಅವನು ಕುಲ
ದಿಂದ ತೆಗೆದುಹಾಕಲ್ಪಡಬೇಕು. ಯಾವನಾದರೂ
ಆ ದಿನದಲ್ಲಿ ಕೆಲಸವನ್ನು ಸ್ವಲ್ಪವಾಗಿ ನಡಿಸಿದರೂ
ಅವನನ್ನು ಇಸ್ರಾಯೇಲ್ಯರಲ್ಲಿ ಇರದಂತೆ ನಾಶಮಾಡು
ವೆನು. ಆ ದಿನದಲ್ಲಿ ಯಾವ ಕೆಲಸವನ್ನೂ ಮಾಡ
ಬಾರದು. ಇದು ನಿಮಗೂ ನಿಮ್ಮ ಸಂತತಿಯವ
ರಿಗೂ ನಿಮ್ಮ ಎಲ್ಲಾ ನಿವಾಸಗಳಲ್ಲಿ ಶಾಶ್ವತನಿಯಮ.
ಆ ದಿನವು ಸಂಪೂರ್ಣವಿರಾಮವುಳ್ಳ ವಿಶ್ರಾಂತಿದಿನ
ವಾಗಿರಬೇಕು. ಅದರಲ್ಲಿ ಉಪವಾಸದಿಂದಿರಬೇಕು.
ಆ ತಿಂಗಳಿನ ಒಂಭತ್ತನೆಯ ದಿನದ ಸಾಯಂಕಾಲದಲ್ಲಿ
ಪ್ರಾರಂಭಿಸಿ ಮರುದಿನದ ಸಾಯಂಕಾಲದ ವರೆಗೆ
ನೀವು ಆ ವಿರಾಮದಿನವನ್ನು ಆಚರಿಸಬೇಕು.

ಯೆಹೋವನು ಮೋಶೆಗೆ ಹೇಳಿದ್ದೇನಂದರೆ—
ನೀನು ಇಸ್ರಾಯೇಲ್ಯರಿಗೆ ಹೀಗೆ ಆಜ್ಞಾಪಿಸು—
5)ಏಳನೆಯ ತಿಂಗಳಿನ ಹದಿನೈದನೆಯ ದಿನ
ಮೊದಲುಗೊಂಡು ಏಳು ದಿನಗಳ ವರೆಗೆ ಪರ್ಣ
ಶಾಲೆಗಳ ಜಾತ್ರೆಯನ್ನು ಯೆಹೋವನಿಗೋಸ್ಕರ
ಆಚರಿಸಬೇಕು. ಮೊದಲನೆಯ ದಿನದಲ್ಲಿ ದೇವಾರಾಧ
ನೆಗಾಗಿ ಸಭೆಕೂಡಬೇಕು; ಯಾವ ಉದ್ಯೋಗವನ್ನೂ
ನಡಿಸಬಾರದು. ಆ ಏಳು ದಿನಗಳಲ್ಲಿಯೂ ನೀವು
ಯೆಹೋವನ ಸನ್ನಿಧಿಯಲ್ಲಿ ಹೋಮಮಾಡಬೇಕು.
ಎಂಟನೆಯ ದಿನದಲ್ಲಿಯೂ ದೇವಾರಾಧನೆಗಾಗಿ ಸಭೆ
ಕೂಡಬೇಕು, ಯೆಹೋವನ ಸನ್ನಿಧಿಯಲ್ಲಿ ಹೋ
ಮಮಾಡಬೇಕು. ಅದು ಸಭೆಕೂಡುವ ದಿನವಾದ
ದರಿಂದ ಅದರಲ್ಲಿ ಯಾವ ಉದ್ಯೋಗವನ್ನೂ ನಡಿಸ
ಬಾರದು.

ಯೆಹೋವನು ನೇಮಿಸಿರುವ ಸಬ್ಬತ್‌ದಿನಗಳ
ಹೊರತಾಗಿ ಮೇಲೆ ಕಂಡವುಗಳೇ ಯೆಹೋವನ
ಹಬ್ಬದ ದಿನಗಳು. ಆ ದಿನಗಳಲ್ಲಿ ದೇವಾರಾಧನೆ

1) ಅಂದರೆ ಪಂಚಾಶತ್ತಮದಿನದಲ್ಲಿ. 2) ಅಂದರೆ ಗೋದಿಯ ಬೆಳೆಯ ಪ್ರಥಮಫಲದ. 3) ಅಶ್ವಯುಜ ಶುದ್ಧ ಪಾಡ
ಪುರಾತನ ಲೆಕ್ಕದ ಮೇರೆಗೆ ಇದು ಹೊಸ ವರುಷದ ಮೊದಲನೆಯ ದಿನ. 4) ವಿಜಯ ದಶಮಿ. 5) ಹಣ್ಣುಹಂಪಲು ಸಂಗ್ರಹಿಸುವ

ಗಾಗಿ ಸಭೆಕೂಡುವಂತೆ ನೀವು ಪ್ರಕಟಿಸಬೇಕು.
ಯೆಹೋವನಿಗೆ ಒಪ್ಪಿಸಬೇಕಾದ ಕಪ್ಪ, ಕಾಣಿಕೆ,
ಹರಕೆ ಇವುಗಳನ್ನು ನೀವು ಸಮರ್ಪಿಸಬೇಕಲ್ಲದೆ
ಮೇಲೆ ಸೂಚಿಸಿರುವ ಹಬ್ಬದ ದಿನಗಳಲ್ಲಿಯೂ
ಆಯಾ ದಿನಕ್ಕೆ ನೇಮಿಸಿರುವ ಪ್ರಕಾರ ಸರ್ವಾಂಗ
ಹೋಮ, ನೈವೇದ್ಯದ್ರವ್ಯ, ಸಮಾಧಾನಯಜ್ಞ,
ಪಾನದ್ರವ್ಯ ಇವುಗಳನ್ನೂ ತಂದು ಯೆಹೋವನ
ಸನ್ನಿಧಿಯಲ್ಲಿ ಹೋಮಮಾಡಬೇಕು.
ಏಳನೆಯ ತಿಂಗಳಿನ ಹದಿನೈದನೆಯ ದಿನದಲ್ಲಿ ನೀವು
ತೋಟ ಮತ್ತು ತೋಪುಗಳ ಬೆಳೆಯನ್ನು ಕೂಡಿಸಿದ
ನಂತರ ಯೆಹೋವನು ನೇಮಿಸಿದ [ಪರ್ಣಶಾಲೆಗಳ]
ಜಾತ್ರೆಯನ್ನು ಏಳು ದಿನಗಳ ವರೆಗೂ ಆಚರಿಸಬೇಕು.
ಮೊದಲನೆಯ ದಿನದಲ್ಲಿಯೂ ಎಂಟನೆಯ ದಿನದಲ್ಲಿ
ಯೂ ಯಾವ ಕೆಲಸವನ್ನೂ ಮಾಡದೆ ಸಂಪೂರ್ಣವಿರಾ
ಮದಿಂದಿರಬೇಕು. ಮೊದಲನೆಯ ದಿನದಲ್ಲಿ ಶ್ರೇಷ್ಠ
ವೃಕ್ಷದ ಹಣ್ಣುಗಳನ್ನೂ ಖರ್ಜೂರ ಮರದ ಗರಿಗ
ಳನ್ನೂ ಎಲೆಗಳು ದಟ್ಟವಾಗಿರುವ ಮರಗಳ ಕೊಂಬೆ
ಗಳನ್ನೂ ನೀರಿನ ಕಾಲಿವೆಗಳ ಬಳಿಯಲ್ಲಿ ಬೆಳೆಯುವ
ನೀರವಂಜಿ ಚಿಗುರುಗಳನ್ನೂ ತೆಗೆದುಕೊಂಡು
ಯೆಹೋವನ ಸನ್ನಿಧಿಯಲ್ಲಿ ಏಳು ದಿನಗಳು
ಸಂಭ್ರಮವಾಗಿರಬೇಕು. ಹೀಗೆ ಪ್ರತಿ ವರುಷ
ದಲ್ಲಿಯೂ ಏಳು ದಿನಗಳ ವರೆಗೆ ಈ ಉತ್ಸವವನ್ನು
ಆಚರಿಸಬೇಕು; ನಿಮಗೂ ನಿಮ್ಮ ಸಂತತಿಯವರಿಗೂ
ಇದು ಶಾಶ್ವತನಿಯಮ; ಏಳನೆಯ ತಿಂಗಳಿನಲ್ಲಿ
ಇದನ್ನು ಆಚರಿಸಬೇಕು. ಏಳು ದಿನಗಳು ನೀವು
ಪರ್ಣಶಾಲೆಗಳಲ್ಲಿ ವಾಸವಾಗಿರಬೇಕು; ಸ್ವದೇಶಸ್ಥ
ರಾದ ಇಸ್ರಾಯೇಲ್ಯರೆಲ್ಲರೂ ಪರ್ಣಶಾಲೆಗಳಲ್ಲಿಯೇ
ವಾಸವಾಗಿರಬೇಕು. ನಾನು ನಿಮ್ಮನ್ನು ಐಗುಪ್ತ
ದೇಶದಿಂದ ಬರಮಾಡಿದಾಗ ಇಸ್ರಾಯೇಲ್ಯರು ಪರ್ಣ
ಶಾಲೆಗಳಲ್ಲಿ ವಾಸವಾಗಿರುವಂತೆ ಮಾಡಿದೆನೆಂಬದಾಗಿ
ಇದರಿಂದ ನಿಮ್ಮ ಸಂತತಿಯವರಿಗೆ ತಿಳಿಯುವದು.
ನಾನು ನಿಮ್ಮ ದೇವರಾದ ಯೆಹೋವನು.
ಯೆಹೋವನಿಂದ ನೇಮಕವಾದ ಹಬ್ಬಗಳ ದಿನ
ಗಳ ವಿಷಯವಾಗಿ ಮೋಶೆಯು ಅದೇ ಮೇರೆಗೆ
ಇಸ್ರಾಯೇಲ್ಯರಿಗೆ ತಿಳಿಸಿದನು.

ವಸ್ಥಾನದ ದೀಪಸ್ತಂಭವನ್ನೂ ನೈವೇದ್ಯವಾದ ರೊಟ್ಟಿಗಳನ್ನೂ
ಕುರಿತದ್ದು.

4 ಯೆಹೋವನು ಮೋಶೆಗೆ ಹೇಳಿದ್ದೇನಂದರೆ—
2 ದೇವಸ್ಥಾನದಲ್ಲಿನ ದೀಪಗಳನ್ನು ಪ್ರತಿನಿತ್ಯವೂ
ಉರಿಸುವದಕ್ಕಾಗಿ ಇಸ್ರಾಯೇಲ್ಯರು ಎಣ್ಣೇಮರದ
ಕಾಯಿಗಳನ್ನು ಕುಟ್ಟಿ ತೆಗೆದ ನಿರ್ಮಲವಾದ ಎಣ್ಣೆ
ಯನ್ನು ನಿನಗೆ ತಂದುಕೊಡಬೇಕೆಂದು ಅವರಿಗೆ
ಆಜ್ಞಾಪಿಸು. ದೇವದರ್ಶನದ ಗುಡಾರದಲ್ಲಿ
ಆಜ್ಞಾಶಾಸನಗಳ ಮಂಜೂಷದ ಮುಂದಣ ತೆರೆಯ
ಹೊರಗೆ ಆ ದೀಪಗಳು ಯೆಹೋವನ ಸನ್ನಿಧಿಯಲ್ಲಿ
ಸಾಯಂಕಾಲದಿಂದ ಉದಯದ ವರೆಗೂ ಉರಿಯು
ತ್ತಿರುವಂತೆ ಆರೋನನು ಅವುಗಳನ್ನು ಸರಿಪಡಿಸ
ಬೇಕು. ಇದು ನಿಮಗೂ ನಿಮ್ಮ ಸಂತತಿಯವರಿಗೂ
ಶಾಶ್ವತನಿಯಮ. ಅವನು ಪ್ರತಿನಿತ್ಯವೂ ಯೆಹೋ 4
ವನ ಸನ್ನಿಧಿಯಲ್ಲಿ ಹಣತಿಗಳನ್ನು ಆ ಚೊಕ್ಕಬಂಗಾ
ರದ ದೀಪಸ್ತಂಭದ ಮೇಲೆ ಸರಿಯಾಗಿ ಇಡ
ಬೇಕು.
ಅದಲ್ಲದೆ ನೀನು ಗೋದಿಯ ಹಿಟ್ಟಿನಿಂದ ಹನ್ನೆ 5
ರಡು ರೊಟ್ಟಿಗಳನ್ನು ಮಾಡಬೇಕು; ಪ್ರತಿಯೊಂದು
ರೊಟ್ಟಿಯು ಆರಾರು ಸೇರಿನದಾಗಿರಬೇಕು. ಅವು 6
ಗಳನ್ನು ಆರಾರರ ಮೇರೆಗೆ ಎರಡು ರಾಶಿಗಳಾಗಿ
ಚೊಕ್ಕಬಂಗಾರದ ಮೇಜಿನ ಮೇಲೆ ಯೆಹೋವನ
ಸನ್ನಿಧಿಯಲ್ಲಿ ಇಡಬೇಕು. ಒಂದೊಂದು ರಾಶಿಯ 7
ಮೇಲೆ ಸ್ವಚ್ಛವಾದ ಧೂಪವನ್ನು ಇಡಬೇಕು. ಆ
ರೊಟ್ಟಿಗಳ ನೈವೇದ್ಯವನ್ನು ಸೂಚಿಸುವದಕ್ಕಾಗಿ
ಆ ಧೂಪವೇ ಯೆಹೋವನಿಗೆ ಹೋಮಮಾಡ
ಲ್ಪಡಬೇಕು. ಯಾಜಕನು ಯಾವಾಗಲೂ ಪ್ರತಿ 8
ಸಬ್ಬತ್‌ದಿನದಲ್ಲಿ ರೊಟ್ಟಿಗಳನ್ನು ತಂದು ಯೆಹೋವನ
ಸನ್ನಿಧಿಯಲ್ಲಿ ಕ್ರಮಪಡಿಸಬೇಕು. ಶಾಶ್ವತವಾದ
ನಿಬಂಧನೆಯ ಮೇರೆಗೆ ಅವುಗಳನ್ನು ಇಸ್ರಾಯೇಲ್ಯರಿ
ಗೋಸ್ಕರ ಯೆಹೋವನಿಗೆ ಸಮರ್ಪಿಸಬೇಕು. ಅವು 9
ಆರೋನನಿಗೂ ಅವನ ಸಂತತಿಯವರಿಗೂ ಸಲ್ಲ
ಬೇಕು. ಮಹಾಪರಿಶುದ್ಧವಾದ ಅವುಗಳನ್ನು ದೇವ
ಸ್ಥಾನದ ಪ್ರಾಕಾರದಲ್ಲಿಯೇ ತಿನ್ನಬೇಕು. ಅವು
ಯೆಹೋವನಿಗೆ ಸಮರ್ಪಿತವಾದ ಹೋಮದ್ರವ್ಯ
ಗಳಿಗೆ ಸೇರಿದವುಗಳಾದದರಿಂದ ಶಾಶ್ವತನಿಯಮದ
ಪ್ರಕಾರ ಯಾಜಕರಿಗೇ ಸಲ್ಲಬೇಕು.

ದೇವದೂಷಕನಿಗೆ ಮರಣಶಿಕ್ಷೆಯೂ ಮನುಷ್ಯನನ್ನು
ಅಂಗಹೀನಮಾಡಿದವನಿಗೆ ಪ್ರತಿಯಾಗಿ ಅಂಗಭಂಗವೂ ಆಗಬೇಕೆಂಬ
ನಿಯಮ.

ಇಸ್ರಾಯೇಲ್ ಸ್ತ್ರೀಯಲ್ಲಿ ಐಗುಪ್ತ ಪುರುಷನಿಂದ 10
ಹುಟ್ಟಿದವನೊಬ್ಬನು ಬಂದು ಇಸ್ರಾಯೇಲ್ಯರ
ಪಾಳೆಯದಲ್ಲಿ ಇಸ್ರಾಯೇಲ್ಯನಾದ ಒಬ್ಬ ಮನುಷ್ಯನ
ಸಂಗಡ ಜಗಳವಾಡುತ್ತಾ ಬೈದು [ಯೆಹೋವನ] 11
ಹೆಸರನ್ನು ದೂಷಿಸಿದದರಿಂದ ಅವನನ್ನು ಮೋಶೆಯ
ಬಳಿಗೆ ಹಿಡಿದು ತಂದರು. ಅವನ ತಾಯಿಯು
ದಾನ್ ಕುಲದ ದಿಬ್ರೀಯ ಮಗಳಾದ ಶೆಲೋಮಿತ್
ಎಂಬವಳು. ಅವನ ವಿಷಯವಾಗಿ ಯೆಹೋವನ 12
ತೀರ್ಪನ್ನು ತಿಳುಕೊಳ್ಳುವ ಪರ್ಯಂತರ ಅವನನ್ನು
ಕಾವಲಲ್ಲಿರಿಸಿದರು.
ಆಗ ಯೆಹೋವನು ಮೋಶೆಗೆ ಹೇಳಿದ್ದೇನಂದರೆ— 13
ಆ ದೂಷಿಸಿದವನನ್ನು ಪಾಳೆಯದ ಹೊರಗೆ ಒಯ್ಯ 14
ಬೇಕು. ಅವನ ದೂಷಣೆಯ ಮಾತುಗಳನ್ನು ಕೇಳಿ
ದವರೆಲ್ಲರೂ ಅವನ ತಲೆಯ ಮೇಲೆ ತಮ್ಮ ಕೈಗಳ
ನ್ನಿಟ್ಟನಂತರ ಸಮೂಹದವರೆಲ್ಲರೂ ಅವನನ್ನು ಕಲ್ಲೆ
ಸೆದು ಕೊಲ್ಲಬೇಕು. ಮತ್ತು ನೀನು ಇಸ್ರಾಯೇಲ್ಯ 15
ರಿಗೆ ಹೀಗೆ ಹೇಳಬೇಕು—ತನ್ನ ದೇವರನ್ನು ದೂಷಿಸಿ
ದವನು ಆ ದೋಷದ ಫಲವನ್ನು ಅನುಭವಿಸಬೇಕು.
ಯೆಹೋವನ ಹೆಸರನ್ನು ನಿಂದಿಸಿದವನಿಗೆ ಮರಣ 16
ಶಿಕ್ಷೆಯಾಗಬೇಕು; ಸಮೂಹದವರೆಲ್ಲರೂ ಅವನನ್ನು
ಕಲ್ಲೆಸೆದು ಕೊಲ್ಲಬೇಕು. ಅನ್ಯದೇಶಸ್ಥನೇಯಾಗಲಿ

ಸ್ವದೇಶಸ್ಥನೇಯಾಗಲಿ ಯೆಹೋವನ ಹೆಸರನ್ನು ನಿಂದಿ
ಸಿದರೆ ಅವನಿಗೆ ಮರಣಶಿಕ್ಷೆಯಾಗಬೇಕು.
17 ಮನುಷ್ಯನನ್ನು ಹೊಡೆದು ಕೊಂದವನಿಗೆ ಮರಣ
18 ಶಿಕ್ಷೆಯಾಗಬೇಕು. ಪಶುವನ್ನು ಹೊಡೆದು ಕೊಂದವ
ನಿಂದ ಅದಕ್ಕೆ ಪ್ರತಿಯಾಗಿ ಈಡನ್ನು ಕೊಡಿಸಬೇಕು;
ಪ್ರಾಣಿಗೆ ಪ್ರತಿಯಾಗಿ ಪ್ರಾಣಿಯನ್ನು ಕೊಡಿಸಬೇಕು.
19 ಯಾವನಾದರೂ ಮತ್ತೊಬ್ಬನನ್ನು ಅಂಗಹೀನಮಾಡಿ
ದರೆ ಅವನು ಮಾಡಿದಂತೆಯೇ ಅವನಿಗೆ ಮಾಡಿಸ
20 ಬೇಕು. ಅವಯವವನ್ನು ಮುರಿದವನಿಗೆ ಅವಯವ
ವನ್ನು ಮುರಿಯುವದೇ ಶಿಕ್ಷೆ. ಕಣ್ಣಿಗೆ ಪ್ರತಿಯಾಗಿ
ಕಣ್ಣನ್ನೂ ಹಲ್ಲಿಗೆ ಪ್ರತಿಯಾಗಿ ಹಲ್ಲನ್ನೂ ತೆಗಿಸ
ಬೇಕು. ಮತ್ತೊಬ್ಬನನ್ನು ಅಂಗಹೀನಮಾಡಿದವನಿಗೆ
21 ಈ ಪ್ರಕಾರ ಪ್ರತೀಕಾರಮಾಡಿಸಬೇಕು. ಪಶುವನ್ನು
ಕೊಂದವನು ಅದಕ್ಕೆ ಬದಲಾಗಿ ಈಡು ಕೊಡಬೇಕು.
ಮನುಷ್ಯನನ್ನು ಕೊಂದವನಿಗೆ ಮರಣಶಿಕ್ಷೆಯಾಗ
22 ಬೇಕು. ಅನ್ಯರಿಗಾಗಲಿ ಸ್ವದೇಶದವರಿಗಾಗಲಿ ಪಕ್ಷ
ಪಾತವಿಲ್ಲದೆ ಒಂದೇ ವಿಧಿಯಿರಬೇಕು. ನಾನು ನಿಮ್ಮ
ದೇವರಾದ ಯೆಹೋವನು.
23 ಮೋಶೆ ಈ ಮಾತುಗಳನ್ನು ಇಸ್ರಾಯೇಲ್ಯರಿಗೆ
ತಿಳಿಸಲಾಗಿ ಅವರು ದೂಷಿಸಿದವನಾದ ಆ ಮನು
ಷ್ಯನನ್ನು ಪಾಳೆಯದ ಹೊರಕ್ಕೆ ತೆಗೆದುಕೊಂಡು
ಹೋಗಿ ಕಲ್ಲೆಸೆದು ಕೊಂದುಬಿಟ್ಟರು. ಯೆಹೋವನು
ಮೋಶೆಗೆ ಆಜ್ಞಾಪಿಸಿದಂತೆಯೇ ಇಸ್ರಾಯೇಲ್ಯರು
ಮಾಡಿದರು.

### ಸಬ್ಬತ್‌ವರುಷಗಳನ್ನೂ ಜೂಬಿಲಿ ಎಂಬ ಬಿಡುಗಡೆಯ ಸಂವತ್ಸರವನ್ನೂ ಕುರಿತದ್ದು.

25 ಯೆಹೋವನು ಸೀನಾಯಿಬೆಟ್ಟದಲ್ಲಿ ಮೋಶೆಗೆ
2 ಹೇಳಿದ್ದೇನಂದರೆ — ನೀನು ಇಸ್ರಾಯೇಲ್ಯರಿಗೆ
ಹೀಗೆ ಆಜ್ಞಾಪಿಸು —
ನಾನು ನಿಮಗೆ ಕೊಡುವ ದೇಶಕ್ಕೆ ನೀವು
ಬಂದಾಗ ಆ ದೇಶವೂ ಯೆಹೋವನಿಗೆ 1)ಸಬ್ಬತ್
3 ಕಾಲವನ್ನು ಆಚರಿಸಬೇಕು. ಆರು ವರುಷಗಳು
ನೀವು ಹೊಲದಲ್ಲಿ ಬೀಜವನ್ನು ಬಿತ್ತಬಹುದು, ದ್ರಾಕ್ಷೇ
ತೋಟದ ಕೆಲಸವನ್ನು ನಡಿಸಬಹುದು; ಹೊಲ
4 ತೋಟಗಳ ಬೆಳೆಗಳನ್ನು ಸಂಗ್ರಹಿಸಬಹುದು. ಆದರೆ
ಏಳನೆಯ ವರುಷವು ಯಾವ ಬೇಸಾಯವೂ ನಡೆಯ
ಬಾರದ ವಿಶ್ರಾಂತಿಕಾಲವಾಗಿಯೂ ಯೆಹೋವನಿಗೆ
ಆಚರಿಸಬೇಕಾದ ಸಬ್ಬತ್‌ಕಾಲವಾಗಿಯೂ ಇರ
ಬೇಕು; ಹೊಲದಲ್ಲಿ ಬೀಜವನ್ನು ಬಿತ್ತಬಾರದು,
ದ್ರಾಕ್ಷೇತೋಟದ ಕೆಲಸವನ್ನು ನಡಿಸಬಾರದು.
5 ಹೊಲದಲ್ಲಿ ತಾನಾಗಿ ಬೆಳೆದ ಪೈರನ್ನು ನೀವು ಕೂಡಿ
ಸಿಟ್ಟುಕೊಳ್ಳಬಾರದು; ನೀವು ನೋಡಿಕೊಳ್ಳದೆ ಬಿಟ್ಟ
ದ್ರಾಕ್ಷಾಲತೆಗಳಲ್ಲಿ ಬಂದ ಹಣ್ಣನ್ನು ಸಂಗ್ರಹಿಸ
ಬಾರದು. ಆ ವರುಷವೆಲ್ಲಾ ಭೂಮಿಗೆ ಸಂಪೂರ್ಣ
6 ವಾಗಿ ವಿಶ್ರಾಂತಿಯಿರಬೇಕು. ಆದರೆ ಅಂಥ ಸಬ್ಬತ್
ಸಂವತ್ಸರದಲ್ಲಿ ತಾನಾಗಿ ಭೂಮಿಯಲ್ಲಿ ಹುಟ್ಟಿದ್ದು
ನಿಮಗೂ ನಿಮ್ಮ ದಾಸದಾಸಿಯರಿಗೂ ಕೂಲಿಯವ
ರಿಗೂ ನಿಮ್ಮ ಬಳಿಯಲ್ಲಿ ಇಳುಕೊಂಡವರಿಗೂ ನಿಮ್ಮ
ಪಶುಗಳಿಗೂ ದೇಶದಲ್ಲಿರುವ ಕಾಡುಮೃಗಗಳಿಗೂ
ಆಹಾರವಾಗಬಹುದು.
ಅದಲ್ಲದೆ ಏಳು ವರುಷಕ್ಕೊಂದರಂತೆ ಏಳು ಸಬ್ಬತ್
ವರುಷಗಳನ್ನು ಲೆಕ್ಕಿಸಬೇಕು. ಆ ಏಳು ಸಬ್ಬತ್
ಸಂವತ್ಸರಗಳ ಕಾಲವು ಅಂದರೆ ನಾಲ್ವತ್ತೊಂಭತ್ತು
ವರುಷಗಳು ಕಳೆದ ಮೇಲೆ ಏಳನೆಯ ತಿಂಗಳಿನ ಹತ್ತ
ನೆಯ ದಿವಸದಲ್ಲಿ ನಿಮ್ಮ ದೇಶದಲ್ಲೆಲ್ಲಾ ಕೊಂಬಿನ
ಧ್ವನಿಯನ್ನು ಮಾಡಿಸಬೇಕು; ಸಕಲ ದೋಷಪರಿ
ಹಾರಕನಾದ ಆ ದಿನದಲ್ಲೇ ನಿಮ್ಮ ದೇಶದಲ್ಲೆಲ್ಲಾ
ಆ ಕೊಂಬಿನ ಧ್ವನಿಯನ್ನು ಮಾಡಿಸಬೇಕು. ನೀವು
ಐವತ್ತನೆಯ ವರುಷವನ್ನು ದೇವರಿಗೆ ಮೀಸಲಾದ
ವರುಷವೆಂದು ಭಾವಿಸಿ ಅದರಲ್ಲಿ ದೇಶದ ನಿವಾಸಿಗಳೆಲ್ಲ
ರಿಗೂ ಬಿಡುಗಡೆಯಾಯಿತೆಂಬದಾಗಿ ಸಾರಬೇಕು.
ಅದು 2)ಜೂಬಿಲಿ ಸಂವತ್ಸರವಾದದರಿಂದ ನೀವೆಲ್ಲರು
ನಿಮ್ಮನಿಮ್ಮ ಸ್ವಂತ ಭೂಮಿಗಳಿಗೂ ಸ್ವಜನರ ಬಳಿಗೂ
ಹೋಗಿ ಇರಬಹುದು. ಆ ಐವತ್ತನೆಯ ವರುಷದಲ್ಲಿ
ಅಂದರೆ ಜೂಬಿಲಿ ಸಂವತ್ಸರದಲ್ಲಿ ನೀವು ಬೀಜವನ್ನು
ಬಿತ್ತಬಾರದು; ತಾನಾಗಿ ಬೆಳೆದ ಪೈರನ್ನು ಕೂಡಿ
ಸಿಟ್ಟುಕೊಳ್ಳಬಾರದು; ನೀವು ನೋಡಿಕೊಳ್ಳದೆ ಬಿಟ್ಟ
ದ್ರಾಕ್ಷಾಲತೆಗಳಲ್ಲಿ ಆದ ಹಣ್ಣನ್ನು ಸಂಗ್ರಹಿಸ
ಬಾರದು. ಅದು ಜೂಬಿಲಿ ವರುಷವಾದದರಿಂದ
ನೀವು ಅದನ್ನು ಮೀಸಲಾದದ್ದೆಂದು ಭಾವಿಸಬೇಕು.
ಹೊಲದಲ್ಲಿ ತಾನಾಗಿ ಬೆಳೆದದ್ದನ್ನು ಊಟಮಾಡ
ಬಹುದು.
ಜೂಬಿಲಿ ವರುಷದಲ್ಲಿ ನಿಮ್ಮನಿಮ್ಮ ಸ್ವಂತ ಭೂಮಿ
ಗಳು ತಿರಿಗಿ ನಿಮ್ಮ ವಶಕ್ಕೆ ಬರುವವು. ನೀವು
[ಸ್ಥಿರಸೊತ್ತನ್ನು] ಸ್ವದೇಶದವರೊಡನೆ ಕ್ರಯವಿಕ್ರಯ
ಮಾಡುವಾಗ ಇದರ ವಿಷಯದಲ್ಲಿ ಅನ್ಯಾಯಮಾಡ
ಬಾರದು. ಕಳೆದ ಜೂಬಿಲಿ ಸಂವತ್ಸರದಿಂದ ಇಷ್ಟು
ವರುಷವಾಯಿತೆಂದು ಲೆಕ್ಕಿಸಿ ಸ್ವದೇಶದವನಿಂದ
ಕ್ರಯಕ್ಕೆ ತೆಗೆದುಕೊಳ್ಳಬೇಕು; ಅದರಂತೆ ಮಾರು
ವವನು ಇಷ್ಟು ವರುಷಗಳ ಬೆಳೆಯಾಯಿತೆಂದು
ಲೆಕ್ಕಿಸಿ ಕ್ರಯಕ್ಕೆ ಕೊಡಬೇಕು. [ಮುಂದಣ ಜೂಬಿಲಿ
ಸಂವತ್ಸರದ ತನಕ] ಹೆಚ್ಚು ವರುಷಗಳಾದರೆ ಭೂಮಿಯ
ಕ್ರಯವನ್ನು ಹೆಚ್ಚಿಸಬೇಕು; ಕಡಮೆಯಾದರೆ ತಗ್ಗಿಸ
ಬೇಕು; ಭೂಮಿಯನ್ನಲ್ಲ, ಲೆಕ್ಕದ ಪ್ರಕಾರ ಬೆಳೆ
ಗಳನ್ನೇ ಮಾರುತ್ತಾನಲ್ಲಾ. ಆದದರಿಂದ ನೀವು
ಒಬ್ಬರಿಗೊಬ್ಬರು ಅನ್ಯಾಯಮಾಡಬಾರದು; ನಿಮ್ಮ
ದೇವರಿಗೆ ಭಯಪಡುವವರಾಗಿರಬೇಕು; ನಾನು
ನಿಮ್ಮ ದೇವರಾದ ಯೆಹೋವನು.
ನನ್ನ ಆಜ್ಞಾವಿಧಿಗಳನ್ನು ನೀವು ಅನುಸರಿಸಿ ನಡೆ
ಯಬೇಕು. ಆಗ ನೀವು ಆ ದೇಶದಲ್ಲಿ ನಿರ್ಭಯ
ವಾಗಿ ವಾಸವಾಗಿರುವಿರಿ; ನಿಮ್ಮ ಭೂಮಿಯು ಫಲವ
ತ್ತಾಗುವದು, ನೀವು ಸಮೃದ್ಧಿಯಾಗಿ ಊಟಮಾಡು
ವಿರಿ, ಮತ್ತು ಆ ದೇಶದಲ್ಲಿ ನೀವು ನಿರ್ಭಯವಾಗಿ
ವಾಸಮಾಡುವಿರಿ.

---

1) ಅಂದರೆ ವಿಶ್ರಾಂತಿ. 2) ಮೂಲಾರ್ಥ: ಕೊಂಬೂದುವ.

ಏಳನೆಯ ವರುಷದಲ್ಲಿ ಬೀಜವನ್ನು ಬಿತ್ತುವದಕ್ಕಾ
ಗಲಿ ಬೆಳೆದದ್ದನ್ನು ಕೂಡಿಸಿಟ್ಟುಕೊಳ್ಳುವದಕ್ಕಾಗಲಿ
ಅಪ್ಪಣೆಯಿಲ್ಲವಲ್ಲಾ; ಆ ವರುಷದಲ್ಲಿ ಏನು ತಿನ್ನ
ಬೇಕೆಂದು ವಿಚಾರಿಸುತ್ತೀರೋ? ಕೇಳಿರಿ, ಆರನೆಯ
ವರುಷದ ಬೆಳೆ ನನ್ನ ಪೂರ್ಣಾನುಗ್ರಹದಿಂದ ಮೂರು
ವರುಷಗಳ ಬೆಳೆಯಷ್ಟಾಗುವದು. ನೀವು ಎಂಟನೆಯ
ವರುಷದಲ್ಲಿ ಬೀಜವನ್ನು ಬಿತ್ತಿ ಅದರ ಬೆಳೆ ದೊರೆ
ಯುವ ತನಕ ಅಂದರೆ ಒಂಭತ್ತನೆಯ ವರುಷದ ವರೆಗೆ
ಹಿಂದಿನ ಬೆಳೆಯಿಂದಲೇ ಜೀವನಮಾಡುವಿರಿ.
ಭೂಮಿಯನ್ನು ಶಾಶ್ವತವಾಗಿ ವಿಕ್ರಯಿಸಿಬಿಡ
ಬಾರದು. ಯಾಕಂದರೆ ಆ ಭೂಮಿ ನನ್ನದು; ನೀವಾ
ದರೋ ಪರವಾಸಿಗಳಾಗಿ ನನ್ನ ಆಶ್ರಯದಲ್ಲಿ ಇಳು
ಕೊಂಡವರೇ. ನಿಮ್ಮಲ್ಲಿ ಮತ್ತೊಬ್ಬನ ಸ್ವಾಸ್ತ್ಯ
ಭೂಮಿ ನಿಮ್ಮ ವಶಕ್ಕೆ ಬಂದರೆ ಅದನ್ನು ಈಡು
ಕೊಟ್ಟು ಬಿಡಿಸಿಕೊಳ್ಳುವ ಅಧಿಕಾರವು ಕೊಟ್ಟವನಿಗೆ
ಇರಬೇಕು.
ನಿಮ್ಮ ಸಹೋದರರಲ್ಲಿ ಒಬ್ಬನು ಬಡವನಾಗಿ ತನ್ನ
ಭೂಸ್ಥಿತಿಯಲ್ಲಿ ಏನಾದರೂ ಮಾರಿಕೊಂಡರೆ ಅವನ
ಸಮೀಪವಾದ ಬಂಧುವು ಅದನ್ನು ಬಿಡಿಸಿಕೊಳ್ಳ
ಬೇಕು. ಬಿಡಿಸುವ ಬಂಧುವು ಇಲ್ಲದೆಹೋದ
ರಕ್ಷಕ್ಕೆ ಮಾರಿದವನೇ ಸ್ಥಿತಿವಂತನಾಗಿ ಅದನ್ನು
ಬಿಡಿಸಿಕೊಳ್ಳುವಷ್ಟು ಹಣವನ್ನು ಸಂಪಾದಿಸಿದರೆ ಆ
ಭೂಮಿಯನ್ನು ಮಾರಿದಂದಿನಿಂದ ಕಳೆದ ವರುಷ
ಗಳನ್ನು ಬಿಟ್ಟು ಮಿಕ್ಕ ಕ್ರಯವನ್ನು ಕೊಟ್ಟು ತನ್ನ
ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳಬಹುದು. ಅವ
ನು ಆ ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳಲಾರದೆ
ಹೋದರೆ ಅದು ಜೂಬಿಲಿ ಸಂವತ್ಸರದ ತನಕ
ಕೊಂಡುಕೊಂಡವನ ವಶದಲ್ಲೇ ಇರಬೇಕು. ಜೂಬಿಲಿ
ವರುಷದಲ್ಲಿ ಅದು ಬಿಡುಗಡೆಯಾಗುವದು; ಆಗ
ಆ ಭೂಮಿ ತಿರಿಗಿ ಅವನ ವಶಕ್ಕೆ ಬರುವದು.
ಯಾವನಾದರೂ ಪೌಳಿಗೋಡೆಯುಳ್ಳ ಪಟ್ಟಣ
ದಲ್ಲಿರುವ ಮನೆಯನ್ನು ಮಾರಿದರೆ ಅದನ್ನು ಮಾರಿದ
ದಿನ ಮೊದಲುಗೊಂಡು ಒಂದು ವರುಷ ಪೂರ್ತಿ
ಯಾಗುವದರೊಳಗೆ ಈಡುಕೊಟ್ಟು ಬಿಡಿಸಬಹುದು;
ಪೂರಾ ಒಂದು ವರುಷದ ತನಕ ಅದನ್ನು ಬಿಡಿಸುವ
ಅಧಿಕಾರವು ಅವನಿಗಿರುವದು. ಪೌಳಿಗೋಡೆಯುಳ್ಳ
ಪಟ್ಟಣದಲ್ಲಿರುವ ಆ ಮನೆ ಒಂದು ವರುಷದೊಳ
ಗಾಗಿ ಬಿಡಿಸಲ್ಪಡದೆಹೋದರೆ ಅದು ಜೂಬಿಲಿ ಸಂವ
ತ್ಸರದಲ್ಲಿಯೂ ಬಿಡುಗಡೆಯಾಗದೆ ಕ್ರಯಕೊಟ್ಟವ
ನಿಗೂ ಅವನ ಸಂತತಿಯವರಿಗೂ ಶಾಶ್ವತವಾಗಿ ನಿಲ್ಲ
ಬೇಕು. ಪೌಳಿಗೋಡೆಯಿಲ್ಲದ ಊರುಗಳಲ್ಲಿರುವ
ಮನೆಗಳು ಬೈಲಿನ ಹೊಲಗಳಂತೆ ಎಣಿಸಲ್ಪಡಬೇಕು.
ಅವುಗಳನ್ನು ಬಿಡಿಸುವ ಅಧಿಕಾರವಿರುವದು; ಜೂಬಿಲಿ
ಸಂವತ್ಸರದಲ್ಲಿ ಅವು ಬಿಡುಗಡೆಯಾಗುವವು. ಆದರೆ
ಲೇವಿಯರ ಸ್ವಾಸ್ತ್ಯವಾಗಿರುವ ಪಟ್ಟಣಗಳಲ್ಲಿನ
ಮನೆಗಳು ಮಾರಲ್ಪಟ್ಟರೆ ಅವುಗಳನ್ನು ಬಿಡಿಸುವ
ಅಧಿಕಾರವು ಲೇವಿಯರಿಗೆ ಯಾವಾಗಲೂ ಇರು
ವದು. ಲೇವಿಯರೊಳಗೆ ಯಾರೂ ಅದನ್ನು ಬಿಡಿ
ಸದೆಹೋದರೆ ಲೇವಿಯರ ಸ್ವಂತವಾಗಿರುವ ಅಂಥ
ಪಟ್ಟಣಗಳಲ್ಲಿ ಮಾರಲ್ಪಟ್ಟ ಮನೆ ಜೂಬಿಲಿ ಸಂವ
ತ್ಸರದಲ್ಲಿ ಬಿಡುಗಡೆಯಾಗುವದು. ಲೇವಿಯರ
ಪಟ್ಟಣಗಳಲ್ಲಿನ ಮನೆಗಳು ಇಸ್ರಾಯೇಲ್ಯರ ಮಧ್ಯ
ದಲ್ಲಿರುವ ಅವರ ಸ್ವಾಸ್ತ್ಯವಷ್ಟೆ. ಅವರು ತಮ್ಮ 34
ಪಟ್ಟಣಗಳಿಗೆ ಸೇರಿರುವ ಹುಲ್ಲುಗಾವುಲನ್ನು ಮಾರ
ಲೇ ಕೂಡದು. ಅವು ಅವರಿಗೆ ಶಾಶ್ವತವಾದ ಸ್ವಾಸ್ತ್ಯ.
ನಿಮ್ಮಲ್ಲಿ ಒಬ್ಬ ಸಹೋದರನು ಬಡತನದಿಂದ ಗತಿ 35
ಹೀನನಾದರೆ ಅವನು ಬದುಕಿಕೊಳ್ಳುವಂತೆ ನೀವು
ಅವನನ್ನು ನಿಮ್ಮ ನಡುವೆ ಇಳುಕೊಂಡ ಪರವಾಸಿ
ಯೆಂದು ಉದ್ಧಾರಮಾಡಬೇಕು. ನೀವು ಅವ 36
ನಿಂದ ಬಡ್ಡಿಯನ್ನಾಗಲಿ ಲಾಭವನ್ನಾಗಲಿ ತೆಗೆದು
ಕೊಳ್ಳಬಾರದು; ಅವನು ನಿಮ್ಮ ಬಳಿಯಲ್ಲಿ ಬದುಕು
ವಂತೆ ನೀವು ದೇವರಲ್ಲಿ ಭಯಭಕ್ತಿಯುಳ್ಳವರಾಗಿ
ನಡೆದುಕೊಳ್ಳಬೇಕು. ನೀವು ಅವನಿಗೆ ಸಾಲಕೊಟ್ಟರೆ 37
ಬಡ್ಡಿಯನ್ನು ಕೇಳಬಾರದು, ದವಸಕೊಟ್ಟರೆ ಲಾಭ
ವನ್ನು ಕೇಳಬಾರದು. ನಾನು ನಿಮ್ಮ ದೇವರಾದ 38
ಯೆಹೋವನು; ನಿಮಗೆ ದೇವರಾಗುವದಕ್ಕೂ ನಿಮಗೆ
ಕಾನಾನ್‌ದೇಶವನ್ನು ಕೊಡುವದಕ್ಕೂ ನಿಮ್ಮನ್ನು
ಐಗುಪ್ತದೇಶದೊಳಗಿಂದ ಬರಮಾಡಿದವನೇ.
ನಿಮ್ಮಲ್ಲಿ ಒಬ್ಬ ಸಹೋದರನು ಬಡವನಾಗಿ 39
ತನ್ನನ್ನೇ ಮಾರಿಕೊಂಡರೆ ಅವನನ್ನು ದಾಸನಂತೆ
ನಡಿಸಬಾರದು. ಅವನು ಕೂಲಿಯವನಂತೆಯೂ 40
ಪರವಾಸಿಯಂತೆಯೂ ನಿಮ್ಮ ಬಳಿಯಲ್ಲಿದ್ದು ಜೂಬಿಲಿ
ಸಂವತ್ಸರದ ತನಕ ನಿಮ್ಮ ಸೇವೆಯನ್ನು ಮಾಡಲಿ.
ಆಗ ಅವನನ್ನೂ ಅವನ ಮಕ್ಕಳನ್ನೂ ಬಿಟ್ಟುಬಿಡ 41
ಬೇಕು; ಅವನು ಸ್ವಜನರ ಬಳಿಗೂ ಪಿತ್ರಾರ್ಜಿತ
ಸ್ವಾಸ್ತ್ಯಕ್ಕೂ ಹೋಗಬಹುದು. ಅವರು ನನಗೇ 42
ದಾಸರಾಗಿದ್ದಾರೆ; ನಾನು ಅವರನ್ನು ಐಗುಪ್ತದೇಶ
ದೊಳಗಿಂದ ಬರಮಾಡಿದೆನು; ದಾಸರನ್ನು ಮಾರು
ವಂತೆ ಅವರನ್ನು ವಿಕ್ರಯಿಸಬಾರದು. ಅವರಿಂದ 43
ಕಠಿಣವಾಗಿ ಸೇವೆಮಾಡಿಸಿಕೊಳ್ಳಬಾರದು; ನಿಮ್ಮ
ದೇವರಿಗೆ ಭಯಪಡಬೇಕು. ನಿಮಗೆ ದಾಸದಾಸಿ 44
ಯರು ಬೇಕಾಗಿದ್ದರೆ ಸುತ್ತಲಿರುವ ಅನ್ಯರನ್ನು
ಕ್ರಯಕ್ಕೆ ತೆಗೆದುಕೊಳ್ಳಬಹುದು. ನಿಮ್ಮ ನಡುವೆ 45
ಇರುವ ಪರವಾಸಿಗಳನ್ನೂ ನಿಮ್ಮ ದೇಶದಲ್ಲಿ ಅವರಿಂದ
ಹುಟ್ಟಿದವರನ್ನೂ ಕ್ರಯಕ್ಕೆ ತೆಗೆದುಕೊಳ್ಳಬಹುದು;
ಅಂಥವರು ನಿಮಗೆ ಸೊತ್ತಾಗಬಹುದು. ನೀವು 46
ಅಂಥವರನ್ನು ಸ್ವಾಧೀನಪಡಿಸಿಕೊಂಡು ನಿಮ್ಮ ತರು
ವಾಯ ನಿಮ್ಮ ಸಂತತಿಯವರಿಗೆ ಸ್ವಾಸ್ತ್ಯವಾಗಿ ಕೊಟ್ಟು
ಬಿಡಬಹುದು. ಅವರನ್ನು ಶಾಶ್ವತದಾಸರನ್ನಾಗಿ
ಮಾಡಿಕೊಳ್ಳಬಹುದು. ಇಸ್ರಾಯೇಲ್ಯರಾದ ನೀವಾ
ದರೋ ಎಲ್ಲರೂ ಸಹೋದರರಾಗಿರುವದರಿಂದ ಒಬ್ಬ
ರಿಂದೊಬ್ಬರು ಕಠಿಣವಾಗಿ ಸೇವೆಮಾಡಿಸಿಕೊಳ್ಳ
ಬಾರದು.
ನಿಮ್ಮ ಸಹೋದರರಲ್ಲಿ ಒಬ್ಬನು ಬಡವನಾಗಿ 47
ನಿಮ್ಮ ನಡುವೆ ಮನೆಮಾಡಿಕೊಂಡ ಧನವಂತನಾದ
ಅನ್ಯದೇಶದವನಿಗಾಗಲಿ ಅವನಿಗೆ ಸೇರಿದವನಿಗಾಗಲಿ
ತನ್ನನ್ನು ಮಾರಿಕೊಂಡಿದ್ದರೂ ಅವನಿಗೆ ಬಿಡುಗಡೆ
ಯಾಗಬಹುದು. ಅವನ ಬಂಧುಗಳಲ್ಲಿ ಯಾರಾ 48
ದರೂ ಈಡುಕೊಟ್ಟು ಅವನನ್ನು ಬಿಡಿಸಬಹುದು.
ಅವನ ದೊಡ್ಡಪ್ಪ ಚಿಕ್ಕಪ್ಪಂದಿರಾಗಲಿ ಇವರ ಮಕ್ಕ 49

ಳಾಗಲಿ ಅಥವಾ ಸಮೀಪಬಂಧುಗಳಲ್ಲಿ ಯಾರೇ
ಯಾಗಲಿ ಈಡುಕೊಟ್ಟು ಅವನನ್ನು ಬಿಡಿಸಬಹುದು.
ಬೇಕಾದಷ್ಟು ಹಣವು ದೊರೆತರೆ ತನ್ನನ್ನು ತಾನೇ
50 ಬಿಡಿಸಿಕೊಳ್ಳಬಹುದು. ಅವನು ತನ್ನನ್ನು ಮಾರಿ
ಕೊಂಡ ವರುಷ ಮೊದಲುಗೊಂಡು ಮುಂದಣ
ಜೂಬಿಲಿ ಸಂವತ್ಸರದ ತನಕ ದಣಿಯ ಸಂಗಡ
ವರುಷಗಳ ಲೆಕ್ಕವನ್ನು ಮಾಡಿ ಆ ಲೆಕ್ಕದ ಮೇರೆಗೆ
ಬಿಡುಗಡೆಯ ಕ್ರಯವನ್ನು ಕೊಡಬೇಕು. ಕೂಲಿ
ಯವನ ವಿಷಯದಲ್ಲಿ ಲೆಕ್ಕಿಸುವಂತೆ ಅವನ ವಿಷಯ
51 ದಲ್ಲಿಯೂ ಲೆಕ್ಕಿಸಬೇಕು. ಜೂಬಿಲಿ ಸಂವತ್ಸರವು
ಬರುವದಕ್ಕೆ ಇನ್ನು ಅನೇಕ ವರುಷಗಳಿದ್ದರೆ ಹೆಚ್ಚು
52 ಭಾಗವನ್ನೂ ಕೆಲವು ವರುಷಗಳು ಮಾತ್ರ ಉಳಿದರೆ
ಸ್ವಲ್ಪಭಾಗವನ್ನೂ ದಣಿಗೆ ಕೊಟ್ಟು ತನ್ನನ್ನು ಬಿಡಿಸಿ
53 ಕೊಳ್ಳಬೇಕು. ಅವನು ವರುಷವರುಷಕ್ಕೆ ಗೊತ್ತು
ಮಾಡಿಕೊಂಡ ಕೂಲಿಯವನಂತೆಯೇ ದಣಿಯ ಬಳಿ
ಯಲ್ಲಿರಬೇಕು. ಆ ದಣಿ ಅವನಿಂದ ಕಠಿಣವಾಗಿ
ಸೇವೆಮಾಡಿಸಿಕೊಳ್ಳುವದನ್ನು ನೀವು ನೋಡಿ ಸುಮ್ಮನೆ
54 ಇರಬಾರದು. ಮೇಲೆ ಹೇಳಿದ ರೀತಿಯಲ್ಲಿ ಅವನು
ಬಿಡಿಸಿಕೊಳ್ಳದೆ ಹೋದರೆ ಜೂಬಿಲಿ ಸಂವತ್ಸರದಲ್ಲಿ
ಅವನೂ ಅವನ ಮಕ್ಕಳೂ ಬಿಡುಗಡೆಯಾಗಬೇಕು.
55 ಯಾಕಂದರೆ ಇಸ್ರಾಯೇಲ್ಯರು ನನ್ನ ದಾಸರೇ;
ನಾನು ಅವರನ್ನು ಐಗುಪ್ತದೇಶದೊಳಗಿಂದ ಬರ
ಮಾಡಿದೆನಲ್ಲವೇ. ನಾನು ನಿಮ್ಮ ದೇವರಾದ
ಯೆಹೋವನು.

ವಿಗ್ರಹಾರಾಧನೆಯನ್ನು ಮಾಡದೆ ಯೆಹೋವನಲ್ಲಿ
ಭಕ್ತಿಯಿಟ್ಟವರಾಗಿ ನಡೆಯಬೇಕೆಂಬದು.

**26** ನೀವು ವಿಗ್ರಹಗಳನ್ನು ಮಾಡಿಸಿಕೊಳ್ಳಬಾರದು;
ಕೆತ್ತಿದ ಪ್ರತಿಮೆಯನ್ನಾಗಲಿ ಕಲ್ಲುಕಂಬವನ್ನಾಗಲಿ
ನಿಲ್ಲಿಸಿಕೊಳ್ಳಬಾರದು; ಅಡ್ಡಬೀಳುವದಕ್ಕಾಗಿ ವಿಚಿತ್ರ
ವಾಗಿ ಕೆತ್ತಿದ ಕಲ್ಲುಗಳನ್ನು ನಿಮ್ಮ ದೇಶದಲ್ಲಿ ಇಡ
ಬಾರದು; ನಾನೇ ಯೆಹೋವನೆಂಬ ನಿಮ್ಮ ದೇವರು.
2 ನಾನು ನೇಮಿಸಿರುವ ಸಬ್ಬತ್‌ದಿನಗಳನ್ನು ನೀವು
ಆಚರಿಸಬೇಕು; ನನ್ನ ದೇವಸ್ಥಾನದ ವಿಷಯದಲ್ಲಿ
ಭಯಭಕ್ತಿಯುಳ್ಳವರಾಗಿರಬೇಕು. ನಾನು ಯೆಹೋ
ವನು.

ವಿಧೇಯತ್ವದಿಂದ ಕ್ಷೇಮವೂ ಅವಿಧೇಯತ್ವದಿಂದ ಶಿಕ್ಷೆಯೂ
ಉಂಟಾಗುವವೆಂದು ಎಚ್ಚರಿಸುವದು.

3 ನೀವು ನನ್ನ ನಿಯಮಗಳನ್ನು ಕೈಕೊಂಡು ನನ್ನ
4 ಆಜ್ಞೆಗಳನ್ನು ಅನುಸರಿಸಿ ನಡೆದರೆ ನಾನು ಮುಂಗಾರು
ಹಿಂಗಾರು ಮಳೆಗಳನ್ನು ಆಯಾ ಕಾಲದಲ್ಲಿಯೇ
ಬರಮಾಡುವೆನು; ನಿಮ್ಮ ಹೊಲಗಳು ಒಳ್ಳೇ ಬೆಳೆ
ಯನ್ನು ಕೊಡುವವು. ತೋಟದ ಮರಗಳು ಬಹಳ
5 ಫಲಕೊಡುವವು; ಕಣತುಳಿಸುವ ಕೆಲಸವು ದ್ರಾಕ್ಷೆಯ
ಬೆಳೆಯ ಪರ್ಯಂತರವೂ ದ್ರಾಕ್ಷೆಯ ಬೆಳೆಯನ್ನು
ಕೂಡಿಸುವ ಕೆಲಸವು ಬಿತ್ತನೆಯ ಕಾಲದ ಪರ್ಯಂತ
ರವೂ ನಡೆಯುವವು; ನೀವು ಸಮೃದ್ಧಿಯಾಗಿ ಊಟ
ಮಾಡುವಿರಿ. ನಿಮ್ಮ ದೇಶದಲ್ಲಿ ನಿರ್ಭಯವಾಗಿ ವಾಸ
ಮಾಡುವಿರಿ; ನಿಮ್ಮ ದೇಶದಲ್ಲಿ ನಿಮಗೆ ಸುಕ್ಷೇಮ
ವನ್ನು ಅನುಗ್ರಹಿಸುವೆನು; ಯಾರ ಭಯವೂ ಇಲ್ಲದ
ಮಲಗಿಕೊಳ್ಳುವಿರಿ; ದುಷ್ಟಮೃಗಗಳು ದೇಶದಲ್ಲಿ
ಇರದಂತೆ ಮಾಡುವೆನು; ನಿಮ್ಮ ದೇಶವು ಶತ್ರುಗಳ
ಕತ್ತಿಯಿಂದ ಹಾಳಾಗುವದಿಲ್ಲ. ನೀವು ನಿಮ್ಮ ವೈರಿ
ಗಳನ್ನು ಓಡಿಸುವಿರಿ, ಅವರನ್ನು ಕತ್ತಿಯಿಂದ ಸಂಹ
ರಿಸುವಿರಿ; ನಿಮ್ಮಲ್ಲಿ ಐದು ಮಂದಿಯು ನೂರು ಮಂದಿ
ಯನ್ನೂ ನೂರು ಮಂದಿಯು ಹತ್ತುಸಾವಿರ ಮಂದಿ
ಯನ್ನೂ ಓಡಿಸುವರು; ನಿಮ್ಮ ಶತ್ರುಗಳು ನಿಮ್ಮ
ಕತ್ತಿಯಿಂದ ಹತರಾಗುವರು. ನಾನು ನಿಮ್ಮ ಮೇಲೆ
ಕಟಾಕ್ಷವಿಟ್ಟು ಬಹುಸಂತಾನವನ್ನು ಕೊಟ್ಟು ಹೆಚ್ಚಿಸಿ
ನಿಮಗೆ ಮಾಡಿದ ವಾಗ್ದಾನವನ್ನು ನೆರವೇರಿಸು
ವೆನು. ನೀವು ಬಹುದಿವಸದಿಂದ ಇಟ್ಟುಕೊಂಡಿರುವ
ಹಳೆಯ ಧಾನ್ಯವನ್ನು ಊಟಮಾಡುವಿರಿ; ಹೊಸದಕ್ಕೆ
ಸ್ಥಳ ಉಂಟಾಗುವಂತೆ ಹಳೆಯದನ್ನು ತೆಗೆಯುವಿರಿ
ನಾನು ನಿಮ್ಮ ನಡುವೆ ನಿವಾಸಮಾಡುವೆನು; ನಿಮ್ಮ
ನ್ನು ತಳ್ಳಿಬಿಡುವದಿಲ್ಲ; ನಿಮ್ಮ ನಡುವೆ ತಿರು
ಗಾಡುತ್ತಾ ನಿಮಗೆ ದೇವರಾಗಿರುವೆನು; ನೀವು
ನನಗೆ ಪ್ರಜೆಯಾಗಿರುವಿರಿ. ನೀವು ಐಗುಪ್ತ್ಯರಿಗೆ
ದಾಸರಾಗಿರಬಾರದೆಂದು ನಿಮ್ಮನ್ನು ಅವರ ದೇಶ
ದೊಳಗಿಂದ ಬರಮಾಡಿದ ನಿಮ್ಮ ದೇವರಾದ
ಯೆಹೋವನು ನಾನೇ; ನಿಮ್ಮನ್ನು ಕುಗ್ಗಿಸಿದ ನೊಗ
ವನ್ನು ಮುರಿದು ನೀವು ನೆಟ್ಟಗೆ ನಿಂತು ನಡೆಯು
ವಂತೆ ಮಾಡಿದೆನಲ್ಲವೇ.
ಆದರೆ ನೀವು ನನ್ನ ಮಾತನ್ನು ಕೇಳದೆ ಈ ಆಜ್ಞೆ
ಗಳನ್ನೆಲ್ಲಾ ಅನುಸರಿಸದೆ ನನ್ನ ನಿಯಮಗಳನ್ನು
ಬೇಡವೆಂದು ನನ್ನ ವಿಧಿಗಳನ್ನು ತಳ್ಳಿಬಿಟ್ಟರೆ ನೀವು
ನನ್ನ ಆಜ್ಞೆಗಳನ್ನು ಅನುಸರಿಸದೆ ನನ್ನ ನಿಬಂಧನೆ
ವನ್ನು ಮೀರಿ ನಡೆದರೆ ನಾನು ನಿಮಗೆ ಮಾಡುವ
ದೇನಂದರೆ—ಕ್ಷಯರೋಗ, ಚಳಿಜ್ವರ ಮುಂತಾದ
ಭಯಂಕರವ್ಯಾಧಿಗಳನ್ನು ನಿಮ್ಮಲ್ಲಿ ಇರುವಂತೆ
ಮಾಡುವೆನು; ಇವುಗಳ ದೆಸೆಯಿಂದ ನೀವು ಕಂಗೆ
ಟ್ಟವರಾಗಿಯೂ ಮನಗುಂದಿದವರಾಗಿಯೂ ಇರು
ವಿರಿ. ನೀವು ಬೀಜಬಿತ್ತಿದಾಗ ಅದರ ಫಲವು ನಿಮಗೆ
ದೊರೆಯದೆ ಹೋಗುವದು; ಶತ್ರುಗಳು ಬಂದು
ಅದನ್ನು ತಿಂದುಬಿಡುವರು. ನಾನು ನಿಮ್ಮ ಮೇಲೆ
ಉಗ್ರಕೋಪವನ್ನು ಮಾಡುವದರಿಂದ ನೀವು ನಿಮ್ಮ
ಶತ್ರುಗಳ ಎದುರಿನಿಂದ ಸೋತು ಬೀಳುವಿರಿ; ನಿಮ್ಮ
ವೈರಿಗಳು ನಿಮ್ಮನ್ನು ಆಳುವರು; ಯಾರೂ ಹಿಂದ
ಟ್ಟದೆ ಇರುವಾಗಲೂ ನೀವು ಹೆದರಿ ಓಡುವಿರಿ.
ಇಷ್ಟಾದರೂ ನೀವು ನನ್ನ ಮಾತಿಗೆ ಲಕ್ಷ್ಯಕೊಡದೆ
ಹೋದರೆ ನಾನು ನಿಮ್ಮ ಪಾಪಗಳ ನಿಮಿತ್ತ ಏಳ
ರಷ್ಟಾಗಿ ನಿಮ್ಮನ್ನು ಶಿಕ್ಷಿಸುವೆನು. ನಿಮ್ಮ ಗರ್ವಕ್ಕೆ
ಕಾರಣವಾದ ಬಲವನ್ನು ಮುರಿಯುವೆನು. ನಿಮ್ಮ
ಮೇಲಿರುವ ಆಕಾಶವನ್ನು ಕಬ್ಬಿಣದಂತೆಯೂ ನೀವು
ಸಾಗುವಳಿಮಾಡುವ ಭೂಮಿಯನ್ನು ತಾಮ್ರದಂತೆ
ಯೂ ಮಾಡುವೆನು; ನೀವು ದುಡಿದದ್ದೆಲ್ಲಾ ವ್ಯರ್ಥ
ವಾಗುವದು; ನಿಮ್ಮ ಭೂಮಿಯಲ್ಲಿ ಬೆಳೆಯಾಗುವ
ದಿಲ್ಲ, ತೋಟಗಳ ಮರಗಳು ಫಲಿಸುವದಿಲ್ಲ.

ನೀವು ನನ್ನ ಮಾತನ್ನು ಕೇಳಲೊಲ್ಲದೆ ನನಗೆ
ರೋಧವಾಗಿ ನಡೆದರೆ ನಾನು ನಿಮ್ಮ ಪಾಪಗಳ
ಮಿತ್ತ ಇನ್ನೂ ಏಳರಷ್ಟಾಗಿ ನಿಮ್ಮನ್ನು ಬಾಧಿಸು
ನೆನು. ನಿಮ್ಮ ಮೇಲೆ ಕಾಡುಮೃಗಗಳನ್ನು ಬರ
ಮಾಡುವೆನು; ಅವು ನಿಮ್ಮನ್ನು ಸಂತಾನವಿಲ್ಲದವ
ರನ್ನಾಗಿ ಮಾಡುವವು; ನಿಮ್ಮ ಪಶುಗಳನ್ನು ಕೊಲ್ಲು
ವವು; ನಿಮ್ಮನ್ನು ಸ್ವಲ್ಪ ಮಂದಿಯನ್ನಾಗಿ ಮಾಡುವವು;
ನಿಮ್ಮ ದಾರಿಗಳು ಹಾಳುಬೀಳುವವು.
ಇಷ್ಟು ಶಿಕ್ಷೆಗಳಿಂದಲೂ ನೀವು ನನ್ನ ಆಜ್ಞೆಗೆ ಒಳ
ಗಾಗದೆ ನನಗೆ ವಿರೋಧವಾಗಿ ನಡೆದರೆ ನಾನು
ನಿಮಗೆ ವಿರೋಧವಾಗಿ ನಡೆಯುವೆನು; ನಿಮ್ಮ ಪಾಪ
ಗಳ ನಿಮಿತ್ತ ನಾನೇ ನಿಮ್ಮನ್ನು ಏಳರಷ್ಟಾಗಿ ಬಾಧಿಸು
ವೆನು. ಶತ್ರುಗಳ ಕತ್ತಿಯ ಮೂಲಕವಾಗಿ ನಿಮ್ಮನ್ನು
ಸಂಹರಿಸುವೆನು; ನೀವು ನನ್ನ ನಿಬಂಧನವನ್ನು ಮೀರಿ
ದದರಿಂದ ಆ ಕತ್ತಿಯು ಪ್ರತಿದಂಡನೆಮಾಡುವದು.
ನೀವು ನಿಮ್ಮ ಪಟ್ಟಣಗಳಲ್ಲಿ ಕೂಡಿರುವಾಗ ನಿಮ್ಮಲ್ಲಿ
ಅಂಟುರೋಗವುಂಟಾಗುವಂತೆ ಮಾಡುವೆನು; ಹೀಗೆ
ನೀವು ಶತ್ರುಗಳ ಕೈಗೆ ಬೀಳುವಿರಿ. ನಾನು ನಿಮ್ಮ
ಜೀವನಾಧಾರವನ್ನು ತೆಗೆದುಬಿಟ್ಟಾಗ ಹತ್ತು ಮಂದಿ
ಹೆಂಗಸರು ಒಂದೇ ಒಲೆಯಲ್ಲಿ ರೊಟ್ಟಿಸುಟ್ಟು ಅದನ್ನು
ತೂಕದ ಪ್ರಕಾರ ಹಂಚಿಕೊಡುವರು; ನೀವು ಅದನ್ನು
ಉಂಡಾಗ ತೃಪ್ತಿಹೊಂದುವದಿಲ್ಲ.
ಇದನ್ನೆಲ್ಲಾ ನೀವು ಅನುಭವಿಸಿದ ಮೇಲೆಯೂ
ಇನ್ನೂ ನನ್ನ ಮಾತನ್ನು ಕೇಳದೆ ನನಗೆ ವಿರೋಧ
ವಾಗಿ ನಡೆದರೆ ನಾನು ನಿಮಗೆ ವಿರೋಧವಾಗಿ ಕೋಪ
ದಿಂದ ನಡೆಯುವವನಾಗಿ ನಿಮ್ಮ ಪಾಪಗಳ ನಿಮಿತ್ತ
ಏಳರಷ್ಟಾಗಿ ಶಿಕ್ಷಿಸುವೆನು. ನೀವು ನಿಮ್ಮ ಗಂಡು
ಹೆಣ್ಣು ಮಕ್ಕಳ ಮಾಂಸವನ್ನೇ ತಿನ್ನುವಿರಿ. ನಿಮ್ಮ
ಪೂಜಾಸ್ಥಳಗಳನ್ನು ಇಲ್ಲದಂತೆ ಮಾಡುವೆನು; ನೀವು
ಸೂರ್ಯನ ಪೂಜೆಗೆ ಇಟ್ಟಿರುವ ಕಂಬಗಳನ್ನು ಕಡಿದು
ಹಾಕುವೆನು; ನಿಮ್ಮ ಬೊಂಬೆಗಳ ಮುಂಡಗಳ ಮೇಲೆ
ನಿಮ್ಮ ಮುಂಡಗಳನ್ನು ಬೀಸಾಡುವೆನು; ನಿಮ್ಮ ವಿಷ
ಯದಲ್ಲಿ ಅಸಹ್ಯಪಡುವೆನು. ನಿಮ್ಮ ಪಟ್ಟಣಗಳನ್ನು
ಹಾಳುಮಾಡುವೆನು. ನಿಮ್ಮ ದೇವಸ್ಥಾನಗಳನ್ನು
ನಾಶಮಾಡುವೆನು; ನೀವು ಸಮರ್ಪಿಸುವ ಸುಗಂಧ
ದ್ರವ್ಯಗಳ ಸುವಾಸನೆಯನ್ನು ನಾನು ಮೂಸಿನೋಡು
ವದಿಲ್ಲ. ನಾನು ನಿಮ್ಮ ದೇಶವನ್ನು ಸಂಪೂರ್ಣ
ವಾಗಿ ಹಾಳುಮಾಡಿದಾಗ ಅದರಲ್ಲಿ ಒಕ್ಕಲಾಗುವ
ನಿಮ್ಮ ಶತ್ರುಗಳೂ ಅದನ್ನು ನೋಡಿ ಆಶ್ಚರ್ಯಪಡು
ವರು. ನಿಮ್ಮನ್ನು ಅನ್ಯಜನಗಳಲ್ಲಿ ಚದರಿಸಿ ನಿಮ್ಮ
ಹಿಂದೆ ಕತ್ತಿಯನ್ನು ಬೀಸುವೆನು. ನಿಮ್ಮ ದೇಶವು
ಹಾಳಾಗುವದು, ನಿಮ್ಮ ಪಟ್ಟಣಗಳು ನಾಶವಾಗು
ವವು. ನೀವು ನಿಮ್ಮ ಶತ್ರುಗಳ ದೇಶದಲ್ಲಿ ಇರುವ
ದಿನಗಳಲ್ಲೆಲ್ಲಾ ನಿಮ್ಮ ದೇಶವು ಹಾಳುಬಿದ್ದು ತನಗೆ
ಸಲ್ಲಬೇಕಾಗಿದ್ದ ಸಬ್ಬತ್‌ಕಾಲವನ್ನು ಅನುಭವಿಸು
ವದು; ಅದು ವಿಶ್ರಾಂತಿಯನ್ನು ಹೊಂದಿ ಸಬ್ಬತ್‌ಕಾಲ
ವನ್ನು ಅನುಭವಿಸುವದು. ನೀವು ಅದರಲ್ಲಿ ವಾಸ
ವಾಗಿದ್ದಾಗ ಅದಕ್ಕೆ ತಕ್ಕ ಕಾಲದಲ್ಲಿ ದೊರೆಯದ
ವಿಶ್ರಾಂತಿಯನ್ನು, ಅದು ಹಾಳುಬಿದ್ದಿರುವ ಎಲ್ಲಾ
ದಿವಸಗಳಲ್ಲಿ ಅನುಭವಿಸುವದು.
ನಿಮ್ಮಲ್ಲಿ ಯಾರಾರು ಉಳಿದು ಶತ್ರುಗಳ ದೇಶ 36
ದಲ್ಲಿರುವರೋ ಅವರ ಹೃದಯಗಳಲ್ಲಿ ನಾನು ಭೀತಿ
ಯನ್ನು ಹುಟ್ಟಿಸುವೆನು. ಗಾಳಿಯಿಂದ ಬಡಿದಾಡುವ
ಉದುರೆಲೆಯ ಸಪ್ಪಳವು ಅವರಲ್ಲಿ ದಿಗಿಲುಹುಟ್ಟಿಸು
ವದು; ಆ ಸಪ್ಪಳವನ್ನು ಕೇಳಿ ಕತ್ತಿಯ ಎದುರಿನಿಂದ
ಓಡಿಹೋಗುವವರಂತೆ ಓಡಿಹೋಗುವರು; ಯಾರೂ
ಹಿಂದಟ್ಟಿ ಬಾರದಿರುವಾಗಲೂ ಅವರು ಓಡಿ ಬೀಳು
ವರು; ಯಾರೂ ಓಡಿಸದಿದ್ದರೂ ಕತ್ತಿಯ ಎದುರಿ 37
ನಿಂದ ಓಡುವವರಂತೆ ಒಬ್ಬರ ಮೇಲೊಬ್ಬರು ಬೀಳು
ವರು; ಶತ್ರುಗಳ ಎದುರಿನಲ್ಲಿ ನಿಲ್ಲಲಾರದವರಾಗು
ವಿರಿ. ಅನ್ಯಜನಗಳಲ್ಲಿ ಚದರಿಸಲ್ಪಟ್ಟು ಕಾಣಿಸದೆ 38
ಹೋಗುವಿರಿ; ನಿಮ್ಮ ಶತ್ರುಗಳ ದೇಶವು ನಿಮ್ಮನ್ನು
ನುಂಗಿಬಿಡುವದು. ನಿಮ್ಮಲ್ಲಿ ಉಳಿದವರು ತಮ್ಮ 39
ಪಾಪದ ದೆಸೆಯಿಂದಲೂ ತಮ್ಮ ಪಿತೃಗಳ ಪಾಪದ
ದೆಸೆಯಿಂದಲೂ ಅವರಾತೆಯೇ ಶತ್ರುಗಳ ದೇಶಗಳಲ್ಲಿ
ಕ್ಷೀಣವಾಗಿಹೋಗುವರು.
ಆದರೆ ಅವರು ತಾವೂ ತಮ್ಮ ಪಿತೃಗಳೂ ನನಗೆ 40
ದ್ರೋಹಿಗಳಾಗಿ ಪಾಪಮಾಡಿದವರೆಂದೂ ತಾವು ನನಗೆ
ವಿರೋಧವಾಗಿ ನಡೆದದ್ದರಿಂದಲೇ ನಾನು ತಮಗೆ 41
ವಿರೋಧವಾಗಿ ನಡೆದುಕೊಂಡು ಶತ್ರುದೇಶಕ್ಕೆ [ಸೆರೆ
ಯವರನ್ನಾಗಿ] ಬರಮಾಡಬೇಕಾಯಿತೆಂದೂ ಒಪ್ಪಿ
ತಮ್ಮ [1]ಮೊಂಡವಾದ ಮನಸ್ಸನ್ನು ನನ್ನ ಆಜ್ಞೆಗೆ
ಒಳಪಡಿಸಿ, ತಮ್ಮ ಪಾಪದಿಂದುಂಟಾದ ಶಿಕ್ಷೆಯನ್ನು
ಸ್ವೀಕರಿಸುವದಾದರೆ ನಾನು ಯಾಕೋಬ್ ಇಸಾಕ್ 42
ಅಬ್ರಹಾಮ್ ಇವರಿಗೆ ಮಾಡಿದ ವಾಗ್ದಾನಗಳನ್ನು
ನೆನಪಿಗೆ ತಂದುಕೊಂಡು ನೆರವೇರಿಸುವೆನು; ಅವರ
ಸ್ವದೇಶವನ್ನೂ ನಾನು ದಯೆಯಿಂದ ಜ್ಞಾಪಿಸಿಕೊಳ್ಳು
ವೆನು. ಅವರು ಬಿಟ್ಟುಹೋದ ಸ್ವದೇಶವು ನಿರ್ಜನ 43
ವಾಗಿ ಬಿದ್ದಿರುವಾಗ ತನಗೆ ಸಲ್ಲಬೇಕಾದ ಸಬ್ಬತ್
ವಿಶ್ರಾಂತಿಯನ್ನು ಹೊಂದುವದು. ಅವರು ಯೆಹೋ
ವನ ಆಜ್ಞೆ ಬೇಡವೆಂದು ಆತನ ವಿಧಿಗಳನ್ನು ತಾತ್ಸಾರ
ಮಾಡಿದ ಕಾರಣವೇ ತಮ್ಮ ಪಾಪದ ಫಲವನ್ನು
ಅನುಭವಿಸಬೇಕಾಗಿರುವದು. ಆದರೂ ಅವರು 44
ಶತ್ರುಗಳ ದೇಶದಲ್ಲಿರುವಾಗಲೂ ನಾನು ಅವರನ್ನು
ಬೇಡವೆನ್ನುವದಿಲ್ಲ, ತಾತ್ಸಾರಮಾಡುವದಿಲ್ಲ; ನಾನು
ಅವರಿಗೆ ಮಾಡಿದ ವಾಗ್ದಾನವನ್ನು ಮೀರುವದಿಲ್ಲ;
ಅವರನ್ನು ಇಲ್ಲದಂತೆ ಮಾಡುವದಿಲ್ಲ; ನಾನು ಅವರ
ದೇವರಾದ ಯೆಹೋವನಲ್ಲವೇ. ಅವರ ಪಿತೃಗಳ 45
ಸಂಗಡ ಮಾಡಿಕೊಂಡ ಒಡಂಬಡಿಕೆಯನ್ನು ನೆನಪಿಗೆ
ತಂದುಕೊಂಡು ಅವರಿಗೆ ಹಿತವನ್ನು ಮಾಡುವೆನು.
ನಾನು ಅವರಿಗೆ ದೇವರಾಗಿರಬೇಕೆಂದು ಅವರ ಪಿತೃ
ಗಳನ್ನು ಎಲ್ಲಾ ಜನಾಂಗಗಳ ಎದುರಿನಲ್ಲಿಯೇ ಐಗುಪ್ತ
ದೇಶದೊಳಗಿಂದ ಬರಮಾಡಿದೆನಲ್ಲವೇ. ನಾನು
ಯೆಹೋವನು.
ಯೆಹೋವನು ಸೀನಾಯಿಬೆಟ್ಟದಲ್ಲಿ ಮೋಶೆಯ 46
ಮೂಲಕವಾಗಿ ಇಸ್ರಾಯೇಲ್ಯರ ಸಂಗಡ ಒಡಂಬಡಿಕೆ

1) ಮೂಲ: ಸುನ್ನತಿಮಾಡಿಸಿಕೊಳ್ಳದ.

ಯನ್ನು ಮಾಡಿಕೊಂಡು ಅವರಿಗೆ ಕೊಟ್ಟ ಆಜ್ಞಾವಿಧಿ
ಗಳು ಮೇಲೆ ಕಂಡವುಗಳೇ.

ಯೆಹೋವನಿಗೆ ತೀರಿಸಬೇಕಾದ ಹರಕೆಗಳನ್ನೂ
ಸಲ್ಲಬೇಕಾದ ದಶವಾಂಶಗಳನ್ನೂ
ಕುರಿತದ್ದು.

27 ಯೆಹೋವನು ಮೋಶೆಗೆ ಹೇಳಿದ್ದೇನಂದರೆ—
2 ನೀನು ಇಸ್ರಾಯೇಲ್ಯರಿಗೆ ಹೀಗೆ ಆಜ್ಞಾಪಿಸು—
ಯಾವನಾದರೂ ಮನುಷ್ಯರ ಪ್ರಾಣಗಳನ್ನು
ಯೆಹೋವನಿಗೆ ಹರಕೆಮಾಡಿ ಪ್ರತಿಷ್ಠಿಸಿದರೆ [ಅವುಗ
ಳನ್ನು ಬಿಡಿಸುವದಕ್ಕೆ] ದೇವರ ಸೇವೆಗೆ ನೇಮಕವಾದ
ರೂಪಾಯಿಯ ಮೇರೆಗೆ ನೀವು ಅವನಿಂದ ಕೊಡಿಸಬೇ
3 ಕಾದ ಈಡು ಹೇಗಂದರೆ—ಇಪ್ಪತ್ತು ವರುಷದಿಂದ ಅರು
ವತ್ತು ವರುಷದ ಪರ್ಯಂತರ ವಯಸ್ಸುಳ್ಳ ಪುರುಷನಿ
4 ಗೋಸ್ಕರ ಐವತ್ತು ರೂಪಾಯಿಗಳನ್ನೂ ಸ್ತ್ರೀಗೋಸ್ಕರ
ಮೂವತ್ತು ರೂಪಾಯಿಗಳನ್ನೂ ಕೊಡಿಸಬೇಕು.
5 ಐದು ವರುಷದ ವಯಸ್ಸಿನಿಂದ ಇಪ್ಪತ್ತು ವರುಷದ
ವಯಸ್ಸಿನ ವರೆಗೆ ಪುರುಷನಿಗೋಸ್ಕರ ಇಪ್ಪತ್ತು ರೂ
ಪಾಯಿಗಳನ್ನೂ ಸ್ತ್ರೀಗೋಸ್ಕರ ಹತ್ತು ರೂಪಾಯಿಗಳ
6 ನ್ನೂ ಕೊಡಿಸಬೇಕು. ಒಂದು ತಿಂಗಳಿನ ವಯಸ್ಸು
ಮೊದಲುಗೊಂಡು ಐದು ವರುಷದ ವಯಸ್ಸಿನ
ಪರ್ಯಂತರ ಹುಡುಗನಿಗೋಸ್ಕರ ಐದು ರೂಪಾಯಿ
ಗಳನ್ನೂ ಹುಡುಗಿಗೋಸ್ಕರ ಮೂರು ರೂಪಾಯಿಗ
7 ಳನ್ನೂ ಕೊಡಿಸಬೇಕು. ಅರುವತ್ತು ವರುಷಗಳ ಪ್ರಾಯ
ವನ್ನು ದಾಟಿದ ಪುರುಷನಿಗೋಸ್ಕರ ಹದಿನೈದು ರೂ
ಪಾಯಿಗಳನ್ನೂ ಸ್ತ್ರೀಗೋಸ್ಕರ ಹತ್ತು ರೂಪಾಯಿ
8 ಗಳನ್ನೂ ಕೊಡಿಸಬೇಕು. ಯಾವನಾದರೂ ಬಡವ
ನಾಗಿ ನೇಮಕವಾದ ಹಣವನ್ನು ಕೊಡಲಾರದೆ ಹೋ
ದರೆ ಅವನು ಹರಕೆಮಾಡಿ ಪ್ರತಿಷ್ಠಿಸಿದ ಮನುಷ್ಯ
ನನ್ನು ಯಾಜಕನ ಮುಂದೆ ನಿಲ್ಲಿಸಬೇಕು. ಯಾಜ
ಕನು ಹರಕೆಮಾಡಿದವನ ಸ್ಥಿತಿಗತಿಗೆ ತಕ್ಕಂತೆ ಅವನು
ಕೊಡಬೇಕಾದ ಹಣ ಇಷ್ಟೆಂದು ನಿರ್ಣಯಿಸಬೇಕು.
9 ಯೆಹೋವನಿಗೆ ಸಮರ್ಪಿಸಬಹುದಾದ ಪಶುವನ್ನು
ಯಾವನಾದರೂ ಹರಕೆಮಾಡಿ ಪ್ರತಿಷ್ಠಿಸಿದ್ದಾದರೆ ಅದು
10 ದೇವರ ಸೊತ್ತಾಗಿರಬೇಕು. ಅದನ್ನು ಬದಲಾಯಿಸ
ಕೂಡದು; ಕೆಟ್ಟದ್ದಕ್ಕೆ ಬದಲಾಗಿ ಒಳ್ಳೇದನ್ನೂ ಒಳ್ಳೇ
ದಕ್ಕೆ ಬದಲಾಗಿ ಕೆಟ್ಟದ್ದನ್ನೂ ಒಂದಕ್ಕೆ ಬದಲಾಗಿ
ಬೇರೊಂದನ್ನೂ ಕೊಡಕೂಡದು. ಅವನು ಗೊತ್ತು
ಮಾಡಿದ ಪಶುವಿಗೆ ಬದಲಾಗಿ ಬೇರೊಂದು ಪಶು
ವನ್ನು ಪ್ರತ್ಯೇಕಿಸಿಟ್ಟಿರುವ ಪಕ್ಷಕ್ಕೆ ಮೊದಲನೆಯ
ಪಶುವೂ ಅದಕ್ಕೆ ಬದಲಾಗಿ ಇಟ್ಟ ಪಶುವೂ ಎರಡೂ
11 ಯೆಹೋವನವಾಗಿರಬೇಕು. ಯೆಹೋವನಿಗೆ ಸಮ
ರ್ಪಿಸಕೂಡದ ಬೇರೆ ಜಾತಿಯ ಪಶುವನ್ನು ಪ್ರತಿಷ್ಠಿಸಿ
ದ್ದಾದರೆ ಅದನ್ನು ಯಾಜಕನ ಮುಂದೆ ನಿಲ್ಲಿಸಬೇಕು;
12 ಅದು ಒಳ್ಳೇದೋ ಕೆಟ್ಟದ್ದೋ ಎಂದು ಯಾಜಕನು
ನೋಡಿಕೊಂಡು ಅದರ ಬೆಲೆ ಇಷ್ಟೆಂದು ನಿರ್ಣಯಿಸ
ಬೇಕು; ಯಾಜಕನು ನಿರ್ಣಯಿಸಿದ ಬೆಲೆ ಸ್ಥಿರವಾಗಿ

ರುವದು. ಹರಕೆಮಾಡಿದವನು ಅದನ್ನು ಬಿಡಿಸಿಕೊಳ್ಳ
ಬೇಕೆಂದಿದ್ದರೆ ಅದರ ಕ್ರಯದೊಡನೆ ಐದನೆಯ ಭಾಗ
ವನ್ನು ಹೆಚ್ಚಾಗಿ ಕೊಡಬೇಕು.

ಯಾವನಾದರೂ ತನ್ನ ಮನೆಯನ್ನು ಯೆಹೋವ
ನಿಗೆ ಮೀಸಲಾಗಿ ಪ್ರತಿಷ್ಠಿಸಿದರೆ ಯಾಜಕನು ಅದು
ಉತ್ತಮವಾದ ಮನೆಯೋ ಅಲ್ಲವೋ ಎಂದು ಪರೀ
ಕ್ಷಿಸಿ ಬೆಲೆಯನ್ನು ನಿರ್ಣಯಿಸಬೇಕು; ಯಾಜಕನು
ನಿರ್ಣಯಿಸಿದ ಬೆಲೆ ಸ್ಥಿರವಾಗಿರುವದು. ಹರಕೆಮಾಡಿ
ದವನು ಆ ಮನೆಯನ್ನು ಬಿಡಿಸಿಕೊಳ್ಳಬೇಕೆಂದಿದ್ದರೆ
ಅದರ ಕ್ರಯದೊಡನೆ ಐದನೆಯ ಭಾಗವನ್ನು ಹೆಚ್ಚಾಗಿ
ಕೊಡಬೇಕು; ಆಗ ಆ ಮನೆ ಅವನದಾಗುವದು.

ಯಾವನಾದರೂ ಪಿತ್ರಾರ್ಜಿತಭೂಮಿಯಲ್ಲಿ ಒಂದು
ಭಾಗವನ್ನು ಯೆಹೋವನಿಗೆ ಹರಕೆಮಾಡಿ ಪ್ರತಿಷ್ಠಿಸಿ
ದರೆ ಅದರಲ್ಲಿ ಇಷ್ಟು ಬೀಜವನ್ನು ಬಿತ್ತತಕ್ಕದ್ದು
ಎಂದು ನೀವು ಆಲೋಚಿಸಿ ಅದರ ಬೆಲೆಯನ್ನು ನಿರ್ಣ
ಯಿಸಬೇಕು. [1]ಎರಡು ಕಂಡುಗ ಜವೆಗೋದಿಯ
ಬೀಜವರಿಯುಳ್ಳ ಹೊಲವು ಐವತ್ತು ರೂಪಾಯಿ
ಬಾಳುವದು. ಅವನು ಜೂಬಿಲಿ ಸಂವತ್ಸರದಿಂದ
ಆ ಹೊಲವನ್ನು ಪ್ರತಿಷ್ಠಿಸಿದರೆ ಈ ಕ್ರಯ ಸ್ಥಿರ
ವಾಗಿರುವದು. ಜೂಬಿಲಿ ಸಂವತ್ಸರದ ತರುವಾಯ
ಭೂಮಿಯನ್ನು ಹರಕೆಮಾಡಿದರೆ ಮುಂದಣ ಜೂಬಿಲಿ
ಸಂವತ್ಸರಕ್ಕೆ ಕಳೆಯಬೇಕಾದ ವರುಷಗಳ ಸಂಖ್ಯೆಯ
ಮೇರೆಗೆ ಅದರ ಬೆಲೆಯನ್ನು ಕಮ್ಮಿಮಾಡಬೇಕು.
ಹರಕೆಮಾಡಿದವನು ಅದನ್ನು ಬಿಡಿಸಿಕೊಳ್ಳಬೇಕೆಂದಿ
ರುವ ಪಕ್ಷಕ್ಕೆ ಅದರ ಕ್ರಯದೊಡನೆ ಐದನೆಯ ಭಾಗ
ವನ್ನು ಹೆಚ್ಚಾಗಿ ಕೊಡಬೇಕು; ಆಗ ಆ ಹೊಲ ಅವನ
ದಾಗಿರುವದು. ತಾನು ಅದನ್ನು ಬಿಡಿಸಿಕೊಳ್ಳದೆ
ಮತ್ತೊಬ್ಬನಿಗೆ ಮಾರಿದರೆ ಮುಂದೆ ಅದನ್ನು ಬಿಡಿಸಿ
ಕೊಳ್ಳುವ ಅಧಿಕಾರವಿರುವದಿಲ್ಲ. ಬಿಡುಗಡೆಯಾ
ಗುವ ಜೂಬಿಲಿ ಸಂವತ್ಸರದಲ್ಲಿ ಆ ಹೊಲವು ಯೆಹೋ
ವನ ಸ್ವಕೀಯವಾದ ಹೊಲದಂತೆ ಆತನ ಸೊತ್ತಾಗಿಯೇ
ಇರಬೇಕು; ಅದು ಯಾಜಕರ ವಶದಲ್ಲಿರಬೇಕು.

ಯಾವನಾದರೂ ಕ್ರಯಕ್ಕೆ ತೆಗೆದುಕೊಂಡ ಹೊಲ
ವನ್ನು ಅಂದರೆ ಪಿತ್ರಾರ್ಜಿತ ಭೂಮಿಗೆ ಸೇರದಿರುವ
ಹೊಲವನ್ನು ಯೆಹೋವನಿಗೆ ಹರಕೆಮಾಡಿ ಪ್ರತಿಷ್ಠಿಸಿ
ದರೆ ಯಾಜಕನು ಮುಂದಣ ಜೂಬಿಲಿ ಸಂವತ್ಸರದ
ತನಕ ಇರುವ ವರುಷಗಳಿಗೆ ತಕ್ಕಂತೆ ಅದರ ಬೆಲೆ
ಯನ್ನು ನಿರ್ಣಯಿಸಬೇಕು. ಪ್ರತಿಷ್ಠಿಸಿದವನು ನಿರ್ಣ
ಯಿಸಲ್ಪಟ್ಟ ಹಣವನ್ನು ಯೆಹೋವನಿಗೆ ಮೀಸಲಾದ
ದ್ದೆಂದು ಭಾವಿಸಿ ಅದೇ ದಿನದಲ್ಲಿ ಕೊಟ್ಟುಬಿಡಬೇಕು.
ಜೂಬಿಲಿ ಸಂವತ್ಸರದಲ್ಲಿ ಆ ಹೊಲವು ಮಾರಿದವನಿಗೆ
ಅಂದರೆ ಯಾರ ಪಿತ್ರಾರ್ಜಿತಭೂಮಿಗೆ ಸೇರಿದೆಯೋ
ಅವನಿಗೆ ತಿರಿಗಿ ಬರಬೇಕು. ದೇವರ ಸೇವೆಯಲ್ಲಿ
ನೇಮಕವಾದ ಇಪ್ಪತ್ತು ಗೇರಾ ತೂಕದ ರೂಪಾ
ಯಿಯ ಮೇರೆಗೆ ನೀವು ಬೆಲೆಯನ್ನು ಯಾವಾಗಲೂ
ನಿರ್ಣಯಿಸಬೇಕು.

[ಶುದ್ಧ] ಪಶುವಿನಲ್ಲಿ ಚೊಚ್ಚಲಾಗಿ ಹುಟ್ಟಿದ್ದು
ಯೆಹೋವನದಾಗಿರುವದರಿಂದ ಅದನ್ನು ಯಾರೂ

1) ಒಂದು ಹೋಮೆರ್.

ಹರಕೆಯಾಗಿ ಕೊಡಕೂಡದು; ಹೋರಿಯಾಗಿದ್ದರೂ ಆಡುಕುರಿಯಾಗಿದ್ದರೂ ಅದು ಯೆಹೋವನ ಸೊತ್ತೇ. ಅಶುದ್ಧಪಶುವಿನಲ್ಲಿ ಚೊಚ್ಚಲುಮರಿ ಹುಟ್ಟಿದ್ದಾದರೆ ಹರಕೆಮಾಡಿದವನು ನಿರ್ಣಯವಾದ ಬೆಲೆಯೊಂದಿಗೆ ಐದನೆಯ ಭಾಗವನ್ನು ಹೆಚ್ಚಾಗಿ ಕೊಟ್ಟು ಅದನ್ನು ಬಿಡಿಸಿಕೊಳ್ಳಬಹುದು. ಅವನು ಬಿಡಿಸದೆಹೋದರೆ ಅದನ್ನು ನಿರ್ಣಯಿಸಲ್ಪಟ್ಟ ಕ್ರಯಕ್ಕೆ ಮಾರಬೇಕು.

ಯಾವನಾದರೂ ಮನುಷ್ಯನನ್ನಾಗಲಿ ಪಶುವನ್ನಾಗಲಿ ಪಿತ್ರಾರ್ಜಿತಭೂಮಿಯನ್ನಾಗಲಿ ಬೇರೆ ಯಾವದನ್ನಾಗಲಿ ಕೇವಲ ಯೆಹೋವನದಾಗಿರುವದಕ್ಕೆ ಹರಕೆಮಾಡಿ ಕೊಟ್ಟರೆ ಅದನ್ನು ಮಾರಲೂ ಕೂಡದು ಬಿಡಿಸಿಕೊಳ್ಳಲೂ ಕೂಡದು. ಕೇವಲ ಯೆಹೋವನದಾಗಿರುವದಕ್ಕೆ ಸಮರ್ಪಿಸುವಂಥದೆಲ್ಲಾ ಯೆಹೋವನಿಗೆ ಮೀಸಲಾಗಿಯೇ ಇರಬೇಕು. ಕೇವಲ ಯೆಹೋವನ ಸೊತ್ತಾಗುವದಕ್ಕೆ ಒಪ್ಪಿಸಲ್ಪಟ್ಟದ್ದು ಮನುಷ್ಯಜಾತಿಯಾದರೆ ಬಿಡಿಸುವದಕ್ಕಾಗದು; ಅವನಿಗೆ ಮರಣವೇ ಆಗಬೇಕು.

ಹೊಲದ ಬೆಳೆಯಾಗಲಿ ತೋಟದ ಹಣ್ಣುಗಳಾ
ಗಲಿ ಭೂಮಿಯಿಂದುಂಟಾದ ಎಲ್ಲಾ ಆದಾಯದಲ್ಲಿ
ಹತ್ತನೆಯ ಪಾಲು ಯೆಹೋವನದಾಗಿರಬೇಕು; ಅದು
ಯೆಹೋವನಿಗೆ ಮೀಸಲಾದದ್ದು. ಯಾವನಾದರೂ 31
ತಾನು ಕೊಡಬೇಕಾದ ಹತ್ತನೆಯ ಪಾಲಿನಲ್ಲಿ ಏನಾ
ದರೂ ಬಿಡಿಸಿಕೊಳ್ಳಬೇಕೆಂದಿದ್ದರೆ ಅಷ್ಟರೊಡನೆ
ಐದನೆಯ ಭಾಗವನ್ನು ಹೆಚ್ಚಾಗಿ ಕೊಡಬೇಕು. ದನ 32
ಗಳೇಯಾಗಲಿ ಆಡುಕುರಿಗಳೇಯಾಗಲಿ ಒಡೆಯನು
ಲೆಕ್ಕಿಸಿದ ಎಲ್ಲಾ ಪಶುಗಳಲ್ಲಿ ಪ್ರತಿ ಹತ್ತನೆಯದು
ಯೆಹೋವನಿಗೆ ಮೀಸಲಾಗಿರಬೇಕು. ಆ ಪಶುವು 33
ಒಳ್ಳೇದೋ ಕೆಟ್ಟದ್ದೋ ಎಂದು ನೋಡಬಾರದು;
ಅದನ್ನು ಬದಲಾಯಿಸಬಾರದು. ಕೊಡಬೇಕಾದವನು
ಅದನ್ನು ಬದಲಾಯಿಸಿದ್ದಾದರೆ ಅವನು ಮೊದಲಾಗಿ
ಲೆಕ್ಕಿಸಿದ್ದೂ ಅದಕ್ಕೆ ಬದಲಾಗಿ ಇಟ್ಟದ್ದೂ ಎರಡೂ
ಯೆಹೋವನವಾಗಿರಬೇಕು; ಅದನ್ನು ಬಿಡಿಸಿಕೊಳ್ಳುವ
ಅಧಿಕಾರವಿರುವದಿಲ್ಲ.

ಯೆಹೋವನು ಸೀನಾಯಿಬೆಟ್ಟದಲ್ಲಿ ಮೋಶೆಯ 34
ಮೂಲಕ ಇಸ್ರಾಯೇಲ್ಯರಿಗೆ ಕೊಟ್ಟ ಆಜ್ಞೆಗಳು
ಇವೇ.

---

# NUMBERS

## ಮೋಶೆಯ ಧರ್ಮಶಾಸ್ತ್ರದಲ್ಲಿ ಅರಣ್ಯಕಾಂಡ ಎಂಬ ಚತುರ್ಥಭಾಗವು

### ಸೀನಾಯಿಬೆಟ್ಟದ ಬಳಿಯಲ್ಲಿ ನಡೆದ ಕಡೇ ಸಂಗತಿಗಳು

**1. 1—10. 10.**

ಮೊದಲನೆಯ ಖಾನೇಷುಮಾರಿಯು. 1—4.
ಯುದ್ಧಕ್ಕೆ ಹೋಗತಕ್ಕವರ ಸಂಖ್ಯೆ;
ಲೇವಿಯರನ್ನು ಬೇರೆ ಕೆಲಸಕ್ಕೆ ನೇಮಿಸಿದ್ದು.

೧ ಇಸ್ರಾಯೇಲ್ಯರು ಐಗುಪ್ತದೇಶದಿಂದ ಹೊರಟ ಎರಡನೆಯ ವರುಷದ ಎರಡನೆಯ ತಿಂಗಳಿನ ಮೊದಲನೆಯ ದಿನದಲ್ಲಿ ಯೆಹೋವನು ಸೀನಾಯಿ ಅರಣ್ಯದಲ್ಲಿ ದೇವದರ್ಶನದ ಗುಡಾರದೊಳಗೆ ಮೋಶೆಗೆ ಹೀಗೆ ಆಜ್ಞಾಪಿಸಿದನು— ಇಸ್ರಾಯೇಲ್ಯರ ಸರ್ವಸಮೂಹದ ಗಂಡಸರನ್ನು ಗೋತ್ರಕುಟುಂಬಗಳ ಪ್ರಕಾರ ಹೆಸರುಹಿಡಿದು ಒಬ್ಬೊಬ್ಬರನ್ನಾಗಿ ಲೆಕ್ಕಿಸಬೇಕು. ಇಸ್ರಾಯೇಲ್ಯರಲ್ಲಿ ಸೈನಿಕರಾಗಿ ಹೊರಡತಕ್ಕವರನ್ನು ಅಂದರೆ ಇಪ್ಪತ್ತು ವರುಷ ಮೊದಲುಗೊಂಡು ಹೆಚ್ಚಾದ ವಯಸ್ಸುಳ್ಳವರೆಲ್ಲರನ್ನು ಸೈನ್ಯಸೈನ್ಯವಾಗಿ ನೀನೂ ಆರೋನನೂ ಲೆಕ್ಕಿಸಬೇಕು. ಈ ಕೆಲಸಕ್ಕಾಗಿ ಒಂದೊಂದು ಕುಲ
ದಲ್ಲಿ ಆಯಾ ಕುಲದ ಮುಖ್ಯಸ್ಥನಾಗಿರುವ ಒಬ್ಬೊಬ್ಬ
ಸಹಾಯಕನಿರಬೇಕು. ನಿಮಗೆ ಸಹಾಯಕರಾಗಿರ 5
ಬೇಕಾದವರು ಯಾರಾರಂದರೆ—
ರೂಬೇನ್ ಕುಲದಿಂದ ಶೆದೇಯೂರನ ಮಗನಾದ
ಎಲೀಚೂರ್,
ಸಿಮೆಯೋನ್ ಕುಲದಿಂದ ಚೂರೀಷದ್ದೈಯ ಮಗ 6
ನಾದ ಶೆಲುಮೀಯೇಲ್,
ಯೆಹೂದ ಕುಲದಿಂದ ಅಮ್ಮೀನಾದಾಬನ ಮಗ 7
ನಾದ ನಹಶೋನ್,
ಇಸ್ಸಾಕಾರ್ ಕುಲದಿಂದ ಚೂವಾರನ ಮಗನಾದ 8
ನೆತನೇಲ್,
ಜೆಬುಲೂನ್ ಕುಲದಿಂದ ಹೇಲೋನನ ಮಗನಾದ 9
ಎಲೀಯಾಬ್,
ಯೋಸೇಫನ ವಂಶದವರಲ್ಲಿ— 10
ಎಫ್ರಾಯೀಮ್ ಕುಲದಿಂದ ಅಮ್ಮೀಹೂದನ
ಮಗನಾದ ಎಲೀಷಾಮಾ,
ಮನಸ್ಸೆ ಕುಲದಿಂದ ಪೆದಾಚೂರನ ಮಗನಾದ
ಗಮ್ಲೀಯೇಲ್,
ಬೆನ್ಯಾಮೀನ್ ಕುಲದಿಂದ ಗಿದ್ಯೋನಿಯ ಮಗನಾದ 11
ಅಬೀದಾನ್,

12 ದಾನ್ ಕುಲದಿಂದ ಅಮ್ಮೀಷದ್ದೈಯ ಮಗನಾದ ಅಹೀಗೆಜೆರ್,

13 ಆಶೇರ್ ಕುಲದಿಂದ ಒಕ್ರಾನನ ಮಗನಾದ ಪಗೀಯೇಲ್,

14 ಗಾದ್ ಕುಲದಿಂದ ರೆಗೂವೇಲನ ಮಗನಾದ ಎಲ್ಯಾಸಾಫ್,

15 ನಫ್ತಾಲಿ ಕುಲದಿಂದ ಏನಾನನ ಮಗನಾದ ಅಹೀರನು.

16 ಇವರು ಸರ್ವಸಮೂಹದವರೊಳಗಿಂದ ಕರಸಿಕೊಂಡವರು, ತಮ್ಮತಮ್ಮ ಕುಲಗಳಲ್ಲಿ 1)ಪ್ರಧಾನಪುರುಷರು, ಇಸ್ರಾಯೇಲ್ಯರಲ್ಲಿ ಸಹಸ್ರಾಧಿಪತಿಗಳು.

17 ಹೆಸರಿನಿಂದ ಸೂಚಿತರಾದ ಪುರುಷರನ್ನು ಮೋಶೆ

18 ಆರೋನರು ಕರೆದು ಎರಡನೆಯ ತಿಂಗಳಿನ ಮೊದಲನೆಯ ದಿನದಲ್ಲಿ ಸಮೂಹದವರೆಲ್ಲರನ್ನೂ ಕೂಡಿಸಿದರು. ಆಗ ಯೆಹೋವನು ಮೋಶೆಗೆ ಆಜ್ಞಾಪಿಸಿದಂತೆ ಇಪ್ಪತ್ತು ವರುಷ ಮೊದಲುಗೊಂಡು ಹೆಚ್ಚಾದ ವಯಸ್ಸುಳ್ಳವರೆಲ್ಲರೂ ಒಬ್ಬೊಬ್ಬರಾಗಿ ಗೋತ್ರಕುಟುಂಬಗಳ ಪ್ರಕಾರ ತಮ್ಮತಮ್ಮ ವಂಶಾವಳಿಯನ್ನು ತಿಳಿಸಿ ಹೆಸರುಗಳನ್ನು ಬರಸಿಕೊಂಡರು.

19 ಹೀಗೆ ಮೋಶೆ ಸೀನಾಯಿ ಅರಣ್ಯದಲ್ಲಿ ಅವರನ್ನು ಲೆಕ್ಕಿಸಿದನು.

20, 21 ಇಸ್ರಾಯೇಲನ ಚೊಚ್ಚಲ ಮಗನಾದ ರೂಬೇನ್ ವಂಶದವರಲ್ಲಿ ಸೈನಿಕರಾಗಿ ಹೊರಡತಕ್ಕವರು ಅಂದರೆ ಇಪ್ಪತ್ತು ವರುಷ ಮೊದಲುಗೊಂಡು ಹೆಚ್ಚಾದ ವಯಸ್ಸುಳ್ಳವರು ಗೋತ್ರಕುಟುಂಬಗಳ ಪ್ರಕಾರ ಒಬ್ಬೊಬ್ಬರಾಗಿ ಹೆಸರು ಹಿಡಿದು ಲೆಕ್ಕಿಸಲ್ಪಟ್ಟ ಗಂಡಸರು 46,500 ಮಂದಿ.

22, 23 ಸಿಮೆಯೋನ್ ವಂಶದವರಲ್ಲಿ ಸೈನಿಕರಾಗಿ ಹೊರಡತಕ್ಕವರು ಅಂದರೆ ಇಪ್ಪತ್ತು ವರುಷ ಮೊದಲುಗೊಂಡು ಹೆಚ್ಚಾದ ವಯಸ್ಸುಳ್ಳವರು ಗೋತ್ರಕುಟುಂಬಗಳ ಪ್ರಕಾರ ಒಬ್ಬೊಬ್ಬರಾಗಿ ಹೆಸರು ಹಿಡಿದು ಲೆಕ್ಕಿಸಲ್ಪಟ್ಟ ಗಂಡಸರು 59,300 ಮಂದಿ.

24, 25 ಗಾದ್ ವಂಶದವರಲ್ಲಿ ಸೈನಿಕರಾಗಿ ಹೊರಡತಕ್ಕವರು ಅಂದರೆ ಇಪ್ಪತ್ತು ವರುಷ ಮೊದಲುಗೊಂಡು ಹೆಚ್ಚಾದ ವಯಸ್ಸುಳ್ಳವರು ಗೋತ್ರಕುಟುಂಬಗಳ ಪ್ರಕಾರ ಒಬ್ಬೊಬ್ಬರಾಗಿ ಹೆಸರುಹಿಡಿದು ಲೆಕ್ಕಿಸಲ್ಪಟ್ಟ ಗಂಡಸರು . . . . . 45,650 ಮಂದಿ.

26, 27 ಯೆಹೂದ ವಂಶದವರಲ್ಲಿ ಸೈನಿಕರಾಗಿ ಹೊರಡತಕ್ಕವರು ಅಂದರೆ ಇಪ್ಪತ್ತು ವರುಷ ಮೊದಲುಗೊಂಡು ಹೆಚ್ಚಾದ ವಯಸ್ಸುಳ್ಳವರು ಗೋತ್ರಕುಟುಂಬಗಳ ಪ್ರಕಾರ ಒಬ್ಬೊಬ್ಬರಾಗಿ ಹೆಸರು ಹಿಡಿದು ಲೆಕ್ಕಿಸಲ್ಪಟ್ಟ ಗಂಡಸರು 74,600 ಮಂದಿ.

ಇಸ್ಸಾಕಾರ್ ವಂಶದವರಲ್ಲಿ 2
ಸೈನಿಕರಾಗಿ ಹೊರಡತಕ್ಕವರು ಅಂದರೆ ಇಪ್ಪತ್ತು ವರುಷ ಮೊದಲುಗೊಂಡು ಹೆಚ್ಚಾದ ವಯಸ್ಸುಳ್ಳವರು ಗೋತ್ರಕುಟುಂಬಗಳ ಪ್ರಕಾರ ಒಬ್ಬೊಬ್ಬರಾಗಿ ಹೆಸರುಹಿಡಿದು ಲೆಕ್ಕಿಸಲ್ಪಟ್ಟ ಗಂಡಸರು. . . . . 54,400 ಮಂ

ಜೆಬುಲೂನ್ ವಂಶದವರಲ್ಲಿ 3
ಸೈನಿಕರಾಗಿ ಹೊರಡತಕ್ಕವರು ಅಂದರೆ ಇಪ್ಪತ್ತು ವರುಷ ಮೊದಲುಗೊಂಡು ಹೆಚ್ಚಾದ ವಯಸ್ಸುಳ್ಳವರು ಗೋತ್ರಕುಟುಂಬಗಳ ಪ್ರಕಾರ ಒಬ್ಬೊಬ್ಬರಾಗಿ ಹೆಸರುಹಿಡಿದು ಲೆಕ್ಕಿಸಲ್ಪಟ್ಟ ಗಂಡಸರು . . . . . . . 57,400 ಮಂ

ಯೋಸೇಫನಿಂದ ಹುಟ್ಟಿದವರೊ 3
ಳಗೆ ಎಫ್ರಾಯಿಮ್ ವಂಶದವರಲ್ಲಿ ಸೈನಿಕರಾಗಿ ಹೊರಡತಕ್ಕವರು ಅಂದರೆ ಇಪ್ಪತ್ತು ವರುಷ ಮೊದಲುಗೊಂಡು ಹೆಚ್ಚಾದ ವಯಸ್ಸುಳ್ಳವರು ಗೋತ್ರಕುಟುಂಬಗಳ ಪ್ರಕಾರ ಒಬ್ಬೊಬ್ಬರಾಗಿ ಹೆಸರು ಹಿಡಿದು ಲೆಕ್ಕಿಸಲ್ಪಟ್ಟ ಗಂಡಸರು . 40,500 ಮಂ

ಮನಸ್ಸೆ ವಂಶದವರಲ್ಲಿ ಸೈನಿ 3
ಕರಾಗಿ ಹೊರಡತಕ್ಕವರು ಅಂದರೆ ಇಪ್ಪತ್ತು ವರುಷ ಮೊದಲುಗೊಂಡು ಹೆಚ್ಚಾದ ವಯಸ್ಸುಳ್ಳವರು ಗೋತ್ರಕುಟುಂಬಗಳ ಪ್ರಕಾರ ಒಬ್ಬೊಬ್ಬರಾಗಿ ಹೆಸರುಹಿಡಿದು ಲೆಕ್ಕಿಸಲ್ಪಟ್ಟ ಗಂಡಸರು . . . . . . . . . 32,200 ಮಂ

ಬೆನ್ಯಾಮೀನ್ ವಂಶದವರಲ್ಲಿ 3
ಸೈನಿಕರಾಗಿ ಹೊರಡತಕ್ಕವರು ಅಂದರೆ ಇಪ್ಪತ್ತು ವರುಷ ಮೊದಲುಗೊಂಡು ಹೆಚ್ಚಾದ ವಯಸ್ಸುಳ್ಳವರು ಗೋತ್ರಕುಟುಂಬಗಳ ಪ್ರಕಾರ ಒಬ್ಬೊಬ್ಬರಾಗಿ ಹೆಸರುಹಿಡಿದು ಲೆಕ್ಕಿಸಲ್ಪಟ್ಟ ಗಂಡಸರು . . . . 35,400 ಮಂ

ದಾನ್ ವಂಶದವರಲ್ಲಿ ಸೈನಿಕ 3
ರಾಗಿ ಹೊರಡತಕ್ಕವರು ಅಂದರೆ ಇಪ್ಪತ್ತು ವರುಷ ಮೊದಲುಗೊಂಡು ಹೆಚ್ಚಾದ ವಯಸ್ಸುಳ್ಳವರು ಗೋತ್ರಕುಟುಂಬಗಳ ಪ್ರಕಾರ ಒಬ್ಬೊಬ್ಬರಾಗಿ ಹೆಸರುಹಿಡಿದು ಲೆಕ್ಕಿಸಲ್ಪಟ್ಟ ಗಂಡಸರು . . . . . . . . . 62,700 ಮಂ

ಆಶೇರ್ ವಂಶದವರಲ್ಲಿ ಸೈನಿ 4
ಕರಾಗಿ ಹೊರಡತಕ್ಕವರು ಅಂದರೆ ಇಪ್ಪತ್ತು ವರುಷ ಮೊದಲುಗೊಂಡು ಹೆಚ್ಚಾದ ವಯಸ್ಸುಳ್ಳವರು ಗೋತ್ರಕುಟುಂಬಗಳ ಪ್ರಕಾರ ಒಬ್ಬೊಬ್ಬರಾಗಿ ಹೆಸರುಹಿಡಿದು ಲೆಕ್ಕಿಸಲ್ಪಟ್ಟ ಗಂಡಸರು . . . . . . . . . 41,500 ಮಂ

43 ನಫ್ತಾಲಿ ವಂಶದವರಲ್ಲಿ ಸೈನಿಕರಾಗಿ ಹೊರಡತಕ್ಕವರು ಅಂದರೆ ಇಪ್ಪತ್ತು ವರುಷ ಮೊದಲುಗೊಂಡು ಹೆಚ್ಚಾದ ವಯಸ್ಸುಳ್ಳವರು ಗೋತ್ರ ಕುಟುಂಬಗಳ ಪ್ರಕಾರ ಒಬ್ಬೊಬ್ಬರಾಗಿ ಹೆಸರುಹಿಡಿದು ಲೆಕ್ಕಿಸಲ್ಪಟ್ಟ ಗಂಡಸರು . . . . . . . . . . . . 53,400 ಮಂದಿ.

ಮೋಶೆ ಆರೋನರೂ ಕುಲ ಪ್ರತಿನಿಧಿಗಳಾದ ಆ ಹನ್ನೆರಡು ಮಂದಿ ಪ್ರಧಾನರೂ ಲೆಕ್ಕಿಸಿದ ಇಸ್ರಾಯೇಲ್ಯರು ಇಷ್ಟು ಜನ.

46 ಇಸ್ರಾಯೇಲ್ಯರಲ್ಲಿ ಲೆಕ್ಕಿಸಲ್ಪಟ್ಟವರು ಅಂದರೆ ಇಪ್ಪತ್ತು ವರುಷ ಮೊದಲುಗೊಂಡು ಹೆಚ್ಚಾದ ವಯಸ್ಸುಳ್ಳವರಾಗಿದ್ದು ಸೈನಿಕರಾಗಿ ಹೊರಡತಕ್ಕವರ ಒಟ್ಟಾದ ಸಂಖ್ಯೆ . . . . . . . . . . . . . . . 603,550.

ಆದರೆ ಅವರೊಡನೆ ಲೇವಿಕುಲದ ಕುಟುಂಬಗಳು ಲೆಕ್ಕಿಸಲ್ಪಡಲಿಲ್ಲ. ಯಾಕಂದರೆ ಯೆಹೋವನು ಮೋಶೆಗೆ ಆಜ್ಞಾಪಿಸಿದ್ದೇನಂದರೆ — ನೀನು ಇಸ್ರಾಯೇಲ್ಯರನ್ನು ಎಣಿಸುವಾಗ ಲೇವಿಯರನ್ನು ಎಣಿಸಬಾರದು. ಆಜ್ಞಾಶಾಸನಗಳಿರುವ ಗುಡಾರವನ್ನೂ ಅದರ ಸಾಮಾನು, ಉಪಕರಣ ಇವುಗಳನ್ನೂ ನೋಡಿಕೊಳ್ಳುವದಕ್ಕೆ ಅವರನ್ನು ನೇಮಿಸಬೇಕು. ಅವರು ಆ ಗುಡಾರವನ್ನೂ ಅದರ ಸಾಮಾನನ್ನೂ ಹೊರುವದಕ್ಕಾಗಿ ಇರಬೇಕು. ಮತ್ತು ಅವರು ಅದರ ಸೇವೆಯನ್ನು ಮಾಡುವವರಾಗಿ ಅದರ ಸುತ್ತಲೂ ತಮ್ಮ ಡೇರೆಗಳನ್ನು ಹಾಕಿಕೊಳ್ಳಬೇಕು. ಹೊರಡುವಾಗ ಆ ಗುಡಾರವನ್ನು ಲೇವಿಯರೇ ಬಿಚ್ಚಬೇಕು; ಇಳಿಯುವಾಗ ಲೇವಿಯರೇ ಅದನ್ನು ಹಾಕಬೇಕು. ಇತರರು ಹತ್ತಿರಕ್ಕೆ ಬಂದರೆ ಅವರಿಗೆ ಮರಣಶಿಕ್ಷೆಯಾಗಬೇಕು. ಇಸ್ರಾಯೇಲ್ಯರೆಲ್ಲರ ಆಯಾ ಸೈನ್ಯಗಳು ತಮ್ಮ ಡೇರೆಗಳನ್ನು ತಮ್ಮತಮ್ಮ ದಂಡಿನ ಧ್ವಜದ ಹತ್ತಿರ ಹಾಕಿಕೊಳ್ಳಬೇಕು. ಲೇವಿಯರು ಮಾತ್ರ ತಮ್ಮ ಡೇರೆಗಳನ್ನು ದೇವದರ್ಶನದ ಗುಡಾರದ ಸುತ್ತಲೂ ಹಾಕಿಕೊಳ್ಳಬೇಕು. ಹೀಗಾದರೆ [ಯೆಹೋವನ] ಕೋಪವು ಇಸ್ರಾಯೇಲ್ಯರ ಮೇಲೆ ಉಂಟಾಗುವದಕ್ಕೆ ಆಸ್ಪದವಿರುವದಿಲ್ಲ. ಲೇವಿಯರು ದೇವದರ್ಶನದ ಗುಡಾರವನ್ನು ಕಾಯುವವರಾಗಿರಬೇಕು.

ಯೆಹೋವನು ಮೋಶೆಗೆ ಆಜ್ಞಾಪಿಸಿದಂತೆಯೇ ಇಸ್ರಾಯೇಲ್ಯರು ನಡೆದರು.

ಇಸ್ರಾಯೇಲ್ಯರು ಪಾಳೆಯದಲ್ಲಿ ಡೇರೆಗಳನ್ನು ಹಾಕಿಕೊಳ್ಳುವ ಕ್ರಮ.

ಯೆಹೋವನು ಮೋಶೆ ಆರೋನರಿಗೆ ಆಜ್ಞಾಪಿಸಿದ್ದೇ
2 ನಂದರೆ — ಇಸ್ರಾಯೇಲ್ಯರೆಲ್ಲರೂ ದೇವದರ್ಶನದ ಗುಡಾರದ ಸುತ್ತಲು ಸ್ವಲ್ಪ ದೂರವಾಗಿ ತಮ್ಮ ಡೇರೆಗಳನ್ನು ಹಾಕಿಕೊಳ್ಳಬೇಕು. ಪ್ರತಿಯೊಬ್ಬನು ತನ್ನ ತನ್ನ ಗೋತ್ರಧ್ವಜದ ಹತ್ತಿರ ತನ್ನ ತನ್ನ ದಂಡಿನಲ್ಲೇ ಇಳಿದುಕೊಳ್ಳಬೇಕು.

ಸೂರ್ಯೋದಯವಾಗುವ ದಿಕ್ಕಿನಲ್ಲಿ ಯೆಹೂದ 3
ಕುಲದ ದಂಡಿಗೆ ಸೇರಿದವರು ಸೈನ್ಯಸೈನ್ಯವಾಗಿ ತಮ್ಮ
ಡೇರೆಗಳನ್ನು ಹಾಕಿಕೊಳ್ಳಬೇಕು. ಯೆಹೂದ ಕುಲ
ದವರ ನಾಯಕನು ಅಮ್ಮೀನಾದಾಬನ ಮಗನಾದ
ನಹಶೋನನು; ಅವರಲ್ಲಿ ಲೆಕ್ಕಿಸಲ್ಪಟ್ಟ ಸೈನಿಕರು 4
74,600 ಮಂದಿ. ಅವರ ಸಮೀಪದಲ್ಲಿ ಇಸ್ಸಾಕಾರ್ 5
ಕುಲದವರೂ ಜೆಬುಲೂನ್ ಕುಲದವರೂ ತಮ್ಮ
ಡೇರೆಗಳನ್ನು ಹಾಕಿಕೊಳ್ಳಬೇಕು. ಇಸ್ಸಾಕಾರ್
ಕುಲದ ನಾಯಕನು ಚೂವಾರನ ಮಗನಾದ ನೆತನೇಲ್;
ಅವರಲ್ಲಿ ಲೆಕ್ಕಿಸಲ್ಪಟ್ಟ ಸೈನಿಕರು 54,400 ಮಂದಿ; 6
ಜೆಬುಲೂನ್ಯರ ನಾಯಕನು ಹೇಲೋನನ ಮಗನಾದ 7
ಎಲೀಯಾಬ್; ಅವರಲ್ಲಿ ಲೆಕ್ಕಿಸಲ್ಪಟ್ಟ ಸೈನಿಕರು 8
57,400 ಮಂದಿ. ಹೀಗೆ ಯೆಹೂದ ಕುಲದ ದಂಡಿಗೆ 9
ಸೇರಿದವರೆಲ್ಲರೂ 186,400 ಮಂದಿ. ಇವರು
ಮುಂಭಾಗದಲ್ಲಿ ಹೊರಡಬೇಕು.

ದಕ್ಷಿಣದಿಕ್ಕಿನಲ್ಲಿ ರೂಬೇನ್ ಕುಲದ ದಂಡಿಗೆ 10
ಸೇರಿದವರು ಸೈನ್ಯಸೈನ್ಯವಾಗಿ ತಮ್ಮ ಡೇರೆಗಳನ್ನು ಹಾಕಿ
ಕೊಳ್ಳಬೇಕು. ರೂಬೇನ್ ಕುಲದ ನಾಯಕನು
ಶೆದೇಯೂರನ ಮಗನಾದ ಎಲೀಚೂರನು; ಅವರಲ್ಲಿ 11
ಲೆಕ್ಕಿಸಲ್ಪಟ್ಟ ಸೈನಿಕರು 46,500 ಮಂದಿ. ಅವರ 12
ಸಮೀಪದಲ್ಲಿ ಸಿಮೆಯೋನ್ ಕುಲದವರೂ ಗಾದ್
ಕುಲದವರೂ ತಮ್ಮ ಡೇರೆಗಳನ್ನು ಹಾಕಿಕೊಳ್ಳಬೇಕು.
ಸಿಮೆಯೋನ್ಯರ ನಾಯಕನು ಚೂರೀಷದ್ದೈಯ ಮಗ
ನಾದ ಶೆಲುಮೀಯೇಲನು; ಅವರಲ್ಲಿ ಲೆಕ್ಕಿಸಲ್ಪಟ್ಟ 13
ಸೈನಿಕರು 59,300 ಮಂದಿ. ಗಾದ್ಯರ ನಾಯಕನು 14
ರೆಗೂವೇಲನ ಮಗನಾದ ಎಲ್ಯಾಸಾಫನು; ಅವರಲ್ಲಿ 15
ಲೆಕ್ಕಿಸಲ್ಪಟ್ಟ ಸೈನಿಕರು 45,650 ಮಂದಿ. ಹೀಗೆ 16
ರೂಬೇನ್ ಕುಲದ ದಂಡಿಗೆ ಸೇರಿದವರೆಲ್ಲರೂ 15,450
ಮಂದಿ. ಇವರು ಎರಡನೆಯ ದಂಡಾಗಿ ಹೊರಡಬೇಕು.

ಅನಂತರ ಸೈನ್ಯಗಳ ನಟ್ಟನಡುವೆಯಲ್ಲಿ ದೇವ 17
ದರ್ಶನದ ಗುಡಾರವೂ ಲೇವಿಯರ ಪಾಳೆಯದವರೂ
ಹೊರಡಬೇಕು. ಅವರು ಹೇಗೆ ಇಳಿದುಕೊಂಡಿ
ದ್ದರೋ ಹಾಗೆಯೇ ತಮ್ಮ ತಮ್ಮ ಧ್ವಜಗಳನ್ನು
ಹಿಡುಕೊಂಡು ತಮ್ಮ ತಮ್ಮ ಗೋತ್ರಾದ ಸ್ಥಾನದಲ್ಲಿ
ಹೊರಡಬೇಕು.

ಪಶ್ಚಿಮದಿಕ್ಕಿನಲ್ಲಿ ಎಫ್ರಾಯೀಮ್ ಕುಲದ ದಂಡಿ 18
ಗೆ ಸೇರಿದವರು ಸೈನ್ಯಸೈನ್ಯವಾಗಿ ತಮ್ಮ ಡೇರೆಗಳನ್ನು
ಹಾಕಿಕೊಳ್ಳಬೇಕು. ಅವರ ನಾಯಕನು ಅಮ್ಮೀ
ಹೂದನ ಮಗನಾದ ಎಲೀಷಾಮಾ; ಅವರಲ್ಲಿ ಲೆಕ್ಕಿ 19
ಸಲ್ಪಟ್ಟ ಸೈನಿಕರು 40,500 ಮಂದಿ. ಅವರ ಸಮೀಪ 20
ದಲ್ಲಿ ಮನಸ್ಸೆ ಕುಲದವರೂ ಬೆನ್ಯಾಮೀನ್ ಕುಲ
ದವರೂ ತಮ್ಮ ಡೇರೆಗಳನ್ನು ಹಾಕಿಕೊಳ್ಳಬೇಕು.
ಮನಸ್ಸೆ ಕುಲದವರ ನಾಯಕನು ಪೆದಾಚೂರನ
ಮಗನಾದ ಗಮ್ಲೀಯೇಲ್; ಅವರಲ್ಲಿ ಲೆಕ್ಕಿಸಲ್ಪಟ್ಟ 21
ಸೈನಿಕರು 32,200 ಮಂದಿ. ಬೆನ್ಯಾಮೀನ್ ಕುಲದ 22
ವರ ನಾಯಕನು ಗಿದ್ಯೋನಿಯ ಮಗನಾದ ಅಬೀ
ದಾನ್; ಅವರಲ್ಲಿ ಲೆಕ್ಕಿಸಲ್ಪಟ್ಟ ಸೈನಿಕರು 35,400 23
ಮಂದಿ. ಹೀಗೆ ಎಫ್ರಾಯೀಮ್ಯರ ದಂಡಿಗೆ ಸೇರಿದವರ 24
ರೆಲ್ಲರೂ 108,100 ಮಂದಿ. ಇವರು ಮೂರನೆಯ
ದಂಡಾಗಿ ಹೊರಡಬೇಕು.

25 ಉತ್ತರದಿಕ್ಕಿನಲ್ಲಿ ದಾನ್ ಕುಲದ ದಂಡಿಗೆ ಸೇರಿ
ದವರು ಸೈನ್ಯಸೈನ್ಯವಾಗಿ ತಮ್ಮ ಡೇರೆಗಳನ್ನು ಹಾಕಿ
ಕೊಳ್ಳಬೇಕು. ಅವರ ನಾಯಕನು ಅಮ್ಮೀಷದ್ದೈಯ
26 ಮಗನಾದ ಅಹೀಗೆಜೆರ್; ಅವರಲ್ಲಿ ಲೆಕ್ಕಿಸಲ್ಪಟ್ಟ
27 ಸೈನಿಕರು 62,700 ಮಂದಿ. ಅವರ ಸಮೀಪದಲ್ಲಿ
ಆಶೇರ್ ಕುಲದವರೂ ನಫ್ತಾಲಿ ಕುಲದವರೂ ತಮ್ಮ
ಡೇರೆಗಳನ್ನು ಹಾಕಿಕೊಳ್ಳಬೇಕು. ಆಶೇರ್ ಕುಲ
ದವರ ನಾಯಕನು ಒಕ್ರಾನನ ಮಗನಾದ ಪಗೀ
28 ಯೇಲ್; ಅವರಲ್ಲಿ ಲೆಕ್ಕಿಸಲ್ಪಟ್ಟ ಸೈನಿಕರು 41,500
29 ಮಂದಿ. ನಫ್ತಾಲಿ ಕುಲದವರ ನಾಯಕನು ಏನಾನನ
30 ಮಗನಾದ ಅಹೀರನು; ಅವರಲ್ಲಿ ಲೆಕ್ಕಿಸಲ್ಪಟ್ಟ ಸೈನಿ
31 ಕರು 53.400 ಮಂದಿ. ಹೀಗೆ ದಾನ್ ಕುಲದ ದಂಡಿಗೆ
ಸೇರಿದವರೆಲ್ಲರೂ 157,600 ಮಂದಿ. ಇವರು ಕಡೇ
ದಂಡಾಗಿ ಹೊರಡಬೇಕು.
32 ಇಸ್ರಾಯೇಲ್ಯರಲ್ಲಿ ಗೋತ್ರಗೋತ್ರಗಳ ಪ್ರಕಾರ
ಲೆಕ್ಕಿಸಲ್ಪಟ್ಟವರು ಇವರೇ; ಆ ದಂಡುಗಳಲ್ಲಿ ಸೈನಿಕ
33 ರಾಗಿ ಲೆಕ್ಕಿಸಲ್ಪಟ್ಟವರು 603,550 ಮಂದಿ. ಯೆಹೋ
ವನು ಮೋಶೆಗೆ ಆಜ್ಞಾಪಿಸಿದಂತೆ ಲೇವಿಯರು ಇಸ್ರಾ
ಯೇಲ್ಯರ ಸಂಗಡ ಲೆಕ್ಕಿಸಲ್ಪಡಲಿಲ್ಲ.
34 ಯೆಹೋವನು ಮೋಶೆಗೆ ಆಜ್ಞಾಪಿಸಿದಂತೆಯೇ
ಇಸ್ರಾಯೇಲ್ಯರು ಮಾಡಿದರು. ಹಾಗೆಯೇ ದಂಡು
ದಂಡಾಗಿ ಡೇರೆಗಳನ್ನು ಹಾಕಿಕೊಳ್ಳುತ್ತಿದ್ದರು; ಹಾಗೆ
ಯೇ ಗೋತ್ರಕುಟುಂಬಗಳ ಪ್ರಕಾರ ಹೊರಡುತ್ತಿ
ದ್ದರು.

ಆರೋನನ ಮಕ್ಕಳ ವಿವರಣೆ.

3 ಯೆಹೋವನು ಸೀನಾಯಿಬೆಟ್ಟದಲ್ಲಿ ಮೋಶೆಯ
ಸಂಗಡ ಮಾತಾಡಿದ ಕಾಲದಲ್ಲಿದ್ದ ಮೋಶೆ ಆರೋ
2 ನರ ವಂಶದವರು. ಆರೋನನ ಮಕ್ಕಳು — ಚೊಚ್ಚಲ
ಮಗನಾದ ನಾದಾಬ್; ಆ ಮೇಲೆ ಅಬೀಹೂ ಎಲ್ಲಾ
3 ಜಾರ್ ಈತಾಮಾರ್ ಎಂಬಿವರೇ. ಇವರೇ ಯಾಜ
ಕೋದ್ಯೋಗವನ್ನು ನಡಿಸುವದಕ್ಕಾಗಿ ಅಭಿಷೇಕದಿಂದ
4 ಪ್ರತಿಷ್ಠಿತರಾದವರು. ನಾದಾಬ್ ಅಬೀಹೂ ಎಂಬಿ
ಬ್ಬರು ಸೀನಾಯಿ ಅರಣ್ಯದಲ್ಲಿ ಯೆಹೋವನು
ಆಜ್ಞಾಪಿಸದೆ ಇದ್ದ ಬೇರೆ ಬೆಂಕಿಯಿಂದ ಧೂಪವನ್ನು
ಸಮರ್ಪಿಸಿದದರಿಂದ ಆತನ ಸನ್ನಿಧಿಯಲ್ಲೇ ಸತ್ತು
ಹೋದರು; ಅವರಿಗೆ ಮಕ್ಕಳಿರಲಿಲ್ಲ. ಎಲ್ಲಾಜಾರ್
ಈತಾಮಾರ್ ಎಂಬಿಬ್ಬರು ತಂದೆಯ ಕೈಕೆಳಗೆ
ಯಾಜಕಧರ್ಮವನ್ನು ನಡೆಸಿದರು.

ಲೇವಿಯರನ್ನು ಲೆಕ್ಕಿಸಿದ್ದು; ಅವರು ದೇವದರ್ಶನದ
ಗುಡಾರವನ್ನು ಕಾಯಬೇಕಾದದ್ದು.

5 ಯೆಹೋವನು ಮೋಶೆಗೆ ಆಜ್ಞಾಪಿಸಿದ್ದೇನಂದರೆ—
6 ನೀನು ಲೇವಿ ಕುಲದವರನ್ನು ಹತ್ತಿರಕ್ಕೆ ಕರೆದು
ಅವರು [ದೇವರ ಸೇವಾಕಾರ್ಯಕ್ಕಾಗಿ] ಯಾಜಕ
ನಾದ ಆರೋನನ ಕೈಕೆಳಗಿರುವಂತೆ ಅವನ ಮುಂದೆ
7 ನಿಲ್ಲಿಸು. ಅವರು ದೇವದರ್ಶನದ ಗುಡಾರದ ಬಳಿ
ಯಲ್ಲಿದ್ದು ಆರೋನನಿಗೋಸ್ಕರವೂ ಸರ್ವಸಮೂಹ
ದವರಿಗೋಸ್ಕರವೂ ದೇವಸ್ಥಾನದ ಪರಿಚರ್ಯವನ್ನು

ನಡಿಸಬೇಕು. ಅವರು ದೇವದರ್ಶನದ ಗುಡಾರದ
ಸಾಮಾನುಗಳನ್ನು ಕಾಯಬೇಕು. ಇಸ್ರಾಯೇಲ್ಯರ
ಗೋಸ್ಕರ ದೇವಸ್ಥಾನದ ಪರಿಚರ್ಯವನ್ನು ನಡಿಸ
ಬೇಕು. ನೀನು ಲೇವಿಯರನ್ನು ಆರೋನನಿಗೂ
ಅವನ ಮಕ್ಕಳಿಗೂ ಒಪ್ಪಿಸಬೇಕು; ಇಸ್ರಾಯೇಲ
ರಲ್ಲಿ ಆರೋನನಿಗೆ ಸಂಪೂರ್ಣವಾಗಿ ವಶಮಾಡಲ್ಪಟ್ಟ
ವರು ಇವರೇ. ಯಾಜಕೋದ್ಯೋಗವನ್ನು ನಡಿಸುವ
ದಕ್ಕೆ ಆರೋನನನ್ನೂ ಅವನ ಮಕ್ಕಳನ್ನೂ ನೇಮಿಸ
ಬೇಕು. ಇತರನು ಆ ಕೆಲಸಕ್ಕೆ ಕೈಹಾಕಿದರೆ ಅವನಿಗ
ಮರಣಶಿಕ್ಷೆಯಾಗಬೇಕು.
ಯೆಹೋವನು ಮೋಶೆಗೆ — ನಾನು ಇಸ್ರಾಯೇ 11
ಲ್ಯರಲ್ಲಿ ಚೊಚ್ಚಲಾದ ಗಂಡಸರಿಗೆ ಬದಲಾಗಿ ಲೇವಿ
ಯರನ್ನೇ ತೆಗೆದುಕೊಂಡಿದ್ದೇನೆಂದು ತಿಳಿದುಕೋ
ಆದದರಿಂದ ಲೇವಿಯರು ನನ್ನ ಸ್ವಕೀಯವಾದ
ಸೊತ್ತು. ಇಸ್ರಾಯೇಲ್ಯರ ಚೊಚ್ಚಲಾದವರೆಲ್ಲರು
ನನ್ನ ಸೊತ್ತಷ್ಟೆ; ಐಗುಪ್ತದೇಶದಲ್ಲಿದ್ದ ಚೊಚ್ಚಲಾದದ್ದ
ನ್ನೆಲ್ಲಾ ನಾನು ಸಂಹಾರಮಾಡಿದಾಗ ಇಸ್ರಾಯೇಲ್ಯ
ರಲ್ಲಿರುವ ಚೊಚ್ಚಲಾದ ಮನುಷ್ಯರನ್ನೂ ಪಶುಗ
ಳನ್ನೂ ನನ್ನ ಸ್ವಂತಕ್ಕಾಗಿ ಪ್ರತಿಷ್ಠಿಸಿಕೊಂಡೆನಲ್ಲಾ
ಅವರು ನನ್ನವರೇ; ನಾನು ಯೆಹೋವನು ಎಂದು
ಹೇಳಿದನು.
ಯೆಹೋವನು ಸೀನಾಯಿ ಅರಣ್ಯದಲ್ಲಿ ಮೋಶೆ
ಗೆ — ನೀನು ಲೇವಿಯರಲ್ಲಿ ಒಂದು ತಿಂಗಳು ಮೊದಲು
ಗೊಂಡು ಹೆಚ್ಚಾದ ವಯಸ್ಸುಳ್ಳ ಗಂಡಸರನ್ನೆಲ್ಲಾ
ಗೋತ್ರಕುಟುಂಬಗಳ ಪ್ರಕಾರ ಲೆಕ್ಕಿಸಬೇಕೆಂದು ಆಜ್ಞಾ
ಪಿಸಲಾಗಿ ಆತನ ಅಪ್ಪಣೆಯ ಮೇರೆಗೆ ಮೋಶೆ ಅವ
ರನ್ನು ಲೆಕ್ಕಿಸಿದನು.
ಲೇವಿಯ ಮಕ್ಕಳು ಯಾರಂದರೆ — ಗೇರ್ಷೋನ್
ಕೆಹಾತ್, ಮೆರಾರೀ ಇವರೇ. ಗೋತ್ರಸ್ಥಾಪಕರಾದ
ಗೇರ್ಷೋನನ ಮಕ್ಕಳು — ಲಿಬ್ನೀ, ಶಿಮ್ಮೀ ಎಂಬ
ವರು. ಗೋತ್ರಸ್ಥಾಪಕರಾದ ಕೆಹಾತನ ಮಕ್ಕಳು —
ಅಮ್ರಾಮ್, ಇಚ್ಹಾರ್, ಹೆಬ್ರೋನ್, ಉಜ್ಜೀಯೇಲ್
ಎಂಬವರು. ಗೋತ್ರಸ್ಥಾಪಕರಾದ ಮೆರಾರೀಯ
ಮಕ್ಕಳು — ಮಹ್ಲೀ, ಮೂಷೀ ಎಂಬವರು. ಗೋತ್ರ
ಕುಟುಂಬಗಳ ಪ್ರಕಾರ ಇವರೇ ಲೇವಿಯ ವಂಶ
ದವರು.
ಗೇರ್ಷೋನ್ ವಂಶದವರಲ್ಲಿ ಲಿಬ್ನೀ ಗೋತ್ರ
ದವರೂ ಶಿಮ್ಮೀ ಗೋತ್ರದವರೂ ಇದ್ದರು. ಅವರಲ್ಲಿ
ಲೆಕ್ಕಿಸಲ್ಪಟ್ಟ ಒಂದು ತಿಂಗಳು ಮೊದಲುಗೊಂಡು
ಹೆಚ್ಚಾದ ವಯಸ್ಸುಳ್ಳ ಗಂಡಸರು 7,500 ಮಂದಿ
ಗೇರ್ಷೋನ್ಯರ ಕುಟುಂಬಗಳವರು ದೇವದರ್ಶನದ
ಗುಡಾರದ ಹಿಂದುಗಡೆ ಅಂದರೆ ಪಶ್ಚಿಮದಿಕ್ಕಿನಲ್ಲಿ
ತಮ್ಮ ಡೇರೆಗಳನ್ನು ಹಾಕಿಕೊಳ್ಳಬೇಕು. ಗೇರ್ಷೋನ
ನ್ಯರ ಗೋತ್ರಗಳ ಪ್ರಧಾನಪುರುಷನು ಲಾಯೇಲನ
ಮಗನಾದ ಎಲ್ಯಾಸಾಫ್. ದೇವದರ್ಶನದ ಗುಡಾ
ರದ ಸಾಮಾನುಗಳಲ್ಲಿ ಗೇರ್ಷೋನನ ವಂಶದವರು
ಕಾಪಾಡಬೇಕಾದವುಗಳು ಯಾವವಂದರೆ — ಗುಡಾ
ರವೂ ಅದರ ಮೇಲಣ ಡೇರೆಯ ಬಟ್ಟೆಯೂ ಅದರ
ಮೇಲ್ಹೊದಿಕೆಯೂ ದೇವದರ್ಶನದ ಗುಡಾರದ ಬಾಗ
ಲಲ್ಲಿರುವ ಪರದೆಯೂ ಗುಡಾರದ ಮತ್ತು ಯಜ್ಞ

ವೇದಿಯ ಸುತ್ತಲಿರುವ ಅಂಗಳದ ತೆರೆಗಳೂ ಅಂಗಳದ ಬಾಗಲಿನ ಪರದೆಯೂ ಇವುಗಳ ಹಗ್ಗಗಳೂ ಇವೇ. ಇವುಗಳ ಸಕಲವಿಧವಾದ ಪರಿಚರ್ಯವನ್ನು ಗೇರ್ಷೋನ್ಯರು ಮಾಡಬೇಕು.

ಕೆಹಾತ್ ವಂಶದವರಲ್ಲಿ ಅಮ್ರಾಮ್ ಗೋತ್ರದವರೂ ಇಚ್ಹಾರ್ ಗೋತ್ರದವರೂ ಹೆಬ್ರೋನ್ ಗೋತ್ರದವರೂ ಉಜ್ಜೀಯೇಲ್ ಗೋತ್ರದವರೂ ಇದ್ದರು. ಅವರಲ್ಲಿ ದೇವಸ್ಥಾನವನ್ನು ಕಾಯತಕ್ಕವರು ಅಂದರೆ ಒಂದು ತಿಂಗಳು ಮೊದಲುಗೊಂಡು ಹೆಚ್ಚಾದ ವಯಸ್ಸುಳ್ಳ ಗಂಡಸರು 1) 8600 ಮಂದಿ. ಕೆಹಾತ್ಯರ ಕುಟುಂಬಗಳವರು ದೇವದರ್ಶನದ ಗುಡಾರದ ದಕ್ಷಿಣದಿಕ್ಕಿನಲ್ಲಿ ತಮ್ಮ ಡೇರೆಗಳನ್ನು ಹಾಕಿಕೊಳ್ಳಬೇಕು. ಕೆಹಾತ್ಯರ ಗೋತ್ರಗಳ ಪ್ರಧಾನಪುರುಷನು ಉಜ್ಜೀಯೇಲನ ಮಗನಾದ ಎಲೀಚಾಫಾನ್. ಅವರು ಕಾಪಾಡಬೇಕಾದವುಗಳು ಯಾವವಂದರೆ—ಮಂಜೂಷವೂ ಮೇಜೂ ದೀಪಸ್ತಂಭವೂ ವೇದಿಗಳೂ ದೇವಸ್ಥಾನದ ಸೇವೋಪಕರಣಗಳೂ ಒಳಗಣ ತೆರೆಯೂ ಇವುಗಳೇ. ಇವುಗಳ ಸಕಲವಿಧವಾದ ಪರಿಚರ್ಯವನ್ನು ಅವರು ಮಾಡಬೇಕು. ಅದಲ್ಲದೆ ಮಹಾಯಾಜಕ ಆರೋನನ ಮಗನಾದ ಎಲ್ಲಾಜಾರನು ಲೇವಿಯರ ಪ್ರಧಾನರಿಗೆ ಅಧ್ಯಕ್ಷನಾಗಿ ದೇವಸ್ಥಾನವನ್ನು ಕಾಯುವವರ ಮೇಲ್ವಿಚಾರಕನಾಗಿರಬೇಕು.

ಮೆರಾರೀ ವಂಶದವರಲ್ಲಿ ಮಹ್ಲೀ ಗೋತ್ರದವರೂ ಮೂಷೀ ಗೋತ್ರದವರೂ ಇದ್ದರು. ಅವರಲ್ಲಿ ಲೆಕ್ಕಿಸಲ್ಪಟ್ಟ ಒಂದು ತಿಂಗಳು ಮೊದಲುಗೊಂಡು ಹೆಚ್ಚಾದ ವಯಸ್ಸುಳ್ಳ ಗಂಡಸರು 6200 ಮಂದಿ. ಮೆರಾರೀಯರ ಗೋತ್ರಗಳ ಪ್ರಧಾನಪುರುಷನು ಅಬೀಹೈಲನ ಮಗನಾದ ಚೂರೀಯೇಲ್. ಇವರು ದೇವದರ್ಶನದ ಗುಡಾರದ ಉತ್ತರದಿಕ್ಕಿನಲ್ಲಿ ತಮ್ಮ ಡೇರೆಗಳನ್ನು ಹಾಕಿಕೊಳ್ಳಬೇಕು, ಮೆರಾರೀ ವಂಶದವರ ವಶಕ್ಕೆ ಕೊಟ್ಟವುಗಳು ಯಾವವಂದರೆ—ಗುಡಾರದ ಚೌಕಟ್ಟುಗಳೂ ಅಗುಳಿಗಳೂ ಕಂಬಗಳೂ ಗದ್ದಿಗೇಕಲ್ಲುಗಳೂ ಇವುಗಳ ಉಪಕರಣಗಳೂ ಅಂಗಳದ ಸುತ್ತಲಿರುವ ಕಂಬಗಳೂ ಅವುಗಳ ಗದ್ದಿಗೇಕಲ್ಲುಗಳೂ ಗೂಟಗಳೂ ಹಗ್ಗಗಳೂ ಇವುಗಳೇ. ಇವುಗಳ ಸಕಲ ವಿಧವಾದ ಪರಿಚರ್ಯವನ್ನು ಇವರೇ ಮಾಡಬೇಕು.

ದೇವದರ್ಶನದ ಗುಡಾರದ ಪೂರ್ವದಿಕ್ಕಿನಲ್ಲಿ ಅಂದರೆ ಸೂರ್ಯೋದಯವಾಗುವ ಕಡೆಯಲ್ಲಿ ಮೋಶೆಯೂ ಆರೋನನೂ ಆರೋನನ ಮಕ್ಕಳೂ ತಮ್ಮ ಡೇರೆಗಳನ್ನು ಹಾಕಿಕೊಳ್ಳಬೇಕು. ಅವರು ಇಸ್ರಾಯೇಲ್ಯರಿಗೋಸ್ಕರವಾಗಿ ದೇವಸ್ಥಾನವನ್ನು ನೋಡಿಕೊಳ್ಳಬೇಕು. ಇತರರು ಆ ಕೆಲಸಕ್ಕೆ ಕೈಹಾಕಿದರೆ ಅವರಿಗೆ ಮರಣಶಿಕ್ಷೆಯಾಗಬೇಕು.

ಮೋಶೆ ಆರೋನರು ಯೆಹೋವನ ಅಪ್ಪಣೆಯ ಮೇರೆಗೆ ಕುಟುಂಬಗಳ ಪ್ರಕಾರ ಲೆಕ್ಕಿಸಿದ ಲೇವಿಯರ ಅಂದರೆ ಒಂದು ತಿಂಗಳು ಮೊದಲುಗೊಂಡು ಹೆಚ್ಚಾದ ವಯಸ್ಸುಳ್ಳ ಗಂಡಸರ ಒಟ್ಟು ಸಂಖ್ಯೆ 22,000.

ಮೋಶೆ ಇಸ್ರಾಯೇಲ್ಯರ ಚೊಚ್ಚಲಾದ ಪುರುಷರನ್ನು ಲೆಕ್ಕಿಸಿದ್ದು; ಯೆಹೋವನು ಅವರಿಗೆ ಬದಲಾಗಿ ಲೇವಿಯರನ್ನು ತನ್ನ ಸ್ವಂತಕ್ಕೆ ತೆಗೆದುಕೊಂಡದ್ದು.

ಅದಲ್ಲದೆ ಯೆಹೋವನು ಮೋಶೆಗೆ—ನೀನು ಇಸ್ರಾ 40
ಯೇಲ್ಯರಲ್ಲಿ ಒಂದು ತಿಂಗಳು ಮೊದಲುಗೊಂಡು
ಹೆಚ್ಚಾದ ವಯಸ್ಸುಳ್ಳ ಚೊಚ್ಚಲು ಗಂಡಸರನ್ನು
ಹೆಸರುಹಿಡಿದು ಲೆಕ್ಕಿಸು. ಯೆಹೋವನೆಂಬ ನನ್ನ 41
ಸೊತ್ತಾಗುವದಕ್ಕೆ ನೀನು ಇಸ್ರಾಯೇಲ್ಯರಲ್ಲಿರುವ
ಚೊಚ್ಚಲಾದವರಿಗೆ ಬದಲಾಗಿ ಲೇವಿಯರನ್ನೂ ಇಸ್ರಾ
ಯೇಲ್ಯರ ಚೊಚ್ಚಲಾದ ಪಶುಗಳಿಗೆ ಬದಲಾಗಿ
ಲೇವಿಯರ ಪಶುಗಳನ್ನೂ ತೆಗೆದುಕೊಳ್ಳಬೇಕು
ಎಂದು ಆಜ್ಞಾಪಿಸಿದನು.
ಯೆಹೋವನ ಅಪ್ಪಣೆಯ ಮೇರೆಗೆ ಮೋಶೆಯು 42
ಇಸ್ರಾಯೇಲ್ಯರಲ್ಲಿದ್ದ ಚೊಚ್ಚಲಾದವರೆಲ್ಲರನ್ನೂ ಲೆಕ್ಕಿ
ಸಿದನು. ಹೆಸರುಹಿಡಿದು ಲೆಕ್ಕಿಸಲ್ಪಟ್ಟ ಚೊಚ್ಚಲಾದ 43
ವರು ಅಂದರೆ ಒಂದು ತಿಂಗಳು ಮೊದಲುಗೊಂಡು
ಹೆಚ್ಚಾದ ವಯಸ್ಸುಳ್ಳ ಗಂಡಸರು 22,273 ಮಂದಿ.
ಯೆಹೋವನು ಮೋಶೆಗೆ ಆಜ್ಞಾಪಿಸಿದ್ದೇನಂದರೆ— 44
ನೀನು ಇಸ್ರಾಯೇಲ್ಯರ ಚೊಚ್ಚಲಾದವರಿಗೆ ಬದ 45
ಲಾಗಿ ಲೇವಿಯರನ್ನೂ ಅವರ ಚೊಚ್ಚಲಾದ ಪಶು
ಗಳಿಗೆ ಬದಲಾಗಿ ಲೇವಿಯರ ಪಶುಗಳನ್ನೂ ತೆಗೆದು
ಕೋ. ಲೇವಿಯರೇ ನನ್ನ ಸೊತ್ತಾಗಿರುವರು; ನಾನು
ಯೆಹೋವನು. ಲೇವಿಯರ ಸಂಖ್ಯೆಗಿಂತ ಹೆಚ್ಚಾಗಿ 46
273 ಮಂದಿ ಚೊಚ್ಚಲರು ಇಸ್ರಾಯೇಲ್ಯರಲ್ಲಿ ಇರು
ವದರಿಂದ ಅವರನ್ನು ಬಿಡಿಸುವದಕ್ಕೋಸ್ಕರ ತಲೆ
ಒಂದಕ್ಕೆ ಐದೈದು ರೂಪಾಯಿಯ ಮೇರೆಗೆ ಈಡು
ತೆಗೆದುಕೊಳ್ಳಬೇಕು. ದೇವರ ಸೇವೆಗೆ ನೇಮಕ 47
ವಾದ ಇಪ್ಪತ್ತು ಗೇರಾ ತೂಕದ ರೂಪಾಯಿಯ
ಮೇರೆಗೆ ತೆಗೆದುಕೊಳ್ಳಬೇಕು. ಆ ಹೆಚ್ಚಾಗಿರುವವರ 48
ಬಿಡುಗಡೆಗೋಸ್ಕರ ಅವರು ಕೊಡುವ ಹಣವನ್ನು
ನೀನು ಆರೋನನಿಗೂ ಅವನ ಮಕ್ಕಳಿಗೂ ಕೊಡ
ಬೇಕು ಅಂದನು.
ಅದಕ್ಕನುಸಾರವಾಗಿ ಮೋಶೆ ಲೇವಿಯರಿಗಿಂತ 49
ಹೆಚ್ಚಾದ ಚೊಚ್ಚಲರನ್ನು ಬಿಡಿಸುವದಕ್ಕೋಸ್ಕರ ಹಣ
ವನ್ನು ತೆಗೆದುಕೊಂಡನು. ದೇವರ ಸೇವೆಗೆ ನೇಮಕ 50
ವಾದ ರೂಪಾಯಿಯ ಮೇರೆಗೆ 1365 ರೂಪಾಯಿ
ತೆಗೆದುಕೊಂಡನು. ಯೆಹೋವನ ಆಜ್ಞೆಯಂತೆ ಮೋಶೆ 51
ಆ ಬಿಡುಗಡೆಯ ಹಣವನ್ನು ಆರೋನನಿಗೂ ಅವನ
ಮಕ್ಕಳಿಗೂ ಕೊಟ್ಟನು.

ಲೇವಿಯ ಮೂರು ಮಂದಿ ಮಕ್ಕಳ ವಂಶದವರನ್ನು ಲೆಕ್ಕಿಸಿ ಅವರವರ ಕೆಲಸಗಳನ್ನು ನೇಮಿಸಿದ್ದು.

4
ಯೆಹೋವನು ಮೋಶೆ ಆರೋನರಿಗೆ ಆಜ್ಞಾಪಿಸಿದ್ದೇ
ನಂದರೆ—ನೀನು ಲೇವಿಯರೊಳಗೆ ಕೆಹಾತ್ಯ 2, 3

1) ಬಹುಶಃ ಒಂದು ಅಕ್ಷರವನ್ನು ತಿದ್ದಿ 8300 ಎಂದು ಓದಬೇಕು; 39ನೇ ವಚನದಲ್ಲಿರುವ ಒಟ್ಟು ಸಂಖ್ಯೆಯನ್ನು ನೋಡಿರಿ.

ರಲ್ಲಿ ಯಾರಾರು ಮೂವತ್ತರಿಂದ ಐವತ್ತು ವರುಷದ
ವರೆಗೂ ವಯುಸ್ಸುಳ್ಳವರಾಗಿ ದೇವದರ್ಶನದ ಗುಡಾ
ರದ ಸೇವಕಮಂಡಲಿಗೆ ಸೇರತಕ್ಕವರಾಗಿದ್ದಾರೋ ಅವ
ರನ್ನು ಗೋತ್ರಕುಟುಂಬಗಳ ಪ್ರಕಾರ ಲೆಕ್ಕಿಸಬೇಕು.
4 ದೇವದರ್ಶನದ ಗುಡಾರದ ವಿಷಯದಲ್ಲಿ ಕೆಹಾ
ತ್ಯರು ಮಾಡಬೇಕಾದ ಕೆಲಸ ಯಾವದಂದರೆ— ಅವರು
ಮಹಾಪರಿಶುದ್ಧವಸ್ತುಗಳನ್ನು ನೋಡಿಕೊಳ್ಳಬೇಕು.
5 ದಂಡು ಹೊರಡುವಾಗ ಆರೋನನೂ ಅವನ ಮಕ್ಕಳೂ
ಒಳಗೆ ಬಂದು [ಮಹಾಪವಿತ್ರಸ್ಥಾನವನ್ನು] ಮರೆ
ಮಾಡುವ ತೆರೆಯನ್ನು ಇಳಿಸಿ ಅದರಿಂದ ಆಜ್ಞಾ
6 ಶಾಸನಗಳ ಮಂಜೂಷವನ್ನು ಮುಚ್ಚಿಬಿಟ್ಟು, ಅದರ
ಮೇಲೆ ಕಡಲುಹಂದಿಯ ತೊಗಲನ್ನೂ ನೀಲಿಬಟ್ಟೆ
ಯನ್ನೂ ಹೊದಿಸಿ [ಮಂಜೂಷದ ಬಳೆಗಳಲ್ಲಿ]
7 ಹೊರುವ ಕೋಲುಗಳನ್ನು ಸೇರಿಸಬೇಕು. ಬಳಿಕ
ಅವರು ಯೆಹೋವನ ಸಮ್ಮುಖದಲ್ಲಿರುವ ಮೇಜಿನ
ಮೇಲೆ ನೀಲಿಬಟ್ಟೆಯನ್ನು ಹಾಸಿ ಅದರ ಮೇಲೆ
ಮೇಜಿಗೆ ಸೇರಿದ ಹರಿವಾಣಗಳನ್ನೂ ಧೂಪಾರತಿ
ಗಳನ್ನೂ ಹೂಜೆಗಳನ್ನೂ ಪಾನದ್ರವ್ಯಾರ್ಪಣೆಯ
ಬಟ್ಟಲುಗಳನ್ನೂ ಇಡಬೇಕು. ಯಾವಾಗಲೂ ಇರ
ಬೇಕಾದ ರೊಟ್ಟಿಗಳೂ ಅದರ ಮೇಲೆ ಇರಬೇಕು.
8 ಅವೆಲ್ಲವುಗಳ ಮೇಲೆ ಅವರು ರಕ್ತವರ್ಣದ ಬಟ್ಟೆ
ಯನ್ನು ಹಾಸಿ ಕಡಲುಹಂದಿಯ ತೊಗಲನ್ನು ಹೊದಿಸಿ
9 ಹೊರುವ ಕೋಲುಗಳನ್ನು ಸೇರಿಸಬೇಕು. ಆ ಮೇಲೆ
ಅವರು ದೀಪಸ್ತಂಭವನ್ನೂ ಅದಕ್ಕೆ ಸಂಬಂಧಪಟ್ಟ ಹಣ
ತೆಗಳನ್ನೂ ಕತ್ತರಿಗಳನ್ನೂ ದೀಪದ ಕುಡಿತೆಗೆಯುವ
ಬಟ್ಟಲುಗಳನ್ನೂ ಎಣ್ಣೆಯ ಪಾತ್ರೆಗಳನ್ನೂ ನೀಲಿಬಟ್ಟೆ
10 ಯಿಂದ ಮುಚ್ಚಿಬಿಟ್ಟು ಅದಕ್ಕೂ ಅದರ ಎಲ್ಲಾ ಉಪಕ
ರಣಗಳಿಗೂ ಕಡಲುಹಂದಿಯ ತೊಗಲನ್ನು ಹೊದಿಸಿ
11 ಅವುಗಳನ್ನು ಅಡ್ಡದಂಡಕ್ಕೆ ಕಟ್ಟಬೇಕು. ತರುವಾಯ
ಅವರು ಬಂಗಾರದ ವೇದಿಯ ಮೇಲೆ ನೀಲಿಬಟ್ಟೆ
ಯನ್ನು ಹಾಸಿ ಕಡಲುಹಂದಿಯ ತೊಗಲನ್ನು ಹೊದಿಸಿ
12 ಹೊರುವ ಕೋಲುಗಳನ್ನು ಹಾಕಬೇಕು. ದೇವಸ್ಥಾ
ನದ ಸೇವೋಪಕರಣಗಳನ್ನೆಲ್ಲಾ ನೀಲಿಬಟ್ಟೆಯಲ್ಲಿ
ಇಟ್ಟು ಕಡಲುಹಂದಿಯ ತೊಗಲನ್ನು ಹೊದಿಸಿ ಅಡ್ಡ
13 ದಂಡಕ್ಕೆ ಕಟ್ಟಬೇಕು. ಆಗ ಅವರು ಯಜ್ಞವೇದಿಯ
ಬೂದಿಯನ್ನು ತೆಗೆದುಬಿಟ್ಟು ಆ ವೇದಿಯ ಮೇಲೆ
14 ಧೂಮ್ರವರ್ಣದ ಬಟ್ಟೆಯನ್ನು ಹಾಸಿ ಅದಕ್ಕೆ ಸಂಬಂಧ
ಪಟ್ಟ ಅಗ್ಗಿಷ್ಟಿಗೆಗಳು, ಮುಳ್ಳುಗಳು, ಸಲಿಕೆಗಳು, ಬೋ
ಗುಣಿಗಳು ಮುಂತಾದ ಉಪಕರಣಗಳನ್ನೆಲ್ಲಾ ಮೇಲೆ
ಇಟ್ಟು ಕಡಲು ಹಂದಿಯ ತೊಗಲನ್ನು ಹೊದಿಸಿ ಹೊರುವ
15 ಕೋಲುಗಳನ್ನು ಹಾಕಬೇಕು. ದಂಡುಹೊರಡುವ
ಕಾಲದಲ್ಲಿ ಆರೋನನೂ ಅವನ ಮಕ್ಕಳೂ ದೇವ
ಸ್ಥಾನದ ಎಲ್ಲಾ ಸಾಮಾನುಗಳನ್ನು ಮುಚ್ಚಿ ಸಿದ್ಧ
ಮಾಡಿದನಂತರ ಕೆಹಾತ್ಯರು ಅವುಗಳನ್ನು ಹೊರು
ವದಕ್ಕೆ ಬರಬೇಕು. ಇವರು ದೇವಸ್ಥಾನದ ಸಾಮಾ
ನುಗಳನ್ನು ಮುಟ್ಟಬಾರದು; ಮುಟ್ಟಿದರೆ ಸತ್ತಾರು.
ದೇವದರ್ಶನದ ಗುಡಾರದ ಸಾಮಾನುಗಳಲ್ಲಿ ಕೆಹಾ
ತ್ಯರು ಹೊರಬೇಕಾದವುಗಳು ಇವೇ.
16 ಮಹಾಯಾಜಕ ಆರೋನನ ಮಗನಾದ ಎಲ್ಲಾ
ಜಾರನು ದೀಪದ ಎಣ್ಣೆಯನ್ನೂ ಪರಿಮಳಧೂಪ

ವನ್ನೂ ನಿತ್ಯವಾಗಿ ನೈವೇದ್ಯಮಾಡುವ ಧಾನ್ಯದ್ರ
ವನ್ನೂ ಅಭಿಷೇಕತೈಲವನ್ನೂ ತನ್ನ ವಶದಲ್ಲಿ ಇಟ
ಕೊಳ್ಳಬೇಕು. ಅದಲ್ಲದೆ ದೇವದರ್ಶನದ ಗುಡಾರ
ಎಲ್ಲಾ ಭಾಗಗಳೂ ಅದರಲ್ಲಿಯೂ ಅದರ ಪಾತ್ರೆಗ
ಲ್ಲಿಯೂ ಇರುವ ಸಮಸ್ತ ವಸ್ತುಗಳೂ ಅವ
ಮೇಲ್ವಿಚಾರಣೆಯಲ್ಲಿರಬೇಕು.
ಯೆಹೋವನು ಮೋಶೆ ಆರೋನರಿಗೆ ಆಜ್ಞಾಪಿ
ದ್ದೇನಂದರೆ— ಕೆಹಾತ್ಯರ ಗೋತ್ರಕುಟುಂಬಗಳವ
ಲೇವಿಯರೊಳಗೆ ಉಳಿಯದೆ ನಾಶವಾಗುವದ
ಅಸ್ಪದಕೊಡಬೇಡಿರಿ. ಅವರು ಮಹಾಪರಿಶುದ್ಧವಸ
ಗಳ ಹತ್ತಿರಕ್ಕೆ ಬರುವಾಗ ಸಾಯದಂತೆ ನೀ
ಅವರ ವಿಷಯದಲ್ಲಿ ಮಾಡಬೇಕಾದದ್ದೇನಂದರೆ—
ಆರೋನನೂ ಅವನ ಮಕ್ಕಳೂ ಒಳಗೆ ಬಂದು ಅವ
ವರ ಕೆಲಸಗಳನ್ನೂ ಅವರವರ ಹೊರೆಗಳನ್ನೂ ಗೊತ್ತ
ಮಾಡಬೇಕು. ಕೆಹಾತ್ಯರೇ ಒಳಗೆ ಬಂದು ಒಂದ
ಕ್ಷಣವಾದರೂ ಆ ಪರಿಶುದ್ಧವಸ್ತುಗಳನ್ನು ನೋ
ಬಾರದು; ನೋಡಿದರೆ ಸತ್ತಾರು.
ಯೆಹೋವನು ಮೋಶೆಗೆ ಆಜ್ಞಾಪಿಸಿದ್ದೇನಂದರೆ—
ನೀನು ಗೇರ್ಷೋನ್ಯರಲ್ಲಿ ಯಾರಾರು ಮೂವತ್ತ 22
ರಿಂದ ಐವತ್ತು ವರುಷದ ವರೆಗೂ ವಯಸ್ಸುಳ್ಳವರಾ
ದೇವದರ್ಶನದ ಗುಡಾರದ ಸೇವಕಮಂಡಲಿಗೆ ಸೇ
ತಕ್ಕವರಾಗಿದ್ದಾರೋ ಅವರನ್ನು ಗೋತ್ರಕುಟುಂ
ಗಳ ಪ್ರಕಾರ ಲೆಕ್ಕಿಸಬೇಕು.
ಪರಿಚರ್ಯಮಾಡುವದರಲ್ಲಿಯೂ ಹೊರೆಗಳನ
ಹೊರುವದರಲ್ಲಿಯೂ ಗೇರ್ಷೋನ್ಯರು ಮಾ
ಬೇಕಾದ ಸೇವೆ ಯಾವದಂದರೆ— ಅವರು ದೇವದರ
ನದ ಗುಡಾರದ ಬಟ್ಟೆಗಳನ್ನು ಹೊರಬೇಕು; ಅಂದ
ಗುಡಾರವು, ಅದರ ಹೊದಿಕೆಯು, ಅದರ ಮೇಲ
ಕಡಲುಹಂದಿಯ ತೊಗಲಿನ ಹೊದಿಕೆಯು, ದೇ
ದರ್ಶನದ ಗುಡಾರದ ಬಾಗಲಿನ ಪರದೆಯು, ಗುಡ
ರದ ಮತ್ತು ಯಜ್ಞವೇದಿಯ ಸುತ್ತಣ ಅಂಗಳ
ತೆರೆಗಳು, ಅದರ ಬಾಗಲಿನ ಪರದೆಯು, ಹಗ್ಗಗಳ
ಎಲ್ಲಾ ಉಪಕರಣಗಳು ಇವುಗಳನ್ನು ಹೊರಬೇಕು
ಮತ್ತು ಇವುಗಳಿಗೆ ಸಂಬಂಧಪಟ್ಟ ಎಲ್ಲಾ ಕೆಲಸವನ
ಅವರು ಮಾಡಬೇಕು. ಗೇರ್ಷೋನ್ಯರು ಹೊ
ಹೊರುವದರಲ್ಲಿಯೂ ಬೇರೆ ಪರಿಚರ್ಯಮಾಡುವ
ರಲ್ಲಿಯೂ ಆರೋನನ ಮತ್ತು ಅವನ ಮಕ್ಕಳ ಅಪ್ಪ
ಣೆಯ ಪ್ರಕಾರವೇ ನಡೆಯಬೇಕು. ನೀವೇ ಹೊ
ಗಳನ್ನು ಗೊತ್ತುಮಾಡಿ ಅವರವರ ವಶಕ್ಕೆ ಕೊ
ಬೇಕು. ದೇವದರ್ಶನದ ಗುಡಾರದ ವಿಷಯದಲ್
ಗೇರ್ಷೋನ್ಯರು ಮಾಡಬೇಕಾದ ಕೆಲಸ ಇದೇ. ಮಹ
ಯಾಜಕನಾದ ಆರೋನನ ಮಗನಾದ ಈತಾಮಾರನ
ಅವರ ಮೇಲ್ವಿಚಾರಣೆ ಮಾಡಬೇಕು.
ನೀನು ಮೆರಾರೀಯರಲ್ಲೂ ಯಾರಾರು ಮೂ
ತ್ತರಿಂದ ಐವತ್ತು ವರುಷದ ವರೆಗೂ ವಯಸ್ಸುಳ್ಳ
ರಾಗಿ ದೇವದರ್ಶನದ ಗುಡಾರದ ಸೇವಕಮಂಡಲಿ
ಸೇರತಕ್ಕವರಾಗಿದ್ದಾರೋ ಅವರನ್ನು ಗೋತ್ರಕುಟುಂ
ಗಳ ಪ್ರಕಾರ ಲೆಕ್ಕಿಸಬೇಕು. ದೇವದರ್ಶನದ ಗುಡ
ರದ ವಿಷಯದಲ್ಲಿ ಅವರು ಮಾಡಬೇಕಾದ ಕೆಲಸ
ಯಾವದಂದರೆ— ಅವರು ಗುಡಾರದ ಚೌಕಟ್ಟುಗಳನ್ನೂ

ಅಗುಳಿಗಳನ್ನೂ ಕಂಬಗಳನ್ನೂ ಗದ್ದಿಗೇಕಲ್ಲುಗಳನ್ನೂ
ಅಂಗಳದ ಕಂಬಗಳನ್ನೂ ಇವುಗಳ ಗದ್ದಿಗೇಕಲ್ಲು
ಗಳನ್ನೂ ಗೂಟಗಳನ್ನೂ ಹಗ್ಗಗಳನ್ನೂ ಎಲ್ಲಾ ಉಪ
ಕರಣಗಳನ್ನೂ ಹೊರಬೇಕು; ಇವುಗಳಿಗೆ ಸಂಬಂಧ
ಪಟ್ಟ ಎಲ್ಲಾ ಕೆಲಸವನ್ನು ಅವರು ಮಾಡಬೇಕು.
ಅವರವರ ಹೊರೆಗಳನ್ನೆಲ್ಲಾ ನೀವು ಹೆಸರು ಹೇಳಿ
ಗೊತ್ತುಮಾಡಬೇಕು. ದೇವದರ್ಶನದ ಗುಡಾರದ
ವಿಷಯದಲ್ಲಿ ಮೆರಾರೀಯರು ಮಾಡಬೇಕಾದ ಕೆಲಸ
ಇದೇ. ಅವರು ಮಹಾಯಾಜಕ ಆರೋನನ ಮಗ
ನಾದ ಈತಾಮಾರನ ಕೈಕೆಳಗೆ ಅದನ್ನು ನಡಿಸಬೇಕು.
35 ಮೋಶೆ ಆರೋನರೂ ಸಮೂಹದ ಪ್ರಧಾನರೂ
ಕೆಹಾತ್ಯರಲ್ಲಿ ಯಾರಾರು ಮೂವತ್ತರಿಂದ ಐವತ್ತು
ವರುಷದ ವರೆಗೂ ವಯಸ್ಸುಳ್ಳವರಾಗಿ ದೇವದರ್ಶನದ
ಗುಡಾರದ ಸೇವಕಮಂಡಲಿಗೆ ಸೇರತಕ್ಕವರಾಗಿದ್ದಾರೋ
ಅವರನ್ನು ಗೋತ್ರಕುಟುಂಬಗಳ ಪ್ರಕಾರ ಲೆಕ್ಕಿಸಿ
ದರು. ಅವರಲ್ಲಿ ಕುಟುಂಬಗಳ ಪ್ರಕಾರ ಲೆಕ್ಕಿಸ
ಲ್ಪಟ್ಟವರು 2750 ಮಂದಿ. ಯೆಹೋವನು ಮೋ
ಶೆಗೆ ಕೊಟ್ಟ ಅಪ್ಪಣೆಯ ಮೇರೆಗೆ ಮೋಶೆ ಆರೋನರು
ಕೆಹಾತ್ಯರನ್ನು ಲೆಕ್ಕಿಸಲಾಗಿ ಅವರಲ್ಲಿ ದೇವದರ್ಶನದ
ಗುಡಾರದ ಕೆಲಸವನ್ನು ಮಾಡತಕ್ಕವರು ಇಷ್ಟೇ ಜನ.
39 ಗೇರ್ಷೋನ್ಯರಲ್ಲಿ ಮೂವತ್ತರಿಂದ ಐವತ್ತು
ವರುಷದ ವರೆಗೂ ವಯಸ್ಸುಳ್ಳವರಾಗಿ ದೇವದರ್ಶನದ
ಗುಡಾರದ ಕೆಲಸಕ್ಕೆ ಸೇರಿದವರೆಂದು ಗೋತ್ರಕುಟುಂಬ
ಗಳ ಪ್ರಕಾರ ಲೆಕ್ಕಿಸಲ್ಪಟ್ಟವರು 2630 ಮಂದಿ.
ಯೆಹೋವನ ಅಪ್ಪಣೆಯ ಮೇರೆಗೆ ಮೋಶೆ ಆರೋ
ನರು ಅವರನ್ನು ಲೆಕ್ಕಿಸಲಾಗಿ ಅವರಲ್ಲಿ ದೇವದರ್ಶನದ
ಗುಡಾರದ ಕೆಲಸವನ್ನು ಮಾಡತಕ್ಕವರು ಇಷ್ಟೇ ಜನ.
43 ಮೆರಾರೀಯರಲ್ಲಿ ಮೂವತ್ತರಿಂದ ಐವತ್ತು
ವರುಷದ ವರೆಗೂ ವಯಸ್ಸುಳ್ಳವರಾಗಿ ದೇವದರ್ಶನದ
ಗುಡಾರದ ಕೆಲಸಕ್ಕೆ ಸೇರಿದವರೆಂದು ಗೋತ್ರಕುಟುಂಬ
ಗಳ ಪ್ರಕಾರ ಲೆಕ್ಕಿಸಲ್ಪಟ್ಟವರು 3200 ಮಂದಿ.
ಯೆಹೋವನು ಮೋಶೆಗೆ ಆಜ್ಞಾಪಿಸಿದ ಪ್ರಕಾರ
ಮೋಶೆ ಆರೋನರು ಮೆರಾರೀಯರನ್ನು ಲೆಕ್ಕಿಸಲಾಗಿ
ಅವರ ಸಂಖ್ಯೆ ಇಷ್ಟೇ.
47 ಮೋಶೆ ಆರೋನರೂ ಇಸ್ರಾಯೇಲ್ಯರ ಪ್ರಧಾ
ನರೂ ಲೇವಿಯರಲ್ಲಿ ಮೂವತ್ತರಿಂದ ಐವತ್ತು ವರು
ಷದ ವರೆಗೂ ವಯಸ್ಸುಳ್ಳವರನ್ನು ಅಂದರೆ ದೇವ
ದರ್ಶನದ ಗುಡಾರದ ಪರಿಚರ್ಯವನ್ನು ಮಾಡಲೂ
ಅದರ ಹೊರೆಗಳನ್ನು ಹೊರಲೂ ತಕ್ಕವರನ್ನು ಗೋತ್ರ
ಕುಟುಂಬಗಳ ಪ್ರಕಾರ ಲೆಕ್ಕಿಸಲಾಗಿ ಅವರ ಒಟ್ಟು
ಸಂಖ್ಯೆ 8580. ಯೆಹೋವನು ಮೋಶೆಗೆ ಆಜ್ಞಾ
ಪಿಸಿದ ಮೇರೆಗೆ ಅವನಿಂದ ಪ್ರತಿಯೊಬ್ಬನಿಗೆ ಅವನವನ
ಕೆಲಸವೂ ಹೊರೆಯೂ ಗೊತ್ತುಮಾಡಲ್ಪಟ್ಟಿತು. ಹೀಗೆ
ಯೆಹೋವನ ಆಜ್ಞೆಯ ಮೇರೆಗೆ ಲೆಕ್ಕವಾಯಿತು.

### ನಾನಾ ನಿಯಮಗಳು. 5. 6.

ಅಪರಿಶುದ್ಧರಾದವರನ್ನು ಪಾಳೆಯದಿಂದ ಹೊರಡಿಸಬೇಕೆಂಬ ವಿಧಿ.

ಯೆಹೋವನು ಮೋಶೆಗೆ ಹೇಳಿದ್ದೇನಂದರೆ—
2 ಎಲ್ಲಾ ಕುಷ್ಠರೋಗಿಗಳನ್ನೂ ಮೇಹಸ್ರಾವವುಳ್ಳವ
ರನ್ನೂ ಹೆಣದ ಸೋಂಕಿನಿಂದ ಅಶುದ್ಧರಾದವರನ್ನೂ
ಪಾಳೆಯದಿಂದ ಹೊರಡಿಸಬೇಕೆಂದು ಇಸ್ರಾಯೇಲ್ಯ
ರಿಗೆ ಆಜ್ಞಾಪಿಸು. ಅಂಥವರು ಗಂಡಸರೇ ಆಗಲಿ ಹೆಂಗ 3
ಸರೇ ಆಗಲಿ ಅವರೆಲ್ಲರನ್ನೂ ಪಾಳೆಯದಿಂದ ಹೊರಡಿಸ
ಬೇಕು. ನಾನೇ ಅವರ ಪಾಳೆಯದಲ್ಲಿ ವಾಸವಾಗಿರು
ವದರಿಂದ ಅವರು ಅದನ್ನು ಅಪವಿತ್ರಮಾಡಬಾರದು.
ಯೆಹೋವನು ಮೋಶೆಗೆ ಆಜ್ಞಾಪಿಸಿದಂತೆಯೇ ಇಸ್ರಾ 4
ಯೇಲ್ಯರು ಮಾಡಿದರು; ಅಂಥವರೆಲ್ಲರನ್ನೂ ಪಾಳೆಯ
ದಿಂದ ಹೊರಡಿಸಿದರು.

ಮೋಸಮಾಡಿ ಪಡೆದದ್ದನ್ನು ಪ್ರಾಯಶ್ಚಿತ್ತದೊಂದಿಗೆ ತಿರಿಗಿ ಕೊಡಬೇಕೆಂಬ ವಿಧಿ.

ಯೆಹೋವನು ಮೋಶೆಗೆ ಹೇಳಿದ್ದೇನಂದರೆ— ನೀನು 5
ಇಸ್ರಾಯೇಲ್ಯರಿಗೆ ಹೀಗೆ ಆಜ್ಞಾಪಿಸು—ಯಾವ 6
ಪುರುಷನಾಗಲಿ ಸ್ತ್ರೀಯಾಗಲಿ ಮತ್ತೊಬ್ಬನನ್ನು ಮೋಸ
ಗೊಳಿಸುವದರಿಂದ ಯೆಹೋವನಿಗೆ ದ್ರೋಹಮಾಡಿ
ಅಪರಾಧಿಗಳಾದರೆ ಅಂಥವರು ತಮ್ಮ ಅಪರಾಧ 7
ವನ್ನು ಅರಿಕೆಮಾಡಬೇಕು. ಅದಲ್ಲದೆ ಅಪರಾಧ
ಮಾಡಿದವನು ನಷ್ಟಪಟ್ಟವನಿಗೆ ಮೂಲದ್ರವ್ಯದ ಬೆಲೆ
ಯೊಡನೆ ಐದನೆಯ ಭಾಗವನ್ನು ಹೆಚ್ಚಾಗಿ ಕೊಡ
ಬೇಕು. ದಂಡವನ್ನು ತೆಗೆದುಕೊಳ್ಳತಕ್ಕವನು [ತೀರಿ 8
ಹೋಗಿ] ಬಾಧ್ಯನೂ ಇಲ್ಲದ ಪಕ್ಷಕ್ಕೆ ಆ ದ್ರವ್ಯವು
ಯೆಹೋವನಿಗೆ ಸೇರಬೇಕು. ಅದು ಮತ್ತು ದೋಷಪರಿ
ಹಾರಕ್ಕಾಗಿ ಸಮರ್ಪಿಸಲ್ಪಡುವ ಪ್ರಾಯಶ್ಚಿತ್ತಯಜ್ಞದ
ಟಗರು ಈ ಎರಡೂ ಯಾಜಕನಿಗೆ ಆಗಬೇಕು.
ಇಸ್ರಾಯೇಲ್ಯರು ಪ್ರತ್ಯೇಕಿಸಿ ಯಾಜಕನಿಗೆ ಒಪ್ಪಿ 9
ಸುವ ದೇವರ ವಸ್ತುಗಳೆಲ್ಲಾ ಯಾಜಕನವುಗಳಾಗಿಯೇ
ಇರಬೇಕು. ಒಬ್ಬನು ಯೆಹೋವನಿಗೆ ಮೀಸಲಾ 10
ಗಿಟ್ಟದ್ದನ್ನು ಯಾವ ಯಾಜಕನಿಗೆ ತಂದು ಒಪ್ಪಿಸು
ತ್ತಾನೋ ಅದು ಅವನದಾಗಿಯೇ ಇರಬೇಕು.

ಮುತ್ತೈದೆಯ ವಿಷಯದಲ್ಲಿ ವ್ಯಭಿಚಾರಸಂಶಯವನ್ನು ಪರಿಹರಿಸುವ ಕ್ರಮ.

ಯೆಹೋವನು ಮೋಶೆಗೆ ಹೇಳಿದ್ದೇನಂದರೆ—ನೀನು 11
ಇಸ್ರಾಯೇಲ್ಯರಿಗೆ ಹೀಗೆ ಆಜ್ಞಾಪಿಸು— ಮುತ್ತೈ 12
ದೆಯು ಸನ್ಮಾರ್ಗವನ್ನು ಬಿಟ್ಟು ದುಷ್ಕಾರ್ಯಮಾಡು
ವಾಗ ಕೈಗೆ ಸಿಕ್ಕದೆಯೂ ಸಾಕ್ಷಿಯಿಲ್ಲದೆಯೂ ರಹಸ್ಯ 13
ವಾಗಿಯೇ ಪರಪುರುಷನೊಡನೆ ಸಂಗಮಿಸಿ ಗಂಡನಿಗೆ
ದ್ರೋಹಿಯಾಗಿ ಅಶುದ್ಧಳಾದ ಸಂದರ್ಭದಲ್ಲೂ ಅವಳು
ಹೀಗೆ ಮಾಡದೆ ಕೆಟ್ಟುಹೋಗದ ಸಂದರ್ಭದಲ್ಲೂ
ಕೆಟ್ಟುಹೋದಳೆಂಬ ಸಂಶಯವು ಗಂಡನಲ್ಲಿ ಹೊಕ್ಕರೆ 14
ಮಾಡಬೇಕಾದದ್ದೇನಂದರೆ—ಆ ಪುರುಷನು ತನ್ನ 15
ಹೆಂಡತಿಯನ್ನು ಯಾಜಕನ ಬಳಿಗೆ ಕರಕೊಂಡು ಬರ
ಬೇಕು. ಮತ್ತು ಅವಳ ಸಂಗತಿಯನ್ನು ವಿಚಾರಿಸು
ವದಕ್ಕಾಗಿ ಅವನು ಯಾಜಕನಿಗೆ ಮೂರು ಸೇರು ಜವೆ
ಗೋದಿಯ ಹಿಟ್ಟನ್ನು ಕಾಣಿಕೆಯಾಗಿ ತಂದುಕೊಡ
ಬೇಕು. ಅದು ವ್ಯಭಿಚಾರಸಂಶಯವನ್ನು ಸೂಚಿಸು
ವದಕ್ಕೂ ಪಾಪವನ್ನು ಹೊರಪಡಿಸುವದಕ್ಕೂ ಯೆಹೋ
ವನಿಗೆ ನೈವೇದ್ಯವಾದ ಕಾಣಿಕೆಯಾದದರಿಂದ ಆ

ಹಿಟ್ಟಿನ ಮೇಲೆ ಎಣ್ಣೆಯನ್ನು ಹೊಯ್ಯಲೂ ಬಾರದು,
16 ಧೂಪವನ್ನು ಇಡಲೂ ಬಾರದು. ಯಾಜಕನು ಅವ
ಳನ್ನು ಕರೆದು ಯೆಹೋವನ ಎದುರಿನಲ್ಲಿ ನಿಲ್ಲಿಸ
17 ಬೇಕು. ಅವನು ಮಣ್ಣಿನ ಪಾತ್ರೆಯಲ್ಲಿ ಪರಿಶುದ್ಧ
ಜಲವನ್ನು ತೆಗೆದುಕೊಂಡು ದೇವದರ್ಶನದ ಗುಡಾರದ
ನೆಲದಿಂದ ಸ್ವಲ್ಪ ಧೂಳನ್ನು ಆ ನೀರಿನಲ್ಲಿ ಹಾಕಬೇಕು.
18 ಅವನು ಆ ಸ್ತ್ರೀಯನ್ನು ಯೆಹೋವನ ಮುಂದೆ
ನಿಲ್ಲಿಸಿ ಅವಳ ತಲೆಯ ಕೂದಲನ್ನು ಕೆದರಿಸಿ ಹಾದರದ
ಸಂಶಯವನ್ನು ಸೂಚಿಸುವ ಆ ನೈವೇದ್ಯದ ಹಿಟ್ಟನ್ನು
ಅವಳ ಕೈಯಲ್ಲಿ ಇಟ್ಟು ಶಾಪವನ್ನುಂಟುಮಾಡುವ
ವಿಷಕರವಾದ ಆ ನೀರನ್ನು ತನ್ನ ಕೈಯಲ್ಲಿ ಹಿಡಿದು
19 ಕೊಳ್ಳಬೇಕು. ಯಾಜಕನು ಅವಳಿಂದ ಶಪಥಪೂರ್ವ
ಕವಾದ ಪ್ರಮಾಣವಾಕ್ಯವನ್ನು ನುಡಿಸುವವನಾಗಿ ಹೀಗ
ನ್ನಬೇಕು—ನೀನು ಪರಪುರುಷನ ಸಂಗಮಾಡದೆ ಗಂಡನ
ಅಧೀನದಲ್ಲಿದ್ದು ಪಾತಿವ್ರತ್ಯವನ್ನು ಬಿಡದೆ ದುಷ್ಕಾ
ರ್ಯವನ್ನು ಮಾಡದೆ ಇರುವವಳಾದರೆ ಶಾಪವನ್ನುಂಟು
ಮಾಡುವ ವಿಷಕರವಾದ ನೀರಿನಿಂದ ನಿನಗೆ ಹಾನಿ
20 ಯಾಗಬಾರದು. ಆದರೆ ನೀನು ಗಂಡನುಳ್ಳವಳಾಗಿ
ಪರಪುರುಷನ ಬಳಿಗೆ ಹೋಗಿ ಕೆಟ್ಟಿದ್ದರೆ ನಿನ್ನ ಗಂಡ
ನಲ್ಲದ ಬೇರೊಬ್ಬನು ನಿನ್ನನ್ನು ಸಂಗಮಿಸಿದ್ದರೆ
21 ಯೆಹೋವನು ನಿನ್ನ ತೊಡೆಗಳು ಕ್ಷೀಣವಾಗಿ
ಹೋಗುವಂತೆಯೂ ಹೊಟ್ಟೆ ಉಬ್ಬುವಂತೆಯೂ ಮಾಡಿ
ನಿನ್ನನ್ನು ನಿನ್ನ ಜನರ ಮಧ್ಯದಲ್ಲಿ ಶಾಪಗ್ರಸ್ತಳನ್ನಾಗಿ
22 ನೇಮಿಸಲಿ. ಶಾಪವನ್ನುಂಟುಮಾಡುವ ಈ ನೀರು
ನಿನ್ನೊಳಗೆ ಸೇರಿ ನಿನ್ನ ಹೊಟ್ಟೆ ಉಬ್ಬುವಂತೆಯೂ
ತೊಡೆಗಳು ಕ್ಷೀಣವಾಗಿ ಹೋಗುವಂತೆಯೂ ಮಾಡು
ವದು ಎಂದು ಹೇಳಬೇಕು. ಅದಕ್ಕೆ ಆ ಸ್ತ್ರೀಯು—
ಆಮೆನ್, ಹಾಗೆಯೇ ಆಗಲಿ ಎಂದು ಹೇಳಬೇಕು.
23 ಆಗ ಯಾಜಕನು ಆ ಶಾಪವಚನಗಳನ್ನು ಪತ್ರದಲ್ಲಿ
24 ಬರೆದು ಆ ವಿಷಕರಜಲದಲ್ಲಿ ಸೇರುವಂತೆ ಒರಸಿ ಶಾಪ
ವನ್ನುಂಟುಮಾಡುವ ಆ ನೀರನ್ನು ಆ ಸ್ತ್ರೀಗೆ ಕುಡಿಸ
ಬೇಕು. ಶಾಪವನ್ನುಂಟುಮಾಡುವ ಆ ನೀರು ಅವ
25 ಳೊಳಗೆ ಸೇರಿ ವಿಷಕರವಾಗುವದು. ಆಗ ಯಾಜ
ಕನು ಸ್ತ್ರೀಯ ಕೈಯಿಂದ ವ್ಯಭಿಚಾರ ಸಂಶಯ ವಿಷಯ
ವಾದ ಆ ಹಿಟ್ಟನ್ನು ತೆಗೆದುಕೊಂಡು ಯೆಹೋವನ
ಮುಂದೆ ನೈವೇದ್ಯವಾಗಿ ನಿವಾಳಿಸಿ ಯಜ್ಞವೇದಿಯ
26 ಹತ್ತಿರ ತರಬೇಕು. ಯಾಜಕನು ನೈವೇದ್ಯವಾದ
ದ್ದನ್ನು ಸೂಚಿಸುವದಕ್ಕಾಗಿ ಆ ಹಿಟ್ಟಿನಲ್ಲಿ ಒಂದು ಹಿಡಿ
ಯನ್ನು ತೆಗೆದುಕೊಂಡು ಯಜ್ಞವೇದಿಯ ಮೇಲೆ
ಹೋಮಮಾಡಬೇಕು. ತರುವಾಯ ಅವನು ಆ
27 ನೀರನ್ನು ಸ್ತ್ರೀಗೆ ಕುಡಿಸಬೇಕು. ಅವಳು ದೋಷಿ
ಯಾಗಿ ಗಂಡನಿಗೆ ದ್ರೋಹಮಾಡಿದವಳಾಗಿದ್ದರೆ ಕುಡಿದ
ನಂತರ ಶಾಪಕರವಾದ ಆ ನೀರು ಅವಳೊಳಗೆ ಸೇರಿ
ವಿಷವಾಗುವದರಿಂದ ಅವಳ ಹೊಟ್ಟೆ ಉಬ್ಬುವದು, ಅವಳ
ತೊಡೆಗಳು ಕ್ಷೀಣವಾಗಿ ಹೋಗುವವು; ಆ ಸ್ತ್ರೀಯು
28 ತನ್ನ ಜನರೊಳಗೆ ಶಾಪಗ್ರಸ್ತಳಾಗುವಳು. ಆದರೆ ಆ
ಸ್ತ್ರೀಯು ದುಷ್ಟಳಾಗಿರದೆ ನಿರಪರಾಧಿಯಾದ ಪಕ್ಷಕ್ಕೆ
ಯಾವ ಹಾನಿಯನ್ನೂ ಅನುಭವಿಸದೆ ಗರ್ಭವತಿಯಾ
ಗುವಳು.
29 ಇದೇ ವ್ಯಭಿಚಾರಸಂಶಯವನ್ನು ಪರಿಹರಿಸುವ

ವಿಧಿ. ಹೆಂಡತಿಯಾದವಳು ಗಂಡನ ಸ್ವಾಧೀನದ
ದ್ದರೂ ಪಾತಿವ್ರತ್ಯವನ್ನು ಬಿಟ್ಟು ಜಾರತ್ವಮಾಡಿ
ವಾಗಲೂ ಗಂಡನು ಹೆಂಡತಿಯ ವಿಷಯದಲ್ಲಿ ಸಂಶ
ಪಡುವಾಗಲೂ ಅವನು ಅವಳನ್ನು ಯೆಹೋವ
ಮುಂದೆ ನಿಲ್ಲಿಸಬೇಕು; ಯಾಜಕನು ಅವಳ ವಿಷ
ದಲ್ಲಿ ಈ ನಿಯಮದ ಪ್ರಕಾರ ಮಾಡಬೇಕು.
ಪುರುಷನು ನಿರಪರಾಧಿಯಾಗುವನು; ಆ ಸ್ತ್ರೀಯ
ತನ್ನ ಪಾಪದ ಫಲವನ್ನು ಅನುಭವಿಸಬೇಕು.

ನಾಜೀರವ್ರತ.

ಯೆಹೋವನು ಮೋಶೆಗೆ ಹೇಳಿದ್ದೇನಂದರೆ — ನೀನ
ಇಸ್ರಾಯೇಲ್ಯರಿಗೆ ಹೀಗೆ ಆಜ್ಞಾಪಿಸು—ಯಾವ
ಪುರುಷನಾಗಲಿ ಸ್ತ್ರೀಯಾಗಲಿ ನಾಜೀರರ ಹರಕೆಯನ
ಅಂದರೆ ಯೆಹೋವನಿಗೆ ತನ್ನನ್ನು ಪ್ರತಿಷ್ಠಿಸಿಕೊಳ್ಳು
ವಿಶೇಷವಾದ ಹರಕೆಯನ್ನು ಮಾಡಿದಾಗ ದ್ರಾಕ
ರಸವನ್ನೂ ಮದ್ಯವನ್ನೂ ಮುಟ್ಟಬಾರದು; ದ್ರಾಕ್ಷಾರ
ದ ಹುಳಿಯನ್ನಾಗಲಿ ಬೇರೆ ಮದ್ಯದ ಹುಳಿಯನ್ನಾಗ
ಕುಡಿಯಬಾರದು; ದ್ರಾಕ್ಷೇ ಹಣ್ಣಿನಿಂದ ಮಾಡಿ
ಯಾವ ಪಾನವನ್ನೂ ಕುಡಿಯಬಾರದು; ಹಸಿದಾಗ
ಒಣಗಿದ್ದಾಗಲಿ ದ್ರಾಕ್ಷೇ ಹಣ್ಣನ್ನೂ ತಿನ್ನಬಾರದು
ಅವನು ಹರಕೆಮಾಡಿ ಪ್ರತಿಷ್ಠಿಸಿಕೊಂಡ ದಿನಗಳೆಲ
ದ್ರಾಕ್ಷಾಲತೆಯಿಂದ ಉತ್ಪನ್ನವಾದ ಬೀಜನ್ನಾದರ
ತೃಣವನ್ನಾದರೂ ತಿನ್ನಬಾರದು. ಅವನು ತನ್ನ ಹ
ಕೆಯ ದಿನಗಳಲ್ಲೆಲ್ಲಾ ಕ್ಷೌರಮಾಡಿಸಿಕೊಳ್ಳಬಾರದ
ಅವನು ತನ್ನನ್ನು ಯೆಹೋವನಿಗೆ ಪ್ರತಿಷ್ಠಿಸಿಕೊಂ
ದಿನಗಳು ಮುಗಿಯುವ ತನಕ ತಾನು ಮೀಸಲಾಗಿದ
ತನ್ನ ತಲೆಯ ಕೂದಲನ್ನು ಕತ್ತರಿಸದೆ ಬಿಡಬೇಕ
ತನ್ನನ್ನು ಯೆಹೋವನಿಗೆ ಪ್ರತಿಷ್ಠಿಸಿಕೊಂಡ ದಿ
ಗಳೆಲ್ಲಾ ಯಾವ ಶವವನ್ನೂ ಮುಟ್ಟಬಾರದ
ತಾಯಿ, ತಂದೆ, ಅಣ್ಣ, ತಮ್ಮ, ಅಕ್ಕ, ತಂಗಿ ಇವರ
ಯಾರು ಸತ್ತರೂ ಅವರ ನಿಮಿತ್ತ ಅವನು ತನ್ನನ್ನು ಅ
ವಿತ್ರಮಾಡಿಕೊಳ್ಳಬಾರದು; ತಾನು ದೇವರಿಗೆ ಮೀ
ಲಾಗಿ ಬಿಟ್ಟ ಕೂದಲು ತಲೆಯ ಮೇಲೆ ಇದೆಯಲ್ಲಾ
ತಾನು ಪ್ರತಿಷ್ಠಿಸಿಕೊಂಡಿರುವ ದಿನಗಳಲ್ಲೆಲ್ಲಾ ಅವ
ಯೆಹೋವನಿಗೆ ಮೀಸಲಾಗಿಯೇ ಇರಬೇಕು.
ಯಾವನಾದರೂ ಅಕಸ್ಮಾತ್ತಾಗಿ ಅವನ ಬ
ಯಲ್ಲೇ ಸತ್ತದರಿಂದ ತಾನು ಪ್ರತಿಷ್ಠಿಸಿಕೊಂಡ ತ
ಕೂದಲು ಅಪವಿತ್ರವಾದರೆ ಏಳನೆಯ ದಿನದಲ್ಲಿ ಅಂದ
ಶುದ್ಧನಾಗುವ ದಿನದಲ್ಲಿ ತಲೆಯನ್ನು ಕ್ಷೌರಮಾಡಿ
ಕೊಳ್ಳಬೇಕು. ಎಂಟನೆಯ ದಿನದಲ್ಲಿ ಅವನು ಎರ
ಬೆಳವಕ್ಕಿಗಳನ್ನಾಗಲಿ ಎರಡು ಪಾರಿವಾಳದ ಮರಿಗ
ನ್ನಾಗಲಿ ದೇವದರ್ಶನದ ಗುಡಾರದ ಬಾಗಲ
ಯಾಜಕನ ಬಳಿಗೆ ತರಬೇಕು. ಯಾಜಕನು ದೋ
ಪರಿಹಾರಯಜ್ಞವಾಗಿ ಒಂದನ್ನೂ ಸರ್ವಾಂಗಹೋ
ವಾಗಿ ಇನ್ನೊಂದನ್ನೂ ಸಮರ್ಪಿಸಿ ಶವಸೋಂಕಿದ
ನಿಗೋಸ್ಕರ ದೋಷಪರಿಹಾರಮಾಡಿ ಅವನ ತಲೆ
ಕೂದಲನ್ನು ಆ ದಿನದಿಂದ ಪವಿತ್ರವೆಂದು ನಿರ್ಣಯಿ
ಬೇಕು. ಅವನು ಎಷ್ಟು ದಿನಗಳ ವರೆಗೆ ತನ್ನನ
ಪ್ರತಿಷ್ಠಿಸಿಕೊಂಡಿದ್ದನೋ ಅಷ್ಟು ದಿನಗಳ ವ

ಹೊಸದಾಗಿ ತನ್ನನ್ನು ಯೆಹೋವನಿಗೆ ಪ್ರತಿಷ್ಠಿಸಿಕೊಳ್ಳಬೇಕು; ಮತ್ತು ಪ್ರಾಯಶ್ಚಿತ್ತಯಜ್ಞವಾಗಿ ಒಂದು ವರುಷದ ಕುರಿಯನ್ನು ಸಮರ್ಪಿಸಬೇಕು. ಮೊದಲು ಮಾಡಿದ್ದ ಹರಕೆಗೆ ವಿಘ್ನಪ್ರಾಪ್ತವಾದದರಿಂದ ಕಳೆದುಹೋದ ದಿನಗಳು ವ್ಯರ್ಥವಾದವು.

ನಾಜೀರನು ತನ್ನ ವ್ರತದಿನಗಳು ಮುಗಿದಾಗ ನಡೆಯಬೇಕಾದ ಕ್ರಮ. ಅವನು ದೇವದರ್ಶನದ ಗುಡಾರದ ಬಾಗಲಿಗೆ ಬಂದು ಯೆಹೋವನಿಗೆ ಸಮರ್ಪಿಸಬೇಕಾದ ಕಾಣಿಕೆಗಳು ಯಾವವಂದರೆ—ಸರ್ವಾಂಗಹೋಮಕ್ಕಾಗಿ ಪೂರ್ಣಾಂಗವಾದ ಒಂದು ವರುಷದ ಟಗರು, ದೋಷಪರಿಹಾರಕಯಜ್ಞಕ್ಕಾಗಿ ಪೂರ್ಣಾಂಗವಾದ ಒಂದು ವರುಷದ ಕುರಿ, ಸಮಾಧಾನಯಜ್ಞಕ್ಕಾಗಿ ಪೂರ್ಣಾಂಗವಾದ ಟಗರು ಇವೇ. ಅದಲ್ಲದೆ ಒಂದು ಪುಟ್ಟಿತುಂಬಾ ಎಣ್ಣೆ ಬೆರಸಿದ ಗೋದಿಹಿಟ್ಟಿನ ಹುಳಿಯಿಲ್ಲದ ರೊಟ್ಟಿಗಳು, ಎಣ್ಣೆ ಹಾಕಿದ ಹುಳಿಯಿಲ್ಲದ ಕಡುಬುಗಳು ಇವುಗಳನ್ನೂ ಮೇಲೆ ಕಂಡ ಯಜ್ಞಗಳೊಡನೆ ಕೊಡಬೇಕಾದ ಧಾನ್ಯದ್ರವ್ಯಪಾನದ್ರವ್ಯಗಳನ್ನೂ ಸಮರ್ಪಿಸಬೇಕು. ಯಾಜಕನು ಇವುಗಳನ್ನು ಯೆಹೋವನ ಸನ್ನಿಧಿಗೆ ತಂದು ನಾಜೀರನ ದೋಷಪರಿಹಾರಕಯಜ್ಞವನ್ನೂ ಸರ್ವಾಂಗಹೋಮವನ್ನೂ ಸಮರ್ಪಿಸಿದನಂತರ ಆ ಟಗರನ್ನೂ ಪುಟ್ಟಿತುಂಬಾ ಹುಳಿಯಿಲ್ಲದ ರೊಟ್ಟಿಗಳನ್ನೂ ಯೆಹೋವನಿಗೆ ಸಮಾಧಾನಯಜ್ಞವಾಗಿ ಸಮರ್ಪಿಸಬೇಕು. ಅವನು ತಂದ ಧಾನ್ಯದ್ರವ್ಯಪಾನದ್ರವ್ಯಗಳನ್ನೂ ನೈವೇದ್ಯಮಾಡಬೇಕು. ಆಗ ನಾಜೀರನು ತನ್ನ ದೀಕ್ಷೆಯನ್ನು ಸೂಚಿಸುವ ತಲೆಯ ಕೂದಲನ್ನು ದೇವದರ್ಶನದ ಗುಡಾರದ ಬಾಗಲಿನ ಬಳಿಯಲ್ಲಿ ಕ್ಷೌರಮಾಡಿಸಿಕೊಂಡು ಆ ಕೂದಲನ್ನು ಸಮಾಧಾನಯಜ್ಞದ್ರವ್ಯಗಳ ಕೆಳಗಿರುವ ಬೆಂಕಿಯಲ್ಲಿ ಹಾಕಬೇಕು. ತರುವಾಯ ಯಾಜಕನು ಆ ಟಗರಿನ ಬೆಂದ ಮುಂದೊಡೆಯನ್ನೂ ಪುಟ್ಟಿಯಲ್ಲಿನ ಒಂದು ಹುಳಿಯಿಲ್ಲದ ರೊಟ್ಟಿಯನ್ನೂ ಒಂದು ಹುಳಿಯಿಲ್ಲದ ಕಡುಬನ್ನೂ ತೆಗೆದುಕೊಂಡು ನಾಜೀರನು ಕ್ಷೌರಮಾಡಿಸಿಕೊಂಡನಂತರ ಅವನ ಕೈಯಲ್ಲಿ ಇಟ್ಟು ನೈವೇದ್ಯವಾಗಿ ಯೆಹೋವನ ಸನ್ನಿಧಿಯಲ್ಲಿ ನಿವಾಳಿಸಬೇಕು. ಇದು ನೈವೇದ್ಯವಾಗಿ ನಿವಾಳಿಸುವ ಎದೆಯ ಭಾಗದಂತೆಯೂ ಯಾಜಕರಿಗೋಸ್ಕರ ಪ್ರತ್ಯೇಕಿಸುವ ತೊಡೆಯಂತೆಯೂ ಯಾಜಕನಿಗೆ ಸಲ್ಲಬೇಕು. ಅನಂತರ ಆ ನಾಜೀರನು ದ್ರಾಕ್ಷಾರಸವನ್ನು ಪಾನಮಾಡಬಹುದು.

ಇದೇ ನಾಜೀರರ ವ್ರತವಿಧಿ. ಅವರು ತಮ್ಮ ವ್ರತಪೂರ್ತಿಗಾಗಿ ಯೆಹೋವನಿಗೆ ಸಮರ್ಪಿಸಬೇಕಾದ ಕಾಣಿಕೆ ಇದೇ. ಅವರು ತಮ್ಮ ಶಕ್ತ್ಯನುಸಾರ ಹೆಚ್ಚಾಗಿಯೂ ಕೊಡಬಹುದು; ಆದರೆ ತಾವು ಕೊಡುತ್ತೇವೆಂದು ಹರಕೆಮಾಡಿದಷ್ಟು ಪ್ರತವಿಧಿಗನುಸಾರವಾಗಿ ಕೊಡಬೇಕು.

ಯಾಜಕರು ಹೇಳಬೇಕಾದ ಆಶೀರ್ವಚನವು.

ಯೆಹೋವನು ಮೋಶೆಗೆ ಹೇಳಿದ್ದೇನಂದರೆ—ನೀನು ಆರೋನನಿಗೂ ಅವನ ಮಕ್ಕಳಿಗೂ ಹೀಗೆ ಆಜ್ಞಾಪಿಸು—ನೀವು ಇಸ್ರಾಯೇಲ್ಯರನ್ನು ಆಶೀರ್ವದಿಸುವಾಗ ಈ ಪ್ರಕಾರ ಅವರಿಗೆ ಹೇಳಬೇಕು—

24 ಯೆಹೋವನು ನಿಮ್ಮನ್ನು ಆಶೀರ್ವದಿಸಿ ಕಾಪಾಡಲಿ;
25 ಯೆಹೋವನು ಪ್ರಸನ್ನಮುಖದಿಂದ ನಿಮ್ಮನ್ನು ನೋಡಿ ನಿಮ್ಮ ಮೇಲೆ ದಯವಿಡಲಿ;
26 ಯೆಹೋವನು ನಿಮ್ಮ ಮೇಲೆ ಕೃಪಾಕಟಾಕ್ಷವಿಟ್ಟು ಶಾಂತಿಯನ್ನು ಅನುಗ್ರಹಿಸಲಿ

ಎಂಬದೇ. ಹೀಗೆ ಅವರು ಇಸ್ರಾಯೇಲ್ಯರ ಮೇಲೆ 27
ನನ್ನ ಹೆಸರನ್ನು ಉಚ್ಚರಿಸಲಾಗಿ ನಾನು ಅವರನ್ನು
ಆಶೀರ್ವದಿಸುವೆನು.

ದೇವದರ್ಶನದ ಗುಡಾರದ ಮತ್ತು ಲೇವಿಯರ ಪ್ರತಿಷ್ಠೆ.
7. 8.

ಕುಲಾಧಿಪತಿಗಳು ದೇವದರ್ಶನದ ಗುಡಾರದ ಸೇವೆಗೆ ಕೊಟ್ಟ ಕಾಣಿಕೆಯ ವಿವರ.

7 ಮೋಶೆ ದೇವದರ್ಶನದ ಗುಡಾರವನ್ನು ಎತ್ತಿ
ನಿಲ್ಲಿಸಿ ಅದನ್ನೂ ಅದರ ಸಾಮಾನುಗಳನ್ನೂ ಯಜ್ಞ
ವೇದಿಯನ್ನೂ ವೇದಿಯ ಉಪಕರಣಗಳನ್ನೂ ಅಭಿ
ಷೇಕಿಸಿ ಪ್ರತಿಷ್ಠಿಸಿದಾಗ ಇಸ್ರಾಯೇಲ್ಯರ ಪ್ರಧಾನ 2
ಪುರುಷರು ಅಂದರೆ ಗೋತ್ರಪ್ರಮುಖರಾಗಿದ್ದು ಕುಲಾ
ಧಿಪತಿಗಳಾಗಿಯೂ ಲೆಕ್ಕಿಸಲ್ಪಟ್ಟ ಭಟರ ಮೇಲೆ
ನಾಯಕರಾಗಿಯೂ ಇದ್ದವರು ಕಾಣಿಕೆಗಳನ್ನು 3
ತಂದು ಸಮರ್ಪಿಸಿದರು. ಇಬ್ಬರಿಬ್ಬರು ಒಂದು
ಕಮಾನುಬಂಡಿಯನ್ನೂ ಒಂದು ಜೋಡಿ ಎತ್ತುಗಳ
ನ್ನೂ ಅಂತು ಆರು ಬಂಡಿಗಳನ್ನೂ ಆರು ಜೋಡಿ
ಎತ್ತುಗಳನ್ನೂ ದೇವದರ್ಶನದ ಗುಡಾರದ ಮುಂದೆ
ಯೆಹೋವನ ಸನ್ನಿಧಿಗೆ ತಂದು ಒಪ್ಪಿಸಿದರು.
ಯೆಹೋವನು ಮೋಶೆಗೆ—ನೀನು ಇವರ ಕೈ 4. 5
ಯಿಂದ ಈ ಕಾಣಿಕೆಯ ವಸ್ತುಗಳನ್ನು ತೆಗೆದುಕೋ;
ಇವು ದೇವದರ್ಶನದ ಗುಡಾರದ ಸೇವೆಗೋಸ್ಕರ
ವಾಗಿರಲಿ; ಇವುಗಳನ್ನು ಲೇವಿಯರಿಗೆ ಅವರವರ
ಕೆಲಸಕ್ಕೆ ತಕ್ಕ ಹಾಗೆ ಕೊಡಬೇಕು ಎಂದು ಆಜ್ಞಾ
ಪಿಸಲಾಗಿ ಮೋಶೆ ಆ ಬಂಡಿಗಳನ್ನೂ ಎತ್ತುಗಳನ್ನೂ 6
ತೆಗೆದುಕೊಂಡು ಲೇವಿಯರಿಗೆ ಕೊಟ್ಟನು. ಅವನು 7
ಗೇರ್ಷೋನ್ಯರಿಗೆ ಅವರು ಮಾಡಬೇಕಾದ ಕೆಲಸಕ್ಕೆ
ತಕ್ಕ ಹಾಗೆ ಎರಡು ಬಂಡಿ ಎರಡು ಜೋಡಿ ಎತ್ತು
ಗಳನ್ನೂ ಮೆರಾರೀಯರಿಗೋಸ್ಕರ ಅವರ ಕೆಲಸಕ್ಕೆ 8
ತಕ್ಕ ಹಾಗೆ ನಾಲ್ಕು ಬಂಡಿ ನಾಲ್ಕು ಜೋಡಿ ಎತ್ತು
ಗಳನ್ನೂ ಮಹಾಯಾಜಕನಾದ ಆರೋನನ ಮಗ
ಈತಾಮಾರನ ಕೈಗೆ ಒಪ್ಪಿಸಿದನು. ಕೆಹಾತ್ಯರಿಗೆ 9
ಮಾತ್ರ ಏನೂ ಕೊಡಲಿಲ್ಲ; ದೇವದರ್ಶನದ ಗುಡಾ
ರದ ಸಾಮಾನುಗಳನ್ನು ವಹಿಸುವದೇ ಅವರಿಗೆ
ನೇಮಕವಾದ ಕೆಲಸ; ಅವರು ಅವುಗಳನ್ನು ಹೆಗಲಿನ
ಮೇಲೆ ಹೊರುತ್ತಿದ್ದರು.
ಯಜ್ಞವೇದಿಯು ಅಭಿಷೇಕಿಸಲ್ಪಟ್ಟ ದಿನದಲ್ಲಿ 10
ಕುಲಾಧಿಪತಿಗಳು ಅದರ ಪ್ರತಿಷ್ಠೆಗಾಗಿ ಕಾಣಿಕೆ
ಗಳನ್ನು ತಂದು ಅದರ ಮುಂದೆ ಇಟ್ಟರು. ಆಗ 11
ಯೆಹೋವನು ಮೋಶೆಗೆ—ಒಬ್ಬೊಬ್ಬ ಕುಲಾಧಿಪತಿ

ಒಂದೊಂದು ದಿನದಲ್ಲಿ ಯಜ್ಞವೇದಿಯ ಪ್ರತಿಷ್ಠೆಗಾಗಿ
ತನ್ನ ಕಾಣಿಕೆಯನ್ನು ಸಮರ್ಪಿಸಬೇಕೆಂದು ಆಜ್ಞಾ
ಪಿಸಿದನು.
12 ಮೊದಲನೆಯ ದಿನದಲ್ಲಿ ಕಾಣಿಕೆತಂದವನು ಯೆಹೂ
ದ ಕುಲಾಧಿಪತಿ ಅಮ್ಮೀನಾದಾಬನ ಮಗನಾದ ನಹ
13 ಶೋನನು. ಅವನ ಕಾಣಿಕೆ ಯಾವದಂದರೆ— ದೇವರ
ಸೇವೆಗೆ ನೇಮಕವಾದ ರೂಪಾಯಿಯ ತೂಕದ
ಮೇರೆಗೆ ನೂರ ಮೂವತ್ತು ರೂಪಾಯಿ ತೂಕದ
ಬೆಳ್ಳಿಯ ಹರಿವಾಣವು; ಎಪ್ಪತ್ತು ತೊಲೆ ತೂಕವುಳ್ಳ
ಬೆಳ್ಳಿಯ ಬಟ್ಟಲು; ಈ ಎರಡರಲ್ಲಿಯೂ ನೈವೇದ್ಯ
ಕ್ಕಾಗಿ ಎಣ್ಣೆ ಬೆರಸಿದ ಗೋದಿಯ ಹಿಟ್ಟು ತುಂಬಿತ್ತು;
14 ಧೂಪದ್ರವ್ಯತುಂಬಿದ್ದ ಹತ್ತು ತೊಲೆ ತೂಕವುಳ್ಳ
15 ಚಿನ್ನದ ಧೂಪಾರತಿ; ಸರ್ವಾಂಗಹೋಮಕ್ಕಾಗಿ ಒಂದು
ಹೋರಿ, ಒಂದು ಟಗರು, ಒಂದು ವರುಷದ ಕುರಿ;
16 ದೋಷಪರಿಹಾರಕಯಜ್ಞಕ್ಕಾಗಿ ಒಂದು ಹೋತ;
17 ಸಮಾಧಾನಯಜ್ಞಕ್ಕಾಗಿ ಎರಡು ಹೋರಿಗಳು, ಐದು
ಟಗರುಗಳು, ಐದು ಹೋತಗಳು, ವರುಷದ ಐದು
ಕುರಿಗಳು ಇವುಗಳೇ. ಇದೇ ಅಮ್ಮೀನಾದಾಬನ
ಮಗನಾದ ನಹಶೋನನು ಕೊಟ್ಟ ಕಾಣಿಕೆ.
18 ಎರಡನೆಯ ದಿನದಲ್ಲಿ ಇಸ್ಸಾಕಾರ್ ಕುಲಾಧಿಪತಿ
ಚೂವಾರನ ಮಗನಾದ ನೆತನೇಲನು ಕಾಣಿಕೆಯನ್ನು
19 ಸಮರ್ಪಿಸಿದನು. ಅವನ ಕಾಣಿಕೆ ಯಾವದಂದರೆ—
ದೇವರ ಸೇವೆಗೆ ನೇಮಕವಾದ ರೂಪಾಯಿಯ
ತೂಕದ ಮೇರೆಗೆ ನೂರ ಮೂವತ್ತು ರೂಪಾಯಿ ತೂಕ
ದ ಬೆಳ್ಳಿಯ ಹರಿವಾಣವು; ಎಪ್ಪತ್ತು ತೊಲೆ ತೂಕವುಳ್ಳ
ಬೆಳ್ಳಿಯ ಬಟ್ಟಲು; ಈ ಎರಡರಲ್ಲಿಯೂ ನೈವೇದ್ಯ
ಕ್ಕಾಗಿ ಎಣ್ಣೆ ಬೆರಸಿದ ಗೋದಿಯ ಹಿಟ್ಟು ತುಂಬಿತ್ತು;
20 ಧೂಪದ್ರವ್ಯತುಂಬಿದ್ದ ಹತ್ತು ತೊಲೆ ತೂಕವುಳ್ಳ ಚಿನ್ನ
21 ದ ಧೂಪಾರತಿ; ಸರ್ವಾಂಗಹೋಮಕ್ಕಾಗಿ ಒಂದು
ಹೋರಿ, ಒಂದು ಟಗರು, ಒಂದು ವರುಷದ ಕುರಿ;
22 ದೋಷಪರಿಹಾರಕಯಜ್ಞಕ್ಕಾಗಿ ಒಂದು ಹೋತ;
23 ಸಮಾಧಾನಯಜ್ಞಕ್ಕಾಗಿ ಎರಡು ಹೋರಿಗಳು, ಐದು
ಟಗರುಗಳು, ಐದು ಹೋತಗಳು, ವರುಷದ ಐದು
ಕುರಿಗಳು ಇವುಗಳೇ. ಇದೇ ಚೂವಾರನ ಮಗ
ನಾದ ನೆತನೇಲನು ಕೊಟ್ಟ ಕಾಣಿಕೆ.
24 ಮೂರನೆಯ ದಿನದಲ್ಲಿ ಜೆಬುಲೂನ್ ಕುಲಾಧಿಪತಿ
ಹೇಲೋನನ ಮಗನಾದ ಎಲೀಯಾಬನು ಕಾಣಿಕೆ
25 ಯನ್ನು ಸಮರ್ಪಿಸಿದನು. ಅವನ ಕಾಣಿಕೆ ಯಾವ
ದಂದರೆ—ದೇವರ ಸೇವೆಗೆ ನೇಮಕವಾದ ರೂಪಾಯಿ
ಯ ತೂಕದ ಮೇರೆಗೆ ನೂರ ಮೂವತ್ತು ರೂಪಾಯಿ
ತೂಕದ ಬೆಳ್ಳಿಯ ಹರಿವಾಣವು; ಎಪ್ಪತ್ತು ತೊಲೆ
ತೂಕವುಳ್ಳ ಬೆಳ್ಳಿಯ ಬಟ್ಟಲು; ಈ ಎರಡರಲ್ಲಿಯೂ
ನೈವೇದ್ಯಕ್ಕಾಗಿ ಎಣ್ಣೆ ಬೆರಸಿದ ಗೋದಿಯ ಹಿಟ್ಟು
26 ತುಂಬಿತ್ತು; ಧೂಪದ್ರವ್ಯತುಂಬಿದ್ದ ಹತ್ತು ತೊಲೆ
27 ತೂಕವುಳ್ಳ ಚಿನ್ನದ ಧೂಪಾರತಿ; ಸರ್ವಾಂಗಹೋಮ
ಕ್ಕಾಗಿ ಒಂದು ಹೋರಿ, ಒಂದು ಟಗರು, ಒಂದು
28 ವರುಷದ ಕುರಿ; ದೋಷಪರಿಹಾರಕಯಜ್ಞಕ್ಕಾಗಿ
29 ಒಂದು ಹೋತ; ಸಮಾಧಾನಯಜ್ಞಕ್ಕಾಗಿ ಎರಡು
ಹೋರಿಗಳು, ಐದು ಟಗರುಗಳು, ಐದು ಹೋತ
ಗಳು, ವರುಷದ ಐದು ಕುರಿಗಳು ಇವುಗಳೇ. ಇದೇ
ಹೇಲೋನನ ಮಗನಾದ ಎಲೀಯಾಬನು ಕೊಟ್ಟ
ಕಾಣಿಕೆ.

ನಾಲ್ಕನೆಯ ದಿನದಲ್ಲಿ ರೂಬೇನ್ ಕುಲಾಧಿಪತಿ
ಶೆದೇಯೂರನ ಮಗನಾದ ಎಲೀಚೂರನು ಕಾಣಿಕೆ
ಯನ್ನು ಸಮರ್ಪಿಸಿದನು. ಅವನ ಕಾಣಿಕೆ ಯಾವ
ದಂದರೆ—ದೇವರ ಸೇವೆಗೆ ನೇಮಕವಾದ ರೂಪಾ
ಯಿಯ ತೂಕದ ಮೇರೆಗೆ ನೂರ ಮೂವತ್ತು
ರೂಪಾಯಿ ತೂಕದ ಬೆಳ್ಳಿಯ ಹರಿವಾಣವು; ಎಪ್ಪತ್ತು
ತೊಲೆ ತೂಕವುಳ್ಳ ಬೆಳ್ಳಿಯ ಬಟ್ಟಲು; ಈ ಎರಡರಲ್ಲಿ
ಯೂ ನೈವೇದ್ಯಕ್ಕಾಗಿ ಎಣ್ಣೆ ಬೆರಸಿದ ಗೋದಿಯ
ಹಿಟ್ಟು ತುಂಬಿತ್ತು; ಧೂಪದ್ರವ್ಯತುಂಬಿದ್ದ ಹತ್ತು
ತೊಲೆ ತೂಕವುಳ್ಳ ಚಿನ್ನದ ಧೂಪಾರತಿ; ಸರ್ವಾಂಗ
ಹೋಮಕ್ಕಾಗಿ ಒಂದು ಹೋರಿ, ಒಂದು ಟಗರು,
ಒಂದು ವರುಷದ ಕುರಿ; ದೋಷಪರಿಹಾರಕಯಜ್ಞ
ಕ್ಕಾಗಿ ಒಂದು ಹೋತ; ಸಮಾಧಾನಯಜ್ಞಕ್ಕಾಗಿ
ಎರಡು ಹೋರಿಗಳು, ಐದು ಟಗರುಗಳು, ಐದು
ಹೋತಗಳು, ವರುಷದ ಐದು ಕುರಿಗಳು ಇವುಗಳೇ.
ಇದೇ ಶೆದೇಯೂರನ ಮಗನಾದ ಎಲೀಚೂರನು
ಕೊಟ್ಟ ಕಾಣಿಕೆ.

ಐದನೆಯ ದಿನದಲ್ಲಿ ಸಿಮೆಯೋನ್ ಕುಲಾಧಿಪತಿ
ಚೂರೀಷದ್ದೈಯ ಮಗನಾದ ಶೆಲುಮೀಯೇಲನು
ಕಾಣಿಕೆಯನ್ನು ಸಮರ್ಪಿಸಿದನು. ಅವನ ಕಾಣಿಕೆ
ಯಾವದಂದರೆ— ದೇವರ ಸೇವೆಗೆ ನೇಮಕವಾದ
ರೂಪಾಯಿಯ ತೂಕದ ಮೇರೆಗೆ ನೂರ ಮೂವತ್ತು
ರೂಪಾಯಿ ತೂಕದ ಬೆಳ್ಳಿಯ ಹರಿವಾಣವು; ಎಪ್ಪತ್ತು
ತೊಲೆ ತೂಕವುಳ್ಳ ಬೆಳ್ಳಿಯ ಬಟ್ಟಲು; ಈ ಎರಡ
ರಲ್ಲಿಯೂ ನೈವೇದ್ಯಕ್ಕಾಗಿ ಎಣ್ಣೆ ಬೆರಸಿದ ಗೋದಿಯ
ಹಿಟ್ಟು ತುಂಬಿತ್ತು; ಧೂಪದ್ರವ್ಯತುಂಬಿದ್ದ ಹತ್ತು
ತೊಲೆ ತೂಕವುಳ್ಳ ಚಿನ್ನದ ಧೂಪಾರತಿ; ಸರ್ವಾಂಗ
ಹೋಮಕ್ಕಾಗಿ ಒಂದು ಹೋರಿ, ಒಂದು ಟಗರು,
ಒಂದು ವರುಷದ ಕುರಿ; ದೋಷಪರಿಹಾರಕಯಜ್ಞ
ಕ್ಕಾಗಿ ಒಂದು ಹೋತ; ಸಮಾಧಾನಯಜ್ಞಕ್ಕಾಗಿ
ಎರಡು ಹೋರಿಗಳು, ಐದು ಟಗರುಗಳು, ಐದು
ಹೋತಗಳು, ವರುಷದ ಐದು ಕುರಿಗಳು ಇವುಗಳೇ.
ಇದೇ ಚೂರೀಷದ್ದೈಯ ಮಗನಾದ ಶೆಲುಮೀ
ಯೇಲನು ಕೊಟ್ಟ ಕಾಣಿಕೆ.

ಆರನೆಯ ದಿನದಲ್ಲಿ ಗಾದ್ ಕುಲಾಧಿಪತಿ ದೆಗೂ
ವೇಲನ ಮಗನಾದ ಎಲ್ಯಾಸಾಫನು ಕಾಣಿಕೆಯನ್ನು
ಸಮರ್ಪಿಸಿದನು. ಅವನ ಕಾಣಿಕೆ ಯಾವದಂದರೆ—
ದೇವರ ಸೇವೆಗೆ ನೇಮಕವಾದ ರೂಪಾಯಿಯ
ತೂಕದ ಮೇರೆಗೆ ನೂರ ಮೂವತ್ತು ರೂಪಾಯಿ
ತೂಕದ ಬೆಳ್ಳಿಯ ಹರಿವಾಣವು; ಎಪ್ಪತ್ತು ತೊಲೆ
ತೂಕವುಳ್ಳ ಬೆಳ್ಳಿಯ ಬಟ್ಟಲು; ಈ ಎರಡರಲ್ಲಿಯೂ
ನೈವೇದ್ಯಕ್ಕಾಗಿ ಎಣ್ಣೆ ಬೆರಸಿದ ಗೋದಿಯ ಹಿಟ್ಟು
ತುಂಬಿತ್ತು; ಧೂಪದ್ರವ್ಯತುಂಬಿದ್ದ ಹತ್ತು ತೊಲೆ ತೂಕ
ವುಳ್ಳ ಚಿನ್ನದ ಧೂಪಾರತಿ; ಸರ್ವಾಂಗಹೋಮಕ್ಕಾಗಿ
ಒಂದು ಹೋರಿ, ಒಂದು ಟಗರು, ಒಂದು ವರುಷದ
ಕುರಿ; ದೋಷಪರಿಹಾರಕಯಜ್ಞಕ್ಕಾಗಿ ಒಂದು ಹೋತ;
ಸಮಾಧಾನಯಜ್ಞಕ್ಕಾಗಿ ಎರಡು ಹೋರಿಗಳು, ಐದು
ಟಗರುಗಳು, ಐದು ಹೋತಗಳು, ವರುಷದ ಐದು

ಕುರಿಗಳು ಇವುಗಳೇ. ಇದೇ ದೆಗೂವೇಲನ ಮಗ
ನಾದ ಎಲ್ಯಾಸಾಫನು ಕೊಟ್ಟ ಕಾಣಿಕೆ.
ಏಳನೆಯ ದಿನದಲ್ಲಿ ಎಫ್ರಾಯಿಮ್ ಕುಲಾಧಿಪತಿ
ಅಮ್ಮೀಹೂದನ ಮಗನಾದ ಎಲೀಷಾಮನು ಕಾಣಿಕೆ
ಯನ್ನು ಸಮರ್ಪಿಸಿದನು. ಅವನ ಕಾಣಿಕೆ ಯಾವ
ದಂದರೆ—ದೇವರ ಸೇವೆಗೆ ನೇಮಕವಾದ ರೂಪಾ
ಯಿಯ ತೂಕದ ಮೇರೆಗೆ ನೂರ ಮೂವತ್ತು
ರೂಪಾಯಿ ತೂಕದ ಬೆಳ್ಳಿಯ ಹರಿವಾಣವು; ಎಪ್ಪತ್ತು
ತೊಲೆ ತೂಕವುಳ್ಳ ಬೆಳ್ಳಿಯ ಬಟ್ಟಲು; ಈ ಎರಡ
ರಲ್ಲಿಯೂ ನೈವೇದ್ಯಕ್ಕಾಗಿ ಎಣ್ಣೆ ಬೆರಸಿದ ಗೋದಿಯ
ಹಿಟ್ಟು ತುಂಬಿತ್ತು; ಧೂಪದ್ರವ್ಯತುಂಬಿದ್ದ ಹತ್ತು
ತೊಲೆ ತೂಕವುಳ್ಳ ಚಿನ್ನದ ಧೂಪಾರತಿ; ಸರ್ವಾಂಗ
ಹೋಮಕ್ಕಾಗಿ ಒಂದು ಹೋರಿ, ಒಂದು ಟಗರು,
ಒಂದು ವರುಷದ ಕುರಿ; ದೋಷಪರಿಹಾರಕಯಜ್ಞ
ಕ್ಕಾಗಿ ಒಂದು ಹೋತ; ಸಮಾಧಾನಯಜ್ಞಕ್ಕಾಗಿ
ಎರಡು ಹೋರಿಗಳು, ಐದು ಟಗರುಗಳು, ಐದು
ಹೋತಗಳು, ವರುಷದ ಐದು ಕುರಿಗಳು ಇವುಗಳೇ.
ಇದೇ ಅಮ್ಮೀಹೂದನ ಮಗನಾದ ಎಲೀಷಾಮನು
ಕೊಟ್ಟ ಕಾಣಿಕೆ.
ಎಂಟನೆಯ ದಿನದಲ್ಲಿ ಮನಸ್ಸೆ ಕುಲಾಧಿಪತಿ ಪೆದಾ
ಚೂರನ ಮಗನಾದ ಗಮ್ಲೀಯೇಲನು ಕಾಣಿಕೆ
ಯನ್ನು ಸಮರ್ಪಿಸಿದನು. ಅವನ ಕಾಣಿಕೆ ಯಾವ
ದಂದರೆ—ದೇವರ ಸೇವೆಗೆ ನೇಮಕವಾದ ರೂಪಾ
ಯಿಯ ತೂಕದ ಮೇರೆಗೆ ನೂರ ಮೂವತ್ತು
ರೂಪಾಯಿ ತೂಕದ ಬೆಳ್ಳಿಯ ಹರಿವಾಣವು; ಎಪ್ಪತ್ತು
ತೊಲೆ ತೂಕವುಳ್ಳ ಬೆಳ್ಳಿಯ ಬಟ್ಟಲು; ಈ ಎರಡ
ರಲ್ಲಿಯೂ ನೈವೇದ್ಯಕ್ಕಾಗಿ ಎಣ್ಣೆ ಬೆರಸಿದ ಗೋದಿಯ
ಹಿಟ್ಟು ತುಂಬಿತ್ತು; ಧೂಪದ್ರವ್ಯತುಂಬಿದ್ದ ಹತ್ತು
ತೊಲೆ ತೂಕವುಳ್ಳ ಚಿನ್ನದ ಧೂಪಾರತಿ; ಸರ್ವಾಂಗ
ಹೋಮಕ್ಕಾಗಿ ಒಂದು ಹೋರಿ, ಒಂದು ಟಗರು,
ಒಂದು ವರುಷದ ಕುರಿ; ದೋಷಪರಿಹಾರಕಯಜ್ಞ
ಕ್ಕಾಗಿ ಒಂದು ಹೋತ; ಸಮಾಧಾನಯಜ್ಞಕ್ಕಾಗಿ
ಎರಡು ಹೋರಿಗಳು, ಐದು ಟಗರುಗಳು, ಐದು
ಹೋತಗಳು, ವರುಷದ ಐದು ಕುರಿಗಳು ಇವುಗಳೇ.
ಇದೇ ಪೆದಾಚೂರನ ಮಗನಾದ ಗಮ್ಲೀಯೇಲನು
ಕೊಟ್ಟ ಕಾಣಿಕೆ.
ಒಂಭತ್ತನೆಯ ದಿನದಲ್ಲಿ ಬೆನ್ಯಾಮೀನ್ ಕುಲಾಧಿ
ಪತಿ ಗಿದ್ಯೋನಿಯ ಮಗನಾದ ಅಬೀದಾನನು ಕಾಣಿಕೆ
ಯನ್ನು ಸಮರ್ಪಿಸಿದನು. ಅವನ ಕಾಣಿಕೆ ಯಾವ
ದಂದರೆ—ದೇವರ ಸೇವೆಗೆ ನೇಮಕವಾದ ರೂಪಾ
ಯಿಯ ತೂಕದ ಮೇರೆಗೆ ನೂರ ಮೂವತ್ತು
ರೂಪಾಯಿ ತೂಕದ ಬೆಳ್ಳಿಯ ಹರಿವಾಣವು; ಎಪ್ಪತ್ತು
ತೊಲೆ ತೂಕವುಳ್ಳ ಬೆಳ್ಳಿಯ ಬಟ್ಟಲು; ಈ ಎರಡ
ರಲ್ಲಿಯೂ ನೈವೇದ್ಯಕ್ಕಾಗಿ ಎಣ್ಣೆ ಬೆರಸಿದ ಗೋದಿಯ
ಹಿಟ್ಟು ತುಂಬಿತ್ತು; ಧೂಪದ್ರವ್ಯತುಂಬಿದ್ದ ಹತ್ತು
ತೊಲೆ ತೂಕವುಳ್ಳ ಚಿನ್ನದ ಧೂಪಾರತಿ; ಸರ್ವಾಂಗ
ಹೋಮಕ್ಕಾಗಿ ಒಂದು ಹೋರಿ, ಒಂದು ಟಗರು,
ಒಂದು ವರುಷದ ಕುರಿ; ದೋಷಪರಿಹಾರಕಯಜ್ಞ
ಕ್ಕಾಗಿ ಒಂದು ಹೋತ; ಸಮಾಧಾನಯಜ್ಞಕ್ಕಾಗಿ
ಎರಡು ಹೋರಿಗಳು, ಐದು ಟಗರುಗಳು, ಐದು
ಹೋತಗಳು, ವರುಷದ ಐದು ಕುರಿಗಳು ಇವುಗಳೇ.
ಇದೇ ಗಿದ್ಯೋನಿಯ ಮಗನಾದ ಅಬೀದಾನನು
ಕೊಟ್ಟ ಕಾಣಿಕೆ.
ಹತ್ತನೆಯ ದಿನದಲ್ಲಿ ದಾನ್ ಕುಲಾಧಿಪತಿ ಅಮ್ಮೀಷ 66
ದ್ದೈಯ ಮಗನಾದ ಅಹೀಗೆಜೆರನು ಕಾಣಿಕೆಯನ್ನು
ಸಮರ್ಪಿಸಿದನು. ಅವನ ಕಾಣಿಕೆ ಯಾವದಂದರೆ— 67
ದೇವರ ಸೇವೆಗೆ ನೇಮಕವಾದ ರೂಪಾಯಿಯ
ತೂಕದ ಮೇರೆಗೆ ನೂರ ಮೂವತ್ತು ರೂಪಾಯಿ
ತೂಕದ ಬೆಳ್ಳಿಯ ಹರಿವಾಣವು; ಎಪ್ಪತ್ತು ತೊಲೆ
ತೂಕವುಳ್ಳ ಬೆಳ್ಳಿಯ ಬಟ್ಟಲು; ಈ ಎರಡರಲ್ಲಿಯೂ
ನೈವೇದ್ಯಕ್ಕಾಗಿ ಎಣ್ಣೆ ಬೆರಸಿದ ಗೋದಿಯ ಹಿಟ್ಟು
ತುಂಬಿತ್ತು; ಧೂಪದ್ರವ್ಯತುಂಬಿದ್ದ ಹತ್ತು ತೊಲೆ 68
ತೂಕವುಳ್ಳ ಚಿನ್ನದ ಧೂಪಾರತಿ; ಸರ್ವಾಂಗಹೋಮ 69
ಕ್ಕಾಗಿ ಒಂದು ಹೋರಿ, ಒಂದು ಟಗರು, ಒಂದು
ವರುಷದ ಕುರಿ; ದೋಷಪರಿಹಾರಕಯಜ್ಞಕ್ಕಾಗಿ 70
ಒಂದು ಹೋತ; ಸಮಾಧಾನಯಜ್ಞಕ್ಕಾಗಿ ಎರಡು 71
ಹೋರಿಗಳು, ಐದು ಟಗರುಗಳು, ಐದು ಹೋತ
ಗಳು, ವರುಷದ ಐದು ಕುರಿಗಳು ಇವುಗಳೇ. ಇದೇ
ಅಮ್ಮೀಷದ್ದೈಯ ಮಗನಾದ ಅಹೀಗೆಜೆರನು ಕೊಟ್ಟ
ಕಾಣಿಕೆ.
ಹನ್ನೊಂದನೆಯ ದಿನದಲ್ಲಿ ಆಶೇರ್ ಕುಲಾಧಿಪತಿ 72
ಒಕ್ರಾನನ ಮಗನಾದ ಪಗೀಯೇಲನು ಕಾಣಿಕೆ
ಯನ್ನು ಸಮರ್ಪಿಸಿದನು. ಅವನ ಕಾಣಿಕೆ ಯಾವ 73
ದಂದರೆ—ದೇವರ ಸೇವೆಗೆ ನೇಮಕವಾದ ರೂಪಾ
ಯಿಯ ತೂಕದ ಮೇರೆಗೆ ನೂರ ಮೂವತ್ತು ರೂಪಾ
ಯಿ ತೂಕದ ಬೆಳ್ಳಿಯ ಹರಿವಾಣವು; ಎಪ್ಪತ್ತು ತೊಲೆ
ತೂಕವುಳ್ಳ ಬೆಳ್ಳಿಯ ಬಟ್ಟಲು; ಈ ಎರಡರಲ್ಲಿಯೂ
ನೈವೇದ್ಯಕ್ಕಾಗಿ ಎಣ್ಣೆ ಬೆರಸಿದ ಗೋದಿಯ ಹಿಟ್ಟು
ತುಂಬಿತ್ತು; ಧೂಪದ್ರವ್ಯತುಂಬಿದ್ದ ಹತ್ತು ತೊಲೆ 74
ತೂಕವುಳ್ಳ ಚಿನ್ನದ ಧೂಪಾರತಿ; ಸರ್ವಾಂಗಹೋಮ 75
ಕ್ಕಾಗಿ ಒಂದು ಹೋರಿ, ಒಂದು ಟಗರು, ಒಂದು
ವರುಷದ ಕುರಿ; ದೋಷಪರಿಹಾರಕಯಜ್ಞಕ್ಕಾಗಿ 76
ಒಂದು ಹೋತ; ಸಮಾಧಾನಯಜ್ಞಕ್ಕಾಗಿ ಎರಡು 77
ಹೋರಿಗಳು, ಐದು ಟಗರುಗಳು, ಐದು ಹೋತಗಳು,
ವರುಷದ ಐದು ಕುರಿಗಳು ಇವುಗಳೇ. ಇದೇ
ಒಕ್ರಾನನ ಮಗನಾದ ಪಗೀಯೇಲನು ಕೊಟ್ಟ
ಕಾಣಿಕೆ.
ಹನ್ನೆರಡನೆಯ ದಿನದಲ್ಲಿ ನಫ್ತಾಲಿ ಕುಲಾಧಿಪತಿ 78
ಏನಾನನ ಮಗನಾದ ಅಹೀರನು ಕಾಣಿಕೆಯನ್ನು
ಸಮರ್ಪಿಸಿದನು. ಅವನ ಕಾಣಿಕೆ ಯಾವದಂದರೆ— 79
ದೇವರ ಸೇವೆಗೆ ನೇಮಕವಾದ ರೂಪಾಯಿಯ ತೂಕದ
ಮೇರೆಗೆ ನೂರ ಮೂವತ್ತು ರೂಪಾಯಿ ತೂಕದ
ಬೆಳ್ಳಿಯ ಹರಿವಾಣವು; ಎಪ್ಪತ್ತು ತೊಲೆ ತೂಕವುಳ್ಳ
ಬೆಳ್ಳಿಯ ಬಟ್ಟಲು; ಈ ಎರಡರಲ್ಲಿಯೂ ನೈವೇದ್ಯ
ಕ್ಕಾಗಿ ಎಣ್ಣೆ ಬೆರಸಿದ ಗೋದಿಯ ಹಿಟ್ಟು ತುಂಬಿತ್ತು;
ಧೂಪದ್ರವ್ಯತುಂಬಿದ್ದ ಹತ್ತು ತೊಲೆ ತೂಕವುಳ್ಳ ಚಿನ್ನದ 80
ಧೂಪಾರತಿ; ಸರ್ವಾಂಗಹೋಮಕ್ಕಾಗಿ ಒಂದು 81
ಹೋರಿ, ಒಂದು ಟಗರು, ಒಂದು ವರುಷದ ಕುರಿ;
ದೋಷಪರಿಹಾರಕಯಜ್ಞಕ್ಕಾಗಿ ಒಂದು ಹೋತ; 82
ಸಮಾಧಾನಯಜ್ಞಕ್ಕಾಗಿ ಎರಡು ಹೋರಿಗಳು, ಐದು 83

ಟಗರುಗಳು, ಐದು ಹೋತಗಳು, ವರುಷದ ಐದು
ಕುರಿಗಳು ಇವುಗಳೇ. ಇದೇ ಏನಾನನ ಮಗನಾದ
ಅಹೀರನು ಕೊಟ್ಟ ಕಾಣಿಕೆ.
84 ಯಜ್ಞವೇದಿಯು ಅಭಿಷೇಕಿಸಲ್ಪಟ್ಟ ದಿನದಲ್ಲಿ
ಇಸ್ರಾಯೇಲ್ಯರ ಕುಲಾಧಿಪತಿಗಳು ಅದರ ಪ್ರತಿಷ್ಠೆ
ಗಾಗಿ ಕೊಟ್ಟ ಕಾಣಿಕೆಗಳು ಒಟ್ಟಾಗಿ 12 ಬೆಳ್ಳಿಯ
ಹರಿವಾಣಗಳು, 12 ಬೆಳ್ಳಿಯ ಬಟ್ಟಲುಗಳು, 12
85 ಚಿನ್ನದ ಧೂಪಾರತಿಗಳು. ಒಂದೊಂದು ಬೆಳ್ಳಿಯ
ಹರಿವಾಣವು 130 ರೂಪಾಯಿ ತೂಕವುಳ್ಳದ್ದು;
ಒಂದೊಂದು ಬಟ್ಟಲು 70 ರೂಪಾಯಿ ತೂಕದ್ದು.
ಆ ಬೆಳ್ಳಿಯ ಪಾತ್ರೆಗಳ ಒಟ್ಟು ತೂಕ ದೇವರ ಸೇವೆಗೆ
ನೇಮಕವಾದ ರೂಪಾಯಿಯ ಪ್ರಕಾರ 2,400
86 ರೂಪಾಯಿ. ಧೂಪದ್ರವ್ಯತುಂಬಿದ್ದ ಒಂದೊಂದು
ಚಿನ್ನದ ಧೂಪಾರತಿಯ ತೂಕವು ದೇವರ ಸೇವೆಗೆ
ನೇಮಕವಾದ ತೊಲೆಯ ಪ್ರಕಾರ ಹತ್ತು ಹತ್ತು
ತೊಲೆಯ ಮೇರೆಗೆ ಇರುವದರಿಂದ ಆ ಹನ್ನೆರಡು
ಧೂಪಾರತಿಗಳ ಚಿನ್ನವು ಒಟ್ಟಾಗಿ 120 ತೊಲೆ.
87 ಸರ್ವಾಂಗಹೋಮಕ್ಕಾಗಿ ಕೊಟ್ಟ ಪಶುಗಳು — ಹೋರಿ
ಗಳು 12, ಟಗರುಗಳು 12, ವರುಷದ ಕುರಿಗಳು
12; ಇವುಗಳೊಂದಿಗೆ ಸಮರ್ಪಿಸಬೇಕಾದ ಧಾನ್ಯ
ದ್ರವ್ಯವನ್ನೂ ಕೊಟ್ಟರು. ದೋಷಪರಿಹಾರಕಯಜ್ಞ
88 ಕ್ಕಾಗಿ ಕೊಟ್ಟದ್ದು 12 ಹೋತಗಳು. ಸಮಾಧಾನ
ಯಜ್ಞಕ್ಕಾಗಿ ಕೊಟ್ಟ ಪಶುಗಳು — ಹೋರಿಗಳು 24,
ಟಗರುಗಳು 60, ಹೋತಗಳು 60, ವರುಷದ ಕುರಿ
ಗಳು 60. ಯಜ್ಞವೇದಿಯು ಅಭಿಷೇಕಿಸಲ್ಪಟ್ಟನಂತರ
ಇದೇ ಅದರ ಪ್ರತಿಷ್ಠೆಗೆ ಸಮರ್ಪಿಸಲ್ಪಟ್ಟ ಕಾಣಿಕೆ.

ದೇವರು ಮೋಶೆಯ ಸಂಗಡ ಮಾತಾಡಿದ್ದು.

89 ಮೋಶೆ ಯೆಹೋವನ ಸಂಗಡ ಮಾತಾಡಬೇ
ಕೆಂದು ದೇವದರ್ಶನದ ಗುಡಾರದೊಳಗೆ ಹೋದಾಗ
ಆಜ್ಞಾಶಾಸನಗಳ ಮಂಜೂಷದ ಮೇಲಣ ಕೃಪಾ
ಸನದ ಮೇಲಿನಿಂದ ಆ ಎರಡು ಕೆರೂಬಿಗಳ ನಡುವೆ
ಯಿಂದ ತನ್ನ ಸಂಗಡ ಮಾತಾಡುವ ಯೆಹೋವನ
ಸ್ವರವು ಅವನಿಗೆ ಕೇಳಿಸಿತು. 1)ಹೀಗೆ ಆತನು ಅವನ
ಸಂಗಡ ಮಾತಾಡಿದನು.

ದೇವಸ್ಥಾನದಲ್ಲಿನ ದೀಪಗಳ ವಿಷಯು.

8 2 ಯೆಹೋವನು ಮೋಶೆಗೆ — ಆರೋನನು ದೇವ
ಸ್ಥಾನದ ದೀಪಗಳನ್ನು ಕ್ರಮಪಡಿಸುವಾಗ ಆ ಏಳು
ದೀಪಗಳು ದೀಪಸ್ತಂಭದ ಎದುರಾಗಿರುವ ಸ್ಥಳಕ್ಕೆ
ಬೆಳಕುಕೊಡುವಂತೆ ಅವುಗಳನ್ನು ಇಡಬೇಕೆಂದು
3 ಅವನಿಗೆ ಆಜ್ಞಾಪಿಸು ಎಂದು ಹೇಳಿದನು. ಯೆಹೋ
ವನು ಮೋಶೆಗೆ ಆಜ್ಞಾಪಿಸಿದಂತೆಯೇ ಆರೋನನು
ಮಾಡಿದನು; ದೀಪಸ್ತಂಭದ ಎದುರಿನ ಪ್ರದೇಶಕ್ಕೆ
ಬೆಳಕುಬೀಳುವಂತೆ ಆ ದೀಪಗಳನ್ನು ಕ್ರಮವಾಗಿ
ಇಟ್ಟನು.

ಆ ದೀಪಸ್ತಂಭವು ಅದರ ಬುಡವೂ ಪುಷ್ಪಾಲಂಕಾ
ಗಳೂ ಚಿನ್ನದ ನಕಾಸಿಕೆಲಸದಿಂದ ಮಾಡಲ್ಪಟ್ಟಿತು
ಯೆಹೋವನು ತೋರಿಸಿದ ಮಾದರಿಯಂತೆ ಮೋ
ಅದನ್ನು ಮಾಡಿಸಿದ್ದನು.

ಲೇವಿಯರನ್ನು ಶುದ್ಧೀಕರಿಸಿ ಉದ್ಯೋಗಕ್ಕೆ ಸೇರಿಸಿದ್ದು.

ಯೆಹೋವನು ಮೋಶೆಗೆ ಆಜ್ಞಾಪಿಸಿದ್ದೇನಂದರೆ —
ನೀನು ಇಸ್ರಾಯೇಲ್ಯರಿಂದ ಲೇವಿಯರನ್ನು ಪ್ರತ್ಯೆ
ಕಿಸಿ ಶುದ್ಧೀಕರಿಸಬೇಕು. ಅವರನ್ನು ಶುದ್ಧೀಕರಿ
ಬೇಕಾದ ಕ್ರಮ ಹೇಗಂದರೆ — ನೀನು ಅವರ ಮೇ
ದೋಷಪರಿಹಾರಕಜಲವನ್ನು ಚಿಮಿಕಿಸಬೇಕು; ಅವರ
ಸರ್ವಾಂಗಕ್ಷೌರಮಾಡಿಸಿಕೊಂಡು ತಮ್ಮ ಬಟ್ಟೆಗಳನ್ನ
ಒಗೆದುಕೊಂಡು ತಮ್ಮನ್ನು ಶುದ್ಧಮಾಡಿಕೊಳ್ಳ
ಬೇಕು. ತರುವಾಯ ಅವರು [ಸರ್ವಾಂಗಹೋವ
ಕ್ಕಾಗಿ] ಒಂದು ಹೋರಿಯನ್ನೂ ಅದರೊಡ
ಸಮರ್ಪಿಸಬೇಕಾದ ಧಾನ್ಯನೈವೇದ್ಯ ಅಂದರೆ ಎಣ್ಣೆ
ಬೆರಸಿದ ಗೋದಿಯ ಹಿಟ್ಟನ್ನೂ ದೋಷಪರಿಹಾರ
ಯಜ್ಞಕ್ಕಾಗಿ ಮತ್ತೊಂದು ಹೋರಿಯನ್ನೂ ತೆಗೆದ
ಕೊಳ್ಳಬೇಕು. ಆಗ ನೀನು ಅವರನ್ನು ದೇವದಶ
ನದ ಗುಡಾರದ ಮುಂದೆ ಕರಕೊಂಡು ಬಂದು ಇಸ್ರಾ
ಯೇಲ್ಯರ ಸಮೂಹವನ್ನೆಲ್ಲಾ ಕೂಡ ಕರಿಸಿ ಲೇವಿಯ
ರನ್ನು ಯೆಹೋವನ ಸನ್ನಿಧಿಯಲ್ಲಿ ನಿಲ್ಲಿಸಿದಾ
ಇಸ್ರಾಯೇಲ್ಯರು ಅವರ ಮೇಲೆ ತಮ್ಮ ಕೈಗಳನ್ನ
ಇಡಬೇಕು. ಲೇವಿಯರು ಯೆಹೋವನ ಪ
ಚರ್ಯವನ್ನು ಮಾಡುವವರಾಗುವಂತೆ ಆರೋನನ
ಇಸ್ರಾಯೇಲ್ಯರ ನಿಮಿತ್ತ ಅವರನ್ನು ಯೆಹೋವ
ಸನ್ನಿಧಿಯಲ್ಲಿ ನೈವೇದ್ಯದೋಪಾದಿಯಲ್ಲಿ ಸಮರ್ಪಿ
ಬೇಕು. ಲೇವಿಯರು ಆ ಹೋರಿಗಳ ತಲೆಯ ಮೇ
ತಮ್ಮ ಕೈಗಳನ್ನಿಟ್ಟನಂತರ ನೀನು ಯೆಹೋವನಿ
ದೋಷಪರಿಹಾರಕಯಜ್ಞವಾಗಿ ಒಂದು ಹೋರಿಯ
ನ್ನೂ ಸರ್ವಾಂಗಹೋಮವಾಗಿ ಮತ್ತೊಂದು ಹೋ
ಯನ್ನೂ ಸಮರ್ಪಿಸಿ ಅವರಿಗೋಸ್ಕರ ದೋಷಪ
ಹಾರವನ್ನು ಮಾಡಬೇಕು.
ನೀನು ಆರೋನನ ಮತ್ತು ಅವನ ಮಕ್ಕ
ಮುಂದೆ ಲೇವಿಯರನ್ನು ನಿಲ್ಲಿಸಿ ಅವರನ್ನು ನೈವೇದ
ದಂತೆ ಯೆಹೋವನಿಗೆ ಸಮರ್ಪಿಸಬೇಕು. ಹೀ
ನೀನು ಲೇವಿಯರನ್ನು ಇಸ್ರಾಯೇಲ್ಯರಿಂದ ಪ್ರತ್ಯೆ
ಕಿಸಿದಾಗ ಅವರು ನನ್ನ ಸೊತ್ತಾಗುವರು. ಅದ
ಮೊದಲುಗೊಂಡು ಅವರು ದೇವದರ್ಶನದ ಗುಡ
ರದ ಪರಿಚರ್ಯವನ್ನು ಮಾಡಬೇಕು. ನೀನು ಅ
ರನ್ನು ಶುದ್ಧೀಕರಿಸಿ ನೈವೇದ್ಯದೋಪಾದಿಯಲ
ಸಮರ್ಪಿಸಬೇಕು. ಇಸ್ರಾಯೇಲ್ಯರಲ್ಲಿ ಇವರ
ನನಗೆ ಸಂಪೂರ್ಣವಾಗಿ ವಶವಾದವರು; ಪ್ರಥವ
ಗರ್ಭಕ್ಕೆ ಬದಲಾಗಿ ಅಂದರೆ ಇಸ್ರಾಯೇಲ್ಯ
ಚೊಚ್ಚಲುಮಕ್ಕಳಿಗೆ ಬದಲಾಗಿ ನಾನು ಇವರನ್ನ
ನನ್ನ ಸ್ವಂತಕ್ಕಾಗಿ ತೆಗೆದುಕೊಂಡಿದ್ದೇನೆ. ಇಸ್ರಾ
ಯೇಲ್ಯರಲ್ಲಿರುವ ಚೊಚ್ಚಲಾದ ಮನುಷ್ಯರೂ ಪಶ

1) ಅಥವಾ: ಆಗ ಅವನು ಆತನ ಸಂಗಡ ಮಾತಾಡಿದನು.

ಗಳೂ ಎಲ್ಲಾ ನನ್ನ ಸೊತ್ತಷ್ಟೆ; ಐಗುಪ್ತದೇಶದಲ್ಲಿದ್ದ
ಚೊಚ್ಚಲಾದದ್ದನ್ನೆಲ್ಲಾ ನಾನು ಸಂಹರಿಸಿದಾಗ ಇಸ್ರಾ
ಯೇಲ್ಯರ ಚೊಚ್ಚಲಾದದ್ದನ್ನು ನನ್ನ ಸ್ವಂತಕ್ಕಾಗಿ
ಪ್ರತಿಷ್ಠಿಸಿಕೊಂಡೆನಲ್ಲಾ. ನಾನು ಇಸ್ರಾಯೇಲ್ಯರ
ಚೊಚ್ಚಲುಮಕ್ಕಳಿಗೆ ಬದಲಾಗಿ ಲೇವಿಯರನ್ನು
ತೆಗೆದುಕೊಂಡಿದ್ದೇನೆ. ಇಸ್ರಾಯೇಲ್ಯರಿಗೋಸ್ಕರ ದೇವ
ದರ್ಶನದ ಗುಡಾರದ ಪರಿಚರ್ಯವನ್ನು ನಡಿಸು
ವದಕ್ಕೂ ದೋಷಪರಿಹಾರವನ್ನು ಮಾಡುವದಕ್ಕೂ
ಲೇವಿಯರನ್ನು ಆರೋನನ ಮತ್ತು ಅವನ ಮಕ್ಕಳ
ವಶಕ್ಕೆ ಕೊಟ್ಟಿದ್ದೇನೆ. ಹೀಗಿರುವದರಿಂದ ಇಸ್ರಾ
ಯೇಲ್ಯರು ದೇವಸ್ಥಾನದ ಹತ್ತಿರಕ್ಕೆ ಬಂದಾಗ ಅವ
ರಿಗೆ ಅಪಾಯವು ಸಂಭವಿಸುವದಿಲ್ಲ.
ಯೆಹೋವನು ಲೇವಿಯರ ವಿಷಯದಲ್ಲಿ ಆಜ್ಞಾ
ಪಿಸಿದಂತೆಯೇ ಮೋಶೆ ಆರೋನರೂ ಇಸ್ರಾಯೇಲ್ಯರ
ಸಮೂಹದವರೆಲ್ಲರೂ ಮಾಡಿದರು. ಲೇವಿಯರು
ತಮ್ಮನ್ನು ಶುದ್ಧಮಾಡಿಕೊಂಡು ಬಟ್ಟೆಗಳನ್ನು ಒಗೆದು
ಕೊಂಡರು; ಆರೋನನು ಅವರನ್ನು ನೈವೇದ್ಯದಂತೆ
ಯೆಹೋವನ ಸನ್ನಿಧಿಯಲ್ಲಿ ಸಮರ್ಪಿಸಿ ಅವರನ್ನು
ಶುದ್ಧೀಕರಿಸುವದಕ್ಕೆ ಅವರಿಗೋಸ್ಕರ ದೋಷಪರಿ
ಹಾರವನ್ನು ಮಾಡಿದನು. ಆ ಮೇಲೆ ಲೇವಿಯರು
ತಮಗೆ ನೇಮಕವಾದ ಕೆಲಸವನ್ನು ದೇವದರ್ಶನದ
ಗುಡಾರದಲ್ಲಿ ಆರೋನನ ಮತ್ತು ಅವನ ಮಕ್ಕಳ
ಕೈಕೆಳಗೆ ನಡಿಸಲಾರಂಭಿಸಿದರು. ಅವರ ವಿಷಯ
ದಲ್ಲಿ ಯೆಹೋವನು ಮೋಶೆಗೆ ಆಜ್ಞಾಪಿಸಿದಂತೆಯೇ
ಅವರು ಮಾಡಿದರು.
ಅದಲ್ಲದೆ ಯೆಹೋವನು ಮೋಶೆಗೆ ಆಜ್ಞಾಪಿಸಿ
ದ್ದೇನಂದರೆ— ಲೇವಿಯರು ಅನುಸರಿಸಬೇಕಾದ ಪದ್ಧತಿ
ಏನಂದರೆ— ಇಪ್ಪತ್ತೈದು ವರುಷ ಮೊದಲುಗೊಂಡು
ಹೆಚ್ಚಿನ ವಯಸ್ಸಿನವರು ದೇವದರ್ಶನದ ಗುಡಾರದ
ಸೇವಕಮಂಡಲಿಗೆ ಸೇರಬೇಕು. ಅವರು ಐವತ್ತು
ವರುಷದವರಾದನಂತರ ಆ ಮಂಡಲಿಯನ್ನು ಬಿಟ್ಟು
ದೇವಸ್ಥಾನದ ಪರಿಚರ್ಯದಿಂದ ಬಿಡುಗಡೆಯಾಗು
ವರು. ಅಂಥವರು ತಮ್ಮ ಸ್ವಕುಲದವರ ಜೊತೆ
ಯಲ್ಲಿ ದೇವದರ್ಶನದ ಗುಡಾರವನ್ನು ಕಾಯುವ
ಸೇವೆ ಮಾಡಬಹುದೇ ಹೊರತು ಅವರಿಂದ ಬೇರೆ ಪರಿ
ಚರ್ಯವನ್ನು ಮಾಡಿಸಕೂಡದು. ಲೇವಿಯರು
ಕಾಪಾಡಬೇಕಾದವುಗಳ ವಿಷಯದಲ್ಲಿ ನೀನು ಹೀಗೆ
ಅವರಿಗೆ ನೇಮಿಸಬೇಕು.

ಇಸ್ರಾಯೇಲ್ಯರು ಪಸ್ಕಹಬ್ಬವನ್ನು ಆಚರಿಸಿದ್ದು;
ನೇಮಕವಾದ ಕಾಲದಲ್ಲಿ ಅದನ್ನು ಆಚರಿಸಲಾರದವರು
ಒಂದು ತಿಂಗಳಿನ ಮೇಲೆ ಆಚರಿಸಬಹುದೆಂಬ ವಿಧಿ.

ಇಸ್ರಾಯೇಲ್ಯರು ಐಗುಪ್ತದೇಶವನ್ನು ಬಿಟ್ಟುಬಂದ
ಎರಡನೆಯ ವರುಷದ ಮೊದಲನೆಯ ತಿಂಗಳಲ್ಲಿ
ಸೀನಾಯಿ ಅರಣ್ಯದಲ್ಲಿ ಯೆಹೋವನು ಮೋಶೆಗೆ—
ಇಸ್ರಾಯೇಲ್ಯರು ಪಸ್ಕಹಬ್ಬವನ್ನು ನೇಮಕವಾದ ಕಾಲ
ದಲ್ಲಿ ಆಚರಿಸಹೇಳು; ನಾನು ನಿರೂಪಿಸಿದ ಆಜ್ಞಾ
ವಿಧಿಗಳ ಪ್ರಕಾರ ನೇಮಕವಾದ ಕಾಲದಲ್ಲೇ ಅಂದರೆ
ಈ ತಿಂಗಳಿನ ಹದಿನಾಲ್ಕನೆಯ ದಿನದ ಸಂಜೇವೇಳೆ
ಯಲ್ಲಿ ನೀವು ಅದನ್ನು ಆಚರಿಸಬೇಕು ಎಂದು ಹೇಳಿ
ದನು. ಆದಕಾರಣ ಮೋಶೆ ಇಸ್ರಾಯೇಲ್ಯರಿಗೆ— 4
ನೀವು ಪಸ್ಕಹಬ್ಬವನ್ನು ಆಚರಿಸಬೇಕೆಂದು ಆಜ್ಞಾಪಿಸ
ಲಾಗಿ ಅವರು ಮೊದಲನೆಯ ತಿಂಗಳಿನ ಹದಿನಾಲ್ಕನೆಯ 5
ದಿನದ ಸಂಜೇವೇಳೆಯಲ್ಲಿ ಸೀನಾಯಿ ಅರಣ್ಯದಲ್ಲಿ
ಅದನ್ನು ಆಚರಿಸಿದರು. ಯೆಹೋವನು ಮೋಶೆಗೆ
ಆಜ್ಞಾಪಿಸಿದಂತೆಯೇ ಇಸ್ರಾಯೇಲ್ಯರು ಮಾಡಿದರು.
ಆದರೆ ಕೆಲವು ಜನರು ಮನುಷ್ಯಶವಸೋಂಕಿದದ 6
ರಿಂದ ಅಶುದ್ಧರಾಗಿ ಆ ದಿನದಲ್ಲಿ ಪಸ್ಕಹಬ್ಬವನ್ನು
ಆಚರಿಸಲಾರದೆ ಮೋಶೆ ಆರೋನರ ಬಳಿಗೆ ಬಂದು
ಮೋಶೆಗೆ— ಮನುಷ್ಯಶವಸೋಂಕಿದದರಿಂದ ನಾವು 7
ಅಶುದ್ಧರಾದೆವು. ನಾವು ಮಿಕ್ಕ ಇಸ್ರಾಯೇಲ್ಯ
ರೊಡನೆ ನೇಮಕವಾದ ಕಾಲದಲ್ಲಿ ಯೆಹೋವನಿಗೆ
ಯಜ್ಞವನ್ನು ಸಮರ್ಪಿಸುವದಕ್ಕೆ ಅಪ್ಪಣೆಯಿಲ್ಲವೋ
ಎಂದು ಕೇಳಲು ಮೋಶೆ ಅವರಿಗೆ—ಸ್ವಲ್ಪ ಕಾದು 8
ಕೊಂಡಿರ್ರಿ; ನಿಮ್ಮ ವಿಷಯದಲ್ಲಿ ಯೆಹೋವನು
ಏನು ಅಪ್ಪಣೆಮಾಡುವನೋ ನಾನು ವಿಚಾರಿಸುತ್ತೇನೆ
ಎಂದು ಹೇಳಿದನು.
ಆಗ ಯೆಹೋವನು ಮೋಶೆಗೆ ಹೇಳಿದ್ದೇನಂದರೆ— 9
ನೀನು ಇಸ್ರಾಯೇಲ್ಯರಿಗೆ ಹೀಗೆ ಆಜ್ಞಾಪಿಸು— ನಿಮ್ಮ 10
ಲ್ಲಿಯಾಗಲಿ ನಿಮ್ಮ ಸಂತತಿಯವರಲ್ಲಿಯಾಗಲಿ ಶವ
ಸೋಂಕಿದದರಿಂದ ಅಶುದ್ಧರಾದವರೂ ದೂರಪ್ರಯಾ
ಣದಲ್ಲಿರುವವರೂ ಕೂಡ ಯೆಹೋವನ ಆಜ್ಞಾನು
ಸಾರ ಪಸ್ಕಹಬ್ಬವನ್ನು ಆಚರಿಸಲೇ ಬೇಕು. ಅಂಥ 11
ವರು ಎರಡನೆಯ ತಿಂಗಳಿನ ಹದಿನಾಲ್ಕನೆಯ ದಿನದ
ಸಂಜೇವೇಳೆಯಲ್ಲಿ ಅದನ್ನು ಆಚರಿಸಬೇಕು. ಆ
ಪಶುವಿನ ಮಾಂಸವನ್ನು ಹುಳಿಯಿಲ್ಲದ ರೊಟ್ಟಿಗಳ
ಮತ್ತು ಕಹಿಯಾದ ಪಲ್ಯಗಳ ಸಂಗಡ ಊಟಮಾಡ
ಬೇಕು. ಅದರಲ್ಲಿ ಸ್ವಲ್ಪವನ್ನಾದರೂ ಮರುದಿನದ 12
ವರೆಗೆ ಮಿಗಿಸಬಾರದು; ಆ ಪಶುವಿನ ಒಂದು ಎಲುಬ
ನ್ನಾದರೂ ಮುರಿಯಬಾರದು. ಅಂತೂ ಪಸ್ಕಹಬ್ಬದ
ವಿಷಯವಾಗಿ ನೇಮಕವಾಗಿರುವ ಪ್ರಕಾರವೇ ಅದನ್ನು
ಆಚರಿಸಬೇಕು. ಆದರೆ ಯಾವನಾದರೂ ಶುದ್ಧ 13
ನಾಗಿಯೂ ಪ್ರಯಾಣಮಾಡದೆಯೂ ಇದ್ದು ಪಸ್ಕ
ಹಬ್ಬವನ್ನು ಆಚರಿಸದೆ ತಪ್ಪಿದರೆ ಅವನು ತನ್ನ ಕುಲ
ದಿಂದ ತೆಗೆದುಹಾಕಲ್ಪಡಬೇಕು. ಅವನು ಯೆಹೋ
ವನಿಂದ ನೇಮಿತವಾದ ಯಜ್ಞವನ್ನು ಗೊತ್ತಾದ
ಕಾಲದಲ್ಲಿ ಸಮರ್ಪಿಸದೆಹೋದದರಿಂದ ತನ್ನ ದೋಷ
ಫಲವನ್ನು ಅನುಭವಿಸಬೇಕು. ನಿಮ್ಮಲ್ಲಿ ಪ್ರವಾಸಿ 14
ಯಾಗಿರುವ ಅನ್ಯದೇಶದವನು ಯೆಹೋವನಿಗೆ ಪಸ್ಕ
ಹಬ್ಬವನ್ನು ಆಚರಿಸಬೇಕೆಂದು ಅಪೇಕ್ಷಿಸಿದರೆ ಅದರ
ವಿಷಯವಾದ ಆಜ್ಞಾವಿಧಿಗಳ ಪ್ರಕಾರವೇ ಅದನ್ನು
ಆಚರಿಸಲಿ. ಪರದೇಶದವನಿಗೂ ಸ್ವದೇಶದವನಿಗೂ
ಒಂದೇ ವಿಧಿಯಿರಬೇಕು.

ಇಸ್ರಾಯೇಲ್ಯರು ಮೇಘಸ್ತಂಭಸೂಚನೆಯಂತೆಯೇ
ಇಳುಕೊಳ್ಳುವದೂ ಪ್ರಯಾಣಮಾಡುವದೂ.

ಇಸ್ರಾಯೇಲ್ಯರು ದೇವದರ್ಶನದ ಗುಡಾರವನ್ನು 15
ಎತ್ತಿ ನಿಲ್ಲಿಸಿದ ದಿನದಲ್ಲಿ ಮೇಘವು ಅದರ ಮೇಲೆ

ಮುಚ್ಚಿಕೊಂಡಿತು. ಅದು ಸಂಜೆಯಿಂದ ಮುಂಜಾ
ನೆಯ ವರೆಗೆ ಬೆಂಕಿಯಂತೆ ಕಾಣಿಸುತ್ತಿರುವದು.
16 ನಿತ್ಯವೂ ಹಾಗೆಯೇ ಇರುವದು; ಮೇಘವು ದೇವ
ಸ್ಥಾನವನ್ನು ಮುಚ್ಚಿಕೊಂಡಿರುವದು; ರಾತ್ರಿವೇಳೆ
ಯಲ್ಲಿ ಆ ಮೇಘವು ಬೆಂಕಿಯಂತೆ ಕಾಣಿಸುವದು.
17 ಆ ಮೇಘವು ಗುಡಾರದಿಂದ ಮೇಲಕ್ಕೆ ಎದ್ದಾಗ
ಇಸ್ರಾಯೇಲ್ಯರು ಮುಂದಕ್ಕೆ ಪ್ರಯಾಣಮಾಡುವರು.
ಆ ಮೇಘವು ಎಲ್ಲಿ ನಿಲ್ಲುವದೋ ಅಲ್ಲಿ ಇಸ್ರಾ
ಯೇಲ್ಯರು ತಮ್ಮ ಡೇರೆಗಳನ್ನು ಹಾಕಿಕೊಳ್ಳುವರು.
18 ಯೆಹೋವನ ಅಪ್ಪಣೆಯನ್ನು ಹೊಂದಿ ಇಸ್ರಾಯೇ
ಲ್ಯರು ಪ್ರಯಾಣಮಾಡುವರು; ಯೆಹೋವನ ಅಪ್ಪಣೆ
ಯನ್ನು ಹೊಂದಿ ಅವರು ತಮ್ಮ ಡೇರೆಗಳನ್ನು ಹಾಕಿ
ಕೊಳ್ಳುವರು. ಆ ಮೇಘವು ದೇವದರ್ಶನದ ಗುಡಾ
ರದ ಮೇಲಿರುವ ತನಕ ಅವರು ಇದ್ದ ಸ್ಥಳದಲ್ಲೇ
19 ಇರುವರು. ಆ ಮೇಘವು ಬಹುದಿನದ ವರೆಗೂ
ದೇವದರ್ಶನದ ಗುಡಾರದ ಮೇಲೆ ಇರುವ ಸಂದರ್ಭ
ದಲ್ಲಿ ಇಸ್ರಾಯೇಲ್ಯರು ಯೆಹೋವನ ಸೂಚನೆ
ಯನ್ನು ಅನುಸರಿಸಿ ಪ್ರಯಾಣಮಾಡದೆ ಇರುವರು.
20 ಒಂದೊಂದು ವೇಳೆಯಲ್ಲಿ ಮೇಘವು ಕೆಲವು ದಿವಸ
ಮಾತ್ರ ಗುಡಾರದ ಮೇಲೆ ನಿಂತಿರುವದು. ಯೆಹೋ
ವನ ಆಜ್ಞಾನುಸಾರವಾಗಿ ಅವರು ಇಳುಕೊಳ್ಳು
ತ್ತಿದ್ದರು, ಯೆಹೋವನ ಆಜ್ಞಾನುಸಾರವಾಗಿ ತಮ್ಮ
ಡೇರೆಗಳನ್ನು ಕಿತ್ತುಕೊಂಡು ಹೊರಡುತ್ತಿದ್ದರು.
21 ಕೆಲವು ಸಮಯಗಳಲ್ಲಿ ಮೇಘವು ಸಾಯಂಕಾಲ
ದಿಂದ ಹೊತ್ತಾರೆಯ ವರೆಗೆ ಇರುವದು; ಬೆಳಿಗ್ಗೆ
ಅದು ಮೇಲಕ್ಕೆ ಎದ್ದಾಗ ಜನರು ಪ್ರಯಾಣಮಾಡು
ವರು. ಕೆಲವು ಸಮಯಗಳಲ್ಲಿ ಅದು ಹಗಲಿರುಳು
ನಿಂತಿರುವದು; ಅದು ಯಾವಾಗ ಏಳುವದೋ ಆಗ
22 ಜನರು ಹೊರಡುವರು. ಆ ಮೇಘವು ದೇವದರ್ಶನದ
ಗುಡಾರದ ಮೇಲೆ ನಿಂತಿರುವದು ಎರಡು ದಿನ
ವಾದರೂ ಒಂದು ತಿಂಗಳಾದರೂ ಒಂದು ವರುಷ
ವಾದರೂ ಸರಿಯೇ, ಆ ಪರ್ಯಂತರವೂ ಇಸ್ರಾಯೇ
ಲ್ಯರು ಪ್ರಯಾಣಮಾಡದೆ ಇಳುಕೊಂಡೇ ಇರುವರು;
23 ಅದು ಎದ್ದಾಗ ಅವರು ಹೊರಡುವರು. ಯೆಹೋವನ
ಆಜ್ಞೆಯ ಪ್ರಕಾರ ಅವರು ತಮ್ಮ ಡೇರೆಗಳನ್ನು ಹಾಕಿ
ಕೊಳ್ಳುವರು, ಯೆಹೋವನ ಆಜ್ಞೆಯ ಪ್ರಕಾರ ಡೇರೆ
ಗಳನ್ನು ಕಿತ್ತು ಹೊರಡುವರು. ಯೆಹೋವನು
ಮೋಶೆಯ ಮೂಲಕವಾಗಿ ಆಜ್ಞಾಪಿಸಿದಂತೆಯೇ
ಅವರು ಯೆಹೋವನ ಸೂಚನೆಗಳನ್ನು ಅನುಸರಿಸಿ
ನಡೆಯುತ್ತಿದ್ದರು.

### ದೇವಸ್ಥಾನದ ಬೆಳ್ಳಿ ತುತೂರಿಗಳ ವಿಷಯ.

10 ಯೆಹೋವನು ಮೋಶೆಗೆ ಆಜ್ಞಾಪಿಸಿದ್ದೇನಂದರೆ—
2 ನೀನು ಬೆಳ್ಳಿಯ ತಗಡಿನಿಂದ ಎರಡು ತುತೂರಿ
ಗಳನ್ನು ಮಾಡಿಸಬೇಕು. ಜನಸಮೂಹದವರನ್ನು
ಕೂಡಕರಿಸುವದಕ್ಕೂ ದಂಡುಗಳನ್ನು ಹೊರಡಿಸು
3 ವದಕ್ಕೂ ಅವುಗಳನ್ನು ಉಪಯೋಗಿಸಬೇಕು. ನೀನು
ಎರಡನ್ನೂ ಊದಿಸುವಾಗ ಜನಸಮೂಹದವರೆಲ್ಲರೂ
ನಿನ್ನ ಹತ್ತಿರ ದೇವದರ್ಶನದ ಗುಡಾರದ ಬಾಗಲಿಗೆ
ಕೂಡಿಬರಬೇಕು. ನೀನು ಒಂದನ್ನು ಮಾತ್ರ ಊ
ಸಿದರೆ ಇಸ್ರಾಯೇಲ್ಯರಲ್ಲಿ ಸಹಸ್ರಾಧಿಪತಿಗಳಾ
ಪ್ರಧಾನರು ನಿನ್ನ ಬಳಿಗೆ ಕೂಡಿಬರಬೇಕು. ನೀ
ಆರ್ಭಟವಾಗಿ ಊದಿಸುವಾಗ ಮೂಡಣ ದಿಕ್ಕಿ
ದಂಡುಗಳು ಹೊರಡಬೇಕು. ಎರಡನೆಯ ಸಾ
ಆರ್ಭಟವಾಗಿ ಊದಿಸುವಾಗ ತೆಂಕಣ ದಿಕ್ಕಿನ ದಂ
ಗಳು ಹೊರಡಬೇಕು. ಹೀಗೆ ಪ್ರಯಾಣಹೊರ
ಬೇಕಾದಾಗ ಆರ್ಭಟವಾಗಿಯೇ ಊದಿಸಬೇಕ
ಜನಸಮೂಹದವರು ಕೂಡಿಬರಬೇಕಾದಾಗ ಸಾಧ
ರಣವಾಗಿ ಊದಿಸಬೇಕೇ ಹೊರತು ಆರ್ಭಟವಾ
ಊದಿಸಬೇಕಾಗಿಲ್ಲ.
ಆರೋನನ ವಂಶಸ್ಥರಾದ ಯಾಜಕರೇ ಆ ತುತೂ
ಗಳನ್ನು ಊದಬೇಕು; ಇದು ನಿಮಗೂ ನಿಮ್ಮ ಸಂತ
ಯವರಿಗೂ ಶಾಶ್ವತನಿಯಮ. ನೀವು ಸ್ವದೇಶವನ
ಸೇರಿದ ಮೇಲೆ ನಿಮ್ಮನ್ನು ಉಪದ್ರವಪಡಿಸುವ ಶತ
ಗಳನ್ನು ಎದುರಿಸುವದಕ್ಕಾಗಿ ಯುದ್ಧಕ್ಕೆ ಹೊರಡ
ವಾಗ ಆ ತುತೂರಿಗಳನ್ನು ಆರ್ಭಟವಾಗಿ ಊದಿ
ಬೇಕು. ಆಗ ನಿಮ್ಮ ದೇವರಾದ ಯೆಹೋವನ
ನಿಮ್ಮನ್ನು ಜ್ಞಾಪಕಕ್ಕೆ ತಂದುಕೊಂಡು ಶತ್ರುಗ
ಕೈಯಿಂದ ಬಿಡಿಸುವನು. ಇದಲ್ಲದೆ ನೀವು ಉತ್ಸ
ಕಾಲಗಳಲ್ಲಿಯೂ ಹಬ್ಬಗಳಲ್ಲಿಯೂ ಅಮಾವಾಸ
ಯಲ್ಲಿಯೂ ಸರ್ವಾಂಗಹೋಮಗಳನ್ನೂ ಸಮಾಧಾ
ಯಜ್ಞಗಳನ್ನೂ ಸಮರ್ಪಿಸುವಾಗ ಆ ತುತೂರಿಗಳನ
ಊದಿಸಬೇಕು. ಆ ಧ್ವನಿ ನಿಮ್ಮನ್ನು ನಿಮ್ಮ ದೇವ
ಜ್ಞಾಪಕಕ್ಕೆ ತರುವದು; ನಾನು ನಿಮ್ಮ ದೇವರಾ
ಯೆಹೋವನು.

### ಅರಣ್ಯಪ್ರಯಾಣದಲ್ಲಿ ನಡೆದ ಸಂಗತಿಗಳು.

### 10. 11—21. 35.

ಇಸ್ರಾಯೇಲ್ಯರು ಸೈನ್ಯಸೈನ್ಯವಾಗಿ ಹೊರಟು ಸೀನಾಯಿ
ಅರಣ್ಯವನ್ನು ಬಿಟ್ಟುಬಿಟ್ಟದ್ದು.

ಎರಡನೆಯ ವರುಷದ ಎರಡನೆಯ ತಿಂಗಳಿನ ಇಪ್ಪತ್ತ
ನೆಯ ದಿನದಲ್ಲಿ ದೇವದರ್ಶನದ ಗುಡಾರದ ಮೇಲಿದ್ದ
ಮೇಘವು ಮೇಲಕ್ಕೆ ಎದ್ದದರಿಂದ ಇಸ್ರಾಯೇಲ್ಯರ
ಸೀನಾಯಿ ಅರಣ್ಯವನ್ನು ಬಿಟ್ಟು ಮುಂದೆ ಮುಂ
ಪ್ರಯಾಣಮಾಡಿದರು. ತರುವಾಯ ಆ ಮೇಘ
ಪಾರಾನ್ ಅರಣ್ಯದಲ್ಲಿ ನಿಂತಿತು. ಯೆಹೋವನ
ಮೋಶೆಯ ಮೂಲಕ ಆಜ್ಞಾಪಿಸಿದ ರೀತಿಯಲ್ಲಿ ಅವರ
ಪ್ರಯಾಣಮಾಡಿದ್ದು ಇದು ಮೊದಲನೆಯ ಸಾರಿ
ಮುಂಭಾಗದಲ್ಲಿ ಯೆಹೂದ ಕುಲದ ದಂಡಿ
ಸೇರಿದವರು ಸೈನ್ಯಸೈನ್ಯವಾಗಿ ಹೊರಟರು. ಅವ
ಸೇನಾನಾಯಕನು ಅಮ್ಮೀನಾದಾಬನ ಮಗನಾ
ನಹಶೋನನು. ಇಸ್ಸಾಕಾರ್ ಕುಲದ ಸೇನಾನಾಯ
ಕನು ಚೂವಾರನ ಮಗನಾದ ನೆತನೇಲನು. ಜೆಬ
ಲೂನ್ ಕುಲದ ಸೇನಾನಾಯಕನು ಹೇಲೋನ
ಮಗನಾದ ಎಲೀಯಾಬನು.
ತರುವಾಯ ದೇವದರ್ಶನದ ಗುಡಾರವನ್ನು ಇಳಿಸಿ
ದಾಗ ಗೇರ್ಷೋನ್ಯರೂ ಮೆರಾರೀಯರೂ ಅದನ್ನು
ಹೊತ್ತುಕೊಂಡು ಹೊರಟರು.

ಆ ಮೇಲೆ ರೂಬೇನ್ ಕುಲದ ದಂಡಿಗೆ ಸೇರಿದವರು ಸೈನ್ಯಸೈನ್ಯವಾಗಿ ಹೊರಟರು. ಅವರ ಸೇನಾನಾಯಕನು ಶೆದೇಯೂರನ ಮಗನಾದ ಎಲೀಚೂರನು. ಸಿಮೆಯೋನ್ ಕುಲದ ಸೇನಾನಾಯಕನು ಚೂರೀಷದ್ದೈಯ ಮಗನಾದ ಶೆಲುಮೀಯೇಲನು. ಗಾದ್ ಕುಲದ ಸೇನಾನಾಯಕನು ದೆಗೂವೇಲನ ಮಗನಾದ ಎಲ್ಯಾಸಾಫನು.

ಅವರ ಹಿಂದೆ ಕೆಹಾತ್ಯರು ದೇವಸ್ಥಾನದ ಸಾಮಾನುಗಳನ್ನು ಹೊತ್ತುಕೊಂಡು ಹೊರಟರು. ಅವರು ಬರುವಷ್ಟರೊಳಗೆ ಮಿಕ್ಕ ಲೇವಿಯರು ದೇವದರ್ಶನದ ಗುಡಾರವನ್ನು ನಿಲ್ಲಿಸಿದರು.

ಆ ಮೇಲೆ ಎಫ್ರಾಯಿಮ್ ಕುಲದ ದಂಡಿಗೆ ಸೇರಿದವರು ಸೈನ್ಯಸೈನ್ಯವಾಗಿ ಹೊರಟರು. ಅವರ ಸೇನಾನಾಯಕನು ಅಮ್ಮೀಹೂದನ ಮಗನಾದ ಎಲೀಷಾಮನು. ಮನಸ್ಸೆ ಕುಲದ ಸೇನಾನಾಯಕನು ಪೆದಾಚೂರನ ಮಗನಾದ ಗಮ್ಲೀಯೇಲನು. ಬೆನ್ಯಾಮೀನ್ ಕುಲದ ಸೇನಾನಾಯಕನು ಗಿದ್ಯೋನಿಯ ಮಗನಾದ ಅಬೀದಾನನು.

ಆ ಮೇಲೆ ಎಲ್ಲಾ ದಂಡುಗಳ ಹಿಂಭಾಗದಲ್ಲಿ ದಾನ್ ಕುಲದ ದಂಡಿಗೆ ಸೇರಿದವರು ಸೈನ್ಯಸೈನ್ಯವಾಗಿ ಹೊರಟರು. ಅವರ ಸೇನಾನಾಯಕನು ಅಮ್ಮೀಷದ್ದೈಯ ಮಗನಾದ ಅಹೀಗೆಜೆರನು. ಆಶೇರ್ ಕುಲದ ಸೇನಾನಾಯಕನು ಒಕ್ರಾನನ ಮಗನಾದ ಪಗೀಯೇಲನು. ನಫ್ತಾಲಿ ಕುಲದ ಸೇನಾನಾಯಕನು ಏನಾನನ ಮಗನಾದ ಅಹೀರನು.

ಈ ರೀತಿಯಲ್ಲಿ ಇಸ್ರಾಯೇಲ್ಯರು ಸೈನ್ಯಸೈನ್ಯವಾಗಿ ಹೊರಟು ಪ್ರಯಾಣಮಾಡಿದರು.

ಮೋಶೆ ತನ್ನ ಮಾವನನ್ನು ದಾರೀತೋರಿಸುವದಕ್ಕೆ ಬರಬೇಕೆಂದು ಬೇಡಿಕೊಂಡದ್ದು; ಯೆಹೋವನ ಮಂಜೂಷವು ಮುಂದಾಗಿ ಹೋದದ್ದು.

ಮೋಶೆ ತನ್ನ ಮಾವನಾಗಿದ್ದ ಮಿದ್ಯಾನ್ಯನಾದ ರೆಗೂವೇಲನ ಮಗನಾದ ಹೋಬಾಬನಿಗೆ—ಯೆಹೋವನು ನಮಗೆ ಕೊಡುತ್ತೇನೆಂದು ವಾಗ್ದಾನಮಾಡಿದ ದೇಶಕ್ಕೆ ನಾವು ಪ್ರಯಾಣಮಾಡುತ್ತಾ ಇದ್ದೇವೆ. ಇಸ್ರಾಯೇಲ್ಯರಿಗೆ ಮೇಲನ್ನುಂಟುಮಾಡುತ್ತೇನೆಂದು ಯೆಹೋವನು ತಾನೇ ಹೇಳಿದ್ದಾನೆ. ಆದದರಿಂದ ನೀನು ನಮ್ಮ ಜೊತೆಯಲ್ಲಿ ಬಾ; ನಮ್ಮಿಂದ ನಿನಗೂ ಮೇಲುಂಟಾಗುವದೆಂದು ಹೇಳಿದನು. ಅದಕ್ಕೆ ಅವನು—ನಾನು ಬರುವದಿಲ್ಲ; ನನ್ನ ಸ್ವದೇಶಕ್ಕೆ ಸ್ವಜನರ ಬಳಿಗೆ ಹೋಗುತ್ತೇನೆ ಅಂದನು. ಆದರೆ ಮೋಶೆ ಅವನಿಗೆ—ನಮ್ಮನ್ನು ಬಿಟ್ಟು ಹೋಗಬೇಡವೆಂದು ನಿನ್ನನ್ನು ಬೇಡಿಕೊಳ್ಳುತ್ತೇನೆ; ಈ ಅರಣ್ಯದಲ್ಲಿ ಡೇರೆಗಳನ್ನು ಹಾಕುವ ಸ್ಥಳಗಳು ನಿನಗೇ ಗೊತ್ತಿರುವದರಿಂದ ನೀನು ನಮಗೆ ಕಣ್ಣಿನಂತೆ ಇರಬೇಕು; ನೀನು ನಮ್ಮ ಸಂಗಡ ಬಂದರೆ ಯೆಹೋವನು
ನಮಗೆ ಮಾಡುವ ಮೇಲನ್ನೆಲ್ಲಾ ನಾವು ನಿನಗೂ
ಉಂಟಾಗುವಂತೆ ಮಾಡುವೆವು ಎಂದು ಹೇಳಿದನು.
ಅವರು ಯೆಹೋವನ ಬೆಟ್ಟವನ್ನು ಬಿಟ್ಟು 33
ಮೂರು ದಿನದ ಪ್ರಯಾಣದಷ್ಟು ದೂರ ಹೋದರು.
ಇಳುಕೊಳ್ಳತಕ್ಕ ಸ್ಥಳವನ್ನು ನೋಡುವದಕ್ಕೋಸ್ಕರ
ಯೆಹೋವನ ಒಡಂಬಡಿಕೆಯ ಮಂಜೂಷವು ಆ
ಮೂರು ದಿವಸ ಅವರ ಮುಂದಾಗಿ ಹೋಗುತ್ತಿತ್ತು.
ಅವರು ಪಾಳೆಯದಿಂದ ಹೊರಡುವಾಗ ಹಗಲು 34
ಹೊತ್ತಿನಲ್ಲಿ ಯೆಹೋವನ ಮೇಘವು ಅವರ ಮೇಲೆ
ಇತ್ತು.
ಯೆಹೋವನ ಮಂಜೂಷವು ಹೊರಡುವಾಗ 35
ಮೋಶೆ—

ಯೆಹೋವನೇ, ಎದ್ದು ಹೊರಡೋಣವಾಗಲಿ;
ನಿನ್ನ ವೈರಿಗಳು ಚದರಿಹೋಗಲಿ;
ನಿನ್ನ ಹಗೆಗಾರರು ಬೆಂಗೊಟ್ಟು ಓಡಿಹೋಗಲಿ

ಎಂದು ಹೇಳುವನು. ಅದು ನಿಂತಾಗ ಅವನು— 36

ಯೆಹೋವನೇ, ಇಸ್ರಾಯೇಲ್ಯರ ಲಕ್ಷಾಂತರ
ಕುಟುಂಬಗಳ ಮಧ್ಯದಲ್ಲಿ ತಿರಿಗಿ ಬರೋಣ
ವಾಗಲಿ

ಎಂದು ಹೇಳುವನು.

ತಬೇರದಲ್ಲಿ ಕೆಲವರು ಬೆಂಕಿಯಿಂದ ಸತ್ತದ್ದು; ಜನರ ಭಾರ ಹೆಚ್ಚಾಗಿದೆ ಎಂದು ಮೋಶೆ ಯೆಹೋವನಿಗೆ ಮೊರೆಯಿಟ್ಟದ್ದು; ಮೋಶೆಯ ಜೊತೆಯಲ್ಲಿರುವದಕ್ಕೆ ನೇಮಿಸಲ್ಪಟ್ಟ ಎಪ್ಪತ್ತು ಮಂದಿ ಹಿರಿಯರು ಪರವಶರಾಗಿ ಪ್ರವಾದಿಸಿದ್ದು; ಕಿಬ್ರೋತ್ ಹತಾವದಲ್ಲಿ ಮಾಂಸವನ್ನು ಅತ್ಯಾಶೆಯಿಂದ ತಿಂದು ಬಹು ಜನ ಸತ್ತದ್ದು.

11
ಇಸ್ರಾಯೇಲ್ಯರು ತಮಗೆ ದುರವಸ್ಥೆ ಪ್ರಾಪ್ತವಾಯಿ
ತೆಂದು ಯೆಹೋವನಿಗೆ ಕೇಳಿಸುವಂತೆ ಗುಣುಗುಟ್ಟು
ವವರಾದರು. ಆದಕ್ಕೆ ಆತನು ಕೋಪಗೊಂಡು ಅವರ
ಮಧ್ಯದಲ್ಲಿ ಬೆಂಕಿಯನ್ನುಂಟುಮಾಡಿದ್ದರಿಂದ ಪಾಳೆ
ಯದ ಕಡೇ ಭಾಗದಲ್ಲಿದ್ದವರು ಸುಟ್ಟುಹೋದರು.
ಆಗ ಜನರು ಮೋಶೆಯ ಬಳಿಗೆ ಬಂದು ಮೊರೆ 2
ಯಿಟ್ಟರು. ಮೋಶೆ ಅವರಿಗೋಸ್ಕರ ಯೆಹೋವನಿಗೆ
ಪ್ರಾರ್ಥಿಸಲಾಗಿ ಆ ಬೆಂಕಿ ಆರಿಹೋಯಿತು. ಯೆಹೋ 3
ವನು ಉಂಟುಮಾಡಿದ ಬೆಂಕಿ ಅವರ ಮಧ್ಯದಲ್ಲಿ
ಉರಿದದ್ದರಿಂದ ಆ ಸ್ಥಳಕ್ಕೆ 1)ತಬೇರ ಎಂದು ಹೆಸ
ರಾಯಿತು.
ಅವರ ಮಧ್ಯದಲ್ಲಿದ್ದ ಇತರ ಜನರು ಮಾಂಸ 4
ವನ್ನು ಆಶಿಸಿದರು. ಇಸ್ರಾಯೇಲ್ಯರು ಕೂಡ ತಿರಿಗಿ
ಅತ್ತುಕೊಂಡು—ಮಾಂಸವು ನಮಗೆ ಹೇಗೆ ಲಭಿ
ಸೀತು; ಐಗುಪ್ತದೇಶದಲ್ಲಿ ನಾವು ಬಿಟ್ಟಿಯಾಗಿ 5
ತಿನ್ನುತ್ತಿದ್ದ ಮೀನು, ಸವತೆಕಾಯಿ, ಕರ್ಬೂಜು,
ಉಳ್ಳಿಗಡ್ಡೆ, ನೀರುಳ್ಳಿ, ಬೆಳ್ಳುಳ್ಳಿ ಇವು ನೆನಪಿಗೆ ಬರು
ತ್ತವಲ್ಲಾ; ಇಲ್ಲಿಯಾದರೋ ನಮ್ಮ ಜೀವ ಬತ್ತಿ 6
ಹೋಯಿತು; ಈ ಮನ್ನವೇ ಹೊರತು ನಮಗೆ ಇನ್ನೇನೂ
ಸಿಕ್ಕಲಿಕ್ಕಿಲ್ಲ ಅಂದುಕೊಳ್ಳುತ್ತಿದ್ದರು.

1) ತಬೇರ ಅಂದರೆ ಬೆಂಕಿ ಉರಿದ ಸ್ಥಳ.

7 ಆ ಮನ್ನವು ಕೊತ್ತುಂಬರಿ ಕಾಳಿನಂತಿತ್ತು; ಬ
8 ದೋಲಖಫೂಪದಂತೆ ಕಾಣಿಸಿತು. ಜನರು ತಿರು
ಗಾಡುತ್ತಾ ಅದನ್ನು ಕೂಡಿಸಿಕೊಂಡು ಬೀಸುವ ಕಲ್ಲು
ಗಳಿಂದ ಬೀಸಿ ಇಲ್ಲವೆ ಒರಳಲ್ಲಿ ಕುಟ್ಟಿ ಪಾತ್ರೆಗಳಲ್ಲಿ
ಬೇಯಿಸಿ ರೊಟ್ಟಿಗಳನ್ನು ಮಾಡಿಕೊಂಡರು. ಅದರ
9 ರುಚಿ ಎಣ್ಣೆ ಬೆರಸಿ ಮಾಡಿದ ಭಕ್ಷ್ಯಗಳಂತಿತ್ತು. ರಾತ್ರಿ
ಕಾಲದಲ್ಲಿ ಮಂಜು ಪಾಳೆಯದಲ್ಲಿ ಬೀಳುತ್ತಿದ್ದಾಗ
ಅದರೊಂದಿಗೆ ಮನ್ನವೂ ಬೀಳುತ್ತಿತ್ತು.
10 ಎಲ್ಲಾ ಕುಟುಂಬದವರೂ ತಮ್ಮ ತಮ್ಮ ಡೇರೇ ಬಾಗ
ಲುಗಳಲ್ಲಿ ನಿಂತು ಅಳುತ್ತಿರಲಾಗಿ ಆ ಶಬ್ದವು ಮೋಶೆಗೆ
ಕೇಳಿಸಿತು. ಆಗ ಯೆಹೋವನು ಬಹಳ ಕೋಪ
ಗೊಂಡನು. ಮೋಶೆಗೆ ಬೇಸರವಾಯಿತು.
11 ಆಗ ಮೋಶೆ ಯೆಹೋವನಿಗೆ—ಈ ಜನರನ್ನು
ನಡಿಸಿಕೊಂಡು ಹೋಗುವ ಭಾರವನ್ನು ನನ್ನ ಮೇಲೆ
ಹೊರಿಸಿ ನೀನು ಯಾಕೆ ನಿನ್ನ ದಾಸನಿಗೆ ಅಪಕಾರ
12 ಮಾಡುತ್ತೀಯೋ? ನಿನ್ನ ದಯೆಗೆ ನಾನು ಯಾಕೆ
ಅಪಾತ್ರನಾದೆ? ನೀನು ನನಗೆ—ಕೂಸನ್ನು ಎತ್ತಿ
ಕೊಂಡು ಹೋಗುವವನಂತೆ ಈ ಜನವನ್ನು ಉಡಿಲ
ಲ್ಲಿಟ್ಟುಕೊಂಡು ನಾನು ಅವರ ಪಿತೃಗಳಿಗೆ ಪ್ರಮಾಣ
ಮಾಡಿ ಕೊಟ್ಟ ದೇಶಕ್ಕೆ ಒಯ್ಯಿ ಎಂದು ಹೇಳುತ್ತೀ
ಯಲ್ಲಾ. ನಾನು ಇವರಿಗೆ ಹೆತ್ತ ತಾಯಿಯೋ?
13 ಇವರು ನನ್ನ ಬಳಿಗೆ ಅಳುತ್ತಾ ಬಂದು—ಮಾಂಸ
ವನ್ನು ನಮಗೆ ತಿನ್ನಲಿಕ್ಕೆ ಕೊಡು ಎಂದು ಕೇಳಿ
ಕೊಳ್ಳುತ್ತಾರಲ್ಲಾ; ಇಷ್ಟು ಜನಕ್ಕೆ ಬೇಕಾದ ಮಾಂಸವು
14 ನನಗೆ ಎಲ್ಲಿಂದ ದೊರಕೀತು. ಇಷ್ಟು ಜನರ ಭಾರ
ವನ್ನು ನಾನೊಬ್ಬನೇ ಹೊರುವದು ಅಸಾಧ್ಯ; ಅದು
15 ನನ್ನ ಶಕ್ತಿಗೆ ಮೀರಿದ ಕೆಲಸ. ನೀನು ಹೀಗೆ ಮಾಡು
ವದಕ್ಕಿಂತಲೂ ನನ್ನನ್ನು ಈಗಲೇ ಕೊಂದುಹಾಕಿಬಿಟ್ಟರೆ
ಉಪಕಾರ; ನನಗಾಗುವ ದುರವಸ್ಥೆಯನ್ನು ನಾನು
ನೋಡಲಾರೆನು ಅಂದನು.
16 ಆಗ ಯೆಹೋವನು ಮೋಶೆಗೆ ಹೇಳಿದ್ದೇನಂದರೆ—
ಇಸ್ರಾಯೇಲ್ಯರಲ್ಲಿ ಹಿರಿಯರೆಂದೂ ಅಧಿಪತಿಗಳೆಂದೂ
ನೀನು ತಿಳುಕೊಂಡಿರುವ ಎಪ್ಪತ್ತು ಮಂದಿಯನ್ನು
ಕೂಡ ಕರಿಸಿ ದೇವದರ್ಶನದ ಗುಡಾರದ ಬಾಗಲಿಗೆ
17 ಕರತಂದು ಅಲ್ಲೇ ನಿನ್ನೊಡನೆ ನಿಲ್ಲಿಸಿಕೋ. ನಾನು
ಅಲ್ಲಿಗೆ ಇಳಿದುಬಂದು ನಿನ್ನ ಸಂಗಡ ಮಾತಾಡುವೆನು.
ಅದಲ್ಲದೆ ನಾನು ನಿನಗೆ ಅನುಗ್ರಹಿಸಿರುವ ಆತ್ಮೀಯ
ವರಗಳಲ್ಲಿ ಕೆಲವನ್ನು ಅವರಿಗೂ ಪಾಲುಕೊಡುವೆನು.
ಆಗ ನೀನೊಬ್ಬನೇ ಈ ಜನರ ಭಾರವನ್ನು ವಹಿಸಬೇಕಾ
ಗಿರುವದಿಲ್ಲ; ನಿನ್ನ ಜೊತೆಯಲ್ಲಿ ಇವರೂ ವಹಿಸುವರು.
18 ಅದಲ್ಲದೆ ಇಸ್ರಾಯೇಲ್ಯರಿಗೆ ಹೀಗೆ ಹೇಳು—
ನಾಳೆಗೆ ನಿಮ್ಮನ್ನು ಶುದ್ಧಪಡಿಸಿಕೊಳ್ಳಿರಿ; ನಾಳೆ
ನಿಮಗೆ ಮಾಂಸಾಹಾರವು ದೊರೆಯುವದು. ನೀವು
ಯೆಹೋವನಿಗೆ ಕೇಳಿಸುವಂತೆ—ನಮಗೆ ಮಾಂಸ
ವನ್ನು ಕೊಡುವವರೇ ಇಲ್ಲ; ಐಗುಪ್ತದೇಶದಲ್ಲಿ
ಎಷ್ಟೋ ಸುಖವಾಗಿದ್ದೆವಲ್ಲಾ ಎಂದು ಅಳುತ್ತಾ ಹೇಳಿ
ದ್ದರಿಂದ ಯೆಹೋವನೇ ನಿಮಗೆ ಮಾಂಸವನ್ನು
19 ತಿನ್ನಲಿಕ್ಕೆ ಕೊಡುವನು. ನಿಮ್ಮ ಮಧ್ಯದಲ್ಲಿರುವ

ಯೆಹೋವನನ್ನು ನೀವು ಉಲ್ಲಂಘಿಸಿ—ಅಯ್ಯೋ
ನಾವು ಐಗುಪ್ತದೇಶವನ್ನು ಬಿಟ್ಟುಬಂದದ್ದು ಮೋ
ವಾಯಿತೆಂದು ಆತನ ಮುಂದೆ ಅತ್ತದ್ದರಿಂದ ನೀ
ಒಂದು ದಿನವಲ್ಲ, ಎರಡು ದಿನವಲ್ಲ, ಐದು ದಿನವ
ಹತ್ತು ದಿನವಲ್ಲ, ಇಪ್ಪತ್ತು ದಿನವಲ್ಲ, ಪೂರಾ ಒಂ
ತಿಂಗಳು ಮಾಂಸವನ್ನು ಊಟಮಾಡುವಿರಿ. ಅದು ಓ
ರಿಕೆಯಾಗಿ ನಿಮ್ಮ ಮೂಗಿನಲ್ಲಿ ಹೊರಟು ನಿಮಗೆ ಅಸ
ವಾಗುವ ತನಕ ಅದನ್ನು ಊಟಮಾಡುವಿರಿ ಅಂದನ
ಅದಕ್ಕೆ ಮೋಶೆ—ನನ್ನ ಸಂಗಡ ಇರುವ ಜನ
ಆರು ಲಕ್ಷ ಕಾಲಾಳುಗಳು; ಆದಾಗ್ಯೂ ನೀನು—
ಇವರು ಪೂರಾ ಒಂದು ತಿಂಗಳು ತಿನ್ನುವಷ್ಟು ಮಾಂ
ವನ್ನು ಕೊಡುತ್ತೇನೆ ಎಂದು ಹೇಳಿದ್ದೀ. ಅವ
ಬೇಕಾದಷ್ಟು ಸಿಕ್ಕುವಂತೆ ನಾವು ಆಡುಕುರಿಗಳನ
ದನಗಳನ್ನೂ ಕೊಯ್ಯಬೇಕನ್ನುತ್ತೀಯೋ? ಇಲ್ಲ
ಸಮುದ್ರದಲ್ಲಿರುವ ಎಲ್ಲಾ ಮೀನುಗಳನ್ನೂ ಹಿ
ಕೊಳ್ಳಬೇಕೋ? ಎಂದು ಹೇಳಲಾಗಿ ಯೆಹೋವ
ಅವನಿಗೆ—ಯೆಹೋವನ ಕೈ ಮೋಟುಗೈಯೋ
ನನ್ನ ಮಾತು ನೆರವೇರುತ್ತದೋ ಇಲ್ಲವೋ ಈಗ ನೀನ
ನೋಡುವಿ ಎಂದು ಹೇಳಿದನು. ಮೋಶೆ ಹೊರಟುಹೋ
ಯೆಹೋವನ ಮಾತುಗಳನ್ನು ಜನರಿಗೆ ತಿಳಿಸಿದನು.
ಮತ್ತು ಅವನು ಜನರ ಹಿರಿಯರಲ್ಲಿ ಎಪ್ಪತ
ಮಂದಿಯನ್ನು ಕೂಡಿಸಿ ದೇವದರ್ಶನದ ಗುಡಾರ
ಸುತ್ತಲೂ ನಿಲ್ಲಿಸಿದಾಗ ಯೆಹೋವನು ಆ ಮೇ
ದಲ್ಲಿ ಇಳಿದುಬಂದು ಅವನ ಸಂಗಡ ಮಾತಾಡಿ ಅವ
ಲ್ಲಿದ್ದ ಆತ್ಮೀಯವರಗಳಲ್ಲಿ ಆ ಎಪ್ಪತ್ತು ಮಂ
ಹಿರಿಯರಿಗೂ ಪಾಲುಕೊಟ್ಟನು; ಆ ವರಗಳು ಅವರಿ
ದೊರಕಿದಾಗ ಅವರು ಪರವಶರಾಗಿ ಪ್ರವಾದಿಸಿದರ
ಆ ಮೇಲೆ ಅವರು ತಿರಿಗಿ ಪ್ರವಾದಿಸಲಿಲ್ಲ.
ಆದರೆ ಎಲ್ದಾದ್, ಮೇದಾದ್ ಎಂಬವರಿಬ್ಬರ
ಪಾಳೆಯದೊಳಗೆ ನಿಂತಿದ್ದರು. ಅವರ ಹೆಸರುಗಳ
ಬರೆಯಲ್ಪಟ್ಟಿದ್ದಾಗ್ಯೂ ಅವರು ದೇವದರ್ಶನದ ಗುಡ
ರಕ್ಕೆ ಹೊರಟುಹೋಗಲಿಲ್ಲ. ಆ ಆತ್ಮೀಯವರಗಳ
ಅವರಿಗೂ ದೊರೆತದರಿಂದ ಅವರು ಪಾಳೆಯದೊಳ
ಪರವಶರಾಗಿ ಪ್ರವಾದಿಸಿದರು. ಹೀಗಿರಲು ಒಬ್ಬ
ಹುಡುಗನು ಮೋಶೆಯ ಬಳಿಗೆ ಓಡಿಬಂದು—ಎಲ್ದಾದ
ಮೇದಾದರು ಪಾಳೆಯದಲ್ಲಿ ಪರವಶರಾಗಿ ಪ್ರವಾ
ಸುತ್ತಿದ್ದಾರೆಂದು ತಿಳಿಸಲಾಗಿ ಯೌವನದಿಂದ ಮೋಶೆ
ಶಿಷ್ಯನಾದ ನೂನನ ಮಗ ಯೆಹೋಶುವನ
ಮೋಶೆಗೆ—ಸ್ವಾಮೀ, ಅವರಿಗೆ ಬೇಡವೆನ್ನಬೇಕ
ಎಂದು ಹೇಳಿದನು. ಅದಕ್ಕೆ ಮೋಶೆ—ನನ್ನ ಗೌರ
ವನ್ನು ಕಾಪಾಡಬೇಕೆಂದಿದ್ದೀಯೋ? ಯೆಹೋವ
ಅನುಗ್ರಹದಿಂದ ಆತನ ಜನರೆಲ್ಲರೂ ಆತ್ಮೀಯವ
ಗಳನ್ನು ಹೊಂದಿದವರೂ ಪ್ರವಾದಿಸುವವರೂ ಆದ
ಎಷ್ಟೋ ಒಳ್ಳೇದು ಅಂದನು. ತರುವಾಯ ಮೋ
ಯೂ ಇಸ್ರಾಯೇಲ್ಯರ ಹಿರಿಯರೂ ಪಾಳೆಯಕ್ಕೆ
ಬಂದುಬಿಟ್ಟರು.
ಆಗ ಯೆಹೋವನ ಬಳಿಯಿಂದ ಗಾಳಿಹೊರಟ
ಸಮುದ್ರದಿಂದ 1)ಲಾವಕ್ಕಿಗಳನ್ನು ಹೊಡೆದುಕೊಂ

1) ಅಥವಾ: ಬುರಲಿಗಳನ್ನು.

ಪಾಳೆಯದ ಸುತ್ತಲೂ ಒಂದು ದಿನದ ಪ್ರಯಾಣದಷ್ಟು
ದೂರದ ವರೆಗೆ ಭೂಮಿಗಿಂತ ಎರಡು ಮೊಳ
ಎತ್ತರದಲ್ಲಿ ಹಾರುತ್ತಾ ಬರುವಂತೆ ಮಾಡಿತು.
ಇಸ್ರಾಯೇಲ್ಯರು ಎದ್ದು ಆ ದಿನ ಹಗಲಿರುಳೂ
ಮರುದಿನ ಹಗಲೂ ಆ ಲಾವಕ್ಕಿಗಳನ್ನು ಕೂಡಿಸಿ
ಕೊಳ್ಳುತ್ತಿದ್ದರು; ಸ್ವಲ್ಪವಾಗಿ ಕೂಡಿಸಿಕೊಂಡವರು
ಹದಿನೆಂಟು ಖಂಡುಗ ಕೂಡಿಸಿದರು. ಅವುಗಳನ್ನು
ಪಾಳೆಯದ ಸುತ್ತಲೂ ಹರವಿ ಒಣಗಿಸಿಕೊಂಡರು.
ಆದರೆ ಅವರು ಆ ಮಾಂಸವನ್ನು ಇನ್ನೂ ಆಹಾರ
ಮಾಡಿಕೊಳ್ಳುತ್ತಿರುವಾಗ 1)ಅದು ಮುಗಿದುಹೋಗು
ವದರೊಳಗಾಗಿಯೇ ಯೆಹೋವನು ಅವರ ಮೇಲೆ
ಕೋಪಗೊಂಡು ಬಹಳ ಜನರನ್ನು ಘೋರವ್ಯಾಧಿ
ಯಿಂದ ಸಾಯಿಸಿದನು. ಆಶೆಪಟ್ಟವರನ್ನು ಅಲ್ಲಿ
ಹೂಳಿಟ್ಟದರಿಂದ ಆ ಸ್ಥಳಕ್ಕೆ 2)ಕಿಬ್ರೋತ್ ಹತಾವಾ
ಎಂದು ಹೆಸರಾಯಿತು.
ತರುವಾಯ ಇಸ್ರಾಯೇಲ್ಯರು ಕಿಬ್ರೋತ್ ಹತಾವ
ದಿಂದ ಹೊರಟು ಹಚೇರೋತಿಗೆ ಬಂದು ಅಲ್ಲಿ ಇಳು
ಕೊಂಡರು.

ಯೆಹೋವನು ಮಿರ್ಯಾಮಳಿಗೆ ತೊನ್ನನ್ನು ಉಂಟುಮಾಡಿ
ಮೋಶೆಯು ಪ್ರವಾದಿಗಳಿಗಿಂತಲೂ ಹೆಚ್ಚಿನವನೆಂದು
ದೃಢವಾಗಿ ತೋರ್ಪಡಿಸಿದ್ದು.

ಮೋಶೆ ಕೂಷ್ ದೇಶದ ಸ್ತ್ರೀಯನ್ನು ಮದುವೆ
ಮಾಡಿಕೊಂಡಿದ್ದನು. ಅದರ ನಿಮಿತ್ತ ಮಿರ್ಯಾ
ಮಳೂ ಆರೋನನೂ ಅವನಿಗೆ ವಿರೋಧವಾಗಿ ಮಾತಾ
ಡುವವರಾಗಿ—ಯೆಹೋವನು ಮೋಶೆಯ ಮೂಲಕ
ವಾಗಿ ಮಾತ್ರವೇ ಮಾತಾಡಿದ್ದಾನೋ; ನಮ್ಮ ಮೂಲ
ಕವೂ ಆತನು ಮಾತಾಡಲಿಲ್ಲವೇ ಎಂದು ಹೇಳಿ
ಕೊಂಡರು. ಆ ಮೋಶೆ ಭೂಮಿಯ ಮೇಲಿರುವ
ಎಲ್ಲಾ ಮನುಷ್ಯರಿಗಿಂತಲೂ ಬಹುಸಾತ್ವಿಕನು. ಹೀಗಿ
ರಲಾಗಿ ಅವರು ಆಡಿದ ಮಾತನ್ನು ಯೆಹೋವನು
ಕೇಳಿ ಫಕ್ಕನೆ ಮೋಶೆ ಆರೋನ್ ಮಿರ್ಯಾಮರಿಗೆ—
ನೀವು ಮೂರು ಮಂದಿಯೂ ದೇವದರ್ಶನದ ಗುಡಾ
ರಕ್ಕೆ ಬರಬೇಕೆಂದು ಆಜ್ಞಾಪಿಸಿದನು. ಆ ಮೂವರು
ಬಂದಾಗ ಯೆಹೋವನು ಮೇಘಸ್ತಂಭದೊಳಗೆ ಇಳಿದು
ಬಂದು ದೇವದರ್ಶನದ ಗುಡಾರದ ಬಾಗಲಲ್ಲಿ ನಿಂತು
ಆರೋನ್ ಮಿರ್ಯಾಮರನ್ನು ಹತ್ತಿರಕ್ಕೆ ಕರೆದನು.
ಅವರು ಬಂದಾಗ ಆತನು—

ನನ್ನ ಮಾತನ್ನು ಕೇಳಿರಿ. ನಿಮ್ಮಲ್ಲಿ ಪ್ರವಾದಿ
ಯಿದ್ದರೆ ನಾನು ಅವನಿಗೆ ಜ್ಞಾನದೃಷ್ಟಿಯಲ್ಲಿ
ಕಾಣಿಸಿಕೊಳ್ಳುವೆನು, ಇಲ್ಲವೆ ಸ್ವಪ್ನದಲ್ಲಿ ಅವನ
ಸಂಗಡ ಮಾತಾಡುವೆನು. ನನ್ನ ಸೇವಕನಾದ
ಮೋಶೆ ಅಂಥವನಲ್ಲ; ಅವನು ನನ್ನ ಮನೆಯ
ಲ್ಲೆಲ್ಲಾ ನಂಬಿಗಸ್ತನು. ಅವನ ಸಂಗಡ ನಾನು
ಗೂಢವಾಗಿ ಅಲ್ಲ, ಪ್ರತ್ಯಕ್ಷದಲ್ಲಿ ಸ್ಪಷ್ಟವಾಗಿಯೇ
ಮಾತಾಡುವೆನು. ಅವನು ಯೆಹೋವನ ಸ್ವರೂಪ
ವನ್ನೇ ದೃಷ್ಟಿಸುವನು. ಹೀಗಿರಲು ನೀವು ನನ್ನ
ಸೇವಕನಾದ ಮೋಶೆಗೆ ವಿರೋಧವಾಗಿ ಮಾತಾಡು
ವದಕ್ಕೆ ಭಯಪಡಬೇಕಾಗಿತ್ತು

ಎಂದು ಹೇಳಿ ಕೋಪಗೊಂಡು ಹೋದನು. ಆ 9, 10
ಮೇಘವು ದೇವದರ್ಶನದ ಗುಡಾರದ ಬಳಿಯಿಂದ
ಹೋದಾಗ, ಅಹಾ, ಮಿರ್ಯಾಮಳಿಗೆ ತೊನ್ನುಹತ್ತಿದದ
ರಿಂದ ಆಕೆಯ ಚರ್ಮ ಹಿಮದಂತೆ ಬೆಳ್ಳಗಾಗಿ
ಹೋಗಿತ್ತು. ಆರೋನನು ಆಕೆಯನ್ನು ನೋಡ
ಲಾಗಿ ಆಕೆಗೆ ತೊನ್ನು ಪ್ರಾಪ್ತವಾಯಿತೆಂದು ತಿಳು
ಕೊಂಡನು.
ಆಗ ಆರೋನನು ಮೋಶೆಗೆ—ಅಯ್ಯಾ, ನಾವು 11
ವಿವೇಕವಿಲ್ಲದೆ ನಡೆದು ದೋಷಿಗಳಾದರೂ ಈ ದೋ
ಷದ ಫಲವನ್ನು ನಾವು ಅನುಭವಿಸುವಂತೆ ಮಾಡ
ಬೇಡವೆಂದು ನಿನ್ನನ್ನು ಬೇಡಿಕೊಳ್ಳುತ್ತೇನೆ; ಅರ್ಧ 12
ಮಾಂಸ ಕೊಳೆತುಹೋಗಿ ಹುಟ್ಟಿದ ಶಿಶುಶವದಂತೆ
ಈಕೆ ಆಗಬಾರದು ಎಂದು ಬೇಡಿದನು. ಆಗ ಮೋಶೆ 13
ಯೆಹೋವನಿಗೆ—ದೇವಾ, ಆಕೆಯನ್ನು ವಾಸಿಮಾಡ
ಬೇಕೆಂದು ಬೇಡುತ್ತೇನೆ ಎಂದು ಮೊರೆಯಿಟ್ಟನು.
ಅದಕ್ಕೆ ಯೆಹೋವನು—ತಂದೆ ಮುಖದ ಮೇಲೆ 14
ಉಗುಳಿದರೆ ಆಕೆ ಹೇಗೂ ಏಳು ದಿವಸ ನಾಚಿಕೆ
ಯಿಂದ ಮರೆಯಾಗುವದಿಲ್ಲವೇ; ಹಾಗಾದರೆ ಆಕೆ
ಏಳು ದಿವಸ ಪಾಳೆಯದ ಹೊರಗೆ ಇರಬೇಕು;
ತರುವಾಯ ನೀನು ಆಕೆಯನ್ನು ಪಾಳೆಯದೊಳಗೆ
ಸೇರಿಸಿಕೊಳ್ಳಬಹುದು ಎಂದು ಉತ್ತರಕೊಟ್ಟನು. ಆದ 15
ಕಾರಣ ಮಿರ್ಯಾಮಳು ಏಳು ದಿನದ ವರೆಗೆ
ಪಾಳೆಯದ ಹೊರಗೆ ಇರಬೇಕಾಯಿತು. ಆಕೆಯು
ತಿರಿಗಿ ಸೇರಿಕೊಳ್ಳುವ ಪರ್ಯಂತರ ಇಸ್ರಾಯೇಲ್ಯರು
ಪ್ರಯಾಣಮಾಡಲಿಲ್ಲ.
ತರುವಾಯ ಅವರು ಹಚೇರೋತಿನಿಂದ ಹೊರಟು 16
ಪಾರಾನ್ ಅರಣ್ಯದಲ್ಲಿ ಇಳುಕೊಂಡರು.

ಕಾನಾನ್‌ದೇಶವನ್ನು ಸಂಚರಿಸಿ ನೋಡಿದವರ ಮಾತುಗಳನ್ನು
ಕೇಳಿ ಇಸ್ರಾಯೇಲ್ಯರು ಅಧೈರ್ಯಪಟ್ಟು ಗುಣುಗುಟ್ಟಲಾಗಿ
ಅವರು ನಾಲ್ವತ್ತು ವರುಷ ಅರಣ್ಯವಾಸಿಗಳಾಗಿರಬೇಕೆಂದು
ಯೆಹೋವನು ವಿಧಿಸಿದ್ದು.

13 ಯೆಹೋವನು ಮೋಶೆಗೆ—ನಾನು ಇಸ್ರಾಯೇ 2
ಲ್ಯರಿಗೆ ಕೊಡುವ ಕಾನಾನ್‌ದೇಶವನ್ನು ಸಂಚರಿಸಿ
ನೋಡುವದಕ್ಕೆ ನೀನು ಒಂದೊಂದು ಕುಲದಿಂದ
ಒಬ್ಬೊಬ್ಬ ಮುಖ್ಯಸ್ಥನನ್ನು ಕಳುಹಿಸಬೇಕೆಂದು
ಆಜ್ಞಾಪಿಸಿದನು. ಯೆಹೋವನ ಅಪ್ಪಣೆಯ ಮೇರೆಗೆ 3
ಮೋಶೆ ಪಾರಾನ್ ಅರಣ್ಯದಿಂದ ಇಸ್ರಾಯೇಲ್ಯರ
ಮುಖ್ಯಸ್ಥರನ್ನು ಕಳುಹಿಸಿದನು. ಅವರ ಹೆಸರುಗಳು 4
ಯಾವವಂದರೆ—
ರೂಬೇನ್ ಕುಲದ ಜಕ್ಕೂರನ ಮಗನಾದ
ಶಮ್ಮೂವ,
ಸಿಮೆಯೋನ್ ಕುಲದ ಹೋರಿಯ ಮಗನಾದ 5
ಶಾಫಾಟ್,

1) ಮೂಲ: ಆ ಮಾಂಸವು ಇನ್ನೂ ಅವರ ಹಲ್ಲುಗಳ ನಡುವೆ ಇದ್ದಾಗ. 2) ಅಂದರೆ ಆಶೆಪಟ್ಟವರ ಸಮಾಧಿಗಳು.

6 ಯೆಹೂದ ಕುಲದ ಯೆಫುನ್ನೆಯ ಮಗನಾದ ಕಾಲೇಬ್,
7 ಇಸ್ಸಾಕಾರ್ ಕುಲದ ಯೋಸೇಫನ ಮಗನಾದ ಇಗಾಲ್,
8 ಎಫ್ರಾಯಿಮ್ ಕುಲದ ನೂನನ ಮಗನಾದ ಹೋಶೇಯ,
9 ಬೆನ್ಯಾಮೀನ್ ಕುಲದ ರಾಫೂವನ ಮಗನಾದ ಪಲ್ಟೀ,
10 ಜೆಬುಲೂನ್ ಕುಲದ ಸೋದೀಯ ಮಗನಾದ ಗದ್ದೀಯೇಲ್,
11 ಯೋಸೇಫ್ ಅಂದರೆ ಮನಸ್ಸೆ ಕುಲದ ಸೂಸೀಯ ಮಗನಾದ ಗದ್ದೀ,
12 ದಾನ್ ಕುಲದ ಗೆಮಲ್ಲೀಯನ ಮಗನಾದ ಅಮ್ಮೀಯೇಲ್,
13 ಆಶೇರ್ ಕುಲದ ಮೀಕಾಯೇಲನ ಮಗನಾದ ಸೆತೂರ್,
14 ನಫ್ತಾಲಿ ಕುಲದ ವಾಫೆಸೀಯನ ಮಗನಾದ ನಹಬೀ,
15 ಗಾದ್ ಕುಲದ ಮಾಕೀಯನ ಮಗನಾದ ಗೆಯೂವೇಲ್.
16 ದೇಶವನ್ನು ಸಂಚರಿಸಿ ನೋಡುವದಕ್ಕೆ ಮೋಶೆ ಕಳು
ಹಿಸಿದ ಮನುಷ್ಯರ ಹೆಸರುಗಳು ಇವೇ. ಮೋಶೆ
ನೂನನ ಮಗನಾದ ಹೋಶೇಯನಿಗೆ ಯೆಹೋಶುವ
ನೆಂದು ಹೆಸರಿಟ್ಟನು.
17 ಕಾನಾನ್‌ದೇಶವನ್ನು ಸಂಚರಿಸಿ ನೋಡುವದಕ್ಕೆ
ಮೋಶೆ ಅವರನ್ನು ಕಳುಹಿಸುವಾಗ ಅವರಿಗೆ—ನೀವು
ಕಾನಾನ್‌ದೇಶದ ದಕ್ಷಿಣಪ್ರಾಂತ್ಯದ ಮಾರ್ಗವಾಗಿ
ಬೆಟ್ಟದ ಸೀಮೆಗೆ ಹತ್ತಿಹೋಗಿ ಆ ದೇಶದ ಸಂಗತಿ
18 ಯನ್ನೆಲ್ಲಾ ನೋಡಿ ತಿಳಿದುಕೊಳ್ಳಬೇಕು. ಅಲ್ಲಿನ
ನಿವಾಸಿಗಳು ಬಲಿಷ್ಠರೋ ಬಲಹೀನರೋ, ಬಹಳ
19 ಮಂದಿಯೋ ಸ್ವಲ್ಪ ಮಂದಿಯೋ, ಅವರ ದೇಶವು
ಒಳ್ಳೇದೋ ಕೆಟ್ಟದ್ದೋ, ಅವರ ವಾಸಸ್ಥಳಗಳು ಪಾಳೆ
20 ಯಗಳೋ ಕೋಟೆಗಳೋ, ಭೂಮಿಯು ಸಾರ
ವಾದದ್ದೋ ನಿಸ್ಸಾರವಾದದ್ದೋ, ಮರಗಳುಳ್ಳದ್ದೋ
ಬೈಲೋ ನೋಡಿ ತಿಳಿದುಕೊಳ್ಳಬೇಕು. ಅದಲ್ಲದೆ
ಆ ದೇಶದ ಉತ್ಪನ್ನಗಳಲ್ಲಿ ಕೆಲವನ್ನು ಸಾಹಸ
ಮಾಡಿ ತರಬೇಕೆಂದು ಬೋಧಿಸಿದನು. ಆಗ ದ್ರಾಕ್ಷಾ
ಲತೆಗಳ ಪ್ರಥಮಫಲಕಾಲವಾಗಿತ್ತು.
21 ಅವರು ಬೆಟ್ಟವನ್ನು ಹತ್ತಿ ಚಿನ್ ಅರಣ್ಯದಿಂದ
ಹಮಾತಿನ ದಾರಿಯಲ್ಲಿರುವ ರೆಹೋಬಿನ ವರೆಗೆ ಆ
22 ದೇಶವನ್ನು ಸಂಚರಿಸಿ ನೋಡಿದರು. ಅವರು ಬೆಟ್ಟ
ವನ್ನು ಹತ್ತಿ ಕಾನಾನ್‌ದೇಶದ ದಕ್ಷಿಣಪ್ರಾಂತ್ಯವನ್ನು
ದಾಟಿ ಹೆಬ್ರೋನಿಗೆ ಬಂದರು. ಅಲ್ಲಿ ಅಹೀಮನ್,
ಶೇಷೈ, ತಲ್ಮೈ ಎಂಬ ಉನ್ನತರಾದ ಪುರುಷರು
ಇದ್ದರು. ಹೆಬ್ರೋನ್ ಪಟ್ಟಣವು ಐಗುಪ್ತದೇಶದಲ್ಲಿ
ರುವ ಚೋವನ್ ಪಟ್ಟಣಕ್ಕಿಂತ ಏಳು ವರುಷ ಮುಂಚೆ
23 ಕಟ್ಟಲ್ಪಟ್ಟದ್ದು. ಅವರು ಎಷ್ಕೋಲ್ ಎಂಬ ತಗ್ಗಿಗೆ
ಬಂದು ಅಲ್ಲಿ ದ್ರಾಕ್ಷಾಲತೆಯಿಂದ ಒಂದೇ ಗೊಂಚ

ಲುಳ್ಳ ಕೊಂಬೆಯನ್ನು ಕೊಯಿದರು; ಇಬ್ಬ
ಅದನ್ನು ಅಡ್ಡದಂಡಿಗೆಯಿಂದ ಹೊತ್ತುಕೊಂ
ಬಂದರು. ಕೆಲವು ದಾಳಿಂಬ ಹಣ್ಣುಗಳನ್ನೂ ಅಂಜ
ರದ ಹಣ್ಣುಗಳನ್ನೂ ತಂದರು. ಇಸ್ರಾಯೇಲ್ಯ
ಅಲ್ಲಿ ಆ ದ್ರಾಕ್ಷೆಯ ಗೊಂಚಲನ್ನು ಕೊಯಿದ
ರಿಂದಲೇ ಆ ಸ್ಥಳಕ್ಕೆ [1]ಎಷ್ಕೋಲ್ ಎಂದು ಹ
ರುಂಟಾಯಿತು.
ಅವರು ನಾಲ್ವತ್ತು ದಿವಸಗಳು ಆ ದೇಶವನ್ನು 2
ಸಂಚರಿಸಿ ನೋಡಿದ ಮೇಲೆ ಪಾರಾನ್ ಅರಣ್ಯದಲ್ಲಿ
ಮೋಶೆ ಆರೋನರ ಮತ್ತು ಇಸ್ರಾಯೇಲ್ಯರ ಸ
ಸಮೂಹದವರ ಬಳಿಗೆ ಕಾದೇಶಿಗೆ ಬಂದು ಅವರ
ಸಮಾಚಾರವನ್ನು ತಿಳಿಸಿ ಆ ದೇಶದ ಹಣ್ಣುಗಳನ
ತೋರಿಸಿದರು. ಅವರು ಮೋಶೆಗೆ—ನೀನು ನಮ್ಮ
ಕಳುಹಿಸಿದ ದೇಶಕ್ಕೆ ಹೋದೆವು; ಅದು ಹಾಲ
ಜೇನೂ ಹರಿಯುವ ದೇಶವೇ; ಅಲ್ಲಿನ ಹಣ್ಣುಗಳ
ಇಂಥವು. ಆದರೆ ಆ ದೇಶದ ನಿವಾಸಿಗಳು ಬಲಿಷ್ಠರು
ಅವರಿರುವ ಪಟ್ಟಣಗಳು ದೊಡ್ಡವಾಗಿಯೂ ಕೋ
ಕೊತ್ತಲುಗಳುಳ್ಳವಾಗಿಯೂ ಅವೆ; ಅದಲ್ಲದೆ ಅ
[2]ಉನ್ನತರಾದ ಪುರುಷರನ್ನು ನೋಡಿದೆವು. ದಕ್ಷಿ
ಸೀಮೆಯಲ್ಲಿ ಅಮಾಲೇಕ್ಯರೂ ಬೆಟ್ಟದ ಸೀಮೆಯ
ಹಿತ್ತಿಯರು, ಯೆಬೂಸಿಯರು, ಅಮೋರಿಯರು ಇ
ರೂ ಸಮುದ್ರತೀರದಲ್ಲಿ ಮತ್ತು ಯೊರ್ದನ್ ಹೊಳೆ
ಬಳಿಯಲ್ಲಿ ಕಾನಾನ್ಯರೂ ವಾಸವಾಗಿದ್ದಾರೆ ಎಂ
ತಿಳಿಸಿದರು.
ಇಸ್ರಾಯೇಲ್ಯರು ಮೋಶೆಗೆ ವಿರೋಧವಾಗಿ ಗುಣ
ಗುಟ್ಟಲಾಗಿ ಕಾಲೇಬನು ಅವರನ್ನು ಸುಮ
ನಿರಿಸಿ—ನಾವು ನಿರ್ಭಯವಾಗಿ ಆ ಬೆಟ್ಟದ ಸೀಮೆ
ಹತ್ತಿಹೋಗಿ ಅದನ್ನು ಸ್ವಾಧೀನಪಡಿಸಿಕೊಳ್ಳೋಣ
ಅದನ್ನು ಜಯಿಸಬಲ್ಲೆವು ಎಂದು ಹೇಳಿದನು. ಆದ
ಅವನ ಜೊತೆಯಲ್ಲಿ ಹೋದವರು—ಆ ಜನರು ನ
ಗಿಂತ ಬಲಿಷ್ಠರು; ಅವರ ಮೇಲೆ ಹೋಗುವದಕ
ನಮಗೆ ಶಕ್ತಿಸಾಲದು ಅಂದರು. ಅದಲ್ಲದೆ ಇವರ
ತಾವು ಸಂಚರಿಸಿ ನೋಡಿದ ದೇಶದ ವಿಷಯವಾ
ಇಸ್ರಾಯೇಲ್ಯರಿಗೆ ಅಶುಭಸಮಾಚಾರವನ್ನು ಹೇಳ
ವವರಾಗಿ—ನಾವು ಸಂಚರಿಸಿ ನೋಡಿದ ದೇಶ
ತನ್ನಲ್ಲಿ ವಾಸಿಸುವವರನ್ನು ನುಂಗಿಬಿಡುತ್ತದೆ; ಅದಲ್ಲ
ನಾವು ಅದರಲ್ಲಿ ನೋಡಿದ ಜನರೆಲ್ಲರೂ ಬಹಳ ಎತ್ತ
ವಾದವರು; ಅಲ್ಲಿ ನೆಫೀಲಿಯರನ್ನು ಅಂದರೆ ನೆಫ
ಲಿಯ ವಂಶದವರಾದ ಉನ್ನತಪುರುಷರನ್ನು ನೋ
ದೆವು. ನಾವು ಅವರ ಮುಂದೆ ಮಿಡತೆಗಳಂತೆ ಇದ್ದ
ವೆಂದು ತಿಳಿದುಕೊಂಡೆವು; ಅವರಿಗೂ ನಾವು ಹಾಗೆಯ
ತೋರಿದೆವು ಅಂದರು.
ಅದನ್ನು ಕೇಳಿ ಜನಸಮೂಹದವರೆಲ್ಲರೂ ಗುಲ್ಲು
ಮಾಡಿ ಬಹಳ ಕೂಗಿಕೊಂಡರು; ಆ ರಾತ್ರಿಯೆಲ್ಲಾ
ಜನರು ಅಳುತ್ತಿದ್ದರು. ಇಸ್ರಾಯೇಲ್ಯರೆಲ್ಲರೂ ಮೋ
ಆರೋನರಿಗೆ ವಿರೋಧವಾಗಿ ಗುಣುಗುಟ್ಟಿ—ನಾ
ಐಗುಪ್ತದೇಶದಲ್ಲಿಯೇ ಸತ್ತಿದ್ದರೆ ಎಷ್ಟೋ ಮೇಲ
ಗಿತ್ತು; ಈ ಅರಣ್ಯದಲ್ಲಿಯಾದರೂ ಸತ್ತಿದ್ದರೆ ಮೇಲ

1) ಅಂದರೆ ದ್ರಾಕ್ಷೆಯ ಗೊಂಚಲು. 2) ಮೂಲ: ಅನಾಕ್ಯರನ್ನು.

ಗಿತ್ತು. ಯೆಹೋವನು ನಮ್ಮನ್ನು ಯಾಕೆ ಕತ್ತಿಯ
ಬಾಯಿಂದ ಸಾಯಿಸುವದಕ್ಕೆ ಈ ದೇಶಕ್ಕೆ ಬರ
ಮಾಡುತ್ತಾನೆ; ನಮ್ಮ ಹೆಂಡರೂ ಮಕ್ಕಳೂ ಪರರ
ಪಾಲಾಗುವರಲ್ಲಾ; ನಾವು ಐಗುಪ್ತದೇಶಕ್ಕೆ ತಿರಿಗಿ
ಹೋಗುವದು ಒಳ್ಳೇದಲ್ಲವೇ ಎಂದು ಹೇಳಿಕೊಳ್ಳುತ್ತಾ
ಒಬ್ಬರ ಸಂಗಡಲೊಬ್ಬರು—ನಾವು ನಾಯಕನನ್ನು
ನೇಮಿಸಿಕೊಂಡು ಐಗುಪ್ತದೇಶಕ್ಕೆ ತಿರಿಗಿ ಹೋಗೋಣ
ಎಂದು ಮಾತಾಡಿಕೊಳ್ಳುತ್ತಿದ್ದರು.

ಆಗ ಮೋಶೆ ಆರೋನರು ಇಸ್ರಾಯೇಲ್ಯರ ಸರ್ವ
ಸಮೂಹದವರ ಮುಂದೆ ಬೋರಲಬಿದ್ದರು. ಮತ್ತು
ದೇಶವನ್ನು ಸಂಚರಿಸಿ ನೋಡಿದವರಲ್ಲಿದ್ದ ನೂನನ
ಮಗನಾದ ಯೆಹೋಶುವನೂ ಯೆಫುನ್ನೆಯ ಮಗ
ನಾದ ಕಾಲೇಬನೂ ತಮ್ಮ ಬಟ್ಟೆಗಳನ್ನು ಹರಿದು
ಕೊಂಡು ಇಸ್ರಾಯೇಲ್ಯರ ಸರ್ವಸಮೂಹದವರಿಗೆ
ಹೀಗಂದರು—ನಾವು ಸಂಚರಿಸಿ ನೋಡಿದ ದೇಶವು
ಅತ್ಯುತ್ತಮವಾದದ್ದು; ಅದು ಹಾಲೂ ಜೇನೂ ಹರಿ
ಯುವ ದೇಶ; ಯೆಹೋವನು ನಮ್ಮನ್ನು ಮೆಚ್ಚಿ
ಕೊಂಡರೆ ಅದರಲ್ಲಿ ನಮ್ಮನ್ನು ಸೇರಿಸಿ ಅದನ್ನು
ನಮ್ಮ ಸ್ವಾಧೀನಕ್ಕೆ ಕೊಡುವನು; ಹೀಗಿರುವದರಿಂದ
ಯೆಹೋವನಿಗೆ ತಿರುಗಿಬೀಳಬೇಡಿರಿ. ಅದಲ್ಲದೆ ಆ
ದೇಶದ ಜನರಿಗೆ ದಿಗಿಲುಪಡಬೇಡಿರಿ; ನಾವು ಅವ
ರನ್ನು ನುಂಗಿ ಪುಷ್ಟಿಯಾಗುವೆವು. ಅವರಿಗೆ ನೆರಳಾಗಿದ್ದ
ದೇವರು ಅವರನ್ನು ಕೈಬಿಟ್ಟನು; ನಮ್ಮ ಕಡೆ
ಯೆಹೋವನು ಇದ್ದಾನೆ, ಅವರಿಗೆ ಭಯಪಡಬೇಡಿರಿ
ಅಂದರು. ಆದರೆ ಜನಸಮೂಹದವರೆಲ್ಲರೂ [ಕೇಳ
ಲೊಲ್ಲದೆ] ಅವರನ್ನು ಕಲ್ಲೆಸೆದು ಕೊಲ್ಲಬೇಕೆಂದು
ಹೇಳಿಕೊಳ್ಳುತ್ತಿರಲಾಗಿ ಯೆಹೋವನ ತೇಜಸ್ಸು ದೇವ
ದರ್ಶನದ ಗುಡಾರದಲ್ಲಿ ಹೊಳೆದು ಇಸ್ರಾಯೇಲ್ಯ
ರೆಲ್ಲರಿಗೂ ಕಾಣಿಸಿತು.

ಯೆಹೋವನು ಮೋಶೆಗೆ—ಈ ಜನರು ಇನ್ನು
ಎಷ್ಟರ ಮಟ್ಟಿಗೆ ನನ್ನನ್ನು ಅಲಕ್ಷ್ಯಮಾಡುವರೋ;
ನಾನು ನಡಿಸಿದ ಎಲ್ಲಾ ಮಹತ್ಕಾರ್ಯಗಳನ್ನು
ಇವರು ಪ್ರತ್ಯಕ್ಷವಾಗಿ ನೋಡಿದಾಗ್ಯೂ ಇನ್ನು ಎಷ್ಟು
ದಿನ ನನ್ನನ್ನು ನಂಬದೆ ಇರುವರೋ. ಆಗಲಿ,
ನಾನು ಇವರಿಗೆ ವ್ಯಾಧಿಯನ್ನುಂಟುಮಾಡಿ ಇವರನ್ನು
ನಿರ್ಮೂಲಮಾಡಿ ಈ ಜನಕ್ಕಿಂತ ಹೆಚ್ಚಾಗಿಯೂ
ಬಲಿಷ್ಠವಾಗಿಯೂ ಇರುವ ಜನಾಂಗವನ್ನು ನಿನ್ನ
ಮೂಲಕವೇ ಹುಟ್ಟಿಸುವೆನು ಎಂದು ಹೇಳಿದನು.

ಅದಕ್ಕೆ ಮೋಶೆ—ನೀನು ಹೀಗೆ ಮಾಡುವದಾದರೆ
ಐಗುಪ್ತ್ಯರು ಈ ಸಮಾಚಾರವನ್ನು ಕೇಳುವರು.
ನೀನು ತಮ್ಮ ಕೈಯೊಳಗಿಂದ ಈ ಜನವನ್ನು ಭುಜ
ಪರಾಕ್ರಮದಿಂದ ತಪ್ಪಿಸಿದ ಸಂಗತಿಯನ್ನು ಈ
[ಕಾನಾನ್] ದೇಶದ ನಿವಾಸಿಗಳಿಗೆ ತಿಳಿಸಿರುವರು.
ಅದಲ್ಲದೆ ಈ ದೇಶದವರು ನೀನು ಇಸ್ರಾಯೇಲ್ಯರ
ಮಧ್ಯದಲ್ಲಿ ಇರುವ ಸಂಗತಿಯನ್ನು ಕೇಳಿದ್ದಾರೆ.
ಹೇಗಂದರೆ ಯೆಹೋವನೇ, ನೀನು ಇಸ್ರಾಯೇಲ್ಯರಿಗೆ
ಪ್ರತ್ಯಕ್ಷವಾಗಿ ಕಾಣಿಸಿಕೊಳ್ಳುವವನಾಗಿ ಹಗಲಿನಲ್ಲಿ
ಮೇಘಸ್ತಂಭದಲ್ಲಿಯೂ ರಾತ್ರಿಯಲ್ಲಿ ಅಗ್ನಿಸ್ತಂಭ
ದಲ್ಲಿಯೂ ಇದ್ದು ಇವರ ಮುಂದೆ ನಡೆದುಹೋಗು
ತ್ತೀಯಲ್ಲಾ; ಅದಲ್ಲದೆ ನೀನಿರುವ ಮೇಘವು ಇಸ್ರಾ
ಯೇಲ್ಯರ ಮೇಲೆ ಇದೆಯಲ್ಲಾ. ಹೀಗಿರಲಾಗಿ ನೀನು 15
ಒಂದೇ ಪೆಟ್ಟಿನಿಂದ ಈ ಜನರನ್ನು ಸಾಯಿಸಿದರೆ
ನಿನ್ನ ಪ್ರಖ್ಯಾತಿಯನ್ನು ಕೇಳಿದ ಜನಾಂಗಗಳವರು
ನಿನ್ನ ವಿಷಯದಲ್ಲಿ—ಯೆಹೋವನು ಪ್ರಮಾಣಪೂರ್ವ 16
ಕವಾಗಿ ವಾಗ್ದಾನಮಾಡಿದ ದೇಶದಲ್ಲಿ ಆ ಜನರನ್ನು
ಸೇರಿಸುವದಕ್ಕೆ ಶಕ್ತಿಸಾಲದೆ ಅವರನ್ನು ಅರಣ್ಯದಲ್ಲಿ
ಕೊಂದುಹಾಕಬಿಟ್ಟನು ಎಂದು ಮಾತಾಡಿಕೊಳ್ಳುವರು.
ನನ್ನ ಸ್ವಾಮಿಯೇ, ನೀನು ನಿನ್ನ ವಿಷಯದಲ್ಲಿ— 17

ಯೆಹೋವನು ದೀರ್ಘಶಾಂತನು, ಬಹುಪ್ರೀತಿ 18
ಯುಳ್ಳವನು, ಅಪರಾಧ ಪಾಪಗಳನ್ನು ಕ್ಷಮಿಸು
ವವನು; ಆದಾಗ್ಯೂ [ಅಪರಾಧಿಗಳನ್ನು] ಶಿಕ್ಷಿಸದೆ
ಬಿಡದವನು, ತಂದೆಗಳ ಪಾಪಫಲವನ್ನು ಮಕ್ಕಳ
ಮೇಲೆ ಮೂರು ನಾಲ್ಕು ತಲೆಗಳ ವರೆಗೆ ಬರ
ಮಾಡುವವನು

ಎಂದು ಹೇಳಿದಿಯಲ್ಲಾ. ಈ ಮಾತಿಗೆ ದೃಷ್ಟಾಂತ
ವನ್ನು ಕೊಟ್ಟು ನಿನ್ನ ಮಹಿಮೆಯನ್ನು ದೃಢಪಡಿಸ
ಬೇಕು. ನಾವು ಐಗುಪ್ತದೇಶದಿಂದ ಬಂದದ್ದು 19
ಮೊದಲುಗೊಂಡು ಇದು ವರೆಗೆ ನೀನು ಈ ಜನರ
ಪಾಪಗಳನ್ನು ಕ್ಷಮಿಸಿದ ಪ್ರಕಾರವೇ ಈಗಲೂ
ಮಹಾಕೃಪೆಯಿಂದ ಇವರ ಪಾಪವನ್ನು ಕ್ಷಮಿಸ
ಬೇಕೆಂದು ನಿನ್ನನ್ನು ಬೇಡಿಕೊಳ್ಳುತ್ತೇನೆ ಎಂದು
ಪ್ರಾರ್ಥಿಸಿದನು.

ಅದಕ್ಕೆ ಯೆಹೋವನು—ನಿನ್ನ ಪ್ರಾರ್ಥನೆಯ 20
ಮೇರೆಗೆ ನಾನು ಕ್ಷಮಿಸಿದ್ದೇನೆ. ಆದಾಗ್ಯೂ ನನ್ನ 21
ಜೀವದಾಣೆ, ಮತ್ತು ಯೆಹೋವನ ಮಹಿಮೆಯು
ಭೂಲೋಕದಲ್ಲೆಲ್ಲಾ ತುಂಬಿರಬೇಕೆಂಬುವ ನಿಶ್ಚಯ
ವಾಕ್ಯದ ಆಣೆ, ಈ ಮನುಷ್ಯರೆಲ್ಲರು ಐಗುಪ್ತ 22
ದೇಶದಲ್ಲಿಯೂ ಅರಣ್ಯದಲ್ಲಿಯೂ ನಾನು ನಡಿಸಿರುವ
ಮಹತ್ಕಾರ್ಯಗಳನ್ನೂ ನನ್ನ ಮಹಿಮೆಯನ್ನೂ
ನೋಡಿದರೂ ನನ್ನ ಮಾತಿಗೆ ಕಿವಿಗೊಡದೆ ಪದೇ
ಪದೇ ನನ್ನನ್ನು ಪರೀಕ್ಷಿಸಿದದರಿಂದ ನಾನು 23
ಅವರ ಪಿತೃಗಳಿಗೆ ಪ್ರಮಾಣಪೂರ್ವಕವಾಗಿ ವಾಗ್ದಾನ
ಮಾಡಿದ ದೇಶವನ್ನು ಇವರಲ್ಲಿ ಯಾರೂ ನೋಡು
ವದಿಲ್ಲ; ನನ್ನನ್ನು ಅಲಕ್ಷ್ಯಮಾಡಿದ ಇವರಲ್ಲಿ
ಯಾರೂ ಅದನ್ನು ನೋಡುವದಿಲ್ಲ. ನನ್ನ ದಾಸ 24
ನಾದ ಕಾಲೇಬನು ಅಂಥ ಮನಸ್ಸುಳ್ಳವನಾಗಿರದೆ
ಮನಃಪೂರ್ವಕವಾಗಿ ನನ್ನ ಮಾತನ್ನು ಅನುಸರಿಸಿ
ನಡೆದದ್ದರಿಂದ ಅವನನ್ನೇ ಅವನು ಸಂಚರಿಸಿದ ಆ
ದೇಶದಲ್ಲಿ ಸೇರಿಸುವೆನು; ಅವನ ಸಂತತಿಯವರು
ಅದನ್ನು ಸ್ವಾಧೀನಪಡಿಸಿಕೊಳ್ಳುವರು. ಅಮಾ 25
ಲೇಕ್ಯರೂ ಕಾನಾನ್ಯರೂ ಆ ತಗ್ಗಿನಲ್ಲಿ ವಾಸವಾಗಿ
ದ್ದಾರೆ. ನೀವು ನಾಳೆ ಹಿಂದಿರುಗಿಕೊಂಡು ಕೆಂಪು
ಸಮುದ್ರಕ್ಕೆ ಹೋಗುವ ದಾರಿಯಲ್ಲಿ ಅರಣ್ಯಕ್ಕೆ
ಪ್ರಯಾಣಮಾಡಬೇಕು ಎಂದು ಹೇಳಿದನು.

ಯೆಹೋವನು ಮೋಶೆ ಆರೋನರಿಗೆ—ನನಗೆ 26, 27
ವಿರೋಧವಾಗಿ ಗುಣುಗುಟ್ಟುವ ಈ ದುಷ್ಟಸಮೂಹ
ದವರನ್ನು ನಾನು ಎಷ್ಟು ದಿನ ಸಹಿಸಲಿ. ಇಸ್ರಾ
ಯೇಲ್ಯರು ನನಗೆ ವಿರೋಧವಾಗಿ ಗುಣುಗುಟ್ಟುವ
ಮಾತುಗಳು ನನಗೆ ಕೇಳಿಸಿದವು. ನೀನು ಅವರಿಗೆ 28
ಹೀಗೆ ಹೇಳಬೇಕು—ಯೆಹೋವನು ಹೇಳುವದೇ

ನಂದರೆ—ನನ್ನ ಜೀವದಾಣೆ, ನೀವು ನನಗೆ ಕೇಳಿಸು
ವಂತೆ ಅಂದುಕೊಂಡ ಪ್ರಕಾರವೇ ನಾನು ಮಾಡುತ್ತೇನೆ;
29 ನಿಮ್ಮ ಶವಗಳು ಈ ಅರಣ್ಯದಲ್ಲಿಯೇ ಬೀಳು
ವವು. ನೀವು ನನಗೆ ವಿರೋಧವಾಗಿ ಗುಣುಗುಟ್ಟಿ
ದದರಿಂದ ನಿಮ್ಮಲ್ಲಿ ಲೆಕ್ಕಿಸಲ್ಪಟ್ಟವರೆಲ್ಲರೂ ಅಂದರೆ
ಇಪ್ಪತ್ತು ವರುಷ ಮೊದಲುಗೊಂಡು ಹೆಚ್ಚಾದ ವಯ
ಸ್ಸುಳ್ಳವರೆಲ್ಲರೂ [ಅರಣ್ಯದಲ್ಲೇ ಸಾಯುವರು].
30 ಯೆಫುನ್ನೆಯ ಮಗನಾದ ಕಾಲೇಬ್ ಮತ್ತು ನೂನನ
ಮಗನಾದ ಯೆಹೋಶುವ ಇವರಿಬ್ಬರೇ ಹೊರತು
ನಿಮ್ಮಲ್ಲಿ ಯಾರೂ ನಿಮ್ಮ ನಿವಾಸಕ್ಕಾಗಿ ನಾನು
ಪ್ರಮಾಣಪೂರ್ವಕವಾಗಿ ವಾಗ್ದಾನಮಾಡಿದ ದೇಶ
31 ವನ್ನು ಸೇರುವದಿಲ್ಲ. ಆದರೆ ಪರರ ಪಾಲಾಗುವ
ರೆಂದು ನೀವು ಹೇಳಿದ ನಿಮ್ಮ ಚಿಕ್ಕ ಮಕ್ಕಳನ್ನು
ಅಲ್ಲಿಗೆ ಸೇರಿಸುವೆನು; ನೀವು ಬೇಡವೆಂದು ಹೇಳಿದ
32 ದೇಶವನ್ನು ಅವರು ಅನುಭೋಗಿಸುವರು. ನೀವಂತೂ
ಈ ಅರಣ್ಯದಲ್ಲಿ ಸಾಯುವಿರಿ; ನಿಮ್ಮೆಲ್ಲರ ಶವಗಳು
33 ಈ ಅರಣ್ಯದಲ್ಲಿ ಬೀಳುವ ಪರ್ಯಂತರ ನೀವು ಮಾಡಿದ
ದ್ರೋಹದ ಫಲವನ್ನು ನಿಮ್ಮ ಮಕ್ಕಳು ಅನುಭವಿಸು
ವವರಾಗಿ ನಾಲ್ವತ್ತು ವರುಷ [1]ಅರಣ್ಯವಾಸಿಗಳಾಗಿರ
34 ಬೇಕು. ನೀವು ಆ ದೇಶವನ್ನು ಸಂಚರಿಸಿ ನೋಡಿದ
ನಾಲ್ವತ್ತು ದಿನಗಳಿಗೆ ಸಮನಾಗಿ, ದಿನ ಒಂದಕ್ಕೆ
ಒಂದು ಸಂವತ್ಸರದ ಮೇರೆಗೆ, ನಾಲ್ವತ್ತು ವರುಷ
ನಿಮ್ಮ ಪಾಪದ ಫಲವನ್ನು ಅನುಭವಿಸುವವರಾಗಿ
ನಾನು ಕೈಬಿಟ್ಟವರ ಗತಿ ಎಂಥದೆಂದು ತಿಳಿದುಕೊಳ್ಳ
35 ಬೇಕು. ಇದು ಯೆಹೋವನೆಂಬ ನಾನೇ ಹೇಳಿದ
ಮಾತು; ನನಗೆ ವಿರೋಧವಾಗಿ ಕೂಡಿಕೊಂಡಿರುವ
ಈ ದುಷ್ಟಸಮೂಹದವರೆಲ್ಲರಿಗೆ ಈ ಮಾತಿನ ಮೇರೆಗೆ
ಮಾಡಲೇ ಮಾಡುತ್ತೇನೆ; ಈ ಅರಣ್ಯದಲ್ಲಿಯೇ ಇವ
ರೆಲ್ಲರೂ ಸಾಯಬೇಕು ಎಂದು ಹೇಳಿದನು.
36, 37 ಆ ದೇಶವನ್ನು ಸಂಚರಿಸಿ ನೋಡುವದಕ್ಕೆ
ಮೋಶೆಯಿಂದ ಕಳುಹಿಸಲ್ಪಟ್ಟು ಹಿಂದಿರುಗಿ ಬಂದು
ಆ ದೇಶದ ವಿಷಯದಲ್ಲಿ ಅಶುಭಸಮಾಚಾರವನ್ನು
ಹೇಳಿ ಸರ್ವಸಮೂಹದವರನ್ನು ಅವನಿಗೆ ವಿರೋಧ
ವಾಗಿ ಗುಣುಗುಟ್ಟುವಂತೆ ಮಾಡಿದ ಮನುಷ್ಯರು
ಯೆಹೋವನ ಸನ್ನಿಧಿಯಲ್ಲಿ ವ್ಯಾಧಿಯಿಂದ ಸತ್ತರು.
38 ಅವರಲ್ಲಿ ನೂನನ ಮಗನಾದ ಯೆಹೋಶುವನೂ
ಯೆಫುನ್ನೆಯ ಮಗನಾದ ಕಾಲೇಬನೂ ಉಳಿದರು.
39 ಮೋಶೆ ಯೆಹೋವನ ಮಾತುಗಳನ್ನೆಲ್ಲಾ ಇಸ್ರಾ
ಯೇಲ್ಯರಿಗೆ ತಿಳಿಸಲಾಗಿ ಅವರು ಬಹಳ ದುಃಖಪಟ್ಟರು.
40 ಮರುದಿನ ಬೆಳಿಗ್ಗೆ ಜನರು ಎದ್ದು—ನಾವು ಪಾಪ
ಮಾಡಿರುವದು ನಿಜ; ಯೆಹೋವನು ವಾಗ್ದಾನ
ಮಾಡಿದ ಸ್ಥಳಕ್ಕೆ ಹತ್ತೋಣ ಬನ್ನಿ ಎಂದು ಹೇಳಿ
ಕೊಳ್ಳುತ್ತಾ ಆ ಬೆಟ್ಟದ ಮೇಲಕ್ಕೆ ಹತ್ತಿಹೋಗು
41 ವವರಾದರು. ಆದರೆ ಮೋಶೆ ಅವರಿಗೆ—ನೀವು
ಯಾಕೆ ಹೀಗೆ ಮಾಡಿ ಯೆಹೋವನ ಆಜ್ಞೆಯನ್ನು
42 ಮೀರುತ್ತೀರಿ; ಇದು ಕೈಗೂಡುವದಿಲ್ಲ; ಯೆಹೋ
ವನು ನಿಮ್ಮ ಸಂಗಡ ಇರುವದಿಲ್ಲ; ಹತ್ತಬೇಡಿರಿ;
ನೀವು ಶತ್ರುಗಳ ಮುಂದೆ ನಿಲ್ಲಲಾರದೆ ಬಿದ್ದು
ಸತ್ತೀರಿ; ಅಲ್ಲಿ ಅಮಾಲೇಕ್ಯರೂ ಕಾನಾನ್ಯರೂ ನಿಮ್ಮ
ಎದುರಿನಲ್ಲಿರುವದರಿಂದ ನೀವು ಅವರ ಕತ್ತಿಯಿಂದ
ಸತ್ತೀರಿ; ನೀವು ಯೆಹೋವನ ಮಾತನ್ನು ಅನುಸರಿ
ಸದೆ ತಿರುಗಿಬಿದ್ದ ಕಾರಣ ಆತನು ನಿಮ್ಮೊಂದಿಗೆ ಇರು
ವದಿಲ್ಲ ಎಂದು ಹೇಳಿದನು. ಆದರೂ ಅವರು
ಹಟಮಾಡಿ ಆ ಬೆಟ್ಟವನ್ನು ಹತ್ತೇ ಹತ್ತಿದರು
ಯೆಹೋವನ ಒಡಂಬಡಿಕೆಯ ಮಂಜೂಷವು ಮತ್ತು
ಮೋಶೆಯು ಪಾಳೆಯವನ್ನು ಬಿಡಲಿಲ್ಲ. ಆಗ ಆ
ಬೆಟ್ಟದ ಸೀಮೆಯಲ್ಲಿ ವಾಸವಾಗಿದ್ದ ಅಮಾಲೇಕ್ಯರೂ
ಕಾನಾನ್ಯರೂ ಇಳಿದುಬಂದು ಅವರನ್ನು ಹೊಡೆದು
ಹೊರ್ಮಾ ಪಟ್ಟಣದ ವರೆಗೆ ಸಂಹರಿಸಿದರು.

## ನಾನಾ ನಿಯಮಗಳು.

## 15.

ಆಯಾ ಯಜ್ಞಪಶುಗಳೊಡನೆ ಸಮರ್ಪಿಸಬೇಕಾದ
ನೈವೇದ್ಯದ್ರವ್ಯಗಳ ವಿವರಣೆ.

ಯೆಹೋವನು ಮೋಶೆಗೆ ಹೇಳಿದ್ದೇನಂದರೆ—
ನೀನು ಇಸ್ರಾಯೇಲ್ಯರಿಗೆ ಹೀಗೆ ಆಜ್ಞಾಪಿಸ 2
ಬೇಕು—ನಾನು ನಿಮ್ಮ ನಿವಾಸಕ್ಕಾಗಿ ಕೊಡುವ
ದೇಶಕ್ಕೆ ನೀವು ಸೇರಿದನಂತರ ಯೆಹೋವನಿಗೆ ಸುವಾ
ಸನೆಯನ್ನುಂಟುಮಾಡುವದಕ್ಕಾಗಿ ದನಗಳನ್ನಾಗಲಿ
ಆಡುಕುರಿಗಳನ್ನಾಗಲಿ ಒಂದು ಪಶುವನ್ನು ಹೋಮ
ಮಾಡುವವನು ಸರ್ವಾಂಗಹೋಮಮಾಡಿದರೂ ಸರಿ
ಯೇ, ಹರಕೆಸಲ್ಲಿಸುವದಕ್ಕೋ ಕೃತಜ್ಞತೆಯನ್ನು
ತೋರಿಸುವದಕ್ಕೋ ಹಬ್ಬವನ್ನು ಆಚರಿಸುವದಕ್ಕೋ
ಸಮಾಧಾನಯಜ್ಞಮಾಡಿದರೂ ಸರಿಯೇ, ಅದ
ರೊಂದಿಗೆ ಧಾನ್ಯನೈವೇದ್ಯಕ್ಕಾಗಿ ಒಂದುವರೆ ಸೇರು
ಎಣ್ಣೆ ಬೆರಸಿದ ಮೂರು ಸೇರು ಗೋದಿಯ
ಹಿಟ್ಟನ್ನೂ ಪಾನದ್ರವ್ಯಕ್ಕಾಗಿ ಒಂದುವರೆ ಸೇರು
ದ್ರಾಕ್ಷಾರಸವನ್ನೂ ತರಬೇಕು. ನೀವು ಸರ್ವಾಂಗ
ಹೋಮವಾಗಿ ಇಲ್ಲವೆ ಸಮಾಧಾನಯಜ್ಞವಾಗಿ ಸಮ
ರ್ಪಿಸುವ ಒಂದೊಂದು ಕುರಿಯೊಂದಿಗೆ ಇದನ್ನೂ
ಸಮರ್ಪಿಸಬೇಕು.
ಟಗರಿನೊಂದಿಗೆ ಯೆಹೋವನಿಗೆ ಸುವಾಸನೆಯ
ನ್ನುಂಟುಮಾಡುವದಕ್ಕೆ ಧಾನ್ಯನೈವೇದ್ಯಕ್ಕಾಗಿ ಎರಡು
ಸೇರು ಎಣ್ಣೆ ಬೆರಸಿದ ಆರು ಸೇರು ಗೋದಿಯ
ಹಿಟ್ಟನ್ನೂ ಪಾನದ್ರವ್ಯವಾಗಿ ಎರಡು ಸೇರು ದ್ರಾಕ್ಷಾ
ರಸವನ್ನೂ ತಂದು ಸಮರ್ಪಿಸಬೇಕು.
ಸರ್ವಾಂಗಹೋಮ, ಹರಕೆಸಲ್ಲಿಸುವ ಯಜ್ಞ,
ಬೇರೆ ವಿಧವಾದ ಸಮಾಧಾನಯಜ್ಞ ಇವುಗಳಿಗಾಗಿ
ನೀವು ತರುವಂಥದು ಹೋರಿಯಾಗುವ ಪಕ್ಷಕ್ಕೆ ಅದ
ರೊಂದಿಗೆ ಧಾನ್ಯನೈವೇದ್ಯಕ್ಕಾಗಿ ಮೂರು ಸೇರು ಎಣ್ಣೆ
ಬೆರಸಿದ ಒಂಭತ್ತು ಸೇರು ಗೋದಿಯ ಹಿಟ್ಟನ್ನೂ
ಪಾನದ್ರವ್ಯಕ್ಕಾಗಿ ಮೂರು ಸೇರು ದ್ರಾಕ್ಷಾರಸವನ್ನೂ
ತಂದು ಸಮರ್ಪಿಸಬೇಕು. ಇದು ಯೆಹೋವನಿಗೆ
ಸುಗಂಧಹೋಮವಾಗುವದು.
ಕುರಿ, ಆಡು, ಟಗರು, ಹೋರಿ ಇವುಗಳಲ್ಲಿ ಪ್ರತಿ

1) ಪಾಠಾಂತರ: ಕುರುಬರಾಗಿರುವರು.

ಯೊಂದು ಪಶುವಿನ ಸಂಗಡ ಈ ಮೇರೆಗೆ ನೀವು
ನೈವೇದ್ಯಮಾಡಬೇಕು. ನೀವು ಸಮರ್ಪಿಸುವ ಪಶು
ಗಳ ಲೆಕ್ಕದ ಪ್ರಕಾರವೇ ಒಂದೊಂದು ಪಶುವಿನ
ಸಂಗಡ ಈ ಮೇರೆಗೆ ಮಾಡಬೇಕು. ಸ್ವದೇಶದವ
ರೆಲ್ಲರೂ ಯೆಹೋವನಿಗೆ ಸುಗಂಧಹೋಮವನ್ನು
ಸಮರ್ಪಿಸುವಾಗ ಈ ರೀತಿಯಾಗಿ ಮಾಡಬೇಕು.
ನಿಮ್ಮ ಮಧ್ಯದಲ್ಲಿ ಇಲ್ಲವೆ ನಿಮ್ಮ ಸಂತತಿಯವರ
ಮಧ್ಯದಲ್ಲಿ ಒಕ್ಕಲಿರುವ ಅನ್ಯದೇಶದವನಾಗಲಿ ಇಳು
ಕೊಂಡಿರುವ ಯಾವನೇ ಆಗಲಿ ಯೆಹೋವನಿಗೆ
ಸುಗಂಧಹೋಮಮಾಡಬೇಕಾದರೆ ನಿಮ್ಮಂತೆಯೇ ಅವ
ನೂ ಮಾಡಬೇಕು. ಸರ್ವರಿಗೂ ಅಂದರೆ ನಿಮಗೂ
ನಿಮ್ಮಲ್ಲಿರುವ ಅನ್ಯದೇಶದವರಿಗೂ ಒಂದೇ ವಿಧಿಯಿರ
ಬೇಕು; ಇದು ನಿಮಗೂ ನಿಮ್ಮ ಸಂತತಿಯವರಿಗೂ
ಶಾಶ್ವತವಾದ ನಿಯಮ. ಯೆಹೋವನ ಸನ್ನಿಧಿಯಲ್ಲಿ
ನೀವು ಹೇಗೋ ಅನ್ಯದೇಶದವನೂ ಹಾಗೆಯೇ ಇರು
ವನು. ನಿಮಗೂ ನಿಮ್ಮ ಬಳಿಯಲ್ಲಿ ಒಕ್ಕಲಿರುವ
ಅನ್ಯದೇಶದವನಿಗೂ ಒಂದೇ ವಿಧವಾದ ಪ್ರಮಾಣ
ವಿಧಿಗಳಿರಬೇಕು.

ಕಣಕದಿಂದ ಮಾಡುವ ಮೊದಲನೆಯ ರೊಟ್ಟಿಯನ್ನು ಯಾಜಕರ
ಭಾಗಕ್ಕೆ ಪ್ರತ್ಯೇಕಿಸಬೇಕೆಂಬ ವಿಧಿ.

ಯೆಹೋವನು ಮೋಶೆಗೆ ಹೇಳಿದ್ದೇನಂದರೆ—
ನೀನು ಇಸ್ರಾಯೇಲ್ಯರಿಗೆ ಹೀಗೆ ಆಜ್ಞಾಪಿಸಬೇಕು—
ನಾನು ನಿಮ್ಮನ್ನು ಕರೆದುಕೊಂಡುಹೋಗುವ ದೇಶಕ್ಕೆ
ನೀವು ಸೇರಿದನಂತರ ನೀವು ಭೂಮಿಯಿಂದಾದ ಬೆಳೆ
ಯನ್ನು ಅನುಭೋಗಿಸುವಾಗ ಸ್ವಲ್ಪವನ್ನು ಯೆಹೋ
ವನಿಗೋಸ್ಕರ ಪ್ರತ್ಯೇಕಿಸಬೇಕು. ನೀವು ಕಣದಲ್ಲಿ
ತುಳಿಸಿದ ದವಸದಲ್ಲಿ ಸ್ವಲ್ಪವನ್ನು ಯೆಹೋವನದೆಂದು
ಪ್ರತ್ಯೇಕಿಸುವ ಪ್ರಕಾರವೇ ಕಣಕದಿಂದ ಮಾಡುವ
ಮೊದಲನೆಯ ರೊಟ್ಟಿಯನ್ನೂ ಪ್ರತ್ಯೇಕಿಸಬೇಕು;
ನೀವೂ ನಿಮ್ಮ ಸಂತತಿಯವರೂ ಕಣಕದಿಂದ ಮಾಡುವ
ಮೊದಲನೆಯ ರೊಟ್ಟಿಯನ್ನು ಯೆಹೋವನಿಗೋಸ್ಕರ
ಪ್ರತ್ಯೇಕಿಸಬೇಕು.

ತಿಳಿಯದೆ ಮಾಡಿದ ತಪ್ಪಿಗಾಗಿ ದೋಷಪರಿಹಾರವನ್ನು ಮಾಡುವ
ವಿಧಾನ; ಹಟದಿಂದ ಪಾಪಮಾಡಿದವನನ್ನು ಇಸ್ರಾಯೇಲ್ಯರಿಂದ
ತೆಗೆಯಲೇ ಬೇಕೆಂಬ ವಿಧಿ.

23 ಯೆಹೋವನು ಮೋಶೆಯ ಮೂಲಕ ಈ ಆಜ್ಞೆ
ಗಳನ್ನು ಕೊಟ್ಟ ದಿನ ಮೊದಲುಗೊಂಡು ನಿಮ್ಮ
ಎಲ್ಲಾ ತಲಾಂತರಗಳ ವರೆಗೂ ಯಾವಾಗಲಾದರೂ
ಸಮೂಹದವರು ತಿಳಿಯದೆ ಇವುಗಳಲ್ಲಿ ಒಂದನ್ನು
ಮೀರಿ ದೋಷಿಗಳಾದರೆ ಅವರೆಲ್ಲರೂ ಒಟ್ಟಾಗಿ
ಯೆಹೋವನಿಗೆ ಸುವಾಸನೆಯನ್ನುಂಟುಮಾಡುವದ
ಕ್ಕೋಸ್ಕರ ಸರ್ವಾಂಗಹೋಮವಾಗಿ ಒಂದು ಹೋರಿ
ಯನ್ನೂ ನೈವೇದ್ಯವಾಗಿ ಅದಕ್ಕೆ ನೇಮಿತವಾದ ಧಾನ್ಯ
ದ್ರವ್ಯಪಾನದ್ರವ್ಯಗಳನ್ನೂ ದೋಷಪರಿಹಾರಕಯಜ್ಞ
ವಾಗಿ ಒಂದು ಹೋತವನ್ನೂ ಸಮರ್ಪಿಸಬೇಕು.
ಯಾಜಕನು ಇಸ್ರಾಯೇಲ್ಯರ ಸರ್ವಸಮೂಹದವರಿ
ಗೋಸ್ಕರ ದೋಷಪರಿಹಾರವನ್ನು ಮಾಡಿದಾಗ ಅವ
ರಿಗೆ ಕ್ಷಮಾಪಣೆಯಾಗುವದು. ಅವರು ಆ ತಪ್ಪನ್ನು
ತಿಳಿಯದೆ ಮಾಡಿದ್ದರಿಂದ ಮತ್ತು ಅವರು ಅದನ್ನು
ಪರಿಹರಿಸುವದಕ್ಕಾಗಿ ಯೆಹೋವನ ಸನ್ನಿಧಿಯಲ್ಲಿ
ಸರ್ವಾಂಗಹೋಮವನ್ನೂ ದೋಷಪರಿಹಾರಕಯಜ್ಞ
ವನ್ನೂ ಮಾಡಿಸಿದ್ದರಿಂದ ಇಸ್ರಾಯೇಲ್ಯರ ಸರ್ವ 26
ಸಮೂಹದವರಿಗೂ ಅವರಲ್ಲಿ ಇಳುಕೊಂಡಿರುವ ಅನ್ಯ
ದೇಶದವರಿಗೂ ಕ್ಷಮಾಪಣೆಯಾಗುವದು. ಜನರೆಲ್ಲರೂ
ಆ ತಪ್ಪನ್ನು ತಿಳಿಯದೆ ಮಾಡಿದರಲ್ಲಾ.
ಯಾವನಾದರೂ ಒಬ್ಬನು ಮಾತ್ರ ತಿಳಿಯದೆ ತಪ್ಪು 27
ಮಾಡಿದರೆ ಅವನು ದೋಷಪರಿಹಾರಕಯಜ್ಞಕ್ಕಾಗಿ
ಒಂದು ವರುಷದ ಆಡನ್ನು ಸಮರ್ಪಿಸಬೇಕು. ತಿಳಿ 28
ಯದೆ ತಪ್ಪುಮಾಡಿದವನಿಗೋಸ್ಕರ ಯಾಜಕನು
ಯೆಹೋವನ ಸನ್ನಿಧಿಯಲ್ಲಿ ದೋಷಪರಿಹಾರವನ್ನು
ಮಾಡಿದಾಗ ಅವನಿಗೆ ಕ್ಷಮಾಪಣೆಯಾಗುವದು. ಈ 29
ವಿಷಯದಲ್ಲಿ ಇಸ್ರಾಯೇಲ್ಯರಲ್ಲಿರುವ ಸ್ವದೇಶದವ
ರಿಗೂ ಅನ್ಯದೇಶದವರಿಗೂ ಒಂದೇ ವಿಧಿಯಿರಬೇಕು.
ಆದರೆ ಸ್ವದೇಶದವನಾಗಲಿ ಅನ್ಯದೇಶದವನಾಗಲಿ 30
ಯಾವನಾದರೂ ಮನಃಪೂರ್ವಕವಾಗಿ ಹಟದಿಂದ ಪಾಪ
ವನ್ನು ಮಾಡಿದರೆ ಅವನು ಯೆಹೋವನನ್ನು ದೂಷಿಸಿ
ದವನಾದ್ದರಿಂದ ಕುಲದಿಂದ ತೆಗೆದುಹಾಕಲ್ಪಡಬೇಕು.
ಆ ಮನುಷ್ಯನು ಯೆಹೋವನ ಮಾತನ್ನು ತಾತ್ಸಾರ 31
ಮಾಡಿ ಆತನ ಆಜ್ಞೆಯನ್ನು ಮೀರಿದ್ದರಿಂದ ತೆಗೆದು
ಹಾಕಲ್ಪಡಲೇ ಬೇಕು; ಅವನು ತನ್ನ ಪಾಪದ ಫಲವನ್ನು
ಅನುಭವಿಸಲಿ.

ಸಬ್ಬತ್‌ದಿನದಲ್ಲಿ ಕೆಲಸಮಾಡಿದವನೊಬ್ಬನಿಗೆ ಮರಣಶಿಕ್ಷೆ
ವಿಧಿಸಲ್ಪಟ್ಟದ್ದು.

ಇಸ್ರಾಯೇಲ್ಯರು ಅರಣ್ಯದಲ್ಲಿ ಇದ್ದಾಗ ಒಬ್ಬನು 32
ಸಬ್ಬತ್‌ದಿನದಲ್ಲಿ ಕಟ್ಟಿಗೆಕೂಡಿಸುವದನ್ನು ಕಂಡರು.
ಕಂಡವರು ಅವನನ್ನು ಮೋಶೆ ಆರೋನರ ಮತ್ತು 33
ಸರ್ವಸಮೂಹದವರ ಬಳಿಗೆ ಹಿಡುಕೊಂಡು ಬಂದರು.
ಅಂಥವನಿಗೆ ವಿಧಿಸಬೇಕಾದ ಶಿಕ್ಷೆಯ ವಿಷಯದಲ್ಲಿ 34
ಆ ವರೆಗೂ ವಿಧಿಯೇ ಇರಲಿಲ್ಲವಾದ ಕಾರಣ ಅವರು
ಅವನನ್ನು ಕಾವಲಲ್ಲಿಟ್ಟರು. ತರುವಾಯ ಯೆಹೋವ 35
ನು—ಆ ಮನುಷ್ಯನಿಗೆ ಮರಣಶಿಕ್ಷೆಯಾಗಬೇಕು;
ಸರ್ವಸಮೂಹದವರು ಪಾಳೆಯದ ಹೊರಗೆ ಅವನನ್ನು
ಕಲ್ಲೆಸೆದು ಕೊಲ್ಲಬೇಕೆಂದು ಮೋಶೆಗೆ ಆಜ್ಞಾಪಿಸಿದನು.
ಯೆಹೋವನು ಮೋಶೆಗೆ ಅಪ್ಪಣೆಕೊಟ್ಟಂತೆ ಸರ್ವ 36
ಸಮೂಹದವರು ಆ ಮನುಷ್ಯನನ್ನು ಪಾಳೆಯದ
ಹೊರಗೆ ಹಿಡುಕೊಂಡುಹೋಗಿ ಕಲ್ಲೆಸೆದು ಕೊಂದರು.

ಇಸ್ರಾಯೇಲ್ಯರು ಬಟ್ಟೆಮೂಲೆಗಳಿಗೆ ಗೊಂಡೆ
ಕಟ್ಟಿಕೊಳ್ಳಬೇಕೆಂಬದು.

ಯೆಹೋವನು ಮೋಶೆಗೆ ಹೇಳಿದ್ದೇನಂದರೆ— 37
ಇಸ್ರಾಯೇಲ್ಯರೂ ಅವರ ಸಂತತಿಯವರೂ ತಮ್ಮ 38
ವಸ್ತ್ರಗಳ ಮೂಲೆಗಳಲ್ಲಿ ಗೊಂಡೆಗಳನ್ನು ಕಟ್ಟಿಕೊಳ್ಳ
ಬೇಕು. ಪ್ರತಿಯೊಂದು ಗೊಂಡೆಯೂ ಒಂದೊಂದು
ನೀಲಿದಾರದಿಂದ ಕೂಡಿರಬೇಕೆಂದು ಅವರಿಗೆ ಆಜ್ಞಾ

39 ಹಿಸು. ಆ ಗೊಂಡೆಗಳ ಉಪಯೋಗವೇನಂದರೆ—
ನೀವು ಅವುಗಳನ್ನು ನೋಡುವಾಗ ಯೆಹೋವನ
ಆಜ್ಞೆಗಳನ್ನೆಲ್ಲಾ ನೆನಪಿಗೆ ತಂದುಕೊಂಡು ನಡಿಸ
ಬೇಕು, ಮತ್ತು ನೀವು ಪೂರ್ವದಲ್ಲಿ ನನಗೆ ದ್ರೋಹಿ
ಗಳಾಗಿ ಮನಸ್ಸಿಗೂ ಕಣ್ಣಿಗೂ ತೋರಿದಂತೆ ದಾರಿ
40 ತಪ್ಪಿ ನಡೆದ ಪ್ರಕಾರ ಇನ್ನು ನಡೆಯದೆ ನನ್ನ ಆಜ್ಞೆ
ಗಳನ್ನೇ ಲಕ್ಷಿಸಿ ಅನುಸರಿಸಿ ನಿಮ್ಮ ದೇವರಿಗೇ ಪ್ರತಿ
41 ಷ್ಠಿತರಾಗಿರಬೇಕೆಂಬುದೇ. ನಾನು ನಿಮ್ಮ ದೇವರಾಗು
ವದಕ್ಕೆ ನಿಮ್ಮನ್ನು ಐಗುಪ್ತದೇಶದೊಳಗಿಂದ ಬರಮಾ
ಡಿದ ನಿಮ್ಮ ದೇವರಾದ ಯೆಹೋವನು. ನಾನು
ನಿಮ್ಮ ದೇವರಾದ ಯೆಹೋವನು.

ಕೆಲವರು ಮೋಶೆ ಆರೋನರ ಮತ್ತು ಲೇವಿಯರ
ಅಧಿಕಾರವನ್ನು ಎದುರಿಸಲಾಗಿ ಯೆಹೋವನು
ಇವರ ಅಧಿಕಾರವನ್ನು ಸ್ಥಾಪಿಸಿದ್ದು.

16—18.

ಕೋರಹನೂ ದಾತಾನ್ ಅಬೀರಾಮರೂ ಮೋಶೆ
ಆರೋನರಿಗೆ ತಿರುಗಿಬಿದ್ದು ನಾಶವಾದದ್ದು.

16 ಲೇವಿಯ ಮರಿಮಗನೂ ಕೆಹಾತನ ಮೊಮ್ಮಗನೂ
ಇಚ್ಹಾರನ ಮಗನೂ ಆದ ಕೋರಹನೂ—ಅವ
ನಲ್ಲದೆ 1)ರೂಬೇನ್ ಕುಲದವರಲ್ಲಿ ಎಲೀಯಾಬನ
ಮಕ್ಕಳಾದ ದಾತಾನ್ ಅಬೀರಾಮರೂ ಪೆಲೆತನ
2 ಮಗನಾದ ಓನನೂ ಮತ್ತು ಸಮೂಹದವರಲ್ಲಿ
ಮುಖ್ಯಸ್ಥರಾಗಿಯೂ ಆಲೋಚನಾಕರ್ತರಾಗಿಯೂ
ಹೆಸರುಗೊಂಡವರಾಗಿಯೂ ಇದ್ದ ಇನ್ನೂರೈವತ್ತು
ಮಂದಿ ಇಸ್ರಾಯೇಲ್ಯರೂ ಮೋಶೆಗೆ ವಿರೋಧವಾಗಿ
3 ತಿರುಗಿಬಿದ್ದರು. ಅವರು ಒಟ್ಟಾಗಿ ಕೂಡಿಕೊಂಡು
ಮೋಶೆ ಆರೋನರ ಬಳಿಗೆ ಬಂದು ಅವರಿಗೆ—
ನಿಮ್ಮಿಂದ ಸಾಕಾಯಿತು; ಈ ಸಮೂಹದವರಲ್ಲಿ
ಪ್ರತಿಯೊಬ್ಬನೂ ದೇವರಿಗೆ ಪ್ರತಿಷ್ಠಿತನೇ; ಯೆಹೋ
ವನು ಇವರೆಲ್ಲರ ಮಧ್ಯದಲ್ಲಿ ಇದ್ದಾನಲ್ಲವೇ;
ಹೀಗಿರಲಾಗಿ ಯೆಹೋವನ ಸಮೂಹದವರಿಗಿಂತಲೂ
ನಿಮ್ಮನ್ನು ನೀವೇ ಹೆಚ್ಚಿಸಿಕೊಳ್ಳುವದೇನು ಎಂದು
4 ಹೇಳಿದರು. ಮೋಶೆ ಆ ಮಾತನ್ನು ಕೇಳಿ ಅಡ್ಡ
5 ಬಿದ್ದು ಕೋರಹನಿಗೂ ಅವನ ಎಲ್ಲಾ ಸಮೂಹ
ದವರಿಗೂ— ತನ್ನವರು ಯಾರಾರೆಂಬದನ್ನು ಯೆಹೋ
ವನು ನಾಳೆ ತಿಳಿಸುವನು. ಯಾರನ್ನು ಯೆಹೋವನು
ಪ್ರತಿಷ್ಠಿಸಿದ್ದಾನೋ ಯಾರನ್ನು ತಾನೇ ಆದುಕೊಂಡಿ
ದ್ದಾನೋ ಅವರನ್ನು ಮಾತ್ರ ಆತನು ತನ್ನ ಹತ್ತಿರಕ್ಕೆ
6 ಬರಗೊಡಿಸುವನು. ನೀವು ಹೀಗೆ ಮಾಡಿರಿ—
ನೀವೆಲ್ಲರೂ ಅಂದರೆ ಕೋರಹನೂ ಅವನ ಸಮೂಹ
ದವರೆಲ್ಲರೂ ಧೂಪಾರತಿಗಳನ್ನು ತೆಗೆದುಕೊಂಡು
7 ಅವುಗಳಲ್ಲಿ ಕೆಂಡಗಳನ್ನಿಟ್ಟು ನಾಳೆ ಯೆಹೋವನ
ಸನ್ನಿಧಿಯಲ್ಲಿ ಧೂಪಹಾಕಿರಿ. ಆಗ ಯೆಹೋವನು
ಯಾರನ್ನು ಮೆಚ್ಚುವನೋ ಅವನೇ ದೇವರಿಗೆ ಪ್ರತಿ
ಷ್ಠಿತನೆಂದು ತಿಳುಕೊಳ್ಳುವಿರಿ. ಲೇವಿಯರೇ, ನಿಮ್ಮಿಂದ
ಸಾಕಾಯಿತು ಎಂದು ಹೇಳಿದನು.
ಮೋಶೆ ಕೋರಹನಿಗೆ—ಲೇವಿಯರೇ, ಕೇಳಿರಿ
ಇಸ್ರಾಯೇಲ್ಯರ ದೇವರು ಅವರ ಸಮೂಹದವರಿಂದ
ನಿಮ್ಮನ್ನು ಪ್ರತ್ಯೇಕಿಸಿ ತನ್ನ ಗುಡಾರದ ಪರಿಚರ್ಯ
ವನ್ನು ಮಾಡಲೂ ಸರ್ವಸಮೂಹದವರಿಗೋಸ್ಕರ
ಸೇವೆಯನ್ನು ಮಾಡಲೂ [ಕೋರಹನೇ,] ನಿನ್ನನ್ನೂ
ನಿನ್ನ ಸ್ವಕುಲದವರಾದ ಲೇವಿಯರನ್ನೂ ತನ್ನ ಹತ್ತಿರ
ಇಟ್ಟುಕೊಂಡದ್ದು ಅಲ್ಪಕಾರ್ಯವೆಂದು ನಿಮಗೆ
ಕಾಣುತ್ತದೋ? ಯಾಜಕತ್ವವೂ ನಿಮಗೆ ಆಗಬೇಕೆಂದು
ಕೋರುತ್ತೀರಾ? ನೀನೂ ನಿನ್ನ ಸಮೂಹದವರೆಲ್ಲರೂ
ಯೆಹೋವನಿಗೇ ವಿರೋಧವಾಗಿ ಕೂಡಿಕೊಂಡವರು
ಆರೋನನಿಗೆ ವಿರೋಧವಾಗಿ ಗುಣುಗುಟ್ಟುವದೇನು
ಎಂದು ಹೇಳಿದನು.
ಮೋಶೆಯು ಎಲೀಯಾಬನ ಮಕ್ಕಳಾದ ದಾತಾನ್
ಅಬೀರಾಮರನ್ನು ಕರೇಕಳುಹಿಸಲಾಗಿ ಅವರು ಅವ
ನಿಗೆ— ನಾವು ಬರುವದಿಲ್ಲ, ನೀನು ಹಾಲೂ ಜೇನೂ
ಹರಿಯುವ ದೇಶದಿಂದ ನಮ್ಮನ್ನು ಕರಕೊಂಡು
ಬಂದು ಮರಳುಕಾಡಿನಲ್ಲಿ ಸಾಯಿಸುವದು ಅಲ್ಪ
ಕಾರ್ಯವೆಂದು ಎಣಿಸಿ ನಮ್ಮ ಮೇಲೆ ದೊರೆತನ
ಮಾಡಬೇಕೆಂದು ಕೋರುತ್ತೀಯೋ? ಅಷ್ಟು ಮಾತ್ರವೇ
ಅಲ್ಲ. ಹಾಲೂ ಜೇನೂ ಹರಿಯುವ ದೇಶಕ್ಕೆ ನಮ್ಮನ್ನು
ಸೇರಿಸಲಿಲ್ಲವಲ್ಲಾ; ಹೊಲಗಳನ್ನೂ ದ್ರಾಕ್ಷೇತೋಟ
ಗಳನ್ನೂ ನಮಗೆ ಸ್ವಂತಕ್ಕೆ ಕೊಡಲೇ ಇಲ್ಲ; ಈ
ಜನರ ಕಣ್ಣಿಗೆ ಮಣ್ಣು ಹಾಕಬೇಕೆಂದಿದ್ದೀಯೋ? ನಾವು
ಬರುವದಿಲ್ಲ ಎಂದು ಹೇಳಿದರು. ಆದಕ್ಕೆ ಮೋಶೆ
ಬಹು ಕೋಪಗೊಂಡು ಯೆಹೋವನಿಗೆ—ನೀನು
ಅವರ ನೈವೇದ್ಯವನ್ನು ಲಕ್ಷ್ಯಕ್ಕೆ ತೆಗೆದುಕೊಳ್ಳಬೇಡ;
ನಾನು ಅವರಿಂದ ಒಂದು ಕತ್ತೆಯನ್ನಾದರೂ ತೆಗೆದು
ಕೊಂಡವನಲ್ಲ; ಅವರಲ್ಲಿ ಒಬ್ಬನಿಗಾದರೂ ಹಾನಿ
ಮಾಡಿದವನಲ್ಲ ಎಂದು ಮನವಿಮಾಡಿದನು.
ಮೋಶೆ ಕೋರಹನಿಗೆ—ನಾಳೆ ನೀನೂ ನಿನ್ನ
ಸಮೂಹದವರೆಲ್ಲರೂ ಆರೋನನೂ ಯೆಹೋವನ
ಸನ್ನಿಧಿಗೆ ಬರಬೇಕು; ಅವರಲ್ಲಿ ಒಬ್ಬೊಬ್ಬನು ತನ್ನ
ತನ್ನ ಧೂಪಾರತಿಯನ್ನು, ಅಂದರೆ ಒಟ್ಟಾಗಿ ಇನ್ನೂ
ರೈವತ್ತು ಧೂಪಾರತಿಗಳನ್ನು ತೆಗೆದುಕೊಂಡು ಧೂಪ
ಹಾಕಿ ಯೆಹೋವನ ಸನ್ನಿಧಿಗೆ ಬರಬೇಕು; ಹಾಗೆಯೇ
ನೀನೂ ಆರೋನನೂ ನಿಮ್ಮ ನಿಮ್ಮ ಧೂಪಾರತಿ
ಗಳನ್ನು ತೆಗೆದುಕೊಂಡು ಬರಬೇಕು ಎಂದು ಹೇಳಿ
ದನು. ಅದಕ್ಕನುಸಾರವಾಗಿ ಅವರೆಲ್ಲರೂ ತಮ್ಮ
ತಮ್ಮ ಧೂಪಾರತಿಗಳನ್ನು ಕೈಯಲ್ಲಿ ತೆಗೆದುಕೊಂಡು
ಅವುಗಳಲ್ಲಿ ಕೆಂಡಗಳನ್ನಿಟ್ಟು ಧೂಪದ್ರವ್ಯಗಳನ್ನು
ಹಾಕಿ ಮೋಶೆ ಆರೋನರ ಜೊತೆಯಲ್ಲಿ ದೇವದರ್ಶನದ
ಗುಡಾರದ ಬಾಗಲಲ್ಲಿ ನಿಂತುಕೊಂಡರು. ಅದಲ್ಲದೆ
ಕೋರಹನು ತಮಗೆ ಎದುರಾಗಿ ಸರ್ವಸಮೂಹದವ
ರನ್ನು ದೇವದರ್ಶನದ ಗುಡಾರದ ಬಾಗಲಿನ ಹತ್ತಿರಕ್ಕೆ

1) ಬಹುಶಃ: ರೂಬೇನನ ಮರಿಮಕ್ಕಳೂ ಪಲ್ಲೂವಿನ ಮೊಮ್ಮಕ್ಕಳೂ ಎಲೀಯಾಬನ ಮಕ್ಕಳೂ ಆದ ದಾತಾನ್ ಅಬೀರಾಮ
ಎಂದು ಓದಬೇಕು.

ಿಡಿಸಿದನು. ಆಗ ಯೆಹೋವನ ತೇಜಸ್ಸು ಸಮೂ
ದವರೆಲ್ಲರಿಗೂ ಹೊಳೆಯಿತು.
21 ಯೆಹೋವನು ಮೋಶೆ ಆರೋನರಿಗೆ—ನೀವು
ಸಮೂಹದವರಿಂದ ಪ್ರತ್ಯೇಕವಾಗಿ ನಿಲ್ಲಿರಿ; ನಾನು
ವರನ್ನು ಒಂದು ಕ್ಷಣದಲ್ಲಿ ಭಸ್ಮಮಾಡುತ್ತೇನೆ
ಂದು ಆಜ್ಞಾಪಿಸಲಾಗಿ ಅವರು ಅಡ್ಡಬಿದ್ದು—
ೀವರೇ, ಎಲ್ಲಾ ಮನುಷ್ಯರ ಆತ್ಮಗಳಿಗೆ ದೇವರಾಗಿ
ವವನೇ, ಇವರಲ್ಲಿ ದೋಷಿಯಾದವನು ಒಬ್ಬನೇ
ಗಿರಲಾಗಿ ಸಮೂಹದವರೆಲ್ಲರ ಮೇಲೆ ಕೋಪ
ೊಳ್ಳಬಹುದೋ ಎಂದು ಬಿನ್ನೈಸಲಾಗಿ ಯೆಹೋ
ನು ಮೋಶೆಗೆ—ಇಸ್ರಾಯೇಲ್ಯರ ಸಮೂಹದವರು
ೋರಹ ದಾತಾನ್ ಅಬೀರಾಮರ ಗುಡಾರದ
ುತ್ತಲಿರದೆ ದೂರವಿರಬೇಕೆಂದು ಅವರಿಗೆ ಆಜ್ಞಾಪಿಸು
ಂದು ಹೇಳಿದನು.
ಆಗ ಮೋಶೆ ಎದ್ದು ದಾತಾನ್ ಅಬೀರಾಮರ
ಳಿಗೆ ಹೋದನು; ಇಸ್ರಾಯೇಲ್ಯರ ಹಿರಿಯರು
ವನ ಹಿಂದೆ ಹೋದರು. ಅವನು [ಇಸ್ರಾಯೇಲ್ಯರ]
ಮೂಹದವರಿಗೆ—ಈ ದುಷ್ಟರ ಡೇರೆಗಳ ಬಳಿಯಲ್ಲಿ
ರದೆ ದೂರ ಹೋಗಬೇಕು; ಇವರ ಸೊತ್ತಿನಲ್ಲಿ
ಯಾವದನ್ನೂ ಮುಟ್ಟಬಾರದು; ಇವರ ದೋಷಗಳಿ
ಾಗಿ ಉಂಟಾಗುವ ಶಿಕ್ಷೆ ನಿಮ್ಮನ್ನೂ ಕೊಚ್ಚಿಕೊಂಡು
ೋದೀತು ಎಂದು ಹೇಳಿದನು.
ಆದಕಾರಣ ಅವರೆಲ್ಲರೂ ಕೋರಹ ದಾತಾನ್
ಬೀರಾಮರ ಗುಡಾರದ ಸುತ್ತಲಿರದೆ ಬೇರೆ
ೋದರು.
ದಾತಾನ್ ಅಬೀರಾಮರೂ ಅವರ ಹೆಂಡರೂ
ಕ್ಕಳೂ ಅವರಿಗೆ ಸಂಬಂಧಪಟ್ಟವರೆಲ್ಲರೂ ಹೊರಗೆ
ಂದು ತಮ್ಮ ತಮ್ಮ ಡೇರೆಗಳ ಬಾಗಲುಗಳಲ್ಲಿ ನಿಂತು
ೊಂಡರು. ಆಗ ಮೋಶೆ ಜನರಿಗೆ—ಈ ಕಾರ್ಯ
ಳೆಲ್ಲಾ ನನ್ನ ಆಲೋಚನೆಯಿಂದ ಆಗಲಿಲ್ಲ
ಂದೂ ಯೆಹೋವನೇ ಇವುಗಳನ್ನು ನಡಿಸುವದಕ್ಕೆ
ನ್ನನ್ನು ಕಳುಹಿಸಿದನೆಂದೂ ನೀವು ತಿಳುಕೊಳ್ಳು
ದು ಹೇಗಂದರೆ—ಎಲ್ಲರೂ ಸಾಯುವ ರೀತಿಯಲ್ಲೇ
ವರು ಸತ್ತರೆ ಇಲ್ಲವೆ ಎಲ್ಲರಿಗೂ ಸಂಭವಿಸುವ
ತಿ ಇವರಿಗುಂಟಾದರೆ ಯೆಹೋವನು ನನ್ನನ್ನು
ಳುಹಿಸಲಿಲ್ಲವೆಂದು ತಿಳುಕೊಳ್ಳಬೇಕು. ಆದರೆ
ಯೆಹೋವನು ಇವರಿಗೋಸ್ಕರ ಅಪೂರ್ವವಾದ ಶಿಕ್ಷೆ
ಯನ್ನು ಕಲ್ಪಿಸಿದರೆ ಅಂದರೆ ಭೂಮಿಯು ಬಾಯ್ದೆ
ದು ಇವರನ್ನೂ ಇವರ ಸರ್ವಸ್ವವನ್ನೂ ನುಂಗುವದ
ಂದ ಇವರೆಲ್ಲರೂ ಸಜೀವಿಗಳಾಗಿ ಪಾತಾಳಕ್ಕೆ
ೋಗಿಬಿಟ್ಟರೆ ಇವರು ಯೆಹೋವನನ್ನು ಉಲ್ಲಂಘಿ
ದವರೆಂದು ನೀವು ತಿಳಿದುಕೊಳ್ಳಬೇಕು ಎಂದು
ೇಳಿದನು. ಮೋಶೆ ಈ ಮಾತುಗಳನ್ನು ಹೇಳಿ
ುಗಿಸಿದ ಕೂಡಲೆ ಆ ಮನುಷ್ಯರ ಕೆಳಗಿದ್ದ ನೆಲವು
ೀಳಿತು; ಭೂಮಿಯು ಬಾಯ್ದೆರೆದು ಅವರನ್ನೂ
ವರ ಮನೆಯವರನ್ನೂ ಕೋರಹನಿಗೆ ಸೇರಿದ ಮನು
ಷ್ಯರೆಲ್ಲರನ್ನೂ ಅವರ ಸರ್ವಸ್ವವನ್ನೂ ನುಂಗಿಬಿಟ್ಟಿತು;
ಅವರು ಸಜೀವಿಗಳಾಗಿ ತಮ್ಮ ಸರ್ವಸ್ವವು ಸಹಿತ
ಾತಾಳಕ್ಕೆ ಹೋಗಿಬಿಟ್ಟರು; ಭೂಮಿಯು ಅವರನ್ನು
ುಚ್ಚಿಕೊಂಡಿತು. ಹೀಗೆ ಅವರು ಸಮೂಹದವ
ರೊಳಗಿಂದ ನಾಶವಾದರು. ಅವರ ಸುತ್ತಲಿದ್ದ ಇಸ್ರಾ
ಯೇಲ್ಯರೆಲ್ಲರೂ ಸಾಯುವವರ ಹಾಹಾಕಾರವನ್ನು
ಕೇಳಿ—ಭೂಮಿಯು ನಮ್ಮನ್ನೂ ನುಂಗೀತೆಂದು ಓಡಿ
ಹೋದರು.
ಮತ್ತು ಯೆಹೋವನ ಬಳಿಯಿಂದ ಬೆಂಕಿಹೊ 35
ರಟು ಧೂಪವನ್ನು ಅರ್ಪಿಸುತ್ತಿದ್ದ ಆ ಇನ್ನೂರೈವತ್ತು
ಮಂದಿಯನ್ನು ಭಸ್ಮಮಾಡಿತು.
ಆಗ ಯೆಹೋವನು ಮೋಶೆಗೆ—ಮಹಾ 33, 37
ಯಾಜಕ ಆರೋನನ ಮಗನಾದ ಎಲ್ಲಾಜಾರನು
ಸುಟ್ಟುಹೋದವರ ನಡುವೆಯಿಂದ ಆ ಧೂಪಾರತಿ
ಗಳನ್ನು ಎತ್ತಬೇಕೆಂದು ಆಜ್ಞಾಪಿಸು; ಮತ್ತು ನೀನು
ಅವುಗಳಲ್ಲಿರುವ ಕೆಂಡಗಳನ್ನು ದೂರಕ್ಕೆ ಚೆಲ್ಲು; ಆ
ಧೂಪಾರತಿಗಳು ದೇವರ ವಸ್ತುವಾದವಲ್ಲಾ. ಪ್ರಾಣ 38
ವನ್ನು ಹೋಗಲಾಡಿಸಿಕೊಂಡ ಆ ದೋಷಿಗಳ ಧೂಪಾ
ರತಿಗಳು ಯೆಹೋವನ ಸನ್ನಿಧಿಗೆ ತರಲ್ಪಟ್ಟ ಕಾರಣ
ಪರಿಶುದ್ಧವಾದವು; ಆದದರಿಂದ ಅವುಗಳನ್ನು ತಗಡು
ಗಳಾಗಿ ಹೊಡೆದು ಯಜ್ಞವೇದಿಗೆ ಮುಚ್ಚಳವನ್ನು
ಮಾಡಿಸಬೇಕು; ಹಾಗೆ ಅವು ಇಸ್ರಾಯೇಲ್ಯರಿಗೆ
ನೆನಪುಹುಟ್ಟಿಸುವವು ಎಂದು ಹೇಳಿದನು. ಯೆಹೋ 39
ವನು ಮೋಶೆಯ ಮೂಲಕ ಹೇಳಿದ ಅಪ್ಪಣೆಯ
ಮೇರೆಗೆ ಯಾಜಕನಾದ ಎಲ್ಲಾಜಾರನು ಸುಟ್ಟು
ಹೋದವರಿಂದ ಮೊದಲು ತರಲ್ಪಟ್ಟಿದ್ದ ಆ ತಾಮ್ರದ
ಧೂಪಾರತಿಗಳನ್ನು ತೆಗೆದುಕೊಂಡು ತಗಡುಗಳಾಗಿ
ಹೊಡಿಸಿ ಯಜ್ಞವೇದಿಗೆ ಮುಚ್ಚಳವನ್ನು ಮಾಡಿಸಿ
ದನು. ಆರೋನನ ಸಂತತಿಯವರಲ್ಲದ ಇತರರಲ್ಲಿ 40
ಯಾರೂ ಯೆಹೋವನ ಸನ್ನಿಧಿಗೆ ಬಂದು ಧೂಪ
ವನ್ನು ಸಮರ್ಪಿಸಬಾರದು; ಸಮರ್ಪಿಸಿದರೆ ಕೋರ
ಹನಿಗೂ ಅವನ ಜೊತೆಗಾರರಿಗೂ ಉಂಟಾದ ಗತಿಗೆ
ಗುರಿಯಾದಾರೆಂದು ಇಸ್ರಾಯೇಲ್ಯರಿಗೆ ನೆನಪುಹುಟ್ಟಿ
ಸುವದಕ್ಕಾಗಿ ಅದು ಗುರುತಾಯಿತು.

ಕೋರಹನ ಕಡೆಯವರು ಸತ್ತದ್ದಕ್ಕಾಗಿ ಜನರು ಗುಣುಗುಟ್ಟ
ಲಾಗಿ ಅವರಲ್ಲಿ ಅನೇಕರು ಘೋರವ್ಯಾಧಿಯಿಂದ ಸತ್ತದ್ದು;
ಆರೋನನು ಅದನ್ನು ಶಮನಮಾಡಿದ್ದು.

ಮರುದಿನ ಇಸ್ರಾಯೇಲ್ಯರ ಸರ್ವಸಮೂಹದವರು 41
ಮೋಶೆ ಆರೋನರ ಮೇಲೆ ಗುಣುಗುಟ್ಟುತ್ತಾ—
ನೀವೇ ಯೆಹೋವನ ಜನರನ್ನು ಸಾಯಿಸಿದಿರಿ ಎಂದು
ಹೇಳುವವರಾದರು. ಸಮೂಹದವರೆಲ್ಲರೂ ಹೀಗೆ 42
ಮೋಶೆ ಆರೋನರಿಗೆ ವಿರೋಧವಾಗಿ ಕೂಡಿದ್ದಾಗ
ದೇವದರ್ಶನದ ಗುಡಾರದ ಕಡೆಗೆ ನೋಡಲಾಗಿ
ಅಹಾ, ಮೇಘವು ಅದನ್ನು ಮುಚ್ಚಿಕೊಂಡಿತು, ಮತ್ತು
ಯೆಹೋವನ ತೇಜಸ್ಸು ಹೊಳೆಯಿತು. ಮೋಶೆ 43
ಆರೋನರು ದೇವದರ್ಶನದ ಗುಡಾರದ ಮುಂಭಾಗಕ್ಕೆ
ಬಂದಾಗ ಯೆಹೋವನು ಮೋಶೆಗೆ—ನೀವಿಬ್ಬರೂ 44, 45
ಸಮೂಹದವರಲ್ಲಿ ಇರದೆ ಬೇರೆ ನಿಲ್ಲಬೇಕು; ನಾನು
ಒಂದು ಕ್ಷಣದಲ್ಲಿ ಅವರನ್ನು ಭಸ್ಮಮಾಡಿಬಿಡುತ್ತೇನೆ
ಎಂದು ಹೇಳಿದನು. ಆಗ ಮೋಶೆ ಆರೋನರು ಅಡ್ಡ
ಬಿದ್ದರು; ಮತ್ತು ಮೋಶೆಯು ಆರೋನನಿಗೆ— 46
ಯೆಹೋವನಿಗೆ ಕೋಪವುಂಟಾಗಿ ಈ ಜನರೊಳಗೆ

ಘೋರವ್ಯಾಧಿ ಪ್ರಾರಂಭವಾಯಿತು; ನೀನು ಧೂಪಾ
ರತಿಯನ್ನು ತೆಗೆದುಕೊಂಡು ಅದರಲ್ಲಿ ಯಜ್ಞವೇದಿ
ಯಿಂದ ಕೆಂಡಗಳನ್ನು ಇಟ್ಟು ಧೂಪಹಾಕಿ ಸಮೂಹ
ದವರ ಬಳಿಗೆ ಬೇಗ ಹೋಗಿ ಅವರಿಗೋಸ್ಕರ ದೋಷ
ಪರಿಹಾರವನ್ನು ಮಾಡಬೇಕು ಎಂದು ಹೇಳಿದನು.
47 ಮೋಶೆ ಹೇಳಿದಂತೆ ಆರೋನನು ಧೂಪಾರತಿಯನ್ನು
ತೆಗೆದುಕೊಂಡು ಸಮೂಹದವರ ಮಧ್ಯಕ್ಕೆ ಓಡಿದಾಗ
ಘೋರವ್ಯಾಧಿ ಆ ಜನರಲ್ಲಿ ಹರಡಿಕೊಳ್ಳುತ್ತಾ ಇತ್ತು.
ಆದದರಿಂದ ಅವನು ಧೂಪಹಾಕಿ ಜನರಿಗೋಸ್ಕರ
48 ದೋಷಪರಿಹಾರವನ್ನು ಮಾಡಿದನು. ಅವನು ಸತ್ತವ
ರಿಗೂ ಬದುಕುವವರಿಗೂ ನಡುವೆ ನಿಂತಿರುವಾಗಲೇ
49 ಆ ವಿಪತ್ತು ಶಮನವಾಯಿತು. ಕೋರಹನನ್ನು
ಕೂಡಿಕೊಂಡು ಸತ್ತವರಲ್ಲದೆ ಆ ವಿಪತ್ತಿನಿಂದ ಸತ್ತ
ವರು ಹದಿನಾಲ್ಕುಸಾವಿರದ ಏಳುನೂರು ಮಂದಿ.
50 ವಿಪತ್ತು ಶಮನವಾದಾಗ ಆರೋನನು ದೇವದರ್ಶನದ
ಗುಡಾರದ ಬಾಗಲಿಗೆ ಮೋಶೆಯ ಬಳಿಗೆ ತಿರಿಗಿ
ಬಂದನು.

ಯೆಹೋವನು ಆರೋನನ ಕೋಲನ್ನು ಚಿಗುರಿಸಿ ಅವನ ಅಧಿಕಾರವನ್ನು ಸ್ಥಾಪಿಸಿದ್ದು.

17 ಯೆಹೋವನು ಮೋಶೆಗೆ ಹೇಳಿದ್ದೇನಂದರೆ—
2 ನೀನು ಇಸ್ರಾಯೇಲ್ಯರ ಸಂಗಡ ಮಾತಾಡಿ ಹೀಗೆ
ಮಾಡಬೇಕು. ಒಂದೊಂದು ಕುಲದ ಅಧಿಪತಿಯಿಂದ
ಒಂದೊಂದು ಕೋಲಿನ ಮೇರೆಗೆ ಹನ್ನೆರಡು ಕೋಲು
ಗಳನ್ನು ತೆಗೆದುಕೊಳ್ಳಬೇಕು. ಅವನವನ ಕೋಲಿನ
ಮೇಲೆ ಆಯಾ ಕುಲಾಧಿಪತಿಯ ಹೆಸರನ್ನು ಬರೆ
3 ಯಿಸಬೇಕು. ಲೇವಿ ಕುಲಕ್ಕೂ ಒಂದು ಕೋಲು
ಇರುವದರಿಂದ ಅದರ ಮೇಲೆ ಆರೋನನ ಹೆಸರನ್ನು
4 ಬರೆಯಿಸಬೇಕು. ನೀನು ಆ ಕೋಲುಗಳನ್ನು
ದೇವದರ್ಶನದ ಗುಡಾರದಲ್ಲಿ ಆಜ್ಞಾಶಾಸನಗಳ
ಮುಂದೆ ನಾನು ನಿಮಗೆ ದರ್ಶನಕೊಡುವ ಸ್ಥಳದಲ್ಲಿ
5 ಇಡಬೇಕು. ನಾನು ಯಾರನ್ನು ಮೆಚ್ಚಿದ್ದೇನೋ
ಅವನ ಕೋಲು ಚಿಗುರುವದು. ಇಸ್ರಾಯೇಲ್ಯರು
ನಿಮ್ಮಿಬ್ಬರಿಗೆ ವಿರೋಧವಾಗಿ ಮಾಡುವ ಗುಣುಗುಟ್ಟು
ವಿಕೆಯು ನನಗೆ ಇನ್ನು ಕೇಳಿಸದಂತೆ ಹೀಗೆ ನಿಲ್ಲಿಸಿ
ಬಿಡುತ್ತೇನೆ ಅಂದನು.
6 ಅದಕ್ಕನುಸಾರವಾಗಿ ಮೋಶೆಯು ಇಸ್ರಾಯೇಲ್ಯರ
ಸಂಗಡ ಮಾತಾಡಲಾಗಿ ಅವರ ಕುಲಾಧಿಪತಿಗ
ಳೆಲ್ಲರೂ ಕುಲಕ್ಕೆ ಒಂದು ಕೋಲಿನ ಮೇರೆಗೆ
ಹನ್ನೆರಡು ಕೋಲುಗಳನ್ನು ಅವನ ಕೈಗೆ ಕೊಟ್ಟರು;
7 ಅವುಗಳೊಡನೆ ಆರೋನನ ಕೋಲೂ ಇತ್ತು. ಮೋಶೆ
ಆ ಕೋಲುಗಳನ್ನು ಆಜ್ಞಾಶಾಸನಗಳಿರುವ ಗುಡಾರ
8 ದಲ್ಲಿ ಯೆಹೋವನ ಸನ್ನಿಧಿಯಲ್ಲಿ ಇಟ್ಟನು. ಮರು
ದಿನ ಮೋಶೆ ಗುಡಾರದಲ್ಲಿ ಹೋಗಿ ನೋಡಲಾಗಿ
ಅಹಾ, ಲೇವಿಕುಲಕ್ಕೋಸ್ಕರ ಆರೋನನು ಕೊಟ್ಟಿದ್ದ
ಕೋಲು ಚಿಗುರಿ ಮೊಗ್ಗೆಬಿಟ್ಟು ಹೂವರಳಿ ಬಾದಾಮಿ
9 ಹಣ್ಣುಗಳನ್ನು ಫಲಿಸಿತ್ತು. ಮೋಶೆ ಆ ಕೋಲು
ಗಳನ್ನೆಲ್ಲಾ ಯೆಹೋವನ ಸನ್ನಿಧಿಯಿಂದ ಇಸ್
ಯೇಲ್ಯರೆಲ್ಲರ ಬಳಿಗೆ ತಂದು ತೋರಿಸಿದನು; ಅವ
ನೋಡಿ ತಮ್ಮತಮ್ಮ ಕೋಲುಗಳನ್ನು ತೆಗೆ
ಕೊಂಡರು.
ತರುವಾಯ ಯೆಹೋವನು ಮೋಶೆಗೆ—ಆರೋ
ನನ ಕೋಲನ್ನು ತಿರಿಗಿ ಆಜ್ಞಾಶಾಸನಗಳ ಮುಂದೆ ಇ
ಬೇಕು. ಅದು ತಿರುಗಿಬೀಳುವವರಿಗೆ ದೃಷ್ಟಾಂ
ವಾಗಿ ಅಲ್ಲೇ ಇರಬೇಕು; ಇವರು ಇನ್ನು ಮುಂ
ನನಗೆ ವಿರೋಧವಾಗಿ ಗುಣುಗುಟ್ಟಿ ನಾಶವಾಗದಂ
ನೀನು ಹೀಗೆ ಮಾಡಬೇಕು ಎಂದು ಆಜ್ಞಾಪಿಸಿದನ
ಯೆಹೋವನ ಅಪ್ಪಣೆಯ ಪ್ರಕಾರವೇ ಮೋಶೆ ಮಾ
ದನು.

ಯಾಜಕರೂ ಲೇವಿಯರೂ ದೇವದರ್ಶನದ ಗುಡಾರದ ವಿಷಯದಲ್ಲಿ ಜವಾಬ್ದಾರಿಗಳಾಗಿರಬೇಕೆಂದು ಯೆಹೋವನು ನೇಮಿಸಿ ಅವರಿಗೆ ಸಲ್ಲಬೇಕಾದ ಕಾಣಿಕೆಗಳನ್ನು ವಿವರಿಸಿದ್ದು.

ಇಸ್ರಾಯೇಲ್ಯರು ಮೋಶೆಯ ಬಳಿಗೆ ಬಂದ
ಅವನಿಗೆ—ನಾವು ಪ್ರಾಣಕಳಕೊಳ್ಳುವವರಾದೆವಲ್ಲಾ
ಇಲ್ಲದೆ ಹೋಗುತ್ತೇವೆ; ನಾವು ನಿಶ್ಶೇಷವಾಗಿ ಇಲ್ಲ
ಹೋಗುವ ಹಾಗೆ ಕಾಣುತ್ತದೆ; ಯೆಹೋವನ ಗುಡ
ರದ ಹತ್ತಿರಕ್ಕೆ ಬರುವವರೆಲ್ಲರೂ ಸಾಯುತ್ತಾರಷ್ಟೆ
ನಾವೆಲ್ಲರೂ ಹಾಗೆಯೇ ಸಾಯಬೇಕೇನು ಎಂದ
ಹೇಳಿದರು.
ಆಗ ಯೆಹೋವನು ಆರೋನನಿಗೆ—ದೇವದರ್ಶ
ನದ ಗುಡಾರದ ವಿಷಯದಲ್ಲಿ ಅಕ್ರಮವೇನಾದರೂ
ನಡೆದರೆ [1]ನೀನೂ ನಿನ್ನ ಸಂತತಿಯವರೂ ನಿನ್ನ ಕು
ದವರೆಲ್ಲರೂ ಆ ದೋಷದ ಫಲವನ್ನು ಅನುಭವಿ
ಬೇಕು. ಯಾಜಕತ್ವದ ವಿಷಯದಲ್ಲಿ ಅಕ್ರಮ
ವೇನಾದರೂ ನಡೆದರೆ ನೀನೂ ನಿನ್ನ ಸಂತತಿಯವರ
ಮಾತ್ರವೇ ಆ ದೋಷದ ಫಲವನ್ನು ಅನುಭವಿ
ಬೇಕು. ನಿನ್ನ ಕುಲದ ಮೂಲಪುರುಷನಾದ ಲೇವಿಯ
ವಂಶದವರನ್ನು ನೀನು ಹತ್ತಿರಕ್ಕೆ ಕರೆದು ಜೊ
ಯಲ್ಲಿರಿಸಿಕೊಂಡು ನಿನ್ನ ಕೈಕೆಳಗೆ ಸೇವೆಮಾಡಿ
ಬೇಕು; ಆದರೆ ಆಜ್ಞಾಶಾಸನಗಳಿರುವ ಗುಡಾರ
ಮುಂದೆ ನೀನೂ ನಿನ್ನ ಮಕ್ಕಳೂ ಮಾತ್ರ ಸೇವೆಮಾ
ಬೇಕು. ಲೇವಿಯರು ನಿನ್ನ ಅಪ್ಪಣೆಯ ಮೇರೆ
ನಡೆದು ಗುಡಾರವನ್ನೆಲ್ಲಾ ಕಾಯಬೇಕು; ಆದ
ಪವಿತ್ರಸ್ಥಾನದ ಸಾಮಾನಿನ ಹತ್ತಿರವಾಗಲಿ ಯಜ್ಞ
ವೇದಿಯ ಹತ್ತಿರವಾಗಲಿ ಅವರು ಬರಕೂಡದು
ಬಂದರೆ ಅವರು ಸಾಯುವದು ಮಾತ್ರವಲ್ಲದೆ ನೀವ
ಸತ್ತೀರಿ. ಅವರೇ ನಿನ್ನ ಜೊತೆಯಲ್ಲಿದ್ದು ದೇವದರ್ಶ
ನದ ಗುಡಾರವನ್ನು ನೋಡಿಕೊಂಡು ಅದರ ಸಕ
ಪರಿಚರ್ಯವನ್ನು ಮಾಡಬೇಕು; ಇತರಕುಲದವರ
ನಿಮ್ಮ ಜೊತೆಯಲ್ಲಿರಕೂಡದು. ಇನ್ನು ಮುಂ
ಇಸ್ರಾಯೇಲ್ಯರ ಮೇಲೆ ದೇವರ ಕೋಪವುಂಟಾ
ದಂತೆ ನೀವೇ ದೇವಸ್ಥಾನದ ಸಾಮಾನನ್ನೂ ಯಜ್ಞ

1) ಅಥವಾ: ಆ ದೋಷದ ಫಲವನ್ನು ವಹಿಸಿಕೊಂಡು ನಿವಾರಣೆಮಾಡಬೇಕು; ಅಥವಾ: ಆ ದೋಷಕ್ಕೆ ಹೊಣೆಯಾಗಿರಬೇಕು.

ವೇದಿಯನ್ನೂ ನೋಡಿಕೊಳ್ಳಬೇಕು. ಇಗೋ ನಾನು
ಇಸ್ರಾಯೇಲ್ಯರೊಳಗಿಂದ ನಿನ್ನ ಕುಲದವರಾದ ಲೇವಿ
ಯರನ್ನು ತೆಗೆದುಕೊಂಡಿದ್ದೇನೆ; ಅವರು ಯೆಹೋ
ವನಿಗೆ ಸಮರ್ಪಿಸಲ್ಪಟ್ಟ ಕಾಣಿಕೆಯಂತೆ ನಿನ್ನ ವಶ
ದಲ್ಲಿಯೇ ಇದ್ದಾರೆ; ಅವರೇ ದೇವದರ್ಶನದ ಗುಡಾ
ರದ ಪರಿಚರ್ಯವನ್ನು ಮಾಡಬೇಕು. ನೀನೂ
ನಿನ್ನ ಸಂತತಿಯವರೂ ಯಾಜಕೋದ್ಯೋಗವನ್ನು
ಕೈಕೊಂಡವರಾಗಿ ಯಜ್ಞವೇದಿಯ ಮತ್ತು ತೆರೆಯೊಳ
ಗಣ ಕಾರ್ಯಗಳನ್ನು ನಡಿಸಬೇಕು; ಅವುಗಳ ಪರಿ
ಚರ್ಯವನ್ನು ನೀವೇ ಮಾಡಬೇಕು; ನಾನು ಯಾಜ
ಕತ್ವವನ್ನು ನಿಮಗೇ ಅನುಗ್ರಹಿಸಿದ್ದೇನೆ; ಇತರರು
ಅದಕ್ಕೆ ಕೈಹಾಕಿದರೆ ಅವರಿಗೆ ಮರಣಶಿಕ್ಷೆಯಾಗ
ಬೇಕು.

ಯೆಹೋವನು ಆರೋನನಿಗೆ ಆಜ್ಞಾಪಿಸಿದ್ದೇ
ನಂದರೆ—ಇಸ್ರಾಯೇಲ್ಯರು ನನಗೋಸ್ಕರ ಪ್ರತ್ಯೇಕಿಸಿ
ಸಮರ್ಪಿಸುವ ಪದಾರ್ಥಗಳನ್ನೆಲ್ಲಾ ಅಂದರೆ ದೇವರ
ವಸ್ತುಗಳನ್ನೆಲ್ಲಾ ನಾನು ನಿನ್ನ ಮತ್ತು ನಿನ್ನ ಸಂತತಿ
ಯವರ ಪಾಲಾಗುವದಕ್ಕೆ ದಾನಮಾಡಿದ್ದೇನೆ; ಅವು
ಸದಾಕಾಲವೂ ನಿಮಗೇ ಸಲ್ಲಬೇಕು. ಬೆಂಕಿ
ಯಲ್ಲಿ ಹೋಮಮಾಡದೆ ಉಳಿಸಿರುವ ಮಹಾಪರಿ
ಶುದ್ಧಪದಾರ್ಥಗಳೆಲ್ಲಾ ಅಂದರೆ ಇಸ್ರಾಯೇಲ್ಯರು
ನನಗೆ ಸಮರ್ಪಿಸುವ ಎಲ್ಲಾ ಧಾನ್ಯದ್ರವ್ಯನೈವೇದ್ಯ
ದ್ರವ್ಯ, ದೋಷಪರಿಹಾರಕಯಜ್ಞ, ಪ್ರಾಯಶ್ಚಿತ್ತ
ಯಜ್ಞದ್ರವ್ಯ ಇವುಗಳಲ್ಲಿ ಹೋಮಶೇಷವು ಮಹಾ
ಪರಿಶುದ್ಧವಾದದರಿಂದ ನಿನಗೂ ನಿನ್ನ ಸಂತತಿಯವ
ರಿಗೂ ಸಲ್ಲಬೇಕು. ನೀವು ಮಹಾಪರಿಶುದ್ಧವಾದ
ಒಂದು ಸ್ಥಳದಲ್ಲಿ ಅವುಗಳನ್ನು ಊಟಮಾಡಬೇಕು;
ನಿಮ್ಮಲ್ಲಿರುವ ಗಂಡಸರೆಲ್ಲರೂ ಅವುಗಳನ್ನು ತಿನ್ನ
ಬಹುದು; ಅವು ಮಹಾಪರಿಶುದ್ಧವಾದವುಗಳೆಂದು
ನೀವು ತಿಳಿದುಕೊಳ್ಳಬೇಕು. ಅದಲ್ಲದೆ ಇಸ್ರಾಯೇ
ಲ್ಯರು [ಮಾಡುವ ಸಮಾಧಾನಯಜ್ಞದ್ರವ್ಯಗಳಿಂದ]
ನನಗೋಸ್ಕರ ಪ್ರತ್ಯೇಕಿಸಿಕೊಡುವ ದ್ರವ್ಯಗಳೂ
ನೈವೇದ್ಯವಾಗಿ ನಿವಾಳಿಸುವ ದ್ರವ್ಯಗಳೂ ನಿಮಗೆ
ಆಗಬೇಕು; ಇವು ನಿನಗೂ ನಿನ್ನ ಸಂತತಿಯವರಾದ
ಸ್ತ್ರೀಪುರುಷರೆಲ್ಲರಿಗೂ ಶಾಶ್ವತವಾದ ನಿಯಮದಿಂದ
ಸಲ್ಲಬೇಕೆಂದು ಅನುಗ್ರಹಿಸಿದ್ದೇನೆ. ಇವುಗಳನ್ನು
ನಿಮ್ಮ ಮನೆಗಳಲ್ಲಿರುವ ಶುದ್ಧರಾದವರೆಲ್ಲರೂ ಊಟ
2 ಮಾಡಬಹುದು. ಇಸ್ರಾಯೇಲ್ಯರು ಯೆಹೋವನಿಗೆ
ಸಮರ್ಪಿಸುವ ಪ್ರಥಮಫಲಗಳು ಅಂದರೆ ಎಣ್ಣೆ,
ದ್ರಾಕ್ಷಾರಸ, ಧಾನ್ಯ ಇವುಗಳಲ್ಲಿ ಶ್ರೇಷ್ಠವಾದದ್ದು
3 ನಿನಗೇ ಆಗಬೇಕೆಂದು ವಿಧಿಸಿದ್ದೇನೆ. ಅವರು ತಮ್ಮ
ದೇಶದ ಎಲ್ಲಾ ಬೆಳೆಗಳಲ್ಲಿ ಯೆಹೋವನಿಗೋಸ್ಕರ
ತರುವ ಪ್ರಥಮಫಲಗಳು ನಿನಗೇ ಸಲ್ಲಬೇಕು; ನಿಮ್ಮ
ಮನೆಗಳಲ್ಲಿ ಶುದ್ಧರಾಗಿರುವ ಎಲ್ಲರೂ ಅವುಗಳನ್ನು
4 ಊಟಮಾಡಬಹುದು. ಕೇವಲ ಯೆಹೋವನದಾಗಿ
ಯೇ ಇರುವದಕ್ಕೆ ಇಸ್ರಾಯೇಲ್ಯರು ಹರಕೆಮಾಡಿ
5 ಕೊಡುವದೆಲ್ಲವೂ ನಿನಗಾಗಬೇಕು. ಮನುಷ್ಯರಲ್ಲಾ
ಗಲಿ ಪಶುಗಳಲ್ಲಾಗಲಿ ಅವರು ಯೆಹೋವನಿಗೆ ಸಮ
ರ್ಪಿಸುವ ಸಕಲಪ್ರಾಣಿಗಳಲ್ಲಿ ಚೊಚ್ಚಲಾದದ್ದು ನಿನಗೆ
ಸಲ್ಲಬೇಕು. ಆದರೆ ಮನುಷ್ಯರ ಚೊಚ್ಚಲುಮಕ್ಕ
ಳಿಗೂ ಅಪವಿತ್ರವಾದ ಪಶುಗಳ ಮರಿಗಳಿಗೂ ಬದ
ಲಾಗಿ ನೀನು ಈಡನ್ನು ತೆಗೆದುಕೊಂಡು ಅವುಗಳನ್ನು
ಬಿಟ್ಟುಬಿಡಬೇಕು. ಬಿಟ್ಟುಬಿಡಬೇಕಾದ ಶಿಶುಗಳು 16
ಒಂದು ತಿಂಗಳಿನ ಪ್ರಾಯಕ್ಕೆ ಬಂದಾಗಲೇ ನೀವು
ಗೊತ್ತಾದ ಈಡನ್ನು ಅಂದರೆ ದೇವರ ಸೇವೆಗೆ ನೇಮಕ
ವಾದ ಇಪ್ಪತ್ತು ಗೇರಾ ತೂಕದ ರೂಪಾಯಿಯ
ಮೇರೆಗೆ ಐದು ರೂಪಾಯಿಯನ್ನು ತೆಗೆದುಕೊಂಡು
ಅವುಗಳನ್ನು ಬಿಟ್ಟುಬಿಡಬೇಕು. ಆಕಳಿನ ಮತ್ತು 17
ಆಡುಕುರಿಗಳ ಚೊಚ್ಚಲುಮರಿಗಳು ದೇವರ ಸೊತ್ತಾಗಿ
ರುವದರಿಂದ ಅವುಗಳನ್ನು ಬಿಡಕೂಡದು; ಅವು
ಗಳ ರಕ್ತವನ್ನು ಯಜ್ಞವೇದಿಗೆ ಎರಚಿ ಕೊಬ್ಬನ್ನು
ಯೆಹೋವನಿಗೆ ಸುಗಂಧಹೋಮಮಾಡಬೇಕು.
ಅವುಗಳ ಮಾಂಸವು [ಸಮಾಧಾನಯಜ್ಞಗಳಲ್ಲಿ] 18
ನೈವೇದ್ಯವಾಗಿ ನಿವಾಳಿಸುವ ಎದೆಯ ಭಾಗದಂತೆಯೂ
ಬಲದೊಡೆಯಂತೆಯೂ ನಿನಗೇ ಸಲ್ಲಬೇಕು. ಇಸ್ರಾ 19
ಯೇಲ್ಯರು ಯೆಹೋವನಿಗೋಸ್ಕರ ಪ್ರತ್ಯೇಕಿಸಿ ಸಮ
ರ್ಪಿಸುವ ದೇವರ ವಸ್ತುಗಳೆಲ್ಲಾ ನಿನಗೂ ನಿನ್ನ ಸಂತತಿ
ಯವರಾದ ಸ್ತ್ರೀಪುರುಷರೆಲ್ಲರಿಗೂ ಸದಾಕಾಲವೂ
ಸಲ್ಲಬೇಕೆಂದು ನಾನು ಅನುಗ್ರಹಮಾಡಿದ್ದೇನೆ. ಇದು
ಯೆಹೋವನ ಸನ್ನಿಧಿಯಲ್ಲಿ ನಿನ್ನೊಡನೆಯೂ ನಿನ್ನ
ಸಂತತಿಯೊಡನೆಯೂ ಮಾಡಲ್ಪಟ್ಟ ಶಾಶ್ವತವಾದ
ಉಪ್ಪಿನ ಒಡಂಬಡಿಕೆ.

ಇದಲ್ಲದೆ ಯೆಹೋವನು ಆರೋನನಿಗೆ ಹೇಳಿದ್ದೇ 20
ನಂದರೆ—ಇಸ್ರಾಯೇಲ್ಯರ ದೇಶದಲ್ಲಿ ನಿನಗೆ ಸ್ವಂತ
ಕ್ಕಾಗಿ ಭೂಸ್ಥಿತಿ ಆಗುವದಿಲ್ಲ; ಅವರೊಂದಿಗೆ ನಿನಗೆ
ಪಾಲು ಇರುವದಿಲ್ಲ. ಇಸ್ರಾಯೇಲ್ಯರ ಮಧ್ಯದಲ್ಲಿ
ನಾನೇ ನಿನಗೆ ಪಾಲಾಗಿಯೂ ಸ್ವಾಸ್ತ್ಯವಾಗಿಯೂ
ಇದ್ದೇನೆ. ಲೇವಿಯರು ದೇವದರ್ಶನದ ಗುಡಾರದ 21
ಪರಿಚರ್ಯವನ್ನು ಮಾಡುವದಕ್ಕಾಗಿ ಇಸ್ರಾಯೇಲ್ಯ
ರಿಂದ [ಸಕಲಪದಾರ್ಥಗಳ] ಹತ್ತನೆಯ ಪಾಲನ್ನು
ಗೊತ್ತುಮಾಡಿ ಕೊಟ್ಟಿದ್ದೇನೆ. ಇನ್ನು ಮುಂದೆ ಇಸ್ರಾ 22
ಯೇಲ್ಯರು ದೇವದರ್ಶನದ ಗುಡಾರದ ಹತ್ತಿರಕ್ಕೆ
ಬರಕೂಡದು; ಬಂದರೆ ಅವರು ಆ ದೋಷದಿಂದ
ಸತ್ತುಹೋದಾರು. ಲೇವಿಯರೇ ದೇವದರ್ಶನದ 23
ಗುಡಾರದ ಪರಿಚರ್ಯವನ್ನು ಮಾಡಬೇಕು; ಅದರ
ಸಂಬಂಧವಾಗಿ ಅವರು ಮಾಡುವ ಪಾಪದ ಫಲ
ವನ್ನು ತಾವೇ ಅನುಭವಿಸಬೇಕು. ಇದು ನಿಮಗೂ
ನಿಮ್ಮ ಸಂತತಿಯವರಿಗೂ ಶಾಶ್ವತನಿಯಮ. ಆದರೆ
ಇಸ್ರಾಯೇಲ್ಯರ ಮಧ್ಯದಲ್ಲಿ ಲೇವಿಯರಿಗೆ ಸ್ವಂತ
ವಾದ ಭೂಸ್ಥಿತಿಯುಂಟಾಗುವದಿಲ್ಲ. ಇಸ್ರಾಯೇಲ್ಯರು 24
ಪ್ರತ್ಯೇಕಿಸಿ ಯೆಹೋವನಿಗೆ ಸಮರ್ಪಿಸುವ ಹತ್ತನೆಯ
ಪಾಲನ್ನೇ ಲೇವಿಯರಿಗೆ ಸ್ವಾಸ್ತ್ಯವಾಗಿ ಕೊಟ್ಟಿದ್ದೇ
ನಲ್ಲಾ. ಇವರಿಗೆ ಇಸ್ರಾಯೇಲ್ಯರೊಂದಿಗೆ ಪಾಲು
ದೊರೆಯುವದಿಲ್ಲವೆಂದು ನಾನು ಹೇಳಿದ ಮಾತಿಗೆ
ಇದೇ ಕಾರಣ.

ಯೆಹೋವನು ಮೋಶೆಗೆ ಹೇಳಿದ್ದೇನಂದರೆ— 25
ನೀನು ಲೇವಿಯರಿಗೆ ಹೀಗೆ ಆಜ್ಞಾಪಿಸಬೇಕು— 26
ನಿಮ್ಮ ಸ್ವಂತಕ್ಕಾಗಿ ನಾನು ನೇಮಿಸಿರುವ ಹತ್ತನೆಯ
ಪಾಲನ್ನು ನೀವು ಇಸ್ರಾಯೇಲ್ಯರಿಂದ ತೆಗೆದುಕೊಳ್ಳು
ವಾಗ ಅದರಲ್ಲಿ ಹತ್ತನೆಯ ಪಾಲನ್ನು ಪ್ರತ್ಯೇಕಿಸಿ

27 ಯೆಹೋವನಿಗೆ ಸಮರ್ಪಿಸಬೇಕು. ನೀವು ಹೀಗೆ
ಸಮರ್ಪಿಸಿದ ಹತ್ತನೆಯ ಪಾಲು ಕಣದಲ್ಲಿನ ದವಸ
ವನ್ನೂ ದ್ರಾಕ್ಷೀತೊಟ್ಟಿಯ ರಸವನ್ನೂ ಕೊಟ್ಟಂತೆ
28 ನಿಮ್ಮ ಲೆಕ್ಕದಲ್ಲಿ ಎಣಿಸಲ್ಪಡುವದು. ಇಸ್ರಾಯೇಲ್ಯ
ರಿಂದ ನಿಮಗೆ ಸಲ್ಲುವ ಹತ್ತನೆಯ ಪಾಲಿನಲ್ಲಿ ನೀವು
ಯೆಹೋವನಿಗೋಸ್ಕರ ಹತ್ತನೆಯ ಭಾಗವನ್ನು ಪ್ರತ್ಯೇ
ಕಿಸಿ ಯಾಜಕನಾದ ಆರೋನನಿಗೆ ಒಪ್ಪಿಸಬೇಕು.
29 ನಿಮಗೆ ಕೊಡಲ್ಪಡುವ ಸಕಲಪದಾರ್ಥಗಳಲ್ಲಿಯೂ
ನೀವು ಉತ್ತಮಭಾಗವನ್ನೇ ಅಂದರೆ ದೇವರ ವಸ್ತು
ವಾಗುವದಕ್ಕೆ ಯೋಗ್ಯಭಾಗವನ್ನೇ ಯೆಹೋವನಿ
ಗೋಸ್ಕರ ಪ್ರತ್ಯೇಕಿಸಿ ಸಮರ್ಪಿಸಬೇಕು.
30 ಮತ್ತು ನೀನು ಲೇವಿಯರಿಗೆ ಹೀಗೆ ಹೇಳಬೇಕು—
ನಿಮಗೆ ದೊರಕಿದ್ದರಲ್ಲಿ ನೀವು ಉತ್ತಮವಾದದ್ದನ್ನೇ
ಪ್ರತ್ಯೇಕಿಸಿ ಸಮರ್ಪಿಸಿದ ಮೇಲೆ ಮಿಕ್ಕದ್ದನ್ನು ಕಣ
ದಲ್ಲಿನ ದವಸದ ಹಾಗೂ ದ್ರಾಕ್ಷೀತೊಟ್ಟಿಯ ರಸದ
ಹಾಗೂ ಭಾವಿಸಿ ಉಪಯೋಗಿಸಿಕೊಳ್ಳಬಹುದು.
31 ನೀವೂ ನಿಮ್ಮ ಮನೆಗಳವರೂ ಅದನ್ನು ಯಾವ ಸ್ಥಳ
ದಲ್ಲಿಯಾದರೂ ಊಟಮಾಡಬಹುದು. ನೀವು ದೇವ
ದರ್ಶನದ ಗುಡಾರದ ಪರಿಚರ್ಯವನ್ನು ಮಾಡಿದ್ದಕ್ಕೆ
32 ಅದು ನಿಮಗೆ ಪ್ರತಿಫಲ. ಅದರಲ್ಲಿ ಉತ್ತಮಭಾಗ
ವನ್ನು ಯೆಹೋವನಿಗೋಸ್ಕರ ಪ್ರತ್ಯೇಕಿಸಿದನಂತರ
ನೀವು ಮಿಕ್ಕದರ ವಿಷಯದಲ್ಲಿ ಯಾವ ದೋಷಕ್ಕೂ
ಗುರಿಯಾಗುವದಿಲ್ಲ. ಇಸ್ರಾಯೇಲ್ಯರು ಸಮರ್ಪಿ
ಸುವ ದೇವರ ವಸ್ತುಗಳನ್ನು ಸಾಧಾರಣವೆಂದೆಣಿಸಿ
ಸಾಯಬೇಡಿರಿ ಎಂಬದೇ.

ಅರಣ್ಯಸಂಚಾರಚರಿತ್ರದ ಸಮಾಪ್ತಿ.

19—21.

ಮನುಷ್ಯಶವವು ಸೋಂಕಿದ ಹೊಲೆಯನ್ನು ಹೋಗಲಾಡಿಸುವ
ಆಚಾರವನ್ನು ಕುರಿತದ್ದು.

19 ಯೆಹೋವನು ಮೋಶೆ ಆರೋನರಿಗೆ ಹೀಗೆ ಆಜ್ಞಾ
2 ಪಿಸಿದನು—ಯೆಹೋವನಾದ ನಾನು ಒಂದು
ವಿಧಿಯನ್ನು ನೇಮಿಸಿದ್ದೇನೆ; ಅದೇನಂದರೆ—ಎಂದೂ
ನೊಗವನ್ನು ಹೊರದ ಮತ್ತು ಯಾವ ಕುಂದುಕೊರ
ತೆಯೂ ಇಲ್ಲದ ಕೆಂದಾಕಳನ್ನು ನಿನಗೆ ತಂದುಕೊಡ
3 ಬೇಕೆಂದು ಇಸ್ರಾಯೇಲ್ಯರಿಗೆ ಆಜ್ಞಾಪಿಸು. ಅದನ್ನು
ನೀವು ಯಾಜಕನಾದ ಎಲ್ಲಾಜಾರನ ಕೈಗೆ ಒಪ್ಪಿಸ
ಬೇಕು. ಅವನು ಅದನ್ನು ಪಾಳೆಯದ ಹೊರಗೆ
ಹೊಡಿಸಿಕೊಂಡುಹೋಗಿ ತನಗೆದುರಾಗಿಯೇ ಒಬ್ಬನ
4 ಕೈಯಿಂದ ವಧೆಮಾಡಿಸಬೇಕು. ತರುವಾಯ ಅವನು
ಅದರ ರಕ್ತದಲ್ಲಿ ಸ್ವಲ್ಪವನ್ನು ಬೆರಳಿನಿಂದ ದೇವ
ದರ್ಶನದ ಗುಡಾರದ ಮುಂಭಾಗದ ಕಡೆಗೆ ಏಳು
5 ಸಾರಿ ಚಿಮಿಕಿಸಬೇಕು. ಆಗ ಅವನು ಆ ಆಕಳನ್ನು
ಚರ್ಮ ಮಾಂಸ ರಕ್ತ ಕಲ್ಮಷಗಳು ಸಹಿತವಾಗಿ ತನ್ನ
6 ಎದುರಿನಲ್ಲಿಯೇ ಸುಡಿಸಿಬಿಡಬೇಕು. ಯಾಜಕನು
ದೇವದಾರುಮರದ ಕಟ್ಟಿಗೆಯನ್ನೂ ಹಿಸ್ಸೋಪ್‌ಗಿಡದ
ಬರಲನ್ನೂ ರಕ್ತವರ್ಣವುಳ್ಳ ದಾರವನ್ನೂ ತೆಗೆದು
ಕೊಂಡು ಆ ಆಕಳನ್ನು ಸುಡುವ ಬೆಂಕಿಯಲ್ಲಿ
7 ಹಾಕಬೇಕು. ಆ ಯಾಜಕನು ತನ್ನ ಬಟ್ಟೆಗಳನ್ನು
ಒಗೆದುಕೊಂಡು ಸ್ನಾನಮಾಡಿದನಂತರ ಪಾಳೆ
ದೊಳಗೆ ಬರಬಹುದು, ಆದರೆ ಆ ದಿನ
ಸಾಯಂಕಾಲದ ವರೆಗೆ ಅವನು ಅಶುದ್ಧನಾಗಿ
ಬೇಕು. ಆ ಆಕಳನ್ನು ಸುಟ್ಟವನೂ ತನ್ನ ಬ
ಗಳನ್ನು ಒಗೆದುಕೊಂಡು ಸ್ನಾನಮಾಡಿ ಆ ದಿನ
ಸಾಯಂಕಾಲದ ವರೆಗೆ ಅಶುದ್ಧನಾಗಿರಬೇಕು. ಮತ್ತ
ಶುದ್ಧನಾದವನೊಬ್ಬನು ಆ ಆಕಳಿನ ಬೂದಿಯನ
ಕೂಡಿಸಿ ಪಾಳೆಯದ ಹೊರಗೆ ಶುದ್ಧವಾದ ಸ್ಥಳದ
ಇಡಬೇಕು. ಅದನ್ನು ಇಸ್ರಾಯೇಲ್ಯರ ಸಮೂ
ದವರ ಉಪಯೋಗಕ್ಕಾಗಿ ನೀವು ಜೋಪಾನಮಾ
ಬೇಕು. ಅದು ಹೊಲೆಗಳೆವ ನೀರನ್ನು ಸಿದ್ಧಪ
ಸುವದಕ್ಕಾಗಿ ಅಲ್ಲೇ ಇಟ್ಟಿರಬೇಕು; ಅದು ದೋ
ಪರಿಹಾರಕವಾದದ್ದು. ಆ ಬೂದಿಯನ್ನು ಕೂಡಿ
ದವನು ತನ್ನ ಬಟ್ಟೆಗಳನ್ನು ಒಗೆದುಕೊಂಡು
ದಿನದ ಸಾಯಂಕಾಲದ ವರೆಗೆ ಅಶುದ್ಧನಾಗಿರಬೇಕ
ಇದು ಇಸ್ರಾಯೇಲ್ಯರಿಗೂ ಅವರಲ್ಲಿ ಇಳುಕೊಂ
ರುವ ಇತರರಿಗೂ ಶಾಶ್ವತನಿಯಮ.
ಮನುಷ್ಯನ ಶವ ಸೋಂಕಿದವನು ಏಳು ದಿನಗ
ವರೆಗೆ ಅಶುದ್ಧನಾಗಿರಬೇಕು. ಮೂರನೆಯ ದಿನದ
ಆ ಬೂದಿಯಿಂದ ದೋಷಪರಿಹಾರಮಾಡಿಕೊಂ
ಏಳನೆಯ ದಿನದಲ್ಲಿ ಶುದ್ಧನಾಗುವನು. ಮೂರನೆ
ದಿನದಲ್ಲಿ ಅವನು ದೋಷಪರಿಹಾರಮಾಡಿಕೊಳ್ಳ
ಹೋದರೆ ಏಳನೆಯ ದಿನದಲ್ಲಿಯೂ ಶುದ್ಧನಾಗುವದಿಲ್ಲ
ಮನುಷ್ಯನ ಶವ ಸೋಂಕಿದವನು ದೋಷಪರಿಹಾ
ವನ್ನು ಮಾಡಿಕೊಳ್ಳದೆಹೋದರೆ ಅವನು ಯೆಹೋವ
ಗುಡಾರವನ್ನು ಅಪವಿತ್ರಪಡಿಸುವವನಾದನು. ಅಂ
ವನನ್ನು ಇಸ್ರಾಯೇಲ್ಯರಿಂದ ತೆಗೆದುಹಾಕಬೇಕ
ಹೊಲೆಗಳೆವ ನೀರನ್ನು ತನ್ನ ಮೇಲೆ ಚಿಮಿಕಿಸಿಕೊಳ್ಳ
ಇರುವದರಿಂದ ಅವನು ಅಶುದ್ಧನು; ಅವನಿಗುಂಟಾ
ಅಪವಿತ್ರತೆಯು ಇದ್ದೇ ಇರುವದು.
[ಹೊಲೆಗಳೆವ] ಕಟ್ಟಳೆ ಹೇಗಂದರೆ—ಯಾರಾದರ
ಡೇರೆಯೊಳಗೆ ಸತ್ತ ಸಂದರ್ಭದಲ್ಲಿ ಆ ಡೇರೆಯಲ್ಲಿ
ವವರೆಲ್ಲರೂ ಅದರೊಳಗೆ ಬರುವವರೂ ಏಳು ದಿ
ಗಳ ವರೆಗೆ ಅಶುದ್ಧರಾಗಿರಬೇಕು. ಮತ್ತು ಮುಚ್ಚ
ಹಾಕಿ ಕಟ್ಟದಿರುವ ಎಲ್ಲಾ ಪಾತ್ರೆಗಳು ಅಶುದ್ಧವಾ
ರುವವು. ಬೈಲಿನಲ್ಲಿರುವ ಯಾವನಿಗಾದರೂ ಶಸ್
ಹತನ ಶವವಾಗಲಿ ಬೇರೆ ಯಾವ ಮನುಷ್ಯಶ
ವಾಗಲಿ ಮನುಷ್ಯನ ಎಲುಬಾಗಲಿ ಸಮಾಧಿಯಾಗ
ಸೋಂಕಿದರೆ ಅವನು ಏಳು ದಿನಗಳ ವರೆಗೆ ಅಶು
ನಾಗಿರಬೇಕು.
ಅಂಥ ಅಶುದ್ಧನಾದವನನ್ನು ಪವಿತ್ರಪಡಿಸಬೇಕ
ದರೆ ಆ ದೋಷಪರಿಹಾರಕವಾದ ಬೂದಿಯಲ್ಲಿ ಸ್ವ
ವನ್ನು ಪಾತ್ರೆಯಲ್ಲಿ ಇಟ್ಟು ಅದರ ಮೇಲೆ ಸೆ
ನೀರನ್ನು ಹಾಕಬೇಕು. ಆಗ ಶುದ್ಧನಾದವನೊಬ್ಬನ
ಆ ನೀರನ್ನು ಹಿಸ್ಸೋಪ್‌ಗಿಡದ ಬರಲಿಂದ [ಮನುಷ್ಯನ
ಸತ್ತ] ಆ ಡೇರೆಯ ಮೇಲೂ ಅದರಲ್ಲಿದ್ದ ಸಾಮಾನ
ಗಳ ಮತ್ತು ಮನುಷ್ಯರ ಮೇಲೂ ಚಿಮಿಕಿಸಬೇಕು
ಹಾಗೆಯೇ ಎಲುಬಾಗಲಿ ಹತವಾದವನ ಅಥವ
ಬೇರೆ ಮನುಷ್ಯನ ಶವವಾಗಲಿ ಸಮಾಧಿಯಾಗ
ಯಾವನಿಗೆ ಸೋಂಕಿತೋ ಅವನ ಮೇಲೆಯೂ ಚಿ

ಸಬೇಕು. ಅವನು ಮೂರನೆಯ ದಿನದಲ್ಲಿಯೂ
ಏಳನೆಯ ದಿನದಲ್ಲಿಯೂ ಅಶುದ್ಧನಾದವನ ಮೇಲೆ
ಅದನ್ನು ಚಿಮಿಕಿಸಬೇಕು. ಅಶುದ್ಧನಾದವನು ಏಳನೆಯ
ದಿನದಲ್ಲಿ ದೋಷಪರಿಹಾರಹೊಂದಿದವನಾಗಿ ತನ್ನ ಬಟ್ಟೆ
ಗಳನ್ನು ಒಗೆದುಕೊಂಡು ಸ್ನಾನಮಾಡಿ ಸಾಯಂಕಾಲ
20 ದಲ್ಲಿ ಶುದ್ಧನಾಗುವನು. ಅಶುದ್ಧನಾಗಿ ದೋಷಪರಿ
ಹಾರಮಾಡಿಕೊಳ್ಳದವನು ಯೆಹೋವನ ದೇವಸ್ಥಾನ
ವನ್ನು ಅಪವಿತ್ರಪಡಿಸಿದ ಕಾರಣ ಸಭೆಯಿಂದ ತೆಗೆಯ
ಲ್ಪಡಬೇಕು. ಹೊಲೆಗಳೆವ ನೀರನ್ನು ತನ್ನ ಮೇಲೆ
ಚಿಮಿಕಿಸಿಕೊಳ್ಳದೆ ಹೋದದರಿಂದ ಅವನು ಅಶುದ್ಧನೇ.
21 ಇದು ಇಸ್ರಾಯೇಲ್ಯರಿಗೆ ಶಾಶ್ವತನಿಯಮ. ಹೊಲೆ
ಗಳೆವ ಆ ನೀರನ್ನು ಚಿಮಿಕಿಸಿದವನು ತನ್ನ
ಬಟ್ಟೆಗಳನ್ನು ಒಗೆದುಕೊಳ್ಳಬೇಕು; ಮತ್ತು ಆ
ನೀರು ಯಾರಿಗೆ ಸೋಂಕಿತೋ ಅವನು ಆ ದಿನದ
22 ಸಾಯಂಕಾಲದ ವರೆಗೆ ಅಶುದ್ಧನಾಗಿರಬೇಕು. ಅಶು
ದ್ಧನಿಗೆ ಸೋಂಕಿದ ವಸ್ತು ಯಾವದೇ ಆಗಲಿ ಅಶುದ್ಧ
ವೆಂದು ನೀವು ತಿಳಿದುಕೊಳ್ಳಬೇಕು; ಅದು ಯಾರಿಗೆ
ಸೋಂಕಿತೋ ಅವನೂ ಆ ದಿನದ ಸಾಯಂಕಾಲದ
ವರೆಗೆ ಅಶುದ್ಧನಾಗಿರಬೇಕು.

ಕಾದೇಶಿನಲ್ಲಿ ಮಿರ್ಯಾಮಳು ಸತ್ತದ್ದು; ಅಲ್ಲಿ ಯೆಹೋವನು
ಬಂಡೆಯೊಳಗಿಂದ ಇಸ್ರಾಯೇಲ್ಯರಿಗೋಸ್ಕರ
ನೀರುಬರಮಾಡಿದ್ದು.

20 ಮೊದಲನೆಯ ತಿಂಗಳಲ್ಲಿ ಇಸ್ರಾಯೇಲ್ಯರ ಸರ್ವ
ಸಮೂಹದವರು ಚಿನ್ ಎಂಬ ಅರಣ್ಯಕ್ಕೆ ಬಂದು
ಕಾದೇಶಿನಲ್ಲಿ ಇಳಿದುಕೊಂಡರು. ಅಲ್ಲಿ ಮಿರ್ಯಾ
ಮಳು ತೀರಿಹೋದಳು; ಆಕೆಯ ಶವವನ್ನು ಸಮಾಧಿ
ಮಾಡಿದರು.
2 ಸಮೂಹದವರಿಗೆ ನೀರು ಇಲ್ಲದ ಕಾರಣ ಅವರು
ಮೋಶೆ ಆರೋನರಿಗೆ ವಿರೋಧವಾಗಿ ಕೂಡಿಕೊಂಡು
3 ಮೋಶೆಯ ಸಂಗಡ ವಿವಾದಿಸುವವರಾಗಿ—ನಮ್ಮ
ಜನರು ಯೆಹೋವನ ಸನ್ನಿಧಿಯಲ್ಲಿ ಸತ್ತಾಗ
ನಾವೂ ಸತ್ತುಹೋಗಿದ್ದರೆ ಎಷ್ಟೋ ಮೇಲಾಗಿತ್ತು
4 ಎಂದೂ ನೀವು ಯೆಹೋವನ ಸಭೆಯವರಾದ ನಮ್ಮ
ನ್ನೂ ನಮ್ಮ ಪಶುಗಳನ್ನೂ ಈ ಮರಳುಕಾಡಿಗೆ ಕರ
5 ಕೊಂಡು ಬಂದು ಯಾಕೆ ಸಾಯಿಸುತ್ತೀರಿ? ನಮ್ಮನ್ನು
ಐಗುಪ್ತದೇಶದಿಂದ ಬರಮಾಡಿ ಈ ಕೆಟ್ಟ ಸ್ಥಳಕ್ಕೆ
ಯಾಕೆ ಕರಕೊಂಡು ಬಂದಿರಿ? ಈ ನೆಲದಲ್ಲಿ ಯಾವ
ಧಾನ್ಯವೂ ಬೆಳೆಯುವದಿಲ್ಲ, ಮತ್ತು ಅಂಜೂರವಿಲ್ಲ,
ದ್ರಾಕ್ಷೆಯಿಲ್ಲ, ದಾಳಿಂಬವಿಲ್ಲ, ಕುಡಿಯುವದಕ್ಕೆ ನೀ
ರಾದರೂ ಇಲ್ಲ ಎಂದೂ ಹೇಳುತ್ತಿದ್ದರು.
6 ಮೋಶೆ ಆರೋನರು ಜನಸಮೂಹದ ಎದುರಿನಿಂದ
ದೇವದರ್ಶನದ ಗುಡಾರದ ಬಾಗಲಿಗೆ ಹೋಗಿ ಅಡ್ಡ
ಬೀಳಲಾಗಿ ಯೆಹೋವನ ತೇಜಸ್ಸು ಅವರಿಗೆ ಕಾಣಿ
7. 8 ಸಿತು. ಆಗ ಯೆಹೋವನು ಮೋಶೆಗೆ—ನೀನು
ಕೋಲನ್ನು ಕೈಯಲ್ಲಿ ಹಿಡಿದು ನಿನ್ನ ಅಣ್ಣನಾದ
ಆರೋನನ ಜೊತೆಯಲ್ಲಿ ಸಮೂಹದವರನ್ನು ಕೂಡಿಸಿ
ಕೊಂಡು ಅವರ ಎದುರಿನಲ್ಲೇ ಆ ಕಡಿದಾದ ಬಂಡೆಗೆ
ನೀರುಕೊಡಬೇಕೆಂದು ಆಜ್ಞಾಪಿಸು. ಅದರೊಳಗಿಂದ
ನೀರು ಹೊರಟುಬರುವದು; ನೀನು ಸಮೂಹದವ
ರಿಗೂ ಅವರ ಪಶುಗಳಿಗೂ ನೀರನ್ನು ಕುಡಿಯ ಕೊಡ
ಬಹುದು ಎಂದು ಹೇಳಿದನು.
ಯೆಹೋವನು ಆಜ್ಞಾಪಿಸಿದಂತೆಯೇ ಮೋಶೆಯು 9
ಆ ಕೋಲನ್ನು ಆತನ ಸನ್ನಿಧಿಯಿಂದ ತೆಗೆದುಕೊಂಡು
ಹೋಗಿ ಆರೋನನ ಜೊತೆಯಲ್ಲಿ ಸಮೂಹದವರನ್ನು 10
ಆ ಕಡಿದಾದ ಬಂಡೆಗೆದುರಾಗಿ ಕೂಡಿಸಿ ಅವರಿಗೆ—
ದ್ರೋಹಿಗಳೇ, ಕೇಳಿರಿ; ನಾವು ಈ ಬಂಡೆಯೊಳಗಿಂದ
ಲೇ ನಿಮಗೋಸ್ಕರ ನೀರನ್ನು 1)ಬರಮಾಡಬೇಕೋ
ಎಂದು ಹೇಳಿ ಕೈಯೆತ್ತಿ ತನ್ನ ಕೈಯಲ್ಲಿರುವ ಕೋಲಿ 11
ನಿಂದ ಆ ಬಂಡೆಯನ್ನು ಎರಡು ಸಾರಿ ಹೊಡೆದನು.
ಆಗ ನೀರು ಪ್ರವಾಹವಾಗಿ ಹೊರಟಿತು; ಸಮೂಹ
ದವರೂ ಅವರ ಪಶುಗಳೂ ಕುಡಿದರು.
ಆಗ ಯೆಹೋವನು ಮೋಶೆ ಆರೋನರಿಗೆ— 12
ನೀವು ನನ್ನನ್ನು ನಂಬದವರಾಗಿ ಇಸ್ರಾಯೇಲ್ಯರ
ಎದುರಿನಲ್ಲಿ ನನ್ನ ಗೌರವವನ್ನು ಕಾಪಾಡದೆಹೋದದ
ರಿಂದ ಈ ಸಮೂಹದವರನ್ನು ನಾನು ಅವರಿಗೆ ವಾಗ್ದಾನ
ಮಾಡಿದ ದೇಶದೊಳಕ್ಕೆ ನೀವು ಕರಕೊಂಡು ಹೋಗ
ಕೂಡದು ಎಂದು ಹೇಳಿದನು.
ಇಸ್ರಾಯೇಲ್ಯರು ಅಲ್ಲಿ ಯೆಹೋವನ ಸಂಗಡ 13
ವಿವಾದಮಾಡಿದ್ದರಿಂದ ಆ ನೀರಿನ ಪ್ರವಾಹಕ್ಕೆ
2)ಮೆರೀಬಾ ಎಂದು ಹೆಸರಾಯಿತು. ಅದಲ್ಲದೆ ಅಲ್ಲಿ
ಯೆಹೋವನು ತನ್ನ 3)ಮಹಾಮಹಿಮೆಯನ್ನು ತೋ
ರ್ಪಡಿಸಿದನು.

ಎದೋಮ್ಯರು ತಮ್ಮ ದೇಶವನ್ನು ದಾಟಿಹೋಗುವದಕ್ಕೆ
ಇಸ್ರಾಯೇಲ್ಯರಿಗೆ ಅಪ್ಪಣೆಕೊಡದೆ ಹೋದದ್ದು.

ಮೋಶೆ ಕಾದೇಶಿನಿಂದ ಎದೋಮ್ಯರ ಅರಸನ 14
ಬಳಿಗೆ ದೂತರನ್ನು ಕಳುಹಿಸಿ—ತಮ್ಮ ಸಂಬಂಧಿಕ
ರಾದ ಇಸ್ರಾಯೇಲ್ಯರು ಕೇಳಿಕೊಳ್ಳುವದೇನಂದರೆ—
ನಮಗೆ ಸಂಭವಿಸಿದ ಎಲ್ಲಾ ಕಷ್ಟವನ್ನು ತಾವು ಕೇಳಿ
ದ್ದೀರಷ್ಟೆ. ನಮ್ಮ ಪಿತೃಗಳು ಐಗುಪ್ತದೇಶಕ್ಕೆ ಇಳಿದು 15
ಹೋದದ್ದೂ ನಾವು ಅಲ್ಲಿ ಬಹುದಿವಸ ವಾಸವಾಗಿ
ದ್ದದ್ದೂ ಐಗುಪ್ತ್ಯರು ನಮ್ಮನ್ನೂ ನಮ್ಮ ಪಿತೃಗಳ
ನ್ನೂ ಉಪದ್ರವಪಡಿಸಿದ್ದೂ ನಾವು ಯೆಹೋವನಿಗೆ 16
ಮೊರೆಯಿಡಲಾಗಿ ಆತನು ನಮ್ಮ ಪ್ರಾರ್ಥನೆಯನ್ನು
ಕೇಳಿ ದೂತನನ್ನು ಕಳುಹಿಸಿ ನಮ್ಮನ್ನು ಐಗುಪ್ತದೇ
ಶದಿಂದ ಬಿಡುಗಡೆಮಾಡಿಸಿದ್ದೂ ಇದನ್ನೆಲ್ಲಾ ತಾವು
ತಿಳಿದೇ ಇದ್ದೀರಷ್ಟೆ. ಈಗ ನಾವು ತಮ್ಮ ರಾಜ್ಯದ ಕಟ್ಟ
ಕಡೆಯ ಹತ್ತಿರವಿರುವ ಕಾದೇಶೆಂಬ ಊರಲ್ಲಿದ್ದೇವೆ.
ತಮ್ಮ ದೇಶವನ್ನು ದಾಟಿಹೋಗುವದಕ್ಕೆ ನಮಗೆ 17
ಅಪ್ಪಣೆಯಾಗಬೇಕೆಂದು ಬೇಡಿಕೊಳ್ಳುತ್ತೇವೆ. ನಾವು
ಹೊಲಗಳಲ್ಲಿಯಾದರೂ ದ್ರಾಕ್ಷೇತೋಟಗಳಲ್ಲಿಯಾದ

1) ಅಥವಾ: ಬರಮಾಡುವದು ಸಾಧ್ಯವೋ? 2) ಅಂದರೆ ವಿವಾದಪ್ರವಾಹ. 3) ಮಹಾಮಹಿಮೆಯನ್ನು ತೋರ್ಪಡಿಸು
ವದಕ್ಕೆ ಮೂಲಭಾಷೆಯಲ್ಲಿ ಕಾದೇಶ್.

ರೂ ಹೋಗುವದಿಲ್ಲ; ಬಾವಿಗಳ ನೀರನ್ನು ಕುಡಿಯುವ
ದಿಲ್ಲ; ರಾಜಮಾರ್ಗದಲ್ಲಿಯೇ ನಡೆದು ತಮ್ಮ ದೇಶದ
ಮೇರೆಗಳನ್ನು ದಾಟಿದ ತನಕ ಬಲಕ್ಕೂ ಎಡಕ್ಕೂ
ತಿರುಗುವದಿಲ್ಲ ಎಂದು ಹೇಳಿಸಿದನು.
18 ಆದರೆ ಎದೋಮ್ಯರು— ನಮ್ಮ ದೇಶವನ್ನು ನೀವು
ದಾಟಿ ಹೋಗಕೂಡದು; ದಾಟುವದಾದರೆ ನಾವು
ನಿಮ್ಮ ಮೇಲೆ ಯುದ್ಧಕ್ಕೆ ಬರುತ್ತೇವೆ ಎಂದು ಉತ್ತರ
19 ಕೊಟ್ಟರು. ಅದಕ್ಕೆ ಇಸ್ರಾಯೇಲ್ಯರು— ನಾವು ರಾಜ
ಮಾರ್ಗದಲ್ಲಿಯೇ ಹೋಗುವೆವು; ನಾವೂ ನಮ್ಮ ಪಶು
ಗಳೂ ನಿಮ್ಮ ನೀರನ್ನು ಕುಡಿದರೆ ಅದರ ಬೆಲೆ ಕೊಡು
ವೆವು; ಬೇರೆ ಏನೂ ನಮಗೆ ಬೇಡ; ಕಾಲ್ನಡೆಯಾಗಿ
ದಾಟಿಹೋಗುವದಕ್ಕೆ ನಮಗೆ ಅಪ್ಪಣೆಯಾಗಬೇಕು
20 ಎಂದು ಹೇಳಿದರು. ಆದರೆ ಎದೋಮ್ಯರು— ನೀವು
ದಾಟಲೇ ಬಾರದು ಎಂದು ಉತ್ತರಕೊಟ್ಟು ಬಹುಜನ
ಕೂಡಿಕೊಂಡು ಬಲಾತ್ಕಾರದಿಂದ ಎದುರಿಸುವವರಾಗಿ
21 ಬಂದರು. ಎದೋಮ್ಯರು ಇಸ್ರಾಯೇಲ್ಯರಿಗೆ ತಮ್ಮ
ಪ್ರದೇಶದೊಳಗೆ ದಾಟಿಹೋಗುವದಕ್ಕೆ ಅಪ್ಪಣೆಕೊಡ
ದೆಹೋದದರಿಂದ ಇಸ್ರಾಯೇಲ್ಯರು ಅವರ ಕಡೆ
ಯಿಂದ ತಿರುಗಿಕೊಂಡು [ಬೇರೊಂದು ಮಾರ್ಗವಾಗಿ]
ಹೊರಟರು.

ಆರೋನನು ಹೋರ್ ಬೆಟ್ಟದ ಮೇಲೆ ಸತ್ತದ್ದು.

22 ಆಗ ಇಸ್ರಾಯೇಲ್ಯರ ಸರ್ವಸಮೂಹದವರು ಕಾದೇ
ಶಿನಿಂದ ಹೊರಟು ಹೋರ್ ಎಂಬ ಬೆಟ್ಟಕ್ಕೆ ಬಂದರು.
23 ಯೆಹೋವನು ಎದೋಮ್ಯರ ದೇಶದ ಮೇರೆಯ
ಹತ್ತಿರವಿರುವ ಹೋರ್ ಎಂಬ ಬೆಟ್ಟದ ಬಳಿಯಲ್ಲಿ
24 ಮೋಶೆ ಆರೋನರ ಸಂಗಡ ಮಾತಾಡಿ— ಆರೋನನು
ದೇಹವನ್ನು ಬಿಟ್ಟು ತನ್ನ ಪಿತೃಗಳ ಬಳಿಗೆ ಸೇರ
ಬೇಕು. ನೀವಿಬ್ಬರೂ ಮೆರೀಬಾ ಪ್ರವಾಹದ ಹತ್ತಿರ
ನನ್ನ ಮಾತಿಗೆ ವಿರೋಧವಾಗಿ ತಿರುಗಿಬಿದ್ದದರಿಂದ
ನಾನು ಇಸ್ರಾಯೇಲ್ಯರಿಗೆ ವಾಗ್ದಾನಮಾಡಿದ ದೇಶ
25 ದೊಳಗೆ ಆರೋನನು ಸೇರಕೂಡದು. ನೀನು
ಆರೋನನನ್ನೂ ಅವನ ಮಗನಾದ ಎಲ್ಲಾಜಾರನನ್ನೂ
26 ಕರಕೊಂಡು ಹೋರ್ ಬೆಟ್ಟವನ್ನು ಹತ್ತಿ ಆರೋನನ
ವಸ್ತ್ರಗಳನ್ನು ತೆಗೆದು ಅವನ ಮಗನಾದ ಎಲ್ಲಾಜಾರ
ನಿಗೆ ತೊಡಿಸಬೇಕು. ಆರೋನನು ಅಲ್ಲಿ ದೇಹ
ವನ್ನು ಬಿಟ್ಟು ತನ್ನ ಪಿತೃಗಳ ಬಳಿಗೆ ಸೇರಬೇಕು
ಎಂದು ಆಜ್ಞಾಪಿಸಿದನು.
27 ಯೆಹೋವನ ಅಪ್ಪಣೆಯ ಮೇರೆಗೆ ಮೋಶೆ ಮಾಡಿ
ದನು. ಸರ್ವಸಮೂಹದವರು ನೋಡುತ್ತಿರಲಾಗಿ
28 ಅವರು ಹೋರ್ ಬೆಟ್ಟವನ್ನು ಹತ್ತಿದರು. ಮೋಶೆ
ಆರೋನನ ವಸ್ತ್ರಗಳನ್ನು ತೆಗೆದುಬಿಟ್ಟು ಅವನ ಮಗ
ನಾದ ಎಲ್ಲಾಜಾರನಿಗೆ ತೊಡಿಸಿದನು. ಆರೋನನು
ಅಲ್ಲೇ ಬೆಟ್ಟದ ತುದಿಯಲ್ಲಿ ಸತ್ತುಹೋದನು.
ತರುವಾಯ ಮೋಶೆಯೂ ಎಲ್ಲಾಜಾರನೂ ಬೆಟ್ಟ
29 ದಿಂದ ಇಳಿದುಬಂದರು. ಆರೋನನು ಸತ್ತುಹೋದ
ದ್ದನ್ನು ಇಸ್ರಾಯೇಲ್ ಜನಾಂಗದವರೆಲ್ಲರೂ ತಿಳಿದು
ಮೂವತ್ತು ದಿನಗಳು ಅವನಿಗಾಗಿ ಶೋಕಿಸಿದರು.

ಇಸ್ರಾಯೇಲ್ಯರು ಅರಾದಿನ ಅರಸನನ್ನು ಜಯಿಸಿದ್ದು.

ಕಾನಾನ್ದೇಶದ ದಕ್ಷಿಣಪ್ರಾಂತ್ಯದಲ್ಲಿದ್ದ ಕಾನಾ
ನ್ಯನಾದ ಅರಾದ್ ಪಟ್ಟಣದ ಅರಸನು [1]ಅತಾ
ರೀಮ್ ಮಾರ್ಗವಾಗಿ ಇಸ್ರಾಯೇಲ್ಯರು ಬರುತ್ತಾರೆಂ
ವರ್ತಮಾನವನ್ನು ಕೇಳಿದಾಗ ಅವನು ಅವರ ಮೇ
ಯುದ್ಧಮಾಡಿ ಕೆಲವರನ್ನು ಸೆರೆಹಿಡಿದನು.
ಇಸ್ರಾಯೇಲ್ಯರು ಯೆಹೋವನಿಗೆ ಹರಕೆಯನ್ನ
ಮಾಡಿಕೊಂಡು— ನಾವು ಈ ಜನವನ್ನು ಜಯಿಸ
ವಂತೆ ನೀನು ಅನುಗ್ರಹಿಸಿದರೆ ನಾವು ಅವರ ಗ್ರಾವ
ಗಳನ್ನು ಪೂರ್ಣವಾಗಿ ಹಾಳುಮಾಡಿ ಯೆಹೋವ
ಗಾಗಿಯೇ ಬಿಟ್ಟುಬಿಡುತ್ತೇವೆ ಅಂದರು. ಯೆಹೋ
ವನು ಆ ಪ್ರಾರ್ಥನೆಯನ್ನು ಕೇಳಿ ಇಸ್ರಾಯೇಲ್ಯರ
ಆ ಕಾನಾನ್ಯರನ್ನು ಜಯಿಸುವಂತೆ ಮಾಡಲಾಗಿ ಅವರ
ಆ ಜನರನ್ನೂ ಅವರ ಗ್ರಾಮಗಳನ್ನೂ ನಿಶ್ಶೇಷವಾಗಿ
ನಾಶಮಾಡಿಬಿಟ್ಟರು. ಆದದರಿಂದ ಆ ಪ್ರದೇಶಕ್ಕೆ
[2]ಹೊರ್ಮಾ ಎಂದು ಹೆಸರಾಯಿತು.

ಮೋಶೆ ತಾಮ್ರದ ಸರ್ಪವನ್ನು ಮಾಡಿಸಿದ್ದು.

ಇಸ್ರಾಯೇಲ್ಯರು ಹೋರ್ ಬೆಟ್ಟದಿಂದ ಹೊರಟು
ಎದೋಮ್ಯರ ದೇಶವನ್ನು ಸುತ್ತಿಕೊಂಡುಹೋಗು
ವದಕ್ಕೆ ಕೆಂಪು ಸಮುದ್ರದ ಮಾರ್ಗವಾಗಿ ಪ್ರಯಾಣ
ಮಾಡುತ್ತಿರಲು ಮಾರ್ಗಾಯಾಸದಿಂದ ಅವರಿಗೆ ಬೇಸ
ರವಾಯಿತು. ಆಗ ಅವರು ದೇವರಿಗೂ ಮೋಶೆಗೂ
ವಿರೋಧವಾಗಿ ಮಾತಾಡುತ್ತಾ— ನೀವು ನಮ್ಮನ್ನು ಈ
ಮರಳುಕಾಡಿನಲ್ಲಿ ಕೊಲ್ಲಬೇಕೆಂದು ಐಗುಪ್ತದೇಶದಿಂದ
ಕರೆದುಕೊಂಡು ಬಂದಿರೋ? ಇಲ್ಲಿ ಆಹಾರವೂ ಇಲ್ಲ
ನೀರೂ ಇಲ್ಲ; ಈ ನಿಸ್ಸಾರವಾದ ಆಹಾರವನ್ನು ತಿಂದು
ತಿಂದು ನಮಗೆ ಬೇಸರವಾಯಿತೆಂದು ಹೇಳುವವರಾ
ದರು. ಅದಕ್ಕೆ ಯೆಹೋವನು ಉರಿಮಂಡಲಗಳನ್ನು
ಜನರೊಳಗೆ ಬರಮಾಡಿದನು; ಅವು ಜನರನ್ನು ಕಚ್ಚಿದ್ದ
ರಿಂದ ಬಹುಜನ ಸತ್ತುಹೋದರು.
ಆದದರಿಂದ ಜನರು ಮೋಶೆಯ ಬಳಿಗೆ ಬಂದು—
ನಾವು ನಿನಗೂ ಯೆಹೋವನಿಗೂ ವಿರೋಧವಾಗಿ
ಮಾತಾಡಿ ದೋಷಿಗಳಾದೆವು. ಈ ಸರ್ಪಗಳು ನಮ್ಮ
ಬಳಿಯಿಂದ ತೊಲಗಿಹೋಗುವಂತೆ ನೀನು ಯೆಹೋವ
ನಿಗೆ ಪ್ರಾರ್ಥನೆಮಾಡಬೇಕೆಂದು ಬೇಡಿಕೊಂಡರು.
ಮೋಶೆ ಜನರಿಗೋಸ್ಕರ ಪ್ರಾರ್ಥಿಸಲಾಗಿ ಯೆಹೋ
ವನು ಅವನಿಗೆ— ನೀನು [ತಾಮ್ರದಿಂದ] ವಿಷಸರ್ಪದ
ಆಕಾರವನ್ನು ಮಾಡಿಸಿ ಧ್ವಜಸ್ತಂಭದ ಮೇಲೆ ಎತ್ತಿ
ನಿಲ್ಲಿಸಬೇಕು; ಸರ್ಪಗಳಿಂದ ಗಾಯಪಟ್ಟವರು ಅದನ್ನು
ನೋಡಿ ಬದುಕಿಕೊಳ್ಳುವರು ಎಂದು ಆಜ್ಞಾಪಿಸಿದನು.
ಆದಕಾರಣ ಮೋಶೆ ತಾಮ್ರದಿಂದ ಸರ್ಪದ ಆಕಾರ
ವನ್ನು ಮಾಡಿಸಿ ಧ್ವಜಸ್ತಂಭದ ಮೇಲೆ ಇಡಿಸಿದನು;
ಸರ್ಪಗಳಿಂದ ಗಾಯಪಟ್ಟವರಲ್ಲಿ ಯಾರು ಆ ತಾಮ್ರದ
ಸರ್ಪವನ್ನು ಲಕ್ಷ್ಯವಿಟ್ಟು ನೋಡಿದರೋ ಅವರೆಲ್ಲರೂ
ಬದುಕಿಕೊಂಡರು.

1) ಪಾಠಾಂತರ: ಗೂಢಚಾರರು ಹೋದ.
2) ಅಂದರೆ ನಿಶ್ಶೇಷವಾಗಿ ನಾಶವಾದ ಸ್ಥಳ.

ಇಸ್ರಾಯೇಲ್ಯರು ಸೀಹೋನ್, ಓಗ್ ಎಂಬ ಅರಸರ ದೇಶಗಳನ್ನು ಸ್ವಾಧೀನಮಾಡಿಕೊಂಡದ್ದು.

ತರುವಾಯ ಇಸ್ರಾಯೇಲ್ಯರು ಅಲ್ಲಿಂದ ಹೊರಟು ಓಬೋತಿನಲ್ಲಿ ಇಳಿದುಕೊಂಡರು.

ಓಬೋತಿನಿಂದ ಹೊರಟು ಮೋವಾಬ್ ದೇಶದ ಮೂಡಲ ದಿಕ್ಕಿನ ಅರಣ್ಯದಲ್ಲಿರುವ 1)ಇಯ್ಯೇ ಅಬಾರೀಮಿನಲ್ಲಿ ಇಳಿದುಕೊಂಡರು. ಅಲ್ಲಿಂದ ಹೊರಟು ಜೆರೆದ್ ತಗ್ಗಿನಲ್ಲಿ ಇಳಿದುಕೊಂಡರು. ಅಲ್ಲಿಂದ ಹೊರಟು ಅರ್ನೋನ್ ಹೊಳೆಯ ಆಚೇ ಕಡೆಯಲ್ಲಿ ಇಳಿದುಕೊಂಡರು. ಅರ್ನೋನ್ ಹೊಳೆಯು ಅಮೋರಿಯರ ಪ್ರದೇಶದಿಂದಾಚೆ ಇರುವ ಅರಣ್ಯದಲ್ಲಿ ಮೋವಾಬ್ಯರಿಗೂ ಅಮೋರಿಯರಿಗೂ ನಡುವೆ ಇದ್ದು ಮೋವಾಬ್ಯರ ಮೇರೆಯಾಗಿದೆ. ಅದಕ್ಕನುಗುಣವಾಗಿ ಯೆಹೋವವಿಜಯ ಎಂಬ ಗ್ರಂಥದಲ್ಲಿ—

ಸೂಫಕ್ಕೆ ಸೇರಿದ ವಾಹೇಬನ್ನೂ
ಅರ್ನೋನ್ ಹೊಳೆಗೆ ಕೂಡುವ ಹಳ್ಳಗಳನ್ನೂ
ಆರ್ ಪಟ್ಟಣದ ತನಕ ಮೋವಾಬಿನ ಮೇರೆಯಾಗಿರುವ ಕೊರಕಲನ್ನೂ [ದಾಟಿದ್ದಾಯಿತು] ಎಂದು

ಬರೆದದೆ.

ಅಲ್ಲಿಂದ ಅವರು 2)ಬೇರ್ ಸ್ಥಳಕ್ಕೆ ಬಂದರು. ಜನರನ್ನು ಕೂಡಿಸಿಕೋ, ನಾನು ಅವರಿಗೆ ಜಲಾಧಾರವನ್ನುಂಟುಮಾಡಿ ಕೊಡುವೆನು ಎಂದು ಯೆಹೋವನು ಮೋಶೆಗೆ ಹೇಳಿದ ಮಾತು ಇಲ್ಲಿನ ಬಾವಿಯ ವಿಷಯವಾದದ್ದೇ. ಆ ಕಾಲದಲ್ಲಿ ಇಸ್ರಾಯೇಲ್ಯರು ಈ ಹಾಡನ್ನು ಗಾನಮಾಡಿದರು; ಏನಂದರೆ—

ಬಾವಿಯೇ, ಉಕ್ಕುತ್ತಾ ಬಾ!
ಜನರೇ, ಉಲ್ಲಾಸದಿಂದ ಗಾನಮಾಡಿರಿ.
ಇದು ಪ್ರಧಾನರು ದಂಡಗಳಿಂದ ತೋಡಿದ ಬಾವಿ,
ಇದು ಜನಾಧಿಪತಿಗಳು ಕೋಲುಗಳಿಂದ ಅಗಿದ ಬಾವಿ ಎಂಬದೇ.

ಅವರು ಅರಣ್ಯವನ್ನು ಬಿಟ್ಟು ಮತ್ತಾನಕ್ಕೂ ಮತ್ತಾನದಿಂದ ನಹಲೀಯೇಲಿಗೂ ನಹಲೀಯೇಲಿನಿಂದ ಬಾಮೋತಿಗೂ ಬಂದರು. ಬಾಮೋತಿನಿಂದ ಮೋವಾಬ್ಯರ ಬೈಲಿನ ಪ್ರದೇಶದಲ್ಲಿರುವ 3)ತಗ್ಗಿಗೆ ಅಂದರೆ ಪಿಸ್ಗಾ ಎಂಬ ಬೆಟ್ಟದ ಸೀಮೆಯ ಅಂಚಿಗೆ ಬಂದರು. ಆ ಬೆಟ್ಟದ ಮೇಲಿನಿಂದ ಕೆಳಗಿರುವ ಯೆಷೀಮೋನ್ ಎಂಬ ಅರಣ್ಯಪ್ರದೇಶವು ಕಾಣಿಸುತ್ತದೆ.

ಇಸ್ರಾಯೇಲ್ಯರು ಅಮೋರಿಯರ ಅರಸನಾದ ಸೀಹೋನನ ಬಳಿಗೆ ದೂತರನ್ನು ಕಳುಹಿಸಿ— ನಿನ್ನ ದೇಶವನ್ನು ದಾಟಿಹೋಗುವದಕ್ಕೆ ನಮಗೆ ಅಪ್ಪಣೆಯಾಗಬೇಕು. ನಾವು ಹೊಲಗಳಲ್ಲಿಯಾಗಲಿ ದ್ರಾಕ್ಷೇತೋಟಗಳಲ್ಲಿಯಾಗಲಿ ಹೋಗುವದಿಲ್ಲ; ಬಾವಿಗಳ ನೀರನ್ನು ಕುಡಿಯುವದಿಲ್ಲ; ನಿನ್ನ ದೇಶವನ್ನು ದಾಟುವ ವರೆಗೂ ರಾಜಮಾರ್ಗದಲ್ಲಿಯೇ ನಡೆದು ಹೋಗುವೆವು ಎಂದು ಹೇಳಿಸಿದರು. ಆದರೆ ತನ್ನ ಸೀಮೆಯನ್ನು ದಾಟಿಹೋಗುವದಕ್ಕೆ ಸೀಹೋನನು ಇಸ್ರಾಯೇಲ್ಯರಿಗೆ ಅಪ್ಪಣೆಕೊಡದೆ ತನ್ನ ಜನರೆಲ್ಲರನ್ನೂ ಕೂಡಿಸಿಕೊಂಡು ಅವರನ್ನು ಎದುರಿಸುವದಕ್ಕೆ ಅರಣ್ಯಕ್ಕೆ ಹೊರಟು ಯಹಚಕ್ಕೆ ಬಂದು ಅವರೊಡನೆ
ಯುದ್ಧಮಾಡಿದನು. ಇಸ್ರಾಯೇಲ್ಯರು ಅವನ ಜನ 24
ರನ್ನು ಸೋಲಿಸಿ ಕತ್ತಿಯಿಂದ ಸಂಹರಿಸಿ ಅರ್ನೋನ್ ಹೊಳೆ ಮೊದಲುಗೊಂಡು ಯಬ್ಬೋಕ್ ಹೊಳೆಯ ವರೆಗೂ ಅಮ್ಮೋನಿಯರ ಮೇರೆಯ ವರೆಗೂ ಸೀಹೋನನ ದೇಶವನ್ನೆಲ್ಲಾ ಸ್ವಾಧೀನಮಾಡಿಕೊಂಡರು. ಅಮ್ಮೋನಿಯರ ಮೇರೆ ಬಲವುಳ್ಳದ್ದಾಗಿತ್ತು.
ಇಸ್ರಾಯೇಲ್ಯರು ಈ ಪಟ್ಟಣಗಳನ್ನೆಲ್ಲಾ ವಶ 25
ಮಾಡಿಕೊಂಡರು. ಅವರು ಹೆಷ್ಬೋನಿನಲ್ಲಿಯೂ ಅದಕ್ಕೆ ಸೇರಿದ ಗ್ರಾಮಗಳಲ್ಲಿಯೂ ಅಮೋರಿಯರ ಬೇರೆ ಎಲ್ಲಾ ಊರುಗಳಲ್ಲಿಯೂ ವಾಸಿಸಿದರು.
ಹೆಷ್ಬೋನ್ ಪಟ್ಟಣವು ಅಮೋರಿಯರ ಅರಸನಾದ 26
ಸೀಹೋನನ ರಾಜಧಾನಿ. ಅವನು ಮೋವಾಬ್ಯರ ಪೂರ್ವದ ಅರಸನ ಮೇಲೆ ಯುದ್ಧಮಾಡಿ ಅರ್ನೋನ್ ಹೊಳೆಯ ವರೆಗೂ ಅವನ ದೇಶವನ್ನೆಲ್ಲಾ ಸ್ವಾಧೀನಮಾಡಿಕೊಂಡಿದ್ದನು.
ಕವಿಗಳು ಹೇಳಿದ ಪದ್ಯವು ಇದರ ವಿಷಯ 27
ವಾದದ್ದೇ; ಅದೇನಂದರೆ—
ಹೆಷ್ಬೋನಿಗೆ ಬಂದು ಅದನ್ನು [ಹೊಸತಾಗಿ] ಕಟ್ಟಬೇಕು;
ಸೀಹೋನನ ಪಟ್ಟಣವನ್ನು ಪುನಃಸ್ಥಾಪನೆಮಾಡಬೇಕು;
ಸೀಹೋನನ ಪಟ್ಟಣವಾದ ಹೆಷ್ಬೋನಿನಿಂದ ಅಗ್ನಿ 28
ಜ್ವಾಲೆಹೊರಟು
ಮೋವಾಬ್ಯರ ರಾಜಧಾನಿಯಾದ ಆರ್ ಎಂಬ ಪಟ್ಟಣವನ್ನೂ
ಅರ್ನೋನ್ ಹೊಳೆಯ ಬಳಿಯಲ್ಲಿರುವ ಪೂಜಾಸ್ಥಳಗಳ ದೇವತೆಗಳನ್ನೂ ದಹಿಸಿಬಿಟ್ಟಿತು.
ಮೋವಾಬ್ಯರೇ, ನಿಮ್ಮ ಗತಿಯೇನೆಂದು ಹೇಳಲಿ; 29
ಕೆಮೋಷಿನ ಭಕ್ತರೇ, ನಿಮಗೆ ದುರ್ಗತಿಯುಂಟಾಯಿತಲ್ಲಾ.
ಆತನು ತನ್ನ ಗಂಡುಮಕ್ಕಳನ್ನು ದೇಶಭ್ರಷ್ಟರನ್ನಾಗಿಯೂ
ತನ್ನ ಹೆಣ್ಣುಮಕ್ಕಳನ್ನು ಸೆರೆಯವರನ್ನಾಗಿಯೂ ಮಾಡಿದ್ದಾನಲ್ಲಾ.
ಅಮೋರಿಯರ ಅರಸನಾದ ಸೀಹೋನನಿಗೆ ಸೆರೆಯವರಾದರು.
ನಾವು ಅವರನ್ನು ಬಾಣದಿಂದ ಹೊಡೆದೆವು; 30
ಹೆಷ್ಬೋನಿನಿಂದ ದೀಬೋನಿನ ವರೆಗೂ ಎಲ್ಲಾ ನಾಶವಾಯಿತು.
ನೋಫಹದ ಊರಿನ ಸೆರೆಯಲ್ಲಿರುವ ನೋಫಹದ ತನಕ ಹಾಳುಮಾಡಿಬಿಟ್ಟೆವು ಎಂಬದೇ.
ಹೀಗೆ ಇಸ್ರಾಯೇಲ್ಯರಿಗೆ ಅಮ್ಮೋನಿಯರ ದೇಶದಲ್ಲಿ 31
ನಿವಾಸವುಂಟಾಯಿತು.

1) ಅಂದರೆ ಯೊರ್ದನ್ ಹೊಳೆಯ ಆಚೆ ಇರುವ ಇಯ್ಯೆ ಪಟ್ಟಣದ ಬಳಿ. 2) ಬೇರ್ ಅಂದರೆ ಬಾವಿ. 3) ಪಾಠಾಂತರ: ...ಗೆ [ಅಂದರೆ ನೆಬೋ ಎಂಬ ಬೆಟ್ಟಕ್ಕೆ].

32 ಆದಲ್ಲದೆ ಮೋಶೆ ಗೂಢಚಾರರ ಮೂಲಕ ಯಗ್ಜೇ
ರನ್ನು ಪರೀಕ್ಷಿಸಿದ ಮೇಲೆ ಇಸ್ರಾಯೇಲ್ಯರು ಅದರ
ಗ್ರಾಮಗಳನ್ನು ವಶಪಡಿಸಿಕೊಂಡು ಅಲ್ಲಿಂದ ಅಮೋರಿ
ಯರನ್ನು ಹೊರಡಿಸಿಬಿಟ್ಟರು.
33 ಇಸ್ರಾಯೇಲ್ಯರು ಹಿಂದಿರುಗಿ ಬಾಷಾನಿನ ಮಾರ್ಗ
ವಾಗಿ ಹತ್ತಿಹೋಗಲಾಗಿ ಬಾಷಾನಿನ ಅರಸನಾದ
ಓಗನು ತನ್ನ ಜನರೆಲ್ಲರೊಡನೆ ಅವರಿಗೆ ವಿರೋಧ
ವಾಗಿ ಯುದ್ಧಮಾಡುವದಕ್ಕೆ ಎದ್ರೈಯೂರಿಗೆ ಹೊರಟು
34 ಬಂದನು. ಯೆಹೋವನು ಮೋಶೆಗೆ— ಅವನಿಗೆ
ಭಯಪಡಬೇಡ; ನಾನು ಅವನನ್ನೂ ಅವನ ಸಮಸ್ತ
ಜನರನ್ನೂ ಅವನ ದೇಶವನ್ನೂ ನಿನಗೆ ಕೈವಶಮಾಡಿ
ದ್ದೇನೆ; ನೀನು ಹೆಷ್ಬೋನಿನಲ್ಲಿದ್ದ ಅಮೋರಿಯರ
ಅರಸನಾದ ಸೀಹೋನನಿಗೆ ಮಾಡಿದ ಪ್ರಕಾರವೇ
35 ಇವರಿಗೂ ಮಾಡಬೇಕು ಎಂದು ಹೇಳಿದನು. ಆದ
ಕಾರಣ ಇಸ್ರಾಯೇಲ್ಯರು ಅವನನ್ನೂ ಅವನ ಮಕ್ಕ
ಳನ್ನೂ ಅವನ ಜನರೆಲ್ಲರನ್ನೂ ಒಬ್ಬರಾದರೂ ಉಳಿಯ
ದಂತೆ ಹತಮಾಡಿ ಅವನ ದೇಶವನ್ನು ಸ್ವಾಧೀನಪಡಿಸಿ
ಕೊಂಡರು.

## ಮೋವಾಬ್ ಬೈಲಿನಲ್ಲಿ ನಡೆದ ಸಂಗತಿಗಳು.

### ೨೨--36.

ಮೋವಾಬ್ಯರ ಅರಸನಾದ ಬಾಲಾಕನು ಇಸ್ರಾಯೇಲ್ಯರನ್ನು ಶಪಿಸುವದಕ್ಕೆ ಬಿಳಾಮನನ್ನು ಕರಿಸಲು ಬಿಳಾಮನು ಅವರನ್ನು ಶಪಿಸದೆ ಅವರ ಅಭಿವೃದ್ಧಿಯನ್ನೇ ಮುಂತಿಳಿಸಿದ್ದು.

22 ತರುವಾಯ ಇಸ್ರಾಯೇಲ್ಯರು ಪ್ರಯಾಣಮಾಡಿ
ಯೆರಿಕೋ ಪಟ್ಟಣಕ್ಕೆ ಎದುರಾಗಿ ಯೊರ್ದನ್
ಹೊಳೆಯ ತೀರದಲ್ಲಿ ಮೋವಾಬ್ಯರ ಬೈಲಿನಲ್ಲಿ ಇಳಿದು
ಕೊಂಡರು.
2 ಆ ಕಾಲದಲ್ಲಿ ಚಿಪ್ಪೋರನ ಮಗನಾದ ಬಾಲಾಕನು
ಅರಸನಾಗಿದ್ದನು. ಇಸ್ರಾಯೇಲ್ಯರು ಅಮೋರಿಯ
ರನ್ನು ಸಂಹಾರಮಾಡಿದ ವರ್ತಮಾನವು ಅವನಿಗೆ
3 ತಿಳಿದುಬಂದಾಗ ಇಸ್ರಾಯೇಲ್ಯರು ಬಹು ಮಂದಿ
ಯಾದದರಿಂದ ಮೋವಾಬ್ಯರು ಬಲು ದಿಗಿಲುಪಟ್ಟರು.
ಅವರು ಇಸ್ರಾಯೇಲ್ಯರ ವಿಷಯದಲ್ಲಿ ಸಹಿಸಲಾರ
4 ದಷ್ಟು ಹೆದರಿಕೆಯುಳ್ಳವರಾಗಿ ಮಿದ್ಯಾನ್ಯರ ಹಿರಿಯ
ರಿಗೆ—ದನಗಳು ಅಡವಿಯ ಹುಲ್ಲನ್ನೆಲ್ಲಾ ಮೇದು
ಬಿಡುವಂತೆ ಈ ಸಮೂಹವು ನಮ್ಮನ್ನೂ ನಮ್ಮ ಸುತ್ತ
ಲಿರುವ ಎಲ್ಲರನ್ನೂ ನಿರ್ಮೂಲಮಾಡುವ ಹಾಗಿದೆ
5 ಯಲ್ಲವೇ ಎಂದು ಹೇಳಿದರು. ಅವನು ಬೆಯೋರನ
ಮಗನಾದ ಬಿಳಾಮನನ್ನು ಕರಿಸುವದಕ್ಕೆ 1)ಸ್ವಜನರ
ದೇಶಕ್ಕೆ ಯೂಫ್ರೇಟೀಸ್ ನದಿಯ ತೀರದಲ್ಲಿರುವ ಪೆತೋ
ರೂರಿಗೆ ದೂತರನ್ನು ಕಳುಹಿಸಿ ಅವನಿಗೆ—ಚಿತ್ತೈಸ
ಬೇಕು; ಒಂದು ಜನಾಂಗವು ಐಗುಪ್ತದೇಶದಿಂದ ಬಂದಿ
ದೆ; ಅವರು ನೆಲವನ್ನೆಲ್ಲಾ ಮುಚ್ಚಿಕೊಂಡು ನನಗೆದು
ರಾಗಿ ಇಳಿದಿದ್ದಾರೆ; ಅವರು ನಮಗಿಂತ ಬಲಿಷ್ಠರು.
6 ಆದದರಿಂದ ನೀನು ದಯಮಾಡಿ ಬಂದು ನನಗೋಸ್ಕರ
ಈ ಜನಕ್ಕೆ ಶಾಪಕೊಡಬೇಕು; ಆಗ ಅವರನ್ನು
ಸೋಲಿಸಿ ಈ ದೇಶದಿಂದ ಹೊರಡಿಸಿಬಿಡುವದಕ್ಕೆ
ನನ್ನಿಂದಾದೀತು. ನಿನ್ನ ಆಶೀರ್ವಾದದಿಂದ ಶುಭವೂ
ನಿನ್ನ ಶಾಪದಿಂದ ಅಶುಭವೂ ಉಂಟಾಗುತ್ತದೆ ಎಂಬ
ದನ್ನು ನಾನು ಬಲ್ಲೆ ಎಂದು ಹೇಳಿಸಿದನು.
ಮೋವಾಬ್ಯರ ಹಿರಿಯರೂ ಮಿದ್ಯಾನ್ಯರ ಹಿರಿಯರೂ
ಶಕುನದ ಕಾಣಿಕೆಯನ್ನು ಕೈಯಲ್ಲಿ ತೆಗೆದುಕೊಂಡು
ಬಿಳಾಮನ ಹತ್ತಿರಕ್ಕೆ ಬಂದು ಬಾಲಾಕನ ಮಾತು
ಗಳನ್ನು ತಿಳಿಸಿದಾಗ ಅವನು—ಈ ರಾತ್ರಿ ನೀವು
ಇಲ್ಲೇ ಇಳಿದುಕೊಂಡಿರ್ರಿ; ಯೆಹೋವನು ನನಗೆ
ಹೇಳುವ ಮಾತನ್ನು ಬೆಳಿಗ್ಗೆ ತಿಳಿಸುವೆನು ಎಂದು
ಹೇಳಲಾಗಿ ಮೋವಾಬ್ಯರ ಪ್ರಧಾನರು ಬಿಳಾಮನ
ಬಳಿಯಲ್ಲಿ ಇಳಿದುಕೊಂಡರು.
ದೇವರು ಬಿಳಾಮನ ಬಳಿಗೆ ಬಂದು—ನಿನ್ನ ಬಳಿ
ಯಲ್ಲಿರುವ ಆ ಮನುಷ್ಯರು ಯಾರೆಂದು ಕೇಳಲು
ಬಿಳಾಮನು—ಮೋವಾಬ್ಯರ ಅರಸನು ಅಂದರೆ ಚಿಪ್ಪೋ
ರನ ಮಗನಾದ ಬಾಲಾಕನು ನನ್ನ ಬಳಿಗೆ ದೂತ
ರನ್ನು ಕಳುಹಿಸಿ—ಚಿತ್ತೈಸಬೇಕು; ಒಂದು ಜನಾಂಗವು
ಐಗುಪ್ತದೇಶದಿಂದ ಹೊರಟು ಬಂದಿದೆ; ಅವರು ನೆಲ
ವನ್ನೆಲ್ಲಾ ಮುಚ್ಚಿಕೊಂಡಿದ್ದಾರೆ; ನೀನು ಬಂದು ಅವ
ರಿಗೆ ಶಾಪಕೊಡಬೇಕು; ಕೊಟ್ಟರೆ ಅವರನ್ನು ಸೋಲಿಸಿ
ಹೊರಡಿಸಿಬಿಡುವದಕ್ಕೆ ನನ್ನಿಂದಾದೀತೆಂದು ಹೇಳಿಕಳು
ಹಿಸಿದ್ದಾನೆ ಎಂದು ಉತ್ತರಕೊಟ್ಟನು. ಅದಕ್ಕೆ
ದೇವರು—ನೀನು ಅವರ ಜೊತೆಯಲ್ಲಿ ಹೋಗ
ಬಾರದು; ಆ ಜನಾಂಗದವರು ನನ್ನ ಆಶೀರ್ವಾದ
ವನ್ನು ಹೊಂದಿದವರು; ಅವರನ್ನು ಶಪಿಸಬಾರದು
ಎಂದು ಹೇಳಿದನು.
ಬೆಳಿಗ್ಗೆ ಬಿಳಾಮನು ಬಾಲಾಕನ ಪ್ರಧಾನರಿಗೆ—
ನಾನು ನಿಮ್ಮ ಜೊತೆಯಲ್ಲಿ ಬರುವದಕ್ಕೆ ಯೆಹೋವನ
ಅಪ್ಪಣೆಯಿಲ್ಲ. ನೀವು ನಿಮ್ಮ ದೇಶಕ್ಕೆ ಹೋಗಿರಿ
ಎಂದು ಹೇಳಲಾಗಿ ಮೋವಾಬ್ಯರ ಪ್ರಧಾನರು
ಹೊರಟು ಬಾಲಾಕನ ಬಳಿಗೆ ಬಂದು—ಬಿಳಾಮನು
ಬರಲೊಲ್ಲನು ಎಂದು ತಿಳಿಸಿದರು.
ಆದರೆ ಬಾಲಾಕನು ಅವರಿಗಿಂತಲೂ ಘನವಂತ
ರಾದ ಹೆಚ್ಚು ಮಂದಿ ಪ್ರಧಾನರನ್ನು ಕಳುಹಿಸಿದನು.
ಇವರು ಬಿಳಾಮನ ಬಳಿಗೆ ಬಂದು ಅವನಿಗೆ—ನೀನು
ದಯಮಾಡಿ ನನ್ನ ಬಳಿಗೆ ಬರುವದಕ್ಕೆ ಯಾವ ಅಡ್ಡಿ
ಯನ್ನೂ ಹೇಳಬೇಡ; ನಾನು ನಿನ್ನನ್ನು ಬಹಳವಾಗಿ
ಘನಪಡಿಸುವೆನು; ನೀನು ಏನು ಹೇಳಿದರೂ ಅದನ್ನು
ಮಾಡುತ್ತೇನೆ; ನೀನು ಅಗತ್ಯವಾಗಿ ಬಂದು ಈ ಜನ
ವನ್ನು ನನಗೋಸ್ಕರ ಶಪಿಸಬೇಕೆಂದು ಚಿಪ್ಪೋರನ
ಮಗನಾದ ಬಾಲಾಕನು ಹೇಳುತ್ತಾನೆಂದು ತಿಳಿಸಿ
ದರು. ಅದಕ್ಕೆ ಬಿಳಾಮನು—ಬಾಲಾಕನು ತನ್ನ
ಮನೇ ತುಂಬುವಷ್ಟು ಬೆಳ್ಳಿಬಂಗಾರ ಕೊಟ್ಟರೂ
ನಾನು ನನ್ನ ದೇವರಾದ ಯೆಹೋವನ ಆಜ್ಞೆಯನ್ನು
ಮೀರಿ ಸಣ್ಣ ಕೆಲಸವನ್ನಾಗಲಿ ದೊಡ್ಡ ಕೆಲಸವನ್ನಾ
ಗಲಿ ಮಾಡಲಾರೆನು. ಆದದರಿಂದ ನೀವೂ ಕೂಡ
ಈ ರಾತ್ರಿ ಇಲ್ಲೇ ಇರ್ರಿ; ಯೆಹೋವನು ಈಗ ಏನು
ಹೇಳುವನೋ ಅದನ್ನು ನಾನು ತಿಳಿದುಕೊಳ್ಳುತ್ತೇನೆ

1) ಭಾಷಾಂತರ: ಅಮ್ಮೋನಿಯರ.

ಎಂದು ಬಾಲಾಕನ ಸೇವಕರಿಗೆ ಉತ್ತರಕೊಟ್ಟನು.
ಆ ರಾತ್ರಿ ದೇವರು ಬಿಳಾಮನ ಬಳಿಗೆ ಬಂದು—ಆ
ಮನುಷ್ಯರು ನಿನ್ನನ್ನು ಕರೆಯುವದಕ್ಕೆ ಬಂದಿರುವದ
ರಿಂದ ಎದ್ದು ಅವರ ಜೊತೆಯಲ್ಲಿ ಹೋಗು; ಆದರೆ
ನಾನು ನಿನಗೆ ಆಜ್ಞಾಪಿಸುವ ಪ್ರಕಾರವೇ ನೀನು
ಮಾಡಬೇಕು ಅಂದನು. ಬೆಳಿಗ್ಗೆ ಬಿಳಾಮನು ತನ್ನ
ಕತ್ತೆಗೆ ತಡಿಹಾಕಿಸಿ ಮೋವಾಬ್ಯರ ಪ್ರಧಾನರ ಜೊತೆ
ಯಲ್ಲಿ ಹೊರಟನು.
ಅವನು ಹೋದದರಿಂದ ದೇವರಿಗೆ ಕೋಪವುಂಟಾ
ಯಿತು; ಯೆಹೋವನ ದೂತನು ಅವನಿಗೆ ಎದು
ರಾಳಿಯಾಗಿ ದಾರಿಯಲ್ಲಿ ನಿಂತುಕೊಂಡನು. ಬಿಳಾ
ಮನು ತನ್ನ ಕತ್ತೆಯ ಮೇಲೆ ಹತ್ತಿಕೊಂಡಿದ್ದನು;
ಇಬ್ಬರು ಆಳುಗಳು ಅವನ ಸಂಗಡ ಇದ್ದರು.
ಯೆಹೋವನ ದೂತನು ಬಿಚ್ಚುಕತ್ತಿಯನ್ನು ಕೈಯಲ್ಲಿ
ಹಿಡಿದುಕೊಂಡು ದಾರಿಯಲ್ಲೇ ನಿಂತಿರುವದನ್ನು ಆ
ಕತ್ತೆ ನೋಡಿ ದಾರಿಯನ್ನು ಬಿಟ್ಟು ಅಡವಿಕಡೆ
ಹೋಯಿತು: ಕತ್ತೆಯನ್ನು ದಾರಿಗೆ ತಿರುಗಿಸುವದಕ್ಕೆ
ಬಿಳಾಮನು ಅದನ್ನು ಹೊಡೆದನು. ಆ ಮೇಲೆ
ಯೆಹೋವನ ದೂತನು ದ್ರಾಕ್ಷೇತೋಟಗಳ ಸಂದಿ
ನಲ್ಲಿ ನಿಂತುಕೊಂಡನು: ಎರಡು ಕಡೆಯಲ್ಲಿಯೂ
ಗೋಡೆಯಿತ್ತು. ಕತ್ತೆ ಯೆಹೋವನ ದೂತನನ್ನು
ನೋಡಿ ಗೋಡೆಗೆ ಒತ್ತಿಕೊಂಡು ಬಿಳಾಮನ ಕಾಲನ್ನು
ಆ ಗೋಡೆಗೆ ಇರುಕಿಸಲು ಅವನು ಅದನ್ನು ತಿರಿಗಿ
ಹೊಡೆದನು. ಆಗ ಯೆಹೋವನ ದೂತನು ಮುಂದೆ
ಹೋಗಿ ಎಡಬಲಕ್ಕೆ ತಿರುಗಲಿಕ್ಕೆ ದಾರಿಯಿಲ್ಲದ
ಇಕ್ಕಟ್ಟಾದ ಸ್ಥಳದಲ್ಲಿ ನಿಂತುಕೊಂಡನು. ಕತ್ತೆಯು
ಅವನನ್ನು ನೋಡಿ ಬಿಳಾಮನ ಕೆಳಗೇ ಅಣಗಿ
ಕೊಂಡಾಗ ಬಿಳಾಮನು ಸಿಟ್ಟುಗೊಂಡು ತನ್ನ ಕೈ
ಕೋಲಿನಿಂದ ಹೊಡೆದನು.
ಆಗ ಯೆಹೋವನು ಆ ಕತ್ತೆಗೆ ಮಾತಾಡುವ
ಶಕ್ತಿಯನ್ನು ಕೊಡಲಾಗಿ ಅದು ಬಿಳಾಮನನ್ನು—
ನೀನು ಮೂರು ಸಾರಿ ನನ್ನನ್ನು ಹೊಡೆದದ್ದೇಕೆ;
ನಾನು ನಿನಗೇನು ಮಾಡಿದ್ದೇನೆ ಎಂದು ಕೇಳಿತು.
ಅದಕ್ಕೆ ಬಿಳಾಮನು—ನೀನು ಇಷ್ಟ ಬಂದಂತೆ ನನ್ನನ್ನು
ಆಟಿಸಿಬಿಟ್ಟೆಯಲ್ಲಾ: ನನ್ನ ಕೈಯಲ್ಲಿ ಕತ್ತಿಯಿದ್ದರೆ
ನಿನ್ನನ್ನು ಕೊಂದುಹಾಕಿಬಿಡುತ್ತಿದ್ದೆ ಅಂದನು. ಅದಕ್ಕೆ
ಆ ಕತ್ತೆ—ನಿನ್ನ ಜೀವಮಾನವೆಲ್ಲಾ ಇಂದಿನ ವರೆಗೂ
ನೀನು ಹತ್ತುತ್ತಾ ಇರುವ ನಿನ್ನ ಕತ್ತೆಯು ನಾನಲ್ಲವೇ;
ನಾನು ಎಂದಾದರೂ ಈ ರೀತಿಯಾಗಿ ಮಾಡಿ
ದ್ದುಂಟೋ ಅಂದಾಗ ಬಿಳಾಮನು ಇಲ್ಲವೆಂದನು.
ಅಷ್ಟರಲ್ಲೇ ಯೆಹೋವನು ಬಿಳಾಮನ ಕಣ್ಣು
ಗಳನ್ನು ತೆರೆದನು. ಯೆಹೋವನ ದೂತನು ಬಿಚ್ಚು
ಕತ್ತಿಯನ್ನು ಹಿಡಿದು ದಾರಿಯಲ್ಲೇ ನಿಂತಿರುವದನ್ನು
ಅವನು ಕಂಡಾಗ ಅಡ್ಡಬಿದ್ದು ನಮಸ್ಕರಿಸಿದನು.
ಯೆಹೋವನ ದೂತನು—ನೀನು ಮೂರು ಸಾರಿಗೂ
ನಿನ್ನ ಕತ್ತೆಯನ್ನು ಹೊಡೆದದ್ದೇಕೆ: ನೀನು 1)ನನಗೆ
ವಿರುದ್ಧವಾದ ಮಾರ್ಗವನ್ನು ಹಿಡಿದದ್ದರಿಂದ ನಿನ್ನನ್ನು
ತಡೆಯುವದಕ್ಕೆ ನಾನೇ ಬಂದಿದ್ದೇನೆ. ಆ ಕತ್ತೆ
ನನ್ನನ್ನು ನೋಡಿ ಮೂರು ಸಾರಿ ನನ್ನೆದುರಿನಿಂದ
ಒತ್ತಟ್ಟಿಗೆ ತಿರುಗಿಕೊಂಡಿತು; ಹಾಗೆ ತಿರುಗಿಕೊಳ್ಳ
ದಿದ್ದರೆ ನಾನು ಕತ್ತೆಯನ್ನು ಉಳಿಸಿ ನಿನ್ನನ್ನು ಕೊಂದು
ಹಾಕಿಬಿಡುತ್ತಿದ್ದೆನು ಎಂದು ಹೇಳಿದನು. ಅದಕ್ಕೆ ಬಿಳಾ 34
ಮನು—ನಾನು ಪಾಪಮಾಡಿದ್ದೇನೆ; ನೀನೇ ನನಗೆದು
ರಾಗಿ ದಾರಿಯಲ್ಲಿ ನಿಂತಿರುವದು ನನಗೆ ತಿಳಿಯಲಿಲ್ಲ:
ನಾನು ಮಾಡುವದು ನಿನಗೆ ಕೆಟ್ಟದ್ದಾಗಿ ತೋರಿದರೆ
ಹಿಂದಕ್ಕೆ ತಿರುಗಿಕೊಳ್ಳುತ್ತೇನೆ ಅಂದಾಗ ಯೆಹೋವನ 35
ದೂತನು ಅವನಿಗೆ—ಆ ಮನುಷ್ಯರ ಜೊತೆಯಲ್ಲಿ
ಹೋಗು; ಆದರೆ ನಾನು ನಿನಗೆ ಹೇಳುವ ಮಾತನ್ನೇ
ಹೊರತು ಬೇರೆ ಯಾವದನ್ನೂ ಹೇಳಬಾರದು ಎಂದು
ಹೇಳಲಾಗಿ ಬಿಳಾಮನು ಬಾಲಾಕನ ಪ್ರಧಾನರ ಜೊತೆ
ಯಲ್ಲಿ ಹೊರಟನು.
ಬಿಳಾಮನು ಬಂದ ವರ್ತಮಾನವನ್ನು ಬಾಲಾಕನು 36
ಕೇಳಿ ಅವನನ್ನು ಎದುರುಗೊಳ್ಳುವದಕ್ಕಾಗಿ ತನ್ನ
ದೇಶದ ಮೇರೆಯಾದ ಅರ್ನೋನ್ ಹೊಳೆಯ ತೀರ
ದಲ್ಲಿರುವ ಮೋವಾಬ್ಯರ ಪಟ್ಟಣಕ್ಕೆ ಹೋದನು.
ಬಾಲಾಕನು ಬಿಳಾಮನನ್ನು ಕಂಡಾಗ—ನಿನ್ನನ್ನು 37
ಅವಸರದಿಂದ ಕರಿಸುವದಕ್ಕೆ ದೂತರನ್ನು ಕಳುಹಿಸಿ
ದೆನಲ್ಲಾ; ನೀನು ಯಾಕೆ ಆಗಲೇ ಬರಲಿಲ್ಲ; ನಿನ್ನನ್ನು
ಘನಪಡಿಸುವದಕ್ಕೆ ನಾನು ಸಮರ್ಥನಲ್ಲವೆಂದು
ಭಾವಿಸುತ್ತೀಯೋ? ಎಂದು ಹೇಳಿದ್ದಕ್ಕೆ ಬಿಳಾಮ 38
ನು—ಅದಿರಲಿ; ನಾನು ಬಂದಿದ್ದೇನೆ; ಆದರೆ ಏನು?
ಏನಾದರೂ ಹೇಳುವದಕ್ಕೆ ನನಗೆ ಶಕ್ತಿಯುಂಟೋ?
ದೇವರು ಆಜ್ಞಿಸುವ ಮಾತನ್ನೇ ಹೇಳುತ್ತೇನಷ್ಟೆ ಎಂದು
ಹೇಳಿದನು. ಆಗ ಬಿಳಾಮನು ಬಾಲಾಕನ ಜೊತೆ 39
ಯಲ್ಲಿ ಹೋದನು; ಅವರು 2)ಕಿರ್ಯತ್‌ಹುಚೋತಿಗೆ
ಬಂದರು. ಬಾಲಾಕನು ಹೋರಿಗಳನ್ನೂ ಕುರಿ 40
ಗಳನ್ನೂ ವಧಿಸಿ ಯಜ್ಞಮಾಡಿ ಬಿಳಾಮನಿಗೂ ಅವನ
ಸಂಗಡ ಇದ್ದ ಪ್ರಧಾನರಿಗೂ ಊಟಕ್ಕೆ ಕಳುಹಿಸಿ
ದನು.
ಮರುದಿನ ಬೆಳಿಗ್ಗೆ ಬಾಲಾಕನು ಬಿಳಾಮನನ್ನು 41
ಕರಕೊಂಡು ಬಾಳೆಂಬ ದೇವತೆಯ ಪೂಜಾಸ್ಥಳ
ಗಳಿದ್ದ ಗುಡ್ಡವನ್ನು ಹತ್ತಿ ಇಸ್ರಾಯೇಲ್ಯರ ಒಂದು
ಭಾಗವನ್ನು ಅಲ್ಲಿಂದ ತೋರಿಸಿದನು. ಆಗ ಬಿಳಾ

# 23

ಮನು—ಇಲ್ಲಿ ನೀನು ಏಳು ಯಜ್ಞಪೀಠಗಳನ್ನು
ಕಟ್ಟಿಸಿ ಏಳು ಹೋರಿಗಳನ್ನೂ ಏಳು ಟಗರುಗಳನ್ನೂ
ಸಿದ್ಧಪಡಿಸಬೇಕೆಂದು ಬಾಲಾಕನಿಗೆ ಹೇಳಿದನು.
ಬಾಲಾಕನು ಹಾಗೆಯೇ ಮಾಡಿದನು. ಬಾಲಾಕನೂ 2
ಬಿಳಾಮನೂ ಪ್ರತಿಯಜ್ಞಪೀಠದ ಮೇಲೆ ಒಂದು
ಹೋರಿಯನ್ನೂ ಒಂದು ಟಗರನ್ನೂ ಸರ್ವಾಂಗ
ಹೋಮವಾಗಿ ಸಮರ್ಪಿಸಿದಾಗ ಬಿಳಾಮನು ಬಾಲಾ 3
ಕನಿಗೆ—ನೀನು ಸರ್ವಾಂಗಹೋಮಮಾಡಿದ ಸ್ಥಳ
ದಲ್ಲೇ ಇರು; ನಾನು ಸ್ವಲ್ಪ ದೂರ ಹೋಗಿ ಬರು
ತ್ತೇನೆ; ಒಂದು ವೇಳೆ ಯೆಹೋವನು ನನಗೆ ದರ್ಶನ
ಕೊಟ್ಟಾನು: ಆತನು ನನಗೆ ಸೂಚಿಸುವ ಸಂಗತಿ
ಯನ್ನು ನಿನಗೆ ತಿಳಿಸುವೆನು ಎಂದು ಹೇಳಿ ಮರ
ವಿಲ್ಲದ ಒಂದು ದಿನ್ನೆಗೆ ಹೋದನು. ದೇವರು 4

1) ಅಥವಾ: ನನ್ನನ್ನು ಹಾಯ್ದುಹೋಗುವದರಿಂದ.
2) ಅಂದರೆ ಪೇಟೆಗಳುಳ್ಳ ಪಟ್ಟಣಕ್ಕೆ.

ಬಿಳಾಮನಿಗೆ ಎದುರಾಗಿ ಬಂದಾಗ ಬಿಳಾಮನು
ಆತನಿಗೆ—ನಾನು ಆ ಏಳು ಯಜ್ಞಪೀಠಗಳನ್ನು
ಕಟ್ಟಿಸಿ ಒಂದೊಂದು ಪೀಠದಲ್ಲಿ ಒಂದು ಹೋರಿ
ಯನ್ನೂ ಒಂದು ಟಗರನ್ನೂ ಸರ್ವಾಂಗಹೋಮವಾಗಿ
5 ಸಮರ್ಪಿಸಿದ್ದೇನೆ ಎಂದು ಹೇಳಲಾಗಿ ಯೆಹೋವನು
ಬಿಳಾಮನಿಗೆ ಅವನು ಹೇಳಬೇಕಾದ ಮಾತನ್ನು
ಕಲಿಸಿಕೊಟ್ಟು—ನೀನು ಬಾಲಾಕನ ಬಳಿಗೆ ತಿರಿಗಿ
ಹೋಗಿ ಹೀಗೆ ಹೀಗೆ ಹೇಳಬೇಕು ಎಂದು ಆಜ್ಞಾಪಿಸಿ
6 ದನು. ಬಿಳಾಮನು ಬಾಲಾಕನ ಬಳಿಗೆ ತಿರಿಗಿ
ಬಂದಾಗ ಬಾಲಾಕನು ತಾನು ಸರ್ವಾಂಗಹೋಮ
ವನ್ನು ಸಮರ್ಪಿಸಿದ್ದ ಪೀಠದ ಹತ್ತಿರ ನಿಂತಿದ್ದನು;
ಮೋವಾಬ್ಯರ ಪ್ರಧಾನರೆಲ್ಲರೂ ಅವನ ಬಳಿಯಲ್ಲಿ
7 ದ್ದರು. ಆಗ ಬಿಳಾಮನು ಪದ್ಯರೂಪವಾಗಿ ನುಡಿದ
ದ್ದೇನಂದರೆ—

ಬಾಲಾಕನು ನನ್ನನ್ನು ಅರಾಮಿನಿಂದ ಕರಿಸಿದನು;
ಮೋವಾಬ್ಯರ ಅರಸನು ಮೂಡಲಬೆಟ್ಟಗಳಿಂದ
ನನ್ನನ್ನು ಬರಮಾಡಿದನು.
ನೀನು ಬಂದು ಯಾಕೋಬವಂಶದವರನ್ನು ನನ್ನ
ಗೋಸ್ಕರ ಶಪಿಸಬೇಕು;
ಇಸ್ರಾಯೇಲ್ಯರಿಗೆ ದುರ್ಗತಿಯುಂಟಾಗಲಿ ಎಂದು
ಆಕ್ರೋಶಿಸಬೇಕು ಎಂದು ನನಗೆ ಹೇಳಿದನು.
8 ನಾನು ಅವರನ್ನು ಏನೆಂದು ಶಪಿಸಲಿ; ದೇವರು
ಶಪಿಸಲಿಲ್ಲವಲ್ಲಾ.
ಏನೆಂದು ಆಕ್ರೋಶಿಸಲಿ; ಯೆಹೋವನು ಆಕ್ರೋಶಿ
ಸಲಿಲ್ಲವಲ್ಲಾ.
9 ಬೆಟ್ಟದ ಶಿಖರದಿಂದ ನಾನು ಅವರನ್ನು ಕಂಡೆನು;
ಗುಡ್ಡದಿಂದ ಅವರನ್ನು ನೋಡಿದೆನು.
ಆ ಜನಾಂಗವು ತಾನು ಇತರ ಜನಾಂಗಗಳಂತಲ್ಲ
ವೆಂದು ಭಾವಿಸಿಕೊಂಡು ಪ್ರತ್ಯೇಕವಾಗಿ ವಾಸಿ
ಸುತ್ತದೆ.
10 ಧೂಳಿನಷ್ಟು ಅಸಂಖ್ಯವಾದ ಯಾಕೋಬ್ಯರನ್ನು
ಲೆಕ್ಕಿಸುವದಕ್ಕೆ ಯಾರಿಂದಾದೀತು;
ಇಸ್ರಾಯೇಲ್ಯರ ಕಾಲ್ಭಾಗವನ್ನಾದರೂ ಯಾರು
ಹೇಳಬಲ್ಲರು.
ಸಜ್ಜನರಾದ ಅವರು ಸಾಯುವ ರೀತಿಯಲ್ಲೇ
ನಾನೂ ಸಾಯಬೇಕು.
ಅವರಿಗುಂಟಾಗುವ ಅವಸಾನವು ನನಗೂ ಆಗ
ಬೇಕು

11 ಅಂದನು. ಈ ಮಾತುಗಳನ್ನು ಕೇಳಿ ಬಾಲಾಕನು
ಅವನಿಗೆ—ಇದೇನು ನೀನು ನನಗೆ ಮಾಡಿದ್ದು; ನನ್ನ
ಶತ್ರುಗಳನ್ನು ಶಪಿಸುವದಕ್ಕೆ ನಿನ್ನನ್ನು ಕರಿಸಿದೆನು;
ನೀನು ಅವರನ್ನು ಶಪಿಸದೆ ಆಶೀರ್ವಾದವನ್ನೇ ಮಾಡಿ
12 ಬಿಟ್ಟೆ ಎಂದು ಹೇಳಿದನು. ಅದಕ್ಕೆ ಬಿಳಾಮನು—
ಯೆಹೋವನು ನುಡಿಸುವ ಮಾತನ್ನೇ ನಾನು ಹೇಳ
ಬೇಕಾಗಿದೆಯಲ್ಲವೇ ಅಂದನು.
13 ಆಗ ಬಾಲಾಕನು—ದಯಮಾಡಿ ನನ್ನ ಕೂಡ
ಇನ್ನೊಂದು ಸ್ಥಳಕ್ಕೆ ಬಾ; ಅಲ್ಲಿಂದ ಅವರನ್ನು ನೋಡ
ಬಹುದು; ಆದರೆ ಅವರೆಲ್ಲರೂ ಕಾಣಿಸದೆ ಕಡೆ
ಭಾಗವು ಮಾತ್ರ ಕಾಣಿಸುವದು; ಅಲ್ಲಿಂದ ನನಗೋ
ಸ್ಕರ ಅವರನ್ನು ಶಪಿಸಬೇಕು ಎಂದು ಹೇಳಿ ಪಿಸ್ಗಾ
ಬೆಟ್ಟದ ತುದಿಯಲ್ಲಿರುವ 1)ಚೋಫೀಮ್ ಬೈಲು ಎಂಬ
ಸ್ಥಳಕ್ಕೆ ಕರಕೊಂಡುಹೋಗಿ ಅಲ್ಲಿಯೂ ಏಳು ಯಜ್ಞ
ಪೀಠಗಳನ್ನು ಕಟ್ಟಿಸಿ ಪ್ರತಿಯೊಂದು ಪೀಠದಲ್ಲಿ
ಒಂದು ಹೋರಿಯನ್ನೂ ಒಂದು ಟಗರನ್ನೂ ಸರ್ವಾಂಗ
ಹೋಮವಾಗಿ ಸಮರ್ಪಿಸಿದನು. ಬಿಳಾಮನು ಅವ
ನಿಗೆ—ನೀನು ಇಲ್ಲೇ ಸರ್ವಾಂಗಹೋಮಮಾಡಿದ
ಸ್ಥಳದಲ್ಲಿರು; ನಾನು ಅತ್ತಕಡೆ ಹೋಗಿ [ಯೆಹೋವ
ನನ್ನು] ಎದುರುಗೊಳ್ಳುವೆನು ಎಂದು ಹೇಳಿದನು.
ಯೆಹೋವನು ಬಿಳಾಮನಿಗೆ ಎದುರಾಗಿ ಬಂದು
ಅವನು ಹೇಳಬೇಕಾದ ಮಾತನ್ನು ಕಲಿಸಿಕೊಟ್ಟು—
ನೀನು ಬಾಲಾಕನ ಬಳಿಗೆ ತಿರಿಗಿ ಹೋಗಿ ಹೀಗೆ ಹೀಗೆ
ಹೇಳಬೇಕು ಅಂದನು. ಬಿಳಾಮನು ಬಾಲಾಕನ ಬಳಿಗೆ
ಬಂದಾಗ ಬಾಲಾಕನು ತಾನು ಸರ್ವಾಂಗಹೋಮ
ವನ್ನು ಸಮರ್ಪಿಸಿದ ಪೀಠದ ಹತ್ತಿರ ನಿಂತಿದ್ದನು;
ಮೋವಾಬ್ಯರ ಪ್ರಧಾನರು ಅವನ ಸಂಗಡ ಇದ್ದರು.
ಬಾಲಾಕನು—ಯೆಹೋವನು ಏನು ಹೇಳಿದ್ದಾನೆ
ಎಂದು ಅವನನ್ನು ಕೇಳಲು ಬಿಳಾಮನು ಪದ್ಯರೂಪ
ವಾಗಿ ನುಡಿದದ್ದೇನಂದರೆ—

ಬಾಲಾಕನೇ, ಕಿವಿಗೊಟ್ಟು ಕೇಳು;
ಚಿಪ್ಪೋರನ ಮಗನೇ, ನನ್ನ ಮಾತನ್ನು ಲಾಲಿಸು.
ದೇವರು ಮನುಷ್ಯನಂತೆ ಎರಡು ಮಾತಿನವನಲ್ಲ;
ಮಾನವನಂತೆ ಮನಸ್ಸನ್ನು ಬೇರೆಮಾಡಿಕೊಳ್ಳುವ
ವನಲ್ಲ.
ತಾನು ಹೇಳಿದ ಮೇರೆಗೆ ನಡೆಯುವದಿಲ್ಲವೋ;
ಮಾತುಕೊಟ್ಟನಂತರ ನೆರವೇರಿಸುವದಿಲ್ಲವೋ.
ಅವರನ್ನು ಆಶೀರ್ವದಿಸುವದಕ್ಕೆ ನನಗೆ ಅಪ್ಪಣೆ
ಯಾಯಿತು;
ಆತನು ಆಶೀರ್ವದಿಸಿದನಂತರ ನಾನು ಬದಲಾ
ಯಿಸಲಾರೆನು.
ಯಾಕೋಬ್ಯರಲ್ಲಿ ಯಾವ ಆಪತ್ತಿನ ಸೂಚನೆಯೂ
ಇಲ್ಲ;
ಇಸ್ರಾಯೇಲ್ಯರಿಗೆ ವಿಪತ್ತುಸಂಭವಿಸುವ ಹಾಗೆ
ತೋರುವದಿಲ್ಲ.
ಅವರಿಗೆ ದೇವರಾಗಿರುವ ಯೆಹೋವನು ಅವರ
ಸಂಗಡಲೇ ಇದ್ದಾನೆ;
ಅವರು ತಮ್ಮ ಅರಸನಿಗೋಸ್ಕರ ಮಾಡುವ ಜಯ
ಘೋಷವು ಕೇಳಿಸುತ್ತಲೇ ಇದೆ.
ಅವರನ್ನು ಐಗುಪ್ತದೇಶದಿಂದ ಕರಕೊಂಡು ಬಂದ
ವನು ದೇವರೇ;
ಅವರು ಕಾಡಕೋಣದಷ್ಟು ಬಲವುಳ್ಳವರು.
2)ಯಾಕೋಬ್ಯರಲ್ಲಿ ಶಕುನನೋಡುವದು ಇಲ್ಲ;
ಇಸ್ರಾಯೇಲ್ಯರಲ್ಲಿ ಕಣಿಕೇಳುವದು ಇಲ್ಲ.
ದೇವರು ತಾನು ಮಾಡುವ ಕೆಲಸವನ್ನು ತತ್ಕಾಲ
ದಲ್ಲೇ ಯಾಕೋಬ್ಯರಿಗೆ ತಿಳಿಸುತ್ತಾನೆ;

1) ಅಂದರೆ ಕಾವಲುಗಾರರ. 2) ಅಥವಾ: ಯಾಕೋಬ್ಯರಿಗೆ ದುರ್ಮಂತ್ರತಗಲುವದಿಲ್ಲ: ಇಸ್ರಾಯೇಲ್ಯರಿಗೆ ಮಾಟಹತ್ತುವದಿ
ಯಾಕೋಬವಂಶದವರಾದ ಇಸ್ರಾಯೇಲ್ಯರಿಗೋಸ್ಕರ ದೇವರು ಎಂಥಾ ಕಾರ್ಯಗಳನ್ನು ಮಾಡಿದ್ದಾನೆಂಬದನ್ನು ಈಗಲೂ ಹೇಳುವದುಂಟು.

ಸಮಯೋಚಿತವಾಗಿ ಅದನ್ನು ಇಸ್ರಾಯೇಲ್ಯರಿಗೆ
ತೋರಿಸುತ್ತಾನೆ.
ಆ ಜನಾಂಗದವರು ಪ್ರಾಯದ ಸಿಂಹದಂತೆ ಎದ್ದು
ಮೃಗೇಂದ್ರನಂತೆ ನಿಂತಿದ್ದಾರೆ;
ಸಿಂಹವು ಮೃಗವನ್ನು ಕೊಂದು ರಕ್ತವನ್ನು ಕುಡಿ
ದು ಮಾಂಸವನ್ನು ತಿಂದು
ತೃಪ್ತಿಹೊಂದಿದ ಹೊರತು ಮಲಗುವದಿಲ್ಲವಷ್ಟೆ
ದನು. ಆಗ ಬಾಲಾಕನು ಅವನಿಗೆ—ನೀನು ಅವ
ನ್ನು ಶಪಿಸಲೂ ಬೇಡ, ಆಶೀರ್ವದಿಸಲೂ ಬೇಡ
ದು ಹೇಳಿದನು. ಅದಕ್ಕೆ ಬಿಳಾಮನು—ಯೆಹೋ
ನು ಆಜ್ಞಾಪಿಸುವದನ್ನೇ ನಾನು ಮಾಡಬೇಕೆಂದು
ನು ನಿನಗೆ ಹೇಳಲಿಲ್ಲವೇ ಅಂದನು.
ತರುವಾಯ ಬಾಲಾಕನು ಬಿಳಾಮನಿಗೆ—ಬೇರೊಂ
ಸ್ಥಳಕ್ಕೆ ನಿನ್ನನ್ನು ಕರಕೊಂಡು ಹೋಗುತ್ತೇನೆ
; ಅಲ್ಲಿಯಾದರೂ ನೀನು ಅವರನ್ನು ಶಪಿಸುವ
ಕ್ಕೆ ಒಂದು ವೇಳೆ ದೇವರು ಅನುಮತಿಸಾನು ಎಂದು
ಳಿ ಅವನನ್ನು ಪೆಗೋರ್ ಎಂಬ ಬೆಟ್ಟದ ತುದಿಗೆ
ಕೊಂಡು ಹೋದನು. ಆ ಬೆಟ್ಟದ ಮೇಲಿನಿಂದ
ಗಿರುವ ಯೆಷೀಮೋನ್ ಎಂಬ ಅರಣ್ಯಪ್ರದೇಶವು
ಣಿಸುತ್ತದೆ. ಆಗ ಬಿಳಾಮನು ಬಾಲಾಕನಿಗೆ—
ಲ್ಲಿಯೂ ಏಳು ಯಜ್ಞಪೀಠಗಳನ್ನು ಕಟ್ಟಿಸಿ ಏಳು
ೀರಿಗಳನ್ನೂ ಏಳು ಟಗರುಗಳನ್ನೂ ಸಿದ್ಧಪಡಿಸು
ದು ಹೇಳಲಾಗಿ ಬಾಲಾಕನು ಅವನ ಅಪ್ಪಣೆಯ
ೀರೆಗೆ ಮಾಡಿ ಪ್ರತಿಯೊಂದು ಪೀಠದಲ್ಲಿ ಒಂದು
ೋರಿಯನ್ನೂ ಒಂದು ಟಗರನ್ನೂ ಸರ್ವಾಂಗಹೋಮ
ಗಿ ಸಮರ್ಪಿಸಿದನು.
ಇಸ್ರಾಯೇಲ್ಯರಿಗೆ ಶುಭವಾಗಬೇಕೆಂಬದೇ ಯೆ
ಹೋವನ ಚಿತ್ತವೆಂದು ಬಿಳಾಮನು ತಿಳಿದು ಮೊದ
ನಂತೆ ಶಕುನನೋಡುವದಕ್ಕೆ ಹೋಗದೆ ಅರಣ್ಯದ
ಕಿಗೆ ಮುಖವನ್ನು ತಿರುಗಿಸಿಕೊಂಡನು. ಅವನು
ಣ್ಣೆತ್ತಿ ನೋಡಲಾಗಿ ಕುಲಗಳ ಪ್ರಕಾರ ಡೇರೆಗಳನ್ನು
ಾಕಿಕೊಂಡಿದ್ದ ಇಸ್ರಾಯೇಲ್ಯರು ಅವನಿಗೆ ಕಾಣಿಸಿ
ರು. ಆಗ ಅವನು ದೇವಾತ್ಮಪ್ರೇರಿತನಾಗಿ ಪದ್ಯ
ಪವಾಗಿ ಇಂತೆಂದನು—
ಬೆಯೋರನ ಮಗನಾದ ಬಿಳಾಮನಿಗುಂಟಾದ
ದೇವೋಕ್ತಿ,
1)ಮನೋದೃಷ್ಟಿಯಿಂದ ನೋಡುವ ಪುರುಷನಿಗೆ
ಬಂದ ದೇವೋಕ್ತಿ;
ದೇವರ ಮಾತುಗಳನ್ನು ಕೇಳುವವನಾಗಿಯೂ
2)ಪರವಶವಾಗಿ ಕಣ್ಣು ತೆರೆದು ಸರ್ವಶಕ್ತನ ದರ್ಶ
ನವನ್ನು ಹೊಂದುವವನಾಗಿಯೂ
ಇರುವ ಪುರುಷನಿಗುಂಟಾದ ದೇವೋಕ್ತಿ.
[illegible]ಕೋಬ್ಯರೇ, ನಿಮ್ಮ ಡೇರೆಗಳು ಎಷ್ಟೋ [illegible]
[illegible]ವಾಗಿವೆ;
ಇಸ್ರಾಯೇಲ್ಯರೇ, ನಿಮ್ಮ ನಿವಾಸಗಳು ಎಷ್ಟೋ
ರಮ್ಯ[illegible]ವಾಗಿವೆ.
ಉದ್ದವಾಗಿ ಚಾಚಿಕೊಂಡಿರುವ 3)ತಗ್ಗುಗಳಂತೆ
ಯೂ,

ನದಿಯ ಬಳಿಯಲ್ಲಿರುವ ತೋಟಗಳಂತೆಯೂ
ಕಾಣಿಸುತ್ತವೆ.
ಯೆಹೋವನು ನೆಟ್ಟ ಅಗರುಮರಗಳಿಗೂ
ನೀರಿನ ಬಳಿಯಲ್ಲಿರುವ ದೇವದಾರುವೃಕ್ಷಗಳಿಗೂ
ಸಮಾನವಾಗಿವೆ.
ಅವರ ಕಪಿಲೆಗಳಿಂದ ನೀರು ಹರಿಯುತ್ತಲೇ ಇದೆ; 7
ಅವರ ಬಿತ್ತನೆಗೆ ಬೇಕಾದಷ್ಟು ನೀರಿದೆ.
ಅವರ ಅರಸನು ಅಗಾಗ್‌ರಾಜನಿಗಿಂತಲೂ ದೊಡ್ಡ
ವನಾಗಿರುವನು;
ಅವರ ರಾಜ್ಯವು ಅಭಿವೃದ್ಧಿಯಲ್ಲಿರುವದು.
ಅವರನ್ನು ಐಗುಪ್ತದೇಶದಿಂದ ಕರಕೊಂಡು ಬಂದ 8
ವನು ದೇವರೇ;
ಅವರು ಕಾಡಕೋಣದಷ್ಟು ಬಲವುಳ್ಳವರು.
ಅವರು ಶತ್ರುಜನಗಳನ್ನು ನಿರ್ಮೂಲಮಾಡುವರು;
ವೈರಿಗಳ ಎಲುಬನ್ನು ಮುರಿದುಹಾಕುವರು;
ಅವರನ್ನು ಬಾಣಗಳಿಂದ ಗಾಯಪಡಿಸುವರು.
ಆ ಜನಾಂಗವು ಸಿಂಹದಂತೆ ಕಾಲುಮುದುರಿ 9
ಹೊಂಚುಹಾಕಿಕೊಂಡದೆ;
ಮೃಗೇಂದ್ರನಿಗೆ ಸಮನಾದ ಆ ಜನವನ್ನು ಕೆಣಕು
ವದು ಯಾರಿಂದಾದೀತು.
ಇಸ್ರಾಯೇಲ್ಯರೇ, ನಿಮ್ಮನ್ನು ಆಶೀರ್ವದಿಸುವ
ವನಿಗೆ ಆಶೀರ್ವಾದವೂ ಶಪಿಸುವವನಿಗೆ ಶಾಪ
ವೂ ಉಂಟಾಗುವದು
ಅಂದನು. ಆಗ ಬಾಲಾಕನು ಬಿಳಾಮನ ಮೇಲೆ 10
ಕೋಪಗೊಂಡು ಚಪ್ಪಾಳೆಹೊಡೆದು ಅವನಿಗೆ—ನನ್ನ
ಶತ್ರುಗಳನ್ನು ಶಪಿಸುವದಕ್ಕೆ ನಿನ್ನನ್ನು ಕರಿಸಿದೆನು;
ಆದರೆ ನೀನು ಅವರನ್ನು ಮೂರು ಸಾರಿಯೂ ಆಶೀ
ರ್ವದಿಸಿದಿಯಲ್ಲಾ. ಆದಕಾರಣ ನಿನ್ನ ಊರಿಗೆ 11
ಹೋಗಿಬಿಡು; ನಿನ್ನನ್ನು ಬಹಳವಾಗಿ ಘನಪಡಿಸುವೆ
ನೆಂದು ಹೇಳಿಕೊಂಡೆನು; ಆದರೆ ನಿನಗೆ ಘನತೆ
ಯುಂಟಾಗದಂತೆ ಯೆಹೋವನು ಅಡ್ಡಿಮಾಡಿದ್ದಾನೆ
ಎಂದು ಹೇಳಿದನು. ಅದಕ್ಕೆ ಬಿಳಾಮನು—ಬಾಲಾ 12, 13
ಕನು ತನ್ನ ಮನೇ ತುಂಬುವಷ್ಟು ಬೆಳ್ಳಿಬಂಗಾರ
ವನ್ನು ದಾನಮಾಡಿದರೂ ನಾನು ಯೆಹೋವನ ಆಜ್ಞೆ
ಯನ್ನು ಮೀರಿ ನನ್ನ ಇಷ್ಟದಂತೆ ಯಾವ ಕೆಲಸ
ವನ್ನೂ ಮಾಡಲಾರೆನು; ಯೆಹೋವನು ಆಜ್ಞಾಪಿಸು
ವದನ್ನೇ ಮಾತಾಡುವೆನೆಂದು ನೀನು ನನ್ನ ಬಳಿಗೆ
ಕಳುಹಿಸಿದ ದೂತರಿಗೆ ನಾನು ಹೇಳಲಿಲ್ಲವೇ. ಆಗಲಿ; 14
ನಾನು ನನ್ನ ಸ್ವಜನರ ಬಳಿಗೆ ಹೋಗುತ್ತೇನೆ. ಆದರೆ
ಕಡೆಗೆ ಆ ಜನರು ನಿನ್ನ ಜನರಿಗೆ ಏನು ಮಾಡುವರೋ
ಅದನ್ನು ನಿನಗೆ ತಿಳಿಸುತ್ತೇನೆ; ಕೇಳು ಎಂದು ಹೇಳಿ 15
ಪದ್ಯರೂಪವಾಗಿ ಇಂತೆಂದನು—
ಬೆಯೋರನ ಮಗನಾದ ಬಿಳಾಮನಿಗುಂಟಾದ
ದೇವೋಕ್ತಿ,
ಮನೋದೃಷ್ಟಿಯಿಂದ ನೋಡುವ ಪುರುಷನಿಗೆ 16
ಬಂದ ದೇವೋಕ್ತಿ,
ದೇವರ ಮಾತುಗಳನ್ನು ಕೇಳುವವನೂ
ಪರಾತ್ಪರನ ಜ್ಞಾನವನ್ನು ಪಡೆದವನೂ

1) [illegible]: [illegible]ಮುಚಿಕೊಂಡು. 2) [illegible] ಬಿದ್ದು. 3) ಪಾಠಾಂತರ: ಖರ್ಜೂರ ಮರಗಳಂತೆಯೂ.

1) ಪರವಶವಾಗಿ ಕಣ್ಣುತೆರೆದು ಸರ್ವಶಕ್ತನ ದರ್ಶನವನ್ನು ಹೊಂದುವವನೂ
ಆಗಿರುವ ಪುರುಷನಿಗುಂಟಾದ ದೇವೋಕ್ತಿ.
17 ಒಬ್ಬಾತನನ್ನು ನೋಡುತ್ತಿದ್ದೇನೆ, ಆತನು ಈಗಿನವನಲ್ಲ;
ಆತನು ಕಾಣಿಸುತ್ತಾನೆ, ಆದರೆ ಸಮೀಪದಲ್ಲಿ ಅಲ್ಲ.
ಯಾಕೋಬವಂಶದವರಲ್ಲಿ ನಕ್ಷತ್ರಪ್ರಾಯನೊಬ್ಬನು ಉದಯಿಸಿದ್ದಾನೆ;
ಇಸ್ರಾಯೇಲ್ಯರಲ್ಲಿ ರಾಜದಂಡ ಹಿಡಿದವನು ಕಂಡುಬಂದಿದ್ದಾನೆ.
ಅವನು ಮೋವಾಬ್ಯರ ತಲೆಯನ್ನು ಸೀಳಿಹಾಕಿದ್ದಾನೆ;
ಯುದ್ಧವೀರರೆಲ್ಲರನ್ನೂ ಕೆಡವಿಬಿಟ್ಟಿದ್ದಾನೆ.
18 ಅದಲ್ಲದೆ ಎದೋಮ್ಯರ ದೇಶವನ್ನೂ ಸ್ವಾಧೀನಪಡಿಸಿಕೊಂಡಿದ್ದಾನೆ;
ಹಗೆಗಳಾದ ಸೇಯೀರಿನವರು ಅವನಿಗೆ ಅಧೀನರಾದರು.
19 ಇಸ್ರಾಯೇಲ್ಯರೋ ಬಲಗೊಂಡವರು;
ಯಾಕೋಬ್ಯರಿಗೇ ದೊರೆತನವಾಯಿತು;
ಪಟ್ಟಣಗಳಿಂದ ತಪ್ಪಿಸಿಕೊಂಡವರೂ ನಾಶವಾದರು
20 ಅಂದನು. ತರುವಾಯ ಅಮಾಲೇಕ್ಯರನ್ನು ನೋಡಿ
ಅವರ ವಿಷಯದಲ್ಲಿ ನುಡಿದದ್ದೇನಂದರೆ—
ಅಮಾಲೇಕ್ಯರು ಜನಾಂಗಗಳಲ್ಲಿ ಪ್ರಮುಖರಲ್ಲವೇ;
ಆದರೂ ನಾಶವೇ ಅವರ ಗತಿ.
21 ಬಳಿಕ ಅವನು ಕೇನ್ಯರನ್ನು ನೋಡಿ ಅವರ ವಿಷಯದಲ್ಲಿ ನುಡಿದದ್ದೇನಂದರೆ—
ನಿಮ್ಮ ನಿವಾಸಸ್ಥಳವು ಶಾಶ್ವತವಾಗಿಯೇ ತೋರುತ್ತದೆ;
ಬೆಟ್ಟದ ತುದಿಯಲ್ಲಿ ಗೂಡನ್ನು ಮಾಡಿಕೊಂಡಿದ್ದೀರಿ.
22 ಆದರೂ ಕೇನ್ಯರೂ ನಾಶವಾಗುವರು.
ಅದು ಎಷ್ಟು ದೂರ ಅನ್ನುತ್ತೀರೋ?
ಅಶ್ಶೂರ್ಯರೇ ನಿಮ್ಮನ್ನು ಸೆರೆಹಿಡಿದುಕೊಂಡು ಹೋಗುವರು.
23 ಅವನು ಮತ್ತೂ ನುಡಿದದ್ದೇನಂದರೆ—
ಅಯ್ಯೋ, 2)ದೇವರು ಹೀಗೆ ಮಾಡುವಾಗ ಯಾರು ಉಳಿಯುವರು.
24 ಕಿತ್ತೀಮೆಂಬ ಸ್ಥಳದಿಂದ ಜನರು ಹಡಗುಗಳಲ್ಲಿ ಬಂದು ಅಶ್ಶೂರ್ಯರನ್ನೂ ಏಬೆರ್‌ಜನರನ್ನೂ ಸೋಲಿಸುವರು;
ಅವರಿಗೂ ನಾಶವುಂಟಾಗುವದು
25 ಅಂದನು. ತರುವಾಯ ಬಿಳಾಮನು ಸ್ವದೇಶಕ್ಕೆ
ತಿರಿಗಿ ಹೋದನು; ಬಾಲಾಕನೂ ಹೊರಟುಹೋದನು.

ಮಿದ್ಯಾನ್ಯಸ್ತ್ರೀಯರು ಇಸ್ರಾಯೇಲ್ಯರನ್ನು ಮರುಳುಗೊ
ದ್ರೋಹಿಗಳನ್ನಾಗಿ ಮಾಡಿದ್ದು.

ಇಸ್ರಾಯೇಲ್ಯರು ಶಿಟ್ಟೀಮಿನಲ್ಲಿ ವಾಸವಾಗಿ
ದ್ದಾಗ ಅವರು ಮೋವಾಬ್ ಸ್ತ್ರೀಯರೊಡನೆ ಸಹ
ವಾಸಮಾಡುವವರಾದರು. ಆ ಸ್ತ್ರೀಯರು ತ
ದೇವತೆಗಳಿಗೆ ಮಾಡಿದ ಔತಣದ ಯಜ್ಞಗ
ಇಸ್ರಾಯೇಲ್ಯರನ್ನು ಕರಿಸಲು ಇವರು ಆ ಭೋ
ವನ್ನು ಮಾಡಿ ಅವರ ದೇವತೆಗಳಿಗೆ ನಮಸ್ಕ
ವವರಾದರು. ಹೀಗೆ ಇಸ್ರಾಯೇಲ್ಯರು ಪೆಗೋ
ಬಾಳನ ಭಕ್ತರಾದ ಹಾಗಾಯಿತು. ಆದದರಿ
ಅವರ ಮೇಲೆ ಯೆಹೋವನು ಕೋಪಗೊಂ
ಮೋಶೆಗೆ—3)ನೀನು ಜನರ ಮುಖಂಡರೆಲ್ಲರನ
ಹಿಡಿಸಿ ಅವರಿಗೆ ಯೆಹೋವನಿಗೋಸ್ಕರ ಬಹಿರಂಗವ
ಮರಣದಂಡನೆಯನ್ನು ಮಾಡಿಸಬೇಕು; ಹಿ
ಯೆಹೋವನ ಕೋಪಾಗ್ನಿಯನ್ನು ಇಸ್ರಾಯೇಲ್ಯರಿ
ತೊಲಗಿಸಬೇಕು ಎಂದು ಹೇಳಿದನು. ಆದಕಾ
ಮೋಶೆ ಇಸ್ರಾಯೇಲ್ಯರ ನ್ಯಾಯಾಧಿಪತಿಗಳಿಗೆ
ನಿಮ್ಮಲ್ಲಿ ಪ್ರತಿಯೊಬ್ಬನು ಪೆಗೋರದ ಬಾಳ
ಸೇರಿಕೊಂಡ ತನ್ನ ತನ್ನ ವಶದಲ್ಲಿರುವವರಿಗೆ ಪ್ರಾ
ಶಿಕ್ಷೆಯನ್ನು ನಡಿಸಬೇಕೆಂದು ಆಜ್ಞಾಪಿಸಿದನು.
ಇಸ್ರಾಯೇಲ್ಯರ ಸರ್ವಸಮೂಹದವರು ದೇ
ದರ್ಶನದ ಗುಡಾರದ ಬಾಗಲಿನ ಹತ್ತಿರ ಅಳುತ್ತಿ
ವಾಗ ಇಸ್ರಾಯೇಲ್ಯನಾದ ಒಬ್ಬ ಮನುಷ್ಯ
ಮೋಶೆಗೂ ಸರ್ವಸಮೂಹದವರಿಗೂ ಎದುರಾಗಿಯ
ಒಬ್ಬ ಮಿದ್ಯಾನ್ ಸ್ತ್ರೀಯನ್ನು ತನ್ನ ಕುಲದ
ಬಳಿಗೆ ಕರಕೊಂಡು ಬರುವದನ್ನು ಕಂಡರು. ಕೂ
ಮಹಾಯಾಜಕ ಆರೋನನ ಮೊಮ್ಮಗನೂ ಎ
ಜಾರನ ಮಗನೂ ಆದ ಫೀನೆಹಾಸನು ಸಭೆ
ನಡುವೆಯಿಂದೆದ್ದು ಈಟಿಯನ್ನು ಕೈಯಲ್ಲಿ ಹಿಡಿ
ಆ ಇಸ್ರಾಯೇಲ್ಯನ ಹಿಂದೆ ಹೋಗಿ ಅವನ ವ
ಗುವ ಕೋಣೆಯನ್ನು ಹೊಕ್ಕು ಅವರಿಬ್ಬರನ
ಅಂದರೆ ಆ ಇಸ್ರಾಯೇಲ್ಯನನ್ನೂ ಆ ಸ್ತ್ರೀಯನ
ಒಂದೇ ಏಟಿನಿಂದ ಹೊಟ್ಟೆಯಲ್ಲಿ ತಿವಿದು ಕೊಂದ
ಆಗ ಇಸ್ರಾಯೇಲ್ಯರಿಗುಂಟಾಗಿದ್ದ ವ್ಯಾಧಿ ನಿ
ಹೋಯಿತು. ಆ ವ್ಯಾಧಿಯಿಂದ ಇಪ್ಪತ್ತನಾ
ಸಾವಿರ ಮಂದಿ ಸತ್ತರು.
ಆಗ ಯೆಹೋವನು ಮೋಶೆಗೆ—ನಾನೇ ನನ್ನ
ಗೌರವವನ್ನು ಕಾಪಾಡಿಕೊಳ್ಳುವ ಮೇರೆಗೆ ಮ
ಯಾಜಕ ಆರೋನನ ಮೊಮ್ಮಗನೂ ಎಲ್ಲಾಜಾ
ಮಗನೂ ಆಗಿರುವ ಫೀನೆಹಾಸನು ನನ್ನ ಗೌರವವ
ಕಾಪಾಡಿದ್ದರಿಂದ ಇಸ್ರಾಯೇಲ್ಯರ ಮೇಲಿದ್ದ ನ
ಕೋಪವನ್ನು ತೊಲಗಿಸಿದ್ದಾನೆ. ಹೀಗಿರುವದರಿ
ನಾನು ನನ್ನ ಗೌರವವನ್ನು ಕಾಪಾಡಿಕೊಳ್ಳು
ಕ್ಕಾಗಿ ಇಸ್ರಾಯೇಲ್ಯರನ್ನು ನಿರ್ಮೂಲಮಾಡಬೇಕ

1) ಮೂಲ: ನೆಲಕ್ಕೆ ಬಿದ್ದು. 2) ಅಥವಾ: ಇವರನ್ನು [ಅಂದರೆ ಅಶ್ಶೂರ್ಯರನ್ನು] ಸ್ಥಾಪಿಸುವಾಗ. 3)
ನೀನು ಜನರ ಮುಖಂಡರನ್ನು ಕರಿಸಿ ಆ ದೋಷಿಗಳಿಗೆ.

ತ್ತ್ಯವಿಲ್ಲ. ಆದಕಾರಣ ನಾನು ಅವನ ಸಂಗಡ
ಹದ ಒಡಂಬಡಿಕೆಯನ್ನು ಮಾಡಿಕೊಳ್ಳುತ್ತೇನೆಂದು
ಲ್ಲರಿಗೂ ತಿಳಿಸು; ಆ ಒಡಂಬಡಿಕೆ ಏನಂದರೆ,
ವನಿಗೂ ಅವನ ತರುವಾಯ ಅವನ ಸಂತತಿಯವ
ಗೂ ಯಾಜಕತ್ವವು ಶಾಶ್ವತವಾಗಿಯೇ ಇರುವ
ಂದು ಮಾತುಕೊಡುತ್ತೇನೆ. ಅವನು ತನ್ನ ದೇವರ
ರವವನ್ನು ಸ್ಥಾಪಿಸಿ ಇಸ್ರಾಯೇಲ್ಯರಿಗೋಸ್ಕರ
ಶ್ಚಿತ್ತಪರಿಹಾರವನ್ನು ಮಾಡಿದ್ದರಿಂದ ನಾನು ಅವ
ಗೆ ಈ ಮಾತನ್ನು ಕೊಟ್ಟಿದ್ದೇನೆ ಎಂದು ಹೇಳಿದನು.
ಆ ಮಿದ್ಯಾನ್ ಸ್ತ್ರೀಯೊಡನೆ ಹತವಾದವನ ಹೆಸರು
ಮ್ರಿ; ಅವನು ಸಿಮೆಯೋನ್ ಕುಲದವರಲ್ಲಿ
ೋತ್ರಪ್ರಧಾನನಾದ ಸಾಲೂ ಎಂಬವನ ಮಗ. ಹತ
ದ ಆ ಮಿದ್ಯಾನ್ ಸ್ತ್ರೀಯ ಹೆಸರು ಕೊಜ್ಬೀ;
ವಳು ಮಿದ್ಯಾನ್ಯರಲ್ಲಿ ಗೋತ್ರಪ್ರಧಾನನಾದ ಚೂರ್
ಬವನ ಮಗಳು.
ತರುವಾಯ ಯೆಹೋವನು ಮೋಶೆಗೆ ಆಜ್ಞಾಪಿಸಿ
ೇನಂದರೆ — ನೀನು ಮಿದ್ಯಾನ್ಯರನ್ನು ಹಿಂಸಿಸಿ ಸಂಹ
ಬೇಕು. ಅವರು ಪೆಗೋರದ ಸಂಗತಿಯಲ್ಲಿಯೂ
ಮ್ಮ ಅಧಿಪತಿಯ ಮಗಳಾದ ಕೊಜ್ಬೀ ಎಂಬ
ಕುಲಸ್ತ್ರೀಯ ಸಂಗತಿಯಲ್ಲಿಯೂ ನಿಮ್ಮನ್ನು
ೋಸಗೊಳಿಸಿ ಹಿಂಸಿಸಿದರಲ್ಲಾ. (ಆ ಸ್ತ್ರೀಯು
ಗೋರದ ಸಂಗತಿಯಿಂದ ಘೋರವ್ಯಾಧಿಯುಂಟಾ
ಗ ಹತವಾದಳು.)

ಎರಡನೆಯ ಖಾನೇಷುಮಾರಿಯು.

ಆ ಘೋರವಾದ ವ್ಯಾಧಿ ನಿಂತ ಮೇಲೆ ಯೆಹೋ
ವನು ಮೋಶೆಗೂ ಆರೋನನ ಮಗನಾದ ಎಲ್ಲಾ
ರನಿಗೂ — ನೀವು ಇಸ್ರಾಯೇಲ್ಯರ ಸರ್ವಸಮೂಹ
ರಲ್ಲಿ ಇಪ್ಪತ್ತು ವರುಷ ಮೊದಲುಗೊಂಡು
ಶ್ಚಾದ ವಯಸ್ಸುಳ್ಳವರನ್ನು ಅಂದರೆ ಯುದ್ಧಕ್ಕೆ
ೊರಡತಕ್ಕವರನ್ನು ಗೋತ್ರಗೋತ್ರಗಳ ಪ್ರಕಾರ
ಕ್ಕಿಸಬೇಕೆಂದು ಆಜ್ಞಾಪಿಸಿದನು.
ಯೆಹೋವನು ಮೋಶೆಗೂ ಐಗುಪ್ತದೇಶದಿಂದ
ದಿದ್ದ ಇಸ್ರಾಯೇಲ್ಯರಿಗೂ ಆಜ್ಞಾಪಿಸಿದಂತೆ ಮೋಶೆ
ೂ ಮಹಾಯಾಜಕ ಎಲ್ಲಾಜಾರನೂ ಯೊರ್ದನ್
ೊಳೆಯ ತೀರದಲ್ಲಿ ಯೆರಿಕೋ ಪಟ್ಟಣದ ಹತ್ತಿರ
ೋವಾಬ್ಯರ ಮೈದಾನದಲ್ಲಿ ಇಸ್ರಾಯೇಲ್ಯರಲ್ಲಿ
ಪ್ಪತ್ತು ವರುಷ ಮೊದಲುಗೊಂಡು ಪಶ್ಚಾದ ವಯ
ುಳ್ಳವರನ್ನು ಲೆಕ್ಕಿಸಿದರು. [ಅದರ ವಿವರ ಹೇಗಂದರೆ —]
ಇಸ್ರಾಯೇಲನ ಚೊಚ್ಚಲುಮಗನಾದ ರೂಬೇನ
ದುಂಟಾದ ಕುಟುಂಬಗಳು ಯಾವವಂದರೆ —
ಹನೋಕನ ವಂಶಸ್ಥರಾದ ಹನೋಕ್ಯರು,
ಪಲ್ಲೂಪಿನ ವಂಶಸ್ಥರಾದ ಪಲ್ಲೂವಿನವರು,
ಹೆಚ್ರೋನನ ವಂಶಸ್ಥರಾದ ಹೆಚ್ರೋನ್ಯರು,
ಕರ್ಮೀಯ ವಂಶಸ್ಥರಾದ ಕರ್ಮೀಯರು
ಇವರೇ.
ಬೇನ್ಯರಾದ ಇವರಲ್ಲಿ ಲೆಕ್ಕಿಸಲ್ಪಟ್ಟವರು 43,730
ಂದಿ.
ಪಲ್ಲೂಪಿನ ಮಗನು ಎಲೀಯಾಬ್. ಎಲೀ

ಯಾಬನ ಮಕ್ಕಳು — ನೆಮೂವೇಲ್, ದಾತಾನ್,
ಅಬೀರಾಮ್ ಎಂಬವರೇ. ಕೋರಹನ ಗುಂಪಿನವರು
ಯೆಹೋವನಿಗೆ ವಿರೋಧವಾಗಿ ವಿವಾದಿಸಿದ ಕಾಲ
ದಲ್ಲಿ ಅವರೊಳಗೆ ಸೇರಿಕೊಂಡು ಮೋಶೆ ಆರೋನ
ರಿಗೆ ವಿರೋಧವಾಗಿ ವಿವಾದಿಸಿದ ಆಲೋಚನಾಕರ್ತ
ರಾದ ದಾತಾನ್ ಅಬೀರಾಮರು ಇವರೇ. ಭೂಮಿಯು 10
ಬಾಯ್ದೆರೆದು ಅವರನ್ನೂ ಕೋರಹನನ್ನೂ ನುಂಗಿ
ಬಿಟ್ಟಿತಷ್ಟೆ; ಮತ್ತು ಬೆಂಕಿಯು ಆ ಗುಂಪಿನವರಲ್ಲಿ
ಬೇರೆ ಇನ್ನೂರೈವತ್ತು ಮಂದಿಯನ್ನು ದಹಿಸಿ ಇಸ್ರಾ
ಯೇಲ್ಯರಿಗೆ ಎಚ್ಚರವುಂಟಾಗುವಂತೆ ಮಾಡಿತಲ್ಲಾ.
ಆ ಗುಂಪಿನವರೆಲ್ಲರು ಸತ್ತರೂ ಕೋರಹನ ಮಕ್ಕಳು 11
ಆ ಕಾಲದಲ್ಲಿ ಸಾಯಲಿಲ್ಲ.
ಸಿಮೆಯೋನ್ ಕುಲದ ಕುಟುಂಬಗಳು ಯಾವ 12
ವಂದರೆ —
ನೆಮೂವೇಲನ ವಂಶಸ್ಥರಾದ ನೆಮೂವೇಲ್ಯರು,
ಯಾಮೀನನ ವಂಶಸ್ಥರಾದ ಯಾಮೀನ್ಯರು,
ಯಾಕೀನನ ವಂಶಸ್ಥರಾದ ಯಾಕೀನ್ಯರು,
ಜೆರಹನ ವಂಶಸ್ಥರಾದ ಜೆರಹಿಯರು, 13
ಸೌಲನ ವಂಶಸ್ಥರಾದ ಸೌಲ್ಯರು ಇವರೇ.
ಸಿಮೆಯೋನ್ ಕುಲದವರಾದ ಇವರಲ್ಲಿ ಲೆಕ್ಕಿಸಲ್ಪಟ್ಟ 14
ವರು 22,200 ಮಂದಿ.
ಗಾದ್ ಕುಲದ ಕುಟುಂಬಗಳು ಯಾವವಂದರೆ — 15
ಚೆಫೋನನ ವಂಶಸ್ಥರಾದ ಚೆಫೋನ್ಯರು,
ಹಗ್ಗೀಯ ವಂಶಸ್ಥರಾದ ಹಗ್ಗೀಯರು,
ಶೂನೀಯ ವಂಶಸ್ಥರಾದ ಶೂನೀಯರು,
ಒಜ್ನೀಯ ವಂಶಸ್ಥರಾದ ಒಜ್ನೀಯರು, 16
ಏರೀಯ ವಂಶಸ್ಥರಾದ ಏರೀಯರು,
ಅರೋದನ ವಂಶಸ್ಥರಾದ ಅರೋದ್ಯರು, 17
ಅರೇಲೀಯ ವಂಶಸ್ಥರಾದ ಅರೇಲೀಯರು
ಇವರೇ.
ಗಾದ್ ಕುಲದವರಾದ ಇವರಲ್ಲಿ ಲೆಕ್ಕಿಸಲ್ಪಟ್ಟವರು 18
40,500 ಮಂದಿ.
ಯೆಹೂದನ ಮಕ್ಕಳಲ್ಲಿ ಏರ್ ಓನಾನರು 19
ಕಾನಾನ್ ದೇಶದಲ್ಲೇ ಸತ್ತರಷ್ಟೆ.
ಯೆಹೂದ ಕುಲದಲ್ಲಿ ಉಳಿದ ಕುಟುಂಬಗಳು ಯಾ 20
ವವಂದರೆ —
ಶೇಲಹನ ವಂಶಸ್ಥರಾದ ಶೇಲಾನ್ಯರು,
ಪೆರೆಚನ ವಂಶಸ್ಥರಾದ ಪೆರೆಚ್ಯರು,
ಜೆರಹನ ವಂಶಸ್ಥರಾದ ಜೆರಹಿಯರು ಇವರೇ.
ಪೆರೆಚನಿಂದುಂಟಾದ ಕುಟುಂಬಗಳು — 21
ಹೆಚ್ರೋನನ ವಂಶಸ್ಥರಾದ ಹೆಚ್ರೋನ್ಯರೂ
ಹಾಮೂಲನ ವಂಶಸ್ಥರಾದ ಹಾಮೂಲ್ಯರೂ.
ಯೆಹೂದ ಕುಲದವರಾದ ಇವರಲ್ಲಿ ಲೆಕ್ಕಿಸಲ್ಪಟ್ಟ 22
ವರು 76,500 ಮಂದಿ.
ಇಸ್ಸಾಕಾರ್ ಕುಲದ ಕುಟುಂಬಗಳು ಯಾವ 23
ವಂದರೆ —
ತೋಲನ ವಂಶಸ್ಥರಾದ ತೋಲಾಯರು.
ಪುವ್ವನ ವಂಶಸ್ಥರಾದ ಪೂನ್ಯರು,
ಯಾಶೂಬನ ವಂಶಸ್ಥರಾದ ಯಾಶೂಬ್ಯರು, 24
ಶಿಮ್ರೋನನ ವಂಶಸ್ಥರಾದ ಶಿಮ್ರೋನ್ಯರು ಇವರೇ.

25 ಇಸ್ಸಾಕಾರ್ ಕುಲದವರಾದ ಇವರಲ್ಲಿ ಲೆಕ್ಕಿಸಲ್ಪಟ್ಟವರು 64,300 ಮಂದಿ.
26 ಜೆಬುಲೂನ್ ಕುಲದ ಕುಟುಂಬಗಳು ಯಾವವಂದರೆ—

ಸೆರೆದನ ವಂಶಸ್ಥರಾದ ಸೆರೆದ್ಯರು,
ಏಲೋನನ ವಂಶಸ್ಥರಾದ ಏಲೋನ್ಯರು,
ಯಹಲೇಲನ ವಂಶಸ್ಥರಾದ ಯಹಲೇಲ್ಯರು.

27 ಜೆಬುಲೂನ್ ಕುಲದವರಾದ ಇವರಲ್ಲಿ ಲೆಕ್ಕಿಸಲ್ಪಟ್ಟವರು 60,500 ಮಂದಿ.
28 ಯೋಸೇಫನ ಮಕ್ಕಳು ಮನಸ್ಸೆ ಎಫ್ರಾಯಿಮ್.
29 ಮನಸ್ಸೆ ಕುಲದ ಕುಟುಂಬಗಳು ಯಾವವಂದರೆ—

ಮಾಕೀರನ ವಂಶಸ್ಥರಾದ ಮಾಕೀರ್ಯರು,
ಮಾಕೀರನ ಮಗನಾದ ಗಿಲ್ಯಾದನ ವಂಶಸ್ಥರಾದ ಗಿಲ್ಯಾದ್ಯರು ಇವರೇ.

30 ಗಿಲ್ಯಾದನ ವಂಶದವರು ಯಾರಂದರೆ—

ಈಯೆಜೆರನ ವಂಶಸ್ಥರಾದ ಈಯೆಜೆರ್ಯರು,
ಹೇಲೆಕನ ವಂಶಸ್ಥರಾದ ಹೇಲೆಕ್ಯರು,
31 ಅಸ್ರೀಯೇಲನ ವಂಶಸ್ಥರಾದ ಅಸ್ರೀಯೇಲ್ಯರು,
ಶೆಕೆಮನ ವಂಶಸ್ಥರಾದ ಶೆಕೆಮ್ಯರು,
32 ಶೆಮೀದಾಯನ ವಂಶಸ್ಥರಾದ ಶೆಮೀದಾಯರು,
ಹೇಫೆರನ ವಂಶಸ್ಥರಾದ ಹೇಫೆರ್ಯರು ಇವರೇ.

33 ಹೇಫೆರನ ಮಗನಾದ ಚಲ್ಪಹಾದನಿಗೆ ಹೆಣ್ಣುಮಕ್ಕಳು ಹುಟ್ಟಿದರೇ ಹೊರತು ಗಂಡುಮಕ್ಕಳು ಹುಟ್ಟಲಿಲ್ಲ. ಅವನ ಹೆಣ್ಣುಮಕ್ಕಳು ಮಹ್ಲಾ, ನೋವಾ, ಹೊಗ್ಲಾ, ಮಿಲ್ಕಾ, ತಿರ್ಚಾ ಎಂಬವರೇ.
34 ಮನಸ್ಸೆ ಕುಲದವರಲ್ಲಿ ಲೆಕ್ಕಿಸಲ್ಪಟ್ಟವರು 52,700 ಮಂದಿ.
35 ಎಫ್ರಾಯಿಮ್ ಕುಲದ ಕುಟುಂಬಗಳು ಯಾವವಂದರೆ—

ಶೂತೆಲಹನ ವಂಶಸ್ಥರಾದ ಶೂತೆಲಹ್ಯರು,
ಬೆಕೆರನ ವಂಶಸ್ಥರಾದ ಬೆಕೆರ್ಯರು,
ತಹನನ ವಂಶಸ್ಥರಾದ ತಹನಿಯರು,
36 ಶೂತೆಲಹನ ಮಗನಾದ ಏರಾನನ ವಂಶಸ್ಥರಾದ ಏರಾನ್ಯರು ಇವರೇ.

37 ಎಫ್ರಾಯಿಮ್ ಕುಲದವರಾದ ಇವರಲ್ಲಿ ಲೆಕ್ಕಿಸಲ್ಪಟ್ಟವರು 32,500 ಮಂದಿ. ಇದೇ ಯೋಸೇಫ್ ವಂಶದ ಕುಟುಂಬಗಳ ವಿವರ.
38 ಬೆನ್ಯಾಮೀನ್ ಕುಲದ ಕುಟುಂಬಗಳು ಯಾವವಂದರೆ—

ಬೆಲಗನ ವಂಶಸ್ಥರಾದ ಬೆಲಗ್ಯರು,
ಅಷ್ಬೇಲನ ವಂಶಸ್ಥರಾದ ಅಷ್ಬೇಲ್ಯರು,
ಅಹೀರಾಮನ ವಂಶಸ್ಥರಾದ ಅಹೀರಾಮ್ಯರು,
39 ಶೂಫಾಮನ ವಂಶಸ್ಥರಾದ ಶೂಫಾಮ್ಯರು,
ಹೂಫಾಮನ ವಂಶಸ್ಥರಾದ ಹೂಫಾಮ್ಯರು ಇವರೇ.

40 ಬೆಲಗನಿಗೆ ಅರ್ದ್, ನಾಮಾನ್ ಎಂಬ ಇಬ್ಬರು ಮಕ್ಕಳಿದ್ದರು.

ಅರ್ದನ ವಂಶದವರು ಅರ್ದ್ಯರು,
ನಾಮಾನನ ವಂಶದವರು ನಾಮಾನ್ಯರು.

ಬೆನ್ಯಾಮೀನ್ ಕುಲದವರಾದ ಇವರಲ್ಲಿ ಲೆಕ್ಕಿಸಲ್ಪಟ್ಟವರು 45,600 ಮಂದಿ.

ದಾನ್ ಕುಲದ ಕುಟುಂಬಗಳು ಯಾವವಂದರೆ—

ಶೂಹಾಮನ ವಂಶಸ್ಥರಾದ ಶೂಹಾಮ್ಯರು.

ದಾನ್ ಕುಲದವರಾದ ಇವರಲ್ಲಿ ಲೆಕ್ಕಿಸಲ್ಪಟ್ಟವರು 64.400 ಮಂದಿ.

ಆಶೇರ್ ಕುಲದ ಕುಟುಂಬಗಳು—

ಇಮ್ನಾಹನ ವಂಶಸ್ಥರಾದ ಇಮ್ನಾಹ್ಯರು,
ಇಷ್ವೀಯ ವಂಶಸ್ಥರಾದ ಇಷ್ವೀಯರು,
ಬೆರೀಯನ ವಂಶಸ್ಥರಾದ ಬೆರೀಯರು.

ಬೆರೀಯನ ಮಕ್ಕಳಿಂದುಂಟಾದ ಕುಟುಂಬಗಳು—

ಹೇಬೆರನ ವಂಶಸ್ಥರಾದ ಹೇಬೆರ್ಯರು,
ಮಲ್ಕೀಯೇಲನ ವಂಶಸ್ಥರಾದ ಮಲ್ಕೀಯೇಲ್ಯರು.

ಆಶೇರನಿಗೆ ಸೆರಹಳೆಂಬ ಮಗಳು ಸಹ ಇದ್ದ

ಆಶೇರ್ ಕುಲದವರಾದ ಇವರಲ್ಲಿ ಲೆಕ್ಕಿಸಲ್ಪಟ್ಟವ 53,400 ಮಂದಿ

ನಫ್ತಾಲಿ ಕುಲದ ಕುಟುಂಬಗಳು—

ಯಹಚೇಲನ ವಂಶಸ್ಥರಾದ ಯಹಚೇಲ್ಯ
ಗೂನೀಯ ವಂಶಸ್ಥರಾದ ಗೂನೀಯರು,
ಯೇಚೆರನ ವಂಶಸ್ಥರಾದ ಯೇಚೆರ್ಯರು,
ಶಿಲ್ಲೇಮನ ವಂಶಸ್ಥರಾದ ಶಿಲ್ಲೇಮ್ಯರು.

ನಫ್ತಾಲಿ ಕುಲದವರಾದ ಇವರಲ್ಲಿ ಲೆಕ್ಕಿಸಲ್ಪಟ್ಟವ 45,400 ಮಂದಿ.

ಇಸ್ರಾಯೇಲ್ಯರಲ್ಲಿ ಲೆಕ್ಕಿಸಲ್ಪಟ್ಟವರ ಒಟ್ಟು ಸಂ 601,730.

ಯೆಹೋವನು ಮೋಶೆಗೆ ಆಜ್ಞಾಪಿಸಿದ್ದೇನಂದರೆ ನೀವು ಈ ಕುಲಗಳಿಗೆ ಅವರವರ ಸಂಖ್ಯೆಯ ಪ್ರಕ ಆ ದೇಶವನ್ನು ಸ್ವದೇಶವಾಗುವಂತೆ ಹಂಚಿಕೊಡಬೇ ಹೆಚ್ಚು ಮಂದಿಯುಳ್ಳ ಕುಲಕ್ಕೆ ಹೆಚ್ಚಾಗಿಯೂ ಕಡ ಯಾದ ಕುಲಕ್ಕೆ ಕಡಮೆಯಾಗಿಯೂ ಕೊಡಬೇ ಲೆಕ್ಕಿಸಿದ ಸಂಖ್ಯೆಯ ಪ್ರಕಾರವೇ ಪ್ರತಿಯೊಂದು ಕ ಕ್ಕೆ ಭೂಮಿಯನ್ನು ಸ್ವಾಸ್ತ್ಯಕ್ಕಾಗಿ ಕೊಡಬೇ ಪ್ರತಿಯೊಂದು ಕುಲದ ಪಿತೃವಿನ ಹೆಸರನ್ನು ಬರೆ ಚೀಟುಹಾಕಿ ಆಯಾ ಕುಲಕ್ಕೆ ಸ್ವಾಸ್ತ್ಯವನ್ನು ಗೊ ಮಾಡಬೇಕು. ಹೆಚ್ಚು ಮಂದಿಯುಳ್ಳ ಕುಲಕ್ಕಾ ಕಡಮೆಯಾದ ಕುಲಕ್ಕಾಗಲಿ ಚೀಟು ಬಂದ ಪ್ರಕ ವೇ ಸ್ವಾಸ್ತ್ಯವನ್ನು ಗೊತ್ತುಮಾಡಬೇಕು.

ಲೇವಿಯರೊಳಗೆ ಲೆಕ್ಕಿಸಲ್ಪಟ್ಟ ಕುಟು ಗಳು—

ಗೇರ್ಷೋನನ ವಂಶದವರಾದ ಗೇರ್ಷೋನ್ಯ
ಕೆಹಾತನ ವಂಶದವರಾದ ಕೆಹಾತ್ಯರು,
ಮೆರಾರೀಯ ವಂಶದವರಾದ ಮೆರಾರೀಯ

ಲೇವಿ ಕುಲದವರ ಕುಟುಂಬಗಳು—ಲಿಬ್ನೀ ಕುಟುಂಬ, ಹೆಬ್ರೋನ್ಯರ ಕುಟುಂಬ, ಮಹ್ಲೀ ಕುಟುಂಬ, ಮೂಷೀಯರ ಕುಟುಂಬ, ಕೋರಹಿ ಕುಟುಂಬ ಇವುಗಳೇ.

ಕೆಹಾತನು ಅಮ್ರಾಮನನ್ನು ಪಡೆದನು. ಅ ಮನ ಹೆಂಡತಿ ಯಾರಂದರೆ ಐಗುಪ್ತದೇಶದಲ್ಲಿ ಲ ಯಿಂದ ಹುಟ್ಟಿದ ಯೋಕೆಬೆದಳು. ಈಕೆಯ

ಮ್ರಾಮುನಿಂದ ಆರೋನನೂ ಮೋಶೆಯೂ ಇವರ
ಕ್ಕನಾದ ಮಿರ್ಯಾಮಳೂ ಹುಟ್ಟಿದರು. ಆರೋನ
ದ ನಾದಾಬ್, ಅಬೀಹೂ, ಎಲ್ಲಾಜಾರ್, ಈತಾ
ಜಾರ್ ಎಂಬವರು ಹುಟ್ಟಿದರು. ನಾದಾಬ್ ಅಬೀಹೂ
ಬ್ಬರು ಯೆಹೋವನ ಸನ್ನಿಧಿಯಲ್ಲಿ ಆತನು
ಜ್ಞಾಪಿಸದೆ ಇದ್ದ ಬೇರೆ ಬೆಂಕಿಯಿಂದ ಧೂಪವನ್ನು
ರ್ಪಿಸಿದದರಿಂದ ಸತ್ತುಹೋದರು.
ಬೇರೆ ಇಸ್ರಾಯೇಲ್ಯರಿಗೆ ಸ್ವಾಸ್ತ್ಯದೊರಕಿದಂತೆ
ವಿಯರಿಗೆ ಸ್ವಾಸ್ತ್ಯದೊರೆಯದೆ ಹೋದದರಿಂದ
ದರು ಇಸ್ರಾಯೇಲ್ಯರೊಡನೆ ಲೆಕ್ಕಿಸಲ್ಪಡಲಿಲ್ಲ.
ವಿಯರೊಳಗ ಒಂದು ತಿಂಗಳು ಮೊದಲುಗೊಂಡು
ಜ್ಞಾದ ವಯಸ್ಸುಳ್ಳ ಗಂಡಸರನ್ನು ಲೆಕ್ಕಿಸಲಾಗಿ
ದರ ಸಂಖ್ಯೆ 23,000.
ಯೊರ್ದನ್ ಹೊಳೆಯ ತೀರದಲ್ಲಿ ಯೆರಿಕೋ
ಟ್ಟಣದ ಹತ್ತಿರ ಮೋವಾಬ್ಯರ ಮೈದಾನದಲ್ಲಿ
ೀಶೆಯೂ ಯಾಜಕನಾದ ಎಲ್ಲಾಜಾರನೂ ಇಸ್ರಾ
ೀಲ್ಯರ ಜನಸಂಖ್ಯೆ ನೋಡಿದಾಗ ಲೆಕ್ಕಿಸಲ್ಪಟ್ಟ
ು ಇವರೇ. ಮೋಶೆಯೂ ಯಾಜಕನಾದ ಆರೋ
ನೂ ಸೀನಾಯಿ ಅರಣ್ಯದಲ್ಲಿ ಇಸ್ರಾಯೇಲ್ಯರ
ಖ್ಯೆಯನ್ನು ನೋಡಿದಾಗ ಲೆಕ್ಕಿಸಲ್ಪಟ್ಟವರೊಳಗೆ
ಬ್ಬರಾದರೂ ಇವರಲ್ಲಿರಲಿಲ್ಲ. ಅವರೆಲ್ಲರೂ ಅರಣ್ಯ
ಲ್ಲಿಯೇ ಸಾಯುವರೆಂದು ಯೆಹೋವನು ಅವರ
ಷಯದಲ್ಲಿ ಹೇಳಿದ್ದನಷ್ಟೆ; ಆದದರಿಂದ ಯೆಫುನ್ನೆಯ
ಗನಾದ ಕಾಲೇಬ್ ಮತ್ತು ನೂನನ ಮಗನಾದ
ಹೋಶುವ ಇವರಿಬ್ಬರೇ ಹೊರತಾಗಿ ಅವರಲ್ಲಿ
ಾರೂ ಉಳಿಯಲಿಲ್ಲ.

ಗಂಡುಮಕ್ಕಳಿಲ್ಲದವರ ಸ್ವಾಸ್ತ್ಯದ ವಿಷಯದಲ್ಲಿ
ನಡೆಯತಕ್ಕ ಕ್ರಮ.

ಯೋಸೇಫನ ಕುಮಾರ ಮನಸ್ಸೆಯ ವಂಶದವ
ರೊಳಗೆ ಮನಸ್ಸೆಗೆ ಹುಟ್ಟಿದ ಮಾಕೀರನ ಮರಿ
ಗನೂ ಗಿಲ್ಯಾದನ ಮೊಮ್ಮಗನೂ ಹೇಫೆರನ
ಗನೂ ಆದ ಚಲ್ಪಹಾದನ ಹೆಣ್ಣುಮಕ್ಕಳಾದ
ಹ್ಲಾ, ನೋವಾ, ಹೊಗ್ಲಾ, ಮಿಲ್ಕಾ, ತಿರ್ಚಾ ಎಂಬ
ು ಒಂದು ವಿಜ್ಞಾಪನೆಯನ್ನು ಮಾಡಿಕೊಳ್ಳುವದಕ್ಕೆ
ದರು. ಅವರು ದೇವದರ್ಶನದ ಗುಡಾರದ ಬಾಗ
ಒಳಿಯಲ್ಲಿ ಮೋಶೆ, ಮಹಾಯಾಜಕನಾದ
ಲ್ಲಾಜಾರ್, ಕುಲಾಧಿಪತಿಗಳು, ಸರ್ವಸಮೂಹ
ರು ಇವರೆಲ್ಲರ ಮುಂದೆ ನಿಂತು ಅವರಿಗೆ—
ಮ್ಮ ತಂದೆ ಅರಣ್ಯದಲ್ಲಿ ಸತ್ತುಹೋದನು; ಅವನು
ೋರಹನ ಜೊತೆಯಲ್ಲಿ ಯೆಹೋವನಿಗೆ ವಿರೋಧ
ಗಿ ತಿರುಗಿಬಿದ್ದವರೊಳಗೆ ಸೇರಿದವನಲ್ಲ; ಅವನು
ತ್ತದ್ದು ಸ್ವಂತ ಕರ್ಮಫಲವೇ. ಅವನಿಗೆ ಗಂಡುಮಕ್ಕ
ಲಿಲ್ಲ. ನಮ್ಮ ತಂದೆಗೆ ಗಂಡುಮಗನಿಲ್ಲದ ಮಾತ್ರ
ದ ಅವನ ಹೆಸರು ಕುಲದಿಂದ ತೆಗೆಯಲ್ಪಡುವದು
್ಯಾಯವೋ? ತಂದೆಯ ಕುಲದವರೊಂದಿಗೆ ನಮಗೂ
್ವಾಸ್ತ್ಯವನ್ನು ಕೊಡಬೇಕೆಂದು ಕೇಳಿಕೊಂಡರು.

ಮೋಶೆಯು ಅವರ ಪ್ರಾರ್ಥನೆಯನ್ನು ಯೆಹೋ 5
ವನ ಬಳಿಯಲ್ಲಿ ವಿಚಾರಿಸಲಾಗಿ ಆತನು ಅವ
ನಿಗೆ ಆಜ್ಞಾಪಿಸಿದ್ದೇನಂದರೆ—ಚಲ್ಪಹಾದನ ಹೆಣ್ಣು 6, 7
ಮಕ್ಕಳು ಹೇಳುವದು ನ್ಯಾಯ. ಅವರ ತಂದೆಯ
ಕುಲದವರೊಂದಿಗೆ ಅವರಿಗೂ ನೀನು ಸ್ವಾಸ್ತ್ಯವನ್ನು
ಕೊಡಬೇಕು; ತಂದೆಯ ಸ್ವಾಸ್ತ್ಯವು ಅವರಿಗೆ ಬರಲಿ.
ಮತ್ತು ನೀನು ಇಸ್ರಾಯೇಲ್ಯರಿಗೆ ಹೀಗೆ ಆಜ್ಞಾ 8
ಪಿಸು— ಯಾವನಾದರೂ ಮಗನಿಲ್ಲದೆ ಸತ್ತರೆ ಅವನ
ಸ್ವಾಸ್ತ್ಯವು ಅವನ ಮಗಳಿಗೆ ಆಗಬೇಕು. ಮಗಳು 9
ಇಲ್ಲದ ಪಕ್ಷಕ್ಕೆ ಅವನ ಸ್ವಾಸ್ತ್ಯವನ್ನು ಅವನ
ಅಣ್ಣತಮ್ಮಂದಿರಿಗೆ ಕೊಡಬೇಕು; ಅಣ್ಣತಮ್ಮಂದಿ 10
ರಿಲ್ಲದ ಪಕ್ಷಕ್ಕೆ ತಂದೆಯ ಅಣ್ಣತಮ್ಮಂದಿರಿಗೆ ಕೊಡ
ಬೇಕು; ಇವರೂ ಇಲ್ಲದಿದ್ದರೆ ಕುಲದವರಲ್ಲಿ 11
ಸಮೀಪಬಂಧುವಿಗೆ ಕೊಡಬೇಕು; ಇವನೇ ಅದನ್ನು
ಅನುಭೋಗಿಸಲಿ. ಯೆಹೋವನು ಮೋಶೆಗೆ ಅಪ್ಪಣೆ
ಮಾಡಿದ ಈ ತೀರ್ಮಾನವು ಇಸ್ರಾಯೇಲ್ಯರಿಗೆ ನ್ಯಾಯ
ವಿಧಿಯಾಗಿರಬೇಕು.

ಮೋಶೆಯ ತರುವಾಯ ಇಸ್ರಾಯೇಲ್ಯರ ಮೇಲೆ ಇರುವದಕ್ಕೆ
ಯೆಹೋವನು ಯೆಹೋಶುವನನ್ನು ನೇಮಿಸಿದ್ದು.

ಯೆಹೋವನು ಮೋಶೆಗೆ— ನೀನು ಈ [1]ಅಬಾರೀಮ್ 12
ಬೆಟ್ಟವನ್ನು ಹತ್ತಿ ನಾನು ಇಸ್ರಾಯೇಲ್ಯರಿಗೆ
ವಾಗ್ದಾನಮಾಡಿದ ದೇಶವನ್ನು ನೋಡು. ನಿನ್ನ 13
ಅಣ್ಣನಾದ ಆರೋನನು ಪಿತೃಗಳ ಬಳಿಗೆ ಸೇರಿ
ದಂತೆಯೇ ನೀನೂ ಆ ದೇಶವನ್ನು ನೋಡಿದ ಮೇಲೆ
ಸೇರಬೇಕು. ಚಿನ್ ಅರಣ್ಯದಲ್ಲಿ ಇಸ್ರಾಯೇಲ್ಯರ 14
ಸಮೂಹದವರು ನನ್ನೊಡನೆ ವಿವಾದಿಸಿದಾಗ ನೀವಿ
ಬ್ಬರೂ ನನ್ನ ಗೌರವವನ್ನು ಅವರ ಎದುರಿನಲ್ಲಿ
ಕಾಪಾಡದೆ ನನ್ನ ಆಜ್ಞೆಯನ್ನು ಉಲ್ಲಂಘಿಸಿದದರಿಂದ
ಆ ದೇಶವನ್ನು ಸೇರಬಾರದು ಎಂದು ಹೇಳಿದನು.
ಚಿನ್ ಅರಣ್ಯದಲ್ಲಿನ ಮೆರೀಬಾ ಕಾದೇಶಿನ ಪ್ರವಾಹದ
ಹತ್ತಿರ ನಡೆದ ಸಂಗತಿಯನ್ನು ಸೂಚಿಸಿ ಇದನ್ನು ಹೇಳಿ
ದನು.

ಆಗ ಮೋಶೆಯು ಯೆಹೋವನಿಗೆ—ಯೆಹೋ 15, 16
ವನೇ, ಎಲ್ಲಾ ಮನುಷ್ಯರ ಆತ್ಮಗಳ ದೇವರೇ, ನಿನ್ನವ
ರಾದ ಈ ಸಮೂಹದವರು ಕುರುಬನಿಲ್ಲದ ಕುರಿಗ
ಳಂತೆ ಆಗಬಾರದು. ಆದದರಿಂದ ಅವರ ಕಾರ್ಯ 17
ಗಳನ್ನು ನಿರ್ವಹಿಸುವದಕ್ಕೂ ನಾಯಕನಾಗಿ ಅವರ
ಮುಂದೆ ಹೊರಡುವದಕ್ಕೂ ಅವರನ್ನು ಹಿಂದಕ್ಕೆ ಕರ
ಕೊಂಡು ಬರುವದಕ್ಕೂ ಒಬ್ಬ ಪುರುಷನನ್ನು ನೇಮಿಸ
ಬೇಕೆಂದು ಬೇಡಿದನು. ಅದಕ್ಕೆ ಯೆಹೋವನು— 18
ನೂನನ ಮಗನಾದ ಯೆಹೋಶುವನು ಆತ್ಮಪರ
ಸಂಪನ್ನನು; ಅವನನ್ನು ಮಹಾಯಾಜಕನಾದ ಎಲ್ಲಾ 19
ಜಾರನ ಮತ್ತು ಸಮೂಹದವರೆಲ್ಲರ ಮುಂದೆ ನಿಲ್ಲಿಸಿ
ಅವನ ಮೇಲೆ ಕೈಯಿಟ್ಟು ಅವರ ಎದುರಿನಲ್ಲೇ
ಅಧಿಕಾರವನ್ನು ಕೊಡಬೇಕು. ಸಮೂಹದವರೆಲ್ಲರೂ 20
ಅವನಿಗೆ ವಿಧೇಯರಾಗುವಂತೆ ನಿನಗಿರುವ ಗೌರವ

[1] ಅಂದರೆ ಯೊರ್ದನ್ ಹೊಳೆಯ ಆಚೆ ಇರುವ ಬೆಟ್ಟವನ್ನು.

21 ವನ್ನು ಅವನಿಗೆ ಕೊಡಬೇಕು. [ಯೆಹೋವನ ಚಿತ್ತ
ವನ್ನು ತಿಳುಕೊಳ್ಳುವದಕ್ಕೆ] ಅವನು ಮಹಾಯಾಜಕ
ನಾದ ಎಲ್ಲಾಜಾರನ ಹತ್ತಿರ ಬರಬೇಕು. ಎಲ್ಲಾ
ಜಾರನು ಯೆಹೋವನ ಸನ್ನಿಧಿಯಲ್ಲಿ ಊರೀಮ್
ಎಂಬ ವಸ್ತುವಿನ ಮೂಲಕ ಅವನಿಗೋಸ್ಕರ ವಿಚಾ
ರಣೆಮಾಡುವನು. ಯೆಹೋಶುವನೂ ಇಸ್ರಾಯೇ
ಲ್ಯರ ಸರ್ವಸಮೂಹದವರೂ ಅವನ ಮಾತಿನಂತೆ
ಹೊರಡಲೂ ಬೇಕು ಬರಲೂ ಬೇಕು ಎಂದು ಆಜ್ಞಾ
ಪಿಸಿದನು.
22 ಯೆಹೋವನ ಅಪ್ಪಣೆಯ ಮೇರೆಗೆ ಮೋಶೆಯು
ಯೆಹೋಶುವನನ್ನು ಮಹಾಯಾಜಕನಾದ ಎಲ್ಲಾ
ಜಾರನ ಮತ್ತು ಸರ್ವಸಮೂಹದವರ ಮುಂದೆ ನಿಲ್ಲಿಸಿ
23 ಅವನ ಮೇಲೆ ಕೈಯಿಟ್ಟು ಅಧಿಕಾರವನ್ನು ಕೊಟ್ಟನು.

### ನಿತ್ಯಸರ್ವಾಂಗಹೋಮವನ್ನೂ ಹಬ್ಬದ ದಿನಗಳಲ್ಲಿ ಹೆಚ್ಚಾಗಿ ಮಾಡಬೇಕಾದ ಯಜ್ಞಗಳನ್ನೂ ಕುರಿತದ್ದು.

**28** ಯೆಹೋವನು ಮೋಶೆಗೆ ಹೇಳಿದ್ದೇನಂದರೆ—
2 ನನಗೆ ಸಮರ್ಪಿಸಬೇಕಾದ ಯಜ್ಞಗಳನ್ನು
ಅಂದರೆ ನನಗೆ ಸುಗಂಧಹೋಮಮಾಡುವದಕ್ಕಾಗಿ
ಇಸ್ರಾಯೇಲ್ಯರು ನನಗೋಸ್ಕರ ತರುವ ಆಹಾರವನ್ನು
ತಕ್ಕ ಕಾಲಗಳಲ್ಲಿ ತಂದು ಎಚ್ಚರಿಕೆಯಿಂದ ಸಮರ್ಪಿಸ
3 ಬೇಕೆಂದು ಅವರಿಗೆ ಆಜ್ಞಾಪಿಸು. ಇದರ ವಿಷಯ
ದಲ್ಲಿ ನೀನು ಅಪ್ಪಣೆಮಾಡಬೇಕಾದದ್ದೇನಂದರೆ—
4 ನೀವು ದಿನಂಪ್ರತಿಯೂ ಯೆಹೋವನಿಗೆ ಸರ್ವಾಂಗ
ಹೋಮಕ್ಕಾಗಿ ಹೊತ್ತಾರೆಯಲ್ಲಿ ಒಂದು ಕುರಿ
ಯನ್ನೂ ಸಾಯಂಕಾಲದಲ್ಲಿ ಒಂದು ಕುರಿಯನ್ನೂ
ಅಂತು ಎರಡು ಪೂರ್ಣಾಂಗವಾದ ವರುಷದ ಕುರಿ
5 ಗಳನ್ನು ಸಮರ್ಪಿಸಬೇಕು. [ಹೊತ್ತಾರೆಯ ಕುರಿ
ಯೊಂದಿಗೆ] ನೀವು ಧಾನ್ಯನೈವೇದ್ಯಕ್ಕಾಗಿ ಒಂದು
ವರೆ ಸೇರು ಶ್ರೇಷ್ಠವಾದ ಎಣ್ಣೆಯನ್ನೂ ಮೂರು
ಸೇರು ಗೋದಿಹಿಟ್ಟನ್ನೂ ಬೆರಸಿ ಸಮರ್ಪಿಸಬೇಕು.
6 ನೀವು ಪ್ರತಿನಿತ್ಯವೂ ಯೆಹೋವನಿಗೆ ಸುಗಂಧಕರ
ವಾದ ಈ ಸರ್ವಾಂಗಹೋಮವನ್ನು ಮಾಡಬೇಕೆಂಬ
ದಾಗಿ ಸೀನಾಯಿ ಬೆಟ್ಟದಲ್ಲಿ ನೇಮಕವಾಯಿತು.
7 ಆ ಕುರಿಯೊಂದಿಗೆ ಪಾನದ್ರವ್ಯಾರ್ಪಣೆಗಾಗಿ ಒಂದು
ವರೆ ಸೇರು ಮದ್ಯವನ್ನು ದೇವಸ್ಥಾನದಲ್ಲಿ ಯೆಹೋ
8 ವನಿಗೋಸ್ಕರ ಹೊಯ್ದುಬಿಡಬೇಕು. ಸಾಯಂಕಾಲ
ದಲ್ಲಿ ಎರಡನೆಯ ಕುರಿಯನ್ನು ಹೋಮಮಾಡು
ವಾಗ ಹೊತ್ತಾರೆಯಲ್ಲಿ ಮಾಡಿದ ಪ್ರಕಾರವೇ ಅದ
ರೊಂದಿಗೆ ಧಾನ್ಯದ್ರವ್ಯಪಾನದ್ರವ್ಯಗಳನ್ನೂ ಸಮರ್ಪಿಸ
ಬೇಕು. ಅದು ಯೆಹೋವನಿಗೆ ಸುಗಂಧಕರಹೋಮ
ವಾಗಿರುವದು.
9, 10 ದಿನಂಪ್ರತಿಯೂ ಮಾಡಬೇಕಾದ ಸರ್ವಾಂಗ
ಹೋಮವು, ಅದಕ್ಕೆ ಸೇರಿದ ಪಾನದ್ರವ್ಯವು ಇವುಗಳನ್ನ
ಲ್ಲದೆ ಸೀವು ಸಬ್ಬತ್‌ದಿನದಲ್ಲಿ ಹೆಚ್ಚಾಗಿ ಎರಡು
ಪೂರ್ಣಾಂಗವಾದ ವರುಷದ ಕುರಿಗಳನ್ನೂ ಧಾನ್ಯ
ದ್ರವ್ಯಾರ್ಪಣೆಗಾಗಿ ಎಣ್ಣೆ ಬೆರಸಿದ ಅರು ಸೇರು
ಗೋದಿಹಿಟ್ಟನ್ನೂ ಅದಕ್ಕೆ ತಕ್ಕ ಪಾನದ್ರವ್ಯವನ್ನೂ ಸಮ
ರ್ಪಿಸಬೇಕು.
ಅಮಾವಾಸ್ಯೆಯಲ್ಲಿ ನೀವು ಸರ್ವಾಂಗಹೋಮ
ಕ್ಕಾಗಿ ಎರಡು ಹೋರಿ, ಒಂದು ಟಗರು, ಏಳು
ಪೂರ್ಣಾಂಗವಾದ ವರುಷದ ಕುರಿ ಇವುಗಳನ್ನು
ಯೆಹೋವನಿಗೆ ಸಮರ್ಪಿಸಬೇಕು. ಇವುಗಳೊಡ
ಧಾನ್ಯನೈವೇದ್ಯಕ್ಕಾಗಿ ನೀವು ಪ್ರತಿಯೊಂದು ಹೋರಿಗೆ
ಒಂಭತ್ತು ಸೇರೂ ಟಗರಿಗೆ ಆರು ಸೇರೂ ಕು
ಯೊಂದಕ್ಕೆ ಮೂರು ಸೇರೂ ಈ ಮೇರೆಗೆ ಎಣ್ಣೆ
ಬೆರಸಿದ ಗೋದಿಹಿಟ್ಟನ್ನು ಸಮರ್ಪಿಸಬೇಕು. ಇದು
ಯೆಹೋವನಿಗೆ ಸುಗಂಧಕರವಾದ ಸರ್ವಾಂಗಹೋ
ಮವಾಗಿರುವದು. ಇವುಗಳಿಗೆ ತಕ್ಕ ಪಾನದ್ರವ್ಯಾ
ರ್ಪಣೆ ಯಾವದಂದರೆ—ಒಂದೊಂದು ಹೋರಿಯೊಡನೆ
ಮೂರು ಸೇರೂ ಟಗರಿನೊಡನೆ ಎರಡು ಸೇರೂ ಕುರಿ
ಯೊಡನೆ ಒಂದುವರೆ ಸೇರೂ ದ್ರಾಕ್ಷಾರಸ. ಸಂವತ್ಸ
ರದ ಪ್ರತಿ ಅಮಾವಾಸ್ಯೆಯಲ್ಲಿಯೂ ಹೀಗೆ ಸರ್ವಾಂಗ
ಹೋಮವನ್ನು ಮಾಡಬೇಕು; ಮತ್ತು ದೋಷಪರಿ
ಹಾರಕಯಜ್ಞಕ್ಕಾಗಿ ಒಂದು ಹೋತವನ್ನು ಯೆಹೋವ
ನಿಗೆ ಸಮರ್ಪಿಸಬೇಕು. ನಿತ್ಯಸರ್ವಾಂಗಹೋಮವನ್ನೂ
ಅದಕ್ಕೆ ಸೇರಿದ ಪಾನದ್ರವ್ಯವನ್ನೂ ಸಮರ್ಪಿಸುವ
ದಲ್ಲದೆ [ಅಮಾವಾಸ್ಯೆಯಲ್ಲಿ] ಇವುಗಳನ್ನು ಹೆಚ್ಚಾಗಿ
ಸಮರ್ಪಿಸಬೇಕು.
[1]ಮೊದಲನೆಯ ತಿಂಗಳಿನ ಹದಿನಾಲ್ಕನೆಯ ದಿನ
ದಲ್ಲಿ ಯೆಹೋವನು ನೇಮಿಸಿದ ಪಸ್ಕಹಬ್ಬವಾಗಬೇಕು.
ಅದೇ ತಿಂಗಳಿನ [2]ಹದಿನೈದನೆಯ ದಿನದಲ್ಲಿ ಜಾತ್ರೆ
ಪ್ರಾರಂಭವಾಗುವದು; ಏಳು ದಿನಗಳ ವರೆಗೂ ಹುಳಿ
ಯಿಲ್ಲದ ರೊಟ್ಟಿಗಳನ್ನು ಊಟಮಾಡಬೇಕು. ಮೊದ
ಲನೆಯ ದಿನದಲ್ಲಿ ದೇವಾರಾಧನೆಗಾಗಿ ಸಭೆಕೂಡಬೇಕು;
ಆ ದಿನದಲ್ಲಿ ಯಾವ ಉದ್ಯೋಗವನ್ನೂ ನಡಿಸಬಾರದು;
ಯೆಹೋವನಿಗೆ ಸರ್ವಾಂಗಹೋಮಕ್ಕಾಗಿ ಎರಡು
ಹೋರಿಗಳನ್ನೂ ಒಂದು ಟಗರನ್ನೂ ವರುಷದ ಏಳು
ಕುರಿಗಳನ್ನೂ ಸಮರ್ಪಿಸಬೇಕು; ಈ ಪಶುಗಳು
ಪೂರ್ಣಾಂಗವಾಗಿಯೇ ಇರಬೇಕು. ಇವುಗಳೊಂದಿಗೆ
ಧಾನ್ಯನೈವೇದ್ಯಕ್ಕಾಗಿ ಎಣ್ಣೆ ಬೆರಸಿದ ಗೋದಿಹಿಟ್ಟನ್ನು
ತಂದುಕೊಡಬೇಕು; ಹೇಗಂದರೆ ಹೋರಿಗೆ ಒಂಭತ್ತು
ಸೇರು, ಟಗರಿಗೆ ಆರು ಸೇರು, ಒಂದೊಂದು
ಕುರಿಗೆ ಮೂರು ಮೂರು ಸೇರು ಇಷ್ಟೇ. ಅದಲ್ಲದೆ
ದೋಷಪರಿಹಾರಕಯಜ್ಞಕ್ಕಾಗಿ ಒಂದು ಹೋತವನ್ನು
ಸಮರ್ಪಿಸಬೇಕು. ನಿತ್ಯಗಟ್ಟಳೆಯಾಗಿರುವ ಪ್ರತಿ
ದಿನದ ಪ್ರಾತಃಕಾಲಸರ್ವಾಂಗಹೋಮವನ್ನಲ್ಲದೆ ಇವು
ಗಳನ್ನು ಹೆಚ್ಚಾಗಿ ಸಮರ್ಪಿಸಬೇಕು. ಆ ಏಳು ದಿನ
ಗಳಲ್ಲಿಯೂ ನಿತ್ಯಸರ್ವಾಂಗಹೋಮವನ್ನೂ ಅದಕ್ಕೆ
ಸೇರಿದ ಪಾನದ್ರವ್ಯನೈವೇದ್ಯವನ್ನೂ ಸಮರ್ಪಿಸುವದ
ಲ್ಲದೆ ಮೇಲೆ ಕಂಡ ಕ್ರಮದ ಮೇರೆಗೆ ಪ್ರತಿದಿನವೂ
ಹೋಮರೂಪವಾಗಿ ಯೆಹೋವನಿಗೆ ಆಹಾರವನ್ನು
ಸಮರ್ಪಿಸಿ ಆತನಿಗೋಸ್ಕರ ಸುವಾಸನೆಯನ್ನುಂಟು
ಮಾಡಬೇಕು. ಏಳನೆಯ ದಿನದಲ್ಲೂ ಸಭೆಕೂಡಬೇಕು;
ಆ ದಿನದಲ್ಲಿ ಯಾವ ಉದ್ಯೋಗವನ್ನೂ ನಡಿಸಬಾರದು.

1) ಅಂದರೆ ಚೈತ್ರ ಶುದ್ಧ ಚತುರ್ದಶಿಯಲ್ಲಿ.
2) ಅಂದರೆ ಪೌರ್ಣಮಿಯಲ್ಲಿ.

[ಪಕ್ವವಾದ ಏಳು] ವಾರಗಳ ಮೇಲೆ ನೀವು
ಹೊಸ ಬೆಳೆಯ ಗೋದಿಯನ್ನು ಯೆಹೋವನಿಗೆ
ನೈವೇದ್ಯಮಾಡುವಾಗ ಪ್ರಥಮಫಲಾರ್ಪಣೆಯ ದಿನ
ದಲ್ಲಿ ನೀವು ಯಾವ ಉದ್ಯೋಗವನ್ನೂ ನಡಿಸದೆ
ದೇವಾರಾಧನೆಗಾಗಿ ಸಭೆಕೂಡಬೇಕು. ಆ ದಿನದಲ್ಲಿ
ನೀವು ಯೆಹೋವನಿಗೆ ಸುವಾಸನೆಯನ್ನುಂಟುಮಾಡು
ವದಕ್ಕೋಸ್ಕರ ಸರ್ವಾಂಗಹೋಮಕ್ಕಾಗಿ ಎರಡು
ಹೋರಿ, ಒಂದು ಟಗರು, ವರುಷದ ಏಳು ಕುರಿ ಇವು
ಗಳನ್ನೂ; ಧಾನ್ಯನೈವೇದ್ಯಕ್ಕಾಗಿ ಎಣ್ಣೆ ಬೆರಸಿದ ಗೋದಿ
ಹಿಟ್ಟನ್ನು ಅಂದರೆ ಪ್ರತಿಯೊಂದು ಹೋರಿಗೆ ಒಂಭತ್ತು
ಸೇರು, ಟಗರಿಗೆ ಆರು ಸೇರು, ಕುರಿಗೆ ಮೂರು
ಸೇರು ಹಿಟ್ಟನ್ನೂ; ದೋಷಪರಿಹಾರಕಯಜ್ಞಕ್ಕಾಗಿ
ಒಂದು ಹೋತವನ್ನೂ ಸಮರ್ಪಿಸಬೇಕು. ಈ ಪಶು
ಗಳೆಲ್ಲಾ ಪೂರ್ಣಾಂಗವಾಗಿಯೇ ಇರಬೇಕು. ನಿತ್ಯ
ಸರ್ವಾಂಗಹೋಮ ಮತ್ತು ಅದಕ್ಕೆ ಸೇರಿದ ಧಾನ್ಯ
ದ್ರವ್ಯನೈವೇದ್ಯ ಇವುಗಳನ್ನಲ್ಲದೆ ಮೇಲೆ ಕಂಡ ಯಜ್ಞ
ಗಳನ್ನೂ ಅವುಗಳೊಡನೆ ಕೊಡಬೇಕಾದ ಪಾನದ್ರವ್ಯ
ನೈವೇದ್ಯಗಳನ್ನೂ ಹೆಚ್ಚಾಗಿ ಸಮರ್ಪಿಸಬೇಕು.

29 ತುತೂರಿಗಳ ಧ್ವನಿಯಿಂದ ಪ್ರಕಟವಾಗುವ
ಏಳನೆಯ ತಿಂಗಳಿನ ಮೊದಲನೆಯ ದಿನ
ದಲ್ಲಿ ನೀವು ಯಾವ ಉದ್ಯೋಗವನ್ನೂ ನಡಿಸದೆ
ದೇವಾರಾಧನೆಗಾಗಿ ಸಭೆಕೂಡಬೇಕು. ಅದರಲ್ಲಿ ನೀವು
ಯೆಹೋವನಿಗೆ ಸುವಾಸನೆಯನ್ನುಂಟುಮಾಡುವ
ಸರ್ವಾಂಗಹೋಮಕ್ಕಾಗಿ ಒಂದು ಹೋರಿ, ಒಂದು
ಟಗರು, ಏಳು ಪೂರ್ಣಾಂಗವಾದ ವರುಷದ ಕುರಿ
ಇವುಗಳನ್ನೂ; ಧಾನ್ಯನೈವೇದ್ಯಕ್ಕಾಗಿ ಆ ಹೋರಿಗೆ
ಒಂಭತ್ತು ಸೇರು, ಟಗರಿಗೆ ಆರು ಸೇರು, ಒಂದೊಂದು
ಕುರಿಗೆ ಮೂರು ಮೂರು ಸೇರು ಈ ಮೇರೆಗೆ ಎಣ್ಣೆ
ಬೆರಸಿದ ಗೋದಿಹಿಟ್ಟನ್ನೂ; ದೋಷಪರಿಹಾರಕಯಜ್ಞ
ಕ್ಕಾಗಿ ಒಂದು ಹೋತವನ್ನೂ ತಂದು ಸಮರ್ಪಿಸಬೇಕು.
ಅಮಾವಾಸ್ಯೆಯಲ್ಲಿಯೂ ದಿನಂಪ್ರತಿಯೂ ಮಾಡಬೇ
ಕಾದ ಸರ್ವಾಂಗಹೋಮಗಳನ್ನೂ ಅವುಗಳಿಗೆ ನೇಮಕ
ವಾದ ಧಾನ್ಯದ್ರವ್ಯಪಾನದ್ರವ್ಯನೈವೇದ್ಯಗಳನ್ನೂ ಮಾತ್ರ
ವಲ್ಲದೆ ಮೇಲೆ ಕಂಡ ಯಜ್ಞಗಳನ್ನು ಹೆಚ್ಚಾಗಿ ಮಾಡ
ಬೇಕು. ಅವು ಯೆಹೋವನಿಗೆ ಸುಗಂಧಹೋಮ
ವಾಗಿರುವವು.

ಉಪವಾಸಾಚರಣೆಯ ಏಳನೆಯ ತಿಂಗಳಿನ
ಹತ್ತನೆಯ ದಿನದಲ್ಲಿ ನೀವು ಯಾವ ಕೆಲಸ
ವನ್ನೂ ಮಾಡದೆ ದೇವಾರಾಧನೆಗಾಗಿ ಸಭೆಕೂಡಬೇಕು.
ನೀವು ಯೆಹೋವನಿಗೆ ಸುವಾಸನೆಯನ್ನುಂಟುಮಾಡುವ
ಸರ್ವಾಂಗಹೋಮಕ್ಕಾಗಿ ಒಂದು ಹೋರಿ, ಒಂದು
ಟಗರು. ಏಳು ಪೂರ್ಣಾಂಗವಾದ ವರುಷದ ಕುರಿ ಇವು
ಗಳನ್ನೂ; ಧಾನ್ಯನೈವೇದ್ಯಕ್ಕಾಗಿ ಹೋರಿಗೆ ಒಂಭತ್ತು
ಸೇರು, ಟಗರಿಗೆ ಆರು ಸೇರು, ಕುರಿಯೊಂದಕ್ಕೆ
ಮೂರು ಸೇರು ಈ ಮೇರೆಗೆ ಎಣ್ಣೆ ಬೆರಸಿದ ಗೋದಿ
ಹಿಟ್ಟನ್ನೂ; ದೋಷಪರಿಹಾರಕಯಜ್ಞಕ್ಕಾಗಿ ಒಂದು
ಹೋತವನ್ನೂ ತಂದು ಸಮರ್ಪಿಸಬೇಕು. ಆ ದಿನಕ್ಕೆ
ನೇಮಕವಾದ ದೋಷಪರಿಹಾರಕಯಜ್ಞ, ನಿತ್ಯಸರ್ವಾಂ
ಗಹೋಮ, ಇದರ ಧಾನ್ಯದ್ರವ್ಯಪಾನದ್ರವ್ಯನೈವೇದ್ಯ
ಗಳು ಇವುಗಳನ್ನಲ್ಲದೆ ಮೇಲೆ ಕಂಡ ಯಜ್ಞಗಳನ್ನು
ಹೆಚ್ಚಾಗಿ ಸಮರ್ಪಿಸಬೇಕು.

1)ಏಳನೆಯ ತಿಂಗಳಿನ ಹದಿನೈದನೆಯ ದಿನ 12
ದಲ್ಲಿ ದೇವಾರಾಧನೆಗಾಗಿ ಸಭೆಕೂಡಬೇಕು. ನೀವು
ಅದರಲ್ಲಿ ಯಾವ ಉದ್ಯೋಗವನ್ನೂ ನಡಿಸಕೂಡದು.
ಆ ದಿನ ಮೊದಲುಗೊಂಡು ಏಳು ದಿನಗಳ ವರೆಗೆ
ಯೆಹೋವನಿಗೆ ಉತ್ಸವವನ್ನು ಆಚರಿಸಬೇಕು. ಆ 13
ದಿನದಲ್ಲಿ ನಿತ್ಯಸರ್ವಾಂಗಹೋಮವನ್ನೂ ಅದಕ್ಕೆ
ನೇಮಕವಾದ ಧಾನ್ಯದ್ರವ್ಯಪಾನದ್ರವ್ಯನೈವೇದ್ಯಗಳನ್ನೂ
ಮಾತ್ರವಲ್ಲದೆ ಯೆಹೋವನಿಗೆ ಸುವಾಸನೆಯನ್ನುಂಟು
ಮಾಡುವ ಸರ್ವಾಂಗಹೋಮಕ್ಕಾಗಿ ಹದಿಮೂರು
ಹೋರಿಗಳನ್ನೂ ಎರಡು ಟಗರುಗಳನ್ನೂ ಹದಿನಾಲ್ಕು
ಪೂರ್ಣಾಂಗವಾದ ವರುಷದ ಕುರಿಗಳನ್ನೂ; ಧಾನ್ಯ 14
ನೈವೇದ್ಯಕ್ಕಾಗಿ ಪ್ರತಿಯೊಂದು ಹೋರಿಗೆ ಒಂಭತ್ತು
ಸೇರು, ಟಗರಿಗೆ ಆರು ಸೇರು, ಕುರಿಗೆ ಮೂರು 15
ಸೇರು ಈ ಮೇರೆಗೆ ಎಣ್ಣೆ ಬೆರಸಿದ ಗೋದಿ
ಹಿಟ್ಟನ್ನೂ; ದೋಷಪರಿಹಾರಕಯಜ್ಞಕ್ಕಾಗಿ ಒಂದು 16
ಹೋತವನ್ನೂ ತಂದು ಸಮರ್ಪಿಸಬೇಕು.

ಆ ಉತ್ಸವದ ಎರಡನೆಯ ದಿನದಲ್ಲಿ ನೀವು ನಿತ್ಯ 17
ಸರ್ವಾಂಗಹೋಮವನ್ನೂ ಅದಕ್ಕೆ ನೇಮಕವಾದ ಧಾನ್ಯ
ದ್ರವ್ಯಪಾನದ್ರವ್ಯಗಳನ್ನೂ ಮಾತ್ರವಲ್ಲದೆ [ಸರ್ವಾಂಗ
ಹೋಮಕ್ಕಾಗಿ] ಹನ್ನೆರಡು ಹೋರಿ, ಎರಡು ಟಗರು,
ಹದಿನಾಲ್ಕು ಪೂರ್ಣಾಂಗವಾದ ವರುಷದ ಕುರಿ ಇವು
ಗಳನ್ನೂ; ನೈವೇದ್ಯಕ್ಕಾಗಿ ಈ ಪಶುಗಳಲ್ಲಿ ಪ್ರತಿ 18
ಯೊಂದಕ್ಕೆ ನೇಮಕವಾದ ಪ್ರಕಾರವೇ ಧಾನ್ಯದ್ರವ್ಯ
ಪಾನದ್ರವ್ಯಗಳನ್ನೂ; ದೋಷಪರಿಹಾರಕಯಜ್ಞಕ್ಕಾಗಿ 19
ಒಂದು ಹೋತವನ್ನೂ ಸಮರ್ಪಿಸಬೇಕು.

ಮೂರನೆಯ ದಿನದಲ್ಲಿ ನೀವು ನಿತ್ಯಸರ್ವಾಂಗ 20
ಹೋಮವನ್ನೂ ಅದಕ್ಕೆ ನೇಮಕವಾದ ಧಾನ್ಯದ್ರವ್ಯಪಾನ
ದ್ರವ್ಯಗಳನ್ನೂ ಮಾತ್ರವಲ್ಲದೆ ಹನ್ನೊಂದು ಹೋರಿ,
ಎರಡು ಟಗರು, ಹದಿನಾಲ್ಕು ಪೂರ್ಣಾಂಗವಾದ ವರು
ಷದ ಕುರಿ ಇವುಗಳನ್ನೂ; ನೈವೇದ್ಯಕ್ಕಾಗಿ ಈ ಪಶು 21
ಗಳಲ್ಲಿ ಪ್ರತಿಯೊಂದಕ್ಕೆ ನೇಮಕವಾದ ಪ್ರಕಾರವೇ
ಧಾನ್ಯದ್ರವ್ಯಪಾನದ್ರವ್ಯಗಳನ್ನೂ; ದೋಷಪರಿಹಾರಕ 22
ಯಜ್ಞಕ್ಕಾಗಿ ಒಂದು ಹೋತವನ್ನೂ ಸಮರ್ಪಿಸಬೇಕು.

ನಾಲ್ಕನೆಯ ದಿನದಲ್ಲಿ ನೀವು ನಿತ್ಯಸರ್ವಾಂಗಹೋ 23
ಮವನ್ನೂ ಅದಕ್ಕೆ ನೇಮಕವಾದ ಧಾನ್ಯದ್ರವ್ಯಪಾನ
ದ್ರವ್ಯಗಳನ್ನೂ ಮಾತ್ರವಲ್ಲದೆ ಹತ್ತು ಹೋರಿ, ಎರಡು
ಟಗರು, ಹದಿನಾಲ್ಕು ಪೂರ್ಣಾಂಗವಾದ ವರುಷದ
ಕುರಿ ಇವುಗಳನ್ನೂ; ನೈವೇದ್ಯಕ್ಕಾಗಿ ಈ ಪಶುಗಳಲ್ಲಿ 24
ಪ್ರತಿಯೊಂದಕ್ಕೆ ನೇಮಕವಾದ ಪ್ರಕಾರವೇ ಧಾನ್ಯ
ದ್ರವ್ಯಪಾನದ್ರವ್ಯಗಳನ್ನೂ; ದೋಷಪರಿಹಾರಕಯಜ್ಞ 25
ಕ್ಕಾಗಿ ಒಂದು ಹೋತವನ್ನೂ ಸಮರ್ಪಿಸಬೇಕು.

ಐದನೆಯ ದಿನದಲ್ಲಿ ನೀವು ನಿತ್ಯಸರ್ವಾಂಗಹೋಮ 26
ವನ್ನೂ ಅದಕ್ಕೆ ನೇಮಕವಾದ ಧಾನ್ಯದ್ರವ್ಯಪಾನದ್ರವ್ಯ
ಗಳನ್ನೂ ಮಾತ್ರವಲ್ಲದೆ ಒಂಭತ್ತು ಹೋರಿ, ಎರಡು
ಟಗರು, ಹದಿನಾಲ್ಕು ಪೂರ್ಣಾಂಗವಾದ ವರುಷದ

1) ಅಂದರೆ ಪರ್ಣಶಾಲೆಗಳನ್ನು ಕಟ್ಟುವ ಜಾತ್ರೆಯಲ್ಲಿ.

27 ಕುರಿ ಇವುಗಳನ್ನೂ; ನೈವೇದ್ಯಕ್ಕಾಗಿ ಈ ಪಶುಗಳಲ್ಲಿ
ಪ್ರತಿಯೊಂದಕ್ಕೆ ನೇಮಕವಾದ ಪ್ರಕಾರವೇ ಧಾನ್ಯ
28 ದ್ರವ್ಯಪಾನದ್ರವ್ಯಗಳನ್ನೂ; ದೋಷಪರಿಹಾರಕಯಜ್ಞ
ಕ್ಕಾಗಿ ಒಂದು ಹೋತವನ್ನೂ ಸಮರ್ಪಿಸಬೇಕು.
29 ಆರನೆಯ ದಿನದಲ್ಲಿ ನೀವು ನಿತ್ಯಸರ್ವಾಂಗಹೋಮ
ವನ್ನೂ ಅದಕ್ಕೆ ನೇಮಕವಾದ ಧಾನ್ಯದ್ರವ್ಯಪಾನದ್ರವ್ಯ
ಗಳನ್ನೂ ಮಾತ್ರವಲ್ಲದೆ ಎಂಟು ಹೋರಿ, ಎರಡು
ಟಗರು, ಹದಿನಾಲ್ಕು ಪೂರ್ಣಾಂಗವಾದ ವರುಷದ
ಕುರಿ ಇವುಗಳನ್ನೂ; ನೈವೇದ್ಯಕ್ಕಾಗಿ ಈ ಪಶುಗಳಲ್ಲಿ
ಪ್ರತಿಯೊಂದಕ್ಕೆ ನೇಮಕವಾದ ಪ್ರಕಾರವೇ ಧಾನ್ಯ
31 ದ್ರವ್ಯಪಾನದ್ರವ್ಯಗಳನ್ನೂ; ದೋಷಪರಿಹಾರಕಯಜ್ಞ
ಕ್ಕಾಗಿ ಒಂದು ಹೋತವನ್ನೂ ಸಮರ್ಪಿಸಬೇಕು.
32 ಏಳನೆಯ ದಿನದಲ್ಲಿ ನೀವು ನಿತ್ಯಸರ್ವಾಂಗಹೋಮ
ವನ್ನೂ ಅದಕ್ಕೆ ನೇಮಕವಾದ ಧಾನ್ಯದ್ರವ್ಯಪಾನದ್ರವ್ಯ
ಗಳನ್ನೂ ಮಾತ್ರವಲ್ಲದೆ ಏಳು ಹೋರಿ, ಎರಡು
ಟಗರು, ಹದಿನಾಲ್ಕು ಪೂರ್ಣಾಂಗವಾದ ವರುಷದ
33 ಕುರಿ ಇವುಗಳನ್ನೂ; ನೈವೇದ್ಯಕ್ಕಾಗಿ ಈ ಪಶುಗಳಲ್ಲಿ
ಪ್ರತಿಯೊಂದಕ್ಕೆ ನೇಮಕವಾದ ಪ್ರಕಾರವೇ ಧಾನ್ಯ
34 ದ್ರವ್ಯಪಾನದ್ರವ್ಯಗಳನ್ನೂ; ದೋಷಪರಿಹಾರಕಯಜ್ಞ
ಕ್ಕಾಗಿ ಒಂದು ಹೋತವನ್ನೂ ಸಮರ್ಪಿಸಬೇಕು.
35 ಎಂಟನೆಯ ದಿನದಲ್ಲಿ ದೇವಾರಾಧನೆಗೆ ಸಭೆಕೂಡ
ಬೇಕು. ಅದರಲ್ಲಿ ಯಾವ ಉದ್ಯೋಗವನ್ನೂ ನಡಿಸ
36 ಕೂಡದು. ನೀವು ನಿತ್ಯಸರ್ವಾಂಗಹೋಮವನ್ನೂ
ಆದಕ್ಕೆ ನೇಮಕವಾದ ಧಾನ್ಯದ್ರವ್ಯಪಾನದ್ರವ್ಯಗಳ
ನ್ನೂ ಮಾತ್ರವಲ್ಲದೆ ಯೆಹೋವನಿಗೆ ಸುಗಂಧಕರ
ಸರ್ವಾಂಗಹೋಮಕ್ಕಾಗಿ ಒಂದು ಹೋರಿ, ಒಂದು
ಟಗರು, ಏಳು ಪೂರ್ಣಾಂಗವಾದ ವರುಷದ ಕುರಿ
37 ಇವುಗಳನ್ನೂ; ನೈವೇದ್ಯಕ್ಕಾಗಿ ಈ ಪಶುಗಳಲ್ಲಿ ಪ್ರತಿ
ಯೊಂದಕ್ಕೆ ನೇಮಕವಾದ ಪ್ರಕಾರವೇ ಧಾನ್ಯದ್ರವ್ಯ
38 ಪಾನದ್ರವ್ಯಗಳನ್ನೂ; ದೋಷಪರಿಹಾರಕಯಜ್ಞಕ್ಕಾಗಿ
ಒಂದು ಹೋತವನ್ನೂ ಸಮರ್ಪಿಸಬೇಕು.
39 ನೀವು ಕಾಣಿಕೆಯಾಗಿಯಾಗಲಿ ಹರಕೆಯನ್ನು
ತೀರಿಸುವದಕ್ಕಾಗಿಯಾಗಲಿ ಮಾಡುವ ಸರ್ವಾಂಗ
ಹೋಮ, ಧಾನ್ಯದ್ರವ್ಯನೈವೇದ್ಯ, ಪಾನದ್ರವ್ಯಾರ್ಪಣೆ,
ಸಮಾಧಾನಯಜ್ಞ ಇವುಗಳನ್ನಲ್ಲದೆ ಹಬ್ಬಗಳ ದಿನ
ಗಳಲ್ಲಿ ಮೇಲೆ ಸೂಚಿಸಿರುವ ಯಜ್ಞಗಳನ್ನೂ ಹೆಚ್ಚಾಗಿ
ಮಾಡಬೇಕು.
40 ಯೆಹೋವನು ಮಾಡಿದ ಈ ಎಲ್ಲಾ ಆಜ್ಞೆಗಳನ್ನು
ಮೋಶೆ ಇಸ್ರಾಯೇಲ್ಯರಿಗೆ ತಿಳಿಸಿದನು.

ಹರಕೆತೀರಿಸುವದು.

30 ಮೋಶೆಯು ಇಸ್ರಾಯೇಲ್ಯರ ಕುಲಾಧಿಪತಿಗಳಿಗೆ
ಹೇಳಿದ್ದೇನಂದರೆ---ಯೆಹೋವನು ಹೀಗೆ ಆಜ್ಞಾ
ಪಿಸಿದ್ದಾನೆ—
2 ಯಾವನಾದರೂ ಯೆಹೋವನಿಗೆ ಹರಕೆಮಾಡಿ
ದರೆ ಇಲ್ಲವೆ ತಾನು ಯಾವದಾದರೂ ಒಂದನ್ನು
ಮುಟ್ಟದೆ ಇರುವೆನೆಂದು ಆಣೆಯಿಟ್ಟುಕೊಂಡರೆ ಅವನು
ತನ್ನ ಮಾತನ್ನು ಮೀರದೆ ಹೇಳಿದಂತೆಯೇ ನೆರವೇರಿಸ
ಬೇಕು.

ಸ್ತ್ರೀಯು ಕನ್ಯಾವಸ್ಥೆಯಲ್ಲಿ ತಂದೆಯ ವ
ಯಲ್ಲಿದ್ದು ಯೆಹೋವನಿಗೆ ಹರಕೆಯನ್ನು ಮ
ದಾಗ ಇಲ್ಲವೆ ಯಾವದಾದರೂ ಒಂದನ್ನು ಮುಟ
ಇರುವೆನೆಂದು ಪ್ರತಿಜ್ಞೆಯನ್ನು ಮಾಡಿಕೊಂಡ
ಅವಳ ತಂದೆಯು ಆ ಸಂಗತಿಯನ್ನು ತಿಳಿದು ಸು
ಸಿದ್ದರೆ ಅವಳು ಆ ಹರಕೆಯನ್ನು ನೆರವೇರಿಸ
ಬೇಕು; ಯಾವದನ್ನು ಮುಟ್ಟದೆ ಇರುವೆನೆಂದು ಹ
ದಳೋ ಅದನ್ನು ಮುಟ್ಟಲೇ ಬಾರದು. ಆದರೆ ತ
ಆ ಸಂಗತಿಯನ್ನು ತಿಳಿದಾಗ ಹಾಗೆ ಮಾಡಬಾರದ
ಅಪ್ಪಣೆಕೊಟ್ಟರೆ ಅವಳು ಮಾಡಿದ ಹರಕೆಗಳೂ ಪ್ರತಿ
ಗಳೂ ವ್ಯರ್ಥವಾಗುವವು. ತಂದೆ ಬೇಡವೆಂದು ಹ
ದದರಿಂದ ಯೆಹೋವನು ಅವಳನ್ನು ದೋಷಿಯೆಂ
ಎಣಿಸುವದಿಲ್ಲ.
ಅವಳು ಮಾಡಿದ ಹರಕೆ ಇಲ್ಲವೆ ಯೋಚಿಸ
ಮಾಡಿದ ಪ್ರತಿಜ್ಞೆ ನಡೆಯುವಷ್ಟರೊಳಗೆ ಅವ
ಮದುವೆಯಾದ ಪಕ್ಷದಲ್ಲಿ ಗಂಡನು ಆ ಪ್ರಮಾಣ
ಸಂಗತಿಯನ್ನು ತಿಳಿದು ಸುಮ್ಮನಿದ್ದರೆ ಆ ಹ
ಗಳೂ ಪ್ರತಿಜ್ಞೆಗಳೂ ನಡೆಯಬೇಕು. ಆದರೆ ಗಂಡ
ಕೇಳಿದಾಗಲೇ ಬೇಡವೆಂದು ಅಪ್ಪಣೆಕೊಟ್ಟರೆ ಆ ಹ
ಕೆಯು ಇಲ್ಲವೆ ಅವಿಚಾರಪ್ರತಿಜ್ಞೆಯು ನಿರರ್ಥಕವಾ
ವವು. ಯೆಹೋವನು ಅವಳನ್ನು ದೋಷಿಯೆಂ
ಎಣಿಸುವದಿಲ್ಲ.
ವಿಧವೆಯು ಇಲ್ಲವೆ ಗಂಡನಿಂದ ಬಿಡಲ್ಪಟ್ಟ ಸ್ತ್ರೀಯ
ಇಂಥ ಪ್ರಮಾಣಮಾಡಿಕೊಂಡರೆ ಅದು ನಿಲ್ಲುವದ
ಅವಳು ಅದನ್ನು ನೆರವೇರಿಸಬೇಕು.
ಮುತ್ತೈದೆಯು ಅಂಥ ಹರಕೆಯನ್ನಾಗಲಿ ಪ್ರಮ
ಣವನ್ನಾಗಲಿ ಮಾಡಿದಾಗ ಅವಳ ಗಂಡನು ತಿಳಿ
ಅಡ್ಡಿಮಾಡದೆ ಸುಮ್ಮನಿದ್ದರೆ ಆ ಹರಕೆಗಳೂ ಪ್ರತಿ
ಗಳೂ ನಿಲ್ಲುವವು. ಆದರೆ ಗಂಡನು ಅವುಗಳನ
ತಿಳಿದಾಗಲೇ ಬೇಡವೆಂದರೆ ಅವು ರದ್ದಾಗುವ
ಗಂಡನು ರದ್ದುಮಾಡಿದ್ದರಿಂದ ಅಂಥವಳು ಯೆಹೋ
ವನಿಂದ ದೋಷಿಯೆಂದು ಎಣಿಸಲ್ಪಡುವದಿಲ್ಲ. ಹೆಂ
ಮಾಡಿದ ಹರಕೆಯನ್ನೂ ಉಪವಾಸವಾಗಿರುವೆನೆ
ಅವಳು ಮಾಡಿದ ಪ್ರಮಾಣವನ್ನೂ ಸ್ಥಾಪಿಸುವದಕ
ಗಲಿ ರದ್ದುಮಾಡುವದಕ್ಕಾಗಲಿ ಗಂಡನಿಗೆ ಅಧಿಕಾ
ವಿರುವದು. ಆದರೆ ಅವಳ ಗಂಡನು ಯಾವ ಅ
ಯನ್ನೂ ಮಾಡದೆ ದಿನದಿನಕ್ಕೆ ಸುಮ್ಮನಿದ್ದರೆ ಅವ
ಅವಳ ಹರಕೆಗಳನ್ನೂ ಪ್ರತಿಜ್ಞೆಗಳನ್ನೂ ಸ್ಥಾಪಿಸಿ
ಹಾಗಾಗುವದು. ಅವನು ತರುವಾಯ ಬೇಡವೆಂದ
ಆ ಪಾಪದ ಫಲವನ್ನು ಅವನೇ ಅನುಭವಿಸಬೇಕು.
ಗಂಡಹೆಂಡತಿಯರ ವಿಷಯವಾಗಿಯೂ ಇನ
ಮದುವೆಯಿಲ್ಲದ ಹೆಂಗಸು ಮತ್ತು ಅವಳ ತಂ
ಇವರ ವಿಷಯವಾಗಿಯೂ [ಹರಕೆಗಳ ಸಂಬಂಧದಲ್ಲಿ
ಯೆಹೋವನು ಮೋಶೆಗೆ ಕೊಟ್ಟ ನಿಯಮಗ
ಇವೇ.

ಇಸ್ರಾಯೇಲ್ಯರು ಮಿದ್ಯಾನ್ಯರನ್ನು ಸಂಹರಿಸಿದ್ದು.

ಯೆಹೋವನು ಮೋಶೆಗೆ—ನೀನು ಇಸ್ರಾಯೇ 2
ಲ್ಯರಿಗೋಸ್ಕರ ಮಿದ್ಯಾನ್ಯರಿಗೆ ಪ್ರತಿದಂಡನೆಯನ್ನು

ಮಾಡಬೇಕು; ಅನಂತರ ನೀನು ಪಿತೃಗಳ ಬಳಿಗೆ
3 ಸೇರಬೇಕು ಎಂದು ಹೇಳಿದನು. ಆಗ ಮೋಶೆಯು
ಇಸ್ರಾಯೇಲ್ಯರಿಗೆ—ನೀವು ಒಂದೊಂದು ಕುಲದಿಂದ
ಸಾವಿರ ಜನರ ಮೇರೆಗೆ ಭಟರನ್ನು ಯುದ್ಧಕ್ಕೆ ಸಿದ್ಧ
4 ಮಾಡಿಕೊಳ್ಳಬೇಕು; ಅವರು ಮಿದ್ಯಾನ್ಯರಿಗೆ ಯೆಹೋ
ವನು ಆಜ್ಞಾಪಿಸಿದ ದಂಡನೆಯನ್ನು ಮಾಡಬೇಕು
5 ಎಂದು ಅಪ್ಪಣೆಕೊಟ್ಟನು. ಆದಕಾರಣ ಇಸ್ರಾಯೇ
ಲ್ಯರು ಕುಲವೊಂದಕ್ಕೆ ಸಾವಿರ ಮಂದಿಯ ಮೇರೆಗೆ
ಯುದ್ಧಕ್ಕೆ ಸನ್ನದ್ಧರಾದ ಹನ್ನೆರಡು ಸಾವಿರ ಮಂದಿ
6 ಯನ್ನು ಲೆಕ್ಕಿಸಿಕೊಟ್ಟರು. ಮೋಶೆಯು ಇವರನ್ನು
ಯುದ್ಧಕ್ಕೆ ಕಳುಹಿಸುವಾಗ ಮಹಾಯಾಜಕನಾದ
ಎಲ್ಲಾಜಾರನ ಮಗ ಫೀನೆಹಾಸನಿಗೆ— ದೇವರ ಸಾಮಾ
ನುಗಳನ್ನೂ ಆಜ್ಞಾತುತೂರಿಗಳನ್ನೂ ತೆಗೆದುಕೊಂಡು
ಅವರೊಡನೆ ಹೋಗಬೇಕೆಂದು ಆಜ್ಞಾಪಿಸಿದನು.
7 ಯೆಹೋವನು ಆಜ್ಞಾಪಿಸಿದಂತೆ ಅವರು ಮಿದ್ಯಾನ್ಯ
ರೊಡನೆ ಯುದ್ಧಮಾಡಿ ಗಂಡಸರೆಲ್ಲರನ್ನೂ ಸಂಹಾರ
8 ಮಾಡಿದರು. ಹತವಾದವರಲ್ಲಿ ಎವೀ, ರೆಕೆಮ್,
ಚೂರ್, ಹೂರ್, ರೆಬಾ ಎಂಬ ಮಿದ್ಯಾನ್ಯರ ಐದು
ಮಂದಿ ರಾಜರು ಇದ್ದರು. ಅದಲ್ಲದೆ ಬೆಯೋರನ
9 ಮಗನಾದ ಬಿಳಾಮನನ್ನು ಕಡಿದುಬಿಟ್ಟರು. ಇಸ್ರಾ
ಯೇಲ್ಯರು ಮಿದ್ಯಾನ್ಯರ ಎಲ್ಲಾ ಹೆಂಗಸರನ್ನೂ ಮಕ್ಕ
ಳನ್ನೂ ಸೆರೆಹಿಡಿದು ಎಲ್ಲಾ ದನಕುರಿಗಳನ್ನೂ ಆಸ್ತಿ
10 ಯನ್ನೂ ಸೂರೆಮಾಡಿ ಅವರು ಇದ್ದ ಎಲ್ಲಾ
ಊರುಗಳನ್ನೂ ಪಾಳೆಯಗಳನ್ನೂ ಸುಟ್ಟುಬಿಟ್ಟರು.
11 ಒಂದನ್ನೂ ಬಿಡದೆ ಮನುಷ್ಯರನ್ನೂ ಪಶುಗಳನ್ನೂ
12 ಸೆರೆಹಿಡಿದರು. ಅವರು ಸೆರೆಯವರನ್ನೂ ಪಶುಗಳನ್ನೂ
ಆಸ್ತಿಯನ್ನೂ ತೆಗೆದುಕೊಂಡು ಯೆರಿಕೋ ಪಟ್ಟಣದ
ಎದುರಾಗಿ ಯೊರ್ದನ್ ಹೊಳೆಯ ತೀರದಲ್ಲಿ ಮೋವಾ
ಬ್ಯರ ಮೈದಾನದಲ್ಲಿದ್ದ ಪಾಳೆಯಕ್ಕೆ ಅಂದರೆ ಮೋಶೆ,
ಮಹಾಯಾಜಕನಾದ ಎಲ್ಲಾಜಾರ್, ಇಸ್ರಾಯೇಲ್ಯರ
ಸರ್ವಸಮೂಹದವರು ಇವರ ಬಳಿಗೆ ಬಂದರು.
13 ಮೋಶೆಯೂ ಮಹಾಯಾಜಕನಾದ ಎಲ್ಲಾಜಾರನೂ
ಸಮೂಹದ ಪ್ರಧಾನರೂ ಪಾಳೆಯದ ಹೊರಗೆ ಹೋಗಿ
ಅವರನ್ನು ಎದುರುಗೊಂಡರು.
14 ಆಗ ಮೋಶೆಯು ಯುದ್ಧಭೂಮಿಯಿಂದ ಬಂದ
ಸೈನ್ಯದ ಸಹಸ್ರಾಧಿಪತಿಗಳ ಮತ್ತು ಶತಾಧಿಪತಿಗಳ
15 ಮೇಲೆ ಕೋಪಗೊಂಡು ಅವರಿಗೆ—ನೀವು ಹೆಂಗಸ
16 ರನ್ನೆಲ್ಲಾ ಉಳಿಸಿದ್ದೇನು? ಪೆಗೋರದ ಬಾಳನ ಸಂಗತಿ
ಯಲ್ಲಿ ಬಿಳಾಮನ ಆಲೋಚನೆಯನ್ನು ಅನುಸರಿಸಿ
ಇಸ್ರಾಯೇಲ್ಯರನ್ನು ಯೆಹೋವನಿಗೆ ದ್ರೋಹಿಗಳ
ನ್ನಾಗಿ ಮಾಡಿ ಸಮೂಹದವರಲ್ಲಿ ಘೋರವ್ಯಾಧಿ
ಯುಂಟಾಗುವಂತೆ ಮಾಡಿದವರು ಇವರೇ ಅಲ್ಲವೇ.
17 ಆದಕಾರಣ ನೀವು ಈ ಗುಂಪಿನಲ್ಲಿರುವ ಎಲ್ಲಾ ಗಂಡು
ಮಕ್ಕಳನ್ನೂ ಪುರುಷಸಂಗಮಾಡಿದ ಎಲ್ಲಾ ಹೆಂಗಸ
18 ರನ್ನೂ ಕೊಲ್ಲಬೇಕು; ಪುರುಷಸಂಗಮಾಡದಿರುವ
ಕನ್ಯೆಯರನ್ನು ನಿಮಗೋಸ್ಕರ ಉಳಿಸಿಕೊಳ್ಳಬೇಕು.
19 ನೀವಾದರೋ ಏಳು ದಿವಸದ ವರೆಗೂ ಪಾಳೆಯದ
ಹೊರಗೆ ಇರಬೇಕು. ಮನುಷ್ಯಪ್ರಾಣತೆಗೆದವರೂ
ಶವಮುಟ್ಟಿದವರೂ ನಿಮ್ಮವರಾದರೂ ಸೆರೆಯವ
ರಾದರೂ ಮೂರನೆಯ ಮತ್ತು ಏಳನೆಯ ದಿವಸಗಳಲ್ಲಿ
ದೋಷಪರಿಹಾರಮಾಡಿಕೊಳ್ಳಬೇಕು. ಅದಲ್ಲದೆ ಎಲ್ಲಾ 20
ಬಟ್ಟೆಗಳನ್ನೂ ತೊಗಲಿನ ಸಾಮಾನನ್ನೂ ಮೇಕೇಕೂ
ದಲಿನ ವಸ್ತುಗಳನ್ನೂ ಮರದ ಸಾಮಾನನ್ನೂ ಶುದ್ಧ
ಮಾಡಿಕೊಳ್ಳಬೇಕು ಎಂದು ಹೇಳಿದನು.
ಮಹಾಯಾಜಕನಾದ ಎಲ್ಲಾಜಾರನು ಯುದ್ಧಕ್ಕೆ 21
ಹೋಗಿದ್ದ ಭಟರಿಗೆ ಹೀಗಂದನು—ಯೆಹೋವನು
ಮೋಶೆಗೆ ಅಪ್ಪಣೆಮಾಡಿದ ವಿಧಿ ಹೇಗಂದರೆ—ಬೆಂಕಿ 22
ಯನ್ನು ತಡೆಯುವ ಚಿನ್ನ, ಬೆಳ್ಳಿ, ತಾಮ್ರ, ಕಬ್ಬಿಣ,
ತವರ, ಸೀಸ ಮೊದಲಾದವುಗಳನ್ನು ಬೆಂಕಿದಾಟಿಸಿ 23
ಶುದ್ಧಮಾಡಬೇಕು; ಅವುಗಳನ್ನು ಹೊಲೆ ಹೋಗ
ಲಾಡಿಸುವ ನೀರಿನಿಂದಲೂ ಶುದ್ಧಮಾಡಬೇಕು.
ಬೆಂಕಿಯನ್ನು ತಡೆಯಲಾರದ ವಸ್ತುಗಳನ್ನು ನೀರಿನಿಂದ
ತೊಳೆದು ಶುದ್ಧಮಾಡಬೇಕು. ಏಳನೆಯ ದಿನದಲ್ಲಿ 24
ನಿಮ್ಮ ಬಟ್ಟೆಗಳನ್ನು ಒಗೆದುಕೊಂಡನಂತರ ಶುದ್ಧರಾಗು
ವಿರಿ; ಆ ಮೇಲೆ ನೀವು ಪಾಳೆಯದೊಳಗೆ ಬರಬಹುದು
ಎಂದು ಹೇಳಿದನು.
ಯೆಹೋವನು ಮೋಶೆಗೆ— ನೀನೂ ಮಹಾ 25, 26
ಯಾಜಕನಾದ ಎಲ್ಲಾಜಾರನೂ ಕುಲಾಧಿಪತಿಗಳೂ
ದಂಡಿನವರ ಕೈಗೆ ಸಿಕ್ಕಿದ ಮನುಷ್ಯರನ್ನೂ ಪಶು
ಗಳನ್ನೂ ಲೆಕ್ಕಿಸಿ ಒಟ್ಟು ತಿಳಿದು ಎರಡು ಭಾಗ 27
ಮಾಡಿ ಯುದ್ಧಕ್ಕೆ ಹೋದ ಭಟರಿಗೆ ಅರ್ಧವನ್ನೂ
ಮಿಕ್ಕ ಸಮೂಹದವರಿಗೆ ಅರ್ಧವನ್ನೂ ಹಂಚಿಕೊಡ
ಬೇಕು. ಯುದ್ಧಕ್ಕೆ ಹೋದ ಭಟರಿಗೆ ಬರುವ ಭಾಗ 28
ದಿಂದ ಮನುಷ್ಯ, ದನ, ಕತ್ತೆ, ಆಡು, ಕುರಿ ಇವು
ಗಳಲ್ಲಿ ನೀನು ಐನೂರರಲ್ಲಿ ಒಂದರ ಮೇರೆಗೆ ಯೆಹೋ 29
ವನಿಗೋಸ್ಕರ ಕಪ್ಪವನ್ನು ತೆಗೆದುಕೊಂಡು ಆತನಿ
ಗೋಸ್ಕರ ಪ್ರತ್ಯೇಕಿಸಿ ಮಹಾಯಾಜಕ ಎಲ್ಲಾಜಾರ
ನಿಗೆ ಒಪ್ಪಿಸಬೇಕು. ಮಿಕ್ಕ ಇಸ್ರಾಯೇಲ್ಯರಿಗೆ 30
ಬರುವ ಭಾಗದಿಂದ ಮನುಷ್ಯ, ದನ, ಕತ್ತೆ, ಆಡು,
ಕುರಿ ಇವುಗಳಲ್ಲಿ ಐವತ್ತರಲ್ಲಿ ಒಂದರ ಮೇರೆಗೆ
ತೆಗೆದುಕೊಂಡು ಯೆಹೋವನ ಗುಡಾರವನ್ನು ನೋಡಿ
ಕೊಳ್ಳುವ ಲೇವಿಯರಿಗೆ ಕೊಡಬೇಕೆಂದು ಆಜ್ಞಾಪಿಸಿ
ದನು. ಯೆಹೋವನ ಅಪ್ಪಣೆಯ ಮೇರೆಗೆ ಮೋಶೆ 31
ಯೂ ಮಹಾಯಾಜಕನಾದ ಎಲ್ಲಾಜಾರನೂ ಮಾಡಿ
ದರು. ಭಟರು ತಂದ ಸುಲಿಗೆಯಲ್ಲಿ ಹಂಚಿಕೊಳ್ಳುವದ 32
ಕ್ಕೋಸ್ಕರ ಉಳಿದದ್ದು ಎಷ್ಟಂದರೆ—ಆಡುಕುರಿ
ಗಳು 675,000, ದನಗಳು 72,000, ಕತ್ತೆ 33-34
ಗಳು 61,000, ಕನ್ಯೆಯರು 32,000. ಯುದ್ಧಕ್ಕೆ 35-36
ಹೋಗಿದ್ದ ಭಟರಿಗೆ ದೊರಕಿದ ಅರ್ಧ ಭಾಗವಾಗಿ
ರುವ 337,500 ಆಡುಕುರಿಗಳಲ್ಲಿ 675 ಆಡುಕುರಿ 37
ಗಳು ಯೆಹೋವನಿಗೆ ಬಂದ ಕಪ್ಪ. ಹಾಗೆ 38
ಯೇ ಅವರಿಗೆ ದೊರಕಿದ 36,000 ದನಗಳಲ್ಲಿ 72
ದನಗಳೂ, 30,500 ಕತ್ತೆಗಳಲ್ಲಿ 61 ಕತ್ತೆಗಳೂ, 39
16,000 ಕನ್ಯೆಯರಲ್ಲಿ 32 ಮಂದಿಯೂ ಯೆಹೋವ 40
ನಿಗೆ ಬಂದ ಕಪ್ಪ. ಯೆಹೋವನ ಅಪ್ಪಣೆಯ ಮೇರೆಗೆ 41
ಮೋಶೆ ಆ ಕಪ್ಪವನ್ನು ಯೆಹೋವನಿಗೋಸ್ಕರ ಪ್ರತ್ಯೇ
ಕಿಸಿ ಮಹಾಯಾಜಕನಾದ ಎಲ್ಲಾಜಾರನಿಗೆ ಒಪ್ಪಿಸಿ
ದನು.
ಭಟರು ತಂದ ಸುಲಿಗೆಯಲ್ಲಿ ಮೋಶೆ ಪ್ರತ್ಯೇಕಿಸಿದ 42
ಮಿಕ್ಕ ಅರ್ಧ ಭಾಗವು—ಅಂದರೆ 337,500 ಆಡು 43

44 45 ಕುರಿಗಳು 36,000 ದನಗಳು 30,500 ಕತ್ತೆ
46 ಗಳು 16,000 ಕನ್ಯೆಯರು—ಇಷ್ಟು ಇಸ್ರಾಯೇಲ್ಯ
47 ಸಮೂಹದವರ ಪಾಲಿಗೆ ಬಂದವು. ಇವುಗಳಲ್ಲಿ
ಮೋಶೆಯು ಯೆಹೋವನ ಅಪ್ಪಣೆಯ ಪ್ರಕಾರ ಐವತ್ತ
ರಲ್ಲಿ ಒಂದರ ಮೇರೆಗೆ ತೆಗೆದುಕೊಂಡು ಯೆಹೋ
ವನ ಗುಡಾರವನ್ನು ನೋಡಿಕೊಳ್ಳುವ ಲೇವಿಯರಿಗೆ
ಕೊಟ್ಟನು.
48 ಆಗ ದಂಡಿನ ಸಹಸ್ರಾಧಿಪತಿಗಳೂ ಶತಾಧಿಪತಿ
49 ಗಳೂ ಮೋಶೆಯ ಬಳಿಗೆ ಬಂದು—ನಿನ್ನ ದಾಸ
ರಾದ ನಾವು ನಮ್ಮ ಅಧಿಕಾರದೊಳಗೆ ಇದ್ದ ಭಟ
ರನ್ನು ಲೆಕ್ಕಿಸಲಾಗಿ ಒಬ್ಬನಾದರೂ ಕಡಿಮೆಯಾಗಿಲ್ಲ
50 ವೆಂದು ಗೊತ್ತಾಯಿತು. ಆದಕಾರಣ ಯೆಹೋವನು
ಕಾಪಾಡಿದ ನಮ್ಮ ಪ್ರಾಣಗಳಿಗೆ ಈಡಾಗಿ ಆತನಿ
ಗೋಸ್ಕರ ಕಾಣಿಕೆಯಾಗಿ ನಮ್ಮಲ್ಲಿ ಒಬ್ಬೊಬ್ಬನು
ತನಗೆ ಸಿಕ್ಕಿದ ಚಿನ್ನದ ಒಡವೆಗಳನ್ನು ಅಂದರೆ
ತೋಳ್ಬಳೆ, ಕಡಗ, ಮುದ್ರೆಯುಂಗರ, ಮುರುವು,
ಕಂಠಮಾಲೆ ಮುಂತಾದವುಗಳನ್ನು ತಂದಿದ್ದೇವೆ ಅಂದರು.
51 ಆವರು ಕೊಟ್ಟ ಆ ಚಿನ್ನದ ಒಡವೆಗಳನ್ನು ಮೋಶೆ
ಯೂ ಮಹಾಯಾಜಕ ಎಲ್ಲಾಜಾರನೂ ತೆಗೆದು
ಕೊಂಡರು; ಅವುಗಳೆಲ್ಲಾ ವಿಚಿತ್ರವಾಗಿ ಮಾಡಿದವು
52 ಗಳೇ. ಸಹಸ್ರಾಧಿಪತಿಗಳೂ ಶತಾಧಿಪತಿಗಳೂ ಯೆ
ಹೋವನಿಗೋಸ್ಕರ ಪ್ರತ್ಯೇಕಿಸಿ ಸಮರ್ಪಿಸಿದ ಕಾಣಿ
53 ಕೆಯ ಒಟ್ಟಾದ ತೂಕ 16,750 ತೊಲೆ. ಅದಲ್ಲದೆ
ದಂಡಿನವರೆಲ್ಲರೂ ಸ್ವಂತಕ್ಕಾಗಿ ಲೂಟಿಯನ್ನು ಹಿಡು
54 ಕೊಂಡಿದ್ದರು. ಸಹಸ್ರಾಧಿಪತಿಗಳೂ ಶತಾಧಿಪತಿಗಳೂ
ಕೊಟ್ಟ ಚಿನ್ನವನ್ನು ಮೋಶೆಯೂ ಮಹಾಯಾಜಕ
ಎಲ್ಲಾಜಾರನೂ ತೆಗೆದುಕೊಂಡು ಇಸ್ರಾಯೇಲ್ಯರ
ವಿಷಯದಲ್ಲಿ ಯೆಹೋವನಿಗೆ ಜ್ಞಾಪಕಕೊಡುವದ
ಕ್ಕಾಗಿ ದೇವದರ್ಶನದ ಗುಡಾರದೊಳಗೆ ತಂದರು.

ಗಾದ್ಯರೂ ರೂಬೇನ್ಯರೂ ಮನಸ್ಸೆಯ ಕುಲದವರಲ್ಲಿ ಅರ್ಧ
ಜನರೂ ಯೊರ್ದನ್ ಹೊಳೆಯ ಮೂಡಣ ದಿಕ್ಕಿನಲ್ಲಿ
ಸ್ವಾಸ್ತ್ಯವನ್ನು ಹೊಂದಿದ್ದು.

32 ರೂಬೇನ್ ಕುಲದವರಿಗೂ ಗಾದ್ ಕುಲದವ
ರಿಗೂ ಬಹಳ ದನಕುರಿಗಳಿದ್ದವು. ಅವರು ಯಗ್ಜೇ
ರ್, ಗಿಲ್ಯಾದ್ ಎಂಬ ಪ್ರದೇಶಗಳನ್ನು ನೋಡಿದಾಗ
ಅವು ದನಕುರಿಗಳ ಮೇವಿಗೆ ತಕ್ಕ ಸ್ಥಳವೆಂದು ತಿಳಿದು
2 ಕೊಂಡು ಮೋಶೆ ಮತ್ತು ಮಹಾಯಾಜಕ ಎಲ್ಲಾ
ಜಾರ್ ಇವರ ಬಳಿಗೂ ಸಮೂಹದ ಪ್ರಧಾನರ ಬಳಿಗೂ
3 ಬಂದು—ಯೆಹೋವನು ಇಸ್ರಾಯೇಲ್ಯರಿಗೆ ಅಧೀನ
ಪಡಿಸಿದ ಈ ಪ್ರದೇಶವು ಅಂದರೆ ಅಟಾರೋತ್,
ದೀಬೋನ್, ಯಗ್ಜೇರ್, ನಿಮ್ರಾ, ಹೆಷ್ಬೋನ್, ಎಲೆ
ಯಾಲೆ, ಸೆಬಾಮ್, ನೆಬೋ, ಬೆಯೋನ್ ಎಂಬ
ಪಟ್ಟಣಗಳ ಪ್ರದೇಶವು ದನಕುರಿಗಳ ಮೇವಿಗೆ ತಕ್ಕ
4 ಪ್ರದೇಶ. ನಿಮ್ಮ ದಾಸರಾದ ನಮಗೆ ಬಹಳ ದನ
5 ಕುರಿಗಳುಂಟಷ್ಟೆ; ಆದಕಾರಣ ನೀವು ದಾಸರಾದ ನಮ್ಮ
ಮೇಲೆ ದಯುಇಟ್ಟು ನಮ್ಮನ್ನು ಯೊರ್ದನ್ ಹೊಳೆಯ
ಆಚೆಗೆ ಬರಮಾಡದೆ ಈ ಪ್ರದೇಶವನ್ನೇ ಸ್ವಾಸ್ತ್ಯಕ್ಕಾಗಿ
ಕೊಡಬೇಕೆಂದು ಕೇಳಿಕೊಂಡರು.

ಮೋಶೆ ಅವರಿಗೆ—ನಿಮ್ಮ ಸಹೋದರರು ಯುದ್ಧ
ಕ್ಕೆ ಹೋಗುವಾಗ ನೀವು ಇಲ್ಲೇ ಕೂತಿರಬೇಕೇನು?
ಯೆಹೋವನು ಇಸ್ರಾಯೇಲ್ಯರಿಗೆ ಕೊಟ್ಟ ದೇಶಕ್ಕೆ
ಅವರು ಹೋಗದಂತೆ ನೀವು ಯಾಕೆ ಅವರಿಗೆ ಅಧೈ
ರ್ಯವನ್ನು ಹುಟ್ಟಿಸುತ್ತೀರಿ? ಆ ದೇಶವನ್ನು ನೋಡಿ
ಕೊಂಡು ಬರುವದಕ್ಕೆ ನಾನು ಕಾದೇಶ್‌ಬರ್ನೇಯ
ದಿಂದ ನಿಮ್ಮ ತಂದೆಗಳನ್ನು ಕಳುಹಿಸಿದಾಗ ಅವರೂ
ಹಾಗೆಯೇ ಮಾಡಿದರಲ್ಲಾ; ಅವರು ಎಷ್ಕೋಲ್ ತಗ್ಗಿಗೆ
ಬಂದು ಆ ದೇಶವನ್ನು ನೋಡಿ ಇಸ್ರಾಯೇಲ್ಯರಿಗೆ
ಅಧೈರ್ಯವನ್ನು ಹುಟ್ಟಿಸಿದದರಿಂದ ಇಸ್ರಾಯೇಲ್ಯರು
ತಮಗೆ ಯೆಹೋವನು ವಾಗ್ದಾನಮಾಡಿದ ದೇಶಕ್ಕೆ
ಹೋಗಲೇ ಇಲ್ಲ. ಆ ಕಾಲದಲ್ಲಿ ಯೆಹೋವನು
ಕೋಪಗೊಂಡು—ಐಗುಪ್ತದೇಶದೊಳಗಿಂದ ಬಂದ 11
ಈ ಜನರೊಳಗೆ ಕೆನಿಜ್ಜೀಯನಾದ ಯೆಫುನ್ನೆಯ
ಮಗ ಕಾಲೇಬನೂ ನೂನನ ಮಗನಾದ ಯೆಹೋಶು
ವನೂ ಇವರಿಬ್ಬರೇ ಹೊರತಾಗಿ ಯಾರೂ ನನ್ನನ್ನು
ಪೂರ್ಣಮನಸ್ಸಿನಿಂದ ಅನುಸರಿಸದೆ ಹೋದದರಿಂದ
ಅವರೊಳಗೆ ಇಪ್ಪತ್ತು ವರುಷ ಮೊದಲುಗೊಂಡು
ಹೆಚ್ಚಾದ ವಯಸ್ಸಿನವರಲ್ಲಿ ಅವರಿಬ್ಬರೇ ಹೊರತಾಗಿ
ಒಬ್ಬನಾದರೂ ನಾನು ಅಬ್ರಹಾಮ್ ಇಸಾಕ್ ಯಾ
ಕೋಬರಿಗೆ ಪ್ರಮಾಣಪೂರ್ವಕವಾಗಿ ಕೊಟ್ಟ ದೇಶ
ವನ್ನು ನೋಡುವದೇ ಇಲ್ಲ ಎಂದು ಖಂಡಿತವಾಗಿ
ಹೇಳಿದನು. ಯೆಹೋವನು ಇಸ್ರಾಯೇಲ್ಯರ ಮೇಲೆ
ಕೋಪಗೊಂಡವನಾಗಿ ತನ್ನ ದೃಷ್ಟಿಯಲ್ಲಿ ಕೆಟ್ಟ
ನಡತೆಯುಳ್ಳ ಆ ಸಂತತಿಯವರೆಲ್ಲರೂ ನಾಶವಾಗುವ
ತನಕ, ಅಂದರೆ ನಾಲ್ವತ್ತು ವರುಷಕಾಲ, ಇಸ್ರಾಯೇ
ಲ್ಯರನ್ನು ಅರಣ್ಯದಲ್ಲಿ ತಿರುಗಾಡ ಮಾಡಿದನು.
ಈಗ ದುಷ್ಟ ಸಂತತಿಯವರಾದ ನೀವು ನಿಮ್ಮ ತಂದೆ
ಗಳಿಗೆ ಬದಲಾಗಿ ಬಂದು ಇಸ್ರಾಯೇಲ್ಯರ ಮೇಲಿದ್ದ
ಯೆಹೋವನ ರೋಷಾಗ್ನಿಯನ್ನು ಮತ್ತಷ್ಟು ಹೆಚ್ಚಿಸು
ತ್ತೀರಲ್ಲಾ. ನೀವು ಆತನನ್ನು ಹಿಂಬಾಲಿಸದೆ ನಡೆಯುವ
ಕಾರಣ ಆತನು ಈ ಜನರನ್ನು ಅರಣ್ಯದಲ್ಲಿ ಇನ್ನೂ ಇರಿ
ಸಿದರೆ ಈ ಸಮಸ್ತಜನಾಂಗದ ನಾಶಕ್ಕೆ ನೀವೇ ಕಾರಣ
ರಾಗುವಿರಿ ಎಂದು ಹೇಳಿದನು.

ಆಗ ಅವರು ಅವನ ಬಳಿಗೆ ಬಂದು—ನಾವು ಇಲ್ಲಿ
ನಮ್ಮ ದನಕುರಿಗಳಿಗೋಸ್ಕರ ದೊಡ್ಡಿಗಳನ್ನೂ ನಮ್ಮ
ಕುಟುಂಬಗಳಿಗೋಸ್ಕರ ಊರುಗಳನ್ನೂ ಕಟ್ಟಿಕೊಳ್ಳು
ವೆವು. ನಾವಾದರೋ ಇಸ್ರಾಯೇಲ್ಯರನ್ನು ಅವರವರ
ಸ್ಥಳಗಳಿಗೆ ಸೇರಿಸುವ ವರೆಗೂ ಯುದ್ಧಕ್ಕೆ ಸನ್ನದ್ಧ
ರಾಗಿ ಅವರ ಮುಂದೆ ನಡೆಯುವೆವು. ಅಷ್ಟರಲ್ಲಿ
ನಮ್ಮ ಕುಟುಂಬಗಳವರು ಈ ದೇಶದ ನಿವಾಸಿಗಳ
ಭಯದ ದೆಸೆಯಿಂದ ಕೋಟೆಕೊತ್ತಲುಗಳುಳ್ಳ ಊರು
ಗಳಲ್ಲಿ ವಾಸಿಸಲಿ. ಇಸ್ರಾಯೇಲ್ಯರೆಲ್ಲರೂ ತಮ್ಮ
ತಮ್ಮ ಸ್ವಾಸ್ತ್ಯಗಳನ್ನು ಸ್ವತಂತ್ರಿಸಿಕೊಳ್ಳುವ ಪರ್ಯಂ
ತರ ನಾವು ನಮ್ಮ ಮನೆಗಳಿಗೆ ತಿರಿಗಿ ಬರುವದಿಲ್ಲ.
ನಮಗೆ ಯೊರ್ದನ್ ಹೊಳೆಯ ಈಚೆ ಮೂಡಣ ದಿಕ್ಕಿ
ನಲ್ಲಿ ಸ್ವಾಸ್ತ್ಯವು ದೊರಕಿದದರಿಂದ ನಾವು ಹೊಳೆಯ
ಆಚೆ ಎಲ್ಲಿಯೂ ಅವರೊಂದಿಗೆ ಸ್ವಾಸ್ತ್ಯವನ್ನು ಅಪೇಕ್ಷಿ
ಸುವದಿಲ್ಲ ಅಂದರು.

ಅದಕ್ಕೆ ಮೋಶೆ—ನೀವು ಆ ಮಾತಿನಂತೆ ನಡೆದ

ನಿಮ್ಮಲ್ಲಿರುವ ಭಟರೆಲ್ಲರೂ ಯುದ್ಧಸನ್ನದ್ಧರಾಗಿ
ಯೊರ್ದನ್ ಹೊಳೆಯ ಆಚೆಗೆ ಹೋಗಿ ಯೆಹೋವನು
ತನ್ನ ವೈರಿಗಳನ್ನು ಹೊರಡಿಸಿಬಿಟ್ಟು ಆ ದೇಶವನ್ನು
ಸ್ವಾಧೀನಮಾಡಿಕೊಳ್ಳುವ ತನಕ ಆತನ ಮುಂದೆ
ಯುದ್ಧಮಾಡುವದಾದರೆ ತರುವಾಯ ನೀವು ತಿರಿಗಿ
ಬಂದು ಆತನ ದೃಷ್ಟಿಯಲ್ಲೂ ಇಸ್ರಾಯೇಲ್ಯರ ದೃಷ್ಟಿ
ಯಲ್ಲೂ ನಿರ್ದೋಷಿಗಳಾಗಿರುವಿರಿ, ಮತ್ತು ಈ
ಪ್ರದೇಶವು ಯೆಹೋವನ ಸನ್ನಿಧಿಯಲ್ಲೇ ನಿಮಗೆ
ಸ್ವಾಸ್ತ್ಯವಾಗಿರುವದು. ಆದರೆ ನೀವು ಹಾಗೆ ಮಾಡದೆ
ಹೋದರೆ ಯೆಹೋವನಿಗೆ ವಿರುದ್ಧವಾಗಿ ಪಾಪಮಾಡಿ
ದವರಾಗುವಿರಿ; ಮತ್ತು ನಿಮ್ಮ ಪಾಪವು ನಿಮ್ಮನ್ನು
ಹಿಡಿಯುವ ತನಕ ಹುಡುಕಿಕೊಂಡೇ ಬರುವದು
ಎಂದು ತಿಳಿದುಕೊಳ್ಳಿರಿ. ನೀವು ನಿಮ್ಮ ಕುಟುಂಬಗಳಿ
ಗೋಸ್ಕರ ಊರುಗಳನ್ನೂ ದನಕುರಿಗಳಿಗೋಸ್ಕರ
ದೊಡ್ಡಿಗಳನ್ನೂ ಕಟ್ಟಿಕೊಂಡು ತರುವಾಯ ನಿಮ್ಮ
ಮಾತಿನ ಮೇರೆಗೆ ಮಾಡಿರಿ ಅಂದನು.

ಅದಕ್ಕೆ ಗಾದ್ಯರೂ ರೂಬೇನ್ಯರೂ—ಸ್ವಾಮಿಯವರ
ಅಪ್ಪಣೆಯ ಮೇರೆಗೆ ದಾಸರಾದ ನಾವು ಮಾಡು
ತ್ತೇವೆ. ನಮ್ಮ ಮನೆಗಳವರೂ ಹೆಂಡತಿಯರೂ ದನ
ಕುರಿಗಳೂ ಇಲ್ಲೇ ಗಿಲ್ಯಾದ್ ದೇಶದ ಊರುಗಳಲ್ಲಿ
ಇರಲಿ. ನಿನ್ನ ದಾಸರಾದ ನಮ್ಮಲ್ಲಿ ಯುದ್ಧಸನ್ನದ್ಧ
ರೆಲ್ಲರೂ ಸ್ವಾಮಿಯವರ ಅಪ್ಪಣೆಯ ಮೇರೆಗೆ
ಯೆಹೋವನ ಮುಂದುಗಡೆಯಲ್ಲಿ ಹೊರಟು ಹೊಳೆ
ಯನ್ನು ದಾಟಿ ಯುದ್ಧಮಾಡುವೆವು ಎಂದು ಉತ್ತರ
ಕೊಟ್ಟರು.

ಆದಕಾರಣ ಮೋಶೆ ಅವರ ವಿಷಯವಾಗಿ ಮಹಾ
ಯಾಜಕ ಎಲ್ಲಾಜಾರನಿಗೂ ನೂನನ ಮಗನಾದ
ಯೆಹೋಶುವನಿಗೂ ಇಸ್ರಾಯೇಲ್ಯರ ಕುಲಾಧಿಪತಿ
ಗಳಿಗೂ ಆಜ್ಞೆಮಾಡಿ—ಗಾದ್ಯರಲ್ಲಿಯೂ ರೂಬೇನ್ಯ
ರಲ್ಲಿಯೂ ಯುದ್ಧಸನ್ನದ್ಧರಾದವರೆಲ್ಲರೂ ನಿಮ್ಮೊಡನೆ
ಯೊರ್ದನ್ ಹೊಳೆಯನ್ನು ದಾಟಿ ಯೆಹೋವನ
ಮುಂದೆ ಯುದ್ಧಮಾಡಿದರೆ ಕಾನಾನ್ ದೇಶವು ನಿಮ್ಮ
ಸ್ವಾಧೀನಕ್ಕೆ ಬಂದಾಗ ನೀವು ಗಿಲ್ಯಾದ್ ಪ್ರದೇಶವನ್ನು
ಅವರಿಗೆ ಸ್ವಾಸ್ತ್ಯವಾಗುವದಕ್ಕೆ ಕೊಡಬೇಕು. ಆದರೆ
ಅವರು ನಿಮ್ಮೊಡನೆ ಯುದ್ಧಕ್ಕೆ ಹೋಗದಿದ್ದರೆ ಕಾನಾನ್
ದೇಶದಲ್ಲಿಯೇ ಅವರಿಗೆ ಸ್ವಾಸ್ತ್ಯವಾಗಬೇಕೆಂದು
ಹೇಳಿದನು.

ಅದಕ್ಕೆ ಗಾದ್ಯರೂ ರೂಬೇನ್ಯರೂ ಒಪ್ಪಿ—ಯೆಹೋ
ವನು ನಿನ್ನ ದಾಸರಾದ ನಮಗೆ ಅಜ್ಞಾಪಿಸಿದಂತೆಯೇ
ಮಾಡುವೆವು; ನಾವು ಯೆಹೋವನ ಮುಂದೆ ಯುದ್ಧ
ಸನ್ನದ್ಧರಾಗಿ ಕಾನಾನ್ ದೇಶಕ್ಕೆ ಹೊರಡುವೆವು;
ಆಗ ಯೊರ್ದನ್ ಹೊಳೆಯ ಈಚೆಯೇ ನಮಗೆ
ಸ್ವಾಸ್ತ್ಯವು ದೊರಕಬೇಕು ಅಂದರು.

ಹೀಗೆ ಮೋಶೆಯು ಗಾದ್ಯರಿಗೂ ರೂಬೇನ್ಯರಿಗೂ
ಯೋಸೇಫನ ಮಗನಾದ ಮನಸ್ಸೆಯ ಕುಲದವರಲ್ಲಿ
ಅರ್ಧಜನರಿಗೂ ಅಮೋರಿಯರ ಅರಸನಾದ ಸೀಹೋ
ನನ ರಾಜ್ಯವನ್ನೂ ಬಾಷಾನಿನ ಅರಸನಾದ ಓಗನ
ರಾಜ್ಯವನ್ನೂ ಇವುಗಳ ಎಲ್ಲಾ ಊರುಗಳನ್ನೂ ಆ
ಊರುಗಳಿಗೆ ಸೇರಿದ ಭೂಮಿಗಳನ್ನೂ ಕೊಟ್ಟನು.

ಗಾದ್ಯರು ದೀಬೋನ್, ಅಟಾರೋತ್, ಅರೋ
ಯೇರ್, ಅಟ್ರೋತ್ಶೋಫಾನ್, ಯಗ್ಜೇರ್, ಯೊಗ್ಬೆ 35
ಹಾ, ಬೇತ್ನಿಮ್ರಾ, ಬೇತ್‌ಹಾರಾನ್ ಎಂಬ ಸುತ್ತು 36
ಗೋಡೆಗಳುಳ್ಳ ಊರುಗಳನ್ನು ಹೊಸದಾಗಿ ಕಟ್ಟಿ
ಕೊಂಡರು; ತಮ್ಮ ಆಡುಕುರಿಗಳಿಗೋಸ್ಕರ ದೊಡ್ಡಿ
ಗಳನ್ನು ಕಟ್ಟಿಕೊಂಡರು.

ರೂಬೇನ್ಯರು ಹೆಷ್ಬೋನ್, ಎಲೆಯಾಲೆ, 37, 38
ಕಿರ್ಯಾತಯಿಮ್, ಸಿಬ್ಮಾ ಎಂಬ ಊರುಗಳನ್ನೂ
(ಬೇರೆ ಹೆಸರಿನಿಂದ ಉಚ್ಚರಿಸತಕ್ಕ) ನೆಬೋ, ಬಾಳ್ಮೆ
ಯೋನ್ ಎಂಬಿವುಗಳನ್ನೂ ಹೊಸದಾಗಿ ಕಟ್ಟಿ ಅವು
ಗಳಿಗೆ ಬೇರೆ ಹೆಸರುಗಳನ್ನು ಇಟ್ಟರು.

ಮನಸ್ಸೆಯ ಮಗನಾದ ಮಾಕೀರನ ವಂಶದವರು 39
ಗಿಲ್ಯಾದಿಗೆ ಹೋಗಿ ಅದನ್ನು ಸ್ವಾಧೀನಮಾಡಿಕೊಂಡು
ಅಲ್ಲಿದ್ದ ಅಮೋರಿಯರನ್ನು ಹೊರಡಿಸಿಬಿಟ್ಟರು.
ಮೋಶೆಯು ಮನಸ್ಸೆಯ ಮಗನಾದ ಮಾಕೀರನ 40
ಸಂತತಿಯವರಿಗೆ ಗಿಲ್ಯಾದ್ ಪ್ರದೇಶವನ್ನು ಕೊಡ
ಲಾಗಿ ಅವರು ಅಲ್ಲೇ ವಾಸಮಾಡಿಕೊಂಡರು. ಮನ 41
ಸ್ಸೆಯ ವಂಶದವನಾದ ಯಾಯಿರನು ಯುದ್ಧಕ್ಕೆ
ಹೊರಟು ಅಮೋರಿಯರ ಗ್ರಾಮಗಳನ್ನು ಸ್ವಾಧೀನ
ಮಾಡಿಕೊಂಡು ಅವುಗಳಿಗೆ ಯಾಯಿರನ ಗ್ರಾಮ
ಗಳೆಂದು ಹೆಸರಿಟ್ಟನು. ನೋಬಹನು ಯುದ್ಧಕ್ಕೆ 42
ಹೊರಟು ಕೆನಾತ್ ಎಂಬ ಪಟ್ಟಣವನ್ನೂ ಅದಕ್ಕೆ
ಸೇರಿದ ಊರುಗಳನ್ನೂ ಜಯಿಸಿ ಅದಕ್ಕೆ ನೋಬಹ
ಎಂದು ತನ್ನ ಹೆಸರನ್ನೇ ಕೊಟ್ಟನು.

ಇಸ್ರಾಯೇಲ್ಯರು ಐಗುಪ್ತದೇಶದಿಂದ ಕಾನಾನ್‌ದೇಶಕ್ಕೆ ಮಾಡಿದ
ಪ್ರಯಾಣದಲ್ಲಿ ಇಳುಕೊಂಡ ಸ್ಥಳಗಳ ಪಟ್ಟಿ.

33

ಮೋಶೆ ಆರೋನರ ಕೈಕೆಳಗೆ ಐಗುಪ್ತದೇಶ
ದೊಳಗಿಂದ ಸೈನ್ಯಸೈನ್ಯವಾಗಿ ಹೊರಟ ಇಸ್ರಾ
ಯೇಲ್ಯರ ಪ್ರಯಾಣಗಳ ವಿವರ. ಮೋಶೆ ಯೆಹೋ 2
ವನ ಅಪ್ಪಣೆಯನ್ನು ಹೊಂದಿ ಇಸ್ರಾಯೇಲ್ಯರು
ಪ್ರಯಾಣಗಳಲ್ಲಿ ಇಳುಕೊಂಡ ಸ್ಥಳಗಳ ಹೆಸರು
ಗಳನ್ನು ಬರೆದನು.

ಮೊದಲನೆಯ ತಿಂಗಳಿನ ಹದಿನೈದನೆಯ ದಿನದಲ್ಲಿ 3
ಅಂದರೆ ಪಸ್ಕಹಬ್ಬದ ಮರುದಿನದಲ್ಲಿ ಇಸ್ರಾಯೇಲ್ಯರು
ಐಗುಪ್ತ್ಯರ ಎದುರಿನಲ್ಲೇ ಅಟ್ಟಹಾಸದಿಂದ ರಮ್ಸೇ
ಸಿನಿಂದ ಹೊರಟರು. ಆ ಕಾಲದಲ್ಲಿ ಯೆಹೋವನು 4
ಐಗುಪ್ತ್ಯರ ದೇವತೆಗಳನ್ನು ಶಿಕ್ಷಿಸಿ ಐಗುಪ್ತ್ಯರ
ಚೊಚ್ಚಲುಮಕ್ಕಳನ್ನು ಸಂಹರಿಸಿದದರಿಂದ ಅವರು
ಆ ಮಕ್ಕಳ ಶವಗಳನ್ನು ಸಮಾಧಿಮಾಡುತ್ತಿದ್ದರು.

ಇಸ್ರಾಯೇಲ್ಯರು ರಮ್ಸೇಸಿನಿಂದ ಹೊರಟು 5
ಸುಕ್ಕೋತಿನಲ್ಲಿ ಇಳಿದುಕೊಂಡರು.

ಸುಕ್ಕೋತಿನಿಂದ ಹೊರಟು ಅರಣ್ಯದ ಅಂಚಿನಲ್ಲಿ 6
ರುವ ಏತಾಮಿನಲ್ಲಿ ಇಳಿದುಕೊಂಡರು.

ಏತಾಮಿನಿಂದ ಹೊರಟು ಬಾಳ್ಜೆಫೋನಿಗೆ ಎದುರಾಗಿ 7
ರುವ ಪೀಹಹೀರೋತಿಗೆ ತಿರುಗಿಕೊಂಡು
ಮಿಗ್ದೋಲಿನ ಮೂಡಲಲ್ಲಿ ಇಳಿದುಕೊಂಡರು.

ಪೀಹಹೀರೋತಿನಿಂದ ಹೊರಟು ಸಮುದ್ರದ ಮಧ್ಯ 8
ದಲ್ಲೇ ನಡೆದು ಅರಣ್ಯಕ್ಕೆ ಬಂದರು. ಏತಾಮಿನ

ಅರಣ್ಯದಲ್ಲಿ ಮೂರು ದಿನ ಪ್ರಯಾಣಮಾಡಿ ಮಾರಾ ಎಂಬ ಸ್ಥಳದಲ್ಲಿ ಇಳಿದುಕೊಂಡರು.
9 ಮಾರದಿಂದ ಹೊರಟು ಏಲೀಮಿಗೆ ಬಂದರು; ಅಲ್ಲಿ ಹನ್ನೆರಡು ನೀರಿನ ಒರತೆಗಳೂ ಎಪ್ಪತ್ತು ಖರ್ಜೂರದ ಮರಗಳೂ ಇದ್ದದರಿಂದ ಅಲ್ಲಿ ಇಳಿದುಕೊಂಡರು.
10 ಏಲೀಮಿನಿಂದ ಹೊರಟು ಕೆಂಪು ಸಮುದ್ರದ ದಡದಲ್ಲಿ ಇಳಿದುಕೊಂಡರು.
11 ಕೆಂಪು ಸಮುದ್ರದಿಂದ ಹೊರಟು ಸೀನ್ ಅರಣ್ಯದಲ್ಲಿ ಇಳಿದುಕೊಂಡರು.
12 ಸೀನ್ ಅರಣ್ಯದಿಂದ ಹೊರಟು ದೊಪ್ಕದಲ್ಲಿ ಇಳಿದುಕೊಂಡರು.
13 ದೊಪ್ಕದಿಂದ ಹೊರಟು ಆಲೂಷಿನಲ್ಲಿ ಇಳಿದುಕೊಂಡರು.
14 ಆಲೂಷಿನಿಂದ ಹೊರಟು ರೆಫೀದೀಮಿನಲ್ಲಿ ಇಳಿದುಕೊಂಡರು; ಅಲ್ಲಿ ಜನರು ಕುಡಿಯುವದಕ್ಕೆ ನೀರು ಸಿಕ್ಕಲಿಲ್ಲ.
15 ರೆಫೀದೀಮಿನಿಂದ ಹೊರಟು ಸೀನಾಯಿ ಅರಣ್ಯದಲ್ಲಿ ಇಳಿದುಕೊಂಡರು.
16 ಸೀನಾಯಿ ಅರಣ್ಯದಿಂದ ಹೊರಟು ಕಿಬ್ರೋತ್ ಹತಾವದಲ್ಲಿ ಇಳಿದುಕೊಂಡರು.
17 ಕಿಬ್ರೋತ್‍ಹತಾವದಿಂದ ಹೊರಟು ಹಚೇರೋತಿನಲ್ಲಿ ಇಳಿದುಕೊಂಡರು.
18 ಹಚೇರೋತಿನಿಂದ ಹೊರಟು ರಿತ್ಮದಲ್ಲಿ ಇಳಿದುಕೊಂಡರು.
19 ರಿತ್ಮದಿಂದ ಹೊರಟು ರಿಮ್ಮೋನ್‍ಪೆರೆಚಿನಲ್ಲಿ ಇಳಿದುಕೊಂಡರು.
20 ರಿಮ್ಮೋನ್‍ಪೆರೆಚಿನಿಂದ ಹೊರಟು ಲಿಬ್ನದಲ್ಲಿ ಇಳಿದುಕೊಂಡರು.
21 ಲಿಬ್ನದಿಂದ ಹೊರಟು ರಿಸ್ಸದಲ್ಲಿ ಇಳಿದುಕೊಂಡರು.
22 ರಿಸ್ಸದಿಂದ ಹೊರಟು ಕೆಹೇಲಾತದಲ್ಲಿ ಇಳಿದುಕೊಂಡರು.
23 ಕೆಹೇಲಾತದಿಂದ ಹೊರಟು ಶೆಫೆರ್ ಬೆಟ್ಟದಲ್ಲಿ ಇಳಿದುಕೊಂಡರು.
24 ಶೆಫೆರ್ ಬೆಟ್ಟದಿಂದ ಹೊರಟು ಹರಾದದಲ್ಲಿ ಇಳಿದುಕೊಂಡರು.
25 ಹರಾದದಿಂದ ಹೊರಟು ಮಖೇಲೋತಿನಲ್ಲಿ ಇಳಿದುಕೊಂಡರು.
26 ಮಖೇಲೋತಿನಿಂದ ಹೊರಟು ತಹತಿನಲ್ಲಿ ಇಳಿದುಕೊಂಡರು.
27 ತಹತಿನಿಂದ ಹೊರಟು ತೆರಹದಲ್ಲಿ ಇಳಿದುಕೊಂಡರು.
28 ತೆರಹದಿಂದ ಹೊರಟು ಮಿತ್ಕದಲ್ಲಿ ಇಳಿದುಕೊಂಡರು.
29 ಮಿತ್ಕದಿಂದ ಹೊರಟು ಹಷ್ಮೋನದಲ್ಲಿ ಇಳಿದುಕೊಂಡರು.
30 ಹಷ್ಮೋನದಿಂದ ಹೊರಟು ಮೋಸೇರೋತಿನಲ್ಲಿ ಇಳಿದುಕೊಂಡರು.

ಮೋಸೇರೋತಿನಿಂದ ಹೊರಟು ಬೆನೇಯಾಕಾನಿನಲ್ಲಿ ಇಳಿದುಕೊಂಡರು.
ಬೆನೇಯಾಕಾನಿನಿಂದ ಹೊರಟು ಹೋರ್ಹಗಿದ್ಗಾದಿನಲ್ಲಿ ಇಳಿದುಕೊಂಡರು.
ಹೋರ್ಹಗಿದ್ಗಾದಿನಿಂದ ಹೊರಟು ಯೊಟ್ಬಾತದಲ್ಲಿ ಇಳಿದುಕೊಂಡರು.
ಯೊಟ್ಬಾತದಿಂದ ಹೊರಟು ಅಬ್ರೋನದಲ್ಲಿ ಇಳಿದುಕೊಂಡರು.
ಅಬ್ರೋನದಿಂದ ಹೊರಟು ಎಚ್ಯೋನ್‍ಗೆಬೆರಿನಲ್ಲಿ ಇಳಿದುಕೊಂಡರು.
ಎಚ್ಯೋನ್‍ಗೆಬೆರಿನಿಂದ ಹೊರಟು ಚಿನ್ ಅರಣ್ಯದಲ್ಲಿ ಇಳಿದುಕೊಂಡರು; ಅದು ಕಾದೇಶ್.
ಕಾದೇಶಿನಿಂದ ಹೊರಟು ಎದೋಮ್ಯರ ದೇಶದ ಅಂಚಿನಲ್ಲಿರುವ ಹೋರ್ ಬೆಟ್ಟದ ಬಳಿಯಲ್ಲಿ ಇಳಿದುಕೊಂಡರು. ಮಹಾಯಾಜಕ ಆರೋನನು ಯೆಹೋವನಿಂದ ಅಪ್ಪಣೆಯನ್ನು ಹೊಂದಿ ಹೋರ್ ಬೆಟ್ಟವನ್ನು ಹತ್ತಿ ಇಸ್ರಾಯೇಲ್ಯರು ಐಗುಪ್ತದೇಶದಿಂದ ಹೊರಟ ನಾಲ್ವತ್ತನೆಯ ವರುಷದ ಐದನೆಯ ತಿಂಗಳಿನ ಮೊದಲನೆಯ ದಿನದಲ್ಲಿ ಅಲ್ಲೇ ಪ್ರಾಣಬಿಟ್ಟನು. ಆರೋನನು ಹೋರ್ ಬೆಟ್ಟದಲ್ಲಿ ಸತ್ತಾಗ ಅವನು ನೂರಿಪ್ಪತ್ತು ಮೂರು ವರುಷದವನಾಗಿದ್ದನು.
ಇಸ್ರಾಯೇಲ್ಯರು ಬರುತ್ತಾರೆಂಬ ವರ್ತಮಾನವನ್ನು ಕಾನಾನ್‍ದೇಶದ ದಕ್ಷಿಣಪ್ರಾಂತ್ಯದಲ್ಲಿ ವಾಸವಾಗಿದ್ದ ಕಾನಾನ್ಯನಾದ ಅರಾದ್ ಪಟ್ಟಣದ ಅರಸನು ಕೇಳಿದನು.
ಇಸ್ರಾಯೇಲ್ಯರು ಹೋರ್ ಬೆಟ್ಟದಿಂದ ಹೊರಟು ಚಲ್ಮೋನದಲ್ಲಿ ಇಳಿದುಕೊಂಡರು.
ಚಲ್ಮೋನದಿಂದ ಹೊರಟು ಪೂನೋನಿನಲ್ಲಿ ಇಳಿದುಕೊಂಡರು.
ಪೂನೋನಿನಿಂದ ಹೊರಟು ಓಬೋತಿನಲ್ಲಿ ಇಳಿದುಕೊಂಡರು.
ಓಬೋತಿನಿಂದ ಹೊರಟು ಮೋವಾಬ್ಯರ ಸರಹದ್ದಿನಲ್ಲಿರುವ ಯೊರ್ದನ್ ಹೊಳೆಯ ಆಚೆಯಿರುವ ಇಯ್ಯೀಮಿನಲ್ಲಿ ಇಳಿದುಕೊಂಡರು.
ಇಯ್ಯೀಮಿನಿಂದ ಹೊರಟು ದೀಬೋನ್‍ಗಾದಿನಲ್ಲಿ ಇಳಿದುಕೊಂಡರು.
ದೀಬೋನ್‍ಗಾದಿನಿಂದ ಹೊರಟು ಅಲ್ಮೋನ್ ದಿಬ್ಲಾತಯಿಮಿನಲ್ಲಿ ಇಳಿದುಕೊಂಡರು.
ಅಲ್ಮೋನ್ ದಿಬ್ಲಾತಯಿಮಿನಿಂದ ಹೊರಟು 1)ಅಬಾರೀಮ್ ಬೆಟ್ಟಗಳಲ್ಲಿರುವ ನೇಬೋವಿನ ಮುಂಗಡಣದಲ್ಲಿ ಇಳಿದುಕೊಂಡರು.
ಅಬಾರೀಮ್ ಬೆಟ್ಟಗಳಿಂದ ಹೊರಟು ಯೆರಿಕೋ ಪಟ್ಟಣದ ಹತ್ತಿರ ಯೊರ್ದನ್ ಹೊಳೆಯ ತೀರದಲ್ಲಿ ಮೋವಾಬ್ಯರ ಮೈದಾನದಲ್ಲಿ ಇಳಿದುಕೊಂಡರು. ಅವರು ಮೋವಾಬ್ಯರ ಮೈದಾನದಲ್ಲಿ ಬೇತ್‍ಯೆಷಿಮೋತಿನಿಂದ ಆಬೇಲ್‍ಶಿಟ್ಟೀಮಿನ ವರೆಗೂ ಯೊರ್ದನ್ ಹೊಳೆಯ ತೀರದಲ್ಲಿ ಇಳಿದುಕೊಂಡರು.

1) ಅಂದರೆ ಯೊರ್ದನ್ ಹೊಳೆಯ ಆಚೆಯಿರುವ.

ಕಾನಾನ್‌ದೇಶವನ್ನು ಜಯಿಸಿ ಹಂಚಿಕೊಳ್ಳುವ ವಿಷಯದಲ್ಲಿ ಯೆಹೋವನು ಮಾಡಿದ ವಿಧಿಗಳು.

33. 50—36. 13.

ಇಸ್ರಾಯೇಲ್ಯರು ಕಾನಾನ್ಯರನ್ನೂ ಅವರ ಪೂಜಾಸ್ಥಳಗಳನ್ನೂ ಪೂರ್ಣವಾಗಿ ತೆಗೆದುಬಿಟ್ಟು ಅವರ ದೇಶವನ್ನು ಚೀಟುಹಾಕಿ ಹಂಚಿಕೊಳ್ಳಬೇಕೆಂಬ ವಿಧಿ.

ಯೊರ್ದನ್ ಹೊಳೆಯ ತೀರದಲ್ಲಿ ಯೆರಿಕೋ ಪಟ್ಟಣದ ಹತ್ತಿರವಿರುವ ಮೋವಾಬ್ಯರ ಮೈದಾನದಲ್ಲಿ ಯೆಹೋವನು ಮೋಶೆಗೆ ಹೇಳಿದ್ದೇನಂದರೆ—ನೀನು ಇಸ್ರಾಯೇಲ್ಯರಿಗೆ ಹೀಗೆ ಅಜ್ಞಾಪಿಸು—ನೀವು ಯೊರ್ದನ್ ಹೊಳೆಯನ್ನು ದಾಟಿ ಕಾನಾನ್‌ದೇಶವನ್ನು ಸೇರಿದಾಗ ಆ ದೇಶದ ನಿವಾಸಿಗಳನ್ನೆಲ್ಲಾ ಹೊರಡಿಸಿಬಿಟ್ಟು ಅವರ ವಿಚಿತ್ರವಾದ ಕಲ್ಲುಗಳನ್ನೂ ಲೋಹವಿಗ್ರಹಗಳನ್ನೂ ನಾಶಮಾಡಿ ಅವರ ಪೂಜಾಸ್ಥಳಗಳನ್ನು ಹಾಳುಮಾಡಬೇಕು.

ನಾನು ನಿಮಗೇ ಆ ದೇಶವನ್ನು ಸ್ವದೇಶವಾಗುವದಕ್ಕೆ ಕೊಟ್ಟದರಿಂದ ನೀವು ಅದನ್ನು ಸ್ವಾಧೀನಮಾಡಿಕೊಂಡು ಅದರಲ್ಲಿ ವಾಸಿಸಬೇಕು. ನೀವು ಚೀಟುಹಾಕಿ ಆ ದೇಶವನ್ನು ನಿಮ್ಮನಿಮ್ಮ ಕುಟುಂಬಗಳಿಗೆ ಹಂಚಿಕೊಳ್ಳಬೇಕು. ಹೆಚ್ಚು ಮಂದಿಯುಳ್ಳ ಕುಟುಂಬಕ್ಕೆ ಹೆಚ್ಚಾಗಿಯೂ ಕಡಮೆಯಾದ ಕುಟುಂಬಕ್ಕೆ ಕಡಮೆಯಾಗಿಯೂ ಸ್ವಾಸ್ತ್ಯವು ದೊರಕಬೇಕು. ಒಂದೊಂದು ಕುಟುಂಬದ ಚೀಟು ಯಾವ ಯಾವ ಸ್ಥಳವನ್ನು ಸೂಚಿಸುವದೋ ಆ ಸ್ಥಳದಲ್ಲಿಯೇ ಆ ಕುಟುಂಬದ ಸ್ವಾಸ್ತ್ಯವಿರಬೇಕು. ಒಂದೊಂದು ಕುಲದ ಕುಟುಂಬಗಳು ಒಂದೇ ಪ್ರದೇಶದಲ್ಲಿರಬೇಕು.

ನೀವು ದೇಶದ ನಿವಾಸಿಗಳನ್ನು ಹೊರಡಿಸಿಬಿಡದೆ ಹೋದರೆ ಅವರಲ್ಲಿ ನೀವು ಉಳಿಸಿದವರು ನಿಮಗೆ ಕಣ್ಣುಚುಚ್ಚುವ ಮುಳ್ಳುಗಳಂತೆಯೂ ಪಕ್ಕೆತಿವಿಯುವ ಶೂಲಗಳಂತೆಯೂ ಆಗಿ ನೀವು ವಾಸಿಸುವ ದೇಶದಲ್ಲಿ ನಿಮಗೆ ಕಂಟಕರಾಗಿರುವರು. ಅದಲ್ಲದೆ ನಾನು ಅವರಿಗೆ ಮಾಡ ಯೋಚಿಸಿದಂತೆ ನಿಮಗೇ ಮಾಡುವೆನು.

ಯೆಹೋವನು ಇಸ್ರಾಯೇಲ್ಯರಿಗೆ ವಾಗ್ದಾನಮಾಡಿದ ಕಾನಾನ್‌ದೇಶದ ಮೇರೆಗಳು.

4 ಯೆಹೋವನು ಮೋಶೆಗೆ ಹೇಳಿದ್ದೇನಂದರೆ—
2 ನೀನು ಇಸ್ರಾಯೇಲ್ಯರಿಗೆ ಹೀಗೆ ಆಜ್ಞಾಪಿಸಬೇಕು—ಸಮಸ್ತ ಕಾನಾನ್‌ದೇಶವೇ ನಿಮಗೆ ಸ್ವದೇಶವಾಗುವದಕ್ಕೆ ದೊರಕುವಂಥದು.

ನೀವು ಅಲ್ಲಿ ಸೇರಿದಾಗ ಎದೋಮ್ಯರ ಸರಹದ್ದಿನ ಬಳಿಯಲ್ಲಿರುವ ಚಿನ್ ಅರಣ್ಯವೇ ನಿಮ್ಮ ದಕ್ಷಿಣ ಮೇರೆಯಾಗಿರಬೇಕು. ಆ ಮೇರೆಯು ಮೂಡಣ ದಿಕ್ಕಿನಲ್ಲಿ ಲವಣಸಮುದ್ರದ ಕೊನೆಯಿಂದ ತೊಡಗಿ ದಕ್ಷಿಣಕ್ಕೆ ತಿರುಗಿಕೊಂಡು ಅಕ್ರಬ್ಬೀಮ್ ಎಂಬ ಕಣಿವೆಯ ಮಾರ್ಗವಾಗಿ ಚಿನಿಗೆ ಬರಬೇಕು. ಅದರ ಮೂಲೆ ಕಾದೇಶ್‌ಬರ್ನೇಯದ ದಕ್ಷಿಣ ಕಡೆಯಲ್ಲಿರಬೇಕು.
ಅಲ್ಲಿಂದ ಅದು ಹಚರದ್ದಾರ್, ಅಚ್ಮೋನ್ ಎಂಬ
ಊರುಗಳ ಮೇಲೆ ಐಗುಪ್ತದೇಶದ ಮುಂದಿರುವ 5
ಹಳ್ಳಕ್ಕೆ ಬಂದು ಸಮುದ್ರದ ದಡದಲ್ಲಿ ಮುಗಿಯಬೇಕು.

ಪಶ್ಚಿಮದಿಕ್ಕಿನಲ್ಲಿ ಮಹಾಸಮುದ್ರದ ದಡವೇ ನಿಮ್ಮ 6
ದೇಶದ ಮೇರೆಯಾಗಿರುವದು.

ಉತ್ತರದಿಕ್ಕಿನ ಮೇರೆಗಾಗಿ ನೀವು ಮಹಾಸಮುದ್ರ 7
ದಿಂದ ಹೋರ್ ಎಂಬ ಪರ್ವತಕ್ಕೂ ಆ ಪರ್ವತದಿಂದ 8
ಹಮಾತಿನ ದಾರಿಗೂ ಗುರುತುಹಾಕಿಕೊಳ್ಳಬೇಕು.
ಅದರ ಮೂಲೆ ಚೆದಾದಿನ ಹತ್ತಿರವಿರುವದು. ಆ ಮೇಲೆ 9
ಅದು ಜಿಫ್ರೋನಿಗೆ ಹೋಗಿ ಹಚರೇನಾನಿನ ಬಳಿಯಲ್ಲಿ ಮುಗಿಯಬೇಕು.

ಪೂರ್ವದಿಕ್ಕಿನ ಮೇರೆಗಾಗಿ ಹಚರೇನಾನಿನಿಂದ 10
ಶೆಫಾಮಿಗೆ ಗುರುತುಹಾಕಬೇಕು. ಅಲ್ಲಿಂದ ಅದು 11
ಅಯಿನಿನ ಮೂಡಲಲ್ಲಿರುವ ರಿಬ್ಲಕ್ಕೆ ಬರಬೇಕು.
ತರುವಾಯ ಅದು ಗಟ್ಟಾ ಇಳಿದು ಕಿನ್ನೆರೆತ್ ಸಮು
ದ್ರದ ಮೂಡಲಲ್ಲಿರುವ ಬೆಟ್ಟಗಳಿಗೆ ಹೋಗಬೇಕು.
ಅಲ್ಲಿಂದ ಅದು ಯೊರ್ದನ್ ಹೊಳೆಗೆ ಇಳಿದು [ಅದ 12
ನ್ನು ಅನುಸರಿಸಿ] ಲವಣಸಮುದ್ರದ ಬಳಿಯಲ್ಲಿ ಮುಗಿಯಬೇಕು.

ಇವೇ ನಿಮ್ಮ ದೇಶದ ಮೇರೆಗಳು ಅಂದನು.

ಅದಕ್ಕನುಸಾರವಾಗಿ ಮೋಶೆಯು ಇಸ್ರಾಯೇಲ್ಯ 13
ರಿಗೆ—ನೀವು ಚೀಟುಹಾಕಿ ಹಂಚಿಕೊಳ್ಳಬೇಕೆಂದು ಯೆಹೋವನು ಆಜ್ಞಾಪಿಸಿದ ದೇಶವು ಇದೇ; ಒಂಭತ್ತುವರೆ ಕುಲದವರಿಗೆ ಇದನ್ನು ಹಂಚಿಕೊಡಬೇಕು.
ಬೇರೆ ಎರಡುವರೆ ಕುಲಗಳವರು ಅಂದರೆ ರೂಬೇ 14, 15
ನ್ಯರ ಕುಟುಂಬಗಳೂ ಗಾದ್ಯರ ಕುಟುಂಬಗಳೂ ಮನಸ್ಸೆ ಕುಲದವರಲ್ಲಿ ಅರ್ಧಜನರೂ ಯೊರ್ದನ್ ಹೊಳೆಯ ಈಚೆ ಯೆರಿಕೋ ಪಟ್ಟಣಕ್ಕೆ ಪೂರ್ವದಿಕ್ಕಿನಲ್ಲಿ ಸ್ವಾಸ್ತ್ಯವನ್ನು ಹೊಂದಿದ್ದಾರಷ್ಟೆ ಎಂದು ಅಪ್ಪಣೆಕೊಟ್ಟನು.

ಕಾನಾನ್‌ದೇಶವನ್ನು ಹಂಚಿಕೊಡುವದಕ್ಕೆ ನೇಮಿಸಲ್ಪಟ್ಟವರ ಹೆಸರುಗಳು.

ಯೆಹೋವನು ಮೋಶೆಗೆ ಆಜ್ಞಾಪಿಸಿದ್ದೇನಂದರೆ— 16
ಮಹಾಯಾಜಕ ಎಲ್ಲಾಜಾರನೂ ನೂನನ ಮಗ 17
ನಾದ ಯೆಹೋಶುವನೂ ಒಂದೊಂದು ಕುಲದಿಂದ 18
ನೇಮಿಸಲ್ಪಟ್ಟ ಒಬ್ಬ ಕುಲಾಧಿಪತಿಯೂ ಇವರೇ ಕಾನಾನ್‌ದೇಶದಲ್ಲಿ ನಿಮ್ಮ ನಿಮ್ಮ ಸ್ವಾಸ್ತ್ಯಗಳನ್ನು
ಹಂಚಿಕೊಡಬೇಕು. ನೀವು ಆಯಾ ಕುಲಗಳಿಂದ 19
ನೇಮಿಸಬೇಕಾದವರು ಯಾರಂದರೆ—

ಯೆಹೂದ ಕುಲದಿಂದ ಯೆಫುನ್ನೆಯ ಮಗನಾದ ಕಾಲೇಬ್,

ಸಿಮೆಯೋನ್ ಕುಲದಿಂದ ಅಮ್ಮೀಹೂದನ ಮಗ 20
ಶೆಮೂವೇಲ್,

ಬೆನ್ಯಾಮೀನ್ ಕುಲದಿಂದ ಕಿಸ್ಲೋನನ ಮಗ 21
ಎಲೀದಾದ್,

22 ದಾನ್ ಕುಲದಿಂದ ಯೊಗ್ಲೀಯ ಮಗ ಬುಕ್ಕೀ
ಕುಲಾಧಿಪತಿ,
23 ಯೋಸೇಫನ ವಂಶದವರಲ್ಲಿ —
ಮನಸ್ಸೆ ಕುಲದಿಂದ ಏಫೋದನ ಮಗ ಹನ್ನೀ
ಯೇಲ್ ಕುಲಾಧಿಪತಿ,
24 ಎಫ್ರಾಯಿಮ್ ಕುಲದಿಂದ ಶಿಫ್ಟಾನನ ಮಗ
ಕೆಮೂವೇಲ್ ಕುಲಾಧಿಪತಿ,
25 ಜೆಬುಲೂನ್ ಕುಲದಿಂದ ಪರ್ನ್ನಾಕನ ಮಗ ಎಲೀ
ಚಾಫಾನ್ ಕುಲಾಧಿಪತಿ,
26 ಇಸ್ಸಾಕಾರ್ ಕುಲದಿಂದ ಅಜ್ಜಾನನ ಮಗ ಪಲ್ಟೀ
ಯೇಲ್ ಕುಲಾಧಿಪತಿ,
27 ಆಶೇರ್ ಕುಲದಿಂದ ಶೆಲೋಮಿಯ ಮಗ ಅಹೀ
ಹೂದ್ ಕುಲಾಧಿಪತಿ,
28 ನಫ್ತಾಲಿ ಕುಲದಿಂದ ಅಮ್ಮೀಹೂದನ ಮಗ ಪೆದ
ಹೇಲ್ ಕುಲಾಧಿಪತಿ ಇವರೇ.
29 ಕಾನಾನ್‌ದೇಶದಲ್ಲಿ ಇಸ್ರಾಯೇಲ್ಯರಿಗೆ ಅವರವರ
ಸ್ವಾಸ್ತ್ಯಗಳನ್ನು ಹಂಚಿಕೊಡುವದಕ್ಕೆ ಯೆಹೋವನು
ಇವರನ್ನೆಲ್ಲಾ ನೇಮಿಸಿದನು.

### ಇಸ್ರಾಯೇಲ್ಯರು ಲೇವಿಯರಿಗೆ ಕೊಡಬೇಕಾದ ಊರುಗಳನ್ನು ಕುರಿತದ್ದು.

35 ಯೊರ್ದನ್ ಹೊಳೆಯ ತೀರದಲ್ಲಿ ಯೆರಿಕೋ
ಪಟ್ಟಣದ ಹತ್ತಿರವಿರುವ ಮೋವಾಬ್ಯರ ಮೈದಾನ
ದಲ್ಲಿ ಯೆಹೋವನು ಮೋಶೆಗೆ ಹೇಳಿದ್ದೇನಂದರೆ—
2 ಇಸ್ರಾಯೇಲ್ಯರು ತಾವು ಹೊಂದುವ ಸ್ವಾಸ್ತ್ಯದಲ್ಲಿ
ಕೆಲವು ಊರುಗಳನ್ನೂ ಆ ಊರುಗಳ ಸುತ್ತಲಿನ
ಭೂಮಿಯನ್ನೂ ಲೇವಿಯರಿಗೆ ನಿವಾಸಕ್ಕಾಗಿ ಕೊಡ
3 ಬೇಕೆಂದು ಅವರಿಗೆ ಆಜ್ಞಾಪಿಸು. ಆ ಊರುಗಳು
ಲೇವಿಯರ ನಿವಾಸಕ್ಕಾಗಿ ಸುತ್ತಲಿರುವ ಭೂಮಿಗಳು
ಅವರ ದನ ಕುರಿ ಮೊದಲಾದ ಪಶುಗಳಿಗಾಗಿಯೂ
4 ಇರುವವು. ನೀವು ಲೇವಿಯರಿಗೆ ಕೊಡುವ ಊರು
ಗಳ ಸುತ್ತಲಿನ ಭೂಮಿಯು ಪ್ರತಿಯೊಂದು ಊರಿನ
ಗೋಡೆಯಿಂದ ನಾಲ್ಕು ಕಡೆಯಲ್ಲಿಯೂ ಸಾವಿರ
5 ಮೊಳದಷ್ಟು ವಿಸ್ತರಿಸಿಕೊಂಡಿರಬೇಕು. ನೀವು ಊರಿನ
ಹೊರಗಡೆ ನಾಲ್ಕು ದಿಕ್ಕುಗಳಲ್ಲಿಯೂ ಎರಡೆರಡು
ಸಾವಿರ ಮೊಳಗಳಷ್ಟು ಉದ್ದವಾಗಿ ಮೇರೆಗಳನ್ನು
ಗೊತ್ತುಮಾಡಬೇಕು; ಆ ಭೂಮಿಯ ನಡುವೆಯಲ್ಲಿ
ಊರು ಇರಬೇಕು; ಮಿಕ್ಕದ್ದು ಹುಲ್ಲುಗಾವಲು.
6 ಮನುಷ್ಯಹತ್ಯಮಾಡಿದವರು ಆಶ್ರಯಕ್ಕಾಗಿ ಓಡಿ
ಹೋಗುವದಕ್ಕೋಸ್ಕರ ನೀವು ನೇಮಿಸುವ ಆರು
ಆಶ್ರಯನಗರಗಳನ್ನೂ ಬೇರೆ ನಾಲ್ವತ್ತೆರಡು ಪಟ್ಟಣ
7 ಗಳನ್ನೂ ಅಂತೂ ನಾಲ್ವತ್ತೆಂಟು ಊರುಗಳನ್ನೂ ಇವು
ಗಳ ಸುತ್ತಲಿನ ಭೂಮಿಯನ್ನೂ ಲೇವಿಯರಿಗೆ ಕೊಡ
8 ಬೇಕು. ಇಸ್ರಾಯೇಲ್ಯರ ಸ್ವಾಸ್ತ್ಯದಲ್ಲಿ ಆಯಾ
ಕುಲದ ಸ್ವಾಸ್ತ್ಯದ ಪ್ರಮಾಣಕ್ಕೆ ತಕ್ಕ ಹಾಗೆ ಅಂದರೆ
ಹೆಚ್ಚಾದ ಮಂದಿಯುಳ್ಳವರಿಂದ ಹೆಚ್ಚಾಗಿಯೂ ಕಡಮೆ
ಯಾದ ಮಂದಿಯುಳ್ಳವರಿಂದ ಕಡಮೆಯಾಗಿಯೂ
ಲೇವಿಯರಿಗೋಸ್ಕರ ಊರುಗಳನ್ನು ಕೊಡಿಸಬೇಕು.

### ನರಹತ್ಯಮಾಡಿದವನು ಆಶ್ರಯಕ್ಕೆ ಓಡಿಹೋಗುವದಕ್ಕೋಸ್ಕರ ಆರು ಪಟ್ಟಣಗಳನ್ನು ನೇಮಿಸಬೇಕೆಂಬ ವಿಧಿ.

ಯೆಹೋವನು ಮೋಶೆಗೆ ಹೇಳಿದ್ದೇನಂದರೆ —
ನೀನು ಇಸ್ರಾಯೇಲ್ಯರಿಗೆ ಹೀಗೆ ಆಜ್ಞಾಪಿಸಬೇಕು —
ನೀವು ಯೊರ್ದನ್ ಹೊಳೆಯನ್ನು ದಾಟಿ ಕಾನಾನ್
ದೇಶವನ್ನು ಸೇರಿದನಂತರ ಆಶ್ರಯಸ್ಥಾನಗಳಾಗು
ವದಕ್ಕೆ ಪಟ್ಟಣಗಳನ್ನು ನೇಮಿಸಬೇಕು. ಕೈತಪ್ಪಿ
ಮತ್ತೊಬ್ಬನನ್ನು ಕೊಂದವನು ಅವುಗಳಲ್ಲಿ ಒಂದಕ್ಕೆ
ಓಡಿಹೋಗಿ ಸುರಕ್ಷಿತನಾಗಿರಬಹುದು. ಅವನು ಸಭೆ
ಯವರಿಂದ ತೀರ್ಪುಹೊಂದುವದಕ್ಕಿಂತ ಮೊದಲೇ ಹತ
ನಾದವನ [1]ಸಮೀಪಬಂಧುವಿನಿಂದ ಸಾಯದಂತೆ ಅ
ಆಶ್ರಯಸ್ಥಾನಗಳು ನಿಮ್ಮೊಳಗೆ ಇರಬೇಕು. ಹೀಗೆ 13
ಆಶ್ರಯಸ್ಥಾನಗಳಾಗಿರುವದಕ್ಕಾಗಿ ನೀವು ಯೊರ್ದನ್
ಹೊಳೆಯ ಈಚೆ ಮೂರು, ಕಾನಾನ್‌ದೇಶದಲ್ಲಿ ಮೂರು
ಅಂತು ಆರು ಪಟ್ಟಣಗಳನ್ನು ನೇಮಿಸಬೇಕು. ಕೈತಪ್ಪಿ
ಮತ್ತೊಬ್ಬನನ್ನು ಕೊಂದವನು ಇಸ್ರಾಯೇಲ್ಯನಾಗಲಿ
ಪರದೇಶದವನಾಗಲಿ ನಿಮ್ಮಲ್ಲಿ ಇಳಿದುಕೊಂಡವನಾಗಲಿ
ಆ ಆರು ಪಟ್ಟಣಗಳೊಳಗೆ ಒಂದಕ್ಕೆ ಓಡಿಹೋಗಿ
ಆಶ್ರಯಹೊಂದಬಹುದು.
ಯಾವನಾದರೂ ಕಬ್ಬಿಣದ ಆಯುಧದಿಂದ ಮ
ತ್ತೊಬ್ಬನನ್ನು ಹೊಡೆದು ಕೊಂದರೆ ಅವನು ನರಹತ್ಯ
ಮಾಡಿದವನೆಂದು ನೀವು ನಿರ್ಣಯಿಸಬೇಕು; ಅಂಥವ
ನಿಗೆ ಮರಣಶಿಕ್ಷೆಯಾಗಬೇಕು. ಯಾವನಾದರೂ
ಮನುಷ್ಯನನ್ನು ಕೊಲ್ಲುವಷ್ಟು ದೊಡ್ಡ ಕಲ್ಲನ್ನು
ಕೈಯಲ್ಲಿ ಹಿಡಿದು ಮತ್ತೊಬ್ಬನನ್ನು ಹೊಡೆದು
ಕೊಂದರೆ ಅವನು ನರಹತ್ಯಮಾಡಿದವನೇ; ಅವನಿಗೆ
ಮರಣಶಿಕ್ಷೆಯಾಗಬೇಕು. ಯಾವನಾದರೂ ಮನು
ಷ್ಯನನ್ನು ಕೊಲ್ಲುವಷ್ಟು ದೊಡ್ಡ ಮರದ ಆಯುಧ
ವನ್ನು ಕೈಯಲ್ಲಿ ಹಿಡಿದು ಮತ್ತೊಬ್ಬನನ್ನು ಹೊಡೆದು
ಕೊಂದರೆ ಅವನು ನರಹತ್ಯಮಾಡಿದವನೇ; ಅವನಿಗೆ
ಮರಣಶಿಕ್ಷೆಯಾಗಬೇಕು. ನರಹತ್ಯಮಾಡಿದವನು
ಎಲ್ಲಿ ಸಿಕ್ಕಿದರೂ ಅವನನ್ನು ಕೊಲ್ಲಬೇಕಾದವನು
ಯಾರಂದರೆ ಹತವಾದವನ ಸಮೀಪಬಂಧುವೇ.
ಯಾವನಾದರೂ ಮತ್ತೊಬ್ಬನನ್ನು ಹಗೆಮಾಡಿ ನೂಕು
ವದರಿಂದಾಗಲಿ ಸಮಯನೋಡಿಕೊಂಡು ಅವನ ಮೇಲೆ
ಏನಾದರೂ ಎಸೆಯುವದರಿಂದಾಗಲಿ ದ್ವೇಷದಿಂದ
ಕೈಯಾರೆ ಹೊಡೆಯುವದರಿಂದಾಗಲಿ ಕೊಂದರೆ ಅವನು
ನರಹತ್ಯಮಾಡಿದವನೇ; ಅವನಿಗೆ ಮರಣಶಿಕ್ಷೆಯಾಗ
ಬೇಕು. ಹತವಾದವನ ಸಮೀಪಬಂಧುವು ಅವನನ್ನು
ಎಲ್ಲಿ ಕಂಡರೂ ಕೊಲ್ಲಲಿ.
ಆದರೆ ಒಬ್ಬನು ಯಾವ ದ್ವೇಷವೂ ಇಲ್ಲದೆ ಅಕ
ಸ್ಮಾತ್ತಾಗಿ ನೂಕುವದರಿಂದಾಗಲಿ ಹಾನಿಮಾಡುವ ಸಮ
ಯವನ್ನು ನೋಡಿಕೊಳ್ಳದೆ ಏನಾದರೂ ಎಸೆಯುವದ
ರಿಂದಾಗಲಿ ಕೊಲ್ಲುವಷ್ಟು ದೊಡ್ಡ ಕಲ್ಲನ್ನು ತಿಳಿಯದೆ
ಬೀಳಿಸುವದರಿಂದಾಗಲಿ ಮತ್ತೊಬ್ಬನು ಸತ್ತರೆ ಅವನು
ಆ ಮನುಷ್ಯನಿಗೆ ವೈರಿಯಾಗಿರದೆಯೂ ಹಾನಿಯನ್ನು
ಮಾಡಬೇಕೆಂಬ ಅಭಿಪ್ರಾಯವಿಲ್ಲದೆಯೂ ಇಷ್ಟ

1) ಅಥವಾ: ಹತ್ಯಮಾಡಿದವನಿಗೆ ಮುಯ್ಯಿತೀರಿಸುವ ಹಂಗುಳ್ಳವನಿಂದ.

ಪಕ್ಷಕ್ಕೆ ಸಭೆಯವರು ಹತ್ಯಮಾಡಿದವನಿಗೂ ಹತವಾ
ದವನ ಸಮೀಪಬಂಧುವಿಗೂ ಈ ಸಂಗತಿಗಳಿಗೆ ಅನು
ಸಾರವಾಗಿ ನ್ಯಾಯತೀರಿಸಿ ಹತ್ಯಮಾಡಿದವನನ್ನು ಆ
ಸಮೀಪಬಂಧುವಿನ ಕೈಯಿಂದ ತಪ್ಪಿಸಿ ಅವನು ಓಡಿ
ಹೋಗಿದ್ದ ಆಶ್ರಯನಗರಕ್ಕೆ ತಿರಿಗಿ ಸೇರಿಸಬೇಕು. ಪಟ್ಟಾ
ಭಿಷೇಕಹೊಂದಿದ ಮಹಾಯಾಜಕನು ಜೀವದಿಂದಿರುವ
ತನಕ ಅವನು ಆ ಪಟ್ಟಣದಲ್ಲೇ ವಾಸಿಸಬೇಕು.
ಆ ಹತ್ಯಮಾಡಿದವನು ಯಾವಾಗಲಾದರೂ ತಾನು
ಓಡಿಹೋಗಿದ್ದ ಆಶ್ರಯನಗರದ ಮೇರೆಯ ಹೊರಗೆ
ಹೋಗಿರುವಾಗ ಹತವಾದವನ ಸಮೀಪಬಂಧುವು
ಅವನನ್ನು ಕಂಡು ಕೊಂದುಹಾಕಿದರೂ ಕೊಲೆಪಾತಕ
ನಾಗುವದಿಲ್ಲ. ಮಹಾಯಾಜಕನು ಜೀವದಿಂದಿರುವ
ತನಕ ಅವನು ಆಶ್ರಯನಗರದೊಳಗೆ ಇರಬೇಕಾಗಿತ್ತು.
ಮಹಾಯಾಜಕನು ತೀರಿಹೋದನಂತರ ಅವನು ತನ್ನ
ಸ್ವಾಸ್ತ್ಯವಿರುವ ಸ್ಥಳಕ್ಕೆ ಹೋಗಬಹುದು.
ನೀವೂ ನಿಮ್ಮ ಸಂತತಿಯವರೂ ನಿಮ್ಮ ಎಲ್ಲಾ
ನಿವಾಸಗಳಲ್ಲಿ ಈ ಮಾತುಗಳಿಗೆ ಅನುಸಾರವಾಗಿ
ನ್ಯಾಯತೀರಿಸಬೇಕು.
ಯಾವನಾದರೂ ಮತ್ತೊಬ್ಬನನ್ನು ಕೊಂದಾಗ
ನೀವು ಸಾಕ್ಷಿಗಳನ್ನು ವಿಚಾರಿಸಿಕೊಂಡು ಅವನಿಗೆ
ಮರಣಶಿಕ್ಷೆಯನ್ನು ವಿಧಿಸಬೇಕು. ಒಬ್ಬನೇ ಒಬ್ಬನ
ಸಾಕ್ಷಿ ಮಾತ್ರ ಇದ್ದರೆ ಮರಣಶಿಕ್ಷೆಯನ್ನು ವಿಧಿಸ
ಕೂಡದು. ಮರಣಶಿಕ್ಷೆಗೆ ಪಾತ್ರನಾದ ಕೊಲೆಪಾತಕ
ನನ್ನು ಉಳಿಸುವದಕ್ಕೆ ಈಡನ್ನು ತೆಗೆದುಕೊಳ್ಳಕೂಡದು;
ಅವನಿಗೆ ಮರಣಶಿಕ್ಷೆಯೇ ಆಗಬೇಕು. ನೀವು
ಆಶ್ರಯನಗರಕ್ಕೆ ಓಡಿಹೋದವನಿಂದ ಧನವನ್ನು ತೆಗೆದು
ಕೊಂಡು ಮಹಾಯಾಜಕನು ಜೀವದಿಂದಿರುವಾಗಲೇ
ಸ್ವಸ್ಥಳಕ್ಕೆ ಹೋಗಗೊಡಿಸಕೂಡದು.
ನೀವು ಹೀಗೆ ನಡೆದುಕೊಂಡರೆ ನಿಮ್ಮ ದೇಶವು
ಅಪವಿತ್ರವಾಗುವದಿಲ್ಲ. ರಕ್ತವು ದೇಶವನ್ನು ಅಪವಿತ್ರ
ಮಾಡುವದಷ್ಟೆ. ಕೊಲ್ಲಲ್ಪಟ್ಟವನ ರಕ್ತಕ್ಕಾಗಿ ಕೊಂದ
ವನ ರಕ್ತದಿಂದಲೇ ಹೊರತು ಬೇರೆ ಪ್ರಾಯಶ್ಚಿತ್ತವಿಲ್ಲ.
ನೀವು ವಾಸಿಸುವ ದೇಶವನ್ನು ಅಪವಿತ್ರಮಾಡಬಾರದು;
ಯೆಹೋವನೆಂಬ ನಾನೇ ಇಸ್ರಾಯೇಲ್ಯರ ನಡುವೆ
ಆ ದೇಶದಲ್ಲಿ ವಾಸಿಸುತ್ತೇನಲ್ಲಾ.

ಸ್ವಾಸ್ತ್ಯವು ಹೆಣ್ಣುಮಕ್ಕಳ ಪಾಲಾಗುವ ಸಂದರ್ಭದಲ್ಲಿ
ಅವರು ಸ್ವಕುಲದಲ್ಲಿಯೇ ಮದುವೆಯನ್ನು
ಮಾಡಿಕೊಳ್ಳಬೇಕೆಂಬ ವಿಧಿ.

36 ಯೋಸೇಫನ ವಂಶದವರೊಳಗೆ ಮನಸ್ಸೆಯ
ಮೊಮ್ಮಗನೂ ಮಾಕೀರನ ಮಗನೂ ಆಗಿದ್ದ ಗಿಲ್ಯಾ
ದನ ಸಂತತಿಯವರ ಮುಖಂಡರು ಮೋಶೆಯ ಬಳಿಗೂ
ಇಸ್ರಾಯೇಲ್ಯರ ಕುಲಾಧಿಪತಿಗಳ ಬಳಿಗೂ ಬಂದು—
ದೇಶವನ್ನು ಚೀಟುಹಾಕಿ ಇಸ್ರಾಯೇಲ್ಯರಿಗೆ ಹಂಚಿ 2
ಕೊಡಬೇಕೆಂದು ಯೆಹೋವನು ಒಡೆಯನಿಗೆ ಆಜ್ಞಾ
ಪಿಸಿ ತರುವಾಯ ನಮ್ಮ ಸ್ವಕುಲದವನಾದ ಚೆಲ್ಪಹಾದ
ನಿಗೆ ಬರತಕ್ಕ ಸ್ವಾಸ್ತ್ಯವನ್ನು ಅವನ ಹೆಣ್ಣುಮಕ್ಕಳಿಗೆ
ಕೊಡಬೇಕೆಂದೂ ಅಪ್ಪಣೆಮಾಡಿದನಷ್ಟೆ. ಹೀಗಿರಲು 3
ಅವರು ಇಸ್ರಾಯೇಲ್ಯರ ಬೇರೆ ಕುಲದವರಿಗೆ ಮದುವೆ
ಯಾದ ಪಕ್ಷಕ್ಕೆ ಅವರ ಸ್ವಾಸ್ತ್ಯವು ನಮ್ಮ ಕುಲದಿಂದ
ತೆಗೆಯಲ್ಪಟ್ಟು ಅವರು ಸೇರಿಕೊಳ್ಳುವ ಕುಲಕ್ಕೆ
ಹೋಗುವದು. ಇದರಿಂದ ನಮ್ಮ ಸ್ವಾಸ್ತ್ಯಕ್ಕೆ ನಷ್ಟ
ವುಂಟಾಗುವದು. ಇಸ್ರಾಯೇಲ್ಯರ ಜೂಬಿಲಿ ಸಂವತ್ಸ 4
ರವು ಬಂದಾಗ ಅವರ ಸ್ವಾಸ್ತ್ಯವು ಅವರು ಸೇರಿ
ಕೊಳ್ಳುವ ಕುಲದ ಸ್ವಾಸ್ತ್ಯಕ್ಕೆ ಕೂಡಿಕೊಳ್ಳುವದ
ರಿಂದ ನಮ್ಮ ಕುಲದಿಂದ ತೆಗೆಯಲ್ಪಡುವದು ಎಂದು
ಹೇಳಿದರು.
ಆಗ ಮೋಶೆಯು ಯೆಹೋವನ ಅಪ್ಪಣೆಯನ್ನು 5
ಹೊಂದಿ ಇಸ್ರಾಯೇಲ್ಯರಿಗೆ—ಯೋಸೇಫನ ಕುಲ
ದವರು ಹೇಳುವ ಮಾತು ನ್ಯಾಯ. ಆದಕಾರಣ 6
ಚೆಲ್ಪಹಾದನ ಹೆಣ್ಣುಮಕ್ಕಳು ತಮ್ಮ ಕುಲದ ಕುಟುಂಬ
ಗಳಲ್ಲಿ ಮಾತ್ರವೇ ತಮಗೆ ಇಷ್ಟಬಂದವರನ್ನು ಮದು
ವೆಮಾಡಿಕೊಳ್ಳಬೇಕೆಂದು ಯೆಹೋವನು ಅಪ್ಪಣೆ
ಮಾಡಿದ್ದಾನೆ. ಇಸ್ರಾಯೇಲ್ಯರ ಯಾವ ಸ್ವಾಸ್ತ್ಯವೂ 7
ಒಂದು ಕುಲದಿಂದ ಬೇರೊಂದು ಕುಲಕ್ಕೆ ಹೋಗ
ಬಾರದು. ಇಸ್ರಾಯೇಲ್ಯರೆಲ್ಲರೂ ತಮ್ಮ ತಮ್ಮ ಕುಲ
ಗಳ ಸ್ವಾಸ್ತ್ಯವನ್ನು ಹೊಂದಿಕೊಂಡೇ ಇರಬೇಕು.
ಇದಕ್ಕಾಗಿ ಇಸ್ರಾಯೇಲ್ಯರಲ್ಲಿ ಸ್ವಾಸ್ತ್ಯವನ್ನು ಹೊಂದಿ 8
ದ ಹೆಣ್ಣುಮಕ್ಕಳು ಸ್ವಕುಲದಲ್ಲಿಯೇ ಮದುವೆ
ಮಾಡಿಕೊಳ್ಳಬೇಕು. ಹೀಗೆ ಯಾವ ಸ್ವಾಸ್ತ್ಯವೂ 9
ಒಂದು ಕುಲದಿಂದ ಬೇರೊಂದು ಕುಲಕ್ಕೆ ಹೋಗದೆ
ಇಸ್ರಾಯೇಲ್ಯರ ಪ್ರತಿಯೊಂದು ಕುಲವು ತನ್ನ ಸ್ವಾಸ್ತ್ಯ
ವನ್ನು ಹೊಂದಿಕೊಂಡೇ ಇರುವದು ಎಂದು ಆಜ್ಞಾ
ಪಿಸಿದನು.
ಚೆಲ್ಪಹಾದನ ಹೆಣ್ಣುಮಕ್ಕಳಾದ ಮಹ್ಲಾ, 10, 11
ತಿರ್ಚಾ, ಹೊಗ್ಲಾ, ಮಿಲ್ಕಾ, ನೋವಾ ಎಂಬವರು
ಯೆಹೋವನ ಆಜ್ಞಾನುಸಾರ ನಡೆದು ತಂದೆಯ ಅಣ್ಣ
ತಮ್ಮಂದಿರ ಮಕ್ಕಳನ್ನು ಮದುವೆಮಾಡಿಕೊಂಡರು.
ಅವರು ಯೋಸೇಫನ ಮಗನಾದ ಮನಸ್ಸೆಯ ಕುಲ 12
ದವರಿಗೇ ಮದುವೆಯಾದದರಿಂದ ಅವರ ಸ್ವಾಸ್ತ್ಯವು
ತಂದೆಯ ಕುಲದಲ್ಲಿಯೇ ನಿಂತಿತು.
ಯೊರ್ದನ್ ಹೊಳೆಯ ತೀರದಲ್ಲಿ ಯೆರಿಕೋ 13
ಪಟ್ಟಣದ ಹತ್ತಿರವಿರುವ ಮೋವಾಬ್ಯರ ಮೈದಾನದಲ್ಲಿ
ಯೆಹೋವನು ಮೋಶೆಯ ಮೂಲಕ ಇಸ್ರಾಯೇಲ್ಯ
ರಿಗೆ ಕೊಟ್ಟ ಆಜ್ಞಾವಿಧಿಗಳು ಇವೇ.

# DEUTERONOMY

## ಮೋಶೆಯ ಧರ್ಮಶಾಸ್ತ್ರದಲ್ಲಿ ಧರ್ಮೋಪದೇಶಕಾಂಡ ಎಂಬ ಪಂಚಮಭಾಗವು.

ಮೋಶೆಯು ಮುಂದಣ ಮೂರು ಉಪನ್ಯಾಸಗಳನ್ನು ಮಾಡಿದ
ಕಾಲ ಮತ್ತು ಸ್ಥಳ ಇವುಗಳ ವಿಷಯ.

1 ಯೊರ್ದನ್ ಹೊಳೆಯ ಆಚೆ, ಪಾರಾನಿಗೂ
ತೋಫೆಲ್ ಲಾಬಾನ್ ಹಚೇರೋತ್ ದೀಜಾಹಾಬ್
ಎಂಬ ಸ್ಥಳಗಳಿಗೂ ನಡುವೆ, ಅರಣ್ಯದಲ್ಲಿ 1)ಅರಾಬಾ
ಎಂಬ ತಗ್ಗಾದ ಪ್ರದೇಶದಲ್ಲಿ ಸೂಫಿಗೆ ಎದುರಾಗಿ
ಮೋಶೆಯು ಇಸ್ರಾಯೇಲ್ಯರೆಲ್ಲರಿಗೆ ಮಾಡಿದ ಉಪ
2 ನ್ಯಾಸಗಳು. (ಹೋರೇಬಿನಿಂದ ಸೇಯಿರ್ ಬೆಟ್ಟ
ಗಳ ಮಾರ್ಗವಾಗಿ ಕಾದೇಶ್‌ಬರ್ನೇಯದ ವರೆಗೆ
ಹನ್ನೊಂದು ದಿನದ ದಾರಿ.)
3 ಮೋಶೆಯು ಹೆಷ್ಬೋನಿನಲ್ಲಿದ್ದ ಅಮೋರಿಯರ
ಅರಸನಾದ ಸೀಹೋನನನ್ನೂ ಅಷ್ಟಾರೋತ್, 2)ಎದ್ರೈ
ಎಂಬ ಪಟ್ಟಣಗಳಲ್ಲಿದ್ದ ಬಾಷಾನಿನ ಅರಸನಾದ ಓಗ
4 ನನ್ನೂ ಜಯಿಸಿದ ತರುವಾಯ, ಅಂದರೆ [ಇಸ್ರಾ
ಯೇಲ್ಯರು ಐಗುಪ್ತದೇಶವನ್ನು ಬಿಟ್ಟ] ನಾಲ್ವತ್ತನೆಯ
ವರುಷದ ಹನ್ನೊಂದನೆಯ ತಿಂಗಳಿನ ಮೊದಲನೆಯ
ದಿನದಲ್ಲಿ ಯೆಹೋವನು ತನಗೆ ಆಜ್ಞಾಪಿಸಿದ್ದನ್ನೆಲ್ಲಾ
ಇಸ್ರಾಯೇಲ್ಯರಿಗೆ ತಿಳಿಸಿದನು.

### ಮೋಶೆ ಮಾಡಿದ ಮೊದಲನೆಯ ಉಪನ್ಯಾಸ.

### 1. 5—4. 40.

ಮೋಶೆ ಅರಣ್ಯಪ್ರಯಾಣದ ಮುಖ್ಯಸಂಗತಿಗಳನ್ನು
ಇಸ್ರಾಯೇಲ್ಯರಿಗೆ ಜ್ಞಾಪಕಪಡಿಸಿದ್ದು. 1. 5—3. 29.
ಕಾನಾನ್ಯರ ದೇಶವನ್ನು ಸ್ವಾಧೀನಮಾಡಿಕೊಳ್ಳುವದಕ್ಕೆ
ಇಸ್ರಾಯೇಲ್ಯರ ಮೊದಲನೆಯ ಪ್ರಯತ್ನವು ಅವಿಧೇಯತ್ವದ
ದೆಸೆಯಿಂದ ನಿಷ್ಫಲವಾದದ್ದು.

5 ಯೊರ್ದನ್ ಹೊಳೆಯ ಆಚೆ ಮೋವಾಬ್ಯರ ದೇಶ
ದಲ್ಲಿ ಮೋಶೆಯು ಈ ಮುಂದಣ ಧರ್ಮಶಾಸ್ತ್ರವನ್ನು
ವಿವರಿಸುವದಕ್ಕೆ ಪ್ರಾರಂಭಿಸಿ ಹೇಳಿದನು—
6 ಹೋರೇಬಿನಲ್ಲಿ ನಮ್ಮ ದೇವರಾದ ಯೆಹೋವನು
ನಮಗೆ—ನೀವು ಈ ಬೆಟ್ಟದ ಬಳಿಯಲ್ಲಿ ವಾಸಿಸಿದ್ದು
7 ಸಾಕು; ಈಗ ಹಿಂದಿರುಗಿ ಅಮೋರಿಯರು ಇರುವ
ಬೆಟ್ಟದ ಸೀಮೆಗೂ ಅದಕ್ಕೆ ಸೇರಿದ ಪ್ರದೇಶವೆಲ್ಲಕ್ಕೂ
ಪ್ರಯಾಣಮಾಡಿರಿ. ಅವು ಯಾವವಂದರೆ—ತಗ್ಗಾದ
ಪ್ರದೇಶ, ಬೆಟ್ಟದ ಮೇಲಿನ ಪ್ರದೇಶ, ಇಳಕಲಿನ
ಪ್ರದೇಶ, ದಕ್ಷಿಣಸೀಮೆ, ಸಮುದ್ರತೀರ ಎಂಬ ನಾಡು
ಗಳನ್ನು ಒಳಗೊಂಡಿರುವ ಕಾನಾನ್ಯರ ದೇಶ, ಲೆಬ
ನೋನ್ ಪರ್ವತ ಮತ್ತು ಯೂಫ್ರೇಟೀಸ್ ಎಂಬ ಮಹಾ
ನದಿಯ ವರೆಗೆ ವಿಸ್ತರಿಸಿಕೊಂಡಿರುವ ಪ್ರದೇಶ ಇವುಗಳೇ.
ಆ ದೇಶವನ್ನು ನಿಮಗೇ ಕೊಟ್ಟಿದ್ದೇನೆ; ಯೆಹೋವ
ನೆಂಬ ನಾನು ನಿಮ್ಮ ಪಿತೃಗಳಾದ ಅಬ್ರಹಾಮ್
ಇಸಾಕ್ ಯಾಕೋಬರಿಗೂ ಅವರ ಸಂತತಿಯವರಿಗೂ
ಆ ದೇಶವನ್ನು ಪ್ರಮಾಣಪೂರ್ವಕವಾಗಿ ವಾಗ್ದಾನ
ಮಾಡಿದೆನಲ್ಲಾ. ಅದರಲ್ಲಿ ಪ್ರವೇಶಮಾಡಿ ಸ್ವಾಧೀನ
ಮಾಡಿಕೊಳ್ಳಿರಿ ಎಂದು ಆಜ್ಞಾಪಿಸಿದನು.
ಆ ಕಾಲದಲ್ಲಿ ನಾನು ನಿಮ್ಮ ಸಂಗಡ ಮಾತಾಡಿ—
ನಿಮ್ಮ ಭಾರವನ್ನು ನಾನೊಬ್ಬನೇ ಹೊರುವದು
ಅಸಾಧ್ಯ; ನಿಮ್ಮ ದೇವರಾದ ಯೆಹೋವನು ನಿಮ್ಮನ್ನು
ಹೆಚ್ಚಿಸಿದ್ದರಿಂದ ನೀವು ಈಗ ಆಕಾಶದ ನಕ್ಷತ್ರಗಳ
ಷ್ಟಾದಿರಲ್ಲಾ. ನೀವು ಈಗ ಇರುವದಕ್ಕಿಂತಲೂ ಇನ್ನು
ಸಾವಿರದಷ್ಟಾಗುವಂತೆ ನಿಮ್ಮ ಪಿತೃಗಳ ದೇವರಾದ
ಯೆಹೋವನು ನಿಮ್ಮನ್ನು ಹೆಚ್ಚಿಸಿ ತಾನು ವಾಗ್ದಾನ
ಮಾಡಿದ ಪ್ರಕಾರವೇ ನಿಮಗೆ ಶುಭಗಳನ್ನು ಅನು
ಗ್ರಹಿಸಲಿ. ಆದರೆ ನಿಮ್ಮಿಂದಾಗುವ ತೊಂದರೆಗಳನ್ನೂ
ಭಾರವನ್ನೂ ವ್ಯಾಜ್ಯಗಳನ್ನೂ ನಾನೊಬ್ಬನೇ ಸಹಿಸು
ವದು ಹೇಗೆ? ಆದದರಿಂದ ನೀವು ಪ್ರತಿಯೊಂದು
ಕುಲದಿಂದ ಪ್ರಸಿದ್ಧರಾದ ಬುದ್ಧಿವಿವೇಕವುಳ್ಳ ಪುರುಷ
ರನ್ನು ಆರಿಸಿಕೊಳ್ಳಿರಿ; ನಾನು ಅವರನ್ನು ನಿಮಗೆ
ಅಧಿಪತಿಗಳನ್ನಾಗಿ ನೇಮಿಸುವೆನು ಎಂದು ಹೇಳಿದೆನು.
ಅದಕ್ಕೆ ನೀವು—ನಿನ್ನ ಆಲೋಚನೆಯಂತೆ ನಡೆಯು
ವದು ವಿಹಿತವಾದದ್ದೇ ಎಂದು ಉತ್ತರಕೊಟ್ಟಿರಿ. ಆಗ
ನಾನು ನಿಮ್ಮಲ್ಲಿ ಪ್ರಸಿದ್ಧರಾದ ಬುದ್ಧಿವಂತರನ್ನು
ಕರಿಸಿ ಒಂದೊಂದು ಕುಲದಲ್ಲಿ ಸಾವಿರ ಮಂದಿಯ
ಮೇಲೆಯೂ ನೂರು ಮಂದಿಯ ಮೇಲೆಯೂ ಐವತ್ತು
ಮಂದಿಯ ಮೇಲೆಯೂ ಹತ್ತು ಮಂದಿಯ ಮೇಲೆಯೂ
ಅಧಿಕಾರಿಗಳನ್ನಾಗಿಯೂ ಉಪಾಧಿಕಾರಿಗಳನ್ನಾಗಿಯೂ

1)ಅಂದರೆ ಯೊರ್ದನ್ ಹೊಳೆಯ ಆಳವಾದ ತಗ್ಗಿನಲ್ಲಿ.

2) ಪಾಠಾಂತರ: ಅಷ್ಟಾರೋಥಿನಲ್ಲಿದ್ದ ಬಾಷಾನಿನ ಅರಸ
ಓಗನನ್ನೂ ಎದ್ರೈಯಲ್ಲಿ.

16 ನೇಮಿಸಿದೆನು. ಆ ನ್ಯಾಯಾಧಿಪತಿಗಳಿಗೆ ನಾನು
ಆ ಕಾಲದಲ್ಲಿ ಅಪ್ಪಣೆಮಾಡಿ—ನೀವು ಸ್ವಕುಲದವರ
ವ್ಯಾಜ್ಯಗಳನ್ನು ವಿಚಾರಿಸಬೇಕು; ಅವರು ಇಸ್ರಾಯೇ
ಲ್ಯರೊಡನೆ ವ್ಯಾಜ್ಯವಾಡಿದರೂ ಅನ್ಯರೊಡನೆ ವ್ಯಾಜ್ಯ
ವಾಡಿದರೂ ನೀವು ನ್ಯಾಯದ ಪ್ರಕಾರವೇ ತೀರ್ಪು
17 ಮಾಡಬೇಕು. ನ್ಯಾಯವಿಚಾರಿಸುವಾಗ ಮುಖದಾಕ್ಷಿ
ಣ್ಯಮಾಡದೆ ಅಧಿಕರನ್ನೂ ಅಲ್ಪರನ್ನೂ ಸಮನಾಗಿ
ತಿಳಿಯಬೇಕು. ನೀವು ದೇವರ ಹೆಸರಿನಲ್ಲಿ ನ್ಯಾಯ
ತೀರಿಸುವವರಾದ ಕಾರಣ ಮನುಷ್ಯರ ಮುಖವನ್ನು
ನೋಡಿ ಹೆದರಬೇಡಿರಿ. ನೀವು ತೀರಿಸಲಿಕ್ಕಾಗದ
ವ್ಯಾಜ್ಯಗಳನ್ನು ನನ್ನ ಬಳಿಗೆ ತರಬೇಕು; ನಾನೇ
18 ಅವುಗಳನ್ನು ತೀರಿಸುವೆನು ಎಂದು ಹೇಳಿದೆನು. ಅದ
ಲ್ಲದೆ ನೀವು ಮಾಡಬೇಕಾದ ಎಲ್ಲಾ ಕಾರ್ಯಗಳ
ವಿಷಯದಲ್ಲಿಯೂ ನಾನು ಆ ಕಾಲದಲ್ಲಿ ನಿಮಗೆ
ಆಜ್ಞೆಕೊಟ್ಟೆನು.
19 ನಾವು ಹೋರೇಬಿನಿಂದ ಹೊರಟು ನಮ್ಮ ದೇವ
ರಾದ ಯೆಹೋವನು ಆಜ್ಞಾಪಿಸಿದಂತೆ ಅಮೋರಿಯರ
ಬೆಟ್ಟದ ಸೀಮೆಯ ಮಾರ್ಗವನ್ನು ಹಿಡಿದು ನೀವು
ನೋಡಿದ ಆ ಘೋರವಾದ ಮಹಾರಣ್ಯದಲ್ಲಿ ನಡೆದು
20 ಕಾದೇಶ್ಬರ್ನೇಯಕ್ಕೆ ಸೇರಿದೆವು. ಆಗ ನಾನು—
ನಮ್ಮ ದೇವರಾದ ಯೆಹೋವನು ನಮಗೆ ಕೊಡುವ
ಅಮೋರಿಯರ ಬೆಟ್ಟದ ಸೀಮೆಯ ಹತ್ತಿರಕ್ಕೆ ಬಂದಿ
21 ದ್ದೀರಿ; ನಿಮ್ಮ ದೇವರಾದ ಯೆಹೋವನು ಆ ದೇಶ
ವನ್ನು ನಿಮಗೇ ಕೊಟ್ಟಿದ್ದಾನೆ; ನಿಮ್ಮ ಪಿತೃಗಳ ದೇವ
ರಾದ ಯೆಹೋವನು ಹೇಳಿದಂತೆ ಅದನ್ನು ಹತ್ತಿ
ಸ್ವಾಧೀನಮಾಡಿಕೊಳ್ಳಿರಿ; ನೀವು ದಿಗಿಲುಪಡದೆ
ಧೈರ್ಯವಾಗಿಯೇ ಇರಬೇಕೆಂದು ಹೇಳಿದೆನು.
22 ಆಗ ನೀವೆಲ್ಲರೂ ನನ್ನ ಬಳಿಗೆ ಬಂದು—ನಮ
ಗಿಂತ ಮುಂದಾಗಿ ಮನುಷ್ಯರನ್ನು ಕಳುಹಿಸುವೆವು;
ಅವರು ನಮಗೋಸ್ಕರ ಆ ದೇಶವನ್ನು ಪರೀಕ್ಷಿಸಿ
ನೋಡಿ ನಾವು ಹತ್ತಿ ಹೋಗಬೇಕಾದ ದಾರಿಯ ವಿಷ
ಯದಲ್ಲೂ ಸೇರಬೇಕಾದ ಊರುಗಳ ವಿಷಯದಲ್ಲೂ
ನಮಗೆ ವರ್ತಮಾನ ತಿಳಿಸಲಿ ಎಂದು ಹೇಳಿದಿರಿ.
23 ಅದು ಒಳ್ಳೇ ಆಲೋಚನೆಯೆಂದು ನಾನು ತಿಳಿದು
ಕೊಂಡು ನಿಮ್ಮಲ್ಲಿ ಕುಲಕ್ಕೆ ಒಬ್ಬೊಬ್ಬನ ಮೇರೆಗೆ
24 ಹನ್ನೆರಡು ಮಂದಿಯನ್ನು ಆರಿಸಿಕೊಂಡೆನು. ಅವರು
ಹೋಗಿ ಆ ಬೆಟ್ಟದ ಸೀಮೆಯನ್ನು ಹತ್ತಿ ಎಷ್ಕೋ
ಲೆಂಬ ತಗ್ಗಿನ ಬಳಿಗೆ ಬಂದು ಆ ಪ್ರದೇಶವನ್ನು ಸಂಚ
25 ರಿಸಿ ನೋಡಿ ಅಲ್ಲಿನ ಹಣ್ಣುಗಳಲ್ಲಿ ಕೆಲವನ್ನು ತಂದು
ತೋರಿಸಿ—ನಮ್ಮ ದೇವರಾದ ಯೆಹೋವನು ನಮಗೆ
ಕೊಡುವ ಆ ದೇಶವು ಒಳ್ಳೆಯ ದೇಶವೆಂದು ನಮಗೆ
26 ವರ್ತಮಾನ ತಿಳಿಸಿದರು. ಆದರೂ ನೀವು ಹತ್ತ
ಲೊಲ್ಲದೆ ನಿಮ್ಮ ದೇವರಾದ ಯೆಹೋವನ ಆಜ್ಞೆ
27 ಯನ್ನು ಉಲ್ಲಂಘಿಸಿ ನಿಮ್ಮ ನಿಮ್ಮ ಡೇರೆಗಳಲ್ಲಿ
ಗುಣುಗುಟ್ಟುತ್ತಾ—ಯೆಹೋವನು ನಮ್ಮನ್ನು ಐಗು
ಪ್ತದೇಶದಿಂದ ಬರಮಾಡಿದ್ದು ಹಗೆತನದಿಂದಲೇ;
ಆತನು ನಮ್ಮನ್ನು ಸಂಹರಿಸಬೇಕೆಂದು ಅಮೋರಿಯರ
28 ಕೈಗೆ ಒಪ್ಪಿಸುತ್ತಾನೆ. ನಾವು ಹೋಗಬೇಕಾದ ಆ
ಸೀಮೆ ಎಂಥದೆಂದು ಆಲೋಚಿಸಿರಿ; ಅಲ್ಲಿ ಹೋಗಿದ್ದ
ನಮ್ಮ ಸಹೋದರರು ನಮಗೆ—ಆ ದೇಶದ ಜನರು
ನಮಗಿಂತ ಹೆಚ್ಚಾಗಿಯೂ ಉದ್ದವಾಗಿಯೂ ಇದ್ದಾರೆ;
ಅವರಿರುವ ಪಟ್ಟಣಗಳು ದೊಡ್ಡವೂ ಆಕಾಶವನ್ನು
ಮುಟ್ಟುವ ಕೋಟೆಕೊತ್ತಲುಳ್ಳವೂ ಆಗಿವೆ; ಅಲ್ಲಿ
1)ಉನ್ನತ ಪುರುಷರನ್ನು ನೋಡಿದೆವೆಂದು ಹೇಳಿ ನಮ್ಮ
ಧೈರ್ಯವನ್ನು ಕೆಡಿಸಿದ್ದಾರೆ ಅಂದುಕೊಳ್ಳುತ್ತಿದ್ದಿರಿ.
ಅದಕ್ಕೆ ನಾನು—ಕಳವಳಪಡಬೇಡಿರಿ, ಅವರಿಗೆ 29
ಭಯಪಡಬೇಡಿರಿ. ನಿಮ್ಮ ಮುಂದುಗಡೆಯಲ್ಲಿ ಹೋ 30
ಗುವ ನಿಮ್ಮ ದೇವರಾದ ಯೆಹೋವನು ಐಗುಪ್ತ
ದೇಶದಲ್ಲಿಯೂ ನೀವು ನೋಡಿದ ಅರಣ್ಯದಲ್ಲಿಯೂ
ಪ್ರತ್ಯಕ್ಷನಾಗಿ ನಿಮಗೋಸ್ಕರ ಯುದ್ಧಮಾಡಿದಂತೆ
ಯೇ ಈಗಲೂ ನಿಮ್ಮ ಕಡೆಯವನಾಗಿ ಯುದ್ಧ
ಮಾಡುವನು. ನೀವು ಈ ಸ್ಥಳಕ್ಕೆ ಸೇರಿದ ಪರ್ಯಂತ 31
ರವೂ ನಿಮ್ಮ ಪ್ರಯಾಣದಲ್ಲೆಲ್ಲಾ ಮಗನನ್ನು ತಂದೆ
ಹೇಗೋ ಹಾಗೆಯೇ ನಿಮ್ಮ ದೇವರಾದ ಯೆಹೋ
ವನು ನಿಮ್ಮನ್ನು ಹೊತ್ತನಲ್ಲವೇ ಎಂದು ನಿಮಗೆ
ಹೇಳಿದೆನು.
ಆದರೂ ನೀವು ನಿಮ್ಮ ದೇವರಾದ ಯೆಹೋವ 32
ನನ್ನು ಇನ್ನೂ ನಂಬಲೇ ಇಲ್ಲ. ನೀವು ಹೋಗ 33
ಬೇಕಾದ ದಾರಿಯನ್ನು ತೋರಿಸುವದಕ್ಕೂ ದಂಡು
ಇಳಿಯಬೇಕಾದ ಸ್ಥಳಗಳನ್ನು ಗೊತ್ತುಮಾಡುವ
ದಕ್ಕೂ ರಾತ್ರಿಹೊತ್ತು ಬೆಂಕಿಯಲ್ಲಿಯೂ ಹಗಲು
ಹೊತ್ತು ಮೇಘದಲ್ಲಿಯೂ ಮಾರ್ಗದಲ್ಲಿ ನಿಮ್ಮ
ಮುಂದುಗಡೆ ಹೋದ ದೇವರನ್ನು ನೀವು ನಂಬ
ಲಿಲ್ಲ.
ಯೆಹೋವನು ನಿಮ್ಮ ಮಾತುಗಳನ್ನು ಕೇಳಿ 34, 35
ಕೋಪಗೊಂಡು ತಾನು ನಿಮ್ಮ ಪಿತೃಗಳಿಗೆ ವಾಗ್ದಾನ
ಮಾಡಿದ ಆ ಒಳ್ಳೇ ದೇಶವನ್ನು ಈ ದುಷ್ಟ ಜನರಲ್ಲಿ
ಯಾರೂ ನೋಡುವದಿಲ್ಲವೆಂದು ಪ್ರಮಾಣಮಾಡಿ—
ಯೆಫುನ್ನೆಯ ಮಗನಾದ ಕಾಲೇಬನೊಬ್ಬನೇ ಯೆ 36
ಹೋವನನ್ನು ಮನಃಪೂರ್ವಕವಾಗಿ ಅನುಸರಿಸಿದದರಿಂದ
ಅವನೇ ಅದನ್ನು ನೋಡುವನು; ಅವನು ಸಂಚರಿಸಿದ
ಪ್ರದೇಶವನ್ನು ಅವನಿಗೂ ಅವನ ಸಂತತಿಯವರಿಗೂ
ಕೊಡುವೆನೆಂದು ಹೇಳಿದನು. ಅದು ಮಾತ್ರವಲ್ಲದೆ 37
ಯೆಹೋವನು ನಿಮ್ಮ ದೆಸೆಯಿಂದ ನನ್ನ ಮೇಲೆಯೂ
ಕೋಪಮಾಡಿ—ನೀನೂ ಆ ದೇಶಕ್ಕೆ ಸೇರುವದಿಲ್ಲ;
ಆದರೆ ನಿನ್ನ ಶಿಷ್ಯನಾದ ನೂನನ ಮಗ ಯೆಹೋಶು 38
ವನು ಅಲ್ಲಿಗೆ ಸೇರುವನು. ಅವನೇ ಇಸ್ರಾಯೇಲ್ಯ
ರಿಗೆ ಆ ದೇಶವನ್ನು ಸ್ವಾಧೀನಪಡಿಸುವನು; ಆದದ
ರಿಂದ ಅವನನ್ನು ಧೈರ್ಯಗೊಳಿಸು. ಆದರೆ ಪರರ 39
ಪಾಲಾಗುವರೆಂದು ನೀವು ಹೇಳಿದ ನಿಮ್ಮ ಮನೆಯವ
ರೂ ಒಳ್ಳೇದು ಕೆಟ್ಟದ್ದು ಅರಿಯದ ನಿಮ್ಮ ಮಕ್ಕಳೂ
ಅಲ್ಲಿಗೆ ಸೇರುವರು; ಅವರಿಗೇ ಆ ದೇಶವನ್ನು ಕೊಡು
ವೆನು; ಅವರು ಅದನ್ನು ಸ್ವಾಧೀನಮಾಡಿಕೊಳ್ಳುವರು.
ನೀವಾದರೋ ಹಿಂದಿರುಗಿ ಕೆಂಪು ಸಮುದ್ರದ 40
ಮಾರ್ಗವನ್ನು ಹಿಡಿದು ಅರಣ್ಯಕ್ಕೆ ಹೊರಟುಹೋಗಿರಿ
ಎಂದು ಆಜ್ಞಾಪಿಸಿದನು.

1) ಮೂಲ: ಅನಾಕ್ಯರನ್ನು.

41 ಅದಕ್ಕೆ ನೀವು—ನಾವು ಯೆಹೋವನಿಗೆ ದ್ರೋಹಿ
ಗಳಾದೆವು; ಆದರೂ ನಮ್ಮ ದೇವರಾದ ಯೆಹೋ
ವನು ಆಜ್ಞಾಪಿಸಿದಂತೆ ನಾವೇ ಈಗ ಆ ಬೆಟ್ಟದ ಸೀಮೆ
ಯನ್ನು ಹತ್ತಿ ಯುದ್ಧಮಾಡುವೆವು ಎಂದು ಉತ್ತರ
ಕೊಟ್ಟು ನೀವೆಲ್ಲರೂ ನಿಮ್ಮನಿಮ್ಮ ಆಯುಧಗಳನ್ನು
ತೆಗೆದುಕೊಂಡು ಆ ಬೆಟ್ಟದ ಸೀಮೆಯನ್ನು ಹತ್ತಿ
ಜಯಿಸುವದು ಅಲ್ಪಕಾರ್ಯವೆಂದು ಭಾವಿಸಿ ಹೊರ
42 ಡುವದಕ್ಕಿದ್ದಿರಿ. ಆದರೆ ಯೆಹೋವನು ನನಗೆ—
ನಾನು ಇವರ ಮಧ್ಯದಲ್ಲಿ ಇಲ್ಲವಾದದರಿಂದ ಇವರು
ಸೋತುಹೋಗುವರು; ಯುದ್ಧಮಾಡಲೂ ಬಾರದು,
ಆ ಬೆಟ್ಟದ ಸೀಮೆಗೆ ಹೋಗಲೂ ಬಾರದು ಎಂದು
ಇವರಿಗೆ ಆಜ್ಞಾಪಿಸು ಅಂದನು.
43 ನಾನು ಆ ಮಾತನ್ನು ನಿಮಗೆ ತಿಳಿಸಿದರೂ ನೀವು
ಕಿವಿಗೊಡದೆ ಯೆಹೋವನ ಆಜ್ಞೆಯನ್ನು ತಾತ್ಸಾರ
44 ಮಾಡಿ ಸೊಕ್ಕಿನಿಂದ ಆ ಬೆಟ್ಟವನ್ನು ಹತ್ತಿದಿರಿ. ಆಗ
ಬೆಟ್ಟದಲ್ಲಿದ್ದ ಅಮೋರಿಯರು ನಿಮಗೆ ವಿರೋಧವಾಗಿ
ಹೊರಟು ಜೇನುಹುಳಗಳಂತೆ ನಿಮ್ಮನ್ನು ಮುತ್ತಿ
ಸೇಯಿರಿನಲ್ಲಿ ಹೊರ್ಮದ ವರೆಗೂ ಬೆನ್ನಟ್ಟಿ ಸಂಹ
45 ರಿಸಿದರು. ನೀವು ಹಿಂದಿರುಗಿ ಬಂದು ಯೆಹೋವನ
ಮುಂದೆ ಗೋಳಾಡಿದಾಗ ಆತನು ನಿಮ್ಮ ಮೊರೆಯ
ನ್ನು ಕೇಳಲೂ ಇಲ್ಲ, ರಕ್ಷಿಸಲೂ ಇಲ್ಲ.
46 ಆ ಮೇಲೆ ನೀವು ಕಾದೇಶಿನಲ್ಲಿ ಬಹುಕಾಲ ವಾಸ
ವಾಗಿದ್ದಿರಿ.

### ಇಸ್ರಾಯೇಲ್ಯರು ಎದೋಮ್ಯಮೋವಾಬ್ಯರ ದೇಶಗಳನ್ನು ದಾಟಿ ಸೀಹೋನನ ಮತ್ತು ಓಗನ ರಾಜ್ಯಗಳನ್ನು ಸ್ವಾಧೀನಮಾಡಿಕೊಂಡದ್ದು.

2 ಆಗ ಯೆಹೋವನು ನನಗೆ ಆಜ್ಞಾಪಿಸಿದಂತೆ ನಾವು
ಹಿಂದಿರುಗಿ ಅರಣ್ಯಕ್ಕೆ ಹೊರಟು ಕೆಂಪು ಸಮುದ್ರದ
ಮಾರ್ಗದಲ್ಲಿ ನಡೆದು ಅನೇಕದಿನಗಳು ಸೇಯಿರ್
2 ಬೆಟ್ಟದ ಸೀಮೆಯನ್ನು ಸುತ್ತುತ್ತಿದ್ದೆವು. ಆ ಮೇಲೆ
3 ಯೆಹೋವನು ನನಗೆ—ನೀವು ಈ ಬೆಟ್ಟದ ಸೀಮೆ
ಯನ್ನು ಸುತ್ತಿದ್ದು ಸಾಕು; ಉತ್ತರದಿಕ್ಕಿಗೆ ತಿರುಗಿ
4 ಕೊಳ್ಳಿರಿ. ಮತ್ತು ಇಸ್ರಾಯೇಲ್ಯರಿಗೆ ಹೀಗೆ ಆಜ್ಞಾ
ಪಿಸು—ಸೇಯಿರ್ ದೇಶದಲ್ಲಿ ವಾಸವಾಗಿರುವ
ನಿಮ್ಮ ಬಂಧುಗಳಾದ ಏಸಾವನ ವಂಶದವರ ದೇಶ
ವನ್ನು ದಾಟುವದಕ್ಕಿದ್ದೀರಷ್ಟೆ. ಅವರು ನಿಮಗೆ
ಅಂಜುವರು; ನೀವು ಅವರ ಸಂಗಡ ಯುದ್ಧಕ್ಕೆ ಹೋಗದೆ
5 ಬಹಳ ಜಾಗರೂಕತೆಯಿಂದಿರಬೇಕು. ನಾನು ಸೇಯಿ
ರ್ ಬೆಟ್ಟದ ಸೀಮೆಯನ್ನು ಏಸಾವ್ಯರಿಗೇ ಸ್ವದೇಶವಾಗ
ಕೊಟ್ಟಿರುವದರಿಂದ ಅದರಲ್ಲಿ ನಿಮಗೆ ಹೆಜ್ಜೆಯಿಡು
6 ವಷ್ಟು ನೆಲವನ್ನಾದರೂ ಕೊಡುವದಿಲ್ಲ. ನೀವು ಅಲ್ಲಿ
ರೊಕ್ಕಕೊಟ್ಟು ಆಹಾರಪದಾರ್ಥಗಳನ್ನು ಕೊಂಡು
ತಿನ್ನಬೇಕು; ನೀರನ್ನೂ ಕೊಂಡುಕೊಂಡು ಕುಡಿಯ
7 ಬೇಕು; ನೀವು ಕೈಹಾಕಿದ ಎಲ್ಲಾ ಕೆಲಸಗಳನ್ನೂ
ನಿಮ್ಮ ದೇವರಾದ ಯೆಹೋವನು ಸಫಲಪಡಿಸಿದ್ದಾ
ನಲ್ಲಾ. ಈ ದೊಡ್ಡ ಅರಣ್ಯದಲ್ಲಿ ನೀವು ಸಂಚರಿಸುತ್ತಿ
ರುವಾಗೆಲ್ಲಾ ಆತನು ನಿಮ್ಮನ್ನು ಪರಾಂಬರಿಸುತ್ತಾ
ಬಂದನು. ಈ ನಾಲ್ವತ್ತು ವರುಷ ನಿಮ್ಮ ದೇವರಾದ
ಯೆಹೋವನು ನಿಮ್ಮ ಸಂಗಡ ಇದ್ದದರಿಂದ ನಿಮಗೆ
ಏನೂ ಕಡಿಮೆಯಾಗಲಿಲ್ಲ ಎಂದು ಹೇಳಿದನು.
ಆದಕಾರಣ ನಾವು ಸೇಯಿರಿನಲ್ಲಿರುವ ನಮ್ಮ
ಬಂಧುಗಳಾದ ಏಸಾವ್ಯರ ಕಡೆಯಿಂದ ಓರೆಯಾಗಿ
ತಿರುಗಿಕೊಂಡು ಅರಾಬದ ಮಾರ್ಗವನ್ನು ಬಿಟ್ಟು
ಏಲತ್, ಎಚ್ಯೋನ್ಗೆಬೆರ್ ಎಂಬ ಪಟ್ಟಣಗಳಿಂದ
ಪ್ರಯಾಣಮಾಡಿ ಮೋವಾಬ್ಯರ ಅಡವಿಯ ದಾರಿ
ಯಲ್ಲಿ ನಡೆದೆವು. ಆಗ ಯೆಹೋವನು ನನಗೆ—
ನೀವು ಮೋವಾಬ್ಯರಿಗೆ ವೈರಿಗಳಾಗಿ ನಡೆದು ಅವ
ರೊಡನೆ ಯುದ್ಧಮಾಡಬಾರದು. ಲೋಟನ ವಂಶ
ದವರಾದ ಅವರಿಗೆ ನಾನು ಆರ್ ಎಂಬ ಪ್ರದೇಶವನ್ನು
ಸ್ವದೇಶವಾಗುವದಕ್ಕೆ ಕೊಟ್ಟಿರುವದರಿಂದ ಅದರಲ್ಲಿ
ನಿಮಗೆ ಸ್ವಾಸ್ತ್ಯವನ್ನು ಕೊಡುವದಿಲ್ಲ. ನೀವು ಎದ್ದು
ಜೆರೆದ್ ಹಳ್ಳವನ್ನು ದಾಟಬೇಕೆಂದು ಆಜ್ಞಾಪಿಸಿದನು.
(ತತ್ಪೂರ್ವದಲ್ಲಿ ಏಮಿಯರು ಆ ದೇಶದಲ್ಲಿ ವಾಸ
ವಾಗಿದ್ದರು. ಅವರು ಬಲಿಷ್ಠರೂ ಬಹುಮಂದಿಯೂ
ಅನಾಕ್ಯರಂತೆ ಉನ್ನತರೂ ಆಗಿದ್ದರು. ಅವರು ಅನಾ
ಕ್ಯರಂತೆ ರೆಫಾಯರಿಗೆ ಸೇರಿದವರೆಂದು ಹೇಳುವ
ದುಂಟು; ಆದರೆ ಮೋವಾಬ್ಯರು ಅವರನ್ನು ಏಮಿಯ
ರೆಂದು ಹೇಳುತ್ತಾರೆ. ಅದೇ ಪೂರ್ವಕಾಲದಲ್ಲಿ ಹೋ
ರಿಯರು ಸೇಯಿರಿನಲ್ಲಿ ವಾಸವಾಗಿದ್ದರು. ತರು
ವಾಯ ಇಸ್ರಾಯೇಲ್ಯರು ತಮಗೆ ಯೆಹೋವನು
ಕೊಟ್ಟ ದೇಶವನ್ನು ಹೇಗೆ ಸ್ವಾಧೀನಮಾಡಿಕೊಂಡ
ರೋ ಹಾಗೆಯೇ ಏಸಾವ್ಯರು ಬಂದು ಹೋರಿಯ
ರನ್ನು ಸಂಹರಿಸಿ ಅವರ ದೇಶದಲ್ಲಿ ವಾಸಮಾಡಿದರು.)
ಆಗ ನಾವು ಜೆರೆದ್ ಹಳ್ಳವನ್ನು ದಾಟಿದೆವು. 13,
ನಾವು ಕಾದೇಶ್‌ಬರ್ನೇಯದಿಂದ ಹೊರಟು ಜೆರೆದ್ ಹಳ್ಳ
ವನ್ನು ದಾಟಿದ ವರೆಗೆ ಮೂವತ್ತೆಂಟು ವರುಷ ಕಾಲ.
ಯೆಹೋವನು ಪ್ರಮಾಣಪೂರ್ವಕವಾಗಿ ಹೇಳಿದ್ದಂತೆ
ಅಷ್ಟರಲ್ಲಿ ಆ ತಲೆಯ ಸೈನಿಕರೆಲ್ಲರೂ ಸತ್ತುಹೋಗಿ
ದ್ದರು. ಯೆಹೋವನ ಹಸ್ತವು ಅವರಿಗೆ ವಿರೋಧವಾ
ದದರಿಂದ ಪಾಳೆಯದಲ್ಲಿ ಒಬ್ಬನೂ ಉಳಿಯದಂತೆ
ನಾಶವಾದರು.
ಆ ಸೈನಿಕರೆಲ್ಲರೂ ಸತ್ತುಹೋದನಂತರ ಯೆ 16–
ಹೋವನು ನನಗೆ—ನೀವು ಈಗ ಮೋವಾಬ್ಯರ ಪ್ರಾಂ
ತ್ಯವಾಗಿರುವ ಆರ್ ಎಂಬ ಪ್ರದೇಶವನ್ನು ದಾಟುವವ
ರಾಗಿದ್ದೀರಿ. ಮುಂದೆ ನೀವು ಅಮ್ಮೋನಿಯರ ಹತ್ತಿ
ರಕ್ಕೆ ಬರುವಾಗ ಅವರಿಗೆ ವೈರಿಗಳಾಗಿ ನಡೆದು ಯುದ್ಧ
ಮಾಡಬೇಡಿರಿ. ನಾನು ಆ ದೇಶವನ್ನು ಲೋಟನ
ವಂಶದವರಾದ ಅಮ್ಮೋನಿಯರಿಗೆ ಸ್ವಾಸ್ತ್ಯವಾಗಿ ಕೊಟ್ಟಿ
ರುವದರಿಂದ ನಿಮಗೆ ಅದರಲ್ಲಿ ಎಷ್ಟು ಭಾಗವನ್ನಾದರೂ
ಕೊಡುವದಿಲ್ಲ. (ಪೂರ್ವಕಾಲದಲ್ಲಿ ರೆಫಾಯರು
ಆ ದೇಶದಲ್ಲಿ ವಾಸವಾಗಿದ್ದದರಿಂದ ಅದೂ ರೆಫಾಯರ
ದೇಶವೆನಿಸಿಕೊಳ್ಳುತ್ತದೆ. ಅಮ್ಮೋನಿಯರು ಅವರನ್ನು
ಜಂಜುಮ್ಯರೆಂದು ಹೇಳುತ್ತಾರೆ; ಅವರು ಬಲಿಷ್ಠರೂ
ಬಹುಜನವೂ ಅನಾಕ್ಯರಂತೆ ಉನ್ನತರಾದವರೂ ಆಗಿ
ದ್ದರು. ಆದರೆ ಹೇಗೆ ಯೆಹೋವನು ಸೇಯಿರಿನಲ್ಲಿ
ರುವ ಏಸಾವ್ಯರಿಗೋಸ್ಕರ ಹೋರಿಯರನ್ನು ಹೊರಡಿ
ಸಿದಾಗ ಏಸಾವ್ಯರು ಆ ದೇಶವನ್ನು ಸ್ವಾಧೀನಮಾಡಿ
ಕೊಂಡು ಇಂದಿನ ವರೆಗೂ ಅಲ್ಲೇ ವಾಸವಾಗಿದ್ದಾರೋ,

23 ಮತ್ತು ಹೇಗೆ ಕಫ್ತೋರಿಂದ ಬಂದ ಕಫ್ತೋರ್ಯರು
ಗಾಜಾ ಪಟ್ಟಣದ ವರೆಗೂ ಹಳ್ಳಿಗಳಲ್ಲಿದ್ದ ಅವ್ವಿಯ
ರನ್ನು ನಾಶಮಾಡಿ ಅವರ ಸ್ಥಳದಲ್ಲಿ ವಾಸಮಾಡಿ
ದರೋ ಹಾಗೆಯೇ ಯೆಹೋವನು ರೆಫಾಯರನ್ನು
ಅಮ್ಮೋನಿಯರ ಎದುರಿನಿಂದ ಹೊರಡಿಸಿದನು; ಅಮ್ಮೋ
ನಿಯರು ಆ ದೇಶವನ್ನು ಸ್ವಾಧೀನಮಾಡಿಕೊಂಡು
24 ಅದರಲ್ಲಿ ವಾಸಿಸಿದರು.) ಈಗ ನೀವು ಹೊರಟು
ಅರ್ನೋನ್ ಹಳ್ಳವನ್ನು ದಾಟಿರಿ. ಅಮೋರಿಯನಾಗಿ
ರುವ ಹೆಷ್ಬೋನಿನ ಅರಸನಾದ ಸೀಹೋನನು ನಿಮ್ಮಿಂದ
ಸೋತುಹೋಗಿ ಅವನ ರಾಜ್ಯವು ನಿಮಗೇ ವಶವಾಗ
ಬೇಕೆಂದು ನಿಮಗೆ ಅನುಗ್ರಹಿಸಿದ್ದೇನೆ. ಅವನೊಡನೆ
ಯುದ್ಧಮಾಡಿ ಆ ದೇಶವನ್ನು ಸ್ವಾಧೀನಮಾಡಿಕೊಳ್ಳು
25 ವದಕ್ಕೆ ಪ್ರಾರಂಭಿಸಿರಿ. ಲೋಕದಲ್ಲಿರುವ ಎಲ್ಲಾ ಜನ
ಗಳಿಗೂ ನಿಮ್ಮಿಂದ ದಿಗಿಲೂ ಹೆದರಿಕೆಯೂ ಉಂಟಾಗು
ವಂತೆ ಇಂದಿನಿಂದ ಮಾಡುತ್ತೇನೆ. ಅವರು ನಿಮ್ಮ ಸುದ್ದಿ
ಯನ್ನು ಕೇಳಿದ ಮಾತ್ರಕ್ಕೆ ಗಡಗಡನೆ ನಡುಗಿ ಸಂಕಟ
ಪಡುವರು ಎಂದು ಹೇಳಿದನು.
26 ಆಗ ನಾನು ಕೆದೇಮೋತಿನ ಅರಣ್ಯದಿಂದ ಹೆಷ್ಬೋ
ನಿನ ಅರಸನಾದ ಸೀಹೋನನ ಬಳಿಗೆ ದೂತರನ್ನು
27 ಕಳುಹಿಸಿ—ನಿನ್ನ ದೇಶವನ್ನು ದಾಟಿಹೋಗುವದಕ್ಕೆ
ನಮಗೆ ಅಪ್ಪಣೆಯಾಗಬೇಕು. ನಾವು ಎಡಬಲಕ್ಕೆ
28 ತಿರುಗದೆ ದಾರಿಹಿಡಿದು ನಡೆದುಹೋಗುವೆವು. ನಿಮ್ಮಿಂ
ದ ಕ್ರಯತೆಗೆದುಕೊಂಡು ಆಹಾರಪದಾರ್ಥಗಳನ್ನೂ
29 ಕುಡಿಯಲಿಕ್ಕೆ ನೀರನ್ನೂ ಕೊಡಿರಿ. ನಾವು ಯೊರ್ದ
ನ್ ಹೊಳೆಯನ್ನು ದಾಟಿ ನಮ್ಮ ದೇವರಾದ ಯೆಹೋ
ವನು ನಮಗೆ ಕೊಡುವ ದೇಶವನ್ನು ಸೇರಬೇಕೆಂದಿ
ದ್ದೇವೆ. ಸೇಯಿರಿನಲ್ಲಿರುವ ಏಸಾವ್ಯರೂ ಆರ್
ಪ್ರದೇಶದಲ್ಲಿರುವ ಮೋವಾಬ್ಯರೂ ನಮಗೆ ದಾರಿ
ಕೊಟ್ಟಂತೆ ನೀನೂ ಕೊಡಬೇಕು. ಕಾಲ್ನಡೆಯಾಗಿ
ನಿನ್ನ ದೇಶವನ್ನು ದಾಟಿಹೋಗುವದಕ್ಕೆ ನಿನ್ನ ಅಪ್ಪಣೆ
ಯಾಗಬೇಕೇ ಹೊರತು ಬೇರೆ ಏನೂ ಬೇಕಿಲ್ಲವೆಂದು
ವಿನಯಪೂರ್ವಕವಾದ ಮಾತುಗಳಿಂದ ಹೇಳಿಸಿದೆನು.
30 ಆದರೆ ಯೆಹೋವನು ಅವನಿಗೆ ಮೂರ್ಖಬುದ್ಧಿಯ
ನ್ನು ಕೊಟ್ಟು ಹಟವನ್ನು ಹುಟ್ಟಿಸಿದದರಿಂದ ಅವನು
ಸಮ್ಮತಿಸಲಿಲ್ಲ. ಅವನು ನಿಮ್ಮಿಂದ ಸೋತುಹೋಗ
ಬೇಕೆಂಬದೇ ನಿಮ್ಮ ದೇವರಾದ ಯೆಹೋವನ ಸಂಕಲ್ಪ;
ಅದು ಈಗಾಗಲೇ ನೆರವೇರಿತಲ್ಲಾ.
ತರುವಾಯ ಯೆಹೋವನು ನನಗೆ—ಈಗ ನಾನು
ಸೀಹೋನನನ್ನೂ ಅವನ ದೇಶವನ್ನೂ ನಿಮಗೆ ವಶ
ಪಡಿಸುವದಕ್ಕೆ ಪ್ರಾರಂಭಿಸಿದ್ದೇನೆ; ಅದನ್ನು ಸ್ವಾಧೀನ
ಮಾಡಿಕೊಳ್ಳುವದಕ್ಕೆ ಪ್ರಾರಂಭಮಾಡಿರಿ ಎಂದು ಹೇಳಿ
ದನು. ಸೀಹೋನನು ತನ್ನ ಜನರೆಲ್ಲರ ಸಮೇತ
ನಮ್ಮೊಡನೆ ಯುದ್ಧಮಾಡುವದಕ್ಕೆ ಯಹಚಿಗೆ ಹೊರ
ಟುಬರಲಾಗಿ ನಮ್ಮ ದೇವರಾದ ಯೆಹೋವನು ಅವ
ನನ್ನು ನಮ್ಮಿಂದ ಪರಾಜಯಪಡಿಸಿದನು. ನಾವು
ಅವನನ್ನೂ ಅವನ ಮಕ್ಕಳನ್ನೂ ಜನರೆಲ್ಲರನ್ನೂ ಸಂಹ
ರಿಸಿದೆವು. ಆ ಕಾಲದಲ್ಲಿ ನಾವು ಅವನ ಎಲ್ಲಾ ಪಟ್ಟ
ಣಗಳನ್ನೂ ಸ್ವಾಧೀನಮಾಡಿಕೊಂಡು ಅವುಗಳಲ್ಲಿದ್ದ
ಗಂಡಸರನ್ನೂ ಹೆಂಗಸರನ್ನೂ ಮಕ್ಕಳನ್ನೂ ನಿಶ್ಶೇಷ
ವಾಗಿ ಹತಮಾಡಿದೆವು; ಒಬ್ಬನನ್ನೂ ಉಳಿಸಲಿಲ್ಲ.
ಪಶುಗಳನ್ನು ಮಾತ್ರ ಉಳಿಸಿ ನಮ್ಮ ಸ್ವಂತಕ್ಕಾಗಿ 35
ತೆಗೆದುಕೊಂಡು ಊರುಗಳನ್ನು ಸೂರೆಮಾಡಿಬಿಟ್ಟೆವು.
ಅರ್ನೋನ್ ತಗ್ಗಿನ ಅಂಚಿನಲ್ಲಿರುವ ಅರೋಯೇರ್ 36
ಪಟ್ಟಣವು ಮತ್ತು ತಗ್ಗಿನಲ್ಲಿಯೇ ಇರುವ ಪಟ್ಟಣವು
ಇವುಗಳು ಮೊದಲುಗೊಂಡು ಗಿಲ್ಯಾದ್ ಸೀಮೆಯ
ವರೆಗೂ ಯಾವ ಪಟ್ಟಣವೂ ನಮಗೆ ಅಸಾಧ್ಯವಾಗ
ಲಿಲ್ಲ. ನಮ್ಮ ದೇವರಾದ ಯೆಹೋವನು ಅವುಗಳ
ನ್ನೆಲ್ಲಾ ನಮ್ಮ ಕೈಗೆ ಸಿಕ್ಕುವಂತೆ ಮಾಡಿದನು.
ಅಮ್ಮೋನಿಯರ ದೇಶವನ್ನು ಮಾತ್ರ ಅಂದರೆ ಯಬ್ಬೋ 37
ಕ್ ಹೊಳೆಯ ಬಳಿಯಲ್ಲಿರುವ ಪ್ರದೇಶವು ಮತ್ತು
ಬೆಟ್ಟದ ಸೀಮೆಯ ಊರುಗಳು ಇವೇ ಮೊದಲಾದ
ಸ್ಥಳಗಳನ್ನು ನೀವು ಆತಿಕ್ರಮಿಸಲಿಲ್ಲ; ಅಲ್ಲಿಗೆ ಹೋ
ಗಲೇ ಬಾರದೆಂದು ನಮ್ಮ ದೇವರಾದ ಯೆಹೋವನು
ಆಜ್ಞಾಪಿಸಿದ್ದನಷ್ಟೆ.
ತರುವಾಯ ನಾವು ಹಿಂದಿರುಗಿ ಬಾಷಾನಿನ ಮಾ 3
ರ್ಗವನ್ನು ಹಿಡಿದು ಹತ್ತಿಹೋಗಲಾಗಿ ಬಾಷಾನಿನ
ಅರಸನಾದ ಓಗನು ತನ್ನ ಜನರೆಲ್ಲರ ಸಮೇತ ನಮಗೆ
ವಿರೋಧವಾಗಿ ಯುದ್ಧಮಾಡುವದಕ್ಕೆ ಎದ್ರೈಯಿಗೆ
ಹೊರಟುಬಂದನು. ಆಗ ಯೆಹೋವನು ನನಗೆ— 2
ಅವನಿಗೆ ಭಯಪಡಬೇಡ; ನಾನು ಅವನನ್ನೂ ಅವನ
ಸಮಸ್ತಜನರನ್ನೂ ದೇಶವನ್ನೂ ನಿನ್ನ ಕೈವಶಮಾಡಿ
ದ್ದೇನೆ; ನೀನು ಹೆಷ್ಬೋನಿನಲ್ಲಿದ್ದ ಅಮೋರಿಯರ ಅರಸ
ನಾದ ಸೀಹೋನನಿಗೆ ಮಾಡಿದ ಪ್ರಕಾರವೇ ಇವನಿಗೂ
ಮಾಡಬೇಕೆಂದು ಆಜ್ಞಾಪಿಸಿದನು.
ಬಾಷಾನಿನ ಅರಸನಾದ ಓಗನೂ ಅವನ ಜನರೆ 3
ಲ್ಲರೂ ನಮ್ಮಿಂದ ಸೋತುಹೋಗುವಂತೆ ನಮ್ಮ ದೇವ
ರಾದ ಯೆಹೋವನು ಮಾಡಲಾಗಿ ಅವರಲ್ಲಿ ಒಬ್ಬರಾ
ದರೂ ಉಳಿಯದಂತೆ ಅವರನ್ನು ಹತಮಾಡಿದೆವು. ಆ 4
ಕಾಲದಲ್ಲಿ ನಾವು ಅವನ ಎಲ್ಲಾ ಪಟ್ಟಣಗಳನ್ನು
ಜಯಿಸಿದೆವು; ನಾವು ಜಯಿಸದ ಕೋಟೆ ಒಂದೂ
ಇರಲಿಲ್ಲ; ಬಾಷಾನಿನಲ್ಲಿರುವ ಓಗನ ರಾಜ್ಯದಲ್ಲಿ
ಅಂದರೆ ಅರ್ಗೋಬ್ ಎಂಬ ಸಮಸ್ತಪ್ರದೇಶದಲ್ಲಿ
ಅರುವತ್ತು ಪಟ್ಟಣಗಳನ್ನು ತೆಗೆದುಕೊಂಡೆವು. ಅವು 5
ಗಳೆಲ್ಲಾ ಎತ್ತರವಾದ ಪೌಳಿಗೋಡೆಗಳಿಂದಲೂ ಕದ
ಗಳಿಂದಲೂ ಅಗುಳಿಗಳಿಂದಲೂ ಭದ್ರಮಾಡಲ್ಪಟ್ಟ
ಪಟ್ಟಣಗಳೇ. ಅವುಗಳಲ್ಲದೆ ಹಳ್ಳಿಪಳ್ಳಿಗಳು ಬಹಳ
ಇದ್ದವು. ನಾವು ಹೆಷ್ಬೋನಿನ ಅರಸನಾದ ಸೀಹೋ 6
ನನ ಪಟ್ಟಣಗಳಿಗೆ ಮಾಡಿದಂತೆ ಇವುಗಳಿಗೂ ಮಾಡಿ
ದೆವು. ಅವುಗಳಲ್ಲಿದ್ದ ಗಂಡಸರನ್ನೂ ಹೆಂಗಸರನ್ನೂ
ಮಕ್ಕಳನ್ನೂ ನಿಶ್ಶೇಷವಾಗಿ ನಾಶಮಾಡಿದೆವು. ಪಶು 7
ಗಳನ್ನು ಮಾತ್ರ ಉಳಿಸಿ ಸ್ವಂತಕ್ಕೆ ತೆಗೆದುಕೊಂಡು
ಊರುಗಳನ್ನೆಲ್ಲಾ ಸೂರೆಮಾಡಿಬಿಟ್ಟೆವು.
ಆ ಕಾಲದಲ್ಲಿ ನಾವು ಅರ್ನೋನ್ ಹೊಳೆ ಮೊದಲು 8
ಗೊಂಡು ಹೆರ್ಮೋನ್ ಪರ್ವತದ ವರೆಗೂ ಯೊರ್ದನ್
ಹೊಳೆಯ ಈಚೆ ಇರುವ ದೇಶವನ್ನೆಲ್ಲಾ ಅಮೋರಿ
ಯರ ಇಬ್ಬರು ಅರಸರಿಂದ ತೆಗೆದುಕೊಂಡೆವು.
(ಹೆರ್ಮೋನ್ ಪರ್ವತಕ್ಕೆ ಚೀದೋನ್ಯರು ಸಿರ್ಯೋನ್ 9
ನೆಂದೂ ಅಮೋರಿಯರು ಸೆನೀರ್ ಎಂದೂ ಹೆಸರಿಟ್ಟು
ಕೊಂಡಿದ್ದಾರೆ.) ಹೀಗೆ ಮೀಶೋರೆಂಬ ಎತ್ತರವಾದ 10
ಬೈಲುಸೀಮೆಯ ಎಲ್ಲಾ ಪಟ್ಟಣಗಳನ್ನೂ ಗಿಲ್ಯಾದ್

ಸೀಮೆಯನ್ನೂ ಓಗನ ರಾಜ್ಯವಾದ ಸಲ್ಕಾ, ಎದ್ರೈ
ಎಂಬ ಪಟ್ಟಣಗಳಿಂದ ಕೂಡಿರುವ ಬಾಷಾನ್ ಸೀಮೆ
11 ಯನ್ನೂ ಸ್ವಾಧೀನಮಾಡಿಕೊಂಡೆವು. (ರೆಫಾಯರೊಳಗೆ
ಬಾಷಾನಿನ ಅರಸನಾದ ಓಗನೊಬ್ಬನೇ ಉಳಿದಿದ್ದನು.
1)ಅವನ ಮಂಚ ಕಬ್ಬಿಣದು; ಅಮ್ಮೋನಿಯರ ರಬ್ಬಾ
ಎಂಬ ಪಟ್ಟಣದಲ್ಲಿ ಅದನ್ನು ಈಗಲೂ ನೋಡ
ಬಹುದು. ಪುರುಷನ ಕೈಯಳತೆಯ ಪ್ರಕಾರ ಅದರ
ಉದ್ದ ಒಂಭತ್ತು ಮೊಳ, ಅಗಲ ನಾಲ್ಕು ಮೊಳ.)
12 ಆ ಕಾಲದಲ್ಲಿ ನಾವು ಆ ದೇಶವನ್ನೆಲ್ಲಾ ಸ್ವಾಧೀನ
ಮಾಡಿಕೊಂಡೆವು. ಅರ್ನೋನ್ ಹಳ್ಳದ ಬಳಿಯಲ್ಲಿ
ರುವ ಅರೋಯೇರ್ ಮೊದಲುಗೊಂಡು ಗಿಲ್ಯಾದ್
ಸೀಮೆಯ ಮಧ್ಯದ ವರೆಗೂ ಇರುವ ಪ್ರದೇಶವ
ನ್ನೆಲ್ಲಾ ಅದರ ಪಟ್ಟಣಗಳು ಸಹಿತವಾಗಿ ನಾನು
13 ರೂಬೇನ್ಯರಿಗೂ ಗಾದ್ಯರಿಗೂ ಕೊಟ್ಟೆನು. ಗಿಲ್ಯಾದಿನ
ಮಿಕ್ಕ ಭಾಗವನ್ನೂ ಓಗನ ರಾಜ್ಯವಾಗಿದ್ದ ಅರ್ಗೋಬ್
ಎನಿಸಿಕೊಳ್ಳುವ ಸಮಸ್ತ ಬಾಷಾನ್ ದೇಶವನ್ನೂ
14 ಮನಸ್ಸೆ ಕುಲದ ಅರ್ಧ ಜನರಿಗೆ ಕೊಟ್ಟೆನು. (ಬಾಷಾನ್
ದೇಶವು ರೆಫಾಯರ ದೇಶವೆನಿಸಿಕೊಳ್ಳುತ್ತದೆ. ಮನ
ಸ್ಸೆಯ ವಂಶಸ್ಥನಾದ ಯಾಯೀರನು ಗೆಷೂರ್ಯರ
ಮತ್ತು ಮಾಕಾತ್ಯರ ಮೇರೆಯ ವರೆಗೆ ಅರ್ಗೋಬ್
ಎಂಬ ಪ್ರದೇಶವನ್ನೆಲ್ಲಾ ಸ್ವಾಧೀನಮಾಡಿಕೊಂಡು
ಬಾಷಾನಿಗೆ ಸೇರಿರುವ ಆ ಪ್ರಾಂತ್ಯಕ್ಕೆ ಯಾಯೀರನ
ಗ್ರಾಮಗಳೆಂದು ತನ್ನ ಹೆಸರಿಟ್ಟನು. ಈ ಹೆಸರು
15 ಇಂದಿನ ವರೆಗೂ ಉಂಟು.) ನಾನು ಗಿಲ್ಯಾದ್
16 ದೇಶವನ್ನು ಮಾಕೀರನಿಗೂ ಗಿಲ್ಯಾದ್ ಮೊದಲು
ಗೊಂಡು [ದಕ್ಷಿಣಕಡೆಯಲ್ಲಿ] ಅರ್ನೋನ್ ತಗ್ಗಿನ
ವರೆಗೂ [ಪೂರ್ವಕಡೆಯಲ್ಲಿ] ಯಬ್ಬೋಕ್ ಹೊಳೆಯ
ವರೆಗೂ ಇರುವ ಪ್ರದೇಶವನ್ನು ರೂಬೇನ್ಯರಿಗೂ
ಗಾದ್ಯರಿಗೂ ಕೊಟ್ಟೆನು. ಅರ್ನೋನ್ ತಗ್ಗಿನ ಮಧ್ಯ
ಭಾಗವೇ ಅವರ [ದಕ್ಷಿಣ] ಮೇರೆ. ಅವರಿಗೂ
ಅಮ್ಮೋನಿಯರಿಗೂ ನಡುವೆ ಇರುವ ಯಬ್ಬೋಕ್
17 ಹೊಳೆಯು ಅವರ [ಪೂರ್ವದಿಕ್ಕಿನ] ಮೇರೆ. ಅದಲ್ಲದೆ
ಅರಾಬಾ ಎಂಬ ತಗ್ಗನ್ನೂ ಅವರಿಗೆ ಕೊಟ್ಟೆನು; ಅದ
ರಲ್ಲಿ ಕಿನ್ನೆರೆತ್ ಸಮುದ್ರ ಮೊದಲುಗೊಂಡು ಪಿಸ್ಗಾ
ಬೆಟ್ಟದ ಪಶ್ಚಿಮದಲ್ಲಿರುವ ಅರಾಬದ ಸಮುದ್ರವೆನಿಸಿ
ಕೊಳ್ಳುವ ಲವಣಸಮುದ್ರದ ವರೆಗೆ ಯೊರ್ದನ್
ಹೊಳೆಯು ಅವರ [ಪಶ್ಚಿಮ] ಮೇರೆ.

ಕಾನಾನ್ಯರ ದೇಶವನ್ನು ಜಯಿಸುವದಕ್ಕೆ ಬೇಕಾದ
ಏರ್ಪಾಡುಗಳನ್ನು ಮಾಡಿದ್ದು.

18 ಆ ಕಾಲದಲ್ಲಿ ನಾನು 2)ನಿಮಗೆ—ನಿಮ್ಮ ದೇವ
ರಾದ ಯೆಹೋವನು ಈ ಪ್ರದೇಶವನ್ನೇ ನಿಮಗೆ
ಸ್ವಾಸ್ತ್ಯಕ್ಕಾಗಿ ಕೊಟ್ಟಿದ್ದಾನೆ. ಆದರೆ ನಿಮ್ಮ ಭಟ
ರೆಲ್ಲರೂ ಯುದ್ಧಸನ್ನದ್ಧರಾಗಿ ನಿಮ್ಮ ಸಹೋದರ
ರಾದ ಇಸ್ರಾಯೇಲ್ಯರ ಮುಂದೆ ಹೊರಟು ಹೊಳೇ
19 ದಾಟಿ ಹೋಗಬೇಕು. ನಿಮಗೆ ಬಹಳ ದನಕುರಿ
ಗಳುಂಟೆಂಬದನ್ನು ನಾನು ಬಲ್ಲೆ. ನಿಮ್ಮ ದೇವ
ರಾದ ಯೆಹೋವನು ಯೊರ್ದನ್ ಹೊಳೆಯ ಆಚೆ
ನಿಮ್ಮ ಸಹೋದರರಿಗೆ ಕೊಡುವ ದೇಶವು ಅವರಿಗೆ
ಸ್ವಾಧೀನವಾಗುವ ವರೆಗೆ ನಿಮ್ಮ ಹೆಂಡರುಮಕ್ಕಳೂ
ದನಕುರಿಗಳೂ ನಾನು ನಿಮಗೆ ಕೊಟ್ಟಿರುವ ಪಟ್ಟಣ
ಗಳಲ್ಲೇ ಇರಲಿ. ಅನಂತರ ನಿಮ್ಮಂತೆ ನಿಮ್ಮ ಸಹೋದ
ರರಿಗೂ ಯೆಹೋವನಿಂದ ವಿಶ್ರಾಂತಿದೊರಕಿದಾಗ
ನಿಮ್ಮಲ್ಲಿ ಪ್ರತಿಯೊಬ್ಬನೂ ನಾನು ಕೊಟ್ಟ ಸ್ವಾಸ್ತ್ಯಕ್ಕೆ
ತಿರಿಗಿ ಬರಬಹುದು ಎಂದು ಆಜ್ಞಾಪಿಸಿದೆನು.
ಆ ಕಾಲದಲ್ಲಿ ನಾನು ಯೆಹೋಶುವನಿಗೆ—ನಿಮ್ಮ
ದೇವರಾದ ಯೆಹೋವನು ಆ ಇಬ್ಬರು ಅರಸರಿಗೆ
ಮಾಡಿದ್ದನ್ನು ನೀನು ನೋಡೇ ಇದ್ದೀ. ನೀನು
ಹೊಳೇ ದಾಟಿಹೋಗುವ ಎಲ್ಲಾ ರಾಜ್ಯಗಳನ್ನೂ ಆತನು
ಹಾಗೆಯೇ ನಾಶಮಾಡುವನು. ನೀವು ಅವರಿಗೆ ಭಯ
ಪಡಬೇಡಿರಿ; ನಿಮ್ಮ ದೇವರಾದ ಯೆಹೋವನು ತಾನೇ
ನಿಮ್ಮ ಕಡೆಯವನಾಗಿ ಯುದ್ಧಮಾಡುವನು ಎಂದು
ಆಜ್ಞಾಪಿಸಿದೆನು.
ಆ ಕಾಲದಲ್ಲಿ ನಾನು ಯೆಹೋವನಿಗೆ—ಕರ್ತ 23
ನಾದ ಯೆಹೋವನೇ, ನೀನು ನಿನ್ನ ಮಹತ್ವವನ್ನೂ
ಭುಜಬಲವನ್ನೂ ನಿನ್ನ ದಾಸನಿಗೆ ತೋರಿಸಲಾರಂಭಿ
ಸಿದಿ. ನೀನು ನಡಿಸುವ ಈ ಮಹತ್ಕಾರ್ಯಗಳಿಗೆ
ಸಮಾನವಾದ ಕಾರ್ಯಗಳನ್ನು ಆಕಾಶದಲ್ಲಾಗಲಿ
ಭೂಮಿಯಲ್ಲಾಗಲಿ ಬೇರೆ ಯಾವ ದೇವರು ನಡಿಸ
ಬಲ್ಲನು? ಕರ್ತನೇ, ನಾನೂ ಈ ಹೊಳೆಯನ್ನು
ದಾಟಿ ಆಚೆಯಿರುವ ಒಳ್ಳೆಯ ದೇಶವನ್ನು ಅಂದರೆ ಅ
ಅಂದವಾದ ಬೆಟ್ಟದ ಸೀಮೆಯನ್ನೂ ಲೆಬನೋನ್
ಪರ್ವತವನ್ನೂ ನೋಡುವದಕ್ಕೆ ಅಪ್ಪಣೆಯಾಗಲಿ
ಎಂದು ಬಿನ್ನೈಸಿದೆನು. ಆದರೆ ಯೆಹೋವನು ನಿಮ್ಮ
ದೆಸೆಯಿಂದ ನನ್ನ ಮೇಲೆ ಕೋಪವುಳ್ಳವನಾಗಿ ನನ್ನ
ಮನವಿಯನ್ನು ಕೇಳದೆ—ಸಾಕು; ಇದರ ವಿಷಯ
ದಲ್ಲಿ ಇನ್ನು ನನ್ನ ಸಂಗಡ ಮಾತಾಡಬೇಡ; ನೀನು
ಯೊರ್ದನ್ ಹೊಳೆಯನ್ನು ದಾಟಕೂಡದು. ಆದರೆ
ಪಿಸ್ಗಾ ಬೆಟ್ಟವನ್ನು ಹತ್ತಿ ತುದಿಯಲ್ಲಿ ನಿಂತು ಚತು
ರ್ದಿಕ್ಕುಗಳಲ್ಲಿ ಸುತ್ತಲೂ ಇರುವ ದೇಶವನ್ನು ಕಣ್ಣು
ತುಂಬಾ ನೋಡಬಹುದು. ಯೆಹೋಶುವನೇ ಈ
ಜನರ ನಾಯಕನಾಗಿ ಹೋಗಿ ನೀನು ನೋಡುವ
ದೇಶವನ್ನು ಅವರಿಗೆ ಸ್ವಾಧೀನಪಡಿಸುವನು. ಅವನಿಗೇ
ಈ ಅಧಿಕಾರವನ್ನು ಕೊಡಬೇಕು; ಅವನು ದೃಢನಾ
ಗುವಂತೆ ಅವನನ್ನು ಧೈರ್ಯಪಡಿಸಬೇಕೆಂದು ಉತ್ತರ
ಕೊಟ್ಟನು.
ಆಗ ನಾವು ಬೇತ್‌ಪೆಗೋರಿಗೆ ಎದುರಾಗಿರುವ
ಕಣಿವೆಯಲ್ಲಿ ವಾಸವಾಗಿದ್ದೆವು.

ಇಸ್ರಾಯೇಲ್ಯರು ವಿಗ್ರಹಾರಾಧನೆಯನ್ನು ಮಾಡದೆ
ಯೆಹೋವನನ್ನೇ ಹೊಂದಿಕೊಂಡು ಆತನ ಆಜ್ಞಾವಿಧಿಗಳನ್ನು
ಮನಃಪೂರ್ವಕವಾಗಿ ಅನುಸರಿಸಬೇಕೆಂಬದು.

ಇಸ್ರಾಯೇಲ್ಯರೇ, ಕೇಳಿರಿ; ನೀವು ಬದುಕಿಕೊಂಡು
ನಿಮ್ಮ ಪಿತೃಗಳ ದೇವರಾದ ಯೆಹೋವನು ನಿಮಗೆ

1) ಅಥವಾ: ಅವನ ಶವದ ಪೆಟ್ಟಿಗೆ ಕಲ್ಲಿನದು.

2) ಅಂದರೆ ನಿಮ್ಮಲ್ಲಿ ಎರಡುವರೆ ಕುಲಗಳವರಿಗೆ.

ಕೊಡುವ ದೇಶವನ್ನು ಸೇರಿ ಸ್ವಾಧೀನಮಾಡಿಕೊಳ್ಳು
ವಂತೆ ನಾನು ಈಗ ಬೋಧಿಸುವ ಆಜ್ಞಾವಿಧಿಗಳನ್ನು
2 ಗಮನಿಸಿ ಅನುಸರಿಸಬೇಕು. ನಿಮ್ಮ ದೇವರಾದ
ಯೆಹೋವನು ಕೊಟ್ಟ ಆಜ್ಞೆಗಳನ್ನೇ ನಾನು ನಿಮಗೆ
ತಿಳಿಸುತ್ತಾ ಇದ್ದೇನೆ. ಈ ಮಾತುಗಳನ್ನು ನೀವು
ಕೈಕೊಳ್ಳಬೇಕೇ ಹೊರತು ಅವುಗಳಿಗೆ ಏನೂ ಕೂಡಿಸ
ಬಾರದು, ಅವುಗಳಿಂದ ಏನೂ ತೆಗೆದುಬಿಡಬಾರದು.
3 ಪೆಗೋರದ ಬಾಳನ ಸಂಗತಿಯಲ್ಲಿ ಯೆಹೋವನು
ಮಾಡಿದ ಕಾರ್ಯವನ್ನು ನೀವು ನೋಡೇ ಇದ್ದೀರಷ್ಟೆ;
ಪೆಗೋರದ ಬಾಳನನ್ನು ಅನುಸರಿಸಿದವರೆಲ್ಲರನ್ನೂ
ನಿಮ್ಮ ದೇವರಾದ ಯೆಹೋವನು ನಿಮ್ಮಲ್ಲಿರದಂತೆ ನಾಶ
4 ಮಾಡಿದನಲ್ಲಾ. ನಿಮ್ಮ ದೇವರಾದ ಯೆಹೋವನನ್ನು
ಹೊಂದಿಕೊಂಡವರಾದ ನೀವಾದರೋ ಇಂದಿನ ವರೆಗೂ
ಉಳಿದುಕೊಂಡಿದ್ದೀರಿ.
5 ನೀವು ಸ್ವಾಧೀನಮಾಡಿಕೊಳ್ಳುವದಕ್ಕೆ ಹೋಗುವ
ದೇಶದಲ್ಲಿ ಅನುಸರಿಸಬೇಕಾದ ಆಜ್ಞಾವಿಧಿಗಳನ್ನು
ನನ್ನ ದೇವರಾದ ಯೆಹೋವನು ನನಗೆ ಆಜ್ಞಾಪಿಸಿ
6 ದಂತೆಯೇ ನಿಮಗೆ ಬೋಧಿಸಿದ್ದೇನೆ. ಇವುಗಳನ್ನು
ಕೈಕೊಂಡು ಅನುಸರಿಸಿರಿ. ಅನುಸರಿಸಿದರೇ ಅನ್ಯ
ಜನಗಳು ನಿಮ್ಮನ್ನು ಜ್ಞಾನಿಗಳೂ ವಿವೇಕಿಗಳೂ ಎಂದು
ತಿಳಿಯುವರು. ಅವರು ಈ ಆಜ್ಞೆಗಳ ವಿಷಯದಲ್ಲಿ
ವರ್ತಮಾನವನ್ನು ಕೇಳಿ—ಈ ದೊಡ್ಡ ಜನಾಂಗವು
ಜ್ಞಾನವಿವೇಕವುಳ್ಳ ಜನಾಂಗ ಎಂದು ಮಾತಾಡಿ
7 ಕೊಳ್ಳುವರು. ನಾವು ನಮ್ಮ ದೇವರಾದ ಯೆಹೋವ
ನಿಗೆ ಮೊರೆಯಿಡುವಾಗೆಲ್ಲಾ ಆತನು ಸಮೀಪವಾಗಿ
ಯೇ ಇದ್ದಾನಲ್ಲಾ; ಬೇರೆ ಎಷ್ಟು ದೊಡ್ಡ ಜನಾಂಗ
ಕ್ಕಾದರೂ ಯಾವ ದೇವರು ಹೀಗೆ ಸಮೀಪವಾಗಿರು
8 ವನು? ನಾನು ಈ ಹೊತ್ತು ನಿಮ್ಮ ಮುಂದೆ ಇಡುವ
ಇಂಥ ನ್ಯಾಯವಾದ ಆಜ್ಞಾವಿಧಿಗಳುಳ್ಳ ಈ ಧರ್ಮ
ಶಾಸ್ತ್ರಕ್ಕೆ ಸಮಾನವಾದದ್ದು ಬೇರೆ ಯಾವ ಜನಾಂಗಕ್ಕೆ
ಉಂಟು?
9 ಹೀಗಿರುವದರಿಂದ ನೀವು ಬಹು ಜಾಗರೂಕತೆ
ಯಿಂದ ನಿಮ್ಮನಿಮ್ಮ ಮನಸ್ಸುಗಳನ್ನು ಕಾಪಾಡಿ
ಕೊಳ್ಳುವವರಾಗಿ ನೀವು ನೋಡಿದ ಸಂಗತಿಗಳನ್ನು
ಎಷ್ಟುಮಾತ್ರವೂ ಮರೆಯದೆ ಜೀವದಿಂದಿರುವ ವರೆಗೂ
ಅವುಗಳನ್ನು ನೆನಪಿನಲ್ಲಿಟ್ಟುಕೊಂಡು ನಿಮ್ಮ ಮಕ್ಕ
ಳಿಗೂ ಮೊಮ್ಮಕ್ಕಳಿಗೂ ತಿಳಿಸುತ್ತಾ ಹೋಗಬೇಕು.
10 ಆ ಸಂಗತಿಗಳು ಯಾವವಂದರೆ—ನೀವು ಹೋರೇಬಿ
ನಲ್ಲಿ ನಿಮ್ಮ ದೇವರಾದ ಯೆಹೋವನ ಸನ್ನಿಧಿಯಲ್ಲಿ
ನಿಂತಿದ್ದಾಗ ಆತನು ನನಗೆ—ಜನರೆಲ್ಲರನ್ನು ನನ್ನ
ಹತ್ತಿರಕ್ಕೆ ಕೂಡಿಸು; ಅವರು ತಾವು ಭೂಮಿಯ
ಮೇಲಿರುವ ದಿನಗಳಲ್ಲೆಲ್ಲಾ ನನಗೆ ಭಯಭಕ್ತಿಯಿಂದಿ
ರುವದಕ್ಕೆ ಕಲಿತುಕೊಂಡು ತಮ್ಮ ಮಕ್ಕಳಿಗೂ ಕಲಿಸಿ
ಕೊಡುವಂತೆ ಅವರಿಗೆ ಆಜ್ಞೆಗಳನ್ನು ತಿಳಿಸುತ್ತೇನೆ
11 ಎಂದು ಹೇಳಿದ ದಿನದ ವಿಷಯಗಳೇ. ಆ ದಿನದಲ್ಲಿ
ನೀವು ಹತ್ತಿರ ಬಂದು ಬೆಟ್ಟದ ಬುಡದಲ್ಲಿ ನಿಂತು
ಕೊಂಡಿರಲು ಮೊಬ್ಬೂ ಮೋಡವೂ ಕಾರ್ಗತ್ತಲೂ
ಕವಿದು ಆ ಬೆಟ್ಟವು ಆಕಾಶದ ತುದಿಯ ವರೆಗೂ
12 ಬೆಂಕಿಯಿಂದ ಉರಿದದ್ದೂ; ಯೆಹೋವನು ಆ ಬೆಂಕಿ
ಯ ಜ್ವಾಲೆಯೊಳಗಿಂದ ನಿಮ್ಮ ಸಂಗಡ ಮಾತಾಡಿದ್ದೂ;

ಮಾತಾಡಿದ ಸ್ವರ ನಿಮಗೆ ಕೇಳಿಸಿತೇ ಹೊರತು
ಯಾವ ಆಕಾರವೂ ಕಾಣಿಸದೆ ಹೋದದ್ದೂ; ನೀವು 13
ಅನುಸರಿಸಬೇಕೆಂದು ಆತನು ನೇಮಿಸಿದ ನಿಬಂಧನೆ
ಯನ್ನು ಅಂದರೆ ಹತ್ತು ಕಟ್ಟಳೆಗಳನ್ನು ನಿಮಗೆ
ವಿವರಿಸಿ ಎರಡು ಕಲ್ಲಿನ ಹಲಗೆಗಳಲ್ಲಿ ಕೆತ್ತಿಸಿದ್ದೂ;
ನೀವು ಹೊಳೆ ದಾಟಿ ಸ್ವಾಧೀನಮಾಡಿಕೊಳ್ಳುವ ದೇಶ 14
ದಲ್ಲಿ ಅನುಸರಿಸಬೇಕಾದ ಆಜ್ಞಾವಿಧಿಗಳನ್ನು ನಿಮಗೆ
ಬೋಧಿಸಬೇಕೆಂದು ಯೆಹೋವನು ಆ ಕಾಲದಲ್ಲಿ
ನನಗೆ ಆಜ್ಞಾಪಿಸಿದ್ದೂ; ಇವುಗಳನ್ನೆಲ್ಲಾ ನೀವು
ನೆನಪಿನಲ್ಲಿಟ್ಟುಕೊಂಡು ನಿಮ್ಮ ಸಂತತಿಯವರಿಗೆ ತಿಳಿಸ
ಬೇಕು.
ಹೋರೇಬಿನಲ್ಲಿ ಯೆಹೋವನು ಬೆಂಕಿಯ ಜ್ವಾಲೆ 15
ಯೊಳಗಿಂದ ನಿಮ್ಮ ಸಂಗಡ ಮಾತಾಡಿದಾಗ ನಿಮಗೆ
ಯಾವ ಆಕಾರವೂ ಕಾಣಿಸಲಿಲ್ಲವಷ್ಟೆ. ಆದದರಿಂದ
ನೀವು ನಿಮ್ಮ ನಿಮ್ಮ ಮನಸ್ಸುಗಳನ್ನು ಬಹು ಜಾಗ
ರೂಕತೆಯಿಂದ ಕಾಪಾಡಿಕೊಳ್ಳಬೇಕು. ನೀವು ಸ್ತ್ರೀ 16
ಪುರುಷರ ರೂಪವನ್ನಾಗಲಿ ಭೂಮಿಯ ಮೇಲೆ ಸಂಚ 17
ರಿಸುವ ಮೃಗದ ರೂಪವನ್ನಾಗಲಿ ಆಕಾಶದಲ್ಲಿ ಹಾರಾ
ಡುವ ಪಕ್ಷಿಯ ರೂಪವನ್ನಾಗಲಿ ನೆಲದ ಮೇಲೆ 18
ಹರಿದಾಡುವ ಕ್ರಿಮಿಕೀಟಗಳ ರೂಪವನ್ನಾಗಲಿ ಭೂಮಿ
ಯ ಕೆಳಗಣ ನೀರಿನಲ್ಲಿರುವ ಮೀನಿನ ರೂಪವನ್ನಾಗಲಿ
ದೇವರ ಸ್ವರೂಪವೆಂದು ಮಾಡಿಕೊಂಡು ಭ್ರಷ್ಟರಾಗ
ಬಾರದು. ನಿಮ್ಮ ದೇವರಾದ ಯೆಹೋವನು ಭೂ 19
ಲೋಕದಲ್ಲಿರುವ ಬೇರೆ ಎಲ್ಲಾ ಜನಾಂಗಗಳಿಗೋಸ್ಕರ
ದಯಪಾಲಿಸಿದ ಸೂರ್ಯಚಂದ್ರನಕ್ಷತ್ರಗಳೆನಿಸಿಕೊ
ಳ್ಳುವ ಆಕಾಶಸೈನ್ಯವನ್ನು ನೀವು ಆಕಾಶದ ಕಡೆಗೆ
ಕಣ್ಣೆತ್ತಿ ನೋಡುವಾಗ, ಮರುಳುಗೊಂಡು ಅವುಗಳನ್ನು
ಪೂಜಿಸಲೂ ಬಾರದು ನಮಸ್ಕರಿಸಲೂ ಬಾರದು. ನಿಮ್ಮ 20
ನ್ನಾದರೋ ಯೆಹೋವನು ತನಗೆ ಸ್ವಕೀಯಜನರ
ನ್ನಾಗಿ ಮಾಡಿಕೊಳ್ಳಬೇಕೆಂದು ಸಂಕಲ್ಪಿಸಿ ಕಬ್ಬಿಣ
ವನ್ನು ಕರಗಿಸುವ ಕುಲಿಮೆಯೋಪಾದಿಯಲ್ಲಿದ್ದ
ಐಗುಪ್ತದೇಶದಿಂದ ತಪ್ಪಿಸಿದನು; ಆ ಸಂಕಲ್ಪವು ಈಗ
ನೆರವೇರಿತಲ್ಲಾ.
ಅದಲ್ಲದೆ ಯೆಹೋವನು ನಿಮ್ಮ ದೆಸೆಯಿಂದ 21
ನನ್ನ ಮೇಲೆಯೂ ಕೋಪಗೊಂಡು ನಾನು ಯೊರ್ದ
ನ್ ಹೊಳೆಯನ್ನು ದಾಟಿ ನಿಮ್ಮ ದೇವರಾದ ಯೆಹೋ
ವನು ನಿಮಗೆ ಸ್ವದೇಶವಾಗುವದಕ್ಕೆ ಕೊಡುವ ಆ
ಒಳ್ಳೆಯ ದೇಶವನ್ನು ಸೇರದೆ ಇಲ್ಲಿಯೇ ಸಾಯ 22
ಬೇಕೆಂದು ಖಂಡಿತವಾಗಿ ಹೇಳಿದನು ನೀವಾದರೋ
ಹೊಳೆ ದಾಟಿ ಆ ಒಳ್ಳೇ ದೇಶವನ್ನು ಸೇರಿ ಸ್ವಾಧೀನ
ಮಾಡಿಕೊಳ್ಳುವಿರಿ.
ಎಚ್ಚರಿಕೆಯಾಗಿರಿ. ನಿಮ್ಮ ದೇವರಾದ ಯೆಹೋ 23
ವನು ನಿಮ್ಮ ಸಂಗಡ ಮಾಡಿದ ನಿಬಂಧನೆಯನ್ನು
ನೀವು ಮರೆತು ಪೂಜಿಸಬೇಡಿರೆಂದು ಆತನು ನಿಷೇಧಿಸಿದ
ಯಾವ ವಸ್ತುವಿನ ವಿಗ್ರಹವನ್ನೂ ಮಾಡಿಕೊಳ್ಳ
ಬಾರದು. ನಿಮ್ಮ ದೇವರಾದ ಯೆಹೋವನು ತನಗೆ 24
ಸಲ್ಲಬೇಕಾದ ಗೌರವವನ್ನು ಮತ್ತೊಬ್ಬನಿಗೆ ಸಲ್ಲಗೊ
ಡಿಸದೆ ಉರಿಯುವ ಬೆಂಕಿಯಂತೆ [ದ್ರೋಹಿಗಳನ್ನು]
ದಹಿಸಿಬಿಡುವವನಾಗಿದ್ದಾನೆಂದು ತಿಳಿಯಿರಿ.
ನೀವು ಮಕ್ಕಳನ್ನೂ ಮೊಮ್ಮಕ್ಕಳನ್ನೂ ಪಡೆದು 25

ಬಹುಕಾಲ ಆ ದೇಶದಲ್ಲಿದ್ದ ಮೇಲೆ ದ್ರೋಹಿಗಳಾಗಿ
ಯಾವ ವಿಗ್ರಹವನ್ನಾದರೂ ಮಾಡಿಕೊಂಡು ನಿಮ್ಮ
ದೇವರಾದ ಯೆಹೋವನ ದೃಷ್ಟಿಗೆ ಕೆಟ್ಟದ್ದನ್ನು ನಡಿಸಿ
26 ಆತನನ್ನು ಕೋಪಗೊಳಿಸಿದರೆ ನೀವು ಯೊರ್ದನ್
ಹೊಳೆಯನ್ನು ದಾಟಿ ಸ್ವಾಧೀನಮಾಡಿಕೊಳ್ಳುವ ಆ
ದೇಶದಲ್ಲಿ ಉಳಿಯದೆ ಬೇಗನೆ ನಾಶವಾಗಿ ಹೋಗು
ವಿರಿ ಎಂದು ಭೂಮ್ಯಾಕಾಶಗಳನ್ನು ಸಾಕ್ಷಿಗಳಾಗಿ
ಕರೆದು ಎಚ್ಚರಿಸುತ್ತೇನೆ. ನೀವು ಆ ದೇಶದಲ್ಲಿ
ಬಹುದಿವಸ ಇರದೆ ನಾಶವಾಗಿಯೇ ಹೋಗುವಿರಿ.
27 ಯೆಹೋವನು ನಿಮ್ಮನ್ನು ಅನ್ಯಜನಗಳಲ್ಲಿ ಚದರಿಸು
ವನು; ಆತನು ನಿಮ್ಮನ್ನು ಓಡಿಸುವ ದೇಶಗಳ ಜನರ
ಮಧ್ಯದಲ್ಲಿ ನೀವು ಸ್ವಲ್ಪ ಮಂದಿ ಮಾತ್ರ ಉಳಿಯು
28 ವಿರಿ. ನೀವು ಆ ದೇಶಗಳಲ್ಲಿ ಮನುಷ್ಯರು ಮಾಡಿ
ಕೊಂಡ ದೇವರುಗಳನ್ನು ಅಂದರೆ ಮರದಲ್ಲಾಗಲಿ
ಕಲ್ಲಿನಲ್ಲಾಗಲಿ ಕೆತ್ತಲ್ಪಟ್ಟು ನೋಡಲಾರದೆ ಕೇಳ
ಲಾರದೆ ತಿನ್ನಲಾರದೆ ವಾಸನೆತಿಳುಕೊಳ್ಳಲಾರದೆ ಇರುವ
ದೇವರುಗಳನ್ನು ಪೂಜಿಸುವವರಾಗುವಿರಿ.
29 ಅಲ್ಲಿಂದಲಾದರೂ ನೀವು ಸಂಪೂರ್ಣಹೃದಯ
ದಿಂದಲೂ ಮನಸ್ಸಿನಿಂದಲೂ ನಿಮ್ಮ ದೇವರಾದ
ಯೆಹೋವನನ್ನು ಹುಡುಕಿದರೆ ಆತನು ನಿಮಗೆ ಸಿಕ್ಕು
30 ವನು. ಮೇಲೆ ಹೇಳಿದ ಎಲ್ಲಾ ಕಷ್ಟಗಳು ನಿಮಗೆ
ಸಂಭವಿಸಿ ನೀವು ಸಂಕಟದಲ್ಲಿರುವಾಗ ಅಂತ್ಯದಲ್ಲಿ
ನೀವು ಆತನ ಕಡೆಗೆ ತಿರುಗಿಕೊಂಡು ಆತನ ಮಾತಿಗೆ
31 [1]ಕಿವಿಗೊಡುವಿರಿ. ನಿಮ್ಮ ದೇವರಾದ ಯೆಹೋವನು
ಕನಿಕರವುಳ್ಳ ದೇವರಾದದರಿಂದ ಆತನು ನಿಮ್ಮನ್ನು
ಅಲಕ್ಷ್ಯಮಾಡುವದಿಲ್ಲ, ನಾಶನಕ್ಕೆ ಬಿಡುವದಿಲ್ಲ;
ತಾನು ನಿಮ್ಮ ಪಿತೃಗಳ ಸಂಗಡ ಪ್ರಮಾಣಪೂರ್ವಕ
ವಾಗಿ ಮಾಡಿಕೊಂಡ ಒಡಂಬಡಿಕೆಯನ್ನು ಮರೆಯು
ವದಿಲ್ಲ.
32 ದೇವರು ಮನುಷ್ಯರನ್ನು ಸೃಷ್ಟಿಸಿ ಭೂಮಿಯ
ಮೇಲೆ ಇರಿಸಿದ ದಿನ ಮೊದಲುಗೊಂಡು ಇಂದಿನ
ವರೆಗೂ ಒಂದು ದಿಕ್ಕಿನಿಂದ ಮತ್ತೊಂದು ದಿಕ್ಕಿನ
ವರೆಗೂ ಅಂಥ ದೊಡ್ಡ ಕಾರ್ಯವು ನಡೆದದ್ದುಂಟೋ,
ಇಲ್ಲವೆ ಅಂಥದರ ಸುದ್ದಿ ಕೇಳಿದ್ದುಂಟೋ ಎಂದು
33 ವಿಚಾರಿಸಿಕೊಳ್ಳಿರಿ. ದೇವರು ಬೆಂಕಿಯ ಜ್ವಾಲೆಯೊಳ
ಗಿಂದ ಮಾತಾಡಿದ ಸ್ವರವು ನಿಮಗೆ ಕೇಳಿಸಿತಲ್ಲಾ;
ಬೇರೆ ಯಾವ ಜನರಾದರೂ ದೇವರ ಸ್ವರವನ್ನು ಕೇಳಿ
34 ಬದುಕಿದ್ದುಂಟೋ? ಬೇರೆ ಯಾವ ದೇವರಾದರೂ
ಮನಶ್ಶೋಧನೆ, ಮಹತ್ಕಾರ್ಯ, ಉತ್ಪಾತ, ಯುದ್ಧ,
ಭುಜಪರಾಕ್ರಮ, [2]ಶಿಕ್ಷಾಹಸ್ತ, ಮಹಾಭೀತಿ ಇವು
ಗಳನ್ನು ಪ್ರಯೋಗಿಸಿ ಒಂದು ಜನಾಂಗವನ್ನು
ಮತ್ತೊಂದು ಜನಾಂಗದ ಕೈಯೊಳಗಿಂದ ತಪ್ಪಿಸು
ವದಕ್ಕೆ ಪ್ರಯತ್ನಿಸಿದ್ದುಂಟೋ? ನಿಮ್ಮ ದೇವರಾದ
ಯೆಹೋವನಾದರೋ ಐಗುಪ್ತದೇಶದಲ್ಲಿ ನಿಮಗೋ
ಸ್ಕರ ಇದನ್ನೆಲ್ಲಾ ನಿಮ್ಮ ಕಣ್ಣೆಗೆದುರಾಗಿ ನಡಿಸಿದ
35 ನಲ್ಲಾ. ಯೆಹೋವನೊಬ್ಬನೇ ದೇವರು, ಬೇರೆ
ದೇವರೇ ಇಲ್ಲವೆಂದು ನೀವು ತಿಳಿದುಕೊಳ್ಳುವದಕ್ಕಾಗಿ
36 ಇದೆಲ್ಲಾ ನಿಮಗೆ ಮಾತ್ರ ತೋರಿಸಲ್ಪಟ್ಟಿತು. ಆತನು
ನಿಮ್ಮ ಶಿಕ್ಷಣಕ್ಕೋಸ್ಕರ ಆಕಾಶದಿಂದ ತನ್ನ ಸ್ವರ
ವನ್ನು ನಿಮಗೆ ಕೇಳಿಸುವಂತೆ ಮಾಡಿದನು; ಮತ್ತು
ಭೂಮಿಯ ಮೇಲೆ ತಾನಿದ್ದ ಮಹಾ ಅಗ್ನಿಜ್ವಾಲೆ
ಯನ್ನು ನೋಡಿಸಿದನು; ಅದಲ್ಲದೆ ಆ ಅಗ್ನಿಜ್ವಾಲೆ
ಯೊಳಗಿಂದ ಆತನು ಆಡಿದ ಮಾತುಗಳನ್ನು ಕೇಳಿಸು
ವಂತೆ ಮಾಡಿದನು.
ಆತನು ನಿಮ್ಮ ಪಿತೃಗಳನ್ನು ಪ್ರೀತಿಸಿ ಅವರ ತರು
ವಾಯ ಅವರ ಸಂತತಿಯವರಾದ ನಿಮ್ಮನ್ನೂ ಆದು
ಕೊಂಡು ಈಗ ನಮ್ಮ ಅನುಭವಕ್ಕೆ ಬಂದ ಪ್ರಕಾರ
ನಿಮಗಿಂತ ಮಹಾಬಲಿಷ್ಠವಾದ ಜನಾಂಗಗಳನ್ನು
ಹೊರಡಿಸಲೂ ಅವರ ದೇಶದಲ್ಲಿ ನಿಮ್ಮನ್ನು ಸೇರಿಸಿ
ಆ ದೇಶವನ್ನು ನಿಮಗೇ ಸ್ವದೇಶವಾಗಿ ಕೊಡಲೂ
ಬೇಕೆಂದು ಸಂಕಲ್ಪಿಸಿ ತಾನೇ ನಿಮ್ಮೊಂದಿಗಿದ್ದು ತನ್ನ
ಅಪಾರಸಾಮರ್ಥ್ಯದಿಂದ ನಿಮ್ಮನ್ನು ಐಗುಪ್ತದೇಶದೊ
ಳಗಿಂದ ಬರಮಾಡಿದನಲ್ಲಾ. ನೀವು ಇದನ್ನೆಲ್ಲಾ ಆ
ಲೋಚಿಸಿ ಆಕಾಶದಲ್ಲಿಯೂ ಭೂಮಿಯಲ್ಲಿಯೂ ಯೆ
ಹೋವನೊಬ್ಬನೇ ದೇವರು, ಬೇರೆ ಯಾವ ದೇವರೂ
ಇಲ್ಲವೆಂಬದನ್ನು ಈಗ ಗ್ರಹಿಸಿಕೊಂಡು ಜ್ಞಾಪಕದಲ್ಲಿ
ಡಬೇಕು. ನಿಮಗೂ ನಿಮ್ಮ ಸಂತತಿಯವರಿಗೂ ಶುಭ
ವುಂಟಾಗುವಂತೆಯೂ ನಿಮ್ಮ ದೇವರಾದ ಯೆಹೋ
ವನು ನಿಮಗೆ ಕೊಡುವ ದೇಶದಲ್ಲಿ ನೀವು ಸದಾಕಾಲ
ಬಾಳುವಂತೆಯೂ ನಾನು ನಿಮಗೆ ಈಗ ತಿಳಿಸಿದ
ಆತನ ಆಜ್ಞಾವಿಧಿಗಳನ್ನು ನೀವು ಅನುಸರಿಸಿ ನಡೆಯ
ಬೇಕು.

### ಕೈತಪ್ಪಿ ನರಹತ್ಯಮಾಡಿದವರಿಗೋಸ್ಕರ ಮೋಶೆಯು ಮೂರು ಆಶ್ರಯಪಟ್ಟಣಗಳನ್ನು ನೇಮಿಸಿದ್ದು.

ಆ ಕಾಲದಲ್ಲಿ ಮೋಶೆ ಯೊರ್ದನ್ ಹೊಳೆಯ ಪೂರ್ವ
ದಿಕ್ಕಿನಲ್ಲಿ ಮೂರು ಆಶ್ರಯನಗರಗಳನ್ನು ಗೊತ್ತು
ಮಾಡಿದನು. ಮೊದಲು ಯಾವ ದ್ವೇಷವೂ ಇಲ್ಲದೆ
ಕೈತಪ್ಪಿ ಮತ್ತೊಬ್ಬನನ್ನು ಕೊಂದವನು ಆ ಪಟ್ಟಣ
ಗಳಲ್ಲಿ ಒಂದಕ್ಕೆ ಓಡಿಹೋಗಿ ಬದುಕಿಕೊಳ್ಳಲಿ ಎಂದು
ಆ ಪಟ್ಟಣಗಳನ್ನು ನೇಮಿಸಿದನು. ಅವು ಯಾವ
ವಂದರೆ—ರೂಬೇನ್ಯರಿಗೋಸ್ಕರ ಮಿಶೋರ್ ಎಂಬ
ಎತ್ತರವಾದ ಬೈಲು ಸೀಮೆಯ ಅರಣ್ಯದಲ್ಲಿರುವ
ಬೆಚೆರ್; ಗಾದ್ಯರಿಗೋಸ್ಕರ ಗಿಲ್ಯಾದಿನಲ್ಲಿರುವ ರಾ
ಮೋತ್; ಮನಸ್ಸೆಯವರಿಗೋಸ್ಕರ ಬಾಷಾನಿನಲ್ಲಿರುವ
ಗೋಲಾನ್ ಇವುಗಳೇ.

### ಮೋಶೆ ಮಾಡಿದ ಎರಡನೆಯ ಉಪನ್ಯಾಸದ ಕಾಲ ಮತ್ತು ಸ್ಥಳ ಇವುಗಳ ವಿಷಯ.

ಮೋಶೆ ಇಸ್ರಾಯೇಲ್ಯರಿಗೆ ಕೊಟ್ಟ ಧರ್ಮಶಾಸ್ತ್ರವು
ಇದೇ. ಇಸ್ರಾಯೇಲ್ಯರು ಐಗುಪ್ತದೇಶದಿಂದ ಬಂ 45
ದಾಗ ಯೊರ್ದನ್ ಹೊಳೆಯ ಆಚೆ ಬೇತ್‌ಪೆಗೋರಿಗೆ
ಎದುರಾಗಿರುವ ಕಣಿವೆಯಲ್ಲಿ ಹೆಷ್ಬೋನಿನಲ್ಲಿ ವಾಸಿಸಿದ
ಅಮೋರಿಯರ ಅರಸನಾದ ಸೀಹೋನನ ದೇಶದಲ್ಲಿ

1) ಅಥವಾ: ಕಿವಿಗೊಟ್ಟರೆ.

2) ಮೂಲ: ಬಲವಾದ ಕೈ ಮತ್ತು ಚಾಚಿದ ತೋಳು.

ಮೋಶೆ ಇಸ್ರಾಯೇಲ್ಯರಿಗೆ ತಿಳಿಸಿದ ಆಜ್ಞಾವಿಧಿನಿರ್ಣ
ಯಗಳು ಇವೇ. (ಮೋಶೆಯೂ ಇಸ್ರಾಯೇಲ್ಯರೂ
ಐಗುಪ್ತದೇಶದಿಂದ ಬಂದಾಗ ಆ ಸೀಹೋನನನ್ನು
48 ಜಯಿಸಿದ್ದರು. ಅವನ ರಾಜ್ಯವನ್ನೂ ಬಾಷಾನ್
ದೇಶದ ಅರಸನಾದ ಓಗನ ರಾಜ್ಯವನ್ನೂ ಅಂತು
ಅರ್ನೋನ್ ತಗ್ಗಿನ ಅಂಚಿನಲ್ಲಿರುವ ಅರೋಯೇರ್
ಪಟ್ಟಣ ಮೊದಲುಗೊಂಡು ಹೆರ್ಮೋನ್ ಎಂಬ ಸೀ
ಯೋನ್ ಪರ್ವತದ ವರೆಗೂ ಯೊರ್ದನ್ ಹೊಳೆಯ
ಆಚೆ ಪೂರ್ವದಿಕ್ಕಿನಲ್ಲಿದ್ದ ಅಮೋರಿಯರ ಇಬ್ಬರು
ಅರಸರ ರಾಜ್ಯಗಳನ್ನು ಮತ್ತು ಅರಾಬಾ ಎಂಬ
ತಗ್ಗಿನಲ್ಲಿ ಪಿಸ್ಗಾ ಬೆಟ್ಟದ ಬುಡದಲ್ಲಿರುವ ಅರಾಬದ
ಸಮುದ್ರದ ವರೆಗೆ ಯೊರ್ದನ್ ಹೊಳೆಯ ಆಚೆ ಇರುವ
ಭಾಗವನ್ನೆಲ್ಲಾ ಸ್ವಾಧೀನಮಾಡಿಕೊಂಡಿದ್ದರು.)

### ಮೋಶೆಯ ಎರಡನೆಯ ಉಪನ್ಯಾಸ.
### 5—28.

ಏಕದೇವರಾಗಿರುವ ಯೆಹೋವನನ್ನು ಪೂರ್ಣಮನಸ್ಸಿನಿಂದ ಸೇವಿಸಬೇಕೆಂಬ ಪ್ರಬೋಧನೆ. 5—11.
ಯೆಹೋವನು ಹೋರೇಬಿನಲ್ಲಿ ಕೊಟ್ಟ ಹತ್ತು ಕಟ್ಟಳೆಗಳ ವಿಷಯ.

ಮೋಶೆ ಇಸ್ರಾಯೇಲ್ಯರೆಲ್ಲರನ್ನು ಕರೆದು ಹೀ
ಗಂದನು—ಇಸ್ರಾಯೇಲ್ಯರೇ, ನಾನು ಈಗ ನಿಮಗೆ
ತಿಳಿಸುವ ಆಜ್ಞಾವಿಧಿಗಳನ್ನು ಕೇಳಿರಿ; ಇವುಗಳನ್ನು
ಗ್ರಹಿಸಿಕೊಂಡು ಅನುಸರಿಸಿ ನಡೆಯಬೇಕು. ನಮ್ಮ
ದೇವರಾದ ಯೆಹೋವನು ಹೋರೇಬಿನಲ್ಲಿ ನಮ್ಮ
ಸಂಗಡ ನಿಬಂಧನೆಯನ್ನು ಮಾಡಿದನು. ಆತನು
ನಮ್ಮ ಪೂರ್ವಿಕರ ಸಂಗಡ ಈ ನಿಬಂಧನೆಯನ್ನು
ಮಾಡದೆ ಈಗ ಇಲ್ಲಿ ಜೀವದಿಂದಿರುವ ನಮ್ಮ ಸಂಗ
ಡಲೇ ಇದನ್ನು ಮಾಡಿದನು. ಯೆಹೋವನು ಆ
ಬೆಟ್ಟದ ಮೇಲೆ ಬೆಂಕಿಯ ಜ್ವಾಲೆಯೊಳಗಿಂದ ಮುಖಾ
ಮುಖಿಯಾಗಿ ನಿಮ್ಮ ಸಂಗಡ ಮಾತಾಡಲಾಗಿ ನೀವು
ಆ ಬೆಂಕಿಯ ಜ್ವಾಲೆಯ ದೆಸೆಯಿಂದ ಭಯಪಟ್ಟು
ಬೆಟ್ಟವನ್ನು ಹತ್ತದೆಹೋಗಲಾಗಿ ನಾನು ಯೆಹೋವ
ನಿಗೂ ನಿಮಗೂ ನಡುವೆ ನಿಂತು ಆತನು ಆಡಿದ
ಮಾತುಗಳನ್ನು ನಿಮಗೆ ತಿಳಿಸಿದೆನು. ಆತನು ಹೇಳಿ
ದ್ದೇನಂದರೆ—
ನೀನು ದಾಸತ್ವದಲ್ಲಿದ್ದ ಐಗುಪ್ತದೇಶದೊಳಗಿಂದ
ನಿನ್ನನ್ನು ಬಿಡುಗಡೆಮಾಡಿದ ಯೆಹೋವನೆಂಬ
ನಿನ್ನ ದೇವರು ನಾನೇ. ನಾನಲ್ಲದೆ ನಿನಗೆ
ಬೇರೆ ದೇವರುಗಳು ಇರಬಾರದು.
ಯಾವ ಮೂರ್ತಿಯನ್ನೂ ಮಾಡಿಕೊಳ್ಳಬಾ
ರದು. ಆಕಾಶದಲ್ಲಾಗಲಿ ಭೂಮಿಯಲ್ಲಾಗಲಿ
ಭೂಮಿಯ ಕೆಳಗಣ ನೀರಿನಲ್ಲಾಗಲಿ ಇರುವ
ಯಾವದರ ರೂಪವನ್ನೂ ಮಾಡಿಕೊಳ್ಳಬಾರ
ದು. ಅವುಗಳಿಗೆ ಅಡ್ಡಬೀಳಲೂ ಬಾರದು,
ಪೂಜೆಮಾಡಲೂ ಬಾರದು. ನಿನ್ನ ದೇವರಾದ
ಯೆಹೋವನೆಂಬ ನಾನು ನನಗೆ ಸಲ್ಲತಕ್ಕ
ಗೌರವವನ್ನು ಮತ್ತೊಬ್ಬನಿಗೆ ಸಲ್ಲಗೊಡಿಸದವ
ನಾದದರಿಂದ ನನ್ನನ್ನು ದ್ವೇಷಿಸುವವರ ವಿಷಯ
ದಲ್ಲಿ ತಂದೆಗಳ ದೋಷಫಲವನ್ನು ಮಕ್ಕಳ
ಮೇಲೆ ಮೂರು ನಾಲ್ಕು ತಲೆಗಳ ವರೆಗೆ ಬರ
ಮಾಡುವವನಾಗಿಯೂ ನನ್ನನ್ನು ಪ್ರೀತಿಸಿ ನನ್ನ 10
ಆಜ್ಞೆಗಳನ್ನು ಕೈಕೊಳ್ಳುವವರಿಗೋ ಸಾವಿರ
ತಲೆಗಳ ವರೆಗೆ ದಯೆತೋರಿಸುವವನಾಗಿಯೂ
ಇದ್ದೇನೆ.
ನಿನ್ನ ದೇವರಾದ ಯೆಹೋವನ ಹೆಸರನ್ನು 11
ಅಯೋಗ್ಯಕಾರ್ಯಕ್ಕಾಗಿ ಎತ್ತಬಾರದು.
ಯೆಹೋವನು ತನ್ನ ಹೆಸರನ್ನು ಅಯೋಗ್ಯ
ಕಾರ್ಯಕ್ಕಾಗಿ ಎತ್ತುವವನನ್ನು ಶಿಕ್ಷಿಸದೆ ಬಿಡು
ವದಿಲ್ಲ.
ನಿನ್ನ ದೇವರಾದ ಯೆಹೋವನು ಆಜ್ಞಾಪಿಸಿದಂತೆ 12
ನೀನು ಸಬ್ಬತ್ ದಿನವನ್ನು ದೇವರ ದಿನ
ವೆಂದು ಆಚರಿಸಬೇಕು. ಆರು ದಿನಗಳಲ್ಲಿ 13
ನೀನು ದುಡಿದು ನಿನ್ನ ಕೆಲಸವನ್ನೆಲ್ಲಾ ಮಾಡ
ಬೇಕು. ಏಳನೆಯ ದಿನವು ನಿನ್ನ ದೇವರಾದ 14
ಯೆಹೋವನಿಗೆ ಮೀಸಲಾದ ವಿಶ್ರಾಂತಿದಿನವಾ
ಗಿದೆ; ಅದರಲ್ಲಿ ನೀನು ಯಾವ ಕೆಲಸವನ್ನೂ
ಮಾಡಬಾರದು. ನಿನ್ನ ಗಂಡುಮಕ್ಕಳು ಹೆಣ್ಣು
ಮಕ್ಕಳು ಗಂಡಾಳು ಹೆಣ್ಣಾಳು ಎತ್ತು ಕತ್ತೆ
ಪಶುಗಳು ನಿನ್ನ ಊರಲ್ಲಿರುವ ಅನ್ಯದೇಶ
ದವರು ಯಾವ ಕೆಲಸವನ್ನೂ ಮಾಡಬಾರದು.
ನಿನ್ನಂತೆಯೇ ನಿನ್ನ ಗಂಡಾಳು ಹೆಣ್ಣಾಳು
ಗಳಿಗೂ ವಿಶ್ರಾಂತಿದೊರೆಯಬೇಕು. ಐಗುಪ್ತ 15
ದೇಶದಲ್ಲಿ ನೀವೂ ದಾಸತ್ವದಲ್ಲಿದ್ದದ್ದನ್ನೂ ನಿಮ್ಮ
ದೇವರಾದ ಯೆಹೋವನು ಭುಜಪರಾಕ್ರಮ
ದಿಂದಲೂ 1)ಶಿಕ್ಷಾಹಸ್ತದಿಂದಲೂ ನಿಮ್ಮನ್ನು
ಬಿಡುಗಡೆಮಾಡಿದ್ದನ್ನೂ ಜ್ಞಾಪಕಮಾಡಿಕೊ
ಳ್ಳಿರಿ. ನೀವು ಸಬ್ಬತ್‌ದಿನವನ್ನು ಆಚರಿಸ
ಬೇಕೆಂಬದನ್ನು ನಿಮ್ಮ ದೇವರಾದ ಯೆಹೋ
ವನು ಇದಕ್ಕಾಗಿಯೇ ಆಜ್ಞಾಪಿಸಿದ್ದಾನೆ.
ನಿನ್ನ ದೇವರಾದ ಯೆಹೋವನು ಆಜ್ಞಾಪಿಸಿದಂತೆ 16
ನಿನ್ನ ತಂದೆತಾಯಿಗಳನ್ನು ಸನ್ಮಾನಿಸ
ಬೇಕು; ಸನ್ಮಾನಿಸಿದರೆ ನಿನ್ನ ದೇವರಾದ
ಯೆಹೋವನು ನಿನಗೆ ಅನುಗ್ರಹಿಸುವ ದೇಶ
ದಲ್ಲಿ ನೀನು ಬಹುಕಾಲ ಇರುವಿ, ಮತ್ತು
ನಿನಗೆ ಮೇಲಾಗುವದು.
ನರಹತ್ಯ ಮಾಡಬಾರದು. 17
ವ್ಯಭಿಚಾರ ಮಾಡಬಾರದು. 18
ಕದಿಯಬಾರದು. 19
ಮತ್ತೊಬ್ಬನ ಮೇಲೆ ಸುಳ್ಳುಸಾಕ್ಷಿ ಹೇಳ 20
ಬಾರದು.
ಮತ್ತೊಬ್ಬನ ಹೆಂಡತಿಯನ್ನು ಅಪೇಕ್ಷಿಸ 21
ಬಾರದು; ಮತ್ತೊಬ್ಬನ ಹೊಲ ಮನೆ ಗಂ

1) ಮೂಲ: ಬಲವಾದ ಕೈಯಿಂದಲೂ ಚಾಚಿದ ತೋಳಿನಿಂದಲೂ

ಡಾಳು ಹೆಣ್ಣಾಳು ಎತ್ತು ಕತ್ತೆ ಮುಂತಾದ
ಯಾವದನ್ನೂ ಆಶಿಸಬಾರದು.
22 ಈ ಮಾತುಗಳನ್ನು ಯೆಹೋವನು ಆ ಬೆಟ್ಟದ
ಮೇಲೆ ಬೆಂಕಿ, ಮೋಡ, ಕಾರ್ಗತ್ತಲು ಇವುಗಳ ಮಧ್ಯ
ದೊಳಗಿಂದ ನಿಮ್ಮ ಸರ್ವಸಮೂಹಕ್ಕೆ ಕೇಳಿಸುವಂತೆ
ಮಹಾ ಸ್ವರದಿಂದ ನುಡಿದನು; ಆ ಮೇಲೆ ಇನ್ನು
ಮಾತಾಡಲಿಲ್ಲ. ಆತನು ಆ ಮಾತುಗಳನ್ನು ಎರಡು
ಕಲ್ಲಿನ ಹಲಗೆಗಳಲ್ಲಿ ಕೆತ್ತಿ ನನಗೆ ಕೊಟ್ಟನು.
23 ಆ ಬೆಟ್ಟವು ಬೆಂಕಿಯಿಂದ ಪ್ರಜ್ವಲಿಸುತ್ತಿರುವಾಗ
ಆ ಕತ್ತಲೊಳಗಿಂದ ದೇವರ ಸ್ವರವನ್ನು ಕೇಳಿ ನೀವು
ಅಂದರೆ ನಿಮ್ಮ ಕುಲಾಧಿಪತಿಗಳೂ ಹಿರಿಯರೂ ನನ್ನ
24 ಬಳಿಗೆ ಬಂದು—ನಮ್ಮ ದೇವರಾದ ಯೆಹೋವನು
ತನ್ನ ಘನವನ್ನೂ ಮಹಿಮೆಯನ್ನೂ ನಮಗೆ ತೋರಿಸಿ
ಅಗ್ನಿಜ್ವಾಲೆಯೊಳಗಿಂದ ತನ್ನ ಸ್ವರವನ್ನು ನಮಗೆ
ಕೇಳಿಸಿದನಲ್ಲಾ. ಮನುಷ್ಯನು ತನ್ನ ಸಂಗಡ ದೇವರು
ಮಾತಾಡಿದರೂ ಸಾಯದೆ ಬದುಕಿದ್ದುಂಟೆಂಬದು
25 ಈ ಹೊತ್ತು ನಮಗೆ ತಿಳಿಯಬಂತು. ಆದರೂ
ಈ ಘೋರವಾದ ಅಗ್ನಿಜ್ವಾಲೆಯು ನಮ್ಮನ್ನು ದಹಿಸಿ
ಬಿಟ್ಟೀತು, ಮತ್ತು ನಮ್ಮ ದೇವರಾದ ಯೆಹೋವನ
ಸ್ವರವನ್ನು ನಾವು ತಿರಿಗಿ ಕೇಳಿದರೆ ಸತ್ತೇವು.
26 ಬೆಂಕಿಯ ಜ್ವಾಲೆಯೊಳಗಿಂದ ಮಾತಾಡುವ ಚೈತನ್ಯ
ಸ್ವರೂಪನಾದ ದೇವರ ಸ್ವರವನ್ನು ನಾವು ಕೇಳಿದಂತೆ
ಎಲ್ಲಾ ಮನುಷ್ಯರೊಳಗೆ ಬೇರೆ ಯಾರು ಕೇಳಿ
ಬದುಕಿದರು? ಹೀಗಿರುವದರಿಂದ ನಾವು ಯಾಕೆ
27 ಸಾಯಬೇಕು? ನೀನೇ ಹತ್ತಿರಕ್ಕೆ ಹೋಗಿ ನಮ್ಮ
ದೇವರಾದ ಯೆಹೋವನ ಆಜ್ಞೆಗಳನ್ನೆಲ್ಲಾ ತಿಳಿದು
ಕೊಂಡು ಬಂದು ನಮಗೆ ತಿಳಿಸು; ತಿಳಿಸಿದಾಗ ನಾವು
ನಡಿಸುವೆವು ಎಂದು ಹೇಳಿದಿರಿ.
28 ನಿಮ್ಮ ಮಾತುಗಳನ್ನು ಯೆಹೋವನು ಕೇಳಿ
ನನಗೆ—ಈ ಜನರು ನಿನಗೆ ಹೇಳಿದ ಮಾತುಗಳನ್ನು
29 ಕೇಳಿದ್ದೇನೆ; ಆ ಮಾತುಗಳೆಲ್ಲಾ ಒಳ್ಳೆಯವೇ. ನನ್ನ
ಲ್ಲಿ ಭಯಭಕ್ತಿಯುಳ್ಳವರಾಗಿ ನನ್ನ ಆಜ್ಞೆಗಳನ್ನು
ಅನುಸರಿಸುವ ಮನಸ್ಸು ಯಾವಾಗಲೂ ಅವರಲ್ಲಿ
ಇದ್ದರೆ ಎಷ್ಟೋ ಮೇಲು; ಆಗ ಅವರಿಗೂ ಅವರ
ಸಂತತಿಯವರಿಗೂ ಯಾವಾಗಲೂ ಶುಭವುಂಟಾಗು
30 ವದು. ನಿಮ್ಮ ನಿಮ್ಮ ಡೇರೆಗಳಿಗೆ ತಿರಿಗಿ ಹೋಗಿರಿ
31 ಎಂದು ಅವರಿಗೆ ಆಜ್ಞಾಪಿಸು. ನೀನಾದರೋ ಇಲ್ಲೇ
ನನ್ನ ಹತ್ತಿರ ನಿಂತಿರು; ನೀನು ಅವರಿಗೆ ಬೋಧಿಸ
ಬೇಕಾದ ಎಲ್ಲಾ ಧರ್ಮೋಪದೇಶವನ್ನೂ ವಿಧಿನಿರ್ಣ
ಯಗಳನ್ನೂ ನಿನಗೆ ತಿಳಿಸುತ್ತೇನೆ. ನಾನು ಅವರಿಗೆ
ಸ್ವಂತಕ್ಕಾಗಿ ಕೊಡುವ ದೇಶದಲ್ಲಿ ಅವರು ಇವುಗಳನ್ನು
ಅನುಸರಿಸಬೇಕು ಎಂದು ಹೇಳಿದನು.
32 ಆದದರಿಂದ ನೀವು ಸ್ವಲ್ಪವಾದರೂ ತಪ್ಪದೆ ನಿಮ್ಮ
ದೇವರಾದ ಯೆಹೋವನು ಆಜ್ಞಾಪಿಸಿದಂತೆಯೇ ನಡೆ
33 ದುಕೊಳ್ಳಬೇಕು. ನೀವು ಸ್ವತಂತ್ರಿಸಿಕೊಳ್ಳುವ ದೇಶ
ದಲ್ಲಿ ಬಹುಕಾಲ ಶುಭವುಳ್ಳವರಾಗಿ ಬದುಕಿಕೊಳ್ಳು
ವಂತೆ ನಿಮ್ಮ ದೇವರಾದ ಯೆಹೋವನು ಆಜ್ಞಾಪಿ
ಸಿದ ಮಾರ್ಗದಲ್ಲೇ ನಡೆಯಬೇಕು.

ಯೆಹೋವನೊಬ್ಬನೇ ದೇವರೆಂಬ ಧರ್ಮೋಪದೇಶದ
ಮೂಲಸೂತ್ರವಿಷಯ.

ನೀವು ಹೊಳೆ ದಾಟಿ ಸ್ವತಂತ್ರಿಸಿಕೊಳ್ಳುವ ದೇಶ
ದಲ್ಲಿ ಅನುಸರಿಸುವದಕ್ಕಾಗಿ ನಿಮಗೆ ಬೋಧಿಸಬೇ
ಕೆಂದು ನಿಮ್ಮ ದೇವರಾದ ಯೆಹೋವನು ನನಗ
ಆಜ್ಞಾಪಿಸಿದ ಧರ್ಮೋಪದೇಶವೂ ವಿಧಿನಿರ್ಣಯಗಳು
ಇವೇ. ನೀವೂ ನಿಮ್ಮ ಪುತ್ರಪೌತ್ರಾದಿಸಂತತಿಯವರು
ಜೀವಮಾನದಲ್ಲೆಲ್ಲಾ ನಿಮ್ಮ ದೇವರಾದ ಯೆಹೋ
ನಲ್ಲಿ ಭಯಭಕ್ತಿಯುಳ್ಳವರಾಗಿದ್ದುಕೊಂಡು ನಾನು
ಈಗ ಬೋಧಿಸುವ ಆತನ ವಿಧಿನಿರ್ಣಯಗಳನ್ನೆಲ್ಲಾ
ಅನುಸರಿಸಬೇಕೆಂದೂ ನೀವು ಬಹುಕಾಲ ಬಾಳಬೇ
ಕೆಂದೂ ಇವುಗಳನ್ನು ಆಜ್ಞಾಪಿಸಿದ್ದಾನೆ. ಆದದರಿಂ
ಇಸ್ರಾಯೇಲ್ಯರೇ, ನಿಮ್ಮ ಪಿತೃಗಳ ದೇವರಾದ ಯೆ
ಹೋವನು ವಾಗ್ದಾನಮಾಡಿದ ಪ್ರಕಾರ ಹಾಲು
ಜೇನೂ ಹರಿಯುವ ಆ ದೇಶದಲ್ಲಿ ನಿಮಗೆ ಶುಭವು
ಟಾಗುವದಕ್ಕೂ ನೀವು ಬಹಳವಾಗಿ ಹೆಚ್ಚುವದಕ್ಕೂ
ಈ ಆಜ್ಞೆಗಳನ್ನು ಲಕ್ಷ್ಯವಿಟ್ಟು ಕೇಳಿ ಅನುಸರಿಸಲೆ
ಬೇಕು.

ಇಸ್ರಾಯೇಲ್ಯರೇ, ಕೇಳಿರಿ; 1)ನಮ್ಮ ದೇ
ರಾದ ಯೆಹೋವನು ಒಬ್ಬನೇ ದೇವರು
ನೀವು ನಿಮ್ಮ ದೇವರಾದ ಯೆಹೋ
ನನ್ನು ಪೂರ್ಣಹೃದಯದಿಂದಲೂ ಪೂರ್ಣ
ಪ್ರಾಣದಿಂದಲೂ ಪೂರ್ಣಶಕ್ತಿಯಿಂದಲೂ
ಪ್ರೀತಿಸಬೇಕು.

ನಾನು ಈಗ ನಿಮಗೆ ತಿಳಿಸುವ ಮಾತುಗಳ
ನಿಮ್ಮ ಹೃದಯದಲ್ಲಿರಬೇಕು. ಇವುಗಳನ್ನು ನಿಮ
ಮಕ್ಕಳಿಗೆ ಅಭ್ಯಾಸಮಾಡಿಸಿ ಮನೆಯಲ್ಲಿ ಕೂತಿರ
ವಾಗಲೂ ದಾರಿನಡೆಯುವಾಗಲೂ ಮಲಗುವಾಗಲೂ
ಏಳುವಾಗಲೂ ಇವುಗಳ ವಿಷಯದಲ್ಲಿ ಮಾತಾ
ಬೇಕು. ಇವುಗಳನ್ನು ಜ್ಞಾಪಕಾರ್ಥವಾಗಿ ಕೈಗ
ಕಟ್ಟಿಕೊಳ್ಳಬೇಕು; ಇವು ಹಣೆಗೆ ಕಟ್ಟಿಕೊಳ್ಳು
ಜ್ಞಾಪಕದ ಪಟ್ಟಿಯಂತೆ ಇರಬೇಕು. ನಿಮ್ಮ ಮನೆ
ಬಾಗಲಿನ ನಿಲುವು ಪಟ್ಟಿಗಳಲ್ಲಿಯೂ ತಲೆಬಾಗಲ
ಗಳ ಮೇಲೆಯೂ ಇವುಗಳನ್ನು ಬರೆಯಬೇಕು.

ನಿಮ್ಮ ದೇವರಾದ ಯೆಹೋವನು ನಿಮ್ಮ ಪಿತ
ಗಳಾದ ಅಬ್ರಹಾಮ್ ಇಸಾಕ್ ಯಾಕೋಬರಿಗೆ
ಪ್ರಮಾಣಮಾಡಿಕೊಟ್ಟ ದೇಶದಲ್ಲಿ ನಿಮ್ಮನ್ನು ಸೇರಿ
ದಾಗ ನೀವು ಕಟ್ಟದ ಒಳ್ಳೆಯ ದೊಡ್ಡ ಪಟ್ಟಣಗಳನ್ನೂ
ನೀವು ಕೂಡಿಸದ ಉತ್ತಮವಸ್ತುಗಳಿಂದ ತುಂಬಿ
ಮನೆಗಳನ್ನೂ ನೀವು ಅಗಿಯದ ನೀರಗುಂಡಿಗಳನ್ನೂ
ನೀವು ಬೆಳಸದ ದ್ರಾಕ್ಷೇತೋಟಗಳನ್ನೂ ಎಣ್ಣೆಮ
ಗಳನ್ನೂ ಅನುಭವಿಸುತ್ತಾ ತೃಪ್ತರಾಗಿರುವಾಗ ಐಗು
ಪ್ತದೇಶದಲ್ಲಿ ದಾಸರಾಗಿದ್ದ ನಿಮ್ಮನ್ನು ಬಿಡುಗ
ಮಾಡಿದ ಯೆಹೋವನನ್ನು ಮರೆಯಬಾರದು, ನೋ
ಡಿರಿ. ನಿಮ್ಮ ದೇವರಾದ ಯೆಹೋವನಲ್ಲಿಯೆ
ಭಯಭಕ್ತಿಯುಳ್ಳವರಾಗಿರಬೇಕು; ಆತನನ್ನೇ ಸೇವಿ

1) ಅಥವಾ: ಅದ್ವಿತೀಯನು. ಮೂಲ: ಒಬ್ಬನೇ ಯೆಹೋವನು.

ಬೇಕು; ಆತನ ಹೆಸರು ಹೇಳಿ ಪ್ರಮಾಣಮಾಡಬೇಕು.
ಸುತ್ತಲಿರುವ ಜನಾಂಗಗಳು ಸೇವಿಸುವ ದೇವರುಗಳ
ನ್ನು ನೀವು ಆರಾಧಿಸಬಾರದು. ನಿಮ್ಮ ಮಧ್ಯದಲ್ಲಿ
ರುವ ನಿಮ್ಮ ದೇವರಾದ ಯೆಹೋವನು ತನಗೆ ಸಲ್ಲ
ಬೇಕಾದ ಗೌರವವನ್ನು ಇನ್ನೊಬ್ಬನಿಗೆ ಸಲ್ಲಗೊಡಿಸದ
ದೇವರು; ಆತನು ನಿಮ್ಮ ಮೇಲೆ ಕೋಪಗೊಂಡರೆ
ನಿಮ್ಮನ್ನು ಭೂಮಿಯ ಮೇಲೆ ಉಳಿಯದಂತೆ ನಾಶ
ಮಾಡಾನು.

ನೀವು ಮಸ್ಸದಲ್ಲಿ ನಿಮ್ಮ ದೇವರಾದ
ಯೆಹೋವನನ್ನು ಪರೀಕ್ಷಿಸಿದಂತೆ ಇನ್ನು ಮುಂದೆ
ಮಾಡಬೇಡಿರಿ. ನಿಮ್ಮ ದೇವರಾದ ಯೆಹೋವನು
ನಿಮಗೆ ನೇಮಿಸಿದ ಆಜ್ಞಾವಿಧಿನಿರ್ಣಯಗಳನ್ನು
ಅನುಸರಿಸಲೇ ಬೇಕು. ಯೆಹೋವನ ದೃಷ್ಟಿಗೆ ಯಾ
ವದು ನ್ಯಾಯವೂ ಯೋಗ್ಯವೂ ಆಗಿದೆಯೋ ಅದನ್ನೇ
ಮಾಡಬೇಕು. ಹೀಗೆ ನಡೆದರೆ ನಿಮಗೆ ಶುಭವುಂಟಾಗು
ವದು, ಮತ್ತು ಯೆಹೋವನು ನಿಮ್ಮ ಪಿತೃಗಳಿಗೆ
ಪ್ರಮಾಣಪೂರ್ವಕವಾಗಿ ಕೊಟ್ಟ ಉತ್ತಮದೇಶವನ್ನು
ನೀವು ಸೇರಿ ಸ್ವಾಧೀನಮಾಡಿಕೊಳ್ಳುವಿರಿ. ಆತನು
ತಾನೇ ನಿಮ್ಮ ಶತ್ರುಗಳನ್ನು ನಿಮ್ಮ ಎದುರಿನಿಂದ
ಹೊರಡಿಸುವೆನೆಂದು ಮಾತುಕೊಟ್ಟನಲ್ಲವೇ.

ಇನ್ನು ಮುಂದೆ ನಿಮ್ಮ ಮಕ್ಕಳು—ಈ ಆಜ್ಞಾವಿಧಿ
ನಿರ್ಣಯಗಳನ್ನು ನಮ್ಮ ದೇವರಾದ ಯೆಹೋವನು
ಯಾತಕ್ಕೆ ನೇಮಿಸಿದನು ಎಂದು ವಿಚಾರಿಸುವಾಗ ನೀವು
ಅವರಿಗೆ—ನಾವು ಐಗುಪ್ತದೇಶದಲ್ಲಿ ಫರೋಹನಿಗೆ
ದಾಸರಾಗಿದ್ದಾಗ ಯೆಹೋವನು ತನ್ನ ಭುಜಬಲದಿಂದ
ನಮ್ಮನ್ನು ಬಿಡುಗಡೆಮಾಡಿದನು; ಆತನು ಐಗುಪ್ತ್ಯ
ರನ್ನೂ ಫರೋಹನನ್ನೂ ಅವನ ಮನೆಯವರನ್ನೂ
ಬಾಧಕವಾದ ದೊಡ್ಡ ಮಹತ್ಕಾರ್ಯಗಳಿಂದಲೂ
ಉತ್ಪಾತಗಳಿಂದಲೂ ನಮ್ಮ ಕಣ್ಣೆದುರಿನಲ್ಲಿ ಶಿಕ್ಷಿಸಿ
ತಾನು ನಮ್ಮ ಪಿತೃಗಳಿಗೆ ಪ್ರಮಾಣಮಾಡಿಕೊಟ್ಟ
ದೇಶದಲ್ಲಿ ನಮ್ಮನ್ನು ಸೇರಿಸುವದಕ್ಕಾಗಿ ಐಗುಪ್ತದೇಶ
ದೊಳಗಿಂದ ಬರಮಾಡಿದನು; ಆ ಕಾರಣದಿಂದಲೇ ಈ
ನಿಯಮಗಳನ್ನೆಲ್ಲಾ ಆಚರಿಸಬೇಕೆಂದು ಆತನು ನಮಗೆ
ಅಪ್ಪಣೆಕೊಟ್ಟಿದ್ದಾನೆ. ಯಾವಾಗಲೂ ಶುಭವುಂಟಾ
ಗುವಂತೆಯೂ ಆತನು ಇಂದಿನಂತೆ ನಮ್ಮ ಪ್ರಾಣ
ಗಳನ್ನು ಕಾಪಾಡುವಂತೆಯೂ ನಾವು ನಮ್ಮ ದೇವ
ರಾದ ಯೆಹೋವನಿಗೆ ಭಯಭಕ್ತಿಯುಳ್ಳವರಾಗಿರ
ಬೇಕು. ನಮ್ಮ ದೇವರಾದ ಯೆಹೋವನು ನಿರೂಪಿ
ಸಿದ ಈ ಧರ್ಮೋಪದೇಶವನ್ನೆಲ್ಲಾ ನಾವು ಅನುಸರಿಸಿ
ದರೆ ಆತನ ದೃಷ್ಟಿಯಲ್ಲಿ ನೀತಿವಂತರೆಂದು ಎಣಿ
ಸಲ್ಪಡುವೆವೆಂಬದಾಗಿ ನೀವು ಉತ್ತರಕೊಡಬೇಕು.

### ಕಾನಾನ್‌ದೇಶದ ಮೂಲನಿವಾಸಿಗಳನ್ನೂ ಅವರ ದೇವತಾ ಪ್ರತಿಮೆಗಳನ್ನೂ ನಿರ್ಮೂಲಮಾಡಬೇಕೆಂಬದು.

ನೀವು ಸ್ವಾಧೀನಮಾಡಿಕೊಳ್ಳುವದಕ್ಕೆ ಹೋಗುವ
ದೇಶದಲ್ಲಿ ನಿಮ್ಮ ದೇವರಾದ ಯೆಹೋವನು ನಿಮ್ಮನ್ನು
ಸೇರಿಸಿ ಸಂಖ್ಯೆಯಲ್ಲಿಯೂ ಬಲದಲ್ಲಿಯೂ ನಿಮಗೆ
ಮೀರುವ ಹಿತ್ತಿಯರು, ಗಿರ್ಗಾಷಿಯರು, ಅಮೋರಿ
ಯರು, ಕಾನಾನ್ಯರು, ಪೆರಿಜ್ಜೀಯರು, ಹಿವ್ವಿಯರು,
ಯೆಬೂಸಿಯರು ಎಂಬ ಏಳು ಜನಾಂಗಗಳನ್ನು
ನಿಮ್ಮ ಎದುರಿನಿಂದ ಹೊರಡಿಸುವವನಾಗಿ ಅವರನ್ನು 2
ನಿಮ್ಮಿಂದ ಪರಾಜಯಪಡಿಸುವಾಗ ನೀವು ಅವರನ್ನು
ನಿಶ್ಶೇಷವಾಗಿ ಸಂಹರಿಸಬೇಕು. ಅವರ ಸಂಗಡ
ಒಡಂಬಡಿಕೆಮಾಡಿಕೊಳ್ಳಬಾರದು, ಅವರನ್ನು ಕನಿಕರಿಸ
ಬಾರದು. ಅವರೊಡನೆ ಬೀಗತನಮಾಡಬಾರದು; 3
ಅವರ ಮಕ್ಕಳಿಗೆ ಹೆಣ್ಣುಗಳನ್ನು ಕೊಡಲೂ ಬಾರದು,
ಅವರಿಂದ ತರಲೂ ಬಾರದು. ಹಾಗೆ ಮಾಡಿದರೆ 4
ಅವರು ನಿಮ್ಮ ಮಕ್ಕಳನ್ನು ಯೆಹೋವನ ಸೇವೆ
ಯಿಂದ ತಪ್ಪಿಸಿ ಇತರ ದೇವರುಗಳನ್ನು ಪೂಜಿಸುವ
ದಕ್ಕೆ ತಿರುಗಿಸಾರು; ಆಗ ಯೆಹೋವನು ನಿಮ್ಮ
ಮೇಲೆ ಕೋಪಗೊಂಡು ಬೇಗನೆ ನಿಮ್ಮನ್ನು ನಾಶ
ಮಾಡುವನು. ಆದದರಿಂದ ನೀವು ಹೀಗೆ ಮಾಡ 5
ಬೇಕು—ಅವರ ಬಲಿಪೀಠಗಳನ್ನು ಕೆಡವಬೇಕು;
ಅವರ ಕಲ್ಲಿನ ಕಂಬಗಳನ್ನು ಒಡೆದು ಅಶೇರವೆಂಬ
ವಿಗ್ರಹಸ್ತಂಭಗಳನ್ನು ಕಡಿದು ಅವರ ದೇವತಾಪ್ರತಿಮೆ
ಗಳನ್ನು ಬೆಂಕಿಯಿಂದ ಸುಟ್ಟುಬಿಡಬೇಕು.

ಯಾಕಂದರೆ ನೀವು ನಿಮ್ಮ ದೇವರಾದ ಯೆಹೋ 6
ವನಿಗೆ ಮೀಸಲಾದ ಜನರಾಗಿದ್ದೀರಲ್ಲವೇ; ಆತನು
ಭೂಲೋಕದಲ್ಲಿರುವ ಸಮಸ್ತ ಜನಾಂಗಗಳಲ್ಲಿ ನಿಮ್ಮ
ನ್ನೇ ಸ್ವಕೀಯಜನವಾಗುವದಕ್ಕೆ ಆದುಕೊಂಡನು.
ನಿಮ್ಮನ್ನು ಎಲ್ಲಾ ಜನಾಂಗಗಳಲ್ಲಿ ಹೆಚ್ಚು ಮಂದಿ 7
ಎಂದು ಇಷ್ಟಪಟ್ಟು ಆದುಕೊಳ್ಳಲಿಲ್ಲ; ನೀವು ಎಲ್ಲಾ
ಜನಾಂಗಗಳಿಗಿಂತಲೂ ಸ್ವಲ್ಪ ಮಂದಿಯಷ್ಟೆ. ಯೆ 8
ಹೋವನು ನಿಮ್ಮನ್ನು ಪ್ರೀತಿಸಿ ತಾನು ನಿಮ್ಮ ಪಿತೃ
ಗಳಿಗೆ ಮಾಡಿದ ಪ್ರಮಾಣವನ್ನು ನೆರವೇರಿಸಬೇಕೆಂದು
ಐಗುಪ್ತ್ಯರ ಅರಸನಾದ ಫರೋಹನ ಕೈಕೆಳಗೆ ದಾಸ
ರಾಗಿದ್ದ ನಿಮ್ಮನ್ನು ಬಿಡುಗಡೆಮಾಡಿ ತನ್ನ ಭುಜ
ಬಲವನ್ನು ಪ್ರಯೋಗಿಸಿ ಆ ದೇಶದೊಳಗಿಂದ ಬರ
ಮಾಡಿದನು.

ಆದದರಿಂದ ನಿಮ್ಮ ದೇವರಾದ ಯೆಹೋವನೊಬ್ಬ 9
ನೇ ದೇವರೆಂದು ತಿಳಿದುಕೊಳ್ಳಬೇಕು. ಆತನು ನಂಬಿ
ಗಸ್ತನಾದ ದೇವರು; ತನ್ನನ್ನು ಪ್ರೀತಿಸಿ ತನ್ನ ಆಜ್ಞೆ
ಗಳನ್ನು ಅನುಸರಿಸುವವರಿಗೆ ಮಾಡಿದ ವಾಗ್ದಾನ
ವನ್ನೂ ಕೃಪೆಯನ್ನೂ ಅವರ ಸಂತತಿಯವರಲ್ಲಿ
ಸಾವಿರ ತಲೆಗಳ ವರೆಗೂ ನೆರವೇರಿಸುವವನಾಗಿಯೂ
ತನ್ನನ್ನು ತಿರಸ್ಕರಿಸಿದವರಿಗೆ ಪ್ರತಿಯಾಗಿ ನಾಶವ 10
ನ್ನುಂಟುಮಾಡುವವನಾಗಿಯೂ ಇದ್ದಾನೆಂದು ತಿಳಿದು
ಕೊಳ್ಳಿರಿ. ಹಗೆಯವರ ವಿಷಯದಲ್ಲಿ ತಡಮಾಡದೆ
ಆಗಲೇ ಮುಯ್ಯಿತೀರಿಸುವನು. ಆದಕಾರಣ ನಾನು 11
ಈಗ ನಿಮಗೆ ಬೋಧಿಸುವ ಧರ್ಮೋಪದೇಶವನ್ನೂ
ಆಜ್ಞಾವಿಧಿಗಳನ್ನೂ ನೀವು ಅನುಸರಿಸುವವರಾಗಿರ
ಬೇಕು.

ನೀವು ಈ ವಿಧಿಗಳನ್ನು ಲಕ್ಷ್ಯವಿಟ್ಟು ಅನುಸರಿಸಿ 12
ದರೆ ಅದಕ್ಕೆ ಪ್ರತಿಯಾಗಿ ನಿಮ್ಮ ದೇವರಾದ ಯೆಹೋ
ವನು ನಿಮ್ಮ ಪಿತೃಗಳಿಗೆ ಪ್ರಮಾಣಪೂರ್ವಕವಾಗಿ
ಮಾಡಿದ ವಾಗ್ದಾನವನ್ನೂ ಕೃಪೆಯನ್ನೂ ನಿಮ್ಮಲ್ಲಿ
ನೆರವೇರಿಸುವವನಾಗಿ ನಿಮ್ಮನ್ನು ಪ್ರೀತಿಸಿ ಅಭಿವೃದ್ಧಿ 13
ಪಡಿಸಿ ಹೆಚ್ಚಿಸುವನು. ಆತನು ನಿಮ್ಮ ಪಿತೃಗಳಿಗೆ
ಪ್ರಮಾಣಮಾಡಿಕೊಟ್ಟ ದೇಶದಲ್ಲಿ ನಿಮ್ಮ ಸಂತಾನ

ವನ್ನೂ ವ್ಯವಸಾಯವನ್ನೂ ನಿಮಗಿರುವ ಧಾನ್ಯ,
ದ್ರಾಕ್ಷಾರಸ, ಎಣ್ಣೆ ಇವುಗಳನ್ನೂ ನಿಮ್ಮ ದನಕುರಿ
14 ಗಳಲ್ಲಿ ಹುಟ್ಟಿದ್ದನ್ನೂ ಅಭಿವೃದ್ಧಿಪಡಿಸುವನು. ನೀವು
ಎಲ್ಲಾ ಜನಗಳಿಗಿಂತಲೂ ಹೆಚ್ಚಾಗಿ ದೇವರ ಅನುಗ್ರಹ
ವನ್ನು ಹೊಂದಿದವರಾಗಿರುವಿರಿ. ನಿಮ್ಮೊಳಗೆ ಸ್ತ್ರೀಪುರುಷ
ರಲ್ಲಿಯಾಗಲಿ ಹೆಣ್ಣುಗಂಡು ಪಶುಗಳಲ್ಲಿಯಾಗಲಿ
15 ಬಂಜೆತನವು ಇರುವದಿಲ್ಲ. ನಿಮ್ಮಲ್ಲಿ ಯಾವ ವ್ಯಾಧಿ
ಯೂ ಉಂಟಾಗದಂತೆ ಯೆಹೋವನು ಮಾಡುವನು.
ನಿಮ್ಮ ಅನುಭವಕ್ಕೆ ಬಂದ ಪ್ರಕಾರ ಐಗುಪ್ತದೇಶದಲ್ಲಿ
ಪ್ರಬಲವಾಗಿರುವ ಕ್ರೂರವ್ಯಾಧಿಗಳನ್ನು ನಿಮಗೆ ಬರ
ಗೊಡಿಸದೆ ಅವುಗಳನ್ನು ನಿಮ್ಮ ಶತ್ರುಗಳ ಮೇಲೆಯೇ
ಬರಮಾಡುವನು.
16 ನಿಮ್ಮ ದೇವರಾದ ಯೆಹೋವನು ನಿಮ್ಮಿಂದ ಪರಾ
ಜಯಪಡಿಸುವ ಜನಾಂಗಗಳನ್ನೆಲ್ಲಾ ನೀವು ಕನಿಕರಿ
ಸದೆ ನಾಶಮಾಡಬೇಕು. ಅವರ ದೇವರುಗಳನ್ನು
ಪೂಜಿಸಲೇ ಬಾರದು; ಪೂಜಿಸಿದರೆ ಅವು ನಿಮಗೆ
ಉರುಲಾಗುವವು.
17 ಆ ಜನಗಳು ನಮಗಿಂತ ಹೆಚ್ಚು ಮಂದಿ; ಅವರನ್ನು
ಹೊರಡಿಸುವದು ನಮ್ಮಿಂದ ಹೇಗಾದೀತು ಅಂದುಕೊ
18 ಳ್ಳುತ್ತೀರೋ? ಅವರಿಗೆ ಹೆದರಬೇಡಿರಿ; ನಿಮ್ಮ ದೇವ
ರಾದ ಯೆಹೋವನು ಫರೋಹನಿಗೂ ಐಗುಪ್ತ್ಯರೆಲ್ಲ
19 ರಿಗೂ ಮಾಡಿದ್ದನ್ನು ನೆನಪಿಗೆ ತಂದುಕೊಳ್ಳಿರಿ. ನೀವು
ಆಗ ಕಣ್ಣಾರೆ ನೋಡಿದ ಪ್ರಕಾರ ಆತನು ವಿಶೇಷ
ಮನಶ್ಶೋಧನೆ, ಮಹತ್ಕಾರ್ಯ, ಉತ್ಪಾತ, ಭುಜ
ಪರಾಕ್ರಮ, ಶಿಕ್ಷೆ ಇವುಗಳನ್ನು ಪ್ರಯೋಗಿಸಿ ನಿಮ್ಮ
ನ್ನು ಬಿಡುಗಡೆಮಾಡಿದನಲ್ಲಾ. ನೀವು ಹೆದರಿಕೊ
ಳ್ಳುವ ಆ ಎಲ್ಲಾ ಜನಾಂಗಗಳಿಗೂ ಆತನು ಹಾಗೆಯೇ
20 ಮಾಡುವನು. ಅದು ಮಾತ್ರವಲ್ಲದೆ ನಿಮ್ಮ ದೇವ
ರಾದ ಯೆಹೋವನು [1]ಕಡಜದ ಹುಳಗಳನ್ನು ಅವರೊ
ಳಗೆ ಕಳುಹಿಸುವನು; ಮರೆಯಾಗಿದ್ದು ಉಳುಕೊಂಡ
ವರು ಆ ಹುಳಗಳ ದೆಸೆಯಿಂದ ನಾಶವಾಗಿ ನಿಮಗೆ
21 ಕಾಣದೆ ಹೋಗುವರು. ನೀವು ಅವರಿಗೆ ಹೆದರಿಕೊಳ್ಳ
ಬೇಡಿರಿ; ನಿಮ್ಮ ದೇವರಾದ ಯೆಹೋವನು ನಿಮ್ಮ
ಮಧ್ಯದಲ್ಲಿದ್ದಾನೆ; ಆತನು ಭಯಂಕರನಾದ ಮಹಾ
22 ದೇವರು. ನಿಮ್ಮ ದೇವರಾದ ಯೆಹೋವನು ಆ
ಜನಾಂಗಗಳನ್ನು ನಿಮ್ಮ ಎದುರಿನಿಂದ ಸ್ವಲ್ಪಸ್ವಲ್ಪವಾಗಿ
ಹೊರಡಿಸುತ್ತಿರುವನು. ನೀವು ಬಹು ಶೀಘ್ರವಾಗಿ ಅವ
ರನ್ನು ನಿರ್ಮೂಲಮಾಡಕೂಡದು; ಮಾಡಿದರೆ ಕಾಡು
ಮೃಗಗಳು ಹೆಚ್ಚಿ ನಿಮಗೆ ತೊಂದರೆಯನ್ನುಂಟುಮಾ
23 ಡಾವು. ನಿಮ್ಮ ದೇವರಾದ ಯೆಹೋವನು ಅವರನ್ನು
ನಿಮ್ಮಿಂದ ಸೋಲಿಸಿ ಬಹಳವಾಗಿ ಗಲಿಬಿಲಿಮಾಡಿ ಕಡೆಗೆ
24 ಇಲ್ಲದಂತೆ ಮಾಡುವನು. ಆತನು ಅವರ ಅರಸು
ಗಳನ್ನು ನಿಮ್ಮ ಕೈಗೆ ಸಿಕ್ಕುವಂತೆ ಮಾಡಲಾಗಿ ನೀವು
ಅವರ ಹೆಸರುಗಳೇ ಭೂಮಿಯ ಮೇಲೆ ಉಳಿಯದಂತೆ
ಮಾಡಬೇಕು. ಯಾರೂ ನಿಮ್ಮ ಮುಂದೆ ನಿಲ್ಲುವ
ದಿಲ್ಲ; ಎಲ್ಲರನ್ನೂ ನಾಶಮಾಡುವಿರಿ.
25 ಅವರು ದೇವರೆಂದು ಮಾಡಿಕೊಂಡ ಮರದ ವಿಗ್ರಹ
ಗಳನ್ನು ನೀವು ಬೆಂಕಿಯಿಂದ ಸುಟ್ಟುಬಿಡಬೇಕು. ಆ
ವಿಗ್ರಹಗಳ ಮೇಲಿರುವ ಬೆಳ್ಳಿಬಂಗಾರವನ್ನು ನೀ
ಆಶಿಸಬಾರದು; ಅದನ್ನು ತೆಗೆದುಕೊಂಡರೆ ಅದು ನಿಮ
ಉರುಲಾಗುವದು. ಅದು ನಿಮ್ಮ ದೇವರಾ
ಯೆಹೋವನಿಗೆ ಹೇಯವಾದದ್ದು. ಅದು ಕೇವ
ಯೆಹೋವನದಾಗುವದಕ್ಕೆ ನಾಶವಾಗತಕ್ಕದ್ದಾಗಿರು
ದರಿಂದ ನೀವು ಅಂಥ ವಸ್ತುವನ್ನು ಮನೆಯೊಳ
ತಂದು ಅದರಂತೆಯೇ ನಾಶಕ್ಕೆ ಗುರಿಯಾಗಬಾರದ
ನೀವು ಅದನ್ನು ಅಸಹ್ಯಪಟ್ಟು ಮುಟ್ಟದಿರಬೇಕು.

ಕಾನಾನ್ಯರ ಉತ್ತಮದೇಶವು ಇಸ್ರಾಯೇಲ್ಯರಿಗೆ ದೊರಕಿದ
ಯೆಹೋವನ ಕೃಪಾಕಟಾಕ್ಷದಿಂದಲೇ ಹೊರತು ಸ್ವಂತ
ಪುಣ್ಯದಿಂದಲ್ಲವೆಂಬದು.

ನಾನು ಈಗ ನಿಮಗೆ ಬೋಧಿಸುವ ಧರ್ಮೋ
ದೇಶವನ್ನೆಲ್ಲಾ ನೀವು ಅನುಸರಿಸಬೇಕು. ಅನುಸರಿ
ದರೆ ನೀವು ಬದುಕಿಕೊಂಡು ಹೆಚ್ಚಿ ಯೆಹೋವ
ನಿಮ್ಮ ಪಿತೃಗಳಿಗೆ ಪ್ರಮಾಣರೂಪವಾಗಿ ಕೊಟ್ಟ ದೆ
ವನ್ನು ಸೇರಿ ಸ್ವಾಧೀನಮಾಡಿಕೊಳ್ಳುವಿರಿ.
ನಿಮ್ಮ ದೇವರಾದ ಯೆಹೋವನು ನಿಮ್ಮನ್ನು
ನಾಲ್ವತ್ತು ವರುಷ ಅರಣ್ಯದಲ್ಲಿ ನಡಿಸಿದ್ದನ್ನೂ ನೀ
ತನ್ನ ಆಜ್ಞೆಗಳನ್ನು ಕೈಕೊಳ್ಳುವವರೋ ಅಲ್ಲವೋ
ಎಂದು ತಿಳಿದುಕೊಳ್ಳುವದಕ್ಕೆ ನಿಮ್ಮನ್ನು ಕಷ್ಟ
ಒಳಪಡಿಸಿ ನಿಮ್ಮ ಮನೋಭಾವವನ್ನು ಪರೀಕ್ಷಿ
ದ್ದನ್ನೂ ನೆನಪಿಗೆ ತಂದುಕೊಳ್ಳಿರಿ. ಮನುಷ್ಯ
ಆಹಾರಮಾತ್ರದಿಂದಲ್ಲ, ಯೆಹೋವನ ಬಾಯಿಂ
ಹೊರಡುವ ಪ್ರತಿಯೊಂದು ಮಾತಿನಿಂದಲೂ ಬದು
ತ್ತಾರೆಂಬದು ನಿಮಗೆ ತಿಳಿಯುವಂತೆ ಆತನು ನಿಮ್ಮನ
ಕಷ್ಟಕ್ಕೆ ಒಳಪಡಿಸಿ ಹಸಿವೆಯಿಂದ ಬಳಲಿಸಿ ನಿಮಗ
ನಿಮ್ಮ ಪೂರ್ವಿಕರಿಗೂ ಗೊತ್ತಿಲ್ಲದ ಮನ್ನವನ
ಕೊಟ್ಟು ಪೋಷಿಸಿದನು. ಈ ನಾಲ್ವತ್ತು ವರು
ನಿಮ್ಮ ಮೈಮೇಲಿದ್ದ ಉಡುಪು ಜೀರ್ಣವಾಗಲಿಲ್ಲ
ನಿಮ್ಮ ಕಾಲುಗಳು ಬಾತುಹೋಗಲಿಲ್ಲ. ತಂ
ಮಗನನ್ನು ಹೇಗೋ ಹಾಗೆಯೇ ನಿಮ್ಮ ದೇವರಾ
ಯೆಹೋವನು ನಿಮ್ಮನ್ನು ಶಿಕ್ಷಿಸುತ್ತಾ ಬಂದನೆಂ
ದನ್ನು ನೀವು ಆಲೋಚಿಸಿಕೊಂಡು ಆತನ ಆಜ್ಞೆಗಳನ
ಅನುಸರಿಸುವವರಾಗಿ ಆತನು ಹೇಳಿದ ಮಾರ್ಗದಲ್ಲ
ನಡೆದು ಆತನಲ್ಲಿ ಭಯಭಕ್ತಿಯುಳ್ಳವರಾಗಿರಬೇಕ
ನಿಮ್ಮ ದೇವರಾದ ಯೆಹೋವನು ಉತ್ತಮದೇಶ
ನಿಮ್ಮನ್ನು ಸೇರಿಸುತ್ತಾನೆ. ಆ ದೇಶದ ಹಳ್ಳಗಳ
ನೀರು ಯಾವಾಗಲೂ ಹರಿಯುತ್ತದೆ; ಮತ್ತು ತಗ
ಗಳಲ್ಲಾಗಲಿ ಗುಡ್ಡಗಳಲ್ಲಾಗಲಿ ಎಲ್ಲಾ ಕಡೆಯ
ಬಾವಿಗಳಲ್ಲಿಯೂ ಬುಗ್ಗೆಗಳಿಂದಲೂ ನೀರು ಉಕ
ತ್ತದೆ. ಆ ದೇಶದಲ್ಲಿ ಗೋದಿ, ಜವೆಗೋದಿ, ದ್ರಾ
ಅಂಜೂರ, ದಾಳಿಂಬ ಇವುಗಳು ಬೆಳೆಯುತ್ತವೆ; ಎ
ಮರಗಳೂ ಜೇನೂ ಸಿಕ್ಕುತ್ತವೆ. ಅಲ್ಲಿ ನೀವು ದುಃ
ಕ್ಷವನ್ನೇ ಕಾಣದೆ ಸಮೃದ್ಧಿಯಾಗಿ ಉಂಡು ಯಾ
ಕೊರತೆಯೂ ಇಲ್ಲದೆ ಇರುವಿರಿ. ಆ ದೇಶದ
ಕಬ್ಬಿಣದ ಕಲ್ಲು ಸಿಕ್ಕುತ್ತದೆ; ಅಲ್ಲಿಯ ಬೆಟ್ಟಗಳ

[1] ಅಂದರೆ ಕಡಜೀರಿಗೆ.

ತಾಮ್ರದ ಗಣಿಗಳುಂಟು. ನೀವು ಹೊಟ್ಟೆತುಂಬಾ
ಉಂಡು ಸುಖದಿಂದಿರುವಾಗ ನಿಮ್ಮ ದೇವರಾದ ಯೆ
ಹೋವನು ನಿಮಗೆ ಉತ್ತಮದೇಶವನ್ನು ಕೊಟ್ಟದ್ದ
ಕ್ಕಾಗಿ ಆತನನ್ನು ಸ್ತುತಿಸಬೇಕು.
ನಾನು ಈಗ ನಿಮಗೆ ಬೋಧಿಸುವ ನಿಮ್ಮ ದೇವ
ರಾದ ಯೆಹೋವನ ಆಜ್ಞಾವಿಧಿನಿರ್ಣಯಗಳನ್ನು
ಕೈಕೊಳ್ಳದವರೂ ಆತನನ್ನು ಮರೆಯುವವರೂ ಆಗ
ಬೇಡಿರಿ, ನೋಡಿರಿ. ನೀವು ಹೊಟ್ಟೆತುಂಬಾ ಉಂಡು
ಸುಖವಾಗಿದ್ದು ಒಳ್ಳೇ ಮನೆಗಳನ್ನು ಕಟ್ಟಿಸಿಕೊಂಡು
ಅವುಗಳಲ್ಲಿ ವಾಸವಾಗಿರುವ ಕಾಲದಲ್ಲಿ ನಿಮ್ಮ ದನ
ಗಳೂ ಆಡುಕುರಿಗಳೂ ನಿಮ್ಮ ಬೆಳ್ಳಿಬಂಗಾರವೂ ಆಸ್ತಿ
ಯೆಲ್ಲವೂ ಹೆಚ್ಚುತ್ತಿರುವಾಗ ಒಂದು ವೇಳೆ ನೀವು
ಮದಿಸಿ ನಿಮ್ಮ ದೇವರಾದ ಯೆಹೋವನನ್ನು ಮರೆ
16 ತೀರಿ. ಆತನು ನಿಮ್ಮನ್ನು ಕಷ್ಟಕ್ಕೆ ಒಳಪಡಿಸಿ
ಪರೀಕ್ಷಿಸಿದನಂತರ ನಿಮಗೆ ಮೇಲನ್ನುಂಟುಮಾಡ
ಬೇಕೆಂಬ ಉದ್ದೇಶದಿಂದ ಐಗುಪ್ತದೇಶದಲ್ಲಿ ದಾಸ
ರಾಗಿದ್ದ ನಿಮ್ಮನ್ನು ಬಿಡುಗಡೆಮಾಡಿ ವಿಷಸರ್ಪಗಳೂ
ಚೇಳುಗಳೂ ಇದ್ದ ಆ ಘೋರವಾದ ಮಹಾರಣ್ಯ
ವನ್ನೂ ನೀರು ಬತ್ತಿಹೋದ ಭೂಮಿಗಳನ್ನೂ ದಾಟಿಸಿ
ಗಟ್ಟಿಯಾದ ಬಂಡೆಯೊಳಗಿಂದ ನೀರನ್ನು ಹೊರಡಿಸಿ
ಕೊಟ್ಟು ನಿಮ್ಮ ಪೂರ್ವಿಕರಿಗೆ ತಿಳಿಯದೆ ಇದ್ದ ಮನ್ನ
ವನ್ನು ಕೊಟ್ಟು ಪೋಷಿಸಿದಾತನನ್ನು ನೀವು ಮರೆತು
ಮನಸ್ಸಿನೊಳಗೆ—ಈ ಭಾಗ್ಯವು ನಮ್ಮ ಸಾಮರ್ಥ್ಯ
ಸಾಹಸಗಳಿಂದಲೇ ನಮಗುಂಟಾಯಿತು ಅಂದು
ಕೊಂಡೀರಿ. ಆದದರಿಂದ ನಿಮ್ಮ ದೇವರಾದ ಯೆಹೋ
ವನೇ ತಾನು ನಿಮ್ಮ ಪಿತೃಗಳಿಗೆ ಪ್ರಮಾಣಪೂರ್ವಕ
ವಾಗಿ ಮಾಡಿದ ವಾಗ್ದಾನವನ್ನು ಈಗ ನಿಮ್ಮ ಅನು
ಭವಕ್ಕೆ ಬಂದ ರೀತಿಯಲ್ಲಿ ನೆರವೇರಿಸುವವನಾಗಿ
ನಿಮಗೆ ಇಷ್ಟು ಭಾಗ್ಯವನ್ನು ಸಂಪಾದಿಸುವದಕ್ಕೆ
ಸಾಮರ್ಥ್ಯವನ್ನು ಕೊಟ್ಟವನೆಂದು ಜ್ಞಾಪಕಮಾಡಿ
ಕೊಳ್ಳಿರಿ. ನೀವು ನಿಮ್ಮ ದೇವರಾದ ಯೆಹೋವನನ್ನು
ಮರೆತು ಇತರ ದೇವರುಗಳನ್ನು ಅವಲಂಬಿಸಿ ಪೂಜಿಸಿ
ದರೆ ನೀವು ತಪ್ಪದೆ ನಾಶವಾಗಿ ಹೋಗುವಿರೆಂದು
ನಿಮ್ಮನ್ನು ಈಗ ಖಂಡಿತವಾಗಿ ಎಚ್ಚರಿಸುತ್ತೇನೆ.
ನೀವು ನಿಮ್ಮ ದೇವರಾದ ಯೆಹೋವನ ಮಾತನ್ನು
ಕೇಳದೆಹೋದರೆ ಆತನಿಂದ ನಿಮ್ಮ ಎದುರಾಗಿ ನಾಶ
ವಾಗಿ ಹೋಗುವ ಜನಾಂಗಗಳಂತೆಯೇ ನೀವೂ ನಾಶ
ವಾಗಿ ಹೋಗುವಿರಿ.
ಇಸ್ರಾಯೇಲ್ಯರೇ ಕೇಳಿರಿ. ನಿಮಗಿಂತ ಮಹಾ
ಬಲಿಷ್ಠಜನಾಂಗಗಳನ್ನೂ ಆಕಾಶವನ್ನು ಮುಟ್ಟುವ
ಕೋಟೆಕೊತ್ತಲುಗಳುಳ್ಳ ಪಟ್ಟಣಗಳನ್ನೂ ಸ್ವಾಧೀನ
ಮಾಡಿಕೊಳ್ಳುವದಕ್ಕೆ ನೀವು ಈ ಯೊರ್ದನ್ ಹೊಳೆ
ಯನ್ನು ಇಂದು ದಾಟುವವರಾಗಿದ್ದೀರಿ. ಆ ದೇಶದ
ವರು ಅನಾಕ್ಯರೆಂಬ ಬಲಿಷ್ಠರಾದ ಉನ್ನತಪುರುಷರು.
ಅವರ ವಿಷಯ ನಿಮಗೆ ತಿಳಿದೇ ಇದೆ; ಅನಾಕ್ಯರ
ಮುಂದೆ ನಿಲ್ಲಬಲ್ಲವರು ಯಾರಿದ್ದಾರೆ ಎಂಬ ಮಾತನ್ನು
ಕೇಳಿದ್ದೀರಷ್ಟೆ. ಆದದರಿಂದ ನಿಮ್ಮ ದೇವರಾದ ಯೆ
ಹೋವನು ತಾನೇ ವಿರೋಧಿಗಳನ್ನು ದಹಿಸುವ ಬೆಂಕಿ
ಯೋಪಾದಿಯಲ್ಲಿ ನಿಮ್ಮ ಮುಂದೆ ಹೋಗುತ್ತಾ
ನೆಂದು ಈಗ ತಿಳಿದುಕೊಳ್ಳಿರಿ. ಆತನೇ ಅವರನ್ನು ನಾಶ
ಮಾಡುವನು; ಆತನೇ ಅವರನ್ನು ನಿಮ್ಮ ಮುಂದೆ
ಸೋತುಹೋಗುವಂತೆ ಮಾಡುವನು. ಯೆಹೋವನು
ನಿಮಗೆ ಹೇಳಿದಂತೆ ನೀವು ಅವರನ್ನು ಹೊರಡಿಸಿ
ಬೇಗನೆ ನಾಶಮಾಡುವಿರಿ.
ನಿಮ್ಮ ದೇವರಾದ ಯೆಹೋವನು ಅವರನ್ನು ನಿಮ್ಮ 4
ಎದುರಿನಿಂದ ಹೊರಡಿಸಿದನಂತರ ನೀವು ಮನಸ್ಸಿ
ನಲ್ಲಿ—ಯೆಹೋವನು ನಮ್ಮನ್ನು ಈ ದೇಶಕ್ಕೆ ಕರ
ತಂದು ಅದನ್ನು ನಮಗೆ ಸ್ವಾಧೀನಪಡಿಸಿದ್ದು ನಮ್ಮ
ಪುಣ್ಯಫಲವೇ ಅಂದುಕೊಳ್ಳಬಾರದು. ಆ ಜನಾಂಗ
ಗಳ ದುರ್ನಡತೆಯ ದೆಸೆಯಿಂದಲೇ ಯೆಹೋವನು
ನಿಮ್ಮ ಎದುರಿನಿಂದ ಅವರನ್ನು ಹೊರಡಿಸುತ್ತಾನೆ.
ನೀವು ಅವರ ದೇಶಕ್ಕೆ ಬಂದು ಅದನ್ನು ಸ್ವಾಧೀನ 5
ಮಾಡಿಕೊಳ್ಳುವದಕ್ಕೆ ನಿಮ್ಮ ಪುಣ್ಯವೇ ಆಗಲಿ
ನಿಮ್ಮ ಸುಸ್ವಭಾವವೇ ಆಗಲಿ ಕಾರಣವಲ್ಲ. ಆ ಜನಾಂಗ
ಗಳ ದುರ್ನಡತೆಯ ದೆಸೆಯಿಂದಲೂ ನಿಮ್ಮ ದೇವ
ರಾದ ಯೆಹೋವನು ನಿಮ್ಮ ಪಿತೃಗಳಾದ ಅಬ್ರ
ಹಾಮ್ ಇಸಾಕ್ ಯಾಕೋಬರಿಗೆ ಪ್ರಮಾಣಪೂರ್ವ
ಕವಾಗಿ ಮಾಡಿದ ವಾಗ್ದಾನವನ್ನು ನೆರವೇರಿಸಬೇ
ಕೆಂದಿದ್ದದರಿಂದಲೂ ಅವರನ್ನು ನಿಮ್ಮ ಎದುರಿನಿಂದ
ಹೊರಡಿಸಿಬಿಡುತ್ತಾನೆ. ನಿಮ್ಮ ದೇವರಾದ ಯೆಹೋ 6
ವನು ಆ ಉತ್ತಮದೇಶವನ್ನು ನಿಮಗೆ ಸ್ವದೇಶವಾಗಿ
ಕೊಡುವದು ನಿಮ್ಮ ಪುಣ್ಯಫಲವಲ್ಲವೆಂದು ಚೆನ್ನಾಗಿ ತಿಳಿ
ದುಕೊಳ್ಳಿರಿ. ನೀವು ಆತನ ಆಜ್ಞೆಗೆ ಮಣಿಯದ ಜನರೇ
ಆಗಿದ್ದೀರಿ.
ನೀವು ಅರಣ್ಯದಲ್ಲಿ ನಿಮ್ಮ ದೇವರಾದ ಯೆಹೋವ 7
ನಿಗೆ ಕೋಪಹುಟ್ಟಿಸಿದ್ದನ್ನು ನೆನಪುಮಾಡಿಕೊಳ್ಳಿರಿ;
ಅದನ್ನು ಮರೆಯಬೇಡಿರಿ. ನೀವು ಐಗುಪ್ತದೇಶ
ವನ್ನು ಬಿಟ್ಟಂದಿನಿಂದ ಈ ಸ್ಥಳಕ್ಕೆ ಬಂದ ದಿನದ ವರೆಗೂ
ಯೆಹೋವನ ಆಜ್ಞೆಗಳನ್ನು ಧಿಕ್ಕರಿಸುವವರಾಗಿದ್ದಿರಿ.
ದೃಷ್ಟಾಂತ—ಹೋರೇಬಿನಲ್ಲಿ ನೀವು ಯೆಹೋವ 8
ನಿಗೆ ಕೋಪವನ್ನು ಹುಟ್ಟಿಸಿದಿರಿ. ಆಗ ಆತನು ಬಲು
ಸಿಟ್ಟುಗೊಂಡು ನಿಮ್ಮನ್ನು ಧ್ವಂಸಮಾಡಬೇಕೆಂದಿ
ದ್ದನು. ಯೆಹೋವನು ನಿಮ್ಮ ಸಂಗಡ ಮಾಡಿದ 9
ನಿಬಂಧನೆಯನ್ನು ಬರೆದ ಆ ಕಲ್ಲಿನ ಹಲಿಗೆಗಳನ್ನು
ತೆಗೆದುಕೊಳ್ಳುವದಕ್ಕೆ ನಾನು ಬೆಟ್ಟವನ್ನು ಹತ್ತಿದ್ದಾಗ
ನಾನು ಅನ್ನಪಾನಗಳನ್ನು ಬಿಟ್ಟು ಹಗಲಿರುಳು
ನಾಲ್ವತ್ತು ದಿನ ಆ ಬೆಟ್ಟದಲ್ಲಿದ್ದೆನು. ಆಗ ಯೆಹೋ 10
ವನು ತನ್ನ ಕೈಯಿಂದಲೇ ಬರೆದ ಆ ಎರಡು ಕಲ್ಲಿನ
ಹಲಿಗೆಗಳನ್ನು ನನ್ನ ವಶಕ್ಕೆ ಕೊಟ್ಟನು. ನೀವು ಸಭೆ
ಕೂಡಿದ ದಿನದಲ್ಲಿ ಯೆಹೋವನು ಆ ಬೆಟ್ಟದ ಮೇಲೆ
ಅಗ್ನಿಜ್ವಾಲೆಯೊಳಗಿಂದ ನಿಮ್ಮ ಸಂಗಡ ಹೇಳಿದ ಮಾತು
ಗಳು ಆ ಹಲಿಗೆಗಳಲ್ಲಿದ್ದವು. ಆ ನಾಲ್ವತ್ತು ದಿನಗಳು 11
ಕಳೆದ ಮೇಲೆ ಯೆಹೋವನು ತನ್ನ ನಿಬಂಧನೆಯಿರುವ
ಆ ಎರಡು ಕಲ್ಲಿನ ಹಲಿಗೆಗಳನ್ನು ನನಗೆ ಕೊಟ್ಟು
ನೀನು ಬೇಗ ಇಲ್ಲಿಂದ ಇಳಿದುಹೋಗು; ನೀನು 12
ಐಗುಪ್ತದೇಶದಿಂದ ಕರಕೊಂಡು ಬಂದ ನಿನ್ನ ಜನರು
ಕೆಟ್ಟುಹೋದರು; ನಾನು ಅವರಿಗೆ ಆಜ್ಞಾಪಿಸಿದ
ಮಾರ್ಗವನ್ನು ಅವರು ಬೇಗನೆ ಬಿಟ್ಟುಹೋಗಿ ತಮಗೆ
ಲೋಹವಿಗ್ರಹವನ್ನು ಮಾಡಿಸಿಕೊಂಡಿದ್ದಾರೆ ಎಂದು
ಹೇಳಿದನು. ಅದಲ್ಲದೆ ಆತನು ನನಗೆ—ಈ ಜನರ 13

ಸ್ವಭಾವವನ್ನು ನಾನು ನೋಡುತ್ತಾ ಬಂದಿದ್ದೇನೆ;
14 ಇವರು ನನ್ನ ಆಜ್ಞೆಗೆ ಒಳಗಾಗದವರು. ಬಿಡು,
ನಾನು ಅವರನ್ನು ನಾಶಮಾಡಿ ಅವರ ಹೆಸರನ್ನು
ಭೂಮಿಯ ಮೇಲೆ ಉಳಿಯದಂತೆ ಮಾಡುವೆನು.
ತರುವಾಯ ಅವರಿಗಿಂತಲೂ ಮಹಾ ಬಲಿಷ್ಠ ಜನಾಂಗವು
ನಿನ್ನಿಂದುಂಟಾಗುವಂತೆ ಮಾಡುವೆನು ಎಂದು ಹೇಳಿ
15 ದನು. ಆಗ ನಾನು ಆ ಎರಡು ಆಜ್ಞಾಶಾಸನಗಳನ್ನು
ನನ್ನ ಎಡಡು ಕೈಗಳಲ್ಲಿ ಹಿಡಿದುಕೊಂಡು ಬೆಂಕಿ
ಯಿಂದ ಉರಿಯುವ ಆ ಬೆಟ್ಟದಿಂದ ಇಳಿದು ಬಂದು
16 ನೋಡಲಾಗಿ ನೀವು ನಿಮ್ಮ ದೇವರಾದ ಯೆಹೋವನಿಗೆ
ದ್ರೋಹಿಗಳಾಗಿ ಲೋಹದ ಬಸವನನ್ನು ಮಾಡಿಸಿ
ಕೊಂಡು ಯೆಹೋವನು ನಿಮಗೆ ಆಜ್ಞಾಪಿಸಿದ್ದ
ಮಾರ್ಗವನ್ನು ಬೇಗನೆ ಬಿಟ್ಟುಹೋದದ್ದು ನನಗೆ ಕಂಡು
17 ಬಂತು. ಅದನ್ನು ನೋಡಿ ನಾನು ಕೈಯಲ್ಲಿದ್ದ ಆ
ಎರಡು ಶಿಲಾಶಾಸನಗಳನ್ನು ನಿಮಗೆದುರಾಗಿಯೇ ನೆಲ
ಕ್ಕೆ ಹಾಕಿ ಒಡೆದುಬಿಟ್ಟೆನು.
18 ನೀವು ಹೀಗೆ ಅಪರಾಧಮಾಡಿ ಯೆಹೋವನ ದೃಷ್ಟಿ
ಯಲ್ಲಿ ಕೆಟ್ಟದ್ದನ್ನು ನಡಿಸಿ ಆತನನ್ನು ಕೋಪಗೊಳಿ
ಸಿದ ಕಾರಣ ನಾನು ಮೊದಲಿನಂತೆ ಅನ್ನಪಾನಗಳನ್ನು
ಬಿಟ್ಟು ನಾಲ್ವತ್ತು ದಿನಗಳು ಹಗಲಿರುಳು ಯೆಹೋ
19 ವನ ಸನ್ನಿಧಿಯಲ್ಲೇ ಬಿದ್ದಿದ್ದೆನು. ಯೆಹೋವನು
ನಿಮ್ಮ ಮೇಲೆ ಬಹುಕೋಪವನ್ನು ಮಾಡಿ ನಿಮ್ಮನ್ನು
ನಾಶಮಾಡಬೇಕೆಂದು ಆಲೋಚಿಸಿದದರಿಂದ ನಾನು
ಹೆದರಿಕೊಂಡೆನು. ಆದರೆ ಆ ಕಾಲದಲ್ಲಿಯೂ ಆತ
20 ನು ನನ್ನ ಮನವಿಯನ್ನು ಕೇಳಿದನು. ಅದಲ್ಲದೆ
ಯೆಹೋವನು ಆರೋನನ ಮೇಲೆ ಬಹಳ ಸಿಟ್ಟುಗೊಂ
ಡು ಅವನನ್ನೂ ನಾಶಮಾಡಬೇಕೆಂದಿದ್ದದರಿಂದ ನಾನು
ಅವನಿಗೋಸ್ಕರವಾಗಿಯೂ ಆ ಕಾಲದಲ್ಲಿ ಪ್ರಾರ್ಥಿಸಿ
21 ದೆನು. ಮತ್ತು ನೀವು ಯಾವದರ ಮೂಲಕ ಪಾಪ
ವನ್ನು ಮಾಡಿದ್ದಿರೋ ಆ ಬಸವನನ್ನು ನಾನು ತೆಗೆದು
ಕೊಂಡು ಬೆಂಕಿಯಿಂದ ಸುಟ್ಟು ಒಡೆದು ಅರೆದು ಧೂಳು
ಮಾಡಿ ಬೆಟ್ಟದಿಂದ ಹರಿಯುವ ಹಳ್ಳದಲ್ಲಿ ಬೀಸಾಡಿ
ಬಿಟ್ಟೆನು.
22 ತಬೇರಾ, ಮಸ್ಸಾ, ಕಿಬ್ರೋತ್‌ಹತಾವಾ ಎಂಬ
ಸ್ಥಳಗಳಲ್ಲಿಯೂ ನೀವು ಯೆಹೋವನಿಗೆ ಕೋಪ
23 ವನ್ನು ಹುಟ್ಟಿಸಿದಿರಲ್ಲಾ. ಅದಲ್ಲದೆ ಕಾದೇಶ್‌ಬರ್ನೇ
ಯದಲ್ಲಿ ಯೆಹೋವನು ನಿಮಗೆ—ಬೆಟ್ಟದ ಸೀಮೆಯ
ನ್ನು ಹತ್ತಿ ನಾನು ನಿಮಗೆ ಕೊಟ್ಟಿರುವ ದೇಶವನ್ನು
ಸ್ವಾಧೀನಮಾಡಿಕೊಳ್ಳಿರಿ ಎಂದು ಅಪ್ಪಣೆಕೊಟ್ಟಾಗಲೂ
ನೀವು ನಿಮ್ಮ ದೇವರಾದ ಯೆಹೋವನ ಆ ಆಜ್ಞೆಯ
ನ್ನು ಧಿಕ್ಕರಿಸಿ ಆತನನ್ನು ನಂಬದೆ ಆತನ ಮಾತನ್ನು
24 ಅಲಕ್ಷ್ಯಮಾಡಿದಿರಿ. ನನಗೆ ನಿಮ್ಮ ಪರಿಚಯವಾದಂದಿ
ನಿಂದಲೂ ನೀವು ಯೆಹೋವನ ಆಜ್ಞೆಯನ್ನು ಉಲ್ಲಂಘಿ
ಸುವವರೇ.
25 ಯೆಹೋವನು ನಿಮ್ಮನ್ನು ನಾಶಮಾಡಬೇಕೆಂದಿದ್ದ
ದರಿಂದ ನಾನು ಆ ನಾಲ್ವತ್ತು ದಿನವೂ ಹಗಲಿರುಳು
26 ಆತನ ಸನ್ನಿಧಿಯಲ್ಲಿ ಬಿದ್ದಿದ್ದೆನು. ನಾನು ಆತನನ್ನು
ಬೇಡಿಕೊಳ್ಳುತ್ತಾ—ಕರ್ತನಾದ ಯೆಹೋವನೇ, ನೀನು
ನಿನ್ನ ಮಹಿಮೆಯಿಂದ ರಕ್ಷಿಸಿ ನಿನ್ನ ಭುಜಬಲದಿಂದ
ಐಗುಪ್ತ್ಯರಿಂದ ಬಿಡುಗಡೆಮಾಡಿದ ನಿನ್ನ ಸ್ವಕೀಯ

ಜನರನ್ನು ನಾಶಮಾಡಬೇಡ. ಇವರ ಮೊಂಡತ
ದುಷ್ಕೃತ್ಯ, ಪಾಪ ಇವುಗಳನ್ನು ಮನಸ್ಸಿಗೆ ತೆಗೆದು
ಳ್ಳದೆ ನಿನ್ನ ಸೇವಕರಾದ ಅಬ್ರಹಾಮ್ ಇಸಾ
ಯಾಕೋಬರನ್ನು ನೆನಪಿಗೆ ತಂದುಕೋ. ನೀ
ಯಾವ ದೇಶದಿಂದ ನಮ್ಮನ್ನು ಬರಮಾಡಿದಿಯೋ
ದೇಶದವರು — ಯೆಹೋವನು ಇಸ್ರಾಯೇಲ್ಯ
ವಾಗ್ದಾನಮಾಡಿದ ದೇಶಕ್ಕೆ ಅವರನ್ನು ಸೇರಿಸಲಾ
ಹಗೆಮಾಡಿ ಅರಣ್ಯದಲ್ಲಿ ಕೊಲ್ಲುವದಕ್ಕೆ ಕರಕೊಂ
ಹೋದನೆಂದು ಹೇಳುವದಕ್ಕೆ ಆಸ್ಪದವಾದೀತು.
ರು ಮಹಾಶಕ್ತಿಯಿಂದಲೂ ಭುಜಬಲದಿಂದಲೂ ನೀ
ಬಿಡಿಸಿದ ನಿನ್ನ ಸ್ವಕೀಯ ಜನರಲ್ಲವೇ ಎಂದು ಬಿನ್
ಸಿದೆನು.

ಆ ಕಾಲದಲ್ಲಿ ಯೆಹೋವನು ನನಗೆ—ನೀನು
ಮೊದಲಿನ ಕಲ್ಲಿನ ಹಲಿಗೆಗಳಂತೆ ಬೇರೆ ಎರಡು
ಹಲಿಗೆಗಳನ್ನು ಸಿದ್ಧಪಡಿಸಿಕೊಂಡು ಬೆಟ್ಟವನ್ನು ಹ
ನನ್ನ ಬಳಿಗೆ ಬಾ; ಮತ್ತು ಒಂದು ಮರದ ಮಂಜೂ
ವನ್ನು ಮಾಡಿಸಿಕೊಳ್ಳಬೇಕು. ನೀನು ಒಡೆ
ಬಿಟ್ಟ ಆ ಮೊದಲಿನ ಹಲಿಗೆಗಳಲ್ಲಿ ಬರೆದಿದ್ದ ಮಾ
ಗಳನ್ನು ನಾನು ಈ ಹಲಿಗೆಗಳ ಮೇಲೆ ಬರೆಯುವೆನ
ತರುವಾಯ ನೀನು ಅವುಗಳನ್ನು ಆ ಮಂಜೂ
ದಲ್ಲಿಡಬೇಕೆಂದು ಆಜ್ಞಾಪಿಸಿದನು. ಆದಕಾರ
ನಾನು ಜಾಲೀಮರದಿಂದ ಮಂಜೂಷವನ್ನು ಮಾಡಿ
ಮೊದಲಿನ ಕಲ್ಲಿನ ಹಲಿಗೆಗಳಂತೆ ಬೇರೆ ಎರಡು ಹಲಿ
ಗಳನ್ನು ಸಿದ್ಧಪಡಿಸಿ ಆ ಎರಡು ಹಲಿಗೆಗಳನ
ಕೈಯಲ್ಲಿ ಹಿಡಿದುಕೊಂಡು ಬೆಟ್ಟವನ್ನು ಹತ್ತಿದೆನ
ಯೆಹೋವನು ಬೆಟ್ಟದ ಮೇಲೆ ಅಗ್ನಿಜ್ವಾಲೆಯೊ
ಗಿಂದ ನೀವು ಸಭೇಕೂಡಿದ ದಿನದಲ್ಲಿ ನಿಮ್ಮ ಸಂಗ
ಹೇಳಿದ ಮಾತುಗಳನ್ನು ಅಂದರೆ ಆ ಹತ್ತು ಕಟ್ಟ
ಗಳನ್ನು ಆತನು ಮೊದಲಿನಂತೆಯೇ ಆ ಹಲಿಗೆ
ಮೇಲೆ ಬರೆದನು. ಯೆಹೋವನು ಆ ಹಲಿಗೆಗಳನ
ನನ್ನ ವಶಕ್ಕೆ ಕೊಟ್ಟನಂತರ ನಾನು ಬೆಟ್ಟದಿಂದ ಇ
ದು ಬಂದು ನನ್ನಿಂದ ಸಿದ್ಧವಾಗಿದ್ದ ಮಂಜೂಷದ
ಆತನ ಅಪ್ಪಣೆಯ ಮೇರೆಗೆ ಅವುಗಳನ್ನು ಇಟ್ಟೆನ
ಅವು ಇಂದಿನ ವರೆಗೂ ಅದರಲ್ಲೇ ಅವೆ.

(ಇಸ್ರಾಯೇಲ್ಯರು ಯಾಕಾನ್ಯರ ಬಾವಿಗಳ ಬ
ಯಿಂದ ಪ್ರಯಾಣಮಾಡಿ ಮೋಸೇರಕ್ಕೆ ಬಂದರ
ಅಲ್ಲಿ ಆರೋನನು ಸಾಯಲಾಗಿ ಅವನಿಗೆ ಸಮಾ
ಮಾಡಿದರು; ಅವನ ಮಗನಾದ ಎಲ್ಲಾಜಾರನು ಅ
ನಿಗೆ ಬದಲಾಗಿ ಮಹಾಯಾಜಕನಾದನು. ಅಲ್ಲಿಂ
ಅವರು ಗುದ್ಗೋದಕ್ಕೂ ಗುದ್ಗೋದದಿಂದ ನೀರಿ
ಹಳ್ಳಗಳುಳ್ಳ ಯೊಟ್ಬಾತಕ್ಕೂ ಪ್ರಯಾಣಮಾ
ದರು.)

ಆ ಕಾಲದಲ್ಲಿ ಯೆಹೋವನು ಲೇವಿಕುಲದ
ರನ್ನು ಪ್ರತ್ಯೇಕಿಸಿ ತನ್ನ ಒಡಂಬಡಿಕೆಯ ಮಂಜೂ
ವನ್ನು ಹೊರುವದಕ್ಕೂ ತನ್ನ ಸನ್ನಿಧಿಯಲ್ಲಿ ಸೇ
ಮಾಡುವದಕ್ಕೂ ತನ್ನ ಹೆಸರಿನಿಂದ ಜನರನ್ನು ಆ
ರ್ವದಿಸುವದಕ್ಕೂ ಅವರನ್ನು ನೇಮಿಸಿದನು. ಅವ
ಇಂದಿನ ವರೆಗೂ ಆ ಕೆಲಸವನ್ನು ನಡಿಸುತ್ತಾ
ಆದದರಿಂದ ಮಿಕ್ಕ ಇಸ್ರಾಯೇಲ್ಯರಿಗೆ ದೊರಕಿದಂ
ಲೇವಿಯರಿಗೆ ಸ್ವಂತವಾದ ಭೂಸ್ಥಿತಿಯು ದೊರೆ

ಲಿಲ್ಲ. ನಿಮ್ಮ ದೇವರಾದ ಯೆಹೋವನು ಅವರಿಗೆ
ಹೇಳಿದಂತೆ ಯೆಹೋವನೇ ಅವರಿಗೆ ಸ್ವಾಸ್ತ್ಯ.
ನಾನು ಮುಂಚಿನಂತೆ ಹಗಲಿರುಳು ನಾಲ್ವತ್ತು ದಿನ
ವೂ ಬೆಟ್ಟದ ಮೇಲೆ ಇರಲಾಗಿ ಯೆಹೋವನು ಆ
ಕಾಲದಲ್ಲಿಯೂ ನನ್ನ ಪ್ರಾರ್ಥನೆಯನ್ನು ಕೇಳಿ ನಿಮ್ಮ
ನ್ನು ನಾಶಮಾಡಬೇಕೆಂಬ ಆಲೋಚನೆಯನ್ನು ಬಿಟ್ಟು
ಬಿಟ್ಟನು. ತರುವಾಯ ಯೆಹೋವನು ನನಗೆ—
ನೀನು ಈ ಜನರ ಮುಂದುಗಡೆಯಲ್ಲಿ ಹೊರಡು;
ನಾನು ಇವರ ಪಿತೃಗಳಿಗೆ ಪ್ರಮಾಣ ಮಾಡಿಕೊಟ್ಟ ದೇಶ
ವನ್ನು ಇವರು ಸೇರಿ ಸ್ವಾಧೀನಮಾಡಿಕೊಳ್ಳಲಿ ಎಂದು
ಆಜ್ಞಾಪಿಸಿದನು.

ವಿಧೇಯತ್ವದಿಂದ ವೃದ್ಧಿಯೂ ಅವಿಧೇಯತ್ವದಿಂದ ಹಾನಿಯೂ
ಉಂಟಾಗುತ್ತವೆಂಬದು.

ಆದದರಿಂದ ಇಸ್ರಾಯೇಲ್ಯರೇ, ನೀವು ನಿಮ್ಮ
ದೇವರಾದ ಯೆಹೋವನಲ್ಲಿ ಭಯಭಕ್ತಿಯುಳ್ಳವ
ರಾಗಿ ಎಲ್ಲಾ ವಿಷಯಗಳಲ್ಲಿಯೂ ಆತನು ಹೇಳುವ
ಮಾರ್ಗದಲ್ಲೇ ನಡೆಯುತ್ತಾ ಆತನನ್ನು ಪ್ರೀತಿಸುತ್ತಾ
ಸಂಪೂರ್ಣವಾದ ಹೃದಯದಿಂದಲೂ ಮನಸ್ಸಿನಿಂದಲೂ
ಸೇವೆಮಾಡುತ್ತಾ ನಾನು ನಿಮ್ಮ ಮೇಲಿಗಾಗಿ ಈಗ
ಬೋಧಿಸುವ ಆತನ ಆಜ್ಞಾವಿಧಿಗಳನ್ನು ಅನುಸರಿಸುತ್ತಾ
ಇರುವದನ್ನೇ ಹೊರತು ನಿಮ್ಮ ದೇವರಾದ ಯೆಹೋ
ವನು ನಿಮ್ಮಿಂದ ಬೇರೇನು ಕೇಳಿಕೊಳ್ಳುತ್ತಾನೆ? ಆಲೋ
ಚಿಸಿರಿ; ಉನ್ನತೋನ್ನತವಾದ ಆಕಾಶಮಂಡಲವೂ
ಮತ್ತು ಭೂಮಿಯೂ ಅದರಲ್ಲಿರುವ ಎಲ್ಲವೂ ನಿಮ್ಮ
ದೇವರಾದ ಯೆಹೋವನವೇ; ಆದರೂ ಆತನು
ನಿಮ್ಮ ಪಿತೃಗಳಲ್ಲಿ ಇಷ್ಟವುಳ್ಳವನಾಗಿ ಅವರನ್ನು ಪ್ರೀತಿ
ಸಿದದರಿಂದ ಈಗ ನಿಮ್ಮ ಅನುಭವಕ್ಕೆ ಬಂದಂತೆ ಅವರ
ತರುವಾಯ ಅವರ ಸಂತತಿಯವರಾದ ನಿಮ್ಮನ್ನೇ
ಎಲ್ಲಾ ಜನಾಂಗಗಳೊಳಗಿಂದ ಆದುಕೊಂಡನು. ಆದ
ದರಿಂದ ನೀವು ಆಜ್ಞೆಗೆ ಮಣಿಯದ ನಿಮ್ಮ ದುಸ್ಸ್ವಭಾ
ವವನ್ನು ಬಿಟ್ಟುಬಿಟ್ಟು ನಿಮ್ಮ ಹೃದಯದಲ್ಲೇ ಸುನ್ನತಿ
ಮಾಡಿಕೊಳ್ಳಿರಿ. ನಿಮ್ಮ ದೇವರಾದ ಯೆಹೋವನು
ದೇವಾಧಿದೇವನಾಗಿಯೂ ಕರ್ತರ ಕರ್ತನಾಗಿ
ಯೂ ಇದ್ದಾನೆ; ಆತನು ಪರಮದೇವರೂ ಪರಾ
ಕ್ರಮಿಯೂ ಭಯಂಕರನೂ ಆಗಿದ್ದಾನೆ. ಆತನು
ದಾಕ್ಷಿಣ್ಯ ನೋಡುವವನಲ್ಲ, ಲಂಚತೆಗೆದುಕೊಳ್ಳುವವ
ನಲ್ಲ. ಆತನು ತಾಯಿತಂದೆಯಿಲ್ಲದವರ ಮತ್ತು ವಿಧ
ವೆಯರ ನ್ಯಾಯವನ್ನು ಸ್ಥಾಪಿಸುತ್ತಾನೆ; ಪರದೇಶಿಗಳಾದ
ವರಲ್ಲಿ ಪ್ರೀತಿಯಿಟ್ಟು ಅವರಿಗೆ ಅನ್ನವಸ್ತ್ರಗಳನ್ನು ಕೊಡು
ತ್ತಾನೆ. ಐಗುಪ್ತದೇಶದಲ್ಲಿ ನೀವೇ ಪರದೇಶಿಗಳಾ
ಗಿದ್ದದ್ದನ್ನು ಜ್ಞಾಪಿಸಿಕೊಂಡು ಪರದೇಶದವರಲ್ಲಿ ಪ್ರೀತಿ
ಯಿಡಿರಿ. ನಿಮ್ಮ ದೇವರಾದ ಯೆಹೋವನಲ್ಲಿ ಭಯಭಕ್ತಿ
ಯುಳ್ಳವರಾಗಿ ಆತನನ್ನೇ ಸೇವಿಸಬೇಕು; ಆತನನ್ನು
ಹೊಂದಿಕೊಂಡು ಆತನ ಹೆಸರಿನ ಮೇಲೆಯೇ ಪ್ರಮಾಣ
ಮಾಡಬೇಕು. ಆತನೊಬ್ಬನೇ ನಿಮ್ಮ ಸ್ತೋತ್ರಕ್ಕೆ
ಪಾತ್ರನು; ಆತನು ನಿಮ್ಮ ದೇವರು; ನೀವು ನೋಡಿದ
ಈ ಮಹಾಭಯಂಕರವಾದ ಮಹತ್ಕಾರ್ಯಗಳನ್ನು
ನಿಮಗೋಸ್ಕರ ನಡಿಸಿದವನು ಆತನೇ. ನಿಮ್ಮ ಪಿತೃ

ಗಳು ಎಪ್ಪತ್ತು ಮಂದಿ ಮಾತ್ರ ಐಗುಪ್ತದೇಶಕ್ಕೆ
ಹೋದರು; ಈಗಲೋ ನಿಮ್ಮ ದೇವರಾದ ಯೆಹೋ
ವನು ನಿಮ್ಮನ್ನು ಆಕಾಶದ ನಕ್ಷತ್ರಗಳಷ್ಟು ಅಸಂಖ್ಯ
ರಾಗಿರುವಂತೆ ಮಾಡಿದ್ದಾನಲ್ಲಾ. ಆದದರಿಂದ ನಿಮ್ಮ
ದೇವರಾದ ಯೆಹೋವನಲ್ಲಿ ಪ್ರೀತಿಯಿಟ್ಟು ಆತನ 11
ನಿಯಮಗಳನ್ನು ಕೈಕೊಂಡು ಆತನ ಆಜ್ಞಾವಿಧಿ
ನಿರ್ಣಯಗಳನ್ನು ಯಾವಾಗಲೂ ಅನುಸರಿಸಬೇಕು.
ನಿಮ್ಮ ದೇವರಾದ ಯೆಹೋವನ ಶಿಕ್ಷಣಕ್ರಮ 2
ವನ್ನೂ ಮಹಿಮೆಯನ್ನೂ ಭುಜಬಲವನ್ನೂ ಶಿಕ್ಷಾ
ಹಸ್ತವನ್ನೂ ಅಂದರೆ ಆತನು ಐಗುಪ್ತದೇಶದಲ್ಲಿ 3
ಫರೋಹನನ್ನೂ ಅವನ ದೇಶವನ್ನೂ ಶಿಕ್ಷಿಸುವದಕ್ಕಾಗಿ
ನಡಿಸಿದ ಉತ್ಪಾತಮಹತ್ಕಾರ್ಯಗಳನ್ನೂ; ಐಗು 4
ಪ್ತ್ಯರ ದಂಡು ಅಂದರೆ ಅವರ ರಥಾಶ್ವಬಲಗಳು
ನಿಮ್ಮನ್ನು ಹಿಂದಟ್ಟಿ ಬಂದಾಗ ಆತನು ಕೆಂಪು ಸಮು
ದ್ರದ ನೀರನ್ನು ಅವರ ಮೇಲೆ ಬರಮಾಡಿ ಸಂಪೂರ್ಣ
ವಾಗಿ ನಾಶಮಾಡಿದ್ದನ್ನೂ; ನೀವು ಈ ಸ್ಥಳಕ್ಕೆ 5
ಸೇರುವ ತನಕ ಆತನು ನಿಮಗೋಸ್ಕರ ಅರಣ್ಯದಲ್ಲಿ
ಉಪಕಾರಮಾಡಿದ್ದನ್ನೂ; ರೂಬೇನನ ಮೊಮ್ಮಕ್ಕಳೂ 6
ಎಲೀಯಾಬನ ಮಕ್ಕಳೂ ಆದ ದಾತಾನ್ ಅಬೀ
ರಾಮರು [ತಿರುಗಿಬಿದ್ದಾಗ] ಭೂಮಿಯು ಬಾಯ್ದ
ರೆದು ಅವರನ್ನೂ ಅವರ ಮನೆಯವರನ್ನೂ ಡೇರೆ
ಗಳನ್ನೂ ಅವರಿಗೆ ಸೇರಿದ ಎಲ್ಲಾ ಪ್ರಾಣಿಗಳನ್ನೂ
ಇಸ್ರಾಯೇಲ್ಯರ ನಡುವೆ ನುಂಗಿಬಿಟ್ಟದ್ದನ್ನೂ ಈಗ
ಜ್ಞಾಪಕಮಾಡಿಕೊಳ್ಳಿರಿ. ಈ ಕಾರ್ಯಗಳನ್ನು ನೋಡ
ದೆ ತಿಳಿಯದೆ ಇರುವ ನಿಮ್ಮ ಮಕ್ಕಳಿಗೆ ನಾನು ಈ
ಮಾತನ್ನು ಹೇಳುವದಿಲ್ಲ; ಯೆಹೋವನು ನಡಿಸಿದ 7
ಆ ವಿಶೇಷಕಾರ್ಯಗಳನ್ನು ಪ್ರತ್ಯಕ್ಷವಾಗಿ ನೋಡಿದವ
ರಾದ ನಿಮಗೇ ಹೇಳುತ್ತಾ ಇದ್ದೇನೆ.
ನಾನು ಈಗ ನಿಮಗೆ ಬೋಧಿಸುವ ಈ ಧರ್ಮೋಪ 8
ದೇಶವನ್ನೆಲ್ಲಾ ನೀವು ಅನುಸರಿಸಬೇಕು. ಆಗ ನೀವು
ಬಲವುಳ್ಳವರಾಗಿ ಈ ಹೊಳೆ ದಾಟಿ ಆಚೆಯಿರುವ
ದೇಶವನ್ನು ಸೇರಿ ಸ್ವಾಧೀನಮಾಡಿಕೊಳ್ಳುವಿರಿ; ಮತ್ತು 9
ಯೆಹೋವನು ನಿಮ್ಮ ಪಿತೃಗಳಿಗೂ ಅವರ ಸಂತತಿಗೂ
ಕೊಡುತ್ತೇನೆಂದು ಪ್ರಮಾಣಮಾಡಿದ ಆ ದೇಶದಲ್ಲಿ
ನೀವು ಬಹುಕಾಲ ಬದುಕಿಕೊಳ್ಳುವಿರಿ; ಅದು ಹಾಲೂ
ಜೇನೂ ಹರಿಯುವ ದೇಶ. ನೀವು ಸ್ವತಂತ್ರಿಸಿಕೊಳ್ಳು 10
ವದಕ್ಕೆ ಹೋಗುವ ದೇಶವು ಬಿಟ್ಟುಬಂದ ಐಗುಪ್ತ
ದೇಶದ ಹಾಗಲ್ಲ. ಐಗುಪ್ತದೇಶದಲ್ಲಿ ನೀವು ಹೊಲ
ಗದ್ದೆಗಳಲ್ಲಿ ಬೀಜ ಬಿತ್ತಿದ ಮೇಲೆ ಕಾಯಿಪಲ್ಯಗಳ
ತೋಟವನ್ನು ಸಾಗುವಳಿಮಾಡುವ ರೀತಿಯಲ್ಲಿ ಯಾತ
ವನ್ನು ತುಳಿದು ನೀರುಕಟ್ಟುತ್ತಿದ್ದಿರಿ. ನೀವು ಸ್ವಾಧೀನ 11
ಮಾಡಿಕೊಳ್ಳುವದಕ್ಕೆ ಹೋಗುವ ದೇಶವೋ ಹಳ್ಳ
ದಿನ್ನೆಗಳ ದೇಶ; ಆಕಾಶದಿಂದ ಮಳೆಬಿದ್ದ ಪ್ರಕಾರವೇ
ಅದಕ್ಕೆ ನೀರುದೊರೆಯುವದು. ಅದು ನಿಮ್ಮ ದೇವ 12
ರಾದ ಯೆಹೋವನು ಪರಾಂಬರಿಸುವ ದೇಶ; ಸಂವತ್ಸ
ರದ ಪ್ರಾರಂಭ ಮೊದಲುಗೊಂಡು ಕೊನೆಯ ವರೆಗೂ
ಆತನು ಅದನ್ನು ಸದಾ ಕಟಾಕ್ಷಿಸುವನು. ನಾನು 13
ಈಗ ನಿಮಗೆ ಬೋಧಿಸುವ ಆಜ್ಞೆಗಳಿಗೆ ನೀವು ಲಕ್ಷ್ಯ
ಕೊಟ್ಟು ನಿಮ್ಮ ದೇವರಾದ ಯೆಹೋವನನ್ನು ಸಂಪೂರ್ಣ
ಹೃದಯದಿಂದಲೂ ಮನಸ್ಸಿನಿಂದಲೂ ಪ್ರೀತಿಸಿ ಆತನನ್ನು

14 ಸೇವಿಸಿದರೆ ನಿಮಗೆ ಗೋದಿ, ದ್ರಾಕ್ಷೆ, ಎಣ್ಣೇಕಾಯಿ
ಇವುಗಳ ಬೆಳೆ ಚೆನ್ನಾಗಿ ಉಂಟಾಗುವಂತೆ ಆತನು
ನಿಮ್ಮ ಭೂಮಿಗೆ ಬೇಕಾದ ಮುಂಗಾರು ಹಿಂಗಾ
15 ರುಗಳನ್ನು ಸರಿಯಾಗಿ ನಡಿಸುವನು; ಅಡವಿಯಲ್ಲಿ ದನ
ಗಳಿಗೆ ಬೇಕಾದಷ್ಟು ಹುಲ್ಲನ್ನು ಕೊಡುವನು; ನೀವು
16 ಆಹಾರದಿಂದ ತೃಪ್ತರಾಗಿರುವಿರಿ. ಆದರೆ ನೀವು ಎಚ್ಚರ
ದಿಂದಿರಬೇಕು; ನೀವು ಭ್ರಾಂತಿಗೊಂಡು ಯೆಹೋವನು
ಹೇಳಿದ ಮಾರ್ಗವನ್ನು ಬಿಟ್ಟು ಇತರ ದೇವರುಗಳನ್ನು
17 ಅವಲಂಬಿಸಿ ಪೂಜಿಸಿದರೆ ಆತನು ನಿಮ್ಮ ಮೇಲೆ ಸಿಟ್ಟು
ಗೊಂಡು ಮಳೆಬಾರದಂತೆ ಆಕಾಶವನ್ನು ಮುಚ್ಚಿ
ಬಿಟ್ಟಾನು; ಆಗ ಭೂಮಿಯಲ್ಲಿ ಬೆಳೆಯಾಗದೆ ಯೆಹೋ
ವನು ನಿಮಗೆ ಕೊಡುವ ಆ ಉತ್ತಮದೇಶದಲ್ಲಿ ನೀವು
ಉಳಿಯದೆ ಬೇಗ ನಾಶವಾಗಿ ಹೋಗುವಿರಿ.
18 ಆದದರಿಂದ ನೀವು ಈ ನನ್ನ ಮಾತುಗಳನ್ನು
ನಿಮ್ಮ ಹೃದಯದಲ್ಲಿಯೂ ಮನಸ್ಸಿನಲ್ಲಿಯೂ ಇಟ್ಟು
ಕೊಳ್ಳಬೇಕು; ಇವುಗಳನ್ನು ಜ್ಞಾಪಕಾರ್ಥವಾಗಿ ಕೈಗೆ
ಕಟ್ಟಿಕೊಳ್ಳಬೇಕು; ಇವು ನಿಮ್ಮ ಹುಬ್ಬುಗಳ ನಡುವೆ
19 ಕಟ್ಟಿಕೊಳ್ಳುವ ಜ್ಞಾಪಕದ ಪಟ್ಟಿಯಂತಿರಬೇಕು. ನೀವು
ಮನೆಯಲ್ಲಿರುವಾಗಲೂ ಪ್ರಯಾಣದಲ್ಲಿರುವಾಗಲೂ
ಮಲಗುವಾಗಲೂ ಏಳುವಾಗಲೂ ಇವುಗಳ ವಿಷಯ
ದಲ್ಲಿ ಮಾತಾಡುತ್ತಾ ನಿಮ್ಮ ಮಕ್ಕಳಿಗೆ ಇವುಗಳನ್ನು
20 ಅಭ್ಯಾಸಮಾಡಿಸಬೇಕು. ನಿಮ್ಮ ಮನೇಬಾಗಲಿನ
ನಿಲುವುಪಟ್ಟಿಗಳಲ್ಲಿಯೂ ಹೆಬ್ಬಾಗಲುಗಳ ಮೇಲೆ
21 ಯೂ ಇವುಗಳನ್ನು ಬರೆಯಬೇಕು. ಹೀಗಾದರೆ
ಭೂಮಿಯ ಮೇಲೆ ಆಕಾಶವು ಎಷ್ಟು ಕಾಲ ನಿಂತಿ
ರುವದೋ ಅಷ್ಟು ಕಾಲ ನೀವೂ ನಿಮ್ಮ ಸಂತತಿಯವ
ರೂ ನಿಮ್ಮ ಪಿತೃಗಳಿಗೆ ಯೆಹೋವನು ಪ್ರಮಾಣ
ಪೂರ್ವಕವಾಗಿ ವಾಗ್ದಾನಮಾಡಿದ ಆ ದೇಶದಲ್ಲಿ
ಬಾಳುವಿರಿ.
22 ನಾನು ಬೋಧಿಸುವ ಈ ಧರ್ಮೋಪದೇಶವನ್ನೆಲ್ಲಾ
ನೀವು ಅನುಸರಿಸುವವರಾಗಿ ನಿಮ್ಮ ದೇವರಾದ
ಯೆಹೋವನನ್ನು ಪ್ರೀತಿಸಿ ಎಲ್ಲಾ ವಿಷಯಗಳಲ್ಲಿಯೂ
ಆತನು ಹೇಳುವ ಮಾರ್ಗದಲ್ಲೇ ನಡೆದು ಆತನನ್ನೇ
23 ಹೊಂದಿಕೊಂಡಿದ್ದರೆ ಆತನು ಆ ಜನಾಂಗಗಳನ್ನೆಲ್ಲಾ
ನಿಮ್ಮ ಎದುರಿನಿಂದ ಹೊರಡಿಸುವನು; ನಿಮಗಿಂತಲೂ
ಮಹಾಬಲಿಷ್ಠಜನಾಂಗಗಳ ದೇಶವನ್ನು ಸ್ವಾಧೀನ
24 ಮಾಡಿಕೊಳ್ಳುವಿರಿ. ನೀವು ಹೆಜ್ಜೆಯಿಡುವ ಎಲ್ಲಾ
ಸ್ಥಳಗಳೂ ನಿಮಗಾಗುವವು; ಅರಣ್ಯ ಮೊದಲು
ಗೊಂಡು ಲೆಬನೋನ್ ಪರ್ವತದ ವರೆಗೂ ಮತ್ತು
ಯೂಫ್ರೇಟೀಸ ನದಿಯಿಂದ ಪಶ್ಚಿಮಸಮುದ್ರದ ವರೆಗೂ
25 ನಿಮ್ಮ ಸೀಮೆ ವ್ಯಾಪಿಸುವದು. ಯಾರೂ ನಿಮ್ಮ
ಮುಂದೆ ನಿಲ್ಲುವದಿಲ್ಲ. ತಾನು ನಿಮಗೆ ಹೇಳಿದಂತೆ
ನೀವು ಕಾಲಿಡುವ ಎಲ್ಲಾ ಪ್ರದೇಶಗಳ ಜನಗಳಿಗೂ
ನಿಮ್ಮಿಂದ ದಿಗಿಲೂ ಹೆದರಿಕೆಯೂ ಉಂಟಾಗುವಂತೆ
ನಿಮ್ಮ ದೇವರಾದ ಯೆಹೋವನು ಮಾಡುವನು.
26 ನೋಡಿರಿ, ಈ ಹೊತ್ತು ನಾನು ಆಶೀರ್ವಾದವನ್ನೂ
ಶಾಪವನ್ನೂ ನಿಮ್ಮ ಮುಂದೆ ಇಡುತ್ತಾ ಇದ್ದೇನೆ.
27 ನಾನು ಈಗ ನಿಮಗೆ ಬೋಧಿಸುವ ನಿಮ್ಮ ದೇವ
ರಾದ ಯೆಹೋವನ ಆಜ್ಞೆಗಳಿಗೆ ನೀವು ವಿಧೇಯರಾಗಿ
28 ನಡೆದರೆ ಆಶೀರ್ವಾದವೂ ಈ ಆಜ್ಞೆಗಳಿಗೆ ವಿಧೇಯ
ರಾಗದೆ ನಾನು ಈಗ ಬೋಧಿಸುವ ಮಾರ್ಗವ
ಬಿಟ್ಟು ನಿಮಗೆ ಗೊತ್ತಿಲ್ಲದ ಇತರ ದೇವರುಗಳ
ಅವಲಂಬಿಸಿದರೆ ಶಾಪವೂ ನಿಮಗುಂಟಾಗುವವು.

ನೀವು ಸ್ವಾಧೀನಮಾಡಿಕೊಳ್ಳುವದಕ್ಕೆ ಹೋಗು ಆ ದೇಶಕ್ಕೆ ನಿಮ್ಮ ದೇವರಾದ ಯೆಹೋವನು ನಿ ನ್ನು ಸೇರಿಸಿದನಂತರ ನೀವು ಗೆರಿಜ್ಜೀಮ್ ಬೆಟ್ಟ ಮೇಲೆ ಆಶೀರ್ವಾದವನ್ನೂ ಏಬಾಲ್ ಬೆಟ್ಟದ ಮೇ ಶಾಪವನ್ನೂ ಪ್ರಕಟಿಸಬೇಕು. ಆ ಬೆಟ್ಟಗಳು ಯ ರ್ದನ್ ಹೊಳೆಯ ಆಚೆ, ಪಡುವಣ ದಾರಿ ಪಶ್ಚಿಮದಲ್ಲಿ ಕಾನಾನ್ಯರು ವಾಸಿಸುವ ಅರಾಬಾ ಪ್ರದೇ ದಲ್ಲಿ ಗಿಲ್ಗಾಲಿಗೆ ಎದುರಾಗಿ ಮೋರೆ ಎಂಬ ವೃಕ್ಷ ಬಳಿಯಲ್ಲಿ ಅವೆ.

ನಿಮ್ಮ ದೇವರಾದ ಯೆಹೋವನು ನಿಮಗೆ ಕೊಡು ದೇಶವನ್ನು ಸ್ವಾಧೀನಮಾಡಿಕೊಳ್ಳುವದಕ್ಕೆ ನೀ ಯೊರ್ದನ್ ಹೊಳೆಯನ್ನು ದಾಟುತ್ತೀರಲ್ಲಾ. ನೀ ಆ ದೇಶವನ್ನು ಸ್ವಾಧೀನಮಾಡಿಕೊಂಡು ಅದರ ವಾಸಮಾಡುವಾಗ ನಾನು ಈಗ ನಿಮಗೆ ತಿಳಿಸು ಎಲ್ಲಾ ಆಜ್ಞಾವಿಧಿಗಳನ್ನು ಅನುಸರಿಸಿ ನಡೆಯು ಬೇಕು.

### ನಿಬಂಧನಗ್ರಂಥವೆನಿಸಿಕೊಳ್ಳುವ ಧರ್ಮಶಾಸ್ತ್ರನಿಯಮಗಳ ವಿವರಣೆ. 12. 1—26. 15.

ಕಾನಾನ್ಯರ ಪೂಜಾಸ್ಥಳಗಳನ್ನೆಲ್ಲಾ ನಾಶಮಾಡಿ ಯೆಹೋವ ಆರಾಧನೆಗೋಸ್ಕರ ಒಂದೇ ಸ್ಥಳದಲ್ಲಿ ಕೂಡಬೇಕೆಂಬದು.

ನಿಮ್ಮ ಪಿತೃಗಳ ದೇವರಾದ ಯೆಹೋವನು ನಿಮಗೆ ಸ್ವದೇಶವಾಗುವದಕ್ಕೆ ಕೊಡುವ ದೇಶದಲ್ಲಿ ನೀವು ಭೂಮಿಯ ಮೇಲಿರುವ ದಿನಗಳಲ್ಲೆಲ್ಲಾ ಅನುಸ ಬೇಕಾದ ಆಜ್ಞಾವಿಧಿಗಳು ಇವೇ—

ನೀವು ಸ್ವಾಧೀನಮಾಡಿಕೊಳ್ಳುವ ದೇಶದ ಜನಾ ಗಳು ದೊಡ್ಡ ಬೆಟ್ಟಗಳ ಮೇಲೆಯೂ ದಿನ್ನೆಗ ಮೇಲೆಯೂ ಹರಡಿಕೊಂಡ ಮರಗಳ ಕೆಳಗೆಯ ತಮ್ಮ ದೇವರುಗಳನ್ನು ಆರಾಧಿಸುತ್ತಾರಷ್ಟೆ; ಆ ಸ್ಥ ಗಳನ್ನೆಲ್ಲಾ ನೀವು ಅಗತ್ಯವಾಗಿ ನಾಶಮಾಡಬೇ ಅವರ ಬಲಿಪೀಠಗಳನ್ನು ಕೆಡವಿ ಅವರ ಕಲ್ಲುಕಂ ಗಳನ್ನು ಒಡೆದು ಅಶೇರವೆಂಬ ವಿಗ್ರಹಸ್ತಂಭಗಳನ ಸುಟ್ಟು ಅವರ ದೇವತಾಪ್ರತಿಮೆಗಳನ್ನು ಕಡಿ ಬಿಟ್ಟು ಆ ದೇವರುಗಳ ಹೆಸರೇ ಉಳಿಯದಂತೆ ಮಾ ಬಿಡಬೇಕು.

ಅವರ ರೀತಿಯಲ್ಲಿ ನೀವು ನಿಮ್ಮ ದೇವರಾದ ಯ ಹೋವನನ್ನು ಪೂಜಿಸಬಾರದು. ನಿಮ್ಮ ದೇವರಾ ಯೆಹೋವನು ತನ್ನ ಹೆಸರನ್ನು ಸ್ಥಾಪಿಸಿಕೊಳ್ಳುವ ಕ್ಕೂ ತಾನು ವಾಸಮಾಡುವದಕ್ಕೂ ನಿಮ್ಮ ಎಲ್ಲಾ ಕು ಗಳೊಳಗಿಂದ ಆದುಕೊಳ್ಳುವ ಸ್ಥಳದಲ್ಲೇ ನೀವು ಆತ ದರ್ಶನಕ್ಕಾಗಿ ಕೂಡಬೇಕು. ಆ ಸ್ಥಳಕ್ಕೆ ಮಾ ನೀವು ಸಮರ್ಪಿಸುವ ಸರ್ವಾಂಗಹೋಮಗಳೇ ಮು ತಾದ ಯಜ್ಞಗಳ ಪಶುಗಳನ್ನೂ ನಿಮ್ಮ ಬೆಳೆ ಲ್ಲಿ ದಶಮಾಂಶವನ್ನೂ ಯಾಜಕರಿಗೋಸ್ಕರ ಪ್ರತ್ಯೆ ಕಿಸುವ ಪದಾರ್ಥಗಳನ್ನೂ ಹರಕೆಮುಡುಪುಗ

ನ್ನೂ ಕಾಣಿಕೆಗಳನ್ನೂ ದನಕುರಿಗಳ ಚೊಚ್ಚಲುಮರಿಗಳನ್ನೂ ತಂದು ಅಲ್ಲಿಯೇ ಆತನ ಸನ್ನಿಧಿಯಲ್ಲಿ ಊಟಮಾಡಿ ನಿಮ್ಮ ದೇವರಾದ ಯೆಹೋವನು ನಿಮ್ಮ ಪ್ರಯತ್ನಗಳನ್ನು ಕೈಗೂಡುವಂತೆ ಮಾಡಿದ್ದಕ್ಕಾಗಿ ನೀವೂ ನಿಮ್ಮ ಮನೆಗಳವರೂ ಸಂತೋಷದಿಂದಿರಬೇಕು.

ನಾವು ಈಗ ಈ ಸ್ಥಳದಲ್ಲಿ ನಡೆಯುವಂತೆ ಎಲ್ಲರೂ ತಮ್ಮ ತಮ್ಮ ಮನಸ್ಸಿಗೆ ತೋರಿದಂತೆ ನಡೆಯಕೂಡದು; ನಿಮ್ಮ ದೇವರಾದ ಯೆಹೋವನು ನಿಮಗೆ ಕೊಡುವ ಸ್ವಾಸ್ತ್ಯಕ್ಕೆ ಸೇರಿ ನೀವು ಇನ್ನು ವಿಶ್ರಾಂತಿ ಹೊಂದಲಿಲ್ಲವಲ್ಲಾ. ಆದರೆ ನೀವು ಯೊರ್ದನ್ ಹೊಳೆಯನ್ನು ದಾಟಿ ನಿಮ್ಮ ದೇವರಾದ ಯೆಹೋವನು ನಿಮಗೆ ಸ್ವಾಸ್ತ್ಯವಾಗಿ ಕೊಡುವ ಆ ದೇಶದಲ್ಲಿ ಮನೆಮಾಡಿಕೊಂಡಿರುವಾಗ ನಿಮ್ಮ ಸುತ್ತಲು ಶತ್ರುಗಳು ಯಾರೂ ಇಲ್ಲದಂತೆ ಯೆಹೋವನು ಮಾಡಿದ್ದರಿಂದ ನೀವು ನಿರ್ಭಯವಾಗಿರುವ ಕಾಲದಲ್ಲಿ ನಾನು ನಿಮಗೆ ಆಜ್ಞಾಪಿಸಿದ ಎಲ್ಲಾ ಕಾಣಿಕೆಗಳನ್ನು ಅಂದರೆ ಸರ್ವಾಂಗಹೋಮಗಳೇ ಮುಂತಾದ ಯಜ್ಞಪಶುಗಳನ್ನೂ ಬೆಳೆಯ ದಶಮಾಂಶಗಳನ್ನೂ ಯೆಹೋವನಿಗೋಸ್ಕರ ಪ್ರತ್ಯೇಕಿಸುವ ಪದಾರ್ಥಗಳನ್ನೂ ಹರಕೆಮಾಡಿದ ವಿಶೇಷವಾದ ಕಾಣಿಕೆಗಳನ್ನೂ ಇವುಗಳನ್ನೆಲ್ಲಾ ನಿಮ್ಮ ದೇವರಾದ ಯೆಹೋವನು ತನ್ನ ಹೆಸರನ್ನು ಸ್ಥಾಪಿಸುವದಕ್ಕೆ ಆದುಕೊಳ್ಳುವ ಸ್ಥಳಕ್ಕೇ ತಂದು ನೀವೂ ನಿಮ್ಮ ಗಂಡುಹೆಣ್ಣು ಮಕ್ಕಳೂ ದಾಸದಾಸಿಯರೂ ನಿಮ್ಮೊಡನೆ ಸ್ವಾಸ್ತ್ಯವನ್ನು ಹೊಂದದೆ ಇರುವ ನಿಮ್ಮ ಊರಿನ ಲೇವಿಯರೂ ನಿಮ್ಮ ದೇವರಾದ ಯೆಹೋವನ ಸನ್ನಿಧಿಯಲ್ಲಿ ಸಂತೋಷವಾಗಿರಬೇಕು.

ನೀವು ಕಂಡ ಕಂಡ ಸ್ಥಳಗಳಲ್ಲಿ ಸರ್ವಾಂಗಹೋಮಗಳನ್ನು ಸಮರ್ಪಿಸಬಾರದು, ನೋಡಿಕೊಳ್ಳಿರಿ. ನಿಮ್ಮ ಕುಲಗಳಲ್ಲಿ ಯಾವದೋ ಒಂದು ಕುಲದಲ್ಲಿ ಯೆಹೋವನು ಆದುಕೊಳ್ಳುವ ಸ್ಥಳದಲ್ಲೇ ನಿಮ್ಮ ಸರ್ವಾಂಗಹೋಮಗಳನ್ನು ಸಮರ್ಪಿಸಬೇಕು; ಅಲ್ಲಿಯೇ ನಾನು ಆಜ್ಞಾಪಿಸುವ ಎಲ್ಲಾ ಆಚಾರಗಳನ್ನು ನಡಿಸಬೇಕು. ಆದರೆ ನೀವು ಎಲ್ಲಾ ಊರುಗಳಲ್ಲಿಯೂ ನಿಮ್ಮ ದೇವರಾದ ಯೆಹೋವನು ನಿಮ್ಮನ್ನು ಅಭಿವೃದ್ಧಿಪಡಿಸಿದ ಮೇರೆಗೆ ಪಶುಗಳನ್ನು ಇಷ್ಟಾನುಸಾರವಾಗಿ ಕೊಯಿದು ಊಟಮಾಡಬಹುದು. ಶುದ್ಧರೂ ಅಶುದ್ಧರೂ ಜಿಂಕೆದುಪ್ಪಿಗಳ ಮಾಂಸವನ್ನು ತಿನ್ನುವ ಪ್ರಕಾರ ಇವುಗಳನ್ನೂ ತಿನ್ನಬಹುದು. ರಕ್ತವನ್ನು ಮಾತ್ರ ಭುಜಿಸಬಾರದು; ಅದನ್ನು ನೀರಿನಂತೆ ಭೂಮಿಯ ಮೇಲೆ ಸುರಿದುಬಿಡಬೇಕು.

ಧಾನ್ಯ, ದ್ರಾಕ್ಷೆ, ಎಣ್ಣೇಕಾಯಿ ಈ ಬೆಳೆಗಳ ದಶಮಾಂಶಗಳನ್ನೂ ದನಕುರಿಗಳ ಚೊಚ್ಚಲುಮರಿಗಳನ್ನೂ ಹರಕೆಮಾಡಿದ ಪದಾರ್ಥಗಳನ್ನೂ ಕಾಣಿಕೆಗಳನ್ನೂ ಯಾಜಕರಿಗೋಸ್ಕರ ಪ್ರತ್ಯೇಕಿಸಿದ ಪದಾರ್ಥಗಳನ್ನೂ ನಿಮ್ಮ ನಿಮ್ಮ ಊರುಗಳಲ್ಲಿ ತಿನ್ನಬಾರದು. ನಿಮ್ಮ ದೇವರಾದ ಯೆಹೋವನು ಆದುಕೊಳ್ಳುವ ಸ್ಥಳದಲ್ಲೇ ಆತನ ಸನ್ನಿಧಿಯಲ್ಲಿ ಅವುಗಳನ್ನು ಊಟಮಾಡಬೇಕು. ನಿಮ್ಮ ಎಲ್ಲಾ ಪ್ರಯತ್ನಗಳು ಕೈಗೂಡಿದ್ದಕ್ಕಾಗಿ, ನೀವು ನಿಮ್ಮ ದೇವರಾದ ಯೆಹೋವನ ಸನ್ನಿಧಿ

ಯಲ್ಲಿ ಸಂತೋಷದಿಂದಿದ್ದು ನೀವೂ ನಿಮ್ಮ ಗಂಡು
ಹೆಣ್ಣು ಮಕ್ಕಳೂ ಆಳುಗಳೂ ನಿಮ್ಮ ಊರಲ್ಲಿರುವ
ಲೇವಿಯರೂ ಇಂಥವುಗಳನ್ನು ಊಟಮಾಡಬೇಕು.
ನೀವು ನಿಮ್ಮ ದೇಶದಲ್ಲಿ ಇರುವ ತನಕ ಲೇವಿಯರನ್ನು 19
ಕೈಬಿಡಬಾರದು; ಜ್ಞಾಪಕವಿರಲಿ.

ನಿಮ್ಮ ದೇವರಾದ ಯೆಹೋವನು ನಿಮಗೆ ವಾಗ್ದಾನ 20
ಮಾಡಿದಂತೆ ನಿಮ್ಮ ರಾಜ್ಯವನ್ನು ವಿಸ್ತರಿಸಿದಾಗ ನೀವು
ಮಾಂಸಾಹಾರವನ್ನು ಮಾಡುವದಕ್ಕೆ ಇಷ್ಟಪಟ್ಟರೆ
ಮಾಡಬಹುದು. ನಿಮ್ಮ ದೇವರಾದ ಯೆಹೋವನು 21
ತನ್ನ ಹೆಸರನ್ನು ಸ್ಥಾಪಿಸಿಕೊಳ್ಳುವದಕ್ಕಾಗಿ ಆದು
ಕೊಂಡ ಸ್ಥಳವು ನಿಮಗೆ ದೂರವಾದರೆ ಆತನು ನಿಮಗೆ
ಅನುಗ್ರಹಿಸಿದ ದನಕುರಿಗಳಲ್ಲಿ ಬೇಕಾದಷ್ಟನ್ನು ನಾನು
ಅಪ್ಪಣೆಕೊಟ್ಟ ಮೇರೆಗೆ ನೀವು ಕೊಯಿದು ನಿಮ್ಮ
ಊರಲ್ಲೇ ಊಟಮಾಡಬಹುದು. ಜಿಂಕೆದುಪ್ಪಿಗಳನ್ನು 22
ಶುದ್ಧರೂ ಅಶುದ್ಧರೂ ತಿನ್ನುವ ಪ್ರಕಾರ ದನಕುರಿ
ಗಳನ್ನೂ ತಿನ್ನಬಹುದು.

ಆದರೆ ರಕ್ತವು ಜೀವಾಧಾರವಾದದರಿಂದ ಮಾಂಸ 23
ದೊಡನೆ ರಕ್ತವನ್ನು ಭುಜಿಸಲೇ ಕೂಡದೆಂಬದನ್ನು
ಜ್ಞಾಪಕದಲ್ಲಿಡಿರಿ. ಪಶುಮಾಂಸದೊಡನೆ ಅದರ ಜೀ
ವಾಧಾರವಾದದ್ದನ್ನೂ ತಿನ್ನಬಾರದಷ್ಟೆ; ಅದನ್ನು ಭುಜಿ 24
ಸದೆ ನೀರಿನಂತೆ ಭೂಮಿಯ ಮೇಲೆ ಸುರಿದುಬಿಡ
ಬೇಕು. ನೀವು ಅದನ್ನು ಭುಜಿಸದೆ ಯೆಹೋವನಿಗೆ 25
ಮೆಚ್ಚಿಗೆಯಾಗಿರುವದನ್ನು ನಡಿಸಿದರೆ ನಿಮಗೂ ನಿಮ್ಮ
ಸಂತತಿಯವರಿಗೂ ಶುಭವುಂಟಾಗುವದು.

ಆದರೆ ನಿಮ್ಮ ಬಳಿಯಲ್ಲಿರುವ ದೇವರ ವಸ್ತು 26
ಗಳನ್ನೂ ಹರಕೆಮಾಡಿದ್ದನ್ನೂ ಯೆಹೋವನು ಆದು
ಕೊಂಡ ಸ್ಥಳಕ್ಕೇ ತೆಗೆದುಕೊಂಡು ಹೋಗಬೇಕು.
ಸರ್ವಾಂಗಹೋಮಗಳನ್ನು ಸಮರ್ಪಿಸುವಾಗ ರಕ್ತ 27
ಮಾಂಸಗಳೆರಡನ್ನೂ ನಿಮ್ಮ ದೇವರಾದ ಯೆಹೋವನ
ಯಜ್ಞವೇದಿಯಲ್ಲಿ ದಹಿಸಿಬಿಡಬೇಕು. [ಸಮಾಧಾನ]
ಯಜ್ಞಗಳನ್ನು ಮಾಡುವಾಗ ರಕ್ತವನ್ನು ಆತನ ಯಜ್ಞ
ವೇದಿಯ ಮೇಲೆ ಸುರಿದುಬಿಟ್ಟು ಮಾಂಸವನ್ನು ಊಟ
ಮಾಡಬೇಕು.

ನಾನು ಬೋಧಿಸುವ ಈ ಎಲ್ಲಾ ಆಜ್ಞೆಗಳಿಗೆ ನೀವು 28
ಚೆನ್ನಾಗಿ ಕಿವಿಗೊಟ್ಟು ಅವುಗಳನ್ನು ಅನುಸರಿಸಿ ನಿಮ್ಮ
ದೇವರಾದ ಯೆಹೋವನಿಗೆ ಒಳ್ಳೇದೂ ಯುಕ್ತವೂ ಆಗಿ
ರುವದನ್ನು ಮಾಡಿದರೆ ನಿಮಗೂ ನಿಮ್ಮ ಸಂತತಿಯವ
ರಿಗೂ ಸದಾಕಾಲ ಶುಭವುಂಟಾಗುವದು.

ಇತರ ದೇವರುಗಳನ್ನು ಎಷ್ಟು ಮಾತ್ರವೂ
ಆರಾಧಿಸಬಾರದೆಂಬ ವಿಧಿ.

ನೀವು ಸ್ವಾಧೀನಮಾಡಿಕೊಳ್ಳುವದಕ್ಕೆ ಹೋಗುವ 29
ದೇಶದ ಜನಾಂಗಗಳನ್ನು ನಿಮ್ಮ ದೇವರಾದ ಯೆಹೋ
ವನು ನಿಮ್ಮ ಮುಂದೆ ನಾಶಮಾಡಿದ ತರುವಾಯ
ನೀವು ಅವರ ದೇಶವನ್ನು ತೆಗೆದುಕೊಂಡು ಅದರಲ್ಲಿ
ವಾಸವಾಗಿರುವಾಗ ನೀವು ಭ್ರಮೆಗೊಂಡು ನಿಮ್ಮ 30
ಎದುರಿನಿಂದ ನಾಶವಾಗಿ ಹೋದವರ ದುಷ್ಪದ್ಧತಿ
ಗಳನ್ನು ಅನುಸರಿಸಬಾರದು ನೋಡಿರಿ. ನೀವು—
ಈ ದೇಶದ ಜನರು ತಮ್ಮ ದೇವರುಗಳನ್ನು ಹೇಗೆ

ಸೇವಿಸುತ್ತಿದ್ದರು? ಹಾಗೆಯೇ ನಾವೂ ಸೇವಿಸುವೆವು
ಎಂದು ಹೇಳಿಕೊಳ್ಳುವವರಾಗಿ ಅವರ ದೇವರುಗಳ
ವಿಷಯದಲ್ಲಿ ವಿಚಾರಣೆಯನ್ನು ಎಷ್ಟು ಮಾತ್ರವೂ
31 ಮಾಡಬಾರದು. ಯೆಹೋವನಿಗೆ ಅಸಹ್ಯವಾಗಿರುವ
ಹಲವು ಹೇಸಿಗೆಕೆಲಸಗಳನ್ನು ಅವರು ತಮ್ಮ ದೇವತೆ
ಗಳಿಗೋಸ್ಕರ ನಡಿಸುತ್ತಾರಲ್ಲಾ; ತಮ್ಮ ಗಂಡು ಹೆಣ್ಣು
ಮಕ್ಕಳನ್ನು ತಮ್ಮ ದೇವತೆಗಳಿಗೋಸ್ಕರ ಬೆಂಕಿಯಲ್ಲಿ
ಸುಡುತ್ತಾರಲ್ಲಾ. ನೀವು ನಿಮ್ಮ ದೇವರಾದ ಯೆಹೋ
ವನನ್ನು ಹಾಗೆ ಸೇವಿಸಲೇ ಬಾರದು.
32 ನಾನು ನಿಮಗೆ ಆಜ್ಞಾಪಿಸುವದನ್ನೆಲ್ಲಾ ನೀವು
ಅನುಸರಿಸಲೇ ಬೇಕು; ಅದಕ್ಕೆ ಏನೂ ಕೂಡಿಸಬಾ
ರದು; ಅದರಿಂದ ಏನೂ ತೆಗೆದುಬಿಡಬಾರದು.

13 ಯಾವ ಪ್ರವಾದಿಯಾಗಲಿ ಕನಸುಕಂಡವನಾಗಲಿ
ನಿಮ್ಮ ಮಧ್ಯದಲ್ಲಿ ಬಂದು ನಿಮಗೆ ಗೊತ್ತಿಲ್ಲದ
2 ಇತರ ದೇವರುಗಳನ್ನು ಸೂಚನೆಮಾಡಿ—ಈ ದೇವತೆ
ಗಳನ್ನು ಅವಲಂಬಿಸಿ ಸೇವಿಸೋಣ ಎಂದು ಬೋಧಿ
ಸುತ್ತಾ ಆ ಬೋಧನೆಯನ್ನು ಸ್ಥಾಪಿಸುವದಕ್ಕೆ ಒಂದು
ಅದ್ಭುತವನ್ನಾಗಲಿ ಮಹತ್ಕಾರ್ಯವನ್ನಾಗಲಿ ತೋರಿಸಿ
ಕೊಡುತ್ತೇನೆಂದು ಹೇಳಲು ಅವನು ಹೇಳಿದಂತೆಯೇ
3 ನಡೆದರೂ ನೀವು ಅವನ ಮಾತಿಗೆ ಕಿವಿಗೊಡ
ಬಾರದು. ನಿಮ್ಮ ದೇವರಾದ ಯೆಹೋವನು—
ಇವರು ಸಂಪೂರ್ಣ ಹೃದಯದಿಂದಲೂ ಮನಸ್ಸಿನಿಂದ
ಲೂ ತನ್ನನ್ನೇ ಪ್ರೀತಿಸುವವರು; ಹೌದೋ ಅಲ್ಲವೋ
ಎಂಬದನ್ನು ತಿಳಿದುಕೊಳ್ಳುವದಕ್ಕೆ ನಿಮ್ಮನ್ನು ಪರೀಕ್ಷಿ
4 ಸುತ್ತಾನೆ. ಆತನು ಹೇಳುವ ಮಾರ್ಗದಲ್ಲೇ ನೀವು
ನಡೆದು ಆತನಲ್ಲಿಯೇ ಭಯಭಕ್ತಿಯುಳ್ಳವರಾಗಿ
ಆತನ ಆಜ್ಞೆಗಳನ್ನೇ ಅನುಸರಿಸಿ ಆತನಿಗೇ ವಿಧೇಯ
ರಾಗಿ ಆತನನ್ನೇ ಸೇವಿಸುತ್ತಾ ಹೊಂದಿಕೊಂಡಿರಬೇಕು.
5 ಆ ಪ್ರವಾದಿಗೆ ಅಥವಾ ಆ ಕನಸುಕಂಡವನಿಗೆ ಮರಣ
ಶಿಕ್ಷೆಯಾಗಬೇಕು. ದಾಸತ್ವದಲ್ಲಿದ್ದ ನಿಮ್ಮನ್ನು ಬಿಡು
ಗಡೆಮಾಡಿ ಐಗುಪ್ತದೇಶದೊಳಗಿಂದ ಕರತಂದ ನಿಮ್ಮ
ದೇವರಾದ ಯೆಹೋವನಿಗೆ ವಿರೋಧವಾಗಿ ಅವನು
ದ್ರೋಹದ ಮಾತುಗಳನ್ನಾಡಿ ನಿಮ್ಮ ದೇವರಾದ
ಯೆಹೋವನು ಹೇಳಿದ ಮಾರ್ಗದಿಂದ ನಿಮ್ಮನ್ನು ತಪ್ಪಿ
ಸಬೇಕೆಂದಿದ್ದನಲ್ಲಾ. ಅವನನ್ನು ಕೊಲ್ಲಿಸಿ ಆ ದುಷ್ಟ
ತ್ವವನ್ನು ನಿಮ್ಮ ಮಧ್ಯದಿಂದ ತೆಗೆದುಹಾಕಬೇಕು.
6 ಒಡಹುಟ್ಟಿದ ಅಣ್ಣತಮ್ಮಂದಿರಾಗಲಿ ಮಗನಾಗಲಿ
ಮಗಳಾಗಲಿ ಪ್ರಾಣಪ್ರಿಯಳಾದ ಹೆಂಡತಿಯಾಗಲಿ
ಆಪ್ತಮಿತ್ರನಾಗಲಿ ನಿಮಗಾದರೂ ನಿಮ್ಮ ಪಿತೃಗಳಿ
ಗಾದರೂ ಗೊತ್ತಿಲ್ಲದ ಇತರ ದೇವರುಗಳನ್ನು ಸೂಚಿ
ಸಿ—ಆ ದೇವರುಗಳನ್ನು ಸೇವಿಸೋಣ ಬನ್ನಿ ಎಂದು
7 ಅಂತರಂಗದಲ್ಲಿ ನಿಮಗೆ ಬೋಧಿಸಿದರೆ ಆ ದೇವರು
ಗಳು ಹತ್ತಿರವಿರುವ ಜನಾಂಗಗಳ ದೇವರುಗಳಾದ
ರೂ ದೂರವಾದವರ ದೇವರುಗಳಾದರೂ ಭೂ
ಲೋಕದ ಯಾವ ಭಾಗದವರ ದೇವರುಗಳಾದರೂ
8 ನೀವು ಸಮ್ಮತಿಸಲೂ ಬಾರದು ಕಿವಿಗೊಡಲೂ
ಬಾರದು. ಅವನನ್ನು ಕನಿಕರಿಸಕೂಡದು, ತಪ್ಪಿಸ
9 ಕೂಡದು, ಬಚ್ಚಿಡಕೂಡದು; ಕೊಲ್ಲಿಸಲೇಬೇಕು. ಆ
ಶಿಕ್ಷೆಯನ್ನು ನಡಿಸುವಾಗ ತಪ್ಪುಕಂಡವನೇ ಮೊದಲು ಕೈ
10 ಹಾಕಬೇಕು; ತರುವಾಯ ಜನರೆಲ್ಲರೂ ಹಾಕಲಿ. ದಾಸ
ತ್ವದಲ್ಲಿದ್ದ ನಿಮ್ಮನ್ನು ಬಿಡುಗಡೆಮಾಡಿ ಐಗುಪ್ತದೇ
ದೊಳಗಿಂದ ಕರತಂದ ನಿಮ್ಮ ದೇವರಾದ ಯೆಹೋ
ವನ ಆಶ್ರಯದಿಂದ ಅವನು ನಿಮ್ಮನ್ನು ತಪ್ಪಿಸಬೇಕೆ
ದಿದ್ದದರಿಂದ ಅವನನ್ನು ಕಲ್ಲೆಸೆದು ಕೊಲ್ಲಲೇ ಬೇಕ
ಇದನ್ನು ಇಸ್ರಾಯೇಲ್ಯರೆಲ್ಲರೂ ಕೇಳಿ ಭಯಪಟ
ಅಂಥ ದುಷ್ಕಾರ್ಯವನ್ನು ಅಲ್ಲಿಂದ ಮುಂದೆ ನ
ಡದೆ ಇರುವರು.
ನಿಮ್ಮ ದೇವರಾದ ಯೆಹೋವನು ನಿಮ್ಮ ನಿವಾ
ಕ್ಕಾಗಿ ಕೊಡುವ ಯಾವದಾದರೂ ಒಂದು ಊರಿ
ವಿಷಯದಲ್ಲಿ—ಅಲ್ಲಿ ವಾಸವಾಗಿರುವ ಇಸ್ರಾಯೇ
ರಲ್ಲಿ ಕೆಲವು ಮಂದಿ ದುಷ್ಟರು ನಿಮಗೆ ಗೊತ್ತಿಲ್ಲ
ಇತರ ದೇವರುಗಳನ್ನು ತಮ್ಮ ಊರಿನವರಿಗೆ ಸೂ
ಸಿ—ಆ ದೇವರುಗಳನ್ನು ಸೇವಿಸೋಣ ಬನ್ನಿ ಎಂದ
ಹೇಳಿ ಅವರನ್ನು ಸನ್ಮಾರ್ಗದಿಂದ ತಪ್ಪಿಸಿದ್ದಾರೆಂ
ಸುದ್ದಿಯನ್ನು ನೀವು ಕೇಳಿದರೆ ಆ ಸಂಗತಿಯನ
ಚೆನ್ನಾಗಿ ವಿಚಾರಿಸಿ ತಿಳಿದುಕೊಳ್ಳಬೇಕು. ಅಂ
ಅಸಹ್ಯಕಾರ್ಯವು ಇಸ್ರಾಯೇಲ್ಯರಲ್ಲಿ ನಡೆದದ್ದು ನಿ
ವೆಂದು ತಿಳಿದುಬಂದರೆ ಆ ಊರನ್ನು ಸಂಪೂರ್ಣವಾ
ಹಾಳುಮಾಡಿ ಅದರಲ್ಲಿರುವ ಎಲ್ಲಾ ಜನರನ್ನೂ ದ
ಗಳನ್ನೂ ಕತ್ತಿಯಿಂದ ಸಂಹರಿಸಿಬಿಡಬೇಕು. ಅದ
ಲ್ಲಿರುವ ಎಲ್ಲಾ ಸಾಮಾನುಗಳನ್ನು ಗ್ರಾಮಮಧ್ಯದ
ಕೂಡಿಸಿ ಊರನ್ನೂ ಅದರಲ್ಲಿರುವ ಎಲ್ಲಾ ಸಾಮಾನ
ಗಳನ್ನೂ ನಿಮ್ಮ ದೇವರಾದ ಯೆಹೋವನಿಗೋಸ್ಕ
ನಿಶ್ಶೇಷವಾಗಿ ಸುಟ್ಟುಬಿಡಬೇಕು. ಅದು ತಿರಿಗಿ ಕಟ
ಲ್ಪಡದೆ ಯಾವಾಗಲೂ ಹಾಳುದಿಬ್ಬವಾಗಿರಬೇಕ
ಕೇವಲ ಯೆಹೋವನಿಗೇ ಆಗಲಿ ಎಂದು ನೀವು 17
ಗೊತ್ತುಮಾಡಿದ್ದರಲ್ಲಿ ಸ್ವಲ್ಪವನ್ನಾದರೂ ತೆಗೆದುಕೊ
ಬಾರದು. ನೀವು ಹೀಗೆ ನಡೆದು ನಿಮ್ಮ ದೇವರಾ
ಯೆಹೋವನ ಮಾತಿಗೆ ಕಿವಿಗೊಟ್ಟು ನಾನು ಈಗ ನಿಮ
ಬೋಧಿಸುವ ಆತನ ಎಲ್ಲಾ ಆಜ್ಞೆಗಳನ್ನು ಕೈಕೊಂಡ
ಆತನ ದೃಷ್ಟಿಗೆ ಸರಿಯಾದದ್ದನ್ನು ಮಾಡಿದರೆ ಆತನ
ರೋಷಾಗ್ನಿಯನ್ನು ಬಿಟ್ಟು ನಿಮಗೆ ದಯೆಯನ್ನು ತೋ
ರಿಸಿ ನಿಮ್ಮನ್ನು ಕರುಣಿಸಿ ತಾನು ನಿಮ್ಮ ಪಿತೃಗಳಿ
ವಾಗ್ದಾನಮಾಡಿದಂತೆ ನಿಮ್ಮ ಸಂತತಿಯನ್ನು ಹೆಚ್ಚ
ಸುವನು.

ಇಸ್ರಾಯೇಲ್ಯರು ದೇವಜನರಾದದರಿಂದ ದುರಾಚಾರಗಳನ್ನು
ನಡಿಸಬಾರದು, ಅಶುದ್ಧವಾದದ್ದನ್ನು ತಿನ್ನಬಾರದು ಎಂಬ ವಿಧಿ

ನೀವು ನಿಮ್ಮ ದೇವರಾಗಿರುವ ಯೆಹೋವನ
ಮಕ್ಕಳಾಗಿರುವದರಿಂದ ಸತ್ತವರಿಗೋಸ್ಕರ ದೇಹ
ವನ್ನು ಗಾಯಮಾಡಿಕೊಳ್ಳಬಾರದು; ಮುಂದಲೆಯನ
ಬೋಳಿಸಿಕೊಳ್ಳಲೂ ಬಾರದು. ಯಾಕಂದರೆ ನೀ
ಕೇವಲ ನಿಮ್ಮ ದೇವರಾದ ಯೆಹೋವನ ಜನರೇ
ಆತನು ಭೂಲೋಕದಲ್ಲಿರುವ ಸಮಸ್ತಜನಾಂಗ
ಳಲ್ಲಿ ನಿಮ್ಮನ್ನೇ ಸ್ವಕೀಯಜನರಾಗುವದಕ್ಕೆ ಆದ
ಕೊಂಡಿದ್ದಾನಲ್ಲಾ.
ನಿಷಿದ್ಧವಾಗಿರುವ ಯಾವದನ್ನೂ ನೀವು ತಿನ್ನ
ಕೂಡದು. ನೀವು ತಿನ್ನಬಹುದಾದ ಪಶುಜಾತಿಗಳ
ಯಾವವೆಂದರೆ—ದನ, ಕುರಿ, ಆಡು, ದುಪ್ಪಿ, ಜಿಂಕೆ

ಸಾರಂಗ, ಕಾಡುಮೇಕೆ, ಚಿಗರಿ, ಕಡವೆ, ಕೊಂಡಗುರಿ
ಎಂಬಿವುಗಳೇ. ಯಾವ ಪ್ರಾಣಿಯ ಕಾಲ್ಗೊರಸು ಸೀಳಿ
ದೆಯೋ ಅದು ಮೆಲಕುಹಾಕುವಂಥದಾದರೆ ಅದರ
ಮಾಂಸವನ್ನು ತಿನ್ನಬಹುದು. ಆದರೆ ಯಾವ ಪ್ರಾಣಿ
ಯು ಮೆಲಕುಹಾಕಿದರೂ ಗೊರಸು ಸೀಳಿರುವದಿಲ್ಲ
ವೋ ಮತ್ತು ಯಾವ ಪ್ರಾಣಿಯು ಗೊರಸು ಸೀಳಿದ್ದರೂ
ಮೆಲಕುಹಾಕುವದಿಲ್ಲವೋ ಅವುಗಳ ಮಾಂಸವನ್ನು
ನೀವು ತಿನ್ನಬಾರದು. ದೃಷ್ಟಾಂತ—ಒಂಟೆ, ಮೊಲ,
ಬೆಟ್ಟದ ಮೊಲ ಇವುಗಳು ಮೆಲಕುಹಾಕುವಂಥವುಗಳಾ
ದರೂ ಸೀಳುಗೊರಸು ಇಲ್ಲವಾದ ಕಾರಣ ಅವು ನಿಮಗೆ
ಅಶುದ್ಧ. ಹಂದಿಯು ಗೊರಸು ಸೀಳಿದ್ದರೂ ಅದು
ಮೆಲಕುಹಾಕುವದಿಲ್ಲವಾದದರಿಂದ ಅದು ನಿಮಗೆ
ಅಶುದ್ಧ. ಇವುಗಳ ಮಾಂಸವನ್ನು ನೀವು ತಿನ್ನ
ಕೂಡದು; ಇವುಗಳ ಹೆಣವನ್ನು ಮುಟ್ಟಕೂಡದು.
ಜಲಜಂತುಗಳಲ್ಲಿ ನೀವು ತಿನ್ನಬಹುದಾದವುಗಳು
ಯಾವವಂದರೆ—ಯಾವ ಜಾತಿಯ ಪ್ರಾಣಿಗೆ ರೆಕ್ಕೆ
ಇದ್ದು ಮೈಯೆಲ್ಲಾ ಪರೆಪರೆಯಾಗಿರುವದೋ ಅದರ
ಮಾಂಸವನ್ನು ತಿನ್ನಬಹುದು. ಯಾವ ಜಾತಿಗೆ
ರೆಕ್ಕೆಯೂ ಪರೆಪರೆಯಾದ ಮೈಯೂ ಇರುವದಿಲ್ಲವೋ
ಅವುಗಳ ಮಾಂಸವನ್ನು ನೀವು ತಿನ್ನಕೂಡದು; ಅದು
ನಿಮಗೆ ಅಶುದ್ಧ.
ಎಲ್ಲಾ ಶುದ್ಧಪಕ್ಷಿಗಳ ಮಾಂಸವನ್ನು ತಿನ್ನಬಹು
ದು. ತಿನ್ನಕೂಡದವುಗಳು ಯಾವವಂದರೆ—ಗರುಡ,
ಬೆಟ್ಟದ ಹದ್ದು, ಕ್ರೌಂಚ, ಗಿಡಗ, ಹಕ್ಕಿಸಾಲೆ, ಸಕಲ
15 ವಿಧವಾದ ಹದ್ದು, ಸಕಲವಿಧವಾದ ಕಾಗೆ, ಉಷ್ಟ್ರ
ಪಕ್ಷಿ, ಉಲೂಕ, ಕಡಲ್ಹಕ್ಕಿ, ಸಕಲವಿಧವಾದ ಡೇಗೆ,
17 ಗೂಬೆ, ಹೆಗ್ಗೂಬೆ, ಕರ್ರೇಟು, ಚೀಲಮೂಗಿ, ರಣ
ಹದ್ದು, ನೀರುಕಾಗೆ, ಕೊಕ್ಕರೆ, ಸಕಲವಿಧವಾದ ಬಕ,
ಹೆಜೆಹಕ್ಕಿ, ಕಣ್ಣಕಪಟಿ.
ರೆಕ್ಕೆಯುಳ್ಳ ಕ್ರಿಮಿಕೀಟಗಳೆಲ್ಲವೂ ನಿಮಗೆ ಅಶುದ್ಧ;
ಅವುಗಳನ್ನು ತಿನ್ನಕೂಡದು. ರೆಕ್ಕೆಯುಳ್ಳವುಗಳಲ್ಲಿ
ಶುದ್ಧಜಾತಿಯವುಗಳನ್ನು ಮಾತ್ರ ತಿನ್ನಬಹುದು.
ಸತ್ತುಬಿದ್ದದ್ದನ್ನು ನೀವು ತಿನ್ನಕೂಡದು; ನಿಮ್ಮ
ಊರಲ್ಲಿರುವ ಪರದೇಶಿಯರಿಗೆ ಅದನ್ನು ತಿನ್ನುವದಕ್ಕೆ
ಕೊಡಬಹುದು, ಅನ್ಯರಿಗೆ ಮಾರಬಹುದು; ನೀವಾ
ದರೋ ನಿಮ್ಮ ದೇವರಾದ ಯೆಹೋವನಿಗೆ ಪ್ರತಿಷ್ಠಿತ
ರಾದವರು.
ಆಡುಮರಿಯನ್ನು ಅದರ ತಾಯಿಯ ಹಾಲಿನಲ್ಲಿ
ಬೇಯಿಸಕೂಡದು.

ಎಲ್ಲಾ ಬೆಳೆಗಳಲ್ಲಿ ಬೇಳೆಯ ದಶಮಾಂಶವನ್ನು ಯೆಹೋವನ
ಸನ್ನಿಧಿಯಲ್ಲಿ ಊಟಮಾಡಿ ಮೂರನೆಯ ವರುಷದ ಬೆಳೆಯ
ದಶಮಾಂಶವನ್ನು ಊರಿನ ಬಡವರಿಗೆ
ಕೊಟ್ಟುಬಿಡಬೇಕೆಂಬ ವಿಧಿ.

ಪ್ರತಿವರುಷದ ನಿಮ್ಮ ಹೊಲದ ಬೆಳೆಯಲ್ಲಿ ದಶಮ
ಭಾಗವನ್ನು ಪ್ರತ್ಯೇಕಿಸಬೇಕು. ಧಾನ್ಯ, ದ್ರಾಕ್ಷೆ, ಎಣ್ಣೆ
ಇವುಗಳಲ್ಲಿ ದಶಮಭಾಗವನ್ನೂ ದನಕುರಿಗಳ ಚೊಚ್ಚ
ಲುಮರಿಗಳನ್ನೂ ನಿಮ್ಮ ದೇವರಾದ ಯೆಹೋವನ ಸನ್ನಿ
ಧಿಯಲ್ಲಿ ಆತನು ತನ್ನ ಹೆಸರನ್ನು ಸ್ಥಾಪಿಸಿಕೊಳ್ಳುವ
ದಕ್ಕೆ ಆದುಕೊಳ್ಳುವ ಸ್ಥಳದಲ್ಲೇ ನೀವು ತಿನ್ನಬೇಕು.
ಹೀಗೆ ನಿಮ್ಮ ದೇವರಾದ ಯೆಹೋವನಲ್ಲೇ ಯಾವಾ
ಗಲೂ ಭಯಭಕ್ತಿಯುಳ್ಳವರಾಗಿರುವದನ್ನು ಅಭ್ಯಾಸ
ಮಾಡಿಕೊಳ್ಳುವಿರಿ.
ನಿಮ್ಮ ದೇವರಾದ ಯೆಹೋವನು ಆದುಕೊಳ್ಳುವ 24
ಸ್ಥಳವು ನಿಮಗೆ ದೂರವಾಗಿದ್ದು ಆ ಕಾಣಿಕೆಗಳನ್ನು
ಅಷ್ಟು ದೂರ ಹೊತ್ತುಕೊಂಡು ಹೋಗುವದು ಅಸಾಧ್ಯ
ವಾದರೆ ನಿಮ್ಮ ದೇವರಾದ ಯೆಹೋವನು ನಿಮಗೆ
ಅಭಿವೃದ್ಧಿಯನ್ನುಂಟು ಮಾಡಿದ ಕಾಲದಲ್ಲಿ ಅವು 25
ಗಳನ್ನು ಮಾರಿಬಿಟ್ಟು ಆ ಹಣದ ಗಂಟನ್ನು ಆತನು
ಆದುಕೊಂಡ ಸ್ಥಳಕ್ಕೆ ತೆಗೆದುಕೊಂಡು ಹೋಗಿ ಅಲ್ಲಿ 26
ನಿಮ್ಮ ಇಷ್ಟಾನುಸಾರ ದನ, ಕುರಿ, ದ್ರಾಕ್ಷಾರಸ, ಮದ್ಯ
ಮೊದಲಾದವುಗಳನ್ನು ಕೊಂಡುಕೊಂಡು ನೀವೂ ನಿಮ್ಮ
ಮನೆಯವರೂ ನಿಮ್ಮ ಊರಿನ ಲೇವಿಯರೂ ನಿಮ್ಮ
ದೇವರಾದ ಯೆಹೋವನ ಸನ್ನಿಧಿಯಲ್ಲಿ ಊಟಮಾಡಿ
ಸಂತೋಷವಾಗಿರಬೇಕು. ಲೇವಿಯರಿಗೆ ನಿಮ್ಮೊಡನೆ 27
ಯಾವ ಸ್ವಾಸ್ತ್ಯವೂ ಇಲ್ಲವಾದದರಿಂದ ನೀವು ಅವ
ರನ್ನು ಕೈಬಿಡಬಾರದು.
ಪ್ರತಿ ಮೂರನೆಯ ವರುಷದ ಬೆಳೆಯ ದಶಮ 28
ಭಾಗವನ್ನು ತಂದು ತಂದು ನೀವು ಇರುವ ಊರಲ್ಲಿಯೇ
ಕೂಡಿಸಬೇಕು. ಆಗ ಊರಲ್ಲಿರುವ ಅನ್ಯದೇಶದವರೂ 29
ತಾಯಿತಂದೆಯಿಲ್ಲದವರೂ ವಿಧವೆಯರೂ ನಿಮ್ಮೊಡನೆ
ಸ್ವಾಸ್ತ್ಯವನ್ನು ಹೊಂದದೆಹೋದ ಲೇವಿಯರೂ
ಉಂಡು ಸಂತೋಷವಾಗಿರಲಿ. ನೀವು ಹೀಗೆ ನಡೆದು
ಕೊಂಡರೆ ನಿಮ್ಮ ದೇವರಾದ ಯೆಹೋವನು ನಿಮ್ಮ
ಎಲ್ಲಾ ಪ್ರಯತ್ನಗಳನ್ನು ಸಫಲಮಾಡುವನು.

ಪ್ರತಿ ಏಳನೆಯ ವರುಷದಲ್ಲಿ ಎಲ್ಲಾ ಸಾಲಗಳನ್ನು ಬಿಟ್ಟುಬಿಟ್ಟು
ದಾಸರಿಗೆ ಬಿಡುಗಡೆಮಾಡಬೇಕೆಂಬ ವಿಧಿ.

ಏಳು ಸಂವತ್ಸರಗಳು ಕಳೆದನಂತರ [ಬಡವರಿಗೆ] 15
ಬಿಡುಗಡೆಯಾಗಬೇಕು. ಹೇಗಂದರೆ ಯೆಹೋ 2
ವನು ನೇಮಿಸಿದ ಬಿಡುಗಡೆಯ ಸಂವತ್ಸರವು ಬಂತೆಂದು
ಪ್ರಕಟವಾದದರಿಂದ ಸಾಲಕೊಟ್ಟವನು ತೆಗೆದುಕೊಂಡ
ವನಿಗೆ ಆ ಸಾಲವನ್ನು ಬಿಟ್ಟುಬಿಡಬೇಕು; ಅವನು
ಸ್ವದೇಶದವನಿಗೆ ಕೊಟ್ಟ ಸಾಲವನ್ನು ಕೇಳಬಾರದು.
ಅನ್ಯದೇಶದವರಿಗೆ ಕೊಟ್ಟ ಸಾಲವನ್ನು ಕೇಳಿ ತೆಗೆದು 3
ಕೊಳ್ಳಬಹುದೇ ಹೊರತು ಸ್ವದೇಶದವನಿಗೆ ಕೊಟ್ಟ
ದ್ದನ್ನು ಕೇಳಕೂಡದು.
ಆದರೆ ನೀವು ನಿಮ್ಮ ದೇವರಾದ ಯೆಹೋವನ 4, 5
ಮಾತಿಗೆ ಕಿವಿಗೊಟ್ಟು ನಾನು ಈಗ ನಿಮಗೆ ಬೋಧಿ
ಸುವ ಈ ಧರ್ಮೋಪದೇಶವನ್ನೆಲ್ಲಾ ಅನುಸರಿಸಿದರೆ
ಯೆಹೋವನು ತಾನು ನಿಮಗೆ ಸ್ವದೇಶವಾಗಿ ಕೊಡುವ
ದೇಶದಲ್ಲಿ ನಿಮ್ಮನ್ನು ಅಭಿವೃದ್ಧಿಪಡಿಸುವದರಿಂದ
ನಿಮ್ಮಲ್ಲಿ ಬಡವರೇ ಇರುವದಿಲ್ಲ. ನಿಮ್ಮ ದೇವರಾದ 6
ಯೆಹೋವನು ವಾಗ್ದಾನಮಾಡಿದಂತೆ ನಿಮ್ಮನ್ನು
ಅಭಿವೃದ್ಧಿಪಡಿಸುವನು. ನೀವು ಅನೇಕಜನಗಳಿಗೆ
ಸಾಲಕೊಡುವಿರೇ ಹೊರತು ಅವರಿಂದ ಸಾಲತೆಗೆದು
ಕೊಳ್ಳುವದಿಲ್ಲ; ಅನೇಕಜನಾಂಗಗಳ ಮೇಲೆ ದೊರೆ
ತನ ಮಾಡುವಿರೇ ಹೊರತು ಅವರು ನಿಮ್ಮ ಮೇಲೆ
ದೊರೆತನಮಾಡುವದಿಲ್ಲ.

7 ನಿಮ್ಮ ದೇವರಾದ ಯೆಹೋವನು ನಿಮಗೆ ಕೊಡುವ
ದೇಶದ ಯಾವ ಊರಲ್ಲಿಯಾದರೂ ಸ್ವದೇಶದವ
ನಾದ ಬಡವನು ಇದ್ದರೆ ನೀವು ಆ ಬಡ ಸಹೋದರ
ನಿಗೆ ಮನಸ್ಸನ್ನು ಕಠಿಣಮಾಡಿಕೊಂಡು ಅವನಿಗೆ
8 ಸಹಾಯಮಾಡದೆ ಇರಬಾರದು. ನೀವು ಕೈದೆರೆದು
ಅವನ ಅವಸರಕ್ಕೆ ಬೇಕಾದದ್ದನ್ನು ಕೊಟ್ಟು ಸಹಾಯ
9 ಮಾಡಬೇಕು. ನೀವು—ಬಿಡುಗಡೆಯುಂಟಾಗುವ ಏಳ
ನೆಯ ವರುಷವು ಸಮೀಪವಾಯಿತೆಂದು ನೀಚವಾದ
ಆಲೋಚನೆಯನ್ನು ಮಾಡಿ ಆ ಬಡ ಸಹೋದರನ ವಿಷ
ಯದಲ್ಲಿ ಮೋರೆ ಕರ್ರಗೆಮಾಡಿಕೊಂಡು ಏನೂ ಕೊಡದೆ
ಇರಬಾರದು, ನೋಡಿರಿ. [ಹಾಗೆ ಧಿಕ್ಕರಿಸಿದರೆ] ಅವನು
ಒಂದು ವೇಳೆ ನಿಮ್ಮ ವಿಷಯದಲ್ಲಿ ಯೆಹೋವನಿಗೆ
ಮೊರೆಯಿಟ್ಟಾನು, ನೀವು ದೋಷಿಗಳಾಗಿ ತೋರಿಬಂ
10 ದೀರಿ. ನೀವು ಕೊಡುವಾಗ ಬೇಸರಗೊಳ್ಳದೆ ಉದಾರ
ವಾದ ಮನಸ್ಸಿನಿಂದಲೇ ಕೊಡಬೇಕು. ಇದರಿಂದ
ನಿಮ್ಮ ದೇವರಾದ ಯೆಹೋವನು ನಿಮ್ಮ ಎಲ್ಲಾ ಕೆಲಸ
ಗಳಲ್ಲಿಯೂ ಪ್ರಯತ್ನಗಳಲ್ಲಿಯೂ ನಿಮ್ಮನ್ನು ಅಭಿ
11 ವೃದ್ಧಿಪಡಿಸುವನು. ದೇಶದಲ್ಲಿ ಯಾವಾಗಲೂ
ಬಡವರು ಇರುವರಷ್ಟೆ; ಆದದರಿಂದ ನೀವು ಸ್ವದೇಶ
ದವರಾದ ಬಡವರಿಗೂ ಗತಿಯಿಲ್ಲದವರಿಗೂ ಕೈನೀಡಿ
ಸಹಾಯಮಾಡಬೇಕೆಂದು ಆಜ್ಞಾಪಿಸಿದ್ದೇನೆ.
12 ಸ್ವದೇಶದವರೊಳಗೆ ಯಾವ ಇಬ್ರಿಯ ಪುರುಷ
ನಾಗಲಿ ಸ್ತ್ರೀಯಾಗಲಿ ನಿಮಗೆ ದಾಸರಾಗಿರುವದ
ಕ್ಕಾಗಿ ಮಾರಲ್ಪಡುವ ಪಕ್ಷಕ್ಕೆ ಅಂಥವರು ಆರು
ವರುಷಗಳ ವರೆಗೂ ನಿಮ್ಮ ಸೇವೆ ಮಾಡಲಿ; ಏಳನೆಯ
ವರುಷದಲ್ಲಿ ನೀವು ಅವರನ್ನು ಬಿಟ್ಟುಬಿಡಬೇಕು.
13 ಬಿಡುವಾಗ ಬರೀಗೈಯಲ್ಲಿ ಕಳುಹಿಸಿಬಿಡಬಾರದು.
14 ನಿಮ್ಮ ದೇವರಾದ ಯೆಹೋವನು ನಿಮಗೆ ಅನುಗ್ರ
ಹಿಸಿರುವ ಮೇರೆಗೆ ನಿಮಗಿರುವ ಆಡುಕುರಿಗಳು, ದವ
ಸ, ದ್ರಾಕ್ಷಾರಸ ಇವುಗಳಲ್ಲಿ ಉದಾರವಾಗಿ ಕೊಟ್ಟು
15 ಕಳುಹಿಸಿಬಿಡಬೇಕು. ಐಗುಪ್ತದೇಶದಲ್ಲಿ ನೀವೇ
ದಾಸರಾಗಿರಲು ನಿಮ್ಮ ದೇವರಾದ ಯೆಹೋವನು
ನಿಮ್ಮನ್ನು ಬಿಡುಗಡೆಮಾಡಿದನೆಂಬದನ್ನು ಜ್ಞಾಪಕಮಾಡಿ
ಕೊಳ್ಳಿರಿ. ಇದಕ್ಕೋಸ್ಕರವಾಗಿಯೇ ನಾನು ಈ ಆಜ್ಞೆ
ಯನ್ನು ನಿಮಗೆ ಈಗ ಕೊಟ್ಟಿದ್ದೇನೆ.
16 ಒಂದು ವೇಳೆ ಅಂಥ ದಾಸನು ನಿಮ್ಮ ಬಳಿಯಲ್ಲಿ
ಸುಖವಾಗಿದ್ದು ನಿಮ್ಮನ್ನೂ ನಿಮ್ಮ ಮನೆಯವರನ್ನೂ
ಪ್ರೀತಿಸಿ ತಾನು ಬಿಡುಗಡೆಯಾಗಿ ಹೋಗಲೊಲ್ಲೆನೆಂದು
17 ಹೇಳುವ ಪಕ್ಷಕ್ಕೆ ನೀವು ಶಲಾಕಿಯಿಂದ ಅವನ
ಕಿವಿಯನ್ನು ಚುಚ್ಚಿ ಕದಕ್ಕೆ ಸಿಕ್ಕಿಸಬೇಕು. ಆ ದಿನ
ಮೊದಲುಗೊಂಡು ಅವನು ನಿಮಗೆ ಶಾಶ್ವತದಾಸ
ನಾಗಿರಬೇಕು. ಅದೇ ರೀತಿಯಲ್ಲಿ ದಾಸಿಯರ ವಿಷ
ಯದಲ್ಲಿಯೂ ನಡೆದುಕೊಳ್ಳಬೇಕು.
18 ದಾಸನನ್ನು ಬಿಡುಗಡೆಮಾಡುವದು ಕಷ್ಟವೆಂದು
ಹೇಳಿಕೊಳ್ಳಬಾರದು. ಅವನು ಆರು ವರುಷಗಳು
ನಿಮ್ಮ ದಾಸನಾಗಿದ್ದು ಕೂಲಿಯಾಳಿಗಿಂತ ಎರಡರಷ್ಟು
ಪ್ರಯೋಜನವನ್ನುಂಟುಮಾಡಿದನಲ್ಲಾ. ನೀವು ಹೀಗೆ
ನಡೆದುಕೊಂಡರೆ ನಿಮ್ಮ ದೇವರಾದ ಯೆಹೋವನು
ನಿಮ್ಮ ಎಲ್ಲಾ ಪ್ರಯತ್ನಗಳನ್ನು ಸಫಲಗೊಳಿಸು
ವನು.

ದನಕುರಿಗಳಲ್ಲಿ ಚೊಚ್ಚಲಾದ ಗಂಡನ್ನು ಯೆಹೋವನಿಗೆ
ಸಮರ್ಪಿಸಬೇಕಾದ ಕ್ರಮ.

ದನಗಳಲ್ಲಿಯೂ ಆಡುಕುರಿಗಳಲ್ಲಿಯೂ ಚೊಚ್ಚ
ಲಾದ ಗಂಡನ್ನು ನಿಮ್ಮ ದೇವರಾದ ಯೆಹೋವನಿ
ಗಾಗಿ ಪ್ರತಿಷ್ಠಿಸಬೇಕು. ಚೊಚ್ಚಲಾದ ಹೋರಿಯಿಂದ
ಕೆಲಸಮಾಡಿಸಬಾರದು; ಚೊಚ್ಚಲಾದ ಕುರಿಯ ಉಣ್ಣೆ
ಯನ್ನು ಕತ್ತರಿಸಬಾರದು. ಪ್ರತಿ ವರುಷದಲ್ಲಿ ನೀವೂ
ನಿಮ್ಮ ಮನೆಯವರೂ ಅವುಗಳನ್ನು ನಿಮ್ಮ ದೇವರಾದ
ಯೆಹೋವನು ಆದುಕೊಳ್ಳುವ ಸ್ಥಳದಲ್ಲಿ ಆತನ ಸನ್ನಿ
ಧಿಯಲ್ಲೇ ಕೊಯಿದು ತಿನ್ನಬೇಕು.
ಅದು ಕುಂಟಾಗಿ ಕುರುಡಾಗಿ ಇಲ್ಲವೆ ಬೇರೆ ವಿಧ
ದಿಂದ ವಿರೂಪವಾಗಿದ್ದರೆ ಅದನ್ನು ನಿಮ್ಮ ದೇವರಾದ
ಯೆಹೋವನಿಗೆ ಸಮರ್ಪಿಸಕೂಡದು; ಅದನ್ನು ನಿಮ್ಮ
ಊರಲ್ಲೇ ತಿನ್ನಬೇಕು. ಶುದ್ಧರೂ ಅಶುದ್ಧರೂ ಜಿಂಕೆ
ದುಪ್ಪಿಗಳ ಮಾಂಸವನ್ನು ತಿನ್ನುವ ಪ್ರಕಾರ ಇವು
ಗಳನ್ನೂ ತಿನ್ನಬಹುದು. ನೀವು ರಕ್ತವನ್ನು ಮಾತ್ರ
ಭುಜಿಸಬಾರದು; ಅದನ್ನು ನೀರಿನಂತೆ ಭೂಮಿಯ ಮೇಲೆ
ಸುರಿದುಬಿಡಬೇಕು.

ಪ್ರತಿ ವರುಷದಲ್ಲಿಯೂ ನಡಿಸಬೇಕಾದ ಮೂರು
ಜಾತ್ರೆಗಳ ವಿಷಯ.

ನೀವು ಚೈತ್ರ ಮಾಸದಲ್ಲಿ ಪಸ್ಕಹಬ್ಬವನ್ನು 1
ನಿಮ್ಮ ದೇವರಾದ ಯೆಹೋವನಿಗೋಸ್ಕರ ಆಚರಿಸ
ಬೇಕು. ಆ ಮಾಸದಲ್ಲಿಯೇ ರಾತ್ರಿಕಾಲದಲ್ಲಿ ನಿಮ್ಮ
ದೇವರಾದ ಯೆಹೋವನು ನಿಮ್ಮನ್ನು ಐಗುಪ್ತದೇಶ
ದಿಂದ ಬಿಡಿಸಿದನಲ್ಲವೇ. ನೀವು ಆಡುಕುರಿಗಳಲ್ಲಾ
ಗಲಿ ದನಗಳಲ್ಲಾಗಲಿ ಪಸ್ಕದ ಪಶುವನ್ನು ಯೆಹೋ
ವನು ತನ್ನ ಹೆಸರನ್ನು ಸ್ಥಾಪಿಸುವದಕ್ಕೆ ಆದುಕೊಳ್ಳು
ವ ಸ್ಥಳದಲ್ಲೇ ಆತನಿಗಾಗಿ ವಧಿಸಬೇಕು. ಅದ
ರೊಂದಿಗೆ ಹುಳಿಹಾಕಿದ ರೊಟ್ಟಿಯನ್ನು ತಿನ್ನಬಾರದು;
ಯಾಕಂದರೆ ನೀವು [ರೊಟ್ಟಿಗೆ ಹುಳಿಹಾಕುವದಕ್ಕೆ
ಅವಕಾಶವಿಲ್ಲದೆ] ಅವಸರದಿಂದ ಐಗುಪ್ತದೇಶವನ್ನು
ಬಿಟ್ಟುಬಂದಿರಿ. ಐಗುಪ್ತದೇಶದಿಂದ ನಿಮಗೆ ಬಿಡು
ಗಡೆಯಾದ ದಿನವು ನಿಮ್ಮ ಜೀವಮಾನವೆಲ್ಲಾ ನೆನಪಿ
ನಲ್ಲಿರುವಂತೆ ನೀವು ಕಷ್ಟವನ್ನು ಸೂಚಿಸುವ ಹುಳಿ
ಯಿಲ್ಲದ ರೊಟ್ಟಿಗಳನ್ನು ಏಳು ದಿವಸಗಳ ವರೆಗೂ
ತಿನ್ನಬೇಕು. ಆ ಏಳು ದಿವಸವೂ ನಿಮ್ಮ ದೇಶದ
ಲ್ಲೆಲ್ಲಾ ಹುಳಿಬೆರೆದ ಯಾವ ಪದಾರ್ಥವೂ ನಿಮ್ಮ
ಬಳಿಯಲ್ಲಿ ಇರಲೇ ಬಾರದು. ಮೊದಲನೆಯ ದಿನದ
ಸಂಜೆಯಲ್ಲಿ ನೀವು ವಧಿಸಿದ ಪಶುಮಾಂಸದಲ್ಲಿ ಸ್ವಲ್ಪ
ವನ್ನಾದರೂ ಮರುದಿನದ ವರೆಗೆ ಉಳಿಸಬಾರದು.
ನಿಮ್ಮ ದೇವರಾದ ಯೆಹೋವನು ನಿಮಗೆ ಕೊಡುವ
ಯಾವ ಊರಲ್ಲಿಯಾದರೂ ಪಸ್ಕದ ಪಶುವನ್ನು ವಧಿ
ಸದೆ ಆತನು ತನ್ನ ಹೆಸರನ್ನು ಸ್ಥಾಪಿಸುವದಕ್ಕೆ ಆದು
ಕೊಳ್ಳುವ ಸ್ಥಳದಲ್ಲೇ ನೀವು ಐಗುಪ್ತದೇಶದಿಂದ
ಹೊರಟುಬಂದ ಕಾಲವಾದ ಸೂರ್ಯಾಸ್ತಮಾನಕಾಲ
ದಲ್ಲಿ ಅದನ್ನು ವಧಿಸಬೇಕು. ಆ ಸ್ಥಳದಲ್ಲಿಯೇ
ನೀವು ಅದನ್ನು ಅಡಿಗೆಮಾಡಿ ತಿನ್ನಬೇಕು. ಮರು

ದಿವಸ ನಿಮ್ಮ ನಿಮ್ಮ ಮನೆಗಳಿಗೆ ನೀವು ಹೊರಟು
8 ಹೋಗಬಹುದು. ಆರು ದಿವಸ ನೀವು ಹುಳಿಯಿಲ್ಲದ
ರೊಟ್ಟಿಗಳನ್ನು ತಿನ್ನಬೇಕು: ಏಳನೆಯ ದಿನದಲ್ಲಿ ನಿಮ್ಮ
ದೇವರಾದ ಯೆಹೋವನ ಘನಕ್ಕಾಗಿ ಸಭೆಕೂಡ
ಬೇಕು; ಆ ದಿನದಲ್ಲಿ ಯಾವ ಉದ್ಯೋಗವನ್ನೂ
ನಡಿಸಕೂಡದು.

9 ಬೆಳೆ ಕೊಯ್ಯುವದಕ್ಕೆ ಕುಡುಗೋಲುಹಾಕುವ
ಕಾಲ ಮೊದಲುಗೊಂಡು ಏಳು ವಾರಗಳನ್ನು ಎಣಿಸಿ
10 ಆ ಏಳು ವಾರಗಳಾದನಂತರ ಪಂಚಾಶತ್ತಮ
ದಿನದ ಜಾತ್ರೆಯನ್ನು ಆಚರಿಸಬೇಕು. ನಿಮ್ಮ ದೇವ
ರಾದ ಯೆಹೋವನು ನಿಮಗೆ ಅನುಗ್ರಹಿಸಿದ ಬೆಳೆಗೆ
ತಕ್ಕಷ್ಟು ಕಾಣಿಕೆಯನ್ನು ನೀವು ಆಗ ಆತನಿಗೋಸ್ಕರ
11 ತರಬೇಕು. ಮತ್ತು ಆತನು ತನ್ನ ಹೆಸರನ್ನು ಸ್ಥಾಪಿಸು
ವದಕ್ಕೆ ಆದುಕೊಳ್ಳುವ ಸ್ಥಳದಲ್ಲಿ ನೀವೂ ನಿಮ್ಮ
ಗಂಡು ಹೆಣ್ಣು ಮಕ್ಕಳೂ ದಾಸದಾಸಿಯರೂ ನಿಮ್ಮ
ಊರಲ್ಲಿರುವ ಲೇವಿಯರೂ ಪರದೇಶದವರೂ ತಾಯಿ
ತಂದೆಯಿಲ್ಲದವರೂ ವಿಧವೆಯರೂ ನಿಮ್ಮ ದೇವರಾದ
ಯೆಹೋವನ ಸನ್ನಿಧಿಯಲ್ಲಿ ಸಂಭ್ರಮದಿಂದಿರಬೇಕು.
12 ಐಗುಪ್ತದೇಶದಲ್ಲಿ ದಾಸರಾಗಿದ್ದೆವೆಂಬದನ್ನು ನೀವು
ನೆನಪಿಗೆ ತಂದುಕೊಂಡು ಈ ವಿಧಿಗಳನ್ನು ಅನುಸರಿಸಿ
ನಡೆಯಬೇಕು.

13 ನೀವು ಕಣದ ಕೆಲಸವನ್ನೂ ಆಲೆಯ ಕೆಲಸವನ್ನೂ
ಪೂರೈಸಿ ಬೆಳೆಯನ್ನು ಮನೆಗೆ ತಂದಾಗ ಏಳು ದಿನಗಳ
ವರೆಗೂ ಪರ್ಣಶಾಲೆಗಳ ಜಾತ್ರೆಯನ್ನು ಆಚ
14 ರಿಸಬೇಕು. ಅದರಲ್ಲಿ ನೀವೂ ನಿಮ್ಮ ಗಂಡು ಹೆಣ್ಣು
ಮಕ್ಕಳೂ ದಾಸದಾಸಿಯರೂ ನಿಮ್ಮ ಊರಲ್ಲಿರುವ
ಲೇವಿಯರೂ ಪರದೇಶದವರೂ ತಾಯಿತಂದೆಯಿಲ್ಲದ
15 ವರೂ ವಿಧವೆಯರೂ ಸಂಭ್ರಮದಿಂದಿರಬೇಕು. ನಿಮ್ಮ
ದೇವರಾದ ಯೆಹೋವನು ಆದುಕೊಳ್ಳುವ ಸ್ಥಳದಲ್ಲಿ
ನೀವು ಏಳು ದಿನವೂ ಆ ಜಾತ್ರೆಯನ್ನು ಆಚರಿಸ
ಬೇಕು. ನಿಮ್ಮ ವ್ಯವಸಾಯವನ್ನೂ ಬೇರೆ ಎಲ್ಲಾ
ಕೆಲಸಗಳನ್ನೂ ಆತನು ಸಫಲವಾಗಿ ಮಾಡಿದ್ದರಿಂದ
ನೀವು ಬಹಳ ಆನಂದದಿಂದಿರಬೇಕು.

16 ಹುಳಿಯಿಲ್ಲದ ರೊಟ್ಟಿಗಳ ಜಾತ್ರೆಯಲ್ಲಿಯೂ
ಪಂಚಾಶತ್ತಮದಿನದ ಜಾತ್ರೆಯಲ್ಲಿಯೂ ಪರ್ಣಶಾಲೆ
ಗಳ ಜಾತ್ರೆಯಲ್ಲಿಯೂ ಅಂತು ವರುಷಕ್ಕೆ ಮೂರಾ
ವರ್ತಿ ನಿಮ್ಮಲ್ಲಿರುವ ಗಂಡಸರೆಲ್ಲರೂ ನಿಮ್ಮ ದೇವ
ರಾದ ಯೆಹೋವನ ಸನ್ನಿಧಿಯಲ್ಲಿ ಆತನು ಆದು
ಕೊಳ್ಳುವ ಸ್ಥಳದಲ್ಲಿ ಕಾಣಿಸಿಕೊಳ್ಳಬೇಕು. ಒಬ್ಬರೂ
ಕೈಯಲ್ಲಿ ಕಾಣಿಕೆಯಿಲ್ಲದೆ ಆತನ ಸನ್ನಿಧಿಗೆ ಬರ
17 ಕೂಡದು. ಪ್ರತಿಯೊಬ್ಬನು ತನಗೆ ಯೆಹೋವನು
ಅನುಗ್ರಹಿಸಿದ ಆದಾಯದ ಮೇರೆಗೆ ತನ್ನ ಶಕ್ತ್ಯನು
ಸಾರ ಕೊಡಬೇಕು.

ನ್ಯಾಯಾಧಿಪತಿಗಳೂ ಅಧಿಕಾರಿಗಳೂ ನಡೆಯಬೇಕಾದ ರೀತಿ.

18 ಪ್ರತಿಯೊಂದು ಕುಲವು ಇರುವ ಪ್ರದೇಶದಲ್ಲಿ ನಿಮ್ಮ
ದೇವರಾದ ಯೆಹೋವನು ನಿಮಗೆ ಕೊಡುವ ಎಲ್ಲಾ
ಊರುಗಳಲ್ಲಿಯೂ ನ್ಯಾಯಾಧಿಪತಿಗಳನ್ನೂ ಅಧಿ
ಕಾರಿಗಳನ್ನೂ ನೀವು ನೇಮಿಸಬೇಕು. ಅವರು ಜನರಿ
ಗೋಸ್ಕರ ನ್ಯಾಯವನ್ನು ವಿಚಾರಿಸಿ ಸರಿಯಾದ ತೀರ್ಪು
ಕೊಡಬೇಕು.

ನೀವು ನ್ಯಾಯವನ್ನು ಬಿಟ್ಟು ತೀರ್ಮಾನಮಾಡ 19
ಬಾರದು; ಪಕ್ಷಪಾತಮಾಡಬಾರದು; ಲಂಚತೆಗೆದು
ಕೊಳ್ಳಬಾರದು. ಲಂಚವು ಬುದ್ಧಿವಂತರನ್ನೂ ಕುರುಡ
ರಂತೆ ಮಾಡುತ್ತದೆ; ನಿರಪರಾಧಿಗಳ ನ್ಯಾಯವನ್ನು
ಕೆಡಿಸುತ್ತದೆ. ನೀವು ಕೇವಲ ನ್ಯಾಯವನ್ನೇ ಅನು 20
ಸರಿಸಬೇಕು. ಹಾಗೆ ನಡೆದರೆ ನೀವು ಬದುಕಿಕೊಂಡು
ನಿಮ್ಮ ದೇವರಾದ ಯೆಹೋವನು ಕೊಡುವ ದೇಶ
ವನ್ನು ಸ್ವಾಧೀನಮಾಡಿಕೊಳ್ಳುವಿರಿ.

ವಿಗ್ರಹಾರಾಧನೆಗೆ ಎಷ್ಟುಮಾತ್ರವೂ ಸಮ್ಮತಿಸದೆ
ಯೆಹೋವನನ್ನು ಯೋಗ್ಯವಾದ ರೀತಿಯಲ್ಲಿಯೇ
ಆರಾಧಿಸಬೇಕೆಂಬ ವಿಧಿ.

ನಿಮ್ಮ ದೇವರಾದ ಯೆಹೋವನಿಗೋಸ್ಕರ ನೀವು 21
ಕಟ್ಟಿಸಿಕೊಳ್ಳುವ ಯಜ್ಞವೇದಿಯ ಬಳಿಯಲ್ಲಿ
ಯಾವ ವಿಧವಾದ ಮರದ ಅಶೇರವೆಂಬ ವಿಗ್ರಹ
ಸ್ತಂಭವನ್ನೂ ನೆಡಬಾರದು. ಕಲ್ಲಿನ ಕಂಬವನ್ನೂ ನಿಲ್ಲಿ 22
ಸಬಾರದು; ಇದು ನಿಮ್ಮ ದೇವರಾದ ಯೆಹೋವನಿಗೆ
ಹೇಯವಾದದ್ದು.

17 ಕುಂದುಕೊರತೆಯಾಗಲಿ ಯಾವ ದುರ್ಲಕ್ಷಣ
ವಾಗಲಿ ಇರುವ ದನಕುರಿಗಳನ್ನು ನಿಮ್ಮ ದೇವ
ರಾದ ಯೆಹೋವನಿಗೆ ಸಮರ್ಪಿಸಬಾರದು. ಅಂಥವು
ಗಳನ್ನು ಸಮರ್ಪಿಸುವದು ಆತನಿಗೆ ಅಸಹ್ಯವಾಗಿದೆ.

ನಿಮ್ಮ ದೇವರಾದ ಯೆಹೋವನು ನಿಮಗೆ 2
ಕೊಡುವ ಯಾವ ಊರಲ್ಲಿಯಾದರೂ ಯಾವ ಪುರು
ಷನಾಗಲಿ ಸ್ತ್ರೀಯಾಗಲಿ ನಿಮ್ಮ ದೇವರಾದ ಯೆಹೋ
ವನ ನಿಬಂಧನೆಯನ್ನು ಮೀರಿ ಅನ್ಯದೇವರುಗಳ 3
ನ್ನಾಗಲಿ ಇಲ್ಲವೆ ಪೂಜಿಸಬಾರದೆಂದು ಆತನು
ನಿಷೇಧಿಸಿರುವ ಸೂರ್ಯಚಂದ್ರನಕ್ಷತ್ರಗಳನ್ನಾಗಲಿ
ಸೇವಿಸಿ ಪೂಜಿಸಿ ಯೆಹೋವನ ದೃಷ್ಟಿಯಲ್ಲಿ ದುಷ್ಟ
ವಾದದ್ದನ್ನು ನಡಿಸಿದರೆ ನೀವು ಆ ಸಂಗತಿಯನ್ನು 4
ಕೇಳಿದಾಗ ಸೂಕ್ಷ್ಮವಾಗಿ ವಿಚಾರಣೆಯನ್ನು ಮಾಡ
ಬೇಕು. ಆಗ ಇಸ್ರಾಯೇಲ್ಯರಲ್ಲಿ ಯಾರಿಂದಲಾದರೂ
ಆ ನಿಷಿದ್ಧಕಾರ್ಯವು ನಡೆದದ್ದು ನಿಜವೆಂದು ತಿಳಿದು
ಬಂದರೆ ಆ ಪುರುಷನನ್ನಾಗಲಿ ಸ್ತ್ರೀಯನ್ನಾಗಲಿ ಹಿಡಿದು 5
ಊರ ಹೊರಗೆ ತಂದು ಕಲ್ಲುಗಳಿಂದ ಕೊಲ್ಲಬೇಕು.
ಒಬ್ಬನೇ ಒಬ್ಬನ ಸಾಕ್ಷಿಯ ಮಾತಿನ ಮೇಲೆ ಯಾರಿಗೂ 6
ಮರಣಶಿಕ್ಷೆಯಾಗಬಾರದು; ಮರಣಶಿಕ್ಷೆಯನ್ನು
ವಿಧಿಸುವದಕ್ಕೆ ಇಬ್ಬರು ಇಲ್ಲವೆ ಮೂವರು ಸಾಕ್ಷಿಗಳು
ಬೇಕು. ಅಪರಾಧಿಯನ್ನು ಕೊಲ್ಲುವದಕ್ಕೆ ಸಾಕ್ಷಿ 7
ಗಳೇ ಮೊದಲು ಕಲ್ಲನ್ನು ಹಾಕಬೇಕು; ತರುವಾಯ
ಜನರೆಲ್ಲರೂ ಹಾಕಲಿ. ಹೀಗೆ ಮಾಡಿ ನೀವು ಆ
ದುಷ್ಟತ್ವವನ್ನು ನಿಮ್ಮ ಮಧ್ಯದಿಂದ ತೆಗೆದುಹಾಕ
ಬೇಕು.

ತೀರ್ಮಾನಿಸಲು ಅಶಕ್ಯವಾದ ಕಾರ್ಯವುಂಟಾದಾಗ
ನಡಿಸಬೇಕಾದದ್ದು.

ವಿಧವಿಧವಾದ ಜೀವಹತ್ಯ, ನ್ಯಾಯ, ಹೊಡೆದಾಟ 8
ಇವುಗಳ ವಿಷಯದಲ್ಲಿ ಅಭಿಮಾನಚರ್ಚೆಗಳು ನಿಮ್ಮ

ಊರಲ್ಲಿ ಉಂಟಾದಾಗ, ಸರಿಯಾಗಿ ವಿವೇಚಿಸುವದು
ನಿಮ್ಮ ಶಕ್ತಿಗೆ ಮೀರಿದ ಪಕ್ಷಕ್ಕೆ ನೀವು ಊರಿನಿಂದ
ಹೊರಟು ನಿಮ್ಮ ದೇವರಾದ ಯೆಹೋವನು ಆದು
9 ಕೊಳ್ಳುವ ಸ್ಥಳಕ್ಕೆ ಯಾಜಕಸೇವೆಮಾಡುವ ಲೇವಿ
ಯರ ಮತ್ತು ಆ ಕಾಲದ ನ್ಯಾಯಾಧಿಪತಿಯ ಬಳಿಗೆ
ಹೋಗಿ ವಿಚಾರಿಸಲು ನೀವು ಕೊಡಬೇಕಾದ ತೀರ್ಪನ್ನು
10 ಅವರು ತಿಳಿಸುವರು. ಯೆಹೋವನು ಆದುಕೊಂಡ
ಆ ಸ್ಥಳದಿಂದ ಅವರು ನಿಮಗೆ ತಿಳಿಸುವ ಮಾತಿನ
ಪ್ರಕಾರ ನೀವು ಮಾಡಬೇಕು; ಅವರು ಬೋಧಿಸುವ
11 ದನ್ನೇ ನೀವು ಅನುಸರಿಸಬೇಕು. ಅವರು ಬೋಧಿಸುವ
ಬೋಧನೆಯಂತೆಯೂ ಅವರು ಹೇಳಿಕೊಡುವ ತೀರ್ಪಿ
ನಂತೆಯೂ ನೀವು ಮಾಡಬೇಕು; ಅವರು ತಿಳಿಸುವ
ಮಾತನ್ನು ಬಿಟ್ಟು ಎಡಬಲಕ್ಕೆ ತಿರುಗಬಾರದು.
12 ನಿಮ್ಮ ದೇವರಾದ ಯೆಹೋವನ ಸನ್ನಿಧಿಯಲ್ಲಿ ಸೇವೆ
ಮಾಡುವ ಯಾಜಕರ ಅಥವಾ ನ್ಯಾಯಾಧಿಪತಿಯ
ಮಾತನ್ನು ಯಾವನು ಅಹಂಕಾರದಿಂದ ನಿರಾಕರಿಸು
ತ್ತಾನೋ ಅವನಿಗೆ ಮರಣಶಿಕ್ಷೆಯಾಗಬೇಕು. ಹೀಗೆ
ಮಾಡಿ ನೀವು ಆ ದುಷ್ಟತ್ವವನ್ನು ಇಸ್ರಾಯೇಲ್ಯರ
13 ಮಧ್ಯದಿಂದ ತೆಗೆದುಹಾಕಬೇಕು. ಜನರೆಲ್ಲರೂ ಕೇಳಿ
ಭಯಪಟ್ಟು ಇನ್ನು ಅಹಂಕಾರದಿಂದ ನಡೆಯದೆ ಇರು
ವರು.

ಅರಸನನ್ನು ನೇಮಿಸುವ ವಿಷಯ; ಅರಸನು
ನಡೆಯಬೇಕಾದ ರೀತಿ.

14 ನಿಮ್ಮ ದೇವರಾದ ಯೆಹೋವನು ನಿಮಗೆ ಕೊಡುವ
ದೇಶವನ್ನು ನೀವು ಸೇರಿ ಸ್ವಾಧೀನಮಾಡಿಕೊಂಡು
ಅದರಲ್ಲಿ ವಾಸವಾಗಿರುವಾಗ—ಸುತ್ತಲಿರುವ ಎಲ್ಲಾ
ಜನಾಂಗಗಳಂತೆ ನಾವೂ ಅರಸನನ್ನು ನೇಮಿಸಿಕೊ
15 ಳ್ಳೋಣ ಎಂದು ಹೇಳಿಕೊಳ್ಳುವ ಪಕ್ಷಕ್ಕೆ ನೀವು
ಅಗತ್ಯವಾಗಿ ನಿಮ್ಮ ದೇವರಾದ ಯೆಹೋವನು ಆದು
ಕೊಂಡವನನ್ನೇ ನೇಮಿಸಿಕೊಳ್ಳಬೇಕು. ನಿಮ್ಮ ಬಂಧು
ಗಳಾದ ಸ್ವಜನರಲ್ಲೇ ಒಬ್ಬನನ್ನು ಅರಸನನ್ನಾಗಿ ನೇಮಿ
ಸಿಕೊಳ್ಳಬೇಕೇ ಹೊರತು ಅನ್ಯದೇಶದವನನ್ನು ನೇಮಿ
ಸಬಾರದು.
16 ಅವನು ಕುದುರೆಯ ದಂಡನ್ನು ಕೂಡಿಸಿಕೊಳ್ಳ
ಬಾರದು. ಕುದುರೆಗಳನ್ನು ಸಂಪಾದಿಸಿಕೊಳ್ಳುವದ
ಕ್ಕಾಗಿ ತನ್ನ ಪ್ರಜೆಗಳನ್ನು ಐಗುಪ್ತದೇಶಕ್ಕೆ ಹೋಗ
ಗೊಡಿಸಬಾರದು. ನೀವು ಇನ್ನು ಆ ದೇಶಕ್ಕೆ ಹೋಗ
ಲೇ ಕೂಡದೆಂದು ಯೆಹೋವನು ಆಜ್ಞಾಪಿಸಿದ್ದಾ
17 ನಲ್ಲಾ. ಅವನು ಅನೇಕ ಸ್ತ್ರೀಯರನ್ನು ಮದುವೆ
ಮಾಡಿಕೊಳ್ಳಬಾರದು; ಮಾಡಿಕೊಂಡರೆ ಅವನ ಮನ
ಸ್ಸು ಯೆಹೋವನ ಕಡೆಯಿಂದ ತಿರುಗುವದಕ್ಕೆ ಅವ
ಕಾಶವಾಗುವದು. ಅವನು ಬೆಳ್ಳಿಬಂಗಾರವನ್ನು ವಿಶೇ
ಷವಾಗಿ ಗಳಿಸಿಕೊಳ್ಳಬಾರದು.
18 ಅವನು ರಾಜ್ಯಾಧಿಕಾರಕ್ಕೆ ಬಂದಾಗ ಯಾಜಕ
ಸೇವೆಮಾಡುವ ಲೇವಿಯರ ವಶದಲ್ಲಿರುವ ಈ
ಧರ್ಮಶಾಸ್ತ್ರಗ್ರಂಥದ ಒಂದು ಪ್ರತಿಯನ್ನು ತನಗೋ
ಸ್ಕರ ಪುಸ್ತಕರೂಪವಾಗಿ ಬರೆಯಿಸಿಕೊಳ್ಳಬೇಕು.
19 ಅವನು ಮದದಿಂದ ತನ್ನ ಸ್ವದೇಶದವರನ್ನು ಹಿಯ್ಯಾಳಿ
ಸದೆ ಯೆಹೋವನ ಆಜ್ಞೆಯನ್ನು ಮೀರಿ ಎಡಬಲಕ್ಕೆ
ತಿರುಗಿಕೊಳ್ಳದೆ ತನ್ನ ದೇವರಾದ ಯೆಹೋವನಲ್ಲಿ
ಭಯಭಕ್ತಿಯುಳ್ಳವನಾಗಿ ಈ ಧರ್ಮಶಾಸ್ತ್ರದ ಎಲ್ಲಾ
ವಾಕ್ಯಗಳನ್ನೂ ವಿಧಿಗಳನ್ನೂ ಅನುಸರಿಸುವದಕ್ಕೆ ಅಭ್ಯಾ
ಸಮಾಡಿಕೊಳ್ಳುವಂತೆ ಈ ಗ್ರಂಥವು ಅವನ ಬಳಿಯ
ಲ್ಲೇ ಇರಬೇಕು; ಅವನು ತನ್ನ ಜೀವಮಾನದ ದಿನಗಳ
ಲ್ಲಾ ಅದರಲ್ಲಿ ಓದಿಕೊಳ್ಳುತ್ತಾ ಇರಬೇಕು. ಹೀಗಾ
ದರೆ ಅವನೂ ಅವನ ಸಂತತಿಯವರೂ ಬಹುಕಾಲ
ರಾಜ್ಯಾಧಿಕಾರವನ್ನು ನಡಿಸುತ್ತಾ ಇಸ್ರಾಯೇಲ್ಯರ
ನಡುವೆ ಬಾಳುವರು.

ಯಾಜಕರಿಗೆ ಸಲ್ಲಬೇಕಾದ ಕಾಣಿಕೆಗಳ ವಿಷಯ.

ಯಾಜಕಸೇವೆಮಾಡುವ ಲೇವಿಯರಿಗಾಗಲಿ ಲೇವಿ 18
ಕುಲದವರಲ್ಲಿ ಯಾರಿಗೇಯಾಗಲಿ ಇತರ ಇಸ್ರಾ
ಯೇಲ್ಯರೊಡನೆ ಸ್ವಂತಕ್ಕಾಗಿ ಭೂಸ್ಥಿತಿದೊರೆಯುವ
ದಿಲ್ಲವಷ್ಟೆ. ಯೆಹೋವನಿಗೆ ಸಮರ್ಪಿಸಲ್ಪಡುವ
ಹೋಮದ್ರವ್ಯಗಳೂ ಆತನಿಗೋಸ್ಕರ ಪ್ರತ್ಯೇಕಿಸಲ್ಪಟ್ಟ
ದ್ದೆಲ್ಲವೂ ಅವರಿಗೆ ಜೀವನಾಧಾರ. ಸ್ವದೇಶಸ್ಥರೊಂದಿಗೆ
ಅವರಿಗೆ ಸ್ವಾಸ್ತ್ಯವು ದೊರೆಯುವದಿಲ್ಲ; ಯೆಹೋ
ವನು ಅವರಿಗೆ ಹೇಳಿದಂತೆ ತಾನೇ ಅವರಿಗೆ ಸ್ವಾಸ್ತ್ಯವು.
ಜನರ ಕಡೆಯಿಂದ ಯಾಜಕರು ಹೊಂದಬೇಕಾದ
ವುಗಳು ಯಾವವಂದರೆ—ದನಗಳಲ್ಲಿಯಾಗಲಿ ಆಡು
ಕುರಿಗಳಲ್ಲಿಯಾಗಲಿ ಪಶುವನ್ನು ಕೊಯಿದು ಯಜ್ಞ
ಮಾಡುವವರೆಲ್ಲರೂ ಆದರ ಮುಂದೊಡೆಯನ್ನೂ
ಎರಡು ದವಡೆಗಳನ್ನೂ ಕೋಷ್ಠವನ್ನೂ ಯಾಜಕರಿಗೆ
ಕೊಡಬೇಕು. ಧಾನ್ಯ, ದ್ರಾಕ್ಷಾರಸ, ಎಣ್ಣೆ ಇವುಗಳ
ಪ್ರಥಮಫಲಗಳನ್ನೂ ಮೊದಲನೆಯ ಸಾರಿ ಕತ್ತರಿಸುವ
ಕುರಿಗಳ ಉಣ್ಣೆಯನ್ನೂ ಅವರಿಗೆ ಕೊಡಬೇಕು.
ನಿಮ್ಮ ದೇವರಾದ ಯೆಹೋವನು ನಿಮ್ಮ ಎಲ್ಲಾ ಕುಲ
ಗಳಲ್ಲಿ ಇವರನ್ನೂ ಇವರ ತರುವಾಯ ಇವರ ಸಂತತಿ
ಯವರನ್ನೂ ತನ್ನ ಸನ್ನಿಧಿಯಲ್ಲಿ ಶಾಶ್ವತವಾಗಿ ಸೇವೆ
ಮಾಡುವದಕ್ಕೆ ತಾನೇ ನೇಮಿಸಿಕೊಂಡನಲ್ಲಾ.
ಇಸ್ರಾಯೇಲ್ಯರ ಯಾವದಾದರೂ ಒಂದು ಊರಲ್ಲಿ
ಇಳಿದುಕೊಂಡಿರುವ ಲೇವಿಯನು ಸ್ವಂತ ಮನಸ್ಸಿನಿಂದ
ಆ ಊರನ್ನು ಬಿಟ್ಟು ಯೆಹೋವನು ಆದುಕೊಂಡ
ಸ್ಥಳಕ್ಕೆ ಬಂದು ಅಲ್ಲೇ ಯೆಹೋವನ ಸನ್ನಿಧಿಯಲ್ಲಿ
ಸೇವೆಮಾಡುವ ತನ್ನ ಸ್ವಕುಲದವರಂತೆ ತನ್ನ ದೇವರಾದ
ಯೆಹೋವನ ಹೆಸರನ್ನು ಹೇಳಿ ತಾನೂ ಸೇವೆ ನಡಿಸಿ
ದರೆ ಅವನ ಕೈಯಲ್ಲಿ ಪಿತ್ರಾರ್ಜಿತ ಸೊತ್ತನ್ನು ಮಾರಿದ
ಹಣವಿದ್ದರೂ ಮಿಕ್ಕ ಲೇವಿಯರೊಂದಿಗೆ ಸಮವಾಗಿ
ಭೋಗಿಸುವದಕ್ಕೆ ಬಾಧ್ಯನಾಗಿರುವನು.

ಪ್ರವಾದಿಗಳನ್ನು ಕುರಿತದ್ದು.

ನಿಮ್ಮ ದೇವರಾದ ಯೆಹೋವನು ನಿಮಗೆ ಕೊಡುವ
ದೇಶದಲ್ಲಿ ನೀವು ಸೇರಿದಾಗ ಅಲ್ಲಿರುವ ಜನ
ಗಳು ಮಾಡುವ ಹೇಸಿಗೆಕೆಲಸಗಳನ್ನು ಅನುಸರಿಸಲೇ
ಬಾರದು. ಮಕ್ಕಳನ್ನು ಆಹುತಿಕೊಡುವವರು,
ಕಣಿಹೇಳುವವರು, ಶಕುನನೋಡುವವರು, ಯಂತ್ರ
ಮಂತ್ರಗಳನ್ನು ಮಾಡುವವರು, ಮಾಟಗಾರರು, ತಂತ್ರ

ಗಾರರು, ಸತ್ತವರನ್ನು ವಿಚಾರಿಸುವವರು, ಬೇತಾಳ
ಕರು, ಪ್ರೇತಸಿದ್ಧರು ಇಂಥವರು ಯಾರೂ ನಿಮ್ಮಲ್ಲಿ
ಇರಬಾರದು. ಇಂಥ ಕೆಲಸಗಳನ್ನು ನಡಿಸುವವರು
ಯೆಹೋವನಿಗೆ ಅಸಹ್ಯರಾಗಿದ್ದಾರೆ; ನಿಮ್ಮ ದೇವ
ರಾದ ಯೆಹೋವನು ಇಂಥ ಹೇಯಕೃತ್ಯಗಳನ್ನು
ಮಾಡುವ ಆ ಜನಾಂಗಗಳನ್ನು ನಿಮ್ಮೆದುರಿನಿಂದ
ಹೊರಡಿಸಿಬಿಡುತ್ತಾನಲ್ಲಾ. ನೀವು ನಿಮ್ಮ ದೇವರಾದ
ಯೆಹೋವನ ಸೇವೆಯ ವಿಷಯದಲ್ಲಿ ಸದಾಚಾರವುಳ್ಳ
ವರಾಗಿರಬೇಕು. ನೀವು ಸ್ವಾಧೀನಮಾಡಿಕೊಳ್ಳುವ
ದೇಶದ ಜನಾಂಗಗಳು ಶಕುನಗಳನ್ನು ನೋಡುತ್ತಾರೆ,
ಯಂತ್ರಮಂತ್ರಗಳನ್ನು ಮಾಡುತ್ತಾರೆ. ನೀವಾದರೋ
ಹಾಗೆ ಮಾಡುವದಕ್ಕೆ ನಿಮ್ಮ ದೇವರಾದ ಯೆಹೋವ
ನಿಂದ ಅಪ್ಪಣೆಹೊಂದಲಿಲ್ಲ.

ನಿಮ್ಮ ದೇವರಾದ ಯೆಹೋವನು ನಿಮ್ಮ ಸಹೋ
ದರರಲ್ಲಿ ನನ್ನಂಥ ಪ್ರವಾದಿಯನ್ನು [ನಿಮಗೆ]
ಏರ್ಪಡಿಸುವನು; ಅವನಿಗೇ ನೀವು ಕಿವಿಗೊಡಬೇಕು.
ಹೋರೇಬಿನಲ್ಲಿ ನೀವು ಸಭೆಕೂಡಿದ ದಿನದಲ್ಲಿ
ಹಾಗೆಯೇ ಕೋರಿಕೊಂಡು—ನಮ್ಮ ದೇವರಾದ
ಯೆಹೋವನ ಸ್ವರವನ್ನು ಇನ್ನು ಕೇಳಲೂ ಈ ಘೋರ
ವಾದ ಅಗ್ನಿಜ್ವಾಲೆಯನ್ನು ಇನ್ನು ನೋಡಲೂ ನಮಗೆ
ಮನಸ್ಸಿಲ್ಲ; ಕೇಳಿ ನೋಡಿದರೆ ಸತ್ತೇವು ಎಂದು
ನೀವು ಹೇಳಿದಿರಷ್ಟೆ. ಆಗ ಯೆಹೋವನು ನನಗೆ—
ಇವರು ಹೇಳಿದ ಮಾತು ಒಳ್ಳೇದೇ; ಇವರ ಸ್ವದೇಶ
ದವರಲ್ಲಿ ನಿನ್ನಂಥ ಪ್ರವಾದಿಯನ್ನು ಅವರಿಗೋಸ್ಕರ
ಏರ್ಪಡಿಸುವೆನು; ಅವನ ಬಾಯಿಂದ ನನ್ನ ಮಾತು
ಗಳನ್ನು ನುಡಿಸುವೆನು; ನಾನು ಅವನಿಗೆ ಆಜ್ಞಾಪಿ
ಸಿದ್ದನ್ನೆಲ್ಲಾ ಅವನು ಅವರಿಗೆ ತಿಳಿಸುವನು. ಅವನು
ನನ್ನ ಹೆಸರಿನಲ್ಲಿ ಹೇಳಿದ ಮಾತುಗಳಿಗೆ ಯಾರು
ಕಿವಿಗೊಡುವದಿಲ್ಲವೋ ಅಂಥವರನ್ನು ನಾನು ಶಿಕ್ಷಿಸು
ವೆನು. ಆದರೆ ಯಾವ ಪ್ರವಾದಿ ನನ್ನಿಂದ
ಅಧಿಕಾರಹೊಂದದೆ ನಾನು ಪ್ರೇರಣೆಮಾಡದ ಮಾತು
ಗಳನ್ನು ಯೆಹೋವನ ಮಾತೆಂದು ಹೇಳಿ ಜನರಿಗೆ
ತಿಳಿಸುವನೋ ಇಲ್ಲವೆ ಇತರ ದೇವರುಗಳ ಹೆಸರಿ
ನಲ್ಲಿ ಮಾತಾಡುವನೋ ಅವನಿಗೆ ಮರಣಶಿಕ್ಷೆಯಾಗ
ಬೇಕೆಂದು ಹೇಳಿದನು.

ಪ್ರವಾದಿಯು ಹೇಳಿದ ಮಾತು ಯೆಹೋವನ
ಮಾತಲ್ಲವೆಂದು ತಿಳಿದುಕೊಳ್ಳುವದು ಹೇಗೆ ಅಂದು
ಕೊಳ್ಳುತ್ತೀರೋ? ಪ್ರವಾದಿಯು ಯೆಹೋವನ ಮಾ
ತೆಂದು ಹೇಳಿ ಮುಂತಿಳಿಸಿದ ಸಂಗತಿ ನಡೆಯದೆ
ಹೋದರೆ ಅವನ ಮಾತು ಯೆಹೋವನದಲ್ಲವೆಂದು
ನೀವು ತಿಳಿದುಕೊಳ್ಳಬೇಕು. ಅವನು ಅಧಿಕಾರವಿಲ್ಲದೆ
ಮಾತಾಡಿದನಷ್ಟು; ಅವನಿಗೆ ಹೆದರಬಾರದು.

ನರಹತ್ಯಮಾಡಿದವರಿಗೋಸ್ಕರ ಆಶ್ರಯನಗರಗಳನ್ನು
ಗೊತ್ತುಮಾಡಬೇಕೆಂಬ ವಿಧಿ.

9 ನಿಮ್ಮ ದೇವರಾದ ಯೆಹೋವನು ನಿಮಗೆ ಕೊಡುವ
ದೇಶದಲ್ಲಿರುವ ಜನಾಂಗಗಳನ್ನು ಆತನು ತೆಗೆದು
ಹಾಕಿಬಿಟ್ಟ ತರುವಾಯ ನೀವು ಆ ದೇಶವನ್ನು ಸ್ವಾಧೀ
ನಕ್ಕೆ ತೆಗೆದುಕೊಂಡು ಅವರ ಗ್ರಾಮಗಳಲ್ಲಿಯೂ
ಮನೆಗಳಲ್ಲಿಯೂ ವಾಸವಾಗಿರುವಾಗ ಆ ನಿಮ್ಮ 2
ದೇಶದ ಮಧ್ಯದಲ್ಲಿ ನೀವು ಮೂರು ಆಶ್ರಯನಗರ
ಗಳನ್ನು ಗೊತ್ತುಮಾಡಬೇಕು. ನರಹತ್ಯಮಾಡಿದ 3
ವರು ಆ ಪಟ್ಟಣಗಳಿಗೆ ಓಡಿಹೋಗುವದಕ್ಕೆ ಅನು
ಕೂಲವಾಗುವಂತೆ ನೀವು ಅವುಗಳ ದಾರಿಗಳನ್ನು ಸರಿ
ಪಡಿಸಬೇಕು. ಮತ್ತು ನಿಮ್ಮ ದೇವರಾದ ಯೆಹೋ
ವನು ನಿಮಗೆ ಸ್ವದೇಶವಾಗುವದಕ್ಕೆ ಕೊಡುವ ಆ
ದೇಶವನ್ನು ಮೂರು ಭಾಗ ಮಾಡಬೇಕು.
ಆ ಪಟ್ಟಣಗಳ ಸಂಗತಿ ಹೇಗಂದರೆ—ಯಾವ 4
ನಾದರೂ ದ್ವೇಷವಿಲ್ಲದೆ ಕೈತಪ್ಪಿ ಮತ್ತೊಬ್ಬನನ್ನು
ಕೊಂದರೆ ಅವನು ಆ ಪಟ್ಟಣಗಳಲ್ಲಿ ಒಂದಕ್ಕೆ ಓಡಿ
ಹೋಗಿ ಬದುಕಿಕೊಳ್ಳಬಹುದು. ದೃಷ್ಟಾಂತ—ಒಬ್ಬ 5
ಮನುಷ್ಯನು ಕಟ್ಟಿಗೆಯನ್ನು ಕಡಿಯಬೇಕೆಂದು
ಮತ್ತೊಬ್ಬನ ಜೊತೆಯಲ್ಲಿ ಅಡವಿಗೆ ಹೋಗಿ ಅಲ್ಲಿ
ಒಂದು ಮರವನ್ನು ಕಡಿಯಬೇಕೆಂದು ಕೊಡಲಿಯಿಂದ
ಹೊಡೆಯುತ್ತಿರುವಾಗ ಕೊಡಲಿಯು ಕಾವಿನಿಂದ ಜಾರಿ
ಆ ಮತ್ತೊಬ್ಬನಿಗೆ ತಗಲಿದ್ದರಿಂದ ಅವನು ಸತ್ತರೆ
ಹೊಡೆದವನು ಆ ಪಟ್ಟಣಗಳಲ್ಲಿ ಒಂದಕ್ಕೆ ಓಡಿ
ಹೋಗಿ ಬದುಕಿಕೊಳ್ಳಬಹುದು. ಸತ್ತವನಲ್ಲಿ ಅವನಿಗೆ 6
ಮೊದಲು ದ್ವೇಷವಿಲ್ಲದ್ದರಿಂದ ಅವನು ಮರಣಶಿಕ್ಷೆಗೆ
ಪಾತ್ರನಲ್ಲವಲ್ಲಾ. ಆದರೂ ಹತ್ಯಮಾಡಿದವನಿಗೆ
ಮುಯ್ಯಿತೀರಿಸುವ ಹಂಗುಳ್ಳ ಸಮೀಪಬಂಧುವು
ಇನ್ನು ಕೋಪದಿಂದ ಉರಿಯುತ್ತಿರುವಾಗಲೇ ಅವನನ್ನು
ಹಿಂದಟ್ಟಾನು; ಮತ್ತು ಮಾರ್ಗ ದೂರವಾಗಿರುವ
ಪಕ್ಷಕ್ಕೆ ಅವನನ್ನು ಹಿಡಿದು ಕೊಂದುಹಾಕಿಬಿಟ್ಟಾನು.
ಈ ಕಾರಣದಿಂದ ನೀವು ಮೂರು ಆಶ್ರಯನಗರ 7
ಗಳನ್ನು ಗೊತ್ತುಮಾಡಬೇಕೆಂದು ಆಜ್ಞಾಪಿಸಿದ್ದೇನೆ.
ನಾನು ಈಗ ನಿಮಗೆ ಬೋಧಿಸುವ ಈ ಧರ್ಮೋ 8, 9
ಪದೇಶವನ್ನೆಲ್ಲಾ ನೀವು ಅನುಸರಿಸುವವರಾಗಿ ನಿಮ್ಮ
ದೇವರಾದ ಯೆಹೋವನನ್ನು ಪ್ರೀತಿಸಿ ಆತನು ಹೇಳುವ
ಮಾರ್ಗದಲ್ಲೇ ಯಾವಾಗಲೂ ನಡೆದರೆ ಆತನು ನಿಮ್ಮ
ಪಿತೃಗಳಿಗೆ ವಾಗ್ದಾನಮಾಡಿದಂತೆ ನಿಮ್ಮ ರಾಜ್ಯವನ್ನು
ವಿಸ್ತರಿಸಿ ತಾನು ನಿಮ್ಮ ಪಿತೃಗಳಿಗೆ ಸೂಚಿಸಿದ ಪ್ರದೇಶ
ವನ್ನೆಲ್ಲಾ ಕೊಡುವನು. ಆಗ ಈ ಮೂರು ಪಟ್ಟಣ
ಗಳನ್ನಲ್ಲದೆ ಇನ್ನು ಮೂರು ಪಟ್ಟಣಗಳನ್ನು ಗೊತ್ತು
ಮಾಡಬೇಕು. ನಿಮ್ಮ ದೇವರಾದ ಯೆಹೋವನು 10
ನಿಮಗೆ ಸ್ವದೇಶವಾಗುವದಕ್ಕೆ ಕೊಡುವ ದೇಶದಲ್ಲಿ
ನಿರಪರಾಧಿಗೆ ಮರಣಶಿಕ್ಷೆಯಾಗಬಾರದು; ಅಂಥವ
ನಿಗೆ ಮರಣಶಿಕ್ಷೆಯಾದರೆ ಆ ದೋಷವು ನಿಮ್ಮ
ದಾಗಿಯೇ ಇರುವದು.
ಆದರೆ ಯಾವನಾದರೂ ಒಬ್ಬನಲ್ಲಿ ದ್ವೇಷವನ್ನೇ 11
ಇಟ್ಟು ಸಮಯನೋಡಿಕೊಂಡು ಅವನ ಮೇಲೆ ಬಿದ್ದು
ಅವನನ್ನು ಹೊಡೆದು ಕೊಂದ ತರುವಾಯ ಈ ಪಟ್ಟಣ
ಗಳಲ್ಲಿ ಒಂದಕ್ಕೆ ಓಡಿಹೋದರೆ ಅವನ ಊರಿನ ಹಿರಿ 12
ಯರು ಅವನನ್ನು ಅಲ್ಲಿಂದ ಹಿಡತರಿಸಿ ಅವನಿಗೆ
ಮರಣಶಿಕ್ಷೆಯಾಗುವಂತೆ ಮುಯ್ಯಿತೀರಿಸುವ ಹಂಗು
ಳ್ಳವನ ಕೈಗೆ ಕೊಡಬೇಕು. ನೀವು ಅವನನ್ನು ಕನಿ 13
ಕರಿಸಬಾರದು. ನಿಮಗೆ ಶುಭವುಂಟಾಗುವಂತೆ ನಿರಪ
ರಾಧಿಯ ಪ್ರಾಣವನ್ನು ತೆಗೆದವನು ಇಸ್ರಾಯೇಲ್ಯ
ರಲ್ಲಿ ಉಳಿಯದಂತೆ ಮಾಡಬೇಕು.

ಮೇರೆಯನ್ನು ಸರಿಸಕೂಡದೆಂಬ ವಿಧಿ.

14 ನಿಮ್ಮ ದೇವರಾದ ಯೆಹೋವನು ನಿಮಗೆ ಸ್ವದೇಶ
ವಾಗುವದಕ್ಕೆ ಕೊಡುವ ದೇಶದಲ್ಲಿ ನಿಮ್ಮ ಪಾಲಿಗೆ
ಬಂದ ಸ್ವಾಸ್ತ್ಯದಲ್ಲಿ ನೆರೆಯವನ ಭೂಮಿಯ ಪೂರ್ವ
ಕಾಲದ ಮೇರೆಯನ್ನು ಒತ್ತಬಾರದು.

ಅಪರಾಧವನ್ನು ಸ್ಥಾಪಿಸುವದಕ್ಕೆ ಒಂದೇ ಸಾಕ್ಷಿ
ಮಾತ್ರ ಸಾಲದೆಂಬ ವಿಧಿ.

15 ಯಾವ ದೋಷದ ಅಥವಾ ಅಪರಾಧದ ವಿಷಯ
ದಲ್ಲೂ ಒಬ್ಬನೇ ಒಬ್ಬನ ಸಾಕ್ಷಿಯನ್ನು ನೀವು
ಅಂಗೀಕರಿಸಬಾರದು. ನಡೆದ ಸಂಗತಿ ಸ್ಥಾಪನೆ
ಯಾಗುವದಕ್ಕೆ ಇಬ್ಬರು ಇಲ್ಲವೆ ಮೂವರು ಸಾಕ್ಷಿ
ಗಳು ಬೇಕು.

ಸುಳ್ಳುಸಾಕ್ಷಿಯನ್ನು ಹೇಳಿದವನಿಗೆ ವಿಧಿಸಬೇಕಾದ ಶಿಕ್ಷೆ.

16 ಯಾವನಾದರೂ ನ್ಯಾಯವಿರುದ್ಧವಾಗಿ ಬಂದು
ಮತ್ತೊಬ್ಬನನ್ನು ಅಪರಾಧಿ ಎಂದು ಸಾಕ್ಷಿಹೇಳಿದರೆ
17 ವ್ಯಾಜ್ಯವಾಡುವ ಆ ಇಬ್ಬರೂ ಯೆಹೋವನ ಸನ್ನಿಧಿ
ಯಲ್ಲಿ ಯಾಜಕರ ಮುಂದೆಯೂ ಆಗ ಇರುವ
18 ನ್ಯಾಯಾಧಿಪತಿಗಳ ಮುಂದೆಯೂ ನಿಲ್ಲಬೇಕು. ನ್ಯಾ
ಯಾಧಿಪತಿಗಳು ಚೆನ್ನಾಗಿ ವಿಚಾರಣೆಮಾಡಿದ ಮೇಲೆ
ಆ ಮನುಷ್ಯನ ಸಾಕ್ಷಿ ಸುಳ್ಳೆಂದು ತೋರಿಬಂದರೆ
19 ಅವನು ಆ ಮತ್ತೊಬ್ಬನಿಗೆ ಮಾಡಿಸಬೇಕೆಂದಿದ್ದ ಶಿಕ್ಷೆ
ಯನ್ನು ಅವನಿಗೇ ವಿಧಿಸಬೇಕು. ಹೀಗೆ ನೀವು ಆ
ದುಷ್ಟತ್ವವನ್ನು ನಿಮ್ಮ ಮಧ್ಯದೊಳಗಿಂದ ತೆಗೆದು
20 ಹಾಕಬೇಕು. ಉಳಿದವರು ಆ ಸಂಗತಿಯನ್ನು ಕೇಳಿ
ಭಯಪಟ್ಟು ಇನ್ನು ಮುಂದೆ ಇಂಥ ದುಷ್ಟತ್ವವನ್ನು
21 ನಡಿಸದಿರುವರು. ನೀವು ಅಂಥವರನ್ನು ಕನಿಕರಿಸ
ಬಾರದು; ಪ್ರಾಣಕ್ಕೆ ಪ್ರತಿಯಾಗಿ ಪ್ರಾಣವನ್ನೂ ಕಣ್ಣಿಗೆ
ಪ್ರತಿಯಾಗಿ ಕಣ್ಣನ್ನೂ ಹಲ್ಲಿಗೆ ಪ್ರತಿಯಾಗಿ ಹಲ್ಲನ್ನೂ
ಕೈಗೆ ಪ್ರತಿಯಾಗಿ ಕೈಯನ್ನೂ ಕಾಲಿಗೆ ಪ್ರತಿಯಾಗಿ
ಕಾಲನ್ನೂ ಅವನಿಗೆ ನಷ್ಟಪಡಿಸಬೇಕು.

ಯುದ್ಧಕ್ರಮ.

20 ನೀವು ಶತ್ರುಗಳೊಡನೆ ಯುದ್ಧಕ್ಕೆ ಹೊರಟಾಗ
ಅವರ ಕಡೆ ಕುದುರೆಗಳೂ ರಥಗಳೂ ನಿಮಗಿಂತ
ಹೆಚ್ಚಾದ ಕಾಲ್ಬಲವೂ ಇರುವದನ್ನು ಕಂಡರೆ ಹೆದರ
ಬಾರದು. ಐಗುಪ್ತದೇಶದಿಂದ ನಿಮ್ಮನ್ನು ಬಿಡಿಸಿದ
ನಿಮ್ಮ ದೇವರಾದ ಯೆಹೋವನು ನಿಮ್ಮ ಕಡೆ ಇದ್ದಾ
ನಲ್ಲಾ.
2, 3 ನಿಮಗೆ ಕಾಳಗಸಮೀಪಿಸಿದಾಗ ಯಾಜಕನು
ಮುಂದೆ ಬಂದು ಭಟರಿಗೆ—ಇಸ್ರಾಯೇಲ್ಯರೇ, ಕೇಳಿರಿ;
ನೀವು ಈಗ ಶತ್ರುಗಳೊಡನೆ ಯುದ್ಧಮಾಡುವ ಕಾಲ
ಸಮೀಪಿಸಿತಷ್ಟೆ. ನೀವು ಎದೆಗೆಡಬಾರದು, ದಿಗಿಲು
ಪಡಬಾರದು, ನಡುಗಬಾರದು, ಶತ್ರುಗಳಿಗೆ ಭಯ
ಪಡಬಾರದು. ನಿಮ್ಮ ದೇವರಾದ ಯೆಹೋವನು
ತಾನೇ ನಿಮ್ಮ ಸಂಗಡ ಇದ್ದು ಶತ್ರುಗಳೊಡನೆ ನಿಮ
ಗೋಸ್ಕರ ಯುದ್ಧಮಾಡಿ ನಿಮಗೆ ಜಯವನ್ನುಂಟು
ಮಾಡುವನು ಎಂದು ಹೇಳಬೇಕು.
ಮತ್ತು ಸೈನ್ಯಾಧಿಪತಿಗಳು ಅವರಿಗೆ—ನಿಮ್ಮಲ್ಲಿ
ಯಾವನಾದರೂ ಹೊಸ ಮನೆಯನ್ನು ಕಟ್ಟಿಸಿಕೊಂಡು
ಇನ್ನು ಗೃಹಪ್ರವೇಶಮಾಡದಿದ್ದರೆ ಅವನು ಮನೆಗೆ
ಹೋಗಲಿ; ಅವನು ಕಾಳಗದಲ್ಲಿ ಸತ್ತರೆ ಮತ್ತೊಬ್ಬನು
ಆ ಮನೆಯಲ್ಲಿ ಗೃಹಪ್ರವೇಶಮಾಡಿಕೊಂಡಾನು
ಯಾವನಾದರೂ ದ್ರಾಕ್ಷೇತೋಟವನ್ನು ಮಾಡಿ ಅದರ
ಹಣ್ಣುಗಳನ್ನು ಇನ್ನೂ ಅನುಭೋಗಿಸದಿದ್ದರೆ ಅವನು
ಮನೆಗೆ ಹೋಗಲಿ; ಅವನು ಕಾಳಗದಲ್ಲಿ ಸತ್ತರೆ ಮತ್ತೊ
ಬ್ಬನು ಆ ತೋಟದ ಹಣ್ಣುಗಳನ್ನು ಅನುಭೋಗಿಸಾನು
ಯಾವನಾದರೂ ತಾನು ಮದುವೆಮಾಡಿಕೊಂಡ ಹೆಣ್ಣ
ನ್ನು ಇನ್ನು ಸೇರಿಸಿಕೊಳ್ಳದಿದ್ದರೆ ಅವನು ಮನೆಗೆ
ಹೋಗಲಿ; ಅವನು ಕಾಳಗದಲ್ಲಿ ಸತ್ತರೆ ಮತ್ತೊಬ್ಬನು
ಅವಳನ್ನು ಸೇರಿಸಿಕೊಂಡಾನು ಎಂದು ಹೇಳಬೇಕು
ಮತ್ತು—ಯಾವನಾದರೂ ಧೈರ್ಯಕಡಮೆಯಾಗಿ
ಅಂಜಿಕೊಂಡರೆ ಅವನೂ ಮನೆಗೆ ಹೋಗಲಿ; ಅವನು
ದಿಗಿಲುಪಡುವದರಿಂದ ಅವನ ಜೊತೆಗಾರರೂ ದಿಗಿಲು
ಪಟ್ಟಾರು ಎಂದು ಹೇಳಬೇಕು. ಸೈನ್ಯಾಧಿಪತಿಗಳು
ಭಟರಿಗೆ ಈ ರೀತಿಯಾಗಿ ಹೇಳಿದನಂತರ ದಂಡಿನವರ
ಮೇಲೆ ನಾಯಕರನ್ನು ನೇಮಿಸಬೇಕು.
ನೀವು ಒಂದು ಪಟ್ಟಣವನ್ನು ಸ್ವಾಧೀನಮಾಡಿಕೊ
ಳ್ಳುವದಕ್ಕೆ ಅದರ ಹತ್ತಿರಕ್ಕೆ ಬಂದಾಗ ಮೊದಲು
ಅದು ಯುದ್ಧವಿಲ್ಲದೆ ಸಮಾಧಾನದಿಂದಲೇ ಅಧೀನ
ವಾಗಬಹುದೆಂದು ಪ್ರಕಟಿಸಬೇಕು. ಅದರಲ್ಲಿರುವ
ವರು ಒಪ್ಪಿ ಬಾಗಲನ್ನು ನಿಮಗೆ ತೆರೆದುಕೊಟ್ಟರೆ ಅವ
ರೆಲ್ಲರೂ ನಿಮಗೆ ಬಿಟ್ಟೀಕೆಲಸವನ್ನು ಮಾಡುವ ದಾಸ
ರಾಗಬೇಕು. ಅವರು ನಿಮ್ಮ ಮಾತಿಗೆ ಸಮ್ಮತಿಸದೆ
ಎದುರಿಸಿದರೆ ನೀವು ಆ ಪಟ್ಟಣಕ್ಕೆ ಮುತ್ತಿಗೆ ಹಾಕ
ಬೇಕು. ನಿಮ್ಮ ದೇವರಾದ ಯೆಹೋವನು ಆ ಪಟ್ಟ
ಣವನ್ನು ನಿಮಗೆ ವಶಮಾಡಿದಾಗ ಅದರಲ್ಲಿರುವ
ಗಂಡಸರೆಲ್ಲರನ್ನೂ ಕನಿಕರಿಸದೆ ಸಂಹಾರಮಾಡಬೇಕು
ಹೆಂಗಸರನ್ನೂ ಮಕ್ಕಳನ್ನೂ ದನಗಳನ್ನೂ ಊರಲ್ಲಿ
ರುವ ಆಸ್ತಿಯನ್ನೂ ನೀವು ಸ್ವಂತಕ್ಕೆ ತೆಗೆದುಕೊಳ್ಳ
ಬಹುದು. ನಿಮ್ಮ ದೇವರಾದ ಯೆಹೋವನು ನಿಮಗೆ
ವಶಪಡಿಸಿದ ಶತ್ರುಗಳ ಆಸ್ತಿಯನ್ನು ನೀವೇ ಅನು
ಭೋಗಿಸಬಹುದು. ಈ ದೇಶದ ಜನಾಂಗಗಳಿಗೆ ಸೇ
ರದೆ ದೂರವಾಗಿರುವ ಜನಾಂಗಗಳ ಪಟ್ಟಣಗಳ ವಿಷ
ಯದಲ್ಲಿ ನೀವು ಹಾಗೆಯೇ ನಡೆದುಕೊಳ್ಳಬೇಕು
ಆದರೆ ನಿಮ್ಮ ದೇವರಾದ ಯೆಹೋವನು ನಿಮಗೆ ಸ್ವಂ
ಕ್ಕಾಗಿ ಕೊಡುವ ಈ ಜನಾಂಗಗಳ ಪಟ್ಟಣಗಳ ವಿಷ
ಯದಲ್ಲಿ ಹಾಗೆ ಮಾಡದೆ ಉಸುರುಬಿಡುವ ಒಬ್ಬರ
ನ್ನಾದರೂ ಉಳಿಸಬಾರದು. ನಿಮ್ಮ ದೇವರಾದ ಯೆ
ಹೋವನು ನಿಮಗೆ ಅಪ್ಪಣೆಕೊಟ್ಟಂತೆ ಇವರನ್ನು
ಅಂದರೆ ಹಿತ್ತಿಯರು, ಅಮೋರಿಯರು, ಕಾನಾನ್ಯರು
ಪೆರಿಜ್ಜೀಯರು, ಹಿವ್ವಿಯರು, ಯೆಬೂಸಿಯರು, ಇವ
ರೆಲ್ಲರನ್ನೂ ನಾಶಮಾಡಿಬಿಡಬೇಕು. ಇಲ್ಲವಾದರೆ
ಅವರು ತಮ್ಮ ದೇವರುಗಳಿಗಾಗಿ ಆಚರಿಸುವ ನಿಷಿದ್ಧಾ

ಚಾರಗಳನ್ನು ನಿಮಗೆ ಕಲಿಸಿಕೊಟ್ಟಾರು; ಮತ್ತು ನೀವು ನಿಮ್ಮ ದೇವರಾದ ಯೆಹೋವನಿಗೆ ದ್ರೋಹಿಗಳಾದೀರಿ.

ನೀವು ಒಂದು ಪಟ್ಟಣವನ್ನು ಸ್ವಾಧೀನಮಾಡಿಕೊಳ್ಳುವದಕ್ಕಾಗಿ ಅದಕ್ಕೆ ಬಹುದಿವಸ ಮುತ್ತಿಗೆಹಾಕಿರುವಾಗ ಅದಕ್ಕೆ ಸೇರಿರುವ ಮರಗಳನ್ನು ಹಾಳುಮಾಡಬಾರದು; ಅವುಗಳಿಗೆ ಕೊಡಲಿಯನ್ನು ಹಾಕಲೇ ಬಾರದು. ಅವುಗಳ ಹಣ್ಣನ್ನು ತಿನ್ನಬಹುದೇ ಹೊರತು ಮರಗಳನ್ನೇ ಕಡಿಯಬಾರದು. ಅಡವಿಯ ಮರಗಳು ಶತ್ರುಗಳೇನು? ಅವುಗಳೊಡನೆ ಯುದ್ಧಮಾಡಬಹುದೇ? ತಿನ್ನತಕ್ಕ ಹಣ್ಣು ಕೊಡುವದಿಲ್ಲವೆಂದು ನೀವು ತಿಳಿದ ಮರಗಳನ್ನು ಮಾತ್ರ ನೀವು ಕೆಡಿಸಬಹುದು, ಕಡಿಯಬಹುದು. ಅವುಗಳಿಂದ ಯುದ್ಧಯಂತ್ರಗಳನ್ನು ಮಾಡಿಕೊಂಡು ನಿಮಗೆ ವಿರುದ್ಧವಾಗಿರುವ ಆ ಪಟ್ಟಣವು ಬೀಳುವ ತನಕ ಅದಕ್ಕೆ ಮುತ್ತಿಗೆ ಹಾಕಬೇಕು.

### ನರಹತ್ಯಮಾಡಿದವನು ಇಂಥವನೆಂದು ತಿಳಿಯದ ಪಕ್ಷಕ್ಕೆ ನಡಿಸಬೇಕಾದ ಕ್ರಮ.

1 ನಿಮ್ಮ ದೇವರಾದ ಯೆಹೋವನು ನಿಮಗೆ ಸ್ವದೇಶವಾಗುವದಕ್ಕೆ ಕೊಡುವ ದೇಶದಲ್ಲಿ ಹತನಾದ ಮನುಷ್ಯನ ಶವವು ಅಡವಿಯಲ್ಲಿ ಬಿದ್ದಿರುವದನ್ನು ನೀವು ಕಂಡರೆ ಮತ್ತು ಅವನನ್ನು ಕೊಂದವನು ಯಾರೆಂಬದು ತಿಳಿಯದೆಹೋದರೆ ನಿಮ್ಮ ಹಿರಿಯರೂ ನ್ಯಾಯಾಧಿಪತಿಗಳೂ ಬಂದು ಹತನಾದವನ ಶವದ ಸುತ್ತಲಿರುವ ಊರುಗಳಲ್ಲಿ ಯಾವದು ಹತ್ತಿರವೆಂದು ತಿಳಿದುಕೊಳ್ಳುವದಕ್ಕೆ ಅಳತೆಮಾಡಬೇಕು. ಯಾವ ಊರು ಹತ್ತಿರವಾಗಿದೆಯೋ ಆ ಊರಿನ ಹಿರಿಯರು ಇನ್ನು ನೊಗಕ್ಕೆ ಕಟ್ಟಲ್ಪಡದೆಯೂ ಯಾವ ಕೆಲಸವನ್ನೂ ಮಾಡದೆಯೂ ಇರುವ ಒಂದು ಮಣಕವನ್ನು ತೆಗೆದುಕೊಂಡು ಎಂದಿಗೂ ವ್ಯವಸಾಯವಿಲ್ಲದಂಥ ನೀರು ಯಾವಾಗಲೂ ಹರಿಯುವಂಥ ತಗ್ಗಿಗೆ ಹೋಗಿ ಅಲ್ಲಿ ಅದರ ಕುತ್ತಿಗೆಯನ್ನು ಮುರಿದು ಕೊಲ್ಲಬೇಕು. ಲೇವಿಕುಲದವರಾದ ಯಾಜಕರಲ್ಲಿ ಕೆಲವರು ಹತ್ತಿರ ಇರಬೇಕು. ನಿಮ್ಮ ದೇವರಾದ ಯೆಹೋವನು ಅವರನ್ನೇ ತನ್ನ ಸಾನ್ನಿಧ್ಯಸೇವೆಯನ್ನು ಮಾಡುವದಕ್ಕೂ ತನ್ನ ಹೆಸರಿನಿಂದ ಜನರನ್ನು ಆಶೀರ್ವದಿಸುವದಕ್ಕೂ ಆದುಕೊಂಡಿದ್ದಾನಲ್ಲಾ; ಅನುಮಾನವಾದ ಎಲ್ಲಾ ವ್ಯಾಜ್ಯಗಳ ಮತ್ತು ಹೊಡೆದಾಟಗಳ ವಿಷಯದಲ್ಲಿ ಅವರೇ ತೀರ್ಮಾನಿಸಬೇಕು. ಹತನಾದವನ ಶವಕ್ಕೆ ಹತ್ತಿರವಿರುವ ಗ್ರಾಮದ ಹಿರಿಯರು ತಗ್ಗಿನಲ್ಲಿ ಕುತ್ತಿಗೆ ಮುರಿಯಲ್ಪಟ್ಟ ಆ ಮಣಕದ ಮೇಲೆ ಕೈಗಳನ್ನು ತೊಳೆದುಕೊಂಡು — ನಮ್ಮ ಕೈಗಳು ಈ ಹತ್ಯವನ್ನು ಮಾಡಲಿಲ್ಲ, ನಮ್ಮ ಕಣ್ಣುಗಳು ನೋಡಲಿಲ್ಲ; ಯೆಹೋವನೇ, ನೀನು ಬಿಡುಗಡೆಮಾಡಿದ ನಿನ್ನ ಜನರನ್ನು ಕ್ಷಮಿಸಬೇಕು; ಅನ್ಯಾಯವಾದ ನರಹತ್ಯದೋಷವು ನಿನ್ನ ಜನರಾದ ಇಸ್ರಾಯೇಲ್ಯರಿಗೆ ತಗಲದಿರಲಿ ಎಂದು ಹೇಳಬೇಕು. ಆಗ ಆ ರಕ್ತಾಪರಾಧವು ಕ್ಷಮಿಸಲ್ಪಡುವದು. ಹೀಗೆ ಯೆಹೋವನ ದೃಷ್ಟಿಯಲ್ಲಿ ಸರಿಯಾದದ್ದನ್ನು ಮಾಡುವದರಿಂದ ನೀವೇ ಅನ್ಯಾಯವಾದ ನರಹತ್ಯದೋಷವನ್ನು ನಿಮ್ಮ ಮಧ್ಯದಿಂದ ತೆಗೆದುಹಾಕುವಿರಿ.

### ಸೆರೆಯವಳಾದ ಸ್ತ್ರೀಯನ್ನು ಮದುವೆಮಾಡಿಕೊಳ್ಳುವ ವಿಷಯ.

ನೀವು ಶತ್ರುಗಳೊಡನೆ ಯುದ್ಧಮಾಡಲಾಗಿ ನಿಮ್ಮ 10
ದೇವರಾದ ಯೆಹೋವನ ಅನುಗ್ರಹದಿಂದ ಅವರನ್ನು
ನಿಮ್ಮಿಂದ ಅಪಜಯಪಡಿಸಿ ಸೆರೆಹಿಡಿದಾಗ ನಿಮ್ಮಲ್ಲಿ 11
ಯಾವನಾದರೂ ಸೆರೆಯವರಲ್ಲಿ ಸುಂದರಸ್ತ್ರೀಯನ್ನು
ಕಂಡು ಮೋಹಿಸಿ ಮದುವೆಮಾಡಿಕೊಳ್ಳಬೇಕೆಂದು
ಅಪೇಕ್ಷಿಸಿದರೆ ಅವಳನ್ನು ಮನೆಗೆ ಕರಕೊಂಡು ಬರಲಿ; 12
ತರುವಾಯ ಅವಳು ಕ್ಷೌರಮಾಡಿಸಿಕೊಂಡು ಉಗುರು
ಗಳನ್ನು ತೆಗೆದುಕೊಂಡು ಸೆರೆಯ ಬಟ್ಟೆಗಳನ್ನು ತೆಗೆ 13
ದಿಟ್ಟು ಅವನ ಮನೆಯಲ್ಲಿ ಒಂದು ತಿಂಗಳಿನ ವರೆಗೆ
ತಾಯಿತಂದೆಗಳ ವಿಯೋಗದ ನಿಮಿತ್ತ ಹಂಬಲಿಸಲಿ. ಆ
ಮೇಲೆ ಅವನು ಅವಳನ್ನು ಹೆಂಡತಿಯನ್ನಾಗಿ ಮಾಡಿ
ಕೊಳ್ಳಬಹುದು. ತರುವಾಯ ಅವಳು ಅವನಿಗೆ ಇಷ್ಟ 14
ವಾಗನೆಹೋದರೆ ಅವನು ಅವಳನ್ನು ಅವಳ ಮನಸ್ಸು
ಬಂದಲ್ಲಿಗೆ ಕಳುಹಿಸಿಬಿಡಬೇಕು. ಅವಳನ್ನು ಕೂಡಿ
ದ್ದರಿಂದ ದಾಸತ್ವಕ್ಕೆ ಮಾರಲೂ ಬಾರದು ದಾಸಿಯಂತೆ
ನಡಿಸಲೂ ಬಾರದು.

### ಚೊಚ್ಚಲುಮಗನಿಗೆ ಜ್ಯೇಷ್ಠಾಂಶವು ದೊರೆಯಬೇಕೆಂಬ ವಿಧಿ.

ಯಾವನಾದರೂ ಇಬ್ಬರು ಹೆಂಡತಿಯರನ್ನು ಮಾಡಿ 15
ಕೊಂಡು ಅವರಲ್ಲಿ ಒಬ್ಬಳನ್ನು ಪ್ರೀತಿಸಿ ಮತ್ತೊಬ್ಬ
ಳನ್ನು ತಿರಸ್ಕರಿಸುವ ಸಂದರ್ಭದಲ್ಲಿ ಅವರಿಬ್ಬರೂ ಅವ
ನಿಂದ ಮಕ್ಕಳನ್ನು ಪಡೆದವರಾಗಿರಲಾಗಿ ಚೊಚ್ಚಲು
ಮಗನು ತಿರಸ್ಕರಿಸಲ್ಪಟ್ಟವಳಲ್ಲಿಯೇ ಹುಟ್ಟಿದ ಪಕ್ಷಕ್ಕೆ
ತಂದೆಯು ತನ್ನ ಆಸ್ತಿಯನ್ನು ಮಕ್ಕಳಿಗೆ ಸ್ವಾಸ್ತ್ಯ 16
ವಾಗಿ ಕೊಡುವಾಗ ಆ ತಿರಸ್ಕರಿಸಲ್ಪಟ್ಟವಳ ಮಗನನ್ನು
ತಳ್ಳಿಬಿಟ್ಟು ಪ್ರೀತಿಯ ಹೆಂಡತಿಯ ಮಗನನ್ನೇ ಚೊಚ್ಚ
ಲವನೆಂದು ಭಾವಿಸಕೂಡದು. ತಿರಸ್ಕರಿಸಲ್ಪಟ್ಟವಳ 17
ಮಗನೇ ಚೊಚ್ಚಲವನೆಂದು ಒಪ್ಪಿ ಅವನಿಗೆ ಎರಡು
ಭಾಗಗಳನ್ನು ಕೊಡಬೇಕು. ಅವನೇ ತಂದೆಯ ವೀ
ರ್ಯಕ್ಕೆ ಪ್ರಥಮಫಲವೂ ಚೊಚ್ಚಲುತನದ ಹಕ್ಕಿಗೆ
ಬಾಧ್ಯನೂ ಆಗಿದ್ದಾನಲ್ಲಾ.

### ದುಷ್ಟಪುತ್ರನ ಶಿಕ್ಷಾಕ್ರಮ.

ಒಬ್ಬ ಮಗನು ತಂದೆತಾಯಿಗಳ ಆಜ್ಞೆಗೆ ಒಳಗಾಗದೆ 18
ಶಿಕ್ಷಿಸಲ್ಪಟ್ಟರೂ ಮೊಂಡನೂ ಅವಿಧೇಯನೂ ಆಗಿ
ಅವರ ಮಾತನ್ನು ಕೇಳದೆಹೋದರೆ ತಂದೆತಾಯಿಗಳು 19
ಅವನನ್ನು ಹಿಡಿದು ಊರುಬಾಗಲಿಗೆ ಹಿರಿಯರ
ಮುಂದೆ ತಂದು ಅವರಿಗೆ — ಈ ನಮ್ಮ ಮಗನು ನಮ್ಮ 20
ಮಾತನ್ನು ಕೇಳುವದೇ ಇಲ್ಲ, ಆಜ್ಞೆಗೆ ಒಳಗಾಗುವ
ದಿಲ್ಲ; ಇವನು ಮೋಂಡ ಕುಡಿಕ ತುಂಟ ಎಂದು ಸಾಕ್ಷ
ಹೇಳಬೇಕು. ಆಗ ಊರಿನವರೆಲ್ಲರೂ ಅವನನ್ನು 21
ಕಲ್ಲೆಸೆದು ಕೊಲ್ಲಬೇಕು. ಹೀಗೆ ನೀವು ಆ ದುಷ್ಟತ್ವ
ವನ್ನು ನಿಮ್ಮ ಮಧ್ಯದೊಳಗಿಂದ ತೆಗೆದುಹಾಕಿಬಿಡ

ಬೇಕು. ಇಸ್ರಾಯೇಲ್ಯರೆಲ್ಲರೂ ಕೇಳಿ ಭಯಪಡು
ವರು.

ಮರಕ್ಕೆ ತೂಗಹಾಕಲ್ಪಟ್ಟ ಅಪರಾಧಿಯ ಶವವನ್ನು ಅದೇ ದಿನದಲ್ಲಿ ಹೂಣಬೇಕೆಂಬ ವಿಧಿ.

22 ಅಪರಾಧಮಾಡಿದವನು ಮರಣಶಿಕ್ಷೆಯನ್ನು ಹೊಂದಿ
ದ ಮೇಲೆ ನೀವು ಅವನ ಶವವನ್ನು ಮರಕ್ಕೆ ತೂಗ
23 ಹಾಕಿದರೆ ಅದು ರಾತ್ರಿಯಲ್ಲಿಯೂ ಮರದ ಮೇಲೆ
ಇರಬಾರದು; ಅದೇ ದಿನದಲ್ಲಿ ಅದನ್ನು ನೆಲದಲ್ಲಿ ಹೂಣ
ಬೇಕು. ನಿಮ್ಮ ದೇವರಾದ ಯೆಹೋವನು ನಿಮಗೆ
ಸ್ವದೇಶವಾಗುವದಕ್ಕೆ ಕೊಡುವ ದೇಶವು ಅಪವಿತ್ರವಾಗ
ಬಾರದು. ಮರಕ್ಕೆ ತೂಗಹಾಕಲ್ಪಟ್ಟವನು ದೇವರ
ಶಾಪವನ್ನು ಹೊಂದಿದವನಲ್ಲವೇ.

ಒಬ್ಬನು ಕಳೆದುಕೊಂಡ ವಸ್ತುವು ಮತ್ತೊಬ್ಬನಿಗೆ ಸಿಕ್ಕಿದಾಗ ಅದನ್ನು ಅವನಿಗೆ ತಿರಿಗಿ ಕೊಡಬೇಕೆಂಬ ವಿಧಿ.

**22** ಸ್ವದೇಶದವನ ಎತ್ತಾಗಲಿ ಕುರಿಯಾಗಲಿ ದಾರಿ
ತಪ್ಪಿ ಹೋಗಿರುವದನ್ನು ನೀವು ಕಂಡರೆ ಕಾಣದವ
ರಂತೆ ಅದನ್ನು ಬಿಟ್ಟು ಹೋಗಬಾರದು; ಅವನ ಬಳಿಗೆ
2 ಅಟ್ಟಿಕೊಂಡುಹೋಗಿ ಕೊಡಲೇ ಬೇಕು. ಅವನು
ನಿಮಗೆ ದೂರವಾಗಿದ್ದರೆ ಇಲ್ಲವೆ ಅವನು ಯಾರೋ
ಎಂದು ನಿಮಗೆ ತಿಳಿಯದೆಹೋದರೆ ಆ ಪಶುವನ್ನು
ನಿಮ್ಮ ಮನೆಗೆ ಹೊಡಕೊಂಡು ಬಂದು ಕಾಯಬೇಕು;
ಅವನು ಅದನ್ನು ಹುಡುಕುತ್ತಾ ಬಂದಾಗ ನೀವು
3 ಅದನ್ನು ಅವನಿಗೆ ತಿರಿಗಿ ಕೊಡಬೇಕು. ಅವನ ಕತ್ತೆ
ಯಾಗಲಿ ಬಟ್ಟೆಯಾಗಲಿ ಅವನು ಕಳೆದುಕೊಂಡ
ಯಾವ ವಸ್ತುವಾಗಲಿ ನಿನಗೆ ಸಿಕ್ಕಿದರೆ ಹಾಗೆಯೇ
ಮಾಡಬೇಕು; ಕಾಣದವರಂತೆ ಇರಲೇ ಬಾರದು.
4 ಸ್ವದೇಶದವನ ಕತ್ತೆಯಾಗಲಿ ಎತ್ತಾಗಲಿ ದಾರಿ
ಯಲ್ಲಿ ಬಿದ್ದಿರುವದನ್ನು ನೀವು ಕಂಡರೆ ಕಾಣದವರಂತೆ
ಹೋಗದೆ ಅವನಿಗೆ ಸಹಾಯಮಾಡಿ ಎಬ್ಬಿಸಬೇಕು.

ವಿಧವಿಧವಾದ ನೇಮಗಳು.

5 ಸ್ತ್ರೀಯು ಪುರುಷವೇಷವನ್ನೂ ಪುರುಷನು ಸ್ತ್ರೀವೇಷ
ವನ್ನೂ ಹಾಕಿಕೊಳ್ಳಕೂಡದು; ಹಾಗೆ ಮಾಡುವವರು
ನಿಮ್ಮ ದೇವರಾದ ಯೆಹೋವನಿಗೆ ಹೇಯರು.
6 ನೀವು ದಾರಿಯಲ್ಲಿ ಹೋಗುವಾಗ ಮರದ ಮೇಲಾ
ಗಲಿ ನೆಲದ ಮೇಲಾಗಲಿ ಇರುವ ಒಂದು ಪಕ್ಷಿಯ
ಗೂಡಿನೊಳಗೆ ಮರಿಗಳು ಅಥವಾ ತತ್ತಿಗಳು ಇದ್ದು
ಅವುಗಳ ಮೇಲೆ ತಾಯಿಹೊದಗಿರುವವನ್ನು ಕಂಡರೆ
ಮರಿಗಳನ್ನು ಮಾತ್ರ ತೆಗೆದುಕೊಳ್ಳಬಹುದೇ ಹೊರತು
7 ತಾಯಿಯನ್ನು ಹಿಡಿದುಕೊಳ್ಳಬಾರದು. ನೀವು ಹೀಗೆ
ನಡೆದುಕೊಂಡರೆ ನಿಮಗೆ ಶ್ರೇಯಸ್ಸುಂಟಾಗುವದು,
ಮತ್ತು ಬಹುಕಾಲ ಬಾಳುವಿರಿ.
8 ಹೊಸ ಮನೆಯನ್ನು ಕಟ್ಟಿಸಿಕೊಳ್ಳುವಾಗ ಯಾವ
ನಾದರೂ ಅದರ ಮಾಳಿಗೆಯಿಂದ ಬಿದ್ದು ನಿಮ
ಜೀವಹತ್ಯದೋಷವುಂಟಾಗದಂತೆ ಮಾಳಿಗೆಯ ಮೇ
ಸುತ್ತಲೂ ಸಣ್ಣ ಗೋಡೆಯನ್ನು ಕಟ್ಟಿಸಬೇಕು.
ದ್ರಾಕ್ಷೇತೋಟಗಳಲ್ಲಿ ಬೇರೆ ವಿಧವಾದ ಬಿತ್ತ
ಮಾಡಬಾರದು; ಹಾಗೆ ಮಾಡಿದರೆ ಆ ಬೆಳೆಯ
ಮತ್ತು ದ್ರಾಕ್ಷೆಯ ಬೆಳೆಯೂ ಅಂತೂ ಆ ತೋಟ
ಎಲ್ಲಾ ಬೆಳೆಯೂ ದೇವರದಾಗುವದು. ಎತ್ತನ
ಕತ್ತೆಯನ್ನೂ ಜೊತೆಮಾಡಿ ನೇಗಿಲಿಗೆ ಕಟ್ಟಬಾರದ
ನಾರೂ ಉಣ್ಣೆಯೂ ಕೂಡಿರುವ ಬಟ್ಟೆಯನ್ನು ಹಾ
ಕೊಳ್ಳಬಾರದು.
ನೀವು ಹೊದ್ದುಕೊಳ್ಳುವ ಬಟ್ಟೆಯ ನಾಲ
ಮೂಲೆಗಳಲ್ಲಿ ಗೊಂಡೆಗಳನ್ನು ಕಟ್ಟಬೇಕು.

ಮದುವೆಮಾಡಿಕೊಂಡ ಹೆಣ್ಣು ದುರಾಚಾರಿ ಎಂದು ಗಂಡನು ತಪ್ಪುಹೊರಿಸಿದ್ದಲ್ಲಿ ನಡಿಸಬೇಕಾದ ಕ್ರಮ.

ಯಾವನಾದರೂ ತಾನು ಮದುವೆಮಾಡಿಕೊಂ
ಸ್ತ್ರೀಯನ್ನು ದ್ವೇಷಿಸಿ ಅವಳ ವಿಷಯದಲ್ಲಿ ಸುಮ
ಸುಮ್ಮನೆ ಕೆಟ್ಟ ಮಾತುಗಳನ್ನು ಆಡಿ—ನಾನು ಇ
ಳನ್ನು ಮದುವೆಮಾಡಿಕೊಂಡೆನು; ಆದರೆ ಕೂಡಿದಾ
ಇವಳು ಕನ್ನಿಕೆಯಲ್ಲವೆಂದು ತಿಳಿದುಬಂತು ಎಂ
ಹೇಳಿ ಅವಳ ಹೆಸರನ್ನು ಕೆಡಿಸಿದರೆ ಅವಳ ತಾ
ತಂದೆಗಳು ತಮ್ಮ ಮಗಳು ವಿವಾಹಕ್ಕೆ ಮುಂಚೆ ಪುರು
ಸಂಪರ್ಕವಿಲ್ಲದವಳು ಎಂಬದಕ್ಕೆ ನಿದರ್ಶನವನ
1)ಊರುಬಾಗಲಿಗೆ ಹಿರಿಯರ ಮುಂದೆ ತಂ
ತೋರಿಸಬೇಕು, ತಂದೆ ಅವರಿಗೆ--ನಾನು ನನ್ನ ಮ
ಳನ್ನು ಈ ಪುರುಷನಿಗೆ ಮದುವೆಮಾಡಿಕೊಟ್ಟ ಮೇ
ಇವನು ಅವಳನ್ನು ದ್ವೇಷಿಸಿ ಪರಪುರುಷಸಂಪರ್ಕ
ಮಾಡಿದವಳೆಂದು ನಿರಾಧಾರವಾದ ಮಾತುಗಳನ್ನಾ
ಅವಳ ಹೆಸರನ್ನು ಅವಮಾನಪಡಿಸುತ್ತಾನೆ. ಇಗೋ
ನನ್ನ ಮಗಳು ವಿವಾಹಕ್ಕೆ ಮುಂಚೆ ಪುರುಷಸಂಪರ್ಕ
ಮಾಡಿದವಳಲ್ಲವೆಂಬದಕ್ಕೆ ಇದೇ ಪ್ರಮಾಣ ಎಂ
ಹೇಳಿ ಅವಳ ಹಚ್ಚಡವನ್ನು ಹಿರಿಯರ ಮುಂದೆ ಇ
ಬೇಕು. ಇಸ್ರಾಯೇಲ್ಯಳಾದ ಹೆಣ್ಣಿನ ವಿಷಯದ
ಆ ಪುರುಷನು ನಿರಾಧಾರವಾದ ತಪ್ಪು ಹೊರಿಸಿ
ರಿಂದ ಆ ಊರಿನ ಹಿರಿಯರು ಅವನನ್ನು ಹಿಡಿ
ಹೊಡಿಸಿ ನೂರು ರೂಪಾಯಿ ದಂಡವನ್ನು ವಿಧಿಸಿ
ಹಣವನ್ನು ಅವಳ ತಂದೆಗೆ ಕೊಡಿಸಬೇಕು. ಮತ್ತ
ಅವನು ಆ ಸ್ತ್ರೀಯನ್ನು ಹೆಂಡತಿಯನ್ನಾಗಿಯೇ ಇಟ
ಕೊಳ್ಳಬೇಕು; ಅವನ ಜೀವಮಾನಕಾಲವೆಲ್ಲಾ ಅ
ಳನ್ನು ಪರಿತ್ಯಾಗಮಾಡುವದಕ್ಕೆ ಅವನಿಗೆ ಅಧಿಕಾ
ವಿರುವದಿಲ್ಲ.
ಆದರೆ ಆ ಹೆಣ್ಣು ವಿವಾಹಕ್ಕೆ ಮುಂಚೆ ಪುರುಷಸ
ಪರ್ಕಮಾಡಿದವಳೇ ಎಂದು ತಿಳಿದುಬಂದರೆ ಅವಳ
ತಂದೆಯ ಮನೆಯಲ್ಲೇ ಸೂಳೆತನಮಾಡಿ ಇಸ್ರಾಯೆ
ಲ್ಯರೊಳಗೆ ದುರಾಚಾರವನ್ನು ನಡಿಸಿದ್ದರಿಂದ ಅವರ
ಅವಳನ್ನು ತಂದೆಯ ಮನೆಯ ಬಾಗಲಿಗೆ ತರಿ
ಬೇಕು; ಊರಿನವರೆಲ್ಲರು ಕಲ್ಲೆಸೆದು ಅವಳನ್ನು ಕೊಲ್

1) ಅಂದರೆ ಚಾವಡಿಗೆ.

ಬೇಕು. ಹೀಗೆ ಆ ದುಷ್ಟತ್ವವನ್ನು ನಿಮ್ಮ ಮಧ್ಯದಿಂದ ತೆಗೆದುಹಾಕಬೇಕು.

ವ್ಯಭಿಚಾರಮಾಡಿದವನಿಗೂ ಮದುವೆಯಿಲ್ಲದ ಸ್ತ್ರೀಯನ್ನು ಮಾನಭಂಗಪಡಿಸಿದವನಿಗೂ ಆಗಬೇಕಾದ ಶಿಕ್ಷೆ.

ಯಾವನಾದರೂ ಪರನ ಹೆಂಡತಿಯೊಡನೆ ವ್ಯಭಿಚಾರಮಾಡಿದ್ದು ಹೊರಬಿದ್ದರೆ ಆ ಸ್ತ್ರೀಪುರುಷರಿಬ್ಬರಿಗೂ ಮರಣಶಿಕ್ಷೆಯಾಗಬೇಕು. ಹೀಗೆ ನೀವು ಆ ದುಷ್ಟತ್ವವನ್ನು ಇಸ್ರಾಯೇಲ್ಯರ ಮಧ್ಯದಿಂದ ತೆಗೆದುಹಾಕಬೇಕು.

ಒಬ್ಬನಿಗೆ ನಿಶ್ಚಿತಳಾದ ಹೆಣ್ಣನ್ನು ಯಾವನಾದರೂ ಊರೊಳಗೆ ಮರುಳುಗೊಳಿಸಿ ಸಂಗಮಿಸಿದರೆ ನೀವು ಅವರಿಬ್ಬರನ್ನೂ ಊರುಬಾಗಲಿನ ಹೊರಕ್ಕೆ ತರಿಸಿ ಕಲ್ಲೆಸೆದು ಕೊಲ್ಲಬೇಕು. ಒಬ್ಬನಿಗೆ ನಿಶ್ಚಿತಳಾದ ಸ್ತ್ರೀಯನ್ನು ಕೆಡಿಸಿದ್ದರಿಂದ ಆ ಪುರುಷನಿಗೂ ಊರಲ್ಲಿದ್ದು ಕೂಗಿಕೊಳ್ಳದೆಹೋದದರಿಂದ ಆ ಸ್ತ್ರೀಗೂ ಮರಣಶಿಕ್ಷೆಯಾಗಬೇಕು. ಹೀಗೆ ನೀವು ಆ ದುಷ್ಟತ್ವವನ್ನು ನಿಮ್ಮ ಮಧ್ಯದಿಂದ ತೆಗೆದುಹಾಕಬೇಕು.

ಆದರೆ ಆ ಪುರುಷನು ನಿಶ್ಚಿತಳಾದ ಆ ಸ್ತ್ರೀಯನ್ನು ಅಡವಿಯಲ್ಲಿ ಬಲಾತ್ಕಾರದಿಂದ ಸಂಗಮಿಸಿದ್ದರೆ ಪುರುಷನಿಗೆ ಮಾತ್ರ ಮರಣಶಿಕ್ಷೆಯಾಗಬೇಕು. ಆ ಸ್ತ್ರೀಗೆ ಯಾವ ಶಿಕ್ಷೆಯೂ ಆಗಬಾರದು; ಅವಳಲ್ಲಿ ಮರಣಶಿಕ್ಷೆಗೆ ಪಾತ್ರವಾದ ಅಪರಾಧವೇನೂ ಇಲ್ಲ. ಒಬ್ಬ ಮನುಷ್ಯನು ಮತ್ತೊಬ್ಬನ ಮೇಲೆ ಬಿದ್ದು ಕೊಲ್ಲುವದು ಹೇಗೋ ಈ ಸಂಗತಿ ಹಾಗೆಯೇ ಆಯಿತು; ಆ ಸ್ತ್ರೀಯು ಅಡವಿಯಲ್ಲೇ ಅವನ ಕೈಗೆ ಸಿಕ್ಕಿದ್ದರಿಂದ ಅವಳು ಕೂಗಿಕೊಂಡರೂ ತಪ್ಪಿಸುವವರು ಇರಲಿಲ್ಲ.

ಯಾರಿಗೂ ನಿಶ್ಚಯವಾಗದೆ ಇರುವ ಸ್ತ್ರೀಯನ್ನು ಒಬ್ಬನು ಹಿಡಿದು ಸಂಗಮಿಸಿದ್ದು ಬೈಲಿಗೆ ಬಂದರೆ ಅವನು ಅವಳನ್ನು ಮಾನಭಂಗಪಡಿಸಿದ್ದರಿಂದ ಅವಳ ತಂದೆಗೆ ಐವತ್ತು ರೂಪಾಯಿ ಕೊಟ್ಟು ಅವಳನ್ನು ಹೆಂಡತಿಯನ್ನಾಗಿ ಮಾಡಿಕೊಳ್ಳಬೇಕು. ಅವನು ಬದುಕುವ ತನಕ ಅವಳನ್ನು ಪರಿತ್ಯಾಗಮಾಡುವದಕ್ಕೆ ಅವನಿಗೆ ಅಧಿಕಾರವಿರುವದಿಲ್ಲ.

ಮಲತಾಯಿಯ ಸಂಗನಿಷೇಧ.

ತಂದೆಗೆ ಹೆಂಡತಿಯಾದವಳನ್ನು ಸಂಗಮಿಸಲೇ ಬಾರದು; ಅದು ತಂದೆಗೆ ಅವಮಾನ ಪಡಿಸಿದ ಹಾಗಾಗುವದು.

ಸಭೆಗೆ ಸೇರಬಾರದವರ ವಿಷಯ.

3 ಬೀಜಹೊಡಿಸಿಕೊಂಡಾಗಲಿ ರಹಸ್ಯಾಂಗಛೇದಿಸಿಕೊಂಡಾಗಲಿ ನಪುಂಸಕರಾದವರು ಯೆಹೋವನ ಸಭೆಯಲ್ಲಿ ಸೇರಬಾರದು. ಅಗಮ್ಯಾಗಮನದಿಂದುಂಟಾದ ಸಂತತಿಯವರು ಹತ್ತನೆಯ ತಲೆಯವರಾದರೂ ಯೆಹೋವನ ಸಭೆಗೆ ಸೇರಬಾರದು.

ಅಮ್ಮೋನಿಯರಾಗಲಿ ಮೋವಾಬ್ಯರಾಗಲಿ ಯೆ 3
ಹೋವನ ಸಭೆಗೆ ಎಂದೆಂದಿಗೂ ಸೇರಬಾರದು. ಅವರ
ಸಂತತಿಯವರು ಹತ್ತನೆಯ ತಲೆಯವರಾದರೂ
ಯೆಹೋವನ ಸಭೆಗೆ ಸೇರಬಾರದು. ಯಾಕಂದರೆ 4
ನೀವು ಐಗುಪ್ತದೇಶದಿಂದ ಬಂದಾಗ [ಅಮ್ಮೋನಿಯರು]
ಅನ್ನಪಾನಗಳನ್ನು ತಂದು ನಿಮ್ಮನ್ನು ಎದುರುಗೊಳ್ಳ
ಲಿಲ್ಲ; [ಮೋವಾಬ್ಯರು] ನಿಮ್ಮನ್ನು ಶಪಿಸುವದಕ್ಕಾಗಿ
ಬೆಯೋರನ ಮಗನಾದ ಬಿಳಾಮನಿಗೆ ಹಣಕೊಟ್ಟು
1)ಎರಡು ನದಿಗಳ ಮಧ್ಯದಲ್ಲಿರುವ ಅರಾಮಿನ ಪೆತೋ
ರೂರಿನಿಂದ ಅವನನ್ನು ಕರಿಸಿದರು. (ಆದರೂ ನಿಮ್ಮ 5
ದೇವರಾದ ಯೆಹೋವನು ನಿಮ್ಮನ್ನು ಪ್ರೀತಿಸಿದ್ದರಿಂದ
ಬಿಳಾಮನ ಮಾತಿಗೆ ಸಮ್ಮತಿಸದೆ ಅವನಿಂದ ಶಾಪ
ವನ್ನು ನುಡಿಸದೆ ಆಶೀರ್ವಾದವನ್ನೇ ಹೇಳಿಸಿದನು.)
ನಿಮ್ಮ ಜೀವಮಾನಕಾಲವೆಲ್ಲಾ ಅವರ ಯೋಗಕ್ಷೇಮ 6
ವನ್ನು ಬಯಸಲೇ ಬಾರದು.
ಎದೋಮ್ಯರನ್ನು ಸಂಪೂರ್ಣವಾಗಿ ನಿಷೇಧಿಸಬಾರ 7
ದು; ಅವರು ಬಂಧುಜನಗಳು. ಐಗುಪ್ತ್ಯರನ್ನೂ
ಸಂಪೂರ್ಣವಾಗಿ ನಿಷೇಧಿಸಬಾರದು; ಅವರ ದೇಶದಲ್ಲಿ
ನೀವು ಪ್ರವಾಸಿಗಳಾಗಿದ್ದಿರಲ್ಲಾ. ಅವರ ಸಂತತಿಯವ 8
ರಲ್ಲಿ ಮೂರನೆಯ ತಲೆಯವರು ಯೆಹೋವನ ಸಭೆಗೆ
ಸೇರಬಹುದು.

ಯುದ್ಧಕಾಲದಲ್ಲಿ ಪಾಳೆಯವು ನಿರ್ಮಲವಾಗಿರಬೇಕೆಂಬ ವಿಧಿ.

ನೀವು ಶತ್ರುಗಳೊಡನೆ ಯುದ್ಧಕ್ಕೆ ಹೊರಟು ಪಾಳೆ 9
ಯದಲ್ಲಿರುವಾಗ ಯಾವ ಅಶುಚಿಯೂ ಆಗದಂತೆ
ಎಚ್ಚರದಿಂದಿರಬೇಕು. ರಾತ್ರಿಕಾಲದಲ್ಲಿ ವೀರ್ಯಸ್ಖಲ 10
ನದಿಂದ ಯಾವನಾದರೂ ಅಶುದ್ಧನಾದರೆ ಅವನು ಪಾಳೆ
ಯದೊಳಗೆ ಇರದೆ ಹೊರಗೆ ಇರಬೇಕು. ಅವನು 11
ಸಂಜೇವೇಳೆಯಲ್ಲಿ ಸ್ನಾನಮಾಡಿ ಸೂರ್ಯನು ಮುಣು
ಗಿದ ಮೇಲೆ ಪಾಳೆಯದೊಳಗೆ ಬರಬಹುದು.
ಪಾಳೆಯದ ಹೊರಗೆ ಪಾಯಖಾನೆಗಾಗಿ ಒಂದು 12
ಸ್ಥಳವನ್ನು ಗೊತ್ತುಮಾಡಬೇಕು. ಯುದ್ಧದ ಸಾಮಾ 13
ನುಗಳಲ್ಲದೆ ಸಲಿಕೆ ನಿಮ್ಮ ಬಳಿಯಲ್ಲಿ ಇರಬೇಕು;
ನೀವು ಬಹಿರ್ಭೂಮಿಗೆ ಹೋದಾಗ ಆ ಸಲಿಕೆಯಿಂದ
ಅಗಿದು ಕಲ್ಮಷವನ್ನು ಮುಚ್ಚಿಬಿಡಬೇಕು. ನಿಮ್ಮ 14
ದೇವರಾದ ಯೆಹೋವನು ನಿಮ್ಮನ್ನು ಕಾಪಾಡುವ
ದಕ್ಕೂ ಶತ್ರುಗಳನ್ನು ನಿಮ್ಮ ಕೈವಶಮಾಡುವದಕ್ಕೂ
ನಿಮ್ಮ ಪಾಳೆಯದೊಳಗೆ ಸಂಚಾರಮಾಡುತ್ತಾನಲ್ಲಾ;
ಆದದರಿಂದ ಪಾಳೆಯವು ನಿರ್ಮಲವಾಗಿರಬೇಕು; ನಿಮ್ಮ
ಲ್ಲಿ ಅಶುಚಿಯೇನಾದರೂ ಕಂಡುಬಂದರೆ ಆತನು ನಿಮ್ಮ
ನ್ನು ಬಿಟ್ಟುಹೋದಾನು.

ತಪ್ಪಿಸಿಕೊಂಡ ದಾಸರನ್ನು ಹಿಡಿದು ದಣಿಯ ವಶಪಡಿಸಬಾರದೆಂಬ ವಿಧಿ.

ತಪ್ಪಿಸಿಕೊಂಡ ದಾಸನು ನಿಮ್ಮಲ್ಲಿರುವದಕ್ಕೆ ಬಂದರೆ 15
ಅವನನ್ನು ಅವನ ದಣಿಗೆ ತಿರಿಗಿ ವಶಪಡಿಸಬಾರದು.
ನಿಮ್ಮ ಊರುಗಳಲ್ಲಿ ಯಾವ ಸ್ಥಳವು ಅವನಿಗೆ ಇಷ್ಟ 16

1) ಅಂದರೆ ಮೆಸೊಪೊತಾಮ್ಯ.

ವಾಗಿದೆಯೋ ಅಲ್ಲೇ ಅವನು ವಾಸವಾಗಿರಬಹುದು;
ನಿರ್ಬಂಧಪಡಿಸಬಾರದು.

ಸೂಳೆಗಾರಿಕೆ ನಿಷಿದ್ಧವಾದದ್ದು ಎಂಬ ವಿಷಯ.

17 ಇಸ್ರಾಯೇಲ್ಯರಲ್ಲಿ ಯಾವ ಸ್ತ್ರೀಯೂ ದೇವದಾಸಿ
ಯಾಗಬಾರದು; ಯಾವ ಪುರುಷನೂ ಗುದಮೈಥುನಿ
18 ಯಾಗಬಾರದು. ಸೂಳೆತನದಿಂದಾಗಲಿ ಗುದಮೈಥುನ
ದಿಂದಾಗಲಿ ಸಂಪಾದಿಸಿದ ಹಣವನ್ನು ಹರಕೆಯಾಗಿ
ನಿಮ್ಮ ದೇವರಾದ ಯೆಹೋವನ ಮಂದಿರದೊಳಗೆ
ತರಲೇ ಬಾರದು; ಈ ಎರಡೂ ಆತನಿಗೆ ಅಸಹ್ಯ.

ಸ್ವದೇಶದವನಿಂದ ಬಡ್ಡಿ ತೆಗೆದುಕೊಳ್ಳಬಾರದೆಂಬ ವಿಧಿ.

19 ಹಣವನ್ನಾಗಲಿ ಆಹಾರಪದಾರ್ಥಗಳನ್ನಾಗಲಿ ಬೇರೆ
20 ಯಾವದನ್ನಾಗಲಿ ಪರದೇಶದವನಿಗೆ ಬಡ್ಡಿಗೆ ಕೊಡ
ಬಹುದೇ ಹೊರತು ಸ್ವದೇಶದವನಿಗೆ ಕೊಡಬಾರದು.
ಹೀಗೆ ನಡೆದರೆ ನೀವು ಸ್ವದೇಶವಾಗಿ ಹೊಂದುವದಕ್ಕೆ
ಹೋಗುವ ದೇಶದಲ್ಲಿ ನಿಮ್ಮ ಎಲ್ಲಾ ಪ್ರಯತ್ನಗಳ
ಲ್ಲಿಯೂ ನಿಮ್ಮ ದೇವರಾದ ಯೆಹೋವನು ನಿಮ್ಮನ್ನು
ಅಭಿವೃದ್ಧಿಪಡಿಸುವನು.

ಹರಕೆಯನ್ನು ನೆರವೇರಿಸಬೇಕೆಂಬ ವಿಧಿ.

21 ನಿಮ್ಮ ದೇವರಾದ ಯೆಹೋವನಿಗೆ ಹರಕೆಮಾಡಿದ
ಮೇಲೆ ಅದನ್ನು ತಡಮಾಡದೆ ತೀರಿಸಬೇಕು; ಆತನು
ತಪ್ಪದೆ ಅದನ್ನು ವಿಚಾರಿಸುವನು; ತೀರಿಸದೆ ಹೋಗು
22 ವದು ಪಾಪ. ನೀವು ಹರಕೆಮಾಡದಿದ್ದರೆ ದೋಷ
23 ವೇನೂ ಇರಲಿಲ್ಲ; ಆದರೆ ಬಾಯಿಂದ ನುಡಿದದ್ದನ್ನು
ನೆರವೇರಿಸಲೇ ಬೇಕು. ನಿಮ್ಮ ದೇವರಾದ ಯೆಹೋ
ವನಿಗೆ ಬಾಯಿಂದ ಹರಕೆಮಾಡಿಕೊಂಡಂತೆಯೇ ಅದ
ನ್ನು ಒಪ್ಪಿಸಿಬಿಡಬೇಕು.

ಮತ್ತೊಬ್ಬನ ಬೆಳೆಯ ವಿಷಯದಲ್ಲಿ ನಡೆದುಕೊಳ್ಳತಕ್ಕ ಕ್ರಮ.

24 ಮತ್ತೊಬ್ಬನ ದ್ರಾಕ್ಷೇತೋಟದಲ್ಲಿ ನೀವು ಹೋಗು
ತ್ತಿರುವಾಗ ಇಷ್ಟಾನುಸಾರ ಹಣ್ಣುಗಳನ್ನು ತಿನ್ನಬಹು
ದೇ ಹೊರತು ಪಾತ್ರೆಯಲ್ಲಿ ತೆಗೆದುಕೊಂಡು ಹೋಗ
25 ಬಾರದು. ಮತ್ತೊಬ್ಬನ ಪೈರಿನಲ್ಲಿ ಹೋಗುತ್ತಿರು
ವಾಗ ತೆನೆಗಳನ್ನು ಕೈಯಿಂದ ಮುರುಕೊಳ್ಳಬಹುದೇ
ಹೊರತು ಆ ಪೈರಿಗೆ ಕುಡುಗೋಲು ಹಾಕಬಾರದು.

ಪರಿತ್ಯಾಗಮಾಡಿದ ಹೆಂಡತಿ ಮತ್ತೊಬ್ಬನನ್ನು ಸೇರಿದ ಪಕ್ಷಕ್ಕೆ
ಅವಳನ್ನು ಪುನಃ ಇಟ್ಟುಕೊಳ್ಳಬಾರದೆಂಬ ವಿಧಿ.

24 ಯಾವನಾದರೂ ತಾನು ಮದುವೆಮಾಡಿಕೊಂಡ
ಸ್ತ್ರೀಯಲ್ಲಿ ಏನೋ ಅವಲಕ್ಷಣವನ್ನು ಕಂಡು ಅವ
ಳಲ್ಲಿ ಸಂತೋಷಪಡದೆ ತ್ಯಾಗಪತ್ರವನ್ನು ಬರೆದು
ಕೊಟ್ಟು ಅವಳನ್ನು ಮನೆಯಿಂದ ಕಳುಹಿಸಿಬಿಟ್ಟಾಗ
2, 3 ಅವಳು ಮತ್ತೊಬ್ಬನನ್ನು ಮದುವೆಯಾಗಿ ಅವ
ನಿಂದಲೂ ತಿರಸ್ಕರಿಸಲ್ಪಟ್ಟು ತ್ಯಾಗಪತ್ರವನ್ನು ಹೊಂದಿ
ಕಳುಹಿಸಲ್ಪಟ್ಟರೆ ಅಥವಾ ಈ ಎರಡನೆಯ ಗಂಡನು
ಸತ್ತರೆ ಅವಳನ್ನು ಕಳುಹಿಸಿಬಿಟ್ಟ ಮೊದಲನೆಯ ಗಂಡ
ನು ಅವಳನ್ನು ಪುನಃ ಪರಿಗ್ರಹಿಸಬಾರದು; ಅವಳು
ಅಶುದ್ಧಳಾದಳು; ಅವನನ್ನು ಪುನಃ ಪರಿಗ್ರಹಿಸುವದು
ಯೆಹೋವನಿಗೆ ಹೇಯಕಾರ್ಯ. ನಿಮ್ಮ ದೇವರಾದ
ಯೆಹೋವನು ನಿಮಗೆ ಸ್ವದೇಶವಾಗುವದಕ್ಕೆ ಕೊ
ಡುವ ದೇಶಕ್ಕೆ ದೋಷವುಂಟಾಗುವಂತೆ ಅವಕಾಶಕೊಡ
ಬಾರದು.

ಹೊಸದಾಗಿ ಮದುವೆಮಾಡಿಕೊಂಡವನ ಮೇಲೆ ಭಾರವಾದ
ಕೆಲಸವನ್ನು ಹೊರಿಸಕೂಡದೆಂಬ ವಿಧಿ.

ಹೊಸದಾಗಿ ಮದುವೆಮಾಡಿಕೊಂಡವನು ಸೈನ್ಯದ
ವರೊಡನೆ ಯುದ್ಧಕ್ಕೆ ಹೋಗಬಾರದು; ಭಾರವಾದ
ಯಾವ ಕೆಲಸವನ್ನೂ ಅವನಿಗೆ ನೇಮಿಸಬಾರದು.
ಅವನು ಒಂದು ವರುಷದ ವರೆಗೂ ಬಿಡುವಾಗಿ ಮನೆ
ಯಲ್ಲಿ ಇದ್ದುಕೊಂಡು ಪರಿಗ್ರಹಿಸಿದ ಹೆಂಡತಿಯೊಡನೆ
ಸುಖವಾಗಿರಲಿ.

ನಿರ್ದಯತ್ವನಿಷೇಧ.

ಬೀಸುವಕಲ್ಲನ್ನು ಪೂರ್ತಿಯಾಗಲಿ ಅರ್ಧವಾಗಲಿ
ಒತ್ತೆತೆಗೆದುಕೊಳ್ಳಬಾರದು; ಅದು ಜೀವನಾಧಾರವನ್ನೇ
ಒತ್ತೆಯಾಗಿ ತೆಗೆದುಕೊಂಡ ಹಾಗಾಗುವದು.

ಯಾವನಾದರೂ ಸ್ವದೇಶದವನಾದ ಇಸ್ರಾಯೇಲ್ಯ
ನನ್ನು ಕದ್ದು ಅವನನ್ನು ದಾಸತ್ವದಲ್ಲಿ ನಡಿಸಿದ್ದಾಗಲಿ
ಮಾರಿಬಿಟ್ಟದ್ದಾಗಲಿ ಕಂಡುಬಂದರೆ ಕದ್ದವನಿಗೆ ಮರಣ
ಶಿಕ್ಷೆಯಾಗಬೇಕು. ಹೀಗೆ ಅಂಥ ದುಷ್ಟತ್ವವನ್ನು ನಿಮ್ಮ
ಮಧ್ಯದಿಂದ ತೆಗೆದುಹಾಕಬೇಕು.

ಕುಷ್ಠರೋಗಿಗಳ ವಿಷಯದಲ್ಲಿ ಯಾಜಕರಾದ
ಲೇವಿಯರು ಬೋಧಿಸುವಂತೆಯೇ ಮಾಡುವದಕ್ಕೆ
ನೀವು ಜಾಗರೂಕರಾಗಿರಬೇಕು; ನಾನು ಅವರಿಗೆ ಆಜ್ಞಾ
ಪಿಸಿದ ನಿಯಮಗಳನ್ನೇ ನೀವು ಅನುಸರಿಸಬೇಕು.
ನೀವು ಐಗುಪ್ತದೇಶದಿಂದ ಬಂದಾಗ ದಾರಿಯಲ್ಲಿ
ನಿಮ್ಮ ದೇವರಾದ ಯೆಹೋವನು ಮಿರ್ಯಾಮಳಿಗೆ
ಮಾಡಿದ್ದನ್ನು ನೆನಪುಮಾಡಿಕೊಳ್ಳಿರಿ.

ಮತ್ತೊಬ್ಬನಿಗೆ ಸಾಲಕೊಡುವಾಗ ಒತ್ತೆಯನ್ನು
ತೆಗೆದುಕೊಳ್ಳುವದಕ್ಕೆ ಅವನ ಮನೆಯೊಳಕ್ಕೆ ಹೋಗದೆ
ಹೊರಗೆ ಇರಬೇಕು; ಸಾಲತೆಗೆದುಕೊಂಡವನೇ ಒತ್ತೆ
ಯ ಸಾಮಾನನ್ನು ತಂದು ಕೊಡಬೇಕು. ಅವನು
ಕೇವಲ ಬಡತನದಿಂದ ತನ್ನ ಕಂಬಳಿಯನ್ನೇ ಒತ್ತೆ
ಯಾಗಿ ಇಟ್ಟ ಸಂದರ್ಭದಲ್ಲಿ ಹೊತ್ತುಮುಣುಗಿದಾಗ
ಅದನ್ನು ಹಿಂದಕ್ಕೆ ಕೊಡಬೇಕು; ಅದನ್ನು ಇಟ್ಟು
ಕೊಂಡು ರಾತ್ರಿ ಮಲಗಬಾರದು; ಅವನು ಅದನ್ನು
ಹೊದ್ದುಕೊಂಡೇ ಮಲಗಿಕೊಳ್ಳಬೇಕಲ್ಲಾ; ಅದಲ್ಲದೆ
ಅವನು ನಿಮ್ಮನ್ನು ಹರಸುವನು, ಮತ್ತು ನೀವು ಮಾ
ಡಿದ್ದು ಧರ್ಮಕಾರ್ಯವೆಂದು ನಿಮ್ಮ ದೇವರಾದ ಯೆ
ಹೋವನು ತಿಳಿದುಕೊಳ್ಳುವನು.

ನೀವು ಸ್ವದೇಶದವರಲ್ಲಿಯಾಗಲಿ ನಿಮ್ಮಲ್ಲಿರುವ

ಅನ್ಯದೇಶದವರಲ್ಲಿಯಾಗಲಿ ಗತಿಯಿಲ್ಲದ ಬಡ ಕೂಲಿಯವನಿಗೆ ಏನೂ ಅನ್ಯಾಯಮಾಡದೆ ದಿನದ ಕೂಲಿಯನ್ನು ಆ ದಿನದಲ್ಲೇ ಹೊತ್ತುಮುಣುಗುವದಕ್ಕೆ ಮುಂಚಿತವಾಗಿ ಅವನಿಗೆ ಕೊಡಬೇಕು. ಅವನಿಗೆ ಬೇರೆ ಗತಿಯಿಲ್ಲದ್ದರಿಂದ ಅದನ್ನೇ ಎದುರುನೋಡುತ್ತಾನಲ್ಲಾ. ನೀವು ಕೊಡದಿದ್ದರೆ ಅವನು ಯೆಹೋವನಿಗೆ ಮೊರೆಯಿಟ್ಟಾನು; ಆಗ ನೀವು ದೋಷಿಗಳಾಗಿ ಕಂಡುಬಂದೀರಿ.

ಮಕ್ಕಳ ಪಾಪದ ದೆಸೆಯಿಂದ ತಂದೆಗೂ ತಂದೆಯ ಪಾಪದ ದೆಸೆಯಿಂದ ಮಕ್ಕಳಿಗೂ ಮರಣಶಿಕ್ಷೆಯಾಗಬಾರದು. ಪ್ರತಿಯೊಬ್ಬನೂ ತನ್ನ ಪಾಪಫಲವನ್ನು ತಾನೇ ಅನುಭವಿಸಬೇಕು.

ನೀವು ಪರದೇಶಿಯ ಅಥವಾ ದಿಕ್ಕಿಲ್ಲದವನ ವ್ಯಾಜ್ಯವನ್ನು ವಿಚಾರಿಸುವಾಗ ನ್ಯಾಯವನ್ನು ಬಿಟ್ಟು ತೀರ್ಪು ಕೊಡಬಾರದು. ವಿಧವೆಯಿಂದ ಉಡುವ ಬಟ್ಟೆಯನ್ನು ಒತ್ತೆಯಿಡಿಸಿಕೊಳ್ಳಬಾರದು. ನೀವೇ ಐಗುಪ್ತದೇಶದಲ್ಲಿ ದಾಸರಾಗಿದ್ದಾಗ ನಿಮ್ಮ ದೇವರಾದ ಯೆಹೋವನು ನಿಮ್ಮನ್ನು ಬಿಡಿಸಿದನೆಂಬದನ್ನು ನೆನಪುಮಾಡಿಕೊಳ್ಳಿರಿ; ಆದಕ್ಕಾಗಿಯೇ ಇದನ್ನು ಆಜ್ಞಾಪಿಸಿದ್ದೇನೆ.

ನೀವು ಪೈರುಗಳನ್ನು ಕೊಯ್ಯುವಾಗ ಒಂದು ಸಿವುಡನ್ನು ಹೊಲದಲ್ಲೇ ಮರೆತುಬಂದರೆ ಅದನ್ನು ತರುವದಕ್ಕೆ ಹಿಂದಕ್ಕೆ ಹೋಗಬಾರದು; ಪರದೇಶಿ, ತಾಯಿತಂದೆಯಿಲ್ಲದವ, ವಿಧವೆ ಇಂಥವರಿಗೋಸ್ಕರ ಇರಲಿ. ನೀವು ಹೀಗೆ ನಡೆದುಕೊಂಡರೆ ನಿಮ್ಮ ದೇವರಾದ ಯೆಹೋವನು ನಿಮ್ಮ ಎಲ್ಲಾ ಕೆಲಸಗಳಲ್ಲಿಯೂ ನಿಮ್ಮನ್ನು ಅಭಿವೃದ್ಧಿಪಡಿಸುವನು. ಎಣ್ಣೆಯಮರಗಳ ರೆಂಬೆಗಳನ್ನು ಹೊಡೆದು ಕಾಯಿಗಳನ್ನು ಉದುರಿಸಿದ ಮೇಲೆ ಪುನಃ ಉದುರಿಸುವದಕ್ಕೆ ಹೋಗಬಾರದು; ಮಿಕ್ಕ ಕಾಯಿಗಳು ಪರದೇಶಿ, ತಾಯಿತಂದೆಯಿಲ್ಲದವ, ವಿಧವೆ ಇಂಥವರಿಗೋಸ್ಕರ ಇರಲಿ. ದ್ರಾಕ್ಷೆಯ ತೋಟದ ಬೆಳೆಯನ್ನು ಕೂಡಿಸಿಕೊಳ್ಳುವಾಗ ಹಕ್ಕಬಾಯಬಾರದು; ಅದು ಪರದೇಶಿ, ತಾಯಿತಂದೆಯಿಲ್ಲದವ, ವಿಧವೆ ಇಂಥವರಿಗೋಸ್ಕರ ಇರಲಿ. ನೀವೇ ಐಗುಪ್ತದೇಶದಲ್ಲಿ ದಾಸರಾಗಿದ್ದದ್ದು ಜ್ಞಾಪಕದಲ್ಲಿರಬೇಕು; ಆದಕ್ಕಾಗಿಯೇ ಇದನ್ನು ನಿಮಗೆ ಆಜ್ಞಾಪಿಸಿದ್ದೇನೆ.

5 ಇಬ್ಬರು ವ್ಯಾಜ್ಯವಾಡುತ್ತಾ ನ್ಯಾಯಾಧಿಪತಿಗಳ ಬಳಿಗೆ ಬಂದರೆ ನ್ಯಾಯಾಧಿಪತಿಗಳು ತಪ್ಪಿಲ್ಲದವನನ್ನು ನಿರಪರಾಧಿ ಎಂದೂ ತಪ್ಪುಳ್ಳವನನ್ನು ಅಪರಾಧಿ ಎಂದೂ ತೀರ್ಮಾನಿಸಬೇಕು. ಅಪರಾಧಿಗೆ ಪೆಟ್ಟಿನ ಶಿಕ್ಷೆ ತೀರ್ಮಾನವಾದರೆ ನ್ಯಾಯಾಧಿಪತಿಯು ಅವನನ್ನು ಮಲಗಿಸಿ ಅವನ ಅಪರಾಧಕ್ಕೆ ಅನುಸಾರವಾಗಿ ಪೆಟ್ಟುಗಳನ್ನು ತನ್ನ ಮುಂದೆಯೇ ಹೊಡಿಸಿ ಲೆಕ್ಕಿಸಬೇಕು. ಪೆಟ್ಟುಗಳ ಶಿಕ್ಷೆಯು ನಾಲ್ವತ್ತಕ್ಕಿಂತ ಹೆಚ್ಚಿರಬಾರದು. ಅದಕ್ಕಿಂತ ಮೀರಿ ನೀವು ಹೆಚ್ಚು ಪೆಟ್ಟುಗಳನ್ನು ಹೊಡಿಸಿದರೆ ನಿಮ್ಮ ಸ್ವದೇಶದವನು ನಿಮಗೆ ಕೇವಲ ನೀಚನಾಗಿ ಕಾಣಿಸಾನು.

ಕಣತುಳಿಯುವ ಎತ್ತಿನ ಬಾಯಿ ಕಟ್ಟಬಾರದು.

ಮೈದುನನಿಂದ ವಂಶಾಭಿವೃದ್ಧಿ ಆಗಬೇಕೆಂಬ ವಿಷಯ.

ಅಣ್ಣತಮ್ಮಂದಿರು ಒಂದೇ ಕುಟುಂಬದಲ್ಲಿರುವಾಗ 5
ಅಣ್ಣನು ಮಗನಿಲ್ಲದೆ ಸತ್ತರೆ ಅವನ ಹೆಂಡತಿ ಬೇರೆ
ಪುರುಷನನ್ನು ಮದುವೆಯಾಗಬಾರದು. ಅವಳ ಮೈ
ದುನ ಅವಳನ್ನು ಹೆಂಡತಿಯಾಗಿ ತೆಗೆದುಕೊಂಡು ಮೈ
ದುನಧರ್ಮವನ್ನು ನೆರವೇರಿಸಬೇಕು. ಅವಳಲ್ಲಿ ಹು 6
ಟ್ಟುವ ಚೊಚ್ಚಲುಮಗನು ಸತ್ತವನ ಮಗನೆಂದು ಎಣಿ
ಸಲ್ಪಡಬೇಕು; ಹೀಗೆ ಆಗುವದರಿಂದ ಸತ್ತವನ ಹೆಸರು
ಇಸ್ರಾಯೇಲ್ಯರೊಳಗಿಂದ ನಾಶವಾಗಿ ಹೋಗುವದಿಲ್ಲ.
ತಮ್ಮನು ಅಣ್ಣನ ಹೆಂಡತಿಯನ್ನು ಪರಿಗ್ರಹಿಸಲೊಲ್ಲದೆ 7
ಹೋದರೆ ಅವಳು ಚಾವಡಿಗೆ ಹೋಗಿ ಹಿರಿಯರಿಗೆ—
ನನ್ನ ಗಂಡನ ತಮ್ಮನು ತನ್ನ ಅಣ್ಣನ ಹೆಸರನ್ನು
ಉಳಿಸಲೊಲ್ಲನು; ಮೈದುನಧರ್ಮವನ್ನು ನಡಿಸುವ
ದಿಲ್ಲ ಅನ್ನುತ್ತಾನೆ ಎಂದು ತಿಳಿಸಬೇಕು. ಆಗ ಆ ಊ 8
ರಿನ ಹಿರಿಯರು ಅವನನ್ನು ಕರಿಸಿ ವಿಚಾರಿಸಿದಲ್ಲಿ ಅವನು
ಅವರ ಮುಂದೆ ನಿಂತು—ಈಕೆಯನ್ನು ಪರಿಗ್ರಹಿಸು
ವದಕ್ಕೆ ನನಗೆ ಇಷ್ಟವಿಲ್ಲ ಎಂದು ಹೇಳುವ ಪಕ್ಷಕ್ಕೆ
ಅವನ ಅತ್ತಿಗೆ ಹಿರಿಯರ ಎದುರಿನಲ್ಲಿ ಅವನ ಕೆರವನ್ನು 9
ಅವನ ಕಾಲಿನಿಂದ ತೆಗೆದುಬಿಟ್ಟು, ಅವನ ಮುಖದ
ಮೇಲೆ ಉಗುಳಿ—ಅಣ್ಣನಿಗೋಸ್ಕರ ಸಂತಾನವನ್ನು
ಹುಟ್ಟಿಸಲೊಲ್ಲದವರೆಲ್ಲರಿಗೂ ಇಂಥ ಅಪಮಾನವಾಗಲಿ
ಎಂದು ಹೇಳಬೇಕು. ಆ ಮನುಷ್ಯನ ಮನೆಯವರಿಗೆ— 10
ಕೆರವನ್ನು ಬಿಚ್ಚಿಸಿಕೊಂಡವನ ಮನೆಯವರು ಎಂದು
ಹೆಸರುಂಟಾಗುವದು.

ಲಜ್ಜಾಹೀನಳಾದ ಸ್ತ್ರೀಗೆ ವಿಧಿಸಬೇಕಾದ ಶಿಕ್ಷಾಕ್ರಮ.

ಇಬ್ಬರು ಜಗಳವಾಡುತ್ತಿರಲಾಗಿ ಅವರಲ್ಲಿ ಒಬ್ಬನ 11
ಹೆಂಡತಿ ಬಂದು ತನ್ನ ಗಂಡನನ್ನು ಬಿಡಿಸಬೇಕೆಂದು
ಆ ಪರಪುರುಷನ ಪ್ರಧಾನಸ್ಥಾನವನ್ನು ಹಿಡಿದುಕೊಂಡರೆ
ಕನಿಕರಿಸದೆ ಅವಳ ಕೈ ಕಡಿದುಹಾಕಸಬೇಕು. 12

ವ್ಯಾಪಾರದಲ್ಲಿ ಅಳತೆತೂಕಗಳು ಸರಿಯಾಗಿಯೇ
ಇರಬೇಕೆಂಬ ವಿಧಿ.

ಹೆಚ್ಚುಕಡಮೆಯಾಗಿರುವ ಎರಡು ವಿಧವಾದ ತೂಕದ 13
ಕಲ್ಲುಗಳನ್ನು ನಿಮ್ಮ ಚೀಲದಲ್ಲಿಟ್ಟುಕೊಳ್ಳಬಾರದು.
ಹೆಚ್ಚುಕಡಮೆಯಾದ ಎರಡು ವಿಧವಾದ ಸೇರುಗಳು 14
ನಿಮ್ಮ ಮನೆಯಲ್ಲಿರಬಾರದು. ನಿಮ್ಮ ತೂಕದ ಕಲ್ಲೂ 15
ನಿಮ್ಮ ಅಳತೆಯ ಸೇರೂ ನ್ಯಾಯವಾಗಿಯೇ ಇರಬೇಕು.
ನೀವು ಹೀಗೆ ನಡೆದುಕೊಂಡರೆ ನಿಮ್ಮ ದೇವರಾದ
ಯೆಹೋವನು ನಿಮಗೆ ಕೊಡುವ ದೇಶದಲ್ಲಿ ಬಹು
ಕಾಲ ಬಾಳುವಿರಿ. ನ್ಯಾಯವಿರುದ್ಧವಾದ ಅಳತೆತೂಕ 16
ಗಳನ್ನು ಮಾಡುವವರೆಲ್ಲರೂ ನಿಮ್ಮ ದೇವರಾದ
ಯೆಹೋವನಿಗೆ ಹೇಯವಾಗಿದ್ದಾರೆ.

ಅಮಾಲೇಕ್ಯರನ್ನು ನಿಶ್ಶೇಷವಾಗಿ ಸಂಹಾರಮಾಡಬೇಕೆಂಬ ವಿಧಿ.

ನೀವು ಐಗುಪ್ತದೇಶದಿಂದ ಬರುವಾಗ ದಾರಿಯಲ್ಲಿ 17
ಅಮಾಲೇಕ್ಯರು ನಿಮ್ಮನ್ನು ಎದುರಿಸಿದ್ದನ್ನು ಜ್ಞಾಪಿಸಿ
ಕೊಳ್ಳಿರಿ. ಅವರು ದೇವರಲ್ಲಿ ಸ್ವಲ್ಪವೂ ಭಯಭಕ್ತಿ 18

ಯಿಲ್ಲದವರಾಗಿ ನೀವು ದಣಿದು ಬಳಲಿ ಇದ್ದಾಗ
ನಿಮ್ಮವರಲ್ಲಿ ಹಿಂದೆಬಿದ್ದ ಬಲಹೀನರನ್ನು ಸಂಹಾರ
19 ಮಾಡಿದರಲ್ಲಾ. ಆದಕಾರಣ ನಿಮ್ಮ ದೇವರಾದ
ಯೆಹೋವನು ನಿಮಗೆ ಸ್ವದೇಶವಾಗುವದಕ್ಕೆ ಕೊಡುವ
ದೇಶದಲ್ಲಿ ನಿಮ್ಮನ್ನು ಸೇರಿಸಿ ಸುತ್ತಲು ಯಾವ ಶತ್ರು
ಗಳೂ ಇಲ್ಲದಂತೆ ಮಾಡಿದಾಗ ಭೂಮಿಯ ಮೇಲೆ
ಅಮಾಲೇಕ್ಯರ ಹೆಸರೇ ಉಳಿಯದಂತೆ ನೀವು ಮಾಡ
ಬೇಕು; ಇದನ್ನು ಮರೆಯಬಾರದು.

ಪ್ರತಿವರುಷದಲ್ಲಿಯೂ ಪ್ರಥಮಫಲಗಳನ್ನು ಸಮರ್ಪಿಸುವಾಗ
ಮಾಡಬೇಕಾದ ಆರಾಧನಾಕ್ರಮ.

**26** ನಿಮ್ಮ ದೇವರಾದ ಯೆಹೋವನು ನಿಮಗೆ ಸ್ವದೇಶ
ವಾಗುವದಕ್ಕೆ ಕೊಡುವ ದೇಶವನ್ನು ನೀವು ಸೇರಿ
ಸ್ವಾಧೀನಮಾಡಿಕೊಂಡು ಅದರಲ್ಲಿ ವಾಸಿಸುವಾಗ
2 ಆತನು ದಯಪಾಲಿಸಿದ ಹೊಲದ ಎಲ್ಲಾ ಬೆಳೆಗಳ
ಲ್ಲಿಯೂ ನೀವು ಕೆಲವು ಪ್ರಥಮಫಲಗಳನ್ನು ಪುಟ್ಟಿ
ಯಲ್ಲಿಟ್ಟು ನಿಮ್ಮ ದೇವರಾದ ಯೆಹೋವನು ತನ್ನ
ಹೆಸರನ್ನು ಸ್ಥಾಪಿಸುವದಕ್ಕೆ ಆದುಕೊಳ್ಳುವ ಸ್ಥಳಕ್ಕೆ
3 ತೆಗೆದುಕೊಂಡುಹೋಗಿ ಆ ಕಾಲದಲ್ಲಿ ಇರುವ ಮಹಾ
ಯಾಜಕನಿಗೆ—ಯೆಹೋವನು ನಮ್ಮ ಪಿತೃಗಳಿಗೆ
ಪ್ರಮಾಣಮಾಡಿಕೊಟ್ಟ ದೇಶದಲ್ಲಿ ನಾವು ಸೇರಿದ್ದಾ
ಯಿತೆಂದು ನೀನು ಸೇವಿಸುವ ದೇವರಾದ ಯೆಹೋ
ವನ ಸನ್ನಿಧಿಯಲ್ಲಿ ಈಗ ಒಪ್ಪಿಕೊಂಡಿದ್ದೇವೆ ಎಂದು
4 ಹೇಳಬೇಕು. ಯಾಜಕನು ಆ ಪುಟ್ಟಿಯನ್ನು ನಿಮ್ಮ
ಕೈಯಿಂದ ತೆಗೆದುಕೊಂಡು ನಿಮ್ಮ ದೇವರಾದ ಯೆ
5 ಹೋವನ ಯಜ್ಞವೇದಿಯ ಮುಂದೆ ಇಟ್ಟಾಗ ನೀವು
ನಿಮ್ಮ ದೇವರಾದ ಯೆಹೋವನ ಸನ್ನಿಧಿಯಲ್ಲಿ—
ಅರಾಮ್ಯನಾದ ನಮ್ಮ ಮೂಲಪಿತೃವು ಗತಿಯಿಲ್ಲದವ
ನಾಗಿ ಸ್ವಲ್ಪ ಮಂದಿಯೊಡನೆ ಐಗುಪ್ತದೇಶಕ್ಕೆ ಹೋಗಿ
ಅಲ್ಲಿ ಇಳಿದುಕೊಂಡನು. ಅಲ್ಲಿ ಅವನ ಸಂತಾನ
6 ದವರು ಹೆಚ್ಚಿ ಮಹಾಬಲಿಷ್ಠ ಜನಾಂಗವಾದರು. ಐಗು
ಪ್ತ್ಯರು ನಮ್ಮನ್ನು ಉಪದ್ರವಪಡಿಸಿ ಬಾಧಿಸಿ ನಮ್ಮಿಂದ
7 ಕಠಿಣವಾಗಿ ದುಡಿಸಿಕೊಂಡಾಗ ನಾವು ನಮ್ಮ ಪಿತೃಗಳ
ದೇವರಾದ ಯೆಹೋವನಿಗೆ ಮೊರೆಯಿಡಲಾಗಿ ಆತನು
ಕೇಳಿ ನಮ್ಮ ದುರವಸ್ಥೆಯನ್ನೂ ಕಷ್ಟವನ್ನೂ ಉಪ
8 ದ್ರವವನ್ನೂ ನೋಡಿ ಭುಜಬಲವನ್ನೂ ಶಿಕ್ಷಾಹಸ್ತ
ವನ್ನೂ ಮಹಾಭೀತಿಗಳನ್ನೂ ಮಹತ್ಕಾರ್ಯಗಳನ್ನೂ
ಉತ್ಪಾತಗಳನ್ನೂ ಪ್ರಯೋಗಿಸಿ ನಮ್ಮನ್ನು ಬಿಡಿಸಿ
9 ಐಗುಪ್ತದೇಶದಿಂದ ಕರತಂದು ಹಾಲೂ ಜೇನೂ ಹರಿ
10 ಯುವ ಈ ದೇಶವನ್ನು ನಮಗೆ ಕೊಟ್ಟಿದ್ದಾನೆ. ಆದ
ದರಿಂದ ಯೆಹೋವನೇ, ನೀನು ಅನುಗ್ರಹಿಸಿರುವ
ಭೂಮಿಯ ಬೆಳೆಯಲ್ಲಿ ಪ್ರಥಮಫಲಗಳನ್ನು ನಾವು
ಕಾಣಿಕೆಯಾಗಿ ತಂದಿದ್ದೇವೆ; ಸ್ವೀಕರಿಸಬೇಕು ಎಂದು
ಹೇಳಿ ಆ ಪ್ರಥಮಫಲಗಳನ್ನು ನಿಮ್ಮ ದೇವರಾದ
ಯೆಹೋವನ ಸನ್ನಿಧಿಯಲ್ಲಿಟ್ಟು ಆತನನ್ನು ಆರಾಧಿಸ
11 ಬೇಕು. ಆತನು ನಿಮಗೂ ನಿಮ್ಮ ಮನೆಯವರಿಗೂ
ಉಂಟುಮಾಡಿದ ಎಲ್ಲಾ ಸುಖಸಂತೋಷಗಳಿಗಾಗಿ
ನೀವೂ ಲೇವಿಯರೂ ನಿಮ್ಮ ಮಧ್ಯದಲ್ಲಿರುವ ಪರದೇಶಿ
ಗಳೂ ಸಂಭ್ರಮದಿಂದಿರಬೇಕು.

ಪ್ರತಿ ಮೂರನೆಯ ವರುಷದಲ್ಲಿ ದಶಮಾಂಶವನ್ನು ಸಮರ್ಪಿಸುವ
ಮಾಡಬೇಕಾದ ಆರಾಧನಾಕ್ರಮ.

ದಶಮಾಂಶವನ್ನು ಕೊಡಬೇಕಾದ ಮೂರನೆ
ಸಂವತ್ಸರದಲ್ಲಿ ನಿಮಗುಂಟಾದ ಆದಾಯದ ದಶ
ಭಾಗವನ್ನು ಪ್ರತ್ಯೇಕಿಸಿದಾಗ ನಿಮ್ಮನಿಮ್ಮ ಊರು
ಲ್ಲಿರುವ ಲೇವಿಯರೂ ಪರದೇಶಿಗಳೂ ತಾಯಿತ
ಯಿಲ್ಲದವರೂ ವಿಧವೆಯರೂ ಉಂಡು ಸಂತೋಷ
ಗಿರುವಂತೆ ಅದನ್ನು ಅವರಿಗೆ ಕೊಡಬೇಕಲ್ಲಾ.
ನಿಮ್ಮ ದೇವರಾದ ಯೆಹೋವನ ಸನ್ನಿಧಿಯಲ್ಲಿ
ನಾವು ಮೀಸಲಾದ ವಸ್ತುಗಳನ್ನು ಮನೆಯಿಂದ ತೆಗೆ
ಬಿಟ್ಟಿದ್ದೇವೆ; ನೀನು ಆಜ್ಞಾಪಿಸಿದ ಮೇರೆಗೆ
ಗಳನ್ನು ಲೇವಿಯ, ಪರದೇಶಿ, ತಾಯಿತಂದೆಯಿ
ದವ, ವಿಧವೆ ಇಂಥವರಿಗೆ ಕೊಟ್ಟಿದ್ದೇವೆ; ನಿನ್ನ ಆ
ಗಳಲ್ಲಿ ಒಂದನ್ನೂ ಮೀರಲೂ ಇಲ್ಲ ಮರೆಯಲೂ ಇ
ನಾವು [ಸತ್ತವರಿಗೋಸ್ಕರ] ದುಃಖಿಸುವ ಕಾ
ಲ್ಲೆಲ್ಲಾ ಅದರಲ್ಲಿ ಏನೂ ತಿನ್ನಲಿಲ್ಲ; ಅಶುದ್ಧರ
ಅದನ್ನು ತೆಗೆದುಹಾಕಲಿಲ್ಲ; ಸತ್ತವರಿಗೋಸ್ಕರ
ರಲ್ಲಿ ಏನೂ ಕೊಡಲಿಲ್ಲ; ನಮ್ಮ ದೇವರಾದ ಯೆಹ
ವನ ಮಾತಿನಲ್ಲಿ ಲಕ್ಷ್ಯವಿಟ್ಟು ನೀನು ನೇಮಿಸಿ
ನ್ನೆಲ್ಲಾ ಅನುಸರಿಸಿದ್ದೇವೆ. ನೀನು ನಿನ್ನ ಪರಿಶು
ವಾಸಸ್ಥಾನವಾಗಿರುವ ಪರಲೋಕದಿಂದ ಕೆಳಗಿರ
ನಮ್ಮನ್ನು ಕಟಾಕ್ಷಿಸಿ ನಿನ್ನ ಜನರಾದ ಇಸ್ರಾಯೇ
ರನ್ನೂ ಹಾಲೂ ಜೇನೂ ಹರಿಯುವ ದೇಶವೆಂ
ನೀನು ನಮ್ಮ ಪಿತೃಗಳಿಗೆ ವಾಗ್ದಾನಮಾಡಿದ ಮೇ
ನಮಗೆ ಕೊಟ್ಟಿರುವ ಈ ಭೂಮಿಯನ್ನೂ ಆಶೀ
ದಿಸು ದೇವರೇ ಎಂದು ಹೇಳಬೇಕು.

ಮೋಶೆಯ ಎರಡನೆಯ ಉಪನ್ಯಾಸದ ಸಮಾಪ್ತಿ.
26. 16—28. 68.

ಯೆಹೋವನು ಇಸ್ರಾಯೇಲ್ಯರೊಡನೆ ಮಾಡಿಕೊಂಡ
ಒಡಂಬಡಿಕೆಯ ವಿಷಯ.

ಈ ಆಜ್ಞಾವಿಧಿಗಳನ್ನು ನೀವು ಅನುಸರಿಸಬೇಕೆಂ
ನಿಮ್ಮ ದೇವರಾದ ಯೆಹೋವನು ನಿಮಗೆ
ಆಜ್ಞಾಪಿಸಿದ್ದಾನೆ. ಆದದರಿಂದ ನೀವು ಸಂಪೂ
ವಾದ ಹೃದಯದಿಂದಲೂ ಮನಸ್ಸಿನಿಂದಲೂ
ಗಳನ್ನು ಕೈಕೊಂಡು ನಡೆಯಬೇಕು. ನಮಗೆ ಯೆಹ
ವನೇ ದೇವರಾಗಿರುವನೆಂದೂ ಆತನು ಹೇಳಿದ ಮಾ
ದಲ್ಲೇ ನಡೆದು ಆತನ ಆಜ್ಞಾವಿಧಿನಿರ್ಣಯಗಳ
ಕೈಕೊಂಡು ಆತನ ಮಾತಿಗೆ ಲಕ್ಷ್ಯವಿಡುವೆವೆಂ
ನೀವು ಈಗ ಒಡಂಬಟ್ಟಿದ್ದೀರಿ. ಯೆಹೋವನ
ನಿಮ್ಮ ವಿಷಯದಲ್ಲಿ—ಇವರು ನನ್ನ ಆಜ್ಞೆಗಳನ್ನೆ
ಅನುಸರಿಸುವ ಪಕ್ಷಕ್ಕೆ ನನ್ನ ವಾಗ್ದಾನಾನುಸಾರ ನ
ಸ್ವಕೀಯಜನರಾಗಿರುವರೆಂದೂ ನಾನು ನಿರ್ಮಿ
ಬೇರೆ ಎಲ್ಲಾ ಜನಾಂಗಗಳಿಗಿಂತಲೂ ಇವರಿಗೆ ಹೆಚ್ಚ
ಕೀರ್ತಿಘನಮಾನಗಳನ್ನುಂಟುಮಾಡುವೆನೆಂದೂ ಇ
ನನ್ನ ಮಾತಿನ ಮೇರೆಗೆ ತಮ್ಮ ದೇವರಾದ ಯೆಹೋ
ನಿಗೋಸ್ಕರ ಮೀಸಲಾದ ಜನರಾಗುವರೆಂದೂ ಒಡ
ಟ್ಟಿದ್ದಾನೆ.

ೀಕದ ಮಧ್ಯದಲ್ಲಿ ಕಲ್ಲಿನ ಕಂಬಗಳನ್ನು ನಿಲ್ಲಿಸಿ ಅವುಗಳ ಮೇಲೆ
ಈ ಧರ್ಮಶಾಸ್ತ್ರವಾಕ್ಯಗಳನ್ನು ಕೆತ್ತಿಸಿ ಆಶೀರ್ವಾದಗಳನ್ನೂ
ಶಾಪೋಕ್ತಿಗಳನ್ನೂ ಉಚ್ಚರಿಸಬೇಕೆಂಬ ವಿಧಿ.

7 ಮೋಶೆಯು ಇಸ್ರಾಯೇಲ್ಯರ ಹಿರಿಯರ ಸಹಿತ
ಜನರಿಗೆ—ನಾನು ಈಗ ಆಜ್ಞಾಪಿಸಿದ ಧರ್ಮೋಪ
3 ದೇಶವನ್ನೆಲ್ಲಾ ನೀವು ಅನುಸರಿಸಬೇಕು. ನಿಮ್ಮ
ದೇವರಾದ ಯೆಹೋವನು ನಿಮಗೆ ಕೊಡುವ ದೇಶ
ದಲ್ಲಿ ಪ್ರವೇಶಿಸುವದಕ್ಕೆ ನೀವು ಯೊರ್ದನ್ ಹೊಳೆ
ಯನ್ನು ದಾಟುವಾಗ ಅಂದರೆ ನಿಮ್ಮ ಪಿತೃಗಳ ದೇವ
ರಾದ ಯೆಹೋವನು ತಾನು ವಾಗ್ದಾನಮಾಡಿದಂತೆ
ನಿಮಗೆ ಕೊಡುವ ಹಾಲೂ ಜೇನೂ ಹರಿಯುವ ದೇಶ
ವನ್ನು ಪ್ರವೇಶಿಸುವದಕ್ಕೆ ನೀವು ಯೊರ್ದನ್ ಹೊಳೆ
ಯನ್ನು ದಾಟುವಾಗ ನೀವು ದೊಡ್ಡ ಕಲ್ಲುಗಳನ್ನು
ನಿಲ್ಲಿಸಿ ಅವುಗಳಿಗೆ ಗಿಲಾವುಮಾಡಿಸಿ ಈ ಧರ್ಮ
ಶಾಸ್ತ್ರದ ವಾಕ್ಯಗಳನ್ನೆಲ್ಲಾ ಅವುಗಳ ಮೇಲೆ ಬರಿಸ
ಬೇಕು. ನೀವು ಯೊರ್ದನ್ ಹೊಳೆಯನ್ನು ದಾಟಿದ
ನಂತರ ನಾನು ಈಗ ಆಜ್ಞಾಪಿಸಿದ ಕಲ್ಲುಗಳನ್ನು
ಏಬಾಲ್‌ಬೆಟ್ಟದ ಮೇಲೆ ನಿಲ್ಲಿಸಿ ಅವುಗಳಿಗೆ ಗಿಲಾವು
ಮಾಡಿಸಬೇಕು.
ಅಲ್ಲಿ ನಿಮ್ಮ ದೇವರಾದ ಯೆಹೋವನಿಗೋಸ್ಕರ
ನೀವು ಕಲ್ಲುಗಳಿಂದ ಯಜ್ಞವೇದಿಯನ್ನು ಕಟ್ಟಿಸ
ಬೇಕು. ಉಳಿ ಮುಂತಾದದ್ದನ್ನು ಉಪಯೋಗಿಸದೆ
ಹುಟ್ಟುಕಲ್ಲುಗಳಿಂದಲೇ ನಿಮ್ಮ ದೇವರಾದ ಯೆಹೋ
ವನ ಯಜ್ಞವೇದಿಯನ್ನು ಕಟ್ಟಿಸಬೇಕು. ಅಲ್ಲಿ
ಸರ್ವಾಂಗಹೋಮಗಳನ್ನೂ ಸಮಾಧಾನಯಜ್ಞಗಳ
ನ್ನೂ ಸಮರ್ಪಿಸಿ ಸಹಭೋಜನಮಾಡಿ ನಿಮ್ಮ ದೇವ
ರಾದ ಯೆಹೋವನ ಸನ್ನಿಧಿಯಲ್ಲಿ ಸಂಭ್ರಮದಿಂದಿರ
ಬೇಕು. ನೀವು ಆ ಕಲ್ಲುಗಳ ಮೇಲೆ ಈ ಧರ್ಮ
ಶಾಸ್ತ್ರದ ವಾಕ್ಯಗಳನ್ನೆಲ್ಲಾ ವಿರಲವಾಗಿಯೂ ಸ್ಪಷ್ಟವಾ
ಗಿಯೂ ಬರಿಸಬೇಕೆಂದು ಆಜ್ಞಾಪಿಸಿದನು.
ಯಾಜಕರಾದ ಲೇವಿಯರೊಡನೆ ಮೋಶೆಯು
ಇಸ್ರಾಯೇಲ್ಯರೆಲ್ಲರಿಗೆ—ಇಸ್ರಾಯೇಲ್ಯರೇ, ನಿಶ್ಶಬ್ದ
ವಾಗಿದ್ದು ಕೇಳಿರಿ. ನೀವು ಈಗ ನಿಮ್ಮ ದೇವರಾದ
ಯೆಹೋವನ ಜನರಾದಿರಷ್ಟೆ. ಆದದರಿಂದ ನೀವು
ಈಗ ನಾನು ನಿಮಗೆ ಹೇಳುವ ಆತನ ಮಾತುಗಳಿಗೆ
ಕಿವಿಗೊಟ್ಟು ಆತನ ಆಜ್ಞಾವಿಧಿಗಳನ್ನು ಅನುಸರಿಸ
ಬೇಕು ಎಂದು ಹೇಳಿದನು.
ಮೋಶೆ ಆ ದಿನದಲ್ಲಿ ಜನರಿಗೆ ಆಜ್ಞಾಪಿಸಿದ್ದೇ
ನಂದರೆ—ನೀವು ಯೊರ್ದನ್ ಹೊಳೆಯನ್ನು ದಾಟಿ
ದಾಗ ಸಿಮೆಯೋನ್, ಲೇವಿ, ಯೆಹೂದ, ಇಸ್ಸಾ
ಕಾರ್, ಯೋಸೇಫ್, ಬೆನ್ಯಾಮೀನ್ ಎಂಬೀ ಕುಲ
ಗಳವರು ಗೆರಿಜ್ಜೀಮ್ ಬೆಟ್ಟದ ಮೇಲೆ ನಿಂತುಕೊಂಡು
ಆಶೀರ್ವಾದಗಳನ್ನು ಉಚ್ಚರಿಸಬೇಕು. ರೂಬೇನ್,
ಗಾದ್, ಆಶೇರ್, ಜೆಬುಲೂನ್, ದಾನ್, ನಫ್ತಾಲಿ
ಎಂಬೀ ಕುಲಗಳವರು ಏಬಾಲ್‌ಬೆಟ್ಟದ ಮೇಲೆ ನಿಂತು
ಕೊಂಡು ಶಾಪೋಕ್ತಿಗಳನ್ನು ಉಚ್ಚರಿಸಬೇಕು.

ಲೇವಿಯರು ಗಟ್ಟಿಯಾದ ಸ್ವರದಿಂದ ಇಸ್ರಾಯೇ 14
ಲ್ಯರೆಲ್ಲರಿಗೂ—ಶಿಲ್ಪಿಯ ಕೆಲಸವಾಗಿರುವ ಮರದ ವಿಗ್ರ 15
ಹವೂ ಲೋಹವಿಗ್ರಹವೂ ಯೆಹೋವನಿಗೆ ಹೇಯವಾದ
ದ್ದರಿಂದ ಅವನ್ನು ಮಾಡಿಸಿ ಗೋಪ್ಯವಾಗಿ ನಿಲ್ಲಿಸಿ
ಕೊಂಡವನಾದರೂ ಶಾಪಗ್ರಸ್ತ ಎನ್ನಲಾಗಿ ಜನರೆಲ್ಲ
ರೂ—1) ಹೌದು ಅನ್ನಬೇಕು.
ಲೇವಿಯರು—ತಂದೆತಾಯಿಗಳನ್ನು ಅವಮಾನ 16
ಪಡಿಸಿದವನು ಶಾಪಗ್ರಸ್ತ ಎನ್ನಲಾಗಿ ಜನರೆಲ್ಲರೂ—
ಹೌದು ಅನ್ನಬೇಕು.
ಅವರು—ಮತ್ತೊಬ್ಬನ ಮೇರೆಯನ್ನು ಸರಿಸಿದ 17
ವನು ಶಾಪಗ್ರಸ್ತ ಎನ್ನಲಾಗಿ ಜನರೆಲ್ಲರೂ—ಹೌದು
ಅನ್ನಬೇಕು.
ಅವರು—ಕುರುಡರಿಗೆ ದಾರಿತಪ್ಪಿಸಿದವನು ಶಾಪ 18
ಗ್ರಸ್ತ ಎನ್ನಲಾಗಿ ಜನರೆಲ್ಲರೂ—ಹೌದು ಅನ್ನಬೇಕು.
ಅವರು—ಪರದೇಶಿ, ತಾಯಿತಂದೆಯಿಲ್ಲದವ, ಇವರ 19
ವ್ಯಾಜ್ಯದಲ್ಲಿ ನ್ಯಾಯ ಬಿಟ್ಟು ತೀರ್ಪುಹೇಳಿದವನು ಶಾಪ
ಗ್ರಸ್ತ ಎನ್ನಲಾಗಿ ಜನರೆಲ್ಲರೂ—ಹೌದು ಅನ್ನಬೇಕು.
ಅವರು—ಮಲತಾಯಿಯನ್ನು ಸಂಗಮಿಸಿ ತಂದೆಗೆ 20
ಅವಮಾನಪಡಿಸಿದವನು ಶಾಪಗ್ರಸ್ತ ಎನ್ನಲಾಗಿ ಜನರೆ
ಲ್ಲರೂ—ಹೌದು ಅನ್ನಬೇಕು.
ಅವರು—ಪಶುಸಂಗಮಮಾಡಿದವನು ಶಾಪಗ್ರಸ್ತ 21
ಎನ್ನಲಾಗಿ ಜನರೆಲ್ಲರೂ—ಹೌದು ಅನ್ನಬೇಕು.
ಅವರು—ತಂದೆಯ ಮಗಳನ್ನಾಗಲಿ ತಾಯಿಯ 22
ಮಗಳನ್ನಾಗಲಿ ಸಂಗಮಿಸಿದವನು ಶಾಪಗ್ರಸ್ತ ಎನ್ನ
ಲಾಗಿ ಜನರೆಲ್ಲರೂ—ಹೌದು ಅನ್ನಬೇಕು.
ಅವರು—ಅತ್ತೆಯನ್ನು ಸಂಗಮಿಸಿದವನು ಶಾಪ 23
ಗ್ರಸ್ತ ಎನ್ನಲಾಗಿ ಜನರೆಲ್ಲರೂ—ಹೌದು ಅನ್ನಬೇಕು.
ಅವರು—ರಹಸ್ಯವಾಗಿ ನರಹತ್ಯಮಾಡಿದವನು 24
ಶಾಪಗ್ರಸ್ತ ಎನ್ನಲಾಗಿ ಜನರೆಲ್ಲರೂ—ಹೌದು ಅನ್ನ
ಬೇಕು.
ಅವರು—ಹಣತೆಗೆದುಕೊಂಡು ನಿರಪರಾಧಿಯನ್ನು 25
ಕೊಂದವನು ಶಾಪಗ್ರಸ್ತ ಎನ್ನಲಾಗಿ ಜನರೆಲ್ಲರೂ—
ಹೌದು ಅನ್ನಬೇಕು.
ಅವರು—ಈ ಧರ್ಮಶಾಸ್ತ್ರವಾಕ್ಯಗಳಿಗೆ ಒಡಂ 26
ಬಟ್ಟು ಕೈಕೊಳ್ಳದೆ ಇರುವವನು ಶಾಪಗ್ರಸ್ತ ಎನ್ನ
ಲಾಗಿ ಜನರೆಲ್ಲರೂ—ಹೌದು ಅನ್ನಬೇಕು.

ವಿಧೇಯತ್ವದಿಂದುಂಟಾಗುವ ಮೇಲು, ಅವಿಧೇಯತ್ವದಿಂದುಂಟಾಗುವ
ಕೇಡು ಇವುಗಳ ವಿಷಯ.

ನೀವು ನಿಮ್ಮ ದೇವರಾದ ಯೆಹೋವನ ಮಾತ 28
ನ್ನು ಶ್ರದ್ಧೆಯಿಂದ ಕೇಳಿ ನಾನು ಈಗ ನಿಮಗೆ
ಬೋಧಿಸುವ ಆತನ ಆಜ್ಞೆಗಳನ್ನೆಲ್ಲಾ ಅನುಸರಿಸಿ ನಡೆ
ದರೆ ಆತನು ಭೂಮಿಯ ಮೇಲಿರುವ ಎಲ್ಲಾ ಜನಾಂಗ
ಗಳಿಗಿಂತಲೂ ನಿಮ್ಮನ್ನು ಉನ್ನತಸ್ಥಿತಿಗೆ ತರುವನು.
ನಿಮ್ಮ ದೇವರಾದ ಯೆಹೋವನ ಮಾತಿಗೆ ಕಿವಿಗೊಟ್ಟು 2
ನಡೆದರೆ ಈ ಶುಭಗಳೆಲ್ಲಾ ನಿಮಗೆ ಪ್ರಾಪ್ತವಾಗುವವು.
ಯಾವವಂದರೆ—

1) ಮೂಲ: ಆಮೆನ್.

3 ನಿಮಗೆ ಊರಲ್ಲಿಯೂ ಅಡವಿಯಲ್ಲಿಯೂ ಶುಭ
4 ವುಂಟಾಗುವದು. ನಿಮ್ಮ ಸಂತಾನ ವ್ಯವಸಾಯ
ಗಳಿಗೂ ದನಕುರಿ ಮುಂತಾದ ಪಶುಗಳಿಗೂ ಶುಭ
5 ವುಂಟಾಗುವದು. ನಿಮ್ಮ ಪುಟ್ಟಿಗಳಿಗೂ 1) ಕೊಣಿಗೆ
6 ಗಳಿಗೂ ಶುಭವುಂಟಾಗುವದು. ನೀವು ಕೆಲಸಕ್ಕೆ
ಹೋಗುವಾಗಲೂ ಬರುವಾಗಲೂ ಶುಭವುಂಟಾಗು
ವದು.

7 ನಿಮ್ಮ ಮೇಲೆ ಬರುವ ಶತ್ರುಗಳು ನಿಮ್ಮಿಂದ
ಸೋತುಹೋಗುವಂತೆ ಯೆಹೋವನು ಮಾಡುವನು;
ಅವರು ಒಂದೇ ದಾರಿಯಿಂದ ನಿಮ್ಮ ಮೇಲೆ ಬಂದರೂ
ಏಳು ದಾರಿಗಳಿಂದ ಓಡಿಹೋಗುವರು.

8 ನಿಮ್ಮ ಕಣಜಗಳು ಯಾವಾಗಲೂ ತುಂಬಿರು
ವಂತೆಯೂ ನಿಮ್ಮ ಪ್ರಯತ್ನಗಳೆಲ್ಲಾ ಸಫಲವಾಗು
ವಂತೆಯೂ ನಿಮ್ಮ ದೇವರಾದ ಯೆಹೋವನು ನಿಮಗೆ
ಶುಭವನ್ನು ಅನುಗ್ರಹಿಸುವನು. ಆತನು ನಿಮಗೆ
ಕೊಡುವ ದೇಶದಲ್ಲಿ ನಿಮಗೆ ಶುಭವನ್ನೇ ಉಂಟು
ಮಾಡುವನು.

9 ನೀವು ನಿಮ್ಮ ದೇವರಾದ ಯೆಹೋವನ ಆಜ್ಞೆ
ಗಳನ್ನು ಅನುಸರಿಸಿ ಆತನು ಹೇಳಿದ ಮಾರ್ಗದಲ್ಲೇ
ನಡೆದರೆ ಆತನು ವಾಗ್ದಾನಮಾಡಿದಂತೆ ನಿಮ್ಮನ್ನು
ತನಗೋಸ್ಕರ ಮೀಸಲಾದ ಜನರನ್ನಾಗಿ ಸ್ಥಾಪಿಸು
10 ವನು. ಭೂಮಿಯಲ್ಲಿರುವ ಎಲ್ಲಾ ಜನಗಳೂ ನಿಮ್ಮ
ನ್ನು ಯೆಹೋವನ ಜನರೆಂದು ತಿಳಿದುಕೊಂಡು ನಿಮಗೆ
ಭಯಪಡುವರು.

11 ಯೆಹೋವನು ನಿಮ್ಮ ಪಿತೃಗಳಿಗೆ ಪ್ರಮಾಣಮಾ
ಡಿದ ಮೇರೆಗೆ ನಿಮಗೆ ಕೊಡುವ ದೇಶದಲ್ಲಿ ಆತನು
ನಿಮಗೆ ಸಂತಾನಪಶುವ್ಯವಸಾಯಗಳ ಸಮೃದ್ಧಿಯ
12 ನ್ನುಂಟುಮಾಡುವನು. ಯೆಹೋವನು ಆಕಾಶದಲ್ಲಿ
ರುವ ತನ್ನ ಜಲನಿಧಿಯನ್ನು ತೆರೆದು ನಿಮ್ಮ ದೇಶದ
ಮೇಲೆ ಬೆಳೆಗೆ ಬೇಕಾದ ಹಾಗೆ ಮಳೆಯನ್ನು ಸುರಿಸಿ
ನಿಮ್ಮ ಎಲ್ಲಾ ವ್ಯವಸಾಯವನ್ನೂ ಸಫಲ ಮಾಡು
ವನು.

ನೀವು ಅನೇಕಜನಗಳಿಗೆ ಸಾಲಕೊಡುವಿರೇ ಹೊರ
13, 14 ತು ಸಾಲತೆಗೆದುಕೊಳ್ಳುವದಿಲ್ಲ. ನಾನು ಈಗ
ನಿಮಗೆ ಬೋಧಿಸುವ ಮಾತುಗಳನ್ನು ನೀವು ಬಿಟ್ಟು
ಎಡಬಲಕ್ಕೆ ತೊಲಗದೆ ಬೇರೆ ದೇವರುಗಳನ್ನು ಅವ
ಲಂಬಿಸದೆ ನಿಮ್ಮ ದೇವರಾದ ಯೆಹೋವನ ಆಜ್ಞೆಗಳ
ಲ್ಲೇ ಲಕ್ಷ್ಯವಿಟ್ಟು ಅವುಗಳನ್ನೇ ಅನುಸರಿಸಿ ನಡೆದರೆ
ಆತನು ಇತರರಿಗೆ ನಿಮ್ಮನ್ನು 2) ಅಧೀನಮಾಡದೆ ಎಲ್ಲ
ರಿಗೂ ಶಿರಸ್ಸನ್ನಾಗಿಯೇ ಮಾಡುವನು; ನೀವು ಎಲ್ಲರಿ
ಗಿಂತಲೂ ಮೇಲಣವರಾಗಿರುವಿರೇ ಹೊರತು ಕೆಳಗಣವ
ರಾಗಿರುವದಿಲ್ಲ.

15 ಆದರೆ ನೀವು ನಿಮ್ಮ ದೇವರಾದ ಯೆಹೋವನ
ಮಾತಿಗೆ ಕಿವಿಗೊಡದೆ ನಾನು ಈಗ ನಿಮಗೆ ಬೋಧಿ
ಸುವ ಆತನ ಆಜ್ಞಾವಿಧಿಗಳನ್ನು ಅನುಸರಿಸದೆ ಹೋದರೆ
ಈ ಅಶುಭಗಳು ನಿಮಗೆ ಪ್ರಾಪ್ತವಾಗುವವು—

16 ನಿಮಗೆ ಊರಲ್ಲಿಯೂ ಅಡವಿಯಲ್ಲಿಯೂ ಅಶು
17 ಭವುಂಟಾಗುವದು. ನಿಮ್ಮ ಪುಟ್ಟಿಗಳಿಗೂ 1) ಕೊಣ
ವಿಗೆಗಳಿಗೂ ಅಶುಭವುಂಟಾಗುವದು. ನಿಮ್ಮ ಸಂತಾ
ವ್ಯವಸಾಯಗಳಿಗೂ ದನಕುರಿಗಳಿಗೂ ಅಶುಭವುಂ
ಗುವದು. ನೀವು ಕೆಲಸಕ್ಕೆ ಹೋಗುವಾಗಲೂ ಬ
ವಾಗಲೂ ಅಶುಭವುಂಟಾಗುವದು.

ನೀವು ದುರ್ನಡತೆಯುಳ್ಳವರಾಗಿ ಯೆಹೋವ
ನ್ನು ಬಿಟ್ಟದ್ದರಿಂದ ಆತನು ನಿಮ್ಮ ಎಲ್ಲಾ ಪ್ರಯ
ಗಳಲ್ಲಿಯೂ ವಿಪತ್ತು, ಕಳವಳ, ಶಾಪ ಇವುಗ
ನ್ನುಂಟುಮಾಡುತ್ತಾ ನಿಮ್ಮನ್ನು ಬೇಗನೆ ನಾ
ಮಾಡುವನು. ವ್ಯಾಧಿಯು ನಿಮಗೆ ಹತ್ತಿಕೊಂ
ಇರುವಂತೆ ಯೆಹೋವನು ಮಾಡಿ ನೀವು ಸ್ವಾಧೀ
ಮಾಡಿಕೊಳ್ಳುವದಕ್ಕೆ ಹೋಗುವ ದೇಶದಲ್ಲಿ ನಿಮ್ಮ
ಒಬ್ಬರೂ ಉಳಿಯದಂತೆ ಮಾಡುವನು. ಆತ
ನಿಮ್ಮನ್ನು ಕ್ಷಯರೋಗ ಚಳಿಜ್ವರ ಉರಿತ ಉಷ್ಣಜ್ವ
ಗಳಿಂದಲೂ ದೇಶವನ್ನು ಕ್ಷಾಮದಿಂದಲೂ ಬೆಳೆಯನ
ಕಾಡಿಗೆ ಬಿಸಿಗಾಳಿಗಳಿಂದಲೂ ಬಾಧಿಸಲಾಗಿ ನೀ
ಸಾಯುವ ತನಕ ಇವು ನಿಮ್ಮನ್ನು ಬೆನ್ನತ್ತುವ
ಮೇಲೆ ಆಕಾಶವು [ಮಳೆಸುರಿಸದೆ] ತಾಮ್ರದಂತೆಯ
ಕೆಳಗೆ ಭೂಮಿಯು [ಬೆಳೆಕೊಡದೆ] ಕಬ್ಬಿಣದಂತೆಯ
ಇರುವವು. ನಿಮ್ಮ ದೇಶದಲ್ಲಿ ಯೆಹೋವನು ಆಕಾ
ದಿಂದ ಮಳೆಗೆ ಬದಲಾಗಿ ಧೂಳಿಯನ್ನೂ ಉಸ
ಬನ್ನೂ ನಿಮ್ಮ ಮೇಲೆ ಸುರಿಸುವನು; ಅದರಿಂದ ನೀ
ನಾಶವಾಗಿ ಹೋಗುವಿರಿ. ನೀವು ಶತ್ರುಗಳಿಂದ ಪರ
ಜಯವನ್ನು ಹೊಂದುವಂತೆ ಯೆಹೋವನು ಮಾ
ವನು; ನೀವು ಒಂದೇ ದಾರಿಯಿಂದ ಅವರೆದುರಿ
ಹೋಗಿ ಏಳು ದಾರಿಗಳಿಂದ ಓಡಿಹೋಗುವಿರಿ. ಲೋ
ಕದ ಎಲ್ಲಾ ರಾಜ್ಯಗಳವರೂ ಇದನ್ನು ಕಂಡು ಬೆ
ಗಾಗುವರು. ನಿಮ್ಮ ಹೆಣಗಳು ಪಕ್ಷಿಗಳಿಗೂ ಕಾಡ
ಮೃಗಗಳಿಗೂ ಆಹಾರವಾಗುವವು; ಅವುಗಳನ್ನು ಬೆ
ರಿಸುವವರು ಯಾರೂ ಇರುವದಿಲ್ಲ.

ಐಗುಪ್ತ್ಯರ ಹುಣ್ಣು, ಬಾವು, ತುರಿಕಜ್ಜಿ ಮುಂತ
ದ ವಾಸಿಯಾಗದ ರೋಗಗಳಿಂದ ಯೆಹೋವನ
ನಿಮ್ಮನ್ನು ಬಾಧಿಸುವನು. ಚಿತ್ತಭ್ರಮಣೆ, ಕುರು
ತನ, ಮನೋವಿಸ್ಮಯ ಇವುಗಳಿಂದ ಯೆಹೋವನ
ನಿಮ್ಮನ್ನು ಬಾಧಿಸಲು ನೀವು ಕುರುಡರಂತೆ ಮಧ
ಹ್ನದಲ್ಲಿಯೂ ಕತ್ತಲಾಯಿತೆಂದು ತಡವರಿಸುತ
ಇರುವಿರಿ; ನೀವು ಮಾಡುವ ಯಾವ ಕೆಲಸವೂ ಕೈಗ
ಡುವದಿಲ್ಲ. ಅನ್ಯರು ಯಾವಾಗಲೂ ನಿಮ್ಮನ್ನು ಪೀ
ಸುತ್ತಾ ನಿಮ್ಮ ಸೊತ್ತನ್ನು ಸೂರೆಮಾಡುತ್ತಾ ಇರ
ವರು; ತಪ್ಪಿಸುವವರು ಯಾರೂ ಇರುವದಿಲ್ಲ. ನೀ
ಮದುವೆಮಾಡಿಕೊಂಡ ಸ್ತ್ರೀಯನ್ನು ಮತ್ತೊಬ್ಬನ
ಮಾನಭಂಗಪಡಿಸುವನು; ನೀವು ಕಟ್ಟಿಕೊಂಡ ಮ
ಯಲ್ಲಿ ಮತ್ತೊಬ್ಬನು ವಾಸಮಾಡುವನು: ನೀ
ಮಾಡಿಕೊಂಡ ದ್ರಾಕ್ಷೇತೋಟದ ಬೆಳೆಯು ನಿಮ
ದೊರೆಯುವದಿಲ್ಲ. ನಿಮ್ಮ ದನಗಳನ್ನು ನಿಮ್ಮ ಕಣ್ಣ
ಮುಂದೆ ಕೊಯ್ಯುವರು; ಅವುಗಳ ಮಾಂಸವು ನಿಮ
ಸಿಕ್ಕುವದಿಲ್ಲ. ನಿಮ್ಮ ಕತ್ತೆಯನ್ನು ನಿಮ್ಮೆದುರಾ
ಬಲಾತ್ಕಾರದಿಂದ ಹಿಡಿದುಕೊಂಡುಹೋಗಿ ನಿಮ
ಹಿಂದಕ್ಕೆ ಕೊಡುವದಿಲ್ಲ. ನಿಮ್ಮ ಆಡುಕುರಿಗಳ

1) ತಟ್ಟೆಗಳಿಗೂ. 2) ಮೂಲ: ಬಾಲದಂತೆ.

ಶತ್ರುಗಳ ಪಾಲಾಗುವವು. ನಿಮಗೆ ರಕ್ಷಕರು ಯಾರೂ
2 ಇರುವದಿಲ್ಲ. ನಿಮ್ಮ ಗಂಡು ಹೆಣ್ಣು ಮಕ್ಕಳನ್ನು
ನಿಮ್ಮ ಮುಂದೆಯೇ ಹಿಡಿದು ಅನ್ಯರಿಗೆ ವಶಪಡಿಸು
ವರು; ನೀವು ಹಗಲೆಲ್ಲಾ ಅವರನ್ನು ಕಾಣಬೇಕೆಂದು
ಹಂಬಲಿಸುತ್ತಾ ಕಂಗೆಡುವಿರಿ; ಆದರೆ ನಿಮ್ಮ ಯತ್ನ
3 ವೇನೂ ಸಾಗುವದಿಲ್ಲ. ನಿಮಗೆ ಗುರುತೇ ಇಲ್ಲದ
ಜನಾಂಗದವರು ಬಂದು ನಿಮ್ಮ ದೇಶದ ಬೆಳೆಯನ್ನೂ
ನಿಮ್ಮ ಕಷ್ಟಾರ್ಜಿತವನ್ನೂ ತಿಂದುಬಿಡುವರು. ನೀವಾ
ದರೋ ಯಾವಾಗಲೂ ಹಿಂಸೆಗೂ ಬಲಾತ್ಕಾರಕ್ಕೂ
4 ಗುರಿಯಾಗಿ ನಿಮ್ಮ ಮುಂದೆ ನಡೆಯುವ ಸಂಗತಿಗಳ
ದೆಸೆಯಿಂದ ಹುಚ್ಚರಾಗಿ ಹೋಗುವಿರಿ.
5 ಯೆಹೋವನು ನಿಮ್ಮ ಮೊಣಕಾಲುಗಳಲ್ಲಿಯೂ
ತೊಡೆಗಳಲ್ಲಿಯೂ ಮತ್ತು ಅಂಗಾಲು ಮೊದಲು
ಗೊಂಡು ನಡುನೆತ್ತಿಯ ವರೆಗೂ ವಾಸಿಯಾಗದ ಕೆಟ್ಟ
6 ಕೆಟ್ಟ ಹುಣ್ಣುಗಳನ್ನು ಹುಟ್ಟಿಸಿ ಬಾಧಿಸುವನು. ನಿಮ
ಗೂ ನಿಮ್ಮ ಪಿತೃಗಳಿಗೂ ಗೊತ್ತಿಲ್ಲದ ಜನಾಂಗದವರ
ದೇಶಕ್ಕೆ ಯೆಹೋವನು ನಿಮ್ಮನ್ನೂ ನೀವು ನೇಮಿಸಿ
ಕೊಳ್ಳುವ ಅರಸರನ್ನೂ ಒಯ್ಯಿಸುವನು; ಅಲ್ಲಿ ನೀವು
ಮರದ ದೇವರುಗಳನ್ನೂ ಕಲ್ಲಿನ ದೇವರುಗಳನ್ನೂ
7 ಸೇವಿಸುವಿರಿ. ಯೆಹೋವನು ನಿಮ್ಮನ್ನು ಒಯ್ಯಿಸಿದ
ಜನಾಂಗಗಳಲ್ಲಿ ನೀವು ಆಶ್ಚರ್ಯಕ್ಕೂ ಗಾದೆಗೂ
ಪರಿಹಾಸ್ಯಕ್ಕೂ ಗುರಿಯಾಗುವಿರಿ.
8 ನೀವು ಹೊಲದಲ್ಲಿ ಎಷ್ಟು ಬೀಜವನ್ನು ಬಿತ್ತಿದ್ದ
ರೂ ಮಿಡತೆಯದಂಡು ಬಂದು ಅದನ್ನು ತಿಂದು
ಬಿಡುವದರಿಂದ ನಿಮಗೆ ದೊರೆಯುವ ಬೆಳೆ ಅತ್ಯಲ್ಪ
9 ವಾಗುವದು; ನೀವು ದ್ರಾಕ್ಷಾವ್ಯವಸಾಯವನ್ನು ಎಷ್ಟು
ಮಾಡಿದರೂ ಅದರ ಹಣ್ಣುಗಳನ್ನು ಹುಳಗಳೇ
ತಿಂದುಹಾಕುವದರಿಂದ ನೀವು ಕೂಡಿಸಿಕೊಳ್ಳುವ
ದಿಲ್ಲ, ಅವುಗಳ ರಸವನ್ನು ರುಚಿನೋಡುವದಿಲ್ಲ.
0 ನಿಮ್ಮ ಎಲ್ಲಾ ಪ್ರದೇಶಗಳಲ್ಲಿ ಎಣ್ಣೇಮರಗಳು ಎಷ್ಟಿ
ದ್ದರೂ ಅವುಗಳ ಕಾಯಿಗಳು ಉದುರಿಹೋಗುವದ
ರಿಂದ ನೀವು ಎಣ್ಣೆಯನ್ನು ಮೈಗೆ ಹಚ್ಚಿಕೊಳ್ಳುವದಿಲ್ಲ.
1 ನಿಮಗೆ ಗಂಡು ಹೆಣ್ಣು ಮಕ್ಕಳು ಎಷ್ಟು ಹುಟ್ಟಿದರೂ
ಅವರು ಸೆರೆಯವರಾಗಿ ಒಯ್ಯಲ್ಪಡುವದರಿಂದ ನಿಮ್ಮ
2 ಬಳಿಯಲ್ಲಿ ಇರುವದಿಲ್ಲ. ನಿಮ್ಮ ಎಲ್ಲಾ ಮರಗಳೂ
3 ಪೈರುಗಳೂ ಮಿಡತೆಯ ಪಾಲಾಗುವವು. ನಿಮ್ಮ
ಮಧ್ಯದಲ್ಲಿರುವ ಅನ್ಯರು ನಿಮಗಿಂತಲೂ ಹೆಚ್ಚೆಚ್ಚಾಗಿ
ಅಭಿವೃದ್ಧಿಗೆ ಬರುವರು; ನೀವೋ ಕಡಮೆಯಾಗುತ್ತಾ
4 ಹೀನಸ್ಥಿತಿಗೆ ಬರುವಿರಿ. ಅವರು ನಿಮಗೆ ಸಾಲಕೊಡು
ವರೇ ಹೊರತು ನೀವು ಅವರಿಗೆ ಕೊಡುವದಿಲ್ಲ. ನೀವು
ಅವರಿಗೆ 1)ಅಧೀನರಾಗುವಿರಿ; ಅವರು ಶಿರಸ್ಸಾಗು
ವರು.
5 ನೀವು ನಿಮ್ಮ ದೇವರಾದ ಯೆಹೋವನ ಮಾತಿಗೆ
ಕಿವಿಗೊಡದೆಯೂ ಆತನು ನೇಮಿಸಿದ ಆಜ್ಞಾವಿಧಿ
ಗಳನ್ನು ಅನುಸರಿಸದೆಯೂ ಹೋದದರಿಂದ ಈ ಎಲ್ಲಾ
ಅಶುಭಗಳು ನಿಮಗೆ ಪ್ರಾಪ್ತವಾಗಿ ನಿಮ್ಮನ್ನು ಹಿಂದಟ್ಟಿ
6 ಹಿಡಿದು ಕಡೆಗೆ ನಾಶಮಾಡುವವು. ಇವು ನಿಮಗೂ
ನಿಮ್ಮ ಸಂತತಿಯವರಿಗೂ ಯಾವಾಗಲೂ ಪ್ರಾಪ್ತ

ವಾಗುತ್ತಾ [ಎಲ್ಲರಿಗೂ] ಎಚ್ಚರಿಕೆಯನ್ನೂ ಬೆರಗನ್ನೂ
ಉಂಟುಮಾಡುವವು.
ನಿಮಗೆ ಸರ್ವಸಮೃದ್ಧಿಯುಂಟಾದ ಕಾಲದಲ್ಲಿ 47
ಯೂ ನೀವು ನಿಮ್ಮ ದೇವರಾದ ಯೆಹೋವನನ್ನು
ಹರ್ಷಾನಂದಗಳುಳ್ಳವರಾಗಿ ಸೇವಿಸದೆ ಹೋದದರಿಂದ
ಯೆಹೋವನು ನಿಮ್ಮ ಮೇಲೆ ಶತ್ರುಗಳನ್ನು ಬರ 48
ಮಾಡುವನು; ಆಗ ನೀವು ಹಸಿವು ಬಾಯಾರಿಕೆಗಳು
ಳ್ಳವರಾಗಿ ಬಟ್ಟೆಯೂ ಏನೂ ಇಲ್ಲದೆ ಆ ಶತ್ರುಗಳಿಗೇ
ಸೇವಕರಾಗಬೇಕಾಗುವದು. ಆತನು ಕಬ್ಬಿಣದ
ನೊಗವನ್ನು ಹೇರಿಸಿ ನಿಮ್ಮನ್ನು ನಾಶಮಾಡು
ವನು. ನಿಮಗೆ ತಿಳಿಯದ ಭಾಷೆಯನ್ನಾಡುವ ಒಂದು 49
ಜನಾಂಗವು ರಣಹದ್ದು ಹೇಗೆ ದೂರದಿಂದ ಹಾರಿಬರು
ವದೋ ಹಾಗೆಯೇ ದೂರದಿಂದ ನಿಮ್ಮ ಮೇಲೆ ಬರು
ವಂತೆ ಯೆಹೋವನು ಮಾಡುವನು. ಆ ಜನಾಂಗ 50
ದವರು ಕ್ರೂರಮುಖವುಳ್ಳವರಾಗಿ ನಿಮ್ಮನ್ನು ವೃದ್ಧ
ರೆಂದು ಮರ್ಯಾದೆತೋರಿಸುವದಿಲ್ಲ, ಚಿಕ್ಕವರೆಂದು
ಕನಿಕರಿಸುವದಿಲ್ಲ. ಅವರು ನಿಮ್ಮ ದನಗಳನ್ನೂ ಬೆಳೆ 51
ಗಳನ್ನೂ ತಿಂದುಬಿಟ್ಟು ನಿಮಗೆ ಧಾನ್ಯವನ್ನಾಗಲಿ
ದ್ರಾಕ್ಷಾರಸವನ್ನಾಗಲಿ ಎಣ್ಣೆಯನ್ನಾಗಲಿ ದನಕುರಿಗಳ
ಸಂತಾನವನ್ನಾಗಲಿ ಉಳಿಸದೆ ನಿಮ್ಮನ್ನು ಸಂಪೂರ್ಣ
ವಾಗಿ ನಾಶಮಾಡುವರು. ನಿಮ್ಮ ದೇವರಾದ ಯೆಹೋ 52
ವನು ನಿಮಗೆ ಕೊಟ್ಟಿರುವ ದೇಶದ ಎಲ್ಲಾ ಪಟ್ಟಣ
ಗಳಿಗೂ ಅವರು ಮುತ್ತಿಗೆಹಾಕಿ ನೀವು ನಂಬಿಕೊಂಡಿದ್ದ
ಎತ್ತರವಾದ ಕೊತ್ತಲುಗಳುಳ್ಳ ಗೋಡೆಗಳನ್ನು ಕೆಡವಿ
ಬಿಡುವರು. ಶತ್ರುಗಳು ನಿಮ್ಮ ಪಟ್ಟಣಗಳಿಗೆ ಮುತ್ತಿಗೆ 53
ಹಾಕಿ ನಿಮ್ಮನ್ನು ಬಹಳವಾಗಿ ಇರಿಕಿಸುವದರಿಂದ ನೀವು
ನಿಮ್ಮ ಸಂತಾನವನ್ನೇ ಅಂದರೆ ನಿಮ್ಮ ದೇವರಾದ
ಯೆಹೋವನು ನಿಮಗೆ ಕೊಟ್ಟಿರುವ ಗಂಡು ಹೆಣ್ಣು
ಮಕ್ಕಳ ಮಾಂಸವನ್ನೇ ತಿನ್ನುವಿರಿ. ಶತ್ರುಗಳು 54, 55
ನಿಮ್ಮ ಎಲ್ಲಾ ಪಟ್ಟಣಗಳಿಗೆ ಮುತ್ತಿಗೆಹಾಕಿ ನಿಮ್ಮನ್ನು
ಬಹಳವಾಗಿ ಇರಿಕಿಸುವ ಕಾಲದಲ್ಲಿ ನಿಮ್ಮಲ್ಲಿ ಮೃದು
ಸ್ವಭಾವಿಯೂ ಅತಿಸುಕುಮಾರನೂ ಆಗಿರುವವನೂ
ತನಗೆ ತಿನ್ನಲಿಕ್ಕೆ ಏನೂ ಉಳಿಯದೆ ಹೋದದರಿಂದ ತನ್ನ
ಮಕ್ಕಳ ಮಾಂಸವನ್ನು ತಾನೇ ತಿನ್ನಬೇಕೆಂದು ಅಣ್ಣ
ತಮ್ಮಂದಿರಿಗೂ ಪ್ರಾಣಪ್ರಿಯಳಾದ ಹೆಂಡತಿಗೂ ಉಳಿದ
ಮಕ್ಕಳಿಗೂ ಮೋರೆಯನ್ನು ಕಪ್ಪುಮಾಡಿಕೊಂಡು ಆ
ಮಾಂಸದಲ್ಲಿ ಅವರಿಗೆ ಸ್ವಲ್ಪವನ್ನಾದರೂ ಕೊಡದೆ ಹೋ
ಗುವನು. ಶತ್ರುಗಳು ನಿಮ್ಮ ಪಟ್ಟಣಗಳಿಗೆ ಮುತ್ತಿಗೆ 56, 57
ಹಾಕಿ ನಿಮ್ಮನ್ನು ಬಹಳವಾಗಿ ಇರಿಕಿಸುವ ಕಾಲದಲ್ಲಿ
ಕೋಮಲತೆಯ ಮತ್ತು ಅತಿಸುಕುಮಾರತೆಯ ದೆಸೆ
ಯಿಂದ ಅಂಗಾಲನ್ನೂ ನೆಲಕ್ಕೆ ಇಡದವಳಾದ ಸ್ತ್ರೀಯು
ತಿನ್ನಲಿಕ್ಕೆ ಏನೂ ಇಲ್ಲದವಳಾಗಿ ತಾನು ಆಗಲೇ ಹೆತ್ತ
ಮಗುವನ್ನೂ ಅದರ ಮೇಲಣ ಮಾಸನ್ನೂ ರಹಸ್ಯ
ವಾಗಿ ತಿನ್ನಬೇಕೆಂದು ಪ್ರಾಣಪ್ರಿಯರಾದ ಗಂಡನಿಗೂ
ಮಗನಿಗೂ ಮಗಳಿಗೂ ಮೋರೆಯನ್ನು ಕಪ್ಪುಮಾಡಿ
ಕೊಳ್ಳುವಳು.
ಈ ಗ್ರಂಥದಲ್ಲಿ ಬರೆದಿರುವ ಧರ್ಮಶಾಸ್ತ್ರವಾಕ್ಯ 58
ಗಳನ್ನೆಲ್ಲಾ ನೀವು ಅನುಸರಿಸಲೊಲ್ಲದೆ ನಿಮ್ಮ ದೇವ

1) [illegible]

ರಾದ ಯೆಹೋವನೆಂಬ ಮಹಾಮಹಿಮೆಯುಳ್ಳ
ಭಯಂಕರ ನಾಮದಲ್ಲಿ ನೀವು ಭಯಭಕ್ತಿಯುಳ್ಳವ
59 ರಾಗಿರದೆ ಹೋದರೆ ಆತನು ನಿಮಗೂ ನಿಮ್ಮ ಸಂತತಿ
ಯವರಿಗೂ ದೀರ್ಘಕಾಲವಿರುವ ಬಹು ವಿಶೇಷವಾದ
ಉಪದ್ರವಗಳನ್ನು ಬರಮಾಡುವನು. ಬಹುಕಾಲದ
ವರೆಗೂ ವಾಸಿಯಾಗದ ಘೋರ ವ್ಯಾಧಿಗಳಿಂದ
60 ನಿಮ್ಮನ್ನು ಬಾಧಿಸುವನು; ನೀವು ಅಂಜಿಕೊಳ್ಳುತ್ತಿದ್ದ
ಐಗುಪ್ತದೇಶದ ರೋಗಗಳನ್ನೆಲ್ಲಾ ತಿರಿಗಿ ನಿಮ್ಮ
ಮೇಲೆ ಬರಮಾಡುವನು; ಅವು ನಿಮ್ಮನ್ನು ಹತ್ತಿ
61 ಕೊಂಡೇ ಇರುವವು. ಇಷ್ಟು ಮಾತ್ರವಲ್ಲದೆ ಈ
ಧರ್ಮಶಾಸ್ತ್ರಗ್ರಂಥದಲ್ಲಿ ಬರೆಯದೆ ಇರುವ ವಿಧವಿಧ
ವಾದ ರೋಗಗಳನ್ನೂ ವ್ಯಾಧಿಗಳನ್ನೂ ನಿಮ್ಮ ಮೇಲೆ
62 ಬರಮಾಡಿ ನಿಮ್ಮನ್ನು ನಾಶಮಾಡುವನು. ನಕ್ಷತ್ರ
ಗಳಷ್ಟು ಅಸಂಖ್ಯರಾಗಿರುವ ನೀವು ನಿಮ್ಮ ದೇವರಾದ
ಯೆಹೋವನ ಮಾತಿಸಲ್ಲಿ ಲಕ್ಷ್ಯವಿಡದೆಹೋದದರಿಂದ
63 ಸ್ವಲ್ಪ ಮಂದಿಯೇ ಉಳಿಯುವಿರಿ. ಹೇಗೆ ಯೆಹೋ
ವನು ಈಗ ನಿಮ್ಮನ್ನು ಅಭಿವೃದ್ಧಿಪಡಿಸುವದರಲ್ಲಿ
ಯೂ ಹೆಚ್ಚಿಸುವದರಲ್ಲಿಯೂ ಸಂತೋಷಪಡುತ್ತಾನೋ
ಹಾಗೆಯೇ ಆಗ ನಿಮ್ಮನ್ನು ಕೆಡಿಸಿ ನಾಶಮಾಡುವದ
ರಲ್ಲಿ ಸಂತೋಷಪಟ್ಟು ನೀವು ಸ್ವಾಧೀನಮಾಡಿಕೊಳ್ಳುವ
ದಕ್ಕೆ ಹೋಗುವ ದೇಶದೊಳಗಿಂದ ನಿಮ್ಮನ್ನು ಕಿತ್ತು
64 ಹಾಕುವನು. ಭೂಮಂಡಲದ ಚತುರ್ದಿಕ್ಕುಗಳಲ್ಲಿ
ರುವ ಎಲ್ಲಾ ಜನಾಂಗಗಳಲ್ಲಿಯೂ ಯೆಹೋವನು
ನಿಮ್ಮನ್ನು ಚದರಿಸುವನು; ಅಲ್ಲಿ ನಿಮಗಾದರೂ ನಿಮ್ಮ
ಪಿತೃಗಳಿಗಾದರೂ ಗೊತ್ತಿಲ್ಲದ ಮರದ ದೇವರು
ಗಳನ್ನೂ ಕಲ್ಲಿನ ದೇವರುಗಳನ್ನೂ ಪೂಜಿಸುವಿರಿ.
65 ಆ ದೇಶಗಳಲ್ಲಿ ನಿಮಗೆ ಯಾವ ವಿಶ್ರಾಂತಿಯೂ
ದೊರೆಯುವದಿಲ್ಲ; ಸ್ವಲ್ಪ ಹೊತ್ತು ಅಂಗಾಲಿಡುವ
ದಕ್ಕೂ ಸ್ಥಳಸಿಕ್ಕುವದಿಲ್ಲ. ನೀವು ನಡುಗುವ ಹೃದ
ಯವುಳ್ಳವರಾಗಿಯೂ ದಿಕ್ಕುತೋರದೆ ಕಂಗೆಟ್ಟವ
ರಾಗಿಯೂ ಮನಗುಂದಿದವರಾಗಿಯೂ ಇರುವಂತೆ
66 ಯೆಹೋವನು ಮಾಡುವನು. ಬದುಕುವೆವೋ ಇಲ್ಲ
ವೋ ಎಂಬದಾಗಿ ಅನುಮಾನಪಟ್ಟು ನೀವು ಹಗ
ಲಿರುಳು ಪ್ರಾಣಭಯದಲ್ಲಿರುವಿರಿ; ಪ್ರಾಣದ ಮೇಲಣ
67 ನಂಬಿಕೆಯನ್ನು ಬಿಟ್ಟೇಬಿಡುವಿರಿ. ಮನಸ್ಸಿನಲ್ಲಿ ಯಾ
ವಾಗಲೂ ಪ್ರಾಣಭಯವಿರುವದರಿಂದಲೂ ಕಣ್ಣಿನಿಂದ
ಭಯಂಕರವಾದ ಸಂಗತಿಗಳನ್ನು ನೋಡುವದರಿಂದ
ಲೂ ನೀವು ಹೊತ್ತಾರೆಯಲ್ಲಿ—ಅಯ್ಯೋ, ಅಯ್ಯೋ!
ಸಾಯಂಕಾಲ ಯಾವಾಗ ಬರುವದೋ ಎಂದೂ
ಸಾಯಂಕಾಲದಲ್ಲಿ—ಅಯ್ಯೋ, ಅಯ್ಯೋ! ಮರುದಿನ
68 ಯಾವಾಗ ಬರುವದೋ ಎಂದೂ ಹೇಳುವಿರಿ. ನೀವು
ಐಗುಪ್ತದೇಶವನ್ನು ತಿರಿಗಿ ಎಂದಿಗೂ ನೋಡುವದಿಲ್ಲ
ವೆಂದು ಯೆಹೋವನು ಹೇಳಿದ್ದರೂ ಆತನು
ನಿಮ್ಮನ್ನು ಹಡಗುಗಳನ್ನೇರಿಸಿ ಅಲ್ಲಿಗೆ ತಿರಿಗಿ ಹೋಗ
ಮಾಡುವನು. ಅಲ್ಲಿ ನೀವು ಶತ್ರುಗಳಿಗೆ ನಿಮ್ಮನ್ನು
ದಾಸದಾಸಿಯರನ್ನಾಗಿ ಮಾರಿಕೊಳ್ಳಬೇಕೆಂದು ಅಪೇ
ಕ್ಷಿಸಿದರೂ ಯಾರೂ ನಿಮ್ಮನ್ನು ಕೊಂಡುಕೊಳ್ಳು
ವದಿಲ್ಲ.

## ಮೋಶೆಯ ಮೂರನೆಯ ಉಪನ್ಯಾಸ. 29. 30.

### ಯೆಹೋವನಿಬಂಧನವನ್ನು ಮೀರುವದರ ದುಷ್ಫಲ.

ಯೆಹೋವನು ಹೋರೇಬಿನಲ್ಲಿ ಇಸ್ರಾಯೇಲ್ಯ 2
ರೊಡನೆ ಮಾಡಿದ ನಿಬಂಧನವಲ್ಲದೆ ಆತನು ಮೋ
ವಾಬ್ಯರ ದೇಶದಲ್ಲಿ ಅವರೊಡನೆ ಮಾಡಬೇಕೆಂದು
ಮೋಶೆಗೆ ಆಜ್ಞಾಪಿಸಿದ ನಿಬಂಧನವಚನಗಳು.

ಮೋಶೆ ಇಸ್ರಾಯೇಲ್ಯರೆಲ್ಲರನ್ನು ಕರೆದು ಹೀಗಂದ
ನು—ಯೆಹೋವನು ಐಗುಪ್ತದೇಶದಲ್ಲಿ ನಿಮ್ಮ ಕಣ್ಣು
ಮುಂದೆ ಫರೋಹನಿಗೂ ಅವನ ಪರಿವಾರದವರಿಗೂ
ಸಮಸ್ತ ಪ್ರಜೆಗಳಿಗೂ ಮಾಡಿದ ಮಹಾಮನಶ್ಶೋಧನೆ
ಉತ್ಪಾತ ಮಹತ್ಕಾರ್ಯಗಳನ್ನು ನೀವು ನೋಡೇ ನೋಡಿ
ದ್ದೀರಷ್ಟೆ. ಆದರೂ ಗ್ರಹಿಸುವ ಬುದ್ಧಿ, ನೋಡುವ
ಕಣ್ಣು, ಕೇಳುವ ಕಿವಿ ಇವುಗಳನ್ನು ಯೆಹೋವನು
ಇಂದಿನ ವರೆಗೂ ನಿಮಗೆ ಅನುಗ್ರಹಿಸಲಿಲ್ಲ ಅಯ್ಯೋ.
ನಾಲ್ವತ್ತು ವರುಷ ನಾನು ನಿಮ್ಮನ್ನು ಅರಣ್ಯದಲ್ಲಿ
ನಡಿಸಿಕೊಂಡು ಬಂದಿದ್ದೇನೆ. ನಿಮ್ಮ ಮೈಮೇಲಿದ್ದ
ಉಡುಪಾಗಲಿ ಕಾಲಲ್ಲಿದ್ದ ಕೆರವಾಗಲಿ ಜೀರ್ಣವಾಗ
ಲಿಲ್ಲ; ನೀವು ರೊಟ್ಟಿಯನ್ನು ತಿನ್ನಲಿಲ್ಲ, ದ್ರಾಕ್ಷಾರಸ
ವನ್ನಾಗಲಿ ಯಾವ ಮದ್ಯವನ್ನಾಗಲಿ ಕುಡಿಯಲೇ
ಇಲ್ಲ. ಯೆಹೋವನೇ ನಿಮ್ಮ ದೇವರು ಎಂಬದು
ನಿಮಗೆ ತಿಳಿಯಬೇಕೆಂಬ ಉದ್ದೇಶದಿಂದ ಹೀಗಾ
ಯಿತು. ನೀವು ಈ ಸ್ಥಳಕ್ಕೆ ಬಂದಾಗ ಹೆಷ್ಬೋನಿನ
ಅರಸನಾದ ಸೀಹೋನನೂ ಬಾಷಾನಿನ ಅರಸನಾದ
ಓಗನೂ ನಮ್ಮೊಡನೆ ಯುದ್ಧಮಾಡುವದಕ್ಕೆ ಬರಲಾಗಿ
ನಾವು ಅವರನ್ನು ಸೋಲಿಸಿ ಅವರ ರಾಜ್ಯಗಳನ್ನು
ಸ್ವಾಧೀನಮಾಡಿಕೊಂಡು ರೂಬೇನ್ಯರಿಗೂ ಗಾದ್ಯರಿಗೂ
ಮನಸ್ಸೆಕುಲದವರಲ್ಲಿ ಅರ್ಧಜನರಿಗೂ ಸ್ವಾಸ್ತ್ಯವಾಗಿ
ಕೊಟ್ಟೆವಷ್ಟೆ. ಈ ಸಂಗತಿಗಳನ್ನೆಲ್ಲಾ ನೀವು ಜ್ಞಾಪಕ
ಮಾಡಿಕೊಂಡು ಈ ನಿಬಂಧನವಾಕ್ಯಗಳನ್ನು ಅನುಸರಿಸಿ
ನಡೆಯಬೇಕು; ಆಗ ನೀವು ನಡಿಸುವ ಎಲ್ಲಾ ಕೆಲಸ
ಗಳಲ್ಲಿಯೂ ಜಾಣರಾಗಿ ಅಭಿವೃದ್ಧಿಹೊಂದುವಿರಿ.

ಇಸ್ರಾಯೇಲ ಪುರುಷರೇ, ನಿಮ್ಮ ಪ್ರಧಾನರು,
ಗೋತ್ರದವರು, ಹಿರಿಯರು, ಅಧಿಕಾರಿಗಳು, ಹೆಂಗ
ಸರು, ಮಕ್ಕಳು, ನಿಮ್ಮ ಪಾಳೆಯದಲ್ಲಿರುವ ಅನ್ಯ
ರಾದ ಕಟ್ಟಿಗೆಯವರು, ನೀರಿನವರು ಮುಂತಾದ
ಆಳುಗಳು, ನೀವೆಲ್ಲರೂ ಈ ಹೊತ್ತು ನಿಮ್ಮ ದೇವ 12,
ರಾದ ಯೆಹೋವನ ಸನ್ನಿಧಿಯಲ್ಲಿ ನಿಂತಿರುವದಕ್ಕೆ
ಕಾರಣವೇನಂದರೆ—ನಿಮ್ಮ ದೇವರಾದ ಯೆಹೋವ
ನು ನಿಮಗೆ ಹೇಳಿದಂತೆಯೂ ನಿಮ್ಮ ಪಿತೃಗಳಾದ
ಅಬ್ರಹಾಮ್ ಇಸಾಕ್ ಯಾಕೋಬರಿಗೆ ವಾಗ್ದಾನ
ಮಾಡಿದಂತೆಯೂ ನಿಮ್ಮನ್ನು ತನಗೆ ಸ್ವಕೀಯಜನರ
ನ್ನಾಗಿಯೂ ತನ್ನನ್ನು ನಿಮಗೆ ದೇವರನ್ನಾಗಿಯೂ
ಸ್ಥಾಪಿಸಿಕೊಳ್ಳುವದಕ್ಕೋಸ್ಕರ ಈಗ ನಿಮ್ಮೊಡನೆ
ಪ್ರಮಾಣಪೂರ್ವಕವಾದ ಒಂದು ಒಡಂಬಡಿಕೆಯನ್ನು
ಮಾಡಿಕೊಳ್ಳುವವನಾಗಿದ್ದಾನೆ; ನೀವು ಅದಕ್ಕೆ ಸೇರು
ವದಕ್ಕಾಗಿ ಕೂಡಿಬಂದಿದ್ದೀರಿ.

1) ಮೂಲ: ಯೆಹೋವನೆಂಬ ನಾಮೇ.

14, 15 ನಮ್ಮ ದೇವರಾದ ಯೆಹೋವನ ಸನ್ನಿಧಿಯಲ್ಲಿ
ಸಿದ್ಧರಾಗಿ ನಿಂತಿರುವ ನಮ್ಮೊಡನೆ ಮಾತ್ರವಲ್ಲದೆ
ಮುಂದೆ ಹುಟ್ಟುವ ನಮ್ಮ ಸಂತತಿಯವರೊಡನೆಯೂ
ಪ್ರಮಾಣಪೂರ್ವಕವಾದ ಈ ಒಡಂಬಡಿಕೆಯನ್ನು
16 ಮಾಡಿಕೊಳ್ಳುವವನಾಗಿದ್ದಾನೆ. ನಾವು ಐಗುಪ್ತದೇಶ
ದಲ್ಲಿ ವಾಸಮಾಡಿದ್ದೂ ಅನೇಕ ಜನಾಂಗಗಳ ಪ್ರದೇಶ
17 ಗಳನ್ನು ದಾಟಿಬಂದದ್ದೂ ನಿಮಗೆ ತಿಳಿದೇ ಇದೆ; ಆ
ಜನಾಂಗಗಳಲ್ಲಿ ನಡೆಯುವ ಹೇಯಾಚಾರಗಳನ್ನೂ
ಅವರು ಮರ ಕಲ್ಲು ಬೆಳ್ಳಿ ಬಂಗಾರಗಳಿಂದ ಮಾಡಿ
ಕೊಂಡು ಪೂಜಿಸುವ ಬೊಂಬೆಗಳನ್ನೂ ಕಂಡೇ ಕಂಡಿ
ದ್ದೀರಷ್ಟೆ.
18 ಎಚ್ಚರಿಕೆಯಾಗಿರ್ರಿ; ನಮ್ಮ ದೇವರಾದ ಯೆಹೋ
ವನನ್ನು ಬಿಟ್ಟು ಆ ಜನಾಂಗಗಳ ದೇವರುಗಳನ್ನು
ಸೇವಿಸುವ ಯಾವ ಕುಲವಾಗಲಿ ಕುಟುಂಬವಾಗಲಿ
ಸ್ತ್ರೀಪುರುಷರಾಗಲಿ ನಿಮ್ಮಲ್ಲಿ ಇರಲೇ ಬಾರದು;
ನಿಮ್ಮಲ್ಲಿ ಯಾವ ವಿಷಲತೆಯ ಬೇರೂ ಇರಬಾರದು.
19 ಶಾಪದಿಂದ ಕೂಡಿರುವ ಈ ಪ್ರತಿಜ್ಞೆಯನ್ನು ಕೇಳಿದ
ಯಾವನಾದರೂ ತನ್ನೊಳಗೆ—ನಾನು ಹಟವನ್ನು
ಹಿಡಿದು ಅವಿಧೇಯನಾದರೂ ನನಗೆ ಕ್ಷೇಮವಾಗಿಯೇ
ಇರುವದು ಅಂದುಕೊಂಡು ಹಿಗ್ಗಬಾರದು. ಹಾಗೆ
ಮಾಡುವವನು 1)ದೋಷಿಗಳಿಗೂ ನಿರ್ದೋಷಿಗಳಿಗೂ
20 ನಾಶವನ್ನುಂಟುಮಾಡಾನು. ಯೆಹೋವನು ಅಂಥವ
ನನ್ನು ಎಂದಿಗೂ ಕ್ಷಮಿಸದೆ ಬಹಳ ಸಿಟ್ಟುಮಾಡಿ
ಕೊಂಡು ತನ್ನ ಗೌರವವನ್ನು ಕಾಪಾಡಿಕೊಳ್ಳುವವ
ನಾಗಿ ಈ ಗ್ರಂಥದಲ್ಲಿ ಬರೆದಿರುವ ಎಲ್ಲಾ ಶಾಪೋಕ್ತಿ
ಗಳಿಗೂ ಅವನನ್ನು ಗುರಿಪಡಿಸಿ ಅವನ ಹೆಸರನ್ನು
21 ಭೂಮಿಯ ಮೇಲೆ ಇಲ್ಲದಂತೆ ಮಾಡುವನು. ಈ
ಧರ್ಮಶಾಸ್ತ್ರದಲ್ಲಿ ಬರೆದಿರುವ ನಿಬಂಧನೆಯನ್ನು ಮೀರು
ವವರಿಗೆ ಉಂಟಾಗುವ ಶಾಪಗಳು ಅವನಲ್ಲಿ ನೆರವೇರ
ಲೆಂದು ಯೆಹೋವನು ಅವನನ್ನು ಇಸ್ರಾಯೇಲ್ಯರ
ಎಲ್ಲಾ ಕುಲಗಳಿಂದ ಪ್ರತ್ಯೇಕಿಸಿ ದಂಡಿಸುವನು.
22 ಮುಂದೆ ಹುಟ್ಟುವ ನಿಮ್ಮ ಸಂತತಿಯವರೂ ದೇಶಾಂ
ತರಗಳಿಂದ ಬರುವ ಅನ್ಯರೂ ನಿಮ್ಮ ದೇಶಕ್ಕೆ ಯೆಹೋ
ವನು ಉಂಟುಮಾಡಿದ ರೋಗೋಪದ್ರವಗಳನ್ನು
23 ಕಂಡು ಆಶ್ಚರ್ಯಪಡುವರು. ಎಲ್ಲಾ ಜನಾಂಗಗಳ
ವರೂ ನಿಮ್ಮ ಆ ದೇಶವು ಯಾವ ವ್ಯವಸಾಯವಾ
ದರೂ ಇಲ್ಲದೆ ಹುಲ್ಲಾದರೂ ಬೆಳೆಯದೆ ಹಾಳುಬಿದ್ದು
ಯೆಹೋವನು ಮಹಾ ಕೋಪದಿಂದ ಕೆಡವಿದ ಸೊ
ದೋಮ್ ಗೊಮೋರ ಅದ್ಮಾ ಚೆಬೋಯೀಮ್ ಎಂಬ
ಪಟ್ಟಣಗಳ ಪ್ರದೇಶದಂತೆ ಸುಟ್ಟುಹೋದದ್ದಾಗಿ ಎಲ್ಲಾ
ಕಡೆಗಳಲ್ಲಿಯೂ ಗಂಧಕ ಉಪ್ಪುಗಳಿಂದ ತುಂಬಿರುವ
24 ದನ್ನು ಕಂಡು—ಯೆಹೋವನು ಈ ದೇಶಕ್ಕೆ ಹೀಗೆ
ಮಾಡಿದ್ದೇಕೆ? ಇಂಥ ಕೋಪಾಗ್ನಿಗೆ ಕಾರಣವೇನಿ
25 ದ್ದೀತು? ಎಂಬದಾಗಿ ವಿಚಾರಿಸುವರು. ಅದಕ್ಕೆ ಜನ
ರು—ಈ ದೇಶದವರ ಪಿತೃಗಳ ದೇವರಾದ ಯೆಹೋ
ವನು ಅವರನ್ನು ಐಗುಪ್ತದೇಶದಿಂದ ಬಿಡಿಸಿ ಅವರೊ
ಡನೆ ಮಾಡಿದ ನಿಬಂಧನೆಯನ್ನು ಅವರು ಉಲ್ಲಂಘಿಸಿ
26 ತಮಗೆ ನೇಮಿಸಲ್ಪಡದೆಯೂ ಗೊತ್ತಿಲ್ಲದೆಯೂ ಇದ್ದ
ಇತರ ದೇವರುಗಳನ್ನು ಸೇವಿಸಿ ಪೂಜಿಸಿದದರಿಂದ
ಯೆಹೋವನು ಅವರ ದೇಶದ ಮೇಲೆ ಕೋಪಮಾಡಿ 27
ಈ ಗ್ರಂಥದಲ್ಲಿ ಬರೆದಿರುವ ಶಾಪಗಳನ್ನು ಅವರ ಮೇಲೆ
ಬರಮಾಡಿ ಮಹಾಕೋಪೋದ್ರೇಕದಿಂದ ಆ ಜನರನ್ನು 28
ದೇಶದಿಂದ ಕಿತ್ತುಹಾಕಿ ಈಗ ಅನುಭವಕ್ಕೆ ಬಂದಿರು
ವಂತೆ ದೇಶಾಂತರದಲ್ಲಿ ಹಾಕಿಬಿಟ್ಟನೆಂದು ಉತ್ತರ
ಕೊಡುವರು.
ರಹಸ್ಯವಾದವುಗಳು ನಮ್ಮ ದೇವರಾದ ಯೆಹೋವ 29
ನವು; ಆದರೆ ಆತನಿಂದ ಪ್ರಕಟವಾದವುಗಳು ಸದಾ
ನಮ್ಮ ಮತ್ತು ನಮ್ಮ ಸಂತತಿಯವರ ಪಾಲಾಗಿರುವದ
ರಿಂದ ನಾವು ಈ ಧರ್ಮಶಾಸ್ತ್ರನಿಯಮಗಳನ್ನು ಅನು
ಸರಿಸಿ ನಡೆಯಬೇಕಾದ ಹಂಗಿನಲ್ಲಿದ್ದೇವೆ.

ಯೆಹೋವನು ಪಶ್ಚಾತ್ತಾಪಪಡುವ ಇಸ್ರಾಯೇಲ್ಯರನ್ನು ಕ್ಷಮಿಸಿ
ತಿರಿಗಿ ಅಭಿವೃದ್ಧಿಪಡಿಸುವನೆಂಬ ವಾಗ್ದಾನ.

## 30

ನಾನು ನಿಮ್ಮ ಮುಂದೆ ಇಟ್ಟಿರುವ ಆಶೀರ್ವಾ
ದವೂ ಶಾಪವೂ ನಿಮ್ಮ ಅನುಭವಕ್ಕೆ ಬಂದಾಗ
ನಿಮ್ಮ ದೇವರಾದ ಯೆಹೋವನು ನಿಮ್ಮನ್ನು ಚದರಿ
ಸಿರುವ ದೇಶಗಳಲ್ಲಿ ನೀವು ಇವುಗಳನ್ನು ನೆನಪಿಗೆ
ತಂದುಕೊಂಡು ನಿಮ್ಮ ಮಕ್ಕಳು ಸಹಿತವಾಗಿ ನಿಮ್ಮ 2
ದೇವರಾದ ಯೆಹೋವನ ಆಶ್ರಯಕ್ಕೆ ತಿರಿಗಿ ಬಂದು
ನಾನು ಈಗ ನಿಮಗೆ ಬೋಧಿಸುವ ಆತನ ಮಾತುಗಳಿಗೆ
ಸಂಪೂರ್ಣವಾದ ಹೃದಯದಿಂದಲೂ ಮನಸ್ಸಿನಿಂದಲೂ
ವಿಧೇಯರಾದರೆ ನಿಮ್ಮ ದೇವರಾದ ಯೆಹೋವನು 3
ದುರವಸ್ಥೆಯಿಂದ ನಿಮ್ಮನ್ನು ತಪ್ಪಿಸಿ ನಿಮ್ಮನ್ನು ಕನಿ
ಕರಿಸಿ ತಾನು ನಿಮ್ಮನ್ನು ಚದರಿಸಿರುವ ಎಲ್ಲಾ ದೇಶ
ಗಳಿಂದ ತಿರಿಗಿ ಕೂಡಿಸುವನು. ನಿಮ್ಮಲ್ಲಿ ಯಾರಾ 4
ದರೂ ಭೂಲೋಕದ ಕೊನೆಯ ವರೆಗೂ ಒಯ್ಯ
ಲ್ಪಟ್ಟರೂ ಅಲ್ಲಿಂದಲೂ ನಿಮ್ಮ ದೇವರಾದ ಯೆಹೋ
ವನು ಅವರನ್ನೂ ಕರತಂದು ನಿಮ್ಮ ಪಿತೃಗಳಿಗೆ ಸ್ವಾಸ್ತ್ಯ 5
ವಾಗಿದ್ದ ದೇಶದಲ್ಲಿ ಸೇರಿಸಿ ಅದು ನಿಮಗೂ ಸ್ವದೇಶ
ವಾಗುವಂತೆ ಮಾಡಿ ನಿಮಗೆ ಮೇಲನ್ನುಂಟುಮಾಡಿ
ಪಿತೃಗಳಿಗಿಂತಲೂ ಅಧಿಕವಾಗಿ ನಿಮ್ಮನ್ನು ಹೆಚ್ಚಿಸುವನು.
ನಿಮ್ಮ ದೇವರಾದ ಯೆಹೋವನು ನಿಮ್ಮ ಮತ್ತು 6
ನಿಮ್ಮ ಸಂತತಿಯವರ ಹೃದಯಕ್ಕೇ ಸುನ್ನತಿಮಾಡು
ವನು. ಆಗ ನೀವು ಆತನನ್ನು ಸಂಪೂರ್ಣವಾದ
ಹೃದಯದಿಂದಲೂ ಮನಸ್ಸಿನಿಂದಲೂ ಪ್ರೀತಿಸಿ ಬದು
ಕಿಕೊಳ್ಳುವಿರಿ. ನಿಮ್ಮ ದೇವರಾದ ಯೆಹೋವನು ಆ 7
ಶಾಪಗಳನ್ನೆಲ್ಲಾ ನಿಮ್ಮನ್ನು ದ್ವೇಷಿಸಿ ಹಿಂಸಿಸಿದ ನಿಮ್ಮ
ಶತ್ರುಗಳ ಮೇಲೆಯೇ ಬರಮಾಡುವನು. ನೀವಾ 8
ದರೋ ಯೆಹೋವನ ಮಾತಿಗೆ ಪುನಃ ವಿಧೇಯರಾಗಿ
ನಾನು ಈಗ ನಿಮಗೆ ಬೋಧಿಸುವ ಆತನ ಆಜ್ಞೆ
ಗಳಂತೆ ನಡೆಯುವಿರಿ; ಮತ್ತು ನಿಮ್ಮ ದೇವರಾದ 9, 10
ಯೆಹೋವನು ನಿಮ್ಮ ಸಂತಾನ ಪಶು ವ್ಯವಸಾಯ
ಗಳನ್ನು ಹೆಚ್ಚಿಸಿ ನಿಮ್ಮ ಎಲ್ಲಾ ಪ್ರಯತ್ನಗಳನ್ನು
ಸಫಲಪಡಿಸಿ ನಿಮಗೆ ಮೇಲನ್ನುಂಟುಮಾಡುವನು.
ನೀವು ನಿಮ್ಮ ದೇವರಾದ ಯೆಹೋವನ ಮಾತಿಗೆ

1) ಮೂಲ: ಹಸಿಯದಕ್ಕೂ ಒಣಗಿದ್ದಕ್ಕೂ ಅಂದರೆ ಎಲ್ಲದಕ್ಕೂ.

ವಿಧೇಯರಾಗಿ ಈ ಧರ್ಮಶಾಸ್ತ್ರದ ಆಜ್ಞಾವಿಧಿಗಳನ್ನು
ಅನುಸರಿಸಿ ಸಂಪೂರ್ಣವಾದ ಹೃದಯದಿಂದಲೂ
ಮನಸ್ಸಿನಿಂದಲೂ ಆತನ ಕಡೆಗೆ ತಿರುಗಿಕೊಳ್ಳಲು
ಆತನು ಸಿಮ್ಮ ಪಿತೃಗಳ ವಿಷಯದಲ್ಲಿ ಸಂತೋಷಪಟ್ಟ
ಹಾಗೆಯೇ ನಿಮ್ಮ ವಿಷಯದಲ್ಲಿಯೂ ತಿರಿಗಿ ಸಂತೋ
ಷಪಟ್ಟು ನಿಮಗೆ ಮೇಲನ್ನುಂಟುಮಾಡುವನು.
11 ನಾನು ಈಗ ನಿಮಗೆ ಬೋಧಿಸಿದ ಧರ್ಮೋಪ
ದೇಶವು ನಿಮಗೆ ಗ್ರಹಿಸುವದಕ್ಕೆ ಕಷ್ಟವಾದದ್ದೂ ಅಲ್ಲ,
12 ಹೊಂದುವದಕ್ಕೆ ಅಸಾಧ್ಯವಾದದ್ದೂ ಅಲ್ಲ. ಇದು
ಮೇಲಣ ಲೋಕದಲ್ಲಿರುವ ಮಾತಲ್ಲ. ನಮಗೋ
ಸ್ಕರ ಮೇಲಣ ಲೋಕವನ್ನು ಏರಿ ಅದನ್ನು ತಿಳಿದು
ಕೊಂಡುಬಂದು ನಮಗೆ ತಿಳಿಸುವಷ್ಟು ಶಕ್ತರು ಯಾರಿ
ದ್ದಾರೆ? ಇದ್ದರೆ ನಾವು ಕೇಳಿ ಕೈಕೊಂಡೇವು ಅಂದು
13 ಕೊಳ್ಳುವದಕ್ಕೆ ಅವಕಾಶವೇನೂ ಇಲ್ಲ. ಮತ್ತು
ಇದು ಸಮುದ್ರದ ಆಚೆ ಇರುವ ಮಾತಲ್ಲ. ಸಮ
ಗೋಸ್ಕರ ಸಮುದ್ರವನ್ನು ದಾಟಿ ಅದನ್ನು ತೆಗೆದು
ಕೊಂಡುಬಂದು ನಮಗೆ ತಿಳಿಸುವಷ್ಟು ಶಕ್ತರು ಯಾರಿ
ದ್ದಾರೆ? ಇದ್ದರೆ ನಾವು ಕೈಕೊಂಡೇವು ಅಂದುಕೊಳ್ಳು
14 ವದಕ್ಕೆ ಆಸ್ಪದವೇನೂ ಇಲ್ಲ. ಈ ವಾಕ್ಯವು ನಿಮಗೆ
ಸಮೀಪದಲ್ಲಿಯೇ ಇದೆ; ಇದು ನಿಮ್ಮ ಬಾಯ
ಲ್ಲಿಯೂ ಹೃದಯದಲ್ಲಿಯೂ ಇದೆ; ಇದನ್ನು ಅನು
ಸರಿಸುವದಕ್ಕೆ ಅವಕಾಶವುಂಟಷ್ಟೆ.

ಶುಭಾಶುಭಗಳೆರಡೂ ತಮ್ಮ ಮುಂದೆ ಇಡಲ್ಪಟ್ಟಲ್ಲಿ
ಇಸ್ರಾಯೇಲ್ಯರು ಶುಭವನ್ನೇ ಆರಿಸಿಕೊಳ್ಳಬೇಕೆಂದು
ಮೋಶೆ ಬೋಧಿಸಿದ್ದು.

15 ನೋಡಿರಿ; ನಾನು ಜೀವಶುಭಗಳನ್ನೂ ಮರಣಾ
ಶುಭಗಳನ್ನೂ ಈಗ ಸಿಮ್ಮ ಮುಂದೆ ಇಟ್ಟಿದ್ದೇನೆ.
16 ನಾನು ಈಗ ನಿಮಗೆ ಬೋಧಿಸುವ ಪ್ರಕಾರ ನೀವು
ನಿಮ್ಮ ದೇವರಾದ ಯೆಹೋವನನ್ನು ಪ್ರೀತಿಸಿ ಆತನು
ಹೇಳಿದ ಮಾರ್ಗದಲ್ಲಿ ನಡೆದು ಆತನ ಆಜ್ಞಾವಿಧಿ
ನಿರ್ಣಯಗಳನ್ನು ಅನುಸರಿಸಿದರೆ ನೀವು ಬದುಕಿ
ಕೊಂಡು ಹೆಚ್ಚುವಿರಿ; ಮತ್ತು ನೀವು ಸ್ವಾಧೀನಮಾಡಿ
ಕೊಳ್ಳುವದಕ್ಕೆ ಹೋಗುವ ದೇಶದಲ್ಲಿ ನಿಮ್ಮ ದೇವ
ರಾದ ಯೆಹೋವನು ನಿಮ್ಮನ್ನು ಅಭಿವೃದ್ಧಿಪಡಿಸು
17 ವನು. ಆದರೆ ನೀವು ಆತನನ್ನು ಬಿಟ್ಟು ಆತನ
ಮಾತನ್ನು ಕೇಳಲೊಲ್ಲದೆ ಮರುಳುಗೊಂಡವರಾಗಿ
18 ಇತರ ದೇವರುಗಳನ್ನು ಪೂಜಿಸಿ ಸೇವಿಸಿದರೆ ನೀವು
ಸ್ವಾಧೀನಮಾಡಿಕೊಳ್ಳುವದಕ್ಕೆ ಯೊರ್ದನ್ ಹೊಳೆ
ಯನ್ನು ದಾಟಿ ಹೋಗುವ ದೇಶದಲ್ಲಿ ಬಹುಕಾಲ ಇರದೆ
ನಾಶವಾಗಿಯೇ ಹೋಗುವಿರೆಂದು ನಾನು ಈಗ ನಿಮಗೆ
19 ಖಂಡಿತವಾಗಿ ತಿಳಿಸುತ್ತೇನೆ. ನಾನು ಜೀವಮರಣ
ಗಳನ್ನೂ ಆಶೀರ್ವಾದಶಾಪಗಳನ್ನೂ ಈಗ ನಿಮ್ಮ
ಮುಂದೆ ಇಟ್ಟಿದ್ದೇನೆ; ಇದಕ್ಕೆ ಭೂಮ್ಯಾಕಾಶಗಳು
ಸಾಕ್ಷಿಗಳಾಗಿರಲಿ. ಆದದರಿಂದ ನೀವೂ ನಿಮ್ಮ ಸಂತತಿ
ಯವರೂ ಬದುಕಿಕೊಳ್ಳುವಂತೆ ಜೀವವನ್ನೇ ಆದು
ಕೊಳ್ಳಿರಿ; ನಿಮ್ಮ ದೇವರಾದ ಯೆಹೋವನನ್ನು ಪ್ರೀತಿಸಿ
ಆತನ ಮಾತಿಗೆ ವಿಧೇಯರಾಗಿರ್ರಿ, ಆತನನ್ನು ಹೊಂದಿ
ಕೊಂಡೇ ಇರ್ರಿ. ಯೆಹೋವನು ನಿಮ್ಮ ಪಿತೃಗಳಾದ
ಅಬ್ರಹಾಮ್ ಇಸಾಕ್ ಯಾಕೋಬರಿಗೆ ಪ್ರಮಾಣ
ಮಾಡಿಕೊಟ್ಟ ದೇಶದಲ್ಲಿ ನೀವು ಬದುಕಿಕೊಳ್ಳುವ
ದಕ್ಕೂ ಬಹುಕಾಲ ಇರುವದಕ್ಕೂ 1)ಆತನೇ ಆಧಾರ.

ಮೋಶೆಯ ಚರಿತ್ರೆಯ ಪೂರಣೆ. 31—34.

ಮೋಶೆ ಯೆಹೋಶುವನನ್ನು ಸೇನಾಪತಿಯನ್ನಾಗಿ ನೇಮಿಸಿ
ಪ್ರೋತ್ಸಾಹಪಡಿಸಿದ್ದು.

3 ಮೋಶೆ ಹೋಗಿ ಈ ಮಾತುಗಳನ್ನು ಇಸ್ರಾಯೇ
ಲ್ಯರೆಲ್ಲರಿಗೆ ತಿಳಿಸಿದನು. ಅವನು ಅವರಿಗೆ— 2
ನಾನು ಈಗ ನೂರಿಪ್ಪತ್ತು ವರುಷದವನಾಗಿದ್ದೇನೆ;
ವಿಶೇಷವಾದ ಕಾರ್ಯಗಳನ್ನು ನಿರ್ವಹಿಸುವದು ಇನ್ನು
ನನ್ನಿಂದಾಗದು; ಯೆಹೋವನು ನನಗೆ—ನೀನು ಈ
ಯೊರ್ದನ್ ಹೊಳೆಯನ್ನು ದಾಟಕೂಡದೆಂದು ಆಜ್ಞಾ
ಪಿಸಿದ್ದಾನೆ. ನಿಮ್ಮ ದೇವರಾದ ಯೆಹೋವನು ತಾನೇ
ನಿಮ್ಮ ಸೇನಾನಾಯಕನಾಗಿ ಹೊಳೆಯನ್ನು ದಾಟಿ
ಹೋಗುವನು; ಆತನು ಆ ಜನಾಂಗಗಳನ್ನು ನಿಮ್ಮ
ಎದುರಿನಲ್ಲಿ ನಿಲ್ಲದಂತೆ ನಾಶಮಾಡುವದರಿಂದ ನೀವು
ಅವರ ದೇಶವನ್ನು ಸ್ವಾಧೀನಮಾಡಿಕೊಳ್ಳುವಿರಿ. ಯೆ
ಹೋವನು ಆಜ್ಞಾಪಿಸಿದಂತೆ ಯೆಹೋಶುವನು ನಿಮ್ಮ
ನಾಯಕನಾಗಿ ಹೊಳೆಯನ್ನು ದಾಟಿಹೋಗುವನು.
ಯೆಹೋವನು ಅಮೋರಿಯರ ಅರಸನಾದ ಸೀಹೋನ್
ಓಗರನ್ನು ನಾಶಮಾಡಿ ಅವರ ದೇಶವನ್ನು ನಿಮಗೆ
ಸ್ವಾಧೀನಪಡಿಸಿದಂತೆ ಆ ಜನಾಂಗಗಳನ್ನೂ ನಾಶ
ಮಾಡಿ ಅವರ ದೇಶವನ್ನು ನಿಮಗೆ ವಶಪಡಿಸುವನು.
ಆತನು ಅವರನ್ನು ನಿಮ್ಮಿಂದ ಪರಾಜಯಪಡಿಸಿದಾಗ
ನೀವು ಅವರ ವಿಷಯದಲ್ಲಿ ನನ್ನ ಆಜ್ಞೆಗಳನ್ನೆಲ್ಲಾ
ಅನುಸರಿಸಿ ನಡೆದುಕೊಳ್ಳಬೇಕು. ನೀವು ಶೂರರಾಗಿ
ಧೈರ್ಯದಿಂದಿರ್ರಿ; ಅವರಿಗೆ ಅಂಜಬೇಡಿರಿ, ಕಳವಳಪಡ
ಬೇಡಿರಿ. ನಿಮ್ಮ ದೇವರಾದ ಯೆಹೋವನೇ ನಿಮ್ಮ
ಸಂಗಡ ಇರುತ್ತಾನಲ್ಲಾ; ಆತನು ನಿಮ್ಮನ್ನು ಕೈಬಿಡು
ವದಿಲ್ಲ, ಅಪಜಯಕ್ಕೆ ಗುರಿಪಡಿಸುವದೇ ಇಲ್ಲ ಎಂದು
ಹೇಳಿದನು.
ಆಗ ಮೋಶೆ ಯೆಹೋಶುವನನ್ನು ಕರೆದು ಇಸ್ರಾ
ಯೇಲ್ಯರೆಲ್ಲರ ಮುಂದೆ ಅವನಿಗೆ—ಯೆಹೋವನು
ಇವರ ಪಿತೃಗಳಿಗೆ ಪ್ರಮಾಣಮಾಡಿಕೊಟ್ಟ ದೇಶಕ್ಕೆ
ನೀನೇ ಇವರೊಡನೆ ಹೋಗಿ ಅದನ್ನು ಅವರಿಗೆ
ಸ್ವಾಧೀನಪಡಿಸಬೇಕು. ಆದದರಿಂದ ಶೂರನಾಗಿ
ಧೈರ್ಯದಿಂದಿರು; ಯೆಹೋವನು ತಾನೇ ನಿನ್ನ
ಮುಂದುಗಡೆ ಹೋಗುವನು; ಆತನೇ ನಿನ್ನ ಸಂಗಡ
ಇರುವನು; ನಿನ್ನನ್ನು ಅಪಜಯಕ್ಕೆ ಗುರಿಪಡಿಸುವದೇ
ಇಲ್ಲ, ಕೈಬಿಡುವದಿಲ್ಲ; ಅಂಜಬೇಡ, ಧೈರ್ಯದಿಂದಿರು
ಎಂದು ಹೇಳಿದನು.

1) ಅಥವಾ: ಇದೇ ಮಾರ್ಗ.

ಏಳು ವರುಷಕ್ಕೆ ಒಂದಾವರ್ತಿ ಯಾಜಕರು ಈ ಧರ್ಮ
ಶಾಸ್ತ್ರವನ್ನು ಜನರೆಲ್ಲರ ಮುಂದೆ ಓದಬೇಕೆಂಬ ವಿಧಿ.

9 ಮೋಶೆ ಈ ಧರ್ಮಶಾಸ್ತ್ರವನ್ನು ಬರೆದು ಯೆಹೋ
ವನ ಆಜ್ಞಾಶಾಸನಗಳ ಮಂಜೂಷವನ್ನು ಹೊರುವ
ಲೇವಿಯರಾದ ಯಾಜಕರ ಮತ್ತು ಹಿರಿಯರ ವಶಕ್ಕೆ
10 ಕೊಟ್ಟು ಅವರಿಗೆ—ಪ್ರತಿ ಏಳು ವರುಷಗಳು ಪೂರ್ತಿ
ಯಾದಾಗ ಬಿಡುಗಡೆಯ ಸಂವತ್ಸರದ ನೇಮಕ
ಕಾಲದಲ್ಲಿ ಅಂದರೆ ಪರ್ಣಶಾಲೆಗಳ ಜಾತ್ರೆಯಲ್ಲಿ
11 ನಿಮ್ಮ ದೇವರಾದ ಯೆಹೋವನು ಆದುಕೊಂಡ ಸ್ಥಳ
ದಲ್ಲಿ ಇಸ್ರಾಯೇಲ್ಯರೆಲ್ಲರು ಆತನ ಸನ್ನಿಧಿಗೆ ಕೂಡಿ
ಬಂದಾಗ ನೀವು ಅವರೆಲ್ಲರಿಗೂ ಕೇಳಿಸುವಂತೆ ಈ
ಧರ್ಮಶಾಸ್ತ್ರವನ್ನು ಅವರ ಮುಂದೆ ಓದಬೇಕು.
12 ಜನರೆಲ್ಲರೂ ಈ ಧರ್ಮಶಾಸ್ತ್ರವನ್ನು ಕೇಳಿ ತಿಳಿದು
ಕೊಳ್ಳುವಂತೆ ಸ್ತ್ರೀಪುರುಷರನ್ನೂ ಮಕ್ಕಳನ್ನೂ ನಿಮ್ಮ
ಊರುಗಳಲ್ಲಿರುವ ಅನ್ಯರನ್ನೂ ಕೂಡಿಸಬೇಕು. ಆಗ
ಅವರು ತಮ್ಮ ದೇವರಾದ ಯೆಹೋವನಲ್ಲಿ ಭಯ
ಭಕ್ತಿಯುಳ್ಳವರಾಗಿ ಈ ಧರ್ಮಶಾಸ್ತ್ರದ ನಿಯಮ
13 ಗಳನ್ನು ಅನುಸರಿಸಿ ನಡೆಯುವರು. ಮತ್ತು ಯೆಹೋ
ವನ ಮಹತ್ಕಾರ್ಯಗಳನ್ನು ನೋಡದಿರುವ ನಿಮ್ಮ
ಸಂತತಿಯವರೂ ಕೇಳಿ ನೀವು ಸ್ವಾಧೀನಮಾಡಿ
ಕೊಳ್ಳುವದಕ್ಕೆ ಯೊರ್ದನ್ ಹೊಳೆಯನ್ನು ದಾಟಿ
ಹೋಗುವ ದೇಶದಲ್ಲಿ ವಾಸವಾಗಿರುವ ವರೆಗೂ ನಿಮ್ಮ
ದೇವರಾದ ಯೆಹೋವನಲ್ಲಿ ಭಯಭಕ್ತಿಯುಳ್ಳವರಾಗಿ
ರುವದಕ್ಕೆ ಕಲಿತುಕೊಳ್ಳುವರು ಎಂದು ಹೇಳಿದನು.

ಯೆಹೋವನು ಯೆಹೋಶುವನನ್ನು ಇಸ್ರಾಯೇಲ್ಯರಿಗೆ
ಸೇನಾಪತಿಯನ್ನಾಗಿ ನೇಮಿಸಿದ್ದು.

14 ಯೆಹೋವನು ಮೋಶೆಗೆ—ನೀನು ಸಾಯಬೇಕಾದ
ಕಾಲ ಸಮೀಪವಾಯಿತು; ಆದಕಾರಣ ನೀನು ಯೆ
ಹೋಶುವನನ್ನು ಕರೆದುಕೊಂಡು ಬಂದು ದೇವದರ್ಶ
ನದ ಗುಡಾರದಲ್ಲಿ ನನ್ನ ಸನ್ನಿಧಿಯಲ್ಲಿ ನಿಲ್ಲಬೇಕು;
ಆಗ ನಾನು ಅವನಿಗೆ ಅಧಿಕಾರವನ್ನು ಕೊಡುವೆನು
ಎಂದು ಆಜ್ಞಾಪಿಸಲಾಗಿ ಮೋಶೆಯೂ ಯೆಹೋಶು
ವನೂ ದೇವದರ್ಶನದ ಗುಡಾರದಲ್ಲಿ ಯೆಹೋವನ
15 ಸನ್ನಿಧಿಯಲ್ಲಿ ನಿಂತುಕೊಂಡರು. ಅಲ್ಲಿ ಯೆಹೋವನು
ಮೇಘಸ್ತಂಭದಲ್ಲಿ ಕಾಣಿಸಿದನು; ಆ ಮೇಘಸ್ತಂಭವು
ಗುಡಾರದ ಬಾಗಲಿನ ಬಳಿಯಲ್ಲಿ ನಿಂತಿತು.

ಭವಿಷ್ಯತ್ಕಾಲದಲ್ಲಿ ಇಸ್ರಾಯೇಲ್ಯರು ಯೆಹೋವನಿಗೆ
ದ್ರೋಹಿಗಳಾದಾಗ ಅವರಿಗೆ ವಿರೋಧವಾಗಿ ಸಾಕ್ಷಿ
ಕೊಡುವದಕ್ಕಾಗಿ ಒಂದು ಪದ್ಯವನ್ನು ರಚಿಸಬೇಕೆಂದು
ಯೆಹೋವನು ಮೋಶೆಗೆ ಆಜ್ಞಾಪಿಸಿದ್ದು.

16 ಯೆಹೋವನು ಮೋಶೆಗೆ—ನೀನು ಪಿತೃಗಳಲ್ಲಿ
ಸೇರಿದ ಮೇಲೆ ಈ ಜನರು ನನ್ನನ್ನು ಬಿಟ್ಟು ನಾನು
ಅವರೊಡನೆ ಮಾಡಿಕೊಂಡ ಒಡಂಬಡಿಕೆಯನ್ನು ಮೀರಿ
ದೇವದ್ರೋಹಿಗಳಾಗಿ ತಾವು ಹೋಗುವ ದೇಶದಲ್ಲಿ
ರುವ ಅನ್ಯದೇವತೆಗಳನ್ನು ಪೂಜಿಸುವರು. ಆಗ ನಾನು 17
ಅವರ ಮೇಲೆ ಬಲುಸಿಟ್ಟಾಗಿ ಅವರನ್ನು ಬಿಟ್ಟು ಅವ
ರಿಗೆ ವಿಮುಖನಾಗಿರುವೆನು: ಆದದರಿಂದ ಅವರು
ಸಂಹಾರಕ್ಕೆ ಗುರಿಯಾಗುವರು; ಮತ್ತು ಅನೇಕಕಷ್ಟ
ಗಳೂ ವಿಪತ್ತುಗಳೂ ಅವರಿಗೆ ಒದಗುವವು. ಆಗ
ಅವರು—ನಮ್ಮ ದೇವರು ನಮ್ಮ ಮಧ್ಯದಲ್ಲಿ ಇಲ್ಲವೆ
ಹೋದದರಿಂದಲೇ ಈ ವಿಪತ್ತುಗಳೆಲ್ಲಾ ನಮಗೆ ಸಂಭ
ವಿಸಿದವಲ್ಲಾ ಅಂದುಕೊಳ್ಳುವರು. ಅವರು ನನ್ನನ್ನು 18
ಬಿಟ್ಟು ಇತರ ದೇವರುಗಳನ್ನು ಆಶ್ರಯಿಸಿ ಬಹಳ ದು
ಷ್ಕಾರ್ಯಗಳನ್ನು ನಡಿಸುವದರಿಂದ ನಾನು ಆ ಕಾಲ
ದಲ್ಲಿ ಖಂಡಿತವಾಗಿ ಅವರಿಗೆ ವಿಮುಖನಾಗಿರುವೆನು.
ಆದಕಾರಣ ನೀನು ಈ ಪದ್ಯವನ್ನು ಬರೆದು 19
ಕೊಂಡು ಇಸ್ರಾಯೇಲ್ಯರಿಗೆ ಕಲಿಸಿಕೊಡಬೇಕು. ಈ
ಪದ್ಯವು ಇಸ್ರಾಯೇಲ್ಯರಿಗೆ ವಿರೋಧವಾಗಿ ನನ್ನ ಪಕ್ಷ
ದಲ್ಲಿ ಸಾಕ್ಷಿಯಾಗಿರುವಂತೆ ಇದನ್ನು ಅವರಿಗೆ ಬಾಯಿ
ಪಾಠಮಾಡಿಸು. ನಾನು ಪ್ರಮಾಣಮಾಡಿಕೊಟ್ಟ 20, 21
ದೇಶದಲ್ಲಿ ಇವರು ಸೇರುವದಕ್ಕಿಂತ ಮುಂಚಿತವಾಗಿ
ಯೇ ಇವರು ಈಗಲೂ ಮಾಡುವ ದುರಾಲೋಚನೆ
ಗಳನ್ನು ನಾನು ಬಲ್ಲೆ. ನಾನು ಇವರ ಪಿತೃಗಳಿಗೆ
ಪ್ರಮಾಣಮಾಡಿದಂತೆ ಹಾಲೂ ಜೇನೂ ಹರಿಯುವ
ದೇಶಕ್ಕೆ ಇವರನ್ನು ಸೇರಿಸಿದ ಮೇಲೆ ಇವರು ಚೆನ್ನಾಗಿ
ಉಂಡು ಕೊಬ್ಬಿದವರಾದಾಗ ಇತರ ದೇವರುಗಳನ್ನು
ಅವಲಂಬಿಸಿ ಸೇವಿಸಿ ನನ್ನನ್ನು ತಾತ್ಸಾರಮಾಡಿ ನನ್ನ
ನಿಬಂಧನೆಯನ್ನು ಮೀರುವರು. ಅನಂತರ ಅನೇಕ
ಕಷ್ಟಗಳೂ ವಿಪತ್ತುಗಳೂ ಸಂಭವಿಸಿದಾಗ ಈ ಪದ್ಯವು
ಇವರ ಸಂತತಿಯವರ ಬಾಯಲ್ಲಿ ಇದ್ದುಕೊಂಡು ಅವರ
ಮುಂದೆ ಸಾಕ್ಷಿಕೊಡುವದು ಎಂದು ಹೇಳಿದನು.
ಆದಕಾರಣ ಮೋಶೆ ಆ ದಿನದಲ್ಲೇ ಈ ಪದ್ಯವನ್ನು 22
ಬರೆದು ಇಸ್ರಾಯೇಲ್ಯರಿಗೆ ಕಲಿಸಿದನು.
ಆಗ ಯೆಹೋವನು ನೂನನ ಮಗನಾದ ಯೆಹೋ 23
ಶುವನಿಗೆ—ನಾನು ಇಸ್ರಾಯೇಲ್ಯರಿಗೆ ಪ್ರಮಾಣಮಾ
ಡಿಕೊಟ್ಟ ದೇಶದಲ್ಲಿ ನೀನೇ ಅವರನ್ನು ಸೇರಿಸಬೇಕು;
ಆದದರಿಂದ ಶೂರನಾಗಿ ಧೈರ್ಯದಿಂದಿರು; ನಾನೇ
ನಿನ್ನ ಸಂಗಡ ಇರುವೆನು ಎಂದು ಆಜ್ಞಾಪಿಸಿದನು.

ಮೋಶೆ ಈ ಧರ್ಮಶಾಸ್ತ್ರವನ್ನು ಆಜ್ಞಾಶಾಸನಗಳ ಮಂಜೂಷದ
ಹತ್ತಿರ ಇಟ್ಟು ಎಚ್ಚರಿಕೆಯ ಮಾತುಗಳನ್ನು ಹೇಳುವದಕ್ಕೆ
ಜನರನ್ನು ಕೂಡಿಸಿದ್ದು.

ಮೋಶೆ ಈ ಧರ್ಮಶಾಸ್ತ್ರವನ್ನು ಗ್ರಂಥರೂಪವಾಗಿ 24
ಬರೆದು ಪೂರೈಸಿದಾಗ ಯೆಹೋವನ ಆಜ್ಞಾಶಾಸನ 25
ಗಳ ಮಂಜೂಷವನ್ನು ಹೊರುವ ಲೇವಿಯರಿಗೆ—
ನೀವು ಈ ಧರ್ಮಶಾಸ್ತ್ರಪುಸ್ತಕವನ್ನು ನಿಮ್ಮ ವಶಕ್ಕೆ 26
ತೆಗೆದುಕೊಂಡು ನಿಮ್ಮ ದೇವರಾದ ಯೆಹೋವನ
ಆಜ್ಞಾಶಾಸನಗಳ ಮಂಜೂಷದ ಬಳಿಯಲ್ಲಿ ಇಡಿರಿ.
[ಇಸ್ರಾಯೇಲ್ಯರೇ,] ಅಲ್ಲಿ ಇದು ನಿಮಗೆ ವಿರೋಧ
ವಾಗಿ ಸಾಕ್ಷಿಕೊಡುವದಾಗಿರಲಿ. ಯಾಕಂದರೆ ನೀವು 27
ಹಟಹಿಡಿದು ಆಜ್ಞೆಗೆ ಒಳಗಾಗದವರೆಂಬದು ನನಗೆ
ತಿಳಿದೇ ಇದೆ. ನಾನು ಇನ್ನೂ ಜೀವದಿಂದಿರುವಾಗಲೇ
ನೀವು ಯೆಹೋವನಿಗೆ ವಿರೋಧವಾಗಿ ತಿರುಗಿ ಬಿದ್ದಿ

ದ್ದೀರಿ; ನಾನು ಹೋದ ತರುವಾಯ ನೀವು ತಿರುಗಿ
28 ಬೀಳುವದು ಮತ್ತಷ್ಟು ನಿಶ್ಚಯ. ನಿಮ್ಮ ಕುಲಗಳ
ಹಿರಿಯರನ್ನೂ ಅಧಿಪತಿಗಳನ್ನೂ ನನ್ನ ಬಳಿಗೆ ಕೂಡಿ
ಸಿರಿ; ನಾನು ಈ ಮಾತುಗಳನ್ನು ಅವರಿಗೆ ತಿಳಿಸಿ
ಅವರಿಗೆ ವಿರೋಧವಾಗಿ ಸಾಕ್ಷಿಗಳಾಗುವದಕ್ಕೆ ಭೂ
29 ಮ್ಯಾಕಾಶಗಳನ್ನು ಕರೆಯುವೆನು. ನಾನು ಹೋದ
ಮೇಲೆ ನೀವು ದ್ರೋಹಿಗಳಾಗಿ ನಾನು ಬೋಧಿಸಿದ
ಮಾರ್ಗವನ್ನು ತಪ್ಪಿಹೋಗುವಿರೆಂದೂ ಅನಂತರದಲ್ಲಿ
ನೀವು ಯೆಹೋವನ ದೃಷ್ಟಿಯಲ್ಲಿ ಕೆಟ್ಟದ್ದನ್ನು ನಡಿಸಿ
1)ದುರಾಚಾರಿಗಳಾಗಿ ಆತನನ್ನು ಕೋಪಗೊಳಿಸು
ವದರಿಂದ ನಿಮಗೆ ಆಪತ್ತುಗಳು ಉಂಟಾಗುವವೆಂದೂ
ನಾನು ಬಲ್ಲೆ ಎಂದು ಹೇಳಿದನು.

ಮೋಶೆ ಇಸ್ರಾಯೇಲ್ಯರಿಗೆ ಪದ್ಯರೂಪವಾಗಿ ಹೇಳಿದ
ಎಚ್ಚರಿಕೆ ಮತ್ತು ಪ್ರೋತ್ಸಾಹ.

30 ಆಗ ಮೋಶೆ ಇಸ್ರಾಯೇಲ್ಯರ ಸರ್ವಸಮೂಹದವ
ರಿಗೆ ಕೇಳಿಸುವಂತೆ ಈ ಪದ್ಯದ ಮಾತುಗಳನ್ನೆಲ್ಲಾ
ಹೇಳಿದನು; ಏನಂದರೆ—

**32** ಆಕಾಶಮಂಡಲವೇ, ನಾನು ಹೇಳುವದನ್ನು ಕೇಳು;
ಭೂಮಂಡಲವೇ, ನನ್ನ ಮಾತುಗಳಿಗೆ ಕಿವಿಕೊಡು.
2 ನನ್ನ ಉಪದೇಶವು ಹಸಿಹುಲ್ಲಿನ ಮೇಲೆ ಮೆಲ್ಲಗೆ ಸುರಿಯುವ ಮಳೆಯ ತುಂತುರುಗಳಂತೆ [ತಣ್ಣಗಿರುವದು];
ನನ್ನ ಬೋಧನೆಯು ಮಂಜಿನಂತೆಯೂ ಕಾಯಿಪಲ್ಯಗಳ ಮೇಲೆ ಬೀಳುವ ಹದಮಳೆಯಂತೆಯೂ [ಹಿತವಾಗಿರುವದು].

3 ಯೆಹೋವನ ನಾಮಮಹತ್ವವನ್ನು ಪ್ರಕಟಿಸುವೆನು;
ನಮ್ಮ ದೇವರನ್ನು ಮಹಾಮಹಿಮೆಯುಳ್ಳವನೆಂದು ಕೊಂಡಾಡಿರಿ.
4 ನಮಗೆ 2)ಶರಣನಾದ ದೇವರು ಮಾಡುವ ಕಾರ್ಯದಲ್ಲಿ ಯಾವ ಕುಂದೂ ಇಲ್ಲ;
ಆತನು ನಡಿಸುವದೆಲ್ಲಾ ನ್ಯಾಯ;
ಆತನು ನಿರ್ವಂಚಕನಾದ ನಂಬಿಗಸ್ತ ದೇವರು,
ನೀತಿಯುಳ್ಳವನೂ ಯಥಾರ್ಥನೂ ಆಗಿದ್ದಾನೆ.
5 ಆದರೆ ಅವರು ದ್ರೋಹಿಗಳೇ, ಮಕ್ಕಳಲ್ಲ;
ಇದು ಅವರ ದೋಷವು;
ಅವರು ವಕ್ರಬುದ್ಧಿಯುಳ್ಳ ಮೂರ್ಖಜಾತಿಯವರು.
6 ದುರಾಚಾರಿಗಳಿರಾ, ಅವಿವೇಕಿಗಳಿರಾ,
ಯೆಹೋವನ ವಿಷಯದಲ್ಲಿ ಈ ರೀತಿಯಾಗಿ ನಡೆಯಬಹುದೇ?
ಆತನು ನಿಮ್ಮನ್ನು ಸೃಷ್ಟಿಸಿದ ತಂದೆಯಲ್ಲವೇ;
ನಿಮ್ಮನ್ನು [ಜನಾಂಗವನ್ನಾಗಿ] ಮಾಡಿ ಸ್ಥಾಪಿಸಿದನಲ್ಲವೇ.

ಪೂರ್ವಕಾಲವನ್ನು ನೆನಪಿಗೆ ತಂದುಕೊಳ್ಳಿರಿ; 7
ಪೂರ್ವಿಕರ ಚರಿತ್ರೆಯನ್ನು ಆಲೋಚಿಸಿರಿ.
ನಿಮ್ಮ ನಿಮ್ಮ ತಂದೆಗಳನ್ನು ವಿಚಾರಿಸಿದರೆ ಅವರು ತಿಳಿಸುವರು;
ಹಿರಿಯರನ್ನು ಕೇಳಿದರೆ ಅವರು ವಿವರಿಸುವರು; ಹೇಗಂದರೆ—
ಪರಾತ್ಪರನಾದ ದೇವರು ಜನಾಂಗಗಳನ್ನು ಬೇರೆ ಬೇರೆ ಮಾಡಿ 8
ಅವರವರಿಗೆ ಸ್ವದೇಶಗಳನ್ನು ನೇಮಿಸಿಕೊಟ್ಟಾಗ
ಇಸ್ರಾಯೇಲ್ಯರ ಸಂಖ್ಯೆಗೆ ತಕ್ಕಂತೆ
ಆಯಾ ಜನಾಂಗಕ್ಕೆ ಒಂದೊಂದು ಪ್ರದೇಶವನ್ನು ಗೊತ್ತುಮಾಡಿದ್ದೂ;
ಇಸ್ರಾಯೇಲ್ಯರು ಮಾತ್ರ ಯೆಹೋವನ ಸ್ವಂತ ಜನರಾದದ್ದೂ; 9
ಯಾಕೋಬ್ ವಂಶಸ್ಥರು ಆತನಿಗೆ ಸ್ವಕೀಯ ಪ್ರಜೆಯಾದದ್ದೂ;
ಆತನು ಅವರನ್ನು ಶೂನ್ಯವೂ ಭಯಂಕರವೂ ಆಗಿರುವ ಮರಳುಕಾಡಿನಲ್ಲಿ ಕಂಡು 10
ಪರಾಮರಿಸಿ ಪ್ರೀತಿಯಿಂದ ಆವರಿಸಿಕೊಂಡು
3) ಕಣ್ಣುಗುಡ್ಡೆನಂತೆ ಕಾಪಾಡಿದ್ದೂ;
ಹದ್ದು ತನ್ನ ಮರಿಗಳನ್ನು ಗೂಡಿನೊಳಗಿಂದ ಹೊರಡಿಸಿ 11
ಅವುಗಳ ಬಳಿಯಲ್ಲಿ ಹಾರಾಡುವಂತೆ
ಯೆಹೋವನು ತನ್ನ ರೆಕ್ಕೆಗಳನ್ನು ಚಾಚಿ
ಇಸ್ರಾಯೇಲ್ಯರನ್ನು ಎತ್ತಿಕೊಂಡದ್ದೂ;
ಯಾವ ಅನ್ಯದೇವರಾದರೂ ಇಲ್ಲದೆ 12
ಯೆಹೋವನೊಬ್ಬನೇ ಅವರನ್ನು ನಡಿಸಿಕೊಂಡು ಬಂದದ್ದೂ;
ಆತನು ಅವರನ್ನು ಭೂಮಿಯ ಎತ್ತರವಾದ ಪ್ರದೇಶಗಳ ಮೇಲೆ ಹತ್ತಿಸಿ 13
ಅವರಿಗೆ ವ್ಯವಸಾಯವೃದ್ಧಿಯನ್ನುಂಟುಮಾಡಿ
ಬಂಡೆಯಿಂದ ಜೇನೂ ಗಿರಿಯಿಂದ ಎಣ್ಣೆಯೂ ದೊರೆಯುವಂತೆ ಮಾಡಿದ್ದೂ;
ಆಹಾರಕ್ಕಾಗಿ ಆಕಳಿನ ಮೊಸರು, ಆಡುಕುರಿಗಳ ಹಾಲು, 14
ಕೊಬ್ಬಿದ ಕುರಿಟಗರುಗಳ ಮಾಂಸವು,
ಬಾಷಾನ್ ಸೀಮೆಯ ಉತ್ತಮಪಶುಗಳು, ಹೋತಗಳು,
ಶ್ರೇಷ್ಠವಾದ ಗೋದಿ ಇವುಗಳನ್ನೂ
ಪಾನಕ್ಕಾಗಿ ದ್ರಾಕ್ಷೆಯ ರಕ್ತರಸವನ್ನೂ ಕೊಟ್ಟದ್ದೂ;
ಇದನ್ನೆಲ್ಲಾ ನೆನಪಿಗೆ ತಂದುಕೊಳ್ಳಿರಿ.

ಆದರೆ 4)ಯೆಶುರೂನು ಚೆನ್ನಾಗಿ ತಿಂದು ಕೊಬ್ಬಿ ಆಗದಾಗಿ 15

---

1) ಅಥವಾ: ವಿಗ್ರಹಾರಾಧನೆಯಿಂದ. 2) ಅಥವಾ: ಆಶ್ರಯದುರ್ಗವಾದ. 3) ಕಣ್ಣುಗೊಂಬೆಯಂತೆ. 4) ಅಂದರೆ ಇಸ್ರಾಯೇಲ್ ಜನವು.

ತನ್ನನ್ನು ಸೃಷ್ಟಿಸಿದ ದೇವರನ್ನು ಬಿಟ್ಟು
ತನ್ನ ಆಶ್ರಯದುರ್ಗವನ್ನು ತಿರಸ್ಕರಿಸಿತು.
16 ಅವರು ಅನ್ಯದೇವರುಗಳನ್ನು ಪೂಜಿಸಿ ಆತನನ್ನು ರೇಗಿಸಿದರು;
ನಿಷಿದ್ಧಾಚಾರಗಳನ್ನು ನಡಿಸಿ ಆತನಿಗೆ ಸಿಟ್ಟೇರಿಸಿದರು.
17 ದೇವರೇ ಅಲ್ಲದ ಕ್ಷುದ್ರದೇವತೆಗಳಿಗೂ
ಪಿತೃಗಳು ಭಜಿಸದೆಯೂ ತಮಗೆ ಮುಂಚಿತವಾಗಿ ಗೊತ್ತಿಲ್ಲದೆಯೂ ಇರುವ
ನೂತನದೇವತೆಗಳಿಗೂ ಬಲಿಯನ್ನರ್ಪಿಸಿದರು.
18 [ಇಸ್ರಾಯೇಲ್ಯರೇ,] ನಿಮ್ಮನ್ನು ಹುಟ್ಟಿಸಿದ ತಂದೆಯಂತಿರುವ 1)ಶರಣನನ್ನು ನೀವು ನೆನಸಲಿಲ್ಲ;
ಹೆತ್ತ ತಾಯಿಯಂತಿರುವ ದೇವರನ್ನು ಮರೆತುಬಿಟ್ಟಿರಿ.

19 ಯೆಹೋವನು ಇದನ್ನು ಕಂಡು ಅವರ ವಿಷಯದಲ್ಲಿ ಬೇಸರಗೊಂಡನು;
ತನ್ನ ಕುಮಾರ ಕುಮಾರ್ತೆಗಳ ವಿಷಯದಲ್ಲಿ ವ್ಯಥೆಪಟ್ಟನು.
20 ಆತನು ಅವರ ವಿಷಯದಲ್ಲಿ ಹೀಗೆ ಅಂದುಕೊಂಡನು—
ನಾನು ಅವರಿಗೆ ವಿಮುಖನಾಗಿ
ಅವರಿಗೆ ಪ್ರಾಪ್ತವಾಗುವ ಗತಿಯನ್ನು ನೋಡುವೆನು.
ಅವರು ಸತ್ಯವನ್ನು ತಿಳಿದೂ ಮಾಡದವರೂ
ದ್ರೋಹಿಗಳಾದ ಮಕ್ಕಳೂ ಆಗಿದ್ದಾರೆ.
21 ಅವರು ದೇವರಲ್ಲದವುಗಳ ಮೂಲಕ ನನ್ನನ್ನು ರೇಗಿಸಿದ್ದರಿಂದ
ನಾನು ಜನಾಂಗವಲ್ಲದವರ ಮೂಲಕ ಅವರಲ್ಲಿ ಹುರುಡುಹುಟ್ಟಿಸುವೆನು.
ಅವರು ಅಚೇತನ ವಿಗ್ರಹಗಳ ಮೂಲಕ ನನ್ನನ್ನು ಸಿಟ್ಟಿಗೆಬ್ಬಿಸಿದ್ದರಿಂದ
ನಾನು ಸದಾಚಾರವಿಲ್ಲದ ಜನರ ಮೂಲಕ ಅವರನ್ನು ಸಿಟ್ಟಿಗೆಬ್ಬಿಸುವೆನು.
22 ನನ್ನ ಕೋಪಾಗ್ನಿ ಪ್ರಜ್ವಲಿಸುತ್ತದೆ;
ಅದು ಪಾತಾಳದ ವರೆಗೂ ವ್ಯಾಪಿಸಿ
ಬೆಳೆ ಸಹಿತವಾಗಿ ಭೂಮಿಯನ್ನೂ
ಬುಡ ಸಹಿತವಾಗಿ ಬೆಟ್ಟಗಳನ್ನೂ ದಹಿಸಿಬಿಡುವದು.
23 ಅವರಿಗೆ ಒಂದರ ಮೇಲೊಂದಾಗಿ ವಿಪತ್ತುಗಳನ್ನು ಬರಮಾಡುವೆನು;
ನನ್ನ ಎಲ್ಲಾ ಬಾಣಗಳನ್ನೂ ಅವರಿಗೆ ವಿರೋಧವಾಗಿ ಪ್ರಯೋಗಿಸುವೆನು.
24 ಅವರು ಬರದಿಂದ ಕ್ಷೀಣವಾಗುವರು,
ತಾಪದಿಂದಲೂ ಅಂಟುರೋಗದಿಂದಲೂ ಸಾಯುವರು;
ಅದಲ್ಲದೆ ನಾನು ದುಷ್ಟಮೃಗಗಳನ್ನೂ ವಿಷಸರ್ಪಗಳನ್ನೂ ಅವರ ಮೇಲೆ ಬರಮಾಡುವೆನು.
25 ಮನೆಯ ಹೊರಗೆ ಕತ್ತಿಯೂ ಒಳಗೆ ಭಯವೂ ಇರುವವು.
ಯೌವನಸ್ಥರು, ಕನ್ಯೆಯರು, ಮೊಲೆಕೂಸುಗಳು, ನರೆತಲೆಯವರು
ಇವರೆಲ್ಲರೂ ಕತ್ತಿಯಿಂದ ಕೊಲ್ಲಲ್ಪಡುವರು.
ಅವರನ್ನು ಸಂಪೂರ್ಣವಾಗಿ ನಾಶಮಾಡುತ್ತಿದ್ದೆನು, 26
ಅವರು ಮನುಷ್ಯರ ಜ್ಞಾಪಕದಲ್ಲೂ ಇಲ್ಲದಂತೆ ಮಾಡುತ್ತಿದ್ದೆನು;
ಆದರೆ ಅವರ ವಿರೋಧಿಗಳು ಹಮ್ಮಿನಿಂದ ತಪ್ಪಾದ 27
ಭಾವನೆ ಮಾಡಿಕೊಂಡು—
ಇದು ನಮ್ಮ ಭುಜಬಲದಿಂದಲೇ ಹೊರತು ಯೆಹೋವನಿಂದ ಆಗಲಿಲ್ಲ
ಅಂದುಕೊಂಡಾರೆಂದು ನಾನು ಹಿಂದೆಗೆದೆನು ಎಂಬದೇ.

ಅವರು ಆಲೋಚನೆಯಿಲ್ಲದ ಜನರು; 28
ಅವರಿಗೆ ಸ್ವಲ್ಪವಾದರೂ ವಿವೇಕವಿಲ್ಲ.
ಅವರಿಗೆ ಜ್ಞಾನವಿದ್ದರೆ ಈ ಸಂಗತಿಗಳನ್ನೆಲ್ಲಾ 29
ಗ್ರಹಿಸುತ್ತಿದ್ದರು;
ತಮಗೆ ಅಂತ್ಯದಲ್ಲಿ ದುರವಸ್ಥೆ ಪ್ರಾಪ್ತವಾಗುವದೆಂದು ತಿಳಿದುಕೊಳ್ಳುತ್ತಿದ್ದರು.
ಅವರ 1)ಶರಣನು ಅವರನ್ನು ಶತ್ರುಗಳಿಗೆ ಒಪ್ಪಿಸಿ 30
ಕೊಡದಿದ್ದರೆ
ಒಬ್ಬನಿಂದ ಸಾವಿರ ಮಂದಿ ಸೋತುಹೋಗುತ್ತಿದ್ದರೋ?
ಯೆಹೋವನು ಕೈಬಿಡದಿದ್ದರೆ
ಇಬ್ಬರಿಗೆ ಹೆದರಿ ಹತ್ತುಸಾವಿರ ಮಂದಿ ಓಡಿಹೋಗುತ್ತಿದ್ದರೋ?
ನಮ್ಮ ಶರಣನಿಗೆ ತಮ್ಮ ಶರಣರು ಸಮಾನರಲ್ಲ 31
ವೆಂದು
ನಮ್ಮ ಶತ್ರುಗಳೇ ತೀರ್ಮಾನಿಸುತ್ತಾರಲ್ಲಾ.
ಅವರು ಸೊದೋಮ್ಯರೆಂಬ ದ್ರಾಕ್ಷಾಲತೆಯ 32
ಒಂದು ಬಳ್ಳಿಯಾಗಿದ್ದಾರೆ;
ಅದು ಗೊಮೋರ ಪಟ್ಟಣದ ತೋಟಗಳಲ್ಲಿ ಬೆಳೆಯುವ ಜಾತಿ.
ಅದರ ಹಣ್ಣಿನ ಗೊಂಚಲು ವಿಷ;
ಅದರ ರಸ ಸರ್ಪವಿಷದಂತೆ ಮರಣಕರವಾದದ್ದು. 33
ಇದನ್ನೆಲ್ಲಾ ಮುದ್ರೆಹಾಕಿ ನನ್ನ ಉಗ್ರಾಣದಲ್ಲಿಟ್ಟು 34
ಕೊಂಡಿದ್ದೇನೆ.
ಪ್ರತೀಕಾರಮಾಡಿ ಮುಯ್ಯಿಗೆ ಮುಯ್ಯಿ ತೀರಿಸು 35
ವದು ನನ್ನ ಕೆಲಸ;
ಅವರು ಜಾರಿ ಬೀಳುವ ಸಮಯ ಬರುವದು.
ಅವರಿಗೆ ಆಪತ್ಕಾಲವು ಸಮೀಪಿಸಿತು;
ಅವರಿಗೋಸ್ಕರ ಸಿದ್ಧವಾಗಿರುವ ದುರ್ಗತಿ ಬೇಗ ಬರುವದು.

ಆಗ ಯೆಹೋವನು ತನ್ನ ಜನರಿಗೋಸ್ಕರ 36
ನ್ಯಾಯತೀರಿಸುವನು.
ಪರತಂತ್ರರಾಗಲಿ ಸ್ವತಂತ್ರರಾಗಲಿ ಅವರೆಲ್ಲರೂ

1) ಅಥವಾ: ಆಶ್ರಯದುರ್ಗವಾದ.

ನಿರಾಶ್ರಯರಾಗಿ ನಿಶ್ಶೇಷರಾದದ್ದನ್ನು ಆತನು ತಿಳಿದಾಗ
ತನ್ನ ಸೇವಕರಾದ ಅವರ ವಿಷಯದಲ್ಲಿ ಪಶ್ಚಾತ್ತಾಪಪಡುವನು.
37 ಯೆಹೋವನು ಅವರ ವಿಷಯದಲ್ಲಿ ಹೇಳುವದೇನಂದರೆ—
ಅವರು ಪೂಜಿಸುತ್ತಿದ್ದ ದೇವರುಗಳು ಎಲ್ಲಿ ಹೋದರು?
ಅವರು ಆಶ್ರಯಿಸಿಕೊಂಡಿದ್ದ ಶರಣನು ಎಲ್ಲಿದ್ದಾನೆ?
38 ಅವರ ನೈವೇದ್ಯಗಳ ಕೊಬ್ಬನ್ನು ತಿಂದು
ಅವರು ಸಮರ್ಪಿಸಿದ ಪಾನದ್ರವ್ಯಗಳನ್ನು ಕುಡಿದ ದೇವತೆಗಳು ಎಲ್ಲಿ?
ಅವರೇ ನಿಮ್ಮ ಸಹಾಯಕ್ಕೆ ಬರಲಿ;
ಅವರೇ ನಿಮ್ಮನ್ನು ಕಾಯಲಿ.
39 ನಾನೇ, ನಾನೊಬ್ಬನೇ ದೇವರಾಗಿರಲಾಗಿ
ನನ್ನ ವಿನಾ ಯಾವ ದೇವರೂ ಇಲ್ಲವೆಂದು ಈಗಲಾದರೂ ತಿಳಿದುಕೊಳ್ಳಿರಿ.
ಬದುಕಿಸುವವನೂ ಕೊಲ್ಲುವವನೂ ನಾನೇ;
ಗಾಯಪಡಿಸುವವನೂ ವಾಸಿಮಾಡುವವನೂ ನಾನೇ;
ನನ್ನ ಕೈಯಿಂದ ತಪ್ಪಿಸ ಶಕ್ತನು ಯಾವನೂ ಇಲ್ಲ.
40 ನಾನು ಆಕಾಶದ ಕಡೆಗೆ ಕೈಯೆತ್ತಿ
ನಾನು ಸದಾಕಾಲ ಜೀವಿಸುವವನೆಂಬದು ಎಷ್ಟು ನಿಶ್ಚಯವೋ
ಅಷ್ಟು ಖಂಡಿತವಾಗಿ ಪ್ರಮಾಣಮಾಡುವೆನು; ಏನಂದರೆ—
41 ಥಳಥಳಿಸುವ ನನ್ನ ಕತ್ತಿಯನ್ನು ನಾನು ಹದಮಾಡಿ
ನ್ಯಾಯವನ್ನು ಸ್ಥಾಪಿಸುವದಕ್ಕೆ ಮುಂಗೊಂಡಾಗ
ನನ್ನ ಶತ್ರುಗಳಿಗೆ ಮುಯ್ಯಿತೀರಿಸುವೆನು,
ನನ್ನನ್ನು ದ್ವೇಷಿಸಿದವರಿಗೆ ಪ್ರತಿದಂಡನೆಮಾಡುವೆನು;
42 ನನ್ನ ಬಾಣಗಳು ರಕ್ತವನ್ನು ಕುಡಿಕುಡಿದು ಮತ್ತವಾಗುವವು;
ನನ್ನ ಕತ್ತಿಯು ಕೊಲ್ಲಲ್ಪಟ್ಟವರ ಮತ್ತು ಸೆರೆಹಿಡಿದವರ ರಕ್ತಮಾಂಸಗಳನ್ನು ಭಕ್ಷಿಸಿ
ಶತ್ರುಗಳಲ್ಲಿರುವ ವೀರರ ತಲೆಗಳನ್ನು ಚಂಡಾಡುವದು ಎಂಬದೇ.

43 ಜನಾಂಗಗಳಿರಾ, [1]ದೇವರ ಜನರನ್ನು ಹೊಗಳಿರಿ.
ತನ್ನ ಸೇವಕರ ರಕ್ತವನ್ನು ಚೆಲ್ಲಿದ ಶತ್ರುಗಳಿಗೆ ಯೆಹೋವನು ಪ್ರತಿದಂಡನೆ ಮಾಡುತ್ತಾನೆ;
ಅವರಿಗೆ ಮುಯ್ಯಿತೀರಿಸುತ್ತಾನೆ;
ತನ್ನ ಜನರಿಗೋಸ್ಕರವೂ ದೇಶಕ್ಕೋಸ್ಕರವೂ ದೋಷಪರಿಹಾರಮಾಡುತ್ತಾನೆ.

44 ಮೋಶೆಯೂ ನೂನನ ಮಗನಾದ ಯೆಹೋಶುವನೂ ಈ ಪದ್ಯದ ಮಾತುಗಳನ್ನೆಲ್ಲಾ ಜನರಿಗೆ ಕೇಳಿಸುವಂತೆ ಹೇಳಿದರು.

ಈ ಧರ್ಮಶಾಸ್ತ್ರವನ್ನು ಅನುಸರಿಸಬೇಕೆಂದು ಮೋಶೆ ಕಡೇ ಸಾರಿ ಇಸ್ರಾಯೇಲ್ಯರನ್ನು ಬೋಧಿಸಿದ್ದು.

ಮೋಶೆ ಈ ಮಾತುಗಳನ್ನೆಲ್ಲಾ ಇಸ್ರಾಯೇಲ್ಯರಿಗೆ 4
ಹೇಳಿ ಮುಗಿಸಿದನಂತರ ಅವರಿಗೆ—ನಾನು ಈಗ 4
ನಿಮಗೆ ಹೇಳಿದ ಎಚ್ಚರಿಕೆಯ ಮಾತುಗಳನ್ನೆಲ್ಲಾ
ಮನಸ್ಸಿನಲ್ಲಿಟ್ಟುಕೊಳ್ಳಿರಿ, ಮತ್ತು ನಿಮ್ಮ ಸಂತತಿಯವರಿಗೆ ಈ ಧರ್ಮಶಾಸ್ತ್ರದ ನಿಯಮಗಳನ್ನು ಅನುಸರಿ
ಸಬೇಕೆಂದು ಆಜ್ಞಾಪಿಸಿರಿ. ಇದು ನಿರರ್ಥಕವೆಂದು 4
ಭಾವಿಸಬಾರದು; ಇದರಿಂದ ನೀವು ಬಾಳುವಿರಿ; ನೀವು ಯೊರ್ದನ್ ಹೊಳೆಯನ್ನು ದಾಟಿ ಸ್ವಾಧೀನಮಾಡಿಕೊಳ್ಳುವದಕ್ಕೆ ಹೋಗುವ ದೇಶದಲ್ಲಿ ಇದನ್ನು ಅನುಸರಿಸುವದರಿಂದಲೇ ಬಹುಕಾಲ ಇರುವಿರಿ ಎಂದು ಹೇಳಿದನು.

ಮೋಶೆ ಕಾನಾನ್ ದೇಶದಲ್ಲಿ ಪ್ರವೇಶಿಸದೆ ದೇಹವನ್ನು ಬಿಡಬೇಕೆಂದು ಯೆಹೋವನು ಆಜ್ಞಾಪಿಸಿದ್ದು.

ಆ ದಿನದಲ್ಲೇ ಯೆಹೋವನು ಮೋಶೆಗೆ—ನೀನು 48, 4
ಈ ಅಬಾರೀಮ್ ಬೆಟ್ಟಗಳನ್ನು ಅಂದರೆ ಮೋವಾಬ್ಯರ ದೇಶದಲ್ಲಿ ಯೆರಿಕೋ ಪಟ್ಟಣಕ್ಕೆ ಎದುರಾಗಿರುವ ನೆಬೋ ಬೆಟ್ಟವನ್ನು ಹತ್ತಿ ನಾನು ಇಸ್ರಾಯೇಲ್ಯರಿಗೆ ಸ್ವದೇಶವಾಗುವದಕ್ಕೆ ಕೊಡುವ ಕಾನಾನ್‌ದೇಶ
ವನ್ನು ನೋಡು. ಅನಂತರ ನಿನ್ನ ಅಣ್ಣನಾದ ಆರೋ 5
ನನು ಹೇಗೆ ಹೋರೆಂಬ ಬೆಟ್ಟದಲ್ಲಿ ದೇಹವನ್ನು ಬಿಟ್ಟು ತನ್ನ ಪಿತೃಗಳಲ್ಲಿ ಸೇರಿದನೋ ಹಾಗೆಯೇ ನೀನೂ ಈ ಬೆಟ್ಟದಲ್ಲಿ ದೇಹವನ್ನು ಬಿಟ್ಟು ಪಿತೃಗಳಲ್ಲಿ ಸೇರ
ಬೇಕು. ನೀವಿಬ್ಬರೂ ಚಿನ್ ಅರಣ್ಯದಲ್ಲಿನ ಮೆರೀಬಾ 5
ಕಾದೇಶಿನಲ್ಲಿ ನೀರು ಹೊರಟ ಸ್ಥಳದ ಬಳಿಯಲ್ಲಿ ಇಸ್ರಾಯೇಲ್ಯರ ಮಧ್ಯದಲ್ಲಿ ನನಗೆ ವಿರೋಧವಾಗಿ ದ್ರೋಹಮಾಡಿ ಅವರ ಮುಂದೆ ನನ್ನ ಗೌರವವನ್ನು
ಕಾಪಾಡದೆಹೋದದರಿಂದ ಹೀಗೆ ಆಗಬೇಕು. ನಾನು 5
ಇಸ್ರಾಯೇಲ್ಯರಿಗೆ ಕೊಡುವ ದೇಶವನ್ನು ನೀನು ದೂರದಿಂದ ನೋಡಬಹುದೇ ಹೊರತು ಅದರಲ್ಲಿ ಪ್ರವೇಶಿಸಕೂಡದು ಎಂದು ಆಜ್ಞಾಪಿಸಿದನು.

ಮೋಶೆ ಇಸ್ರಾಯೇಲ್ಯರ ಹನ್ನೆರಡು ಕುಲಗಳ ವಿಷಯದಲ್ಲಿ ಹೇಳಿದ ಆಶೀರ್ವಾದ.

ದೇವಪುರುಷನಾದ ಮೋಶೆ ದೇಹವನ್ನು ಬಿಡು 33
ವದಕ್ಕಿಂತ ಮುಂಚೆ ಇಸ್ರಾಯೇಲ್ಯರ ವಿಷಯವಾಗಿ ಹೇಳಿದ ಆಶೀರ್ವಾದವು ಹೇಗಂದರೆ—
ಯೆಹೋವನು ಸೀನಾಯಿಬೆಟ್ಟದಿಂದ ಬಂದು
ಸೇಯೀರ್ ಎಂಬ ಬೆಟ್ಟದ ಸೀಮೆಯೊಳಗಿಂದ ಪ್ರಕಾಶಿಸಿ

1) ಅಥವಾ: ದೇವರ ಜನರೊಡನೆ ಉಲ್ಲಾಸಪಡಿರಿ.

ಪಾರಾನ್ ಪರ್ವತದಿಂದ ಹೊಳೆದು
ಲಕ್ಷಾಂತರ ಪರಿಶುದ್ಧದೂತರ ಮಧ್ಯದಿಂದ ಅವರಿಗೋಸ್ಕರ ದಯಮಾಡಿದನು;
ಆತನ ಬಲಪಾರ್ಶ್ವದಲ್ಲಿ ಅಗ್ನಿಸದೃಶವಾದ ಧರ್ಮಶಾಸ್ತ್ರವಿತ್ತು.

3 ಆತನು ತನ್ನ ಜನರನ್ನು ಪ್ರೀತಿಸುತ್ತಾನೆ;
[ಯೆಹೋವನೇ,] ನಿನ್ನ ಭಕ್ತರೆಲ್ಲರೂ ನಿನ್ನ ಆಶ್ರಯದಲ್ಲಿಯೇ ಇದ್ದಾರೆ;
ನಿನ್ನ ಚರಣಸನ್ನಿಧಾನದಲ್ಲಿ ಕೂತಿರುವರು;
ನೀನು ಹೇಳುವ ಆಜ್ಞೆಗಳನ್ನು ಶಿರಸ್ಸಾವಹಿಸುವರು.
4 ಮೋಶೆಯು ಯಾಕೋಬ್ ಸಂತತಿಯವರಾದ ನಮಗೆ
ಧರ್ಮಶಾಸ್ತ್ರವನ್ನು ಸ್ವಾಸ್ಥ್ಯವಾಗಿ ಕೊಟ್ಟಿದ್ದಾನೆ.
5 ಇಸ್ರಾಯೇಲ್ಯರ ಅಧಿಪತಿಗಳು ಕುಲಗಳವರೊಡನೆ ಒಟ್ಟಾಗಿ ಕೂಡಿದಾಗ
[ಯೆಹೋವನು ತಾನೇ ಯೆಶುರೂನಿನಲ್ಲಿ ಅರಸನಾದನು.]

6 [ರೂಬೇನ್ ಕುಲದ ವಿಷಯದಲ್ಲಿ ಹೇಳಿದ್ದೇನಂದರೆ—]
ರೂಬೇನ್ ಕುಲವು ನಾಶವಾಗದೆ ಉಳಿಯಲಿ;
ಆದರೆ ಅದು ಸ್ವಲ್ಪ ಮಂದಿಯುಳ್ಳದ್ದಾಗಿರುವದು.

7 ಯೆಹೂದ ಕುಲದ ವಿಷಯದಲ್ಲಿ ಹೀಗಂದನು—
ಯೆಹೋವನೇ, ಯೆಹೂದ ಕುಲದವರ ಮೊರೆಯನ್ನು ಲಾಲಿಸಿ
ಅವರನ್ನು ಅವರ ಬಂಧುಗಳೊಡನೆ ಸೇರಿಸು.
ಅವರಿಗೋಸ್ಕರ ಯುದ್ಧಮಾಡಿದರಲ್ಲಾ;
ಅವರ ಶತ್ರುಗಳಿಂದ ಅವರನ್ನು ತಪ್ಪಿಸಬೇಕು.

8 ಲೇವಿಕುಲದ ವಿಷಯದಲ್ಲಿ ಹೀಗಂದನು—
[ಯೆಹೋವನೇ,] ನಿನ್ನ ನಿರ್ಣಯವನ್ನು ತಿಳಿಸುವ ಊರೀಮ್ ತುಮ್ಮೀಮ್ ಎಂಬ ವಸ್ತುಗಳು
ನಿನ್ನ ಭಕ್ತರಾದ ಇವರ ವಶದಲ್ಲಿ ಉಂಟಷ್ಟೆ.
ನೀನು ಮಸ್ಸದಲ್ಲಿ ಅವರನ್ನು ಪರೀಕ್ಷಿಸಿದಿಯಲ್ಲಾ;
ಮೆರೀಬದಲ್ಲಿ ನೀರು ಹೊರಟ ಸ್ಥಳದ ಹತ್ತಿರ ಅವರೊಡನೆ ವಿವಾದಮಾಡಿದಿ.
9 ಅವರು ನಿನ್ನ ಆಜ್ಞೆಯನ್ನು ಅನುಸರಿಸುತ್ತಾ
ನಿನ್ನ ನಿಬಂಧನೆಯನ್ನು ಕೈಕೊಳ್ಳುವವರಾಗಿ
ತಾಯಿತಂದೆಗಳನ್ನು ಪರಿಚಯವಿಲ್ಲವೆಂದೂ
ಅಣ್ಣತಮ್ಮಂದಿರನ್ನು ಅರಿಯೆವೆಂದೂ
ಸ್ವಂತ ಮಕ್ಕಳನ್ನು ಗುರುತಿಲ್ಲವೆಂದೂ ಹೇಳಿಬಿಟ್ಟರಲ್ಲಾ.
10 ಅವರು ಯಾಕೋಬ್ ವಂಶದವರಿಗೆ ನಿನ್ನ ನಿರ್ಣಯಗಳನ್ನು ತಿಳಿಸುವರು;
ಇಸ್ರಾಯೇಲ್ಯರಿಗೆ ನಿನ್ನ ಧರ್ಮಶಾಸ್ತ್ರವನ್ನು ಕಲಿಸುವರು.
ನಿನ್ನ ಸನ್ನಿಧಿಯಲ್ಲಿ ಧೂಪಹಾಕುವರು;
ನಿನ್ನ ಯಜ್ಞವೇದಿಯ ಮೇಲೆ ಸರ್ವಾಂಗಹೋಮಗಳನ್ನು ಸಮರ್ಪಿಸುವರು.
ಯೆಹೋವನೇ, ಅವರ ಆಸ್ತಿಯನ್ನು ವೃದ್ಧಿಪಡಿಸು; 11
ಅವರ ಸೇವೆಯು ನಿನಗೆ ಸಮರ್ಪಕವಾಗಿರಲಿ;
ಅವರಿಗೆ ವಿರೋಧವಾಗಿ ಬರುವವರ ನಡುವನ್ನು ಮುರಿದು
ಅವರ ವೈರಿಗಳು ಪುನಃ ಶ್ವಾಸಬಿಡದಂತೆ ಮಾಡು.

ಬೆನ್ಯಾಮೀನ್ ಕುಲದವರ ವಿಷಯದಲ್ಲಿ ಹೀಗಂದನು— 12
ಯೆಹೋವನು ಇವರ ಬೆಟ್ಟಗಳ ತಪ್ಪಲುಗಳಲ್ಲೇ ನಿವಾಸಿಸುತ್ತಾ
ಇವರನ್ನು ಯಾವಾಗಲೂ ಆವರಿಸಿಕೊಂಡಿರುವದರಿಂದ
ಆತನ ಪ್ರಿಯರಾದ ಇವರು ನಿರ್ಭಯವಾಗಿ ವಾಸಿಸುವರು.

ಯೋಸೇಫ್ ಕುಲಗಳ ವಿಷಯದಲ್ಲಿ ಹೇಳಿದ್ದೇನಂದರೆ— 13
ಅವರ ಸೀಮೆಗೆ ಯೆಹೋವನ ಆಶೀರ್ವಾದವಾಗಲಿ.
ಮೇಲಣ ಆಕಾಶದಿಂದುಂಟಾಗುವ ಮಂಜು,
ಕೆಳಗಣ ಸಾಗರದ ಸೆಲೆ,
ವರುಷ ವರುಷಕ್ಕೂ ತಿಂಗಳು ತಿಂಗಳಿಗೂ ಆಗುವ ಬೆಳೆ, 14
ಅನಾದಿಯಾದ ಪರ್ವತಗಳ ಉತ್ಪನ್ನ, 15
ಶಾಶ್ವತವಾದ ಬೆಟ್ಟಗಳಿಂದುಂಟಾಗುವ ಮೇಲು,
ಭೂಮಿಯಲ್ಲಿ ಸಮೃದ್ಧಿಯಾಗಿ ಬೆಳೆಯುವ ಫಲ 16
ಇವೆಲ್ಲವುಗಳಲ್ಲಿ ಶ್ರೇಷ್ಠವಾದದ್ದೂ
[ಹೋರೇಬ್‌ಬೆಟ್ಟದಲ್ಲಿನ] ಮುಳ್ಳುಗಿಡದಲ್ಲಿ ವಾಸಿಸಿದಾತನ ದಯೆಯೂ
ಯೋಸೇಫ್ ವಂಶದವರ ಪಾಲಿಗೆ ಬರಲಿ;
ಅಣ್ಣತಮ್ಮಂದಿರಿಗೆ ಪ್ರಭುವಾಗಿರುವ ಕುಲದವರ ಶಿರಸ್ಸಿನ ಮೇಲೆ ಉಂಟಾಗಲಿ.
ಯೋಸೇಫನ ಜ್ಯೇಷ್ಠಸಂತತಿಯವರು ಗೂಳಿಯೋಪಾದಿಯಲ್ಲಿ ಗಾಂಭೀರ್ಯವುಳ್ಳವರು; 17
ಅವರ ಕೊಂಬುಗಳು ಕಾಡುಕೋಣದ ಕೊಂಬುಗಳಷ್ಟು [ಬಲವುಳ್ಳವು];
ಅವುಗಳಿಂದ ಭೂಮಂಡಲದ ಜನಾಂಗಗಳನ್ನೆಲ್ಲಾ ಇರಿದು ಓಡಿಸುವರು.
ಎಫ್ರಾಯೀಮ್ ಕುಲದ ಕೋಟ್ಯಂತರ ಜನರೂ
ಮನಸ್ಸೆಕುಲದ ಲಕ್ಷಾಂತರ ಮಂದಿಯೂ ಇಂಥವರೇ.

ಜೆಬುಲೂನ್ಯರ [ಮತ್ತು ಇಸ್ಸಾಕಾರ್ಯರ] ವಿಷಯದಲ್ಲಿ ಹೀಗಂದನು— 18
ಜೆಬುಲೂನ್ಯರೇ, ನಿಮ್ಮ ಪ್ರಯಾಣಗಳಲ್ಲಿ ಸಂತೋಷವಾಗಿರ್ರಿ;
ಇಸ್ಸಾಕಾರ್ಯರೇ, ನಿಮ್ಮ ಪಾಳೆಯಗಳಲ್ಲಿ ಆನಂದವಾಗಿರ್ರಿ.

19 ಅವರು ಸಮುದ್ರದಿಂದ ಐಶ್ವರ್ಯವನ್ನು ಹೊಂದಿ
ಉಸುಬಿನಲ್ಲಿ ಅಡಗಿರುವ ಸಂಪತ್ತನ್ನು ಪಡೆಯುವರು.
ಅನ್ಯಜನಗಳನ್ನು ತಮ್ಮ ಬೆಟ್ಟದ ಸೀಮೆಗೆ ಕರಿಸಿ
ಅಲ್ಲಿ ನ್ಯಾಯವಾದ ಯಜ್ಞಗಳನ್ನು ಸಮರ್ಪಿಸುವರು.

20 ಗಾದ್‌ಕುಲದವರ ವಿಷಯದಲ್ಲಿ ಹೀಗಂದನು—
ಗಾದ್ಯರ ಪ್ರದೇಶವನ್ನು ವಿಸ್ತಾರಮಾಡಿದ ಯೆಹೋವನಿಗೆ ಸ್ತೋತ್ರ.
ಅವರು ಸಿಂಹದಂತೆ ಹೊಂಚಿಕೊಂಡು
[ಶತ್ರುಗಳ] ಭುಜವನ್ನೂ ಶಿರಸ್ಸನ್ನೂ ಮುರಿಯುತ್ತಾರೆ.
21 ಅವರು ದೇಶದ ಮೊದಲನೆಯ ಭಾಗವನ್ನು ತಮಗೋಸ್ಕರ ತೆಗೆದುಕೊಂಡರು;
ಅಲ್ಲಿ ಪ್ರಧಾನನಿಗೆ ಯೋಗ್ಯವಾದ ಸ್ವಾಸ್ತ್ಯವು ದೊರಕಿತು.
ಅವರು ಜನಾಧಿಪತಿಗಳ ಜೊತೆಯಲ್ಲಿ ಬಂದು
ಇಸ್ರಾಯೇಲ್ಯರೊಡನೆ ಯೆಹೋವನ ಆಜ್ಞೆಯನ್ನು ನೆರವೇರಿಸಿ
ಆತನ ನ್ಯಾಯವನ್ನು ಸ್ಥಾಪಿಸಿದರು.

22 ದಾನ್‌ಕುಲದ ವಿಷಯದಲ್ಲಿ ಹೀಗಂದನು—
ದಾನ್‌ಕುಲವು ಬಾಷಾನ್ ಸೀಮೆಯಿಂದ ಹೊರಟು
ಹಾರಿಬರುವ ಪ್ರಾಯದ ಸಿಂಹದಂತಿದೆ.

23 ನಫ್ತಾಲಿಕುಲದ ವಿಷಯದಲ್ಲಿ ಹೀಗಂದನು—
ನಫ್ತಾಲಿಕುಲವೇ, ನೀನು ಯೆಹೋವನ ದಯೆಯನ್ನು ಹೊಂದಿ ಸಂತೃಪ್ತವಾದಿ;
ಆತನ ಆಶೀರ್ವಾದದಿಂದ ನಿನಗೆ ಸಮೃದ್ಧಿಯುಂಟು.
[ಕಿನ್ನೆರೆತ್] ಸಮುದ್ರವೂ ದಕ್ಷಿಣಪ್ರದೇಶವೂ ನಿನಗೆ ಸ್ವಾಸ್ತ್ಯವಾಗಲಿ.

24 ಆಶೇರ್ ಕುಲದ ವಿಷಯದಲ್ಲಿ ಹೀಗಂದನು—
ಪುತ್ರಶ್ರೇಷ್ಠರಾದ ಆಶೇರ್ಯರು ಭಾಗ್ಯವನ್ನು ಹೊಂದಲಿ;
ಅವರು ಸಹೋದರರ ದಯೆಯನ್ನು ಪಡೆಯಲಿ;
ಅವರು ಎಣ್ಣೆಯಲ್ಲೇ ಕಾಲನ್ನು ಅದ್ದಲಿ.
25 ನಿಮ್ಮ ಕೋಟೆಯ ಬಾಗಲುಗಳಿಗೆ ಕಬ್ಬಿಣದ ಮತ್ತು ತಾಮ್ರದ ಅಗುಳಿಗಳು ಇರುವವು;
ನೀವು ಇರುವ ವರೆಗೂ ನಿಮಗೆ ಬಲವು ಇರುವದು.

26 ಯೆಶುರೂನೇ, ನಿಮ್ಮ ದೇವರಿಗೆ ಸಮಾನನು ಯಾವನೂ ಇಲ್ಲ;
ಆತನು ಆಕಾಶವನ್ನೇರಿ ಮೇಘಾರೂಢನಾಗಿ
ಮಹಾಗಾಂಭೀರ್ಯದಿಂದ ನಿಮ್ಮ ಸಹಾಯಕ್ಕೆ ಬರುವನು.
27 ಆದಿಯಿಂದಲೂ ದೇವರೇ ನಿಮಗೆ ನಿವಾಸಸ್ಥಾನವಾಗಿದ್ದಾನಲ್ಲಾ;
ಸದಾದೇವರ ಹಸ್ತವೇ ನಿಮಗೆ ಆಧಾರ.
ಆತನು ನಿಮ್ಮೆದುರಿನಿಂದ ಶತ್ರುಗಳನ್ನು ಹೊರಡಿ[...]
ಅವರನ್ನು ಸಂಹರಿಸಿರಿ ಎಂದು ಆಜ್ಞಾಪಿಸಿದನ[...]
28 ಆದಕಾರಣ ಇಸ್ರಾಯೇಲ್ಯರು ಆಕಾಶದಿಂ[...] ಮಂಜು ಸುರಿದು
ಧಾನ್ಯವೂ ದ್ರಾಕ್ಷಾರಸವೂ ಸಮೃದ್ಧಿಯಾಗಿರು[...] ದೇಶದಲ್ಲೇ ಸೇರಿ
ನಿರ್ಭಯವಾಗಿ ವಾಸಿಸುವವರಾದರು,
ಯಾಕೋಬ್‌ಸಂಭವರು ಸುರಕ್ಷಿತರಾದರು.

29 ಇಸ್ರಾಯೇಲ್ಯರೇ, ನೀವು ಎಷ್ಟೋ ಧನ್ಯರ[...]
ನಿಮ್ಮಷ್ಟು ಭಾಗ್ಯವಂತರು ಯಾರಿದ್ದಾರೆ?
ನೀವು ಯೆಹೋವನ ಅನುಗ್ರಹದಿಂದ ಜಯವನ[...] ಹೊಂದಿದವರು.
ಆತನೇ ನಿಮ್ಮನ್ನು ಕಾಯುವ ಡಾಲೂ
ನಿಮ್ಮ ಗೌರವವನ್ನು ಕಾಪಾಡುವ ಕತ್ತಿಯೂ ಆ[...]ದ್ದಾನೆ.
ಆದದರಿಂದ ನಿಮ್ಮ ಶತ್ರುಗಳು ನಿಮ್ಮ ಮುಂ[...] ಮುದುರಿಕೊಳ್ಳುತ್ತಾರೆ;
ನೀವೋ ಅವರಿಗಿದ್ದ ಎತ್ತರವಾದ ಸೀಮೆಯು[...] ಜಯಶಾಲಿಗಳಾಗಿ ಸಂಚರಿಸುತ್ತೀರಿ.

ಮೋಶೆಯು ಕಾನಾನ್‌ದೇಶವನ್ನು ದೂರದಿಂದ ನೋಡಿದ ತರುವಾಯ ಮರಣಹೊಂದಿದ್ದು.

ಮೋಶೆಯು ಮೋವಾಬ್ಯರ ಮೈದಾನದಿಂದ [...]
ಯೆರಿಕೋ ಪಟ್ಟಣಕ್ಕೆ ಎದುರಾಗಿರುವ ನೆಬೋ [...]
ಪರ್ವತಕ್ಕೆ ಹೋಗಿ ಪಿಸ್ಗಾ ಎಂಬ ಬೆಟ್ಟದ ಶಿಖರವನ[...]
ಹತ್ತಿದನು. ಆಗ ಯೆಹೋವನು [ಕಾನಾನ್] ದೇ[...]
ವನ್ನೆಲ್ಲಾ ಅಂದರೆ ದಾನ್ ಪಟ್ಟಣದ ವರೆಗೂ ಗಿಲ್ಯಾ[...]
ಸೀಮೆ, ನಫ್ತಾಲಿ ಪ್ರದೇಶ, ಎಫ್ರಾಯಿಮ್ ಮನ[...]
ಕುಲಗಳವರ ಸೀಮೆ, ಪಶ್ಚಿಮಸಮುದ್ರದ ವರೆಗ[...]
ಯೆಹೂದ ಸೀಮೆ, ದಕ್ಷಿಣಪ್ರದೇಶ, ಚೋಗರ[...]
ರಿನ ತನಕ ಯೆರಿಕೋ ಎಂಬ ಖರ್ಜೂರಗಳ ಪಟ್ಟಣ[...]
ಸುತ್ತಲಿರುವ ಮೈದಾನ ಇದನ್ನೆಲ್ಲಾ ಅವನಿಗೆ ತೋ[...]
ಸಿ—ನಾನು ಅಬ್ರಹಾಮ್ ಇಸಾಕ್ ಯಾಕೋಬರಿ[...]
ಪ್ರಮಾಣಮಾಡಿ ಅವರ ಸಂತತಿಯವರಿಗೆ ಕೊಡು[...]
ನೆಂದು ವಾಗ್ದಾನಮಾಡಿದ ದೇಶವು ಇದೇ; ನಿನ[...]
ಪ್ರತ್ಯಕ್ಷವಾಗಿ ತೋರಿಸಿದ್ದೇನೆ. ಆದರೆ ನೀನು ಹೊ[...]
ದಾಟಿ ಅಲ್ಲಿಗೆ ಹೋಗಕೂಡದೆಂದು ಹೇಳಿದನು.
ಯೆಹೋವನ ಮಾತಿನಂತೆ ಆತನ ಸೇವಕನಾ[...]
ಮೋಶೆ ಅಲ್ಲೇ ಮೋವಾಬ್ಯರ ದೇಶದಲ್ಲಿ ದೇಹಬಿಟ್ಟನ[...]
ಮೋವಾಬ್ಯರ ದೇಶದಲ್ಲಿ ಬೇತ್ಪೆಗೋರಿಗೆ ಎದುರಾ[...]
ರುವ ಕಣಿವೆಯಲ್ಲಿ [ಯೆಹೋವನು] ಅವನ ದೇಹ[...]
ನ್ನು ಸಮಾಧಿಮಾಡಿದನು; ಅವನ ಸಮಾಧಿ ಎ[...]
ದೆಯೋ ಇಂದಿನ ವರೆಗೆ ಯಾರಿಗೂ ತಿಳಿಯದ[...]
ಮೋಶೆ ಸಾಯುವಾಗ ನೂರಿಪ್ಪತ್ತು ವರುಷದವನಾ[...]
ದ್ದನು. ಅವನ ಕಣ್ಣು ಮೊಬ್ಬಾಗಲಿಲ್ಲ, ಅವನ ಜೀ[...]
ಕಳೆ ಕುಂದಿಹೋಗಿರಲಿಲ್ಲ. ಮೋವಾಬ್ಯರ ಮೈದಾ[...]

ದಲ್ಲಿ ಇಸ್ರಾಯೇಲ್ಯರು ಮೋಶೆಗೋಸ್ಕರ ಮೂವತ್ತು
ದಿನ ದುಃಖಿಸಿದರು. ಅಲ್ಲಿಗೆ ಮೋಶೆಯ ಪ್ರಲಾಪದ
ದಿನಗಳು ಮುಗಿದವು.
9 ಮೋಶೆಯು ನೂನನ ಮಗನಾದ ಯೆಹೋಶುವನ
ಮೇಲೆ ಕೈಯಿಟ್ಟದರಿಂದ ಅವನು ಜ್ಞಾನವರಸಂಪನ್ನ
ನಾದನು. ಯೆಹೋವನು ಮೋಶೆಗೆ ಕೊಟ್ಟ ಆಜ್ಞೆಗೆ
ಅನುಸಾರವಾಗಿ ಇಸ್ರಾಯೇಲ್ಯರು ಯೆಹೋಶುವನ
ಮಾತಿನ ಪ್ರಕಾರ ನಡೆದರು.
10 ಯೆಹೋವನು ಮೋಶೆಯ ಸಂಗಡ ಮುಖಾಮುಖಿ
ಯಾಗಿ ಬಳಿಕೆಯಾಗಿದ್ದನು. ಆತನು ಐಗುಪ್ತದೇಶ 11
ದಲ್ಲಿ ಫರೋಹನ ಮುಂದೆಯೂ ಅವನ ಪ್ರಜಾಪರಿ
ವಾರದವರ ಮುಂದೆಯೂ ವಿಧವಿಧವಾದ ಅದ್ಭುತ
ಮಹತ್ಕಾರ್ಯಗಳನ್ನು ನಡಿಸುವದಕ್ಕೆ ಯೆಹೋವನು
ಅವನನ್ನು ಕಳುಹಿಸಿದನು; ಇಸ್ರಾಯೇಲ್ಯರ ಮುಂದೆ 12
ವಿಶೇಷವಾದ ಭುಜಪರಾಕ್ರಮವನ್ನೂ ಭಯಂಕರ
ಕಾರ್ಯಗಳನ್ನೂ ನಡಿಸಿದನು. ಇಂಥವನಿಗೆ ಸಮಾನ
ನಾದ ಮತ್ತೊಬ್ಬ ಪ್ರವಾದಿ ಈಚೆಗೆ ಇಸ್ರಾಯೇಲ್ಯರಲ್ಲಿ
ಹುಟ್ಟಲೇ ಇಲ್ಲ.

---

# THE BOOK OF JOSHUA

## ಯೆಹೋಶುವನು

ಕಾನಾನ್‌ದೇಶವು ಇಸ್ರಾಯೇಲ್ಯರಿಗೆ ವಶವಾದದ್ದು.
1—12.

ಹೊಳೆದಾಟುವದಕ್ಕೆ ಸನ್ನದ್ಧರಾಗಬೇಕೆಂಬ ಅಪ್ಪಣೆ.

1 ಯೆಹೋವನ ಸೇವಕನಾದ ಮೋಶೆಯು ಸತ್ತ
ಮೇಲೆ ಯೆಹೋವನು ಅವನ ಶಿಷ್ಯನಾದ ನೂನನ
2 ಮಗ ಯೆಹೋಶುವನಿಗೆ—ನನ್ನ ಸೇವಕನಾದ
ಮೋಶೆ ಸತ್ತನು; ನೀನು ಈಗ ಎದ್ದು ಸಮಸ್ತ
ಪ್ರಜಾಸಹಿತವಾಗಿ ಈ ಯೊರ್ದನ್ ಹೊಳೆಯನ್ನು
ದಾಟಿ ನಾನು ಇಸ್ರಾಯೇಲ್ಯರಿಗೆ ಕೊಡುವ ದೇಶಕ್ಕೆ
3 ಹೋಗು. ನಾನು ಮೋಶೆಗೆ ಹೇಳಿದಂತೆ ನೀವು
ಕಾಲಿಡುವ ಸ್ಥಳವನ್ನೆಲ್ಲಾ ನಿಮಗೆ ಕೊಟ್ಟಿದ್ದೇನೆ.
4 ಅರಣ್ಯವೂ ಈ ಲೆಬನೋನ್ ಪರ್ವತವೂ ಮೊದಲು
ಗೊಂಡು ಯೂಫ್ರೇಟೀಸ್ ಮಹಾನದಿಯ ವರೆಗಿರುವ
ಹಿತ್ತಿಯರ ದೇಶವೆಲ್ಲಾ ನಿಮ್ಮದಾಗುವದು; ನಿಮ್ಮ
ಸೀಮೆಯು ಪಶ್ಚಿಮದಿಕ್ಕಿನ ಮಹಾಸಾಗರದ ವರೆಗೆ
5 ವಿಸ್ತರಿಸಿಕೊಳ್ಳುವದು. ನಿನ್ನ ಜೀವಮಾನದಲ್ಲೆಲ್ಲಾ
ಒಬ್ಬನೂ ನಿನ್ನ ಮುಂದೆ ನಿಲ್ಲನು; ನಾನು ಮೋಶೆಯ
ಸಂಗಡ ಇದ್ದ ಹಾಗೆ ನಿನ್ನ ಸಂಗಡಲೂ ಇರುವೆನು.
6 ನಿನ್ನನ್ನು ಕೈಬಿಡುವದಿಲ್ಲ, ತೊರೆಯುವದಿಲ್ಲ. ಸ್ಥಿರ
ಚಿತ್ತನಾಗಿರು, ಧೈರ್ಯದಿಂದಿರು. ಯಾಕಂದರೆ
ನಾನು ಈ ಜನರ ಪಿತೃಗಳಿಗೆ ಪ್ರಮಾಣಮಾಡಿ
ಕೊಟ್ಟ ದೇಶವನ್ನು ಇವರಿಗೆ ನೀನೇ ಸ್ವಾಧೀನಪಡಿಸ
7 ಬೇಕು. ನನ್ನ ಸೇವಕನಾದ ಮೋಶೆ ನಿನಗೆ ಬೋಧಿ
ಸಿದ ಧರ್ಮೋಪದೇಶವನ್ನೆಲ್ಲಾ ಕೈಕೊಂಡು ನಡೆಯು
ವದರಲ್ಲಿ ಸ್ಥಿರಚಿತ್ತನಾಗಿರು, ಪೂರ್ಣಧೈರ್ಯದಿಂದಿರು.
ಅದನ್ನು ಬಿಟ್ಟು ಎಡಕ್ಕಾದರೂ ಬಲಕ್ಕಾದರೂ
ಹೋಗಬೇಡ. ಆಗ ನೀನು ಎಲ್ಲಿ ಹೋದರೂ
ಕೃತಾರ್ಥನಾಗುವಿ. ಈ ಧರ್ಮಶಾಸ್ತ್ರವು ಯಾವಾ 8
ಗಲೂ ನಿನ್ನ ಬಾಯಲ್ಲಿರಲಿ; ಹಗಲಿರುಳು ಅದನ್ನು
ಧ್ಯಾನಿಸುತ್ತಾ ಅದರಲ್ಲಿ ಬರೆದಿರುವದನ್ನೆಲ್ಲಾ ಕೈ
ಕೊಂಡು ನಡಿ. ಆಗ ನಿನ್ನ ಮಾರ್ಗದಲ್ಲೆಲ್ಲಾ ಸಫಲ
ನಾಗುವಿ, ಕೃತಾರ್ಥನಾಗುವಿ. ನಾನು ನಿನಗೆ ಆಜ್ಞಾಪಿ 9
ಸಿದ್ದೇನಲ್ಲಾ; ಸ್ಥಿರಚಿತ್ತನಾಗಿರು, ಧೈರ್ಯದಿಂದಿರು.
ಅಂಜಬೇಡ, ಕಳವಳಗೊಳ್ಳಬೇಡ. ನೀನು ಹೋಗು
ವಲ್ಲೆಲ್ಲಾ ನಿನ್ನ ದೇವರಾದ ಯೆಹೋವನು ನಿನ್ನ
ಸಂಗಡ ಇರುತ್ತಾನೆ ಎಂದು ಹೇಳಿದನು.
ಆಗ ಯೆಹೋಶುವನು ಜನಾಧಿಪತಿಗಳಿಗೆ— 10
ನೀವು ಪಾಳೆಯದ ಎಲ್ಲಾ ಕಡೆಗೂ ಹೋಗಿ ಜನರಿಗೆ— 11
ನೀವು ಇನ್ನು ಮೂರು ದಿವಸಗಳಲ್ಲಿ ಈ ಯೊರ್ದನ್
ಹೊಳೆಯನ್ನು ದಾಟಿ ನಿಮ್ಮ ದೇವರಾದ ಯೆಹೋವನು
ನಿಮಗೆ ಸ್ವಾಸ್ತ್ಯವಾಗಿ ಕೊಡುವ ದೇಶವನ್ನು ಸ್ವತಂತ್ರಿ
ಸಿಕೊಳ್ಳುವದಕ್ಕೆ ಹೋಗಬೇಕು. ಆದದರಿಂದ ನಿಮ
ಗೋಸ್ಕರ ಆಹಾರವನ್ನು ಸಿದ್ಧಮಾಡಿಕೊಳ್ಳಿರಿ ಎಂದು
ಹೇಳಬೇಕು ಅಂದನು.
ಮತ್ತು ಯೆಹೋಶುವನು ರೂಬೇನ್ಯರಿಗೂ ಗಾದ್ಯ 12
ರಿಗೂ ಮನಸ್ಸೆಕುಲದ ಅರ್ಧಜನರಿಗೂ ಹೇಳಿದ್ದೇ
ನಂದರೆ—ಯೆಹೋವನ ಸೇವಕನಾದ ಮೋಶೆಯು 13
ನಿಮಗೆ ಆಜ್ಞಾಪಿಸಿದ್ದನ್ನು ನೆನಪುಮಾಡಿಕೊಳ್ಳಿರಿ.
ನಿಮ್ಮ ದೇವರಾದ ಯೆಹೋವನು ನಿಮಗೆ ಈ ದೇಶ
ವನ್ನು ಕೊಟ್ಟು ವಿಶ್ರಾಂತಿಯನ್ನುಂಟುಮಾಡಿದ್ದಾನೆ.
ನಿಮ್ಮ ಹೆಂಡರುಮಕ್ಕಳೂ ದನಕುರಿಗಳೂ ಮೋಶೆ 14
ಯು ನಿಮಗೆ ಯೊರ್ದನಿನ ಆಚೆಯಲ್ಲಿ ಕೊಟ್ಟ
ದೇಶದಲ್ಲೇ ಇರಲಿ. ಆದರೆ ನಿಮ್ಮ ಭಟರೆಲ್ಲರೂ

1) ಅಂದರೆ ಪೂರ್ವದಿಕ್ಕಿನಲ್ಲಿ.

ಯುದ್ಧಸನ್ನದ್ಧರಾಗಿ ನಿಮ್ಮ ಸಹೋದರರ ಮುಂದೆ
ಹೊರಟು ಹೊಳೆದಾಟಿ ಅವರಿಗೆ ಸಹಾಯಮಾಡ
15 ಬೇಕು. ನಿಮ್ಮ ದೇವರಾದ ಯೆಹೋವನು ಕೊಡುವ
ದೇಶವನ್ನು ನಿಮ್ಮ ಸಹೋದರರು ಸ್ವಾಧೀನಮಾಡಿ
ಕೊಂಡು ಅವರೂ ನಿಮ್ಮಂತೆ ವಿಶ್ರಾಂತಿಹೊಂದಿದ
ನಂತರ ಯೆಹೋವನ ಸೇವಕನಾದ ಮೋಶೆಯು
ನಿಮಗೆ ಯೊರ್ದನ್ ಹೊಳೆಯ ಪೂರ್ವದಿಕ್ಕಿನಲ್ಲಿ
ಸ್ವಾಸ್ತ್ಯವಾಗಿ ಕೊಟ್ಟ ದೇಶಕ್ಕೆ ತಿರಿಗಿ ಬಂದು
16 ಅದನ್ನು ಅನುಭವಿಸಬಹುದು ಎಂಬದೇ. ಅವರು
ಯೆಹೋಶುವನಿಗೆ—ನೀನು ನಮಗೆ ಆಜ್ಞಾಪಿಸಿದ್ದ
ನ್ನೆಲ್ಲಾ ಮಾಡುವೆವು; ಎಲ್ಲಿಗೆ ಕಳುಹಿಸಿದರೂ
17 ಹೋಗುವೆವು. ನಾವು ಮೋಶೆಯ ಎಲ್ಲಾ ಮಾತು
ಗಳನ್ನು ಕೇಳಿದಂತೆ ನಿನ್ನ ಮಾತುಗಳನ್ನೂ ಕೇಳು
ವೆವು; ನಿನ್ನ ದೇವರಾದ ಯೆಹೋವನು ಮೋಶೆಯ
ಸಂಗಡ ಇದ್ದ ಹಾಗೆ ನಿನ್ನ ಸಂಗಡಲೂ ಇರಲಿ.
18 ನಿನ್ನ ಆಜ್ಞೆಗಳಲ್ಲಿ ಒಂದನ್ನಾದರೂ ಅಲಕ್ಷ್ಯಮಾಡಿ
ನಿನ್ನ ವಿಧಿಗಳನ್ನು ಎದುರಿಸುವವನು ಸಾಯತಕ್ಕ
ವನೇ; ಸ್ಥಿರಚಿತ್ತನಾಗಿರು, ಧೈರ್ಯದಿಂದಿರು ಎಂದು
ಹೇಳಿದರು.

ಗೂಢಚಾರರು ಯೆರಿಕೋವಿಗೆ ಹೋಗಿ ಬಂದದ್ದು.

2 ನೂನನ ಮಗನಾದ ಯೆಹೋಶುವನು [ಕಾನಾನ್]
ದೇಶವನ್ನೂ ಯೆರಿಕೋ ಪಟ್ಟಣವನ್ನೂ ನೋಡುವದ
ಕ್ಕೋಸ್ಕರ ಶಿಟ್ಟೀಮಿನಿಂದ ಇಬ್ಬರು ಗೂಢಚಾರರನ್ನು
ಕಳುಹಿಸಿದನು. ಅವರು ಹೊರಟುಹೋಗಿ ರಾಹಾಬ
2 ಳೆಂಬ ಸೂಳೆಯ ಮನೆಯಲ್ಲಿ ಇಳುಕೊಂಡರು. ಆಗ
ಜನರು ಯೆರಿಕೋವಿನ ಅರಸನಿಗೆ—ಇಗೋ, ಈ
ರಾತ್ರಿ ಇಸ್ರಾಯೇಲ್ಯರ ಕಡೆಯವರು ನಮ್ಮ ದೇಶ
ವನ್ನು ಸಂಚರಿಸಿ ನೋಡುವದಕ್ಕೆ ಬಂದಿದ್ದಾರೆಂದು
3 ಹೇಳಿದರು. ಯೆರಿಕೋವಿನ ಅರಸನು ರಾಹಾಬ
ಳಿಗೆ—ನಿನ್ನ ಮನೆಯಲ್ಲಿಳುಕೊಂಡಿರುವ ಮನುಷ್ಯ
ರನ್ನು ತಂದೊಪ್ಪಿಸು; ಅವರು ದೇಶವನ್ನೆಲ್ಲಾ ಸಂಚ
ರಿಸಿ ನೋಡುವದಕ್ಕೆ ಬಂದವರು ಎಂದು ಹೇಳಿಕಳು
4 ಹಿಸಿದನು. ಆ ಸ್ತ್ರೀಯು ಆ ಇಬ್ಬರನ್ನು ಅಡಗಿಸಿಟ್ಟು
ಕೇಳ ಬಂದವರಿಗೆ—ಆ ಮನುಷ್ಯರು ನನ್ನ ಬಳಿಗೆ
ಬಂದದ್ದು ನಿಜ; ಅವರು ಎಲ್ಲಿಯವರೆಂಬದು ನನಗೆ
5 ಗೊತ್ತಿದ್ದಿಲ್ಲ. ಊರುಬಾಗಲನ್ನು ಮುಚ್ಚುವ ಹೊತ್ತಿ
ನಲ್ಲಿ ಕತ್ತಲೊಳಗೆ ಹೊರಟುಹೋದರು. ಎಲ್ಲಿಗೆ
ಹೋದರೆಂಬದೂ ಗೊತ್ತಿಲ್ಲ. ಬೇಗನೆ ಅವರನ್ನು
ಬೆನ್ನಟ್ಟಿರಿ; ನಿಮಗೆ ಸಿಕ್ಕಾರು ಎಂದು ಹೇಳಿದಳು.
6 ಆದರೆ ಅವಳು ಆ ಮನುಷ್ಯರನ್ನು ಮಾಳಿಗೆಯ
ಮೇಲೆ ಹತ್ತಿಸಿ ಅಲ್ಲಿ ಸಾಲಾಗಿ ಇಟ್ಟಿದ್ದ ಪುಂಡಿಯ
7 ಹೊರೆಗಳಲ್ಲಿ ಅಡಗಿಸಿಟ್ಟಿದ್ದಳು. ಅರಸನ ಆಳುಗಳು
ಯೊರ್ದನಿನ ದಾರಿ ಹಿಡಿದು ಹೋಗಿ ಹೊಳೆದಾಟುವ
ಸ್ಥಳಗಳ ವರೆಗೂ ಹುಡುಕಿದರು. ಹುಡುಕುವವರು
ಹೊರಟ ಕೂಡಲೆ ಊರುಬಾಗಲನ್ನು ಮುಚ್ಚಿದರು.
8 ಆ ಮನುಷ್ಯರಿಬ್ಬರೂ ಮಲಗಿಕೊಳ್ಳುವ ಮೊದಲು
9 ಆಕೆಯು ಮಾಳಿಗೆಹತ್ತಿ ಅವರ ಬಳಿಗೆ ಬಂದು ಹೇಳಿ
ದ್ದೇನಂದರೆ—ಯೆಹೋವನು ಈ ದೇಶವನ್ನು ನಿಮಗೆ
ಕೊಟ್ಟಿರುವದನ್ನು ಬಲ್ಲೆನು. ನಿಮ್ಮ ನಿಮಿತ್ತ ನಮಗೆ
ಮಹಾಭೀತಿಯುಂಟಾಗಿದೆ; ದೇಶದ ನಿವಾಸಿಗಳೆಲ್ಲ
ರೂ ಕಂಗೆಟ್ಟುಹೋಗಿದ್ದಾರೆ. ನೀವು ಐಗುಪ್ತದಿಂದ
ಹೊರಟು ಬಂದ ಮೇಲೆ ಯೆಹೋವನು ನಿಮ್ಮ
ಮುಂದೆ ಕೆಂಪುಸಮುದ್ರವನ್ನು ಬತ್ತಿಸಿಬಿಟ್ಟದ್ದನ್ನೂ
ನೀವು ಯೊರ್ದನಿನ ಆಚೆಯಲ್ಲಿರುವ ಸೀಹೋನ್
ಓಗ್ ಎಂಬ ಅಮೋರಿಯರ ಅರಸರಿಬ್ಬರನ್ನು ನಿರ್ಮೂ
ಲಮಾಡಿದ್ದನ್ನೂ ಕೇಳಿ ನಮ್ಮ ಎದೆಯೊಡೆದು
ಹೋಯಿತು; ನಿಮ್ಮನ್ನು ಎದುರಿಸುವ ಧೈರ್ಯವು
ಒಬ್ಬನಲ್ಲಿಯೂ ಇಲ್ಲ. ನಿಮ್ಮ ದೇವರಾದ ಯೆಹೋವ
ನೊಬ್ಬನೇ ಪರಲೋಕದಲ್ಲಿಯೂ ಭೂಲೋಕದಲ್ಲಿ
ಯೂ ದೇವರು. ಆದದರಿಂದ ಈಗ ನೀವು ನನಗೆ
ನಂಬತಕ್ಕ ಒಂದು ಗುರುತು ಕೊಟ್ಟು ನಾನು ನಿಮಗೆ
ದಯೆತೋರಿಸಿದಂತೆ ನೀವೂ ನನ್ನ ತಂದೆಯ ಮನೆ
ಯವರಿಗೆ ದಯೆತೋರಿಸುವದಾಗಿಯೂ ನನ್ನ ತಂದೆ
ತಾಯಿಗಳನ್ನೂ ಸಹೋದರಸಹೋದರಿಯರನ್ನೂ ಅವ
ರಿಗಿರುವದೆಲ್ಲವನ್ನೂ ನಾಶಮಾಡದೆ ಉಳಿಸುವದಾ
ಗಿಯೂ ಯೆಹೋವನ ಹೆಸರಿನಲ್ಲಿ ಪ್ರಮಾಣಮಾಡ
ಬೇಕೆಂದು ಬೇಡಿಕೊಳ್ಳುತ್ತೇನೆ ಎಂಬದೇ. ಆಗ ಆ
ಮನುಷ್ಯರು—ನೀವು ನಮ್ಮ ಸಂಗತಿಯನ್ನು ಹೊರ
ಪಡಿಸದಿದ್ದರೆ ನಾವು ನಿಮ್ಮ ಪ್ರಾಣಕ್ಕೆ ಹೊಣೆಯಾಗಿ
ರುವೆವು; ಯೆಹೋವನು ಈ ದೇಶವನ್ನು ನಮಗೆ
ಅನುಗ್ರಹಿಸಿದ ಮೇಲೆ ನಮ್ಮ ಮಾತಿನಂತೆ ನಿನ್ನಲ್ಲಿ
ದಯದಿಂದ ನಡೆದುಕೊಳ್ಳುವೆವು ಅಂದರು. ಅವಳ
ಮನೆಯು ಊರುಗೋಡೆಯ ಮೇಲಿದ್ದದರಿಂದ ಅವ
ರನ್ನು ಹಗ್ಗದ ಮೂಲಕ ಕಿಟಿಕಿಯಿಂದ ಕೆಳಕ್ಕೆ ಇಳಿಸಿ
ಅವರಿಗೆ—ನೀವು ಹಿಂದಟ್ಟುವವರಿಗೆ ಸಿಕ್ಕದಂತೆ ಆ
ಪರ್ವತಕ್ಕೆ ಓಡಿ ಹೋಗಿ ಅಲ್ಲಿ ಮೂರು ದಿವಸ ಅಡಗಿ
ಕೊಂಡಿದ್ದು ಅವರು ಹಿಂದಿರುಗಿದ ಮೇಲೆ ನಿಮ್ಮ
ದಾರಿ ಹಿಡಿದು ಹೋಗಿರಿ ಅಂದಳು. ಆಗ ಅವರು—
[ನಾವು ಹೇಳುವ ಮಾತಿನಂತೆ ನೀನು ನಡೆಯದಿದ್ದರೆ]
ನೀನು ನಮ್ಮಿಂದ ಮಾಡಿಸಿದ ಪ್ರಮಾಣದಿಂದ ಬಿಡು
ಗಡೆಯಾಗಿರುವೆವು. ಇಗೋ, ನಾವು ಈ ದೇಶದಲ್ಲಿ
ಪ್ರವೇಶಿಸುವಾಗ ನೀನು ನಮ್ಮನ್ನು ಇಳಿಸಿದ ಕಿಟಿ
ಕಿಗೆ ಈ ಕೆಂಪು ದಾರವನ್ನು ಕಟ್ಟಬೇಕು. ಮತ್ತು
ನಿನ್ನ ತಂದೆತಾಯಿಗಳನ್ನೂ ಅಣ್ಣತಮ್ಮಂದಿರನ್ನೂ ಎಲ್ಲಾ
ಬಳಗದವರನ್ನೂ ನಿನ್ನ ಮನೆಯಲ್ಲಿ ಸೇರಿಸಿಕೊಂಡಿರ
ಬೇಕು. ಅವರಲ್ಲಿ ಯಾರಾದರೂ ಮನೆಬಿಟ್ಟು ಬೀದಿಗೆ
ಬಂದರೆ ರಕ್ತಾಪರಾಧವು ಅವರ ತಲೆಯ ಮೇಲೆ
ಯೇ ಇರುವದು; ನಾವು ನಿರ್ದೋಷಿಗಳು. ಆದರೆ
ನಿನ್ನೊಡನೆ ಮನೆಯಲ್ಲಿದ್ದವರ ಮೇಲೆ ಕೈ ಹಾಕುವ
ದಾದರೆ ಆ ರಕ್ತಾಪರಾಧವು ನಮ್ಮ ತಲೆಯ ಮೇಲಿರು
ವದು; ಇದಲ್ಲದೆ ನೀನು ಈ ನಮ್ಮ ಸಂಗತಿಯನ್ನು
ಹೊರತರುವದಾದರೆ ನಮ್ಮಿಂದ ಮಾಡಿಸಿದ ಪ್ರಮಾಣ
ದಿಂದ ಬಿಡುಗಡೆಯಾಗಿರುವೆವು ಅಂದರು. ಅದಕ್ಕೆ
ವಳು—ನಿಮ್ಮ ಮಾತಿನಂತೆಯೇ ಆಗಲಿ ಎಂದು ಹೇಳಿ
ಅವರನ್ನು ಕಳುಹಿಸಿದಳು; ಅವರು ಹೋದ ಮೇಲೆ
ಆ ಕೆಂಪು ದಾರವನ್ನು ಕಿಟಿಕಿಗೆ ಕಟ್ಟಿದಳು.
ಅವರು ಆ ಪರ್ವತವನ್ನು ಸೇರಿ ಬೆನ್ನಟ್ಟುವವರು
ಹಿಂದಿರುಗುವ ತನಕ ಮೂರು ದಿವಸ ಅಲ್ಲೇ

ಇದ್ದರು. ಬೆನ್ನಟ್ಟುವವರು ಅವರನ್ನು ದಾರಿಯುದ್ದ
3 ಕ್ಕೂ ಹುಡುಕಿ ಕಾಣದೆ ಹಿಂದಿರುಗಿದರು. ಆಗ
ಅವರಿಬ್ಬರೂ ಬೆಟ್ಟದಿಂದಿಳಿದು ಹೊಳೆದಾಟಿ ನೂನನ
ಮಗನಾದ ಯೆಹೋಶುವನ ಬಳಿಗೆ ಬಂದು ತಮಗೆ
4 ಸಂಭವಿಸಿದ್ದನ್ನೆಲ್ಲಾ ತಿಳಿಸಿದರು. ಇದಲ್ಲದೆ ಅವರು
ಯೆಹೋಶುವನಿಗೆ—ಯೆಹೋವನು ನಿಜವಾಗಿ ಆ
ದೇಶವನ್ನೆಲ್ಲಾ ನಮಗೆ ಕೊಟ್ಟಿದ್ದಾನೆ; ಅದರ ನಿವಾಸಿ
ಗಳೆಲ್ಲಾ ನಮ್ಮ ನಿಮಿತ್ತ ಕಂಗೆಟ್ಟುಹೋಗಿದ್ದಾರೆ
ಎಂದು ತಿಳಿಸಿದರು.

ಯೊರ್ದನ್ ಹೊಳೆಯನ್ನು ದಾಟಿದ್ದು.

3 ಯೆಹೋಶುವನು ಬೆಳಿಗ್ಗೆ ಎದ್ದನು; ಅವನೂ
ಇಸ್ರಾಯೇಲ್ಯರೆಲ್ಲರೂ ಶಿಟ್ಟೀಮನ್ನು ಬಿಟ್ಟು ಯೊರ್ದ
ನಿಗೆ ಬಂದು ಅದನ್ನು ದಾಟುವ ಮೊದಲು ಅಲ್ಲಿ
2 ಇಳುಕೊಂಡರು. ಮೂರು ದಿನಗಳ ಮೇಲೆ ಜನಾಧಿ
ಪತಿಗಳು ಪಾಳೆಯದ ಎಲ್ಲಾ ಕಡೆಗೂ ಹೋಗಿ
3 ಜನರಿಗೆ—ಯಾಜಕರಾದ ಲೇವಿಯರು ನಿಮ್ಮ ದೇವ
ರಾದ ಯೆಹೋವನ ಒಡಂಬಡಿಕೆಯ ಮಂಜೂಷ
ಹೊತ್ತಿರುವದನ್ನು ಕಂಡ ಕೂಡಲೆ ನೀವೂ ನಿಮ್ಮ
4 ಸ್ಥಳವನ್ನು ಬಿಟ್ಟು ಅದರ ಹಿಂದೆ ಹೋಗಿರಿ. ಆದರೆ
ನಿಮಗೂ ಮಂಜೂಷಕ್ಕೂ ಸುಮಾರು ಎರಡು ಸಾವಿರ
ಮೊಳ ಅಂತರವಿರಬೇಕು; ಹತ್ತಿರ ಹೋಗಬಾರದು.
ಹೀಗೆ ನೀವು ಹೋಗತಕ್ಕ ಮಾರ್ಗವು ನಿಮಗೆ
ಗೊತ್ತಾಗುವದು; ಆ ಮಾರ್ಗದಲ್ಲಿ ನೀವು ಮುಂಚೆ
5 ಬರಲಿಲ್ಲವಲ್ಲಾ ಅಂದರು. ಇದಲ್ಲದೆ ಯೆಹೋಶು
ವನು ಜನರಿಗೆ—ನಿಮ್ಮನ್ನು ಶುದ್ಧಮಾಡಿಕೊಳ್ಳಿರಿ;
ಯೆಹೋವನು ನಾಳೆ ನಿಮ್ಮ ಮಧ್ಯದಲ್ಲಿ ಅದ್ಭುತ
6 ಗಳನ್ನು ನಡಿಸುವನು ಎಂದು ಹೇಳಿದನು. ಮತ್ತು
ಯಾಜಕರಿಗೆ—ಒಡಂಬಡಿಕೆಯ ಮಂಜೂಷವನ್ನು ಹೊ
ತ್ತುಕೊಂಡು ಜನರ ಮುಂದಾಗಿ ನಡೆದು ಹೊಳೆ
ದಾಟಿರಿ ಎಂದು ಆಜ್ಞಾಪಿಸಲು ಅವರು ಆ ಮಂಜೂಷ
ವನ್ನು ಹೊತ್ತುಕೊಂಡು ಅವರ ಮುಂದಾಗಿ
ಹೋದರು.
7 ಆಗ ಯೆಹೋವನು ಯೆಹೋಶುವನಿಗೆ—ನಾನು
ಇಂದಿನಿಂದ ನಿನ್ನನ್ನು ಇಸ್ರಾಯೇಲ್ಯರೆಲ್ಲರ ಮುಂದೆ
ಘನಪಡಿಸುವೆನು; ನಾನು ಮೋಶೆಯ ಸಂಗಡ ಇದ್ದ
ಹಾಗೆ ನಿನ್ನ ಸಂಗಡಲೂ ಇರುವೆನೆಂಬದು ಅವರಿಗೆ
8 ಗೊತ್ತಾಗುವದು. ಒಡಂಬಡಿಕೆಯ ಮಂಜೂಷವನ್ನು
ಹೊತ್ತ ಯಾಜಕರು ಯೊರ್ದನ್ ಹೊಳೆಯ ಅಂಚಿಗೆ
ಬಂದ ಕೂಡಲೆ ಅಲ್ಲೇ ನಿಲ್ಲಬೇಕೆಂದು ಆಜ್ಞಾಪಿಸು
9 ಎಂದು ಹೇಳಿದನು. ಆಗ ಯೆಹೋಶುವನು ಇಸ್ರಾ
ಯೇಲ್ಯರಿಗೆ—ಇಲ್ಲಿ ಬಂದು ನಿಮ್ಮ ದೇವರಾದ
ಯೆಹೋವನ ಮಾತುಗಳನ್ನು ಕೇಳಿರಿ ಎಂದು ಹೇಳಿ—
10 ಚೈತನ್ಯಸ್ವರೂಪನಾದ ದೇವರು ನಿಮ್ಮ ಮಧ್ಯದಲ್ಲಿರು
ತ್ತಾನೆಂಬದೂ ಆತನು ಕಾನಾನ್ಯರು, ಹಿತ್ತಿಯರು,
ಹಿವ್ವಿಯರು, ಪೆರಿಜ್ಜೀಯರು. ಗಿರ್ಗಾಷಿಯರು, ಅಮೋ
ರಿಯರು, ಯೆಬೂಸಿಯರು ಇವರನ್ನೆಲ್ಲಾ ನಿಮ್ಮ
ಮುಂದೆ ತಪ್ಪದೆ ಹೊರಡಿಸುವನೆಂಬದೂ ನಿಮಗೆ
11 ಗೊತ್ತಾಗುವದು. ಹೇಗಂದರೆ—ಸರ್ವಲೋಕದ ಒಡೆ

ಯನ ಒಡಂಬಡಿಕೆಯ ಮಂಜೂಷವು ನಿಮ್ಮ
ಮುಂದಾಗಿ ಹೋಗಿ ಯೊರ್ದನಿನಲ್ಲಿ ಇಳಿಯುವದು.
(ನೀವಾದರೋ ಇಸ್ರಾಯೇಲ್‌ಕುಲಗಳಿಂದ ಕುಲಕ್ಕೆ 12
ಒಬ್ಬನಂತೆ ಹನ್ನೆರಡು ಮಂದಿಯನ್ನು ಆರಿಸಿಕೊಳ್ಳಿರಿ.)
ಸರ್ವಲೋಕದ ಒಡೆಯನಾದ ಯೆಹೋವನ ಒಡಂಬಡಿ 13
ಕೆಯ ಮಂಜೂಷವನ್ನು ಹೊರುವ ಯಾಜಕರು
ತಮ್ಮ ಕಾಲುಗಳನ್ನು ಯೊರ್ದನ್ ಹೊಳೆಯ ನೀರಲ್ಲಿ
ಇಡುತ್ತಲೇ ಮೇಲಣಿಂದ ಬರುವ ನೀರು ಮುಂದೆ
ಹೋಗದೆ ಅಲ್ಲೇ ರಾಶಿಯಾಗಿ ನಿಂತುಕೊಳ್ಳುವದು
ಎಂದು ತಿಳಿಸಿದನು.
ಜನರು ಯೊರ್ದನ್ ಹೊಳೆಯನ್ನು ದಾಟುವದ 14
ಕ್ಕೋಸ್ಕರ ತಮ್ಮ ಡೇರೆಗಳನ್ನು ಕಿತ್ತುಕೊಂಡು ಹೊರ
ಟರು. ಒಡಂಬಡಿಕೆಯ ಮಂಜೂಷವನ್ನು ಹೊತ್ತ
ಯಾಜಕರು ಅವರ ಮುಂದೆ ಇದ್ದರು. ಮಂಜೂಷ 15
ವನ್ನು ಹೊತ್ತ ಯಾಜಕರು ಯೊರ್ದನಿಗೆ ಬಂದು
ನೀರಿನಲ್ಲಿ ತಮ್ಮ ಕಾಲುಗಳನ್ನು ಅದ್ದುತ್ತಲೇ ಸುಗ್ಗೀ
ಕಾಲದಲ್ಲೆಲ್ಲಾ ದಡಮೀರಿ ಹರಿಯುವ ಯೊರ್ದನ್
ಹೊಳೆಯ ನೀರು ನಿಂತುಹೋಯಿತು. ಮೇಲಣಿಂದ 16
ಬರುವ ನೀರು ಬಹುದೂರದಲ್ಲಿದ್ದ ಚಾರೆತಾನಿನ
ಹತ್ತಿರವಿರುವ ಆದಾಮ್ ಊರಿನ ತನಕ ರಾಶಿಯಾಗಿ
ನಿಂತುಕೊಂಡಿತು. ಕೆಳಗಣ ನೀರು ಅರಾಬಾ ತಗ್ಗಿನ
ಲ್ಲಿರುವ ಲವಣಸಮುದ್ರಕ್ಕೆ ಹರಿದುಹೋಯಿತು.
ಜನರು ಯೆರಿಕೋವಿನ ಎದುರಿನಲ್ಲಿ ಹೊಳೆದಾಟಿ
ದರು. ಯೆಹೋವನ ಒಡಂಬಡಿಕೆಯ ಮಂಜೂಷ 17
ವನ್ನು ಹೊತ್ತ ಯಾಜಕರು ಯೊರ್ದನಿನ ಮಧ್ಯದಲ್ಲಿ
ಒಣನೆಲದ ಮೇಲೆ ನಿಂತಿದ್ದರು. ಅಷ್ಟರಲ್ಲಿ ಇಸ್ರಾ
ಯೇಲ್ಯರೆಲ್ಲರೂ ಒಣನೆಲದ ಮೇಲೆ ನಡೆದು
ಹೋದರು. ಈ ಪ್ರಕಾರ ಜನರೆಲ್ಲಾ ಯೊರ್ದನಿನ
ಆಚೆಗೆ ಸೇರಿದರು.

ಗಿಲ್ಗಾಲಿನಲ್ಲಿ ಹನ್ನೆರಡು ಕಲ್ಲುಗಳನ್ನು ನಿಲ್ಲಿಸಿದ್ದು.

ಜನರೆಲ್ಲಾ ಯೊರ್ದನಿನ ಆಚೆಗೆ ಸೇರಿದ ಮೇಲೆ 4
ಯೆಹೋವನು ಯೆಹೋಶುವನಿಗೆ—ನೀವು ಜನ 2
ರೊಳಗಿಂದ ಕುಲಕ್ಕೆ ಒಬ್ಬನಂತೆ ಹನ್ನೆರಡು ಮಂದಿ
ಯನ್ನು ಆರಿಸಿಕೊಂಡು ಅವರಿಗೆ—ಯೊರ್ದನಿನ 3
ಮಧ್ಯದಲ್ಲಿ ಯಾಜಕರು ನಿಂತಿರುವ ಸ್ಥಳದಿಂದ ಹನ್ನೆ
ರಡು ಕಲ್ಲುಗಳನ್ನು ಎತ್ತಿ ಅವುಗಳನ್ನು ನಿಮ್ಮ
ಸಂಗಡ ಈಚೇ ದಡಕ್ಕೆ ತಂದು ನೀವು ಈ ರಾತ್ರಿ ಇಳು
ಕೊಳ್ಳುವ ಸ್ಥಳದಲ್ಲಿ ನಿಲ್ಲಿಸಿರಿ ಎಂದು ಆಜ್ಞಾಪಿಸ
ಬೇಕೆಂದು ಹೇಳಿದನು. ಆಗ ಯೆಹೋಶುವನು 4
ತಾನು ಇಸ್ರಾಯೇಲ್ಯರೊಳಗಿಂದ ಕುಲಕ್ಕೆ ಒಬ್ಬ
ನಂತೆ ಆರಿಸಿಕೊಂಡ ಹನ್ನೆರಡು ಮಂದಿಯನ್ನು ಕರೆದು
ಅವರಿಗೆ—ನೀವು ನಿಮ್ಮ ದೇವರಾದ ಯೆಹೋವನ 5
ಮಂಜೂಷದ ಮುಂದಾಗಿ ಯೊರ್ದನಿನ ಮಧ್ಯಕ್ಕೆ
ಹೋಗಿ ಇಸ್ರಾಯೇಲ್‌ಕುಲಗಳ ಸಂಖ್ಯೆಗೆ ಸರಿ
ಯಾಗುವಂತೆ ಪ್ರತಿಯೊಬ್ಬನು ಒಂದೊಂದು ಕಲ್ಲನ್ನು
ಹೆಗಲ ಮೇಲೆ ಹೊತ್ತುಕೊಂಡು ಬನ್ನಿರಿ. ಅವು 6
ನಿಮ್ಮ ಮಧ್ಯದಲ್ಲಿ ಗುರುತಾಗಿರುವವು. ಮುಂದಣ
ಕಾಲದಲ್ಲಿ ನಿಮ್ಮ ಮಕ್ಕಳು—ಈ ಕಲ್ಲುಗಳು ಏನು

7 ಸೂಚಿಸುತ್ತವೆಂದು ನಿಮ್ಮನ್ನು ಕೇಳುವಾಗ ನೀವು
ಅವರಿಗೆ—ಯೆಹೋವನ ಒಡಂಬಡಿಕೆಯ ಮಂಜೂ
ಷವು ಯೊರ್ದನನ್ನು ದಾಟುವಾಗ ಅದರ ಮುಂದೆ
ಯೊರ್ದನಿನ ನೀರು ನಿಂತುಹೋಯಿತೆಂದು ಹೇಳಿರಿ.
ಯೊರ್ದನಿನ ನೀರು ನಿಂತುಹೋಯಿತೆಂಬದಕ್ಕೆ
ಈ ಕಲ್ಲುಗಳು ಇಸ್ರಾಯೇಲ್ಯರಿಗೆ ಸದಾಕಾಲವೂ
8 ಸಾಕ್ಷಿಗಳಾಗಿರುವವು ಅಂದನು. ಇಸ್ರಾಯೇಲ್ಯರು
ಯೆಹೋಶುವನು ಅಜ್ಞಾಪಿಸಿದಂತೆಯೇ ಮಾಡಿದರು.
ಯೆಹೋವನು ಯೆಹೋಶುವನಿಗೆ ಹೇಳಿದ ಪ್ರಕಾರ
ಅವರು ಇಸ್ರಾಯೇಲ್ಯರ ಕುಲಸಂಖ್ಯೆಗನುಸಾರವಾಗಿ
ಯೊರ್ದನಿನ ಮಧ್ಯದಿಂದ ಹನ್ನೆರಡು ಕಲ್ಲುಗಳನ್ನು
ಎತ್ತಿ ತಾವು ಇಳುಕೊಳ್ಳುವ ಸ್ಥಳಕ್ಕೆ ತಂದು ಅಲ್ಲಿ
9 ಅವುಗಳನ್ನು ನಿಲ್ಲಿಸಿದರು. ಇದಲ್ಲದೆ ಯೆಹೋಶು
ವನು ಹನ್ನೆರಡು ಕಲ್ಲುಗಳನ್ನು ತೆಗೆದುಕೊಂಡು
ಯೊರ್ದನಿನ ಮಧ್ಯದಲ್ಲಿ ಒಡಂಬಡಿಕೆಯ ಮಂಜೂ
ಷವನ್ನು ಹೊತ್ತ ಯಾಜಕರು ನಿಂತಿದ್ದ ಸ್ಥಳದಲ್ಲಿ
ನಿಲ್ಲಿಸಿದನು. ಅವು ಇಂದಿನ ವರೆಗೂ ಅಲ್ಲೇ ಇರು
10 ತ್ತವೆ. ಮೋಶೆಯು ಅಜ್ಞಾಪಿಸಿದಂತೆ ಯೆಹೋಶು
ವನು ಜನರಿಗೆ ತಿಳಿಸಿದ ಯೆಹೋವನ ಅಪ್ಪಣೆಗಳ
ನ್ನೆಲ್ಲಾ ಅವರು ನೆರವೇರಿಸುವ ವರೆಗೂ ಮಂಜೂಷ
ವನ್ನು ಹೊತ್ತ ಯಾಜಕರು ಯೊರ್ದನಿನ ಮಧ್ಯದಲ್ಲೇ
11 ನಿಂತರು. ಜನರು ಬೇಗನೆ ಹೊಳೆದಾಟಿದರು. ಜನ
ರೆಲ್ಲಾ ಆಚೆಗೆ ಸೇರಿದ ಮೇಲೆ ಯಾಜಕರು ಯೆಹೋ
ವನ ಮಂಜೂಷಸಹಿತವಾಗಿ ದಾಟಿ ಜನರ ಮುಂಗಡೆ
12 ಯಲ್ಲಿ ಹೋದರು. ರೂಬೇನ್ಯರೂ ಗಾದ್ಯರೂ
ಮನಸ್ಸೆಕುಲದ ಅರ್ಧಜನರೂ ಮೋಶೆಯು ತಮಗೆ
ಅಜ್ಞಾಪಿಸಿದಂತೆ ಯುದ್ಧಸನ್ನದ್ಧರಾಗಿ ಇಸ್ರಾಯೇಲ್ಯರ
13 ಮುಂದಾಗಿ ಹೊರಟು ಹೊಳೆದಾಟಿದರು. ಅವರು
ಸುಮಾರು ನಾಲ್ವತ್ತು ಸಾವಿರ ಭಟರಾಗಿದ್ದು ಯುದ್ಧ
ಮಾಡುವದಕ್ಕಾಗಿ ಯೆಹೋವನ ಮುಂದೆ ಯೆರಿ
14 ಕೋವಿನ ಬೈಲಿಗೆ ಬಂದರು. ಆ ದಿವಸ ಯೆಹೋ
ವನು ಯೆಹೋಶುವನನ್ನು ಇಸ್ರಾಯೇಲ್ಯರೆಲ್ಲರ ದೃಷ್ಟಿ
ಯಲ್ಲಿ ಘನಪಡಿಸಿದ್ದರಿಂದ ಅವರು ಮೋಶೆಯಲ್ಲಿ
ಹೇಗೋ ಹಾಗೆಯೇ ಇವನಲ್ಲಿಯೂ ಇವನು ಜೀವ
ದಿಂದಿದ್ದ ಕಾಲವೆಲ್ಲಾ ಭಯಭಕ್ತಿಯುಳ್ಳವರಾಗಿದ್ದರು.
15, 16 ಯೆಹೋವನು ಯೆಹೋಶುವನಿಗೆ—ಆಜ್ಞಾ
ಶಾಸನಗಳ ಮಂಜೂಷವನ್ನು ಹೊತ್ತ ಯಾಜಕರಿಗೆ
ಯೊರ್ದನಿನಿಂದ ಮೇಲೆ ಬರಲಾಜ್ಞಾಪಿಸೆಂದು ಹೇಳಲು
17 ಅವನು ಆ ಯಾಜಕರಿಗೆ ಮೇಲೆ ಬರಬೇಕೆಂದು
18 ವಿಧಿಸಿದನು. ಯೆಹೋವನ ಒಡಂಬಡಿಕೆಯ ಮಂಜೂ
ಷವನ್ನು ಹೊತ್ತ ಯಾಜಕರು ಯೊರ್ದನಿನಿಂದ ಮೇಲೆ
ಬಂದು ಒಣನೆಲದಲ್ಲಿ ತಮ್ಮ ಕಾಲುಗಳನ್ನಿಟ್ಟ
ಕೂಡಲೆ ನೀರು ಮುಂಚಿನಂತೆ ಬಂದು ಯೊರ್ದನ್
ಹೊಳೆಯು ದಡಮೀರಿ ಹರಿಯಹತ್ತಿತು.
19 ಜನರು ಮೊದಲನೆಯ ತಿಂಗಳಿನ ಹತ್ತನೆಯ ದಿವಸ
ದಲ್ಲಿ ಯೊರ್ದನನ್ನು ದಾಟಿ ಯೆರಿಕೋವಿನ ಪೂರ್ವ
ಪ್ರಾಂತದಲ್ಲಿರುವ ಗಿಲ್ಗಾಲೆಂಬಲ್ಲಿ ಇಳುಕೊಂಡರು.
20 ಯೆಹೋಶುವನು ಯೊರ್ದನಿನಿಂದ ತೆಗೆದುಕೊಂಡು
ಬಂದ ಹನ್ನೆರಡು ಕಲ್ಲುಗಳನ್ನು ಗಿಲ್ಗಾಲಿನಲ್ಲೇ
21 ನಿಲ್ಲಿಸಿ ಇಸ್ರಾಯೇಲ್ಯರಿಗೆ—ಮುಂದಣ ಕಾಲದಲ್ಲಿ
ನಿಮ್ಮ ಮಕ್ಕಳು ಈ ಕಲ್ಲುಗಳನ್ನು ಯಾಕೆ ನಿಲ್ಲಿಸಿದ್ದಾ
ರೆಂದು ನಿಮ್ಮನ್ನು ಕೇಳಿದರೆ ನೀವು ಅವರಿಗೆ—ಇಸ್ರಾಯೆ
ಲ್ಯರು ಒಣನೆಲವಾಗಿದ್ದ ಈ ಯೊರ್ದನನ್ನು ದಾಟಿ
ಬಂದದ್ದಕ್ಕಾಗಿ ಎಂದು ಹೇಳಿರಿ. ನಿಮ್ಮ ದೇವರಾದ
ಯೆಹೋವನು ನಮ್ಮ ಮುಂದೆ ಕೆಂಪುಸಮುದ್ರವನ್ನು
ಬತ್ತಿಸಿ ನಮ್ಮನ್ನು ದಾಟಿಸಿದಂತೆ ಈಗ ನಿಮ್ಮ ಮುಂದೆ
ಈ ಯೊರ್ದನನ್ನು ಬತ್ತಿಸಿ ನಿಮ್ಮನ್ನು ದಾಟಿಸಿದ್ದಾನೆ
ಇದರಿಂದ ಭೂನಿವಾಸಿಗಳೆಲ್ಲರೂ ಯೆಹೋವನ ಹಸ್ತವು
ಪರಾಕ್ರಮವುಳ್ಳದ್ದೆಂದು ತಿಳಿದುಕೊಳ್ಳುವರು. ನಿಮ್ಮ
ದೇವರಾದ ಯೆಹೋವನಿಗೆ ಯಾವಾಗಲೂ ಭಯಪಡು
ವರು ಅಂದನು.

ಗಿಲ್ಗಾಲಿನಲ್ಲಿ ಸುನ್ನತಿಮಾಡಿದ್ದೂ ಪಸ್ಕವನ್ನು ಆಚರಿಸಿದ್ದೂ.

ಯೊರ್ದನಿನ ಪಶ್ಚಿಮದಲ್ಲಿದ್ದ ಎಲ್ಲಾ ಅಮೋರಿ
ಯರ ಅರಸರೂ ಸಮುದ್ರದ ಬಳಿಯಲ್ಲಿದ್ದ ಸರ್ವ
ಕಾನಾನ್‌ರಾಜರೂ ಯೆಹೋವನು ಇಸ್ರಾಯೇಲ್ಯರ
ಮುಂದೆ ಯೊರ್ದನನ್ನು ಬತ್ತಿಸಿ ಅವರನ್ನು ದಾಟಿಸಿದ
ನೆಂದು ಕೇಳಲು ಅವರ ಎದೆಯೊಡೆದುಹೋಯಿತು
ಇಸ್ರಾಯೇಲ್ಯರ ನಿಮಿತ್ತವಾಗಿ ಅವರಿಗೆ ಧೈರ್ಯವಿಲ್ಲ
ವಾಯಿತು.

ಆ ಸಮಯದಲ್ಲಿ ಯೆಹೋವನು ಯೆಹೋಶುವ
ನಿಗೆ—ನೀನು ಕಲ್ಲಿನ ಚೂರಿಗಳನ್ನು ಮಾಡಿಕೊಂಡು
ಇಸ್ರಾಯೇಲ್ಯರಲ್ಲಿ ತಿರಿಗಿ ಸುನ್ನತಿಮಾಡು ಎಂದು
ಹೇಳಲು ಅವನು ಕಲ್ಲಿನ ಚೂರಿಗಳನ್ನು ಮಾಡಿ
ಕೊಂಡು ಸುನ್ನತಿಗುಡ್ಡದಲ್ಲಿ ಇಸ್ರಾಯೇಲ್ಯರಿಗೆ ಸುನ್ನ
ತಿಮಾಡಿದನು. ಯೆಹೋಶುವನು ಸುನ್ನತಿಮಾಡಿ
ದ್ದಕ್ಕೆ ಕಾರಣವೇನಂದರೆ—ಐಗುಪ್ತದಿಂದ ಹೊರಟು
ಬಂದ ಗಂಡಸರಲ್ಲಿ ಯುದ್ಧವೀರರೆಲ್ಲಾ ಆ ದೇಶ
ವನ್ನು ಬಿಟ್ಟನಂತರ ಅರಣ್ಯದಲ್ಲಿ ಸತ್ತುಹೋದರು
ಅಲ್ಲಿಂದ ಬಂದ ಜನರಿಗೆಲ್ಲಾ ಸುನ್ನತಿಯಾಗಿತ್ತು
ಐಗುಪ್ತವನ್ನು ಬಿಟ್ಟನಂತರ ಅರಣ್ಯಪ್ರಯಾಣದಲ್ಲಿ
ಹುಟ್ಟಿದವರಿಗೆ ಸುನ್ನತಿಯಾಗಿರಲಿಲ್ಲ. ಐಗುಪ್ತದಿಂದ
ಬಂದ ಇಸ್ರಾಯೇಲ್ಯರು ಯೆಹೋವನ ಮಾತನ್ನು
ಕೇಳದೆ ಹೋದದರಿಂದ ಅವರು ತಮ್ಮ ಭಟರೆಲ್ಲರೂ
ಸಂಹಾರವಾಗುವ ತನಕ ನಾಲ್ವತ್ತು ವರುಷ ಅರಣ್ಯ
ದಲ್ಲಿ ಅಲೆಯುತ್ತಿರಬೇಕಾಯಿತು. ಯೆಹೋವನು
ತಾನು ಅವರ ಪಿತೃಗಳಿಗೆ ವಾಗ್ದಾನ ಮಾಡಿದ್ದ
ಹಾಲೂ ಜೇನೂ ಹರಿಯುವ ದೇಶದಲ್ಲಿ ಅವರನ್ನು
ಸೇರಿಸುವದಿಲ್ಲವೆಂದು ಆಣೆಯಿಟ್ಟನು. ಅವರಿಗೆ
ಪ್ರತಿಯಾಗಿ ಹುಟ್ಟಿದ ಅವರ ಮಕ್ಕಳಿಗೆ ಯೆಹೋಶು
ವನು ಸುನ್ನತಿಮಾಡಿದನು. ದಾರಿಯಲ್ಲಿ ಯಾರೂ
ಅವರಿಗೆ ಸುನ್ನತಿಮಾಡಿರಲಿಲ್ಲವಾದದರಿಂದ ಅವರು
ಸುನ್ನತಿಯಿಲ್ಲದವರಾಗಿದ್ದರು. ಜನಾಂಗದವರಿಗೆಲ್ಲಾ
ಸುನ್ನತಿಯಾದ ಮೇಲೆ ಅವರು ವಾಸಿಯಾಗುವ
ವರೆಗೆ ತಮ್ಮ ತಮ್ಮ ಸ್ಥಳಗಳಲ್ಲಿ ಪಾಳೆಯದಲ್ಲಿಯೇ
ಇದ್ದರು. ಯೆಹೋವನು ಯೆಹೋಶುವನಿಗೆ—
ನಾನು ಐಗುಪ್ತ್ಯರ ನಿಂದೆಯನ್ನು ಈ ಹೊತ್ತು
ನಿಮ್ಮಿಂದ ನಿವಾರಿಸಿ ಬಿಟ್ಟಿದ್ದೇನೆಂದು ಹೇಳಿದ್ದರಿಂದ

ಆ ಸ್ಥಳಕ್ಕೆ ಇಂದಿನ ವರೆಗೂ 1)ಗಿಲ್ಗಾಲೆಂಬ ಹೆಸ
ರಿರುತ್ತದೆ.
0 ಇಸ್ರಾಯೇಲ್ಯರು ಗಿಲ್ಗಾಲಿನಲ್ಲಿ ಇಳುಕೊಂಡಿ
ದ್ದಾಗ ಮೊದಲನೆಯ ತಿಂಗಳಿನ ಹದಿನಾಲ್ಕನೆಯ
ದಿನದ ಸಾಯಂಕಾಲ ಯೆರಿಕೋವಿನ ಬೈಲಿನಲ್ಲಿ ಪಸ್ಕ
1 ಹಬ್ಬವನ್ನು ಆಚರಿಸಿ ಮರುದಿವಸದಿಂದ ಆ ದೇಶದ
ಧಾನ್ಯವನ್ನು ಊಟಕ್ಕೆ ಉಪಯೋಗಿಸ ತೊಡಗಿದರು.
ಹೇಗಂದರೆ ಅದೇ ದಿನದಲ್ಲಿ ಅವರು ಹುಳಿಯಿಲ್ಲದ
2 ರೊಟ್ಟಿಗಳನ್ನೂ ಸುಟ್ಟ ತೆನೆಗಳನ್ನೂ ತಿಂದರು. ಆ
ದೇಶದ ಹುಟ್ಟುವಳಿಯನ್ನು ಊಟಮಾಡಿದ ಮರು
ದಿವಸವೇ ಮನ್ನವು ನಿಂತುಹೋಯಿತು. ಅದು ಅವ
ರಿಗೆ ತಿರಿಗಿ ಸಿಕ್ಕಲೇ ಇಲ್ಲ. ಇಸ್ರಾಯೇಲ್ಯರು ಆ
ವರುಷದಲ್ಲೆಲ್ಲಾ ಕಾನಾನ್ ದೇಶದ ಉತ್ಪನ್ನವನ್ನು
ಅನುಭವಿಸುತ್ತಿದ್ದರು.

ಯೆಹೋವನ ಸೇನಾನಿಯು ಯೆಹೋಶುವನಿಗೆ
ಪ್ರತ್ಯಕ್ಷವಾದದ್ದು.

3 ಯೆಹೋಶುವನು ಯೆರಿಕೋವಿನ ಹತ್ತಿರದಲ್ಲಿದ್ದಾಗ
ಒಂದಾನೊಂದು ದಿನ ಕಣ್ಣೆತ್ತಿ ನೋಡಲು ಒಬ್ಬ
ಮನುಷ್ಯನು ಹಿರಿದ ಕತ್ತಿಯನ್ನು ಕೈಯಲ್ಲಿ ಹಿಡಿದು
ತನ್ನೆದುರಿನಲ್ಲಿ ನಿಂತಿರುವದನ್ನು ಕಂಡನು. ಅವನು
ಅವನ ಬಳಿಗೆ ಹೋಗಿ— ನೀನು ನಮ್ಮವನೋ ಅಥವಾ
4 ಶತ್ರುಪಕ್ಷದವನೋ ಎಂದು ಕೇಳಲು ಆ ಮನು
ಷ್ಯನು—ನಾನು ಅಂಥವನಲ್ಲ; ಯೆಹೋವನ ಸೇನಾ
ಪತಿಯು; ಈಗಲೇ ಬಂದಿದ್ದೇನೆ ಎಂದನು. ಆಗ
ಯೆಹೋಶುವನು ಅವನಿಗೆ ಸಾಷ್ಟಾಂಗನಮಸ್ಕಾರ
ಮಾಡಿ—ಸ್ವಾಮಿಯವರು ತಮ್ಮ ಸೇವಕನಿಗೆ ಏನು
5 ಆಜ್ಞಾಪಿಸಬೇಕೆಂದಿದ್ದೀರಿ ಅನ್ನಲು ಯೆಹೋವನ
ಸೇನಾಪತಿಯು— ನಿನ್ನ ಕಾಲಿನಿಂದ ಕೆರಗಳನ್ನು
ತೆಗೆದುಹಾಕು; ನೀನು ನಿಂತಿರುವ ಸ್ಥಳವು ಪರಿಶುದ್ಧ
ವಾದದ್ದು ಎಂದು ಯೆಹೋಶುವನಿಗೆ ಹೇಳಿದನು.
6 ಅವನು ಹಾಗೆಯೇ ಮಾಡಿದನು. (ಯೆರಿಕೋವಿ
ನವರು ಇಸ್ರಾಯೇಲ್ಯರಿಗೆ ಹೆದರಿ ತಮ್ಮ ಪಟ್ಟಣದ
ಬಾಗಲುಗಳನ್ನು ಭದ್ರವಾಗಿ ಮುಚ್ಚಿಕೊಂಡರು.
ಯಾರೂ ಒಳಗೆ ಹೋಗಲಿಲ್ಲ; ಹೊರಗೆ ಬರಲಿಲ್ಲ.)
2 ಆಗ ಯೆಹೋವನು ಯೆಹೋಶುವನಿಗೆ—ನೋಡು,
ನಾನು ಯೆರಿಕೋವನ್ನೂ ಅದರ ಅರಸನನ್ನೂ
ಯುದ್ಧವೀರರನ್ನೂ ನಿನ್ನ ಕೈಗೆ ಒಪ್ಪಿಸಿದ್ದೇನೆ.
3 ನಿಮ್ಮ ಭಟರೆಲ್ಲಾ ಆರು ದಿವಸಗಳ ವರೆಗೆ ದಿನಕ್ಕೆ
4 ಒಂದು ಸಾರಿ ಪಟ್ಟಣವನ್ನು ಸುತ್ತಲಿ. ಏಳು ಮಂದಿ
ಯಾಜಕರು 2)ಕೊಂಬುಗಳನ್ನು ಹಿಡಿದುಕೊಂಡು
ಮಂಜೂಷದ ಮುಂದೆ ನಡೆಯಲಿ. ಏಳನೆಯ ದಿವಸ
ನೀವು ಪಟ್ಟಣವನ್ನು ಏಳು ಸಾರಿ ಸುತ್ತಬೇಕು;
5 ಯಾಜಕರು ಕೊಂಬುಗಳನ್ನು ಊದಬೇಕು. ಅವರು
ದೀರ್ಘವಾಗಿ ಊದುವ ಕೊಂಬಿನ ಧ್ವನಿಯು ಕೇಳಿ
ಸುತ್ತಲೇ ನೀವೆಲ್ಲರೂ ಮಹತ್ತರವಾಗಿ ಆರ್ಭಟಿಸಿರಿ.
ಆಗ ಪಟ್ಟಣದ ಗೋಡೆಯು ತಾನೇ ಬಿದ್ದುಹೋಗು
ವದು; ಪ್ರತಿಯೊಬ್ಬನೂ ನೆಟ್ಟಗೆ ಒಳನುಗ್ಗಬಹುದು
ಎಂದು ಹೇಳಿದನು.

ಯೆಹೋವನು ಇಸ್ರಾಯೇಲ್ಯರಿಗೆ ಯೆರಿಕೋವನ್ನು
ಸ್ವಾಧೀನಪಡಿಸಿದ್ದು.

ಆಗ ನೂನನ ಮಗನಾದ ಯೆಹೋಶುವನು ಯಾಜ 6
ಕರನ್ನು ಕರೆದು ಅವರಿಗೆ—ಒಡಂಬಡಿಕೆಯ ಮಂಜೂ
ಷವನ್ನು ಹೊತ್ತುಕೊಂಡು ಹೋಗಿರಿ; ಏಳು ಮಂದಿ
ಯಾಜಕರು ಕೊಂಬುಗಳನ್ನು ಹಿಡಿದುಕೊಂಡು
ಯೆಹೋವನ ಮಂಜೂಷದ ಮುಂದೆ ನಡೆಯಲಿ
ಅಂದನು. ಮತ್ತು ಅವನು ಜನರಿಗೆ— ಹೋಗಿ 7
ಪಟ್ಟಣವನ್ನು ಸುತ್ತಿರಿ. ಯುದ್ಧಸನ್ನದ್ಧರೆಲ್ಲರೂ
ಯೆಹೋವನ ಮಂಜೂಷದ ಮುಂದೆ ಹೋಗಲಿ
ಎಂದು ಹೇಳಿದನು. ಯೆಹೋಶುವನು ಆಜ್ಞಾಪಿಸಿ 8
ದಂತೆಯೇ ಏಳು ಮಂದಿ ಯಾಜಕರು ಕೊಂಬು
ಗಳನ್ನು ಹಿಡಿದುಕೊಂಡು ಊದುತ್ತಾ ಯೆಹೋವನ
ಮುಂದೆ ನಡೆದರು. ಯೆಹೋವನ ಒಡಂಬಡಿಕೆಯ
ಮಂಜೂಷವು ಅವರ ಹಿಂದೆ ಹೋಯಿತು. ಯುದ್ಧ 9
ಸನ್ನದ್ಧರಾದವರು ಕೊಂಬುಗಳನ್ನು ಊದುತ್ತಿದ್ದ
ಯಾಜಕರ ಮುಂದೆ ಇದ್ದರು. ಹಿಂದಣ ದಳವು
ಮಂಜೂಷದ ಹಿಂದಿತ್ತು. ಕೊಂಬುಗಳನ್ನು ಊದು
ತ್ತಲೇ ಹೋಗುತ್ತಿದ್ದರು. ಯೆಹೋಶುವನು ಜನ 10
ರಿಗೆ—ನೀವು ಈಗ ಆರ್ಭಟಿಸಬಾರದು; ನಿಮ್ಮ
ಧ್ವನಿಯು ಕೇಳಿಸದಿರಲಿ, ನಿಮ್ಮ ಬಾಯಿಂದ ಒಂದು
ಮಾತಾದರೂ ಹೊರಡದಿರಲಿ; ಆರ್ಭಟಿಸಿರೆಂದು ನಾನು
ಹೇಳುವ ದಿವಸದಲ್ಲಿ ಮಾತ್ರ ಆರ್ಭಟಿಸಿರಿ ಎಂದು
ಆಜ್ಞಾಪಿಸಿದ್ದನು. ಅವನು ಯೆಹೋವನ ಮಂಜೂಷ 11
ವನ್ನು ಒಂದು ಸಾರಿ ಪಟ್ಟಣವನ್ನು ಸುತ್ತಿಸಿದ ಮೇಲೆ
ಅವರು ತಿರಿಗಿ ಪಾಳೆಯಕ್ಕೆ ಬಂದು ರಾತ್ರಿಕಳೆದರು.
ಯೆಹೋಶುವನು ಬೆಳಗ್ಗೆ ಎದ್ದನು. ಯಾಜಕರು 12
ಯೆಹೋವನ ಮಂಜೂಷವನ್ನು ಹೊತ್ತುಕೊಂಡು
ಹೊರಟರು. ಏಳು ಮಂದಿ ಯಾಜಕರು ಕೊಂಬು 13
ಗಳನ್ನು ಊದುತ್ತಾ ಯೆಹೋವನ ಮಂಜೂಷದ
ಮುಂದೆ ನಡೆದರು. ಯುದ್ಧಸನ್ನದ್ಧರು ಅವರ
ಮುಂದಿದ್ದರು; ಹಿಂದಣ ದಳವು ಯೆಹೋವನ ಮಂ
ಜೂಷದ ಹಿಂದಿತ್ತು. ಕೊಂಬುಗಳನ್ನು ಊದುತ್ತಲೇ
ಹೋಗುತ್ತಿದ್ದರು. ಹೀಗೆ ಎರಡನೆಯ ದಿನದಲ್ಲಿಯೂ 14
ಪಟ್ಟಣವನ್ನು ಸುತ್ತಿ ಪಾಳೆಯಕ್ಕೆ ಹಿಂದಿರುಗಿದರು.
ಆರು ದಿವಸ ಈ ಪ್ರಕಾರ ಮಾಡಿದರು. ಏಳನೆಯ 15
ದಿನದಲ್ಲಿ ಅವರು ಸೂರ್ಯೋದಯವಾಗುತ್ತಲೇ
ಎದ್ದು ಅದೇ ಕ್ರಮದಲ್ಲಿ ಪಟ್ಟಣವನ್ನು ಏಳು ಸಾರಿ
ಸುತ್ತಿದರು. ಈ ದಿವಸದಲ್ಲಿ ಮಾತ್ರ ಅದನ್ನು ಏಳು
ಸಾರಿ ಸುತ್ತಿದರು. ಏಳನೆಯ ಸಾರಿ ಸುತ್ತುವಾಗ 16
ಯಾಜಕರು ಕೊಂಬುಗಳನ್ನು ಊದಲು ಯೆಹೋಶು
ವನು ಜನರಿಗೆ— ಆರ್ಭಟಿಸಿರಿ, ಯೆಹೋವನು ನಿಮಗೆ
ಈ ಪಟ್ಟಣವನ್ನು ಕೊಟ್ಟಿದ್ದಾನೆ. ಇದೂ ಇದರಲ್ಲಿರು 17
ವದೆಲ್ಲವೂ ಕೇವಲ ಯೆಹೋವನ ಸೊತ್ತೇ ಎಂದು

1) ಗಿಲ್ಗಾಲ್ ಅಂದರೆ ನಿವಾರಿಸುವದು. 2) ಮೂಲ: ಟಗರಿನ ಕೊಂಬಿನಿಂದ ಮಾಡಿದ ವಾದ್ಯ.

ತಿಳಿಯಿರಿ. ಸೂಳೆಯಾದ ರಾಹಾಬಳೂ ಅವಳ
ಸಂಗಡ ಮನೆಯಲ್ಲಿರುವವರೆಲ್ಲರೂ ಉಳಿಯಲಿ;
ನಾವು ಕಳುಹಿಸಿದ ದೂತರನ್ನು ಅವಳು ಅಡಗಿಸಿಟ್ಟ
18 ಳಲ್ಲಾ. ನೀವಾದರೋ ಯೆಹೋವನಿಗೆ ಮೀಸ
ಲಾದ ವಸ್ತುಗಳ ವಿಷಯದಲ್ಲಿ ಜಾಗರೂಕತೆಯಿಂದಿರ
ಬೇಕು. ನೀವು ಅವುಗಳಲ್ಲಿ ಯಾವದನ್ನಾದರೂ
ತೆಗೆದುಕೊಂಡರೆ ಇಸ್ರಾಯೇಲ್ಯರ ಪಾಳೆಯವು ಶಾಪ
19 ಕ್ಕೆ ಗುರಿಯಾಗಿ ಕೆಟ್ಟೀತು. ಎಲ್ಲಾ ಬೆಳ್ಳಿಬಂಗಾರವೂ
ತಾಮ್ರ ಕಬ್ಬಿಣಗಳ ಪಾತ್ರೆಗಳೂ ಯೆಹೋವನ
ಮೀಸಲಾಗಿದ್ದು ಆತನ ಭಂಡಾರಕ್ಕೆ ಸೇರತಕ್ಕವುಗಳು
20 ಅಂದನು. ಕೂಡಲೆ ಜನರ ಆರ್ಭಟವೂ ಕೊಂಬು
ಗಳ ಧ್ವನಿಯೂ ಉಂಟಾದವು. ಜನರು ಕೊಂಬಿನ
ಧ್ವನಿಯನ್ನು ಕೇಳಿ ಮಹತ್ತರವಾಗಿ ಆರ್ಭಟಿಸಲು
ಪಟ್ಟಣದ ಗೋಡೆಯು ತಾನೇ ಬಿದ್ದುಹೋಯಿತು.
ಪ್ರತಿಯೊಬ್ಬನೂ ನೆಟ್ಟಗೆ ಪಟ್ಟಣದಲ್ಲಿ ನುಗ್ಗಿ
ಹೋದನು. ಅದು ಅವರಿಗೆ ಸ್ವಾಧೀನವಾಯಿತು.
21 ಅವರು ಪಟ್ಟಣದಲ್ಲಿದ್ದ ಗಂಡಸರನ್ನೂ ಹೆಂಗಸರನ್ನೂ
ಹುಡುಗರನ್ನೂ ಮುದುಕರನ್ನೂ ದನಕುರಿಕತ್ತೆಗಳನ್ನೂ
ನಿಶ್ಶೇಷವಾಗಿ ಕತ್ತಿಯಿಂದ ಸಂಹರಿಸಿಬಿಟ್ಟರು.
22 ಯೆಹೋಶುವನು ದೇಶವನ್ನು ಸಂಚರಿಸಿ ನೋಡಿದ್ದ
ಇಬ್ಬರು ಮನುಷ್ಯರಿಗೆ— ನೀವು ಆ ಸೂಳೆಯ ಮನೆಗೆ
ಹೋಗಿ ಅವಳಿಗೆ ಪ್ರಮಾಣಮಾಡಿದಂತೆ ಅವಳನ್ನೂ
ಅವಳಿಗಿರುವದೆಲ್ಲವನ್ನೂ ಹೊರಗೆ ತೆಗೆದುಕೊಂಡು
23 ಬನ್ನಿರಿ ಎಂದು ಹೇಳಲು ಆ ಯೌವನಸ್ಥರು ಹೋಗಿ
ರಾಹಾಬಳನ್ನೂ ಅವಳ ತಂದೆತಾಯಿಗಳನ್ನೂ ಸಹೋ
ದರರನ್ನೂ ಅವಳಿಗಿರುವದೆಲ್ಲವನ್ನೂ ಅವಳ ಗೋತ್ರದ
ಎಲ್ಲಾ ಜನರನ್ನೂ ತಂದು ಇಸ್ರಾಯೇಲ್ಯರ ಪಾಳೆ
24 ಯದ ಹೊರಗೆ ಇಟ್ಟರು. ಇಸ್ರಾಯೇಲ್ಯರು ಪಟ್ಟಣ
ವನ್ನೂ ಅದರಲ್ಲಿರುವದೆಲ್ಲವನ್ನೂ ಬೆಂಕಿಯಿಂದ
ಸುಟ್ಟರು. ಆದರೆ ಬೆಳ್ಳಿಬಂಗಾರವನ್ನೂ ತಾಮ್ರ
ಕಬ್ಬಿಣಗಳ ಪಾತ್ರೆಗಳನ್ನೂ ಯೆಹೋವನ ಆಲಯದ
25 ಭಂಡಾರಕ್ಕೆ ಕೊಟ್ಟರು. ಸೂಳೆಯಾದ ರಾಹಾ
ಬಳು ಯೆರಿಕೋಪಟ್ಟಣವನ್ನು ಸಂಚರಿಸಿನೋಡುವದಕ್ಕೆ
ಬಂದಿದ್ದ ಯೆಹೋಶುವನ ದೂತರನ್ನು ಅಡಗಿಸಿಟ್ಟದ
ರಿಂದ ಅವನು ಅವಳನ್ನೂ ಅವಳ ತಂದೆಯ ಮನೆ
ಯವರನ್ನೂ ಅವಳಿಗಿರುವದೆಲ್ಲವನ್ನೂ ಉಳಿಸಿದನು.
ಅವಳು ಇಂದಿನ ವರೆಗೂ ಇಸ್ರಾಯೇಲ್ಯರಲ್ಲಿ ವಾಸ
ವಾಗಿದ್ದಾಳೆ.
26 ಅದೇ ಸಮಯದಲ್ಲಿ ಯೆಹೋಶುವನು ಇಸ್ರಾ
ಯೇಲ್ಯರಿಂದ ಪ್ರಮಾಣಮಾಡಿಸಿ ಅವರಿಗೆ—
ಈ ಯೆರಿಕೋಪಟ್ಟಣವನ್ನು ಕಟ್ಟುವದಕ್ಕೆ ಕೈ
ಹಚ್ಚುವ ಮನುಷ್ಯನು
ಯೆಹೋವನ ದೃಷ್ಟಿಯಲ್ಲಿ ಶಾಪಗ್ರಸ್ತನಾಗಿರಲಿ.
ಅಂಥವನು ಅದಕ್ಕೆ ಅಸ್ತಿವಾರಹಾಕುವಾಗ ತನ್ನ
ಹಿರೀ ಮಗನನ್ನೂ
ಬಾಗಿಲುಗಳನ್ನಿಡುವಾಗ ಕಿರೀ ಮಗನನ್ನೂ ಕಳೆ
ದುಕೊಳ್ಳಲಿ
27 ಎಂದು ಹೇಳಿದನು. ಯೆಹೋವನು ಯೆಹೋಶುವನ
ಸಂಗಡ ಇದ್ದದರಿಂದ ಅವನು ದೇಶದಲ್ಲೆಲ್ಲಾ ಕೀರ್ತಿ
ಗೊಂಡನು.

ಆಕಾನನ ಪಾಪದ ದೆಸೆಯಿಂದ ಇಸ್ರಾಯೇಲ್ಯರಿಗುಂಟಾದ
ಅಪಜಯವೂ ಅವನಿಗಾದ ಶಿಕ್ಷೆಯೂ.

ಯೆಹೂದಕುಲದವನೂ ಜೆರಹನ ಗೋತ್ರದವನ
ಜಬ್ದೀಯ ಕುಟುಂಬದವನೂ ಕರ್ಮೀಯ ಮಗನ
ಆದ ಆಕಾನನು ಯೆಹೋವನಿಗೆ ಮೀಸಲಾಗಿ
ವಸ್ತುಗಳಲ್ಲಿ ಕೆಲವನ್ನು ಕದ್ದುಕೊಂಡದರಿಂದ ಇಸ್
ಯೇಲ್ಯರೆಲ್ಲರೂ ದ್ರೋಹಿಗಳಾದರು. ಯೆಹೋವ
ಕೋಪವು ಅವರ ಮೇಲೆ ಉರಿಯಹತ್ತಿತು.
ಯೆಹೋಶುವನು ಜನರನ್ನು ಕರೆದು— ನೀ
ಗಟ್ಟಾ ಹತ್ತಿ ಬೇತೇಲಿನ ಪೂರ್ವಕ್ಕೂ ಬೇತಾವೆನಿ
ಸಮೀಪದಲ್ಲೂ ಇರುವ ಆಯಿ ಎಂಬ ಪ್ರಾಂತವನ
ಸಂಚರಿಸಿನೋಡಿರಿ ಎಂದು ಹೇಳಿ ಅವರನ್ನು ಯೆರಿಕೋ
ವಿನಿಂದ ಕಳುಹಿಸಿದನು. ಅವರು ಹೋಗಿ ಆಯಿ ಎಂ
ಊರನ್ನು ಸಂಚರಿಸಿ ನೋಡಿ ಹಿಂದಿರುಗಿ ಬಂದ
ಯೆಹೋಶುವನಿಗೆ—ಎಲ್ಲಾ ಜನರು ಹೋಗುವದ
ಅವಶ್ಯವಿಲ್ಲ; ಎರಡು ಅಥವಾ ಮೂರು ಸಾವಿರ ಮಂ
ಹೋದರೆ ಸಾಕು. ಅವರು ಪಟ್ಟಣವನ್ನು ಜಯಿಸಬಹ
ದು. ಎಲ್ಲರನ್ನೂ ಕಳುಹಿಸಿ ಸುಮ್ಮನೆ ದಣಿಸುವದೇಕೆ
ಅವರು ಸ್ವಲ್ಪ ಮಂದಿ ಮಾತ್ರ ಇರುತ್ತಾರೆ ಎಂದ
ಹೇಳಿದರು. ಅದರಂತೆ ಸುಮಾರು ಮೂರು ಸಾವಿ
ಮಂದಿ ಹೋದರು. ಆದರೆ ಅವರು ಆಯಿ ಎಂ
ಊರಿನವರ ಎದುರಿನಿಂದ ಓಡಿ ಬರಬೇಕಾಯಿತು
ಆಯಿ ಎಂಬ ಊರಿನವರು ಅವರನ್ನು ಊರಬಾಗಿ
ನಿಂದ ಕಲ್ಲುಗಣಿಯ ವರೆಗೂ ಹಿಂದಟ್ಟಿ ಇಳಿನೆಲದಲ್ಲಿ
ಅವರನ್ನು ಸೋಲಿಸಿ ಸುಮಾರು ಮೂವತ್ತಾರು ಮಂ
ಯನ್ನು ಹತಮಾಡಿದರು. ಇದರಿಂದ ಇಸ್ರಾಯೇಲ್ಯ
ಧೈರ್ಯವು ಕರಗಿ ನೀರಾಯಿತು.
ಆಗ ಯೆಹೋಶುವನೂ ಇಸ್ರಾಯೇಲ್ಯರ ಹಿ
ಯರೂ ತಮ್ಮ ಬಟ್ಟೆಗಳನ್ನು ಹರಿದುಕೊಂಡು ತಲೆಯ
ಮೇಲೆ ಬೂದಿಯನ್ನು ಹಾಕಿಕೊಂಡು ಸಾಯಂಕಾಲ
ವರೆಗೂ ಯೆಹೋವನ ಮಂಜೂಷದ ಮುಂ
ಬೋರಲಬಿದ್ದಿದ್ದರು. ಮತ್ತು ಯೆಹೋಶುವನು—
ಅಯ್ಯೋ ಕರ್ತನೇ, ಯೆಹೋವನೇ, ನೀನು ಈ ಜ
ರನ್ನು ಯೊರ್ದನ್ ಹೊಳೆ ದಾಟಿಸಿದ್ದೇಕೆ? ನಮ್ಮನ್ನು
ಅಮೋರಿಯರ ಕೈಗೆ ಒಪ್ಪಿಸಿ ನಾಶಮಾಡ ಬೇಕೆಂ
ದ್ದೀಯಾ? ನಾವು ಇಷ್ಟೇ ಸಾಕೆಂದು ಯೊರ್ದನ
ಹೊಳೆಯ ಆಚೆಯಲ್ಲಿಯೇ ಇದ್ದರೆ ಎಷ್ಟೋ ಒಳ್ಳೆ
ದಾಗಿತ್ತು. ಕರ್ತನೇ, ಇಸ್ರಾಯೇಲ್ಯರು ಶತ್ರುಗಳಿಗ
ಬೆನ್ನು ತೋರಿಸಿದ್ದಾರಲ್ಲಾ. ಇನ್ನೇನು ಹೇಳಲಿ? ಕಾನಾ
ನ್ಯರೂ ದೇಶದ ಬೇರೆ ಎಲ್ಲಾ ನಿವಾಸಿಗಳೂ ಇದನ್ನು
ಕೇಳಿ ನಮ್ಮನ್ನು ಸುತ್ತಿಕೊಂಡು ಭೂಲೋಕದಲ್ಲಿ
ನಮ್ಮ ಹೆಸರುಳಿಯದಂತೆ ಮಾಡುವರು. ನಿನ್ನ
ಮಹಾನಾಮಕ್ಕೋಸ್ಕರ ಏನು ಮಾಡುವಿ ಅಂದನು
ಆಗ ಯೆಹೋವನು ಯೆಹೋಶುವನಿಗೆ ಹೇಳಿದ್ದೇ
ನಂದರೆ—ಏಳು, ನೀನು ಈ ಪ್ರಕಾರ ಬೋರಲಬಿದ್ದಿರು
ವದೇಕೆ? ಇಸ್ರಾಯೇಲ್ಯರು ನನ್ನ ನಿಬಂಧನೆಯನ್ನು
ಮೀರಿ ಪಾಪಿಷ್ಠರಾಗಿದ್ದಾರೆ. ಮೀಸಲಾದ ವಸ್ತು
ಗಳನ್ನು ತೆಗೆದುಕೊಂಡು ಕಳ್ಳರಾಗಿ ತಮ್ಮ ಸಾಮಾನು
ಗಳಲ್ಲಿ ಅಡಗಿಸಿಟ್ಟು ವಂಚಕರಾದರು. ಆದದರಿಂದ

ಇಸ್ರಾಯೇಲ್ಯರು ಶತ್ರುಗಳ ಮುಂದೆ ನಿಲ್ಲಲಾರದೆ
ಅವರಿಗೆ ಬೆನ್ನು ತೋರಿಸುವರು. ಅವರು ಶಾಪಗ್ರಸ್ತರೇ.
ಶಾಪಕ್ಕೆ ಕಾರಣವಾದದ್ದನ್ನು ನಿಮ್ಮ ಮಧ್ಯದಿಂದ ತೆಗೆದು
ಹಾಕುವ ವರೆಗೆ ನಾನು ನಿಮ್ಮ ಸಂಗಡ ಬರುವದಿಲ್ಲ.
13 ಎದ್ದು ಜನರನ್ನು ಶುದ್ಧಪಡಿಸು. ನೀನು ಅವರಿಗೆ—
ಇಸ್ರಾಯೇಲ್ಯರೇ, ನಾಳೆಗೋಸ್ಕರ ನಿಮ್ಮನ್ನು ಶುದ್ಧ
ಪಡಿಸಿಕೊಳ್ಳಿರಿ; ನಿಮ್ಮ ಮಧ್ಯದಲ್ಲಿ ಶಾಪಕ್ಕೆ ಕಾರಣ
ವಾದದ್ದುಂಟು. ನೀವು ಅದನ್ನು ತೆಗೆದುಹಾಕುವ
ವರೆಗೂ ಶತ್ರುಗಳ ಮುಂದೆ ನಿಲ್ಲಲಾರಿರಿ ಎಂದು
ನಿಮ್ಮ ದೇವರಾದ ಯೆಹೋವನು ಅನ್ನುತ್ತಾನೆ.
14 ನಾಳೆ ಬೆಳಿಗ್ಗೆ ನೀವು ಕುಲಕುಲವಾಗಿ ನನ್ನ ಬಳಿಗೆ
ಬನ್ನಿರಿ. ಯೆಹೋವನು ಯಾವ ಕುಲವನ್ನು ಹಿಡಿ
ಯುತ್ತಾನೋ ಆ ಕುಲವು ಗೋತ್ರ ಗೋತ್ರವಾಗಿ
ಯೂ, ಯಾವ ಗೋತ್ರವನ್ನು ಹಿಡಿಯುತ್ತಾನೋ
ಆ ಗೋತ್ರವು ಕುಟುಂಬ ಕುಟುಂಬವಾಗಿಯೂ,
ಯಾವ ಕುಟುಂಬವನ್ನು ಹಿಡಿಯುತ್ತಾನೋ ಆ
ಕುಟುಂಬದವರು ಒಬ್ಬೊಬ್ಬರಾಗಿಯೂ ಬರಬೇಕು.
15 ಯಾವನು ಮೀಸಲಾದ ವಸ್ತುಗಳನ್ನು ತೆಗೆದು
ಕೊಂಡವನೆಂದು ಹಿಡಿಯಲ್ಪಡುವನೋ ಅವನು ಯೆ
ಹೋವನ ನಿಬಂಧನೆಯನ್ನು ಮೀರಿ ಇಸ್ರಾಯೇಲ್ಯ
ರಲ್ಲಿ ಬುದ್ಧಿಹೀನಕಾರ್ಯವನ್ನು ನಡಿಸಿದ್ದರಿಂದ ತನ್ನ
ಎಲ್ಲಾ ಆಸ್ತಿ ಸಹಿತವಾಗಿ ಸುಡಲ್ಪಡಬೇಕು ಎಂದು
ಹೇಳು ಎಂಬದೇ.
16 ಯೆಹೋಶುವನು ಬೆಳಿಗ್ಗೆ ಎದ್ದು ಇಸ್ರಾಯೇಲ್
ಕುಲಗಳನ್ನು ಒಂದೊಂದಾಗಿ ಬರಮಾಡಲು ಯೆ
17 ಹೂದಕುಲವು ಹಿಡಿಯಲ್ಪಟ್ಟಿತು. ಅದರ ಗೋತ್ರ
ಗಳನ್ನು ಕರೆದಾಗ ಜೆರಹನ ಗೋತ್ರವು ಹಿಡಿಯಲ್ಪ
ಟ್ಟಿತು. ಆ ಗೋತ್ರದ ಕುಟುಂಬಗಳನ್ನು ಕರೆದಾಗ
18 ಜಬ್ದೀಯ ಕುಟುಂಬವು ಹಿಡಿಯಲ್ಪಟ್ಟಿತು. ಆ
ಕುಟುಂಬದ ಪುರುಷರನ್ನು ಕರೆದಾಗ ಯೆಹೂದಕುಲ
ದವನೂ ಜೆರಹನ ಗೋತ್ರದವನೂ ಜಬ್ದೀಯ
ಕುಟುಂಬದವನೂ ಕರ್ಮೀಯ ಮಗನೂ ಆದ
19 ಆಕಾನನು ಹಿಡಿಯಲ್ಪಟ್ಟನು. ಆಗ ಯೆಹೋಶು
ವನು ಆಕಾನನಿಗೆ—ನನ್ನ ಮಗನೇ, ನೀನು ಇಸ್ರಾ
ಯೇಲ್‌ದೇವರಾದ ಯೆಹೋವನನ್ನು ಘನಪಡಿಸಿ
1)ಆತನಿಗೆ ಸ್ತೋತ್ರಸಲ್ಲಿಸು. ನೀನು ಮಾಡಿದ್ದನ್ನು
ನನಗೆ ಹೇಳು, ಯಾವದನ್ನೂ ಮುಚ್ಚಬೇಡ ಅಂದನು.
20, 21 ಆಕಾನನು ಯೆಹೋಶುವನಿಗೆ—ನಾನು ಕೊಳ್ಳೆ
ಯಲ್ಲಿ ಶಿನಾರ್ ದೇಶದ ಒಂದು ಉತ್ತಮವಾದ
ನಿಲುವಂಗಿಯನ್ನೂ ಇನ್ನೂರು ರೂಪಾಯಿ ತೂಕದ
ಬೆಳ್ಳಿಯನ್ನೂ ಐವತ್ತು ರೂಪಾಯಿ ತೂಕದ ಬಂಗಾ
ರದ ಗಟ್ಟಿಯನ್ನೂ ಕಂಡು ಅದನ್ನು ಆಶೆಯಿಂದ
ತೆಗೆದುಕೊಂಡೆನು. ಅವುಗಳನ್ನು ನನ್ನ ಗುಡಾರದ
ಮಧ್ಯದಲ್ಲಿ ಹುಗಿದಿಟ್ಟಿದ್ದೇನೆ; ಬೆಳ್ಳಿಯು ಅಂಗಿಯ
ಕೆಳಗಿರುತ್ತದೆ. ನಾನು ನಿಜವಾಗಿ ಇಂಥದನ್ನು
ಮಾಡಿ ಇಸ್ರಾಯೇಲ್‌ದೇವರಾದ ಯೆಹೋವನಿಗೆ
ವಿರುದ್ಧವಾಗಿ ಪಾಪಮಾಡಿದ್ದೇನೆ ಎಂದು ಉತ್ತರ
22 ಕೊಟ್ಟನು. ಆಗ ಯೆಹೋಶುವನು ಆಳುಗಳನ್ನು
ಕಳುಹಿಸಲು ಅವರು ಓಡಿಹೋಗಿ ನೋಡಲಾಗಿ ಆ
ನಿಲುವಂಗಿಯು ಗುಡಾರದಲ್ಲಿ ಹುಗಿದಿತ್ತು. ಬೆಳ್ಳಿ
ಯು ಅದರ ಕೆಳಗಿತ್ತು. ಅವರು ಅವುಗಳನ್ನು 23
ಗುಡಾರದೊಳಗಿಂದ ತೆಗೆದುಕೊಂಡು ಯೆಹೋಶು
ವನೂ ಇಸ್ರಾಯೇಲ್ಯರೂ ಇದ್ದಲ್ಲಿಗೆ ಒಂದು ಯೆಹೋ
ವನ ಮುಂದಿಟ್ಟರು. ಮತ್ತು ಯೆಹೋಶುವನೂ 24
ಎಲ್ಲಾ ಇಸ್ರಾಯೇಲ್ಯರೂ ಜೆರಹನ ಮಗನಾದ ಆಕಾನ
ನನ್ನು ಆ ಬೆಳ್ಳಿ, ನಿಲುವಂಗಿ, ಬಂಗಾರದ ಗಟ್ಟಿ
ಅವನ ಗಂಡು ಹೆಣ್ಣು ಮಕ್ಕಳು, ದನಕರಗಳು, ಕತ್ತೆ
ಗಳು, ಆಡುಕುರಿಗಳು, ಗುಡಾರವು ಈ ಎಲ್ಲವುಗಳ
ಸಹಿತವಾಗಿ ಹಿಡಿದು 2)ಆಕೋರಿನ ತಗ್ಗಿಗೆ ಒಯ್ದರು.
ಅಲ್ಲಿ ಯೆಹೋಶುವನು ಅವನಿಗೆ—ನೀನು ನಮ್ಮನ್ನು 25
ಆಪತ್ತಿಗೆ ಗುರಿಮಾಡಿದ್ದೇಕೆ? ಈ ಹೊತ್ತು ಯೆಹೋ
ವನು ನಿನ್ನ ಮೇಲೆ ಆಪತ್ತನ್ನು ಬರಮಾಡುವನು
ಎಂದು ಹೇಳಿದ ಕೂಡಲೆ ಇಸ್ರಾಯೇಲ್ಯರೆಲ್ಲರೂ
ಅವನನ್ನು ಕಲ್ಲೆಸೆದು ಕೊಂದರು. ಅವನಿಗಿದ್ದದ್ದೆಲ್ಲ
ವನ್ನೂ ಕಲ್ಲೆಸೆದು ಬೆಂಕಿಯಿಂದ ಸುಟ್ಟುಬಿಟ್ಟರು.
ಅವನ ಮೇಲೆ ಕಲ್ಲುಗಳ ಒಂದು ದೊಡ್ಡ ಕುಪ್ಪೆ 26
ಯನ್ನು ಹಾಕಿದರು. ಅದು ಇಂದಿನ ವರೆಗೂ ಅದೆ.
ಆಗ ಯೆಹೋವನ ರೋಷಾಗ್ನಿಯು ಅಡಗಿಹೋಯಿ
ತು. ಈ ಸಂಗತಿಯ ದೆಸೆಯಿಂದ ಆ ಸ್ಥಳಕ್ಕೆ ಇಂದಿನ
ವರೆಗೂ 2)ಆಕೋರಿನ ತಗ್ಗು ಎಂಬ ಹೆಸರಿರುತ್ತದೆ.

ಆಯಿ ಎಂಬ ಪಟ್ಟಣವು ಇಸ್ರಾಯೇಲ್ಯರಿಗೆ ಸ್ವಾಧೀನವಾದದ್ದು.

## 8

ಅನಂತರ ಯೆಹೋವನು ಯೆಹೋಶುವನಿಗೆ—
ಅಂಜಬೇಡ, ಕಳವಳಗೊಳ್ಳಬೇಡ; ಎದ್ದು ಭಟರೆಲ್ಲ
ರನ್ನೂ ತೆಗೆದುಕೊಂಡು ಆಯಿಗೆ ಹೋಗು. ನೋಡು,
ಆಯಿ ಎಂಬ ಊರಿನ ರಾಜ, ಪ್ರಜೆ, ನಗರ, ದೇಶ
ಇವುಗಳನ್ನೆಲ್ಲಾ ನಿನಗೆ ಕೊಟ್ಟಿದ್ದೇನೆ. ಯೆರಿಕೋವಿಗೂ 2
ಅದರ ಅರಸನಿಗೂ ಮಾಡಿದಂತೆಯೇ ಆಯಿಗೂ ಅದರ
ಅರಸನಿಗೂ ಮಾಡು. ಆದರೆ ಕೊಳ್ಳೆಯನ್ನೂ
ಪಶುಗಳನ್ನೂ ನಿಮಗೋಸ್ಕರ ತೆಗೆದುಕೊಳ್ಳಬಹು
ದು. ನಿಮ್ಮಲ್ಲಿ ಕೆಲವರು ಆ ಊರಿನ ಹಿಂದುಗಡೆ
ಯಲ್ಲಿ ಹೊಂಚುಹಾಕಿಕೊಂಡಿರಲಿ ಎಂದು ಅಜ್ಞಾಪಿ
ಸಲು ಅವನು ಎದ್ದು ಭಟರೆಲ್ಲರ ಸಹಿತವಾಗಿ ಆಯಿಗೆ 3
ಹೋಗುವದಕ್ಕೋಸ್ಕರ ಸಿದ್ಧನಾಗಿ ಮೂವತ್ತು ಸಾವಿರ
ಯುದ್ಧವೀರರನ್ನು ಆರಿಸಿ ಅವರಿಗೆ—ನೀವು ಪಟ್ಟಣದ 4
ಹಿಂಭಾಗದಲ್ಲಿ ಹೊಂಚುಹಾಕಿಕೊಂಡಿರ್ರಿ. ಪಟ್ಟಣಕ್ಕೆ
ಬಹುದೂರವಾಗಿರಬೇಡಿರಿ; ಎಲ್ಲರೂ ಸಿದ್ಧವಾಗಿರ್ರಿ.
ನಾನೂ ನನ್ನ ಸಂಗಡ ಇರುವ ಜನರೆಲ್ಲರೂ ಪಟ್ಟಣದ 5
ಸಮೀಪಕ್ಕೆ ಹೋಗುವೆವು. ಅವರು ಮುಂಚಿನಂತೆ
ನಮ್ಮೊಡನೆ ಯುದ್ಧಕ್ಕೆ ಬಂದ ಕೂಡಲೆ ನಾವು ಓಡಿ
ಹೋಗುವೆವು. ಇವರು ಮುಂಚಿನಂತೆ ನಮಗೆ ಹೆದರಿ 6
ಓಡಿಹೋಗುತ್ತಾರೆಂದು ನೆನಸಿ ಅವರು ನಮ್ಮನ್ನು
ಹಿಂದಟ್ಟುವರು; ನಾವು ಓಡುತ್ತಲೇ ಇರುವೆವು.
ನಾವೂ ಅವರೂ ಪಟ್ಟಣಕ್ಕೆ ದೂರವಾದ ಮೇಲೆ ನೀವು 7
ಹೊಂಚಿನೋಡುತ್ತಿದ್ದ ಸ್ಥಳದಿಂದ ಎದ್ದು ಪಟ್ಟಣ

1) ಅಥವಾ: ನಿನ್ನ ಪಾಪವನ್ನು ಆತನಿಗೆ ಅರಿಕೆಮಾಡು.

2) ಆಕೋರಿನ ಅಂದರೆ ಆಪತ್ತಿನ.

ದೊಳಗೆ ನುಗ್ಗಿ ಅದನ್ನು ಸ್ವಾಧೀನಮಾಡಿಕೊಳ್ಳಿರಿ.
ನಿಮ್ಮ ದೇವರಾದ ಯೆಹೋವನು ಅದನ್ನು ನಿಮ್ಮ
8 ಕೈಗೆ ಒಪ್ಪಿಸುವನು. ನೀವು ಪಟ್ಟಣವನ್ನು ಹಿಡಿದ
ಕೂಡಲೆ ಅದಕ್ಕೆ ಬೆಂಕಿಹೊತ್ತಿಸಿರಿ. ಯೆಹೋವನ
ಮಾತಿನಂತೆ ನಡೆಯಿರಿ, ನನ್ನ ಅಪ್ಪಣೆ ಇಷ್ಟೇ ಎಂದು
ಹೇಳಿ ಅವರನ್ನು ರಾತ್ರಿಯಲ್ಲೇ ಕಳುಹಿಸಿದನು.
9 ಅವರು ಹೊಂಚುಹಾಕುವದಕ್ಕೆ ಹೊರಟುಹೋಗಿ
ಬೇತೇಲಿಗೂ ಆಯಿಗೂ ನಡುವೆ ಆಯಿ ಎಂಬ ಊರಿನ
ಪಶ್ಚಿಮದಲ್ಲಿ ಅಡಗಿಕೊಂಡರು. ಯೆಹೋಶುವನು ಆ
ರಾತ್ರಿಯಲ್ಲಿ ಜನರ ಮಧ್ಯದಲ್ಲಿ ಕಳೆದನು.
10 ಅವನು ಬೆಳಿಗ್ಗೆ ಎದ್ದು ಇಸ್ರಾಯೇಲ್ಯರ ಹಿರಿಯರ
ಸಂಗಡ ಸೈನ್ಯವನ್ನು ಕೂಡಿಸಿ ಅವರ ಮುಂದೆ ಆಯಿಗೆ
11 ಹೊರಟನು. ಅವನ ಸಂಗಡ ಇದ್ದ ಭಟರೆಲ್ಲರೂ
ಗಟ್ಟ್ಯಾಹತ್ತಿ ಪಟ್ಟಣದ ಸಮೀಪಕ್ಕೆ ಬಂದು ಅದರ
ಉತ್ತರದಿಕ್ಕಿನಲ್ಲಿ ಇಳುಕೊಂಡರು. ಅವರಿಗೂ ಆಯಿ
12 ಗೂ ನಡುವೆ ಒಂದು ತಗ್ಗು ಇತ್ತು. ಆದರೆ ಅವನು
ಹೆಚ್ಚುಕಡಿಮೆ ಐದು ಸಾವಿರ ಜನರನ್ನು ಆರಿಸಿಕೊಂಡು
ಬೇತೇಲಿಗೂ ಆಯಿಗೂ ನಡುವೆ ಪಟ್ಟಣದ ಪಶ್ಚಿಮ
ದಲ್ಲಿ ಹೊಂಚಿನೋಡುವದಕ್ಕೋಸ್ಕರ ಇರಿಸಿದನು.
13 ಪಟ್ಟಣದ ಉತ್ತರದಲ್ಲಿದ್ದ ಎಲ್ಲಾ ಸೈನ್ಯವನ್ನೂ ಪಟ್ಟ
ಣದ ಪಶ್ಚಿಮದಲ್ಲಿ ಹೊಂಚಿನೋಡುತ್ತಿದ್ದ ಸೈನ್ಯ
ವನ್ನೂ ಕ್ರಮಪಡಿಸಿಕೊಂಡು ಯೆಹೋಶುವನು ಆ
14 ರಾತ್ರಿಯಲ್ಲಿ ತಗ್ಗಿಗೆ ಹೋದನು. ಆಯಿ ಎಂಬ ಊರಿನ
ಅರಸನು ಬೆಳಿಗ್ಗೆ ಇದನ್ನು ತಿಳಿದು ತ್ವರೆಯಿಂದ ಜನ
ರೆಲ್ಲರ ಸಹಿತವಾಗಿ ಇಸ್ರಾಯೇಲ್ಯರ ಸಂಗಡ ಯುದ್ಧ
ಮಾಡುವದಕ್ಕೆ ಹೊರಟನು. ಅವನೂ ಅವನ ಜನರೂ
ಅರಾಬಾ ಎಂಬ ತಗ್ಗಾದ ಪ್ರದೇಶವು ಕಾಣುವ ಸ್ಥಳಕ್ಕೆ
ಬಂದರು. ಪಟ್ಟಣದ ಹಿಂಭಾಗದಲ್ಲಿ ಹೊಂಚಿನೋಡು
15 ತ್ತಿರುವದು ಅವನಿಗೆ ಗೊತ್ತಿದ್ದಿಲ್ಲ. ಯೆಹೋಶು
ವನೂ ಅವನ ಸಂಗಡ ಇದ್ದ ಇಸ್ರಾಯೇಲ್ಯರೆಲ್ಲರೂ
ತಾವು ಸೋತವರೋ ಎಂಬಂತೆ ಅರಣ್ಯಮಾರ್ಗವಾಗಿ
16 ಓಡತೊಡಗಿದರು. ಆಯಿ ಎಂಬ ಊರಿನವರು ಊರಿ
ನಲ್ಲಿದ್ದ ತಮ್ಮ ಎಲ್ಲಾ ಜನರನ್ನೂ ಕರೆದುಕೊಂಡು
ಯೆಹೋಶುವನನ್ನು ಹಿಂದಟ್ಟುತ್ತಾ ಪಟ್ಟಣಕ್ಕೆ ದೂರ
17 ವಾಗಿ ಸೆಳೆಯಲ್ಪಟ್ಟರು. ಆಯಿ ಎಂಬ ಊರಲ್ಲಿಯೂ
ಬೇತೇಲಿನಲ್ಲಿಯೂ ಒಬ್ಬ ಗಂಡಸಾದರೂ ಉಳಿಯಲಿಲ್ಲ.
ಊರುಬಾಗಲುಗಳನ್ನು ತೆರೆದುಬಿಟ್ಟು ಎಲ್ಲರೂ ಇಸ್ರಾ
ಯೇಲ್ಯರನ್ನು ಹಿಂದಟ್ಟುವದಕ್ಕೋಸ್ಕರ ಹೊರಟರು.
18 ಯೆಹೋವನು ಯೆಹೋಶುವನಿಗೆ—ನಿನ್ನ ಕೈಯಲ್ಲಿ
ರುವ ಈಟಿಯನ್ನು ಆಯಿ ಎಂಬ ಊರಿನ ಕಡೆಗೆ ಚಾಚು;
ಆ ಪಟ್ಟಣವನ್ನು ನಿನ್ನ ಕೈಗೆ ಒಪ್ಪಿಸಿದ್ದೇನೆ ಎನ್ನಲು
19 ಅವನು ಅದನ್ನು ಚಾಚಿದನು. ಅವನು ಕೈಯನ್ನು
ಚಾಚಿದ ಕೂಡಲೆ ಹೊಂಚಿನೋಡುತ್ತಿದ್ದವರು ತಾವಿದ್ದ
ಸ್ಥಳದಿಂದ ಎದ್ದು ಓಡಿಬಂದು ಪಟ್ಟಣದೊಳಕ್ಕೆ ನುಗ್ಗಿ
20 ಕೂಡಲೆ ಅದಕ್ಕೆ ಬೆಂಕಿಹತ್ತಿಸಿದರು. ಆಯಿ ಎಂಬ
ಊರಿನ ಜನರು ಹಿಂದಿರುಗಿ ನೋಡಿದಾಗ ಪಟ್ಟಣದ
ಹೊಗೆಯು ಆಕಾಶಕ್ಕೆ ಏರಿಹೋಗುವದನ್ನು ಕಂಡು
ಯಾವ ಮಾರ್ಗದಿಂದಲಾದರೂ ತಪ್ಪಿಸಿಕೊಳ್ಳಲಾರದವ
ರಾದರು. ಅರಣ್ಯದ ಕಡೆಗೆ ಓಡಿಹೋಗಿದ್ದ ಇಸ್ರಾಯೇ
21 ಲ್ಯರು ಹಿಂದಟ್ಟುವವರ ಕಡೆಗೆ ತಿರುಗಿದರು. ಯೆಹೋ

ಶುವನೂ ಇಸ್ರಾಯೇಲ್ಯರೂ ಪಟ್ಟಣವು ಹೊಂಚ
ನೋಡುತ್ತಿದ್ದವರಿಗೆ ಸ್ವಾಧೀನವಾದದ್ದನ್ನೂ ಹೊಗೆಯು
ಆಕಾಶಕ್ಕೆ ಏರಿಹೋಗುತ್ತಿದ್ದದ್ದನ್ನೂ ಕಂಡು ಹಿಂದಿರುಗಿ
ಆಯಿ ಎಂಬ ಊರಿನ ಜನರನ್ನು ಹೊಡೆದರು. ಪಟ್ಟಣ
ದೊಳಗೆ ನುಗ್ಗಿದವರೂ ಬಂದುಬಿಟ್ಟದರಿಂದ ಆಯಿ
ಎಂಬ ಊರಿನವರು ಈಚೆಯಲ್ಲಿಯೂ ಆಚೆಯಲ್ಲಿಯೂ
ಇದ್ದ ಇಸ್ರಾಯೇಲ್ಯರ ಮಧ್ಯದಲ್ಲಿ ಸಿಕ್ಕಿಬಿದ್ದರು
ಅವರು ಎಲ್ಲರನ್ನೂ ಹೊಡೆದು ಹಾಕಿದರು. ಒಬ್ಬ
ನಾದರೂ ಉಳಿಯಲಿಲ್ಲ. ಯಾವನೂ ತಪ್ಪಿಸಿಕೊಳ್ಳ
ಲಿಲ್ಲ. ಆಯಿ ಎಂಬ ಪಟ್ಟಣದ ಅರಸನನ್ನು ಹಿಡಿದು
ಜೀವದೊಡನೆ ಯೆಹೋಶುವನ ಬಳಿಗೆ ತೆಗೆದುಕೊಂಡು
ಬಂದರು. ಇಸ್ರಾಯೇಲ್ಯರು ತಮ್ಮನ್ನು ಅರಣ್ಯದ
ವರೆಗೂ ಹಿಂದಟ್ಟಿ ಬಂದ ಆಯಿ ಎಂಬ ಊರಿನವರನ್ನು
ಅಲ್ಲೇ ಕತ್ತಿಯಿಂದ ಸಂಹರಿಸಿ ಮುಗಿಸಿಬಿಟ್ಟನಂತರ
ಎಲ್ಲರೂ ಪಟ್ಟಣಕ್ಕೆ ಹೋಗಿ ಅಲ್ಲಿದ್ದವರನ್ನು ಹತಿಸಿದರು
ಆ ದಿನ ಆಯಿ ಎಂಬ ಊರಿನವರಲ್ಲಿ ಸಂಹೃತರಾದ ಗಂಡ
ಸರೂ ಹೆಂಗಸರೂ ಹನ್ನೆರಡು ಸಾವಿರ ಮಂದಿ
ಪಟ್ಟಣದವರೆಲ್ಲರನ್ನೂ ಸಂಹರಿಸುವ ವರೆಗೆ ಯೆಹೋ
ಶುವನು ಈಟಿಹಿಡಿದು ಚಾಚಿದ ಕೈಯನ್ನು ಹಿಂದೆಗೆ
ಯಲಿಲ್ಲ. ಯೆಹೋವನು ಯೆಹೋಶುವನಿಗೆ ಆಜ್ಞಾ
ಪಿಸಿದಂತೆ ಇಸ್ರಾಯೇಲ್ಯರು ಪಟ್ಟಣದೊಳಗಿಂದ ಪಶು
ಮೊದಲಾದವುಗಳನ್ನು ಮಾತ್ರ ಕೊಳ್ಳೆಯಾಗಿ ತೆಗೆದು
ಕೊಂಡರು. ಯೆಹೋಶುವನು ಆಯಿ ಎಂಬ ಪಟ್ಟಣ
ವನ್ನು ಸುಟ್ಟು ಅದು ಯಾವ ಕಾಲಕ್ಕೂ ತಿರಿಗಿ ಕಟ್ಟಲ್ಪಡ
ದಂತೆ ಹಾಳುದಿಬ್ಬವಾಗ ಮಾಡಿದನು. ಅದು ಇಂದಿನ
ವರೆಗೂ ಹಾಗೆಯೇ ಇದೆ. ಆಯಿ ಎಂಬ ಊರಿನ ಅರಸ
ನನ್ನು ಸಾಯಂಕಾಲದ ವರೆಗೂ ಮರದಲ್ಲಿ ನೇತು
ಹಾಕಿಸಿ ಸೂರ್ಯನು ಅಸ್ತಮಿಸುತ್ತಲೇ ಅವನ ಶವವನ್ನು
ಕೆಳಗಿಳಿಸಿ ಅದನ್ನು ಊರುಬಾಗಲಲ್ಲಿ ಹಾಕಿಸಿಬಿಟ್ಟು
ಅದರ ಮೇಲೆ ಕಲ್ಲಿನ ದೊಡ್ಡ ಕುಪ್ಪೆಯನ್ನು ಮಾಡಿ
ಸಿದನು. ಅದು ಇಂದಿನ ವರೆಗೂ ಹಾಗೆಯೇ ಇದೆ.

ಏಬಾಲ್ ಬೆಟ್ಟದಲ್ಲಿ ಯಜ್ಞವೇದಿಯನ್ನು ಕಟ್ಟಿದ್ದೂ
ಧರ್ಮಶಾಸ್ತ್ರವನ್ನು ಪಾರಾಯಣಮಾಡಿದ್ದೂ.

ಯೆಹೋವನ ಸೇವಕನಾದ ಮೋಶೆಯು ಇಸ್ರಾ
ಯೇಲ್ಯರಿಗೆ ಆಜ್ಞಾಪಿಸಿದ್ದಂತೆಯೂ ಮೋಶೆಯ ಧರ್ಮ
ಶಾಸ್ತ್ರದಲ್ಲಿ ಬರೆದಿರುವಂತೆಯೂ ಯೆಹೋಶುವನು ಆ
ಸಮಯದಲ್ಲಿ ಇಸ್ರಾಯೇಲ್‌ದೇವರಾದ ಯೆಹೋವ
ನಿಗೆ ಏಬಾಲ್ ಬೆಟ್ಟದಲ್ಲಿ ಉಳಿ ಮುಂತಾದವುಗಳನ್ನು
ಉಪಯೋಗಿಸದೆ ಹುಟ್ಟುಕಲ್ಲುಗಳಿಂದಲೇ ಒಂದು
ಯಜ್ಞವೇದಿಯನ್ನು ಕಟ್ಟಿಸಿದನು. ಜನರು ಅದರ
ಮೇಲೆ ಯೆಹೋವನಿಗೆ ಸರ್ವಾಂಗಹೋಮಗಳನ್ನೂ
ಸಮಾಧಾನಯಜ್ಞಗಳನ್ನೂ ಸಮರ್ಪಿಸಿದರು. ಯೆ
ಹೋಶುವನು ಅಲ್ಲಿದ್ದ ಕಲ್ಲುಗಳ ಮೇಲೆ ಜನರೆಲ್ಲರ
ಸಮಕ್ಷದಲ್ಲಿ ಮೋಶೆಯ ಧರ್ಮಶಾಸ್ತ್ರದ ಒಂದು
ಪ್ರತಿಯನ್ನು ಬರೆದನು. ಎಲ್ಲಾ ಇಸ್ರಾಯೇಲ್ಯರು
ಅಂದರೆ ಹಿರಿಯರೂ ಅಧಿಕಾರಿಗಳೂ ನ್ಯಾಯಾಧಿ
ಪತಿಗಳೂ ಅನ್ಯದೇಶಸ್ಥರೂ ಸ್ವದೇಶಸ್ಥರೂ ಯೆಹೋ
ವನ ಒಡಂಬಡಿಕೆಯ ಮಂಜೂಷದ ಎಡಬಲಗಳ

ಗಳಲ್ಲಿ ಅದನ್ನು ಹೊತ್ತ ಲೇವಿಯರಾದ ಯಾಜಕರ
ಎದುರಾಗಿ ನಿಂತುಕೊಂಡರು. ಗೆರಿಜ್ಜೀಮ್ ಬೆಟ್ಟದ
ಕಡೆ ಅರ್ಧಜನರೂ ಏಬಾಲ್ ಬೆಟ್ಟದ ಕಡೆ ಅರ್ಧ
ಜನರೂ ಯೆಹೋವನ ಸೇವಕನಾದ ಮೋಶೆಯು
ಮೊದಲೇ ಹೇಳಿದ್ದಂತೆ ಆಶೀರ್ವಾದಗಳನ್ನು ನುಡಿ
ಯುವದಕ್ಕೋಸ್ಕರ ನಿಂತರು. ಅನಂತರ ಯೆಹೋಶು
ವನು ಧರ್ಮಶಾಸ್ತ್ರದ ಎಲ್ಲಾ ಆಶೀರ್ವಾದಶಾಪವಾಕ್ಯ
ಗಳನ್ನು ಆ ಗ್ರಂಥದಲ್ಲಿ ಇದ್ದ ಹಾಗೆಯೇ ಓದಿದನು.
ಮೋಶೆಯು ಆಜ್ಞಾಪಿಸಿದ್ದರಲ್ಲಿ ಒಂದನ್ನೂ ಬಿಡದೆ
ಹೆಂಗಸರಿಗೂ ಚಿಕ್ಕವರಿಗೂ ಅವರಲ್ಲಿದ್ದ ಅನ್ಯದೇಶಸ್ಥ
ರಿಗೂ ಕೇಳಿಸುವಂತೆ ಸರ್ವಸಮೂಹದ ಮುಂದೆ ಓದಿ
ದನು.

ಗಿಬ್ಯೋನ್ಯರು ಯುಕ್ತಿಯಿಂದ ಉಳಿದದ್ದೂ
ಇಸ್ರಾಯೇಲ್ಯರಿಗೆ ದಾಸರಾದದ್ದೂ.

ಯೊರ್ದನ್ ಹೊಳೆಯ ಆಚೆ ಬೆಟ್ಟದ ಮೇಲಿನ
ಪ್ರದೇಶ, ಇಳಕಲಿನ ಪ್ರದೇಶ, ಲೆಬನೋನಿನ ಎದುರಿ
ಗಿರುವ ಮಹಾಸಾಗರದ ತೀರಪ್ರದೇಶ ಇವುಗಳಲ್ಲಿ
ವಾಸವಾಗಿದ್ದ ಅಮೋರಿಯ ಹಿತ್ತಿಯ ಕಾನಾನ್
ಪೆರಿಜ್ಜೀಯ ಹಿವ್ವಿಯ ಯೆಬೂಸಿಯ ರಾಜರು ನಡೆದ
ಸಂಗತಿಯನ್ನು ಕೇಳಿ ಒಂದೇ ಮನಸ್ಸಿನಿಂದ ಯೆಹೋ
ಶುವನಿಗೂ ಇಸ್ರಾಯೇಲ್ಯರಿಗೂ ವಿರೋಧವಾಗಿ
ಯುದ್ಧಮಾಡುವದಕ್ಕೆ ಕೂಡಿಕೊಂಡರು.
ಯೆರಿಕೋವಿನವರನ್ನೂ ಆಯಿ ಎಂಬ ಊರಿನವ
ರನ್ನೂ ಯೆಹೋಶುವನು ಸಂಹರಿಸಿದ ಸುದ್ದಿಯನ್ನು
ಗಿಬ್ಯೋನಿನ ನಿವಾಸಿಗಳು ಕೇಳಿ ಅವರೂ ಒಂದು
ಯುಕ್ತಿಮಾಡಿದರು. ಹೇಗಂದರೆ—ಅವರು ತಮ್ಮ ಕತ್ತೆ
ಗಳ ಮೇಲೆ ಹಳೆಯ ಗೋಣೀತಟ್ಟುಗಳನ್ನು ಹಾಕಿ,
ಅವುಗಳ ಮೇಲೆ ಹರಿದುಹೋಗಿ ಕಟ್ಟಲ್ಪಟ್ಟಿರುವ
ದ್ರಾಕ್ಷಾರಸದ ಹಳೆಯ ಬುದ್ದಲಿಗಳನ್ನು ಹೇರಿ ಹರಿದ
ಹಳೆಯ ಕೆರಗಳನ್ನು ಮೆಟ್ಟಿ ಹಳೆಯ ಬಟ್ಟೆಗಳನ್ನು
ಹೊದೆದು ಒಣರೊಟ್ಟೀ ಚೂರುಗಳನ್ನು ಬುತ್ತೀ ಕಟ್ಟಿ
ಕೊಂಡು ತಾವು ರಾಯಭಾರಿಗಳೆಂದು ಗಿಲ್ಗಾಲಿನಲ್ಲಿದ್ದ
ಯೆಹೋಶುವನ ಪಾಳೆಯಕ್ಕೆ ಬಂದು ಅವನಿಗೂ ಇಸ್ರಾ
ಯೇಲ್ಯರಿಗೂ—ನಾವು ದೂರದೇಶದಿಂದ ಬಂದೆವು;
ನೀವು ನಮ್ಮ ಸಂಗಡ ಒಡಂಬಡಿಕೆಮಾಡಿಕೊಳ್ಳಿರಿ ಎಂದು
ಹೇಳಿದರು. ಆಗ ಇಸ್ರಾಯೇಲ್ಯರು ಹಿವ್ವಿಯರಾದ
ಅವರಿಗೆ—ನೀವು ಒಂದು ವೇಳೆ ಈ ನಮ್ಮ ದೇಶದ
ನಿವಾಸಿಗಳೇ ಆಗಿರಬಹುದು; ಆ ಪಕ್ಷದಲ್ಲಿ ನಾವು
ನಿಮ್ಮ ಸಂಗಡ ಒಡಂಬಡಿಕೆಮಾಡಿಕೊಳ್ಳುವದು ಹೇಗೆ
ಎಂದು ಉತ್ತರಕೊಟ್ಟರು. ಅವರು ಯೆಹೋಶು
ವನಿಗೆ—ನಾವು ನಿನ್ನ ದಾಸರಾಗಿದ್ದೇವೆನ್ನಲು ಅವನು
ಅವರನ್ನು—ನೀವು ಯಾರು, ಎಲ್ಲಿಯವರು ಎಂದು
ಕೇಳಿದನು. ಅದಕ್ಕೆ ಅವರು—ನಿನ್ನ ಸೇವಕರಾದ
ನಾವು ನಿಮ್ಮ ದೇವರಾದ ಯೆಹೋವನ ನಾಮ
ಮಹತ್ತಿನ ನಿಮಿತ್ತ ಬಹುದೂರದೇಶದಿಂದ ಬಂದಿ
ದ್ದೇವೆ. ನಮ್ಮ ಹಿರಿಯರೂ ದೇಶನಿವಾಸಿಗಳೂ
ಆತನು ಐಗುಪ್ತದಲ್ಲಿ ನಡಿಸಿದ ಮಹತ್ಕಾರ್ಯಗಳ
ಸುದ್ದಿಯನ್ನೂ ಹೆಷ್ಬೋನಿನ ಅರಸನಾದ ಸೀಹೋನ್,
ಅಷ್ಟರೋತಿನಲ್ಲಿ ವಾಸವಾಗಿದ್ದ ಬಾಷಾನಿನ ಅರಸ
ನಾದ ಓಗ್ ಎಂಬ ಈ ಇಬ್ಬರು ಅಮೋರಿಯರ ಅರಸ
ರಿಗೆ ಮಾಡಿದ್ದೆಲ್ಲವನ್ನೂ ಕೇಳಿ—ನೀವು ಪ್ರಯಾಣ 11
ಕ್ಕೋಸ್ಕರ ಬುತ್ತೀ ಕಟ್ಟಿಕೊಂಡು ಹೋಗಿ ಇಸ್ರಾ
ಯೇಲ್ಯರನ್ನು ಎದುರುಗೊಂಡು—ನಾವು ನಿಮ್ಮ ಸೇವ
ಕರು; ನೀವು ನಮ್ಮ ಸಂಗಡ ಒಡಂಬಡಿಕೆ ಮಾಡಿಕೊ
ಳ್ಳಿರಿ ಎಂಬದಾಗಿ ಅವರನ್ನು ಬೇಡಿಕೊಳ್ಳಿರಿ ಎಂದು ಹೇಳಿ
ನಮ್ಮನ್ನು ಕಳುಹಿಸಿದರು. ನಾವು ನಿಮ್ಮನ್ನು ಎದುರು 12
ಗೊಳ್ಳುವದಕ್ಕಾಗಿ ಮನೆಬಿಟ್ಟು ಹೊರಟಾಗ ಪ್ರಯಾಣ
ಕ್ಕೋಸ್ಕರ ತೆಗೆದುಕೊಂಡ ಈ ರೊಟ್ಟಿ ಬಿಸಿಯಾಗಿತ್ತು;
ಈಗ ಒಣಗಿ ಚೂರುಚೂರಾಗಿದೆ ನೋಡಿರಿ. ನಾವು 13
ದ್ರಾಕ್ಷಾರಸ ತುಂಬಿಸಿಕೊಂಡಿದ್ದ ಈ ಬುದ್ದಲಿಗಳು
ಹೊಸವಾಗಿದ್ದವು; ಈಗ ಹರಿದವೆ. ನಮ್ಮ ಬಟ್ಟೆಕೆರ
ಗಳು ದೀರ್ಘಪ್ರಯಾಣದಿಂದ ಹಳೆಯವಾದವು ಅಂದ
ರು. ಆಗ ಇಸ್ರಾಯೇಲ್ಯರು ಅವರ ಬುತ್ತಿಯಲ್ಲಿ 14
ಸ್ವಲ್ಪ ತೆಗೆದುಕೊಂಡರು; ಆದರೆ ಯೆಹೋವನನ್ನು
ವಿಚಾರಿಸಲಿಲ್ಲ. ಯೆಹೋಶುವನು ಅವರೊಡನೆ— 15
ನಿಮ್ಮನ್ನು ಜೀವದಿಂದುಳಿಸುವೆವೆಂದು ಸಮಾಧಾನದ
ಒಡಂಬಡಿಕೆಯನ್ನು ಮಾಡಿಕೊಂಡನು. ಸಮೂಹಪ್ರಧಾ
ನರೂ ಪ್ರಮಾಣಮಾಡಿದರು.
ಒಡಂಬಡಿಕೆಯಾದ ಮೂರು ದಿನಗಳ ಮೇಲೆ 16
ಅವರು ಹತ್ತಿರದವರೂ ತಮ್ಮ ಮಧ್ಯದಲ್ಲಿಯೇ ವಾಸಿ
ಸುವವರೂ ಆಗಿದ್ದಾರೆಂದು ಇಸ್ರಾಯೇಲ್ಯರಿಗೆ
ಗೊತ್ತಾಯಿತು. ಹೇಗಂದರೆ—ಇಸ್ರಾಯೇಲ್ಯರು ಮೂ 17
ರನೆಯ ದಿನದಲ್ಲಿ ಹೊರಟು ಸೇರಿದಂಥ ಗಿಬ್ಯೋನ್,
ಕೆಫೀರಾ, ಬೇರೋತ್, ಕಿರ್ಯತ್ಯಾರೀಮ್ ಎಂಬ
ಊರುಗಳು ಅವರವೇ ಆಗಿದ್ದವು. ಸಮೂಹಪ್ರಧಾ 18
ನರು ಇಸ್ರಾಯೇಲ್‌ದೇವರಾದ ಯೆಹೋವನ ಹೆಸರಿ
ನಲ್ಲಿ ಅವರಿಗೆ ಪ್ರಮಾಣಮಾಡಿದ್ದರಿಂದ ಇಸ್ರಾಯೇ
ಲ್ಯರು ಅವರನ್ನು ಹೊಡೆಯಲಿಲ್ಲ. ಆದರೆ ಸಮೂಹ
ದವರೆಲ್ಲಾ ಪ್ರಧಾನರಿಗೆ ವಿರೋಧವಾಗಿ ಗುಣುಗುಟ್ಟಿ
ದರು. ಆಗ ಪ್ರಧಾನರೆಲ್ಲರೂ ಸರ್ವಸಮೂಹದವ 19
ರಿಗೆ—ನಾವು ಇಸ್ರಾಯೇಲ್‌ದೇವರಾದ ಯೆಹೋವನ
ಹೆಸರಿನಲ್ಲಿ ಅವರಿಗೆ ಪ್ರಮಾಣಮಾಡಿದ್ದರಿಂದ ಅವ
ರನ್ನು ಮುಟ್ಟುವದಕ್ಕಾಗದು. ನಾವು ಇಟ್ಟ ಆಣೆಯ 20
ನಿಮಿತ್ತ ದೇವರ ಕೋಪವು ನಮ್ಮ ಮೇಲೆ ಬಾರದಂತೆ
ಅವರನ್ನು ಜೀವದಿಂದುಳಿಸಬೇಕು. ಆದರೆ ಒಂದನ್ನು
ಮಾಡೋಣ. ಅವರು ಸಮೂಹಕ್ಕೆಲ್ಲಾ ಕಟ್ಟಿಗೆ 21
ಒಡೆಯುವವರೂ ನೀರುತರುವವರೂ ಆಗಿ ಬದುಕಲಿ
ಎಂದು ಹೇಳಿದರು. ಪ್ರಧಾನರ ಮಾತಿನಂತೆಯೇ
ಆಯಿತು. ಯೆಹೋಶುವನು ಗಿಬ್ಯೋನ್ಯರನ್ನು ಕರಿಸಿ 22
ಅವರಿಗೆ—ನೀವು ನಮ್ಮ ಮಧ್ಯದಲ್ಲಿ ವಾಸಿಸುವವ
ರಾಗಿದ್ದರೂ ಬಹುದೂರದವರೆಂದು ಹೇಳಿ ನಮ್ಮನ್ನು
ವಂಚಿಸಿದ್ದೇಕೆ? ಇದರಿಂದ ನೀವು ಶಾಪಗ್ರಸ್ತರು. 23
ನೀವು ಯಾವಾಗಲೂ ದಾಸರಾಗಿದ್ದು ನನ್ನ ದೇವರ
ಮಂದಿರಕ್ಕೆ ಕಟ್ಟಿಗೆ ಒಡೆಯುವವರೂ ನೀರುತರು
ವವರೂ ಆಗಿರಬೇಕು ಅಂದನು. ಅವರು ಯೆಹೋ 24
ಶುವನಿಗೆ—ನಿನ್ನ ದೇವರಾದ ಯೆಹೋವನು ತನ್ನ
ಸೇವಕನಾದ ಮೋಶೆಗೆ—ನಾನು ನಿಮಗೆ ಈ ದೇಶ
ವನ್ನೆಲ್ಲಾ ಕೊಡುವಾಗ ನೀವು ಇದರ ಎಲ್ಲಾ ನಿವಾಸಿ

ಗಳನ್ನು ಸಂಹರಿಸಿಬಿಡಬೇಕೆಂದು ಆಜ್ಞಾಪಿಸಿದ್ದನ್ನು
ಕೇಳಿ ನಮ್ಮ ಪ್ರಾಣ ತೆಗೆಯುವಿರೆಂದು ಹೆದರಿ
25 ಹೀಗೆ ಮಾಡಿದೆವು. ಇಗೋ, ಈಗ ನಾವು ನಿನ್ನ
ಕೈಯಲ್ಲಿರುತ್ತೇವೆ; ನಿನಗೆ ಒಳ್ಳೇದೆಂದೂ ನ್ಯಾಯ
ವೆಂದೂ ತೋರುವದನ್ನು ನಮಗೆ ಮಾಡು ಎಂದು
26 ಉತ್ತರಕೊಟ್ಟರು. ಯೆಹೋಶುವನು ತಾನು ಮೊ
ದಲು ಹೇಳಿದಂತೆಯೇ ಮಾಡಿದನು. ಅವನು ಅವ
ರನ್ನು ಇಸ್ರಾಯೇಲ್ಯರ ಕೈಯಿಂದ ಸಂಹೃತರಾಗ
27 ದಂತೆ ತಪ್ಪಿಸಿ ಸಮೂಹಕ್ಕೋಸ್ಕರವೂ ಯೆಹೋವನು
ಆದುಕೊಳ್ಳುವ ಸ್ಥಳದಲ್ಲಿ ಆತನ ಯಜ್ಞವೇದಿಗೋಸ್ಕ
ರವೂ ಕಟ್ಟಿಗೆ ಒಡೆಯುವವರನ್ನಾಗಿಯೂ ನೀರು ತರು
ವವರನ್ನಾಗಿಯೂ ನೇಮಿಸಿದನು. ಅವರು ಇಂದಿನ
ವರೆಗೂ ಅದೇ ಕೆಲಸ ಮಾಡುತ್ತಾರೆ.

ಯೆಹೋಶುವನು ಗಿಬ್ಯೋನಿನ ಬಳಿಯಲ್ಲಿ ಐದು ಮಂದಿ ಅರಸರನ್ನು ಸೋಲಿಸಿದ್ದು.

10 ಯೆಹೋಶುವನು ಯೆರಿಕೋವನ್ನೂ ಅದರ ಅರಸ
ನನ್ನೂ ಹೇಗೋ ಹಾಗೆಯೇ ಆಯಿ ಎಂಬ ಪಟ್ಟಣ
ವನ್ನೂ ಅದರ ಅರಸನನ್ನೂ ತೆಗೆದುಕೊಂಡು ಸಂಹರಿಸಿ
2 ಬಿಟ್ಟನೆಂಬದನ್ನೂ ಆಯಿ ಎಂಬ ಊರಿಗಿಂತ ದೊಡ್ಡದೂ
ಒಂದು ರಾಜಧಾನಿಯಷ್ಟು ಶ್ರೇಷ್ಠವೂ ಆಗಿರುವ
ಗಿಬ್ಯೋನ್ ಪಟ್ಟಣದಲ್ಲಿರುವ ಜನರು ತಾವೆಲ್ಲರೂ
ಯುದ್ಧವೀರರಾಗಿದ್ದರೂ ಇಸ್ರಾಯೇಲ್ಯರ ಮಧ್ಯದಲ್ಲಿ
ಜೀವದಿಂದುಳಿಯುವದಕ್ಕೋಸ್ಕರ ಅವರ ಸಂಗಡ
ಒಡಂಬಡಿಕೆಮಾಡಿಕೊಂಡರೆಂಬದನ್ನೂ ಯೆರೂಸಲೇ
ಮಿನ ಅರಸನಾದ ಅದೋನೀಚೆದೆಕನು ಕೇಳಿ ಬಹಳ
3 ವಾಗಿ ಭಯಪಟ್ಟು ಹೆಬ್ರೋನಿನ ಅರಸನಾದ ಹೋಹಾ
ಮ್, ಯರ್ಮೂತಿನ ಅರಸನಾದ ಪಿರಾಮ್, ಲಾಕೀ
ಷಿನ ಅರಸನಾದ ಯಾಫೀಯ, ಎಗ್ಲೋನಿನ ಅರಸನಾದ
4 ದೆಬೀರ್ ಇವರ ಬಳಿಗೆ ದೂತರನ್ನು ಕಳುಹಿಸಿ—ನೀವು
ಬಂದು ನನಗೆ ಸಹಾಯಮಾಡಿರಿ; ನಾವು ಯೆಹೋಶು
ವನ ಸಂಗಡಲೂ ಇಸ್ರಾಯೇಲ್ಯರ ಸಂಗಡಲೂ ಒಡಂಬ
ಡಿಕೆಮಾಡಿಕೊಂಡ ಗಿಬ್ಯೋನ್ಯರನ್ನು ಸೋಲಿಸೋಣ
5 ಎಂದು ಹೇಳಿಸಿದನು. ಆಗ ಯೆರೂಸಲೇಮ್, ಹೆಬ್ರೋ
ನ್, ಯರ್ಮೂತ್, ಲಾಕೀಷ್, ಎಗ್ಲೋನ್ ಎಂಬ
ಪಟ್ಟಣಗಳ ಐದು ಮಂದಿ ಅಮೋರಿಯರಾಜರು ದಂಡೆ
6 ತ್ತಿ ಕೂಡಿಬಂದು ಗಿಬ್ಯೋನಿಗೆ ಮುತ್ತಿಗೆಹಾಕಿ ಯುದ್ಧ
ಮಾಡಿದರು. ಗಿಬ್ಯೋನ್ಯರು ಗಿಲ್ಗಾಲಿನಲ್ಲಿದ್ದ ಯೆ
ಹೋಶುವನ ಪಾಳೆಯಕ್ಕೆ ದೂತರನ್ನು ಕಳುಹಿಸಿ—
ನಿನ್ನ ಸೇವಕರನ್ನು ಕೈಬಿಡಬೇಡ; ಬೇಗ ಬಂದು
ಸಹಾಯಮಾಡು; ನಮಗೆ ವಿರೋಧವಾಗಿ ಕೂಡಿ
ಬಂದಿರುವ ಈ ಬೆಟ್ಟದ ಸೀಮೆಯ ಎಲ್ಲಾ ಅಮೋರಿಯ
ರಾಜರಿಂದ ನಮ್ಮನ್ನು ತಪ್ಪಿಸು ಎಂದು ಬೇಡಿಕೊಂಡರು.
7 ಆಗ ಯೆಹೋಶುವನು ಎಲ್ಲಾ ಭಟರ ಮತ್ತು ಯುದ್ಧ
ವೀರರ ಸಹಿತವಾಗಿ ಗಿಲ್ಗಾಲಿನಿಂದ ಹೊರಟನು.
8 ಯೆಹೋವನು ಯೆಹೋಶುವನಿಗೆ—ಅವರಿಗೆ ಹೆದರ
ಬೇಡ; ಅವರನ್ನು ನಿನ್ನ ಕೈಗೆ ಒಪ್ಪಿಸಿದ್ದೇನೆ. ಅವರಲ್ಲಿ

ಒಬ್ಬನೂ ನಿನ್ನ ಮುಂದೆ ನಿಲ್ಲುವದಿಲ್ಲ ಎಂದು ಹೇ
ದನು. ಯೆಹೋಶುವನು ಗಿಲ್ಗಾಲ್ ಬಿಟ್ಟು ರಾತ್ರಿ
ಯೆಲ್ಲಾ ಪ್ರಯಾಣಮಾಡಿ ತಟ್ಟನೆ ಅವರ ಮೇ
ಬಿದ್ದನು. ಯೆಹೋವನು ಇಸ್ರಾಯೇಲ್ಯರ ಮುಂ
ಅವರನ್ನು ಕಳವಳಗೊಳಿಸಿದ್ದರಿಂದ ಯೆಹೋಶುವನ
ಅವರನ್ನು ಗಿಬ್ಯೋನಿನ ಹತ್ತಿರ ಪೂರ್ಣವಾಗಿ ಸೋಲಿ
ಬೇತ್‌ಹೋರೋನ್ ಎಂಬ ಗಟ್ಟದ ದಾರಿಯ
ಅಜೇಕ, ಮಕ್ಕೇದ ಎಂಬ ಊರುಗಳ ವರೆಗೂ ಅ
ರನ್ನು ಹಿಂದಟ್ಟಿ ಸಂಹರಿಸಿದನು. ಅವರು ಇಸ್ರಾಯೆ
ಲ್ಯರಿಗೆ ಬೆಂಗೊಟ್ಟು ಬೇತ್‌ಹೋರೋನಿನ ಇಳಿಜಾ
ನಲ್ಲಿ ಓಡುತ್ತಾ ಅಜೇಕವನ್ನು ಮುಟ್ಟುವ ವರೆಗ
ಯೆಹೋವನು ಆಕಾಶದಿಂದ ದೊಡ್ಡ ಕಲ್ಮಳೆಯನ
ಸುರಿಸಿ ಅನೇಕರನ್ನು ಸಾಯಿಸಿದನು. ಇಸ್ರಾಯೇಲ್ಯ
ಕತ್ತಿಯಿಂದ ಸಂಹೃತರಾದವರಿಗಿಂತ ಕಲ್ಮಳೆಯಿಂದ ಸಾ
ವಾದವರೇ ಹೆಚ್ಚು ಮಂದಿ.

ಯೆಹೋವನು ಅಮೋರಿಯರನ್ನು ಇಸ್ರಾಯೇ
ರಿಗೆ ಒಪ್ಪಿಸಿದ ದಿನದಲ್ಲಿ ಯೆಹೋಶುವನು ಯೆಹೋ
ವನಿಗೆ ಒಂದು ವಿಜ್ಞಾಪನೆ ಮಾಡಿದನು.

ಸೂರ್ಯನೇ, ನೀನು ಗಿಬ್ಯೋನಿನಲ್ಲಿಯೂ
ಚಂದ್ರನೇ, ನೀನು ಅಯ್ಯಾಲೋನ್ ತಗ್ಗಿನಲ್ಲಿಯ
ನಿಲ್ಲಿರಿ!
ಎಂದು ಇಸ್ರಾಯೇಲ್ಯರ ಸಮಕ್ಷದಲ್ಲಿ ಆಜ್ಞಾಪಿಸಲ
ಇಸ್ರಾಯೇಲ್ಯರು ತಮ್ಮ ಶತ್ರುಗಳಿಗೆ ಮುಯಿ
ತೀರಿಸುವ ವರೆಗೆ
ಸೂರ್ಯಚಂದ್ರರು ಹಾಗೆಯೇ ನಿಂತರು.

ಈ ಮಾತು [1] ಯಾಷಾರ್‌ಗ್ರಂಥದಲ್ಲಿ ಬರೆದದೆಯ
ಲ್ಲಾ! ಹೀಗೆ ಸೂರ್ಯನು ಮುಣುಗಲಿಕ್ಕೆ ಆತು
ಪಡದೆ ಹೆಚ್ಚುಕಡಿಮೆ ಒಂದು ದಿವಸ ಪೂರ್ತಿ ಆಕಾ
ಮಧ್ಯದಲ್ಲಿಯೇ ನಿಂತನು. ಯೆಹೋವನು
ಪ್ರಕಾರ ಒಬ್ಬ ಮನುಷ್ಯನ ಮಾತಿಗೆ ಕಿವಿಗೊಟ್ಟ ದಿವ
ವು ಅದಕ್ಕಿಂತ ಹಿಂದೆಯೂ ಮುಂದೆಯೂ ಇಲ್ಲ
ಇಲ್ಲ. ಯೆಹೋವನು ತಾನೇ ಇಸ್ರಾಯೇಲ್ಯ
ಗೋಸ್ಕರ ಯುದ್ಧಮಾಡುತ್ತಾ ಇದ್ದನು. ಯೆಹೋ
ಶುವನು ಇಸ್ರಾಯೇಲ್ಯರ ಸಹಿತವಾಗಿ ಗಿಲ್ಗಾಲಿ
ಪಾಳೆಯಕ್ಕೆ ಹಿಂದಿರುಗಿದನು.

ಆ ಐದು ಮಂದಿ ಅರಸರು ಓಡಿಹೋಗಿ ಮಕ್ಕೇದ
ಗುಹೆಯಲ್ಲಿ ಅಡಗಿಕೊಂಡರು. ಜನರು ಯೆಹೋಶ
ವನಿಗೆ—ಆ ಐದು ಮಂದಿ ನಮಗೆ ಸಿಕ್ಕಿದರು; ಅವ
ಮಕ್ಕೇದದ ಗವಿಯಲ್ಲಿ ಅಡಗಿಕೊಂಡಿದ್ದಾರೆ ಎಂದ
ತಿಳಿಸಿದಾಗ ಅವನು ಅವರಿಗೆ—ಗವಿಯ ಬಾಯಿ
ದೊಡ್ಡ ಕಲ್ಲುಗಳನ್ನು ಹೊರಳಿಸಿ ಕಾಯುವದ
ಕೆಲವರನ್ನಿಡಿರಿ. ನೀವಾದರೋ ಅಲ್ಲೇ ನಿಂತುಕೊ
ಬೇಡಿರಿ; ಬೇಗನೆ ಹಿಂದಟ್ಟಿ ಹಿಂದಾದ ವೈರಿಗಳನ
ಹತಮಾಡುತ್ತಾ ಹೋಗಿರಿ; ಅವರನ್ನು ಅವರ ಪಟ್ಟ
ಗಳಲ್ಲಿ ಸೇರಗೊಡಿಸಬೇಡಿರಿ. ನಿಮ್ಮ ದೇವರಾ
ಯೆಹೋವನು ಅವರನ್ನು ನಿಮ್ಮ ಕೈಗೆ ಒಪ್ಪಿಸಿದಾ
ನಲ್ಲಾ ಅಂದನು. ಈ ಪ್ರಕಾರ ಯೆಹೋಶುವನ
ಇಸ್ರಾಯೇಲ್ಯರೂ ಅವರನ್ನು ಸಂಪೂರ್ಣವಾ

1) ಯಾಷಾರ್ ಗ್ರಂಥ ಅಂದರೆ ವೀರ ಪ್ರಶಂಸೆ.

ಸೋಲಿಸಿ ಸಂಹರಿಸಿಬಿಟ್ಟರು. ಸ್ವಲ್ಪ ಜನರು ಮಾತ್ರ
ತಪ್ಪಿಸಿಕೊಂಡು ಕೋಟೆಕೊತ್ತಲುಗಳುಳ್ಳ ಪಟ್ಟಣ
1 ಗಳನ್ನು ಸೇರಿಕೊಂಡರು. ಇಸ್ರಾಯೇಲ್ಯರಾದರೋ
ಮಕ್ಕೇದದಲ್ಲಿ ಇಳುಕೊಂಡಿದ್ದ ಯೆಹೋಶುವನ ಬಳಿಗೆ
ಸುರಕ್ಷಿತರಾಗಿ ಬಂದರು. ಇಸ್ರಾಯೇಲ್ಯರಿಗೆ ವಿರೋ
ಧವಾಗಿ ಒಬ್ಬನೂ ತನ್ನ ನಾಲಿಗೆಯನ್ನು ಎತ್ತಲಿಲ್ಲ.
2 ಅನಂತರ ಯೆಹೋಶುವನು ಜನರಿಗೆ—ನೀವು ಗವಿಯ
ಬಾಯನ್ನು ತೆರೆದು ಆ ಐದು ಮಂದಿ ಅರಸರನ್ನು
3 ನನ್ನ ಬಳಿಗೆ ತನ್ನಿರಿ ಅನ್ನಲು ಅವರು ಹೋಗಿ
ಯೆರೂಸಲೇಮ್, ಹೆಬ್ರೋನ್, ಯರ್ಮೂತ್,
ಲಾಕೀಷ್, ಎಗ್ಲೋನ್ ಎಂಬ ಪಟ್ಟಣಗಳ ಐದು
ಮಂದಿ ಅರಸರನ್ನು ಗವಿಯಿಂದ ಹೊರಗೆ ಅವನ
4 ಬಳಿಗೆ ತಂದರು. ಅವರನ್ನು ತನ್ನ ಬಳಿಗೆ ತಂದ
ಮೇಲೆ ಯೆಹೋಶುವನು ಎಲ್ಲಾ ಇಸ್ರಾಯೇಲ್ಯರನ್ನು
ಕರಿಸಿ ತನ್ನ ಜೊತೆಯಲ್ಲಿ ಬಂದಿದ್ದ ಸೈನ್ಯಾಧಿಪತಿ
ಗಳಿಗೆ—ಹತ್ತಿರ ಬಂದು ಈ ಅರಸರ ಕೊರಳಿನ ಮೇಲೆ
ಪಾದಗಳನ್ನಿಡಿರಿ ಎಂದು ಹೇಳಲು ಅವರು ಹತ್ತಿರ
ಬಂದು ಅವರ ಕುತ್ತಿಗೆಯ ಮೇಲೆ ಕಾಲಿಟ್ಟರು.
5 ಆಗ ಅವನು ಅವರಿಗೆ—ಅಂಜಬೇಡಿರಿ, ಕಳವಳ
ಗೊಳ್ಳಬೇಡಿರಿ; ಸ್ಥಿರಚಿತ್ತರಾಗಿರ್ರಿ, ಧೈರ್ಯದಿಂದಿರ್ರಿ.
ನಿಮ್ಮೊಡನೆ ಯುದ್ಧಕ್ಕೆ ಬರುವ ಎಲ್ಲಾ ವೈರಿಗಳಿಗೂ
ಯೆಹೋವನು ಹೀಗೆಯೇ ಮಾಡುವನು ಎಂದು
6 ಹೇಳಿದನಂತರ ಆ ಅರಸರನ್ನು ಕೊಲ್ಲಿಸಿ ಐದು ಮರ
ಗಳಿಗೆ ನೇತುಹಾಕಿಸಿದನು. ಅವರ ಶವಗಳು
ಸಾಯಂಕಾಲದ ವರೆಗೂ ಅಲ್ಲೇ ತೂಗಾಡುತ್ತಿದ್ದವು.
7 ಸೂರ್ಯಾಸ್ತಮಾನದ ಹೊತ್ತಿಗೆ ಜನರು ಯೆಹೋಶು
ವನ ಅಪ್ಪಣೆಯಂತೆ ಅವುಗಳನ್ನು ಮರಗಳಿಂದ ಕೆಳ
ಗಿಳಿಸಿ ಅವರು ಅಡಗಿಕೊಂಡಿದ್ದ ಗವಿಯಲ್ಲಿಯೇ
ಹಾಕಿ ಅದರ ಬಾಯಿಗೆ ದೊಡ್ಡ ಕಲ್ಲುಗಳನ್ನು ಹೊರ
ಳಿಸಿದರು. ಆ ಕಲ್ಲುಗಳು ಇಂದಿನ ವರೆಗೂ ಅಲ್ಲೇ
ಇರುತ್ತವೆ.

ಕಾನಾನ್ ದೇಶದ ದಕ್ಷಿಣಭಾಗವು ಇಸ್ರಾಯೇಲ್ಯರಿಗೆ
ವಶವಾದದ್ದು.

8 ಅದೇ ದಿವಸ ಯೆಹೋಶುವನು ಮಕ್ಕೇದ ಊರನ್ನು
ಹಿಡಿದುಕೊಂಡು ಅದನ್ನೂ ಅದರ ರಾಜಪ್ರಜೆಗಳೆಲ್ಲ
ರನ್ನೂ ಕತ್ತಿಯಿಂದ ಸಂಹರಿಸಿದನು. ಒಬ್ಬನನ್ನೂ
ಉಳಿಸಲಿಲ್ಲ. ಯೆರಿಕೋವಿನ ಅರಸನಿಗೆ ಮಾಡಿ
ದಂತೆ ಇದರ ಅರಸನಿಗೂ ಮಾಡಿದನು.
9 ಯೆಹೋಶುವನು ಜನರೆಲ್ಲರ ಸಹಿತವಾಗಿ ಮಕ್ಕೇ
ದದಿಂದ ಲಿಬ್ನಕ್ಕೆ ಹೋಗಿ ಅಲ್ಲಿಯುವರೊಡನೆ ಯುದ್ಧ
0 ಮಾಡಿದನು. ಯೆಹೋವನು ಅದನ್ನೂ ಅದರ ಅರಸ
ನನ್ನೂ ಇಸ್ರಾಯೇಲ್ಯರ ಕೈಗೆ ಕೊಟ್ಟನು. ಅವರು
ಅದರಲ್ಲಿದ್ದ ಜನರಲ್ಲಿ ಒಬ್ಬನನ್ನೂ ಉಳಿಸದೆ ಎಲ್ಲ
ರನ್ನೂ ಕತ್ತಿಯಿಂದ ಸಂಹರಿಸಿದರು. ಯೆರಿಕೋವಿನ
ಅರಸನಿಗಾದ ಗತಿಯೇ ಇದರ ಅರಸನಿಗೂ ಆಯಿತು.
1 ಅಲ್ಲಿಂದ ಯೆಹೋಶುವನು ಇಸ್ರಾಯೇಲ್ಯರ ಸಹಿತ
ವಾಗಿ ಲಾಕೀಷಿಗೆ ಹೋಗಿ ಮುತ್ತಿಗೆಹಾಕಿ ಯುದ್ಧ
2 ಮಾಡಿದನು. ಯೆಹೋವನು ಅದನ್ನು ಇಸ್ರಾಯೇ
ಲ್ಯರ ಕೈಗೆ ಒಪ್ಪಿಸಿದದರಿಂದ ಅವರು ಅದನ್ನು ಎರ
ಡನೆಯ ದಿನದಲ್ಲಿ ಸ್ವಾಧೀನಮಾಡಿಕೊಂಡು ಅದನ್ನೂ
ಅದರ ಜನರನ್ನೂ ಸಂಹರಿಸಿಬಿಟ್ಟರು. ಲಿಬ್ನದವರಿ
ಗಾದ ಗತಿಯೇ ಇವರಿಗೂ ಆಯಿತು.
ಇದಲ್ಲದೆ ಯೆಹೋಶುವನು ಲಾಕೀಷಿನವರ ಸಹಾ 33
ಯಕ್ಕೆ ಬಂದ ಗೆಜೆರಿನ ಅರಸನಾದ ಹೋರಾಮನನ್ನೂ
ಅವನ ಪ್ರಜೆಗಳೆಲ್ಲರನ್ನೂ ಹೊಡೆದುಹಾಕಿದನು;
ಒಬ್ಬನೂ ಉಳಿಯಲಿಲ್ಲ.
ತರುವಾಯ ಯೆಹೋಶುವನು ಲಾಕೀಷನ್ನು 34
ಬಿಟ್ಟು ಇಸ್ರಾಯೇಲ್ಯರೆಲ್ಲರ ಸಹಿತವಾಗಿ ಎಗ್ಲೋನಿಗೆ
ಬಂದು ಮುತ್ತಿಗೆಹಾಕಿ ಯುದ್ಧಮಾಡಿದನು. ಅವರು 35
ಅದೇ ದಿನದಲ್ಲಿ ಅದನ್ನು ಹಿಡಿದು ಲಾಕೀಷಿನಲ್ಲಿ
ಮಾಡಿದಂತೆಯೇ ಅದನ್ನೂ ಅದರ ಜನರೆಲ್ಲರನ್ನೂ
ಕತ್ತಿಯಿಂದ ಸಂಹರಿಸಿಬಿಟ್ಟರು.
ಅನಂತರ ಯೆಹೋಶುವನೂ ಇಸ್ರಾಯೇಲ್ಯರೂ 36
ಎಗ್ಲೋನನ್ನು ಬಿಟ್ಟು ಹೆಬ್ರೋನಿಗೆ ಹೋಗಿ ಅದಕ್ಕೆ
ವಿರೋಧವಾಗಿ ಯುದ್ಧಮಾಡಿ ಅದನ್ನೂ ಅದಕ್ಕೆ 37
ಸೇರಿದ ಊರುಗಳನ್ನೂ ಅದರ ರಾಜಪ್ರಜೆಗಳೆಲ್ಲ
ರನ್ನೂ ಕತ್ತಿಯಿಂದ ಸಂಹರಿಸಿದರು. ಎಗ್ಲೋನಿನಲ್ಲಿ
ಹೇಗೋ ಹಾಗೆಯೇ ಇಲ್ಲಿಯೂ ಒಬ್ಬನನ್ನೂ ಉಳಿಸ
ಲಿಲ್ಲ; ಪಟ್ಟಣವನ್ನೂ ಜನರನ್ನೂ ನಾಶಮಾಡಿದರು.
ಅಲ್ಲಿಂದ ಯೆಹೋಶುವನೂ ಎಲ್ಲಾ ಇಸ್ರಾಯೇ 38
ಲ್ಯರೂ ದೆಬೀರಿಗೆ ಬಂದು ಅಲ್ಲಿಯವರೊಡನೆ ಯುದ್ಧ
ಮಾಡಿ ಅದನ್ನೂ ಅದಕ್ಕೆ ಸೇರಿದ ಊರುಗಳನ್ನೂ 39
ಹಿಡಿದುಕೊಂಡು ಅದರ ರಾಜಪ್ರಜೆಗಳೆಲ್ಲರನ್ನೂ ಕತ್ತಿ
ಯಿಂದ ಸಂಹರಿಸಿದರು. ಒಬ್ಬನನ್ನೂ ಉಳಿಸಲಿಲ್ಲ.
ಹೆಬ್ರೋನಿಗೂ ಅದರ ಅರಸನಿಗೂ ಲಿಬ್ನಕ್ಕೂ ಅದರ
ಅರಸನಿಗೂ ಆದ ಗತಿಯೇ ದೆಬೀರಿಗೂ ಅದರ
ಅರಸನಿಗೂ ಆಯಿತು.
ಹೀಗೆ ಯೆಹೋಶುವನು ಬೆಟ್ಟದ ಮೇಲಣ ಪ್ರದೇಶ, 40
ದಕ್ಷಿಣಪ್ರಾಂತ್ಯ, ಇಳಕಲಿನ ಪ್ರದೇಶ, ಬೆಟ್ಟಗಳ
ಬುಡದ ಪ್ರದೇಶ ಇವುಗಳನ್ನು ಸ್ವತಂತ್ರಿಸಿಕೊಂಡು
ಇವುಗಳ ರಾಜಪ್ರಜೆಗಳನ್ನು ಸಂಹರಿಸಿಬಿಟ್ಟನು.
ಒಬ್ಬನನ್ನೂ ಉಳಿಸಲಿಲ್ಲ. ಇಸ್ರಾಯೇಲ್ ದೇವರಾದ
ಯೆಹೋವನ ಆಜ್ಞೆಯಂತೆ ಜೀವವಿರುವದೆಲ್ಲವನ್ನೂ
ಸಂಹರಿಸಿದನು. ಕಾದೇಶ್‌ಬರ್ನೇಯದಿಂದ ಗಾಜಾ 41
ಊರಿನ ವರೆಗೂ ಗೋಷೆನ್ ಪ್ರಾಂತದಿಂದ ಗಿಬ್ಯೋ
ನಿನ ವರೆಗೂ ಎಲ್ಲರನ್ನೂ ಸೋಲಿಸಿದನು. ಇಸ್ರಾ 42
ಯೇಲ್‌ದೇವರಾದ ಯೆಹೋವನು ಅವರ ಪಕ್ಷದಲ್ಲಿ
ಯುದ್ಧಮಾಡಿದ್ದರಿಂದ ಯೆಹೋಶುವನು ಈ ಎಲ್ಲಾ
ರಾಜರನ್ನೂ ರಾಜ್ಯಗಳನ್ನೂ ಏಕಕಾಲದಲ್ಲಿಯೇ ವಶ
ಮಾಡಿಕೊಂಡನು. ತರುವಾಯ ಯೆಹೋಶುವನು 43
ಎಲ್ಲಾ ಇಸ್ರಾಯೇಲ್ಯರೊಡನೆ ಗಿಲ್ಗಾಲಿನಲ್ಲಿದ್ದ ತನ್ನ
ಪಾಳೆಯಕ್ಕೆ ಹಿಂದಿರುಗಿದನು.

ಕಾನಾನ್ ದೇಶದ ಉತ್ತರಭಾಗವು ವಶವಾದದ್ದು.

11 ಹಾಚೋರಿನ ಅರಸನಾದ ಯಾಬೀನನು ಇದ
ನ್ನೆಲ್ಲಾ ಕೇಳಿ ಯೋಬಾಬನೆಂಬ ಮಾದೋನಿನ ಅರ
ಸನು, ಶಿಮ್ರೋನಿನ ಅರಸನು, ಅಕ್ಷಾಫಿನ ಅರಸನು

2 ಇವರನ್ನೂ ಉತ್ತರದಿಕ್ಕಿನ ಪರ್ವತಪ್ರದೇಶ, ಕಿನ್ನೆ
ರೋತ್ ಸಮುದ್ರದ ದಕ್ಷಿಣದಲ್ಲಿನ ತಗ್ಗಾದ ಪ್ರದೇಶ,
ಇಳಕಲಿನ ಪ್ರದೇಶ, ದೋರ್ ಊರಿನ ಪಶ್ಚಿಮ
ದಲ್ಲಿದ್ದ ಬೆಟ್ಟದ ಮೇಲಿನ ಪ್ರದೇಶ ಇವುಗಳ ಅರಸ
3 ರನ್ನೂ ಪೂರ್ವಪಶ್ಚಿಮಗಳಲ್ಲಿರುವ ಕಾನಾನ್ಯರು,
ಅಮೋರಿಯರು, ಹಿತ್ತಿಯರು, ಪೆರಿಜ್ಜೀಯರು,
ಬೆಟ್ಟದ ಮೇಲಿನ ಪ್ರದೇಶದಲ್ಲಿದ್ದ ಯೆಬೂಸಿಯರು,
ಹೆರ್ಮೋನಿನ ಬುಡದಲ್ಲಿ ಮಿಚ್ಪಾ ದೇಶದಲ್ಲಿದ್ದ
4 ಹಿವ್ವಿಯರು ಇವರನ್ನೂ ಕರೇಕಳುಹಿಸಿದನು. ಅವರು
ಒಡನೆ ಬಹುರಥಾಶ್ವಗಳಿಂದ ಕೂಡಿರುವ ತಮ್ಮ ಸರ್ವ
ಸೈನ್ಯಗಳನ್ನು ತೆಗೆದುಕೊಂಡು ಹೊರಟರು. ಆ
ಸೈನಿಕರು ಸಮುದ್ರತೀರದ ಮರಳಿನಂತೆ ಅಸಂಖ್ಯ
5 ರಾಗಿದ್ದರು. ಈ ಎಲ್ಲಾ ಅರಸರು ಕೂಡಿ ಮೇರೋಮ್
ಜಲಾಶಯದ ಬಳಿಯಲ್ಲಿ ಇಸ್ರಾಯೇಲ್ಯರೊಡನೆ
6 ಯುದ್ಧಮಾಡುವದಕ್ಕೋಸ್ಕರ ಇಳುಕೊಂಡರು. ಆಗ
ಯೆಹೋವನು ಯೆಹೋಶುವನಿಗೆ—ನೀನು ಅವರಿಗೆ
ಹೆದರಬೇಡ; ನಾಳೆ ಇಷ್ಟೇ ಹೊತ್ತಿಗೆ ಅವರನ್ನು ಇಸ್ರಾ
ಯೇಲ್ಯರಿಗೆ ಒಪ್ಪಿಸುವೆನು; ಅವರು ಅವರನ್ನು ಹತಿಸಿ
ಬಿಡುವರು. ನೀನು ಅವರ ಕುದುರೆಗಳ ಹಿಂಗಾಲಿನ
ನರಗಳನ್ನು ಕೊಯಿದು ರಥಗಳನ್ನು ಸುಟ್ಟುಬಿಡ
7 ಬೇಕು ಅಂದನು. ಯೆಹೋಶುವನು ತನ್ನ ಎಲ್ಲಾ
ಭಟರೊಡನೆ ಹೊರಟುಹೋಗಿ ಮೇರೋಮ್ ಜಲಾ
ಶಯದ ಬಳಿಯಲ್ಲಿದ್ದ ಶತ್ರುಗಳ ಮೇಲೆ ಫಕ್ಕನೆ ಬಿ
8 ದ್ದನು. ಯೆಹೋವನು ಅವರನ್ನು ಇಸ್ರಾಯೇಲ್ಯರ
ಕೈಗೆ ಒಪ್ಪಿಸಿದನು. ಇವರು ಅವರನ್ನು ದೊಡ್ಡ ಚೀ
ದೋನ್, ಮಿಸ್ರೆಫೋತ್ಮಯಿಮ್ ಎಂಬ ಊರುಗಳ
ವರೆಗೂ ಪೂರ್ವದಿಕ್ಕಿನಲ್ಲಿರುವ ಮಿಚ್ಪೆಯ ಬೈಲಿನ ವರೆ
ಗೂ ಹಿಂದಟ್ಟಿ ಹೊಡೆದರು. ಒಬ್ಬನಾದರೂ ಉಳಿಯ
9 ದಂತೆ ಎಲ್ಲರನ್ನೂ ಸಂಹರಿಸಿದರು. ಯೆಹೋಶುವನು
ಯೆಹೋವನ ಅಪ್ಪಣೆಗನುಸಾರವಾಗಿ ಅವರ ಕುದುರೆ
ಗಳ ಹಿಂಗಾಲಿನ ನರಗಳನ್ನು ಕೊಯಿದು ರಥಗಳನ್ನು
ಸುಟ್ಟುಬಿಟ್ಟನು.
10 ಕೂಡಲೆ ಯೆಹೋಶುವನು ಹಿಂದಿರುಗಿ ಹಾಚೋ
ರನ್ನೂ ಅದರ ಅರಸನನ್ನೂ ಕತ್ತಿಯಿಂದ ಸಂಹರಿಸಿ
ದನು. ಹಾಚೋರೆಂಬುದು ಪೂರ್ವಕಾಲದಲ್ಲಿ ಆ ಎಲ್ಲಾ
11 ರಾಜ್ಯಗಳಲ್ಲಿ ಶ್ರೇಷ್ಠವಾಗಿತ್ತು. ಇಸ್ರಾಯೇಲ್ಯರು
ಅದರಲ್ಲಿದ್ದ ಎಲ್ಲಾ ಜನರನ್ನು ಕತ್ತಿಯಿಂದ ಸಂಹರಿಸಿ
ಹಾಚೋರ್ ಪಟ್ಟಣವನ್ನು ಸುಟ್ಟುಬಿಟ್ಟರು. ಒಂದು
12 ಪ್ರಾಣಿಯಾದರೂ ಉಳಿಯಲಿಲ್ಲ. ಮತ್ತು ಯೆಹೋ
ಶುವನು ಆ ಬೇರೆ ಅರಸರನ್ನೂ ಅವರ ಎಲ್ಲಾ ಪಟ್ಟಣ
ಗಳನ್ನೂ ಹಿಡಿದು ಯೆಹೋವನ ಸೇವಕನಾದ ಮೋಶೆ
ಯ ಆಜ್ಞೆಯಂತೆ ಅವರನ್ನು ಕತ್ತಿಯಿಂದ ಸಂಹರಿಸಿ
13 ದನು. ಯೆಹೋಶುವನು ಸುಟ್ಟ ಹಾಚೋರ್ ಹೊರ
ತು ಇಸ್ರಾಯೇಲ್ಯರು ದಿನ್ನೆಯ ಮೇಲಣ ಬೇರೆ
14 ಯಾವ ಪಟ್ಟಣವನ್ನೂ ಸುಡಲಿಲ್ಲ. ಇಸ್ರಾಯೇಲ್ಯ
ರು ಅವುಗಳಲ್ಲಿದ್ದ ಪಶುಗಳನ್ನೂ ವಸ್ತುಗಳನ್ನೂ
ಕೊಳ್ಳೆಹಿಡಿದರು. ಆದರೆ ಜನರೆಲ್ಲರನ್ನೂ ಕತ್ತಿಯಿಂದ
ಹೊಡೆದು ನಿರ್ಮೂಲಮಾಡಿದರು. ಒಂದು ಪ್ರಾಣಿ

ಯನ್ನೂ ಉಳಿಸಲಿಲ್ಲ. ಯೆಹೋವನ ಸೇವಕನಾದ
ಮೋಶೆಯು ದೇವರು ತನಗೆ ಹೇಳಿದ್ದನ್ನೆಲ್ಲಾ ಯೆ
ಹೋಶುವನಿಗೆ ಹೇಳಿದ್ದನು. ಯೆಹೋಶುವನು ಅ
ರಂತೆಯೇ ಮಾಡಿದನು; ಯೆಹೋವನು ಮೋಶೆಯ
ಮೂಲಕ ಆಜ್ಞಾಪಿಸಿದ್ದರಲ್ಲಿ ಅವನು ಒಂದನ್ನೂ
ಮೀರಲಿಲ್ಲ.

ಯುದ್ಧ ಫಲವು.

ಈ ಪ್ರಕಾರ ಬೆಟ್ಟದ ಮೇಲಿನ ಪ್ರದೇಶ, ದಕ್ಷಿಣ
ಪ್ರಾಂತ, ಗೋಷೆನ್ ಸೀಮೆ, ಇಳಕಲಿನ ಪ್ರದೇಶ
ತಗ್ಗಾದ ಪ್ರದೇಶ, ಇಸ್ರಾಯೇಲ್‍ಸೀಮೆಯ ಪರ್ವ
ಪ್ರಾಂತ್ಯ, ಅದಕ್ಕೆ ಸೇರಿದ ಇಳಕಲಿನ ಪ್ರದೇಶ ಇವು
ಳೆಲ್ಲಾ ಯೆಹೋಶುವನಿಗೆ ಸ್ವಾಧೀನವಾದವು. ಅವನು
ಸೇಯಿರಿನ ದಾರಿಯಲ್ಲಿದ್ದ ಹಾಲಾಕ್ ಬೆಟ್ಟದಿಂದ
ಹೆರ್ಮೋನಿನ ಬುಡದಲ್ಲಿ ಲೆಬನೋನ್ ತಗ್ಗಿನಲ್ಲಿರುವ
ಬಾಲ್ಗಾದ್ ಪಟ್ಟಣದ ವರೆಗೂ ಇರುವ ಪ್ರದೇಶವನ್ನೆ
ಲ್ಲಾ ತೆಗೆದುಕೊಂಡು ಅದರ ಎಲ್ಲಾ ಅರಸರನ್ನು
ಹಿಡಿದು ಸಂಹರಿಸಿಬಿಟ್ಟನು. ಯೆಹೋಶುವನು ಈ
ಎಲ್ಲಾ ಅರಸರೊಡನೆ ಬಹು ದಿನಗಳ ವರೆಗೂ ಯುದ್ಧ
ಮಾಡಿದನು. ಗಿಬ್ಯೋನಿನ ನಿವಾಸಿಗಳಾದ ಹಿವ್ವಿ
ಯರು ಹೊರತು ಯಾವ ಪಟ್ಟಣದವರೂ ಇಸ್ರಾ
ಯೇಲ್ಯರೊಡನೆ ಒಪ್ಪಂದಮಾಡಿಕೊಳ್ಳಲಿಲ್ಲ. ಎಲ್ಲ
ರನ್ನೂ ಯುದ್ಧದಿಂದ ವಶಮಾಡಿಕೊಳ್ಳಬೇಕಾಯಿತು
ಯೆಹೋವನು ಮೋಶೆಗೆ ಆಜ್ಞಾಪಿಸಿದಂತೆ ಇಸ್ರಾಯೇ
ಲ್ಯರು ಅವರೆಲ್ಲರನ್ನೂ ಕರುಣೆಯಿಲ್ಲದೆ ಸಂಹರಿ
ಬಿಡುವ ಹಾಗೆ ಆತನು ತಾನೇ ಆ ಜನರ ಹೃದಯಗಳ
ನ್ನು ಕಠಿನಪಡಿಸಿ ಯುದ್ಧಕ್ಕೆ ಬರಮಾಡಿದನು.
ಅದೇ ಕಾಲದಲ್ಲಿ ಯೆಹೋಶುವನು ಹೆಬ್ರೋನ್
ದೆಬೀರ್, ಅನಾಬ್ ಎಂಬ ಊರುಗಳಲ್ಲಿಯೂ ಯೆಹು
ದ ಮತ್ತು ಇಸ್ರಾಯೇಲ್ ಪ್ರಾಂತಗಳ ಬೆಟ್ಟಗಳಲ್ಲಿ
ಯೂ ಇದ್ದ 1)ಉನ್ನತಪುರುಷರನ್ನು ನಾಶಮಾಡಿ ಅವ
ಪಟ್ಟಣಗಳನ್ನು ಹಾಳುಮಾಡಿದನು. ಇಸ್ರಾಯೇಲ್ಯ
ಪ್ರಾಂತ್ಯದಲ್ಲಿ ಅಂಥವರು ಯಾರೂ ಉಳಿಯಲಿಲ್ಲ
ಆದರೆ ಗಾಜಾ, ಗತೂರು, ಅಷ್ದೋದ್ ಎಂಬ ಊರುಗ
ಳಲ್ಲಿ ಮಾತ್ರ ಕೆಲವರು ಉಳಿದರು. ಯೆಹೋವನು
ಮೋಶೆಯ ಮೂಲಕ ವಾಗ್ದಾನಮಾಡಿದ್ದ ಪ್ರದೇಶವ
ನ್ನೆಲ್ಲಾ ಯೆಹೋಶುವನು ಹಿಡಿದುಕೊಂಡು ಇಸ್ರಾ
ಯೇಲ್ ಕುಲಭಾಗಗಳಿಗನುಸಾರವಾಗಿ ಹಂಚಿಕೊಟ್ಟ
ನು. ಯುದ್ಧವು ನಿಂತು ದೇಶದಲ್ಲೆಲ್ಲಾ ಸಮಾಧಾನ
ವುಂಟಾಯಿತು.

ಇಸ್ರಾಯೇಲ್ಯರು ಸೋಲಿಸಿದ ಅರಸರ ಪಟ್ಟಿ.

ಇಸ್ರಾಯೇಲ್ಯರು ಯೊರ್ದನ್ ಹೊಳೆಯ ಪೂರ್ವ 1
ದಿಕ್ಕಿನಲ್ಲಿ ಅರ್ನೋನ್ ತಗ್ಗು ಮೊದಲುಗೊಂಡು
ಹೆರ್ಮೋನ್ ಪರ್ವತದ ವರೆಗಿದ್ದ ಪ್ರದೇಶವನ್ನೂ
ತಗ್ಗಾದ ಪ್ರದೇಶದ ಪೂರ್ವಭಾಗವನ್ನೂ ಸ್ವಾಧೀನ

1) ಮೂಲ: ಅನಾಕ್ಯರನ್ನು.

ಮಾಡಿಕೊಂಡು ಅವುಗಳಲ್ಲಿದ್ದ ಅರಸರನ್ನು ಸಂಹರಿಸಿ
ದರು. [ಅವರಲ್ಲಿ ಮೊದಲನೆಯವನು] ಹೆಷ್ಬೋನಿ
ನಲ್ಲಿದ್ದ ಅಮೋರಿಯರ ಅರಸನಾದ ಸೀಹೋನ್
ಎಂಬವನು. ಅರ್ನೋನ್ ತಗ್ಗಿನ ಅಂಚಿನಲ್ಲಿರುವ
ಅರೋಯೇರ್ ಪಟ್ಟಣವು ಮತ್ತು ತಗ್ಗಿನಲ್ಲಿಯೇ
ಇರುವ ಪಟ್ಟಣವು ಇವುಗಳು ಮೊದಲುಗೊಂಡು
ಅಮ್ಮೋನಿಯರ ಮೇರೆಯಾಗಿರುವ ಯಬ್ಬೋಕ್
ಹೊಳೆಯ ವರೆಗಿರುವ ಗಿಲ್ಯಾದಿನ ಅರ್ಧಪ್ರಾಂತವು,
ಯೊರ್ದನ್ ಹೊಳೆಯ ಪೂರ್ವದಲ್ಲಿ ಕಿನ್ನೆರೋ
ತ್ ಸಮುದ್ರದಿಂದ ಲವಣಸಮುದ್ರವೆನಿಸಿಕೊಳ್ಳುವ
ಅರಾಬಾ ಸಮುದ್ರದ ಹತ್ತಿರವಿರುವ ಬೇತ್‌ಯೆಷಿ
ಮೋತಿನ ವರೆಗೂ ದಕ್ಷಿಣದಲ್ಲಿರುವ ಪಿಸ್ಗಾ ಬೆಟ್ಟದ
ಬುಡದ ವರೆಗೂ ಇರುವ ತಗ್ಗಾದ ಪ್ರದೇಶವು ಇವೇ
ಅವನ ರಾಜ್ಯ. ಅಷ್ಟರೋತ್, ಎದ್ರೈ ಎಂಬ ಊರುಗ
ಳಲ್ಲಿ ವಾಸವಾಗಿದ್ದ ರೆಫಾಯರ ವಂಶಸ್ಥನೂ ಬಾಷಾ
ನಿನ ಅರಸನೂ ಆದ ಓಗನು [ಎರಡನೆಯವನು].
ಹೆರ್ಮೋನ್ ಬೆಟ್ಟದ ಮೇಲಿನ ಸೀಮೆ, ಸಲ್ಕಾ ಪಟ್ಟ
ಣವು, ಗೆಷೂರ್‍ಯರ ಮತ್ತು ಮಾಕತೀಯರ ಮೇರೆಯ
ವರೆಗಿದ್ದ ಬಾಷಾನ್ ಸೀಮೆ, ಹೆಷ್ಬೋನಿನ ಅರಸನಾದ
ಸೀಹೋನನ ಮೇರೆಯ ವರೆಗಿದ್ದ ಗಿಲ್ಯಾದಿನ ಅರ್ಧ
ಪ್ರಾಂತವು ಇವೇ ಇವನ ರಾಜ್ಯ. ಯೆಹೋವನ
ಸೇವಕನಾದ ಮೋಶೆಯು ಇಸ್ರಾಯೇಲ್ಯರ ಸಹಿತ
ವಾಗಿ ಆ ಇಬ್ಬರನ್ನೂ ಸೋಲಿಸಿ ಅವರ ರಾಜ್ಯಗಳನ್ನು
ರೂಬೇನ್ಯರಿಗೂ ಗಾದ್ಯರಿಗೂ ಮನಸ್ಸೆಕುಲದ ಅರ್ಧ
ಜನರಿಗೂ ಸ್ವಾಸ್ತ್ಯವಾಗಿ ಕೊಟ್ಟನು.

ಯೆಹೋಶುವನು ಇಸ್ರಾಯೇಲ್ಯರ ಸಹಿತವಾಗಿ
ಯೊರ್ದನ್ ಹೊಳೆಯ ಪಶ್ಚಿಮದಲ್ಲಿ ಲೆಬನೋನ್
ತಗ್ಗಿನಲ್ಲಿದ್ದ ಬಾಲ್ಗಾದಿನಿಂದ ಸೇಯೀರಿನ ದಾರಿ
ಯಲ್ಲಿದ್ದ ಹಾಲಾಕ್ ಪರ್ವತದ ವರೆಗೂ ವಿಸ್ತರಿಸಿ
ಕೊಂಡಿದ್ದ ಬೆಟ್ಟದ ಮೇಲಿನ ಪ್ರದೇಶ, ಇಳಕಲಿನ
ಪ್ರದೇಶ, ತಗ್ಗಾದ ಪ್ರದೇಶ, ಬೆಟ್ಟಗಳ ಬುಡದಲ್ಲಿರುವ
ಸೀಮೆ, ಅರಣ್ಯ, ದಕ್ಷಿಣಪ್ರಾಂತ್ಯ ಇವುಗಳಲ್ಲಿ ಆಳು
ತ್ತಿದ್ದ ಹಿತ್ತಿಯ ಅಮೋರಿಯ ಕಾನಾನ್ ಪೆರಿಜ್ಜೀಯ
ಹಿವ್ವಿಯ ಯೆಬೂಸಿಯ ಅರಸರನ್ನು ಸೋಲಿಸಿ
ಅವರ ದೇಶಗಳನ್ನು ಇಸ್ರಾಯೇಲ್‌ಕುಲಭಾಗಗಳಿಗೆ
ಸ್ವಾಸ್ತ್ಯವಾಗಿ ಕೊಟ್ಟನು. ಆ ಅರಸರ ಪಟ್ಟಿಯು
ಹೇಗಂದರೆ—

ಯೆರಿಕೋವಿನ ಅರಸನು 1; ಬೇತೇಲಿನ ಹತ್ತಿರ
ವಿರುವ ಆಯಿ ಎಂಬ ಊರಿನ ಅರಸನು 1; ಯೆರೂಸ
ಲೇಮಿನ ಅರಸನು 1; ಹೆಬ್ರೋನಿನ ಅರಸನು 1;
ಯರ್ಮೂತಿನ ಅರಸನು 1; ಲಾಕೀಷಿನ ಅರಸನು 1;
13 ಎಗ್ಲೋನಿನ ಅರಸನು 1; ಗೆಜೆರಿನ ಅರಸನು 1; ದೆಬೀ
ರಿನ ಅರಸನು 1; ಗೆದೆರಿನ ಅರಸನು 1; ಹೊರ್ಮದ
ಅರಸನು 1; ಅರಾದಿನ ಅರಸನು 1; ಲಿಬ್ನದ ಅರ
ಸನು 1; ಅದುಲ್ಲಾಮದ ಅರಸನು 1; ಮಕ್ಕೇದದ
ಅರಸನು 1; ಬೇತೇಲಿನ ಅರಸನು 1; ತಪ್ಪೂಹದ
ಅರಸನು 1; ಹೇಫೆರಿನ ಅರಸನು 1; ಅಫೇಕದ ಅರ
ಸನು 1; ಲಷ್ಕಾರೋನಿನ ಅರಸನು 1; ಮಾದೋ
ನಿನ ಅರಸನು 1; ಹಾಚೋರಿನ ಅರಸನು 1;
ಶಿಮ್ರೋನ್ಮೆರೋನಿನ ಅರಸನು 1; ಅಕ್ಷಾಫಿನ ಅರ 20
ಸನು 1; ತಾನಕದ ಅರಸನು 1; ಮೆಗಿದ್ದೋವಿನ 21
ಅರಸನು 1; ಕೆದೆಷಿನ ಅರಸನು 1; ಕರ್ಮೆಲ್ 22
ಬೆಟ್ಟದ ಯೊಕ್ನೆಯಾಮದ ಅರಸನು 1; ದೋರ್ 23
ಬೆಟ್ಟದ ಮೇಲಿರುವ ದೋರಿನ ಅರಸನು 1; ಗಿಲ್ಗಾಲಿ
ನವರ ಅರಸನು 1; ತಿರ್ಚದ ಅರಸನು 1; ಒಟ್ಟು 24
ಅರಸರು 31 ಮಂದಿ.

## ಯೆಹೋಶುವನು ಇಸ್ರಾಯೇಲ್ಯರಿಗೆ ಕಾನಾನ್ ದೇಶವನ್ನು ಹಂಚಿಕೊಟ್ಟದ್ದು. 13—21.

### ದೇಶವನ್ನು ಹಂಚಿಕೊಡಬೇಕೆಂಬ ಅಪ್ಪಣೆ.

13 ಯೆಹೋಶುವನು ದಿನತುಂಬಿದ ಮುದುಕನಾಗಲು
ಯೆಹೋವನು ಅವನಿಗೆ—ನೀನು ಈಗ ಮುದುಕ
ನಾದಿ; ಸ್ವಾಧೀನಮಾಡಿಕೊಳ್ಳತಕ್ಕ ದೇಶಗಳು ಇನ್ನೂ
ಬಹಳ ಇರುತ್ತವೆ. ಅವು ಯಾವವಂದರೆ—ಐಗು 2, 3
ಪ್ತದ ಈಚೆಯಲ್ಲಿರುವ ಶೀಹೋರ್ ಹಳ್ಳ ಮೊದಲು
ಗೊಂಡು ಕಾನಾನ್ಯರಿಗೆ ಸೇರಿದ್ದ ಉತ್ತರ ಮೇರೆಯಾದ
ಎಕ್ರೋನಿನ ವರೆಗಿದ್ದು ಗಾಜಾ, ಅಷ್ಡೋದ್, ಅಷ್ಕೆ
ಲೋನ್, ಗತೂರು, ಎಕ್ರೋನ್ ಎಂಬ ಪಟ್ಟಣಗಳ ಐದು
ಮಂದಿ ಫಿಲಿಷ್ಟಿಯ ಪ್ರಭುಗಳ ಸ್ವಾಧೀನದಲ್ಲಿದ್ದಂಥ
ಫಿಲಿಷ್ಟಿಯ ಪ್ರಾಂತ್ಯವು, ಗೆಷೂರ್‍ಯರ ಸೀಮೆಯು, ದಕ್ಷಿಣ 4
ದಲ್ಲಿದ್ದ ಅವ್ವೀಯರ ದೇಶವು ಇವುಗಳೂ ಚೀದೋನ್ಯ
ರಿಗೆ ಸೇರಿದ ಮೆಯಾರಾ ಮೊದಲುಗೊಂಡು ಅಮೋ
ರಿಯರ ಮೇರೆಯಾದ ಅಫೇಕದ ವರೆಗಿರುವ ಕಾನಾ
ನ್ಯರ ದೇಶವು, ಗೆಬಾಲ್ಯರ ಸೀಮೆ, ಹೆರ್ಮೋನ್ 5
ಬೆಟ್ಟದ ಬುಡದಲ್ಲಿರುವ ಬಾಲ್ಗಾದಿನಿಂದ ಹಾಮಾತಿನ
ದಾರಿಯ ವರೆಗಿರುವ ಲೆಬನೋನಿನ ಪೂರ್ವಪ್ರದೇಶ,
ಒಟ್ಟಾರೆ ಲೆಬನೋನಿನಿಂದ ಮಿಸ್ರೆಫೋತ್ಮಯಿಮಿನ 6
ವರೆಗಿರುವ ಚೀದೋನ್ಯರ ಎಲ್ಲಾ ಪರ್ವತಪ್ರಾಂತ್ಯ
ಗಳೂ ಇವೇ. ನಾನೇ ಈ ಎಲ್ಲಾ ಜನಾಂಗಗಳನ್ನು
ಇಸ್ರಾಯೇಲ್ಯರ ಎದುರಿನಿಂದ ಹೊರಡಿಸಿಬಿಡುವೆನು.
ನೀನಾದರೋ ನಾನು ಮೊದಲೇ ಆಜ್ಞಾಪಿಸಿದಂತೆ
ಇಸ್ರಾಯೇಲ್ಯರಿಗೆ ದೇಶವನ್ನು ಹಂಚಿಕೊಡುವಾಗ
ಇವುಗಳನ್ನೂ ಸೇರಿಸಿ ದೇಶವನ್ನೆಲ್ಲಾ ಒಂಭತ್ತು ಕುಲ 7
ಗಳಿಗೂ ಮನಸ್ಸೆಕುಲದ ಅರ್ಧಜನರಿಗೂ ಪಾಲು
ಮಾಡಿ ಕೊಡು ಅಂದನು.

### ಯೊರ್ದನಿನ ಪೂರ್ವದಲ್ಲಿ ಎರಡುವರೆ ಕುಲಗಳಿಗೆ ಸಿಕ್ಕಿದ ಸ್ವಾಸ್ತ್ಯ.

[1]ಮನಸ್ಸೆಕುಲದ ಉಳಿದ ಅರ್ಧಜನರಿಗೂ ರೂಬೇ 8
ನ್ಯರಿಗೂ ಗಾದ್ಯರಿಗೂ ಮೋಶೆಯಿಂದ ಯೊರ್ದನಿನ
ಆಚೆಯಲ್ಲೇ ಸ್ವಾಸ್ತ್ಯವು ದೊರಕಿತು. ಯೆಹೋವನ
ಸೇವಕನಾದ ಮೋಶೆಯು ಅವರಿಗೆ ಕೊಟ್ಟ ಪ್ರಾಂತ
ಗಳು ಯಾವವಂದರೆ—ಅರ್ನೋನ್ ತಗ್ಗಿನ ಅಂಚಿನ 9
ಲ್ಲಿದ್ದ ಅರೋಯೇರ್ ಪಟ್ಟಣವು ಮತ್ತು ತಗ್ಗಿ

1) ಮೂಲ: ಅವರ ಸಂಗಡ.

ನಲ್ಲಿಯೇ ಇದ್ದ ಪಟ್ಟಣವು ಇವು ಮೊದಲುಗೊಂಡು
ದೀಬೋನಿನ ವರೆಗೆ ವಿಸ್ತರಿಸಿಕೊಂಡಿರುವ ಮೇದೆಬದ
10 ತಪ್ಪಲಸೀಮೆ, ಹೆಷ್ಬೋನಿನಲ್ಲಿ ಆಳುತ್ತಿದ್ದ ಅಮೋ
ರಿಯ ಅರಸನಾದ ಸೀಹೋನನ ವಶದಲ್ಲಿದ್ದು ಅಮ್ಮೋ
ನಿಯರ ಮೇರೆಯ ಈಚೆಗಿದ್ದಂಥ ಎಲ್ಲಾ ಪಟ್ಟಣಗಳು,
11 ಗಿಲ್ಯಾದ್ ಸೀಮೆಯು, ಗೆಷೂರ್ಯರ ಮತ್ತು ಮಾಕತೀ
ಯರ ಪ್ರಾಂತ್ಯಗಳು, ಹೆರ್ಮೋನ್ ಬೆಟ್ಟದ ಮೇಲಿನ
12 ಎಲ್ಲಾ ಪ್ರದೇಶವು, ಅಷ್ಟರೋತ್, ಎದ್ರೈ ಎಂಬ
ಊರುಗಳಲ್ಲಿ ಆಳುತ್ತಿದ್ದ ರೆಫಾಯರ ವಂಶಸ್ಥನಾದ
ಓಗನ ರಾಜ್ಯವಾಗಿದ್ದು ಸಲ್ಕಾ ಪಟ್ಟಣದ ವರೆಗೆ ವಿಸ್ತ
ರಿಸಿಕೊಂಡಿದ್ದ ಬಾಷಾನಿನ ಎಲ್ಲಾ ಪ್ರಾಂತ್ಯಗಳು
ಇವುಗಳೇ. ಮೋಶೆಯೇ ಅವರನ್ನು ಜಯಿಸಿ ಅವರ
13 ದೇಶಗಳನ್ನು ಸ್ವಾಧೀನಮಾಡಿಕೊಂಡಿದ್ದನು. ಇಸ್ರಾ
ಯೇಲ್ಯರು ಗೆಷೂರ್ಯರನ್ನೂ ಮಾಕತೀಯರನ್ನೂ ದೇಶ
ದೊಳಗಿಂದ ಅಟ್ಟಿಬಿಡಲಿಲ್ಲ. ಅವರು ಇಂದಿನ ವರೆಗೂ
14 ಇಸ್ರಾಯೇಲ್ಯರ ಮಧ್ಯದಲ್ಲಿಯೇ ಇರುತ್ತಾರೆ. ಲೇವಿ
ಕುಲದವರಿಗೆ ಮಾತ್ರ ಪಾಲು ಸಿಕ್ಕಲಿಲ್ಲ. ಇಸ್ರಾ
ಯೇಲ್‍ದೇವರಾದ ಯೆಹೋವನು ಆಜ್ಞಾಪಿಸಿದಂತೆ
ಆತನ ಯಜ್ಞಶೇಷವೇ ಅವರ ಸ್ವಾಸ್ತ್ಯ.
15 ಮೋಶೆಯು ರೂಬೇನ್ಯರ ಗೋತ್ರಗಳಿಗೆ ಸ್ವಾಸ್ತ್ಯ
ವಾಗಿ ಕೊಟ್ಟ ಪ್ರದೇಶಗಳು ಯಾವವಂದರೆ—
16 ಅರ್ನೋನ್ ತಗ್ಗಿನ ಅಂಚಿನಲ್ಲಿದ್ದ ಅರೋಯೇರ್
ಪಟ್ಟಣ, ಆ ತಗ್ಗಿನ ಮಧ್ಯದಲ್ಲಿದ್ದ ಪಟ್ಟಣ ಇವುಗಳೂ
17 ಮೇದೆಬದ ತಪ್ಪಲಸೀಮೆಗೆ ಸೇರಿದ ಹೆಷ್ಬೋನ್
ಪಟ್ಟಣವೂ ಅದೇ ಎತ್ತರವಾದ ಬೈಲಿನಲ್ಲಿರುವ
ದೀಬೋನ್, ಬಾಮೋತ್‍ಬಾಳ್, ಬೇತ್ಬಾಳ್ಮೆಯೋ
18 ನ್, ಯಹಚಾ, ಕೆದೇಮೋತ್, ಮೇಫಾಯತ್,
19 ಕಿರ್ಯಾತಯಿಮ್, ಸಿಬ್ಮಾ ಎಂಬ ಹೆಷ್ಬೋನಿನ ಉಪ
ಗ್ರಾಮಗಳೂ ತಗ್ಗಿನಲ್ಲಿರುವ ಬೆಟ್ಟದ ಮೇಲಿನ ಚೆರೆತ್
20 ಶಹರ್, ಬೇತ್ಪೆಗೋರ್ ಎಂಬ ಪಟ್ಟಣಗಳೂ ಪಿಸ್ಗದ
ಬುಡದಲ್ಲಿರುವ ಸೀಮೆ, ಬೇತ್‍ಯೆಷಿಮೋತ್ ಪಟ್ಟಣ
21 ಇವುಗಳೂ ಒಟ್ಟಾರೆ ಮಿಾಶೋರೆಂಬ ಎತ್ತರವಾದ
ಬೈಲಿನಲ್ಲಿದ್ದ ಎಲ್ಲಾ ಪಟ್ಟಣಗಳೂ ಹೆಷ್ಬೋನಿನಲ್ಲಿ
ಆಳುತ್ತಿದ್ದ ಅಮೋರಿಯರ ಅರಸನಾದ ಸೀಹೋನನ
ಸಮಸ್ತರಾಜ್ಯವೂ ಇವುಗಳೇ. ಮೋಶೆಯು ಆ ದೇಶ
ದಲ್ಲಿ ವಾಸವಾಗಿದ್ದ ಸೀಹೋನನನ್ನೂ ಎವೀ, ರೆಕೆಮ್,
ಚೂರ್, ಹೂರ್, ರೆಬಾ ಎಂಬ ಮಿದ್ಯಾನ್ ಪ್ರಭು
ಗಳಾಗಿರುವ ಅವನ ಸರದಾರರನ್ನೂ ಹೊಡೆದುಹಾಕಿ
22 ದನು. ಇಸ್ರಾಯೇಲ್ಯರು ಕತ್ತಿಯಿಂದ ಸಂಹರಿಸಿ
ದವರಲ್ಲಿ ಬೆಯೋರನ ಮಗನೂ ಶಕುನನೋಡು
23 ವವನೂ ಆಗಿದ್ದ ಬಿಳಾಮನೂ ಇದ್ದನು. ಯೊರ್ದನ್
ಹೊಳೆಯು ರೂಬೇನ್ಯರ [ಪಡುವಣ] ಮೇರೆಯಾ
ಗಿತ್ತು. ರೂಬೇನ್ ಗೋತ್ರಗಳಿಗೆ ಸ್ವಾಸ್ತ್ಯವಾಗಿ
ಸಿಕ್ಕಿದ ಗ್ರಾಮನಗರಗಳು ಇವೇ.
24 ಮೋಶೆಯು ಗಾದ್ ಕುಲದ ಗೋತ್ರಗಳಿಗೆ
ಸ್ವಾಸ್ತ್ಯವಾಗಿ ಕೊಟ್ಟ ಪ್ರದೇಶಗಳು ಯಾವವಂದರೆ—
25 ಹೆಷ್ಬೋನಿನ ಅರಸನಾದ ಸೀಹೋನನ ರಾಜ್ಯದ
ಉಳಿದ ಭಾಗವಾಗಿರುವ ಯಗ್ಜೇರ್ ಮೊದಲಾದ
ಗಿಲ್ಯಾದಿನ ಎಲ್ಲಾ ಪಟ್ಟಣಗಳು, ರಬ್ಬಾ ಊರಿನ
ಪೂರ್ವದಲ್ಲಿರುವ ಅರೋಯೇರ್ ಪಟ್ಟಣದ ವರೆಗೆ

ವಿಸ್ತರಿಸಿಕೊಂಡಿರುವ ಅಮ್ಮೋನಿಯರ ಅರ್ಧರಾಜ
ಹೆಷ್ಬೋನಿನಿಂದ ರಾಮತ್‍ಮಿಚ್ಪೆ, ಬೆಟೋನೀಮ
ಎಂಬ ಊರುಗಳ ವರೆಗೂ ಇರುವ ಪ್ರದೇಶ, ಮ
ನಯಿಮಿನಿಂದ ದೆಬೀರ್ ಪ್ರಾಂತ್ಯದ ವರೆಗೂ ಇರು
ಸೀಮೆ, ಯೊರ್ದನ್ ತಗ್ಗಿನಲ್ಲಿರುವ ಬೇತ್‍ಹಾರ
ಮ್, ಬೇತ್‍ನಿಮ್ರಾ, ಸುಕ್ಕೋತ್, ಚಾಫೋನ್ ಎಂ
ಪಟ್ಟಣಗಳು, ಕಿನ್ನೆರೆತ್ ಸಮುದ್ರದ [ದಕ್ಷಿಣದಿಕ್ಕಿ
ಮೂಲೆಯ ವರೆಗೆ ವಿಸ್ತರಿಸಿಕೊಂಡಿರುವ ಯೊರ್ದ
ಪೂರ್ವಪ್ರದೇಶ ಇವುಗಳೇ. ಆ ಎಲ್ಲಾ ಗ್ರಾಮನಗ
ಗಳು ಗಾದ್ ಕುಲದ ಸ್ವಾಸ್ತ್ಯ.
ಮಹನಯಿಮಿನ [ಉತ್ತರದಲ್ಲಿದ್ದು] ಮೊದಲ
ಬಾಷಾನಿನ ಅರಸನಾದ ಓಗನ ರಾಜ್ಯವಾಗಿದ್ದ ಎಲ
ಬಾಷಾನ್ ಸೀಮೆಯನ್ನು ಮೋಶೆಯು ಮನ
ಕುಲದ ಅರ್ಧಗೋತ್ರಗಳಿಗೆ ಕೊಟ್ಟನು. ಯಾಯಿ
ರನ ಗ್ರಾಮಗಳೆನಿಸಿಕೊಳ್ಳುವ ಅರವತ್ತು ಊರುಗಳ
ಇದರಲ್ಲೇ ಇರುತ್ತವೆ. ಗಿಲ್ಯಾದಿನ ಅರ್ಧಭಾಗವ
ಓಗನ ರಾಜಧಾನಿಗಳಾಗಿದ್ದ ಬಾಷಾನಿನ ಅಷ್ಟರೋತ
ಎದ್ರೈ ಎಂಬ ಪಟ್ಟಣಗಳೂ ಮನಸ್ಸೆಯ ಮಗನಾ
ಮಾಕೀರನ ಗೋತ್ರದ ಅರ್ಧಜನರಿಗೆ ಸಿಕ್ಕಿದವು.
ಮೋಶೆಯು ಯೊರ್ದನಿನ ಆಚೆ ಯೆರಿಕೋವಿ
ಎದುರಿನಲ್ಲಿರುವ ಮೋವಾಬ್ಯರ ಬೈಲಿನಲ್ಲಿದ್ದಾಗ ಇ
ಗಳನ್ನು ಅವರಿಗೆ ಸ್ವಾಸ್ತ್ಯವಾಗಿ ಕೊಟ್ಟನು. ಆದ
ಲೇವಿಯ ಕುಲಕ್ಕೆ ಮೋಶೆಯು ಸ್ವಾಸ್ತ್ಯವನ
ಕೊಡಲಿಲ್ಲ. ಇಸ್ರಾಯೇಲ್‍ದೇವರಾದ ಯೆಹೋವ
ವಾಗ್ದಾನದಂತೆ ಆತನೇ ಅವರ ಸ್ವಾಸ್ತ್ಯವು.

ಉಳಿದ ಇಸ್ರಾಯೇಲ್ಯರಿಗೆ ಯೊರ್ದನಿನ ಪಶ್ಚಿಮದಲ್ಲಿ
ಸ್ವಾಸ್ತ್ಯವು ಸಿಕ್ಕಿದ್ದು.

ಮಹಾಯಾಜಕ ಎಲ್ಲಾಜಾರನೂ ನೂನನ ಮಗ
ಯೆಹೋಶುವನೂ ಇಸ್ರಾಯೇಲ್ ಕುಲಾಧಿಪತಿ
ಗಳೂ ಯೆಹೋವನು ಮೋಶೆಯ ಮೂಲಕ ಆಜ
ಪಿಸಿದಂತೆ [ಯೊರ್ದನಿನ ಪಶ್ಚಿಮದ] ಕಾನಾ
ದೇಶವನ್ನು ಚೀಟುಹಾಕಿ ಇಸ್ರಾಯೇಲ್ಯರ ಒಂಭತ
ವರೆ ಕುಲದವರಿಗೆ ಸ್ವಾಸ್ತ್ಯವಾಗಿ ಹಂಚಿಕೊಟ್ಟರ
ಉಳಿದ ಎರಡುವರೆ ಕುಲಗಳ ಜನರಿಗೆ ಯೊರ್ದನಿ
ಆಚೆಯಲ್ಲಿ ಮೋಶೆಯೇ ಸ್ವಾಸ್ತ್ಯವನ್ನು ಕೊಟ್ಟಿದ್ದನ
ಲೇವಿಯರಿಗೆ ಮಾತ್ರ ಕೊಡಲಿಲ್ಲ. ಯೋಸೇಫ್ಯ
ಮನಸ್ಸೆ, ಎಫ್ರಾಯಿಮ್ ಎಂಬ ಎರಡು ಕುಲ
ಳಾಗಿ ಎಣಿಸಲ್ಪಟ್ಟರಲ್ಲಾ; ಲೇವಿಯರಿಗೆ ಕೆಲ
ಪಟ್ಟಣಗಳೂ ಅವರ ದನಕುರಿಗಳಿಗೋಸ್ಕರ ಅ
ಗಳಿಗೆ ಸೇರಿದ ಹುಲ್ಲುಗಾವಲುಗಳೂ ಹೊರತಾ
ಬೇರೇನೂ ಸಿಕ್ಕಲಿಲ್ಲ. ಯೆಹೋವನು ಮೋಶ
ಆಜ್ಞಾಪಿಸಿದಂತೆಯೇ ಇಸ್ರಾಯೇಲ್ಯರು ದೇಶವನ
ಹಂಚಿಕೊಂಡರು.

ಕಾಲೇಬನ ಸ್ವಾಸ್ತ್ಯವು.

ಯೆಹೋಶುವನು ಗಿಲ್ಗಾಲಿನಲ್ಲಿದ್ದಾಗ ಯೆಹೂ
ಕುಲದವರು ಅವನ ಬಳಿಗೆ ಬಂದರು. ಅವರ
ಕೆನಿಜ್ಜೀಯನೂ ಯೆಫುನ್ನೆಯ ಮಗನೂ ಆ

ಕಾಲೇಬನು ಅವನಿಗೆ—ಯೆಹೋವನು ಕಾದೇಶ್ ಬರ್ನೇಯದಲ್ಲಿ ನಮ್ಮಿಬ್ಬರ ವಿಷಯವಾಗಿ ದೇವರ ಮನುಷ್ಯನಾದ ಮೋಶೆಗೆ ಹೇಳಿದ್ದು ನಿನಗೆ ಗೊತ್ತಿರುವದಷ್ಟೆ. ಯೆಹೋವನ ಸೇವಕನಾದ ಮೋಶೆಯು ಈ ದೇಶವನ್ನು ಸಂಚರಿಸಿನೋಡುವದಕ್ಕೋಸ್ಕರ ಕಾದೇಶ್‌ಬರ್ನೇಯದಿಂದ ನನ್ನನ್ನು ಕಳುಹಿಸಿದಾಗ ನನಗೆ ನಾಲ್ವತ್ತು ವರುಷವಾಗಿತ್ತು. ನನ್ನ ಜೊತೆಯಲ್ಲಿ ಬಂದಿದ್ದ ಸಹೋದರರು ಜನರನ್ನು ಎದೆಗೆಡಿಸಿದರು. ನಾನಾದರೋ ನನ್ನ ದೇವರಾದ ಯೆಹೋವನನ್ನೇ ಸಂಪೂರ್ಣವಾಗಿ ನಂಬಿಕೊಂಡು ಯಥಾರ್ಥವನ್ನೇ ಹೇಳಿದೆನು. ಮೋಶೆಯು ಆ ದಿವಸ—ನೀನು ಪೂರ್ಣಮನಸ್ಸಿನಿಂದ ನನ್ನ ದೇವರಾದ ಯೆಹೋವನನ್ನು ಹೊಂದಿಕೊಂಡದರಿಂದ ನೀನು ಸಂಚರಿಸಿದ ಪ್ರದೇಶವು ನಿನಗೂ ನಿನ್ನ ಸಂತಾನದವರಿಗೂ ಶಾಶ್ವತ ಸ್ವಾಸ್ತ್ಯವಾಗುವದು ಎಂದು ಪ್ರಮಾಣಮಾಡಿ ನನಗೆ ಹೇಳಿದನು. ಯೆಹೋವನು ಈ ಮಾತುಗಳನ್ನು ಮೋಶೆಗೆ ಹೇಳಿದಂದಿನಿಂದ ಇಸ್ರಾಯೇಲ್ಯರು ಅರಣ್ಯದಲ್ಲಿ ಅಲೆಯುತ್ತಿದ್ದ ವರುಷಗಳೂ ಸೇರಿ ನಾಲ್ವತ್ತೈದು ವರುಷಗಳು ದಾಟಿದವು. ಯೆಹೋವನು ತಾನು ನುಡಿದಂತೆಯೇ ಈ ಕಾಲವೆಲ್ಲಾ ನನ್ನನ್ನು ಜೀವದಿಂದುಳಿಸಿದ್ದಾನೆ. ಈಗ ನಾನು ಎಂಭತ್ತೈದು ವರುಷದವನಾಗಿದ್ದೇನೆ. ಮೋಶೆಯು ನನ್ನನ್ನು ಕಳುಹಿಸಿದಾಗ ನನಗೆಷ್ಟು ಬಲವಿತ್ತೋ ಈಗಲೂ ಅಷ್ಟಿದೆ. ಯುದ್ಧಮಾಡುವದಕ್ಕೂ ವಿಶೇಷ ಕಾರ್ಯಗಳನ್ನು ನಿರ್ವಹಿಸುವದಕ್ಕೂ ನನಗೆ ಮುಂಚಿನಂತೆಯೇ ಶಕ್ತಿಯಿರುತ್ತದೆ. ಹೀಗಿರಲಾಗಿ ಯೆಹೋವನು ಆ ದಿನದಲ್ಲಿ ಸೂಚಿಸಿದಂಥ ಈ ಪರ್ವತಪ್ರದೇಶವನ್ನು ನನಗೆ ಕೊಡು. ಇದರಲ್ಲಿ ಉನ್ನತಪುರುಷರಿರುತ್ತಾರೆಂದೂ ಇದರ ಪಟ್ಟಣಗಳು ದೊಡ್ಡವೂ ಕೋಟೆಕೊತ್ತಲುಳ್ಳವುಗಳೂ ಆಗಿವೆ ಎಂದೂ ಆ ಕಾಲದಲ್ಲಿ ನೀನು ಕೇಳಿದಿಯಲ್ಲಾ. ಅವರೆಲ್ಲರನ್ನೂ ಓಡಿಸಿಬಿಡುವದಕ್ಕೋಸ್ಕರ ಯೆಹೋವನು ತನ್ನ ಮಾತಿಗನುಸಾರವಾಗಿ ನನಗೆ ಸಹಾಯಮಾಡುವನೆಂದು ನಿರೀಕ್ಷಿಸಿಕೊಂಡಿದ್ದೇನೆ ಅಂದನು. ಆಗ ಯೆಹೋಶುವನು ಯೆಫುನ್ನೆಯ ಮಗನಾದ ಕಾಲೇಬನನ್ನು ಆಶೀರ್ವದಿಸಿ ಹೆಬ್ರೋನ್ ಪಟ್ಟಣವನ್ನು ಅವನಿಗೆ ಸ್ವಾಸ್ತ್ಯವಾಗಿ ಕೊಟ್ಟನು. ಕೆನಿಜ್ಜೀಯನಾದ ಯೆಫುನ್ನೆಯ ಮಗ ಕಾಲೇಬನು ಇಸ್ರಾಯೇಲ್‌ದೇವರಾದ ಯೆಹೋವನನ್ನು ಸಂಪೂರ್ಣವಾಗಿ ಹೊಂದಿಕೊಂಡದರಿಂದ ಹೆಬ್ರೋನ್ ಅವನಿಗೆ ಸ್ವಾಸ್ತ್ಯವಾಗಿ ಸಿಕ್ಕಿತು. ಅದು ಇಂದಿನ ವರೆಗೂ ಅವನದೇ ಆಗಿರುತ್ತದೆ. ಅದರ ಮುಂಚಿನ ಹೆಸರು ಕಿರ್ಯತ್‌ಅರ್ಬ ಎಂಬದು. ಅರ್ಬ ಎಂಬವನು ಉನ್ನತಪುರುಷರಲ್ಲಿ ಪ್ರಮುಖನು. ಯುದ್ಧವು ನಿಂತು ದೇಶದಲ್ಲಿ ಸಮಾಧಾನವುಂಟಾಯಿತು.

ಯೆಹೂದಕುಲದ ಸ್ವಾಸ್ತ್ಯವು.

15 ಎದೋಮ್ ಸೀಮೆಯೂ ಚಿನ್ ಅರಣ್ಯವೂ ಮೇರೆ
ಯಾಗಿರುವ ಕಾನಾನ್ ದೇಶದ ದಕ್ಷಿಣಭಾಗವು
ಯೆಹೂದ ಕುಲದ ಗೋತ್ರಗಳಿಗೆ ಸ್ವಾಸ್ತ್ಯವಾಗಿ
ಸಿಕ್ಕಿತು. ಅದರ ದಕ್ಷಿಣದ ಮೇರೆಯು ಲವಣ 2
ಸಮುದ್ರದ ತೆಂಕಣ ಕೊನೆಯಿಂದ ತೊಡಗಿ ಅಕ್ರಬ್ಬೀ 3
ಮೆಂಬ ಕಣಿವೆಯ ದಕ್ಷಿಣಮಾರ್ಗವಾಗಿ ಚಿನಿಗೆ
ಹೋಗುವದು. ಅಲ್ಲಿಂದ ಕಾದೇಶ್‌ಬರ್ನೇಯದ
ದಕ್ಷಿಣಮಾರ್ಗವಾಗಿ ಹೆಚ್ರೋನಿಗೂ ಅಲ್ಲಿಂದ ಏರುತ್ತಾ
ಅದ್ದಾರಿಗೂ ಹೋಗಿ ಕರ್ಕದ ಕಡೆಗೆ ತಿರುಗಿಕೊಂಡು
ಅಚ್ಮೋನಿನ ಮೇಲೆ ಐಗುಪ್ತದ ಹಳ್ಳಕ್ಕೆ ಬಂದು 4
ಸಮುದ್ರತೀರದಲ್ಲಿ ಮುಗಿಯುವದು. ಇದು [1]ಅದರ
ತೆಂಕಣ ಮೇರೆ. ಯೊರ್ದನ್ ಹೊಳೆಯ ಮುಖ 5
ದಿಂದ ಲವಣಸಮುದ್ರವೆಲ್ಲಾ ಅದರ ಪೂರ್ವದಿಕ್ಕಿನ
ಮೇರೆ. ಅದರ ಉತ್ತರದಿಕ್ಕಿನ ಮೇರೆಯು ಯೊರ್ದನ್
ಹೊಳೆ ಲವಣಸಮುದ್ರವನ್ನು ಕೂಡುವ ಸ್ಥಳದಿಂದ
ತೊಡಗಿ ಬೇತ್‌ಹೊಗ್ಲಾ, ಬೇತ್‌ಅರಾಬದ ಉತ್ತರ 6
ಪ್ರಾಂತ, ರೂಬೇನನ ಮಗನಾದ ಬೋಹನನ ಬಂಡೆ,
ಆಕೋರಿನ ತಗ್ಗು ಇವುಗಳ ಮೇಲೆ ದೆಬೀರಿಗೆ 7
ಹೋಗುತ್ತದೆ. ಅದು ಅಲ್ಲಿಂದ ಉತ್ತರಕ್ಕೆ ತಿರುಗಿ
ಕೊಂಡು ಹಳ್ಳದ ದಕ್ಷಿಣದಲ್ಲಿರುವ ಅದುಮ್ಮೀಮಿಗೆ
ಹೋಗುವ ದಾರಿಯ ಎದುರಿನಲ್ಲಿರುವ ಗಿಲ್ಗಾಲ್,
ಏನ್‌ಷೆಮೆಷ್ ಅನ್ನಿಸಿಕೊಳ್ಳುವ ಬುಗ್ಗೆ, ಏನ್
ರೋಗೆಲ್ ಇವುಗಳ ಮೇಲೆ ಬೆನ್‌ಹಿನ್ನೋಮನ 8
ತಗ್ಗಿಗೆ ಹೋಗುತ್ತದೆ. ಅಲ್ಲಿಂದ ಅದು ಯೆರೂ
ಸಲೇಮ್ ಪಟ್ಟಣವು ಕಟ್ಟಲ್ಪಟ್ಟಿರುವ ಯೆಬೂಸಿ
ಯರ ಬೆಟ್ಟದ ದಕ್ಷಿಣಮಾರ್ಗವಾಗಿ ಹಿನ್ನೋಮ್
ತಗ್ಗಿನ ಪಶ್ಚಿಮದಲ್ಲಿಯೂ ರೆಫಾಯೀಮ್ ತಗ್ಗಿನ
ಉತ್ತರದಲ್ಲಿಯೂ ಇರುವ ಬೆಟ್ಟದ ತುದಿಗೆ ಹೋಗು
ತ್ತದೆ. ಅದು ಆ ಬೆಟ್ಟದ ತುದಿಯಿಂದ ಮುಂದೆ 9
ನೆಫ್ತೋಹ ಬುಗ್ಗೆ, ಎಫ್ರೋನ್ ಬೆಟ್ಟದ ಪಟ್ಟಣಗಳು
ಇವುಗಳ ಮೇಲೆ ಕಿರ್ಯತ್ಯಾರೀಮ್ ಅನ್ನಿಸಿಕೊಳ್ಳುವ
ಬಾಲಾ ಎಂಬ ಊರಿಗೆ ಹೋಗುತ್ತದೆ. ಅಲ್ಲಿಂದ 10
ಪಶ್ಚಿಮದಲ್ಲಿರುವ ಸೇಯಿರ್ ಬೆಟ್ಟದ ಕಡೆಗೆ ತಿರುಗಿ
ಕೊಂಡು ಕೆಸಾಲೋನ್ ಅನ್ನಿಸಿಕೊಳ್ಳುವ ಯಾರೀಮ್
ಬೆಟ್ಟದ ಉತ್ತರಮಾರ್ಗವಾಗಿ ಇಳಿಯುತ್ತಾ ಬೇತ್‌ಷೆ
ಮೆಷಿಗೂ ಅಲ್ಲಿಂದ ತಿಮ್ನಾ ಊರಿಗೂ ಬಂದು
ಅಲ್ಲಿಂದ ಉತ್ತರದಿಕ್ಕಿನಲ್ಲಿರುವ ಎಕ್ರೋನ್ ಗುಡ್ಡಕ್ಕೆ 11
ಹೋಗಿ ಶಿಕ್ಕರೋನಿಗೆ ತಿರುಗಿಕೊಂಡು ಬಾಲಾ
ಗುಡ್ಡದ ಮೇಲೆ ಯಬ್ನೇಲಿಗೆ ಹೋಗಿ ಸಮುದ್ರತೀರ
ದಲ್ಲಿ ಮುಗಿಯುವದು. ಮಹಾಸಾಗರದ ತೀರವೇ 12
ಪಶ್ಚಿಮ ಮೇರೆಯು. ಯೆಹೂದ ಗೋತ್ರಗಳ ದೇಶದ
ಸುತ್ತಣ ಮೇರೆಗಳು ಇವೇ.

ಯೆಹೋಶುವನು ಯೆಹೋವನ ಅಪ್ಪಣೆಯಂತೆ 13
ಯೆಫುನ್ನೆಯ ಮಗನಾದ ಕಾಲೇಬನಿಗೆ ಯೆಹೂದ
ಕುಲದವರ ಮಧ್ಯದಲ್ಲಿಯೇ ಅನಾಕನ ತಂದೆಯಾದ
ಅರ್ಬನ ಪಟ್ಟಣವಾಗಿದ್ದ ಹೆಬ್ರೋನನ್ನು ಕೊಟ್ಟನು.
ಕಾಲೇಬನು ಶೇಷೈ, ಅಹೀಮನ್, ತಲ್ಮೈ ಎಂಬ 14
ಅನಾಕನ ಮೂರು ಮಂದಿ ಮಕ್ಕಳನ್ನು ಅಲ್ಲಿಂದ
ಹೊರಡಿಸಿಬಿಟ್ಟನು. ಅನಂತರ ಅವನು ಹೊರಟು 15
ಕಿರ್ಯತ್‌ಸೇಫೆರ್ ಅನ್ನಿಸಿಕೊಳ್ಳುತ್ತಿದ್ದ ದೆಬೀರಿನ

[1] ಮೂಲ: ನಿಮ್ಮ

16 ನಿವಾಸಿಗಳೊಡನೆ ಯುದ್ಧಮಾಡಿದನು. ಅವನು—
ಕಿರ್ಯತ್‍ಸೇಫೆರನ್ನು ಹಿಡಿದುಕೊಳ್ಳುವವನಿಗೆ ನನ್ನ
ಮಗಳಾದ ಅಕ್ಷ್ಸಾ ಎಂಬಾಕೆಯನ್ನು ಮದುವೆಮಾಡಿ
17 ಕೊಡುತ್ತೇನೆ ಅಂದನು. ಕೆನಜನ ಮಗನೂ ಕಾಲೇ
ಬನ ತಮ್ಮನೂ ಆದ ಒತ್ನೀಯೇಲನು ಅದನ್ನು
ತೆಗೆದುಕೊಳ್ಳಲು ಅವನಿಗೆ ತನ್ನ ಮಗಳಾದ ಅಕ್ಷ್ಸಾ
18 ಎಂಬಾಕೆಯನ್ನು ಮದುವೆಮಾಡಿಕೊಟ್ಟನು. ಆಕೆಯು
ಬರುತ್ತಿರುವಾಗ ತನ್ನ ತಂದೆಯ ಹತ್ತಿರ ಭೂಮಿ
ಯನ್ನು ಕೇಳಬೇಕೆಂದು ಗಂಡನನ್ನು ಪ್ರೇರೇಪಿಸಿ
ತಾನು ಕತ್ತೆಯ ಮೇಲಿಂದ ಇಳಿದಳು. ಕಾಲೇಬನು
ನಿನಗೇನು ಬೇಕೆಂದು ಆಕೆಯನ್ನು ಕೇಳಲು ಆಕೆ
19 ಯು—ನನಗೊಂದು ದಾನ ಕೊಡಬೇಕು; ನನ್ನನ್ನು
1)ಬೆಗ್ಗಾಡಿಗೆ ಕೊಟ್ಟುಬಿಟ್ಟೆಯಲ್ಲಾ; ಬುಗ್ಗೆಗಳಿರುವ
ಸ್ಥಳವನ್ನು ನನಗೆ ಕೊಡು ಅಂದಳು. ಆಗ ಅವನು
ಆಕೆಗೆ ಮೇಲಣ ಮತ್ತು ಕೆಳಗಣ ಬುಗ್ಗೆಗಳನ್ನು
ಕೊಟ್ಟನು.
20 ಯೆಹೂದಕುಲದ ಗೋತ್ರಗಳಿಗೆ ಸಿಕ್ಕಿದ ಸ್ವಾಸ್ತ್ಯದ
21 ವಿವರ—ಎದೋಮ್ ಪ್ರಾಂತವು ಮೇರೆಯಾಗಿರುವ
ದಕ್ಷಿಣಭಾಗದಲ್ಲಿ ಕಬ್ಜೇಲ್, ಏದೆರ್, ಯಾಗೂರ್,
22, 23 ಕೀನಾ, ದೀಮೋನಾ, ಅದಾದಾ, ಕೆದೆಷ್,
24 ಹಾಚೋರ್, ಇತ್ನಾನ್, ಜೀಫ್, ಟೆಲೆಮ್, ಬೆಯಾ
25 ಲೋತ್, ಹಾಚೋರ್‍ಹದತ್ತಾ, ಹಾಚೋರ್ ಎಂಬುವ
26 ಕಿರ್ಯೋತ್ ಹೆಚ್ರೋನ್, ಅಮಾಮ್, ಶೆಮ,
27 ಮೋಲಾದಾ, ಹಚರ್‍ಗದ್ದಾ, ಹೆಷ್ಮೋನ್, ಬೇತ್ಪೆ
28 ಲೆಟ್, ಹಚರ್‍ಷೂವಾಲ್, ಬೇರ್ಷೆಬ, ಬಿಜ್ಯೋತ್ಯಾ,
29, 30 ಬಾಲಾ, ಇಯ್ಯೀಮ್, ಎಚೆಮ್, ಎಲ್ತೋಲದ್,
31 ಕೆಸೀಲ್, ಹೊರ್ಮಾ, ಚಿಕ್ಲಗ್, ಮದ್ಮನ್ನಾ, ಸನ್ಸ
32 ನ್ನಾ, ಲೆಬಾವೋತ್, ಶಿಲ್ಹೀಮ್, ಅಯಿನ್, ರಿಮ್ಮೋನ್
ಎಂಬ ಇಪ್ಪತ್ತೊಂಭತ್ತು ಪಟ್ಟಣಗಳೂ ಅವುಗಳಿಗೆ
33 ಸೇರಿದ ಗ್ರಾಮಗಳೂ; ಇಳಕಲಿನ ಪ್ರದೇಶದಲ್ಲಿ
34 ಎಷ್ಟಾವೋಲ್, ಚೊರ್ಗಾ, ಅಶ್ನಾ, ಜನೋಹ, ಏಂಗ
35 ನ್ನೀಮ್, ತಪ್ಪೂಹ, ಏನಾಮ್, ಯರ್ಮೂತ್,
36 ಅದುಲ್ಲಾಮ್, ಸೋಕೋ, ಅಜೇಕಾ, ಶಾರಯಿಮ್,
ಅದೀತಯಿಮ್, ಗೆದೇರಾ, ಗೆದೆರೋತಯಿಮ್ ಎಂಬ
ಹದಿನಾಲ್ಕು ಪಟ್ಟಣಗಳೂ ಅವುಗಳ ಗ್ರಾಮಗಳೂ;
37, 38 ಚೆನಾನ್, ಹದಾಷಾ, ಮಿಗ್ದಲ್ಗಾದ್, ದಿಲಾನ್,
39 ಮಿಚ್ಪೆ, ಯೊಕ್ತೇಲ್, ಲಾಕೀಷ್, ಬೊಚ್ಕತ್,
40 ಎಗ್ಲೋನ್, ಕಬ್ಬೋನ್, ಲಹ್ಮಾಸ್, ಕಿತ್ಲೀಷ್,
41 ಗೆದೇರೋತ್, ಬೇತ್‍ದಾಗೋನ್, ನಾಮಾ, ಮಕ್ಕೇದಾ
ಎಂಬ ಹದಿನಾರು ಪಟ್ಟಣಗಳೂ ಅವುಗಳ ಗ್ರಾಮ
42, 43 ಗಳೂ; ಲಿಬ್ನಾ, ಎತೆರ್, ಆಷಾನ್, ಇಪ್ತಾಹ,
44 ಅಶ್ನಾ, ನೆಚೀಬ್, ಕೆಯಿಲಾ, ಅಕ್ಜೀಬ್, ಮಾರೇ
ಷಾ ಎಂಬ ಒಂಭತ್ತು ಪಟ್ಟಣಗಳೂ ಅವುಗಳ ಗ್ರಾಮ
45 ಗಳೂ; ಎಕ್ರೋನ್ ಸಂಸ್ಥಾನವೂ ಅದಕ್ಕೆ ಸೇರಿದ
46 ಗ್ರಾಮನಗರಗಳೂ; ಎಕ್ರೋನಿನಿಂದ ಸಮುದ್ರದ
ವರೆಗೆ ಅಷ್ಡೋದಿನ ಬಳಿಯಲ್ಲಿರುವ ಸಮಸ್ತಗ್ರಾಮ
47 ಗಳು; ಅಷ್ಡೋದ್ ಸಂಸ್ಥಾನವೂ ಅದರ ಗ್ರಾಮ
ನಗರಗಳೂ; ಗಾಜಾ ಸಂಸ್ಥಾನವೂ ಐಗುಪ್ತಹಳ್ಳದ

ಉತ್ತರದಲ್ಲಿ ಮತ್ತು ಮಹಾಸಾಗರತೀರದಲ್ಲಿ ಇರ
ಅದರ ಎಲ್ಲಾ ಗ್ರಾಮನಗರಗಳೂ; ಬೆಟ್ಟದ ಮೇ
ಪ್ರದೇಶದಲ್ಲಿರುವ ಶಾಮೀರ್, ಯತ್ತೀರ್, ಸೋಕೋ
ದನ್ನಾ, ದೆಬೀರ್ ಎಂಬ ಕಿರ್ಯತ್‍ಸನ್ನಾ, ಅನಾಬ್,
ಎಷ್ಟೆಮೋ, ಆನೀಮ್, ಗೋಷೆನ್, ಹೋಲೋ
ಗಿಲೋ ಎಂಬ ಹನ್ನೊಂದು ಪಟ್ಟಣಗಳೂ ಅವು
ಗ್ರಾಮಗಳೂ; ಅರಬ್, ದೂಮಾ, ಎಷಾ
ಯಾನೂಮ್, ಬೇತ್‍ತಪ್ಪೂಹ, ಅಫೇಕಾ, ಹುಮ್ಟಾ,
ಹೆಬ್ರೋನೆಂಬ ಕಿರ್ಯತ್‍ಅರ್ಬ, ಚೀಯೋರ್ ಎ
ಒಂಭತ್ತು ಪಟ್ಟಣಗಳೂ ಅವುಗಳ ಗ್ರಾಮಗಳ
ಮಾವೋನ್, ಕರ್ಮೆಲ್, ಜೀಫ್, ಯುಟ
ಇಜ್ರೇಲ್, ಯೊಗ್ದೆಯಾಮ್, ಜನೋಹ, ಕಯಿ
ನ್, ಗಿಬೆಯಾ, ತಿಮ್ನಾ ಎಂಬ ಹತ್ತು ಪಟ್ಟಣಗಳ
ಅವುಗಳ ಗ್ರಾಮಗಳೂ; ಹಲ್ಹೂಲ್, ಬೇತ್‍ಚೂ
ಗೆದೋರ್, ಮಾರಾತ್, ಬೇತನೋತ್, ಎಲ್ತೆಕೋ
ಎಂಬ ಆರು ಪಟ್ಟಣಗಳೂ ಅವುಗಳ ಗ್ರಾಮಗಳ
ಕಿರ್ಯತ್ಯಾರೀಮ್ ಅನ್ನಿಸಿಕೊಳ್ಳುವ ಕಿರ್ಯ
ಬಾಳ್, ರಬ್ಬಾ ಎಂಬ ಎರಡು ಪಟ್ಟಣಗಳೂ ಅವು
ಗ್ರಾಮಗಳೂ; ಅರಣ್ಯದಲ್ಲಿರುವ ಬೇತ್‍ಅರಾಬ
ಮಿದ್ದೀನ್, ಸೆಕಾಕಾ, ನಿಬ್ಷಾನ್, ಉಪ್ಪಿನಪಟ್ಟ
ಏಂಗೆದೀ ಎಂಬ ಆರು ಪಟ್ಟಣಗಳೂ ಅವುಗಳ ಗ್ರಾ
ಗಳೂ; ಯೆರೂಸಲೇಮಿನಲ್ಲಿ ವಾಸವಾಗಿದ್ದ ಯೆಬೂ
ಯರನ್ನು ಹೊರಡಿಸುವದು ಯೆಹೂದಕುಲದವರಿ
ಆಗದೆ ಹೋಯಿತು. ಆದದರಿಂದ ಅವರು ಇಂ
ವರೆಗೂ ಯೆಹೂದಕುಲದವರೊಡನೆ ಯೆರೂಸಲೇ
ನಲ್ಲೇ ವಾಸವಾಗಿದ್ದಾರೆ.

ಎಫ್ರಾಯಿಮ್ ಕುಲದ ಸ್ವಾಸ್ತ್ಯವು.

ಯೋಸೇಫನ ವಂಶದವರಿಗೆ ದೊರಕಿದ ಸ್ವಾಸ್ತ್ಯದ
ಮೇರೆಯು ಯೆರಿಕೋವಿನ ಬಳಿಯಲ್ಲಿ ಯೊರ್ದನ್
ತೀರದಿಂದ ತೊಡಗಿ ಯೆರಿಕೋವಿನ ಪೂರ್ವದಲ್ಲಿ
ಹಳ್ಳ, ಯೆರಿಕೋವಿಗೂ ಬೇತೇಲಿಗೂ ನಡುವೆ ಇರು
ಬೆಟ್ಟದ ಸೀಮೆಯ ಅರಣ್ಯ, ಬೇತೇಲ್ ಇವು
ಮೇಲೆ ಲೂಜಿಗೆ ಹೋಗುತ್ತದೆ. ಅಲ್ಲಿಂದ ಅಕಿ
ಯರ ಮೇರೆಯನ್ನು ಅನುಸರಿಸಿ ಅಟಾರೋ
ಹೋಗುತ್ತದೆ. ಅಲ್ಲಿಂದ ಇಳಿದು ಪಶ್ಚಿಮದಿಕ್ಕಿನ
ರುವ ಯಫ್ಲೇಟ್ಯರ ಪ್ರಾಂತವನ್ನು ಮುಟ್ಟಿ ಕೆಳಗಿ
ಬೇತ್‍ಹೋರೋನಿನ ಮೇಲೆ ಗೆಜೆರಿಗೆ ಹೋ
ಸಮುದ್ರತೀರದಲ್ಲಿ ಮುಗಿಯುತ್ತದೆ. ಇದು ಯೋ
ಫನ ಮಕ್ಕಳಾದ ಮನಸ್ಸೆ ಎಫ್ರಾಯಿಮ್ ಎಂ
ಕುಲಗಳಿಗೆ ಸಿಕ್ಕಿದ ಸ್ವಾಸ್ತ್ಯದ ಮೇರೆಯು.
ಎಫ್ರಾಯಿಮ್ ಗೋತ್ರಗಳ ದೇಶದ [ದಕ್ಷಿ
ದಿಕ್ಕಿನ] ಮೇರೆಯು ಅಟಾರೋತದ್ದಾರಿನ ಪೂ
ದಿಕ್ಕಿನಿಂದ ತೊಡಗಿ ಮೇಲಿನ ಬೇತ್‍ಹೋರೋನಿ
ಮೇಲೆ ಸಮುದ್ರತೀರಕ್ಕೆ ಹೋಗಿ ಅಲ್ಲಿ ಮುಗಿ
ತ್ತದೆ. ಅದರ ಉತ್ತರದಿಕ್ಕಿನ ಮೇರೆಯು ಮಿಕ್ಮೆತಾ

1) ಮೂಲ: ನೆಗೆಬ್ ಅಂದರೆ ದಕ್ಷಿಣಪ್ರಾಂತ.

ಎಂಬಲ್ಲಿ ತೊಡಗಿ ಪೂರ್ವಕ್ಕೆ ತಿರುಗಿಕೊಂಡು ತಾನತ್
7 ಶೀಲೋ ಎಂಬಲ್ಲಿಗೆ ಹೋಗುತ್ತದೆ. ಅಲ್ಲಿಂದ
ಯಾನೋಹ ಊರಿನ ಪೂರ್ವಮಾರ್ಗವಾಗಿ ಅಟಾ
ರೋತ್, ನಾರಾ ಎಂಬ ಊರುಗಳ ಮೇಲೆ ಇಳಿ
ಯುತ್ತಾ ಯೆರಿಕೋ ಪ್ರಾಂತಕ್ಕೆ ತಗಲಿ ಯೊರ್ದನ್
8 ಹೊಳೆಯ ತೀರದಲ್ಲಿ ಮುಗಿಯುತ್ತದೆ. ಅದರ
ಮೇರೆಯು ತಪ್ಪೂಹದಿಂದ ಪಶ್ಚಿಮ ಕಡೆಗೆ ಹೋಗುವ
ಕಾನಾ ಹಳ್ಳವನ್ನು ಅನುಸರಿಸಿ ಸಮುದ್ರತೀರದಲ್ಲಿ
ಮುಗಿಯುತ್ತದೆ. ಎಫ್ರಾಯಿಮ್ ಕುಲದ ಗೋತ್ರ
9 ಗಳಿಗೆ ಸಿಕ್ಕಿದ ಸ್ವಾಸ್ತ್ಯವು ಇದೇ. ಇದಲ್ಲದೆ ಎಫ್ರಾ
ಯಿಮ್ ಕುಲದವರಿಗೆ ಮನಸ್ಸೆಕುಲದವರ ಮಧ್ಯ
ದಲ್ಲಿ ಪ್ರತ್ಯೇಕವಾದ ಕೆಲವು ಪಟ್ಟಣಗಳೂ ಅವುಗಳ
10 ಗ್ರಾಮಗಳೂ ದೊರಕಿದವು. ಅವರು ಗೆಜೆರಿನಲ್ಲಿದ್ದ
ಕಾನಾನ್ಯರನ್ನು ಹೊರಡಿಸದೆ ಇದ್ದದರಿಂದ ಅವರು
ಇಂದಿನ ವರೆಗೂ ಎಫ್ರಾಯಿಮ್ಯರ ಮಧ್ಯದಲ್ಲಿ
ದಾಸತ್ವದಲ್ಲಿದ್ದುಕೊಂಡು ಅವರಿಗೋಸ್ಕರ ಕೆಲಸ
ಮಾಡುತ್ತಾರೆ.

### ಮನಸ್ಸೆಕುಲದ ಸ್ವಾಸ್ತ್ಯತ್ತೆ.

17 ಯೋಸೇಫನ ಚೊಚ್ಚಲ ಮಗನಾದ ಮನಸ್ಸೆಯ
ವಂಶದವರಿಗೆ ಸಿಕ್ಕಿದ ಸ್ವಾಸ್ತ್ಯದ ವಿವರ. ಮನ
ಸ್ಸೆಯ ಹಿರೀಮಗನೂ ಗಿಲ್ಯಾದನ ತಂದೆಯೂ
ಆಗಿರುವ ಮಾಕೀರನು ಯುದ್ಧವೀರನಾದದರಿಂದ
ಅವನಿಗೆ ಗಿಲ್ಯಾದ್, ಬಾಷಾನ್ ಎಂಬ ಪ್ರಾಂತಗಳು
2 ಸಿಕ್ಕಿದವು. ಯೋಸೇಫನ ಮಗನಾಗಿರುವ ಮನ
ಸ್ಸೆಯ ಉಳಿದ ಗಂಡು ಮಕ್ಕಳಾದ ಅಬೀಯೆಜೆರ್,
ಹೇಲೆಕ್, ಅಸ್ರೀಯೇಲ್, ಶೆಕೆಮ್, ಹೇಫೆರ್, ಶೆಮೀ
ದಾ ಎಂಬವರ ವಂಶದವರಿಗೆ [ಯೊರ್ದನಿನ ಈಚೆ
3 ಯಲ್ಲಿ] ಸ್ವಾಸ್ತ್ಯವು ಸಿಕ್ಕಿತು. ಮನಸ್ಸೆಗೆ ಹುಟ್ಟಿದ
ಮಾಕೀರನ ಮರಿಮಗನೂ ಗಿಲ್ಯಾದನ ಮೊಮ್ಮಗನೂ
ಹೇಫೆರನ ಮಗನೂ ಆದ ಚಲ್ಪಹಾದನಿಗೆ ಹೆಣ್ಣು
ಮಕ್ಕಳು ಹುಟ್ಟಿದರೇ ಹೊರತು ಗಂಡು ಮಕ್ಕಳು
ಹುಟ್ಟಲಿಲ್ಲ. ಮಹ್ಲಾ, ನೋವಾ, ಹೊಗ್ಲಾ, ಮಿಲ್ಕಾ,
4 ತಿರ್ಚಾ ಎಂಬವರು ಅವನ ಹೆಣ್ಣುಮಕ್ಕಳು. ಇವರು
ಮಹಾಯಾಜಕನಾದ ಎಲ್ಲಾಜಾರ್ ನೂನನ ಮಗ
ನಾದ ಯೆಹೋಶುವ, ಕುಲಾಧಿಪತಿಗಳು ಇವರ
ಬಳಿಗೆ ಬಂದು—ನಮ್ಮ ಅಣ್ಣತಮ್ಮಂದಿರ ಮಧ್ಯದಲ್ಲಿ
ನಮಗೆ ಪಾಲುಕೊಡಬೇಕೆಂದು ಯೆಹೋವನು ಮೋ
ಶೆಗೆ ಆಜ್ಞಾಪಿಸಿದನಲ್ಲಾ ಎಂದು ಹೇಳಲು ಯೆಹೋ
ಶುವನು ಯೆಹೋವನ ಅಪ್ಪಣೆಯಂತೆ ಅವರಿಗೆ ಅವರ
ತಂದೆಯ ಅಣ್ಣತಮ್ಮಂದಿರ ಮಧ್ಯದಲ್ಲಿ ಸ್ವಾಸ್ತ್ಯವನ್ನು
5 ಕೊಟ್ಟನು. ಮನಸ್ಸೆಕುಲದ ಹೆಣ್ಣುಮಕ್ಕಳಿಗೆ
ಗಂಡುಮಕ್ಕಳ ಸಂಗಡ ಸ್ವಾಸ್ತ್ಯದೊರಕಿದ್ದರಿಂದ
ಮನಸ್ಸೆಯವರಿಗೆ ಯೊರ್ದನಿನ ಆಚೆಯಿದ್ದ ಬಾಷಾ
ನ್ ಗಿಲ್ಯಾದ್ ಪ್ರಾಂತಗಳ ಹೊರತು ಈಚೆಯಲ್ಲಿಯೂ
6 ಹತ್ತು ಪಾಲು ಸಿಕ್ಕಿದವು. ಗಿಲ್ಯಾದ್ ಸೀಮೆಯು
ಮನಸ್ಸೆಯ ಉಳಿದ ಗೋತ್ರಗಳಿಗೆ ಸಿಕ್ಕಿತು.
7 ಮನಸ್ಸೆಯವರ ಸ್ವಾಸ್ತ್ಯದ ಮೇರೆಯು ಆಶೇರ್
ಊರಿನಿಂದ ತೊಡಗಿ ಶೆಕೆಮಿನ ಪೂರ್ವದಲ್ಲಿರುವ
ಮಿಕ್ಮೆತಾತಿನ ಮೇಲೆ ದಕ್ಷಿಣದಲ್ಲಿರುವ ತಪ್ಪೂಹದ
ಬುಗ್ಗೆಗೆ ಹೋಗುತ್ತದೆ. ತಪ್ಪೂಹ ಪಟ್ಟಣಕ್ಕೆ ಸೇರುವ 8
ಭೂಮಿಯು ಮನಸ್ಸೆಯವರದು; ಆದರೆ ಅವರ
ಮೇರೆಗೆ ಹೊಂದಿರುವ ತಪ್ಪೂಹ ಪಟ್ಟಣವು ಎಫ್ರಾ
ಯಿಮ್ಯರದು. ಅಲ್ಲಿಂದ ಮೇರೆಯು ಇಳಿಯುತ್ತಾ 9
ಕಾನಾ ಹಳ್ಳದ ದಕ್ಷಿಣಕ್ಕೆ ಹೋಗುತ್ತದೆ. ಅಲ್ಲಿ ಮನ
ಸ್ಸೆಯವರಿಗಿರುವಂತೆ ಎಫ್ರಾಯಿಮ್ಯರಿಗೂ ಕೆಲವು
ಪಟ್ಟಣಗಳಿರುತ್ತವೆ. ಮನಸ್ಸೆಯವರ ಮುಂದಿನ ಮೇ
ರೆಯು ಹಳ್ಳದ ಉತ್ತರತೀರವನ್ನನುಸರಿಸಿ ಹೋಗಿ
ಸಮುದ್ರದ ದಡದಲ್ಲಿ ಮುಗಿಯುವದು. ಹಳ್ಳದ 10
ದಕ್ಷಿಣತೀರವು ಎಫ್ರಾಯಿಮ್ಯರದು; ಉತ್ತರತೀರವು
ಮನಸ್ಸೆಯವರದು. ಮಹಾಸಾಗರವೇ ಇವರ ಪಶ್ಚಿ
ಮದ ಮೇರೆ. ಉತ್ತರಕ್ಕೆ ಆಶೇರ್ ಕುಲದವರ ಪ್ರಾಂತ
ವೂ ಪೂರ್ವಕ್ಕೆ ಇಸ್ಸಾಕಾರ್ ಕುಲದವರ ದೇಶವೂ
ಇರುತ್ತವೆ.

ಇದಲ್ಲದೆ ಮನಸ್ಸೆಯವರಿಗೆ ಇಸ್ಸಾಕಾರ್, ಆಶೇರ್ 11
ಎಂಬವರ ಪ್ರಾಂತಗಳಲ್ಲಿ ಬೇತ್‌ಷೆಯಾನ್, ಇಬ್ಲೆ
ಯಾಮ್, ದೋರ್ ಎಂಬ ಪಟ್ಟಣಗಳೂ ಅವುಗಳ
ಗ್ರಾಮಗಳೂ ದುರ್ಗತ್ರಯವಾದ ಎಂದೋರ್, ತಾನ
ಕ್, ಮೆಗಿದ್ದೋ ಎಂಬ ಪಟ್ಟಣಗಳೂ ಅವುಗಳಿಗೆ
ಸೇರಿದ ಊರುಗಳೂ ಸಿಕ್ಕಿದವು. ಆದರೆ ಮನಸ್ಸೆ 12
ಯವರು ಆ ಪಟ್ಟಣಗಳ ನಿವಾಸಿಗಳನ್ನು ಹೊರಡಿಸ
ಲಾರದವರಾದರು. ಕಾನಾನ್ಯರಿಗೆ ಅಲ್ಲಿ ವಾಸಿಸು
ವದಕ್ಕೆ ಅನುಕೂಲವಾಯಿತು. ಇಸ್ರಾಯೇಲ್ಯರು ಬಲ 13
ಗೊಂಡ ಮೇಲೆ ಕಾನಾನ್ಯರನ್ನು ಹೊರಡಿಸದೆ ಅವ
ರನ್ನು ದಾಸತ್ವಕ್ಕೆ ಹಚ್ಚಿದರು.

ಆದರೆ ಯೋಸೇಫ್ಯರು ಯೆಹೋಶುವನಿಗೆ—ನೀನು 14
ಚೀಟುಹಾಕಿ ನಮಗೆ ಒಂದೇ ಭಾಗವನ್ನು ಕೊಟ್ಟ
ದ್ದೇಕೆ? ಯೆಹೋವನು ನಮ್ಮನ್ನು ಇಂದಿನ ವರೆಗೂ
ಆಶೀರ್ವದಿಸಿದ್ದರಿಂದ ನಾವು ಮಹಾಜನಾಂಗವಾಗಿ
ದ್ದೇವಲ್ಲಾ ಎಂದು ಹೇಳಲು ಯೆಹೋಶುವನು ಅವ 15
ರಿಗೆ—ಮಹಾಜನಾಂಗವಾದ ನಿಮಗೆ ಎಫ್ರಾಯಿಮ್
ಬೆಟ್ಟದ ಸೀಮೆ ಸಾಲದಿದ್ದರೆ ಪೆರಿಜ್ಜೀಯರ ಮತ್ತು
ರೆಫಾಯರ ಸೀಮೆಗಳಿಗೆ ಹೋಗಿ ಅಲ್ಲಿನ ಕಾಡು
ಕಡಿದು ಸ್ಥಳಮಾಡಿಕೊಳ್ಳಿರಿ ಅಂದನು. ಅವರು ತಿರಿಗಿ 16
ಯೆಹೋಶುವನಿಗೆ—ನಮ್ಮ ಪರ್ವತಪ್ರದೇಶವು ನಮಗೆ
ಸಾಲುವದಿಲ್ಲ; ಬೇತ್‌ಷೆಯಾನ್ ಮತ್ತು ಅದಕ್ಕೆ
ಸೇರಿದ ಊರುಗಳಿರುವ ತಗ್ಗಿನಲ್ಲಿಯೂ ಇಜ್ರೇಲಿನ
ತಗ್ಗಿನಲ್ಲಿಯೂ ವಾಸಿಸುವ ಕಾನಾನ್ಯರೆಲ್ಲರಿಗೆ ಕಬ್ಬಿ
ಣದ ರಥಗಳಿವೆ ಅನ್ನಲು ಅವನು ಯೋಸೇಫ್ಯರಾದ 17
ಎಫ್ರಾಯಿಮ್ ಮನಸ್ಸೆ ಕುಲಗಳ ಜನರಿಗೆ—ನೀವು
ಮಹಾಜನಾಂಗವೂ ಬಹುಬಲವುಳ್ಳವರೂ ಆಗಿರು
ವದು ನಿಜ; ನೀವು ಒಂದು ಭಾಗಕ್ಕಿಂತ ಹೆಚ್ಚು ತೆಗೆದು
ಕೊಳ್ಳಬಹುದಲ್ಲಾ! ಆ ಬೆಟ್ಟದ ಸೀಮೆಯನ್ನು ನಿಮಗೆ 18
ಕೊಟ್ಟಿರುತ್ತೇನೆ. ಅದರಲ್ಲಿ ಕಾಡುಗಳಿದ್ದರೂ ನೀವು
ಅವುಗಳನ್ನು ಕಡಿದುಹಾಕಬಹುದು. ಅದಕ್ಕೆ ಸೇರಿ
ರುವ ಬೈಲೂ ನಿಮ್ಮದೇ. ಕಾನಾನ್ಯರು ಬಲಿಷ್ಠರಾಗಿ
ಕಬ್ಬಿಣದ ರಥಗಳುಳ್ಳವರಾಗಿದ್ದರೂ ನೀವು ಅವರನ್ನು
ಹೊರಡಿಸುವಿರಿ ಎಂದು ಉತ್ತರಕೊಟ್ಟನು.

ಉಳಿದ ಪ್ರದೇಶಗಳ ಪಟ್ಟಿಯನ್ನು ಮಾಡಿದ್ದು.

18 ದೇಶವೆಲ್ಲಾ ವಶವಾದ ಮೇಲೆ ಇಸ್ರಾಯೇಲ್
ಸಮೂಹದ ಎಲ್ಲಾ ಜನರೂ ಶೀಲೋವಿನಲ್ಲಿ ಕೂಡಿ
ಬಂದು ದೇವದರ್ಶನದ ಗುಡಾರವನ್ನು ನಿಲ್ಲಿಸಿದರು.
2 ಇಸ್ರಾಯೇಲ್ಯರಲ್ಲಿ ಇನ್ನೂ ಏಳು ಕುಲಗಳಿಗೆ
3 ಪಾಲುಸಿಕ್ಕರಲಿಲ್ಲ. ಆಗ ಯೆಹೋಶುವನು ಇಸ್ರಾ
ಯೇಲ್ಯರಿಗೆ—ನಿಮ್ಮ ಪಿತೃಗಳ ದೇವರಾದ ಯೆಹೋ
ವನು ನಿಮಗೆ ಕೊಟ್ಟ ದೇಶವನ್ನು ಸ್ವಾಧೀನಮಾಡಿ
4 ಕೊಳ್ಳುವದರಲ್ಲಿ ಇನ್ನೆಷ್ಟು ತಡಮಾಡುತ್ತೀರಿ? ಪ್ರತಿ
ಯೊಂದು ಕುಲದಿಂದ ಮೂರು ಮೂರು ಜನರನ್ನು
ನೇಮಿಸಿರಿ; ನಾನು ಅವರನ್ನು ಕಳುಹಿಸುವೆನು. ಅವರು
ಹೋಗಿ ದೇಶದಲ್ಲೆಲ್ಲಾ ಸಂಚರಿಸಿ ತಮ್ಮ ತಮ್ಮ ಕುಲಗಳಿ
ಗನುಸಾರವಾಗಿ ಎಲ್ಲಾ ಪ್ರದೇಶಗಳ ಪಟ್ಟಿಯನ್ನು ಬರೆ
5 ದುಕೊಂಡು ನನ್ನ ಬಳಿಗೆ ಬರಲಿ. ತರುವಾಯ ಅವರು
ಏಳು ಪಾಲುಗಳನ್ನು ಮಾಡಿ ತಮ್ಮತಮ್ಮೊಳಗೆ ಹಂಚಿ
ಕೊಳ್ಳಲಿ. ದಕ್ಷಿಣದಲ್ಲಿ ಯೆಹೂದಕುಲದವರಿಗೂ
ಉತ್ತರದಲ್ಲಿ ಯೋಸೇಫನ ಕುಲದವರಿಗೂ ಸ್ವಾಸ್ತ್ಯವು
6 ಸಿಕ್ಕಿರುತ್ತದೆ. ಅದು ಅವರಿಗೇ ಇರಲಿ. ಅವರು
ಪಟ್ಟಿಯಲ್ಲಿ ದೇಶವನ್ನು ಏಳು ಪಾಲು ಮಾಡಿ ಇಲ್ಲಿ
ನನ್ನ ಬಳಿಗೆ ತೆಗೆದುಕೊಂಡು ಬರಲಿ; ನಾನು ನಿಮ
ಗೋಸ್ಕರ ನಮ್ಮ ದೇವರಾದ ಯೆಹೋವನ ಸನ್ನಿಧಿ
7 ಯಲ್ಲಿ ಚೀಟುಹಾಕುವೆನು. ಲೇವಿಯರಿಗೆ ನಿಮ್ಮ
ಸಂಗಡ ಪಾಲುಸಿಕ್ಕುವದಿಲ್ಲ; ಯೆಹೋವನ ಯಾಜಕ
ಸೇವೆಯೇ ಅವರ ಸ್ವಾಸ್ತ್ಯವಾಗಿದೆ. ಗಾದ್ ರೂಬೇನ್
ಕುಲಗಳಿಗೂ ಮನಸ್ಸೆಕುಲದ ಅರ್ಧಜನರಿಗೂ
ಯೊರ್ದನಿನ ಪೂರ್ವದಿಕ್ಕಿನಲ್ಲಿ ಯೆಹೋವನ ಸೇವಕ
ನಾದ ಮೋಶೆಯಿಂದ ಸ್ವಾಸ್ತ್ಯವು ಸಿಕ್ಕಿತು ಅಂದನು.
8 ದೇಶದ ಪಟ್ಟಿಯನ್ನು ಮಾಡತಕ್ಕ ಜನರು ಹೊರಡು
ವದಕ್ಕಿಂತ ಮುಂಚೆ ಯೆಹೋಶುವನು ಅವರಿಗೆ—
ಹೋಗಿ ದೇಶದಲ್ಲೆಲ್ಲಾ ಸಂಚರಿಸಿ ಪಟ್ಟಿಮಾಡಿಕೊಂಡು
ಶೀಲೋವಿಗೆ ನನ್ನ ಬಳಿಗೆ ಬನ್ನಿರಿ; ನಾನು ಯೆಹೋ
ವನ ಮುಂದೆ ನಿಮಗೋಸ್ಕರ ಚೀಟುಹಾಕುವೆನು
9 ಎಂದು ಹೇಳಿ ಕಳುಹಿಸಿದನು. ಆ ಜನರು ಹೊರಟು
ದೇಶದಲ್ಲೆಲ್ಲಾ ಸಂಚರಿಸಿ ಒಂದು ಪುಸ್ತಕದಲ್ಲಿ ಅದರ
ಗ್ರಾಮನಗರಗಳನ್ನೆಲ್ಲಾ ಬರೆದು ಏಳು ಭಾಗಗಳನ್ನು
ಮಾಡಿ ಶೀಲೋವಿನಲ್ಲಿದ್ದ ಯೆಹೋಶುವನ ಪಾಳೆ
10 ಯಕ್ಕೆ ಹಿಂದಿರುಗಿ ಬಂದರು. ಯೆಹೋಶುವನು
ಶೀಲೋವಿನಲ್ಲಿಯೇ ಯೆಹೋವನ ಮುಂದೆ ಅವರಿ
ಗೋಸ್ಕರ ಚೀಟುಹಾಕಿ ದೇಶವನ್ನು ಅವರ ಶಾಖೆ
ಗಳಿಗೆ ಹಂಚಿಕೊಟ್ಟನು.

ಬೆನ್ಯಾಮೀನ್ಯರ ಸ್ವಾಸ್ತ್ಯವು.

11 ಚೀಟು ಮೊದಲು ಬೆನ್ಯಾಮೀನ್ ಕುಲದವರಿಗೆ
ಬಿದ್ದಿತು. ಅವರ ಗೋತ್ರಗಳಿಗೆ ಸಿಕ್ಕಿದ ಸ್ವಾಸ್ತ್ಯವು
ಯೆಹೂದ್ಯರ ಮತ್ತು ಯೋಸೇಫ್ಯರ ಪ್ರಾಂತಗಳ
12 ಮಧ್ಯದಲ್ಲಿರುತ್ತದೆ. ಅದರ ಉತ್ತರದಿಕ್ಕಿನ ಮೇರೆಯು
ಯೊರ್ದನ್ ಹೊಳೆಯಿಂದ ತೊಡಗಿ ಯೆರಿಕೋವಿನ
ಉತ್ತರದಲ್ಲಿರುವ ಗುಡ್ಡದ ಮೇಲಿನಿಂದ ಪಶ್ಚಿಮಕ್ಕೆ
ಹೋಗಿ ಗಟ್ಟಾಹತ್ತಿ ಬೇತಾವೆನಿನ ಬೈಲಿನಲ್ಲಿ ಮುಗಿ
ಯುತ್ತದೆ. ಅಲ್ಲಿಂದ ದಕ್ಷಿಣಕ್ಕೆ ತಿರುಗಿಕೊಂಡು ಈಗ 13
ಬೇತೇಲ್ ಅನ್ನಿಸಿಕೊಳ್ಳುವ ಲೂಜ್ ಊರಿರುವ
ಬೆಟ್ಟಕ್ಕೆ ಹೋಗಿ ಅಲ್ಲಿಂದ ಇಳಿದು ಅಟಾರೋತ
ದ್ದಾರಿನ ಮೇಲೆ ಕೆಳಗಿನ ಬೇತ್‌ಹೋರೋನಿನ ಬಳಿ
ಯಲ್ಲಿರುವ ಬೆಟ್ಟಕ್ಕೆ ಹೋಗುತ್ತದೆ. ಮೇರೆಯು 14
ಪಶ್ಚಿಮದ ಮೂಲೆಯಾಗಿರುವ ಈ ಬೆಟ್ಟದಿಂದ ಅದು
ದಕ್ಷಿಣಕ್ಕೆ ತಿರುಗಿಕೊಂಡು ಕಿರ್ಯತ್‌ಬಾಳ್ ಅನ್ನಿಸಿ
ಕೊಳ್ಳುತ್ತಿದ್ದ ಯೆಹೂದ್ಯರ ಕಿರ್ಯತ್ಯಾರೀಮ್ ಎಂಬ
ಪಟ್ಟಣದಲ್ಲಿ ಮುಗಿಯುತ್ತದೆ. ಇದೇ ಅವರ ಪಡು
ವಣ ಮೇರೆ. ದಕ್ಷಿಣದಿಕ್ಕಿನ ಮೇರೆಯು ಪಡುವಣ 15
ಮೂಲೆಯಾಗಿರುವ ಕಿರ್ಯತ್ಯಾರೀಮಿನ ಪ್ರಾಂತ
ದಿಂದ ತೊಡಗಿ ನೆಫ್ತೋಹ ಬುಗ್ಗೆಯ ಮೇಲೆ ಬೆನ್ 16
ಹಿನ್ನೋಮ್ ತಗ್ಗಿನ ಈಚೆಗೂ ರೆಫಾಯಿಮ್ ತಗ್ಗಿನ
ಉತ್ತರದಲ್ಲಿಯೂ ಇರುವ ಬೆಟ್ಟದ ಅಂಚಿಗೆ ಹೋಗಿ
ಅಲ್ಲಿಂದ ಯೆಬೂಸಿಯರ ಬೆಟ್ಟದ ದಕ್ಷಿಣದಲ್ಲಿದ್ದ
ಬೆನ್‌ಹಿನ್ನೋಮ್ ತಗ್ಗಿನ ಮಾರ್ಗವಾಗಿ ಏನ್‌ರೋಗೆ
ಲಿಗೆ ಬರುತ್ತದೆ. ಅದು ಅಲ್ಲಿಂದ ಉತ್ತರಕ್ಕೆ ತಿರುಗಿ 17
ಕೊಂಡು ಇಳಿಯುತ್ತಾ ಏನ್‌ಷೆಮೆಸ್, ಅದುಮ್ಮೀಮಿನ
ದಾರಿಯ ಎದುರಿನಲ್ಲಿರುವ ಗೆಲೀಲೋತ್, ರೂಬೇನನ
ಮಗನಾದ ಬೋಹನನ ಬಂಡೆ, ಅರಾಬದ ಉತ್ತರ 18
ದಲ್ಲಿರುವ ಬೆಟ್ಟ ಇವುಗಳ ಮೇಲೆ ಅರಾಬಾ ಎಂಬ
ತಗ್ಗಾದ ಪ್ರದೇಶಕ್ಕೆ ಹೋಗುತ್ತದೆ. ಅಲ್ಲಿಂದ 19
ಮೇರೆಯು ಬೇತ್‌ಹೊಗ್ಲಾ ಎಂಬ ಊರಿನ ಉತ್ತರ
ದಲ್ಲಿರುವ ಗುಡ್ಡದ ಮೇಲೆ ಲವಣಸಮುದ್ರದ ಬಡ
ಗಣ ಮೂಲೆಗೆ ಹೋಗಿ ಯೊರ್ದನ್ ಹೊಳೆಯು ಆ
ಸಮುದ್ರಕ್ಕೆ ಕೂಡುವ ಸ್ಥಳದಲ್ಲಿ ಮುಗಿಯುತ್ತದೆ.
ಇದೇ ದಕ್ಷಿಣದಿಕ್ಕಿನ ಮೇರೆಯು. ಯೊರ್ದನ್ 20
ಹೊಳೆಯೇ ಅವರ ಪೂರ್ವದಿಕ್ಕಿನ ಮೇರೆ. ಬೆನ್ಯಾ
ಮೀನ್ ಗೋತ್ರಗಳ ಸ್ವಾಸ್ತ್ಯದ ಸುತ್ತಣ ಮೇರೆಯು
ಇದೇ. ಬೆನ್ಯಾಮೀನ್ ಗೋತ್ರಗಳಿಗೆ ದೊರಕಿದ 21
ಪಟ್ಟಣಗಳಾವವಂದರೆ—ಯೆರಿಕೋ, ಬೇತ್‌ಹೊಗ್ಲಾ,
ಏಮೆಕ್ಕೆಚ್ಚೀಚ್, ಬೇತ್‌ಅರಾಬಾ, ಚೆಮಾರಯಿಮ್, 22
ಬೇತೇಲ್, ಅವ್ವೀಮ್, ಪಾರಾ, ಒಫ್ರಾ, ಅಮ್ಮೋನ್ಯ 23, 24
ಕೆಫೆರ್, ಒಫ್ನೀ, ಗೆಬಾ ಎಂಬ ಹನ್ನೆರಡು ನಗರಗಳೂ
ಅವುಗಳ ಗ್ರಾಮಗಳೂ; ಮತ್ತು ಗಿಬ್ಯೋನ್, ರಾಮಾ, 25
ಬೇರೋತ್, ಮಿಚ್ಪೆ, ಕೆಫೀರಾ, ಮೋಚಾ, ರೆಕೆಮ್, 26, 27
ಇರ್ಪೇಲ್, ತರಲಾ, ಚೇಲ, ಎಲೆಫ್, ಯೆಬೂಸಿ 28
ಯರು ಇದ್ದಂಥ ಯೆರೂಸಲೇಮ್, ಗಿಬೆಯತ್,
ಕಿರ್ಯತ್ ಎಂಬ ಹದಿನಾಲ್ಕು ನಗರಗಳೂ ಅವುಗಳ
ಗ್ರಾಮಗಳೂ ಇವೇ. ಬೆನ್ಯಾಮೀನ್ ಗೋತ್ರಗಳಿಗೆ
ಸಿಕ್ಕಿದ ಸ್ವಾಸ್ತ್ಯವು ಇದೇ.

ಉಳಿದ ಆರು ಕುಲಗಳ ಸ್ವಾಸ್ತ್ಯವು.

19 ಚೀಟು ಎರಡನೆಯ ಸಾರಿ ಸಿಮೆಯೋನ್ ಕುಲ
ದವರಿಗೆ ಬಿದ್ದಿತು. ಸಿಮೆಯೋನ್ ಕುಲದ ಗೋತ್ರ
ಗಳ ಸ್ವಾಸ್ತ್ಯವು ಯೆಹೂದಕುಲದವರ ಸ್ವಾಸ್ತ್ಯದ
ಮಧ್ಯದಲ್ಲಿತ್ತು. ಅದರ ಊರುಗಳು ಯಾವ 2

3 ವಂದರೆ—ಬೇರ್ಷೆಬ, ಶೆಬ, ಮೋಲಾದಾ, ಹಚರ್
4 ಷೂವಾಲ್, ಬಾಲಾ, ಎಚೆಮ್, ಎಲ್ತೋಲದ್,
5 ಬೆತೂಲ್, ಹೊರ್ಮಾ, ಚಿಕ್ಲಗ್, ಬೇತ್ಮರ್ಕಾ
6 ಬೋತ್, ಹಚರ್ಸೂಸಾ, ಬೇತ್ಲೆಬಾವೋತ್, ಶಾರೂ
ಹೆನ್ ಎಂಬ ಹದಿಮೂರು ಪಟ್ಟಣಗಳೂ ಅವುಗಳ
7 ಗ್ರಾಮಗಳೂ; ಅಯಿನ್, ರಿಮ್ಮೋನ್, ಏತೆರ್,
ಆಷಾನ್ ಎಂಬ ನಾಲ್ಕು ಪಟ್ಟಣಗಳೂ ಅವುಗಳ
8 ಗ್ರಾಮಗಳೂ; ಅವುಗಳ ಸುತ್ತಣ ಪ್ರದೇಶದಲ್ಲಿ
ಬಾಲತ್ಬೇರ್ ಎಂಬ ಊರಿನ ವರೆಗಿರುವ ಇತರ
ಗ್ರಾಮಗಳೂ ಇವೇ. ಬಾಲತ್ಬೇರ್ ಎಂಬದು
ದಕ್ಷಿಣದ ರಾಮ ಅನ್ನಿಸಿಕೊಳ್ಳುತ್ತದೆ. ಸಿಮೆಯೋನ್
ಕುಲದ ಗೋತ್ರಗಳಿಗೆ ಸಿಕ್ಕಿದ ಸ್ವಾಸ್ತ್ಯವು ಇದೇ.
9 ಈ ಸ್ವಾಸ್ತ್ಯವು ಯೆಹೂದ್ಯರ ಸ್ವಾಸ್ತ್ಯದ ಒಂದು
ಭಾಗ. ಯೆಹೂದ್ಯರಿಗೆ ದೊರಕಿದ ಪ್ರದೇಶವು
ಹೆಚ್ಚಾಗಿದ್ದದರಿಂದ ಸಿಮೆಯೋನ್ಯರಿಗೂ ಅದರಲ್ಲೇ
ಪಾಲುಸಿಕ್ಕಿತು.
10 ಚೀಟು ಮೂರನೆಯ ಸಾರಿ ಜೆಬುಲೂನ್ಯರಿಗೆ
ಬಿದ್ದಿತು. ಆ ಕುಲದ ಗೋತ್ರಗಳಿಗೆ ಸಿಕ್ಕಿದ ಸ್ವಾಸ್ತ್ಯದ
11 ಮೇರೆಯು ಸಾರೀದಿನಿಂದ ತೊಡಗಿ ಪಶ್ಚಿಮದಿಕ್ಕಿನಲ್ಲಿ
ರುವ ಮರ್ಗಲಾ, ದಬ್ಬೆಷೆತ್ ಇವುಗಳ ಮೇಲೆ ಯೊಕ್ನೆ
ಯಾಮ್ ಊರಿನ ಈಚೆಯಲ್ಲಿರುವ ಹಳ್ಳಕ್ಕೆ ಹೋಗು
12 ತ್ತದೆ. ಅದೇ ಸಾರೀದಿನಿಂದ ಅದು ಪೂರ್ವದಿಕ್ಕಿನಲ್ಲಿ
ಕಿಸ್ಲೋತ್ ತಾಬೋರಿನ ಮೇರೆಗೆ ಹತ್ತಿ ದಾಬೆರತಿಗೆ
ಹೋಗುತ್ತದೆ. ಅಲ್ಲಿಂದ ಏರುತ್ತಾ ಯಾಫೀಯಕ್ಕೆ
13 ಹೋಗುತ್ತದೆ. ಅಲ್ಲಿಂದ ಮತ್ತೂ ಪೂರ್ವಕ್ಕೆ ಮುಂದ
ರಿದು ಗತ್ಹೇಫೆರ್, ಎತ್ಕಾಚೀನ್ ಇವುಗಳ ಮೇಲೆ
ನೇಯದ ಮಗ್ಗುಲಲ್ಲಿರುವ ರಿಮ್ಮೋನಿಗೆ ಹೋಗು
14 ತ್ತದೆ. ಅಲ್ಲಿಂದ ಅದು ಉತ್ತರಕ್ಕೆ ತಿರುಗಿಕೊಂಡು
ಹನ್ನಾತೋನಿನ ಮೇಲೆ ಇಪ್ತಹೇಲಿನ ತಗ್ಗಿಗೆ ಹೋಗಿ
15 ಅಲ್ಲಿ ಮುಗಿಯುತ್ತದೆ. ಕಟ್ಟಾತ್, ನಹಲಾಲ್,
ಶಿಮ್ರೋನ್, ಇದಲಾ, ಬೇತ್ಲೆಹೇಮ್ ಇವೇ ಮೊದ
ಲಾದ ಹನ್ನೆರಡು ಪಟ್ಟಣಗಳೂ ಅವುಗಳ ಗ್ರಾಮಗಳೂ
16 ಜೆಬುಲೂನ್ ಕುಲದ ಗೋತ್ರಗಳಿಗೆ ಸ್ವಾಸ್ತ್ಯವಾಗಿ
ದೊರಕಿದವು.
17 ಚೀಟು ನಾಲ್ಕನೆಯ ಸಾರಿ ಇಸ್ಸಾಕಾರ್ ಕುಲದವ
ರಿಗೆ ಬಿದ್ದಿತು. ಅವರ ಗೋತ್ರಗಳಿಗೆ ಸಿಕ್ಕಿದ ದೇಶ
18 ದಲ್ಲಿರುವ ಪಟ್ಟಣಗಳಾವವಂದರೆ—ಇಜ್ರೇಲ್, ಕೆಸು
19 ಲ್ಲೋತ್, ಶೂನೇಮ್, ಹಫಾರಯಿಮ್, ಶೀಯೋನ್,
20 ಅನಾಹರತ್, ರಬ್ಬೀತ್, ಕಿಷ್ಯೋನ್, ಎಬೆಜ್,
21 ರೆಮೆತ್, ಏಂಗನ್ನೀಮ್, ಏನ್ಹದ್ದಾ, ಬೇತ್ಪಚ್ಚೇಚ್
22 ಇವುಗಳೇ. ತಾಬೋರ್, ಶಹಚೀಮಾ, ಬೇತ್ಷೆ
ಮೆಷ್ ಎಂಬ ಊರುಗಳೂ ಅದರ ಮೇರೆಯೊಳ
ಗಿದ್ದವು. ಮೇರೆಯು ಯೊರ್ದನ್ ಹೊಳೆಯ ತೀರ
ದಲ್ಲಿ ಮುಗಿಯುತ್ತದೆ. ಒಟ್ಟಾರೆ ಹದಿನಾರು ಪಟ್ಟಣ
23 ಗಳೂ ಅವುಗಳ ಗ್ರಾಮಗಳೂ ಇಸ್ಸಾಕಾರ್ ಕುಲದ
ಗೋತ್ರಗಳಿಗೆ ಸಿಕ್ಕಿದವು.
24 ಚೀಟು ಐದನೆಯ ಸಾರಿ ಆಶೇರ್ ಕುಲದವರಿಗೆ
ಬಿದ್ದಿತು. ಅವರ ಗೋತ್ರಗಳಿಗೆ ಸಿಕ್ಕಿದ ಊರುಗಳು
25 ಯಾವವಂದರೆ—ಹೆಲ್ಕತ್, ಹಲೀ, ಬೆಟೆನ್, ಅಕ್ಷಾಫ್,
26 ಅಲಮ್ಮೆಲೆಕ್, ಅಮಾದ್, ಮಿಷಾಲ್ ಇವುಗಳೇ.
ಇವರ ದೇಶದ ಮೇರೆಯು ಪಶ್ಚಿಮದಲ್ಲಿ ಕರ್ಮೆಲ್
ಬೆಟ್ಟಕ್ಕೂ ಶೀಹೋರ್ಲಿಬ್ನತ್ ಎಂಬ ಹಳ್ಳಕ್ಕೂ ತಗುಲಿ
ಅಲ್ಲಿಂದ ಪೂರ್ವಕ್ಕೆ ತಿರುಗಿ ಬೇತ್ದಾಗೋನಿಗೆ 27
ಹೋಗುತ್ತದೆ. ಅಲ್ಲಿಂದ ಜೆಬುಲೂನ್ಯರ ಮೇರೆಗೂ
ಇಪ್ತಹೇಲ್ ತಗ್ಗಿನ ಉತ್ತರದಿಕ್ಕಿನ ಮೂಲೆಗೂ ಹೊಂದಿ
ಕೊಂಡು ಬೇತ್ಏಮೆಕ್, ನೆಗೀಯೇಲ್ ಇವುಗಳ
ಮೇಲೆ ಉತ್ತರಕ್ಕೆ ಮುಂದರಿದು ಕಾಬೂಲ್, ಎಬ್ರೋ 28
ನ್, ರೆಹೋಬ್, ಹಮ್ಮೋನ್, ಕಾನಾ ಇವುಗಳ ಮೇಲೆ
ಚೀದೋನ್ ಎಂಬ ಮಹಾನಗರಕ್ಕೆ ಹೋಗುತ್ತದೆ.
ಅಲ್ಲಿಂದ ಅದು ತಿರುಗಿಕೊಂಡು ರಾಮಾ, ತೂರ್ 29
ಕೋಟೆ, ಹೋಸಾ ಇವುಗಳ ಮೇಲೆ ಅಕ್ಜೀಬ್
ಪ್ರಾಂತಕ್ಕೆ ಹೋಗಿ ಸಮುದ್ರತೀರದಲ್ಲಿ ಮುಗಿಯು
ತ್ತದೆ. ಉಮ್ಮಾ, ಅಫೇಕ್, ರೆಹೋಬ್ ಇವೇ ಮೊದ 30
ಲಾದ ಇಪ್ಪತ್ತೆರಡು ಪಟ್ಟಣಗಳೂ ಅವುಗಳ ಗ್ರಾಮ
ಗಳೂ ಆಶೇರ್ ಕುಲದ ಗೋತ್ರಗಳ ಸ್ವಾಸ್ತ್ಯವಾಗಿವೆ. 31
ಚೀಟು ಆರನೆಯ ಸಾರಿ ನಫ್ತಾಲಿ ಕುಲದವರಿಗೆ 32
ಬಿದ್ದಿತು. ಆ ಕುಲದ ಗೋತ್ರಗಳಿಗೆ ಸಿಕ್ಕಿದ ಸ್ವಾ
ಸ್ತ್ಯದ ಮೇರೆಯು ಚಾನನ್ನೀಮಿನಲ್ಲಿರುವ ಹೇಲೆಫಿನ 33
ಅಲ್ಲೋನ್ ಮರದಿಂದ ತೊಡಗಿ ಅದಾಮಿನೆಕೆಬ್,
ಯಬ್ನೆಯೇಲ್ ಇವುಗಳ ಮೇಲೆ ಲಕ್ಕೂಮಿಗೆ ಹೋಗಿ
ಯೊರ್ದನ್ ಹೊಳೆಯ ತೀರದಲ್ಲಿ ಮುಗಿಯುವದು.
ಇದಲ್ಲದೆ ಮೇರೆಯು ತಿರಿಗಿ ಅದೇ ಸ್ಥಳದಿಂದ 34
ತೊಡಗಿ ಅಜ್ನೋತ್ತಾಬೋರಿನ ಮೇಲೆ ಹುಕ್ಕೋ
ಕಿಗೆ ಹೋಗುತ್ತದೆ. ದಕ್ಷಿಣದಲ್ಲಿ ಜೆಬುಲೂನ್ಯರ
ಮೇರೆಗೂ ಪಶ್ಚಿಮದಲ್ಲಿ ಆಶೇರ್ಯರ ಮತ್ತು ಯೆಹೂ
ದ್ಯರ ಮೇರೆಗೂ ಪೂರ್ವದಲ್ಲಿ ಯೊರ್ದನ್ ಹೊಳೆಗೂ
ಹೊಂದಿಕೊಂಡಿರುತ್ತದೆ. ಚಿದ್ದೀಮ್, ಚೇರ್, ಹಮ್ಮ 35
ತ್, ರಕ್ಕತ್, ಕಿನ್ನೆರೆತ್, ಅದಾಮಾ, ರಾಮಾ, ಹಾ 36
ಚೋರ್, ಕೆದೆಷ್, ಎದ್ರೈ, ಏನ್ಹಾಚೋರ್, 37, 38
ಇರೋನ್, ಮಿಗ್ದಲೇಲ್, ಹೊರೇಮ್, ಬೇತನಾತ್,
ಬೇತ್ಷೆಮೆಷ್ ಇವೇ ಮೊದಲಾದ ಹತ್ತೊಂಭತ್ತು
ಕೋಟೆಕೊತ್ತಲುಗಳುಳ್ಳ ಪಟ್ಟಣಗಳೂ ಅವುಗಳ
ಗ್ರಾಮಗಳೂ ನಫ್ತಾಲಿ ಕುಲದ ಗೋತ್ರಗಳಿಗೆ ಸಿಕ್ಕಿದ 39
ಸ್ವಾಸ್ತ್ಯವಾಗಿವೆ.
ಚೀಟು ಏಳನೆಯ ಸಾರಿ ದಾನ್ ಕುಲದವರಿಗೆ ಬಿದ್ದಿ 40
ತು. ಅವರ ಗೋತ್ರಗಳಿಗೆ ಸ್ವಾಸ್ತ್ಯವಾಗಿ ದೊರಕಿದ
ಊರುಗಳು ಯಾವವಂದರೆ—ಚೊಗ್ರಾ, ಎಷ್ಟಾವೋ 41
ಲ್, ಈರ್ಷೆಮೆಷ್, ಶಾಲಬ್ಬೀನ್, ಅಯ್ಯಾಲೋನ್, 42
ಇತ್ಲಾ, ಏಲೋನ್, ತಿಮ್ನಾ, ಎಕ್ರೋನ್, ಎಲ್ತೆ 43, 44
ಕೇ, ಗಿಬ್ಬೆತೋನ್, ಬಾಲತ್, ಯೆಹುದ್, ಬೆನೇ 45
ಬೆರಕ್, ಗತ್ರಿಮ್ಮೋನ್ ಮೇಯರ್ಕೋನ್, ರಕ್ಕೋ 46
ನ್, ಇವೇ. ಯೊಪ್ಪಕ್ಕೆ ಹೊಂದಿರುವ ಪ್ರದೇಶವೂ
ಇವರಿಗೇ ದೊರಕಿತು. ದಾನ್ಕುಲದವರು ತಮ್ಮ 47
ಪ್ರಾಂತವನ್ನು ವಿಸ್ತರಿಸುವದಕ್ಕಾಗಿ ಹೊರಟು ಲೆಷೆಮಿ
ನವರೊಡನೆ ಯುದ್ಧಮಾಡಿ ಜಯಿಸಿ ಜನರನ್ನು ಕತ್ತಿ
ಯಿಂದ ಸಂಹರಿಸಿ ಪಟ್ಟಣವನ್ನು ಸ್ವಾಧೀನಮಾಡಿ
ಕೊಂಡು ಅದರಲ್ಲಿ ವಾಸಿಸಿದರು. ಮತ್ತು ಅದಕ್ಕೆ
ತಮ್ಮ ಮೂಲಪುರುಷನ ಹೆಸರಾದ ದಾನ್ ಎಂಬ ಹೆಸ
ರನ್ನಿಟ್ಟರು. ದಾನ್ಕುಲದ ಗೋತ್ರಗಳಿಗೆ ಸಿಕ್ಕಿದ 48
ಸ್ವಾಸ್ತ್ಯವೂ ಅದರಲ್ಲಿದ್ದ ಗ್ರಾಮನಗರಗಳೂ ಇವೇ.

49 ಇಸ್ರಾಯೇಲ್ಯರು ದೇಶವನ್ನು ಮೇರೆಗಳ ಪ್ರಕಾರ
ತಮ್ಮೊಳಗೆ ಹಂಚಿಕೊಂಡ ಮೇಲೆ ನೂನನ ಮಗನಾದ
ಯೆಹೋಶುವನಿಗೂ ತಮ್ಮದರಲ್ಲಿ ಪಾಲುಕೊಟ್ಟರು.
50 ಅವನು ತನಗೋಸ್ಕರ ಎಫ್ರಾಯಿಮ್ಯರ ಪರ್ವತ
ಪ್ರದೇಶದಲ್ಲಿರುವ ತಿಮ್ನತ್‌ಸೆರಹ ಎಂಬ ಪಟ್ಟಣವನ್ನು
ಕೇಳಿಕೊಳ್ಳಲು ಅವರು ಯೆಹೋವನ ಆಜ್ಞೆಯಂತೆ
ಅದನ್ನು ಅವನಿಗೆ ಕೊಟ್ಟುಬಿಟ್ಟರು. ಅವನು ಅದನ್ನು
51 ಕಟ್ಟಿಕೊಂಡು ಅದರಲ್ಲಿ ವಾಸವಾಗಿದ್ದನು. ಮಹಾ
ಯಾಜಕ ಎಲ್ಲಾಜಾರನೂ ನೂನನ ಮಗ ಯೆಹೋ
ಶುವನೂ ಇಸ್ರಾಯೇಲ್ ಕುಲಪ್ರಧಾನರೂ ಶೀಲೋವಿ
ನಲ್ಲಿದ್ದ ದೇವದರ್ಶನದ ಗುಡಾರದ ಬಾಗಲಲ್ಲಿ ಯೆ
ಹೋವನ ಸನ್ನಿಧಿಯಲ್ಲೇ ಚೀಟುಹಾಕಿ ಹಂಚಿಕೊಟ್ಟ
ಪ್ರಾಂತಗಳು ಇವೇ. ಹೀಗೆ ದೇಶವಿಭಾಗಕಾರ್ಯವು
ಪೂರೈಸಿತು.

### ಆಶ್ರಯನಗರಗಳನ್ನು ನೇಮಿಸಿದ್ದು.

20 ತರುವಾಯ ಯೆಹೋವನು ಯೆಹೋಶುವನನ್ನು
2 ಕುರಿತು—ನೀನು ಇಸ್ರಾಯೇಲ್ಯರಿಗೆ—ನಾನು
ಮೋಶೆಯ ಮೂಲಕ ಆಜ್ಞಾಪಿಸಿದಂತೆ ನೀವು ನಿಮ
ಗೋಸ್ಕರ ಕೆಲವು ಆಶ್ರಯನಗರಗಳನ್ನು ಗೊತ್ತು
3 ಮಾಡಿಕೊಳ್ಳಿರಿ. ನಿಮ್ಮಲ್ಲಿ ತಿಳಿಯದೆ ಅಕಸ್ಮಾತ್ತಾಗಿ
ನರಹತ್ಯಮಾಡಿದವನು ಅಲ್ಲಿಗೆ ಓಡಿಹೋಗಲಿ. ಹತ
ವಾದವನ ಸಮೀಪಬಂಧುವು ಮುಯ್ಯಿತೀರಿಸದಂತೆ
4 ಅವು ನಿಮಗೆ ಆಶ್ರಯಸ್ಥಾನಗಳಾಗುವವು. ಅಂಥ
ಪಟ್ಟಣಕ್ಕೆ ಓಡಿಹೋದವನು ಮೊದಲು ಊರಬಾಗ
ಲಲ್ಲೇ ನಿಂತುಕೊಂಡು ಅಲ್ಲಿನ ಹಿರಿಯರಿಗೆ ತನ್ನ
ಸಂಗತಿಯನ್ನು ತಿಳಿಯಪಡಿಸಲಿ. ಅವರು ಅವನನ್ನು
ಊರೊಳಗೆ ಸೇರಿಸಿಕೊಂಡು ಅವನ ವಾಸಕ್ಕೆ ಸ್ಥಳ
5 ಕೊಡಲಿ. ಹತವಾದವನ ಸಮೀಪಬಂಧುವು ಕೊಂದ
ವನನ್ನು ಹಿಂಬಟ್ಟಿಕೊಂಡು ಅಲ್ಲಿಗೆ ಬಂದರೆ ಅವರು
ಅವನನ್ನು ಅವನ ಕೈಗೆ ಒಪ್ಪಿಸಬಾರದು. ಯಾಕಂದರೆ
ಅವನು ನೆರೆಯವನನ್ನು ಪೂರ್ವದ್ವೇಷವೇನೂ ಇಲ್ಲದೆ
6 ಅಕಸ್ಮಾತ್ತಾಗಿ ಕೊಂದನು. ಒಂದು ಸಭೆಯನ್ನು
ಸೇರಿಸಿ ಅಂಥವನನ್ನು ವಿಚಾರಿಸಬೇಕು; ಮತ್ತು
ಅವನು ಆಗಿನ ಮಹಾಯಾಜಕನ ಜೀವಮಾನವೆಲ್ಲಾ
ಅದೇ ಪಟ್ಟಣದಲ್ಲಿರಬೇಕು. ಆ ಮೇಲೆ ತಾನು
ಬಿಟ್ಟುಬಂದ ಪಟ್ಟಣದಲ್ಲಿರುವ ಮನೆಗೆ ಹಿಂದಿರುಗಿ
7 ಹೋಗಬಹುದು ಎಂದು ಹೇಳು ಅಂದನು. ಇಸ್ರಾ
ಯೇಲ್ಯರು ನಫ್ತಾಲಿಕುಲದವರ ಪರ್ವತಪ್ರದೇಶವಾದ
ಗಲಿಲಾಯ ಪ್ರಾಂತದಲ್ಲಿ ಕೆದೆಷ್, ಎಫ್ರಾಯಿಮ್
ಪರ್ವತಪ್ರದೇಶದಲ್ಲಿ ಶೆಕೆಮ್, ಯೆಹೂದ್ಯರ ಬೆಟ್ಟದ
ಸೀಮೆಯಲ್ಲಿ ಹೆಬ್ರೋನ್ ಅನ್ನಿಸಿಕೊಳ್ಳುವ ಕಿರ್ಯ
8 ತರ್ಬ ಎಂಬೀ ಪಟ್ಟಣಗಳನ್ನು ನೇಮಿಸಿದರು. ಮತ್ತು
ಯೆರಿಕೋವಿನ ಪೂರ್ವದಲ್ಲಿರುವ ಯೊರ್ದನಿನ ಆಚೆ
ಯಲ್ಲಿ ರೂಬೇನ್ಯರ ಬೆಟ್ಟದ ಮೇಲಿನ ಅರಣ್ಯ
ಪ್ರದೇಶದಲ್ಲಿರುವ ಬೆಚೆರ್, ಗಾದ್ಯರಿಗೆ ಸೇರಿದ
ಗಿಲ್ಯಾದ್‌ಪ್ರಾಂತದ ರಾಮೋತ್, ಮನಸ್ಸೆಯವರಿಗೆ
ಸೇರಿದ ಬಾಷಾನಿನಲ್ಲಿರುವ ಗೋಲಾನ್ ಎಂಬ
9 ಪಟ್ಟಣಗಳನ್ನೂ ನೇಮಿಸಿದರು. ಎಲ್ಲಾ ಇಸ್ರಾಯೇಲ್ಯ
ರಲ್ಲಿಯೂ ಅವರ ಮಧ್ಯದಲ್ಲಿರುವ ಪರದೇಶಿ
ಗಳಲ್ಲಿಯೂ ಬೇರೊಬ್ಬನನ್ನು ಅಕಸ್ಮಾತ್ತಾಗಿ ಕೊಂದ
ವನು ಓಡಿಹೋಗಿ ತಾನು ನ್ಯಾಯಸಭೆಯ ಮುಂದೆ
ನಿಲ್ಲುವ ವರೆಗೆ ಹತವಾದವನ ಸಮೀಪಬಂಧುವಿಗೆ
ತಪ್ಪಿಸಿಕೊಳ್ಳುವದಕ್ಕೋಸ್ಕರ ನೇಮಕವಾದ ಪಟ್ಟಣ
ಗಳು ಇವೇ.

### ಲೇವಿಕುಲದವರಿಗೆ ಸ್ವಾಸ್ತ್ಯವಾಗಿ ದೊರಕಿದ ಪಟ್ಟಣಗಳು.

ಲೇವಿಕುಲಾಧಿಪತಿಗಳು ಕಾನಾನ್‌ದೇಶದ ಶೀಲೋ 2
ವಿನಲ್ಲಿದ್ದ ಮಹಾಯಾಜಕನಾದ ಎಲ್ಲಾಜಾರ್,
ನೂನನ ಮಗನಾದ ಯೆಹೋಶುವ, ಇಸ್ರಾಯೇಲ್
ಕುಲಾಧಿಪತಿಗಳು ಇವರ ಬಳಿಗೆ ಬಂದು—ನಮ್ಮ
ನಿವಾಸಕ್ಕೆ ಪಟ್ಟಣಗಳನ್ನೂ ಪಶುಗಳಿಗೆ ಗೋಮಾಳ
ಗಳನ್ನೂ ಕೊಡಬೇಕೆಂದು ಯೆಹೋವನು ಮೋಶೆಯ
ಮೂಲಕ ಆಜ್ಞಾಪಿಸಿದ್ದಾನಲ್ಲಾ ಅನ್ನಲು ಅವರು
ಯೆಹೋವನ ಆಜ್ಞೆಯಂತೆ ಅವರಿಗೆ ತಮ್ಮ ಸ್ವಾಸ್ತ್ಯ
ದಿಂದ ಕೆಳಗೆ ಬರೆದಷ್ಟು ಪಟ್ಟಣಗಳನ್ನೂ ಅವುಗಳಿಗೆ
ಸೇರಿದ ಗೋಮಾಳಗಳನ್ನೂ ಕೊಟ್ಟುಬಿಟ್ಟರು.
ಕೆಹಾತ್ಯರಿಗೋಸ್ಕರ ಚೀಟುಹಾಕಿದಾಗ ಆರೋ
ನನ ವಂಶದವರಾದ ಲೇವಿಯರಿಗೆ ಯೆಹೂದ, ಸಿಮೆ
ಯೋನ್, ಬೆನ್ಯಾಮೀನ್ ಕುಲಗಳಿಂದ ಹದಿಮೂರು
ಪಟ್ಟಣಗಳು ದೊರಕಿದವು. ಮಿಕ್ಕ ಕೆಹಾತ್ಯರಿಗೆ
ಎಫ್ರಾಯಿಮ್ ದಾನ್ ಕುಲಗಳಿಂದಲೂ ಮನ
ಸ್ಸೆಯ ಅರ್ಧಕುಲದಿಂದಲೂ ಹತ್ತು ಪಟ್ಟಣಗಳು
ಸಿಕ್ಕಿದವು. ತಿರಿಗಿ ಚೀಟುಹಾಕುವಲ್ಲಿ ಗೇರ್ಷೋನ್ಯ
ರಿಗೆ ಇಸ್ಸಾಕಾರ್, ಆಶೇರ್, ನಫ್ತಾಲಿ ಎಂಬ ಕುಲ
ಗಳಿಂದಲೂ ಬಾಷಾನಿನಲ್ಲಿರುವ ಮನಸ್ಸೆಯ ಅರ್ಧ
ಕುಲದಿಂದಲೂ ಹದಿಮೂರು ಪಟ್ಟಣಗಳು ದೊರಕಿ
ದವು. ಮೆರಾರೀ ಗೋತ್ರದವರಿಗೆ ರೂಬೇನ್, ಗಾದ್,
ಜೆಬುಲೂನ್ ಕುಲಗಳಿಂದ ಹನ್ನೆರಡು ಪಟ್ಟಣಗಳು
ಸಿಕ್ಕಿದವು. ಯೆಹೋವನು ಮೋಶೆಯ ಮೂಲಕ
ಆಜ್ಞಾಪಿಸಿದಂತೆ ಇಸ್ರಾಯೇಲ್ಯರು ಚೀಟುಹಾಕಿ
ಲೇವಿಯರಿಗೆ ಇಷ್ಟು ಪಟ್ಟಣಗಳನ್ನೂ ಅವುಗಳಿಗೆ
ಸೇರಿದ ಗೋಮಾಳಗಳನ್ನೂ ಕೊಟ್ಟರು.
ಲೇವಿಕುಲದವರೂ ಕೆಹಾತನ ಗೋತ್ರದವರೂ
ಆದ ಆರೋನನ ಕುಟುಂಬದವರಿಗೆ ಚೀಟು ಮೊದಲು
ಬಿದ್ದದರಿಂದ ಇಸ್ರಾಯೇಲ್ಯರು ಅವರಿಗೆ ಯೆಹೂದ
ಸಿಮೆಯೋನ್ ಕುಲಗಳಿಂದ ಕೆಳಗೆ ಹೇಳಿರುವ
ಪಟ್ಟಣಗಳನ್ನು ಕೊಟ್ಟರು. ಇವುಗಳಲ್ಲಿ ಯೆಹೂದ
ಬೆಟ್ಟದ ಸೀಮೆಯ ಹೆಬ್ರೋನೆಂಬ ಗೋಮಾಳಸಹಿತ
ವಾದ ಕಿರ್ಯತರ್ಬವೂ ಸೇರಿರುತ್ತದೆ. (ಕಿರ್ಯತರ್ಬ
ವಂದರೆ ಅನಾಕನ ತಂದೆಯಾದ ಅರ್ಬನ ಪಟ್ಟಣ.)
ಆದರೆ ಇದರ ಹೊಲಗಳನ್ನೂ ಇದಕ್ಕೆ ಸೇರಿದ ಗ್ರಾಮ
ಗಳನ್ನೂ ಯೆಫುನ್ನೆಯ ಮಗನಾದ ಕಾಲೇಬನಿಗೆ
ಕೊಟ್ಟರು. ಮಹಾಯಾಜಕನಾದ ಆರೋನನ ವಂಶ
ದವರಿಗೆ ಮೇಲೆ ಹೇಳಿದ ಎರಡು ಕುಲಗಳಿಂದ
ಹೆಬ್ರೋನೆಂಬ ಆಶ್ರಯನಗರ, ಲಿಬ್ನಾ, ಯತ್ತೀರ್
ಎಷ್ಟೆಮೋಹ, ಹೋಲೋನ್, ದೆಬೀರ್, ಆಯಿನ್, 15,
ಯುಟ್ಟಾ, ಬೇತ್‌ಷೆಮೆಷ್ ಎಂಬ ಒಂಭತ್ತು ಗೋ

17 ಮಾಳಸಹಿತವಾದ ಪಟ್ಟಣಗಳೂ ಬೆನ್ಯಾಮೀನ್ ಕುಲ
18 ದಿಂದ ಗಿಬ್ಯೋನ್, ಗೆಬ, ಅನಾತೋತ್, ಅಲ್ಮೋನ್
ಎಂಬ ನಾಲ್ಕು ಗೋಮಾಳಸಹಿತವಾದ ಪಟ್ಟಣಗಳೂ
19 ದೊರಕಿದವು. ಮಹಾಯಾಜಕನಾದ ಆರೋನನ
ವಂಶದವರ ಪಾಲಿಗೆ ಬಂದಂಥ ಗೋಮಾಳಸಹಿತ
ವಾದ ಪಟ್ಟಣಗಳು ಹದಿಮೂರು.
20 ಲೇವಿಯರಾದ ಕೆಹಾತ್ಯರ ಉಳಿದ ಕುಟುಂಬಗಳಿಗೆ
21 ಎಫ್ರಾಯಿಮ್ಯರ ಸ್ವಾಸ್ತ್ಯದಿಂದ ಬೆಟ್ಟದಲ್ಲಿರುವ
22 ಶೆಕೆಮೆಂಬ ಆಶ್ರಯನಗರ, ಗೆಜೆರ್, ಕಿಬ್ಚೈಮ್,
ಬೇತ್‌ಹೋರೋನ್ ಎಂಬ ಗೋಮಾಳಸಹಿತವಾದ
23 ನಾಲ್ಕು ಪಟ್ಟಣಗಳೂ, ದಾನ್ಯರ ಸ್ವಾಸ್ತ್ಯದಿಂದ
24 ಎಲ್ತೆಕೇ, ಗಿಬ್ಬೆತೋನ್, ಅಯ್ಯಾಲೋನ್, ಗತ್
ರಿಮ್ಮೋನ್ ಎಂಬ ಗೋಮಾಳಸಹಿತವಾದ ನಾಲ್ಕು
25 ಪಟ್ಟಣಗಳೂ, ಮನಸ್ಸೆಕುಲದ ಅರ್ಧಜನರ ಸ್ವಾಸ್ತ್ಯ
ದಿಂದ ತಾನಾಕ್, ಗತ್‌ರಿಮ್ಮೋನ್ ಎಂಬ ಎರಡು
ಗೋಮಾಳಸಹಿತವಾದ ಪಟ್ಟಣಗಳೂ ಚೀಟಿನಿಂದ
26 ದೊರಕಿದವು. ಕೆಹಾತ್ಯರಿಗೆ ಸಿಕ್ಕಿದಂಥ ಗೋಮಾಳ
ಸಹಿತವಾದ ಪಟ್ಟಣಗಳು ಹತ್ತು.
27 ಗೇರ್ಷೋನ್ಯರ ಕುಟುಂಬಗಳಿಗೆ ಅರ್ಧಮನಸ್ಸೆ
ಯವರ ಸ್ವಾಸ್ತ್ಯದಿಂದ ಕೊಲೆಮಾಡಿದವನ ಆಶ್ರಯ
ನಗರವಾದ ಬಾಷಾನಿನ ಗೋಲಾನ್, ಬೆಯೆಷ್ಟೆರಾ
ಎಂಬ ಗೋಮಾಳಸಹಿತವಾದ ಎರಡು ಪಟ್ಟಣಗಳೂ
28 ಇಸ್ಸಾಕಾರ್ ಸ್ವಾಸ್ತ್ಯದಿಂದ ಕಿಷ್ಯೋನ್, ದಾಬೆರತ್,
29 ಯರ್ಮೂತ್, ಏಂಗನ್ನೀಮ್ ಎಂಬ ನಾಲ್ಕು ಗೋ
30 ಮಾಳಸಹಿತವಾದ ಪಟ್ಟಣಗಳೂ ಆಶೇರ್‌ಕುಲದಿಂದ
31 ಮಿಷಾಲ್, ಅಬ್ದೋನ್, ಹೆಲ್ಕಾತ್, ರೆಹೋಬ್ ಎಂಬ
32 ನಾಲ್ಕು ಗೋಮಾಳಸಹಿತವಾದ ಪಟ್ಟಣಗಳೂ ನಫ್ತಾಲಿ
ಸ್ವಾಸ್ತ್ಯದಿಂದ ಕೊಲೆಮಾಡಿದವನ ಆಶ್ರಯನಗರವಾದ
ಗಲಿಲಾಯದ ಕೆದೆಷ್, ಹಮ್ಮೋತ್‌ದೋರ್, ಕರ್ತಾ
ನ್ ಎಂಬ ಗೋಮಾಳಸಹಿತವಾದ ಮೂರು ಪಟ್ಟಣ
33 ಗಳೂ ದೊರಕಿದವು. ಗೇರ್ಷೋನ್ಯರಿಗೆ ಸಿಕ್ಕಿದ
ಗೋಮಾಳಸಹಿತವಾದ ಪಟ್ಟಣಗಳು ಹದಿಮೂರು.
34 ಮಿಕ್ಕ ಲೇವಿಯರಾದ ಮೆರಾರೀ ಗೋತ್ರದವರಿಗೆ
ಜೆಬುಲೂನ್ ಸ್ವಾಸ್ತ್ಯದಿಂದ ಯೊಕ್ನೆಯಾಮ್,
35 ಕರ್ತಾ, ದಿಮ್ನಾ, ನಹಲಾಲ್ ಎಂಬ ಗೋಮಾಳ
36 ಸಹಿತವಾದ ನಾಲ್ಕು ಪಟ್ಟಣಗಳೂ ರೂಬೇನ್ಯರ
37 ಸ್ವಾಸ್ತ್ಯದಿಂದ ಬೆಜೆರ್, ಯಹಜಾ, ಕೆದೇಮೋತ್,
ಮೇಫಾಗತ್ ಎಂಬ ಗೋಮಾಳಸಹಿತವಾದ ನಾಲ್ಕು
38 ಪಟ್ಟಣಗಳೂ ಗಾದ್ಯರ ಸ್ವಾಸ್ತ್ಯದಿಂದ ಕೊಲೆಮಾಡಿದ
ವನ ಆಶ್ರಯನಗರವಾಗಿರುವ ಗಿಲ್ಯಾದಿನ ರಾಮೋತ್,
39 ಮಹನಯಿಮ್, ಹೆಷ್ಬೋನ್, ಯಗ್ಜೇರ್ ಎಂಬ
ಗೋಮಾಳಸಹಿತವಾದ ನಾಲ್ಕು ಪಟ್ಟಣಗಳೂ ಸಿಕ್ಕಿ
40 ದವು. ಮಿಕ್ಕ ಲೇವಿಯರಾದ ಮೆರಾರೀಗೋತ್ರಗಳಿಗೆ
ಚೀಟಿನಿಂದ ದೊರಕಿದ ಪಟ್ಟಣಗಳು ಹನ್ನೆರಡು.
41 ಲೇವಿಯರಿಗೆ ಇಸ್ರಾಯೇಲ್ಯರ ಮಧ್ಯದಲ್ಲಿ ದೊರ
ಕಿದ ಗೋಮಾಳಸಹಿತವಾದ ಪಟ್ಟಣಗಳು ನಾಲ್ವ
42 ತ್ತೆಂಟು. ಆ ಪಟ್ಟಣಗಳಲ್ಲಿ ಪ್ರತಿಯೊಂದಕ್ಕೂ
ಗೋಮಾಳವಿರುವದು. ಎಲ್ಲಾ ಪಟ್ಟಣಗಳಿಗೂ
ಹೀಗೆಯೇ.
43 ಯೆಹೋವನು ಇಸ್ರಾಯೇಲ್ಯರ ಪೂರ್ವಿಕರಿಗೆ
ಪ್ರಮಾಣಪೂರ್ವಕವಾಗಿ ವಾಗ್ದಾನಮಾಡಿದ ದೇಶ
ವನ್ನು ಇಸ್ರಾಯೇಲ್ಯರಿಗೆ ಕೊಟ್ಟನು. ಅವರು ಅದನ್ನು
ಸ್ವತಂತ್ರಿಸಿಕೊಂಡು ಅದರಲ್ಲಿ ವಾಸಮಾಡಿದರು. ಯೆ 44
ಹೋವನು ಅವರ ಪೂರ್ವಿಕರಿಗೆ ಆಣೆಯಿಟ್ಟು ಹೇಳಿ
ದಂತೆ ಅವರಿಗೆ ಎಲ್ಲಾ ಕಡೆಯಲ್ಲಿಯೂ ಸಮಾಧಾನ
ಕೊಟ್ಟನು. ವೈರಿಗಳಲ್ಲಿ ಒಬ್ಬನೂ ಅವರ ಮುಂದೆ
ನಿಲ್ಲಲಿಲ್ಲ. ಆತನು ಎಲ್ಲರನ್ನೂ ಅವರ ಕೈಗೆ ಒಪ್ಪಿಸಿ
ದನು. ಆತನು ಇಸ್ರಾಯೇಲ್ಯರಿಗೆ ಮಾಡಿದ ಅತಿ 45
ಶ್ರೇಷ್ಠವಾಗ್ದಾನಗಳಲ್ಲಿ ಒಂದೂ ತಪ್ಪಿಹೋಗಲಿಲ್ಲ.
ಎಲ್ಲಾ ನೆರವೇರಿದವು.

## ಯೆಹೋಶುವನ ಚರಿತ್ರದ ಸಮಾಪ್ತಿ. 22—24.

### ರೂಬೇನ್ಯರೂ ಗಾದ್ಯರೂ ಮನಸ್ಸೆಕುಲದ ಅರ್ಧಜನರೂ ತಮ್ಮ ಸ್ವಾಸ್ತ್ಯಗಳಿಗೆ ಹಿಂದಿರುಗಿ ಹೋದದ್ದು.

22 ಯೆಹೋಶುವನು ರೂಬೇನ್ಯರನ್ನೂ ಗಾದ್ಯರನ್ನೂ
ಮನಸ್ಸೆಕುಲದ ಅರ್ಧಜನರನ್ನೂ ಕರಿಸಿ ಅವರಿಗೆ—
ನೀವು ಯೆಹೋವನ ಸೇವಕನಾದ ಮೋಶೆಯು ವಿಧಿ 2
ಸಿದ್ದೆಲ್ಲವನ್ನೂ ಕೈಕೊಂಡಿದ್ದೀರಿ. ನಾನು ಆಜ್ಞಾಪಿಸಿ
ದ್ದನ್ನೂ ನೆರವೇರಿಸಿದಿರಿ. ಈ ಕಾಲವೆಲ್ಲಾ ನೀವು 3
ನಿಮ್ಮ ಸಹೋದರರನ್ನು ಕೈಬಿಡಲಿಲ್ಲ. ಈ ವರೆಗೆ
ನಿಮ್ಮ ದೇವರಾದ ಯೆಹೋವನ ಆಜ್ಞೆಯನ್ನು ಪಾಲಿ
ಸುತ್ತಾ ಬಂದಿದ್ದೀರಿ. ಈಗ ನಿಮ್ಮ ದೇವರಾದ 4
ಯೆಹೋವನು ತನ್ನ ವಾಗ್ದಾನಕ್ಕನುಸಾರವಾಗಿ ನಿಮ್ಮ
ಸಹೋದರರಿಗೆ ವಿಶ್ರಾಂತಿಯನ್ನು ದಯಪಾಲಿಸಿದ್ದದ
ರಿಂದ ಆತನ ಸೇವಕನಾದ ಮೋಶೆಯು ಯೊರ್ದನಿನ
ಆಚೆಯಲ್ಲಿ ನಿಮಗೆ ಕೊಟ್ಟ ಸ್ವಾಸ್ತ್ಯದಲ್ಲಿರುವ
ನಿಮ್ಮ ನಿಮ್ಮ ನಿವಾಸಗಳಿಗೆ ಹೋಗಬಹುದು.
ಯೆಹೋವನ ಸೇವಕನಾದ ಮೋಶೆಯು ನಿಮಗೆ 5
ಕೊಟ್ಟ ಧರ್ಮೋಪದೇಶವಿಧಿಗಳನ್ನು ಜಾಗರೂಕತೆ
ಯಿಂದ ಕೈಕೊಳ್ಳಿರಿ. ಹೀಗಿರಲಾಗಿ ನಿಮ್ಮ ದೇವ
ರಾದ ಯೆಹೋವನನ್ನು ಪ್ರೀತಿಸಿ ಆತನ ಮಾರ್ಗ
ದಲ್ಲೇ ನಡೆದು ಆತನ ಆಜ್ಞೆಗಳನ್ನು ಕೈಕೊಂಡು
ಆತನನ್ನೇ ಹೊಂದಿಕೊಂಡು ಪೂರ್ಣಮನಸ್ಸಿನಿಂದಲೂ
ಪೂರ್ಣಪ್ರಾಣದಿಂದಲೂ ಆತನನ್ನು ಸೇವಿಸಿರಿ ಎಂದು
ಹೇಳಿ ಅವರನ್ನು ಆಶೀರ್ವದಿಸಿ ಕಳುಹಿಸಿದನು. 6
ಅವರು ತಮ್ಮ ನಿವಾಸಗಳಿಗೆ ಹೋದರು. (ಮೋಶೆ 7
ಯು ಮನಸ್ಸೆಕುಲದ ಅರ್ಧಜನರಿಗೆ ಬಾಷಾನಿನಲ್ಲಿ
ಸ್ವಾಸ್ತ್ಯವನ್ನು ಕೊಟ್ಟಿದ್ದನು. ಉಳಿದ ಅರ್ಧಜನರಿಗೆ
ಯೆಹೋಶುವನು ಯೊರ್ದನಿನ ಪಶ್ಚಿಮದಲ್ಲಿ ಬೇರೆ
ಕುಲದವರೊಂದಿಗೆ ಪಾಲುಕೊಟ್ಟನು.) ಇದಲ್ಲದೆ
ಯೆಹೋಶುವನು ಅವರನ್ನು ಆಶೀರ್ವದಿಸಿ ಸ್ವಸ್ಥಳ
ಗಳಿಗೆ ಕಳುಹಿಸುವಾಗ ಅವರಿಗೆ—ನೀವು ಬಹಳ 8
ದನ, ಕುರಿ, ಬೆಳ್ಳಿ, ಬಂಗಾರ, ತಾಮ್ರ, ಕಬ್ಬಿಣ,
ವಸ್ತ್ರ ಮೊದಲಾದ ವಸ್ತುಸಮೃದ್ಧಿಯುಳ್ಳವರಾಗಿ ನಿಮ್ಮ
ನಿವಾಸಗಳಿಗೆ ಹೋಗಿರಿ; ನೀವು ಶತ್ರುಗಳಿಂದ
ತೆಗೆದುಕೊಂಡ ಕೊಳ್ಳೆಯಲ್ಲಿ ನಿಮ್ಮ ಸಹೋದರ
ರಿಗೂ ಪಾಲುಕೊಡಿರಿ ಅಂದನು. ಆಗ ರೂಬೇನ್ಯರೂ 9
ಗಾದ್ಯರೂ ಮನಸ್ಸೆಕುಲದ ಅರ್ಧಜನರೂ ಕಾನಾನ್

ದೇಶದ ಶೀಲೋವಿನಲ್ಲಿದ್ದ ಇಸ್ರಾಯೇಲ್ಯರನ್ನು ಬಿಟ್ಟು ಯೆಹೋವನ ಆಜ್ಞೆಗನುಸಾರವಾಗಿ ಮೋಶೆಯಿಂದ ತನುಗೆ ಸಿಕ್ಕಿದ ಸ್ವಾಸ್ತ್ಯವಾದ ಗಿಲ್ಯಾದ್ ದೇಶಕ್ಕೆ ಹೋದರು.

ಯೊರ್ದನಿನ ಆಚೆಯು ಪ್ರದೇಶಕ್ಕೆ ಹಿಂದಿರುಗಿ ಹೋದವರು ದಾರಿಯಲ್ಲಿ ವೇದಿಯನ್ನು ಕಟ್ಟಿದ್ದು.

10 ರೂಬೇನ್ಯರೂ ಗಾದ್ಯರೂ ಮನಸ್ಸೆಕುಲದ ಅರ್ಧ
ಜನರೂ ಕಾನಾನ್ ದೇಶದಲ್ಲಿರುವ ಯೊರ್ದನ್‌ತೀರ
ಪ್ರದೇಶಕ್ಕೆ ಬಂದಾಗ ಅಲ್ಲಿ ಒಂದು ಮಹಾವೇದಿ
11 ಯನ್ನು ಕಟ್ಟಿದರು. ರೂಬೇನ್ಯರೂ ಗಾದ್ಯರೂ
ಮನಸ್ಸೆಕುಲದ ಅರ್ಧಜನರೂ ಇಸ್ರಾಯೇಲ್‌ದೇಶ
ವಾದ ಕಾನಾನಿನ ಪೂರ್ವಕ್ಕಿರುವ ಯೊರ್ದನ್ ಹೊಳೆ
ಯ ತೀರಪ್ರದೇಶದಲ್ಲಿ ವೇದಿಯನ್ನು ಕಟ್ಟಿದ್ದಾರೆಂಬ
ವರ್ತಮಾನವು ಮಿಕ್ಕ ಇಸ್ರಾಯೇಲ್ಯರಿಗೆ ಮುಟ್ಟಿ
12 ದಾಗ ಅವರೆಲ್ಲರೂ ಶೀಲೋವಿನಲ್ಲಿ ಕೂಡಿ ಒಂದು
ಅವರೊಡನೆ ಯುದ್ಧಕ್ಕೆ ಹೊರಡಲು ಸಿದ್ಧರಾದರು.
13 ಆದರೆ ಮೊದಲು ಗಿಲ್ಯಾದಿನಲ್ಲಿರುವ ರೂಬೇನ್ಯರು,
ಗಾದ್ಯರು, ಮನಸ್ಸೆಕುಲದ ಅರ್ಧಜನರು ಇವರ
ಬಳಿಗೆ ಮಹಾಯಾಜಕ ಎಲ್ಲಾಜಾರನ ಮಗನಾದ
14 ಫೀನೆಹಾಸನನ್ನೂ ಕುಲಕ್ಕೆ ಒಬ್ಬನಂತೆ ಹತ್ತು ಮಂದಿ
ಪ್ರಭುಗಳನ್ನೂ ಕಳುಹಿಸಿದರು. ಅವರಲ್ಲಿ ಪ್ರತಿಯೊ
ಬ್ಬನು ತನ್ನ ತನ್ನ ಕುಲಗೋತ್ರಕುಟುಂಬಗಳಲ್ಲಿ
15 ಮುಖ್ಯನಾಗಿದ್ದನು. ಅವರು ಗಿಲ್ಯಾದಿನಲ್ಲಿದ್ದ ರೂಬೇ
ನ್ಯರು, ಗಾದ್ಯರು, ಮನಸ್ಸೆಕುಲದ ಅರ್ಧಜನರು
16 ಇವರ ಬಳಿಗೆ ಬಂದು—ಯೆಹೋವನ ಸರ್ವಸಭೆಯು
ಮಾತನ್ನು ಕೇಳಿರಿ—ನೀವು ಇಸ್ರಾಯೇಲ್‌ದೇವರಿಗೆ
ವಿರುದ್ಧವಾಗಿ ಇಂಥ ದ್ರೋಹಮಾಡಿದ್ದೇಕೆ? ನಿಮ
ಗೋಸ್ಕರ ವೇದಿಯನ್ನು ಕಟ್ಟಿಕೊಂಡದರಿಂದ ನೀವು
ಯೆಹೋವನಿಗೆ ವಿಮುಖರಾದ ಹಾಗಾಯಿತಲ್ಲವೇ.
ನೀವು ಈ ಹೊತ್ತು ಯೆಹೋವನಿಗೆ ವಿರುದ್ಧವಾಗಿ
17 ತಿರುಗಿಬಿದ್ದಂತಾಯಿತು. ನಾವು ಪೆಗೋರದ ಸಂಗ
ತಿಯಲ್ಲಿ ಅಪರಾಧಿಗಳಾದದ್ದು ಸಾಕಾಗಲಿಲ್ಲವೋ?
ಅದರ ದೆಸೆಯಿಂದ ಯೆಹೋವನ ಸಭೆಗೆ ವ್ಯಾಧಿ
18 ಬಂದರೂ ಅದು ಇನ್ನೂ ಶುದ್ಧವಾಗಲಿಲ್ಲ. ಈಗ
ನೀವು ತಿರಿಗಿ ಯೆಹೋವನನ್ನು ಬಿಡುತ್ತೀರೋ? ನೀವು
ಈ ಹೊತ್ತು ಯೆಹೋವನಿಗೆ ವಿರುದ್ಧವಾಗಿ ತಿರುಗಿ
ಬಿದ್ದರೆ ನಾಳೆಯೇ ಆತನ ಕೋಪಾಗ್ನಿಯು ಇಸ್ರಾ
ಯೇಲ್ ಸರ್ವಸಭೆಯ ಮೇಲೆ ಉರಿಯಹತ್ತುವದು.
19 ನಿಮ್ಮ ದೇಶವು ಅಶುದ್ಧವಾಗಿದೆಯೆಂದು ತೋರಿದರೆ
ಯೆಹೋವನ ಗುಡಾರವಿರುವ ಆತನ ಸ್ವಂತ ಸೀಮೆಗೆ
ಬಂದು ನಮ್ಮ ಮಧ್ಯದಲ್ಲಿ ಸ್ವಾಸ್ತ್ಯವನ್ನು ತೆಗೆದು
ಕೊಳ್ಳಿರಿ. ನಮ್ಮ ದೇವರಾದ ಯೆಹೋವನ ವೇದಿಯ
ಹೊರತು ನಿಮಗೋಸ್ಕರ ಇನ್ನೊಂದನ್ನು ಕಟ್ಟಿಕೊಂಡು
ಯೆಹೋವನಿಗೂ ನಮಗೂ ವಿರೋಧವಾಗಿ ತಿರುಗಿ
20 ಬೀಳಬೇಡಿರಿ. ಜೆರಹನ ಮಗನಾದ ಆಕಾನನು
ಯೆಹೋವನ ಸೊತ್ತನ್ನು ಕದ್ದುಕೊಂಡು ದ್ರೋಹಿ
ಯಾದಾಗ ಯೆಹೋವನ ಕೋಪವು ಇಸ್ರಾಯೇಲ್ಯರ
ಸರ್ವಸಭೆಯ ಮೇಲೆ ಬಂದಿತು. ಮತ್ತು ಅವನ
ಪಾಪದ ದೆಸೆಯಿಂದ ಅವನೊಡನೆ ಅನೇಕರು ಸಾಯ
ಬೇಕಾಯಿತಲ್ಲಾ ಎಂದು ಹೇಳಿದರು.
21 ಆಗ ರೂಬೇನ್ಯರೂ ಗಾದ್ಯರೂ ಮನಸ್ಸೆಕುಲದ
ಅರ್ಧಜನರೂ ಆ ಇಸ್ರಾಯೇಲ್ ಕುಲಾಧಿಪತಿ
22 ಗಳಿಗೆ—ದೇವದೇವನಾದ ಯೆಹೋವನು ಇದಕ್ಕೆ
ಸಾಕ್ಷಿ; ದೇವದೇವನಾದ ಯೆಹೋವನಿಗೆ ಇದು
ಗೊತ್ತುಂಟು. ಇಸ್ರಾಯೇಲ್ಯರಿಗೂ ಗೊತ್ತಾಗುವದು.
ನಾವು ದ್ರೋಹಿಗಳೂ ಯೆಹೋವನಿಗೆ ವಿರುದ್ಧವಾಗಿ
ಪಾಪಮಾಡಿದವರೂ ಆಗಿದ್ದರೆ ಆತನು ನಮ್ಮನ್ನು ಈ
23 ಹೊತ್ತೇ ಕೈಬಿಡಲಿ. ನಾವು ಯೆಹೋವನಿಂದ ವಿಮುಖ
ರಾಗಿ ಸರ್ವಾಂಗಹೋಮ, ಸಮಾಧಾನಯಜ್ಞ, ಧಾನ್ಯ
ನೈವೇದ್ಯ ಇವುಗಳನ್ನು ಸಮರ್ಪಿಸುವದಕ್ಕೋಸ್ಕರ
ಈ ವೇದಿಯನ್ನು ಕಟ್ಟಿದ್ದರೆ ಯೆಹೋವನು ತಾನೇ
24 ನಮ್ಮನ್ನು ಶಿಕ್ಷಿಸಲಿ. ಒಂದು ವಿಶೇಷವಾದ ಉದ್ದೇಶ
ದಿಂದ ಈ ಕೆಲಸವನ್ನು ಮಾಡಿದೆವು. ಮುಂದೆ ನಿಮ್ಮ
ಮಕ್ಕಳು ನಮ್ಮ ಮಕ್ಕಳಿಗೆ—ಇಸ್ರಾಯೇಲ್ ದೇವ
25 ರಾದ ಯೆಹೋವನಲ್ಲಿ ನಿಮಗೇನು ಪಾಲಿದೆ? ರೂಬೇ
ನ್ಯರೇ, ಗಾದ್ಯರೇ, ಯೆಹೋವನು ನಮಗೂ ನಿಮ
ಗೂ ನಡುವೆ ಯೊರ್ದನ್ ಹೊಳೆಯನ್ನು ಮೇರೆ
ಯಾಗಿಟ್ಟಿದ್ದಾನೆ. ಆತನಲ್ಲಿ ನಿಮಗೇನೂ ಪಾಲಿಲ್ಲ
ಎಂದು ಹೇಳಿ ಅವರನ್ನು ದೇವಭಕ್ತಿಯಿಂದ ತೊಲಗಿಸಿ
26 ಬಿಟ್ಟಾರು ಎಂಬ ಭಯದಿಂದ ನಾವು—ಬನ್ನಿರಿ, ಒಂದು
ವೇದಿಯನ್ನು ಕಟ್ಟೋಣ ಎಂದುಕೊಂಡು ಹಾಗೆಯೇ
ಮಾಡಿದೆವು. ಇದು ಸರ್ವಾಂಗಹೋಮಯಜ್ಞಗಳನ್ನು
27 ಸಮರ್ಪಿಸುವದಕ್ಕೋಸ್ಕರವಲ್ಲ; ಆದರೆ ಯೆಹೋ
ವನ ಸಾನ್ನಿಧ್ಯದಲ್ಲಿ ಸರ್ವಾಂಗಹೋಮ, ಯಜ್ಞ,
ಸಮಾಧಾನಯಜ್ಞ ಮೊದಲಾದವುಗಳನ್ನು ಸಮರ್ಪಿಸಿ
ಆರಾಧಿಸುವದಕ್ಕೆ ನಮಗೂ ಹಕ್ಕುಂಟೆಂಬದಕ್ಕೆ ಇದು
ನಮಗೂ ನಿಮಗೂ ನಮ್ಮ ಸಂತಾನಕ್ಕೂ ನಿಮ್ಮ
ಸಂತಾನಕ್ಕೂ ಸಾಕ್ಷಿಯಾಗಿರುವದು. ಇದರಿಂದ
ಮುಂದೆ ನಿಮ್ಮ ಮಕ್ಕಳು ನಮ್ಮ ಮಕ್ಕಳಿಗೆ—ಯೆಹೋ
ವನಲ್ಲಿ ನಿಮಗೆ ಪಾಲಿಲ್ಲವೆಂದು ಹೇಳುವದಕ್ಕೆ
28 ಆಸ್ಪದವಿಲ್ಲ. ಅವರು ಮುಂದೆ ನಮಗಾಗಲಿ
ನಮ್ಮ ಸಂತಾನದವರಿಗಾಗಲಿ ಈ ಪ್ರಕಾರ ಹೇಳಿದರೆ
ನಾವು ಅವರಿಗೆ—ಈ ಯೆಹೋವವೇದಿಯ ಮಾದರಿ
ಯನ್ನು ನೋಡಿರಿ; ನಮ್ಮ ಪಿತೃಗಳು ಇದನ್ನು
ಸರ್ವಾಂಗಹೋಮಯಜ್ಞಗಳನ್ನು ಸಮರ್ಪಿಸುವದ
ಕ್ಕೋಸ್ಕರ ಕಟ್ಟಲಿಲ್ಲ; ಇದು ನಮಗೂ ನಿಮಗೂ
ಮಧ್ಯದಲ್ಲಿ ಸಾಕ್ಷಿಯಾಗಿರುತ್ತದೆಯಷ್ಟೆ ಎಂದು ಹೇಳು
29 ವೆವು. ನಮ್ಮ ದೇವರಾದ ಯೆಹೋವನ ಗುಡಾರದ
ಮುಂದಿರುವ ಯಜ್ಞವೇದಿಯ ಹೊರತು ಸರ್ವಾಂ
ಗಹೋಮ, ಧಾನ್ಯನೈವೇದ್ಯ, ಸಮಾಧಾನಯಜ್ಞ
ಮೊದಲಾದವುಗಳನ್ನು ಸಮರ್ಪಿಸುವದಕ್ಕೋಸ್ಕರ ಬೇ
ರೊಂದು ವೇದಿಯನ್ನು ಕಟ್ಟಿ ಯೆಹೋವನಿಗೆ ವಿಮು
ಖರಾಗಿ ದ್ರೋಹಿಗಳಾಗುವದು ನಮಗೆ ದೂರವಾಗಿರಲಿ
ಅಂದರು.
30 ಯಾಜಕನಾದ ಫೀನೆಹಾಸನೂ ಅವನ ಜೊತೆ
ಯಲ್ಲಿ ಬಂದ ಕುಲಾಧಿಪತಿಗಳಾಗಿರುವ ಇಸ್ರಾಯೇಲ್
ಪ್ರಭುಗಳೂ ರೂಬೇನ್ ಗಾದ್ ಮನಸ್ಸೆಕುಲಗಳವರ
ಮಾತುಗಳನ್ನು ಕೇಳಿ ಸಂತೋಷಪಟ್ಟರು. ಮಹಾ 31

ಯಾಜಕ ಎಲ್ಲಾಜಾರನ ಮಗನಾದ ಫೀನೆಹಾಸನು
ರೂಬೇನ್ ಗಾದ್ ಮನಸ್ಸೆಕುಲಗಳವರಿಗೆ—ನೀವು
ಯೆಹೋವನಿಗೆ ವಿರುದ್ಧವಾಗಿ ಅಂಥ ದ್ರೋಹವನ್ನು
ಮಾಡಲಿಲ್ಲವಾದದರಿಂದ ಆತನು ನಮ್ಮ ಮಧ್ಯದಲ್ಲಿ
ರುತ್ತಾನೆಂದು ಈಗ ತಿಳಿಯಿತು. ಹೀಗಿರಲಾಗಿ ನೀವು
ಇಸ್ರಾಯೇಲ್ಯರನ್ನು ಯೆಹೋವನ ಶಿಕ್ಷಾಹಸ್ತಕ್ಕೆ
32 ತಪ್ಪಿಸಿದ್ದೀರಿ ಅಂದನು. ಮಹಾಯಾಜಕ ಎಲ್ಲಾಜಾ
ರನ ಮಗನಾದ ಫೀನೆಹಾಸನೂ ಪ್ರಭುಗಳೂ ಗಿಲ್ಯಾದ್
ಸೀಮೆಯಲ್ಲಿದ್ದ ರೂಬೇನ್ಯರು, ಗಾದ್ಯರು ಇವರ ಬಳಿ
ಯಿಂದ ಕಾನಾನ್ ದೇಶದಲ್ಲಿದ್ದ ಇಸ್ರಾಯೇಲ್ಯರ
ಬಳಿಗೆ ಬಂದು ಅವರಿಗೆ ಈ ವರ್ತಮಾನವನ್ನು ತಿಳಿ
33 ಸಲು ಅವರೂ ಬಹುಸಂತೋಷಪಟ್ಟು ದೇವರನ್ನು
ಕೊಂಡಾಡಿ ರೂಬೇನ್ ಗಾದ್ ಕುಲಗಳೊಡನೆ
ಯುದ್ಧಮಾಡಿ ಅವರ ದೇಶವನ್ನು ಹಾಳುಮಾಡ
34 ಬೇಕೆಂಬ ಆಲೋಚನೆಯನ್ನು ಬಿಟ್ಟರು. ರೂಬೇನ್ಯರೂ
ಗಾದ್ಯರೂ ಯೆಹೋವನೇ ದೇವರು ಎಂಬದಕ್ಕೆ ಈ
ವೇದಿಯೇ ಸಾಕ್ಷಿ ಎಂದು ಹೇಳಿ ಅದಕ್ಕೆ 1)ಏದ್
ಎಂಬ ಹೆಸರಿಟ್ಟರು.

ಯೆಹೋಶುವನ ಅಂತ್ಯಪ್ರಬೋಧನೆ.

23 ಯೆಹೋವನು ಸುತ್ತಣ ವಿರೋಧಿಗಳನ್ನು
ನಿರ್ಮೂಲಮಾಡಿ ಇಸ್ರಾಯೇಲ್ಯರಿಗೆ ವಿಶ್ರಾಂತಿ
2 ಕೊಟ್ಟನು. ತರುವಾಯ ಬಹುದಿನಗಳು ಗತಿಸಿದ
ಮೇಲೆ ದಿನತುಂಬಿದ ಮುದುಕನಾದ ಯೆಹೋಶುವನು
ಇಸ್ರಾಯೇಲ್ಯರ ಹಿರಿಯರು, ಪ್ರಭುಗಳು, ನ್ಯಾಯಾಧಿ
ಪತಿಗಳು, ಅಧಿಕಾರಿಗಳು ಇವರನ್ನೂ ಎಲ್ಲಾ ಇಸ್ರಾ
ಯೇಲ್ಯರನ್ನೂ ತನ್ನ ಬಳಿಗೆ ಕರಿಸಿ ಅವರಿಗೆ—ನಾನು
3 ದಿನತುಂಬಿದ ಮುದುಕನಾಗಿದ್ದೇನೆ. ನಿಮ್ಮ ದೇವ
ರಾದ ಯೆಹೋವನು ನಿಮಗೋಸ್ಕರ ಈ ಜನಾಂಗಗಳಿ
ಗೆಲ್ಲಾ ಮಾಡಿದ್ದೆಲ್ಲವನ್ನೂ ನೋಡಿದ್ದೀರಷ್ಟೆ; ಹೌದು,
ನಿಮಗಾಗಿ ಯುದ್ಧಮಾಡಿದಾತನು ನಿಮ್ಮ ದೇವರಾದ
4 ಯೆಹೋವನೇ. ನಾನು ಯೊರ್ದನಿನಿಂದ ಪಶ್ಚಿಮ
ಮಹಾಸಾಗರದ ವರೆಗೂ ಇರುವ ಜನಾಂಗಗಳಲ್ಲಿ
ಸಂಹೃತರಾದವರ ಮತ್ತು ಉಳಿದಿರುವವರ ದೇಶವನ್ನು
5 ನಿಮಗೆ ಸ್ವಾಸ್ತ್ಯವಾಗಿ ಕೊಟ್ಟಿದ್ದೇನೆ. ನಿಮ್ಮ ದೇವ
ರಾದ ಯೆಹೋವನು ತಾನೇ ಅವರನ್ನು ನಿಮ್ಮ
ಕಣ್ಣಮುಂದೆ ಹೊರಡಿಸಿಬಿಡುವನು. ಆತನ ವಾಗ್ದಾನ
ದಂತೆ ಅವರ ದೇಶವನ್ನು ನೀವು ಸ್ವತಂತ್ರಿಸಿಕೊಳ್ಳು
6 ವಿರಿ. ಮೋಶೆಯ ಧರ್ಮಶಾಸ್ತ್ರವಿಧಿಗಳನ್ನೆಲ್ಲಾ ಸ್ಥಿರ
ಚಿತ್ತದಿಂದ ಕೈಕೊಳ್ಳಿರಿ; ಎಡಕ್ಕಾದರೂ ಬಲಕ್ಕಾ
7 ದರೂ ಓರೆಯಾಗಬೇಡಿರಿ. ಉಳಿದಿರುವ ಈ ಜನಾಂಗ
ಗಳ ಜೊತೆಯಲ್ಲಿ ಸೇರಿಕೊಳ್ಳಬೇಡಿರಿ. ಅವರ ದೇವತೆ
ಗಳ ಹೆಸರು ಹೇಳಿ ಆರಾಧಿಸಲೂ ಪ್ರಮಾಣಮಾಡಲೂ
ಬಾರದು, ಅವುಗಳಿಗೆ ಅಡ್ಡಬಿದ್ದು ಸೇವಿಸಲೂ ಬಾರದು.
8 ಈ ವರೆಗೆ ಹೇಗೋ ಹಾಗೆಯೇ ಇನ್ನು ಮುಂದಕ್ಕೂ
ನಿಮ್ಮ ದೇವರಾದ ಯೆಹೋವನನ್ನೇ ಹೊಂದಿಕೊಂಡಿರ್ರಿ.
9 ಯೆಹೋವನು ಮಹಾಪರಾಕ್ರಮಿಗಳಾದ ಜನಾಂಗ
ಗಳನ್ನು ನಿಮ್ಮೆದುರಿನಿಂದ ಓಡಿಸಿಬಿಟ್ಟಿದ್ದಾನೆ; ನಿಮ್ಮ
ಮುಂದೆ ಈ ವರೆಗೆ ಒಬ್ಬನೂ ನಿಲ್ಲಲಿಲ್ಲವಲ್ಲಾ.
ನಿಮ್ಮ ದೇವರಾದ ಯೆಹೋವನು ತನ್ನ ವಾಗ್ದಾನ 10
ದಂತೆಯೇ ನಿಮಗೋಸ್ಕರ ಯುದ್ಧಮಾಡಿದ್ದರಿಂದ
ನಿಮ್ಮಲ್ಲಿ ಒಬ್ಬನು ಸಾವಿರ ಜನರನ್ನು ಓಡಿಸುವದಕ್ಕೆ
ಶಕ್ತನಾದನು. ಹೀಗಿರುವದರಿಂದ ನಿಮ್ಮ ನಿಮ್ಮ 11
ಮನಸ್ಸುಗಳನ್ನು ಬಹು ಜಾಗರೂಕತೆಯಿಂದ ಕಾಪಾ
ಡಿಕೊಂಡು ನಿಮ್ಮ ದೇವರಾದ ಯೆಹೋವನನ್ನೇ
ಪ್ರೀತಿಸಿರಿ. ನೀವು ದೇವರಿಗೆ ವಿಮುಖರಾಗಿ ನಿಮ್ಮ 12
ಮಧ್ಯದಲ್ಲಿ ಉಳಿದಿರುವ ಈ ಜನಾಂಗಗಳೊಡನೆ ಕೊಟ್ಟು
ತಂದು ಮಿಶ್ರವಾದರೆ ನಿಮ್ಮ ದೇವರಾದ ಯೆಹೋ 13
ವನು ಅವರನ್ನು ನಿಮ್ಮ ಎದುರಿನಿಂದ ಹೊರಡಿಸುವದೇ
ಇಲ್ಲವೆಂದು ತಿಳಿದುಕೊಳ್ಳಿರಿ. ಅವರೇ ನಿಮಗೆ
ಉರುಲೂ ಬೋನೂ ಆಗುವರು. ಅವರು ಪಕ್ಕೆಗೆ
ಹೊಡೆಯುವ ಕೊರಡೆಯಂತೆಯೂ ಕಣ್ಣುಚುಚ್ಚುವ
ಮುಳ್ಳಿನಂತೆಯೂ ಇರುವರು. ಕಡೆಯಲ್ಲಿ ನಿಮ್ಮ
ದೇವರಾದ ಯೆಹೋವನು ನಿಮಗೆ ಕೊಟ್ಟ ಈ ಉತ್ತಮ
ದೇಶದಲ್ಲಿ ಇಲ್ಲದಂತಾಗುವಿರಿ. ಭೂಲೋಕದವರೆಲ್ಲರೂ 14
ಹೋಗುವ ಮಾರ್ಗವನ್ನು ನಾನೂ ಈಗ ಅನುಸರಿಸ
ಬೇಕು. ನಿಮ್ಮ ದೇವರಾದ ಯೆಹೋವನು ನಿಮ್ಮ
ವಿಷಯದಲ್ಲಿ ನುಡಿದ ಆಶೀರ್ವಚನಗಳಲ್ಲಿ ಒಂದೂ
ವ್ಯರ್ಥವಾಗಲಿಲ್ಲ; ಎಲ್ಲವೂ ತಪ್ಪದೆ ನೆರವೇರಿದ
ವೆಂಬದು ನಿಮಗೆ ಮನದಟ್ಟಾಯಿತಲ್ಲಾ. ನಿಮ್ಮ 15
ದೇವರಾದ ಯೆಹೋವನು ತನ್ನ ವಾಗ್ದಾನಕ್ಕನು
ಸಾರವಾಗಿ ಈಗ ನಿಮಗೆ ಎಲ್ಲಾ ತರದ ಮೇಲನ್ನು
ಅನುಗ್ರಹಿಸಿದಂತೆಯೇ ನಿಮ್ಮ ಮೇಲೆ ಸಕಲ
ವಿಧವಾದ ಕೇಡುಗಳನ್ನೂ ಬರಮಾಡಿ ತಾನು ಕೊಟ್ಟಿ
ರುವ ಈ ಉತ್ತಮದೇಶದಿಂದ ನಿಮ್ಮನ್ನು ತೆಗೆದು
ನಾಶಮಾಡಿಬಿಡುವನು. ನೀವು ದೇವರಾದ ಯೆಹೋ 16
ವನ ನಿಬಂಧನೆಯನ್ನು ಮೀರಿ ಅನ್ಯದೇವತೆಗಳಿಗೆ
ಅಡ್ಡಬಿದ್ದು ಸೇವಿಸಿದರೆ ಯೆಹೋವನ ಕೋಪಾಗ್ನಿಯು
ನಿಮ್ಮ ಮೇಲೆ ಉರಿಯುವದು; ಮತ್ತು ಆತನು
ಕೊಟ್ಟ ಒಳ್ಳೆಯ ದೇಶದಿಂದ ನೀವು ತೆಗೆದುಹಾಕಲ್ಪಟ್ಟು
ಬೇಗನೆ ನಾಶವಾದೀರಿ ಅಂದನು.

ಇಸ್ರಾಯೇಲ್ಯರು ತಾವು ಯೆಹೋವನನ್ನೇ ಸೇವಿಸುವೆವೆಂದು
ಯೆಹೋಶುವನೊಡನೆ ಪ್ರಮಾಣಮಾಡಿದ್ದು.

ತರುವಾಯ ಯೆಹೋಶುವನು ಇಸ್ರಾಯೇಲ್ಯರ 24
ಎಲ್ಲಾ ಕುಲದವರನ್ನು ಶೆಕೆಮಿನಲ್ಲಿ ಕೂಟಕ್ಕೆ
ಕರಿಸಲು ಅವರ ಹಿರಿಯರೂ ಪ್ರಧಾನರೂ ನ್ಯಾಯಾಧಿ
ಪತಿಗಳೂ ಅಧಿಕಾರಿಗಳೂ ಬಂದು ದೇವರ ಸನ್ನಿಧಿ
ಯಲ್ಲಿ ಕಾಣಿಸಿಕೊಂಡರು. ಯೆಹೋಶುವನು ಅವ 2
ರೆಲ್ಲರಿಗೆ—ನಿಮ್ಮ ದೇವರಾದ ಯೆಹೋವನು ಹೇಳು
ವದೇನಂದರೆ—ಅಬ್ರಹಾಮ್, ನಾಹೋರ್ ಎಂಬ
ವರ ತಂದೆಯಾದ ತೆರಹ ಮೊದಲಾದ ನಿಮ್ಮ ಮೂಲ
ಪುರುಷರು ಪೂರ್ವದಲ್ಲಿ [ಯೂಫ್ರೇಟೀಸ್] ಹೊಳೆಯ
ಆಚೆಯಲ್ಲಿದ್ದು ಅನ್ಯದೇವತೆಗಳನ್ನು ಪೂಜಿಸುತ್ತಿ

1) ಏದ್ ಅಂದರೆ ಸಾಕ್ಷಿ.

3 ದ್ದರು. ನಾನು ನಿಮ್ಮ ಪಿತೃವಾದ ಅಬ್ರಹಾಮ
ನನ್ನು ಅಲ್ಲಿಂದ ಕರತಂದು ಕಾನಾನ್ ದೇಶದಲ್ಲೆಲ್ಲಾ
ಸಂಚಾರಮಾಡಿಸಿ ಇಸಾಕನೆಂಬ ಮಗನನ್ನು ಕೊಟ್ಟು
4 ಅವನ ಸಂತಾನವನ್ನು ಹೆಚ್ಚಿಸಿದೆನು. ಇಸಾಕನಿಗೆ
ಯಾಕೋಬ್, ಏಸಾವ್ ಎಂಬಿಬ್ಬರು ಮಕ್ಕಳನ್ನು
ಅನುಗ್ರಹಿಸಿ ಏಸಾವನಿಗೆ ಸೇಯೀರ್‌ಪರ್ವತವನ್ನು
ಸ್ವಾಸ್ತ್ಯವಾಗಿ ದಯಪಾಲಿಸಿದೆನು. ಯಾಕೋಬ
ನಾದರೋ ತನ್ನ ಮಕ್ಕಳ ಸಹಿತವಾಗಿ ಐಗುಪ್ತ
5 ದೇಶಕ್ಕೆ ಹೋದನು. ತರುವಾಯ ನಾನು ಮೋಶೆ
ಆರೋನರನ್ನು ಕಳುಹಿಸಿ ಆ ಐಗುಪ್ತ್ಯರಲ್ಲಿ ಅನೇಕ
ಮಹತ್ಕಾರ್ಯಗಳನ್ನು ನಡಿಸಿ ಅವರನ್ನು ಬಾಧಿಸಿ
6 ನಿಮ್ಮನ್ನು ಹೊರಗೆ ಕರತಂದೆನು. ನಿಮ್ಮ ಪಿತೃಗಳು
ಐಗುಪ್ತದಿಂದ ಬಿಡುಗಡೆಯಾಗಿ ಕೆಂಪುಸಮುದ್ರಕ್ಕೆ
ಬರುತ್ತಿರುವಾಗ ಐಗುಪ್ತ್ಯರು ರಥಾಶ್ವಬಲಗಳ ಸಹಿತ
ವಾಗಿ ಅವರನ್ನು ಆ ಸಮುದ್ರದ ವರೆಗೂ ಹಿಂದಟ್ಟಿದರು.
7 ಆಗ ಅವರು ಯೆಹೋವನಾದ ನನಗೆ ಮೊರೆಯಿಡಲು
1)ನಾನು ಅವರಿಗೂ ಐಗುಪ್ತ್ಯರಿಗೂ ಮಧ್ಯದಲ್ಲಿ
ಕಾರ್ಗತ್ತಲೆಯನ್ನುಂಟುಮಾಡಿದೆನು. ಇದಲ್ಲದೆ ನಾನು
ಐಗುಪ್ತ್ಯರ ಮೇಲೆ ಸಮುದ್ರವನ್ನು ಬರಮಾಡಿ ಅವ
ರನ್ನು ಮುಚ್ಚಿಬಿಟ್ಟೆನು. ನಾನು ಐಗುಪ್ತದಲ್ಲಿ ಏನೇನು
ಮಾಡಿದೆನೆಂಬದಕ್ಕೆ ನೀವು ಸಾಕ್ಷಿಗಳಾಗಿದ್ದೀರಿ.
8 ನೀವು ಬಹುಕಾಲದ ವರೆಗೆ ಅರಣ್ಯದಲ್ಲಿದ್ದನಂತರ
ನಿಮ್ಮನ್ನು ಯೊರ್ದನಿನ ಆಚೆಯಲ್ಲಿ ಅಮೋರಿಯರ
ದೇಶಕ್ಕೆ ಕರತಂದೆನು. ನಿಮ್ಮೊಡನೆ ಯುದ್ಧಕ್ಕೆ ಬಂದ
ಅವರನ್ನು ನಿಮ್ಮ ಕೈಗೆ ಕೊಟ್ಟುಬಿಟ್ಟೆನು. ನೀವು ಅವರ
ದೇಶವನ್ನು ಸ್ವತಂತ್ರಿಸಿಕೊಂಡಿರಿ. ಅವರನ್ನು ನಿಮ್ಮೆ
9 ದುರಿನಲ್ಲಿ ಸಂಹರಿಸಿದೆನು. ಅನಂತರ ಮೋವಾಬ್ಯರ
ಅರಸನೂ ಚಿಪ್ಪೋರನ ಮಗನೂ ಆದ ಬಾಲಾಕನು
ಇಸ್ರಾಯೇಲ್ಯರಾದ ನಿಮಗೆ ವಿರೋಧವಾಗಿ ಯುದ್ಧ
ಮಾಡುವದಕ್ಕೆ ಎದ್ದು ನಿಮ್ಮನ್ನು ಶಪಿಸುವದ
ಕ್ಕೋಸ್ಕರ ಬೆಯೋರನ ಮಗನಾದ ಬಿಳಾಮನನ್ನು
10 ಕರೇಕಳುಹಿಸಿದನು. ಆದರೆ ನಾನು ಆ ಬಿಳಾಮನಿಗೆ
ಸಮ್ಮತಿಕೊಡಲಿಲ್ಲವಾದದರಿಂದ ಅವನು ನಿಮ್ಮನ್ನು ಆಶೀ
ರ್ವದಿಸುತ್ತಲೇ ಇರಬೇಕಾಯಿತು. ಹೀಗೆ ನಿಮ್ಮನ್ನು
11 ಅವನ ಕೈಗೆ ಬೀಳದಂತೆ ತಪ್ಪಿಸಿದೆನು. ನೀವು
ಯೊರ್ದನನ್ನು ದಾಟಿ ಯೆರಿಕೋವಿಗೆ ಬಂದಿರಿ.
ಆಗ ಯೆರಿಕೋವಿನವರು, ಅಮೋರಿಯರು, ಪೆರಿಜ್ಜೀ
ಯರು, ಕಾನಾನ್ಯರು, ಹಿತ್ತಿಯರು, ಗಿರ್ಗಾಷಿಯರು,
ಹಿವ್ವಿಯರು, ಯೆಬೂಸಿಯರು ಇವರೆಲ್ಲಾ ನಿಮಗೆ
ವಿರೋಧವಾಗಿ ಯುದ್ಧಕ್ಕೆ ಬರಲು ನಾನು ಅವರೆಲ್ಲ
12 ರನ್ನೂ ನಿಮ್ಮ ಕೈಗೆ ಒಪ್ಪಿಸಿದೆನು. ಇದಲ್ಲದೆ ನಾನು
ಕಡಜದ ಹುಳಗಳನ್ನು ನಿಮ್ಮ ಮುಂದಾಗಿ ಕಳುಹಿಸಿ
ದೆನು. ಅವು ಅಮೋರಿಯರ ಅರಸರಿಬ್ಬರನ್ನೂ
ಓಡಿಸಿಬಿಟ್ಟವು. ಇದು ನಿಮ್ಮ ಕತ್ತಿಬಿಲ್ಲುಗಳಿಂದಾ
13 ದದ್ದಲ್ಲ. ನೀವು ವ್ಯವಸಾಯಮಾಡದೆ ಬೆಳೆದಿರುವ
ಭೂಮಿಯನ್ನು ನಿಮಗೆ ಕೊಟ್ಟೆನು. ನೀವು ಕಟ್ಟದೆ
ಇರುವ ಪಟ್ಟಣಗಳಲ್ಲಿ ನೀವು ವಾಸಿಸುತ್ತೀರಿ. ನೀವು
ನೆಟ್ಟು ಬೆಳಸದೆ ಇರುವ ದ್ರಾಕ್ಷೆ, ಎಣ್ಣೇಮರ ಇವು
ಗಳ ತೋಟಗಳನ್ನು ಅನುಭವಿಸುತ್ತಿದ್ದೀರಿ ಎಂಬದೇ.
ಹೀಗಿರುವದರಿಂದ ನೀವು ಯೆಹೋವನಲ್ಲಿ ಭಯ
ಭಕ್ತಿಯುಳ್ಳವರಾಗಿರ್ರಿ; ಆತನನ್ನು ಪೂರ್ಣಮನಸ್ಸಿ
ನಿಂದಲೂ ಯಥಾರ್ಥಚಿತ್ತದಿಂದಲೂ ಸೇವಿಸಿರಿ.
ನಿಮ್ಮ ಪೂರ್ವಿಕರು [ಯೂಫ್ರೇಟೀಸ್] ನದಿಯ ಆಚೆ
ಯಲ್ಲಿಯೂ ಐಗುಪ್ತದಲ್ಲಿಯೂ ಪೂಜಿಸುತ್ತಿದ್ದ
ದೇವತೆಗಳನ್ನು ನಿಮ್ಮಲ್ಲಿಂದ ತೆಗೆದುಹಾಕಿರಿ; ಯೆಹೋ
ವನನ್ನೇ ಸೇವಿಸಿರಿ. ಯೆಹೋವನನ್ನು ಸೇವಿಸು
ವದು ನಿಮಗೆ ಸರಿಕಾಣದಿದ್ದರೆ ಯಾರನ್ನು ಸೇವಿಸ
ಬೇಕೆಂದಿದ್ದೀರಿ? ಈ ಹೊತ್ತೇ ಆರಿಸಿಕೊಳ್ಳಿರಿ. ನಿಮ್ಮ
ಪೂರ್ವಿಕರು [ಯೂಫ್ರೇಟೀಸ್] ನದಿಯ ಆಚೆಯಲ್ಲಿ
ಸೇವಿಸುತ್ತಿದ್ದ ದೇವತೆಗಳೋ ಈ ದೇಶದ ಮೂಲ
ನಿವಾಸಿಗಳಾದ ಅಮೋರಿಯರ ದೇವತೆಗಳೋ, ಹೇಳಿರಿ.
ನಾನೂ ನನ್ನ ಮನೆಯವರೂ ಯೆಹೋವನನ್ನೇ
ಸೇವಿಸುವೆವು ಅಂದನು.

ಅದಕ್ಕೆ ಜನರು—ಯೆಹೋವನ ಸೇವೆಯನ್ನು
ಬಿಟ್ಟು ಅನ್ಯದೇವತೆಗಳನ್ನು ಸೇವಿಸುವದು ನಮಗೆ
ದೂರವಾಗಿರಲಿ; ನಾವು ದಾಸತ್ವದಲ್ಲಿದ್ದ ಐಗುಪ್ತದಿಂದ
ನಮ್ಮನ್ನೂ ನಮ್ಮ ಪಿತೃಗಳನ್ನೂ ಹೊರತಂದು ನಮ್ಮೆ
ದುರಿನಲ್ಲಿಯೇ ಮಹತ್ಕಾರ್ಯಗಳನ್ನು ನಡಿಸಿ ನಮ್ಮ
ಎಲ್ಲಾ ಪ್ರಯಾಣಗಳಲ್ಲಿಯೂ ದಾಟಿಬಂದ ಅನ್ಯ
ಜನಾಂಗಗಳ ಮಧ್ಯದಲ್ಲಿಯೂ ನಮ್ಮನ್ನು ಕಾಪಾಡಿ
ದವನು ನಮ್ಮ ದೇವರಾದ ಯೆಹೋವನೇ ಅಲ್ಲವೇ.
ಈ ದೇಶವಾಸಿಗಳಾಗಿದ್ದ ಅಮೋರಿಯರು ಮೊದಲಾದ
ಸರ್ವ ಜನಾಂಗಗಳನ್ನು ನಮ್ಮ ಮುಂದೆ ಹೊರಡಿಸಿ
ಬಿಟ್ಟವನು ಆತನೇ. ಆದದರಿಂದ ನಾವೂ ಯೆಹೋ
ವನನ್ನೇ ಸೇವಿಸುವೆವು; ಆತನೇ ನಮ್ಮ ದೇವರು
ಎಂದು ಉತ್ತರಕೊಟ್ಟರು. ಆಗ ಯೆಹೋಶುವನು
ಅವರಿಗೆ—ನೀವು ಯೆಹೋವನನ್ನು ಸೇವಿಸಲಾರಿರಿ.
ಆತನು ಪರಿಶುದ್ಧನೂ ತನಗೆ ಸಲ್ಲಬೇಕಾದ ಗೌರ
ವವನ್ನು ಮತ್ತೊಬ್ಬರಿಗೆ ಸಲ್ಲಗೊಡಿಸದವನೂ ಆಗಿ
ರುವ ದೇವರು. ಆತನು ನಿಮ್ಮ ದ್ರೋಹಾಪರಾಧಗಳ
ನ್ನು ಕ್ಷಮಿಸುವದಿಲ್ಲ. ನೀವು ಆತನನ್ನು ಬಿಟ್ಟು ಅನ್ಯ
ದೇವತೆಗಳನ್ನು ಸೇವಿಸಿದರೆ ಆತನು ವಿಮುಖನಾಗಿ
ಮೇಲಿಗೆ ಬದಲಾಗಿ ಕೇಡನ್ನು ಬರಮಾಡಿ ನಿಮ್ಮನ್ನು
ನಾಶಮಾಡಿಬಿಡುವನು ಅಂದನು. ಜನರು ಯೆಹೋ
ಶುವನಿಗೆ—ಇಲ್ಲ, ನಾವು ಯೆಹೋವನನ್ನೇ ಸೇವಿಸು
ವೆವು ಅಂದರು. ಅವನು ಅವರಿಗೆ—ನೀವು ಯೆಹೋ
ವನ ಸೇವೆಯನ್ನು ಆರಿಸಿಕೊಂಡಿರುವದಕ್ಕೆ ನೀವೇ
ಸಾಕ್ಷಿಗಳು ಎನ್ನಲು ಅವರು—ಹೌದು, ನಾವೇ
ಸಾಕ್ಷಿಗಳು ಅಂದರು. ಆಗ ಯೆಹೋಶುವನು ಅವ
ರಿಗೆ—ಹಾಗಾದರೆ ನಿಮ್ಮಲ್ಲಿರುವ ಅನ್ಯದೇವತೆಗಳನ್ನು
ತೆಗೆದುಹಾಕಿ ಇಸ್ರಾಯೇಲ್ ದೇವರಾದ ಯೆಹೋವನ
ಕಡೆಗೆ ಮನಸ್ಸನ್ನು ತಿರುಗಿಸಿಕೊಳ್ಳಿರಿ ಅಂದನು.
ಅದಕ್ಕೆ ಜನರು—ನಮ್ಮ ದೇವರಾದ ಯೆಹೋವ
ನನ್ನೇ ಸೇವಿಸುತ್ತಾ ಆತನ ಮಾತನ್ನು ಕೇಳುವೆವು
ಅಂದರು. ಹೀಗೆ ಯೆಹೋಶುವನು ಶೆಕೆಮಿನಲ್ಲಿ
ಇಸ್ರಾಯೇಲ್ಯರೊಡನೆ ಒಡಂಬಡಿಕೆಯನ್ನು ಮಾಡಿ

1) ಮೂಲ: ಆತನು.

ಕೊಂಡು ಅವರಿಗೆ ನ್ಯಾಯವಿಧಿಗಳನ್ನು ನೇಮಿಸಿದನು.
26 ಇದಲ್ಲದೆ ಅವನು ಈ ಎಲ್ಲಾ ಮಾತುಗಳನ್ನು ದೇವರ
ಧರ್ಮಶಾಸ್ತ್ರಗ್ರಂಥದಲ್ಲಿ ಬರೆದು ಒಂದು ದೊಡ್ಡ
ಕಲ್ಲನ್ನು ತಂದು ಯೆಹೋವನ ಆಲಯದ ಬಳಿಯಲ್ಲೇ
27 ಇದ್ದ ಅಲ್ಲಾವೃಕ್ಷದ ಅಡಿಯಲ್ಲಿ ನಿಲ್ಲಿಸಿ ಎಲ್ಲಾ ಜನ
ರಿಗೆ—ಇಗೋ, ಈ ಕಲ್ಲು ನಮ್ಮ ವಿಷಯದಲ್ಲಿ
ಸಾಕ್ಷಿಹೇಳುವದು. ಯೆಹೋವನು ನಮಗೆ ಹೇಳಿದ
ಎಲ್ಲಾ ಮಾತುಗಳನ್ನು ಇದು ಕೇಳಿರುವದರಿಂದ
ನೀವು ನಿಮ್ಮ ದೇವರಾದ ಆತನನ್ನು ಅಲ್ಲಗಳೆದರೆ ಇದೇ
ನಿಮಗೆ ವಿರೋಧಸಾಕ್ಷಿಯಾಗಿರುವದು ಎಂದು ಹೇಳಿ
28 ಅವರನ್ನು ಅವರವರ ಸ್ವಾಸ್ತ್ಯಗಳಿಗೆ ಕಳುಹಿಸಿದನು.

ಯೆಹೋಶುವನ ಮರಣ.

29 ಇದಾದ ಮೇಲೆ ಯೆಹೋವನ ಸೇವಕನಾದ
ನೂನನ ಮಗ ಯೆಹೋಶುವನು ನೂರ ಹತ್ತು ವರುಷ
30 ದವನಾಗಿ ಮರಣಹೊಂದಿದನು. ಅವನ ಶವವನ್ನು
ಎಫ್ರಾಯಿೂಮ್ ಪರ್ವತಪ್ರದೇಶದಲ್ಲಿ ಗಾಷ್ ಬೆಟ್ಟದ
ಉತ್ತರದಿಕ್ಕಿನಲ್ಲಿರುವ ತಿಮ್ನತ್‌ಸೆರಹ ಎಂಬ ಅವನ
ಸ್ವಾಸ್ತ್ಯಭೂಮಿಯಲ್ಲಿ ಸಮಾಧಿಮಾಡಿದರು. ಯೆ 31
ಹೋಶುವನ ದಿನಗಳಲ್ಲಿಯೂ ಆವನ ಕಾಲದಿಂದ
ಇನ್ನೂ ಜೀವಿಸುತ್ತಾ ಯೆಹೋವನು ಇಸ್ರಾಯೇಲ್ಯರಿ
ಗೋಸ್ಕರ ನಡಿಸಿದ ಮಹತ್ಕಾರ್ಯಗಳಿಗೆ ಸಾಕ್ಷಿಗಳಾ
ಗಿದ್ದ ಹಿರಿಯರ ದಿನಗಳಲ್ಲಿಯೂ ಇಸ್ರಾಯೇಲ್ಯರು
ಯೆಹೋವನನ್ನು ಸೇವಿಸುತ್ತಿದ್ದರು. ಇಸ್ರಾಯೇ 32
ಲ್ಯರು ಐಗುಪ್ತದಿಂದ ತಂದ ಯೋಸೇಫನ ಎಲುಬು
ಗಳನ್ನು, ಯಾಕೋಬನು ಶೆಕೆಮನ ತಂದೆಯಾದ
ಹಮೋರನ ಮಕ್ಕಳಿಂದ ನೂರು ವರಹಾ ಕೊಟ್ಟು
ಕೊಂಡುಕೊಂಡ ಶೆಕೆಮ್ ಊರಿನ ಹೊಲದಲ್ಲಿ ಹೂಣಿ
ಟ್ಟರು. ಆ ಹೊಲವು ಯೋಸೇಫ್ಯರ ಸ್ವಾಸ್ತ್ಯವಾ
ಯಿತು. ಆರೋನನ ಮಗನಾದ ಎಲ್ಲಾಜಾರನೂ 33
ಮರಣಹೊಂದಿದನು. ಅವನ ಶವವನ್ನು ಎಫ್ರಾಯಿೂ
ಮ್ ಪರ್ವತಪ್ರಾಂತದಲ್ಲಿ ಅವನ ಮಗನಾದ ಫೀನೆಹಾ
ಸನ ಪಾಲಿಗೆ ಬಂದ ಗುಡ್ಡದಲ್ಲಿ ಸಮಾಧಿಮಾಡಿದರು.

---

# THE BOOK OF JUDGES

## ನ್ಯಾಯಸ್ಥಾಪಕರು

ಕಾನಾನ್‌ದೇಶವು ಸ್ವಾಧೀನವಾಗುವಲ್ಲಿ ಸಂಭವಿಸಿದ
ಕೆಲವು ವಿಶೇಷವಾದ ಸಂಗತಿಗಳು.

1 ಯೆಹೋಶುವನು ಮರಣಹೊಂದಿದನಂತರ ಇಸ್ರಾ
ಯೇಲ್ಯರು—ಕಾನಾನ್ಯರೊಡನೆ ಯುದ್ಧಮಾಡುವದಕ್ಕೆ
ನಮ್ಮಲ್ಲಿ ಮೊದಲು ಯಾರು ಹೋಗಬೇಕು
2 ಎಂದು ಯೆಹೋವನನ್ನು ಕೇಳಲು ಆತನು ಅವ
ರಿಗೆ—ಯೆಹೂದ್ಯರು ಹೋಗಲಿ; ಇಗೋ, ದೇಶವನ್ನು
3 ಅವರಿಗೆ ಒಪ್ಪಿಸಿದ್ದೇನೆ ಅಂದನು. ಆಗ ಯೆಹೂ
ದ್ಯರು ತಮ್ಮ ಸಹೋದರರಾದ ಸಿಮೆಯೋನ್ಯರಿಗೆ—
ಕಾನಾನ್ಯರೊಡನೆ ಯುದ್ಧಮಾಡುವದಕ್ಕೋಸ್ಕರ ನೀವು
ನಮ್ಮ ಸಂಗಡ ನಮ್ಮ ಸ್ವಾಸ್ತ್ಯಭೂಮಿಗೆ ಬನ್ನಿರಿ;
ಅನಂತರ ನಾವೂ ನಿಮ್ಮ ಸಂಗಡ ನಿಮ್ಮ ಸ್ವಾಸ್ತ್ಯ
4 ಭೂಮಿಗೆ ಬರುವೆವು ಎಂದು ಹೇಳಲು ಅವರು ಒಪ್ಪಿ
ಯೆಹೂದ್ಯರ ಜೊತೆಯಲ್ಲಿ ಯುದ್ಧಕ್ಕೆ ಹೋದರು.
ಆಗ ಯೆಹೋವನು ಕಾನಾನ್ಯರನ್ನೂ ಪೆರಿಜ್ಜೀಯ
ರನ್ನೂ ಅವರ ಕೈಗೆ ಒಪ್ಪಿಸಿದ್ದರಿಂದ ಅವರು ಅವ
ರಲ್ಲಿ ಹತ್ತು ಸಾವಿರ ಮಂದಿಯನ್ನು ಬೆಜೆಕಿನಲ್ಲಿ ಹತ
5 ಮಾಡಿದರು. ಅವರು ಅಲ್ಲಿ ಅದೋನೀಬೆಜೆಕನನ್ನು
ಸಂಧಿಸಿ ಅವನೊಡನೆ ಯುದ್ಧಮಾಡಿ ಕಾನಾನ್ಯರನ್ನೂ
6 ಪೆರಿಜ್ಜೀಯರನ್ನೂ ಸೋಲಿಸಿದರು. ಅದೋನೀಬೆಜೆ
ಕನು ಓಡಿಹೋಗಲು ಅವನನ್ನು ಹಿಂದಟ್ಟಿ ಹಿಡಿದು
ಅವನ ಕೈಕಾಲುಗಳ ಹೆಬ್ಬೆರಳುಗಳನ್ನು ಕತ್ತರಿಸಿ
ಬಿಟ್ಟರು. ಆಗ ಅದೋನೀಬೆಜೆಕನು—ನಾನು ಕೈ 7
ಕಾಲುಗಳ ಹೆಬ್ಬೆರಳುಗಳನ್ನು ಕತ್ತರಿಸಿಬಿಟ್ಟ ಎಪ್ಪತ್ತು
ಮಂದಿ ಅರಸರು ನನ್ನ ಮೇಜಿನ ಕೆಳಗೆ ಬೀಳುವ
ಚೂರುಗಳನ್ನು ಕೂಡಿಸಿಕೊಂಡು ತಿನ್ನುತ್ತಿದ್ದರು;
ನಾನು ಅವರಿಗೆ ಮಾಡಿದಂತೆಯೇ ದೇವರು ನನಗೆ
ಮಾಡಿದ್ದಾನೆ ಅಂದನು. ಅವರು ಅವನನ್ನು ಯೆರೂ
ಸಲೇಮಿಗೆ ತೆಗೆದುಕೊಂಡು ಬರಲು ಅಲ್ಲಿ ಸತ್ತನು.
ಯೆಹೂದ್ಯರು ಯೆರೂಸಲೇಮಿನವರೊಡನೆ ಯುದ್ಧ 8
ಮಾಡಿ ಅದನ್ನು ಹಿಡಿದು ಜನರನ್ನು ಕತ್ತಿಯಿಂದ
ಸಂಹರಿಸಿ ಪಟ್ಟಣಕ್ಕೆ ಬೆಂಕಿಹೊತ್ತಿಸಿದರು. ತರುವಾಯ 9
ಅವರು ಹೋಗಿ ಪರ್ವತಪ್ರದೇಶ, ದಕ್ಷಿಣ ಸೀಮೆ,
ಇಳಕಲಿನ ಪ್ರದೇಶ ಇವುಗಳಲ್ಲಿದ್ದ ಕಾನಾನ್ಯರೊಡನೆ
ಯುದ್ಧಮಾಡಿದರು.
ಅವರು ಮುಂಚೆ ಕಿರ್ಯತರ್ಬ ಎಂಬ ಹೆಸರಿದ್ದ 10
ಹೆಬ್ರೋನಿಗೆ ಹೋಗಿ ಅಲ್ಲಿದ್ದ ಕಾನಾನ್ಯರ ಮೇಲೆ
ಬಿದ್ದು ಅವರಲ್ಲಿ ಶೇಷೈ, ಅಹೀಮನ್, ತಲ್ಮೈ ಎಂಬ
ವರನ್ನು ಹೊಡೆದುಬಿಟ್ಟರು. ಅಲ್ಲಿಂದ ದೆಬೀರಿನವ 11
ರಿಗೆ ವಿರೋಧವಾಗಿ ಹೋದರು; ದೆಬೀರಕ್ಕೆ ಮುಂಚೆ
ಕಿರ್ಯತ್‌ಸೇಫೆರ್ ಎಂಬ ಹೆಸರಿತ್ತು. ಕಿರ್ಯತ್ 12
ಸೇಫೆರನ್ನು ಹಿಡಿದುಕೊಳ್ಳುವವನಿಗೆ ನನ್ನ ಮಗಳಾದ
ಅಕ್ಸಾ ಎಂಬಾಕೆಯನ್ನು ಮದುವೆಮಾಡಿಕೊಡುತ್ತೇ

13 ನೆಂದು ಕಾಲೇಬನು ಹೇಳಲು 1)ಅವನ ತಮ್ಮನೂ
ಕೆನಜನ ಮಗನೂ ಆದ ಒತ್ನೀಯೇಲನು ಅದನ್ನು
ಹಿಡಿದನು. ಆಗ ಕಾಲೇಬನು ತನ್ನ ಮಗಳಾದ
ಅಕ್ಸಾ ಎಂಬಾಕೆಯನ್ನು ಅವನಿಗೆ ಮದುವೆಮಾಡಿ
14 ಕೊಟ್ಟನು. ಆಕೆಯು ಬರುತ್ತಿರುವಾಗ ತನ್ನ
ತಂದೆಯ ಹತ್ತಿರ ಭೂಮಿಯನ್ನು ಕೇಳಬೇಕೆಂದು
ಗಂಡನನ್ನು ಪ್ರೇರೇಪಿಸಿ ತಾನು ಕತ್ತೆಯಿಂದ ಇಳಿ
ದಳು. ಕಾಲೇಬನು—ನಿನಗೇನು ಬೇಕೆಂದು ಆಕೆ
15 ಯನ್ನು ಕೇಳಲು ಆಕೆಯು—ನನಗೊಂದು ದಾನ
ಕೊಡಬೇಕು; ನನ್ನನ್ನು 2)ಬೆಗ್ಗಾಡಿಗೆ ಕೊಟ್ಟುಬಿಟ್ಟಿ
ಯಲ್ಲಾ, ಬುಗ್ಗೆಗಳಿರುವ ಸ್ಥಳವನ್ನು ನನಗೆ ಕೊಡು
ಅಂದಳು. ಆಗ ಅವನು ಆಕೆಗೆ ಮೇಲಣ ಮತ್ತು
ಕೆಳಗಣ ಬುಗ್ಗೆಗಳನ್ನು ಕೊಟ್ಟನು.
16 ಕೇನ್ಯನೂ ಮೋಶೆಯ ಮಾವನೂ ಆದ [ಹೋಬಾ
ಬನ] ವಂಶದವರು ಖರ್ಜೂರ ನಗರದಿಂದ ಹೊರಟು
ಯೆಹೂದ್ಯರ ಜೊತೆಯಲ್ಲಿ ಅರಾದಿನ ದಕ್ಷಿಣದಲ್ಲಿರುವ
ಯೆಹೂದ ಅರಣ್ಯಕ್ಕೆ ಬಂದು ಅಲ್ಲಿನ ಜನರ ಸಂಗಡ
17 ವಾಸಮಾಡಿದರು. ತರುವಾಯ ಯೆಹೂದ್ಯರು ತಮ್ಮ
ಬಂಧುಗಳಾದ ಸಿಮೆಯೋನ್ಯರ ಸಂಗಡ ಹೋಗಿ
ಚೆಫತ್ ಎಂಬ ಪಟ್ಟಣದಲ್ಲಿದ್ದ ಕಾನಾನ್ಯರನ್ನು ಸೋ
ಲಿಸಿ ಆ ಪಟ್ಟಣವನ್ನು ಹಾಳುಮಾಡಿ ಅದನ್ನು
18 3)ಹೊರ್ಮಾ ಎಂದು ಕರೆದರು. ಅನಂತರ ಅವರು
ಗಾಜಾ, ಅಷ್ಕೆಲೋನ್, ಎಕ್ರೋನ್ ಎಂಬ ಪಟ್ಟಣಗಳ
ನ್ನೂ ಅವುಗಳ ಮೇರೆಗಳನ್ನೂ ಸ್ವಾಧೀನಮಾಡಿಕೊಂ
19 ಡರು. ಯೆಹೋವನು ಯೆಹೂದ್ಯರ ಸಂಗಡ ಇದ್ದ
ದರಿಂದ ಅವರು ಪರ್ವತಪ್ರದೇಶಗಳನ್ನೆಲ್ಲಾ ಸ್ವತಂತ್ರಿಸಿ
ಕೊಂಡರು. ಆದರೆ ತಗ್ಗಿನ ಪ್ರದೇಶಗಳಲ್ಲಿ ವಾಸಿಸು
ವವರಿಗೆ ಕಬ್ಬಿಣದ ರಥಗಳಿದ್ದದರಿಂದ ಅವರನ್ನು ಹೊರ
20 ಡಿಸುವದು ಆಗಲಿಲ್ಲ. ಮೋಶೆ ಆಜ್ಞಾಪಿಸಿದಂತೆ
ಅವರು ಕಾಲೇಬನಿಗೆ ಹೆಬ್ರೋನ್ ಪಟ್ಟಣವನ್ನು ಕೊ
ಟ್ಟರು; ಅವನು ಅನಾಕನ ಮೂರು ಮಂದಿ ಮಕ್ಕಳ
ನ್ನು ಅಲ್ಲಿಂದ ಅಟ್ಟಿಬಿಟ್ಟನು.
21 ಯೆರೂಸಲೇಮಿನಲ್ಲಿದ್ದ ಯೆಬೂಸಿಯರನ್ನು ಹೊರ
ಡಿಸುವದು ಬೆನ್ಯಾಮೀನ್ಯರಿಂದ ಆಗದೆ ಹೋಯಿತು.
ಅವರು ಇಂದಿನ ವರೆಗೂ ಬೆನ್ಯಾಮೀನ್ಯರ ಸಂಗಡ ಯೆ
ರೂಸಲೇಮಿನಲ್ಲಿಯೇ ವಾಸವಾಗಿದ್ದಾರೆ.
22 ಇವರ ಹಾಗೆಯೇ ಯೋಸೇಫನ ವಂಶದವರೂ
ಹೊರಟು ಬೇತೇಲಿಗೆ ಬಂದರು. ಯೆಹೋವನು
23 ಅವರ ಸಂಗಡ ಇದ್ದನು. ಅವರು ಲೂಜ್ ಅನ್ನಿಸಿ
ಕೊಳ್ಳುತ್ತಿದ್ದ ಬೇತೇಲ್ ಊರನ್ನು ಸಂಚರಿಸಿನೋಡು
24 ವದಕ್ಕೆ ಗೂಢಚಾರರನ್ನು ಕಳುಹಿಸಿದರು. ಅವರು
ಆ ಊರೊಳಗಿಂದ ಬರುವ ಒಬ್ಬ ಮನುಷ್ಯನನ್ನು
ಕಂಡು ಅವನಿಗೆ—ದಯವಿಟ್ಟು ಪಟ್ಟಣದೊಳಗೆ ನುಗ್ಗ
ಬಹುದಾದ ದಾರಿಯನ್ನು ನಮಗೆ ತೋರಿಸು; ನಾವೂ
ನಿನಗೆ ದಯೆತೋರಿಸುವೆವು ಎಂದು ಹೇಳಲು ಅವನು
25 ಅಂಥ ದಾರಿಯನ್ನು ತೋರಿಸಿದನು. ಆಗ ಅವರು
ಆ ಪಟ್ಟಣವನ್ನು ಕತ್ತಿಯಿಂದ ಸಂಹರಿಸಿದರು. ಆದರೆ

ಆ ಮನುಷ್ಯನನ್ನೂ ಅವನ ಕುಟುಂಬವನ್ನೂ ಕಳುಹಿಸಿ
ಬಿಟ್ಟರು. ಅವನು ಹಿತ್ತಿಯರ ದೇಶಕ್ಕೆ ಹೋಗಿ
ಒಂದು ಪಟ್ಟಣವನ್ನು ಕಟ್ಟಿಕೊಂಡು ಅದಕ್ಕೆ ಲೂಜೆಂದು
ಹೆಸರಿಟ್ಟನು; ಅದಕ್ಕೆ ಇಂದಿನ ವರೆಗೂ ಅದೇ ಹೆಸ
ರಿರುತ್ತದೆ.

ಮನಸ್ಸೆಯವರು ಬೇತ್‌ಷೆಯಾನ್, ತಾನಾಕ್,
ದೋರ್, ಇಬ್ಲೆಯಾಮ್, ಮೆಗಿದ್ದೋ ಎಂಬ ಪಟ್ಟಣ
ಗಳನ್ನೂ ಅವುಗಳ ಗ್ರಾಮಗಳನ್ನೂ ಸ್ವಾಧೀನಮಾಡಿ
ಕೊಳ್ಳಲಿಲ್ಲ. ಆದದರಿಂದ ಕಾನಾನ್ಯರು ಆ ಪ್ರಾಂತ
ಗಳಲ್ಲೇ ವಾಸಿಸುವದಕ್ಕೆ ದೃಢಮಾಡಿದರು. ಇಸ್ರಾ
ಯೇಲ್ಯರು ಬಲಗೊಂಡ ಮೇಲೆ ಅವರನ್ನು ದಾಸ
ತ್ವಕ್ಕೆ ಹಚ್ಚಿದರೇ ಹೊರತು ಅಲ್ಲಿಂದ ಅಟ್ಟಿಬಿಡಲಿಲ್ಲ.

ಎಫ್ರಾಯಿಮ್ಯರು ಗೆಜೆರಿನಲ್ಲಿದ್ದ ಕಾನಾನ್ಯರನ್ನು
ಹೊರಡಿಸಿಬಿಡಲಿಲ್ಲ. ಆದದರಿಂದ ಅವರು ಅವರ
ಮಧ್ಯದಲ್ಲೇ ವಾಸಿಸುವವರಾದರು.

ಜೆಬುಲೂನ್ಯರು ಕಿಟ್ರೋನ್, ನಹಲೋಲ್ ಎಂಬ
ಪಟ್ಟಣಗಳ ನಿವಾಸಿಗಳನ್ನು ಅಟ್ಟಿಬಿಡಲಿಲ್ಲ. ಆದರೆ
ಆ ಕಾನಾನ್ಯರು ಅವರಿಗೆ ದಾಸರಾಗಿ ಅವರ ಮಧ್ಯ
ದಲ್ಲೇ ವಾಸಮಾಡುವವರಾದರು.

ಆಶೇರ್ಯರು ಅಕ್ಕೋ, ಚೀದೋನ್, ಅಹ್ಲಾಬ್,
ಅಕ್ಜೀಬ್, ಹೆಲ್ಬಾ, ಅಫೀಕ್, ರೆಹೋಬ್ ಎಂಬ
ಪಟ್ಟಣಗಳನ್ನು ಸ್ವಾಧೀನಮಾಡಿಕೊಳ್ಳಲಿಲ್ಲ; ಅವರು
ಆ ದೇಶದ ಕಾನಾನ್ಯರನ್ನು ಹೊರಡಿಸದೆ ಅವರ ಮಧ್ಯ
ದಲ್ಲೇ ವಾಸಮಾಡಿದರು.

ನಫ್ತಾಲ್ಯರು ಬೇತ್‌ಷೆಮೆಷ್, ಬೇತನಾತ್ ಎಂಬ
ಊರುಗಳನ್ನು ಸ್ವತಂತ್ರಿಸಿಕೊಳ್ಳದೆ ಅಲ್ಲಿಯ ನಿವಾಸಿ
ಗಳಾದ ಕಾನಾನ್ಯರ ಮಧ್ಯದಲ್ಲೇ ವಾಸಮಾಡಿದರು.
ಮತ್ತು ಆ ಬೇತ್‌ಷೆಮೆಷ್ ಬೇತನಾತ್ ಊರುಗಳ
ಜನರು ಅವರಿಗೆ ದಾಸರಾದರು.

ಇದಲ್ಲದೆ ಅಮೋರಿಯರು ದಾನ್ ಕುಲದವರನ್ನು
ತಗ್ಗಿನ ಪ್ರದೇಶಕ್ಕೆ ಇಳಿಯಗೊಡದೆ ಹಿಂದಟ್ಟಿ ಬೆಟ್ಟ
ಗಳಿಗೆ ಓಡಿಸಿಬಿಟ್ಟರು. ಹೀಗೆ ಅಮೋರಿಯರು ಹರ್
ಹೆರೆಸ್, ಅಯ್ಯಾಲೋನ್, ಶಾಲ್ಬೀಮ್ ಎಂಬ ಊರು
ಗಳಲ್ಲೇ ವಾಸಿಸ ದೃಢಮಾಡಿದರು. ಆದರೆ ಯೋಸೇ
ಫ್ಯರ ಹಸ್ತವು ಭಾರವಾದ ಮೇಲೆ ಅವರಿಗೆ ದಾಸರಾ
ದರು. ಅಮೋರಿಯರ ಮೇರೆಯು ಅಕ್ರಬ್ಬೀಮ್
ಕಣಿವೆಯಲ್ಲಿರುವ ಬಂಡೆಯಿಂದ ಮೇಲಕ್ಕೆ ವಿಸ್ತರಿಸಿ
ಕೊಂಡಿರುವದು.

ಯೆಹೋವನ ದೂತನು ಗಿಲ್ಗಾಲಿನಿಂದ ಬೋಕೀ
ಮಿಗೆ ಬಂದು ಇಸ್ರಾಯೇಲ್ಯರಿಗೆ—ನಾನು ನಿಮ್ಮನ್ನು
ಐಗುಪ್ತದಿಂದ ಬರಮಾಡಿ ನಿಮ್ಮ ಪಿತೃಗಳಿಗೆ ಪ್ರಮಾಣ
ಮಾಡಿದ ದೇಶಕ್ಕೆ ಕರತಂದೆನು. ನಿಮ್ಮೊಡನೆ ಮಾಡಿ
ಕೊಂಡ ಒಡಂಬಡಿಕೆಯನ್ನು ಎಂದೂ ಭಂಗಪಡಿಸುವ
ದಿಲ್ಲವೆಂದು ನಾನು ಮಾತು ಕೊಟ್ಟಾಗ—ನೀವು ಈ
ದೇಶದ ನಿವಾಸಿಗಳ ಸಂಗಡ ಒಡಂಬಡಿಕೆಮಾಡಿಕೊಳ್ಳ
ಬಾರದು; ಅವರ ಯಜ್ಞವೇದಿಗಳನ್ನು ಕೆಡವಿಬಿಡ
ಬೇಕು ಎಂದು ಆಜ್ಞಾಪಿಸಿದೆನು. ಆದರೆ ನೀವು ನನ್ನ

1) ಅಥವಾ: ಅವನ ತಮ್ಮನಾದ ಕೆನಜನ ಮಗನಾಗಿರುವ ಒತ್ನೀಯೇಲನು. 2) ಮೂಲ: ನೆಗೇಬ್ ಅಂದರೆ ದಕ್ಷಿಣಪ್ರಾ
3) ಹೊರ್ಮಾ ಅಂದರೆ ಹಾಳು.

ಮಾತನ್ನು ಕೇಳಲಿಲ್ಲ. ಹೀಗೆ ಯಾಕೆ ಮಾಡಿದಿರಿ?
3 ನೀವು ಹೀಗೆ ಮಾಡುವದಾದರೆ ನಾನು ಈ ದೇಶ
ನಿವಾಸಿಗಳನ್ನು ನಿಮ್ಮೆದುರಿನಿಂದ ಓಡಿಸಿಬಿಡುವದಿಲ್ಲ;
ಅವರು ನಿಮ್ಮನ್ನು ಉಪದ್ರವಪಡಿಸುವರು; ಅವರ
ದೇವತೆಗಳು ನಿಮಗೆ ಉರುಲಾಗುವವು ಎಂದು
4 ಮೊದಲೇ ಹೇಳಿದೆನಲ್ಲಾ ಅಂದನು. ಯೆಹೋವನ
ದೂತನು ಈ ಮಾತುಗಳನ್ನು ಹೇಳಿದಾಗ ಇಸ್ರಾ
5 ಯೇಲ್ಯರೆಲ್ಲರೂ ಗಟ್ಟಿಯಾಗಿ ಅತ್ತರು. ಮತ್ತು
ಆ ಸ್ಥಳಕ್ಕೆ ಬೋಕೀಮೆಂಬ ಹೆಸರಿಟ್ಟು ಅಲ್ಲಿಯೇ
ಯೆಹೋವನಿಗೋಸ್ಕರ ಯಜ್ಞಮಾಡಿದರು.

## ನ್ಯಾಯಸ್ಥಾಪಕರ ಕಾಲದ ಚರಿತ್ರೆ.
## 2. 6—16. 31.

### ಇಸ್ರಾಯೇಲ್ಯರಿಗೆ ಸಂಭವಿಸಿದ ಸುಖದುಃಖಗಳ ಕಾರಣಗಳು.

6 ಯೆಹೋಶುವನು ಇಸ್ರಾಯೇಲ್ಯರನ್ನು ಕಳುಹಿಸಿದ
ಮೇಲೆ ಅವರು ತಮ್ಮ ತಮ್ಮ ಪಾಲಿಗೆ ಬಂದ ಪ್ರದೇಶ
ಗಳಿಗೆ ಹೋಗಿ ಅವುಗಳನ್ನು ಸ್ವತಂತ್ರಿಸಿಕೊಂಡರು.
7 ಯೆಹೋಶುವನ ದಿನಗಳಲ್ಲಿಯೂ ಅವನ ಕಾಲದಿಂದ
ಇನ್ನೂ ಜೀವಿಸುತ್ತಾ ಯೆಹೋವನು ಇಸ್ರಾಯೇಲ್ಯರಿ
ಗೋಸ್ಕರ ನಡಿಸಿದ ಮಹತ್ಕಾರ್ಯಗಳಿಗೆ ಸಾಕ್ಷಿಗಳಾ
ಗಿದ್ದ ಹಿರಿಯರ ದಿನಗಳಲ್ಲಿಯೂ ಇಸ್ರಾಯೇಲ್ಯರು
8 ಯೆಹೋವನನ್ನು ಸೇವಿಸುತ್ತಿದ್ದರು. ಯೆಹೋವನ
ಸೇವಕನಾದ ನೂನನ ಮಗ ಯೆಹೋಶುವನು ನೂರ
9 ಹತ್ತು ವರುಷದವನಾಗಿ ಮರಣಹೊಂದಿದನು. ಅವ
ನನ್ನು ಅವನ ಸ್ವಾಸ್ತ್ಯಭೂಮಿಯಾದ ತಿಮ್ನತ್‌ಹೆರೆಸ್
ಎಂಬಲ್ಲಿ ಸಮಾಧಿಮಾಡಿದರು; ಅದು ಎಫ್ರಾಯಿಮ್
ಪರ್ವತಪ್ರದೇಶದಲ್ಲಿರುವ ಗಾಷ್‌ಬೆಟ್ಟದ ಉತ್ತರದಿಕ್ಕಿ
10 ನಲ್ಲಿರುತ್ತದೆ. ಆವನ ಕಾಲದವರೆಲ್ಲರೂ ಪಿತೃಗಳ
ಬಳಿಗೆ ಸೇರಿದ ಮೇಲೆ ಯೆಹೋವನನ್ನೂ ಆತನು
ಇಸ್ರಾಯೇಲ್ಯರಿಗೋಸ್ಕರ ಮಾಡಿದ ಮಹತ್ಕಾರ್ಯಗ
ಳನ್ನೂ ಅರಿಯದಿದ್ದ ಬೇರೊಂದು ಸಂತಾನವು ಹುಟ್ಟಿತು.
11 ಈ ಇಸ್ರಾಯೇಲ್ಯರು ಬಾಳನ ಪ್ರತಿಮೆಗಳನ್ನು
ಪೂಜಿಸಿ ಯೆಹೋವನ ದೃಷ್ಟಿಯಲ್ಲಿ ದ್ರೋಹಿಗಳಾ
12 ದರು. ತಮ್ಮ ಪಿತೃಗಳನ್ನು ಐಗುಪ್ತದಿಂದ ಕರತಂದ
ದೇವರಾದ ಯೆಹೋವನನ್ನು ಬಿಟ್ಟು ಅನ್ಯದೇವತೆ
ಗಳನ್ನು ಅಂದರೆ ತಮ್ಮ ಸುತ್ತಣ ಜನಾಂಗಗಳ ದೇವ
ರುಗಳನ್ನು ಅವಲಂಬಿಸಿ ಅವುಗಳಿಗೆ ಅಡ್ಡಬಿದ್ದು
13 ಯೆಹೋವನನ್ನು ರೇಗಿಸಿದರು. ಅವರು ಯೆಹೋವ
ನನ್ನು ಬಿಟ್ಟು ಬಾಳ್ ಅಷ್ಟೋರೆತ್ ಎಂಬ ದೇವತೆ
14 ಗಳನ್ನು ಪೂಜಿಸುವವರಾದದರಿಂದ ಯೆಹೋವನ
ಕೋಪವು ಅವರ ಮೇಲೆ ಉರಿಯಹತ್ತಿತು. ಆತನು
ಅವರನ್ನು ಸೂರೆಮಾಡುವವರ ಕೈಗೆ ಒಪ್ಪಿಸಲು
ಅವರು ಅವರನ್ನು ಸೂರೆಮಾಡಿದರು. ಆತನು ಅವ
ರನ್ನು ಸುತ್ತಣ ವೈರಿಗಳಿಗೆ ಮಾರಿಬಿಟ್ಟನು; ಅವರು
ಆ ಶತ್ರುಗಳ ಮುಂದೆ ನಿಲ್ಲಲಾರದವರಾದರು.
15 ಯೆಹೋವನು ತಾನು ಮೊದಲೇ ಆಣೆಯಿಟ್ಟು ಹೇಳಿ
ದಂತೆ ಎಲ್ಲಿ ಹೋದರೂ ಆತನ ಕೈ ಅವರಿಗೆ ವಿರೋಧ
ವಾಗಿಯೇ ಇತ್ತು; ಅವರಿಗೆ ಬಹುಸಂಕಟವಾ
16 ಯಿತು. ಆಗ ಯೆಹೋವನು ಅವರನ್ನು ಸೂರೆ
ಮಾಡುವವರ ಕೈಯಿಂದ ತಪ್ಪಿಸುವದಕ್ಕೋಸ್ಕರ
ನ್ಯಾಯಸ್ಥಾಪಕರನ್ನು ಕಳುಹಿಸಿದರೂ ಇಸ್ರಾಯೇ 17
ಲ್ಯರು ಅವರ ಮಾತನ್ನೂ ಕೇಳದೆ ಅನ್ಯದೇವತೆಗಳನ್ನು
ಪೂಜಿಸಿ ಅವುಗಳಿಗೆ ಅಡ್ಡಬಿದ್ದು ದೇವದ್ರೋಹಿಗಳಾ
ದರು. ಯೆಹೋವನ ಆಜ್ಞೆಗಳನ್ನು ಕೈಕೊಳ್ಳುತ್ತಿದ್ದ
ತಮ್ಮ ಪಿತೃಗಳ ಮಾರ್ಗವನ್ನು ಬೇಗನೆ ಬಿಟ್ಟು
ಬಿಟ್ಟರು; ಅವರಂತೆ ನಡೆಯಲೇ ಇಲ್ಲ. ವೈರಿಗಳ 18
ಹಿಂಸೆಯನ್ನು ತಾಳಲಾರದ ಇಸ್ರಾಯೇಲ್ಯರ ಗೋಳಾ
ಟವನ್ನು ಯೆಹೋವನು ಕೇಳಿ ಕನಿಕರಪಟ್ಟು ನ್ಯಾಯ
ಸ್ಥಾಪಕರನ್ನು ಎಬ್ಬಿಸಿ ಅವರ ಜೀವಮಾನವೆಲ್ಲಾ
ಅವರ ಸಂಗಡ ಇದ್ದು ಅವರ ಮೂಲಕವಾಗಿ ಇಸ್ರಾ
ಯೇಲ್ಯರನ್ನು ಶತ್ರುಗಳಿಂದ ಬಿಡಿಸಿದನು. ಅಂಥ 19
ನ್ಯಾಯಸ್ಥಾಪಕರು ತೀರಿಹೋದನಂತರ ಇಸ್ರಾಯೇ
ಲ್ಯರು ತಿರುಗಿಕೊಂಡು ತಮ್ಮ ಹಿರಿಯರಿಗಿಂತಲೂ
ಭ್ರಷ್ಟರಾಗಿ ಅನ್ಯದೇವತೆಗಳನ್ನು ಅವಲಂಬಿಸಿ ಸೇವಿಸಿ
ಅವುಗಳಿಗೆ ಅಡ್ಡಬಿದ್ದರು; ಅವರು ಈ ತಮ್ಮ
ದುರ್ಮಾರ್ಗವನ್ನೂ ಮೊಂಡತನವನ್ನೂ ಬಿಡಲೇ
ಇಲ್ಲ. ಆದದರಿಂದ ಯೆಹೋವನ ಕೋಪವು ಇಸ್ರಾ 20
ಯೇಲ್ಯರ ಮೇಲೆ ಉರಿಯಹತ್ತಿತು; ಆತನು—ಈ
ಜನರ ಪಿತೃಗಳಿಗೆ ನಾನು ಕೊಟ್ಟ ನಿಬಂಧನೆಯನ್ನು
ಇವರು ಕೈಕೊಳ್ಳಲಿಲ್ಲ; ನನ್ನ ಮಾತಿಗೆ ಕಿವಿಗೊಡ
ಲಿಲ್ಲ. ಹೀಗಿರುವದರಿಂದ ಯೆಹೋಶುವನು ಸಾಯುವ 21
ಮೊದಲು ಹೊರಡಿಸದೆ ಬಿಟ್ಟ ಜನಾಂಗಗಳಲ್ಲಿ ನಾನೂ
ಒಂದನ್ನಾದರೂ ಹೊರಡಿಸುವದಿಲ್ಲ. ಇವರು ತಮ್ಮ 22
ಹಿರಿಯರಂತೆ ಜಾಗರೂಕತೆಯಿಂದ ಯೆಹೋವನಾದ
ನನ್ನ ಮಾರ್ಗದಲ್ಲಿ ನಡೆಯುವರೋ ಇಲ್ಲವೋ
ಎಂದು ಈ ಜನಾಂಗಗಳ ಮೂಲಕವಾಗಿ ಪರೀಕ್ಷಿಸು
ವೆನು ಅಂದನು. ಇದರಿಂದ ಯೆಹೋವನು ಯೆಹೋಶು 23
ವನ ಕೈಗೆ ಒಪ್ಪಿಸದೆ ಉಳಿಸಿದ್ದ ಜನಾಂಗಗಳನ್ನು
ಬೇಗನೆ ಅಟ್ಟಿಬಿಡಲಿಲ್ಲ.

ಕಾನಾನ್ಯರೊಡನೆ ನಡೆದ ಯುದ್ಧಗಳಲ್ಲಿ ಒಂದನ್ನೂ 3
ನೋಡದೆ ಇದ್ದ ಇಸ್ರಾಯೇಲ್ಯರನ್ನು ಪರೀಕ್ಷಿಸು
ವದಕ್ಕೂ ಇಸ್ರಾಯೇಲ್‌ಸಂತತಿಯವರಲ್ಲಿ ಯುದ್ಧ 2
ವಿದ್ಯೆಯನ್ನು ಅರಿಯದವರಿಗೆ ಅದನ್ನು ಕಲಿಸಿಕೊಡು
ವದಕ್ಕೂ ಯೆಹೋವನು ಉಳಿಸಿದ ಜನಾಂಗಗಳ
ವರು ಯಾರಂದರೆ—ಐದು ಮಂದಿ ಫಿಲಿಷ್ಟಿಯ ಪ್ರಭು 3
ಗಳು, ಸರ್ವ ಕಾನಾನ್ಯರು, ಚೀದೋನ್ಯರು, ಲೆಬ
ನೋನ್ ಪರ್ವತಾವಳಿಯಲ್ಲಿ ಬಾಳ್‌ಹೆರ್ಮೋನ್ ಬೆಟ್ಟ
ದಿಂದ ಹಮಾತಿನ ದಾರಿಯ ವರೆಗೆ ವಾಸವಾಗಿರುವ
ಹಿವ್ವಿಯರು ಇವರೇ. ತಾನು ಮೋಶೆಯ ಮೂಲಕ 4
ವಾಗಿ ಇವರ ಪಿತೃಗಳಿಗೆ ವಿಧಿಸಿದ ಆಜ್ಞೆಗಳನ್ನು ಇಸ್ರಾ
ಯೇಲ್ಯರು ಕೈಕೊಂಡು ನಡೆಯುವರೋ ಇಲ್ಲವೋ
ಎಂಬುದನ್ನು ಪರೀಕ್ಷಿಸಿ ತಿಳುಕೊಳ್ಳುವದಕ್ಕೋಸ್ಕರ
ಯೆಹೋವನು ಅವರನ್ನು ಉಳಿಸಿದನು. ಇಸ್ರಾಯೇ
ಲ್ಯರು ಕಾನಾನ್ಯ, ಹಿತ್ತಿಯ, ಅಮೋರಿಯ, ಪೆರ 5
ಜ್ಜೀಯ, ಹಿವ್ವಿಯ, ಯೆಬೂಸಿಯ ಎಂಬೀ ಜನಾಂಗ
ಗಳ ಮಧ್ಯದಲ್ಲಿ ವಾಸಮಾಡುತ್ತಾ ಅವರ ಕನ್ಯೆಯ
ರನ್ನು ತಾವು ತಂದು ತಮ್ಮ ಕನ್ಯೆಯರನ್ನು ಅವರ 6
ಕುಮಾರರಿಗೆ ಕೊಟ್ಟು, ಅವರ ದೇವತೆಗಳನ್ನು ಸೇವಿ
ಸಿದರು.

ಒತ್ನೀಯೇಲ್, ಏಹೂದ್, ಶಮ್ಗರ್ ಎಂಬ ಪ್ರಥಮ
ನ್ಯಾಯಸ್ಥಾಪಕರು.

7 [7]ಇಸ್ರಾಯೇಲ್ಯರು ಬಾಳ್, ಅಶೇರ ಎಂಬ ದೇವತೆ
ಗಳನ್ನು ಪೂಜಿಸಿ, ತಮ್ಮ ದೇವರಾದ ಯೆಹೋವನನ್ನು
ಮರೆತುಬಿಟ್ಟು ಆತನ ದೃಷ್ಟಿಯಲ್ಲಿ ದ್ರೋಹಿಗಳಾ
8 ದರು. ಆದದರಿಂದ ಆತನು ಇಸ್ರಾಯೇಲ್ಯರ ಮೇಲೆ
ಕೋಪಗೊಂಡು ಅವರನ್ನು 1)ಎರಡು ನದಿಗಳ ಮಧ್ಯ
ದಲ್ಲಿರುವ ಅರಾಮ್ ರಾಜ್ಯದ ಅರಸನಾದ ಕೂಷನ್
ರಿಷಾತಯಿಮ್ ಎಂಬವನಿಗೆ ಮಾರಿಬಿಟ್ಟನು. ಅವರು
ಎಂಟು ವರುಷಗಳ ವರೆಗೆ ಅವನಿಗೆ ದಾಸರಾಗಿದ್ದರು.
9 ಇಸ್ರಾಯೇಲ್ಯರು ಯೆಹೋವನಿಗೆ ಮೊರೆಯಿಟ್ಟಾಗ
ಆತನು ಅವರನ್ನು ಬಿಡಿಸುವದಕ್ಕೋಸ್ಕರ ರಕ್ಷಕನನ್ನು
ಎಬ್ಬಿಸಿದನು; ಕಾಲೇಬನ ತಮ್ಮನೂ ಕೆನಜನ ಮಗನೂ
10 ಆದ ಒತ್ನೀಯೇಲನೇ ಆ ರಕ್ಷಕನು. ಯೆಹೋವನ
ಆತ್ಮವು ಅವನ ಮೇಲೆ ಬಂದದರಿಂದ ಅವನು ಇಸ್ರಾ
ಯೇಲ್ಯರ ನ್ಯಾಯಸ್ಥಾಪನೆಗೋಸ್ಕರ ಯುದ್ಧಕ್ಕೆ ಹೊ
ರಟನು. ಯೆಹೋವನು ಎರಡು ನದಿಗಳ ಮಧ್ಯ
ದಲ್ಲಿರುವ ಅರಾಮ್ ರಾಜ್ಯದ ಅರಸನಾದ ಕೂಷನ್
ರಿಷಾತಯಿಮನನ್ನು ಅವನ ಕೈಗೆ ಒಪ್ಪಿಸಿಕೊಟ್ಟದ
ರಿಂದ ಅವನು ಅವನನ್ನು ಪೂರ್ಣವಾಗಿ ಸೋಲಿಸಿ
11 ಬಿಟ್ಟನು. ದೇಶದಲ್ಲಿ ನಾಲ್ವತ್ತು ವರುಷಗಳ ಪರ್ಯಂ
ತರ ಸಮಾಧಾನವಿತ್ತು. ತರುವಾಯ ಕೆನಜನ ಮಗ
ನಾದ ಒತ್ನೀಯೇಲನು ಮರಣಹೊಂದಿದನು.
12 ಇಸ್ರಾಯೇಲ್ಯರು ತಿರಿಗಿ ಯೆಹೋವನ ದೃಷ್ಟಿಯ
ಲ್ಲಿ ದ್ರೋಹಿಗಳಾದರು; ಆತನು ಅವರ ದ್ರೋಹದ
ನಿಮಿತ್ತ ಮೋವಾಬ್ಯರ ಅರಸನಾದ ಎಗ್ಲೋನನನ್ನು
13 ಅವರಿಗೆ ವಿರೋಧವಾಗಿ ಬಲಪಡಿಸಿದನು. ಇವನು
ಅಮ್ಮೋನಿಯರನ್ನೂ ಅಮಾಲೇಕ್ಯರನ್ನೂ ಕೂಡಿಸಿ
ಕೊಂಡು ಹೊರಟು ಬಂದು ಇಸ್ರಾಯೇಲ್ಯರನ್ನು
14 ಸೋಲಿಸಿ ಖರ್ಜೂರನಗರವನ್ನು ಹಿಡಿದನು. ಇಸ್ರಾ
ಯೇಲ್ಯರು ಅವನಿಗೆ ಹದಿನೆಂಟು ವರುಷ ದಾಸರಾಗಿ
15 ದ್ದರು. ಅವರು ಯೆಹೋವನಿಗೆ ಮೊರೆಯಿಡಲು
ಆತನು ಅವರನ್ನು ರಕ್ಷಿಸುವದಕ್ಕೋಸ್ಕರ ಬೆನ್ಯಾಮೀನ್
ಕುಲದ ಗೇರನ ಮಗನಾದ ಏಹೂದನನ್ನು ಎಬ್ಬಿಸಿ
ದನು. ಅವನು ಎಡಚನಾಗಿದ್ದನು. ಇಸ್ರಾಯೇಲ್ಯರು
ಅವನ ಮೂಲಕವಾಗಿ ಮೋವಾಬ್ಯರ ಅರಸನಾದ
16 ಎಗ್ಲೋನನಿಗೆ ಕಪ್ಪವನ್ನು ಕಳುಹಿಸಿದರು. ಅವನು
ತನಗೋಸ್ಕರ ಒಂದು ಗುದ್ದುಮೊಳ ಉದ್ದವಾದ
ಇಬ್ಬಾಯಿಕತ್ತಿಯನ್ನು ಮಾಡಿ ಅದನ್ನು ಬಟ್ಟೆಗಳ
ಕೆಳಗೆ ಬಲಗಡೆಯ ಸೊಂಟಕ್ಕೆ ಕಟ್ಟಿಕೊಂಡು ಹೋಗಿ
17 ಮೋವಾಬ್ಯರ ಅರಸನಾದ ಎಗ್ಲೋನನಿಗೆ ಕಪ್ಪವನ್ನು
ಒಪ್ಪಿಸಿದನು. ಎಗ್ಲೋನನು ಬಲು ಕೊಬ್ಬಿದವನು.
18 ಏಹೂದನು ಕಪ್ಪವನ್ನು ಒಪ್ಪಿಸಿದ ಮೇಲೆ ಅದನ್ನು
ಹೊತ್ತುಕೊಂಡು ಬಂದ ಆಳುಗಳನ್ನು ಕಳುಹಿಸಿ
19 ಬಿಟ್ಟು ತಾನು ಗಿಲ್ಗಾಲಿನಲ್ಲಿರುವ ವಿಗ್ರಹಸ್ಥಳದಿಂದ
ಹಿಂದಿರುಗಿ ಎಗ್ಲೋನನ ಬಳಿಗೆ ಬಂದು—ಅರಸೇ,
ನಿನಗೆ ತಿಳಿಸತಕ್ಕದ್ದೊಂದು ರಹಸ್ಯವದೆ ಅಂದನು.
ಆಗ ಅರಸನು ನಿಶ್ಶಬ್ದ ಅನ್ನಲು ಅವನ ಸೇವಕರೆಲ್ಲರೂ
ಹೊರಗೆ ಹೋದರು. ಅರಸನು ತನ್ನ ತಂಪಾದ
ಮೇಲುಪ್ಪರಿಗೆಯಲ್ಲಿ ಒಬ್ಬನೇ ಕೂತುಕೊಂಡಿದ್ದಾಗ
ಏಹೂದನು ಅವನ ಬಳಿಗೆ ಹೋಗಿ—ನಿನಗೆ ಹೇಳ
ಬೇಕಾದದ್ದೊಂದು ದೇವೋಕ್ತಿಯಿದೆ ಅನ್ನಲು ಅವನು
ತನ್ನ ಸಿಂಹಾಸನದಿಂದೆದ್ದನು. ಆಗ ಏಹೂದನು
ಎಡಗೈ ಚಾಚಿ ಬಲಗಡೆಯ ಸೊಂಟಕ್ಕೆ ಕಟ್ಟಿದ್ದ ಕತ್ತಿ
ಯನ್ನು ಹಿರಿದು ಅವನ ಹೊಟ್ಟೆಯಲ್ಲಿ ತಿವಿದನು.
ಅಲಗೂ ಹಿಡಿಯೂ ಹೊಟ್ಟೆಯೊಳಗೆ ಹೊಕ್ಕವು. ಅವ
ನು ಕತ್ತಿಯನ್ನು ಹೊರಗೆ ತೆಗೆಯದ್ದರಿಂದ ಕೊಬ್ಬು
ಅಲಗನ್ನು ಸುತ್ತಿಕೊಂಡಿತು; 2)ಮಲವು ಹೊರಗೆ
ಬಂದಿತು. ಏಹೂದನು ಪಡಸಾಲೆಗೆ ಬಂದು ಆ
ಮೇಲುಪ್ಪರಿಗೆಯ ಕದವನ್ನು ಮುಚ್ಚಿ ಬೀಗಹಾಕಿ
ಹೊರಟು ಹೋದನು. ತರುವಾಯ ಸೇವಕರು ಅಲ್ಲಿ
ಬಂದು ಬಾಗಲಿಗೆ ಬೀಗಹಾಕಿರುವದನ್ನು ಕಂಡು—
ಅರಸನು ತಂಪಾದ ಕೋಣೆಗೆ ಸೇರಿದ ಪಾಯಖಾನೆಗೆ
ಹೋಗಿರಬೇಕು ಅಂದುಕೊಂಡು ತಮಗೆ ಬೇಸರವಾ
ಗುವ ತನಕ ಕಾಯುತ್ತಾ ಇದ್ದರು. ಆದರೂ
ಕದಗಳು ತೆರೆಯಲ್ಪಡದೆ ಇರುವದನ್ನು ನೋಡಿ ಬೀಗ
ದ ಕೈಯನ್ನು ತೆಗೆದುಕೊಂಡು ಬಾಗಲನ್ನು ತೆರೆ
ಯಲು ಇಗೋ ಅವರ ಒಡೆಯನು ಸತ್ತು ಬಿದ್ದಿ
ದ್ದನು. ಅವರು ತಡಮಾಡುವಷ್ಟರಲ್ಲಿ ಏಹೂದನು
ತಪ್ಪಿಸಿಕೊಂಡು ವಿಗ್ರಹಗಳಿದ್ದ ಸ್ಥಳದಲ್ಲಿ ಹೊಳೆದಾಟಿ
ಸೆಯಿರಾ ಎಂಬಲ್ಲಿಗೆ ಬಂದು ಎಫ್ರಾಯಿಮ್ ಪರ್ವ
ತಪ್ರದೇಶದಲ್ಲಿ ಕೊಂಬನ್ನು ಊದಿದನು. ಆಗ ಇಸ್ರಾ
ಯೇಲ್ಯರು ಅವನ ಬಳಿಗೆ ಬಂದು ಗಟ್ಟಾ ಇಳಿದು
ಅವನ ಸಂಗಡ ಹೊರಟರು. ಅವನು ಅವರ ನಾಯಕ
ನಾಗಿ—ನನ್ನನ್ನು ಹಿಂಬಾಲಿಸಿರಿ; ಯೆಹೋವನು
ನಿಮ್ಮ ಶತ್ರುಗಳಾದ ಮೋವಾಬ್ಯರನ್ನು ನಿಮ್ಮ ಕೈಗೆ
ಒಪ್ಪಿಸಿದ್ದಾನೆಂದು ಹೇಳಲು ಅವರು ಅವನನ್ನು ಹಿಂಬಾ
ಲಿಸಿ ಮೋವಾಬಿಗೆ ಹೋಗುವ ಹಾಯಗಡಗಳನ್ನೆಲ್ಲಾ
ಹಿಡಿದರು; ಯಾರನ್ನೂ ದಾಟಗೊಡಲಿಲ್ಲ. ಅವರು ಆ
ಕಾಲದಲ್ಲಿ ಪುಷ್ಟರೂ ಪರಾಕ್ರಮಿಗಳೂ ಆದ ಸುಮಾ
ರು ಹತ್ತು ಸಾವಿರ ಮಂದಿ ಮೋವಾಬ್ಯರನ್ನು ಒಬ್ಬನೂ
ತಪ್ಪಿಸಿಕೊಳ್ಳದಂತೆ ಹತಮಾಡಿದರು. ಆ ದಿವಸದಲ್ಲಿ
ಮೋವಾಬ್ಯರು ಇಸ್ರಾಯೇಲ್ಯರಿಂದ ತಗ್ಗಿಸಲ್ಪಟ್ಟರು;
ದೇಶದಲ್ಲಿ ಎಂಭತ್ತು ವರುಷ ಸಮಾಧಾನವಿತ್ತು.
ಏಹೂದನ ತರುವಾಯ ಅನಾತನ ಮಗನಾದ
ಶಮ್ಗರನು ಎದ್ದು ಎತ್ತಿನ ಮುಳ್ಳುಗೋಲಿನಿಂದ
ಆರು ನೂರು ಮಂದಿ ಫಿಲಿಷ್ಟಿಯರನ್ನು ಹತಮಾಡಿ
ಇಸ್ರಾಯೇಲ್ಯರನ್ನು ರಕ್ಷಿಸಿದನು.

ದೆಬೋರಾ, ಬಾರಾಕ್ ಎಂಬ ನ್ಯಾಯಸ್ಥಾಪಕರು.

ಏಹೂದನು ಮರಣಹೊಂದಿದನಂತರ ಇಸ್ರಾಯೇ 4
ಲ್ಯರು ತಿರಿಗಿ ಯೆಹೋವನ ದೃಷ್ಟಿಯಲ್ಲಿ ದ್ರೋಹಿ
ಗಳಾದದರಿಂದ ಆತನು ಅವರನ್ನು ಹಾಚೋರಿನಲ್ಲಿ

1) ಅಂದರೆ: ಮೆಸೊಪೊತಾಮ್ಯ. 2) ಮೂಲಾರ್ಥವು ಅಸ್ಪಷ್ಟ.

ಆಳುತ್ತಿದ್ದ ಕಾನಾನ್ಯರಾಜನಾದ ಯಾಬೀನನಿಗೆ
ಮಾರಿಬಿಟ್ಟನು. ಮ್ಲೇಚ್ಛರ ಹರೋಷೆತ್ ಎಂಬ ಪಟ್ಟಣ
ದಲ್ಲಿ ವಾಸವಾಗಿದ್ದ ಸೀಸೆರನು ಅವನ ಸೇನಾಪತಿ
3 ಯಾಗಿದ್ದನು. ಒಂಭೈನೂರು ಕಬ್ಬಿಣದ ರಥಗಳುಳ್ಳ
ಇವನು ಇಸ್ರಾಯೇಲ್ಯರನ್ನು ಇಪ್ಪತ್ತು ವರುಷಗಳ
ತನಕ ಬಲವಾಗಿ ಬಾಧಿಸುತ್ತಿರಲು ಅವರು ಯೆಹೋವ
ನಿಗೆ ಮೊರೆಯಿಟ್ಟರು.
4 ಆ ಕಾಲದಲ್ಲಿ ಲಪ್ಪೀದೋತನ ಹೆಂಡತಿಯಾದ
ದೆಬೋರಳೆಂಬ ಪ್ರವಾದಿನಿಯು ಇಸ್ರಾಯೇಲ್ಯರಲ್ಲಿ
5 ನ್ಯಾಯತೀರಿಸುತ್ತಿದ್ದಳು. ಆಕೆಯು ಎಫ್ರಾಯೀಮ್
ಬೆಟ್ಟದ ಸೀಮೆಯಲ್ಲಿ ರಾಮಕ್ಕೂ ಬೇತೇಲಿಗೂ
ಮಧ್ಯದಲ್ಲಿರುವ ದೆಬೋರಳ ಖರ್ಜೂರವೃಕ್ಷವೆಂದು
ಹೆಸರುಗೊಂಡ ಮರದ ಕೆಳಗೆ ಆಸೀನಳಾಗಿರು
ವಲ್ಲಿ ಇಸ್ರಾಯೇಲ್ಯರು ನ್ಯಾಯನಿರ್ಣಯಕ್ಕೋಸ್ಕರ
6 ಆಕೆಯ ಬಳಿಗೆ ಬರುತ್ತಿದ್ದರು. ಆಕೆಯು ನಫ್ತಾಲಿ
ದೇಶದ ಕೆದೆಷ್ ಊರಿನಲ್ಲಿದ್ದ ಅಬೀನೋವಮನ
ಮಗನಾದ ಬಾರಾಕನನ್ನು ಕರೇಕಳುಹಿಸಿ ಅವನಿಗೆ—
ನಿಶ್ಚಯವಾಗಿ ಇಸ್ರಾಯೇಲ್ಯರ ದೇವರಾದ ಯೆಹೋ
ವನು ನಿನಗೆ—ಎದ್ದು ನಫ್ತಾಲಿ ಜೆಬುಲೂನ್ ಕುಲ
ಗಳಿಂದ ಹತ್ತು ಸಾವಿರ ಜನರನ್ನು ಕೂಡಿಸಿಕೊಂಡು
7 ತಾಬೋರ್ ಬೆಟ್ಟಕ್ಕೆ ಹೋಗು; ನಾನು ಯಾಬೀನನ
ಸೇನಾಪತಿಯಾದ ಸೀಸೆರನನ್ನೂ ಅವನ ಸೈನ್ಯರಥಗಳ
ನ್ನೂ ನಿನ್ನ ಬಳಿಗೆ ಕೀಷೋನ್ ಹಳ್ಳಕ್ಕೆ ಎಳೆದು
ಕೊಂಡು ಬಂದು ನಿನ್ನ ಕೈಗೆ ಒಪ್ಪಿಸುವೆನು ಎಂದು
8 ಆಜ್ಞಾಪಿಸಿದ್ದಾನೆ ಅಂದಳು. ಬಾರಾಕನು ಆಕೆಗೆ—
ನೀನು ನನ್ನ ಸಂಗಡ ಬರುವವಾದರೆ ಹೋಗುವೆನು;
9 ಇಲ್ಲವಾದರೆ ಹೋಗುವದಿಲ್ಲ ಅನ್ನಲು ಆಕೆಯು—
ನಾನು ಹೇಗೂ ನಿನ್ನ ಸಂಗಡ ಬರುವೆನು; ಆದರೆ ಈ
ಯುದ್ಧಪ್ರಯಾಣದಲ್ಲುಂಟಾಗುವ ಮಾನವು ನಿನ
ಗಲ್ಲ. ಯೆಹೋವನು ಸೀಸೆರನನ್ನು ಒಬ್ಬ ಸ್ತ್ರೀಗೆ
ಒಪ್ಪಿಸಿಕೊಡುವನು ಎಂದು ಹೇಳಿ ಎದ್ದು ಬಾರಾಕ
10 ನೊಡನೆ ಕೆದೆಷಿಗೆ ಹೋದಳು. ಮತ್ತು ಬಾರಾಕನು
ಜೆಬುಲೂನ್ಯರನ್ನೂ ನಫ್ತಾಲ್ಯರನ್ನೂ ಕೆದೆಷಿಗೆ ಕರಿಸಿ
ದನು; ಅವರಲ್ಲಿ ಹತ್ತು ಸಾವಿರ ಮಂದಿ ಅವನ
ಹೆಜ್ಜೆ ಹಿಡಿದು ಯುದ್ಧಕ್ಕೆ ಹೋದರು; ದೆಬೋರಳೂ
11 ಹೋದಳು. (ಕೇನ್ಯನಾದ ಹೆಬೆರನು ಮೋಶೆಯ
ಮಾವನಾದ ಹೋಬಾಬನ ವಂಶದ ಉಳಿದ ಕೇನ್ಯ
ರನ್ನು ಅಗಲಿ ಕೆದೆಷಿನ ಹತ್ತಿರ ಇರುವ ಚಾನನ್ನೀ
ಮೆಂಬ ಊರಿನ ಏಲೋನ್ ವೃಕ್ಷದ ವರೆಗೆ ಬಂದು
12 ಅಲ್ಲಿ ಗುಡಾರಹಾಕಿಕೊಂಡಿದ್ದನು.) ಅಬೀನೋವ
ಮನ ಮಗನಾದ ಬಾರಾಕನು ತಾಬೋರ್ ಬೆಟ್ಟ
ವನ್ನೇರಿ ಬಂದಿದ್ದಾನೆಂಬ ವರ್ತಮಾನವು ಸೀಸೆರನಿಗೆ
13 ಮುಟ್ಟಿದಾಗ ಅವನು ತನ್ನ ಒಂಭೈನೂರು ಕಬ್ಬಿಣದ
ರಥಗಳನ್ನೂ ಎಲ್ಲಾ ಸೈನ್ಯವನ್ನೂ ತೆಗೆದುಕೊಂಡು
ಮ್ಲೇಚ್ಛರ ಹರೋಷೆತಿನಿಂದ ಕೀಷೋನ್ ಹಳ್ಳಕ್ಕೆ
14 ಬಂದನು. ಆಗ ದೆಬೋರಳು ಬಾರಾಕನಿಗೆ—ಏಳು,
ಯೆಹೋವನು ಸೀಸೆರನನ್ನು ನಿನ್ನ ಕೈಗೆ ಒಪ್ಪಿಸುವ
ದಿನವು ಇದೇ; ನಿಶ್ಚಯವಾಗಿ ಆತನು ತಾನೇ ನಿನ್ನ
ಮುಂದಾಗಿ ಯುದ್ಧಕ್ಕೆ ಹೊರಡುವನು ಅನ್ನಲು
ಬಾರಾಕನು ಬೇಗನೆ ಹತ್ತು ಸಾವಿರ ಜನರ ಸಹಿತ
ವಾಗಿ ತಾಬೋರ್ ಬೆಟ್ಟದಿಂದಿಳಿದನು. ಯೆಹೋ 15
ವನು ಸೀಸೆರನನ್ನೂ ಅವನ ಎಲ್ಲಾ ಸೈನ್ಯರಥಗಳನ್ನೂ
ಬಾರಾಕನ ಮುಂದೆ ಗಲಿಬಿಲಿಪಡಿಸಿ ಕತ್ತಿಗೆ ಬಲಿ
ಕೊಟ್ಟನು. ಸೀಸೆರನು ರಥದಿಂದ ಹಾರಿ ಓಡಿ
ಹೋದನು. ಬಾರಾಕನು ಅವನ ಸೈನ್ಯರಥಗಳನ್ನು 16
ಮ್ಲೇಚ್ಛರ ಹರೋಷೆತಿನ ವರೆಗೂ ಹಿಂದಟ್ಟಿದನು.
ಸೀಸೆರನ ಸೈನ್ಯದವರೆಲ್ಲಾ ಕತ್ತಿಯಿಂದ ಹತರಾದರು;
ಒಬ್ಬನೂ ಉಳಿಯಲಿಲ್ಲ.
ಹಾಚೋರಿನ ಅರಸನಾದ ಯಾಬೀನನಿಗೂ ಕೇನ್ಯ 17
ನಾದ ಹೆಬೆರನ ಮನೆಯವರಿಗೂ ಸಮಾಧಾನವಿದ್ದ
ದರಿಂದ ಸೀಸೆರನು ಕಾಲುನಡೆಯಾಗಿ ಕೇನ್ಯನಾದ
ಹೆಬೆರನ ಹೆಂಡತಿಯಾದ ಯಾಯೇಲಳ ಗುಡಾರದ
ಕಡೆಗೆ ಹೋದನು. ಯಾಯೇಲಳು ಹೊರಗೆ 18
ಹೋಗಿ ಸೀಸೆರನನ್ನು ಎದುರುಗೊಂಡು ಅವನಿಗೆ—
ಸ್ವಾಮೀ, ಒಳಗೆ ಬನ್ನಿರಿ; ಹೆದರಬೇಡಿರಿ, ನಮ್ಮಲ್ಲಿ
ಬನ್ನಿರಿ ಅನ್ನಲು ಅವನು ಗುಡಾರದೊಳಗೆ ಹೋದನು.
ಆಗ ಆಕೆಯು ಅವನನ್ನು ಕಂಬಳಿಯಿಂದ ಮುಚ್ಚಿ
ದಳು. ಅವನು ಆಕೆಗೆ—ದಯವಿಟ್ಟು ಸ್ವಲ್ಪ ನೀರನ್ನು 19
ಕೊಡು, ನನಗೆ ಬಹಳ ದಾಹವಾಗಿದೆ ಅಂದನು;
ಆಕೆಯು ಬುದ್ದಲಿಯನ್ನು ಬಿಚ್ಚಿ ಹಾಲನ್ನು ಕುಡಿಯ
ಕೊಟ್ಟು ಅವನನ್ನು ತಿರಿಗಿ ಮುಚ್ಚಿದಳು. ಅವನು 20
ಆಕೆಗೆ—ನೀನು ಗುಡಾರದ ಬಾಗಲಲ್ಲೇ ನಿಂತಿರು;
ಯಾರಾದರೂ ಬಂದು ಇಲ್ಲಿ ಒಬ್ಬ ಮನುಷ್ಯನಿರು
ತ್ತಾನೋ ಎಂದು ವಿಚಾರಿಸಿದರೆ ಇಲ್ಲ ಅನ್ನು ಎಂದು
ಹೇಳಿದನು. ಹೆಬೆರನ ಹೆಂಡತಿಯಾದ ಯಾಯೇ 21
ಲಳು ಕೈಯಲ್ಲಿ ಗುಡಾರದ ಗೂಟವನ್ನೂ ಒಂದು
ಕೊಡತಿಯನ್ನೂ ತೆಗೆದುಕೊಂಡು ಅವನು ಆಯಾಸ
ದಿಂದ ಗಾಢನಿದ್ರೆಯಲ್ಲಿದ್ದಾಗ ಮೆಲ್ಲಗೆ ಹತ್ತಿರ ಹೋಗಿ
ಅವನ ಕಣತಲೆಯಲ್ಲಿ ಆ ಗೂಟವನ್ನು ಹೊಡೆದು
ನೆಲಕ್ಕೆ ನಾಟಿಸಿದಳು; ಅವನು ಸತ್ತನು. ಅದೇ 22
ಕ್ಷಣದಲ್ಲಿ ಸೀಸೆರನನ್ನು ಹಿಂದಟ್ಟುತ್ತಿದ್ದ ಬಾರಾಕನು
ಅಲ್ಲಿ ಬಂದನು. ಯಾಯೇಲಳು ಹೊರಗೆ ಹೋಗಿ
ಅವನನ್ನು ಎದುರುಗೊಂಡು—ಬಾ, ನೀನು ಹುಡು
ಕುವ ಮನುಷ್ಯನನ್ನು ತೋರಿಸುತ್ತೇನೆಂದು ಹೇಳಲು
ಅವನು ಒಳಗೆ ಹೋಗಿ ಸೀಸೆರನು ಸತ್ತು ಬಿದ್ದದ್ದನ್ನು
ಕಂಡನು. ಅವನ ತಲೆಯಲ್ಲಿ ಗೂಟವು ಜಡಿಯ
ಲ್ಪಟ್ಟಿತ್ತು. ಆ ದಿನದಲ್ಲಿ ದೇವರು ಕಾನಾನ್ಯರಾಜ 23
ನಾದ ಯಾಬೀನನನ್ನು ಇಸ್ರಾಯೇಲ್ಯರ ಮುಂದೆ
ತಗ್ಗಿಸಿದನು. ಇಸ್ರಾಯೇಲ್ಯರ ಹಸ್ತವು ಹೆಚ್ಚು ಹೆಚ್ಚು 24
ಬಲಗೊಂಡದರಿಂದ ಕಾನಾನ್ಯರ ಅರಸನಾದ ಯಾಬೀ
ನನು ಪೂರ್ಣವಾಗಿ ಸೋತು ನಿರ್ನಾಮವಾದನು.

ಜಯಗೀತ.

5

ಆ ದಿನದಲ್ಲಿ ದೆಬೋರಳೂ ಅಬೀನೋವಮನ ಮಗ
ನಾದ ಬಾರಾಕನೂ ಹಾಡಿದ್ದೇನಂದರೆ—
ಇಸ್ರಾಯೇಲ್ಯರಲ್ಲಿ ಸೇನಾನಾಯಕರು ಎದ್ದಿ 2
ದ್ದಾರೆ;
ಜನರು ಸ್ವೇಚ್ಛೆಯಿಂದ ಸೈನ್ಯದಲ್ಲಿ ಸೇರಿದ್ದಾರೆ,
ಯೆಹೋವನನ್ನು ಕೊಂಡಾಡಿರಿ.

3 ಅರಸರೇ, ಕೇಳಿರಿ; ಪ್ರಭುಗಳೇ, ಕಿವಿಗೊಡಿರಿ;
ನಾನು ಯೆಹೋವನನ್ನು ಕೀರ್ತಿಸುವೆನು;
ಇಸ್ರಾಯೇಲ್‍ದೇವರಾದ ಯೆಹೋವನಿಗೆ ಗಾನ
ಮಾಡುವೆನು.

4 ಯೆಹೋವನೇ, ನೀನು ಹೊರಟು
ಎದೋಮ್ಯರ ಪ್ರಾಂತವಾದ ಸೇಯೀರಿನ ಮಾರ್ಗ
ವಾಗಿ ಪಯಣಮಾಡುತ್ತಾ ಬರುವಾಗ
ಭೂಲೋಕವು ಕಂಪಿಸಿತು, ಆಕಾಶದಿಂದ ಹನಿ
ಬಿದ್ದಿತು;
ಮೇಘಮಂಡಲವು ಮಳೆಗರೆಯಿತು.
5 ಯೆಹೋವನ ಮುಂದೆ ಪರ್ವತಗಳು ಕರಗಿ
ಹೋದವು,
ಇಸ್ರಾಯೇಲ್‍ದೇವರಾದ ಯೆಹೋವನ ಎದು
ರಿಗೆ ಆ ಸೀನಾಯಿಬೆಟ್ಟವೂ ನೀರಾಯಿತು.

6 ಅನಾತನ ಮಗನಾದ ಶಮ್ಗರನ ಕಾಲದ
ಲ್ಲಿಯೂ
ಯಾಯೇಲಳ ದಿನಗಳಲ್ಲಿಯೂ ರಾಜಮಾರ್ಗ
ಗಳಲ್ಲಿ ಸಂಚಾರವು ನಿಂತುಹೋಯಿತು;
ಪ್ರಯಾಣಿಕರು ಸೀಳುದಾರಿಹಿಡಿದು ಹೋಗು
ವರು.
7 ದೆಬೋರಳಾದ ನಾನು ಇಸ್ರಾಯೇಲ್ಯರಲ್ಲಿ ತಾಯಿ
ಯಂತೆ ಎದ್ದು ಬರುವ ವರೆಗೆ
ಇಸ್ರಾಯೇಲ್ ಗ್ರಾಮಗಳು ಹಾಳುಬಿದ್ದಿದ್ದವು.
8 ಜನರು ಅನ್ಯದೇವತೆಗಳನ್ನು ಆರಿಸಿಕೊಂಡಿದ್ದರು;
ಯುದ್ಧವು ಊರುಬಾಗಿಲ ವರೆಗೆ ಬಂದಿತ್ತು.
ಇಸ್ರಾಯೇಲ್ಯರ ನಾಲ್ವತ್ತು ಸಾವಿರ ಸೈನಿಕರಲ್ಲಿ
ಒಬ್ಬನಿಗೂ ಗುರಾಣಿ ಬರ್ಜಿಗಳು ಇದ್ದಿಲ್ಲ.

9 ನಾನು ಇಸ್ರಾಯೇಲ್ ನಾಯಕರಲ್ಲಿಯೂ
ಸ್ವೇಚ್ಛೆಯಿಂದ ಸೈನ್ಯದಲ್ಲಿ ಸೇರಿದ ಜನರಲ್ಲಿಯೂ
ಸಂತೋಷಿಸುತ್ತೇನೆ;
ಯೆಹೋವನನ್ನು ಕೊಂಡಾಡಿರಿ.
10 ಬಿಳೀ ಕತ್ತೆಗಳ ಮೇಲೆ ಸವಾರಿಮಾಡುವವರೇ,
ರತ್ನಗಂಬಳಿಗಳ ಮೇಲೆ ಕೂತುಕೊಳ್ಳುವವರೇ,
ಪ್ರಯಾಣಿಕರೇ, ಗಾನಮಾಡಿರಿ.
11 ಸೇದುವ ಬಾವಿಗಳ ಬಳಿಯಲ್ಲಿ ಕೊಳ್ಳೆಯನ್ನು
ಹಂಚಿಕೊಳ್ಳುವವರ ಧ್ವನಿಗಿಂತ ಗಟ್ಟಿಯಾಗಿ
ಯೆಹೋವನ ನೀತಿಸಾಧನೆಯನ್ನು ವರ್ಣಿಸುತ್ತಾರೆ.
ಆತನು ತನ್ನ ಪ್ರಜೆಗಳಾಗಿರುವ ಇಸ್ರಾಯೇಲ್
ಗ್ರಾಮಸ್ಥರ ನ್ಯಾಯವನ್ನು ಸ್ಥಾಪಿಸಿದ್ದಾನಲ್ಲಾ.
ಆ ಕಾಲದಲ್ಲಿ ಯೆಹೋವನ ಜನರು ಊರುಬಾಗ
ಲುಗಳಿಗೆ ಇಳಿದು ಬಂದರು.

12 ಎಚ್ಚರವಾಗು, ದೆಬೋರಳೇ, ಎಚ್ಚರವಾಗು;
ಎಚ್ಚರವಾಗು, ಎಚ್ಚರವಾಗಿ ಗಾನಮಾಡು.
ಬಾರಾಕನೇ, ಏಳು;
ಅಬೀನೋವಮನ ಮಗನೇ, ನೀನು ಸೆರೆಹಿಡಿದವ
ರನ್ನು ಸಾಗಿಸಿಕೊಂಡು ಹೋಗು.

ಆಗ ಚದರಿಹೋದವರು ನಾಯಕರ ಬಳಿಗ
ಕೂಡಿಬಂದರು;
ಯೆಹೋವನ ಜನರು ವೀರರಾಗಿ ನನ್ನ ಸಹಾ
ಯಕ್ಕೆ ನೆರೆದು ಬಂದರು.
ಅಮಾಲೇಕ್ಯರ ಪ್ರದೇಶದಲ್ಲಿ ನೆಲೆಗೊಂಡಿರುವ
ಎಫ್ರಾಯಿಮ್ಯರೂ
ಅವರ ಜೊತೆಯಲ್ಲಿ ಬೆನ್ಯಾಮೀನ್ಯರೂ ಬಂದರು;
ಮಾಕೀರನ ಗೋತ್ರದಿಂದ ಪ್ರಧಾನರೂ
ಜೆಬುಲೂನ್ ಕುಲದಿಂದ ದಂಡಧಾರಿಗಳಾದ ಸೇನಾ
ನಾಯಕರೂ
ದೆಬೋರಳ ಜೊತೆಯಲ್ಲಿ ಇಸ್ಸಾಕಾರ್ ಕುಲ
ಪ್ರಭುಗಳೂ
ಇಸ್ಸಾಕಾರ್ಯರೊಡನೆ ಬಾರಾಕನೂ ಆಗಮಿಸಿ
ದರು.
ಇವರೆಲ್ಲರೂ ಬಾರಾಕನ ಹೆಜ್ಜೆಹಿಡಿದು ಸರ್ರನೆ
ತಗ್ಗಿಗೆ ಬಂದರು.

ರೂಬೇನ್ಯರು ನೀರಿನ ಕಾಲಿವೆಗಳ ಬಳಿಯಲ್ಲಿ
ಮಾಡಿದ ತೀರ್ಮಾನಗಳು ಘನವಾದವು
ಗಳೇ ಸರಿ.
ರೂಬೇನ್ಯರೇ, ನೀವು ಕುರಿಹಟ್ಟಿಗಳಲ್ಲಿ ಕೂತಿರು
ವದೇಕೆ?
ಮಂದೆಗಳ ಮಧ್ಯದಲ್ಲಿ ಕೊಳಲೂದುವದನ್ನು
ಕೇಳಬೇಕೆಂದಿದ್ದೀರೋ?
ರೂಬೇನ್ಯರು ನೀರಿನ ಕಾಲಿವೆಗಳ ಬಳಿಯಲ್ಲಿ
ಮಾಡಿದ ವಿಚಾರಗಳು ಬಹು ಘನವಾದವು
ಗಳೇ ಸರಿ.
ಗಿಲ್ಯಾದ್ಯರು ಯೊರ್ದನಿನ ಆಚೆಯಲ್ಲೇ ಉಳಿ
ದರು;
ದಾನ್ ಕುಲದವರು ಹಡಗುಗಳಲ್ಲಿಯೇ ಉಳಿದ
ದ್ದೇಕೆ?
ಆಶೇರ್ ಕುಲದವರು ತಮ್ಮ ರೇವುಗಳನ್ನು ಬಿಡದೆ
ಸಮುದ್ರತೀರದಲ್ಲಿ ಸುಮ್ಮನೆ ಕೂತುಬಿಟ್ಟರು.
ಜೆಬುಲೂನ್ಯರೂ ನಫ್ತಾಲ್ಯರೂ ಅಂಥವರಲ್ಲ;
ಅವರು ಬೈಲಿನ ದಿನ್ನೆಗಳಲ್ಲಿ ತಮ್ಮ ಜೀವವನ್ನು
ಮರಣಾಪತ್ತಿಗೊಪ್ಪಿಸಿದರು.

ಅರಸರು ಬಂದು ಯುದ್ಧಮಾಡಿದರು;
ಕಾನಾನ್ಯರಾಜರು ಮೆಗಿದ್ದೋ ಪ್ರವಾಹಗಳ
ಬಳಿಯಲ್ಲಿರುವ ತಾನಾಕದಲ್ಲಿ ಕೂಡಿಬಂದು
ಕಾದಿದರು.
ಅವರಿಗೆ ದ್ರವ್ಯವೇನೂ ಸಿಕ್ಕಲಿಲ್ಲ.
ನಕ್ಷತ್ರಗಳೂ ಆಕಾಶಪಥದಲ್ಲಿದ್ದು ಸೀಸೆರನೊಡನೆ
ಯುದ್ಧಮಾಡಿದವು.
ಪೂರ್ವಪ್ರಸಿದ್ಧವಾದ ಕೀಷೋನ್ ಹೊಳೆಯು
ಶತ್ರುಗಳನ್ನು ಬಡಕೊಂಡು ಹೋಯಿತು.
(ನನ್ನ ಮನವೇ, ಧೈರ್ಯದಿಂದ ಮುಂದೆ
ಹೊರಡು.)
ಭರಧೌಡಿನಿಂದ ಓಡುವ ಅವರ ಬಲವಾದ ಕುದುರೆ
ಗಳ ಕಾಲುಗಳ ಪೆಟ್ಟಿನಿಂದ ನೆಲವು ಕಂಪಿಸಿತು.

23 ಮೇರೋಜ್ ಊರನ್ನು ಶಪಿಸಿರೆಂದು ಯೆಹೋ
ವನ ದೂತನು ಹೇಳುತ್ತಾನೆ.
ಅದರ ನಿವಾಸಿಗಳು ಯೆಹೋವನ ಸಹಾಯಕ್ಕೆ
ಬರಲಿಲ್ಲ;
ಯುದ್ಧವೀರರ ಜೊತೆಯಲ್ಲಿ ಯೆಹೋವನ ಸಹಾ
ಯಕ್ಕೆ ಬರಲಿಲ್ಲವಲ್ಲಾ;
ಅವರನ್ನು ಶಪಿಸೇ ಶಪಿಸಿರಿ.
24 ಎಲ್ಲಾ ಸ್ತ್ರೀಯರಲ್ಲಿ ಕೇನ್ಯನಾದ ಹೆಬೆರನ ಹೆಂಡತಿ
ಯಾಯೇಲಳಿಗೇ ಆಶೀರ್ವಾದವು;
ಗುಡಾರಗಳಲ್ಲಿ ವಾಸಿಸುವ ಸ್ತ್ರೀಯರಲ್ಲಿ ಆಕೆಗೇ
ಆಶೀರ್ವಾದವು.
25 ನೀರುಕೇಳಿದನು, ಹಾಲುಕೊಟ್ಟಳು;
ಉತ್ತಮಪಾತ್ರೆಯಲ್ಲಿ ಮಜ್ಜಿಗೆಕೊಟ್ಟಳು.
26 ಕೈಚಾಚಿ ಗೂಟವನ್ನು ತೆಗೆದುಕೊಂಡಳು;
ಬಲಗೈಯಲ್ಲಿ ದೊಡ್ಡ ಕೊಡತಿಯನ್ನು ಹಿಡಿ
ದಳು;
ಆ ಕೊಡತಿಯಿಂದ ಸೀಸೆರನ ತಲೆಯನ್ನು ಒಡೆದು
ಬಿಟ್ಟಳು.
ಅವನ ಕಣತಲೆಗೆ ತಿವಿದು ಬಡಿದಳು.
27 ಅವನು ಆಕೆಯ ಕಾಲುಗಳ ಬಳಿಯಲ್ಲಿ ಬೊಗ್ಗಿ
ಕೊಂಡು ಉರುಳಿ ಬಿದ್ದನು;
ಅವನು ಆಕೆಯ ಕಾಲುಗಳ ಬಳಿಯಲ್ಲಿ ಮುದುರಿ
ಕೊಂಡು ಉರುಳಿದನು.
ಅವನು ಬಿದ್ದಲ್ಲೇ ಸತ್ತನು.

28 ಸೀಸೆರನ ತಾಯಿಯು ಕಿಟಕಿಯಿಂದ ನೋಡಿ
ದಳು;
ಸೀಸೆರನ ತಾಯಿಯು ಕಿಟಕಿಯ ಜಾಲರಿಗಳಿಂದ
ಕೂಗಿದಳು;
ಅವನ ರಥವು ಬರುವದಕ್ಕೆ ಇಷ್ಟು ಹೊತ್ತೇ
ಕಾಯಿತು!
ಅವನ ಕುದುರೆಗಳ ಕಾಲುಗಳಿಗೆ ಇಷ್ಟು ಸಾವ
ಕಾಶವೇಕೆ ಅಂದಳು.
29 ಸಭ್ಯಸ್ತ್ರೀಯರಲ್ಲಿ ಬುದ್ಧಿವಂತೆಯರು ಕೊಟ್ಟ
ಉತ್ತರವನ್ನು
ಈಕೆಯು ತನ್ನಲ್ಲಿ ತಾನೇ ಅಂದುಕೊಳ್ಳುತ್ತಿದ್ದದ್ದು
ಹೇಗಂದರೆ—
30 ನಿಶ್ಚಯವಾಗಿ ಅವರಿಗೆ ಕೊಳ್ಳೆಸಿಕ್ಕಿರುತ್ತದೆ; ಅದ
ನ್ನು ಹಂಚಿಕೊಳ್ಳುತ್ತಿದ್ದಾರೆ.
ಪ್ರತಿಯೊಬ್ಬ ಸೈನಿಕನಿಗೆ ಒಬ್ಬಿಬ್ಬರು ದಾಸಿಯರೂ
ಸೀಸೆರನಿಗೆ ನಾನಾ ವರ್ಣಗಳುಳ್ಳ ಬಟ್ಟೆಗಳೂ
ವಿಚಿತ್ರವಾಗಿ ಕಸೂತಿಹಾಕಿದ ಒಂದೆರಡು ವಸ್ತ್ರ
ಗಳೂ ಕಂಠಮಾಲೆಯೂ ದೊರಕಿರುತ್ತವೆ
ಎಂಬದೇ.

31 ಯೆಹೋವನ ಎಲ್ಲಾ ಶತ್ರುಗಳೂ ಇವರಂತೆ
ಯೇ ನಾಶವಾಗಲಿ;
ಆತನ ಭಕ್ತರು ಪ್ರತಾಪದಿಂದ ಉದಯಿಸುವ
ಸೂರ್ಯನಂತಿರಲಿ.
ದೇಶದಲ್ಲಿ ನಾಲ್ವತ್ತು ವರುಷ ಸಮಾಧಾನವಿತ್ತು.

ಮಿದ್ಯಾನ್ಯರ ಕಾಟವೂ ಯೆಹೋವನು ಗಿದ್ಯೋನನನ್ನು
ಕರೆದದ್ದೂ.

6 ಇಸ್ರಾಯೇಲ್ಯರು ತಿರಿಗಿ ಯೆಹೋವನ ದೃಷ್ಟಿಯಲ್ಲಿ
ದ್ರೋಹಿಗಳಾದದರಿಂದ ಆತನು ಅವರನ್ನು ಏಳು
ವರುಷಗಳ ಪರ್ಯಂತರ ಮಿದ್ಯಾನ್ಯರ ಕೈಗೆ ಒಪ್ಪಿಸಿ
ದನು. ಮಿದ್ಯಾನ್ಯರ ಹಸ್ತವು ಬಲಗೊಂಡದರಿಂದ 2
ಇಸ್ರಾಯೇಲ್ಯರು ಅವರಿಗೆ ಹೆದರಿ ಪರ್ವತಗಳಲ್ಲಿ
ಕಂದರಗುಹೆದುರ್ಗಗಳನ್ನು ಮಾಡಿ ಸೇರಿಕೊಂಡರು.
ಇವರು ಬೀಜಬಿತ್ತಿದ ತರುವಾಯ ಮಿದ್ಯಾನ್ಯರೂ 3
ಅಮಾಲೇಕ್ಯರೂ ಮೂಡಣ ದೇಶದವರೂ ಇವರಿಗೆ
ವಿರೋಧವಾಗಿ ದಂಡೆತ್ತಿ ಬಂದು ಇಳುಕೊಂಡು ಗಾಜಾ 4
ಪ್ರಾಂತದ ವರೆಗಿದ್ದ ಎಲ್ಲಾ ಭೂಮಿಯ ಹುಟ್ಟುವಳಿ
ಯನ್ನು ಹಾಳುಮಾಡಿಬಿಟ್ಟದರಿಂದ ಇವರಿಗೆ ದವಸ
ಧಾನ್ಯವಾಗಲಿ ಕುರಿದನಕತ್ತೆಗಳಾಗಲಿ ಉಳಿಯಲೇ
ಇಲ್ಲ. ಆ ಶತ್ರುಗಳು ತಮ್ಮ ಕುರಿದನಗುಡಾರ 5
ಗಳ ಸಹಿತವಾಗಿ ಮಿಡಿತೆಗಳಂತೆ ಗುಂಪುಗುಂಪಾಗಿ
ಬಂದರು; ಅವರೂ ಅವರ ಒಂಟೆಗಳೂ ಅಸಂಖ್ಯ.
ಆ ಗುಂಪೆಲ್ಲಾ ಬಂದು ದೇಶವನ್ನು ಹಾಳುಮಾಡು
ತ್ತಿತ್ತು. ಇಸ್ರಾಯೇಲ್ಯರು ಮಿದ್ಯಾನ್ಯರ ದೆಸೆಯಿಂದ 6
ಬಲು ಕುಗ್ಗಿಹೋಗಿ ಯೆಹೋವನಿಗೆ ಮೊರೆಯಿಟ್ಟರು.
ಇಸ್ರಾಯೇಲ್ಯರು ಮಿದ್ಯಾನ್ಯರ ಕಾಟವನ್ನು ಸಹಿಸ 7
ಲಾರದೆ ಯೆಹೋವನಿಗೆ ಮೊರೆಯಿಟ್ಟಾಗ ಆತನು 8
ಅವರ ಬಳಿಗೆ ಒಬ್ಬ ಪ್ರವಾದಿಯನ್ನು ಕಳುಹಿಸಿದನು.
ಅವನು ಬಂದು ಅವರಿಗೆ—ಇಸ್ರಾಯೇಲ್ಯರ ದೇವ
ರಾದ ಯೆಹೋವನ ಮಾತನ್ನು ಕೇಳಿರಿ; ಆತನು
ಹೇಳುವದೇನಂದರೆ—ನೀವು ದಾಸತ್ವದಲ್ಲಿದ್ದ ಐಗುಪ್ತ
ದಿಂದ ನಿಮ್ಮನ್ನು ಕರತಂದೆನು. ಐಗುಪ್ತ್ಯರಿಂದ 9
ನಿಮ್ಮನ್ನು ಬಿಡಿಸಿದ್ದಲ್ಲದೆ ಬೇರೆ ಎಲ್ಲಾ ಬಾಧಕ
ರಿಂದಲೂ ನಿಮ್ಮನ್ನು ಬಿಡಿಸಿ ಅವರನ್ನು ನಿಮ್ಮೆದುರಿ
ನಿಂದ ಅಟ್ಟಿಬಿಟ್ಟು ಅವರ ದೇಶವನ್ನು ನಿಮಗೆ
ಕೊಟ್ಟೆನು. ಯೆಹೋವನೆಂಬ ನಾನೇ ನಿಮ್ಮ ದೇವ 10
ರಾಗಿದ್ದೇನೆಂದೂ ನೀವು ಅಮೋರಿಯರ ಮಧ್ಯದಲ್ಲಿ
ವಾಸಿಸುವಾಗ ಅವರ ದೇವತೆಗಳನ್ನು ಪೂಜಿಸಬಾರ
ದೆಂದೂ ಹೇಳಿದೆನು; ಆದರೆ ನೀವು ನನ್ನ ಮಾತನ್ನು
ಕೇಳಲಿಲ್ಲ ಎಂಬದೇ ಅಂದನು.
ಆ ಮೇಲೆ ಯೆಹೋವನ ದೂತನು ಬಂದು ಒಫ್ರ 11
ದಲ್ಲಿದ್ದ ಏಲಾ ವೃಕ್ಷದ ಅಡಿಯಲ್ಲಿ ಕೂತುಕೊಂಡನು.
ಅದು ಅಬೀಯೆಜೆರನ ಗೋತ್ರದವನಾದ ಯೋವಾ
ಷನದಾಗಿತ್ತು. ಅವನ ಮಗನಾದ ಗಿದ್ಯೋನನು
ಮಿದ್ಯಾನ್ಯರಿಗೆ ಗೊತ್ತಾಗದ ಹಾಗೆ ಅಲ್ಲಿನ ದ್ರಾಕ್ಷೆಯ
ಆಲೆಯ ಮರೆಯಲ್ಲಿ ಗೋದಿಯನ್ನು ಬಡಿಯುತ್ತಿ
ದ್ದನು. ಯೆಹೋವನ ದೂತನು ಗಿದ್ಯೋನನಿಗೆ ಪ್ರತ್ಯ 12
ಕ್ಷನಾಗಿ ಅವನಿಗೆ—ಪರಾಕ್ರಮಶಾಲಿಯೇ, ಯೆಹೋ
ವನು ನಿನ್ನ ಸಂಗಡ ಇದ್ದಾನೆ ಅಂದನು. ಆಗ ಗಿದ್ಯೋ 13
ನನು ಅವನಿಗೆ—ಸ್ವಾಮೀ, ಯೆಹೋವನು ನಮ್ಮ
ಸಂಗಡ ಇದ್ದರೆ ನಮಗೆ ಇದೆಲ್ಲಾ ಯಾಕೆ ಸಂಭವಿ
ಸಿತು? ನಮ್ಮ ಹಿರಿಯರು, ಯೆಹೋವನು ಅದ್ಭುತ
ಗಳನ್ನು ನಡಿಸಿ ತಮ್ಮನ್ನು ಐಗುಪ್ತದಿಂದ ಬಿಡಿಸಿದ

ನೆಂಬದಾಗಿ ವಿವರಿಸುತ್ತಿದ್ದರು. ಅಂಥ ಅದ್ಭುತಗಳು
ಈಗೆಲ್ಲಿವೆ? ಆತನು ನಮ್ಮನ್ನು ತಿರಸ್ಕರಿಸಿ ಮಿದ್ಯಾ
14 ನ್ಯರ ಕೈಗೆ ಒಪ್ಪಿಸಿಬಿಟ್ಟಿದ್ದಾನಲ್ಲಾ ಅನ್ನಲು ಯೆಹೋ
ವನು ಅವನನ್ನು ಚೆನ್ನಾಗಿ ನೋಡಿ—ನಾನು ನಿನ್ನನ್ನು
ಕಳುಹಿಸುತ್ತೇನೆ, ಹೋಗು; ಈ ನಿನ್ನ ಬಲದಿಂದ
ಇಸ್ರಾಯೇಲ್ಯರನ್ನು ಮಿದ್ಯಾನ್ಯರಿಂದ ಬಿಡಿಸು ಎಂದು
15 ಹೇಳಿದನು. ಆಗ ಗಿದ್ಯೋನನು ಆತನಿಗೆ—ಸ್ವಾಮಿ,
ನಾನು ಇಸ್ರಾಯೇಲ್ಯರನ್ನು ರಕ್ಷಿಸುವದು ಹೇಗೆ?
ಮನಸ್ಸೆ ಕುಲದಲ್ಲಿ ನನ್ನ ಮನೆಯು ಕನಿಷ್ಠವಾದದ್ದು;
ಮತ್ತು ನಾನು ನಮ್ಮ ಕುಟುಂಬದಲ್ಲಿ ಅಲ್ಪನು
16 ಅನ್ನಲು ಯೆಹೋವನು ಅವನಿಗೆ—ನಾನು ನಿನ್ನ
ಸಂಗಡ ಇರುವದರಿಂದ ನೀನು ಮಿದ್ಯಾನ್ಯರೆಲ್ಲರನ್ನೂ
ಒಬ್ಬ ಮನುಷ್ಯನನ್ನೋ ಎಂಬಂತೆ ಸಂಹರಿಸಿಬಿಡುವಿ
17 ಅಂದನು. ಅವನು ಆತನಿಗೆ—ಸ್ವಾಮಿ, ದಯವಿರಲಿ;
ನನ್ನೊಂದಿಗೆ ಮಾತಾಡುತ್ತಿರುವ ತಾವು ಸ್ವಾಮಿ
ಯವರೇ ಆಗಿದ್ದೀರೆಂಬದಕ್ಕೆ ನನಗೊಂದು ಗುರು
18 ತನ್ನು ಅನುಗ್ರಹಿಸಬೇಕು. ನಾನು ಹೋಗಿ ತಮಗೆ
ಕಾಣಿಕೆಯನ್ನು ತೆಗೆದುಕೊಂಡು ಬರುವ ವರೆಗೆ
ತಾವು ಈ ಸ್ಥಳವನ್ನು ಬಿಡಬಾರದು ಎಂದು ಬಿನ್ನ
ವಿಸಲು ಆತನು—ನೀನು ತಿರಿಗಿ ಬರುವ ವರೆಗೆ
19 ನಾನು ಇಲ್ಲೇ ಇರುವೆನು ಅಂದನು. ಗಿದ್ಯೋನನು
ಮನೆಗೆ ಹೋಗಿ ಒಂದು ಆಡಿನ ಮರಿಯನ್ನು ಪಕ್ವ
ಮಾಡಿ 1)ಒಂದು ಏಫಾ ಹಿಟ್ಟಿನಿಂದ ಹುಳಿಯಿಲ್ಲದ
ರೊಟ್ಟಿಗಳನ್ನು ಸುಟ್ಟು ಮಾಂಸವನ್ನು ಪುಟ್ಟಿಯ
ಲ್ಲಿಟ್ಟು ಅದರ ರಸವನ್ನು ಬಟ್ಟಲಿನಲ್ಲಿ ಹೊಯ್ದು
ಎಲ್ಲವನ್ನೂ ಏಲಾ ಮರದ ಕೆಳಗೆ ಆತನ ಮುಂದ
20 ತಂದಿಟ್ಟನು. ಆಗ ದೇವದೂತನು ಅವನಿಗೆ—
ಮಾಂಸವನ್ನೂ ರೊಟ್ಟಿಗಳನ್ನೂ ಆ ಬಂಡೆಯ ಮೇ
ಲಿಟ್ಟು ರಸವನ್ನು ಹೊಯ್ಯಿ ಅನ್ನಲು ಅವನು ಹಾಗೆ
21 ಯೇ ಮಾಡಿದನು. ಅನಂತರ ಯೆಹೋವನ ದೂತ
ನು ತನ್ನ ಕೈಕೋಲನ್ನು ಚಾಚಿ ಅದರ ತುದಿಯನ್ನು ಆ
ರೊಟ್ಟಿಗಳಿಗೂ ಮಾಂಸಕ್ಕೂ ಮುಟ್ಟಿಸಲು ಬಂಡೆ
ಯಿಂದ ಬೆಂಕಿಯೆದ್ದು ಅವೆರಡನ್ನೂ ದಹಿಸಿಬಿಟ್ಟಿತು;
22 ಯೆಹೋವನ ದೂತನು ಅದೃಶ್ಯನಾದನು. ಆತನು
ಯೆಹೋವನ ದೂತನೆಂದು ಗಿದ್ಯೋನನು ತಿಳಿದು
ಭಯಪಟ್ಟು—ಅಯ್ಯೋ ಕರ್ತನೇ, ಯೆಹೋವನೇ,
ಯೆಹೋವನ ದೂತನನ್ನು ಮುಖಾಮುಖಿಯಾಗಿ
23 ನೋಡಿಬಿಟ್ಟೆನಲ್ಲಾ ಎಂದು ಕೂಗಿದನು. ಆದರೆ
ಯೆಹೋವನು ಅವನಿಗೆ—ಸಮಾಧಾನದಿಂದಿರು, ಹೆದ
24 ರಬೇಡ; ನೀನು ಸಾಯುವದಿಲ್ಲ ಅಂದನು. ಗಿದ್ಯೋ
ನನು ಅಲ್ಲಿ ಯೆಹೋವನಿಗೋಸ್ಕರ ಒಂದು ಯಜ್ಞ
ವೇದಿಯನ್ನು ಕಟ್ಟಿ ಅದಕ್ಕೆ 2)ಯೆಹೋವ ಷಾಲೋ
ಮ್ ಎಂದು ಹೆಸರಿಟ್ಟನು; ಅದು ಈ ವರೆಗೂ ಅಬೀ
ಯೆಜೆರ್ ಗೋತ್ರದವರ ಒಫ್ರದಲ್ಲಿರುತ್ತದೆ.
25 ಅದೇ ದಿನ ರಾತ್ರಿಯಲ್ಲಿ ಯೆಹೋವನು ಅವ
ನಿಗೆ—ನೀನು ನಿನ್ನ ತಂದೆಯ ಹೋರಿಗಳಲ್ಲಿ ಒಂದು
ಚಿಕ್ಕ ಹೋರಿಯನ್ನೂ ಏಳು ವರುಷದ ಇನ್ನೊಂದು

ಹೋರಿಯನ್ನೂ ತೆಗೆದುಕೊಂಡು ಹೋಗಿ ನಿನ
ತಂದೆಯು ಕಟ್ಟಿರುವ ಬಾಳನ ಯಜ್ಞವೇದಿಯನ
ಕೆಡವಿ ಅದರ ಬಳಿಯಲ್ಲಿರುವ ಅಶೇರವೆಂಬ ವಿಗ್ರ
ಸ್ತಂಭವನ್ನು ಕಡಿದುಹಾಕಿ ಈ ಗುಡ್ಡದ ಶಿಖರದಲ್
ಯೆಹೋವನಿಗೋಸ್ಕರ ನೇಮಕವಾದ ರೀತಿಯಿಂ
ಒಂದು ಯಜ್ಞವೇದಿಯನ್ನು ಕಟ್ಟಿಸಿ ನೀನು ಕಡಿದ
ಹಾಕಿದ ಅಶೇರವಿಗ್ರಹಸ್ತಂಭದಿಂದ ಬೆಂಕಿಮಾಡಿ
ಎರಡನೆಯ ಹೋರಿಯನ್ನೂ ಸರ್ವಾಂಗಹೋಮವಾ
ಸಮರ್ಪಿಸು ಎಂದು ಹೇಳಿದನು. ಆಗ ಗಿದ್ಯೋನನ
ತನ್ನ ಸೇವಕರಲ್ಲಿ ಹತ್ತು ಮಂದಿಯನ್ನು ಕರೆದ
ಕೊಂಡು ಹೋಗಿ ಯೆಹೋವನು ಹೇಳಿದಂತೆಯೆ
ಮಾಡಿದನು. ಆದರೆ ಆವನು ತನ್ನ ಮನೆಯವರಿಗ
ಊರಿನವರಿಗೂ ಹೆದರಿಕೊಂಡದರಿಂದ ಅದನ್ನು ಹ
ಲಿನಲ್ಲಿ ಮಾಡದೆ ರಾತ್ರಿಯಲ್ಲಿ ಮಾಡಿದನು. ಊರಿ
ಜನರು ಹೊತ್ತಾರೆಯಲ್ಲೆದ್ದು ಬಾಳನ ಯಜ್ಞವೇದಿಯ
ಕೆಡವಲ್ಪಟ್ಟದ್ದನ್ನೂ ಅದರ ಸಮೀಪದಲ್ಲಿದ್ದ ವಿಗ್ರ
ಸ್ತಂಭವು ಕಡಿಯಲ್ಪಟ್ಟದ್ದನ್ನೂ ಹೊಸದಾಗಿ ಕಟ್ಟಿ
ಯಜ್ಞವೇದಿಯ ಮೇಲೆ ಎರಡನೆಯ ಹೋರಿಯ
ಯಜ್ಞವಾದದ್ದನ್ನೂ ಕಂಡು ಹೀಗೆ ಮಾಡಿದವರಾರ
ಎಂದು ಒಬ್ಬರನ್ನೊಬ್ಬರು ವಿಚಾರಿಸುವಲ್ಲಿ ಯೋವಾ
ಷನ ಮಗನಾದ ಗಿದ್ಯೋನನೇ ಎಂದು ಗೊತ್ತಾಗಲ
ಆ ಜನರು ಯೋವಾಷನಿಗೆ—ನಿನ್ನ ಮಗನನ್ನು ಹೊ
ರಗೆ ತೆಗೆದುಕೊಂಡು ಬಾ; ಅವನು ಸಾಯಬೇಕು
ಯಾಕಂದರೆ ಬಾಳನ ಯಜ್ಞವೇದಿಯನ್ನು ಕೆಡ
ಅದರ ಬಳಿಯಲ್ಲಿದ್ದ ಅಶೇರವಿಗ್ರಹಸ್ತಂಭವನ್ನು ಕ
ದುಹಾಕಿದ್ದಾನೆ ಅಂದರು. ಯೋವಾಷನು ತನ
ವಿರೋಧವಾಗಿ ನಿಂತವರೆಲ್ಲರಿಗೆ—ಬಾಳನಿಗೋಸ್ಕ
ನೀವು ವ್ಯಾಜ್ಯವಾಡಬೇಕೋ? ನೀವು ಅವನನ್ನು ರಕ್ಷಿ
ಬೇಕೋ? ಅವನಿಗಾಗಿ ವ್ಯಾಜ್ಯವಾಡುವವರು
ಹೊತ್ತೇ ಕೊಲ್ಲಲ್ಪಡಲಿ. ಅವನು ದೇವನಾಗಿದ್ದ
ತನ್ನ ಯಜ್ಞವೇದಿಯನ್ನು ಕೆಡವಿಬಿಟ್ಟದ್ದಕ್ಕಾಗಿ ತಾನ
ವ್ಯಾಜ್ಯವಾಡಲಿ ಎಂದನು. ಆ ದಿವಸದಲ್ಲಿ ಅವನು—
ಬಾಳನು ತನ್ನ ಯಜ್ಞವೇದಿಯನ್ನು ಕೆಡವಿದವನ
ಡನೆ ತಾನೇ ವ್ಯಾಜ್ಯವಾಡಲಿ ಎಂದು ಹೇಳಿದ್ದರಿಂ
ಗಿದ್ಯೋನನಿಗೆ 3)ಯೆರುಬ್ಬಾಳನೆಂಬ ಹೆಸರಾಯಿತು
ಇಷ್ಟರಲ್ಲಿ ಮಿದ್ಯಾನ್ಯರೂ ಅಮಾಲೇಕ್ಯರೂ ಮ
ಡಣದೇಶದವರೂ ಕೂಡಿ ಹೊಳೆದಾಟಿ ಬಂದು ಇಜ್ರೆ
ಲಿನ ತಗ್ಗಿನಲ್ಲಿ ಪಾಳೆಯಮಾಡಿಕೊಂಡರು. ಆ
ಗಿದ್ಯೋನನು ಯೆಹೋವನ ಆತ್ಮನ ಆವೇಶವುಳ್ಳ
ನಾಗಿ ಕೊಂಬನ್ನು ಊದಲು ಅಬೀಯೆಜೆರನ ಗೋತ್
ದವರು ಬಂದು ಅವನನ್ನು ಹಿಂಬಾಲಿಸಿದರು. ಅವನ
ಉಳಿದ ಮನಸ್ಸೆಯವರ ಬಳಿಗೆ ದೂತರನ್ನು ಕಳುಹಿ
ಲಾಗಿ ಅವರೂ ಕೂಡಿಬಂದರು. ಆಶೇರ್ ಜೆಬುಲೂನ
ನಫ್ತಾಲಿ ಕುಲಗಳವರ ಬಳಿಗೆ ದೂತರನ್ನು ಕಳುಹಿಸಲ
ಅವರೂ ಬಂದು ಯುದ್ಧಪ್ರಯಾಣಕ್ಕೋಸ್ಕರ ಸೇ
ಕೊಂಡರು.
ಮತ್ತು ಗಿದ್ಯೋನನು ದೇವರಿಗೆ—ನೀನು ಹೇ

1) ಸುಮಾರು 30 ಸೇರು. 2) ಅಂದರೆ ಯೆಹೋವನು ಸಮಾಧಾನಪ್ರಭು. 3) ಯೆರುಬ್ಬಾಳನು ಅಂದರೆ ಬಾ
ವ್ಯಾಜ್ಯವಾಡಲಿ.

ದಂತೆ ಇಸ್ರಾಯೇಲ್ಯರನ್ನು ನನ್ನ ಮೂಲಕವಾಗಿ ರಕ್ಷಿ
ಸುವಿಯೋ ಇಲ್ಲವೋ ಎಂಬದನ್ನು ತಿಳಿಯಪಡಿಸು.
37 ಇಗೋ, ನಾನು ಕಣದಲ್ಲಿ ಕುರಿಯ ತುಪ್ಪಟವನ್ನು
ಇಡುತ್ತೇನೆ; ಅದರಲ್ಲಿ ಮಾತ್ರ ಮಂಜುಬಿದ್ದು ನೆಲ
ವೆಲ್ಲಾ ಒಣಗಿದ್ದರೆ ನೀನು ಹೇಳಿದಂತೆಯೇ ಇಸ್ರಾ
ಯೇಲ್ಯರನ್ನು ನನ್ನ ಮೂಲಕವಾಗಿ ರಕ್ಷಿಸುವಿಯೆಂದು
38 ತಿಳಿಯುವೆನು ಎಂಬದಾಗಿ ವಿಜ್ಞಾಪಿಸಿದನು. ಹಾಗೆ
ಯೇ ಆಯಿತು; ಅವನು ಮರುದಿವಸ ಹೊತ್ತಾರೆಯ
ಲ್ಲಿ ಎದ್ದು ತುಪ್ಪಟವನ್ನು ಎತ್ತಿ ಹಿಂಡಲು ಮಂಜಿನ
39 ನೀರು ಒಂದು ಬಟ್ಟಲು ತುಂಬಾ ಆಯಿತು. ಅವನು
ತಿರಿಗಿ ದೇವರಿಗೆ—ಸ್ವಾಮಿ, ಸಿಟ್ಟಾಗಬಾರದು;
ಇನ್ನೊಂದು ಸಾರಿ ಮಾತಾಡುತ್ತೇನೆ. ಇನ್ನು ಒಂದೇ
ಸಾರಿ ಈ ತುಪ್ಪಟದಿಂದ ನಿನ್ನನ್ನು ಪರೀಕ್ಷಿಸುವದಕ್ಕೆ
ಅಪ್ಪಣೆಯಾಗಲಿ; ಈ ತುಪ್ಪಟವು ಮಾತ್ರವೇ ಒಣ
ಗಿದ್ದು ನೆಲದ ಮೇಲೆಲ್ಲಾ ಹನಿಬಿದ್ದಿರಲಿ ಅಂದನು.
40 ಆ ರಾತ್ರಿ ದೇವರು ಹಾಗೆಯೇ ಮಾಡಿದನು; ತುಪ್ಪ
ಟವು ಮಾತ್ರ ಒಣಗಿತ್ತು, ನೆಲದ ಮೇಲೆಲ್ಲಾ ಹನಿ
ಬಿದ್ದಿತ್ತು.

ಗಿದ್ಯೋನನು ಮುನ್ನೂರು ಜನರಿಂದ ಮಿದ್ಯಾನ್ಯರನ್ನು
ಸೋಲಿಸಿದ್ದು.

7 ಯೆರುಬ್ಬಾಳನೆನಿಸಿಕೊಳ್ಳುವ ಗಿದ್ಯೋನನೂ ಅವನ
ಸಂಗಡ ಇದ್ದ ಜನರೂ ಬೆಳಿಗ್ಗೆ ಎದ್ದು ಹೊರಟು
ಹೋಗಿ ಹರೋದಿನ ಬುಗ್ಗೆಯ ಬಳಿಯಲ್ಲಿ ಇಳು
ಕೊಂಡರು. ಇವರಿಗೆ ಉತ್ತರದಿಕ್ಕಿನಲ್ಲಿ ಮೋರೆ
ಗುಡ್ಡದ ಹಿಂದಿನ ತಗ್ಗಿನಲ್ಲಿ ಮಿದ್ಯಾನ್ಯರ ದಂಡಿಳಿ
ದಿತ್ತು.
2 ಆಗ ಯೆಹೋವನು ಗಿದ್ಯೋನನಿಗೆ—ನಿನ್ನ
ಸಂಗಡ ಇರುವ ಜನರು ಹೆಚ್ಚಾಗಿದ್ದಾರೆ; ಇವರ
ಕೈಗೆ ಮಿದ್ಯಾನ್ಯರನ್ನು ಒಪ್ಪಿಸುವದು ನನಗೆ ಸರಿ
ಯಾಗಿ ಕಾಣುವದಿಲ್ಲ; ಒಪ್ಪಿಸಿಕೊಟ್ಟರೆ ಸ್ವಹಸ್ತ
ದಿಂದಲೇ ನಮಗೆ ರಕ್ಷಣೆಯುಂಟಾಯಿತೆಂದು ಹೆಚ್ಚಳ
3 ಪಟ್ಟು ನನ್ನನ್ನು ಅಲಕ್ಷ್ಯಮಾಡಾರು. ಆದದರಿಂದ
ಎಲ್ಲಾ ಜನರಿಗೆ ಕೇಳಿಸುವಂತೆ—ಧೈರ್ಯವಿಲ್ಲದ
ವರೂ ಅಂಜುವವರೂ ಈ ಗಿಲ್ಯಾದ್ ಪರ್ವತವನ್ನು
ಬಿಟ್ಟು ಮನೆಗೆ ಹೋಗಲಿ ಎಂದು ಪ್ರಕಟಿಸು ಅಂದ
ನು. ಹಾಗೆ ಮಾಡಲು ಇಪ್ಪತ್ತೆರಡು ಸಾವಿರ ಮಂದಿ
ಹಿಂದಿರುಗಿ ಹೋದರು; ಹತ್ತು ಸಾವಿರ ಮಂದಿ
ಉಳಿದರು.
4 ಯೆಹೋವನು ತಿರಿಗಿ ಗಿದ್ಯೋನನಿಗೆ— ನಿನ್ನ ಬಳಿ
ಯಲ್ಲಿರುವ ಜನರು ಇನ್ನೂ ಹೆಚ್ಚಾಗಿದ್ದಾರೆ; ನೀನು
ಅವರನ್ನು ಹಳ್ಳಕ್ಕೆ ಕರೆದುಕೊಂಡು ಹೋಗು; ಅಲ್ಲಿ
ಅವರನ್ನು ನಿನಗೋಸ್ಕರ ಪರೀಕ್ಷಿಸುವೆನು. ಯಾರು
ನಿನ್ನ ಸಂಗಡ ಹೋಗಬಹುದೆಂದು ಹೇಳುವೆನೋ
ಅವರು ಮಾತ್ರ ಹೋಗಲಿ; ಯಾರಿಗೆ ಹೋಗಬಾರ
ದೆಂದು ಹೇಳುವೆನೋ ಅವರು ಹೋಗದಿರಲಿ ಅಂದನು.
5 ಗಿದ್ಯೋನನು ಜನರನ್ನು ಹಳ್ಳಕ್ಕೆ ಕರೆದುಕೊಂಡು
ಬಂದಾಗ ಯೆಹೋವನು ಅವನಿಗೆ— ನಾಯಿಯಂತೆ
ನೀರನ್ನು ನಾಲಿಗೆಯಿಂದ ನೆಕ್ಕುವವರನ್ನೂ ಮೊಣ
ಕಾಲೂರಿ ಕುಡಿಯುವವರನ್ನೂ ಬೇರೆ ಬೇರೆಯಾಗಿ
ನಿಲ್ಲಿಸು ಎಂದು ಹೇಳಿದನು. ಕೈಯಿಂದ ನೀರನ್ನು 6
ಬಾಯಿಗೆ ತೆಗೆದುಕೊಂಡು ನೆಕ್ಕಿದವರ ಸಂಖ್ಯೆ
ಮುನ್ನೂರು. ಇತರ ಜನರು ಮೊಣಕಾಲೂರಿ ಕುಡಿ
ದವರು. ಆಗ ಯೆಹೋವನು ಗಿದ್ಯೋನನಿಗೆ— 7
ನೀರನ್ನು ನೆಕ್ಕಿದ ಆ ಮುನ್ನೂರು ಮಂದಿಯಿಂದಲೇ
ನಿಮಗೆ ಜಯವನ್ನುಂಟುಮಾಡಿ ಮಿದ್ಯಾನ್ಯರನ್ನು
ನಿನ್ನ ಕೈಗೆ ಒಪ್ಪಿಸಿಕೊಡುವೆನು; ಉಳಿದವರು ತಮ್ಮ
ತಮ್ಮ ಸ್ಥಳಗಳಿಗೆ ಹೋಗಲಿ ಎಂದು ಆಜ್ಞಾಪಿಸಿದನು.
ಗಿದ್ಯೋನನು ಆ ಮುನ್ನೂರು ಜನರನ್ನು ಇಟ್ಟು 8
ಕೊಂಡು ಉಳಿದ ಇಸ್ರಾಯೇಲ್ಯರನ್ನು ಅವರವರ
ಗುಡಾರಗಳಿಗೆ ಕಳುಹಿಸಿದನು. ಕಳುಹಿಸುವಾಗ
ಅವರ ಹತ್ತಿರ ಇದ್ದ ಆಹಾರವನ್ನೂ ಕೊಂಬುಗಳನ್ನೂ
ತನ್ನ ಜನರಿಗೋಸ್ಕರ ತೆಗೆದುಕೊಂಡನು. ಮಿದ್ಯಾ
ನ್ಯರ ದಂಡು ಕೆಳಗೆ ತಗ್ಗಿನಲ್ಲಿ ಇಳುಕೊಂಡಿತ್ತು.
ಅದೇ ದಿವಸ ರಾತ್ರಿಯಲ್ಲಿ ಯೆಹೋವನು ಅವ 9
ನಿಗೆ—ನೀನು ಎದ್ದು ಹೋಗಿ ಶತ್ರುಗಳ ಪಾಳೆಯದ
ಮೇಲೆ ಬೀಳು; ಅದನ್ನು ನಿನಗೆ ಒಪ್ಪಿಸಿಕೊಟ್ಟಿದ್ದೇನೆ.
ಅವರ ಮೇಲೆ ಬೀಳುವದಕ್ಕೆ ಹೆದರುತ್ತೀಯಾದರೆ 10
ಮೊದಲು ನಿನ್ನ ಸೇವಕನಾದ ಪುರನ ಸಂಗಡ ಅಲ್ಲಿಗೆ
ಹೋಗಿ ಅವರು ಮಾತಾಡಿಕೊಳ್ಳುವದನ್ನು ಲಾಲಿಸು;
ಆಗ ಅವರ ಮೇಲೆ ಬೀಳುವದಕ್ಕೆ ನಿನಗೆ ಧೈರ್ಯ 11
ಬರುವದು ಅಂದನು. ಗಿದ್ಯೋನನು ಅದರಂತೆಯೇ
ತನ್ನ ಸೇವಕನಾದ ಪುರನ ಸಂಗಡ ಶತ್ರುಸೈನಿಕರ
ಪಾಳೆಯದ ಕಡೇ ಭಾಗಕ್ಕೆ ಹೋದನು. ಮಿದ್ಯಾ 12
ನ್ಯರೂ ಅಮಾಲೇಕ್ಯರೂ ಮೂಡಣ ದೇಶದವರೂ
ಮಿಡಿತೆಗಳಂತೆ ಗುಂಪಾಗಿ ತಗ್ಗಿನಲ್ಲಿ ಇಳುಕೊಂಡಿ
ದ್ದರು. ಅವರ ಒಂಟೆಗಳು ಸಮುದ್ರತೀರದ ಮರಳಿ
ನಂತೆ ಅಸಂಖ್ಯವಾಗಿದ್ದವು. ಗಿದ್ಯೋನನು ಬಂದಾಗ 13
ಅವರಲ್ಲೊಬ್ಬನು ತನ್ನ ಜೊತೆಗಾರನಿಗೆ ಒಂದು
ಕನಸನ್ನು ತಿಳಿಸುತ್ತಿದ್ದನು. ಅವನು—ಇಗೋ,
ನಾನು ಒಂದು ಕನಸು ಕಂಡೆನು; ಅದರಲ್ಲಿ ಒಂದು
ಜವೆಗೋದಿಯ ರೊಟ್ಟಿಯು ಉರುಳುತ್ತಾ ಮಿದ್ಯಾ
ನ್ಯರ ಪಾಳೆಯದೊಳಗೆ ಬಂದು ಒಂದು ಡೇರೆಗೆ
ತಗಲಿ ಅದನ್ನು ಅಡಿಮೇಲು ಮಾಡಿ ಬೀಳಿಸಿಬಿಟ್ಟಿತು
ಎಂದು ಹೇಳಲು ಅವನ ಜೊತೆಗಾರನು—ಇದು 14
ಇಸ್ರಾಯೇಲ್ಯನಾದ ಯೋವಾಷನ ಮಗ ಗಿದ್ಯೋನನ
ಕತ್ತಿಯೇ ಹೊರತು ಮತ್ತೊಂದಲ್ಲ; ದೇವರು ಮಿದ್ಯಾ
ನ್ಯರನ್ನೂ ಅವರ ಪಾಳೆಯಗಳನ್ನೂ ಅವನ ಕೈಗೆ
ಒಪ್ಪಿಸಿದನು ಅಂದನು.
ಗಿದ್ಯೋನನು ಆ ಕನಸನ್ನೂ ಅದರ ಅರ್ಥವನ್ನೂ 15
ಕೇಳಿದಾಗ ಯೆಹೋವನಿಗೆ ಅಡ್ಡಬಿದ್ದು ಇಸ್ರಾಯೇ
ಲ್ಯರ ಪಾಳೆಯಕ್ಕೆ ಹಿಂದಿರುಗಿ ಬಂದು ಅವರಿಗೆ—
ಏಳಿರಿ, ಯೆಹೋವನು ಮಿದ್ಯಾನ್ಯರ ಪಾಳೆಯವನ್ನು
ನಿಮ್ಮ ಕೈಗೆ ಒಪ್ಪಿಸಿದ್ದಾನೆ ಅಂದನು. ಮತ್ತು 16
ಅವನು ಆ ಮುನ್ನೂರು ಮಂದಿಯನ್ನು ಮೂರು
ಗುಂಪು ಮಾಡಿ ಪ್ರತಿಯೊಬ್ಬನ ಕೈಯಲ್ಲಿ ಕೊಂಬನ್ನೂ
ಉರಿಯುವ ಪಂಜಿದ್ದ ಬರೀಕೊಡವನ್ನೂ ಕೊಟ್ಟು
ಅವರಿಗೆ—ನನ್ನನ್ನೇ ನೋಡುತ್ತಾ ನಾನು ಮಾಡುವ 17
ಹಾಗೆ ಮಾಡಿರಿ. ನಾನು ಪಾಳೆಯದ ಅಂಚಿಗೆ

ಬಂದಾಗ ಹೇಗೆ ಮಾಡುತ್ತೇನೋ ಹಾಗೆ ನೀವೂ
18 ಮಾಡಬೇಕು. ನಾನೂ ನನ್ನ ಸಂಗಡ ಇದ್ದವರೂ
ಕೊಂಬುಗಳನ್ನು ಊದಲು ನೀವೂ ಪಾಳೆಯದ
ಸುತ್ತಲೂ ಕೊಂಬನ್ನು ಊದಿ—ಯೆಹೋವನಿಗೆ
ಜಯ, ಗಿದ್ಯೋನನಿಗೆ ಜಯ ಎಂದು ಕೂಗಿರಿ
ಎಂದು ಹೇಳಿದನು.
19 ರಾತ್ರಿಯ ಮಧ್ಯಯಾಮವು ಪ್ರಾರಂಭಿಸಿ ಕಾವಲು
ಗಾರರು ಬದಲಾದ ಕೂಡಲೆ ಗಿದ್ಯೋನನೂ ಅವನ
ಸಂಗಡ ಇದ್ದ ನೂರು ಮಂದಿಯೂ [ಶತ್ರುಗಳ] ಪಾಳೆ
ಯದ ಅಂಚಿಗೆ ಬಂದು ಕೊಂಬುಗಳನ್ನು ಊದಿ
20 ಕೈಯಲ್ಲಿದ್ದ ಕೊಡಗಳನ್ನು ಒಡೆದುಬಿಟ್ಟರು. ಕೂಡ
ಲೆ ಮೂರು ಗುಂಪಿನವರೂ ಕೊಂಬುಗಳನ್ನು ಊದಿ
ಕೊಡಗಳನ್ನು ಒಡೆದುಬಿಟ್ಟು ಎಡಗೈಯಲ್ಲಿ ಪಂಜು
ಗಳನ್ನೂ ಬಲಗೈಯಲ್ಲಿ ಊದುವ ಕೊಂಬುಗಳನ್ನೂ
ಹಿಡಿದು—ಯೆಹೋವನ ಕತ್ತಿ, ಗಿದ್ಯೋನನ ಕತ್ತಿ
21 ಎಂದು ಕೂಗಿ ಪಾಳೆಯದ ಸುತ್ತಲೂ ತಮ್ಮ ತಮ್ಮ
ಸ್ಥಳದಲ್ಲಿ ನಿಂತರು; ಪಾಳೆಯದವರಾದರೋ ಭ್ರಾಂತ
ರಾಗಿ ಕೂಗುತ್ತಾ ಓಡಿಹೋಗ ಪ್ರಾರಂಭಿಸಿದರು.
22 ಆ ಮುನ್ನೂರು ಮಂದಿಯು ಕೊಂಬುಗಳನ್ನು ಊದು
ತ್ತಿರುವಲ್ಲಿ ಪಾಳೆಯದವರು ಒಬ್ಬರನ್ನೊಬ್ಬರು ಹತ
ಮಾಡಿಕೊಳ್ಳುವಂತೆ ಯೆಹೋವನು ಮಾಡಿದನು.
ಪಾಳೆಯದವರು ಚೆರೇರದ ದಾರಿಯಲ್ಲಿರುವ ಬೇತ್
ಷಿಟ್ಟದ ವರೆಗೂ ಟಬ್ಬಾತಿನ ಬಳಿಯಲ್ಲಿರುವ ಆಬೇಲ್ಮೆ
23 ಹೋಲಾ ಪ್ರಾಂತ್ಯದ ವರೆಗೂ ಓಡಿಹೋದರು. ಇಸ್ರಾ
ಯೇಲ್ಯರಾದ ನಫ್ತಾಲಿ ಆಶೇರ್ ಕುಲಗಳವರೂ
ಮನಸ್ಸೆಕುಲದ ಎಲ್ಲಾ ಜನರೂ ಕೂಡಿ ಬಂದು ಮಿದ್ಯಾ
24 ನ್ಯರನ್ನು ಹಿಂದಟ್ಟಿದರು. ಇದಲ್ಲದೆ ಗಿದ್ಯೋನನು
ಎಫ್ರಾಯಿಮ್ ಪರ್ವತಪ್ರದೇಶಗಳಿಗೆ ದೂತರನ್ನು
ಅಟ್ಟಿ ಅಲ್ಲಿನವರಿಗೆ—ನೀವು ಮಿದ್ಯಾನ್ಯರಿಗೆ ವಿರೋಧ
ವಾಗಿ ಹೊರಟು ಅವರು ಬೇತ್‌ಬಾರದ ವರೆಗಿರುವ
ಪ್ರವಾಹಗಳನ್ನೂ ಯೊರ್ದನ್ ಹೊಳೆಯನ್ನೂ ದಾಟಿ
ಹೋಗದಂತೆ ಅಡ್ಡಗಟ್ಟಿರಿ ಎಂದು ಹೇಳಿಸಿದನು. ಆಗ
ಎಫ್ರಾಯಿಮ್ಯರೆಲ್ಲರೂ ಬೇತ್‌ಬಾರದ ವರೆಗಿರುವ
ಪ್ರವಾಹಗಳಿಗೂ ಯೊರ್ದನ್ ಹೊಳೆಗೂ ಬಂದು ಅವು
25 ಗಳ ಹಾಯಗಡಗಳನ್ನೆಲ್ಲಾ ಹಿಡಿದರು. ಇದಲ್ಲದೆ
ಅವರು ಮಿದ್ಯಾನ್ಯರ ನಾಯಕರಾದ ಓರೇಬ್, ಜೇಬ್
ಎಂಬವರನ್ನು ಹಿಡಿದು ಓರೇಬನನ್ನು ಓರೇಬನ ಬಂಡೆ
ಯ ಮೇಲೆಯೂ ಜೇಬನನ್ನು ಜೇಬನ ದ್ರಾಕ್ಷೆಯ
ಆಲೆಯಲ್ಲಿಯೂ ಕೊಂದು ಅವರ ತಲೆಗಳನ್ನು ತೆಗೆ
ದುಕೊಂಡು ಮಿದ್ಯಾನ್ಯರನ್ನು ಹಿಂದಟ್ಟುತ್ತಾ ಯೊರ್ದ
ನಿನ ಆಚೆಗೆ ಹೋಗಿ ಅಲ್ಲಿದ್ದ ಗಿದ್ಯೋನನಿಗೆ ಅವುಗ
ಳನ್ನು ಒಪ್ಪಿಸಿದರು.

ಎಫ್ರಾಯಿಮ್ಯರು ಸಿಟ್ಟಿನಿಂದ ಗಿದ್ಯೋನನೊಡನೆ
ಕಲಹಮಾಡಿದ್ದು.

8 ಅನಂತರ ಎಫ್ರಾಯಿಮ್ಯರು ಗಿದ್ಯೋನನಿಗೆ—
ನೀನು ಹೀಗೆ ಯಾಕೆ ಮಾಡಿದಿ? ಮಿದ್ಯಾನ್ಯರೊಡನೆ
ಯುದ್ಧಮಾಡುವದಕ್ಕೆ ಹೊರಟಾಗ ನಮ್ಮನ್ನೇಕೆ ಕರೆ
ಯಲಿಲ್ಲ ಎಂದು ಉಗ್ರದಿಂದ ಕಲಹಮಾಡಿದರು.
ಆಗ ಅವನು ಅವರಿಗೆ—ನೀವು ಮಾಡಿದ ಕಾರ್ಯಕ
ಸಮಾನವಾದದ್ದನ್ನು ನಾನೇನು ಮಾಡಿದೆನು? ಅಬಿ
ಯೆಜೆರನವರು ಸುಗ್ಗಿಯಲ್ಲಿ ಕೂಡಿಸಿದ್ದಕ್ಕಿಂತಲ
ಎಫ್ರಾಯಿಮ್ಯರು ಹಕ್ಕಲಾಯ್ದು ಕೂಡಿಸಿದ್ದು ಹೆಚ
ಗಿದೆಯಲ್ಲವೇ. ದೇವರು ನಿಮ್ಮ ಕೈಯಲ್ಲಿ ಮಿದ
ನ್ಯರ ನಾಯಕರಾದ ಓರೇಬ್ ಜೇಬರನ್ನು ಒಪ್ಪಿ
ಕೊಟ್ಟಿದ್ದಾನಲ್ಲಾ! ಇದಕ್ಕೆ ಸಮಾನವಾದದ್ದನ
ನಾನೇನು ಮಾಡಿದ್ದೇನೆ ಎಂದನು. ಈ ಮಾತ
ಗಳನ್ನು ಕೇಳಿದಾಗ ಅವರ ಸಿಟ್ಟಿಳಿಯಿತು.

ಗಿದ್ಯೋನನು ಯೊರ್ದನಿನ ಆಚೆಯಲ್ಲಿ ಮಿದ್ಯಾನ್ಯರನ್ನು
ಸೋಲಿಸಿದ್ದು.

ಗಿದ್ಯೋನನೂ ಅವನ ಸಂಗಡ ಇದ್ದ ಮುನ್ನೂರ
ಮಂದಿಯೂ ಬಹಳ ದಣಿದವರಾಗಿದ್ದರೂ ಹಿಂದಟ್ಟು
ತ್ತಾ ಯೊರ್ದನನ್ನು ದಾಟಿ [ಸುಖೋತಿಗೆ] ಬಂದರ
ಗಿದ್ಯೋನನು ಸುಖೋತಿನವರಿಗೆ—ದಯವಿಟ್ಟು ನನ್ನ
ಜೊತೆಯಲ್ಲಿ ಬಂದಿರುವವರಿಗೆ ಕೆಲವು ರೊಟ್ಟಿಗಳನ್ನ
ಕೊಡಿರಿ, ಅವರು ಬಹಳ ದಣಿದಿದ್ದಾರೆ; ನಾನ
ಮಿದ್ಯಾನ್ಯರ ಅರಸರಾದ ಜೆಬಹ, ಚಲ್ಮುನ್ನ ಎಂಬ
ರನ್ನು ಹಿಂದಟ್ಟುತ್ತಾ ಇದ್ದೇನೆ ಅಂದನು. ಆದ
ಸುಖೋತಿನ ಮುಖಂಡರು ಅವನಿಗೆ—ನಾವು ನಿನ್ನ
ಸೈನಿಕರಿಗೆ ರೊಟ್ಟಿಗಳನ್ನು ಕೊಡುವದಕ್ಕೆ ಜೆಬಹ
ಚಲ್ಮುನ್ನ ಎಂಬವರನ್ನು ಕೈಕಟ್ಟಿ ವಶಮಾಡಿಕೊಂ
ಡ್ಡೀಯೋ ಎಂದು ಉತ್ತರಕೊಟ್ಟರು. ಆಗ ಗಿದ್ಯೋ
ನನು ಅವರಿಗೆ—ಒಳ್ಳೇದು, ಯೆಹೋವನು ಜೆಬಹ
ಚಲ್ಮುನ್ನ ಎಂಬವರನ್ನು ನನ್ನ ಕೈಗೆ ಒಪ್ಪಿಸಿಕೊಟ್ಟ
ತರುವಾಯ ನಾನು ನಿಮ್ಮನ್ನು ಜಾಲಿಮುಳ್ಳುಗ
ಳಿಂದಲೂ ಕಾರೆಗಿಡಗಳಿಂದಲೂ ಹೊಡಿಸುವೆನ
ಎಂದು ಹೇಳಿದನು. ಅವನು ಅಲ್ಲಿಂದ ಪೆನೂವೇಲಿಗ
ಬಂದು ಅಲ್ಲಿನವರನ್ನು ಅದೇ ಪ್ರಕಾರ ಬಿನ್ನವಿಸಲ
ಅವರೂ ಸುಖೋತಿನವರಂತೆಯೇ ಉತ್ತರಕೊಟ್ಟರು
ಗಿದ್ಯೋನನು ಅವರಿಗೆ—ನಾನು ಸುರಕ್ಷಿತವಾಗಿ ಹಿಂ
ರುಗಿ ಬಂದಾಗ ಈ ಬುರುಜನ್ನು ಕೆಡವಿಬಿಡುವೆನ
ಅಂದನು.

ಜೆಬಹ, ಚಲ್ಮುನ್ನ ಎಂಬವರು ಸುಮಾರು ಹ
ನೈದು ಸಾವಿರ ಮಂದಿ ಸೈನಿಕರೊಡನೆ ಕರ್ಕೋರ
ನಲ್ಲಿ ಇಳುಕೊಂಡಿದ್ದರು. ಮೂಡಣದೇಶದವರ ಸೈನ
ದಲ್ಲಿ ಲಕ್ಷದ ಇಪ್ಪತ್ತು ಸಾವಿರ ಭಟರು ಹತರಾಗ
ಉಳಿದವರು ಇಷ್ಟೇ ಮಂದಿ. ಗಿದ್ಯೋನನು ಕಾಡ
ಗೊಲ್ಲರ ಪ್ರದೇಶಮಾರ್ಗವಾಗಿ ನೋಬಹ, ಯೊಗ್ಬ
ಹಾ ಇವುಗಳ ಪೂರ್ವದಿಕ್ಕಿಗೆ ಹೋಗಿ ನಿರ್ಭಯದಿಂ
ಇಳುಕೊಂಡಿದ್ದ ಆ ಪಾಳೆಯದ ಮೇಲೆ ಬಿದ್ದನು
ಜೆಬಹನೂ ಚಲ್ಮುನ್ನನೂ ಓಡಿಹೋಗಲಾಗಿ ಅವರನ್ನ
ಹಿಂದಟ್ಟಿ ಹಿಡಿದು ಅವರ ಸೈನ್ಯವನ್ನು ಚದರಿಸ
ಬಿಟ್ಟನು.

ಯೋವಾಷನ ಮಗನಾದ ಗಿದ್ಯೋನನು ಯುದ್ಧ
ದಿಂದ ಹೆರೆಷಿನ ಗಟ್ಟದ ಮಾರ್ಗವಾಗಿ ಹಿಂದಿರುಗ
ಬಂದು ಸುಖೋತಿನ ಒಬ್ಬ ಯೌವನಸ್ಥನನ್ನು ಹಿಡಿದ
ಆ ಊರಿನ ಮುಖಂಡರೂ ಹಿರಿಯರೂ ಯಾರಾ

ರೆಂದು ವಿಚಾರಿಸಿ ಎಪ್ಪತ್ತೇಳು ಮಂದಿಯ ಹೆಸರು
15 ಗಳನ್ನು ಬರಿಸಿಕೊಂಡನು. ಅನಂತರ ಅವನು ಸುಖ್ಖೋ
ತಿನವರ ಬಳಿಗೆ ಹೋಗಿ ಅವರಿಗೆ—ನಾವು ದಣಿದಿರುವ
ನಿನ್ನ ಸೈನಿಕರಿಗೋಸ್ಕರ ರೊಟ್ಟಿಗಳನ್ನು ಕೊಡು
ವದಕ್ಕೆ ಜೆಬಹ, ಚಲ್ಮುನ್ನ ಎಂಬವರನ್ನು ಕೈಕಟ್ಟಿ
ಸ್ವಾಧೀನಮಾಡಿಕೊಂಡಿದ್ದೀಯೋ ಎಂದು ನನ್ನನ್ನು
16 ನಿಂದಿಸಿದಿರಲ್ಲಾ; ನೋಡಿರಿ, ಅವರು ಇಲ್ಲಿರುತ್ತಾರೆ
ಅಂದು ಊರಿನ ಹಿರಿಯರನ್ನೂ ಮುಖಂಡರನ್ನೂ
ಜಾಲಿಮುಳ್ಳುಗಳಿಂದಲೂ ಕಾರೆಗಿಡಗಳಿಂದಲೂ ಹೊ
17 ಡಿಸಿ ಸುಖ್ಖೋತಿನವರಿಗೆ ಬುದ್ಧಿ ಕಲಿಸಿದನು. ಮತ್ತು
ಪೆನೂವೇಲಿನ ಬುರುಜನ್ನು ಕೆಡವಿಬಿಟ್ಟು ಆ ಊರಿನ
ಜನರನ್ನು ಹತಿಸಿದನು.
18 ಮತ್ತು ಅವನು ಜೆಬಹ, ಚಲ್ಮುನ್ನ ಎಂಬವರನ್ನು—
ನೀವು ತಾಬೋರದಲ್ಲಿ ಕೊಂದು ಹಾಕಿದ ಮನುಷ್ಯರು
ಹೇಗಿದ್ದರು ಎಂದು ಕೇಳಲಾಗಿ ಅವರು ಅವನಿಗೆ—
ನಿನ್ನ ಹಾಗೆಯೇ ಇದ್ದರು; ಎಲ್ಲರೂ ರೂಪ
ದಲ್ಲಿ ರಾಜಪುತ್ರರಂತಿದ್ದರು ಎಂದು ಉತ್ತರಕೊಟ್ಟರು.
19 ಆಗ ಅವನು—ಅವರು ನನ್ನ ತಾಯಿಯ ಮಕ್ಕಳು;
ನನ್ನ ಸಹೋದರರು; ಯೆಹೋವನಾಣೆ, ನೀವು ಅವ
ರನ್ನು ಉಳಿಸಿದ್ದರೆ ನಾನು ನಿಮ್ಮನ್ನು ಕೊಲ್ಲುತ್ತಿದ್ದಿಲ್ಲ
20 ಎಂದು ಹೇಳಿ ತನ್ನ ಹಿರೀ ಮಗನಾದ ಎತೆರನಿಗೆ—
ನೀನೆದ್ದು ಇವರನ್ನು ಕೊಂದುಹಾಕು ಅಂದನು. ಆದ
ರೆ ಅವನು ಇನ್ನೂ ಹುಡುಗನಾಗಿದ್ದದರಿಂದ ಭಯ
21 ಪಟ್ಟು ಕತ್ತಿಯನ್ನು ಹಿರಿಯಲೇ ಇಲ್ಲ. ಆಗ ಜೆಬ
ಹನೂ ಚಲ್ಮುನ್ನನೂ ಗಿದ್ಯೋನನಿಗೆ—ನೀನೇ ಎದ್ದು
ಬಂದು ನಮ್ಮ ಮೇಲೆ ಬೀಳು; ಪ್ರಾಯಕ್ಕೆ ತಕ್ಕಂತೆ
ಪುರುಷನಿಗೆ ಬಲವಿರುತ್ತದಲ್ಲಾ ಅನ್ನಲು ಅವನೆದ್ದು
ಜೆಬಹ, ಚಲ್ಮುನ್ನ ಎಂಬವರನ್ನು ಕೊಂದುಹಾಕಿ ಅವರ
ಒಂಟೆಗಳ ಕೊರಳಲ್ಲಿದ್ದ ಅರ್ಧಚಂದ್ರಾಕಾರದ ಆಭರಣ
ಗಳನ್ನು ತೆಗೆದುಕೊಂಡನು.

ಗಿದ್ಯೋನನ ಚರಿತ್ರೆಯ ಸಮಾಪ್ತಿ.

22 ತರುವಾಯ ಇಸ್ರಾಯೇಲ್ಯರು ಗಿದ್ಯೋನನಿಗೆ—
ನೀನು ನಮ್ಮನ್ನು ಮಿದ್ಯಾನ್ಯರ ಕೈಯಿಂದ ಬಿಡಿಸಿದ್ದೀ
ಯಲ್ಲಾ; ನೀನೂ ನಿನ್ನ ಮಗನೂ ಮೊಮ್ಮಗನೂ
ವಂಶಪಾರಂಪರ್ಯವಾಗಿ ನಮ್ಮ ಮೇಲೆ ಅರಸರಾಗಿರ
23 ಬೇಕು ಅನ್ನಲು ಅವನು ಅವರಿಗೆ—ನಾನಾಗಲಿ ನನ್ನ
ಮಗನಾಗಲಿ ನಿಮ್ಮನ್ನು ಆಳುವದಿಲ್ಲ; ಯೆಹೋವನೇ
24 ನಿಮ್ಮ ಅರಸನಾಗಿರುವನು. ಆದರೆ ನಿಮಗೆ ಒಂದು
ಬಿನ್ನಹ ಮಾಡುತ್ತೇನೆ; ಪ್ರತಿಯೊಬ್ಬನು ತಾನು ಕೊಳ್ಳೆ
ಹೊಡೆದ ಮುರುವುಗಳನ್ನು ನನಗೆ ಕೊಡಲಿ ಅಂದನು.
ಮಿದ್ಯಾನ್ಯರು ಇಷ್ಮಾಯೇಲ್ಯರಾಗಿದ್ದದರಿಂದ ಬಂಗಾ
ರದ ಮುರುವುಗಳನ್ನು ಹಾಕಿಕೊಳ್ಳುತ್ತಿದ್ದರು. ಗಿದ್ಯೋ
25 ನನ ಬಿನ್ನಹಕ್ಕೆ ಇಸ್ರಾಯೇಲ್ಯರು—ನಾವು ಸಂತೋಷ
ದಿಂದ ಕೊಡುವೆವು ಎಂದು ಹೇಳಿ ಅಲ್ಲಿ ಒಂದು ಬಟ್ಟೆ
ಯನ್ನು ಹಾಸಿ ಅದರ ಮೇಲೆ ತಾವು ಕೊಳ್ಳೆಯಾಗ
26 ತಂದ ಮುರುವುಗಳನ್ನು ಇಟ್ಟುಬಿಟ್ಟರು. ಗಿದ್ಯೋನ
ನಿಗೆ ಮೊದಲೇ ದೊರಕಿದ್ದ ಅರ್ಧಚಂದ್ರಾಕಾರದ
ಆಭರಣ, ಕುಂಡಲ, ಮಿದ್ಯಾನ್ ರಾಜರು ಹೊದ್ದು

ಕೊಂಡಿದ್ದ ರಕ್ತಾಂಬರ, ಅವರ ಒಂಟೆಗಳ ಕಂಠಮಾಲೆ
ಇವುಗಳ ಹೊರತಾಗಿ ಅವನು ಇಸ್ರಾಯೇಲ್ಯರಿಂದ
ಕೇಳಿ ತೆಗೆದುಕೊಂಡ ಮುರುವುಗಳ ಬಂಗಾರವೇ
ಸಾವಿರದ ಏಳುನೂರು ತೊಲೆ ತೂಕವಾಗಿತ್ತು. ಈ 27
ಬಂಗಾರದಿಂದ ಗಿದ್ಯೋನನು ಒಂದು ಏಫೋದನ್ನು
ಮಾಡಿಸಿ ಅದನ್ನು ತನ್ನ ಊರಾದ ಒಫ್ರದಲ್ಲಿಟ್ಟನು.
ಅದರಿಂದ ಇಸ್ರಾಯೇಲ್ಯರೆಲ್ಲರೂ ದೇವದ್ರೋಹಿಗಳಾ
ದರು; ಅದು ಗಿದ್ಯೋನನಿಗೂ ಅವನ ಮನೆಯವರಿಗೂ
ಉರುಲಾಯಿತು. ಮಿದ್ಯಾನ್ಯರು ಇಸ್ರಾಯೇಲ್ಯರ 28
ಮುಂದೆ ಬಹಳವಾಗಿ ತಗ್ಗಿಸಲ್ಪಟ್ಟರು; ಅವರು ತಿರಿಗಿ
ತಲೆಯೆತ್ತಲಿಲ್ಲ. ಗಿದ್ಯೋನನ ಜೀವಮಾನದಲ್ಲಿ
ನಾಲ್ವತ್ತು ವರುಷಗಳ ಪರ್ಯಂತ ದೇಶದಲ್ಲಿ ಸಮಾ
ಧಾನವಿತ್ತು.
ಯೋವಾಷನ ಮಗ ಯೆರುಬ್ಬಾಳನು ಹೋಗಿ 29
ತನ್ನ ಮನೆಯಲ್ಲಿ ವಾಸವಾಗಿದ್ದನು. ಗಿದ್ಯೋನನಿಗೆ 30
ಅನೇಕ ಮಂದಿ ಹೆಂಡತಿಯರಿದ್ದದರಿಂದ ಅವನಿಗೆ
ಎಪ್ಪತ್ತು ಮಂದಿ ಗಂಡು ಮಕ್ಕಳು ಹುಟ್ಟಿದರು.
ಅವನು ಶೆಕೆಮಿನಲ್ಲಿದ್ದ ತನ್ನ ಉಪಪತ್ನಿಯಲ್ಲಿ 31
ಇನ್ನೊಬ್ಬ ಮಗನು ಹುಟ್ಟಲು ಅವನಿಗೆ ಅಬೀಮೆಲೆ
ಕನೆಂದು ಹೆಸರಿಟ್ಟನು. ಯೋವಾಷನ ಮಗನಾದ 32
ಗಿದ್ಯೋನನು ದಿನತುಂಬಿದ ಮುದುಕನಾಗಿ ಮರಣ
ಹೊಂದಲು ಅವನ ಶವವನ್ನು ಅಬೀಯೆಜೆರೀಯರ
ಒಫ್ರದಲ್ಲಿದ್ದ ಒಂದು ಸಮಾಧಿಯಲ್ಲಿ ಹೂಣಿಟ್ಟರು.
ಆ ಸಮಾಧಿಯು ಅವನ ತಂದೆಯಾದ ಯೋವಾಷನ
ದಾಗಿತ್ತು. ಗಿದ್ಯೋನನು ಸತ್ತನಂತರ ಇಸ್ರಾಯೇ 33
ಲ್ಯರು ದೇವದ್ರೋಹಿಗಳಾಗಿ ಬಾಳನ ಪ್ರತಿಮೆಗಳನ್ನು
ಪೂಜಿಸಿದರು; ಬಾಳ್‌ಬೆರೀತನನ್ನು ತಮಗೆ ದೇವರು
ಮಾಡಿಕೊಂಡರು. ಸುತ್ತಣ ಎಲ್ಲಾ ಶತ್ರುಗಳಿಂದ 34
ತಮ್ಮನ್ನು ಬಿಡಿಸಿದ ದೇವರಾದ ಯೆಹೋವನನ್ನು
ಮರೆತುಬಿಟ್ಟರು. ಯೆರುಬ್ಬಾಳನೆಂಬ ಗಿದ್ಯೋನನು 35
ತಮಗೆ ಮಾಡಿದ ಉಪಕಾರಗಳನ್ನು ನೆನಸಲಿಲ್ಲ;
ಅವನ ಮನೆಯವರಿಗೆ ದಯೆತೋರಿಸಲಿಲ್ಲ.

ಗಿದ್ಯೋನನ ಮಗ ಅಬೀಮೆಲೆಕನು.

9 ಯೆರುಬ್ಬಾಳನ ಮಗನಾದ ಅಬೀಮೆಲೆಕನು ಶೆಕೆ
ಮಿಗೆ ಹೋಗಿ ತನ್ನ ಸೋದರ ಮಾವಂದಿರಿಗೂ
ತಾಯಿಯ ಬಂಧುಗಳೆಲ್ಲರಿಗೂ ಹೇಳಿದ್ದೇನಂದರೆ—
ನೀವು ದಯವಿಟ್ಟು ಶೆಕೆಮಿನ ಹಿರಿಯರನ್ನು ಮಾತಾ 2
ಡಿಸಿ—ಯೆರುಬ್ಬಾಳನ ಎಪ್ಪತ್ತು ಮಂದಿ ಮಕ್ಕಳು
ನಿಮ್ಮನ್ನು ಆಳುವದು ಒಳ್ಳೇದೋ ಅಥವಾ ಒಬ್ಬನೇ
ಆಳುವದು ಮೇಲೋ ಎಂದು ಅವರನ್ನು ಕೇಳಿ
ನಾನು ಅವರ ರಕ್ತಸಂಬಂಧಿಯಾಗಿದ್ದೇನೆಂಬದನ್ನು
ಜ್ಞಾಪಕಪಡಿಸಿರಿ ಅಂದನು. ಅವರು ಶೆಕೆಮಿನ ಹಿರಿ 3
ಯರ ಬಳಿಗೆ ಹೋಗಿ ಅಬೀಮೆಲೆಕನ ವಿಷಯದಲ್ಲಿ
ಹಾಗೆಯೇ ಹೇಳಲು ಅವರು—ಇವನು ನಮ್ಮ
ಸಹೋದರನಾಗಿದ್ದಾನಲ್ಲಾ ಅಂದುಕೊಂಡು ಅವನ
ಪಕ್ಷವನ್ನು ಹಿಡಿಯುವದಕ್ಕೆ ಒಡಂಬಟ್ಟರು. ಮತ್ತು 4
ಅವರು ಬಾಳ್‌ಬೆರೀತಿನ ದೇವಸ್ಥಾನದಿಂದ ಎಪ್ಪತ್ತು
ರೂಪಾಯಿಗಳನ್ನು ಅವನಿಗೆ ಕೊಟ್ಟರು. ಅವನು

ಈ ಹಣದಿಂದ ಕೆಲವು ಮಂದಿ ಕಾಕಪೋಕರನ್ನು
5 ಕೂಡಿಸಿ ಅವರ ನಾಯಕನಾಗಿ ಹೊರಟು ಒಫ್ರದ
ಲ್ಲಿದ್ದ ತನ್ನ ತಂದೆಯಾದ ಯೆರುಬ್ಬಾಳನ ಮನೆಗೆ
ಹೋಗಿ ಅವನ ಎಪ್ಪತ್ತು ಮಂದಿ ಮಕ್ಕಳನ್ನು ಹಿಡಿದು
ಒಂದೇ ಬಂಡೆಯ ಮೇಲೆ ಕೊಲ್ಲಿಸಿದನು. ಆದರೆ
ಕಿರಿಯವನಾದ ಯೋತಾಮನೆಂಬವನು ಅಡಗಿಕೊಂಡು
6 ಉಳಿದನು. ತರುವಾಯ ಎಲ್ಲಾ ಶೆಕೆಮಿನವರೂ
ಮಿಲ್ಲೋ ಕೋಟೆಯವರೂ ಶೆಕೆಮಿನ ಬಳಿಯಲ್ಲಿ
ಜ್ಞಾಪಕಸ್ತಂಭವಿರುವ ಏಲೋನ್ ವೃಕ್ಷದ ಹತ್ತಿರ
ಕೂಡಿಬಂದು ಅಬೀಮೆಲೆಕನನ್ನು ತಮ್ಮ ಅರಸನನ್ನಾಗಿ
ಏರ್ಪಡಿಸಿಕೊಂಡರು.
7 ಯೋತಾಮನು ಇದನ್ನು ಕೇಳಿ ಗೆರಿಜ್ಜೀಮ್ ಬೆಟ್ಟ
ದ ತುದಿಯಲ್ಲಿ ನಿಂತು ಗಟ್ಟಿಯಾದ ಧ್ವನಿಯಿಂದ—
ಶೆಕೆಮಿನವರೇ, ನನ್ನ ಮಾತನ್ನು ಕೇಳಿರಿ; ಆಗ ದೇವ
ರು ನಿಮಗೆ ಕಿವಿಗೊಡುವನು.
8 ಮರಗಳು ತಮಗೋಸ್ಕರ ಒಬ್ಬ ಅರಸನನ್ನು ಅಭಿ
ಷೇಕಿಸಬೇಕೆಂದು ಹೊರಟು ಎಣ್ಣೆಯ ಮರದ
ಬಳಿಗೆ ಬಂದು—ನೀನು ಬಂದು ನಮಗೆ ಅರಸ
ನಾಗು ಅಂದವು.
9 ಆಗ ಅದು ಅವುಗಳಿಗೆ—ನನ್ನಲ್ಲಿರುವ ಎಣ್ಣೆಗೋ
ಸ್ಕರ ದೇವತೆಗಳೂ ಮನುಷ್ಯರೂ ನನ್ನನ್ನು ಘನ
ಪಡಿಸುತ್ತಾರೆ.
ಇದನ್ನು ಬಿಟ್ಟು ಮರಗಳ ಮೇಲೆ ಓಲಾಡುವದಕ್ಕೆ
ಬರಬೇಕೋ ಅಂದಿತು.
10 ತರುವಾಯ ಅವು ಅಂಜೂರ ಗಿಡದ ಬಳಿಗೆ ಹೋಗಿ
ಅದಕ್ಕೆ—ನೀನು ಬಂದು ನಮ್ಮ ಅರಸನಾಗು
ಅನ್ನಲು
11 ಅದು—ನಾನು ನನ್ನ ಶ್ರೇಷ್ಠವಾದ ಮಧುರಫಲ
ದಾನವನ್ನು ಬಿಟ್ಟು ಮರಗಳ ಮೇಲೆ ಓಲಾಡು
ವದಕ್ಕೆ ಬರಬೇಕೋ ಎಂದಿತು.
12 ಅನಂತರ ಅವು ದ್ರಾಕ್ಷಾಲತೆಯ ಬಳಿಗೆ ಹೋಗಿ—
ನೀನು ಬಂದು ನಮ್ಮ ಅರಸನಾಗು ಎನ್ನಲು
13 ಅದು ಅವುಗಳಿಗೆ—ನಾನು ನನ್ನ ರಸದಿಂದ ದೇವ
ತೆಗಳಿಗೂ ಮನುಷ್ಯರಿಗೂ ಆನಂದಕೊಡುವ
ದನ್ನು ಬಿಟ್ಟು
ಮರಗಳ ಮೇಲೆ ಓಲಾಡುವದಕ್ಕೆ ಬರಬೇಕೋ
ಅಂದಿತು.
14 ಕಡೆಗೆ ಎಲ್ಲಾ ಮರಗಳು ಮುಳ್ಳುಗಿಡದ ಬಳಿಗೆ
ಹೋಗಿ—ನೀನು ಬಂದು ನಮ್ಮ ಅರಸನಾಗು
ಅನ್ನಲು
15 ಅದು ನೀವು ಯಥಾರ್ಥಮನಸ್ಸಿನಿಂದ ನನಗೆ
ರಾಜ್ಯಾಭಿಷೇಕಮಾಡಬೇಕೆಂದಿರುವದಾದರೆ
ಬಂದು ನನ್ನ ನೆರಳನ್ನು ಆಶ್ರಯಿಸಿಕೊಳ್ಳಿರಿ;
ಇಲ್ಲವಾದರೆ ನನ್ನಿಂದ ಬೆಂಕಿಹೊರಟು ಲೆಬನೋ
ನಿನ ದೇವದಾರುವೃಕ್ಷಗಳನ್ನು ದಹಿಸಿಬಿಡು
ವದು ಎಂದಿತು.
16 ನೀವು ಅಬೀಮೆಲೆಕನನ್ನು ಅರಸನನ್ನಾಗಿ ಮಾಡಿ
ದ್ದು ನ್ಯಾಯವೋ? ಅದು ಧರ್ಮಕಾರ್ಯವೋ?
ಯೆರುಬ್ಬಾಳನು ನಿಮಗೆ ಮಾಡಿದ ಉಪಕಾರಕ್ಕೋ
ಸ್ಕರ ನೀವು ಅವನಿಗೂ ಅವನ ಮನೆಯವರಿಗೂ ಪ್ರತ್ಯು
ಪಕಾರಮಾಡಿದಿರೋ? ನನ್ನ ತಂದೆಯು ತನ್ನ ಜೀವದ 1
ಆಶೆಯನ್ನು ತೊರೆದು ಹೋರಾಡಿ ನಿಮ್ಮನ್ನು ಮಿದ್ಯಾ
ನ್ಯರ ಕೈಯಿಂದ ಬಿಡಿಸಿದನಲ್ಲಾ. ಆದರ ನೀವು ಈಗ 1
ನನ್ನ ತಂದೆಯ ಮನೆಗೆ ವಿರೋಧವಾಗಿ ನಿಂತು ಅವನ
ಎಪ್ಪತ್ತು ಮಂದಿ ಮಕ್ಕಳನ್ನು ಒಂದೇ ಬಂಡೆಯ
ಮೇಲೆ ವಧಿಸಿ ಅವನ ದಾಸಿಯ ಮಗನಾದ ಅಬೀಮೆ
ಲೆಕನನ್ನು ನಮ್ಮ ಬಂಧುವೆಂದು ಹೇಳಿ ಶೆಕೆಮಿನ
ಅರಸನನ್ನಾಗಿ ಮಾಡಿಕೊಂಡಿದ್ದೀರಿ. ನೀವು ಈಗ 1
ಯೆರುಬ್ಬಾಳನಿಗೂ ಅವನ ಮನೆಯವರಿಗೂ ಮಾಡಿ
ದ್ದು ನ್ಯಾಯವೂ ಧರ್ಮವೂ ಆಗಿದ್ದರೆ ಅಬೀಮೆಲೆಕ
ನಲ್ಲಿ ಆನಂದಿಸಿರಿ; ಅವನು ನಿಮ್ಮಲ್ಲಿ ಆನಂದಿಸಲಿ.
ಇಲ್ಲವಾದರೆ ಅಬೀಮೆಲೆಕನಿಂದ ಬೆಂಕಿಹೊರಟು ಶೆಕೆ 2
ಮಿನವರನ್ನೂ ಮಿಲ್ಲೋ ಕೋಟೆಯವರನ್ನೂ ದಹಿಸಿ
ಬಿಡಲಿ; ಶೆಕೆಮಿನವರಿಂದಲೂ ಮಿಲ್ಲೋ ಕೋಟೆಯ
ವರಿಂದಲೂ ಬೆಂಕಿಹೊರಟು ಅಬೀಮೆಲೆಕನನ್ನು ದಹಿಸಿ
ಬಿಡಲಿ. ಯೋತಾಮನು ಇಷ್ಟು ಹೇಳಿ ತನ್ನ ಸಹೋ 2
ದರನಾದ ಅಬೀಮೆಲೆಕನಿಗೆ ತಪ್ಪಿಸಿಕೊಂಡು ಬೇರಕ್ಕೆ
ಓಡಿಹೋಗಿ ಅಲ್ಲೇ ವಾಸಮಾಡಿದನು.
ಅಬೀಮೆಲೆಕನು ಇಸ್ರಾಯೇಲ್ಯರನ್ನು ಮೂರು 2
ವರುಷ ಆಳಿದನಂತರ ಯೆಹೋವನು ಅವನಿಗೂ ಶೆಕೆ 2
ಮಿನ ಹಿರಿಯರಿಗೂ ವೈಮನಸ್ಯಹುಟ್ಟುವಂತೆ ಮಾಡಿ
ದನು. ಅವರು ಅವನಿಗೆ ದ್ರೋಹಮಾಡಿದರು.
ಇದರಿಂದ ಯೆರುಬ್ಬಾಳನ ಎಪ್ಪತ್ತು ಮಂದಿ ಮಕ್ಕ 2
ಳನ್ನು ಕ್ರೂರತನದಿಂದ ಕೊಂದುಹಾಕಿದ ರಕ್ತಾಪ
ರಾಧಫಲವು ಅವರ ಸಹೋದರನಾದ ಅಬೀಮೆಲೆಕನ
ಮೇಲೆಯೂ ಆ ಕೃತ್ಯದಲ್ಲಿ ಅವನಿಗೆ ಸಹಾಯಕ
ರಾಗಿದ್ದ ಶೆಕೆಮಿನವರ ಮೇಲೆಯೂ ಬರುವದಕ್ಕೆ
ಮಾರ್ಗವಾಯಿತು. ಶೆಕೆಮಿನವರು ಅಬೀಮೆಲೆಕ 2
ನಿಗೆ ವಿರೋಧವಾಗಿ ಪರ್ವತಶಿಖರಗಳಲ್ಲಿ ಹೊಂಚು
ಗಾರರನ್ನಿಟ್ಟರು. ಇವರು ಆ ದಾರಿಗಳಲ್ಲಿ ಸಂಚ
ರಿಸುವ ಪ್ರಯಾಣಿಕರನ್ನು ಸುಲುಕೊಳ್ಳುತ್ತಿದ್ದರು.
ಈ ವರ್ತಮಾನವು ಅಬೀಮೆಲೆಕನಿಗೆ ಮುಟ್ಟಿತು.
ಅದೇ ಸಮಯದಲ್ಲಿ ಎಬೆದನ ಮಗನಾದ ಗಾಳ 2
ನೆಂಬವನು ತನ್ನ ಬಂಧುಗಳೊಡನೆ ಶೆಕೆಮಿಗೆ ಬಂದನು.
ಶೆಕೆಮಿನ ಹಿರಿಯರು ಅವನಲ್ಲಿ ಭರವಸವಿಟ್ಟರು.
ಆ ಊರಿನವರು ಒಂದಾನೊಂದು ದಿವಸ ತಮ್ಮ 2
ದ್ರಾಕ್ಷಾಫಲಗಳನ್ನು ಕೊಯಿದು ಆಲೆಗಳಲ್ಲಿ ರಸತೆಗೆ
ದು ತಮ್ಮ ದೇವರ ಗುಡಿಗೆ ಹೋಗಿ ಹಬ್ಬಮಾಡಿ
ಉಂಡು ಕುಡಿದು ಅಬೀಮೆಲೆಕನನ್ನು ಶಪಿಸಿದರು.
ಎಬೆದನ ಮಗನಾದ ಗಾಳನೂ ಅವರ ಸಂಗಡ ಕೂಡಿ 2
ಕೊಂಡು—ಅಬೀಮೆಲೆಕನು ಎಷ್ಟರವನು? ಶೆಕೆಮಿನವ
ರಾದ ನಾವು ಎಷ್ಟರವರು? ನಾವು ಅಬೀಮೆಲೆಕನನ್ನು
ಯಾಕೆ ಸೇವಿಸಬೇಕು? ಅವನು ಯೆರುಬ್ಬಾಳನ ಮಗನ
ಲ್ಲವೋ? ಅವನ ಪುರಾಧಿಕಾರಿಯು ಜೆಬುಲನಲ್ಲವೋ?
ನಾವು ಅವನನ್ನು ಯಾಕೆ ಸೇವಿಸಬೇಕು? ಶೆಕೆಮನ
ತಂದೆಯಾದ ಹಮೋರನ ವಂಶದವರನ್ನೇ ಸೇವಿ
ಸುವಾ. ಈ ಜನರ ಮೇಲೆ ನನಗೆ ಅಧಿಕಾರ 2
ವಿದ್ದರೆ ಅಬೀಮೆಲೆಕನನ್ನು ಓಡಿಸಿಬಿಡುತ್ತಿದ್ದೆನು ಎಂದು
ಹೇಳಿ—ಎಲಾ, ಅಬೀಮೆಲೆಕನೇ, ಸೈನ್ಯವನ್ನು ತೆಗೆದು
ಕೊಂಡು ನನ್ನೊಡನೆ ಯುದ್ಧಕ್ಕೆ ಬಾ ಎಂದು ಕೊಚ್ಚಿ

30 ಕೊಂಡನು. ಪುರಾಧಿಕಾರಿಯಾದ ಜೆಬುಲನು ಎಬೆ
ದನ ಮಗನಾದ ಗಾಳನ ಮಾತುಗಳನ್ನು ಕೇಳಿ ರೇಗಿ
ದವನಾಗಿ ಯಾರಿಗೂ ತಿಳಿಯದಂತೆ ಅಬೀಮೆಲೆಕನ
31 ಬಳಿಗೆ ದೂತರನ್ನು ಕಳುಹಿಸಿ—ಇಗೋ, ಎಬೆದನ
ಮಗನಾದ ಗಾಳನೂ ಅವನ ಬಂಧುಗಳೂ ಇಲ್ಲಿಗೆ
ಬಂದು ಶೆಕೆಮಿನವರೆಲ್ಲರನ್ನೂ ನಿನಗೆ ವಿರೋಧ
32 ವಾಗಿ ಹುರಿದುಂಬಿಸುತ್ತಿದ್ದಾರೆ. ಆದದರಿಂದ ನೀನು
ಈ ರಾತ್ರಿಯಲ್ಲೇ ಸೈನ್ಯವನ್ನು ತೆಗೆದುಕೊಂಡು
ಬಂದು ಹೊಲಗಳಲ್ಲಿ ಹೊಂಚುಹಾಕಿಕೊಂಡಿರು.
33 ಸೂರ್ಯನು ಉದಯಿಸುತ್ತಲೇ ಎದ್ದು ಪಟ್ಟಣದ
ಮೇಲೆ ಬೀಳು; ಅವನೂ ಅವನ ಜೊತೆಯಲ್ಲಿರು
ವವರೂ ನಿನಗೆ ವಿರೋಧವಾಗಿ ಹೊರಟು ಬಂದಾಗ
ನಿನಗೆ ಅನುಕೂಲ ತೋರಿದ ಹಾಗೆ ಮಾಡು ಎಂದು
34 ಹೇಳಿಸಿದನು. ಅಬೀಮೆಲೆಕನೂ ಅವನ ಜನರೂ
ರಾತ್ರಿಯಲ್ಲೇ ಹೊರಟು ಬಂದು ನಾಲ್ಕು ಗುಂಪಾಗಿ
35 ಶೆಕೆಮಿನವರನ್ನು ಹೊಂಚಿಕಾಯುತ್ತಿದ್ದರು. ಎಬೆದನ
ಮಗನಾದ ಗಾಳನು ಹೊರಗೆ ಹೋಗಿ ಊರುಬಾಗ
ಲಲ್ಲಿ ನಿಂತುಕೊಂಡಾಗ ಅಬೀಮೆಲೆಕನೂ ಅವನ
ಜನರೂ ತಾವು ಹೊಂಚಿನೋಡುತ್ತಿದ್ದ ಸ್ಥಳದಿಂದ
36 ಎದ್ದು ಬಂದರು. ಗಾಳನು ಅವರನ್ನು ಕಂಡು ಜೆಬು
ಲನಿಗೆ—ಇಗೋ, ಬೆಟ್ಟದ ಮೇಲಣಿಂದ ಜನರು
ಬರುತ್ತಿದ್ದಾರೆ ಎಂದು ಹೇಳಲು ಜೆಬುಲನು ಅವ
ನಿಗೆ—ನೀನು ಬೆಟ್ಟದ ನೆರಳನ್ನು ನೋಡಿ ಜನರೆಂದು
37 ಭಾವಿಸುತ್ತೀ ಅನ್ನಲು ಅವನು ತಿರಿಗಿ—ನೋಡು, ದೇಶ
ನಾಭಿಗಿರಿಯಿಂದ ಜನರು ಬರುತ್ತಿದ್ದಾರೆ; ಕಣಿಹೇಳು
ವವರ ಮರದ ಮಾರ್ಗವಾಗಿ ಇನ್ನೊಂದು ಗುಂಪು
38 ಬರುತ್ತಿದೆ ಅಂದನು. ಆಗ ಜೆಬುಲನು ಅವನಿಗೆ—
ಈಗ ನಿನ್ನ ಬಾಯೆಲ್ಲಿದೆ? ಅಬೀಮೆಲೆಕನು ಎಷ್ಟರ
ವನು? ನಾವು ಅವನನ್ನು ಯಾಕೆ ಸೇವಿಸಬೇಕು
ಎಂದು ಕೊಚ್ಚಿಕೊಂಡಿಯಲ್ಲಾ: ಈನರು ನೀನು ತಿರ
ಸ್ಕರಿಸಿದ ಜನರಲ್ಲವೋ? ಹಾಗಾದರೆ ಹೋಗಿ ಅವ
ರೊಡನೆ ಯುದ್ಧಮಾಡು, ನೋಡೋಣ ಎಂದು ಹೇಳಿ
39 ದನು. ಗಾಳನು ಶೆಕೆಮಿನವರ ನಾಯಕನಾಗಿ ಹೊ
40 ರಟು ಅಬೀಮೆಲೆಕನೊಡನೆ ಕಾದಿದನು. ಆದರೆ ಅಬೀ
ಮೆಲೆಕನಿಗೆ ಬೆನ್ನುತೋರಿಸಿ ಓಡಿಹೋಗಬೇಕಾಗಲು
ಅವನು ಇವನನ್ನು ಹಿಂದಟ್ಟಿದನು. ಊರುಬಾಗಲಿನ
41 ವರೆಗೆ ಅನೇಕ ಮಂದಿ ಹತರಾಗಿ ಬಿದ್ದರು. ಅನಂತರ
ಅಬೀಮೆಲೆಕನು ಹೋಗಿ ಅರೂಮದಲ್ಲಿ ವಾಸಿಸಿದನು.
ಇತ್ತ ಜೆಬುಲನು ಗಾಳನನ್ನೂ ಅವನ ಬಂಧುಗಳನ್ನೂ
ಶೆಕೆಮಿನಿಂದ ಅಟ್ಟಿಬಿಟ್ಟನು.
42 ಮರುದಿವಸ ಜನರು ಬೈಲಿಗೆ ಹೊರಟು ಬಂದರು;
43 ಇದು ಅಬೀಮೆಲೆಕನಿಗೆ ಗೊತ್ತಿದ್ದದರಿಂದ ಅವನು
ತನ್ನ ಜನರನ್ನು ಮೂರು ಗುಂಪು ಮಾಡಿ ಅವರನ್ನು
ತೆಗೆದುಕೊಂಡು ಬಂದು ಹೊಲಗಳಲ್ಲಿ ಹೊಂಚಿ
ನೋಡುತ್ತಿದ್ದನು. ಜನರು ಪಟ್ಟಣದಿಂದ ಹೊರಟು
ಬರುವದನ್ನು ಇವನು ಕಾಣುತ್ತಲೆ ಅಲ್ಲಿಂದ ಎದ್ದು
44 ಅವರನ್ನು ಹೊಡೆದನು. ಅಬೀಮೆಲೆಕನೂ ಅವನ
ಸಂಗಡ ಇದ್ದ ಗುಂಪಿನವರೂ ಓಡಿ ಬಂದು ಊರು
ಬಾಗಲಲ್ಲಿ ನಿಂತರು; ಉಳಿದ ಎರಡು ಗುಂಪಿನವರು
ಬೈಲಿನಲ್ಲಿದ್ದ ಶೆಕೆಮಿನವರ ಮೇಲೆ ಬಿದ್ದು ಅವರನ್ನು
ಹತಮಾಡಿದರು. ಅಬೀಮೆಲೆಕನು ಆ ದಿವಸವೆಲ್ಲಾ 45
ಯುದ್ಧಮಾಡಿ ಪಟ್ಟಣವನ್ನು ಸ್ವಾಧೀನಮಾಡಿಕೊಂಡು
ಅದರ ಜನರನ್ನೆಲ್ಲಾ ಸಂಹರಿಸಿ ಊರನ್ನು ಕೆಡವಿ
ಬಿಟ್ಟು ಅಲ್ಲಿ ಉಪ್ಪನ್ನು ಎರಚಿಬಿಟ್ಟನು. ಶೆಕೆಮಿನ 46
ಕೋಟೆಯವರು ಇದನ್ನು ಕೇಳಿ ಏಲ್‌ಬೆರೀತೆಂಬ
ದೇವರ ಗುಡಿಯ ನೆಲಮನೆಯಲ್ಲಿ ಅಡಗಿಕೊಂಡ
ರು. ಕೋಟೆಯವರೆಲ್ಲರೂ ಅಲ್ಲಿ ಅಡಗಿಕೊಂಡಿ 47
ದ್ದಾರೆಂಬದು ಅಬೀಮೆಲೆಕನಿಗೆ ಗೊತ್ತಾದಾಗ ಅವನು 48
ಕೊಡಲಿಯನ್ನು ತೆಗೆದುಕೊಂಡು ತನ್ನ ಜನರೆಲ್ಲ
ರೊಡನೆ ಚಲ್ಮೋನ್ ಗುಡ್ಡವನ್ನೇರಿ ತನ್ನವರಿಗೆ—
ನಾನು ಮಾಡುವಂತೆಯೇ ನೀವೂ ತೀವ್ರವಾಗಿ ಮಾಡಿರಿ
ಎಂದು ಹೇಳಿ ತಾನು ಒಂದು ಮರದ ಕೊಂಬೆ
ಯನ್ನು ಕಡಿದು ಹೆಗಲ ಮೇಲೆ ಹೊತ್ತುಕೊಳ್ಳಲು
ಅವರೂ ಅದರಂತೆಯೇ ಮಾಡಿ ಅವನ ಹಿಂದೆ ಹೋಗಿ 49
ಆ ಕೊಂಬೆಗಳನ್ನು ಅವರಿದ್ದ ನೆಲಮನೆಯ ಸುತ್ತಲೂ
ಹಾಕಿ ಬೆಂಕಿಹೊತ್ತಿಸಿ ಅದನ್ನು ಸುಟ್ಟುಬಿಟ್ಟರು. ಹೀಗೆ
ಶೆಕೆಮ್‌ಕೋಟೆಯವರೆಲ್ಲರೂ ಸತ್ತರು. ಅವರು ಸ್ತ್ರೀ
ಪುರುಷರೆಲ್ಲಾ ಸುಮಾರು ಸಾವಿರ ಜನರಿದ್ದರು.
ಅನಂತರ ಅಬೀಮೆಲೆಕನು ತೇಬೇಚಿಗೆ ಹೋಗಿ 50
ಮುತ್ತಿಗೆಹಾಕಿ ಅದನ್ನು ಹಿಡಿದನು. ಆ ಊರಿನ 51
ಮಧ್ಯದಲ್ಲಿ ಒಂದು ಭದ್ರವಾದ ಬುರುಜು ಇತ್ತು;
ಊರಿನ ಸ್ತ್ರೀಪುರುಷರೆಲ್ಲರೂ ಓಡಿಹೋಗಿ ಅದರೊಳಗೆ
ಹೊಕ್ಕು ಬಾಗಲನ್ನು ಮುಚ್ಚಿಕೊಂಡು ಮೇಲೆ ಹತ್ತಿ
ದರು. ಅಬೀಮೆಲೆಕನು ಅಲ್ಲಿಗೆ ಬಂದು ಯುದ್ಧ 52
ಮಾಡುತ್ತಾ ಬುರುಜಿನ ಬಾಗಲಿಗೆ ಬೆಂಕಿ ಹೊತ್ತಿಸ
ಬೇಕೆಂದು ಅದರ ಸಮೀಪಕ್ಕೆ ಹೋಗಲು ಒಬ್ಬ 53
ಸ್ತ್ರೀಯು ಮೇಲಣಿಂದ ಒಂದು ಬೀಸುವ ಕಲ್ಲನ್ನು
ಬೀಳಿಸಿ ಅವನ ತಲೆಬುರುಡೆಯನ್ನು ಒಡೆದುಬಿಟ್ಟಳು.
ಅವನು ಕೂಡಲೆ ತನ್ನ ಆಯುಧವಾಹಕನನ್ನು ಕರೆದು 54
ಅವನಿಗೆ—ಕತ್ತಿಯನ್ನು ಹಿರಿದು ನನ್ನನ್ನು ಕೊಲ್ಲು;
ಇಲ್ಲವಾದರೆ ಹೆಂಗಸಿನ ಕೈಯಿಂದ ಸತ್ತನೆಂದು ಹೇ
ಳಾರು ಎಂದನ್ನಲು ಆ ಪ್ರಾಯಸ್ಥನು ಅವನನ್ನು
ತಿವಿದು ಕೊಂದುಹಾಕಿದನು. ಅಬೀಮೆಲೆಕನು ಸತ್ತು 55
ಹೋದದ್ದನ್ನು ಕಂಡು ಇಸ್ರಾಯೇಲ್ಯರು ತಮ್ಮ ತಮ್ಮ
ಸ್ಥಳಗಳಿಗೆ ಹಿಂದಿರುಗಿದರು.
ಎಪ್ಪತ್ತು ಮಂದಿ ಸಹೋದರರನ್ನು ಕೊಂದುಹಾಕಿ 56
ತನ್ನ ತಂದೆಗೆ ದ್ರೋಹಿಯಾದ ಅಬೀಮೆಲೆಕನಿಗೆ ದೇವ
ರು ಈ ರೀತಿಯಾಗಿ ಮುಯ್ಯಿತೀರಿಸಿದನು. ಶೆಕೆಮಿ 57
ನವರಿಗಾದರೋ ಅವರ ದುಷ್ಟತ್ವವು ಅವರ ತಲೆಯ
ಮೇಲೆಯೇ ಬರಮಾಡಿದನು. ಹೀಗೆ ಯೆರುಬ್ಬಾಳನ
ಮಗನಾದ ಯೋತಾಮನು ಇವರ ವಿಷಯದಲ್ಲಿ
ನುಡಿದ ಶಾಪವು ನೆರವೇರಿತು.

ತೋಲಾ, ಯಾಯಿರ್ ಎಂಬ ನ್ಯಾಯಸ್ಥಾಪಕರು.

10 ಅಬೀಮೆಲೆಕನ ತರುವಾಯ ಇಸ್ಸಾಕಾರ್ ಕುಲದ
ಪೂವನ ಮಗನೂ ದೋದೋವಿನ ಮೊಮ್ಮಗನೂ
ಆಗಿದ್ದ ತೋಲನು ಎದ್ದು ಇಸ್ರಾಯೇಲ್ಯರನ್ನು ರಕ್ಷಿಸಿ
ದನು. ಅವನು ಎಫ್ರಾಯಾಮ್ ಬೆಟ್ಟದ ಸೀಮೆಯ
ಶಾಮೀರೆಂಬ ಊರಲ್ಲಿ ವಾಸವಾಗಿದ್ದನು. ಇಪ್ಪತ್ತ 2

ಮೂರು ವರುಷಗಳ ವರೆಗೆ ಇಸ್ರಾಯೇಲ್ಯರನ್ನು ಪಾಲಿ
ಸಿದನಂತರ ಸತ್ತು ಶಾಮೀರಿನಲ್ಲಿ ಹೂಣಲ್ಪಟ್ಟನು.
3 ಅವನ ತರುವಾಯ ಗಿಲ್ಯಾದ್ಯನಾದ ಯಾಯೀರನು
ಎದ್ದು ಇಸ್ರಾಯೇಲ್ಯರನ್ನು ಇಪ್ಪತ್ತೆರಡು ವರುಷ ಪಾಲಿ
4 ಸಿದನು. ಇವನಿಗೆ ಮೂವತ್ತು ಮಂದಿ ಮಕ್ಕಳಿ
ದ್ದರು. ಇವರಿಗೆ ಮೂವತ್ತು ಸವಾರೀ ಕತ್ತೆಗಳೂ
ಗಿಲ್ಯಾದ್ ದೇಶದಲ್ಲಿ ಮೂವತ್ತು ಊರುಗಳೂ ಇದ್ದವು.
ಅವುಗಳಿಗೆ ಇಂದಿನ ವರೆಗೂ ಯಾಯೀರನ ಗ್ರಾಮ
5 ಗಳೆಂದು ಹೆಸರಿದೆ. ಯಾಯೀರನು ಸತ್ತು ಕಾಮೋನಿ
ನಲ್ಲಿ ಹೂಣಲ್ಪಟ್ಟನು.

### ಅಮ್ಮೋನಿಯರ ಕಾಟವು.

6 ಇಸ್ರಾಯೇಲ್ಯರು ತಿರಿಗಿ ಯೆಹೋವನ ದೃಷ್ಟಿಯಲ್ಲಿ
ದ್ರೋಹಿಗಳಾದರು; ಅವರು ಆತನನ್ನು ಬಿಟ್ಟು ಬಾಳ್,
ಅಷ್ಟೋರೆತ್ ಎಂಬ ದೇವತೆಗಳನ್ನೂ ಅರಾಮ್ಯರು,
ಚೀದೋನ್ಯರು, ಮೋವಾಬ್ಯರು, ಅಮ್ಮೋನಿಯರು,
ಫಿಲಿಷ್ಟಿಯರು ಇವರ ದೇವತೆಗಳನ್ನೂ ಪೂಜಿಸಹತ್ತಿ
7 ಯೆಹೋವನನ್ನು ಬಿಟ್ಟೇ ಬಿಟ್ಟರು. ಆದದರಿಂದ
ಆತನು ಇಸ್ರಾಯೇಲ್ಯರ ಮೇಲೆ ಕೋಪವುಳ್ಳವನಾಗಿ
ಅವರನ್ನು ಫಿಲಿಷ್ಟಿಯರ ಮತ್ತು ಅಮ್ಮೋನಿಯರ ಕೈಗೆ
8 ಒಪ್ಪಿಸಿಬಿಟ್ಟನು. ಇವರು ಆ ವರುಷದಿಂದ ಹದಿನೇಟು
ವರುಷಗಳ ವರೆಗೆ ಯೊರ್ದನಿನ ಆಚೆ ಗಿಲ್ಯಾದಿನಲ್ಲಿದ್ದ
ಇಸ್ರಾಯೇಲ್ಯರನ್ನು ಬಹಳವಾಗಿ ಪೀಡಿಸುತ್ತಾ ಕುಗ್ಗಿ
ಸುತ್ತಾ ಇದ್ದರು. ಈ ದೇಶವು ಮೊದಲು ಅಮೋರಿಯರ
9 ದಾಗಿತ್ತು. ಇದಲ್ಲದೆ ಅಮ್ಮೋನಿಯರು ಯೊರ್ದನ್
ಹೊಳೆಯನ್ನು ದಾಟಿ ಯೆಹೂದ ಬೆನ್ಯಾಮೀನ್
ಎಫ್ರಾಯಿಮ್ ಕುಲಗಳೊಡನೆ ಯುದ್ಧಮಾಡಿದ್ದ
ರಿಂದ ಇಸ್ರಾಯೇಲ್ಯರಿಗೆ ಬಹಳ ಕಷ್ಟವಾಯಿತು.
10 ಆಗ ಅವರು ಯೆಹೋವನಿಗೆ—ನಾವು ನಮ್ಮ ದೇವ
ರಾದ ನಿನ್ನನ್ನು ಬಿಟ್ಟು ಬಾಳನ ಪ್ರತಿಮೆಗಳನ್ನು
ಪೂಜಿಸಿ ನಿನಗೆ ವಿರುದ್ಧವಾಗಿ ಪಾಪಮಾಡಿದ್ದೇವೆ
11 ಎಂದು ಮೊರೆಯಿಡಲು ಆತನು ಅವರಿಗೆ—ಐ
ಗುಪ್ತ, ಅಮೋರಿಯ, ಅಮ್ಮೋನಿಯ, ಫಿಲಿಷ್ಟಿಯ,
12 ಚೀದೋನ್ಯ, ಅಮಾಲೇಕ್ಯ, ಮಾವೋನ್ಯ ಇವೇ ಮೊದ
ಲಾದ ಜನಾಂಗಗಳು ನಿಮ್ಮನ್ನು ಪೀಡಿಸಿದಾಗ ನೀವು
ನನಗೆ ಮೊರೆಯಿಟ್ಟಿರಿ; ನಾನು ಅವುಗಳಿಂದ ನಿಮ್ಮನ್ನು
13 ಬಿಡಿಸಿದರೂ ನೀವು ತಿರಿಗಿ ನನ್ನನ್ನು ಬಿಟ್ಟು ಅನ್ಯ
ದೇವತೆಗಳನ್ನು ಸೇವಿಸುತ್ತಾ ಬಂದಿರಿ; ಆದದರಿಂದ
ನಾನು ಇನ್ನು ಮುಂದೆ ನಿಮ್ಮನ್ನು ರಕ್ಷಿಸುವದೇ
14 ಇಲ್ಲ. ಹೋಗಿ ನೀವು ಆರಿಸಿಕೊಂಡ ದೇವತೆಗಳಿಗೆ
ಮೊರೆಯಿಡಿರಿ; ಅವು ನಿಮ್ಮ ಈ ಇಕ್ಕಟ್ಟಿನಲ್ಲಿ ಸಹಾಯ
15 ಮಾಡಲಿ ಅಂದನು. ಇಸ್ರಾಯೇಲ್ಯರು ತಿರಿಗಿ
ಯೆಹೋವನಿಗೆ—ನಾವು ಪಾಪ ಮಾಡಿದ್ದೇವೆ; ನಿನಗೆ
ಸರಿಕಾಣುವ ಪ್ರಕಾರ ನಮಗೆ ಮಾಡು; ಆದರೆ ಈ
ಸಾರಿ ಹೇಗೂ ನಮ್ಮನ್ನು ರಕ್ಷಿಸಬೇಕು ಎಂದು ಮೊರೆ
ಯಿಟ್ಟು ಅನ್ಯದೇವತೆಗಳನ್ನು ತಮ್ಮಲ್ಲಿಂದ ತೆಗೆದು
16 ಹಾಕಿ ಯೆಹೋವನನ್ನು ಸೇವಿಸುವವರಾದರು. ಆಗ
ಆತನ ಮನಸ್ಸು ಇಸ್ರಾಯೇಲ್ಯರ ಸಂಕಟದ ನಿಮಿತ್ತ
ಬಲುನೊಂದಿತು.

ಅಮ್ಮೋನಿಯರು ದಂಡೆತ್ತಿ ಬಂದು ಗಿಲ್ಯಾದಿನಲ್ಲಿ
ಇಳುಕೊಳ್ಳಲು ಇಸ್ರಾಯೇಲ್ಯರು ಕೂಡಿ ಮಿಚ್ಪೆ
ಯಲ್ಲಿ ಪಾಳೆಯಮಾಡಿಕೊಂಡರು. ಗಿಲ್ಯಾದಿನ ಜನ
ರೂ ಅಧಿಪತಿಗಳೂ—ನಮ್ಮಲ್ಲಿ ಅಮ್ಮೋನಿಯರೊಡನ
ಯುದ್ಧಕ್ಕೆ ಕೈಹಾಕುವವನಾವನು? ಅಂಥವನನ್ನು
ಗಿಲ್ಯಾದಿನವರೆಲ್ಲರ ಮೇಲೆ ನಾಯಕನನ್ನಾಗಿ ಮಾಡೋ
ವಲ್ಲಾ ಎಂದು ತಮ್ಮತಮ್ಮೊಳಗೆ ಮಾತಾಡಿಕೊಂಡರು

### ಯೆಪ್ತಾಹನು ಗಿಲ್ಯಾದಿನವರ ನಾಯಕನಾಗಿ ಅಮ್ಮೋನಿಯರನ್ನು ಸೋಲಿಸಿದ್ದು.

ಗಿಲ್ಯಾದ್ಯನಾದ ಯೆಪ್ತಾಹನು ಮಹಾಪರಾಕ್ರಮಿ
ಯಾಗಿದ್ದನು. ಅವನು ಗಿಲ್ಯಾದನಿಗೆ ಒಬ್ಬ ಸೂಳೆ
ಯಲ್ಲಿ ಹುಟ್ಟಿದವನು. ಗಿಲ್ಯಾದನಿಗೆ ಹೆಂಡತಿಯ
ಲ್ಲಿಯೂ ಮಕ್ಕಳು ಹುಟ್ಟಿದರು. ಇವರು ದೊಡ್ಡವ
ರಾದ ಮೇಲೆ ಯೆಪ್ತಾಹನಿಗೆ—ನೀನು ಪರಸ್ತ್ರೀಯಿಂದ
ಹುಟ್ಟಿದವನು; ಆದದರಿಂದ ನಿನಗೆ ನಮ್ಮ ತಂದೆಯ
ಮನೆಯಲ್ಲಿ ಬಾಧ್ಯತೆ ಸಿಕ್ಕಲಾರದು ಎಂದು ಹೇಳಿ
ಅವನನ್ನು ಹೊರಗೆ ಹಾಕಿದರು. ಅವನು ತನ್ನ ಸಹೋ
ದರರನ್ನು ಬಿಟ್ಟು ಟೋಬ್ ದೇಶಕ್ಕೆ ಹೋಗಲು ಅಲ್ಲಿನ
ಕಾಕಪೋಕರು ಕೂಡಿ ಅವನನ್ನು ಹಿಂಬಾಲಿಸಿದರು.
ಇಸ್ರಾಯೇಲ್ಯರಿಗೆ ವಿರೋಧವಾಗಿ ಬಂದ ಅಮ್ಮೋ
ನಿಯರು ಸ್ವಲ್ಪದಿನಗಳಾದ ಮೇಲೆ ಯುದ್ಧವನ್ನು
ಪ್ರಾರಂಭಿಸಿದರು. ಆಗ ಗಿಲ್ಯಾದಿನ ಹಿರಿಯರು
ಯೆಪ್ತಾಹನನ್ನು ಟೋಬ್ ದೇಶದಿಂದ ಕರೆದುಕೊಂಡು
ಬರುವದಕ್ಕಾಗಿ ಅಲ್ಲಿಗೆ ಹೋಗಿ ಅವನಿಗೆ—ನಾವು
ಅಮ್ಮೋನಿಯರೊಡನೆ ಯುದ್ಧಮಾಡುವ ಹಾಗೆ ನೀನು
ಬಂದು ನಮ್ಮ ನಾಯಕನಾಗು ಎಂದು ಬೇಡಿ
ಕೊಂಡರು. ಅವನು ಅವರಿಗೆ—ನನ್ನನ್ನು ಹಗೆಮಾಡಿ
ನನ್ನ ತಂದೆಯ ಮನೆಯಿಂದ ಅಟ್ಟಿಬಿಟ್ಟವರು ನೀವೇ
ಅಲ್ಲವೋ? ನಿಮಗೆ ಕಷ್ಟ ಬಂದಾಗ ನನ್ನ ಬಳಿಗೆ
ಯಾಕೆ ಬಂದಿರಿ ಅನ್ನಲು ಅವರು—ಆದದರಿಂದಲೇ
ಈಗ ತಿರಿಗಿ ನಿನ್ನ ಬಳಿಗೆ ಬಂದಿದ್ದೇವೆ; ನಮ್ಮ ಸಂಗಡ
ಬಂದು ಅಮ್ಮೋನಿಯರೊಡನೆ ಯುದ್ಧಮಾಡುವಿ
ಯಾದರೆ ಗಿಲ್ಯಾದಿನವರಿಗೆಲ್ಲಾ ನೀನೇ ಶಿರಸ್ಸಾಗಿರುವಿ
ಎಂದು ಹೇಳಿದರು. ಆಗ ಯೆಪ್ತಾಹನು ಅವರಿಗೆ—
ನೀವು ನನ್ನನ್ನು ಅಮ್ಮೋನಿಯರೊಡನೆ ಯುದ್ಧಮಾಡು
ವದಕ್ಕೋಸ್ಕರ ಕರೆದುಕೊಂಡು ಹೋಗುವಲ್ಲಿ ಯೆ
ಹೋವನು ಅವರನ್ನು ನನ್ನ ಕೈಗೆ ಒಪ್ಪಿಸಿಕೊಟ್ಟರೆ
ನಿಜವಾಗಿ ನನ್ನನ್ನು ಅಧಿಪತಿಯನ್ನಾಗಿ ಮಾಡುವಿರೋ
ಎಂದು ಕೇಳಲು ಅವರು ಅವನಿಗೆ—ಹಾಗೆಯೇ
ಮಾಡುವೆವು; ಉಭಯತರ ಮಾತುಗಳಿಗೆ ಯೆಹೋ
ವನೇ ಸಾಕ್ಷಿ ಎಂದು ಉತ್ತರಕೊಟ್ಟರು. ಆಗ ಯೆಪ್ತಾ
ಹನು ಗಿಲ್ಯಾದಿನ ಹಿರಿಯರ ಸಂಗಡ ಹೋದನು;
ಜನರು ಅವನನ್ನು ಅಧಿಪತಿಯನ್ನಾಗಿಯೂ ನಾಯಕ
ನನ್ನಾಗಿಯೂ ನೇಮಿಸಿದರು. ಮತ್ತು ಯೆಪ್ತಾಹನು
ತನ್ನ ಸಂಗತಿಗಳನ್ನೆಲ್ಲಾ ಮಿಚ್ಪೆಯಲ್ಲಿ ಯೆಹೋವನ
ಮುಂದೆ ಅರಿಕೆಮಾಡಿದನು.
ಯೆಪ್ತಾಹನು ಅಮ್ಮೋನಿಯರ ಅರಸನ ಬಳಿಗೆ
ದೂತರನ್ನು ಕಳುಹಿಸಿ ಅವನನ್ನು—ನನಗೂ ನಿನಗೂ

ಏನದೆ? ನೀನು ನನ್ನ ದೇಶಕ್ಕೆ ವಿರೋಧವಾಗಿ ಯುದ್ಧ
13 ಮಾಡುವದಕ್ಕೇನು ಕಾರಣ ಎಂದು ಕೇಳಿದನು. ಆ
ಅರಸನು ದೂತರಿಗೆ—ಇಸ್ರಾಯೇಲ್ಯರು ಐಗುಪ್ತ
ದಿಂದ ಬಂದಾಗ ಅರ್ನೋನಿನಿಂದ ಯಬ್ಬೋಕ್,
ಯೊರ್ದನ್ ಹೊಳೆಗಳ ವರೆಗೂ ಇದ್ದ ನನ್ನ ದೇಶ
ವನ್ನು ಕಸಕೊಂಡರಲ್ಲಾ; ನೀನು ಈಗ ಅದನ್ನು
ಸಮಾಧಾನದಿಂದ ಹಿಂದಕ್ಕೆ ಕೊಡು ಎಂದು ಹೇಳಿ
14 ಕಳುಹಿಸಿದನು. ಯೆಪ್ತಾಹನು ಇನ್ನೊಂದು ಸಾರಿ
ಅಮ್ಮೋನಿಯರ ಅರಸನ ಬಳಿಗೆ ದೂತರನ್ನು ಕಳು
15 ಹಿಸಿ ಅವನಿಗೆ—ಯೆಪ್ತಾಹನಾದ ನನ್ನ ಮಾತನ್ನು
ಕೇಳು; ಇಸ್ರಾಯೇಲ್ಯರು ಮೋವಾಬ್ಯರ ಮತ್ತು
ಅಮ್ಮೋನಿಯರ ದೇಶವನ್ನು ತೆಗೆದುಕೊಳ್ಳಲೇ ಇಲ್ಲ.
16 ಅವರು ಐಗುಪ್ತವನ್ನು ಬಿಟ್ಟನಂತರ ಅರಣ್ಯದಲ್ಲಿ ಸಂಚ
ರಿಸಿ ಕೆಂಪು ಸಮುದ್ರಕ್ಕೂ ಅನಂತರ ಕಾದೇಶಿಗೂ
17 ಬಂದರು. ಅವರು ಅಲ್ಲಿಂದ ಎದೋಮ್ಯರ ಅರಸನ
ಬಳಿಗೆ ದೂತರನ್ನು ಕಳುಹಿಸಿ—ನಿನ್ನ ದೇಶವನ್ನು
ದಾಟಿಹೋಗುವದಕ್ಕೆ ಅಪ್ಪಣೆಯಾಗಬೇಕೆಂದು ಬೇಡಿ
ಕೊಳ್ಳಲು ಅವನು ಒಪ್ಪಿಕೊಳ್ಳಲಿಲ್ಲ. ತರುವಾಯ
ಮೋವಾಬ್ಯರ ಅರಸನ ಬಳಿಗೆ ದೂತರನ್ನು ಕಳುಹಿ
ಸಲು ಅವನೂ ಒಪ್ಪಿಕೊಳ್ಳಲಿಲ್ಲ; ಆದದರಿಂದ ಅವರು
18 ಕಾದೇಶಿನಲ್ಲಿಯೇ ನಿಂತರು. ಅನಂತರ ಅವರು ಅರಣ್ಯ
ದಲ್ಲಿ ಪ್ರಯಾಣಮಾಡಿ ಎದೋಮ್ ಮೋವಾಬ್
ದೇಶಗಳನ್ನು ಸುತ್ತಿಕೊಂಡು ಮೋವಾಬ್‌ದೇಶದ
ಪೂರ್ವದಿಕ್ಕಿಗೆ ಬಂದು ಅದರ ಮೇರೆಯಾಗಿರುವ
ಅರ್ನೋನ್ ಹೊಳೆಯ ಆಚೆಯಲ್ಲಿ ಇಳುಕೊಂಡರು;
19 ಮೋವಾಬ್ಯರ ಮೇರೆಯೊಳಗೆ ಕಾಲಿಡಲಿಲ್ಲ. ತರು
ವಾಯ ಅವರು ಹೆಷ್ಬೋನನ್ನು ರಾಜಧಾನಿಮಾಡಿ
ಕೊಂಡಿದ್ದ ಅಮೋರಿಯರ ಅರಸನಾದ ಸೀಹೋನನ
ಬಳಿಗೆ ದೂತರನ್ನು ಕಳುಹಿಸಿ—ನಿನ್ನ ದೇಶವನ್ನು
ದಾಟಿ ನಮ್ಮ ಸ್ಥಳಕ್ಕೆ ಹೋಗುವದಕ್ಕೆ ಅಪ್ಪಣೆಕೊಡು
20 ಎಂದು ಅವನನ್ನು ಬೇಡಿಕೊಂಡರು. ಆದರೆ ಸೀಹೋ
ನನು ಅವರನ್ನು ನಂಬದವನಾಗಿ ತನ್ನ ಸೀಮೆಯನ್ನು
ದಾಟಿಹೋಗುವದಕ್ಕೆ ಅಪ್ಪಣೆಕೊಡದೆ ತನ್ನ ಜನರನ್ನು
ಕೂಡಿಸಿಕೊಂಡು ಯಹಚಕ್ಕೆ ಬಂದು ಅವರೊಡನೆ
21 ಯುದ್ಧಮಾಡಿದನು. ಇಸ್ರಾಯೇಲ್ಯರ ದೇವರಾದ
ಯೆಹೋವನು ಸೀಹೋನನನ್ನೂ ಅವನ ಜನರೆಲ್ಲ
ರನ್ನೂ ಇಸ್ರಾಯೇಲ್ಯರ ಕೈಗೆ ಒಪ್ಪಿಸಿದ್ದರಿಂದ
ಅವರು ಈ ದೇಶದ ನಿವಾಸಿಗಳಾದ ಅಮೋರಿಯರನ್ನು
ಹೊಡೆದು ಅವರ ದೇಶವನ್ನೆಲ್ಲಾ ಸ್ವತಂತ್ರಿಸಿಕೊಂಡರು.
22 ಹೀಗೆ ಇಸ್ರಾಯೇಲ್ಯರು ಅರ್ನೋನಿನಿಂದ ಯಬ್ಬೋ
ಕಿನ ವರೆಗೂ ಅರಣ್ಯದಿಂದ ಯೊರ್ದನಿನ ವರೆಗೂ
ಇದ್ದ ಅಮೋರಿಯರ ಪ್ರಾಂತವನ್ನೆಲ್ಲಾ ವಶಮಾಡಿ
23 ಕೊಂಡರು. ಇಸ್ರಾಯೇಲ್‌ದೇವರಾದ ಯೆಹೋ
ವನು ಈ ದೇಶವನ್ನು ಅಮೋರಿಯರಿಂದ ತೆಗೆದು
ತನ್ನ ಪ್ರಜೆಗಳಾದ ಇಸ್ರಾಯೇಲ್ಯರಿಗೆ ಕೊಟ್ಟ ಮೇಲೆ
24 ನೀನು ಅದನ್ನು ತೆಗೆದುಕೊಳ್ಳುವದು ಹೇಗೆ? ನಿನ್ನ
ದೇವನಾದ ಕೆಮೋಷನು ನಿನಗೆ ಕೊಡುವ ದೇಶ
ಗಳನ್ನು ನೀನು ಸ್ವತಂತ್ರಿಸಿಕೊಳ್ಳುವದಿಲ್ಲವೋ? ಹಾಗೆ
ಯೇ ನಮ್ಮ ದೇವರಾದ ಯೆಹೋವನು ನಮಗೆ
ಒಪ್ಪಿಸಿಕೊಡುವದನ್ನು ನಾವು ಸ್ವತಂತ್ರಿಸಿಕೊಳ್ಳುವದು
ನ್ಯಾಯವಾಗಿದೆ. ಚಿಪ್ಪೋರನ ಮಗನೂ ಮೋವಾ 25
ಬ್ಯರ ಅರಸನೂ ಆದ ಬಾಲಾಕನಿಗಿಂತ ನೀನು ಹೆಚ್ಚಿನ
ವನೋ? ಅವನು ಇಸ್ರಾಯೇಲ್ಯರೊಡನೆ ಎಂದಾದರೂ
ವಿವಾದಮಾಡಿದನೋ? ಅಥವಾ ಅವರಿಗೆ ವಿರೋಧ
ವಾಗಿ ಯುದ್ಧಕ್ಕೆ ಬಂದನೋ? ಇಸ್ರಾಯೇಲ್ಯರು 26
ಮುನ್ನೂರು ವರುಷಗಳಿಂದ ಹೆಷ್ಬೋನ್, ಅರೋ
ಯೇರ್ ಎಂಬ ಪಟ್ಟಣಗಳಲ್ಲಿಯೂ ಅವುಗಳ ಗ್ರಾಮ
ಗಳಲ್ಲಿಯೂ ಅರ್ನೋನ್ ತೀರದ ಎಲ್ಲಾ ಪಟ್ಟಣ
ಗಳಲ್ಲಿಯೂ ವಾಸಿಸುತ್ತಿದ್ದಾರಲ್ಲಾ; ಇಷ್ಟು ದಿವಸಗಳ
ವರೆಗೆ ನೀನು ಅದನ್ನು ಹಿಡಿಸಿಕೊಳ್ಳದೆ ಇದ್ದದ್ದೇಕೆ?
ನಾನು ನಿನಗೆ ಯಾವ ಅನ್ಯಾಯವನ್ನೂ ಮಾಡಲಿಲ್ಲ. 27
ನೀನು ಈಗ ನನಗೆ ವಿರೋಧವಾಗಿ ಯುದ್ಧಕ್ಕೆ
ಬಂದದರಿಂದ ನೀನೇ ಅನ್ಯಾಯಮಾಡಿದ ಹಾಗಾ
ಯಿತು. ನ್ಯಾಯಸ್ಥಾಪಕನಾದ ಯೆಹೋವನೇ ಈ
ಹೊತ್ತು ಇಸ್ರಾಯೇಲ್ಯರಿಗೂ ಅಮ್ಮೋನಿಯರಿಗೂ
ಮಧ್ಯದಲ್ಲಿ ನ್ಯಾಯತೀರಿಸಲಿ ಎಂದು ಹೇಳಿಸಿದನು.
ಆದರೆ ಯೆಪ್ತಾಹನು ಹೇಳಿಕಳುಹಿಸಿದ ಮಾತುಗಳಿಗೆ 28
ಅಮ್ಮೋನಿಯರ ಅರಸನು ಕಿವಿಗೊಡಲಿಲ್ಲ.

ಆಗ ಯೆಹೋವನ ಆತ್ಮವು ಯೆಪ್ತಾಹನ ಮೇಲೆ 29
ಬಂದಿತು. ಅವನು ಗಿಲ್ಯಾದ್‌ಪ್ರಾಂತ, ಮನಸ್ಸೆಯ
ದೇಶ ಇವುಗಳಲ್ಲಿ ಸಂಚರಿಸಿ ತಿರಿಗಿ ಗಿಲ್ಯಾದಿನ
ಮಿಚ್ಪೆಗೆ ಬಂದು ಅಲ್ಲಿಂದ ಅಮ್ಮೋನಿಯರ ಮೇಲೆ
ಯುದ್ಧಕ್ಕೆ ಹೋದನು. ಇದಲ್ಲದೆ ಅವನು ಯೆಹೋ 30
ವನಿಗೆ—ನೀನು ಅಮ್ಮೋನಿಯರನ್ನು ನನ್ನ ಕೈಗೆ ಒಪ್ಪಿ
ಸುವದಾದರೆ ನಾನು ಸುರಕ್ಷಿತನಾಗಿ ಮನೆಗೆ ಮುಟ್ಟಿ 31
ದಾಗ ನನ್ನನ್ನು ಎದುರುಗೊಳ್ಳುವದಕ್ಕಾಗಿ ನನ್ನ
ಮನೆಯ ಬಾಗಲಿನಿಂದ ಮೊದಲು ಬರುವಂಥ
ಪ್ರಾಣಿಯು ನಿನ್ನದೇ ಎಂದು ಅದನ್ನು ನಿನಗೋಸ್ಕರ
ಹೋಮಮಾಡುವೆನು ಎಂದು ಹರಕೆಮಾಡಿದನು.
ಯೆಪ್ತಾಹನು ಅಮ್ಮೋನಿಯರಿಗೆ ವಿರೋಧವಾಗಿ 32
ಯುದ್ಧಕ್ಕೆ ಹೋಗಲು ಯೆಹೋವನು ಅವರನ್ನು
ಅವನ ಕೈಗೆ ಒಪ್ಪಿಸಿದನು. ಅವನು ಅವರನ್ನು 33
ಸೋಲಿಸಿ ಅರೋಯೇರಿನಿಂದ ಮಿನ್ನೀತಿನ ದಾರಿಯ
ವರೆಗೂ ಆಬೇಲ್ ಕೆರಾಮೀಮಿನ ವರೆಗೂ ಇಪ್ಪತ್ತು
ಪಟ್ಟಣಗಳನ್ನು ಹಾಳುಮಾಡಿಬಿಟ್ಟನು. ಹೀಗೆ ದೊಡ್ಡ
ಜಯವಾಗಿ ಅಮ್ಮೋನಿಯರು ಇಸ್ರಾಯೇಲ್ಯರ ಮುಂದೆ
ತಗ್ಗಿಸಲ್ಪಟ್ಟರು.

ಯೆಪ್ತಾಹನು ತನ್ನ ಮಗಳನ್ನು ಯಜ್ಞಮಾಡಿದ್ದು.

ಯೆಪ್ತಾಹನು ಮಿಚ್ಪೆಯಲ್ಲಿದ್ದ ತನ್ನ ಮನೆಯನ್ನು 34
ಸಮೀಪಿಸಿದಾಗ ಅವನ ಮಗಳು ದಮ್ಮಡಿಬಡಿ
ಯುತ್ತಾ ನಾಟ್ಯವಾಡುತ್ತಾ ಅವನನ್ನು ಎದುರು
ಗೊಳ್ಳುವದಕ್ಕಾಗಿ ಬಂದಳು. ಆಕೆಯು ಅವನ
ಒಬ್ಬಳೇ ಮಗಳು. ಆಕೆಯು ಹೊರತು ಅವನಿಗೆ
ಬೇರೆ ಗಂಡು ಹೆಣ್ಣು ಮಕ್ಕಳೇ ಇರಲಿಲ್ಲ. ಆಕೆ 35
ಯನ್ನು ಕಾಣುತ್ತಲೆ ಅವನು ತನ್ನ ಬಟ್ಟೆಯನ್ನು
ಹರಿದುಕೊಂಡು—ಅಯ್ಯೋ ನನ್ನ ಮಗಳೇ, ಮಗಳೇ,
ನೀನು ನನ್ನನ್ನು ಕುಗ್ಗಿಸೇ ಬಿಟ್ಟೆಯಲ್ಲಾ; ನನಗೆ
ಮಹಾಸಂಕಟವನ್ನುಂಟುಮಾಡಿದಿ. ನಾನು ಬಾಯ್ದೆ

ರದು ಯೆಹೋವನಿಗೆ ಹರಕೆಮಾಡಿದ್ದೇನೆ; ಆದಕ್ಕೆ
33 ಹಿಂದೆಗೆಯಲಾರೆನು ಎಂದು ಕೂಗಿಕೊಳ್ಳಲು ಆಕ
ಯು ಅವನಿಗೆ—ನನ್ನ ತಂದೆಯೇ, ನೀನು ಬಾಯ್ದೆ
ರೆದು ಯೆಹೋವನಿಗೆ ಹರಕೆಮಾಡಿದ ಮೇಲೆ ಆತನು
ನಿನ್ನ ಶತ್ರುಗಳಾದ ಅಮ್ಮೋನಿಯರಿಗೆ ಮುಯ್ಯಿ
ತೀರಿಸಿದದರಿಂದ ನಿನ್ನ ಬಾಯಿಂದ ಹೊರಟದ್ದನ್ನೇ
37 ನೆರವೇರಿಸು ಅಂದಳು. ಆಕೆಯು ತಿರಿಗಿ ತನ್ನ
ತಂದೆಗೆ—ನನ್ನ ಬಿನ್ನಹವನ್ನು ಲಾಲಿಸು; ಎರಡು
ತಿಂಗಳುಗಳ ವರೆಗೆ ನನ್ನನ್ನು ಬಿಡು. ನಾನು ನನ್ನ
ಗೆಳತಿಯರೊಡನೆ ಬೆಟ್ಟದ ಪ್ರದೇಶಗಳಿಗೆ ಹೋಗಿ
ನನ್ನ ಕನ್ಯಾವಸ್ಥೆಗೋಸ್ಕರ ಗೋಳಾಡುವೆನು ಅನ್ನಲು
38 ಅವನು—ಎರಡು ತಿಂಗಳ ತನಕ ಹೋಗಿ ಬಾ ಎಂದು
ಕಳುಹಿಸಿದನು. ಆಕೆಯು ಸಖಿಯರ ಸಹಿತವಾಗಿ
ಬೆಟ್ಟದ ಪ್ರದೇಶಗಳಿಗೆ ಹೋಗಿ ತನ್ನ ಕನ್ಯಾವಸ್ಥೆ
39 ಗೋಸ್ಕರ ಗೋಳಾಡಿದಳು. ಎರಡು ತಿಂಗಳು ಕಳೆದ
ನಂತರ ಆಕೆಯು ತಿರಿಗಿ ತಂದೆಯ ಹತ್ತಿರ ಬರಲು
ಅವನು ತನ್ನ ಹರಕೆಯನ್ನು ತೀರಿಸಿದನು. ಆಕೆಯು
40 ಪುರುಷನನ್ನರಿಯದವಳು. ಇಸ್ರಾಯೇಲ್ಯರ ಹೆಣ್ಣು
ಮಕ್ಕಳು ಪ್ರತಿವರುಷದಲ್ಲಿಯೂ ನಾಲ್ಕು ದಿವಸ
ಗಿಲ್ಯಾದ್ಯನಾದ ಯೆಪ್ತಾಹನ ಮಗಳನ್ನು ವರ್ಣಿಸು
ತ್ತಾರೆ. ಇದು ಅವರಲ್ಲಿ ಒಂದು ಪದ್ಧತಿ.

### ಎಫ್ರಾಯೀಮ್ಯರ ಕಲಹಾಪಜಯಗಳು.

12 ಎಫ್ರಾಯೀಮ್ಯರು ಕೂಡಿಕೊಂಡು ಯೊರ್ದ
ನನ್ನು ದಾಟಿ ಉತ್ತರದಿಕ್ಕಿಗೆ ಯೆಪ್ತಾಹನಿದ್ದಲ್ಲಿಗೆ
ಹೋಗಿ ಅವನಿಗೆ—ನೀನು ಅಮ್ಮೋನಿಯರ ಸಂಗಡ
ಯುದ್ಧಕ್ಕೆ ಹೋಗುವಾಗ ನಮ್ಮನ್ನು ಯಾಕೆ ಕರೆಯ
ಲಿಲ್ಲ? ಈಗ ನಾವು ನಿನ್ನನ್ನೂ ನಿನ್ನ ಮನೆಯನ್ನೂ
2 ಸುಟ್ಟುಬಿಡುತ್ತೇವೆ ಅಂದರು. ಆಗ ಅವನು ಅವ
ರಿಗೆ—ನನಗೂ ನನ್ನ ಜನರಿಗೂ ಅಮ್ಮೋನಿಯರೊಡನೆ
ವ್ಯಾಜ್ಯವಿದ್ದಾಗ ನಾನು ನಿಮ್ಮನ್ನು ಕರೆದೆನು; ಆದರೆ
ನೀವು ಬಂದು ನನ್ನನ್ನು ಅವರ ಕೈಯಿಂದ ಬಿಡಿಸ
3 ಲಿಲ್ಲ. ನೀವು ಸಹಾಯಮಾಡುವದಿಲ್ಲವೆಂದು ತಿಳಿದು
ಜೀವವನ್ನು ಕೈಯಲ್ಲಿ ಹಿಡಿದು ಅಮ್ಮೋನಿಯರೊಡನೆ
ಯುದ್ಧಕ್ಕೆ ಹೋದೆನು; ಯೆಹೋವನು ಅವರನ್ನು
ನನ್ನ ಕೈಗೆ ಒಪ್ಪಿಸಿದನು. ಹೀಗಿರಲು ನೀವು ಈಗ
ಬಂದು ನನ್ನೊಡನೆ ಕಲಹಮಾಡುವದೇಕೆ ಎಂದು
4 ಉತ್ತರಕೊಟ್ಟು ಗಿಲ್ಯಾದಿನವರೆಲ್ಲರನ್ನೂ ಕೂಡಿಸಿ
ಎಫ್ರಾಯೀಮ್ಯರಿಗೆ ವಿರೋಧವಾಗಿ ಯುದ್ಧಕ್ಕೆ
ನಿಂತನು. ಗಿಲ್ಯಾದ್ಯರಾದ ನೀವು ನಮ್ಮ ಮತ್ತು ಮನ
ಸ್ಸೆಯವರ ಮಧ್ಯದಲ್ಲಿದ್ದು ಸ್ವಕುಲವನ್ನು ಬಿಟ್ಟು
ಇಲ್ಲಿಗೆ ಓಡಿ ಬಂದಿರಿ ಎಂದು ಎಫ್ರಾಯೀಮ್ಯರು
ಅಂದದರಿಂದ ಗಿಲ್ಯಾದ್ಯರು [ಕೋಪಗೊಂಡು] ಅವ
5 ರನ್ನು ಪೂರ್ಣವಾಗಿ ಸೋಲಿಸಿಬಿಟ್ಟರು. ಇದಲ್ಲದೆ
ಅವರು ಎಫ್ರಾಯೀಮಿಗೆ ಹೋಗುವ ೭)ಯೊರ್ದನಿನ
ಹಾಯಗಡಗಳನ್ನೆಲ್ಲಾ ಹಿಡಿದರು. ತಪ್ಪಿಸಿಕೊಂಡ
ಎಫ್ರಾಯೀಮ್ಯರಲ್ಲೊಬ್ಬನು ಅಲ್ಲಿಗೆ ಬಂದು ನನ್ನನ್ನು
ದಾಟಗೊಡಿರಿ ಎಂದು ಅವರನ್ನು ಕೇಳಿದರೆ ಅವರು—
ನೀನು ಎಫ್ರಾಯೀಮ್ಯನೋ ಎಂದು ಕೇಳುವರು.
ಅವನು ಅಲ್ಲವೆಂದರೆ ಅವನಿಗೆ—ನೀನು ಷಿಬ್ಬೋಲೆತ್
ಅನ್ನು ಎಂದು ಹೇಳುವರು. ಹಾಗೆ ಅನ್ನಲಿಕ್ಕೆ ಬಾರ
ದೆ ಅವನು ಸಿಬ್ಬೋಲೆತ್ ಅನ್ನುವನು. ಕೂಡಲೆ
ಅವರು ಅವನನ್ನು ಹಿಡಿದು ಯೊರ್ದನಿನ ಹಾಯಗಡ
ಗಳ ಬಳಿಯಲ್ಲೇ ಕೊಂದುಹಾಕುವರು. ಹೀಗೆ ಆ
ಕಾಲದಲ್ಲಿ ಎಫ್ರಾಯೀಮ್ಯರೊಳಗೆ ನಾಲ್ವತ್ತೆರಡು
ಸಾವಿರ ಜನರು ಹತರಾದರು.

ಗಿಲ್ಯಾದ್ಯನಾದ ಯೆಪ್ತಾಹನು ಇಸ್ರಾಯೇಲ್ಯರನ್ನು
ಆರು ವರುಷ ಪಾಲಿಸಿದನಂತರ ಸತ್ತನು; ಅವನ ಶವ
ವನ್ನು ಗಿಲ್ಯಾದಿನ ಪಟ್ಟಣಗಳಲ್ಲೊಂದರಲ್ಲಿ ಸಮಾಧಿ
ಮಾಡಿದರು.

### ಇಬ್ಚಾನ್, ಏಲೋನ್, ಅಬ್ದೋನ್ ಎಂಬ ನ್ಯಾಯಸ್ಥಾಪಕರು.

ಇವನ ತರುವಾಯ ಬೇತ್ಲೆಹೇಮಿನವನಾದ ಇಬ್ಚಾ
ನನು ಇಸ್ರಾಯೇಲ್ಯರ ಪಾಲಕನಾದನು. ಅವನಿಗೆ
ಮೂವತ್ತು ಮಂದಿ ಗಂಡುಮಕ್ಕಳೂ ಮೂವತ್ತು
ಮಂದಿ ಹೆಣ್ಣುಮಕ್ಕಳೂ ಇದ್ದರು; ತನ್ನ ಹೆಣ್ಣುಮಕ್ಕ
ಳನ್ನು ಬೇರೆಯವರಿಗೆ ಕೊಟ್ಟು ಗಂಡುಮಕ್ಕಳಿಗೋ
ಸ್ಕರ ಹೊರಗಿನ ಮೂವತ್ತು ಮಂದಿ ಕನ್ಯೆಯರನ್ನು
ತಂದನು. ಇವನು ಇಸ್ರಾಯೇಲ್ಯರನ್ನು ಏಳು ವರುಷ
ಪಾಲಿಸಿದನಂತರ ಮೃತನಾಗಲು ಅವನ ಶವವನ್ನು
ಬೇತ್ಲೆಹೇಮಿನಲ್ಲಿ ಸಮಾಧಿಮಾಡಿದರು.

ಇವನ ತರುವಾಯ ಜೆಬುಲೂನ್ಯನಾದ ಏಲೋ
ನನು ಇಸ್ರಾಯೇಲ್ಯರ ಪಾಲಕನಾಗಿ ಹತ್ತು ವರುಷ
ಗಳ ವರೆಗೆ ಅವರನ್ನು ಪಾಲಿಸಿದನಂತರ ಮರಣ
ಹೊಂದಿದನು. ಅವನ ಶವವನ್ನು ಜೆಬುಲೂನ್ ದೇಶದ
ಅಯ್ಯಾಲೋನಿನಲ್ಲಿ ಸಮಾಧಿಮಾಡಿದರು.

ಇವನ ತರುವಾಯ ಪಿರಾತೋನಿನವನೂ ಹಿಲ್ಲೇ
ಲನ ಮಗನೂ ಆದ ಅಬ್ದೋನನು ಇಸ್ರಾಯೇಲ್ಯರ
ಪಾಲಕನಾದನು. ಇವನಿಗೆ ನಾಲ್ವತ್ತು ಮಂದಿ ಮಕ್ಕ
ಳೂ ಮೂವತ್ತು ಮಂದಿ ಮೊಮ್ಮಕ್ಕಳೂ ಇದ್ದರು.
ಇವರೆಲ್ಲರಿಗೆ ಸವಾರಿಮಾಡುವದಕ್ಕೋಸ್ಕರ ಎಪ್ಪತ್ತು
ಕತ್ತೆಗಳಿದ್ದವು. ಪಿರಾತೋನಿನವನೂ ಹಿಲ್ಲೇಲನ
ಮಗನೂ ಆದ ಅಬ್ದೋನನು ಇಸ್ರಾಯೇಲ್ಯರನ್ನು
ಎಂಟು ವರುಷ ಪಾಲಿಸಿದನಂತರ ಮರಣಹೊಂದಿ
ದನು; ಅವನ ಶವವನ್ನು ಎಫ್ರಾಯೀಮ್ ದೇಶದಲ್ಲಿ
ಅಮಾಲೇಕ್ಯರ ಬೆಟ್ಟದ ಮೇಲಿರುವ ಪಿರಾತೋನಿನಲ್ಲಿ
ಸಮಾಧಿಮಾಡಿದರು.

### ಸಂಸೋನನ ಜನನ.

ಇಸ್ರಾಯೇಲ್ಯರು ತಿರಿಗಿ ಯೆಹೋವನ ದೃಷ್ಟಿ 1
ಯಲ್ಲಿ ದ್ರೋಹಿಗಳಾದದರಿಂದ ಆತನು ಅವರನ್ನು
ನಾಲ್ವತ್ತು ವರುಷಗಳ ತನಕ ಫಿಲಿಷ್ಟಿಯರ ಕೈಗೆ ಒಪ್ಪಿ
ಸಿದನು.

ಚೊರ್ಗಾ ಎಂಬ ಊರಲ್ಲಿ ದಾನ್ ಕುಲದವನಾದ
ಮಾನೋಹ ಎಂಬ ಒಬ್ಬ ಮನುಷ್ಯನಿದ್ದನು. ಅವನ
ಹೆಂಡತಿಯು ಬಂಜೆಯಾಗಿದ್ದದರಿಂದ ಅವನಿಗೆ ಮಕ್ಕ

3 ಳಿರಲಿಲ್ಲ. ಒಂದಾನೊಂದು ದಿವಸ ಯೆಹೋವನ
ದೂತನು ಆಕೆಗೆ ಪ್ರತ್ಯಕ್ಷನಾಗಿ—ಇಗೋ, ಬಂಜೆ
ಯಾಗಿ ಮಕ್ಕಳಿಲ್ಲದಿರುವ ನೀನು ಗರ್ಭವತಿಯಾಗಿ
4 ಮಗನನ್ನು ಹೆರುವಿ. ಆದದರಿಂದ ಜಾಗರೂಕತೆ
ಯಿಂದಿರು; ದ್ರಾಕ್ಷಾರಸವನ್ನಾಗಲಿ ಬೇರೆ ಯಾವ
ಮದ್ಯವನ್ನಾಗಲಿ ಕುಡಿಯದಿರು; ಯಾವ ನಿಷಿದ್ಧ
5 ಪದಾರ್ಥವನ್ನೂ ಊಟಮಾಡದಿರು. ನೀನು ಗರ್ಭ
ವತಿಯಾಗಿ ಹೆರುವ ಮಗನ ತಲೆಯ ಮೇಲೆ ಕ್ಷೌರದ
ಕತ್ತಿಯನ್ನು ಉಪಯೋಗಿಸಲೇ ಬಾರದು; ಅವನು
ಹುಟ್ಟಿದಂದಿನಿಂದ ದೇವರಿಗೆ 1)ಪ್ರತಿಷ್ಠಿತನಾಗಿರುವನು;
ಇಸ್ರಾಯೇಲ್ಯರನ್ನು ಫಿಲಿಷ್ಟಿಯರ ಕೈಯಿಂದ ಬಿಡಿಸು
6 ವದಕ್ಕೆ ಪ್ರಾರಂಭಿಸುವನು ಅಂದನು. ತರುವಾಯ
ಆ ಸ್ತ್ರೀಯು ತನ್ನ ಗಂಡನ ಬಳಿಗೆ ಹೋಗಿ—ಒಬ್ಬ
ದೇವಪುರುಷನು ನನ್ನ ಹತ್ತಿರ ಬಂದಿದ್ದನು. ಅವನ
ರೂಪವು ದೇವದೂತನ ರೂಪದಂತಿದ್ದು ಭಯಂಕರ
ನಾಗಿದ್ದನು. ನೀನು ಎಲ್ಲಿಂದ ಬಂದಿ ಎಂದು ನಾನು
ಅವನನ್ನು ಕೇಳಲಿಲ್ಲ; ಅವನೂ ತನ್ನ ಹೆಸರನ್ನು ತಿಳಿಸ
7 ಲಿಲ್ಲ. ಆದರೆ ನನಗೆ—ನೀನು ಗರ್ಭವತಿಯಾಗಿ
ಮಗನನ್ನು ಹೆರುವಿ; ಆದದರಿಂದ ನೀನು ದ್ರಾಕ್ಷಾರಸ
ವನ್ನಾಗಲಿ ಬೇರೆ ಯಾವ ಮದ್ಯವನ್ನಾಗಲಿ ಕುಡಿಯ
ದಿರು, ಯಾವ ನಿಷಿದ್ಧಾಹಾರವನ್ನೂ ಮುಟ್ಟಬೇಡ:
ಆ ಹುಡುಗನು ಹುಟ್ಟಿದಂದಿನಿಂದ ಸಾಯುವ ವರೆಗೆ
ದೇವರಿಗೆ ಪ್ರತಿಷ್ಠಿತನಾಗಿರುವನು ಎಂದು ಹೇಳಿದನು
ಅಂದಳು.

8 ಮಾನೋಹನು ಇದನ್ನು ಕೇಳಿ ಯೆಹೋವನಿಗೆ—
ಸ್ವಾಮೀ, ದಯವಿರಲಿ, ನೀನು ಕಳುಹಿಸಿದ ದೇವ
ಪುರುಷನು ಇನ್ನೊಂದು ಸಾರಿ ನಮ್ಮ ಬಳಿಗೆ ಬಂದು
ಹುಟ್ಟಲಿಕ್ಕಿರುವ ಮಗುವಿಗೋಸ್ಕರ ಮಾಡಬೇಕಾದ
ದ್ದನ್ನು ನಮಗೆ ಬೋಧಿಸಲಿ ಎಂದು ಬೇಡಿಕೊಳ್ಳಲು
9 ದೇವರು ಅವನ ಮೊರೆಯನ್ನು ಕೇಳಿದನು; ಆ ಸ್ತ್ರೀಯು
ಹೊಲದಲ್ಲಿ ಕೂತಿರುವಾಗ ದೇವದೂತನು ತಿರಿಗಿ
ಬಂದನು. ಆಕೆಯ ಗಂಡನಾದ ಮಾನೋಹನು
10 ಅಲ್ಲಿರಲಿಲ್ಲ. ಆದದರಿಂದ ಆಕೆಯು ಬೇಗನೆ ಗಂಡನ
ಬಳಿಗೆ ಹೋಗಿ—ಮೊನ್ನೆ ನನಗೆ ಪ್ರತ್ಯಕ್ಷನಾದ ಪುರು
11 ಷನು ತಿರಿಗಿ ಬಂದಿದ್ದಾನೆಂದು ತಿಳಿಸಲು ಅವನೆದ್ದು
ಹೆಂಡತಿಯೊಡನೆ ಬಂದು ಆ ಪುರುಷನಿಗೆ—ಮೊನ್ನೆ
ಈಕೆಯೊಡನೆ ಮಾತಾಡಿದವನು ನೀನೋ ಎಂದು
12 ಕೇಳಲು ಅವನು—ಹೌದು, ನಾನೇ ಅಂದನು. ಆಗ
ಮಾನೋಹನು—ನೀನು ಹೇಳಿದ್ದು ನೆರವೇರಿದಾಗ
ನಾವು ಆ ಮಗುವಿಗೋಸ್ಕರ ಮಾಡತಕ್ಕದ್ದೇನು?
ಅವನನ್ನು ಹೇಗೆ ನಡಿಸತಕ್ಕದ್ದು ಎಂದು ಕೇಳಲು
13 ಯೆಹೋವನ ದೂತನು ಮಾನೋಹನಿಗೆ—ನಾನು
ಹೇಳಿದನ್ನೆಲ್ಲಾ ಈಕೆಯು ಜಾಗರೂಕತೆಯಿಂದ ಕೈ
14 ಕೊಳ್ಳಲಿ. ದ್ರಾಕ್ಷಾಫಲವನ್ನು ತಿನ್ನದಿರಲಿ; ದ್ರಾಕ್ಷಾ
ರಸವನ್ನಾಗಲಿ ಬೇರೆ ಯಾವ ಮದ್ಯವನ್ನಾಗಲಿ ಕುಡಿ
ಯದಿರಲಿ; ನಿಷಿದ್ಧಾಹಾರವನ್ನು ಮುಟ್ಟದಿರಲಿ: ಹೀಗೆ
ನಾನು ಆಜ್ಞಾಪಿಸಿದ್ದನ್ನೆಲ್ಲಾ ಕೈಕೊಳ್ಳಲಿ ಅಂದನು.
15 ಮತ್ತು ಮಾನೋಹನು ಯೆಹೋವನ ದೂತನನ್ನು—
ನಾವು ನಿನಗೋಸ್ಕರ ಒಂದು ಹೋತಮರಿಯನ್ನು
ಪಕ್ವಮಾಡಿ ತರುವ ವರೆಗೆ ದಯವಿಟ್ಟು ಇಲ್ಲೇ
ನಿಲ್ಲಬೇಕೆಂದು ಬೇಡಿಕೊಳ್ಳಲು ಅವನು—ನೀನು 16
ನನ್ನನ್ನು ನಿಲ್ಲಿಸಿಕೊಂಡರೂ ನಾನು ನಿನ್ನ ಆಹಾರ
ವನ್ನು ಊಟಮಾಡುವದಿಲ್ಲ; ಯಜ್ಞಮಾಡಬೇಕೆಂದು
ನಿನಗೆ ಮನಸ್ಸಿದ್ದರೆ ಅದನ್ನು ಯೆಹೋವನಿಗೆ
ಸಮರ್ಪಿಸು ಅಂದನು. ಅವನು ಯೆಹೋವನ ದೂತ
ನೆಂಬದು ಮಾನೋಹನಿಗೆ ಗೊತ್ತಿದ್ದಿಲ್ಲ. ಆದದರಿಂದ 17
ಅವನು ಆ ದೂತನನ್ನು—ನೀನು ಹೇಳಿದ್ದು ನೆರವೇರಿ
ದಾಗ ನಿನ್ನನ್ನು ಸನ್ಮಾನಿಸಬೇಕೆಂದಿರುತ್ತೇವೆ, ನಿನ್ನ ಹೆಸ
ರೇನು ಎಂದು ಕೇಳಿದನು. ಯೆಹೋವನ ದೂತನು— 18
ನನ್ನ ಹೆಸರನ್ನು ಕೇಳುವದೇಕೆ? ಅದು ಆಶ್ಚರ್ಯಕರ
ವಾದದ್ದು ಅಂದನು. ಮಾನೋಹನು ಹೋತಮರಿ 19
ಯನ್ನೂ ಧಾನ್ಯದ್ರವ್ಯವನ್ನೂ ತಂದು ಬಂಡೆಯ ಮೇಲಿ
ಟ್ಟು ಯೆಹೋವನಿಗೆ ಸಮರ್ಪಿಸಿದನು. ಮಾನೋಹನೂ
ಅವನ ಹೆಂಡತಿಯೂ ನೋಡುತ್ತಿರುವಾಗಲೇ ಯೆಹೋ
ವನ ದೂತನು ಆಶ್ಚರ್ಯವನ್ನು ನಡಿಸಿದನು. ಏನಂದರೆ 20
ಅವನು ಯಜ್ಞವೇದಿಯಿಂದ ಆಕಾಶಕ್ಕೆ ಹೋಗುತ್ತಿ
ರುವ ಅಗ್ನಿಜ್ವಾಲೆಯೊಳಗೆ ಮೇಲಕ್ಕೇರಿ ಹೋದನು.
ಅವರು ಇದನ್ನು ನೋಡುತ್ತಲೆ ನೆಲದ ಮೇಲೆ ಬೋರಲ
ಬಿದ್ದರು. ಯೆಹೋವನ ದೂತನು ಮಾನೋಹನಿಗೂ 21
ಅವನ ಹೆಂಡತಿಗೂ ತಿರಿಗಿ ಕಾಣಿಸಲಿಲ್ಲ; ಆಗ
ಮಾನೋಹನು ಆತನು ಯೆಹೋವನ ದೂತನೆಂದು
ತಿಳಿದು ತನ್ನ ಹೆಂಡತಿಗೆ—ನಾವು ಸಾಯಬೇಕು. 22
ದೇವರನ್ನು ಕಣ್ಣಾರೆ ಕಂಡೆವಲ್ಲಾ ಅನ್ನಲು ಆಕೆಯು 23
ಅವನಿಗೆ—ಯೆಹೋವನು ನಮ್ಮನ್ನು ಕೊಲ್ಲಬೇಕೆಂದಿ
ದ್ದರೆ ಆತನು ನಮ್ಮ ಕೈಯಿಂದ ಯಜ್ಞವನ್ನೂ ನೈವೇದ್ಯ
ವನ್ನೂ ಸ್ವೀಕರಿಸುತ್ತಿದ್ದಿಲ್ಲ; ಈಗ ಇವುಗಳನ್ನೆಲ್ಲಾ
ನಮಗೆ ತೋರಿಸುತ್ತಿದ್ದಿಲ್ಲ, ಹೇಳುತ್ತಿದ್ದಿಲ್ಲ ಅಂದಳು.

ಆ ಸ್ತ್ರೀಯು ಮಗನನ್ನು ಹೆತ್ತು ಅವನಿಗೆ ಸಂಸೋನ 24
ನೆಂದು ಹೆಸರಿಟ್ಟಳು. ಹುಡುಗನು ದೊಡ್ಡವನಾದನು.
ಯೆಹೋವನ ಆಶೀರ್ವಾದವು ಅವನ ಮೇಲಿತ್ತು.
ಇದಲ್ಲದೆ ಅವನು ಚೊರ್ಗಕ್ಕೂ ಎಷ್ಟಾವೋಲಿಗೂ 25
ಮಧ್ಯದಲ್ಲಿರುವ ದಾನ್‌ಕುಲದ ಪಾಳೆಯದಲ್ಲಿದ್ದಾಗ
ಯೆಹೋವನ ಆತ್ಮವು ಅವನನ್ನು ಪ್ರೇರೇಪಿಸಹತ್ತಿತು.

ಸಂಸೋನನ ವಿವಾಹವೂ ಒಗಟೂ.

14 ಸಂಸೋನನು ಗಟ್ಟಾ ಇಳಿದು ತಿಮ್ನಾ ಊರಿಗೆ
ಹೋಗಿ ಅಲ್ಲಿನ ಫಿಲಿಷ್ಟಿಯರ ಹೆಣ್ಣುಗಳಲ್ಲಿ ಒಬ್ಬ
ಳನ್ನು ನೋಡಿ ತಿರಿಗಿ ತಂದೆತಾಯಿಗಳ ಬಳಿಗೆ ಬಂದು 2
ಅವರಿಗೆ—ನಾನು ತಿಮ್ನಾ ಊರಲ್ಲಿ ಒಬ್ಬ ಫಿಲಿಷ್ಟಿಯ
ಹೆಣ್ಣನ್ನು ನೋಡಿದ್ದೇನೆ; ಆಕೆಯನ್ನು ನನಗೆ ಮದುವೆ
ಮಾಡಿಕೊಡಿರಿ ಎಂದು ಹೇಳಿದನು. ಆಗ ಅವರು 3
ಅವನಿಗೆ—ಸುನ್ನತಿಯಿಲ್ಲದ ಫಿಲಿಷ್ಟಿಯರ ಹೆಣ್ಣನ್ನು
ವರಿಸಬೇಕೆಂದಿರುತ್ತೀ; ನಿನ್ನ ಬಂಧುಗಳಲ್ಲಿಯೂ
ನಮ್ಮ ಎಲ್ಲಾ ಜನರಲ್ಲಿಯೂ ನಿನಗೆ ಹೆಣ್ಣು ಸಿಕ್ಕುವ
ದಿಲ್ಲವೋ ಎಂದು ಕೇಳಲು ಅವನು—ನನಗೋಸ್ಕರ

1) ಮೂಲ: ನಾಜೀರನು.

ಆಕೆಯನ್ನೇ ತೆಗೆದುಕೊಳ್ಳಬೇಕು; ಆಕೆಯನ್ನೇ ಮೆಚ್ಚಿ
4 ಕೊಂಡಿದ್ದೇನೆ ಅಂದನು. ಫಿಲಿಷ್ಟಿಯರ ಕೇಡಿಗೆ ಕಾರಣ
ಹುಡುಕುತ್ತಿದ್ದ ಯೆಹೋವನ ಪ್ರೇರಣೆಯಿಂದಲೇ
ಈ ಸಂಗತಿ ಉಂಟಾಯಿತೆಂಬದು ಅವನ ತಂದೆತಾಯಿ
ಗಳಿಗೆ ಗೊತ್ತಿದ್ದಿಲ್ಲ. ಆ ಕಾಲದಲ್ಲಿ ಫಿಲಿಷ್ಟಿಯರು
ಇಸ್ರಾಯೇಲ್ಯರ ಮೇಲೆ ದೊರೆತನ ನಡಿಸುತ್ತಿದ್ದರು.
5 ಸಂಸೋನನು ತನ್ನ ತಂದೆತಾಯಿಗಳ ಸಹಿತವಾಗಿ
ತಿಮ್ನಾ ಊರಿಗೆ ಹೊರಟು ಅಲ್ಲಿನ ದ್ರಾಕ್ಷೇ ತೋಟಗಳ
ಬಳಿಗೆ ಬಂದಾಗ ಒಂದು ಪ್ರಾಯದ ಸಿಂಹವು ಗರ್ಜ
6 ಸುತ್ತಾ ಅವನೆದುರಿಗೆ ಬಂದಿತು. ಅವನ ಕೈಯಲ್ಲಿ
ಏನೂ ಇಲ್ಲದಿದ್ದರೂ ಯೆಹೋವನ ಆತ್ಮವು ಅವನ
ಮೇಲೆ ಫಕ್ಕನೆ ಬಂದದರಿಂದ ಆ ಸಿಂಹವನ್ನು ಹೋತ
ಮರಿಯನ್ನೋ ಎಂಬಂತೆ ಸೀಳಿಬಿಟ್ಟನು, ಈ ಸಂಗತಿ
7 ಯನ್ನು ತಂದೆತಾಯಿಗಳಿಗೆ ತಿಳಿಸಲಿಲ್ಲ. ಅನಂತರ
ಅವನು ಊರೊಳಗೆ ಹೋಗಿ ಆ ಸ್ತ್ರೀಯನ್ನು ಮಾತಾ
8 ಡಿಸಿ ಆಕೆಯನ್ನು ಮೆಚ್ಚಿಕೊಂಡನು. ಕೆಲವು ದಿವಸ
ಗಳಾದ ಮೇಲೆ ಅವನು ಆಕೆಯನ್ನು ವರಿಸುವದಕ್ಕೋ
ಸ್ಕರ ತಿರಿಗಿ ಆ ಊರಿಗೆ ಹೋಗುತ್ತಿದ್ದಾಗ ದಾರೀ
ಬಿಟ್ಟು ಸಿಂಹದ ಹೆಣವನ್ನು ನೋಡುವದಕ್ಕೆ ಹೋಗಲು
ಅದರ ಒಡಲಲ್ಲಿ ಜೇನುಹುಳಗಳನ್ನೂ ಜೇನನ್ನೂ
9 ಕಂಡು ಆ ಜೇನನ್ನು ಕೈಯಲ್ಲಿ ತೆಗೆದುಕೊಂಡು
ತಿನ್ನುತ್ತಾ ಹೋದನು; ತನ್ನ ತಂದೆತಾಯಿಗಳಿಗೂ
ಕೊಟ್ಟನು; ಅವರು ತಿಂದರು. ಆದರೆ ಅದು ತನಗೆ
ಸಿಂಹದ ಒಡಲಲ್ಲಿ ಸಿಕ್ಕಿತೆಂಬದನ್ನು ಅವರಿಗೆ ತಿಳಿಸಲಿಲ್ಲ.
10 ಸಂಸೋನನ ತಂದೆಯು ಹೆಣ್ಣಿನ ಮನೆಗೆ ಬಂದ
ಮೇಲೆ ಸಂಸೋನನು ಯೌವನಸ್ಥರ ಪದ್ಧತಿಯ
ಪ್ರಕಾರ ಅಲ್ಲಿ ಔತಣವನ್ನು ಸಿದ್ಧಮಾಡಿಸಿದನು.
11 ಅವರು ಅವನನ್ನು ನೋಡಿದಾಗ ತಮ್ಮಲ್ಲಿಂದ ಮೂವ
ತ್ತು ಮಂದಿಯನ್ನು ಆರಿಸಿ ಅವನ ಜೊತೆಯಲ್ಲಿರಿಸಿ
12 ದರು. ಸಂಸೋನನು ಇವರಿಗೆ—ನಾನು ನಿಮಗೆ
ಒಂದು ಒಗಟನ್ನು ಹೇಳುತ್ತೇನೆ; ನೀವು ಔತಣದ
ಏಳು ದಿನಗಳಲ್ಲಿಯೇ ಅದನ್ನು ಬಿಚ್ಚಿ ಅದರ ಅರ್ಥ
ವನ್ನು ಹೇಳಿದರೆ ನಿಮಗೆ ಮೂವತ್ತು ದುಪ್ಪಟಿಗಳ
ನ್ನೂ ಮೂವತ್ತು ವಿಶೇಷವಸ್ತ್ರಗಳನ್ನೂ ಕೊಡುವೆನು.
13 ನಿಮ್ಮಿಂದ ಆಗದೆ ಹೋದರೆ ನೀವು ನನಗೆ ಮೂವತ್ತು
ದುಪ್ಪಟಿಗಳನ್ನೂ ಮೂವತ್ತು ವಿಶೇಷವಸ್ತ್ರಗಳನ್ನೂ
ಕೊಡಬೇಕು ಅನ್ನಲು ಅವರು ಅವನಿಗೆ—ನಿನ್ನ ಒಗ
ಟನ್ನು ಹೇಳು, ಕೇಳೋಣ ಎಂದು ಹೇಳಿದರು.
14 ಅಗ ಅವನು—

ತಿಂದುಬಿಡುವಂಥದರಿಂದ ತಿನ್ನತಕ್ಕದ್ದು ದೊರಕಿತು;
ಕ್ರೂರವಾದದ್ದರಿಂದ ಮಧುರವಾದದ್ದು ಸಿಕ್ಕಿತು

ಎಂದು ಹೇಳಿದನು. ಮೂರು ದಿನಗಳಾದರೂ ಅವರು
15 ಅದನ್ನು ಬಿಚ್ಚಲಾರದೆ ಹೋದರು. ಅವರು ಏಳನೆಯ
ದಿನದಲ್ಲಿ ಸಂಸೋನನ ಹೆಂಡತಿಗೆ—ನಿನ್ನ ಗಂಡನನ್ನು
ಮರುಳುಗೊಳಿಸಿ ಅವನಿಂದ ಒಗಟಿನ ಅರ್ಥವನ್ನು
ತಿಳಿದುಕೋ; ಇಲ್ಲವಾದರೆ ನಾವು ನಿನ್ನನ್ನೂ ನಿನ್ನ
ತಂದೆಯ ಮನೆಯವರನ್ನೂ ಬೆಂಕಿಯಿಂದ ಸುಟ್ಟು
ಬಿಡುವೆವು, ನಮಗಿರುವದೆಲ್ಲವನ್ನೂ ಕಸಕೊಳ್ಳು
ವದಕ್ಕೆ ನಮ್ಮನ್ನು ಇಲ್ಲಿಗೆ ಕರಿಸಿದಿರೋ ಅಂದರು.
16 ಆಕೆಯು ಸಂಸೋನನ ಮುಂದೆ ಅಳುತ್ತಾ—ನೀನು
ನನ್ನನ್ನು ಪ್ರೀತಿಸುವದಿಲ್ಲ, ದ್ವೇಷಿಸುತ್ತೀಯಷ್ಟೆ; ನನ್ನ
ಜನರಿಗೆ ಒಗಟನ್ನು ಹೇಳಿದ್ದೀ, ಅದರ ಅರ್ಥವನ್ನು
ನನಗೆ ತಿಳಿಸಲಿಲ್ಲವಲ್ಲಾ ಎಂದು ತೊಂದರೆಪಡಿಸಿದಳು
ಅವನು ಆಕೆಗೆ—ಅದನ್ನು ನನ್ನ ತಂದೆತಾಯಿಗಳಿ
ಹೇಳಲಿಲ್ಲ; ನಿನಗೆ ಹೇಳುವೆನೋ ಎಂದು ಉತ್ತ
ಕೊಟ್ಟನು. ಆಕೆಯು ಔತಣದ ಏಳು ದಿನಗ
ಲ್ಲಿಯೂ ಅವನ ಮುಂದೆ ಅಳುತ್ತಿದ್ದಳು. ಏಳನೆಯ
ದಿನದಲ್ಲಿ ಆಕೆಯು ಬಹಳವಾಗಿ ಪೀಡಿಸಿದ್ದರಿಂ
ಅವನು ಹೇಳಿಬಿಟ್ಟನು. ಆಕೆಯು ಒಗಟಿನ ಅರ್ಥ
ವನ್ನು ತನ್ನ ಜನರಿಗೆ ತಿಳಿಸಿದಳು. ಅವರು ಏಳನೆಯ
ದಿನ ಸೂರ್ಯಾಸ್ತಮಾನಕ್ಕೆ ಮೊದಲು ಅವನಿಗೆ—

ಜೇನಿಗಿಂತ ಸಿಹಿಯಾದದ್ದು ಯಾವದು?
ಸಿಂಹಕ್ಕಿಂತ ಕ್ರೂರವಾದದಾವದು

ಎಂದು ಹೇಳಲು ಅವನು—

ನೀವು ನನ್ನ ಕಡಸಿನಿಂದ ಉಳದಿದ್ದರೆ
ಒಗಟನ್ನು ಬಿಚ್ಚುವದು ನಿಮ್ಮಿಂದಾಗುತ್ತಿರಲಿ

ಅಂದನು. ಯೆಹೋವನ ಆತ್ಮವು ಫಕ್ಕನೆ ಅವ
ಮೇಲೆ ಬಂದಿತು; ಅವನು ಅಷ್ಕಲೋನಿಗೆ ಹೋ
ಅಲ್ಲಿನ ಮೂವತ್ತು ಮಂದಿಯನ್ನು ಹೊಡೆದು ಅವ
ವಸ್ತ್ರಗಳನ್ನು ಸುಲುಕೊಂಡು ಒಗಟನ್ನು ಬಿಚ್ಚಿದವರಿ
ತಂದುಕೊಟ್ಟನು. ಮತ್ತು ರೇಗಿದವನಾಗಿ ತನ
ತಂದೆಯ ಮನೆಗೆ ಹೋದನು. ಇತ್ತ ಸಂಸೋನ
ಹೆಂಡತಿಯನ್ನು ಆ [ಮೂವತ್ತು] ಮಂದಿಯಲ್ಲಿ ಅವನಿ
ಸ್ನೇಹಿತನಾಗಿದ್ದವನಿಗೆ ಮದುವೆಮಾಡಿಕೊಟ್ಟರು.

### ಸಂಸೋನನು ಫಿಲಿಷ್ಟಿಯರ ಪೈರನ್ನು ಹಾಳುಮಾಡಿದ್ದು.

ಕೆಲವು ದಿನಗಳಾದ ಮೇಲೆ ಗೋದಿಯ ಸುಗ್ಗಿ
ಯಲ್ಲಿ ಸಂಸೋನನು ಒಂದು ಹೋತಮರಿಯನ್ನು
ತೆಗೆದುಕೊಂಡು ತನ್ನ ಹೆಂಡತಿಯನ್ನು ನೋಡುವ
ಕ್ಕೋಸ್ಕರ ಹೊರಟುಹೋಗಿ ಆಕೆಯ ತಂದೆಗೆ—
ನನ್ನನ್ನು ನನ್ನ ಹೆಂಡತಿಯ ಹತ್ತಿರ ಒಳಗಿನ ಕೋ
ಣೆಗೆ ಹೋಗಗೊಡಿಸು ಅನ್ನಲು ಅವನು—ಹೋ
ಬಾರದು; ನೀನು ನಿಜವಾಗಿ ಆಕೆಯನ್ನು ಹ
ಮಾಡುತ್ತೀಯೆಂದು ನಿನ್ನ ಗೆಳೆಯರಲ್ಲೊಬ್ಬನಿ
ಮದುವೆಮಾಡಿಕೊಟ್ಟೆನು. ಆಕೆಯ ತಂಗಿಯು ಆ
ಗಿಂತ ಸುಂದರಿಯಾಗಿದ್ದಾಳಲ್ಲಾ; ಆಕೆಯು ನಿ
ಗಿರಲಿ ಅಂದನು. ಆಗ ಸಂಸೋನನು—ಈ ಸಾ
ನಾನು ಫಿಲಿಷ್ಟಿಯರಿಗೆ ಕೇಡುಮಾಡುವದಾದರೆ ತ
ನನ್ನದಲ್ಲ ಎಂದಂದುಕೊಂಡು ಹೋಗಿ ಮುನ್ನೂರ
ನರಿಗಳನ್ನು ಹಿಡಿದು ಬಾಲಕ್ಕೆ ಬಾಲವನ್ನು ಸೇರಿ
ಕಟ್ಟಿ ಅವುಗಳ ನಡುವೆ ಒಂದೊಂದು ಪಂಜನ್ನು ಸಿಕ್ಕ
ಪಂಜುಗಳಿಗೆ ಬೆಂಕಿಹೊತ್ತಿಸಿ ಆ ನರಿಗಳನ್ನು ಫಿಲಿ
ಯರ ಪೈರುಗಳಲ್ಲಿ ಬಿಟ್ಟು ಅವರ ತೆನೆಗೂಡುಗಳನ್ನು
ಇನ್ನೂ ಕೊಯ್ಯದೆ ಇದ್ದ ಪೈರುಗಳನ್ನೂ ಎಣ್ಣೆಯ
ಮರಗಳ ತೋಟಗಳನ್ನೂ ಸುಟ್ಟುಬಿಟ್ಟನು. ಫಿಲಿ
ಯರು ಇದನ್ನು ಮಾಡಿದವರಾರೆಂದು ವಿಚಾರಿಸುವ
ತಿಮ್ನಾ ಊರಿನವನ ಅಳಿಯನಾದ ಸಂಸೋನನೆಂ
ಗೊತ್ತಾಯಿತು. ಅವನ ಮಾವನು ಅವನ ಹೆಂ
ಯನ್ನು ಬೇರೊಬ್ಬನಿಗೆ ಕೊಟ್ಟುಬಿಟ್ಟದ್ದೇ ಇದ

ಕಾರಣವೆಂದು ಅವರು ತಿಳಿದು ಬಂದು ಆಕೆಯನ್ನೂ
7 ಆಕೆಯ ತಂದೆಯನ್ನೂ ಸುಟ್ಟುಬಿಟ್ಟರು. ಸಂಸೋ
ನನು ಅವರಿಗೆ—ನೀವು ಹೀಗೆ ಮಾಡಿದ್ದರಿಂದ ನಾನು
ನಿಮಗೆ ಮುಯ್ಯಿತೀರಿಸದೆ ಬಿಡುವದಿಲ್ಲ ಎಂದು ಹೇಳಿ
8 ಅವರ ತೊಡೆ ಸೊಂಟಗಳನ್ನು ಮುರಿದು ಅವರನ್ನು
ಸಂಹರಿಸಿ ತಾನು ಹೋಗಿ ಏಟಾಮ್ ಗಿರಿಯ ಗುಹೆ
ಯಲ್ಲಿ ವಾಸಮಾಡಿದನು.

ಸಂಸೋನನು ಲೆಹೀಯಲ್ಲಿ ಸಾವಿರ ಮಂದಿ ಫಿಲಿಷ್ಟಿಯರನ್ನು ಹೊಡೆದದ್ದು.

9 ಆಗ ಫಿಲಿಷ್ಟಿಯರು ಹೊರಟು ಯೆಹೂದಾ ಪ್ರಾಂತ
ದ 1)ಲೆಹೀ ಎಂಬಲ್ಲಿಗೆ ಹೋಗಿ ಪಾಳೆಯಮಾಡಿ
10 ಕೊಂಡರು. ನೀವು ನಮಗೆ ವಿರೋಧವಾಗಿ ಯುದ್ಧಕ್ಕೆ
ಬಂದದ್ದೇಕೆ ಎಂದು ಯೆಹೂದ್ಯರು ಅವರನ್ನು ಕೇಳಲು
ಅವರು—ಸಂಸೋನನನ್ನು ಹಿಡಿದು ಕಟ್ಟಿ ಅವನು
ನಮಗೆ ಮಾಡಿದಂತೆಯೇ ಅವನಿಗೂ ಮಾಡಬೇಕೆಂದು
11 ಬಂದೆವು ಎಂದು ಉತ್ತರಕೊಟ್ಟರು. ಮೂರು ಸಾವಿರ
ಮಂದಿ ಯೆಹೂದ್ಯರು ಏಟಾಮ್ ಗಿರಿಗೆ ಹೋಗಿ
ಸಂಸೋನನಿಗೆ—ಫಿಲಿಷ್ಟಿಯರು ನಮ್ಮ ಮೇಲೆ ದೊರೆ
ತನಮಾಡುತ್ತಿದ್ದಾರೆಂಬದು ನಿನಗೆ ಗೊತ್ತಿಲ್ಲವೋ?
ಹೀಗೆ ಯಾಕೆ ಮಾಡಿದಿ ಎಂದು ಕೇಳಲು ಅವನು—
ಅವರು ನನಗೆ ಮಾಡಿದಂತೆಯೇ ನಾನು ಅವರಿಗೆ
12 ಮಾಡಿದ್ದೇನೆ ಅಂದನು. ಅವರು—ನಾವು ನಿನ್ನನ್ನು
ಕಟ್ಟಿ ಫಿಲಿಷ್ಟಿಯರ ಕೈಗೆ ಒಪ್ಪಿಸಬೇಕೆಂದು ಬಂದಿ
ದ್ದೇವೆ ಅನ್ನಲು ಸಂಸೋನನು—ಹಾಗಾದರೆ ನೀವು
ನನ್ನನ್ನು ಕೊಲ್ಲುವದಿಲ್ಲವೆಂದು ಆಣೆಮಾಡಿರಿ ಎಂದನು.
13 ಅದಕ್ಕೆ ಅವರು—ನಾವು ಸತ್ಯವಾಗಿ ನಿನ್ನನ್ನು ಕೊಲ್ಲು
ವದಿಲ್ಲ; ನಿನ್ನನ್ನು ಕಟ್ಟಿ ಫಿಲಿಷ್ಟಿಯರ ಕೈಗೆ ಒಪ್ಪಿಸು
ತ್ತೇವೆ ಎಂದು ಹೇಳಿ ಅವನನ್ನು ಎರಡು ಹೊಸ
ಹಗ್ಗಗಳಿಂದ ಕಟ್ಟಿ ಗಿರಿಯಿಂದ ತಂದರು.
14 ಸಂಸೋನನು ಲೆಹೀಯ ಸಮೀಪಕ್ಕೆ ಬರಲು ಫಿಲಿ
ಷ್ಟಿಯರು ಅವನನ್ನು ಕಂಡು ಆರ್ಭಟಿಸಿದರು.
ಯೆಹೋವನ ಆತ್ಮವು ಅವನ ಮೇಲೆ ಬಂದದರಿಂದ
ಅವನ ರಟ್ಟೆಗಳಿಗೆ ಸುತ್ತಲೂ ಕಟ್ಟಿದ್ದ ಹಗ್ಗಗಳು ಸುಟ್ಟ
ಸಣಬಿನ ಹಾಗಾದವು; ಕೈಗೆ ಹಾಕಿದ ಬೇಡಿಗಳು
15 ಕಳಚಿ ಬಿದ್ದವು. ಅಲ್ಲಿ ಒಂದು ಕತ್ತೆಯ ದವಡೇ
ಎಲುಬು ಬಿದ್ದಿತ್ತು. ಅದು ಇನ್ನೂ ಹಸಿ ಇತ್ತು.
ಅವನು ಅದನ್ನು ತೆಗೆದುಕೊಂಡು ಅದರಿಂದ ಸಾವಿರ
ಜನರನ್ನು ಹತಿಸಿಬಿಟ್ಟು—
16 ಕತ್ತೆಯ ದವಡೇ ಎಲುಬಿನಿಂದ ಸಾವಿರ ಜನ
ರನ್ನು ವಧಿಸಿದೆನು;
ಕತ್ತೆಯ ದವಡೇ ಎಲುಬಿನಿಂದ ಹೆಣಗಳನ್ನು
ರಾಶಿರಾಶಿಯಾಗಿ ಬೀಳಿಸಿದೆನು
17 ಎಂದು ಹೇಳಿ ತನ್ನ ಕೈಯಲ್ಲಿದ್ದ ಎಲುಬನ್ನು ಬೀಸಾಡಿ
ದನು. ಆ ಸ್ಥಳಕ್ಕೆ 2)ರಾಮತ್ ಲೆಹೀ ಎಂದು ಹೆಸ
ರಾಯಿತು.
18 ಮತ್ತು ಅವನು ಬಹಳ ದಾಹವುಳ್ಳವನಾಗಿ ಯೆಹೋ
ವನಿಗೆ—ನೀನು ನಿನ್ನ ಸೇವಕನ ಮೂಲಕವಾಗಿ ಈ
ಮಹಾಜಯವನ್ನುಂಟುಮಾಡಿದ ಮೇಲೆ ನಾನು ದಾಹ
ದಿಂದ ಸತ್ತು ಸುನ್ನತಿಯಿಲ್ಲದವರ ಕೈಯಲ್ಲಿ ಬೀಳ
ಬೇಕೋ ಎಂದು ಮೊರೆಯಿಡಲು ಆತನು ಲೆಹೀ 19
ಯಲ್ಲಿ ಒರಳಬಂಡೆಯನ್ನು ಸೀಳಿ ಅದರೊಳಗಿಂದ ನೀರು
ಬರುವಂತೆ ಮಾಡಲು ಅವನು ಕುಡಿದು ಪುನಃ ಚೈತನ್ಯ
ಹೊಂದಿದನು. ಆದದರಿಂದ ಅದಕ್ಕೆ 3)ಏನ್ ಹಕ್ಕೋರೇ
ಎಂದು ಹೆಸರಾಯಿತು; ಅದು ಇಂದಿನ ವರೆಗೂ ಲೆಹೀ
ಯಲ್ಲಿರುತ್ತದೆ. ಫಿಲಿಷ್ಟಿಯರ ಪ್ರಾಬಲ್ಯದಲ್ಲಿ ಸಂಸೋ 20
ನನು ಇಸ್ರಾಯೇಲ್ಯರನ್ನು ಇಪ್ಪತ್ತು ವರುಷಗಳ ವರೆಗೆ
ಪಾಲಿಸಿದನು.

ಗಾಜಾ ಎಂಬಲ್ಲಿ ಸಂಸೋನನು ತೋರಿಸಿದ ಪರಾಕ್ರಮ.

16
ತರುವಾಯ ಸಂಸೋನನು ಗಾಜಕ್ಕೆ ಹೋಗಿ ಅಲ್ಲಿ
ಒಬ್ಬ ಸೂಳೆಯನ್ನು ಕಂಡು ಅವಳ ಬಳಿಗೆ ಹೋದ
ನು. ಸಂಸೋನನು ಬಂದಿರುವದು ಗಾಜದವರಿಗೆ 2
ಗೊತ್ತಾಗಲು ಅವರು ಬಂದು ಅವನನ್ನು ಸುತ್ತಿ
ಕೊಂಡರು; ಸೂರ್ಯೋದಯವಾಗುತ್ತಲೆ ಅವನನ್ನು
ಕೊಂದುಹಾಕೋಣ ಎಂದುಕೊಂಡು ರಾತ್ರಿಯೆಲ್ಲಾ
ಊರಬಾಗಲಲ್ಲಿ ಹೊಂಚಿನೋಡುತ್ತಾ ಸುಮ್ಮನಿದ್ದರು.
ಸಂಸೋನನು ಮಲಗಿ ಮಧ್ಯರಾತ್ರಿಯಲ್ಲೆದ್ದು ಊರು 3
ಬಾಗಲಿನ ಕದಗಳನ್ನೂ ಅದರ ಎರಡು ನಿಲುವು
ಪಟ್ಟಿಗಳನ್ನೂ ಅಗುಳಿಗಳನ್ನೂ ಕಿತ್ತು ಹೆಗಲ ಮೇಲೆ
ಹೊತ್ತುಕೊಂಡು ಹೋಗಿ ಹೆಬ್ರೋನಿನ ಎದುರಿಗಿರುವ
ಪರ್ವತದ ಶಿಖರದ ಮೇಲೆ ಇಟ್ಟನು.

ಸಂಸೋನನು ದೆಲೀಲಳಿಂದ ಹಾಳಾದದ್ದು.

ಆನಂತರ ಸಂಸೋನನು ಸೋರೇಕ್ ತಗ್ಗಿನಲ್ಲಿ ವಾಸ 4
ವಾಗಿದ್ದ ದೆಲೀಲಾ ಎಂಬ ಹೆಸರುಳ್ಳ ಒಬ್ಬ ಸ್ತ್ರೀಯಲ್ಲಿ
ಮೋಹಿತನಾದನು. ಫಿಲಿಷ್ಟಿಯ ಪ್ರಭುಗಳು ಅವಳ 5
ಬಳಿಗೆ ಹೋಗಿ ಅವಳಿಗೆ—ನೀನು ಅವನನ್ನು ಮರುಳು
ಗೊಳಿಸಿ ಅವನ ಮಹಾಶಕ್ತಿಯ ಮೂಲ ಯಾವದೆಂಬ
ದನ್ನೂ ನಾವು ಅವನನ್ನು ಗೆದ್ದು ಕಟ್ಟಿ ಕುಂದಿಸು
ವದು ಹೇಗೆಂಬದನ್ನೂ ಗೊತ್ತುಮಾಡಿಕೊಂಡು ನಮಗೆ
ತಿಳಿಸು; ನಮ್ಮಲ್ಲಿ ಪ್ರತಿಯೊಬ್ಬನೂ ನಿನಗೆ ಸಾವಿರದ
ನೂರು ರೂಪಾಯಿ ಕೊಡುವೆವು ಎಂದು ಹೇಳಿದರು.
ದೆಲೀಲಳು ಸಂಸೋನನಿಗೆ—ನಿನಗೆ ಇಂಥ ಮಹಾ 6
ಶಕ್ತಿ ಹೇಗೆ ಬಂದಿತು? ನಿನ್ನನ್ನು ಕಟ್ಟಿ ಕುಂದಿಸು
ವದು ಹೇಗೆ ಎಂಬದನ್ನು ದಯವಿಟ್ಟು ನನಗೆ ತಿಳಿಸು
ಅನ್ನಲು ಅವನು—ಕರುಳಿನ ಏಳು ಹಸೀ ತಂತಿ 7
ಗಳಿಂದ ನನ್ನನ್ನು ಕಟ್ಟಿದರೆ ನಾನು ಬಲಹೀನನಾಗಿ
ಬೇರೆ ಮನುಷ್ಯನಂತಾಗುವೆನು ಎಂದು ಹೇಳಿದನು.
ಫಿಲಿಷ್ಟಿಯ ಪ್ರಭುಗಳು ಅಂಥ ಏಳು ಹಸೀ ತಂತಿ 8
ಗಳನ್ನು ಅವಳಿಗೆ ತಂದುಕೊಟ್ಟರು. ಅವಳು ಒಳಗಿನ 9
ಕೋಣೆಯಲ್ಲಿ ಹೊಂಚುಗಾರರನ್ನಿಟ್ಟು ಅವುಗಳಿಂದ
ಅವನನ್ನು ಕಟ್ಟಿ—ಸಂಸೋನನೇ, ನಿನ್ನ ಮೇಲೆ ಫಿಲಿ

1) ಅಂದರೆ ದವಡೆ. 2) ಅಂದರೆ ದವಡೆಯ ಗುಡ್ಡ. 3) ಅಂದರೆ ಮೊರೆಯಿಡುವವನ ಬುಗ್ಗೆ.

ಷ್ಟಿಯರು ಬಂದರು ಎಂದು ಕೂಗಿದಳು. ಅವನು
ಬೆಂಕಿತಗುಲಿದ ಸಣಬಿನ ದಾರವನ್ನೋ ಎಂಬಂತೆ ಆ
ತಂತಿಗಳನ್ನು ಹರಿದುಬಿಟ್ಟನು; ಹೀಗೆ ಅವನ ಶಕ್ತಿಯ
ರಹಸ್ಯವು ತಿಳಿಯದೆ ಹೋಯಿತು.
10 ದೆಲೀಲಳು ತಿರಿಗಿ ಸಂಸೋನನಿಗೆ—ನೀನು ನನ್ನ
ನ್ನು ವಂಚಿಸಿದಿ; ಸುಳ್ಳಾಡಿದಿ; ನಿನ್ನನ್ನು ಯಾವದರಿಂದ
ಕಟ್ಟಬಹುದೆಂಬದನ್ನು ದಯವಿಟ್ಟು ನನಗೆ ತಿಳಿಸು
11 ಎಂದಳು. ಅವನು ಆವಳಿಗೆ—ಯಾವದಕ್ಕೂ ಉಪ
ಯೋಗಿಸದ ಹೊಸ ಹಗ್ಗಗಳಿಂದ ನನ್ನನ್ನು ಕಟ್ಟಿದರೆ
ನಾನು ಬಲಹೀನನಾಗಿ ಬೇರೆ ಮನುಷ್ಯರಂತಾಗುವೆನು
12 ಅಂದನು. ಅವಳು ಒಳಗಿನ ಕೋಣೆಯಲ್ಲಿ ಹೊಂಚು
ಗಾರರನ್ನಿರಿಸಿ ಹೊಸ ಹಗ್ಗಗಳನ್ನು ತೆಗೆದುಕೊಂಡು
ಅವುಗಳಿಂದ ಅವನನ್ನು ಕಟ್ಟಿ—ಸಂಸೋನನೇ, ಫಿಲಿಷ್ಟಿ
ಯರು ಬಂದಿದ್ದಾರೆಂದು ಕೂಗಲು ಅವನೆದ್ದು ತೋಳು
ಗಳಿಗೆ ಕಟ್ಟಿದ್ದ ಹಗ್ಗಗಳನ್ನು ದಾರವನ್ನೋ ಎಂಬಂತೆ
ಹರಿದುಬಿಟ್ಟನು.
13 ಆಗ ದೆಲೀಲಳು ಸಂಸೋನನಿಗೆ—ನೀನು ತಿರಿಗಿ
ನನ್ನನ್ನು ವಂಚಿಸಿದಿ; ಸುಳ್ಳಾಡಿದಿ; ನಿನ್ನನ್ನು ಯಾವ
ದರಿಂದ ಕಟ್ಟಬಹುದೆಂದು ತಿಳಿಸು ಅನ್ನಲು ಅವನು—
ನನ್ನ ತಲೇಕೂದಲಿನ ಏಳು ಜಡೆಗಳನ್ನು ಮಗ್ಗದಲ್ಲಿ
14 ನೇಯಿದರೆ ಸಾಕು ಎಂದು ಹೇಳಿದನು. ಅವಳು
ಅವನ ತಲೇಕೂದಲಿನ ಏಳು ಜಡೆಗಳನ್ನು ಗೂಟಕ್ಕೆ
ಭದ್ರಮಾಡಿ—ಸಂಸೋನನೇ, ಫಿಲಿಷ್ಟಿಯರು ಬಂದಿ
ದ್ದಾರೆ ಎಂದು ಕೂಗಿದಳು. ಅವನು ನಿದ್ರೆಯಿಂದ
ಎಚ್ಚತ್ತು ಮಗ್ಗವನ್ನೂ ಮಗ್ಗದ ಗೂಟವನ್ನೂ ಕಿತ್ತು
ಕೊಂಡು ಹೋದನು.
15 ಆಕೆಯು ತಿರಿಗಿ ಅವನಿಗೆ—ನಿನ್ನನ್ನು ಪ್ರೀತಿಸು
ತ್ತೇನೆಂದು ನೀನು ನನಗೆ ಹೇಗೆ ಹೇಳಬಹುದು?
ನಿನ್ನ ಮನಸ್ಸು ನನ್ನ ಮೇಲೆ ಇಲ್ಲವಲ್ಲಾ; ಮೂರು
ಸಾರಿ ನನ್ನನ್ನು ವಂಚಿಸಿದಿ. ನಿನಗೆ ಇಂಥ ಮಹಾ
ಶಕ್ತಿ ಯಾವದರಿಂದ ಬಂದಿತೆಂಬದನ್ನು ನನಗೆ ತಿಳಿಸ
16 ಲಿಲ್ಲ ಅಂದಳು. ಇದಲ್ಲದೆ ಆವಳು ಅವನನ್ನು ದಿನ
ದಿನವೂ ಮಾತಿನಿಂದ ಪೀಡಿಸಿದ್ದರಿಂದ ಅವನಿಗೆ
ಸಾಯುವದು ಒಳ್ಳೇದನ್ನುವಷ್ಟು ಬೇಸರವಾಯಿತು.
17 ಮತ್ತು ಅವನು—ಕ್ಷೌರಕತ್ತಿಯು ನನ್ನ ತಲೆಯ
ಮೇಲೆ ಬಂದದ್ದಿಲ್ಲ; ನಾನು ಮಾತೃಗರ್ಭ ಬಿಟ್ಟಂದಿ
ನಿಂದಲೇ ದೇವರಿಗೆ [1]ಪ್ರತಿಷ್ಠಿತನಾದವನು. ನನ್ನ ತಲೆ
ಯನ್ನು ಕ್ಷೌರಮಾಡುವದಾದರೆ ನನ್ನ ಶಕ್ತಿಯು
ಹೋಗುವದು; ಮತ್ತು ನಾನು ಬಲಹೀನನಾಗಿ ಬೇರೆ
ಮನುಷ್ಯನಂತಾಗುವೆನು ಎಂದು ತನ್ನ ಗುಟ್ಟನ್ನೆಲ್ಲಾ
18 ಆಕೆಯ ಮುಂದೆ ಬಿಚ್ಚಿಹೇಳಿದನು. ಅವನು ಇದ್ದ
ದ್ದನ್ನು ಇದ್ದ ಹಾಗೆಯೇ ಹೇಳಿದನೆಂದು ದೆಲೀಲಳು
ತಿಳಿದು ಫಿಲಿಷ್ಟಿಯ ಪ್ರಭುಗಳ ಬಳಿಗೆ ದೂತರನ್ನು
ಕಳುಹಿಸಿ ಅವರಿಗೆ—ಇದೊಂದು ಸಾರಿ ಬನ್ನಿರಿ
ಅವನು ನನಗೆ ತನ್ನ ಹೃದಯವನ್ನೆಲ್ಲಾ ತಿಳಿಸಿದ್ದಾನೆ
ಎಂದು ಹೇಳಿಸಿ ಕರಿಸಿದಳು. ಅವರು ಹಣವನ್ನು
19 ತೆಗೆದುಕೊಂಡು ಆಕೆಯ ಬಳಿಗೆ ಬಂದರು. ಆಕೆಯು
ಸಂಸೋನನನ್ನು ತನ್ನ ತೊಡೆಯ ಮೇಲೆ ಮಲಗಿಸಿ
ಕೊಂಡು ಅವನಿಗೆ ನಿದ್ರೆಹತ್ತಿದಾಗ ಒಬ್ಬ ಮನುಷ್ಯ
ನಿಂದ ಅವನ ತಲೆಯ ಏಳು ಜಡೆಗಳನ್ನು ಬೋಳಿಸಿ
ಅವನನ್ನು ದುರ್ಬಲಪಡಿಸಿದಳು. ಅವನ ಶಕ್ತಿಯು
ಹೋಯಿತು, ಆಗ ಆವಳು—ಸಂಸೋನನೇ, ಫಿಲಿಷ್ಟಿ
ಯರು ಬಂದಿದ್ದಾರೆಂದು ಕೂಗಲು ಆವನು ಎಚ್ಚ
ತ್ತು—ಮುಂಚಿನಂತೆ ಈಗಲೂ ಕೊಸರಿಕೊಂಡು ಹೋ
ಗುವೆನು ಅಂದುಕೊಂಡನು; ಆದರೆ ಯೆಹೋವನು
ತನ್ನನ್ನು ಬಿಟ್ಟುಹೋಗಿದ್ದಾನೆಂಬದು ಅವನಿಗೆ ತಿಳಿಯ
ಲಿಲ್ಲ. ಫಿಲಿಷ್ಟಿಯರು ಅವನನ್ನು ಹಿಡಿದು ಕಣ್ಣುಗ
ಳನ್ನು ಕಿತ್ತು ಗಾಜಕ್ಕೆ ಒಯ್ದು ಕಬ್ಬಿಣದ ಬೇಡಿಗಳನ್ನು
ಹಾಕಿ ಸೆರೆಮನೆಯಲ್ಲಿ ಬೀಸುವದಕ್ಕೆ ಹಚ್ಚಿದರು. ಅಷ್ಟ
ರಲ್ಲಿ ಅವನ ತಲೆಗೂದಲುಗಳು ಬೆಳೆಯ ಹತ್ತಿದವು,

ಸಂಸೋನನ ಮರಣ.

ಶತ್ರುವಾದ ಸಂಸೋನನನ್ನು ತಮ್ಮ ಕೈಗೆ ಒಪ್ಪಿಸಿದ
ತಮ್ಮ ದೇವರಾದ ದಾಗೋನನಿಗೆ ಮಹಾಯಜ್ಞವನ್ನು
ಸಮರ್ಪಿಸಿ ಸಂತೋಷಪಡಬೇಕೆಂದು ಫಿಲಿಷ್ಟಿಯ ಪ್ರಭು
ಗಳು ಕೂಡಿಬಂದರು. ಜನರು ಸಂಸೋನನನ್ನು
ನೋಡಿ—

ನಮ್ಮ ದೇಶವನ್ನು ಹಾಳುಮಾಡಿ ನಮ್ಮಲ್ಲಿ ಅನೇಕ
ರನ್ನು ಕೊಂದುಹಾಕಿದ ಈ ಶತ್ರುವನ್ನು
ನಮ್ಮ ದೇವರು ನಮ್ಮ ಕೈಗೆ ಒಪ್ಪಿಸಿಕೊಟ್ಟಿ
ದ್ದಾನೆ

ಎಂದು ಗಾನಮಾಡಿದರು. ಅವರು ಆನಂದಲಹರಿಯ
ಲ್ಲಿದ್ದಾಗ—ನಮ್ಮ ವಿನೋದಕ್ಕೋಸ್ಕರ ಸಂಸೋನ
ನನ್ನು ಕರಕೊಂಡು ಬನ್ನಿರಿ ಅಂದರು; ಅದರಂತೆಯೇ
ಸಂಸೋನನನ್ನು ಸೆರೆಮನೆಯಿಂದ ಕರಕೊಂಡು ಬಂದ
ರು. ಅವನು ಎರಡು ಸ್ತಂಭಗಳ ನಡುವೆ ನಿಂತು
ವಿನೋದಮಾಡಬೇಕಾಯಿತು. ಆಗ ಸಂಸೋನನು
ತನ್ನನ್ನು ಕೈಹಿಡಿದು ನಡಿಸುವ ಹುಡುಗನಿಗೆ—ನನ್ನ
ಕೈಗಳನ್ನು ಬಿಡು; ನಾನು ಕೈಯಾಡಿಸಿ ಮನೆಗೆ
ಆಧಾರವಾಗಿರುವ ಸ್ತಂಭಗಳನ್ನು ಹುಡುಕಿ ಅವು
ಗಳಿಗೆ ಸ್ವಲ್ಪ ಒರಗಿಕೊಳ್ಳುತ್ತೇನೆ ಅಂದನು. ಆ
ಮನೆಯು ಸ್ತ್ರೀಪುರುಷರಿಂದ ಕಿಕ್ಕಿರಿಯುತ್ತಿತ್ತು. ಫಿಲಿ
ಷ್ಟಿಯರ ಅಧಿಪತಿಗಳೆಲ್ಲರೂ ಅಲ್ಲಿದ್ದರು; ಸಂಸೋನನ
ವಿನೋದವನ್ನು ನೋಡುವದಕ್ಕಾಗಿ ಬಂದವರಲ್ಲಿ
ಸುಮಾರು ಮೂರು ಸಾವಿರ ಮಂದಿ ಸ್ತ್ರೀಪುರುಷರು
ಮಾಳಿಗೆಯ ಮೇಲಿದ್ದರು. ಆಗ ಸಂಸೋನನು
ಯೆಹೋವನಿಗೆ—ಕರ್ತನೇ, ಯೆಹೋವನೇ, ಫಿಲಿಷ್ಟಿ
ಯರು ಕಿತ್ತುಹಾಕಿದ ನನ್ನ ಎರಡೂ ಕಣ್ಣುಗಳಲ್ಲಿ
ಒಂದಕ್ಕೋಸ್ಕರವಾದರೂ ನಾನು ಅವರಿಗೆ ಮುಯ್ಯಿ
ತೀರಿಸುವ ಹಾಗೆ ನನ್ನನ್ನು ಈ ಸಾರಿ ಬಲಪಡಿಸು
ಎಂದು ಮೊರೆಯಿಟ್ಟು ಮನೆಯ ಆಧಾರಸ್ತಂಭಗಳಲ್ಲಿ
ಒಂದನ್ನು ಬಲಗೈಯಿಂದಲೂ ಇನ್ನೊಂದನ್ನು ಎಡಗೈ
ಯಿಂದಲೂ ಹಿಡಿದು ಅವುಗಳನ್ನು ಒತ್ತಿ ನಾನೂ
ಫಿಲಿಷ್ಟಿಯರ ಸಂಗಡ ಸಾಯುವೆನು ಎಂದು ಹೇಳಿ
ಬಲವಾಗಿ ಬಾಗಿಕೊಳ್ಳಲು ಮನೆಯು ಅಧಿಪತಿಗಳ

1) ಮೂಲ: ನಾಜೀರನು.

ಮೇಲೆಯೂ ಅಲ್ಲಿ ಬಂದಿದ್ದ ಎಲ್ಲಾ ಜನರ ಮೇಲೆಯೂ
ಬಿದ್ದಿತು. ಅವನು ಜೀವದಿಂದಿದ್ದಾಗ ಕೊಂದುಹಾಕಿ
ದವರಿಗಿಂತ ಸಾಯುವಾಗ ಕೊಂದವರ ಸಂಖ್ಯೆಯೇ
ಹೆಚ್ಚಿತ್ತು.
31 ಅವನ ಬಂಧುಗಳೂ ತಂದೆಯ ಮನೆಯವರೆಲ್ಲರೂ
ಬಂದು ಅವನ ಶವವನ್ನು ಎತ್ತಿ ತೆಗೆದುಕೊಂಡು
ಹೋಗಿ ಚೊರ್ಗಕ್ಕೂ ಎಷ್ಟಾವೋಲಿಗೂ ಮಧ್ಯದಲ್ಲಿದ್ದ
ಅವನ ತಂದೆಯಾದ ಮಾನೋಹನ ಸಮಾಧಿಯಲ್ಲಿ
ಹೂಣಿಟ್ಟರು. ಅವನು ಇಸ್ರಾಯೇಲ್ಯರನ್ನು ಇಪ್ಪತ್ತು
ವರುಷ ಪಾಲಿಸಿದನು.

### ನ್ಯಾಯಸ್ಥಾಪಕರ ಕಾಲದಲ್ಲಿ ನಡೆದ ಎರಡು ವಿಶೇಷ ಸಂಗತಿಗಳು. 17—21.

#### ಮೀಕನ ಮನೆಯ ವಿಗ್ರಹ.

17 ಎಫ್ರಾಯಿಮ್ ಬೆಟ್ಟದ ಸೀಮೆಯಲ್ಲಿ ಮೀಕ
2 ನೆಂಬೊಬ್ಬ ಮನುಷ್ಯನಿದ್ದನು. ಅವನು ಒಂದಾ
ನೊಂದು ದಿವಸ ತನ್ನ ತಾಯಿಗೆ—ಅಮ್ಮಾ, ಕಳವಾ
ಗಿದ್ದ ನಿನ್ನ ಸಾವಿರದ ನೂರು ರೂಪಾಯಿಗಳಿಗೋಸ್ಕರ
ನೀನು ನನಗೆ ಕೇಳಿಸುವಂತೆ ಶಪಿಸಿದಿಯಲ್ಲಾ; ಇಗೋ,
ಆ ರೂಪಾಯಿಗಳು ನನ್ನ ಹತ್ತಿರ ಇವೆ; ನಾನು
ತೆಗೆದುಕೊಂಡಿದ್ದೆನು ಎಂದು ಹೇಳಲು ಆಕೆಯು—
ನನ್ನ ಮಗನೇ, ಯೆಹೋವನು ನಿನ್ನನ್ನು ಆಶೀರ್ವದಿ
3 ಸಲಿ ಅಂದಳು. ಅವನು ಆ ಸಾವಿರದ ನೂರು ರೂಪಾ
ಯಿಗಳನ್ನು ತನ್ನ ತಾಯಿಗೆ ಹಿಂದಕ್ಕೆ ಕೊಡಲು
ಆಕೆಯು—ನನ್ನ ಮಗನಿಗೆ ಹಿತವಾಗಲೆಂದು ಈ
ಹಣವನ್ನು ಯೆಹೋವನಿಗೆ ಹರಕೆಮಾಡಿದ್ದೇನೆ; ಇದ
ರಿಂದ ಒಂದು ಎರಕದ ವಿಗ್ರಹವನ್ನು ಮಾಡಿಸಿ ನಿನ್ನ
4 ವಶಕ್ಕೆ ಕೊಡುವೆನು ಎಂದು ಹೇಳಿ ಮಗನು ಹಿಂದಕ್ಕೆ
ಕೊಟ್ಟ ರೂಪಾಯಿಗಳಲ್ಲಿ ಇನ್ನೂರು ರೂಪಾಯಿ
ಗಳನ್ನು ತೆಗೆದು ಅಕ್ಕಸಾಲಿಗನಿಗೆ ಕೊಟ್ಟಳು. ಅವನು
ಅವುಗಳಿಂದ ಕೆತ್ತನೆಯ ಮತ್ತು ಎರಕದ ವಿಗ್ರಹ
ಗಳನ್ನು ಮಾಡಿಕೊಟ್ಟನು. ಮೀಕನು ಅದನ್ನು ತನ್ನ
ಮನೆಯಲ್ಲಿಟ್ಟುಕೊಂಡನು.
5 ಈ ಮೀಕನು ಏಫೋದನ್ನೂ ವಿಗ್ರಹಗಳನ್ನೂ
ಮಾಡಿಸಿ ಅವುಗಳನ್ನು ತಾನು ಕಟ್ಟಿಸಿದ ದೇವಸ್ಥಾನ
ದಲ್ಲಿಟ್ಟು, ತನ್ನ ಕುಮಾರರಲ್ಲೊಬ್ಬನನ್ನು ಅರ್ಚಕ
6 ಸೇವೆಗೆ ಪ್ರತಿಷ್ಠಿಸಿದನು. ಆ ಕಾಲದಲ್ಲಿ ಇಸ್ರಾಯೇಲ್ಯ
ರೊಳಗೆ ಅರಸನಿರಲಿಲ್ಲ. ಪ್ರತಿಯೊಬ್ಬನೂ ಮನಸ್ಸಿಗ
ಬಂದ ಹಾಗೆಯೇ ನಡೆಯುತ್ತಿದ್ದನು.
7 ಯೆಹೂದದ ಬೇತ್ಲೆಹೇಮಿನವನೂ ಯೆಹೂದ ಕುಲ
ದವನೂ ಆಗಿದ್ದ ಒಬ್ಬ ಯೌವನಸ್ಥನಾದ ಲೇವಿಯು
8 ಉಪಜೀವನಕ್ಕೆ ಅನುಕೂಲವಾಗುವಲ್ಲಿ ವಾಸಿಸಬೇ
ಕೆಂದು ಸ್ವಂತ ಊರನ್ನು ಬಿಟ್ಟು ಪ್ರಯಾಣಮಾಡುತ್ತಾ
ಎಫ್ರಾಯಿಮ್ ಬೆಟ್ಟದ ಸೀಮೆಯಲ್ಲಿದ್ದ ಮೀಕನ
9 ಮನೆಗೆ ಬಂದನು. ನೀನು ಎಲ್ಲಿಂದ ಬಂದಿ ಎಂದು
ಮೀಕನು ಅವನನ್ನು ಕೇಳಲು ಅವನು—ನಾನು
ಯೆಹೂದದ ಬೇತ್ಲೆಹೇಮಿನವನಾದ ಲೇವಿಯನು;
ಉಪಜೀವನಕ್ಕೆ ಅನುಕೂಲವಾಗುವಲ್ಲಿ ವಾಸಿಸಬೇ
ಕೆಂದು ಹೊರಟಿದ್ದೇನೆ ಎಂದು ಉತ್ತರಕೊಟ್ಟನು.

ಮೀಕನು ಅವನಿಗೆ—ನೀನು ನಮ್ಮಲ್ಲಿರು; ನಮಗೆ 10
ತಂದೆಯೂ ಯಾಜಕನೂ ಆಗು. ನಿನಗೆ ವರುಷಕ್ಕೆ
ಹತ್ತು ರೂಪಾಯಿಗಳನ್ನೂ ಒಂದು ದುಸ್ತು ಬಟ್ಟೆಯ
ನ್ನೂ ಆಹಾರವನ್ನೂ ಕೊಡುತ್ತೇನೆ ಅನ್ನಲು ಆ ಲೇವಿ 11
ಯನು ಒಪ್ಪಿಕೊಂಡು ಅಲ್ಲೇ ವಾಸಮಾಡಿದನು;
ಹೀಗೆ ಆ ಯೌವನಸ್ಥನು ಅವನ ಮಕ್ಕಳಲ್ಲೊಬ್ಬ
ನಂತಾದನು. ಮೀಕನು ಯೌವನಸ್ಥನಾದ ಆ ಲೇವಿ 12
ಯನನ್ನು ಯಾಜಕಸೇವೆಗೋಸ್ಕರ ಪ್ರತಿಷ್ಠಿಸಿ ತನ್ನ
ಮನೆಯಲ್ಲಿಟ್ಟುಕೊಂಡು—ಒಬ್ಬ ಲೇವಿಯು ನನ್ನ 13
ಮನೆಯಲ್ಲಿ ಯಾಜಕನಾಗಿರುವದರಿಂದ ಯೆಹೋ
ವನು ನನ್ನನ್ನು ಆಶೀರ್ವದಿಸುವನೆಂದು ಬಲ್ಲೆನು ಅಂದು
ಕೊಂಡನು.

#### ದಾನ್ಯರು ಮೀಕನ ವಿಗ್ರಹವನ್ನು ಲಯಿಷಿಗೆ ಒಯ್ದದ್ದು.

ಆ ಕಾಲದಲ್ಲಿ ಇಸ್ರಾಯೇಲ್ಯರೊಳಗೆ ಅರಸನಿರ 18
ಲಿಲ್ಲ. ದಾನ್‌ಕುಲದವರಿಗೆ ಆ ವರೆಗೂ ಇಸ್ರಾಯೇ
ಲ್ಯರಲ್ಲಿ ಸ್ವಾಸ್ತ್ಯವು ಸಿಕ್ಕದ್ದರಿಂದ ಅವರು ತಮಗೋ
ಸ್ಕರ ವಾಸಸ್ಥಳವನ್ನು ಹುಡುಕುತ್ತಿದ್ದರು. ಮತ್ತು 2
ಅವರು ಚೊರ್ಗಾ, ಎಷ್ಟಾವೋಲ್ ಎಂಬ ಊರು
ಗಳಿಂದ ತಮ್ಮ ಕುಲದಲ್ಲಿ ಐದು ಮಂದಿ ಪರಾಕ್ರಮ
ಶಾಲಿಗಳಾದ ಗೂಢಚಾರರನ್ನು ಆರಿಸಿ ಅವರಿಗೆ—
ನೀವು ಹೋಗಿ [ಲಯಿಷ್] ದೇಶವನ್ನು ಸಂಚರಿಸಿ
ನೋಡಿರಿ ಎಂದು ಆಜ್ಞಾಪಿಸಿ ಕಳುಹಿಸಿದರು. ಇವರು
ಪ್ರಯಾಣಮಾಡುತ್ತಾ ಎಫ್ರಾಯಿಮ್ ಬೆಟ್ಟದ ಸೀಮೆ
ಯಲ್ಲಿದ್ದ ಮೀಕನ ಮನೆಗೆ ಬಂದು ಇಳುಕೊಂಡರು.
ಇವರು ಮೀಕನ ಮನೆಯ ಹತ್ತಿರದಲ್ಲಿ ಆ ಯೌವ 3
ನಸ್ಥನಾದ ಲೇವಿಯನು ಮಾತಾಡುವದನ್ನು ಕೇಳಿ
ಗುರುತುಹಿಡಿದು ಅವನ ಬಳಿಗೆ ಹೋಗಿ—ನಿನ್ನನ್ನು
ಇಲ್ಲಿಗೆ ಕರತಂದವರಾರು? ಇಲ್ಲಿ ಏನು ಕೆಲಸ ಮಾ
ಡುತ್ತೀ? ಏನು ಸಿಕ್ಕುತ್ತದೆ ಎಂದು ಅವನನ್ನು ಕೇಳಲು
ಅವನು—ಮೀಕನು ತನಗೆ ಇಂಥಿಂಥವುಗಳನ್ನು ಸಂಬ 4
ಳವಾಗಿ ಕೊಡುತ್ತಾನೆಂದೂ ತಾನು ಅವನ ಯಾಜಕ
ನಾಗಿದ್ದೇನೆಂದೂ ಹೇಳಿದನು. ಆಗ ಅವರು ಅವ 5
ನಿಗೆ—ದಯವಿಟ್ಟು ನಮ್ಮ ಪ್ರಯಾಣವು ಸಫಲವಾಗು
ವದೋ ಇಲ್ಲವೋ ಎಂಬದನ್ನು ದೇವರ ಸನ್ನಿಧಿಯಲ್ಲಿ
ವಿಚಾರಿಸು ಎಂದು ಬೇಡಿಕೊಳ್ಳಲು ಅವನು—ಸಮಾ 6
ಧಾನದಿಂದ ಹೋಗಿರಿ; ಯೆಹೋವನು ನಿಮ್ಮ ಪ್ರಯಾ
ಣವನ್ನು ಕಟಾಕ್ಷಿಸುವನು ಅಂದನು.
ಆ ಐದು ಮಂದಿ ಹೊರಟು ಲಯಿಷಿಗೆ ಬಂದು— 7
ಅಲ್ಲಿನ ಜನರು ನಿರ್ಭೀತರಾಗಿ ಚೀದೋನ್ಯರಂತೆ ಸುಖ
ಸಮಾಧಾನಗಳಿಂದ ಜೀವಿಸುತ್ತಾರೆ; ಅವರನ್ನು ತಗ್ಗಿ
ಸುವ ಅಧಿಕಾರಿಗಳು ದೇಶದಲ್ಲಿಲ್ಲ; ಅವರು ಚೀದೋ
ನ್ಯರಿಗೆ ದೂರವಾಗಿದ್ದು ಯಾರೊಡನೆಯೂ ಬಳಕೆ
ಯಿಲ್ಲದವರು ಎಂಬದನ್ನು ತಿಳಿದುಕೊಂಡು ಹಿಂತಿ 8
ರುಗಿ ಚೊರ್ಗಾ, ಎಷ್ಟಾವೋಲ್ ಎಂಬ ಊರುಗಳಲ್ಲಿ
ರುವ ತಮ್ಮ ಬಂಧುಗಳ ಬಳಿಗೆ ಬಂದರು. ಅವರ
ಬಂಧುಗಳು—ನೀವು ಯಾವ ವರ್ತಮಾನ ತಂದಿ
ದ್ದೀರಿ ಎಂದು ಅವರನ್ನು ಕೇಳಲು ಅವರು—ಏಳಿರಿ, 9
ಅವರಿಗೆ ವಿರೋಧವಾಗಿ ಯುದ್ಧಕ್ಕೆ ಹೋಗೋಣ.

ನಾವು ಆ ದೇಶವನ್ನು ನೋಡಿದೆವು; ಅದು ಬಹು
ಉತ್ತಮದೇಶ, ನೀವು ಸುಮ್ಮನೆ ಕೂತುಕೊಳ್ಳುವ
ದೇಕೆ? ತಡಮಾಡದೆ ಹೊರಡಿರಿ; ಆ ದೇಶವನ್ನು
10 ಸ್ವತಂತ್ರಿಸಿಕೊಳ್ಳೋಣ. ನೀವು ಅಲ್ಲಿಗೆ ಹೋಗುವ
ದಾದರೆ ಅಲ್ಲಿನ ಜನರು ನಿರ್ಭಯದಿಂದ ಜೀವಿಸು
ವವರೆಂದೂ ಅವರ ದೇಶವು ಬಹುವಿಸ್ತಾರವಾಗಿದೆ
ಯೆಂದೂ ತಿಳಿದುಕೊಳ್ಳುವಿರಿ. ದೇವರು ಅದನ್ನು
ನಿಮ್ಮ ಕೈಗೆ ಒಪ್ಪಿಸಿದ್ದಾನೆ; ಅದರಲ್ಲಿ ದೊರಕದಿರುವ
ಪದಾರ್ಥಗಳು ಲೋಕದಲ್ಲೇ ಇಲ್ಲ ಅಂದರು.
11 ಆಗ ಚೊರ್ಗಾ ಎಷ್ಟಾವೋಲ್ ಊರುಗಳಿಂದ
ಆರುನೂರು ಮಂದಿ ದಾನ್‌ಕುಲದವರು ಯುದ್ಧ
12 ಸನ್ನದ್ಧರಾಗಿ ಹೊರಟು ಗಟ್ಟಾಹತ್ತಿ ಯೆಹೂದದ
ಕಿರ್ಯತ್ಯಾರೀಮಿನ ಬಳಿಯಲ್ಲಿ ಇಳುಕೊಂಡರು.
ಆದದರಿಂದ ಆ ಸ್ಥಳಕ್ಕೆ ಇಂದಿನ ವರೆಗೂ ದಾನ್ಯರ
ಪಾಳೆಯವೆಂಬ ಹೆಸರಿದೆ; ಅದು ಕಿರ್ಯತ್ಯಾರೀಮಿನ
13 ಪಶ್ಚಿಮದಲ್ಲಿರುತ್ತದೆ. ಅವರು ಅಲ್ಲಿಂದ ಮುಂದೆ
ಪ್ರಯಾಣಮಾಡಿ ಎಫ್ರಾಯಿಮ್ ಪರ್ವತಪ್ರದೇಶ
14 ದಲ್ಲಿದ್ದ ಮೀಕನ ಮನೆಯ ಹತ್ತಿರ ಬಂದರು. ಆಗ
ಲಯಿಷ್ ದೇಶವನ್ನು ಸಂಚರಿಸಿ ನೋಡುವದಕ್ಕೆ
ಹೋಗಿದ್ದ ಐದು ಮಂದಿ ತಮ್ಮ ಬಂಧುಗಳಿಗೆ—
ಈ ಗ್ರಾಮದಲ್ಲಿ ಒಂದು ಏಫೋದೂ ದೇವತಾಪ್ರತಿಮೆ
ಗಳೂ ಕೆತ್ತನೆಯ ಮತ್ತು ಎರಕದ ವಿಗ್ರಹಗಳೂ
15 ಇರುತ್ತವೆಂಬದು ನಿಮಗೆ ಗೊತ್ತುಂಟೋ? ಈ ವಿಷ
ಯದಲ್ಲಿ ಏನು ಮಾಡಬೇಕೆಂಬದನ್ನು ಆಲೋಚಿ
ಸಿರಿ ಎಂದು ಹೇಳಿ ತಾವು ಅಲ್ಲಿಂದ ಮೀಕನ ಮನೆ
ಯಲ್ಲಿದ್ದ ಆ ಯೌವನಸ್ಥನಾದ ಲೇವಿಯನ ಬಳಿಗೆ
ಬಂದು ಅವನ ಕ್ಷೇಮಸಮಾಚಾರವನ್ನು ವಿಚಾರಿಸ
16 ಹತ್ತಿದರು. ಇಷ್ಟರಲ್ಲಿ ಯುದ್ಧಸನ್ನದ್ಧರಾದ ಆರು
ನೂರು ಮಂದಿ ದಾನ್ಯರು ಬಂದು ಬಾಗಲಲ್ಲಿ ನಿಂತರು.
17 ಯಾಜಕನೂ ಬಂದು ಇವರೊಡನೆ ಬಾಗಲಲ್ಲಿ ನಿಂತಿ
ದ್ದಾಗ ಆ ಐದು ಮಂದಿ ಮನೆಯನ್ನು ಹೊಕ್ಕು
ಕೆತ್ತನೆಯ ಮತ್ತು ಎರಕದ ವಿಗ್ರಹಗಳನ್ನೂ ಏಫೋ
ದನ್ನೂ ದೇವತಾಪ್ರತಿಮೆಗಳನ್ನೂ ತೆಗೆದುಕೊಂಡರು.
18 ಅವರು ಮೀಕನ ಮನೆಯನ್ನು ಹೊಕ್ಕು ಅವುಗಳನ್ನು
ತೆಗೆದುಕೊಂಡು ಬರುವಾಗ ಯಾಜಕನು ಕಂಡು
19 ಅವರಿಗೆ— ನೀವು ಮಾಡಿದ್ದೇನು ಅಂದನು. ಅವರು
ಅವನಿಗೆ—ಸುಮ್ಮನಿರು; ಬಾಯಿ ಮುಚ್ಚು; ನಮ್ಮ
ಜೊತೆಯಲ್ಲಿ ಬಂದು ನಮಗೆ ತಂದೆಯೂ ಯಾಜ
ಕನೂ ಆಗಿರು. ಒಂದು ಮನೆಗೆ ಯಾಜಕನಾಗಿರು
ವದು ಉತ್ತಮವೋ ಅಥವಾ ಇಸ್ರಾಯೇಲ್ಯರ ಒಂದು
ಕುಲಕ್ಕೂ ಗೋತ್ರಕ್ಕೂ ಯಾಜಕನಾಗಿರುವದು ಉತ್ತ
20 ಮವೋ ಅಂದರು. ಯಾಜಕನು ಈ ಮಾತನ್ನು ಕೇಳಿ
ಸಂತೋಷಪಟ್ಟು ಏಫೋದನ್ನೂ ದೇವತಾಪ್ರತಿಮೆಗಳ
ನ್ನೂ ಕೆತ್ತನೆಯ ವಿಗ್ರಹವನ್ನೂ ತೆಗೆದುಕೊಂಡು ಅವರ
21 ಬಳಿಗೆ ಬಂದನು. ತರುವಾಯ ಅವರು ತಮ್ಮ ಹೆಂಡರು
ಮಕ್ಕಳನ್ನೂ ಕುರಿ ದನ ಮೊದಲಾದ ಸೊತ್ತನ್ನೂ
ಮುಂದಾಗಿ ಕಳುಹಿಸಿ ತಾವು ಹಿಂದಿನಿಂದ ಹೊರಟರು.
22 ಅವರು ಮೀಕನ ಮನೆಗೆ ದೂರವಾದ ಮೇಲೆ
ಮೀಕನೂ ಅವನ ನೆರೆಹೊರೆಯವರೆಲ್ಲರೂ ದಾನ್ಯರನ್ನು
23 ಹಿಂದಟ್ಟಿ ಅವರ ಸಮೀಪಕ್ಕೆ ಹೋಗಿ ಅವರನ್ನು ಕೂಗಿ

ದರು. ದಾನ್ಯರು ಹಿಂದಿರುಗಿ ನೋಡಿ ಮೀಕನಿಗೆ—
ನಿನಗೇನಾಯಿತು? ಗುಂಪನ್ನು ಕೂಡಿಸಿಕೊಂಡು ಬಂದ
ದ್ದೇಕೆ ಎಂದು ಕೇಳಲು ಅವನು— ನೀವು ಯಾಜಕ
ನನ್ನೂ ನಾನು ಮಾಡಿಸಿಕೊಂಡ ದೇವರುಗಳನ್ನೂ ಅಪ
ಹರಿಸಿಕೊಂಡಿದ್ದೀರಿ ನನಗೆ ಇನ್ನೇನಿದೆ; ಹೀಗಿರಲಾಗಿ
ನಿನಗೇನಾಯಿತೆಂದು ನೀವು ನನ್ನನ್ನು ಕೇಳುವದು ಹೇಗೆ
ಅಂದನು. ದಾನ್ಯರು ಅವನಿಗೆ—ನಮ್ಮಲ್ಲಿ ಕೆಲವರು
ಸಿಟ್ಟಿನವರಿದ್ದಾರೆ; ಅವರು ನಿಮ್ಮ ಮೇಲೆ ಬಿದ್ದರೆ
ನೀನೂ ನಿನ್ನ ಮನೆಯವರೂ ಪ್ರಾಣನಷ್ಟಪಟ್ಟೀರಿ; ಆದ
ದರಿಂದ ಬಾಯಿಮುಚ್ಚಿಕೊಂಡು ಹೋಗು ಎಂದು ಹೇಳಿ
ಮುಂದೆ ನಡೆದರು. ಅವರು ತನಗಿಂತ ಬಲಿಷ್ಠರೆಂದು
ಮೀಕನು ತಿಳಿದು ಹಿಂದಿರುಗಿ ಮನೆಗೆ ಹೋದನು.

ದಾನ್ಯರು ಮೀಕನು ಮಾಡಿಸಿದ್ದ ವಿಗ್ರಹಗಳನ್ನೂ
ಅವನ ಯಾಜಕನನ್ನೂ ಅಪಹರಿಸಿಕೊಂಡು ಲಯಿ
ಷಿಗೆ ಹೋಗಿ ಸುಖದಿಂದಲೂ ನಿರ್ಭಯದಿಂದಲೂ
ವಾಸವಾಗಿದ್ದ ಅಲ್ಲಿನ ಜನರ ಮೇಲೆ ಬಿದ್ದು ಅವರನ್ನು
ಕತ್ತಿಯಿಂದ ಸಂಹರಿಸಿ ಅವರ ಪಟ್ಟಣವನ್ನು ಸುಟ್ಟು
ಬಿಟ್ಟರು. ಆ ಪಟ್ಟಣವು ಚೀದೋನಿಗೆ ದೂರವಾಗಿ
ದ್ದದ್ದರಿಂದಲೂ ಸಮೀಪದಲ್ಲಿ ಪರಿಚಯಸ್ಥರಾರೂ
ಇಲ್ಲದ್ದರಿಂದಲೂ ಅವರಿಗೆ ಸಹಾಯದೊರಕಲಿಲ್ಲ.
ಬೇತ್‌ರೆಹೋಬಿನ ತಗ್ಗಿನಲ್ಲಿದ್ದ ಈ ಪಟ್ಟಣವನ್ನು
ದಾನ್ಯರು ತಿರಿಗಿ ಕಟ್ಟಿಸಿ ಅದರಲ್ಲಿ ವಾಸಿಸಿದರು.
ಮುಂಚೆ ಲಯಿಷ್ ಎಂಬ ಹೆಸರಿದ್ದ ಆ ಪಟ್ಟಣಕ್ಕೆ ಈಗ
ದಾನ್ ಎಂದು ಹೆಸರಿಟ್ಟರು. ದಾನ್ ಎಂಬದು ಇವರ
ಮೂಲಪುರುಷನೂ ಇಸ್ರಾಯೇಲನ ಮಗನೂ ಆದ
ವನ ಹೆಸರು.

ಇದಲ್ಲದೆ ದಾನ್ಯರು ಆ ವಿಗ್ರಹವನ್ನು ತಮ್ಮ ಪಟ್ಟಣ
ದಲ್ಲಿಟ್ಟರು. ಇಸ್ರಾಯೇಲ್ಯರು ಸೆರೆಗೆ ಹೋಗುವ
ವರೆಗೆ ಮೋಶೆಯ ಮೊಮ್ಮಗನೂ ಗೇರ್ಷೋಮನ
ಮಗನೂ ಆದ ಯೆಹೋನಾತಾನನೂ ಅವನ ವಂಶ
ದವರೂ ದಾನ್ಯರಿಗೆ ಯಾಜಕರಾಗಿದ್ದರು. ಶೀಲೋವಿ
ನಲ್ಲಿ ದೇವಸ್ಥಾನವಿದ್ದ ಕಾಲದಲ್ಲೆಲ್ಲಾ ದಾನ್ಯರಲ್ಲಿ
ಮೀಕನು ಮಾಡಿಸಿದ ವಿಗ್ರಹವಿತ್ತು.

ಗಿಬೆಯದವರ ಪೈಶಾಚಿಕಕೃತ್ಯ.

ಆ ಕಾಲದಲ್ಲಿ ಇಸ್ರಾಯೇಲ್ಯರೊಳಗೆ ಅರಸನಿರ
ಲಿಲ್ಲ. ಎಫ್ರಾಯಿಮ್ ಪರ್ವತಪ್ರದೇಶದ ಒಂದು
ಮೂಲೆಯಲ್ಲಿ ಒಬ್ಬಾನೊಬ್ಬ ಲೇವಿಯನು ಪ್ರವಾಸಿ
ಯಾಗಿದ್ದನು. ಯೆಹೂದದ ಬೇತ್ಲೆಹೇಮಿನವಳಾದ
ಒಬ್ಬ ಸ್ತ್ರೀಯು ಅವನಿಗೆ ಉಪಪತ್ನಿಯಾಗಿದ್ದಳು.
ಈಕೆಯು ಇವನನ್ನು ಬಿಟ್ಟು ಜಾರತ್ವಮಾಡಿ ಯೆಹೂ
ದದ ಬೇತ್ಲೆಹೇಮಿನಲ್ಲಿದ್ದ ತನ್ನ ತೌರಮನೆಗೆ ಹೋಗಿ
ಅಲ್ಲಿ ನಾಲ್ಕು ತಿಂಗಳು ಇದ್ದಳು. ಅನಂತರ ಆಕೆಯ
ಗಂಡನಾದ ಆ ಲೇವಿಯನು ಆಕೆಯನ್ನು ಪ್ರೀತಿಯಿಂದ
ಮಾತಾಡಿಸಿ ತಿರಿಗಿ ಮನೆಗೆ ಕರತರಬೇಕೆಂದು ಒಬ್ಬ
ಸೇವಕನನ್ನೂ ಎರಡು ಕತ್ತೆಗಳನ್ನೂ ತೆಗೆದುಕೊಂಡು
ಅಲ್ಲಿಗೆ ಹೋದನು. ಆಕೆಯು ಅವನನ್ನು ತನ್ನ ತೌರ
ಮನೆಯಲ್ಲಿ ಸೇರಿಸಿಕೊಂಡಳು; ಆಕೆಯ ತಂದೆಯೂ
ಅವನನ್ನು ನೋಡಿ ಸಂತೋಷಪಟ್ಟನು. ಆ ಸ್ತ್ರೀಯ

ತಂದೆಯಾದ ಅವನ ಮಾವನು ಅವನನ್ನು ಮೂರು
ದಿವಸ ಅಲ್ಲೇ ನಿಲ್ಲಿಸಿಕೊಂಡನು; ಅವನೂ ಅವನ
ಸೇವಕನೂ ಅನ್ನಪಾನಗಳನ್ನು ತೆಗೆದುಕೊಳ್ಳುತ್ತಾ
5 ಅಲ್ಲಿದ್ದರು. ಅವರು ನಾಲ್ಕನೆಯ ದಿನ ಬೆಳಿಗ್ಗೆ ಎದ್ದು
ಹೋಗುವದಕ್ಕೆ ಸಿದ್ಧರಾಗಲು ಆ ಸ್ತ್ರೀಯ ತಂದೆಯು
ತನ್ನ ಅಳಿಯನಿಗೆ—ಮೊದಲು ಸ್ವಲ್ಪ ಊಟಮಾಡಿ
ಬಲಹೊಂದು; ಆ ಮೇಲೆ ಹೋಗಬಹುದು ಎಂದು
6 ಹೇಳಲು ಅವರಿಬ್ಬರೂ ಕೂತು ಅನ್ನಪಾನಗಳನ್ನು
ತೆಗೆದುಕೊಂಡರು. ಊಟವಾದ ಮೇಲೆ ಆ ಸ್ತ್ರೀಯ
ತಂದೆಯು ತಿರಿಗಿ ಅವನಿಗೆ—ದಯವಿಟ್ಟು ಈ ಹೊತ್ತಿನ
ರಾತ್ರಿ ಇಲ್ಲೇ ಇದ್ದು ಸಂತೋಷಪಡು ಎಂದು ಹೇಳಿ
7 ದರೂ ಅವನು ಹೊರಡುವದಕ್ಕಿದ್ದನು; ಆದರೆ ಅವನ
ಮಾವನು ಬಹಳ ಬಲಾತ್ಕಾರಮಾಡಿದ್ದರಿಂದ ಆ
8 ರಾತ್ರಿ ಅಲ್ಲಿ ಇಳುಕೊಂಡನು. ಅವರು ಐದನೆಯ
ದಿನ ಬೆಳಿಗ್ಗೆ ಎದ್ದು ಹೋಗುವದಕ್ಕೆ ಸಿದ್ಧರಾಗಲು ಆ
ಸ್ತ್ರೀಯ ತಂದೆಯು—ದಯವಿಟ್ಟು ಇಳಿಹೊತ್ತಿನ ವರೆಗೆ
ಇಲ್ಲೇ ಇದ್ದು ಬಲಹೊಂದು ಎಂದು ಅವನನ್ನು ಬೇಡಿ
9 ಕೊಳ್ಳಲು ತಿರಿಗಿ ಊಟಕ್ಕೆ ನಿಂತನು. ಅನಂತರ
ಅವನೂ ಅವನ ಉಪಪತ್ನಿಯೂ ಸೇವಕನೂ ಹೋಗು
ವದಕ್ಕೆ ಸಿದ್ಧರಾಗಲು ಆ ಸ್ತ್ರೀಯ ತಂದೆಯು ತನ್ನ
ಅಳಿಯನಿಗೆ—ಹೊತ್ತು ಹೋಯಿತು; ಸಂಜೆಯಾ
ಯಿತು. ದಯವಿಟ್ಟು, ಈ ಹೊತ್ತಿನ ರಾತ್ರಿ ಇಲ್ಲೇ
ಇರು; ನೋಡು, ಸಾಯಂಕಾಲವಾಯಿತು. ಈ ರಾತ್ರಿ
ಇಲ್ಲಿದ್ದು ನಮ್ಮೊಡನೆ ಸಂತೋಷಪಡು; ನಾಳೆ ಬೆಳಿಗ್ಗೆ
ಎದ್ದು ನಿನ್ನ ಮನೆಗೆ ಹೋಗಬಹುದು ಎಂದು ಬೇಡಿ
10 ಕೊಂಡರೂ ಆ ಮನುಷ್ಯನು ಒಪ್ಪದೆ ತನ್ನ ಎರಡು
ಕತ್ತೆಗಳಿಗೆ ತಡಿಹಾಕಿಸಿ ಉಪಪತ್ನಿಯನ್ನು ಕರೆದು
11 ಕೊಂಡು ಹೊರಟನು. ಅವರು ಯೆಬೂಸಿಯರ
ಊರಾದ ಯೆರೂಸಲೇಮಿನ ಸಮೀಪಕ್ಕೆ ಬಂದಾಗ
ಹೊತ್ತುಮುಣುಗುವ ಕಾಲವಾದದರಿಂದ ಸೇವಕನು
ದಣಿಗೆ—ದಯವಿಟ್ಟು ಬಾ; ನಾವು ಯೆಬೂಸಿಯರ
ಈ ಪಟ್ಟಣಕ್ಕೆ ಹೋಗಿ ಅಲ್ಲಿ ರಾತ್ರಿಯನ್ನು ಕಳೆಯೋಣ
12 ಅಂದನು. ಆಗ ದಣಿಯು—ನಾವು ಇಸ್ರಾಯೇಲ್ಯ
ರಿಲ್ಲದ ಅನ್ಯರ ಪಟ್ಟಣದಲ್ಲಿ ಇಳಿಯಬಾರದು; ಗಿಬ
13 ಯಕ್ಕೆ ಹೋಗೋಣ ಅಂದನು. ಅವನು ತಿರಿಗಿ ತನ್ನ
ಆಳಿಗೆ—ನಾವು ಬೇಗನೆ ಹೋಗಿ ಮುಂದಿರುವ ಗಿಬೆ
ಯದಲ್ಲಾಗಲಿ ರಾಮದಲ್ಲಾಗಲಿ ಇಳುಕೊಳ್ಳೋಣ
14 ಬಾ ಅಂದನು. ಹೀಗೆ ಅವರು ಮುಂದೆ ಸಾಗಿ ಬೆನ್ಯಾ
ಮೀನ್ಯರ ಗಿಬೆಯ ಊರಿನ ಸಮೀಪಕ್ಕೆ ಬಂದಾಗ
15 ಸೂರ್ಯನು ಮುಣುಗಿದನು. ಆದದರಿಂದ ಅವರು
ಇಳುಕೊಳ್ಳುವದಕ್ಕೋಸ್ಕರ ಗಿಬೆಯಕ್ಕೆ ಹೋಗಿ ಯಾ
ರೂ ಮನೆಯಲ್ಲಿ ಸೇರಿಸಿಕೊಳ್ಳದ್ದರಿಂದ ಸಂತೇ ಬೀದಿ
ಯಲ್ಲಿ ಕೂತುಕೊಂಡರು.
16 ಅಷ್ಟರಲ್ಲಿ ಎಫ್ರಾಯೀಮ್‌ಪರ್ವತಪ್ರದೇಶಕ್ಕೆ ಸೇರಿ
ದವನೂ ಬೆನ್ಯಾಮೀನ್ಯರ ಊರಾದ ಗಿಬೆಯದಲ್ಲಿ
ವಾಸಿಸುವವನೂ ಆಗಿದ್ದ ಒಬ್ಬಾನೊಬ್ಬ ಮುದುಕನು
ಸಾಯಂಕಾಲವಾದದರಿಂದ ಕೆಲಸವನ್ನು ಬಿಟ್ಟು
17 ಹೊಲದಿಂದ ಮನೆಗೆ ಬರುತ್ತಿದ್ದನು. ಈ ಮುದು
ಕನು ಬೀದಿಯಲ್ಲಿ ಕೂತಿದ್ದ ಆ ದಾರಿಗನನ್ನು
ಕಂಡು—ಎಲ್ಲಿಂದ ಬಂದಿ? ಎಲ್ಲಿಗೆ ಹೋಗುತ್ತೀ
ಎಂದು ಕೇಳಲು ಅವನು ಇವನಿಗೆ—ನಾವು ಯೆಹೂ 18
ದದ ಬೇತ್ಲೆಹೇಮಿನಿಂದ ಎಫ್ರಾಯೀಮ್‌ಪರ್ವತಪ್ರದೇ
ಶದ ಒಂದು ಮೂಲೆಯಲ್ಲಿರುವ ನಮ್ಮ ವಾಸಸ್ಥಳಕ್ಕೆ
ಹೋಗುತ್ತಿದ್ದೇವೆ. ನಾನು ಅಲ್ಲಿಂದ ಯೆಹೂದದ
ಬೇತ್ಲೆಹೇಮಿಗೆ ಹೋಗಿದ್ದೆನು; ಈಗ ತಿರಿಗಿ ಯೆಹೋ
ವನ ಮಂದಿರಕ್ಕೆ ಹೋಗುತ್ತೇನೆ. ಇಲ್ಲಿ ಯಾರೂ
ನಮ್ಮನ್ನು ತಮ್ಮ ಮನೆಗೆ ಕರಕೊಂಡು ಹೋಗಲಿಲ್ಲ.
ನಮ್ಮ ಕತ್ತೆಗಳಿಗೆ ಹುಲ್ಲೂ ಕಾಳೂ ಇವೆ; ನನಗೂ 19
ನಿನ್ನ ಸೇವಕಿಗೂ ನಿನ್ನ ಸೇವಕನ ಸಂಗಡ ಬಂದಿ
ರುವ ಈ ಪ್ರಾಯಸ್ಥನಿಗೂ ಸಾಕಾಗುವಷ್ಟು ರೊಟ್ಟಿ
ಯೂ ದ್ರಾಕ್ಷಾರಸವೂ ಇರುತ್ತವೆ; ನಮಗೆ ಹೆಚ್ಚು
ಏನೂ ಬೇಕಾಗಿರುವದಿಲ್ಲ ಎಂದು ಹೇಳಿದನು. ಆಗ 20
ಆ ಮುದುಕನು—ನಿನಗೆ ಶುಭವಾಗಲಿ; ನಿನಗೆ ಏನಾ
ದರೂ ಕಡಮೆಯಾದರೆ ಅದನ್ನು ನೋಡಿಕೊಳ್ಳು
ತ್ತೇನೆ; ಈ ಬೀದಿಯಲ್ಲಿ ರಾತ್ರಿಕಳೆಯಬೇಡ, ನನ್ನ 21
ಮನೆಗೆ ಬಾ ಎಂದು ಹೇಳಿ ಅವನನ್ನು ಕರಕೊಂಡು
ಹೋಗಿ ಅವನ ಕತ್ತೆಗಳಿಗೆ ಮೇವುಕೊಟ್ಟನು. ಅವರು
ತಮ್ಮ ಕೈಕಾಲುಗಳನ್ನು ತೊಳೆದುಕೊಂಡು ಅಲ್ಲಿ ಅನ್ನ
ಪಾನಗಳನ್ನು ತೆಗೆದುಕೊಂಡರು.
ಅವರು ಭೋಜನದಿಂದ ತೃಪ್ತಿಪಡುವಷ್ಟರಲ್ಲಿ ಆ 22
ಊರಲ್ಲಿದ್ದ ನೀಚಜನರು ಬಂದು ಆ ಮನೆಯನ್ನು
ಸುತ್ತಿಕೊಂಡು ಕದಗಳನ್ನು ಬಡಿದು ಮನೆಯ ಯಜ
ಮಾನನಾದ ಮುದುಕನಿಗೆ—ನಿನ್ನ ಮನೆಗೆ ಬಂದಿರು
ವಂಥ ಮನುಷ್ಯನನ್ನು ಹೊರಗೆ ತೆಗೆದುಕೊಂಡು
ಬಾ; ಅವನೊಡನೆ ನಮಗೆ ಸಂಗಮವಾಗಬೇಕು
ಎಂದು ಕೂಗಿದರು. ಆಗ ಆ ಮುದುಕನು ಹೊರಗೆ 23
ಹೋಗಿ ಅವರಿಗೆ—ಸಹೋದರರೇ, ಇಂಥ ದುಷ್ಟತನ
ವನ್ನು ನಡಿಸಬೇಡಿರಿ; ಅವನು ಆಶ್ರಯಕ್ಕಾಗಿ ನನ್ನ
ಮನೆಗೆ ಬಂದಿದ್ದಾನೆ; ನೀವು ಇಂಥ ಹುಚ್ಚುತನವನ್ನು
ಮಾಡಬೇಡಿರಿ. ಇನ್ನೂ ಮದುವೆಯಾಗದಂಥ ನನ್ನ 24
ಮಗಳನ್ನೂ ಅವನ ಉಪಪತ್ನಿಯನ್ನೂ ಹೊರಗೆ ತರು
ತ್ತೇನೆ; ಅವರನ್ನು ಭಂಗಪಡಿಸಿರಿ; ನಿಮ್ಮ ಮನಸ್ಸಿಗೆ
ಬಂದ ಹಾಗೆ ಅವರಿಗೆ ಮಾಡಿರಿ. ಈ ಮನುಷ್ಯನಿಗೆ
ಮಾತ್ರ ಅಂಥ ದುಷ್ಕೃತ್ಯವನ್ನು ಮಾಡಬೇಡಿರಿ ಅಂದ
ನು. ಆದರೆ ಅವರು ಆ ಮುದುಕನಿಗೆ ಕಿವಿಗೊಡ 25
ಲೊಲ್ಲದೆ ಹೋದದರಿಂದ ಆ ಮನುಷ್ಯನು ತನ್ನ
ಉಪಪತ್ನಿಯನ್ನು ಹೊರಗೆ ಅವರ ಮಧ್ಯಕ್ಕೆ ಕಳುಹಿಸಿ
ಬಿಟ್ಟನು. ಅವರು ಆಕೆಯನ್ನು ಕೆಡಿಸಿ ರಾತ್ರಿಯ
ಲ್ಲೆಲ್ಲಾ ಬಹುಕ್ರೂರತನದಿಂದ ನಡಿಸಿ ಕೋಳಿಕೂಗುವ
ಹೊತ್ತಾಗಲು ಬಿಟ್ಟುಹೋದರು. ಆ ಸ್ತ್ರೀಯು 26
ಸೂರ್ಯೋದಯಕ್ಕೆ ಮುಂಚೆಯೇ ಬಂದು ತನ್ನ
ಯಜಮಾನನು ಇಳುಕೊಂಡಿದ್ದ ಮನೆಯ ಬಾಗಲಲ್ಲಿ
ಬಿದ್ದವಳು ಬೆಳಗಾದರೂ ಏಳಲೇ ಇಲ್ಲ. ಆಕೆಯ 27
ಪತಿಯು ಬೆಳಗ್ಗೆ ಎದ್ದು ಹೊರಡುವದಕ್ಕೆ ಸಿದ್ಧನಾಗಿ
ಬಾಗಲನ್ನು ತೆರೆಯಲು ತನ್ನ ಉಪಪತ್ನಿಯು ಬಾಗಲ
ಮುಂದೆ ಬಿದ್ದಿರುವದನ್ನೂ ಆಕೆಯ ಕೈಗಳು ಹೊಸ್ತ
ಲಿನ ಮೇಲಿರುವದನ್ನೂ ಕಂಡನು. ಅವನು—ಏಳು, 28
ಹೋಗೋಣ ಎಂದು ಆಕೆಯನ್ನು ಕರೆಯಲು ಪ್ರತ್ಯು
ತ್ತರವೇ ಇಲ್ಲ. ಆಗ ಅವನು ಆಕೆಯ ಶವವನ್ನು
ಕತ್ತೆಯ ಮೇಲೆ ಹಾಕಿಕೊಂಡು ಸ್ವಸ್ಥಳಕ್ಕೆ ಹೋದನು.

29 ಅವನು ಮನೆಸೇರಿದ ಮೇಲೆ ಒಂದು ಕತ್ತಿಯನ್ನು
ತೆಗೆದುಕೊಂಡು ತನ್ನ ಉಪಪತ್ನಿಯ ಶವವನ್ನು
ಎಲುಬುಗಳ ಸಹಿತವಾಗಿ ಹನ್ನೆರಡು ತುಂಡುಮಾಡಿ
ಅವುಗಳನ್ನು ಇಸ್ರಾಯೇಲ್ಯರ ಎಲ್ಲಾ ಪ್ರಾಂತಗಳಿಗೆ
30 ಕಳುಹಿಸಿದನು. ಅವುಗಳನ್ನು ಕಂಡವರೆಲ್ಲರೂ—
ಇಸ್ರಾಯೇಲ್ಯರು ಐಗುಪ್ತವನ್ನು ಬಿಟ್ಟು ಬಂದ ದಿವಸ
ಮೊದಲುಗೊಂಡು ಈ ದಿವಸದ ವರೆಗೆ ಇಂಥ
ಕೃತ್ಯವು ನಡೆಯಲೂ ಇಲ್ಲ, ನಾವು ಅದನ್ನು ನೋಡಿ
ಯೂ ಇಲ್ಲ. ಈ ಸಂಗತಿಯನ್ನು ಮನಸ್ಸಿಗೆ ತಂದು
ವಿಚಾರಿಸತಕ್ಕದ್ದು ಅಂದುಕೊಂಡರು.

ಇಸ್ರಾಯೇಲ್ಯರು ಬೆನ್ಯಾಮೀನ್ಯರನ್ನು ಸಂಹರಿಸಿದ್ದು.

20 ದಾನ್ ಪಟ್ಟಣದಿಂದ ಬೇರ್ಷೆಬದ ವರೆಗಿರುವ
ಪ್ರಾಂತ್ಯಗಳಲ್ಲಿಯೂ ಗಿಲ್ಯಾದಿನಲ್ಲಿಯೂ ಇರುವ
ಇಸ್ರಾಯೇಲ್ಯರೆಲ್ಲರೂ ಏಕಮನಸ್ಸಿನಿಂದ ಹೊರಟು
ಮಿಚ್ಪೆಗೆ ಬಂದು ಯೆಹೋವನ ಸನ್ನಿಧಿಯಲ್ಲಿ ಸಭೆ
2 ನೆರೆದರು. ಆ ದೇವಪ್ರಜಾಸಭೆಯಲ್ಲಿ ಎಲ್ಲಾ ಕುಲಾ
ಧಿಪತಿಗಳೂ ಯುದ್ಧಸನ್ನದ್ಧರಾದ ನಾಲ್ಕು ಲಕ್ಷ
3 ಕಾಲಾಳುಗಳೂ ಇದ್ದರು. (ಇಸ್ರಾಯೇಲ್ಯರು ಕೂಡಿ
ಕೊಂಡು ಮಿಚ್ಪೆಗೆ ಬಂದಿದ್ದಾರೆಂಬ ವರ್ತಮಾನವು
ಬೆನ್ಯಾಮೀನ್ಯರಿಗೆ ಮುಟ್ಟಿತು.) ಇಸ್ರಾಯೇಲ್ಯರು—
ಈ ದುಷ್ಟತನವು ಹೇಗೆ ನಡೆಯಿತೆಂದು ತಿಳಿಸಿರಿ
4 ಎಂದು ಕೇಳಲು ಹತಳಾದ ಸ್ತ್ರೀಯ ಗಂಡನಾದ ಆ
ಲೇವಿಯನು—ನಾನು ನನ್ನ ಉಪಪತ್ನಿಯ ಸಹಿತ
ವಾಗಿ ಬೆನ್ಯಾಮೀನ್ಯರ ಊರಾದ ಗಿಬೆಯದಲ್ಲಿ ಒಂದು
5 ರಾತ್ರಿ ಇಳುಕೊಂಡೆನು. ಆ ಊರಿನ ಜನರು ಅದೇ
ರಾತ್ರಿ ನಾನು ಇಳುಕೊಂಡಿದ್ದ ಮನೆಯನ್ನು ಸುತ್ತಿ
ಕೊಂಡು ನನ್ನನ್ನು ಕೊಲ್ಲಬೇಕೆಂದಿದ್ದರು; ಮತ್ತು
ನನ್ನ ಉಪಪತ್ನಿಯನ್ನು ಬಹಳವಾಗಿ ಭಂಗಪಡಿಸಿ
6 ದರು, ಆಕೆಯು ಸತ್ತಳು. ಅವರು ಇಸ್ರಾಯೇಲ್ಯ
ರಲ್ಲಿ ನಡಿಸಿದ ಇಂಥ ಕೆಟ್ಟ ಹುಚ್ಚುಗೆಲಸವು ಎಲ್ಲ
ರಿಗೂ ಗೊತ್ತಾಗಲೆಂದು ನಾನು ಆಕೆಯ ಶವವನ್ನು
ತುಂಡುಮಾಡಿ ಇಸ್ರಾಯೇಲ್ಯರ ಎಲ್ಲಾ ಪ್ರಾಂತಗಳಿಗೆ
7 ಕಳುಹಿಸಿದೆನು. ಇಲ್ಲಿ ಕೂಡಿದ ಎಲ್ಲಾ ಇಸ್ರಾಯೇ
ಲ್ಯರೇ, ಈಗ ನಿಮ್ಮ ಆಲೋಚನಾಭಿಪ್ರಾಯಗಳನ್ನು
ಹೇಳಿರಿ ಅಂದನು.
8 ಇದನ್ನು ಕೇಳಿ ಜನರು ಏಕಮನಸ್ಸಿನಿಂದ—ನಮ್ಮ
ಲ್ಲಿ ಯಾವನೂ ತನ್ನ ಗುಡಾರಕ್ಕೆ ಹೋಗಬಾರದು;
9 ತನ್ನ ಮನೆಗೆ ತಿರುಗಕೂಡದು. ನಾವು ಚೀಟು ಹಾಕೋ
ಣ; ಅದು ಬಿದ್ದ ಪ್ರಕಾರವೇ ಗಿಬೆಯದವರಿಗೆ ವಿರೋಧ
10 ವಾಗಿ ಯುದ್ಧಕ್ಕೆ ಹೋಗೋಣ. ಇಸ್ರಾಯೇಲ್ಯರ
ಕುಲಗಳಲ್ಲಿ ನೂರಕ್ಕೆ ಹತ್ತು, ಸಾವಿರಕ್ಕೆ ನೂರು,
ಹತ್ತು ಸಾವಿರಕ್ಕೆ ಸಾವಿರ ಈ ಪ್ರಕಾರ ಜನರನ್ನು
ಆರಿಸಿಕೊಂಡು ಅವರನ್ನು ಆಹಾರತರುವದಕ್ಕಾಗಿ ಕಳು
ಹಿಸೋಣ. ಅವರು ಬಂದ ಮೇಲೆ ಬೆನ್ಯಾಮೀನ್ಯರಾದ
ಗಿಬೆಯದವರು ಇಸ್ರಾಯೇಲ್ಯರಲ್ಲಿ ನಡಿಸಿದ ದುಷ್ಕ
ರ್ಮಕ್ಕಾಗಿ ಅವರಿಗೆ ದಂಡನೆಮಾಡೋಣ ಅಂದು
11 ಕೊಂಡರು. ಹೀಗೆ ಅವರೆಲ್ಲರೂ ಏಕಮನಸ್ಸಿನಿಂದ
ಆ ಪಟ್ಟಣಕ್ಕೆ ವಿರೋಧವಾಗಿ ಕೂಡಿಕೊಂಡರು.

ಅವರು ಬೆನ್ಯಾಮೀನ್ಯರ ಸಮಸ್ತ ಕುಲಸ್ಥರ ಬಳಿಗ ದೂತರನ್ನು ಕಳುಹಿಸಿ ಅವರಿಗೆ—ನಿಮ್ಮಲ್ಲಿ ನಡೆದ ಈ ದುಷ್ಕರ್ಮ ಎಂಥದು? ಈಗ ಗಿಬೆಯ ಊರಲ್ಲಿ ರುವ ಆ ನೀಚರನ್ನು ನಮಗೆ ಒಪ್ಪಿಸಿರಿ; ನಾವು ಅವ ರನ್ನು ಕೊಂದು ಇಸ್ರಾಯೇಲ್ಯರ ಮಧ್ಯದಿಂದ ಇಂಥ ದುಷ್ಟತನವನ್ನು ತೆಗೆದುಹಾಕುತ್ತೇವೆ ಎಂದು ಹೇಳಿಸಿ ದರು. ಆದರೆ ಬೆನ್ಯಾಮೀನ್ಯರು ತಮ್ಮ ಬಂಧುಗಳ ಮಾತಿಗೆ ಕಿವಿಗೊಡದೆ ತಮ್ಮ ಎಲ್ಲಾ ಊರುಗಳಿಂದ ಗಿಬೆಯಕ್ಕೆ ಬಂದು ಇಸ್ರಾಯೇಲ್ಯರ ಸಂಗಡ ಯುದ್ಧ ಕ್ಕೆ ನಿಂತರು. ಆ ದಿವಸದಲ್ಲಿ ಆಯಾ ಊರುಗಳಿಂದ ಯುದ್ಧಸನ್ನದ್ಧರಾಗಿ ಕೂಡಬಂದ ಬೆನ್ಯಾಮೀನ್ಯ ಸಂಖ್ಯೆಯು ಇಪ್ಪತ್ತಾರು ಸಾವಿರವಾಗಿತ್ತು. ಇವ ರಲ್ಲದ ಗಿಬೆಯದಲ್ಲಿಯೇ ಏಳು ನೂರು ಮಂದಿ ಯುದ್ಧವೀರರಿದ್ದರು. ಈ ಎಲ್ಲಾ ಜನರಲ್ಲಿ ಏಳು ನೂರು ಮಂದಿ ಎಡಚರಾದ ಯುದ್ಧವೀರರಿದ್ದರು. ಅವರಲ್ಲಿ ಪ್ರತಿಯೊಬ್ಬನೂ ಕೂದಲೆಳೆಯಷ್ಟು ಗು ತಪ್ಪದ ಹಾಗೆ ಕವಣೆಯನ್ನು ಹೊಡೆಯುವದರಲ್ಲಿ ನಿಪುಣನು; ಬೆನ್ಯಾಮೀನ್ಯರಲ್ಲದ ಇಸ್ರಾಯೇಲ್ಯರಲ್ಲಿ ನಾಲ್ಕು ಲಕ್ಷ ಭಟರಿದ್ದರು; ಇವರೆಲ್ಲರೂ ವೀರರೇ

ಇಸ್ರಾಯೇಲ್ಯರು ಬೇತೇಲಿಗೆ ಹೋಗಿ—ಬೆನ್ಯಾ ಮೀನ್ಯರ ಮೇಲ ಯುದ್ಧಕ್ಕೆ ನಮ್ಮಲ್ಲಿ ಮೊದಲ ಯಾರು ಹೋಗಬೇಕು ಎಂದು ದೇವರಾದ ಯೆಹೋವ ನನ್ನು ಕೇಳಲು ಆತನು—ಮೊದಲು ಯೆಹೂದಕುಲದ ವರು ಹೋಗಲಿ ಎಂದು ಹೇಳಿದನು. ಇಸ್ರಾಯೇಲ್ಯರು ಬೆಳಿಗ್ಗೆ ಹೊರಟುಹೋಗಿ ಗಿಬೆಯದ ಎದುರಿನಲ್ಲಿ ಪಾ ಯಮಾಡಿಕೊಂಡು ಬೆನ್ಯಾಮೀನ್ಯರೊಡನೆ ಯುದ್ಧ ಮಾಡುವದಕ್ಕೋಸ್ಕರ ಸಿದ್ಧರಾಗಿ ಗಿಬೆಯದ ಎದು ರಿನಲ್ಲಿ ವ್ಯೂಹಕಟ್ಟಿ ನಿಂತರು. ಆ ದಿನದಲ್ಲಿ ಬೆನ್ಯಾಮೀ ನ್ಯರು ಗಿಬೆಯದಿಂದ ಹೊರಗೆ ಬಂದು ಇಸ್ರಾಯೇಲ್ಯ ರಲ್ಲಿ ಇಪ್ಪತ್ತೆರಡು ಸಾವಿರ ಜನರನ್ನು ನೆಲಕ್ಕುರುಳಿಸಿ ದರು.

ಇಸ್ರಾಯೇಲ್ಯರು ತಿರಿಗಿ ಧೈರ್ಯ ತಂದುಕೊಂಡು ಮೊದಲನೆಯ ದಿನದಲ್ಲಿ ವ್ಯೂಹಕಟ್ಟಿದ ಸ್ಥಳದಲ್ಲಿ ತಿರಿಗಿ ವ್ಯೂಹಕಟ್ಟಿ ಯುದ್ಧಕ್ಕೆ ನಿಂತರು.

(ಇಸ್ರಾಯೇಲ್ಯರು ಹೋಗಿ ಯೆಹೋವನ ಮುಂದ ಅಳುತ್ತಾ—ನಾವು ತಿರಿಗಿ ನಮ್ಮ ಬಂಧುಗಳಾದ ಬೆನ್ಯಾ ಮೀನ್ಯರೊಡನೆ ಯುದ್ಧಮಾಡಬೇಕೋ ಎಂದು ಕೇಳ ಲು ಆತನು—ಹೋಗಿ ಯುದ್ಧಮಾಡಿರಿ ಅಂದನು. ಆದದರಿಂದ ಅವರು ಎರಡನೆಯ ದಿನದಲ್ಲಿಯೂ ಯುದ್ಧ ಕ್ಕೆ ಸಿದ್ಧರಾಗಿ ಬೆನ್ಯಾಮೀನ್ಯರ ಸಮೀಪಕ್ಕೆ ಬಂದರು. ಬೆನ್ಯಾಮೀನ್ಯರು ಎರಡನೆಯ ದಿನದಲ್ಲಿಯೂ ಗಿಬೆಯ ದಿಂದ ಹೊರಗೆ ಬಂದು ಇಸ್ರಾಯೇಲ್ಯರಲ್ಲಿ ಹ ನೆಂಟು ಸಾವಿರ ಮಂದಿ ಯುದ್ಧವೀರರನ್ನು ನೆಲಕ್ಕೆ ಬೀಳಿಸಿದರು.

ಆಗ ಎಲ್ಲಾ ಜನರೂ ಬೇತೇಲಿಗೆ ಹೋಗಿ ಅಲ್ಲಿ ಯೆಹೋವನ ಮುಂದೆ ಅಳುತ್ತಾ ಬಿದ್ದು ಸಾಯಂಕಾ ಲದ ವರೆಗೆ ಉಪವಾಸಮಾಡಿದರು. ಇದಲ್ಲದೆ ಅವರು ಆತನಿಗೆ ಸರ್ವಾಂಗಹೋಮಗಳನ್ನೂ ಸಮಾಧಾನಯಜ್ಞ ಗಳನ್ನೂ ಸಮರ್ಪಿಸಿದರು. ಆ ಕಾಲದಲ್ಲಿ ಯೆಹೋ ವನ ಒಡಂಬಡಿಕೆಯ ಮಂಜೂಷವು ಆ ಊರೊಳಗಿತ್ತು

28 ಆರೋನನ ಮೊಮ್ಮಗನೂ ಎಲ್ಲಾಜಾರನ ಮಗನೂ
ಆದ ಫೀನೆಹಾಸನು ಯಾಜಕಸೇವೆಮಾಡುತ್ತಿದ್ದನು.
ಹೀಗಿರುವದರಿಂದ ಇಸ್ರಾಯೇಲ್ಯರು—ನಾವು ನಮ್ಮ
ಬಂಧುಗಳಾದ ಬೆನ್ಯಾಮೀನ್ಯರೊಡನೆ ಯುದ್ಧಕ್ಕೆ ಹೋ
ಗಬೇಕೋ ಬೇಡವೋ ಎಂದು ಯೆಹೋವನನ್ನು ಕೇಳಿ
ದರು. ಆತನು ಅವರಿಗೆ—ಹೋಗಿರಿ, ನಾಳೆ ಅವರನ್ನು
ನಿಮ್ಮ ಕೈಗೆ ಒಪ್ಪಿಸುವೆನು ಅಂದನು.
29 ಆಗ ಇಸ್ರಾಯೇಲ್ಯರು ಗಿಬೆಯದ ಸುತ್ತಲೂ ಕೆಲ
30 ವರನ್ನು ಹೊಂಚಿನೋಡುವದಕ್ಕೆ ಇರಿಸಿ ಉಳಿದವರು
ಬೆನ್ಯಾಮೀನ್ಯರ ಸಂಗಡ ಕಾದಾಡುವದಕ್ಕೋಸ್ಕರ
ಮುಂಚಿನಂತೆ ಮೂರನೆಯ ದಿನದಲ್ಲಿಯೂ ಗಿಬೆಯದ
31 ಸಮೀಪದಲ್ಲಿ ವ್ಯೂಹಕಟ್ಟಿದರು. ಬೆನ್ಯಾಮೀನ್ಯರು
ಇಸ್ರಾಯೇಲ್ಯರೊಡನೆ ಯುದ್ಧಮಾಡುವದಕ್ಕಾಗಿ ಪಟ್ಟ
ಣವನ್ನು ಬಿಟ್ಟು ದೂರಕ್ಕೆ ಬಂದರು. ಅವರು ಮುಂಚಿ
ನಂತೆ ಜನರನ್ನು ವಧಿಸುವದಕ್ಕೆ ಪ್ರಾರಂಭಿಸಿ ಬೇತೇ
ಲಿಗೂ ಬೈಲಿನಲ್ಲಿರುವ ಗಿಬೆಯಕ್ಕೂ ಹೋಗುವ ರಾಜ
ಮಾರ್ಗಗಳಲ್ಲಿ ಸುಮಾರು ಮೂವತ್ತು ಮಂದಿಯನ್ನು
32 ಹತಮಾಡಿದರು. ಬೆನ್ಯಾಮೀನ್ಯರು—ಅವರು ಮುಂಚಿ
ನಂತೆ ಈಗಲೂ ಸೋತುಹೋಗುತ್ತಾರೆಂದು ನೆನಸಿ
ದರು. ಇಸ್ರಾಯೇಲ್ಯರಾದರೋ—ಅವರು ತಮ್ಮ
ಪಟ್ಟಣಕ್ಕೆ ದೂರವಾಗುವಂತೆ ನಾವು ಸ್ವಲ್ಪ ದೂರ
33 ಓಡಿಹೋಗೋಣ ಎಂದು ಮಾತಾಡಿಕೊಂಡು ತಾವು
ಮೊದಲು ನಿಂತ ಸ್ಥಳದಿಂದ ಓಡತೊಡಗಿದರು. ಬಾಳ್
ತಾಮಾರಿಗೆ ಮುಟ್ಟಿದ ಕೂಡಲೆ ಅಲ್ಲಿ ನಿಂತು ತಿರಿಗಿ
ಯುದ್ಧವನ್ನು ಪ್ರಾರಂಭಿಸಿದರು. ಅಷ್ಟರಲ್ಲಿ ಹೊಂಚಿ
ನೋಡುತ್ತಿದ್ದವರು ತಾವು ಅಡಗಿಕೊಂಡಿದ್ದ ಗಿಬೆ
34 ಯದ ಮೈದಾನಿನಿಂದ ಎದ್ದು ಪಟ್ಟಣದ ಮುಂದೆ
ಬಂದರು; ಅವರು ಸುಮಾರು ಹತ್ತು ಸಾವಿರ ಮಂದಿ
ಯುದ್ಧವೀರರು. ಯುದ್ಧವು ಬಹುಘೋರವಾಯಿತು.
ತಮಗೆ ಅಪಾಯವು ಒದಗಿ ಬಂದದೆ ಎಂಬದು ಬೆನ್ಯಾ
35 ಮೀನ್ಯರಿಗೆ ಇನ್ನೂ ಗೊತ್ತಾಗಲಿಲ್ಲ. ಯೆಹೋವನು
ಇಸ್ರಾಯೇಲ್ಯರಿಗೆ ಜಯಕೊಟ್ಟದರಿಂದ ಅವರು ಆ ದಿನ
ದಲ್ಲಿ ಇಪ್ಪತ್ತೈದು ಸಾವಿರದ ನೂರು ಮಂದಿ ಬೆನ್ಯಾ
36 ಮೀನ್ಯ ಭಟರನ್ನು ಹತಮಾಡಿದರು. ತಾವು ಸೋತು
ಹೋದೆವೆಂಬದು ಬೆನ್ಯಾಮೀನ್ಯರಿಗೆ ಆಗ ತಿಳಿಯಿತು.
(ಇಸ್ರಾಯೇಲ್ಯರು ತಾವು ಗಿಬೆಯದ ಸಮೀಪ
ದಲ್ಲಿ ಹೊಂಚಿನೋಡುವದಕ್ಕೋಸ್ಕರ ಇಟ್ಟ ಜನರಲ್ಲಿ
ಭರವಸವುಳ್ಳವರಾಗಿದ್ದದರಿಂದ ತಮ್ಮ ಸ್ಥಳವನ್ನು ಬಿಟ್ಟು
37 ಬೆನ್ಯಾಮೀನ್ಯರ ಮುಂದೆ ಓಡಿಹೋದರು. ಅಷ್ಟರಲ್ಲಿ
ಅಡಗಿಕೊಂಡಿದ್ದವರು ಎದ್ದು ಗಿಬೆಯಕ್ಕೆ ಶೀಘ್ರವಾಗಿ
ಹೋಗಿ ಅದರೊಳಗಿದ್ದವರೆಲ್ಲರನ್ನೂ ಕತ್ತಿಯಿಂದ ಸಂಹ
38 ರಿಸಿದರು. ಅಡಗಿದ್ದವರು ಊರಿಗೆ ಬೆಂಕಿಹೊತ್ತಿಸಿ
ಹೊಗೆ ಏರಿಹೋಗುವಂತೆ ಮಾಡಿದ ಮೇಲೆ ಓಡಿಹೋಗು
ತ್ತಿದ್ದವರು ತಿರುಗಿಕೊಂಡು ಯುದ್ಧಕ್ಕೆ ನಿಲ್ಲಬೇಕೆಂದು
ಹೊಂಚಿನೋಡುವವರೂ ಉಳಿದ ಇಸ್ರಾಯೇಲ್ಯರೂ
39 ತಮ್ಮತಮ್ಮೊಳಗೆ ಗೊತ್ತುಮಾಡಿದ್ದರು. ಬೆನ್ಯಾಮೀನ್ಯ
ರಾದರೋ—ಇಸ್ರಾಯೇಲ್ಯರು ಮುಂಚಿನಂತೆ ನಮ್ಮ
ಮುಂದೆ ಸೋತುಹೋದರೆಂದು ನೆನಸಿ ಅವರನ್ನು ಹತಿಸ
ಪ್ರಾರಂಭಿಸಿ ಸುಮಾರು ಮೂವತ್ತು ಮಂದಿಯನ್ನು
40 ಕೊಂದುಹಾಕಿದರು. ಆದರೆ ಪಟ್ಟಣದಿಂದ ಹೊಗೆಯೆದ್ದು
ಸ್ತಂಭದೋಪಾದಿಯಲ್ಲಿ ಕಾಣಿಸಲು ಇಸ್ರಾಯೇಲ್ಯರು
ತಿರುಗಿ ನಿಂತರು. ಬೆನ್ಯಾಮೀನ್ಯರು ಹಿಂದಿರುಗಿ ನೋಡಿ 41
ತಮ್ಮ ಪಟ್ಟಣವು ಅಗ್ನಿಗೆ ಆಹುತಿಯಾದದ್ದನ್ನು ಕಂಡು
ತಮಗೆ ಅಪಾಯಪ್ರಾಪ್ತವಾಯಿತೆಂದು ಕಳವಳ
ಗೊಂಡರು. ಅವರು ಇಸ್ರಾಯೇಲ್ಯರಿಗೆ ಬೆನ್ನು ತೋರಿಸಿ 42
ಅರಣ್ಯಮಾರ್ಗವಾಗಿ ಓಡಿಹೋದರು. ಆದರೆ ಯುದ್ಧ
ಸ್ಥರು ಅವರನ್ನು ಹಿಂದಟ್ಟಿದ್ದರಿಂದಲೂ ಪಟ್ಟಣಕ್ಕೆ ಬೆಂಕಿ
ಹೊತ್ತಿಸಿದವರು ಬಂದುಬಿಟ್ಟದ್ದರಿಂದಲೂ ಅವರು ಉಭ
ಯರ ಮಧ್ಯದಲ್ಲಿ ಸಿಕ್ಕಿ ಹಾಳಾದರು. ಇಸ್ರಾಯೇಲ್ಯ 43
ರು ಅವರನ್ನು ಸುತ್ತಿಕೊಂಡು ಎಲ್ಲಿಯೂ ಓಡಗೊಡದೆ
ಗಿಬೆಯ ಊರಿನ ಪೂರ್ವದಿಕ್ಕಿನಲ್ಲಿರುವ ಮೆನೂಹದಲ್ಲಿ
ತುಳಿದುಬಿಟ್ಟರು. ಈ ಪ್ರಕಾರ ಬೆನ್ಯಾಮೀನ್ಯರಲ್ಲಿ 44
ಹದಿನೆಂಟು ಸಾವಿರ ಮಂದಿ ಯುದ್ಧವೀರರು ಹತರಾ
ದರು. ಇದಲ್ಲದೆ ಅವರು ಅರಣ್ಯದಲ್ಲಿರುವ ರಿಮ್ಮೋನ್ 45
ಗಿರಿಗೆ ಓಡಿಹೋಗುವಾಗ ಹಕ್ಕಲುತೆನೆಗಳನ್ನೋಎಂಬಂತೆ
ಐದು ಸಾವಿರ ಜನರನ್ನು ರಾಜಮಾರ್ಗಗಳಲ್ಲಿ ಕೊಂದು
ಹಾಕಿದರು. ಅಲ್ಲಿಂದ ಗಿದ್ದೋಮಿನ ವರೆಗೆ ಹಿಂದಟ್ಟಿ
ತಿರಿಗಿ ಎರಡು ಸಾವಿರ ಜನರನ್ನು ಹತಮಾಡಿದರು. ಹೀಗೆ 46
ಆ ದಿವಸ ಬೆನ್ಯಾಮೀನ್ಯರಲ್ಲಿ ಇಪ್ಪತ್ತೈದು ಸಾವಿರ
ಯುದ್ಧಸನ್ನದ್ಧರಾದ ಭಟರು ಸಂಹೃತರಾದರು.)
ಆದರೆ ಆರು ನೂರು ಮಂದಿ ಅರಣ್ಯಮಾರ್ಗವಾಗಿ 47
ಓಡಿಹೋಗಿ ರಿಮ್ಮೋನ್ ಗಿರಿಯನ್ನು ಸೇರಿ ಅಲ್ಲಿ
ನಾಲ್ಕು ತಿಂಗಳಿದ್ದರು. ಇಸ್ರಾಯೇಲ್ಯರು ತಿರುಗಿ 48
ಕೊಂಡು ಬೆನ್ಯಾಮೀನ್ ದೇಶದ ಉಳಿದ ಗ್ರಾಮನಗರ
ಗಳಿಗೆ ಹೋಗಿ ಅವುಗಳ ನಿವಾಸಿಗಳನ್ನೂ ದನಕುರಿ
ಗಳನ್ನೂ ಸಿಕ್ಕಿದ್ದೆಲ್ಲವನ್ನೂ ಸಂಹರಿಸಿ ಎಲ್ಲಾ ಊರು
ಗಳಿಗೆ ಬೆಂಕಿಹೊತ್ತಿಸಿದರು.

ಹತರಾಗದೆ ಉಳಿದ ಬೆನ್ಯಾಮೀನ್ಯರಿಗೆ ಹೆಂಡತಿಯರನ್ನು
ದೊರಕಿಸಿದ್ದು.

ಇಸ್ರಾಯೇಲ್ಯರೆಲ್ಲರೂ ಮಿಚ್ಪೆಯಲ್ಲಿದ್ದಾಗ ತಾವು 21
ಬೆನ್ಯಾಮೀನ್ಯರಿಗೆ ತಮ್ಮ ಹೆಣ್ಣುಗಳನ್ನು ಕೊಡುವ
ದಿಲ್ಲವೆಂದು ಆಣೆಯಿಟ್ಟಿದ್ದರು. ಅವರು ಬೇತೇ 2
ಲಿಗೆ ಬಂದು ಸಾಯಂಕಾಲದ ವರೆಗೆ ದೇವರ ಮುಂದೆ
ಬಿದ್ದುಕೊಂಡು ಗಟ್ಟಿಯಾಗಿ ಅಳುತ್ತಾ—ಯೆಹೋ 3
ವನೇ, ಇಸ್ರಾಯೇಲ್ಯರ ದೇವರೇ, ನಮ್ಮಲ್ಲಿ ಹೀಗೆ
ಯಾಕೆ ಆಯಿತು? ಇಸ್ರಾಯೇಲ್ಯರ ಒಂದು ಕುಲವು
ಹಾಳಾಗಿ ಹೋಯಿತಲ್ಲಾ ಎಂದು ಕೂಗಿದರು. ಮರು 4
ದಿವಸ ಅವರು ಬೆಳಿಗ್ಗೆ ಎದ್ದು ಯಜ್ಞವೇದಿಯನ್ನು
ಕಟ್ಟಿ ಸರ್ವಾಂಗಹೋಮಗಳನ್ನೂ ಸಮಾಧಾನಯಜ್ಞ
ಗಳನ್ನೂ ಸಮರ್ಪಿಸಿದರು. ಮತ್ತು ಯೆಹೋವನ 5
ಮುಂದೆ ಸಭೆನೆರೆದಾಗ ಅದಕ್ಕೆ ಬಾರದೆ ಇದ್ದಂಥ
ಇಸ್ರಾಯೇಲ್ಯರು ಯಾರಾರೆಂದು ವಿಚಾರಮಾಡಿ
ದರು. ಯಾಕಂದರೆ ಮಿಚ್ಪೆಯಲ್ಲಿ—ಯೆಹೋವನ
ಸನ್ನಿಧಿಗೆ ಬಾರದವರನ್ನು ಕೊಂದೇಹಾಕುವೆವೆಂದು
ಆಣೆಯಿಟ್ಟು ಖಂಡಿತ ಪ್ರಮಾಣಮಾಡಿದ್ದರು. ಇಸ್ರಾ 6
ಯೇಲ್ಯರು ತಮ್ಮ ಬಂಧುಗಳಾದ ಬೆನ್ಯಾಮೀನ್ಯರ
ಅವಸ್ಥೆಯನ್ನು ನೆನಸಿ ದುಃಖದಿಂದ—ಅಯ್ಯೋ, ಇಸ್ರಾ
ಯೇಲ್ಯರಾದ ನಮ್ಮಲ್ಲಿ ಒಂದು ಕುಲವು ಕಡಿಮೆಯಾ

7 ಯಿತಲ್ಲಾ; ಜೀವದಿಂದುಳಿದವರಿಗೆ ಹೆಂಡತಿಯರನ್ನು
ದೊರಕಿಸಿಕೊಡುವದು ಹೇಗೆ? ನಮ್ಮ ಹೆಣ್ಣುಗಳನ್ನು
ಅವರಿಗೆ ಕೊಡುವದಿಲ್ಲವೆಂದು ಯೆಹೋವನ ಹೆಸರಿನಲ್ಲಿ
ಆಣೆಯಿಟ್ಟೆವಲ್ಲಾ ಎಂದು ಗೋಳಾಡಿದರು.
8 ಮಿಚ್ಪೆಯಲ್ಲಿ ಯೆಹೋವನ ಮುಂದೆ ಸಭೆನೆರೆದಾಗ
ಅದಕ್ಕೆ ಬಾರದಿದ್ದ ಇಸ್ರಾಯೇಲ್ಯರು ಯಾರಾದರೂ
ಇದ್ದಾರೋ ಎಂದು ವಿಚಾರಿಸುವಲ್ಲಿ ಯಾಬೇಷ್
ಗಿಲ್ಯಾದಿನಿಂದ ಒಬ್ಬನೂ ಬರಲಿಲ್ಲವೆಂದು ಗೊತ್ತಾ
9 ಯಿತು. ಜನರನ್ನು ಲೆಕ್ಕಿಸಿದಾಗ ಯಾಬೇಷ್ ಗಿಲ್ಯಾ
ದಿನಿಂದ ಯಾರೂ ಬರಲಿಲ್ಲವೆಂಬದು ದೃಢವಾಯಿತು.
10 ಆಗ ಅವರು ತಮ್ಮಲ್ಲಿಂದ ಹನ್ನೆರಡು ಸಾವಿರ ಮಂದಿ
ಪರಾಕ್ರಮಶಾಲಿಗಳನ್ನು ಆರಿಸಿಕೊಂಡು ಅವರಿಗೆ—
ನೀವು ಯಾಬೇಷ್ ಗಿಲ್ಯಾದಿಗೆ ಹೋಗಿ ಎಲ್ಲಾ ನಿವಾಸಿ
ಗಳನ್ನೂ ಸ್ತ್ರೀಯರನ್ನೂ ಚಿಕ್ಕ ಮಕ್ಕಳನ್ನೂ ಬಿಡದೆ
11 ಸಂಹರಿಸಬೇಕು; ಹೇಗೂ ಗಂಡಾದದ್ದೆಲ್ಲವನ್ನೂ
ಮದುವೆಯಾದ ಸ್ತ್ರೀಯರನ್ನೂ ನಿರ್ಮೂಲಮಾಡು
ವದು ನಿಮ್ಮ ಕೆಲಸ ಎಂದು ಆಜ್ಞಾಪಿಸಿ ಕಳುಹಿಸಿ
12 ದರು. ಯಾಬೇಷ್ ಗಿಲ್ಯಾದಿನಲ್ಲಿ ಇನ್ನೂ ಮದುವೆ
ಯಾಗದಿದ್ದ ನಾನೂರು ಮಂದಿ ಯುವತಿಯರಿದ್ದರು.
ಪಟ್ಟಣವನ್ನು ಸಂಹರಿಸುವದಕ್ಕೆ ಹೋದವರು ಇವ
ರನ್ನು ಉಳಿಸಿ ಕಾನಾನ್ ದೇಶದ ಶೀಲೋವಿನಲ್ಲಿದ್ದ
13 ಪಾಳೆಯಕ್ಕೆ ತೆಗೆದುಕೊಂಡು ಬಂದರು. ಅನಂತರ
ಸರ್ವಸಭೆಯವರು ರಿಮ್ಮೋನ್ ಗಿರಿಯಲ್ಲಿದ್ದ ಬೆನ್ಯಾ
ಮೀನ್ಯರ ಬಳಿಗೆ ದೂತರನ್ನು ಕಳುಹಿಸಿ ಅವರಲ್ಲಿ
ಸಮಾಧಾನವಾಕ್ಯವನ್ನು ಪ್ರಕಟಿಸಲು ಅವರು ತಿರಿಗಿ
14 ಬಂದರು. ಇಸ್ರಾಯೇಲ್ಯರು ತಾವು ಯಾಬೇಷ್
ಗಿಲ್ಯಾದಿನಿಂದ ಉಳಿಸಿ ತಂದ ಕನ್ಯೆಯರನ್ನು ಅವರಿಗೆ
ಮದುವೆಮಾಡಿಕೊಟ್ಟರು; ಅವರು ಸಾಲಲಿಲ್ಲ.
15 ಯೆಹೋವನು ನಮ್ಮಲ್ಲಿ ಒಂದು ಲೋಪವನ್ನುಂಟು
ಮಾಡಿದ್ದಾನೆಂದು ಇಸ್ರಾಯೇಲ್ಯರು ಬೆನ್ಯಾಮೀನ್ಯರ
16 ವಿಷಯದಲ್ಲಿ ದುಃಖಪಟ್ಟರು. ಸಭೆಯ ಹಿರಿಯರು—
ಉಳಿದಿರುವ ಬೆನ್ಯಾಮೀನ್ಯರಿಗೋಸ್ಕರ ಹೆಂಡತಿಯ
ರನ್ನು ದೊರಕಿಸುವದು ಹೇಗೆ? ಅವರ ಸ್ತ್ರೀಯರೆಲ್ಲಾ
17 ಸಂಹೃತರಾದರಲ್ಲಾ. ಇಸ್ರಾಯೇಲ್ಯರ ಒಂದು ಪೂರ್ಣ
ಕುಲವು ಅಳಿದುಹೋಗಬಾರದು; ತಪ್ಪಿಸಿಕೊಂಡು

ಉಳಿದಿರುವ ಬೆನ್ಯಾಮೀನ್ಯರಿಗೆ ಬಾಧ್ಯಸ್ಥರು ಹುಟ್ಟ
ಬೇಕಲ್ಲಾ. ಬೆನ್ಯಾಮೀನ್ಯರಿಗೆ ತಮ್ಮ ಹೆಣ್ಣುಗಳನ್ನು
ಕೊಡುವ ಇಸ್ರಾಯೇಲ್ಯರು ಶಾಪಗ್ರಸ್ತರಾಗಲಿ ಎಂದು
ಆಣೆಯಿಟ್ಟುಕೊಂಡಿದ್ದೇವಾದದರಿಂದ ನಾವು ಅವರಿಗೆ
ನಮ್ಮ ಹೆಣ್ಣುಗಳನ್ನು ಕೊಡುವದಕ್ಕಾಗುವದಿಲ್ಲ
ಎಂದು ಮಾತಾಡಿಕೊಳ್ಳುತ್ತಿರುವಾಗ ಶೀಲೋವಿನಲ್ಲಿ
ವರ್ಷ ವರ್ಷ ಯೆಹೋವನ ಉತ್ಸವ ನಡೆಯುತ್ತದೆಂಬ
ದು ಅವರಿಗೆ ನೆನಪಿಗೆ ಬಂದಿತು. (ಶೀಲೋ ಎಂಬದು
ಬೇತೇಲಿನ ಉತ್ತರಕ್ಕೂ ಬೇತೇಲಿನಿಂದ ಶೆಕೆಮಿಗೆ
ಹೋಗುವ ರಾಜಮಾರ್ಗದ ಪೂರ್ವಕ್ಕೂ ಲೆಬೋನದ
ದಕ್ಷಿಣಕ್ಕೂ ಇರುತ್ತದೆ.) ಆಗ ಅವರು ಬೆನ್ಯಾಮೀನ್ಯ
ರನ್ನು ಕರೆದು ಅವರಿಗೆ—ಇಗೋ, ನೀವು ದ್ರಾಕ್ಷೆ
ತೋಟಗಳಲ್ಲಿ ಅಡಗಿಕೊಳ್ಳಿರಿ; ಶೀಲೋವಿನ ಕನ್ಯೆ
ಯರು ಹೊರಗೆ ಬಂದು ನಾಟ್ಯವಾಡುವಾಗ ನೀವು
ತೋಟಗಳಿಂದ ಹೊರಗೆ ಬಂದು ಪ್ರತಿಯೊಬ್ಬನು
ತನತನಗೆ ಶೀಲೋವಿನ ಕನ್ನಿಕೆಗಳಿಂದ ಒಬ್ಬಳನ್ನು
ಹೆಂಡತಿಯಾಗಿ ತೆಗೆದುಕೊಂಡು ನಿಮ್ಮ ಸೀಮೆಗೆ
ಓಡಿಹೋಗಿರಿ. ಅವರ ತಂದೆಗಳೂ ಅಣ್ಣತಮ್ಮಂದಿರು
ನಮ್ಮ ಹತ್ತಿರ ದೂರುತಂದರೆ ನಾವು ಅವರಿಗೆ—
ನಮ್ಮನ್ನು ನೋಡಿ ಅವರಿಗೆ ಕೃಪೆತೋರಿಸಿರಿ; ಯುದ್ಧ
ದಿಂದ ಪ್ರತಿಯೊಬ್ಬನಿಗೆ ಹೆಣ್ಣನ್ನು ದೊರಕಿಸುವದು
ನಮ್ಮಿಂದಾಗಲಿಲ್ಲವಲ್ಲಾ; ಮತ್ತು ನಿಮ್ಮ ಹೆಣ್ಣುಮಕ್ಕ
ಳನ್ನು ನೀವೇ ಕೊಡಲಿಲ್ಲವಾದದರಿಂದ ನೀವು ನಿರಪರಾ
ಧಿಗಳು ಎಂದು ಹೇಳಿ ಸಮಾಧಾನಪಡಿಸುವೆವು ಅಂದರು.
ಅದರಂತೆಯೇ ಬೆನ್ಯಾಮೀನ್ಯರು ನಾಟ್ಯವಾಡುವದ
ಕ್ಕೋಸ್ಕರ ಹೊರಗೆ ಬಂದಿದ್ದ ಕನ್ಯೆಯರಲ್ಲಿ ತಮ
ಸಂಖ್ಯೆಗೆ ಸರಿಯಾಗುವಷ್ಟು ಮಂದಿಯನ್ನು ಹೆಂಡ
ಯರನ್ನಾಗಿ ಹಿಡಿದುಕೊಂಡು ತಮ್ಮ ಸ್ವಾಸ್ತ್ಯಭೂಮಿಗೆ
ಹೋಗಿ ಅಲ್ಲಿ ಪಟ್ಟಣಗಳನ್ನು ಕಟ್ಟಿ ವಾಸಮಾಡಿ
ದರು.
ಅನಂತರ ಇಸ್ರಾಯೇಲ್ಯರು ತಮ್ಮ ತಮ್ಮ ಕುಲ
ಗೋತ್ರಗಳಿಗೆ ಸ್ವಾಸ್ತ್ಯವಾಗಿ ಸಿಕ್ಕಿದ ಪ್ರದೇಶಗಳಿಗೆ
ಹಿಂದಿರುಗಿ ಹೋದರು. ಆ ಕಾಲದಲ್ಲಿ ಇಸ್ರಾಯೇ
ಲ್ಯರೊಳಗೆ ಅರಸನಿರಲಿಲ್ಲ; ಪ್ರತಿಯೊಬ್ಬನೂ ತನ್ನ
ಮನಸ್ಸಿಗೆ ಬಂದಂತೆ ನಡೆಯುತ್ತಿದ್ದನು.

---

# THE BOOK OF RUTH

## ರೂತಳು

ಮೋವಾಬ್ಯಳಾದ ರೂತಳು ಗಂಡ ಸತ್ತ ಮೇಲೆ ಅತ್ತೆಯೊಡನೆ ಯೆಹೂದದೇಶಕ್ಕೆ ಬಂದದ್ದು.

1 ನ್ಯಾಯಸ್ಥಾಪಕರು ಆಳುತ್ತಿದ್ದಾಗ ದೇಶದಲ್ಲಿ ಬರ
ಬಂದದರಿಂದ ಯೆಹೂದಪ್ರಾಂತದ ಬೇತ್ಲೆಹೇಮಿನವ
ನೊಬ್ಬನು ತನ್ನ ಹೆಂಡತಿ, ಇಬ್ಬರು ಕುಮಾರರು ಇವ
ಸಹಿತವಾಗಿ ಮೋವಾಬ್‌ದೇಶದಲ್ಲಿ ವಾಸಮಾಡಬೇ
ಕೆಂದು ಹೊರಟುಹೋದನು. ಆ ಮನುಷ್ಯನಿಗೆ ಎಲಿ
ಮೆಲೆಕನೆಂದೂ ಅವನ ಹೆಂಡತಿಗೆ ನೊವೊಮಿಯೆಂದು
ಇಬ್ಬರು ಮಕ್ಕಳಿಗೆ ಮಹ್ಲೋನ್, ಕಿಲ್ಯೋನ್ ಎಂದು

ಹೆಸರು. ಯೆಹೂದದೇಶಕ್ಕೆ ಸೇರಿದ ಎಫ್ರಾತದಲ್ಲಿ
ರುವ ಬೇತ್ಲೆಹೇಮಿನವರಾದ ಇವರು ಬಂದು ಮೋವಾ
3 ಬ್‌ದೇಶದಲ್ಲಿ ಪ್ರವಾಸವಾಗಿದ್ದಾಗ ನೊವೊಮಿಯ
ಗಂಡನಾದ ಎಲೀಮೆಲೆಕನು ಸತ್ತನು. ಆಕೆಯು
4 ಇಬ್ಬರು ಮಕ್ಕಳೊಡನೆ ಉಳಿದಳು. ಈ ಮಕ್ಕಳು
ಒರ್ಫಾ, ರೂತ್ ಎಂಬ ಹೆಸರುಳ್ಳ ಇಬ್ಬರು ಮೋವಾ
ಬ್‌ಸ್ತ್ರೀಯರನ್ನು ಮದುವೆಮಾಡಿಕೊಂಡು ಸುಮಾರು
5 ಹತ್ತು ವರುಷ ಅಲ್ಲಿದ್ದ ಮೇಲೆ ಇಬ್ಬರೂ ತೀರಿಹೋದ
ರು. ಹೀಗೆ ಆ ಸ್ತ್ರೀಯು ಗಂಡನನ್ನೂ ಇಬ್ಬರು ಮಕ್ಕ
ಳನ್ನೂ ಕಳೆದುಕೊಂಡು ಒಬ್ಬಳೇ ಉಳಿದಳು.
6 ಯೆಹೋವನು ತನ್ನ ಜನರನ್ನು ಕಟಾಕ್ಷಿಸಿ ಅವ
ರಿಗೆ ಆಹಾರವನ್ನು ಅನುಗ್ರಹಿಸಿದ್ದಾನೆಂಬ ವರ್ತಮಾ
ನವನ್ನು ಕೇಳಿದ ನೊವೊಮಿಯು ಮೋವಾಬ್‌ದೇಶ
ದಿಂದ ಸ್ವದೇಶಕ್ಕೆ ಹೋಗಬೇಕೆಂದು ಸೊಸೆಯರೊಡನೆ
7 ಹೊರಟಳು. ಆಕೆಯು ಇಬ್ಬರು ಸೊಸೆಯರೊಡನೆ
ತಾನಿದ್ದ ಸ್ಥಳದಿಂದ ಯೆಹೂದದೇಶಕ್ಕೆ ಹೋಗುವ
8 ದಾರಿಯಲ್ಲಿ ಅವರಿಗೆ—ತಿರಿಗಿ ನಿಮ್ಮ ನಿಮ್ಮ ತೌರ
ಮನೆಗೆ ಹೋಗಿರಿ; ನೀವು ನನ್ನನ್ನೂ ಮರಣಹೊಂದಿದ
ನನ್ನ ಮಕ್ಕಳನ್ನೂ ಪ್ರೀತಿಸಿದಂತೆ ಯೆಹೋವನು
9 ನಿಮ್ಮನ್ನು ಪ್ರೀತಿಸಿ ನಿಮಗೆ ಕೃಪೆಮಾಡಲಿ. ನೀವಿಬ್ಬ
ರೂ ಮದುವೆಯಾಗಿ ಗಂಡನ ಮನೆಯಲ್ಲಿ ವಿಶ್ರಾಂತಿ
ಯಿಂದಿರುವಂತೆ ಯೆಹೋವನು ಅನುಗ್ರಹಿಸಲಿ ಎಂದು
ಹೇಳಿ ಅವರನ್ನು ಮುದ್ದಿಟ್ಟಳು. ಆಗ ಅವರು ಗಟ್ಟಿ
10 ಯಾಗಿ ಅತ್ತು—ನಾವೂ ನಿನ್ನ ಜೊತೆಯಲ್ಲೇ ನಿನ್ನ
11 ಸ್ವಜನರ ಬಳಿಗೆ ಬರುತ್ತೇವೆ ಅನ್ನಲು ಆಕೆಯು—ನನ್ನ
ಮಕ್ಕಳೇ, ನೀವು ನನ್ನೊಡನೆ ಬರುವದೇಕೆ? ಹಿಂದಿ
ರುಗಿ ಹೋಗಿರಿ; ನಿಮಗೆ ಗಂಡಂದಿರನ್ನು ಕೊಡು
ವದಕ್ಕೆ ನನ್ನ ಗರ್ಭದಲ್ಲಿ ಬೇರೆ ಮಕ್ಕಳಿಲ್ಲವಲ್ಲಾ.
12 ಮತ್ತೊಬ್ಬನನ್ನು ಮದುವೆಮಾಡಿಕೊಳ್ಳುವ ಪ್ರಾಯ
ವೂ ನನಗೆ ದಾಟಿಹೋಯಿತು. ಆದದರಿಂದ ನನ್ನ
ಮಕ್ಕಳೇ, ನೀವು ಹಿಂದಿರುಗಿ ಹೋಗಿರಿ. ಒಂದು
ವೇಳೆ ನಿರೀಕ್ಷೆಯಿಂದ ಈ ಹೊತ್ತೇ ಒಬ್ಬ ಗಂಡನನ್ನು
13 ಕೂಡಿ ಮಕ್ಕಳನ್ನು ಹೆತ್ತರೂ ಅವರು ದೊಡ್ಡವರಾಗುವ
ತನಕ ಕಾದಿರುವಿರೋ? ಅಲ್ಲಿಯ ವರೆಗೂ ಗಂಡಂದಿ
ರಿಲ್ಲದೆ ಇರುವಿರೋ? ನನ್ನ ಮಕ್ಕಳೇ, ಹಾಗೆ ಮಾಡ
ಬೇಡಿರಿ; ಯೆಹೋವನ ಹಸ್ತವು ನನಗೆ ವಿರೋಧವಾಗಿ
ರುವದರಿಂದ ನಿಮಗೋಸ್ಕರ ಬಹಳ ದುಃಖಪಡು
14 ತ್ತೇನೆ ಅಂದಳು. ಆಗ ಅವರು ತಿರಿಗಿ ಗಟ್ಟಿಯಾಗಿ
ಅತ್ತರು. ಒರ್ಫಳು ಅತ್ತೆಯನ್ನು ಮುದ್ದಿಟ್ಟು ಹೊರ
ಟು ಹೋದಳು; ರೂತಳಾದರೋ ಅತ್ತೆಯನ್ನೇ ಅಂಟಿ
15 ಕೊಂಡಳು. ನೊವೊಮಿಯು ರೂತಳಿಗೆ—ಇಗೋ,
ನಿನ್ನ 1)ಓರಗಿತ್ತಿಯು ತಿರಿಗಿ ತನ್ನ ಜನರ ಬಳಿಗೂ
ದೇವತೆಗಳ ಬಳಿಗೂ ಹೋಗುತ್ತಾಳೆ; ನೀನೂ ಆಕೆಯ
16 ಜೊತೆಯಲ್ಲಿ ಹೋಗು ಅಂದಾಗ ಆಕೆಯು—ನಿನ್ನನ್ನು
ಬಿಟ್ಟು ಹಿಂದಿರುಗಬೇಕೆಂದು ನನ್ನನ್ನು ಒತ್ತಾಯ
ಮಾಡಬೇಡ. ನೀನು ಎಲ್ಲಿಗೆ ಹೋದರೂ ನಾನೂ
ಅಲ್ಲಿಗೆ ಬರುವೆನು; ನೀನು ವಾಸಿಸುವಲ್ಲೇ ನಾನೂ
ವಾಸಿಸುವೆನು; ನಿನ್ನ ಜನರೇ ನನ್ನ ಜನರು; ನಿನ್ನ
ದೇವರೇ ನನ್ನ ದೇವರು. ನೀನು ಸಾಯುವಲ್ಲೇ 17
ನಾನೂ ಸಾಯುವೆನು; ಅಲ್ಲೇ ನನಗೆ ಸಮಾಧಿ
ಯಾಗಬೇಕು. ಮರಣದಿಂದಲ್ಲದೆ ನಾನು ನಿನ್ನನ್ನು
ಅಗಲಿದರೆ ಯೆಹೋವನು ನನಗೆ ಬೇಕಾದದ್ದನ್ನು
ಮಾಡಲಿ ಎಂದಳು. ಆಕೆಯು ತನ್ನ ಜೊತೆಯಲ್ಲಿ 18
ಬರುವದಕ್ಕೆ ದೃಢಮಾಡಿಕೊಂಡಿದ್ದಾಳೆಂದು ನೊವೊ
ಮಿಯು ತಿಳಿದು ಸುಮ್ಮನಾದಳು. ಹಾಗೆಯೇ 19
ಪ್ರಯಾಣಮಾಡಿಕೊಂಡು ಅವರಿಬ್ಬರೂ ಬೇತ್ಲೆಹೇಮಿಗೆ
ಬಂದು ಊರೊಳಕ್ಕೆ ಹೋದಾಗ ಅಲ್ಲೆಲ್ಲಾ ಗದ್ದಲ
ವಾಯಿತು. ಸ್ತ್ರೀಯರು—ಈಕೆಯು ನೊವೊಮಿಯ
ಲ್ಲವೋ ಎಂದು ಮಾತಾಡತೊಡಗಲು ಆಕೆಯು 20
ಅವರಿಗೆ—ನನ್ನನ್ನು 2)ನೊವೊಮಿಯೆಂದು ಕರೆಯ
ಬೇಡಿರಿ; ಸರ್ವಶಕ್ತನು ನನ್ನನ್ನು ಬಹಳವಾಗಿ ದುಃಖ
ಪಡಿಸಿದ್ದಾನೆ. ಆದದರಿಂದ 3)ಮಾರಾ ಎಂದು ಕರೆ
ಯಿರಿ. ಭಾಗ್ಯವಂತಳಾಗಿ ಹೋದೆನು; ಯೆಹೋವನು 21
ನನ್ನನ್ನು ಗತಿಹೀನಳನ್ನಾಗಿ ಬರಮಾಡಿದನು. ಯೆಹೋ
ವನು ನನಗೆ ವಿರೋಧವಾಗಿ ಸಾಕ್ಷಿ ಹೇಳಿದ್ದಾನೆ; ಸರ್ವ
ಶಕ್ತನು ನನ್ನನ್ನು ಬಾಧಿಸಿದ್ದಾನೆ. ಇದರಿಂದ ನೀವು
ನನ್ನನ್ನು ನೊವೊಮಿಯೆಂದು ಕರೆಯುವದು ಹೇಗೆ
ಅಂದಳು. ಹೀಗೆ ನೊವೊಮಿಯು ಮೋವಾಬ್ಯಳೂ 22
ತನ್ನ ಸೊಸೆಯೂ ಆದ ರೂತಳೊಡನೆ ಬೇತ್ಲೆಹೇಮಿಗೆ
ಬಂದಳು. ಆಗ ಜವೆಗೋದಿಯ ಸುಗ್ಗಿಯು ಪ್ರಾರಂಭ
ವಾಗಿತ್ತು.

ರೂತಳು ಬೋವಜನ ಹೊಲದಲ್ಲಿ ಹಕ್ಕಲಾಯ್ದದ್ದು.

ನೊವೊಮಿಯ ಗಂಡನಾದ ಎಲೀಮೆಲೆಕನ ಗೋ 2
ತ್ರದಲ್ಲಿ ಬೋವಜನೆಂಬ ಒಬ್ಬ ಧನವಂತನಾದ ಸಂಬಂ
ಧಿಯಿದ್ದನು. ಮೋವಾಬ್ಯಳಾದ ರೂತಳು ನೊವೊ 2
ಮಿಗೆ—ನಾನು ಹೋಗಿ ಯಾವನು ನನಗೆ ದಯೆ
ತೋರಿಸುವನೋ ಅವನ ಹೊಲದಲ್ಲಿ ಹಕ್ಕಲತೆನೆಗ
ಳನ್ನು ಕೂಡಿಸಿಕೊಂಡು ಬರುವೆನು ಅಂದಳು. ಅದ
ಕ್ಕವಳು—ನನ್ನ ಮಗಳೇ, ಹೋಗು ಎನ್ನಲು ಆಕೆ 3
ಯು ದೈವಯೋಗದಿಂದ ಎಲೀಮೆಲೆಕನ ಗೋತ್ರ
ದವನಾದ ಬೋವಜನ ಸ್ವಾಸ್ತ್ಯವಾಗಿದ್ದ ಹೊಲಕ್ಕೇ
ಹೋಗಿ ಕೊಯ್ಯುವವರ ಹಿಂದಿನಿಂದ ಹಕ್ಕಲಾಯುತ್ತಾ
ಇದ್ದಳು. ಆಗ ಬೋವಜನು ಬೇತ್ಲೆಹೇಮಿನಿಂದ 4
ಹೊಲಕ್ಕೆ ಬಂದು ಕೊಯ್ಯುವವರಿಗೆ—ಯೆಹೋವನು
ನಿಮ್ಮ ಸಂಗಡ ಇರಲಿ ಅಂದನು. ಅವರು—ಯೆ
ಹೋವನು ನಿನ್ನನ್ನು ಆಶೀರ್ವದಿಸಲಿ ಎಂದು ಹರಸಿ
ದರು. ಬೋವಜನು ಕೊಯ್ಯುವವರ ಮೇಲಿರಿಸಿದ 5
ತನ್ನ ಸೇವಕನನ್ನು—ಇವಳು ಯಾರ ಹುಡುಗಿ ಎಂದು
ಕೇಳಿದ್ದಕ್ಕೆ ಅವನು—ನೊವೊಮಿಯ ಸಂಗಡ ಬಂದ 6
ಮೋವಾಬ್‌ಸ್ತ್ರೀಯು; ಇವಳು—ಕೊಯ್ಯುವವರ 7
ಹಿಂದಿನಿಂದ ಸಿವುಡುಗಳ ಮಧ್ಯದಲ್ಲಿ ಹಕ್ಕಲಾಯ್ದು
ಕೊಳ್ಳುವ ಹಾಗೆ ತನಗೆ ಅಪ್ಪಣೆಯಾಗಬೇಕೆಂದು
ಕೇಳಿಕೊಂಡಳು. ಈಕೆಯು ಮನೆಯಲ್ಲಿ ಹೆಚ್ಚಾಗಿ
ಕಾಲಕಳೆಯಲಿಲ್ಲ; ಬೆಳಿಗ್ಗೆ ಬಂದವಳು ಇನ್ನೂ

1) ಅಂದರೆ: ನೆಗೆಣ್ಣಿ. 2) ನೊವೊಮಿ ಅಂದರೆ ರಮಣೀಯಳು. 3) ಮಾರಾ ಅಂದರೆ ದುಃಖಿತಳು.

8 ಇಲ್ಲಿಯೇ ಇದ್ದಾಳೆ ಅಂದನು. ಆಗ ಬೋವ
ಜನು ರೂತಳಿಗೆ--ನನ್ನ ಮಗಳೇ, ಕೇಳು; ನನ್ನ
ಹೊಲವನ್ನು ಬಿಟ್ಟು ಬೇರೆಯವರ ಹೊಲಕ್ಕೆ ಹೋಗ
ಬೇಡ; ನನ್ನ ಹೆಣ್ಣಾಳುಗಳ ಜೊತೆಯಲ್ಲೇ ಇದ್ದು
9 ಕೊಂಡು ನನ್ನ ಆಳುಗಳು ಕೊಯ್ಯುವದಕ್ಕೋಸ್ಕರ
ಯಾವ ಹೊಲಕ್ಕೆ ಹೋಗುತ್ತಾರೋ ಆ ಹೊಲಕ್ಕೆ
ನೀನೂ ಹೋಗು. ನಿನ್ನನ್ನು ಯಾರೂ ಮುಟ್ಟಬಾರ
ದೆಂದು ನನ್ನ ಸೇವಕರಿಗೆ ಅಪ್ಪಣೆಕೊಟ್ಟಿದ್ದೇನೆ. ನಿನಗೆ
ದಾಹವಾದರೆ ನನ್ನ ಸೇವಕರೇ ನೀರು ತಂದು ತುಂಬಿ
ಸಿದ ನೀರಿನ ಪಾತ್ರೆಗಳ ಬಳಿಗೆ ಹೋಗಿ ಕುಡಿ ಎಂದು
10 ಹೇಳಿದನು. ರೂತಳು ಅವನಿಗೆ ಸಾಷ್ಟಾಂಗನಮಸ್ಕಾರ
ಮಾಡಿ—ಪರದೇಶಿಯಾದ ನನ್ನಲ್ಲಿ ಇಷ್ಟು ಕಟಾಕ್ಷ
11 ವೇಕೆ ಅನ್ನಲು ಬೋವಜನು—ನಿನ್ನ ಗಂಡನು ಸತ್ತ
ಮೇಲೆ ನೀನು ಅತ್ತೆಯನ್ನು ಪ್ರೀತಿಸಿ ತಂದೆತಾಯಿಗ
ಳನ್ನೂ ಸ್ವದೇಶವನ್ನೂ ಬಿಟ್ಟು ನೀನು ಈ ವರೆಗೂ
ಅರಿಯದ ಜನರ ಬಳಿಗೆ ಬಂದಿರುವಿಯೆಂಬದು ನನಗೆ
12 ಚೆನ್ನಾಗಿ ಗೊತ್ತಾಗಿದೆ. ನೀನು ಮಾಡಿದ ಉಪಕಾ
ರಕ್ಕೆ ಪ್ರತಿಯಾಗಿ ಯೆಹೋವನು ನಿನಗೆ ಉಪಕಾರ
ಮಾಡಲಿ; ನೀನು ಯಾವಾತನ ರೆಕ್ಕೆಗಳ ಮರೆ
ಯನ್ನು ಆಶ್ರಯಿಸಿಕೊಳ್ಳ ಬಂದಿಯೋ ಆ ಇಸ್ರಾ
ಯೇಲ್‍ದೇವರಾದ ಯೆಹೋವನು ನಿನಗೆ ಉತ್ತಮ
ವಾದ ಪ್ರತಿಫಲವನ್ನು ಅನುಗ್ರಹಿಸಲಿ ಎಂದು ಉತ್ತರ
13 ಕೊಟ್ಟನು. ಆಗ ಆಕೆಯು—ಸ್ವಾಮೀ, ತಾವು ದಾಸಿ
ಯಾದ ನನ್ನನ್ನು ಕಟಾಕ್ಷಿಸಿದ್ದೀರಿ; ನಾನು ತಮ್ಮ
ದಾಸಿಯೆನಿಸಿಕೊಳ್ಳುವದಕ್ಕೆ ಯೋಗ್ಯಳಲ್ಲದಿದ್ದರೂ
ನನ್ನನ್ನು ಕನಿಕರಿಸಿ ಪ್ರೀತಿಯಿಂದ ಮಾತಾಡಿಸಿದಿರಿ
14 ಅಂದಳು. ಊಟದ ವೇಳೆಯಾದಾಗ ಬೋವಜನು—
ಇಲ್ಲಿ ಬಾ; ರೊಟ್ಟಿಯನ್ನು ತೆಗೆದುಕೊಂಡು ಮುರಿದು
ಹುಳಿರಸದಲ್ಲಿ ಅದ್ದಿ ತಿನ್ನು ಎಂದು ಕರೆಯಲು
ಆಕೆಯು ಹೋಗಿ ಕೊಯ್ಯುವವರ ಬಳಿಯಲ್ಲಿ ಕೂತು
ಕೊಂಡಳು. ಇದಲ್ಲದೆ ಅವನು ಆಕೆಗೆ ಸುಟ್ಟ ತೆನೆ
ಗಳನ್ನು ಕೊಟ್ಟನು. ಆಕೆಯು ತಿಂದು ತೃಪ್ತಳಾಗಿ
15 ಇನ್ನೂ ಉಳಿಸಿಟ್ಟುಕೊಂಡಳು. ತರುವಾಯ ತಿರಿಗಿ
ಹಕ್ಕಲಾಯುವದಕ್ಕೆ ಏಳಲು ಬೋವಜನು ತನ್ನ ಸೇವ
ಕರಿಗೆ—ಈಕೆಯು ಸಿವುಡುಗಳ ಮಧ್ಯದಲ್ಲಿ ಹಕ್ಕ
16 ಲಾಯುಕೊಳ್ಳಲಿ, ಬೈಯಬೇಡಿರಿ; ಕಟ್ಟುಗಳಿಂದ ತೆನೆ
ಗಳನ್ನು ಕಿತ್ತುಹಾಕಿರಿ; ಈಕೆಯು ಕೂಡಿಸಿಕೊಳ್ಳಲಿ,
17 ಗದರಿಸಬೇಡಿರಿ ಎಂದು ಆಜ್ಞಾಪಿಸಿದನು. ರೂತಳು
ಸಾಯಂಕಾಲದ ವರೆಗೂ ಹಕ್ಕಲಾಯ್ದು ಕೂಡಿಸಿ
ದ್ದನ್ನು ಬಡಿದಾಗ ಸುಮಾರು ಮೂವತ್ತು ಸೇರು
18 ಜವೆಗೋದಿ ಸಿಕ್ಕಿತು. ಆಕೆಯು ಅದನ್ನು ಹೊತ್ತು
ಕೊಂಡು ಊರಿಗೆ ಬಂದು ಅತ್ತೆಗೆ ತೋರಿಸಿ ತಾನು
19 ಉಳಿಸಿಟ್ಟದ್ದನ್ನು ತೆಗೆದು ಕೊಟ್ಟಳು. ಅತ್ತೆಯು—
ನೀನು ಈ ಹೊತ್ತು ಯಾರ ಹೊಲದಲ್ಲಿ ಹಕ್ಕಲಾಯ್ದಿ?
ಎಲ್ಲಿ ಕೆಲಸಮಾಡಿದಿ? ನಿನ್ನನ್ನು ಕಟಾಕ್ಷಿಸಿದವನಿಗೆ
ಶುಭವಾಗಲಿ ಎನ್ನಲು ರೂತಳು--ನಾನು ಯಾವನ
ಹೊಲದಲ್ಲಿ ಹಕ್ಕಲಾಯ್ದೆನೋ ಅವನ ಹೆಸರು ಬೋವ
20 ಜನೆಂದು ತಿಳಿಸಿದಳು. ಆಗ ನೊವೊಮಿಯು—ಸತ್ತ
ವರಿಗೂ ಬದುಕುವವರಿಗೂ ಬಿಡದೆ ದಯೆತೋರಿಸು
ತ್ತಿರುವ ಇವನು ಯೆಹೋವನಿಂದ ಆಶೀರ್ವಾದ ಹೊಂ
ದಲಿ ಎಂದು ಹೇಳಿ, ಆ ಮನುಷ್ಯನು ತಮ್ಮ ಸಂಬಂಧಿಕ
ನೆಂದೂ ಸಮೀಪಬಂಧುಗಳಲ್ಲೊಬ್ಬನೆಂದೂ ರೂತಳಿಗೆ
ತಿಳಿಸಿದಳು. ಆಗ ಮೋವಾಬ್ಯಳಾದ ರೂತಳು—ಇದ
ಲ್ಲದೆ ಆ ಮನುಷ್ಯನು ನನಗೆ—ಸುಗ್ಗಿಯೆಲ್ಲಾ ತೀರುವ
ವರೆಗೂ ನನ್ನ ಆಳುಗಳ ಜೊತೆಯಲ್ಲೇ ಇರು ಎಂದು
ಹೇಳಿದ್ದಾನೆ ಅನ್ನಲು ನೊವೊಮಿಯು ತನ್ನ ಸೊಸೆ
ಯಾದ ರೂತಳಿಗೆ--ನನ್ನ ಮಗಳೇ, ನೀನು ಅವನ
ಹೆಣ್ಣಾಳುಗಳ ಸಂಗಡಲೇ ಹೊರಟುಹೋಗುವದು
ಒಳ್ಳೇದು; ಬೇರೆ ಹೊಲದಲ್ಲಿ ನಿನಗೆ ತೊಂದರೆಯಾ
ದೀತು ಎಂದು ಹೇಳಿದಳು. ಅದರಂತೆಯೇ ರೂತಳು
ಅತ್ತೆಯ ಮನೆಯಲ್ಲಿದ್ದುಕೊಂಡು ಜವೆಗೋದಿಯ
ಮತ್ತು ಗೋದಿಯ ಸುಗ್ಗಿ ತೀರುವ ವರೆಗೆ ಬೋವ
ಜನ ಹೆಣ್ಣಾಳುಗಳ ಸಂಗಡಲೇ ಹೋಗಿ ಹಕ್ಕಲಾಯು
ತ್ತಿದ್ದಳು.

### ಬೋವಜನು ರಾತ್ರಿಯಲ್ಲಿ ಬಂದ ರೂತಳಿಗೆ ವಾಗ್ದಾನಮಾಡಿದ್ದು.

ನೊವೊಮಿಯು ಸೊಸೆಗೆ—ನನ್ನ ಮಗಳೇ, ನೀನು
ಗೃಹಿಣಿಯಾಗಿ ಸುಖದಿಂದಿರುವದಕ್ಕೋಸ್ಕರ ನಾನು
ಪ್ರಯತ್ನಿಸಬೇಕಲ್ಲವೇ. ನೀನು ಯಾವನ ಹೆಣ್ಣಾಳು
ಗಳ ಜೊತೆಯಲ್ಲಿರುತ್ತೀಯೋ ಆ ಬೋವಜನು ನಮ್ಮ
ಸಂಬಂಧಿಕನಾಗಿರುತ್ತಾನಲ್ಲಾ! ಅವನು ಇಂದಿನ ರಾತ್ರಿ
ಕಣದಲ್ಲಿ ಜವೆಗೋದಿಯನ್ನು ತೂರುವನು. ನೀನು
ಸ್ನಾನಮಾಡಿ ತೈಲಹಚ್ಚಿಕೊಂಡು ಶ್ರೇಷ್ಠವಸ್ತ್ರಗಳನ್ನು
ಟ್ಟು ಅಲ್ಲಿಗೆ ಹೋಗು; ಅವನು ಅನ್ನಪಾನಗಳನ್ನು
ತೆಗೆದುಕೊಳ್ಳುವ ವರೆಗೂ ಮರೆಯಾಗಿದ್ದು ಅವನು
ಮಲಗಿದ ಸ್ಥಳವನ್ನು ಗೊತ್ತುಮಾಡಿಕೊಂಡು ಹೋಗಿ
ಅವನ ಕಾಲುಗಳ ಮೇಲಣ ಹೊದಿಕೆಯನ್ನು ತೆಗೆದು
ಬಿಟ್ಟು ಅಲ್ಲೇ ಮಲಗಿಕೋ; ಆ ಮೇಲೆ ಮಾಡತಕ್ಕ
ದ್ದನ್ನು ನಿನಗೆ ತಿಳಿಸುವನು ಅಂದಳು. ಅದಕ್ಕೆ ಸೊಸೆ
ಯು—ನೀನು ಹೇಳಿದ್ದನ್ನೆಲ್ಲಾ ಮಾಡುವೆನೆಂದು ಹೇಳಿ
ಅತ್ತೆಯ ಆಜ್ಞೆಯಂತೆಯೇ ಕಣಕ್ಕೆ ಹೋಗಿ ಬೋ 6,
ವಜನು ಅನ್ನಪಾನಗಳನ್ನು ತೆಗೆದುಕೊಂಡು ಸಂತು
ಷ್ಟನಾಗಿ ರಾಶಿಯ ಬಳಿಯಲ್ಲಿ ಮಲಗಿದ ಮೇಲೆ ರಹ
ಸ್ಯವಾಗಿ ಬಂದು ಅವನ ಕಾಲುಮೇಲಣ ಹೊದಿಕೆ
ಯನ್ನು ತೆಗೆದುಬಿಟ್ಟು ಮಲಗಿದಳು. ಮಧ್ಯರಾತ್ರಿ
ಯಲ್ಲಿ ಆ ಮನುಷ್ಯನು ಹೆದರಿ ಬೊಗ್ಗಿನೋಡಿ ತನ್ನ
ಕಾಲುಗಳ ಬಳಿಯಲ್ಲಿ ಮಲಗಿರುವ ಹೆಂಗಸನ್ನು
ಕಂಡನು. ಅವನು ಆಕೆಯನ್ನು—ನೀನು ಯಾರು
ಎಂದು ಕೇಳಲು ಆಕೆಯು—ನಾನು ನಿನ್ನ ದಾಸಿ
ಯಾದ ರೂತಳು. ನೀನು ಸಮೀಪಬಂಧುವಾಗಿರುವ
ದರಿಂದ ನಿನ್ನ ಹೊದಿಕೆಯ ಅಂಚನ್ನು ನನ್ನ ಮೇಲೆ
ಹಾಕು ಅಂದಳು. ಆಗ ಅವನು—ನನ್ನ ಮಗಳೇ,
ಯೆಹೋವನಿಂದ ನಿನಗೆ ಆಶೀರ್ವಾದವಾಗಲಿ; ನೀನು
ಬಡವರೂ ಐಶ್ವರ್ಯವಂತರೂ ಆದ ಯೌವನಸ್ಥರನ್ನು
ನೋಡಿ ಹೋಗಲಿಲ್ಲ. ಈಗ ನಿನ್ನ ಪತಿಭಕ್ತಿಯು
ಮುಂಚೆಗಿಂತ ವಿಶೇಷವಾಗಿ ಪ್ರತ್ಯಕ್ಷವಾಯಿತು. ನನ್ನ
ಮಗಳೇ, ಈಗ ಭಯಪಡಬೇಡ. ನೀನು ಗುಣವಂತೆ
ಯೆಂಬದು ಊರಿನವರಿಗೆಲ್ಲಾ ಗೊತ್ತದೆ; ಆದದರಿಂದ

12 ನೀನು ಹೇಳಿದ್ದನ್ನೆಲ್ಲಾ ಮಾಡುವೆನು. ನಾನು
ಸಮೀಪಬಂಧುವೆಂಬದು ನಿಜ; ಆದರೂ ನನಗಿಂತ
13 ಸಮೀಪನಾದವನು ಒಬ್ಬನಿರುತ್ತಾನೆ. ಈ ರಾತ್ರಿ
ಇಲ್ಲೇ ಇರು; ನಾಳೆ ಅವನು ಮೈದುನಧರ್ಮವನ್ನು
ನಡಿಸಿದರೆ ಸರಿ; ಇಲ್ಲವಾದರೆ ಯೆಹೋವನಾಣೆ,
ನಾನೇ ಅದನ್ನು ನಡಿಸುವೆನು. ಬೆಳಗಾಗುವ ತನಕ
14 ಇಲ್ಲೇ ಮಲಗಿಕೋ ಎಂದು ಹೇಳಿದನು. ಆಕೆಯು
ಆ ವರೆಗೂ ಅವನ ಕಾಲುಗಳ ಬಳಿಯಲ್ಲೇ ಮಲಗಿ
ಕೊಂಡಿದ್ದಳು. ಒಬ್ಬ ಹೆಂಗಸು ಕಣಕ್ಕೆ ಬಂದಿದ್ದ
ಳೆಂಬದು ಯಾರಿಗೂ ಗೊತ್ತಾಗಬಾರದೆಂದು ಅವನು
ಹೇಳಿದ್ದರಿಂದ ಗುರುತುಹಿಡಿಯಲಾರದಷ್ಟು ಕತ್ತಲಿರು
15 ವಾಗಲೇ ಆಕೆಯು ಎದ್ದಳು. ಆಗ ಅವನು ಆಕೆ
ಗೆ— ನಿನ್ನ ಕಂಬಳಿಯನ್ನು ಹಾಸು ಎಂದು ಹೇಳಿ ಆಕೆ
ಹಾಸಲು ಅದರಲ್ಲಿ ಆರು ಪಡಿ ಜವೆಗೋದಿಯನ್ನು
ಹಾಕಿ ಹೊರಿಸಿದನು. ಆಕೆಯು ಊರೊಳಕ್ಕೆ ಹೋಗಿ
16 ಅತ್ತೆಯ ಬಳಿಗೆ ಬಂದಾಗ ಅತ್ತೆಯು— ನನ್ನ ಮಗಳೇ,
ನಿನ್ನ ಕಾರ್ಯವೇನಾಯಿತು ಎಂದು ಕೇಳಲು ಆಕೆ
ಯು ಆ ಮನುಷ್ಯನು ನಡಿಸಿದ್ದೆಲ್ಲವನ್ನೂ ತಿಳಿಸಿ—
17 ನೀನು ಬರಿಗೈಯಿಂದ ಅತ್ತೆಯ ಬಳಿಗೆ ಹೋಗಬಾರ
ದೆಂದು ಹೇಳಿ ಈ ಆರು ಪಡಿ ಜವೆಗೋದಿಯನ್ನು
18 ಕೊಟ್ಟನು ಅಂದಳು. ಅತ್ತೆಯು— ನನ್ನ ಮಗಳೇ,
ಈ ಕಾರ್ಯವು ಹೇಗಾಗುವದೆಂದು ಗೊತ್ತಾಗುವ
ವರೆಗೂ ಸುಮ್ಮನಿರು; ಈ ಹೊತ್ತು ಅದನ್ನು ಇತ್ಯರ್ಥ
ಪಡಿಸುವ ವರೆಗೆ ಅವನಿಗೆ ಸಮಾಧಾನವಿರಲಾರದು
ಎಂದು ಹೇಳಿದಳು.

ರೂತಳು ಬೋವಜನಿಗೆ ಮದುವೆಯಾದದ್ದು;
ದಾವೀದನ ವಂಶಾವಳಿ.

4 ಬೋವಜನು ಹೋಗಿ ಊರುಬಾಗಲಲ್ಲಿ ಕೂತನು.
ತಾನು ಹೇಳಿದ್ದ ಸಮೀಪಬಂಧುವು ಆ ಮಾರ್ಗವಾಗಿ
ಹೋಗುತ್ತಿರುವದನ್ನು ಕಂಡು ಅವನನ್ನು— ಎಲಾ,
ಅಪ್ಪಾ, ಇತ್ತ ಬಂದು ಕೂತುಕೋ ಎಂದು ಕರೆಯಲು
2 ಅವನು ಬಂದು ಕೂತುಕೊಂಡನು. ಇದಲ್ಲದೆ ಅವನು
ಊರಿನ ಹಿರಿಯರಲ್ಲಿ ಹತ್ತು ಮಂದಿಯನ್ನು ಕರೆದಾಗ
3 ಅವರೂ ಬಂದು ಕೂತುಕೊಂಡರು. ಆಗ ಅವನು ಆ
ಸಮೀಪಬಂಧುವಿಗೆ— ಮೋವಾಬ್‌ದೇಶದಿಂದ ಹಿಂದಿರು
ಗಿ ಬಂದಿರುವ ನೊವೊಮಿಯು ಎಲೀಮೆಲೆಕನ ಪಾಲಿಗೆ
ಬಂದ ಹೊಲವನ್ನು ಮಾರಿಬಿಡಬೇಕೆಂದಿರುತ್ತಾಳೆ.
4 ನಾನು ನಿನಗೆ ಹೇಳಬೇಕೆಂದಿರುವದೇನಂದರೆ—
ನಿನಗೆ ಅದನ್ನು ಕೊಂಡುಕೊಳ್ಳುವ ಮನಸ್ಸಿದ್ದರೆ
ಇಲ್ಲಿ ಕೂತಿರುವ ಊರಿನ ಹಿರಿಯರ ಮುಂದೆಯೇ
ಕೊಂಡುಕೋ. ಇಲ್ಲದಿದ್ದರೆ ನನಗೆ ತಿಳಿಸು; ನನಗೆ
ಗೊತ್ತಾಗಬೇಕು. ನೀನೂ ನಿನ್ನ ತರುವಾಯ ನಾನೂ
ಅಲ್ಲದೆ ಅದನ್ನು ಕೊಂಡುಕೊಳ್ಳತಕ್ಕ ಬಾಧ್ಯರು ಬೇರೆ
ಯಾರೂ ಇಲ್ಲ ಎಂದು ಹೇಳಲು ಅವನು— ನಾನೇ
5 ಕೊಂಡುಕೊಳ್ಳುತ್ತೇನೆ ಅಂದನು. ಆಗ ಬೋವ
ಜನು— ನೀನು ನೊವೊಮಿಯಿಂದ ಆ ಹೊಲವನ್ನು
ತೆಗೆದುಕೊಳ್ಳುವ ದಿನದಲ್ಲಿ ಹೊಲದ ಖಾತೆಯು
ಆಕೆಯ ಸತ್ತುಹೋದ ಮಗನ ಹೆಸರಿನಲ್ಲೇ ಉಳಿಯು
ವಂತೆ ಅವನ ಹೆಂಡತಿಯೂ ಮೋವಾಬ್‌ಸ್ತ್ರೀಯೂ
ಆದ ರೂತಳನ್ನೂ ತೆಗೆದುಕೊಳ್ಳಬೇಕು ಎಂದು ತಿಳಿ
ಸಲು ಆ ಸಮೀಪಬಂಧುವು— ಹಾಗಾದರೆ ಅದನ್ನು 6
ಕೊಂಡುಕೊಂಡು ನನ್ನ ಆಸ್ತಿಯನ್ನು ನಷ್ಟಪಡಿಸಿ
ಕೊಳ್ಳಲಾರೆನು; ಆ ಬಾಧ್ಯತೆಯನ್ನು ನೀನೇ ವಹಿ
ಸಿಕೋ; ನನ್ನಿಂದಾಗದು ಅಂದನು. ಯಾವದಾದ 7
ರೊಂದು ವಸ್ತುವನ್ನು ತೆಗೆದುಕೊಳ್ಳುವಾಗಲೂ ಕೊಡು
ವಾಗಲೂ ಮಾತನ್ನು ದೃಢಪಡಿಸುವದಕ್ಕೋಸ್ಕರ
ಇಸ್ರಾಯೇಲ್ಯರಲ್ಲಿ ಪೂರ್ವಕಾಲದಿಂದಿದ್ದ ಪದ್ಧತಿ
ಯಾವದಂದರೆ— ಕೊಡುವವನು ತೆಗೆದುಕೊಳ್ಳುವವ
ನಿಗೆ ತನ್ನ ಕೆರವನ್ನು ಕೊಡುವನು; ಇದರಿಂದ ಮಾತು
ದೃಢವಾಯಿತೆಂದು ಇಸ್ರಾಯೇಲ್ಯರು ತಿಳಿದುಕೊಳ್ಳು
ವರು. ಹಾಗೆಯೇ ಆ ಸಮೀಪಬಂಧುವು ಬೋವಜ 8
ನಿಗೆ— ನೀನೇ ತೆಗೆದುಕೋ ಎಂದು ಹೇಳಿ ತನ್ನ ಕೆರ
ವನ್ನು ತೆಗೆದುಕೊಟ್ಟನು.
ಆಗ ಬೋವಜನು ಹಿರಿಯರಿಗೂ ಎಲ್ಲಾ ಜನರಿ 9
ಗೂ— ನಾನು ಎಲೀಮೆಲೆಕ್, ಕಿಲ್ಯೋನ್, ಮಹ್ಲೋನ್
ಎಂಬವರಿಗಿದ್ದದ್ದನ್ನೆಲ್ಲಾ ನೊವೊಮಿಯಿಂದ ತೆಗೆದು
ಕೊಂಡಿದ್ದೇನೆ; ಹೊಲದ ಖಾತೆಯು ಸತ್ತುಹೋದ 10
ಮಹ್ಲೋನನ ಹೆಸರಿನಲ್ಲೇ ನಿಂತು ಅವನ ಬಂಧು
ಗಳಲ್ಲಿಯೂ ಊರಲ್ಲಿಯೂ ಅವನ ಸಂತಾನವು ಉಳಿ
ಯುವಂತೆ ಮೋವಾಬ್ಯಳೂ ಅವನ ಹೆಂಡತಿಯೂ ಆದ
ರೂತಳನ್ನು ಹೆಂಡತಿಯನ್ನಾಗಿ ತೆಗೆದುಕೊಂಡಿದ್ದೇನೆ;
ಇದಕ್ಕೆ ನೀವು ಸಾಕ್ಷಿಗಳು ಎಂದು ಹೇಳಿದ್ದಕ್ಕೆ ಊರು 11
ಬಾಗಲಲ್ಲಿ ಕೂಡಿದ್ದ ಹಿರಿಯರೂ ಎಲ್ಲಾ ಜನರೂ—
ಹೌದು, ನಾವು ಸಾಕ್ಷಿಗಳು; ಯೆಹೋವನು ಇಸ್ರಾ
ಯೇಲನ ಮನೆಯನ್ನು ಕಟ್ಟಿದ ರಾಹೇಲ್, ಲೇಯಾ
ಎಂಬ ಸ್ತ್ರೀಯರನ್ನು ಹೇಗೋ ಹಾಗೆಯೇ ನಿನ್ನ
ಮನೆಗೆ ಬರುವ ಈ ಸ್ತ್ರೀಯನ್ನೂ ಅಭಿವೃದ್ಧಿಪಡಿಸಲಿ.
ಎಫ್ರಾತದಲ್ಲಿ ಸತ್ಕಾರ್ಯವನ್ನು ಮಾಡು; ಬೇತ್ಲೆ
ಹೇಮಿನಲ್ಲಿ ಘನವಂತನಾಗು. ಯೆಹೋವನು ಈ 12
ಸ್ತ್ರೀಯ ಮೂಲಕ ನಿನಗೆ ಅನುಗ್ರಹಿಸುವ ಸಂತಾನದಿಂದ
ನಿನ್ನ ಮನೆಯು ಯೆಹೂದನಿಗೆ ತಾಮಾರಳಿಂದ ಹುಟ್ಟಿದ
ಪೆರೆಚನ ಮನೆಗೆ ಸಮಾನವಾಗಲಿ ಅಂದರು.
ಬೋವಜನು ರೂತಳನ್ನು ಹೆಂಡತಿಯನ್ನಾಗಿ ಪರಿ 13
ಗ್ರಹಿಸಿ ಕೂಡಲು ಆಕೆಯು ಯೆಹೋವನ ಅನುಗ್ರಹ
ದಿಂದ ಗರ್ಭಿಣಿಯಾಗಿ ಮಗನನ್ನು ಹೆತ್ತಳು. ಆಗ 14
ಹೆಂಗಸರು ನೊವೊಮಿಗೆ— ಈ ಹೊತ್ತು ನಿನಗೆ ಬಾಧ್ಯ
ಸ್ಥನನ್ನು ದಯಪಾಲಿಸಿದ ಯೆಹೋವನಿಗೆ ಸ್ತೋತ್ರ
ವಾಗಲಿ. ಈ ಮಗನು ಇಸ್ರಾಯೇಲ್ಯರಲ್ಲಿ ಹೆಸರು
ಹೊಂದಲಿ. ಇವನು ನಿನ್ನನ್ನು ಉಜ್ಜೀವಿಸಮಾಡು 15
ವನು; ವೃದ್ಧಾಪ್ಯದಲ್ಲಿ ನಿನಗೆ ಸಂರಕ್ಷಕನಾಗಿರು
ವನು. ನಿನ್ನನ್ನು ಬಹಳವಾಗಿ ಪ್ರೀತಿಸುತ್ತಾ ಏಳು
ಮಂದಿ ಮಕ್ಕಳಿಗಿಂತ ನಿನಗೆ ಉತ್ತಮಳಾಗಿರುವ ನಿನ್ನ
ಸೊಸೆಯು ಇವನನ್ನು ಹೆತ್ತಳಲ್ಲಾ ಎಂದು ಹೇಳಿದರು.
ನೊವೊಮಿಯೇ ಆ ಮಗುವನ್ನು ಉಡಿಲಲ್ಲಿಟ್ಟು 16
ಕೊಂಡು ಸಾಕುತ್ತಿದ್ದಳು. ನೆರೆಹೊರೆಯ ಹೆಂಗಸರು 17
ನೊವೊಮಿಗೆ ಒಬ್ಬ ಮಗನು ಹುಟ್ಟಿದ್ದಾನೆಂದು ಹೇಳಿ
ಅವನಿಗೆ ಓಬೇದನೆಂದು ಹೆಸರಿಟ್ಟರು. ಇವನೇ ಇಷ
ಯನಿಗೆ ತಂದೆಯೂ ದಾವೀದನಿಗೆ ಅಜ್ಜನೂ ಆದನು.

18 ಪೆರೆಚನ ವಂಶಾವಳಿ—ಪೆರೆಚನು ಹೆಚ್ರೋನನನ್ನು
19 ಪಡೆದನು; ಹೆಚ್ರೋನನು ರಾಮನನ್ನು ಪಡೆದನು;
20 ರಾಮನು ಅಮ್ಮಿನಾದಾಬನನ್ನು ಪಡೆದನು; ಅಮ್ಮಿ
ನಾದಾಬನು ನಹಶೋನನನ್ನು ಪಡೆದನು; ನಹಶೋ
ನನು ಸಲ್ಮೋನನನ್ನು ಪಡೆದನು; ಸಲ್ಮೋನನ
ಬೋವಜನನ್ನು ಪಡೆದನು; ಬೋವಜನು ಓಬೇದ
ನನ್ನು ಪಡೆದನು; ಓಬೇದನು ಇಷಯನನ್ನು ಪಡೆ
ದನು; ಇಷಯನು ದಾವೀದನನ್ನು ಪಡೆದನು.

# THE FIRST BOOK OF

# SAMUEL

## ಸಮುವೇಲನು
## ಪ್ರಥಮಭಾಗ

### ನ್ಯಾಯಸ್ಥಾಪಕನಾದ ಸಮುವೇಲನು. 1—7.

#### ಸಮುವೇಲನ ಜನನ.

1 ಎಫ್ರಾಯಿಮ್ ಬೆಟ್ಟದ ಸೀಮೆಯಲ್ಲಿನ ರಾಮಾತ
ಯಿಮ್ ಚೋಫೀಮ್ ಊರಿನಲ್ಲಿ ಎಲ್ಕಾನನೆಂಬ
ಒಬ್ಬ ಮನುಷ್ಯನಿದ್ದನು. ಇವನು ಯೆರೋಹಾಮನ
ಮಗನೂ ಎಲೀಹುವಿನ ಮೊಮ್ಮಗನೂ ತೋಹುವಿನ
ಮರಿಮಗನೂ ಆಗಿದ್ದನು. ತೋಹು ಎಂಬವನು
2 ಎಫ್ರಾಯಿಮ್ಯನಾದ ಚೂಫನ ಮಗನು. ಎಲ್ಕಾನ
ನಿಗೆ ಹನ್ನಳು, ಪೆನಿನ್ನಳು ಎಂಬ ಇಬ್ಬರು ಹೆಂಡತಿ
ಯರಿದ್ದರು. ಪೆನಿನ್ನಳಿಗೆ ಮಕ್ಕಳಿದ್ದರು; ಹನ್ನಳಿಗೆ
3 ಇರಲಿಲ್ಲ. ಅವನು ಪ್ರತಿವರುಷವೂ ಸೈನ್ಯಾಧೀಶ್ವರ
ನಾದ ಯೆಹೋವನಿಗೆ ಯಜ್ಞವನ್ನು ಸಮರ್ಪಿಸಿ ಆತ
ನನ್ನು ಆರಾಧಿಸುವದಕ್ಕೋಸ್ಕರ ತನ್ನ ಊರಿನಿಂದ
ಶೀಲೋವಿಗೆ ಹೋಗುತ್ತಿದ್ದನು. ಅಲ್ಲಿ ಏಲಿಯ ಮಕ್ಕ
ಳಾದ ಹೊಫ್ನಿ, ಫೀನೆಹಾಸ್ ಎಂಬವರು ಯೆಹೋವನ
4 ಯಾಜಕರಾಗಿದ್ದರು. ಎಲ್ಕಾನನು ಯಜ್ಞವನ್ನರ್ಪಿ
ಸಿದಾಗೆಲ್ಲಾ ತನ್ನ ಹೆಂಡತಿಯಾದ ಪೆನಿನ್ನಳಿಗೂ ಆಕೆ
ಯ ಎಲ್ಲಾ ಗಂಡು ಹೆಣ್ಣು ಮಕ್ಕಳಿಗೂ ಭಾಗಗಳನ್ನು
5 ಕೊಡುತ್ತಿದ್ದನು. ಅವನು ಹನ್ನಳನ್ನು ಬಹಳವಾಗಿ
ಪ್ರೀತಿಸಿದರೂ 1)ಯೆಹೋವನು ಆಕೆಗೆ ಮಕ್ಕಳನ್ನು
ಕೊಡಲಿಲ್ಲವಾದದರಿಂದ ಆಕೆಗೆ ಒಂದು ಭಾಗವನ್ನು
6 ಮಾತ್ರ ಕೊಡುತ್ತಿದ್ದನು. ಇದಲ್ಲದೆ ಆಕೆಯ ಸವ
ತಿಯು—ಯೆಹೋವನು ನಿನ್ನನ್ನು ಬಂಜೆಯನ್ನಾಗಿ
ಮಾಡಿದ್ದಾನೆ ಎಂದು ಹೇಳಿ ಆಕೆಯನ್ನು ಕೆಣಕಿ
7 ನೋಯಿಸುತ್ತಿದ್ದಳು. ಪ್ರತಿವರ್ಷವೂ ಯೆಹೋವನ
ಮಂದಿರಕ್ಕೆ ಹೋದಾಗೆಲ್ಲಾ ಎಲ್ಕಾನನು ಹಾಗೆಯೆ
ಮಾಡುತ್ತಿದ್ದದರಿಂದಲೂ ಪೆನಿನ್ನಳು ಆಕೆಯನ್ನು ರೇಗಿ
ಸುತ್ತಿದ್ದದರಿಂದಲೂ ಹನ್ನಳು ಬಂದಾನೊಂದು ಸಾ
ಉಣ್ಣಲೊಲ್ಲದೆ ಅಳುತ್ತಾ ಇದ್ದಳು. ಆಗ ಆಕೆಯ
ಗಂಡನಾದ ಎಲ್ಕಾನನು ಆಕೆಗೆ—ಹನ್ನಾ, ಏಕೆ ಅಳ
ತ್ತೀ? ಉಣ್ಣದಿರುವದಕ್ಕೇನು ಕಾರಣ? ನೀನು ವ್ಯಸ
ಪಡುವದೇಕೆ? ನಾನು ನಿನಗೆ ಹತ್ತು ಮಂದಿ ಮಕ್ಕ
ಗಿಂತ ಹೆಚ್ಚಾಗಿದ್ದೇನಲ್ಲಾ ಅಂದನು. ಆಗ ಅವರ
ಶೀಲೋವಿನಲ್ಲಿ ಅನ್ನಪಾನಗಳನ್ನು ತೆಗೆದುಕೊಂ
ಮೇಲೆ ಹನ್ನಳು ಎದ್ದು ಯಾಜಕನಾದ ಏಲಿಯ
ಯೆಹೋವನ ಮಂದಿರದ್ವಾರದ ನಿಲುವುಪಟ್ಟಿಗ
ಬಳಿಯಲ್ಲಿ ಒಂದು ಪೀಠದ ಮೇಲೆ ಕೂತಿರುವಾ
ಹೋಗಿ ಬಹುದುಃಖದಿಂದ ಕಣ್ಣೀರುಸುರಿಸುತ್ತಾ
ಯೆಹೋವನನ್ನು ಕುರಿತು—ಸೇನಾಧೀಶ್ವರನಾದ ಯೆ
ಹೋವನೇ, ನಿನ್ನ ದಾಸಿಯ ದುಃಖವನ್ನು ಪರಾಂ
ರಿಸು; ನನ್ನನ್ನು ತಿರಸ್ಕರಿಸದೆ ಕನಿಕರವಿಟ್ಟು, ನನಗೊಬ್ಬ
ಮಗನನ್ನು ಕೊಡಬೇಕು; ಅವನು ಜೀವದಿಂದಿರು
ತನಕ ನಿನ್ನವನಾಗಿಯೇ ಇರುವ ಹಾಗೆ ನಿನಗೆ ಪ್ರ
ಷ್ಠಿಸಿ ಕೊಡುವೆನು; ಅವನ ತಲೆಯ ಮೇಲೆ ಕ್ಷೌ
ಕತ್ತಿಯನ್ನು ಬರಗೊಡುವದಿಲ್ಲ ಎಂದು ಪ್ರಾರ್ಥ
ಹರಕೆಮಾಡಿದಳು. ಆಕೆಯು ಬಲು ಹೊತ್ತಿನ ವರೆ
ಯೆಹೋವನ ಮುಂದೆ ಪ್ರಾರ್ಥನೆಮಾಡುತ್ತಿರುವಾ
ಏಲಿಯು ಆಕೆಯ ಬಾಯನ್ನೇ ನೋಡುತ್ತಿದ್ದನು
ಆಕೆಯು ಹೃದಯದಲ್ಲಿ ಪ್ರಾರ್ಥಿಸುತ್ತಿದ್ದದರಿಂ
ತುಟಿಗಳು ಮಾತ್ರ ಅಲ್ಲಾಡುತ್ತಿದ್ದವು; ಶಬ್ದ ಕೇಳಿ
ಲಿಲ್ಲ. ಆದದರಿಂದ ಈಕೆಯು ಮದ್ಯಪಾನಮಾ

1) ಪಾಠಾಂತರ: ಯೆಹೋವನು ಹನ್ನಳಿಗೆ ಮಕ್ಕಳನ್ನು ಕೊಡದಿದ್ದರೂ ಎಲ್ಕಾನನು ಆಕೆಯನ್ನು ಬಹಳವಾಗಿ ಪ್ರೀತಿಸಿದದರಿಂದ
ಎರಡು ಭಾಗಗಳನ್ನು ಕೊಡುತ್ತಿದ್ದನು.

14 ದ್ದಾಳೆಂದು ಅವನು ನೆನಸಿ—ನಿನ್ನ ಅಮಲು ಇನ್ನೂ
ಇಳಿಯಲಿಲ್ಲವೋ? ದ್ರಾಕ್ಷಾರಸದ [1]ಮತ್ತು ನಿನ್ನನ್ನು
15 ಬಿಟ್ಟು ಹೋಗಲಿ ಅಂದನು. ಅದಕ್ಕೆ ಹನ್ನಳು—
ಸ್ವಾಮೀ, ಹಾಗಲ್ಲ; ನಾನು ಬಹುದುಃಖಪೀಡಿತಳು;
ದ್ರಾಕ್ಷಾರಸವನ್ನಾದರೂ ಬೇರೆ ಯಾವ ಮದ್ಯವನ್ನಾ
ದರೂ ಕುಡಿದವಳಲ್ಲ. ನನ್ನ ಮನೋವೇದನೆಯನ್ನು
16 ಯೆಹೋವನ ಮುಂದೆ ಹೊಯ್ದಿದ್ದೇನೆ. ನಿನ್ನ ದಾಸಿ
ಯಾದ ನನ್ನನ್ನು ಅಯೋಗ್ಯಳೆಂದು ನೆನಸಬೇಡ; ಈ
ವರೆಗೆ ನನ್ನ ಹೆಚ್ಚಾದ ಚಿಂತೆಯನ್ನೂ ವ್ಯಥೆಯನ್ನೂ
ಅರಿಕೆಮಾಡಿಕೊಳ್ಳುತ್ತಿದ್ದೆನು ಎಂದು ಹೇಳಿದಳು.
17 ಆಗ ಏಲಿಯು ಆಕೆಗೆ—ಸಮಾಧಾನದಿಂದ ಹೋಗು;
ಇಸ್ರಾಯೇಲ್‌ದೇವರು ನಿನ್ನ ಪ್ರಾರ್ಥನೆಯನ್ನು ನೆರ
18 ವೇರಿಸಲಿ ಎನ್ನಲು ಹನ್ನಳು ಏಲಿಗೆ—ನಿನ್ನ ದಾಸಿಯ
ಮೇಲೆ ಕಟಾಕ್ಷವಿರಲಿ ಎಂದು ಹೇಳಿ ಹೊರಟುಹೋಗಿ
ಊಟಮಾಡಿದಳು. ಆ ಮೇಲೆ ಆಕೆಯ ಮೋರೆಯಲ್ಲಿ
ದುಃಖವು ಕಾಣಲಿಲ್ಲ.
19 ಅವರು ಮರುದಿನ ಬೆಳಿಗ್ಗೆ ಎದ್ದು ಯೆಹೋವನ
ನ್ನು ಆರಾಧಿಸಿ ರಾಮದಲ್ಲಿದ್ದ ತಮ್ಮ ಮನೆಗೆ ಬಂದ
ರು. ಎಲ್ಕಾನನು ತನ್ನ ಹೆಂಡತಿಯಾದ ಹನ್ನಳನ್ನು
ಕೂಡಲು ಆಕೆಯು ಯೆಹೋವನ ಅನುಗ್ರಹದಿಂದ
20 ಗರ್ಭಿಣಿಯಾಗಿ ದಿನತುಂಬಿದ ಮೇಲೆ ಒಬ್ಬ ಮಗ
ನನ್ನು ಹೆತ್ತಳು. ಯೆಹೋವನನ್ನು ಬೇಡಿ ಪಡಕೊಂಡೆ
ನೆಂದು ಹೇಳಿ ಆ ಮಗನಿಗೆ ಸಮುವೇಲನೆಂದು ಹೆಸ
ರಿಟ್ಟಳು.
21 ಎಲ್ಕಾನನು ಕುಟುಂಬಸಹಿತವಾಗಿ ಎಂದಿನಂತೆ ಯೆ
ಹೋವನಿಗೆ ವಾರ್ಷಿಕಯಜ್ಞವನ್ನು ಅರ್ಪಿಸುವದಕ್ಕೂ
ಹರಕೆಸಲ್ಲಿಸುವದಕ್ಕೂ ಹೋಗುವದಕ್ಕೆ ಸಿದ್ಧನಾಗಲು
22 ಹನ್ನಳು—ಮಗನು ಮೊಲೆಬಿಡುವ ವರೆಗೂ ನಾನು
ಬರುವದಿಲ್ಲ; ಅವನು ಯೆಹೋವನ ಸನ್ನಿಧಿಯಲ್ಲಿ
ಕಾಣಿಸಿಕೊಂಡು ಯಾವಾಗಲೂ ಅಲ್ಲಿಯೇ ಇರುವ
ಹಾಗೆ ಆ ಮೇಲೆ ತೆಗೆದುಕೊಂಡು ಬರುವೆನು ಎಂದು
23 ಹೇಳಿದಳು. ಆಕೆಯ ಗಂಡನಾದ ಎಲ್ಕಾನನು
ಆಕೆಗೆ—ನಿನಗೆ ಸರಿತೋರುವ ಪ್ರಕಾರ ಆಗಲಿ;
ಮಗನು ಮೊಲೆಬಿಡುವ ವರೆಗೆ ಇರು. ಯೆಹೋ
ವನು ತನ್ನ ವಾಕ್ಯವನ್ನು ದೃಢಪಡಿಸಲಿ ಅಂದನು.
ಮಗನು ಮೊಲೆಬಿಡುವ ತನಕ ಹನ್ನಳು ಮನೆಯಲ್ಲೇ
24 ಇದ್ದು ಅವನನ್ನು ಸಾಕಿದಳು. ಅನಂತರ ಆಕೆಯು
ಮೂರು ವರುಷದ ಒಂದು ಹೋರಿಯನ್ನೂ ಮೂವ
ತ್ತು ಸೇರು ಹಿಟ್ಟನ್ನೂ ಒಂದು ತಿತ್ತಿ ದ್ರಾಕ್ಷಾ
ರಸವನ್ನೂ ತೆಗೆದುಕೊಂಡು ಪುತ್ರಸಹಿತವಾಗಿ ಶೀಲೋ
ವಿನಲ್ಲಿದ್ದ ಯೆಹೋವನ ಮಂದಿರಕ್ಕೆ ಬಂದಳು; ಮಗ
25 ನು ಇನ್ನೂ ಚಿಕ್ಕವನಾಗಿದ್ದನು. ಅವರು ಹೋರಿ
ಯನ್ನು ಯಜ್ಞಮಾಡಿದ ಮೇಲೆ ಮಗನನ್ನು ಏಲಿಯ
26 ಬಳಿಗೆ ತಂದರು. ಹನ್ನಳು ಏಲಿಗೆ—ಸ್ವಾಮೀ, ನಿನ್ನ
ಜೀವದಾಣೆ; ಮೊದಲು ಯೆಹೋವನ ಸನ್ನಿಧಿಯಲ್ಲಿ
ಪ್ರಾರ್ಥನೆಮಾಡುತ್ತಾ ಇಲ್ಲಿ ನಿನ್ನ ಹತ್ತಿರ ನಿಂತಿದ್ದ
27 ಸ್ತ್ರೀಯು ನಾನೇ. ಆತನು ನನ್ನ ಪ್ರಾರ್ಥನೆಯ ಫಲ
28 ವಾಗಿ ಅನುಗ್ರಹಿಸಿದ ಮಗನು ಇವನೇ; ನಾನು ಇವ
ನನ್ನು ಯೆಹೋವನಿಗೇ ಒಪ್ಪಿಸಿಬಿಟ್ಟಿದ್ದೇನೆ. ಇವನು
ಜೀವದಿಂದಿರುವ ತನಕ ಆತನಿಗೇ ಪ್ರತಿಷ್ಠಿತನಾಗಿರು
ವನು ಎಂದು ಹೇಳಿದಳು. ಆ ಮೇಲೆ ಅವರು
ಯೆಹೋವನಿಗೆ ನಮಸ್ಕರಿಸಿದರು.

ಹನ್ನಳು ದೇವರನ್ನು ಕೊಂಡಾಡಿ ಸಮುವೇಲನನ್ನು
ಶೀಲೋವಿನಲ್ಲಿ ಬಿಟ್ಟು ಹೋದದ್ದು.

**2** ಹನ್ನಳ ವಿಜ್ಞಾಪನೆ—

ನನ್ನ ಹೃದಯವು ಯೆಹೋವನಲ್ಲಿ ಉಲ್ಲಾ
ಸಿಸುತ್ತದೆ;
ನನ್ನ ಕೊಂಬು ಯೆಹೋವನಿಂದ ಎತ್ತಲ್ಪಟ್ಟಿದೆ.
ಶತ್ರುಗಳ ಮುಂದೆ ನನ್ನ ಬಾಯಿ ತೆರೆದಿರುವದು.
ನಿನ್ನ ರಕ್ಷಣೆಯಲ್ಲಿ ಆನಂದಿಸುತ್ತೇನೆ.
ಯೆಹೋವನಂಥ ಪರಿಶುದ್ಧನು ಇಲ್ಲವೇ ಇಲ್ಲ; 2
ನಿನ್ನ ಹೊರತು ದೇವರು ಯಾರು?
ನಮ್ಮ ದೇವರೇ ಅಸಮಾನವಾದ ಆಶ್ರಯ
ದುರ್ಗವು.

ಇನ್ನು ಮುಂದೆ ಹಮ್ಮಿನಿಂದ ನುಡಿಯಬೇಡಿರಿ; 3
ಸೊಕ್ಕಿನ ಮಾತು ನಿಮ್ಮ ಬಾಯಿಂದ ಹೊರಡ
ದಿರಲಿ.
ದೇವರಾದ ಯೆಹೋವನು ಸರ್ವಜ್ಞನು;
ಆತನು ಮನುಷ್ಯರ ಕ್ರಿಯೆಗಳನ್ನು ತೂಗುವನು.
ಶೂರರ ಬಿಲ್ಲುಗಳು ಮುರಿಯಲ್ಪಡುತ್ತವೆ, 4
ಎಡವಿದವರು ಶೌರ್ಯವೆಂಬ ನಡುಕಟ್ಟನ್ನು ಬಿಗಿ
ದಿದ್ದಾರೆ.
ಹೊಟ್ಟೆತುಂಬಾ ಉಣ್ಣುತ್ತಿದ್ದವರು ಅನ್ನಕ್ಕೋಸ್ಕರ 5
ಕೂಲಿಮಾಡುತ್ತಾರೆ.
ಹಸಿವುಗೊಂಡವರು ಉಂಡು ಸುಖದಿಂದಿರುತ್ತಾರೆ.
ಬಂಜೆಯು ಏಳು ಮಂದಿ ಮಕ್ಕಳನ್ನು ಹೆರುವಳು;
ಮಕ್ಕಳುಳ್ಳವಳು ದಿಕ್ಕಿಲ್ಲದೆ ಹೋಗುವಳು.

ಯೆಹೋವನೇ ಸಾಯಿಸುವವನೂ ಬದುಕಿಸು 6
ವವನೂ;
ಪಾತಾಳದಲ್ಲಿ ದೊಬ್ಬುವವನೂ ಮೇಲಕ್ಕೆ ಬರ
ಮಾಡುವವನೂ ಆತನೇ.
ಬಡತನ ಸಿರಿತನಗಳನ್ನು ಕೊಡುವವನೂ 7
ತಗ್ಗಿಸುವವನೂ ಹೆಚ್ಚಿಸುವವನೂ ಯೆಹೋವನೇ.
ಆತನು ದೀನನನ್ನು ಧೂಳಿಯಿಂದ ಎತ್ತಿ 8
ದರಿದ್ರನನ್ನು ತಿಪ್ಪೆಯಿಂದ ಎಬ್ಬಿಸಿ
ಪ್ರಭುಗಳೊಂದಿಗೆ ಕುಳ್ಳಿರಿಸಿ
ಅವನಿಗೆ ಮಹಿಮಾಸನವನ್ನು ಬಾಧ್ಯತೆಯಾಗಿ ಅನು
ಗ್ರಹಿಸುವವನಾಗಿದ್ದಾನೆ.
ಭೂಮಿಯ ಆಧಾರಸ್ತಂಭಗಳು ಯೆಹೋವನವೇ;
ಆತನೇ ಅವುಗಳ ಮೇಲೆ ಭೂಮಂಡಲವನ್ನು ಸ್ಥಾಪಿ
ಸಿದ್ದಾನೆ.

1) ಅಂದರೆ ಮದವು.

9 ಆತನು ತನ್ನ ಭಕ್ತರ ಹೆಜ್ಜೆಗಳನ್ನು ಕಾಯುವನು;
ದುಷ್ಟರು ಅಂಧಕಾರದಲ್ಲಿ ಮುಳುಗಿ ಮೌನಹೊಂದುವರು.
ಬಾಹುಬಲದಿಂದಲೇ ಯಾವನೂ ಜಯಹೊಂದಲಾರನು.
10 ಯೆಹೋವನ ವಿರೋಧಿಗಳು ಮುರಿಯಲ್ಪಡುತ್ತಾರೆ;
ಆತನು ಆಕಾಶದಿಂದ ಅವರ ಮೇಲೆ ಗರ್ಜಿಸುತ್ತಾನೆ.
ಯೆಹೋವನು ಭೂಮಿಯ ಕಟ್ಟಕಡೆಯಲ್ಲಿರುವವರಿಗೂ ನ್ಯಾಯತೀರಿಸುವನು.
ತಾನು ನೇಮಿಸಿದ ಅರಸನಿಗೆ ಬಲವನ್ನು ಅನುಗ್ರಹಿಸುವನು;
ತನ್ನ ಅಭಿಷಿಕ್ತನ ಕೊಂಬನ್ನು ಉನ್ನತಮಾಡುವನು.
11 ಎಲ್ಕಾನನು ರಾಮದಲ್ಲಿದ್ದ ತನ್ನ ಮನೆಗೆ ಹೋದ
ನು; ಹುಡುಗನು ಯಾಜಕನಾದ ಏಲಿಯ ಕೈಕೆಳಗಿ
ದ್ದುಕೊಂಡು ಯೆಹೋವನನ್ನು ಸೇವಿಸುತ್ತಿದ್ದನು.

### ಏಲಿಯ ಮಕ್ಕಳ ದುಷ್ಟತ್ವಕ್ಕೆ ಶಿಕ್ಷೆಯು ಮುಂತಿಳಿಸಲ್ಪಟ್ಟದ್ದು.

12 ಏಲಿಯ ಮಕ್ಕಳು ಬಹುದುಷ್ಟರಾಗಿದ್ದರು; ಅವರು
13 ಯೆಹೋವನನ್ನು ಲಕ್ಷಿಸುತ್ತಿರಲಿಲ್ಲ. ಯಜ್ಞವನ್ನ
ರ್ಪಿಸುವದಕ್ಕೆ ಬಂದ ಜನರಲ್ಲಿ ಈ ಯಾಜಕರು ನಡಿಸಿ
ದ್ದೇನಂದರೆ—ಯಜ್ಞಮಾಂಸವು ಬೇಯುತ್ತಿರುವಾಗಲೇ
ಯಾಜಕನ ಆಳು ಕೈಯಲ್ಲಿ ತ್ರಿಶೂಲವನ್ನು ಹಿಡಿದು
14 ಕೊಂಡು ಬಂದು ಅದನ್ನು ಆ ಮಾಂಸ ಬೇಯು
ತ್ತಿರುವ ಕೊಪ್ಪರಿಗೆಯಲ್ಲಾಗಲಿ, ಭಾಂಡದಲ್ಲಾಗಲಿ,
ತಪ್ಪಲೆಯಲ್ಲಾಗಲಿ, ಗಡಿಗೆಯಲ್ಲಾಗಲಿ ಚುಚ್ಚಿ ಅದಕ್ಕೆ
ಸಿಕ್ಕಿದ್ದೆಲ್ಲವನ್ನೂ ಯಾಜಕನಿಗೋಸ್ಕರ ತೆಗೆದು
ಕೊಳ್ಳುತ್ತಿದ್ದನು. ಶೀಲೋವಿಗೆ ಬರುವ ಇಸ್ರಾಯೇ
15 ಲ್ಯರೆಲ್ಲರಿಗೂ ಹೀಗೆಯೇ ಮಾಡುತ್ತಿದ್ದರು. ಇದ
ಲ್ಲದೆ ಯಾಜಕನ ಆಳು ಕೊಬ್ಬನ್ನು ಹೋಮಮಾಡು
ವದಕ್ಕಿಂತ ಮುಂಚೆಯೇ ಬಂದು ಯಜ್ಞವನ್ನರ್ಪಿಸು
ವವನಿಗೆ—ಯಾಜಕನಿಗೋಸ್ಕರ ಕರಿಯತಕ್ಕ ಮಾಂಸ
ವನ್ನು ಕೊಡು; ನೀನು ಬೇಯಿಸಿದ ಮಾಂಸವನ್ನು
ಅವನು ತೆಗೆದುಕೊಳ್ಳುವದಿಲ್ಲ; ಅವನಿಗೆ ಹಸೀ
16 ಮಾಂಸವೇ ಬೇಕು ಅನ್ನುವನು. ಅರ್ಪಿಸುವವನು—
ಮೊದಲು ಕೊಬ್ಬನ್ನು ಹೋಮಮಾಡಲಿ, ಅನಂತರ
ನಿನಗೆ ಬೇಕಾದದ್ದನ್ನು ತೆಗೆದುಕೋ ಎಂದು ಹೇಳಿ
ದಾಗ ಅವನು—ಈಗಲೇ ಕೊಡಬೇಕು; ಇಲ್ಲವಾದರೆ
ಬಲಾತ್ಕಾರದಿಂದ ತೆಗೆದುಕೊಳ್ಳುವೆನು ಎನ್ನುವನು.
17 ಹೀಗೆ ಆ ಯೌವನಸ್ಥರು ಯೆಹೋವನ ನೈವೇದ್ಯ
ವನ್ನು ತುಚ್ಛೀಕರಿಸಿದ್ದರಿಂದ ಅವರ ಅಪರಾಧವು ಆತನ
ದೃಷ್ಟಿಯಲ್ಲಿ ಅಧಿಕವಾಯಿತು.
18 ಬಾಲಕನಾದ ಸಮುವೇಲನು ಏಫೋದೆಂಬ ನಾರು
ಮಡಿಯಂಗಿಯನ್ನು ತೊಟ್ಟುಕೊಂಡು ಯೆಹೋವನ
19 ಸಾನ್ನಿಧ್ಯಸೇವೆಯನ್ನು ಮಾಡುತ್ತಿದ್ದನು. ಅವನ
ತಾಯಿಯು ಪ್ರತಿವರುಷವೂ ಗಂಡನ ಜೊತೆಯಲ್ಲಿ
ಯಜ್ಞವನ್ನರ್ಪಿಸುವದಕ್ಕೆ ಬಂದಾಗ ಒಂದು ಚಿಕ್ಕ
ಅಂಗಿಯನ್ನು ಹೊಲಿದು ಅವನಿಗೆ ತಂದುಕೊಡು
ತ್ತಿದ್ದಳು. ಏಲಿಯು ಎಲ್ಕಾನನಿಗೆ—ನೀನು ಯೆಹೋ
ವನಿಗೆ ಒಪ್ಪಿಸಿಬಿಟ್ಟ ಮಗನಿಗೆ ಬದಲಾಗಿ ಆತನು
ಈ ಸ್ತ್ರೀಯಿಂದ ನಿನಗೆ ಬೇರೆ ಮಕ್ಕಳನ್ನು ಕೊಡಲಿ
ಎಂದು ಹೇಳಿ ಅವನನ್ನೂ ಅವನ ಹೆಂಡತಿಯನ್ನೂ
ಆಶೀರ್ವದಿಸುತ್ತಿದ್ದನು. ಅನಂತರ ಅವರು ತಿರಿಗಿ
ಸ್ವಸ್ಥಳಕ್ಕೆ ಹೋಗುತ್ತಿದ್ದರು. ಯೆಹೋವನು ಕಟಾ
ಕ್ಷಿಸಿದದರಿಂದ ಹನ್ನಳಿಗೆ ಮೂರು ಮಂದಿ ಗಂಡು
ಮಕ್ಕಳೂ ಇಬ್ಬರು ಹೆಣ್ಣುಮಕ್ಕಳೂ ಆದರು. ಬಾಲಕ
ನಾಗಿದ್ದ ಸಮುವೇಲನು ಯೆಹೋವನ ಸನ್ನಿಧಿಯಲ್ಲೇ
ದೊಡ್ಡವನಾದನು.
ಬಹುವೃದ್ಧನಾದ ಏಲಿಯು ತನ್ನ ಮಕ್ಕಳು ಎಲ್ಲಾ
ಇಸ್ರಾಯೇಲ್ಯರಲ್ಲಿ ನಡಿಸುತ್ತಿರುವದನ್ನೂ ಅವರು
ದೇವದರ್ಶನದ ಗುಡಾರದ ಬಾಗಲಿನಲ್ಲಿ ಸೇವೆ
ಮಾಡುವ ಸ್ತ್ರೀಯರೊಡನೆ ಸಂಗಮಿಸುತ್ತಿರುವದನ್ನೂ
ಕೇಳಿ ಅವರಿಗೆ—ಎಲ್ಲಾ ಜನರಿಂದಲೂ ನಿಮ್ಮ ದುಷ್ಕೃ
ತ್ಯಗಳನ್ನು ಕೇಳುತ್ತಿರುತ್ತೇನೆ. ಯಾಕೆ ಹೀಗೆ ಮಾಡು
ತ್ತೀರಿ? ನನ್ನ ಮಕ್ಕಳೇ, ಹೀಗೆ ಮಾಡಬಾರದು
ನೀವು ಯೆಹೋವನ ಜನರನ್ನು ದುರ್ಮಾರ್ಗಕ್ಕೆ ಎಳೆ
ಯುವವರಾಗಿದ್ದೀರೆಂದು ಕೇಳಿದ್ದೇನೆ; ಇದು ಒಳ್ಳೇ
ದಲ್ಲ. ಮನುಷ್ಯನು ಮನುಷ್ಯನಿಗೆ ಅಪರಾಧಮಾಡಿ
ದರೆ ದೇವರು ಮಧ್ಯಸ್ಥಿಕೆಯನ್ನು ವಹಿಸುವನು
ಮನುಷ್ಯನು ಯೆಹೋವನಿಗೆ ಅಪರಾಧಮಾಡಿದರೆ ವಹಿ
ಸುವವರಾರು ಎಂದು ಎಚ್ಚರಿಸಿದರೂ ಅವರು ತಮ್ಮ
ತಂದೆಯ ಮಾತಿಗೆ ಕಿವಿಗೊಡಲಿಲ್ಲ. ಯೆಹೋವನು
ಅವರನ್ನು ಸಾಯಿಸಬೇಕೆಂದಿದ್ದನಷ್ಟೆ. ಬಾಲಕನಾದ
ಸಮುವೇಲನಾದರೋ ಬೆಳೆಯುತ್ತಾ ಬಂದ ಹಾಗೆಲ್ಲಾ
ಯೆಹೋವನ ಮತ್ತು ಮನುಷ್ಯರ ದಯೆಗೆ ಪಾತ್ರ
ನಾದನು.
ದೇವರ ಮನುಷ್ಯನೊಬ್ಬನು ಏಲಿಯ ಬಳಿಗೆ
ಬಂದು ಅವನಿಗೆ—ಯೆಹೋವನು ನಿನಗೆ ಹೇಳುವ
ದೇನಂದರೆ—ಇಸ್ರಾಯೇಲ್ಯರು ಐಗುಪ್ತದಲ್ಲಿ ಫರೋ
ಹನ ದಾಸತ್ವದಲ್ಲಿದ್ದಾಗ ನಾನು ನಿನ್ನ ಗೋತ್ರದವ
ರಿಗೆ ಪ್ರತ್ಯಕ್ಷನಾಗಿ ಇಸ್ರಾಯೇಲ್ಯರ ಎಲ್ಲಾ ಕುಟುಂಬ
ಗಳಿಂದ ಅವರನ್ನೇ ಯಾಜಕೋದ್ಯೋಗಕ್ಕೆ ಅಂದರೆ
ಯಜ್ಞವನ್ನರ್ಪಿಸುವದಕ್ಕೂ ಧೂಪಹಾಕುವದಕ್ಕೂ
ನನ್ನ ಸನ್ನಿಧಿಯಲ್ಲಿ ಏಫೋದನ್ನು ಧರಿಸಿಕೊಳ್ಳುವ
ದಕ್ಕೂ ಆರಿಸಿಕೊಂಡು ಅವರಿಗೆ ಇಸ್ರಾಯೇಲ್ಯರ
ಯಜ್ಞಶೇಷದ ಹಕ್ಕನ್ನು ಅನುಗ್ರಹಿಸಿದೆನು. ನನ್ನ
ಪ್ರಜೆಗಳಾದ ಇಸ್ರಾಯೇಲ್ಯರು ನನ್ನ ಆಜ್ಞಾನುಸಾರ
ವಾಗಿ ನನ್ನ ಮಂದಿರಕ್ಕೆ ತರುವ ಯಜ್ಞನೈವೇದ್ಯಗಳ
ಘನತೆಯನ್ನು ನೀವು ಭಂಗಪಡಿಸಿ ಅವುಗಳ ಶ್ರೇಷ್ಠ
ಭಾಗಗಳಿಂದ ನಿಮ್ಮನ್ನು ಕೊಬ್ಬಿಸಿಕೊಳ್ಳುವದೇಕೆ
ನೀನು ನನ್ನನ್ನು ಗೌರವಿಸುವದಕ್ಕಿಂತ ಹೆಚ್ಚಾಗಿ ನಿನ್ನ
ಮಕ್ಕಳನ್ನೇ ಗೌರವಿಸುವದು ಸರಿಯೋ? ನಿನ್ನ ಗೋತ್ರ
ದವರೂ ಸಂತಾನದವರೂ ನಿರಂತರವೂ ನನ್ನ ಸನ್ನಿಧಿ
ಯಲ್ಲಿ ಸೇವೆಮಾಡಬಹುದು ಎಂದು ಆಜ್ಞಾಪಿಸಿದ
ಇಸ್ರಾಯೇಲ್‌ದೇವರಾದ ಯೆಹೋವನೆಂಬ ನಾನು
ಈಗ ತಿಳಿಸುವದೇನಂದರೆ—ಅದು ನನಗೆ ದೂರವಾಗಿ

ರಲಿ; ನನ್ನನ್ನು ಸನ್ಮಾನಿಸುವವರನ್ನು ಸನ್ಮಾನಿಸುವೆನು;
ನನ್ನನ್ನು ತಿರಸ್ಕರಿಸುವವರು ತಿರಸ್ಕಾರಹೊಂದುವರು.
31 ನಾನು ನಿನ್ನ ಮತ್ತು ನಿನ್ನ ಮನೆಯವರ ಬಾಹು
ಬಲವನ್ನು ಮುರಿಯುವ ದಿನಗಳು ಬರುವವು.
ನಿನ್ನ ಮನೆಯಲ್ಲಿ ಯಾರೂ ಪೂರ್ಣಾಯುಷ್ಯವನ್ನು
32 ಮುಟ್ಟುವದಿಲ್ಲ. ನಿನ್ನ ವೈರಿಯು ನನ್ನ ಮಂದಿರ
ದಲ್ಲಿ ಸೇವೆಮಾಡುವದನ್ನು ನೋಡುವಿ. ಇಸ್ರಾಯೇ
ಲ್ಯರಿಗೆ ಸರ್ವಶುಭವನ್ನು ದಯಪಾಲಿಸುವೆನು; ಆದರೆ
ನಿನ್ನ ಮನೆಯಲ್ಲಿ ಯಾರೂ ಪೂರ್ಣಾಯುಷ್ಯವನ್ನು
33 ಮುಟ್ಟುವದೇ ಇಲ್ಲ. ನಾನು ನನ್ನ ಸಾನ್ನಿಧ್ಯಸೇವೆ
ಯಿಂದ ತೆಗೆದುಹಾಕದೆ ಒಬ್ಬನನ್ನಾದರೂ ಉಳಿಸಿದರೆ
ಅವನು ನಿನ್ನ ಕಣ್ಣೀಡಿಗೂ ಮನೋವ್ಯಥೆಗೂ ಕಾರಣ
ನಾಗುವನು. ನಿನ್ನ ಸಂತಾನದವರೆಲ್ಲರೂ ಕತ್ತಿಯಿಂದ
34 ಸಂಹೃತರಾಗುವರು. ಇದೆಲ್ಲಾ ನೆರವೇರುವದೆಂಬ
ದಕ್ಕೆ ನಿನ್ನ ಮಕ್ಕಳಾದ ಹೊಫ್ನಿ ಫೀನೆಹಾಸರು ಒಂದೇ
35 ದಿವಸದಲ್ಲಿ ಸಾಯುವದೇ ಗುರುತಾಗಿರುವದು. ನನ್ನ
ದೃಷ್ಟಿಗೂ ಮನಸ್ಸಿಗೂ ಸರಿಯಾದದ್ದನ್ನೇ ಮಾಡುವ
ಒಬ್ಬ ನಂಬಿಕೆಯುಳ್ಳ ಯಾಜಕನನ್ನು ಎಬ್ಬಿಸುವೆನು;
ಅವನಿಗೆ ಶಾಶ್ವತಗೃಹವನ್ನು ಅನುಗ್ರಹಿಸುವೆನು.
ಅವನು ನನ್ನ ಅಭಿಷಿಕ್ತನ ಬಳಿಯಲ್ಲಿ ಸದಾಕಾಲ
36 ಸೇವೆಮಾಡುವನು. ನಿನ್ನ ಮನೆಯಲ್ಲಿ ಉಳಿದವರು
ಬಂದು ಅವನ ಮುಂದೆ ಅಡ್ಡಬಿದ್ದು—ನಮಗೆ ಒಂದು
ದುಡ್ಡನ್ನೂ ರೊಟ್ಟಿಯ ಚೂರನ್ನೂ ಕೊಡು; ಒಂದು
ತುತ್ತು ಅನ್ನಕ್ಕೆ ಮಾರ್ಗವಾಗುವ ಹಾಗೆ ದೇವಸ್ಥಾನದ
ಸೇವೆಯಲ್ಲಿ ಯಾವದಕ್ಕಾದರೂ ನಮ್ಮನ್ನು ಸೇರಿ
ಸಿಕೋ ಎಂದು ಅವನನ್ನು ಬೇಡಿಕೊಳ್ಳುವರು ಎಂಬದೇ
ಅಂದನು.

ಸಮುವೇಲನಿಗಾದ ದೇವದರ್ಶನ.

3 ಬಾಲಕನಾದ ಸಮುವೇಲನು ಏಲಿಯ ಕೈಕೆಳಗಿ
ದ್ದುಕೊಂಡು ಯೆಹೋವನ ಸೇವೆಮಾಡುತ್ತಿದ್ದನಷ್ಟೆ.
ಆ ಕಾಲದಲ್ಲಿ ದೇವೋಕ್ತಿಗಳು ವಿರಳವಾಗಿದ್ದವು; ದೇವ
2 ದರ್ಶನಗಳು ಅಪರೂಪವಾಗಿದ್ದವು. ಏಲಿಯ ಕಣ್ಣು
ಗಳು ದಿನದಿನಕ್ಕೆ ಮೊಬ್ಬಾಗುತ್ತಾ ಬಂದು ಚೆನ್ನಾಗಿ
ಕಾಣದೆಹೋಗಿದ್ದವು. ಇವನು ಒಂದಾನೊಂದು ರಾತ್ರಿ
3 ತನ್ನ ಸ್ಥಳದಲ್ಲಿ ಮಲಗಿದ್ದನು; ಸಮುವೇಲನು
ಯೆಹೋವನ ಮಂದಿರದಲ್ಲಿ ದೇವರ ಮಂಜೂಷವಿದ್ದ
ಸ್ಥಳದಲ್ಲಿ ಮಲಗಿದ್ದನು. ಆಗ ದೇವದೀಪವು ಇನ್ನೂ
4 ಉರಿಯುತ್ತಿರುವಾಗಲೇ ಯೆಹೋವನು ಸಮುವೇಲ
ನನ್ನು ಕರೆದನು; ಸಮುವೇಲನು ಬಂದೆನೆಂದು ಉತ್ತರ
5 ಕೊಟ್ಟು ಒಡನೆ ಏಲಿಯ ಬಳಿಗೆ ಹೋಗಿ—ಇಗೋ
ಬಂದಿದ್ದೇನೆ; ನೀನು ನನ್ನನ್ನು ಕರೆದಿಯಲ್ಲಾ ಎನ್ನಲು
ಏಲಿಯು—ನಾನು ನಿನ್ನನ್ನು ಕರೆಯಲಿಲ್ಲ, ಹೋಗಿ
ಮಲಗಿಕೋ ಅಂದನು. ಸಮುವೇಲನು ಹೋಗಿ
6 ಮಲಗಿದನು. ಯೆಹೋವನು ತಿರಿಗಿ—ಸಮುವೇ
ಲನೇ ಎಂದು ಕರೆದನು. ಸಮುವೇಲನು ಕೂಡಲೆ
ಎದ್ದು ಏಲಿಯ ಬಳಿಗೆ ಹೋಗಿ—ಇಗೋ, ಬಂದಿ
ದ್ದೇನೆ; ನೀನು ನನ್ನನ್ನು ಕರೆದಿಯಲ್ಲಾ ಅನ್ನಲು ಅವ
ನು—ನನ್ನ ಮಗನೇ, ನಾನು ನಿನ್ನನ್ನು ಕರೆಯಲಿಲ್ಲ;

ಹೋಗಿ ಮಲಗಿಕೋ ಎಂದನು. ಆ ವರೆಗೂ ಸಮು 7
ವೇಲನಿಗೆ ಯೆಹೋವನ ಅನುಭವವಿರಲಿಲ್ಲ; ಅವನು
ದೈವೋತ್ತರಗಳನ್ನು ಹೊಂದಿರಲಿಲ್ಲ. ಯೆಹೋವನು 8
ಸಮುವೇಲನನ್ನು ಮೂರನೆಯ ಸಾರಿ ಕರೆದನು. ಅವ
ನು ತಟ್ಟನೆ ಏಲಿಯ ಹತ್ತಿರ ಹೋಗಿ—ಇಗೋ, ಬಂದಿ
ದ್ದೇನೆ, ನನ್ನನ್ನು ಕರೆದಿಯಲ್ಲಾ ಅನ್ನಲು ಹುಡುಗ
ನನ್ನು ಕರೆದವನು ಯೆಹೋವನೇ ಎಂದು ಏಲಿಯು
ತಿಳಿದು ಅವನಿಗೆ—ಹೋಗಿ ಮಲಗಿಕೋ; ತಿರಿಗಿ ಶಬ್ದ 9
ವಾದರೆ ಯೆಹೋವನೇ, ಅಪ್ಪಣೆಯಾಗಲಿ, ನಿನ್ನ
ದಾಸನು ಕಾದಿದ್ದಾನೆ ಎಂದು ಹೇಳು ಅಂದನು.
ಸಮುವೇಲನು ತಿರಿಗಿ ಹೋಗಿ ತನ್ನ ಸ್ಥಳದಲ್ಲಿ ಮಲ
ಗಿಕೊಳ್ಳಲು ಯೆಹೋವನು ಪ್ರತ್ಯಕ್ಷನಾಗಿ ಮುಂಚಿ 10
ನಂತೆ ಸಮುವೇಲನೇ, ಸಮುವೇಲನೇ ಅಂದನು.
ಸಮುವೇಲನು—ಅಪ್ಪಣೆಯಾಗಲಿ, ನಿನ್ನ ದಾಸನು
ಕಾದಿದ್ದಾನೆ ಎಂದನು.

ಯೆಹೋವನು ಸಮುವೇಲನಿಗೆ—ನಾನು ಇಸ್ರಾ 11
ಯೇಲ್ಯರಲ್ಲಿ ಒಂದು ವಿಶೇಷಕಾರ್ಯವನ್ನು ನಡಿಸು
ವೆನು; ಅದರ ವಿಷಯ ಕೇಳುವವರ ಎರಡು ಕಿವಿಗಳೂ
ಮೊರ್ರೆನ್ನುವವು. ಏಲಿಯ ಮನೆಯನ್ನು ಕುರಿತು ತಿಳಿ 12
ಸಿದ್ದೆಲ್ಲವನ್ನೂ ಆ ದಿನದಲ್ಲಿ ತಪ್ಪದೆ ನೆರವೇರಿಸುವೆನು.
ತನ್ನ ಮಕ್ಕಳು ದೇವದೂಷಕರೆಂದು ಅವನಿಗೆ ತಿಳಿದು 13
ಬಂದರೂ ಅವನು ಅವರನ್ನು ಗದರಿಸಲಿಲ್ಲ. ಈ ಪಾಪ
ದ ನಿಮಿತ್ತವಾಗಿ ಅವನ ಮನೆಯನ್ನು ನಿತ್ಯದಂಡನೆಗೆ
ಗುರಿಮಾಡಿದ್ದೇನೆಂದು ಅವನಿಗೆ ಮೊದಲೇ ತಿಳಿಸಿದೆನು.
ಏಲಿಯ ಮನೆಯವರ ಅಪರಾಧಕ್ಕೆ ಯಜ್ಞನೈವೇದ್ಯ 14
ಗಳಿಂದಲೂ ಎಂದಿಗೂ ಪ್ರಾಯಶ್ಚಿತ್ತವಾಗುವದಿಲ್ಲವೆಂಬ
ದಾಗಿ ಆಣೆಯಿಟ್ಟಿದ್ದೇನೆ ಎಂದು ಹೇಳಿದನು.

ಅನಂತರ ಸಮುವೇಲನು ಮಲಗಿ ಹೊತ್ತಾರೆಯ 15
ಲ್ಲೆದ್ದು ಯೆಹೋವಮಂದಿರದ ಕದಗಳನ್ನು ತೆರೆದನು;
ಅವನು ತಾನು ಕಂಡದ್ದನ್ನು ಏಲಿಗೆ ತಿಳಿಸುವದಕ್ಕೆ
ಭಯಪಟ್ಟನು. ಆದರೆ ಏಲಿಯು—ನನ್ನ ಮಗನೇ, 16
ಸಮುವೇಲನೇ ಎಂದು ಕರೆಯಲು ಅವನು—ಇಗೋ,
ಇದ್ದೇನೆ ಅಂದನು. ಆಗ ಏಲಿಯು ಅವನಿಗೆ— 17
ಯೆಹೋವನು ನಿನಗೆ ತಿಳಿಸಿದ್ದೇನು? ಆತನ ಮಾತು
ಗಳಲ್ಲಿ ಒಂದನ್ನಾದರೂ ಮುಚ್ಚಬೇಡ; ಮುಚ್ಚಿದರೆ
ಆತನು ಬೇಕಾದ ಹಾಗೆ ನಿನ್ನನ್ನು ದಂಡಿಸಲಿ ಎಂದು
ಹೇಳಲು ಸಮುವೇಲನು ಒಂದನ್ನೂ ಮುಚ್ಚದೆ ಎಲ್ಲ 18
ವನ್ನೂ ತಿಳಿಸಿದನು; ಏಲಿಯು ಅದನ್ನು ಕೇಳಿ—
ಆತನು ಯೆಹೋವನು; ತನಗೆ ಸರಿಕಾಣುವದನ್ನು
ಮಾಡಲಿ ಅಂದನು.

ಸಮುವೇಲನು ದೊಡ್ಡವನಾಗುತ್ತಾ ಬಂದನಷ್ಟೆ. 19
ಯೆಹೋವನು ಅವನೊಡನೆ ಇದ್ದದರಿಂದ ಅವನ
ಪ್ರವಾದನೆಗಳಲ್ಲಿ ಒಂದೂ ಬಿದ್ದುಹೋಗಲಿಲ್ಲ. ಯೆ 20
ಹೋವನು ಅವನನ್ನು ತನ್ನ ಪ್ರವಾದಿಯನ್ನಾಗಿ ನೇಮಿ
ಸಿಕೊಂಡದ್ದು ದಾನ್ ಊರಿನಿಂದ ಬೇರ್ಶೆಬದ ವರೆಗಿದ್ದ
ಎಲ್ಲಾ ಇಸ್ರಾಯೇಲ್ಯರಿಗೆ ಗೊತ್ತಾಯಿತು. ಯೆಹೋ 21
ವನು ಶೀಲೋವಿನಲ್ಲಿ ದರ್ಶನಕೊಡುವದಕ್ಕೆ ಪ್ರಾರಂಭಿಸಿ
ತನ್ನ ವಾಕ್ಯದಿಂದ ಸಮುವೇಲನಿಗೆ ತನ್ನನ್ನು ಪ್ರಕಟಿಸಿ
ಕೊಳ್ಳುತ್ತಾ ಬಂದನು. ಸಮುವೇಲನು ಇಸ್ರಾಯೇ 4
ಲ್ಯರೆಲ್ಲರಿಗೆ ದೈವೋತ್ತರಗಳನ್ನು ತಿಳಿಸುತ್ತಿದ್ದನು.

ಫಿಲಿಷ್ಟಿಯರು ಇಸ್ರಾಯೇಲ್ಯರನ್ನು ಜಯಿಸಿದ್ದು;
ಏಲಿಯ ಮಕ್ಕಳ ಮರಣ.

ಇಸ್ರಾಯೇಲ್ಯರು ಫಿಲಿಷ್ಟಿಯರಿಗೆ ವಿರೋಧವಾಗಿ
ಯುದ್ಧಕ್ಕೆ ಹೊರಟು ಎಬೆನೆಜೆರಿನ ಸಮೀಪದಲ್ಲಿ
ಪಾಳೆಯಮಾಡಿಕೊಂಡರು; ಫಿಲಿಷ್ಟಿಯರು ಬಂದು
2 ಅಫೇಕಿನಲ್ಲಿ ಇಳುಕೊಂಡರು. ಇವರು ಇಸ್ರಾಯೇಲ್ಯ
ರಿಗೆ ಎದುರಾಗಿ ವ್ಯೂಹಕಟ್ಟಿ ಯುದ್ಧಮಾಡಲು ಇಸ್ರಾ
ಯೇಲ್ಯರು ಸೋತರು; ಫಿಲಿಷ್ಟಿಯರು ರಣರಂಗದಲ್ಲಿ
ಸುಮಾರು ನಾಲ್ಕು ಸಾವಿರ ಮಂದಿ ಇಸ್ರಾಯೇಲ್ಯ
3 ರನ್ನು ಸಂಹರಿಸಿದರು. ಇಸ್ರಾಯೇಲ್ಯರು ತಮ್ಮ ಪಾಳೆ
ಯಕ್ಕೆ ಹಿಂದಿರುಗಿದ ಮೇಲೆ ಅವರ ಹಿರಿಯರು ಅವ
ರಿಗೆ—ಯೆಹೋವನು ಈ ಹೊತ್ತು ನಮ್ಮನ್ನು ಫಿಲಿಷ್ಟಿ
ಯರಿಂದ ಅಪಜಯಪಡಿಸಿದ್ದೇಕೆ? ಶೀಲೋವಿನಿಂದ
ಯೆಹೋವನ ಒಡಂಬಡಿಕೆಯ ಮಂಜೂಷವನ್ನು ತರಿ
ಸೋಣ; ಆತನು ನಮ್ಮ ಮಧ್ಯದಲ್ಲಿ ಬಂದು ಶತ್ರು
ಗಳ ಕೈಗೆ ನಮ್ಮನ್ನು ತಪ್ಪಿಸಲಿ ಎಂದು ಆಲೋಚನೆ
4 ಹೇಳಿದ್ದರಿಂದ ಅವರು ಜನರನ್ನು ಕಳುಹಿಸಿ ಕೆರೂಬಿ
ಗಳ ಮಧ್ಯದಲ್ಲಿ ಆಸೀನನಾಗಿರುವ ಸೈನ್ಯಾಧೀಶ್ವರ
ಯೆಹೋವನ ಒಡಂಬಡಿಕೆಯ ಮಂಜೂಷವನ್ನು ತರಿಸಿ
ದರು. ಏಲಿಯ ಇಬ್ಬರು ಮಕ್ಕಳಾದ ಹೊಫ್ನಿ, ಫೀನೆ
ಹಾಸ್ ಎಂಬವರು ದೇವರ ಒಡಂಬಡಿಕೆಯ ಮಂಜೂ
5 ಷದ ಸಂಗಡ ಇದ್ದರು. ಯೆಹೋವನ ಒಡಂಬಡಿ
ಕೆಯ ಮಂಜೂಷವು ಪಾಳೆಯಕ್ಕೆ ಬಂದಾಗ ಇಸ್ರಾ
ಯೇಲ್ಯರೆಲ್ಲರೂ ಭೂಮಿಯು ಪ್ರತಿಧ್ವನಿಕೊಡುವಷ್ಟು
6 ಆರ್ಬಟಿಸಿದರು. ಫಿಲಿಷ್ಟಿಯರು ಇದನ್ನು ಕೇಳಿ—
ಇಬ್ರಿಯರ ಪಾಳೆಯದಲ್ಲಿ ಇಂಥ ಆರ್ಬಟಕ್ಕೇನು
ಕಾರಣವೆಂದು ವಿಚಾರಿಸುವಲ್ಲಿ ಯೆಹೋವನ ಮಂಜೂ
ಷವು ಪಾಳೆಯದಲ್ಲಿ ಬಂದದ್ದೇ ಕಾರಣವೆಂದು ಗೊತ್ತಾ
7 ಯಿತು. ದೇವರು ಇವರ ಪಾಳೆಯಕ್ಕೆ ಬಂದಿದ್ದಾ
ನಲ್ಲಾ ಎಂದು ಫಿಲಿಷ್ಟಿಯರು ಬಹಳವಾಗಿ ಭಯ
8 ಪಟ್ಟು—ಅಯ್ಯೋ, ಮುಂಚೆ ಹೀಗಿದ್ದಿಲ್ಲ. ಅಯ್ಯೋ,
ಪ್ರತಾಪವುಳ್ಳ ಈ ದೇವರುಗಳ ಕೈಯಿಂದ ನಮ್ಮನ್ನು
ಬಿಡಿಸುವವರಾರು? ಐಗುಪ್ತ್ಯರನ್ನು ಅರಣ್ಯದಲ್ಲಿ
ಸಂಪೂರ್ಣವಾಗಿ ನಾಶಮಾಡಿಬಿಟ್ಟ ದೇವರುಗಳು
9 ಇವರೇ ಅಲ್ಲವೋ! ಫಿಲಿಷ್ಟಿಯರೇ, ಬಲಗೊಳ್ಳಿರಿ,
ಶೂರರಾಗಿರ್ರಿ; ನಿಮಗೆ ದಾಸರಾಗಿದ್ದ ಇಬ್ರಿಯರಿಗೆ
ನೀವೇ ದಾಸರಾದೀರಿ. ಆದಕಾರಣ ಶೌರ್ಯದಿಂದ
10 ಯುದ್ಧಮಾಡಬೇಕು ಎಂದು ಹೇಳಿಕೊಂಡು ಯುದ್ಧ
ಮಾಡಲು ಇಸ್ರಾಯೇಲ್ಯರು ಸೋತು ತಮ್ಮ ತಮ್ಮ
ಮನೆಗಳಿಗೆ ಓಡಿಹೋದರು. ಮಹಾಸಂಹಾರವಾ
ಯಿತು; ಇಸ್ರಾಯೇಲ್ಯರಲ್ಲಿ ಮೂವತ್ತು ಸಾವಿರ
11 ಕಾಲಾಳುಗಳು ಮಡಿದರು. ದೇವರ ಮಂಜೂಷವು
ಶತ್ರುವಶವಾಯಿತು; ಏಲಿಯ ಮಕ್ಕಳಾದ ಹೊಫ್ನಿ
ಫೀನೆಹಾಸರು ಹತರಾದರು.
12 ಅದೇ ದಿವಸ ಒಬ್ಬ ಬೆನ್ಯಾಮೀನ್ಯನು ರಣರಂಗ
ದಿಂದ ತಪ್ಪಿಸಿಕೊಂಡು ತನ್ನ ಬಟ್ಟೆಗಳನ್ನು ಹರಿದು
ಕೊಂಡು ತಲೆಯ ಮೇಲೆ ಮಣ್ಣುಹಾಕಿಕೊಂಡ
ಶೀಲೋವಿಗೆ ಬಂದು ನಡೆದದ್ದನ್ನು ತಿಳಿಸಲಾಗಿ ಜ
ರೆಲ್ಲಾ ಗೋಳಾಡ ತೊಡಗಿದರು. ದೇವರ ಮಂಜೂ
ವೇನಾಯಿತೋ ಎಂಬ ಚಿಂತೆಯಿಂದ ಮಂದಿರದ್ವಾರ
ಬಳಿಯಲ್ಲಿ ಆಸೀನನಾಗಿ ದಾರಿಯನ್ನು ನೋಡುತ್ತಿದ್
ಏಲಿಯು ಆ ದುಃಖಧ್ವನಿಯನ್ನು ಕೇಳಿ ಈ ಗದ್ದ
ವೇನೆಂದು ವಿಚಾರಿಸಲು ಒಡನೆ ಆ ಮನುಷ್ಯನ
ಏಲಿಯ ಬಳಿಗೆ ಬಂದು ಎಲ್ಲವನ್ನೂ ತಿಳಿಸಿದನು
ಏಲಿಯು ತೊಂಭತ್ತೆಂಟು ವರುಷದವನು; ಕಣ್ಣುಗಳ
ಇಂಗಿಹೋಗಿ ಕುರುಡನಾಗಿದ್ದನು. ಆ ಮನುಷ್ಯನ
ಏಲಿಗೆ—ನಾನು ರಣರಂಗದಲ್ಲಿದ್ದವನು; ಈಹೊತ್ತ
ಅಲ್ಲಿಂದ ಓಡಿಬಂದೆನು ಅನ್ನಲು ಏಲಿಯು ಅ
ನನ್ನು—ನನ್ನ ಮಗನೇ, ವರ್ತಮಾನವೇನು ಎಂದ
ಕೇಳಿದನು. ಅವನು ಏಲಿಗೆ—ಇಸ್ರಾಯೇಲ್ಯರು ಫಿ
ಷ್ಟಿಯರಿಗೆ ಬೆನ್ನುತೋರಿಸಿದರು; ಮಹಾಸಂಹಾರವ
ಯಿತು. ನಿನ್ನ ಇಬ್ಬರು ಮಕ್ಕಳಾದ ಹೊಫ್ನಿ ಫೀ
ಹಾಸರು ಸತ್ತರು; ದೇವರ ಮಂಜೂಷವು ಶತ್ರುವಶವ
ಯಿತು ಎಂದು ತಿಳಿಸಿದನು. ಮುದುಕನೂ ಸ್ಥೂ
ಕಾಯನೂ ಆದ ಏಲಿಯು ದೇವರ ಒಡಂಬಡಿಕೆಯ
ಮಂಜೂಷದ ವರ್ತಮಾನವನ್ನು ಕೇಳಿದೊಡನೆ ಪೀ
ಠದಿಂದ ಹಿಂದಕ್ಕೆ ಬಾಗಲಿನ ಕಡೆಗೆ ಬಿದ್ದು ಕುತ್ತಿ
ಮುರಿದು ಸತ್ತನು. ಅವನು ಇಸ್ರಾಯೇಲ್ಯರನ್
ನಾಲ್ವತ್ತು ವರುಷ ಪಾಲಿಸಿದನು.
ಫೀನೆಹಾಸನ ಹೆಂಡತಿಯಾದ ಅವನ ಸೊಸೆಯು
ದಿನತುಂಬಿದ ಗರ್ಭಿಣಿಯಾಗಿದ್ದು ದೇವರ ಮಂಜ
ಷವು ಶತ್ರುವಶವಾದದ್ದನ್ನೂ ಮಾವನೂ ಗಂಡನೂ ಹ
ರಾದದ್ದನ್ನೂ ಕೇಳಿದೊಡನೆ ಪ್ರಸವವೇದನೆಯುಂಟಾ
ಮಗುವನ್ನು ಹೆತ್ತಳು. ಆಕೆಯು ಸಾಯುವ ಸಮ
ಯದಲ್ಲಿ ಬಳಿಯಲ್ಲಿ ನಿಂತಿದ್ದ ಸ್ತ್ರೀಯರು—ಭಯ
ಪಡಬೇಡ, ಮಗನನ್ನು ಹೆತ್ತಿದ್ದೀ ಎಂದು ಹೇಳಿದರು
ಆಕೆಯು ಅವರ ಮಾತಿಗೆ ಲಕ್ಷ್ಯಕೊಡಲಿಲ್ಲ, ಪ್ರತ್
ತ್ತರಕೊಡಲಿಲ್ಲ. ದೇವರ ಮಂಜೂಷವು ಶತ್ರುವ
ವಾದದರಿಂದಲೂ ಮಾವನೂ ಗಂಡನೂ ಮೃತಿಹೊಂದಿ
ರಿಂದಲೂ—ಮಹಿಮೆಯು ಇಸ್ರಾಯೇಲ್ಯರನ್ನು ಬಿಟ್ಟು
ಹೋಯಿತೆಂದು ಹೇಳಿ ಆ ಕೂಸಿಗೆ 1) ಈಕಾಬೋದ
ಎಂದು ಹೆಸರಿಟ್ಟಳು. ದೇವರ ಮಂಜೂಷವು ಶತ್ರು
ವಶವಾದದರಿಂದಲೇ ಇಸ್ರಾಯೇಲ್ಯರ ಮಹಿಮೆಯ
ಹೋಯಿತೆಂದು ಹೇಳಿದಳು.

ದೇವರ ಮಂಜೂಷವು ಫಿಲಿಷ್ಟಿಯರ ದೇಶದಲ್ಲಿದ್ದದ್ದು.

ಫಿಲಿಷ್ಟಿಯರು ದೇವರ ಮಂಜೂಷವನ್ನು ಎಬೆನೆಜೆ
ರಿನಿಂದ ಅಷ್ಡೋದಿನಲ್ಲಿರುವ ದಾಗೋನನ ಗುಡಿಗೆ
ಒಯ್ದು ಅಲ್ಲಿ ದಾಗೋನನ ಮಗ್ಗುಲಲ್ಲೇ ಇಟ್ಟರು
ಅಷ್ಡೋದಿನವರು ಮರುದಿನ ಬೆಳಿಗ್ಗೆ ಎದ್ದು ನೋಡ
ಲಾಗಿ ದಾಗೋನ್ ವಿಗ್ರಹವು ಯೆಹೋವನ ಮಂಜೂ
ಷದ ಮುಂದೆ ಬೋರಲಬಿದ್ದಿರುವದನ್ನು ಕಂಡ
ಅದನ್ನು ಎತ್ತಿ ತಿರಿಗಿ ಅದರ ಸ್ಥಳದಲ್ಲಿಟ್ಟರು. ಮುಂದಿ

1) ಅಂದರೆ ಮಹಿಮೆ ಕಳಕೊಂಡವನು.

ದಿನ ಬೆಳಿಗ್ಗೆ ನೋಡುವಾಗ ದಾಗೋನನ ತಲೆಯೂ
ಕೈಗಳೂ ಕಡಿಯಲ್ಪಟ್ಟು ಹೊಸ್ತಲಿನ ಮೇಲೆ ಬಿದ್ದಿ
ದ್ದವು; ಮುಂಡ ಮಾತ್ರ ಯೆಹೋವನ ಮಂಜೂಷದ
5 ಮುಂದೆ ಬಿದ್ದಿತ್ತು; ಇಂದಿನ ವರೆಗೂ ದಾಗೋನನ
ಯಾಜಕರೂ ಅವನ ಬಳಿಗೆ ಬರುವವರೆಲ್ಲರೂ ಅಷ್ಡೋದ್
ದಿನ ಗುಡಿಯ ಹೊಸ್ತಿಲನ್ನು ತುಳಿಯದಿರುವದಕ್ಕೆ
ಇದೇ ಕಾರಣ.
6 ಯೆಹೋವನ ಹಸ್ತವು ಅಷ್ಡೋದಿನವರಿಗೆ ಬಾಧಕ
ವಾಗಿತ್ತು; ಆತನು ಆ ನಗರದಲ್ಲಿಯೂ ಅದರ ಗ್ರಾಮ
ಗಳಲ್ಲಿಯೂ ಗಡ್ಡೆರೋಗವನ್ನು ಬರಮಾಡಿ ಅವು
7 ಗಳನ್ನು ಹಾಳುಮಾಡಿದನು. ಅಷ್ಡೋದಿನ ಜನರು
ಅದನ್ನು ನೋಡಿ—ಇಸ್ರಾಯೇಲ್‍ದೇವರ ಮಂಜೂಷವು
ನಮ್ಮಲ್ಲಿರಬಾರದು; ಆತನ ಹಸ್ತವು ನಮಗೂ ನಮ್ಮ
ದೇವರಾದ ದಾಗೋನನಿಗೂ ಬಾಧಕವಾಗಿದೆ ಎಂದು
8 ಹೇಳಿ ಫಿಲಿಷ್ಟಿಯ ಪ್ರಭುಗಳೆಲ್ಲರನ್ನೂ ಕೂಡಿಸಿ—
ಇಸ್ರಾಯೇಲ್‍ದೇವರ ಮಂಜೂಷವನ್ನು ಏನು ಮಾ
ಡೋಣ ಎಂದು ಕೇಳಲು ಅವರು—ಅದನ್ನು ಗತ್
ಊರಿಗೆ ಕಳುಹಿಸಬೇಕೆಂದು ನಿರ್ಣಯಿಸಿದರು. ಅವರು
ಹಾಗೆಯೇ ಇಸ್ರಾಯೇಲ್‍ದೇವರ ಮಂಜೂಷವನ್ನು
9 ಅಲ್ಲಿಗೆ ಕಳುಹಿಸಿದರು. ಮಂಜೂಷವು ಅಲ್ಲಿ ಹೋದ
ಮೇಲೆ ಯೆಹೋವನ ಹಸ್ತವು ಆ ಊರಿನವರಿಗೂ
ಬಾಧಕವಾದದರಿಂದ ಅಲ್ಲಿ ದೊಡ್ಡ ಗದ್ದಲವಾಯಿತು.
ಯೆಹೋವನು ಊರಿನ ಚಿಕ್ಕವರಲ್ಲಿಯೂ ದೊಡ್ಡವ
10 ರಲ್ಲಿಯೂ ಗಡ್ಡೆಗಳನ್ನು ಬರಮಾಡಿದನು. ಆದದ
ರಿಂದ ಅವರು ದೇವರ ಮಂಜೂಷವನ್ನು ಎಕ್ರೋನಿಗೆ
ಕಳುಹಿಸಿದರು. ಅದು ಅಲ್ಲಿಗೆ ಬಂದಾಗ ಆ ಊರಿ
ನವರು—ನೋಡಿರಿ, ನಮ್ಮನ್ನೂ ನಮಗೆ ಸೇರಿದವ
ರನ್ನೂ ಕೊಲ್ಲುವದಕ್ಕೋಸ್ಕರ ಇಸ್ರಾಯೇಲ್‍ದೇವರ
ಮಂಜೂಷವನ್ನು ಇಲ್ಲಿಗೆ ಕಳುಹಿಸಿದ್ದಾರೆಂದು ಕೂಗಿ
11 ಕೊಂಡರು. ದೇವರ ಹಸ್ತವು ಅವರಿಗೂ ಬಾಧಕ
ವಾಗಿದ್ದದರಿಂದ ಅವರಿಗೆ ಮರಣಭಯವುಂಟಾಯಿತು.
ಅವರು ಫಿಲಿಷ್ಟಿಯ ಪ್ರಭುಗಳೆಲ್ಲರನ್ನೂ ಕೂಡಿಸಿ ಅವ
ರಿಗೆ—ಇಸ್ರಾಯೇಲ್‍ದೇವರ ಮಂಜೂಷದಿಂದ ನಮ
ಗೂ ನಮ್ಮ ಜನರಿಗೂ ಮರಣವುಂಟಾಗದ ಹಾಗೆ
ಅದನ್ನು ಅದರ ಸ್ಥಳಕ್ಕೆ ಕಳುಹಿಸಿಬಿಡಿರಿ ಅಂದರು.
12 ಸಾಯದೆ ಉಳಿದ ಜನರಿಗೂ ಗಡ್ಡೆರೋಗ ಬಂದಿತ್ತು.
ಪಟ್ಟಣದ ಗೋಳಾಟವು ಆಕಾಶವನ್ನು ಮುಟ್ಟಿತು.

ಫಿಲಿಷ್ಟಿಯರು ದೇವರ ಮಂಜೂಷವನ್ನು ಹಿಂದಕ್ಕೆ
ಕಳುಹಿಸಿದ್ದು.

6 ಯೆಹೋವನ ಮಂಜೂಷವು ಫಿಲಿಷ್ಟಿಯರ ದೇಶದಲ್ಲಿ
2 ಏಳು ತಿಂಗಳಿದ್ದನಂತರ ಫಿಲಿಷ್ಟಿಯರು ಪೂಜಾರಿ
ಗಳನ್ನೂ ಕಣಿಹೇಳುವವರನ್ನೂ ಕರೆದು ಅವರಿಗೆ—
ಯೆಹೋವನ ಮಂಜೂಷವನ್ನು ಏನು ಮಾಡಬೇಕು?
ಅದನ್ನು ತಿರಿಗಿ ಅದರ ಸ್ಥಳಕ್ಕೆ ಹೇಗೆ ಕಳುಹಿಸ
3 ಬೇಕು? ತಿಳಿಸಿರಿ ಅನ್ನಲು ಅವರು—ನೀವು ಇಸ್ರಾ
ಯೇಲ್‍ದೇವರ ಮಂಜೂಷವನ್ನು ಸುಮ್ಮನೆ ಕಳುಹಿಸ
ಬಾರದು; ಪ್ರಾಯಶ್ಚಿತ್ತದ್ರವ್ಯದೊಡನೆ ಕಳುಹಿಸಿದರೆ
ಮಾತ್ರ ಗುಣಹೊಂದುವಿರಿ; ಆತನ ಶಿಕ್ಷಾಹಸ್ತವು
ನಿಮ್ಮನ್ನು ಬಾಧಿಸುತ್ತಿದ್ದದ್ದಕ್ಕೆ ಕಾರಣವು ಗೊತ್ತಾಗು
ವದು ಎಂದು ಹೇಳಿದರು. ಜನರು—ನಾವು ಪ್ರಾಯ 4
ಶ್ಚಿತ್ತಾರ್ಥವಾಗಿ ಕಳುಹಿಸತಕ್ಕದ್ದೇನು ಎನ್ನಲು ಅವ
ರು—ನಿಮಗೂ ನಿಮ್ಮ ಪ್ರಭುಗಳಿಗೂ ಒಂದೇ ವಿಧ
ವ್ಯಾಧಿಯಿರುವದರಿಂದ ಪ್ರಭುಗಳ ಸಂಖ್ಯೆಗೆ ಸರಿ
ಯಾಗಿ ಬಂಗಾರದ ಐದು ಗಡ್ಡೆಗಳನ್ನೂ ಇಲಿಗಳ
ನ್ನೂ ಮಾಡಿಸಬೇಕು. ನೀವು ನಿಮ್ಮ ದೇಶನಿವಾಸಿಗಳ 5
ವಿನಾಶಕ್ಕೆ ಕಾರಣವಾಗಿರುವ ಗಡ್ಡೆ ಮತ್ತು ಇಲಿ ಇವು
ಗಳ ಸ್ವರೂಪಗಳನ್ನು ಚಿನ್ನದಿಂದ ಮಾಡಿಸಿ ಇಸ್ರಾ
ಯೇಲ್‍ದೇವರಿಗೆ ಬಹುಮಾನವಾಗಿ ಕೊಟ್ಟರೆ ಆತನ
ಶಿಕ್ಷಾಹಸ್ತವು ನಿಮ್ಮನ್ನೂ ನಿಮ್ಮ ದೇವತೆಗಳನ್ನೂ
ಪ್ರಾಂತಗಳನ್ನೂ ಬಿಟ್ಟುಹೋದೀತು. ಐಗುಪ್ತ್ಯರಂತೆ 6
ಯೂ ಫರೋಹನಂತೆಯೂ ನಿಮ್ಮ ಹೃದಯಗಳನ್ನು
ಕಠಿಣಪಡಿಸಿಕೊಳ್ಳುವದೇಕೆ? ಇಸ್ರಾಯೇಲ್ಯರನ್ನು
ಕಳುಹಿಸಲೊಲ್ಲದ ಇವರನ್ನು ಯೆಹೋವನು ಎಷ್ಟೋ
ವಿಧವಾಗಿ ಬಾಧಿಸಬೇಕಾಯಿತಲ್ಲಾ. ಈಗ ನೀವು 7
ಒಂದು ಹೊಸ ಬಂಡಿಯನ್ನು ಮಾಡಿಸಿ ಅದಕ್ಕೆ ಹಾಲು
ಕರೆಯುವ ಮತ್ತು ಎಂದೂ ನೊಗಹೊರದ ಎರಡು
ಹಸುಗಳನ್ನು ಹೂಡಿ ಆ ಬಂಡಿಯ ಮೇಲೆ ಯೆಹೋ 8
ವನ ಮಂಜೂಷವನ್ನೂ ನೀವು ಪ್ರಾಯಶ್ಚಿತ್ತಾರ್ಥವಾಗಿ
ಕೊಡುವ ಬಂಗಾರದ ವಸ್ತುಗಳುಳ್ಳ ಚಿಕ್ಕ ಪೆಟ್ಟಿಗೆ
ಯನ್ನೂ ಇಟ್ಟು ಕಳುಹಿಸಿಬಿಡಿರಿ. ಆ ಹಸುಗಳ ಕರು
ಗಳನ್ನು ಮನೆಗೆ ತೆಗೆದುಕೊಂಡು ಹೋಗಿರಿ. ಅದು 9
ತಾನಾಗಿ ಸ್ವದೇಶದ ದಾರಿ ಹಿಡಿದು ಬೇತ್‍ಷೆಮೆಷಿನ
ಕಡೆಗೆ ಹೋದರೆ ಈ ದೊಡ್ಡ ಕೇಡನ್ನು ಬರಮಾಡಿ
ದವನು ಯೆಹೋವನೇ ಎಂದೂ ಆ ಮಾರ್ಗ ಹಿಡಿಯ
ದಿದ್ದರೆ ಆತನ ಹಸ್ತವು ನಮ್ಮನ್ನು ಮುಟ್ಟಲಿಲ್ಲ, ಅದು
ನಮ್ಮ ಅದೃಷ್ಟವೇ ಎಂದೂ ತಿಳಿದುಕೊಳ್ಳಿರಿ ಅಂದರು.
ಅದೇ ಪ್ರಕಾರ ಫಿಲಿಷ್ಟಿಯರು ಹಾಲುಕರೆಯುವ 10
ಎರಡು ಹಸುಗಳನ್ನು ತೆಗೆದುಕೊಂಡು ಬಂಡಿಗೆ ಹೂಡಿ
ಅವುಗಳ ಕರುಗಳನ್ನು ಮನೆಯಲ್ಲಿ ಕಟ್ಟಿಹಾಕಿ
ಯೆಹೋವನ ಮಂಜೂಷವನ್ನೂ ಚಿನ್ನದ ಇಲಿಗಳೂ 11
ಗಡ್ಡೆಗಳೂ ಉಳ್ಳ ಚಿಕ್ಕ ಪೆಟ್ಟಿಗೆಯನ್ನೂ ಬಂಡಿಯ
ಮೇಲಿಟ್ಟರು. ಕೂಡಲೆ ಆ ಹಸುಗಳು ಬೇತ್‍ಷೆ 12
ಮೆಷಿನ ರಾಜಮಾರ್ಗವನ್ನು ಹಿಡಿದು ಕೂಗುತ್ತಾ
ನೆಟ್ಟಗೆ ಮುಂದೆ ನಡೆದವು; ಎಡಬಲಕ್ಕೆ ತಿರುಗಲಿಲ್ಲ.
ಫಿಲಿಷ್ಟಿಯ ಪ್ರಭುಗಳು ಬೇತ್‍ಷೆಮೆಷಿನ ಎಲ್ಲೆಯ
ವರೆಗೂ ಅವುಗಳ ಹಿಂದೆ ಹೋದರು. ಬೇತ್‍ಷೆಮೆಷಿ 13
ನವರು ಅಲ್ಲಿನ ತಗ್ಗಿನಲ್ಲಿ ಗೋದಿಯ ಬೆಳೆಯನ್ನು
ಕೊಯ್ಯುತ್ತಿದ್ದರು. ಅವರು ಕಣ್ಣೆತ್ತಿ ಯೆಹೋವನ
ಮಂಜೂಷವನ್ನು ನೋಡಿ ಬಹುಸಂತೋಷಪಟ್ಟರು.
ಬಂಡಿಯು ಬೇತ್‍ಷೆಮೆಷಿನವನಾದ ಯೆಹೋಶುವನ 14
ಹೊಲದಲ್ಲಿದ್ದ ದೊಡ್ಡ ಕಲ್ಲಿನ ಬಳಿಯಲ್ಲಿ ಬಂದು
ನಿಲ್ಲಲು ಅವರು ಹೋಗಿ ಬಂಡಿಯ ಕಟ್ಟಿಗೆಗಳನ್ನು
ಒಡೆದು ಅಗ್ನಿಮಾಡಿ ಆ ಹಸುಗಳನ್ನು ಯೆಹೋವನಿ
ಗೋಸ್ಕರ ಆಹುತಿಕೊಟ್ಟರು. ಲೇವಿಯರು ಯೆಹೋ 15
ವನ ಮಂಜೂಷವನ್ನೂ ಚಿನ್ನದ ವಸ್ತುಗಳುಳ್ಳ ಚಿಕ್ಕ
ಪೆಟ್ಟಿಗೆಯನ್ನೂ ಇಳಿಸಿ ಆ ದೊಡ್ಡ ಕಲ್ಲಿನ ಮೇಲಿ
ಟ್ಟರು. ಬೇತ್‍ಷೆಮೆಷಿನವರು ಅದೇ ದಿವಸ ಯೆಹೋ
ವನಿಗೆ ಸರ್ವಾಂಗಹೋಮಗಳನ್ನೂ ಸಮಾಧಾನಯಜ್ಞ

16 ಗಳನ್ನೂ ಸಮರ್ಪಿಸಿದರು. ಇದನ್ನೆಲ್ಲಾ ನೋಡಿದ
ಮೇಲೆ ಫಿಲಿಷ್ಟಿಯರ ಐದು ಮಂದಿ ಪ್ರಭುಗಳು
ಅದೇ ದಿವಸ ಎಕ್ರೋನಿಗೆ ಹಿಂದಿರುಗಿದರು.
17 ಫಿಲಿಷ್ಟಿಯರು ಯೆಹೋವನಿಗೆ ಸಮರ್ಪಿಸಿದ ಚಿನ್ನ
ದ ಗಡ್ಡೆಗಳು ಅಷ್ಡೋದ್, ಗಾಜಾ, ಅಷ್ಕೆಲೋನ್,
ಗತ್‌ಊರು, ಎಕ್ರೋನ್ ಎಂಬ ಅವರ ಸಂಸ್ಥಾನಗಳ
18 ಸಂಖ್ಯೆಗೂ ಅವರು ಕಳುಹಿಸಿದ ಬಂಗಾರದ ಇಲಿಗಳು
ಫಿಲಿಷ್ಟಿಯರ ಐದು ಮಂದಿ ಪ್ರಭುಗಳ ಅಧೀನದಲ್ಲಿದ್ದ
ಎಲ್ಲಾ ಗ್ರಾಮನಗರಗಳ ಸಂಖ್ಯೆಗೂ ಸರಿಯಾಗಿದ್ದವು.
ಬೇತ್‌ಷೆಮೆಷಿನವನಾದ ಯೆಹೋಶುವನ ಹೊಲದಲ್ಲಿ
ಇಂದಿನ ವರೆಗೂ ಇರುವ ಯೆಹೋವನ ಮಂಜೂಷವು
ಇಡಲ್ಪಟ್ಟ ಆ ದೊಡ್ಡ ಕಲ್ಲೇ ಈ ಗ್ರಾಮನಗರಗಳಿಗೆ
19 [1]ಮೇರೆಯಾಗಿದೆ. [2]ಬೇತ್‌ಷೆಮೆಷಿನವರು ಯೆಹೋ
ವನ ಮಂಜೂಷದಲ್ಲಿ ಹಣಿಕಿನೋಡಿದ್ದರಿಂದ ಯೆ
ಹೋವನು ಅವರಲ್ಲಿ ಎಪ್ಪತ್ತು ಮಂದಿಯನ್ನು ಸಾಯಿ
ಸಿದನು. ಇದಲ್ಲದೆ ಐವತ್ತು ಸಾವಿರ ಜನರು ಮರಣ
ಹೊಂದಿದರು. ಯೆಹೋವನು ತಮ್ಮಲ್ಲಿ ಮಹಾನಾಶನ
ವನ್ನುಂಟುಮಾಡಿದದರಿಂದ ಬೇತ್‌ಷೆಮೆಷಿನವರು ಗೋ
20 ಳಾಡಿ—[3]ಅಗಮ್ಯದೇವರಾದ ಯೆಹೋವನ ಮುಂದೆ
ಯಾರು ನಿಂತಾರು? ಇನ್ನು ಮೇಲೆ ಈತನು ಹೋಗತಕ್ಕ
21 ಸ್ಥಳವಾವದು ಎಂದು ಮಾತಾಡಿಕೊಂಡು ಕಿರ್ಯ
ತ್ಯಾರೀಮಿನವರ ಬಳಿಗೆ ದೂತರನ್ನು ಕಳುಹಿಸಿ ಅವ
ರಿಗೆ—ಫಿಲಿಷ್ಟಿಯರು ಯೆಹೋವನ ಮಂಜೂಷವನ್ನು
ಕಳುಹಿಸಿದ್ದಾರೆ; ನೀವು ಬಂದು ಅದನ್ನು ತೆಗೆದು
7 ಕೊಂಡು ಹೋಗಿರಿ ಎಂದು ಹೇಳಿಸಿದರು. ಆಗ ಕಿರ್ಯ
ತ್ಯಾರೀಮಿನವರು ಬಂದು ಯೆಹೋವನ ಮಂಜೂಷ
ವನ್ನು ತೆಗೆದುಕೊಂಡು ಹೋಗಿ ಗುಡ್ಡದ ಮೇಲೆ
ವಾಸವಾಗಿದ್ದ ಅಬೀನಾದಾಬನ ಮನೆಯಲ್ಲಿಟ್ಟು ಆವನ
ಮಗನಾದ ಎಲ್ಲಾಜಾರನನ್ನು ಅದರ ಸೇವೆಗೋಸ್ಕರ
ಪ್ರತಿಷ್ಠಿಸಿದರು.

ಇಸ್ರಾಯೇಲ್ಯರು ದೇವರ ಕಡೆಗೆ ತಿರುಗಿಕೊಂಡದ್ದು;
ಫಿಲಿಷ್ಟಿಯರು ಅಪಜಯಹೊಂದಿದ್ದು.

2 ಮಂಜೂಷವು ಕಿರ್ಯತ್ಯಾರೀಮಿಗೆ ಬಂದು ಬಹಳ
ದಿವಸಗಳು ಅಂದರೆ ಇಪ್ಪತ್ತು ವರುಷಗಳು ಕಳೆದು
ಹೋದವು; ಈ ಕಾಲದಲ್ಲಿ ಎಲ್ಲಾ ಇಸ್ರಾಯೇಲ್ಯರು
3 ಯೆಹೋವನನ್ನೇ ಹಂಬಲಿಸುತ್ತಿದ್ದರು. ಆಗ ಸಮು
ವೇಲನು ಅವರಿಗೆ— ನೀವು ಪೂರ್ಣಮನಸ್ಸಿನಿಂದ
ಯೆಹೋವನ ಕಡೆಗೆ ತಿರುಗಿಕೊಂಡಿರುವದಾದರೆ ನಿಮ್ಮ
ಮಧ್ಯದಲ್ಲಿರುವ ಅಷ್ಟೋರೆತ್ ಮೊದಲಾದ ಅನ್ಯ
ದೇವತೆಗಳನ್ನು ತೆಗೆದುಹಾಕಿ ಯೆಹೋವನ ಮೇಲೆ
ಯೇ ಮನಸ್ಸಿಟ್ಟು ಆತನೊಬ್ಬನನ್ನೇ ಸೇವಿಸಿರಿ; ಆಗ
ಆತನು ನಿಮ್ಮನ್ನು ಫಿಲಿಷ್ಟಿಯರ ಕೈಯಿಂದ ಬಿಡಿಸಿ
4 ಕಾಪಾಡುವನು ಅಂದನು. ಹಾಗೆಯೇ ಇಸ್ರಾಯೇ
ಲ್ಯರು ಬಾಳ್ ಅಷ್ಟೋರೆತ್ ದೇವತೆಗಳನ್ನು ತೆಗೆದು

ಹಾಕಿ ಯೆಹೋವನೊಬ್ಬನನ್ನೇ ಸೇವಿಸತೊಡಗಿದರು
ಸಮುವೇಲನು ತಿರಿಗಿ ಅವರಿಗೆ— ಇಸ್ರಾಯೇಲ್ಯರೆಲ್ಲರು
ಮಿಚ್ಪೆಯಲ್ಲಿ ಕೂಡಿಬರಲಿ; ನಾನು ನಿಮಗೋಸ್ಕ
ಯೆಹೋವನನ್ನು ಪ್ರಾರ್ಥಿಸುವೆನು ಅನ್ನಲು ಅವರ
ಅಲ್ಲಿ ಕೂಡಿಬಂದು ನೀರುಸೇದಿ ಯೆಹೋವನ ಮುಂ
ಹೊಯ್ದು ಆ ದಿವಸ ಉಪವಾಸವಿದ್ದು — ನಿನಗೆ ದ್ರೋ
ಗಳಾಗಿದ್ದೇವೆಂದು ಆತನಿಗೆ ಅರಿಕೆಮಾಡಿದರು. ಸಮ
ವೇಲನು ಮಿಚ್ಪೆಯಲ್ಲಿ ಇಸ್ರಾಯೇಲ್ಯರ ವ್ಯಾಜ್ಯಗಳನ್
ತೀರಿಸಿದನು.
ಇಸ್ರಾಯೇಲ್ಯರು ಮಿಚ್ಪೆಯಲ್ಲಿ ಕೂಡಿಬಂದಿದ್ದಾ
ರೆಂಬದು ಫಿಲಿಷ್ಟಿಯರಿಗೆ ಗೊತ್ತಾದಾಗ ಅವರ ಪ್ರಭ
ಗಳು ಇಸ್ರಾಯೇಲ್ಯರಿಗೆ ವಿರೋಧವಾಗಿ ಹೊರಟರು
ಇದನ್ನು ತಿಳಿದ ಇಸ್ರಾಯೇಲ್ಯರು ಬಹಳವಾಗಿ ಭಯ
ಪಟ್ಟು ಸಮುವೇಲನಿಗೆ—ನಮ್ಮ ದೇವರಾದ ಯೆಹೊ
ವನು ನಮ್ಮನ್ನು ಫಿಲಿಷ್ಟಿಯರ ಕೈಯಿಂದ ತಪ್ಪಿ
ರಕ್ಷಿಸುವ ಹಾಗೆ ನೀನು ನಮಗೋಸ್ಕರ ಆತನಿ
ಮೊರೆಯಿಡು, ಸುಮ್ಮನಿರಬೇಡ ಅಂದರು. ಆ
ಸಮುವೇಲನು ಹಾಲುಕುಡಿಯುವ ಕುರಿಮರಿಯನ್
ತಂದು ಯೆಹೋವನಿಗೆ ಸರ್ವಾಂಗಹೋಮವಾಗಿ ಸವ
ರ್ಪಿಸಿ ಇಸ್ರಾಯೇಲ್ಯರಿಗೋಸ್ಕರ ಮೊರೆಯಿಡಲ
ಆತನು ಸದುತ್ತರವನ್ನು ದಯಪಾಲಿಸಿದನು. ಹೇಗಂ
ರೆ—ಸಮುವೇಲನು ಯಜ್ಞವನ್ನರ್ಪಿಸುವ ವೇಳೆಯಲ್
ಫಿಲಿಷ್ಟಿಯರು ಯುದ್ಧಕ್ಕೋಸ್ಕರ ಸಮೀಪಿಸಲಾ
ಯೆಹೋವನು ದೊಡ್ಡ ಗುಡುಗಿನಿಂದ ಅವರನ್
ಕಳವಳಗೊಳಿಸಿ ಇಸ್ರಾಯೇಲ್ಯರಿಗೆ ಸೋತು ಓ
ಹೋಗುವಂತೆ ಮಾಡಿದನು. ಇಸ್ರಾಯೇಲ್ಯರಾದರೊ
ಮಿಚ್ಪೆಯಿಂದ ಹೊರಟು ಹಿಂದಟ್ಟಿ ಬೇತ್ಕರಿನ ತಗ್ಗಿ
ವರೆಗೆ ಅವರನ್ನು ಹತಮಾಡಿದರು. ಅನಂತರ ಸಮು
ವೇಲನು ಮಿಚ್ಪೆಗೂ ಶೇನಿಗೂ ಮಧ್ಯದಲ್ಲಿ ಒಂದ
ಕಲ್ಲನ್ನು ನಿಲ್ಲಿಸಿ—ಯೆಹೋವನು ಇಲ್ಲಿಯ ವರೆ
ನಮಗೆ ಸಹಾಯಮಾಡಿದನೆಂದು ಹೇಳಿ ಅದಕ್ಕೆ [4]ಎ
ನೆಜೆರೆಂದು ಹೆಸರಿಟ್ಟನು. ಫಿಲಿಷ್ಟಿಯರು ಬಹ
ವಾಗಿ ತಗ್ಗಿಸಲ್ಪಟ್ಟದರಿಂದ ತಿರಿಗಿ ಇಸ್ರಾಯೇಲ್ಯ
ಪ್ರಾಂತದೊಳಗೆ ಬರಲೇ ಇಲ್ಲ. ಸಮುವೇಲನ ಜೀ
ಮಾನದಲ್ಲೆಲ್ಲಾ ಯೆಹೋವನ ಹಸ್ತವು ಫಿಲಿಷ್ಟಿಯರಿ
ವಿರೋಧವಾಗಿಯೇ ಇತ್ತು. ಅವರು ಎಕ್ರೋನ
ಮೊದಲುಗೊಂಡು ಗತ್ ಊರಿನ ವರೆಗೆ ಇಸ್ರಾಯೇಲ
ರಿಂದ ಕಿತ್ತುಕೊಂಡಿದ್ದ ಎಲ್ಲಾ ಪಟ್ಟಣಗಳು ಇಸ್ರಾ
ಯೇಲ್ಯರಿಗೇ ದೊರಕಿದವು. ಅವುಗಳಿಗೆ ಸೇರಿದ ಗ್ರಾಮ
ಗಳನ್ನೂ ಇಸ್ರಾಯೇಲ್ಯರು ಫಿಲಿಷ್ಟಿಯರಿಂದ ತೆಗೆದ
ಕೊಂಡರು. ಇಸ್ರಾಯೇಲ್ಯರಿಗೂ ಅಮೋರಿಯರಿಗ
ಸಮಾಧಾನವಿತ್ತು.
ಸಮುವೇಲನು ಜೀವದಿಂದಿರುವ ವರೆಗೆ ಇಸ್ರಾ
ಯೇಲ್ಯರನ್ನು ಪಾಲಿಸುತ್ತಿದ್ದನು. ಅವನು ಇಸ್ರಾ
ಯೇಲ್ಯರ ನ್ಯಾಯಗಳನ್ನು ತೀರಿಸುವದಕ್ಕೋಸ್ಕ
ಪ್ರತಿವರ್ಷವೂ ಬೇತೇಲ್, ಗಿಲ್ಗಾಲ್, ಮಿಚ್ಪೆ ಎಂ

1) ಪಾಠಾಂತರ: ಇದಕ್ಕೆಲ್ಲಾ ಸಾಕ್ಷಿ. 2) ಪಾಠಾಂತರ: ಯೆಕೋನೀಯನ ಮನೆಯವರು ಯೆಹೋವನ ಮಂಜೂಷ
ಕಂಡಾಗ ಉಳಿದ ಬೇತ್‌ಷೆಮೆಷಿನವರೊಡನೆ ಸಂತೋಷಪಡಲಿಲ್ಲವಾದದರಿಂದ. 3) ಅಥವಾ: ಪವಿತ್ರದೇವರಾದ. 4) ಎಬ
ಅಂದರೆ ಸಹಾಯಶಿಲೆ.

ಪಟ್ಟಣಗಳನ್ನು ಸುತ್ತಿ ರಾಮಕ್ಕೆ ತಿರಿಗಿ ಬರುತ್ತಿ
17 ದ್ದನು. ಅಲ್ಲಿ ಅವನ ಸ್ವಂತ ಮನೆಯಿದ್ದದರಿಂದ
ಅಲ್ಲಿಯೇ ಯೆಹೋವನಿಗೆ ಒಂದು ಯಜ್ಞವೇದಿ
ಯನ್ನು ಕಟ್ಟಿಸಿ ಇಸ್ರಾಯೇಲ್ಯರನ್ನು ಪಾಲಿಸುತ್ತಿ
ದ್ದನು.

### ಸಮುವೇಲನೂ ಸೌಲನೂ. 8—15.

ಇಸ್ರಾಯೇಲ್ಯರು ತಮಗೊಬ್ಬ ಅರಸನು ಬೇಕೆಂದು ಬೇಡಿಕೊಂಡದ್ದು.

8 ಸಮುವೇಲನು ಮುದುಕನಾದ ಮೇಲೆ ತನ್ನ ಮಕ್ಕ
ಳನ್ನು ಇಸ್ರಾಯೇಲ್ಯರಿಗೆ ನ್ಯಾಯಸ್ಥಾಪಕರನ್ನಾಗಿ
2 ಮಾಡಿದನು. ಅವನ ಚೊಚ್ಚಲನ ಮಗನ ಹೆಸರು
ಯೋವೇಲ್, ಮರಚಲ ಮಗನ ಹೆಸರು ಅಬೀಯ.
3 ಇವರ ನ್ಯಾಯಾಸನವು ಬೇರ್ಷೆಬದಲ್ಲಿತ್ತು. ಇವರು
ತಂದೆಯ ಮಾರ್ಗದಲ್ಲಿ ನಡೆಯದೆ ದ್ರವ್ಯಾಶೆಯಿಂದ
ಲಂಚತೆಗೆದುಕೊಂಡು ನ್ಯಾಯವಿರುದ್ಧವಾದ ತೀರ್ಪು
4 ಮಾಡುತ್ತಿದ್ದದರಿಂದ ಇಸ್ರಾಯೇಲ್ಯರ ಹಿರಿಯರೆಲ್ಲರೂ
ಕೂಡಿಕೊಂಡು ರಾಮದಲ್ಲಿದ್ದ ಸಮುವೇಲನ ಬಳಿಗೆ
5 ಬಂದು ಅವನಿಗೆ—ನೀನಂತೂ ಮುದುಕನಾದಿ; ನಿನ್ನ
ಮಕ್ಕಳು ನಿನ್ನ ಮಾರ್ಗದಲ್ಲಿ ನಡೆಯುವದಿಲ್ಲ. ಆದ
ದರಿಂದ ಬೇರೆ ಎಲ್ಲಾ ಜನಾಂಗಗಳಿಗಿರುವಂತೆ ನಮಗೂ
ಒಬ್ಬ ಅರಸನನ್ನು ನೇಮಿಸು; ಅವನೇ ನಮ್ಮ ನ್ಯಾಯ
6 ಸ್ಥಾಪಕನಾಗಿರಲಿ ಅಂದರು. ನ್ಯಾಯಸ್ಥಾಪನೆಗೋ
ಸ್ಕರ ನಮಗೊಬ್ಬ ಅರಸನನ್ನು ನೇಮಿಸಿಕೊಡು ಎಂಬ
ಮಾತಿಗೆ ಸಮುವೇಲನು ದುಃಖಪಟ್ಟು ಯೆಹೋವ
7 ನನ್ನು ಪ್ರಾರ್ಥಿಸಲು ಆತನು ಅವನಿಗೆ—ಜನರು
ಹೇಳಿದಂತೆಯೇ ಮಾಡು; ಅವರು ನಿನ್ನನ್ನಲ್ಲ,
ನನ್ನನ್ನು ತಿರಸ್ಕರಿಸಿದ್ದಾರೆ. ನನ್ನ ಆಳಿಕೆಗೆ ಬೇಡ
8 ವೆನ್ನುತ್ತಾರೆ. ನಾನು ಅವರನ್ನು ಐಗುಪ್ತದಿಂದ ಬಿಡಿಸಿ
ದಂದಿನಿಂದ ಇಂದಿನ ವರೆಗೂ ಅವರು ನನ್ನನ್ನು ಬಿಟ್ಟು
ಅನ್ಯದೇವತೆಗಳನ್ನು ಸೇವಿಸಿದರು. ನನಗೆ ಹೇಗೆ
ಮಾಡಿದರೋ ಹಾಗೆಯೇ ನಿನಗೂ ಮಾಡುತ್ತಾರೆ.
9 ನೀನು ಈಗ ಅವರು ಕೇಳಿಕೊಂಡಂತೆ ಮಾಡು; ಆದರೆ
ಅವರ ಮೇಲೆ ರಾಜರಿಗಿರುವ ಅಧಿಕಾರವೆಷ್ಟೆಂಬದನ್ನು
ಅವರಿಗೆ ತಿಳಿಸಿ ಎಚ್ಚರಿಸದೆ ಇರಬೇಡ ಎಂದು ಹೇಳಿ
ದನು.
10 ಸಮುವೇಲನು ಅರಸನನ್ನು ಬೇಡಿಕೊಂಡ ಜನರಿಗೆ
11 ಯೆಹೋವನ ಮಾತುಗಳನ್ನೆಲ್ಲಾ ತಿಳಿಸಿ ಅವರಿಗೆ—
ಅರಸನ ಅಧಿಕಾರವೆಷ್ಟೆಂದು ಕೇಳಿರಿ—ಅವನು
ನಿಮ್ಮ ಮಕ್ಕಳನ್ನು ತೆಗೆದುಕೊಂಡು ತನ್ನ ಸಾರಥಿಗಳ
ನ್ನಾಗಿಯೂ ರಾಹುತರನ್ನಾಗಿಯೂ ಮಾಡಿಕೊಳ್ಳು
ವನು; ಅವರು ಅವನ ರಥಗಳ ಮುಂದೆ ಓಡುವವರಾಗ
12 ಬೇಕು. ಕೆಲವರನ್ನು ಸಹಸ್ರಾಧಿಪತಿಗಳನ್ನಾಗಿಯೂ
ಕೆಲವರನ್ನು ಪಂಚಾಶದಧಿಪತಿಗಳನ್ನಾಗಿಯೂ ನೇಮಿ
ಸುವನು. ಇನ್ನು ಕೆಲವರು ಅವನ ಭೂಮಿಯನ್ನು
ಉಳುವವರೂ ಪೈರನ್ನು ಕೊಯ್ಯುವವರೂ ಯುದ್ಧಾ
ಯುಧ, ರಥಸಾಹಿತ್ಯ ಇವುಗಳನ್ನು ಮಾಡುವವರೂ
13 ಆಗಬೇಕು. ಇದಲ್ಲದೆ ಅವನು ನಿಮ್ಮ ಹೆಣ್ಣುಮಕ್ಕ
ಳನ್ನು ಸುಗಂಧದ್ರವ್ಯಮಾಡುವದಕ್ಕೂ ಅಡಿಗೆಮಾಡು
ವದಕ್ಕೂ ರೊಟ್ಟಿಸುಡುವದಕ್ಕೂ ನೇಮಿಸಿಕೊಳ್ಳುವನು.
ನಿಮ್ಮ ಉತ್ತಮವಾದ ಹೊಲಗಳನ್ನೂ ದ್ರಾಕ್ಷೇ 14
ತೋಟಗಳನ್ನೂ ಎಣ್ಣೇ ಮರದ ತೋಪುಗಳನ್ನೂ
ಕಿತ್ತುಕೊಂಡು ತನ್ನ ಸೇವಕರಿಗೆ ಕೊಡುವನು. ನಿಮ್ಮ 15
ಧಾನ್ಯದ್ರಾಕ್ಷೆಗಳಲ್ಲಿ ದಶಮಾಂಶವನ್ನು ತೆಗೆದುಕೊಂಡು
ತನ್ನ ಪ್ರಧಾನರಿಗೂ ಪರಿವಾರದವರಿಗೂ ಕೊಡುವನು.
ನಿಮ್ಮ ದಾಸದಾಸಿಯರನ್ನೂ ಉತ್ತಮವಾದ ಎತ್ತು 16
ಕತ್ತೆಗಳನ್ನೂ ತನ್ನ ಕೆಲಸಕ್ಕೆ ಹಚ್ಚಿಕೊಳ್ಳುವನು.
ಕುರಿಹಿಂಡುಗಳಲ್ಲಿ ಹತ್ತರಲ್ಲೊಂದು ಭಾಗವನ್ನು 17
ತೆಗೆದುಕೊಳ್ಳುವನು; ನೀವು ಅವನಿಗೆ ದಾಸರಾಗಿರ
ಬೇಕು. ಆಗ ನೀವು ಆರಿಸಿಕೊಂಡ ಅರಸನ ದೆಸೆ 18
ಯಿಂದ ಆ ದಿನದಲ್ಲಿ ಬೇಸತ್ತು ಯೆಹೋವನಿಗೆ ಮೊರೆ
ಯಿಡುವಿರಿ; ಆಗ ಆತನು ನಿಮ್ಮನ್ನು ಲಕ್ಷಿಸು
ವದಿಲ್ಲ ಅಂದನು. ಹೀಗೆ ಸಮುವೇಲನು ಎಷ್ಟು 19
ಹೇಳಿದರೂ ಜನರು ಕೇಳದೆ—ಅದಿರಲಿ; ನಮಗೆ ಅರಸ
ನನ್ನು ಕೊಡು; ನಾವು ಇತರ ಜನಾಂಗಗಳಂತೆ ಆಗ 20
ಬೇಕು. ನಮ್ಮ ನ್ಯಾಯಗಳನ್ನು ತೀರಿಸಿ ನಮಗೆ
ಮುಂದಾಗಿ ಹೊರಟು ನಮಗೋಸ್ಕರ ಯುದ್ಧಮಾಡುವ
ಒಬ್ಬ ಅರಸನು ಬೇಕು ಎಂದು ಹೇಳಿದರು. ಸಮು 21
ವೇಲನು ಜನರ ಈ ಎಲ್ಲಾ ಮಾತುಗಳನ್ನು ಯೆಹೋ
ವನಿಗೆ ತಿಳಿಸಲಾಗಿ ಆತನು ಅವನಿಗೆ—ಅವರ ಇಷ್ಟ 22
ದಂತೆ ಅವರಿಗೊಬ್ಬ ಅರಸನನ್ನು ನೇಮಿಸು ಎಂದನು.
ಆಗ ಸಮುವೇಲನು ಇಸ್ರಾಯೇಲ್ಯರಿಗೆ—ನಿಮ್ಮ ನಿಮ್ಮ
ಊರುಗಳಿಗೆ ಹೋಗಿರಿ ಎಂದು ಅಪ್ಪಣೆಕೊಟ್ಟನು.

ಸೌಲನು ಸಮುವೇಲನ ಬಳಿಗೆ ಬಂದದ್ದು.

ಬೆನ್ಯಾಮೀನ್‌ಕುಲದಲ್ಲಿ ಕೀಷನೆಂಬ ಒಬ್ಬ ಐಶ್ವ 9
ರ್ಯವಂತನಿದ್ದನು. ಇವನು ಚೆರೋರನ ಮಗನೂ
ಬೆಕೋರತನ ಮೊಮ್ಮಗನೂ ಅಫೀಹನ ಮರಿಮಗನೂ
ಆದ ಅಬೀಯೇಲನ ಮಗನು. ಇವನಿಗೆ ಸೌಲನೆಂಬ 2
ಹೆಸರುಳ್ಳ ಒಬ್ಬ ಮಗನಿದ್ದನು. ಈ ಸೌಲನು ಉತ್ತ
ಮನೂ ಎಲ್ಲಾ ಇಸ್ರಾಯೇಲ್ಯರಲ್ಲಿ ಅತಿಸುಂದರನೂ
ಆಗಿದ್ದನು; ಜನರ ಗುಂಪಿನಲ್ಲಿ ಅವನ ಹೆಗಲೂ
ತಲೆಯೂ ಕಾಣುವಷ್ಟು ಉನ್ನತವಾಗಿದ್ದನು. ಒಂದು 3
ದಿವಸ ಸೌಲನ ತಂದೆಯಾದ ಕೀಷನ ಕತ್ತೆಗಳು
ತಪ್ಪಿಸಿಕೊಂಡು ಹೋದದರಿಂದ ಅವನು ತನ್ನ ಮಗ
ನಾದ ಸೌಲನಿಗೆ—ನೀನೆದ್ದು ಆಳುಗಳಲ್ಲೊಬ್ಬನನ್ನು
ಕರೆದುಕೊಂಡು ಕತ್ತೆಗಳನ್ನು ಹುಡುಕುವದಕ್ಕೆ
ಹೋಗು ಎಂದು ಹೇಳಿದನು. ಅದರಂತೆಯೇ ಅವನು 4
ಹೊರಟು ಎಫ್ರಾಯೀಮ್ ಪರ್ವತಪ್ರಾಂತ್ಯ, ಶಾಲಿ
ಷಾದೇಶ ಇವುಗಳಲ್ಲಿ ಸಂಚರಿಸಿದರೂ ಅವು ಸಿಕ್ಕ
ಲಿಲ್ಲ; ಶಾಲೀಮ್, ಬೆನ್ಯಾಮೀನ್ ಈ ಪ್ರಾಂತಗಳ
ಲ್ಲಿಯೂ ಸಿಕ್ಕಲಿಲ್ಲ. ಕಡೆಗೆ ಅವರು ಚೂಫ್‌ದೇಶಕ್ಕೆ 5
ಬಂದಾಗ ಅವನು ತನ್ನ ಆಳಿಗೆ—ಹಿಂದಿರುಗಿ ಹೋ
ಗೋಣ ನಡಿ; ನಮ್ಮ ತಂದೆಯು ಈಗ ಕತ್ತೆಗಳ
ಚಿಂತೆ ಬಿಟ್ಟು ನಮ್ಮ ಚಿಂತೆಯಲ್ಲಿದ್ದಾನು ಅನ್ನಲು
ಆ ಆಳು—ಇಗೋ, ಈ ಪಟ್ಟಣದಲ್ಲಿ ಗೌರವಸ್ಥನಾದ 6
ಒಬ್ಬ ದೇವರ ಮನುಷ್ಯನಿರುತ್ತಾನೆ. ಅವನು ನುಡಿ
ಯುವದೆಲ್ಲಾ ನೆರವೇರುತ್ತದೆ; ಅಲ್ಲಿಗೆ ಹೋಗೋಣ;

ಒಂದು ವೇಳೆ ಅವನು ನಾವು ಹೋಗತಕ್ಕ ಮಾರ್ಗ
7 ವನ್ನು ತಿಳಿಸುವನು ಎಂದನು. ಅದಕ್ಕೆ ಸೌಲನು—
ನಾವು ಅವನ ಬಳಿಗೆ ಹೋಗಬೇಕಾದರೆ ಏನಾದರೂ
ತೆಗೆದುಕೊಂಡು ಹೋಗಬೇಕು; ನಾವು ತಂದಿದ್ದ
ಆಹಾರಸಾಮಗ್ರಿಯು ಮುಗಿದುಹೋಯಿತು. ಆ
ದೇವರ ಮನುಷ್ಯನಿಗೆ ಕೊಡತಕ್ಕ ಕಾಣಿಕೆ ನಮ್ಮಲ್ಲಿಲ್ಲ
8 ವಲ್ಲಾ; ಏನು ಕೊಡಬೇಕು ಎನ್ನಲು ಆಳು—ಇಗೋ,
ನನ್ನ ಕೈಯಲ್ಲಿ ಒಂದು ಪಾವಲಿಯಿದೆ; ಇದನ್ನು
ಅವನಿಗೆ ಕೊಡೋಣ; ಅವನು ನಮಗೆ ಮಾರ್ಗ
9 ತೋರಿಸುವನು ಎಂದು ಉತ್ತರಕೊಟ್ಟನು. (ಪೂರ್ವ
ಕಾಲದಲ್ಲಿ ಇಸ್ರಾಯೇಲ್ಯರಲ್ಲಿ ಯಾವನಾದರೂ ದೈ
ವೋತ್ತರಕೇಳಬೇಕಾದರೆ ದರ್ಶಿಯ ಬಳಿಗೆ ಹೋ
ಗೋಣ ಬನ್ನಿರಿ ಎನ್ನುವನು; ಈ ಕಾಲದಲ್ಲಿ ಪ್ರವಾದಿ
ಗಳೆನಿಸಿಕೊಳ್ಳುವವರನ್ನು ಆ ಕಾಲದಲ್ಲಿ ದರ್ಶಿಗ
10 ಳೆಂದು ಕರೆಯುತ್ತಿದ್ದರು.) ಆಗ ಸೌಲನು ಆಳಿಗೆ—
ನೀನು ಹೇಳುವದು ಒಳ್ಳೇದು; ಹೋಗೋಣ ನಡಿ
11 ಅಂದನು. ಅವರಿಬ್ಬರೂ ದಿನ್ನೆಯನ್ನು ಹತ್ತಿ ದೇವರ
ಮನುಷ್ಯನಿದ್ದ ಪಟ್ಟಣವನ್ನು ಸಮೀಪಿಸಲು ನೀರು
ಸೇದುವದಕ್ಕೋಸ್ಕರ ಹೊರಗೆ ಬಂದಿದ್ದ ಸ್ತ್ರೀಯರನ್ನು
ಕಂಡು—ದರ್ಶಿಯು ಊರಲ್ಲಿದ್ದಾನೋ ಎಂದು ಕೇಳ
12 ಲು ಅವರು—ಇದ್ದಾನೆ; ಈ ಹೊತ್ತು ನಮ್ಮ ಊರಿ
ನವರು ಗುಡ್ಡದ ಮೇಲೆ ಯಜ್ಞವನ್ನರ್ಪಿಸುವದರಿಂದ
ಅವನು ಈಗಲೇ ಇಲ್ಲಿಗೆ ಬಂದನು; ಬೇಗನೆ ಹೋಗಿರಿ.
13 ಅವನು ಯಜ್ಞಭೋಜನಕ್ಕೋಸ್ಕರ ಗುಡ್ಡಕ್ಕೆ ಹೋ
ಗುವ ಮೊದಲು ನೀವು ಊರೊಳಕ್ಕೆ ಹೋದರೆ ಸಿಕ್ಕು
ವನು. ಅವನು ಅಲ್ಲಿ ಹೋಗುವ ವರೆಗೆ ಜನರು
ಊಟಮಾಡುವದಿಲ್ಲ. ಅವನು ಹೋಗಿ ಯಜ್ಞಾ
ಹಾರವನ್ನು ಆಶೀರ್ವದಿಸುತ್ತಾನೆ; ಅನಂತರ ಕರೆಯ
ಲ್ಪಟ್ಟವರು ಊಟಮಾಡುತ್ತಾರೆ. ಈಗಲೇ ಹೋಗಿರಿ;
14 ಅವನು ಸಿಕ್ಕುವ ಸಮಯ ಇದೇ ಅಂದರು. ಅವರು
ಮೇಲೆ ಹತ್ತಿ ಊರಿಗೆ ಬಂದಾಗ ಸಮುವೇಲನು
ಗುಡ್ಡಕ್ಕೆ ಹೋಗುವದಕ್ಕೋಸ್ಕರ ಹೊರಟು ಅವರೆದು
ರಿಗೆ ಬಂದನು.
15 ಸೌಲನು ಬರುವದಕ್ಕೆ ಒಂದು ದಿವಸ ಮುಂದಾಗಿ
16 ಯೆಹೋವನು ಸಮುವೇಲನಿಗೆ—ನಾಳೆ ಇಷ್ಟು ಹೊ
ತ್ತಿಗೆ ಬೆನ್ಯಾಮೀನ್‌ದೇಶದವನೊಬ್ಬನನ್ನು ನಿನ್ನ ಬಳಿಗೆ
ಬರಮಾಡುವೆನು; ನೀನು ಅವನನ್ನು ಇಸ್ರಾಯೇಲ್ಯರ
ನಾಯಕನನ್ನಾಗಿ ಅಭಿಷೇಕಿಸಬೇಕು. ಅವನು ನನ್ನ
ಜನರನ್ನು ಫಿಲಿಷ್ಟಿಯರ ಕೈಯಿಂದ ಬಿಡಿಸಿ ಕಾಪಾಡು
ವನು. ಅವರ ಕೂಗು ನನಗೆ ಮುಟ್ಟಿತು; ಅವರನ್ನು
17 ಕಟಾಕ್ಷಿಸಿದ್ದೇನೆ ಎಂದು ತಿಳಿಸಿದ್ದನು. ಸಮುವೇಲನು
ಸೌಲನನ್ನು ಕಂಡಾಗ ಯೆಹೋವನು ಅವನಿಗೆ—
ನಾನು ತಿಳಿಸಿದ್ದ ಮನುಷ್ಯನು ಇವನೇ; ಇವನೇ ನನ್ನ
ಪ್ರಜೆಯನ್ನು ಆಳತಕ್ಕವನು ಎಂದು ಸೂಚಿಸಿದನು.
18 ಊರುಬಾಗಲಿಗೆ ಬಂದು ಸೌಲನು ಎದುರಿಗೆ ಬಂದ
ಸಮುವೇಲನನ್ನು ನೋಡಿ—ದರ್ಶಿಯ ಮನೆ ಎಲ್ಲಿದೆ
ಎಂಬದನ್ನು ದಯವಿಟ್ಟು ತಿಳಿಸುವಿಯೋ ಎನ್ನಲು
19 ಸಮುವೇಲನು—ನಾನೇ ದರ್ಶಿಯು; ನೀನು ನನ್ನ

ಜೊತೆಯಲ್ಲಿ ಗುಡ್ಡಕ್ಕೆ ಬಾ; ನೀವು ಈ ಹೊತ್ತು ನನ್ನ
ಸಂಗಡ ಊಟಮಾಡಬೇಕು. ನಿನ್ನ ಚಿಂತೆಯನ್ನೆಲ್ಲಾ
ಪರಿಹರಿಸಿ ನಾಳೆ ಬೆಳಿಗ್ಗೆ ನಿನ್ನನ್ನು ಕಳುಹಿಸಿಕೊಡು
ವೆನು. ಮೂರು ದಿವಸಗಳ ಹಿಂದೆ ತಪ್ಪಿಸಿಕೊಂಡ
ನಿನ್ನ ಕತ್ತೆಗಳಿಗೋಸ್ಕರ ಚಿಂತೆಮಾಡಬೇಡ; ಅವು
ಸಿಕ್ಕಿವೆ. ಮತ್ತು [1]ಇಸ್ರಾಯೇಲ್ಯರ ಶ್ರೇಷ್ಠವಸ್ತು
ಗಳೆಲ್ಲಾ ನಿನಗೂ ನಿನ್ನ ಕುಟುಂಬದವರಿಗೂ ಸಲ್ಲುವ
ವಲ್ಲವೋ ಅಂದನು. ಅದಕ್ಕೆ ಸೌಲನು—ನಾನು
ಇಸ್ರಾಯೇಲ್ ಕುಲಗಳಲ್ಲಿ ಅಲ್ಪವಾಗಿರುವ ಬೆನ್ಯಾ
ಮೀನ್ ಕುಲದವನಲ್ಲವೋ? ಬೆನ್ಯಾಮೀನ್ಯರ ಎಲ್ಲಾ
ಕುಟುಂಬಗಳಲ್ಲಿ ನನ್ನದು ಕನಿಷ್ಠವಾದದ್ದು; ನನಗೆ
ಇಂಥ ದೊಡ್ಡ ಮಾತನ್ನು ಯಾಕೆ ಹೇಳುತ್ತೀ ಎಂದನು.
ಸಮುವೇಲನು ಸೌಲನನ್ನೂ ಅವನ ಸೇವಕನನ್ನೂ
ಮಂಟಪಕ್ಕೆ ಕರಕೊಂಡು ಹೋದನು; ಭೋಜನಕ್ಕೆ
ಬಂದಿದ್ದ ಸುಮಾರು ಮೂವತ್ತು ಜನರಲ್ಲಿ ಅವರಿಬ್ಬ
ರಿಗೂ ಮುಖ್ಯಸ್ಥಾನವನ್ನು ಕೊಟ್ಟನು. ಅನಂತರ
ಸಮುವೇಲನು ಅಡಿಗೆಯವನಿಗೆ—ನಾನು ನಿನಗೆ
ಹೇಳಿ ಪ್ರತ್ಯೇಕವಾಗಿ ಇಡಿಸಿದ್ದ ಮಾಂಸಭಾಗವನ್ನು
ತಂದಿಡು ಅನ್ನಲು ಅವನು ಒಂದು ತೊಡೆಯ ಮಾಂಸ
ವನ್ನೂ ಅದರ ಸಂಗಡ ಇದ್ದದ್ದನ್ನೂ ತಂದು ಸೌಲನ
ಮುಂದಿಟ್ಟು ಅವನಿಗೆ—ಇಗೋ, ಇದು ನಿನಗೋಸ್ಕರ
ಪ್ರತ್ಯೇಕಿಸಿದ್ದು; ಇದನ್ನು ತಿನ್ನು. ಜನರನ್ನು ಭೋಜ
ನಕ್ಕೆ ಕರೆದಾಗಿನಿಂದ ಇದು ನಿನಗೋಸ್ಕರವಾಗಿಯೇ
ಇಡಲ್ಪಟ್ಟಿತ್ತು ಎಂದು ಹೇಳಿದನು. ಸೌಲನು ಆ ದಿನ
ಸಮುವೇಲನ ಸಂಗಡ ಊಟಮಾಡಿದನು. ಅವರು
ಗುಡ್ಡದಿಂದಿಳಿದು ಪಟ್ಟಣಕ್ಕೆ ಬಂದನಂತರ ಸಮುವೇ
ಲನು ಸೌಲನನ್ನು ತನ್ನ ಮನೇ ಮಾಳಿಗೆಯ ಮೇಲೆ
ಕರೆದುಕೊಂಡು ಹೋಗಿ ಅವನೊಡನೆ ಮಾತಾಡಿ
ದನು.

ಸೌಲನಿಗೆ ರಾಜ್ಯಾಭಿಷೇಕವಾದದ್ದು.

ಮರುದಿನ ಬೆಳಿಗ್ಗೆ ಸಮುವೇಲನು ಮಾಳಿಗೆಯ
ಮೇಲೆ ಮಲಗಿದ್ದ ಸೌಲನನ್ನು—ಏಳು, ನಿನ್ನನ್ನು
ಸಾಗಕಳುಹಿಸುತ್ತೇನೆ ಎಂದು ಎಬ್ಬಿಸಲು ಅವನೆದ್ದನು.
ತರುವಾಯ ಅವರಿಬ್ಬರೂ ಹೊರಟು ಊರ ಹೊರಗೆ
ಬಂದಾಗ ಸಮುವೇಲನು ಸೌಲನಿಗೆ—ನಿನ್ನ ಸೇವಕ
ನನ್ನು ಮುಂದೆ ಕಳುಹಿಸಿ ನೀನು ಇಲ್ಲಿ ಸ್ವಲ್ಪ ನಿಲ್ಲು;
ನಿನಗೆ ತಿಳಿಸಬೇಕಾದ ದೈವೋಕ್ತಿಯೊಂದುಂಟು ಎಂದ
ನು. ಆ ಆಳು ಮುಂದೆ ಹೋದಾಗ ಸಮು
ವೇಲನು ಎಣ್ಣೇ ಕುಪ್ಪಿಯಿಂದ ಅವನ ತಲೆಯ ಮೇಲೆ
ತೈಲವನ್ನು ಹೊಯ್ದು ಅವನನ್ನು ಮುದ್ದಿಟ್ಟು ಅವ
ನಿಗೆ—ಯೆಹೋವನು ತನ್ನ ಸ್ವಾಸ್ತ್ಯದ ಮೇಲೆ ಪ್ರಭು
ವಾಗಿರುವದಕ್ಕೋಸ್ಕರ ನಿಜವಾಗಿ ನಿನ್ನನ್ನು ಅಭಿಷೇಕಿಸಿ
ದ್ದಾನೆ. ಈ ಹೊತ್ತು ನೀನು ನನ್ನನ್ನು ಬಿಟ್ಟುಹೋದ
ನಂತರ ಬೆನ್ಯಾಮೀನ್ಯರ ಮೇರೆಯೊಳಗಿರುವ ರಾಹೇ
ಲಳ ಸಮಾಧಿಯ ಬಳಿಯಲ್ಲಿರುವಂಥ ಚೆಲ್ಚಹಿನಲ್ಲಿ
ಇಬ್ಬರು ಮನುಷ್ಯರನ್ನು ಕಾಣುವಿ; ಅವರು ನಿನಗೆ—

1) ಪಾಠಾಂತರ: ಇಸ್ರಾಯೇಲ್ಯರ ಅಭಿಲಾಷೆಗೆ ನೀನೂ ನಿನ್ನ ಕುಟುಂಬದವರೂ ಪಾತ್ರರಾಗಿದ್ದೀರಲ್ಲವೇ.

ನೀನು ಹುಡುಕುತ್ತಿರುವ ಕತ್ತೆಗಳು ಸಿಕ್ಕಿದವು; ನಿನ್ನ
ತಂದೆಯು ಕತ್ತೆಗಳ ಚಿಂತೆ ಬಿಟ್ಟು ನನ್ನ ಮಗನೆಲ್ಲಿ
ಹೋದನೋ ಎಂಬದಾಗಿ ನಿನಗೋಸ್ಕರ ಹಂಬಲಿಸು
3 ತ್ತಿರುತ್ತಾನೆ ಎಂದು ಹೇಳುವರು. ನೀನು ಅಲ್ಲಿಂದ
ಮುಂದೆ ನಡೆದು ತಾಬೋರಿನ ಹತ್ತಿರವಿರುವ ಏಲೋ
ನ್‌ವೃಕ್ಷದ ಬಳಿಗೆ ಬಂದಾಗ ದೇವದರ್ಶನಕ್ಕಾಗಿ
ಬೇತೇಲಿಗೆ ಹೋಗುವ ಮೂವರು ಜನರು ನಿನಗೆದು
ರಾಗುವರು. ಅವರಲ್ಲೊಬ್ಬನು ಮೂರು ಹೋತಮರಿ
ಗಳನ್ನೂ ಮತ್ತೊಬ್ಬನು ಮೂರು ರೊಟ್ಟಿಗಳನ್ನೂ
ಇನ್ನೊಬ್ಬನು ದ್ರಾಕ್ಷಾರಸದ ಒಂದು ಬುದ್ದಲಿಯನ್ನೂ
4 ಹೊತ್ತುಕೊಂಡಿರುವರು. ಅವರು ನಿನ್ನ ಕ್ಷೇಮಸಮಾ
ಚಾರವನ್ನು ವಿಚಾರಿಸಿ ಎರಡು ರೊಟ್ಟಿಗಳನ್ನು ಕೊಡು
ವರು; ನೀನು ಅವುಗಳನ್ನು ತೆಗೆದುಕೊಳ್ಳಬೇಕು.
5 ಅಲ್ಲಿಂದ ಫಿಲಿಷ್ಟಿಯರ ಠಾಣವಿರುವ ದೇವಗಿರಿ
ಯನ್ನು ಮುಟ್ಟಿದಾಗ ಮುಂಗಡೆಯಲ್ಲಿ ಸ್ವರಮಂಡಲ,
ದಮ್ಮಡಿ, ಕೊಳಲು, ಕಿನ್ನರಿ ಈ ವಾದ್ಯಗಾರರೊಡನೆ
ಗುಡ್ಡ ದಿಂದಿಳಿದು ಬರುತ್ತಿರುವ ಪ್ರವಾದಿಸಮೂಹವನ್ನು
ಕಾಣುವಿ. ಅವರು ಪರವಶರಾಗಿ ಪ್ರವಾದಿಸುವರು;
6 ಆಗ ಯೆಹೋವನ ಆತ್ಮವು ನಿನ್ನ ಮೇಲೂ ಬರು
7 ವದರಿಂದ ನೀನೂ ಮಾರ್ಪಟ್ಟು ಪ್ರವಾದಿಸುವಿ. ಈ
ಗುರುತುಗಳೆಲ್ಲಾ ಸಂಭವಿಸಿದಾಗ ನಿನಗೆ ಅನುಕೂಲ
ವಿದ್ದದ್ದನ್ನು ನಡಿಸು; ದೇವರು ನಿನ್ನ ಸಂಗಡ
8 ಇದ್ದಾನೆ. ನೀನು ಮುಂದಾಗಿ ಗಿಲ್ಗಾಲಿಗೆ ಹೋಗು;
ಏಳು ದಿವಸಗಳಾದನಂತರ ನಾನು ಸರ್ವಾಂಗಹೋ
ಮಗಳನ್ನೂ ಸಮಾಧಾನಯಜ್ಞಗಳನ್ನೂ ಸಮರ್ಪಿಸು
ವದಕ್ಕೋಸ್ಕರ ಅಲ್ಲಿಗೆ ಬಂದು ನೀನು ಮಾಡಬೇಕಾ
ದದ್ದನ್ನು ನಿನಗೆ ತಿಳಿಸುವೆನು; ಅಲ್ಲಿಯ ವರೆಗೆ ಕಾದು
ಕೊಂಡಿರು ಎಂದು ಹೇಳಿದನು.
9 ಸೌಲನು ಸಮುವೇಲನನ್ನು ಬಿಟ್ಟು ಹೊರಟ
ಕೂಡಲೆ ದೇವರು ಅವನಿಗೆ ನೂತನ ಹೃದಯವನ್ನು
ಕೊಟ್ಟನು. ಅದೇ ದಿನದಲ್ಲಿ ಆ ಎಲ್ಲಾ ಗುರುತು
10 ಗಳು ಸಂಭವಿಸಿದವು. ಅವನು ದೇವಗಿರಿಗೆ ಬಂದ
ಕೂಡಲೆ ಪರವಶವಾದ ಪ್ರವಾದಿಸಮೂಹವು ತನ್ನೆದು
ರಿಗೆ ಬರುವದನ್ನು ಕಂಡನು. ದೇವರ ಆತ್ಮವು ಅವನ
ಮೇಲೆ ಬಂದದರಿಂದ ಅವನೂ ಪರವಶನಾಗಿ ಅವರೊ
11 ಳಗೆ ಸೇರಿ ಪ್ರವಾದಿಸಿದನು. ಅವನು ಪರವಶನಾಗಿ
ಮಾತಾಡುವದನ್ನು ಗುರುತಿನವರು ಕಂಡು ತಮ್ಮ
ತಮ್ಮೊಳಗೆ—ಕೀಷನ ಮಗನಿಗೆ ಏನಾಯಿತು? ಸೌಲ
ನೂ ಪ್ರವಾದಿಗಳಲ್ಲಿದ್ದಾನೋ ಎಂದು ಮಾತಾಡಿಕೊ
12 ಳ್ಳುತ್ತಿರುವಾಗ ಆ ಸ್ಥಳದವನೊಬ್ಬನು—ಹಾಗಾದರೆ
ಇವರ ತಂದೆ ಯಾರು ಎಂದು ಕೇಳಿದನು. ಈ ಸಂಗ
ತಿಯಿಂದ ಸೌಲನು ಪ್ರವಾದಿಗಳಲ್ಲಿದ್ದಾನೋ ಎಂಬ
13 ಗಾದೆ ಹುಟ್ಟಿತು. ಅವನು ಪ್ರವಾದಿಸಿ ಆದ ಮೇಲೆ
14 ಪೂಜಾಸ್ಥಳಕ್ಕೆ ಬಂದನು. ಸೌಲನ ಚಿಕ್ಕಪ್ಪನು ಅವ
ನನ್ನೂ ಅವನ ಸೇವಕನನ್ನೂ—ನೀವು ಎಲ್ಲಿಗೆ ಹೋಗಿ
ದ್ದಿರಿ ಎಂದು ಕೇಳಲು ಅವನು—ಕತ್ತೆಗಳನ್ನು ಹುಡು
ಕುವದಕ್ಕೆ ಹೋಗಿದ್ದೆವು. ಅವು ಸಿಕ್ಕಲಿಲ್ಲವಾದದ
ರಿಂದ ಸಮುವೇಲನ ಬಳಿಗೆ ಹೋದೆವು ಅಂದನು.
15 ಸಮುವೇಲನು ಏನು ಹೇಳಿದನೆಂದು ಚಿಕ್ಕಪ್ಪನು
16 ಕೇಳಲು ಸೌಲನು—ಕತ್ತೆಗಳು ಸಿಕ್ಕಿದವೆಂದು ತಿಳಿಸಿ
ದನು ಎಂಬದಾಗಿ ಹೇಳಿದನೇ ಹೊರತು ಅವನು
ಹೇಳಿದ ರಾಜ್ಯದ ಮಾತನ್ನು ತಿಳಿಸಲಿಲ್ಲ.

ಚೀಟುಹಾಕಿ ಸೌಲನನ್ನು ಅರಸನನ್ನಾಗಿ ಆರಿಸಿಕೊಂಡದ್ದು.

ಸಮುವೇಲನು ಇಸ್ರಾಯೇಲ್ಯರನ್ನು ಮಿಚ್ಪೆಗೆ ಕರಿಸಿ 17
ಯೆಹೋವನ ಸನ್ನಿಧಿಯಲ್ಲಿ ಕೂಡಿಸಿಕೊಂಡು ಅವ 18
ರಿಗೆ—ಇಸ್ರಾಯೇಲ್‌ದೇವರಾದ ಯೆಹೋವನು ಹೇ
ಳುವದನ್ನು ಕೇಳಿರಿ; ಆತನು ನಿಮಗೆ—ನೀವು ಐಗು
ಪ್ತ್ಯರ ಕೈಗೆ ತಪ್ಪಿಸಿಕೊಳ್ಳುವಂತೆ ನಿಮ್ಮನ್ನು ಅವರ
ದೇಶದಿಂದ ಬಿಡಿಸಿದವನೂ ಬಾಧಿಸುತ್ತಿದ್ದ ಬೇರೆ
ಎಲ್ಲಾ ಜನಾಂಗಗಳಿಂದ ನಿಮ್ಮನ್ನು ರಕ್ಷಿಸಿದವನೂ
ನಾನೇ. ನೀವಾದರೋ ನಿಮ್ಮನ್ನು ಕಷ್ಟಸಂಕಟಗ 19
ಳಿಂದ ಬಿಡಿಸಿದ ನಿಮ್ಮ ದೇವರಾದ ನನ್ನನ್ನು ಈಗ
ತಿರಸ್ಕರಿಸಿ ನಮಗೊಬ್ಬ ಅರಸನನ್ನು ನೇಮಿಸೆಂದು
ಹೇಳುತ್ತೀರಿ ಅನ್ನುತ್ತಾನೆ. ಆದದರಿಂದ ನೀವು ಕುಲ
ಕುಲವಾಗಿಯೂ ಗೋತ್ರಗೋತ್ರವಾಗಿಯೂ ಯೆಹೋ
ವನ ಸನ್ನಿಧಿಯಲ್ಲಿ ಕಾಣಿಸಿಕೊಳ್ಳಿರಿ ಎಂದು ಅಪ್ಪಣೆ
ಮಾಡಿದನು. ಸಮುವೇಲನು ಇಸ್ರಾಯೇಲ್ಯರ ಎಲ್ಲಾ 20
ಕುಲಗಳನ್ನು ಸಮೀಪಕ್ಕೆ ಕರೆದಾಗ ಬೆನ್ಯಾಮೀನ್
ಕುಲಕ್ಕೆ ಚೀಟುಬಿದ್ದಿತು. ಆ ಕುಲದ ಗೋತ್ರ 21
ಗಳನ್ನು ಬರಮಾಡಿದಾಗ ಮಟ್ರಿಯ ಗೋತ್ರದಲ್ಲಿ
ಕೀಷನ ಮಗನಾದ ಸೌಲನಿಗೆ ಚೀಟುಬಿದ್ದಿತು. ಅವ
ನನ್ನು ಹುಡುಕಲು ಅವನು ಸಿಕ್ಕಲಿಲ್ಲ. ಅವರು— 22
ಆ ಮನುಷ್ಯನು ಇಲ್ಲಿಗೆ ಬರುವನೋ ಎಂದು ಯೆಹೋ
ವನನ್ನು ವಿಚಾರಿಸಿದಾಗ ಆತನು—ಬಂದಿದ್ದಾನೆ;
ಇಗೋ, ಸಾಮಾನುಗಳಲ್ಲಿ ಅಡಗಿಕೊಂಡಿದ್ದಾನೆ
ಎಂದು ಉತ್ತರಕೊಟ್ಟನು. ಅವರು ತಟ್ಟನೆ ಹೋಗಿ 23
ಅವನನ್ನು ಹಿಡಿದುಕೊಂಡು ಬಂದು ಜನರ ಮಧ್ಯ
ದಲ್ಲಿ ನಿಲ್ಲಿಸಿದರು. ಎಲ್ಲಾ ಜನರ ಗುಂಪಿನಲ್ಲಿ ಅವನ
ಹೆಗಲೂ ತಲೆಯೂ ಕಾಣುವಷ್ಟು ಉನ್ನತಪುರುಷ
ನಾಗಿದ್ದನು. ಆಗ ಸಮುವೇಲನು ಎಲ್ಲಾ ಜನರಿಗೆ— 24
ನೋಡಿದಿರಾ, ಯೆಹೋವನಿಂದ ಆರಿಸಲ್ಪಟ್ಟವನು
ಇವನೇ; ಸರ್ವಜನರಲ್ಲಿ ಇವನಿಗೆ ಸಮಾನರು
ಇಲ್ಲವೇ ಇಲ್ಲ ಎನ್ನಲು ಜನರೆಲ್ಲರೂ—ಅರಸನು
ಚಿರಂಜೀವಿಯಾಗಿರಲಿ ಎಂದು ಆರ್ಬಟಿಸಿದರು. ತರು 25
ವಾಯ ಸಮುವೇಲನು ಜನರಿಗೆ ರಾಜನೀತಿಯನ್ನು
ಬೋಧಿಸಿ ಅದನ್ನು ಒಂದು ಪುಸ್ತಕದಲ್ಲಿ ಬರೆದು
ಯೆಹೋವನ ಸನ್ನಿಧಿಯಲ್ಲಿಟ್ಟನು; ಆ ಮೇಲೆ ಜನ
ರನ್ನು ಅವರವರ ಮನೆಗಳಿಗೆ ಕಳುಹಿಸಿಬಿಟ್ಟನು.
ಸೌಲನೂ ಗಿಬೆಯದಲ್ಲಿರುವ ತನ್ನ ಮನೆಗೆ ಹೋ 26
ದನು; ಕೆಲವು ಮಂದಿ ಶೂರರು ದೇವರಿಂದ ಪ್ರೇರಿತ
ರಾಗಿ ಅವನ ಜೊತೆಯಲ್ಲಿ ಹೋದರು. ಕೆಲವು ಮಂದಿ 27
ಕಾಕಪೋಕರು—ಇವನೋ ನಮ್ಮನ್ನು ರಕ್ಷಿಸುವವನು
ಎಂದು ತಿರಸ್ಕರಿಸಿ ಕಾಣಿಕೆಗಳನ್ನು ತರಲಿಲ್ಲ. ಆದರೂ
ಸೌಲನು ಸುಮ್ಮನಿದ್ದನು.

ಸೌಲನು ಅಮ್ಮೋನಿಯರನ್ನು ಸೋಲಿಸಿದ್ದು.

ಅಮ್ಮೋನಿಯನಾದ ನಾಹಾಷನು ಹೊರಟು ಬಂದು 11
ಯಾಬೇಷ್ ಗಿಲ್ಯಾದಿಗೆ ಮುತ್ತಿಗೆಹಾಕಲು ಯಾಬೇ

ಷಿನವರು ಅವನನ್ನು—ನೀನು ನಮ್ಮ ಸಂಗಡ ಒಡಂಬ
ಡಿಕೆ ಮಾಡಿಕೋ; ನಾವು ನಿನ್ನ ಸೇವಕರಾಗಿರುವೆವು
2 ಎಂದು ಬೇಡಿಕೊಂಡರು. ಅದಕ್ಕೆ ಅವನು—
ಎಲ್ಲಾ ಇಸ್ರಾಯೇಲ್ಯರನ್ನು ಅವಮಾನಪಡಿಸುವದ
ಕ್ಕಾಗಿ ನಾನು ಮೊದಲು ನಿಮ್ಮಲ್ಲಿ ಪ್ರತಿಯೊಬ್ಬರ
ಬಲಗಣ್ಣನ್ನು ಕಿತ್ತುಹಾಕುತ್ತೇನೆ. ಇದಕ್ಕೆ ನೀವು ಒಪ್ಪು
ವಿರಾದರೆ ನಿಮ್ಮ ಸಂಗಡ ಒಡಂಬಡಿಕೆಮಾಡಿಕೊಳ್ಳು
3 ತ್ತೇನೆ ಎಂದು ಉತ್ತರಕೊಟ್ಟನು. ಆಗ ಯಾಬೇಷಿನ
ಹಿರಿಯರು ಅವನಿಗೆ—ಏಳು ದಿವಸಗಳ ವರೆಗೆ ತಡೆ;
ಅಷ್ಟರೊಳಗೆ ನಾವು ಇಸ್ರಾಯೇಲ್ಯರ ಎಲ್ಲಾ ಪ್ರಾಂತ್ಯ
ಗಳಿಗೆ ದೂತರನ್ನು ಕಳುಹಿಸುತ್ತೇವೆ. ನಮ್ಮನ್ನು
ಯಾರೂ ರಕ್ಷಿಸದಿದ್ದರೆ ನಾವು ನಿನ್ನ ಬಳಿಗೆ ಹೊರಟು
4 ಬರುವೆವು ಎಂದು ತಿಳಿಸಿದರು. ದೂತರು ಸೌಲನು
ವಾಸವಾಗಿದ್ದ ಗಿಬೆಯಕ್ಕೆ ಬಂದು ಅಲ್ಲಿನವರಿಗೆ ಈ
ವರ್ತಮಾನವನ್ನು ತಿಳಿಸಲು ಎಲ್ಲರೂ ಗಟ್ಟಿಯಾಗಿ
5 ಅಳತೊಡಗಿದರು. ಅಷ್ಟರಲ್ಲಿ ಸೌಲನು ಹೊಲದಿಂದ
ದನಗಳನ್ನು ಹೊಡೆದುಕೊಂಡು ಬಂದನು. ಅವನು—
ಜನರು ಗೋಳಾಡುವದಕ್ಕೇನು ಕಾರಣವೆಂದು ಕೇಳ
ಲು ಅವನಿಗೆ ಯಾಬೇಷಿನವರ ವರ್ತಮಾನವನ್ನು
6 ತಿಳಿಸಿದರು. ಆಗ ಯೆಹೋವನ ಆತ್ಮವು ಅವನ
ಮೇಲೆ ಬಂದಿತು. ಅವನು ಅತ್ಯಂತಕುಪಿತನಾಗಿ
7 ಒಂದು ಜೋಡಿ ಎತ್ತುಗಳನ್ನು ತೆಗೆದುಕೊಂಡು
ತುಂಡು ತುಂಡು ಮಾಡಿ ಆ ತುಂಡುಗಳನ್ನು ದೂತರ
ಮುಖಾಂತರ ಇಸ್ರಾಯೇಲ್ಯರ ಎಲ್ಲಾ ಪ್ರಾಂತಗಳಿಗೆ
ಕಳುಹಿಸಿ—ಯಾರು ಸೌಲ ಸಮುವೇಲರನ್ನು
ಹಿಂಬಾಲಿಸುವದಿಲ್ಲವೋ ಅವರ ಎತ್ತುಗಳು ಹೀಗೆಯೇ
ಕಡಿಯಲ್ಪಡುವವು ಎಂದು ಹೇಳಿಸಿದನು. ಯೆಹೋವನ
ಭಯಪ್ರೇರಿತರಾಗಿ ಜನರೆಲ್ಲರೂ ಏಕಮನಸ್ಸಿನಿಂದ
8 ಕೂಡಿಬಂದರು. ಅವರನ್ನು ಬೆಜೆಕಿನಲ್ಲಿ ಕ್ರಮ
ಪಡಿಸಿ ಲೆಕ್ಕಿಸಿದಾಗ ಇಸ್ರಾಯೇಲ್ಯರಲ್ಲಿ ಮೂರು
ಲಕ್ಷ ಸೈನಿಕರೂ ಯೆಹೂದ್ಯರಲ್ಲಿ ಮೂವತ್ತು ಸಾವಿರ
9 ಸೈನಿಕರೂ ಇದ್ದರು. ಇವರು ಬಂದಿದ್ದ ದೂತರಿಗೆ—
ನಾಳೆ ಮಧ್ಯಾಹ್ನದಲ್ಲಿ ನಿಮಗೆ ಸಹಾಯಸಿಕ್ಕುವ
ದೆಂದು ಯಾಬೇಷ್ ಗಿಲ್ಯಾದಿನವರಿಗೆ ತಿಳಿಸಿರಿ ಎಂದು
10 ಹೇಳಿ ಅವರನ್ನು ಕಳುಹಿಸಿದರು. ದೂತರು ಹೋಗಿ
ಈ ವರ್ತಮಾನವನ್ನು ತಿಳಿಸಲು ಯಾಬೇಷಿನವರು
ಬಹಳವಾಗಿ ಸಂತೋಷಪಟ್ಟು ಅಮ್ಮೋನಿಯರಿಗೆ—
ನಾವು ನಾಳೆ ನಿಮ್ಮ ಬಳಿಗೆ ಬರುವೆವು; ನಿಮಗೆ ಸರಿ
ಕಾಣುವ ಪ್ರಕಾರ ಮಾಡಿರಿ ಎಂದು ಹೇಳಿದರು.
11 ಸೌಲನು ಬೆಳಗಿನ ಜಾವದಲ್ಲಿ ತನ್ನ ಜನರನ್ನು ಮೂರು
ಪಾಲು ಮಾಡಿ ಅಮ್ಮೋನಿಯರ ಪಾಳೆಯದೊಳಕ್ಕೆ
ನುಗ್ಗಿ ಅವರನ್ನು ಮಧ್ಯಾಹ್ನದ ವರೆಗೆ ಹತಮಾಡಿ
ದನು; ಉಳಿದವರನ್ನು ಒಬ್ಬರನ್ನೊಬ್ಬರು ಕೂಡದ
ಹಾಗೆ ಚದರಿಸಿಬಿಟ್ಟನು.
12 ತರುವಾಯ ಜನರು ಸಮುವೇಲನಿಗೆ—ಸೌಲನು
ನಮಗೆ ಅರಸನಾಗಬಾರದೆಂದು ಹೇಳಿದವರಾರು?
ಅವರನ್ನು ನಮಗೆ ಒಪ್ಪಿಸಿರಿ; ನಾವು ಕೊಂದುಹಾಕು
13 ತ್ತೇವೆ ಎನ್ನಲು ಸೌಲನು ಅವರಿಗೆ—ಯೆಹೋವನು
ಈ ಹೊತ್ತು ಇಸ್ರಾಯೇಲ್ಯರಿಗೆ ಜಯವನ್ನುಂಟು
ಮಾಡಿರುವದರಿಂದ ಯಾರನ್ನೂ ಕೊಲ್ಲಬಾರದು ಎಂದು

ಹೇಳಿದನು. ಸಮುವೇಲನು ಜನರಿಗೆ—ಬನ್ನಿರಿ
ಗಿಲ್ಗಾಲಿಗೆ ಹೋಗಿ ಅರಸುತನವನ್ನು ಸ್ಥಿರಪ
ಸೋಣ ಅನ್ನಲು ಅವರೆಲ್ಲರೂ ಅಲ್ಲಿಗೆ ಹೋ
ಯೆಹೋವನ ಸನ್ನಿಧಿಯಲ್ಲಿ ಸೌಲನ ಅರಸುತನವನ್ನು
ಸ್ಥಿರಪಡಿಸಿ ಯೆಹೋವನಿಗೆ ಸಮಾಧಾನಯಜ್ಞಗಳನ್ನು
ಸಮರ್ಪಿಸಿ ಸೌಲನೊಡನೆ ಬಹಳವಾಗಿ ಆನಂದಿ
ದರು.

ಸಮುವೇಲನು ಉದ್ಯೋಗನಿವೃತ್ತನಾಗುವಾಗ
ಇಸ್ರಾಯೇಲ್ಯರಿಗೆ ಹೇಳಿದ ಮಾತುಗಳು.

ಸಮುವೇಲನು ಎಲ್ಲಾ ಇಸ್ರಾಯೇಲ್ಯರಿಗೆ—ನೋಡಿ
ರಿ, ನಾನು ನಿಮ್ಮ ಬಿನ್ನಹಗಳನ್ನು ಲಾಲಿಸಿ ನಿಮ
ಗೊಬ್ಬ ಅರಸನನ್ನು ನೇಮಿಸಿದೆನು. ಇನ್ನು ಮುಂ
ಇವನೇ ನಿಮ್ಮನ್ನು ನಡಿಸುವನು. ಚಿಕ್ಕಂದಿನಿಂ
ನಿಮ್ಮ ನಾಯಕನಾಗಿದ್ದ ನಾನು ಈಗ ತಲೆನರೆ
ಮುದುಕನಾಗಿದ್ದೇನೆ; ನನ್ನ ಮಕ್ಕಳು ನಿಮ್ಮ ಮಧ
ದಲ್ಲಿದ್ದಾರೆ. ಇಲ್ಲಿ ನಿಂತುಕೊಂಡಿರುವ ನಾನ
ಯಾರ ಎತ್ತನ್ನಾಗಲಿ ಕತ್ತೆಯನ್ನಾಗಲಿ ತೆಗೆದ
ಕೊಂಡು ಯಾರನ್ನಾದರೂ ವಂಚಿಸಿ ಪೀಡಿಸಿದ್ದೂ ಲಂ
ತೆಗೆದುಕೊಂಡು ಕುರುಡನಂತೆ ತೀರ್ಪುಮಾಡಿದ್ದೂ
ಉಂಟೋ? ಇದ್ದರೆ ಯೆಹೋವನ ಮುಂದೆಯೂ ಆ
ನ ಅಭಿಷಿಕ್ತನ ಮುಂದೆಯೂ ಹೇಳಿರಿ; ನಾನು ಅದನ್ನು
ಹಿಂದಕ್ಕೆ ಕೊಡುತ್ತೇನೆ ಅನ್ನಲು ಅವರು—ನೀನ
ನಮ್ಮನ್ನು ವಂಚಿಸಿ ಪೀಡಿಸಿದ್ದಾಗಲಿ ನಮ್ಮಿಂದ ಏನಾ
ರೂ ಕಸಕೊಂಡದ್ದಾಗಲಿ ಇರುವದಿಲ್ಲ ಎಂದು ಉತ್ತ
ಕೊಟ್ಟರು. ಸಮುವೇಲನು ತಿರಿಗಿ—ನೀವು ನನ್ನಲ್ಲಿ
ಇಂಥದನ್ನೇನೂ ಕಾಣಲಿಲ್ಲವೆಂಬದಕ್ಕೆ ಯೆಹೋವನು
ಆತನ ಅಭಿಷಿಕ್ತನೂ ಸಾಕ್ಷಿಯಾಗಿದ್ದಾರೆ ಎನ್ನಲ
ಅವರು—ಹೌದು, ಸಾಕ್ಷಿಯಾಗಿದ್ದಾರೆ ಎಂದು ನು
ದರು. ಆಗ ಸಮುವೇಲನು—ನಿಮ್ಮ ಪಿತೃಗಳನ್ನು
ಐಗುಪ್ತದಿಂದ ಕರತರುವದಕ್ಕಾಗಿ ಮೋಶೆ ಆರೋ
ರನ್ನು ಏರ್ಪಡಿಸಿದ ಯೆಹೋವನೇ ಇದಕ್ಕೆ ಸಾಕ್ಷಿ
ಇಲ್ಲಿ ನಿಂತುಕೊಂಡು ಕೇಳಿರಿ; ಯೆಹೋವನು ನಿಮ
ಗೋಸ್ಕರವೂ ನಿಮ್ಮ ಪಿತೃಗಳಿಗೋಸ್ಕರವೂ ನಡಿಸಿ
ನೀತಿಕಾರ್ಯಗಳನ್ನು ಕುರಿತು ಆತನೆದುರಿನಲ್ಲಿ ನಿಮಗ
ನೆನಪುಹುಟ್ಟಿಸಿ ನಿಮ್ಮನ್ನು ಎಚ್ಚರಿಸುತ್ತೇನೆ. ಐಗುಪ್ತಕ್ಕೆ
ಬಂದ ಯಾಕೋಬನ ವಂಶದವರಾದ ನಮ್ಮ ಹಿರಿಯರು
ಯೆಹೋವನಿಗೆ ಮೊರೆಯಿಟ್ಟಾಗ ಆತನು ಮೋ
ಆರೋನರ ಮುಖಾಂತರ ಅವರನ್ನು ಐಗುಪ್ತದಿಂ
ಬಿಡಿಸಿ ಈ ದೇಶದಲ್ಲಿ ನೆಲೆಗೊಳಿಸಿದನು. ಅವರ
ತಮ್ಮ ದೇವರಾದ ಯೆಹೋವನನ್ನು ಮರೆತುಬಿಡಲ
ಆತನು ಅವರನ್ನು ಹಾಚೋರಿನ ಸೇನಾಪತಿಯಾ
ಸೀಸೆರನಿಗೂ ಫಿಲಿಷ್ಟಿಯರಿಗೂ ಮೋವಾಬ್‌ರಾಜನಿಗ
ಮಾರಿಬಿಟ್ಟನು. ಇವರು ಬಂದು ಅವರೊಡನೆ ಯುದ್ಧ
ಮಾಡಿದರು. ಆಗ ಅವರು ಆತನಿಗೆ—ನಾವ
ಯೆಹೋವನಾದ ನಿನ್ನನ್ನು ಬಿಟ್ಟು ಬಾಳ್, ಅಷ್ಟೋ
ರೆತ್ ಎಂಬ ದೇವತೆಗಳನ್ನು ಪೂಜಿಸಿ ಪಾಪಮಾ
ಡ್ಡೇವೆ. ಈಗ ಕೃಪೆಮಾಡಿ ನಮ್ಮನ್ನು ಶತ್ರುಗಳ ಕೈ
ಯಿಂದ ಬಿಡಿಸು; ನಾವು ಇನ್ನು ಮುಂದೆ ನಿನ್ನನ್ನೆ

11 ಸೇವಿಸುವೆವು ಎಂದು ಮೊರೆಯಿಟ್ಟರು. ಯೆಹೋವನು
ಯೆರುಬ್ಬಾಳ್, ಬಾರಾಕ್, ಯೆಫ್ತಾಹ, ಸಮುವೇಲ್
ಇವರನ್ನು ಕಳುಹಿಸಿ ನಿಮ್ಮನ್ನು ಎಲ್ಲಾ ಶತ್ರುಗಳ
ಕೈಗೆ ತಪ್ಪಿಸಿ ಸುರಕ್ಷಿತವಾಗಿ ವಾಸಿಸುವಂತೆ ಮಾಡಿ
12 ದನು. ಅಮ್ಮೋನಿಯರ ಅರಸನಾದ ನಾಹಾಷನು
ನಿಮ್ಮ ಮೇಲೆ ಯುದ್ಧಕ್ಕೆ ಬರುತ್ತಾನೆಂದು ನಿಮಗೆ
ಗೊತ್ತಾಗಲು ನಿಮ್ಮ ದೇವರಾದ ಯೆಹೋವನು
ನಿಮ್ಮ ಅರಸನಾಗಿದ್ದರೂ ನೀವು—ನಮಗೊಬ್ಬ ಅರ
ಸನನ್ನು ನೇಮಿಸೆಂದು ನನ್ನನ್ನು ಬೇಡಿಕೊಂಡಿರಿ.
13 ಇಗೋ, ನೀವು ಅಪೇಕ್ಷಿಸಿ ಆರಿಸಿಕೊಂಡ ಅರಸನು
ಇವನೇ; ಯೆಹೋವನು ಇವನನ್ನು ನಿಮ್ಮ ಮೇಲೆ
14 ಅರಸನನ್ನಾಗಿ ನೇಮಿಸಿದ್ದಾನೆ. ನೀವೂ ನಿಮ್ಮ ಅರ
ಸನೂ ನಿಮ್ಮ ದೇವರಾದ ಯೆಹೋವನಲ್ಲಿ ಭಯಭಕ್ತಿ
ಯುಳ್ಳವರಾಗಿದ್ದುಕೊಂಡು ವಿಧೇಯರಾಗಿ ಆತನನ್ನು
ಸೇವಿಸುತ್ತಾ ತಪ್ಪದೆ ಆತನ ಮಾತು ಕೇಳುವವರಾಗಿ
ಆತನನ್ನೇ ಹೊಂದಿಕೊಂಡಿರುವದಾದರೆ ಎಷ್ಟೋ ಒಳ್ಳೇ
15 ದು. ನೀವು ಯೆಹೋವನ ಮಾತನ್ನು ಕೇಳದೆಯೂ
ಆತನ ಆಜ್ಞೆಗಳನ್ನು ಕೈಕೊಳ್ಳದೆಯೂ ಹೋದರೆ ಆತನ
ಹಸ್ತವು ನಿಮ್ಮ ಹಿರಿಯರಿಗೆ ವಿರೋಧವಾಗಿದ್ದಂತೆ ನಿಮ
16 ಗೂ ವಿರೋಧವಾಗಿಯೇ ಇರುವದು. ಈಗ ಯೆಹೋ
ವನು ನಿಮ್ಮ ಕಣ್ಣು ಮುಂದೆ ಮಾಡುವ ಮಹತ್ಕಾರ್ಯ
17 ವನ್ನು ಹತ್ತಿರ ಬಂದು ನೋಡಿರಿ. ನಾನು ಯೆ
ಹೋವನಿಗೆ ಮೊರೆಯಿಡುವೆನು; ಈಗ ಗೋದಿಯ
ಸುಗ್ಗಿಯಿದ್ದರೂ ಆತನು ಗುಡುಗನ್ನೂ ಮಳೆಯನ್ನೂ
ಕಳುಹಿಸುವದರ ಮೂಲಕ ನೀವು ಅರಸನನ್ನು ಕೇಳಿ
ಕೊಂಡದ್ದು ತನ್ನ ದೃಷ್ಟಿಯಲ್ಲಿ ಎಷ್ಟೋ ಕೆಟ್ಟದ್ದಾಗಿದೆ
ಎಂಬದನ್ನು ತೋರಿಸಿಕೊಡುವನು ಎಂದು ಅವರಿಗೆ
18 ಹೇಳಿ ಯೆಹೋವನಿಗೆ ಮೊರೆಯಿಡಲು ಆತನು ಗುಡು
ಗುಮಳೆಗಳನ್ನು ಕಳುಹಿಸಿದನು. ಎಲ್ಲಾ ಜನರೂ
ಯೆಹೋವನಿಗೂ ಸಮುವೇಲನಿಗೂ ಬಹಳವಾಗಿ
19 ಭಯಪಟ್ಟು ಸಮುವೇಲನನ್ನು—ನಮಗೊಬ್ಬ ಅರ
ಸನು ಬೇಕೆಂದು ನಾವು ಬೇಡಿಕೊಂಡದರಿಂದ ನಮ್ಮ
ಪಾಪಗಳಿಗೆ ಮತ್ತೊಂದು ಪಾಪವು ಕೂಡಿತು; ಆದದ
ರಿಂದ ನಿನ್ನ ಸೇವಕರಾದ ನಾವು ಸಾಯದಂತೆ ನಿನ್ನ
ದೇವರಾದ ಯೆಹೋವನನ್ನು ಬೇಡಿಕೋ ಎಂದು
20 ವಿಜ್ಞಾಪಿಸಲು ಅವನು—ಭಯಪಡಬೇಡಿರಿ; ಇಷ್ಟು
ಪಾಪಮಾಡಿದ ನೀವು ಇನ್ನು ಮುಂದೆಯಾದರೂ
ಅದನ್ನು ಬಿಟ್ಟು ಯೆಹೋವನನ್ನು ಅಂಟಿಕೊಂಡು
ಪೂರ್ಣಮನಸ್ಸಿನಿಂದ ಆತನೊಬ್ಬನನ್ನೇ ಸೇವಿಸಿರಿ.
21 ದೇವರಲ್ಲದವುಗಳನ್ನು ಹಿಂಬಾಲಿಸಬೇಡಿರಿ; ಅವುಗ
ಳಿಂದ ನಿಮಗೆ ಲಾಭವೂ ರಕ್ಷಣೆಯೂ ಸಿಕ್ಕುವದಿಲ್ಲ.
22 ಅವು ವ್ಯರ್ಥವಾದವುಗಳೇ. ಯೆಹೋವನು ದಯೆ
ದಿಂದ ನಿಮ್ಮನ್ನು ಸ್ವಕೀಯಜನವನ್ನಾಗಿ ಆರಿಸಿಕೊಂಡ
ಮೇಲೆ ಆತನು ತನ್ನ ಮಹೋನ್ನತ ನಾಮದ ನಿಮಿತ್ತ
23 ವಾಗಿ ನಿಮ್ಮನ್ನು ಕೈಬಿಡುವದೇ ಇಲ್ಲ. ನಾನಾದರೋ
ನಿಮಗೋಸ್ಕರವಾಗಿ ಯೆಹೋವನನ್ನು ಪ್ರಾರ್ಥಿಸುತ್ತಾ
ಆತನ ಉತ್ತಮನೀತಿಮಾರ್ಗವನ್ನು ನಿಮಗೆ ತೋರಿಸಿ
ಕೊಡುವದನ್ನು ಬಿಡುವದೇ ಇಲ್ಲ; ಬಿಟ್ಟರೆ ಆತನ
24 ದೃಷ್ಟಿಯಲ್ಲಿ ಪಾಪಿಯಾಗಿರುವೆನು. ನೀವಾದರೋ
ಯೆಹೋವನಲ್ಲಿ ಭಯಭಕ್ತಿಯುಳ್ಳವರಾಗಿದ್ದು ಆತನು
ನಿಮಗೋಸ್ಕರವಾಗಿ ಮಾಡಿದ ಮಹತ್ಕಾರ್ಯಗಳನ್ನು
ನೆನಸಿಕೊಂಡು ಆತನನ್ನು ಸತ್ಯದಿಂದಲೂ ಪೂರ್ಣ
ಮನಸ್ಸಿನಿಂದಲೂ ಸೇವಿಸುತ್ತಾ ಬರಬೇಕು; ನೀವು 25
ದ್ರೋಹಿಗಳಾಗಿಯೇ ಇದ್ದರೆ ನಿಮ್ಮ ಅರಸನೊಡನೆ
ನಾಶವಾಗುವಿರಿ ಎಂದು ಹೇಳಿದನು.

ಇಸ್ರಾಯೇಲ್ಯರಿಗೂ ಫಿಲಿಷ್ಟಿಯರಿಗೂ ಯುದ್ಧವುಂಟಾದಾಗ
ಸೌಲನು ಧರ್ಮವಿರುದ್ಧವಾಗಿ ಯಜ್ಞವನ್ನರ್ಪಿಸಿದ್ದು.

13 ಸೌಲನು ಅರಸನಾದಾಗ [ಮೂವತ್ತು] ವರುಷ
ದವನಾಗಿದ್ದನು. ಅವನು ಇಸ್ರಾಯೇಲ್ಯರನ್ನು
ಎರಡು ವರುಷ ಆಳಿದನಂತರ ಅವರಿಂದ ಮೂರು 2
ಸಾವಿರ ಮಂದಿ ಸೈನಿಕರನ್ನು ಆರಿಸಿಕೊಂಡು ಅವರಲ್ಲಿ
ಎರಡು ಸಾವಿರ ಜನರನ್ನು ಮಿಕ್ಮಾಷಿನಲ್ಲಿಯೂ
ಬೇತೇಲಿನ ಗುಡ್ಡದಲ್ಲಿಯೂ ಇಟ್ಟುಕೊಂಡನು. ಉಳಿದ
ಸಾವಿರ ಜನರನ್ನು ಬೆನ್ಯಾಮೀನ್ಯರ ಗಿಬೆಯದಲ್ಲಿದ್ದ
ಯೋನಾತಾನನ ವಶಕ್ಕೆ ಕೊಟ್ಟನು. ಬೇರೆ ಇಸ್ರಾ
ಯೇಲ್ಯರನ್ನು ಅವರವರ ಮನೆಗಳಿಗೆ ಕಳುಹಿಸಿದನು.
ಯೋನಾತಾನನು ಗೆಬದಲ್ಲಿದ್ದ ಫಿಲಿಷ್ಟಿಯರ ಠಾಣ 3
ವನ್ನು ನಾಶಮಾಡಿದನು. ಈ ವರ್ತಮಾನವು
ಫಿಲಿಷ್ಟಿಯರಿಗೆ ಮುಟ್ಟಿತು. ಈ ಸಂಗತಿಯು ಎಲ್ಲಾ
ಇಬ್ರಿಯರಿಗೂ ಗೊತ್ತಾಗುವಂತೆ ಸೌಲನು ದೇಶದ
ಲ್ಲೆಲ್ಲಾ ಕೊಂಬೂದಿಸಿದನು. ಸೌಲನು ಫಿಲಿಷ್ಟಿಯರ 4
ಠಾಣವನ್ನು ನಾಶಮಾಡಿದ್ದರಿಂದ ತಾವು ಅವರ ದ್ವೇಷಕ್ಕೆ
ಗುರಿಯಾದೆವೆಂದು ಇಸ್ರಾಯೇಲ್ಯರು ತಿಳಿದು ಗಿಲ್ಗಾ
ಲಿಗೆ ಬಂದು ಸೌಲನನ್ನು ಕೂಡಿಕೊಂಡರು. ಆಗ 5
ಫಿಲಿಷ್ಟಿಯರು ಇಸ್ರಾಯೇಲ್ಯರೊಡನೆ ಯುದ್ಧಮಾಡು
ವದಕ್ಕೋಸ್ಕರ ಮೂವತ್ತು ಸಾವಿರ ರಥಬಲವನ್ನೂ
ಆರು ಸಾವಿರ ಅಶ್ವಬಲವನ್ನೂ ಸಮುದ್ರದ ಮರಳಿ
ನಷ್ಟು ಅಸಂಖ್ಯವಾದ ಕಾಲ್ಬಲವನ್ನೂ ತೆಗೆದುಕೊಂಡು
ಬಂದು ಬೇತಾವೆನಿನ ಪೂರ್ವದಿಕ್ಕಿನಲ್ಲಿರುವ ಮಿಕ್ಮಾ
ಷಿನಲ್ಲಿ ಪಾಳೆಯಮಾಡಿಕೊಂಡರು. ಇಸ್ರಾಯೇಲ್ಯರಿಗೆ 6
ಕೇಡು ಬಂದಿತು. ತಾವು ಇಕ್ಕಟ್ಟಿನಲ್ಲಿದ್ದೇವೆಂದು
ಅವರು ತಿಳಿದು ಗವಿ, ಕಾಡು, ಬಂಡೆ, ನೆಲಮನೆ,
ಗುಂಡಿ ಇವುಗಳಲ್ಲಿ ಅಡಗಿಕೊಂಡರು. ಕೆಲವರು 7
ಯೊರ್ದನ್ ಹೊಳೆದಾಟಿ ಗಾದ್ಯರ ದೇಶಕ್ಕೂ ಗಿಲ್ಯಾದ್
ಪ್ರಾಂತಕ್ಕೂ ಹೊರಟುಹೋದರು.
ಸೌಲನು ಇನ್ನೂ ಗಿಲ್ಗಾಲಿನಲ್ಲೇ ಇದ್ದನು. ಅವನ
ಸಂಗಡ ಇದ್ದವರು ಭಯದಿಂದ ನಡುಗುತ್ತಿದ್ದರು.
ಸೌಲನು ಸಮುವೇಲನ ಆಜ್ಞೆಯಂತೆ ಗಿಲ್ಗಾಲಿನಲ್ಲೇ 8
ಏಳು ದಿವಸ ಇದ್ದರೂ ಸಮುವೇಲನು ಬರಲಿಲ್ಲ;
ಅಷ್ಟರಲ್ಲಿ ಜನರು ಚದರಿಹೋದರು. ಆಗ ಸೌಲನು 9
ಜನರಿಂದ ಸರ್ವಾಂಗಹೋಮಕ್ಕೂ ಸಮಾಧಾನಯಜ್ಞ
ಕ್ಕೂ ಬೇಕಾದದ್ದನ್ನು ತರಿಸಿ ಸರ್ವಾಂಗಹೋಮವನ್ನು
ಅರ್ಪಿಸಿದನು. ಅದು ತೀರುವಷ್ಟರಲ್ಲೇ ಸಮುವೇ 10
ಲನು ಬಂದನು. ಸೌಲನು ಅವನನ್ನು ವಂದಿಸುವದ
ಕ್ಕೋಸ್ಕರ ಎದುರಿಗೆ ಹೋಗಲು ಸಮುವೇಲನು ಅವ 11
ನನ್ನು—ಇದೇನು ನೀನು ಮಾಡಿದ್ದು ಎಂದು ಕೇಳಲು
ಅವನು—ಜನರು ಚದರಿಹೋಗುವದನ್ನೂ ನೀನು
ನಿಯಮಿತಕಾಲದಲ್ಲಿ ಬಾರದಿರುವದನ್ನೂ ಫಿಲಿಷ್ಟಿಯ

ರು ಮಿಕ್ಮಾಷಿನಲ್ಲಿ ನಮಗೆ ವಿರೋಧವಾಗಿ ಕೂಡಿ
12 ಕೊಂಡಿರುವದನ್ನೂ ನೋಡಿ—ನಾನು ಯೆಹೋವನಿಗೆ
ಶಾಂತ್ಯರ್ಪಣೆಯನ್ನು ಸಲ್ಲಿಸುವದಕ್ಕಿಂತ ಮೊದಲೇ
ಫಿಲಿಷ್ಟಿಯರು ಗಿಲ್ಗಾಲಿಗೆ ಬಂದು ನನ್ನ ಮೇಲೆ ಬಿದ್ದಾ
ರೆಂಬ ಭಯಪಟ್ಟು ಸರ್ವಾಂಗಹೋಮವನ್ನು ಸಮ
13 ರ್ಪಿಸುವದಕ್ಕೆ ಮುಂಗೊಂಡೆನು ಅಂದನು. ಆಗ
ಸಮುವೇಲನು—ನೀನು ಬುದ್ಧಿಹೀನಕಾರ್ಯವನ್ನು
ಮಾಡಿದೆ; ನೀನು ನಿನ್ನ ದೇವರಾದ ಯೆಹೋವನ
ಆಜ್ಞೆಯನ್ನು ಕೈಕೊಳ್ಳಲಿಲ್ಲ. ಕೈಕೊಂಡಿದ್ದರೆ ಆತ
ನು ನಿನ್ನ ರಾಜ್ಯವನ್ನು ಇಸ್ರಾಯೇಲ್ಯರಲ್ಲಿ ಶಾಶ್ವತವಾಗಿ
14 ಸ್ಥಿರಪಡಿಸುತ್ತಿದ್ದನು. ಈಗಲಾದರೋ ನಿನ್ನ ಅರಸು
ತನವು ನಿಲ್ಲುವದಿಲ್ಲ; ನೀನು ಯೆಹೋವನ ಆಜ್ಞೆ
ಯನ್ನು ಕೈಕೊಳ್ಳದೆ ಹೋದದರಿಂದ ಆತನು ತನಗೆ
ಒಪ್ಪುವ ಬೇರೊಬ್ಬ ಪುರುಷನನ್ನು ತನ್ನ ಪ್ರಜೆಯ ಮೇಲೆ
15 ಪ್ರಭುವಾಗಿ ನೇಮಿಸಿದ್ದಾನೆ ಎಂದು ಹೇಳಿದನು. ಅನಂ
ತರ ಸಮುವೇಲನು ಗಿಲ್ಗಾಲನ್ನು ಬಿಟ್ಟು ಬೆನ್ಯಾಮೀನ್ಯರ
ಗಿಬೆಯಕ್ಕೆ ಹೋದನು.

ಸೌಲನು ತನ್ನ ಜೊತೆಯಲ್ಲಿದ್ದ ಸೈನಿಕರನ್ನು ಲೆಕ್ಕಿಸಿ
16 ದಾಗ ಆರು ನೂರು ಮಂದಿಯಿದ್ದರು. ಅವರೊಡನೆ
ಅವನೂ ಅವನ ಮಗನಾದ ಯೋನಾತಾನನೂ ಬೆನ್ಯಾ
ಮೀನ್ಯರ ಗೆಬದಲ್ಲಿ ಇಳುಕೊಂಡರು. ಫಿಲಿಷ್ಟಿಯರು
17 ಮಿಕ್ಮಾಷಿನಲ್ಲಿ ಪಾಳೆಯಮಾಡಿಕೊಂಡಿದ್ದರು. ಸುಲಿಗೆ
ಮಾಡುವದಕ್ಕೋಸ್ಕರ ಫಿಲಿಷ್ಟಿಯರ ಪಾಳೆಯದಿಂದ
ಮೂರು ಗುಂಪುಗಳು ಹೊರಟು ಒಂದು ಗುಂಪು
18 ಒಫ್ರದ ಮಾರ್ಗವಾಗಿ ಶುವಲ್‌ದೇಶಕ್ಕೂ ಇನ್ನೊಂದು
ಬೇತ್‌ಹೋರೋನಿನ ಕಡೆಗೂ ಮತ್ತೊಂದು ಜೆಬೋ
ಯಿಮ್ ಕಣಿವೆಯ ಕೆಳಗಿರುವ ಅರಣ್ಯವನ್ನು
19 ನೋಡಬಹುದಾದ ಸ್ಥಳಕ್ಕೂ ಹೋದವು. ಇಬ್ರಿಯ
ರು ಈಟಿಕತ್ತಿಗಳನ್ನು ಮಾಡಿಕೊಳ್ಳಕೂಡದೆಂದು ಫಿಲಿ
ಷ್ಟಿಯರ ಆಜ್ಞೆಯಿದ್ದದರಿಂದ ಇಸ್ರಾಯೇಲ್‌ದೇಶದಲ್ಲಿ
ಅವುಗಳನ್ನು ಮಾಡುವ ಕಮ್ಮಾರರೇ ಇರಲಿಲ್ಲ.
20 (ಅವರು ತಮ್ಮ ನೇಗಲಿನ ಗುಳ, ಸಲಿಕೆ, ಕೊಡಲಿ,
ಗುದ್ದಲಿ ಇವುಗಳನ್ನು ಹಣಿಸುವದಕ್ಕೋಸ್ಕರ ಫಿಲಿಷ್ಟಿ
21 ಯರ ಹತ್ತಿರವೇ ಹೋಗಬೇಕಿತ್ತು. 1)ಗುದ್ದಲಿ, ಸಲಿಕೆ,
ತ್ರಿಶೂಲ, ಕೊಡಲಿ, ಮುಳ್ಳುಗೋಲು ಇವುಗಳನ್ನು
ಹದಮಾಡುವದಕ್ಕೋಸ್ಕರ ಅವರಲ್ಲಿ ಅರ ಮಾತ್ರ
22 ಇತ್ತು.) ಹೀಗಿರುವದರಿಂದ ಯುದ್ಧಪ್ರಾರಂಭಿಸಿದಾಗ
ಸೌಲ ಯೋನಾತಾನರ ಹೊರತು ಅವರ ಜೊತೆಯ
ಲ್ಲಿದ್ದ ಜನರಲ್ಲಿ ಒಬ್ಬನ ಕೈಯಲ್ಲಾದರೂ ಕತ್ತಿಯಾ
ಗಲಿ ಬರ್ಜಿಯಾಗಲಿ ಇರಲಿಲ್ಲ.

ಯೋನಾತಾನನ ಶೌರ್ಯ, ಫಿಲಿಷ್ಟಿಯರ ಅಪಜಯ,
ಸೌಲನ ಬುದ್ಧಿಹೀನವಾದ ಆಜ್ಞೆ.

23 ಫಿಲಿಷ್ಟಿಯರ ಕಾವಲುದಂಡು ಮಿಕ್ಮಾಷಿನ ಕಣಿವೆಯ
14 ಕಡೆಗೆ ಹೊರಟಿತು. ಒಂದು ದಿವಸ ಸೌಲನ ಮಗ
ನಾದ ಯೋನಾತಾನನು ತನ್ನ ಆಯುಧಗಳನ್ನು
ಹೊರುವ ಸೇವಕನಿಗೆ—ಆಚೆ ಇರುವ ಫಿಲಿಷ್ಟಿಯರ
ಕಾವಲುದಂಡಿಗೆ ವಿರೋಧವಾಗಿ ಹೋಗೋಣ ಬಾ
ಎಂದು ಹೇಳಿದನು. ಆದರೆ ಈ ಸಂಗತಿಯನ್ನು ತನ್ನ
ತಂದೆಗೆ ತಿಳಿಸಲಿಲ್ಲ. ಸೌಲನಾದರೋ ಗಿಬೆಯ ಪ್ರಾಂ
ದ ಅಂತ್ಯಭಾಗವಾಗಿರುವ ಮಿಗ್ರೋನಿನಲ್ಲಿನ ಒಂದು
ದಾಳಿಂಬ ವೃಕ್ಷದ ಅಡಿಯಲ್ಲಿ ಇಳುಕೊಂಡಿದ್ದನು
ಅವನ ಜೊತೆಯಲ್ಲಿ ಸುಮಾರು ಆರು ನೂರ
ಮಂದಿ ಸೈನಿಕರೂ ಏಫೋದನ್ನು ಧರಿಸಿಕೊಂಡಿದ್ದ
ಅಹೀಯನೂ ಇದ್ದರು. ಈ ಅಹೀಯನು ಶಿಲೋ
ವಿನಲ್ಲಿ ಯೆಹೋವನ ಯಾಜಕನಾಗಿದ್ದ ಏಲಿಯ ಮ
ಮಗನೂ ಫೀನೆಹಾಸನ ಮೊಮ್ಮಗನೂ ಈಕಾಬೋ
ದನ ಅಣ್ಣನಾದ ಅಹೀಟೂಬನ ಮಗನೂ ಆಗಿದ್ದನು
ಯೋನಾತಾನನು ಹೋದದ್ದು ಜನರಿಗೂ ಗೊತ್ತಿ
ಲ್ಲಿಲ್ಲ. ಅವನು ಫಿಲಿಷ್ಟಿಯರ ಕಾವಲುದಂಡಿ
ವಿರೋಧವಾಗಿ ಹೊರಟ ಕಣಿವೆಯ ಮಾರ್ಗದ ಎರಡ
ಕಡೆಗಳಲ್ಲಿ ಬೋಚೇಚ್, ಸೆನೆ ಎಂಬ ಎರಡು ಕೋಡ
ಗಲ್ಲುಗಳಿದ್ದವು. ಉತ್ತರದಿಕ್ಕಿನದು ಎತ್ತರವಾಗಿ ಮಿ
ಕ್ಮಾಷಿಗೂ ದಕ್ಷಿಣದಿಕ್ಕಿನದು ಗೆಬಕ್ಕೂ ಎದುರಾ
ದ್ದವು. ಯೋನಾತಾನನು ತನ್ನ ಆಯುಧಗಳನ್ನು
ಹೊರುವವನಿಗೆ—ಸುನ್ನತಿಯಿಲ್ಲದ ಈ ಕಾವಲುದಂಡಿ
ವರಿಗೆ ವಿರೋಧವಾಗಿ ಹೋಗೋಣ ಬಾ; ಒಂದ
ವೇಳೆ ಯೆಹೋವನು ತಾನೇ ನಮಗೋಸ್ಕರ ಕಾಯ
ನಡಿಸುವನು. ಬಹುಜನರಿಂದಾದರೂ ಸ್ವಲ್ಪಜ
ರಿಂದಾದರೂ ರಕ್ಷಿಸುವದು ಯೆಹೋವನಿಗೆ ಅಸಾಧ
ವಲ್ಲ ಎಂದು ಹೇಳಲು ಆಯುಧಗಳನ್ನು ಹೊರುವ
ನು—ನಿನ್ನ ಮನಸ್ಸಿನಂತೆ ಮಾಡು; ನಿನ್ನ ಕೋರಿಕೆಯ
ಹಾಗೆ ನಾನೂ ನಿನ್ನನ್ನು ಹಿಂಬಾಲಿಸುತ್ತೇನೆ ಅಂದನು
ಆಗ ಯೋನಾತಾನನು ಅವನಿಗೆ—ಅವರು ನಮ್ಮನ್ನು
ಕಾಣುವಂತೆ ಸಮೀಪಕ್ಕೆ ಹೋಗೋಣ. ನಾವು ನಿಮ್ಮ
ಬಳಿಗೆ ಬರುವ ತನಕ ಅಲ್ಲೇ ನಿಲ್ಲಿರಿ ಎಂದು ಅವರ
ನಮಗೆ ಹೇಳಿದರೆ ಮೇಲೆ ಹತ್ತದೆ ಇದ್ದ ಸ್ಥಳದಲ್ಲೇ
ಇರೋಣ. ಆದರೆ ಅವರು—ಮೇಲೆ ಹತ್ತಿ ನಮ್ಮ
ಬಳಿಗೆ ಬನ್ನಿರಿ ಎಂದು ನಮ್ಮನ್ನು ಕರೆದರೆ ಯೆಹೋ
ವನು ಅವರನ್ನು ನಮ್ಮ ಕೈಗೆ ಒಪ್ಪಿಸಿದ್ದಾನೆಂಬದಕ
ಇದೇ ಗುರುತೆಂದು ತಿಳಿದು ಮೇಲೆ ಹೋಗೋ
ಎಂದನು.

ಇವರಿಬ್ಬರೂ ಫಿಲಿಷ್ಟಿಯರ ಕಾವಲುದಂಡಿನವರಿ
ಕಾಣಿಸಿಕೊಂಡಾಗ ಅವರು—ಇಗೋ, ಇಬ್ರಿಯರ
ತಾವು ಅಡಗಿಕೊಂಡಿದ್ದ ಗುಹೆಗಳಿಂದ ಹೊರಗೆ ಬರ
ತ್ತಲಿದ್ದಾರೆ ಎಂದು ತಮ್ಮೊಳಗೆ ಮಾತಾಡಿಕೊಂಡ
ಯೋನಾತಾನನಿಗೂ ಅವನ ಆಯುಧಗಳನ್ನು ಹೊರ
ವವನಿಗೂ—ಹತ್ತಿ ನಮ್ಮ ಬಳಿಗೆ ಬನ್ನಿರಿ; ನಿಮ
ಕಾರ್ಯತೋರಿಸಿಕೊಡುತ್ತೇವೆ ಅನ್ನಲು ಯೋನ
ತಾನನು ತನ್ನ ಆಯುಧಗಳನ್ನು ಹೊರುವ ಸೇ
ಕನಿಗೆ—ನೀನೂ ನನ್ನ ಸಂಗಡ ಹತ್ತಿ ಬಾ; ಯೆಹೋ
ವನು ಅವರನ್ನು ಇಸ್ರಾಯೇಲ್ಯರ ಕೈಗೆ ಒಪ್ಪಿಸಿದ್ದಾ
ಎಂದು ಹೇಳಿದನು. ಯೋನಾತಾನನೂ ಅವ
ಆಯುಧಗಳನ್ನು ಹೊರುವ ಸೇವಕನೂ ತಮ್ಮ ಕ
ಕಾಲುಗಳಿಂದ ಗಟ್ಟ್ಯಾ ಹತ್ತಿದರು; ಯೋನಾತಾನ

1) ವ. 21. ಮೂಲಾರ್ಥವು ಕೇವಲ ಅಸ್ಪಷ್ಟ.

ಫಿಲಿಷ್ಟಿಯರನ್ನು ನೆಲಕ್ಕುರುಳಿಸುತ್ತಾ ಹೋದನು;
ಅವನ ಸೇವಕನು ಹಿಂದಿನಿಂದ ಅವರನ್ನು ಕೊಲ್ಲುತ್ತಾ
14 ನಡೆದನು. ಅವರು ಒಂದು ಜೋಡಿ ಎತ್ತು ಒಪ್ಪೊತ್ತಿ
ನಲ್ಲಿ ಉಳುವಷ್ಟು ಭೂಮಿಯಲ್ಲೇ ಸುಮಾರು ಇಪ್ಪ
15 ತ್ತು ಮಂದಿಯನ್ನು ವಧಿಸಿದರು. ಇದರಿಂದ ಪಾಳೆಯ
ದಲ್ಲಿದ್ದವರೂ ಕಾವಲುಗಾರರಾಗಿ ಠಾಣದಲ್ಲಿದ್ದವರೂ
ಸುಲಿಗೆಗೋಸ್ಕರ ಹೊರಗೆ ಹೋಗಿದ್ದವರೂ ಉಳಿದ
ಎಲ್ಲಾ ಜನರೂ ಭಯದಿಂದ ನಡುಗಹತ್ತಿದರು. ಇದ
ಲ್ಲದೆ ದೇವರು ಭೂಕಂಪವನ್ನುಂಟುಮಾಡಿದ್ದರಿಂದ
16 ಜನರಲ್ಲಿ ಮಹಾಭೀತಿಯುಂಟಾಯಿತು. ಬೆನ್ಯಾಮೀ
ನ್ಯರ ಗಿಬೆಯದಲ್ಲಿ ಕಾವಲಿದ್ದ ಸೌಲನ ಸೈನಿಕರು
ಫಿಲಿಷ್ಟಿಯರ ದಂಡು ಕಳವಳಗೊಂಡು ಚದರಿಹೋಗು
17 ತ್ತಿರುವದನ್ನು ಕಂಡರು. ಸೌಲನು ತನ್ನ ಜೊತೆಯಲ್ಲಿ
ದ್ದವರಿಗೆ—ನಮ್ಮನ್ನು ಬಿಟ್ಟುಹೋದವರು ಯಾರೆಂಬ
ದನ್ನು ಲೆಕ್ಕಮಾಡಿ ನೋಡಿರಿ ಎಂದು ಆಜ್ಞಾಪಿಸಿ
ದನು. ಅವರು ಲೆಕ್ಕಮಾಡಿ ನೋಡುವಲ್ಲಿ ಯೋನಾ
ತಾನನೂ ಅವನ ಆಯುಧಗಳನ್ನು ಹೊರುವ ಸೇವ
18 ಕನೂ ಇರುವದಿಲ್ಲವೆಂದು ತಿಳಿದುಬಂದಿತು. ಅನಂತರ
ಸೌಲನು ಅಹೀಯನಿಗೆ—1)ಏಫೋದನ್ನು ತೆಗೆದು
ಕೊಂಡು ಬಾ ಎಂದು ಆಜ್ಞಾಪಿಸಿದನು. ಆ ಕಾಲದಲ್ಲಿ
ಇವನು ಇಸ್ರಾಯೇಲ್ಯರೊಳಗೆ ಏಫೋದನ್ನು ಧರಿಸು
19 ತ್ತಿದ್ದನಷ್ಟೆ. ಸೌಲನು ಯಾಜಕನೊಡನೆ ಮಾ
ತಾಡುತ್ತಿರುವಷ್ಟರಲ್ಲಿ ಫಿಲಿಷ್ಟಿಯರ ಸೈನ್ಯದ ಗದ್ದ
ಲವು ಬಲು ಹೆಚ್ಚಾಯಿತು. ಆದದರಿಂದ ಅವನು ಕೈ
20 ನಿಲ್ಲಿಸೆಂದು ಯಾಜಕನಿಗೆ ಹೇಳಿ ತನ್ನ ಜೊತೆಯಲ್ಲಿ
ದ್ದವರನ್ನು ಕೂಡಿಕೊಂಡು ಯುದ್ಧಕ್ಕೆ ಹೋದನು;
ಅಷ್ಟರಲ್ಲಿ ಫಿಲಿಷ್ಟಿಯರ ಸೈನ್ಯದಲ್ಲಿ ಗಲಿಬಿಲಿಯುಂಟಾ
ಗಿ ಒಬ್ಬನನ್ನೊಬ್ಬನು ಕೊಂದುಹಾಕುತ್ತಿದ್ದನು.
21 ಇದಲ್ಲದೆ ಮುಂಚಿನಿಂದಲೇ ಫಿಲಿಷ್ಟಿಯರನ್ನು ಸೇರಿ
ಕೊಂಡು ಅವರೊಡನೆ ಪಾಳೆಯದಲ್ಲಿದ್ದ ಇಬ್ರಿಯರು
ಸೌಲ ಯೋನಾತಾನರ ಜೊತೆಯಲ್ಲಿ ಬಂದ ಇಸ್ರಾಯೇ
22 ಲ್ಯರನ್ನು ಕೂಡಿಕೊಂಡರು. ಎಫ್ರಾಯಿಮ್‌ಪರ್ವತ
ಪ್ರಾಂತದಲ್ಲಿ ಅಡಗಿಕೊಂಡಿದ್ದ ಇಸ್ರಾಯೇಲ್ಯರಿಗೆ
ಫಿಲಿಷ್ಟಿಯರು ಓಡಿಹೋದರೆಂಬ ವರ್ತಮಾನವು
ಮುಟ್ಟಿದಾಗ ಅವರೂ ಯುದ್ಧಕ್ಕೆ ಬಂದು ಅವರನ್ನು
23 ಚೆನ್ನಟ್ಟಿದರು. ಹೀಗೆ ಯೆಹೋವನು ಆ ದಿನದಲ್ಲಿ
ಇಸ್ರಾಯೇಲ್ಯರಿಗೆ ಜಯವನ್ನುಂಟು ಮಾಡಿದನು.
ಯುದ್ಧವು ಬೇತಾವೆನಿನ ಆಚೆಯ ತನಕ ನಡೆಯಿತು.
24 ಆ ದಿವಸ ಸೌಲನು ಇಸ್ರಾಯೇಲ್ಯರನ್ನು ಕುರಿತು—
ಶತ್ರುಗಳಿಗೆ ಮುಯ್ಯಿತೀರಿಸುವದಕ್ಕೋಸ್ಕರ ನಿಮ್ಮಲ್ಲಿ
ಒಬ್ಬನಾದರೂ ಸಾಯಂಕಾಲದ ವರೆಗೆ ಊಟಮಾಡ
ಬಾರದು; ಮಾಡಿದವನು ಶಾಪಗ್ರಸ್ತನಾಗಲಿ ಎಂದು
ಆಣೆಯಿಟ್ಟಿದ್ದದರಿಂದ ಅಂದು ಅವರೆಲ್ಲರೂ ಬಹು
ವಾಗಿ ಬಳಲಿಹೋಗಿದ್ದರು. ಒಬ್ಬನಾದರೂ ಆಹಾರ
25 ಪದಾರ್ಥವನ್ನು ರುಚಿನೋಡಲಿಲ್ಲ. ಜನರೆಲ್ಲರೂ
26 ನೆಲಜೇನು ಇರುವ ಕಾಡಿಗೆ ಬಂದರು. ಅವರು ಅಲ್ಲಿ
ಜೇನುತುಪ್ಪ ಹರಿಯುವದನ್ನು ಕಂಡರೂ ಶಾಪಕ್ಕೆ
ಭಯಪಟ್ಟದರಿಂದ ಯಾವನೂ ಅದನ್ನು ಬಾಯೊಳಗೆ

ಹಾಕಲಿಲ್ಲ. ಯೋನಾತಾನನಿಗೆ ತನ್ನ ತಂದೆಯು 27
ಜನರಿಗೆ ಆಣೆಯಿಟ್ಟು ಹೇಳಿದ್ದು ಗೊತ್ತಿರಲಿಲ್ಲವಾದದ
ರಿಂದ ಅವನು ತನ್ನ ಕೋಲನ್ನು ಜೇನುತೊಟ್ಟಿಯಲ್ಲಿ
ಚುಚ್ಚಿ ಕೈಯಿಂದ ತೆಗೆದು ತಿನ್ನಲು ಅವನ ಕಣ್ಣು
ಗಳು ಕಳೆಗೊಂಡವು. ಕೂಡಲೆ ಒಬ್ಬನು ಅವನಿಗೆ— 28
ಈ ಹೊತ್ತು ಊಟಮಾಡುವಂಥವರು ಶಾಪಗ್ರಸ್ತರಾ
ಗುವರೆಂದು ನಿನ್ನ ತಂದೆಯು ಆಣೆಯಿಟ್ಟು ಹೇಳಿ
ದ್ದಾನೆ ಎಂದು ತಿಳಿಸಿದನು. ಜನರು ಬಹಳವಾಗಿ
ಬಳಲಿಹೋದದನ್ನು ಕಂಡು ಯೋನಾತಾನನು ಆ 29
ಮನುಷ್ಯನಿಗೆ—ನನ್ನ ತಂದೆಯು ದೇಶಕ್ಕೆ ನಷ್ಟವ
ನ್ನುಂಟುಮಾಡಿದ್ದಾನೆ; ನಾನು ಸ್ವಲ್ಪ ಜೇನುತುಪ್ಪ
ವನ್ನು ತಿಂದದರಿಂದ ನನ್ನ ಕಣ್ಣುಗಳು ಹೇಗೆ ಕಳೆ
ಗೊಂಡಿರುತ್ತವೆ ನೋಡು. ಜನರು ತಾವು ಇಂದು 30
ಶತ್ರುಗಳಿಂದ ಸುಲುಕೊಂಡ ಆಹಾರವನ್ನು ಯಥೇಚ್ಛ
ವಾಗಿ ಊಟಮಾಡಿದ್ದರೆ ಅವರು ಇನ್ನಷ್ಟು ಬಲಗೊಳ್ಳು
ತ್ತಿದ್ದರು. ಫಿಲಿಷ್ಟಿಯರಲ್ಲಿ ಹತವಾಗದವರು ಇನ್ನೂ
ಹೆಚ್ಚು ಮಂದಿ ಇದ್ದಾರೆ ಅಂದನು. ಆ ದಿವಸ ಜನರು 31
ಮಿಕ್ಮಾಷಿನಿಂದ ಅಯ್ಯಾಲೋನಿನ ವರೆಗೆ ಫಿಲಿಷ್ಟಿ
ಯರನ್ನು ಹೊಡೆದು ಬಹಳವಾಗಿ ದಣಿದಿದ್ದದರಿಂದ
ಅವರು ತಾವು ಕೊಳ್ಳೆಮಾಡಿದ ಎತ್ತು, ಕುರಿ, 32
ಕರು ಇವುಗಳನ್ನು ಹಿಡಿದು ನೆಲದ ಮೇಲೆಯೇ
ಕೊಂದು ಮಾಂಸದೊಡನೆ ರಕ್ತವನ್ನೂ ತಿಂದರು.
ಆಗ ಕೆಲವರು ಸೌಲನಿಗೆ—ನೋಡು, ಜನರು ರಕ್ತ 33
ವನ್ನು ಭುಜಿಸಿ ಯೆಹೋವನಿಗೆ ವಿರುದ್ಧವಾಗಿ ಪಾಪ
ಮಾಡುತ್ತಾರೆ ಎಂದು ತಿಳಿಸಲು ಅವನು ಅವರಿಗೆ—
ಇದು ಮಹಾಪಾತಕವೇ ಸರಿ; ನೀವು ಬೇಗನೆ ನನ್ನ
ಬಳಿಗೆ ದೊಡ್ಡ ಕಲ್ಲನ್ನು ಹೊರಳಿಸಿ ತಂದಿಟ್ಟು ಜನರ 34
ಬಳಿಗೆ ಹೋಗಿ ಅವರಿಗೆ—ರಕ್ತವನ್ನು ಭುಜಿಸಿ ಯೆ
ಹೋವನಿಗೆ ವಿರುದ್ಧವಾಗಿ ಪಾಪಮಾಡಬೇಡಿರಿ; ನಿಮ್ಮ
ನಿಮ್ಮ ಎತ್ತು ಕುರಿಗಳನ್ನು ಇಲ್ಲಿ ತಂದು ಕೊಂದು
ತಿನ್ನಬೇಕೆಂದು ಹೇಳಿರಿ ಅಂದನು. ಹಾಗೆಯೇ ಜನ
ರೆಲ್ಲರೂ ತಮ್ಮ ತಮ್ಮ ಎತ್ತು ಕುರಿಗಳನ್ನು ಅದೇ
ರಾತ್ರಿ ಅಲ್ಲಿಗೆ ತಂದು ಕೊಂದು ತಿಂದರು. ಸೌಲನು 35
ಯೆಹೋವನಿಗೋಸ್ಕರ ಒಂದು ಯಜ್ಞವೇದಿಯನ್ನು
ಕಟ್ಟಿಸಿದನು; ಅವನು ಕಟ್ಟಿಸಿದ ಯಜ್ಞವೇದಿಗಳಲ್ಲಿ
ಇದೇ ಮೊದಲನೆಯದು.

ಸೌಲನು ತನ್ನ ಸೈನಿಕರನ್ನು—ಬನ್ನಿರಿ; ನಾವು ಈ 36
ರಾತ್ರಿಯಲ್ಲೇ ಫಿಲಿಷ್ಟಿಯರನ್ನು ಚೆನ್ನಟ್ಟಿ ಬೆಳಗಾಗುವ
ವರೆಗೆ ಅವರನ್ನು ಸುಲುಕೊಂಡು ಒಬ್ಬನನ್ನೂ ಉಳಿ
ಸದೆ ಕೊಂದುಹಾಕೋಣ ಎಂದು ಕರೆಯಲು ಅವರು—
ನಿನ್ನ ಇಷ್ಟದಂತೆ ಆಗಲಿ ಎಂದು ಹೇಳಿದರು. ಆದರೆ
ಯಾಜಕನು—ಇತ್ತ ಬನ್ನಿರಿ; ನಾವು ದೇವರನ್ನು
ವಿಚಾರಿಸೋಣ ಅನ್ನಲು ಸೌಲನು—ದೇವಾ, ನಾವು 37
ಫಿಲಿಷ್ಟಿಯರನ್ನು ಚೆನ್ನಟ್ಟಬಹುದೋ? ನೀನು ಅವ
ರನ್ನು ಇಸ್ರಾಯೇಲ್ಯರ ಕೈಗೆ ಒಪ್ಪಿಸಿಕೊಡುವಿಯೋ
ಎಂದು ಕೇಳಿಕೊಂಡರೂ ಆತನು ಅವನಿಗೆ ಆ ದಿವಸ
ಉತ್ತರಕೊಡಲೇ ಇಲ್ಲ. ಆಗ ಸೌಲನು ಪ್ರಜೆಯ 38
ಮುಖಂಡರಿಗೆ—ನೀವೆಲ್ಲರೂ ಇಲ್ಲಿ ಬಂದು ಈ ಹೊತ್ತು

1) ಪಾಠಾಂತರ: ದೇವರ ಮಂಜೂಷವನ್ನು.

ಪಾಪ ಯಾವನರಿಂದುಂಟಾಯಿತೋ ವಿಚಾರಿಸಿ ಗೊತ್ತು
39 ಮಾಡಿರಿ. ಇಸ್ರಾಯೇಲ್ಯರ ರಕ್ಷಕನಾದ ಯೆಹೋ
ವನ ಆಣೆ, ಪಾಪಮಾಡಿದವನು ನನ್ನ ಮಗನಾದ
ಯೋನಾತಾನನಾಗಿದ್ದರೂ ಸರಿಯೇ ಅವನು ಸಾಯ
ಲೇಬೇಕು ಎಂದು ಹೇಳಿದನು; ಜನರು ಏನೂ ಮಾ
40 ತಾಡದೆ ಮೌನವಾಗಿದ್ದರು. ಆಗ ಸೌಲನು ಅವ
ರಿಗೆ—ನೀವೆಲ್ಲರೂ ಒಂದು ಕಡೆಯಲ್ಲಿರಿ; ನಾನೂ
ನನ್ನ ಮಗನಾದ ಯೋನಾತಾನನೂ ಮತ್ತೊಂದು
ಕಡೆಯಲ್ಲಿರುವೆವು ಅನ್ನಲು ಅವರು—ನಿನ್ನ ಇಷ್ಟದಂತೆ
41 ಆಗಲಿ ಅಂದರು. ಅನಂತರ ಸೌಲನು—1)ಇಸ್ರಾಯೇ
ಲ್‌ದೇವರೇ ಸತ್ಯವನ್ನು ತಿಳಿಸು ಎಂದು ಯೆಹೋವ
ನನ್ನು ಪ್ರಾರ್ಥಿಸಿ ಚೀಟುಹಾಕಿದಲ್ಲಿ ಅದು ಅವನಿಗೂ
ಯೋನಾತಾನನಿಗೂ ಂದಿತು; ಜನರು ಪಾರಾದರು.
42 ಸೌಲನು ತಿರಿಗಿ—ನಮ್ಮಿಬ್ಬರೊಳಗೆ ಚೀಟುಹಾಕಿರಿ
ಎಂದು ಹೇಳಿದನು. ಹಾಗೆಯೇ ಮಾಡಿದಲ್ಲಿ ಚೀಟು
43 ಯೋನಾತಾನನಿಗೆ ಬಿದ್ದಿತು. ಆಗ ಸೌಲನು ಯೋನಾ
ತಾನನನ್ನು—ನೀನು ಏನು ಮಾಡಿದ್ದೀ, ಹೇಳು ಎಂದು
ಕೇಳಲು ಅವನು—ನಾನು ಕೋಲಿನಿಂದ ಸ್ವಲ್ಪ ಜೇನು
ತುಪ್ಪವನ್ನು ತೆಗೆದುಕೊಂಡು ತಿಂದೆನು; ಸಾಯು
ವದಕ್ಕೆ ಸಿದ್ಧನಾಗಿದ್ದೇನೆ ಎಂದು ಉತ್ತರಕೊಟ್ಟನು.
44 ಅದಕ್ಕೆ ಸೌಲನು—ಯೋನಾತಾನನೇ, ನಾನು ನಿನ್ನನ್ನು
ಕೊಲ್ಲದೆ ಬಿಟ್ಟರೆ ದೇವರು ನನಗೆ ಬೇಕಾದದ್ದನ್ನು
45 ಮಾಡಲಿ ಅನ್ನಲು ಜನರು ಅವನಿಗೆ—ದೇವರ ಸಹಾ
ಯದಿಂದ ಈ ಹೊತ್ತು ಇಸ್ರಾಯೇಲ್ಯರಿಗೆ ಮಹಾ
ಜಯವನ್ನುಂಟುಮಾಡಿದ ಯೋನಾತಾನನು ಸಾಯ
ಬೇಕೋ? ಕೂಡದು; ಯೆಹೋವನಾಣೆ, ಅವನ ತಲೆ
ಗೂದಲುಗಳಲ್ಲಿ ಒಂದನ್ನೂ ನೆಲಕ್ಕೆ ಬೀಳಿಸಬಾರದು
ಎಂದು ಹೇಳಿ ಪ್ರಾಯಶ್ಚಿತ್ತವನ್ನು ಕೊಟ್ಟು ಅವನನ್ನು
46 ಬಿಡಿಸಿದರು. ಸೌಲನು ಆ ಮೇಲೆ ಫಿಲಿಷ್ಟಿಯರನ್ನು
ಹಿಂದಟ್ಟದೆ ತನ್ನ ಮನೆಗೆ ಹೋದನು. ಫಿಲಿಷ್ಟಿಯರೂ
ತಮ್ಮ ಪ್ರಾಂತಕ್ಕೆ ಹೋದರು.

### ಸೌಲನ ಯುದ್ಧಗಳೂ ಅವನ ಕುಟುಂಬವೂ.

47 ಸೌಲನು ಇಸ್ರಾಯೇಲ್ಯರ ಅರಸನಾದ ಮೇಲೆ
ಅವನು ಸುತ್ತಣ ವೈರಿಗಳಾದ ಮೋವಾಬ್ಯರು, ಅಮ್ಮೋ
ನಿಯರು, ಎದೋಮ್ಯರು, ಚೋಬದ ಅರಸರು, ಫಿಲಿ
ಷ್ಟಿಯರು ಇವರೊಡನೆ ಯುದ್ಧಮಾಡಿದನು. ಹೋದ
48 ಕಡೆಯಲ್ಲೆಲ್ಲಾ ಜಯವನ್ನೇ ಹೊಂದಿದನು. ಇದಲ್ಲದೆ
ಅವನು ಸುಲಿಗೆಮಾಡುವವರಾದ ಅಮಾಲೇಕ್ಯರಿಗೆ
ವಿರೋಧವಾಗಿ ದಂಡೆತ್ತಿ ಹೋಗಿ ಅವರನ್ನು ಮುರಿ
ಬಡಿದು ಇಸ್ರಾಯೇಲ್ಯರನ್ನು ಅವರ ಕೈಗೆ ಸಿಕ್ಕದಂತೆ
ತಪ್ಪಿಸಿದನು.
49 ಸೌಲನ ಗಂಡು ಮಕ್ಕಳು—ಯೋನಾತಾನ್,
ಇಷ್ವಿ, ಮಲ್ಕೀಷೂವ. ಅವನ ಹೆಣ್ಣು ಮಕ್ಕಳು—
50 ಮೇರಬ್, ಮೀಕಲ್. ಅಹೀಮಾಚನ ಮಗಳಾದ
ಅಹೀನೋವಮಳು ಅವನ ಹೆಂಡತಿ; ನೇರನ ಮಗನಾ
ಅಬ್ನೇರನು ಅವನ ಸೇನಾಪತಿಯು; ನೇರನು ಸೌಲ
ಚಿಕ್ಕಪ್ಪನು. ಸೌಲನ ತಂದೆಯಾದ ಕೀಷನೂ ಅಬ್ನೇರ
ತಂದೆಯಾದ ನೇರನೂ ಅಬೀಯೇಲನ ಮಕ್ಕಳು.
ಸೌಲನ ಜೀವಮಾನದಲ್ಲೆಲ್ಲಾ ಫಿಲಿಷ್ಟಿಯರಿಗ
ಇಸ್ರಾಯೇಲ್ಯರಿಗೂ ಘೋರ ಯುದ್ಧವಿದ್ದದರಿಂ
ಅವನು ಎಲ್ಲಿಯಾದರೂ ಒಬ್ಬ ಬಲಿಷ್ಠನೂ ಪರಾಕ್ರಮ
ಶಾಲಿಯೂ ಆದ ಮನುಷ್ಯನನ್ನು ಕಂಡರೆ ಕೂಡಲೆ ಅ
ನನ್ನು ತನ್ನ ಹತ್ತಿರ ಇಟ್ಟುಕೊಳ್ಳುತ್ತಿದ್ದನು.

### ಅಮಾಲೇಕ್ಯರೊಡನೆ ಆದ ಯುದ್ಧದಲ್ಲಿ ಸೌಲನು ದೇವರ ಮಾತನ್ನು ಕೇಳದೆಹೋದದರಿಂದ ಆತನು ಅವನನ್ನು ತಳ್ಳಿಬಿಟ್ಟದ್ದು.

ಸಮುವೇಲನು ಸೌಲನಿಗೆ—ಯೆಹೋವನು ನಿನ್ನ
ನ್ನು ತನ್ನ ಪ್ರಜೆಗಳಾದ ಇಸ್ರಾಯೇಲ್ಯರ ಮೇಲೆ
ಅರಸನನ್ನಾಗಿ ಅಭಿಷೇಕಿಸುವದಕ್ಕೋಸ್ಕರ ನನ್ನನ್ನ
ಕಳುಹಿಸಿದನಲ್ಲಾ; ಆತನು ಈಗ ಹೇಳುವದನ್ನು ಕೇಳ
ಸೇನಾಧೀಶ್ವರನಾದ ಯೆಹೋವನು ನಿನಗೆ—ಇಸ್ರಾ
ಯೇಲ್ಯರು ಐಗುಪ್ತದಿಂದ ಬರುತ್ತಿರುವಾಗ ದಾರಿಯ
ಲ್ಲಿ ಅಮಾಲೇಕ್ಯರು ಅವರಿಗೆ ವಿರೋಧವಾಗಿ ನಿಂತ
ತೊಂದರೆಪಡಿಸಿದದರಿಂದ ನಾನು ಅವರಿಗೆ ಮುಯಿ
ತೀರಿಸುವೆನು. ಈಗ ನೀನು ಹೋಗಿ ಅವರನ
ಸೋಲಿಸಿ ಅವರಿಗಿರುವದನ್ನೆಲ್ಲಾ ಸಂಪೂರ್ಣವಾ
ಹಾಳುಮಾಡು. ಗಂಡಸರನ್ನೂ ಹೆಂಗಸರನ್ನೂ ಮಕ
ಳನ್ನೂ ಶಿಶುಗಳನ್ನೂ ಎತ್ತು, ಕುರಿ, ಕತ್ತೆ, ಒಂಟ
ಇವುಗಳನ್ನೂ ಕನಿಕರವಿಲ್ಲದೆ ಕೊಂದುಹಾಕು ಎಂದ
ಹೇಳುತ್ತಾನೆ ಅಂದನು.
ಸೌಲನು ತೆಲಾಯಿಮಿನಲ್ಲಿ ಸೈನ್ಯವನ್ನು ಕೂಡಿ
ಲೆಕ್ಕಿಸಲು ಎರಡು ಲಕ್ಷ ಮಂದಿ ಕಾಲಾಳುಗಳು ಇದ
ರು; ಯೆಹೂದ್ಯರು ಹತ್ತು ಸಾವಿರ ಮಂದಿ ಇದ್ದರ
ಅವನು ಇವರೊಡನೆ ಅಮಾಲೇಕ್ಯರ ರಾಜಧಾನಿಯ
ಬಳಿಗೆ ಹೋಗಿ ಅಲ್ಲಿನ ಒಂದು ತಗ್ಗಿನಲ್ಲಿ ಹೊಂ
ನೋಡುತ್ತಿದ್ದನು. ಆದರೆ ಅವನು ಕೇನ್ಯರಿಗೆ—
ನೀವು ಅಮಾಲೇಕ್ಯರನ್ನು ಬಿಟ್ಟುಹೋಗಿರಿ; ಇಲ್ಲವಾದ
ನೀವೂ ಅವರೊಡನೆ ನಾಶವಾದೀರಿ; ಇಸ್ರಾಯೇಲ್ಯರ
ಐಗುಪ್ತದಿಂದ ಬರುತ್ತಿದ್ದಾಗ ನೀವು ಅವರಿಗೆ ದಯ
ತೋರಿಸಿದಿರಲ್ಲಾ ಎಂದು ಹೇಳಿಕಳುಹಿಸಿದನು. ಅ
ರಂತೆಯೇ ಅವರು ಅಮಾಲೇಕ್ಯರನ್ನು ಬಿಟ್ಟುಹೋದರ
ಆಗ ಸೌಲನು ಅಮಾಲೇಕ್ಯರನ್ನು ಹವೀಲಾ ಪ್ರಾಂ
ದಿಂದ ಐಗುಪ್ತದ ಪೂರ್ವದಿಕ್ಕಿನಲ್ಲಿರುವ ಶೂರಿ
ವರೆಗೂ ಹೊಡೆಯುತ್ತಾ ಹೋದನು. ಅವರ ಅರ
ನಾದ ಅಗಾಗನನ್ನು ಸಜೀವಿಯಾಗಿ ಹಿಡಿದು ಎಲ
ಜನರನ್ನು ಕತ್ತಿಯಿಂದ ಸಂಹರಿಸಿದನು. ಸೌಲನ
ಇಸ್ರಾಯೇಲ್ಯರೂ ಅಗಾಗನನ್ನೂ ಮೇಲ್ತರದ ಕು
ದನಗಳನ್ನೂ ಕುರಿಮರಿಗಳನ್ನೂ ಕೊಬ್ಬಿದ ಪಶುಗ

1) ಪಾಠಾಂತರ: ಯೆಹೋವನೇ, ನೀನು ಈ ಹೊತ್ತು ನಿನ್ನ ಸೇವಕನಿಗೆ ಯಾಕೆ ಉತ್ತರದಯಪಾಲಿಸಲಿಲ್ಲ? ಇಸ್ರಾಯೇಲ್‌ದ ಯೆಹೋವನೇ, ಅಪರಾಧವು ನನ್ನಲ್ಲಾಗಲಿ ಯೋನಾತಾನನಲ್ಲಾಗಲಿ ಇದ್ದರೆ ಊರೀಮನ್ನು ಕೊಡು; ನಿನ್ನ ಪ್ರಜೆಯಾದ ಇಸ್ರಾಯೇಲ್ಯರ ತುಮ್ಮೀಮನ್ನು ಕೊಡು.

ನ್ನೂ ಶ್ರೇಷ್ಠವಾದ ಎಲ್ಲಾ ಪದಾರ್ಥಗಳನ್ನೂ ನಾಶ
ಮಾಡ ಮನಸ್ಸಿಲ್ಲದೆ ಉಳಿಸಿ ಪ್ರಯೋಜನವಿಲ್ಲದಂಥ
ಹೀನವಾದವುಗಳನ್ನೆಲ್ಲಾ ನಾಶಮಾಡಿಬಿಟ್ಟರು.
10, 11 ಯೆಹೋವನು ಸಮುವೇಲನಿಗೆ— ಸೌಲನನ್ನು
ಅರಸನನ್ನಾಗಿ ಮಾಡಿದ್ದಕ್ಕೆ ಈಗ ಪಶ್ಚಾತ್ತಾಪಪಡುತ್ತೇನೆ.
ಅವನು ನನ್ನನ್ನು ಬಿಟ್ಟುಬಿಟ್ಟನು; ನನ್ನ ಆಜ್ಞೆಗಳನ್ನು
ನೆರವೇರಿಸುವದಿಲ್ಲ ಎಂದು ಹೇಳಲು ಸಮುವೇಲನು
ಕೋಪಗೊಂಡು ರಾತ್ರಿಯೆಲ್ಲಾ ಆತನಿಗೆ ಮೊರೆಯಿ
12 ಟ್ಟನು. ಅವನು ಬೆಳಿಗ್ಗೆ ಎದ್ದು ಸೌಲನನ್ನು ನೋಡು
ವದಕ್ಕೆ ಹೊರಟಾಗ ಅವನಿಗೆ— ಸೌಲನು ಕರ್ಮೆಲಿಗೆ
ಹೋಗಿ ಅಲ್ಲಿ ತನಗೋಸ್ಕರ ಒಂದು ಜ್ಞಾಪಕಸ್ತಂಭ
ವನ್ನು ನಿಲ್ಲಿಸಿ ಅಲ್ಲಿಂದ ಗಟ್ಟಾ ಇಳಿದು ಗಿಲ್ಗಾಲಿಗೆ
13 ಹೋದನೆಂಬ ವರ್ತಮಾನವು ಬಂದದರಿಂದ ಸಮು
ವೇಲನು ಅಲ್ಲಿಗೆ ಹೋದನು. ಸೌಲನು ಅವನನ್ನು
ಕಂಡು—ಯೆಹೋವನು ನಿನ್ನನ್ನು ಆಶೀರ್ವದಿಸಲಿ;
ನಾನು ಆತನ ಅಪ್ಪಣೆಯನ್ನು ನೆರವೇರಿಸಿದೆನು ಅಂದ
14 ನು. ಅದಕ್ಕೆ ಸಮುವೇಲನು— ಹಾಗಾದರೆ ಇದೇನು?
ಕುರಿಗಳ ಕೂಗು ನನ್ನ ಕಿವಿಗೆ ಬೀಳುತ್ತದೆ, ದನಗಳ
15 ಶಬ್ದವು ನನಗೆ ಕೇಳಿಸುತ್ತದೆ ಎನ್ನಲು ಸೌಲನು—
ಜನರು ನಿನ್ನ ದೇವರಾದ ಯೆಹೋವನಿಗೋಸ್ಕರ ಯಜ್ಞ
ಸಲ್ಲಿಸುವದಕ್ಕಾಗಿ ಅಮಾಲೇಕ್ಯರ ಕುರಿದನಗಳಲ್ಲಿ
ಮೇಲ್ತರದವುಗಳನ್ನು ಉಳಿಸಿ ತಂದಿದ್ದಾರೆ; ಮಿಕ್ಕಾ
ದವುಗಳನ್ನೆಲ್ಲಾ ಸಂಪೂರ್ಣವಾಗಿ ನಾಶಮಾಡಿದೆವು
16 ಎಂದು ಉತ್ತರಕೊಟ್ಟನು. ಆಗ ಸಮುವೇಲನು
ಅವನಿಗೆ—ಅದಿರಲಿ; ಯೆಹೋವನು ಕಳೆದ ರಾತ್ರಿ
ಯಲ್ಲಿ ನನಗೆ ಹೇಳಿದ್ದನ್ನು ತಿಳಿಸುತ್ತೇನೆ ಕೇಳು
17 ಎನ್ನಲು ಅವನು— ಹೇಳು ಅಂದನು. ಸಮುವೇಲ
ನು—ನೀನು ನಿನ್ನ ದೃಷ್ಟಿಯಲ್ಲಿ ಅಲ್ಪನಾಗಿದ್ದರೂ
ಯೆಹೋವನು ನಿನಗೆ ಇಸ್ರಾಯೇಲ್ಯರಲ್ಲಿ ರಾಜ್ಯಾಭಿ
ಷೇಕಮಾಡಿದ್ದರಿಂದ ನೀನು ಎಲ್ಲಾ ಕುಲಗಳಿಗೆ ಶಿರ
18 ಸ್ಸಾದಿ. ಆತನು ನಿನಗೆ—ಹೊರಟು ಹೋಗಿ ದುಷ್ಟ
ರಾದ ಅಮಾಲೇಕ್ಯರೊಡನೆ ಯುದ್ಧಮಾಡಿ ಅವರೆಲ್ಲ
ರನ್ನೂ ಸಂಪೂರ್ಣವಾಗಿ ನಾಶಮಾಡು ಎಂದು ಹೇಳಿ
19 ದನು. ಆದರೆ ನೀನು ಯೆಹೋವನ ಮಾತನ್ನು ಕೇಳದೆ
ಕೊಳ್ಳೆಗಾಗಿ ಎರಗಿ ಆತನಿಗೆ ದ್ರೋಹಮಾಡಿದ್ದೇಕೆ
20 ಅಂದನು. ಅಗ ಸೌಲನು ಸಮುವೇಲನಿಗೆ— ಏನು?
ನಾನು ಯೆಹೋವನ ಮಾತನ್ನು ಕೇಳಲಿಲ್ಲವೋ?
ಆತನು ಕಳುಹಿಸಿದಲ್ಲಿಗೆ ಹೋಗಿ ಅಮಾಲೇಕ್ಯರನ್ನೆಲ್ಲಾ
ಸಂಹರಿಸಿ ಅವರ ಅರಸನಾದ ಅಗಾಗನನ್ನು ಹಿಡಿದು
21 ತಂದೆನು. ಆದರೆ ಜನರು ಸಂಪೂರ್ಣವಾಗಿ ಸಂಹರಿಸ
ಬೇಕಾದ ಕೊಳ್ಳೆಯಲ್ಲಿ ಉತ್ತಮವಾದ ಕುರಿದನಗ
ಳನ್ನು ನಿನ್ನ ದೇವರಾದ ಯೆಹೋವನಿಗೆ ಗಿಲ್ಗಾಲಿನಲ್ಲಿ
ಯಜ್ಞಾರ್ಪಣೆಮಾಡುವದಕ್ಕಾಗಿ ಉಳಿಸಿ ತಂದರುಎಂದು
22 ಉತ್ತರಕೊಟ್ಟನು. ಅದಕ್ಕೆ ಸಮುವೇಲನು—

ಯೆಹೋವನು ವಿಧೇಯತ್ವಕ್ಕೆ ಮೆಚ್ಚುವಷ್ಟು
ಯಜ್ಞಹೋಮಗಳಿಗೆ ಮೆಚ್ಚುತ್ತಾನೋ?
ಯಜ್ಞವನ್ನರ್ಪಿಸುವದಕ್ಕಿಂತ ಮಾತುಕೇಳುವದು
ಉತ್ತಮವಾಗಿದೆ;
ಟಗರುಗಳ ಕೊಬ್ಬಿಗಿಂತ ವಿಧೇಯತ್ವವು ವಿಶೇಷ
ವಾಗಿದೆ.

ಅವಿಧೇಯತ್ವವು ಮಂತ್ರತಂತ್ರಗಳಷ್ಟೇ ಕೆಟ್ಟದ್ದಾ 23
ಗಿರುವದು;
ಹಟವು ಮಿಥ್ಯಾಭಕ್ತಿಗೂ ವಿಗ್ರಹಾರಾಧನೆಗೂ
ಸಮಾನವಾಗಿರುವದು.
ನೀನು ಯೆಹೋವನ ಮಾತನ್ನು ತಳ್ಳಿಬಿಟ್ಟದ್ದರಿಂದ
ಆತನು ನಿನ್ನನ್ನು ಅರಸುತನದಿಂದ ತಳ್ಳಿಬಿಟ್ಟಿದ್ದಾನೆ

ಎಂದು ನುಡಿದನು. ಸೌಲನು ಸಮುವೇಲನಿಗೆ— 24
ನಾನು ಯೆಹೋವನ ಮತ್ತು ನಿನ್ನ ಆಜ್ಞೆಗಳನ್ನು
ಮೀರಿ ಪಾಪಮಾಡಿದ್ದೇನೆ; ಜನರಿಗೆ ಹೆದರಿ ಅವರ
ಮಾತನ್ನು ಕೇಳಿದೆನು. ನೀನು ದಯವಿಟ್ಟು ನನ್ನ 25
ಪಾಪವನ್ನು ಕ್ಷಮಿಸು; ನಾನು ಯೆಹೋವನನ್ನು
ಆರಾಧಿಸುವಂತೆ ಹಿಂದಿರುಗಿ ನನ್ನ ಜೊತೆಯಲ್ಲಿ ಬಾ
ಎಂದು ಅವನನ್ನು ಬೇಡಿಕೊಂಡನು. ಅದಕ್ಕೆ ಸಮು 26
ವೇಲನು— ನಾನು ಹಿಂದಿರುಗಿ ನಿನ್ನ ಜೊತೆಯಲ್ಲಿ ಬರು
ವದಿಲ್ಲ; ನೀನು ಯೆಹೋವನ ಮಾತನ್ನು ತಳ್ಳಿಬಿಟ್ಟದ್ದ
ರಿಂದ ಆತನು ನಿನ್ನನ್ನು ಇಸ್ರಾಯೇಲ್ಯರ ಅರಸುತನ
ದಿಂದ ತಳ್ಳಿಬಿಟ್ಟಿದ್ದಾನೆ ಎಂದು ಹೇಳಿ ತಿರುಗಿಕೊಂಡು
ಹೊರಡಲು ಸೌಲನು ಅವನ ಮೇಲಂಗಿಯ ಅಂಚನ್ನು 27
ಹಿಡಿದು ಎಳೆದನು; ಅದು ಹರಿದುಹೋಯಿತು. ಆಗ 28
ಸಮುವೇಲನು ಅವನಿಗೆ— ಯೆಹೋವನು ಈ ಹೊತ್ತು
ಇಸ್ರಾಯೇಲ್‌ರಾಜ್ಯವನ್ನು ನಿನ್ನಿಂದ ಕಿತ್ತು ನಿನಗಿಂತ
ಉತ್ತಮನಾದ ಇನ್ನೊಬ್ಬನಿಗೆ ಕೊಟ್ಟಿದ್ದಾನೆ. ಇಸ್ರಾ 29
ಯೇಲ್ಯರ ನಿತ್ಯಾಧಾರನು ಸುಳ್ಳಾಡುವವನಲ್ಲ; ಪಶ್ಚಾ
ತ್ತಾಪಪಡುವವನಲ್ಲ; ಯಾಕಂದರೆ ಅವನು ಪಶ್ಚಾತ್ತಾಪ
ಪಡ ಮನುಷ್ಯನಲ್ಲ ಎಂದು ಹೇಳಿದನು. ಅದಕ್ಕೆ 30
ಸೌಲನು — ನಾನು ಪಾಪಮಾಡಿದ್ದೇನೆ; ದಯವಿಟ್ಟು
ಇಸ್ರಾಯೇಲ್ಯರ ಮುಂದೆಯೂ ಜನರ ಹಿರಿಯರ
ಮುಂದೆಯೂ ನನ್ನ ಮಾನವನ್ನುಳಿಸು; ನಾನು ನಿನ್ನ
ದೇವರಾದ ಯೆಹೋವನನ್ನು ಆರಾಧಿಸುವದಕ್ಕಾಗು
ವಂತೆ ಹಿಂದಿರುಗಿ ನನ್ನ ಜೊತೆಯಲ್ಲಿ ಬಾ ಎಂದು ಬೇಡಿ
ಕೊಳ್ಳಲು ಅವನು ಹಿಂದಿರುಗಿ ಸೌಲನ ಜೊತೆಯಲ್ಲಿ 31
ಹೋದನು. ಆಗ ಸೌಲನು ದೇವರನ್ನು ಆರಾಧಿಸಿದನು.
ತರುವಾಯ ಸಮುವೇಲನು ಅಮಾಲೇಕ್ಯರ ಅರಸ 32
ನಾದ ಅಗಾಗನನ್ನು ತನ್ನ ಬಳಿಗೆ ತರ ಹೇಳಿದನು.
ಅಗಾಗನು ಮರಣಭಯ ತಪ್ಪಿತೆಂದು ನೆನಸಿಕೊಂಡು
ಸಂತೋಷದಿಂದ ಅವನ ಹತ್ತಿರ ಬಂದನು. ಆದರೆ 33
ಸಮುವೇಲನು ಅವನಿಗೆ—

ನಿನ್ನ ಕತ್ತಿಯು ಅನೇಕಸ್ತ್ರೀಯರಿಗೆ ಪುತ್ರಶೋಕ
ವನ್ನುಂಟುಮಾಡಿತು;
ನಿನ್ನ ತಾಯಿಯು ಎಲ್ಲರಿಗಿಂತಲೂ ಹೆಚ್ಚಾಗಿ ಪುತ್ರ
ಶೋಕವನ್ನು ಅನುಭವಿಸಲಿ

ಎಂದು ಹೇಳಿ ಅವನನ್ನು ಗಿಲ್ಗಾಲಿನಲ್ಲಿ ಯೆಹೋವನ
ಸನ್ನಿಧಿಯಲ್ಲೇ ಕಡಿದುಹಾಕಿದನು. ಅನಂತರ ಸಮು 34
ವೇಲನು ರಾಮಕ್ಕೆ ಹೋದನು; ಸೌಲನು ತನ್ನ ಊ
ರಾದ ಗಿಬೆಯದಲ್ಲಿರುವ ಮನೆಗೆ ಹೋದನು. ಸಮು 35
ವೇಲನು ಜೀವದಿಂದಿರುವ ವರೆಗೂ ಸೌಲನನ್ನು ನೋ
ಡುವದಕ್ಕೆ ಹೋಗಲಿಲ್ಲ; ಆದರೆ ಯೆಹೋವನು
ಸೌಲನನ್ನು ಇಸ್ರಾಯೇಲ್ಯರ ಅರಸನನ್ನಾಗಿ ಮಾಡಿದ್ದ
ಕ್ಕೋಸ್ಕರ ಪಶ್ಚಾತ್ತಾಪಪಟ್ಟದರಿಂದ ಸಮುವೇಲನು
ಅವನ ವಿಷಯದಲ್ಲಿ ದುಃಖಪಡುತ್ತಿದ್ದನು.

## ಸೌಲನೂ ದಾವೀದನೂ. 16—31.

### ಸಮುವೇಲನು ದಾವೀದನಿಗೆ ರಾಜ್ಯಾಭಿಷೇಕಮಾಡಿದ್ದು.

16 ಯೆಹೋವನು ಸಮುವೇಲನಿಗೆ—ನಾನು ಸೌಲನ
ನ್ನು ಇಸ್ರಾಯೇಲ್ಯರ ಅರಸನಾಗಿರುವದಕ್ಕೆ ಅಯೋ
ಗ್ಯನೆಂದು ತಳ್ಳಿಬಿಟ್ಟೆನಲ್ಲಾ; ನೀನು ಅವನಿಗೋಸ್ಕರ
ಎಷ್ಟರ ವರೆಗೆ ದುಃಖಿಸುತ್ತಿರುವಿ? ಕೊಂಬನ್ನು ಎಣ್ಣೆ
ಯಿಂದ ತುಂಬಿಸಿಕೊಂಡು ಬಾ; ನಾನು ನಿನ್ನನ್ನು
ಬೇತ್ಲೆಹೇಮಿನವನಾದ ಇಷಯನ ಬಳಿಗೆ ಕಳುಹಿಸು
ತ್ತೇನೆ; ಅವನ ಮಕ್ಕಳಲ್ಲೊಬ್ಬನನ್ನು ಅರಸನನ್ನಾಗಿ
2 ಆರಿಸಿಕೊಂಡಿದ್ದೇನೆ ಎಂದು ಹೇಳಿದನು. ಅದಕ್ಕೆ
ಸಮುವೇಲನು—ನಾನು ಹೋಗುವದು ಹೇಗೆ? ಇದು
ಸೌಲನಿಗೆ ಗೊತ್ತಾದರೆ ಅವನು ನನ್ನನ್ನು ಕೊಂದು
ಹಾಕುವನಲ್ಲವೇ ಅನ್ನಲು ಆತನು—ನೀನು ಒಂದು
ಕಡಸನ್ನು ತೆಗೆದುಕೊಂಡು ಹೋಗಿ ಯೆಹೋವನಿ
ಗೋಸ್ಕರ ಯಜ್ಞಮಾಡುವದಕ್ಕೆ ಬಂದಿದ್ದೇನೆಂದು ಹೇಳಿ
3 ಇಷಯನನ್ನು ಅದಕ್ಕೆ ಕರೆ. ಆ ಮೇಲೆ ನೀನು ಮಾಡ
ಬೇಕಾದದ್ದನ್ನು ನಾನೇ ತಿಳಿಸುತ್ತೇನೆ; ನಾನು ಯಾವ
ನನ್ನು ತೋರಿಸುತ್ತೇನೋ ಅವನನ್ನು ನೀನು ಅಭಿಷೇ
4 ಕಿಸಬೇಕು ಎಂದನು. ಯೆಹೋವನು ಹೇಳಿದಂತೆ
ಯೇ ಸಮುವೇಲನು ಬೇತ್ಲೆಹೇಮಿಗೆ ಹೋದನು. ಆ
ಊರಿನ ಹಿರಿಯರು ನಡುಗುತ್ತಾ ಬಂದು ಅವನನ್ನು
ಎದುರುಗೊಂಡು ನಿನ್ನ ಆಗಮನವು ನಮಗೆ ಶುಭಕರ
5 ವಾಗಿದೆಯೋ ಎಂದು ಕೇಳಲು ಅವನು—ಹೌದು, ಶುಭ
ಕರವಾಗಿದೆ; ಯೆಹೋವನಿಗೆ ಯಜ್ಞವನ್ನರ್ಪಿಸುವ
ದಕ್ಕೆ ಬಂದಿದ್ದೇನೆ. ನೀವು ನಿಮ್ಮನ್ನು ಶುದ್ಧಪಡಿಸಿ
ಕೊಂಡು ನನ್ನ ಜೊತೆಯಲ್ಲಿ ಯಜ್ಞಕ್ಕೆ ಬನ್ನಿರಿ ಎಂದು
ಹೇಳಿ ಇಷಯನನ್ನೂ ಅವನ ಮಕ್ಕಳನ್ನೂ ಶುದ್ಧೀಕರಿಸಿ
6 ಅವರನ್ನೂ ಯಜ್ಞಕ್ಕೆ ಕರೆದನು. ಅವರು ಬರಲು
ಅವನು ಎಲೀಯಾಬನನ್ನು ನೋಡಿ—ನಿಶ್ಚಯವಾಗಿ
ಯೆಹೋವನು ಅಭಿಷೇಕಕ್ಕೆ ಆರಿಸಿಕೊಂಡವನು ಆತನ
7 ಮುಂದೆ ಇದ್ದಾನೆ ಎಂದುಕೊಂಡನು. ಆದರೆ ಯೆಹೋ
ವನು ಸಮುವೇಲನಿಗೆ—ನೀನು ಅವನ ಚೆಲುವಿಕೆ
ಯನ್ನೂ ನೀಳವನ್ನೂ ನೋಡಬೇಡ; ನಾನು ಅವನನ್ನು
ತಳ್ಳಿಬಿಟ್ಟಿದ್ದೇನೆ. ಯೆಹೋವನು ಮನುಷ್ಯರಂತೆ ಹೊರ
ಗಿನ ತೋರಿಕೆಯನ್ನು ನೋಡದೆ ಹೃದಯವನ್ನೇ
8 ನೋಡುವವನಾಗಿದ್ದಾನೆ ಅಂದನು. ಇಷಯನು ಅಬೀ
ನಾದಾಬನನ್ನು ಸಮುವೇಲನ ಬಳಿಗೆ ಬರಮಾಡಲು
ಸಮುವೇಲನು—ಯೆಹೋವನು ಇವನನ್ನು ಆರಿಸಿಕೊ
9 ಳ್ಳಲಿಲ್ಲ ಎಂದನು. ತರುವಾಯ ಇಷಯನು ಶಮ್ಮ
ಎಂಬವನನ್ನು ಬರಮಾಡಲು ಸಮುವೇಲನು—ಯೆಹೋ
ವನು ಇವನನ್ನೂ ಆರಿಸಿಕೊಳ್ಳಲಿಲ್ಲ ಎಂದು ಹೇಳಿದನು.
10 ಹೀಗೆ ಇಷಯನು ತನ್ನ ಮಕ್ಕಳಲ್ಲಿ ಏಳು ಮಂದಿಯನ್ನು
ಅವನ ಬಳಿಗೆ ಬರಮಾಡಿದರೂ ಅವನು—ಯೆಹೋ
ವನು ಇವರನ್ನು ಆರಿಸಿಕೊಳ್ಳಲಿಲ್ಲ ಎಂದು ನುಡಿದನು.
11 ಅನಂತರ ಸಮುವೇಲನು ಇಷಯನನ್ನು—ನಿನ್ನ ಮಕ್ಕ
ಳೆಲ್ಲಾ ಇಷ್ಟೇ ಮಂದಿಯೋ ಎಂದು ಕೇಳಲು ಅವನು—
ಇವರೆಲ್ಲರಿಗಿಂತಲೂ ಚಿಕ್ಕವನು ಒಬ್ಬನಿರುತ್ತಾನೆ;
ಅವನು ಕುರಿಮೇಯಿಸುವದಕ್ಕೆ ಹೋಗಿದ್ದಾನೆ ಎಂದು
ಉತ್ತರಕೊಟ್ಟನು. ಆಗ ಸಮುವೇಲನು—ಅವನನ್ನು
ಕರೇಕಳುಹಿಸು; ಅವನು ಬರುವ ವರೆಗೂ ನಾವು ಊ
ಟಕ್ಕೆ ಕೂತುಕೊಳ್ಳಬಾರದು ಎಂದು ಹೇಳಲು ಇಷ
ಯನು ಅವನನ್ನು ಕರತರಿಸಿದನು. ಅವನು ಕೆಂಬಣ್ಣ
ದವನೂ ಸುಂದರನೇತ್ರನೂ ನೋಟಕ್ಕೆ ರಮಣೀಯನೂ
ಆಗಿದ್ದನು. ಯೆಹೋವನು ಸಮುವೇಲನಿಗೆ—ಎದ್ದು
ಇವನನ್ನು ಅಭಿಷೇಕಿಸು; ನಾನು ಆರಿಸಿಕೊಂಡವನು
ಇವನೇ ಎಂದು ಆಜ್ಞಾಪಿಸಲು ಸಮುವೇಲನು ಎಣ್ಣೆ
ಯ ಕೊಂಬನ್ನು ತೆಗೆದುಕೊಂಡು ಅವನನ್ನು ಅವನ
ಸಹೋದರರ ಮಧ್ಯದಲ್ಲೇ ಅಭಿಷೇಕಿಸಿದನು. ಕೂಡ
ಲೆ ಯೆಹೋವನ ಆತ್ಮವು ದಾವೀದನ ಮೇಲೆ ಬಂದು
ನೆಲೆಗೊಂಡಿತು. ಅನಂತರ ಸಮುವೇಲನು ರಾಮಕ್ಕೆ
ಹೊರಟುಹೋದನು.

### ದುರಾತ್ಮಪೀಡಿತನಾದ ಸೌಲನು ದಾವೀದನನ್ನು ಕಿನ್ನರಿಬಾರಿಸುವದಕ್ಕೆ ಹಚ್ಚಿದ್ದು.

ಯೆಹೋವನ ಆತ್ಮವು ಸೌಲನನ್ನು ಬಿಟ್ಟು ಹೋ
ಯಿತು; ಯೆಹೋವನು ಕಳುಹಿಸಿದ ದುರಾತ್ಮವು
ಬಂದು ಅವನನ್ನು ಪೀಡಿಸುತ್ತಿದ್ದದರಿಂದ ಅವನ ಸೇವ
ಕರು ಅವನಿಗೆ—ಇಗೋ, ದೇವರಿಂದ ಬಂದ ದುರಾತ್ಮ
ವು ನಿನ್ನನ್ನು ಪೀಡಿಸುತ್ತಾ ಇದೆ. ಸ್ವಾಮೀ, ಅಪ್ಪಣೆ
ಯಾಗಲಿ; ನಿನ್ನ ಸನ್ನಿಧಿಯಲ್ಲಿ ನಿಂತಿರುವ ನಿನ್ನ ಸೇವ
ಕರಾದ ನಾವು ಹೋಗಿ ಕಿನ್ನರಿಬಾರಿಸುವವರಲ್ಲಿ ನಿಪು
ಣನಾದ ಒಬ್ಬನನ್ನು ಹುಡುಕಿ ತರುತ್ತೇವೆ. ಯೆಹೋ
ವನಿಂದ ಕಳುಹಿಸಲ್ಪಟ್ಟ ದುರಾತ್ಮವು ನಿನ್ನ ಮೇಲೆ
ಬರುವಾಗ ಅವನು ಬಾರಿಸಿದರೆ ನಿನಗೆ ಉಪಶಮನ
ವಾಗುವದು ಎಂದು ಹೇಳಿದರು. ಸೌಲನು ಅವರಿಗೆ—
ಚೆನ್ನಾಗಿ ಬಾರಿಸಬಲ್ಲವನಾದ ಒಬ್ಬನನ್ನು ನನಗೋ
ಸ್ಕರ ಹುಡುಕಿ ಕರಕೊಂಡು ಬನ್ನಿರಿ ಎಂದು ಆಜ್ಞಾಪಿ
ಸಲು ಸೇವಕರಲ್ಲೊಬ್ಬನು ಅವನಿಗೆ—ಬೇತ್ಲೆಹೇಮಿ
ನವನಾದ ಇಷಯನ ಮಗನನ್ನು ನೋಡಿದ್ದೇನೆ; ಅವನು
ಚೆನ್ನಾಗಿ ಬಾರಿಸಬಲ್ಲವನೂ ಪರಾಕ್ರಮಶಾಲಿಯೂ
ರಣಶೂರನೂ ವಾಕ್ಚತುರನೂ ಸುಂದರನೂ ಯೆಹೋವ
ನ ಅನುಗ್ರಹವನ್ನು ಹೊಂದಿದವನೂ ಆಗಿದ್ದಾನೆಂದು
ತಿಳಿಸಿದನು. ಕೂಡಲೆ ಸೌಲನು ಇಷಯನ ಬಳಿಗೆ
ದೂತರನ್ನು ಕಳುಹಿಸಿ ಅವನಿಗೆ—ಕುರಿಗಳನ್ನು ಮೇಯಿ
ಸುತ್ತಿರುವ ನಿನ್ನ ಮಗನಾದ ದಾವೀದನನ್ನು ನನ್ನ
ಬಳಿಗೆ ಕಳುಹಿಸು ಎಂದು ಹೇಳಿಸಿದನು. ಇಷಯನು
ರೊಟ್ಟಿಯನ್ನೂ ಒಂದು ಬುದ್ದಲಿ ದ್ರಾಕ್ಷಾರಸವನ್ನೂ
ಒಂದು ಹೋತಮರಿಯನ್ನೂ ಕತ್ತೆಯ ಮೇಲೆ ಹೇರಿಸಿ
ತನ್ನ ಮಗನಾದ ದಾವೀದನ ಮುಖಾಂತರ ಸೌಲನಿಗೆ
ಕಳುಹಿಸಿದನು. ಹೀಗೆ ದಾವೀದನು ಸೌಲನ ಬಳಿಗೆ
ಬಂದು ಅವನ ಸೇವಕನಾದನು; ಸೌಲನು ಅವನನ್ನು
ಬಹಳವಾಗಿ ಪ್ರೀತಿಸಿ ತನ್ನ ಆಯುಧಗಳನ್ನು ಹೊರು
ವದಕ್ಕೆ ನೇಮಿಸಿಕೊಂಡನು. ತರುವಾಯ ಸೌಲನು
ಇಷಯನ ಬಳಿಗೆ ದೂತರನ್ನು ಅಟ್ಟಿ ಅವನಿಗೆ—ನಾನು
ದಾವೀದನನ್ನು ಮೆಚ್ಚಿದ್ದೇನೆ; ಅವನು ನನ್ನ ಸನ್ನಿಧಿ
ಯಲ್ಲಿ ಸೇವೆಮಾಡಲಿ ಎಂದು ತಿಳಿಸಿದನು. ದೇವರಿಂದ
ಕಳುಹಿಸಲ್ಪಟ್ಟ ದುರಾತ್ಮವು ಸೌಲನ ಮೇಲೆ ಬಂದಾಗ

ದಾವೀದನು ಕಿನ್ನರಿಯನ್ನು ಬಾರಿಸುವನು; ಅದರಿಂದ
ದುರಾತ್ಮವು ಸೌಲನನ್ನು ಬಿಟ್ಟುಹೋಗುವದು; ಅವನು
ಉಪಶಮನಹೊಂದಿ ಚೆನ್ನಾಗಿರುವನು.

ದಾವೀದನು ಗೊಲ್ಯಾತನನ್ನು ಕೊಂದದ್ದು.

17 ಫಿಲಿಷ್ಟಿಯರು ಯುದ್ಧಮಾಡುವದಕ್ಕೋಸ್ಕರ ಯೆ
ಹೂದದೇಶದ ಸೋಕೋವಿನಲ್ಲಿ ಸೈನ್ಯವನ್ನು ಕೂಡಿ
ಸಿಕೊಂಡು ಬಂದು ಸೋಕೋವಿಗೂ ಅಜೇಕಕ್ಕೂ
ಮಧ್ಯದಲ್ಲಿರುವ ಎಫೆಸ್ದಮ್ಮೀಮಿನಲ್ಲಿ ಪಾಳೆಯಮಾಡಿ
2 ಕೊಂಡರು. ಸೌಲನೂ ಇಸ್ರಾಯೇಲ್ಯರೂ ಫಿಲಿಷ್ಟಿ
ಯರೊಡನೆ ಯುದ್ಧಮಾಡುವದಕ್ಕಾಗಿ ಸೈನ್ಯವನ್ನು
ಕೂಡಿಸಿ ಏಲಾ ತಗ್ಗಿನಲ್ಲಿ ಪಾಳೆಯಮಾಡಿಕೊಂಡು
3 ವ್ಯೂಹಕಟ್ಟಿದರು. ಫಿಲಿಷ್ಟಿಯರು ಒಂದು ಗುಡ್ಡದ
ಪಕ್ಕದಲ್ಲಿಯೂ ಇಸ್ರಾಯೇಲ್ಯರು ಇನ್ನೊಂದು ಗುಡ್ಡ
ದ ಪಕ್ಕದಲ್ಲಿಯೂ ನಿಂತರು. ಉಭಯರ ಮಧ್ಯ
4 ದಲ್ಲಿ ಒಂದು ತಗ್ಗು ಇತ್ತು. ಫಿಲಿಷ್ಟಿಯರ ಪಾಳೆಯ
ದಿಂದ ಗತ್ ಊರಿನವನಾದ ಗೊಲ್ಯಾತನೆಂಬ ಒಬ್ಬ
ರಣಶೂರನು ಹೊರಟುಬಂದನು; ಅವನು ಆರುವರೆ
5 ಮೊಳ ಎತ್ತರವಾಗಿದ್ದನು. ಅವನ ಶಿರಸ್ತ್ರಾಣವು ತಾಮ್ರ
ದ್ದು; ಅದೇ ಲೋಹದ ಬಿಲ್ಲೆಗಳಿಂದ ಪರೆಪರೆಯಾಗಿ
ಜೋಡಿಸಲ್ಪಟ್ಟ ಅವನ ಕವಚವು ಐದು ಸಾವಿರ ರೂಪಾ
6 ಯಿ ತೂಕವಾಗಿತ್ತು. ಅವನ ಪಾದರಕ್ಷೆಗಳೂ ಹೆಗಲ
7 ಮೇಲಣ ಈಟಿಯೂ ತಾಮ್ರದವು. ಅವನ ಬರ್ಜಿಯ
ಹಿಡಿಕೆಯು ನೇಯಿಗಾರರ ಕುಂಟೆಯಷ್ಟು ಗಾತ್ರವಾಗಿ
ತ್ತು. ಅದರ ಅಲಗು ಆರುನೂರು ತೊಲೆ ಕಬ್ಬಿಣ
ದಿಂದ ಮಾಡಿದ್ದು. ಅವನ ಗುರಾಣಿಯನ್ನು ಹೊರು
ವವನು ಅವನ ಮುಂದೆ ಮುಂದೆ ಹೋಗುತ್ತಿದ್ದನು.
8 ಅವನು ನಿಂತು ಇಸ್ರಾಯೇಲ್‌ಸೈನ್ಯದವರನ್ನು ಕೂಗಿ
ಅವರಿಗೆ—ನೀವು ಯುದ್ಧಮಾಡಬಂದದ್ದೇಕೆ? ನಾನು
ಫಿಲಿಷ್ಟಿಯನು, ನೀವು ಸೌಲನ ಸೇವಕರು. ನಿಮ್ಮಲ್ಲಿ
ಒಬ್ಬನನ್ನು ಆರಿಸಿಕೊಂಡು ನನ್ನ ಬಳಿಗೆ ಕಳುಹಿಸಿರಿ;
9 ಅವನು ನನ್ನೊಡನೆ ಯುದ್ಧಮಾಡಿ ನನ್ನನ್ನು ಸೋಲಿಸಿ
ಕೊಂದರೆ ನಮ್ಮವರು ನಿಮ್ಮ ಸೇವಕರಾಗುವರು;
ನಾನು ಅವನನ್ನು ಸೋಲಿಸಿ ಕೊಂದರೆ ನೀವು ನಮ್ಮ
ದಾಸರಾಗಿ ನಮ್ಮನ್ನು ಸೇವಿಸಬೇಕು ಎಂದು ಹೇಳಿ
10 ದನು. ಮತ್ತು ಅವನು—ಈ ಹೊತ್ತು ಇಸ್ರಾಯೇಲ್
ಸೈನ್ಯದವರನ್ನು ಹೀಯಾಳಿಸುತ್ತೇನೆ; ನನ್ನೊಡನೆ ಕಾಳ
ಗಕ್ಕೆ ನಿಮ್ಮಲ್ಲಿಂದ ಒಬ್ಬ ಮನುಷ್ಯನನ್ನು ಕಳುಹಿಸಿರಿ
11 ನೋಡೋಣ ಎಂದು ಕೊಚ್ಚಿಕೊಂಡನು. ಸೌಲನೂ
ಎಲ್ಲಾ ಇಸ್ರಾಯೇಲ್ಯರೂ ಆ ಫಿಲಿಷ್ಟಿಯನ ಮಾತು
ಗಳನ್ನು ಕೇಳಿ ಬಹಳವಾಗಿ ಭಯಪಟ್ಟರು; ಅವರ ಎದೆ
ಒಡೆದು ಹೋಯಿತು.
12 ಯೆಹೂದದ ಬೇತ್ಲೆಹೇಮ್ ಊರಿನ ಎಫ್ರಾತ್ಯ
ನಾದ ಇಷಯನೆಂಬವನು ಸೌಲನ ಕಾಲದಲ್ಲಿ ಬಹು
ವೃದ್ಧನಾಗಿದ್ದನು. ಇವನ ಎಂಟು ಮಂದಿ ಮಕ್ಕ
13 ಳಲ್ಲಿ ದಾವೀದನೆಂಬವನು ಒಬ್ಬನು. ಇವನ ಮೂರು
ಮಂದಿ ಹಿರೀ ಮಕ್ಕಳು ಸೌಲನ ಜೊತೆಯಲ್ಲಿ ಯುದ್ಧ
ಕ್ಕೆ ಹೋಗಿದ್ದರು. ಅವರಲ್ಲಿ ಚೊಚ್ಚಲ ಮಗನ
ಹೆಸರು ಎಲೀಯಾಬ್; ಮರಚಲ ಮಗನ ಹೆಸರು
ಅಬೀನಾದಾಬ್; ಮೂರನೆಯವನ ಹೆಸರು ಶಮ್ಮ.
ದಾವೀದನೇ ಎಲ್ಲರಿಗಿಂತಲೂ ಕಿರಿಯವನು. ಮೂ 14
ರು ಮಂದಿ ಹಿರೀ ಮಕ್ಕಳು ಸೌಲನ ಜೊತೆಯಲ್ಲಿ
ಯುದ್ಧಕ್ಕೆ ಹೋದದರಿಂದ ದಾವೀದನು ಸೌಲನನ್ನು 15
ಬಿಟ್ಟು ತನ್ನ ತಂದೆಯ ಕುರಿಗಳನ್ನು ಮೇಯಿಸುವದ
ಕ್ಕೋಸ್ಕರ ಬೇತ್ಲೆಹೇಮಿಗೆ ಹೋದನು. ಆ ಫಿಲಿಷ್ಟಿಯ 16
ನು ನಾಲ್ವತ್ತು ದಿವಸ ಹೊತ್ತಾರೆಯಲ್ಲಿಯೂ ಸಾಯಂ
ಕಾಲದಲ್ಲಿಯೂ ಬಂದು ಬಂದು ಅದೇ ಪ್ರಕಾರ ಕೂಗು
ತ್ತಾ ನಿಲ್ಲುತ್ತಿದ್ದನು.
ಒಂದು ದಿವಸ ಇಷಯನು ತನ್ನ ಮಗನಾದ ದಾ 17
ವೀದನಿಗೆ—ಇಗೋ, ಇಲ್ಲಿ ಮೂವತ್ತು ಸೇರು ಹುರಿ
ಗಾಳೂ ಹತ್ತು ರೊಟ್ಟಿಗಳೂ ಇರುತ್ತವೆ. ಇವುಗಳನ್ನು
ತೆಗೆದುಕೊಂಡು ಶೀಘ್ರವಾಗಿ ಪಾಳೆಯಕ್ಕೆ ಹೋಗಿ
ನಿನ್ನ ಅಣ್ಣಂದಿರಿಗೆ ಕೊಡು. ಇದಲ್ಲದೆ ಇಲ್ಲಿ ಹತ್ತು 18
ಗಿಣ್ಣಿನ ಗಡ್ಡೆಗಳಿರುತ್ತವೆ; ಇವುಗಳನ್ನು ಅವರ ಸಹ
ಸ್ರಾಧಿಪತಿಗೆ ಕೊಡು. ಬರುವಾಗ ನಿನ್ನ ಅಣ್ಣಂದಿರ
ಕ್ಷೇಮಸಮಾಚಾರವನ್ನು ವಿಚಾರಿಸಿಕೊಂಡು ಅವರಿಂದ
ಒಂದು ಗುರುತನ್ನು ತೆಗೆದುಕೊಂಡು ಬಾ. ಸೌಲ 19
ನೂ ಇಸ್ರಾಯೇಲ್ಯರೂ ಏಲಾ ತಗ್ಗಿನಲ್ಲಿ ಫಿಲಿಷ್ಟಿಯ
ರೊಡನೆ ಯುದ್ಧಮಾಡುತ್ತಿದ್ದಾರಲ್ಲಾ ಎಂದು ಹೇಳಿ
ದನು. ದಾವೀದನು ಮರುದಿನ ಬೆಳಿಗ್ಗೆ ಎದ್ದು ಕಾ 20
ಯುವವನಿಗೆ ಕುರಿಗಳನ್ನು ಒಪ್ಪಿಸಿ ತನ್ನ ತಂದೆಯಾದ
ಇಷಯನು ಹೇಳಿದವುಗಳನ್ನು ತೆಗೆದುಕೊಂಡು ಸೈನ್ಯ
ವು ಹೊರಟು ಯುದ್ಧಕ್ಕಾಗಿ ಆರ್ಭಟಿಸುವ ಹೊತ್ತಿ
ನಲ್ಲಿ ಪಾಳೆಯದ ಬಂಡಿಗಳು ನಿಂತಿದ್ದ ಸ್ಥಳಕ್ಕೆ ಬಂದ
ನು. ಇಸ್ರಾಯೇಲ್ಯರೂ ಫಿಲಿಷ್ಟಿಯರೂ ಎದುರೆದು 21
ರಾಗಿ ವ್ಯೂಹಕಟ್ಟುವಷ್ಟರಲ್ಲಿ ದಾವೀದನು ತಾನು 22
ತಂದವುಗಳನ್ನು ಸಾಮಾನುಕಾಯುವವನ ಬಳಿಯ
ಲ್ಲಿಟ್ಟು ರಣರಂಗಕ್ಕೆ ಓಡಿಹೋಗಿ ತನ್ನ ಸಹೋದರರ
ಕ್ಷೇಮಸಮಾಚಾರವನ್ನು ವಿಚಾರಿಸುತ್ತಾ ಅವರೊಡನೆ 23
ಮಾತಾಡುತ್ತಿರುವಷ್ಟರಲ್ಲಿ ಗತ್ ಊರಿನ ರಣವೀರ
ನಾದ ಗೊಲ್ಯಾತನೆಂಬ ಆ ಫಿಲಿಷ್ಟಿಯನು ತನ್ನ ಸೈನ್ಯ
ದಿಂದ ಹೊರಗೆ ಬಂದು ಮುಂಚಿನಂತೆಯೇ ಕೂಗಿ
ದನು. ದಾವೀದನು ಅವನ ಮಾತುಗಳನ್ನು ಕೇಳಿ
ದನು. ಇಸ್ರಾಯೇಲ್ಯರು ಅವನನ್ನು ನೋಡಿ ಬಹಳ 24
ವಾಗಿ ಭಯಪಟ್ಟು ಅಲ್ಲಿಂದ ಓಡಿಹೋದರು. ಅವರು— 25
ಇಸ್ರಾಯೇಲ್ಯರಾದ ನಮ್ಮನ್ನು ಹೀಯಾಳಿಸುವದ
ಕ್ಕೋಸ್ಕರ ಬಂದಿರುವ ಈ ಮನುಷ್ಯನನ್ನು ಕಂಡಿರಾ!
ಯಾವನು ಇವನನ್ನು ಕೊಲ್ಲುವನೋ ಅಂಥವನಿಗೆ
ಅರಸನು ಅಪಾರದ್ರವ್ಯದೊಡನೆ ತನ್ನ ಮಗಳನ್ನು
ಕೊಟ್ಟು ಮದುವೆಮಾಡುವನು; ಇದಲ್ಲದೆ ಅವನ
ಕುಟುಂಬಕ್ಕೆ ಸರ್ವಮಾನ್ಯವನ್ನು ಕೊಡುವನು ಎಂದು
ಮಾತಾಡಿಕೊಳ್ಳುತ್ತಿದ್ದರು. ದಾವೀದನು—ಜೀವಸ್ವ 26
ರೂಪನಾದ ದೇವರ ಸೈನ್ಯವನ್ನು ಹೀಯಾಳಿಸುವದಕ್ಕೆ
ಸುನ್ನತಿಯಿಲ್ಲದ ಈ ಫಿಲಿಷ್ಟಿಯನು ಎಷ್ಟರವನು? ಇವ
ನನ್ನು ಕೊಂದು ಇಸ್ರಾಯೇಲ್ಯರಿಗೆ ಬಂದಿರುವ ನಿಂದೆ
ಯನ್ನು ತೆಗೆದುಹಾಕುವವನಿಗೆ ಸಿಕ್ಕುವದೇನೆಂದು
ಹೇಳಿದಿರಿ ಎಂದು ತನ್ನ ಬಳಿಯಲ್ಲಿ ನಿಂತಿದ್ದ ಮನುಷ್ಯ
ರನ್ನು ಕೇಳಲು ಅವರು ಮುಂಚಿನಂತೆ ಇಂಥಿಂಥದು 27
ದೊರಕುವದೆಂದು ಉತ್ತರಕೊಟ್ಟರು. ದಾವೀದನು 28

ಜನರ ಸಂಗಡ ಹೀಗೆ ಮಾತಾಡುತ್ತಿರುವದನ್ನು ಅವನ
ಹಿರೀ ಅಣ್ಣನಾದ ಎಲೀಯಾಬನು ಕೇಳಿ ಕೋಪ
ಗೊಂಡು—ನೀನು ಇಲ್ಲಿಗೆ ಬಂದದ್ದೇಕೆ? ಅಡವಿಯಲ್ಲಿ
ರುವ ನಾಲ್ಕಾರು ಕುರಿಗಳನ್ನು ಯಾರಿಗೊಪ್ಪಿಸಿ ಬಂದಿ?
ನಿನ್ನ ಸೊಕ್ಕೂ ತುಂಟತನವೂ ನನಗೆ ಗೊತ್ತದೆ; ನೀನು
ಯುದ್ಧವನ್ನು ನೋಡುವದಕ್ಕೆ ಬಂದಿದ್ದೀ ಎಂದು ಅವ
29 ನನ್ನು ಗದರಿಸಲು ದಾವೀದನು—ನಾನೇನು ತಪ್ಪು
ಮಾಡಿದೆನು? 1)ಬರೀ ಮಾತಾಡಿದೆನಷ್ಟೆ ಎಂದು ಹೇಳಿ
30 ಅವನನ್ನು ಬಿಟ್ಟು ಬೇರೆ ಕಡೆಗೆ ಹೋಗಿ ಹಾಗೆಯೇ
ವಿಚಾರಮಾಡಲು ಜನರು ಮುಂಚಿನಂತೆಯೇ ಉತ್ತರ
31 ಕೊಟ್ಟರು. ದಾವೀದನು ಈ ಪ್ರಕಾರ ವಿಚಾರಿಸುತ್ತಿರು
ವದನ್ನು ಕೇಳಿದವರು ಸೌಲನಿಗೆ ತಿಳಿಸಿದರು; ಅವನು
ಇವನನ್ನು ಕರೇಕಳುಹಿಸಿದನು.
32 ದಾವೀದನು ಸೌಲನಿಗೆ—ಆ ಫಿಲಿಷ್ಟಿಯನ ನಿಮಿ
ತ್ತವಾಗಿ ಯಾವನೂ ಎದೆಗೆಡಬಾರದು; ನಿನ್ನ ಸೇವಕ
ನಾದ ನಾನು ಹೋಗಿ ಅವನೊಡನೆ ಯುದ್ಧಮಾಡು
33 ವೆನು ಅನ್ನಲು ಸೌಲನು ಅವನಿಗೆ—ನೀನು ಅವನೊಡ
ನೆ ಕಾದಾಡಲಾರಿ; ನೀನು ಇನ್ನೂ ಹುಡುಗನು.
ಅವನಾದರೋ ಚಿಕ್ಕಂದಿನಿಂದಲೇ ಯುದ್ಧವೀರನು
34 ಎಂದು ಹೇಳಿದನು. ಆಗ ದಾವೀದನು ಅವನಿಗೆ—
ನಿನ್ನ ಸೇವಕನಾದ ನಾನು ನನ್ನ ತಂದೆಯ ಕುರಿಗ
ಳನ್ನು ಕಾಯುತ್ತಿದ್ದಾಗ ಸಿಂಹವಾಗಲಿ ಕರಡಿಯಾ
ಗಲಿ ಬಂದು ಹಿಂಡಿನಲ್ಲಿನ ಕುರಿಮರಿಯನ್ನು ಹಿಡಿದು
35 ಕೊಂಡು ಹೋಗಲು ನಾನು ಒಡನೆ ಅದನ್ನು ಬೆನ್ನಟ್ಟಿ
ಹೊಡೆದು ಕುರಿಮರಿಯನ್ನು ಕಿತ್ತುಕೊಳ್ಳುತ್ತಿದ್ದೆನು.
ಅದು ಹಿಂದಿರುಗಿ ನನ್ನ ಮೇಲೆ ಬಿದ್ದರೆ ಅದನ್ನು
36 ಗದ್ದಹಿಡಿದು ಬಡಿದು ಕೊಂದುಹಾಕುತ್ತಿದ್ದೆನು. ನಿನ್ನ
ಸೇವಕನಿಂದ ಕೊಲ್ಲಲ್ಪಟ್ಟ ಸಿಂಹಕ್ಕೂ ಕರಡಿಗೂ
ಆದ ಗತಿಯೇ ಜೀವಸ್ವರೂಪನಾದ ದೇವರ ಸೈನ್ಯ
ವನ್ನು ನಿಂದಿಸುವಂಥ ಈ ಸುನ್ನತಿಯಿಲ್ಲದ ಫಿಲಿಷ್ಟಿಯ
37 ನಿಗೂ ಆಗಬೇಕು. ನನ್ನನ್ನು ಅಂಥ ಸಿಂಹದ ಮತ್ತು
ಕರಡಿಯ ಉಗುರುಗಳಿಗೆ ತಪ್ಪಿಸಿದ ಯೆಹೋವನು
ಈ ಫಿಲಿಷ್ಟಿಯನ ಕೈಗೂ ತಪ್ಪಿಸುವನು ಎನ್ನಲು ಸೌಲ
ನು ದಾವೀದನಿಗೆ—ಹೋಗು; ಯೆಹೋವನು ನಿನ್ನ
38 ಸಂಗಡ ಇರಲಿ ಎಂದು ಹೇಳಿ ಅವನಿಗೆ ತನ್ನ ಯುದ್ಧ
ವಸ್ತ್ರಗಳನ್ನೂ ಕವಚವನ್ನೂ ತೊಡಿಸಿ ತಲೆಗೊಂದು
39 ತಾಮ್ರದ ಶಿರಸ್ತ್ರಾಣವನ್ನಿಟ್ಟನು; ದಾವೀದನು ಯುದ್ಧ
ವಸ್ತ್ರದ ಮೇಲೆ ಕತ್ತಿಯನ್ನು ಬಿಗಿದುಕೊಂಡನಂತರ
ನಡೆಯಬಹುದೋ ಎಂದು ಪರೀಕ್ಷಿಸಿದ ಮೇಲೆ ಸೌ
ಲನಿಗೆ—ನನಗೆ ಅಭ್ಯಾಸವಿಲ್ಲದರಿಂದ ಇವುಗಳನ್ನು
ಧರಿಸಿಕೊಂಡು ನಡೆಯಲಾರೆ ಎಂದು ಹೇಳಿ ಅವು
40 ಗಳನ್ನು ತೆಗೆದಿಟ್ಟು ತನ್ನ ಕೋಲನ್ನು ತೆಗೆದುಕೊಂಡು
ಹೊರಟು ಹಳ್ಳದಲ್ಲಿ ಐದು ನುಣುಪುಕಲ್ಲುಗಳನ್ನು
ಆರಿಸಿಕೊಂಡು ಅವುಗಳನ್ನು ಕುರುಬರ ಪದ್ಧತಿ
ಯಂತೆ ತನಗಿರುವ ಸೊಂಟಚೀಲದಲ್ಲಿ ಹಾಕಿ ಕೈ
ಯಲ್ಲಿ ಕವಣೆಯನ್ನು ಹಿಡಿದು ಫಿಲಿಷ್ಟಿಯನ ಬಳಿಗೆ
ಹೋದನು.

ಇತ್ತ ಫಿಲಿಷ್ಟಿಯನೂ ದಾವೀದನ ಸಮೀಪಕ್ಕೆ ಬಂದ
ನು. ಗುರಾಣಿಹೊರುವವನು ಅವನ ಮುಂದೆ ಇದ್ದ
ನು. ಫಿಲಿಷ್ಟಿಯನು ಕೆಂಬಣ್ಣದವನೂ ಸುಂದರನೂ
ಯೌವನಸ್ಥನೂ ಆದ ದಾವೀದನನ್ನು ನೋಡಿ ತಿರ
ಸ್ಕಾರದಿಂದ ಅವನಿಗೆ—ನೀನು ಕೋಲುಹಿಡಿದು ನನ್ನ
ಬಳಿಗೆ ಬರುವದೇನು? ನಾನು ನಾಯಿಯೋ ಎಂದು
ಹೇಳಿ ಅವನನ್ನು ತನ್ನ ದೇವರ ಹೆಸರಿನಲ್ಲಿ ಶಪಿಸಿ—
ಇಲ್ಲಿ ಬಾ; ನಿನ್ನ ಮಾಂಸವನ್ನು ಮೃಗಪಕ್ಷಿಗಳಿಗೆ
ಹಂಚಿಕೊಡುತ್ತೇನೆ ಅಂದನು. ಆಗ ದಾವೀದನು ಅವ
ನಿಗೆ—ನೀನು ಈಟಿ ಕತ್ತಿ ಬರ್ಜಿಗಳೊಡನೆ ನನ್ನ
ಬಳಿಗೆ ಬರುತ್ತೀ; ನಾನಾದರೋ ನೀನು ಹೀಯಾಳಿಸಿ
ದಂಥ ಸೇನಾಧೀಶ್ವರನೂ ಇಸ್ರಾಯೇಲ್ಯರ ಯುದ್ಧ
ಭಟರ ದೇವರೂ ಆಗಿರುವ ಯೆಹೋವನ ನಾಮದೊ
ಡನೆ ನಿನ್ನ ಬಳಿಗೆ ಬರುತ್ತೇನೆ. ಆತನು ಈ ಹೊತ್ತು
ನಿನ್ನನ್ನು ನನ್ನ ಕೈಗೆ ಒಪ್ಪಿಸಿಕೊಡುವನು; ನಾನು
ನಿನ್ನನ್ನು ಕೊಂದು ನಿನ್ನ ತಲೆಯನ್ನು ಕಡಿದುಹಾಕಿ
ಫಿಲಿಷ್ಟಿಯಸೈನ್ಯದ ಶವಗಳನ್ನು ಮೃಗಪಕ್ಷಿಗಳಿಗೆ
ಹಂಚಿಕೊಡುವೆನು, ಇದರಿಂದ ಇಸ್ರಾಯೇಲ್ಯರೊ
ಳಗೆ ದೇವರಿರುತ್ತಾನೆಂಬದು ಭೂಲೋಕದವರಿಗೆಲ್ಲಾ
ತಿಳಿದುಬರುವದು; ಯೆಹೋವನು ಈಟಿ ಕತ್ತಿಗಳಿ
ಲ್ಲದೆ ರಕ್ಷಿಸಬಲ್ಲನೆಂಬದು ಇಲ್ಲಿ ಕೂಡಿರುವವರಿಗೆಲ್ಲಾ
ಗೊತ್ತಾಗುವದು; ಯಾಕಂದರೆ ಯುದ್ಧಫಲವು ಯೆ
ಹೋವನ ಕೈಯಲ್ಲಿದೆ; ಆತನು ನಿಮ್ಮನ್ನು ನಮ್ಮ ಕೈಗೆ
ಒಪ್ಪಿಸಿಕೊಡುವನು ಅಂದನು. ಕೂಡಲೆ ಆ ಫಿಲಿಷ್ಟಿ
ಯನು ಹೊರಟು ದಾವೀದನೊಡನೆ ಯುದ್ಧಮಾಡು
ವದಕ್ಕೆ ಸಮೀಪಿಸಿದಾಗ ದಾವೀದನು ಫಿಲಿಷ್ಟಿಯ
ಸೈನ್ಯದ ಕಡೆಗೆ ಓಡಿಹೋಗಿ ಆ ಫಿಲಿಷ್ಟಿಯನನ್ನು
ಸಂಧಿಸಿ ಕೈಯನ್ನು ಚೀಲದಲ್ಲಿ ಹಾಕಿ ಒಂದು ಕಲ್ಲನ್ನು
ತೆಗೆದು ಅವನ ಹಣೆಗೆ ಗುರಿಯಿಟ್ಟು ಕವಣೆಯನ್ನು
ಬೀಸಿ ಹೊಡೆಯಲು ಕಲ್ಲು ಅವನ ಹಣೆಯೊಳಗೆ
ಹೊಕ್ಕಿತು; ಅವನು ಬೋರಲಬಿದ್ದನು. ಕೂಡಲೆ ಅವ
ನು ಹೋಗಿ ಆ ಫಿಲಿಷ್ಟಿಯನ ಮೇಲೆ ನಿಂತು ಅವನ
ಕತ್ತಿಯನ್ನು ಹಿರಿದು ಅದರಿಂದಲೇ ಅವನ ತಲೆಯನ್ನು
ಕಡಿದು ಅವನನ್ನು ಸಾಯಿಸಿದನು. ಈ ಪ್ರಕಾರ
ದಾವೀದನು ಕತ್ತಿಯಿಂದಲ್ಲ, ಬರೀ ಒಂದು ಕವಣೆಯ
ಕಲ್ಲಿನಿಂದ ಫಿಲಿಷ್ಟಿಯನನ್ನು ಸೋಲಿಸಿ ಕೊಂದುಹಾಕಿ
ದನು. ಫಿಲಿಷ್ಟಿಯರು ತಮ್ಮ ರಣವೀರನು ಸತ್ತು
ಹೋದದ್ದನ್ನು ಕಂಡು ಓಡಿಹೋದರು. ಇಸ್ರಾಯೇ
ಲ್ಯರೂ ಯೆಹೂದ್ಯರೂ ಎದ್ದು ಆರ್ಭಟಿಸಿ ಫಿಲಿಷ್ಟಿಯ
ರನ್ನು ತಗ್ಗಿನ ದಾರಿಯ ವರೆಗೂ ಎಕ್ರೋನಿನ ಬಾಗ
ಲುಗಳ ವರೆಗೂ ಹಿಂದಟ್ಟಿದರು. ಫಿಲಿಷ್ಟಿಯರ ಹೆಣ
ಗಳು ಶಾರಯಿಮಿನಿಂದ ಗತ್ ಎಕ್ರೋನ್ ಪಟ್ಟಣಗಳ
ವರೆಗೂ ಬಿದ್ದಿದ್ದವು. ಅನಂತರ ಇಸ್ರಾಯೇಲ್ಯರು
ಹಿಂದಿರುಗಿ ಬಂದು ಫಿಲಿಷ್ಟಿಯರ ಪಾಳೆಯವನ್ನು
ಸೂರೆಮಾಡಿದರು. ದಾವೀದನು ಆ ಫಿಲಿಷ್ಟಿಯನ
ತಲೆಯನ್ನು ಯೆರೂಸಲೇಮಿಗೆ ಒಯ್ದನು; ಅವನ
ಆಯುಧಗಳನ್ನು ತನ್ನ ಗುಡಾರದಲ್ಲಿಟ್ಟುಕೊಂಡನು.

1) ಅಥವಾ: ಇದು ವಿಶೇಷವಲ್ಲವೋ?

ದಾವೀದನು ಸೌಲನ ಒಡ್ಡೋಲಗದಲ್ಲಿ ಸೇರಿದ್ದೂ
ಯೋನಾತಾನನ ಸ್ನೇಹಿತನಾದದ್ದೂ.

5 ದಾವೀದನು ಫಿಲಿಷ್ಟಿಯನೊಡನೆ ಯುದ್ಧಮಾಡು
ವದಕ್ಕೆ ಹೊರಟದ್ದನ್ನು ಸೌಲನು ಕಂಡು ತನ್ನ ಸೇನಾ
ಪತಿಯಾದ ಅಬ್ನೇರನನ್ನು—ಅಬ್ನೇರನೇ, ಈ ಹುಡು
ಗನು ಯಾರ ಮಗನು ಎಂದು ಕೇಳಿದ್ದಕ್ಕೆ ಅವನು
ಸೌಲನಿಗೆ—ಅರಸನೇ, ನಿನ್ನ ಜೀವದಾಣೆ ನನಗೆ ಗೊ
6 ತ್ತಿಲ್ಲ ಎಂದು ಉತ್ತರಕೊಟ್ಟನು. ಆಗ ಅರಸನು
ಅವನಿಗೆ—ಆ ಪ್ರಾಯಸ್ಥನು ಯಾರ ಮಗನೆಂದು
7 ವಿಚಾರಿಸು ಎಂದು ಆಜ್ಞಾಪಿಸಿದನು. ದಾವೀದನು
ಫಿಲಿಷ್ಟಿಯನನ್ನು ಕೊಂದು ಅವನ ತಲೆಯನ್ನು ಹಿಡಿ
ದುಕೊಂಡು ಹಿಂದಿರುಗಿ ಬರುವಾಗ ಅಬ್ನೇರನು ಅವ
8 ನನ್ನು ಕರೆದು ಸೌಲನ ಮುಂದೆ ನಿಲ್ಲಿಸಿದನು. ಸೌಲ
ನು ಅವನನ್ನು—ಹುಡುಗನೇ, ನೀನು ಯಾರ ಮಗ
ನೆಂದು ಕೇಳಿದ್ದಕ್ಕೆ ಅವನು—ನಾನು ಬೇತ್ಲೆಹೇಮಿನ
ವನೂ ನಿನ್ನ ಸೇವಕನೂ ಆದ ಇಷಯನ ಮಗನು
18 ಎಂದು ಉತ್ತರಕೊಟ್ಟನು. ದಾವೀದನು ಸೌಲ
ನೊಡನೆ ಮಾತಾಡಿ ತೀರಿಸಿದ ಮೇಲೆ ಯೋನಾತಾ
ನನ ಪ್ರಾಣವು ದಾವೀದನ ಪ್ರಾಣದೊಡನೆ ಒಂದಾ
ಯಿತು. ಅವನು ಇವನನ್ನು ತನ್ನ ಪ್ರಾಣದಂತೆಯೇ
2 ಪ್ರೀತಿಸ ತೊಡಗಿದನು. ಅಂದಿಸಿಂದ ಸೌಲನು ದಾವೀದ
ನನ್ನು ಅವನ ತಂದೆಯ ಮನೆಗೆ ಹೋಗಗೊಡದೆ ತನ್ನ
3 ಬಳಿಯಲ್ಲೇ ಇಟ್ಟುಕೊಂಡನು. ಯೋನಾತಾನನು
ದಾವೀದನನ್ನು ತನ್ನ ಪ್ರಾಣದಂತೆಯೇ ಪ್ರೀತಿಸಿದ್ದ
ರಿಂದ ಅವನೊಡನೆ ಒಡಂಬಡಿಕೆಮಾಡಿಕೊಂಡನು.
4 ಇದಲ್ಲದೆ ಅವನು ತನ್ನ ಮೈಮೇಲಿದ್ದ ನಿಲುವಂಗಿ
ಯನ್ನೂ ತನ್ನ ಯುದ್ಧವಸ್ತ್ರಗಳನ್ನೂ ಕತ್ತಿ ಬಿಲ್ಲು
5 ನಡುಕಟ್ಟುಗಳನ್ನೂ ದಾವೀದನಿಗೆ ಕೊಟ್ಟನು. ದಾವೀ
ದನಾದರೋ ಸೌಲನು ಎಲ್ಲಿಗೆ ಕಳುಹಿಸಿದರೂ ಹೋಗಿ
ಎಲ್ಲವನ್ನು ವಿವೇಕದಿಂದ ನಡಿಸುತ್ತಿದ್ದನು. ಸೌಲನು
ಇವನನ್ನು ಸೇನಾಪತಿಯನ್ನಾಗಿ ನೇಮಿಸಿದನು; ಇದು
ಅವನ ಸೇವಕರಿಗೂ ಎಲ್ಲಾ ಜನರಿಗೂ ಸಮ್ಮತವಾ
ಯಿತು.

ಸೌಲನು ದಾವೀದನನ್ನು ದ್ವೇಷಿಸತೊಡಗಿದ್ದು.

6 ದಾವೀದನು ಫಿಲಿಷ್ಟಿಯನನ್ನು ಸಂಹರಿಸಿ ಸರ್ವಜನ
ರೊಡನೆ ಹಿಂದಿರುಗಿ ಬರುವಾಗ ಇಸ್ರಾಯೇಲ್ಯರ
ಎಲ್ಲಾ ಪಟ್ಟಣಗಳಿಂದ ಸ್ತ್ರೀಯರು ಹೊರಗೆ ಬಂದು
ದಮ್ಮಡಿತಾಳಗಳನ್ನು ಹಿಡಿದು ಸಂತೋಷದಿಂದ ಹಾ
ಡುತ್ತಾ ಕುಣಿಯುತ್ತಾ ಅರಸನಾದ ಸೌಲನನ್ನು
7 ಎದುರುಗೊಂಡರು. ಅವರು ಪರಸ್ಪರವಾಗಿ—
ಸೌಲನು ಸಾವಿರಗಟ್ಟಳೆಯಾಗಿ ಕೊಂದನು;
ದಾವೀದನು ಹತ್ತುಸಾವಿರಗಟ್ಟಳೆಯಾಗಿ ಕೊಂದನು
8 ಎಂದು ಹಾಡಿದರು. ಈ ಮಾತುಗಳ ದೆಸೆಯಿಂದ
ಸೌಲನಿಗೆ ಬಹುವ್ಯಸನವೂ ಕೋಪವೂ ಉಂಟಾ
ಗಿ ಅವನು—ದಾವೀದನು ಹತ್ತುಸಾವಿರಗಟ್ಟಳೆಯಾಗಿ
ಕೊಂದನೆಂದೂ ನಾನು ಸಾವಿರಗಟ್ಟಳೆಯಾಗಿ ಕೊಂದೆ
ನೆಂದೂ ಹಾಡುತ್ತಾರಲ್ಲಾ! ರಾಜತ್ವದ ಹೊರತು ಅವ
ನಿಗೆ ಇನ್ನೇನು ಕಡಿಮೆಯಾದ ಹಾಗಾಯಿತು ಅಂದು
ಕೊಂಡು ಅಂದಿಸಿಂದ ಅವನ ಮೇಲೆ ಕಣ್ಣಿಟ್ಟನು. 9
ಮರುದಿನ ದೇವರಿಂದ ಕಳುಹಿಸಲ್ಪಟ್ಟ ದುರಾ 10
ತ್ಮವು ಸೌಲನ ಮೇಲೆ ಬಂದದರಿಂದ ಅವನು ಬುದ್ಧಿ
ಗೆಟ್ಟು ಮನೆಯೊಳಗೆ ಕೂಗುತ್ತಿದ್ದನು. ಅವನ ಕೈ
ಯಲ್ಲಿ ಒಂದು ಈಟಿ ಇತ್ತು. ದಾವೀದನು ಕ್ರಮದ
ಪ್ರಕಾರ ಕಿನ್ನರಿಯನ್ನು ಬಾರಿಸುತ್ತಾ ಇದ್ದನು. ಆಗ 11
ಸೌಲನು—ದಾವೀದನನ್ನು ಗೋಡೆಗೆ ಹತ್ತಿಕೊಳ್ಳುವ
ಹಾಗೆ ತಿವಿಯುವೆನೆಂದುಕೊಂಡು ಈಟಿಯನ್ನು ಎಸೆ
ದನು. ದಾವೀದನು ಎರಡು ಸಾರಿ ತಪ್ಪಿಸಿಕೊಂಡನು.
ಯೆಹೋವನು ಸೌಲನನ್ನು ಬಿಟ್ಟು ದಾವೀದನ ಸಂಗ 12
ಡ ಇದ್ದದರಿಂದ ಸೌಲನು ದಾವೀದನಿಗೆ ಭಯಪಟ್ಟು
ಅವನನ್ನು ತನ್ನ ಸಾನ್ನಿಧ್ಯಸೇವೆಯಿಂದ ತಪ್ಪಿಸಿ ಸೈನ್ಯ 13
ದಲ್ಲಿ ಸಹಸ್ರಾಧಿಪತಿಯನ್ನಾಗಿ ನೇಮಿಸಿದನು; ಇವನು
ದಳಪತಿಯಾಗಿ ಹೋಗುತ್ತಾ ಬರುತ್ತಾ ಇದ್ದನು.
ಯೆಹೋವನು ಇವನ ಸಂಗಡ ಇದ್ದದರಿಂದ ಎಲ್ಲಾ 14
ಕಾರ್ಯಗಳಲ್ಲಿ ಇವನು ವಿವೇಕದಿಂದ ನಡೆಯುತ್ತಿ
ದ್ದನು. ಸೌಲನು ಇದನ್ನು ನೋಡಿ ಅವನಿಗೆ ಬಹಳ 15
ವಾಗಿ ಹೆದರಿಕೊಂಡನು. ಇಸ್ರಾಯೇಲ್ಯರೂ ಯೆಹೂ 16
ದ್ಯರೂ ತಮ್ಮ ಸಂಗಡ ಹೋಗುತ್ತಾ ಬರುತ್ತಾ ಇದ್ದ
ದಾವೀದನನ್ನು ಬಹಳವಾಗಿ ಪ್ರೀತಿಸುತ್ತಿದ್ದರು.

ದಾವೀದನು ಸೌಲನ ಅಳಿಯನಾದದ್ದು.

ಒಂದು ದಿವಸ ಸೌಲನು—ಇವನು ನನ್ನ ಕೈಯಿಂದ 17
ಲ್ಲ, ಫಿಲಿಷ್ಟಿಯರ ಕೈಯಿಂದ ಸಾಯಲಿ ಎಂದು ಆಲೋ
ಚಿಸಿಕೊಂಡು ದಾವೀದನಿಗೆ—ನೀನು ನನ್ನ ವೀರನಾಗಿ
ಹೋಗಿ ಯೆಹೋವನ ಯುದ್ಧಗಳನ್ನು ನಡಿಸು;
ನಾನು ನನ್ನ ಹಿರೀ ಮಗಳಾದ ಮೇರಬಳನ್ನು ನಿನ
ಗೆ ಮದುವೆಮಾಡಿಕೊಡುತ್ತೇನೆ ಅಂದನು. ಅದಕ್ಕೆ 18
ದಾವೀದನು—ಅರಸನ ಅಳಿಯನಾಗುವದಕ್ಕೆ ನಾನೆ
ಷ್ಟರವನು? ಇಸ್ರಾಯೇಲ್ಯರಲ್ಲಿ ನನ್ನ ಕುಲವೂ
ಕುಟುಂಬವೂ ಎಷ್ಟರವು ಎಂದನು. ಸೌಲನು ತನ್ನ 19
ಮಗಳಾದ ಮೇರಬಳನ್ನು ದಾವೀದನಿಗೆ ಕೊಡತಕ್ಕ
ಕಾಲ ಬಂದಾಗ ಅವನು ಅವಳನ್ನು ಮೆಹೋ
ಲದ ಅದ್ರೀಯೇಲ್ ಎಂಬವನಿಗೆ ಮದುವೆಮಾಡಿ
ಕೊಟ್ಟನು.
ಸೌಲನ ಮಗಳಾದ ಮಾಕಲಳು ದಾವೀದನನ್ನು 20
ಪ್ರೀತಿಸಿದಳು. ಇದು ಸೌಲನಿಗೆ ತಿಳಿದಾಗ ಅವ
ನಿಗೆ ಸಂತೋಷವಾಯಿತು. ಸೌಲನು—ದಾವೀದನಿಗೆ 21
ಉರುಲಾಗಿರುವಂತೆಯೂ ಅವನು ಫಿಲಿಷ್ಟಿಯರ ಕೈಗೆ
ಸಿಕ್ಕಿಬೀಳುವಂತೆಯೂ ಇವಳನ್ನು ಅವನಿಗೆ ಕೊಡು
ವೆನು ಅಂದುಕೊಂಡು ಅವನಿಗೆ—ನೀನು ನನ್ನ ಅಳಿ
ಯನಾಗುವದಕ್ಕೆ ಈಗ ಎರಡನೆಯ ಸಂದರ್ಭವುಂಟಾ
ಯಿತು ಎಂದು ಹೇಳಿದನು. ಅವನು ತನ್ನ ಸೇವಕ 22
ರಿಗೆ—ನೀವು ದಾವೀದನಿಗೆ ಗುಪ್ತವಾಗಿ—ಅರಸನು
ನಿನಗೆ ಒಲಿಯುತ್ತಾನೆ; ಅವನ ಎಲ್ಲಾ ಸೇವಕರು
ನಿನ್ನನ್ನು ಪ್ರೀತಿಸುತ್ತಾರೆ; ನೀನು ಅರಸನ ಅಳಿಯ
ನಾಗು ಎಂದು ಪುಸಲಾಯಿಸಿರಿ ಅಂದನು. ಆ ಸೇವ 23

ಕರು ದಾವೀದನಿಗೆ ಹಾಗೆಯೇ ಹೇಳಿದಾಗ—ಅವನು
ಅರಸನ ಅಳಿಯನಾಗುವದು ಸಾಧಾರಣವಾದ ಸಂಗ
ತಿಯೆಂದು ನೆನಸುತ್ತೀರೋ? ನಾನು ದರಿದ್ರನೂ
ಅಲ್ಪನೂ ಆಗಿರುತ್ತೇನಲ್ಲಾ ಎಂದು ಉತ್ತರಕೊಟ್ಟನು.
24 ದಾವೀದನು ಅಂದದ್ದನ್ನು ಸೇವಕರು ಸೌಲನಿಗೆ ತಿಳಿಸಿ
25 ದರು. ಆಗ ಅವನು ಅವರಿಗೆ—ನೀವು ಹೋಗಿ
ದಾವೀದನಿಗೆ—ಅರಸನು ತೆರವನ್ನು ಅಪೇಕ್ಷಿಸುವ
ದಿಲ್ಲ; ತನ್ನ ಶತ್ರುಗಳಾದ ಫಿಲಿಷ್ಟಿಯರಿಗೆ ಮುಯ್ಯಿ
ತೀರಿಸಿ ಅವರಲ್ಲಿನ ನೂರು ಮಂದಿಯ ಮುಂದೊಗ
ಲನ್ನು ತಂದುಕೊಡಬೇಕು ಅನ್ನುತ್ತಾನೆಂದು ಹೇಳಿರಿ
ಎಂದು ಆಜ್ಞಾಪಿಸಿದನು. ದಾವೀದನನ್ನು ಫಿಲಿಷ್ಟಿಯ
26 ರಿಂದ ಕೊಲ್ಲಿಸಬೇಕೆಂಬದೇ ಇದಕ್ಕೆ ಕಾರಣ. ಸೇವ
ಕರು ದಾವೀದನಿಗೆ ಈ ಮಾತುಗಳನ್ನು ತಿಳಿಸಿದಾಗ
ಅವನು ಅರಸನ ಅಳಿಯನಾಗುವದಕ್ಕೆ ಒಪ್ಪಿದನು.
ದಾವೀದನು ನೇಮಕವಾದ ದಿನಗಳು ಮುಗಿಯುವ
27 ಮೊದಲೇ ತನ್ನ ಸೈನಿಕರೊಡನೆ ಹೊರಟು ಫಿಲಿಷ್ಟಿ
ಯರ ದೇಶಕ್ಕೆ ಹೋಗಿ ಅಲ್ಲಿನ ಇನ್ನೂರು ಜನರನ್ನು
ಕೊಂದು ಮುಂದೊಗಲುಗಳನ್ನು ತಂದು ಅರಸನ
ಅಳಿಯನಾಗುವದಕ್ಕೋಸ್ಕರ ಅವುಗಳನ್ನು ಪೂರ್ಣ
ವಾಗಿ ಅವನಿಗೆ ಒಪ್ಪಿಸಿದನು. ಆಗ ಸೌಲನು ತನ್ನ
ಮಗಳಾದ ಮೀಕಲಳನ್ನು ಅವನಿಗೆ ಮದುವೆಮಾಡಿ
28 ಕೊಟ್ಟನು; ಆಕೆಯು ಅವನನ್ನು ಬಹಳವಾಗಿ ಪ್ರೀತಿ
ಸುವವಳಾದಳು. ಯೆಹೋವನು ದಾವೀದನ ಸಂಗಡ
29 ಇದ್ದಾನೆಂದು ಸೌಲನು ತಿಳಿದು ಅವನಿಗೆ ಮತ್ತಷ್ಟು
30 ಹೆದರುವವನಾಗಿ ಅವನ ನಿತ್ಯವೈರಿಯಾದನು. ಫಿಲಿ
ಷ್ಟಿಯಪ್ರಭುಗಳು ಯುದ್ಧಕ್ಕೆ ಬಂದಾಗೆಲ್ಲಾ ಸೌಲನ
ಸೇನಾಪತಿಗಳಲ್ಲಿ ದಾವೀದನೇ ಅಧಿಕಜಯಶೀಲನಾಗಿ
ಬರುತ್ತಿದ್ದದರಿಂದ ಅವನ ಹೆಸರು ಬಹುಪ್ರಸಿದ್ಧ
ವಾಯಿತು.

ಯೋನಾತಾನನ ಮಧ್ಯಸ್ತಿಕೆ; ಕೊಲ್ಲಬೇಕೆಂದಿದ್ದ ಸೌಲನಿಂದ
ದಾವೀದನು ತಪ್ಪಿಸಿಕೊಂಡು ಸಮುವೇಲನ ಬಳಿಗೆ ಹೋದದ್ದು.

19 ಸೌಲನು ದಾವೀದನನ್ನು ಕೊಲ್ಲಬೇಕೆಂದು ತನ್ನ
ಮಗನಾದ ಯೋನಾತಾನನಿಗೂ ಎಲ್ಲಾ ಪರಿವಾರ
ದವರಿಗೂ ಆಜ್ಞಾಪಿಸಿದನು. ಆದರೆ ಯೋನಾತಾನನು
2 ದಾವೀದನನ್ನು ಬಹಳವಾಗಿ ಪ್ರೀತಿಸುತ್ತಿದ್ದನು. ಆದ
ದರಿಂದ ಅವನು ದಾವೀದನಿಗೆ—ನನ್ನ ತಂದೆಯಾದ
ಸೌಲನು ನಿನ್ನನ್ನು ಕೊಲ್ಲಬೇಕೆಂದಿರುತ್ತಾನೆ. ನೀನು
ಜಾಗರೂಕತೆಯಿಂದಿರು; ನಾಳೆ ಬೆಳಿಗ್ಗೆ ಒಂದು ಗುಪ್ತ
3 ಸ್ಥಳದಲ್ಲಿ ಅಡಗಿಕೊಂಡಿರು. ನೀನು ಅಡಗಿಕೊಂಡಿ
ರುವ ಹೊಲಕ್ಕೆ ನಾನೂ ಬಂದು ನನ್ನ ತಂದೆಯ ಬಳಿ
ಯಲ್ಲಿ ನಿಂತು ನಿನ್ನ ವಿಷಯ ಅವನೊಡನೆ ಮಾತಾಡಿ
ಗೊತ್ತಾಗುವದನ್ನು ನಿನಗೆ ತಿಳಿಸುವೆನು ಎಂದು ಹೇಳಿ
4 ದನು. ತರುವಾಯ ಅವನು ತನ್ನ ತಂದೆಯ ಮುಂದೆ
ದಾವೀದನನ್ನು ಹೊಗಳಿ—ಒಡೆಯನು ತನ್ನ ಸೇವಕ
ನಾದ ದಾವೀದನಿಗೆ ಅನ್ಯಾಯಮಾಡದಿರಲಿ; ಅವನು
ನಿನಗೆ ದ್ರೋಹ ಮಾಡಲಿಲ್ಲ; ಅವನು ಮಾಡಿದ್ದೆಲ್ಲವೂ
5 ನಿನ್ನ ಹಿತಕ್ಕಾಗಿಯೇ. ತನ್ನ ಜೀವವನ್ನು ಕೈಯಲ್ಲಿ
ಹಿಡಿದುಕೊಂಡು ಹೋಗಿ ಆ ಫಿಲಿಷ್ಟಿಯನನ್ನು
ಕೊಂದನು; ಯೆಹೋವನು ಇಸ್ರಾಯೇಲ್ಯರಿಗೆ ಮಹಾ
ಜಯವನ್ನುಂಟುಮಾಡಿದನು. ನೀನು ಅದನ್ನು ನೋಡಿ
ಸಂತೋಷಪಟ್ಟಿಯಲ್ಲಾ; ದಾವೀದನನ್ನು ನಿಷ್ಕಾರಣ
ವಾಗಿ ಕೊಂದು ನಿರ್ದೋಷಿಯ ರಕ್ತವನ್ನು ಸುರಿಸಿದ
ಅಪರಾಧಕ್ಕೆ ನೀನೇಕೆ ಗುರಿಯಾಗುತ್ತೀ ಅಂದನು.
ಸೌಲನು ಯೋನಾತಾನನ ಮಾತುಗಳನ್ನು ಲಾಲಿಸಿ—
ಯೆಹೋವನಾಣೆ, ಅವನನ್ನು ಕೊಲ್ಲುವದಿಲ್ಲ ಎಂದು
ಪ್ರಮಾಣಮಾಡಿದನು. ಆಗ ಯೋನಾತಾನನು ದಾವೀದ
ನನ್ನು ಕರೆದು ಅವನಿಗೆ ಈ ಮಾತುಗಳನ್ನು ತಿಳಿಸಿ
ಸೌಲನ ಬಳಿಗೆ ಕರತಂದನು. ದಾವೀದನು ಮುಂಚಿ
ನಂತೆ ಸೌಲನ ಸನ್ನಿಧಿಯಲ್ಲಿ ಇರುವವನಾದನು. ಫಿಲಿಷ್ಟಿ
ಯರು ತಿರಿಗಿ ಯುದ್ಧಕ್ಕೆ ಬರುವಲ್ಲಿ ದಾವೀದನು
ಹೋಗಿ ಅವರೊಡನೆ ಯುದ್ಧಮಾಡಿ ಅವರನ್ನು ಪೂರ್ಣ
ವಾಗಿ ಸೋಲಿಸಿ ಓಡಿಸಿಬಿಟ್ಟನು.

ಒಂದು ದಿವಸ ಸೌಲನು ಕೈಯಲ್ಲಿ ಈಟಿಯನ್ನು
ಹಿಡಿದುಕೊಂಡು ತನ್ನ ಮನೆಯಲ್ಲಿ ಕೂತುಕೊಂಡಿ
ದ್ದಾಗ ಯೆಹೋವನಿಂದ ಕಳುಹಿಸಲ್ಪಟ್ಟ ದುರಾತ್ಮವು
ಅವನ ಮೇಲೆ ಬಂದಿತು. ಅವನು ಒಡನೆ ಕಿನ್ನರಿ
ಯನ್ನು ಬಾರಿಸುತ್ತಿದ್ದ ದಾವೀದನನ್ನು ಗೋಡೆಗೆ ಹತ್ತಿ
ಕೊಳ್ಳುವಂತೆ ತಿವಿಯಬೇಕೆಂದು ತನ್ನ ಈಟಿಯನ್ನು
ಎಸೆದನು. ಆದರೆ ದಾವೀದನು ಫಕ್ಕನೆ ಸೌಲನೆದುರಿ
ನಿಂದ ಸರಿದುಕೊಂಡ ಕಾರಣ ಅದು ಗೋಡೆಯೊಳಗೆ
ನಾಟಿತು. ದಾವೀದನು ಆ ರಾತ್ರಿಯಲ್ಲೇ ತಪ್ಪಿಸಿ
ಕೊಂಡು ಓಡಿಹೋದನು. ಸೌಲನು ಕೂಡಲೆ ದೂತ
ರನ್ನು ಕರಿಸಿ—ದಾವೀದನ ಮನೆಯ ಸುತ್ತಲೂ
ಹೊಂಚುಹಾಕಿ ಅವನನ್ನು ಬೆಳಗಾಗುವಷ್ಟರಲ್ಲಿ ಕೊಂದು
ಹಾಕಬೇಕೆಂದು ಆಜ್ಞಾಪಿಸಿ ಕಳುಹಿಸಿದನು. ಮೀಕ
ಲಳು ತನ್ನ ಗಂಡನಾದ ದಾವೀದನಿಗೆ—ನೀನು ಈ
ರಾತ್ರಿಯೇ ತಪ್ಪಿಸಿಕೊಳ್ಳದಿದ್ದರೆ ನಾಳೆ ಬೆಳಿಗ್ಗೆ ಹತನಾ
ಗುವಿ ಎಂದು ಹೇಳಿ ಅವನನ್ನು ಕಿಟಿಕಿಯಿಂದ ಕೆಳಕ್ಕೆ
ಇಳಿಸಲು ಅವನು ಓಡಿಹೋಗಿ ತಪ್ಪಿಸಿಕೊಂಡನು. ಅನಂ
ತರ ಆಕೆಯು ಪೂಜೆಯ ಬೊಂಬೆಯನ್ನು ತಂದು
ಹಾಸಿಗೆಯ ಮೇಲೆ ಮಲಗಿಸಿ ಅದರ ಮುಖದ ಮೇಲೆ
ಮೇಕೆಕೂದಲಿನಿಂದ ಹೆಣೆದ ಜಾಲರಿಯನ್ನು ಹಾಕಿ
ಕಂಬಳಿಯನ್ನು ಹೊದಿಸಿದಳು. ಸೌಲನ ದೂತರು
ದಾವೀದನನ್ನು ಹಿಡಿಯುವದಕ್ಕೆ ಬಂದಾಗ ಅವಳು—
ಅವನಿಗೆ ಸ್ವಸ್ಥವಿಲ್ಲವೆಂದು ಹೇಳಿ ಕಳುಹಿಸಿದಳು.
ಸೌಲನು ತಿರಿಗಿ ತನ್ನ ಆಳುಗಳಿಗೆ—ನೀವು ಹೋಗಿ
ನೋಡಿ ದಾವೀದನನ್ನು ಹಾಸಿಗೆಯೊಡನೆ ನನ್ನ ಬಳಿಗೆ
ತೆಗೆದುಕೊಂಡು ಬನ್ನಿರಿ, ಕೊಂದುಹಾಕುತ್ತೇನೆ ಎಂದು
ಆಜ್ಞಾಪಿಸಿದನು. ಅವರು ಹೋಗಿ ನೋಡಲು ಮುಖದ
ಮೇಲೆ ಮೇಕೆಕೂದಲಿನಿಂದ ಹೆಣೆದ ಜಾಲರಿಯುಳ್ಳ
ದ್ದಾಗಿ ಹಾಸಿಗೆಯ ಮೇಲಿರುವದು ಒಂದು ಬೊಂಬೆ
ಯೆಂದು ತಿಳಿದುಬಂದಾಗ ಸೌಲನು ಮೀಕಲಳಿಗೆ—
ನೀನು ನನ್ನನ್ನು ವಂಚಿಸಿದ್ದೇಕೆ? ನನ್ನ ಶತ್ರುವನ್ನು
ಕಳುಹಿಸಿ ಅವನು ತಪ್ಪಿಸಿಕೊಳ್ಳುವಂತೆ ಮಾಡಿದಿಯ
ಲ್ಲಾ ಎನ್ನಲು ಆಕೆಯು ಅವನಿಗೆ—ನನ್ನನ್ನು ಕಳುಹಿಸ
ದಿದ್ದರೆ ನಿನ್ನನ್ನು ಕೊಂದುಬಿಡುತ್ತೇನೆಂದು ಅವನು
ನನಗೆ ಹೇಳಿದನು ಅಂದಳು.

ದಾವೀದನು ತಪ್ಪಿಸಿಕೊಂಡು ರಾಮದಲ್ಲಿದ್ದ

ಸಮುವೇಲನ ಬಳಿಗೆ ಬಂದು ಸೌಲನು ತನಗೆ ಮಾಡಿ
ದ್ದೆಲ್ಲವನ್ನೂ ತಿಳಿಸಿದನು. ಅವರಿಬ್ಬರೂ ಹೋಗಿ ಅಲ್ಲಿನ
19 1)ಮಠದಲ್ಲಿ ವಾಸವಾಗಿದ್ದರು. ದಾವೀದನು ರಾಮದ
20 ಮಠದಲ್ಲಿರುವದು ಸೌಲನಿಗೆ ಗೊತ್ತಾಗಲು ಅವನು
ಅವನನ್ನು ಹಿಡಿದುತರುವದಕ್ಕಾಗಿ ಆಳುಗಳನ್ನು ಕಳು
ಹಿಸಿದನು. ಅವರು ಹೋಗಿ ಅಲ್ಲಿನ ಪ್ರವಾದಿಸಮೂ
ಹವು ಪರವಶವಾಗಿ ಮಾತಾಡುವದನ್ನೂ ಸಮುವೇಲನು
ಅವರ ನಾಯಕನಾಗಿ ನಿಂತಿರುವದನ್ನೂ ಕಂಡಾಗ
ದೇವರ ಆತ್ಮವು ಅವರ ಮೇಲೆಯೂ ಬಂದಿತು;
ಅವರೂ ಪರವಶರಾಗಿ ಮಾತಾಡತೊಡಗಿದರು.
21 ಸೌಲನಿಗೆ ಈ ವರ್ತಮಾನವು ಮುಟ್ಟಿದಾಗ ಅವನು
ಬೇರೆ ಆಳುಗಳನ್ನು ಕಳುಹಿಸಿದನು; ಇವರೂ ಪರವಶ
ರಾದರು. ಮೂರನೆಯ ಸಾರಿ ಇನ್ನು ಕೆಲವು ಮಂದಿ
ಆಳುಗಳನ್ನು ಕಳುಹಿಸಿದನು. ಇವರೂ ಪರವಶರಾ
22 ದರು. ಆಗ ಸೌಲನು ತಾನೇ ರಾಮಕ್ಕೆ ಹೋಗಬೇ
ಕೆಂದು ಹೊರಟು ಸೇಕೂವಿನಲ್ಲಿರುವ ದೊಡ್ಡ ಬಾವಿಯ
ಬಳಿಗೆ ಬಂದು ಸಮುವೇಲ ದಾವೀದರು ಎಲ್ಲಿರುತ್ತಾ
ರೆಂದು ವಿಚಾರಿಸಲು ಜನರು—ರಾಮದ ಮಠದಲ್ಲಿದ್ದಾ
23 ರೆಂದು ಉತ್ತರಕೊಟ್ಟರು. ಅವನು ಅಲ್ಲಿಂದ ರಾಮದ
ಮಠಕ್ಕೆ ಹೋಗುವಾಗ ದೇವರ ಆತ್ಮವು ಅವನ ಮೇಲೆ
ಯೂ ಬಂದಿತು. ಅವನು ಆ ಊರನ್ನು ಮುಟ್ಟುವ
ವರೆಗೆ ಪರವಶನಾಗಿ ಮಾತಾಡುತ್ತಾ ಹೋದನು.
24 ಅಲ್ಲಿಗೆ ಸೇರಿದ ಮೇಲೆ ಅವನೂ ತನ್ನ ಬಟ್ಟೆಗಳನ್ನು
ತೆಗೆದುಹಾಕಿ ಸಮುವೇಲನ ಮುಂದೆ ಪರವಶನಾಗಿ
ಮಾತಾಡುತ್ತಾ ಆ ದಿನ ಹಗಲಿರುಳು ಬೆತ್ತಲೆಯಾಗಿ
ಬಿದ್ದುಕೊಂಡಿದ್ದನು. ಆದದರಿಂದ—ಸೌಲನೂ ಪ್ರ
ವಾದಿಗಳಲ್ಲಿದ್ದಾನೋ ಎಂಬ ಗಾದೆಯುಂಟಾಯಿತು.

ದಾವೀದ ಯೋನಾತಾನರು ಒಡಂಬಡಿಕೆಮಾಡಿಕೊಂಡದ್ದು.

20 ದಾವೀದನು ರಾಮದ ಮಠದಿಂದ ತಪ್ಪಿಸಿಕೊಂಡು
ಯೋನಾತಾನನ ಬಳಿಗೆ ಬಂದು ಅವನಿಗೆ—ನಿನ್ನ
ತಂದೆಯು ನನ್ನ ಪ್ರಾಣವನ್ನು ತೆಗೆಯಬೇಕೆಂದಿರುತ್ತಾ
ನಲ್ಲಾ! ನಾನೇನು ಮಾಡಿದೆನು? ನನ್ನ ಅಪರಾಧ
ವೇನು? ನಾನು ಅವನಿಗೆ ಮಾಡಿದ ದ್ರೋಹವು ಯಾ
2 ವದು ಅನ್ನಲು ಯೋನಾತಾನನು ಅವನಿಗೆ—ಇದು
ಆಗಲೇ ಬಾರದು; ನಿನಗೆ ಮರಣವಾಗ ಕೂಡದು,
ನನ್ನ ತಂದೆಯು ಅಲ್ಪಕಾರ್ಯವನ್ನಾಗಲಿ ಅಧಿಕಕಾ
ರ್ಯವನ್ನಾಗಲಿ ನನಗೆ ತಿಳಿಸದೆ ಮಾಡುವದಿಲ್ಲ; ಈ
ಕಾರ್ಯವನ್ನು ನನಗೆ ಹೇಗೆ ಮರೆಮಾಡಾನು? ಆಗು
3 ವದಿಲ್ಲ ಎಂದು ಹೇಳಿದನು. ಅದಕ್ಕೆ ದಾವೀದನು—
ನಿನ್ನ ಕಣ್ಣುಮುಂದೆ ನನಗೆ ದಯೆ ದೊರಕುತ್ತದೆಂಬ
ದನ್ನು ನಿನ್ನ ತಂದೆಯು ಬಲ್ಲನು. ಆದದರಿಂದ ಇದ
ನ್ನು ಯೋನಾತಾನನಿಗೆ ತಿಳಿಸಿದರೆ ಅವನಿಗೆ ದುಃಖವಾ
ಗುವದೆಂದು ಮರೆಮಾಡುತ್ತಾನೆ. ನಿನ್ನ ಜೀವದಾಣೆ,
ಯೆಹೋವನಾಣೆ, ನನಗೂ ಮರಣಕ್ಕೂ ಒಂದು
ಗೇಣು ಮಾತ್ರ ಅಂತರವಿದೆ ಎಂದು ಖಂಡಿತವಾಗಿ ಹೇಳಿ
4 ದನು. ಆಗ ಯೋನಾತಾನನು ದಾವೀದನಿಗೆ—ನಾನು
ನಿನಗೋಸ್ಕರ ಮಾಡಬೇಕಾದದ್ದನ್ನು ಹೇಳು ಮಾಡು
ತ್ತೇನೆ ಅಂದನು. ಅದಕ್ಕೆ ದಾವೀದನು—ನಾಳೆ 5
ಶುದ್ಧ ಪಾಡ್ಯವು; ನಾನು ಅರಸನ ಪಂಕ್ತಿಯಲ್ಲಿ ಕೂತು
ಊಟಮಾಡಬೇಕಾಗಿರುವದು. ನೀನು ಅಪ್ಪಣೆಕೊಟ್ಟರೆ
ನಾನು ಈಗಲೇ ಹೋಗಿ ಮೂರನೆಯ ದಿನ ಸಾಯಂಕಾ
ಲದ ವರೆಗೆ ಹೊಲದಲ್ಲಿ ಅಡಗಿಕೊಂಡಿರುವೆನು. ನಿನ್ನ 6
ತಂದೆಯು ನನ್ನನ್ನು ಕುರಿತು ವಿಚಾರಮಾಡಿದರೆ
ನೀನು—ದಾವೀದನು ತನ್ನ ಊರಾದ ಬೇತ್ಲೆಹೇಮಿಗೆ
ಹೋಗಿ ಬರುವದಕ್ಕೆ ಅಪ್ಪಣೆಯಾಗಬೇಕೆಂದು ನನ್ನ
ನ್ನು ಬಹಳವಾಗಿ ಬೇಡಿಕೊಂಡನು; ಅವನ ಗೋತ್ರದ
ವರು ಅಲ್ಲಿ ವಾರ್ಷಿಕಯಜ್ಞಮಾಡುತ್ತಾರಂತೆ ಎಂದು
ಹೇಳು. ಅವನು ಆಗಲಿ ಎಂದರೆ ನಿನ್ನ ಸೇವಕನಾದ 7
ನಾನು ಸುರಕ್ಷಿತನಾಗಿರುವೆನು; ಸಿಟ್ಟುಮಾಡಿದರೆ
ಅವನಿಂದ ನನಗೆ ಕೇಡುಸಿದ್ಧವಾಗಿದೆಂದು ತಿಳಿದು
ಕೋ. ಸೇವಕನ ಮೇಲೆ ದಯವಿರಲಿ. ನೀನು ಯೆ 8
ಹೋವನ ಸನ್ನಿಧಿಯಲ್ಲಿ ನನ್ನೊಡನೆ ಒಡಂಬಡಿಕೆ
ಮಾಡಿಕೊಂಡಿಯಲ್ಲಾ; ನಾನು ಅಪರಾಧಿಯಾಗಿದ್ದರೆ
ನನ್ನನ್ನು ನಿನ್ನ ತಂದೆಗೆ ಒಪ್ಪಿಸುವದೇಕೆ? ನೀನೇ
ಕೊಂದುಹಾಕು ಎಂದು ಹೇಳಿದನು. ಯೋನಾತಾ 9
ನನು ಅವನಿಗೆ—ಇದು ಆಗಲೇ ಬಾರದು; ನಿನಗೆ ನನ್ನ
ತಂದೆಯಿಂದ ಕೇಡುಸಿದ್ಧವಾಗಿದ್ದರೆ ಅದನ್ನು ನಿನಗೆ
ತಿಳಿಸದಿರುವೆನೋ ಅಂದನು. ದಾವೀದನು—ನಿನ್ನ 10
ತಂದೆಯು ಬಿರುನುಡಿಯಿಂದ ಉತ್ತರಕೊಟ್ಟರೆ ಅದನ್ನು
ಯಾರ ಮುಖಾಂತರವಾಗಿ ತಿಳಿಸುವಿ ಎಂದು ಅವನನ್ನು
ಕೇಳಲು ಯೋನಾತಾನನು ಅವನಿಗೆ—ನಾವು ಅಡವಿಗೆ 11
ಹೋಗೋಣ ಬಾ ಎಂದು ಹೇಳಿದನು.

ಅವರಿಬ್ಬರೂ ಅಡವಿಗೆ ಹೋದ ಮೇಲೆ ಯೋ 12
ನಾತಾನನು ದಾವೀದನಿಗೆ—ಇಸ್ರಾಯೇಲ್‌ದೇವರಾದ
ಯೆಹೋವನೇ ಸಾಕ್ಷಿ; ನಾನು ನಾಳೆ ಇಲ್ಲವೆ ನಾಡದು
ನಿನ್ನ ವಿಷಯದಲ್ಲಿ ನನ್ನ ತಂದೆಯೊಡನೆ ಮಾತಾಡಿ ನಿನ್ನ
ಮೇಲೆ ಅವನಿಗೆ ದಯವುಂಟೆಂದು ಗೊತ್ತಾದರೆ ಕೂಡಲೆ
ನಿನಗೆ ತಿಳಿಯಪಡಿಸುವೆನು. ನನ್ನ ತಂದೆಯು ನಿನಗೆ 13
ಕೇಡುಮಾಡ ಮನಸ್ಸುಳ್ಳವನಾಗಿದ್ದಾನೆಂದು ಗೊತ್ತಾ
ದರೆ ಅದನ್ನೂ ನಿನಗೆ ತಿಳಿಸಿ ನೀನು ತಪ್ಪಿಸಿಕೊಂಡು
ಸುರಕ್ಷಿತನಾಗುವ ಹಾಗೆ ನಿನ್ನನ್ನು ಕಳುಹಿಸಿಬಿಡು
ವೆನು. ಹಾಗೆ ಮಾಡದಿದ್ದರೆ ಯೆಹೋವನು ನನಗೆ
ಬೇಕಾದದ್ದನ್ನು ಮಾಡಲಿ. ಆತನು ನನ್ನ ತಂದೆಯ
ಸಂಗಡ ಇದ್ದ ಹಾಗೆ ನಿನ್ನ ಸಂಗಡಲೂ ಇರಲಿ. ನೀನು 14
ಯೆಹೋವನನ್ನು ನೆನಸಿ ನನ್ನ ಜೀವಮಾನದಲ್ಲೆಲ್ಲಾ
ನನಗೆ ಕೃಪೆತೋರಿಸು; ನಾನು ಸತ್ತನಂತರ ನನ್ನ ಮನೆ 15
ಯ ಮೇಲೆಯೂ ಶಾಶ್ವತವಾಗಿ ನಿನ್ನ ದಯವಿರಲಿ. ಯೆ
ಹೋವನು ನಿನ್ನ ಎಲ್ಲಾ ಶತ್ರುಗಳನ್ನು ಭೂಮಿಯಿಂದ
ತೆಗೆದುಹಾಕಿದ ಮೇಲಾದರೂ ಅದು ನನ್ನ ಮನೆಯಿಂದ
ಅಗಲದಿರಲಿ. ಅಗಲಿದರೆ 2) ಯೆಹೋವನೇ ಶತ್ರುಗಳ 16
ಕೈಯಿಂದ ದಾವೀದನಿಗೆ ಮುಯ್ಯಿ ತೀರಿಸಲಿ ಎಂದು
ಹೇಳಿ ಅವನ ಮನೆಯವರೊಡನೆ ಒಡಂಬಡಿಕೆಮಾಡಿ
ಕೊಂಡು ತಾನು ದಾವೀದನನ್ನು ಸ್ವಂತ ಪ್ರಾಣದಂತೆ 17

1) ಮೂಲ: ನಾಯೋತಿನಲ್ಲಿ. 2) ಅಥವಾ: ಯೆಹೋವನೇ ದಾವೀದನ ಶತ್ರುಗಳಿಗೆ . . .

ಪ್ರೀತಿಸುತ್ತಿದ್ದದರಿಂದ ಆ ಪ್ರೀತಿಸಾಕ್ಷಿಯಾಗಿ ಅವನಿಂದ
ಪ್ರಮಾಣಮಾಡಿಸಿದನು.
18 ಯೋನಾತಾನನು ದಾವೀದನಿಗೆ—ನಾಳೆ ಶುದ್ಧ
ಪಾಡ್ಯವು; ನಿನ್ನ ಸ್ಥಳವು ಬರಿದಾಗಿರುವದನ್ನು ಅರಸನು
19 ಕಂಡು ನಿನ್ನ ವಿಷಯವಾಗಿ ವಿಚಾರಿಸುವನು. ನೀನು
ಮೂರನೆಯ ದಿನದಲ್ಲಿ ಮೊದಲು ಅಡಗಿಕೊಂಡಿದ್ದ
ಸ್ಥಳಕ್ಕೆ ಬೇಗ ಬಂದು ಅಲ್ಲಿನ ಕಲ್ಲುಕುಪ್ಪೆಯ ಬಳಿ
20 ಯಲ್ಲಿ ಕೂತುಕೊಂಡಿರು. ನಾನು ಗುರಿಯಿಟ್ಟವನೋ
ಎಂಬಂತೆ ಅದರ ಕಡೆಗೆ ಮೂರು ಬಾಣಗಳನ್ನು ಎಸೆದು
21 ಕೂಡಲೆ ಅವುಗಳನ್ನು ತರುವದಕ್ಕಾಗಿ ನನ್ನ ಆಳನ್ನು
ಕಳುಹಿಸುವೆನು. ನಾನು ಅವನಿಗೆ—ಬಾಣಗಳು ಈಚೆ
ಬಿದ್ದಿರುತ್ತವೆ; ಅವುಗಳನ್ನು ತೆಗೆದುಕೊಂಡು ಬಾ
ಎಂದು ಹೇಳಿದರೆ ನೀನು ಬಾ; ಯೆಹೋವನಾಣೆ,
ಯಾವ ಕೇಡೂ ಸಂಭವಿಸದೆ ಸುರಕ್ಷಿತನಾಗಿರುವಿ.
22 ಆದರೆ—ಬಾಣಗಳು ಆಚೆ ಬಿದ್ದಿರುತ್ತವೆ ಎಂದು ಹೇಳಿ
ದರೆ ಹೊರಟುಹೋಗು; ನೀನು ಹೋಗುವದೇ ಯೆ
23 ಹೋವನ ಚಿತ್ತವಾಗಿದೆ. ನಮ್ಮಿಬ್ಬರ ಒಡಂಬಡಿಕೆಗೆ
ಯೆಹೋವನೇ ನಿತ್ಯ ಸಾಕ್ಷಿಯಾಗಿರುವನು ಅಂದನು.
24 ದಾವೀದನು ಅಡವಿಯಲ್ಲಿ ಅಡಗಿಕೊಂಡನು. ಅರ
25 ಸನು ಶುದ್ಧ ಪಾಡ್ಯದ ದಿವಸ ಪದ್ಧತಿಯ ಪ್ರಕಾರ
ಗೋಡೆಯ ಬಳಿಯಲ್ಲಿರುವ ತನ್ನ ಆಸನದ ಮೇಲೆ
ಭೋಜನಕ್ಕೆ ಕೂತುಕೊಂಡನು. ಅವನ ಎದುರಾಗಿ
1) ಯೋನಾತಾನನೂ ಅವನ ಪಾರ್ಶ್ವದಲ್ಲಿ ಅಬ್ನೇರ
ನೂ ಕೂತುಕೊಂಡರು. ಸೌಲನು ದಾವೀದನ ಸ್ಥಳ
26 ವು ಬರಿದಾಗಿರುವದನ್ನು ಕಂಡರೂ ಆ ದಿವಸ ಅವನ
ವಿಷಯ ಏನೂ ಹೇಳಲಿಲ್ಲ. ಅವನಿಗೆ ಏನಾದರೂ
ಸಂಭವಿಸಿರಬೇಕು; ಅವನು ಹೊಲೆಯಾಗಿದ್ದಾನು,
ತನ್ನನ್ನು ಇನ್ನೂ ಶುದ್ಧಪಡಿಸಿಕೊಳ್ಳದೆ ಇರಬಹುದು
27 ಅಂದುಕೊಂಡನು. ಮರುದಿವಸದಲ್ಲಿಯೂ ಅಂದರೆ
ತಿಂಗಳಿನ ಎರಡನೆಯ ದಿವಸದಲ್ಲಿಯೂ ದಾವೀದನ
ಸ್ಥಾನವು ಬರಿದಾಗಿದ್ದದರಿಂದ ಸೌಲನು—ಇಷಯನ
ಮಗನು ನಿನ್ನೆಯೂ ಈ ಹೊತ್ತೂ ಭೋಜನಕ್ಕೆ ಯಾಕೆ
ಬರಲಿಲ್ಲ ಎಂದು ತನ್ನ ಮಗನಾದ ಯೋನಾತಾನ
28 ನನ್ನು ಕೇಳಿದನು. ಆದಕ್ಕೆ ಯೋನಾತಾನನು—
ದಾವೀದನು—ಬೇತ್ಲೆಹೇಮಿನಲ್ಲಿ ನಮ್ಮ ಗೋತ್ರದ
29 ವರು ಯಜ್ಞಮಾಡುತ್ತಾರೆ; ನನ್ನ ಅಣ್ಣನು ಅದಕ್ಕಾಗಿ
ನನ್ನನ್ನು ಕರೆದಿದ್ದಾನೆ; ದಯವಿಟ್ಟು ನನಗೆ ಅಪ್ಪಣೆ
ಕೊಡು. ನಾನು ಹೋಗಿ ನನ್ನ ಅಣ್ಣಂದಿಯರನ್ನು
ನೋಡಿ ಬರುತ್ತೇನೆ ಎಂದು ನನ್ನನ್ನು ಬಹಳವಾಗಿ ಬೇಡಿ
ಕೊಂಡು ಹೋದನು. ಆದದರಿಂದ ಅವನು ಅರಸನ
30 ಪಂಕ್ತಿಗೆ ಬರಲಿಲ್ಲ ಎಂದು ಉತ್ತರಕೊಟ್ಟನು. ಆಗ
ಸೌಲನು ಬಹಳವಾಗಿ ಉರಿಗೊಂಡು ಯೋನಾತಾನ
ನಿಗೆ—ಎಲೋ, ದುಷ್ಟ ದಾಸಿಯ ಮಗನೇ, ನೀನು
ಇಷಯನ ಮಗನೊಡನೆ ಸ್ನೇಹದಿಂದಿರುವದು ನನಗೆ
ಗೊತ್ತಿಲ್ಲವೋ? ಇದರಿಂದ ನಿನಗೂ ನಿನ್ನನ್ನು ಹೆತ್ತ
31 ವಳಿಗೂ ಮಾನಭಂಗವಾಗುವದು. ಆ ಇಷ
ಯನ ಮಗನು ಭೂಲೋಕದಲ್ಲಿರುವ ವರೆಗೆ ನಿನ
ಗಾದರೂ ನಿನ್ನ ರಾಜ್ಯಕ್ಕಾದರೂ ನೆಲೆಯಿಲ್ಲ; ಆದದ
ರಿಂದ ಅವನನ್ನು ಕರಿಸಿ ನನ್ನ ಬಳಿಗೆ ತೆಗೆದುಕೊಂಡು
ಬಾ; ಅವನು ಸಾಯಬೇಕು ಅಂದನು. ಅದಕ್ಕೆ
ಯೋನಾತಾನನು—ಅವನು ಯಾಕೆ ಸಾಯಬೇಕು?
ಅವನು ಏನು ಮಾಡಿದನು ಎಂದು ತನ್ನ ತಂದೆಯನ್ನು
ಕೇಳಿದನು. ಕೂಡಲೆ ಸೌಲನು ಅವನನ್ನು ತಿವಿಯ
ಬೇಕೆಂದು ಈಟಿಯನ್ನೆಸೆದನು. ತನ್ನ ತಂದೆಯು ದಾವೀ
ದನನ್ನು ಕೊಲ್ಲುವದಕ್ಕೆ ನಿಶ್ಚಯಿಸಿದ್ದಾನೆಂಬದು ಯೋ
ನಾತಾನನಿಗೆ ಗೊತ್ತಾಗಲು ಅವನು ಬಲು ಸಿಟ್ಟುಗೊಂ
ಡು ಪಂಕ್ತಿಯಿಂದೆದ್ದು ಹೋದನು; ತನ್ನ ತಂದೆಯು
ದಾವೀದನನ್ನು ಅಪಮಾನಪಡಿಸಿದದರಿಂದ ಯೋನಾ
ತಾನನಿಗೆ ಬಹಳ ದುಃಖವುಂಟಾಗಿ ಅವನು ಆ ದಿವಸ
ಊಟಮಾಡಲೇ ಇಲ್ಲ

ಅವನು ಮರುದಿವಸ ಮುಂಜಾನೆ ಒಬ್ಬ ಹುಡುಗ
ನನ್ನು ಕರಕೊಂಡು ದಾವೀದನನ್ನು ನೋಡುವದ
ಕ್ಕಾಗಿ ಅಡವಿಗೆ ಹೋಗಿ ಹುಡುಗನಿಗೆ—ಬೇಗ ಹೋಗಿ
ನಾನು ಎಸೆದ ಬಾಣಗಳನ್ನು ಕೂಡಿಸಿಕೊಂಡು ಬಾ
ಎಂದು ಹೇಳಿದನು. ಆ ಹುಡುಗನು ಹೋಗುತ್ತಿರು
ವಾಗ ಯೋನಾತಾನನು ಬಾಣವನ್ನು ಅವನ ಆಚೆಗೆ
ಎಸೆದನು. ಹುಡುಗನು ಬಾಣಬಿದ್ದ ಸ್ಥಳಕ್ಕೆ ಬಂದಾಗ
ಯೋನಾತಾನನು ಅವನಿಗೆ—ಬಾಣವು ನಿನ್ನ ಆಚೆ
ಬಿದ್ದಿತಲ್ಲಾ; ಬೇಗ ಹೋಗು, ನಿಲ್ಲಬೇಡ ಎಂದು
ಕೂಗಿ ಹೇಳಿದನು. ಹುಡುಗನು ಬಾಣಗಳನ್ನು
ಕೂಡಿಸಿಕೊಂಡು ಯಜಮಾನನ ಬಳಿಗೆ ಬಂದನು.
ಇದರ ರಹಸ್ಯವು ಯೋನಾತಾನ ದಾವೀದರಿಗೆ ಗೊತ್ತೇ
ಹೊರತು ಆ ಹುಡುಗನಿಗೆ ಗೊತ್ತಿರಲಿಲ್ಲ.

ಯೋನಾತಾನನು ತನ್ನ ಆಯುಧಗಳನ್ನು ಹುಡು
ಗನ ಕೈಯಲ್ಲಿ ಕೊಟ್ಟು ಅವನಿಗೆ—ಅವುಗಳನ್ನು
ಊರಿಗೆ ತೆಗೆದುಕೊಂಡು ಹೋಗು ಎಂದು ಹೇಳಿದನು.
ಹುಡುಗನು ಹೋಗುತ್ತಲೆ ದಾವೀದನು ಕಲ್ಲುಕುಪ್ಪೆ
ಯ ಬಳಿಯಿಂದೆದ್ದು ಬಂದು ಮೂರು ಸಾರಿ ಸಾಷ್ಟಾಂಗ
ವಾಗಿ ಯೋನಾತಾನನನ್ನು ವಂದಿಸಿದನು. ಅವರು
ಒಬ್ಬರಿಗೊಬ್ಬರು ಮುದ್ದಿಟ್ಟುಕೊಂಡು ಅತ್ತರು; ದಾವೀ
ದನು ಬಹಳವಾಗಿ ಅತ್ತನು. ಅನಂತರ ಯೋನಾತಾ
ನನು ದಾವೀದನಿಗೆ—ಸಮಾಧಾನದಿಂದ ಹೋಗು;
ನಾವು ಯೆಹೋವನ ಹೆಸರಿನಲ್ಲಿ ಆಣೆಯಿಟ್ಟು ಒಡಂಬ
ಡಿಕೆಯನ್ನು ಮಾಡಿಕೊಂಡಿದ್ದೇವಲ್ಲಾ; ಆತನೇ ನನಗೂ
ನಿನಗೂ ನನ್ನ ಸಂತಾನಕ್ಕೂ ನಿನ್ನ ಸಂತಾನಕ್ಕೂ ಸದಾ
ಸಂಬಂಧಸಾಕ್ಷಿಯಾಗಿರಲಿ ಎಂದು ಹೇಳಿದನು. ತರು
ವಾಯ ದಾವೀದನು ಹೊರಟುಹೋದನು; ಯೋನಾ
ತಾನನು ಊರೊಳಕ್ಕೆ ಬಂದನು.

ದಾವೀದನು ನೋಬಕ್ಕೂ ಅಲ್ಲಿಂದ ಗತ್ ಊರಿಗೂ
ಓಡಿಹೋದದ್ದು.

ದಾವೀದನು ನೋಬ್ ಊರಲ್ಲಿದ್ದ ಯಾಜಕ 2
ನಾದ ಅಹೀಮೆಲೆಕನ ಬಳಿಗೆ ಬಂದನು. ಅಹೀಮೆಲೆ
ಕನು ದಾವೀದನನ್ನು ಭಯಭಕ್ತಿಯಿಂದ ಎದುರು
ಗೊಂಡು—ನಿನ್ನ ಜೊತೆಯಲ್ಲಿ ಒಬ್ಬನಾದರೂ ಇಲ್ಲ

1) ಪಾಠಾಂತರ: ಯೋನಾತಾನನು ಎದ್ದನು.

ವಲ್ಲಾ! ನೀನು ಒಬ್ಬನೇ ಬಂದದ್ದೇಕೆ ಎಂದು ಅವ
2 ನನ್ನು ಕೇಳಲು ಅವನು— ಅರಸನು ಒಂದು ಕೆಲಸ
ವನ್ನು ಆಜ್ಞಾಪಿಸಿ ಇದನ್ನು ಯಾರಿಗೂ ತಿಳಿಸಬಾರ
ದೆಂದು ಕಟ್ಟುಮಾಡಿ ನನ್ನನ್ನು ಕಳುಹಿಸಿದ್ದಾನೆ. ನನ್ನ
ಆಳುಗಳು ಇಂಥಿಂಥ ಸ್ಥಳದಲ್ಲಿ ನನ್ನನ್ನು ಸಂಧಿಸ
3 ಬೇಕೆಂದು ಗೊತ್ತುಮಾಡಿದ್ದೇನೆ. ಈಗ ನಿನ್ನ ಕೈ
ಯಲ್ಲಿ ಏನಾದರೂ ಉಂಟೋ? ನಾಲ್ಕೈದು ರೊಟ್ಟಿ
ಗಳಾದರೂ ಬೇರೆ ಯಾವ ಆಹಾರಪದಾರ್ಥವಾದರೂ
4 ಇದ್ದರೆ ನನಗೆ ಕೊಟ್ಟುಬಿಡು ಅಂದನು. ಯಾಜಕನು
ದಾವೀದನಿಗೆ— ನನ್ನ ಬಳಿಯಲ್ಲಿ ಮೀಸಲ ರೊಟ್ಟಿ
ಗಳ ಹೊರತು ಬೇರೆ ರೊಟ್ಟಿಗಳಿಲ್ಲ; ನಿನ್ನ ಆಳುಗಳು
ಸ್ತ್ರೀಸಂಗಬಿಟ್ಟವರಾಗಿದ್ದರೆ ಅವುಗಳನ್ನು ಕೊಡಬಹು
5 ದು ಎನ್ನಲು ದಾವೀದನು— ನಮ್ಮ ಎಲ್ಲಾ ಯುದ್ಧ
ಪ್ರಯಾಣಗಳಲ್ಲಿ ಸ್ತ್ರೀನಿಷೇಧಮಾಡುವಂತೆ ಈಗಲೂ
ಮಾಡಿದ್ದೇವೆ. ನಾವು ಸಾಧಾರಣಕಾರ್ಯಕ್ಕೆ ಹೊರ
ಟಾಗಲೂ ಆಳುಗಳ ಸಾಮಾನುಗಳು ಪರಿಶುದ್ಧವಾಗಿ
ರುತ್ತಿದ್ದವು. ಈ ದಿನದಲ್ಲಿ ಅವು ಎಷ್ಟೋ ಹೆಚ್ಚಾಗಿ
ಪರಿಶುದ್ಧವಾಗಿರುವವಲ್ಲವೇ ಎಂದು ಉತ್ತರಕೊಟ್ಟನು.
6 ಬಿಸಿರೊಟ್ಟಿಗಳನ್ನು ಅರ್ಪಿಸಿದ ಆ ದಿನದಲ್ಲಿ ಯೆಹೋ
ವನ ಸನ್ನಿಧಿಯಿಂದ ತೆಗೆಯಲ್ಪಟ್ಟ ನೈವೇದ್ಯವಾದ
ಮೊದಲ ರೊಟ್ಟಿಗಳ ಹೊರತು ಅಲ್ಲಿ ಬೇರೆ ರೊಟ್ಟಿಗ
ಳಿರಲಿಲ್ಲವಾದದರಿಂದ ಯಾಜಕನು ಆ ಪರಿಶುದ್ಧ
7 ವಾದ ರೊಟ್ಟಿಗಳನ್ನೇ ಕೊಟ್ಟುಬಿಟ್ಟನು. ಅದೇ
ದಿವಸ ಸೌಲನ ಪಶುಪಾಲರಲ್ಲಿ ಪ್ರಧಾನನಾದ ದೋ
ಯೇಗನೆಂಬ ಎದೋಮ್ಯನು ಯೆಹೋವನ ಆಲಯ
8 ದಲ್ಲಿ ತಡೆಯಲ್ಪಟ್ಟಿದ್ದನು. ದಾವೀದನು ಅಹೀಮೆಲೆ
ಕನನ್ನು— ಅರಸನ ಕಾರ್ಯವು ಅವಸರವಾಗಿದ್ದದ
ರಿಂದ ಕತ್ತಿಯನ್ನಾಗಲಿ ಬೇರೆ ಆಯುಧವನ್ನಾಗಲಿ
ತೆಗೆದುಕೊಂಡು ಬರಲು ಆಗಲಿಲ್ಲ; ನಿನ್ನ ಬಳಿಯಲ್ಲಿ
ಬರ್ಜಿಯಾಗಲಿ ಕತ್ತಿಯಾಗಲಿ ಇಲ್ಲವೋ ಎಂದು
9 ಕೇಳಲು ಅವನು— ನೀನು ಏಲಾ ತಗ್ಗಿನಲ್ಲಿ ಕೊಂದು
ಹಾಕಿದ ಫಿಲಿಷ್ಟಿಯನಾದ ಗೊಲ್ಯಾತನ ಕತ್ತಿಯು
ಒಂದು ಬಟ್ಟೆಯಲ್ಲಿ ಸುತ್ತಲ್ಪಟ್ಟು ಏಫೋದಿನ ಹಿಂದೆ
ಇಡಲ್ಪಟ್ಟಿದೆ; ಬೇಕಾದರೆ ಅದನ್ನು ತೆಗೆದುಕೋ.
ಅದರ ಹೊರತು ನನ್ನ ಬಳಿಯಲ್ಲಿ ಬೇರೊಂದಿಲ್ಲ
ಎಂದು ಉತ್ತರಕೊಟ್ಟನು. ದಾವೀದನು— ಅದಕ್ಕೆ
ಸಮಾನವಾದದ್ದು ಮತ್ತೊಂದಿಲ್ಲ, ಅದನ್ನೇ ಕೊಡು
ಎಂದು ಹೇಳಿ ತೆಗೆದುಕೊಂಡನು.
10 ದಾವೀದನು ಸೌಲನ ಭಯದಿಂದ ಅದೇ ದಿವಸ
ಗತ್ ಊರಿನ ಅರಸನಾದ ಆಕೀಷನ ಬಳಿಗೆ ಓಡಿಹೋ
11 ದನು. ಆಕೀಷನ ಸೇವಕರು—
ಸೌಲನು ಸಾವಿರಗಟ್ಟಳೆಯಾಗಿ ಕೊಂದನು;
ದಾವೀದನು ಹತ್ತು ಸಾವಿರಗಟ್ಟಳೆಯಾಗಿ ಕೊಂ
ದನು
ಎಂಬದಾಗಿ ಸ್ತ್ರೀಯರು ಕುಣಿಯುತ್ತಾ ಹಾಡಿದ್ದು
ಇವನನ್ನು ಕುರಿತಲ್ಲವೋ? ಎಂದು ಮಾತಾಡಿಕೊಂಡ
12 ರು. ದಾವೀದನು ಈ ಮಾತುಗಳನ್ನು ಕೇಳುತ್ತಲೆ
ಗತ್ ಊರಿನ ಅರಸನಾದ ಆಕೀಷನಿಗೆ ಬಹಳವಾಗಿ ಹೆದರಿ
13 ಅವನ ಸೇವಕರ ಮುಂದೆ ತನ್ನ ಬುದ್ಧಿಯನ್ನು
ಮಾರ್ಪಡಿಸಿಕೊಂಡು ಗಡ್ಡದ ಮೇಲೆಲ್ಲಾ ಜೊಲ್ಲು
ಸುರಿಸುತ್ತಾ ಕದಗಳನ್ನು ಕೆರೆಯುತ್ತಾ ತನ್ನನ್ನು
ಹುಚ್ಚನಂತೆ ತೋರಿಸಿಕೊಂಡನು. ಆಗ ಆಕೀಷನು 14
ತನ್ನ ಸೇವಕರಿಗೆ— ಈ ಮನುಷ್ಯನು ಹುಚ್ಚನೆಂದು
ನಿಮಗೆ ಕಾಣುವದಿಲ್ಲವೋ? ಇವನನ್ನು ನನ್ನ ಹತ್ತಿರ
ಯಾಕೆ ತಂದಿರಿ? ನನ್ನ ಬಳಿಯಲ್ಲಿ ಹುಚ್ಚರು ಕಡಿಮೆ 15
ಯೆಂದು ನೆನಸಿ ನನ್ನನ್ನು ಮರುಳಾಟದಿಂದ ಬೇಸರ
ಗೊಳಿಸುವದಕ್ಕಾಗಿ ಇವನನ್ನು ತಂದಿರೋ? ಇಂಥ
ವನು ನನ್ನ ಮನೆಗೆ ಬರಬೇಕೋ ಅಂದನು.

ದಾವೀದನು ಅದುಲ್ಲಾಮ್, ಮೋವಾಬ್, ಹೆರೆತ್ ಎಂಬ
ಸ್ಥಳಗಳಲ್ಲಿ ಸಂಚರಿಸಿದ್ದು; ಸೌಲನು ನೋಬಿನ
ಯಾಜಕರನ್ನು ಕೊಲ್ಲಿಸಿದ್ದು.

ದಾವೀದನು ಅಲ್ಲಿಂದ ತಪ್ಪಿಸಿಕೊಂಡು ಅದು 22
ಲ್ಲಾಮೆಂಬ ಗವಿಗೆ ಹೋದನು. ಈ ವರ್ತಮಾನವು
ಅವನ ಅಣ್ಣಂದಿರಿಗೂ ಬೇರೆ ಎಲ್ಲಾ ಸಂಬಂಧಿಕರಿಗೂ
ಮುಟ್ಟಲಾಗಿ ಅವರೂ ಬಂದು ಅವನನ್ನು ಸೇರಿ
ಕೊಂಡರು. ಇದಲ್ಲದೆ ಕುಗ್ಗಿದವರೂ ಸಾಲಗಾರರೂ 2
ಮನನೊಂದವರೂ ಆಗಿರುವ ಸರ್ವಜನರೂ ಬಂದು
ಅವನನ್ನು ಆಶ್ರಯಿಸಿಕೊಳ್ಳಲು ಅವನು ಸುಮಾರು
ನಾನೂರು ಜನರಿಗೆ ನಾಯಕನಾದನು.
ಅನಂತರ ದಾವೀದನು ತನ್ನ ತಂದೆತಾಯಿಗಳನ್ನು 3
ಮೋವಾಬ್‌ದೇಶದ ಮಿಚ್ಪೆ ಎಂಬಲ್ಲಿಗೆ ಕರಕೊಂಡು
ಹೋಗಿ ಅಲ್ಲಿನ ಅರಸನನ್ನು— ದೇವರು ನನಗೆ
ಮಾರ್ಗತೋರಿಸುವ ವರೆಗೂ ನನ್ನ ತಂದೆತಾಯಿಗಳು
ನಿನ್ನ ಬಳಿಯಲ್ಲಿರುವದಕ್ಕೆ ಅಪ್ಪಣೆಯಾಗಬೇಕೆಂದು
ಬೇಡಿಕೊಂಡು ಅವರನ್ನು ಆವನ ಬಳಿಯಲ್ಲಿ ಬಿಟ್ಟನು. 4
ದಾವೀದನು ದುರ್ಗದಲ್ಲಿದ್ದ ಕಾಲವೆಲ್ಲಾ ಅವನ ತಂದೆ
ತಾಯಿಗಳು ಈ ಅರಸನ ಬಳಿಯಲ್ಲಿ ವಾಸವಾಗಿ
ದ್ದರು. ಗಾದ್‌ಪ್ರವಾದಿಯು ದಾವೀದನಿಗೆ— ನೀನು 5
ಈ ದುರ್ಗದಲ್ಲಿರಬಾರದು; ಇದನ್ನು ಬಿಟ್ಟು ಯೆಹೂ
ದದೇಶಕ್ಕೆ ಹೋಗು ಎಂದು ಹೇಳಿದದರಿಂದ ಅವನು
ಹೆರೆತ್ ಅರಣ್ಯಕ್ಕೆ ಹೋದನು.
ಒಂದು ದಿವಸ ಸೌಲನು ತನ್ನ ಎಲ್ಲಾ ಪರಿವಾರದ 6
ವರ ನಡುವೆ ಕೈಯಲ್ಲಿ ಬರ್ಜಿಯನ್ನು ಹಿಡಿದುಕೊಂಡು
ಗಿಬೆಯ ಗುಡ್ಡದ ಪಿಚುಲವೃಕ್ಷದ ಕೆಳಗೆ ಕೂತು
ಕೊಂಡಿರಲು ದಾವೀದನೂ ಅವನ ಜನರೂ ಅಡಗಿ
ಕೊಂಡಿರುವ ಸ್ಥಳವು ಗೊತ್ತಾಗಿದೆ ಎಂಬ ಸುದ್ದಿಯು
ಅವನಿಗೆ ಮುಟ್ಟಿತು. ಆಗ ಅವನು ತನ್ನ ಸುತ್ತಲೂ 7
ನಿಂತಿದ್ದ ಪರಿವಾರದವರಿಗೆ— ಬೆನ್ಯಾಮೀನನ ಮಕ್ಕಳೇ,
ಕೇಳಿರಿ; ನೀವೆಲ್ಲರೂ ನನಗೆ ವಿರೋಧವಾಗಿ ಒಳ
ಸಂಚು ಮಾಡುವದೇಕೆ? ಇಷಯನ ಮಗನು ನಿಮ್ಮೆ
ಲ್ಲರಿಗೂ ಹೊಲಗಳನ್ನೂ ದ್ರಾಕ್ಷೇತೋಟಗಳನ್ನೂ
ಕೊಡುವನೋ? ಎಲ್ಲರನ್ನೂ ಸಹಸ್ರಾಧಿಪತಿಗಳನ್ನಾ
ಗಲಿ ಶತಾಧಿಪತಿಗಳನ್ನಾಗಲಿ ಮಾಡುವನೋ? ನನ್ನ 8
ಮಗನು ಇಷಯನ ಮಗನೊಡನೆ ಒಡಂಬಡಿಕೆಮಾಡಿ
ಕೊಂಡದ್ದನ್ನು ನಿಮ್ಮಲ್ಲಿ ಒಬ್ಬನಾದರೂ ನನಗೆ ತಿಳಿಸ
ಲಿಲ್ಲವಲ್ಲಾ; ನನ್ನ ಸೇವಕನು ನನಗೆ ವಿರೋಧವಾಗಿ
ಒಳಸಂಚುಮಾಡುವ ಹಾಗೆ ನನ್ನ ಮಗನೇ ಅವನನ್ನು
ಎಬ್ಬಿಸಿದನೆಂದು ಒಬ್ಬನಾದರೂ ನನಗೆ ಯಾಕೆ ತಿಳಿಸ

ಲಿಲ್ಲ; ನೀವು ನನ್ನ ಚಿಂತೆಯನ್ನೇ ಬಿಟ್ಟಿರಿ ಅಂದನು.
9 ಆಗ ಸೌಲನ ಸೇವಕರ ಬಳಿಯಲ್ಲಿ ನಿಂತಿದ್ದ ಎದೋ
ಮ್ಯನಾದ ದೋಯೇಗನು—ಇಷಯನ ಮಗನು
ನೋಬದಲ್ಲಿರುವ ಅಹೀಟೂಬನ ಮಗನಾದ ಅಹೀ
10 ಮೆಲೆಕನ ಬಳಿಗೆ ಬಂದದ್ದನ್ನು ಕಂಡೆನು. ಅವನು ಇವ
ನಿಗೆ ಯೆಹೋವನ ಚಿತ್ತವನ್ನು ತಿಳಿಸಿ ಆಹಾರವನ್ನೂ
ಫಿಲಿಷ್ಟಿಯನಾದ ಗೊಲ್ಯಾತನ ಕತ್ತಿಯನ್ನೂ ಕೊಟ್ಟನು
11 ಎಂದು ಹೇಳಿದನು. ಕೂಡಲೆ ಸೌಲನು ಅಹಿಟೂಬನ
ಮಗನೂ ಯಾಜಕನೂ ಆಗಿದ್ದ ಅಹೀಮೆಲೆಕನನ್ನು
ಅವನ ಕುಟುಂಬಕ್ಕೆ ಸೇರಿದ ನೋಬದ ಬೇರೆ ಎಲ್ಲಾ
ಯಾಜಕರೊಡನೆ ಕರೇ ಕಳುಹಿಸಿದನು. ಅವರೆಲ್ಲರೂ
12 ಅರಸನ ಸನ್ನಿಧಿಗೆ ಬರಲು ಅರಸನು—ಅಹೀಟೂಬನ
ಮಗನೇ, ಕೇಳು ಅಂದನು. ಅದಕ್ಕೆ ಆವನು—ಒಡೆ
ಯಾ, ಅಪ್ಪಣೆಯಾಗಲಿ ಎಂದು ಉತ್ತರಕೊಟ್ಟನು.
13 ಆಗ ಸೌಲನು ಅವನಿಗೆ—ನೀನು ನನಗೆ ವಿರೋಧ
ವಾಗಿ ಇಷಯನ ಮಗನೊಡನೆ ಒಳಸಂಚುಮಾಡಿ
ದ್ದೇಕೆ? ಅವನು ನನಗೆ ವಿರೋಧವಾಗಿ ಎದ್ದು ನನ್ನ
ಜೀವಕ್ಕಾಗಿ ಹೊಂಚುಹಾಕುವಂತೆ ನೀನು ಅವನಿಗೆ
ರೊಟ್ಟಿಕತ್ತಿಗಳನ್ನು ಕೊಟ್ಟು ದೈವೋತ್ತರವನ್ನು ತಿಳಿಸಿ
14 ದ್ದೇಕೆ ಎಂದು ಕೇಳಲು ಅವನು—ನಿನ್ನ ಎಲ್ಲಾ ಸೇವ
ಕರಲ್ಲಿ ಅರಸನ ಅಳಿಯನಾಗಿರುವ ದಾವೀದನಂತೆ
ನಂಬಿಗಸ್ತನಾದವನು ಯಾವನಿದ್ದಾನೆ? ಅವನು ನಿನ್ನ
ಮಂತ್ರಾಲೋಚಕರಲ್ಲೊಬ್ಬನೂ ನಿನ್ನ ಮನೆಯಲ್ಲಿ
15 ಘನವಂತನೂ ಆಗಿದ್ದಾನಲ್ಲವೋ? ನಾನು ಅವನಿಗೋ
ಸ್ಕರ ದೇವರ ಸನ್ನಿಧಿಯಲ್ಲಿ ವಿಚಾರಮಾಡಿದ್ದು ಇದೇ
ಮೊದಲನೆಯ ಸಾರಿಯೋ? ಇದು ನನಗೆ ದೂರವಾಗಿ
ರಲಿ; ಅರಸನು ತನ್ನ ಸೇವಕನ ಮೇಲೆಯೂ ಅವನ
ಮನೆಯವರ ಮೇಲೆಯೂ ಇಂಥ ಮಾತನ್ನು ಹೊರಿಸ
ಬಾರದು. ಈ ವಿಷಯದಲ್ಲಿ ನಿನ್ನ ಸೇವಕನಿಗೆ ಸ್ವಲ್ಪ
16 ವೂ ಗೊತ್ತಿರಲಿಲ್ಲ ಎಂದು ಉತ್ತರಕೊಟ್ಟನು. ಆಗ
ಅರಸನು ಅವನಿಗೆ—ಅಹೀಮೆಲೆಕನೇ, ನೀನೂ ನಿನ್ನ
ಮನೆಯವರೂ ಸಾಯಲೇ ಬೇಕು ಎಂದು ಹೇಳಿ
17 ತನ್ನ ಬಳಿಯಲ್ಲಿದ್ದ ಸಿಪಾಯಿಗಳಿಗೆ—ನೀವು ತಿರುಗಿ
ಕೊಂಡು ಯೆಹೋವನ ಈ ಯಾಜಕರನ್ನು ಕೊಲ್ಲಿರಿ;
ದಾವೀದನು ಓಡಿಹೋದದ್ದು ಗೊತ್ತಿದ್ದರೂ ನನಗೆ
ತಿಳಿಸದೆ ಅವನಿಗೆ ಸಹಾಯಮಾಡಿದ್ದಾರೆ ಎಂದು ಹೇಳಿ
ಆಜ್ಞಾಪಿಸಿದನು. ಆದರೆ ಅರಸನ ಸಿಪಾಯಿಗಳು
ಯೆಹೋವನ ಯಾಜಕರ ಮೇಲೆ ಕೈಹಾಕುವದಕ್ಕೆ
18 ಮನಸ್ಸುಮಾಡಲಿಲ್ಲ. ಆದದರಿಂದ ಸೌಲನು ಎದೋ
ಮ್ಯನಾದ ದೋಯೇಗನಿಗೆ—ನೀನು ಹೋಗಿ ಅವ
ರನ್ನು ಕೊಲ್ಲು ಎಂದು ಆಜ್ಞಾಪಿಸಲು ಅವನು ನಾರು
ಬಟ್ಟೆಯ ಏಫೋದನ್ನು ಧರಿಸಿಕೊಂಡಿದ್ದ ಎಂಭತ್ತೈದು
ಮಂದಿ ಯಾಜಕರನ್ನು ಆ ದಿವಸ ಕೊಂದುಹಾಕಿದನು.
19 ಅನಂತರ ಅವನು ಯಾಜಕರ ಪಟ್ಟಣವಾದ ನೋಬಕ್ಕೆ
ಹೋಗಿ ಅಲ್ಲಿನ ಸ್ತ್ರೀಪುರುಷರನ್ನೂ ಶಿಶುಬಾಲಕರನ್ನೂ
ದನಕುರಿಕತ್ತೆಗಳನ್ನೂ ಕತ್ತಿಯಿಂದ ಸಂಹರಿಸಿದನು.
20 ಅಹೀಟೂಬನ ಮಗನಾದ ಅಹೀಮೆಲೆಕನ ಮಕ್ಕ
ಳಲ್ಲೊಬ್ಬನಾದ ಎಬ್ಯಾತಾರನೆಂಬವನು ತಪ್ಪಿಸಿಕೊಂಡು
21 ದಾವೀದನ ಬಳಿಗೆ ಓಡಿಬಂದು ಸೌಲನು ಯೆಹೋವನ
ಯಾಜಕರನ್ನು ಕೊಲ್ಲಿಸಿದ ಸಂಗತಿಯನ್ನು ಅವನಿಗೆ
ತಿಳಿಸಲು ದಾವೀದನು—ಎದೋಮ್ಯನಾದ ದೋಯೇಗ
ನನ್ನು ನಾನು ಅಲ್ಲಿ ಕಂಡಾಗಲೇ ಇವನು ಸೌಲನಿಗೆ
ಹೇಗೂ ಈ ಸಂಗತಿಯನ್ನು ತಿಳಿಸುವನೆಂದು ನೆನಸಿ
ಕೊಂಡೆನು. ನಿನ್ನ ಸಂಬಂಧಿಕರ ವಧೆಗೆ ನಾನೇ ಕಾರಣ
ನಾದೆನಲ್ಲಾ! ನೀನಾದರೋ ಹೆದರದೆ ನನ್ನ ಸಂಗಡ
ಇರು; ನನ್ನ ಪ್ರಾಣವನ್ನು ತೆಗೆಯಬೇಕೆಂದಿರುವವನೇ
ನಿನ್ನ ಪ್ರಾಣವನ್ನೂ ತೆಗೆಯಬೇಕೆಂದಿರುತ್ತಾನೆ. ನೀನು
ನನ್ನ ಜೊತೆಯಲ್ಲಿರುವದಾದರೆ ಸುರಕ್ಷಿತನಾಗಿರುವಿ
ಅಂದನು.

ದಾವೀದನು ಕೆಯಿಲಾ ಊರಿನಲ್ಲಿಯೂ ಜೀಫ್
ಅರಣ್ಯದಲ್ಲಿಯೂ ಇದ್ದದ್ದು.

ಫಿಲಿಷ್ಟಿಯರು ಕೆಯಿಲಾಕ್ಕೆ ಮುತ್ತಿಗೆಹಾಕಿ ಅಲ್ಲಿನ 2
ಕಣಗಳನ್ನು ಸೂರೆಮಾಡುತ್ತಿರುವ ವರ್ತಮಾನವು
ದಾವೀದನಿಗೆ ಮುಟ್ಟಲು ಅವನು—ನಾನು ಹೋಗಿ
ಆ ಫಿಲಿಷ್ಟಿಯರನ್ನು ಹೊಡಿಯಬಹುದೋ ಎಂದು
ಯೆಹೋವನನ್ನು ಕೇಳಿದನು. ಆತನು ಅವನಿಗೆ—
ಹೋಗಿ ಫಿಲಿಷ್ಟಿಯರನ್ನು ಹೊಡೆದು ಕೆಯಿಲಾ ಊರ
ನ್ನು ರಕ್ಷಿಸು ಎಂದು ಉತ್ತರಕೊಟ್ಟನು. ಆದರೆ
ದಾವೀದನ ಸೈನಿಕರು ಅವನಿಗೆ—ನಮಗೆ ಯೆಹೂದ
ಸೀಮೆಯಲ್ಲಿಯೇ ಇಷ್ಟು ಭಯವಿರುವಲ್ಲಿ ಫಿಲಿಷ್ಟಿಯ
ಸೈನ್ಯದೊಡನೆ ಯುದ್ಧಮಾಡುವದಕ್ಕಾಗಿ ಕೆಯಿಲಾಕ್ಕೆ
ಹೋದರೆ ಅಲ್ಲಿ ಎಷ್ಟೋ ಅಧಿಕವಾದ ಭಯವುಂಟಾ
ಗುವದಲ್ಲವೇ ಅಂದರು. ಆದದರಿಂದ ಅವನು ತಿರಿಗಿ
ಯೆಹೋವನನ್ನು ಕೇಳಿದನು. ಆತನು—ನೀನೆದ್ದು
ಕೆಯಿಲಾಕ್ಕೆ ಹೋಗು; ನಾನು ಫಿಲಿಷ್ಟಿಯರನ್ನು ನಿನ್ನ
ಕೈಗೆ ಒಪ್ಪಿಸಿಕೊಡುವೆನು ಎಂದು ಉತ್ತರಕೊಟ್ಟನು.
ಆಗ ದಾವೀದನು ತನ್ನ ಜನರೊಡನೆ ಕೆಯಿಲಾಕ್ಕೆ
ಹೋಗಿ ಫಿಲಿಷ್ಟಿಯರೊಡನೆ ಯುದ್ಧಮಾಡಿ ಅವರನ್ನು
ಪೂರ್ಣವಾಗಿ ಸೋಲಿಸಿ ಅವರ ಪಶುಗಳನ್ನು ತೆಗೆದು
ಕೊಂಡು ಕೆಯಿಲಾದವರನ್ನು ರಕ್ಷಿಸಿದನು. ದಾವೀ
ದನ ಬಳಿಗೆ ಓಡಿಬಂದಿದ್ದ ಅಹೀಮೆಲೆಕನ ಮಗನಾದ
ಎಬ್ಯಾತಾರನು ಕೆಯಿಲಾಕ್ಕೆ ಬರುವಾಗ ಏಫೋ
ದನ್ನು ತಂದಿದ್ದನು. ದಾವೀದನು ಕೆಯಿಲಾದಲ್ಲಿದ್ದಾ
ನೆಂಬ ವರ್ತಮಾನವು ಸೌಲನಿಗೆ ಮುಟ್ಟಿದಾಗ ಅವ
ನು—ದೇವರು ದಾವೀದನನ್ನು ನನ್ನ ಕೈಗೆ ಒಪ್ಪಿಸಿ
ದನು. ಅವನು ಅಗುಳಿಕದಗಳಿಂದ ಭದ್ರವಾಗಿರುವ
ಪಟ್ಟಣವನ್ನು ಪ್ರವೇಶಿಸಿದ್ದಾನಲ್ಲಾ; ಅವನು ಅಲ್ಲಿಂದ
ತಪ್ಪಿಸಿಕೊಳ್ಳಲಾರನು ಅಂದುಕೊಂಡು ಕೆಯಿಲಾದ
ಲ್ಲಿದ್ದ ದಾವೀದನನ್ನೂ ಅವನ ಜನರನ್ನೂ ಹಿಡಿಯ
ಹೋಗುವದಕ್ಕೋಸ್ಕರ ಸೈನ್ಯವನ್ನು ಕೂಡಿಸಿದನು.
ಸೌಲನು ತನಗೆ ಕೇಡುಮಾಡಬೇಕೆಂದಿದ್ದಾನೆಂದು ದಾ
ವೀದನು ತಿಳಿದು ಯಾಜಕನಾದ ಎಬ್ಯಾತಾರನಿಗೆ—
ಏಫೋದನ್ನು ಇಲ್ಲಿಗೆ ತೆಗೆದುಕೊಂಡು ಬಾ ಎಂದು
ಹೇಳಿ ತರಿಸಿ—ಇಸ್ರಾಯೇಲ್‌ದೇವರಾದ ಯೆಹೋ
ವನೇ, ಸೌಲನು ಕೆಯಿಲಾಕ್ಕೆ ಬಂದು ನನ್ನ ನಿಮಿತ್ತ
ವಾಗಿ ಪಟ್ಟಣವನ್ನು ಹಾಳುಮಾಡಬೇಕೆಂದಿದ್ದಾನೆಂದು
ನಿನ್ನ ಸೇವಕನಾದ ನನಗೆ ಸುದ್ದಿ ಬಂದಿತು. ನಾನು
ಕೇಳಿದ ಸುದ್ದಿಯಂತೆ ಅವನು ನಿಜವಾಗಿ ಬರುವನೋ?

ಕೆಯಿಲಾ ಊರಿನವರು ನನ್ನನ್ನು ಅವನ ಕೈಗೆ ಒಪ್ಪಿ
ಸುವರೋ? ಇಸ್ರಾಯೇಲ್‌ದೇವರಾದ ಯೆಹೋವನೇ,
ಈ ವಿಷಯದಲ್ಲಿ ಉತ್ತರದಯಪಾಲಿಸು ಎಂದು ಪ್ರಾರ್ಥಿ
ಸಲು ಅವನು ಬರುವನೆಂಬದಾಗಿ ಯೆಹೋವನಿಂದ
2 ಉತ್ತರಸಿಕ್ಕಿತು. ದಾವೀದನು ತಿರಿಗಿ ಯೆಹೋವನನ್ನು—
ಕೆಯಿಲದವರು ನನ್ನನ್ನೂ ನನ್ನ ಜನರನ್ನೂ ಸೌಲನ
ಕೈಗೆ ಒಪ್ಪಿಸುವರೋ ಎಂದು ಕೇಳಿದಾಗ ಆತನು—
3 ಒಪ್ಪಿಸಿಕೊಡುವರು ಎಂದು ಉತ್ತರಕೊಟ್ಟನು. ಆಗ
ದಾವೀದನು ತನ್ನ ಸಂಗಡ ಇದ್ದ ಆರುನೂರು
ಜನರ ಸಹಿತವಾಗಿ ಕೆಯಿಲಾ ಊರನ್ನು ಬಿಟ್ಟು
ಎಲ್ಲೆಲ್ಲಿಯೋ ಅಲೆದಾಡಿದನು. ದಾವೀದನು ಕೆಯಿ
ಲದಿಂದ ತಪ್ಪಿಸಿಕೊಂಡನೆಂದು ಸೌಲನಿಗೆ ಗೊತ್ತಾಗಲು
ಅವನು ಹೊರಡುವದನ್ನು ನಿಲ್ಲಿಸಿಬಿಟ್ಟನು.
4 ಅನಂತರ ದಾವೀದನು ಅರಣ್ಯದಲ್ಲಿರುವ ಆಯಾ
ಆಶ್ರಯಗಿರಿಗಳಲ್ಲಿ ಇರುತ್ತಿದ್ದು ಕಡೆಗೆ ಜೀಫ್ ಅರ
ಣ್ಯದ ಪರ್ವತಪ್ರಾಂತಕ್ಕೆ ಬಂದು ಅಲ್ಲಿ ವಾಸಮಾಡಿ
ದನು. ಸೌಲನು ದಿನಂಪ್ರತಿಯೂ ಅವನನ್ನು ಹುಡು
ಕುತ್ತಿದ್ದರೂ ದೇವರು ಇವನ ಕೈಗೆ ಒಪ್ಪಿಸಲಿಲ್ಲ.
5 ಸೌಲನು ತನ್ನನ್ನು ಕೊಲ್ಲ ಹೊರಟಿದ್ದಾನೆಂದು ದಾವೀ
ದನು ತಿಳಿದು ಜೀಫ್ ಅರಣ್ಯದ ಹೋರೆಷದಲ್ಲಿ ಅಡಗಿ
16 ಕೊಂಡಿದ್ದನು. ಆಗ ಸೌಲನ ಮಗನಾದ ಯೋನಾ
17 ತಾನನು ಅಲ್ಲಿಗೆ ಹೋಗಿ ದಾವೀದನಿಗೆ—ಭಯಪಡ
ಬೇಡ; ನೀನು ನನ್ನ ತಂದೆಯಾದ ಸೌಲನ ಕೈಗೆ
ಸಿಕ್ಕಬೀಳುವದಿಲ್ಲ; ನೀನು ಇಸ್ರಾಯೇಲ್ಯರ ಅರಸ
ನಾಗುವಿ; ನಾನು ನಿನಗೆ ಎರಡನೆಯವನಾಗಿರುವೆನು.
ಹೀಗಾಗುವದೆಂದು ನನ್ನ ತಂದೆಯಾದ ಸೌಲನೂ
ತಿಳಿದುಕೊಂಡಿದ್ದಾನೆ ಎಂದು ಹೇಳಿ ದೇವರಲ್ಲಿ ಅವ
18 ನನ್ನು ಬಲಪಡಿಸಿದನು. ಅವರಿಬ್ಬರೂ ಯೆಹೋವನ
ಸನ್ನಿಧಿಯಲ್ಲಿ ಒಡಂಬಡಿಕೆಮಾಡಿಕೊಂಡರು. ತರು
ವಾಯ ಯೋನಾತಾನನು ತನ್ನ ಮನೆಗೆ ಹೋದನು;
ದಾವೀದನು ಹೋರೆಷದಲ್ಲಿಯೇ ಇದ್ದನು.
19 ಜೀಫ್ಯರು ಗಿಬೆಯದಲ್ಲಿದ್ದ ಸೌಲನ ಬಳಿಗೆ ಬಂದು
ಅವನಿಗೆ—ಒಡೆಯಾ, ಕೇಳು; ದಾವೀದನು ನಮ್ಮ
ಪ್ರಾಂತಕ್ಕೆ ಸೇರಿದ ಹೋರೆಷದ ಗಿರಿಗಳಲ್ಲಿ ಅಂದರೆ
ಅರಣ್ಯದ ದಕ್ಷಿಣದಲ್ಲಿರುವ ಹಕೀಲಾ ಬೆಟ್ಟದಲ್ಲಿ
20 ಅಡಗಿಕೊಂಡಿದ್ದಾನೆ. ಅರಸನು ಕುತೂಹಲದಂತೆ ನಮ್ಮ
ಜೊತೆಯಲ್ಲಿ ಬರೋಣವಾಗಲಿ; ಅವನನ್ನು ಅರಸನ
ಕೈಗೆ ಒಪ್ಪಿಸುವ ಕೆಲಸ ನಮ್ಮದು ಎಂದು ಹೇಳಿ
21 ದರು. ಆಗ ಸೌಲನು ಅವರಿಗೆ—ನೀವು ನನ್ನ ಮೇಲೆ
ಕನಿಕರಪಟ್ಟದರಿಂದ ಯೆಹೋವನ ಆಶೀರ್ವಾದವು
22 ನಿಮ್ಮ ಮೇಲಿರಲಿ. ನೀವು ದಯವಿಟ್ಟು ಹೋಗಿ
ಅವನು ತಿರುಗಾಡುವ ಸ್ಥಳವನ್ನೂ ಅಲ್ಲಿ ಅವನ
ಗುರುತು ಕಂಡಿರುವವರನ್ನೂ ಸೂಕ್ಷ್ಮವಾಗಿ ವಿಚಾರಿಸಿ
ಗೊತ್ತುಮಾಡಿಕೊಳ್ಳಿರಿ. ಅವನು ಬಹುಯುಕ್ತಿವಂತ
23 ನೆಂದು ಕೇಳಿದ್ದೇನೆ. ಆದದರಿಂದ ಅವನು ಅಡಗಿ
ಕೊಳ್ಳತಕ್ಕ ಎಲ್ಲಾ ಗುಪ್ತಸ್ಥಳಗಳನ್ನು ಗೊತ್ತುಮಾಡಿ
ಕೊಂಡು ನಿಜವಾದ ವರ್ತಮಾನವನ್ನು ನನಗೆ ಮುಟ್ಟಿ
ಸಿರಿ. ನಾನು ನಿಮ್ಮ ಸಂಗಡ ಬರುವೆನು; ಅವನು
ದೇಶದಲ್ಲಿರುವದಾದರೆ ಎಲ್ಲಾ ಯೆಹೂದ ಪ್ರಜೆ
ಗಳ ಮಧ್ಯದಲ್ಲಾದರೂ ಹುಡುಕಿ ಅವನನ್ನು ಹಿಡಿ
ಯುವೆನು ಅಂದನು. ಅವರು ಹೊರಟು ಸೌಲನ 24
ಮುಂದಾಗಿ ಜೀಫಿಗೆ ಬಂದರು. ದಾವೀದನೂ ಅವನ
ಜನರೂ ಮಾವೋನ್ ಅರಣ್ಯದ ದಕ್ಷಿಣದಿಕ್ಕಿನಲ್ಲಿರುವ
ಅರಾಬಾ ಎಂಬ ತಗ್ಗಾದ ಪ್ರದೇಶದಲ್ಲಿದ್ದರು. ಸೌಲ 25
ನು ತನ್ನ ಜನರೊಡನೆ ದಾವೀದನನ್ನು ಹಿಡಿಯುವದಕ್ಕೆ
ಬಂದನು. ಈ ವರ್ತಮಾನವು ದಾವೀದನಿಗೆ ಮುಟ್ಟಲು
ಅವನು ಮಾವೋನಿನಲ್ಲಿರುವ ಒಂದು ಕಡಿದಾದ
ಬೆಟ್ಟಕ್ಕೆ ಹೋಗಿ ಅಡಗಿಕೊಂಡನು. ಸೌಲನು ಇದನ್ನು
ಕೇಳಿ ಮಾವೋನ್ ಅರಣ್ಯಕ್ಕೆ ಬಂದು ಆ ಬೆಟ್ಟದ
ಒಂದು ಕಡೆಯಲ್ಲಿ ಹೋಗುತ್ತಿದ್ದನು. ಅದರ ಇ 26
ನ್ನೊಂದು ಕಡೆಯಲ್ಲಿ ದಾವೀದನೂ ಅವನ ಜನರೂ
ಇದ್ದರು. ದಾವೀದನೂ ಅವನ ಜನರೂ ತಪ್ಪಿಸಿ
ಕೊಳ್ಳುವದಕ್ಕೆ ತ್ವರೆಪಡುವಷ್ಟರಲ್ಲಿ ಸೌಲನೂ ಅವನ
ಜನರೂ ಬಂದು ಅವರನ್ನು ಸುತ್ತಿ ಹಿಡಿಯುವದ
ಕ್ಕಿದ್ದರು. ಆಗಲೇ ಒಬ್ಬ ದೂತನು ಸೌಲನ ಬಳಿಗೆ 27
ಬಂದು ಅವನಿಗೆ—ಬೇಗ ಬಾ; ಫಿಲಿಷ್ಟಿಯರು ದೇಶ
ದೊಳಕ್ಕೆ ನುಗ್ಗಿದ್ದಾರೆ ಎಂದು ತಿಳಿಸಿದ್ದರಿಂದ ಅವನು 28
ದಾವೀದನನ್ನು ಹಿಡಿಯುವ ಕೆಲಸದಿಂದ ಹಿಂದಿರುಗಿ
ಫಿಲಿಷ್ಟಿಯರಿಗೆ ವಿರೋಧವಾಗಿ ಹೊರಟನು. ಆದದ
ರಿಂದ ಆ ಬೆಟ್ಟಕ್ಕೆ ತಡೆಬೆಟ್ಟ ಎಂದು ಹೆಸರಾಯಿತು.
ದಾವೀದನು ಅಲ್ಲಿಂದ ಗಟ್ಟಾಹತ್ತಿ ಹೋಗಿ ಏಂಗೆದಿಯ 29
ಗಿರಿಗಳಲ್ಲಿ ವಾಸಿಸಿದನು.

ಸೌಲನು ಏಂಗೆದಿಯ ಗುಹೆಯಲ್ಲಿ ದಾವೀದನ ಕೈಗೆ ಸಿಕ್ಕಲು
ದಾವೀದನು ಅವನಿಗೆ ಕೇಡುಮಾಡದೆ ಬಿಟ್ಟದ್ದು.

**24**

ಸೌಲನು ಫಿಲಿಷ್ಟಿಯರನ್ನು ಓಡಿಸಿ ಹಿಂದಿರುಗಿ
ದಾಗ ದಾವೀದನು ಏಂಗೆದಿಯ ಅರಣ್ಯದಲ್ಲಿದ್ದಾ
ನೆಂದು ಅವನಿಗೆ ತಿಳಿದುಬಂದಿತು. ಆಗ ಅವನು 2
ಎಲ್ಲಾ ಇಸ್ರಾಯೇಲ್ಯರಲ್ಲಿ ಶ್ರೇಷ್ಠರಾದ ಮೂರು
ಸಾವಿರ ಮಂದಿ ಸೈನಿಕರನ್ನು ಆರಿಸಿಕೊಂಡು ಕಾಡು
ಗುರಿಬಂಡೆಗಳಲ್ಲಿದ್ದ ದಾವೀದನನ್ನೂ ಅವರ ಜನ
ರನ್ನೂ ಹುಡುಕುವದಕ್ಕೋಸ್ಕರ ಹೊರಟನು. ಅವನು 3
ಮಾರ್ಗದಲ್ಲಿ ಕುರಿಹಟ್ಟಿಗಳ ಬಳಿಯಲ್ಲಿ ಒಂದು ಗವಿ
ಯನ್ನು ಕಂಡು ಶೌಚಕ್ಕೋಸ್ಕರ ಅದರೊಳಗೆ ಪ್ರವೇ
ಶಿಸಿದನು. ದಾವೀದನೂ ಅವನ ಜನರೂ ಅದೇ
ಗವಿಯ ಹಿಂಗಡೆಯಲ್ಲಿ ಅಡಗಿಕೊಂಡಿದ್ದರು. ಜನರು 4
ದಾವೀದನಿಗೆ— ನಿನ್ನ ಶತ್ರುವನ್ನು ನಿನ್ನ ಕೈಗೆ ಒಪ್ಪಿಸಿ
ಕೊಡುವೆನು; ಆಗ ನೀನು ಅವನನ್ನು ಮನಸ್ಸಿಗೆ
ಬಂದಂತೆ ನಡಿಸಬಹುದು ಎಂದು ಯೆಹೋವನು
ನಿನಗೆ ಹೇಳಿದ ಮಾತು ನೆರವೇರುವ ದಿವಸ ಇದೇ
ಅಂದಾಗ ಅವನೆದ್ದು ಮೆಲ್ಲಗೆ ಹೋಗಿ ಸೌಲನ ನಿಲು
ವಂಗಿಯ ಮೂಲೆಯನ್ನು ಕತ್ತರಿಸಿಕೊಂಡನು. ಅನಂತ 5
ರದಲ್ಲಿ ಸೌಲನ ನಿಲುವಂಗಿಯ ಮೂಲೆಯನ್ನು ಕತ್ತ
ರಿಸಿದ್ದಕ್ಕಾಗಿ ಅವನ ಮನಸ್ಸಾಕ್ಷಿಯು ಅವನನ್ನು
ಹಂಗಿಸತೊಡಗಿತು. ಅವನು ತನ್ನ ಜನರಿಗೆ—ಅವನು 6
ಯೆಹೋವನಿಂದ ಅಭಿಷೇಕಿಸಲ್ಪಟ್ಟವನೂ ನನ್ನ ಒಡೆ
ಯನೂ ಆಗಿದ್ದಾನೆ; ನಾನು ನಿಮ್ಮ ಮಾತು ಕೇಳಿ
ಯೆಹೋವನ ಅಭಿಷಿಕ್ತನಿಗೆ ವಿರೋಧವಾಗಿ ಕೈಯೆತ್ತ
ದಂತೆ ಯೆಹೋವನೇ ನನಗೆ ಅಡ್ಡಿಮಾಡಲಿ ಎಂದು

7 ಹೇಳಿದನು. ಈ ಮಾತುಗಳಿಂದ ಅವನು ಸೌಲನಿಗೆ
ವಿರೋಧವಾಗಿ ಏಳದಂತೆ ತನ್ನ ಜನರನ್ನು ತಡೆದನು.
ಸೌಲನು ಗವಿಯಿಂದ ಹೊರಗೆ ಬಂದು ಸ್ವಲ್ಪ ಮುಂದೆ
8 ಹೋದ ಮೇಲೆ ದಾವೀದನೂ ಹೊರಗೆ ಬಂದು—
ಅರಸೇ, ನನ್ನ ಒಡೆಯನೇ ಎಂದು ಅವನನ್ನು ಕೂಗಿ
ದನು. ಸೌಲನು ಹಿಂದಿರುಗಿ ನೋಡಲು ಅವನಿಗೆ
9 ಸಾಷ್ಟಾಂಗನಮಸ್ಕಾರಮಾಡಿ—ದಾವೀದನು ನಿನಗೆ
ಕೇಡುಮಾಡಬೇಕೆಂದಿರುತ್ತಾನೆಂದು ಹೇಳುವವರ ಮಾ
10 ತಿಗೆ ನೀನೇಕೆ ಕಿವಿಗೊಡುತ್ತೀ? ಈಹೊತ್ತು ಯೆಹೋ
ವನು ಗವಿಯಲ್ಲಿ ನಿನ್ನನ್ನು ನನ್ನ ಕೈಗೆ ಒಪ್ಪಿಸಿಕೊಟ್ಟಿ
ದ್ದನೆಂಬದು ಈಗ ನಿನಗೆ ಗೊತ್ತಾಯಿತಲ್ಲವೋ?
ನಿನ್ನನ್ನು ಕೊಂದುಬಿಡಬೇಕೆಂದು ಕೆಲವರು ನನಗೆ
ಹೇಳಿದರು; ಆದರೆ ನಾನು ಅವರಿಗೆ—ಯೆಹೋವನ
ಅಭಿಷಿಕ್ತನಾದ ನನ್ನ ಒಡೆಯನ ಮೇಲೆ ಕೈಹಾಕು
11 ವದಿಲ್ಲ ಎಂದು ಹೇಳಿ ನಿನ್ನನ್ನು ಉಳಿಸಿದೆನು. ನನ್ನ
ತಂದೆಯೇ, ಇಗೋ ನೋಡು; ನನ್ನ ಕೈಯಲ್ಲಿ
ನಿನ್ನ ನಿಲುವಂಗಿಯ ತುಂಡು ಇದೆ; ನಾನು ನಿನ್ನನ್ನು
ಕೊಲ್ಲದೆ ನಿನ್ನ ನಿಲುವಂಗಿಯ ಮೂಲೆಯನ್ನು ಕತ್ತರಿ
ಸಿಕೊಂಡೆನಷ್ಟೆ. ಇದರಿಂದ ನನ್ನಲ್ಲಿ ಯಾವ ದೋಷ
ವೂ ಅಪರಾಧವೂ ಇರುವದಿಲ್ಲ, ನಾನು ನಿನಗೆ ವಿರೋ
ಧವಾಗಿ ದ್ರೋಹಮಾಡಲಿಲ್ಲ ಎಂದು ತಿಳಿದುಕೋ.
ಆದರೂ ನೀನು ನನ್ನ ಪ್ರಾಣಕ್ಕೆ ಹೊಂಚುಹಾಕು
12 ತ್ತಿರುವಿಯಲ್ಲಾ; ಯೆಹೋವನೇ ನಮ್ಮ ಉಭ
ಯರ ವ್ಯಾಜ್ಯವನ್ನು ತೀರಿಸಲಿ; ಆತನೇ ನನಗೋಸ್ಕರ
ನಿನಗೆ ಮುಯ್ಯಿಸಲ್ಲಿಸಲಿ; ನಾನಂತೂ ನಿನಗೆ ವಿರೋಧ
13 ವಾಗಿ ಕೈಯೆತ್ತುವದಿಲ್ಲ. ಕೆಟ್ಟವರಿಂದಲೇ ಕೇಡು
ಎಂಬದಾಗಿ ಹಿರಿಯರ ಗಾದೆಯುಂಟಷ್ಟೆ; ನಾನು
14 ನಿನಗೆ ವಿರೋಧವಾಗಿ ಕೈಯೆತ್ತುವದಿಲ್ಲ. ಇಸ್ರಾಯೇ
ಲ್ಯರ ಅರಸೇ, ಯಾರನ್ನು ಹಿಂದಟ್ಟ ಹೊರಟಿದ್ದೀ?
ಯಾರನ್ನು ಹಿಡಿಯಬೇಕೆಂದಿರುತ್ತೀ? ಸತ್ತ ನಾಯಿ
15 ಯನ್ನೇ; ಒಂದು ಬಡ ಸೊಳ್ಳೆಯನ್ನೇ. ಯೆಹೋ
ವನು ನ್ಯಾಯಾಧಿಪತಿಯಾಗಿ ನಮ್ಮಿಬ್ಬರ ವ್ಯಾಜ್ಯವನ್ನು
ತೀರಿಸಲಿ; ಆತನೇ ನೋಡಿ ನನಗೋಸ್ಕರ ವಾದಿಸಿ
ನನ್ನನ್ನು ನಿನ್ನ ಕೈಗೆ ತಪ್ಪಿಸಲಿ ಎಂದು ಹೇಳಿದನು.
16 ದಾವೀದನ ಮಾತುಗಳು ಮುಗಿದನಂತರ ಸೌಲನು—
ದಾವೀದನೇ, ನನ್ನ ಮಗನೇ, ಇದು ನಿನ್ನ ಸ್ವರವೋ
17 ಅಂದು ಗಟ್ಟಿಯಾಗಿ ಅತ್ತನು. ಇದಲ್ಲದೆ ಅವನು
ದಾವೀದನಿಗೆ—ನೀನು ನನಗಿಂತ ನೀತಿವಂತನು; ನಾನು
ನಿನಗೆ ಕೇಡುಮಾಡಿದರೂ ನೀನು ನನಗೆ ಒಳ್ಳೇ
18 ದನ್ನೇ ಮಾಡಿದಿ. ಯೆಹೋವನು ನನ್ನನ್ನು ನಿನ್ನ
ಕೈಗೆ ಒಪ್ಪಿಸಿಕೊಟ್ಟರೂ ನೀನು ನನ್ನನ್ನು ಕೊಲ್ಲ
ಲಿಲ್ಲ; ಇದರಿಂದ ನೀನು ನನಗೆ ಹಿತವನ್ನೇ ಮಾಡು
19 ವಂಥವನೆಂಬದು ಈಹೊತ್ತು ಪ್ರಕಟವಾಯಿತು. ಯಾವ
ನಾದರೂ ತನ್ನ ಕೈಗೆ ಸಿಕ್ಕಿದ ವೈರಿಯನ್ನು ಸುಕ್ಷೇ
ಮದಿಂದ ಕಳುಹಿಸಿಬಿಡುವನೋ? ನೀನು ಈಹೊತ್ತು
ನನಗೆ ಉಪಕಾರಮಾಡಿದ್ದಕ್ಕಾಗಿ ಯೆಹೋವನು
20 ನಿನಗೆ ಉಪಕಾರಮಾಡಲಿ. ಕೇಳು, ನೀನು ಹೇಗೂ
ಅರಸನಾಗುವಿಯೆಂದೂ ಇಸ್ರಾಯೇಲ್ ರಾಜ್ಯವು
21 ನಿನ್ನಲ್ಲಿ ಸ್ಥಿರವಾಗುವದೆಂದೂ ಬಲ್ಲೆನು. ಹೀಗಿರು
ವದರಿಂದ ನೀನು ನನ್ನ ಸಂತಾನವನ್ನು ನಿರ್ಮೂಲ

ಮಾಡುವದಿಲ್ಲವೆಂದೂ ನಮ್ಮ ಕುಲದಿಂದ ನನ್ನ
ಹೆಸರನ್ನು ತೆಗೆದುಹಾಕುವದಿಲ್ಲವೆಂದೂ ಯೆಹೋವನ
ಹೆಸರಿನಲ್ಲಿ ಪ್ರಮಾಣಮಾಡು ಎಂದು ಬೇಡಿಕೊಂ
ಹಾಗೆ ದಾವೀದನು ಪ್ರಮಾಣಮಾಡಿದನು; ಅನಂತ
ಸೌಲನು ತನ್ನ ಮನೆಗೆ ಹೊರಟನು; ದಾವೀದನ
ತನ್ನ ಜನರೊಡನೆ ಆಶ್ರಯಗಿರಿಗೆ ಹೋದನು.

ಸಮುವೇಲನ ಮರಣ; ದಾವೀದನೂ
ನಾಬಾಲ್ ಅಬೀಗೈಲರೂ.

2
ಸಮುವೇಲನು ಮೃತಿಹೊಂದಿದನು. ಇಸ್ರಾಯೇ
ಲ್ಯರೆಲ್ಲರೂ ಕೂಡಿ ಬಂದು ಅವನಿಗೋಸ್ಕರ ಗೋ
ಳಾಡುತ್ತಾ ಅವನ ಶವವನ್ನು ರಾಮದಲ್ಲಿದ್ದ ಅವನ
ಮನೆಯ ನಿವೇಶನದಲ್ಲಿ ಸಮಾಧಿಮಾಡಿದರು.
ದಾವೀದನು ಹೊರಟು ಪಾರಾನ್ ಅರಣ್ಯಕ್ಕೆ
ಹೋದನು. ಕರ್ಮೆಲಿನಲ್ಲಿ ಸ್ವಾಸ್ತ್ಯವಿದ್ದಂಥ ಒಬ್ಬ
ಮನುಷ್ಯನು ಮಾವೋನಿನಲ್ಲಿ ವಾಸಿಸುತ್ತಿದ್ದನು
ಅವನ ಹೆಸರು ನಾಬಾಲ; ಅವನ ಹೆಂಡತಿಯ ಹೆಸರ
ಅಬೀಗೈಲ್. ಆಕೆಯು ಬಹುಬುದ್ಧಿವಂತೆಯೂ ಸುಂ
ರಿಯೂ ಆಗಿದ್ದಳು; ಕಾಲೇಬನ ವಂಶದವನಾದ
ಮನುಷ್ಯನು ನಿಷ್ಠುರನೂ ದುಷ್ಕರ್ಮಿಯೂ ಆ
ದ್ದನು. ಅವನು ಬಹುಧನವಂತನು. ಅವನಿ
ಮೂರು ಸಾವಿರ ಕುರಿಗಳೂ ಸಾವಿರ ಆಡುಗಳು
ಇದ್ದವು. ಅವನು ಒಂದು ಸಾರಿ ಕರ್ಮೆಲಿನಲ್ಲಿ
ಕುರಿಗಳ ಉಣ್ಣೆಯನ್ನು ಕತ್ತರಿಸುತ್ತಿದ್ದನು. ನಾಬಾ
ಲನು ಉಣ್ಣೆಕತ್ತರಿಸುತ್ತಿದ್ದಾನೆಂಬ ವರ್ತಮಾನ
ಅಲ್ಲಿನ ಅರಣ್ಯದಲ್ಲಿದ್ದ ದಾವೀದನಿಗೆ ಮುಟ್ಟಿದಾ
ಅವನು ಹತ್ತು ಮಂದಿ ಸೇವಕರನ್ನು ಕರೆದು ಅ
ರಿಗೆ— ನೀವು ಕರ್ಮೆಲಿನಲ್ಲಿರುವ ನಮ್ಮ ಸಂಬಂಧಿ
ನಾದ ನಾಬಾಲನ ಬಳಿಗೆ ಹೋಗಿ ಅವನ ಕ್ಷೇಮ
ಸಮಾಚಾರವನ್ನು ವಿಚಾರಿಸಿ ಅವನಿಗೆ ನನ್ನ ಹೆಸ
ನಲ್ಲಿ — ನಿನಗೂ ನಿನ್ನ ಕುಟುಂಬಕ್ಕೂ ನಿನ್ನ ಸಮ
ಸಂಪತ್ತಿಗೂ ಶುಭವಾಗಲಿ. ನಿನ್ನ ಕುರಿಗಳ ಉಣ್ಣೆ
ಯನ್ನು ಕತ್ತರಿಸುವ ಕೆಲಸವು ನಡೆಯುತ್ತದೆಂ
ವರ್ತಮಾನವನ್ನು ಕೇಳಿದ್ದೇನೆ. ನಿನ್ನ ಕುರುಬರ
ನಮ್ಮೊಡನೆ ಕರ್ಮೆಲಿನಲ್ಲಿದ್ದ ಕಾಲವೆಲ್ಲಾ ನಾವು ಅ
ರನ್ನು ತೊಂದರೆಪಡಿಸಲಿಲ್ಲ; ಅವರಿಗೇನೂ ನಷ್ಟವಾಗ
ಲಿಲ್ಲ. ನಿನ್ನ ಆಳುಗಳನ್ನು ಕೇಳು, ಅವರೇ ಹೇಳ
ವರು. ಹೀಗಿರುವದರಿಂದ ಶುಭಕಾಲದಲ್ಲಿ ನಿನ್ನ
ಬಳಿಗೆ ಬಂದಿರುವ ನನ್ನ ಸೇವಕರಿಗೆ ನಿನ್ನ ದೃಷ್ಟಿ
ಯಲ್ಲಿ ದಯೆದೊರಕಲಿ. ಕೃಪೆಮಾಡಿ ನಿನ್ನ ಸೇವಕ
ರಿಗೂ ಮಗನಾದ ದಾವೀದನಿಗೂ ನಿನಗಿರುವದರಲ್ಲಿ
ಕೊಡು ಎಂದು ಹೇಳಿರಿ ಅಂದು ಅವರನ್ನು ಕಳುಹಿ
ದನು. ದಾವೀದನ ಸೇವಕರು ಹೋಗಿ ಅವನ ಹೆಸ
ನಲ್ಲಿ ಈ ಮಾತುಗಳನ್ನೆಲ್ಲಾ ನಾಬಾಲನಿಗೆ ತಿಳಿ
ಉತ್ತರಕಾಯುತ್ತಿರಲು ನಾಬಾಲನು ಅವರಿಗೆ—
ದಾವೀದನಾರು? ಇಷಯನ ಮಗನಾರು? ಯ
ಮಾನರನ್ನು ಬಿಟ್ಟು ಓಡಿಹೋದ ಸೇವಕರು ಈಗಿ
ಕಾಲದಲ್ಲಿ ಎಷ್ಟು ಮಂದಿಯಿಲ್ಲ! ಉಣ್ಣೆಕತ್ತರಿಸ
ವವರಿಗೋಸ್ಕರ ನಾನು ಸಿದ್ಧಮಾಡಿಸಿದ ಮಾಂ

ವನ್ನೂ ಆಹಾರಪಾನಗಳನ್ನೂ ಎತ್ತಿ ಎಲ್ಲಿಂದಲೋ
ಬಂದವರಿಗೆ ಕೊಟ್ಟುಬಿಡಬೇಕೋ ಎಂದು ಉತ್ತರ
12 ಕೊಟ್ಟನು. ಆ ಸೇವಕರು ಹಿಂದಿರುಗಿ ತಮ್ಮ ದಾರಿ
ಹಿಡಿದು ದಾವೀದನ ಬಳಿಗೆ ಬಂದು ಅವನಿಗೆ ಎಲ್ಲ
13 ವನ್ನೂ ತಿಳಿಸಲಾಗಿ ಅವನು ತನ್ನ ಜನರಿಗೆ—ಕತ್ತಿ
ಯನ್ನು ಸೊಂಟಕ್ಕೆ ಕಟ್ಟಿಕೊಳ್ಳಿರಿ ಎಂದು ಆಜ್ಞಾಪಿಸಿ
ದನು; ಅವರೆಲ್ಲರೂ ಕಟ್ಟಿಕೊಂಡರು. ದಾವೀದನೂ
ಕಟ್ಟಿಕೊಂಡನು. ಹೆಚ್ಚುಕಡಿಮೆ ನಾನೂರು ಮಂದಿ
ದಾವೀದನ ಜೊತೆಯಲ್ಲಿ ಹೋದರು; ಇನ್ನೂರು
ಮಂದಿ ಸಾಮಾನುಗಳ ಬಳಿಯಲ್ಲಿ ಇದ್ದರು.
14 ನಾಬಾಲನ ಸೇವಕರಲ್ಲೊಬ್ಬನು ಅವನ ಹೆಂಡತಿ
ಯಾದ ಅಬೀಗೈಲಳಿಗೆ—ಅರಣ್ಯದಲ್ಲಿರುವ ದಾವೀದ
ನು ನಮ್ಮ ದಣಿಯ ಕ್ಷೇಮವಿಚಾರಕ್ಕಾಗಿ ದೂತರನ್ನು
ಕಳುಹಿಸಲು ದಣಿಯು ಬಂದವರ ಮೇಲೆ ಬಿದ್ದು
15 ಬೈದನು. ಆ ಜನರು ನಮಗೆ ಬಹಳ ಉಪಕಾರ
ಮಾಡಿದವರು; ನಾವು ಅವರೊಡನೆ ಅಡವಿಯಲ್ಲಿದ್ದ
ಕಾಲವೆಲ್ಲಾ ಏನೂ ತೊಂದರೆಪಡಲಿಲ್ಲ, ನಷ್ಟಹೊಂದ
16 ಲಿಲ್ಲ. ನಾವು ಕುರಿಗಳನ್ನು ಮೇಯಿಸುವವರಾಗಿ
ಅವರೊಡನೆ ಇದ್ದಾಗ ಅವರು ಹಗಲಿರುಳು ನಮಗೆ
17 ಕಾವಲುಗೋಡೆಯಂತಿದ್ದರು. ಈಗ ಮಾಡಬೇಕಾ
ದದ್ದನ್ನು ನೀನೇ ಆಲೋಚಿಸಿ ಗೊತ್ತುಮಾಡು. ನಮ್ಮ
ಯಜಮಾನನಿಗೂ ಅವನ ಕುಟುಂಬದವರೆಲ್ಲರಿಗೂ
ಕೇಡು ಹತ್ತಿರವಾಗಿದೆ; ಮೂರ್ಖನಾದ ಅವನೊಡನೆ
18 ಮಾತಾಡುವದಸಾಧ್ಯ ಎಂದು ಹೇಳಿದನು. ಆಗ ಅಬೀ
ಗೈಲಳು ಶೀಘ್ರವಾಗಿ ಇನ್ನೂರು ರೊಟ್ಟಿ, ಎರಡು
ಬುದ್ದಲಿ ದ್ರಾಕ್ಷಾರಸ, ಸಿದ್ಧಮಾಡಿದ ಐದು ಕುರಿಗಳ
ಮಾಂಸ, ಐವತ್ತು ಸೇರು ಹುರಿಗಾಳು, ಒಣಗಿದ
ನೂರು ದ್ರಾಕ್ಷೇಗೊಂಚಲುಗಳು, ಅಂಜೂರಹಣ್ಣುಗಳ
ಇನ್ನೂರು ಉಂಡೆಗಳು ಇವುಗಳನ್ನು ಕತ್ತೆಗಳ ಮೇಲೆ
19 ಹೇರಿಸಿ ತನ್ನ ಸೇವಕರಿಗೆ—ನೀವು ಮುಂದೆ ನಡೆ
ಯಿರಿ, ನಾನು ಹಿಂದೆ ಬರುತ್ತೇನೆ ಎಂದು ಹೇಳಿ ಅವ
ರನ್ನು ಕಳುಹಿಸಿದಳು; ಗಂಡನಾದ ನಾಬಾಲನಿಗೆ
20 ಏನೂ ತಿಳಿಸಲಿಲ್ಲ. ಆಕೆ ಕತ್ತೆಯ ಮೇಲೆ ಕೂತು
ಗುಡ್ಡದ ಮರೆಯಲ್ಲಿ ಹೋಗುತ್ತಿರುವಾಗ ದಾವೀದ
ನೂ ಅವನ ಜನರೂ ಆ ಕಡೆಯಿಂದ ಗಟ್ಟಾ ಇಳಿದು
ಬರಲು ಆಕೆಯು ಅವರನ್ನು ಎದುರುಗೊಂಡಳು.
21 ಅಷ್ಟರಲ್ಲಿ ದಾವೀದನು—ನಾನು ಅಡವಿಯಲ್ಲಿ ಈ
ಮನುಷ್ಯನ ಆಸ್ತಿಯಲ್ಲಿ ಏನೂ ನಷ್ಟವಾಗದಂತೆ ಕಾ
ಪಾಡಿದ್ದು ವ್ಯರ್ಥವಾಯಿತು. ಅವನು ಉಪಕಾರಕ್ಕೆ
22 ಅಪಕಾರಮಾಡಿದನು. ಬೆಳಗಾಗುವಷ್ಟರಲ್ಲಿ ಅವನ
ಜನರೊಳಗೆ ಒಬ್ಬ ಗಂಡಸಾದರೂ ಉಳಿದರೆ ದೇವರು
ದಾವೀದನಿಗೆ ಬೇಕಾದದ್ದನ್ನು ಮಾಡಲಿ ಎಂದು ಪ್ರತಿಜ್ಞೆ
23 ಮಾಡಿದ್ದನು. ಅಬೀಗೈಲಳು ದಾವೀದನನ್ನು ಕಂಡ
ಕೂಡಲೆ ಕತ್ತೆಯಿಂದಿಳಿದು ಅವನಿಗೆ ಸಾಷ್ಟಾಂಗ
24 ವಾಗಿ ನಮಸ್ಕರಿಸಿದಳು. ಆ ಮೇಲೆ ಅವನ ಪಾದಗಳ
ಮೇಲೆ ಬಿದ್ದು ಅವನಿಗೆ—ಸ್ವಾಮೀ, ಅಪರಾಧವು ನನ್ನ
ಮೇಲಿರಲಿ; ನಿನ್ನ ದಾಸಿಯು ಮಾತಾಡುವದಕ್ಕೆ ಅಪ್ಪ
25 ಣೆಯಾಗಲಿ; ಅವಳ ಮಾತನ್ನು ಲಾಲಿಸಬೇಕು. ಸ್ವಾಮಿ
ಯು ಮೂರ್ಖನಾದ ಆ ನಾಬಾಲನನ್ನು ಲಕ್ಷಿಸದಿರಲಿ.
ಅವನ ಹೆಸರು 1)ನಾಬಾಲ್; ಅದಕ್ಕೆ ತಕ್ಕಂತೆ ಅವನು
ಮೂರ್ಖನೇ ಆಗಿರುತ್ತಾನೆ. ನಿನ್ನ ದಾಸಿಯಾದ
ನಾನು ಸ್ವಾಮಿಯು ಕಳುಹಿಸಿದ ಸೇವಕರನ್ನು ನೋಡ
ಲಿಲ್ಲ. ಸ್ವಾಮೀ, ನೀನು ಸ್ವಹಸ್ತದಿಂದ ಮುಯ್ಯಿ 26
ತೀರಿಸಿ ರಕ್ತಾಪರಾಧಕ್ಕೆ ಗುರಿಯಾಗದಂತೆ ಯೆಹೋ
ವನು ನಿನ್ನನ್ನು ಕಾಪಾಡಿದ್ದಾನೆ. ಯೆಹೋವನ ಆಣೆ,
ನಿನ್ನ ಜೀವದಾಣೆ, ನಿನ್ನ ವಿರೋಧಿಗಳೂ ನಿನಗೆ ಕೇಡು
ಬಗೆಯುವವರೂ ನಾಬಾಲನ ಗತಿಯನ್ನು ಹೊಂದಲಿ.
ನಿನ್ನ ದಾಸಿಯು ತಂದ ಈ ಕಾಣಿಕೆಯು ಸ್ವಾಮಿಯ 27
ಸೇವಕರಿಗೆ ಸಲ್ಲಲಿ. ನಿನ್ನ ದಾಸಿಯ ಅಪರಾಧಕ್ಕೆ 28
ಕ್ಷಮಾಪಣೆಯಾಗಲಿ; ಸ್ವಾಮಿಯೇ, ನೀನು ಯೆ
ಹೋವನ ಶತ್ರುಗಳೊಡನೆ ಯುದ್ಧಮಾಡುವದರಿಂದ
ಆತನು ನಿನ್ನ ಮನೆಯನ್ನು ಶಾಶ್ವತವಾಗಿ ಸ್ಥಿರಪಡಿ
ಸುವನು. ಆದದರಿಂದ ನಿನ್ನ ಜೀವಮಾನದಲ್ಲೆಲ್ಲಾ
ನಿನ್ನಲ್ಲಿ ಕೆಟ್ಟತನವು ಕಾಣದಿರಲಿ; ಯಾವನಾದರೂ 29
ನನ್ನ ಸ್ವಾಮಿಯಾದ ನಿನ್ನನ್ನು ಹಿಂಸಿಸಿ ಜೀವತೆಗೆಯ
ಬೇಕೆಂದಿರುವಾಗ ಆ ನಿನ್ನ ಜೀವವು ನಿನ್ನ ದೇವರಾದ
ಯೆಹೋವನ ರಕ್ಷಣೆಯಲ್ಲಿರುವ ಜೀವನಿಕ್ಷೇಪದಲ್ಲಿ
ಭದ್ರವಾಗಿರಲಿ; ಆದರೆ ಆತನು ನಿನ್ನ ಶತ್ರುಗಳ ಜೀವ
ವನ್ನು ಕವಣೆಯ ಕಲ್ಲನ್ನೋ ಎಂಬಂತೆ ಎಸೆದು
ಬಿಡಲಿ. ಯೆಹೋವನು ನನ್ನ ಸ್ವಾಮಿಯಾದ ನಿನಗೆ 30
ವಾಗ್ದಾನಮಾಡಿದ ಎಲ್ಲಾ ಸೌಭಾಗ್ಯವನ್ನು ದಯಪಾ
ಲಿಸಿ ನಿನ್ನನ್ನು ಇಸ್ರಾಯೇಲ್‍ಪ್ರಭುವನ್ನಾಗಿ ಮಾಡಿದ
ಮೇಲೆ ನಿರಪರಾಧಿಯ ರಕ್ತವನ್ನು ಸುರಿಸಿ ಮುಯ್ಯಿ 31
ತೀರಿಸಿದ್ದರಿಂದುಂಟಾಗುವ ಪಶ್ಚಾತ್ತಾಪ ಮನೋವ್ಯಥೆ
ಗಳಿಗೆ ಕಾರಣವಿರುವದಿಲ್ಲ. ಆತನು ನಿನ್ನನ್ನು ಮಹಾ
ಪದವಿಗೆ ತರುವಾಗ ನಿನ್ನ ದಾಸಿಯಾದ ನನ್ನನ್ನು
ಮರೆತುಬಿಡಬೇಡ ಅಂದಳು. ಆಗ ದಾವೀದನು ಅಬೀ 32
ಗೈಲಳಿಗೆ— ಈ ಹೊತ್ತು ನನ್ನನ್ನು ಎದುರುಗೊಳ್ಳುವದ
ಕ್ಕಾಗಿ ನಿನ್ನನ್ನು ಕಳುಹಿಸಿದ ಇಸ್ರಾಯೇಲ್‍ದೇವ
ರಾದ ಯೆಹೋವನಿಗೆ ಸ್ತೋತ್ರವಾಗಲಿ. ಸ್ವಹಸ್ತ 33
ದಿಂದ ಮುಯ್ಯಿತೀರಿಸಿ ರಕ್ತಾಪರಾಧಕ್ಕೆ ಗುರಿಯಾಗ
ದಂತೆ ನನ್ನನ್ನು ತಡೆದ ನೀನೂ ನಿನ್ನ ಬುದ್ಧಿಯೂ ಸ್ತೋ
ತ್ರಾರ್ಹವೇ ಸರಿ. ನಿನಗೆ ಕೇಡುಮಾಡದಂತೆ ನನ್ನನ್ನು 34
ತಡೆದ ಇಸ್ರಾಯೇಲ್‍ದೇವರಾದ ಯೆಹೋವನ ಆಣೆ,
ನೀನು ಬೇಗನೆ ಬಂದು ನನ್ನನ್ನು ಎದುರುಗೊಳ್ಳದಿದ್ದರೆ
ನಿಜವಾಗಿ ನಾಳೆ ಬೆಳಗಾಗುವಷ್ಟರಲ್ಲಿ ನಾಬಾಲನವರಲ್ಲಿ
ಒಬ್ಬ ಗಂಡಸಾದರೂ ಉಳಿಯುತ್ತಿದ್ದಿಲ್ಲ ಎಂದು ಹೇಳಿ
ಆಕೆ ತಂದ ಪದಾರ್ಥಗಳನ್ನು ತೆಗೆದುಕೊಂಡು ಆಕೆಗೆ— 35
ಸಮಾಧಾನದಿಂದ ಮನೆಗೆ ಹೋಗು; ನಿನ್ನನ್ನು ನೋಡಿ
ನಿನ್ನ ವಿಜ್ಞಾಪನೆಯನ್ನು ಲಾಲಿಸಿದ್ದೇನೆ ಅಂದನು.
ಅಬೀಗೈಲಳು ನಾಬಾಲನ ಬಳಿಗೆ ಬಂದಳು. ಅವನು 36
ತನ್ನ ಮನೆಯಲ್ಲಿ ರಾಜರಂತೆ ಒಂದು ದೊಡ್ಡ ಔತಣ
ವನ್ನು ಮಾಡಿಸಿ ಬಹಳವಾಗಿ ಕುಡಿದು ಬಹು ಸಂಭ್ರಮ
ದಿಂದಿದ್ದ ಕಾರಣ ಈಕೆಯು ಮರುದಿವಸದ ವರೆಗೆ
ಇದರ ವಿಷಯವಾಗಿ ಏನೂ ಹೇಳಲಿಲ್ಲ. ಮರುದಿನ 37
ಅಮಲಿಳಿದನಂತರ ಈಕೆಯು ಈ ವರ್ತಮಾನವನ್ನು

1) ನಾಬಾಲ್ ಅಂದರೆ ಮೂರ್ಖ.

ಅವನಿಗೆ ತಿಳಿಸಲಾಗಿ ಅವನ ಹೃದಯವು ಸಿಂತುಹೋ
38 ಯಿತು, ಅವನು ಸ್ತಬ್ಧನಾದನು. ಸುಮಾರು ಹತ್ತು
ದಿನಗಳಾದನಂತರ ನಾಬಾಲನು ಯೆಹೋವನಿಂದ ಹತ
39 ನಾಗಿ ಸತ್ತನು. ನಾಬಾಲನು ಸತ್ತನೆಂಬ ವರ್ತಮಾನ
ವನ್ನು ದಾವೀದನು ಕೇಳಿ— ನನಗೆ ಅಪಮಾನ ಮಾಡಿದ
ನಾಬಾಲನಿಗೆ ಮುಯ್ಯಿತೀರಿಸಿದಂಥ ಯೆಹೋವನಿಗೆ
ಸ್ತೋತ್ರವಾಗಲಿ. ಆತನು ನನ್ನನ್ನು ಕೆಟ್ಟತನಕ್ಕೆ
ದೂರಮಾಡಿ ನಾಬಾಲನ ಕೆಟ್ಟತನವನ್ನು ಅವನ ತಲೆಯ
ಮೇಲೆಯೇ ಹೊರಿಸಿದನಲ್ಲಾ ಅಂದನು. ಅನಂತರ
ಅವನು ಅಬೀಗೈಲಳು ತನಗೆ ಹೆಂಡತಿಯಾಗಬೇಕೆಂದು
40 ದೂತರನ್ನು ಕಳುಹಿಸಿದನು; ಅವರು ಕರ್ಮೆಲಿನಲ್ಲಿದ್ದ
ಅಬೀಗೈಲಳ ಬಳಿಗೆ ಹೋಗಿ ಆಕೆಗೆ—ದಾವೀದನು
ನಿನ್ನನ್ನು ತನಗೆ ಹೆಂಡತಿಯಾಗುವದಕ್ಕೆ ಕರಕೊಂಡು
ಬರಬೇಕೆಂದು ನಮ್ಮನ್ನು ಕಳುಹಿಸಿದ್ದಾನೆ ಅಂದಾಗ
41 ಆಕೆ ಎದ್ದು ನಮಸ್ಕಾರಮಾಡಿ ಮಾತಾಡಿಸಿದವನಿಗೆ—
ನಿನ್ನ ದಾಸಿಯಾದ ನಾನು ನನ್ನ ಸ್ವಾಮಿಯ ಸೇವಕರ
ಪಾದಗಳನ್ನು ತೊಳೆಯುವ ಸೇವಕಿಯಾಗುವದಕ್ಕೆ ಸಿದ್ಧ
42 ಳಾಗಿದ್ದೇನೆ ಎಂದು ಉತ್ತರಕೊಟ್ಟು ಬೇಗನೆ ಒಂದು
ಕತ್ತೆಯನ್ನು ಹತ್ತಿ ತನ್ನ ಐದು ಮಂದಿ ದಾಸಿಯರ
ಸಹಿತವಾಗಿ ದಾವೀದನ ಸೇವಕರ ಜೊತೆಯಲ್ಲಿ ಹೊರ
43 ಟುಹೋಗಿ ಅವನ ಹೆಂಡತಿಯಾದಳು. ಇದಲ್ಲದೆ
ದಾವೀದನು ಇಜ್ರೇಲಿನವಳಾದ ಅಹೀನೋವಮಳನ್ನು
ಮದುವೆಮಾಡಿಕೊಂಡಿದ್ದನು. ಅವರಿಬ್ಬರೂ ಅವನ
44 ಹೆಂಡತಿಯರಾದರು. ಸೌಲನು ದಾವೀದನ ಹೆಂಡತಿ
ಯಾಗಿದ್ದ ಮೀಕಲಳೆಂಬ ತನ್ನ ಮಗಳನ್ನು ಗಲ್ಲೀಮ್
ಊರಿನ ಲಯಿಷನ ಮಗನಾದ ಪಲ್ಟೀ ಎಂಬವನಿಗೆ
ಮದುವೆಮಾಡಿಕೊಟ್ಟನು.

ದಾವೀದನು ಎರಡನೆಯ ಸಾರಿ ತನ್ನ ಕೈಗೆ ಸಿಕ್ಕಿದ
ಸೌಲನನ್ನು ಕೊಲ್ಲದೆ ಉಳಿಸಿದ್ದು.

26 ಜೀಫ್ಯರು ಗಿಬೆಯದಲ್ಲಿದ್ದ ಸೌಲನ ಬಳಿಗೆ
ಬಂದು ಅವನಿಗೆ—ದಾವೀದನು ಅರಣ್ಯದ ಮೂಡಣ
ದಿಕ್ಕಿನಲ್ಲಿರುವ ಹಕೀಲಾ ಬೆಟ್ಟದಲ್ಲಿ ಅಡಗಿಕೊಂಡಿರು
2 ವದು ನಿನಗೆ ಗೊತ್ತಿಲ್ಲವೋ ಅಂದರು. ಆಗ ಸೌಲನು
ಇಸ್ರಾಯೇಲ್ಯರಲ್ಲಿ ಶ್ರೇಷ್ಠರಾದ ಮೂರು ಸಾವಿರ
ಮಂದಿ ಸೈನಿಕರನ್ನು ಆರಿಸಿಕೊಂಡು ದಾವೀದನನ್ನು
ಹುಡುಕುವದಕ್ಕೋಸ್ಕರ ಜೀಫ್ ಅರಣ್ಯಕ್ಕೆ ಹೋಗಿ
3 ಅದರ ಮೂಡಣದಿಕ್ಕಿನಲ್ಲಿ ದಾರಿಯ ಬಳಿಯಲ್ಲಿರುವ
ಹಕೀಲಾ ಬೆಟ್ಟದಲ್ಲಿ ಪಾಳೆಯಮಾಡಿಕೊಂಡನು. ಸೌಲ
ನು ತನ್ನನ್ನು ಹಿಡಿಯುವದಕ್ಕೋಸ್ಕರ ಅರಣ್ಯಕ್ಕೆ ಬಂದಿ
ದ್ದಾನೆಂಬ ವರ್ತಮಾನವು ಅಲ್ಲಿಯೇ ಇದ್ದ ದಾವೀದ
4 ನಿಗೆ ಮುಟ್ಟಲು ಅವನು ಕೂಡಲೆ ಗೂಢಚಾರರನ್ನು
ಕಳುಹಿಸಿ ಸೌಲನು ಇಳುಕೊಂಡಿದ್ದ ಸ್ಥಳವನ್ನು ಗೊತ್ತು
5 ಮಾಡಿಕೊಂಡನು. ಅನಂತರ ತಾನಾಗಿಯೇ ಸೌಲನ
ಪಾಳೆಯದ ಹತ್ತಿರ ಹೋಗಿ ಸೌಲನೂ ನೇರನ ಮಗ
ನಾದ ಅವನ ಸೇನಾಪತಿ ಅಬ್ನೇರನೂ ಮಲಗಿದ್ದ
ಸ್ಥಳಗಳನ್ನು ಕಂಡುಹಿಡಿದನು. ಸೌಲನು ಬಂಡಿಗ
ಳನ್ನು ಬಿಟ್ಟಿರುವ ಸ್ಥಳಮಧ್ಯದಲ್ಲಿ ಮಲಗಿದ್ದನು;
6 ಅವನ ಸುತ್ತಲೂ ಸೈನಿಕರು ಇದ್ದರು. ಆಗ ದಾವೀದ

ನು ಹಿತ್ತಿಯನಾದ ಅಹೀಮೆಲೆಕನನ್ನೂ ಚೆರೂಯ
ಮಗನೂ ಯೋವಾಬನ ತಮ್ಮನೂ ಆದ ಅಬೀ
ಯನ್ನೂ ಕುರಿತು— ನಿಮ್ಮಲ್ಲಿ ನನ್ನ ಸಂಗಡ ಸೌ
ಪಾಳೆಯಕ್ಕೆ ಯಾರು ಬರುವಿರಿ ಎಂದು ಕೇಳಿದ್ದ
ಅಬೀಷೈಯು—ನಾನು ಬರುತ್ತೇನೆ ಎಂದು ಉತ್ತ
ಕೊಟ್ಟನು. ದಾವೀದನೂ ಅಬೀಷೈಯೂ ರಾತ್ರಿಯ
ಆ ಪಾಳೆಯಕ್ಕೆ ಹೋದಾಗ ಸೌಲನು ಬಂಡಿಗ
ಗುಂಪಿನ ಮಧ್ಯದಲ್ಲಿ ಮಲಗಿಕೊಂಡು ನಿದ್ರೆಮಾಡು
ದ್ದನು. ಅವನ ಬರ್ಜಿಯು ಅವನ ತಲೆಯ ಹತ್ತಿ
ನೆಲದಲ್ಲಿ ನೆಡಲ್ಪಟ್ಟಿತ್ತು. ಅಬ್ನೇರನೂ ಸೈನಿಕರ
ಅವನ ಸುತ್ತಲೂ ಮಲಗಿದ್ದರು. ಅಬೀಷೈಯ
ದಾವೀದನಿಗೆ—ದೇವರು ಈಹೊತ್ತು ನಿನ್ನ ವೈರಿಯನ
ನಿನ್ನ ಕೈಗೆ ಒಪ್ಪಿಸಿಕೊಟ್ಟಿದ್ದಾನೆ; ಅಪ್ಪಣೆಯಾಗ
ನಾನು ಬರ್ಜಿಯಿಂದ ಒಂದೇ ಪೆಟ್ಟಿನಲ್ಲಿ ಅವನ
ನೆಲಕ್ಕೆ ಹತ್ತಿಕೊಳ್ಳುವಂತೆ ತಿವಿಯುವೆನು; ಎರಡನೆ
ಸಾರಿ ಹೊಡೆಯುವದು ಅವಶ್ಯವಿಲ್ಲ ಎಂದು ಹೇ
ದನು. ಆದರೆ ದಾವೀದನು—ಅವನನ್ನು ಕೊಲ್ಲಬೇ
ಯೆಹೋವನ ಅಭಿಷಿಕ್ತನಿಗೆ ವಿರೋಧವಾಗಿ ಕೈಎ
ತ್ತುವ ಯಾವನಾದರೂ ನಿರಪರಾಧಿಯೆಂದು ಎಣಿಸ
ಡುವನೋ ಅಂದನು. ಇದಲ್ಲದೆ ದಾವೀದನು
ಯೆಹೋವನಾಣೆ, ಅವನು ಯೆಹೋವನಿಂದ ಸಾಯ
ವನು; ಇಲ್ಲವೆ ಕಾಲತುಂಬಿ ಮೃತಿಹೊಂದುವನ
ಅಥವಾ ಯುದ್ಧದಲ್ಲಿ ಮಡಿಯುವನು. ತನ್ನ ಅ
ಷಿಕ್ತನಿಗೆ ವಿರೋಧವಾಗಿ ಕೈಯೆತ್ತದಂತೆ ಯೆಹೋ
ವನೇ ನನ್ನನ್ನು ತಡೆಯಲಿ. ಈಗ ಅವನ ತಲೆಯ ಬ
ಯಲ್ಲಿರುವ ಬರ್ಜಿಯನ್ನೂ ತಂಬಿಗೆಯನ್ನೂ ತೆಗೆ
ಕೊಂಡು ಹೋಗೋಣ ಎಂದು ಹೇಳಿ ಸೌಲನ ತಲೆ
ಬಿನ ಬಳಿಯಲ್ಲಿದ್ದ ಬರ್ಜಿ ತಂಬಿಗೆಗಳನ್ನು ತೆಗೆ
ಕೊಂಡು ಹೋದನು. ಯಾರೂ ಕಾಣಲಿಲ್ಲ, ಯಾ
ಗೂ ಗೊತ್ತಾಗಲಿಲ್ಲ; ಯಾರೂ ಎಚ್ಚರವಾಗಲಿ
ಯಾಕಂದರೆ ಯೆಹೋವನು ಅವರಿಗೆ ಗಾಢನಿದ್ರೆಯನ
ಬರಮಾಡಿದ್ದನು; ಒಬ್ಬರಿಗೂ ಎಚ್ಚರವಿಲ್ಲದೆ ಎಲ್ಲರ
ನಿದ್ರೆಮಾಡುತ್ತಿದ್ದರು.

ದಾವೀದನು ತನಗೂ ಪಾಳೆಯಕ್ಕೂ ತಕ್ಕಷ್ಟು ಅಂ
ತರವಿರುವ ಹಾಗೆ ಸ್ವಲ್ಪ ದೂರಕ್ಕೆ ಹೋಗಿ ಗುಡ್ಡವನ್ನೇ
ತುದಿಯಲ್ಲಿ ನಿಂತು—ಅಬ್ನೇರನೇ, ಕಿವಿಗೊಡುವದಿ
ವೋ ಎಂದು ನೇರನ ಮಗನಾದ ಅವನಿಗೂ ಸೈನಿಕ
ಗೂ ಕೇಳಿಸುವಂತೆ ಕೂಗಲು ಅಬ್ನೇರನು—ಅರಸನನ
ಕೂಗುವ ನೀನಾರು ಎಂದು ಕೇಳಿದನು. ದಾ
ದನು ಅಬ್ನೇರನಿಗೆ—ನೀನು ಶೂರನಲ್ಲವೋ? ಇಸ
ಯೇಲ್ಯರಲ್ಲಿ ನಿನಗೆ ಸಮಾನರಾರು! ನೀನು ನಿ
ಒಡೆಯನಾದ ಅರಸನನ್ನು ಯಾಕೆ ಕಾಯಲಿಲ್ಲ? ಜನ
ಲ್ಲೊಬ್ಬನು ಒಳಗೆ ಹೊಕ್ಕು ನಿನ್ನ ಒಡೆಯನಾದ ಅರ
ನನ್ನು ಕೊಲ್ಲಬೇಕೆಂದಿದ್ದನು. ನೀನು ಹೀಗೆ ಮಾಡ
ವದು ಸರಿಯಲ್ಲ. ಯೆಹೋವನಾಣೆ, ಆತನ ಅಭಿಷಿ
ನಾಗಿರುವ ನಿಮ್ಮ ಒಡೆಯನನ್ನು ಕಾಯದಿರುವ ನೀ
ಮರಣಕ್ಕೆ ಪಾತ್ರರೇ ಹೌದು. ಅರಸನ ತಲೆಯ ಬ
ಯಲ್ಲಿದ್ದ ಬರ್ಜಿಯೂ ತಂಬಿಗೆಯೂ ಏನಾದವೆ
ನೋಡು ಎಂದು ಕೂಗಿ ಹೇಳಿದನು. ಸೌಲನು ದಾವೀ
ದನ ಸ್ವರದ ಗುರುತು ಹಿಡಿದು ಅವನನ್ನು—ದಾವೀ

ನೇ, ನನ್ನ ಮಗನೇ, ಇದು ನಿನ್ನ ಸ್ವರವೋ ಎಂದು
ಕೇಳಲು ಅವನು—ಅರಸನೇ, ನನ್ನ ಒಡೆಯನೇ, ಹೌದು
18 ನನ್ನ ಸ್ವರವೇ: ನನ್ನ ಸ್ವಾಮಿಯು ತನ್ನ ಸೇವಕನನ್ನು
ಈ ಪ್ರಕಾರ ಹಿಂಸಿಸುವದೇಕೆ? ನಾನೇನು ಮಾಡಿದೆನು?
19 ಯಾವ ಪಾಪಕ್ಕೆ ಕೈಹಾಕಿದೆನು? ನನ್ನ ಅರಸನಾದ
ಒಡೆಯನು ದಯವಿಟ್ಟು ತನ್ನ ಸೇವಕನ ಮಾತುಗ
ಳನ್ನು ಲಾಲಿಸಬೇಕು. ನಿನ್ನನ್ನು ನನಗೆ ವಿರೋಧವಾಗಿ
ಎಬ್ಬಿಸಿದವನು ಯೆಹೋವನೇ ಆಗಿರುವ ಪಕ್ಷದಲ್ಲಿ
ಆತನಿಗೆ ಗಮಗಮಿಸುವ ನೈವೇದ್ಯವನ್ನು ಸಮರ್ಪಿಸ
ಬೇಕು; ಮನುಷ್ಯರಾಗಿದ್ದರೆ ಈಗ ಅವರು ನನಗೆ
ಯೆಹೋವನ ಸ್ವಾಸ್ತ್ಯದಲ್ಲಿ ಪಾಲುಸಿಕ್ಕದಂತೆ—ಹೋಗಿ
ಅನ್ಯದೇವತೆಗಳನ್ನು ಸೇವಿಸು ಎಂದು ನನ್ನನ್ನು ತಳ್ಳಿ
ಬಿಟ್ಟಿದ್ದಾರಾದದರಿಂದ ಯೆಹೋವನ ದೃಷ್ಟಿಯಲ್ಲಿ
20 ಅವರು ಶಾಪಗ್ರಸ್ತರಾಗಿರಲಿ. ಯೆಹೋವನ ಸಾನ್ನಿಧ್ಯ
ವಿಲ್ಲದಿರುವ ದೇಶದಲ್ಲಿ ನನ್ನ ರಕ್ತವು ಸುರಿಸಲ್ಪಡದಿರಲಿ.
ಅಯ್ಯೋ, ಗುಡ್ಡಗಳಲ್ಲಿ ಕೌಜುಗವನ್ನು ಹಿಡಿಯಹೊರಟ
ಬೇಟೆಗಾರನೋ ಎಂಬಂತೆ ಇಸ್ರಾಯೇಲ್ಯರ ಅರಸನು
ಹೊರಟು ಬಂದು ನನ್ನ ಪ್ರಾಣವನ್ನು ತೆಗೆಯಬೇಕೆಂದಿ
ರುತ್ತಾನಲ್ಲಾ ಅಂದನು. ಆಗ ಸೌಲನು ಅವನಿಗೆ—
ನಾನು ಪಾಪಮಾಡಿದೆನು; ದಾವೀದನೇ, ನನ್ನ ಮಗ
ನೇ, ಹಿಂದಿರುಗಿ ಬಾ; ಈಹೊತ್ತು ನನ್ನ ಜೀವವು ನಿನ್ನ
ದೃಷ್ಟಿಯಲ್ಲಿ ಬಲು ಬೆಲೆಯುಳ್ಳದ್ದೆಂದು ಎಣಿಸಲ್ಪಟ್ಟಿತು.
ಆದದರಿಂದ ನಾನು ಇನ್ನು ಮುಂದೆ ನಿನಗೆ ಕೇಡುಮಾ
ಡುವದಿಲ್ಲ. ಈ ವರೆಗೆ ನಾನು ಮಾಡಿದ್ದು ಹುಚ್ಚುತ
ನವೂ ದೊಡ್ಡ ತಪ್ಪೂ ಆಗಿದೆ ಎಂದು ಹೇಳಲು ದಾವೀದನು
ಅವನಿಗೆ—ಅರಸೇ, ಇಗೋ ನಿನ್ನ ಬರ್ಜಿ ಇಲ್ಲಿ ಅದೆ;
ಸೇವಕರಲ್ಲೊಬ್ಬನು ಬಂದು ತೆಗೆದುಕೊಂಡು ಹೋ
ಗಲಿ. ಯೆಹೋವನು ಪ್ರತಿಯೊಬ್ಬನಿಗೂ ಅವನವನ
ನೀತಿಸತ್ಯತೆಗಳಿಗನುಸಾರವಾದ ಫಲವನ್ನು ಕೊಡು
ವನು. ಆತನು ಈಹೊತ್ತು ನಿನ್ನನ್ನು ನನ್ನ ಕೈಗೆ
ಒಪ್ಪಿಸಿಕೊಟ್ಟಿದ್ದರೂ ನೀನು ಯೆಹೋವನ ಅಭಿಷಿಕ್ತ
ನೆಂದು ನಾನು ನಿನ್ನ ಮೇಲೆ ಕೈಹಾಕಲಿಲ್ಲ. ನಾನು
ಈಹೊತ್ತು ನಿನ್ನ ಜೀವವನ್ನು ಮಾನ್ಯವಾದದ್ದೆಂದೆ
ಣಿಸಿದಂತೆ ಯೆಹೋವನು ನನ್ನ ಜೀವವನ್ನೂ ಮಾನ್ಯ
ವಾದದ್ದೆಂದೆಣಿಸಿ ನನ್ನನ್ನು ಎಲ್ಲಾ ಇಕ್ಕಟ್ಟಿನಿಂದ ಬಿಡಿಸಲಿ
ಎಂದನು. ಆಗ ಸೌಲನು ದಾವೀದನಿಗೆ—ನನ್ನ ಮಗ
ನೇ, ದಾವೀದನೇ, ನೀನು ಆಶೀರ್ವಾದ ಹೊಂದು;
ನೀನು ಹೇಗೂ ಮಹಾಕಾರ್ಯಗಳನ್ನು ನಡಿಸಿ ಸಫಲ
ನಾಗುವಿ ಎಂದು ಹೇಳಿ ತನ್ನ ಊರಿಗೆ ಹೊರಟನು;
ದಾವೀದನು ತನ್ನ ದಾರಿ ಹಿಡಿದನು.

ದಾವೀದನು ಗತ್ ಊರಿನ ಅರಸನಾದ
ಆಕೀಷನನ್ನು ಆಶ್ರಯಿಸಿದ್ದು.

**27** ದಾವೀದನು ತನ್ನ ಮನಸ್ಸಿನಲ್ಲಿ—ನಾನು ಇಲ್ಲಿ
ದ್ದರೆ ಹೇಗೂ ಒಂದು ದಿನ ಸೌಲನ ಕೈಯಿಂದ
ಮಡಿಯಲೇ ಬೇಕು ಆದದರಿಂದ ಫಿಲಿಷ್ಟಿಯರ
ದೇಶಕ್ಕೆ ಹೋಗಿ ತಪ್ಪಿಸಿಕೊಳ್ಳುವದೇ ಉತ್ತಮ. ಆ
ಮೇಲೆ ಸೌಲನು ಇಸ್ರಾಯೇಲ್ಪ್ರಾಂತಗಳಲ್ಲಿ ನನ್ನನ್ನು
ಹುಡುಕದೆ ಬಿಟ್ಟುಬಿಡುವನು, ನಾನು ಅವನ ಕೈಗೆ
ತಪ್ಪಿಸಿಕೊಂಡವನಾಗಿರುವೆನು ಅಂದುಕೊಂಡು ತನ್ನ
ಆರುನೂರು ಮಂದಿ ಸೈನಿಕರೊಡನೆ ಗತ್ ಊರಿನ
ಅರಸನೂ ಮಾವೋಕನ ಮಗನೂ ಆದ ಆಕೀಷನ
ಬಳಿಗೆ ಹೋದನು. ಅವನೂ ಅವನ ಜನರೂ ತಮ್ಮ 3
ತಮ್ಮ ಕುಟುಂಬಸಹಿತವಾಗಿ ಆಕೀಷನ ಊರಾದ ಗತ್
ಊರಿನಲ್ಲಿ ವಾಸಿಸಿದರು. ದಾವೀದನ ಹೆಂಡತಿಯ
ರಾಗಿರುವ ಇಜ್ರೇಲ್ಯಳಾದ ಅಹೀನೋವಮಳೂ ಕರ್ಮೆ
ಲ್ಯನಾದ ನಾಬಾಲನ ಹೆಂಡತಿಯಾಗಿದ್ದ ಅಬೀಗೈಲಳೂ
ಅವನ ಸಂಗಡ ಇದ್ದರು. ದಾವೀದನು ತಪ್ಪಿಸಿಕೊಂಡು 4
ಗತ್ ಊರಿಗೆ ಹೋದನೆಂಬ ವರ್ತಮಾನವನ್ನು ಸೌಲನು
ಕೇಳಿ ಆ ಮೇಲೆ ಅವನನ್ನು ಹುಡುಕಲೇ ಇಲ್ಲ. ಒಂದು 5
ದಿನ ದಾವೀದನು ಆಕೀಷನಿಗೆ—ನಿನ್ನ ಸೇವಕನಾದ
ನಾನು ನಿನ್ನ ಸಂಗಡ ರಾಜಧಾನಿಯಲ್ಲೇಕೆ ವಾಸಿಸ
ಬೇಕು? ನಿನ್ನ ದೃಷ್ಟಿಯಲ್ಲಿ ನನಗೆ ದಯೆದೊರಕಿರುವ
ದಾದರೆ ಯಾವದಾದರೊಂದು ಹಳ್ಳಿಯಲ್ಲಿ ನನಗೆ
ಸ್ಥಳಕೊಡಿಸು, ನಾನು ಅಲ್ಲಿ ವಾಸಿಸುವೆನು ಅನ್ನಲು
ಆಕೀಷನು ಕೂಡಲೆ ಅವನಿಗೆ ಚಿಕ್ಲಗ್ ಊರನ್ನು 6
ಕೊಟ್ಟುಬಿಟ್ಟನು. ಆದದರಿಂದ ಚಿಕ್ಲಗ್ ಎಂಬದು
ಇಂದಿನ ವರೆಗೂ ಯೆಹೂದರಾಜರಿಗೆ ಸೇರಿದೆ.

ದಾವೀದನು ಫಿಲಿಷ್ಟಿಯರ ದೇಶದಲ್ಲಿ ಒಂದು ವರು 7
ಷವೂ ನಾಲ್ಕು ತಿಂಗಳೂ ವಾಸವಾಗಿದ್ದನು. ಈ ಕಾಲ 8
ದಲ್ಲಿ ಅವನೂ ಅವನ ಜನರೂ ತೇಲಾಮಿನಿಂದ
ಶೂರಿನ ವರೆಗೂ ಐಗುಪ್ತದೇಶದ ವರೆಗೂ ವಿಸ್ತರಿಸಿ
ಕೊಂಡಿರುವ ಪ್ರಾಂತಗಳಲ್ಲಿ ವಾಸಿಸುತ್ತಿರುವ ಗೆಷೂ
ರ್ಯರು, ಗಿಜ್ರೀಯರು, ಅಮಾಲೇಕ್ಯರು ಇವರ
ಮೇಲೆ ಬಿದ್ದು ಸುಲುಕೊಳ್ಳುತ್ತಿದ್ದರು. ದಾವೀದನು 9
ಸ್ತ್ರೀಪುರುಷರಲ್ಲಿ ಒಬ್ಬರನ್ನೂ ಉಳಿಸದೆ ದೇಶದ ಎಲ್ಲಾ
ನಿವಾಸಿಗಳನ್ನು ಕೊಂದು ಕುರಿ, ದನ, ಕತ್ತೆ, ಒಂಟೆ,
ಉಡುಗೆರೆ ಇವುಗಳನ್ನು ತೆಗೆದುಕೊಂಡು ಆಕೀಷನ
ಬಳಿಗೆ ಹೋಗುತ್ತಿದ್ದನು. ಆಕೀಷನು ಅವನನ್ನು— 10
ಈಹೊತ್ತು ಯಾವ ಪ್ರಾಂತದವರನ್ನು ಸೂರೆಮಾಡಿ
ಕೊಂಡು ಬಂದಿರಿ ಎಂದು ಕೇಳುವನು. ದಾವೀದನು
ಅವನಿಗೆ—ದಕ್ಷಿಣಪ್ರಾಂತದಲ್ಲಿರುವ ಯೆಹೂದ್ಯರು,
ಎರಹ್ಮೇಲ್ಯರು, ಕೇನ್ಯರು ಇವರಲ್ಲಿ ಯಾರ ಹೆಸರ
ನ್ನಾದರೂ ಹೇಳುವನು. ದಾವೀದನು ತನ್ನ ಕೃತ್ಯವನ್ನು 11
ಜನರು ಹೇಳಾರೆಂದು ನೆನಸಿ ಅವನು ಯಾರನ್ನೂ ಗತ್
ಊರಿಗೆ ತಾರದೆ ಎಲ್ಲಾ ಸ್ತ್ರೀಪುರುಷರನ್ನು ಅಲ್ಲೇ
ಕೊಂದುಹಾಕುತ್ತಿದ್ದನು. ಅವನು ಫಿಲಿಷ್ಟಿಯರ ದೇಶ
ದಲ್ಲಿ ವಾಸವಾಗಿದ್ದ ಕಾಲದಲ್ಲೆಲ್ಲಾ ಇದೇ ರೀತಿ ಮಾ
ಡುತ್ತಿದ್ದನು. ದಾವೀದನ ಹೆಸರು ಸ್ವಜನರಾದ ಇಸ್ರಾ 12
ಯೇಲ್ಯರಲ್ಲಿ ಅಸಹ್ಯವಾದದರಿಂದ ಇವನು ತನ್ನ ನಿತ್ಯ
ದಾಸನಾಗಿರುವನೆಂದು ಆಕೀಷನು ನಂಬಿಕೊಂಡನು.

**28** ಆ ಕಾಲದಲ್ಲಿ ಫಿಲಿಷ್ಟಿಯರು ಇಸ್ರಾಯೇಲ್ಯ
ರೊಡನೆ ಯುದ್ಧಮಾಡುವದಕ್ಕಾಗಿ ಸೈನ್ಯವನ್ನು
ಕೂಡಿಸತೊಡಗಿದರು. ಆಗ ಆಕೀಷನು ದಾವೀದ
ನಿಗೆ—ನೀನೂ ನಿನ್ನ ಜನರೂ ಯುದ್ಧಕ್ಕೆ ನನ್ನ ಜೊತೆ
ಯಲ್ಲೇ ಬರಬೇಕೆಂಬದು ನಿನಗೆ ಗೊತ್ತಿರುತ್ತದಲ್ಲವೋ
ಎನ್ನಲು ದಾವೀದನು—ಹೌದು, ನಿನ್ನ ದಾಸನ ಸಾಹ 2
ಸವು ಗೊತ್ತಾಗುವದು ಅಂದನು. ಆಕೀಷನು ಅವ
ನಿಗೆ—ಹಾಗಾದರೆ ಯುದ್ಧಕಾಲದಲ್ಲೆಲ್ಲಾ ನಿನ್ನನ್ನೇ
ನನ್ನ ಮೈಗಾವಲಿಗೆ ನೇಮಿಸಿಕೊಳ್ಳುವೆನು ಅಂದನು.

ಫಿಲಿಷ್ಟಿಯರು ಯುದ್ಧಕ್ಕೆ ಬಂದಲ್ಲಿ ಸೌಲನು ಅದರ
ಫಲವೇನಾಗುವದೆಂದು ಏಂದೋರಿನ ಒಬ್ಬ
ಯಕ್ಷಿಣಿಯನ್ನು ವಿಚಾರಿಸಿದ್ದು.

3 ಸಮುವೇಲನು ಮೃತಿಹೊಂದಿದ್ದನು. ಇಸ್ರಾಯೇ
ಲ್ಯರು ಅವನಿಗೋಸ್ಕರ ಗೋಳಾಡಿ ಅವನ ಶವವನ್ನು
ಅವನ ಸ್ವಂತ ಊರಾದ ರಾಮದಲ್ಲಿ ಸಮಾಧಿಮಾಡಿ
ದ್ದರು. ಸೌಲನು ಸತ್ತವರಲ್ಲಿ ವಿಚಾರಿಸುವವರನ್ನೂ
ಬೇತಾಳಿಕರನ್ನೂ ದೇಶದಿಂದ ಹೊರಡಿಸಿಬಿಟ್ಟಿದ್ದನು.
4 ಫಿಲಿಷ್ಟಿಯರು ಸೈನ್ಯಕೂಡಿಸಿಕೊಂಡು ಬಂದು ಶೂನೇಮಿ
ನಲ್ಲಿ ಪಾಳೆಯಮಾಡಿಕೊಂಡಿದ್ದರು. ಸೌಲನು ಎಲ್ಲಾ
ಇಸ್ರಾಯೇಲ್ಯರೊಡನೆ ಬಂದು ಗಿಲ್ಬೋವದಲ್ಲಿ ಇಳು
5 ಕೊಂಡನು. ಅವನು ಫಿಲಿಷ್ಟಿಯರ ಪಾಳೆಯವನ್ನು
ಕಂಡು ಬಹಳ ಭಯದಿಂದ ಎದೆಯೊಡೆದವನಾದನು.
6 ಅವನು ಯೆಹೋವನ ಸನ್ನಿಧಿಯಲ್ಲಿ ವಿಚಾರಿಸಿದರೂ
ಆತನು ಅವನಿಗೆ ಕನಸುಗಳಿಂದಾಗಲಿ ಊರೀಮಿ
ನಿಂದಾಗಲಿ ಪ್ರವಾದಿಗಳಿಂದಾಗಲಿ ಉತ್ತರಕೊಡಲೇ
7 ಇಲ್ಲ. ಆದದರಿಂದ ಅವನು ತನ್ನ ಸೇವಕರಿಗೆ—
ಸತ್ತವರಲ್ಲಿ ವಿಚಾರಿಸಬಲ್ಲ ಒಬ್ಬ ಸ್ತ್ರೀಯನ್ನು ಹುಡು
ಕಿರಿ; ನಾನು ಆಕೆಯ ಹತ್ತಿರ ಹೋಗಿ ವಿಚಾರಿಸು
ವೆನು ಎಂದು ಹೇಳಲಾಗಿ ಅವರು— ಅಂಥವಳೊಬ್ಬಳು
8 ಏಂದೋರಿನಲ್ಲಿದ್ದಾಳೆ ಅಂದರು. ಆಗ ಸೌಲನು
ವಸ್ತ್ರಾದಿಗಳಿಂದ ತನ್ನನ್ನು ಮಾರ್ಪಡಿಸಿಕೊಂಡು ಇಬ್ಬ
ರು ಸೇವಕರೊಡನೆ ಹೊರಟು ರಾತ್ರಿಯಲ್ಲಿ ಆಕೆಯ
ಮನೆ ಸೇರಿ—ದಯವಿಟ್ಟು ನನಗೋಸ್ಕರ ಸತ್ತವರಲ್ಲಿ
ವಿಚಾರಿಸಿ ಕಣಿಹೇಳು; ನಾನು ಯಾವನ ಹೆಸರು ಹೇಳು
ತ್ತೇನೋ ಅವನನ್ನು ಇಲ್ಲಿಗೆ ಬರಮಾಡು ಎಂದು ಆಕೆ
9 ಯನ್ನು ಬೇಡಿಕೊಂಡನು. ಆಗ ಆಕೆಯು ಅವನಿಗೆ—
ಸೌಲನು ಮಾಡಿದ್ದು ನಿನಗೆ ಗೊತ್ತುಂಟು; ಅವನು
ಸತ್ತವರಲ್ಲಿ ವಿಚಾರಿಸುವವರನ್ನೂ ಬೇತಾಳಿಕರನ್ನೂ
ದೇಶದಿಂದ ಹೊರಡಿಸಿಬಿಟ್ಟನಲ್ಲಾ; ಹೀಗಿದ್ದರೂ ನಾನು
ಸಾಯುವಂತೆ ನೀನು ನನ್ನ ಪ್ರಾಣಕ್ಕೆ ಉರುಲೊಡ್ಡುವ
10 ದೇಕೆ ಅಂದಳು. ಅದಕ್ಕೆ ಸೌಲನು--ಯೆಹೋವ
ನಾಣೆ, ಈ ವಿಷಯದಲ್ಲಿ ನೀನು ದಂಡನೆಗೆ ಗುರಿಯಾ
ಗುವದಿಲ್ಲ ಎಂದು ಆಕೆಗೆ ಯೆಹೋವನ ಹೆಸರಿನಲ್ಲಿ
11 ಪ್ರಮಾಣಮಾಡಿದನು. ಆಗ ಸ್ತ್ರೀಯು— ನಿನಗೆ ಯಾ
ರನ್ನು ಬರಮಾಡಬೇಕು ಎನ್ನಲು—ಸಮುವೇಲನನ್ನು
12 ಎಂದು ಉತ್ತರಕೊಟ್ಟನು. ಆ ಸ್ತ್ರೀಯು ಸಮುವೇಲ
ನನ್ನು ಕಂಡಕೂಡಲೆ ಗಟ್ಟಿಯಾಗಿ ಕೂಗಿ ಸೌಲನಿಗೆ—
ನೀನು ನನ್ನನ್ನು ವಂಚಿಸಿದ್ದೇಕೆ? ನೀನು ಸೌಲನಲ್ಲವೋ?
13 ಅಂದಳು. ಅರಸನು—ಹೆದರ ಬೇಡ; ನಿನಗೇನು
ಕಾಣಿಸುತ್ತದೆ ಎಂದು ಆಕೆಯನ್ನು ಕೇಳಲು—ಭೂಮಿ
ಯೊಳಗಿಂದ ಒಬ್ಬ ದೇವನು ಬರುತ್ತಿರುವದನ್ನು ನೋ
14 ಡುತ್ತೇನೆ ಎಂದು ಉತ್ತರಕೊಟ್ಟಳು. ಅವನು ತಿರಿಗಿ--
ಅವನ ರೂಪ ಹೇಗದೆ ಎಂದು ಕೇಳಲು ಆಕೆಯು—
ನಿಲುವಂಗಿಯನ್ನು ತೊಟ್ಟುಕೊಂಡ ಒಬ್ಬ ಮುದು
ಕನು ಬರುತ್ತಾನೆ ಎಂದು ಹೇಳಿದಳು. ಅವನು
ಸಮುವೇಲನೇ ಎಂದು ಸೌಲನು ತಿಳಿದು ನೆಲದ ಮಟ್ಟಿ
15 ಗೂ ಬೊಗ್ಗಿ ನಮಸ್ಕರಿಸಿದನು. ಆಗ ಸಮುವೇಲನು
ಸೌಲನನ್ನು—ನೀನು ನನ್ನ ವಿಶ್ರಾಂತಿಯನ್ನು ಕೆ
ದ್ದೇಕೆ? ನನ್ನನ್ನು ಇಲ್ಲಿಗೆ ಯಾಕೆ ಬರಮಾಡಿದಿ ಎಂ
ಕೇಳಿದನು. ಅದಕ್ಕೆ ಸೌಲನು—ನಾನು ಬಲು ಇಕ್ಕ
ನಲ್ಲಿದ್ದೇನೆ; ಫಿಲಿಷ್ಟಿಯರು ನನಗೆ ವಿರೋಧವಾಗಿ ಯ
ದ್ಧಕ್ಕೆ ಬಂದಿದ್ದಾರೆ; ದೇವರು ನನ್ನನ್ನು ಬಿಟ್ಟು ದ
ಹೋಗಿದ್ದಾನೆ; ಆತನು ನನಗೆ ಪ್ರವಾದಿಗಳಿಂದಾಗಲಿ ಕ
ಸುಗಳಿಂದಾಗಲಿ ಉತ್ತರಕೊಡಲೊಲ್ಲನು. ಆದದರಿ
ನಾನು ಮಾಡಬೇಕಾದದ್ದನ್ನು ನೀನು ತಿಳಿಸುವಿಯೆಂ
ನಿನ್ನನ್ನು ಇಲ್ಲಿಗೆ ಬರಮಾಡಿದೆನು ಅಂದನು. ಅ
ಸಮುವೇಲನು—ಯೆಹೋವನು ನಿನ್ನನ್ನು ಬಿಟ್ಟು ನಿ
ವಿರೋಧಿಯಾದ ಮೇಲೆ ನೀನು ನನ್ನನ್ನು ವಿಚಾರಿಸು
ದೇಕೆ? ಆತನು ನನ್ನ ಮುಖಾಂತರ ನಿನಗೆ ಹೇಳಿದ್ದ
ನೆರವೇರಿಸಿದ್ದಾನೆ; ರಾಜ್ಯವನ್ನು ನಿನ್ನಿಂದ ಕಿತ
ಕೊಂಡು ನಿನ್ನ ನೆರೆಯವನಾದ ದಾವೀದನಿಗೆ ಕೊ
ದ್ದಾನೆ. ನೀನು ಯೆಹೋವನ ಮಾತನ್ನು ಕೇಳಲಿ
ಆತನು ಅಮಾಲೇಕ್ಯರ ಮೇಲೆ ಉಗ್ರಕೋಪಗೊಂ
ಮಾಡಿದ ಕೋಪಾಜ್ಞೆಯನ್ನು ನೀನು ನೆರವೇರಿಸಲಿ
ಆದದರಿಂದಲೇ ಯೆಹೋವನು ಈಗ ನಿನಗೆ ಹೀಗೆ ವ
ಡುತ್ತಾನೆ. ಆತನು ನಿನ್ನ ಕೂಡ ಇಸ್ರಾಯೇಲ್ಯರನ
ಫಿಲಿಷ್ಟಿಯರ ಕೈಗೆ ಒಪ್ಪಿಸುವನು. ನಾಳೆ ನೀನೂ ನಿ
ಮಕ್ಕಳೂ ನಾನಿರುವಲ್ಲಿಗೆ ಬರುವಿರಿ; ಆತನು ಇಸ
ಯೇಲ್ ಸೈನ್ಯವನ್ನು ಫಿಲಿಷ್ಟಿಯರ ಕೈಗೆ ಒಪ್ಪಿಸುವ
ಎಂದು ಹೇಳಿದನು. ಸೌಲನು ಸಮುವೇಲನ ಮಾತುಗ
ನ್ನು ಕೇಳಿದ ಕೂಡಲೆ ಭಯಭ್ರಾಂತನಾಗಿ ನೆಲದ ಮೇ
ಉದ್ದಕ್ಕೆ ಬಿದ್ದನು. ಅವನು ಇಡೀ ದಿವಸ ಊ
ಮಾಡಿರಲಿಲ್ಲವಾದದರಿಂದ ಅವನಲ್ಲಿ ಬಲವೇ ಇರಲಿ
ಆ ಸ್ತ್ರೀಯು ಸೌಲನ ಹತ್ತಿರ ಬಂದು ಅವನು ಬ
ಭೀತನಾಗಿದ್ದಾನೆಂದು ಕಂಡು ಅವನಿಗೆ—ನಿನ್ನ ದಾ
ಯಾದ ನಾನು ನಿನ್ನ ಮಾತುಕೇಳಿದೆನು; ಕೈಯ
ಜೀವಹಿಡಿದವಳಾಗಿ ನಿನ್ನ ಅಪ್ಪಣೆಯನ್ನು ನೆರವೇ
ಸಿದೆನು. ಆದದರಿಂದ ಈಗ ನೀನು ದಯವಿಟ್ಟು ನಿ
ದಾಸಿಯ ಮಾತನ್ನು ಕೇಳಬೇಕು; ಸ್ವಲ್ಪ ಆಹಾರ ತ
ತ್ತೇನೆ, ಪ್ರಯಾಣಕ್ಕೆ ಬಲಬರುವ ಹಾಗೆ ಅದನ
ಊಟಮಾಡು ಎಂದು ಹೇಳಿದಳು. ಅವನು—ಒಲ್ಲೆನ
ಊಟಮಾಡುವದಿಲ್ಲ ಅಂದನು. ಆದರೆ ಅವನ ಸೇ
ಕರೂ ಆ ಸ್ತ್ರೀಯೂ ಬಹಳವಾಗಿ ಬೇಡಿಕೊಂಡದರಿಂ
ಅವನು ಕಡೆಗೆ ಅವರ ಮಾತಿಗೆ ಒಪ್ಪಿ ನೆಲದಿಂದೆದ
ಮಂಚದ ಮೇಲೆ ಕೂತುಕೊಂಡನು. ಆ ಸ್ತ್ರೀಗೆ ಮ
ಯಲ್ಲಿ ಒಂದು ಕೊಬ್ಬಿದ ಕರುವಿತ್ತು. ಆಕೆಯ
ಶೀಘ್ರವಾಗಿ ಅದನ್ನು ಕೊಯ್ದು ಪಕ್ವಮಾಡಿ ಹಿಟ್ಟನ
ತೆಗೆದುಕೊಂಡು ನಾದಿ ಹುಳಿಯಿಲ್ಲದ ರೊಟ್ಟಿಗಳನ
ಸುಟ್ಟು ಸೌಲನಿಗೂ ಅವನ ಸೇವಕರಿಗೂ ಬಡಿಸಿದಳ
ಅವರು ಊಟಮಾಡಿ ಅದೇ ರಾತ್ರಿ ಹೊರಟುಹೋದರ

ದಾವೀದನು ಆಕೀಷನ ಜೊತೆಯಲ್ಲಿ ಯುದ್ಧಕ್ಕೆ
ಹೊರಡಲು ಫಿಲಿಷ್ಟಿಯಪ್ರಭುಗಳು ಸಂಶಯಪಟ್ಟು
ಅವನನ್ನು ಹಿಂದಕ್ಕೆ ಕಳುಹಿಸಿದ್ದು.

ಫಿಲಿಷ್ಟಿಯರು ತಮ್ಮ ಸೈನ್ಯವನ್ನು ಕೂಡಿಸಿಕೊಂಡು
ಬಂದು ಅಫೇಕಿನಲ್ಲಿ ಪಾಳೆಯಮಾಡಿಕೊಂಡರು.

ಇಸ್ರಾಯೇಲ್ಯರು ಇಜ್ರೇಲ್ ಬೈಲಿನಲ್ಲಿರುವ ಬುಗ್ಗೆ
ಯ ಬಳಿಯಲ್ಲಿ ಇಳುಕೊಂಡರು. ಫಿಲಿಷ್ಟಿಯ ಪ್ರಭು
ಗಳ ಸೈನಿಕರು ನೂರು ನೂರು ಮಂದಿಯಾಗಿಯೂ
ಸಾವಿರ ಸಾವಿರ ಮಂದಿಯಾಗಿಯೂ ಬರುತ್ತಿರುವಾಗ
ದಾವೀದನು ತನ್ನ ಜನರ ಸಹಿತವಾಗಿ ಆಕೀಷನ ಸಂಗ
ಡ ಹಿಂದಳದಲ್ಲಿದ್ದನು. ಆಗ ಫಿಲಿಷ್ಟಿಯಪ್ರಭುಗಳು—
ಈ ಇಬ್ರಿಯರು ಯಾಕೆ ಎಂದು ಆಕೀಷನನ್ನು ಕೇಳ
ಲು ಅವನು ಅವರಿಗೆ—ಇವನು ಇಸ್ರಾಯೇಲ್ಯರ ಅರ
ಸನಾದ ಸೌಲನ ಸೇವಕ ದಾವೀದನಲ್ಲವೋ? ಇವನು
ಇಷ್ಟು ವರುಷ ಇಷ್ಟು ದಿವಸಗಳಿಂದ ನನ್ನ ಬಳಿಯಲ್ಲಿ
ದ್ದಾನೆ; ಸೌಲನನ್ನು ಬಿಟ್ಟು ನನ್ನ ಹತ್ತಿರ ಬಂದ
ದಿವಸ ಮೊದಲುಗೊಂಡು ಇಂದಿನ ವರೆಗೂ ನಾನು
ಇವನಲ್ಲಿ ಯಾವ ಅಪರಾಧವನ್ನೂ ಕಾಣಲಿಲ್ಲ ಎಂದು
ಉತ್ತರಕೊಟ್ಟನು. ಆದರೆ ಫಿಲಿಷ್ಟಿಯಪ್ರಭುಗಳು
ಅವನ ಮೇಲೆ ಕೋಪಗೊಂಡು ಅವನಿಗೆ—ಈ ಮನು
ಷ್ಯನನ್ನು ಕಳುಹಿಸಿಬಿಡು, ಇವನು ಹಿಂದಿರುಗಿ ಹೋಗಿ
ನೀನು ನೇಮಿಸಿದ ಸ್ಥಳದಲ್ಲೇ ವಾಸಿಸಲಿ; ನಮ್ಮ ಜೊತೆ
ಯಲ್ಲಿ ಯುದ್ಧಕ್ಕೆ ಬರಬಾರದು. ಬಂದರೆ ನಮಗೇ
ಶತ್ರುವಾಗಿ ನಿಂತಾನು. ಫಿಲಿಷ್ಟಿಯರ ತಲೆಗಳನ್ನು
ಕಡಿಯುವದರಿಂದಲೇ ಇವನು ತನ್ನ ಯಜಮಾನನ
ಮೆಚ್ಚಿಕೆಯನ್ನು ಪಡೆಯಬಹುದಲ್ಲವೇ!

ಸೌಲನು ಸಾವಿರಗಟ್ಟಳೆಯಾಗಿ ಕೊಂದನು;

ದಾವೀದನು ಹತ್ತುಸಾವಿರಗಟ್ಟಳೆಯಾಗಿ ಕೊಂದನು
ಎಂದು ಸ್ತ್ರೀಯರು ಕುಣಿಯುತ್ತಾ ಪರಸ್ಪರವಾಗಿ ಹಾಡಿ
ದ್ದು ಈ ದಾವೀದನನ್ನೇ ಕುರಿತಲ್ಲವೋ ಅಂದರು.

ಆಗ ಆಕೀಷನು ದಾವೀದನನ್ನು ಕರೆದು ಅವನಿ
ಗೆ—ಯೆಹೋವನಾಣೆ, ನೀನು ಯಥಾರ್ಥನು; ನೀನು
ನನ್ನ ಸಂಗಡ ಪಾಳೆಯದಲ್ಲಿದ್ದುಕೊಂಡು ಯುದ್ಧಕ್ಕೆ
ಹೋಗುತ್ತಾ ಬರುತ್ತಾ ಇರುವದು ಯುಕ್ತವೆಂದು
ನನಗೆ ತೋರಿತು. ನೀನು ಬಂದಂದಿನಿಂದ ಇಂದಿನ
ವರೆಗೂ ನಿನ್ನಲ್ಲಿ ಯಾವ ದೋಷವನ್ನೂ ಕಾಣಲಿಲ್ಲ.
ಆದರೆ ಪ್ರಭುಗಳು ನಿನ್ನನ್ನು ಮೆಚ್ಚುವದಿಲ್ಲ; ಆದದ
ರಿಂದ ನೀನು ಸಮಾಧಾನದಿಂದ ಹಿಂದಿರುಗಿ ಹೋಗು;
ಅವರನ್ನು ಸಿಟ್ಟುಗೊಳಿಸಬಾರದು ಎಂದು ಹೇಳಲು
ದಾವೀದನು ಆಕೀಷನಿಗೆ—ನಾನೇನು ಮಾಡಿದೆನು?
ನಿನ್ನ ದಾಸನಾದ ನಾನು ನಿನ್ನ ಬಳಿಗೆ ಬಂದಂದಿನಿಂದ
ಇಂದಿನ ವರೆಗೂ ನನ್ನಲ್ಲಿ ಯಾವ ಅಪರಾಧವನ್ನು
ಕಂಡಿ? ಅರಸನಾದ ನನ್ನ ಒಡೆಯನ ಜೊತೆಯಲ್ಲಿ
ಹೋಗಿ ಅವನ ಶತ್ರುಗಳೊಡನೆ ನಾನೇಕೆ ಯುದ್ಧ
ಮಾಡಬಾರದು ಅಂದನು. ಆಗ ಆಕೀಷನು ದಾವೀ
ದನಿಗೆ—ನೀನು ಒಳ್ಳೆಯವನೆಂದು ನನಗೆ ಗೊತ್ತದೆ;
ನನ್ನ ದೃಷ್ಟಿಯಲ್ಲಿ ನೀನು ದೇವದೂತನಂತಿರುತ್ತೀ;
ಆದರೆ ಫಿಲಿಷ್ಟಿಯಪ್ರಭುಗಳು—ಇವನು ನಮ್ಮ ಜೊತೆ
ಯಲ್ಲಿ ಯುದ್ಧಕ್ಕೆ ಹೊರಡಬಾರದೆಂದು ಹೇಳುತ್ತಾರ
ಲ್ಲಾ; ಆದದರಿಂದ ನೀನೂ ನಿನ್ನ ಸಂಗಡ ಬಂದ ನಿನ್ನ
ಒಡೆಯನ ಸೇವಕರೂ ನಾಳೆ ಬೆಳಿಗ್ಗೆ ಎದ್ದು ಹೊತ್ತು
ಮೂಡಿದ ಕೂಡಲೆ ಹಿಂದಿರುಗಿ ಹೋಗಿರಿ ಎಂದು ಹೇಳಿ
ದನು. ದಾವೀದನು ತನ್ನ ಜನರೊಡನೆ ಬೆಳಿಗ್ಗೆ ಎದ್ದು
ಹಿಂದಿರುಗಿ ಫಿಲಿಷ್ಟಿಯರ ದೇಶಕ್ಕೆ ಹೊರಟನು. ಫಿಲಿಷ್ಟಿ
ಯರು ಇಜ್ರೇಲಿಗೆ ಹೋದರು.

ದಾವೀದನು ತನ್ನ ಊರಾದ ಚಿಕ್ಲಗನ್ನು ಸುಟ್ಟ
ಅಮಾಲೇಕ್ಯರನ್ನು ಸಂಹರಿಸಿದ್ದು.

30 ದಾವೀದನೂ ಅವನ ಜನರೂ ಮೂರನೆಯ ದಿನ
ಚಿಕ್ಲಗ್ ಊರನ್ನು ಮುಟ್ಟಿದರು. ಅಷ್ಟರೊಳಗೆ
ಅಮಾಲೇಕ್ಯರು ದಂಡೆತ್ತಿ ದಕ್ಷಿಣಪ್ರಾಂತಕ್ಕೂ ಚಿಕ್ಲಗ್
ಊರಿಗೂ ಬಂದು ಚಿಕ್ಲಗ್ ಊರನ್ನು ಸುಟ್ಟು ಹಾಳು
ಮಾಡಿ ಅದರಲ್ಲಿದ್ದ ಎಲ್ಲಾ ಹೆಂಗಸರನ್ನೂ ಚಿಕ್ಕವ 2
ರನ್ನೂ ದೊಡ್ಡವರನ್ನೂ ಸೆರೆಹಿಡಿದುಕೊಂಡು ಹೋಗಿ
ದ್ದರು; ಆದರೆ ಯಾರನ್ನೂ ಕೊಂದಿರಲಿಲ್ಲ. ದಾವೀ 3
ದನೂ ಅವನ ಜನರೂ ತಮ್ಮ ಊರಿಗೆ ಬಂದಾಗ
ಅದು ಸುಡಲ್ಪಟ್ಟಿರುವದನ್ನೂ ತಮ್ಮ ಹೆಂಡತಿಯರೂ
ಗಂಡುಹೆಣ್ಣುಮಕ್ಕಳೂ ಸೆರೆಯಾಗಿ ಒಯ್ಯಲ್ಪಟ್ಟಿರು
ವದನ್ನೂ ಕಂಡು ಅವರು ತಮ್ಮಿಂದಾಗುವಷ್ಟು ಕಾಲ 4
ಗಟ್ಟಿಯಾಗಿ ಅತ್ತರು. ದಾವೀದನ ಇಬ್ಬರು ಹೆಂಡ 5
ತಿಯರಾದ ಇಜ್ರೇಲಿನವಳಾದ ಅಹೀನೋವಮಳೂ
ಕರ್ಮೆಲ್ಯನಾದ ನಾಬಾಲನ ಹೆಂಡತಿಯಾಗಿದ್ದ ಅಬೀ
ಗೈಲಳೂ ಸೆರೆಯಾಗಿ ಹೋಗಿದ್ದರು. ಇದಲ್ಲದೆ ಜನರು 6
ತಮ್ಮ ಗಂಡುಹೆಣ್ಣುಮಕ್ಕಳಿಗಾಗಿ ಮನಸ್ಸಿನಲ್ಲಿ ಬಹಳ
ವಾಗಿ ನೊಂದುಕೊಂಡು ದಾವೀದನನ್ನು ಕಲ್ಲೆಸೆದು
ಕೊಲ್ಲಬೇಕೆಂದಿದ್ದದರಿಂದ ಅವನು ಬಲು ಇಕ್ಕಟ್ಟಿನಲ್ಲಿ
ಬಿದ್ದನು. ಆದರೂ ಅವನು ತನ್ನ ದೇವರಾದ ಯೆಹೋ
ವನಲ್ಲಿ ತನ್ನನ್ನು ಬಲಪಡಿಸಿಕೊಂಡು ಅಹೀಮೆಲೆಕನ 7
ಮಗನಾದ ಎಬ್ಯಾತಾರನಿಗೆ—ದಯವಿಟ್ಟು ಏಫೋದನ್ನು
ಇಲ್ಲಿಗೆ ತೆಗೆದುಕೊಂಡು ಬಾ ಎಂದು ಹೇಳಲು ಅವನು
ತಂದನು. ಆಗ ದಾವೀದನು ಯೆಹೋವನನ್ನು— 8
ನಾನು ಆ ಗುಂಪನ್ನು ಹಿಂದಟ್ಟಬಹುದೋ? ಅದು
ನನಗೆ ಸಿಕ್ಕುವದೋ ಎಂದು ಕೇಳಲು ಆತನು—ಹಿಂದ
ಟ್ಟು, ಅದು ನಿನಗೆ ಸಿಕ್ಕುವದು; ನೀನು ಎಲ್ಲರನ್ನೂ
ಬಿಡಿಸಿಕೊಂಡು ಬರುವಿ ಎಂದು ಉತ್ತರಕೊಟ್ಟನು.

ದಾವೀದನೂ ಅವನ ಸಂಗಡ ಇದ್ದ ಆರುನೂರು 9
ಮಂದಿ ಸೈನಿಕರೂ ಹೊರಟು ಬೆಸೋರ್ ಹಳ್ಳಕ್ಕೆ ಬಂದ
ಮೇಲೆ ಆ ಹಳ್ಳದಿಂದ ಮೇಲೆ ಹತ್ತಲಾರದಷ್ಟು ಆಯಾ 10
ಸಗೊಂಡ ಇನ್ನೂರು ಜನರು ಅಲ್ಲೇ ನಿಂತುಬಿಟ್ಟದ
ರಿಂದ ದಾವೀದನು ಉಳಿದ ನಾನೂರು ಜನರನ್ನೇ ಕರೆ
ದುಕೊಂಡು ಮುಂದೆ ನಡೆದನು. ಅವನ ಜನರು ಅಡ 11
ವಿಯಲ್ಲಿ ಒಬ್ಬ ಐಗುಪ್ತ್ಯನು ಬಿದ್ದಿರುವದನ್ನು ಕಂಡು
ಅವನನ್ನು ದಾವೀದನ ಬಳಿಗೆ ತಂದು ಅವನಿಗೆ ರೊಟ್ಟಿ
ತಿನ್ನಿಸಿ ನೀರುಕುಡಿಸಿ ಅಂಜೂರ ಹಣ್ಣಿನ ಉಂಡೆಯನ್ನೂ 12
ಎರಡು ದ್ರಾಕ್ಷೇ ಗೊಂಚಲುಗಳನ್ನೂ ಕೊಟ್ಟರು.
ಮೂರು ದಿವಸ ಹಗಲಿರುಳು ಅನ್ನಪಾನವಿಲ್ಲದ್ದರಿಂದ
ಬಹಳವಾಗಿ ಬಳಲಿಹೋಗಿದ್ದ ಇವನು ಅವುಗಳನ್ನು
ತಿನ್ನುತ್ತಲೇ ಚೇತರಿಸಿಕೊಂಡನು. ಆಗ ದಾವೀದನು 13
ಅವನನ್ನು—ನೀನು ಯಾರ ಕಡೆಯವನು? ಎಲ್ಲಿಯ
ವನು ಎಂದು ಕೇಳಲು ಅವನು—ನಾನು ಐಗುಪ್ತ್ಯನು;
ಒಬ್ಬ ಅಮಾಲೇಕ್ಯನ ದಾಸನು. ನಾನು ಮೂರು
ದಿನಗಳ ಹಿಂದೆ ಅಸ್ವಸ್ಥನಾಗಿ ಮಲಗಿಕೊಂಡದರಿಂದ
ನನ್ನ ಯಜಮಾನನು ನನ್ನನ್ನು ಬಿಟ್ಟುಹೋದನು.
ನಾವು ಕೆರೇತ್ಯರೂ ಯೆಹೂದ್ಯರೂ ಕಾಲೇಬ್ಯರೂ 14

ಇರುವ ದಕ್ಷಿಣಪ್ರಾಂತವನ್ನು ಸೂರೆಮಾಡಿ ಚಿಕ್ಲಗ್
ಊರನ್ನು ಸುಟ್ಟುಬಿಟ್ಟು ಬಂದೆವು ಎಂದು ಉತ್ತರ
15 ಕೊಟ್ಟನು. ಅನಂತರ ದಾವೀದನು— ನೀನು ನನ್ನನ್ನು
ಆ ಗುಂಪು ಇರುವ ಸ್ಥಳಕ್ಕೆ ಕರಕೊಂಡು ಹೋಗು
ವಿಯೋ ಎಂದು ಕೇಳಿದ್ದಕ್ಕೆ ಅವನು— ನೀನು ನನ್ನ
ನ್ನು ಕೊಲ್ಲುವದಿಲ್ಲವೆಂದೂ ನನ್ನ ಯಜಮಾನನ ಕೈಗೆ
ಒಪ್ಪಿಸುವದಿಲ್ಲವೆಂದೂ ದೇವರ ಹೆಸರಿನಲ್ಲಿ ಪ್ರಮಾಣ
ಮಾಡಿದರೆ ನಿನ್ನನ್ನು ಆ ಗುಂಪಿನವರ ಬಳಿಗೆ ಕರ
16 ಕೊಂಡು ಹೋಗುವೆನು ಅಂದನು. ಅವರು ಅಲ್ಲಿಗೆ
ಹೋದಾಗ ಆ ಗುಂಪಿನವರು ತಮಗೆ ಫಿಲಿಷ್ಟಿಯ
ಯೆಹೂದ ಪ್ರಾಂತಗಳಲ್ಲಿ ದೊರಕಿದ ದೊಡ್ಡ ಕೊಳ್ಳೆ
ಯ ನಿಮಿತ್ತವಾಗಿ ಸಂತೋಷಿಸಿ ಉಂಡು ಕುಡಿದು
ಕುಣಿದಾಡುತ್ತಾ ಅಲ್ಲಿನ ಬೈಲಿನಲ್ಲಿ ವ್ಯಾಪಿಸಿಕೊಂಡಿ
17 ದ್ದರು. ದಾವೀದನು ಮರುದಿನ ಹೊತ್ತಾರೆಯಿಂದ
ಸೂರ್ಯಾಸ್ತಮಾನದ ವರೆಗೂ ಅವರನ್ನು ಸಂಹರಿಸಿ
ದನು. ಒಂಟೆಗಳನ್ನು ಹತ್ತಿ ಓಡಿಹೋದ ನಾನೂರು
ಮಂದಿ ಪ್ರಾಯಸ್ಥರ ಹೊರತು ಬೇರೆ ಯಾರೂ ತಪ್ಪಿಸಿ
18 ಕೊಳ್ಳಲಿಲ್ಲ. ದಾವೀದನು ತನ್ನ ಇಬ್ಬರು ಹೆಂಡತಿ
ಯರನ್ನೂ ಅಮಾಲೇಕ್ಯರು ಒಯ್ದಿದ್ದ ಎಲ್ಲಾ ಕೊಳ್ಳೆ
19 ಯನ್ನೂ ಬಿಡಿಸಿಕೊಂಡನು. ಅಮಾಲೇಕ್ಯರು ಒಯ್ದಿ
ದ್ದ ಚಿಕ್ಕ ದೊಡ್ಡ ಒಡವೆಗಳಾಗಲಿ ಗಂಡುಹೆಣ್ಣುಮಕ್ಕ
ಳಾಗಲಿ ಒಂದನ್ನೂ ಬಿಡದೆ ಎಲ್ಲವನ್ನೂ ತಿರಿಗಿ ತೆಗೆದು
20 ಕೊಂಡು ಬಂದನು. ಇದಲ್ಲದೆ ದಾವೀದನು ಶತ್ರು
ಗಳ ದನಕುರಿಗಳನ್ನು ತೆಗೆದುಕೊಂಡನು. ಅವನ
ಜನರು— ಇವು ದಾವೀದನ ಕೊಳ್ಳೆ ಎಂದು ಹೇಳಿ
ಅವುಗಳನ್ನು ತಮ್ಮ ದನಗಳ ಮುಂದಾಗಿ ಹೊಡ
ಕೊಂಡು ಬಂದರು.

21 ಅನಂತರ ದಾವೀದನು ಮೊದಲು ಆಯಾಸದಿಂದ
ತನ್ನ ಹಿಂದೆ ಬರಲಾರದೆ ಬೆಸೋರ್‌ಹಳ್ಳದ ಹತ್ತಿರ
ಉಳಿದಿದ್ದ ಇನ್ನೂರು ಜನರ ಬಳಿಗೆ ಹೋಗುತ್ತಿರು
ವಾಗ ಅವರು ಅವನನ್ನೂ ಅವನೊಂದಿಗಿದ್ದ ಜನರನ್ನೂ
ಎದುರುಗೊಳ್ಳಬಂದರು. ದಾವೀದನು ಅವರನ್ನು
ಸಂಧಿಸಿ ಅವರ ಕ್ಷೇಮಸಮಾಚಾರವನ್ನು ವಿಚಾರಿಸಿ
22 ದನು. ಆಗ ದಾವೀದನ ಜೊತೆಯಲ್ಲಿ ಹೋಗಿದ್ದ
ಜನರಲ್ಲಿ ದುಷ್ಟರೂ ಮೂರ್ಖರೂ ಆದ ಕೆಲವು
ಮಂದಿ— ಇವರು ನಮ್ಮ ಸಂಗಡ ಬಾರದ್ದರಿಂದ ನಾವು
ಬಿಡಿಸಿಕೊಂಡು ಬಂದ ಕೊಳ್ಳೆಯಲ್ಲಿ ಇವರಿಗೆ ಏನೂ
ಸಿಕ್ಕುವದಿಲ್ಲ. ತಮ್ಮ ತಮ್ಮ ಹೆಂಡರುಮಕ್ಕಳನ್ನು
23 ಕರಕೊಂಡು ಹೋಗಿಬಿಡಲಿ ಅಂದರು. ಆಗ ದಾವೀ
ದನು ಅವರಿಗೆ— ಸಹೋದರರೇ, ಯೆಹೋವನು ನಮ್ಮ
ನ್ನು ಕಾಪಾಡಿ ನಮಗೆ ವಿರೋಧವಾಗಿ ಬಂದಿದ್ದ ಶತ್ರು
ಗಳ ಗುಂಪನ್ನು ನಮ್ಮ ಕೈಗೆ ಒಪ್ಪಿಸಿ ನಮಗೆ ಇಷ್ಟ
ನ್ನೆಲ್ಲಾ ಕೊಟ್ಟ ಮೇಲೆ ನೀವು ಹೀಗೆ ಮಾಡಬಾರದು.
24 ಈ ವಿಷಯದಲ್ಲಿ ನಿಮ್ಮ ಮಾತನ್ನು ಯಾರು ಕೇಳು
ವರು? ಯುದ್ಧಮಾಡಿದವನಿಗೆ ಸಿಕ್ಕುವಷ್ಟು ಪಾಲು
ಸಾಮಾನುಕಾಯ್ದವನಿಗೂ ಸಿಕ್ಕಬೇಕು. ಉಭಯ
ರಿಗೂ ಸಮಭಾಗವಾಗಬೇಕು ಎಂದು ಉತ್ತರಕೊಟ್ಟ
25 ನು. ದಾವೀದನು ಇಸ್ರಾಯೇಲ್ಯರಲ್ಲಿ ಇದನ್ನು ಕಟ್ಟಳೆ
ಯನ್ನಾಗಿ ನೇಮಿಸಿದ್ದರಿಂದ ಇಂದಿನ ವರೆಗೂ ಹಾಗೆ
ಯೇ ನಡೆಯುತ್ತಾ ಬಂದಿದೆ.

ದಾವೀದನು ಚಿಕ್ಲಗಿಗೆ ಬಂದನಂತರ ತನ್ನ ಸ್ನೇಹಿ
ರಾದ ಯೆಹೂದಹಿರಿಯರಿಗೆ ಕೊಳ್ಳೆಯ ಒಂದು ಭಾ
ವನ್ನು ಕಳುಹಿಸಿ— ಇಗೋ, ಯೆಹೋವನ ಶತ್ರುಗ
ನ್ನು ಸೂರೆಮಾಡಿ ತಂದವುಗಳಲ್ಲಿ ಇದು ನಿಮ
ಬಹುಮಾನವಾಗಿರಲಿ ಎಂದು ಹೇಳಿಸಿದನು. ಬಹ
ಮಾನಹೊಂದಿದವರು ಯಾರಂದರೆ— ಬೇತೇಲಿನವರು
ದಕ್ಷಿಣಪ್ರಾಂತದ ರಾಮೋತಿನವರು, ಯತ್ತೀರಿನವರು
ಅರೋಯೇರಿನವರು, ಸಿಪ್ಮೋತಿನವರು, ಎಷ್ಟೆಮೋ
ದವರು, ರಾಕಾಲಿನವರು, ಎರಹ್ಮೇಲ್ಯರು, ಕೇನ್ಯರು
ಹೊರ್ಮದವರು, ಬೋರಾಷಾನಿನವರು, ಅತಾಕಿ
ವರು, ಹೆಬ್ರೋನಿನವರು ಮತ್ತು ದಾವೀದನೂ ಅವ
ಜನರೂ ಸಂಚರಿಸುತ್ತಿದ್ದ ಇತರ ಎಲ್ಲಾ ಸ್ಥಳಗಳವರ
ಇವರೇ.

ಸೌಲನ ಮತ್ತು ಅವನ ಮಕ್ಕಳ ಮರಣ;
ಇಸ್ರಾಯೇಲ್ಯರ ಅಪಜಯ.

ಫಿಲಿಷ್ಟಿಯರು ಇಸ್ರಾಯೇಲ್ಯರೊಡನೆ ಯುದ್ಧಮಾ
ಡಿದರು. ಇಸ್ರಾಯೇಲ್ಯರು ಅವರಿಂದ ಅಪಜಯ
ಹೊಂದಿ ಗಿಲ್ಬೋವಬೆಟ್ಟದಲ್ಲಿ ಹತರಾದರು. ಫಿಲಿಷ್
ಯರು ಸೌಲನನ್ನೂ ಅವನ ಮಕ್ಕಳನ್ನೂ ಬಿಡ
ಹಿಂದಟ್ಟಿ ಅವನ ಮಕ್ಕಳಾದ ಯೋನಾತಾನನನ್ನೂ
ಅಬೀನಾದಾಬನನ್ನೂ ಮಲ್ಕೀಷೂವನನ್ನೂ ಕೊಂದರು
ಸೌಲನಿದ್ದ ಕಡೆಯಲ್ಲಿ ಯುದ್ಧವು ಬಹುಘೋರವಾ
ಗಿತ್ತು. ಬಿಲ್ಲುಗಾರರು ಅವನಿಗೆ ಗುರಿಯಿಟ್ಟರು
ಆದದರಿಂದ ಸೌಲನು ಬಹುಭೀತನಾಗಿ ತನ್ನ ಆಯು
ಧವಾಹಕನಿಗೆ— ನಿನ್ನ ಕತ್ತಿಯನ್ನು ಹಿರಿದು ನನ್ನನ್ನು
ತಿವಿದು ಕೊಲ್ಲು; ಇಲ್ಲವಾದರೆ ಸುನ್ನತಿಯಿಲ್ಲದ
ಜನರು ಬಂದು ನನ್ನನ್ನು ತಿವಿದು ಅಪಕೀರ್ತಿಯ
ನ್ನುಂಟುಮಾಡಾರು ಎಂದು ಹೇಳಲು ಅವನು ಹೆದ
ಒಲ್ಲೆನು ಅಂದನು. ಆದದರಿಂದ ಸೌಲನು ತಾನೆ
ಕತ್ತಿಯನ್ನು ಹಿರಿದು ಅದರ ಮೇಲೆ ಬಿದ್ದನು. ಸೌ
ನು ಸತ್ತದ್ದನ್ನು ಅವನ ಆಯುಧವಾಹಕನು ಕಂಡ
ತಾನೂ ತನ್ನ ಕತ್ತಿಯ ಮೇಲೆ ಬಿದ್ದು ಅಲ್ಲಿಯೇ ಸತ್
ನು. ಹೀಗೆ ಸೌಲನೂ ಅವನ ಮೂರು ಮಂದಿ ಮಕ್
ಳೂ ಅವನ ಆಯುಧವಾಹಕನೂ ಎಲ್ಲಾ ಆಳುಗಳ
ಅದೇ ದಿವಸದಲ್ಲಿ ಸತ್ತರು. ಇಸ್ರಾಯೇಲ್‌ಭಟರ
ಸೋತರು, ಸೌಲನೂ ಅವನ ಮಕ್ಕಳೂ ಸತ್ತರು ಎಂ
ವರ್ತಮಾನವನ್ನು ತಗ್ಗಿನ ಆಚೆಯಲ್ಲಿಯೂ ಯೊರ
ನಿನ ಆಚೆಯಲ್ಲಿಯೂ ವಾಸವಾಗಿದ್ದ ಇಸ್ರಾಯೇಲ್ಯರ
ಕೇಳಿ ತಮ್ಮ ಪಟ್ಟಣಗಳನ್ನು ಬಿಟ್ಟು ಓಡಿಹೋದರು
ಫಿಲಿಷ್ಟಿಯರು ಬಂದು ಅವುಗಳಲ್ಲಿ ವಾಸಿಸಿದರು.

ಮರುದಿನ ಬೆಳಿಗ್ಗೆ ಫಿಲಿಷ್ಟಿಯರು ಸತ್ತವರ ಒಡ
ಗಳನ್ನು ಸುಲುಕೊಳ್ಳುವದಕ್ಕೆ ಬಂದಾಗ ಸೌಲನ
ಅವನ ಮೂರು ಮಂದಿ ಮಕ್ಕಳೂ ಗಿಲ್ಬೋವಬೆ
ದಲ್ಲಿ ಸತ್ತುಬಿದ್ದಿರುವದನ್ನು ಕಂಡು ಸೌಲನ ತ
ಯನ್ನು ಕಡಿದು ಅವನ ಆಯುಧಗಳನ್ನು ತೆಗೆದ
ಕೊಂಡು ಅವುಗಳನ್ನು ತಮ್ಮ ದೇಶದ ಎಲ್ಲಾ ಕಡೆಗ
ಕಳುಹಿಸಿ ತಮ್ಮ ಎಲ್ಲಾ ಜನರಿಗೂ ದೇವಸ್ಥಾನಗ
ಗೂ ಜಯವಾರ್ತೆಯನ್ನು ಮುಟ್ಟಿಸಿದರು. ಅವ

ಆಯುಧಗಳನ್ನು ಅಷ್ಟೋರೆತ್ ದೇವತೆಯ ಗುಡಿಯ
ಲ್ಲಿಟ್ಟರು; ಅವನ ಶವವನ್ನು ಬೇತ್‍ಷೆಯಾನಿನ ಕೋಟೆ
ಗೋಡೆಗೆ ನೇತುಹಾಕಿದರು. ಫಿಲಿಷ್ಟಿಯರು ಸೌಲ
ನಿಗೆ ಏನೇನು ಮಾಡಿದರೆಂಬ ವರ್ತಮಾನವು ಯಾ
ಬೇಷ್‍ಗಿಲ್ಯಾದಿನವರಿಗೆ ಮುಟ್ಟಿದಾಗ ಅವರಲ್ಲಿದ್ದ
ಶೂರರೆಲ್ಲರೂ ಹೊರಟು ರಾತ್ರಿಯೆಲ್ಲಾ ನಡೆದುಹೋಗಿ
ಸೌಲನ ಮತ್ತು ಅವನ ಮಕ್ಕಳ ಶವಗಳನ್ನು ಬೇತ್‍ಷೆ
ಯಾನಿನ ಗೋಡೆಯಿಂದ ಇಳಿಸಿ ಯಾಬೇಷಿಗೆ ತೆಗೆದು
ಕೊಂಡು ಬಂದು ಅಲ್ಲಿ ಅವುಗಳನ್ನು ಸುಟ್ಟುಬಿಟ್ಟರು.
ಅವರ ಎಲುಬುಗಳನ್ನು ಯಾಬೇಷಿನಲ್ಲಿದ್ದ ಪಿಚುಲ 13
ವೃಕ್ಷದ ಕೆಳಗೆ ಸಮಾಧಿಮಾಡಿ ಏಳು ದಿವಸ ಉಪವಾಸ
ವಾಗಿದ್ದರು.

---

# THE SECOND BOOK OF

# SAMUEL

## ಸಮುವೇಲನು

### ದ್ವಿತೀಯಭಾಗ

ಯೆಹೂದ್ಯರಲ್ಲಿ ದಾವೀದನೂ ಇಸ್ರಾಯೇಲ್ಯರಲ್ಲಿ
ಈಷ್ಬೋಶೆತನೂ ಅರಸರಾದದ್ದು. 1—4.

ಸೌಲಯೋನಾತಾನರ ಮರಣದ ಸುದ್ದಿಯು
ದಾವೀದನಿಗೆ ಮುಟ್ಟಿದ್ದು.

ಸೌಲನು ಸತ್ತನಂತರ ಸಂಭವಿಸಿದ್ದು. ದಾವೀದನು
ಅಮಾಲೇಕ್ಯರನ್ನು ಹೊಡೆದು ಬಂದು ಚಿಕ್ಲಗಿನಲ್ಲಿ
ಎರಡು ದಿವಸ ಇದ್ದನು. ಮೂರನೆಯ ದಿನ ಸೌಲನ
ಪಾಳೆಯದಿಂದ ಒಬ್ಬ ಮನುಷ್ಯನು ದಾವೀದನ ಬಳಿಗೆ
ಬಂದು ನೆಲದ ಮಟ್ಟಿಗೆ ಬಾಗಿ ನಮಸ್ಕರಿಸಿದನು.
ಅವನು ವಸ್ತ್ರಗಳನ್ನು ಹರಿದುಕೊಂಡು ತಲೆಯ
ಮೇಲೆ ಮಣ್ಣುಹಾಕಿಕೊಂಡಿದ್ದನು. ದಾವೀದನು
ಅವನನ್ನು—ನೀನು ಎಲ್ಲಿಂದ ಬಂದಿ ಎಂದು ಕೇಳಲು
ಅವನು—ನಾನು ಇಸ್ರಾಯೇಲ್ಯರ ಪಾಳೆಯದಿಂದ
ತಪ್ಪಿಸಿಕೊಂಡು ಬಂದೆನು ಎಂದು ಉತ್ತರಕೊಟ್ಟನು.
ಆಗ ದಾವೀದನು—ದಯವಿಟ್ಟು ಕಾರ್ಯವೇನಾಯಿ
ತೆಂದು ತಿಳಿಸು ಅನ್ನಲು ಆ ಮನುಷ್ಯನು—ಇಸ್ರಾ
ಯೇಲ್ಯರು ರಣರಂಗದಿಂದ ಓಡಿಹೋದರು; ಅನೇ
ಕರು ಮಡಿದರು. ಸೌಲನೂ ಅವನ ಮಗನಾದ
ಯೋನಾತಾನನೂ ಮೃತಿಹೊಂದಿದರು ಎಂದು ತಿಳಿಸಿ
ದನು. ದಾವೀದನು ವರ್ತಮಾನತಂದ ಆ ಪ್ರಾಯಸ್ಥ
ನಿಗೆ—ಸೌಲನೂ ಅವನ ಮಗನಾದ ಯೋನಾತಾ
ನನೂ ಸತ್ತಿರುವದು ನಿನಗೆ ಹೇಗೆ ಗೊತ್ತಾಯಿತು
ಎಂದು ಪ್ರಶ್ನಿಸಲು ಅವನು—ನಾನು ಅಕಸ್ಮಾತ್ತಾಗಿ
ಗಿಲ್ಬೋವಪರ್ವತಪ್ರದೇಶಕ್ಕೆ ಬಂದಾಗ ಸೌಲನು ತನ್ನ
ಬರ್ಜಿಯನ್ನೂರಿಕೊಂಡು ನಿಂತಿರುವದನ್ನೂ ರಥಿಕರೂ
ರಾಹುತರೂ ಅವನನ್ನು ಹಿಂದಟ್ಟಿ ಬರುತ್ತಿರುವದನ್ನೂ
ಕಂಡೆನು. ಅವನು ತಿರುಗಿಕೊಂಡು ನನ್ನನ್ನು ಕಂಡು
ಕರೆದನು. ನಾನು—ಇಗೋ, ಬಂದೆನು ಎಂದು ಹೇಳಿ
ಹೋದಾಗ ಅವನು—ನೀನಾರು ಎಂದು ಕೇಳಿದ್ದಕ್ಕೆ—
ಅಮಾಲೇಕ್ಯನೆಂದು ಉತ್ತರಕೊಟ್ಟೆನು. ಆಗ ಅವನು 9
ನನಗೆ—ನೀನು ಕೃಪೆಮಾಡಿ ಹತ್ತಿರ ಬಂದು ನನ್ನನ್ನು
ಕೊಂದುಹಾಕು; ಯಾಕಂದರೆ ನನ್ನಲ್ಲಿ ಜೀವವು
ಇನ್ನೂ ಪೂರ್ಣವಾಗಿರುವದರಿಂದ ನನಗೆ ಸಂಕಟ
ಹಿಡಿದದೆ ಎಂದು ಹೇಳಿದನು. ನಾನು ಹತ್ತಿರ ಹೋಗಿ 10
ಅವನು ಬಿದ್ದುಬಿಟ್ಟರೆ ಬದುಕಲಾರನೆಂದು ನೆನಸಿ
ಅವನನ್ನು ಕೊಂದುಹಾಕಿ ಅವನ ತಲೆಯ ಮೇಲಣ
ಕಿರೀಟವನ್ನೂ ರಟ್ಟೆಯಲ್ಲಿದ್ದ ಬಳೆಯನ್ನೂ ತೆಗೆದು
ಕೊಂಡು ಅವುಗಳನ್ನು ನನ್ನ ಒಡೆಯನಾದ ನಿನಗೆ
ತಂದಿದ್ದೇನೆ ಅಂದನು. ಸೌಲನೂ ಅವನ ಮಗ 11
ನಾದ ಯೋನಾತಾನನೂ ಯೆಹೋವನ ಪ್ರಜೆಗಳಾದ
ಇಸ್ರಾಯೇಲ್ಯರೂ ಕತ್ತಿಯಿಂದ ಸಂಹೃತರಾದದ್ದ
ಕ್ಕಾಗಿ ದಾವೀದನೂ ಅವನ ಜನರೂ ತಮ್ಮ ಬಟ್ಟೆ 12
ಗಳನ್ನು ಹರಿದುಕೊಂಡು ಗೋಳಾಡಿ ಅತ್ತು ಸಾಯಂ
ಕಾಲದ ವರೆಗೆ ಉಪವಾಸಮಾಡಿದರು. ದಾವೀ 13
ದನು ವರ್ತಮಾನತಂದ ಪ್ರಾಯಸ್ಥನನ್ನು—ನೀನೆ
ಲ್ಲಿಯವನು ಎಂದು ಕೇಳಿದ್ದಕ್ಕೆ ಅವನು—ನಾನು
ಇಸ್ರಾಯೇಲ್ಯರಲ್ಲಿ ಪ್ರವಾಸಿಯಾಗಿರುವ ಅಮಾ
ಲೇಕ್ಯನ ಮಗನು ಎಂದು ಉತ್ತರಕೊಟ್ಟನು. ದಾವೀ 14
ದನು ಅವನಿಗೆ—ನೀನು ಕೈಯೆತ್ತಿ ಯೆಹೋವನ
ಅಭಿಷಿಕ್ತನನ್ನು ಕೊಲ್ಲುವದಕ್ಕೆ ಏಕೆ ಭಯಪಡ
ಲಿಲ್ಲ ಎಂದು ಹೇಳಿ ತನ್ನ ಆಳುಗಳಲ್ಲಿ ಒಬ್ಬನನ್ನು 15
ಕರೆದು—ಇವನ ಮೇಲೆ ಬಿದ್ದು ಹೊಡಿ ಎಂದು
ಆಜ್ಞಾಪಿಸಲು ಅವನು ಇವನನ್ನು ಹೊಡೆದು ಕೊಂದ
ನು. ದಾವೀದನು—ರಕ್ತಾಪರಾಧವು ನಿನ್ನ ತಲೆಯ 16
ಮೇಲೆಯೇ ಇರಲಿ; ಯೆಹೋವನ ಅಭಿಷಿಕ್ತನನ್ನು
ಕೊಂದುಹಾಕಿದೆನೆಂದು ನಿನ್ನ ಬಾಯೇ ನಿನಗೆ ವಿರೋ
ಧವಾಗಿ ಸಾಕ್ಷಿ ಹೇಳಿತು ಅಂದನು.

ದಾವೀದನು ಸೌಲಯೋನಾತಾನರನ್ನು ಕುರಿತು
ರಚಿಸಿದ ಶೋಕಗೀತ.

17 ದಾವೀದನು ಸೌಲಯೋನಾತಾನರ ಮೇಲೆ ಬಿಲ್ಲೆಂಬ
18 ಒಂದು ಶೋಕಗೀತವನ್ನು ರಚಿಸಿ ಅದನ್ನು ಯೆಹೂದ್ಯ
ರಿಗೆ ಕಲಿಸಬೇಕೆಂದು ಆಜ್ಞಾಪಿಸಿದನು. ಆ ಗೀತವು
1)ಯಾಷಾರ್ ಗ್ರಂಥದಲ್ಲಿ ಬರೆದಿರುತ್ತದೆ—

19 ಇಸ್ರಾಯೇಲ್ಯರೇ, ನಿಮ್ಮ ವೈಭವವು ನಿಮ್ಮ ಗುಡ್ಡ
ಗಳಲ್ಲಿ ಮಣ್ಣುಪಾಲಾಗಿ ಹೋಯಿತು.
ಅಯ್ಯೋ, ಪರಾಕ್ರಮಶಾಲಿಗಳೇ, ಹೇಗೆ ಹತರಾದಿರಿ!

20 ಈ ಸಂಗತಿಯನ್ನು ಗತ್ ಊರಿನಲ್ಲಿ ತಿಳಿಸಬೇಡಿರಿ;
ಅಷ್ಕೆಲೋನಿನ ಬೀದಿಗಳಲ್ಲಿ ಸಾರಬೇಡಿರಿ.
ಫಿಲಿಷ್ಟಿಯರ ಹೆಂಗಸರು ಸಂತೋಷಿಸಾರು;
ಸುನ್ನತಿಯಿಲ್ಲದವರ ಸ್ತ್ರೀಯರು ಉಲ್ಲಾಸಿಸಾರು.

21 ಗಿಲ್ಬೋವಗುಡ್ಡಗಳೇ, ನಿಮ್ಮ ಮೇಲೆ ಮಂಜೂ
ಮಳೆಯೂ
ನೈವೇದ್ಯಕ್ಕಾಗಿ ಫಲಿಸುವ ಹೊಲಗಳೂ ಇಲ್ಲದೆ
ಹೋಗಲಿ;
ಅಲ್ಲಿ ಪರಾಕ್ರಮಶಾಲಿಗಳ ಗುರಾಣಿಗಳು ಬಿದ್ದಿರು
ತ್ತವೆ.
ಸೌಲನ ಗುರಾಣಿಯೂ ಅಭಿಷಿಕ್ತನಲ್ಲದವನ ಗುರಾ
ಣಿಯಂತೆ ಬಿದ್ದಿದೆ.

22 ಯೋನಾತಾನನ ಬಿಲ್ಲು
ಹತರಾದವರ ರಕ್ತವನ್ನು ಹೀರದೆಯೂ
ಪರಾಕ್ರಮಶಾಲಿಗಳ ಕೊಬ್ಬನ್ನು ಭುಂಜಿಸದೆಯೂ
ಬರುತ್ತಿರಲಿಲ್ಲ.
ಸೌಲನ ಕತ್ತಿಯು ವ್ಯರ್ಥವಾಗಿ ಹಿಂದಿರುಗುತ್ತಿರ
ಲಿಲ್ಲ.

23 ಸೌಲಯೋನಾತಾನರು ಪ್ರಿಯರೂ ಮನೋಹ
ರರೂ ಆಗಿದ್ದರು;
ಅವರು ಜೀವಿಸುವಾಗಲೂ ಸಾಯುವಾಗಲೂ ಅಗ
ಲಿದವರಲ್ಲ.
ಅವರು ಹದ್ದುಗಳಿಗಿಂತಲೂ ವೇಗವುಳ್ಳವರು;
ಸಿಂಹಗಳಿಗಿಂತಲೂ ಬಲವುಳ್ಳವರು.

24 ಇಸ್ರಾಯೇಲ್ಸ್ತ್ರೀಯರೇ, ಸೌಲನಿಗಾಗಿ ಗೋಳಾ
ಡಿರಿ;
ನಿಮಗೆ ಉಲ್ಲಾಸಕರವಾದ ರಕ್ತಾಂಬರಗಳನ್ನು
ಉಡಿಸಿ
ಅವುಗಳ ಮೇಲೆ ಸುವರ್ಣಾಭರಣಗಳನ್ನು ತೊಡಿಸಿ
ದವನು ಆತನೇ ಅಲ್ಲವೋ?

25 ಅಯ್ಯೋ, ಪರಾಕ್ರಮಶಾಲಿಗಳೇ, ಯುದ್ಧದಲ್ಲಿ
ಹೇಗೆ ಮಡಿದುಹೋದಿರಿ!
ಯೋನಾತಾನನು ನಿಮ್ಮ ಬೆಟ್ಟಗಳಲ್ಲಿ ಹತನಾಗಿ
ಬಿದ್ದಿದ್ದಾನಲ್ಲಾ.

ಯೋನಾತಾನನೇ, ನನ್ನ ಸಹೋದರನೇ, ನಿನ
ಗೋಸ್ಕರ ನನ್ನಲ್ಲಿ ಬಹು ಸಂಕಟವುಂಟಾಗಿದೆ
ನೀನು ನನಗೆ ಬಹುಮನೋಹರನಾಗಿದ್ದಿ.
ನನ್ನ ಮೇಲಿದ್ದ ನಿನ್ನ ಪ್ರೀತಿಯು ಆಶ್ಚರ್ಯಕರ
ವಾದದ್ದೇ ಸರಿ;
ಅದು ಸತೀಪ್ರೇಮಕ್ಕಿಂತ ಶ್ರೇಷ್ಠವಾದದ್ದು.

ಅಯ್ಯೋ, ಪರಾಕ್ರಮಶಾಲಿಗಳು ಹೇಗೆ ಹತರಾ
ದರು!
ಯುದ್ಧಾಯುಧಗಳು ಹೇಗೆ ಹಾಳಾದವು!

ದಾವೀದನಿಗೆ ಹೆಬ್ರೋನಿನಲ್ಲಿ ರಾಜ್ಯಾಭಿಷೇಕವಾದದ್ದು.

ಅನಂತರ ದಾವೀದನು ಯೆಹೋವನನ್ನು—ನಾನು
ಯೆಹೂದದೇಶದ ಯಾವದಾದರೊಂದು ಪಟ್ಟಣಕ್ಕೆ
ಹೋಗಬಹುದೋ ಎಂದು ಕೇಳಲು ಆತನು—ಹೋಗ
ಬಹುದು ಅಂದನು. ಅವನು ತಿರಿಗಿ—ಯಾವ ಊರಿಗೆ
ಹೋಗಲಿ ಎಂದು ಕೇಳಿದ್ದಕ್ಕೆ—ಹೆಬ್ರೋನಿಗೆ ಹೋ
ಗು ಎಂಬ ಉತ್ತರ ಸಿಕ್ಕಿತು. ಆಗ ದಾವೀದನ
ತನ್ನ ಇಬ್ಬರು ಹೆಂಡತಿಯರಾದ ಇಜ್ರೇಲಿನ ಅಹಿ
ನೋವಮಳನ್ನೂ ಕರ್ಮೆಲ್ಯನಾದ ನಾಬಾಲನ ಹೆಂಡ
ಯಾಗಿದ್ದ ಅಬೀಗೈಲಳನ್ನೂ ಕರಕೊಂಡು ಅಲ್ಲಿಗೆ
ಹೋದನು. ದಾವೀದನ ಜನರೂ ತಮ್ಮ ತಮ್ಮ
ಕುಟುಂಬಗಳನ್ನು ಕರಕೊಂಡು ಅವನ ಜೊತೆಯಲ್ಲಿ
ಹೋಗಿ ಹೆಬ್ರೋನಿಗೆ ಸೇರಿದ ಊರುಗಳಲ್ಲಿ ವಾಸಿಸಿ
ದರು. ತರುವಾಯ ಯೆಹೂದ್ಯರು ಅಲ್ಲಿಗೆ ಬಂದು
ದಾವೀದನನ್ನು ಅಭಿಷೇಕಿಸಿ ತಮ್ಮ ಕುಲಕ್ಕೆ ಅರಸ
ನ್ನಾಗಿ ಮಾಡಿಕೊಂಡರು.
ಸೌಲನ ಶವವನ್ನು ಸಮಾಧಿಮಾಡಿದವರು ಯಾ
ಬೇಷ್ಗಿಲ್ಯಾದಿನವರೇ ಎಂಬ ಸಂಗತಿಯು ದಾವೀದ
ನಿಗೆ ಗೊತ್ತಾಯಿತು. ಆಗ ಅವನು ಅವರ ಬಳಿಗೆ
ದೂತರನ್ನು ಕಳುಹಿಸಿ—ನೀವು ಕರುಣೆಯಿಂದ ನಿಮ್ಮ
ಒಡೆಯನಾದ ಸೌಲನ ಶವವನ್ನು ಸಮಾಧಿಮಾಡಿದ್ದ
ಕ್ಕಾಗಿ ನಿಮಗೆ ಯೆಹೋವನ ಆಶೀರ್ವಾದವುಂಟಾಗಲಿ
ಆತನ ಕೃಪಾಸತ್ಯತೆಗಳು ನಿಮ್ಮೊಂದಿಗಿರಲಿ; ಈ ಕಾ
ರ್ಯಕ್ಕಾಗಿ ನಾನೂ ನಿಮಗೆ ಉಪಕಾರಮಾಡುವೆನು
ಯೆಹೂದ್ಯರು ನನ್ನನ್ನು ಅಭಿಷೇಕಿಸಿ ತಮ್ಮ ಅರಸ
ನ್ನಾಗಿ ಮಾಡಿಕೊಂಡಿರುವದರಿಂದ ಸೌಲನು ಸತ್ತುಹೋ
ದರೂ ಶೂರರಾಗಿರ್ರಿ, ನಿಮ್ಮ ಕೈಗಳು ಜೋಲುಬೀಳದಿ
ರಲಿ ಎಂದು ಹೇಳಿಸಿದನು.

ಸೌಲನ ಉತ್ತರಾಧಿಕಾರಿಯಾದ ಈಷ್ಬೋಶೆತನು
ದಾವೀದನೊಡನೆ ಯುದ್ಧ ಮಾಡಿದ್ದು.

ಸೌಲನ ಸೇನಾಪತಿಯೂ ನೇರನ ಮಗನೂ ಆದ
ಅಬ್ನೇರನು ಸೌಲನ ಮಗನಾದ ಈಷ್ಬೋಶೆತನನ್ನು

1) ಯಾಷಾರ್‌ಗ್ರಂಥ ಅಂದರೆ ವೀರ ಪ್ರಶಂಸೆ.

ಹೊಳೆಯ ಆಚೆಯಲ್ಲಿರುವ ಮಹನಯಿಮಿಗೆ ಒಯ್ದು
9 ಅವನನ್ನು ಗಿಲ್ಯಾದ್, 1)ಆಶೇರ್, ಇಜ್ರೇಲ್, ಎಫ್ರಾ
ಯಿಮ್, ಬೆನ್ಯಾಮೀನ್ ಇವುಗಳ ಜನರ ಮೇಲೆಯೂ
ಬೇರೆ ಎಲ್ಲಾ ಇಸ್ರಾಯೇಲ್ಯರ ಮೇಲೆಯೂ ಅರಸನ
10 ನ್ನಾಗಿ ಮಾಡಿದನು. (ಸೌಲನ ಮಗನಾದ ಈಷ್ಬೋ
ಶೆತನು ನಾಲ್ವತ್ತು ವರುಷದವನಾದಾಗ ಇಸ್ರಾಯೇಲ್ಯ
ರನ್ನು ಆಳತೊಡಗಿ ಎರಡು ವರುಷ ರಾಜ್ಯಭಾರಮಾಡಿ
ದನು.) ಯೆಹೂದ್ಯರು ಮಾತ್ರ ದಾವೀದನನ್ನು
11 ಹಿಂಬಾಲಿಸಿದರು. ದಾವೀದನು ಹೆಬ್ರೋನಿನಲ್ಲಿ ಯೆ
ಹೂದ್ಯರ ಅರಸನಾಗಿದ್ದದ್ದು ಏಳು ವರುಷವೂ ಆರು
ತಿಂಗಳೂ.
12 ಒಂದು ದಿವಸ ನೇರನ ಮಗನಾದ ಅಬ್ನೇರನೂ
ಸೌಲನ ಮಗನಾದ ಈಷ್ಬೋಶೆತನ ಸೇವಕರೂ ಮಹ
13 ನಯಿಮಿನಿಂದ ಹೊರಟು ಗಿಬ್ಯೋನಿಗೆ ಬಂದರು. ಚೆರೂ
ಯಳ ಮಗನಾದ ಯೋವಾಬನೂ ದಾವೀದನ ಸೇವ
ಕರೂ ಹೊರಟು ಅವರನ್ನು ಗಿಬ್ಯೋನಿನ ಕೆರೆಯ
ಹತ್ತಿರ ಸಂಧಿಸಿ ಇವರು ಕೆರೆಯ ಈಚೆಯಲ್ಲಿಯೂ
14 ಅವರು ಆಚೆಯಲ್ಲಿಯೂ ಕೂತುಕೊಂಡರು. ಆಗ
ಅಬ್ನೇರನು ಯೋವಾಬನಿಗೆ—ಪ್ರಾಯಸ್ಥರು ಎದ್ದು
ನಮ್ಮ ಮುಂದೆ ಆಡಲಿ ಎಂದು ಹೇಳಲು ಯೋವಾ
15 ಬನು ಆಗಲಿ ಅಂದನು. ಆಗ ಸೌಲನ ಮಗನಾದ
ಈಷ್ಬೋಶೆತನ ಕಡೆಯುವರಾದ ಹನ್ನೆರಡು ಮಂದಿ ಬೆನ್ಯಾ
ಮೀನ್ಯರೂ ದಾವೀದನ ಸೇವಕರಲ್ಲಿ ಹನ್ನೆರಡು ಮಂದಿ
16 ಯೂ ಸಮಸಂಖ್ಯೆಯಾಗಿ ಹೊರಟುಬಂದು ಅವರಲ್ಲಿ
ಪ್ರತಿಯೊಬ್ಬನೂ ತನ್ನ ತನ್ನ ಎದುರಾಳಿಯ ತಲೆಹಿಡಿದು
ಕತ್ತಿಯಿಂದ ಪಕ್ಕೆಯಲ್ಲಿ ತಿವಿದದರಿಂದ ಎಲ್ಲರೂ ಸತ್ತು
ಬಿದ್ದರು. ಆದದರಿಂದ ಗಿಬ್ಯೋನಿನಲ್ಲಿರುವ ಆ ಸ್ಥಳಕ್ಕೆ
17 ಹದಗತ್ತಿಹೊಲವೆಂದು ಹೆಸರಾಯಿತು. ಅನಂತರ ಆ
ದಿವಸ ಘೋರಯುದ್ಧವಾಯಿತು.
ಅಬ್ನೇರನೂ ಇಸ್ರಾಯೇಲ್ಯರೂ ದಾವೀದನ ಸೇವ
18 ಕರಿಂದ ಸೋಲಿಸಲ್ಪಟ್ಟರು. ಚೆರೂಯಳ ಮೂರು
ಮಂದಿ ಮಕ್ಕಳಾದ ಯೋವಾಬ್, ಅಬೀಷೈ, ಅಸಾ
ಹೇಲ್ ಎಂಬವರು ಅಲ್ಲಿಗೆ ಬಂದಿದ್ದರು, ಅಸಾಹೇ
ಲನು ಅಡವಿಯ ಜಿಂಕೆಯಂತೆ ಚುರುಕು ಕಾಲಿನವ
19 ನಾಗಿದ್ದನು. ಇವನು ಎಡಕ್ಕಾದರೂ ಬಲಕ್ಕಾದರೂ
20 ತಿರುಗದೆ ಅಬ್ನೇರನನ್ನು ಹಿಂದಟ್ಟಿದನು. ಅಬ್ನೇರನು
ಹಿಂದಿರುಗಿ ನೋಡಿ—ನೀನು ಅಸಾಹೇಲನೋ ಎಂದು
ಕೇಳಿದ್ದಕ್ಕೆ ಅವನು ಹೌದೆಂದು ಉತ್ತರಕೊಟ್ಟನು.
21 ಆಗ ಅಬ್ನೇರನು ಅವನಿಗೆ—ನನ್ನನ್ನು ಬಿಟ್ಟು ಎಡ
ಕ್ಕಾಗಲಿ ಬಲಕ್ಕಾಗಲಿ ತಿರುಗಿಕೊಂಡು ಪ್ರಾಯಸ್ಥರ
ಲ್ಲೊಬ್ಬನನ್ನು ಹಿಡಿದು ಸುಲುಕೋ ಎಂದು ಹೇಳಿದನು;
22 ಆದರೆ ಅಸಾಹೇಲನು ಒಪ್ಪಲಿಲ್ಲ. ಅಬ್ನೇರನು ತಿರಿಗಿ—
ನನ್ನನ್ನು ಬಿಟ್ಟುಹೋಗು; ನಾನೇಕೆ ನಿನ್ನನ್ನು ನೆಲ
ಕ್ಕುರುಳಿಸಬೇಕು? ಹಾಗೆ ಮಾಡಿದರೆ ನಿನ್ನ ಅಣ್ಣ
ನಾದ ಯೋವಾಬನಿಗೆ ಹೇಗೆ ಮೋರೆತೋರಿಸಲಿ ಅಂದ
23 ನು. ಅಸಾಹೇಲನು ಬಿಟ್ಟುಹೋಗುವದಕ್ಕೆ ಒಪ್ಪ
ದ್ದರಿಂದ ಅಬ್ನೇರನು ಬರ್ಜಿಯನ್ನು ಹಿಂಗಡೆಯಿಂದ
ಅವನ ಹೊಟ್ಟೆಯೊಳಗೆ ತಿವಿದನು. ಬರ್ಜಿಯು ಅವನ
ಬೆನ್ನಿನೀದ ಹಾಯ್ದು ಬಂದಿತು. ಅವನು ಕೂಡಲೆ
ಅಲ್ಲೇ ಬಿದ್ದು ಸತ್ತನು.
ಅಸಾಹೇಲನು ಸತ್ತುಬಿದ್ದ ಸ್ಥಳಕ್ಕೆ ಬಂದವರೆಲ್ಲರೂ
ಅಲ್ಲೇ ನಿಂತರು. ಆದರೆ ಯೋವಾಬನೂ ಅಬೀಷೈ 24
ಯೂ ಅಬ್ನೇರನನ್ನು ಹಿಂದಟ್ಟಿದರು. ಹೀಗೆ ಅವರು
ಅಮ್ಮಾ ಎಂಬ ಗುಡ್ಡಕ್ಕೆ ಬರುವಷ್ಟರಲ್ಲಿ ಸೂರ್ಯಾಸ್ತ
ಮಾನವಾಯಿತು. ಆ ಗುಡ್ಡವು ಗಿಬ್ಯೋನಿನ ಅರಣ್ಯ
ಮಾರ್ಗದ ಬಳಿಯಲ್ಲಿರುವ ಗೀಯದ ಎದುರಿನಲ್ಲಿರು
ತ್ತದೆ. ಬೆನ್ಯಾಮೀನ್ಯರು ಒಂದೇ ಗುಂಪಾಗಿ ಕೂಡಿ 25
ಕೊಂಡು ಅಬ್ನೇರನ ಬಳಿಗೆ ಬಂದು ಗುಡ್ಡದ ಮೇಲೆ
ನಿಂತರು. ಆಗ ಅಬ್ನೇರನು ಯೋವಾಬನನ್ನು—ಕತ್ತಿ 26
ಯು ಯಾವಾಗಲೂ ತಿನ್ನುತ್ತಲೇ ಇರಬೇಕೋ? ಹಗೆ
ತನವೇ ಇದರ ಅಂತ್ಯಫಲವೆಂದು ನಿನಗೆ ಗೊತ್ತಾಗಲಿಲ್ಲ
ವೋ? ಸಹೋದರರನ್ನು ಹಿಂದಟ್ಟುವದು ಸಾಕೆಂದು
ನಿನ್ನ ಜನರಿಗೆ ಯಾವಾಗ ಆಜ್ಞಾಪಿಸುವಿ ಎಂದನು.
ಅದಕ್ಕೆ ಯೋವಾಬನು—ದೇವರ ಜೀವದಾಣೆ ಈಗ 27
ನೀನು ಈ ಮಾತುಗಳನ್ನು ಹೇಳದಿದ್ದರೆ ಜನರು ನಾಳೆ
ಬೆಳಗಾಗುವ ವರೆಗೆ ತಮ್ಮ ಬಂಧುಗಳನ್ನು ಹಿಂದಟ್ಟದೆ
ಬಿಡುತ್ತಿದ್ದಿಲ್ಲ ಎಂದು ಉತ್ತರಕೊಟ್ಟು ಕೂಡಲೆ ತುತೂರಿ 28
ಯನ್ನು ಊದಿಸಿದನು. ಆಗ ಜನರು ಇಸ್ರಾಯೇಲ್ಯ
ರನ್ನು ಹಿಂದಟ್ಟದೆ ಬಿಟ್ಟದರಿಂದ ಯುದ್ಧವು ನಿಂತುಹೋ
ಯಿತು. ಅಬ್ನೇರನೂ ಅವನ ಜನರೂ ಅರಾಬಾ 29
ತಗ್ಗಿನಲ್ಲಿ ರಾತ್ರಿಯೆಲ್ಲಾ ಪ್ರಯಾಣಮಾಡಿ ಯೊರ್ದನ್
ಹೊಳೆದಾಟಿ ಬಿಥ್ರೋನ್ ಕಣಿವೆಯನ್ನು ಹಾಯ್ದು
ಮಹನಯಿಮಿಗೆ ಸೇರಿದರು. ಯೋವಾಬನು ಅಬ್ನೇರ 30
ನನ್ನು ಹಿಂದಟ್ಟದೆ ಬಿಟ್ಟು ಹಿಂದಿರುಗಿ ಬಂದು ಜನರನ್ನು
ಕೂಡಿಸಿ ಲೆಕ್ಕಿಸಿದಾಗ ಅವರಲ್ಲಿ ದಾವೀದನ ಹತ್ತೊಂ
ಭತ್ತು ಮಂದಿ ಭಟರೂ ಅಸಾಹೇಲನೂ ಇರಲಿಲ್ಲ.
ಆದರೆ ದಾವೀದನ ಭಟರು ಅಬ್ನೇರನ ಜನರಾಗಿರುವ 31
ಬೆನ್ಯಾಮೀನ್ಯರಲ್ಲಿ ಮುನ್ನೂರರುವತ್ತು ಮಂದಿಯನ್ನು
ಕೊಂದಿದ್ದರು. ಅವರು ಅಸಾಹೇಲನ ಶವವನ್ನು 32
ತಂದು ಅದನ್ನು ಬೇತ್ಲೆಹೇಮಿನಲ್ಲಿರುವ ಅವನ ತಂದೆ
ಯ ಶ್ಮಶಾನಭೂಮಿಯಲ್ಲಿ ಸಮಾಧಿಮಾಡಿದರು.
ಅನಂತರ ಯೋವಾಬನೂ ಅವನ ಜನರೂ ರಾತ್ರಿಯೆ
ಲ್ಲಾ ಪ್ರಯಾಣಮಾಡಿ ಹೆಬ್ರೋನಿಗೆ ಬಂದರು. ಆಗ
ಸೂರ್ಯೋದಯವಾಯಿತು.
ಬಹುದಿವಸಗಳ ವರೆಗೆ ಸೌಲನ ವಂಶದವರಿಗೂ 3
ದಾವೀದನ ವಂಶದವರಿಗೂ ಯುದ್ಧನಡೆದಿತ್ತು. ದಾವೀ
ದನು ಬಲಗೊಳ್ಳುತ್ತಾ ಬಂದನು, ಸೌಲನ ವಂಶವು
ದುರ್ಬಲವಾಗುತ್ತಾ ಬಂದಿತು.

ದಾವೀದನ ಕುಟುಂಬವು.

ಹೆಬ್ರೋನಿನಲ್ಲಿರುವಾಗ ದಾವೀದನಿಗೆ ಹುಟ್ಟಿದ 2
ಮಕ್ಕಳು—ಚೊಚ್ಚಲ ಮಗನು ಅಮ್ನೋನನು; ಇವನು
ಇಜ್ರೇಲಿನವಳಾದ ಅಹೀನೋವಮಳಲ್ಲಿ ಹುಟ್ಟಿದ
ವನು. ಎರಡನೆಯವನು ಕಿಲಾಬನು; ಇವನು ಕರ್ಮೆ 3
ಲ್ಯನಾದ ನಾಬಾಲನ ಹೆಂಡತಿಯಾಗಿದ್ದ ಅಬೀಗೈಲ

1) ಪಾಠಾಂತರ: ಅಶೂರ್.

ಳಲ್ಲಿ ಹುಟ್ಟಿದವನು. ಮೂರನೆಯವನು ಅಬ್ಶಾ
ಲೋಮನು; ಇವನು ಗೆಷೂರಿನ ಅರಸನಾದ ತಲ್ಮೈ
4 ಎಂಬವನ ಮಗಳಾದ ಮಾಕಳ ಪುತ್ರನು. ನಾಲ್ಕನೆ
ಯವನು ಅದೋನೀಯನು; ಇವನು ಹಗ್ಗೀತಳ
ಮಗನು. ಐದನೆಯವನು ಶೆಫಟ್ಯನು; ಇವನು ಅಬೀ
5 ಟಲಳ ಮಗನು. ಆರನೆಯವನು ಇತ್ರಾಮನು; ಇವನು
ದಾವೀದನಿಗೆ ಅವನ ಹೆಂಡತಿಯಾದ ಎಗ್ಲಳಲ್ಲಿ ಹುಟ್ಟಿ
ದವನು. ಹೆಬ್ರೋನಿನಲ್ಲಿರುವಾಗ ದಾವೀದನಿಗೆ ಹುಟ್ಟಿದ
ಮಕ್ಕಳು ಇವರೇ.

ಅಬ್ನೇರನು ಈಷ್ಬೋಶೆತನನ್ನು ಬಿಟ್ಟು ದಾವೀದನ
ಪಕ್ಷಹಿಡಿದದ್ದೂ ಯೋವಾಬನಿಂದ ಹತನಾದದ್ದೂ.

6 ಸೌಲನ ವಂಶದವರಿಗೂ ದಾವೀದನ ವಂಶದವರಿಗೂ
ಯುದ್ಧನಡಿಯುತ್ತಿದ್ದಾಗ ಸೌಲನ ವಂಶದವರಲ್ಲಿ ಅಬ್ನೇ
7 ರನೇ ಬಲಿಷ್ಠನಾಗಿದ್ದನು. ಅಯ್ಯಾಹನ ಮಗಳಾದ
ರಿಚ್ಪಳು ಸೌಲನ ಉಪಪತ್ನಿಯಾಗಿದ್ದಳು. ಒಂದು
ದಿವಸ ಈಷ್ಬೋಶೆತನು ಅಬ್ನೇರನನ್ನು—ನೀನು ನನ್ನ
ತಂದೆಯ ಉಪಪತ್ನಿಯನ್ನು ಕೂಡಿದ್ದೇಕೆ ಎಂದು ಕೇಳಿ
8 ದನು. ಅಬ್ನೇರನು ಈ ಮಾತನ್ನು ಕೇಳಿ ಉರಿ
ಗೊಂಡು ಈಷ್ಬೋಶೆತನಿಗೆ—ಈ ವರೆಗೆ ನಾನು ನಿನ್ನ
ತಂದೆಯಾದ ಸೌಲನ ಕುಟುಂಬಕ್ಕೂ ಅವನ ಬಂಧು
ಮಿತ್ರರಿಗೂ ದಯೆತೋರಿಸುತ್ತಿದ್ದೆನಲ್ಲಾ; ನಿನ್ನನ್ನು
ದಾವೀದನ ಕೈಗೆ ಒಪ್ಪಿಸಿಕೊಡಲಿಲ್ಲವಷ್ಟೆ. ಈಗ ಈ
ಹೆಂಗಸಿನ ದೆಸೆಯಿಂದ ನನ್ನಲ್ಲಿ ತಪ್ಪುಹಿಡಿಯುವದಕ್ಕೆ
9 ನಾನೇನು ಯೆಹೂದನಾಯಿಯ ತಲೆಯೋ? ನಾನು
ಅರಸುತನವನ್ನು ಸೌಲನ ಕುಟುಂಬದಿಂದ ತೆಗೆದು
ದಾನಿನಿಂದ ಬೇರ್ಷೆಬದ ವರೆಗಿರುವ ಎಲ್ಲಾ ಇಸ್ರಾ
ಯೇಲ್ಯರಲ್ಲಿಯೂ ಯೆಹೂದ್ಯರಲ್ಲಿಯೂ ದಾವೀದನ
10 ಸಿಂಹಾಸನವನ್ನು ಸ್ಥಿರಪಡಿಸಿ ಯೆಹೋವನಾದ ದೇವರು
ದಾವೀದನಿಗೆ ಮಾಡಿದ ವಾಗ್ದಾನವನ್ನು ನೆರವೇರಿಸದೆ
ಹೋದರೆ ಆತನು ನನಗೆ ಬೇಕಾದದ್ದನ್ನು ಮಾಡಲಿ
11 ಅಂದನು. ಈಷ್ಬೋಶೆತನು ಅವನಿಗೆ ಹೆದರಿ ಏನೂ
ಉತ್ತರಕೊಡಲಾರದೆ ಹೋದನು.
12 ಅನಂತರ ಅಬ್ನೇರನು ದಾವೀದನ ಬಳಿಗೆ ದೂತ
ರನ್ನು ಕಳುಹಿಸಿ ಅವನಿಗೆ—ದೇಶವು ಯಾರದು?
ನೀನು ನನ್ನೊಡನೆ ಒಡಂಬಡಿಕೆಮಾಡಿಕೊಂಡರೆ ಇಸ್ರಾ
ಯೇಲ್ಯರನ್ನೆಲ್ಲಾ ನಿನ್ನ ಕಡೆಗೆ ತಿರುಗಿಸುವ ಹಾಗೆ
ನನ್ನ ಹಸ್ತವು ನಿನ್ನ ಸಂಗಡ ಇರುವದು ಎಂದು ಹೇಳಿ
13 ಸಿದನು. ಅದಕ್ಕೆ ದಾವೀದನು—ಒಳ್ಳೇದು, ನಿನ್ನ
ಸಂಗಡ ಒಡಂಬಡಿಕೆಮಾಡಿಕೊಳ್ಳುತ್ತೇನೆ; ಆದರೆ ನೀನು
ಒಂದು ಮಾಡಬೇಕು. ನನ್ನನ್ನು ನೋಡುವದಕ್ಕೆ
ಬರುವಾಗ ಸೌಲನ ಮಗಳಾದ ಮೀಕಲಳನ್ನು ಕರ
ಕೊಂಡುಬರಬೇಕು; ಹಾಗೆ ಕರಕೊಂಡು ಬಾರದಿದ್ದರೆ
ನೀನು ನನ್ನ ಮೋರೆಯನ್ನು ನೋಡಕೂಡದು ಎಂದು
14 ಉತ್ತರಕೊಟ್ಟನು. ಮತ್ತು ಅವನು ಸೌಲನ ಮಗ
ನಾದ ಈಷ್ಬೋಶೆತನ ಬಳಿಗೆ ದೂತರನ್ನು ಕಳುಹಿಸಿ
ಅವನಿಗೆ—ನಾನು ನೂರು ಮಂದಿ ಫಿಲಿಷ್ಟಿಯರ
ಮುಂದೊಗಲನ್ನು ತಂದುಕೊಟ್ಟು ವರಿಸಿದ ನನ್ನ
ಹೆಂಡತಿಯಾದ ಮೀಕಲಳನ್ನು ನನಗೊಪ್ಪಿಸು ಎಂಬ

ದಾಗಿ ಆಜ್ಞಾಪಿಸಿದನು. ಈಷ್ಬೋಶೆತನು ಲಯಿಷನ
ಮಗನೂ ಆಕೆಯ ಗಂಡನೂ ಆದ ಪಲ್ಟೀಯೇಲನ
ಮನೆಗೆ ಆಳುಗಳನ್ನು ಕಳುಹಿಸಿ ಆಕೆಯನ್ನು ತರಿಸಿ
ದನು. ಆಗ ಪಲ್ಟೀಯೇಲನು ಬಹುರೀಮಿನ
ವರೆಗೆ ಅಳುತ್ತಾ ಆಕೆಯ ಹಿಂದೆ ಬಂದನು. ಅನಂತರ
ಅಬ್ನೇರನು ಅವನಿಗೆ—ಹಿಂದಿರುಗು, ನಡೆ ಎಂದು
ಹೇಳಲು ಅವನು ಹಿಂದಿರುಗಿ ಹೋದನು.
ಅಬ್ನೇರನು ಇಸ್ರಾಯೇಲ್ಯರ ಹಿರಿಯರಿಗೆ—ದಾವೀ
ದನು ನಮ್ಮ ಅರಸನಾಗಬೇಕೆಂದು ನೀವು ಮುಂಚೆ
ಅಪೇಕ್ಷಿಸಿದಂತೆಯೇ ಈಗ ಮಾಡಿರಿ. ಯೆಹೋವನು
ದಾವೀದನ ವಿಷಯವಾಗಿ—ನನ್ನ ಸೇವಕನಾದ ದಾವೀ
ದನ ಮುಖಾಂತರವಾಗಿ ನನ್ನ ಪ್ರಜೆಗಳಾದ ಇಸ್ರಾ
ಯೇಲ್ಯರನ್ನು ಫಿಲಿಷ್ಟಿಯರ ಕೈಗೂ ಬೇರೆ ಎಲ್ಲಾ
ಶತ್ರುಗಳ ಕೈಗೂ ತಪ್ಪಿಸುವೆನೆಂದು ನುಡಿದಿದ್ದಾನಲ್ಲಾ
ಎಂದು ಹೇಳಿಸಿದನು. ಅವನು ಬೆನ್ಯಾಮೀನ್ಯರಿಗೂ
ಇದೇ ಪ್ರಕಾರ ಹೇಳಿದನು. ತರುವಾಯ ಅವನು
ಇಸ್ರಾಯೇಲ್ಯರೂ ಬೆನ್ಯಾಮೀನ್ಯರೆಲ್ಲರೂ ಒಪ್ಪಿ ಹೇ
ಳಿದ ಮಾತುಗಳನ್ನು ದಾವೀದನಿಗೆ ತಿಳಿಸುವದಕ್ಕೋ
ಸ್ಕರ ಹೆಬ್ರೋನಿಗೆ ಹೊರಟನು. ಅವನು ಹೆಬ್ರೋ
ನಿಗೆ ಬಂದಾಗ ದಾವೀದನು ಅವನಿಗೂ ಅವನ ಸಂಗಡ
ಬಂದಿದ್ದ ಇಪ್ಪತ್ತು ಜನರಿಗೂ ಔತಣಮಾಡಿಸಿದನು.
ಅಬ್ನೇರನು ದಾವೀದನಿಗೆ—ನಾನು ಹೊರಟುಹೋಗಿ
ಇಸ್ರಾಯೇಲ್ಯರನ್ನೆಲ್ಲಾ ಕೂಡಿಸಿ ನನ್ನ ಒಡೆಯನಾದ
ಅರಸನ ಬಳಿಗೆ ಕರಕೊಂಡುಬರುವೆನು; ಅವರು ನಿನ್ನ
ಸಂಗಡ ಒಡಂಬಡಿಕೆಮಾಡಿಕೊಳ್ಳುವರು; ನೀನು ನಿನ್ನ
ಅಪೇಕ್ಷೆಯಂತೆ ಎಲ್ಲರ ಮೇಲೆ ದೊರೆತನಮಾಡ
ಬಹುದು ಎಂದು ಹೇಳಲು ದಾವೀದನು ಅವನನ್ನು
ಸುರಕ್ಷಿತವಾಗಿ ಕಳುಹಿಸಿಕೊಟ್ಟನು.
ಸುಲಿಗೆಮಾಡುವದಕ್ಕಾಗಿ ಹೋಗಿದ್ದ ದಾವೀದನ
ಭಟರೂ ಯೋವಾಬನೂ ದೊಡ್ಡ ಕೊಳ್ಳೆಯೊಡನೆ
ಅಷ್ಟರಲ್ಲಿ ಹಿಂದಿರುಗಿ ಬಂದರು. ಅವರು ಹೆಬ್ರೋನಿಗೆ
ಬಂದಾಗ ಅಬ್ನೇರನು ದಾವೀದನ ಹತ್ತಿರ ಇರಲಿಲ್ಲ.
ದಾವೀದನು ಅವನನ್ನು ಸುರಕ್ಷಿತವಾಗಿ ಕಳುಹಿಸಿ
ಬಿಟ್ಟಿದ್ದನು. ಸೈನ್ಯಸಹಿತವಾಗಿ ಹಿಂದಿರುಗಿ ಬಂದ
ಯೋವಾಬನು—ನೇರನ ಮಗನಾದ ಅಬ್ನೇರನು ಬಂದಿ
ದ್ದನೆಂದೂ ಅರಸನು ಅವನನ್ನು ಸುರಕ್ಷಿತವಾಗಿ ಕಳು
ಹಿಸಿದನೆಂದೂ ತಿಳಿದು ಅರಸನ ಬಳಿಗೆ ಹೋಗಿ—
ನೀನು ಮಾಡಿದ್ದೇನು? ಅಬ್ನೇರನು ನಿನ್ನ ಬಳಿಗೆ
ಬಂದಿದ್ದನಂತೆ; ನೀನು ಅವನನ್ನು ಸುರಕ್ಷಿತವಾಗಿ
ಕಳುಹಿಸಿಬಿಟ್ಟದ್ದೇಕೆ? ನೇರನ ಮಗನಾದ ಅಬ್ನೇರನ
ಸಂಗತಿಯು ನಿನಗೆ ಗೊತ್ತಿಲ್ಲವೋ? ಅವನು ನಿನ್ನನ್ನು
ವಂಚಿಸುವದಕ್ಕೂ ನಿನ್ನ ಸ್ಥಿತಿಗತಿಗಳನ್ನು ತಿಳುಕೊಳ್ಳು
ವದಕ್ಕೂ ನೀನು ಏನೇನು ಮಾಡುತ್ತಿರುತ್ತೀ ಎಂಬ
ದನ್ನು ಕಂಡುಹಿಡಿಯುವದಕ್ಕೂ ಬಂದಿದ್ದನಷ್ಟೆ ಎಂದು
ಹೇಳಿ ದಾವೀದನನ್ನು ಬಿಟ್ಟು ಹೊರಗೆ ಹೋಗಿ ಅಬ್ನೇ
ರನನ್ನು ಕರತರುವಂತೆ ದೂತರನ್ನು ಅಟ್ಟಿದನು. ಇವರು
ಹೋಗಿ ಸಿರಾ ಬಾವಿಯ ಬಳಿಯಿಂದ ಅವನನ್ನು
ಕರಕೊಂಡುಬಂದರು. ಇದು ದಾವೀದನಿಗೆ ಗೊತ್ತಿರ
ಲಿಲ್ಲ. ಅಬ್ನೇರನು ಹೆಬ್ರೋನಿಗೆ ಬಂದಾಗ ಯೋವಾ
ಬನು ಅವನನ್ನು ಗುಪ್ತಸಂಭಾಷಣೆಗಾಗಿಯೋ ಎಂಬಂತೆ

ಊರುಬಾಗಲಿನೊಳಗೆ ಕರಕೊಂಡು ಹೋಗಿ ತನ್ನ ತಮ್ಮ
ನಾದ ಅಸಾಹೇಲನನ್ನು ವಧಿಸಿದ್ದದಕ್ಕೆ ಪ್ರತಿಯಾಗಿ
ಅವನನ್ನು ಹೊಟ್ಟೆಯಲ್ಲಿ ತಿವಿದು ಕೊಂದನು.

ತುಸ ಹೊತ್ತಾದ ಮೇಲೆ ಈ ವರ್ತಮಾನವು ದಾವೀ
ದನಿಗೆ ಮುಟ್ಟಿತು. ಆಗ ಅವನು—ನೇರನ ಮಗ
ನಾದ ಅಬ್ನೇರನ ವಧೆಯಲ್ಲಿ ನಾನೂ ನನ್ನ ರಾಜ್ಯವೂ
ಯೆಹೋವನ ಮುಂದೆ ಸದಾ ನಿರ್ದೋಷಿಗಳು. ಈ
ಅಪರಾಧವು ಯೋವಾಬನ ಮೇಲೆಯೂ ಅವನ
ಸಂತಾನದವರೆಲ್ಲರ ಮೇಲೆಯೂ ಇರಲಿ. ಅವನ
ಮನೆಯಲ್ಲಿ ಮೇಹಸ್ರಾವವುಳ್ಳವರೂ ಕುಷ್ಠರೋಗಿ
ಗಳೂ ಕುಂಟರೂ ಕತ್ತಿಯಿಂದ ಹತರಾಗುವವರೂ
ಭಿಕ್ಷೆ ಬೇಡುವವರೂ ಇದ್ದೇ ಇರಲಿ ಅಂದನು. ಅಬ್ನೇ
ರನು ಗಿಬ್ಯೋನಿನ ಸಮೀಪದಲ್ಲಾದ ಯುದ್ಧದಲ್ಲಿ
ಯೋವಾಬ ಅಬೀಷೈಯರ ತಮ್ಮನಾದ ಅಸಾಹೇಲ
ನನ್ನು ವಧಿಸಿದ್ದದರಿಂದ ಅವರು ಇವನನ್ನು ಕೊಂದು
ಹಾಕಿದರು.

ದಾವೀದನು ಯೋವಾಬನಿಗೂ ಅವನ ಸಂಗಡ
ಇದ್ದ ಜನರಿಗೂ—ನಿಮ್ಮ ಬಟ್ಟೆಗಳನ್ನು ಹರಕೊಂಡು
ಗೋಣೀತಟ್ಟುಗಳನ್ನು ಕಟ್ಟಿಕೊಂಡು ಗೋಳಾಡುತ್ತಾ
ಅಬ್ನೇರನ ಶವದ ಮುಂದೆ ನಡೆಯಿರಿ ಎಂದು ಆಜ್ಞಾ
ಪಿಸಿ ತಾನು ಚಟ್ಟದ ಹಿಂದೆ ಹೋದನು. ಅಬ್ನೇರನ
ಶವವನ್ನು ಹೆಬ್ರೋನಿನಲ್ಲಿ ಸಮಾಧಿಮಾಡಿದರು. ಅರ
ಸನು ಅವನ ಸಮಾಧಿಯ ಹತ್ತಿರ ನಿಂತು ಗಟ್ಟಿ
ಯಾಗಿ ಅತ್ತನು; ಜನರೆಲ್ಲರೂ ಅತ್ತರು. ದಾವೀದನು
ಅಬ್ನೇರನನ್ನು ಕುರಿತು—

ಅಬ್ನೇರನೇ, ನಿನಗೆ ಮೂರ್ಖರಿಗಾಗುವಂತೆ ದುರ್ಮ
ರಣವಾಯಿತೇ!
ನಿನ್ನ ಕೈಗಳು ಕಟ್ಟಲ್ಪಡಲಿಲ್ಲ, ನಿನ್ನ ಕಾಲಿಗೆ ಬೇಡಿ
ಗಳು ಬರಲಿಲ್ಲ;
ನೀನು ದುಷ್ಟರಿಂದಲೋ ಎಂಬಂತೆ ಹತನಾದಿ

ಎಂದು ಶೋಕಗೀತವನ್ನು ಹಾಡಲು ಜನರು ತಿರಿಗಿ
ಅತ್ತರು. ಸೂರ್ಯಾಸ್ತಮಾನಕ್ಕೆ ಮೊದಲೇ ಜನರೆ
ಲ್ಲರೂ ದಾವೀದನ ಬಳಿಗೆ ಬಂದು ಅವನನ್ನು ಊಟಕ್ಕೆ
ಎಬ್ಬಿಸಬೇಕೆಂದು ಪ್ರಯತ್ನಿಸಿದರು. ಆದರೆ ಅವನು—
ಸೂರ್ಯನು ಮುಣುಗುವ ಮೊದಲು ನಾನು ರೊಟ್ಟಿ
ಯನ್ನಾಗಲಿ ಬೇರೆ ಯಾವದನ್ನಾಗಲಿ ಬಾಯಲ್ಲಿ
ಹಾಕಿದರೆ ದೇವರು ನನಗೆ ಬೇಕಾದದ್ದು ಮಾಡಲಿ
ಎಂದು ಆಣೆಯಿಟ್ಟು ಹೇಳಿದನು. ಜನರು ಇದನ್ನು
ಕಂಡು ಮೆಚ್ಚಿದರು; ಅರಸನು ಮಾಡಿದ್ದೆಲ್ಲವೂ ಅವ
ರಿಗೆ ಒಪ್ಪಿಕೆಯಾಯಿತು. ನೇರನ ಮಗನಾದ ಅಬ್ನೇ
ರನ ವಧೆಯಲ್ಲಿ ಅರಸನು ಕೈಹಾಕಲಿಲ್ಲವೆಂಬದು
ಅವನ ಎಲ್ಲಾ ಜನರಿಗೂ ಇಸ್ರಾಯೇಲ್ಯರಿಗೂ ಅದೇ
ದಿವಸ ಗೊತ್ತಾಯಿತು. ಅರಸನು ತನ್ನ ಸೇವಕರಿಗೆ—
ಈ ಹೊತ್ತು ಇಸ್ರಾಯೇಲ್ಯರಲ್ಲಿ ಹತವಾದವನು ಪ್ರಭು
ವೂ ಮಹಾಪುರುಷನೂ ಆಗಿದ್ದಾನೆಂಬದು ನಿಮಗೆ
ಗೊತ್ತುಂಟಲ್ಲಾ; ನಾನು ರಾಜ್ಯಾಭಿಷೇಕಹೊಂದಿದವ
ನಾಗಿದ್ದರೂ ಈಗ ಏನೂ ಮಾಡಲಾರದವನಾಗಿದ್ದೇನೆ.
ಚೆರೂಯಳ ಮಕ್ಕಳಾದ ಇವರು ನನ್ನ ಹತೋಟಿಗೆ
ಬಾರದವರು. ಯೆಹೋವನೇ ಕೇಡುಕರಿಗೆ ಮುಯ್ಯಿ
ತೀರಿಸಲಿ ಎಂದು ಹೇಳಿದನು.

ಈಷ್ಬೋಶೆತನು ಕೊಲ್ಲಲ್ಪಟ್ಟದ್ದು.

ಅಬ್ನೇರನು ಹೆಬ್ರೋನಿನಲ್ಲಿ ಸತ್ತನೆಂಬ ವರ್ತಮಾ 4
ನವು ಸೌಲನ ಮಗನಾದ ಈಷ್ಬೋಶೆತನಿಗೆ ಮುಟ್ಟಿ
ದಾಗ ಅವನ ಕೈಗಳು ಜೋಲುಬಿದ್ದವು. ಇಸ್ರಾಯೇ
ಲ್ಯರೆಲ್ಲರೂ ಕಳವಳಗೊಂಡರು. ಸೌಲನ ಮಗನಿಗೆ 2
ಬಾಣ, ರೇಕಾಬ್ ಎಂಬ ಇಬ್ಬರು ಸೇನಾಪತಿಗಳಿದ್ದರು.
ಅವರು ಬೆನ್ಯಾಮೀನ್ ಕುಲದ ಬೇರೋತಿನವನಾದ
ರಿಮ್ಮೋನನ ಮಕ್ಕಳು. (ಬೇರೋತ್ ಎಂಬದು ಬೆನ್ಯಾ
ಮೀನ್ಯರಿಗೆ ಸೇರಿದ ಗ್ರಾಮ; ಆದರೆ ಬೇರೋತ್ಯರು ಗಿತ್ತ 3
ಯೀಮಿಗೆ ಓಡಿಹೋಗಿ ಇಂದಿನ ವರೆಗೂ ಅಲ್ಲೇ ಪ್ರವಾ
ಸಿಗಳಾಗಿದ್ದಾರೆ.)

ಸೌಲನ ಮಗನಾದ ಯೋನಾತಾನನಿಗೆ ಮೆಫೀ 4
ಬೋಶೆತನೆಂಬ ಒಬ್ಬ ಕುಂಟ ಮಗನಿದ್ದನು. ಅವನು
ಕುಂಟನಾದದ್ದು ಹೇಗಂದರೆ— ಸೌಲಯೋನಾತಾನರು
ಸತ್ತರೆಂಬ ವರ್ತಮಾನವು ಇಜ್ರೇಲಿನಿಂದ ಬಂದಾಗ
ಐದು ವರುಷದವನಾಗಿದ್ದ ಅವನನ್ನು ಅವನ ದಾದಿಯು
ತೆಗೆದುಕೊಂಡು ಅವಸರದಿಂದ ಓಡಿಹೋಗುವಾಗ ಅವ
ನು ಬಿದ್ದು ಕುಂಟನಾದನು.

ಈಷ್ಬೋಶೆತನು ಮಧ್ಯಾಹ್ನದ ಬಿಸಿಲುಹೊತ್ತಿನಲ್ಲಿ 5
ಮನೆಯೊಳಗೆ ಮಲಗಿರುವಾಗ ಬೇರೋತಿನ ರಿಮ್ಮೋ
ನನ ಮಕ್ಕಳಾದ ರೇಕಾಬ್, ಬಾಣ ಎಂಬವರು ಅವನ
ಮನೆಯ ಬಳಿಗೆ ಹೋದರು. ಆಗ ಬಾಗಲುಕಾಯು 6
ವವಳು ಗೋದಿಕೇರುತ್ತಿದ್ದು ಹಾಗೆಯೇ ತೂಗಡಿಸಿ
ನಿದ್ರೆಮಾಡುತ್ತಿರುವದನ್ನು ಅವರು ಕಂಡು ರಹಸ್ಯ
ವಾಗಿ ಒಳಗೆ ಬಂದು ಒಳಕೋಣೆಯಲ್ಲಿ ಮಂಚದ 7
ಮೇಲೆ ಮಲಗಿದ್ದ ಅರಸನನ್ನು ಹೊಡೆದು ಕೊಂದು
ತಲೆತೆಗೆದುಕೊಂಡು ರಾತ್ರಿಯೆಲ್ಲಾ ಅರಾಬಾ ತಗ್ಗಿ
ನಲ್ಲಿ ಪ್ರಯಾಣಮಾಡಿ ಹೆಬ್ರೋನಿನಲ್ಲಿದ್ದ ಅರಸನಾದ 8
ದಾವೀದನ ಬಳಿಗೆ ಬಂದು ಆ ತಲೆಯನ್ನು ಅವನಿಗೆ
ತೋರಿಸಿ—ಇಗೋ, ನಿನ್ನ ಜೀವತೆಗೆಯಬೇಕೆಂದಿದ್ದ
ನಿನ್ನ ಶತ್ರುವಾದ ಸೌಲನ ಮಗ ಈಷ್ಬೋಶೆತನ ತಲೆ!
ಅರಸನಾದ ನಮ್ಮ ಒಡೆಯನಿಗಾಗಿ ಸೌಲನಿಗೂ ಅವನ
ಸಂತಾನಕ್ಕೂ ಯೆಹೋವನು ಈ ಹೊತ್ತು ಮುಯ್ಯಿ
ತೀರಿಸಿದ್ದಾನೆ ಅಂದರು. ದಾವೀದನು ಬೇರೋತಿನ 9
ರಿಮ್ಮೋನನ ಮಕ್ಕಳಾದ ರೇಕಾಬ್, ಬಾಣ ಎಂಬವ
ರಿಗೆ—ಸೌಲನ ಮರಣವಾರ್ತೆಯನ್ನು ತಿಳಿಸುವದು 10
ಶುಭಕರವೆಂದು ಭಾವಿಸಿ ಬಂದು ನನಗೆ ಹೇಳಿದವ
ನನ್ನು ಹಿಡಿದು ಅವನಿಗೆ ಚಿಕ್ಲಗಿನಲ್ಲಿ ಮರಣದಂಡನೆ
ಯೆಂಬ ಬಹುಮಾನವನ್ನು ಸಲ್ಲಿಸಿದೆನಲ್ಲವೋ? ಮಹಾ 11
ದುಷ್ಟರಾದ ನೀವು ನೀತಿವಂತನ ಮನೆಹೊಕ್ಕು
ಅವನನ್ನು ಅವನ ಮಂಚದ ಮೇಲೆಯೇ ಕೊಂದು
ಹಾಕಿದ ಮೇಲೆ ಆ ರಕ್ತಾಪರಾಧಕ್ಕಾಗಿ ನಿಮಗೆ
ಮುಯ್ಯಿತೀರಿಸುವದು ಎಷ್ಟೋ ಅಗತ್ಯವಾಗಿದೆ. ನನ್ನ
ಪ್ರಾಣವನ್ನು ಎಲ್ಲಾ ಇಕ್ಕಟ್ಟುಗಳಿಂದ ಬಿಡಿಸಿದ ಯೆ
ಹೋವನಾಣೆ, ನಿಮ್ಮನ್ನು ಭೂಲೋಕದಿಂದ ತೆಗೆದೇ
ಬಿಡುವೆನು ಎಂದು ಹೇಳಿ ತನ್ನ ಆಳುಗಳಿಗೆ ಆಜ್ಞಾಪಿ 12
ಸಲು ಅವರು ಇವರನ್ನು ಕೊಂದು ಕೈಕಾಲುಗಳನ್ನು
ಕತ್ತರಿಸಿ ಶವಗಳನ್ನು ಹೆಬ್ರೋನಿನ ಕೆರೆಯ ಬಳಿ

ಯಲ್ಲಿ ನೇತುಹಾಕಿದರು. ಈಷ್ಬೋಶೆತನ ತಲೆಯನ್ನು
ಹೆಬ್ರೋನಿನಲ್ಲಿದ್ದ ಅಬ್ನೇರನ ಸಮಾಧಿಯಲ್ಲಿ ಇಡಿಸಿ
ದನು.

### ದಾವೀದನು ಯೆಹೂದ್ಯರ ಮತ್ತು ಇಸ್ರಾಯೇಲ್ಯರ ಅರಸನಾಗಿ ನಡಿಸಿದ ವಿಶೇಷಕಾರ್ಯಗಳು.

5—12.

ಇಸ್ರಾಯೇಲ್ಯರು ದಾವೀದನನ್ನು ಅಭಿಷೇಕಿಸಿದ್ದೂ
ಯೆರೂಸಲೇಮ್ ಪಟ್ಟಣವು ರಾಜಧಾನಿಯಾದದ್ದೂ.

5 ಅನಂತರ ಇಸ್ರಾಯೇಲ್ಯರ ಎಲ್ಲಾ ಕುಲಗಳವರು
ಹೆಬ್ರೋನಿನಲ್ಲಿದ್ದ ದಾವೀದನ ಬಳಿಗೆ ಬಂದು ಅವ
2 ನಿಗೆ— ನಾವು ನಿನ್ನ ರಕ್ತಸಂಬಂಧಿಗಳಾಗಿದ್ದೇವೆ; ಹಿಂದಿನ
ದಿವಸಗಳಲ್ಲಿ ಅಂದರೆ ಸೌಲನ ಆಳಿಕೆಯಲ್ಲಿ ಇಸ್ರಾ
ಯೇಲ್ಯರ ದಳಪತಿಯಾಗಿ ಹೋಗುತ್ತಾ ಬರುತ್ತಾ
ಇದ್ದವನು ನೀನೇ. ನಿನ್ನನ್ನು ಕುರಿತು ಯೆಹೋ
ವನು— ನೀನು ನನ್ನ ಪ್ರಜೆಗಳಾದ ಇಸ್ರಾಯೇಲ್ಯರ
ನಾಯಕನೂ ಪಾಲಕನೂ ಆಗಿರುವಿಯೆಂದು ಹೇಳಿ
3 ದ್ದಾನಷ್ಟೆ ಅಂದರು. ಹೆಬ್ರೋನಿನಲ್ಲಿದ್ದ ಅರಸನಾದ
ದಾವೀದನು ತನ್ನ ಬಳಿಗೆ ಬಂದಿದ್ದ ಇಸ್ರಾಯೇಲ್ಯರ
ಹಿರಿಯರೆಲ್ಲರೊಡನೆ ಅಲ್ಲೇ ಯೆಹೋವನ ಸನ್ನಿಧಿ
ಯಲ್ಲಿ ಒಡಂಬಡಿಕೆಮಾಡಿಕೊಂಡನು. ಅವರು ದಾವೀದ
ನನ್ನು ಅಭಿಷೇಕಿಸಿ ಇಸ್ರಾಯೇಲ್ಯರ ಅರಸನನ್ನಾಗಿ
4 ಮಾಡಿದರು. ದಾವೀದನು ಮೂವತ್ತು ವರುಷದವ
ನಾದಾಗ ಅರಸನಾಗಿ ನಾಲ್ವತ್ತು ವರುಷ ಆಳಿದನು.
5 ಅವನು ಹೆಬ್ರೋನಿನಲ್ಲಿದ್ದುಕೊಂಡು ಯೆಹೂದಕುಲ
ವೊಂದನ್ನೇ ಆಳಿದ್ದು ಏಳು ವರುಷವೂ ಆರು ತಿಂಗಳೂ;
ಯೆರೂಸಲೇಮಿನಲ್ಲಿದ್ದುಕೊಂಡು ಯೆಹೂದ್ಯರನ್ನೂ
ಎಲ್ಲಾ ಇಸ್ರಾಯೇಲ್ಯರನ್ನೂ ಆಳಿದ್ದು ಮೂವತ್ತು
ಮೂರು ವರುಷ.
6 ದಾವೀದನು ತನ್ನ ಜನರನ್ನು ಕರಕೊಂಡು ಯೆರೂ
ಸಲೇಮಿನಲ್ಲಿದ್ದ ದೇಶದ ಮೂಲನಿವಾಸಿಗಳಾದ ಯೆ
ಬೂಸಿಯರಿಗೆ ವಿರೋಧವಾಗಿ ಹೊರಟನು. ಅವರು
ಇವನು ಒಳಗೆ ಬರಲಾರನೆಂದು ನೆನಸಿ ದಾವೀದನಿಗೆ—
ನೀನು ಒಳಗೆ ಬರಲಾರಿ; ಕುರುಡರು, ಕುಂಟರು ಇವ
ರೇ ನಿನ್ನನ್ನು ಅಟ್ಟಿಬಿಡುವರು ಎಂದು ಹೇಳಿದರು.
7 ಆದರೂ ಅವನು ಈಗ ದಾವೀದನಗರವೆನಿಸಿಕೊಳ್ಳು
ವ ಚೀಯೋನ್‌ಕೋಟೆಯನ್ನು ಸ್ವಾಧೀನಪಡಿಸಿಕೊಂಡ
8 ನು. ಆ ದಿವಸ ದಾವೀದನು—ಯೆಬೂಸಿಯರನ್ನು
ಜಯಿಸಬೇಕೆಂದಿರುವವನು ಜಲದ್ವಾರದಲ್ಲಿ ಹತ್ತಿಹೋ
ಗಿ ದಾವೀದನಿಗೆ ಅಸಹ್ಯರಾಗಿರುವ ಕುರುಡರನ್ನೂ
ಕುಂಟರನ್ನೂ ಕಂದಕದಲ್ಲಿ ನಾಶಮಾಡಿಬಿಡಲಿ ಎಂದು
ಹೇಳಿದನು. ಆದದರಿಂದ ಕುರುಡರೂ ಕುಂಟರೂ
ಇದ್ದಾರೆ, ಒಳಗೆ ಹೋಗಲಾಗದು ಎಂದು ಗಾದೆ
ಯುಂಟು.
9 ದಾವೀದನು ಆ ಕೋಟೆಗೆ ದಾವೀದನಗರವೆಂದು
ಹೆಸರಿಟ್ಟು ಅಲ್ಲೇ ವಾಸಿಸುತ್ತಾ ಅದರ ಸುತ್ತಲೂ
ಮಿಲ್ಲೋವಿನಿಂದ ಪ್ರಾರಂಭಿಸಿ ಒಳಗಣ ಪೌಳಿಗೋಡೆ
ಯನ್ನು ಕಟ್ಟಿಸಿದನು. ಸೇನಾಧೀಶ್ವರನಾದ ಯೆಹೋ
ವದೇವರು ಅವನ ಸಂಗಡ ಇದ್ದದರಿಂದ ಅವನು
ಅಭಿವೃದ್ಧಿಹೊಂದುತ್ತಾ ಹೋದನು. ತೂರಿನ ಅರಸ
ನಾದ ಹೀರಾಮನು ದಾವೀದನಿಗೆ ದೂತರನ್ನೂ ದೇವ
ದಾರುಮರಗಳನ್ನೂ ಬಡಿಗೆಯವರನ್ನೂ ಶಿಲ್ಪಿಗಳನ್ನೂ
ಕಳುಹಿಸಲು ಅವರು ಇವನಿಗೋಸ್ಕರ ಅರಮನೆಯ
ನ್ನು ಕಟ್ಟಿದರು. ಇದರಿಂದ ದಾವೀದನು—ಯೆಹೋ
ವನು ನನ್ನನ್ನು ಇಸ್ರಾಯೇಲ್‌ರಾಜನನ್ನಾಗಿ ಸ್ಥಿರ
ಪಡಿಸಿ ತನ್ನ ಪ್ರಜೆಗಳಾದ ಇಸ್ರಾಯೇಲ್ಯರ ನಿಮಿತ್ತ
ವಾಗಿ ನನ್ನ ರಾಜ್ಯವನ್ನು ವೃದ್ಧಿಪಡಿಸಿದನೆಂದು ತಿಳಿದು
ಕೊಂಡನು.
ದಾವೀದನು ಹೆಬ್ರೋನಿನಿಂದ ಯೆರೂಸಲೇಮಿಗೆ
ಬಂದ ಮೇಲೆ ಅಲ್ಲಿಯೂ ಅನೇಕ ಸ್ತ್ರೀಯರನ್ನು ಪತ್ನಿ
ಯರನ್ನಾಗಿಯೂ ಉಪಪತ್ನಿಯರನ್ನಾಗಿಯೂ ಮಾಡಿ
ಕೊಂಡದರಿಂದ ಅವನಿಗೆ ಇನ್ನೂ ಕೆಲವು ಮಂದಿ ಗಂಡು
ಹೆಣ್ಣುಮಕ್ಕಳು ಹುಟ್ಟಿದರು. ಅಲ್ಲಿ ಅವನಿಗೆ ಹುಟ್ಟಿದ
ವರ ಹೆಸರುಗಳು—ಶಮ್ಮೂವ, ಶೋಬಾಬ್, ನಾತಾನ್,
ಸೊಲೊಮೋನ್, ಇಬ್ಹಾರ್, ಎಲೀಷೂವ, ನೆಫೆಗ್,
ಯಾಫೀಯ, ಎಲೀಷಾಮ, ಎಲ್ಯಾದ, ಎಲೀಫೆಲೆಟ್.

ದಾವೀದನು ಫಿಲಿಷ್ಟಿಯರನ್ನು ಎರಡು ಸಾರಿ
ಸೋಲಿಸಿದ್ದು.

ಇಸ್ರಾಯೇಲ್ಯರು ದಾವೀದನನ್ನು ಅಭಿಷೇಕಿಸಿ ತಮ್ಮ
ಅರಸನನ್ನಾಗಿ ಮಾಡಿಕೊಂಡರೆಂಬ ವರ್ತಮಾನವು ಫಿಲಿ
ಷ್ಟಿಯರಿಗೆ ಮುಟ್ಟಿದಾಗ ಅವರು ಅವನನ್ನು ಹಿಡಿಯು
ವದಕ್ಕೆ ಹೊರಟರು. ದಾವೀದನು ಇದನ್ನು ಕೇಳಿ
ದುರ್ಗಕ್ಕೆ ಹೋದನು. ಫಿಲಿಷ್ಟಿಯರು ದೇಶದೊ
ಳಗೆ ನುಗ್ಗಿ ರೆಫಾಯಿಮ್ ತಗ್ಗಿಗೆ ಬಂದು ಪಾಳೆಯ
ಮಾಡಿಕೊಂಡಿದ್ದಾರೆಂದು ತಿಳಿದು ದಾವೀದನು ಯೆ
ಹೋವನನ್ನು — ನಾನು ಫಿಲಿಷ್ಟಿಯರಿಗೆ ವಿರೋಧವಾಗಿ
ಹೋಗಬಹುದೋ? ಅವರನ್ನು ನನ್ನ ಕೈಗೆ ಒಪ್ಪಿಸಿ
ಕೊಡುವಿಯೋ ಎಂದು ಕೇಳಲು ಆತನು—ಹೋಗು,
ನಾನು ಹೇಗೂ ಅವರನ್ನು ನಿನ್ನ ಕೈಗೆ ಒಪ್ಪಿಸುವೆನು
ಎಂದು ಉತ್ತರಕೊಟ್ಟದರಿಂದ ಅವನು ಹೋಗಿ ಅವ
ರನ್ನು ಸೋಲಿಸಿ ಯೆಹೋವನು ಕಟ್ಟೆಯೊಡೆದ
ಪ್ರವಾಹದಂತೆ ನನ್ನ ಶತ್ರುಗಳ ಮೇಲೆ ಬಿದ್ದು ಅವರ
ನ್ನು ನನ್ನ ಕಣ್ಣಮುಂದೆಯೇ ನಾಶಮಾಡಿದ್ದಾನೆಂದು
ಹೇಳಿ ಆ ಯುದ್ಧಸ್ಥಳಕ್ಕೆ 1) ಬಾಳ್‌ಪೆರಾಚೀಮೆಂದು
ಹೆಸರಿಟ್ಟನು. ಫಿಲಿಷ್ಟಿಯರು ಅಲ್ಲಿ ಬಿಟ್ಟುಹೋಗಿದ್ದ
ವಿಗ್ರಹಗಳನ್ನು ದಾವೀದನೂ ಅವನ ಜನರೂ ತೆಗೆದು
ಕೊಂಡು ಬಂದರು.
ಫಿಲಿಷ್ಟಿಯರು ಇನ್ನೊಮ್ಮೆ ಹೊರಟುಬಂದು ರೆಫಾ
ಯಿಮ್ ತಗ್ಗಿನಲ್ಲಿ ಇಳುಕೊಂಡರು. ದಾವೀದನು
ಯೆಹೋವನ ಸನ್ನಿಧಿಯಲ್ಲಿ ವಿಚಾರಿಸಿದಾಗ ಆತನು
ಅವನಿಗೆ—ನೀನು ನೆಟ್ಟಗೆ ಹೋಗಿ ಅವರ ಮೇಲೆ
ಬೀಳಬೇಡ; ಅವರ ಹಿಂದಳವನ್ನು ಸುತ್ತಿಕೊಂಡು ಹೋ
ಗಿ ಬಾಕಾ ಮರಗಳಿರುವ ಕಡೆಯಿಂದ ಅವರ ಮೇಲೆ

1) ಅಂದರೆ ಸಂಹಾರಕಕರ್ತ.

4 ಬೀಳು. ಆ ಮರಗಳ ತುದಿಯಲ್ಲಿ ಹೆಜ್ಜೆಗಳ ಸಪ್ಪ
ಳ ಕೇಳಿಸುವಾಗ ಯೆಹೋವನು ಫಿಲಿಷ್ಟಿಯರ ಸೈನ್ಯ
ವನ್ನು ಸೋಲಿಸುವದಕ್ಕೋಸ್ಕರ ನಿನ್ನ ಮುಂದಾಗಿ
ಹೊರಟನೆಂದು ತಿಳಿದುಕೊಂಡು ಅವರ ಮೇಲೆ ಬೀಳು
5 ಅಂದನು. ದಾವೀದನು ಯೆಹೋವನ ಆಜ್ಞಾನುಸಾರ
ವಾಗಿ ಮಾಡಿ ಫಿಲಿಷ್ಟಿಯರನ್ನು ಗೆಬದಿಂದ ಗೆಜೆರಿನ ವರೆ
ಗೂ ಸಂಹರಿಸಿದನು.

ದಾವೀದನು ಯೆಹೋವನ ಮಂಜೂಷವನ್ನು
ಚೀಯೋನಿಗೆ ತಂದದ್ದು.

6 ಅನಂತರ ದಾವೀದನು ಇಸ್ರಾಯೇಲ್ಯರಲ್ಲಿ ಮೂವ
ತ್ತುಸಾವಿರ ಮಂದಿ ಶ್ರೇಷ್ಠ ಸೈನಿಕರನ್ನು ಆರಿಸಿಕೊಂಡು
2 ದೇವರ ಮಂಜೂಷವನ್ನು ತರುವದಕ್ಕಾಗಿ ಅವರೆಲ್ಲರ
ಸಹಿತ ಯೆಹೂದದೇಶದ ಬಾಳಾ ಎಂಬಲ್ಲಿಗೆ ಹೋದ
ನು. ಆ ಮಂಜೂಷವು ದೇವನಾಮದಿಂದ ಅಂದರೆ
ಕೆರೂಬಿಯರ ನಡುವೆ ಆಸೀನನಾಗಿರುವ ಸೇನಾಧೀಶ್ವ
ರನಾದ ಯೆಹೋವನ ನಾಮದಿಂದ ಪ್ರಸಿದ್ಧವಾದದ್ದು.
3 ಅವರು ದೇವರ ಮಂಜೂಷವನ್ನು ಗುಡ್ಡದ ಮೇಲಿರುವ
ಅಬೀನಾದಾಬನ ಮನೆಯಿಂದ ಹೊರಗೆ ತಂದು
ಅದನ್ನು ಒಂದು ಹೊಸ ಬಂಡಿಯ ಮೇಲೆ ಏರಿಸಿದರು.
ಅಬೀನಾದಾಬನ ಮಕ್ಕಳಾದ ಉಜ್ಜನೂ ಅಹಿಯೋವ
4 ನೂ ಬಂಡಿಯನ್ನು ಹೊಡೆದರು. ಗುಡ್ಡದ ಮೇಲೆ
ವಾಸವಾಗಿದ್ದ ಅಬೀನಾದಾಬನ ಮನೆಯಿಂದ ತೆಗೆಯಲ್ಪ
ಟ್ಟ ದೇವರ ಮಂಜೂಷದ ಮುಂದೆ ಅಹಿಯೋವನು
5 ಹೋಗುತ್ತಿದ್ದನು. ದಾವೀದನೂ ಎಲ್ಲಾ ಇಸ್ರಾಯೇ
ಲ್ಯರೂ ಕಿನ್ನರಿ, ಸ್ವರಮಂಡಲ, ದಮ್ಮಡಿ, ಝಲ್ಲರಿ,
ತಾಳ ಇವುಗಳನ್ನು ಬಾರಿಸಿಕೊಂಡು ಪೂರ್ಣಾಸಕ್ತಿ
ಯಿಂದ ಗೀತಗಳನ್ನು ಹಾಡುತ್ತಾ 1) ಯೆಹೋವನ
6 ಮುಂದೆ ನರ್ತನಮಾಡುತ್ತಾ ಹೋದರು. ಅವರು
ನಾಕೋನನ ಕಣಕ್ಕೆ ಬಂದಾಗ ಎತ್ತುಗಳು ಎಡವಿದ್ದ
ರಿಂದ ಉಜ್ಜನು ಕೈಚಾಚಿ ದೇವರ ಮಂಜೂಷವನ್ನು ಹಿಡಿ
7 ದನು. ಆಗ ಯೆಹೋವನು ಉಜ್ಜನ ಮೇಲೆ ಕೋಪ
ಗೊಂಡು ಈ ತಪ್ಪಿನ ಸಲವಾಗಿ ಅವನನ್ನು ಹತಮಾಡಿದ
ನು; ಅವನು ಅಲ್ಲೇ ದೇವರ ಮಂಜೂಷದ ಬಳಿಯಲ್ಲಿ
8 ಸತ್ತನು. ಯೆಹೋವನು ಉಜ್ಜನನ್ನು ಮುರಿದುಬಿಟ್ಟ
ದ್ದರಿಂದ ದಾವೀದನು ಉರಿಗೊಂಡು ಆ ಸ್ಥಳಕ್ಕೆ 2) ಪೆರೆ
ಚುಜ್ಜಾ ಎಂಬ ಹೆಸರಿಟ್ಟನು. ಅದಕ್ಕೆ ಇಂದಿನ ವರೆಗೂ
9 ಇದೇ ಹೆಸರಿರುತ್ತದೆ. ಆ ದಿವಸ ದಾವೀದನು ಯೆಹೋ
ವನಿಗೆ ಭಯಪಟ್ಟು—ಯೆಹೋವನ ಮಂಜೂಷವನ್ನು
ನಾಸಿರುವಲ್ಲಿಗೆ ತೆಗೆದುಕೊಂಡು ಹೋಗುವದು ಹೇಗೆ
10 ಎಂದುಕೊಂಡು ಅದನ್ನು ದಾವೀದನಗರಕ್ಕೆ ತರಲೊಲ್ಲ
ದೆ ಗತ್ ಊರಿನ ಓಬೇದೆದೋಮನ ಮನೆಗೆ ಕಳುಹಿ
11 ಸಿದನು. ಯೆಹೋವನ ಮಂಜೂಷವು ಗತ್ ಊರಿನ
ಓಬೇದೆದೋಮನ ಮನೆಯಲ್ಲಿ ಮೂರು ತಿಂಗಳು
ಇತ್ತು. ಆ ಕಾಲದಲ್ಲಿ ಯೆಹೋವನು ಅವನನ್ನೂ
ಅವನ ಮನೆಯವರನ್ನೂ ಆಶೀರ್ವದಿಸಿದನು.

ಯೆಹೋವನು ಹೀಗೆ ತನ್ನ ಮಂಜೂಷದ ದೆಸೆ 12
ಯಿಂದ ಓಬೇದೆದೋಮನನ್ನೂ ಅವನಿಗಿರುವದೆಲ್ಲ
ವನ್ನೂ ಆಶೀರ್ವದಿಸಿದ್ದಾನೆಂಬ ವರ್ತಮಾನವು ದಾವೀ
ದನಿಗೆ ಮುಟ್ಟಿದಾಗ ಅವನು ಹೋಗಿ ಓಬೇದೆದೋ
ಮನ ಮನೆಯಲ್ಲಿದ್ದ ದೇವರ ಮಂಜೂಷವನ್ನು ಉತ್ಸ
ವದಿಂದ ದಾವೀದನಗರಕ್ಕೆ ತಂದನು. ಯೆಹೋವನ 13
ಮಂಜೂಷವನ್ನು ಹೊತ್ತವರು ಆರು ಹೆಜ್ಜೆ ನಡೆದನಂತರ
ದಾವೀದನು ಒಂದು ಎತ್ತನ್ನೂ ಕೊಬ್ಬಿದ ಕರುವ
ನ್ನೂ ಯಜ್ಞಮಾಡಿದನು. ದಾವೀದನು ನಾರಿನ ಏ 14
ಫೋದನ್ನು ಧರಿಸಿಕೊಂಡವನಾಗಿ ಯೆಹೋವನ ಸನ್ನಿಧಿ
ಯಲ್ಲಿ ಪೂರ್ಣಾಸಕ್ತಿಯಿಂದ ಕುಣಿದಾಡಿದನು. ಹೀಗೆ 15
ದಾವೀದನೂ ಎಲ್ಲಾ ಇಸ್ರಾಯೇಲ್ಯರೂ ಆರ್ಭಟಿಸು
ತ್ತಾ ತುತೂರಿ ಊದುತ್ತಾ ಯೆಹೋವನ ಮಂಜೂಷ
ವನ್ನು ತಂದರು. ಮಂಜೂಷವು ದಾವೀದನಗರದೊಳಗೆ 16
ಬರುತ್ತಿರುವಾಗ ಸೌಲನ ಮಗಳಾದ ಮೀಕಲಳು ಕಿಟಿಕಿ
ಯಿಂದ ಹಣಿಕಿ ನೋಡಿ ದಾವೀದನು ಯೆಹೋವನ
ಮುಂದೆ ಜಿಗಿಯುತ್ತಾ ಕುಣಿಯುತ್ತಾ ಇರುವದನ್ನು
ಕಂಡು ಮನಸ್ಸಿನಲ್ಲಿ ಅವನನ್ನು ತಿರಸ್ಕರಿಸಿದಳು. ಜನ 17
ರು ಯೆಹೋವನ ಮಂಜೂಷವನ್ನು ತಂದು ದಾವೀದ
ನು ಹಾಕಿಸಿದ ಗುಡಾರದೊಳಗೆ ನಿಯಮಿತ ಸ್ಥಳ
ದಲ್ಲಿಟ್ಟರು; ಆಗ ದಾವೀದನು ಯೆಹೋವನಿಗೋಸ್ಕರ
ಸರ್ವಾಂಗಹೋಮಗಳನ್ನೂ ಸಮಾಧಾನಯಜ್ಞಗಳ
ನ್ನೂ ಸಮರ್ಪಿಸಿದನು. ಇದಾದ ಮೇಲೆ ಅವನು 18
ಸೇನಾಧೀಶ್ವರನಾದ ಯೆಹೋವನ ಹೆಸರಿನಿಂದ ಎಲ್ಲ
ರನ್ನೂ ಆಶೀರ್ವದಿಸಿ ಸಭೆಯಾಗಿ ನೆರೆದುಬಂದಿರುವ 19
ಇಸ್ರಾಯೇಲ್ಯರಲ್ಲಿ ಪ್ರತಿಯೊಬ್ಬ ಗಂಡಸಿಗೂ ಹೆಂಗ
ಸಿಗೂ ಒಂದು ರೊಟ್ಟಿಯನ್ನೂ ಒಂದು ತುಂಡು ಮಾಂಸ
ವನ್ನೂ ದ್ರಾಕ್ಷೇಹಣ್ಣಿನ ಉಂಡೆಯನ್ನೂ ಕೊಡಿಸಿದನು.
ತರುವಾಯ ಜನರೆಲ್ಲರೂ ತಮ್ಮ ತಮ್ಮ ಮನೆಗಳಿಗೆ
ಹೋದರು.

ಅನಂತರ ದಾವೀದನು ತನ್ನ ಮನೆಯವರನ್ನು ಆಶೀ 20
ರ್ವದಿಸುವದಕ್ಕೆ ಹೋದಾಗ ಸೌಲನ ಮಗಳಾದ ಮೀಕ
ಲಳು ಅವನೆದುರಿಗೆ ಬಂದು—ಈ ಹೊತ್ತು ಇಸ್ರಾಯೇ
ಲ್ಯರ ಅರಸನು ಎಂಥ ಗೌರವದಿಂದ ನಡೆದುಕೊಂಡನು!
ನೀಚರಲ್ಲೊಬ್ಬನಂತೆ ತನ್ನ ಜನರ ದಾಸಿಯರ ಮುಂದೆ
ಬೆತ್ತಲೆಯಾಗಿದ್ದನಲ್ಲಾ ಅಂದಳು. ಆಗ ದಾವೀದನು 21
ಆಕೆಗೆ—ಯೆಹೋವನ ಸನ್ನಿಧಿಯಲ್ಲಿಯಷ್ಟೆ; ನಿನ್ನ
ತಂದೆಯನ್ನೂ ಅವನ ಮನೆಯವರೆಲ್ಲರನ್ನೂ ಬಿಟ್ಟು
ನನ್ನನ್ನೇ ಆರಿಸಿಕೊಂಡು ತನ್ನ ಪ್ರಜೆಗಳಾದ ಇಸ್ರಾಯೇ
ಲ್ಯರ ಅರಸನನ್ನಾಗಿ ಮಾಡಿದ ಯೆಹೋವನ ಮುಂದೆ
ಇನ್ನೂ ಕುಣಿದಾಡುವೆನು. ಇದಕ್ಕಿಂತ ಇನ್ನೂ ಹೆಚ್ಚಾಗಿ 22
ತಿರಸ್ಕಾರಹೊಂದುವದಕ್ಕೂ ನನ್ನನ್ನು ಅಲ್ಪನೆಂದು ಭಾವಿ
ಸಿಕೊಳ್ಳುವದಕ್ಕೂ ಸಿದ್ಧನಾಗಿದ್ದೇನೆ. ನೀನು ಹೇಳಿದ
ದಾಸಿಯರಾದರೋ ಹೇಗೂ ನನ್ನನ್ನು ಸನ್ಮಾನಿಸುವರು
ಅಂದನು. ಸೌಲನ ಮಗಳಾದ ಮೀಕಲಳಿಗೆ ಜೀವ 23
ದಿಂದಿರುವ ವರೆಗೂ ಮಕ್ಕಳೇ ಆಗಲಿಲ್ಲ.

1) ಈ ಭಾಷಾಂತರವು ೧ ಪೂರ್ವ. 13. 8ನ್ನು ಅನುಸರಿಸುತ್ತದೆ; ಮೂಲ: ಎಲ್ಲಾ ತುರಾಯಿ ಮರಗಳಿಂದ. 2) ಅಂದರೆ ಉಜ್ಜನ ವಧೆ.

ದಾವೀದನ ರಾಜ್ಯಸಂತಾನಗಳನ್ನು ಶಾಶ್ವತವಾಗಿರಿಸುವೆನೆಂದು
ಯೆಹೋವನು ವಾಗ್ದಾನಮಾಡಿದ್ದು.

7 ಯೆಹೋವನ ಅನುಗ್ರಹದಿಂದ ಸುತ್ತಣ ವೈರಿಗಳ
ಭಯವೆಲ್ಲಾ ತಪ್ಪಿಹೋಗಿ ಅರಸನು ಅರಮನೆಯಲ್ಲಿ
2 ಸಮಾಧಾನದಿಂದ ವಾಸಿಸುತ್ತಿದ್ದಾಗ ಒಂದು ದಿವಸ
ಪ್ರವಾದಿಯಾದ ನಾತಾನನಿಗೆ— ನೋಡು, ನಾನು ದೇವ
ದಾರುಮರದ ಮನೆಯಲ್ಲಿ ವಾಸವಾಗಿದ್ದೇನೆ; ದೇವರ
ಮಂಜೂಷವಾದರೋ ಬಟ್ಟೆಯ ಮನೆಯಲ್ಲಿ ಇರು
3 ತ್ತದೆ ಎಂದು ಹೇಳಿದನು. ನಾತಾನನು ಅರಸನಿಗೆ—
ಆಗಲಿ ಮನಸ್ಸಿದ್ದಂತೆ ಮಾಡು, ಯೆಹೋವನು ನಿನ್ನ
ಸಂಗಡ ಇರುತ್ತಾನೆ ಅಂದನು.
4 ಅದೇ ರಾತ್ರಿಯಲ್ಲಿ ಯೆಹೋವನು ನಾತಾನನಿಗೆ
5 ಆಜ್ಞಾಪಿಸಿದ್ದೇನಂದರೆ— ಹೋಗಿ ನನ್ನ ಸೇವಕನಾದ
ದಾವೀದನಿಗೆ— ನೀನು ನನಗೋಸ್ಕರ ಮನೆಯನ್ನು
6 ಕಟ್ಟಬೇಕೋ? ನಾನು ಇಸ್ರಾಯೇಲ್ಯರನ್ನು ಐಗುಪ್ತ
ದೇಶದಿಂದ ಬರಮಾಡಿದಂದಿನಿಂದ ಇಂದಿನ ವರೆಗೂ
ಮನೆಯಲ್ಲಿ ವಾಸಮಾಡಲಿಲ್ಲ. ಗುಡಾರದಲ್ಲೇ ವಾಸಿ
7 ಸುತ್ತಾ [ಅವರೊಡನೆ] ಸಂಚರಿಸಿದೆನು. ನಾನು ಇಸ್ರಾ
ಯೇಲ್ಯರ ಮಧ್ಯದಲ್ಲಿ ಸಂಚರಿಸುತ್ತಿದ್ದಾಗ ನನ್ನ ಜನ
ರಾದ ಇಸ್ರಾಯೇಲ್ಯರನ್ನು ಪಾಲಿಸುವದಕ್ಕೋಸ್ಕರ
ನನ್ನಿಂದ ನೇಮಿಸಲ್ಪಟ್ಟ ಯಾವ ಕುಲದವರನ್ನಾ
ದರೂ— ನೀವು ನನಗೋಸ್ಕರ ದೇವದಾರುಮರದ ಮನೆ
ಯನ್ನೇಕೆ ಕಟ್ಟಲಿಲ್ಲವೆಂದು ಕೇಳಿದೆನೋ ಎಂಬದಾಗಿ
8 ಯೆಹೋವನು ಅನ್ನುತ್ತಾನೆ ಎಂದು ಹೇಳು. ಇದ
ಲ್ಲದೆ ನೀನು ನನ್ನ ಸೇವಕನಾದ ದಾವೀದನಿಗೆ
ಹೇಳಬೇಕಾದದ್ದೇನಂದರೆ— ಸೇನಾಧೀಶ್ವರನಾದ ಯೆ
ಹೋವನು ಹೀಗನ್ನುತ್ತಾನೆ— ಕುರಿಗಳ ಹಿಂದೆ ಹೋ
ಗುತ್ತಿದ್ದ ನಿನ್ನನ್ನು ಅಡವಿಯಿಂದ ತೆಗೆದುಕೊಂಡು ನನ್ನ
ಪ್ರಜೆಗಳಾದ ಇಸ್ರಾಯೇಲ್ಯರ ಮೇಲೆ ನಾಯಕನನ್ನಾಗಿ
9 ನೇಮಿಸಿದೆನು. ನೀನು ಹೋದಲ್ಲೆಲ್ಲಾ ನಿನ್ನ ಸಂಗಡ
ಇದ್ದೆನು; ನಿನ್ನ ಶತ್ರುಗಳನ್ನೆಲ್ಲಾ ನಿನ್ನೆದುರಿನಲ್ಲಿಯೇ
ಸಂಹರಿಸಿಬಿಟ್ಟೆನು. ಲೋಕದ ಮಹಾಪುರುಷರ ಹೆಸರಿ
10 ನಂತೆ ನಿನ್ನ ಹೆಸರನ್ನೂ ದೊಡ್ಡದುಮಾಡುವೆನು. ನನ್ನ
ಪ್ರಜೆಗಳಾದ ಇಸ್ರಾಯೇಲ್ಯರಿಗೆ ಒಂದು ಸ್ಥಳವನ್ನು
ಕೊಟ್ಟು ಅದರಲ್ಲಿ ಅವರನ್ನು ನೆಲೆಗೊಳಿಸುವೆನು.
ಅವರು ಇನ್ನು ಮೇಲೆ ಯಾವ ಭಯವೂ ಇಲ್ಲದೆ ಅಲ್ಲಿ
11 ವಾಸಿಸುವರು. ಪೂರ್ವಕಾಲದಲ್ಲೂ ನಾನು ನನ್ನ ಜನ
ರಾದ ಇಸ್ರಾಯೇಲ್ಯರ ಮೇಲೆ ನೇಮಿಸಿದ ನ್ಯಾಯಸ್ಥಾಪ
ಕರ ಕಾಲದಿಂದೀಚೆಗೂ ದುಷ್ಟರು ಅವರನ್ನು ಕುಗ್ಗಿಸಿ
ದಂತೆ ಇನ್ನು ಕುಗ್ಗಿಸುವದಿಲ್ಲ. ನೀನು ಶತ್ರುಭಯವಿ
ಲ್ಲದೆ ಸುಖದಿಂದಿರುವಂತೆ ಮಾಡುವೆನು. ಇದಲ್ಲದೆ ಯೆ
ಹೋವನಾದ ನಾನು ನಿನಗೋಸ್ಕರ ಒಂದು ಮನೆಯನ್ನು
12 ಕಟ್ಟುವೆನೆಂದು ಮಾತುಕೊಡುತ್ತೇನೆ. ನಿನ್ನ ಆಯು
ಷ್ಕಾಲವು ಮುಗಿದು ನೀನು ಪಿತೃಗಳ ಬಳಿಗೆ
ಸೇರಿದ ಮೇಲೆ ನಿನ್ನಿಂದ ಹುಟ್ಟುವವನನ್ನು ನೆಲೆಗೊ
13 ಳಿಸಿ ಅವನ ರಾಜ್ಯವನ್ನು ಸ್ಥಿರಪಡಿಸುವೆನು. ಅವನು
ನನ್ನ ಹೆಸರಿಗಾಗಿ ಒಂದು ಮನೆಯನ್ನು ಕಟ್ಟುವನು;
ನಾನು ಅವನ ರಾಜ್ಯಸಿಂಹಾಸನವನ್ನು ನಿರಂತರವಾಗಿ

ಸ್ಥಿರಪಡಿಸುವೆನು. ನಾನು ಅವನಿಗೆ ತಂದೆಯಾಗಿ
ರುವೆನು, ಅವನು ನನಗೆ ಮಗನಾಗಿರುವನು; ಅವನು
ತಪ್ಪುಮಾಡಿದರೆ ಅವನಿಗೆ ಮನುಷ್ಯಶಿಕ್ಷೆಯನ್ನು ಕೊ
ಡುವೆನು, ನರಪುತ್ರರಂತೆ ಅವನನ್ನು ದಂಡಿಸುವೆನು
ಆದರೂ ನನ್ನ ಕೃಪೆಯು ಸೌಲನನ್ನು ಬಿಟ್ಟುಹೋದ
ಹಾಗೆ ಅವನನ್ನು ಬಿಟ್ಟುಹೋಗುವದಿಲ್ಲ. ನಾನು
ಸೌಲನನ್ನು ನಿನ್ನೆದುರಿನಿಂದ ಹೊರಡಿಸಿಬಿಟ್ಟೆನಲ್ಲಾ
ನಿನ್ನ ಮನೆಯೂ ಅರಸುತನವೂ ಸದಾಕಾಲ ಸ್ಥಿರ
ವಾಗಿರುವವು; ನಿನ್ನ ಸಿಂಹಾಸನವು ಶಾಶ್ವತವಾಗಿರು
ವದು ಎಂಬದೇ. ನಾತಾನನು ತನಗುಂಟಾದ ದರ್ಶನದ
ಈ ಎಲ್ಲಾ ಮಾತುಗಳನ್ನು ದಾವೀದನಿಗೆ ಹೇಳಿದನು
ಅನಂತರ ದಾವೀದನು ಹೋಗಿ ಯೆಹೋವನ ಸನ್ನಿ
ಧಿಯಲ್ಲಿ ಕೂತುಕೊಂಡು— ಕರ್ತನೇ, ಯೆಹೋವನೇ
ನಾನೆಷ್ಟರವನು? ನನ್ನ ಮನೆ ಎಷ್ಟರದು? ನೀನು ನನ್ನ
ನ್ನು ಇಲ್ಲಿಯ ವರೆಗೂ ತಂದಿದ್ದೀಯಲ್ಲಾ; ಕರ್ತನೇ
ಯೆಹೋವನೇ, ಇದು ಸಾಲದೆಂದೆಣಿಸಿ ನಿನ್ನ ಸೇವ
ಕನ ಬಹುದೂರಸಂತಾನದ ವಿಷಯದಲ್ಲಿಯೂ ವಾ
ಗ್ದಾನಮಾಡಿದಿ. ಕರ್ತನೇ, ಯೆಹೋವನೇ, ನೀನು
ನರಪ್ರಾಣಿಯನ್ನು ಹೀಗೆ ನಡಿಸಿದ್ದು ಆಶ್ಚರ್ಯ
ಕರ್ತನೇ, ಯೆಹೋವನೇ, ನೀನು ನಿನ್ನ ಸೇವಕ
ನಾದ ದಾವೀದನನ್ನು ಬಲ್ಲೆ; ನಾನು ಇನ್ನೇನು ಹೇಳಲಿ
ನೀನು ನಿನ್ನ ವಾಗ್ದಾನಗಳನ್ನು ನೆರವೇರಿಸುವದಕ್ಕೋ
ಸ್ಕರ ನಿನ್ನ ಇಷ್ಟಾನುಸಾರವಾಗಿ ಈ ಎಲ್ಲಾ ಮಹತ್ಕಾ
ರ್ಯಗಳನ್ನು ನಡಿಸಿ ಅವುಗಳ ಅನುಭವವನ್ನು ನಿನ್ನ
ಸೇವಕನಿಗೆ ಉಂಟುಮಾಡಿದ್ದೀ. ದೇವರೇ, ಯೆಹೋ
ವನೇ, ನೀನೇ ದೊಡ್ಡವನು; ನಿನ್ನ ಸಮಾನರು
ಯಾರೂ ಇಲ್ಲ. ನಾವು ಕೇಳಿದವುಗಳನ್ನೆಲ್ಲಾ ಆಲೋ
ಚಿಸಿ ನೋಡಿದರೆ ನಿನ್ನ ಹೊರತು ದೇವರೇ ಇಲ್ಲವೆಂಬದು
ನಿಶ್ಚಯ. ನಿನ್ನ ಇಸ್ರಾಯೇಲ್‌ಪ್ರಜೆಗೆ ಸಮಾನವಾದ
ಜನಾಂಗವು ಲೋಕದಲ್ಲಿ ಯಾವದಿರುತ್ತದೆ? ನೀನೇ
ಹೋಗಿ ಅದನ್ನು ವಿಮೋಚಿಸಿ ಸ್ವಪ್ರಜೆಯನ್ನಾಗಿ ಮಾಡಿ
ಕೊಂಡು ನಿನ್ನ ಹೆಸರನ್ನು ಪ್ರಸಿದ್ಧಪಡಿಸಿದಿ. ಐಗು
ಪ್ತ್ಯರು ಮೊದಲಾದ ಅನ್ಯಜನರ ಕೈಗೂ ಅವರ ದೇವ
ಗಳ ಕೈಗೂ ಸಿಕ್ಕದಂತೆ ತಪ್ಪಿಸಿ ರಕ್ಷಿಸಿ ಅದರ ಎದುರಿ
ನಲ್ಲೇ ನಿನ್ನ ದೇಶಕ್ಕೋಸ್ಕರ ಭಯಂಕರವಾದ ಮಹ
ತ್ಕಾರ್ಯಗಳನ್ನು ನಡಿಸಿದಿ. ಇಸ್ರಾಯೇಲ್ಯರು ಸದಾ
ಕಾಲವೂ ನಿನ್ನ ಪ್ರಜೆಗಳಾಗಿರಬೇಕೆಂದು ನಿರ್ಣಯಿ
ಸಿದಿ; ಯೆಹೋವನೇ, ನೀನು ಅವರಿಗೆ ದೇವರಾದಿ
ದೇವರೇ, ಯೆಹೋವನೇ, ನೀನು ನಿನ್ನ ಸೇವಕ
ನನ್ನೂ ಅವನ ಮನೆಯನ್ನೂ ಕುರಿತು ಮಾಡಿದ
ವಾಗ್ದಾನವನ್ನು ನೆರವೇರಿಸು. ಅದು ಸದಾ ಸ್ಥಿರವಾ
ಗಿರಲಿ. ಸೇನಾಧೀಶ್ವರನಾದ ಯೆಹೋವನು, ಇಸ್ರಾ
ಯೇಲ್‌ದೇವರು ಎಂಬ ನಿನ್ನ ನಾಮಧೇಯಗಳಿಗೆ
ಸದಾಕಾಲವೂ ಮಹಿಮೆಯುಂಟಾಗಲಿ. ನಿನ್ನ ಸೇವ
ಕನಾದ ದಾವೀದನ ಮನೆಯು ನಿನ್ನ ಸನ್ನಿಧಿಯಲ್ಲಿ
ಸ್ಥಿರವಾಗಿರಲಿ. ಸೇನಾಧೀಶ್ವರನಾದ ಯೆಹೋವನೇ
ಇಸ್ರಾಯೇಲ್‌ದೇವರೇ, ನೀನು ನಿನ್ನ ಸೇವಕನಿಗೆ—
ನಾನು ನಿನಗೋಸ್ಕರ ಮನೆಕಟ್ಟುವೆನೆಂದು ವಾಗ್ದಾನ
ಮಾಡಿದ್ದರಿಂದ ಅವನು ಈ ಪ್ರಕಾರ ನಿನ್ನನ್ನು ಪ್ರಾರ್ಥಿ
ಸುವದಕ್ಕೆ ಧೈರ್ಯಗೊಂಡನು. ಕರ್ತನೇ, ಯೆಹೋ

ವನೇ, ನಿನ್ನ ಸೇವಕನಿಗೆ ಈ ಶ್ರೇಷ್ಠವಾಗ್ದಾನಗಳನ್ನು
ಮಾಡಿದ ನೀನು ದೇವರಾಗಿರುತ್ತೀ; ನಿನ್ನ ವಾಕ್ಯವು
ಸತ್ಯವಾದದ್ದು. ಆದದರಿಂದ ನೀನು ನಿನ್ನ ಸೇವಕನ
ಮನೆಯನ್ನು ಆಶೀರ್ವದಿಸು; ಸದಾಕಾಲವೂ ಅದರ
ಮೇಲೆ ನಿನ್ನ ಕಟಾಕ್ಷವಿರಲಿ. ಕರ್ತನೇ, ಯೆಹೋ
ವನೇ, ವಾಗ್ದಾನಮಾಡಿದವನು ನೀನೇ. ನಿನ್ನ ಆಶೀ
ರ್ವಾದದಿಂದ ನಿನ್ನ ಸೇವಕನ ಮನೆಯಲ್ಲಿ ನಿನ್ನ ಸೌಭಾ
ಗ್ಯವಿರಲಿ ಎಂದನು.

ದಾವೀದನು ನಡಿಸಿದ ಯುದ್ಧಗಳೂ ಅವನ
ಸರದಾರರೂ.

8 ಆನಂತರ ದಾವೀದನು ಹೋಗಿ ಫಿಲಿಷ್ಟಿಯರ ಮೇಲೆ
ಬಿದ್ದು ಅವರನ್ನು ಸೋಲಿಸಿ ಅವರ ರಾಜಧಾನಿಯನ್ನು
ತೆಗೆದುಕೊಂಡು ಆಡಳಿತವನ್ನು ತನ್ನ ಸ್ವಾಧೀನದ
2 ಲ್ಲಿಟ್ಟುಕೊಂಡನು. ಇದಲ್ಲದೆ ಅವನು ಮೋವಾಬ್ಯ
ರನ್ನು ಸೋಲಿಸಿ ಅವರನ್ನು ನೆಲಕ್ಕೆ ಹಾಕಿಸಿ ಹಗ್ಗ
ದಿಂದ ಅಳತೆಮಾಡಿಸಿ ಎರಡು ಪಾಲು ಜನರನ್ನು
ಕೊಲ್ಲಿಸಿ ಒಂದು ಪಾಲು ಉಳಿಸಿದನು. ಮೋವಾ
ಬ್ಯರು ದಾವೀದನ ದಾಸರಾಗಿ ಅವನಿಗೆ ಕಪ್ಪಕೊಡ
ಬೇಕಾಯಿತು.
3 ದಾವೀದನು ಯೂಫ್ರೇಟೀಸ್ ನದಿಯ ಸುತ್ತಣ
ಪ್ರದೇಶದಲ್ಲಿ ತನ್ನ ರಾಜ್ಯಾಧಿಕಾರವನ್ನು ಸ್ಥಾಪಿಸುವ
ದಕ್ಕೆ [1]ಹೋಗುತ್ತಿದ್ದ ರೆಹೋಬನ ಮಗನೂ ಚೋ
ಬದ ಅರಸನೂ ಆದ ಹದದೆಜೆರನನ್ನು ಸೋಲಿಸಿ
4 ಅವನ ಸಾವಿರದ ಏಳುನೂರು ಮಂದಿ ರಾಹುತರನ್ನೂ
ಇಪ್ಪತ್ತುಸಾವಿರ ಮಂದಿ ಕಾಲಾಳುಗಳನ್ನೂ ಸೆರೆಹಿಡಿದು
ನೂರು ಕುದುರೆಗಳನ್ನಿಟ್ಟುಕೊಂಡು ಮಿಕ್ಕಾದ ಕುದು
ರೆಗಳ ಹಿಂಗಾಲಿನ ನರಗಳನ್ನು ಕೊಯ್ದುಬಿಟ್ಟನು.
5 ದಮಸ್ಕದ ಅರಾಮ್ಯರು ಚೋಬದ ಅರಸನಾದ ಹದ
ದೆಜೆರನನ್ನು ರಕ್ಷಿಸಬಂದಾಗ ದಾವೀದನು ಅವರನ್ನೂ
ಸೋಲಿಸಿ ಅವರಲ್ಲಿ ಇಪ್ಪತ್ತೆರಡು ಸಾವಿರ ಜನರನ್ನು
6 ಹತಿಸಿದನು. ದಾವೀದನು ದಮಸ್ಕದ ಅರಾಮ್
ದೇಶದಲ್ಲಿ ಕಾವಲುದಂಡನ್ನಿರಿಸಿದನು. ಹೀಗೆ ಅರಾ
ಮ್ಯರು ಅವನ ಸೇವಕರಾಗಿ ಅವನಿಗೆ ಕಪ್ಪಕೊಡು
ವವರಾದರು. ಯೆಹೋವನ ಅನುಗ್ರಹದಿಂದ ದಾವೀ
7 ದನಿಗೆ ಎಲ್ಲಿ ಹೋದರೂ ಜಯದೊರಕಿತು. ಅವನು
ಹದದೆಜೆರನ ಸೇವಕರಿಗಿದ್ದ ಬಂಗಾರದ ಗುರಾಣಿ
ಗಳನ್ನು ಕಿತ್ತುಕೊಂಡು ಯೆರೂಸಲೇಮಿಗೆ ಒಯ್ದನು.
8 ಇದಲ್ಲದೆ ಹದದೆಜೆರನ ಪಟ್ಟಣಗಳಾದ ಬೆಟಹದಿಂದ
ಲೂ ಬೇರೋತೈಯಿಂದಲೂ ಬಹಳ ತಾಮ್ರವನ್ನು
ತೆಗೆದುಕೊಂಡುಹೋದನು.
9 ದಾವೀದನು ಹದದೆಜೆರನ ಸೈನ್ಯವನ್ನು ಸೋಲಿಸಿ
ದನೆಂಬ ವರ್ತಮಾನವು ಹಮಾತಿನ ಅರಸನಾದ
10 ತೋಯಿಗೆ ಮುಟ್ಟಿತು. (ತೋಯಿಗೂ ಹದದೆಜೆರನಿಗೂ
ವಿರೋಧವಿತ್ತು.) ದಾವೀದನು ಹದದೆಜೆರನ ಮೇಲೆ
ಬಿದ್ದು ಅವನನ್ನು ಸೋಲಿಸಿದದರಿಂದ ತೋಯು ದಾವೀ
ದನನ್ನು ವಂದಿಸುವದಕ್ಕೂ ಹರಸುವದಕ್ಕೂ ತನ್ನ
ಮಗನಾದ ಯೋರಾಮನನ್ನು ಕಳುಹಿಸಿದನು. ಇವನು
ಬರುವಾಗ ದಾವೀದನಿಗೋಸ್ಕರ ತಾಮ್ರ ಬೆಳ್ಳಿ ಬಂಗಾ
ರದ ಪಾತ್ರೆಗಳನ್ನು ತಂದನು. ಅರಸನಾದ ದಾವೀದನು 11
ಇವುಗಳನ್ನೂ ತನ್ನಿಂದ ಅಪಜಯಹೊಂದಿದ ಅರಾ
ಮ್ಯರು, ಮೋವಾಬ್ಯರು, ಅಮ್ಮೋನಿಯರು, ಫಿಲಿ
ಷ್ಟಿಯರು, ಅಮಾಲೇಕ್ಯರು ಎಂಬೀ ಸುತ್ತಣ ಜನಾಂಗ
ಗಳಿಂದಲೂ ಚೋಬದ ಅರಸನಾದ ರೆಹೋಬನ ಮಗ
ಹದದೆಜೆರನಿಂದಲೂ ಪಡಕೊಂಡ ಬೆಳ್ಳಿಬಂಗಾರ 12
ವನ್ನೂ ಯೆಹೋವನಿಗೋಸ್ಕರ ಪ್ರತಿಷ್ಠಿಸಿದನು.
ಇದಲ್ಲದೆ ದಾವೀದನು ಹೋಗಿ ಉಪ್ಪಿನ ತಗ್ಗಿನಲ್ಲಿ 13
ಎದೋಮ್ಯರ ಹದಿನೆಂಟು ಸಾವಿರ ಮಂದಿ ಸೈನಿಕ
ರನ್ನು ಹೊಡೆದು ಬಂದು ಅಂದಿನಿಂದ ಬಹುಖ್ಯಾತಿ
ವಂತನಾದನು. ಅವನು ಎದೋಮಿನಲ್ಲೆಲ್ಲಾ ಕಾವಲು 14
ದಂಡುಗಳನ್ನಿರಿಸಿದನು; ಎದೋಮ್ಯರೆಲ್ಲರೂ ದಾವೀ
ದನ ದಾಸರಾದರು. ಯೆಹೋವನ ಅನುಗ್ರಹದಿಂದ
ದಾವೀದನಿಗೆ ಎಲ್ಲಿ ಹೋದರೂ ಜಯವುಂಟಾಯಿತು.
ದಾವೀದನು ಇಸ್ರಾಯೇಲ್ಯರೆಲ್ಲರ ಅರಸನಾಗಿ ಎಲ್ಲಾ 15
ಪ್ರಜೆಗಳಿಗೂ ಧರ್ಮತಪ್ಪದೆ ನ್ಯಾಯತೀರಿಸುತ್ತಿದ್ದನು.
ಚೆರೂಯಳ ಮಗನಾದ ಯೋವಾಬನು ಅವನ 16
ಸೇನಾಪತಿಯೂ ಅಹೀಲೂದನ ಮಗನಾದ ಯೆಹೋ
ಷಾಫಾಟನು ಮಂತ್ರಿಯೂ ಆಗಿದ್ದರು. ಅಹೀಟೂ 17
ಬನ ಮಗನಾದ ಚಾದೋಕನೂ ಅಹೀಮೆಲೆಕನ ಮಗ
ನಾದ ಎಬ್ಯಾತಾರನೂ ಅವನ ಯಾಜಕರು; ಸೆರಾ
ಯನು ಲೇಖಕನು. ಯೆಹೋಯಾದಾವನ ಮಗ 18
ನಾದ ಬೆನಾಯನು ಕೆರೇತ್ಯ, ಪೆಲೇತ್ಯ ಎಂಬ ಕಾ
ವಲು ದಂಡುಗಳ ಮುಖ್ಯಸ್ಥನು. ದಾವೀದನ ಮಕ್ಕಳೂ
ಯಾಜಕರಾಗಿದ್ದರು.

ದಾವೀದನು ಯೋನಾತಾನನ ಮಗನಿಗೆ ದಯೆ
ತೋರಿಸಿದ್ದು.

9 [ಒಂದು ದಿವಸ] ದಾವೀದನು — ಸೌಲನ ಮನೆಯ
ವರಲ್ಲಿ ಯಾರಾದರೂ ಉಳಿದಿರುತ್ತಾರೋ? ನಾನು
ಅವರಿಗೆ ಯೋನಾತಾನನ ಸಲುವಾಗಿ ದಯೆತೋರಿಸ
ಬೇಕೆಂದಿರುತ್ತೇನೆ ಅನ್ನಲು ಸೌಲನ ಮನೆಯಲ್ಲಿ 2
ದಾಸನಾಗಿದ್ದ ಚೀಬನೆಂಬ ಒಬ್ಬ ಮನುಷ್ಯನನ್ನು
ಕರಕೊಂಡುಬಂದರು. ಅರಸನು ಅವನನ್ನು — ನೀನು
ಚೀಬನೋ ಎಂದು ಕೇಳಲು ಅವನು — ನಿನ್ನ ಸೇವಕ
ನಾದ ನಾನು ಚೀಬನೇ ಎಂದು ಉತ್ತರಕೊಟ್ಟ
ನು. ಅರಸನು ಅವನಿಗೆ — ಸೌಲನ ಕುಟುಂಬದವರಲ್ಲಿ 3
ಯಾರಾದರೂ ಉಳಿದಿದ್ದರೆ ಹೇಳು; ನಾನು ದೇವ
ರನ್ನು ನೆನಸಿ ಅವರಿಗೆ ದಯೆತೋರಿಸುತ್ತೇನೆ ಅಂದನು.
ಆಗ ಚೀಬನು ಅರಸನಿಗೆ — ಯೋನಾತಾನನಿಗೆ ಎರ
ಡು ಕಾಲೂ ಕುಂಟಾದ ಒಬ್ಬ ಮಗನಿರುತ್ತಾನೆ ಎಂದು
ಹೇಳಿದನು. ಅರಸನು — ಎಲ್ಲಿರುತ್ತಾನೆ ಎಂದು ಅವ 4
ನನ್ನು ಕೇಳಲು ಅವನು — ಲೋದೆಬಾರಿನಲ್ಲಿರುವ
ಅಮ್ಮೀಯೇಲನ ಮಗನಾದ ಮಾಕೀರನ ಮನೆಯಲ್ಲಿ
ರುತ್ತಾನೆ ಎಂದು ಉತ್ತರಕೊಟ್ಟನು. ಕೂಡಲೆ ಅರಸನು 5

1) ಅಥವಾ: ಹೋದಾಗ.

ದೂತರನ್ನು ಕಳುಹಿಸಿ ಅವನನ್ನು ಲೋದೆಬಾರಿನಲ್ಲಿದ್ದ
ಅಮ್ಮಿಯೇಲನ ಮಗನಾದ ಮಾಕೀರನ ಮನೆಯಿಂದ
6 ಕರಿಸಿದನು. ಸೌಲನ ಮೊಮ್ಮಗನೂ ಯೋನಾತಾನನ
ಮಗನೂ ಆದ ಮೆಫೀಬೋಶೆತನು ಬಂದಾಗ ದಾವೀ
ದನಿಗೆ ಸಾಷ್ಟಾಂಗನಮಸ್ಕಾರಮಾಡಿದನು. ದಾವೀ
ದನು — ಮೆಫೀಬೋಶೆತನೇ ಅನ್ನಲು ಅವನು — ನಿನ್ನ
7 ಸೇವಕನಾದ ನಾನು ಇಲ್ಲಿದ್ದೇನೆ ಎಂದನು. ಆಗ ದಾ
ವೀದನು ಅವನಿಗೆ — ಹೆದರಬೇಡ; ನಿನ್ನ ತಂದೆಯಾದ
ಯೋನಾತಾನನನ್ನು ನೆನಸಿ ನಿನಗೆ ದಯೆತೋರಿಸು
ತ್ತೇನೆ. ನಿನ್ನ ಅಜ್ಜನಾದ ಸೌಲನ ಭೂಮಿಯನ್ನೆಲ್ಲಾ
ನಿನಗೆ ಹಿಂದಕ್ಕೆ ಕೊಡುತ್ತೇನೆ; ಮತ್ತು ನೀನು ಪ್ರತಿದಿನ
ನನ್ನ ಪಂಕ್ತಿಯಲ್ಲಿ ಊಟಮಾಡಬೇಕು ಎಂದು ಹೇಳಿ
8 ದನು. ಮೆಫೀಬೋಶೆತನು ಇದನ್ನು ಕೇಳಿ ಅರಸ
ನಿಗೆ ಸಾಷ್ಟಾಂಗನಮಸ್ಕಾರಮಾಡಿ — ನೀನು ಸತ್ತ
ನಾಯಿಯಂತಿರುವ ನನ್ನನ್ನು ಲಕ್ಷಿಸುವ ಹಾಗೆ ನಿನ್ನ
9 ದಾಸನಾದ ನಾನು ಎಷ್ಟರವನು ಅಂದನು. ಅನಂತರ
ದಾವೀದನು ಸೌಲನ ಸೇವಕನಾದ ಚೀಬನನ್ನು ಕರೆದು
ಅವನಿಗೆ — ನಿನ್ನ ಯಜಮಾನನಾದ ಸೌಲನಿಗೂ ಅವನ
ಕುಟುಂಬದವರಿಗೂ ಇದ್ದದ್ದನ್ನೆಲ್ಲಾ ಅವನ ಮೊಮ್ಮಗ
10 ನಿಗೆ ಕೊಟ್ಟಿರುತ್ತೇನೆ. ನೀನೂ ನಿನ್ನ ಮಕ್ಕಳೂ ದಾಸ
ರೂ ನಿನ್ನ ಯಜಮಾನನ ಮೊಮ್ಮಗನಿಗೋಸ್ಕರ ಆ
ಭೂಮಿಯನ್ನು ವ್ಯವಸಾಯಮಾಡಿ ಅದರ ಬೆಳೆಯ
ನ್ನು ಇವನ ಮನೆಯವರ ಅಶನಾರ್ಥವಾಗಿ ತಂದು
ಕೊಡಬೇಕು. ಇವನಿಗಾದರೋ ನಿತ್ಯವೂ ನನ್ನ ಪಂಕ್ತಿ
ಯಲ್ಲಿ ಭೋಜನವಾಗುವದು ಎಂದು ಹೇಳಿದನು.
ಚೀಬನಿಗೆ ಹದಿನೈದು ಮಂದಿ ಗಂಡುಮಕ್ಕಳೂ ಇಪ್ಪ
11 ತ್ತು ಮಂದಿ ಸೇವಕರೂ ಇದ್ದರು. ಚೀಬನು ಅರಸ
ನಿಗೆ — ಒಡೆಯನಾದ ಅರಸನ ಅಪ್ಪಣೆಯಂತೆ ಸೇವ
ಕನು ನಡೆಯುವನು ಎಂದು ಉತ್ತರಕೊಟ್ಟನು. ಈ
ಪ್ರಕಾರ ಮೆಫೀಬೋಶೆತನು ರಾಜಪುತ್ರರಂತೆ 1)ಅರಸನ
12 ಪಂಕ್ತಿಯಲ್ಲಿ ಊಟಮಾಡುವವನಾದನು. ಅವನಿಗೆ
ಮೀಕನೆಂಬೊಬ್ಬ ಚಿಕ್ಕ ಮಗನಿದ್ದನು; ಚೀಬನ
13 ಮನೆಯವರೆಲ್ಲರೂ ಅವನ ಸೇವಕರು. ಮೆಫೀಬೋ
ಶೆತನಿಗೆ ಪ್ರತಿದಿನವೂ ರಾಜಪಂಕ್ತಿಯಲ್ಲಿ ಊಟವಾಗು
ತ್ತಿದ್ದದರಿಂದ ಅವನು ಯೆರೂಸಲೇಮಿನಲ್ಲೇ ವಾಸಿಸಿ
ದನು. ಅವನ ಎರಡು ಕಾಲುಗಳೂ ಕುಂಟಾಗಿದ್ದವು.

### ದಾವೀದನು ಅಮ್ಮೋನಿಯರ ಮತ್ತು ಅರಾಮ್ಯರ ಸಂಗಡ ಯುದ್ಧಮಾಡಿದ್ದು.

10 ಇದಾದನಂತರ ಅಮ್ಮೋನಿಯರ ಅರಸನು ಸತ್ತ
ನು. ಅವನಿಗೆ ಬದಲಾಗಿ ಅವನ ಮಗನಾದ ಹಾನೂ
2 ನನು ಅರಸನಾದನು. ದಾವೀದನು — ನಾಹಾಷನು
ನನಗೆ ದಯೆತೋರಿಸಿದ್ದರಿಂದ ನಾನೂ ಅವನ ಮಗ
ನಾದ ಹಾನೂನನಿಗೆ ದಯೆತೋರಿಸುವೆನು ಅಂದು
ಕೊಂಡು ಪಿತೃಶೋಕದಲ್ಲಿದ್ದ ಹಾನೂನನನ್ನು ಸಂತೈ
ಸುವದಕ್ಕೋಸ್ಕರ ತನ್ನ ಸೇವಕರನ್ನು ಕಳುಹಿಸಿದನು.
ದಾವೀದನ ಸೇವಕರು ಅಮ್ಮೋನಿಯರ ದೇಶಕ್ಕೆ ಬಂದಾ
ಗ ಅಲ್ಲಿನ ಪ್ರಭುಗಳು ತಮ್ಮ ಒಡೆಯನಾದ ಹಾನೂ
ನಿಗೆ — ದಾವೀದನು ನಿನ್ನ ಬಳಿಗೆ ಸಂತೈಸುವವರನ್ನು
ಕಳುಹಿಸಿದ್ದರಿಂದ ಅವನು ನಿನ್ನ ತಂದೆಯನ್ನು ಸನ್ಮಾ
ಸುವವನಾಗಿದ್ದಾನೆಂದು ತಿಳಿಯುತ್ತೀಯೋ? ಪಟ್ಟ
ವನ್ನು ಸಂಚರಿಸಿ ನೋಡಿ ಅದನ್ನು ಸ್ವಾಧೀನಮಾ
ಕೊಳ್ಳಬೇಕೆಂದು ತನ್ನ ಆಳುಗಳನ್ನು ಕಳುಹಿಸಿದ್ದಾ
ಎಂದು ಹೇಳಿದರು. ಆದದರಿಂದ ಹಾನೂನನು ದಾವೀ
ದನ ಸೇವಕರನ್ನು ಹಿಡಿಸಿ ಗಡ್ಡದ ಅರ್ಧಭಾಗವನ್ನು
ಬೋಳಿಸಿ ಅವರ ನಿಲುವಂಗಿಗಳನ್ನು ಕುಂಡಿಯಿಂ
ಕೆಳಗಿನ ಭಾಗವನ್ನೆಲ್ಲಾ ಕತ್ತರಿಸಿ ಕಳುಹಿಸಿಬಿಟ್ಟನು
ಅವರು ಈ ವರ್ತಮಾನವನ್ನು ದಾವೀದನಿಗೆ ಹೇ
ಕಳುಹಿಸಿದಾಗ ಅವನು ಬಹಳವಾಗಿ ಅಪಮಾನಹೊಂ
ದ ಅವರಿಗೆ ಆಳುಗಳ ಮುಖಾಂತರವಾಗಿ — ನಿಮ
ಗಡ್ಡ ಬೆಳೆಯುವ ವರೆಗೆ ನೀವು ಯೆರಿಕೋವಿನಲ್ಲಿದ್ದ
ಅನಂತರ ಬನ್ನಿರಿ ಎಂದು ಹೇಳಿಸಿದನು.

ತಾವು ದಾವೀದನಿಗೆ ಅಸಹ್ಯರಾದೆವೆಂದು ಅಮ್ಮೋ
ನಿಯರು ತಿಳಿದು ಹಣಕೊಟ್ಟು ಬೇತ್‌ರೆಹೋಬ್
ಚೋಬಾ ಎಂಬ ಪಟ್ಟಣಗಳಿಂದ ಅರಾಮ್ಯರ ಇಪ್ಪತ್ತು
ಸಾವಿರ ಮಂದಿ ಕಾಲಾಳುಗಳನ್ನೂ ಮಾಕದ ರಾ
ನಿಂದ ಸಾವಿರ ಮಂದಿ ಸೈನಿಕರನ್ನೂ ಟೋಬ್‌ದೇ
ದಿಂದ ಹನ್ನೆರಡುಸಾವಿರ ಮಂದಿ ದಂಡಾಳುಗಳನ್ನೂ
ತರಿಸಿದರು. ಈ ಸುದ್ದಿಯು ದಾವೀದನಿಗೆ ಮುಟ್ಟಿದಾಗ
ಅವನು ಯೋವಾಬನನ್ನೂ ಎಲ್ಲಾ ಶೂರಸೈನಿಕರನ್ನೂ
ಕಳುಹಿಸಿದನು. ಕೂಡಲೆ ಅಮ್ಮೋನಿಯರು ಹೊರ
ಬಂದು ಊರಬಾಗಲಿನ ಬಳಿಯಲ್ಲಿ ವ್ಯೂಹಕಟ್ಟಿದರು
ಚೋಬಾ, ರೆಹೋಬ್ ಎಂಬ ಸ್ಥಳಗಳ ಅರಾಮ್ಯರು
ಟೋಬ್ ಮಾಕಾ ದೇಶಗಳವರೂ ಪ್ರತ್ಯೇಕವಾ
ಮೈದಾನದಲ್ಲಿ ಇಳುಕೊಂಡಿದ್ದರು. ಯೋವಾಬನು
ತನ್ನ ಮುಂದೆಯೂ ಹಿಂದೆಯೂ ಯುದ್ಧ ಪ್ರಾರಂಭ
ವಾದದ್ದನ್ನು ಕಂಡು ಇಸ್ರಾಯೇಲ್ಯರಲ್ಲಿ ಶ್ರೇಷ್ಠರಾ
ಸೈನಿಕರನ್ನು ಆರಿಸಿಕೊಂಡು ಅವರನ್ನು ಅರಾಮ್ಯ
ರಿಗೆ ವಿರೋಧವಾಗಿ ನಿಲ್ಲಿಸಿದನು. ಉಳಿದ ಜನರನ್ನು
ತನ್ನ ತಮ್ಮನಾದ ಅಬೀಷೈಯ ವಶಕ್ಕೆ ಕೊಟ್ಟು ಅ
ನಿಗೆ — ಅರಾಮ್ಯರು ನನ್ನನ್ನು ಸೋಲಿಸುವಂತೆ ಕಂಡ
ನೀನು ನನ್ನ ಸಹಾಯಕ್ಕೆ ಬಾ; ಅಮ್ಮೋನಿಯರು ನಿನ್ನ
ನ್ನು ಸೋಲಿಸುವಂತೆ ಕಂಡರೆ ನಾನು ನಿನ್ನ ಸಹಾಯ
ಕ್ಕೆ ಬರುವೆನು; ಧೈರ್ಯದಿಂದಿರು, ನಮ್ಮ ಜನರಿಗೋ
ಸ್ಕರವೂ ನಮ್ಮ ದೇವರ ಪಟ್ಟಣಗಳಿಗೋಸ್ಕರವೂ ನಮ್ಮ
ಪೌರುಷವನ್ನು ತೋರಿಸೋಣ; ಯೆಹೋವನು ತನಗ
ಸರಿಕಾಣುವಂಥದನ್ನು ಮಾಡಲಿ ಎಂದು ಹೇಳಿ ಅ
ನನ್ನು ಅಮ್ಮೋನಿಯರಿಗೆ ವಿರೋಧವಾಗಿ ಕಳುಹಿಸಿ
ದನು. ಯೋವಾಬನೂ ಅವನ ಜನರೂ ಅರಾಮ್ಯರಿಗೆ
ವಿರೋಧವಾಗಿ ಯುದ್ಧ ಪ್ರಾರಂಭಿಸಿದಾಗ ಅರಾಮ್ಯರು
ಓಡಿಹೋದರು. ಇವರು ಓಡಿಹೋಗುವದನ್ನು ಅಮ್ಮೋ
ನಿಯರು ಕಂಡು ಅವರೂ ಅಬೀಷೈಯ ಎದುರಿನಿಂದ
ಓಡಿಹೋಗಿ ಪಟ್ಟಣವನ್ನು ಹೊಕ್ಕರು. ಯೋವಾಬನು
ಅಮ್ಮೋನಿಯರೊಡನೆ ಯುದ್ಧಮಾಡುವದನ್ನು ಬಿಟ್ಟು
ಯೆರೂಸಲೇಮಿಗೆ ಹೋದನು.

1) ಪಾಠಾಂತರ: ನನ್ನ.

15 ಅರಾಮ್ಯರಿಗೆ ತಮ್ಮ ಸೈನ್ಯವು ಇಸ್ರಾಯೇಲ್ಯರಿಂದ
ಅಪಜಯಹೊಂದಿತೆಂದು ಗೊತ್ತಾದಾಗ ಅವರೆಲ್ಲರೂ
16 ಕೂಡಿಬಂದರು. ಹದದೆಜೆರನು ಯೂಫ್ರೇಟೀಸ್
ನದಿಯ ಆಚೆಯಲ್ಲಿದ್ದ ಅರಾಮ್ಯರನ್ನು ಕರೇಕಳುಹಿಸಿ
ದನು; ಅವರು ಹೇಲಾಮಿಗೆ ಬಂದರು. ಹದದೆಜೆರನ
ಸೇನಾಪತಿಯಾದ ಶೋಬಕನು ಅವರ ನಾಯಕನಾ
17 ದನು. ಈ ಸುದ್ದಿಯು ದಾವೀದನಿಗೆ ಮುಟ್ಟಿದಾಗ
ಅವನು ಇಸ್ರಾಯೇಲ್ಯರೆಲ್ಲರನ್ನೂ ಕೂಡಿಸಿಕೊಂಡು
ಯೊರ್ದನ್‌ಹೊಳೆದಾಟಿ ಹೇಲಾಮಿಗೆ ಬಂದನು. ಅರಾ
ಮ್ಯರು ವ್ಯೂಹಕಟ್ಟಿ ದಾವೀದನೊಡನೆ ಯುದ್ಧಕ್ಕೆ
18 ನಿಂತಾಗ ಇಸ್ರಾಯೇಲ್ಯರ ಮುಂದೆ ಸೋತು ಓಡಿ
ಹೋದರು; ದಾವೀದನು ಅರಾಮ್ಯರ ಏಳುನೂರು
ರಥಗಳನ್ನು ಹಾಳುಮಾಡಿ ನಾಲ್ವತ್ತುಸಾವಿರ ಮಂದಿ
ರಾಹುತರನ್ನು ಹತಿಸಿಬಿಟ್ಟನು; ಸೇನಾಪತಿಯಾದ ಶೋ
19 ಬಕನು ಗಾಯಹೊಂದಿ ಅಲ್ಲೇ ಸತ್ತನು. ಹದದೆಜೆರ
ನಿಗೆ ದಾಸರಾಗಿದ್ದ ಅರಸರೆಲ್ಲರೂ ಇಸ್ರಾಯೇಲ್ಯರ
ಮುಂದೆ ತಮ್ಮ ಕೈಸಾಗದೆಂದು ತಿಳಿದು ಅವರೊಡನೆ
ಒಪ್ಪಂದಮಾಡಿಕೊಂಡು ಅವರ ದಾಸರಾದರು. ಅಂದಿ
ನಿಂದ ಅರಾಮ್ಯರು ಅಮ್ಮೋನಿಯರಿಗೆ ಸಹಾಯಮಾಡು
ವದಕ್ಕೆ ಧೈರ್ಯಗೊಳ್ಳಲಿಲ್ಲ.

ದಾವೀದನ ನೀಚಕೃತ್ಯಗಳು.

11 ಮರುವರುಷ ಅರಸನು ಯುದ್ಧಕ್ಕೆ ಹೊರಡುವ
ಸಮಯದಲ್ಲಿ[1]) ದಾವೀದನು ಯೋವಾಬನನ್ನೂ ತನ್ನ
ಸೇವಕರನ್ನೂ ಎಲ್ಲಾ ಇಸ್ರಾಯೇಲ್ಯರನ್ನೂ ಯು
ದ್ಧಕ್ಕೆ ಕಳುಹಿಸಿದನು. ಇವರು ಹೋಗಿ ಅಮ್ಮೋನಿಯರ
ಪ್ರಾಂತಗಳನ್ನು ಹಾಳುಮಾಡಿ ರಬ್ಬಕ್ಕೆ ಮುತ್ತಿಗೆಹಾಕಿ
ದರು. ದಾವೀದನು ಯೆರೂಸಲೇಮಿನಲ್ಲಿಯೇ ಇದ್ದನು.
2 ಅವನು ಒಂದು ದಿವಸ ಸಂಜೇ ಹೊತ್ತಿನಲ್ಲಿ ಮಂಚ
ದಿಂದೆದ್ದು ಅರಮನೆಯ ಮಾಳಿಗೆಯ ಮೇಲೆ ತಿರು
ಗಾಡುತ್ತಿರುವಾಗ ಅಲ್ಲಿಂದ ಬಹುಸುಂದರಿಯಾದ ಒಬ್ಬ
3 ಸ್ತ್ರೀ ಸ್ನಾನಮಾಡುವದನ್ನು ಕಂಡನು. ಕೂಡಲೆ ದಾ
ವೀದನು ಒಬ್ಬನನ್ನು ಕರೆದು ಆ ಸ್ತ್ರೀ ಯಾರೆಂದು
ಕೇಳಲು ಅವನು—ಆಕೆಯು ಎಲೀಯಾಮನ ಮಗ
ಳೂ ಹಿತ್ತಿಯನಾದ ಊರೀಯನ ಹೆಂಡತಿಯೂ ಆಗಿ
ರುವ ಬತ್ಷೆಬೆಯಲ್ಲವೋ ಎಂದು ಉತ್ತರಕೊಟ್ಟನು.
4 ಆಗ ದಾವೀದನು ಆಗಲೇ ಋತುಸ್ನಾನಮಾಡಿಕೊಂಡಿ
ದ್ದ ಆಕೆಯನ್ನು ದೂತರ ಮುಖಾಂತರವಾಗಿ ಕರೇ
ಕಳುಹಿಸಿದನು; ಆಕೆಯು ಬರಲು ಆಕೆಯನ್ನು ಕೂಡಿ
ದನು. ಅನಂತರ ಆಕೆಯು ತನ್ನ ಮನೆಗೆ ಹೋದಳು.
5 ಆಕೆಯು ತಾನು ಗರ್ಭಧರಿಸಿದ್ದು ಗೊತ್ತಾದಾಗ ದಾ
ವೀದನಿಗೆ ವರ್ತಮಾನಕಳುಹಿಸಿದಳು.
6 ಒಡನೆ ದಾವೀದನು ದೂತರ ಮುಖಾಂತರವಾಗಿ
ಯೋವಾಬನಿಗೆ— ಹಿತ್ತಿಯನಾದ ಊರೀಯನನ್ನು ನನ್ನ
ಬಳಿಗೆ ಕಳುಹಿಸು ಎಂದು ಆಜ್ಞಾಪಿಸಿದನು. ಅವನು
7 ಊರೀಯನನ್ನು ಕಳುಹಿಸಿದನು. ಊರೀಯನು
ಬಂದಾಗ ದಾವೀದನು—ಯೋವಾಬನೂ ಸೈನ್ಯದವ
ರೂ ಹೇಗಿರುತ್ತಾರೆ? ಯುದ್ಧವು ಹೇಗೆ ನಡೆದದೆ
ಎಂದು ವಿಚಾರಿಸಿದನಂತರ ಅವನಿಗೆ—ಮನೆಗೆ ಹೋಗಿ 8
ಕೈಕಾಲುತೊಳೆದುಕೋ ಎಂದು ಹೇಳಿದನು. ಊರೀ
ಯನು ಅರಮನೆಯಿಂದ ಹೊರಟ ಕೂಡಲೆ ಅವನ
ಹಿಂದೆಯೇ ಅರಸನ ಭೋಜನಪದಾರ್ಥಗಳೂ ಹೋದ
ವು. ಆದರೆ ಊರೀಯನು ತನ್ನ ಮನೆಗೆ ಹೋಗದೆ 9
ಅರಸನ ಸೇವಕರೊಡನೆ ಅರಮನೆಯ ಬಾಗಲಲ್ಲೇ
ಮಲಗಿಕೊಂಡನು. ಊರೀಯನು ತನ್ನ ಮನೆಗೆ ಹೋ 10
ಗಲಿಲ್ಲ ಎಂಬ ವರ್ತಮಾನವು ದಾವೀದನಿಗೆ ಮುಟ್ಟಿ
ದಾಗ ಇವನು ಅವನಿಗೆ—ನೀನು ಪ್ರಯಾಣಮಾಡಿ
ಕೊಂಡು ಬಂದಿಯಲ್ಲಾ; ಯಾಕೆ ಮನೆಗೆ ಹೋಗ
ಲಿಲ್ಲ ಅಂದನು. ಆದಕ್ಕೆ ಊರೀಯನು — ಒಡಂಬ 11
ಡಿಕೆಯ ಮಂಜೂಷವೂ ಇಸ್ರಾಯೇಲ್ಯರೂ ಯೆಹೂ
ದ್ಯರೂ ಗುಡಾರಗಳಲ್ಲಿ ವಾಸವಾಗಿದ್ದಾರೆ. ನನ್ನ ಒಡೆ
ಯನಾದ ಯೋವಾಬನೂ ಅವನ ಸೇವಕರೂ ಬೈಲಿ
ನಲ್ಲಿ ಪಾಳೆಯಮಾಡಿಕೊಂಡಿದ್ದಾರೆ. ಹೀಗಿರುವಲ್ಲಿ
ನಾನು ನನ್ನ ಮನೆಗೆ ಹೋಗಿ ಉಂಡು ಕುಡಿದು ಹೆಂಡ
ತಿಯೊಡನೆ ಮಲಗಿಕೊಳ್ಳುವದು ಹೇಗೆ? ನಿನ್ನಾಣೆ,
ನಿನ್ನ ಜೀವದ ಆಣೆ, ನಾನು ಇಂಥದನ್ನು ಮಾಡು
ವದೇ ಇಲ್ಲ ಎಂದು ಉತ್ತರಕೊಟ್ಟನು. ಆಗ ದಾವೀ 12
ದನು ಅವನಿಗೆ— ನೀನು ಈ ಹೊತ್ತು ಇಲ್ಲೇ ಇರು,
ನಾಳೆ ನಿನ್ನನ್ನು ಕಳುಹಿಸುತ್ತೇನೆ ಎಂದು ಆಜ್ಞಾಪಿಸಿ
ದನು. ಆದದರಿಂದ ಊರೀಯನು ಆ ದಿನ ಯೆರೂ
ಸಲೇಮಿನಲ್ಲೇ ಇದ್ದನು. ಮರುದಿನ ದಾವೀದನು 13
ಅವನನ್ನು ಅನ್ನಪಾನತೆಗೆದುಕೊಳ್ಳಬೇಕೆಂದು ತನ್ನ
ಮನೆಗೆ ಕರಕೊಂಡುಹೋಗಿ ಮತ್ತನನ್ನಾಗಿ ಮಾಡಿ
ದನು. ಆದರೆ ಆ ರಾತ್ರಿಯಲ್ಲಿಯೂ ಅವನು ಹೋಗಿ
ತನ್ನ ಯಜಮಾನನ ಸೇವಕರ ಹತ್ತಿರ ಹಾಸಿಗೆಹಾಸಿ
ಮಲಗಿಕೊಂಡನೇ ಹೊರತು ತನ್ನ ಮನೆಗೆ ಹೋಗ
ಲಿಲ್ಲ.
ಮರುದಿನ ಬೆಳಿಗ್ಗೆ ದಾವೀದನು ಯೋವಾಬನಿಗೆ 14
ಒಂದು ಪತ್ರವನ್ನು ಬರೆದು ಅದನ್ನು ಊರೀಯನ
ಕೈಯಲ್ಲಿ ಕೊಟ್ಟು ಕಳುಹಿಸಿದನು. ಅದರಲ್ಲಿದ್ದದ್ದೇ 15
ನಂದರೆ—ಊರೀಯನು ಗಾಯಹೊಂದಿ ಸಾಯುವಂತೆ
ಅವನನ್ನು ಘೋರಯುದ್ಧ ನಡೆಯುತ್ತಿರುವ ಕಡೆಗೆ
ಮುಂಭಾಗದಲ್ಲಿ ನಿಲ್ಲಿಸಿ ನೀವು ಹಿಂದಕ್ಕೆ ಸರಿದು
ಕೊಳ್ಳಿರಿ ಎಂಬದೇ. ಯೋವಾಬನು ಪಟ್ಟಣಕ್ಕೆ 16
ಮುತ್ತಿಗೆಹಾಕುವಾಗ ಶೂರರಾದ ಶತ್ರುಸೈನಿಕರೆಲ್ಲಿರು
ತ್ತಾರೆಂದು ಗೊತ್ತುಮಾಡಿಕೊಂಡು ಊರೀಯನನ್ನು
ಅಲ್ಲಿ ನಿಲ್ಲಿಸಿದನು. ಆ ಊರಿನ ಜನರು ಹೊರಗೆ 17
ಬಂದು ಯೋವಾಬನೊಡನೆ ಕಾದಿದಾಗ ದಾವೀದನ
ಸೇವಕರಲ್ಲಿ ಕೆಲವರು ಸತ್ತರು. ಹಿತ್ತಿಯನಾದ ಊರೀ
ಯನೂ ಮಡಿದನು.
ಅನಂತರ ಯೋವಾಬನು ಒಬ್ಬ ದೂತನನ್ನು ಕರೆದು 18
ಅವನಿಗೆ— ನೀನು ಹೋಗಿ ದಾವೀದನಿಗೆ ಯುದ್ಧವರ್ತ
ಮಾನವನ್ನೆಲ್ಲಾ ತಿಳಿಸು. ನೀನು ಯುದ್ಧಸಮಾಚಾರ 19
ವನ್ನು ಹೇಳಿ ಮುಗಿಸಿದನಂತರ ಅರಸನು ಮುನಿದು 20
ನಿನ್ನನ್ನು — ನೀವು ಯುದ್ಧಮಾಡುವದಕ್ಕಾಗಿ ಪಟ್ಟಣದ

1) ಪಾಠಾಂತರ: ದಾವೀದನ ದೂತರು ಹೋಗಿ ಬಂದು ಒಂದು ವರುಷ ಕಳೆದನಂತರ ಅವನು.

ಸಮಿಾಪಕ್ಕೆ ಹೋದದ್ದೇಕೆ? ಶತ್ರುಗಳು ಊರುಗೋ
ಡೆಯ ಮೇಲಣಿಂದ ಏನಾದರೂ ಬೀಸಾಡಬಹುದಲ್ಲ
21 ವೋ? ಯೆರುಬ್ಬೆಷೆತನ ಮಗನಾದ ಅಬೀಮೆಲೆಕನನ್ನು
ಕೊಂದವರಾರೆಂದು ನಿಮಗೆ ಗೊತ್ತಿಲ್ಲವೋ? ತೇಬೇಚಿ
ನಲ್ಲಿ ಒಬ್ಬ ಹೆಂಗಸು ಗೋಡೆಯ ಮೇಲಣಿಂದ ಒಂದು
ಬೀಸುವ ಕಲ್ಲನ್ನು ಅವನ ಮೇಲೆ ಎತ್ತಿಹಾಕಿ ಅವ
ನನ್ನು ಕೊಂದಳಲ್ಲವೇ. ಹೀಗಿರುವದರಿಂದ ನೀವು ಗೋ
ಡೆಯ ಸಮಿಾಪಕ್ಕೆ ಹೋದದ್ದೇನು ಎಂದು ಕೇಳಿದರೆ
ನೀನು—ಹಿತ್ತಿಯನಾದ ನಿನ್ನ ಸೇವಕ ಊರೀಯನೂ
ಮೃತಿಹೊಂದಿದನೆಂದು ಹೇಳು ಎಂಬದಾಗಿ ಆಜ್ಞಾಪಿಸಿ
22 ಅವನನ್ನು ಕಳುಹಿಸಿದನು. ಆ ದೂತನು ಹೋಗಿ
23 ಯೋವಾಬನ ಅಜ್ಞೆಯಂತೆ ದಾವೀದನಿಗೆ ತಿಳಿಸಿದ್ದೇ
ನಂದರೆ — ಆ ಊರಿನವರು ಮಹಾಬಲದೊಡನೆ ಯುದ್ಧ
ಮಾಡುವದಕ್ಕೆ ಬೈಲಿಗೆ ಬಂದರು; ನಾವು ಅವರನ್ನು
24 ಊರುಬಾಗಲಿನ ವರೆಗೆ ಹಿಂದಟ್ಟಿದೆವು. ಆಗ ಬಿಲ್ಲು
ಗಾರರು ಗೋಡೆಯ ಮೇಲಣಿಂದ ನಿನ್ನ ಸೇವಕರ
ಮೇಲೆ ಬಾಣಗಳನ್ನು ಎಸೆದದರಿಂದ ಅವರಲ್ಲಿ ಕೆಲವರು
ಸತ್ತರು. ಹಿತ್ತಿಯನಾದ ನಿನ್ನ ಸೇವಕ ಊರೀಯನೂ
25 ಮಡಿದನು ಎಂಬದೇ. ಆಗ ದಾವೀದನು ದೂತನಿಗೆ—
ನೀನು ಹೋಗಿ—ಇದಕ್ಕೋಸ್ಕರವಾಗಿ ವ್ಯಸನಪಡಬೇಡ;
ಕತ್ತಿಯು ಈ ಹೊತ್ತು ಒಬ್ಬನನ್ನು ನುಂಗಿದರೆ ನಾಳೆ
ಇನ್ನೊಬ್ಬನನ್ನು ನುಂಗುವದು. ಮತ್ತಷ್ಟು ಶೂರತನ
ದಿಂದ ಯುದ್ಧಮಾಡಿ ಪಟ್ಟಣವನ್ನು ಕೆಡವಿಬಿಡಿರಿ ಎಂಬ
ದಾಗಿ ಅರಸನು ಆಜ್ಞಾಪಿಸುತ್ತಾನೆಂದು ಯೋವಾಬನಿಗೆ
ಹೇಳಿ ಅವನನ್ನು ಧೈರ್ಯಪಡಿಸು ಅಂದನು.
26 ಊರೀಯನ ಮರಣವಾರ್ತೆಯನ್ನು ಅವನ ಹೆಂಡ
ತಿಯು ಕೇಳಿ ಗಂಡನಿಗೋಸ್ಕರ ಗೋಳಾಡಿದಳು.
27 ದುಃಖಕಾಲ ತೀರಿದನಂತರ ದಾವೀದನು ಆಕೆಯನ್ನು
ತನ್ನ ಮನೆಗೆ ಕರತರಿಸಿ ತನ್ನ ಹೆಂಡತಿಯನ್ನಾಗಿ ಮಾಡಿ
ಕೊಂಡನು; ಆಕೆಯು ಅವನಿಂದ ಒಬ್ಬ ಮಗನನ್ನು
ಹೆತ್ತಳು. ದಾವೀದನ ಈ ಕೃತ್ಯವು ಯೆಹೋವನ
ದೃಷ್ಟಿಯಲ್ಲಿ ಕೆಟ್ಟದ್ದಾಗಿತ್ತು.

ದೇವರು ನಾತಾನನ ಮುಖಾಂತರವಾಗಿ ದಾವೀದನಿಗೆ
ಶಿಕ್ಷೆಯನ್ನು ಮುಂತಿಳಿಸಿದ್ದೂ ಸೊಲೊಮೋನನ ಜನನವೂ.

12 ಯೆಹೋವನು ನಾತಾನನನ್ನು ದಾವೀದನ ಬಳಿಗೆ
ಕಳುಹಿಸಿದನು. ಅವನು ಇವನ ಹತ್ತಿರ ಬಂದು
ಹೇಳಿದ್ದೇನಂದರೆ — ಒಂದು ಊರಲ್ಲಿ ಇಬ್ಬರು ಮನು
ಷ್ಯರಿದ್ದರು; ಒಬ್ಬನು ಐಶ್ವರ್ಯವಂತನು, ಇನ್ನೊಬ್ಬನು
2 ಬಡವನು. ಐಶ್ವರ್ಯವಂತನಿಗೆ ಬಹಳ ಕುರಿದನ
3 ಗಳಿದ್ದವು. ಬಡವನಿಗೆ ಒಂದು ಕುರಿಮರಿಯ ಹೊರತು
ಬೇರೇನೂ ಇರಲಿಲ್ಲ. ಅವನು ಅದನ್ನು ಕೊಂಡು
ಕೊಂಡು ಸಾಕುತ್ತಿದ್ದನು. ಅದು ದೊಡ್ಡದಾಗುವ
ವರೆಗೆ ಮಗಳಂತೆ ಅವನ ಸಂಗಡಲೂ ಅವನ ಮಕ್ಕಳ
ಸಂಗಡಲೂ ಇದ್ದುಕೊಂಡು ಅವನೊಡನೆ ರೊಟ್ಟಿ
ತಿನ್ನುತ್ತಾ ಅವನ ಪಾತ್ರೆಯಲ್ಲೇ ನೀರು ಕುಡಿಯುತ್ತಾ
ಇತ್ತು; ಅವನ ಎದೆಯ ಮೇಲೆಯೇ ಒರಗಿಕೊಂಡು
4 ನಿದ್ರೆಮಾಡುತ್ತಿತ್ತು. ಒಂದು ದಿವಸ ಐಶ್ವರ್ಯವಂತನ
ಮನೆಗೆ ಒಬ್ಬ ಪ್ರಯಾಣಿಕನು ಬಂದನು. ಆಗ

ಐಶ್ವರ್ಯವಂತನು ತನ್ನ ಕುರಿದನಗಳಿಂದ ಏನ
ತೆಗೆದುಕೊಳ್ಳ ಮನಸ್ಸಿಲ್ಲದೆ ಆ ಬಡವನ ಕುರಿಮ
ಯನ್ನು ಹಿಡಿದು ಅತಿಥಿಗೋಸ್ಕರ ಅದನ್ನು ಅಡಿ
ಮಾಡಿಸಿದನು ಎಂಬದೇ. ಇದನ್ನು ಕೇಳಿ ದಾವೀದನ
ಆ ಮನುಷ್ಯನ ಮೇಲೆ ಬಹಳವಾಗಿ ಕೋಪಗೊಂಡ
ನಾತಾನನಿಗೆ—ಯೆಹೋವನಾಣೆ, ಆ ಮನುಷ್ಯನ
ಸಾಯಲೇ ಬೇಕು. ಅವನು ಕರುಣೆಯಿಲ್ಲದೆ ಹೀ
ಮಾಡಿದ್ದರಿಂದ ಆ ಕುರಿಮರಿಗಾಗಿ ನಾಲ್ಕರಷ್ಟ
ಹಿಂದಕ್ಕೆ ಕೊಡಬೇಕು ಅಂದನು.
ಆಗ ನಾತಾನನು ದಾವೀದನನ್ನು ನೋಡಿ—
ಮನುಷ್ಯನು ನೀನೇ. ಇಸ್ರಾಯೇಲ್‌ದೇವರಾದ ಯೆ
ಹೋವನು ನಿನಗೆ ಹೇಳುವದೇನಂದರೆ— ನಿನ್ನನ್ನು
ಅಭಿಷೇಕಿಸಿ ಇಸ್ರಾಯೇಲ್ಯರ ಅರಸನನ್ನಾಗಿ ಮಾಡಿದ
ನೂ ಸೌಲನ ಕೈಗೆ ಸಿಕ್ಕದಂತೆ ತಪ್ಪಿಸಿದವನೂ ನಾನೇ
ಇದಲ್ಲದೆ ನಾನು ನಿನಗೆ ನಿನ್ನ ಯಜಮಾನನ ಮ
ಯನ್ನು ಒಪ್ಪಿಸಿದೆನು; ಅವನ ಹೆಂಡತಿಯನ್ನು ನಿನ್ನ
ಮಗ್ಗಲಿಗೆ ಕೊಟ್ಟೆನು. ಇಸ್ರಾಯೇಲ್ ಮತ್ತು
ಯೆಹೂದ ಕುಲಗಳನ್ನು ನಿನಗೆ ವಶಪಡಿಸಿದೆನು. ಇದ
ಸಾಕಾಗಿರದಿದ್ದರೆ ನಾನು ನಿನಗೆ ಇನ್ನೂ ಬೇಕಾದದ್ದನ್ನು
ಕೊಡುತ್ತಿದ್ದೆನು. ಹೀಗಿರಲು ನೀನು ಯೆಹೋ
ನಾದ ನನ್ನ ಅಜ್ಞೆಯನ್ನು ತಿರಸ್ಕರಿಸಿ ನನ್ನ ದೃಷ್ಟಿ
ಯಲ್ಲಿ ಕೆಟ್ಟದ್ದಾಗಿರುವದನ್ನು ಮಾಡಿದ್ದೇನು? ನೀನ
ಹಿತ್ತಿಯನಾದ ಊರೀಯನನ್ನು ಕತ್ತಿಯಿಂದ ಕೊಲ್ಲಿಸಿ
ಅವನ ಹೆಂಡತಿಯನ್ನು ನಿನ್ನ ಹೆಂಡತಿಯನ್ನಾಗಿ ತೆಗೆದ
ಕೊಂಡಿ. ನೀನು ನನ್ನ ಅಜ್ಞೆಯನ್ನು ತಿರಸ್ಕರಿಸಿ
ದದರಿಂದಲೂ ಹಿತ್ತಿಯನಾದ ಊರೀಯನನ್ನು ಅಮ್ಮೋ
ನಿಯರ ಕತ್ತಿಯಿಂದ ಕೊಲ್ಲಿಸಿ ಅವನ ಹೆಂಡತಿಯನ್ನು
ನಿನ್ನ ಹೆಂಡತಿಯನ್ನಾಗಿ ತೆಗೆದುಕೊಂಡದರಿಂದಲೂ
ಕತ್ತಿಯು ನಿನ್ನ ಮನೆಯನ್ನು ಬಿಟ್ಟುಹೋಗುವದಿಲ್ಲ
ಯೆಹೋವನಾದ ನನ್ನ ಮಾತನ್ನು ಕೇಳು—ನಾನು
ನಿನ್ನ ಮನೆಯವರಿಂದಲೇ ನಿನಗೆ ಕೇಡು ಉಂಟಾಗು
ವಂತೆ ಮಾಡುವೆನು. ನಿನ್ನ ಹೆಂಡತಿಯರನ್ನು ತೆಗೆದ
ನಿನ್ನೆದುರಿನಲ್ಲಿಯೇ ಇನ್ನೊಬ್ಬನಿಗೆ ಕೊಡುವೆನು. ಅ
ನು ಹಗಲಿನಲ್ಲಿಯೇ ಅವರ ಕೂಡ ಮಲಗುವನು
ನೀನು ಅದನ್ನು ಗುಪ್ತವಾಗಿ ಮಾಡಿದಿ; ನಾನು ಹೇಳುವ
ಮಾತಾದರೋ ಎಲ್ಲಾ ಇಸ್ರಾಯೇಲ್ಯರ ಮುಂ
ಪ್ರಕಟವಾಗಿ ನೆರವೇರುವದು ಎಂಬದೇ ಅಂದನು.
ಆಗ ದಾವೀದನು ನಾತಾನನಿಗೆ—ನಾನು ಯೆಹೋ
ವನಿಗೆ ವಿರುದ್ಧವಾಗಿ ಪಾಪಮಾಡಿದ್ದೇನೆ ಎಂದು ಹೇಳಿ
ದನು. ನಾತಾನನು ಅವನಿಗೆ—ಯೆಹೋವನು ನಿನ್ನ
ಪಾಪವನ್ನು ಕ್ಷಮಿಸಿದ್ದಾನೆ, ನೀನು ಸಾಯುವದಿಲ್ಲ;
ಆದರೂ ನೀನು ಈ ಕೃತ್ಯದಿಂದ ಯೆಹೋವನ ವೈರಿ
ಗಳು ಆತನನ್ನು ಬಹಳವಾಗಿ ನಿಂದಿಸುವದಕ್ಕೆ ಆಸ್ಪದ
ಕೊಟ್ಟದರಿಂದ ನಿನ್ನಿಂದ ಹುಟ್ಟಿರುವ ಮಗುವು ಸತ್ತೇ
ಹೋಗುವದು ಎಂದು ಹೇಳಿ ಮನೆಗೆ ಹೊರಟುಹೋ
ದನು.
ಊರೀಯನ ಹೆಂಡತಿಯಲ್ಲಿ ದಾವೀದನಿಗೆ ಹುಟ್ಟಿದ
ಮಗುವು ಯೆಹೋವನ ಪೆಟ್ಟಿನಿಂದ ಬಹುವಾಗಿ ಅಸ್ವಸ್ಥ
ವಾಯಿತು. ಆದದರಿಂದ ದಾವೀದನು ಮಗುವಿ
ಗೋಸ್ಕರ ದೇವರನ್ನು ಪ್ರಾರ್ಥಿಸುತ್ತಾ ಉಪವಾಸಮಾ

ಡುತ್ತಾ ಒಳಕೋಣೆಯಲ್ಲಿ ನೆಲದ ಮೇಲೆಯೇ ಬಿದ್ದು
7 ಕೊಂಡು ರಾತ್ರಿಕಳೆಯುತ್ತಿದ್ದನು. ಅವನ ಮನೆಯ
ಹಿರೀಸೇವಕರು ಅವನನ್ನು ಎಬ್ಬಿಸುವದಕ್ಕೆ ಹೋದರು.
ಆದರೆ ಅವನು ಏಳಲೂ ಇಲ್ಲ, ಅವರೊಡನೆ ಆಹಾರ
8 ತೆಗೆದುಕೊಳ್ಳಲೂ ಇಲ್ಲ. ಏಳನೆಯ ದಿನದಲ್ಲಿ
ಮಗುವು ಸತ್ತಿತು; ಅವನ ಸೇವಕರು ಭಯಪಟ್ಟು
ಈ ವರ್ತಮಾನವನ್ನು ದಾವೀದನಿಗೆ ತಿಳಿಸಲಿಲ್ಲ. ಅವ
ರು—ಹುಡುಗನು ಜೀವದಿಂದಿದ್ದಾಗಲೇ ಅವನು ನಮ್ಮ
ಸಂತೈಸುವಿಕೆಯನ್ನು ಲಕ್ಷಿಸಲಿಲ್ಲ. ಹೀಗಿರುವಲ್ಲಿ
ಮಗುವಿನ ಮರಣವಾರ್ತೆಯನ್ನು ಅವನಿಗೆ ತಿಳಿಸಿದರೆ
ಅವನು ತನಗೆ ಏನಾದರೂ ಕೇಡುಮಾಡಿಕೊಂಡಾ
9 ನಲ್ಲವೇ ಎಂದು ಮಾತಾಡಿಕೊಳ್ಳುತ್ತಿದ್ದರು. ಸೇವಕರು
ಈ ಪ್ರಕಾರ ಗುಜುಗುಜು ಮಾತಾಡುವದನ್ನು ದಾವೀ
ದನು ಕಂಡು ಮಗುವು ಮೃತಿಹೊಂದಿತೆಂದು ತಿಳಿದು
ಸೇವಕರನ್ನು—ಮಗುವು ಸತ್ತಿತೋ ಎಂದು ಕೇಳಿದನು.
ಅವರು—ಹೌದು, ಸತ್ತಿತು ಎಂದು ಉತ್ತರಕೊಟ್ಟರು.
0 ಆಗ ದಾವೀದನು ನೆಲದಿಂದೆದ್ದು ಸ್ನಾನಮಾಡಿ ತೈಲ
ಹಚ್ಚಿಕೊಂಡು ತನ್ನ ಬಟ್ಟೆಗಳನ್ನು ಬದಲಿಸಿ ಯೆಹೋವನ
ಮಂದಿರಕ್ಕೆ ಹೋಗಿ ಆರಾಧನೆಮಾಡಿದನು. ಅನಂತರ
ಮನೆಗೆ ಬಂದು ಆಹಾರತರಿಸಿ ಊಟಮಾಡಿದನು.
1 ಇದನ್ನು ನೋಡಿ ಅವನ ಸೇವಕರು ಅವನಿಗೆ—ಇದೇನು
ನೀನು ಮಾಡಿದ್ದು? ಹುಡುಗನು ಜೀವದಿಂದಿದ್ದಾಗ
ಅಳುತ್ತಾ ಉಪವಾಸವಾಗಿದ್ದಿ; ಹುಡುಗನು ಸತ್ತನಂತರ
2 ಎದ್ದು ಊಟಮಾಡಿದಿ ಅಂದರು. ದಾವೀದನು ಅವ
ರಿಗೆ—ಹುಡುಗನು ಜೀವದಿಂದಿದ್ದಾಗ ಒಂದು ವೇಳೆ
ಯೆಹೋವನು ಕೃಪೆಮಾಡಿ ಅವನನ್ನು ಉಳಿಸಾನು
3 ಅಂದುಕೊಂಡು ಉಪವಾಸಮಾಡಿದೆನು, ಅತ್ತೆನು. ಈಗ
ಸತ್ತಿದ್ದಾನಲ್ಲಾ. ನಾನೇಕೆ ಉಪವಾಸಮಾಡಬೇಕು?
ಅವನನ್ನು ಹಿಂದಕ್ಕೆ ತರುವದು ನನ್ನಿಂದಾದೀತೇ?
ನಾನಾಗಿ ಅವನ ಬಳಿಗೆ ಹೋಗಬೇಕೇ ಹೊರತು
ಅವನು ನನ್ನ ಬಳಿಗೆ ಬರುವದಿಲ್ಲ ಎಂದು ಉತ್ತರ
ಕೊಟ್ಟನು.
4 ದಾವೀದನು ತನ್ನ ಹೆಂಡತಿಯಾದ ಬತ್ಷೆಬೆಯ
ಬಳಿಗೆ ಹೋಗಿ ಆಕೆಯನ್ನು ಸಂತೈಸಿ ಆಕೆಯ ಸಂಗಡ
ಮಲಗಿದನು. ಆಕೆ ಮಗನನ್ನು ಹೆತ್ತಾಗ ಅವನಿಗೆ
ಸೊಲಮೋನನೆಂದು ಹೆಸರಿಟ್ಟನು. ಯೆಹೋವನು
5 ಹುಡುಗನನ್ನು ಪ್ರೀತಿಸಿದನು; ಪ್ರವಾದಿಯಾದ ನಾತಾ
ನನು ಯೆಹೋವನು ತನಗೆ ಆಜ್ಞಾಪಿಸಿದಂತೆ ಆತನಿ
ಗೋಸ್ಕರವಾಗಿ ಆ ಹುಡುಗನಿಗೆ 1)ಯೆದೀದ್ಯನು
ಎಂದು ಹೆಸರಿಟ್ಟನು.

ದಾವೀದನು ಅಮ್ಮೋನಿಯರ ರಾಜಧಾನಿಯಾದ
ರಬ್ಬವನ್ನು ವಶಮಾಡಿಕೊಂಡದ್ದು.

26 ಯೋವಾಬನು ಅಮ್ಮೋನಿಯರ ಪಟ್ಟಣವಾದ
ರಬ್ಬಕ್ಕೆ ಮುತ್ತಿಗೆಹಾಕಿ ಅರಮನೆಯಿದ್ದ ಭಾಗವನ್ನು
27 ಸ್ವಾಧೀನಮಾಡಿಕೊಂಡು ದಾವೀದನಿಗೆ ದೂತರ ಮು
ಖಾಂತರವಾಗಿ—ನಾನು ರಬ್ಬಕ್ಕೆ ಮುತ್ತಿಗೆಹಾಕಿ ಹೊಳೆ
ಯ ಬಳಿಯಲ್ಲಿರುವ ಭಾಗವನ್ನು ಸ್ವಾಧೀನಮಾಡಿ
ಕೊಂಡಿದ್ದೇನೆ. ನೀನು ಬೇಗನೆ ಉಳಿದ ಸೈನ್ಯ 28
ವನ್ನು ಕೂಡಿಸಿಕೊಂಡು ಬಂದು ಪಟ್ಟಣಕ್ಕೆ ಮುತ್ತಿಗೆ
ಹಾಕಿ ಉಳಿದ ಭಾಗವನ್ನು ಸ್ವಾಧೀನಪಡಿಸಿಕೋ;
ಅದನ್ನು ನಾನೇ ಹಿಡಿದರೆ ಅದಕ್ಕೆ ನನ್ನ ಹೆಸರು
ಬರುವದು ಎಂದು ಹೇಳಿ ಕಳುಹಿಸಿದನು. ಆಗ 29
ದಾವೀದನು ಜನರೆಲ್ಲರನ್ನೂ ಕೂಡಿಸಿಕೊಂಡು ಹೋಗಿ
ರಬ್ಬಕ್ಕೆ ಮುತ್ತಿಗೆಹಾಕಿ ಅದನ್ನು ವಶಮಾಡಿಕೊಂಡ
ನು. ಇದಲ್ಲದೆ ಅವನು ಅವರ ಮಲ್ಕಾಮಮೂರ್ತಿಯ 30
ತಲೆಯ ಮೇಲಿದ್ದ ಬಂಗಾರದ ಕಿರೀಟವನ್ನು ತೆಗೆದು
ಕೊಂಡನು; ಅದು ನಾಲ್ಕು ಸಾವಿರ ತೊಲೆ ತೂಕದ್ದು.
ಅದರಲ್ಲಿದ್ದ ಮಣಿಯನ್ನು ದಾವೀದನು ತನ್ನ ಶಿರಸ್ಸಿ
ನಲ್ಲಿ ಧರಿಸಿಕೊಂಡನು. ಆ ಪಟ್ಟಣದಿಂದ ದೊಡ್ಡ
ಕೊಳ್ಳೆಯನ್ನು ಒಯ್ದನು. ಊರಿನ ನಿವಾಸಿಗಳನ್ನು 31
ಹಿಡಿದು 2)ಗರಗಸ ಗುದ್ದಲಿ ಕೊಡಲಿಗಳಿಂದ ಕೆಲಸ
ಮಾಡುವದಕ್ಕೂ ಇಟ್ಟಿಗೆಗಳನ್ನು ಮಾಡುವದಕ್ಕೂ
ಹಚ್ಚಿದನು. ಅಮ್ಮೋನಿಯರ ಎಲ್ಲಾ ಪಟ್ಟಣದವರಿಗೂ
ಇದೇ ಗತಿಯಾಯಿತು. ಅನಂತರ ದಾವೀದನು ಎಲ್ಲಾ
ಸೈನಿಕರೊಡನೆ ಯೆರೂಸಲೇಮಿಗೆ ಬಂದನು.

ಅರಮನೆಯಲ್ಲಿಯೂ ರಾಜ್ಯದಲ್ಲಿಯೂ ಉಂಟಾದ
ಕಲಹಗಳು. 13—20.

ಅಮ್ನೋನನು ತಾಮಾರಳನ್ನು ಕೆಡಿಸಿದ್ದೂ ಅಬ್ಷಾಲೋಮನು
ಅವನನ್ನು ಕೊಂದದ್ದೂ.

ದಾವೀದನ ಮಗನಾದ ಅಬ್ಷಾಲೋಮನಿಗೆ ತಾ 13
ಮಾರಳೆಂಬ ಬಹು ಸುಂದರಿಯಾದ ಒಬ್ಬ ತಂಗಿಯಿ
ದ್ದಳು. ದಾವೀದನ ಮಗನಾದ ಅಮ್ನೋನನು ಆಕೆ
ಯನ್ನು ಮೋಹಿಸಿದನು. ಅವನು ಆಕೆಯ ಮೇಲಣ 2
ಮೋಹದಿಂದ ಪೀಡಿತನಾಗಿ ಅಸ್ವಸ್ಥನಾದನು. ಆಕೆಯು
ಕನ್ಯೆಯಾಗಿದ್ದದರಿಂದ ಆಕೆಗೆ ಏನೂ ಮಾಡುವದೂ
ಅಸಾಧ್ಯವೆಂದು ಅಮ್ನೋನನಿಗೆ ಕಂಡಿತು. ಅವನಿಗೆ 3
ಯೋನಾದಾಬನೆಂಬ ಒಬ್ಬ ಗೆಳೆಯನಿದ್ದನು. ಇವನು
3)ದಾವೀದನ ಅಣ್ಣನಾದ ಶಿಮ್ಮನ ಮಗನು. ಬಹು 4
ಯುಕ್ತಿವಂತನಾದ ಇವನು ಒಂದು ದಿವಸ ಅಮ್ನೋನ
ನನ್ನು—ರಾಜಪುತ್ರನೇ, ನೀನು ದಿನೇ ದಿನೇ ಕ್ಷೀಣ
ನಾಗುತ್ತಾ ಬರುವದೇಕೆ? ನನಗೆ ತಿಳಿಸುವದಿಲ್ಲವೋ
ಎಂದು ಕೇಳಲು ಅವನು—ನನ್ನ ತಮ್ಮನಾದ ಅಬ್ಷಾ
ಲೋಮನ ತಂಗಿ ತಾಮಾರಳ ಮೇಲೆ ನನಗೆ ಮೋಹ
ವುಂಟಾಗಿದೆ ಎಂದು ಉತ್ತರಕೊಟ್ಟನು. ಆಗ ಯೋನಾ 5
ದಾಬನು ಅವನಿಗೆ—ನೀನು ಅಸ್ವಸ್ಥನಾದವನಂತೆ ಹಾಸಿ
ಗೆಯ ಮೇಲೆ ಮಲಗಿಕೋ; ನಿನ್ನ ತಂದೆಯು ನಿನ್ನನ್ನು
ನೋಡುವದಕ್ಕೆ ಬಂದಾಗ ಅವನಿಗೆ—ದಯವಿಟ್ಟು ನನ್ನ
ತಂಗಿಯಾದ ತಾಮಾರಳನ್ನು ನನಗಾಗಿ ಆಹಾರಸಿದ್ಧ
ಮಾಡುವದಕ್ಕೆ ಕಳುಹಿಸು. ಆಕೆ ನನ್ನೆದುರಿನಲ್ಲಿಯೇ

1) ಯೆದೀದ್ಯನು ಅಂದರೆ ಯಾಹುವಿಗೆ ಪ್ರಿಯನಾದವನು.
2) ಪಾಠಾಂತರ: ಗರಗಸ ಗುದ್ದಲಿ ಕೊಡಲಿಗಳಿಂದ ತುಂಡುಮಾಡಿ
…ಒಪಿಗೆಗಳಲ್ಲಿ ಹಾಕಿ ಸುಡಿಸಿದನು. 3) ಅಥವಾ: ಶಮ್ಮನ.

ಸಿದ್ಧಮಾಡಿ ಕೊಡುವದಾದರೆ ಊಟಮಾಡೇನು ಎಂದು
6 ಹೇಳು ಅಂದನು. ಅಮ್ನೋನನು ಅಸ್ವಸ್ಥವಾದವನೋ
ಎಂಬಂತೆ ಮಲಗಿಕೊಂಡನು. ಅರಸನು ಅವನನ್ನು
ನೋಡುವದಕ್ಕೆ ಬಂದಾಗ ಅವನು ಅರಸನಿಗೆ—ದಯ
ವಿಟ್ಟು ನನ್ನ ತಂಗಿಯಾದ ತಾಮಾರಳನ್ನು ನನ್ನ ಬಳಿಗೆ
ಕಳುಹಿಸು; ಆಕೆ ನನ್ನ ಕಣ್ಣುಮುಂದೆಯೇ ಎರಡು
ಭಕ್ಷ್ಯಗಳನ್ನು ಮಾಡಿಕೊಡುವದಾದರೆ ಊಟಮಾಡೇ
7 ನು ಎಂದು ಬೇಡಿಕೊಳ್ಳಲು ದಾವೀದನು ಅರಮನೆಗೆ
ಆಳುಗಳನ್ನು ಕಳುಹಿಸಿ ಆಕೆಗೆ— ನೀನು ನಿನ್ನ ಅಣ್ಣ
ನಾದ ಅಮ್ನೋನನ ಮನೆಗೆ ಹೋಗಿ ಅವನಿಗೋಸ್ಕರ
ಆಹಾರವನ್ನು ಸಿದ್ಧಮಾಡು ಎಂದು ಹೇಳಿಸಿದನು.
8 ಕೂಡಲೆ ಆಕೆಯು ತನ್ನ ಅಣ್ಣನಾದ ಅಮ್ನೋನನ ಮನೆ
ಗೆ ಹೋದಳು; ಅವನು ಮಲಗಿದ್ದನು. ಆಕೆಯು
ಹೋಗಿ ಹಿಟ್ಟುತೆಗೆದುಕೊಂಡು ನಾದಿ ಅವನ ಕಣ್ಣು
9 ಮುಂದೆಯೇ ಭಕ್ಷ್ಯಗಳನ್ನು ಮಾಡಿ ಸುಟ್ಟಳು. ಅ
ನಂತರ ಆಕೆ ಅವುಗಳನ್ನು ಬಾಂಡ್ಲದಿಂದ ತೆಗೆದು ಅವನ
ಮುಂದಿಟ್ಟಳು. ಅವನು ಊಟಮಾಡದೆ ಎಲ್ಲಾ ಜನ
ರನ್ನು ತನ್ನ ಬಳಿಯಿಂದ ಹೊರಡಿಸಬೇಕೆಂದು ಅಪ್ಪಣೆ
10 ಮಾಡಿದನು. ಎಲ್ಲರೂ ಹೋದ ಮೇಲೆ ಅವನು ತಾ
ಮಾರಳಿಗೆ—ಆಹಾರವನ್ನು ಈ ಕೋಣೆಗೆ ತೆಗೆದು
ಕೊಂಡು ಬಾ; ನೀನಾಗಿ ತಂದುಕೊಟ್ಟರೆ ಊಟಮಾಡು
ತ್ತೇನೆ ಎಂದು ಹೇಳಿದನು. ಆಗ ತಾಮಾರಳು ತಾನು
ಮಾಡಿದ ಭಕ್ಷ್ಯಗಳನ್ನು ಅಣ್ಣನಾದ ಅಮ್ನೋನನಿದ್ದ
11 ಕೋಣೆಗೆ ತೆಗೆದುಕೊಂಡುಹೋಗಿ ಅವನ ಮುಂದಿಟ್ಟ
ಳು. ಕೂಡಲೇ ಅವನು ಆಕೆಯನ್ನು ಹಿಡಿದು—ನನ್ನ
ತಂಗಿಯೇ, ಬಂದು ನನ್ನ ಸಂಗಡ ಮಲಗಿಕೋ ಅಂದ
12 ನು. ಆಕೆಯು—ಅಣ್ಣನೇ, ಬೇಡ; ನನ್ನನ್ನು ಕೆಡಿಸ
ಬೇಡ; ಇಸ್ರಾಯೇಲ್ಯರಲ್ಲಿ ಇಂಥದು ನಡೆಯಬಾರ
13 ದು. ಇಂಥ ಹುಚ್ಚುತನವನ್ನು ಮಾಡಬೇಡ. ಈ ಅಪ
ಮಾನವನ್ನು ಮರೆಮಾಡುವದು ಹೇಗೆ? ನಿನಗಂತೂ
ಇಸ್ರಾಯೇಲ್ಯರಲ್ಲಿ ನೀಚನೆಂಬ ಹೆಸರು ತಪ್ಪದು. ಆದ
ದರಿಂದ ದಯವಿಟ್ಟು ಅರಸನ ಸಂಗಡ ಮಾತಾಡು.
ಅವನು ನನ್ನನ್ನು ನಿನಗೆ ಕೊಡದಿರಲಾರನು ಎಂದಳು.
14 ಆದರೆ ಅವನು ಆಕೆಯ ಮಾತನ್ನು ಕೇಳದೆ ಬಲಾತ್ಕಾರ
15 ದಿಂದ ಆಕೆಯನ್ನು ಕೆಡಿಸಿದನು. ಇದಾದ ಮೇಲೆ ಅವ
ನಿಗೆ ಆಕೆಯಲ್ಲಿ ತುಂಬಾ ದ್ವೇಷಹುಟ್ಟಿತು. ಅವನ
16 ಮುಂಚಿನ ಪ್ರೀತಿಗಿಂತ ದ್ವೇಷವೇ ಹೆಚ್ಚಾಯಿತು. ಅ
ಮ್ನೋನನು ಆಕೆಗೆ—ಎದ್ದು ಹೋಗು ಎಂದು ಹೇಳಿ
ದಾಗ ಆಕೆಯು—ಹಾಗೆ ಮಾಡಬೇಡ; ನನ್ನನ್ನು ಹೊರ
ಡಿಸಿಬಿಡುವದು ನೀನು ಮಾಡಿದ ಮೊದಲನೆಯ ಅನ್ಯಾ
17 ಯಕ್ಕಿಂತ ಹೆಚ್ಚಿನ ಅನ್ಯಾಯವಾಗಿದೆ ಅಂದಳು. ಆದರೆ
ಅವನು ಆಕೆಯ ಮಾತನ್ನು ಕೇಳದೆ ಯಾವಾಗಲೂ
ತನ್ನ ಹತ್ತಿರವೇ ಇರುವಂಥ ಆಳನ್ನು ಕರೆದು ಅವನಿಗೆ—
ಇವಳನ್ನು ಹೊರಗೆ ತಳ್ಳಿ ಕದಮುಚ್ಚು ಎಂದು ಆಜ್ಞಾ
18 ಪಿಸಿದನು. (ಆಕೆಯು ನಾನಾ ವರ್ಣಗಳುಳ್ಳ ಒಂದು
ನಿಲುವಂಗಿಯನ್ನು ಧರಿಸಿಕೊಂಡಿದ್ದಳು. ಕನ್ಯೆಯರಾದ
ರಾಜಪುತ್ರಿಯರು ಇದೇ ತರದ ವಸ್ತ್ರಗಳನ್ನು ಹಾಕಿ
ಕೊಳ್ಳುತ್ತಿದ್ದರು.) ಸೇವಕನು ಆಕೆಯನ್ನು ಹೊರಗೆ
19 ಕಳುಹಿಸಿ ಕದಮುಚ್ಚಿದನು. ತಾಮಾರಳು ತಲೆಯ
ಮೇಲೆ ಬೂದಿ ಹಾಕಿಕೊಂಡು ನಿಲುವಂಗಿಯನ್ನು

ಹರಿದುಕೊಂಡು ಕೈಗಳನ್ನು ತಲೆಯ ಮೇಲಿಟ್ಟು
ಗೋಳಾಡುತ್ತಾ ಹೋದಳು. ಆಕೆಯ ಸಹೋದರನಾ
ದ ಅಬ್ಷಾಲೋಮನು ಆಕೆಯನ್ನು ಕಂಡು—ನಿನ್ನ ಅ
ಣ್ಣನಾದ ಅಮ್ನೋನನು ನಿನ್ನನ್ನು ಕೂಡಿದನೇನು? ನನ್ನ
ತಂಗಿಯೇ, ಈಗ ಸುಮ್ಮನಿರು; ಅವನು ನಿನ್ನ ಅಣ್ಣ
ನಲ್ಲವೋ? ಈ ಸಂಗತಿಯನ್ನು ಮನಸ್ಸಿಗೆ ಹಚ್ಚಿಕೊಳ್ಳ
ಬೇಡ ಎಂದು ಹೇಳಿದನು. ತಾಮಾರಳು ಒಂಟಿಗಳಾಗಿ
ತನ್ನ ಅಣ್ಣನಾದ ಅಬ್ಷಾಲೋಮನ ಮನೆಯಲ್ಲೇ ವಾಸಿಸಿ
ದಳು. ಅರಸನಾದ ದಾವೀದನು ಈ ಸಂಗತಿಯನ್ನು
ಕೇಳಿ ಬಹಳವಾಗಿ ಕೋಪಗೊಂಡನು. ಅಬ್ಷಾಲೋಮ
ನು ಅಮ್ನೋನನ ಸಂಗಡ ಒಳ್ಳೇ ಮಾತನ್ನಾಗಲಿ ಕೆಟ್ಟ
ಮಾತನ್ನಾಗಲಿ ಆಡಲಿಲ್ಲ. ತನ್ನ ತಂಗಿಯಾದ ತಾಮಾ
ರಳನ್ನು ಕೆಡಿಸಿದ್ದಕ್ಕಾಗಿ ಅವನು ಅಮ್ನೋನನನ್ನು ದ್ವೇ
ಷಿಸಿದನು.

ಎರಡು ವರುಷಗಳಾದನಂತರ ಅಬ್ಷಾಲೋಮನು
ಒಂದು ದಿನ ಎಫ್ರಾಯಿಮಿನ ಬಳಿಯಲ್ಲಿರುವ ಬಾಳ್
ಹಾಚೋರಿನಲ್ಲಿ ಕುರಿಗಳ ಉಣ್ಣೆಯನ್ನು ಕತ್ತರಿಸು
ವಾಗ ಎಲ್ಲಾ ರಾಜಪುತ್ರರನ್ನು ಔತಣಕ್ಕೆ ಕರೆದನು.
ಅವನು ಅರಸನ ಬಳಿಗೂ ಹೋಗಿ ಅವನನ್ನು—ಸ್ವಾ
ಮೀ, ನಿನ್ನ ಸೇವಕನು ಕುರಿಗಳ ಉಣ್ಣೆಕತ್ತರಿಸುವವ
ರನ್ನು ಕರಿಸಿದ್ದಾನೆ. ಅರಸನು ತನ್ನ ಸೇವಕರೊಡನೆ
ಅವನ ಬಳಿಗೆ ಚಿತ್ತಯಿಸೋಣವಾಗಲಿ ಎಂದು ಬೇಡಿ
ಕೊಂಡನು. ಅರಸನು ಅವನಿಗೆ—ಮಗನೇ, ಬೇಡ;
ನಾವೆಲ್ಲರೂ ಬಂದರೆ ನಿನಗೆ ಭಾರವಾದೀತು ಅನ್ನಲು
ಅಬ್ಷಾಲೋಮನು ಅವನನ್ನು ಬಹಳವಾಗಿ ಒತ್ತಾಯ
ಪಡಿಸಿದನು. ಆದರೂ ಅರಸನು ಒಪ್ಪಲಿಲ್ಲ, ಅವನನ್ನು
ಆಶೀರ್ವದಿಸಿದನು, ಅಷ್ಟೆ. ಆಗ ಅಬ್ಷಾಲೋಮನು—
ನೀನು ಬಾರದಿದ್ದರೆ ನನ್ನ ಅಣ್ಣನಾದ ಅಮ್ನೋನನನ್ನು
ನಮ್ಮೊಡನೆ ಕಳುಹಿಸು ಅಂದನು. ಅದಕ್ಕೆ ಅರಸನು—
ಅವನೇಕೆ ನಿನ್ನ ಸಂಗಡ ಬರಬೇಕು ಎಂದು ಕೇಳಿದನು.
ಆದರೆ ಅಬ್ಷಾಲೋಮನು ಬಹಳವಾಗಿ ಒತ್ತಾಯಪಡಿ
ಸಿದ್ದರಿಂದ ಅರಸನು ಅಮ್ನೋನನನ್ನೂ ತನ್ನ ಬೇರೆ
ಎಲ್ಲಾ ಮಕ್ಕಳನ್ನೂ ಕಳುಹಿಸಿದನು. ಇದಕ್ಕೆ ಮೊದ
ಲೇ ಅಬ್ಷಾಲೋಮನು ತನ್ನ ಆಳುಗಳಿಗೆ—ಕೇಳಿರಿ,
ಅಮ್ನೋನನು ದ್ರಾಕ್ಷಾರಸ ಕುಡಿದು ಮತ್ತನಾಗಿರು
ವಾಗ ನಾನು ಹೊಡೆಯಬೇಕೆಂದು ಹೇಳಿದ ಕೂಡಲೆ
ಅವನನ್ನು ಹೊಡೆದು ಕೊಂದುಹಾಕಿರಿ; ಹೆದರಬೇಡಿರಿ,
ನಿಮಗೆ ಆಜ್ಞಾಪಿಸಿದವನು ನಾನಲ್ಲವೋ? ಧೈರ್ಯ
ದಿಂದಿರಿ, ಶೂರರಾಗಿರಿ ಎಂದು ಹೇಳಿದ್ದನು. ಅಬ್ಷಾ
ಲೋಮನ ಆಳುಗಳು ಅವನ ಆಜ್ಞೆಯಂತೆ ಅಮ್ನೋನ
ನನ್ನು ಕೊಂದರು. ರಾಜಪುತ್ರರೆಲ್ಲರೂ ತಮ್ಮ ತಮ್ಮ
ಹೇಸರಕತ್ತೆಗಳನ್ನು ಹತ್ತಿ ಓಡಿಹೋದರು.

ಅವರು ಇನ್ನೂ ಮಾರ್ಗದಲ್ಲಿರುವಾಗಲೇ ದಾವೀ
ದನಿಗೆ — ಅಬ್ಷಾಲೋಮನು ರಾಜಪುತ್ರರೆಲ್ಲರನ್ನೂ
ಕೊಂದುಹಾಕಿದನು, ಒಬ್ಬನನ್ನೂ ಉಳಿಸಲಿಲ್ಲ ಎಂಬ
ಸುದ್ದಿ ಮುಟ್ಟಿತು. ಆಗ ಅರಸನು ಎದ್ದು ತನ್ನ
ಬಟ್ಟೆಗಳನ್ನು ಹರಿದುಕೊಂಡು ನೆಲಕ್ಕೆ ಬಿದ್ದನು. ಅವನ
ಸೇವಕರೆಲ್ಲರೂ ತಮ್ಮ ತಮ್ಮ ಬಟ್ಟೆಗಳನ್ನು ಹರ
ಕೊಂಡು ಅವನ ಹತ್ತಿರ ನಿಂತರು. ಆಗ ದಾವೀದನ
ಅಣ್ಣನಾದ ಶಿಮ್ಮನ ಮಗ ಯೋನಾದಾಬನು ದಾವೀ

ದನಿಗೆ — ರಾಜಪುತ್ರರೆಲ್ಲರನ್ನೂ ಕೊಂದುಹಾಕಿದ್ದಾ
ರೆಂದು ನನ್ನ ಒಡೆಯನು ನೆನಸದಿರಲಿ. ಅಮ್ನೋನ
ನೊಬ್ಬನೇ ಸತ್ತಿರಬೇಕು. ಅವನು ಅಬ್ಷಾಲೋಮನ
ತಂಗಿಯಾದ ತಾಮಾರಳನ್ನು ಕೆಡಿಸಿದಾಗಿನಿಂದಲೇ ಹೀ
ಗಾಗುವದೆಂದು ಅಬ್ಷಾಲೋಮನ ಮುಖದಿಂದ ತೋ
33 ರುತ್ತಿತ್ತು. ಆದದರಿಂದ ರಾಜಪುತ್ರರೆಲ್ಲರೂ ಸತ್ತರೆಂಬ
ಸುದ್ದಿಗೆ ಅರಸನು ಲಕ್ಷ್ಯಕೊಡದಿರಲಿ; ಅಮ್ನೋನನೊಬ್ಬ
34 ನೇ ಸತ್ತಿದ್ದಾನಷ್ಟೆ ಎಂದು ಹೇಳಿ ಸಂತೈಸಿದನು. (ಅ
ಬ್ಷಾಲೋಮನು ತಪ್ಪಿಸಿಕೊಂಡನು.) ಅಷ್ಟರಲ್ಲಿ ದಾರಿ
ನೋಡುತ್ತಿದ್ದ ಕಾವಲುಗಾರನು ಒಂದು ದೊಡ್ಡ ಗುಂಪು
1)ಹೋರೋನಿನ ಮಾರ್ಗವಾಗಿ ಗುಡ್ಡ ಇಳಿದು ಬರುವ
35 ದನ್ನು ಕಂಡನು. ಯೋನಾದಾಬನು ಅರಸನಿಗೆ— ಇ
ಗೋ, ರಾಜಕುಮಾರರು ಬರುತ್ತಿದ್ದಾರೆ; ನಿನ್ನ ಸೇವಕ
ನ ಮಾತಿನಂತೆಯೇ ಆಯಿತಲ್ಲವೋ ಎಂದು ಹೇಳಿ
36 ಮುಗಿಸುವಷ್ಟರಲ್ಲೇ ರಾಜಕುಮಾರರು ಬಂದು ಗಟ್ಟಿ
ಯಾಗಿ ಅಳತೊಡಗಿದರು. ಅರಸನೂ ಅವನ ಸೇವಕ
37 ರೂ ಬಹಳವಾಗಿ ಗೋಳಾಡಿದರು. ದಾವೀದನು ತನ್ನ
ಮಗನಿಗೋಸ್ಕರ ನಿತ್ಯವೂ ದುಃಖ ಪಡುತ್ತಿದ್ದನು.
ಅಬ್ಷಾಲೋಮನು ತಪ್ಪಿಸಿಕೊಂಡು ಗೆಷೂರಿಗೆ ಓಡಿ
ಹೋಗಿ ಅಲ್ಲಿನ ಅರಸನೂ ಅಮ್ಮೀಹೂದನ ಮಗನೂ
38 ಆದ ತಲ್ಮೈಯ ಬಳಿಯಲ್ಲಿ ಮೂರು ವರುಷ ಇದ್ದ
39 ನು. ಅರಸನಾದ ದಾವೀದನು ಅಮ್ನೋನನ ಮರ
ಣದ ವಿಷಯ ಆದರಣೆಹೊಂದಿ ತನ್ನ ಮಗನಾದ ಅಬ್ಷಾ
ಲೋಮನನ್ನು ತಿರಿಗಿ ನೋಡುವದಕ್ಕೆ ಬಹಳ ಆತುರ
ಪಟ್ಟನು.

ಯೋವಾಬನ ಪ್ರಯತ್ನದಿಂದ ದಾವೀದನಿಗೂ
ಅಬ್ಷಾಲೋಮನಿಗೂ ಸಂಧಾನವಾದದ್ದು.

4 ಅರಸನು ಅಬ್ಷಾಲೋಮನಿಗಾಗಿ ಹಂಬಲಿಸುತ್ತಿ
ರುವದನ್ನು ಚೆರೂಯಳ ಮಗನಾದ ಯೋವಾಬನು
2 ತಿಳಿದು ತೆಕೋವದಿಂದ ಒಬ್ಬ ಬುದ್ಧಿವಂತೆಯಾದ
ಸ್ತ್ರೀಯನ್ನು ಕರೇಕಳುಹಿಸಿ ಆಕೆಗೆ— ನೀನು ಪ್ರಿಯ
ರನ್ನು ಕಳಕೊಂಡು ಬಹುದಿವಸಗಳಿಂದ ಶೋಕಪಡು
ತ್ತಿರುವ ಸ್ತ್ರೀಯೋ ಎಂಬಂತೆ ಶೋಕವಸ್ತ್ರಗಳನ್ನು ಧರಿ
3 ಸಿಕೊಂಡು ಎಣ್ಣೆಹಚ್ಚಿಕೊಳ್ಳದೆ ಅರಸನ ಬಳಿಗೆ ಹೋಗಿ
ಈ ಮಾತುಗಳನ್ನು ಅವನಿಗೆ ಹೇಳು ಎಂದು ಆಜ್ಞಾ
ಪಿಸಿ ಹೇಳಬೇಕಾದ ಮಾತುಗಳನ್ನು ಆಕೆಗೆ ಕಲಿಸಿ
4 ಕೊಟ್ಟನು. ತೆಕೋವದ ಸ್ತ್ರೀಯು ಅರಸನ ಹತ್ತಿರ
ಹೋಗಿ ಅವನ ಮುಂದೆ ನೆಲಕ್ಕೆ ಬಿದ್ದು — ಅರಸೇ,
5 ರಕ್ಷಿಸು ಎಂದು ಕೂಗಿದಳು. ಅರಸನು ನಿನಗೇನಾ
ಯಿತು ಎಂದು ಆಕೆಯನ್ನು ಕೇಳಲು ಆಕೆಯು—
6 ನಾನು ವಿಧವೆ; ಗಂಡನು ಸತ್ತುಹೋಗಿದ್ದಾನೆ. ನಿನ್ನ
ದಾಸಿಯಾದ ನನಗೆ ಇಬ್ಬರು ಮಕ್ಕಳಿದ್ದರು. ಒಂದು
ದಿವಸ ಅವರಿಬ್ಬರೂ ಹೊಲದಲ್ಲಿ ಜಗಳವಾಡಿದರು;
ಅಲ್ಲಿ ಬಿಡಿಸುವವರಾರೂ ಇರಲಿಲ್ಲವಾದದರಿಂದ ಒಬ್ಬ
7 ನು ಇನ್ನೊಬ್ಬನನ್ನು ಹೊಡೆದು ಕೊಂದನು. ಈಗ
ನೋಡು, ಸಂಬಂಧಿಕರೆಲ್ಲಾ ನಿನ್ನ ದಾಸಿಯಾದ ನನಗೆ
ವಿರೋಧವಾಗಿ ಎದ್ದು —ತಮ್ಮನನ್ನು ಕೊಂದವನೆಲ್ಲಿ?
ಅವನನ್ನು ನಮಗೆ ಒಪ್ಪಿಸು; ತಮ್ಮನ ಪ್ರಾಣಕ್ಕಾಗಿ
ಅವನ ಪ್ರಾಣವನ್ನೂ ತೆಗೆದುಬಿಟ್ಟು ನಿನ್ನನ್ನು ಬಾಧ್ಯ
ಸ್ಥನಿಲ್ಲದ ಹಾಗೆ ಮಾಡಿಬಿಡುತ್ತೇವೆ ಅನ್ನುತ್ತಾರೆ.
ಹೀಗೆ ಅವರು ನನಗುಳಿದಿರುವ ಒಂದು ಕೆಂಡವನ್ನೂ
ಆರಿಸಿಬಿಟ್ಟು ನನ್ನ ಗಂಡನ ಹೆಸರನ್ನೂ ಸಂತಾನವನ್ನೂ
ಭೂಲೋಕದ ಮೇಲಣಿಂದ ಅಳಿಸಬೇಕೆಂದಿದ್ದಾರೆ
ಎಂದು ಉತ್ತರಕೊಟ್ಟಳು. ಆಗ ಅರಸನು— ಮನೆಗೆ 8
ಹೋಗು, ನಿನ್ನ ವಿಷಯದಲ್ಲಿ ಆಜ್ಞಾಪಿಸುತ್ತೇನೆ ಎಂದು
ಹೇಳಿದ್ದಕ್ಕೆ ಆ ತೆಕೋವದ ಸ್ತ್ರೀಯು— ಅರಸನೇ, ಒಡೆ 9
ಯನೇ, ಅಪರಾಧವು ನನ್ನ ಮೇಲೆಯೂ ನನ್ನ
ಕುಟುಂಬದ ಮೇಲೆಯೂ ಇರಲಿ; ಅರಸನಿಗೂ ಅವನ
ಸಿಂಹಾಸನಕ್ಕೂ ದೋಷಹತ್ತದಿರಲಿ ಅಂದಳು. ಅರ 10
ಸನು ಆಕೆಗೆ— ಹಾಗೆ ಅಂದವರನ್ನು ನನ್ನ ಬಳಿಗೆ ಕರ
ಕೊಂಡು ಬಾ; ಅವರು ನಿನ್ನನ್ನು ಮುಟ್ಟದಂತೆ ಮಾಡು
ತ್ತೇನೆ ಅಂದನು. ಆಗ ಆ ಸ್ತ್ರೀಯು— ಸಮೀಪ 11
ಬಂಧುವು ನನ್ನ ಎರಡನೆಯ ಮಗನನ್ನು ಕೊಂದು ನನ್ನ
ನ್ನು ಪೂರ್ಣವಾಗಿ ಹಾಳುಮಾಡದಂತೆ ಅರಸನು ತಾನಾಗಿ
ನೋಡಿಕೊಳ್ಳುವನೆಂಬದಾಗಿ ನನ್ನ ದೇವರಾದ ಯೆಹೋ
ವನ ಮೇಲೆ ಆಣೆಯಿಟ್ಟು ಪ್ರಮಾಣಮಾಡಬೇಕು
ಎಂದು ಬೇಡಿಕೊಂಡಳು. ಅದಕ್ಕೆ ಅರಸನು— ಯೆ
ಹೋವನಾಣೆ, ನಿನ್ನ ಮಗನ ಕೂದಲುಗಳಲ್ಲಿ ಒಂದ
ನ್ನೂ ನೆಲಕ್ಕೆ ಬೀಳಗೊಡುವದಿಲ್ಲ ಎಂದು ಹೇಳಿದನು.
ಆಗ ಸ್ತ್ರೀಯು— ನನ್ನ ಒಡೆಯನಿಗೆ ಇನ್ನೊಂದು ಮಾತ 12
ನ್ನು ಹೇಳಿಕೊಳ್ಳುವದಕ್ಕೆ ಅಪ್ಪಣೆಯಾಗಲಿ ಅನ್ನಲು
ಅರಸನು— ಹೇಳು ಅಂದನು. ಆಕೆಯು— ಅರಸನು 13
ಈ ತೀರ್ಪು ಕೊಟ್ಟದರಿಂದ ತನ್ನನ್ನೇ ಅಪರಾಧಿಯೆಂದು
ನಿರ್ಣಯಿಸಿದ ಹಾಗಾಯಿತು. ಅವನು ತಳ್ಳಲ್ಪ
ಟ್ಟವನನ್ನು ಸೇರಿಸಿಕೊಳ್ಳಲೊಲ್ಲದೆ ಹೋಗುವದರಿಂದ
ದೇವಪ್ರಜೆಗೆ ವಿರೋಧವಾಗಿ ಅದೇ ಆಲೋಚನೆ ಮಾ
ಡಿದ ಹಾಗಾಯಿತು. ಅರಸನು ಹೀಗೇಕೆ ಮಾಡ
ಬೇಕು? ನಾವು ಸಾಯುವವರು; ನೆಲದ ಮೇಲೆ ಚೆಲ್ಲ 14
ಲ್ಪಟ್ಟು ತಿರಿಗಿ ಕೂಡಿಸಲ್ಪಡಲಾರದ ನೀರಿನಂತಿದ್ದೇವೆ.
ಮನುಷ್ಯರ ಪ್ರಾಣವನ್ನು ತೆಗೆಯುವದಕ್ಕೆ ದೇವರಿಗೆ
ಇಷ್ಟವಿಲ್ಲ; ತಳ್ಳಲ್ಪಟ್ಟವನು ತಿರಿಗಿ ತನ್ನ ಬಳಿಗೆ
ಬರುವ ಹಾಗೆ ಆತನು ಸದುಪಾಯಗಳನ್ನು ಕಲ್ಪಿಸುವ
ವನಾಗಿರುತ್ತಾನೆ. ಅದಿರಲಿ, ಜನರು ನಿನ್ನ ಸೇವಕಿ 15
ಯಾದ ನನ್ನನ್ನು ಹೆದರಿಸಿದ್ದರಿಂದ ನಾನು ಈ ಸಂಗತಿ
ಯನ್ನು ಅರಸನಿಗೆ ತಿಳಿಸಿದರೆ ಅವನು ತನ್ನ ಸೇವಕಿಯ
ಬಿನ್ನಹವನ್ನು ಲಾಲಿಸಾನು ಎಂದುಕೊಂಡು ನನ್ನ ಒಡೆ
ಯನಾದ ಅರಸನಿಗೆ ಇದನ್ನು ತಿಳಿಸುವದಕ್ಕೆ ಬಂದೆನು.
ಅರಸನು ತನ್ನ ಸೇವಕಿಯಾದ ನನ್ನ ಬಿನ್ನಹವನ್ನು 16
ಲಾಲಿಸಿ ನನ್ನನ್ನೂ ನನ್ನ ಮಗನನ್ನೂ ದೇವರ ಸ್ವಾ
ಸ್ತ್ಯದಿಂದ ತೆಗೆದುಹಾಕಬೇಕೆಂದಿರುವವರ ಕೈಗೆ ಸಿಕ್ಕ
ದಂತೆ ತಪ್ಪಿಸಿ ರಕ್ಷಿಸುವನೆಂದು ನಂಬಿಕೊಂಡಿದ್ದೇನೆ.
ನನ್ನ ಒಡೆಯನಾದ ಅರಸನ ಮಾತು ಸಮಾಧಾನಕ್ಕೆ 17
ಕಾರಣವಾಗುವದೆಂದು ನೆನಸಿ ನಿನ್ನ ದಾಸಿಯಾದ
ನಾನು ಬಂದೆನು. ನ್ಯಾಯಾನ್ಯಾಯಗಳನ್ನು ಕಂಡು

1) ಪಾಠಾಂತರ: ತನ್ನ ಹಿಂದಿನಿಂದ.

ಹಿಡಿಯುವದರಲ್ಲಿ ನನ್ನ ಒಡೆಯನಾದ ಅರಸನು ದೇವ
ದೂತನಂತಿರುತ್ತಾನೆ; ನಿನ್ನ ದೇವರಾದ ಯೆಹೋವನು
18 ನಿನ್ನ ಸಂಗಡ ಇರಲಿ ಅಂದಳು. ಆಗ ಅರಸನು ಆ
ಸ್ತ್ರೀಗೆ—ನಾನು ನಿನ್ನನ್ನು ಒಂದು ಮಾತು ಕೇಳಬೇಕೆಂ
ದಿರುತ್ತೇನೆ; ನೀನು ಅದನ್ನು ಮರೆಮಾಡದೆ ತಿಳಿಸ
ಬೇಕು ಎಂದು ಹೇಳಲು ಆಕೆಯು—ಅರಸನ ಅಪ್ಪಣೆ
19 ಯಾಗಲಿ ಎಂದು ಉತ್ತರಕೊಟ್ಟಳು. ಅರಸನು—ಈ
ಕಾರ್ಯದಲ್ಲಿ ಯೋವಾಬನ ಕೈಯಿರುತ್ತದಲ್ಲವೋ
ಎಂದು ಕೇಳಿದನು. ಅದಕ್ಕೆ ಸ್ತ್ರೀಯು—ಅರಸನ
ಜೀವದಾಣೆ, ಅರಸನು ಒಂದು ಮಾತು ಹೇಳಿದರೆ ನಾವು
ತಪ್ಪಿಸಿಕೊಂಡು ಎಡಕ್ಕಾಗಲಿ ಬಲಕ್ಕಾಗಲಿ ಜಾರಿಕೊಳ್ಳು
ವದಕ್ಕೆ ಆಗುವದಿಲ್ಲ; ನಿನ್ನ ದಾಸಿಯಾದ ನನ್ನನ್ನು
ಪ್ರೇರಿಸಿ ಈ ಎಲ್ಲಾ ಮಾತುಗಳನ್ನು ನನಗೆ ಕಲಿಸಿಕೊ
ಟ್ಟವನು ನಿನ್ನ ಸೇವಕನಾದ ಯೋವಾಬನೇ ಹೌದು.
20 ಅಬ್ಶಾಲೋಮನ 1)ವಿಷಯವನ್ನು ರೂಪಾಂತರಪಡಿಸು
ವದಕ್ಕೋಸ್ಕರ ನಿನ್ನ ಸೇವಕನಾದ ಯೋವಾಬನೇ ಇದ
ನ್ನು ಮಾಡಿದನು. ನನ್ನ ಒಡೆಯನು ದೇವದೂತನಂಥ
ಜ್ಞಾನಿಯು; ಅವನು ಭೂಲೋಕದಲ್ಲಿ ನಡೆಯುವದ
ನ್ನೆಲ್ಲಾ ತಿಳುಕೊಳ್ಳುವನು ಎಂದು ಉತ್ತರಕೊಟ್ಟಳು.
21 ಅನಂತರ ಅರಸನು ಯೋವಾಬನಿಗೆ—ನೀನು ಕೇಳಿ
ಕೊಂಡದ್ದನ್ನು ಅನುಗ್ರಹಿಸಿದ್ದೇನೆ; ಹೋಗಿ ಯೌವ
ನಸ್ಥನಾದ ಅಬ್ಶಾಲೋಮನನ್ನು ಕರಕೊಂಡು ಬಾ
22 ಅಂದನು. ಆಗ ಯೋವಾಬನು ನೆಲಕ್ಕೆ ಬಿದ್ದು ನಮ
ಸ್ಕರಿಸಿ ಅರಸನನ್ನು ಹರಸಿ—ಅರಸನೇ, ನನ್ನ ಒಡೆ
ಯನೇ, ನೀನು ನಿನ್ನ ಸೇವಕನಾದ ನನ್ನ ಬಿನ್ನಹವನ್ನು
ಲಾಲಿಸಿದ್ದರಿಂದ ನಿನ್ನ ದೃಷ್ಟಿಯಲ್ಲಿ ನನಗೆ ದಯೆದೊರ
23 ಕಿತೆಂದು ಈಗ ಗೊತ್ತಾಯಿತು ಎಂದು ಹೇಳಿ ಎದ್ದು
ಗೆಷೂರಿಗೆ ಹೋಗಿ ಅಬ್ಶಾಲೋಮನನ್ನು ಯೆರೂಸಲೇ
24 ಮಿಗೆ ಕರಕೊಂಡು ಬಂದನು. ಆದರೆ ಅರಸನು—
ಅಬ್ಶಾಲೋಮನು ತನ್ನ ಮನೆಗೆ ಹೋಗಲಿ; ಅವನು
ನನ್ನ ಮುಖವನ್ನು ನೋಡಬಾರದು ಎಂದು ಆಜ್ಞಾಪಿಸಿ
ದ್ದರಿಂದ ಅವನು ತನ್ನ ಮನೆಗೆ ಹೋದನು; ಅರಸನ
ಮುಖವನ್ನು ನೋಡಲಿಲ್ಲ.
25 ಸೌಂದರ್ಯದಲ್ಲಿ ಅಬ್ಶಾಲೋಮನಂತೆ ಹೆಸರು
ಗೊಂಡ ಪುರುಷನು ಇಸ್ರಾಯೇಲ್ಯರಲ್ಲಿ ಒಬ್ಬನೂ ಇರ
ಲಿಲ್ಲ. ಅವನಲ್ಲಿ ಅಂಗಾಲಿನಿಂದ ನಡುನೆತ್ತಿಯ ವರೆಗೆ
26 ಒಂದು ದೋಷವಾದರೂ ಇರಲಿಲ್ಲ. ಅವನು ತಲೆ
ಗೂದಲು ಬಹುಭಾರವಾಗುವದರಿಂದ ಪ್ರತಿವರುಷದ
ಅಂತ್ಯದಲ್ಲಿ ಬೋಳಿಸಿಕೊಳ್ಳುವನು. ಆಗ ಅವನ ಕೂ
ದಲು ಸರಕಾರೀ ತೂಕದ ಪ್ರಕಾರ ಇನ್ನೂರು ರೂಪಾ
27 ಯಿ ತೂಕವಾಗುತ್ತಿತ್ತು. ಅವನಿಗೆ ಮೂರು ಮಂದಿ
ಗಂಡುಮಕ್ಕಳೂ ಒಬ್ಬ ಮಗಳೂ ಇದ್ದರು. ಮಗಳ
ಹೆಸರು ತಾಮಾರ್; ಈಕೆಯು ಬಹು ಸುಂದರಿಯಾಗಿ
ದ್ದಳು.
28 ಅಬ್ಶಾಲೋಮನು ಅರಸನ ಮೋರೆಯನ್ನು ನೋ
ಡದೆ ಎರಡು ವರುಷ ಯೆರೂಸಲೇಮಿನಲ್ಲಿ ವಾಸವಾಗಿ
29 ದ್ದನಂತರ ಒಂದು ದಿವಸ ಅವನು ಅರಸನ ಬಳಿಗೆ
ಕಳುಹಿಸುವದಕ್ಕಾಗಿ ಯೋವಾಬನನ್ನು ಕರೇಕಳುಹಿಸಿ
ದನು; ಆದರೆ ಯೋವಾಬನು ಬರಲಿಲ್ಲ. ಎರಡನೆಯ
ಸಾರಿ ಕರೇಕಳುಹಿಸಿದರೂ ಅವನು ಬರಲಿಲ್ಲ. ಆದದ
ರಿಂದ ಅಬ್ಶಾಲೋಮನು ತನ್ನ ಸೇವಕರಿಗೆ—ನೋಡಿರಿ,
ಸಮೀಪದಲ್ಲಿಯೇ ಯೋವಾಬನ ಜವೆಗೋಧಿಹೊಲ
ವುಂಟಲ್ಲಾ; ಹೋಗಿ ಅದಕ್ಕೆ ಬೆಂಕಿ ಹಚ್ಚಿರಿ ಎಂದು
ಆಜ್ಞಾಪಿಸಿದನು; ಅವರು ಹಾಗೆಯೇ ಮಾಡಿದರು.
ಆಗ ಯೋವಾಬನು ಅಬ್ಶಾಲೋಮನ ಮನೆಗೆ
ಹೋಗಿ—ನಿನ್ನ ಸೇವಕರು ನನ್ನ ಹೊಲಕ್ಕೆ ಬೆಂಕಿಹಚ್ಚಿ
ದ್ದೇಕೆ ಎಂದು ಅವನನ್ನು ಕೇಳಲು ಅಬ್ಶಾಲೋಮನು
ಅವನಿಗೆ—ನಾನು ಗೆಷೂರಿನಿಂದ ಇಲ್ಲಿಗೆ ಬಂದದ್ದೇಕೆ?
ಅಲ್ಲೇ ಇದ್ದರೆ ಒಳ್ಳೇದಾಗುತ್ತಿತ್ತಲ್ಲವೋ ಎಂದು ನಿನ್ನ
ಮುಖಾಂತರ ಅರಸನಿಗೆ ತಿಳಿಸುವದಕ್ಕಾಗಿ ನಿನ್ನನ್ನು
ಕರೇಕಳುಹಿಸಿದೆನು; ನಾನು ಹೇಗೂ ಅರಸನ ಮೋರೆ
ಯನ್ನು ನೋಡಬೇಕು; ನಾನು ಅಪರಾಧಿಯಾಗಿ
ದ್ದರೆ ಅವನು ನನ್ನನ್ನು ಕೊಲ್ಲಿಸಲಿ ಅಂದನು. ಯೋ
ವಾಬನು ಹೋಗಿ ಇದನ್ನು ಅರಸನಿಗೆ ತಿಳಿಸಿದಾಗ ಅರ
ಸನು ಅಬ್ಶಾಲೋಮನನ್ನು ಕರಿಸಿದನು. ಅವನು
ಅರಸನ ಬಳಿಗೆ ಬಂದು ಸಾಷ್ಟಾಂಗನಮಸ್ಕಾರಮಾಡಿದ
ನು. ಅರಸನು ಅವನನ್ನು ಮುದ್ದಿಟ್ಟನು.

### ಅಬ್ಶಾಲೋಮನು ತಂದೆಗೆ ವಿರೋಧವಾಗಿ ಎದ್ದು ರಾಜ್ಯವನ್ನು ಕಿತ್ತುಕೊಂಡದ್ದು.

ಸ್ವಲ್ಪ ಕಾಲವಾದನಂತರ ಅಬ್ಶಾಲೋಮನು
ತನಗೋಸ್ಕರ ಒಂದು ರಥವನ್ನೂ ಕುದುರೆಗಳನ್ನೂ
ತೆಗೆದುಕೊಂಡು ತನ್ನ ಮುಂದೆ ಮೈಗಾವಲಾಗಿ ಓಡು
ವದಕ್ಕೆ ಐವತ್ತು ಮಂದಿಯನ್ನು ನೇಮಿಸಿದನು.
ಅವನು ಹೊತ್ತಾರೆಯಲ್ಲೆದ್ದು ಊರುಬಾಗಿಲ ಬಳಿ
ಯಲ್ಲಿ ನಿಂತುಕೊಳ್ಳುವನು. ಯಾವನಾದರೂ ತನ್ನ
ವ್ಯಾಜ್ಯತೀರಿಸಿಕೊಳ್ಳುವದಕ್ಕಾಗಿ ಅರಸನ ಬಳಿಗೆ
ಹೋಗುವದನ್ನು ಅಬ್ಶಾಲೋಮನು ಕಂಡರೆ ಅಂಥವ
ನನ್ನು ತನ್ನ ಬಳಿಗೆ ಕರೆದು ನೀನು ಯಾವ ಊರಿನ
ವನು ಎಂದು ಕೇಳುವನು. ಅವನು—ನಿನ್ನ ಸೇವಕ
ನಾದ ನಾನು ಇಸ್ರಾಯೇಲ್ಯರ ಇಂಥ ಕುಲಕ್ಕೆ ಸೇರಿ
ದವನು ಎಂದು ಉತ್ತರಕೊಡುವನು. ಆಗ ಅಬ್ಶಾ
ಲೋಮನು—ನೋಡು, ನಿನ್ನ ಕಾರ್ಯವು ಒಳ್ಳೇದೂ
ನ್ಯಾಯವಾದದ್ದೂ ಆಗಿದೆ; ಆದರೆ ವ್ಯಾಜ್ಯಗಳನ್ನು
ವಿಚಾರಿಸುವದಕ್ಕೆ ಅರಸನಿಂದ ಒಬ್ಬನೂ ನೇಮಕ
ವಾಗಿಲ್ಲ. ವ್ಯಾಜ್ಯವಾಗಲಿ ಬಿನ್ನಹವಾಗಲಿ ಉಳ್ಳ
ವರು ಬಂದು ನ್ಯಾಯವನ್ನು ಪಡಕೊಳ್ಳುವ ಹಾಗೆ
ನನ್ನನ್ನೇ ದೇಶದ ನ್ಯಾಯಾಧಿಪತಿಯನ್ನಾಗಿ ನೇಮಿಸಿ
ದ್ದರೆ ಎಷ್ಟೋ ಒಳ್ಳೇದಾಗುತ್ತಿತ್ತು ಎಂದು ಹೇಳು
ವನು. ಯಾವನಾದರೂ ಅವನಿಗೆ ಸಾಷ್ಟಾಂಗ ನಮ
ಸ್ಕಾರಮಾಡುವದಕ್ಕೆ ಬಂದರೆ ಅವನು ಕೂಡಲೆ ಕೈ
ಚಾಚಿ ಅವನನ್ನು ಹಿಡಿದು ಮುದ್ದಿಡುವನು. ಅರಸನ
ಬಳಿಗೆ ವ್ಯಾಜ್ಯಕ್ಕಾಗಿ ಬರುವ ಎಲ್ಲಾ ಇಸ್ರಾಯೇಲ್ಯ
ರಿಗೆ ಅಬ್ಶಾಲೋಮನು ಹೀಗೆಯೇ ಮಾಡಿ ಎಲ್ಲರ
ಮನಸ್ಸುಗಳನ್ನು ತನ್ನ ಕಡೆಗೆ ತಿರುಗಿಸಿಕೊಂಡನು.

1) ಸ್ಥಿತಿಯನ್ನು ಬದಲಾಯಿಸುವದಕ್ಕೋಸ್ಕರ.

1)ನಾಲ್ಕು ವರುಷಗಳಾದನಂತರ ಅಬ್ಷಾಲೋಮನು
ಅರಸನಿಗೆ— ನಾನು ಯೆಹೋವನಿಗೆ ಹೊತ್ತ ಹರಕೆ
ಗಳನ್ನು ಸಲ್ಲಿಸುವದಕ್ಕಾಗಿ ಹೆಬ್ರೋನಿಗೆ ಹೋಗ
ಬೇಕಾಗಿದೆ, ಅಪ್ಪಣೆಯಾಗಲಿ. ನಿನ್ನ ಸೇವಕನಾದ
ನಾನು ಅರಾಮ್‍ದೇಶದ ಗೆಷೂರಿನಲ್ಲಿದ್ದಾಗ— ಯೆ
ಹೋವನು ನನ್ನನ್ನು ತಿರಿಗಿ ಯೆರೂಸಲೇಮಿಗೆ ಬರ
ಮಾಡುವದಾದರೆ ಆತನಿಗೆ ಒಂದು ವಿಶೇಷವಾದ ಆರಾ
ಧನೆಮಾಡಿಸುವೆನೆಂದು ಹರಕೆಮಾಡಿದ್ದೆನು ಎಂದು
ವಿಜ್ಞಾಪಿಸಲು ಅರಸನು— ಹೋಗು, ನಿನಗೆ ಶುಭ
ವಾಗಲಿ ಎಂದನು. ಅಬ್ಷಾಲೋಮನು ಹೆಬ್ರೋನಿಗೆ
ಹೊರಟುಹೋದನು. ಅವನು ಗೂಢಚಾರರನ್ನು ಕಳು
ಹಿಸಿ ಇಸ್ರಾಯೇಲ್ಯರ ಎಲ್ಲಾ ಕುಲದವರಿಗೆ— ನೀವು
ತುತೂರಿಯ ಧ್ವನಿಯನ್ನು ಕೇಳುತ್ತಲೆ ಅಬ್ಷಾಲೋಮ
ನು ಹೆಬ್ರೋನಿನಲ್ಲಿ ಅರಸನಾದನೆಂದು ಆರ್ಭಟಿಸಿರಿ
ಎಂದು ಹೇಳಿಸಿದ್ದನು. ಅಬ್ಷಾಲೋಮನು ಯೆರೂ
ಸಲೇಮಿನಿಂದ ಸಮಾರಾಧನೆಗೆಂದು ಇನ್ನೂರು ಜನ
ರನ್ನು ಕರಕೊಂಡು ಹೋಗಿದ್ದನು. ಅವರು ಯಥಾರ್ಥ
ಮನಸ್ಸಿನಿಂದ ಹೋದವರು; ಅವರಿಗೇನೂ ಗೊತ್ತಿರ
ಲಿಲ್ಲ. ಇದಲ್ಲದೆ ಅವನು ಸಮಾಧಾನಯಜ್ಞವನ್ನು
ಮಾಡುತ್ತಿರುವಾಗ ದಾವೀದನ ಮಂತ್ರಿಯಾಗಿದ್ದ ಗೀ
ಲೋವಿನ ಅಹೀತೋಫೆಲನೆಂಬವನನ್ನು ಅವನ ಊರಾದ
ಗೀಲೋವಿನಿಂದ ಕರೇಕಳುಹಿಸಿದನು. ಜನರು ಅಬ್ಷಾ
ಲೋಮನನ್ನು ಕೂಡಿಕೊಳ್ಳುತ್ತಾ ಬಂದದರಿಂದ ಒಳ
ಸಂಚು ಬಲವಾಗುತ್ತಾ ಹೋಯಿತು.

ಇಸ್ರಾಯೇಲ್ಯರ ಮನಸ್ಸು ಅಬ್ಷಾಲೋಮನ ಕಡೆ
ಗೆ ತಿರುಗಿಕೊಂಡಿತೆಂಬ ವರ್ತಮಾನವು ದಾವೀದನಿಗೆ
ಮುಟ್ಟಿದಾಗ ಅವನು ಯೆರೂಸಲೇಮಿನಲ್ಲಿದ್ದ ತನ್ನ
ಸೇವಕರಿಗೆ— ಏಳಿರಿ, ಓಡಿ ಹೋಗೋಣ; ಇಲ್ಲೇ
ಇದ್ದರೆ ನಾವು ಅಬ್ಷಾಲೋಮನ ಕೈಯಿಂದ ತಪ್ಪಿಸಿಕೊ
ಳ್ಳಲಾರೆವು. ಬೇಗ ಹೊರಡೋಣ; ಅವನು ಅಕಸ್ಮಾ
ತ್ತಾಗಿ ನಮ್ಮ ಮೇಲೆ ಬಿದ್ದು ನಮಗೆ ದುರ್ಗತಿಯನ್ನುಂ
ಟುಮಾಡಿ ಪಟ್ಟಣದವರನ್ನೆಲ್ಲಾ ಕತ್ತಿಯಿಂದ ಸಂಹರಿ
ಸಾನು ಎಂದು ಹೇಳಿದನು. ಸೇವಕರು ಅರಸನಿಗೆ—
ನಮ್ಮ ಒಡೆಯನಾದ ಅರಸನಿಗೆ ಸರಿತೋಚಿದ್ದನ್ನು
ಮಾಡಸಿದ್ಧರಾಗಿದ್ದೇವೆ ಎಂದು ಉತ್ತರಕೊಟ್ಟರು.
ಆಗ ಅರಸನು ಮನೆಕಾಯುವದಕ್ಕಾಗಿ ಹತ್ತು ಮಂದಿ
ಉಪಪತ್ನಿಯರನ್ನು ಬಿಟ್ಟು ಉಳಿದವರನ್ನೆಲ್ಲಾ ಕರ
ಕೊಂಡು ಹೊರಟನು. ಅರಸನೂ ಅವನ ಜೊತೆಯಲ್ಲಿ
ಹೋದ ಜನರೆಲ್ಲರೂ ಪಟ್ಟಣದ ಕಡೇ ಮನೆಯ ಬಳಿ
ಯಲ್ಲಿ ತುಸ ಹೊತ್ತು ನಿಂತರು. ದಾವೀದನ ಎಲ್ಲಾ
ಸೇವಕರೂ ಕೆರೇತ್ಯ, ಪೆಲೇತ್ಯ ಎಂಬ ಕಾವಲುದಂಡು
ಗಳೂ ಗತ್‍ಊರಿನಿಂದ ಅರಸನ ಜೊತೆಯಲ್ಲಿ ಬಂದಿದ್ದ
ಆರುನೂರು ಮಂದಿ ಗಿತ್ತೀಯರೂ ಅರಸನ ಮುಂದೆ
ಹೋದರು.

ಆಗ ಅರಸನು ಗಿತ್ತೀಯನಾದ ಇತ್ತೈ ಎಂಬವ
ನಿಗೆ— ನೀನೂ ನಮ್ಮ ಸಂಗಡ ಯಾಕೆ ಬರಬೇಕು?
ನೀನು ಸ್ವದೇಶವನ್ನು ಬಿಟ್ಟು ನನ್ನ ಆಶ್ರಯಕ್ಕೆ ಬಂದವ
ನಲ್ಲವೇ. ಹಿಂದಿರುಗಿ ಹೋಗಿ ಅರಸನ ಬಳಿಯಲ್ಲಿ
ವಾಸಮಾಡು. ನಾನು ಎಲ್ಲೆಲ್ಲಿಯೋ ಅಲೆಯುತ್ತಿರ 20
ಬೇಕಾಗುವದು; ಹೀಗಿರುವದರಿಂದ ನಿನ್ನೆ ಬಂದಂಥ
ನಿನ್ನನ್ನು ಕರಕೊಂಡು ಹೋಗಿ ಸುಮ್ಮನೆ ಯಾಕೆ
ತಿರುಗಾಡಲಿಕ್ಕೆ ಹಚ್ಚಬೇಕು? ನಿನ್ನ ಸಹೋದರರನ್ನು
ಕರಕೊಂಡು ಹಿಂದಿರುಗಿ ಹೋಗು; ಕೃಪಾಸತ್ಯತೆಗಳು
ನಿನ್ನ ಸಂಗಡ ಇರಲಿ ಎಂದು ಹೇಳಿದನು. ಅದಕ್ಕೆ 21
ಇತ್ತೈ— ಯೆಹೋವನಾಣೆ, ನನ್ನ ಒಡೆಯನಾದ ಅರ
ಸನ ಜೀವದಾಣೆ, ಜೀವ ಹೋದರೂ ಉಳಿದರೂ ನನ್ನ
ಒಡೆಯನಾದ ಅರಸನಿರುವಲ್ಲಿಗೆ ಹೋಗುವೆನು ಎಂದು
ಉತ್ತರಕೊಟ್ಟನು. ಆಗ ದಾವೀದನು ಅವನಿಗೆ— 22
ಒಳ್ಳೇದು ಮುಂದೆ ನಡೆ ಅಂದನು. ಗಿತ್ತೀಯನಾದ
ಇತ್ತೈಯು ತನ್ನ ಎಲ್ಲಾ ಸೈನಿಕರನ್ನೂ ಪರಿಜನವನ್ನೂ
ಕರಕೊಂಡು ಮುಂದೆ ನಡೆದನು. ಇವರೆಲ್ಲರೂ ಮುಂದೆ 23
ನಡೆಯುವಾಗ ಸುತ್ತಣವರೆಲ್ಲರೂ ಬಹಳವಾಗಿ ಅತ್ತರು.
ಅರಸನೂ ಎಲ್ಲಾ ಜನರೂ ಕಿದ್ರೋನ್‍ಹಳ್ಳವನ್ನು ದಾಟಿ
ಅರಣ್ಯಮಾರ್ಗಹಿಡಿದರು.

ಚಾದೋಕನೂ ಅವನ ವಶದಲ್ಲಿದ್ದ ಎಲ್ಲಾ ಲೇವಿ 24
ಯರೂ ದೇವರ ಒಡಂಬಡಿಕೆಯ ಮಂಜೂಷವನ್ನು
ಹೊತ್ತುಕೊಂಡು ಬಂದು ಅದನ್ನು ಜನರೆಲ್ಲರೂ ದಾಟಿ
ಹೋಗುವ ವರೆಗೆ ಕೆಳಗಿಳಿಸಿದ್ದರು. ಎಬ್ಯಾತಾರನೂ
ಬಂದಿದ್ದನು. ಅರಸನು ಚಾದೋಕನಿಗೆ— ನೀನು ದೇವರ 25
ಒಡಂಬಡಿಕೆಯ ಮಂಜೂಷವನ್ನು ಹಿಂದಿರುಗಿ ತೆಗೆದು
ಕೊಂಡು ಹೋಗು; ಯೆಹೋವನ ದೃಷ್ಟಿಯಲ್ಲಿ
ನನಗೆ ದಯೆದೊರಕಿದರೆ ನಾನು ಆತನನ್ನೂ ಆತನ
ಆಲಯವನ್ನೂ ನೋಡುವ ಹಾಗೆ ತಾನೇ ನನ್ನನ್ನು
ಹಿಂದಕ್ಕೆ ಬರಮಾಡುವನು. ಆತನು— ನಿನ್ನಲ್ಲಿ ನನಗೆ 26
ಇಷ್ಟವಿಲ್ಲವೆಂದು ತೋರಿಸಿದರೆ ತನಗೆ ಸರಿಕಂಡಂತೆ
ಮಾಡಲಿ, ಆತನ ಚಿತ್ತ ಅಂದನು. ಇದಲ್ಲದೆ ಅವನು 27
ಯಾಜಕನಾದ ಚಾದೋಕನಿಗೆ— ನೀನು ದೇವದರ್ಶಿ;
ನೀನು ನಿನ್ನ ಮಗನಾದ ಅಹೀಮಾಚನು, ಎಬ್ಯಾತಾ
ರನ ಮಗನಾದ ಯೋನಾತಾನನು ಎಂಬ ಈ ಇಬ್ಬರು
ಹುಡುಗರನ್ನು ಕರಕೊಂಡು ಸುರಕ್ಷಿತವಾಗಿ ಪಟ್ಟಣಕ್ಕೆ
ಹೋಗಬೇಕು. ನಿಮ್ಮಿಂದ ವರ್ತಮಾನಬರುವ ತನಕ 28
ನಾನು ಅಡವಿಯಲ್ಲಿ ಹೊಳೆದಾಟುವ ಸ್ಥಳದ ಹತ್ತಿರ
ಇರುವೆನು ಎಂದು ಹೇಳಿದನು. ಆಗ ಚಾದೋಕನೂ 29
ಎಬ್ಯಾತಾರನೂ ದೇವರ ಮಂಜೂಷವನ್ನು ಯೆರೂಸ
ಲೇಮಿಗೆ ಒಯ್ದು ಅಲ್ಲೇ ವಾಸಿಸಿದರು.

ದಾವೀದನು ಮೋರೆಯನ್ನು ಮುಚ್ಚಿಕೊಂಡು ಅಳು 30
ತ್ತಾ ಬರಿಗಾಲಿನಿಂದ ಎಣ್ಣೇ ಮರಗಳ ಗುಡ್ಡವನ್ನೇರಿ
ದನು. ಅವನ ಜೊತೆಯಲ್ಲಿದ್ದ ಜನರೂ ಮೋರೆ ಮುಚ್ಚಿ
ಕೊಂಡು ಅಳುತ್ತಾ ಏರಿದರು. ಅಬ್ಷಾಲೋಮನ 31
ಸಂಗಡ ಒಳಸಂಚುಮಾಡಿದವರಲ್ಲಿ ಅಹೀತೋಫೆಲನೂ
ಇದ್ದಾನೆಂಬ ವರ್ತಮಾನವು ದಾವೀದನಿಗೆ ಮುಟ್ಟಿ
ದಾಗ ಅವನು— ಯೆಹೋವನೇ, ಅಹೀತೋಫೆಲನ
ಆಲೋಚನೆಗಳನ್ನು ನಿರರ್ಥಕಪಡಿಸು ಎಂದು ಪ್ರಾರ್ಥ
ಸಿದನು. ಅವನು ಗುಡ್ಡದ ತುದಿಯಲ್ಲಿ ದೇವಾರಾಧನೆ 32
ನಡೆಯುವ ಸ್ಥಳಕ್ಕೆ ಬಂದಾಗ ಅರ್ಕೀಯನಾದ ಹೂಷೈ
ಎಂಬವನು ಅಂಗಿಯನ್ನು ಹರಕೊಂಡು ತಲೆಯ ಮೇಲೆ

1) ಪಾಠಾಂತರ: ನಾಲ್ವತ್ತು.

ಮಣ್ಣುಹಾಕಿಕೊಂಡು ಅರಸನ ಬಳಿಗೆ ಬಂದನು.
33 ಅರಸನು ಅವನಿಗೆ—ನೀನು ನನ್ನ ಸಂಗಡ ಬರುವ
34 ದಾದರೆ ನನಗೆ ಭಾರವಾಗುವಿಯಷ್ಟೆ. ಆದರೆ ನೀನು
ಹಿಂದಿರುಗಿ ಪಟ್ಟಣಕ್ಕೆ ಹೋಗಿ ಅಬ್ಷಾಲೋಮನಿಗೆ—
ಅರಸನೇ, ನಾನು ನಿನ್ನ ಸೇವಕನು; ಮುಂಚೆ ನಿನ್ನ
ತಂದೆಯನ್ನು ಸೇವಿಸಿದಂತೆ ಈಗ ನಿನ್ನನ್ನು ಸೇವಿಸು
ತ್ತೇನೆ ಎಂದು ಹೇಳುವದಾದರೆ ನನಗೋಸ್ಕರ ಅಹೀ
ತೋಫೆಲನ ಆಲೋಚನೆಯನ್ನು ವ್ಯರ್ಥಮಾಡುವದಕ್ಕೆ
35 ನಿನಗೆ ಅನುಕೂಲವಾಗುವದು. ಅಲ್ಲಿ ನಿನ್ನ ಸಂಗಡ
ಯಾಜಕರಾದ ಚಾದೋಕ್ ಎಬ್ಯಾತಾರರು ಇರುತ್ತಾ
ರಲ್ಲಾ; ಅರಮನೆಯಲ್ಲಿ ನಿನಗೆ ಗೊತ್ತಾಗುವ ವರ್ತ
ಮಾನವನ್ನೆಲ್ಲಾ ಆ ಇಬ್ಬರು ಯಾಜಕರಿಗೆ ತಿಳಿಸು.
36 ಅವರ ಬಳಿಯಲ್ಲಿ ಇಬ್ಬರು ಹುಡುಗರಿದ್ದಾರೆ; ಒಬ್ಬ
ನು ಚಾದೋಕನ ಮಗನಾದ ಅಹೀಮಾಚನು; ಇನ್ನೊ
ಬ್ಬನು ಎಬ್ಯಾತಾರನ ಮಗನಾದ ಯೋನಾತಾನನು.
ಇವರ ಮುಖಾಂತರವಾಗಿ ನೀನು ಎಲ್ಲಾ ವರ್ತಮಾನ
ವನ್ನು ನನಗೆ ಮುಟ್ಟಿಸಬಹುದು ಎಂದು ಹೇಳಿ ಅವ
37 ನನ್ನು ಕಳುಹಿಸಿದನು. ಅಬ್ಷಾಲೋಮನು ಯೆರೂಸ
ಲೇಮನ್ನು ಪ್ರವೇಶಿಸುವಷ್ಟರಲ್ಲೇ ದಾವೀದನ ಸ್ನೇಹಿತ
ನಾದ ಹೂಷೈಯು ಪಟ್ಟಣಕ್ಕೆ ಬಂದನು.

### ಚೀಬನು ಅರಸನಿಗೆ ಆಹಾರತಂದದ್ದೂ ಶಿಮ್ಮಿಯು ಶಪಿಸಿದ್ದೂ.

16 ದಾವೀದನು ಗುಡ್ಡದ ತುದಿಯ ಆಚೆಗೆ ಹೋದ
ಕೂಡಲೆ ಮೆಫೀಬೋಶೆತನ ಸೇವಕನಾದ ಚೀಬನು
ತಡಿಹಾಕಿದ ಎರಡು ಕತ್ತೆಗಳ ಮೇಲೆ ಇನ್ನೂರು
ರೊಟ್ಟಿಗಳನ್ನೂ ನೂರು ಒಣಗಿದ ದ್ರಾಕ್ಷೇ ಗೊಂಚ
ಲುಗಳನ್ನೂ ನೂರು ಹಣ್ಣುಗಳನ್ನೂ ಒಂದು ಬುದ್ದಲಿ
ದ್ರಾಕ್ಷಾರಸವನ್ನೂ ಹೇರಿಕೊಂಡು ಬಂದು ಅವನನ್ನು
2 ಎದುರುಗೊಂಡನು. ಅರಸನು ಚೀಬನನ್ನು—ಇವು
ಗಳನ್ನು ಯಾಕೆ ತಂದಿ ಎಂದು ಕೇಳಲು ಅವನು—
ಕತ್ತೆಗಳನ್ನು ಅರಸನ ಮನೆಯವರು ಸವಾರಿಮಾಡು
ವದಕ್ಕಾಗಿಯೂ ಹಣ್ಣುರೊಟ್ಟಿಗಳನ್ನು ಆಳುಗಳು ತಿನ್ನು
ವದಕ್ಕಾಗಿಯೂ ದ್ರಾಕ್ಷಾರಸವನ್ನು ಅರಣ್ಯದಲ್ಲಿ ದಣಿ
ದವರು ಕುಡಿಯುವದಕ್ಕಾಗಿಯೂ ತಂದಿದ್ದೇನೆ ಎಂದು
3 ಉತ್ತರಕೊಟ್ಟನು. ಅರಸನು ತಿರಿಗಿ ಅವನನ್ನು—ನಿನ್ನ
ಯಜಮಾನನ ಮಗನು ಎಲ್ಲಿದ್ದಾನೆಂದು ಕೇಳಲು
ಅವನು—ತನ್ನ ತಂದೆಯ ರಾಜ್ಯವನ್ನು ಇಸ್ರಾಯೇ
ಲ್ಯರು ಈಹೊತ್ತು ತನಗೆ ತಿರಿಗಿ ಕೊಡುವರೆಂದು ಹೇಳಿ
ಅವನು ಯೆರೂಸಲೇಮಿನಲ್ಲೇ ಉಳುಕೊಂಡನು ಅಂದ
4 ನು. ಆಗ ಅರಸನು ಅವನಿಗೆ—ಮೆಫೀಬೋಶೆತನ ಆಸ್ತಿ
ಯೆಲ್ಲಾ ನಿನ್ನದೇ ಎಂದು ಹೇಳಲು ಅವನು—ಅರಸನೇ,
ನಿನಗೆ ಸಾಷ್ಟಾಂಗನಮಸ್ಕಾರಮಾಡುತ್ತೇನೆ; ನನ್ನ ಒಡೆ
ಯನೇ, ನಿನ್ನ ದೃಷ್ಟಿಯಲ್ಲಿ ನನಗೆ ದಯೆದೊರಕಲಿ
ಎಂದನು.
5 ಅರಸನಾದ ದಾವೀದನು ಬಹುರೀಮಿಗೆ ಬಂದಾಗ
ಸೌಲನ ವಂಶದವನೂ ಗೇರನ ಮಗನೂ ಆದ ಶಿಮ್ಮೀ
ಎಂಬವನು ದಾವೀದನನ್ನು ಶಪಿಸುತ್ತಾ ಆ ಊರಿನಿಂದ
6 ಹೊರಗೆ ಬಂದನು. ಅವನು ದಾವೀದನಿಗೂ ಅವನ
ಎಲ್ಲಾ ಸೇವಕರಿಗೂ ಎಡಬಲದಲ್ಲಿರುವ ಸೈನಿಕರಿಗೂ
ಶೂರರಿಗೂ ಕಲ್ಲೆಸೆಯ ತೊಡಗಿದನು. ಅವನು ಶಪಿ
ಸುತ್ತಾ—ನಡೆ, ಕೊಲೆಗಾರನೇ, ನೀಚನೇ, ನಡೆ; ಸೌಲನ
ರಾಜ್ಯವನ್ನು ಕಸಕೊಂಡು ಅವನ ಮನೆಯವರನ್ನು
ಕೊಂದದ್ದಕ್ಕಾಗಿ ಯೆಹೋವನು ನಿನಗೆ ಮುಯ್ಯಿ
ತೀರಿಸಿದ್ದಾನೆ; ಆತನು ರಾಜ್ಯವನ್ನು ನಿನ್ನ ಮಗನಾದ
ಅಬ್ಷಾಲೋಮನಿಗೆ ಕೊಟ್ಟುಬಿಟ್ಟನು. ಕೊಲೆಗಾರನೇ,
ಇಗೋ, ನಿನಗೆ ಈಗ ತಕ್ಕ ಆಪತ್ತು ಬಂದಿದೆ ಅಂದನು.
ಆಗ ಚೆರೂಯಳ ಮಗನಾದ ಅಬೀಷೈಯು ಅರಸನಿಗೆ—
ಈ ಸತ್ತ ನಾಯಿ ಅರಸನಾದ ನನ್ನ ಒಡೆಯನನ್ನು ಶಪಿ
ಸುವದೇನು? ಅಪ್ಪಣೆಯಾಗಲಿ, ನಾನು ಅವನಿರುವಲ್ಲಿಗೆ
ಹೋಗಿ ಅವನ ತಲೆ ಹಾರಿಸಿಕೊಂಡು ಬರುವೆನು ಅಂದ
ನು. ಅದಕ್ಕೆ ಅರಸನು—ಚೆರೂಯಳ ಮಕ್ಕಳೇ,
ನನಗೆ ನಿಮ್ಮ ಗೊಡವೆಯೇ ಬೇಡ; ಬಿಡಿರಿ, ಅವನು
ಶಪಿಸಲಿ; ದಾವೀದನನ್ನು ಶಪಿಸೆಂದು ಯೆಹೋವನೇ
ಅವನಿಗೆ ಆಜ್ಞಾಪಿಸಿದ ಮೇಲೆ ನೀನು ಹೀಗೇಕೆ ಮಾಡಿದಿ
ಎಂದು ಅವನನ್ನು ಯಾರು ಕೇಳಬಹುದು ಎಂದು
ಉತ್ತರಕೊಟ್ಟನು. ಇದಲ್ಲದೆ ಅವನು ಅಬೀಷೈಗೂ
ತನ್ನ ಎಲ್ಲಾ ಸೇವಕರಿಗೂ—ನೋಡಿರಿ, ನನ್ನಿಂದ ಹುಟ್ಟಿ
ದ ನನ್ನ ಮಗನೇ ನನ್ನ ಪ್ರಾಣವನ್ನು ತೆಗೆಯಬೇ
ಕೆಂದಿರುವಲ್ಲಿ ಈ ಬೆನ್ಯಾಮೀನ್ಯನು ಹೀಗೆ ಮಾಡುವದು
ಯಾವ ದೊಡ್ಡ ಮಾತು! ಬಿಡಿರಿ, ಅವನು ಶಪಿಸಲಿ;
ಹೀಗೆ ಮಾಡಬೇಕೆಂದು ಯೆಹೋವನೇ ಅವನಿಗೆ ಆಜ್ಞಾ
ಪಿಸಿದ್ದಾನೆ. ಒಂದು ವೇಳೆ ಯೆಹೋವನು ನನ್ನ
ಕಷ್ಟವನ್ನು ನೋಡಿ ಈಹೊತ್ತಿನ ಶಾಪಕ್ಕೆ ಬದಲಾಗಿ
ನನಗೆ ಶುಭವನ್ನು ಅನುಗ್ರಹಿಸಾನು ಎಂದು ಹೇಳಿದನು.
ದಾವೀದನೂ ಅವನ ಜನರೂ ದಾರಿಹಿಡಿದು ಹೋಗು
ವಾಗ ಶಿಮ್ಮಿಯು ಶಪಿಸುತ್ತಾ ಕಲ್ಲೆಸೆಯುತ್ತಾ ಧೂಳೆರ
ಚುತ್ತಾ ಗುಡ್ಡದ ಓರೆಯಲ್ಲಿ ಸಮಾನಾಂತರದಲ್ಲೇ
ನಡೆಯುತ್ತಿದ್ದನು. ಅರಸನೂ ಅವನ ಜೊತೆಯಲ್ಲಿ
ಬಂದವರೆಲ್ಲರೂ ದಣಿದವರಾಗಿ ಹೋಗಬೇಕಾದ ಸ್ಥಳ
ವನ್ನು ಸೇರಿ ಅಲ್ಲಿ ವಿಶ್ರಮಿಸಿಕೊಂಡರು.

### ಅಬ್ಷಾಲೋಮನು ಅಹೀತೋಫೆಲನ ಉಪದೇಶದಂತೆ ತನ್ನ ತಂದೆಯ ಉಪಪತ್ನಿಗಳನ್ನು ಕೆಡಿಸಿದ್ದು.

ಇಷ್ಟರಲ್ಲಿ ಅಬ್ಷಾಲೋಮನು ಎಲ್ಲಾ ಇಸ್ರಾಯೇಲ್ಯ
ರೊಡನೆ ಯೆರೂಸಲೇಮಿಗೆ ಬಂದನು. ಅಹೀತೋಫೆ
ಲನೂ ಅವನ ಸಂಗಡ ಇದ್ದನು. ಅರ್ಕೀಯನೂ
ದಾವೀದನ ಸ್ನೇಹಿತನೂ ಆಗಿದ್ದ ಹೂಷೈಯು ಅಬ್ಷಾ
ಲೋಮನ ಬಳಿಗೆ ಬಂದು—ಅರಸನು ಚಿರಂಜೀವಿ
ಯಾಗಿರಲಿ, ಅರಸನು ಚಿರಂಜೀವಿಯಾಗಿರಲಿ ಎಂದು
ಕೂಗಿದನು. ಅಬ್ಷಾಲೋಮನು ಅವನಿಗೆ—ಸ್ನೇಹಿ
ತನ ಮೇಲೆ ನಿನಗಿದ್ದ ಪ್ರೀತಿ ಇಷ್ಟೇಯೇನು? ನೀನು
ನಿನ್ನ ಸ್ನೇಹಿತನೊಡನೆ ಯಾಕೆ ಹೋಗಲಿಲ್ಲ ಅಂದನು.
ಅದಕ್ಕೆ ಹೂಷೈಯು—ಹಾಗಲ್ಲ, ಯೆಹೋವನೂ ಈ
ಜನರೂ ಎಲ್ಲಾ ಇಸ್ರಾಯೇಲ್ಯರೂ ಯಾವನನ್ನು ಆರಿಸಿ
ದ್ದಾರೋ ಅವನ ಪಕ್ಷದವನಾಗಿರುವೆನು; ಅವನ ಬಳಿ
ಯಲ್ಲಿ ವಾಸಿಸುವೆನು. ಇದಲ್ಲದೆ ನಾನು ಈಗ
ಸೇವಿಸಬೇಕೆಂದಿರುವದು ರಾಜಪುತ್ರನ ಸನ್ನಿಧಿಯಲ್ಲಿ

ಯಲ್ಲವೇ. ನಿನ್ನ ತಂದೆಯ ಸನ್ನಿಧಿಯಲ್ಲಿ ಸೇವಿಸಿ
ದಂತೆ ನಿನ್ನ ಸನ್ನಿಧಿಯಲ್ಲಿಯೂ ಸೇವಿಸುವೆನು ಎಂದು
ಉತ್ತರಕೊಟ್ಟನು.
ಅನಂತರ ಅಬ್ಷಾಲೋಮನು—ನಾವು ಈಗ ಮಾಡ
ತಕ್ಕದ್ದೇನು? ಆಲೋಚನೆ ಹೇಳು ಎಂಬದಾಗಿ ಅಹೀ
ತೋಫೆಲನನ್ನು ಕೇಳಲು ಅವನು—ಹೋಗಿ ನಿನ್ನ
ತಂದೆಯು ಮನೆಕಾಯುವದಕ್ಕೆ ಬಿಟ್ಟಿರುವ ಅವನ
ಉಪಪತ್ನಿಗಳೊಡನೆ ಸಂಗಮಿಸು. ಹೀಗೆ ಮಾಡುವ
ದಾದರೆ ನೀನು ನಿನ್ನ ತಂದೆಗೆ ಅಸಹ್ಯವಾದಿಯೆಂದು
ಎಲ್ಲಾ ಇಸ್ರಾಯೇಲ್ಯರಿಗೆ ತಿಳಿಯುವದರಿಂದ ನಿನ್ನ
ಪಕ್ಷದವರು ಬಲಗೊಳ್ಳುವರು ಎಂದು ಉತ್ತರಕೊಟ್ಟ
ನು. ಆಗ ಅಬ್ಷಾಲೋಮನಿಗೋಸ್ಕರ ಮಾಳಿಗೆಯ
ಮೇಲೆ ಗುಡಾರಹಾಕಿದರು. ಅವನು ಎಲ್ಲಾ ಇಸ್ರಾ
ಯೇಲ್ಯರ ಮುಂದೆಯೇ ತನ್ನ ತಂದೆಯ ಉಪಪತ್ನಿ
ಗಳನ್ನು ಕೂಡಿದನು. ಆ ಕಾಲದಲ್ಲಿ ಅಹೀತೋಫೆ
ಲನ ಆಲೋಚನೆಗಳಿಗೆ ದೈವೋತ್ತರಗಳಿಗಿರುವಷ್ಟು ಬೆಲೆ
ಯಿತ್ತು. ದಾವೀದನೂ ಅಬ್ಷಾಲೋಮನೂ ಅವನ
ಆಲೋಚನೆಗಳನ್ನು ಗೌರವಿಸುತ್ತಿದ್ದರು.

ಹೂಶೈಯು ಅಹೀತೋಫೆಲನ ಆಲೋಚನೆಯನ್ನು ನಿರರ್ಥಕ ಪಡಿಸಿದ್ದೂ ಅಹೀತೋಫೆಲನು ಆತ್ಮಹತ್ಯಮಾಡಿಕೊಂಡದ್ದೂ.

17 ತರುವಾಯ ಅಹೀತೋಫೆಲನು ಅಬ್ಷಾಲೋಮನಿ
ಗೆ—ಅಪ್ಪಣೆಯಾಗಲಿ, ನಾನು ಹನ್ನೆರಡು ಸಾವಿರ
ಜನರನ್ನು ಆರಿಸಿಕೊಂಡು ಈ ರಾತ್ರಿಯೇ ದಾವೀದ
ನನ್ನು ಹಿಂದಟ್ಟುವೆನು; ಅವನು ದಣಿದವನೂ ಧೈರ್ಯ
ಗುಂದಿದವನೂ ಆಗಿರುವಾಗಲೇ ಫಕ್ಕನೆ ಅವನ ಮೇಲೆ
ಬಿದ್ದು ಅವನನ್ನು ಬೆದರಿಸುವೆನು, ಅವನ ಜನರೆಲ್ಲರೂ
ಓಡಿಹೋಗುವರು. ಅರಸನೊಬ್ಬನನ್ನೇ ಕೊಂದು ಎಲ್ಲಾ
ಜನರನ್ನು ತಿರಿಗಿ ನಿನ್ನ ಬಳಿಗೆ ಬರಮಾಡುವೆನು. ನಿನ್ನ
ಅಪೇಕ್ಷೆಯಂತೆ ಎಲ್ಲಾ ಜನರೂ ಹಿಂದಿರುಗಿ ಬಂದ
ಮೇಲೆ ದೇಶದಲ್ಲೆಲ್ಲಾ ಸಮಾಧಾನವುಂಟಾಗುವದು
ಎಂದು ಹೇಳಿದನು.
ಈ ಮಾತು ಅಬ್ಷಾಲೋಮನಿಗೂ ಇಸ್ರಾಯೇಲ್ಯರ
ಎಲ್ಲಾ ಹಿರಿಯರಿಗೂ ಸರಿಯಾಗಿ ಕಂಡಿತು. ಆ ಮೇಲೆ
ಅಬ್ಷಾಲೋಮನು—ಅರ್ಕೀಯನಾದ ಹೂಶೈಯನ್ನು
ಕರೆದು ಅವನ ಅಭಿಪ್ರಾಯವನ್ನು ಕೇಳೋಣ ಎಂದು
ಹೇಳಿ ಅವನು ತನ್ನ ಬಳಿಗೆ ಬಂದಾಗ ಅವನನ್ನು—
ಅಹೀತೋಫೆಲನು ಹೀಗೆ ಹೀಗೆ ಹೇಳಿದ್ದಾನೆ; ಇದರಂತೆ
ಮಾಡಿದರೆ ಒಳ್ಳೇದಾಗುವದೋ? ಇಲ್ಲವಾದರೆ ನಿನ್ನ
ಅಭಿಪ್ರಾಯವೇನು ಎಂದು ಕೇಳಲು ಹೂಶೈಯು ಅ
ಬ್ಷಾಲೋಮನಿಗೆ—ಈ ಸಾರಿ ಅಹೀತೋಫೆಲನು ಹೇಳಿ
ದ ಆಲೋಚನೆ ಒಳ್ಳೇದಲ್ಲ; ನಿನ್ನ ತಂದೆಯೂ ಅವನ
ಜನರೂ ಶೂರರಾಗಿದ್ದಾರೆಂದೂ ಈಗ ಅವರು ಮರಿ
ಯನ್ನು ಕಳಕೊಂಡ ಕರಡಿಯಂತೆ ರೋಷವುಳ್ಳವರಾಗಿ
ದ್ದಾರೆಂದೂ ನಿನಗೆ ಗೊತ್ತುಂಟಲ್ಲಾ; ಇದಲ್ಲದೆ ಅವನು
ಯುದ್ಧನಿಪುಣನು; ಜನರ ಮಧ್ಯದಲ್ಲಿ ರಾತ್ರಿ ಕಳೆಯು
ವದಿಲ್ಲ. ಅವನು ಈಗ ಒಂದು ಗುಹೆಯಲ್ಲಾಗಲಿ
ಬೇರೆ ಯಾವದಾದರೊಂದು ಸ್ಥಳದಲ್ಲಾಗಲಿ ಅಡಗಿ
ಕೊಂಡಿರುವನು. ಮೊದಲು ನಮ್ಮವರಲ್ಲೇ ಕೆಲವರು
ಮಡಿದರೆ ಜನರು ಇದನ್ನು ಕೇಳಿ ಅಬ್ಷಾಲೋಮನ
ಪಕ್ಷದವರಿಗೆ ಮಹಾಪಜಯವಾಯಿತೆಂದು ಸುದ್ದಿ ಹಬ್ಬಿ
ಸುವರು. ಆಗ ಸಿಂಹಹೃದಯರಾದ ಶೂರರ ಎದೆ 10
ಯೂ ಕರಗಿ ನೀರಾಗುವದು. ನಿನ್ನ ತಂದೆಯು ರಣ
ವೀರನೆಂದೂ ಅವನ ಸಂಗಡ ಇದ್ದವರು ಪರಾಕ್ರಮ
ಶಾಲಿಗಳೆಂದೂ ಎಲ್ಲಾ ಇಸ್ರಾಯೇಲ್ಯರು ಬಲ್ಲರಷ್ಟೆ.
ಹೀಗಿರುವದರಿಂದ ನನ್ನ ಆಲೋಚನೆಯನ್ನು ಕೇಳು— 11
ದಾನಿನಿಂದ ಬೇರ್ಷೆಬದ ವರೆಗೆ ವಾಸವಾಗಿರುವ ಇಸ್ರಾ
ಯೇಲ್ಯರೊಳಗಿಂದ ಸಮುದ್ರದ ಮರಳಿನಷ್ಟು ಅಸಂಖ್ಯ
ವಾದ ಸೈನ್ಯವನ್ನು ಕೂಡಿಸಿ ನೀನೂ ಅವರ ಜೊತೆಯಲ್ಲಿ
ಯುದ್ಧಕ್ಕೆ ಹೋಗು. ನಾವು ಅವನಿರುವ ಸ್ಥಳವನ್ನು 12
ಗೊತ್ತುಮಾಡಿಕೊಂಡು ಹೋಗಿ ಇಬ್ಬನಿಯು ನೆಲದ
ಮೇಲೆ ಹೇಗೋ ಹಾಗೆಯೇ ನಾವು ಅವರ ಮೇಲೆ
ಬೀಳೋಣ. ಆಗ ಅವನೂ ಅವನ ಜನರೂ ನಮ್ಮ
ಕೈಗೆ ಸಿಕ್ಕುವರು; ಒಬ್ಬನೂ ತಪ್ಪಿಸಿಕೊಳ್ಳಲಾರನು.
ಅವನು ಒಂದು ಪಟ್ಟಣವನ್ನು ಹೊಕ್ಕಿರುವದಾದರೆ 13
ಇಸ್ರಾಯೇಲ್ಯರೆಲ್ಲರೂ ಹಗ್ಗಗಳನ್ನು ತೆಗೆದುಕೊಂಡು
ಅಲ್ಲಿಗೆ ಬರಲಿ; ಆಗ ಆ ಊರನ್ನು ಒಂದು ಹರಳಾದ
ರೂ ಉಳಿಯದಂತೆ ಹಗ್ಗಗಳಿಂದ ಎಳೆದುಕೊಂಡುಹೋ
ಗಿ ಹೊಳೆಯಲ್ಲಿ ಹಾಕಿ ಬಿಡೋಣ ಅಂದನು. ಇದನ್ನು 14
ಕೇಳಿ ಅಬ್ಷಾಲೋಮನೂ ಎಲ್ಲಾ ಇಸ್ರಾಯೇಲ್ಯರೂ
ಅರ್ಕೀಯನಾದ ಹೂಶೈಯ ಆಲೋಚನೆಯು ಅಹೀ
ತೋಫೆಲನ ಆಲೋಚನೆಗಿಂತ ಒಳ್ಳೇದಾಗಿದೆ ಎಂದರು.
ಯೆಹೋವನು ಅಬ್ಷಾಲೋಮನಿಗೆ ಕೇಡನ್ನುಂಟು
ಮಾಡಬೇಕೆಂದು ಅಹೀತೋಫೆಲನ ಆಲೋಚನೆಯನ್ನು
ವ್ಯರ್ಥಮಾಡಿದನು.
ತರುವಾಯ ಹೂಶೈಯು ಯಾಜಕರಾದ ಚಾ 15
ದೋಕ ಎಬ್ಯಾತಾರರಿಗೆ—ಅಹೀತೋಫೆಲನು ಅಬ್ಷಾ
ಲೋಮನಿಗೂ ಇಸ್ರಾಯೇಲ್ಯರ ಹಿರಿಯರಿಗೂ ಇಂಥಿಂಥ
ಆಲೋಚನೆಯನ್ನು ಹೇಳಿದನು; ನಾನು ಹೀಗೆ ಹೀಗೆ
ಹೇಳಿದೆನು. ಆದದರಿಂದ ನೀವು ಬೇಗನೆ ಅರಸನಾದ 16
ದಾವೀದನಿಗೆ—ನೀನು ಈ ರಾತ್ರಿ ಅಡವಿಯಲ್ಲಿ ಹೊಳೆ
ದಾಟುವ ಸ್ಥಳದ ಹತ್ತಿರ ಇಳುಕೊಳ್ಳಬೇಡ; ಶೀಘ್ರ
ವಾಗಿ ಹೊಳೆದಾಟಿ ಮುಂದೆ ಹೋಗಿಬಿಡು; ಇಲ್ಲ
ವಾದರೆ ನೀನೂ ನಿನ್ನ ಜನರೂ ನಾಶವಾಗುವಿರಿ ಎಂದು
ಹೇಳಿಕಳುಹಿಸಿರಿ ಅಂದನು. ಯೋನಾತಾನ್ ಅಹೀ 17
ಮಾಚರು ರೋಗೆಲಿನ ಬುಗ್ಗೆಯ ಬಳಿಯಲ್ಲಿದ್ದರು.
ಇವರ ಮನೆಯ ದಾಸಿಯು ಎಲ್ಲಾ ವರ್ತಮಾನಗ
ಳನ್ನು ಇವರಿಗೂ ಇವರು ಅರಸನಾದ ದಾವೀದನಿಗೂ
ಮುಟ್ಟಿಸುವಂತೆ ಗೊತ್ತುಮಾಡಿಕೊಂಡಿದ್ದರು. ತಮ್ಮ
ನ್ನು ಯಾರೂ ನೋಡಬಾರದೆಂದು ಇವರು ತಾವಾಗಿ
ಊರೊಳಗೆ ಬರಲಿಲ್ಲ. ಆದರೂ ಒಬ್ಬ ಯೌವನಸ್ಥ 18
ನು ಅವರನ್ನು ನೋಡಿ ಅಬ್ಷಾಲೋಮನಿಗೆ ತಿಳಿಸಿದನು.
ಅಷ್ಟರಲ್ಲಿ ಅವರಿಬ್ಬರೂ ಬಹುರೀಮಿಗೆ ಓಡಿ ಹೋಗಿ
ಅಲ್ಲಿ ಒಬ್ಬನ ಮನೆಯನ್ನು ಹೊಕ್ಕರು. ಆ ಮನೆಯ
ಅಂಗಳದಲ್ಲಿ ಒಂದು ಬಾವಿಯಿತ್ತು. ಅವರು ಅದರಲ್ಲಿ
ಇಳಿದರು. ಕೂಡಲೆ ಆ ಮನೆಯ ಹೆಂಗಸು ಅದರ 19
ಮೇಲೆ ಒಂದು ಬಟ್ಟೆಯನ್ನು ಹಾಸಿ ಗೋದಿಯ ನುಚ್ಚ
ನ್ನು ಹರವಿದಳು. ಆದದರಿಂದ ಸಂಗತಿಯು ಯಾರಿ
ಗೂ ಗೊತ್ತಾಗಲಿಲ್ಲ. ಅಬ್ಷಾಲೋಮನ ಸೇವಕರು ಆ 20

ಸ್ತ್ರೀಯ ಮನೆಗೆ ಹೋಗಿ—ಅಹೀಮಾಚ್ ಯೋನಾ
ತಾನರೆಲ್ಲಿ ಎಂದು ಆಕೆಯನ್ನು ಕೇಳಿದ್ದಕ್ಕೆ ಆಕೆಯು—
ಅವರು ಹಳ್ಳದಾಟಿ ಹೋಗಿಬಿಟ್ಟರು ಎಂದು ಉತ್ತರ
ಕೊಟ್ಟಳು. ಅವರು ಅವರನ್ನು ಹುಡುಕುವದಕ್ಕೆ ಹೋ
21 ಗಿ ಕಾಣದೆ ಯೆರೂಸಲೇಮಿಗೆ ಹಿಂದಿರುಗಿದರು. ಅವ
ರು ಹೋದಕೂಡಲೆ ಇವರಿಬ್ಬರೂ ಬಾವಿಯಿಂದ ಮೇಲ
ಕ್ಕೆ ಬಂದು ಅರಸನಾದ ದಾವೀದನ ಬಳಿಗೆ ಹೋಗಿ ಅವ
ನಿಗೆ—ಅಹೀತೋಫೆಲನು ನಿನಗೆ ವಿರೋಧವಾಗಿ ಇಂ
ಥಿಂಥ ಆಲೋಚನೆಯನ್ನು ಹೇಳಿದ್ದಾನೆ; ಆದದರಿಂದ
ಬೇಗನೆ ಎದ್ದು ಹೊಳೆದಾಟಿ ಹೋಗು ಎಂದು ಹೇಳಿ
22 ದರು. ಆಗ ದಾವೀದನೂ ಅವನ ಜೊತೆಯಲ್ಲಿದ್ದವರೆ
ಲ್ಲರೂ ಯೊರ್ದನ್‌ಹೊಳೆಯನ್ನು ದಾಟಿದರು. ಉದ
ಯವಾದಾಗ ದಾಟಬೇಕಾದವನೊಬ್ಬನೂ ಇರಲಿಲ್ಲ.
23 ಅಹೀತೋಫೆಲನು ತನ್ನ ಆಲೋಚನೆಯು ನಡೆಯಲಿಲ್ಲ
ವೆಂದು ತಿಳಿದು ಕತ್ತೆಗೆ ತಡಿಹಾಕಿಸಿ ಕೂತುಕೊಂಡು
ತನ್ನ ಊರಿಗೆ ಹೋಗಿ ಮನೆಯಲ್ಲಿ ವ್ಯವಸ್ಥೆಮಾಡಿ
ಉರ್ಲುಹಾಕಿಕೊಂಡು ಸತ್ತನು. ಅವನ ಶವವನ್ನು
ಅವನ ತಂದೆಯ ಶ್ಮಶಾನಭೂಮಿಯಲ್ಲಿ ಸಮಾಧಿಮಾಡಿ
ದರು.

ದಾವೀದನು ಮಹನಯಿಮಿಗೆ ಹೋದದ್ದೂ ಅಬ್ಷಾಲೋಮನು
ಅವನಿಗೆ ವಿರೋಧವಾಗಿ ಯುದ್ಧಕ್ಕೆ ಹೋಗಿ
ಕೊಲ್ಲಲ್ಪಟ್ಟದ್ದೂ.

24 ದಾವೀದನು ಮಹನಯಿಮಿಗೆ ಹೋದನು. ಇಸ್ರಾ
ಯೇಲ್ಯರನ್ನೆಲ್ಲಾ ಕೂಡಿಸಿಕೊಂಡು ಅಬ್ಷಾಲೋಮನು
25 ಯೊರ್ದನ್‌ಹೊಳೆ ದಾಟಿದನು. ಅವನು ಯೋವಾಬ
ನಿಗೆ ಬದಲಾಗಿ ಅಮಾಸನನ್ನು ಸೇನಾಪತಿಯನ್ನಾಗಿ
ನೇಮಿಸಿದನು. 1) ಇಸ್ರಾಯೇಲ್ಯನಾದ ಇತ್ರನು ನಾ
ಹಾಷನ ಮಗಳೂ ಯೋವಾಬನ ತಾಯಿಯಾದ ಚೆರೂ
ಯಳ ತಂಗಿಯೂ ಆದ ಅಬೀಗಲ್ ಎಂಬವಳನ್ನು
26 ಕೂಡಿದ್ದರಿಂದ ಈ ಅಮಾಸನು ಹುಟ್ಟಿದನು. ಇಸ್ರಾ
ಯೇಲ್ಯರೂ ಅಬ್ಷಾಲೋಮನೂ ಗಿಲ್ಯಾದ್ ದೇಶದಲ್ಲಿ
ಪಾಳೆಯಮಾಡಿಕೊಂಡರು.
27 ದಾವೀದನು ಮಹನಯಿಮಿಗೆ ಬಂದಾಗ ಅಮ್ಮೋ
ನಿಯರ ರಬ್ಬಾ ಊರಿನವನಾದ ನಾಹಾಷನ ಮಗ ಶೋ
ಬಿ, ಲೋದೆಬಾರಿನ ಅಮ್ಮಿಯೇಲನ ಮಗನಾದ
ಮಾಕೀರ್, ರೋಗೆಲೀಮ್ ಊರಿನ ಗಿಲ್ಯಾದ್ಯನಾದ
28 ಬರ್ಜಿಲ್ಲೈ ಎಂಬವರು ದಾವೀದನಿಗೂ ಅವನ ಜನರಿ
ಗೂ ಹಾಸಿಗೆ, ಬಟ್ಟಲು, ಮಡಕೆ ಇವುಗಳನ್ನೂ ಊಟ
ಕ್ಕಾಗಿ ಗೋದಿ ಜವೆಗೋದಿ ಹಿಟ್ಟು ಹುರಿಗಾಳು
29 ಅವರೆ ಅಲಸಂದಿ ಬೇಳೆ ಜೇನುತುಪ್ಪ ಬೆಣ್ಣೆ ಕುರಿ
ಹಸುವಿನ ಗಿಣ್ಣ ಇವುಗಳನ್ನೂ ತಂದುಕೊಟ್ಟರು. ಜನ
ರು ಅರಣ್ಯಪ್ರಯಾಣದಿಂದ ಹಸಿದವರೂ ದಣಿದವರೂ
ಬಾಯಾರಿದವರೂ ಆಗಿದ್ದಾರೆ ಅಂದುಕೊಂಡು ಇವು
ಗಳನ್ನು ತಂದರು.

18 ತರುವಾಯ ಅರಸನಾದ ದಾವೀದನು ತನ್ನ ಹತ್ತಿ
ರ ಇದ್ದ ಸೈನಿಕರನ್ನು ಲೆಕ್ಕಿಸಿ ಅವರ ಮೇಲೆ ಸಹ
ಸ್ರಾಧಿಪತಿಗಳನ್ನೂ ಶತಾಧಿಪತಿಗಳನ್ನೂ ನೇಮಿಸಿದನು.
ಅವನು ಸೈನ್ಯವನ್ನು ಮೂರು ಪಾಲು ಮಾಡಿ ಒಂದು
ಪಾಲನ್ನು ಯೋವಾಬನಿಗೂ ಇನ್ನೊಂದನ್ನು ಚೆರೂಯ
ಳ ಮಗನೂ ಯೋವಾಬನ ತಮ್ಮನೂ ಆದ ಅಬೀಷೈ
ಗೂ ಮತ್ತೊಂದನ್ನು ಗಿತ್ತೀಯನಾದ ಇತ್ತೈಗೂ ಒಪ್ಪಿ
ಸಿ—ನಾನೂ ನಿಮ್ಮ ಸಂಗಡ ಬರುತ್ತೇನೆ ಎಂದು ಹೇಳಿ
ದನು. ಆಗ ಸೈನ್ಯದವರು ಅವನಿಗೆ—ನೀನು ಬರ
ಬಾರದು; ನಾವು ಸೋತು ಓಡಿಹೋದರೆ ಶತ್ರುಗಳು
ಲಕ್ಷಿಸುವದಿಲ್ಲ; ನಮ್ಮಲ್ಲಿ ಅರ್ಧ ಜನರು ಸತ್ತರೂ
ಅದು ಅವರಿಗೆ ದೊಡ್ಡ ಲಾಭವಲ್ಲ. ನಮ್ಮಂಥ ಹತ್ತು
ಸಾವಿರ ಜನರ ಬೆಲೆ ನಿನ್ನೊಬ್ಬನಿಗೇ ಉಂಟು. ನೀನು
ಊರಲ್ಲಿದ್ದುಕೊಂಡು ಅಲ್ಲಿಂದಲೇ ನಮಗೆ ಬೇಕಾದ
ಸಹಾಯಮಾಡಬಹುದು ಅಂದರು. ಅರಸನು ಅವರಿ
ಗೆ—ನಿಮಗೆ ಸರಿಕಂಡ ಹಾಗೆ ಮಾಡುತ್ತೇನೆ ಎಂದು
ಹೇಳಿ ಊರುಬಾಗಲಿನ ಒಂದು ಕಡೆಯಲ್ಲಿ ನಿಂತನು.
ಸೈನಿಕರು ನೂರು ನೂರು ಮಂದಿಯಾಗಿಯೂ ಸಾವಿರ
ಸಾವಿರ ಮಂದಿಯಾಗಿಯೂ ಹೊರಟರು. ಅರಸನು
ಯೋವಾಬ್ ಅಬೀಷೈ ಇತ್ತೈ ಎಂಬವರಿಗೆ—ನನಗೋ
ಸ್ಕರವಾಗಿ ಯೌವನಸ್ಥನಾದ ಅಬ್ಷಾಲೋಮನನ್ನು ಕ
ರುಣಿಸಿರಿ ಎಂದು ಆಜ್ಞಾಪಿಸಿದನು. ದಾವೀದನು ಸೇ
ನಾಪತಿಗಳಿಗೆ ಕೊಟ್ಟ ಈ ಅಪ್ಪಣೆಯು ಸೈನ್ಯದವರಿಗೆ
ಲ್ಲಾ ಕೇಳಿಸಿತು. ಅನಂತರ ಸೈನಿಕರು ಇಸ್ರಾಯೇಲ್ಯ
ರಿಗೆ ವಿರೋಧವಾಗಿ ಹೊರಟು ಬೈಲಿಗೆ ಬಂದರು; ಎಫ್ರಾ
ಯೀಮ್‌ಕಾಡಿನಲ್ಲಿ ಯುದ್ಧವಾಯಿತು. ಇಸ್ರಾಯೇ
ಲ್ಯರು ದಾವೀದನ ಸೈನಿಕರಿಂದ ಪೂರ್ಣವಾಗಿ ಸೋಲಿಸ
ಲ್ಪಟ್ಟರು. ಆ ದಿವಸ ಇಪ್ಪತ್ತುಸಾವಿರ ಜನರು ಹತ
ರಾದರು. ಯುದ್ಧವು ಸುತ್ತಣ ಪ್ರದೇಶಗಳಲ್ಲಿ ಹಬ್ಬಿ
ಕೊಂಡಿತು. ಆ ದಿವಸ ಕತ್ತಿಗಿಂತ ಕಾಡೇ ಹೆಚ್ಚಿನ ಸಂ
ಹಾರಕ್ಕೆ ಕಾರಣವಾಯಿತು.

ಅಬ್ಷಾಲೋಮನು ದಾವೀದನ ಸೇವಕರಿಗೆ ಸಿಕ್ಕಿ
ದನು; ಹೇಗಂದರೆ—ಅವನು ಹತ್ತಿದ ಹೇಸರಕತ್ತೆ
ಯು ಒಂದು ದೊಡ್ಡ ಏಲಾಮರದ ಕೆಳಗೆ ಹಾದು
ಹೋಗುವಾಗ ಅವನ ತಲೆಯು ನಿಬಿಡವಾದ ಅದರ
ಕೊಂಬೆಗಳಲ್ಲಿ ಸಿಕ್ಕಿಕೊಂಡಿತು; ಹೇಸರಕತ್ತೆಯು ಅವ
ನ ಕೆಳಗಿನಿಂದ ಓಡಿಹೋಯಿತು. ಅವನು ಭೂಮಿ
ಗೂ ಆಕಾಶಕ್ಕೂ ಮಧ್ಯದಲ್ಲಿ ನೇತಾಡುವವನಾದ
ನು. ಇದನ್ನು ನೋಡಿದ ಒಬ್ಬ ಮನುಷ್ಯನು ಯೋ
ವಾಬನಿಗೆ—ಅಗೋ, ಆ ಏಲಾಮರದಲ್ಲಿ ಅಬ್ಷಾಲೋ
ಮನು ನೇತಾಡುತ್ತಿರುವದನ್ನು ಕಂಡೆನು ಎಂದು
ಹೇಳಲು ಯೋವಾಬನು ಅವನಿಗೆ—ನೀನು ಕಂಡ ಕೂ
ಡಲೆ ಯಾಕೆ ಅವನನ್ನು ಕಡಿದು ನೆಲಕ್ಕುರುಳಿಸಲಿಲ್ಲ?
ಹಾಗೆ ಮಾಡಿದ್ದರೆ ನಾನು ನಿನಗೆ ಹತ್ತು ರೂಪಾಯಿಗ
ಳನ್ನೂ ಒಂದು ನಡುಕಟ್ಟನ್ನೂ ಕೊಡುತ್ತಿದ್ದೆನು ಅಂದ
ನು. ಅದಕ್ಕೆ ಆ ಮನುಷ್ಯನು—ನೀನು ನನ್ನ ಕೈ
ಯಲ್ಲಿ ಸಾವಿರ ರೂಪಾಯಿಗಳನ್ನಿಟ್ಟರೂ ಅರಸನ ಮಗ
ನಿಗೆ ವಿರೋಧವಾಗಿ ಕೈಯೆತ್ತೆನು. ಅರಸನು ನಮ್ಮೆ
ಲ್ಲರಿಗೆ ಕೇಳಿಸುವಂತೆ ನಿನಗೂ ಅಬೀಷೈಗೂ ಇತ್ತೈ
ಗೂ—ಜಾಗರೂಕತೆಯಿಂದಿರ್ರಿ, ಯೌವನಸ್ಥನಾದ ಅಬ್ಷಾ

1) ಪಾಠಾಂತರ: ಇಷ್ಮಾಯೇಲ್ಯನಾದ.

ಲೋಮನನ್ನು ಯಾರೂ ಮುಟ್ಟಬಾರದು ಎಂದು
ಆಜ್ಞಾಪಿಸಿದನಲ್ಲವೋ? ನಾನು ಅವನ ಪ್ರಾಣಕ್ಕೆ
ಅಪಾಯವನ್ನುಂಟುಮಾಡಿದರೆ ಅದು ಅರಸನಿಗೆ ಮರ
ಯಾಗುವದಿಲ್ಲ; ನೀನೂ ನನ್ನನ್ನು ಕೈಬಿಟ್ಟು ದೂರ
ನಿಲ್ಲುವಿ ಎಂದು ಉತ್ತರಕೊಟ್ಟನು. ಆಗ ಯೋವಾ
ಬನು—ಇಲ್ಲಿ ನಿಂತು ತಡಮಾಡುವದೇಕೆ ಎಂದು ಹೇಳಿ
ಕೂಡಲೆ ಕೈಯಲ್ಲಿ ಮೂರು ಈಟಿಗಳನ್ನು ತೆಗೆದು
ಕೊಂಡು ಹೋಗಿ ಅಬ್ಷಾಲೋಮನ ಎದೆಗೆ ತಿವಿದನು.
ಅವನು ಇನ್ನೂ ಜೀವದಿಂದ ಮರದಲ್ಲಿ ನೇತಾಡುತ್ತಿರು
ವಾಗಲೇ ಯೋವಾಬನ ಆಯುಧಗಳನ್ನು ಹೊರುವ
ಹತ್ತು ಮಂದಿ ಯೌವನಸ್ಥರು ಬಂದು ಅವನನ್ನು
ಕೊಂದುಹಾಕಿದರು. ಕೂಡಲೆ ಯೋವಾಬನು ತನ್ನ
ಜನರನ್ನು ತಡೆಯುವದಕ್ಕಾಗಿ ತುತೂರಿಯನ್ನು ಊದಿ
ಸಲು ಸೈನ್ಯದವರೆಲ್ಲಾ ಇಸ್ರಾಯೇಲ್ಯರನ್ನು ಹಿಂದ
ಟ್ಟುವದನ್ನು ಬಿಟ್ಟು ಹಿಂದಿರುಗಿದರು. ಅವರು ಅಬ್ಷಾ
ಲೋಮನ ಶವವನ್ನು ಆ ಕಾಡಿನಲ್ಲಿದ್ದ ಒಂದು ದೊಡ್ಡ
ಗುಂಡಿಯೊಳಗೆ ಹಾಕಿ ಅದರ ಮೇಲೆ ಬಲು ದೊಡ್ಡ
ಕಲ್ಲುಕುಪ್ಪೆಯನ್ನು ಮಾಡಿದರು. ಇಸ್ರಾಯೇಲ್ಯ
ರಾದರೋ ತಮ್ಮ ತಮ್ಮ ನಿವಾಸಗಳಿಗೆ ಓಡಿಹೋದರು.
ಅಬ್ಷಾಲೋಮನು ಇನ್ನೂ ಜೀವದಿಂದಿದ್ದಾಗ ತನ್ನ
ಹೆಸರನ್ನುಳಿಸುವ ಮಗನಿಲ್ಲದ್ದರಿಂದ ಒಂದು ಕಲ್ಲಿನ
ಕಂಬವನ್ನು ತರಿಸಿ ಅದನ್ನು ಅರಸನ ತಗ್ಗಿನಲ್ಲಿ ತನ್ನ
ಜ್ಞಾಪಕಾರ್ಥವಾಗಿ ನಿಲ್ಲಿಸಿ ಅದಕ್ಕೆ ತನ್ನ ಹೆಸರನ್ನಿ
ಟ್ಟನು. ಅದು ಇಂದಿನ ವರೆಗೂ ಅಬ್ಷಾಲೋಮನ
ಜ್ಞಾಪಕಸ್ತಂಭವೆಂದೆನಿಸಿಕೊಳ್ಳುತ್ತದೆ.

ದಾವೀದನು ಮಗನಿಗಾಗಿ ಗೋಳಾಡಿದ್ದು.

೧೯ ಚಾದೋಕನ ಮಗನಾದ ಅಹೀಮಾಚನು ಯೋವಾ
ಬನಿಗೆ—ಅಪ್ಪಣೆಯಾಗಲಿ, ನಾನು ಅರಸನ ಬಳಿಗೆ
ಓಡಿಹೋಗಿ ಯೆಹೋವನು ಅವನ ವೈರಿಗಳಿಗೆ ಮುಯ್ಯಿ
ತೀರಿಸಿದ್ದಾನೆಂಬ ಶುಭವರ್ತಮಾನವನ್ನು ತಿಳಿಸುವೆನು
ಅನ್ನಲು ಯೋವಾಬನು ಅವನಿಗೆ—ಈಹೊತ್ತಿನ
ಸುದ್ದಿಯನ್ನು ತೆಗೆದುಕೊಂಡು ಹೋಗತಕ್ಕವನು ನೀ
ನಲ್ಲ; ಇನ್ನೊಂದು ಸಾರಿ ನಿನ್ನನ್ನು ಕಳುಹಿಸುತ್ತೇನೆ.
ಈಹೊತ್ತು ಅರಸನ ಮಗನು ಸತ್ತಿರುವದರಿಂದ ವರ್ತ
ಮಾನವು ಶುಭವಾದದ್ದಲ್ಲ ಎಂದು ಹೇಳಿ ತನ್ನ ಬಳಿ
ಯಲ್ಲಿದ್ದ ಒಬ್ಬ ಕೂಷ್ಯನನ್ನು ಕರೆದು ಅವನಿಗೆ—
ನೀನು ಹೋಗಿ ಕಂಡದ್ದನ್ನು ಅರಸನಿಗೆ ತಿಳಿಸು ಎಂದು
ಆಜ್ಞಾಪಿಸಿದನು. ಅವನು ಯೋವಾಬನಿಗೆ ನಮಸ್ಕ
ರಿಸಿ ಹೊರಟುಹೋದನು. ಚಾದೋಕನ ಮಗನಾದ
ಅಹೀಮಾಚನು ತಿರಿಗಿ ಯೋವಾಬನಿಗೆ—ಆಗುವದಾ
ಗಲಿ, ದಯವಿಟ್ಟು ಆ ಕೂಷ್ಯನ ಹಿಂದೆ ಹೋಗುವದಕ್ಕೆ
ನನಗೆ ಅಪ್ಪಣೆಕೊಡು ಎಂದು ಬೇಡಿಕೊಂಡನು. ಅದಕ್ಕೆ
ಯೋವಾಬನು—ಮಗನೇ, ಯಾಕೆ ಹೋಗಬೇಕ
ನ್ನುತ್ತೀ? ಅದಕ್ಕಾಗಿ ನಿನಗೆ ಬಹುಮಾನಸಿಕ್ಕುವದಿಲ್ಲ
ವಲ್ಲಾ ಅಂದನು. ಆದರೆ ಅಹೀಮಾಚನು ತಿರಿಗಿ—
ಹೇಗಾದರೂ ಸರಿ. ನನ್ನನ್ನೂ ಕಳುಹಿಸು ಎಂದು ಒತ್ತಾಯ
ಮಾಡಿದ್ದರಿಂದ ಯೋವಾಬನು ಹೋಗು ಎಂದು ಹೇಳಿ
ದನು. ಆಗ ಅಹೀಮಾಚನು ಯೊರ್ದನ್ ತಗ್ಗಿನ
ಲ್ಲಿರುವ ದಾರಿಯನ್ನು ಹಿಡಿದು ಆ ಕೂಷ್ಯನಿಗಿಂತ
ಮುಂದಾಗಿ ಓಡಿದನು.

ದಾವೀದನು ಎರಡು ಬಾಗಲುಗಳ ಮಧ್ಯದಲ್ಲಿ 24
ಕೂತುಕೊಂಡಿದ್ದನು. ಅಷ್ಟರಲ್ಲಿ ಕಾವಲುಗಾರನು
ಗೋಪುರದ ಮಾಳಿಗೆಯನ್ನು ಹತ್ತಿ ಪಾಗಾರದ ಬಳಿ
ಯಲ್ಲಿ ನಿಂತು ನೋಡಲು ಒಂಟಿಗನಾಗಿ ಬರುವ ಒಬ್ಬ
ಮನುಷ್ಯನನ್ನು ಕಂಡನು. ಅವನು ಕೂಡಲೆ ದಾವೀದ 25
ನಿಗೆ ತಿಳಿಸಲು ದಾವೀದನು—ಅವನು ಒಬ್ಬನಾಗಿ ಇದ್ದರೆ
ಸಮಾಚಾರತರುವವನಾಗಿರಬಹುದು ಅಂದನು. ಆ
ಮನುಷ್ಯನು ಬರಬರುತ್ತಾ ಸಮೀಪವಾದನು. ಅಷ್ಟ 26
ರಲ್ಲಿ ಕಾವಲುಗಾರನು ಓಡುತ್ತಾ ಬರುವ ಇನ್ನೊಬ್ಬ
ನನ್ನು ಕಂಡು ದ್ವಾರಪಾಲಕನ ಮುಖಾಂತರ—ಇಗೋ,
ಇನ್ನೊಬ್ಬನು ಒಂಟಿಗನಾಗಿ ಬರುತ್ತಿದ್ದಾನೆ ಎಂದು
ಅರಸನಿಗೆ ತಿಳಿಸಿದನು. ಅರಸನು—ಹಾಗಾದರೆ ಅವನೂ
ಸಮಾಚಾರತರುವವನು ಎಂದು ಹೇಳಿದನು. ಕಾವಲು 27
ಗಾರನು—ಮುಂದಾಗಿ ಬರುತ್ತಿರುವವನ ಓಟವು ಚಾ
ದೋಕನ ಮಗನಾದ ಅಹೀಮಾಚನ ಓಟದ ಹಾಗೆ
ಕಾಣುತ್ತದೆ ಎಂದನು. ಅದಕ್ಕೆ ಅರಸನು—ಅವನು
ಒಳ್ಳೆಯವನು; ಶುಭವರ್ತಮಾನತರುವವನು ಅಂದ
ನು. ಅಹೀಮಾಚನು ಹತ್ತಿರ ಬಂದು ಅರಸನಿಗೆ ಶುಭ 28
ವಾಗಲಿ ಎಂದು ಹೇಳಿ ಸಾಷ್ಟಾಂಗನಮಸ್ಕಾರಮಾಡಿ—
ಅರಸನಿಗೆ ವಿರೋಧವಾಗಿ ಕೈಯೆತ್ತಿದವರನ್ನು ಸ್ವಾಧೀನ
ಪಡಿಸಿದ ನಿನ್ನ ದೇವರಾದ ಯೆಹೋವನಿಗೆ ಸ್ತೋತ್ರವಾ
ಗಲಿ ಅಂದನು. ಆಗ ಅರಸನು ಅವನನ್ನು—ಯೌವ 29
ನಸ್ಥನಾದ ಅಬ್ಷಾಲೋಮನು ಸುರಕ್ಷಿತನಾಗಿದ್ದಾನೋ
ಎಂದು ಕೇಳಿದನು. ಅದಕ್ಕೆ ಅಹೀಮಾಚನು—ಯೋ
ವಾಬನು ಒಡೆಯರ ಸೇವಕನಾದ ನನ್ನನ್ನು ಕಳುಹಿಸು
ವಾಗ ನಾನು ಒಂದು ದೊಡ್ಡ ದೊಂಬಿಯನ್ನು ಕಂಡೆನು.
ಆದರೆ ಸಂಗತಿಯೇನೆಂಬದು ನನಗೆ ಗೊತ್ತಾಗಲಿಲ್ಲ
ಎಂದು ಉತ್ತರಕೊಟ್ಟನು. ಆಗ ಅರಸನು ಅವನಿಗೆ— 30
ನೀನು ಇತ್ತ ನಿಲ್ಲು ಎಂದು ಆಜ್ಞಾಪಿಸಿದನು; ಅವನು
ನಿಂತನು. ಅಷ್ಟರಲ್ಲಿ ಕೂಷ್ಯನೂ ಬಂದು—ನನ್ನ ಒಡೆ 31
ಯನಾದ ಅರಸನಿಗೆ ಶುಭವರ್ತಮಾನತಂದಿದ್ದೇನೆ; ಯೆ
ಹೋವನು ನಿನಗೆ ವಿರೋಧವಾಗಿ ಎದ್ದವರೆಲ್ಲರಿಗೂ
ಮುಯ್ಯಿತೀರಿಸಿದ್ದಾನೆ ಅಂದನು. ಅರಸನು ಅವ 32
ನನ್ನು—ಯೌವನಸ್ಥನಾದ ಅಬ್ಷಾಲೋಮನು ಸುರಕ್ಷಿ
ತನಾಗಿದ್ದಾನೋ ಎಂದು ಕೇಳಲು ಅವನು—ನನ್ನ ಒಡೆ
ಯನಾದ ಅರಸನ ಶತ್ರುಗಳಿಗೂ ಅವನಿಗೆ ಕೇಡು
ಮಾಡುವದಕ್ಕೆ ಎದ್ದು ನಿಂತವರೆಲ್ಲರಿಗೂ ಆ ಯೌವ
ನಸ್ಥನಿಗಾದ ಗತಿಯೇ ಆಗಲಿ ಎಂದು ಉತ್ತರಕೊಟ್ಟನು.
ಇದನ್ನು ಕೇಳಿ ಅರಸನು ಎದೆಯೊಡೆದವನಾಗಿ— 33
ನನ್ನ ಮಗನೇ, ಅಬ್ಷಾಲೋಮನೇ, ನನ್ನ ಮಗನೇ,
ನನ್ನ ಮಗನಾದ ಅಬ್ಷಾಲೋಮನೇ, ನಿನಗೆ ಬದಲಾಗಿ
ನಾನು ಸತ್ತಿದ್ದರೆ ಎಷ್ಟೋ ಒಳ್ಳೇದಾಗುತ್ತಿತ್ತು. ಅಬ್ಷಾ
ಲೋಮನೇ, ನನ್ನ ಮಗನೇ, ಮಗನೇ ಎಂದು ಕೂಗಿ
ಅಳುತ್ತಾ ಹೆಬ್ಬಾಗಲಿನ ಮೇಲಿರುವ ಕೋಣೆಗೆ ಹೋ
ದನು.

ಅರಸನು ಅಬ್ಷಾಲೋಮನಿಗಾಗಿ ಅಳುತ್ತಾ ಗೋ 19
ಳಾಡುತ್ತಾ ಇದ್ದಾನೆಂಬ ವರ್ತಮಾನವು ಯೋವಾಬ
ನಿಗೆ ಮುಟ್ಟಿತು. ಅರಸನು ಮಗನಿಗೋಸ್ಕರ ಪ್ರಲಾ 2

ಪಿಸುತ್ತಿದ್ದಾನೆಂಬದು ಎಲ್ಲಾ ಜನರಿಗೂ ಗೊತ್ತಾದದ
ರಿಂದ ಅವರ ಜಯಘೋಷವು ಗೋಳಾಟವಾಯಿತು.
3 ಜನರು ಆ ದಿವಸ ಯುದ್ಧದಲ್ಲಿ ಸೋತು ಓಡಿಬಂದ
ವರೋ ಎಂಬಂತೆ ನಾಚಿಕೆಯಿಂದ ಕಳ್ಳತನವಾಗಿ ಊರ
4 ನ್ನು ಹೊಕ್ಕರು. ಅರಸನು ತನ್ನ ಮೋರೆಯನ್ನು
ಮುಚ್ಚಿಕೊಂಡು—ನನ್ನ ಮಗನಾದ ಅಬ್ಷಾಲೋಮನೇ,
ಅಬ್ಷಾಲೋಮನೇ, ನನ್ನ ಮಗನೇ, ಮಗನೇ ಎಂದು
5 ಬಹಳವಾಗಿ ಗೋಳಾಡಿದನು. ಯೋವಾಬನು ಅರಸನ
ಬಳಿಗೆ ಹೋಗಿ ಅವನಿಗೆ—ನಿನ್ನನ್ನೂ ನಿನ್ನ ಗಂಡುಹೆಣ್ಣು
ಮಕ್ಕಳನ್ನೂ ಹೆಂಡತಿಯರನ್ನೂ ಉಪಪತ್ನಿಯರನ್ನೂ
ರಕ್ಷಿಸಿದಂಥ ನಿನ್ನ ಸೇವಕರನ್ನು ಈಹೊತ್ತು ಅಪಮಾ
6 ನಪಡಿಸಿದಿ. ನೀನು ಶತ್ರುಗಳನ್ನು ಪ್ರೀತಿಸುವವನೂ
ಮಿತ್ರರನ್ನು ದ್ವೇಷಿಸುವವನೂ ಆಗಿದ್ದೀ; ನೀನು ನಿನ್ನ
ಸೇನಾಧಿಪತಿಗಳನ್ನೂ ಸೈನಿಕರನ್ನೂ ಲಕ್ಷಿಸುವವನಲ್ಲ
ವೆಂದು ಈಗ ತೋರಿಸಿಕೊಟ್ಟಿ. ಇದರಿಂದ ಈಹೊತ್ತು
ನಾವೆಲ್ಲರೂ ಸತ್ತು ಅಬ್ಷಾಲೋಮನೊಬ್ಬನೇ ಉಳಿದಿ
ದ್ದರೆ ನಿನಗೆ ಸಂತೋಷವಾಗುತ್ತಿತ್ತೆಂದು ತಿಳಿಯಬೇ
7 ಕಷ್ಟೆ. ಈಗ ಎದ್ದು ಹೋಗಿ ನಿನ್ನ ಸೇವಕರನ್ನು
ದಯಾಭಾವದಿಂದ ಮಾತಾಡಿಸು; ಯೆಹೋವನಾಣೆ,
ನೀನು ಹೀಗೆ ಮಾಡದಿದ್ದರೆ ಸಾಯಂಕಾಲವಾಗುವಷ್ಟ
ರಲ್ಲಿ ಎಲ್ಲರೂ ನಿನ್ನನ್ನು ಬಿಟ್ಟುಹೋಗುವರು. ಯೌ
ವನಕಾಲದಿಂದ ಈ ವರೆಗೆ ನಿನಗೆ ಬಂದ ಎಲ್ಲಾ ಕೇಡು
ಗಳಲ್ಲಿ ಇದೇ ಹೆಚ್ಚಿನದಾಗಿರುವದು ಎಂದು ಹೇಳಿದನು.
8 ಆಗ ಅರಸನು ಎದ್ದು ಬಂದು ಊರುಬಾಗಲಲ್ಲಿ ಕೂತು
ಕೊಂಡನು. ಇಗೋ, ಅರಸನು ಬಂದು ಊರುಬಾಗ
ಲಲ್ಲಿ ಕೂತುಕೊಂಡಿದ್ದಾನೆಂಬ ಸುದ್ದಿಯು ಪ್ರಜೆಗಳಿಗೆ
ಮುಟ್ಟಿದಾಗ ಅವರೆಲ್ಲರೂ ಅವನ ಮುಂದೆ ಕೂಡಿ
ಬಂದರು.

ಜನರು ದಾವೀದನನ್ನು ತಿರಿಗಿ ಯೆರೂಸಲೇಮಿಗೆ
ಕರಕೊಂಡು ಬಂದದ್ದು.

9 ಇಸ್ರಾಯೇಲ್ಯರೆಲ್ಲರೂ ತಮ್ಮ ತಮ್ಮ ನಿವಾಸಗಳಿಗೆ
ಓಡಿಹೋಗಿದ್ದರು. ಇಸ್ರಾಯೇಲ್‌ಕುಲಗಳಲ್ಲೆಲ್ಲಾ
ಜನರು ತಮ್ಮತಮ್ಮೊಳಗೆ ಜಗಳವಾಡಿ—ಅರಸನಾದ
ದಾವೀದನು ನಮ್ಮನ್ನು ಫಿಲಿಷ್ಟಿಯರ ಕೈಗೂ ಬೇರೆ
ಎಲ್ಲಾ ವೈರಿಗಳ ಕೈಗೂ ಸಿಕ್ಕದಂತೆ ತಪ್ಪಿಸಿ ಕಾಪಾಡಿ
ದನು. ಆದರೆ ಅವನು ಅಬ್ಷಾಲೋಮನ ದೆಸೆ
ಯಿಂದ ದೇಶವನ್ನು ಬಿಟ್ಟು ಓಡಿಹೋಗಬೇಕಾಯಿತು.
10 ನಾವು ಅಭಿಷೇಕಿಸಿದ ಅಬ್ಷಾಲೋಮನು ಯುದ್ಧದಲ್ಲಿ
ಸತ್ತನು. ಹೀಗಿರುವಲ್ಲಿ ಅರಸನಾದ ದಾವೀದನನ್ನು
ತಿರಿಗಿ ಕರಕೊಂಡು ಬರಬಾರದೇ? ಸುಮ್ಮನೆ ಕೂತಿ
11 ರುವದೇಕೆ ಎಂದು ಮಾತಾಡಿಕೊಂಡರು. ಇಸ್ರಾಯೇ
ಲ್ಯರು ಈ ಪ್ರಕಾರ ಮಾತಾಡಿಕೊಂಡ ವರ್ತಮಾನವು
ದಾವೀದನಿಗೆ ಮುಟ್ಟಲು ಅವನು ಯಾಜಕರಾದ
ಚಾದೋಕ್ ಎಬ್ಯಾತಾರರಿಗೆ—ನೀವು ನನ್ನ ಹೆಸರಿ
ನಲ್ಲಿ ಯೆಹೂದಕುಲದ ಹಿರಿಯರಿಗೆ—ಅರಸನಾದ ನನ್ನ
ನ್ನು ತಿರಿಗಿ ಅರಮನೆಗೆ ಕರಕೊಂಡು ಹೋಗುವದರಲ್ಲಿ
12 ನೀವು ಹಿಂದುಳಿದಿರುವದೇಕೆ? ನೀವು ನನ್ನ ರಕ್ತಸಂಬಂ
ಧಿಗಳಾದ ಸಹೋದರರಾಗಿರುತ್ತೀರಲ್ಲಾ; ಆದದರಿಂದ

ನನ್ನನ್ನು ಕರಕೊಂಡು ಹೋಗುವದರಲ್ಲಿ ನೀವು ಹಿಂ
ಳಿದಿರುವದು ಒಳ್ಳೇದಲ್ಲ ಎಂಬದಾಗಿಯೂ ಅಮಾ
ಸಿಗೆ—ನೀನೂ ನನ್ನ ರಕ್ತಸಂಬಂಧಿಯಾಗಿದ್ದೀ; ನಾ
ಯೋವಾಬನ ಬದಲಿಗೆ ನಿನ್ನನ್ನೇ ನಿತ್ಯಸೇನಾಪತಿ
ನ್ನಾಗಿ ಮಾಡದಿದ್ದರೆ ಯೆಹೋವನು ನನಗೆ ಬೇ
ದದ್ದನ್ನು ಮಾಡಲಿ ಎಂಬದಾಗಿಯೂ ತಿಳಿಸಿರಿ ಎಂ
ಹೇಳಿಕಳುಹಿಸಿದನು. ಆಗ ಯೆಹೂದ್ಯರೆಲ್ಲರೂ
ಮನಸ್ಸಿನಿಂದ ಅರಸನ ಕಡೆಗೆ ತಿರುಗಿಕೊಂಡು ಅ
ನಿಗೆ—ನೀನೂ ನಿನ್ನ ಎಲ್ಲಾ ಸೇವಕರೂ ತಿರಿಗಿ ಬನ್ನಿ
ಎಂದು ಹೇಳಿಕಳುಹಿಸಿದರು. ಅರಸನು ಸ್ವದೇಶ
ಹೋಗಬೇಕೆಂದು ಹೊರಟು ಯೊರ್ದನಿಗೆ ಬಂದಾ
ಯೆಹೂದಕುಲದವರು ಅವನನ್ನು ಎದುರುಗೊಳ್ಳುವ
ಕ್ಕೂ ಯೊರ್ದನ್ ಹೊಳೆಯನ್ನು ದಾಟಿಸುವದಕ
ಗಿಲ್ಗಾಲಿಗೆ ಬಂದರು.

ಬೆನ್ಯಾಮೀನ್ ಕುಲದ ಗೇರನ ಮಗನೂ ಬ
ರೀಮಿನವನೂ ಆದ ಶಿಮ್ಮಿಯು ಅವಸರದಿಂದ ಬಂ
ಅರಸನಾದ ದಾವೀದನನ್ನು ಎದುರುಗೊಳ್ಳುವದ
ಯೆಹೂದಕುಲದವರನ್ನು ಕೂಡಿಕೊಂಡನು. ಅ
ಜೊತೆಯಲ್ಲಿ ಸಾವಿರ ಮಂದಿ ಬೆನ್ಯಾಮೀನ್ಯರಿದ್ದ
ಇದಲ್ಲದೆ ಸೌಲನ ಮನೆಯ ಸೇವಕನಾದ ಚೀಬ
ತನ್ನ ಹದಿನೈದು ಮಂದಿ ಮಕ್ಕಳನ್ನೂ ಇಪ್ಪ
ಮಂದಿ ಸೇವಕರನ್ನೂ ಕರಕೊಂಡು ಅರಸನ ಮು
ಯೇ ಪೂರ್ಣಾಸಕ್ತಿಯಿಂದ ಯೊರ್ದನ್ ಹೊಳೆಯ
ಳಿದು ಅರಸನ ಮನೆಯವರನ್ನು ದಾಟಿಸುವದಕ್ಕೋಸ
ವೂ ಅವರಿಗೆ ಬೇಕಾದ ಸಹಾಯಮಾಡುವದಕ್ಕೋಸ
ವೂ ದಡದಿಂದ ದಡಕ್ಕೆ ಹೋಗುತ್ತಾ ಬರುತ್ತಾ ಇದ್ದ
ಅರಸನು ಯೊರ್ದನ್ ಹೊಳೆಯನ್ನು ದಾಟಬ
ಕೂಡಲೆ ಗೇರನ ಮಗನಾದ ಶಿಮ್ಮಿಯು ಸಾಷ್ಟಾ
ನಮಸ್ಕಾರಮಾಡಿ ಅವನಿಗೆ—ನನ್ನ ಒಡೆಯ
ನನ್ನನ್ನು ಅಪರಾಧಿಯೆಂದೆಣಿಸದಿರಲಿ; ನನ್ನ ಅರಸ
ಯೆರೂಸಲೇಮನ್ನು ಬಿಟ್ಟು ಹೋಗುವಾಗ ನಾ
ಮೂರ್ಖತನದಿಂದ ಮಾಡಿದ್ದನ್ನೆಲ್ಲಾ ಅವನು ನೆ
ದಿರಲಿ, ಲಕ್ಷಿಸದಿರಲಿ. ಒಡೆಯನೇ, ನಿನ್ನ ಸೇ
ನಾದ ನಾನು ಪಾಪಮಾಡಿದೆನೆಂದು ಒಪ್ಪಿಕೊಳ್ಳುತ್ತೇ
ಆದದರಿಂದಲೇ ನಾನು ಈಹೊತ್ತು ಅರಸನ
ಎದುರುಗೊಳ್ಳುವದಕ್ಕೆ ಎಲ್ಲಾ ಯೋಸೇಫ್ಯ
ಮೊದಲಾಗಿ ಬಂದಿದ್ದೇನೆ ಎಂದು ಹೇಳಿದನು. ಚೆ
ಯಳ ಮಗನಾದ ಅಬೀಷೈಯು—ಯೆಹೋ
ಅಭಿಷಿಕ್ತನನ್ನು ಶಪಿಸಿದ್ದಕ್ಕಾಗಿ ಶಿಮ್ಮಿಗೆ ಮರಣದಂ
ಯಾಗಬೇಕಲ್ಲವೇ ಅಂದನು. ಅದಕ್ಕೆ ದಾವೀದನ
ಚೆರೂಯಳ ಮಕ್ಕಳೇ, ನನಗೆ ನಿಮ್ಮ ಗೊಡವೆ
ಬೇಡ; ನೀವು ಈ ಹೊತ್ತು ನನ್ನನ್ನು ಅಕೃತ್ಯಕ್ಕೆ ಪ್ರೇರಿ
ವವರಾಗಿದ್ದೀರಿ. ಇಂಥ ದಿವಸದಲ್ಲಿ ಇಸ್ರಾಯೇಲ್ಯ
ಒಬ್ಬನಿಗೆ ಮರಣದಂಡನೆಯಾಗುವದು ಸರಿಯೆ
ನಾನು ಇಸ್ರಾಯೇಲ್ಯರ ಅರಸನೆಂಬದು ಈಹೊ
ಸ್ಪಷ್ಟವಾಗಿ ಗೊತ್ತಾಯಿತು ಎಂದು ನುಡಿದನು. ಅನಂ
ಅರಸನು ಶಿಮ್ಮಿಗೆ—ನಿನಗೆ ಮರಣಶಿಕ್ಷೆಯಾಗ
ದಿಲ್ಲ ಎಂದು ಪ್ರಮಾಣಮಾಡಿ ಹೇಳಿದನು.

ತರುವಾಯ ಸೌಲನ ಮೊಮ್ಮಗನಾದ ಮೆ
ಬೋಶೆತನು ಅರಸನನ್ನು ಎದುರುಗೊಳ್ಳುವದಕ್ಕೆ ಬ

ನು. ಅರಸನು ಯೆರೂಸಲೇಮನ್ನು ಬಿಟ್ಟಂದಿನಿಂದ
ಸುರಕ್ಷಿತನಾಗಿ ಹಿಂದಿರುಗುವ ವರೆಗೂ ಇವನು ತನ್ನ
ಕಾಲುಗಳನ್ನು ಕಟ್ಟಿಕೊಂಡಿದ್ದಿಲ್ಲ, ಮೀಸೆಯನ್ನು
ಕತ್ತರಿಸಿದ್ದಿಲ್ಲ, ಬಟ್ಟೆಗಳನ್ನು ಒಗೆಸಿಕೊಂಡಿದ್ದಿಲ್ಲ.
ಇವನು ಯೆರೂಸಲೇಮಿನಿಂದ ಅರಸನ ದರ್ಶನಕ್ಕೆ
ಬಂದಾಗ ಅರಸನು—ಮೆಫೀಬೋಶೆತನೇ, ನೀನು ನನ್ನ
ಸಂಗಡ ಯಾಕೆ ಬರಲಿಲ್ಲ ಎಂದು ಕೇಳಲು ಅವನು—
ನನ್ನ ಒಡೆಯನೇ, ಅರಸನೇ, ನನ್ನ ಸೇವಕನು ನನ್ನನ್ನು
ವಂಚಿಸಿದನು. ಕುಂಟನಾದ ನಾನು ಅವನಿಗೆ—ಕತ್ತೆಗೆ
ತಡಿಹಾಕು, ನಾನು ಕೂತುಕೊಂಡು ಅರಸನ ಜೊತೆ
ಯಲ್ಲಿ ಹೋಗಬೇಕು ಎಂದು ಆಜ್ಞಾಪಿಸಿದೆನು. ಅವನು
ಹಾಗೆ ಮಾಡದೆ ನನ್ನ ಒಡೆಯನಾದ ಅರಸನ ಬಳಿಗೆ
ಬಂದು ನನ್ನ ವಿಷಯದಲ್ಲಿ ಚಾಡಿಹೇಳಿದನು. ಅರಸನು
ದೇವದೂತನ ಹಾಗಿರುತ್ತಾನೆ, ತನಗೆ ಸರಿಕಂಡದ್ದನ್ನು
ಮಾಡಲಿ. ನನ್ನ ತಂದೆಯ ಮನೆಯವರೆಲ್ಲರೂ ಅರಸ
ನಾದ ನನ್ನ ಒಡೆಯನ ದೃಷ್ಟಿಯಲ್ಲಿ ಮರಣಕ್ಕೆ ಪಾತ್ರ
ರಾಗಿದ್ದರು. ಆದರೂ ಅವನು ತನ್ನ ಸೇವಕನಾದ
ನನ್ನನ್ನು ಭೋಜನಕ್ಕೆ ತನ್ನ ಪಂಕ್ತಿಯಲ್ಲಿ ಕುಳ್ಳಿರಿಸಿ
ಕೊಂಡನು. ಅರಸನಿಗೆ ಹೆಚ್ಚಾಗಿ ಮೊರೆಯಿಡುವ
ದಕ್ಕೆ ನಾನೇನು ಯೋಗ್ಯನೋ ಎಂದು ಉತ್ತರಕೊಟ್ಟ
ನು. ಆಗ ಅರಸನು ಅವನಿಗೆ—ಹೆಚ್ಚು ಮಾತು ಯಾಕೆ?
ನೀನೂ ಚೀಬನೂ ಹೊಲವನ್ನು ಭಾಗಮಾಡಿಕೊಳ್ಳ
ಬೇಕೆಂಬದೇ ನನ್ನ ತೀರ್ಪು ಎಂದು ಹೇಳಿದನು. ಅದಕ್ಕೆ
ಮೆಫೀಬೋಶೆತನು—ಚೀಬನು ಎಲ್ಲವನ್ನು ತಾನೇ ತೆಗೆ
ದುಕೊಂಡರೂ ತೆಗೆದುಕೊಳ್ಳಲಿ, ನನ್ನ ಒಡೆಯನಾದ
ಅರಸನು ತನ್ನ ಮನೆಗೆ ಸುರಕ್ಷಿತನಾಗಿ ಬಂದದ್ದೇ
ಸಾಕು ಅಂದನು.

ಗಿಲ್ಯಾದ್ಯನಾದ ಬರ್ಜಿಲ್ಲೈ ಎಂಬವನು ಅರಸ
ನನ್ನು ಸಾಗಕಳುಹಿಸುವದಕ್ಕಾಗಿ ರೋಗೆಲೀಮಿನಿಂದ
ಯೊರ್ದನಿಗೆ ಬಂದಿದ್ದನು. ಇವನು ಎಂಭತ್ತು ವರು
ಷದ ಮುದುಕನು. ಇವನು ಬಹುಶ್ರೀಮಂತನಾ
ಗಿದ್ದದರಿಂದ ದಾವೀದನು ಮಹನಯಿಮಿನಲ್ಲಿದ್ದ ಕಾಲ
ದಲ್ಲೆಲ್ಲಾ ಅವನ ಜೀವನಕ್ಕೆ ಬೇಕಾದದ್ದನ್ನು ಇವನೇ
ಒದಗಿಸಿಕೊಡುತ್ತಿದ್ದನು. ಅರಸನು ಬರ್ಜಿಲ್ಲೈಗೆ—
ನನ್ನ ಜೊತೆಯಲ್ಲಿ ಹೊಳೆಯ ಆಚೆಗೆ ಬಾ; ನಾನು
ಯೆರೂಸಲೇಮಿನಲ್ಲಿ ನಿನ್ನನ್ನು ಹತ್ತಿರವೇ ಇಟ್ಟು
ಕೊಂಡು ಸಂರಕ್ಷಿಸುತ್ತೇನೆ ಅಂದನು. ಅದಕ್ಕೆ
ಬರ್ಜಿಲ್ಲೈಯು—ಇಷ್ಟು ವಯಸ್ಸು ಕಳೆದವನಾದ
ನಾನು ಅರಸನ ಸಂಗಡ ಯೆರೂಸಲೇಮಿಗೆ ಬರು
ವದು ಹೇಗೆ? ಈಗ ನಾನು ಎಂಭತ್ತು ವರುಷದವನು.
ಒಳ್ಳೇದು, ಕೆಟ್ಟದ್ದು ಇವುಗಳ ಭೇದವು ನನಗಿನ್ನು
ತಿಳಿಯುವದೋ? ನಿನ್ನ ಸೇವಕನಾದ ನನಗೆ ಅನ್ನ
ಪಾನಗಳ ರುಚಿಯು ಗೊತ್ತಾಗುವದೋ? ಗಾಯನ
ಮಾಡುವ ಸ್ತ್ರೀಪುರುಷರ ಸ್ವರಗಳು ನನಗೆ ಕೇಳಿಸು
ತ್ತವೋ? ನಾನು ನನ್ನ ಒಡೆಯನಾದ ಅರಸನಿಗೆ
ಸುಮ್ಮನೆ ಯಾಕೆ ಭಾರವಾಗಿರಬೇಕು? ಹೊಳೆದಾಟಿ
ಸ್ವಲ್ಪದೂರಕ್ಕೆ ನಿನ್ನ ಸಂಗಡ ಬರುತ್ತೇನೆ. ಅರಸ
ನಾದ ನೀನು ನನಗೇಕೆ ಇಂಥ ಉಪಕಾರ ಮಾಡ
ಬೇಕು? ದಯವಿಟ್ಟು ನಿನ್ನ ಸೇವಕನಾದ ನನಗೆ ಹಿಂದಿ
ರುಗಿ ಹೋಗುವದಕ್ಕೆ ಅಪ್ಪಣೆಯಾಗಲಿ; ನಾನು ನನ್ನ
ತಂದೆತಾಯಿಗಳ ಸಮಾಧಿಯಿರುವ ಸ್ವಂತ ಊರಿಗೆ
ಹೋಗಿ ಅಲ್ಲೇ ಸಾಯುವೆನು. ಇಗೋ, ಇಲ್ಲಿ ನಿನ್ನ
ಸೇವಕನಾದ ಕಿಮ್ಹಾಮನಿರುತ್ತಾನೆ. ನನ್ನ ಒಡೆಯ
ನಾದ ಅರಸನು ಇವನನ್ನು ಕರಕೊಂಡುಹೋಗಿ ತನ್ನ
ಇಷ್ಟವಿದ್ದಂತೆ ಇವನಿಗೆ ದಯೆತೋರಿಸಲಿ ಎಂದನು.
ಅದಕ್ಕೆ ಅರಸನು—ಕಿಮ್ಹಾಮನು ನನ್ನ ಸಂಗಡ ಬರಲಿ; 38
ಅವನಿಗೆ ನಿನ್ನ ಇಷ್ಟದಂತೆ ದಯೆತೋರಿಸುವೆನು.
ಇನ್ನೂ ಏನೇನು ಮಾಡಬೇಕನ್ನುತ್ತೀಯೋ ಅದೆಲ್ಲ
ವನ್ನೂ ಮಾಡುತ್ತೇನೆ ಎಂದು ಹೇಳಿದನು. ಎಲ್ಲಾ 39
ಜನರೂ ಹೊಳೆದಾಟಿದರು. ಅರಸನು ಹೊಳೆದಾಟಿದ
ಮೇಲೆ ಬರ್ಜಿಲ್ಲೈಯನ್ನು ಮುದ್ದಿಟ್ಟು ಆಶೀರ್ವದಿಸಿ
ದನು. ಅನಂತರ ಬರ್ಜಿಲ್ಲೈಯು ತನ್ನ ಊರಿಗೆ
ಹೋದನು. ಅರಸನು ಕಿಮ್ಹಾಮನೊಡನೆ ಗಿಲ್ಗಾಲಿಗೆ 40
ತೆರಳಿದನು. ಎಲ್ಲಾ ಯೆಹೂದ್ಯರೂ ಇಸ್ರಾಯೇಲ್ಯರಲ್ಲಿ
ಅರ್ಧಜನರೂ ಅರಸನನ್ನು ಕರಕೊಂಡು ಹೋದರು.

ಆಗ ಇಸ್ರಾಯೇಲ್ಯರೆಲ್ಲರೂ ಅರಸನ ಮುಂದೆ 41
ಬಂದು ಅವನನ್ನು—ನಮ್ಮ ಸಹೋದರರಾದ ಯೆಹೂ
ದ್ಯರು ನಮಗೆ ತಿಳಿಸದೆ ತಾವೇ ಹೋಗಿ ಅರಸನನ್ನೂ
ಅವನ ಮನೆಯವರನ್ನೂ ಅವನೊಡನೆ ಇದ್ದ ಜನ
ರನ್ನೂ ಯೊರ್ದನ್‍ಹೊಳೆದಾಟಿಸಿ ಕರಕೊಂಡು ಬಂದ
ದ್ದೇಕೆ ಎಂದು ಕೇಳಿದರು. ಅದಕ್ಕೆ ಯೆಹೂದ್ಯ 42
ರೆಲ್ಲರೂ—ಅರಸನು ನಮಗೆ ಸಮೀಪಬಂಧು; ನೀವು
ಅದಕ್ಕಾಗಿ ಉರಿಗೊಳ್ಳುವದೇಕೆ? ನಾವೇನು ಅರಸನ
ಖರ್ಚಿನಿಂದ ಊಟಮಾಡಿದೆವೋ? ಅವನು ನಮಗೆ
ಏನಾದರೂ ಕೊಟ್ಟನೋ ಎಂದು ಉತ್ತರಕೊಟ್ಟರು.
ಆಗ ಇಸ್ರಾಯೇಲ್ಯರು ಯೆಹೂದ್ಯರಿಗೆ—ಅರಸನಲ್ಲಿ 43
ನಮಗೆ ಹತ್ತುಪಾಲು ಉಂಟಲ್ಲಾ; ದಾವೀದನ ವಿಷ
ಯದಲ್ಲಿಯೂ ನಮಗೆ ಹೆಚ್ಚು ಹಕ್ಕು ಉಂಟು. ಹೀ
ಗಿರುವದರಿಂದ ನೀವು ನಮ್ಮನ್ನು ತಿರಸ್ಕರಿಸಿದ್ದೇಕೆ?
ನಮ್ಮ ಅರಸನನ್ನು ಕರಕೊಂಡು ಬರುವ ವಿಷಯ
ದಲ್ಲಿ ಮೊದಲು ಮಾತಾಡಿದವರು ನಾವಲ್ಲವೋ ಅಂದ
ರು. ಇಸ್ರಾಯೇಲ್ಯರ ಮಾತುಗಳಿಗಿಂತ ಯೆಹೂದ್ಯರ
ಮಾತುಗಳು ಕಠಿಣವಾಗಿದ್ದವು.

### ಶೆಬನ ದಂಗೆ.

20
ಅಕಸ್ಮಾತ್ತಾಗಿ ಬೆನ್ಯಾಮೀನ್‍ಕುಲದವನೂ ಬಿಕ್ರೀ
ಯ ಮಗನೂ ಆದ ಶೆಬನೆಂಬ ಒಬ್ಬ ದುಷ್ಟಮನು
ಷ್ಯನು ಅಲ್ಲಿ ಹೇಗೋ ಬಂದಿದ್ದನು. ಅವನು
ತುತೂರಿಯನ್ನು ಊದಿ—ಇಸ್ರಾಯೇಲ್ಯರೇ, ದಾವೀ
ದನಲ್ಲಿ ನಮಗೆ ಪಾಲಿಲ್ಲ; ಇಷಯನ ಮಗನಲ್ಲಿ
ನಮಗೆ ಸ್ವಾಸ್ತ್ಯವಿಲ್ಲ. ಪ್ರತಿಯೊಬ್ಬನೂ ನಮ್ಮ ನಮ್ಮ
ನಿವಾಸಗಳಿಗೆ ಹೋಗೋಣ ಅಂದನು. ಆಗ ಇಸ್ರಾ 2
ಯೇಲ್ಯರೆಲ್ಲರೂ ದಾವೀದನನ್ನು ಬಿಟ್ಟು ಬಿಕ್ರೀಯ
ಮಗನಾದ ಶೆಬನನ್ನು ಹಿಂಬಾಲಿಸಿದರು. ಆದರೆ
ಯೆಹೂದ್ಯರು ತಮ್ಮ ಅರಸನನ್ನು ಅಂಟಿಕೊಂಡು
ಯೊರ್ದನ್‍ತಗ್ಗಿನಿಂದ ಯೆರೂಸಲೇಮಿನ ವರೆಗೂ
ಅವನ ಜೊತೆಯಲ್ಲಿ ಹೋದರು.

ಅರಸನಾದ ದಾವೀದನು ಯೆರೂಸಲೇಮಿಗೆ ಬಂದ 3
ಮೇಲೆ ತಾನು ಮನೆಕಾಯುವದಕ್ಕೋಸ್ಕರ ಇಟ್ಟಿದ್ದ

ತನ್ನ ಹತ್ತು ಮಂದಿ ಉಪಪತ್ನಿಯರನ್ನು ಪ್ರತ್ಯೇಕವಾದ
ಒಂದು ಮನೆಯಲ್ಲಿಟ್ಟು ಅವರಿಗೆ ಅನ್ನವಸ್ತ್ರಕೊಡು
ತ್ತಿದ್ದನು; ಆದರೆ ಅವರನ್ನು ತಿರಿಗಿ ಕೂಡಲಿಲ್ಲ.
ಅವರು ಜೀವದಿಂದಿರುವ ವರೆಗೂ ವಿಧವೆಯರಂತಿದ್ದು
ಕಾವಲಲ್ಲಿರಬೇಕಾಯಿತು.
4 ಅನಂತರ ಅರಸನು ಅಮಾಸನಿಗೆ— ನೀನು ಮೂರು
ದಿನಗಳೊಳಗಾಗಿ ಯೆಹೂದ್ಯರನ್ನು ಕೂಡಿಸಿಕೊಂಡು
5 ಇಲ್ಲಿ ಸಿದ್ಧವಾಗಿರು ಎಂದು ಆಜ್ಞಾಪಿಸಿದನು. ಅವನು
ಹೋಗಿ ಯೆಹೂದ್ಯರನ್ನು ಕೂಡಿಸಿದನು. ಆದರೆ
ಅವನು ನೇಮಕವಾದ ಸಮಯಕ್ಕೆ ಬಾರದೆ ತಡ
6 ಮಾಡಿದ್ದರಿಂದ ಅರಸನು ಅಬೀಷೈಗೆ— ಅಬ್ಷಾಲೋ
ಮನಿಗಿಂತ ಬಿಕ್ರೀಯ ಮಗನಾದ ಶೆಬನು ನಮಗೆ
ಹೆಚ್ಚಿನ ಕೇಡುಮಾಡುವಂತಿದೆ. ಆದದರಿಂದ ನೀನು
ನನ್ನ ಸ್ವಂತ ಆಳುಗಳನ್ನು ತೆಗೆದುಕೊಂಡು ಹೋಗಿ
ಅವನನ್ನು ಹಿಂದಟ್ಟು; ಇಲ್ಲವಾದರೆ ಅವನು ನಮ್ಮ
ಕಣ್ಣಿಗೆ ಮರೆಯಾಗಿ ಹೋಗಿ ಕೋಟೆಕೊತ್ತಲುಗಳುಳ್ಳ
7 ಪಟ್ಟಣಗಳನ್ನು ಸೇರಿಕೊಂಡಾನು ಅಂದನು. ಆಗ
ಅವನು ಯೋವಾಬನ ಸೈನಿಕರನ್ನೂ ಕೆರೇತ್ಯ, ಪೆಲೇತ್ಯ
ಎಂಬ ಕಾವಲುದಂಡುಗಳನ್ನೂ ಎಲ್ಲಾ ಶೂರರನ್ನೂ
ಕರಕೊಂಡು ಬಿಕ್ರೀಯ ಮಗನಾದ ಶೆಬನನ್ನು ಹಿಂದ
ಟ್ಟುವದಕ್ಕೋಸ್ಕರ ಯೆರೂಸಲೇಮಿನಿಂದ ಹೊರಟನು.
8 ಅವರು ಗಿಬ್ಯೋನಿನಲ್ಲಿದ್ದ ದೊಡ್ಡ ಕಲ್ಲನ್ನು ಸಮೀ
ಪಿಸಿದಾಗ ಅಮಾಸನು ಅವರೆದುರಿಗೆ ಬಂದನು. ಯುದ್ಧ
ವಸ್ತ್ರಗಳನ್ನು ಧರಿಸಿಕೊಂಡಿದ್ದ ಯೋವಾಬನು ಅವ
ನನ್ನು ವಂದಿಸುವದಕ್ಕೆ ಹೋಗುತ್ತಿರುವಾಗ ಅವನ
ಸೊಂಟಕ್ಕೆ ಕಟ್ಟಿದ್ದ ಕತ್ತಿಯು ಒರೆಯಿಂದ ಕೆಳಗೆ
9 ಬಿದ್ದಿತು. ಅವನು ಅಮಾಸನನ್ನು —ಸಹೋದರನೇ,
ಕ್ಷೇಮವೋ ಎಂದು ಕೇಳಿ ಮುದ್ದಿಡುವದಕ್ಕೋಸ್ಕ
ರವೋ ಎಂಬಂತೆ ಬಲಗೈಯಿಂದ ಅವನ ಗಡ್ಡವನ್ನು
10 ಹಿಡಿದು ಕೈಯಲ್ಲಿದ್ದ ಕತ್ತಿಯನ್ನು ಗಮನಿಸದಿದ್ದ
ಅಮಾಸನನ್ನು ಹೊಟ್ಟೆಯೊಳಗೆ ತಿವಿದನು. ಅದರಿಂದ
ಅವನ ಕರುಳುಗಳೆಲ್ಲಾ ಹೊರಗೆ ಬಂದವು. ಎರಡನೆಯ
ಸಾರಿ ತಿವಿಯಲಿಲ್ಲ; ಅಷ್ಟಕ್ಕೆ ಅವನು ಸತ್ತನು. ಯೋ
ವಾಬನೂ ಅವನ ತಮ್ಮನಾದ ಅಬೀಷೈಯೂ ಬಿಕ್ರೀಯ
ಮಗನಾದ ಶೆಬನನ್ನು ಹಿಂದಟ್ಟುವದಕ್ಕೋಸ್ಕರ ಮುಂದೆ
11 ನಡೆದಾಗ ಯೋವಾಬನ ಆಳುಗಳಲ್ಲೊಬ್ಬನು ಅಮಾ
ಸನ ಹತ್ತಿರ ನಿಂತು— ದಾವೀದ ಯೋವಾಬರ ಕಡೆ
ಯವರು ಯೋವಾಬನನ್ನು ಹಿಂಬಾಲಿಸಲಿ ಎಂದು
12 ಕೂಗಿದನು. ಮಾರ್ಗದ ಮಧ್ಯದಲ್ಲಿ ರಕ್ತದೊಳಗೆ
ಹೊರಳಾಡುತ್ತಿದ್ದ ಅಮಾಸನನ್ನು ನೋಡುತ್ತಾ ಎಲ್ಲಾ
ಜನರೂ ನಿಂತರು. ಬಂದವರೆಲ್ಲರೂ ಅಲ್ಲೇ ನಿಲ್ಲು
ವದನ್ನು ಆ ಮನುಷ್ಯನು ಕಂಡು ಅಮಾಸನ ಶವ
ವನ್ನು ದಾರಿಯಿಂದ ಎಳೆದು ಹೊಲದಲ್ಲಿ ಹಾಕಿ
13 ಅದನ್ನು ಬಟ್ಟೆಯಿಂದ ಮುಚ್ಚಿದನು. ಶವವನ್ನು
ಆಚೆ ಹಾಕಿದನಂತರ ಜನರೆಲ್ಲರೂ ಬಿಕ್ರೀಯ ಮಗ
ನಾದ ಶೆಬನನ್ನು ಹಿಂದಟ್ಟುವದಕ್ಕೋಸ್ಕರ ಯೋ
ವಾಬನನ್ನು ಹಿಂಬಾಲಿಸಿದರು.
14 ಶೆಬನು ಇಸ್ರಾಯೇಲ್‌ಪ್ರಾಂತಗಳಲ್ಲಿ ಸಂಚರಿಸುತ್ತಾ

ಆಬೇಲ್ಬೇತ್ಮಾಕಾ ಎಂಬಲ್ಲಿಗೆ ಬಂದನು. ಬೇರಿ
ರೆಲ್ಲರೂ ಕೂಡಿಕೊಂಡು ಅವನೊಡನೆ ಆ ಊರ
ಸೇರಿದರು. ಯೋವಾಬನ ಕಡೆಯವರು ಆಬೇ
ತ್ಮಾಕಾ ಊರಿಗೆ ಮುತ್ತಿಗೆಹಾಕಿ ಅದಕ್ಕೆ ಎದು
ಊರುಗೋಡೆಗೆ ತಗಲುವ ಒಂದು ಮಣ್ಣಿನ
ವನ್ನು ಮಾಡಿ ಗೋಡೆಯನ್ನು ಕೆಡವಿಬಿಡುವ
ಪ್ರಯತ್ನಿಸಿದರು. ಆಗ ಆ ಊರಿನ ಬುದ್ಧಿವಂತೆಯ
ಒಬ್ಬ ಹೆಂಗಸು ಅವರಿಗೆ— ಕೇಳಿರಿ, ದಯವಿಟ್ಟು
ಳಿರಿ; ಯೋವಾಬನು ಮಾತಾಡುವದಕ್ಕೋಸ್ಕರ
ಬಳಿಗೆ ಬರಬೇಕೆಂದು ಹೇಳಿರಿ ಎಂದು ಕೂಗಿದ
ಯೋವಾಬನು ಬರಲು ಆ ಸ್ತ್ರೀಯು— ನೀನು ಯ
ವಾಬನೋ ಎಂದು ಅವನನ್ನು ಕೇಳಿದಳು. ಅವನ
ಹೌದು, ನಾನೇ ಎಂದು ಉತ್ತರಕೊಟ್ಟನು.
ಯು— ನಿನ್ನ ದಾಸಿಯ ಮಾತನ್ನು ಕೇಳು ಅನ್
ಅವನು— ಕೇಳುತ್ತೇನೆ ಅಂದನು. ಆಗ ಆಕೆಯು
ಪೂರ್ವಕಾಲದಲ್ಲಿ ಜನರು ಆಬೇಲಿನವರ ಆಲೋ
ಯನ್ನು ಕೇಳೋಣ ಅಂದುಕೊಂಡು ಅವರ ಆಲೋ
ನೆಯ ಮೇರೆಗೆ ತೀರ್ಮಾನಮಾಡಿಕೊಳ್ಳುತ್ತಿದ್ದ
[1]ನಮ್ಮ ಪಟ್ಟಣವು ಇಸ್ರಾಯೇಲ್ಯರಲ್ಲಿ ಸಮಾಧ
ವುಳ್ಳದ್ದೂ ರಾಜನಿಷ್ಠೆಯುಳ್ಳದ್ದೂ ಆಗಿದೆ. ನಿ
ಇಸ್ರಾಯೇಲ್ಯರ ಪಟ್ಟಣಗಳಲ್ಲಿ ತಾಯಿಯೆಂದು
ರುಗೊಂಡ ಈ ಪಟ್ಟಣವನ್ನು ಹಾಳುಮಾಡಬೇಕೆಂದಿ
ನೀನು ಯೆಹೋವನ ಸ್ವಾಸ್ತ್ಯವನ್ನು ನುಂಗಿಬಿ
ದೇಕೆ ಅಂದಳು. ಅದಕ್ಕೆ ಯೋವಾಬನು— ನ
ಬಿಡುವದಾಗಲಿ ಹಾಳುಮಾಡುವದಾಗಲಿ ನನಗೆ ದ
ವಾಗಿರಲಿ; ಅಂಥದು ಬೇಡವೇ ಬೇಡ. ಸಂಗತಿ
ಹೀಗಿರುವದಿಲ್ಲ; ಎಫ್ರಾಯೀಮ್ ಪರ್ವತಪ್ರದೇ
ಬಿಕ್ರೀಯ ಮಗನಾದ ಶೆಬನೆಂಬವನು ಅರಸ
ದಾವೀದನಿಗೆ ವಿರೋಧವಾಗಿ ಕೈಯೆತ್ತಿದ್ದಾನೆ. ಅವನ
ಒಪ್ಪಿಸಿರಿ; ನಾನು ಊರನ್ನು ಬಿಟ್ಟುಹೋಗುತ್ತೇನೆ ಎ
ಹೇಳಿದನು. ಅದಕ್ಕೆ ಸ್ತ್ರೀಯು— ನೋಡು, ಈಗ
ಅವನ ತಲೆಯು ಗೋಡೆಯ ಕಂಡಿಯಿಂದ ನಿನ್ನ ಕ
ಒಗೆಯಲ್ಪಡುವದು ಎಂದು ಉತ್ತರಕೊಟ್ಟು ತನ್ನ ಜ
ಬಳಿಗೆ ಹೋಗಿ ಅವರಿಗೆ ವಿವೇಕದೊಡನೆ ಈ ಸಂ
ಯನ್ನು ತಿಳಿಸಿದಳು. ಅವರು ಬಿಕ್ರೀಯ ಮಗನ
ಶೆಬನ ತಲೆಯನ್ನು ಕಡಿದು ಯೋವಾಬನಿದ್ದಲ್ಲಿಗೆ ಬ
ಡಿದರು. ಕೂಡಲೆ ಅವನು ತುತೂರಿಯನ್ನು ಊ
ದನು; ಜನರು ಆ ಪಟ್ಟಣವನ್ನು ಬಿಟ್ಟು ತಮ್ಮ ತ
ನಿವಾಸಗಳಿಗೆ ಹೋದರು. ಯೋವಾಬನು ಹಿಂದಿ
ಯೆರೂಸಲೇಮಿನಲ್ಲಿದ್ದ ಅರಸನ ಬಳಿಗೆ ಬಂದನು.

ದಾವೀದನ ಆಸ್ಥಾನಿಕರು.

ಯೋವಾಬನು ಇಸ್ರಾಯೇಲ್ಯರ ಮುಖ್ಯ ಸೇ
ಪತಿ; ಯೆಹೋಯಾದಾವನ ಮಗನಾದ ಬೆನಾ
ಯನು ಕೆರೇತ್ಯ, ಪೆಲೇತ್ಯ ಎಂಬ ಕಾವಲುದಂಡು
ಅಧಿಪತಿ. ಅದೋರಾಮನು ಬಿಟ್ಟೀಕೆಲಸ ಮ
ಸುವವನು; ಅಹೀಲೂದನ ಮಗನಾದ ಯೆಹೋ

1) ಮೂಲ: ನಾನು ಇಸ್ರಾಯೇಲ್ಯರಲ್ಲಿ ಸಮಾಧಾನವುಳ್ಳವಳೂ ರಾಜನಿಷ್ಠೆಯುಳ್ಳವಳೂ ಆಗಿದ್ದೇನೆ.

ಫಾಟನು ಪ್ರಧಾನಮಂತ್ರಿಯು. ಶೆವನು ಲೇಖಕನು;
ಚಾದೋಕ್ ಎಬ್ಯಾತಾರರು ಯಾಜಕರು; ಯಾಯೀ
ರಿನವನಾದ ಈರನೂ ದಾವೀದನ ಯಾಜಕನು.

### ದಾವೀದನ ಚರಿತ್ರೆಯ ಪೂರಣೆ 21 — 24.

ಸೌಲನು ಗಿಬ್ಯೋನ್ಯರನ್ನು ಹಿಂಸಿಸಿದ್ದಕ್ಕಾಗಿ ದಾವೀದನು ಪ್ರಾಯಶ್ಚಿತ್ತಕೊಟ್ಟದ್ದು.

21 ದಾವೀದನ ಕಾಲದಲ್ಲಿ ಮೂರು ವರುಷಗಳ ವರೆ
ಗೂ ಬಿಡದೆ ಬರವಿತ್ತು. ದಾವೀದನು ಯೆಹೋ
ವನನ್ನು ವಿಚಾರಿಸಲು ಆತನು—ಸೌಲನು ಗಿಬ್ಯೋನ್ಯ
ರನ್ನು ಕೊಲ್ಲಿಸಿದ್ದರಿಂದ ಅವನ ಮೇಲೆಯೂ ಅವನ
ಮನೆಯವರ ಮೇಲೆಯೂ ರಕ್ತಾಪರಾಧವಿರುತ್ತದೆ
ಎಂದು ಉತ್ತರಕೊಟ್ಟನು. (ಗಿಬ್ಯೋನ್ಯರು ಇಸ್ರಾ
ಯೇಲ್‌ಕುಲಗಳಿಗೆ ಸೇರಿದವರಲ್ಲ; ಸಂಹೃತರಾಗದೆ
ಉಳಿದ ಅಮೋರಿಯರಷ್ಟೆ. ಇಸ್ರಾಯೇಲ್ಯರು ತಾವು
ಇವರನ್ನು ಕೊಲ್ಲುವದಿಲ್ಲವೆಂದು ಪ್ರಮಾಣಮಾಡಿ
ದ್ದರು. ಆದರೂ ಸೌಲನು ಇಸ್ರಾಯೇಲ್ ಮತ್ತು
ಯೆಹೂದಕುಲಗಳ ಮೇಲೆ ತನಗಿದ್ದ ಅಭಿಮಾನದ ದೆಸೆ
ಯಿಂದ ಇವರನ್ನೂ ನಿರ್ನಾಮಗೊಳಿಸಬೇಕೆಂದಿದ್ದನು.)
ಅಗ ಅರಸನಾದ ದಾವೀದನು ಗಿಬ್ಯೋನ್ಯರನ್ನು ಕರೆ
ದು—ನಾನು ನಿಮಗೋಸ್ಕರ ಏನು ಮಾಡಬೇಕೆನ್ನು
ತ್ತೀರಿ? ನಿಮಗೆ ಪ್ರಾಯಶ್ಚಿತ್ತವಾಗಿ ಯಾವದನ್ನು
ಕೊಟ್ಟರೆ ನೀವು ಯೆಹೋವನ ಸ್ವಾಸ್ತ್ಯವನ್ನು ಆಶೀರ್ವ
ದಿಸುವಿರಿ ಎಂದು ಕೇಳಿದನು. ಅದಕ್ಕೆ ಅವರು—
ಸೌಲನ ಸಂತಾನದವರಿಗೂ ನಮಗೂ ಇರುವ ವ್ಯಾಜ್ಯ
ವು ಬೆಳ್ಳಿಬಂಗಾರದಿಂದ ತೀರಲಾರದು; ಇಸ್ರಾಯೇಲ್ಯ
ರನ್ನು ಕೊಲ್ಲುವ ಅಧಿಕಾರವು ನಮಗಿಲ್ಲ ಎಂದು ಉತ್ತ
ರಕೊಡಲು ಅರಸನು ಅವರಿಗೆ—ಏನು ಮಾಡಬೇಕು
ಹೇಳಿರಿ, ಮಾಡುತ್ತೇನೆ ಅಂದನು. ಅವರು—ನಮ್ಮ
ನ್ನು ಇಸ್ರಾಯೇಲ್‌ಪ್ರಾಂತಗಳಿಂದ ಹೊರಡಿಸುವದ
ಕ್ಕೂ ನಿರ್ನಾಮಗೊಳಿಸುವದಕ್ಕೂ ಪ್ರಯತ್ನಿಸಿದ ಆ
ಮನುಷ್ಯನ ಮಕ್ಕಳಲ್ಲಿ ಏಳು ಮಂದಿಯನ್ನು ನಮಗೆ
ಒಪ್ಪಿಸು. ಯೆಹೋವನಿಂದ ಆರಿಸಲ್ಪಟ್ಟ ಸೌಲನು
ವಾಸವಾಗಿದ್ದ ಗಿಬೆಯದಲ್ಲಿ ನಾವು ಅವರನ್ನು
ಕೊಂದು ಯೆಹೋವನ ಸನ್ನಿಧಿಯಲ್ಲಿ ನೇತುಹಾಕು
ವೆವು ಎಂದರು. ಅರಸನು—ಆಗಲಿ, ಒಪ್ಪಿಸುತ್ತೇನೆ
ಅಂದನು. ದಾವೀದನು ತಾನು ಸೌಲನ ಮಗನಾದ
ಯೋನಾತಾನನಿಗೆ ಯೆಹೋವನ ಹೆಸರಿನಲ್ಲಿ ಮಾಡಿದ
ಪ್ರಮಾಣವನ್ನು ನೆನಸಿ ಸೌಲನ ಮೊಮ್ಮಗನೂ ಯೋ
ನಾತಾನನ ಮಗನೂ ಆದ ಮೆಫೀಬೋಶೆತನನ್ನು ಉಳಿ
ಸಿದನು. ಆದರೆ ಸೌಲನಿಗೆ ಅಯ್ಯಾಹನ ಮಗಳಾದ
ರಿಚ್ಪಳಲ್ಲಿ ಹುಟ್ಟಿದ ಅರ್ಮೋನೀ, ಮೆಫೀಬೋಶೆತ್
ಎಂಬ ಇಬ್ಬರು ಮಕ್ಕಳನ್ನೂ ಮೆಹೋಲದ ಬರ್ಜಿಲ್ಲೈ
ಯ ಮಗನಾದ ಅದ್ರೀಯೇಲನಿಗೆ ಸೌಲನ ಮಗಳಾದ
ಮೇರಬಳಲ್ಲಿ ಹುಟ್ಟಿದ ಐದು ಮಂದಿ ಮಕ್ಕಳನ್ನೂ
ತೆಗೆದುಕೊಂಡು ಅವರನ್ನು ಗಿಬ್ಯೋನ್ಯರಿಗೆ ಒಪ್ಪಿಸಿ
ದನು. ಅವರು ಇವರನ್ನು ಕೊಂದು ಗುಡ್ಡದ ಮೇಲೆ
ಯೆಹೋವನ ಸನ್ನಿಧಿಯಲ್ಲಿ ನೇತುಹಾಕಿದರು. ಈ
ಏಳು ಮಂದಿಯೂ ಏಕಕಾಲದಲ್ಲಿ ಹತರಾದರು.
ಇವರನ್ನು ಕೊಂದಾಗ ಜವೆಗೋದಿಸುಗ್ಗಿಯು ಆರಂಭ
ವಾಗಿತ್ತು. ಆಗ ಅಯ್ಯಾಹನ ಮಗಳಾದ ರಿಚ್ಪಳು 10
ಒಂದು ಗೋಣಿತಟ್ಟನ್ನು ತೆಗೆದುಕೊಂಡು ಅದನ್ನು
ಬಂಡೆಯ ಮೇಲೆ ಹಾಸಿ ಸುಗ್ಗಿಯ ಆರಂಭದಿಂದ ಶವ
ಗಳ ಮೇಲೆ ಮಳೆ ಬೀಳುವ ತನಕ ಅದರ ಮೇಲೆ ಕೂತು
ಕೊಂಡು ಹಗಲಿನಲ್ಲಿ ಆಕಾಶದ ಪಕ್ಷಿಗಳೂ ಇರುಳಿ
ನಲ್ಲಿ ಕಾಡುಮೃಗಗಳೂ ಅವುಗಳನ್ನು ತಿನ್ನದಂತೆ ಕಾ
ಯುತ್ತಿದ್ದಳು.
ಅಯ್ಯಾಹನ ಮಗಳೂ ಸೌಲನ ಉಪಪತ್ನಿಯೂ 11
ಆದ ರಿಚ್ಪಳು ಮಾಡಿದ ಈ ಕಾರ್ಯವು ದಾವೀದನಿಗೆ
ತಿಳಿಸಲ್ಪಟ್ಟಿತು. ಆಗ ಅವನು ಸೌಲನ ಮತ್ತು ಅವನ 12
ಮಗನಾದ ಯೋನಾತಾನನ ಎಲುಬುಗಳನ್ನು ತರು
ವದಕ್ಕೋಸ್ಕರ ಯಾಬೇಷ್‌ಗಿಲ್ಯಾದಿಗೆ ಹೋದನು.
ಫಿಲಿಷ್ಟಿಯರು ಸೌಲನನ್ನು ಗಿಲ್ಬೋವದಲ್ಲಿ ಸೋಲಿಸಿದ
ನಂತರ ಅವನ ಮತ್ತು ಯೋನಾತಾನನ ಶವಗಳನ್ನು
ಬೇತ್‌ಷೆಯಾನಿನ ಬೀದಿಗಳಲ್ಲಿ ತೂಗಹಾಕಿದ್ದರು.
ಯಾಬೇಷ್‌ಗಿಲ್ಯಾದಿನವರು ಅಲ್ಲಿಂದ ಅವುಗಳನ್ನು
ಕದ್ದುಕೊಂಡು ಹೋಗಿದ್ದರು. ದಾವೀದನು ಯಾಬೇ 13
ಷಿನಲ್ಲಿದ್ದ ಸೌಲಯೋನಾತಾನರ ಎಲುಬುಗಳನ್ನೂ
ಗಿಬ್ಯೋನಿನಲ್ಲಿ ಹತರಾದ ಆ ಮನುಷ್ಯರ ಎಲುಬುಗ
ಳನ್ನೂ ತೆಗೆದುಕೊಂಡು ಅವುಗಳನ್ನೆಲ್ಲಾ ಬೆನ್ಯಾಮೀನ್ 14
ದೇಶದ ಚೇಲಾ ಊರಿನಲ್ಲಿ ಸೌಲನ ತಂದೆಯಾದ
ಕೀಷನ ಶ್ಮಶಾನಭೂಮಿಯಲ್ಲಿ ಸಮಾಧಿಮಾಡಿಸಿದನು.
ಅರಸನ ಅಪ್ಪಣೆಯಂತೆ ಇದೆಲ್ಲಾ ಆದನಂತರ ದೇಶದ
ಮೇಲೆ ದೇವರಿಗಿದ್ದ ಕೋಪವು ಶಾಂತಿಯಾಯಿತು.

ದಾವೀದನ ಭಟರ ಕೆಲವು ಶೂರಕೃತ್ಯಗಳು.

ಒಂದು ಕಾಲದಲ್ಲಿ ಫಿಲಿಷ್ಟಿಯರಿಗೂ ಇಸ್ರಾಯೇಲ್ಯ 15
ರಿಗೂ ತಿರಿಗಿ ಯುದ್ಧವಾಯಿತು. ದಾವೀದನು ತನ್ನ
ಸೈನಿಕರನ್ನು ಕರಕೊಂಡು ಫಿಲಿಷ್ಟಿಯರಿಗೆ ವಿರೋಧ
ವಾಗಿ ಯುದ್ಧಕ್ಕೆ ಹೋದಾಗ ಬಹಳವಾಗಿ ದಣಿದಂಥ
ಅವನನ್ನು ರೆಫಾಯರಲ್ಲೊಬ್ಬನಾದ ಇಷ್ಬೀಬೆನೋಬ್ 16
ಎಂಬವನು ಕೊಲ್ಲುವದಕ್ಕಿದ್ದನು. ಅವನ ಬರ್ಜಿಯ
ತಾಮ್ರವು ಮುನ್ನೂರು ರೂಪಾಯಿ ತೂಕದ್ದು; ಅವನು
ಸೊಂಟಕ್ಕೆ ಹೊಸ [ಕತ್ತಿಯನ್ನು] ಕಟ್ಟಿಕೊಂಡಿದ್ದನು.
ಚೆರೂಯಳ ಮಗನಾದ ಅಬೀಷೈಯು ದಾವೀದನ 17
ಸಹಾಯಕ್ಕೆ ಬಂದು ಫಿಲಿಷ್ಟಿಯನನ್ನು ಕೊಂದುಹಾಕಿ
ದನು. ಆಗ ಜನರು ದಾವೀದನಿಗೆ—ಇಸ್ರಾಯೇ
ಲ್ಯರ ದೀಪವು ಆರಿಹೋಗದಂತೆ ನೀನು ಇನ್ನು ಮುಂದೆ
ನಮ್ಮ ಜೊತೆಯಲ್ಲಿ ಯುದ್ಧಕ್ಕೆ ಬರಬಾರದು ಎಂದು
ಖಂಡಿತವಾಗಿ ಹೇಳಿದರು.
ಅನಂತರ ಫಿಲಿಷ್ಟಿಯರ ಸಂಗಡ ಗೋಬಿನಲ್ಲಿ 18
ಯುದ್ಧನಡೆಯಿತು. ಆಗ ಹುಷಾ ಊರಿನವನಾದ ಸಿಬ್ಬೆ
ಕೈ ಎಂಬವನು ರೆಫಾಯನಾದ ಸಫ್ ಎಂಬವನನ್ನು
ಕೊಂದನು.
ಗೋಬಿನಲ್ಲಿ ಫಿಲಿಷ್ಟಿಯರೊಡನೆ ಇನ್ನೊಮ್ಮೆ ಯುದ್ಧ 19
ನಡೆದಾಗ ಬೇತ್ಲೆಹೇಮಿನವನಾದ ಯಾರೇಯೋರೆಗೀ
ಮ್ ಎಂಬವನ ಮಗನಾದ ಎಲ್ಹಾನಾನನು ಗಿತ್ತೀಯ
ನಾದ ಗೊಲ್ಯಾತನನ್ನು ಕೊಂದನು. ಆ ಗೊಲ್ಯಾ

ತನ ಬರ್ಜಿಯ ಹಿಡಿಕೆಯು ನೇಯಿಗಾರರ ಕುಂಟೆಯ
ಷ್ಟು ಗಾತ್ರವಿತ್ತು.
20 ಮತ್ತೊಂದು ಸಾರಿ ಗತ್ ಊರಿನಲ್ಲಿ ಯುದ್ಧನಡೆ
ಯಿತು. ಅಲ್ಲಿ ಒಬ್ಬ ಎತ್ತರವಾದ ಪುರುಷನಿದ್ದನು.
ಅವನ ಕೈಕಾಲುಗಳಿಗೆ ಆರಾರು ಬೆರಳುಗಳಂತೆ ಒಟ್ಟಿಗೆ
ಇಪ್ಪತ್ತನಾಲ್ಕು ಬೆರಳುಗಳಿದ್ದವು. ಅವನೂ ರೆಫಾ
21 ಯನು. ಅವನು ಇಸ್ರಾಯೇಲ್ಯರನ್ನು ನಿಂದಿಸಿದಾಗ
ದಾವೀದನ ಅಣ್ಣನಾದ ಶಿಮೆಯಾನನ ಮಗ ಯೋ
ನಾತಾನನು ಅವನನ್ನು ಕೊಂದುಹಾಕಿದನು.
22 ಗತ್ ಊರಿನವರಾದ ಈ ನಾಲ್ಕು ಮಂದಿ ರೆಫಾ
ಯರು ದಾವೀದನಿಂದಲೂ ಅವನ ಸೇವಕರಿಂದಲೂ
ಹತರಾದರು.

ದಾವೀದನು ರಚಿಸಿದ ಸ್ತುತಿಗೀತ.

22 ಯೆಹೋವನು ದಾವೀದನನ್ನು ಎಲ್ಲಾ ಶತ್ರುಗಳ
ಕೈಗೂ ಸೌಲನ ಕೈಗೂ ಸಿಕ್ಕದಂತೆ ತಪ್ಪಿಸಿದಾಗ
ಅವನು ಯೆಹೋವನ ಘನಕ್ಕಾಗಿ ಈ ಪದ್ಯವನ್ನು
ರಚಿಸಿ ಹೇಳಿದನು—

2 ಯೆಹೋವನು ನನ್ನ ಬಂಡೆಯೂ ನನ್ನ ಕೋ
ಟೆಯೂ ನನ್ನ ವಿಮೋಚಕನೂ ಆಗಿದ್ದಾನೆ;
3 ಆತನು ನನ್ನ ಆಶ್ರಯಗಿರಿಯಾಗಿರುವ ದೇವರೂ
ನನ್ನ ಗುರಾಣಿಯೂ ನನ್ನ ರಕ್ಷಣೆಯ ಕೊಂಬೂ
ನನ್ನ ದುರ್ಗವೂ
ನನ್ನ ಶರಣನೂ ಬಲಾತ್ಕಾರಿಯಿಂದ ನನ್ನನ್ನು
ರಕ್ಷಿಸುವವನೂ ಆಗಿದ್ದಾನೆ.
4 ಯೆಹೋವನು ಸ್ತೋತ್ರಕ್ಕೆ ಅರ್ಹನು;
ನಾನು ಆತನಿಗೆ ಮೊರೆಯಿಡಲು ನನ್ನನ್ನು ಶತ್ರು
ಗಳಿಂದ ರಕ್ಷಿಸುತ್ತಾನೆ.

5 ಮರಣಪ್ರವಾಹದ ಅಲ್ಲಕಲ್ಲೋಲಗಳು ನನ್ನನ್ನು
ಸುತ್ತಿಕೊಂಡವು;
ನಾಶಪ್ರವಾಹವು ನನ್ನನ್ನು ನಡುಗಿಸಿತು.
6 ಪಾತಾಳಪಾಶಗಳು ನನ್ನನ್ನು ಆವರಿಸಿಕೊಂಡವು;
ಮರಣಕರವಾದ ಉರ್ಲುಗಳು ನನ್ನೆದುರಿನಲ್ಲಿದ್ದವು.
7 ಅಂಥ ಕಷ್ಟದಲ್ಲಿ ನಾನು ಯೆಹೋವನಿಗೆ ಮೊರೆಯಿ
ಟ್ಟೆನು;
ನನ್ನ ದೇವರನ್ನು ಪ್ರಾರ್ಥಿಸಿದೆನು.
ಆತನು ತನ್ನ ಮಂದಿರದಲ್ಲಿ ನನ್ನ ಶಬ್ದವನ್ನು ಕೇಳಿ
ದನು;
ನನ್ನ ಕೂಗು ಆತನ ಸನ್ನಿಧಿಗೆ ಕೇಳಿಸಿತು.

8 ಆಗ ಆತನಿಗೆ ಸಿಟ್ಟೇರಿದದರಿಂದ ಭೂಮಿಯು
ಗಡಗಡನೆ ಕಂಪಿಸಿತು;
ಆಕಾಶದ ಆಧಾರಗಳು ನಡುಗಿ ಕದಲಿದವು.
9 ಆತನ ಮೂಗಿನಿಂದ ಹೊಗೆಯು ಬಂತು;
ಆತನ ಬಾಯಿಂದ ಅಗ್ನಿಜ್ವಾಲೆಹೊರಟು ಸಿಕ್ಕಿದ್ದೆಲ್ಲ
ವನ್ನೂ ದಹಿಸಿ ಕೆಂಡವನ್ನಾಗಿ ಮಾಡಿತು.
10 ಆತನು ಆಕಾಶವನ್ನು ತಗ್ಗಿಸಿ ಇಳಿದುಬಂದನು;
ಆತನ ಪಾದಗಳ ಕೆಳಗೆ ಕಾರ್ಗತ್ತಲಿತ್ತು.
ಕೆರೂಬಿವಾಹನನಾಗಿ ಹಾರಿ
ವಾಯುವೇ ಆತನ ರೆಕ್ಕೆಗಳೋ ಎಂಬಂತೆ ಇಳಿದ
ಪ್ರತ್ಯಕ್ಷನಾದನು.
ಕತ್ತಲನ್ನೂ ಜಲಮಯವಾಗಿರುವ ನೀಲಮೇಘಗ
ನ್ನೂ
ತನ್ನ ಸುತ್ತಲು ಗುಡಾರದಂತೆ ಕವಿಸಿಕೊಂಡನು.
ಆತನ ಸಾನ್ನಿಧ್ಯಪ್ರಕಾಶದಿಂದ ಉರಿಗೆಂಡಗಳು ಹೆ
ರಟವು.
ಯೆಹೋವನು ಆಕಾಶದಿಂದ ಗುಡುಗಿದನು;
ಪರಾತ್ಪರನು ಧ್ವನಿಗೊಟ್ಟನು.
ಆತನು ಬಾಣಗಳನ್ನೆಸೆದು ಶತ್ರುಗಳನ್ನು ಚದರಿ
ಬಿಟ್ಟನು;
ಸಿಡಿಲಿನಿಂದ ಕಳವಳಗೊಳಿಸಿದನು.
ಆಗ ಯೆಹೋವನ ಗದರಿಕೆಯಿಂದಲೂ ಆತ
ಶ್ವಾಸಭರದಿಂದಲೂ
ಸಮುದ್ರದ ತಳವು ಕಾಣಿಸಿತು, ಭೂಮಂಡಲ
ಅಸ್ತಿವಾರಗಳು ತೋರಬಂದವು.

ಆತನು ಮೇಲಣ ಲೋಕದಿಂದ ಕೈಚಾ
ನನ್ನನ್ನು ಹಿಡಿದು
ಮಹಾಜಲರಾಶಿಗಳೊಳಗಿಂದ ಎಳೆದನು.
ನನಗಿಂತ ಬಲಿಷ್ಠರೂ ಪುಷ್ಟರೂ ಆಗಿ ದ್ವೇಷಿಸುತ್ತಿ
ಶತ್ರುಗಳಿಂದ
ನನ್ನನ್ನು ಬಿಡಿಸಿ ರಕ್ಷಿಸಿದನು.
ಅವರು ನನ್ನ ವಿಪತ್ಕಾಲದಲ್ಲಿ ನನ್ನ ಮೇಲೆ ಬಿದ್ದರು
ಆಗ ಯೆಹೋವನು ನನಗೆ ಉದ್ಧಾರಕನಾದನು
ಆತನು ನನ್ನನ್ನು ಬಿಡಿಸಿ ವಿಶಾಲಸ್ಥಳದಲ್ಲಿ ಸೇ
ಸಿದನು;
ನನ್ನನ್ನು ಮೆಚ್ಚಿ ರಕ್ಷಿಸಿದನು.

ಯೆಹೋವನು ನನ್ನ ನೀತಿಗೆ ಸರಿಯಾ
ಮೇಲು ಮಾಡಿದನು;
ನನ್ನ ಕೈಗಳ ಶುದ್ಧತ್ವಕ್ಕೆ ತಕ್ಕಂತೆ ಪ್ರತಿಫಲಕೆ
ಟ್ಟನು.
ಯೆಹೋವನ ಮಾರ್ಗವನ್ನೇ ಅನುಸರಿಸಿದೆನಲ್ಲಾ
ನನ್ನ ದೇವರನ್ನು ಬಿಟ್ಟು ದುಷ್ಟನಾಗಲಿಲ್ಲವಲ್ಲ
ನಾನು ಆತನ ಆಜ್ಞೆಗಳನ್ನು ಯಾವಾಗಲೂ ನ
ದುರಿನಲ್ಲಿ ಇಟ್ಟುಕೊಂಡೆನು;
ಆತನ ವಿಧಿಗಳಿಂದ ತೊಲಗಿಹೋಗಲಿಲ್ಲ.
ನಾನು ಆತನ ದೃಷ್ಟಿಯಲ್ಲಿ ನಿರ್ದೋಷಿಯು;
ಪಾಪದಲ್ಲಿ ಬೀಳದಂತೆ ಜಾಗರೂಕತೆಯಿಂದ ನಡೆ
ಕೊಂಡೆನು.
ಆದದರಿಂದ ನಾನು ನೀತಿವಂತನೂ ನಿರಪರಾಧಿಯ
ಎಂದು ನೋಡಿ
ಯೆಹೋವನು ತಕ್ಕ ಪ್ರತಿಫಲವನ್ನು ಕೊಟ್ಟನು.

ನೀನು ಕೃಪೆಯುಳ್ಳವನಿಗೆ ಕೃಪಾವಂತನೂ
ದೋಷವಿಲ್ಲದವನಿಗೆ ನಿರ್ದೋಷಿಯೂ
ಶುದ್ಧನಿಗೆ ಪರಿಶುದ್ಧನೂ
ಮೂರ್ಖನಿಗೆ ವಕ್ರನೂ ಆಗಿರುವಿ.

28 ದೀನರನ್ನು ಉದ್ಧರಿಸುತ್ತೀ;
ಹಮ್ಮಿನವರನ್ನು ಕಂಡುಹಿಡಿದು ತಗ್ಗಿಸಿಬಿಡುತ್ತೀ.
29 ಯೆಹೋವನೇ, ನನ್ನ ದೀಪವು ನೀನೇ;
ಯೆಹೋವನು ನನಗೆ ಬೆಳಕನ್ನು ಕೊಟ್ಟು ಕತ್ತಲನ್ನು ಪರಿಹರಿಸುವನು.
30 ನಿನ್ನ ಬಲದಿಂದ ದಂಡಿನ ಮೇಲೆ ಬೀಳುವೆನು;
ನನ್ನ ದೇವರ ಸಹಾಯದಿಂದ ಪ್ರಾಕಾರವನ್ನು ಲಂಘಿಸುವೆನು.
31 ದೇವರ ಮಾರ್ಗವು ಯಾವ ದೋಷವೂ ಇಲ್ಲದ್ದು;
ಯೆಹೋವನ ವಚನವು ಶುದ್ಧವಾದದ್ದು.
ಆತನು ಆಶ್ರಿತರೆಲ್ಲರಿಗೆ ಗುರಾಣಿಯಾಗಿದ್ದಾನೆ.

32 ಯೆಹೋವನಲ್ಲದೆ ದೇವರು ಯಾರು?
ನಮ್ಮ ದೇವರ ಹೊರತು ಶರಣನು ಎಲ್ಲಿ?
33 ದೇವರು ನನ್ನ ಬಲವಾದ ಕೋಟೆಯಾಗಿದ್ದಾನೆ;
ಆತನು ನನ್ನ ಮಾರ್ಗವನ್ನು ಸರಾಗಮಾಡುತ್ತಾನೆ.
34 ನನ್ನ ಕಾಲನ್ನು ಜಿಂಕೆಯ ಕಾಲಿನಂತೆ ಚುರುಕುಮಾಡುತ್ತಾನೆ.
ನನ್ನನ್ನು ಉನ್ನತಪ್ರದೇಶಗಳಲ್ಲಿ ನಿಲ್ಲಿಸುತ್ತಾನೆ.
35 ಆತನೇ ನನಗೆ ಯುದ್ಧವಿದ್ಯೆಯನ್ನು ಕಲಿಸಿದದರಿಂದ
ನಾನು ತಾಮ್ರದ ಬಿಲ್ಲನ್ನಾದರೂ ಉಪಯೋಗಿಸಬಲ್ಲೆನು.
36 ನೀನೇ ನನಗೋಸ್ಕರ ಗುರಾಣಿಯನ್ನು ಹಿಡಿದು ರಕ್ಷಿಸಿದ್ದೀ;
ನಿನ್ನ ಕೃಪಾಕಟಾಕ್ಷವು ನನಗೆ ದೊಡ್ಡಸ್ತಿಕೆಯನ್ನು ಉಂಟುಮಾಡಿದೆ.
37 ನೀನು ನನ್ನ ಕಾಲುಗಳಿಗೆ ವಿಶಾಲಸ್ಥಳವನ್ನು ಕೊಟ್ಟದರಿಂದ
ನನ್ನ ಹರಡುಗಳು ಕದಲುವದಿಲ್ಲ.
38 ನನ್ನ ಶತ್ರುಗಳನ್ನು ಹಿಂದಟ್ಟಿ ಸಂಹರಿಸುವೆನು;
ಅವರನ್ನು ಇಲ್ಲದಂತೆ ಮಾಡುವ ವರೆಗೂ ಹಿಂದಿರುಗುವದಿಲ್ಲ.
39 ಅವರನ್ನು ನಿರ್ನಾಮಗೊಳಿಸುವೆನು, ಹೊಡೆದು ಏಳಲಾರದಂತೆ ಮಾಡುವೆನು;
ಅವರು ನನ್ನ ಪಾದದ ಕೆಳಗೆ ಬೀಳುವರು.
40 ನೀನು ನನಗೆ ಯುದ್ಧಕ್ಕಾಗಿ ಶೌರ್ಯವೆಂಬ ನಡುಕಟ್ಟನ್ನು ಬಿಗಿದಿದ್ದೀ;
ಎದುರಾಳಿಗಳನ್ನು ಕುಗ್ಗಿಸಿ ನನಗೆ ಅಧೀನಮಾಡಿದ್ದೀ.
41 ನನ್ನ ಶತ್ರುಗಳನ್ನು ಬೆಂಗೊಟ್ಟು ಓಡಮಾಡಿದ್ದೀ;
ನನ್ನ ಹಗೆಯವರನ್ನು ನಿರ್ಮೂಲಮಾಡುವೆನು.
42 ಅವರು ಸುತ್ತಲೂ ನೋಡಿದರೂ ರಕ್ಷಿಸುವವನಿಲ್ಲ;
ಯೆಹೋವನಿಗೆ ಮೊರೆಯಿಟ್ಟರೂ ಆತನು ಉತ್ತರವನ್ನು ಕೊಡಲೇ ಇಲ್ಲ.
43 ಭೂಮಿಯ ಧೂಳನ್ನೋ ಎಂಬಂತೆ ಅವರನ್ನು ಪುಡಿಪುಡಿಮಾಡಿದೆನು;
ಬೀದಿಯಲ್ಲಿರುವ ಕೆಸರನ್ನೋ ಎಂಬಂತೆ ಅವರನ್ನು ತುಳಿದು ಎಸೆದುಬಿಟ್ಟೆನು.
44 ನನ್ನ ಜನರ ಕಲಹಗಳಿಗೆ ನನ್ನನ್ನು ತಪ್ಪಿಸಿದ್ದೀ.
ಜನಾಂಗಗಳಿಗೆ ದೊರೆಯಾಗುವಂತೆ ನನ್ನನ್ನು ಉಳಿಸಿದ್ದೀ.
ನಾನರಿಯದ ಜನಾಂಗದವರು ಸಹ ನನಗೆ ಅಧೀನರಾಗುವರು.
ದೇಶಾಂತರದವರು ನನ್ನ ಮುಂದೆ ಮುದುರಿಕೊಳ್ಳುವರು. 45
ನನ್ನ ಸುದ್ದಿಯನ್ನು ಕೇಳಿದ ಮಾತ್ರಕ್ಕೆ ನನಗೆ ವಿಧೇಯರಾಗುವರು.
ಅವರು ಧೈರ್ಯಗುಂದಿದವರಾಗಿ 46
ತಮ್ಮ ತಮ್ಮ ಕೋಟೆಗಳಿಂದ ನಡುಗುತ್ತಾ ಬರುವರು.

ಯೆಹೋವನು ಚೈತನ್ಯಸ್ವರೂಪನು; 47
ನನ್ನ ಶರಣನಿಗೆ ಸ್ತೋತ್ರ!
ನನ್ನ ಆಶ್ರಯಗಿರಿಯಾಗಿರುವ ದೇವರಿಗೆ ಕೊಂಡಾಟ!
ಆತನು ನನ್ನ ಶತ್ರುಗಳಿಗೆ ಪ್ರತಿದಂಡನೆಮಾಡುವ 48
ದೇವರು;
ಜನಾಂಗಗಳನ್ನು ನನಗೆ ಅಧೀನಪಡಿಸುತ್ತಾನೆ.
ಶತ್ರುಗಳಿಂದ ನನ್ನನ್ನು ಬಿಡಿಸುವಾತನೇ, 49
ನೀನು ನನ್ನನ್ನು ನನ್ನ ಎದುರಾಳಿಗಳಿಗೆ ತಪ್ಪಿಸಿ ಉನ್ನತಪಡಿಸುತ್ತೀ;
ಬಲಾತ್ಕಾರಿಗಳಿಂದ ನನ್ನನ್ನು ರಕ್ಷಿಸುತ್ತೀ.
ಈ ಕಾರಣದಿಂದ ಯೆಹೋವನೇ, ಅನ್ಯಜನಗಳ 50
ಮಧ್ಯದಲ್ಲಿ ನಿನ್ನನ್ನು ಸ್ತುತಿಸುವೆನು;
ನಿನ್ನ ನಾಮವನ್ನು ಸಂಕೀರ್ತಿಸುವೆನು.
ಆತನು ತಾನು ನೇಮಿಸಿದ ಅರಸನಿಗೋಸ್ಕರ 51
ವಿಶೇಷರಕ್ಷಣೆಯನ್ನು ದಯಪಾಲಿಸುವವನಾಗಿದ್ದಾನೆ;
ತಾನು ಅಭಿಷೇಕಿಸಿದ ದಾವೀದನಿಗೂ ಅವನ ಸಂತತಿಯವರಿಗೂ
ಸದಾಕಾಲ ಕೃಪೆಯನ್ನು ಅನುಗ್ರಹಿಸುವವನಾಗಿದ್ದಾನೆ.

ದಾವೀದನ ಕಡೇ ಮಾತುಗಳು.

## 23

ದಾವೀದನ ಕಡೇ ಮಾತುಗಳು.

ಇಷಯನ ಮಗನಾದ ದಾವೀದನ ನುಡಿಗಳು—
ಉನ್ನತಸ್ಥಾನಕ್ಕೆ ಏರಿಸಲ್ಪಟ್ಟವನೂ
ಯಾಕೋಬನ ದೇವರಿಂದ ಅಭಿಷೇಕಿಸಲ್ಪಟ್ಟವನೂ
ಇಸ್ರಾಯೇಲ್ಯರ ವರಕವಿಯೂ ಆಗಿರುವವನು ಹೇಳಿದ್ದು—

ಯೆಹೋವನ ಆತ್ಮವು ನನ್ನಲ್ಲಿ ಉಸುರಿತು; 2
ಆತನ ವಾಕ್ಯವು ನನ್ನ ಬಾಯಲ್ಲಿತ್ತು.
ಇಸ್ರಾಯೇಲ್ಯರ ಶರಣನೂ ದೇವರೂ ಆಗಿರುವಾತನು ಹೇಳಿದ್ದೇನಂದರೆ—

ದೇವರಲ್ಲಿ ಭಯಭಕ್ತಿಯುಳ್ಳವನಾಗಿ ಜನರನ್ನು 3
ನೀತಿಯಿಂದ ಆಳುವವನು

4 ಮೋಡಗಳಿಲ್ಲದ ಪ್ರಾತಃಕಾಲದಲ್ಲಿ ತೇಜೋಮಯ
ನಾಗಿ ಉದಯಿಸಿ
ಮೋಡಗಳನ್ನು ಚದರಿಸಿಬಿಟ್ಟು
ಮಳೆಬಿದ್ದ ಭೂಮಿಯಿಂದ ಹುಲ್ಲನ್ನು ಮೊಳಿಸುವ
ಸೂರ್ಯನಿಗೆ ಸಮಾನನಾಗಿದ್ದಾನೆ.

5 ನನ್ನ ಮನೆಯು ಯೆಹೋವನ ಸನ್ನಿಧಿಯಲ್ಲಿ
ಸ್ಥಿರವಾಗಿರುತ್ತದಲ್ಲವೋ?
ಆತನು ನನ್ನೊಡನೆ ಒಡಂಬಡಿಕೆಮಾಡಿಕೊಂಡಿ
ದ್ದಾನೆ;
ಅದು ಎಂದಿಗೂ ಬಿದ್ದುಹೋಗುವದಿಲ್ಲ, ಎಲ್ಲಾ
ವಿಷಯಗಳಲ್ಲಿ ಖಂಡಿತವಾಗಿದೆ.
ನನ್ನ ರಕ್ಷಣೆಯ ಮೂಲವೂ ನನ್ನ ಅಭಿಲಾಷೆಯನ್ನು
ಪೂರ್ತಿಗೊಳಿಸುವವನೂ ಆತನೇ ಅಲ್ಲವೋ?

6 ದುಷ್ಟರು ದೂರಕ್ಕೆ ಬಿಸಾಡಲ್ಪಟ್ಟ ಮುಳ್ಳುಗ
ಳಂತಿರುತ್ತಾರೆ;
ಅವುಗಳನ್ನು ಹಿಡಿಯಬೇಕೆಂದಿರುವವನು ಕೈಯಿಂದ
ಹಿಡಿಯಲಾರದೆ
7 ಕಬ್ಬಿಣದ ಆಯುಧವನ್ನೂ ಬರ್ಜಿಯ ಹಿಡಿಯನ್ನೂ
ಉಪಯೋಗಿಸಬೇಕು;
ಅವು ಬಿದ್ದಲ್ಲಿಯೇ ಬೆಂಕಿಯಿಂದ ಸುಟ್ಟುಹೋಗು
ವವು.

ದಾವೀದನ ರಣವೀರರೂ ಅವರ ಶೂರಕೃತ್ಯಗಳೂ.

8 ದಾವೀದನ ರಣವೀರರ ಪಟ್ಟಿ—ತಹ್ಕೆಮೋನ್ಯನಾದ
ಯೋಷೆಬಷ್ಷೆಬೆತನು ಸರದಾರರಲ್ಲಿ ಮುಖ್ಯಸ್ಥನು.
ಎಚ್ನೀಯನಾದ ಅದೀನೋ ಅನ್ನಿಸಿಕೊಳ್ಳುವ ಇವನು
ಒಂದೇ ಸಾರಿ ಎಂಟುನೂರು ಮಂದಿಯನ್ನು ಕೊಂದನು.
9 ಎರಡನೆಯವನು ಅಹೋಹ್ಯನಾದ ದೋದೋ ಎಂಬ
ವನ ಮಗನಾಗಿರುವ ಎಲ್ಲಾಜಾರನು. ಫಿಲಿಷ್ಟಿಯರು
ಅಲ್ಲಿ ಯುದ್ಧಕ್ಕೆ ಕೂಡಿಕೊಂಡಾಗ ಅವರನ್ನು ನಿಂದಿ
ಸುವದಕ್ಕೆ ದಾವೀದನ ಜೊತೆಯಲ್ಲಿ ಹೋದ ಮೂರು
10 ಮಂದಿ ಶೂರರಲ್ಲಿ ಇವನು ಒಬ್ಬನಾಗಿದ್ದನು. ಇಸ್ರಾ
ಯೇಲ್ಯರು ಹೋದನಂತರ ಇವನು ನಿಂತು ಕತ್ತಿ
ಹಿಡಿದ ಕೈ ಸೋತು ಮರಗಟ್ಟಿ ಹೋಗುವ ತನಕ
ಫಿಲಿಷ್ಟಿಯರನ್ನು ಕೊಲ್ಲುತ್ತಲೇ ಇದ್ದನು. ಆ ದಿನ
ದಲ್ಲಿ ಯೆಹೋವನು ಮಹಾಜಯವನ್ನುಂಟುಮಾಡ
ಲು ಇಸ್ರಾಯೇಲ್ಯರು ಸುಲುಕೊಳ್ಳುವದಕ್ಕೋಸ್ಕರವೇ
11 ಹಿಂದಿರುಗಿದರು. ಮೂರನೆಯವನು ಹರಾರ್ಯನಾದ
ಆಗೇಯನ ಮಗ ಶಮ್ಮ ಎಂಬವನು. ಫಿಲಿಷ್ಟಿ
ಯರು ದೊಡ್ಡ ಗುಂಪಾಗಿ ಒಂದು ಅಲಸಂದಿಯ
12 ಹೊಲಕ್ಕೆ ಬಂದರು. ಇಸ್ರಾಯೇಲ್ಯರು ಅವರ ಎದು
ರಿನಿಂದ ಓಡಿಹೋದಾಗ ಇವನು ಆ ಹೊಲದ ಮಧ್ಯ
ದಲ್ಲೇ ನಿಂತುಕೊಂಡು ಫಿಲಿಷ್ಟಿಯರನ್ನು ಕೊಂದು
ಹೊಲವನ್ನು ಕಾಪಾಡಿದನು. ಹೀಗೆ ಯೆಹೋವನು
ಮಹಾಜಯವನ್ನುಂಟುಮಾಡಿದನು.

ಮೂವತ್ತು ಮಂದಿ ಪ್ರಸಿದ್ಧಶೂರರಲ್ಲಿ ದಾವೀದನು ಅದುಲ್ಲಾಮ್ ಗವಿಯಲ್ಲಿದ್ದಾಗ ಸುಗ್ಗೀಕಾಲದಲ್ಲಿ ಅವನ ಬಳಿಗೆ ಮೂರು ಮಂದಿ ಬಂದರು. ಫಿಲಿಷ್ಟಿಯರು ದಂಡೆತ್ತಿಬಂದು ರೆಫಾಯಿೊಮ್ ತಗ್ಗಿನಲ್ಲಿ ಪಾಳೆಯಮಾಡಿಕೊಂಡಾಗ ದಾವೀದನು ಆ ಅದುಲ್ಲಾಮ್ ದುರ್ಗದಲ್ಲಿದ್ದನು. ಫಿಲಿಷ್ಟಿಯರು ಬೇತ್ಲೆಹೇಮಿನಲ್ಲಿ ಕಾವಲುದಂಡನ್ನಿಟ್ಟಿದ್ದರು. ಅದೇ ಸಮಯದಲ್ಲಿ ದಾವೀದನು ಲವಲವಿಕೆಯಿಂದ—ಬೇತ್ಲೆಹೇಮ್ ಊರಿನ ಬಾಗಲ ಬಳಿಯಲ್ಲಿರುವ ಬಾವಿಯ ನೀರನ್ನು ಯಾರಾದರೂ ನನಗೆ ತಂದುಕೊಡುವದಾದರೆ ಎಷ್ಟೋ ಒಳ್ಳೇದು ಅಂದನು. ಕೂಡಲೆ ಆ ಮೂರು ಮಂದಿ ಪರಾಕ್ರಮಶಾಲಿಗಳು ಫಿಲಿಷ್ಟಿಯರ ದಂಡಿನೊಳಗೆ ನುಗ್ಗಿಹೋಗಿ ಬೇತ್ಲೆಹೇಮಿನ ಬಾಗಲ ಬಳಿಯಲ್ಲಿರುವ ಬಾವಿಯ ನೀರನ್ನು ಸೇದಿ ದಾವೀದನಿಗೆ ತಂದುಕೊಟ್ಟರು. ಆದರೆ ಅವನು ಅದನ್ನು ಕುಡಿಯಲೊಲ್ಲದೆ—ಯೆಹೋವನೇ, ಈ ನೀರನ್ನು ಕುಡಿಯುವದು ನನಗೆ ದೂರವಾಗಿರಲಿ. ಇದು ಜೀವದಾಶೆ ತೊರೆದವರ ರಕ್ತ! ಇದನ್ನು ಕುಡಿಯುವದೇ ಇಲ್ಲ ಎಂದು ಹೇಳಿ ಅದನ್ನು ಯೆಹೋವನ ಮುಂದೆ ಹೊಯ್ದನು. ಆ ಮೂರು ಮಂದಿಯ ಪರಾಕ್ರಮವು ಇದೇ.

ಚೆರೂಯಳ ಮಗನೂ ಯೋವಾಬನ ತಮ್ಮನೂ ಆದ ಅಬೀಷೈಯು ಈ [1]ಮೂರು ಮಂದಿಯಲ್ಲಿ ಮುಖ್ಯಸ್ಥನು. ಅವನು ತನ್ನ ಬರ್ಜಿಯನ್ನು ಬೀಸುತ್ತಾ ಹೋಗಿ ಮುನ್ನೂರು ಮಂದಿಯನ್ನು ಕೊಂದದರಿಂದ ಈ [1]ಮೂವರಲ್ಲಿ ಕೀರ್ತಿಗೊಂಡನು. ಇವರಲ್ಲಿ ಘನವುಳ್ಳವನೂ ನಾಯಕನೂ ಇವನೇ. ಆದರೂ ಇವನು ಮೊದಲಿನ ಮೂರು ಮಂದಿಗೆ ಸಮಾನನಾಗಿರಲಿಲ್ಲ. ಯೆಹೋಯಾದಾವನ ಮಗನೂ ಕಬ್ಜಯೇಲಿನ ಪರಾಕ್ರಮಶಾಲಿಯೂ ಆದ ಬೆನಾಯನು ಇನ್ನೊಬ್ಬನು. ಇವನು ಅನೇಕ ಶೂರಕೃತ್ಯಗಳನ್ನು ನಡಿಸಿದನು. ದೃಷ್ಟಾಂತ—ಒಂದು ಸಾರಿ ಮೋವಾಬ್ಯನಾದ ಅರೀಯೇಲನ ಇಬ್ಬರು ಮಕ್ಕಳನ್ನು ಕೊಂದನು. ಇನ್ನೊಮ್ಮೆ ಹಿಮಕಾಲದಲ್ಲಿ ಒಂದು ಸಿಂಹವು ಗುಂಡಿಯಲ್ಲಿ ಬಿದ್ದಿರಲು ಇವನು ಆ ಗುಂಡಿಗೆ ಇಳಿದು ಹೋಗಿ ಅದನ್ನು ಕೊಂದನು. ಮತ್ತೊಮ್ಮೆ ಉನ್ನತನಾದ ಒಬ್ಬ ಐಗುಪ್ತ್ಯನನ್ನು ಕೊಂದನು. ಆ ಐಗುಪ್ತ್ಯನ ಕೈಯಲ್ಲಿ ಒಂದು ಬರ್ಜಿಯಿತ್ತು. ಇವನು ಕೈಯಲ್ಲಿ ಒಂದು ಕೋಲನ್ನು ಮಾತ್ರ ಹಿಡಿದುಕೊಂಡು ಹೋಗಿ ಅವನ ಕೈಯಲ್ಲಿದ್ದ ಬರ್ಜಿಯನ್ನು ಕಿತ್ತುಕೊಂಡು ಅದರಿಂದ ಅವನನ್ನು ಕೊಂದನು. ಈ ಪರಾಕ್ರಮಕೃತ್ಯದಿಂದ ಯೆಹೋಯಾದಾವನ ಮಗನಾದ ಬೆನಾಯನು ಈ [1]ಮೂವರಲ್ಲಿ ಹೆಸರುಗೊಂಡನು. ಮೂವತ್ತು ಮಂದಿಯಲ್ಲಿ ಇವನು ವಿಶೇಷ ಕೀರ್ತಿಯನ್ನು ಹೊಂದಿದ್ದರೂ [ಮೊದಲಿನ] ಮೂವರಿಗೆ ಸಮಾನನಾಗಿರಲಿಲ್ಲ. ದಾವೀದನು ಇವನನ್ನು ತನ್ನ ಕಾವಲುದಂಡಿನ ಮುಖ್ಯಸ್ಥನನ್ನಾಗಿ ಮಾಡಿದನು.

ಮೂವತ್ತು ಮಂದಿ ರಣವೀರರ ಪಟ್ಟಿ—

ಯೋವಾಬನ ತಮ್ಮನಾದ ಅಸಾಹೇಲನು, ಬೇತ್ಲೆ

1) ಪಾಠಾಂತರ: ಮೂವತ್ತು ಮಂದಿಯಲ್ಲಿ.

ಹೇಮಿನ ದೋದೋವಿನ ಮಗನಾದ ಎಲ್ಹಾನಾನ್,
25, 26 ಹರೋದಿನವರಾದ ಶಮ್ಮ ಎಲೀಕರು, ಪೆಲೆಟಿನವ
ನಾದ ಹೆಲೆಚ್, ತೆಕೋವದ ಇಕ್ಕೇಷನ ಮಗನಾದ
27 ಈರಾ, ಅಣತೋತಿನವನಾದ ಅಬೀಯೆಜೆರ್, ಹುಷಾ
28 ಊರಿನವನಾದ ಮೆಬುನ್ನೈ, ಅಹೋಹಿನವನಾದ
29 ಚಲ್ಮೋನ್, ನೆಟೋಫದವನಾದ ಮಹರೈ, ನೆಟೋಫ
ದವನಾದ ಬಾಣನ ಮಗ ಹೇಲೆಬ್, ಬೆನ್ಯಾಮೀನ್
ದೇಶದ ಗಿಬೆಯ ಊರಿನ ರೀಬೈ ಎಂಬವನ ಮಗ
30 ನಾದ ಇತ್ತೈ, ಪಿರಾತೋನ್ಯನಾದ ಬೆನಾಯ, ನಹಲೇ
31 ಗಾಷಿನವನಾದ ಹಿದ್ದೈ, ಅರಾಬಾ ತಗ್ಗಿನವನಾದ ಅಬೀ
32 ಅಲ್ಬೋನ್, ಬಹುರ್ಮ್ಯನಾದ ಅಜ್ಮಾವೇತ್, ಶಾಲ್ಬೋ
ನ್ಯನಾದ ಎಲೆಯಖ್ಬಾ, ಯಾಷೇನನ ಮಕ್ಕಳು,
33 ಯೋನಾತಾನನು, ಹರಾರ್ಯನಾದ ಶಮ್ಮ, ಅರಾರ್ಯ
34 ನಾದ ಶಾರಾರನ ಮಗ ಅಹೀಯಾಮ್, ಮಾಕಾ
ಊರಿನ ಅಹಸ್ಬೈ ಎಂಬವನ ಮಗನಾದ ಎಲೀಫೆಲೆಟ್,
ಗಿಲೋವಿನ ಅಹೀತೋಫೆಲ್ ಎಂಬವನ ಮಗನಾದ
35 ಎಲೀಯಾಮ್, ಕರ್ಮೆಲ್ಯನಾದ ಹೆಚ್ರೋ, ಅರ್ಬೀ
36 ಯನಾದ ಪಾರೈ, ಚೋಬ ಊರಿನ ನಾತಾನ್ ಎಂಬವನ
37 ಮಗನಾದ ಇಗಾಲ್, ಗಾದ್ಯನಾದ ಬಾನೀ, ಅಮ್ಮೋ
ನಿಯನಾದ ಚೆಲೆಕ್, ಬೇರೋತ್ಯನೂ ಚೆರೂಯಳ ಮಗ
ನಾದ ಯೋವಾಬನ ಆಯುಧವಾಹಕನೂ ಆಗಿದ್ದ
38, 39 ನಹರೈ, ಇತ್ರೀಯರಾದ ಈರಾ ಗಾರೇಬರು, ಹಿತ್ತಿಯ
ನಾದ ಊರೀಯ, ಒಟ್ಟಿಗೆ ಮೂವತ್ತೇಳು ಮಂದಿ.

ಖಾನೇಷುಮಾರಿಯೂ ಅದರ ಫಲವೂ.

24 ಯೆಹೋವನು ತಿರಿಗಿ ಇಸ್ರಾಯೇಲ್ಯರ ಮೇಲೆ
ಕೋಪಗೊಂಡು ದಾವೀದನನ್ನು ಇಸ್ರಾಯೇಲ್
ಯೆಹೂದ್ಯಕುಲಗಳವರ ಖಾನೇಷುಮಾರಿಮಾಡುವ
2 ದಕ್ಕೆ ಪ್ರೇರೇಪಿಸಿದನು. ಅರಸನು ತನ್ನ ಹತ್ತಿರದ
ಲ್ಲಿದ್ದ ಸೇನಾಪತಿಯಾದ ಯೋವಾಬನಿಗೆ—ಜನಸಂಖ್ಯೆ
ಗೊತ್ತಾಗುವ ಹಾಗೆ ನೀನು ದಾನ್ ಊರಿನಿಂದ
ಬೇರ್ಷೆಬದ ವರೆಗೆ ಸಂಚರಿಸಿ ಇಸ್ರಾಯೇಲ್‌ಕುಲ
ಗಳ ಎಲ್ಲಾ ಜನರನ್ನು ಲೆಕ್ಕಮಾಡಿಕೊಂಡು ಬಾ
3 ಎಂದು ಅವನಿಗೆ ಆಜ್ಞಾಪಿಸಿದನು. ಆಗ ಯೋವಾ
ಬನು ಅರಸನಿಗೆ—ನನ್ನ ಒಡೆಯನಾದ ನಿನ್ನ ಆಯು
ಷ್ಕಾಲದಲ್ಲೇ ದೇವರಾದ ಯೆಹೋವನು ನಿನ್ನ ಪ್ರಜೆ
ಯನ್ನು ಈಗ ಇರುವದಕ್ಕಿಂತ ನೂರರಷ್ಟು ಹೆಚ್ಚಿಸಲಿ.
ನನ್ನ ಒಡೆಯನಾದ ಅರಸನು ಈ ಕಾರ್ಯಕ್ಕೆ ಮನಸ್ಸು
4 ಮಾಡಿದ್ದೇಕೆ ಅಂದನು. ಆದರೆ ಅರಸನು ಯೋವಾ
ಬನಿಗೂ ಇತರ ಸೇನಾಪತಿಗಳಿಗೂ ಕಿವಿಗೊಡದೆ ತನ್ನ
ಮಾತನ್ನೇ ಸಾಧಿಸಿದದರಿಂದ ಅವರು ಇಸ್ರಾಯೇಲ್ಯ
ರನ್ನು ಲೆಕ್ಕಿಸುವದಕ್ಕಾಗಿ ಅರಸನ ಸನ್ನಿಧಿಯಿಂದ
5 ಹೊರಟುಹೋದರು. ಅವರು ಯೊರ್ದನ್ ಹೊಳೆ
ಯನ್ನು ದಾಟಿ ಗಾದ್ ತಗ್ಗಿನಲ್ಲಿರುವ ಪಟ್ಟಣದ
ಬಲಪಾರ್ಶ್ವದಲ್ಲಿರುವ ಅರೋಯೇರಿನಿಂದ ತೊಡಗಿ
6 ಯಗ್ಜೇರಿಗೂ ಅಲ್ಲಿಂದ ಗಿಲ್ಯಾದ್‌ಪ್ರಾಂತ, ತಖ್ತೀಮ್
ಹೊಜ್ಜೀಪ್ರದೇಶ ಇವುಗಳ ಮೇಲೆ ಯಾನಿನ ದಾನ್
7 ಎಂಬಲ್ಲಿಗೂ ಬಂದರು. ಅಲ್ಲಿಂದ ತಿರುಗಿಕೊಂಡು
ಚೀದೋನ್, ತೂರ್‌ಕೋಟೆ, ಹಿವ್ವಿಯರ ಮತ್ತು
ಕಾನಾನ್ಯರ ಪಟ್ಟಣಗಳು ಇವುಗಳ ಮೇಲೆ ಯೆಹೂದ
ಪ್ರಾಂತದ ದಕ್ಷಿಣದಿಕ್ಕಿನಲ್ಲಿರುವ ಬೇರ್ಷೆಬಕ್ಕೆ ಬಂದರು.
ಹೀಗೆ ಒಂಭತ್ತು ತಿಂಗಳು ಇಪ್ಪತ್ತು ದಿವಸಗಳಲ್ಲಿ 8
ದೇಶವನ್ನೆಲ್ಲಾ ಸಂಚರಿಸಿ ಯೆರೂಸಲೇಮಿಗೆ ಹಿಂದಿ
ರುಗಿ ಬಂದರು. ಯೋವಾಬನು ಅರಸನಿಗೆ ಒಪ್ಪಿಸಿದ 9
ಖಾನೇಷುಮಾರಿಯ ಸಂಖ್ಯೆಯು—ಇಸ್ರಾಯೇಲ್ಯರಲ್ಲಿ
ಯುದ್ಧಕ್ಕೆ ಹೋಗತಕ್ಕ ಸೈನಿಕರು ಎಂಟು ಲಕ್ಷ;
ಯೆಹೂದ್ಯರಲ್ಲಿ ಐದು ಲಕ್ಷ.

ಖಾನೇಷುಮಾರಿಮಾಡಿಸಿದನಂತರ ದಾವೀದನನ್ನು 10
ಮನಸ್ಸಾಕ್ಷಿಯು ಹಂಗಿಸತೊಡಗಿತು. ಆದದರಿಂದ
ಅವನು ಯೆಹೋವನನ್ನು—ಯೆಹೋವನೇ, ನಾನು
ಬುದ್ಧಿಹೀನಕಾರ್ಯವನ್ನು ಮಾಡಿ ಪಾಪಿಯಾದೆನು;
ದಯವಿಟ್ಟು ನಿನ್ನ ಸೇವಕನ ಅಪರಾಧವನ್ನು ಕ್ಷಮಿಸು
ಎಂದು ಪ್ರಾರ್ಥಿಸಿದನು. ಅವನು ಮರುದಿನ ಬೆಳಿಗ್ಗೆ 11
ಏಳುವಷ್ಟರಲ್ಲಿ ಅವನ ದರ್ಶಿಯಾದ ಗಾದ್‌ಪ್ರವಾದಿಗೆ
ಯೆಹೋವನು ದರ್ಶನದಲ್ಲಿ—ನೀನು ದಾವೀದನ 12
ಹತ್ತಿರ ಹೋಗಿ ಅವನಿಗೆ—ನಾನು ಮೂರು ವಿಧವಾದ
ಶಿಕ್ಷೆಗಳನ್ನು ನಿನ್ನ ಮುಂದೆ ಇಡುತ್ತೇನೆ; ಅವುಗಳಲ್ಲಿ
ಯಾವದನ್ನು ನಿನ್ನ ಮೇಲೆ ಬರಮಾಡಬೇಕೋ ಆರಿ
ಸಿಕೋ ಎಂದು ಯೆಹೋವನು ಅನ್ನುತ್ತಾನೆ ಎಂಬ
ದಾಗಿ ಹೇಳು ಎಂದು ಆಜ್ಞಾಪಿಸಿದನು. ಆಗ ಗಾದನು 13
ದಾವೀದನ ಬಳಿಗೆ ಹೋಗಿ—ನಿನ್ನ ದೇಶದಲ್ಲಿ ಏಳು
ವರುಷಗಳ ಬರವು ಉಂಟಾಗಬೇಕೋ, ಇಲ್ಲವೆ ನಿನ್ನ
ಶತ್ರುಗಳು ನಿನ್ನನ್ನು ಸೋಲಿಸಿ ಮೂರು ತಿಂಗಳುಗಳ
ವರೆಗೆ ಓಡಿಸಿಬಿಡಬೇಕೋ, ಇಲ್ಲವೆ ನಿನ್ನ ದೇಶದಲ್ಲಿ
ಮೂರು ದಿನಗಳ ವರೆಗೂ ಘೋರವ್ಯಾಧಿಬರಬೇಕೋ?
ನನ್ನನ್ನು ಕಳುಹಿಸಿದವನಿಗೆ ಯಾವ ಉತ್ತರವನ್ನು
ತೆಗೆದುಕೊಂಡುಹೋಗಬೇಕು, ಆಲೋಚಿಸಿ ಹೇಳು
ಅಂದನು. ಅದಕ್ಕೆ ದಾವೀದನು—ನಾನು ಬಲು 14
ಇಕ್ಕಟ್ಟಿನಲ್ಲಿರುತ್ತೇನೆ. ಯೆಹೋವನ ಕೈಯಲ್ಲಿ ಬೀಳು
ತ್ತೇನೆ; ಆತನು ಕೃಪಾಪೂರ್ಣನು. ಮನುಷ್ಯರ ಕೈ
ಯಲ್ಲಿ ಬೀಳಲೊಲ್ಲೆನು ಎಂದು ಹೇಳಿದನು.

ಆಗ ಯೆಹೋವನು ಇಸ್ರಾಯೇಲ್ಯರ ಮೇಲೆ 15
ವ್ಯಾಧಿಯನ್ನು ಬರಮಾಡಿದನು. ಅದು ಹೊತ್ತಾರೆ
ಯಿಂದ ನೇಮಕವಾದ ಹೊತ್ತಿನ ವರೆಗೂ ಇತ್ತು.
ದಾನಿನಿಂದ ಬೇರ್ಷೆಬದ ವರೆಗೆ ವಾಸವಾಗಿರುವ ಇಸ್ರಾ
ಯೇಲ್ಯರಲ್ಲಿ ಎಪ್ಪತ್ತು ಸಾವಿರ ಜನರು ಸತ್ತರು.
ದೇವದೂತನು ಯೆರೂಸಲೇಮನ್ನೂ ಸಂಹರಿಸುವದಕ್ಕೆ 16
ಕೈಚಾಚಿದಾಗ ಯೆಹೋವನು ಆ ಕೇಡಿನ ವಿಷ
ಯದಲ್ಲಿ ಪಶ್ಚಾತ್ತಾಪಪಟ್ಟು ಸಂಹಾರಕದೂತನಿಗೆ—
ಈಗ ಸಾಕು, ನಿನ್ನ ಕೈಯನ್ನು ಹಿಂದೆಗೆ ಎಂದು
ಆಜ್ಞಾಪಿಸಿದನು. ಆಗ ಆ ದೂತನು ಯೆಬೂಸಿಯ
ನಾದ ಅರೌನನ ಕಣದಲ್ಲಿದ್ದನು. ದಾವೀದನು 17
ಜನಸಂಹಾರಕದೂತನನ್ನು ಕಂಡಾಗ ಯೆಹೋವ
ನಿಗೆ—ಮೂರ್ಖತನದಿಂದ ಪಾಪಮಾಡಿದವನು ನಾನು:
ಕುರಿಗಳಂತಿರುವ ಈ ಜನರು ಏನು ಮಾಡಿದ್ದಾರೆ? ನಿನ್ನ
ಕೈ ನನಗೂ ನನ್ನ ಮನೆಯವರಿಗೂ ವಿರೋಧವಾಗಿರಲಿ
ಎಂದು ಬೇಡಿಕೊಂಡನು.

ಅದೇ ದಿನದಲ್ಲಿ ಗಾದನು ದಾವೀದನ ಬಳಿಗೆ ಬಂದು 18
ಅವನಿಗೆ—ನೀನು ಹೋಗಿ ಯೆಬೂಸಿಯನಾದ ಅರೌ

ನನ ಕಣದಲ್ಲಿ ಯೆಹೋವನಿಗೋಸ್ಕರ ಒಂದು ಯಜ್ಞ
19 ವೇದಿಯನ್ನು ಕಟ್ಟಿಸು ಎಂದು ಹೇಳಿದನು. ದಾವೀ
ದನು ಗಾದನ ಮುಖಾಂತರವಾಗಿ ತನಗಾದ ಯೆಹೋ
20 ವನ ಅಪ್ಪಣೆಯಂತೆ ಹೊರಟನು. ದಾವೀದನೂ ಅವನ
ಸೇವಕರೂ ತನ್ನ ಬಳಿಗೆ ಬರುವದನ್ನು ಅರೌನನು
ಕಂಡು ಅವರ ಮುಂದೆ ಹೋಗಿ ಅರಸನಿಗೆ ಸಾಷ್ಟಾಂಗ
21 ನಮಸ್ಕಾರಮಾಡಿ—ನನ್ನ ಒಡೆಯನಾದ ಅರಸನು ತನ್ನ
ಸೇವಕನ ಬಳಿಗೆ ಬರುವದಕ್ಕೇನು ಕಾರಣ ಎಂದು
ಕೇಳಿದನು. ದಾವೀದನು ಅವನಿಗೆ—ವ್ಯಾಧಿಯು ಜನ
ರನ್ನು ಬಿಟ್ಟುಹೋಗುವಂತೆ ನಾನು ನಿನ್ನ ಕಣವನ್ನು
ಕೊಂಡುಕೊಂಡು ಅದರಲ್ಲಿ ಯೆಹೋವನಿಗೋಸ್ಕರ
ಒಂದು ವೇದಿಯನ್ನು ಕಟ್ಟುವದಕ್ಕೆ ಬಂದಿದ್ದೇನೆ ಎಂದು
22 ಉತ್ತರಕೊಟ್ಟನು. ಆಗ ಅರೌನನು ದಾವೀದನಿಗೆ—
ನನ್ನ ಒಡೆಯನಾದ ಅರಸನು ತನಗೆ ಇಷ್ಟವಾದದ್ದನ್ನು
ತೆಗೆದುಕೊಂಡು ಅರ್ಪಿಸೋಣವಾಗಲಿ; ಇಲ್ಲಿ ಯಜ್ಞಕ್ಕೆ
ಹೋರಿಗಳೂ ಸೌದೆಗೆ ಹಂತೀಕುಂಟೆ ಮೊದಲಾದ ಎತ್ತಿನ
ಸಾಮಾನುಗಳೂ ಇರುತ್ತವೆ. ಇವುಗಳನ್ನೆಲ್ಲಾ ಅರ
ಸನ ಸೇವಕನಾದ ನಾನು ಅರಸನಿಗೆ ಕೊಡುತ್ತೇನೆ
ನಿನ್ನ ದೇವರಾದ ಯೆಹೋವನು ನಿನಗೆ ಪ್ರಸನ್ನನಾಗಲಿ
ಎಂದು ಹೇಳಿದನು. ಅರಸನು ಅರೌನನಿಗೆ—ಹಾಗಲ್ಲ
ನಾನು ನಿನ್ನಿಂದ ಕ್ರಯಕ್ಕೆ ತೆಗೆದುಕೊಳ್ಳುತ್ತೇನೆ. ನನ್ನ
ದೇವರಾದ ಯೆಹೋವನಿಗೆ ಸುಮ್ಮನೆ ಸಿಕ್ಕಿದ್ದನ್ನು
ಯಜ್ಞವಾಗಿ ಅರ್ಪಿಸಲೊಲ್ಲೆನು ಎಂದು ಹೇಳಿ ಅ
ಕಣವನ್ನೂ ಹೋರಿಗಳನ್ನೂ ಐವತ್ತು ರೂಪಾಯಿಗೆ
ಕೊಂಡುಕೊಂಡು ಅಲ್ಲಿ ಯೆಹೋವನಿಗೋಸ್ಕರ ಯಜ್ಞ
ವೇದಿಯನ್ನು ಕಟ್ಟಿಸಿ ಅದರ ಮೇಲೆ ಆತನಿಗೆ ಸರ್ವಾಂಗ
ಹೋಮಗಳನ್ನೂ ಸಮಾಧಾನಯಜ್ಞಗಳನ್ನೂ ಅರ್ಪಿ
ಸಿದನು. ಹೀಗೆ ದೇಶದ ಮೇಲಿದ್ದ ಯೆಹೋವನ
ಕೋಪವು ಶಾಂತವಾಯಿತು. ಇಸ್ರಾಯೇಲ್ಯರಲ್ಲಿದ್ದ
ಸಂಹಾರಕವ್ಯಾಧಿಯು ನಿಂತುಹೋಯಿತು.

---

# THE FIRST BOOK OF THE
# KINGS

## ಅರಸುಗಳು
## ಪ್ರಥಮಭಾಗ

### ಅರಸನಾದ ಸೊಲೊಮೋನನು. 1—11.

ಅದೋನೀಯನು ಅರಸನಾಗುವದಕ್ಕೆ ಪ್ರಯತ್ನಿಸಿದಲ್ಲಿ ದಾವೀದನು ಸೊಲೊಮೋನನಿಗೆ ರಾಜ್ಯಾಭಿಷೇಕ ಮಾಡಿಸಿದ್ದು.

1 ಅರಸನಾದ ದಾವೀದನು ದಿನತುಂಬಿದ ಮುದುಕ
ನಾಗಿದ್ದನು. ಸೇವಕರು ಎಷ್ಟು ಕಂಬಳಿಗಳನ್ನು
2 ಹೊದಿಸಿದರೂ ಅವನಿಗೆ ಬೆಚ್ಚಗಾಗುತ್ತಿದ್ದಿಲ್ಲ. ಆದದ
ರಿಂದ ಅವನ ಸೇವಕರು ಅವನಿಗೆ—ನಮ್ಮ ಒಡೆಯ
ನಾದ ಅರಸನಿಗೋಸ್ಕರ ಒಬ್ಬ ಕನ್ಯೆಯನ್ನು ಹುಡುಕ
ತಕ್ಕದ್ದು; ಆಕೆಯು ಅರಸನ ಸನ್ನಿಧಿಯಲ್ಲಿದ್ದುಕೊಂಡು
ಅವನನ್ನು ಪರಾಂಬರಿಸಬೇಕು. ಆಕೆಯು ನಮ್ಮ
ಒಡೆಯನಾದ ಅರಸನ ಮಗ್ಗುಲಲ್ಲಿ ಮಲಗುವದಾದರೆ
3 ಅವನಿಗೆ ಬೆಚ್ಚಗಾಗುವದು ಎಂದು ಹೇಳಿ ಇಸ್ರಾಯೇ
ಲ್ಯರ ಎಲ್ಲಾ ಪ್ರಾಂತಗಳಲ್ಲಿ ಅತಿಸುಂದರಿಯಾದ ಹುಡು
ಗಿಯನ್ನು ಹುಡುಕುವದಕ್ಕೆ ಹೋಗಿ ಶೂನೇಮ್
ಊರಿನ ಅಬೀಷಗ್ ಎಂಬಾಕೆಯನ್ನು ಕಂಡು ಆಕೆ
4 ಯನ್ನು ಅರಸನ ಬಳಿಗೆ ಕರಕೊಂಡು ಬಂದರು. ಬಹು
ಸುಂದರಿಯಾದ ಈಕೆಯು ಅರಸನನ್ನು ಪರಾಂಬರಿಸುವ
ಸೇವಕಿಯಾದಳು. ಅರಸನು ಈಕೆಯನ್ನು ಸಂಗಮಿ
ಸಲಿಲ್ಲ.
ಹಗ್ಗೀತಳ ಮಗನಾದ ಅದೋನೀಯನು ನಾನೇ
ಅರಸನಾಗತಕ್ಕವನು ಎಂಬದಾಗಿ ಉಬ್ಬಿಕೊಂಡು ತನ
ಗೋಸ್ಕರ ರಥರಥಾಶ್ವಗಳನ್ನೂ ಮುಂದೆ ಓಡುವದ
ಕ್ಕಾಗಿ ಐವತ್ತು ಮಂದಿ ಸಿಪಾಯಿಗಳನ್ನೂ ಇಟ್ಟು
ಕೊಂಡನು. ಅವನ ತಂದೆಯು—ನೀನು ಹಾಗೆ ಹೀಗೆ
ಮಾಡಿದ್ದೇಕೆ ಎಂದು ಅವನನ್ನು ಒಂದು ಸಾರಿಯಾ
ದರೂ ಗದರಿಸಿದ್ದು ಇರಲಿಲ್ಲ. ಅವನು ಬಹುಸುಂದ
ರನು. ಅಬ್ಷಾಲೋಮನ ತರುವಾಯ ಅವನೇ ಹಿರಿ
ಯನು. ಅವನು ಚೆರೂಯಳ ಮಗನಾದ ಯೋ
ವಾಬನನ್ನೂ ಯಾಜಕನಾದ ಎಬ್ಯಾತಾರನನ್ನೂ ತನ್ನ
ಕಡೆಗೆ ಒಲಿಸಿಕೊಂಡನು. ಇವರು ಅವನಿಗೆ ಸಹಾಯ
ಕರಾದರು. ಆದರೆ ಯಾಜಕನಾದ ಚಾದೋಕ್,
ಯೆಹೋಯಾದಾವನ ಮಗನಾದ ಬೆನಾಯ, ಪ್ರ
ವಾದಿಯಾದ ನಾತಾನ್, ಶಿಮ್ಮಿ, ರೇಗೀ ಎಂಬವರೂ
ದಾವೀದನ ಭಟರೂ ಅವನ ಪಕ್ಷದಲ್ಲಿರಲಿಲ್ಲ.
ಅದೋನೀಯನು ರೋಗೆಲ್ ಬುಗ್ಗೆಯ ಬಳಿಯಲ್ಲಿ
ರುವ ಚೋಹೆಲೆತ್ ಬಂಡೆಯ ಮೇಲೆ ಕುರಿ, ಹೋರಿ

ಮೊದಲಾದ ಕೊಬ್ಬಿದ ಪಶುಗಳನ್ನು ಯಜ್ಞಮಾಡಿಸಿ
ಪ್ರವಾದಿಯಾದ ನಾತಾನ್, ಬೆನಾಯ, ಯುದ್ಧಭ
ಟರು, ತಮ್ಮನಾದ ಸೊಲೊಮೋನ್ ಇವರನ್ನು
10 ಬಿಟ್ಟು ರಾಜಪುತ್ರರಾದ ತನ್ನ ಉಳಿದ ಸಹೋದರರನ್ನೂ
ಅರಸನ ಉದ್ಯೋಗಸ್ಥರಾದ ಎಲ್ಲಾ ಯೆಹೂದ್ಯರನ್ನೂ
ಔತಣಕ್ಕೆ ಕರಿಸಿದನು.

11 ಆಗ ನಾತಾನನು ಸೊಲೊಮೋನನ ತಾಯಿಯಾದ
ಬತ್ಷೆಬೆಗೆ—ಹಗ್ಗೀತಳ ಮಗನಾದ ಅದೋನೀಯನು
ನಮ್ಮ ಒಡೆಯನಾದ ದಾವೀದನಿಗೆ ತಿಳಿಯದೆ ಅರಸ
12 ನಾದನೆಂಬದನ್ನು ನೀನು ಕೇಳಿದಿಯಲ್ಲವೋ? ಈಗ
ನನ್ನ ಆಲೋಚನೆಯನ್ನು ಲಾಲಿಸಿ ನಿನ್ನ ಮತ್ತು ನಿನ್ನ
ಮಗನಾದ ಸೊಲೊಮೋನನ ಜೀವವನ್ನು ಉಳಿಸಿ
13 ಕೋ. ನೀನು ಅರಸನಾದ ದಾವೀದನ ಬಳಿಗೆ ಹೋಗಿ
ಅವನಿಗೆ—ನನ್ನ ಒಡೆಯನಾದ ಅರಸನು ತನ್ನ ತರು
ವಾಯ ನನ್ನ ಮಗನಾದ ಸೊಲೊಮೋನನೇ ಆಳ
ಬೇಕು; ಅವನೇ ತನ್ನ ಸಿಂಹಾಸನದ ಮೇಲೆ ಕೂತು
ಕೊಳ್ಳಬೇಕು ಎಂದು ತನ್ನ ದಾಸಿಯಾದ ನನಗೆ ಪ್ರ
ಮಾಣಮಾಡಿ ಹೇಳಿದನಲ್ಲಾ! ಹೀಗಿದ್ದ ಮೇಲೆ ಅದೋ
14 ನೀಯನು ಆಳುವದೇಕೆ ಎಂದು ಹೇಳು. ನೀನು ಅರಸ
ನೊಡನೆ ಮಾತಾಡುತ್ತಿರುವಾಗ ನಾನೂ ಬಂದು ನಿನ್ನ
15 ಮಾತನ್ನು ದೃಢಪಡಿಸುವೆನು ಅಂದನು. ಅರಸನು
ಬಹು ವೃದ್ಧನಾಗಿದ್ದದರಿಂದ ಶೂನೇಮ್ಯಳಾದ ಅಬೀ
ಷಗ್ ಎಂಬಾಕೆಯು ಪರಾಂಬರಿಕೆಯನ್ನು ಹೊಂದು
ತ್ತಾ ಒಳಗಿನ ಕೋಣೆಯಲ್ಲಿಯೇ ಇರುತ್ತಿದ್ದನು.
16 ಬತ್ಷೆಬೆಯು ಅಲ್ಲಿಗೆ ಹೋಗಿ ಅರಸನಿಗೆ ಬೊಗ್ಗಿ ನಮ
ಸ್ಕರಿಸಿದಳು. ಅರಸನು—ನಿನಗೇನು ಬೇಕು ಎಂದು
17 ಆಕೆಯನ್ನು ಕೇಳಿದನು. ಆಗ ಆಕೆಯು—ನನ್ನ
ಒಡೆಯನು ತನ್ನ ದೇವರಾದ ಯೆಹೋವನ ಮೇಲೆ
ಆಣೆಯಿಟ್ಟು ತನ್ನ ದಾಸಿಯಾದ ನನಗೆ—ನನ್ನ ತರು
ವಾಯ ನಿನ್ನ ಮಗನಾದ ಸೊಲೊಮೋನನು ಅರಸ
ನಾಗಬೇಕು; ನಿಜವಾಗಿ ಅವನೇ ನನ್ನ ಸಿಂಹಾಸನದ
ಮೇಲೆ ಕೂತುಕೊಳ್ಳಬೇಕು ಎಂಬದಾಗಿ ಹೇಳಿದನಲ್ಲಾ!
18 ಆದರೆ ಈಗ ಅದೋನೀಯನು ನನ್ನ ಒಡೆಯನೂ ಅರ
19 ಸನೂ ಆದ ನಿನಗೆ ತಿಳಿಯದೆ ರಾಜನಾಗಿ ಹೋರಿ ಕುರಿ
ಮೊದಲಾದ ಹಲವು ಕೊಬ್ಬಿದ ಪಶುಗಳನ್ನು ಯಜ್ಞ
ಮಾಡಿಸಿ ನಿನ್ನ ಸೇವಕನಾದ ಸೊಲೊಮೋನನ ಹೊರ
ತಾಗಿ ಎಲ್ಲಾ ರಾಜಪುತ್ರರನ್ನೂ ಯಾಜಕನಾದ ಎಬ್ಯಾ
ತಾರನನ್ನೂ ಸೇನಾಪತಿಯಾದ ಯೋವಾಬನನ್ನೂ ಔತ
20 ಣಕ್ಕೆ ಕರೆಸಿದ್ದಾನೆ. ನನ್ನ ಒಡೆಯನೂ ಅರಸನೂ ಆದ
ನಿನ್ನ ತರುವಾಯ ಸಿಂಹಾಸನದ ಮೇಲೆ ಕೂತುಕೊಳ್ಳ
ತಕ್ಕವರಾರೆಂಬದನ್ನು ನೀನೇ ಗೊತ್ತುಮಾಡಬೇಕೆಂದು
21 ಇಸ್ರಾಯೇಲ್ಯರೆಲ್ಲರೂ ಕಾದುಕೊಂಡಿರುತ್ತಾರೆ. ನನ್ನ
ಒಡೆಯನೂ ಅರಸನೂ ಆದ ನೀನು ಹಾಗೆ ಮಾಡದೆ
ಪಿತೃಗಳ ಬಳಿಗೆ ಸೇರುವದಾದರೆ ನಾನೂ ನನ್ನ ಮಗ
ನೂ ದೋಷಾರೋಪಣೆಗೆ ಗುರಿಯಾಗುವೆವು ಎಂದು
ಹೇಳಿದಳು.

22 ಆಕೆಯು ಹೀಗೆ ಅರಸನ ಸಂಗಡ ಮಾತಾಡುತ್ತಿರು
ವಷ್ಟರಲ್ಲಿ ಪ್ರವಾದಿಯಾದ ನಾತಾನನು ಬಂದನು.
23 ಸೇವಕರು ನಾತಾನನು ಬಂದಿರುವ ಸಂಗತಿಯನ್ನು
ಅರಸನಿಗೆ ತಿಳಿಸಿದರು. ನಾತಾನನು ಅರಸನ ಮುಂದೆ
ಹೋಗಿ ಸಾಷ್ಟಾಂಗನಮಸ್ಕಾರಮಾಡಿ—ನನ್ನ ಒಡೆಯ 24
ನೂ ಅರಸನೂ ಆದ ನೀನು ಅದೋನೀಯನಿಗೆ ಅರಸ
ನಾಗುವದಕ್ಕೂ ನಿನ್ನ ಸಿಂಹಾಸನದ ಮೇಲೆ ಕೂತುಕೊ
ಳ್ಳುವದಕ್ಕೂ ಅಪ್ಪಣೆಕೊಟ್ಟಿರುವಂತೆ ಕಾಣುತ್ತದೆ.
ಅವನು ಗಟ್ಟಾ ಇಳಿದು ಹೋಗಿ ಹೋರಿ ಕುರಿ ಮುಂ 25
ತಾದ ಹಲವು ಕೊಬ್ಬಿದ ಪಶುಗಳನ್ನು ಯಜ್ಞಮಾಡಿಸಿ
ಎಲ್ಲಾ ರಾಜಪುತ್ರರನ್ನೂ ಸೇನಾಪತಿಗಳನ್ನೂ ಯಾಜಕ
ನಾದ ಎಬ್ಯಾತಾರನನ್ನೂ ಔತಣಕ್ಕೆ ಕರೆದಿದ್ದಾನೆ. ಅವ
ರು ಅವನ ಪಂಕ್ತಿಯಲ್ಲಿ ಅನ್ನಪಾನಗಳನ್ನು ತೆಗೆದು
ಕೊಂಡು ಅರಸನಾದ ಅದೋನೀಯನು ಚಿರಂಜೀವಿ
ಯಾಗಿರಲಿ ಎಂದು ಕೂಗುತ್ತಿರುತ್ತಾರೆ. ಆದರೆ ಅವ 26
ನು ನಿನ್ನ ಸೇವಕನಾದ ನನ್ನನ್ನೂ ಯಾಜಕನಾದ ಚಾ
ದೋಕ್, ಯೆಹೋಯಾದಾವನ ಮಗನಾದ ಬೆನಾಯ
ಎಂಬವರನ್ನೂ ನಿನ್ನ ಸೇವಕನಾದ ಸೊಲೊಮೋನನ
ನ್ನೂ ಔತಣಕ್ಕೆ ಕರೆಯಲಿಲ್ಲ. ಈ ಕಾರ್ಯವು ನನ್ನ 27
ಒಡೆಯನೂ ಅರಸನೂ ಆದ ನಿನ್ನಿಂದಲೇ ನಡೆದಿರುವ
ಪಕ್ಷದಲ್ಲಿ ನಿನ್ನ ತರುವಾಯ ಸಿಂಹಾಸನದ ಮೇಲೆ
ಕೂತುಕೊಳ್ಳತಕ್ಕವರಾರೆಂಬದನ್ನು ನಿನ್ನ ಸೇವಕನಾದ
ನನಗೆ ತಿಳಿಸಬಾರದಾಗಿತ್ತೇ ಎಂದು ಹೇಳಿದನು. ಅರಸ 28
ನಾದ ದಾವೀದನು ಬತ್ಷೆಬೆಯನ್ನು ಕರೆಯಬೇಕೆಂದು
ಆಜ್ಞಾಪಿಸಿದನು. ಆಕೆಯು ಬಂದು ಅರಸನ ಮುಂದೆ
ನಿಂತಾಗ ಅರಸನು ಆಕೆಗೆ—ನನ್ನ ಪ್ರಾಣವನ್ನು ಎಲ್ಲಾ 29
ಇಕ್ಕಟ್ಟುಗಳಿಂದ ಬಿಡಿಸಿ ಕಾಪಾಡಿದ ಯೆಹೋವ
ನಾಣೆ, ನನ್ನ ತರುವಾಯ ನಿನ್ನ ಮಗನಾದ ಸೊಲೊ 30
ಮೋನನು ಅರಸನಾಗಿ ನನ್ನ ಸಿಂಹಾಸನದ ಮೇಲೆ ಕೂ
ತುಕೊಳ್ಳಬೇಕೆಂದು ನಾನು ನಿನಗೆ ಇಸ್ರಾಯೇಲ್
ದೇವರಾದ ಯೆಹೋವನ ಹೆಸರಿನಲ್ಲಿ ಪ್ರಮಾಣಮಾಡಿ
ದ್ದನ್ನು ಈಹೊತ್ತೇ ನೆರವೇರಿಸುವೆನು ಅಂದನು. ಆಗ 31
ಬತ್ಷೆಬೆಯು ಅರಸನಿಗೆ ಸಾಷ್ಟಾಂಗನಮಸ್ಕಾರ ಮಾ
ಡಿ—ನನ್ನ ಒಡೆಯನೂ ಅರಸನೂ ಆದ ದಾವೀದನು
ಸದಾಕಾಲ ಬಾಳಲಿ ಎಂದಳು.

ಅನಂತರ ಅರಸನಾದ ದಾವೀದನು ತನ್ನ ಸೇವಕ 32
ರಿಗೆ—ಯಾಜಕನಾದ ಚಾದೋಕ್, ಪ್ರವಾದಿಯಾದ
ನಾತಾನ್, ಯೆಹೋಯಾದಾವನ ಮಗನಾದ ಬೆನಾ
ಯ ಎಂಬವರನ್ನು ಕರೆಯಿರಿ ಎಂದು ಆಜ್ಞಾಪಿಸಿದನು;
ಅವರು ಅರಸನ ಸನ್ನಿಧಿಗೆ ಬರಲು ಅರಸನು ಅವ 33
ರಿಗೆ—ನೀವು ನನ್ನ ಸೇವಕರನ್ನು ಕರಕೊಂಡು ನನ್ನ
ಮಗನಾದ ಸೊಲೊಮೋನನನ್ನು ನನ್ನ ಹೇಸರಕತ್ತೆಯ
ಮೇಲೆ ಕುಳ್ಳಿರಿಸಿಕೊಂಡು ಗೀಹೋನ್ ಬುಗ್ಗೆಗೆ ಹೋ
ಗಿರಿ. ಅಲ್ಲಿ ಯಾಜಕನಾದ ಚಾದೋಕನೂ ಪ್ರವಾದಿ 34
ಯಾದ ನಾತಾನನೂ ಅವನನ್ನು ಇಸ್ರಾಯೇಲ್ಯರ
ಅರಸನನ್ನಾಗಿ ಅಭಿಷೇಕಿಸಲಿ; ಅನಂತರ ಕೊಂಬನ್ನೂ
ದಿರಿ; ಎಲ್ಲರೂ ಅರಸನಾದ ಸೊಲೊಮೋನನು ಚಿರಂ
ಜೀವಿಯಾಗಿರಲಿ ಎಂದು ಆರ್ಭಟಿಸಲಿ. ಆ ಮೇಲೆ 35
ನೀವು ಅವನ ಹಿಂದೆ ಬನ್ನಿರಿ; ಅವನು ಅರಮನೆಯನ್ನು
ಪ್ರವೇಶಿಸಿ ನನ್ನ ಸಿಂಹಾಸನದ ಮೇಲೆ ಕೂತುಕೊಂಡು
ನನಗೆ ಬದಲಾಗಿ ಆಳಬೇಕು. ನಾನು ಇಸ್ರಾಯೇ
ಲ್ಯರ ಮತ್ತು ಯೆಹೂದ್ಯರ ಮೇಲೆ ಅವನನ್ನೇ ಪ್ರಭು
ವನ್ನಾಗಿ ನೇಮಿಸಿದ್ದೇನೆ ಅಂದನು. ಯೆಹೋಯಾ 36
ದಾವನ ಮಗನಾದ ಬೆನಾಯನು ಅರಸನಿಗೆ—ಹಾಗಾ

ಗಲಿ; ನನ್ನ ಒಡೆಯನಾದ ಅರಸನ ದೇವರಾದ ಯೆಹೋ
37 ವನು ಅದನ್ನು ಸ್ಥಿರಪಡಿಸಲಿ. ಆತನು ನನ್ನ ಒಡೆಯ
ನಾದ ಅರಸನ ಸಂಗಡ ಇದ್ದ ಪ್ರಕಾರ ಸೊಲೊಮೋನನ
ಸಂಗಡಲೂ ಇದ್ದು ರಾಜ್ಯವನ್ನು ನನ್ನ ಒಡೆಯನೂ ಅರ
ಸನೂ ಆದ ನಿನ್ನ ಕಾಲದಲ್ಲಿದ್ದದ್ದಕ್ಕಿಂತ ಅಭಿವೃದ್ಧಿ
ಮಾಡಲಿ ಎಂದು ನುಡಿದನು.
38 ಆಗ ಯಾಜಕನಾದ ಚಾದೋಕ್, ಪ್ರವಾದಿಯಾದ
ನಾತಾನ್, ಯೆಹೋಯಾದಾವನ ಮಗನಾದ ಬೆನಾ
ಯ ಎಂಬವರು ಕೆರೇತ್ಯ ಪೆಲೇತ್ಯ ಎಂಬ ಕಾವಲು
ದಂಡುಗಳನ್ನು ತೆಗೆದುಕೊಂಡು ಸೊಲೊಮೋನನನ್ನು
ಅರಸನಾದ ದಾವೀದನ ಹೇಸರಕತ್ತೆಯ ಮೇಲೆ ಕುಳ್ಳಿ
39 ರಿಸಿ ಗೀಹೋನಿಗೆ ಕರಕೊಂಡು ಹೋದರು. ಯಾಜ
ಕನಾದ ಚಾದೋಕನು ದೇವದರ್ಶನದ ಗುಡಾರದಲ್ಲಿ
ರುವ ಎಣ್ಣೆಯ ಕೊಂಬನ್ನು ತೆಗೆದುಕೊಂಡು ಸೊಲೊ
ಮೋನನನ್ನು ಅಭಿಷೇಕಿಸಿದನು. ಕೂಡಲೆ ಕೊಂಬ
ನ್ನೂದಿ ಎಲ್ಲಾ ಜನರು — ಅರಸನಾದ ಸೊಲೊಮೋ
ನನು ಚಿರಂಜೀವಿಯಾಗಿರಲಿ ಎಂದು ಆರ್ಬಟಿಸಿದರು.
40 ತರುವಾಯ ಅವರೆಲ್ಲರೂ ಅವನನ್ನು ಹಿಂಬಾಲಿಸಿ
ಕೊಳಲೂದುತ್ತಾ ಬಹುಸಂತೋಷದಿಂದ ಆರ್ಬಟಿಸು
ತ್ತಾ ತಿರಿಗಿ ಬಂದರು. ಅವರ ಕೂಗಿನಿಂದ ಭೂಮಿ
ಯು ಸೀಳಿಹೋಗುತ್ತದೋ ಎಂಬಂತೆ ಆಯಿತು.
41 ಅದೋನೀಯನೂ ಅವನ ಸಂಗಡ ಇದ್ದ ಅತಿಥಿ
ಗಳೂ ಭೋಜನವನ್ನು ತೀರಿಸುವಷ್ಟರಲ್ಲೇ ಅವರಿಗೆ
ಈ ಕೂಗು ಕೇಳಿಸಿತು. ಯೋವಾಬನು ಕೊಂಬಿನ
ಧ್ವನಿಯನ್ನು ಕೇಳಿದಾಗ — ಪಟ್ಟಣದಲ್ಲಿ ಇಂಥ ಗದ್ದಲ
42 ವೇಕೆ ಎಂದು ವಿಚಾರಿಸುವಾಗಲೇ ಯಾಜಕನಾದ
ಎಬ್ಯಾತಾರನ ಮಗ ಯೋನಾತಾನನು ಅಲ್ಲಿಗೆ
ಬಂದನು. ಅದೋನೀಯನು ಅವನಿಗೆ — ಬಾ, ನೀನು
ಯೋಗ್ಯಪುರುಷನೂ ಶುಭವರ್ತಮಾನತರುವವನೂ ಆ
43 ಗಿರುತ್ತೀ ಅಂದನು. ಯೋನಾತಾನನು ಅವನಿಗೆ —
ಶುಭವಾರ್ತೆಯೆಲ್ಲಿ! ನಮ್ಮೊಡೆಯನೂ ಅರಸನೂ ಆದ
ದಾವೀದನು ಸೊಲೊಮೋನನನ್ನು ಅರಸನನ್ನಾಗಿ ಮಾ
44 ಡಿದ್ದಾನೆ. ಅರಸನು ಯಾಜಕನಾದ ಚಾದೋಕ್,
ಪ್ರವಾದಿಯಾದ ನಾತಾನ್, ಯೆಹೋಯಾದಾವನ
ಮಗನಾದ ಬೆನಾಯ ಎಂಬವರನ್ನೂ ಕೆರೇತ್ಯ ಪೆಲೇತ್ಯ
ರನ್ನೂ ಅವನ ಜೊತೆಯಲ್ಲಿ ಕಳುಹಿಸಿದ್ದಾನೆ. ಅವರು
ಅವನನ್ನು ಅರಸನ ಹೇಸರಕತ್ತೆಯ ಮೇಲೆ ಕುಳ್ಳಿರಿಸಿ
45 ದ್ದಾರೆ. ಯಾಜಕನಾದ ಚಾದೋಕನೂ ಪ್ರವಾದಿಯಾದ
ನಾತಾನನೂ ಗೀಹೋನಿನ ಬಳಿಯಲ್ಲಿ ಅವನಿಗೆ ರಾಜ್ಯಾ
ಭಿಷೇಕಮಾಡಿದರು. ಅಲ್ಲಿಂದ ಅವರು ಮಹಾಸಂತೋ
ಷದಿಂದ ಆರ್ಬಟಿಸುತ್ತಾ ಪಟ್ಟಣಕ್ಕೆ ಬಂದಿದ್ದಾರೆ. ಇದ
ರಿಂದಲೇ ಪಟ್ಟಣದಲ್ಲಿ ಗದ್ದಲವುಂಟಾಗಿದೆ; ನೀವು ಕೇಳಿದ
46 ಆರ್ಬಟವು ಇದೇ. ಇದಲ್ಲದೆ ಸೊಲೊಮೋನನು ರಾಜ
47 ಸಿಂಹಾಸನದ ಮೇಲೆ ಕೂತುಕೊಂಡಿದ್ದಾನೆ. ಅರಸ
ನಾದ ದಾವೀದನ ಸೇವಕರು ನಮ್ಮ ಒಡೆಯನೂ
ಅರಸನೂ ಆದ ದಾವೀದನ ಮುಂದೆ ಬಂದು — ನಿನ್ನ
ದೇವರು ನಿನ್ನ ಹೆಸರಿಗಿಂತಲೂ ಸೊಲೊಮೋನನ
ಹೆಸರನ್ನು ಪ್ರಸಿದ್ಧಿಗೆ ತರಲಿ. ರಾಜ್ಯವನ್ನು ನಿನ್ನ
ಕಾಲದಲ್ಲಿದ್ದದ್ದಕ್ಕಿಂತ ಅವನ ಕಾಲದಲ್ಲಿ ಹೆಚ್ಚು ಬಲ
ಪಡಿಸಲಿ ಎಂದು ಅವನನ್ನು ಹರಸಿದ್ದಾರೆ; ಅರಸನು

ತನ್ನ ಹಾಸಿಗೆಯ ಮೇಲೆ ಬಿದ್ದುಕೊಂಡು — ನಾನು
ಕಣ್ಣಾರೆ ಕಾಣುವಂತೆ ಇಂದು ನನ್ನ ಸಿಂಹಾಸನಕ್ಕೆ
ಒಬ್ಬ ಉತ್ತರಾಧಿಕಾರಿಯನ್ನು ದಯಪಾಲಿಸಿದ ಇಸ್ರಾ
ಯೇಲ್ ದೇವರಾದ ಯೆಹೋವನಿಗೆ ಸ್ತೋತ್ರವಾಗಲಿ
ಎಂದು ಹೇಳಿದ್ದಾನೆ ಅಂದನು. ಆಗ ಅದೋನೀಯ
ನಿಂದ ಔತಣಕ್ಕೆ ಕರೆಯಲ್ಪಟ್ಟವರೆಲ್ಲರೂ ಭಯಪಟ್ಟು
ತಮ್ಮ ತಮ್ಮ ಮನೆಗಳಿಗೆ ಹೊರಟುಹೋದರು.
ಅದೋನೀಯನು ಸೊಲೊಮೋನನಿಗೆ ಹೆದರಿ ಹೊರ
ಟುಹೋಗಿ ಯಜ್ಞವೇದಿಯ ಕೊಂಬುಗಳನ್ನು ಹಿಡಿ
ದನು. ದೂತರು ಬಂದು ಸೊಲೊಮೋನನಿಗೆ —
ಅದೋನೀಯನು ನಿನಗೆ ಹೆದರಿ ಯಜ್ಞವೇದಿಯ
ಕೊಂಬುಗಳನ್ನು ಹಿಡಿದು — ಅರಸನಾದ ಸೊಲೊಮೋ
ನನು ನನ್ನನ್ನು ಕತ್ತಿಯಿಂದ ಸಂಹರಿಸುವದಿಲ್ಲವೆಂಬ
ದಾಗಿ ಈಹೊತ್ತು ನನಗೆ ಪ್ರಮಾಣಮಾಡಬೇಕೆಂದು
ಬೇಡಿಕೊಳ್ಳುತ್ತಾನೆ ಎಂಬದನ್ನು ತಿಳಿಸಿದಾಗ ಅವನು —
ಅದೋನೀಯನು ಸತ್ಪುರುಷನಾಗಿ ನಡೆಯುವದಾ
ದರೆ ಅವನ ಕೂದಲುಗಳಲ್ಲಿ ಒಂದನ್ನೂ ನೆಲಕ್ಕೆ
ಬೀಳಗೊಡುವದಿಲ್ಲ; ಅವನಲ್ಲಿ ಕೆಟ್ಟತನವು ಕಂಡು
ಬರುವದಾದರೆ ಅವನು ಸಾಯುವನು ಎಂದು ಹೇಳಿ
ಆಳುಗಳನ್ನು ಕಳುಹಿಸಿ ಅವನನ್ನು ಯಜ್ಞವೇದಿಯ
ಬಳಿಯಿಂದ ತರಿಸಿದನು. ಅವನು ಬಂದಾಗ ಅರಸ
ನಾದ ಸೊಲೊಮೋನನಿಗೆ ಸಾಷ್ಟಾಂಗನಮಸ್ಕಾರಮಾಡಿ
ದನು. ಸೊಲೊಮೋನನು ಅವನಿಗೆ ಮನೆಗೆ ಹೋಗ
ಅಪ್ಪಣೆಕೊಟ್ಟನು.

### ದಾವೀದನು ಸೊಲೊಮೋನನಿಗೆ ಹೇಳಿದ ಕಡೇ ಮಾತುಗಳೂ ಅವನ ಮರಣವೂ.

ದಾವೀದನ ಅವಸಾನಕಾಲವು ಸಮೀಪಿಸಿದಾಗ ಅವ
ನು ತನ್ನ ಮಗನಾದ ಸೊಲೊಮೋನನಿಗೆ ಆಜ್ಞಾಪಿಸಿ
ದ್ದೇನಂದರೆ — ಭೂಲೋಕದವರೆಲ್ಲರೂ ಹೋಗುವ ದಾ
ರಿಯನ್ನು ನಾನೂ ಈಗ ಹಿಡಿಯಬೇಕು; ನೀನು ಧೈರ್ಯ
ದಿಂದಿರು, ನಿನ್ನ ಪೌರುಷವನ್ನು ತೋರಿಸು. ನಿನ್ನ
ದೇವರಾದ ಯೆಹೋವನ ಕಟ್ಟಳೆಯನ್ನು ಕೈಕೊಂಡು
ಆತನ ಮಾರ್ಗದಲ್ಲೇ ನಡೆದುಕೋ; ಮೋಶೆಯ
ಧರ್ಮಶಾಸ್ತ್ರದಲ್ಲಿ ಬರೆದಿರುವ ಆತನ ಆಜ್ಞಾಸಿಯಮ
ವಿಧಿನಿರ್ಣಯಗಳನ್ನು ಪಾಲಿಸು. ಹೀಗೆ ಮಾಡುವ
ದಾದರೆ ನೀನು ಯಾವದನ್ನು ಮಾಡಿದರೂ ಎಲ್ಲಿಗೆ
ಹೋದರೂ ಕೃತಾರ್ಥನಾಗುವಿ. ಮತ್ತು ಯೆಹೋ
ವನು — ನಿನ್ನ ಸಂತಾನದವರು ನಂಬಿಗಸ್ತರಾಗಿ ಪೂರ್ಣ
ಮನಸ್ಸಿನಿಂದಲೂ ಪೂರ್ಣಪ್ರಾಣದಿಂದಲೂ ನನಗೆ ನಡೆ
ದುಕೊಳ್ಳುವದರಲ್ಲಿ ಜಾಗರೂಕರಾಗಿರುವದಾದರೆ ಅವ
ರು ತಪ್ಪದೆ ಇಸ್ರಾಯೇಲ್‌ಸಿಂಹಾಸನದ ಮೇಲೆ ಕೂ
ತುಕೊಳ್ಳುವರು ಎಂಬದಾಗಿ ತಾನು ನನಗೆ ಮಾಡಿದ
ವಾಗ್ದಾನವನ್ನು ಸ್ಥಿರಪಡಿಸುವನು. ಚೆರೂಯಳ
ಮಗನಾದ ಯೋವಾಬನು ನನಗೆ ಮಾಡಿರುವದನ್ನು
ಬಲ್ಲೆಯಲ್ಲಾ; ಅವನು ಇಬ್ಬರು ಇಸ್ರಾಯೇಲ್
ಸೇನಾಪತಿಗಳಾದ ನೇರನ ಮಗ ಅಬ್ನೇರನನ್ನೂ ಯೆತೆ
ರನ ಮಗ ಅಮಾಸನನ್ನೂ ಕೊಂದುಹಾಕಿದನು.
ಯುದ್ಧಕಾಲದಲ್ಲಿಯೋ ಎಂಬಂತೆ ಸಮಾಧಾನಕಾಲ

ದಲ್ಲಿಯೂ ರಕ್ತಸುರಿಸಿ ಅದನ್ನು ತನ್ನ ನಡುಕಟ್ಟಿಗೂ
6 ಪಾದರಕ್ಷೆಗಳಿಗೂ ಹಚ್ಚಿಕೊಂಡನು. ಅವನಿಗೇನು
ಮಾಡಬೇಕೆಂಬದು ಬುದ್ಧಿವಂತನಾದ ನಿನಗೆ ಗೊ
ತ್ತುಂಟಲ್ಲಾ; ಅವನ ಮುದಿ ತಲೆಯು ಸಮಾಧಿಯನ್ನು
7 ಸಮಾಧಾನದಿಂದ ಸೇರದಂತೆ ಮಾಡು. ಆದರೆ
ನೀನು ಗಿಲ್ಯಾದ್ಯನಾದ ಬರ್ಜಿಲ್ಲೈಯ ಮಕ್ಕಳಿಗೆ ಉಪ
ಕಾರಮಾಡಬೇಕು; ಅವರು ನಿತ್ಯವೂ ನಿನ್ನ ಪಂಕ್ತಿ
ಯಲ್ಲಿ ಊಟಮಾಡುತ್ತಿರಬೇಕು. ಯಾಕಂದರೆ ನಾನು
ನಿನ್ನ ಸಹೋದರನಾದ ಅಬ್ಷಾಲೋಮನ ಬಳಿಯಿಂದ
ಓಡಿಹೋದಾಗ ಅವರು ನನ್ನನ್ನು ಉಪಚರಿಸಿದರು.
8 ಬೆನ್ಯಾಮೀನ್ಯನಾದ ಗೇರನ ಮಗನೂ ಬಹುರೀಮ್
ಊರಿನವನೂ ಆದ ಶಿಮ್ಮಿಯು ನಿನ್ನ ಬಳಿಯಲ್ಲಿರು
ತ್ತಾನಲ್ಲಾ; ನಾನು ಮಹನಯಿಮಿಗೆ ಹೋದಾಗ
ಅವನು ನನ್ನನ್ನು ಬಹುಕ್ರೂರವಾಗಿ ಶಪಿಸಿದನು;
ಅವನು ನನ್ನನ್ನು ಎದುರುಗೊಳ್ಳುವದಕ್ಕೆ ಯೊರ್ದ
ನಿಗೆ ಬಂದಾಗ ನಾನು ಅವನಿಗೆ—ನಿನ್ನನ್ನು ಕೊಲ್ಲು
ವದಿಲ್ಲ ಎಂಬದಾಗಿ ಯೆಹೋವನ ಹೆಸರಿನಲ್ಲಿ ಪ್ರಮಾಣ
9 ಮಾಡಿದೆನು. ನೀನಾದರೋ ಅವನನ್ನು ಶಿಕ್ಷಿಸದೆ
ಬಿಡಬೇಡ; ನೀನು ಬುದ್ಧಿವಂತನಲ್ಲವೋ! ಅವನ
ಮುದಿತಲೆಯು ರಕ್ತಮಯವಾಗಿ ಸಮಾಧಿ ಸೇರುವಂತೆ
ಏನು ಮಾಡಬೇಕೆಂಬದು ನಿನಗೆ ಗೊತ್ತಿರುವದು
ಎಂಬದೇ.
10 ಅನಂತರ ದಾವೀದನು ಪಿತೃಗಳ ಬಳಿಗೆ ಸೇರಿ
ದನು. ಅವನ ಶವವನ್ನು ದಾವೀದನಗರದಲ್ಲಿ ಸಮಾಧಿ
11 ಮಾಡಿದರು. ದಾವೀದನು ಇಸ್ರಾಯೇಲ್ಯರನ್ನು
ಆಳಿದ್ದು ನಾಲ್ವತ್ತು ವರುಷ. ಹೇಗಂದರೆ—ಹೆಬ್ರೋನಿ
ನಲ್ಲಿ ಏಳು ವರುಷ, ಯೆರೂಸಲೇಮಿನಲ್ಲಿ ಮೂವತ್ತ
12 ಮೂರು ವರುಷ ಆಳಿದನು. ಸೊಲೊಮೋನನು ತನ್ನ
ತಂದೆಯಾದ ದಾವೀದನ ಸಿಂಹಾಸನವನ್ನು ಏರಿದನು.
ಅವನ ರಾಜ್ಯವು ಬಹಳವಾಗಿ ಬಲಗೊಂಡಿತು.

ಸೊಲೊಮೋನನು ರಾಜಕಂಟಕರನ್ನು ಶಿಕ್ಷಿಸಿದ್ದು.

13 ಹಗ್ಗೀತಳ ಮಗನಾದ ಅದೋನೀಯನು ಸೊಲೊ
ಮೋನನ ತಾಯಿಯಾದ ಬತ್ಷೆಬೆಯ ದರ್ಶನಕ್ಕೆ ಬಂದ
ನು. ಆಕೆಯು ಅವನನ್ನು—ನೀನು ಸಮಾಧಾನ
ದಿಂದ ಬಂದಿರುತ್ತೀಯೋ ಎಂದು ಕೇಳಲು ಅವನು—
14 ಹೌದು, ಸಮಾಧಾನದಿಂದ ಬಂದೆನು ಅಂದನು. ಆ
ಮೇಲೆ ಅವನು—ನಿನಗೊಂದು ಮಾತು ಹೇಳಬೇ
ಕೆಂದು ಬಂದಿದ್ದೇನೆ ಅನ್ನಲು ಆಕೆಯು—ಹೇಳು
15 ಅಂದಳು. ಆಗ ಅವನು—ರಾಜ್ಯವು ನನಗೆ ಬರ
ಬೇಕಾಗಿತ್ತು; ನಾನೇ ಅರಸನಾಗುವೆನೆಂದು ಇಸ್ರಾ
ಯೇಲ್ಯರೆಲ್ಲರೂ ಎದುರುನೋಡುತ್ತಿದ್ದರೆಂದು ನೀನು
ಬಲ್ಲೆಯಷ್ಟೆ; ಆದರೆ ಅದು ತಪ್ಪಿ ನನ್ನ ತಮ್ಮನಿಗೆ
ಹೋಯಿತು. ಅದು ಯೆಹೋವನಿಂದಲೇ ಅವನಿಗೆ
16 ದೊರಕಿತು. ಅದಿರಲಿ, ಒಂದು ಬಿನ್ನಹವಿದೆ; ಅದನ್ನು
ತಿರಸ್ಕರಿಸಬೇಡ ಎನ್ನಲು ಆಕೆಯು—ಅದೇನು, ಹೇಳು
17 ಅಂದಾಗ ಅವನು—ದಯವಿಟ್ಟು ಶೂನೇಮ್ಯಳಾದ
ಅಬೀಷಗ್ ಎಂಬಾಕೆಯನ್ನು ನನಗೆ ಹೆಂಡತಿಯನ್ನಾಗಿ
ಕೊಡಬೇಕೆಂದು ಅರಸನಾದ ಸೊಲೊಮೋನನಿಗೆ

ಹೇಳು; ಅವನು ನಿನ್ನ ಮಾತನ್ನು ತಳ್ಳುವದಿಲ್ಲ ಅಂದ
ನು. ಬತ್ಷೆಬೆಯು—ಒಳ್ಳೇದು, ನಾನು ನಿನಗೋಸ್ಕರ 18
ಸನ್ನಿಧಿಯಲ್ಲಿ ಅರಿಕೆಮಾಡುತ್ತೇನೆ ಎಂದು ಹೇಳಿದಳು.
ಆಕೆಯು ಅದೋನೀಯನಿಗಾಗಿ ಮಾತಾಡುವದಕ್ಕೋ 19
ಸ್ಕರ ಅರಸನಾದ ಸೊಲೊಮೋನನ ಬಳಿಗೆ ಬರುತ್ತಿರು
ವಾಗ ಅರಸನು ಎದ್ದುಹೋಗಿ ಆಕೆಯನ್ನು ಎದುರು
ಗೊಂಡು ನಮಸ್ಕರಿಸಿದನು. ಅನಂತರ ತಾನು ಸಿಂಹಾ
ಸನದ ಮೇಲೆ ಕೂತು ರಾಜಮಾತೆಗೋಸ್ಕರ ಒಂದು
ಆಸನವನ್ನು ತರಿಸಲು ಆಕೆಯು ಅವನ ಬಲಗಡೆ
ಯಲ್ಲಿ ಕೂತುಕೊಂಡು—ಒಂದು ಸಣ್ಣ ಬಿನ್ನಹ ಉಂಟು, 20
ಅದನ್ನು ತಿರಸ್ಕರಿಸಬೇಡ ಎಂದು ಹೇಳಿದಳು. ಅರ
ಸನು—ನನ್ನ ತಾಯಿಯೇ, ಏನು ಬೇಕು, ಕೇಳು;
ನಾನು ಆಗದು ಅನ್ನುವದಿಲ್ಲ ಎಂದನ್ನಲು ಆಕೆಯು— 21
ಶೂನೇಮ್ಯಳಾದ ಅಬೀಷಗ್ ಎಂಬಾಕೆಯು ನಿನ್ನ ಅಣ್ಣ
ನಾದ ಅದೋನೀಯನಿಗೆ ಹೆಂಡತಿಯಾಗಿ ಕೊಡಲ್ಪಡಲಿ
ಅಂದಳು. ಆಗ ಅರಸನಾದ ಸೊಲೊಮೋನನು ತನ್ನ 22
ತಾಯಿಗೆ—ಅದೋನೀಯನಿಗೋಸ್ಕರ ಶೂನೇಮ್ಯಳಾದ
ಅಬೀಷಗ್ ಎಂಬಾಕೆಯನ್ನು ಮಾತ್ರ ಕೇಳುವದೇಕೆ?
ಅವನಿಗೆ ರಾಜ್ಯವನ್ನೂ ಕೊಡಬೇಕೆಂದು ಕೇಳು; ಅವ
ನು ನನ್ನ ಅಣ್ಣನಲ್ಲವೇ; ಯಾಜಕನಾದ ಎಬ್ಯಾ
ತಾರನೂ ಚೆರೂಯಳ ಮಗನಾದ ಯೋವಾಬನೂ
ಅವನ ಪಕ್ಷದವರಾಗಿದ್ದಾರೆ ಎಂದು ಉತ್ತರಕೊಟ್ಟನು.
ಇದಲ್ಲದೆ ಅರಸನಾದ ಸೊಲೊಮೋನನು—ಯೆಹೋ 23
ವನಾಣೆ, ಅದೋನೀಯನ ಈ ಮಾತಿಗೋಸ್ಕರ ನಾನು
ಅವನನ್ನು ಮರಣಕ್ಕೆ ಪಾತ್ರನೆಂದು ಎಣಿಸದಿದ್ದರೆ
ದೇವರು ನನಗೆ ಬೇಕಾದದ್ದನ್ನು ಮಾಡಲಿ. ನನ್ನ ತಂದೆ 24
ಯಾದ ದಾವೀದನ ಸಿಂಹಾಸನದ ಮೇಲೆ ನನ್ನನ್ನು
ಕುಳ್ಳಿರಿಸಿ ಬಲಪಡಿಸಿ ತಾನು ವಾಗ್ದಾನಮಾಡಿದಂತೆ
ನನಗೆ ಮನೆಯನ್ನು ಕಟ್ಟಿದ ಯೆಹೋವನಾಣೆ,
ಅದೋನೀಯನು ಈಹೊತ್ತೇ ಸಾಯಬೇಕು ಎಂದು
ಹೇಳಿ ಯೆಹೋಯಾದಾವನ ಮಗನಾದ ಬೆನಾಯನಿಗೆ 25
ಆಜ್ಞಾಪಿಸಿದದರಿಂದ ಅವನು ಹೋಗಿ ಅವನನ್ನು ಹೊ
ಡೆದು ಕೊಂದುಹಾಕಿದನು.
ತರುವಾಯ ಅರಸನು ಯಾಜಕನಾದ ಎಬ್ಯಾತಾರ 26
ನಿಗೆ—ನೀನು ಅಣಾತೋತಿನಲ್ಲಿರುವ ನಿನ್ನ ಸ್ವಾಸ್ತ್ಯಕ್ಕೆ
ಹೋಗು; ನೀನು ಮರಣಕ್ಕೆ ಪಾತ್ರನು. ಆದರೆ ನೀನು
ಕರ್ತನಾದ ಯೆಹೋವನ ಮಂಜೂಷವನ್ನು ಹೊತ್ತು
ಕೊಂಡು ನನ್ನ ತಂದೆಯಾದ ದಾವೀದನೊಡನೆ ಸಂಚರಿ
ಸುತ್ತಾ ಅವನ ಎಲ್ಲಾ ಕಷ್ಟಗಳಲ್ಲಿ ಪಾಲುಗಾರನಾಗಿದ್ದ
ದರಿಂದ ಈ ಹೊತ್ತು ನಿನ್ನನ್ನು ಕೊಲ್ಲಿಸುವದಿಲ್ಲ ಎಂದು 27
ಹೇಳಿ ಅವನನ್ನು ಯೆಹೋವನ ಯಾಜಕೋದ್ಯೋಗ
ದಿಂದ ತಳ್ಳಿಬಿಟ್ಟನು. ಹೀಗೆ ಯೆಹೋವನು ಶೀಲೋವಿ
ನಲ್ಲಿದ್ದ ಏಲಿಯ ಮನೆಯನ್ನು ಕುರಿತು ಹೇಳಿದ
ಮಾತು ನೆರವೇರಿತು.
ಈ ವರ್ತಮಾನವು ಯೋವಾಬನಿಗೆ ಮುಟ್ಟಿದ 28
ಕೂಡಲೆ ಅವನು ಯೆಹೋವನ ಗುಡಾರಕ್ಕೆ ಓಡಿ
ಹೋಗಿ ಯಜ್ಞವೇದಿಯ ಕೊಂಬುಗಳನ್ನು ಹಿಡಿ
ದನು. (ಅವನು ಅಬ್ಷಾಲೋಮನ ಪಕ್ಷವನ್ನು ಹಿಡಿ
ಯದಿದ್ದರೂ ಅದೋನೀಯನ ಪಕ್ಷವನ್ನು ಹಿಡಿದಿ
ದ್ದನು.) ಯೋವಾಬನು ಯೆಹೋವನ ಗುಡಾ 29

ರಕ್ಕೆ ಓಡಿಹೋಗಿ ಯಜ್ಞವೇದಿಯ ಹತ್ತಿರ ಇದ್ದಾನೆ
ಎಂಬ ಸುದ್ದಿಯು ಅರಸನಾದ ಸೊಲೊಮೋನನಿಗೆ
ತಲಪಿದಾಗ ಅವನು ಯೆಹೋಯಾದಾವನ ಮಗ
ನಾದ ಬೆನಾಯನಿಗೆ—ಹೋಗಿ ಅವನ ಮೇಲೆ ಬೀಳು
30 ಎಂದು ಆಜ್ಞಾಪಿಸಿದನು. ಬೆನಾಯನು ಯೆಹೋ
ವನ ಗುಡಾರಕ್ಕೆ ಹೋಗಿ ಯೋವಾಬನಿಗೆ— ಅರಸನು
ನಿನಗೆ ಹೊರಗೆ ಬರಬೇಕೆಂದು ಆಜ್ಞಾಪಿಸುತ್ತಾನೆ
ಎಂದು ಹೇಳಲು ಅವನು—ಬರುವದಿಲ್ಲ, ನಾನು
ಇಲ್ಲಿಯೇ ಸಾಯುತ್ತೇನೆ ಎಂದು ಉತ್ತರಕೊಟ್ಟನು.
ಬೆನಾಯನು ಅರಸನ ಬಳಿಗೆ ಹೋಗಿ ಯೋವಾ
31 ಬನು ಅಂದದ್ದನ್ನು ತಿಳಿಸಲು ಅರಸನು ಅವನಿಗೆ—
ಅವನು ಹೇಳಿದಂತೆ ಮಾಡು; ಅವನನ್ನು ಕೊಂದು
ಅವನ ಶವವನ್ನು ಸಮಾಧಿಮಾಡು. ಯೋವಾಬನು
ನಿಷ್ಕಾರಣವಾಗಿ ರಕ್ತಸುರಿಸಿದವರಿಂದ ನನಗೂ ನನ್ನ
ತಂದೆಯ ಮನೆಯವರಿಗೂ ಹತ್ತಿರುವ ದೋಷವನ್ನು
32 ಈ ಪ್ರಕಾರ ಪರಿಹರಿಸು. ಯೆಹೋವನು ಈ
ರಕ್ತಾಪರಾಧವನ್ನು ಅವನ ತಲೆಯ ಮೇಲೆಯೇ ಬರ
ಮಾಡಲಿ. ಅವನು ನನ್ನ ತಂದೆಯಾದ ದಾವೀದನಿಗೆ
ತಿಳಿಯದೆ ತನಗಿಂತ ಉತ್ತಮರೂ ನೀತಿವಂತರೂ ಆದ
ಇಬ್ಬರು ಮನುಷ್ಯರನ್ನು ಅಂದರೆ ಇಸ್ರಾಯೇಲ್ ಸೇನಾ
ಪತಿಯೂ ನೇರನ ಮಗನೂ ಆದ ಅಬ್ನೇರನನ್ನೂ
ಯೆಹೂದಸೇನಾಪತಿಯೂ ಯೆತೆರನ ಮಗನೂ ಆದ
33 ಅಮಾಸನನ್ನೂ ಕೊಂದನಲ್ಲಾ. ಈ ಇಬ್ಬರನ್ನೂ
ವಧಿಸಿದ ಪಾಪವು ಯೋವಾಬನ ತಲೆಯ ಮೇಲೆಯೂ
ಅವನ ಸಂತಾನದವರ ತಲೆಯ ಮೇಲೆಯೂ ಇರಲಿ.
ಆದರೆ ದಾವೀದನಿಗೂ ಅವನ ಸಿಂಹಾಸನಕುಟುಂಬ
ಸಂತಾನಗಳಿಗೂ ಯೆಹೋವನಿಂದ ನಿತ್ಯಸೌಭಾಗ್ಯವು
34 ದೊರಕಲಿ ಅಂದನು. ಯೆಹೋಯಾದಾವನ ಮಗ
ನಾದ ಬೆನಾಯನು ಹೋಗಿ ಯೋವಾಬನನ್ನು
ಕೊಂದನು. ಅವನ ಶವಕ್ಕೆ ಅರಣ್ಯದಲ್ಲಿರುವ ಅವನ
35 ಮನೆಯ ನಿವೇಶನದಲ್ಲಿ ಸಮಾಧಿಯಾಯಿತು. ಅರ
ಸನು ಯೋವಾಬನಿಗೆ ಬದಲಾಗಿ ಯೆಹೋಯಾದಾ
ವನ ಮಗನಾದ ಬೆನಾಯನನ್ನು ಸೈನ್ಯಾಧಿಪತಿಯ
ನ್ನಾಗಿಯೂ ಎಬ್ಯಾತಾರನಿಗೆ ಬದಲಾಗಿ ಚಾದೋಕ
ನನ್ನು ಯಾಜಕನನ್ನಾಗಿಯೂ ನೇಮಿಸಿದನು.
36 ತರುವಾಯ ಅರಸನು ಶಿಮ್ಮಿಯನ್ನು ಕರಿಸಿ ಅವ
ನಿಗೆ—ನೀನು ಒಂದು ಮನೆಯನ್ನು ಕಟ್ಟಿಸಿಕೊಂಡು
ಯೆರೂಸಲೇಮಿನಲ್ಲೇ ವಾಸಿಸಬೇಕು. ಇದನ್ನು
37 ಬಿಟ್ಟು ಎಲ್ಲಿಗೂ ಹೋಗಬಾರದು. ನೀನು ಇದನ್ನು
ಬಿಟ್ಟು ಕಿದ್ರೋನ್‌ಹಳ್ಳದ ಆಚೆಗೆ ಹೋದಿಯಾದರೆ
ಅದೇ ದಿವಸದಲ್ಲಿ ನಿನಗೆ ಮರಣಶಿಕ್ಷೆಯಾಗುವದೆಂದು
ತಿಳಿದುಕೋ; ಮತ್ತು ಆ ರಕ್ತಾಪರಾಧವು ನಿನ್ನ ತಲೆಯ
38 ಮೇಲೆಯೇ ಇರುವದು ಎಂದು ಹೇಳಿದನು. ಅದಕ್ಕೆ
ಶಿಮ್ಮಿಯು—ಒಳ್ಳೇದು; ನನ್ನ ಒಡೆಯನೂ ಅರಸನೂ
ಆದ ನೀನು ಹೇಳಿದಂತೆಯೇ ಸೇವಕನಾದ ನಾನು
ಮಾಡುವೆನು ಎಂದು ಉತ್ತರಕೊಟ್ಟು ಬಹುದಿನಗಳ
ವರೆಗೂ ಯೆರೂಸಲೇಮಿನಲ್ಲೇ ವಾಸಿಸುತ್ತಿದ್ದನು.
39 ಮೂರು ವರುಷಗಳಾದನಂತರ ಶಿಮ್ಮಿಯ ಇಬ್ಬರು
ದಾಸರು ಗತ್ ಊರಿನ ಅರಸನೂ ಮಾಕನ ಮಗನೂ
ಆದ ಆಕೀಷನ ಬಳಿಗೆ ಓಡಿಹೋದರು. ದಾಸರು

ಗತ್ ಊರಿನಲ್ಲಿರುವದು ಶಿಮ್ಮಿಗೆ ಗೊತ್ತಾದಾಗ ಅವ
ನು ಕತ್ತೆಗೆ ತಡಿಹಾಕಿಸಿ ತನ್ನ ದಾಸರನ್ನು ಹುಡುಕುವ
ದಕ್ಕೋಸ್ಕರ ಗತ್ ಊರಿನ ಅರಸನಾದ ಆಕೀಷನ
ಬಳಿಗೆ ಹೊರಟುಹೋಗಿ ಅವರನ್ನು ಗತ್ ಊರಿನಿಂದ
ಹಿಡಿದುಕೊಂಡು ಬಂದನು. ಶಿಮ್ಮಿಯು ಯೆರೂಸ
ಲೇಮಿನಿಂದ ಗತ್ ಊರಿಗೆ ಹೋಗಿ ಬಂದದ್ದು ಅರಸ
ನಾದ ಸೊಲೊಮೋನನಿಗೆ ತಿಳಿದುಬಂದಾಗ ಅವನು
ಅವನನ್ನು ಕರಿಸಿ ಅವನಿಗೆ—ನೀನು ಈ ಊರನ್ನು
ಬಿಟ್ಟು ಎಲ್ಲಿಗಾದರೂ ಹೋದರೆ ಅದೇ ದಿನದಲ್ಲಿ ನಿನಗೆ
ಮರಣಶಿಕ್ಷೆಯಾಗುವದೆಂದು ಖಂಡಿತವಾಗಿ ಹೇಳಿ ಯೆ
ಹೋವನ ಹೆಸರಿನಲ್ಲಿ ನಿನ್ನಿಂದ ಪ್ರಮಾಣತೆಗೆದುಕೊಂಡ
ನಲ್ಲವೋ? ಆಗ ನೀನು—ಒಳ್ಳೇದು, ಹಾಗೆಯೇ ಮಾ
ಡುತ್ತೇನೆ ಎಂದು ಹೇಳಿದಿಯಲ್ಲಾ. ಹಾಗಾದರೆ ಯೆ
ಹೋವನ ಹೆಸರಿನಲ್ಲಿ ನೀನು ಮಾಡಿದ ಪ್ರಮಾಣವನ್ನೂ
ನಾನು ನಿನಗೆ ಕೊಟ್ಟ ಅಪ್ಪಣೆಯನ್ನೂ ಯಾಕೆ ಕೈ
ಕೊಳ್ಳಲಿಲ್ಲ ಅಂದನು. ಇದಲ್ಲದೆ ಅರಸನು ಅವ
ನಿಗೆ—ನೀನು ನನ್ನ ತಂದೆಯಾದ ದಾವೀದನಿಗೆ ವಿರೋ
ಧವಾಗಿ ಮಾಡಿದ ಪಾಪಕ್ಕೆ ಮನವೇ ಸಾಕ್ಷಿ; ಯೆಹೋ
ವನು ಅದರ ಫಲವನ್ನು ನಿನ್ನ ತಲೆಯ ಮೇಲೆ ಬ
ಮಾಡುವನು. ಆದರೆ ಸೊಲೊಮೋನರಾಜನಿಗೆ ಆಶೀ
ರ್ವಾದವಾಗಲಿ; ದಾವೀದನ ಸಿಂಹಾಸನವು ಯೆ
ಹೋವನ ಸನ್ನಿಧಿಯಲ್ಲಿ ಸದಾಕಾಲವೂ ಇರಲಿ ಎಂದು
ಹೇಳಿ ಯೆಹೋಯಾದಾವನ ಮಗನಾದ ಬೆನಾಯನಿಗೆ
ಅವನನ್ನು ಸಂಹರಿಸೆಂದು ಆಜ್ಞಾಪಿಸಲು ಇವನು
ಹೊರಗೆ ಹೋಗಿ ಅವನ ಮೇಲೆ ಬಿದ್ದು ಅವನನ್ನು
ಕೊಂದುಹಾಕಿದನು. ಹೀಗೆ ಸೊಲೊಮೋನನ ರಾಜ್ಯಾ
ಧಿಕಾರವು ಸ್ಥಿರವಾಯಿತು.

### ಸೊಲೊಮೋನನಿಗೆ ಯೆಹೋವನಿಂದ ವಿಶೇಷಜ್ಞಾನವು ದೊರಕಿದ್ದು.

ಸೊಲೊಮೋನನು ಐಗುಪ್ತದ ಅರಸನಾದ ಫರೋ
ಹನ ಅಳಿಯನಾದನು. ಅವನು ಫರೋಹನ ಮಗ
ಳನ್ನು ಮದುವೆಮಾಡಿಕೊಂಡು ತನ್ನ ಅರಮನೆಯನ್ನೂ
ಯೆಹೋವನ ಆಲಯವನ್ನೂ ಯೆರೂಸಲೇಮಿನ ಸು
ತ್ತಣ ಗೋಡೆಯನ್ನೂ ಕಟ್ಟಿ ತೀರಿಸುವ ತನಕ ಅ
ಯನ್ನು ದಾವೀದನಗರದಲ್ಲಿ ಇರಿಸಿದನು. ಆ ವರೆಗ
ಯೆಹೋವನಾಮಕ್ಕೋಸ್ಕರ ಆಲಯವಿರಲಿಲ್ಲವಾದ
ರಿಂದ ಜನರು ಪೂಜಾಸ್ಥಳಗಳಲ್ಲಿ ಯಜ್ಞಮಾಡುತ್ತಿ
ದ್ದರು. ಸೊಲೊಮೋನನು ಯೆಹೋವನನ್ನು
ಪ್ರೀತಿಸಿ ತನ್ನ ತಂದೆಯಾದ ದಾವೀದನ ವಿಧಿಗಳನ್ನು
ಕೈಕೊಳ್ಳುವವನಾಗಿದ್ದರೂ ಆ ಪೂಜಾಸ್ಥಳಗಳಲ್ಲಿ ಯೆ
ಯಜ್ಞವರ್ಪಿಸುತ್ತಿದ್ದನು; ಅಲ್ಲಿಯೇ ಧೂಪಸುಡುತ್ತಿ
ದ್ದನು.

ಅರಸನಾದ ಸೊಲೊಮೋನನು ಯಜ್ಞಮಾಡುವ
ಕ್ಕೋಸ್ಕರ ಪೂಜಾಸ್ಥಳಗಳಲ್ಲಿ ವಿಶೇಷವಾಗಿದ್ದ
ಗಿಬ್ಯೋನಿಗೆ ಹೋಗಿ ಅಲ್ಲಿನ ವೇದಿಯ ಮೇಲೆ ಸಹಸ್ರ
ಯಜ್ಞಗಳನ್ನು ಸಮರ್ಪಿಸಿದಾಗ ದೇವರಾದ ಯೆ
ಹೋವನು ಆ ರಾತ್ರಿ ಕನಸ್ಸಿನಲ್ಲಿ ಅವನಿಗೆ ಕಾಣಿ
ಕೊಂಡು—ನಿನಗೆ ಯಾವ ವರ ಬೇಕು ಕೇಳಿಕೊ

6 ಎಂದು ಹೇಳಲು ಸೊಲೊಮೋನನು—ನಿನಗೆ ನಂಬಿಗ
ಸ್ತನಾಗಿ ನೀತಿಯಿಂದಲೂ ಯಥಾರ್ಥಚಿತ್ತದಿಂದಲೂ
ನಡೆದುಕೊಂಡ ನಿನ್ನ ಸೇವಕನೂ ನನ್ನ ತಂದೆಯೂ ಆದ
ದಾವೀದನಿಗೆ ನೀನು ಮಹಾಕೃಪೆಯನ್ನು ತೋರಿಸಿದಿ;
ಅವನ ಮೇಲೆ ಬಹಳವಾಗಿ ಕೃಪೆಮಾಡಿ ಈಗಿರುವಂತೆ
ಅವನ ಸಿಂಹಾಸನಕ್ಕೆ ಒಬ್ಬ ಮಗನನ್ನು ಅನುಗ್ರಹಿಸಿದ್ದ
7 ರಲ್ಲಿ ಅದನ್ನು ಪೂರ್ತಿಗೊಳಿಸಿದಿ. ನನ್ನ ದೇವರಾದ
ಯೆಹೋವನೇ, ನನ್ನ ತಂದೆಗೆ ಬದಲಾಗಿ ನಿನ್ನಿಂದ ಅರಸ
ನಾಗಿ ನೇಮಿಸಲ್ಪಟ್ಟ ನಿನ್ನ ಸೇವಕನಾದ ನಾನು
8 ಇನ್ನೂ ಚಿಕ್ಕವನು; ವ್ಯವಹಾರಜ್ಞಾನವಿಲ್ಲದವನು, ನಿನ್ನ
ಸೇವಕನಾದ ನಾನು ಲೆಕ್ಕಿಸಲಾಗದಂಥ ಮಹಾ
ಜನಾಂಗವಾಗಿರುವ ನಿನ್ನ ಸ್ವಕೀಯ ಪ್ರಜೆಯ ಮಧ್ಯ
9 ದಲ್ಲಿದ್ದೇನೆ. ಆದದರಿಂದ ಅದನ್ನು ಆಳುವದ
ಕ್ಕೂ ನ್ಯಾಯಾನ್ಯಾಯಗಳನ್ನು ಕಂಡುಹಿಡಿಯುವದ
ಕ್ಕೂ ನನಗೆ ವಿವೇಕವನ್ನು ದಯಪಾಲಿಸು. ಈ
ಮಹಾಜನಾಂಗವನ್ನು ಆಳಲು ಸಮರ್ಥರು ಯಾರು
10 ಎಂದು ಬೇಡಿಕೊಂಡನು. ಸೊಲೊಮೋನನ ಈ ಬಿನ್ನಹ
11 ವನ್ನು ಕರ್ತನಾದ ದೇವರು ಮೆಚ್ಚಿದನು. ಆತನು ಅವ
ನಿಗೆ—ನೀನು ನಿನಗೋಸ್ಕರ ದೀರ್ಘಾಯುಷ್ಯವನ್ನಾ
ಗಲಿ, ಐಶ್ವರ್ಯವನ್ನಾಗಲಿ, ವೈರಿಗಳ ಪ್ರಾಣವನ್ನಾ
ಗಲಿ ಕೇಳಿಕೊಳ್ಳದೆ ನ್ಯಾಯನಿರ್ಣಯಿಸುವದಕ್ಕೋಸ್ಕ
12 ರ ವಿವೇಕವನ್ನು ಬೇಡಿಕೊಂಡದರಿಂದ ನಿನ್ನ ಬಿನ್ನಹ
ವನ್ನು ನೆರವೇರಿಸಿದ್ದೇನೆ. ನೋಡು, ನಿನಗೆ ಜ್ಞಾನ
ವನ್ನೂ ವಿವೇಕವನ್ನೂ ಅನುಗ್ರಹಿಸಿದ್ದೇನೆ; ನಿನ್ನಂಥ
ಜ್ಞಾನಿಯು ಮುಂಚೆ ಇರಲಿಲ್ಲ; ಮುಂದೆಯೂ ಇರು
13 ವದಿಲ್ಲ. ಇದಲ್ಲದೆ ನೀನು ಕೇಳದಂಥದನ್ನೂ ನಿನಗೆ
ಅನುಗ್ರಹಿಸಿದ್ದೇನೆ. ನಿನ್ನ ಜೀವಮಾನದಲ್ಲೆಲ್ಲಾ ಐಶ್ವ
ರ್ಯದಲ್ಲಿಯೂ ಘನದಲ್ಲಿಯೂ ನಿನಗೆ ಸಮಾನನಾದ
14 ಅರಸನು ಇನ್ನೊಬ್ಬನಿರುವದಿಲ್ಲ. ನೀನು ನಿನ್ನ ತಂದೆ
ಯಾದ ದಾವೀದನಂತೆ ನನ್ನ ಮಾರ್ಗದಲ್ಲಿ ನಡೆದು ನನ್ನ
ಆಜ್ಞಾವಿಧಿಗಳನ್ನು ಕೈಕೊಳ್ಳುವದಾದರೆ ನಿನ್ನ ಆಯು
15 ಷ್ಯವನ್ನು ಹೆಚ್ಚಿಸುವೆನು ಅಂದನು. ಸೊಲೊಮೋನನು
ನಿದ್ರೆಯಿಂದ ಎಚ್ಚತ್ತಾಗ ಅದು ಕನಸೆಂದು ತಿಳಿದು
ಕೊಂಡನು. ಅವನು ಯೆರೂಸಲೇಮಿಗೆ ಬಂದನಂತರ
ಯೆಹೋವನ ಒಡಂಬಡಿಕೆಯ ಮಂಜೂಷದ ಮುಂದೆ
ನಿಂತು ಸರ್ವಾಂಗಹೋಮಗಳನ್ನೂ ಸಮಾಧಾನಯಜ್ಞ
ಗಳನ್ನೂ ಸಮರ್ಪಿಸಿ ತನ್ನ ಎಲ್ಲಾ ಸೇವಕರಿಗೋಸ್ಕರ
ಔತಣಮಾಡಿಸಿದನು.

16 ಅದೇ ಕಾಲದಲ್ಲಿ ಇಬ್ಬರು ಸೂಳೆಯರು ಅರಸನ
17 ಸನ್ನಿಧಿಗೆ ಬಂದರು. ಅವರಲ್ಲಿ ಒಬ್ಬಳು ಅರಸನಿಗೆ—
ನನ್ನ ಒಡೆಯಾ, ಕೇಳು; ನಾನೂ ಈ ಹೆಂಗಸೂ ಒಂದೇ
ಮನೆಯಲ್ಲಿ ವಾಸಿಸುತ್ತೇವೆ. ಇವಳು ಮನೆಯಲ್ಲಿದ್ದಾ
18 ಗಲೇ ನಾನು ಮಗುವನ್ನು ಹೆತ್ತೆನು. ಮೂರನೆಯ
ದಿನದಲ್ಲಿ ಇವಳೂ ಹೆತ್ತಳು. ನಾವಿಬ್ಬರೂ ಒಟ್ಟಿಗೆ ಇ
ದ್ದೆವು; ನಮ್ಮಿಬ್ಬರ ಹೊರತು ಆ ಮನೆಯಲ್ಲಿ ಯಾರೂ
19 ಇರಲಿಲ್ಲ. ಇವಳು ರಾತ್ರಿಯಲ್ಲಿ ತನ್ನ ಕೂಸಿನ ಮೇಲೆ
20 ಹೊರಳಿದ್ದರಿಂದ ಅದು ಸತ್ತಿತು. ಮಧ್ಯರಾತ್ರಿಯಲ್ಲಿ
ಇವಳೆದ್ದು ನಿನ್ನ ದಾಸಿಯಾದ ನಾನು ಗಾಢನಿದ್ರೆಯಲ್ಲಿ
ದ್ದಾಗ ನನ್ನ ಮಗುವನ್ನು ನನ್ನ ಬಳಿಯಿಂದ ತೆಗೆದು
ತನ್ನ ಮಗ್ಗುಲಲ್ಲಿಟ್ಟುಕೊಂಡಳು. ಸತ್ತುಹೋದ ತನ್ನ
ಮಗುವನ್ನು ನನ್ನ ಮಗ್ಗುಲಲ್ಲಿಟ್ಟಳು. ನಾನು ಹೊ 21
ತ್ತಾರೆ ಎದ್ದು ಮಗುವಿಗೆ ಮೊಲೆಕೊಡಬೇಕೆಂದಿರುವಾಗ
ಅದು ಸತ್ತಿತ್ತು. ಆದರೆ ಅದನ್ನು ಬೆಳಕಿನಲ್ಲಿ ನೋಡಿ
ದಾಗ ಅದು ನಾನು ಹೆತ್ತ ಕೂಸಾಗಿರಲಿಲ್ಲ ಎಂದು ಹೇ
ಳಿದಳು. ಆಗ ಎರಡನೆಯವಳು—ಹಾಗಲ್ಲ, ಬದುಕಿರು 22
ವವನು ನನ್ನ ಮಗನು; ಸತ್ತಿರುವವನು ನಿನ್ನ ಮಗನು
ಎಂದು ನುಡಿದಳು. ಮೊದಲನೆಯವಳು ತಿರಿಗಿ—ಅಲ್ಲ,
ಸತ್ತಿರುವವನು ನಿನ್ನ ಮಗನು; ಬದುಕಿರುವವನು ನನ್ನ
ಮಗನು ಅಂದಳು. ಹೀಗೆ ಅವರು ಅರಸನ ಮುಂದೆ
ವಾದಿಸುತ್ತಾ ಇದ್ದರು. ಆಗ ಅರಸನು—ಜೀವದಿಂದಿ 23
ರುವ ಕೂಸು ನನ್ನದು, ಸತ್ತಿರುವದು ನಿನ್ನದು ಎಂದು
ಒಬ್ಬಳು ಹೇಳುತ್ತಾಳೆ; ಇನ್ನೊಬ್ಬಳು—ಅಲ್ಲ, ಸತ್ತಿರು
ವದು ನಿನ್ನದು, ಜೀವದಿಂದಿರುವದು ನನ್ನದು ಅನ್ನು
ತ್ತಾಳೆ. ನನಗೊಂದು ಕತ್ತಿಯನ್ನು ತಂದುಕೊಡಿರಿ 24
ಎಂದು ಸೇವಕರಿಗೆ ಹೇಳಿದನು. ಅವರು ತರಲು ಅರ 25
ಸನು ಅವರಿಗೆ—ಜೀವದಿಂದಿರುವ ಕೂಸನ್ನು ಕಡಿದು
ಎರಡು ಭಾಗಮಾಡಿ ಅರ್ಧವನ್ನು ಇವಳಿಗೂ ಅರ್ಧವ
ನ್ನು ಅವಳಿಗೂ ಕೊಡಿರಿ ಎಂದು ಅಪ್ಪಣೆಮಾಡಿದನು.
ಆಗ ಜೀವದಿಂದಿದ್ದ ಕೂಸಿನ ನಿಜವಾದ ತಾಯಿ ಕೂಸಿ 26
ನ ವಿಷಯದಲ್ಲಿ ಕರುಳುಮರುಗಿ—ನನ್ನ ಒಡೆಯಾ,
ಬೇಡ; ಬದುಕಿರುವ ಕೂಸನ್ನು ಅವಳಿಗೇ ಕೊಟ್ಟುಬಿ
ಡು; ಅದನ್ನು ಕೊಲ್ಲಿಸಬೇಡ ಎಂದು ಬೇಡಿಕೊಳ್ಳುವ
ಲ್ಲಿ ಎರಡನೆಯವಳು—ಅದು ನನಗೂ ಬೇಡ, ನಿನಗೂ
ಬೇಡ, ಕಡಿಯಲಿ ಎಂದು ಕೂಗಿದಳು. ಕೂಡಲೆ ಅರಸ 27
ನು—ಬದುಕಿರುವ ಕೂಸನ್ನು ಕೊಲ್ಲಬೇಡಿರಿ, ಆ ಸ್ತ್ರೀ
ಗೆ ಕೊಡಿರಿ; ಅವಳೇ ಅದರ ತಾಯಿ ಎಂದು ಆಜ್ಞಾಪಿಸಿ
ದನು. ಇಸ್ರಾಯೇಲ್ಯರೆಲ್ಲರೂ ಅರಸನ ಈ ತೀರ್ಪನ್ನು 28
ಕೇಳಿ ನ್ಯಾಯನಿರ್ಣಯಿಸುವದಕ್ಕೆ ಈತನಲ್ಲಿ ದೇವಜ್ಞಾ
ನವಿದೆ ಎಂದು ತಿಳಿದು ಅವನಿಗೆ ಬಹಳವಾಗಿ ಭಯ
ಪಟ್ಟರು.

### ಸೊಲೊಮೋನನ ಉದ್ಯೋಗಸ್ಥರು.

4 ಸೊಲೊಮೋನರಾಜನು ಎಲ್ಲಾ ಇಸ್ರಾಯೇಲ್ಯರ
ಮೇಲೆ ಅರಸನಾಗಿದ್ದನು. ಅವನ ಮುಖ್ಯ ಉ 2
ದ್ಯೋಗಸ್ಥರು—ಚಾದೋಕನ ಮಗನಾದ ಅಜರ್ಯ
ನು ಯಾಜಕನು; ಶೀಷನ ಮಕ್ಕಳಾದ ಎಲೀಹೋರೆಫ್. 3
ಅಹೀಯಾಹು ಎಂಬವರು ಲೇಖಕರು; ಅಹೀಲೂದನ
ಮಗನಾದ ಯೆಹೋಷಾಫಾಟನು ಅವನ ಮಂತ್ರಿ
ಯು; ಯೆಹೋಯಾದಾವನ ಮಗನಾದ ಬೆನಾಯನು 4
ಸೇನಾಪತಿ; ಎಬ್ಯಾತಾರ ಚಾದೋಕರು ಯಾಜಕರು;
ನಾತಾನನ ಮಗನಾದ ಅಜರ್ಯನು ಪ್ರದೇಶಾಧಿಪತಿ 5
ಗಳ ಮುಖ್ಯಸ್ಥನು; ನಾತಾನನ ಮಗನಾದ ಜಾಬೂದ
ನು ಯಾಜಕನೂ ಅರಸನ ಮಿತ್ರನೂ ಆಗಿದ್ದನು;
ಅಹೀಷಾರನು ರಾಜಗೃಹಾಧಿಪತಿಯು; ಅಬ್ದನ ಮಗ 6
ನಾದ ಅದೋನೀರಾಮನು ಬಿಟ್ಟೀಕೆಲಸಮಾಡಿಸುವ
ವರ ಮುಖ್ಯಸ್ಥನು.

ಸೊಲೊಮೋನನು ಎಲ್ಲಾ ಇಸ್ರಾಯೇಲ್ಯರ ಮೇಲೆ 7
ಹನ್ನೆರಡು ಮಂದಿ ಪ್ರದೇಶಾಧಿಪತಿಗಳನ್ನು ನೇಮಿಸಿ
ದನು. ಅವರಲ್ಲಿ ಪ್ರತಿಯೊಬ್ಬನು ಒಂದೊಂದು ತಿಂಗ

ಳು ಅರಸನಿಗೂ ಅವನ ಮನೆಯವರಿಗೂ ಬೇಕಾದ
ಆಹಾರಪದಾರ್ಥಗಳನ್ನು ಪ್ರತಿವರುಷವೂ ಒದಗಿಸಿಕೊ
8 ಡಬೇಕಾಗಿತ್ತು. ಅವರು ಯಾರಂದರೆ—ಎಫ್ರಾಯಿ
9 ಮ್ ಪರ್ವತಪ್ರದೇಶದಲ್ಲಿದ್ದ ಹೂರನ ಮಗನು. ಮಾ
ಕಚ್, ಶಾಲ್ಬೀಮ್, ಬೇತ್‌ಷೆಮೆಷ್, ಏಲೋನ್, ಬೇತ್
ಹಾನಾನ್ ಎಂಬ ಊರುಗಳ ಒಡೆಯನಾದ ದೆಕೆರನ
10 ಮಗನು. ಸೋಕೋ, ಹೇಫೆರ್ ಎಂಬ ಪ್ರದೇಶಗಳಿಗೆ
ಅಧಿಪತಿಯಾಗಿದ್ದು ಅರುಬ್ಬೋತಿನಲ್ಲಿ ವಾಸವಾಗಿದ್ದ
11 ಹಸೆದನ ಮಗನು. ದೋರ್‌ಗುಡ್ಡದ ಪ್ರದೇಶದಲ್ಲಿದ್ದ
ಅಬೀನಾದಾಬನ ಮಗನು; ಸೊಲೊಮೋನನ ಮಗ
12 ಳಾದ ಟಾಫತಳು ಇವನ ಹೆಂಡತಿಯಾಗಿದ್ದಳು. ತಾಣ
ಕ್, ಮೆಗಿದ್ದೋ, ಚಾರೆತಾನಿನ ಬಳಿಯಲ್ಲಿಯೂ ಇಜ್ರೇ
ಲಿನ ಅಡಿಯಲ್ಲಿಯೂ ಬೇತ್‌ಷೆಯಾನಿನಿಂದ ಆಬೇಲ್
ಮೆಹೋಲದ ವರೆಗೂ ಇರುವಂಥ ಯೊಕ್ಮೆಯಾನಿನ
ಆಚೆಗೆ ವಿಸ್ತರಿಸಿಕೊಂಡಿರುವಂಥ ಬೇತ್‌ಷೆಯಾನಿನ ಎ
ಲ್ಲಾ ಪ್ರದೇಶ ಇವುಗಳಿಗೆ ಅಧಿಪತಿಯಾದ ಅಹೀಲೂದ
13 ನ ಮಗನಾದ ಬಾಣಾ. ಗಿಲ್ಯಾದಿನಲ್ಲಿ ಮನಸ್ಸೆಯ
ಮಗನಾದ ಯಾಯಿರನ ಗ್ರಾಮಗಳಿಗೂ ಬಾಷಾ
ನಿನಲ್ಲಿ ಪೌಳಿಗೋಡೆಗಳಿಂದಲೂ ಕಬ್ಬಿಣದ ಅಗುಳಿ
ಗಳಿಂದಲೂ ಭದ್ರಮಾಡಲ್ಪಟ್ಟ ಅರುವತ್ತು ಪಟ್ಟಣಗಳಿ
ರುವ ಅರ್ಗೋಬ್‌ಪ್ರದೇಶಕ್ಕೂ ಅಧಿಪತಿಯಾಗಿದ್ದು
ರಾಮೋತ್‌ಗಿಲ್ಯಾದಿನಲ್ಲಿ ವಾಸವಾಗಿದ್ದ ಗೆಬೆರನ ಮಗ
14 ನು. ಮಹನಯಿಮಿನಲ್ಲಿದ್ದ ಇದ್ದೋವಿನ ಮಗನಾದ
15 ಅಹೀನಾದಾಬನು. ನಫ್ತಾಲಿ ಪ್ರದೇಶದಲ್ಲಿದ್ದ ಅಹೀ
ಮಾಚನು; ಇವನು ಸೊಲೊಮೋನನ ಮಗಳಾದ ಬಾ
16 ಸೆಮತಳನ್ನು ಮದುವೆಮಾಡಿಕೊಂಡವನು. ಆಶೇರಿಗೂ
ಆಲೋತಿಗೂ ಒಡೆಯನಾದ ಹೂಷೈಯ ಮಗನಾದ
17 ಬಾಣನು. ಇಸ್ಸಾಕಾರ್‌ಪ್ರಾಂತದಲ್ಲಿದ್ದ ಫಾರೂಹನ
18 ಮಗನಾದ ಯೆಹೋಷಾಫಾಟನು. ಬೆನ್ಯಾಮೀನಿನಲ್ಲಿ
19 ದ್ದ ಏಲನ ಮಗನಾದ ಶಿಮ್ಮೀ. ಅಮೋರಿಯರ ಅರಸ
ನಾದ ಸೀಹೋನ್, ಬಾಷಾನಿನ ಅರಸನಾದ ಓಗ್
ಇವರ ರಾಜ್ಯವಾಗಿದ್ದ ಗಿಲ್ಯಾದ್‌ಪ್ರದೇಶಕ್ಕೆಲ್ಲಾ ಒಬ್ಬ
ನೇ ಅಧಿಪತಿಯಾಗಿದ್ದ ಊರೀಯ ಮಗನಾದ ಗೆಬೆರ್
ಇವರೇ.

### ಸೊಲೊಮೋನನ ವೈಭವವೂ ಜ್ಞಾನವೂ.

20 ಇಸ್ರಾಯೇಲ್‌ಯೆಹೂದ್ಯರು ಸಮುದ್ರತೀರದ ಉಸು
ಬಿನಷ್ಟು ಅಸಂಖ್ಯರಾಗಿದ್ದರು; ಅವರು ಅನ್ನಪಾನಗಳ
21 ಲ್ಲಿ ತೃಪ್ತರಾಗಿ ಸಂತೋಷದಿಂದಿದ್ದರು. ಸೊಲೊಮೋ
ನನು ಯೂಫ್ರೇಟೀಸ್‌ನದಿ ಮೊದಲುಗೊಂಡು ಫಿಲಿಷ್ಟಿ
ಯರ ಮತ್ತು ಐಗುಪ್ತ್ಯರ ದೇಶಗಳ ವರೆಗೂ ಇರುವ
ಎಲ್ಲಾ ರಾಜ್ಯಗಳವರನ್ನು ಆಳುತ್ತಿದ್ದನು. ಅವರು
ಅವನ ಜೀವಮಾನದಲ್ಲೆಲ್ಲಾ ಅವನಿಗೆ ಅಧೀನರಾಗಿ
ಕಪ್ಪಕೊಡುತ್ತಿದ್ದರು.
22 ಸೊಲೊಮೋನನ ಅರಮನೆಗೆ ದಿನಂಪ್ರತಿ ಬೇಕಾ
ಗುವ ಆಹಾರಪದಾರ್ಥಗಳು—ಮೂವತ್ತು 1)ಕೋರ್
ಗೋದಿಯ ಹಿಟ್ಟು, ಅರುವತ್ತು ಕೋರ್ ಜವೆಗೋದಿ
ಯ ಹಿಟ್ಟು, ಹತ್ತು ಕಟ್ಟಿಮೇಯಿಸಿದ ಎತ್ತುಗಳ
ಇಪ್ಪತ್ತು ಬಿಟ್ಟುಮೇಯಿಸಿದ ಎತ್ತುಗಳು, ನೂರು ಕು
ಗಳು; ಇವುಗಳ ಹೊರತು ದುಪ್ಪಿ, ಜಿಂಕೆ, ಸಾರಗ
ಕೊಬ್ಬಿದ ಕೋಳಿಗಳು ಇವೇ. ಅವನು ಯೂಫ್ರೇಟಿ
ಸ್‌ನದಿಯ ಈಚೆಯಲ್ಲಿ ತಿಪ್ಸಹು ಮೊದಲುಗೊಂಡ
ಗಾಜದ ವರೆಗಿರುವ ಈಚೆಯ ಎಲ್ಲಾ ಅರಸರಿಗೂ ದೊ
ಯಾಗಿದ್ದನು. ಅವನು ಸುತ್ತಣ ರಾಜರೊಡನೆ ಸಮ
ಧಾನದಿಂದಿದ್ದನು. ಸೊಲೊಮೋನನ ಆಳಿಕೆಯಲ್ಲೆಲ್ಲಾ
ದಾನ್‌ಪಟ್ಟಣ ಮೊದಲುಗೊಂಡು ಬೇರ್ಷೆಬದ ವರೆ
ರುವ ಸಮಸ್ತ ಇಸ್ರಾಯೇಲ್ಯರೂ ಯೆಹೂದ್ಯರು
ತಮ್ಮ ತಮ್ಮ ದ್ರಾಕ್ಷಾಲತೆ, ಅಂಜೂರಗಿಡ ಇವುಗ
ನೆರಳಿನಲ್ಲಿ ವಾಸಿಸುತ್ತಾ ಸುರಕ್ಷಿತರಾಗಿದ್ದರು. ಸೊ
ಲೊಮೋನನ ಲಾಯಗಳಲ್ಲಿ ನಾಲ್ವತ್ತು ಸಾವಿರ ರಥ
ಶ್ವಗಳಿಗೆ ಸ್ಥಳವಿತ್ತು; ಅವನಿಗೆ ಹನ್ನೆರಡು ಸಾವಿ
ಮಂದಿ ರಾಹುತರಿದ್ದರು. ಮೇಲೆ ಕಂಡ ಪ್ರದೇಶಾ
ಪತಿಗಳು ತಮತಮಗೆ ನೇಮಕವಾದ ತಿಂಗಳಲ್ಲಿ
ಅರಸನಾದ ಸೊಲೊಮೋನನಿಗೂ ಅವನ ಪಂಕ್ತಿಯಲ್ಲಿ
ಊಟಕ್ಕೆ ಕೂತುಕೊಳ್ಳುವವರೆಲ್ಲರಿಗೂ ಬೇಕಾಗು
ಆಹಾರಪದಾರ್ಥಗಳನ್ನು ಯಾವ ಕೊರತೆಯೂ ಇಲ್ಲ
ದೆ ಒದಗಿಸಿಕೊಡುತ್ತಿದ್ದರು. ಇದಲ್ಲದೆ ಅವರು ರಥ
ಶ್ವಗಳಿಗೋಸ್ಕರವೂ ಸವಾರಿಕುದುರೆಗಳಿಗೋಸ್ಕರವ
ನೇಮಕವಾದಷ್ಟು ಜವೆಗೋದಿಯನ್ನೂ ಹುಲ್ಲನ್ನೂ
ಕುದುರೆಗಳಿದ್ದ ಸ್ಥಳಕ್ಕೆ ತಂದೊಪ್ಪಿಸುತ್ತಿದ್ದರು.
ದೇವರು ಸೊಲೊಮೋನನಿಗೆ ಸಮುದ್ರತೀರದ ಉ
ಸುಬಿನಷ್ಟು ಅಪರಿಮಿತವಾದ ಜ್ಞಾನವಿವೇಕಗಳನ್ನೂ
ಮನೋವಿಶಾಲತೆಯನ್ನೂ ಅನುಗ್ರಹಿಸಿದನು. ಅವನ
ಜ್ಞಾನವು ಮೂಡಣದೇಶದವರೆಲ್ಲರ ಜ್ಞಾನಕ್ಕಿಂತಲೂ
ಐಗುಪ್ತ್ಯರ ಜ್ಞಾನಕ್ಕಿಂತಲೂ ಮಿಗಿಲಾದದ್ದು. ಅವನ
ಜೆರಹನ ಮಗನಾದ ಏತಾನ್, ಮಾಹೋಲನ ಮಕ್ಕ
ಳಾದ ಹೇಮಾನ್, ಕಲ್ಕೋಲ್, ದರ್ದ ಮೊದಲಾದ
ಎಲ್ಲರಿಗಿಂತಲೂ ಜ್ಞಾನಿಯಾಗಿದ್ದನು. ಸುತ್ತಣ ಎಲ್ಲಾ
ಜನಾಂಗಗಳಲ್ಲಿ ಅವನ ಹೆಸರು ಪ್ರಸಿದ್ಧವಾಯಿತು
ಅವನ ಜ್ಞಾನೋಕ್ತಿಗಳು ಮೂರು ಸಾವಿರ; ಗೀ
ಗಳು ಸಾವಿರದ ಐದು. ಅವನು ಲೆಬನೋನಿನ ದೇ
ದಾರುವೃಕ್ಷ ಮೊದಲುಗೊಂಡು ಗೋಡೆಯಲ್ಲಿ ಬೆ
ಯುವ ಹಿಸ್ಸೋಪ್ ಗಿಡದ ವರೆಗಿರುವ ಎಲ್ಲಾ ವನಸ್ಪ
ಗಳನ್ನೂ ಎಲ್ಲಾ ಪಶುಪಕ್ಷಿಜಲಜಂತುಕ್ರಿಮಿಕೀಟಗ
ನ್ನೂ ಕುರಿತು ಪ್ರಸ್ತಾಪಿಸಿದನು. ಎಲ್ಲಾ ಜನಾಂ
ಗಳಲ್ಲಿಯೂ ಸೊಲೊಮೋನನ ಜ್ಞಾನವಿಶೇಷವನ್ನು
ಕುರಿತು ಕೇಳಿದ ಭೂಪಾಲರಲ್ಲಿಯೂ ಅನೇಕರು
ಅವನ ಜ್ಞಾನವಾಕ್ಯಗಳನ್ನು ಕೇಳುವದಕ್ಕೋಸ್ಕ
ಬಂದರು.

### ದೇವಾಲಯವನ್ನು ಕಟ್ಟುವದಕ್ಕೋಸ್ಕರ ಸಾಮಾನುಗಳನ್ನು ಸಿದ್ಧಪಡಿಸಿದ್ದು.

ದಾವೀದನ ಜೀವಮಾನದಲ್ಲೆಲ್ಲಾ ಅವನ ಮಿತ್ರ
ನಾಗಿದ್ದ ತೂರಿನ ಅರಸನಾದ ಹೀರಾಮನು ಸೊಲೊ

1) ಒಂದು ಕೋರ್ ಅಂದರೆ ಎರಡು ಕಂಡುಗ.

ಮೋನನು ತಂದೆಗೆ ಬದಲಾಗಿ ಅಭಿಷೇಕಿಸಲ್ಪಟ್ಟನೆಂದು
ಕೇಳಿದಾಗ ಅವನ ಬಳಿಗೆ ತನ್ನ ಸೇವಕರನ್ನು ಕಳುಹಿಸಿ
2 ದನು. ಅನಂತರ ಸೊಲೊಮೋನನು ದೂತರ ಮು
3 ಖಾಂತರವಾಗಿ ಹೀರಾಮನಿಗೆ—ಯೆಹೋವನ ಅನು
ಗ್ರಹದಿಂದ ನಮ್ಮ ತಂದೆಯಾದ ದಾವೀದನಿಗೆ ಎಲ್ಲಾ
ಶತ್ರುಗಳು ವಶವಾಗುವ ವರೆಗೆ ಅವನು ಸುತ್ತಲೂ
ಯುದ್ಧಗಳನ್ನು ನಡಿಸಬೇಕಾಗಿದ್ದದರಿಂದ ತನ್ನ ದೇವ
ರಾದ ಯೆಹೋವನ ಹೆಸರಿಗೆ ಆಲಯವನ್ನು ಕಟ್ಟಿಸಲಾ
4 ರದೆ ಹೋದನೆಂದು ನೀನು ಬಲ್ಲೆ. ನನಗಾದರೋ
ನನ್ನ ದೇವರಾದ ಯೆಹೋವನು ಎಲ್ಲಾ ಕಡೆಗಳಲ್ಲಿ
ಯೂ ಸಮಾಧಾನವನ್ನು ಅನುಗ್ರಹಿಸಿದ್ದಾನೆ; ನನ್ನನ್ನು
ವಿರೋಧಿಸುವವನು ಒಬ್ಬನೂ ಇಲ್ಲ; ಆಪತ್ತು ನನಗೆ
5 ದೂರವಾಗಿದೆ. ಯೆಹೋವನು ನನ್ನ ತಂದೆಯಾದ
ದಾವೀದನಿಗೆ—ನಾನು ನಿನಗೆ ಬದಲಾಗಿ ನಿನ್ನ ಸಿಂಹಾಸ
ನದ ಮೇಲೆ ಕುಳ್ಳಿರಿಸುವ ನಿನ್ನ ಮಗನು ನನ್ನ ಹೆಸ
ರಿಗೆ ಒಂದು ಆಲಯವನ್ನು ಕಟ್ಟಲಿ ಎಂದು ಹೇಳಿದ್ದ
ರಿಂದ ನಾನು ನನ್ನ ದೇವರಾದ ಯೆಹೋವನ ಹೆಸರಿಗೆ
6 ಒಂದು ಆಲಯವನ್ನು ಕಟ್ಟಬೇಕೆಂದಿರುತ್ತೇನೆ. ಆದದ
ರಿಂದ ನೀನು ನನಗೋಸ್ಕರ ಲೆಬನೋನಿನ ದೇವದಾರು
ವೃಕ್ಷಗಳನ್ನು ಕೊಯ್ಯಬೇಕೆಂದು ನಿನ್ನ ಆಳುಗಳಿಗೆ
ಆಜ್ಞಾಪಿಸು; ಅವರ ಜೊತೆಯಲ್ಲಿ ನನ್ನ ಆಳುಗಳನ್ನೂ
ಕಳುಹಿಸುವೆನು. ಮತ್ತು ನಿನ್ನ ಆಳುಗಳಿಗೆ ನೀನು
ಹೇಳುವಷ್ಟು ಸಂಬಳವನ್ನು ಕೊಡುತ್ತೇನೆ. ಚೀದೋನ್ಯ
ರಂತೆ ಮರಕೊಯ್ಯುವದರಲ್ಲಿ ಜಾಣರು ನಮ್ಮಲ್ಲಿರುವ
ದಿಲ್ಲವೆಂದು ನಿನಗೆ ಗೊತ್ತುಂಟಲ್ಲಾ ಎಂದು ಹೇಳಿಸಿ
ದನು. ಹೀರಾಮನು ಸೊಲೊಮೋನನ ಮಾತುಗ
ಳನ್ನು ಕೇಳಿದಾಗ ಬಹಳವಾಗಿ ಸಂತೋಷಪಟ್ಟು—ಈ
ಮಹಾಜನಾಂಗವನ್ನು ಆಳುವದಕ್ಕಾಗಿ ದಾವೀದನಿಗೆ
ಒಬ್ಬ ಬುದ್ಧಿವಂತನಾದ ಮಗನನ್ನು ಅನುಗ್ರಹಿಸಿದ
ಯೆಹೋವನಿಗೆ ಈಗ ಸ್ತೋತ್ರವಾಗಲಿ ಎಂದು ನುಡಿ
ದನು. ಇದಲ್ಲದೆ ಅವನು ಸೊಲೊಮೋನನಿಗೆ—
ನೀನು ಹೇಳಿಕಳುಹಿಸಿದ್ದನ್ನು ಕೇಳಿದೆನು; ದೇವದಾರು
ವೃಕ್ಷಗಳನ್ನೂ ತುರಾಯಿಮರಗಳನ್ನೂ ಕುರಿತು ನಿನ್ನ
ಅಪೇಕ್ಷೆಯನ್ನು ನೆರವೇರಿಸುವೆನು. ನನ್ನ ಸೇವಕರು
ಅವುಗಳನ್ನು ಲೆಬನೋನಿನಿಂದ ಸಮುದ್ರಕ್ಕೆ ತೆಗೆದು
ಕೊಂಡು ಹೋಗುವರು. ನಾನು ಅವುಗಳನ್ನು ತೆಪ್ಪ
ವನ್ನಾಗಿ ಕಟ್ಟಿಸಿ ಸಮುದ್ರಮಾರ್ಗವಾಗ ನೀನು ನೇಮಿ
ಸುವ ಸ್ಥಳಕ್ಕೆ ಕಳುಹಿಸಿ ಅಲ್ಲಿ ಬಿಚ್ಚಿಸುವೆನು; ನೀನು
ಅವುಗಳನ್ನು ತೆಗೆದುಕೊಂಡು ಅವುಗಳಿಗೆ ಬದಲಾಗ
ನನ್ನ ಮನೆಯವರಿಗೆ ಆಹಾರಪದಾರ್ಥಗಳನ್ನು ಕೊಡ
ಬೇಕೆಂಬದೇ ನನ್ನ ಅಪೇಕ್ಷೆಯಾಗಿದೆ ಎಂದು ಹೇಳಿ
ಕಳುಹಿಸಿದನು. ಹೀಗೆ ಹೀರಾಮನು ಸೊಲೊಮೋನ
ನಿಗೆ ಬೇಕಾದಷ್ಟು ದೇವದಾರಿನ ಮರಗಳನ್ನೂ ತುರಾ
ಯಿಮರಗಳನ್ನೂ ಕೊಡುತ್ತಿದ್ದನು. ಸೊಲೊಮೋನ
ನಾದರೋ ಪ್ರತಿವರುಷ ಅವನ ಮನೆಯವರ ಆಹಾರ
ಕ್ಕಾಗಿ ಇಪ್ಪತ್ತುಸಾವಿರ 1) ಕೋರ್ ಗೋದಿಯನ್ನೂ
ಇಪ್ಪತ್ತು ಕೋರ್ ನಿರ್ಮಲವಾದ ಎಣ್ಣೆಯನ್ನೂ ಕೊಡು
ತ್ತಿದ್ದನು. ಯೆಹೋವನು ತಾನು ವಾಗ್ದಾನಮಾಡಿ
ದಂತೆ ಸೊಲೊಮೋನನಿಗೆ ಜ್ಞಾನವನ್ನು ಅನುಗ್ರಹಿಸಿ
ದನು. ಸೊಲೊಮೋನನಿಗೂ ಹೀರಾಮನಿಗೂ ಸಮಾ
ಧಾನವಿತ್ತು; ಅವರು ಒಡಂಬಡಿಕೆಮಾಡಿಕೊಂಡರು.
ಅರಸನಾದ ಸೊಲೊಮೋನನು ಎಲ್ಲಾ ಇಸ್ರಾಯೇ 13
ಲ್ಯರಲ್ಲಿ ಮೂವತ್ತು ಸಾವಿರ ಮಂದಿಯನ್ನು ಬಿಟ್ಟೆ
ಹಿಡಿದು ಅವರಲ್ಲಿ ತಿಂಗಳೊಂದಕ್ಕೆ ಹತ್ತುಸಾವಿರ ಮಂದಿ 14
ಯಂತೆ ಲೆಬನೋನಿಗೆ ಕಳುಹಿಸುತ್ತಿದ್ದನು. ಅವರು
ಒಂದು ತಿಂಗಳು ಲೆಬನೋನಿನಲ್ಲಿದ್ದರೆ ಎರಡು ತಿಂಗಳು
ಮನೆಯಲ್ಲಿರುತ್ತಿದ್ದರು. ಅದೋನೀರಾಮನು ಇವರ
ಮುಖ್ಯಸ್ಥನಾಗಿದ್ದನು. ಇದಲ್ಲದೆ ಸೊಲೊಮೋನ 15
ನಿಗೆ ಎಪ್ಪತ್ತು ಸಾವಿರ ಮಂದಿ ಹೊರೆಹೊರುವವರೂ
ಎಂಭತ್ತು ಸಾವಿರ ಮಂದಿ ಕಲ್ಲುಗಣಿಯಲ್ಲಿ ಕೆಲಸ
ಮಾಡುವವರೂ ಇದ್ದರು. ಈ ಕೆಲಸದವರ ಮೇಲ್ವಿ 16
ಚಾರಣೆಗಾಗಿ ಅವನು ಮೂರು ಸಾವಿರದ ಮುನ್ನೂರು
ಮಂದಿ ಮೇಸ್ತ್ರಿಗಳನ್ನು ನೇಮಿಸಿದನು. ಕೆತ್ತಿದ ಕಲ್ಲು 17
ಗಳಿಂದ ಹಾಕಬೇಕಾದ ದೇವಾಲಯದ ಅಸ್ತಿವಾರ
ಕ್ಕಾಗಿ ಆಳುಗಳು ಸೊಲೊಮೋನನ ಅಪ್ಪಣೆಯಂತೆ
ಶ್ರೇಷ್ಠವಾದ ದೊಡ್ಡ ಕಲ್ಲುಗಳನ್ನು ಕೊರೆಯುತ್ತಿದ್ದರು.
ಸೊಲೊಮೋನನ ಮತ್ತು ಹೀರಾಮನ ಶಿಲ್ಪಿಗಳೂ 18
ಗೆಬಾಲ್ಯರೂ ಅವುಗಳನ್ನು ಕೆತ್ತುತ್ತಿದ್ದರು. ದೇವಾಲಯ
ಕಟ್ಟುವದಕ್ಕಾಗಿ ಬೇಕಾದ ಕಲ್ಲುಮರಗಳನ್ನು ಸಿದ್ಧ
ಪಡಿಸಿದವರು ಇವರೇ.

ದೇವಾಲಯವನ್ನು ಕಟ್ಟಿದ್ದು.

6 ಇಸ್ರಾಯೇಲ್ಯರು ಐಗುಪ್ತದೇಶವನ್ನು ಬಿಟ್ಟ ನಾ
ನೂರ ಎಂಭತ್ತನೆಯ ವರುಷದ ಅಂದರೆ ಇಸ್ರಾಯೇಲ್ಯರ
ಅರಸನಾದ ಸೊಲೊಮೋನನ ಆಳಿಕೆಯ ನಾಲ್ಕನೆಯ
ವರುಷದ ಎರಡನೆಯ ತಿಂಗಳಾದ 2) ವೈಶಾಖ ಮಾಸ
ದಲ್ಲಿ ಅರಸನಾದ ಸೊಲೊಮೋನನು ಯೆಹೋವನ
ಆಲಯವನ್ನು ಕಟ್ಟುವದಕ್ಕೆ ಪ್ರಾರಂಭಿಸಿದನು. ಅವನು 2
ಯೆಹೋವನಿಗೋಸ್ಕರ ಕಟ್ಟಿಸಿದ ದೇವಾಲಯದ ಉ
ದ್ದವು ಅರುವತ್ತು ಮೊಳ; ಅಗಲವು ಇಪ್ಪತ್ತು ಮೊಳ;
ಎತ್ತರವು ಮೂವತ್ತು ಮೊಳ. ದೇವಾಲಯದ ಪರಿಶುದ್ಧ 3
ಸ್ಥಳದ ಮುಂದುಗಡೆಯಲ್ಲಿ ಒಂದು ಮಂಟಪವಿತ್ತು;
ಅದರ ಉದ್ದವು ದೇವಾಲಯದ ಅಗಲಕ್ಕೆ ಸರಿಯಾಗಿ
ಇಪ್ಪತ್ತು ಮೊಳ, ಅಗಲವು ಹತ್ತು ಮೊಳ. ಇದಲ್ಲದೆ 4
ಅವನು ಆಲಯಕ್ಕೆ ತೆರೆಯಲಾರದ ಜಾಲಂಧರ ಕಿಟಿಕಿ
ಗಳನ್ನಿಡಿಸಿದನು. ದೇವಾಲಯದ ಗೋಡೆಯ ಸುತ್ತ 5
ಲೂ ಅಂದರೆ ಪರಿಶುದ್ಧಸ್ಥಳ, ಮಹಾಪರಿಶುದ್ಧಸ್ಥಳ
ಇವುಗಳ ಗೋಡೆಯ ಸುತ್ತಲೂ ಇನ್ನೊಂದು ಗೋಡೆ
ಯನ್ನು ಕಟ್ಟಿಸಿ ಇವುಗಳ ನಡುವೆ ಅಂತಸ್ತುಗಳುಳ್ಳ
ಕೊಠಡಿಗಳನ್ನು ಮಾಡಿಸಿದನು. ಕೆಳಗಿನ ಕೊಠಡಿಗಳ 6
ಅಗಲವು ಐದು ಮೊಳ; ಮೊದಲನೆಯ ಅಂತಸ್ತಿನ
ಕೊಠಡಿಗಳ ಅಗಲವು ಆರು ಮೊಳ; ಎರಡನೆಯ ಅಂತ
ಸ್ತಿನ ಕೊಠಡಿಗಳ ಅಗಲವು ಏಳು ಮೊಳ. ಅಂತಸ್ತಿನ
ತೊಲೆಗಳನ್ನಿಡುವಾಗ ದೇವಾಲಯದ ಗೋಡೆಯಲ್ಲಿ
ತೂತಾಗಬಾರದೆಂದು ಗೋಡೆಯ ಹೊರಮೈಯನ್ನು

1) ಒಂದು ಕೋರ್ ಅಂದರೆ ಎರಡು ಖಂಡುಗ. 2) ಮೂಲ: ಜೀವ್.

7 ಸೋಪಾನಾಕಾರವಾಗಿ ಮಾಡಿಸಿದನು. ದೇವಾಲಯ
ವನ್ನು ಕಟ್ಟುತ್ತಿರುವಾಗ ಕಲ್ಲುಗಳನ್ನು ಕಲ್ಲುಗಣಿಯ
ಲ್ಲಿಯೇ ಸಿದ್ಧಮಾಡಿಕೊಂಡು ಬಂದು ಕಟ್ಟಿದ್ದರಿಂದ
ಕಟ್ಟುವ ದಿವಸಗಳಲ್ಲೆಲ್ಲಾ ಸುತ್ತಿಗೆ, ಉಳಿ ಮುಂತಾದ
8 ಕಬ್ಬಿಣದ ಸಾಮಾನುಗಳ ಶಬ್ದವು ಕೇಳಿಸಲಿಲ್ಲ. ಕೆಳ
ಗಿನ ಕೊಠಡಿಗಳಿಗೆ ಹೋಗುವ ಬಾಗಲು ಆಲಯದ
ಬಲಪಾರ್ಶ್ವದಲ್ಲಿತ್ತು. ಅಲ್ಲಿಂದ ಮೊದಲನೆಯ ಅಂತ
ಸ್ತಿಗೂ ಎರಡನೆಯ ಅಂತಸ್ತಿಗೂ ಹೋಗಬೇಕಾದರೆ
9 ವಕ್ರಸೋಪಾನಗಳಿದ್ದವು. ಈ ಪ್ರಕಾರ ಅವನು ಮನೆ
ಯನ್ನು ಕಟ್ಟಿಸಿ ದೇವದಾರಿನ ತೊಲೆಹಲಿಗೆಗಳಿಂದ
10 ಮಾಳಿಗೆಯನ್ನು ಮಾಡಿಸಿ ಕೆಲಸ ತೀರಿಸಿದನು. ಅವನು
ದೇವಾಲಯದ ಸುತ್ತಲೂ ಒಂದರ ಮೇಲೊಂದು
ಐದೈದು ಮೊಳ ಎತ್ತರವಾದ ಕೊಠಡಿಗಳನ್ನು ಕಟ್ಟಿಸಿ
ದನು. ಇವು ದೇವದಾರಿನ ತೊಲೆಗಳಿಂದ ದೇವಾಲ
ಯಕ್ಕೆ ಸಂಬಂಧಿಸಲ್ಪಟ್ಟಿದ್ದವು.

11, 12 ಯೆಹೋವನು ಸೊಲೊಮೋನನಿಗೆ—ನೀನು
ಈಗ ಒಂದು ಆಲಯವನ್ನು ಕಟ್ಟಿಸುತ್ತಿರುತ್ತೀಯಷ್ಟೆ.
ನೀನು ನನ್ನ ನಿಯಮವಿಧಿಗಳನ್ನು ಅನುಸರಿಸಿ ನನ್ನ
ಆಜ್ಞೆಗಳನ್ನು ಕೈಕೊಂಡು ನಡೆಯುವದಾದರೆ ನಾನು
ನಿನ್ನನ್ನು ಕುರಿತು ನಿನ್ನ ತಂದೆಯಾದ ದಾವೀದನಿಗೆ
13 ಮಾಡಿದ ವಾಗ್ದಾನವನ್ನು ನೆರವೇರಿಸುವೆನು. ನನ್ನ
ಪ್ರಜೆಗಳಾದ ಇಸ್ರಾಯೇಲ್ಯರನ್ನು ಕೈಬಿಡದೆ ಅವರ
ಮಧ್ಯದಲ್ಲೇ ವಾಸಿಸುವೆನು ಎಂದು ಹೇಳಿದನು.

14 ಸೊಲೊಮೋನನು ದೇವಾಲಯವನ್ನು ಕಟ್ಟಿಸಿದ
15 ಮೇಲೆ ಅದರ ಗೋಡೆಗಳ ಒಳಮೈಯನ್ನು ನೆಲದಿಂದ
ಮಾಳಿಗೆಯ ವರೆಗೆ ದೇವದಾರಿನ ಹಲಿಗೆಗಳಿಂದ ಹೊದಿ
ಸಿದನು. ನೆಲಕ್ಕೆ ತುರಾಯಿಮರದ ಹಲಿಗೆಗಳನ್ನು
16 ಹಾಕಿಸಿದನು. ಇದಲ್ಲದೆ ಅವನು ದೇವಾಲಯದೊ
ಳಗೆ ಹಿಂದಿನ ಇಪ್ಪತ್ತು ಮೊಳ ಸ್ಥಳವನ್ನು ಬಿಟ್ಟು ನೆಲ
ದಿಂದ ತೊಲೆಗಳ ವರೆಗೆ ದೇವದಾರಿನ ಹಲಿಗೆಗಳಿಂದ
ಒಂದು ಗೋಡೆಯನ್ನು ಮಾಡಿಸಿ ಅದರ ಹಿಂದಿನ ಭಾಗ
ವನ್ನು ಗರ್ಭಗೃಹ ಅಥವಾ ಮಹಾಪರಿಶುದ್ಧ ಸ್ಥಳ
17 ವೆಂದು ಪ್ರತ್ಯೇಕಿಸಿದನು. ದೇವಾಲಯದ ಪರಿಶುದ್ಧ
ಸ್ಥಳವೆನಿಸಿಕೊಳ್ಳುವ ಮುಂದಿನ ಭಾಗವು ನಾಲ್ವತ್ತು
18 ಮೊಳ ಉದ್ದವಿತ್ತು. ದೇವಾಲಯದೊಳಗೆ ಕಲ್ಲು
ಕಾಣಿಸದಂತೆ ಗೋಡೆಯನ್ನೆಲ್ಲಾ ಬಳ್ಳಿಗಳೂ ಹೂವು
ಗಳೂ ಕೆತ್ತಿರುವ ದೇವದಾರಿನ ಹಲಿಗೆಗಳಿಂದ ಹೊದಿಸಿ
19 ದನು. ಯೆಹೋವನ ಒಡಂಬಡಿಕೆಯ ಮಂಜೂಷ
ವನ್ನು ಇಡುವದಕ್ಕೋಸ್ಕರ ದೇವಾಲಯದೊಳಗೆ ಒಂದು
20 ಭಾಗವನ್ನು ಗರ್ಭಗೃಹವೆಂದು ಪ್ರತ್ಯೇಕಿಸಿದನು. ಆ
ಗರ್ಭಗೃಹವು ಇಪ್ಪತ್ತು ಮೊಳ ಉದ್ದವೂ ಇಪ್ಪತ್ತು
ಮೊಳ ಅಗಲವೂ ಇಪ್ಪತ್ತು ಮೊಳ ಎತ್ತರವೂ ಇತ್ತು.
ಅದನ್ನು ಚೊಕ್ಕ ಬಂಗಾರದ ತಗಡಿನಿಂದಲೂ ವೇದಿ
ಯನ್ನು ದೇವದಾರುಮರದಿಂದಲೂ ಹೊದಿಸಿದನು.
21 ಸೊಲೊಮೋನನು ದೇವಾಲಯದ ಒಳಮೈಯನ್ನು
ಚೊಕ್ಕ ಬಂಗಾರದ ತಗಡಿನಿಂದ ಹೊದಿಸಿದನು. ಬಂಗಾ
ರದ ತಗಡಿನಿಂದ ಹೊದಿಸಲ್ಪಟ್ಟ ಮಹಾಪರಿಶುದ್ಧ
ಸ್ಥಳದ ಎದುರಿನಲ್ಲಿ ಒಂದು ಗೋಡೆಯಿಂದ ಇನ್ನೊಂದು

ಗೋಡೆಗೆ ಬಂಗಾರದ ಸರಪಣಿಗಳನ್ನು ಕಟ್ಟಿಸಿದನು.
ದೇವಾಲಯದ ಎಲ್ಲಾ ಗೋಡೆಗಳನ್ನೂ ಮಹಾಪ
ಶುದ್ಧಸ್ಥಳಕ್ಕೆ ಸೇರಿದ ವೇದಿಯನ್ನೂ ಪೂರ್ಣವಾ
ಬಂಗಾರದ ತಗಡಿನಿಂದ ಹೊದಿಸಿದನು.

ಇದಲ್ಲದೆ ಅವನು ಎಣ್ಣೇಮರದಿಂದ ಹತ್ತು
ಮೊಳ ಎತ್ತರವಾದ ಎರಡು ಕೆರೂಬಿಗಳನ್ನು ಮಾಡಿ
ಅವುಗಳನ್ನು ಗರ್ಭಗೃಹದಲ್ಲಿಡಿಸಿದನು. ಪ್ರತಿಯೊಂದ
ಕೆರೂಬಿಯ ರೆಕ್ಕೆಗಳು ಐದೈದು ಮೊಳ ಉದ್ದವಿದ್ದವ
ಎರಡು ರೆಕ್ಕೆಗಳ ಅಂತರವು ತುದಿಯಿಂದ ತುದಿಗೆ ಹತ್ತು
ಮೊಳ. ಇನ್ನೊಂದು ಕೆರೂಬಿಯ ರೆಕ್ಕೆಗಳ ಅಂತ
ವೂ ಹತ್ತು ಮೊಳ. ಎರಡೂ ಕೆರೂಬಿಗಳ ಅಳತೆಯ
ಆಕಾರವೂ ಒಂದೇ. ಅವೆರಡೂ ಹತ್ತತ್ತು ಮೊಳ ಎತ್ತ
ವಾಗಿದ್ದವು. ಅವನು ಅವುಗಳನ್ನು ದೇವಾಲಯ
ಗರ್ಭಗೃಹದಲ್ಲಿಡಿಸಿದನು. ಅವುಗಳ ರೆಕ್ಕೆಗಳು ಚಾ
ದವುಗಳಾಗಿದ್ದದರಿಂದ ಮೊದಲನೆಯ ಕೆರೂಬಿಯ
ಒಂದು ರೆಕ್ಕೆಯು ಈಚೆಯ ಗೋಡೆಗೂ ಎರಡನೆಯ
ಕೆರೂಬಿಯ ಒಂದು ರೆಕ್ಕೆಯು ಆಚೆಯ ಗೋಡೆಗ
ತಗುಲಿದ್ದವು; ಅವುಗಳ ಬೇರೆ ಎರಡು ರೆಕ್ಕೆಗಳು ಮ
ಯ ಮಧ್ಯದಲ್ಲಿ ಒಂದನ್ನೊಂದು ತಗುಲಿದ್ದವು.
ಕೆರೂಬಿಗಳು ಬಂಗಾರದ ತಗಡುಗಳಿಂದ ಹೊದಿಸಲ್ಪ
ಟ್ಟಿದ್ದವು. ಅವನು ದೇವಾಲಯದ ಎಲ್ಲಾ ಗೋಡೆ
ಳಲ್ಲಿ ಹೊರಗೂ ಒಳಗೂ ಕೆರೂಬಿ, ಖರ್ಜೂರವೃಕ್ಷ
ಹೂವು ಇವುಗಳ ಚಿತ್ರಗಳನ್ನು ಕೆತ್ತಿಸಿದನು. ದೇವಾ
ಯದ ಒಳಗಣ ಮತ್ತು ಹೊರಗಣ ನೆಲವನ್ನು ಬಂಗ
ರದ ತಗಡುಗಳಿಂದ ಹೊದಿಸಿದನು. ಗರ್ಭಗೃಹ
ಬಾಗಲಿಗೆ ಎಣ್ಣೇಮರದ ಕದಗಳನ್ನು ಹಚ್ಚಿಸಿದನು
ಚೌಕಟ್ಟು ಪಂಚಕೋಣಗಳುಳ್ಳದಾಗಿತ್ತು. ಎಣ್ಣೇಮರ
ಆ ಎರಡು ಕದಗಳಲ್ಲಿಯೂ ಕೆರೂಬಿ, ಖರ್ಜೂರವೃಕ್ಷ
ಹೂವು ಇವುಗಳ ಚಿತ್ರಗಳನ್ನು ಕೆತ್ತಿಸಿ ಕದಗಳಿಗೆ ಬಂಗ
ರದ ತಗಡನ್ನು ಹೊದಿಸಿ ಚಿತ್ರಗಳಿದ್ದಲ್ಲಿ ಆ ತಗಡನ್ನ
ಬಡಿಸಿದನು. ಇದಲ್ಲದೆ ಅವನು ಪರಿಶುದ್ಧಸ್ಥಳ
ಬಾಗಲಿಗೆ ಎಣ್ಣೇಮರದಿಂದ ಚತುಷ್ಕೋಣದ ಚೌ
ಟ್ಟನ್ನು ಮಾಡಿಸಿ ಅದಕ್ಕೆ ತುರಾಯಿಮರದ ಎರಡು
ಕದಗಳನ್ನು ಹಚ್ಚಿಸಿದನು. ಪ್ರತಿಯೊಂದು ಕದ
ಎರಡು ಭಾಗವುಳ್ಳದ್ದಾಗಿ ಮಡಚುವದಕ್ಕೆ ಬರುತ್ತಿತ್ತು
ಈ ಕದಗಳಲ್ಲಿ ಕೆರೂಬಿ, ಖರ್ಜೂರವೃಕ್ಷ, ಹೂವ
ಇವುಗಳ ಚಿತ್ರಗಳನ್ನು ಕೆತ್ತಿಸಿ ಅವುಗಳಿಗೆ ಬಂಗ
ರದ ತಗಡನ್ನು ಹೊದಿಸಿ ಕೆತ್ತನೆಯಿದ್ದಲ್ಲಿ ಆ ತ
ಡನ್ನು ಬಡಿಸಿದನು. ದೇವಾಲಯದ ಪ್ರಾಕಾರದಲ್ಲಿ
ಮೂರು ಸಾಲು ಕಲ್ಲಿನ ಕಂಬಗಳನ್ನೂ ಒಂದು ಸಾಲ
ದೇವದಾರುವಿನ ಕಂಬಗಳನ್ನೂ ಇರಿಸಿದನು. ಸೊಲೊ
ಮೋನನ ಆಳಿಕೆಯ ನಾಲ್ಕನೆಯ ವರುಷದ [1]ವೈಶಾ
ಮಾಸದಲ್ಲಿ ಯೆಹೋವನ ಆಲಯದ ಅಸ್ತಿವಾರವನ್ನ
ಹಾಕಿದರು. ಹನ್ನೊಂದನೆಯ ವರುಷದ ಎಂಟನೆಯ
ತಿಂಗಳಾದ [2]ಕಾರ್ತಿಕ ಮಾಸದಲ್ಲಿ ದೇವಾಲಯವ
ಅದರ ಎಲ್ಲಾ ಕಟ್ಟಡಗಳೂ ನೇಮದ ಪ್ರಕಾರ ಸಿದ್ಧವಾ
ದವು. ದೇವಾಲಯವನ್ನು ಕಟ್ಟುವದಕ್ಕೆ ಏಳು ವರು
ಹಿಡಿಯಿತು.

1) ಮೂಲ: ಜೀವ್. 2) ಮೂಲ: ಬೂಲ್.

### ಅರಮನೆಯೂ ಅದಕ್ಕೆ ಸಂಬಂಧಪಟ್ಟ ಮನೆಗಳೂ ಕಟ್ಟಲ್ಪಟ್ಟದ್ದು.

ಸೊಲೊಮೋನನು ತನ್ನ ಅರಮನೆಯನ್ನು ಹದಿ
2 ಮೂರು ವರುಷಗಳಲ್ಲಿ ಕಟ್ಟಿಸಿ ತೀರಿಸಿದನು. ಅವ
ನು ಕಟ್ಟಿಸಿದ ಲೆಬನೋನಿನ ತೋಪು ಎನಿಸಿಕೊಳ್ಳುವ
ಮಂದಿರವು ನೂರು ಮೊಳ ಉದ್ದ, ಐವತ್ತು ಮೊಳ
ಅಗಲ, ಮೂವತ್ತು ಮೊಳ ಎತ್ತರವಾಗಿತ್ತು. ಅದರ
ಮಾಳಿಗೆಗೆ ದೇವದಾರಿನ 1)ಮೂರು ಸಾಲು ಕಂಬ
ಗಳೂ ಅವುಗಳ ಮೇಲೆ ಇಡಲ್ಪಟ್ಟ ದೇವದಾರಿನ
ತೊಲೆಗಳೂ ಆಧಾರವಾಗಿದ್ದವು. ಸ್ತಂಭಗಳ ಮೇಲಿ
ರುವ ತೊಲೆಗಳ ಮೇಲೆ ದೇವದಾರಿನ ಹಲಿಗೆಗಳಿಂದ
ಮಾಡಿದ ಮಾಳಿಗೆಯಿತ್ತು. ಸ್ತಂಭಗಳು ಪ್ರತಿಯೊಂದು
ಸಾಲಿನಲ್ಲಿ ಹದಿನೈದರಂತೆ ಒಟ್ಟು ನಾಲ್ವತ್ತೈದು ಇದ್ದವು.
ಬೆಳಕು ಎದುರೆದುರಾಗಿ ಬೀಳುವಂತೆ ಎರಡು ಗೋಡೆ
ಗಳಿಗೆ ಮೂರು ಮೂರು ಸಾಲು ಬೆಳಕುಕಂಡಿಗಳಿದ್ದವು.
ಎಲ್ಲಾ ದ್ವಾರಗಳೂ ಬೆಳಕು 2)ಕಂಡಿಗಳೂ ಚತುಷ್ಕೋ
ಣಾಕಾರವುಳ್ಳವುಗಳು. ಮೂರು ಮೂರು ಸಾಲು
ಬೆಳಕುಕಂಡಿಗಳು ಎದುರೆದುರಾಗಿದ್ದವು.
ಇದಲ್ಲದೆ ಸೊಲೊಮೋನನು ಒಂದು ಕಂಬಮಂಟ
ಪವನ್ನು ಕಟ್ಟಿಸಿದನು. ಅದರ ಉದ್ದ ಐವತ್ತು ಮೊಳ,
ಅಗಲ ಮೂವತ್ತು ಮೊಳ, ಅದರ ಮುಂದುಗಡೆ
ಯಲ್ಲಿ ಒಂದು ಪಡಸಾಲೆಯಿತ್ತು; ಆ ಪಡಸಾಲೆಗೆ
ಕಂಬಗಳೂ ಮೆಟ್ಲುಗಳೂ ಇದ್ದವು.
ಇದಲ್ಲದೆ ಅವನು ಸಿಂಹಾಸನಮಂದಿರವನ್ನು ಕಟ್ಟಿ
ಸಿದನು. ಅವನು ಅಲ್ಲಿ ನ್ಯಾಯತೀರಿಸುತ್ತಿದ್ದದರಿಂದ
ಅದಕ್ಕೆ ನ್ಯಾಯಮಂದಿರವೆಂತಲೂ ಹೆಸರಾಯಿತು.
ಇದರ ಎಲ್ಲಾ ಗೋಡೆಗಳು ನೆಲದಿಂದ ಮಾಳಿಗೆಯ ವರೆ
ಗೆ ದೇವದಾರುವಿನ ಹಲಿಗೆಗಳಿಂದ ಹೊದಿಸಲ್ಪಟ್ಟಿದ್ದವು.
ನ್ಯಾಯಮಂದಿರದ ಹಿಂದಿನ ಪ್ರಾಕಾರದಲ್ಲಿ ತನ
ಗೋಸ್ಕರ ಅರಮನೆಯನ್ನೂ ತನ್ನ ಹೆಂಡತಿಯಾದ
ಫರೋಹನ ಮಗಳಿಗೋಸ್ಕರ ಇನ್ನೊಂದು ಮನೆ
ಯನ್ನೂ ಕಟ್ಟಿಸಿದನು. ನ್ಯಾಯಮಂದಿರದ ಹಾಗೆ
ಯೇ ಇವುಗಳನ್ನು ಕಟ್ಟಿಸಿದನು. ಈ ಎಲ್ಲಾ ಮಂದಿ
ರಗಳನ್ನೂ ಅವುಗಳ ಸುತ್ತುಗೋಡೆಯನ್ನೂ ದೊಡ್ಡ
ಪ್ರಾಕಾರದ ಸುತ್ತುಗೋಡೆಯನ್ನೂ ಅಸ್ತಿವಾರದ ಮೇಲ
ಣಿಂದ ಕಡೇ ವರಸೆಯ ವರೆಗೆ ಅಳತೆಯ ಮೇರೆಗೆ
ಕೆತ್ತಲ್ಪಟ್ಟಂಥ ಎರಡು ಮಗ್ಗುಲಿಗೂ ಗರಗಸದಿಂದ
ಕೊಯ್ಯಲ್ಪಟ್ಟಂಥ ಶ್ರೇಷ್ಠವಾದ ಕಲ್ಲುಗಳಿಂದ ಕಟ್ಟಿ
ದರು. ಅಸ್ತಿವಾರಕ್ಕೆ ಪ್ರಯೋಗಿಸಿದ ಶ್ರೇಷ್ಠವಾದ
ದೊಡ್ಡ ಕಲ್ಲುಗಳು ಎಂಟು ಹತ್ತು ಮೊಳ ಉದ್ದ
ವಾಗಿದ್ದವು. ಅಸ್ತಿವಾರದ ಮೇಲಣ ಭಾಗಕ್ಕೆ ಅಳ
ತೆಯ ಮೇರೆಗೆ ಕೆತ್ತಿದ ಶ್ರೇಷ್ಠವಾದ ಕಲ್ಲುಗ
ಳನ್ನೂ ದೇವದಾರಿನ ಮರವನ್ನೂ ಉಪಯೋಗಿಸಿ
ದರು. ಒಳಗಣ ಪ್ರಾಕಾರವೆನಿಸಿಕೊಳ್ಳುವ ಯೆ 12
ಹೋವನ ಆಲಯದ ಪ್ರಾಕಾರಕ್ಕೂ ಅರಮನೆಯ
3)ಪ್ರಾಕಾರಕ್ಕೂ ಹೇಗೋ ಹಾಗೆಯೇ ಎಲ್ಲಾ ಮಂದಿ
ರಗಳ ಸುತ್ತಲಿರುವ ದೊಡ್ಡ ಪ್ರಾಕಾರಕ್ಕೆ ಮೂರು
ಸಾಲು ಕಲ್ಲಿನ ಕಂಬಗಳೂ ಒಂದು ಸಾಲು ದೇವ
ದಾರುವಿನ ಮರದ ಕಂಬಗಳೂ ಇದ್ದವು.

### ತಾಮ್ರದ ಕಂಬಗಳೂ ದೇವಾಲಯದ ಉಪಕರಣಗಳೂ.

ಅರಸನಾದ ಸೊಲೊಮೋನನು ತೂರ್‌ಪಟ್ಟಣದಿಂದ 13
ಹೀರಾಮ್ ಎಂಬವನನ್ನು ಕರಿಸಿದನು. ಇವನು 14
ನಫ್ತಾಲಿಕುಲದ ಒಬ್ಬ ವಿಧವೆಯಲ್ಲಿ ತೂರ್‌ಪಟ್ಟಣದ
ಒಬ್ಬ ಕಂಚುಗಾರನಿಗೆ ಹುಟ್ಟಿದವನು. ಜಾಣನೂ
ತಾಮ್ರದ ಕೆಲಸದಲ್ಲಿ ನಿಪುಣನೂ ಅನುಭವಶಾಲಿಯೂ
ಆಗಿದ್ದ ಇವನು ಅರಸನ ಬಳಿಗೆ ಬಂದು ಅವನ
ಎಲ್ಲಾ ಕೆಲಸವನ್ನು ಮಾಡಿದನು.
ಅವನು ಎರಡು ತಾಮ್ರದ ಕಂಬಗಳನ್ನು ಮಾ 15
ಡಿದನು; ಅವು ಹದಿನೆಂಟು ಮೊಳ ಎತ್ತರವಿದ್ದವು.
ಅವುಗಳ ಸುತ್ತಳತೆಯು ಹನ್ನೆರಡು ಮೊಳ. ಇದಲ್ಲದೆ 16
ಅವನು ತಾಮ್ರವನ್ನು ಎರಕಹೊಯ್ದು ಕಂಬಗಳ
ಮೇಲೆ ಇಡುವದಕ್ಕೋಸ್ಕರ ಐದೈದು ಮೊಳ ಎತ್ತರ
ವಾದ ಎರಡು ಕುಂಭಗಳನ್ನೂ ಒಂದೊಂದಕ್ಕೆ 4)ಏಳೇಳ 17
ರಂತೆ ಕುಂಭದ ಮೇಲೆ ಹಾಕುವದಕ್ಕೋಸ್ಕರ ತಾಮ್ರದ
ಸರಿಗೆಯ ಜಾಲರಿಗಳನ್ನೂ ಮಾಡಿದನು; ಇದಲ್ಲದೆ 18
ಅವನು ತಾಮ್ರದ 5)ದಾಳಿಂಬಹಣ್ಣುಗಳನ್ನು ಮಾಡಿ
ಅವುಗಳನ್ನು ಕಂಬಗಳ ಮೇಲಣ ಪ್ರತಿಯೊಂದು
ಕುಂಭದ ಜಾಲರಿಯ ಸುತ್ತಲೂ ಎರಡೆರಡು ಸಾಲಾಗಿ
ಸಿಕ್ಕಿಸಿದನು. ಕಂಬಗಳ ಮೇಲಿರುವ ಕುಂಭಗಳ 19
ಒಡಲು ನಾಲ್ಕು ಮೊಳಗಳ ವರೆಗೆ ಕಮಲಾಕಾರವುಳ್ಳ
ದ್ದಾಗಿತ್ತು. ಆ ಕುಂಭಗಳ ಮೇಲಿನ ಭಾಗದಲ್ಲಿ ಒಡ 20
ಲಿನ ಸುತ್ತಲೂ ಜಾಲರಿಯ ಹೊರಗೆ ದಾಳಿಂಬಹಣ್ಣಿನ
ಆಕಾರವುಳ್ಳ ಗುಂಡುಗಳಿದ್ದವು. ಪ್ರತಿಯೊಂದು ಕುಂಭದ
ಸುತ್ತಲೂ ಇನ್ನೂರು ಗುಂಡುಗಳನ್ನು ಸಾಲಾಗಿ ಸಿಕ್ಕಿಸಿ
ದನು. ತರುವಾಯ ಅವನು ಆ ಎರಡು ಕಂಬಗಳನ್ನೂ 21
ದೇವಾಲಯದ ಮಂಟಪದ ಬಳಿಯಲ್ಲಿ ನಿಲ್ಲಿಸಿ ಬಲ
ಗಡೆಯ ಕಂಬಕ್ಕೆ 6)ಯಾಕೀನ್ ಎಂದೂ ಎಡಗಡೆಯ
ಕಂಬಕ್ಕೆ ಬೋವಜ್ ಎಂದೂ ಹೆಸರಿಟ್ಟನು. ಅವನು 22
ಕಂಬಗಳ ಮೇಲೆ ಕಮಲಾಲಂಕಾರವನ್ನು ಮಾಡಿ ಅವು
ಗಳ ಕೆಲಸವನ್ನು ತೀರಿಸಿದನು.
ಅನಂತರ ಅವನು ಸಮುದ್ರವೆನಿಸಿಕೊಳ್ಳುವ 23
ಒಂದು ಎರಕದ ಪಾತ್ರೆಯನ್ನು ಮಾಡಿದನು. ಅದರ
ಬಾಯಿ ಚಕ್ರಾಕಾರವಾಗಿಯೂ ಅಂಚಿನಿಂದ ಅಂಚಿಗೆ
ಹತ್ತು ಮೊಳವಾಗಿಯೂ ಇತ್ತು. ಅದರ ಎತ್ತರ ಐದು
ಮೊಳ, ಸುತ್ತಳತೆ ಮೂವತ್ತು ಮೊಳ. ಅದನ್ನು 24
ಎರಕಹೊಯ್ಯುವಾಗ ಅದರ ಅಂಚಿನ ಕೆಳಗೆ ಸುತ್ತಲೂ

1) ಪಾಠಾಂತರ: ನಾಲ್ಕು ಸಾಲು. 2) ಪಾಠಾಂತರ: ಚೌಕಟ್ಟುಗಳು. 3) ಪಾಠಾಂತರ: ಮಂಟಪಕ್ಕೂ.
ಪಾಠಾಂತರ: ಒಂದೊಂದರಂತೆ. 5) ಮೂಲಭಾಷೆಯ ಹೆಚ್ಚಾದ ಪ್ರತಿಗಳಲ್ಲಿ ಲೇಖಕನ ತಪ್ಪಿನಿಂದ ತಾಮ್ರದ 'ದಾಳಿಂಬಹಣ್ಣು' ಎಂಬ
ದ ಸ್ಥಳದಲ್ಲಿ 'ಕಂಬ' ಎಂಬ ಶಬ್ದವೂ 'ಕಂಬ' ಎಂಬ ಶಬ್ದದ ಸ್ಥಳದಲ್ಲಿ ತಾಮ್ರದ 'ದಾಳಿಂಬಹಣ್ಣು' ಎಂಬ ಶಬ್ದವೂ ಬಂದಿರುತ್ತದೆ.
ಯಾಕೀನ್ ಎಂಬದಕ್ಕೆ ಯೆಹೋವನು ಸ್ಥಿರಪಡಿಸುವನೆಂಬದಾಗಿಯೂ ಬೋವಜ್ ಎಂಬದಕ್ಕೆ ಆತನಲ್ಲಿ ಬಲವಿದೆ ಎಂಬದಾಗಿಯೂ ಅರ್ಥ.

ಹತ್ತತ್ತು ಮೊಳ ಉದ್ದವಾದ ಬಳ್ಳಿಗಳನ್ನು ಎರಡು
25 ಸಾಲಾಗಿ ಎರಕಹೊಯ್ದಿದ್ದನು. ಹನ್ನೆರಡು ಎರಕದ
ಹೋರಿಗಳು ಅದನ್ನು ಹೊತ್ತಿದ್ದವು. ಅವುಗಳಲ್ಲಿ
ಮೂರು ಉತ್ತರದಿಕ್ಕಿಗೂ ಮೂರು ಪಶ್ಚಿಮದಿಕ್ಕಿಗೂ
ಮೂರು ದಕ್ಷಿಣದಿಕ್ಕಿಗೂ ಮೂರು ಪೂರ್ವದಿಕ್ಕಿಗೂ
ಮುಖಮಾಡಿಕೊಂಡಿದ್ದವು. ಸಮುದ್ರವು ಅವುಗಳ
ಬೆನ್ನಿನ ಮೇಲೆ ಇತ್ತು; ಅವುಗಳ ಹಿಂಭಾಗವು ಒಳ
26 ಗಡೆ ಇತ್ತು. ಪಾತ್ರೆಯು ನಾಲ್ಕು ಬೆರಳು ದಪ್ಪ
ವಾಗಿತ್ತು. ಅದರ ಅಂಚು ಕಮಲಾಕಾರದ ಬಟ್ಟಲನ್ನು
ಹೋಲುತ್ತಿತ್ತು. ಅದು ಎರಡು ಸಾವಿರ ಬತ್
ನೀರನ್ನು ಹಿಡಿಯುವದು.
27 ಇದಲ್ಲದೆ ಅವನು ಹತ್ತು ತಾಮ್ರದ ಪೀಠಗಳನ್ನು
ಮಾಡಿದನು. ಪ್ರತಿಯೊಂದು ನಾಲ್ಕು ಮೊಳ ಉದ್ದ,
ನಾಲ್ಕು ಮೊಳ ಅಗಲ, ಮೂರು ಮೊಳ ಎತ್ತರ ಇತ್ತು.
28 ಅವುಗಳನ್ನು ಮಾಡಿದ ವಿಧಾನವು ಹೇಗಂದರೆ—
ಅವುಗಳಲ್ಲಿ ನಿಲುವುಪಟ್ಟಿಗಳಿಂದ ಕೂಡಿದ ಅಡ್ಡಪಟ್ಟಿ
29 ಗಳಿದ್ದವು. ಆ ಅಡ್ಡಪಟ್ಟಿಗಳ ಮೇಲೆ ಸಿಂಹ, ಹೋರಿ,
ಕೆರೂಬಿ ಇವುಗಳ ಚಿತ್ರಗಳಿದ್ದವು; ನಿಲುವುಪಟ್ಟಿಗಳಿಗೂ
ಇದೇ ಅಲಂಕಾರವಿತ್ತು; ಸಿಂಹ, ಹೋರಿ ಇವುಗಳ
30 ಮೇಲೂ ಕೆಳಗೂ ತೋರಣಚಿತ್ರಗಳಿದ್ದವು. ಪ್ರತಿ
ಯೊಂದು ಪೀಠಕ್ಕೆ ನಾಲ್ಕು ತಾಮ್ರದ ಗಾಲಿಗಳೂ
ಅಚ್ಚುಗಳೂ ಇದ್ದವು. ಪ್ರತಿಯೊಂದು ನಿಲುವುಪಟ್ಟಿಯ
ಮೇಲಣ ತುದಿಯಲ್ಲಿ ಎರಕಹೊಯ್ದ ತಾಮ್ರದ ಹಿಡಿ
ಗಳಿದ್ದವು; ಅವು ಪೀಠದ ಮೇಲಣ ಗಂಗಾಳವನ್ನು ಹಿಡಿ
ಯುತ್ತಿದ್ದವು. ಅವುಗಳ ಹೊರಮೈಗೆ ತೋರಣಚಿತ್ರ
31 ಗಳಿದ್ದವು. ಗಂಗಾಳವನ್ನು ಇಡುವದಕ್ಕೋಸ್ಕರ ಪೀಠದ
ಮೇಲಿನ ಭಾಗದಲ್ಲಿ ಒಂದು ಅಥವಾ ಒಂದುವರೆ ಮೊಳ
ಎತ್ತರವಾದ ಬಾಯಿತ್ತು. ಚಕ್ರಾಕಾರವಾಗಿರುವ ಈ
ಬಾಯಿಯು ಒಂದುವರೆ ಮೊಳ ಅಗಲವಾಗಿತ್ತು. ಇದರ
ಮೇಲೆಯೂ ಚಿತ್ರಗಳಿದ್ದವು. ಇದಕ್ಕೆ ಆಧಾರವಾದ ಅಡ್ಡ
ಪಟ್ಟಿಗಳು ಚಕ್ರಾಕಾರವಾಗಿರದೆ ಚತುಷ್ಕೋಣದವುಗಳಾ
32 ಗಿದ್ದವು. ಮೇಲೆ ಕಂಡ ನಾಲ್ಕು ಗಾಲಿಗಳು ಅಡ್ಡ
ಪಟ್ಟಿಗಳ ಕೆಳಗಿದ್ದವು. ಇರಸೂ ಪೀಠವೂ ಅಖಂಡ
ವಾಗಿದ್ದವು; ಪ್ರತಿಯೊಂದು ಗಾಲಿಯು ಒಂದುವರೆ
33 ಮೊಳ ಎತ್ತರವಿತ್ತು. ಅವು ಸಾಧಾರಣವಾದ ಬಂಡಿ
ಗಳ ಗಾಲಿಗಳಂತೆಯೇ ಇದ್ದವು. ಆದರೆ ಅವುಗಳ
ಕಟ್ಟು, ಅರ, ಕುಂಭ ಇವುಗಳೂ ಅವುಗಳಿಗೆ ಸಂಬಂಧ
34 ಪಟ್ಟ ಇರಸೂ ತಾಮ್ರದವುಗಳು. ಪ್ರತಿಯೊಂದು ಪೀಠದ
ತುದಿಯಲ್ಲಿದ್ದ ನಾಲ್ಕು ಹಿಡಿಗಳು ಪೀಠದೊಡನೆ ಅಖಂಡ
35 ವಾಗಿದ್ದವು. ಪೀಠದ ಮೇಲಣ ಭಾಗದಲ್ಲಿದ್ದ ಚಕ್ರಾ
ಕಾರವಾದ ಬಾಯಿಯು ಅರ್ಧ ಮೊಳ ಎತ್ತರವಾಗಿತ್ತು.
ಪೀಠದ ಮೇಲಿನ ಭಾಗದಲ್ಲಿದ್ದ ಹಿಡಿಗಳೂ ಅಡ್ಡಪಟ್ಟಿ
36 ಗಳೂ ಅದರೊಡನೆ ಅಖಂಡವಾಗಿದ್ದವು; ಅಡ್ಡಪಟ್ಟಿಗಳಿ
ಗೂ ಹಿಡಿಗಳ ಹೊರಮೈಗೂ ಸ್ಥಳವಿದ್ದ ಪ್ರಕಾರ ಕೆರೂಬಿ,
ಸಿಂಹ, ಖರ್ಜೂರವೃಕ್ಷ ಇವುಗಳ ಚಿತ್ರಗಳನ್ನೂ ಈ ಚಿತ್ರ
ಗಳ ಸುತ್ತಲೂ ತೋರಣಚಿತ್ರಗಳನ್ನೂ ಮಾಡಿದನು.
37 ಲೋಹಗಳನ್ನು ಒಂದೇ ಸಾರಿ ಕರಗಿಸಿ ಆ ಹತ್ತು
ಪೀಠಗಳನ್ನು ಮಾಡಿದನು. ಅವುಗಳ ಆಕಾರವೂ

ಅಳತೆಯೂ ಒಂದೇ. ಇದಲ್ಲದೆ ಅವನು 1)ನಾಲ್ವತ್ತ
ಬತ್ ನೀರು ಹಿಡಿಯುವ ನಾಲ್ಕು ಮೊಳ ಅಗಲವಾ
ಹತ್ತು ಗಂಗಾಳಗಳನ್ನು ಮಾಡಿ ಪ್ರತಿಯೊಂದು ಪೀಠ
ಮೇಲೆ ಒಂದೊಂದನ್ನು ಇಟ್ಟನು. ಐದು ಪೀಠಗಳನ
ದೇವಾಲಯದ ಬಲಗಡೆಯಲ್ಲಿಯೂ ಐದು ಪೀಠ
ಳನ್ನು ಎಡಗಡೆಯಲ್ಲಿಯೂ ಇಟ್ಟನು. ಸಮುದ್ರವೆನಿ
ಕೊಳ್ಳುವ ಪಾತ್ರೆಯನ್ನು ದೇವಾಲಯದ ಬಲಗ
ಯಲ್ಲಿ ಅಂದರೆ ಪ್ರಾಕಾರದ ಆಗ್ನೇಯದಿಕ್ಕಿನಲ್ಲಿರಿ
ದನು. ಇದಲ್ಲದೆ ಹೀರಾಮನು ಬಟ್ಟಲುಗಳನ್
ಸಲಿಕೆಗಳನ್ನೂ ಬೋಗುಣಿಗಳನ್ನೂ ಮಾಡಿದನು.
ಅವನು ಸೊಲೊಮೋನನ ಅಪ್ಪಣೆಯಂತೆ ದೇವ
ಲಯಕ್ಕೋಸ್ಕರ ಮಾಡಿದ ಒಟ್ಟು ಸಾಮಾನುಗಳ
ಯಾವವಂದರೆ—ಎರಡು ಕಂಬಗಳು, ಅವುಗಳ ಮೇ
ನ ಎರಡು ಕುಂಭಗಳು, ಕುಂಭಗಳ ಮೇಲೆ ಹಾಕುವ
ಕ್ಕೋಸ್ಕರ ಎರಡು ಜಾಲರಿಗಳು, ಜಾಲರಿಗಳ ಮೇ
ಎರಡೆರಡು ಸಾಲಾಗಿ ಸಿಕ್ಕಿಸುವದಕ್ಕೋಸ್ಕರ ತಾಮ್ರ
ನಾನೂರು ದಾಳಿಂಬಹಣ್ಣುಗಳು, ಹತ್ತು ಪೀಠಗಳ
ಅವುಗಳ ಮೇಲಿದ್ದ ಹತ್ತು ಗಂಗಾಳಗಳು, ಸಮುದ್ರ
ವೆನಿಸಿಕೊಳ್ಳುವ ಪಾತ್ರೆಯು, ಅದನ್ನು ಹೊರು
ಹನ್ನೆರಡು ಎರಕದ ಹೋರಿಗಳು, ಹಂಡೆ ಸಲಿ
ಬೋಗುಣಿಗಳು ಇವೇ. ಹೀರಾಮನು ಅರಸನಾ
ಸೊಲೊಮೋನನ ಅಪ್ಪಣೆಯಂತೆ ಯೆಹೋವನ ಆ
ಯಕ್ಕೋಸ್ಕರ ಈ ಎಲ್ಲಾ ಸಾಮಾನುಗಳನ್ನು ಒ
ಹಾಕಿದ ತಾಮ್ರದಿಂದ ಮಾಡಿದನು. ಅರಸನ
ಯೊರ್ದನಿನ ತಗ್ಗಿನಲ್ಲಿ ಸುಕ್ಕೋತಿಗೂ ಚಾರೆತಾನಿಗ
ಮಧ್ಯದಲ್ಲಿರುವ ಮಣ್ಣುನೆಲದಲ್ಲಿ ಎರಕಹೊಯ್ಸಿದನು
ಸೊಲೊಮೋನನು ತಾನು ಮಾಡಿಸಿದ ಸಾಮಾನುಗಳ
ಅನೇಕವಾಗಿದ್ದದರಿಂದ ಅವುಗಳ ತಾಮ್ರದ ತೂಕ
ಎಷ್ಟೆಂಬದನ್ನು ಗೊತ್ತುಮಾಡಲಾರದವನಾದನು.
ಸೊಲೊಮೋನನು ಯೆಹೋವನ ಆಲಯಕ್ಕೋ
ಸ್ಕರ ಮಾಡಿಸಿದ ಒಳಗಿನ ಸಾಮಾನುಗಳು ಯಾ
ವಂದರೆ—ಬಂಗಾರದ ಧೂಪವೇದಿಯು, ನೈವೇದ್ಯವಾ
ರೊಟ್ಟಿಗಳನ್ನಿಡುವದಕ್ಕಾಗಿ ಬಂಗಾರದ ಮೇಜು, ಮಹ
ಪರಿಶುದ್ಧಸ್ಥಳದ ಎದುರಿಗೆ ಎಡಗಡೆಯಲ್ಲಿಯೂ ಬ
ಗಡೆಯಲ್ಲಿಯೂ ಐದೈದರಂತೆ ಇಡುವದಕ್ಕೋಸ್ಕ
ಚೊಕ್ಕ ಬಂಗಾರದಿಂದ ಮಾಡಿದ ಪುಷ್ಪಾಲಂಕಾರವು
ಹತ್ತು ದೀಪಸ್ತಂಭಗಳು, ಬಂಗಾರದ ಹಣತೆತಂಡಸ
ಗಳು, ಚೊಕ್ಕ ಬಂಗಾರದ ಬಟ್ಟಲುಗಳು, ಕತ್ತರಿಗಳ
ಬೋಗುಣಿಗಳು, ಧೂಪಾರತಿಗಳು, ಅಗ್ಗಿಷ್ಟಿಗೆಗಳ
ದೇವಾಲಯದ ಮಹಾಪರಿಶುದ್ಧಸ್ಥಳವೆನಿಸಿಕೊಳ್ಳು
ಗರ್ಭಗೃಹದ ಕದಗಳಿಗೂ ಪರಿಶುದ್ಧಸ್ಥಳದ ಕದಗಳಿಗ
ಇರುವ ಬಂಗಾರದ ತಿರುಗಣಿಗಳು ಇವೇ. ಅರಸನಾ
ಸೊಲೊಮೋನನು ಯೆಹೋವನ ಆಲಯಕ್ಕೋಸ್ಕ
ಬೇಕಾದ ಎಲ್ಲಾ ಸಾಮಾನುಗಳನ್ನು ಸಿದ್ಧಮಾಡಿಸಿ
ನಂತರ ತನ್ನ ತಂದೆಯಾದ ದಾವೀದನು ಯೆಹೋ
ನಿಗೆ ಹರಕೆಹೊತ್ತು ಪ್ರತಿಷ್ಠಿಸಿದ ಬೆಳ್ಳಿ ಬಂಗಾರವನ್
ಸಾಮಾನುಗಳನ್ನೂ ದೇವಾಲಯದ ಭಂಡಾರಕ್ಕೆ ಸೇರಿ
ದನು.

1) ಅಂದರೆ ಸುಮಾರು ಮುನ್ನೂರ ಎಪ್ಪತ್ತೈದು ಗ್ಯಾಲನ್.

### ದೇವಾಲಯಪ್ರತಿಷ್ಠೆಯು.

ಆನಂತರ ಅರಸನಾದ ಸೊಲೊಮೋನನು ದಾವೀದ
ನಗರವಾದ ಚೀಯೋನಿನಿಂದ ಯೆಹೋವನ ಒಡಂಬಡಿ-
ಕೆಯ ಮಂಜೂಷವನ್ನು ಮೇಲೆ ತರುವದಕ್ಕಾಗಿ ಇಸ್ರಾ
ಯೇಲ್ಯರ ಹಿರಿಯರು ಕುಲಾಧಿಪತಿಗಳು ಇವರೇ
ಮೊದಲಾದ ಎಲ್ಲಾ ಇಸ್ರಾಯೇಲ್ ಪ್ರಧಾನಪುರುಷರನ್ನು
ಯೆರೂಸಲೇಮಿಗೆ ತನ್ನ ಹತ್ತಿರಕ್ಕೆ ಕರಿಸಿಕೊಂಡನು.
ಇಸ್ರಾಯೇಲ್ಯರೆಲ್ಲರೂ ಏಳನೆಯ ತಿಂಗಳಾದ ಆಶ್ವೀಜ
ಮಾಸದಲ್ಲಿ ಜಾತ್ರೆಗೋಸ್ಕರ ಅರಸನಾದ ಸೊಲೊಮೋ
ನನ ಬಳಿಗೆ ಕೂಡಿಬಂದರು. ಇಸ್ರಾಯೇಲ್ಯರ ಎಲ್ಲಾ
ಹಿರಿಯರು ಕೂಡಿಬಂದಿರಲಾಗಿ ಯಾಜಕರು ಯೆಹೋ
ವನ ಮಂಜೂಷವನ್ನು ಹೊತ್ತುಕೊಂಡರು. ಉಳಿದ ಯಾ
ಜಕರೂ ಲೇವಿಯರೂ ದೇವದರ್ಶನದ ಗುಡಾರ,
ಅದರಲ್ಲಿದ್ದ ಪರಿಶುದ್ಧವಸ್ತು ಇವುಗಳನ್ನು ಹೊತ್ತರು.
ಅರಸನಾದ ಸೊಲೊಮೋನನೂ ಅಲ್ಲಿ ಕೂಡಿ ಬಂದಿದ್ದ
ಎಲ್ಲಾ ಇಸ್ರಾಯೇಲ್ಯರೂ ಮಂಜೂಷದ ಮುಂದೆ
ಅಸಂಖ್ಯವಾದ ಕುರಿದನಗಳನ್ನು ಯಜ್ಞಮಾಡಿದರು.
ಯಾಜಕರು ಯೆಹೋವನ ಒಡಂಬಡಿಕೆಯ ಮಂಜೂ
ಷವನ್ನು ತೆಗೆದುಕೊಂಡು ಬಂದು ಮಹಾಪರಿಶುದ್ಧ
ಸ್ಥಳವೆನಿಸುವ ಗರ್ಭಗೃಹದಲ್ಲಿ ಕೆರೂಬಿಗಳ ರೆಕ್ಕೆ
ಗಳ ಕೆಳಗೆ ಅದಕ್ಕೆ ನೇಮಕವಾದ ಸ್ಥಳದಲ್ಲಿ ಇಟ್ಟರು.
ಕೆರೂಬಿಗಳ ರೆಕ್ಕೆಗಳು ಮಂಜೂಷವಿದ್ದ ಸ್ಥಳದ ಮೇಲೆ
ಚಾಚಿದವುಗಳಾಗಿದ್ದದರಿಂದ ಮಂಜೂಷವೂ ಅದರ
ಕೋಲುಗಳೂ ಪೂರ್ಣವಾಗಿ ಅವುಗಳ ನೆರಳಿನಲ್ಲಿ
ದ್ದವು. ಆ ಕೋಲುಗಳು ಬಹಳ ಉದ್ದವಾಗಿದ್ದ
ದರಿಂದ ಅವುಗಳ ತುದಿಗಳು ಗರ್ಭಗೃಹದ ಎದುರಿ
ನಲ್ಲಿರುವ ಪರಿಶುದ್ಧಸ್ಥಳದಲ್ಲಿ ನಿಂತವರಿಗೆ ಕಾಣಿಸಿದರೂ
ಹೊರಗೆ ನಿಂತವರಿಗೆ ಕಾಣಿಸುತ್ತಿರಲಿಲ್ಲ. ಅವು ಇಂದಿನ
ವರೆಗೂ ಅಲ್ಲೇ ಇರುತ್ತವೆ. ಮಂಜೂಷದಲ್ಲಿ ಎರಡು
ಕಲ್ಲಿನ ಹಲಿಗೆಗಳ ಹೊರತಾಗಿ ಬೇರೇನೂ ಇರಲಿಲ್ಲ.
ಯೆಹೋವನು ಐಗುಪ್ತದಿಂದ ಬಂದ ಇಸ್ರಾಯೇಲ್ಯ
ರೊಡನೆ ಹೋರೇಬ್ ಬೆಟ್ಟದ ಬಳಿಯಲ್ಲಿ ಒಡಂಬಡಿಕೆ
ಮಾಡಿಕೊಂಡ ಮೇಲೆ ಮೋಶೆಯು ಅವುಗಳನ್ನು ಅದ
ರಲ್ಲಿಟ್ಟಿದ್ದನು. ಯಾಜಕರು ಪರಿಶುದ್ಧಸ್ಥಳದಿಂದ
ಹೊರಗೆ ಬಂದ ಕೂಡಲೆ ಮೇಘವು ಯೆಹೋವನ
ಆಲಯವನ್ನು ತುಂಬಿಕೊಂಡಿತು. ಯೆಹೋವನ
ತೇಜಸ್ಸಿನಿಂದ ವ್ಯಾಪ್ತವಾಗಿದ್ದ ಮೇಘವು ಆಲಯವನ್ನು
ತುಂಬಿಕೊಂಡದರಿಂದ ಯಾಜಕರು ಅಲ್ಲಿ ನಿಂತು ಸೇವೆ
ಮಾಡಲಾರದವರಾದರು.

ತರುವಾಯ ಸೊಲೊಮೋನನು — ಯೆಹೋವನೇ,
ಕಾರ್ಗತ್ತಲಲ್ಲಿ ವಾಸಿಸುತ್ತೇನೆಂದು ಹೇಳಿದ್ದೀ; ನಾನು
ನಿನಗೋಸ್ಕರ ಒಂದು ಮಂದಿರವನ್ನು ಕಟ್ಟಿಸಿದ್ದೇನೆ;
ಅದು ನಿನಗೆ ಶಾಶ್ವತವಾದ ವಾಸಸ್ಥಳವಾಗಿರಲಿ ಎಂದು
ಪ್ರಾರ್ಥನೆಮಾಡಿದನು.

ಇದಾದ ಮೇಲೆ ಅರಸನು ಎದ್ದುನಿಂತಿದ್ದ ಇಸ್ರಾ
ಯೇಲ್ ಸಮೂಹದವರ ಕಡೆಗೆ ತಿರುಗಿಕೊಂಡು ಅವ
ರನ್ನು ಆಶೀರ್ವದಿಸಿ— ಇಸ್ರಾಯೇಲ್ ದೇವರಾದ ಯೆ
ಹೋವನಿಗೆ ಸ್ತೋತ್ರವಾಗಲಿ; ನನ್ನ ತಂದೆಯಾದ ದಾವೀ
ದನಿಗೆ ಆತನ ಬಾಯಿ ನುಡಿದದ್ದನ್ನು ಆತನ ಹಸ್ತವು
ಈಗ ನೆರವೇರಿಸಿಯದೆ. ಆತನು—ನಾನು ನನ್ನ ಜನ 16
ರಾದ ಇಸ್ರಾಯೇಲ್ಯರನ್ನು ಐಗುಪ್ತದಿಂದ ಬರಮಾಡಿ
ದಂದಿನಿಂದ ನನ್ನ ಪ್ರಜೆಗಳಾದ ಇಸ್ರಾಯೇಲ್ಯರನ್ನು
ಆಳುವದಕ್ಕೋಸ್ಕರ ದಾವೀದನನ್ನು ಆರಿಸಿಕೊಂಡೆನೇ
ಹೊರತು ನನ್ನ ನಾಮದ ನಿವಾಸಕ್ಕೋಸ್ಕರ ಆಲಯ
ಸ್ಥಾನವನ್ನಾಗಿ ಇಸ್ರಾಯೇಲ್ ಕುಲಗಳ ಯಾವ ಪಟ್ಟಣ
ವನ್ನೂ ಆರಿಸಿಕೊಳ್ಳಲಿಲ್ಲ ಎಂದು ಹೇಳಿದ್ದನು. ನನ್ನ 17
ತಂದೆಯಾದ ದಾವೀದನು ಇಸ್ರಾಯೇಲ್ ದೇವರಾದ
ಯೆಹೋವನ ಹೆಸರಿಗೋಸ್ಕರ ಆಲಯವನ್ನು ಕಟ್ಟ
ಬೇಕೆಂದು ಮನಸ್ಸುಮಾಡಿದಾಗ ಆತನು ಅವನಿಗೆ— 18
ನೀನು ನನ್ನ ಹೆಸರಿಗೋಸ್ಕರ ಒಂದು ಮನೆಯನ್ನು
ಕಟ್ಟುವದಕ್ಕೆ ಮನಸ್ಸುಮಾಡಿದ್ದು ಒಳ್ಳೇದೇ ಸರಿ.
ಆದರೂ ನೀನು ಅದನ್ನು ಕಟ್ಟಬಾರದು; ನಿನ್ನಿಂದ 19
ಹುಟ್ಟುವ ಮಗನು ನನ್ನ ಹೆಸರಿಗಾಗಿ ಒಂದು ಆಲಯ
ವನ್ನು ಕಟ್ಟಬೇಕು ಎಂದು ಹೇಳಿದನು. ಯೆಹೋವನು 20
ತಾನು ಕೊಟ್ಟ ಮಾತನ್ನು ನೆರವೇರಿಸಿದನು. ಆತನ
ವಾಗ್ದಾನದಂತೆ ನಾನು ನನ್ನ ತಂದೆಯಾದ ದಾವೀದ
ನಿಗೆ ಬದಲಾಗಿ ಇಸ್ರಾಯೇಲ್ ಸಿಂಹಾಸನದ ಮೇಲೆ
ಅರಸನಾಗಿ ಕೂತುಕೊಂಡು ಇಸ್ರಾಯೇಲ್ ದೇವ
ರಾದ ಯೆಹೋವನ ಹೆಸರಿಗೋಸ್ಕರ ಈ ಆಲಯ
ವನ್ನು ಕಟ್ಟಿದೆನು; ಇದಲ್ಲದೆ ಐಗುಪ್ತದಿಂದ ಬಿಡು 21
ಗಡೆಹೊಂದಿದ ನಮ್ಮ ಪಿತೃಗಳಿಗೆ ಯೆಹೋವನಿಂದ
ದೊರಕಿದ ನಿಬಂಧನಶಾಸನಗಳಿರುವ ಮಂಜೂಷಕ್ಕೆ
ಸ್ಥಳವನ್ನು ಪ್ರತ್ಯೇಕಿಸಿ ಅಲ್ಲಿ ಅದನ್ನು ಇಟ್ಟೆನು ಎಂದು
ಹೇಳಿದನು.

ತರುವಾಯ ಸೊಲೊಮೋನನು ಎಲ್ಲಾ ಇಸ್ರಾ 22
ಯೇಲ್ಯರ ಎದುರಿನಲ್ಲಿ ಯೆಹೋವನ ಯಜ್ಞವೇದಿಯ
ಮುಂದೆ ನಿಂತು ಆಕಾಶದ ಕಡೆಗೆ ಕೈಗಳನ್ನೆತ್ತಿ ಹೀಗೆ
ಪ್ರಾರ್ಥಿಸಿದನು — ಇಸ್ರಾಯೇಲ್ ದೇವರಾದ ಯೆಹೋ 23
ವನೇ, ಭೂಲೋಕದಲ್ಲಿಯೂ ಪರಲೋಕದಲ್ಲಿಯೂ
ನಿನಗೆ ಸಮಾನನಾದ ದೇವರಿಲ್ಲ; ಪೂರ್ಣಮನಸ್ಸಿ
ನಿಂದ ನಿನಗೆ ನಡೆದುಕೊಳ್ಳುವಂಥ ಸೇವಕರ ವಿಷಯ
ದಲ್ಲಿ ನೀನು ನಿನ್ನ ಒಡಂಬಡಿಕೆಯನ್ನೂ ಕೃಪೆಯನ್ನೂ
ನೆರವೇರಿಸುವವನು. ನಿನ್ನ ಸೇವಕನೂ ನನ್ನ ತಂದೆಯೂ 24
ಆದ ದಾವೀದನಿಗೆ ಕೊಟ್ಟ ಮಾತನ್ನು ಕೈಕೊಂಡಿ; ನಿನ್ನ
ಬಾಯಿ ನುಡಿದದ್ದನ್ನು ನಿನ್ನ ಹಸ್ತವು ಈಗ ನೆರವೇರಿ
ಸಿತು. ಇಸ್ರಾಯೇಲ್ ದೇವರಾದ ಯೆಹೋವನೇ, ನೀನು 25
ನನ್ನ ತಂದೆಯಾದ ದಾವೀದನಿಗೆ— ನಿನ್ನ ಸಂತಾನ
ದವರು ನಿನ್ನಂತೆ ಜಾಗರೂಕತೆಯಿಂದ ನನ್ನ ಮಾರ್ಗ
ದಲ್ಲೇ ನಡೆದುಕೊಳ್ಳುವದಾದರೆ ಅವರು ತಪ್ಪದೆ ಇಸ್ರಾ
ಯೇಲ್ ಸಿಂಹಾಸನದ ಮೇಲೆ ಕೂತುಕೊಳ್ಳುವಂತೆ
ಮಾಡುವೆನು ಎಂಬದಾಗಿ ವಾಗ್ದಾನಮಾಡಿದಿಯಲ್ಲಾ;
ಅದನ್ನು ನೆರವೇರಿಸು. ಇಸ್ರಾಯೇಲ್ ದೇವರೇ, ನೀನು 26
ನಿನ್ನ ಸೇವಕನೂ ನನ್ನ ತಂದೆಯೂ ಆದ ದಾವೀದನಿಗೆ
ನುಡಿದದ್ದೆಲ್ಲವೂ ಸಾರ್ಥಕವಾಗಲಿ.

ದೇವರು ನಿಜವಾಗಿ ಭೂಲೋಕದಲ್ಲಿ ವಾಸಿಸು 27
ವನೋ? ಆಕಾಶವೂ ಉನ್ನತೋನ್ನತವಾದ ಆಕಾ
ಶವೂ ನಿನ್ನ ವಾಸಕ್ಕೆ ಸಾಲವು; ಹೀಗಿರುವಲ್ಲಿ ನಾನು ಕಟ್ಟಿ
ಸಿದ ಈ ಮಂದಿರವು ಹೇಗೆ ಸಾಕಾದೀತು! ಆದರೂ 28

ನನ್ನ ದೇವರೇ, ಯೆಹೋವನೇ, ನಿನ್ನ ಸೇವಕನ
ಪ್ರಾರ್ಥನೆಗೂ ವಿಜ್ಞಾಪನೆಗೂ ಕಿವಿಗೊಡು; ಈಹೊತ್ತು
ನಿನ್ನನ್ನು ಪ್ರಾರ್ಥಿಸುತ್ತಿರುವ ನಿನ್ನ ಸೇವಕನ ಮೊರೆ
29 ಯನ್ನು ಲಾಲಿಸು. ಈ ಸ್ಥಳವನ್ನು ಕುರಿತು—
ನನ್ನ ನಾಮಪ್ರಭಾವವು ಇಲ್ಲಿ ವಾಸಿಸುವದು ಎಂದು
ಹೇಳಿದವನೇ, ನಿನ್ನ ಕಟಾಕ್ಷವು ಹಗಲಿರುಳು ಈ
ಮಂದಿರದ ಮೇಲಿರಲಿ; ಇಲ್ಲಿ ನಿನ್ನ ಸೇವಕನು ನಿನ್ನ
ನ್ನು ಪ್ರಾರ್ಥಿಸುವಾಗೆಲ್ಲಾ ಅವನಿಗೆ ಸದುತ್ತರವನ್ನು
30 ದಯಪಾಲಿಸು. ನಿನ್ನ ಸೇವಕನಾದ ನಾನಾಗಲಿ
ನಿನ್ನ ಪ್ರಜೆಗಳಾದ ಇಸ್ರಾಯೇಲ್ಯರಾಗಲಿ ಈ ಸ್ಥಳದ
ಕಡೆಗೆ ತಿರುಗಿಕೊಂಡು ನಿನ್ನನ್ನು ಪ್ರಾರ್ಥಿಸುವದಾದರೆ
ನಿನ್ನ ನಿವಾಸವಾಗಿರುವ ಪರಲೋಕದಿಂದ ನಮ್ಮ ಬಿನ್ನ
ಹವನ್ನು ಕೇಳಿ ಕ್ಷಮೆಯುನ್ನು ಅನುಗ್ರಹಿಸು.
31 ನೆರೆಯವನಿಗೆ ವಿರೋಧವಾಗಿ ತಪ್ಪುಮಾಡಿದವನೆಂಬ
ಸಂಶಯಕ್ಕೆ ಗುರಿಯಾದ ಮನುಷ್ಯನು ತಾನು ನಿರ್ದೋ
ಷಿಯೆಂದು ಪ್ರಮಾಣಮಾಡಬೇಕಾದಾಗ ಅಂಥವನು
ಈ ಆಲಯಕ್ಕೆ ಬಂದು ನಿನ್ನ ವೇದಿಯ ಮುಂದೆ
32 ನಿಂತು ಪ್ರಮಾಣಮಾಡುವದಾದರೆ ಪರಲೋಕದಲ್ಲಿ
ರುವ ನೀನು ಅದನ್ನು ಕೇಳಿ ನಿನ್ನ ಸೇವಕರ ವ್ಯಾಜ್ಯ
ವನ್ನು ತೀರಿಸು; ದುಷ್ಟನಿಗೆ ಅವನ ದುಷ್ಟತ್ವವನ್ನು
ಅವನ ತಲೆಯ ಮೇಲೆಯೇ ಬರಮಾಡಿ ಅವನು ಅಪ
ರಾಧಿಯೆಂದೂ ನೀತಿವಂತನಿಗೆ ಅವನ ನೀತಿಯ ಫಲ
ವನ್ನು ಅನುಗ್ರಹಿಸಿ ಅವನು ನೀತಿವಂತನೆಂದೂ ತೋರಿಸಿ
ಕೊಡು.
33 ತಮ್ಮ ಪಾಪಗಳ ಸಲುವಾಗಿ ಶತ್ರುಗಳಿಂದ ತಗ್ಗಿ
ಸಲ್ಪಟ್ಟ ನಿನ್ನ ಪ್ರಜೆಗಳಾದ ಇಸ್ರಾಯೇಲ್ಯರು ನಿನ್ನ
ಕಡೆಗೆ ತಿರುಗಿಕೊಂಡು ನಿನ್ನ ನಾಮವನ್ನು ಎತ್ತಿ
ಈ ಆಲಯದಲ್ಲಿ ನಿನಗೆ ವಿಜ್ಞಾಪನೆಯನ್ನೂ ಪ್ರಾರ್ಥ
34 ನೆಯನ್ನೂ ಮಾಡುವದಾದರೆ ಪರಲೋಕದಲ್ಲಿರುವ
ನೀನು ಲಾಲಿಸಿ ಅವರ ಪಾಪಗಳನ್ನು ಕ್ಷಮಿಸಿ ಅವರ
ಪಿತೃಗಳಿಗೆ ನೀನು ಕೊಟ್ಟ ದೇಶಕ್ಕೆ ಅವರನ್ನು ತಿರಿಗಿ
ಬರಮಾಡು.
35 ಅವರ ಪಾಪಗಳ ನಿಮಿತ್ತವಾಗಿ ಆಕಾಶವು ಮಳೆ
ಗರಿಯದಂತೆ ಮುಚ್ಚಿಕೊಂಡಾಗ ಅವರು ತಮ್ಮ ಪಾಪ
ಗಳನ್ನು ಬಿಟ್ಟು ತಮ್ಮನ್ನು ತಗ್ಗಿಸಿದವನು ನೀನೇ ಎಂದು
ನಿನ್ನ ನಾಮವನ್ನು ಎತ್ತಿ ಈ ಆಲಯದ ಕಡೆಗೆ ತಿರುಗಿ
36 ಕೊಂಡು ಪ್ರಾರ್ಥಿಸುವದಾದರೆ ಪರಲೋಕದಲ್ಲಿರುವ
ನೀನು ಲಾಲಿಸಿ ನಿನ್ನ ಸೇವಕರೂ ಪ್ರಜೆಗಳೂ ಆದ
ಇಸ್ರಾಯೇಲ್ಯರ ಪಾಪಗಳನ್ನು ಕ್ಷಮಿಸಿ ಅವರು ನಡೆ
ಯ ಬೇಕಾದ ಮಾರ್ಗವನ್ನು ತೋರಿಸಿ ನಿನ್ನ ಪ್ರಜೆಗೆ
ಸ್ವಾಸ್ತ್ಯವಾಗಿ ಕೊಟ್ಟ ದೇಶಕ್ಕೆ ಮಳೆಯನ್ನು ಅನು
ಗ್ರಹಿಸು.
37 ದೇಶಕ್ಕೆ ಕ್ಷಾಮ, ಘೋರವ್ಯಾಧಿ, ಬಿಸಿಗಾಳಿ, ಬೂ
ದಿ, ಮಿಡಿತೆ, ಜಿಟ್ಟೇಹುಳ, ಪಟ್ಟಣಗಳಿಗೆ ಶತ್ರುಗಳ
ಮುತ್ತಿಗೆ, ಅಂತು ಯಾವ ಉಪದ್ರವದಿಂದಾಗಲಿ ವ್ಯಾಧಿ
38 ಯಿಂದಾಗಲಿ ಬಾಧೆಯುಂಟಾಗುವಲ್ಲಿ ಮನಸ್ಸಾಕ್ಷಿಪೀ
ಡಿತರಾದ ಎಲ್ಲಾ ಇಸ್ರಾಯೇಲ್ಯರಾಗಲಿ ಅವರಲ್ಲಿ ಒಬ್ಬ
ನಾಗಲಿ ಈ ಆಲಯದ ಕಡೆಗೆ ಕೈಯೆತ್ತಿ ನಿನಗೆ ಪ್ರಾರ್ಥ
39 ನೆಯನ್ನೂ ವಿಜ್ಞಾಪನೆಯನ್ನೂ ಮಾಡುವದಾದರೆ ಮ
ನುಷ್ಯರ ಹೃದಯಗಳನ್ನು ಬಲ್ಲಂಥ ನೀನು ನಿನ್ನ ನಿವಾ

ಸವಾಗಿರುವ ಪರಲೋಕದಿಂದ ಲಾಲಿಸಿ ಅವರಿಗೆ ಪಾ
ಪರಿಹಾರವನ್ನು ಅನುಗ್ರಹಿಸು; ನೀನೊಬ್ಬನೇ ಎಲ್ಲಾ
ಮನುಷ್ಯರ ಹೃದಯಗಳನ್ನು ಬಲ್ಲವನಾಗಿರುವದರಿಂ
ಪ್ರತಿಯೊಬ್ಬನಿಗೂ ಅವನವನು ಹಿಡಿಯುವ ಮಾರ್ಗಕ
ತಕ್ಕ ಹಾಗೆ ಫಲವನ್ನು ಕೊಡು. ಆಗ ನಮ್ಮ ಪಿತ
ಗಳಿಗೆ ನೀನು ಕೊಟ್ಟ ದೇಶದಲ್ಲಿ ಅವರು ವಾಸಿಸು
ಕಾಲದಲ್ಲೆಲ್ಲಾ ನಿನ್ನಲ್ಲಿ ಭಯಭಕ್ತಿಯುಳ್ಳವರಾಗಿರ
ವರು.
ನಿನ್ನ ನಾಮಮಹತ್ತು, ಭುಜಬಲ, ಶಿಕ್ಷಾಹಸ್
ಇವುಗಳ ವರ್ತಮಾನವು ಪರರಾಜ್ಯಗಳವರಿಗೂ ಗೊ
ತ್ತಾಗುವದು. ನಿನ್ನ ಪ್ರಜೆಗಳಾದ ಇಸ್ರಾಯೇಲ್ಯರಿ
ಸೇರದವನಾದ ಇಂಥ ಒಬ್ಬ ಪರದೇಶಿಯು ನಿನ್ನ ನಾಮ
ಕ್ಕೋಸ್ಕರ ದೂರದೇಶದಿಂದ ಬಂದು ಈ ಆಲಯ
ಮುಂದೆ ನಿಂತು ನಿನ್ನನ್ನು ಪ್ರಾರ್ಥಿಸುವದಾದರೆ ನಿನ್
ನಿವಾಸವಾಗಿರುವ ಪರಲೋಕದಿಂದ ಅವನ ಪ್ರಾರ್ಥ
ಯನ್ನು ಕೇಳಿ ಅವನು ಬೇಡಿಕೊಂಡದ್ದನ್ನು ಅನುಗ್ರ
ಸು; ಆಗ ಲೋಕದ ಎಲ್ಲಾ ಜನರೂ ನಿನ್ನ ನಾಮ
ಮಹತ್ತನ್ನು ತಿಳಿದು ನಿನ್ನ ಜನರಾದ ಇಸ್ರಾಯೇಲ
ರಂತೆ ನಿನ್ನಲ್ಲಿ ಭಯಭಕ್ತಿಯುಳ್ಳವರಾಗಿ ನಾನು ನಿನ್
ಹೆಸರಿಗಾಗಿ ಈ ಆಲಯವನ್ನು ಕಟ್ಟಿಸಿದ್ದೇನೆಂದು ತಿ
ದುಕೊಳ್ಳುವರು.
ನೀನು ನಿನ್ನ ಜನರನ್ನು ಶತ್ರುಗಳೊಡನೆ ಯುದ್ಧ
ಮಾಡುವದಕ್ಕೋಸ್ಕರ ಎಲ್ಲಿಗಾದರೂ ಕಳುಹಿಸಿದಾಗ
ಅವರು ಅಲ್ಲಿಂದ ನೀನು ಆರಿಸಿಕೊಂಡ ಪಟ್ಟಣದ ಕ
ಗೂ ನಾನು ನಿನ್ನ ಹೆಸರಿಗಾಗಿ ಕಟ್ಟಿಸಿದ ಈ ಆಲಯ
ಕಡೆಗೂ ತಿರುಗಿಕೊಂಡು ಯೆಹೋವನಾದ ನಿನ್ನನ್
ಪ್ರಾರ್ಥಿಸುವದಾದರೆ ಪರಲೋಕದಲ್ಲಿರುವ ನೀನು ಅ
ರ ವಿಜ್ಞಾಪನೆಯನ್ನೂ ಪ್ರಾರ್ಥನೆಯನ್ನೂ ಕೇಳಿ ಅವ
ನ್ಯಾಯವನ್ನು ಸ್ಥಾಪಿಸು.
ಅವರು ನಿನಗೆ ವಿರುದ್ಧವಾಗಿ ಪಾಪಮಾಡಾರು
ಪಾಪಮಾಡದ ಮನುಷ್ಯನು ಒಬ್ಬನೂ ಇಲ್ಲವಲ್ಲಾ
ನೀನು ಅವರ ಮೇಲೆ ಕೋಪಗೊಂಡು ಅವರನ್ನು ಶತ್ರು
ಗಳ ಕೈಗೆ ಒಪ್ಪಿಸಿದಾಗ ಮತ್ತು ಆ ಶತ್ರುಗಳು ಅ
ರನ್ನು ಸೆರೆಹಿಡಿದು ದೂರದಲ್ಲಾಗಲಿ ಸಮೀಪದಲ್ಲಾ
ಗಲಿ ಇರುವ ತಮ್ಮ ದೇಶಕ್ಕೆ ಅವರನ್ನು ಒಯ್ದಾಗ
ತಾವು ಸೆರೆಯವರಾಗಿ ಬಿದ್ದುಕೊಂಡಿರುವ ದೇಶದಲ್ಲಿ
ಅವರು ಪಶ್ಚಾತ್ತಾಪಪಟ್ಟು ನಿನ್ನ ಅನುಗ್ರಹದಿಂದ ತಮ್
ಪಿತೃಗಳಿಗೆ ದೊರಕಿದ ದೇಶದ ಕಡೆಗೂ ನೀನು ಆರಿಸಿ
ಕೊಂಡ ಪಟ್ಟಣದ ಕಡೆಗೂ ನಾನು ನಿನ್ನ ಹೆಸರಿಗೋಸ್ಕ
ರ ಕಟ್ಟಿಸಿದ ಈ ಆಲಯದ ಕಡೆಗೂ ತಿರುಗಿಕೊಂಡು—
ನಾವು ನಿನ್ನ ಆಜ್ಞೆಗಳನ್ನು ಮೀರಿ ಪಾಪಮಾಡಿ
ದ್ರೋಹಿಗಳಾದೆವು ಎಂದು ಒಪ್ಪಿ ಪೂರ್ಣಮನಸ್ಸಿ
ನಿಂದಲೂ ಪೂರ್ಣಪ್ರಾಣದಿಂದಲೂ ನಿನ್ನನ್ನು ಪ್ರಾರ್ಥಿ
ಸುವದಾದರೆ ನೀನು ನಿನ್ನ ನಿವಾಸವಾಗಿರುವ ಪರಲೋ
ಕದಿಂದ ಅವರ ವಿಜ್ಞಾಪನೆಯನ್ನೂ ಪ್ರಾರ್ಥನೆಯನ್ನೂ
ಲಾಲಿಸಿ ಅವರ ನ್ಯಾಯವನ್ನು ಸ್ಥಾಪಿಸು. ಕಬ್ಬಿಣ
ಕರಗಿಸುವ ಕುಲಿಮೆಯೋಪಾದಿಯಲ್ಲಿದ್ದ ಐಗುಪ್ತ
ದೇಶದಿಂದ ನೀನು ಬಿಡಿಸಿದ ಈ ಜನರು ನಿನ್ನ ಸ್ವಕೀಯ
ಜನರಾಗಿದ್ದಾರೆಂಬದನ್ನು ನೆನಸಿ ಅವರು ನಿನಗೆ ವಿರುದ್ಧ
ವಾಗಿ ಮಾಡಿದ ಎಲ್ಲಾ ಅಪರಾಧದ್ರೋಹಗಳನ್ನು ಕ್ಷ

ಮಿಸಿ ಅವರನ್ನು ಸೆರೆಂಹೊಯ್ದವರ ಮನಸ್ಸಿನಲ್ಲಿ
2 ಅವರ ಮೇಲೆ ದಯೆಹುಟ್ಟಿಸು. ನಿನ್ನ ಸೇವಕನ ಮೇಲೆ
ಯೂ ಪ್ರಜೆಗಳಾದ ಇಸ್ರಾಯೇಲ್ಯರ ಮೇಲೆಯೂ
ಕಟಾಕ್ಷವಿಟ್ಟು ಅವರು ಪ್ರಾರ್ಥಿಸುವಾಗೆಲ್ಲಾ ಅವರ
3 ವಿಜ್ಞಾಪನೆಗಳನ್ನು ಲಾಲಿಸು. ಕರ್ತನೇ, ಯೆಹೋ
ವನೇ, ನೀನು ನಮ್ಮ ಪಿತೃಗಳನ್ನು ಐಗುಪ್ತದೇಶದಿಂದ
ಬಿಡಿಸುವಾಗ ಅವರಿಗೆ—ನಾನು ನಿಮ್ಮನ್ನು ಎಲ್ಲಾ
ಜನಾಂಗಗಳೊಳಗಿಂದ ಪ್ರತ್ಯೇಕಿಸಿ ಸ್ವಕೀಯಜನರ
ನ್ನಾಗಿ ಮಾಡಿಕೊಂಡಿದ್ದೇನೆಂದು ಮೋಶೆಯ ಮುಖಾಂತ
ರವಾಗಿ ಹೇಳಿದಿಯಲ್ಲವೇ ಎಂದು ದೇವರನ್ನು ಪ್ರಾರ್ಥಿ
ಸಿದನು.

4 ಆಕಾಶದ ಕಡೆಗೆ ಕೈಯೆತ್ತಿ ಯೆಹೋವನ ಯಜ್ಞ
ವೇದಿಯ ಮುಂದೆ ಮೊಣಕಾಲೂರಿದ್ದ ಸೊಲೊಮೋ
ನನು ಈ ಪ್ರಕಾರವಾಗಿ ಯೆಹೋವನನ್ನು ಪ್ರಾರ್ಥಿಸಿ
5 ದನಂತರ ಎದ್ದು ನಿಂತು ಇಸ್ರಾಯೇಲ್ ಸರ್ವಸಮೂ
ಹದವರನ್ನು ಆಶೀರ್ವದಿಸಿ ಗಟ್ಟಿಯಾಗಿ ಹೇಳಿದ್ದೇ
6 ನಂದರೆ—ತಾನು ವಾಗ್ದಾನಮಾಡಿದಂತೆ ತನ್ನ ಪ್ರಜೆ
ಗಳಾದ ಇಸ್ರಾಯೇಲ್ಯರಿಗೆ ವಿಶ್ರಾಂತಿಯನ್ನು ಅನು
ಗ್ರಹಿಸಿದ ಯೆಹೋವನಿಗೆ ಸ್ತೋತ್ರವಾಗಲಿ. ಆತನು
ತನ್ನ ಸೇವಕನಾದ ಮೋಶೆಯ ಮುಖಾಂತರವಾಗಿ
ಮಾಡಿದ ಅತಿಶ್ರೇಷ್ಠವಾಗ್ದಾನಗಳಲ್ಲಿ ಒಂದೂ ತಪ್ಪಿ
7 ಹೋಗಲಿಲ್ಲ. ನಮ್ಮ ದೇವರಾದ ಯೆಹೋವನು ನಮ್ಮ
ಪಿತೃಗಳ ಸಂಗಡ ಇದ್ದ ಹಾಗೆ ನಮ್ಮ ಸಂಗಡಲೂ
ಇರಲಿ; ಆತನು ನಮ್ಮನ್ನು ಕೈಬಿಡದಿರಲಿ, ತಳ್ಳದಿರಲಿ.
8 ನಾವು ನಮ್ಮ ಪಿತೃಗಳಿಗೆ ಕೊಡಲ್ಪಟ್ಟ ಆಜ್ಞಾನಿಯಮ
ವಿಧಿಗಳನ್ನು ಕೈಕೊಂಡು ಆತನ ಮಾರ್ಗದಲ್ಲಿ ನಡೆ
ಯುವಂತೆ ನಮ್ಮ ಮನಸ್ಸನ್ನು ತನ್ನ ಕಡೆಗೆ ತಿರುಗಿಸಿ
9 ಕೊಳ್ಳಲಿ. ನಾನು ಈಗ ನಮ್ಮ ದೇವರಾದ ಯೆಹೋವ
ನಿಗೆ ಮಾಡಿದ ಪ್ರಾರ್ಥನೆಯು ಹಗಲಿರುಳು ಆತನ
0 ಜ್ಞಾಪಕದಲ್ಲಿರಲಿ. ಭೂಲೋಕದ ಜನರೆಲ್ಲರೂ ಯೆ
ಹೋವನ ಹೊರತು ಬೇರೆ ದೇವರಿಲ್ಲವೆಂಬದನ್ನು ತಿಳಿ
ದುಕೊಳ್ಳುವಂತೆ ಆತನು ಅವಶ್ಯವಿರುವಾಗೆಲ್ಲಾ ತನ್ನ
ಸೇವಕನ ಮತ್ತು ಪ್ರಜೆಗಳಾದ ಇಸ್ರಾಯೇಲ್ಯರ ನ್ಯಾ
1 ಯವನ್ನು ಸ್ಥಾಪಿಸುತ್ತಾ ಬರಲಿ. ನೀವಾದರೋ ಈಗಿ
ನಂತೆ ಮುಂದೆಯೂ ನಮ್ಮ ದೇವರಾದ ಯೆಹೋವ
ನಲ್ಲಿ ಪೂರ್ಣಭಯಭಕ್ತಿಯುಳ್ಳವರಾಗಿ ಆತನ ವಿಧಿ
ಗಳನ್ನು ಅನುಸರಿಸಿ ಆತನ ಆಜ್ಞೆಗಳನ್ನು ಕೈಕೊಳ್ಳಿರಿ
ಎಂಬದೇ.

2 ಅರಸನೂ ಎಲ್ಲಾ ಇಸ್ರಾಯೇಲ್ಯರೂ ಯೆಹೋವ
3 ನ ಸನ್ನಿಧಿಯಲ್ಲಿ ಯಜ್ಞಮಾಡಿದರು. ಸೊಲೊಮೋನ
ನು ಯೆಹೋವನಿಗೋಸ್ಕರ ಮಾಡಿದ ಸಮಾಧಾನ
ಯಜ್ಞಕ್ಕಾಗಿ ವಧಿಸಿದ ಹೋರಿಗಳು ಇಪ್ಪತ್ತೆರಡು ಸಾವಿ
ರ; ಕುರಿಗಳು ಲಕ್ಷದ ಇಪ್ಪತ್ತುಸಾವಿರ. ಈ ಪ್ರಕಾರ
ಅರಸನೂ ಎಲ್ಲಾ ಇಸ್ರಾಯೇಲ್ಯರೂ ಯೆಹೋವನ
4 ಆಲಯವನ್ನು ಪ್ರತಿಷ್ಠಿಸಿದರು. ಯೆಹೋವನ ಆಲ
ಯದ ಮುಂದಿರುವ ತಾಮ್ರದ ಯಜ್ಞವೇದಿಯು
ಈ ಎಲ್ಲಾ ಸರ್ವಾಂಗಹೋಮದ್ರವ್ಯಗಳನ್ನೂ ಧಾನ್ಯ
ನೈವೇದ್ಯಗಳನ್ನೂ ಸಮಾಧಾನಯಜ್ಞದ ಕೊಬ್ಬನ್ನೂ
ಹಿಡಿಯಲಾರದಷ್ಟು ಚಿಕ್ಕದಾಗಿದ್ದದರಿಂದ ಸೊಲೊಮೋ
ನನು ಆ ದಿವಸ ದೇವಾಲಯದ ಮುಂದಿನ ಪ್ರಾಕಾರದ
ಮಧ್ಯಸ್ಥಳವನ್ನು ಪ್ರತಿಷ್ಠಿಸಿ ಅಲ್ಲಿ ಇವುಗಳನ್ನೆಲ್ಲಾ
ಸಮರ್ಪಿಸಿದನು. ಈ ಪ್ರಕಾರ ಸೊಲೊಮೋನನೂ 65
ಹಮಾತಿನ ದಾರಿಯಿಂದ ಐಗುಪ್ತದ ಹಳ್ಳದ ವರೆಗಿರುವ
ಪ್ರಾಂತಗಳಿಂದ ಮಹಾ ಸಮೂಹವಾಗಿ ಕೂಡಿಬಂದಿದ್ದ
ಎಲ್ಲಾ ಇಸ್ರಾಯೇಲ್ಯರೂ ಎರಡು ವಾರ ಅಂದರೆ
ಹದಿನಾಲ್ಕು ದಿವಸಗಳ ವರೆಗೆ ನಮ್ಮ ದೇವರಾದ ಯೆ
ಹೋವನ ಸನ್ನಿಧಿಯಲ್ಲಿ ಹಬ್ಬಮಾಡಿದರು. ಎಂಟನೆಯ 66
ದಿವಸ ಜನರಿಗೆ ಹೋಗುವದಕ್ಕೆ ಅಪ್ಪಣೆಯಾಗಲು
ಅವರು ಅರಸನನ್ನು ವಂದಿಸಿ ಯೆಹೋವನು ತನ್ನ
ಸೇವಕನಾದ ದಾವೀದನಿಗೂ ತನ್ನ ಪ್ರಜೆಗಳಾದ ಇಸ್ರಾ
ಯೇಲ್ಯರಿಗೂ ಮಾಡಿದ ಸರ್ವೋಪಕಾರಗಳನ್ನು ನೆನಸಿ
ಆನಂದಚಿತ್ತರಾಗಿ ಹರ್ಷಿಸುತ್ತಾ ತಮ್ಮ ತಮ್ಮ ನಿವಾಸ
ಗಳಿಗೆ ಹೋದರು.



ಯೆಹೋವನು ಸೊಲೊಮೋನನಿಗೆ ಕನಸಿನಲ್ಲಿ ಕಾಣಿಸಿ
ಕೊಂಡು ಅವನ ಪ್ರಾರ್ಥನೆಗೆ ಉತ್ತರಕೊಟ್ಟದ್ದು.

ಸೊಲೊಮೋನನು ಯೆಹೋವನ ಆಲಯವನ್ನೂ 9
ತನ್ನ ಅರಮನೆಯನ್ನೂ ತನಗೆ ಇಷ್ಟವಾದ ಬೇರೆ ಎಲ್ಲಾ
ಮಂದಿರಗಳನ್ನೂ ಕಟ್ಟಿಸಿದನಂತರ ಯೆಹೋವನು ಅವ 2
ನಿಗೆ ಗಿಬ್ಯೋನಿನಲ್ಲಿ ಪ್ರತ್ಯಕ್ಷನಾದಂತೆ ಎರಡನೆಯ
ಸಾರಿ ಪ್ರತ್ಯಕ್ಷನಾದನು. ಆತನು ಅವನಿಗೆ—ನೀನು 3
ನನಗೆ ಮಾಡಿದ ಪ್ರಾರ್ಥನೆಯನ್ನೂ ವಿಜ್ಞಾಪನೆಯನ್ನೂ
ಕೇಳಿದ್ದೇನೆ. ನನ್ನ ನಾಮಮಹತ್ತು ನೀನು ಕಟ್ಟಿಸಿದ
ಆಲಯದಲ್ಲಿ ಸದಾ ಇರುವಂತೆ ಅದನ್ನು ನನಗೋಸ್ಕರ
ಪ್ರತಿಷ್ಠಿಸಿಕೊಂಡಿದ್ದೇನೆ; ನನ್ನ ದೃಷ್ಟಿಯೂ ಮನಸ್ಸೂ
ಪ್ರತಿದಿನವೂ ಅದರ ಮೇಲಿರುವವು. ನೀನು ನಿನ್ನ 4
ತಂದೆಯಾದ ದಾವೀದನಂತೆ ಪೂರ್ಣಮನಸ್ಸಿನಿಂದಲೂ
ಯಥಾರ್ಥಚಿತ್ತದಿಂದಲೂ ನನಗೆ ನಡೆದುಕೊಂಡು ನನ್ನ
ಆಜ್ಞಾವಿಧಿನ್ಯಾಯಗಳನ್ನು ಕೈಕೊಳ್ಳುತ್ತಾ ಬರುವದಾ
ದರೆ ಇಸ್ರಾಯೇಲ್ಯರಲ್ಲಿ ನಿನ್ನ ಸಿಂಹಾಸನವನ್ನು ಸದಾ 5
ಸ್ಥಿರಪಡಿಸುವೆನು; ಇಸ್ರಾಯೇಲ್‌ಸಿಂಹಾಸನದ ಮೇಲೆ
ನಿನ್ನ ಸಂತಾನದವರು ತಪ್ಪದೆ ಕೂತುಕೊಳ್ಳುವರು
ಎಂಬದಾಗಿ ನಿನ್ನ ತಂದೆಯಾದ ದಾವೀದನಿಗೆ ನಾನು
ಮಾಡಿದ ವಾಗ್ದಾನವನ್ನು ನೆರವೇರಿಸುವೆನು. ಆದರೆ 6
ನೀವಾಗಲಿ ನಿಮ್ಮ ಮಕ್ಕಳಾಗಲಿ ನನ್ನ ಆಜ್ಞಾವಿಧಿ
ಗಳನ್ನು ಕೈಕೊಳ್ಳದೆ ನನ್ನನ್ನು ಬಿಟ್ಟು ಅನ್ಯದೇವತೆ
ಗಳನ್ನು ಹಿಂಬಾಲಿಸಿ ಅವುಗಳಿಗೆ ಕೈಮುಗಿಯುವದಾ
ದರೆ ಇಸ್ರಾಯೇಲ್ಯರನ್ನು ನಾನು ಅವರಿಗೆ ಕೊಟ್ಟ 7
ದೇಶದಿಂದ ತೆಗೆದುಹಾಕಿ ನನ್ನ ಹೆಸರಿಗೋಸ್ಕರ ಪ್ರತಿಷ್ಠಿ
ಸಿಕೊಂಡ ಆಲಯವನ್ನು ನಿರಾಕರಿಸಿಬಿಡುವೆನು. ಇಸ್ರಾ
ಯೇಲ್ಯರು ಎಲ್ಲಾ ಜನಾಂಗಗಳವರ ಗಾದೆಗೂ ನಿಂದೆ
ಗೂ ಆಸ್ಪದರಾಗುವರು. 1)ಉನ್ನತವಾದ ಈ ಮಂದಿರದ 8
ಮಾರ್ಗವಾಗಿ ಹಾದುಹೋಗುವವರು ಅದನ್ನು ನೋ
ಡಿ ವಿಸ್ಮಿತರಾಗಿ—ಅಬ್ಬಬ್ಬಾ, ಇದೇನು! ಯೆಹೋ
ವನು ಈ ದೇಶವನ್ನೂ ಈ ಆಲಯವನ್ನೂ ಹೀಗೇಕೆ

1) ಪಾಠಾಂತರ: ಈ ಮಂದಿರವು ಹಾಳಾಗುವದು; ಹಾದು ಹೋಗುವವರು ಇದನ್ನು ನೋಡಿ.

9 ಮಾಡಿದನು ಎಂದು ಕೇಳುವರು. ಆಗ ಅವರಿಗೆ—ಈ
ದೇಶದವರು ತಮ್ಮ ಪಿತೃಗಳನ್ನು ಐಗುಪ್ತದಿಂದ ಬರ
ಮಾಡಿದ ದೇವರಾದ ಯೆಹೋವನನ್ನು ಬಿಟ್ಟು ಅನ್ಯ
ದೇವತೆಗಳನ್ನು ಅವಲಂಬಿಸಿ ಅವುಗಳಿಗೆ ಅಡ್ಡಬಿದ್ದು
ಸೇವಿಸಿದದರಿಂದಲೇ ಯೆಹೋವನು ಈ ಎಲ್ಲಾ ಆಪ
ತ್ತನ್ನು ಬರಮಾಡಿದ್ದಾನೆ ಎಂಬ ಉತ್ತರವು ಸಿಕ್ಕುವದು
ಅಂದನು.

ಕಟ್ಟೋಣಗಳ ಸಂಬಂಧವಾದ ಕೆಲವು ಸಂಗತಿಗಳು.

10 ಅರಸನಾದ ಸೊಲೊಮೋನನು ಇಪ್ಪತ್ತು ವರುಷ
ಗಳಲ್ಲಿ ಯೆಹೋವನ ಆಲಯವನ್ನೂ ತನ್ನ ಅರಮನೆ
11 ಯನ್ನೂ ಕಟ್ಟಿಸಿ ತೀರಿಸಿದನಂತರ ತನಗೆ ಬೇಕಾ
ದಷ್ಟು ದೇವದಾರುಮರಗಳನ್ನೂ ತುರಾಯಿಮರಗಳ
ನ್ನೂ ಬಂಗಾರವನ್ನೂ ಕೊಟ್ಟಂಥ ತೂರಿನ ಅರಸನಾದ
ಹೀರಾಮನಿಗೆ ಗಲಿಲಾಯ ಪ್ರಾಂತದಲ್ಲಿನ ಇಪ್ಪತ್ತು
12 ಪಟ್ಟಣಗಳನ್ನು ಕೊಟ್ಟನು. ಹೀರಾಮನು ತೂರಿ
ನಿಂದ ಬಂದು ಆ ಪಟ್ಟಣಗಳನ್ನು ನೋಡಲು ಅವು
13 ಅವನ ಮನಸ್ಸಿಗೆ ಬರಲಿಲ್ಲ. ಆದದರಿಂದ ಅವನು
ಸೊಲೊಮೋನನಿಗೆ—ಸಹೋದರನೇ, ನೀನು ನನಗೆ
ಎಂಥ ಪಟ್ಟಣಗಳನ್ನು ಕೊಟ್ಟೆ ಎಂದು ಹೇಳಿ ಅವು
ಗಳಿಗೆ ಕಾಬೂಲ್‌ದೇಶವೆಂದು ಹೆಸರಿಟ್ಟನು. ಅವು
14 ಗಳಿಗೆ ಇಂದಿನ ವರೆಗೂ ಇದೇ ಹೆಸರಿರುತ್ತದೆ. ಹೀರಾ
ಮನು ಸೊಲೊಮೋನನಿಗೆ 1)ನೂರಿಪ್ಪತ್ತು ತಲಾಂತು
ಬಂಗಾರವನ್ನು ಕೊಟ್ಟನು.
15 ಸೊಲೊಮೋನನ ಬಿಟ್ಟೀಕೆಲಸದವರು ಕಟ್ಟಿದವು
ಗಳು ಯಾವವಂದರೆ—ಯೆಹೋವನ ಆಲಯ, ಅರ
ಮನೆ, ಮಿಲ್ಲೋಕೋಟೆ, ಯೆರೂಸಲೇಮಿನ ಪೌಳಿ
ಗೋಡೆ, ಹಾಚೋರ್, ಮೆಗಿದ್ದೋ, ಗೆಜೆರ್ ಇವೇ.
16 ಐಗುಪ್ತದ ಅರಸನಾದ ಫರೋಹನು ಗೆಜೆರ್‌ಪಟ್ಟಣ
ವನ್ನು ಹಿಡಿದು ಅದಕ್ಕೆ ಬೆಂಕಿಹೊತ್ತಿಸಿ ಅದರಲ್ಲಿದ್ದ
ಕಾನಾನ್ಯರನ್ನು ಹತಿಸಿ ಅದನ್ನು ವಶಮಾಡಿಕೊಂಡು
ಸೊಲೊಮೋನನ ಹೆಂಡತಿಯಾದ ತನ್ನ ಮಗಳಿಗೆ
17 ಬಳುವಳಿಯಾಗಿ ಕೊಟ್ಟಿದ್ದನು. ಸೊಲೊಮೋನನು
ಗೆಜೆರ್‌ಪಟ್ಟಣದ ಹೊರತಾಗಿ ಕೆಳಗಿನ ಬೇತ್‌ಹೋ
18 ರೋನ್, ಬಾಲಾತ್, ಅರಣ್ಯಪ್ರದೇಶದಲ್ಲಿರುವ ತಾ
19 ಮಾರ್, ತನ್ನ ಎಲ್ಲಾ ಉಗ್ರಾಣಪಟ್ಟಣಗಳು, ಯುದ್ಧ
ರಥಗಳನ್ನಿರಿಸುವ ಪಟ್ಟಣಗಳು, ರಾಹುತರ ಪಟ್ಟಣ
ಗಳು, ಇವುಗಳನ್ನೂ ಕಟ್ಟಿಸಿದನು. ಇದಲ್ಲದೆ ಯೆರೂ
ಸಲೇಮಿನಲ್ಲಿಯೂ ಲೆಬನೋನಿನಲ್ಲಿಯೂ ತನ್ನ ರಾಜ್ಯದ
ಎಲ್ಲಾ ಪ್ರಾಂತಗಳಲ್ಲಿಯೂ ಮನಸ್ಸಿಗೆ ಬಂದವುಗಳ
20 ನ್ನೆಲ್ಲಾ ಕಟ್ಟಿಸಿದನು. ಇದಲ್ಲದೆ ಅವನು ಇಸ್ರಾಯೇ
ಲ್ಯರಿಂದ ಸಂಹೃತರಾಗದೆ ಇಸ್ರಾಯೇಲ್ಯರಲ್ಲದವರೂ
ಕಾನಾನ್‌ದೇಶದಲ್ಲಿ ಉಳಿದ ಅಮೋರಿಯ, ಹಿತ್ತಿಯ,
21 ಪೆರಿಜ್ಜೀಯ, ಹಿವ್ವೀಯ, ಯೆಬೂಸಿಯ ಮೊದಲಾದ
ಅನ್ಯಜನಾಂಗಗಳ ಸಂತಾನದವರೆಲ್ಲರನ್ನು ತನ್ನ ಕೆಲಸ
ಕ್ಕಾಗಿ ಬಿಟ್ಟೀಹಿಡಿದನು. ಇಂದಿನ ವರೆಗೂ ಅವರು
ಬಿಟ್ಟೀಕೆಲಸದವರಾಗಿರುತ್ತಾರೆ. ಆದರೆ ಅವನು
ಇಸ್ರಾಯೇಲ್ಯರನ್ನು ಬಿಟ್ಟೀಹಿಡಿಯಲಿಲ್ಲ; ಅವರನ್ನು
ಸೈನಿಕರನ್ನಾಗಿಯೂ ಪರಿವಾರದವರನ್ನಾಗಿಯೂ ಅಧಿ
ಪತಿಗಳನ್ನಾಗಿಯೂ ಸರದಾರರನ್ನಾಗಿಯೂ ರಥಾಶ್ವ
ಬಲಗಳ ನಾಯಕರನ್ನಾಗಿಯೂ ನೇಮಿಸಿಕೊಂಡನು.
ಇದಲ್ಲದೆ ಅವನು ಬಿಟ್ಟೀಕೆಲಸ ಮಾಡುವವರ ಮೇಲೆ
ಐನೂರೈವತ್ತು ಮಂದಿ ಇಸ್ರಾಯೇಲ್ಯರನ್ನು ಅಧಿಕಾರಿ
ಗಳನ್ನಾಗಿ ನೇಮಿಸಿದನು. ಫರೋಹನ ಮಗಳು ದಾ
ವೀದನಗರದಿಂದ ತನಗೋಸ್ಕರ ಕಟ್ಟಿಸಿದ್ದ ಮಂದಿರಕ್ಕೆ
ಬಂದಳು; ಅನಂತರ ಸೊಲೊಮೋನನು ಮಿಲ್ಲೋ
ಕೋಟೆಯನ್ನು ಕಟ್ಟಿಸಿದನು. ಸೊಲೊಮೋನನು
ಯೆಹೋವನ ಆಲಯದ ಮುಂದೆ ತಾನು ಯೆಹೋವನಿ
ಗೋಸ್ಕರ ಕಟ್ಟಿಸಿದ ಯಜ್ಞವೇದಿಯ ಮೇಲೆ ವರು
ಷಕ್ಕೆ ಮೂರು ಸಾರಿ ಸರ್ವಾಂಗಹೋಮ, ಸಮಾಧಾನ
ಯಜ್ಞ ಇವುಗಳನ್ನು ಸಮರ್ಪಿಸಿ ಧೂಪಸುಡುತ್ತಿದ್ದನು.
ದೇವಾಲಯವನ್ನು ಕಟ್ಟಿಸಿ ತೀರಿಸಿದನು.
ಇದಲ್ಲದೆ ಅರಸನಾದ ಸೊಲೊಮೋನನು ಎದೋ
ಮ್‌ದೇಶದಲ್ಲಿ ಏಲೋತಿನ ಹತ್ತಿರ ಕೆಂಪುಸಮುದ್ರದ
ತೀರದಲ್ಲಿರುವ ಎಚ್ಯೋನ್ಗೆಬೆರಿನಲ್ಲಿ ಹಡಗುಗಳನ್ನು
ಕಟ್ಟಿಸಿದನು. ಹೀರಾಮನು ಸಮುದ್ರಪ್ರಯಾಣದಲ್ಲಿ
ನಿಪುಣರಾದ ತನ್ನ ನಾವಿಕರನ್ನು ಸೊಲೊಮೋನನ
ಸೇವಕರೊಡನೆ ಆ ಹಡಗುಗಳಲ್ಲಿ ಕಳುಹಿಸಿದನು.
ಅವರು ಓಫೀರಿಗೆ ಪ್ರಯಾಣಮಾಡಿ ಅಲ್ಲಿಂದ ಅರಸ
ನಾದ ಸೊಲೊಮೋನನಿಗೆ 2)ನಾನೂರಿಪ್ಪತ್ತು ತಲಾಂತು
ಬಂಗಾರವನ್ನು ತೆಗೆದುಕೊಂಡು ಬಂದರು.

ಶೆಬಾದೇಶದ ರಾಣಿಯು ಸೊಲೊಮೋನನ ದರ್ಶನಕ್ಕೆ ಬಂದದ್ದು.

ಯೆಹೋವನಾಮಮಹತ್ತಿನಿಂದ ಸೊಲೊಮೋನ 1
ನಿಗುಂಟಾದ ಕೀರ್ತಿಯನ್ನು ಕುರಿತು ಶೆಬದ ರಾಣಿ
ಯು ಕೇಳಿ ಅವನನ್ನು ಒಗಟುಗಳಿಂದ ಪರೀಕ್ಷಿಸುವದಕ್ಕೆ
ಬಂದಳು. ಆಕೆಯು ಸುಗಂಧದ್ರವ್ಯ, ಅಪರಿಮಿತ
ವಾದ ಬಂಗಾರ, ರತ್ನ ಇವುಗಳನ್ನು ಒಂಟೆಗಳ ಮೇಲೆ
ಹೇರಿಸಿಕೊಂಡು ಮಹಾಪರಿವಾರದೊಡನೆ ಯೆರೂಸ
ಲೇಮಿಗೆ ಬಂದು ತನ್ನ ಮನಸ್ಸಿನಲ್ಲಿ ಗೊತ್ತುಮಾಡಿ
ಕೊಂಡಿದ್ದ ಎಲ್ಲಾ ವಿಷಯಗಳನ್ನು ಕುರಿತು ಸೊಲೊ
ಮೋನನೊಡನೆ ಸಂಭಾಷಿಸಿದಳು. ಸೊಲೊಮೋನನು
ಆಕೆಯ ಎಲ್ಲಾ ಪ್ರಶ್ನೆಗಳಿಗೆ ಉತ್ತರಕೊಟ್ಟನು; ಅರಸ
ನಾದ ಅವನಿಗೆ ತಿಳಿಯದಂಥದು ಅವುಗಳಲ್ಲಿ ಒಂದೂ
ಇರಲಿಲ್ಲವಾದದರಿಂದ ಎಲ್ಲವುಗಳಿಗೂ ಉತ್ತರಕೊಟ್ಟ
ನು. ಶೆಬದ ರಾಣಿಯು ಸೊಲೊಮೋನನ ಎಲ್ಲಾ ಜ್ಞಾನ,
ಅವನು ಕಟ್ಟಿಸಿದ ಅರಮನೆ, ಅವನ ಭೋಜನಪೀಠದ
ಆಹಾರ, ಆ ಪೀಠದ ಸುತ್ತಲಿರುವ ಉದ್ಯೋಗಸ್ಥರ
ಆಸನಗಳು, ಅವನ ಪರಿಚಾರಕರ ಸೇವಾಕ್ರಮ, ಅವರ
ಉಡುಪುಗಳು, ಅವನ ಪಾನಕಗಳು ಇವುಗಳನ್ನೂ
ಅವನು ಯೆಹೋವನ ಆಲಯದಲ್ಲಿ ಸಮರ್ಪಿಸು

1) ಅಂದರೆ ಸುಮಾರು ನಾಲ್ಕು ಲಕ್ಷ ಎಂಭತ್ತು ಸಾವಿರ ತೊಲೆ.

2) ಅಂದರೆ ಸುಮಾರು ಹನ್ನೆರಡು ಲಕ್ಷ ಅರು
ಸಾವಿರ ತೊಲೆ.

ತ್ರಿದ್ದ ಸರ್ವಾಂಗಹೋಮಗಳನ್ನೂ ನೋಡಿದಾಗ ವಿಸ್ಮಿ
6 ತಳಾಗಿ ಅರಸನಿಗೆ—ನಾನು ನನ್ನ ದೇಶದಲ್ಲಿ ನಿನ್ನ
ಜ್ಞಾನವನ್ನೂ ಕೃತ್ಯಗಳನ್ನೂ ಕುರಿತು ಕೇಳಿದ್ದು ಸತ್ಯ
7 ವಾಗಿದೆ. ನಾನಾಗಿ ಇಲ್ಲಿಗೆ ಬಂದು ಕಣ್ಣಾರೆ ನೋಡು
ವದಕ್ಕಿಂತ ಮೊದಲು ಜನರು ಹೇಳಿದ ಸುದ್ದಿಯನ್ನು
ನಂಬಲಿಲ್ಲ; ಈಗ ನೋಡಿದರೆ ನಿನ್ನ ಜ್ಞಾನವೈಭವಗಳು
ನಾನು ಕೇಳಿದ್ದಕ್ಕಿಂತ ಹೆಚ್ಚಾಗಿವೆ; ಜನರು ನನಗೆ
8 ಇದರಲ್ಲಿ ಅರ್ಧವನ್ನಾದರೂ ಹೇಳಲಿಲ್ಲ. 1)ನಿನ್ನ
ಪ್ರಜೆಗಳೂ ಸದಾ ನಿನ್ನ ಮುಂದೆ ನಿಂತುಕೊಂಡು
ನಿನ್ನ ಜ್ಞಾನವಾಕ್ಯಗಳನ್ನು ಕೇಳುವ ನಿನ್ನ ಸೇವ
9 ಕರೂ ಧನ್ಯರು. ನಿನ್ನನ್ನು ಮೆಚ್ಚಿ ಇಸ್ರಾಯೇಲ್
ಸಿಂಹಾಸನದ ಮೇಲೆ ಕುಳ್ಳಿರಿಸಿದ ನಿನ್ನ ದೇವರಾದ
ಯೆಹೋವನಿಗೆ ಸ್ತೋತ್ರವಾಗಲಿ; ಆತನು ಇಸ್ರಾ
ಯೇಲ್ಯರನ್ನು ಸದಾ ಪ್ರೀತಿಸುವವನಾಗಿರುವದರಿಂದ
ಅವರ ನೀತಿನ್ಯಾಯಗಳನ್ನು ಸ್ಥಾಪಿಸುವದಕ್ಕೋಸ್ಕರ
ನಿನ್ನನ್ನೇ ಅರಸನನ್ನಾಗಿ ನೇಮಿಸಿದ್ದಾನೆ ಎಂದು ಹೇಳಿ
0 ದಳು. ಆಕೆಯು ಅರಸನಿಗೆ 2)ನೂರಿಪ್ಪತ್ತು ತಲಾಂತು
ಬಂಗಾರವನ್ನೂ ಅಪರಿಮಿತ ಸುಗಂಧದ್ರವ್ಯವನ್ನೂ ರತ್ನ
ಗಳನ್ನೂ ಕೊಟ್ಟಳು. ಶೆಬದ ರಾಣಿಯು ಅರಸ
ನಾದ ಸೊಲೊಮೋನನಿಗೆ ಕೊಟ್ಟಷ್ಟು ಸುಗಂಧದ್ರ
ವ್ಯವು ದೇಶಕ್ಕೆ ತಿರಿಗಿ ಬರಲೇ ಇಲ್ಲ.
1 ಹೀರಾಮನ ಹಡಗುಗಳು ಓಫೀರ್‌ದೇಶದಿಂದ
ಬಂಗಾರದ ಹೊರತಾಗಿ ಸುಗಂಧದ ಮರವನ್ನೂ ರತ್ನ
2 ಗಳನ್ನೂ ರಾಶಿರಾಶಿಯಾಗಿ ತಂದವು. ಅರಸನು
ಸುಗಂಧದ ಮರದಿಂದ ದೇವಾಲಯ, ಅರಮನೆ ಇವು
ಗಳಿಗೆ 3)ಕಟಕಟೆಗಳನ್ನೂ ಗಾಯಕರಿಗೋಸ್ಕರ ಕಿನ್ನರಿ
ಗಳನ್ನೂ ಸ್ವರಮಂಡಲಗಳನ್ನೂ ಮಾಡಿಸಿದನು. ಆಗ
ಬಂದಷ್ಟು ಸುಗಂಧದ ಮರವು ಇಂದಿನ ವರೆಗೂ
ಬರಲಿಲ್ಲ, ಮತ್ತು ಕಾಣಲಿಲ್ಲ.
3 ಅರಸನಾದ ಸೊಲೊಮೋನನು ಶೆಬದ ರಾಣಿಗೆ
ತಾನಾಗಿ ರಾಜಮರ್ಯಾದೆಯಿಂದ ಕೊಟ್ಟ ವಸ್ತು
ಗಳಲ್ಲದೆ ಆಕೆಯು ಕೇಳಿದವುಗಳನ್ನೆಲ್ಲಾ ಕೊಟ್ಟು
ಬಿಟ್ಟನು. ಅನಂತರ ಆಕೆಯು ತನ್ನ ಪರಿವಾರದವ
ರೊಡನೆ ಸ್ವದೇಶಕ್ಕೆ ಹೊರಟುಹೋದಳು.

ಸೊಲೊಮೋನನ ವೈಭವ.

4 ಸೊಲೊಮೋನನಿಗೆ ದೇಶಾಂತರ ವ್ಯಾಪಾರಿಗಳೂ
ವರ್ತಕರೂ ಅರಬಿಯ ಅರಸರೂ ಪ್ರದೇಶಾಧಿಪತಿ
5 ಗಳೂ ತೆರುತ್ತಿದ್ದ ಬಂಗಾರದ ಹೊರತಾಗಿ ಪ್ರತಿವರುಷ
4)ಆರುನೂರರುವತ್ತಾರು ತಲಾಂತು ಬಂಗಾರವು ದೊರ
6 ಕುತ್ತಿತ್ತು. ಅರಸನಾದ ಸೊಲೊಮೋನನು ಬಂಗಾರದ
ತಗಡಿನಿಂದ ಇನ್ನೂರು ಗುರಾಣಿಗಳನ್ನು ಮಾಡಿಸಿ
ದನು; ಪ್ರತಿಯೊಂದು ಗುರಾಣಿಗೆ ಆರುನೂರು ತೊಲೆ
7 ಬಂಗಾರ ಹಿಡಿಯಿತು. ಇದಲ್ಲದೆ ಅವನು ಬಂಗಾರದ
ತಗಡಿನಿಂದ ಮುನ್ನೂರು ಖೇಡ್ಯಗಳನ್ನು ಮಾಡಿಸಿ
ದನು. ಪ್ರತಿಯೊಂದು ಖೇಡ್ಯಕ್ಕೆ ನೂರೈವತ್ತು ತೊಲೆ
ಬಂಗಾರ ಹಿಡಿಯಿತು. ಅವನು ಇವುಗಳನ್ನು ಲೆಬ
ನೋನಿನ ತೋಪು ಎನಿಸಿಕೊಳ್ಳುವ ಮಂದಿರದಲ್ಲಿ ಇರಿ
ಸಿದನು.
ಇದಲ್ಲದೆ ಅರಸನು ದೊಡ್ಡದಾದ ಒಂದು ದಂತ 18
ಸಿಂಹಾಸನವನ್ನು ಮಾಡಿಸಿ ಅದನ್ನು ಚೊಕ್ಕಬಂಗಾರದ
ತಗಡಿನಿಂದ ಹೊದಿಸಿದನು; ಅದಕ್ಕೆ ಆರು ಮೆಟ್ಲು 19
ಗಳಿದ್ದವು. ಅದರ ಹಿಂಭಾಗದ ತುದಿಯು ಚಕ್ರಾಕಾರ
ವಾಗಿತ್ತು. ಆಸನಕ್ಕೆ ಎರಡು ಕೈಗಳೂ ಅವುಗಳ
ಹತ್ತಿರ ಎರಡು ಸಿಂಹಗಳೂ ಇದ್ದವು. ಆರು ಮೆಟ್ಲು 20
ಗಳ ಎರಡು ಕಡೆಗಳಲ್ಲೂ ಒಟ್ಟು ಹನ್ನೆರಡು ಸಿಂಹ
ಗಳು ನಿಂತಿದ್ದವು; ಇಂಥ ಸಿಂಹಾಸನವು ಬೇರೆ ಯಾವ
ರಾಜ್ಯದಲ್ಲಿಯೂ ಇರಲಿಲ್ಲ. ಅರಸನಾದ ಸೊಲೊ 21
ಮೋನನ ಎಲ್ಲಾ ಪಾನಪಾತ್ರೆಗಳು ಬಂಗಾರದವುಗಳು;
ಲೆಬನೋನಿನ ತೋಪು ಎನಿಸಿಕೊಳ್ಳುವ ಮಂದಿರದ
ಸಾಮಾನುಗಳು ಚೊಕ್ಕ ಬಂಗಾರದವುಗಳು. ಸೊಲೊ
ಮೋನನ ಕಾಲದಲ್ಲಿ ಬೆಳ್ಳಿಗೆ ಬೆಲೆಯಿರಲಿಲ್ಲವಾದದ
ರಿಂದ ಅವನಲ್ಲಿ ಬೆಳ್ಳಿಯ ಸಾಮಾನು ಒಂದಾದರೂ
ಕಾಣಿಸಲಿಲ್ಲ. ಹೀರಾಮನ ನಾವೆಗಳ ಜೊತೆಯಲ್ಲಿ 22
ಸೊಲೊಮೋನನ ತಾರ್ಷೀಷ್ ಹಡಗುಗಳು ಹೋಗಿ
ಮೂರು ವರುಷಕ್ಕೊಮ್ಮೆ ಬಂಗಾರ, ಬೆಳ್ಳಿ, ದಂತ,
ಕಪಿ, ನವಿಲು ಇವುಗಳನ್ನು ತರುತ್ತಿದ್ದವು. ಈ 23
ಪ್ರಕಾರ ಅರಸನಾದ ಸೊಲೊಮೋನನು ಐಶ್ವರ್ಯ
ದಲ್ಲಿಯೂ ಜ್ಞಾನದಲ್ಲಿಯೂ ಭೂಲೋಕದ ಎಲ್ಲಾ
ಅರಸರಿಗಿಂತ ಮಿಗಿಲಾಗಿದ್ದನು. ಭೂಲೋಕದವ 24
ರೆಲ್ಲರೂ ದೇವರು ಅವನಿಗೆ ಅನುಗ್ರಹಿಸಿದ ಜ್ಞಾನ
ವಾಕ್ಯಗಳನ್ನು ಕೇಳುವದಕ್ಕೋಸ್ಕರ ಅವನ ದರ್ಶ
ನಕ್ಕೆ ಬಂದರು. ಅವರೆಲ್ಲರೂ ಅವನಿಗೆ ವರುಷ ವರುಷ 25
ಬೆಳ್ಳಿಬಂಗಾರದ ಸಾಮಾನು, ಉಡುಪು, ಯುದ್ಧಾ
ಯುಧ, ಸುಗಂಧದ್ರವ್ಯ, ಕುದುರೆ, ಹೇಸರಕತ್ತೆ ಇವು
ಗಳನ್ನು ಕಾಣಿಕೆಯಾಗಿ ಕೊಡುತ್ತಿದ್ದರು. ಸೊಲೊ 26
ಮೋನನು ರಥಗಳನ್ನೂ ರಾಹುತರನ್ನೂ ಸಂಗ್ರಹಿಸಿ
ದನು. ಅವನ ರಥಗಳು ಸಾವಿರದ ನಾನೂರು; ರಾಹು
ತರು ಹನ್ನೆರಡು ಸಾವಿರ. ಇವುಗಳಲ್ಲಿ ಕೆಲವನ್ನು ಯೆರೂ
ಸಲೇಮಿನಲ್ಲಿ ತನ್ನ ಬಳಿಯಲ್ಲಿಯೂ ಉಳಿದವುಗಳನ್ನು
ರಥಗಳಿಗೋಸ್ಕರ ನೇಮಿಸಿದ ಪಟ್ಟಣಗಳಲ್ಲಿಯೂ
ಇರಿಸಿದನು. ಅವನ ಮುಖಾಂತರವಾಗಿ ಯೆರೂಸಲೇಮಿ 27
ನಲ್ಲಿ ಬೆಳ್ಳಿಯು ಕಲ್ಲಿನ ಹಾಗೂ ದೇವದಾರುಮರಗಳು
ಇಳಕಲಿನ ಪ್ರದೇಶದಲ್ಲಿ ಬೆಳೆಯುವ ಅತ್ತಿಮರಗಳ
ಹಾಗೂ ಹೇರಳವಾದವು. ಅರಸನಾದ ಸೊಲೊಮೋನನ 28
ಕುದುರೆಗಳು ಐಗುಪ್ತದೇಶದವುಗಳು. ಅವನ ವರ್ತ
ಕರು ಅವುಗಳನ್ನು ಹಿಂಡುಗಟ್ಟಳೆಯಾಗಿ ಕೊಂಡು
ಕೊಂಡು ಬರುತ್ತಿದ್ದರು. ಐಗುಪ್ತದೇಶದಿಂದ ರಥಗ 29
ಳನ್ನೂ ಕುದುರೆಗಳನ್ನೂ ತರಿಸಬೇಕಾದರೆ ಪ್ರತಿಯೊಂದು
ರಥಕ್ಕೆ ಆರುನೂರು ರೂಪಾಯಿಗಳನ್ನೂ ಕುದುರೆಗೆ
ನೂರೈವತ್ತು ರೂಪಾಯಿಗಳನ್ನೂ ಕೊಡಬೇಕಾಯಿತು.
ಅವು ಹಿತ್ತಿಯರ ಮತ್ತು ಅರಾಮ್ಯರ ಎಲ್ಲಾ ಅರಸರಿಗೆ
ಇವರ ಮುಖಾಂತರವಾಗಿಯೇ ಸಿಕ್ಕುತ್ತಿದ್ದವು.

1) ಪಾಠಾಂತರ: ಪತ್ನಿಗಳೂ. 2) ಅಂದರೆ ಸುಮಾರು ಮೂರುಲಕ್ಷ ಅರುವತ್ತು ಸಾವಿರ ತೊಲೆ. 3) ಅಂದರೆ ಕಟಾಂಜನ.
) ಅಂದರೆ ಸುಮಾರು ಹತ್ತೊಂಬತ್ತು ಲಕ್ಷ ತೊಂಭತ್ತೆಂಟು ಸಾವಿರ ತೊಲೆ.

ಸೊಲೊಮೋನನು ಹೆಂಡತಿಯರಿಂದ ಸನ್ಮಾರ್ಗಭ್ರಷ್ಟನಾದದ್ದು; ರಾಜ್ಯದಲ್ಲಿ ವೈರಿಗಳು ಎದ್ದದ್ದು; ಅವನ ಮರಣ.

11 ಅರಸನಾದ ಸೊಲೊಮೋನನು ಫರೋಹನ ಮಗಳ
ಲ್ಲದೆ ಮೋವಾಬ್ಯರು, ಅಮ್ಮೋನಿಯರು, ಎದೋ
ಮ್ಯರು, ಚೀದೋನ್ಯರು, ಹಿತ್ತಿಯರು ಎಂಬೀ ಜನಾಂ
2 ಗಗಳ ಸ್ತ್ರೀಯರನ್ನೂ ಮೋಹಿಸಿದನು. ಯೆಹೋವನು
ಈ ಜನಾಂಗಗಳ ವಿಷಯದಲ್ಲಿ ಇಸ್ರಾಯೇಲ್ಯರಿಗೆ—
ನಿಮಗೂ ಅವರಿಗೂ ಕೊಟ್ಟುಕೊಳ್ಳುವದು ನಡಿಯ
ಬಾರದು; ಅದು ನಡಿಯುವದಾದರೆ ಅವರು ನಿಮ್ಮ
ಮನಸ್ಸನ್ನು ತಮ್ಮ ದೇವತೆಗಳ ಕಡೆಗೆ ತಿರುಗಿಸಾರು
ಎಂದು ಆಜ್ಞಾಪಿಸಿದ್ದರೂ ಸೊಲೊಮೋನನು ಅವರ
3 ಸ್ತ್ರೀಯರಲ್ಲಿ ಅನುರಕ್ತನಾಗಿದ್ದನು. ಅವನಿಗೆ ರಾಜ
ವಂಶದವರಾದ ಏಳುನೂರು ಮಂದಿ ಪತ್ನಿಯರಲ್ಲದೆ
ಮುನ್ನೂರು ಮಂದಿ ಉಪಪತ್ನಿಯರಿದ್ದರು. ಈ ಸ್ತ್ರೀ
4 ಯರು ಅವನ ಮನಸ್ಸನ್ನು ಕೆಡಿಸಿಬಿಟ್ಟರು. ಅವನು
ವೃದ್ಧನಾದಾಗ ಇವರು ಅವನ ಹೃದಯುವನ್ನು ಅನ್ಯ
ದೇವತೆಗಳ ಕಡೆಗೆ ತಿರುಗಿಸಿದರು. ಈ ಕಾರಣದಿಂದ
ಅವನು ತನ್ನ ದೇವರಾದ ಯೆಹೋವನಲ್ಲಿಟ್ಟಿದ್ದ ಯಥಾ
ರ್ಥಭಕ್ತಿಯನ್ನು ಕಳೆದುಕೊಂಡನು. ತನ್ನ ತಂದೆ
5 ಯಾದ ದಾವೀದನಂತೆ ನಡಿಯಲಿಲ್ಲ. ಅವನು ಚೀದೋ
ನ್ಯರ ಅಷ್ಟೋರೆತ್ ದೇವತೆಯನ್ನೂ ಅಮ್ಮೋನಿಯರ
ಮಿಲ್ಕೋಮ್ ಎಂಬ ಅಸಹ್ಯ ವಿಗ್ರಹವನ್ನೂ ಆರಾಧಿಸ
6 ತೊಡಗಿ ಯೆಹೋವನ ದೃಷ್ಟಿಯಲ್ಲಿ ದ್ರೋಹಿಯಾ
ದನು; ಅವನ ತಂದೆಯಾದ ದಾವೀದನು ಪೂರ್ಣ
ಮನಸ್ಸಿನಿಂದ ಯೆಹೋವನನ್ನು ಸೇವಿಸಿದಂತೆ ಅವನು
7 ಸೇವಿಸಲಿಲ್ಲ. ಅವನು ಯೆರೂಸಲೇಮಿನ ಮೂಡ
ಲಲ್ಲಿರುವ ಗುಡ್ಡದಲ್ಲಿ ಮೋವಾಬ್ಯರ ಕೆಮೋಷ್
ಎಂಬ ಅಸಹ್ಯ ವಿಗ್ರಹಕ್ಕೂ ಅಮ್ಮೋನಿಯರ ಮೋಲೆಕ್
ಎಂಬ ಅಸಹ್ಯ ವಿಗ್ರಹಕ್ಕೂ ಪೂಜಾಸ್ಥಳಗಳನ್ನು ಏರ್ಪ
8 ಡಿಸಿದನು. ಈ ಪ್ರಕಾರವಾಗಿ ಅನ್ಯಜನಾಂಗಗಳಿಂದ
ಬಂದ ತನ್ನ ಹೆಂಡತಿಯರು ತಮ್ಮ ದೇವತೆಗಳಿಗೆ ಧೂಪ
ಸುಡುವದಕ್ಕೂ ಯಜ್ಞವರ್ಪಿಸುವದಕ್ಕೂ ಅನುಕೂಲ
ಮಾಡಿಕೊಟ್ಟನು.
9 ಇಸ್ರಾಯೇಲ್‌ದೇವರಾದ ಯೆಹೋವನು ಸೊಲೊ
10 ಮೋನನಿಗೆ ಎರಡು ಸಾರಿ ಕಾಣಿಸಿಕೊಂಡು ಅನ್ಯ
ದೇವತೆಗಳನ್ನು ಸೇವಿಸಲೇ ಬಾರದೆಂದು ಆಜ್ಞಾಪಿಸಿ
ದ್ದರೂ ಅವನು ಆತನ ಆಜ್ಞೆಗಳನ್ನು ಮೀರಿದ್ದರಿಂದ
11 ಆತನು ಅವನ ಮೇಲೆ ಕೋಪಗೊಂಡು ಅವನಿಗೆ—
ನೀನು ಈ ಪ್ರಕಾರ ಮಾಡಿ ನನ್ನ ವಿಧಿನಿಬಂಧನೆಗಳನ್ನು
ಮೀರಿದ್ದರಿಂದ ನಿನ್ನ ರಾಜ್ಯವನ್ನು ನಿನ್ನಿಂದ ಕಿತ್ತು
12 ಕೊಂಡು ನಿನ್ನ ಸೇವಕನಿಗೆ ಕೊಡುವೆನು. ಆದರೂ
ನಾನು ನಿನ್ನ ತಂದೆಯಾದ ದಾವೀದನನ್ನು ನೆನಸಿ ನಿನ್ನ
ಕಾಲದಲ್ಲಿ ಇದನ್ನು ಮಾಡುವದಿಲ್ಲ. ನಿನ್ನ ಮಗನ
13 ಕೈಯಿಂದ ಅದನ್ನು ಕಿತ್ತುಕೊಳ್ಳುವೆನು. ಆದರೆ
ರಾಜ್ಯವನ್ನೆಲ್ಲಾ ಕಿತ್ತುಕೊಳ್ಳುವದಿಲ್ಲ. ನನ್ನ ಸೇವಕ
ನಾದ ದಾವೀದನಿಗೋಸ್ಕರವೂ ನಾನು ಆರಿಸಿಕೊಂಡ
ಯೆರೂಸಲೇಮ್‌ಪಟ್ಟಣಕ್ಕೋಸ್ಕರವೂ ನಿನ್ನ ಮಗನಿಗೆ
ಒಂದು ಕುಲವನ್ನು ಉಳಿಸುವೆನು ಎಂದು ಹೇಳಿದನು.

ಯೆಹೋವನು ಎದೋಮ್ಯನೂ ರಾಜಪುತ್ರನ
ಆದ ಹದದನನ್ನು ಸೊಲೊಮೋನನಿಗೆ ವಿರೋಧವಾ
ಏಳಮಾಡಿದನು. ದಾವೀದನಿಗೂ ಎದೋಮ
ರಿಗೂ ಯುದ್ಧನಡಿಯುತ್ತಿರುವಾಗ ಸೇನಾಪತಿಯಾ
ಯೋವಾಬನು ಇಸ್ರಾಯೇಲ್ ಸರ್ವಸೈನ್ಯದೊಡ
ಅಲ್ಲಿಗೆ ಹೋಗಿ ಹತರಾದ ಇಸ್ರಾಯೇಲ್ಯರನ್ನು ಹ
ಣಿಟ್ಟು ಆರು ತಿಂಗಳು ಅಲ್ಲಿಯೇ ಇದ್ದು ಎದೋಮ್ಯ
ಎಲ್ಲಾ ಗಂಡಸರನ್ನು ಸಂಹರಿಸಿದನು. ಆ ಸಮಯ
ದಲ್ಲಿ ಬಾಲಕನಾದ ಹದದನು ತನ್ನ ತಂದೆಯ ಸೇವ
ರಾದ ಕೆಲವು ಮಂದಿ ಎದೋಮ್ಯರ ಜೊತೆಯಲ್ಲಿ ಐಗ
ಪ್ತಕ್ಕೆ ಓಡಿಹೋಗಬೇಕೆಂದು ಹೊರಟನು. ಅವರ
ಮೊದಲು ಮಿದ್ಯಾನಿಗೂ ಆ ಮೇಲೆ ಪಾರಾನಿಗ
ಬಂದರು. ಅಲ್ಲಿಂದ ಕೆಲವು ಮಂದಿ ಪಾರಾನಿನ ಜ
ರನ್ನು ತಮ್ಮ ಜೊತೆಯಲ್ಲಿ ಕರಕೊಂಡು ಐಗುಪ್ತ
ಅರಸನಾದ ಫರೋಹನ ಬಳಿಗೆ ಬಂದರು. ಫರೋಹನ
ಹದದನಿಗೆ ಅಶನವನ್ನು ನೇಮಿಸಿ ಮನೆಯನ್ನೂ ಭೂಮಿ
ಯನ್ನೂ ಕೊಟ್ಟನು. ಹದದನು ಫರೋಹನ ವಿಶೇ
ದಯೆಗೆ ಪಾತ್ರನಾದದರಿಂದ ಫರೋಹನು ತನ್ನ ಹೆಂಡ
ಯೂ ರಾಣಿಯೂ ಆದ ತಖ್ಪೆನೇಸ್ ಎಂಬಾಕೆಯ ತಂ
ಯನ್ನು ಇವನಿಗೆ ಮದುವೆಮಾಡಿಕೊಟ್ಟನು. ಆ
ಯಲ್ಲಿ ಇವನಿಗೆ ಗೆನುಬತ್ ಎಂಬ ಮಗನು ಹುಟ
ದನು. ತಖ್ಪೆನೇಸಳು ಈ ಹುಡುಗನನ್ನು ಫರೋಹ
ಮನೆಯಲ್ಲೇ ಸಾಕಿದಳು; ಅಲ್ಲಿ ಇವನು ಫರೋಹ
ಕುಮಾರರ ಜೊತೆಯಲ್ಲಿದ್ದನು. ದಾವೀದನು ಪಿತ
ಗಳ ಬಳಿಗೆ ಸೇರಿದನೆಂದೂ ಸೇನಾಪತಿಯಾದ ಯೊ
ವಾಬನು ಮೃತನಾದನೆಂದೂ ಐಗುಪ್ತದಲ್ಲಿದ್ದ ಹ
ದನು ಕೇಳಿ ಫರೋಹನಿಗೆ—ನಾನು ಸ್ವದೇಶಕ್ಕೆ ಹೋ
ಬೇಕೆಂದಿರುತ್ತೇನೆ; ನನಗೆ ಅಪ್ಪಣೆಕೊಡು ಅಂದನು
ಫರೋಹನು ಅವನನ್ನು—ನನ್ನ ಬಳಿಯಲ್ಲಿ ನಿನಗೇನ
ಕೊರತೆಯಾಯಿತು? ಸ್ವದೇಶಕ್ಕೆ ಹೋಗಬೇಕೆಂದ
ಯಾಕೆ ಆಶಿಸುತ್ತೀ ಎಂದು ಕೇಳಲು ಅವನು—ಏನು
ಕೊರತೆಯಾಗಿರುವದಿಲ್ಲ; ಆದರೂ ನನಗೆ ಹೋಗು
ದಕ್ಕೆ ಅಪ್ಪಣೆಯಾಗಬೇಕು ಎಂದು ಉತ್ತರಕೊಟ್ಟನು
ದೇವರು ಸೊಲೊಮೋನನಿಗೆ ವಿರೋಧವಾಗಿ ಎಬ್ಬ
ಸಿದ ಎರಡನೆಯ ವೈರಿಯು ಎಲ್ಯಾದಾವನ ಮಗನಾ
ರೆಜೋನ್ ಎಂಬವನು. ದಾವೀದನು ಚೋಬದ
ರನ್ನು ಸಂಹರಿಸಿದಾಗ ಇವನು ಚೋಬದ ಅರಸನ
ತನ್ನ ಒಡೆಯನೂ ಆದ ಹದದೆಜೆರನನ್ನು ಬಿಟ್ಟು ಓ
ಹೋಗಿ ಕೆಲವು ಮಂದಿಯನ್ನು ಕೂಡಿಸಿಕೊಂಡು ತಾನ
ಅವರ ನಾಯಕನಾಗಿ ಅವರೊಡನೆ ದಮಸ್ಕಕ್ಕೆ ಬಂದ
ಅಲ್ಲಿ ಅರಸನಾದನು. ಸೊಲೊಮೋನನ ಜೀವಮಾ
ದಲ್ಲೆಲ್ಲಾ ಇಸ್ರಾಯೇಲ್ಯರಿಗೆ ಮಹಾಬಾಧಕನಾ
ಹದದನಲ್ಲದೆ ಇವನೂ ವೈರಿಯಾಗಿದ್ದನು. ಇವನ
ಅರಾಮ್‌ದೇಶದಲ್ಲಿ ಆಳುವವನಾಗಿ ಇಸ್ರಾಯೇ
ರನ್ನು ಬಹಳವಾಗಿ ದ್ವೇಷಿಸಿದನು.
ಅರಸನಾದ ಸೊಲೊಮೋನನಿಗೆ ವಿರೋಧವಾ
ಎದ್ದವರಲ್ಲಿ ಅವನ ಸೇವಕನೂ ಚರೇದ ಊರಿನ ಎಫ್ರಾ
ಯಿಮ್ಯನಾದ ನೆಬಾಟನ ಮಗನೂ ಆಗಿದ್ದ ಯಾರೊ
ಬ್ಬಾಮನೆಂಬವನು ಮತ್ತೊಬ್ಬನು; ಚೆರೂಗಳೆಂ
ವಿಧವೆಯು ಅವನ ತಾಯಿ. ಅವನು ತಿರುಗಿ ಬಿ

ದ್ದು ಹೇಗಂದರೆ— ಸೊಲೊಮೋನನು ಮಿಲ್ಲೋ
ಕೋಟೆಯನ್ನು ಕಟ್ಟಿಸಿ ತನ್ನ ತಂದೆಯಾದ ದಾವೀದನ
ಪಟ್ಟಣದ ದುರ್ಬಲಸ್ಥಳವನ್ನು ಭದ್ರಪಡಿಸುತ್ತಿರುವಾಗ
28 ಯೌವನಸ್ಥನಾದ ಯಾರೊಬ್ಬಾಮನು ಬಹುಸಾಮ
ರ್ಥ್ಯದಿಂದ ಕೆಲಸಮಾಡುತ್ತಿರುವದನ್ನು ಕಂಡು ಅವ
ನನ್ನು ಯೋಸೇಫ್ಯರ ಎಲ್ಲಾ ಆಳುಗಳ ಮೇಲೆ ಮೇಸ್ತ್ರಿ
29 ಯನ್ನಾಗಿ ನೇಮಿಸಿದನು. ಒಂದು ದಿವಸ ಯಾರೊ
ಬ್ಬಾಮನು ಯೆರೂಸಲೇಮಿನಿಂದ ಎಲ್ಲಿಗೋ ಹೋಗು
ತ್ತಿರುವಾಗ ಅಡವಿಯಲ್ಲಿ ಶೀಲೋವಿನವನಾದ ಅಹೀ
ಯನೆಂಬ ಪ್ರವಾದಿಯು ಅವನಿಗೆ ಎದುರಾದನು.
ಇವನು ಹೊಸ ಬಟ್ಟೆಯನ್ನು ಹೊದ್ದುಕೊಂಡಿದ್ದನು.
ಅಲ್ಲಿ ಇವರಿಬ್ಬರ ಹೊರತಾಗಿ ಬೇರೆ ಯಾರೂ ಇರಲಿಲ್ಲ.
30 ಆಗ ಅಹೀಯನು ತಾನು ಹೊದ್ದುಕೊಂಡಿದ್ದ ಹೊಸ
ಬಟ್ಟೆಯನ್ನು ತೆಗೆದುಕೊಂಡು ಅದನ್ನು ಹರಿದು ಹನ್ನೆ
31 ರಡು ತುಂಡುಮಾಡಿ ಯಾರೊಬ್ಬಾಮನಿಗೆ— ನೀನು
ಇವುಗಳಲ್ಲಿ ಹತ್ತು ತುಂಡುಗಳನ್ನು ತೆಗೆದುಕೋ.
ಇಸ್ರಾಯೇಲ್‍ದೇವರಾದ ಯೆಹೋವನು ರಾಜ್ಯ
32 ವನ್ನು ಸೊಲೊಮೋನನಿಂದ ಕಿತ್ತುಕೊಂಡು ತನ್ನ
ಸೇವಕನಾದ ದಾವೀದನ ನಿಮಿತ್ತವಾಗಿಯೂ ತಾನು
ಇಸ್ರಾಯೇಲ್ಯರ ಎಲ್ಲಾ ಕುಲಗಳಿಂದ ಆರಿಸಿಕೊಂಡ
ಯೆರೂಸಲೇಮ್‍ಪಟ್ಟಣದ ನಿಮಿತ್ತವಾಗಿಯೂ ಅವನಿಗೆ
ಒಂದೇ ಕುಲವನ್ನು ಉಳಿಸಿ ಬೇರೆ ಹತ್ತು ಕುಲಗಳನ್ನು
33 ನಿನಗೆ ಕೊಡುತ್ತೇನೆಂದು ಹೇಳಿದ್ದಾನೆ. ಇದಲ್ಲದೆ
ಆತನು ನಿನಗೆ—ಸೊಲೊಮೋನನೂ ಅವನ ಮನೆಯ
ವರೂ ನನ್ನನ್ನು ಬಿಟ್ಟು ಚೀದೋನ್ಯರ ದೇವತೆಯಾದ
ಅಷ್ಟೋರೆತ್, ಮೋವಾಬ್ಯರ ದೇವತೆಯಾದ ಕೆಮೋಷ್,
ಅಮ್ಮೋನಿಯರ ದೇವತೆಯಾದ ಮಿಲ್ಕೋಮ್ ಇವುಗ
ಳನ್ನು ಆರಾಧಿಸಿದ್ದೂ ಅವರ ತಂದೆಯಾದ ದಾವೀದನು
ನನ್ನ ನೇಮವಿಧಿಗಳನ್ನು ಕೈಕೊಂಡು ನನ್ನನ್ನು ಮೆಚ್ಚಿಸಿ
ನಡೆದಂತೆ ಅವರು ನಡಿಯದೆ ಹೋದದ್ದೂ ಇದಕ್ಕೆ
34 ಕಾರಣ. ಆದರೂ ನಾನು ಸೊಲೊಮೋನನ ಕೈ
ಯಿಂದ ರಾಜ್ಯವನ್ನೆಲ್ಲಾ ಕಿತ್ತುಕೊಳ್ಳುವದಿಲ್ಲ; ನನ್ನ
ಆಜ್ಞಾವಿಧಿಗಳನ್ನು ಕೈಕೊಂಡವನೂ ನಾನು ಆರಿಸಿ
ಕೊಂಡ ಸೇವಕನೂ ಆದ ದಾವೀದನ ನಿಮಿತ್ತವಾಗಿ ಅವ
ನನ್ನು ಅವನ ಜೀವಮಾನದಲ್ಲೆಲ್ಲಾ ಅರಸನನ್ನಾಗಿಯೇ
35 ಇರಿಸುವೆನು. ಆದರೆ ಅವನ ಮಗನ ಕೈಯಿಂದ
ಅದನ್ನು ಕಿತ್ತುಕೊಂಡು ನಿನಗೆ ಹತ್ತು ಕುಲಗಳನ್ನು
36 ಕೊಡುವೆನು. ನಾನು ನನ್ನ ಹೆಸರಿಗೋಸ್ಕರ ಆರಿಸಿ
ಕೊಂಡ ಯೆರೂಸಲೇಮ್‍ಪಟ್ಟಣದಲ್ಲಿ ನನ್ನ ಸೇವಕ
ನಾದ ದಾವೀದನ ದೀಪವು ನನ್ನ ಸನ್ನಿಧಿಯಲ್ಲಿ ಉರಿ
ಯುತ್ತಲೇ ಇರುವಂತೆ ಅವನ ಮಗನಿಗೆ ಒಂದು ಕುಲ
37 ವನ್ನು ಉಳಿಸುವೆನು. ನಾನು ನಿನ್ನನ್ನು ಇಸ್ರಾಯೇ
ಲ್ಯರ ಅರಸನನ್ನಾಗಿ ನೇಮಿಸುವೆನು; ನೀನು ಅವರನ್ನು
38 ನಿನ್ನ ಇಷ್ಟದ ಪ್ರಕಾರ ಆಳಬಹುದು. ನನ್ನ ಸೇವಕ
ನಾದ ದಾವೀದನು ನನ್ನ ಆಜ್ಞಾವಿಧಿಗಳನ್ನು ಕೈಕೊಂ
ಡಂತೆ ನೀನೂ ನನ್ನ ಆಜ್ಞೆಗಳನ್ನು ಕೈಕೊಂಡು ನನ್ನ
ಮಾರ್ಗದಲ್ಲಿ ನಡೆದು ನನ್ನನ್ನು ಮೆಚ್ಚಿಸುವದಾದರೆ
ನಾನು ನಿನ್ನ ಸಂಗಡ ಇದ್ದು ದಾವೀದನ ಸಂತಾನ
ದಂತೆ ನಿನ್ನ ಸಂತಾನವನ್ನೂ ಸ್ಥಿರಪಡಿಸುವೆನು; ಇಸ್ರಾ
39 ಯೇಲ್‍ರಾಜ್ಯವು ನಿನ್ನ ಪಾಲಾಗುವದು. ದಾವೀದನ
ಸಂತಾನದವರನ್ನು ಅವರ ಪಾಪದ ದೆಸೆಯಿಂದ ಕುಗ್ಗಿ
ಸುವೆನು; ಆದರೆ ಸದಾಕಾಲವೂ ಅಲ್ಲ ಎಂದು ಹೇಳಿ
ದ್ದಾನೆ ಅಂದನು.

ಸೊಲೊಮೋನನು ಯಾರೊಬ್ಬಾಮನನ್ನು ಕೊ 40
ಲ್ಲುವದಕ್ಕೆ ಪ್ರಯತ್ನಿಸಿದಾಗ ಅವನು ತಪ್ಪಿಸಿಕೊಂಡು
ಐಗುಪ್ತದ ಅರಸನಾದ ಶೀಶಕನ ಬಳಿಗೆ ಹೋಗಿ
ಸೊಲೊಮೋನನು ಜೀವದಿಂದಿರುವ ವರೆಗೆ ಅಲ್ಲಿಯೇ
ಇದ್ದನು.

ಸೊಲೊಮೋನನ ಉಳಿದ ಎಲ್ಲಾ ಕೃತ್ಯಗಳನ್ನೂ 41
ಅವನ ಜ್ಞಾನವನ್ನೂ ಕುರಿತು ಸೊಲೊಮೋನನ ಚರಿತ್ರ
ಎಂಬ ಗ್ರಂಥದಲ್ಲಿ ಬರೆದಿರುತ್ತದೆ. ಅವನು ಯೆರೂಸ 42
ಲೇಮಿನಲ್ಲಿದ್ದುಕೊಂಡು ಎಲ್ಲಾ ಇಸ್ರಾಯೇಲ್ಯರನ್ನು
ನಾಲ್ವತ್ತು ವರುಷ ಆಳಿದನಂತರ ಪಿತೃಗಳ ಬಳಿಗೆ 43
ಸೇರಿದನು; ಅವನ ಶವವನ್ನು ತಂದೆಯಾದ ದಾವೀದನ
ಪಟ್ಟಣದಲ್ಲಿ ಸಮಾಧಿಮಾಡಿದರು. ಅವನಿಗೆ ಬದಲಾಗಿ
ಅವನ ಮಗನಾದ ರೆಹಬ್ಬಾಮನು ಅರಸನಾದನು.

## ರೆಹಬ್ಬಾಮನೂ ಯಾರೊಬ್ಬಾಮನೂ.

12—14.

### ರಾಜ್ಯಭೇದ.

**12** ರೆಹಬ್ಬಾಮನು ಶೆಕೆಮಿಗೆ ಹೋದನು; ಅಲ್ಲಿ
ಎಲ್ಲಾ ಇಸ್ರಾಯೇಲ್ಯರೂ ಅವನನ್ನು ಅರಸನನ್ನಾಗಿ
ಮಾಡುವದಕ್ಕೆ ಕೂಡಿ ಬಂದಿದ್ದರು. ಇದಲ್ಲದೆ ಅರಸ 2
ನಾದ ಸೊಲೊಮೋನನಿಗೆ ತಪ್ಪಿಸಿಕೊಂಡು ಐಗುಪ್ತಕ್ಕೆ
ಓಡಿಹೋಗಿದ್ದ ನೆಬಾಟನ ಮಗನಾದ ಯಾರೊಬ್ಬಾ
ಮನನ್ನು ಕರಿಸಿಕೊಂಡಿದ್ದರು. ಯಾರೊಬ್ಬಾಮನು 3
ನಡೆದ ಸಂಗತಿಗಳ ವರ್ತಮಾನವನ್ನು ಕೇಳಿ ಎಲ್ಲಾ
ಇಸ್ರಾಯೇಲ್ಯರೊಡನೆ ರೆಹಬ್ಬಾಮನ ಬಳಿಗೆ ಹೋಗಿ
ಅವನಿಗೆ—ನಿನ್ನ ತಂದೆಯು ನಮ್ಮ ಮೇಲೆ ಭಾರ 4
ವಾದ ನೊಗವನ್ನು ಹೇರಿದನು; ನಿನ್ನ ತಂದೆಯು ನೇಮಿ
ಸಿದ ಬಿಟ್ಟೀಕೆಲಸವನ್ನು ನೀನು ಕಡಿಮೆಮಾಡಿ ನಮ್ಮ
ಮೇಲಿರುವ ಭಾರವಾದ ನೊಗವನ್ನು ಹಗುರಮಾಡುವ
ದಾದರೆ ನಾವು ನಿನ್ನನ್ನು ಸೇವಿಸುವೆವು ಎಂದು ಹೇಳಲು
ಅವನು—ನೀವು ಈಗ ಹೋಗಿ ಮೂರು ದಿನಗಳಾದ 5
ನಂತರ ತಿರಿಗಿ ಬನ್ನಿರಿ ಎಂದು ಉತ್ತರಕೊಟ್ಟನು; ಜನರು
ಹೋದರು. ಆಗ ಅರಸನಾದ ರೆಹಬ್ಬಾಮನು ತನ್ನ 6
ತಂದೆಯಾದ ಸೊಲೊಮೋನನ ಕಾಲದಲ್ಲಿ ಮಂತ್ರಿಗಳಾ
ಗಿದ್ದ ಹಿರಿಯರನ್ನು ಕೂಡಿಸಿ ತಾನು ಜನರಿಗೆ ಕೊಡ
ತಕ್ಕ ಉತ್ತರದ ವಿಷಯದಲ್ಲಿ ಅವರ ಆಲೋಚನೆಯನ್ನು
ಕೇಳಿದನು. ಅವರು ಅವನಿಗೆ—ನೀನು ಈ ಹೊತ್ತು ಈ 7
ಜನರ ಮಾತನ್ನು ಕೇಳಿ ಅವರಿಗೆ ಒಳಗಾಗಿ ಒಳ್ಳೇ
ಉತ್ತರಕೊಡುವದಾದರೆ ಅವರು ಯಾವಾಗಲೂ ನಿನಗೆ
ಒಳಗಾಗಿರುವರು ಅಂದರು. ಆದರೆ ಅವನು ಹಿರಿಯರ 8
ಆಲೋಚನೆಯನ್ನು ನಿರಾಕರಿಸಿ ತನ್ನ ಸಂಗಡ ಬೆಳೆದು
ತನ್ನ ಮಂತ್ರಿಗಳಾದ ಯೌವನಸ್ಥರನ್ನು ಕರಿಸಿ—ನನ್ನ 9
ತಂದೆಯು ಹೇರಿದ ನೊಗವನ್ನು ಹಗುರ ಮಾಡಬೇ
ಕೆಂದು ಬೇಡಿಕೊಳ್ಳುವ ಈ ಜನರಿಗೆ ಯಾವ ಉತ್ತರ
ವನ್ನು ಕೊಡತಕ್ಕದ್ದು? ಈ ವಿಷಯದಲ್ಲಿ ನಿಮ್ಮ ಆ

10 ಲೋಚನೆ ಏನು ಎಂದು ಕೇಳಲು ಅವರು ಅವನಿಗೆ—
ನಿನ್ನ ತಂದೆಯು ನಮ್ಮ ಮೇಲೆ ಹೇರಿರುವ ನೊಗವನ್ನು
ಹಗುರವಾಡು ಎಂಬದಾಗಿ ನಿನ್ನನ್ನು ಬೇಡಿಕೊಂಡ ಜನ
ರಿಗೆ ನೀನು—ನನ್ನ ತಂದೆಯ ನಡುವಿಗಿಂತ ನನ್ನ ಕಿರಿ
11 ಬೆರಳು ದಪ್ಪವಾಗಿದೆ. ನನ್ನ ತಂದೆಯು ನಿಮ್ಮ ಮೇಲೆ
ಭಾರವಾದ ನೊಗವನ್ನು ಹಾಕಿರುವದು ನಿಜ; ಆದರೆ
ನಾನು ಆದಕ್ಕೆ ಇನ್ನೂ ಹೆಚ್ಚಿನ ಭಾರವನ್ನು ಕೂಡಿಸು
ತ್ತೇನೆ; ಅವನು ನಿಮ್ಮನ್ನು ಬಾರುಕೋಲುಗಳಿಂದ
ಹೊಡೆದದ್ದು ನಿಜ; ನಾನಾದರೋ ನಿಮ್ಮನ್ನು ಮುಳ್ಳು
ಕೊರಡೆಗಳಿಂದ ದಂಡಿಸುವೆನು ಎಂಬದಾಗಿ ಹೇಳಬೇಕು
12 ಎಂದು ಉತ್ತರಕೊಟ್ಟರು. ಯಾರೊಬ್ಬಾಮನೂ ಎಲ್ಲಾ
ಜನರೂ ಅರಸನಾದ ರೆಹಬ್ಬಾಮನ ಅಪ್ಪಣೆಯಂತೆ
ಮೂರನೆಯ ದಿನದಲ್ಲಿ ತಿರಿಗಿ ಅವನ ಬಳಿಗೆ ಬಂದರು.
13 ಅರಸನು ಅವರಿಗೆ ಕಠಿನವಾದ ಉತ್ತರವನ್ನು ಕೊಟ್ಟ
ನು; ಅವನು ಹಿರಿಯರ ಆಲೋಚನೆಯನ್ನು ನಿರಾಕರಿಸಿ
14 ಯೌವನಸ್ಥರ ಆಲೋಚನೆಗನುಸಾರವಾಗಿ ಜನರಿಗೆ—
ನನ್ನ ತಂದೆಯು ನಿಮ್ಮ ಮೇಲೆ ಭಾರವಾದ ನೊಗವನ್ನು
ಹೇರಿರುವದು ನಿಜ; ಆದರೆ ನಾನು ಅದಕ್ಕೆ ಇನ್ನೂ
ಹೆಚ್ಚಿನ ಭಾರವನ್ನು ಕೂಡಿಸುವೆನು; ಅವನು ನಿಮ್ಮನ್ನು
ಬಾರುಕೋಲುಗಳಿಂದ ಹೊಡೆದದ್ದು ನಿಜ; ನಾನಾದರೋ
1)ಮುಳ್ಳುಕೊರಡೆಗಳಿಂದ ದಂಡಿಸುವೆನು ಎಂದು ನುಡಿ
15 ದನು. ಅವನು ಜನರ ಮಾತನ್ನು ಕೇಳದೆಹೋದದ್ದು
ಯೆಹೋವನಿಂದಲೇ. ಈ ಪ್ರಕಾರ ಯೆಹೋವನು
ಶೀಲೋವಿನವನಾದ ಅಹೀಯನ ಮುಖಾಂತರವಾಗಿ
ನೆಬಾಟನ ಮಗನಾದ ಯಾರೊಬ್ಬಾಮನಿಗೆ ಹೇಳಿಸಿದ
16 ಮಾತು ನೆರವೇರಿತು. ಅರಸನು ತಮ್ಮ ಮಾತನ್ನು
ಲಕ್ಷಿಸಲಿಲ್ಲವೆಂದು ನೋಡಿ ಇಸ್ರಾಯೇಲ್ಯರೆಲ್ಲರೂ ಅವ
ನಿಗೆ—ದಾವೀದನಲ್ಲಿ ನಮಗೇನು ಪಾಲು? ಇಷಯನ
ಮಗನಲ್ಲಿ ನಮಗೇನು ಬಾಧ್ಯತೆ? ಇಸ್ರಾಯೇಲ್ಯರೇ,
ನಿಮ್ಮ ನಿಮ್ಮ ನಿವಾಸಗಳಿಗೆ ಹೋಗಿರಿ; ದಾವೀದನವರೇ,
ನಿಮ್ಮ ಕುಲವನ್ನು ನೀವೇ ನೋಡಿಕೊಳ್ಳಿರಿ ಎಂದು
17 ಹೇಳಿ ತಮ್ಮ ತಮ್ಮ ನಿವಾಸಗಳಿಗೆ ಹೋದರು. ಯೆ
ಹೂದ ಪ್ರಾಂತದಲ್ಲಿದ್ದ ಇಸ್ರಾಯೇಲ್ಯರಾದರೋ ರೆಹ
18 ಬ್ಬಾಮನ ಆಧೀನದಲ್ಲಿದ್ದರು. ರೆಹಬ್ಬಾಮನು ಬಿಟ್ಟೀ
ಕೆಲಸದವರ ಮೇಲ್ವಿಚಾರಕನಾದ ಅದೋರಾಮನನ್ನು
ಇಸ್ರಾಯೇಲ್ಯರ ಬಳಿಗೆ ಕಳುಹಿಸಲು ಅವರು ಇವನನ್ನು
ಕಲ್ಲೆಸೆದು ಕೊಂದರು. ಅರಸನಾದ ರೆಹಬ್ಬಾಮನು
ಬೇಗನೇ ರಥವನ್ನೇರಿ ಯೆರೂಸಲೇಮಿಗೆ ಓಡಿಹೋದನು.
19 ಇಸ್ರಾಯೇಲ್ಯರು ಅಂದಿನಿಂದ ಇಂದಿನ ವರೆಗೂ ದಾವೀ
ದನ ಕುಟುಂಬದವರೊಡನೆ ಸಮಾಧಾನವಾಗಲೇ ಇಲ್ಲ.
20 ಯಾರೊಬ್ಬಾಮನು ಹಿಂದಿರುಗಿ ಬಂದಿದ್ದಾನೆಂಬ ವರ್ತ
ಮಾನವು ಇಸ್ರಾಯೇಲ್ಯರಿಗೆ ಗೊತ್ತಾದಾಗ ಅವರೆಲ್ಲ
ರೂ ಅವನನ್ನು ನೆರೆದ ಸಭೆಯ ಮುಂದೆ ಕರಿಸಿ ತಮ್ಮ
ಅರಸನನ್ನಾಗಿ ನೇಮಿಸಿಕೊಂಡರು. ದಾವೀದನ ಕುಟುಂ
ಬದವರನ್ನು ಯೆಹೂದಕುಲವೇ ಹೊರತು ಬೇರೆ ಯಾವ
ಕುಲವೂ ಹಿಂಬಾಲಿಸಲಿಲ್ಲ.
21 ಸೊಲೊಮೋನನ ಮಗನಾದ ರೆಹಬ್ಬಾಮನು
ಯೆರೂಸಲೇಮನ್ನು ಮುಟ್ಟಿದನಂತರ ಇಸ್ರಾಯೇ
ರಿಗೆ ವಿರೋಧವಾಗಿ ಯುದ್ಧಮಾಡುವದಕ್ಕೂ ರಾ
ವನ್ನು ತಿರಿಗಿ ತನಗೆ ವಶಪಡಿಸಿಕೊಳ್ಳುವದಕ್ಕೂ
ಹೂದಬೆನ್ಯಾಮೀನ್‘ಕುಲಗಳಿಂದ ಲಕ್ಷದ ಎಂಭ
ಸಾವಿರ ಮಂದಿ ಶ್ರೇಷ್ಠ ಸೈನಿಕರನ್ನು ಕೂಡಿಸಿದನ
ಆಗ ದೇವರ ಮನುಷ್ಯನಾದ ಶೆಮಾಯನಿಗೆ
ನೀನು ಹೋಗಿ ಸೊಲೊಮೋನನ ಮಗನೂ ಯೆಹೂದ
ಅರಸನೂ ಆದ ರೆಹಬ್ಬಾಮನಿಗೂ ಯೆಹೂದಬೆನ
ಮೀನ್‌ಕುಲಗಳವರಿಗೂ ಉಳಿದ ಜನರಿಗೂ—ಯೆಹೆ
ವನ ಮಾತನ್ನು ಕೇಳಿರಿ, ನೀವು ನಿಮ್ಮ ಸಹೋ
ರಾದ ಇಸ್ರಾಯೇಲ್ಯರೊಡನೆ ಯುದ್ಧಮಾಡುವದ
ಹೋಗಬಾರದು; ಎಲ್ಲರೂ ಹಿಂದಿರುಗಿ ಹೋಗಿರಿ;
ಕಾರ್ಯವು ಯೆಹೋವನಿಂದಾಗಿದೆ ಎಂದು ಹೇಳಬೇ
ಎಂಬ ದೈವೋತ್ತರವುಂಟಾಗಲು ಅವರು ಯೆಹೋ
ಮಾತನ್ನು ಕೇಳಿ ಹಿಂದಿರುಗಿಹೋದರು.

ಯಾರೊಬ್ಬಾಮನು ತನ್ನ ರಾಜ್ಯವನ್ನು ಬಲಪಡಿಸಿದ್ದು.

ಯಾರೊಬ್ಬಾಮನು ಎಫ್ರಾಯೀಮ್‌ಬೆಟ್ಟದ ಸೀ
ಯಲ್ಲಿನ ಶೆಕೆಮ್‌ಪಟ್ಟಣವನ್ನು ಭದ್ರಪಡಿಸಿ ಅ
ವಾಸಿಸಿದನು. ಅಲ್ಲಿಂದ ಪೆನೂವೇಲಿಗೆ ಹೋಗಿ ಅ
ನ್ನೂ ಭದ್ರಪಡಿಸಿದನು; ಅವನು ತನ್ನ ಮನಸ್ಸಿನಲ್ಲಿ
ರಾಜ್ಯವು ತಿರಿಗಿ ದಾವೀದನ ಕುಟುಂಬದವರಿಗೆ ಆಗ
ದೋ ಏನೋ; ಜನರು ಯೆರೂಸಲೇಮಿನಲ್ಲಿರು
ಯೆಹೋವನ ಆಲಯಕ್ಕೆ ಯಜ್ಞಾರ್ಪಣೆಗಾಗಿ ಹೋ
ವದಾದರೆ ಅವರ ಮನಸ್ಸು ಅವರ ಒಡೆಯನೂ ಯೆಹ
ದದ ಅರಸನೂ ಆದ ರೆಹಬ್ಬಾಮನ ಕಡೆಗೆ ತಿರುಗೀ
ಅವರು ನನ್ನನ್ನು ಕೊಂದು ಅವನ ಬಳಿಗೆ ಹೋದಾ
ಅಂದುಕೊಂಡು ಬಹಳವಾಗಿ ಆಲೋಚಿಸಿ ಕಡೆಯ
ಬಂಗಾರದ ಎರಡು ಬಸವನ ಮೂರ್ತಿಗಳನ್ನು ಮಾಡಿ
ಇಸ್ರಾಯೇಲ್ಯರಿಗೆ—ನೀವು ಜಾತ್ರೆಗಾಗಿ ಯೆರೂಸ
ಮಿಗೆ ಹೋದದ್ದು ಸಾಕಾಯಿತು; ಇಗೋ, ನಿಮ್ಮನ
ಐಗುಪ್ತದಿಂದ ಕರತಂದ ದೇವರುಗಳು ಇಲ್ಲಿರುತ್ತ
ಎಂದು ಹೇಳಿ ಅವುಗಳಲ್ಲಿ ಒಂದನ್ನು ಬೇತೇಲಿನಲ್ಲಿ
ಇನ್ನೊಂದನ್ನು ದಾನಿಗೆ ಕಳುಹಿಸಿದನು. (ಇದು ಪಾ
ಕ್ಕೆ ಕಾರಣವಾಯಿತು.) ಜನರು ಈ ಎರಡನೆಯ ವಿ
ಹವನ್ನು ಮೆರವಣಿಗೆಯಿಂದ ದಾನಿಗೆ ಒಯ್ದು
ಇದಲ್ಲದೆ ಅವನು ಪೂಜಾಗಿರಿಗಳ ಮೇಲೆ ಗುಡಿಗಳನ
ಕಟ್ಟಿಸಿ ಲೇವಿಯರಲ್ಲದ ಕನಿಷ್ಠಜನರನ್ನೂ ಯಾಜ
ನ್ನಾಗಿ ನೇಮಿಸಿದನು. ಅವನು ಎಂಟನೆಯ ತಿಂಗ
ಹದಿನೈದನೆಯ ದಿವಸ ಬೇತೇಲಿನಲ್ಲಿ ಯೆಹೂದ
ಶದ ಜಾತ್ರೆಗೆ ಸರಿಯಾದ ಜಾತ್ರೆಯು ನಡೆಯಬೇಕೆಂ
ಅಪ್ಪಣೆಮಾಡಿ ತಾನೂ ಅಲ್ಲಿಗೆ ಹೋಗಿ ಅಲ್ಲಿ ನಿಲ್ಲಿ
ಬಸವನ ಮೂರ್ತಿಗಳಿಗೋಸ್ಕರ ವೇದಿಯ ಮೇ
ಯಜ್ಞಮಾಡಿದನು. ತಾನು ಏರ್ಪಡಿಸಿದ ಪೂಜಾಸ್ಥ
ಗಳ ಯಾಜಕರನ್ನು ಬೇತೇಲಿನ ದೇವಸ್ಥಾನದ ಸೇ
ನೇಮಿಸಿದನು.

1) ಅಥವಾ: ಚೇಳು.

ಒಬ್ಬ ಯೆಹೂದಪ್ರವಾದಿಯು ಬೇತೇಲಿನ ವೇದಿಯನ್ನು
ಶಪಿಸಿದ್ದೂ ಮರಣಹೊಂದಿದ್ದೂ.

33 ಇಸ್ರಾಯೇಲ್ಯರು ಎಂಟನೆಯ ತಿಂಗಳ ಹದಿನೈದನೆಯ
ದಿವಸದಲ್ಲಿ ಹಬ್ಬವನ್ನಾಚರಿಸಬೇಕೆಂದು ಯಾರೊಬ್ಬಾ
ಮನು ಸ್ವೇಚ್ಛೆಯಿಂದ ಗೊತ್ತುಮಾಡಿ ಆ ಸಮಯಕ್ಕೆ
ತಾನೂ ಬೇತೇಲಿನ ಯಜ್ಞವೇದಿಯ ಬಳಿಗೆ ಹೋಗಿ
ಧೂಪಸುಡುವದಕ್ಕಾಗಿ ಅದರ ಮೆಟ್ಲುಗಳನ್ನು ಹತ್ತು
13 ತ್ತಿರುವಾಗ ಯೆಹೂದದೇಶದವನಾದ ಒಬ್ಬ ದೇವರ
ಮನುಷ್ಯನು ಯೆಹೋವನಿಂದ ಕಳುಹಿಸಲ್ಪಟ್ಟವನಾಗಿ
ಬೇತೇಲಿಗೆ ಬಂದನು. ಯಾರೊಬ್ಬಾಮನು ಧೂಪಸು
2 ಡುವದಕ್ಕಾಗಿ ವೇದಿಯ ಹತ್ತಿರ ನಿಂತುಕೊಳ್ಳಲು ಆ
ಮನುಷ್ಯನು ಯೆಹೋವನ ಅಪ್ಪಣೆಯಿಂದ ವೇದಿಯ
ನ್ನು ಕುರಿತು—ವೇದಿಯೇ, ವೇದಿಯೇ, ದಾವೀದನ
ಸಂತಾನದಲ್ಲಿ ಯೋಷೀಯನು ಎಂಬೊಬ್ಬನು
ಹುಟ್ಟುವನು; ಅವನು ನಿನ್ನ ಮೇಲೆ ಧೂಪಸುಡುವ
ಪೂಜಾಸ್ಥಳಗಳ ಯಾಜಕರನ್ನು ಹಿಡಿದು ಅವರನ್ನು
ನಿನ್ನ ಮೇಲೆಯೇ ಯಜ್ಞಮಾಡುವನು. ಮನುಷ್ಯರ
ಎಲುಬುಗಳು ನಿನ್ನ ಮೇಲೆ ಸುಡಲ್ಪಡುವವು ಎಂದು
3 ಯೆಹೋವನು ಹೇಳುತ್ತಾನೆ ಅಂದನು. ಇದಲ್ಲದೆ
ಅವನು—ನನ್ನ ಮಾತು ಯೆಹೋವನದೆಂಬದಕ್ಕೆ ವೇದಿ
ಯು ಸೀಳಿ ಅದರ ಮೇಲಣ ಬೂದಿಯು ಬಿದ್ದುಹೋ
ಗುವದೇ ಗುರುತಾಗಿರುವದು ಎಂದು ಹೇಳಿದನು.
4 ಬೇತೇಲಿನ ವೇದಿಯ ಬಳಿಯಲ್ಲಿ ನಿಂತಿದ್ದ ಅರಸನು
ಆ ದೇವರ ಮನುಷ್ಯನು ವೇದಿಗೆ ವಿರೋಧವಾಗಿ ನುಡಿ
ದದ್ದನ್ನು ಕೇಳಿ ಕೈಚಾಚಿ—ಅವನನ್ನು ಹಿಡಿಯಿರಿ ಎಂದು
ಆಜ್ಞಾಪಿಸಿದನು. ಕೂಡಲೆ ಅವನ ಕೈ ಒಣಗಿಹೋ
ಯಿತು. ಅವನು ಅದನ್ನು ಹಿಂದೆಗೆಯಲಾರದವನಾ
5 ದನು. ಯಜ್ಞವೇದಿಯು ಸೀಳಿ ಅದರ ಮೇಲಣ
ಬೂದಿಯು ಬಿದ್ದುಹೋಯಿತು; ಹೀಗೆ ಆ ದೇವರ
ಮನುಷ್ಯನು ಯೆಹೋವನ ಅಪ್ಪಣೆಯಿಂದ ಹೇಳಿದ
6 ಗುರುತು ನೆರವೇರಿತು. ಅರಸನು ಆ ಮನುಷ್ಯನಿಗೆ—
ನಿನ್ನ ದೇವರಾದ ಯೆಹೋವನು ಪ್ರಸನ್ನನಾಗುವಂತೆ
ಬೇಡಿಕೊಂಡು ನಾನು ನನ್ನ ಕೈಯನ್ನು ಹಿಂದೆಗೆಯು
ವದಕ್ಕಾಗುವ ಹಾಗೆ ಆತನನ್ನು ನನಗೋಸ್ಕರ ಪ್ರಾ
ರ್ಥಿಸು ಎಂದು ಹೇಳಿದನು. ದೇವರ ಮನುಷ್ಯನು
ಯೆಹೋವನನ್ನು ಬೇಡಿಕೊಂಡದರಿಂದ ಅರಸನ ಕೈ
7 ವಾಸಿಯಾಗಿ ಮುಂಚಿನಂತೆ ಆಯಿತು. ಆಗ ಅರಸನು
ಅವನಿಗೆ—ನನ್ನ ಮನೆಗೆ ಬಾ; ಸ್ವಲ್ಪ ಊಟಮಾಡಿ
ಬಲಹೊಂದು; ನಾನು ನಿನಗೆ ಬಹುಮಾನವನ್ನು ಕೊ
8 ಡುತ್ತೇನೆ ಅನ್ನಲು ದೇವರ ಮನುಷ್ಯನು ಅರಸನಿಗೆ—
ನೀನು ನನಗೆ ನಿನ್ನ ಆಸ್ತಿಯಲ್ಲಿ ಅರ್ಧವನ್ನು ಕೊಟ್ಟ
ರೂ ನಾನು ನಿನ್ನ ಸಂಗಡ ಬರುವದಿಲ್ಲ; ಇಲ್ಲಿ ಅನ್ನ
9 ಪಾನಗಳನ್ನು ತೆಗೆದುಕೊಳ್ಳುವದಿಲ್ಲ. ಇಲ್ಲಿ ಅನ್ನ
ಪಾನಗಳನ್ನು ತೆಗೆದುಕೊಳ್ಳಬಾರದೆಂದೂ ಹಿಂದಿರುಗಿ
ಹೋಗುವಾಗ ಬೇರೆ ದಾರಿಯಿಂದ ಹೋಗಬೇಕೆಂದೂ
ನನಗೆ ಯೆಹೋವನ ಅಪ್ಪಣೆಯಾಗಿದೆ ಎಂದು ಹೇಳಿ
10 ಬಂದ ದಾರಿಯನ್ನು ಬಿಟ್ಟು ಇನ್ನೊಂದು ದಾರಿಯನ್ನು
ಹಿಡಿದು ಹೊರಟನು.

ಬೇತೇಲಿನಲ್ಲಿ ಒಬ್ಬ ಮುದುಕನಾದ ಪ್ರವಾದಿಯು 11
ವಾಸವಾಗಿದ್ದನು. ಅವನ ಮಕ್ಕಳು ಬಂದು ದೇವರ
ಮನುಷ್ಯನು ಆ ದಿವಸ ಬೇತೇಲಿನಲ್ಲಿ ಮಾಡಿದ್ದನ್ನೂ
ಅವನು ಅರಸನಿಗೆ ಅಂದದ್ದನ್ನೂ ತಂದೆಗೆ ತಿಳಿಸಿದರು.
ತಂದೆಯು ಅವರನ್ನು—ಅವನು ಯಾವ ದಾರಿಯಿಂದ 12
ಹೋದನು ಎಂದು ಕೇಳಲು ಅವರು ಯೆಹೂದದೇಶ
ದವನಾದ ಆ ದೇವರ ಮನುಷ್ಯನು ಹೋದ ದಾರಿ
ಯನ್ನು ತೋರಿಸಿದರು. ಆಗ ಅವನು ತನ್ನ ಮಕ್ಕ 13
ಳಿಗೆ—ಕತ್ತೆಗೆ ತಡಿಹಾಕಿರಿ ಎಂದು ಆಜ್ಞಾಪಿಸಲು
ಅವರು ಹಾಕಿದರು. ಅವನು ಕತ್ತೆಯ ಮೇಲೆ ಕೂತು
ಕೊಂಡು ದೇವರ ಮನುಷ್ಯನ ಹಿಂದೆ ಹೋಗಿ ಏಲಾ 14
ವೃಕ್ಷದ ಕೆಳಗೆ ಕೂತಿರುವ ಅವನನ್ನು ಕಂಡು—
ಯೆಹೂದದಿಂದ ಬಂದ ದೇವರ ಮನುಷ್ಯನು ನೀನೋ
ಎಂದು ಕೇಳಿದನು; ಅವನು ಹೌದೆಂದನು. ಆಗ ಆ 15
ಮುದುಕನು ಅವನಿಗೆ—ನೀನು ನನ್ನ ಮನೆಗೆ ಬಂದು
ಊಟಮಾಡು ಎಂದು ಹೇಳಿದನು. ಅದಕ್ಕೆ ಅವನು— 16
ನಾನು ನಿನ್ನ ಸಂಗಡ ಬರಕೂಡದು; ಈ ಸ್ಥಳದಲ್ಲಿ
ಅನ್ನಪಾನಗಳನ್ನು ತೆಗೆದುಕೊಳ್ಳಕೂಡದು. ಇಲ್ಲಿ 17
ಅನ್ನಪಾನಗಳನ್ನು ತೆಗೆದುಕೊಳ್ಳಬಾರದೆಂದೂ ಬಂದ
ದಾರಿಯನ್ನು ಬಿಟ್ಟು ಬೇರೆ ದಾರಿಯಿಂದ ಹಿಂದಿರುಗಿ
ಹೋಗಬೇಕೆಂದೂ ನನಗೆ ಯೆಹೋವನ ಅಪ್ಪಣೆಯಾ
ಗಿದೆ ಎಂದು ಉತ್ತರಕೊಟ್ಟನು. ಆಗ ಮುದುಕನು— 18
ನಾನೂ ನಿನ್ನಂತೆ ಪ್ರವಾದಿಯಾಗಿದ್ದೇನೆ; ಒಬ್ಬ ದೇವ
ದೂತನು ನನಗೆ ಕಾಣಿಸಿಕೊಂಡು ನಿನ್ನನ್ನು ಕರ
ಕೊಂಡು ಬರಬೇಕೆಂದೂ ನಿನಗೆ ಅನ್ನಪಾನಗಳನ್ನು
ಕೊಡಬೇಕೆಂದೂ ಯೆಹೋವನ ಹೆಸರಿನಲ್ಲಿ ಆಜ್ಞಾ
ಪಿಸಿದ್ದಾನೆ ಎಂದು ಹೇಳಿದನು; ಆದರೆ ಈ ಮಾತು
ಸುಳ್ಳು. ದೇವರ ಮನುಷ್ಯನು ಹಿಂದಿರುಗಿಕೊಂಡು 19
ಅವನ ಮನೆಗೆ ಹೋಗಿ ಅನ್ನಪಾನಗಳನ್ನು ತೆಗೆದು
ಕೊಂಡನು.

ಅವರು ಊಟಮಾಡುತ್ತಿರುವಾಗ ದೇವರ ಮನು 20
ಷ್ಯನನ್ನು ಹಿಂದಕ್ಕೆ ಕರತಂದ ಪ್ರವಾದಿಗೆ ಯೆಹೋವನು
ಒಂದು ವಾಕ್ಯವನ್ನು ದಯಪಾಲಿಸಿದನು. ಅವನು 21
ಯೆಹೂದದೇಶದವನಾದ ಆ ದೇವರ ಮನುಷ್ಯನಿಗೆ—
ನಿನ್ನ ದೇವರಾದ ಯೆಹೋವನು ನಿನಗೆ ಈ ಸ್ಥಳದಲ್ಲಿ
ಅನ್ನಪಾನಗಳನ್ನು ತೆಗೆದುಕೊಳ್ಳಬಾರದೆಂದು ಆಜ್ಞಾಪಿ
ಸಿದರೂ ನೀನು ಆತನ ಆಜ್ಞೆಯನ್ನು ಮೀರಿ ಅವಿಧೇಯ
ನಾಗಿ ಅನ್ನಪಾನಗಳನ್ನು ತೆಗೆದುಕೊಳ್ಳುವದಕ್ಕೋಸ್ಕರ 22
ಹಿಂದಿರುಗಿ ಬಂದದರಿಂದ ನಿನ್ನ ಶವವು ನಿನ್ನ ಕುಟುಂಬ
ಶ್ಮಶಾನಭೂಮಿಯನ್ನು ಸೇರುವದೇ ಇಲ್ಲವೆಂದು ಯೆ
ಹೋವನು ಹೇಳುತ್ತಾನೆ ಅಂದನು. ಅನ್ನಪಾನಗಳನ್ನು 23
ತೆಗೆದುಕೊಂಡನಂತರ ಅವನು ತಾನು ಕರತಂದ ಪ್ರವಾದಿ
ಗೋಸ್ಕರ ಕತ್ತೆಗೆ ತಡಿಹಾಕಿಸಿದನು. ದೇವರ ಮನು 24
ಷ್ಯನು ಸ್ವಲ್ಪ ದೂರ ಹೋದನಂತರ ಒಂದು ಸಿಂಹವು
ಅವನಿಗೆ ಎದುರಾಗಿ ಬಂದು ಅವನನ್ನು ಕೊಂದು
ಹಾಕಿತು. ಅವನ ಶವವು ದಾರಿಯಲ್ಲಿಯೇ ಬಿದ್ದಿತ್ತು.
ಕತ್ತೆಯೂ ಸಿಂಹವೂ ಶವದ ಹತ್ತಿರ ನಿಂತುಕೊಂಡಿ
ದ್ದವು. ಹಾದುಹೋಗುವವರು ಶವವು ದಾರಿಯಲ್ಲಿ 25
ಬಿದ್ದಿರುವದನ್ನೂ ಸಿಂಹವು ಅದರ ಬಳಿಯಲ್ಲಿ ನಿಂತಿರು
ವದನ್ನೂ ಕಂಡು ಮುದುಕನಾದ ಪ್ರವಾದಿಯ ಊರಿಗೆ

26 ಬಂದು ಅದನ್ನು ತಿಳಿಸಿದರು. ಅವನನ್ನು ಹಿಂದಕ್ಕೆ
ಕರಕೊಂಡು ಹೋಗಿದ್ದ ಪ್ರವಾದಿಯು ಈ ಸುದ್ದಿ
ಯನ್ನು ಕೇಳಿ—ಆ ಶವವು ದೇವರ ಮನುಷ್ಯನದೇ
ಆಗಿರಬೇಕು; ಅವನು ಯೆಹೋವನ ಆಜ್ಞೆಗೆ ಅವಿಧೇ
ಯನಾದದರಿಂದ ಯೆಹೋವನು ಅವನ ವಿಷಯದಲ್ಲಿ
ತಾನು ಹೇಳಿದ ಮಾತು ನೆರವೇರುವಂತೆ ಅವನನ್ನು
ಸಿಂಹದ ಬಾಯಿಗೆ ಒಪ್ಪಿಸಿದನು. ಅದು ಅವನ
ಮೇಲೆ ಹಾರಿ ಅವನನ್ನು ಕೊಂದುಬಿಟ್ಟಿತು ಎಂದು
27 ಹೇಳಿ ಕತ್ತೆಗೆ ತಡಿಹಾಕಬೇಕೆಂದು ಮಕ್ಕಳಿಗೆ ಆಜ್ಞಾ
28 ಪಿಸಿದನು; ಅವರು ಹಾಕಿದರು. ಅವನು ಹೋಗಿ
ಶವವು ದಾರಿಯಲ್ಲಿ ಬಿದ್ದಿರುವದನ್ನೂ ಕತ್ತೆಯೂ ಸಿಂಹ
ವೂ ಅದರ ಬಳಿಯಲ್ಲಿ ನಿಂತಿರುವದನ್ನೂ ಕಂಡನು.
ಸಿಂಹವು ಶವವನ್ನು ತಿನ್ನಲಿಲ್ಲ, ಕತ್ತೆಯನ್ನು ಕೊಲ್ಲ
29 ಲೂ ಇಲ್ಲ. ಪ್ರವಾದಿಯು ದೇವರ ಮನುಷ್ಯನ
ಶವವನ್ನು ಹೂಳಿ ಗೋಳಾಡಬೇಕೆಂದು ಕತ್ತೆಯ ಮೇಲೆ
30 ಹಾಕಿ ತನ್ನ ಊರಿಗೆ ತೆಗೆದುಕೊಂಡು ಬಂದು ತನ್ನ
ಶ್ಮಶಾನಭೂಮಿಯಲ್ಲಿ ಅದನ್ನು ಸಮಾಧಿಮಾಡಿದನು.
ಅವರು - ಅಯ್ಯೋ, ನನ್ನ ಸಹೋದರನೇ, ಎಂದು
31 ಗೋಳಾಡಿದರು. ಅನಂತರ ಅವನು ತನ್ನ ಮಕ್ಕಳಿಗೆ—
ನಾನು ಸತ್ತಾಗ ನನ್ನ ಶವವನ್ನು ದೇವರ ಮನುಷ್ಯನ
ಶವವಿರುವಲ್ಲೇ ಸಮಾಧಿಮಾಡಿರಿ; ನನ್ನ ಎಲುಬು
32 ಗಳನ್ನು ಅವನ ಎಲುಬುಗಳಿರುವಲ್ಲೇ ಇಡಿರಿ. ಅವನು
ಯೆಹೋವನ ಅಪ್ಪಣೆಯಿಂದ ಬೇತೇಲಿನ ಯಜ್ಞವೇದಿಗೆ
ವಿರೋಧವಾಗಿಯೂ ಸಮಾರ್ಯದ ಪಟ್ಟಣಗಳಲ್ಲಿರುವ
ಎಲ್ಲಾ ಪೂಜಾಸ್ಥಳಗಳಿಗೆ ವಿರೋಧವಾಗಿಯೂ ಹೇ
ಳಿದ ಮಾತುಗಳು ಸಂದೇಹವಿಲ್ಲದೆ ನೆರವೇರುವವು
ಅಂದನು.
33 ಇಷ್ಟಾದರೂ ಯಾರೊಬ್ಬಾಮನು ತನ್ನ ದುರ್ಮಾ
ರ್ಗವನ್ನು ಬಿಡದೆ ತಿರಿಗಿ ತಿರಿಗಿ ಕನಿಷ್ಠರಾದ ಜನ
ರನ್ನು ಪೂಜಾಸ್ಥಳಗಳ ಯಾಜಕರನ್ನಾಗಿ ನೇಮಿಸಿದನು;
ಮನಸ್ಸಿಗೆ ಬಂದವರನ್ನು ಪೂಜಾಸ್ಥಳಗಳ ಯಾಜಕ
34 ರನ್ನಾಗಿ ಪ್ರತಿಷ್ಠಿಸಿದನು. ಈ ಕಾರಣದಿಂದ ಯಾರೊ
ಬ್ಬಾಮನ ಕುಟುಂಬದವರು ಪಾಪಿಗಳಾಗಿ ಭೂಲೋಕ
ದಿಂದ ತೆಗೆದುಹಾಕಲ್ಪಟ್ಟು ನಿರ್ನಾಮವಾದರು.

ಯಾರೊಬ್ಬಾಮನ ಮಗನಾದ ಅಬೀಯನು ಅಸ್ವಸ್ಥನಾದದ್ದು;
ಅವನ ಮತ್ತು ಯಾರೊಬ್ಬಾಮನ ಮರಣ.

14 ಆ ಕಾಲದಲ್ಲಿ ಯಾರೊಬ್ಬಾಮನ ಮಗನಾದ ಅಬೀ
2 ಯನು ಅಸ್ವಸ್ಥನಾದನು. ಆಗ ಯಾರೊಬ್ಬಾ
ಮನು ತನ್ನ ಹೆಂಡತಿಗೆ— ನೀನು ಎದ್ದು ನನ್ನ ಹೆಂಡತಿ
ಯೆಂದು ಯಾರಿಗೂ ಗೊತ್ತಾಗದಂತೆ ವೇಷಮಾರ್ಪ
ಡಿಸಿಕೊಂಡು ಶೀಲೋವಿಗೆ ಹೋಗು. ನಾನು ಈ
ಜನರ ಮೇಲೆ ಅರಸನಾಗಬೇಕೆಂದು ನನಗೆ ಮುಂತಿ
ಳಿಸಿದ ಪ್ರವಾದಿಯಾದ ಅಹೀಯನು ಅಲ್ಲಿರುತ್ತಾನೆ.
3 ನೀನು ಹತ್ತು ರೊಟ್ಟಿಗಳನ್ನೂ ಮಿಠಾಯಿಯನ್ನೂ
ಒಂದು ಕುಪ್ಪಿ ಜೇನುತುಪ್ಪವನ್ನೂ ತೆಗೆದುಕೊಂಡು
ಅವನ ಬಳಿಗೆ ಹೋಗು; ಹುಡುಗನಿಗೆ ಏನಾಗುವ
ದೆಂದು ಅವನು ತಿಳಿಸುವನು ಎಂದು ಹೇಳಿದನು.
4 ಆಕೆಯು ಅವನು ಹೇಳಿದಂತೆಯೇ ಮಾಡಿ ಶೀಲೋ

ವಿನಲ್ಲಿದ್ದ ಅಹೀಯನ ಮನೆಗೆ ಹೋದಳು. ಮುಪ್ಪಿ
ದೆಸೆಯಿಂದ ಅಹೀಯನ ಕಣ್ಣುಗಳು ಮೊಬ್ಬಾಗಿದ್ದ
ರಿಂದ ಕಾಣಿಸುತ್ತಿರಲಿಲ್ಲ. ಆದರೆ ಯೆಹೋವನ
ಅವನಿಗೆ—ಯಾರೊಬ್ಬಾಮನ ಹೆಂಡತಿಯು ಅಸ್ವಸ
ನಾದ ತನ್ನ ಮಗನ ವಿಷಯದಲ್ಲಿ ದೈವೋತ್ತರವನ
ಕೇಳುವದಕ್ಕೆ ತನ್ನನ್ನು ಅನ್ಯಳೆಂದು ತೋರ್ಪಡಿ
ಕೊಂಡು ಬರುತ್ತಾಳೆಂದೂ ಆಕೆಗೆ ಇಂಥಿಂಥ ಉತ್ತ
ಕೊಡಬೇಕೆಂದೂ ತಿಳಿಸಿದ್ದನು. ಆಕೆಯು ಅಹೀಯ
ಮನೆಯನ್ನು ಪ್ರವೇಶಿಸುವಾಗಲೇ ಅಹೀಯನು ಆ
ಯ ಕಾಲುಸಪ್ಪಳವನ್ನು ಕೇಳಿ—ಯಾರೊಬ್ಬಾಮ
ಹೆಂಡತಿಯೇ, ಬಾ; ಯಾಕೆ ನಿನ್ನನ್ನು ಅನ್ಯಳೆಂ
ತೋರ್ಪಡಿಸಿಕೊಳ್ಳುತ್ತೀ? ನಿನಗೆ ಕಠಿನವಾದ ಉತ್ತ
ವನ್ನು ಕೊಡಬೇಕೆಂದು ನನಗೆ ಅಪ್ಪಣೆಯಾಗಿ
ನೀನು ಹೋಗಿ ಯಾರೊಬ್ಬಾಮನಿಗೆ ಇಸ್ರಾಯೇ
ದೇವರಾದ ಯೆಹೋವನ ಅಪ್ಪಣೆಯನ್ನು ತಿಳಿಸ
ಆತನು ಅವನಿಗೆ—ನಾನು ನಿನ್ನನ್ನು ಜನರ ಮಧ್ಯದಿಂ
ಉನ್ನತಸ್ಥಾನಕ್ಕೆ ತಂದೆನು; ನಿನ್ನನ್ನು ನನ್ನ ಪ್ರಜೆಗಳಾ
ಇಸ್ರಾಯೇಲ್ಯರ ನಾಯಕನನ್ನಾಗಿ ಮಾಡಿದೆನು. ರಾ
ವನ್ನು ದಾವೀದನ ಕುಟುಂಬದವರಿಂದ ಕಿತ್ತುಕೊಂ
ನಿನಗೆ ಕೊಟ್ಟೆನು. ಆದರೂ ನೀನು ನನ್ನ ಆ
ಗಳನ್ನು ಕೈಕೊಂಡು ಪೂರ್ಣಮನಸ್ಸಿನಿಂದ ನನ್ನನ
ಹಿಂಬಾಲಿಸಿ ಮೆಚ್ಚಿಸಿದಂಥ ನನ್ನ ಸೇವಕನಾದ ದಾವೀ
ನಂತೆ ನಡೆಯಲಿಲ್ಲ. ನೀನು ನಿನ್ನ ಎಲ್ಲಾ ಪೂರ್ವಾ
ಕಾರಿಗಳಿಗಿಂತಲೂ ದುಷ್ಟನಾದಿ; ನನ್ನನ್ನು ಉಲ್ಲಂಘಿ
ಅನ್ಯದೇವತೆಗಳನ್ನೂ ಎರಕದ ವಿಗ್ರಹಗಳನ್ನೂ ಪೂಜಿ
ನನಗೆ ಕೋಪವನ್ನೆಬ್ಬಿಸಿದಿ. ಆದದರಿಂದ ಯಾರ
ಬ್ಬಾಮನೇ, ಕೇಳು; ನಾನು ನಿನ್ನ ಮನೆಯವ
ಮೇಲೆ ಕೇಡನ್ನು ಬರಮಾಡುವೆನು; ನಿನ್ನ ಕುಟುಂಬ
ಗಂಡಸರಲ್ಲಿ ಸ್ವತಂತ್ರರಾಗಲಿ ಪರತಂತ್ರರಾಗ
ಎಲ್ಲರನ್ನೂ ಇಸ್ರಾಯೇಲ್ಯರೊಳಗಿಂದ ಸಂಹರಿಸಿಬಿ
ವೆನು. ಒಬ್ಬನು ಕಸವನ್ನು ಗುಡಿಸಿ ತೆಗೆದುಹಾ
ವಂತೆ ನಾನು ನಿನ್ನ ಮನೆಯವರನ್ನು ತೆಗೆದುಹಾ
ವೆನು; ಅವರು ನಿರ್ನಾಮವಾಗುವರು. ಅವರ
ಪಟ್ಟಣದೊಳಗೆ ಸಾಯುವಂಥವರನ್ನು ನಾಯಿಗಳ
ಅಡವಿಯಲ್ಲಿ ಸಾಯುವಂಥವರನ್ನು ಪಕ್ಷಿಗಳೂ ತಿಂ
ಬಿಡುವವು ಎಂದು ಹೇಳುತ್ತಾನೆ. ಇದು ಯೆಹೋವ
ಮಾತು. ನೀನು ನಿನ್ನ ಮನೆಗೆ ಹೋಗು; ನೀ
ಪಟ್ಟಣದೊಳಗೆ ಕಾಲಿಡುವಷ್ಟರಲ್ಲಿ ಹುಡುಗನು ಸಾಯ
ವನು. ಇಸ್ರಾಯೇಲ್ಯರೆಲ್ಲರೂ ಅವನಿಗೋಸ್ಕರ ಗೋ
ಳಾಡಿ ಅವನ ಶವವನ್ನು ಸಮಾಧಿಮಾಡುವರು. ಯ
ರೊಬ್ಬಾಮನ ಮನೆಯವರೊಳಗೆ ಇಸ್ರಾಯೇಲ್‍ದೇ
ರಾದ ಯೆಹೋವನ ದೃಷ್ಟಿಯಲ್ಲಿ ಒಳ್ಳೆಯವನಾಗಿ
ವದರಿಂದ ಇವನೊಬ್ಬನೇ ಸಮಾಧಿಹೊಂದುವನು.
ಹೋವನು ಇಸ್ರಾಯೇಲ್ಯರ ಮೇಲೆ ಬೇರೊಬ್ಬ ಅ
ನನ್ನು ನೇಮಿಸುವನು. ಅವನು ಕೂಡಲೆ ಯಾರೊಬ
ಮನ ಮನೆಯನ್ನು ಸಂಹರಿಸಿಬಿಡುವನು. ಇ
ಏನೇನು ಸಂಭವಿಸುವದೋ! ಯೆಹೋವನು ಇಸ
ಯೇಲ್ಯರನ್ನು ಹೊಡಿಯುವನು. ಆಗ ಅವರು ನಿ
ನಲ್ಲಿರುವ ಆಪುಹುಲ್ಲೋ ಎಂಬಂತೆ ಹೊಯ್ದಾಡುವ
ಅವರು ಅಶೇರವಿಗ್ರಹಸ್ತಂಭಗಳನ್ನು ಮಾಡಿಕೊಂ

ಆತನಿಗೆ ಕೋಪವನ್ನೆಬ್ಬಿಸಿದ್ದ ದರಿಂದ ಆತನು ಅವರನ್ನು
ಅವರ ಪಿತೃಗಳಿಗೆ ಕೊಟ್ಟ ದೇಶದಿಂದ ಕಿತ್ತುಹಾಕಿ
ಯೂಫ್ರೇಟೀಸ್ ನದಿಯ ಆಚೆಯಲ್ಲಿರುವ ದೇಶ
16 ದೊಳಗೆ ಚದರಿಸಿಬಿಡುವನು. ಯೆಹೋವನು ಯಾರೊ
ಬ್ಬಾಮನ ಪಾಪಗಳ ನಿಮಿತ್ತವಾಗಿಯೂ ಅವನ ಪ್ರೇರ
ಣೆಯಿಂದ ಇಸ್ರಾಯೇಲ್ಯರು ಮಾಡಿದ ಪಾಪಗಳ ನಿಮಿತ್ತ
ವಾಗಿಯೂ ಅವರನ್ನು ಶತ್ರುಗಳಿಗೆ ಒಪ್ಪಿಸುವನು ಎಂದು
ಆಕೆಗೆ ಹೇಳಿದನು.
17 ಯಾರೊಬ್ಬಾಮನ ಹೆಂಡತಿಯು ತಿರ್ಚಾ ಊರಿಗೆ
ಹೊರಟುಹೋಗಿ ತನ್ನ ಮನೆಯ ಹೊಸ್ತಿಲಲ್ಲಿ ಕಾಲಿಟ್ಟ
18 ಕೂಡಲೆ ಹುಡುಗನು ಸತ್ತನು. ಯೆಹೋವನು ಪ್ರವಾ
ದಿಯಾದ ಅಹೀಯನ ಮುಖಾಂತರವಾಗಿ ತಿಳಿಸಿದ
ಪ್ರಕಾರ ಎಲ್ಲಾ ಇಸ್ರಾಯೇಲ್ಯರು ಅವನಿಗೋಸ್ಕರ
ಗೋಳಾಡಿ ಅವನ ಶವವನ್ನು ಸಮಾಧಿಮಾಡಿದರು.
19 ಯಾರೊಬ್ಬಾಮನ ಇತರ ಕೃತ್ಯಗಳೂ ಅವನ
ಯುದ್ಧರಾಜ್ಯಭಾರಗಳ ವಿವರವೂ ಇಸ್ರಾಯೇಲ್‌ರಾಜ
ಕಾಲವೃತ್ತಾಂತ ಎಂಬ ಗ್ರಂಥದಲ್ಲಿ ಬರೆದಿರುತ್ತವೆ.
20 ಅವನು ಇಪ್ಪತ್ತೆರಡು ವರುಷ ಆಳಿ ಪಿತೃಗಳ ಬಳಿಗೆ ಸೇರಿ
ದನು. ಅವನಿಗೆ ಬದಲಾಗಿ ಅವನ ಮಗನಾದ ನಾದಾ
ಬನು ಅರಸನಾದನು.

### ಯೆಹೂದ್ಯರ ಅರಸನಾದ ರೆಹಬ್ಬಾಮನು.

21 ಸೊಲೊಮೋನನ ಮಗನಾದ ರೆಹಬ್ಬಾಮನು ಯೆ
ಹೂದದ ಅರಸನಾದನು. ಅವನು ಪಟ್ಟಕ್ಕೆ ಬಂದಾಗ
ನಾಲ್ವತ್ತೊಂದು ವರುಷದವನಾಗಿದ್ದು ಯೆಹೋವನು
ತನ್ನ ಹೆಸರಿಗೋಸ್ಕರ ಇಸ್ರಾಯೇಲ್ಯರ ಎಲ್ಲಾ ಕುಲ
ಗಳಿಂದ ಆರಿಸಿಕೊಂಡ ಯೆರೂಸಲೇಮ್ ಪಟ್ಟಣದಲ್ಲಿ
ಹದಿನೇಳು ವರುಷ ಆಳಿದನು. ಅಮ್ಮೋನಿಯಳಾದ
22 ನಯಮಾ ಎಂಬಾಕೆಯು ಅವನ ತಾಯಿ. ಯೆಹೂ
ದ್ಯರು ಯೆಹೋವನ ದೃಷ್ಟಿಯಲ್ಲಿ ದ್ರೋಹಿಗಳಾದರು;
ಅವರು ತಮ್ಮ ಪಿತೃಗಳಿಗಿಂತಲೂ ದುಷ್ಟರಾಗಿ ಆತನನ್ನು
23 ರೇಗಿಸಿದರು. ಪಿತೃಗಳಂತೆಯೇ ಅವರೂ ತಮಗೋ
ಸ್ಕರ ಪೂಜಾಸ್ಥಳಗಳನ್ನು ಏರ್ಪಡಿಸಿಕೊಂಡರು. ಪ್ರತಿ
ಯೊಂದು ದಿನ್ನೆಯ ಮೇಲೆಯೂ ಚೆನ್ನಾಗಿ ಬೆಳೆದಿರುವ
ಪ್ರತಿಯೊಂದು ಮರದ ಕೆಳಗೆಯೂ ಕಲ್ಲಿನ ಕಂಬಗ
24 ಳನ್ನೂ ಅಶೇರವಿಗ್ರಹಸ್ತಂಭಗಳನ್ನೂ ನಿಲ್ಲಿಸಿದರು. ಇದ
ಲ್ಲದೆ ಅವರ ದೇಶದಲ್ಲಿ ವೇಶ್ಯಾವೃತ್ತಿಯನ್ನನುಸರಿಸು
ತ್ತಿರುವ ದೇವದಾಸ ದೇವದಾಸಿಯರು ಇದ್ದರು.
ಯೆಹೋವನು ಅವರ ಎದುರಿನಿಂದ ಹೊರಡಿಸಿಬಿಟ್ಟ
ಅನ್ಯಜನಾಂಗಗಳಲ್ಲಿದ್ದ ದುರಾಚಾರಗಳನ್ನೆಲ್ಲಾ ಅವರೂ
ನಡಿಸುವವರಾದರು.
25 ರೆಹಬ್ಬಾಮನ ಆಳಿಕೆಯ ಐದನೆಯ ವರುಷದಲ್ಲಿ
ಐಗುಪ್ತದ ಅರಸನಾದ ಶೀಶಕನು ಯೆರೂಸಲೇಮಿಗೆ
26 ವಿರೋಧವಾಗಿ ಬಂದು ಯೆಹೋವನ ಆಲಯದ ಮತ್ತು
ಅರಮನೆಯ ಎಲ್ಲಾ ದ್ರವ್ಯವನ್ನೂ ಸೊಲೊಮೋನನು
ಮಾಡಿಸಿದ ಬಂಗಾರದ ಗುರಾಣಿಗಳನ್ನೂ ತೆಗೆದು
27 ಕೊಂಡು ಹೋದನು. ಅರಸನಾದ ರೆಹಬ್ಬಾಮನು
ಅವುಗಳಿಗೆ ಬದಲಾಗಿ ತಾಮ್ರದ ಗುರಾಣಿಗಳನ್ನು ಮಾ
ಡಿಸಿ ಅವುಗಳನ್ನು ಅರಮನೆಯ ದ್ವಾರಪಾಲಕರಾಗಿದ್ದ
ಮೈಗಾವಲಿನವರ ದಳವಾಯಿಗಳಿಗೆ ಒಪ್ಪಿಸಿದನು. ಅರ 28
ಸನು ಯೆಹೋವನ ಆಲಯಕ್ಕೆ ಹೋಗುವಾಗೆಲ್ಲಾ
ಅವರು ಅವುಗಳನ್ನು ಹಿಡಿದುಕೊಳ್ಳುವರು; ಅಲ್ಲಿಂದ
ತಿರಿಗಿ ಬಂದ ಮೇಲೆ ಅವುಗಳನ್ನು ತಮ್ಮ ಕೋಣೆಯಲ್ಲಿ
ಡುವರು. ರೆಹಬ್ಬಾಮನ ಉಳಿದ ಚರಿತ್ರೆಯೂ ಅವನ 29
ಎಲ್ಲಾ ಕೃತ್ಯಗಳೂ ಯೆಹೂದರಾಜಕಾಲವೃತ್ತಾಂತ
ಎಂಬ ಗ್ರಂಥದಲ್ಲಿ ಬರೆದಿರುತ್ತವೆ. ರೆಹಬ್ಬಾಮನಿಗೂ 30
ಯಾರೊಬ್ಬಾಮನಿಗೂ ಯಾವಾಗಲೂ ಯುದ್ಧನಡೆ
ಯುತ್ತಿತ್ತು. ರೆಹಬ್ಬಾಮನು ಪಿತೃಗಳ ಬಳಿಗೆ ಸೇರಲು 31
ಅವನ ಶವವನ್ನು ದಾವೀದನಗರದೊಳಗೆ ಅವನ ಹಿರಿ
ಯರ ಶ್ಮಶಾನಭೂಮಿಯಲ್ಲಿ ಸಮಾಧಿಮಾಡಿದರು.
ಅಮ್ಮೋನಿಯಳಾದ ನಯಮಾ ಎಂಬಾಕೆಯು ಅವನ
ತಾಯಿ. ಅನಂತರ ಅವನ ಮಗನಾದ ಅಬೀಯಾ
ಮನು ಅವನಿಗೆ ಬದಲಾಗಿ ಅರಸನಾದನು.

## ಯೆಹೂದ್ಯರ ಅರಸರಾದ ಅಬೀಯಾಮ್, ಆಸ ಎಂಬವರೂ ಅವರ ಸಹಕಾಲಿಕರಾದ ಇಸ್ರಾಯೇಲ್ಯರ ಅರಸರೂ.

15. 1—16. 28.

### ಅಬೀಯಾಮನು.

15 ನೆಬಾಟನ ಮಗನಾದ ಯಾರೊಬ್ಬಾಮನ ಆಳಿಕೆ
ಯ ಹದಿನೆಂಟನೆಯ ವರುಷದಲ್ಲಿ ಅಬೀಯಾಮನು
ಯೆಹೂದದ ಅರಸನಾಗಿ ಯೆರೂಸಲೇಮಿನಲ್ಲಿ ಮೂರು 2
ವರುಷ ಆಳಿದನು; ಅಬೀಷಾಲೋಮನ ಮಗಳಾದ
ಮಾಕಾ ಎಂಬಾಕೆಯು ಅವನ ತಾಯಿ. ತನ್ನ ತಂದೆ 3
ಯು ಮಾಡಿದ ಪಾಪಕೃತ್ಯಗಳನ್ನು ಇವನೂ ಮಾಡಿ
ದನು. ಇವನ ಪೂರ್ವಿಕನಾದ ದಾವೀದನು ದೇವರಾದ
ಯೆಹೋವನನ್ನು ಯಥಾರ್ಥಮನಸ್ಸಿನಿಂದ ಸೇವಿಸಿ
ದಂತೆ ಇವನು ಸೇವಿಸಲಿಲ್ಲ. ಆದರೂ ಹಿತ್ತಿಯ 4
ನಾದ ಊರೀಯನ ವಿಷಯ ಹೊರತಾಗಿ ಬೇರೆ ಯಾವ
ವಿಷಯದಲ್ಲಿಯೂ ತನ್ನ ಆಜ್ಞೆಯನ್ನು ಮೀರದೆ ಜೀವ
ದಿಂದಿರುವ ವರೆಗೂ ತನ್ನ ಚಿತ್ತಕ್ಕನುಸಾರವಾಗಿ ನಡೆದ
ದಾವೀದನ ನಿಮಿತ್ತವಾಗಿ ಯೆಹೋವನು ಯೆರೂಸ
ಲೇಮಿನಲ್ಲಿ ಇವನ ದೀಪವನ್ನು ಆರಿಸಲಿಲ್ಲ. ಯೆರೂ 5
ಸಲೇಮನ್ನೂ ಇವನ ಸಂತಾನವನ್ನೂ ಉಳಿಸಿದನು.
(ರೆಹಬ್ಬಾಮನಿಗೂ ಯಾರೊಬ್ಬಾಮನಿಗೂ ಯಾವಾ 6
ಗಲೂ ಯುದ್ಧನಡೆಯುತ್ತಿತ್ತು.) ಅಬೀಯಾಮನ 7
ಉಳಿದ ಚರಿತ್ರೆಯೂ ಅವನ ಎಲ್ಲಾ ಕೃತ್ಯಗಳೂ ಯೆ
ಹೂದರಾಜಕಾಲವೃತ್ತಾಂತ ಎಂಬ ಗ್ರಂಥದಲ್ಲಿ ಬರೆದಿ
ರುತ್ತವೆ. ಇವನಿಗೂ ಯಾರೊಬ್ಬಾಮನಿಗೂ ಯುದ್ಧ
ನಡೆಯುತ್ತಿತ್ತು. ಅಬೀಯಾಮನು ಪಿತೃಗಳ ಬಳಿಗೆ 8
ಸೇರಲು ಅವನ ಶವವನ್ನು ದಾವೀದನಗರದಲ್ಲಿ ಸಮಾಧಿ
ಮಾಡಿದರು. ಅವನಿಗೆ ಬದಲಾಗಿ ಅವನ ಮಗನಾದ
ಆಸನು ಅರಸನಾದನು.

### ಆಸನು.

ಇಸ್ರಾಯೇಲ್ಯರ ಅರಸನಾದ ಯಾರೊಬ್ಬಾಮನ ಆಳಿ 9
ಕೆಯ ಇಪ್ಪತ್ತನೆಯ ವರುಷದಲ್ಲಿ ಆಸನು ಯೆಹೂ

10 ದದ ಅರಸನಾದನು. ಇವನು ಯೆರೂಸಲೇಮಿನಲ್ಲಿ
ನಾಲ್ವತ್ತೊಂದು ವರುಷ ಆಳಿದನು. ಅಬೀಷಾಲೋಮು
ನ ಮಗಳಾದ ಮಾಕಾ ಎಂಬಾಕೆಯು ಇವನ ತಾಯಿ.
11 ಇವನು ತನ್ನ ಪೂರ್ವಿಕನಾದ ದಾವೀದನಂತೆ ಯೆಹೋ
12 ವನ ದೃಷ್ಟಿಯಲ್ಲಿ ಒಳ್ಳೆಯವನಾಗಿ ನಡೆದನು. ದೇವ
ದಾಸ ದೇವದಾಸಿಯರನ್ನು ದೇಶದಿಂದ ಹೊರಡಿಸಿ
ತನ್ನ ಹಿರಿಯರು ಮಾಡಿಸಿಟ್ಟಿದ್ದ ವಿಗ್ರಹಗಳನ್ನೆಲ್ಲಾ
13 ತೆಗೆದುಹಾಕಿದನು. ಇವನ ತಾಯಿಯಾದ ಮಾಕಳು
ಅಶೇರದೇವತೆಯ ಒಂದು ಅಸಹ್ಯವಾದ ಮೂರ್ತಿ
ಯನ್ನು ಮಾಡಿಸಿದದರಿಂದ ಆಸನು ಆಕೆಯನ್ನು
ಗದ್ದುಗೆಯಿಂದ ತಳ್ಳಿ ಆ ಮೂರ್ತಿಯನ್ನು ಕಡಿದು
14 ಕಿದ್ರೋನ್‌ಹಳ್ಳದ ಹತ್ತಿರ ಸುಡಿಸಿದನು. ಇವನು
ದೇಶದಲ್ಲಿದ್ದ ಪೂಜಾಸ್ಥಳಗಳನ್ನು ಹಾಳುಮಾಡದಿದ್ದ
ರೂ ತನ್ನ ಜೀವಮಾನದಲ್ಲೆಲ್ಲಾ ಯಥಾರ್ಥಮನಸ್ಸಿ
15 ನಿಂದ ಯೆಹೋವನಿಗೆ ನಡೆದುಕೊಂಡನು. ಇದ
ಲ್ಲದೆ ತನ್ನ ತಂದೆಯೂ ತಾನೂ ಪ್ರತಿಷ್ಠಿಸಿದ ಬೆಳ್ಳಿ
ಬಂಗಾರವನ್ನೂ ಪಾತ್ರೆಗಳನ್ನೂ ಯೆಹೋವನ ಆಲಯ
ದಲ್ಲಿ ತಂದಿಟ್ಟನು.
16 ಇವನಿಗೂ ಇಸ್ರಾಯೇಲ್ಯರ ಅರಸನಾದ ಬಾಷ
17 ನಿಗೂ ಯಾವಾಗಲೂ ಯುದ್ಧ ನಡೆಯುತ್ತಿತ್ತು. ಇಸ್ರಾ
ಯೇಲ್ಯರ ಅರಸನಾದ ಬಾಷನು ಯೆಹೂದ್ಯರಿಗೆ ವಿರೋ
ಧವಾಗಿ ಯುದ್ಧಮಾಡಿ ಯಾರೂ ಯೆಹೂದ್ಯರ ಅರಸ
ನಾದ ಆಸನ ಬಳಿಗೆ ಹೋಗಿ ಬರುವದಕ್ಕಾಗದಂತೆ
18 ರಾಮ ಎಂಬ ಕೋಟೆಯನ್ನು ಕಟ್ಟಿಸಿದನು. ಆಗ
ಆಸನು ಯೆಹೋವನ ಆಲಯದ ಮತ್ತು ಅರಮನೆಯ
ಭಂಡಾರಗಳಲ್ಲಿ ಉಳಿದಿದ್ದ ಬೆಳ್ಳಿಬಂಗಾರವನ್ನು ತೆಗೆ
ದುಕೊಂಡು ಅದನ್ನು ದೂತರ ಮುಖಾಂತರವಾಗಿ
ದಮಸ್ಕದಲ್ಲಿದ್ದ ಅರಾಮ್ಯರ ಅರಸನೂ ಹೆಜ್ಯೋನನ
ಮೊಮ್ಮಗನೂ ಟಬ್ರಿಮ್ಮೋನನ ಮಗನೂ ಆದ ಬೆನ್ಹದದ
19 ನಿಗೆ ಕೊಟ್ಟು ಕಳುಹಿಸಿ ಆವನಿಗೆ—ನನಗೂ ನಿನಗೂ
ನನ್ನ ತಂದೆಗೂ ನಿನ್ನ ತಂದೆಗೂ ಒಡಂಬಡಿಕೆಯಿರುತ್ತ
ದಲ್ಲಾ; ಇಗೋ, ನಿನಗೆ ಬೆಳ್ಳಿಬಂಗಾರವನ್ನು ಕಾಣಿಕೆ
ಯಾಗಿ ಕಳುಹಿಸಿದ್ದೇನೆ. ಇಸ್ರಾಯೇಲ್ಯರ ಅರಸನಾದ
ಬಾಷನು ನನ್ನನ್ನು ಬಿಟ್ಟುಹೋಗುವಂತೆ ಅವನ ಸಂಗಡ
ನೀನು ಮಾಡಿಕೊಂಡಿರುವ ಒಡಂಬಡಿಕೆಯನ್ನು ಮುರಿ
20 ದುಬಿಡು ಎಂದು ಹೇಳಿಸಿದನು. ಬೆನ್ಹದದನು ಅರಸ
ನಾದ ಆಸನ ಮಾತನ್ನು ಕೇಳಿ ತನ್ನ ಸೈನ್ಯಾಧಿಪತಿಗ
ಳನ್ನು ಯುದ್ಧಕ್ಕಾಗಿ ಇಸ್ರಾಯೇಲ್ಯರ ಪಟ್ಟಣಗಳಿಗೆ
ಕಳುಹಿಸಿದನು. ಇವರು ಇಯ್ಯೋನ್, ದಾನ್,
ಆಬೇಲ್ಬೇತ್ಮಾಕಾ, ಕಿನ್ನೆರೋತ್ ಪ್ರದೇಶ, ನಫ್ತಾ
ಲ್ಯರ ಎಲ್ಲಾ ಪ್ರಾಂತ ಇವುಗಳನ್ನು ಹಾಳುಮಾಡಿದರು.
21 ಬಾಷನು ಈ ಸುದ್ದಿಯನ್ನು ಕೇಳಿದಾಗ ರಾಮಕೋಟೆ
ಯನ್ನು ಕಟ್ಟಿಸುವದನ್ನು ಬಿಟ್ಟು ತಿರ್ಚಕ್ಕೆ ಹೋಗಿ
22 ಅಲ್ಲೇ ವಾಸಿಸಿದನು. ಅನಂತರ ಅರಸನಾದ ಆಸನು
ಯೆಹೂದ್ಯರಲ್ಲಿ ಒಬ್ಬನನ್ನೂ ಬಿಡದೆ ಎಲ್ಲರನ್ನೂ ಕರಿಸಿ
ಬಾಷನು ರಾಮಕೋಟೆಗಾಗಿ ತರಿಸಿದ್ದ ಕಲ್ಲುಮರಗ
ಳನ್ನು ಇವರ ಮುಖಾಂತರವಾಗಿ ತೆಗೆದುಕೊಂಡು
ಹೋಗಿ ಬೆನ್ಯಾಮೀನ್ಯರ ಗೆಬ, ಮಿಚ್ಪೆ ಎಂಬ ಪಟ್ಟಣಗ
23 ಳನ್ನು ಭದ್ರಪಡಿಸಿದನು. ಆಸನ ಉಳಿದ ಚರಿತ್ರೆ,
ಅವನ ಎಲ್ಲಾ ಪರಾಕ್ರಮಕೃತ್ಯಗಳು, ಪಟ್ಟಣಗಳನ್ನು

ಕಟ್ಟಿಸಿದ ಸಂಗತಿ ಇವುಗಳೂ ಅವನ ಇತರ ಕ್ರಿಯೆಗಳ
ಯೆಹೂದರಾಜಕಾಲವೃತ್ತಾಂತ ಎಂಬ ಗ್ರಂಥದಲ್ಲಿ ಬ
ದಿರುತ್ತವೆ. ಮುಪ್ಪಿನಲ್ಲಿ ಅವನ ಕಾಲುಗಳಿಗೆ ರೋ
ವುಂಟಾಯಿತು. ಅವನು ತನ್ನ ಪಿತೃಗಳ ಬಳಿಗೆ ಸೇ
ದನು. ಅವನ ಶವವನ್ನು ಅವನ ಪೂರ್ವಿಕನಾದ ದಾ
ದನ ಪಟ್ಟಣದೊಳಗೆ ಕುಟುಂಬಶ್ಮಶಾನಭೂಮಿಯ
ಸಮಾಧಿಮಾಡಿದರು. ಅವನಿಗೆ ಬದಲಾಗಿ ಅವನ ಮ
ನಾದ ಯೆಹೋಷಾಫಾಟನು ಅರಸನಾದನು.

ನಾದಾಬನು.

ಯೆಹೂದ್ಯರ ಅರಸನಾದ ಆಸನ ಆಳಿಕೆಯ ಎರ
ನೆಯ ವರುಷದಲ್ಲಿ ಯಾರೊಬ್ಬಾಮನ ಮಗನಾ
ನಾದಾಬನು ಇಸ್ರಾಯೇಲ್ಯರ ಅರಸನಾಗಿ ಎರ
ವರುಷ ಆಳಿದನು. ಇವನು ಇಸ್ರಾಯೇಲ್ಯರನ
ಪಾಪಕ್ಕೆ ಪ್ರೇರಿಸಿದ ತನ್ನ ತಂದೆಯ ಮಾರ್ಗದಲ್ಲಿ ನ
ದು ಯೆಹೋವನ ದೃಷ್ಟಿಯಲ್ಲಿ ದ್ರೋಹಿಯಾದನ
ಇವನು ಇಸ್ರಾಯೇಲ್ಯರೊಡನೆ ಫಿಲಿಷ್ಟಿಯರ ವಶ
ಲ್ಲಿದ್ದ ಗಿಬ್ಬೆತೋನ್ ಎಂಬ ಪಟ್ಟಣಕ್ಕೆ ಮುತ್ತಿಗೆ ಹಾ
ದಾಗ ಇಸ್ಸಾಕಾರನ ಕುಲದವನೂ ಅಹೀಯನ ಮ
ನೂ ಆದ ಬಾಷನೆಂಬವನು ಇವನಿಗೆ ವಿರೋಧವಾ
ಒಳಸಂಚು ಮಾಡಿ ಇವನನ್ನು ಕೊಂದನು. ಬಾಷನ
ಯೆಹೂದದ ಅರಸನಾದ ಆಸನ ಆಳಿಕೆಯ ಮೂರ
ಯ ವರುಷದಲ್ಲಿ ಇವನನ್ನು ಕೊಂದು ಇವನಿಗೆ ಬ
ಲಾಗಿ ತಾನು ಅರಸನಾದನು; ಅರಸನಾದ ಕೂಡ
ಯಾರೊಬ್ಬಾಮನ ಮನೆಯವರಲ್ಲಿ ಒಬ್ಬನನ್ನೂ ಜೀ
ದಿಂದುಳಿಸದೆ ಎಲ್ಲರನ್ನೂ ಸಂಹರಿಸಿದನು. ಹೀ
ಯೆಹೋವನು ಶೀಲೋವಿನ ಪ್ರವಾದಿಯಾದ ಅಹಿ
ಯನ ಮುಖಾಂತರವಾಗಿ ಹೇಳಿಸಿದ ಮಾತು ನೆರವ
ರಿತು. ಯಾರೊಬ್ಬಾಮನು ತಾನು ಪಾಪಮಾಡಿ
ಲ್ಲದೆ ಇಸ್ರಾಯೇಲ್ಯರನ್ನೂ ಪಾಪಕ್ಕೆ ಪ್ರೇರಿಸಿ ಇಸ್
ಯೇಲ್‌ದೇವರಾದ ಯೆಹೋವನನ್ನು ರೇಗಿಸಿದ್ದರಿಂ
ಹೀಗಾಯಿತು. ನಾದಾಬನ ಉಳಿದ ಚರಿತ್ರೆಯ
ಅವನ ಎಲ್ಲಾ ಕೃತ್ಯಗಳೂ ಇಸ್ರಾಯೇಲ್‌ರಾಜಕಾ
ವೃತ್ತಾಂತ ಎಂಬ ಗ್ರಂಥದಲ್ಲಿ ಬರೆದಿರುತ್ತವೆ. ಆ
ನಿಗೂ ಇಸ್ರಾಯೇಲ್ಯರ ಅರಸನಾದ ಬಾಷನಿಗೂ ಯ
ವಾಗಲೂ ಯುದ್ಧನಡೆಯುತ್ತಿತ್ತು.

ಬಾಷನು.

ಯೆಹೂದದ ಅರಸನಾದ ಆಸನ ಆಳಿಕೆಯ ಮೂ
ನೆಯ ವರುಷದಲ್ಲಿ ಅಹೀಯನ ಮಗನಾದ ಬಾಷನ
ಇಸ್ರಾಯೇಲ್ಯರ ಅರಸನಾಗಿ ತಿರ್ಚದಲ್ಲಿದ್ದುಕೊಂ
ಇಪ್ಪತ್ತನಾಲ್ಕು ವರುಷ ಆಳಿದನು. ಇವನು ಇಸ್
ಯೇಲ್ಯರನ್ನು ಪಾಪಕ್ಕೆ ಪ್ರೇರಿಸಿದ ಯಾರೊಬ್ಬಾಮ
ಮಾರ್ಗದಲ್ಲಿ ನಡೆದು ಯೆಹೋವನ ದೃಷ್ಟಿಯ
ದ್ರೋಹಿಯಾದನು. ಆಗ ಯೆಹೋವನು ಹನಾ
ನೀಯ ಮಗನಾದ ಯೇಹುವಿನ ಮುಖಾಂತರ
ವಾಗಿ ಅವನಿಗೆ ಹೇಳಿಸಿದ್ದೇನಂದರೆ—ನಾನು ನಿನ್ನನ
ಧೂಳಿನಿಂದ ಎತ್ತಿ ನನ್ನ ಪ್ರಜೆಗಳಾದ ಇಸ್ರಾಯೇಲ್ಯ

ನಾಯಕನನ್ನಾಗಿ ಮಾಡಿದರೂ ನೀನು ಯಾರೊಬ್ಬಾ
ಮನ ಮಾರ್ಗದಲ್ಲಿ ನಡೆದು ನನ್ನ ಜನರಾದ ಇಸ್ರಾ
ಯೇಲ್ಯರನ್ನು ಪಾಪಕ್ಕೆ ಪ್ರೇರಿಸಿ ಅವರ ಪಾಪದ ಮೂ
3 ಲಕವಾಗಿ ನನಗೆ ಕೋಪವನ್ನೆಬ್ಬಿಸಿದ್ದರಿಂದ ನಿನ್ನನ್ನೂ
ನಿನ್ನ ಮನೆಯವರನ್ನೂ ಅಳಿಸಿಬಿಡುವೆನು; ನೆಬಾಟನ
ಮಗನಾದ ಯಾರೊಬ್ಬಾಮನ ಮನೆಗಾದ ಗತಿಯು
4 ನಿನ್ನ ಮನೆಗೂ ಆಗುವದು. ನಿನ್ನ ಕುಟುಂಬದವ
ರಲ್ಲಿ ಪಟ್ಟಣದೊಳಗೆ ಸಾಯುವವರನ್ನು ನಾಯಿಗಳೂ
ಅಡವಿಯಲ್ಲಿ ಸಾಯುವವರನ್ನು ಪಕ್ಷಿಗಳೂ ತಿಂದು
5 ಬಿಡುವವು ಎಂಬದೇ. ಬಾಷನ ಉಳಿದ ಚರಿತ್ರೆಯೂ
ಅವನ ಪರಾಕ್ರಮಕೃತ್ಯಗಳೂ ಇಸ್ರಾಯೇಲ್‌ರಾಜ
ಕಾಲವೃತ್ತಾಂತ ಎಂಬ ಗ್ರಂಥದಲ್ಲಿ ಬರೆದಿರುತ್ತವೆ.
6 ಅವನು ಪಿತೃಗಳ ಬಳಿಗೆ ಸೇರಲು ಅವನ ಶವವನ್ನು
ತಿರ್ಚದಲ್ಲಿ ಸಮಾಧಿಮಾಡಿದರು. ಅವನಿಗೆ ಬದಲಾಗಿ
7 ಅವನ ಮಗನಾದ ಏಲನು ಅರಸನಾದನು. ಬಾಷನು
ಯಾರೊಬ್ಬಾಮನ ಮನೆಯವರಂತೆ ತನ್ನ ದುಷ್ಕೃತ್ಯ
ಗಳಿಂದ ಯೆಹೋವನನ್ನು ರೇಗಿಸಿ ಆತನ ದೃಷ್ಟಿ
ಯಲ್ಲಿ ದ್ರೋಹಿಯಾದವರಿಂದಲೂ ಅವನು ಯಾರೊ
ಬ್ಬಾಮನ ಮನೆಯವರನ್ನು ನಿರ್ನಾಮಗೊಳಿಸಿದ್ದದ
ರಿಂದಲೂ ಯೆಹೋವನು ಹನಾನೀಯ ಮಗನಾದ
ಯೇಹುವಿನ ಮುಖಾಂತರವಾಗಿ ಅವನಿಗೂ ಅವನ
ಕುಟುಂಬಕ್ಕೂ ದುರ್ಗತಿಯನ್ನು ಮುಂತಿಳಿಸಿದನು.

ಏಲನು.

8 ಯೆಹೂದ್ಯರ ಅರಸನಾದ ಆಸನ ಆಳಿಕೆಯ ಇಪ್ಪ
ತ್ತಾರನೆಯ ವರುಷದಲ್ಲಿ ಬಾಷನ ಮಗನಾದ ಏಲನು
ತಿರ್ಚದಲ್ಲಿ ಇಸ್ರಾಯೇಲ್ಯರ ಅರಸನಾಗಿ ಎರಡು ವರುಷ
9 ಆಳಿದನು. ಅವನ ಸೇವಕನೂ ಅವನ ರಥಬಲದ
ಅರ್ಧಭಾಗಕ್ಕೆ ಅಧಿಪತಿಯೂ ಆಗಿದ್ದ ಜಿಮ್ರಿ ಎಂಬ
ವನು ಅವನಿಗೆ ವಿರೋಧವಾಗಿ ಒಳಸಂಚುಮಾಡಿದನು.
ಅರಸನು ತಿರ್ಚದಲ್ಲಿ ತನ್ನ ಮನೆಯ ಉಗ್ರಾಣಿಕನಾದ
ಅರ್ಚನೆಂಬವನ ಮನೆಯಲ್ಲಿ ಕುಡಿದು ಮತ್ತನಾಗಿರು
10 ವಾಗ ಜಿಮ್ರಿಯು ಅಲ್ಲಿಗೆ ಹೋಗಿ ಅವನ ಮೇಲೆ ಬಿದ್ದು
ಅವನನ್ನು ಕೊಂದುಹಾಕಿ ಅವನಿಗೆ ಬದಲಾಗಿ ತಾನು
ಅರಸನಾದನು. ಇದು ಯೆಹೂದದ ಅರಸನಾದ ಆಸನ
ಆಳಿಕೆಯ ಇಪ್ಪತ್ತೇಳನೆಯ ವರುಷದಲ್ಲಿ ನಡೆಯಿತು.
11 ಇವನು ಸಿಂಹಾಸನದ ಮೇಲೆ ಕೂತು ಆಳ ತೊಡ
ಗಿದ ಕೂಡಲೆ ಬಾಷನ ಮನೆಯವರನ್ನೂ ಅವನ ಬಂಧು
ಮಿತ್ರರನ್ನೂ ಸಂಹರಿಸಿದನು; ಅವರಲ್ಲಿ ಒಬ್ಬ ಗಂಡ
12 ಸನ್ನೂ ಉಳಿಸಲಿಲ್ಲ. ಬಾಷನೂ ಅವನ ಮಗನಾದ
ಏಲನೂ ತಾವು ಪಾಪಮಾಡಿದ್ದಲ್ಲದೆ ಇಸ್ರಾಯೇಲ್ಯ
ರನ್ನೂ ಪಾಪಕ್ಕೆ ಪ್ರೇರಿಸಿ ತಮ್ಮ ವಿಗ್ರಹಗಳಿಂದ ಇಸ್ರಾ
ಯೇಲ್‌ದೇವರಾದ ಯೆಹೋವನನ್ನು ರೇಗಿಸಿದ್ದ
13 ರಿಂದ ಆತನು ಪ್ರವಾದಿಯಾದ ಯೇಹುವಿನ ಮು
ಖಾಂತರವಾಗಿ ಬಾಷನ ಮನೆಗೆ ದುರ್ಗತಿಯನ್ನು
ಮುಂತಿಳಿಸಿದ್ದನು. ಜಿಮ್ರಿಯು ಬಾಷನ ಮನೆಯವ
ರೆಲ್ಲರನ್ನೂ ನಿರ್ನಾಮಗೊಳಿಸಿದಾಗ ಆ ಮಾತು ನೆರ
ವೇರಿತು. ಏಲನ ಉಳಿದ ಚರಿತ್ರೆಯೂ ಅವನ ಎಲ್ಲಾ 14
ಕೃತ್ಯಗಳೂ ಇಸ್ರಾಯೇಲ್‌ರಾಜಕಾಲವೃತ್ತಾಂತ ಎಂಬ
ಗ್ರಂಥದಲ್ಲಿ ಬರೆದಿರುತ್ತವೆ.

ಜಿಮ್ರಿಯು.

ಯೆಹೂದ್ಯರ ಅರಸನಾದ ಆಸನ ಆಳಿಕೆಯ ಇಪ್ಪ 15
ತ್ತೇಳನೆಯ ವರುಷದಲ್ಲಿ ಜಿಮ್ರಿಯು ತಿರ್ಚದಲ್ಲಿ ಇಸ್ರಾ
ಯೇಲ್ಯರ ಅರಸನಾಗಿ ಏಳು ದಿವಸ ಆಳಿದನು. ಆ
ಸಮಯದಲ್ಲಿ ಇಸ್ರಾಯೇಲ್ಯರು ಫಿಲಿಷ್ಟಿಯರ ವಶದ
ಲ್ಲಿದ್ದ ಗಿಬ್ಬೆತೋನ್ ಎಂಬ ಪಟ್ಟಣಕ್ಕೆ ಮುತ್ತಿಗೆಹಾಕಿ
ದ್ದರು. ಜಿಮ್ರಿಯು ಅರಸನಿಗೆ ವಿರೋಧವಾಗಿ ಒಳ 16
ಸಂಚುಮಾಡಿ ಅವನನ್ನು ಕೊಂದುಹಾಕಿದನೆಂಬ ವರ್ತ
ಮಾನವು ಪಾಳೆಯದಲ್ಲಿದ್ದ ಇಸ್ರಾಯೇಲ್ಯರಿಗೆ ಮುಟ್ಟಿ
ಲಾಗಿ ಅವರು ಅದೇ ದಿವಸ ಅಲ್ಲಿಯೇ ಸೈನ್ಯಾಧಿ
ಪತಿಯಾದ ಒಮ್ರಿಯನ್ನು ತಮ್ಮ ಅರಸನನ್ನಾಗಿ ನೇಮಿ
ಸಿಕೊಂಡರು. ಇವನೂ ಇವನ ಜೊತೆಯಲ್ಲಿದ್ದ ಎಲ್ಲಾ 17
ಇಸ್ರಾಯೇಲ್ಯರೂ ಗಿಬ್ಬೆತೋನನ್ನು ಬಿಟ್ಟುಹೋಗಿ
ತಿರ್ಚಕ್ಕೆ ಮುತ್ತಿಗೆಹಾಕಿದರು. ಪಟ್ಟಣವು ಅವರ ವಶ 18
ವಾದದ್ದನ್ನು ಜಿಮ್ರಿಯು ಕಂಡು ಅರಮನೆಯ ಗರ್ಭ
ಗೃಹವನ್ನು ಹೊಕ್ಕು ಅರಮನೆಗೆ ಬೆಂಕಿಹೊತ್ತಿಸಿ
ಸುಟ್ಟುಕೊಂಡು ಸತ್ತನು. ಅವನು ಯಾರೊಬ್ಬಾಮ 19
ನಂತೆ ತಾನು ಪಾಪಮಾಡಿದ್ದಲ್ಲದೆ ಇಸ್ರಾಯೇಲ್ಯರನ್ನೂ
ಪಾಪಕ್ಕೆ ಪ್ರೇರಿಸಿ ಯೆಹೋವನ ದೃಷ್ಟಿಯಲ್ಲಿ ದ್ರೋಹಿ
ಯಾದದರಿಂದ ಹೀಗಾಯಿತು. ಜಿಮ್ರಿಯ ಉಳಿದ ಚರಿ 20
ತ್ರೆಯೂ ಅವನ ಒಳಸಂಚೂ ಇಸ್ರಾಯೇಲ್‌ರಾಜಕಾಲ
ವೃತ್ತಾಂತ ಎಂಬ ಗ್ರಂಥದಲ್ಲಿ ಬರೆದಿರುತ್ತವೆ.
ಆ ಕಾಲದಲ್ಲಿ ಇಸ್ರಾಯೇಲ್ಯರೊಳಗೆ ಎರಡು ಪಕ್ಷ 21
ಗಳುಂಟಾದವು; ಒಂದು ಪಕ್ಷದವರು ಗೀನತನ ಮಗ
ನಾದ ತಿಬ್ನಿಯನ್ನು ಹಿಂಬಾಲಿಸಿ ಅವನನ್ನು ಅರಸನ
ನ್ನಾಗಿ ಮಾಡಿಕೊಳ್ಳಬೇಕೆಂದಿದ್ದರು; ಇನ್ನೊಂದು ಪಕ್ಷ
ದವರು ಒಮ್ರಿಯನ್ನು ಹಿಂಬಾಲಿಸಿದರು. ಆದರೆ ಒಮ್ರಿ 22
ಯ ಪಕ್ಷದವರು ಗೀನತನ ಮಗನಾದ ತಿಬ್ನಿಯ ಪಕ್ಷ
ದವರನ್ನು ಸೋಲಿಸಿದರು. ತಿಬ್ನಿಯು ಸಾಯಲಾಗಿ
ಒಮ್ರಿಯೇ ಆಳುವವನಾದನು.

ಒಮ್ರಿಯು.

ಯೆಹೂದ್ಯರ ಅರಸನಾದ ಆಸನ ಆಳಿಕೆಯ ಮೂವ 23
ತ್ತೊಂದನೆಯ ವರುಷದಲ್ಲಿ ಒಮ್ರಿಯು ಇಸ್ರಾಯೇಲ್ಯರ
ಅರಸನಾಗಿ ಹನ್ನೆರಡು ವರುಷ ಆಳಿದನು. ಆರು ವರು
ಷಗಳ ವರೆಗೆ ತಿರ್ಚವೇ ಅವನ ರಾಜಧಾನಿಯಾಗಿತ್ತು.
ಅನಂತರ ಶೆಮೆರ್ ಎಂಬವನಿಗೆ [1]ಎರಡು ತಲಾಂತು 24
ಬೆಳ್ಳಿಯನ್ನು ಕೊಟ್ಟು ಅವನಿಂದ ಸಮಾರ್ಯವೆಂಬ
ಗುಡ್ಡವನ್ನು ಕೊಂಡುಕೊಂಡು ಅದರ ಮೇಲೆ ಒಂದು
ಪಟ್ಟಣವನ್ನು ಕಟ್ಟಿಸಿ ಅದಕ್ಕೆ ಆ ಭೂಮಿಯ ಒಡೆಯ
ನಾಗಿದ್ದ ಶೆಮೆರನ ಜ್ಞಾಪಕಾರ್ಥವಾಗಿ ಸಮಾರ್ಯ
ವೆಂಬ ಹೆಸರಿಟ್ಟನು. ಇವನು ಯೆಹೋವನ ದೃಷ್ಟಿ 25

1) ಅಂದರೆ ಸುಮಾರು ಆರು ಸಾವಿರ ರೂಪಾಯಿ.

ಯಲ್ಲಿ ದ್ರೋಹಿಯೂ ತನ್ನ ಪೂರ್ವಾಧಿಕಾರಿಗಳೆಲ್ಲರಿ
26 ಗಿಂತ ದುಷ್ಟನೂ ಆಗಿದ್ದನು. ಇಸ್ರಾಯೇಲ್ಯರು ವಿಗ್ರ
ಹಗಳಿಂದ ತಮ್ಮ ದೇವರಾದ ಯೆಹೋವನನ್ನು ರೇಗಿ
ಸುವಂತೆ ಅವರನ್ನು ಪಾಪಕ್ಕೆ ಪ್ರೇರಿಸಿದ ನೆಬಾಟನ
ಮಗನಾದ ಯಾರೊಬ್ಬಾಮನ ಮಾರ್ಗದಲ್ಲಿ ಇವನೂ
27 ನಡೆದನು. ಇವನ ಉಳಿದ ಚರಿತ್ರೆಯೂ ಪರಾಕ್ರಮ
ಕೃತ್ಯಗಳೂ ಇಸ್ರಾಯೇಲ್‌ರಾಜಕಾಲವೃತ್ತಾಂತ ಎಂಬ
28 ಗ್ರಂಥದಲ್ಲಿ ಬರೆದಿರುತ್ತವೆ. ಒಮ್ರಿಯು ಪಿತೃಗಳ
ಬಳಿಗೆ ಸೇರಲು ಇವನ ಶವವನ್ನು ಸಮಾರ್ಯಪಟ್ಟಣ
ದಲ್ಲಿ ಸಮಾಧಿಮಾಡಿದರು. ಇವನಿಗೆ ಬದಲಾಗಿ ಇವ
ನ ಮಗನಾದ ಅಹಾಬನು ಅರಸನಾದನು.

### ಪ್ರವಾದಿಯಾದ ಎಲೀಯನ ಕಾಲದ ಅರಸರು.
16. 29—22. 53.

#### ಅಹಾಬನು.

29 ಯೆಹೂದ್ಯರ ಅರಸನಾದ ಆಸನ ಆಳಿಕೆಯ ಮೂವ
ತ್ತೆಂಟನೆಯ ವರುಷದಲ್ಲಿ ಒಮ್ರಿಯ ಮಗನಾದ ಅಹಾ
ಬನು ಇಸ್ರಾಯೇಲ್ಯರ ಅರಸನಾಗಿ ಸಮಾರ್ಯಪಟ್ಟ
30 ಣದಲ್ಲಿ ಇಪ್ಪತ್ತೆರಡು ವರುಷ ಆಳಿದನು. ಇವನು
ತನ್ನ ಪೂರ್ವಾಧಿಕಾರಿಗಳೆಲ್ಲರಿಗಿಂತಲೂ ದುಷ್ಟನಾಗಿ
31 ಯೆಹೋವನ ದೃಷ್ಟಿಯಲ್ಲಿ ದ್ರೋಹಿಯಾದನು. ಇವ
ನು ನೆಬಾಟನ ಮಗನಾದ ಯಾರೊಬ್ಬಾಮನ ಮಾರ್ಗ
ದಲ್ಲಿ ನಡೆಯುವದು ಅಲ್ಪ ಪಾಪವೆಂದು ತಿಳಿದವನೋ
ಎಂಬಂತೆ ಚೀದೋನ್ಯರ ಅರಸನಾದ ಎತ್ಬಾಳನ ಮಗ
ಳು ಈಜೆಬೆಲ್ ಎಂಬಾಕೆಯನ್ನು ಮದುವೆಮಾಡಿ
ಕೊಂಡು ಬಾಳ್‌ದೇವರನ್ನು ಪೂಜಿಸತೊಡಗಿದನು.
32 ಬಾಳ್‌ದೇವರಿಗೋಸ್ಕರ ಸಮಾರ್ಯದಲ್ಲಿ ಒಂದು ಗುಡಿ
ಕಟ್ಟಿಸಿ ಅದರಲ್ಲಿ ಯಜ್ಞವೇದಿಯನ್ನು ಮಾಡಿಸಿದನು.
33 ಇದಲ್ಲದೆ ಅಶೇರವಿಗ್ರಹಸ್ತಂಭವನ್ನು ನಿಲ್ಲಿಸಿದನು;
ಹೀಗೆ ಇನ್ನು ಎಷ್ಟೋ ಕೆಟ್ಟ ಕೆಲಸಗಳನ್ನು ಮಾಡಿ
ಮುಂಚೆ ಇದ್ದ ಎಲ್ಲಾ ಇಸ್ರಾಯೇಲ್‌ರಾಜರಿಗಿಂತಲೂ
ಹೆಚ್ಚಾಗಿ ಇಸ್ರಾಯೇಲ್‌ದೇವರಾದ ಯೆಹೋವನನ್ನು
ರೇಗಿಸಿದನು.
34 ಇವನ ಕಾಲದಲ್ಲಿ ಬೇತೇಲಿನವನಾದ ಹೀಯೇ
ಲನು ಯೆರಿಕೋಪಟ್ಟಣವನ್ನು ಕಟ್ಟಿಸಿದನು. ಅವನು
ಅದಕ್ಕೆ ಅಸ್ತಿವಾರಹಾಕುವಾಗ ಹಿರೀಮಗನಾದ ಅಬೀ
ರಾಮನನ್ನೂ ಬಾಗಲುಗಳನ್ನಿಡುವಾಗ ಕಿರೀಮಗನಾದ
ಸೆಗೂಬನನ್ನೂ ಕಳಕೊಂಡನು. ಹೀಗೆ ಯೆಹೋವನು
ನೂನನ ಮಗನಾದ ಯೆಹೋಶುವನಿಂದ ಹೇಳಿಸಿದ
ಮಾತು ನೆರವೇರಿತು.

#### ಎಲೀಯನು ಕೆರೀತ್‌ಹಳ್ಳದಲ್ಲಿಯೂ ಚಾರೆಪ್ತದಲ್ಲಿಯೂ ಇದ್ದದ್ದು.

17 ಗಿಲ್ಯಾದಿನ ಪ್ರವಾಸಿಗಳಲ್ಲಿ ತಿಷ್ಬೀಯನಾದ ಎಲೀ
ಯ ಎಂಬವನು ಅಹಾಬನಿಗೆ—ನಾನು ಸನ್ನಿಧಿಸೇವೆ
ಮಾಡುತ್ತಿರುವ ಇಸ್ರಾಯೇಲ್‌ದೇವರಾದ ಯೆಹೋವ
ನಾಣೆ, ನಾನು ಸೂಚಿಸಿದ ಹೊರತು ಇಂದಿನಿಂದ ಕೆಲವು
ವರುಷಗಳ ವರೆಗೆ ಮಳೆಯಾಗಲಿ ಮಂಜಾಗಲಿ ಬೀಳು
ವದಿಲ್ಲ ಅಂದನು.

ತರುವಾಯ ಯೆಹೋವನು ಎಲೀಯನಿಗೆ—ನೀನು
ಈ ಸ್ಥಳವನ್ನು ಬಿಟ್ಟು ಪೂರ್ವದಿಕ್ಕಿಗೆ ಹೋಗಿ ಯೊ
ರ್ದನ್‌ಹೊಳೆಯ ಆಚೆಯಲ್ಲಿರುವ ಕೆರೀತ್‌ಹಳ್ಳದಲ್ಲಿ
ಅಡಗಿಕೋ. ಆ ಹಳ್ಳದ ನೀರು ನಿನಗೆ ಪಾನವಾಗಿರು
ವದು; ನಿನಗೆ ಆಹಾರತಂದುಕೊಡಬೇಕೆಂದು ಕಾಗೆಗಳಿ
ಆಜ್ಞಾಪಿಸಿದ್ದೇನೆ ಎಂದು ಹೇಳಿದನು. ಅವನು ಯೆಹೋ
ವನ ಅಪ್ಪಣೆಯಂತೆ ಯೊರ್ದನಿನ ಪೂರ್ವಕ್ಕಿರುವ ಕೆರೀ
ತ್‌ಹಳ್ಳದಲ್ಲಿ ವಾಸಿಸಿದನು. ಕಾಗೆಗಳು ಅವನಿಗೆ ಪ್ರಾ
ತಃಕಾಲದಲ್ಲಿಯೂ ಸಾಯಂಕಾಲದಲ್ಲಿಯೂ ರೊಟ್ಟಿ
ಮಾಂಸ ಇವುಗಳನ್ನು ತಂದುಕೊಡುತ್ತಿದ್ದವು. ಅವನ
ಇವುಗಳನ್ನು ತಿನ್ನುತ್ತಿದ್ದನು; ಹಳ್ಳದ ನೀರು ಅವನಿ
ಪಾನವಾಗಿತ್ತು. ದೇಶದಲ್ಲಿ ಮಳೆಯಿಲ್ಲದ್ದರಿಂದ ಕೆಲ
ದಿವಸಗಳಾದನಂತರ ಹಳ್ಳವು ಬತ್ತಿಹೋಯಿತು.
ಆಗ ಯೆಹೋವನು ಅವನಿಗೆ—ನೀನು ಇಲ್ಲಿಂದ
ಚೀದೋನ್ಯರ ಚಾರೆಪ್ತಾ ಊರಿಗೆ ಹೊರಟುಹೋ
ಅಲ್ಲಿ ವಾಸಿಸು. ನಿನ್ನನ್ನು ಸಾಕಬೇಕೆಂದು ಅಲ್ಲಿ
ಒಬ್ಬ ವಿಧವೆಗೆ ಆಜ್ಞಾಪಿಸಿದ್ದೇನೆ ಅಂದನು. ಅವನ
ಅಲ್ಲಿಂದ ಹೊರಟು ಚಾರೆಪ್ತದ ಊರುಬಾಗಲಿನ ಸಮಿ
ಪಕ್ಕೆ ಬಂದಾಗ ಸೌದೆಯನ್ನು ಕೂಡಿಸುತ್ತಿರುವ ಒಬ್ಬ
ವಿಧವೆಯನ್ನು ಕಂಡು ಆಕೆಯನ್ನು ಕೂಗಿ—ದಯ
ವಿಟ್ಟು ಕುಡಿಯುವದಕ್ಕೆ ಒಂದು ತಂಬಿಗೆಯಲ್ಲಿ ನೀರ
ತೆಗೆದುಕೊಂಡು ಬಾ ಎಂದು ಹೇಳಿದನು. ಆಕೆಯ
ಹೋಗುತ್ತಿರುವಾಗ ತಿರಿಗಿ ಆಕೆಯನ್ನು ಕರೆದು—
ನೀನು ಬರುವಾಗ ನನಗೋಸ್ಕರ ಒಂದು ತುಂಡ
ರೊಟ್ಟಿಯನ್ನೂ ತೆಗೆದುಕೊಂಡು ಬಾ ಅಂದನು. ಆ
ಯು ಅವನಿಗೆ—ನಿನ್ನ ದೇವರಾದ ಯೆಹೋವನಾಣೆ
ನನ್ನ ಹತ್ತಿರ ರೊಟ್ಟಿಯಿರುವದಿಲ್ಲ, ಮಡಕೆಯಲ್
ಒಂದು ಹಿಡಿ ಹಿಟ್ಟು, ಮೊಗೆಯುಲ್ಲಿ ಸ್ವಲ್ಪ ಎಣ್ಣೆ ಇ
ಗಳ ಹೊರತಾಗಿ ಬೇರೇನೂ ಇರುವದಿಲ್ಲ. ಈ
ಎರಡು ಕಟ್ಟಿಗೆಗಳನ್ನು ಹೆಕ್ಕಿ ನನಗೋಸ್ಕರವೂ ನನ
ಮಗನಿಗೋಸ್ಕರವೂ ರೊಟ್ಟಿಮಾಡುತ್ತೇನೆ. ಅದನ
ತಿಂದ ಮೇಲೆ ನಾವು ಸಾಯಬೇಕೇ ಹೊರತು ಬೇರೆ ಗ
ಯಿಲ್ಲ ಎಂದು ಉತ್ತರಕೊಟ್ಟಳು. ಆಗ ಎಲೀಯನ
ಆಕೆಗೆ—ಹೆದರಬೇಡ; ನೀನು ಹೇಳಿದಂತೆ ಮಾಡು
ಆದರೆ ಮೊದಲು ಅದರಿಂದ ನನಗೋಸ್ಕರ ಒಂದು ಚಿ
ರೊಟ್ಟಿಯನ್ನು ಮಾಡಿಕೊಂಡು ಬಾ; ತರುವಾಯ ನಿ
ಗೂ ನಿನ್ನ ಮಗನಿಗೂ ಮಾಡಿಕೋ. ಇಸ್ರಾಯೇಲ
ದೇವರಾದ ಯೆಹೋವನು ನಿನಗೆ—ನಾನು ದೇಶಕ
ಮಳೆಯನ್ನು ಕಳುಹಿಸುವ ವರೆಗೆ ನಿನ್ನ ಮಡಕೆಯಲ
ರುವ ಹಿಟ್ಟು ತೀರುವದಿಲ್ಲ, ಮೊಗೆಯಲ್ಲಿರುವ ಎಣ್ಣೆ
ಯು ಮುಗಿದುಹೋಗುವದಿಲ್ಲ ಎಂದು ಹೇಳುತ್ತಾ
ಅಂದನು. ಆಕೆಯು ಹೋಗಿ ಅವನು ಹೇಳಿದಂತೆಯೆ
ಮಾಡಿದಳು; ಆಕೆಯೂ ಆಕೆಯ ಮನೆಯವರೂ ಎಲೀ
ಯನೂ ಅದನ್ನು ಅನೇಕ ದಿವಸಗಳ ವರೆಗೆ ಊಟಮಾ
ಡಿದರು. ಯೆಹೋವನು ಎಲೀಯನ ಮುಖಾಂತ
ವಾಗಿ ಹೇಳಿದಂತೆ ಮಡಕೆಯಲ್ಲಿದ್ದ ಹಿಟ್ಟು ತೀರಲಿಲ್ಲ
ಮೊಗೆಯಲ್ಲಿದ್ದ ಎಣ್ಣೆಯು ಮುಗಿದುಹೋಗಲಿಲ್ಲ.
ಕೆಲವು ದಿನಗಳಾದನಂತರ ಮನೆಯ ಯಜಮಾ
ಯಾದ ಆ ಸ್ತ್ರೀಯ ಮಗನು ಅಸ್ವಸ್ಥನಾದನು; ಹುಡ
ಗನಿಗೆ ರೋಗವು ಹೆಚ್ಚಾದದರಿಂದ ಉಸಿರಾಡುವುದ

18 ನಿಂತುಹೋಯಿತು. ಆಗ ಆ ಸ್ತ್ರೀಯು ಎಲೀಯ
ನಿಗೆ—ದೇವರ ಮನುಷ್ಯನೇ, ನನ್ನ ಗೊಡವೆ ನಿನ
ಗೇಕೆ? ನೀನು ನನ್ನ ಪಾಪವನ್ನು [ದೇವರ] ನೆನಪಿಗೆ
ತಂದು ನನ್ನ ಮಗನನ್ನು ಸಾಯಿಸುವದಕ್ಕೆ ಬಂದಿಯೋ
19 ಎನ್ನಲು ಅವನು ಆಕೆಗೆ—ನಿನ್ನ ಮಗನನ್ನು ನನಗೆ
ಕೊಡು ಎಂದು ಹೇಳಿ ಅವನನ್ನು ಆಕೆಯ ಉಡಿಲಿನಿಂದ
ತೆಗೆದುಕೊಂಡು ತಾನು ವಾಸವಾಗಿದ್ದ ಮೇಲಿನ ಕೋ
ಣೆಗೆ ಹೋಗಿ ತನ್ನ ಮಂಚದ ಮೇಲೆ ಮಲಗಿಸಿದನು.
20 ಅನಂತರ ಅವನು ಯೆಹೋವನಿಗೆ—ನನ್ನ ದೇವರಾದ
ಯೆಹೋವನೇ, ನನಗೆ ಸ್ಥಳಕೊಟ್ಟ ಈ ವಿಧವೆಯ ಮಗ
ನನ್ನು ನೀನು ಸಾಯಿಸಿ ಆಕೆಗೂ ಕೇಡನ್ನುಂಟುಮಾಡಿ
21 ದ್ದೀನು ಎಂದು ಹೇಳಿ ಹುಡುಗನ ಮೇಲೆ ಮೂರು
ಸಾರಿ ಬೋರ್ಲಬಿದ್ದು—ನನ್ನ ದೇವರಾದ ಯೆಹೋ
ವನೇ, ಈ ಹುಡುಗನ ಪ್ರಾಣವು ತಿರಿಗಿ ಬರುವಂತೆ
ಮಾಡು ಎಂಬದಾಗಿ ಆತನಿಗೆ ಮೊರೆಯಿಟ್ಟನು.
22 ಯೆಹೋವನು ಅವನ ಪ್ರಾರ್ಥನೆಯನ್ನು ಕೇಳಿದದ
ರಿಂದ ಹುಡುಗನ ಪ್ರಾಣವು ತಿರಿಗಿ ಬಂದು ಅವನು
23 ಉಜ್ಜೀವಿಸಿದನು. ಎಲೀಯನು ಆ ಹುಡುಗನನ್ನು
ಅಲ್ಲಿಂದ ಕೆಳಗೆ ತೆಗೆದುಕೊಂಡುಹೋಗಿ ಅವನ
ತಾಯಿಗೆ ಒಪ್ಪಿಸಿ—ಇಗೋ, ನೋಡು; ನಿನ್ನ ಮಗನು
24 ಜೀವಿಸುತ್ತಾನೆ ಅಂದನು. ಆಗ ಆಕೆಯು ಅವನಿಗೆ—
ನೀನು ದೇವರ ಮನುಷ್ಯನೆಂದೂ ನಿನ್ನ ಬಾಯಿಂದ
ಬಂದ ಯೆಹೋವನ ಮಾತು ಸತ್ಯವೆಂದೂ ಈಗ ನನಗೆ
ಗೊತ್ತಾಯಿತು ಎಂದು ಹೇಳಿದಳು.

### ಸತ್ಯದೇವರು ಬಾಳನೋ ಯೆಹೋವನೋ?

18 ಅನೇಕ ದಿವಸಗಳಾದನಂತರ ಎಲೀಯನಿಗೆ ಯೆ
ಹೋವನ ವಾಕ್ಯವುಂಟಾಯಿತು. ಬರಗಾಲದ ಮೂ
ರನೆಯ ವರುಷದಲ್ಲಿ ಆತನು ಅವನಿಗೆ—ನೀನು ಹೋಗಿ
ಅಹಾಬನನ್ನು ಕಾಣು; ನಾನು ದೇಶಕ್ಕೆ ಮಳೆಕೊಡು
2 ತ್ತೇನೆ ಅಂದನು. ಎಲೀಯನು ಅಹಾಬನನ್ನು ನೋಡು
ವದಕ್ಕೆ ಹೊರಟನು. ಆಗ ಸಮಾರ್ಯದಲ್ಲಿ ಬರವು
3 ಬಹುಘೋರವಾಗಿದ್ದದರಿಂದ ಅಹಾಬನು ತನ್ನ ಉಗ್ರಾ
ಣಿಕನಾದ ಓಬದ್ಯ ಎಂಬವನನ್ನು ಕರೇಕಳುಹಿಸಿದನು.
4 (ಈಜೆಬೆಲಳು ಯೆಹೋವನ ಪ್ರವಾದಿಗಳನ್ನು ಸಂಹರಿ
ಸುತ್ತಿರುವಾಗ ಯೆಹೋವನಲ್ಲಿ ಬಹುಭಯಭಕ್ತಿಯು
ಳ್ಳವನಾದ ಈ ಓಬದ್ಯನು ನೂರುಮಂದಿ ಪ್ರವಾದಿಗ
ಳನ್ನು ತೆಗೆದುಕೊಂಡು ಅವರನ್ನು ಐವತ್ತೈವತ್ತು
ಮಂದಿಯನ್ನಾಗಿ ಗವಿಗಳಲ್ಲಿ ಅಡಗಿಸಿಟ್ಟು ಅವರಿಗೆ ಅನ್ನ
5 ಪಾನಗಳನ್ನು ಕೊಟ್ಟು ಸಾಕುತ್ತಿದ್ದನು.) ಅಹಾಬನು
ಅವನಿಗೆ—ನಾವು ದೇಶಸಂಚಾರಮಾಡುತ್ತಾ ಎಲ್ಲಾ
ಬುಗ್ಗೆಹಳ್ಳಗಳಿಗೆ ಹೋಗಿ ಅವುಗಳಲ್ಲಿ ಹುಲ್ಲು ಸಿಕ್ಕು
ತ್ತದೋ ನೋಡೋಣ; ಸಿಕ್ಕುವದಾದರೆ ನಮ್ಮ ಕುದುರೆ
ಗಳೂ ಹೇಸರಕತ್ತೆಗಳೂ ಉಳಿಯುವವು; ಇಲ್ಲವಾದರೆ
6 ಎಲ್ಲಾ ಸತ್ತುಹೋಗುವವು ಎಂದು ಹೇಳಿ ಸಂಚಾರ
ಕ್ಕಾಗಿ ದೇಶವನ್ನು ಎರಡು ಭಾಗಮಾಡಿ ಒಂದು
ಭಾಗಕ್ಕೆ ಓಬದ್ಯನನ್ನು ಕಳುಹಿಸಿ ಇನ್ನೊಂದು ಭಾಗಕ್ಕೆ
ತಾನೇ ಹೊರಟುಹೋದನು.
7 ಓಬದ್ಯನು ಪ್ರಯಾಣಮಾಡುತ್ತಿರುವಾಗ ಎಲೀ
ಯನು ಫಕ್ಕನೆ ಅವನಿಗೆ ಎದುರಾದನು. ಓಬದ್ಯನು
ಅವನ ಗುರುತು ಹಿಡಿದು ಸಾಷ್ಟಾಂಗನಮಸ್ಕಾರ
ಮಾಡಿ—ನೀನು ನನ್ನ ಸ್ವಾಮಿಯಾದ ಎಲೀಯನೋ
ಎಂದು ಕೇಳಲು ಅವನು—ಹೌದು; ನೀನು ಹೋಗಿ 8
ನಿನ್ನ ಒಡೆಯನಿಗೆ ಎಲೀಯನು ಬಂದಿದ್ದಾನೆಂದು ಹೇಳು
ಅಂದನು. ಅದಕ್ಕೆ ಓಬದ್ಯನು—ಅಹಾಬನು ನನ್ನನ್ನು 9
ಕೊಲ್ಲುವ ಹಾಗೆ ನೀನು ನನ್ನನ್ನು ಅವನ ಕೈಗೆ ಒಪ್ಪಿ
ಸುವದೇಕೆ? ನಾನೇನು ಪಾಪಮಾಡಿದೆನು? ನಿನ್ನ ದೇವ 10
ರಾದ ಯೆಹೋವನಾಣೆ, ನನ್ನ ಒಡೆಯನು ಸೇವಕ
ರನ್ನು ಅಟ್ಟಿ ನಿನ್ನನ್ನು ಹುಡುಕದ ಜನಾಂಗವೂ ರಾಜ್ಯ
ವೂ ಒಂದೂ ಇರುವದಿಲ್ಲ. ಆ ಜನಾಂಗರಾಜ್ಯಗಳ
ವರು ಎಲೀಯನು ನಮ್ಮಲ್ಲಿರುವದಿಲ್ಲವೆಂದು ಹೇಳಿ
ದಾಗ ಅವನು ಅವರಿಂದ ಪ್ರಮಾಣಮಾಡಿಸಿದನು.
ಹೀಗಿದ್ದರೂ ನೀನು ನನಗೆ—ಎಲೀಯನು ಬಂದಿದ್ದಾ 11
ನೆಂದು ನಿನ್ನ ಒಡೆಯನಿಗೆ ತಿಳಿಸು ಎಂಬದಾಗಿ ಆಜ್ಞಾ
ಪಿಸುವದೇನು? ನಾನು ನಿನ್ನನ್ನು ಬಿಟ್ಟು ಹೊರಟ 12
ಕೂಡಲೆ ಯೆಹೋವನ ಆತ್ಮವು ನಿನ್ನನ್ನು ನನಗೆ ಗೊತ್ತಿ
ಲ್ಲದ ಬೇರೊಂದು ಸ್ಥಳಕ್ಕೆ ಒಯ್ಯುವದು. ನಾನು
ಹೋಗಿ ಅಹಾಬನಿಗೆ ಹೇಳುವಲ್ಲಿ ನೀನು ಅವನಿಗೆ ಸಿಕ್ಕ
ದೆಹೋದರೆ ಅವನು ನನ್ನನ್ನು ಕೊಂದುಹಾಕುವನು.
ನಾನು ಬಾಲ್ಯಾರಭ್ಯ ಯೆಹೋವನಲ್ಲಿ ಭಯಭಕ್ತಿಯು
ಳ್ಳವನಲ್ಲವೇ. ಈಜೆಬೆಲಳು ಯೆಹೋವನ ಪ್ರವಾದಿ 13
ಗಳನ್ನು ಸಂಹರಿಸುತ್ತಿರುವಾಗ ನಾನು ಮಾಡಿದ್ದು ನನ್ನ
ಸ್ವಾಮಿಯಾದ ನಿನಗೆ ತಿಳಿಸಲ್ಪಡಲಿಲ್ಲವೋ? ಅವರಲ್ಲಿ
ನೂರು ಮಂದಿಯನ್ನು ತೆಗೆದುಕೊಂಡು ಐವತ್ತೈವತ್ತು
ಮಂದಿಯನ್ನಾಗಿ ಗವಿಗಳಲ್ಲಿ ಅಡಗಿಸಿಟ್ಟು ಅನ್ನಪಾನಗ
ಳನ್ನು ಕೊಟ್ಟು ಸಾಕಿದೆನಲ್ಲವೇ. ಹೀಗಿದ್ದರೂ ನೀನು 14
ನನಗೆ—ಎಲೀಯನು ಬಂದಿದ್ದಾನೆಂಬದಾಗಿ ನಿನ್ನ ಒಡೆಯ
ನಿಗೆ ತಿಳಿಸು ಎಂದು ಆಜ್ಞಾಪಿಸುತ್ತೀ; ಅವನು ನನ್ನನ್ನು
ಕೊಲ್ಲುವನಲ್ಲವೋ ಎಂದು ಉತ್ತರಕೊಟ್ಟನು. ಆಗ 15
ಎಲೀಯನು ಅವನಿಗೆ—ನಾನು ಸನ್ನಿಧಿಸೇವೆಮಾಡುತ್ತಿ
ರುವ ಸೇನಾಧೀಶ್ವರನಾದ ಯೆಹೋವನಾಣೆ, ಈ ಹೊತ್ತು
ಅಹಾಬನಿಗೆ ಹೇಗೂ ಕಾಣಿಸಿಕೊಳ್ಳುವೆನು ಅಂದನು.
ಓಬದ್ಯನು ಅಹಾಬನ ಬಳಿಗೆ ಹೋಗಿ ಅವನಿಗೆ ಈ 16
ಮಾತನ್ನು ತಿಳಿಸಿದನು. ಅಹಾಬನು ಎಲೀಯನನ್ನು
ಎದುರುಗೊಳ್ಳುವದಕ್ಕಾಗಿ ಹೊರಟುಹೋಗಿ ಅವನನ್ನು 17
ಕಂಡಕೂಡಲೆ—ಇಸ್ರಾಯೇಲ್ಯರಿಗೆ ಆಪತ್ತನ್ನು ಬರ
ಮಾಡಿದವನೇ, ನೀನು ಬಂದಿಯಾ ಅಂದನು. ಅದಕ್ಕೆ 18
ಅವನು—ಅವರಿಗೆ ಆಪತ್ತನ್ನು ಬರಮಾಡಿದವನು ನಾ
ನಲ್ಲ; ಯೆಹೋವನ ಆಜ್ಞೆಗಳನ್ನು ಉಲ್ಲಂಘಿಸಿ
ಬಾಳನ ವಿಗ್ರಹಗಳನ್ನು ಪೂಜಿಸಿದ ನೀನೂ ನಿನ್ನ
ಮನೆಯವರೂ ಅದಕ್ಕೆ ಕಾರಣರು. ನೀನು ಈಗ 19
ಎಲ್ಲಾ ಇಸ್ರಾಯೇಲ್ಯರನ್ನೂ ಈಜೆಬೆಲಳಿಂದ ಪೋಷಣೆ
ಹೊಂದುವ ಬಾಳನ ನಾನೂರೈವತ್ತು ಮಂದಿ ಪ್ರವಾದಿ
ಗಳನ್ನೂ ಅಶೇರದೇವತೆಯ ನಾನೂರು ಮಂದಿ ಪ್ರವಾದಿ
ಗಳನ್ನೂ ಕರ್ಮೆಲ್‌ಬೆಟ್ಟಕ್ಕೆ ಕರಿಸು ಎಂದು ಹೇಳಿದನು.
ಅಹಾಬನು ಇಸ್ರಾಯೇಲ್ಯರನ್ನೂ ಎಲ್ಲಾ ಪ್ರವಾದಿಗ 20
ಳನ್ನೂ ಅಲ್ಲಿಗೆ ಕರಿಸಿದನು.
ಎಲೀಯನು ಎಲ್ಲಾ ಜನರ ಹತ್ತಿರ ಹೋಗಿ ಅವ 21
ರಿಗೆ—ನೀವು ಎಷ್ಟರ ವರೆಗೆ ಎರಡು ಮನಸ್ಸುಳ್ಳವರಾಗಿ

ರುವಿರಿ? ಯೆಹೋವನು ದೇವರಾಗಿದ್ದರೆ ಆತನನ್ನೇ
ಹಿಂಬಾಲಿಸಿರಿ; ಬಾಳನು ದೇವರಾಗಿದ್ದರೆ ಅವನನ್ನೇ
ಹಿಂಬಾಲಿಸಿರಿ ಎಂದು ಹೇಳಿದನು. ಜನರು ಇದಕ್ಕೆ
ಏನೂ ಉತ್ತರಕೊಡದೆ ಸುಮ್ಮನಿರುವದನ್ನು ಕಂಡು
22 ಅವನು ತಿರಿಗಿ ಅವರಿಗೆ—ಯೆಹೋವನ ಪ್ರವಾದಿಗಳಲ್ಲಿ
ನಾನೊಬ್ಬನೇ ಉಳಿದಿದ್ದೇನೆ; ಬಾಳನ ಪ್ರವಾದಿಗಳಲ್ಲಿ
23 ನಾನೂರೈವತ್ತು ಮಂದಿ ಇದ್ದಾರೆ. ಅವರು ಎರಡು
ಹೋರಿಗಳನ್ನು ನಮ್ಮ ಬಳಿಗೆ ತರಲಿ, ಅವುಗಳಲ್ಲೊಂ
ದನ್ನು ಆರಿಸಿಕೊಂಡು ಕಡಿದು ತುಂಡುಮಾಡಿ ಕಟ್ಟಿಗೆ
ಯ ಮೇಲಿಡಲಿ; ಆದರೆ ಬೆಂಕಿಹೊತ್ತಿಸಬಾರದು.
ನಾನೂ ಇನ್ನೊಂದನ್ನು ಹಾಗೆಯೇ ಮಾಡಿ ಬೆಂಕಿಹೊತ್ತಿ
24 ಸದೆ ಕಟ್ಟಿಗೆಯ ಮೇಲಿಡುವೆನು. ನೀವು ನಿಮ್ಮ ದೇವರ
ಹೆಸರು ಹೇಳಿ ಪ್ರಾರ್ಥಿಸಿರಿ; ಅನಂತರ ನಾನು ಯೆಹೋ
ವನ ಹೆಸರು ಹೇಳಿ ಪ್ರಾರ್ಥಿಸುವೆನು. ಆ ಇಬ್ಬರಲ್ಲಿ
ಯಾವನು ಲಾಲಿಸಿ ಬೆಂಕಿಯನ್ನು ಕಳುಹಿಸುವನೋ
ಅವನೇ ದೇವರೆಂದು ನಿಶ್ಚಯಿಸೋಣ ಅಂದನು. ಎಲ್ಲಾ
ಜನರೂ—ಸರಿ, ನೀನು ಹೇಳಿದಂತೆಯೇ ಆಗಲಿ ಎಂದು
25 ಉತ್ತರಕೊಟ್ಟರು. ಆಗ ಅವನು ಬಾಳನ ಪ್ರವಾದಿಗ
ಳಿಗೆ—ನೀವು ಹೆಚ್ಚು ಮಂದಿ ಇರುವದರಿಂದ ಮೊದಲು
ನೀವೇ ಒಂದು ಹೋರಿಯನ್ನು ಆರಿಸಿಕೊಂಡು ಅದನ್ನು
ಸಿದ್ಧಪಡಿಸಿ ನಿಮ್ಮ ದೇವರ ಹೆಸರು ಹೇಳಿ ಪ್ರಾರ್ಥಿಸಿರಿ;
ಆದರೆ ಬೆಂಕಿಯನ್ನು ಹೊತ್ತಿಸಕೂಡದು ಅಂದನು.
26 ಅವರು ತರಲ್ಪಟ್ಟ ಹೋರಿಗಳಲ್ಲೊಂದನ್ನು ತೆಗೆದು
ಕೊಂಡು ಸಿದ್ಧಪಡಿಸಿ ತಮ್ಮ ದೇವರಾದ ಬಾಳನ
ಹೆಸರು ಹೇಳಿ—ಬಾಳನೇ, ನಮಗೆ ಕಿವಿಗೊಡು ಎಂದು
ಹೊತ್ತಾರೆಯಿಂದ ಮಧ್ಯಾಹ್ನದ ವರೆಗೆ ಕೂಗಿದರೂ
ಆಕಾಶವಾಣಿಯಾಗಲಿಲ್ಲ; ಅವರು ವೇದಿಯ ಸುತ್ತಲು
ಕುಣಿದಾಡಿದರೂ ಯಾರೂ ಉತ್ತರದಯಪಾಲಿಸಲಿಲ್ಲ.
27 ಮಧ್ಯಾಹ್ನವಾದನಂತರ ಎಲೀಯನು ಅವರನ್ನು ಪರಿ
ಹಾಸ್ಯಮಾಡಿ—ಗಟ್ಟಿಯಾಗಿ ಕೂಗಿರಿ; ಅವನು ದೇವ
ರಾಗಿರುತ್ತಾನಲ್ಲಾ! ಈಗ ಒಂದು ವೇಳೆ ಅವನು ಧ್ಯಾನ
ದಲ್ಲಿರಬಹುದು; ಇಲ್ಲವೆ ಯಾವದೋ ಕೆಲಸದಲ್ಲಿ
ಅಥವಾ ಪ್ರಯಾಣದಲ್ಲಿ ಇರಬೇಕು. ಅದೂ ಇಲ್ಲದಿ
ದ್ದರೆ ನಿದ್ರೆಮಾಡುತ್ತಿದ್ದಾನು, ಎಚ್ಚರವಾಗಬೇಕು ಎಂದು
28 ಹೇಳಿದನು. ಅವರು ಗಟ್ಟಿಯಾಗಿ ಕೂಗಿ ತಮ್ಮ ಪದ್ಧ
ತಿಯ ಪ್ರಕಾರ ಈಟಿಕತ್ತಿಗಳಿಂದ ರಕ್ತಸೋರುವಷ್ಟು
29 ಗಾಯಮಾಡಿಕೊಂಡರು. ಮಧ್ಯಾಹ್ನದಿಂದ ನೈವೇ
ದ್ಯಸಮರ್ಪಣೆಯ ಹೊತ್ತಿನ ವರೆಗೂ ಪರವಶರಾಗಿ
ಕೂಗುತ್ತಾ ಇದ್ದರು. ಆದರೂ ಆಕಾಶವಾಣಿಯಾಗ
ಲಿಲ್ಲ; ಯಾವನೂ ಅವರಿಗೆ ಉತ್ತರಕೊಡಲಿಲ್ಲ, ಅವ
ರನ್ನು ಲಕ್ಷಿಸಲಿಲ್ಲ.
30 ಅನಂತರ ಎಲೀಯನು ಎಲ್ಲಾ ಜನರನ್ನು ಹತ್ತಿರಕ್ಕೆ
ಕರೆಯಲು ಅವರು ಬಂದರು. ಅವನು ಹಾಳಾಗಿದ್ದ
ಅಲ್ಲಿನ ಯೆಹೋವವೇದಿಯನ್ನು ತಿರಿಗಿ ಕಟ್ಟಿಸಿ
31 ದನು. ಯೆಹೋವನಿಂದ ಇಸ್ರಾಯೇಲನೆಂಬ
ಹೆಸರು ಹೊಂದಿದ ಯಾಕೋಬನ ಮಕ್ಕಳಿಂದ
ಉತ್ಪತ್ತಿಯಾದ ಕುಲಗಳ ಸಂಖ್ಯೆಗೆ ಸರಿಯಾಗಿ
32 ಹನ್ನೆರಡು ಕಲ್ಲುಗಳನ್ನು ತೆಗೆದುಕೊಂಡು ಯೆಹೋ
ವನ ಹೆಸರಿಗೋಸ್ಕರ ಒಂದು ವೇದಿಯನ್ನು ಕಟ್ಟಿಸಿ
ಅದರ ಸುತ್ತಲೂ ಇಪ್ಪತ್ತು ಸೇರು ಬೀಜವರೀ ನೆಲ

ವನ್ನು ಅಗಿಸಿ ಕಾಲಿವೆಮಾಡಿಸಿದನು. ಇದಲ್ಲ
ಕಟ್ಟಿಗೆಯನ್ನು ವೇದಿಯ ಮೇಲೆ ಕ್ರಮಪಡಿಸಿ ಹೋ
ಯನ್ನು ವಧಿಸಿ ತುಂಡುಮಾಡಿ ಅದರ ಮೇಲಿಟ್ಟನು
ಅನಂತರ ಜನರಿಗೆ—ನಾಲ್ಕು ಕೊಡ ನೀರು ತಂದ
ಯಜ್ಞಮಾಂಸದ ಮೇಲೆಯೂ ಕಟ್ಟಿಗೆಯ ಮೇಲೆಯ
ಹೊಯ್ಯಿರಿ ಎಂದು ಆಜ್ಞಾಪಿಸಿದನು. ಅವರು ತೆಗೆದ
ಕೊಂಡು ಬರಲು ಇನ್ನೊಂದು ಸಾರಿ ತನ್ನಿರಿ ಎಂದ
ಹೇಳಿದನು. ತಿರಿಗಿ ತಂದರು. ಅವನು ಮೂರನೆಯ
ಸಾರಿ ಅದೇ ಪ್ರಕಾರವಾಗಿ ಆಜ್ಞಾಪಿಸಲು ಅವರು ವ
ತ್ತೊಮ್ಮೆ ತಂದು ಸುರಿದರು. ನೀರು ವೇದಿಯ ಸುತ್
ಲೂ ಹರಿಯಿತು; ಇದಲ್ಲದೆ ಅವನು ಕಾಲಿವೆಯನ
ನೀರಿನಿಂದ ತುಂಬಿಸಿದನು.

ಸಂಧ್ಯಾನೈವೇದ್ಯದ ಹೊತ್ತಿಗೆ ಪ್ರವಾದಿಯಾದ ಎಲಿ
ಯನು ವೇದಿಯ ಹತ್ತಿರ ಬಂದು—ಅಬ್ರಹಾಮ
ಇಸಾಕ್ ಇಸ್ರಾಯೇಲ್ಯರ ದೇವರೇ, ಯೆಹೋವನೇ
ನೀನೊಬ್ಬನೇ ಇಸ್ರಾಯೇಲ್ಯರ ದೇವರಾಗಿರುತ್ತೀ ಎಂ
ದನ್ನೂ ನಾನು ನಿನ್ನ ಸೇವಕನಾಗಿರುತ್ತೇನೆಂಬದನ
ಇದನ್ನೆಲ್ಲಾ ನಿನ್ನ ಅಪ್ಪಣೆಯ ಮೇರೆಗೆ ಮಾಡಿದೆನೆಂ
ದನ್ನೂ ಈಹೊತ್ತು ತೋರಿಸಿಕೊಡು. ಕಿವಿಗೊಡು
ಯೆಹೋವನೇ, ಕಿವಿಗೊಡು; ಯೆಹೋವನಾದ ನೀನೆ
ಬ್ಬನೇ ದೇವರೂ ಈ ಜನರ ಮನಸ್ಸನ್ನು ನಿನ್ನ ಕಡೆ
ತಿರುಗಿಸಿಕೊಳ್ಳುವವನೂ ಆಗಿರುತ್ತೀ ಎಂಬದನ್ನು ಇ
ರಿಗೆ ತಿಳಿಯಪಡಿಸು ಎಂದು ಪ್ರಾರ್ಥಿಸಿದನು. ಕೂ
ಲೆ ಯೆಹೋವನ ಕಡೆಯಿಂದ ಬೆಂಕಿಬಿದ್ದು ಯಜ್
ಮಾಂಸವನ್ನೂ ಕಟ್ಟಿಗೆಕಲ್ಲುಮಣ್ಣುಗಳನ್ನೂ ದಹಿ
ಬಿಟ್ಟು ಕಾಲಿವೆಯಲ್ಲಿದ್ದ ನೀರನ್ನೆಲ್ಲಾ ಹೀರಿಬಿಟ್ಟಿತು
ಜನರೆಲ್ಲರೂ ಅದನ್ನು ಕಂಡು ಬೋರ್ಲಬಿದ್ದು—ಯೆ
ಹೋವನೇ ದೇವರು, ಯೆಹೋವನೇ ದೇವರು ಎಂದ
ಕೂಗಿದರು. ಆಗ ಎಲೀಯನು ಅವರಿಗೆ—ಬಾಳ
ಪ್ರವಾದಿಗಳೆಲ್ಲರನ್ನೂ ಹಿಡಿಯಿರಿ; ಅವರಲ್ಲಿ ಒಬ್ಬನ
ತಪ್ಪಿಸಿಕೊಳ್ಳಬಾರದು ಎಂದು ಆಜ್ಞಾಪಿಸಲು ಅವರ
ಹಿಡಿದರು. ಅವನು ಅವರನ್ನು ಕೀಷೋನ್‌ಹಳ್ಳಕ
ಒಯ್ದು ಅಲ್ಲಿ ಕೊಲ್ಲಿಸಿದನು.

ಅನಂತರ ಅವನು ಅಹಾಬನಿಗೆ—ನೀನು ಮೇ
ಹೋಗಿ ಅನ್ನಪಾನಗಳನ್ನು ತೆಗೆದುಕೋ; ದೊಡ್ಡ ವ
ಳೆಯ ಶಬ್ದವು ಕೇಳಿಸುತ್ತದೆ ಅಂದನು. ಅಹಾಬನ
ಅನ್ನಪಾನಗಳನ್ನು ತೆಗೆದುಕೊಳ್ಳ ಹೋದಾಗ ಎಲಿ
ಯನು ಕರ್ಮೆಲಿನ ತುದಿಗೆ ಹೋಗಿ ಅಲ್ಲಿ ನೆಲ
ಮೇಲೆ ಬಿದ್ದುಕೊಂಡು ಮೊಣಕಾಲಿನ ಮೇಲೆ ತಲೆಯ
ನ್ನಿಟ್ಟನು. ಅವನು ತನ್ನ ಸೇವಕನಿಗೆ—ನೀನು ಮೇ
ಹೋಗಿ ಸಮುದ್ರದ ಕಡೆಗೆ ನೋಡು ಎಂದು ಆಜ್ಞಾ
ಸಿದನು. ಸೇವಕನು ಹೋಗಿ ನೋಡಿ ಬಂದು ಏನ
ತೋರುವದಿಲ್ಲ ಎಂದು ಹೇಳಿದನು. ಹೀಗೆ ಅವನನ
ಏಳು ಸಾರಿ ಕಳುಹಿಸಿದನು. ಏಳನೆಯ ಸಾರಿ ಸೇ
ಕನು—ಅಂಗೈಯಷ್ಟು ಚಿಕ್ಕದಾದ ಮೋಡವು ಸಮ
ದ್ರದಿಂದ ಏರಿ ಬರುತ್ತಲಿದೆ ಎಂದು ತಿಳಿಸಿದನು. ಅ
ಎಲೀಯನು ಅವನಿಗೆ—ನೀನು ಹೋಗಿ ಅಹಾಬನಿಗೆ—
ಬೇಗನೆ ರಥವನ್ನು ಹೂಡಿಸಿಕೊಂಡು ಮಳೆಯು ನಿ
ನ್ನು ತಡೆಯದಂತೆ ಬೆಟ್ಟವನ್ನಿಳಿದು ಹೋಗು ಎಂ
ಹೇಳು ಅಂದನು. ತುಸ ಹೊತ್ತಿನಲ್ಲಿಯೇ ಆಕಾಶ

ಮೋಡಗಾಳಿಗಳಿಂದ ಕಪ್ಪಾಗಿ ದೊಡ್ಡ ಮಳೆಯು ಪ್ರಾ
ರಂಭವಾಯಿತು. ಅಹಾಬನು ರಥದಲ್ಲಿ ಕೂತುಕೊಂಡು
ಇಜ್ರೇಲಿಗೆ ಹೋದನು. ಯೆಹೋವನ ಹಸ್ತವು
ಎಲೀಯನ ಸಂಗಡ ಇದ್ದದರಿಂದ ಅವನು ನಡುಕಟ್ಟಿ
ಕೊಂಡು ಅಹಾಬನ ಮುಂದೆ ಓಡುತ್ತಾ ಇಜ್ರೇಲನ್ನು
ಸೇರಿದನು.

ದೇವರು ಹೋರೇಬಿನಲ್ಲಿ ಎಲೀಯನಿಗೆ ಕಾಣಿಸಿಕೊಂಡದ್ದು;
ಎಲೀಷನು ಅವನ ಸೇವಕನಾದದ್ದು.

9 ಎಲೀಯನು ಎಲ್ಲಾ ಪ್ರವಾದಿಗಳನ್ನು ಕತ್ತಿಯಿಂದ
ಸಂಹರಿಸಿದ್ದನ್ನೂ ಅವನು ಮಾಡಿದ ಬೇರೆ ಎಲ್ಲಾ
ಕಾರ್ಯಗಳನ್ನೂ ಅಹಾಬನು ಈಜೆಬೆಲಳಿಗೆ ತಿಳಿಸಿ
ದಾಗ ಆಕೆಯು ಎಲೀಯನ ಬಳಿಗೆ ದೂತರನ್ನು ಕಳು
ಹಿಸಿ ಅವನಿಗೆ—ನೀನು ಪ್ರವಾದಿಗಳ ಪ್ರಾಣವನ್ನು
ತೆಗೆದಂತೆ ನಾಳೆ ಇಷ್ಟು ಹೊತ್ತಿಗೆ ನಾನು ನಿನ್ನ ಪ್ರಾಣ
ವನ್ನು ತೆಗೆಯದೆ ಹೋದರೆ ದೇವತೆಗಳು ನನಗೆ ಬೇಕಾ
ದದ್ದನ್ನು ಮಾಡಲಿ ಎಂದು ಹೇಳಿಕಳುಹಿಸಿದಳು. ಅವ
ನು ಇದನ್ನು ಕೇಳಿದೊಡನೆ ತನ್ನ ಪ್ರಾಣರಕ್ಷಣೆಗಾಗಿ
ಅಲ್ಲಿಂದ ಹೊರಟು ಯೆಹೂದದ ಬೇರ್ಷೆಬಕ್ಕೆ ಬಂದು
ಅಲ್ಲಿ ತನ್ನ ಸೇವಕನನ್ನು ಬಿಟ್ಟನು. ತರುವಾಯ
ತಾನೊಬ್ಬನಾಗಿ ಅರಣ್ಯದೊಳಗೆ ಒಂದು ದಿವಸದ ಪ್ರ
ಯಾಣದಷ್ಟು ದೂರ ಹೋಗಿ ಒಂದು ಜಾಲೀಗಿಡದ
ಕೆಳಗೆ ಕೂತುಕೊಂಡು ಮರಣವನ್ನು ಅಪೇಕ್ಷಿಸಿದನು.
ಅವನು—ಯೆಹೋವನೇ, ನನಗೆ ಸಾಕಾಯಿತು; ನನ್ನ
ಪ್ರಾಣವನ್ನು ತೆಗೆದುಬಿಡು; ನಾನು ನನ್ನ ಪಿತೃಗಳಿ
ಗಿಂತ ಉತ್ತಮನಲ್ಲ ಎಂದು ದೇವರನ್ನು ಪ್ರಾರ್ಥಿಸಿ
ಅದೇ ಗಿಡದ ಕೆಳಗೆ ಮಲಗಿಕೊಂಡು ನಿದ್ರೆಮಾಡಿದನು.
ಫಕ್ಕನೆ ಒಬ್ಬ ದೇವದೂತನು ಅವನನ್ನು ತಟ್ಟಿ—ಎದ್ದು
ಊಟಮಾಡು ಎಂದು ಹೇಳಿದನು. ಎಲೀಯನು ಎದ್ದು
ನೋಡಲಾಗಿ ಕೆಂಡದ ಮೇಲೆ ಸುಟ್ಟ ರೊಟ್ಟಿಯೂ
ಒಂದು ತಂಬಿಗೆ ನೀರೂ ತನ್ನ ತಲೆಯ ಹತ್ತಿರ ಇರುವ
ದನ್ನು ಕಂಡು ಅವುಗಳನ್ನು ತೆಗೆದುಕೊಂಡು ತಿಂದು
ಕುಡಿದು ತಿರಿಗಿ ಮಲಗಿದನು. ಯೆಹೋವನ ದೂತನು
ಎರಡನೆಯ ಸಾರಿ ಬಂದು ಅವನನ್ನು ತಟ್ಟಿ ಅವನಿಗೆ—
ಎದ್ದು ಊಟಮಾಡು; ನೀನು ನಿನ್ನ ಶಕ್ತಿ ಮೀರು
ವಷ್ಟು ಪ್ರಯಾಣಮಾಡಬೇಕಾಗಿದೆ ಅಂದನು. ಅವನು
ಎದ್ದು ತಿಂದು ಕುಡಿದು ಅದರ ಬಲದಿಂದ ನಾಲ್ವತ್ತು
ದಿವಸ ಹಗಲಿರುಳು ಪ್ರಯಾಣಮಾಡಿ ದೇವಗಿರಿ
ಯಾದ ಹೋರೇಬಿಗೆ ಮುಟ್ಟಿ ಅಲ್ಲಿನ ಒಂದು ಗವಿ
ಯಲ್ಲಿ ಇಳುಕೊಂಡನು.
ಆಗ ಅವನಿಗೆ ಯೆಹೋವನಿಂದ—ಎಲೀಯನೇ,
ನೀನು ಇಲ್ಲೇನು ಮಾಡುತ್ತೀ ಎಂಬ ವಾಣಿಯು ಕೇಳಿ
ಸಿತು. ಅವನು ಅದಕ್ಕೆ—ಸೇನಾಧೀಶ್ವರನಾದ ದೇವರೇ,
ಯೆಹೋವನೇ, ಇಸ್ರಾಯೇಲ್ಯರು ನಿನ್ನ ನಿಬಂಧನೆ
ಯನ್ನು ಮೀರಿದ್ದಾರೆ, ಯಜ್ಞವೇದಿಗಳನ್ನು ಕೆಡವಿಹಾಕಿ
ದ್ದಾರೆ, ಪ್ರವಾದಿಗಳನ್ನು ಕತ್ತಿಯಿಂದ ಸಂಹರಿಸಿದ್ದಾರೆ,
ನಾನೊಬ್ಬನೇ ಉಳಿದು ನಿನ್ನ ಗೌರವವನ್ನು ಕಾಪಾಡು
ವದರಲ್ಲಿ ಆಸಕ್ತನಾಗಿದ್ದೇನು; ಆದರೆ ಅವರು ನನ್ನ
ಪ್ರಾಣವನ್ನೂ ತೆಗೆಯಬೇಕೆಂದಿದ್ದಾರೆ ಎಂದು ಉತ್ತರ
ಕೊಟ್ಟನು. ಆಗ ತಿರಿಗಿ—ನೀನು ಹೊರಗೆ ಬಂದು 11
ಬೆಟ್ಟದ ಮೇಲೆ ಯೆಹೋವನ ಮುಂದೆ ನಿಲ್ಲು ಎಂಬ
ವಾಣಿಯಾಯಿತು; ಆಹಾ, ಯೆಹೋವನು ಅಲ್ಲಿ ಹಾದು
ಹೋದನು. ಆತನ ಮುಂದೆ ಪರ್ವತಗಳನ್ನು ಭೇದಿಸಿ
ಬಂಡೆಗಳನ್ನು ಪುಡಿಪುಡಿಮಾಡುವಂಥ ದೊಡ್ಡ ಬಿರುಗಾಳಿ
ಯು ಬೀಸಿತು; ಯೆಹೋವನು ಅದರಲ್ಲಿ ಇರಲಿಲ್ಲ.
ತರುವಾಯ ಭೂಕಂಪವುಂಟಾಯಿತು; ಅದರಲ್ಲಿಯೂ
ಆತನಿರಲಿಲ್ಲ. ಭೂಕಂಪವಾದನಂತರ ಸಿಡಿಲುಂಟಾಯಿ 12
ತು; ಅದರಲ್ಲಿಯೂ ಯೆಹೋವನಿರಲಿಲ್ಲ. ಕಡೆಗೆ
ಮಂದಮಾರುತಶಬ್ದ! ಅದನ್ನು ಕೇಳಿದ ಕೂಡಲೆ 13
ಎಲೀಯನು ತನ್ನ ಕಂಬಳಿಯಿಂದ ಮೋರೆಯನ್ನು
ಮುಚ್ಚಿಕೊಂಡು ಹೋಗಿ ಗವಿಯ ದ್ವಾರದಲ್ಲಿ ನಿಂತನು.
ಆಗ—ಎಲೀಯನೇ, ನೀನು ಇಲ್ಲೇನು ಮಾಡುತ್ತೀ
ಎಂಬ ವಾಣಿಯು ಕೇಳಿಸಿತು. ಅದಕ್ಕೆ ಅವನು— 14
ಸೇನಾಧೀಶ್ವರನಾದ ಯೆಹೋವನೇ, ಇಸ್ರಾಯೇಲ್ಯರು
ನಿನ್ನ ನಿಬಂಧನೆಯನ್ನು ಮೀರಿದ್ದಾರೆ, ಯಜ್ಞವೇದಿಗ
ಳನ್ನು ಕೆಡವಿಹಾಕಿದ್ದಾರೆ, ಪ್ರವಾದಿಗಳನ್ನು ಕತ್ತಿಯಿಂದ
ಸಂಹರಿಸಿದ್ದಾರೆ, ನಾನೊಬ್ಬನೇ ಉಳಿದು ನಿನ್ನ ಗೌರವ
ವನ್ನು ಕಾಪಾಡುವದರಲ್ಲಿ ಆಸಕ್ತನಾಗಿದ್ದೇನು; ಆದರೆ
ಅವರು ನನ್ನ ಪ್ರಾಣವನ್ನೂ ತೆಗೆಯಬೇಕೆಂದಿದ್ದಾರೆ
ಎಂದು ಉತ್ತರಕೊಟ್ಟನು. ಆಗ ಯೆಹೋವನು ಅವ 15
ನಿಗೆ—ನೀನು ಬಂದ ದಾರಿಯಿಂದ ಹಿಂದಿರುಗಿ ದಮ
ಸ್ಕದ ಅರಣ್ಯಕ್ಕೆ ಹೋಗು; ಅಲ್ಲಿಂದ ಪಟ್ಟಣದೊಳಗೆ
ಪ್ರವೇಶಿಸಿ ಹಜಾಯೇಲನನ್ನು ಅರಾಮ್ಯರ ಅರಸನನ್ನಾಗಿ
ಅಭಿಷೇಕಿಸು; ನಿಂಷಿಯ ಮಗನಾದ ಯೇಹುವನ್ನು 16
ಇಸ್ರಾಯೇಲ್ಯರ ಅರಸನನ್ನಾಗಿಯೂ ಅಬೇಲ್ಮೆಹೋ
ಲದವನೂ ಶಾಫಾಟನ ಮಗನೂ ಆದ ಎಲೀಷನನ್ನು
ನಿನಗೆ ಬದಲಾಗಿ ಪ್ರವಾದಿಯನ್ನಾಗಿಯೂ ಅಭಿಷೇ
ಕಿಸು. ಹಜಾಯೇಲನ ಕತ್ತಿಗೆ ತಪ್ಪಿಸಿಕೊಂಡವರನ್ನು 17
ಯೇಹುವು ಕೊಲ್ಲುವನು; ಇವನ ಕತ್ತಿಗೆ ತಪ್ಪಿಸಿ
ಕೊಂಡವರನ್ನು ಎಲೀಷನು ಕೊಲ್ಲುವನು. ಆದರೆ 18
ಬಾಳನ ವಿಗ್ರಹಕ್ಕೆ ಅಡ್ಡಬೀಳದೆಯೂ ಅದನ್ನು ಮುದ್ದಿ
ಡದೆಯೂ ಇರುವ ಏಳು ಸಾವಿರ ಮಂದಿ ಇಸ್ರಾ
ಯೇಲ್ಯರನ್ನು ಉಳಿಸುವೆನು ಎಂದು ಹೇಳಿದನು.
ಎಲೀಯನು ಅಲ್ಲಿಂದ ಹೊರಟುಹೋಗಿ ಶಾಫಾ 19
ಟನ ಮಗನಾದ ಎಲೀಷನನ್ನು ಕಂಡನು. ಅವನು
ಹೊಲವನ್ನು ಉಳುವದಕ್ಕೆ ಹನ್ನೆರಡು ಜೋಡಿ ಎತ್ತು
ಗಳನ್ನು ತಂದು ಹನ್ನೆರಡನೆಯ ಜೋಡಿಯಿಂದ ತಾನಾ
ಗಿ ಉಳುತ್ತಿದ್ದನು. ಎಲೀಯನು ಅಲ್ಲಿಂದ ಹಾದುಹೋ
ಗುವಾಗ ತನ್ನ ಕಂಬಳಿಯನ್ನು ಅವನ ಮೇಲೆ ಹಾಕಿ
ದನು. ಕೂಡಲೆ ಅವನು ಎತ್ತುಗಳನ್ನು ಬಿಟ್ಟು ಓಡು 20
ತ್ತಾ ಬಂದು ಎಲೀಯನಿಗೆ—ನನ್ನ ತಂದೆತಾಯಿ
ಗಳನ್ನು ಮುದ್ದಿಟ್ಟು ಬರುವದಕ್ಕೆ ಅಪ್ಪಣೆಯಾಗಲಿ:
ಅನಂತರ ನಿನ್ನನ್ನು ಹಿಂಬಾಲಿಸುವೆನು ಅಂದನು. ಅದ
ಕ್ಕೆ ಎಲೀಯನು—1)ಹೋಗು; ನಾನು ನಿನಗೆ ಮಾಡಿ
ದ್ದೇನು ಎಂದು ಉತ್ತರಕೊಟ್ಟನು. ಎಲೀಷನು ಹಿಂದಿ 21

1) ಅಥವಾ: ಹೋಗಿ ನಾನು ನಿನಗೇನು ಮಾಡಿದೆನೆಂಬದನ್ನು ಆಲೋಚಿಸಿ ಹಿಂದಿರುಗಿ ಬಾ.

ರುಗಿ ಹೋಗಿ ತಾನು ಉಳುತ್ತಿದ್ದ ಜೋಡಿ ಎತ್ತುಗಳ
ನ್ನು ತೆಗೆದುಕೊಂಡು ಅವುಗಳನ್ನು ವಧಿಸಿ ಮಾಂಸ
ವನ್ನು ರಂಟೆಯ ಕಟ್ಟಿಗೆಯಿಂದ ಬೇಯಿಸಿ ಜನರಿಗೆ
ಔತಣಮಾಡಿಸಿದನು. ಅನಂತರ ಅವನು ಎದ್ದು ಎಲೀ
ಯನನ್ನು ಹಿಂಬಾಲಿಸಿ ಅವನ ಸೇವಕನಾದನು.

ಅಹಾಬನು ಅರಾಮ್ಯರನ್ನು ಎರಡು ಸಾರಿ ಸೋಲಿಸಿದ್ದು.

20 ಅರಾಮ್ಯರ ಅರಸನಾದ ಬೆನ್ಹದದನು ತನ್ನ ಎಲ್ಲಾ
ಸೈನ್ಯವನ್ನು ಕೂಡಿಸಿಕೊಂಡು ರಥಾಶ್ವಬಲಗಳಿಂದ
ಕೂಡಿದ ಮೂವತ್ತೆರಡು ಮಂದಿ ಅರಸರೊಡನೆ ಹೊರ
ಟು ಬಂದು ಸಮಾರ್ಯಪಟ್ಟಣಕ್ಕೆ ಮುತ್ತಿಗೆ ಹಾಕಿ
2 ಯುದ್ಧಮಾಡಿದನು. ಅವನು ಆ ಪಟ್ಟಣದಲ್ಲಿದ್ದ
ಇಸ್ರಾಯೇಲ್ಯರ ಅರಸನಾದ ಅಹಾಬನ ಬಳಿಗೆ ದೂತ
3 ರನ್ನು ಕಳುಹಿಸಿ ಅವನಿಗೆ—ನಿನ್ನ ಬೆಳ್ಳಿಬಂಗಾರವು
ನನ್ನದು; ನಿನ್ನ ಪ್ರಿಯ ಸತಿಸುತರೂ ನನ್ನವರೇ ಎಂದು
4 ತಿಳಿದುಕೋ ಎಂಬದಾಗಿ ಹೇಳಿಸಿದನು. ಅದಕ್ಕೆ ಇಸ್ರಾ
ಯೇಲ್ಯರ ಅರಸನು—ನನ್ನ ಒಡೆಯನಾದ ಅರಸನೇ,
ನೀನು ಹೇಳಿದಂತೆ ನಾನು ನಿನ್ನವನೇ; ನನಗಿರುವದೆಲ್ಲ
ವೂ ನಿನ್ನದೇ ಎಂದು ಉತ್ತರಕೊಟ್ಟು ಕಳುಹಿಸಿದನು.
5 ಆ ದೂತರು ತಿರಿಗಿ ಅಹಾಬನ ಬಳಿಗೆ ಬಂದು ಅವನಿಗೆ—
ನಿನ್ನ ಬೆಳ್ಳಿಬಂಗಾರವನ್ನೂ ಸತಿಸುತರನ್ನೂ ನನಗೆ ಒಪ್ಪಿ
6 ಸಬೇಕೆಂದು ನಿನಗೆ ಹೇಳಿಕಳುಹಿಸಿದೆನಲ್ಲಾ. ನಾಳೆ ಇಷ್ಟು
ಹೊತ್ತಿಗೆ ನನ್ನ ಆಳುಗಳನ್ನು ಕಳುಹಿಸುವೆನು; ಅವರು
ನಿನ್ನ ಮತ್ತು ನಿನ್ನ ಸೇವಕರ ಮನೆಗಳನ್ನು ಶೋಧಿಸಿ
ನಿಮಗೆ ಇಷ್ಟವಾಗಿರುವವುಗಳನ್ನೆಲ್ಲಾ ತೆಗೆದುಕೊಳ್ಳುವ
ರು ಎಂಬದಾಗಿ ಬೆನ್ಹದದನು ಅನ್ನುತ್ತಾನೆ ಎಂದು ತಿಳಿಸಿ
7 ದರು. ಆಗ ಇಸ್ರಾಯೇಲ್ಯರ ಅರಸನು ದೇಶದ
ಎಲ್ಲಾ ಹಿರಿಯರನ್ನು ಕರಿಸಿ ಅವರಿಗೆ—ನೋಡಿದಿರಾ,
ಅವನು ನಮಗೆ ಕೇಡು ಬಗೆಯುತ್ತಾನೆ; ನಿನ್ನ ಬೆಳ್ಳಿ
ಬಂಗಾರವನ್ನೂ ಸತಿಸುತರನ್ನೂ ನನಗೆ ಕೊಡು ಎಂದು
ಅವನು ಹೇಳಿಕಳುಹಿಸಿದ್ದಕ್ಕೆ ನಾನು ಒಪ್ಪಿದರೂ
8 ಅವನಿಗೆ ತೃಪ್ತಿಯಾಗಲಿಲ್ಲ ಎಂದು ಹೇಳಲು ಎಲ್ಲಾ
ಹಿರಿಯರೂ ಜನರೂ ಅವನಿಗೆ—ನೀನು ಈ ಮಾತಿಗೆ
9 ಒಪ್ಪಬೇಡ ಅಂದರು. ಆದದರಿಂದ ಅವನು ಬಂದಂಥ
ದೂತರ ಮುಖಾಂತರವಾಗಿ ಬೆನ್ಹದದನಿಗೆ—ನನ್ನ ಒಡೆ
ಯನೇ, ಅರಸನೇ, ನಾನು ನಿನ್ನ ಮೊದಲನೆಯ
ಮಾತಿಗೆ ಒಪ್ಪಿ ಅದರಂತೆ ಮಾಡಲು ಸಿದ್ಧನಾಗಿರು
ತ್ತೇನೆ; ಆದರೆ ಎರಡನೆಯ ಮಾತಿಗೆ ಒಪ್ಪಲಾರೆನು
ಎಂದು ಹೇಳಿಕಳುಹಿಸಿದನು. ದೂತರು ಬಂದು ಈ
10 ಮಾತುಗಳನ್ನು ಬೆನ್ಹದದನಿಗೆ ತಿಳಿಸಿದಾಗ ಅವನು ಅಹಾ
ಬನಿಗೆ—ಸಮಾರ್ಯಪಟ್ಟಣದ ನಾಶನದಿಂದುಂಟಾಗುವ
ಧೂಳು ಲೆಕ್ಕವಿಲ್ಲದ ನನ್ನ ಸೈನಿಕರ ಹಿಡಿತುಂಬುವ
ಷ್ಟಿದ್ದರೆ ದೇವತೆಗಳು ನನಗೆ ಬೇಕಾದದ್ದನ್ನು ಮಾಡಲಿ
11 ಎಂದು ಹೇಳಿಕಳುಹಿಸಿದನು. ಇಸ್ರಾಯೇಲ್ಯರ ಅರ
ಸನು ಬಂದ ದೂತರಿಗೆ—ಯುದ್ಧಕ್ಕಾಗಿ ನಡುಕಟ್ಟನ್ನು
ಬಿಗಿದುಕೊಳ್ಳುವವನು ಅದನ್ನು ಬಿಚ್ಚಿಡುವ ಜಯಶಾಲಿ
ಯಂತೆ ಹೆಚ್ಚಳಪಡಬಾರದು ಎಂದು ಅವನಿಗೆ ಹೇಳಿರಿ
12 ಅಂದನು. ತನ್ನ ಅರಸುಗಳ ಸಂಗಡ ಡೇರೆಗಳಲ್ಲಿ ಮದ್ಯ
ಪಾನಮಾಡುತ್ತಿದ್ದ ಬೆನ್ಹದದನು ಈ ಉತ್ತರವನ್ನು

ಕೇಳುತ್ತಲೆ ಪಟ್ಟಣಕ್ಕೆ ಲಗ್ಗೆಹತ್ತುವಂತೆ ಸೈನಿಕರಿ
ಆಜ್ಞಾಪಿಸಿದನು. ಅವರು ಹಾಗೆಯೇ ಮಾಡಿದರ
ಆಗ ಒಬ್ಬ ಪ್ರವಾದಿಯು ಇಸ್ರಾಯೇಲ್ಯರ ಅರ
ನಾದ ಅಹಾಬನ ಬಳಿಗೆ ಬಂದು ಅವನಿಗೆ—
ಮಹಾಸಮೂಹವನ್ನು ನೋಡಿದಿಯಾ; ನಾನು ಯ
ಹೋವನೇ ಎಂಬದು ನಿನಗೆ ಗೊತ್ತಾಗುವಂತೆ
ಹೊತ್ತೇ ಇವರನ್ನೆಲ್ಲಾ ನಿನ್ನ ಕೈಗೆ ಒಪ್ಪಿಸುವೆನ
ಎಂಬದಾಗಿ ಯೆಹೋವನು ಅನ್ನುತ್ತಾನೆ ಎಂದ
ಹೇಳಿದನು. ಅಹಾಬನು ಅವನನ್ನು—ಇದು ಯಾ
ಮುಖಾಂತರವಾಗಿ ಆಗುವದು ಎಂದು ಕೇಳಿದ್ದಕ
ಅವನು—ಪ್ರದೇಶಾಧಿಪತಿಗಳ ಸೇವಕರ ಮುಖಾಂತ
ವಾಗಿ ಆಗುವದೆಂದು ಯೆಹೋವನು ಅನ್ನುತ್ತಾ
ಎಂದು ಉತ್ತರಕೊಟ್ಟನು. ಅಹಾಬನು ತಿರಿಗಿ ಅ
ನನ್ನು—ಯುದ್ಧಪ್ರಾರಂಭಮಾಡತಕ್ಕವರಾರು ಎಂದ
ಕೇಳಲು ಅವನು—ನೀನೇ ಎಂದು ಹೇಳಿದನು. ಅಹ
ಬನು ಪ್ರದೇಶಾಧಿಪತಿಗಳ ಆಳುಗಳನ್ನು ಲೆಕ್ಕಿಸಿದಾ
ಇನ್ನೂರ ಮೂವತ್ತೆರಡು ಮಂದಿಯಿದ್ದರು; ಇಸ್
ಯೇಲ್ಯರ ಸೈನ್ಯವನ್ನು ಲೆಕ್ಕಿಸಿದಾಗ ಏಳು ಸಾವ
ಮಂದಿಯಿದ್ದರು. ಮಧ್ಯಾಹ್ನದಲ್ಲಿ ಬೆನ್ಹದದನು ತನ
ಸಹಾಯಕ್ಕಾಗಿ ಬಂದ ಮೂವತ್ತೆರಡು ಮಂದಿ ಅ
ಸರ ಸಂಗಡ ಮದ್ಯಪಾನಮಾಡಿ ಮತ್ತನಾಗಿ ಡೇ
ಯಲ್ಲಿ ಕೂತುಕೊಂಡಿದ್ದಾಗ ಇವರು ಪಟ್ಟಣದಿಂ
ಹೊರಗೆ ಬಂದರು. ಪ್ರದೇಶಾಧಿಪತಿಗಳ ಆಳುಗಳ
ಮೊದಲು ಬಂದರು. ಸಮಾರ್ಯದ ಜನರು ಹೊರ
ಬಂದಿರುತ್ತಾರೆಂದು ಬೆನ್ಹದದನ ಕಾವಲುಗಾರರು ಅ
ನಿಗೆ ತಿಳಿಸಲು ಅವನು ಅವರಿಗೆ—ಅವರು ಯುದ್ಧಕ್ಕಾ
ಬಂದಿದ್ದರೂ ಸಮಾಧಾನಕ್ಕಾಗಿ ಬಂದಿದ್ದರೂ ಅವರನ
ಸಜೀವಿಗಳನ್ನಾಗಿ ಹಿಡಿದು ತನ್ನಿರಿ ಎಂದು ಆಜ್ಞಾಪಿ
ದನು. ಮೊದಲಾಗಿ ಹೊರಟುಬಂದ ಪ್ರದೇಶಾಧಿಪ
ಗಳ ಆಳುಗಳ ಹಿಂದೆ ಇಸ್ರಾಯೇಲ್‌ಸೈನ್ಯದವರ
ಬಂದರು. ಅವರಲ್ಲಿ ಪ್ರತಿಯೊಬ್ಬನು ತನ್ನ ಎದುರಿ
ಬಂದ ವಿರೋಧಿಯನ್ನು ಕೊಲ್ಲುತ್ತಾ ಮುಂದರಿದನ
ಅರಾಮ್ಯರು ಓಡಿಹೋಗಲು ಇಸ್ರಾಯೇಲ್ಯರು ಅ
ರನ್ನು ಹಿಂದಟ್ಟಿದರು. ಅವರ ಅರಸನಾದ ಬೆನ್ಹದದನ
ಕೆಲವು ಮಂದಿ ರಾಹುತರೂ ಕುದುರೆಗಳನ್ನೇರಿ ಓ
ಹೋಗಿ ತಪ್ಪಿಸಿಕೊಂಡರು. ಇಸ್ರಾಯೇಲ್ಯರ ಅರಸನ
ಹೊರಟುಬಂದು ಅರಾಮ್ಯರ ರಥಾಶ್ವಬಲಗಳನ್ನು ಸೋ
ಲಿಸಿ ಮಹಾಸಮೂಹವನ್ನು ಸಂಹರಿಸಿದನು.
ಆಗ ಪ್ರವಾದಿಯು ತಿರಿಗಿ ಇಸ್ರಾಯೇಲ್ಯರ ಅರಸ
ಬಳಿಗೆ ಬಂದು ಅವನಿಗೆ—ಅರಾಮ್ಯರ ಅರಸನು ಮುಂ
ನ ವರುಷದಲ್ಲಿ ಇನ್ನೊಮ್ಮೆ ನಿನಗೆ ವಿರೋಧವಾಗಿ ಬ
ತ್ತಾನೆ; ಆದದರಿಂದ ನೀನು ಹೋಗಿ ನಿನ್ನನ್ನು ಬ
ಪಡಿಸಿಕೋ; ಜಾಗರೂಕನಾಗಿದ್ದು ನೀನು ಮಾಡತಕ
ದ್ದೇನೆಂಬದನ್ನು ಪರ್ಯಾಲೋಚಿಸು ಅಂದನು.
ಅರಾಮ್ಯರ ಅರಸನ ಮಂತ್ರಿಗಳು ತಮ್ಮ ಒಡೆಯ
ನಿಗೆ—ಇಸ್ರಾಯೇಲ್ಯರ ದೇವರು ಬೆಟ್ಟಗಳ ದೇ
ರಾಗಿರುವದರಿಂದ ಅವರು ನಮ್ಮನ್ನು ಸೋಲಿಸಿದರು
ನಾವು ಅವರೊಡನೆ ಬೈಲಿನಲ್ಲಿ ಯುದ್ಧಮಾಡುವದ
ದರೆ ಹೇಗೂ ಜಯಹೊಂದುವೆವು. ನೀನು ಆಯ
ಸ್ಥಳಗಳಲ್ಲಿರುವ ಅರಸರನ್ನು ತೆಗೆದುಹಾಕಿ ಅವರಿ

25 ಬದಲಾಗಿ ಪ್ರದೇಶಾಧಿಪತಿಗಳನ್ನು ನೇಮಿಸು. ಅನಂತರ
ನಮ್ಮ ಸೈನ್ಯದಿಂದ ನಷ್ಟವಾಗಿ ಹೋದಷ್ಟು ಜನರನ್ನೂ
ಕುದುರೆಗಳನ್ನೂ ರಥಗಳನ್ನೂ ತಿರಿಗಿ ಕೂಡಿಸಿ ಅವ
ರೊಡನೆ ಬೈಲಿನಲ್ಲಿ ಯುದ್ಧಮಾಡೋಣ; ನಮಗೆ
ಹೇಗೂ ಜಯಸಿಕ್ಕುವದು ಎಂದು ಹೇಳಿದರು. ಅವನು
26 ಅದರಂತೆಯೇ ಮಾಡಿದನು. ಒಂದು ವರುಷ ದಾಟಿದ
ನಂತರ ಬೆನ್ಹದದನು ಅರಾಮ್ಯರನ್ನು ಕೂಡಿಸಿಕೊಂಡು
ಇಸ್ರಾಯೇಲ್ಯರೊಡನೆ ಯುದ್ಧಮಾಡುವದಕ್ಕಾಗಿ ಅಫೇ
27 ಕಕ್ಕೆ ಹೋದನು. ಇಸ್ರಾಯೇಲ್ಯರೂ ಕೂಡಿ ಆಹಾರ
ಸಾಮಗ್ರಿಗಳನ್ನು ಒದಗಿಸಿಕೊಂಡು ಅವರಿಗೆ ವಿರೋಧ
ವಾಗಿ ಬಂದರು. ಅರಾಮ್ಯರು ದೇಶದಲ್ಲೆಲ್ಲಾ ವ್ಯಾಪಿಸಿ
ಕೊಂಡಿದ್ದರು. ಆಡುಮರಿಗಳ ಎರಡು ಹಿಂಡುಗಳಂತಿ
ರುವ ಇಸ್ರಾಯೇಲ್ಯರು ಅವರ ಎದುರಿನಲ್ಲಿ ಪಾಳೆಯ
28 ಮಾಡಿಕೊಂಡರು. ಆಗ ದೇವರ ಮನುಷ್ಯನು ಇಸ್ರಾ
ಯೇಲ್ಯರ ಅರಸನ ಬಳಿಗೆ ಬಂದು ಅವನಿಗೆ—ಯೆಹೋ
ವನು ಹೀಗನ್ನುತ್ತಾನೆ—ಯೆಹೋವನು ತಗ್ಗುಗಳ
ದೇವರಲ್ಲ, ಬೆಟ್ಟಗಳ ದೇವರಾಗಿರುತ್ತಾನೆ ಅಂದು
ಕೊಂಡು ಬಂದಿರುವ ಈ ಅರಾಮ್ಯರ ಮಹಾಸಮೂಹ
ವನ್ನು ನಿನ್ನ ಕೈಗೆ ಒಪ್ಪಿಸುವೆನು; ಇದರಿಂದ ನಾನು
ಯೆಹೋವನೇ ಎಂದು ನಿನಗೆ ಗೊತ್ತಾಗುವದು ಎಂದು
29 ಹೇಳಿದನು. ಈ ಎರಡು ಸೈನ್ಯಗಳೂ ಏಳು ದಿನಗಳ
ವರೆಗೆ ಎದುರುಬದುರಾಗಿ ಪಾಳೆಯಮಾಡಿಕೊಂಡಿದ್ದವು.
ಏಳನೆಯ ದಿನದಲ್ಲಿ ಯುದ್ಧಪ್ರಾರಂಭವಾಗಲು ಇಸ್ರಾ
ಯೇಲ್ಯರು ಆ ಒಂದೇ ದಿನದಲ್ಲಿ ಅರಾಮ್ಯರ ಒಂದು
30 ಲಕ್ಷ ಮಂದಿ ಕಾಲಾಳುಗಳನ್ನು ವಧಿಸಿದರು. ಉಳಿದ
ಇಪ್ಪತ್ತೇಳು ಸಾವಿರ ಮಂದಿ ಸೈನಿಕರು ಅಫೇಕಪಟ್ಟಣ
ವನ್ನು ಹೊಕ್ಕರು; ಆದರೆ ಆ ಪಟ್ಟಣದ ಗೋಡೆಯು
ಅವರ ಮೇಲೆ ಬಿದ್ದದರಿಂದ ಅವರೂ ಸತ್ತರು. ಬೆನ್ಹದದ
ನೂ ಆ ಪಟ್ಟಣವನ್ನು ಹೊಕ್ಕು ಒಂದು ಮನೆಯ ಒಳ
31 ಕೋಣೆಯಲ್ಲಿ ಅಡಗಿಕೊಂಡನು. ಆಗ ಅವನ ಸೇವ
ಕರು ಅವನಿಗೆ—ಇಸ್ರಾಯೇಲ್ಯರ ಅರಸರು ದಯೆ
ಯುಳ್ಳವರೆಂದು ನಾವು ಕೇಳಿದ್ದೇವೆ; ಆದದರಿಂದ
ಸೊಂಟಕ್ಕೆ ಗೋಣೀತಟ್ಟುಕಟ್ಟಿಕೊಂಡು ತಲೆಯ
ಮೇಲೆ ಹಗ್ಗವನ್ನಿಟ್ಟುಕೊಂಡು ಆ ಅರಸನ ಬಳಿಗೆ
ಹೋಗುವದಕ್ಕೆ ನಮಗೆ ಅಪ್ಪಣೆಯಾಗಲಿ; ಹೀಗೆ
ಮಾಡುವದಾದರೆ ಅವನು ನಿನ್ನ ಜೀವವನ್ನು ಉಳಿ
32 ಸಾನು ಎಂದು ಹೇಳಿದರು. ಅವರು ಸೊಂಟಕ್ಕೆ
ಗೋಣೀತಟ್ಟುಕಟ್ಟಿಕೊಂಡು ತಲೆಯ ಮೇಲೆ ಹಗ್ಗವ
ನ್ನಿಟ್ಟುಕೊಂಡು ಇಸ್ರಾಯೇಲ್ಯರ ಅರಸನ ಬಳಿಗೆ
ಬಂದು ಅವನಿಗೆ—ನನಗೆ ಜೀವದಾನಮಾಡಬೇಕೆಂದು
ನಿನ್ನ ಸೇವಕನಾದ ಬೆನ್ಹದದನು ವಿಜ್ಞಾಪಿಸುತ್ತಾನೆ
ಅಂದರು. ಆಗ ಅವನು—ಬೆನ್ಹದದನು ಇನ್ನೂ
ಜೀವದಿಂದಿರುತ್ತಾನೋ? ಅವನು ನನ್ನ ಸಹೋದರನು
33 ಎಂದು ಉತ್ತರಕೊಟ್ಟನು. ಅವರು ಈ ಮಾತು
ಶುಭವಚನವೆಂದು ನೆನಸಿ ಕೂಡಲೆ ಅವನ ಮಾತನ್ನೇ
ಹಿಡಿದು—ಬೆನ್ಹದದನು ನಿನ್ನ ಸಹೋದರನೇ ಹೌದು
ಅಂದರು. ಅವನು ಅವರಿಗೆ—ಹೋಗಿ ಬೆನ್ಹದದನನ್ನು
ಕರಕೊಂಡು ಬನ್ನಿರಿ ಎಂದು ಆಜ್ಞಾಪಿಸಲು ಅವನು
ಬಂದಾಗ ಅವನನ್ನು ತನ್ನ ರಥದಲ್ಲಿ ಕುಳ್ಳಿರಿಸಿಕೊಂಡ
ನು. ಬೆನ್ಹದದನು ಅವನಿಗೆ—ನನ್ನ ತಂದೆಯು 34
ನಿನ್ನ ತಂದೆಯಿಂದ ಕಿತ್ತುಕೊಂಡ ಪಟ್ಟಣಗಳನ್ನು
ನಾನು ಹಿಂದಕ್ಕೆ ಕೊಡುತ್ತೇನೆ; ಅವನು ಸಮಾರ್ಯ
ದಲ್ಲಿ ಮಾಡಿದಂತೆ ನೀನೂ ನಿನಗೋಸ್ಕರ ದಮಸ್ಕ
ದಲ್ಲಿ ಕೆಲವು ಕೇರಿಗಳನ್ನು ಮಾಡಿಸಿಕೊಳ್ಳಬಹುದು
ಎಂದು ಹೇಳಲು ಅಹಾಬನು—ನಾನು ಈ ಒಪ್ಪಂದದ
ಮೇಲೆ ನಿನ್ನನ್ನು ಬಿಟ್ಟುಬಿಡುತ್ತೇನೆ ಎಂದು ಹೇಳಿ
ಅವನಿಂದ ಪ್ರಮಾಣಮಾಡಿಸಿ ಕಳುಹಿಸಿಬಿಟ್ಟನು.
ಪ್ರವಾದಿಮಂಡಲಿಯವರಲ್ಲಿ ಒಬ್ಬನು ಯೆಹೋವ 35
ಪ್ರೇರಿತನಾಗಿ ತನ್ನ ಜೊತೆಗಾರನಿಗೆ—ನನ್ನನ್ನು ಹೊಡಿ
ಎಂದು ಹೇಳಿದನು. ಅದಕ್ಕೆ ಅವನು ಒಪ್ಪಲಿಲ್ಲ.
ಆಗ ಪ್ರವಾದಿಯು ಅವನಿಗೆ—ನೀನು ಯೆಹೋವನ 36
ಮಾತನ್ನು ಕೇಳದೆಹೋದದರಿಂದ ನನ್ನನ್ನು ಬಿಟ್ಟು
ಹೊರಟ ಕೂಡಲೆ ಒಂದು ಸಿಂಹವು ಬಂದು ನಿನ್ನನ್ನು
ಕೊಲ್ಲುವದು ಅಂದನು. ಅವನು ಇವನನ್ನು ಬಿಟ್ಟು
ಹೋದ ಕೂಡಲೆ ಒಂದು ಸಿಂಹವು ಬಂದು ಅವನನ್ನು
ಕೊಂದುಹಾಕಿತು. ಅನಂತರ ಆ ಪ್ರವಾದಿಯು 37
ಇನ್ನೊಬ್ಬನನ್ನು ನೋಡಿ—ನನ್ನನ್ನು ಹೊಡಿ ಎಂದು
ಅವನನ್ನು ಬೇಡಿಕೊಂಡನು. ಅವನು ಇವನನ್ನು
ಗಾಯವಾಗುವಷ್ಟು ಹೊಡೆದನು. ಆಗ ಇವನು 38
ತನ್ನ ಗುರುತು ತಿಳಿಯಬಾರದೆಂದು ಮುಂಡಾಸದಿಂದ
ಕಣ್ಣುಗಳನ್ನು ಮುಚ್ಚಿಕೊಂಡು ಅರಸನು ಬರುವ
ದಾರಿಯಲ್ಲಿ ನಿಂತು ಅವನು ಹಾದುಹೋಗುವಾಗ 39
ಅವನಿಗೆ—ನಿನ್ನ ಸೇವಕನಾದ ನಾನು ಯುದ್ಧಕ್ಕೆ
ಹೋದಾಗ ರಣರಂಗದಲ್ಲಿ ಒಬ್ಬನು ಇನ್ನೊಬ್ಬನನ್ನು
ಹಿಡಿದುಕೊಂಡು ನನ್ನ ಬಳಿಗೆ ಬಂದು—ನೀನು ಇವ
ನನ್ನು ಕಾಯಬೇಕು; ಇವನು ತಪ್ಪಿಸಿಕೊಂಡರೆ ಇವನ
ಪ್ರಾಣಕ್ಕೆ ಬದಲಾಗಿ ನಿನ್ನ ಪ್ರಾಣವು ನನ್ನದಾಗಿರು
ವದು; ಅಥವಾ ನೀನು ನನಗೆ [1]ಒಂದು ತಲಾಂತು
ಬೆಳ್ಳಿಯನ್ನು ಕೊಡಬೇಕು ಎಂದು ಆಜ್ಞಾಪಿಸಿದನು.
ನಾನು ಕೆಲಸದಲ್ಲಿದ್ದಾಗ ಅವನು ತಪ್ಪಿಸಿಕೊಂಡು 40
ಹೋದನು ಎಂದು ಮೊರೆಯಿಟ್ಟನು. ಇಸ್ರಾಯೇಲ್ಯರ
ಅರಸನು ಇವನಿಗೆ—ನಿನಗೆ ಆ ತೀರ್ಪು ಸರಿಯಾಗಿದೆ;
ತೀರ್ಮಾನಿಸಿದವನು ನೀನೇ ಅಲ್ಲವೋ ಎಂದು ನುಡಿ
ದನು. ಕೂಡಲೆ ಆ ಪ್ರವಾದಿಯು ಕಣ್ಣುಗಳ ಮೇಲಿ 41
ನಿಂದ ಮುಂಡಾಸವನ್ನು ತೆಗೆದದರಿಂದ ಅವನು ಪ್ರವಾದಿ
ಗಳಲ್ಲೊಬ್ಬನೆಂದು ಇಸ್ರಾಯೇಲ್ಯರ ಅರಸನಿಗೆ ಗೊತ್ತಾ
ಯಿತು. ಪ್ರವಾದಿಯು ಅರಸನಿಗೆ—ಸಂಹರಿಸಬೇಕೆಂದು 42
ಹೇಳಿ ನಾನು ನಿನ್ನ ಕೈಗೆ ಒಪ್ಪಿಸಿದ ಮನುಷ್ಯನನ್ನು
ನೀನು ಹೋಗಗೊಟ್ಟದ್ದರಿಂದ ಅವನ ಪ್ರಾಣಕ್ಕೆ ಬದ
ಲಾಗಿ ನಿನ್ನ ಪ್ರಾಣವು ಹೋಗುವದು; ನಿನ್ನ ಪ್ರಜೆಗಳು
ಅವನ ಪ್ರಜೆಗಳಾಗುವರು ಎಂಬದಾಗಿ ಯೆಹೋವನು
ಅನ್ನುತ್ತಾನೆ ಎಂದು ಹೇಳಿದನು. ಇಸ್ರಾಯೇಲ್ಯರ 43
ಅರಸನು ಸಿಟ್ಟಿನಿಂದ ಗಂಟುಮೋರೆಮಾಡಿಕೊಂಡು
ಸಮಾರ್ಯದಲ್ಲಿದ್ದ ತನ್ನ ಮನೆಗೆ ಹೋದನು.

---

1) ಅಂದರೆ ಸುಮಾರು ಮೂರು ಸಾವಿರ ತೊಲೆ.

### ನಾಬೋತನು ಹತನಾದದ್ದು.

21 ಅನಂತರ ಸಂಭವಿಸಿದ್ದೇನಂದರೆ—ಇಜ್ರೇಲಿನಲ್ಲಿ
ಸಮಾರ್ಯದ ಅರಸನಾದ ಅಹಾಬನ ಅರಮನೆಯ
ಹತ್ತಿರ ಇಜ್ರೇಲಿನವನಾದ ನಾಬೋತನೆಂಬ ಮನುಷ್ಯನ
2 ದ್ರಾಕ್ಷೇತೋಟವಿತ್ತು. ಅಹಾಬನು ನಾಬೋತನಿಗೆ—
ನಿನ್ನ ದ್ರಾಕ್ಷೇತೋಟವನ್ನು ನನಗೆ ಕೊಡು; ಅದು
ನನ್ನ ಅರಮನೆಯ ಹತ್ತಿರವಿರುವದರಿಂದ ಅದನ್ನು
ಕಾಯಿಪಲ್ಯದ ತೋಟವನ್ನಾಗಿ ಮಾಡಿಕೊಳ್ಳುವೆನು;
ಅದಕ್ಕೆ ಬದಲಾಗಿ ನಿನಗೆ ಅದಕ್ಕಿಂತ ಉತ್ತಮವಾದ
ತೋಟವನ್ನು ಕೊಡುತ್ತೇನೆ; ಅದು ಬೇಡವಾದರೆ
3 ಕ್ರಯವನ್ನು ಕೊಡುತ್ತೇನೆ ಎಂದು ಹೇಳಿದನು. ಅದಕ್ಕೆ
ನಾಬೋತನು—ನಾನು ಪಿತ್ರಾರ್ಜಿತಸ್ವಾಸ್ತ್ಯವನ್ನು
ನಿನಗೆ ಮಾರದಂತೆ ಯೆಹೋವನು ನನ್ನನ್ನು ತಡೆಯಲಿ
4 ಎಂದು ಉತ್ತರಕೊಟ್ಟನು. ನನ್ನ ಪಿತ್ರಾರ್ಜಿತಸ್ವಾಸ್ತ್ಯ
ವನ್ನು ನಿನಗೆ ಕೊಡುವದಿಲ್ಲವೆಂದು ನಾಬೋತನು
ಹೇಳಿದದರಿಂದ ಅಹಾಬನು ಸಿಟ್ಟಿನಿಂದ ಗಂಟುಮೋರೆ
ಮಾಡಿಕೊಂಡು ಮನೆಗೆ ಹೋಗಿ ಊಟಮಾಡಲೊಲ್ಲದೆ
ಮಂಚದ ಮೇಲೆ ಮಲಗಿ ಗೋಡೆಯ ಕಡೆಗೆ ಮುಖ
5 ತಿರುಗಿಸಿಕೊಂಡನು. ಆಗ ಅವನ ಹೆಂಡತಿಯಾದ
ಈಜೆಬೆಲಳು ಅವನ ಬಳಿಗೆ ಬಂದು ಅವನನ್ನು—ನೀನು
ಯಾಕೆ ಊಟಮಾಡುವದಿಲ್ಲ? ನಿನಗೆ ಯಾವ ಚಿಂತೆ
6 ಇರುತ್ತದೆ ಎಂದು ಕೇಳಲು ಅವನು—ನಾನು ಇಜ್ರೇಲಿ
ನವನಾದ ನಾಬೋತನಿಗೆ—ನಿನ್ನ ದ್ರಾಕ್ಷೇತೋಟವನ್ನು
ನನಗೆ ಮಾರಿಬಿಡು; ಹಣ ಬೇಡವಾದರೆ ನಿನಗೆ ಬೇ
ರೊಂದು ದ್ರಾಕ್ಷೇತೋಟವನ್ನು ಕೊಡುತ್ತೇನೆ ಎಂಬ
ದಾಗಿ ಹೇಳಿದನು; ಆದರೆ ಅವನು ಕೊಡುವದಿಲ್ಲ
7 ಅಂದನು ಎಂದು ಉತ್ತರಕೊಟ್ಟನು. ಆಗ ಅವನ
ಹೆಂಡತಿಯಾದ ಈಜೆಬೆಲಳು ಅವನಿಗೆ—ನೀನು ಇಸ್ರಾ
ಯೇಲ್ಯರ ಅರಸನೋ; ಎದ್ದು ಊಟಮಾಡಿ ಸಂತೋಷ
ದಿಂದಿರು; ನಾನು ನಿನಗೆ ಇಜ್ರೇಲಿನವನಾದ ನಾಬೋ
ತನ ದ್ರಾಕ್ಷೇತೋಟವನ್ನು ಕೊಡುತ್ತೇನೆ ಎಂದು ನುಡಿ
8 ದು ಅಹಾಬನ ಹೆಸರಿನಲ್ಲಿ ಒಂದು ಪತ್ರವನ್ನು ಬರೆದು
ಅದಕ್ಕೆ ಅವನ ಮುದ್ರೆ ಹಾಕಿ ಅದನ್ನು ನಾಬೋತನ
ಊರಿನಲ್ಲಿದ್ದ ಎಲ್ಲಾ ಪ್ರಧಾನಪುರುಷರಿಗೂ ಹಿರಿಯ
9 ರಿಗೂ ಕಳುಹಿಸಿದಳು. ಅದರಲ್ಲಿ—ಎಲ್ಲರೂ ಉಪವಾಸ
ಮಾಡಬೇಕೆಂದು ಪ್ರಕಟಿಸಿ ನಾಬೋತನನ್ನು ನೆರೆದ
10 ಸಭೆಯ ಮುಂದೆ ನಿಲ್ಲಿಸಿ ಅವನು ದೇವರನ್ನೂ ಅರಸ
ನನ್ನೂ ಶಪಿಸಿದವನು ಎಂಬದಾಗಿ ಇಬ್ಬರು ದುಷ್ಟ
ಮನುಷ್ಯರಿಂದ ಅವನಿಗೆ ವಿರೋಧವಾಗಿ ಸಾಕ್ಷಿಹೇಳಿಸಿ
ಅವನನ್ನು ಹೊರಗೆ ಒಯ್ದು ಕಲ್ಲೆಸೆದು ಕೊಲ್ಲಿರಿ
11 ಎಂದು ಬರೆದಿದ್ದಳು. ಅವನ ಊರಿನ ಹಿರಿಯರೂ
ಪ್ರಧಾನಪುರುಷರೂ ಈಜೆಬೆಲಳು ಕಳುಹಿಸಿದ ಪತ್ರದಲ್ಲಿ
12 ಬರೆದಿದ್ದಂತೆಯೇ ಮಾಡಿದರು. ಅವರು ಉಪವಾಸ
ವನ್ನು ಪ್ರಕಟಿಸಿ ನೆರೆದ ಸಭೆಯ ಮುಂದೆ ನಾಬೋತ
13 ನನ್ನು ನಿಲ್ಲಿಸಿದರು. ತರುವಾಯ ಇಬ್ಬರು ದುಷ್ಟರು
ಬಂದು ಅವನ ಮುಂದೆ ಕೂತು ಇವನು ದೇವರನ್ನೂ
ಅರಸನನ್ನೂ ಶಪಿಸಿದ್ದಾನೆಂಬದಾಗಿ ಜನರ ಎದುರಿನಲ್ಲಿ
ಅವನಿಗೆ ವಿರೋಧವಾಗಿ ಸಾಕ್ಷಿಹೇಳಿದರು. ಜನರು
ಅವನನ್ನು ಊರಿನ ಹೊರಗೆ ಒಯ್ದು ಕಲ್ಲೆಸೆದು ಕೊ
ದರು. ನಾಬೋತನು ಕಲ್ಲೆಸೆಯಲ್ಪಟ್ಟು ಸತ್ತ ವರ್ತ
ಮಾನವನ್ನು ಹಿರಿಯರು ಈಜೆಬೆಲಳಿಗೆ ಮುಟ್ಟಿಸಿದರು
ಆಕೆಯು ಇದನ್ನು ಕೇಳಿ ಅಹಾಬನಿಗೆ—ನೀನು ಹೋಗಿ
ನಾಬೋತನು ಮಾರುವದಿಲ್ಲವೆಂದು ಹೇಳಿದ ದ್ರಾಕ್ಷೇ
ತೋಟವನ್ನು ಸ್ವಾಧೀನಮಾಡಿಕೋ; ಅವನು ಜೀವ
ದಿಂದಿಲ್ಲ, ಸತ್ತನು ಎಂದು ಹೇಳಿದಳು. ಇಜ್ರೇಲಿನವ
ನಾದ ನಾಬೋತನ ಮರಣವಾರ್ತೆಯನ್ನು ಅಹಾಬನು
ಕೇಳಿ ದ್ರಾಕ್ಷೇತೋಟವನ್ನು ಸ್ವಾಧೀನಮಾಡಿಕೊಳ್ಳುವ
ದಕ್ಕೋಸ್ಕರ ಇಳಿದು ಹೋದನು.

ಆಗ ತಿಷ್ಬೀಯನಾದ ಎಲೀಯನಿಗೆ ಯೆಹೋವನ
ವಾಕ್ಯವುಂಟಾಯಿತು. ಆತನು ಅವನಿಗೆ—ನೀನು
ಹೋಗಿ ಸಮಾರ್ಯದಲ್ಲಿ ವಾಸಿಸುವ ಇಸ್ರಾಯೇಲ
ರಾಜನನ್ನು ಕಾಣು; ಅವನು ಈಗ ನಾಬೋತನ ದ್ರಾಕ್ಷೇ
ತೋಟವನ್ನು ಸ್ವಾಧೀನಮಾಡಿಕೊಳ್ಳುವದಕ್ಕೋಸ್ಕರ
ಅಲ್ಲಿಗೆ ಹೋಗಿದ್ದಾನೆ. ಅವನಿಗೆ—ನೀನು ಕೊಲೆ
ಮಾಡಿ ಸ್ವಾಸ್ತ್ಯವನ್ನು ಸಂಪಾದಿಸಿಕೊಂಡಿಯಲ್ಲವೋ?
ನಾಯಿಗಳು ನಾಬೋತನ ರಕ್ತವನ್ನು ನೆಕ್ಕಿದ ಸ್ಥಳ
ದಲ್ಲೇ ನಿನ್ನ ರಕ್ತವನ್ನೂ ನೆಕ್ಕುವವು ಎಂಬದಾಗಿ ಯೆ
ಹೋವನು ಅನ್ನುತ್ತಾನೆ ಎಂದು ಅವನಿಗೆ ಹೇಳು
ಎಂಬದೇ. ಅಹಾಬನು ಎಲೀಯನನ್ನು ಕಂಡು ಅವ
ನನ್ನು—ನನ್ನ ವೈರಿಯೇ, ನೀನು ನನ್ನನ್ನು ಕಂಡು
ಕೊಂಡಿಯಾ ಎಂದು ಕೇಳಲು ಅವನು—ಹೌದು,
ಕಂಡುಕೊಂಡೆನು; ನೀನು ನಿನ್ನನ್ನು ಪಾಪಕ್ಕೆ ಮಾರಿ
ಬಿಟ್ಟು ಯೆಹೋವನ ದೃಷ್ಟಿಯಲ್ಲಿ ದ್ರೋಹಿಯಾದಿ
ಯಲ್ಲಾ. ಯೆಹೋವನು ನಿನ್ನನ್ನು ಕುರಿತು—ನಾನು
ನಿನ್ನ ಮೇಲೆ ಕೇಡನ್ನು ಬರಮಾಡಿ ನಿನ್ನನ್ನು ಕಸವನ್ನೋ
ಎಂಬಂತೆ ತೆಗೆದುಹಾಕುವೆನು; ನಿನ್ನ ಸಂತಾನದ ಗಂಡ
ಸರಲ್ಲಿ ಸ್ವತಂತ್ರರಾಗಲಿ, ಪರತಂತ್ರರಾಗಲಿ ಎಲ್ಲರನ್ನೂ
ಇಸ್ರಾಯೇಲ್ಯರೊಳಗಿಂದ ಕಡಿದುಬಿಡುವೆನು. ನೀನು
ಇಸ್ರಾಯೇಲ್ಯರನ್ನು ಪಾಪಕ್ಕೆ ಪ್ರೇರಿಸಿ ನನಗೆ ಕೋಪ
ವನ್ನೆಬ್ಬಿಸಿದದರಿಂದ ನೆಬಾಟನ ಮಗನಾದ ಯಾರೊಬ್ಬಾ
ಮನ ಮನೆಗೂ ಅಹೀಯನ ಮಗನಾದ ಬಾಷನ ಮನೆ
ಗೂ ಆದ ಗತಿ ನಿನ್ನ ಮನೆಗೂ ಆಗುವದು ಅನ್ನುತ್ತಾನೆ.
ಇದಲ್ಲದೆ ಆತನು ಈಜೆಬೆಲಳನ್ನು ಕುರಿತು—1)ನಾಯಿ
ಗಳು ಇಜ್ರೇಲ್ ಪಟ್ಟಣದ ಗೋಡೆಯ ಬಳಿಯಲ್ಲಿ ಆಕೆ
ಯ ಶವವನ್ನು ತಿನ್ನುವವು; ಅಹಾಬನ ಮನೆಯವರಲ್ಲಿ
ಊರೊಳಗೆ ಸಾಯುವಂಥವರನ್ನು ನಾಯಿಗಳೂ ಅಡವಿ
ಯಲ್ಲಿ ಸಾಯುವಂಥವರನ್ನು ಪಕ್ಷಿಗಳೂ ತಿಂದುಬಿಡು
ವವು ಎಂದು ಹೇಳುತ್ತಾನೆ ಅಂದನು. ಹೆಂಡತಿಯಾದ
ಈಜೆಬೆಲಳಿಂದ ಪ್ರೇರಿತನಾಗಿ ಯೆಹೋವನ ದೃಷ್ಟಿ
ಯಲ್ಲಿ ಕೆಟ್ಟದ್ದಾಗಿರುವದನ್ನು ಮಾಡುವದಕ್ಕೆ ತನ್ನನ್ನೇ
ಮಾರಿಬಿಟ್ಟ ಅಹಾಬನಂಥ ದುಷ್ಟನು ಇನ್ನೊಬ್ಬನಿರ
ಲಿಲ್ಲ. ಯೆಹೋವನು ಇಸ್ರಾಯೇಲ್ಯರ ಎದುರಿನಿಂದ
ಓಡಿಸಿಬಿಟ್ಟ ಅಮೋರಿಯರಂತೆ ವಿಗ್ರಹಗಳನ್ನು ಪೂಜಿ
ಸಿದ ಅಹಾಬನ ನಡತೆಯು ಕೇವಲ ಅಸಹ್ಯವಾಗಿತ್ತು.

1) ಪಾಠಾಂತರ: ಇಜ್ರೇಲಿನ ಹೊಲದಲ್ಲಿ.

ಅಹಾಬನು ಎಲೀಯನ ಮಾತುಗಳನ್ನು ಕೇಳಿ ತನ್ನ
ಬಟ್ಟೆಯನ್ನು ಹರಿದುಕೊಂಡು ಹಗಲಿರುಳು ಮೈಮೇಲೆ
ಗೋಣೀತಟ್ಟನ್ನು ಹಾಕಿಕೊಂಡು ಉಪವಾಸಮಾಡು
ತ್ತಾ ದೀನಮನಸ್ಸಿನಿಂದ ಪ್ರವರ್ತಿಸಿದನು. ಆದದ
ರಿಂದ ಯೆಹೋವನು ತಿಷ್ಬೀಯನಾದ ಎಲೀಯನಿಗೆ—
ಅಹಾಬನು ನನ್ನ ಮುಂದೆ ತಗ್ಗಿಹೋದದ್ದನ್ನು ಕಂಡಿ
ಯಾ? ಅವನು ನನ್ನ ಮುಂದೆ ತನ್ನನ್ನು ತಗ್ಗಿಸಿಕೊಂಡ
ದರಿಂದ ನಾನು ಮುಂತಿಳಿಸಿದ ಕೇಡನ್ನು ಅವನ ಜೀವ
ಮಾನದಲ್ಲಿ ಬರಗೊಡದೆ ಅವನ ಮಗನ ಕಾಲದಲ್ಲಿ
ಅವನ ಮನೆಯವರ ಮೇಲೆ ಬರಮಾಡುವೆನು ಎಂದು
ಹೇಳಿದನು.

ಅಹಾಬ್ ಯೆಹೋಷಾಫಾಟರು ಮೀಕಾಯೆಹುವಿನ
ಮಾತು ಕೇಳದೆ ಅರಾಮ್ಯರಿಗೆ ವಿರೋಧವಾಗಿ
ಯುದ್ಧಕ್ಕೆ ಹೋದದ್ದೂ ಅಹಾಬನು ಸತ್ತದ್ದೂ.

22 ಮೂರು ವರುಷಗಳ ವರೆಗೆ ಇಸ್ರಾಯೇಲ್ಯ
ರಿಗೂ ಅರಾಮ್ಯರಿಗೂ ಯುದ್ಧ ನಡೆಯಲಿಲ್ಲ.
ಮೂರನೆಯ ವರುಷದಲ್ಲಿ ಯೆಹೂದ್ಯರ ಅರಸನಾದ
ಯೆಹೋಷಾಫಾಟನು ಇಸ್ರಾಯೇಲ್ಯರ ಅರಸನ ಬಳಿಗೆ
ಬಂದನು. ಆಗ ಇಸ್ರಾಯೇಲ್ಯರ ಅರಸನು ತನ್ನ ಸೇವ
ಕರಿಗೆ—ಗಿಲ್ಯಾದಿನ ರಾಮೋತ್ ಪಟ್ಟಣವು ನಮ್ಮದೆಂದು
ನಿಮಗೆ ಗೊತ್ತುಂಟಲ್ಲಾ; ಅದನ್ನು ಇಷ್ಟರ ವರೆಗೂ
ಅರಾಮ್ಯರ ಅರಸನಿಂದ ತಿರಿಗಿ ತೆಗೆದುಕೊಳ್ಳದೆ ಸುಮ್ಮನೆ
ಕೂತಿರುತ್ತೇವೆ ಎಂದು ಹೇಳಿ ಯೆಹೋಷಾಫಾಟ
ನನ್ನು—ಯುದ್ಧಮಾಡುವದಕ್ಕಾಗಿ ನೀನೂ ನಮ್ಮ
ಜೊತೆಯಲ್ಲಿ ರಾಮೋತ್‍ಗಿಲ್ಯಾದಿಗೆ ಬರುತ್ತೀಯೋ
ಎಂದು ಕೇಳಲು ಅವನು—ನಾನೂ ನೀನೂ, ನನ್ನ
ಜನರೂ ನಿನ್ನ ಜನರೂ, ನನ್ನ ಕುದುರೆಗಳೂ ನಿನ್ನ
ಕುದುರೆಗಳೂ ಒಂದೇಯಲ್ಲವೋ ಎಂದು ಉತ್ತರಕೊಟ್ಟು
ಯೆಹೋವನ ಸನ್ನಿಧಿಯಲ್ಲಿ ಈಗ ವಿಚಾರಿಸು ಎಂದು
ಇಸ್ರಾಯೇಲ್ಯರ ಅರಸನನ್ನು ಬೇಡಿಕೊಂಡನು. ಆಗ
ಇಸ್ರಾಯೇಲ್ಯರ ಅರಸನು ತನ್ನ ರಾಜ್ಯದಲ್ಲಿದ್ದ ಸು
ಮಾರು ನಾನೂರು ಮಂದಿ ಪ್ರವಾದಿಗಳನ್ನು ಕೂಡಿಸಿ
ಅವರನ್ನು—ನಾನು ರಾಮೋತ್‍ಗಿಲ್ಯಾದಿನ ಮೇಲೆ
ಯುದ್ಧಕ್ಕಾಗಿ ಹೋಗಬಹುದೋ ಬಾರದೋ ಎಂದು
ಕೇಳಲು ಅವರು—ಹೋಗಬಹುದು, ಕರ್ತನು ಅದನ್ನು
ಅರಸನ ಕೈಗೆ ಒಪ್ಪಿಸುವನು ಅಂದರು. ಆದರೆ ಯೆ
ಹೋಷಾಫಾಟನು ಇಸ್ರಾಯೇಲ್ಯರ ಅರಸನನ್ನು — ಯೆ
ಹೋವನ ಪ್ರವಾದಿಗಳಲ್ಲಿ ಇವರ ಹೊರತಾಗಿ ನಾವು
ವಿಚಾರಿಸಬಹುದಾದ ಬೇರೆ ಪ್ರವಾದಿಯಿರುವದಿಲ್ಲವೋ
ಎಂದು ಕೇಳಲು ಅವನು—ನಮಗೋಸ್ಕರ ಯೆಹೋ
ವನ ಸನ್ನಿಧಿಯಲ್ಲಿ ವಿಚಾರಿಸಬಲ್ಲವನಾದ ಇನ್ನೊಬ್ಬ
ಪ್ರವಾದಿಯಿರುತ್ತಾನೆ; ಅವನು ಇಮ್ಲನ ಮಗನಾದ
ಮೀಕಾಯೆಹು ಎಂಬವನು. ಆದರೆ ನಾನು ಅವ
ನನ್ನು ಹಗೆಮಾಡುತ್ತೇನೆ; ಅವನು ನನ್ನನ್ನು ಕುರಿತು
ಯಾವಾಗಲೂ ಶುಭವನ್ನಲ್ಲ, ಅಶುಭವನ್ನೇ ಮುಂತಿ
ಳಿಸುತ್ತಾನೆ ಎಂದು ಉತ್ತರಕೊಟ್ಟನು. ಅದಕ್ಕೆ ಯೆ
ಹೋಷಾಫಾಟನು—ಅರಸನು ಹಾಗನ್ನದಿರಲಿ ಅಂದನು.
ಆಗ ಇಸ್ರಾಯೇಲ್ಯರ ಅರಸನು ಒಬ್ಬ ಕಂಚುಕಿಯನ್ನು
ಕರೆದು ಅವನಿಗೆ—ಬೇಗ ಹೋಗಿ ಇಮ್ಲನ ಮಗನಾದ
ಮೀಕಾಯೆಹುವನ್ನು ಕರೆದುಕೊಂಡು ಬಾ ಎಂದು
ಆಜ್ಞಾಪಿಸಿದನು. ಇಸ್ರಾಯೇಲ್ಯರ ಅರಸನೂ ಯೆಹೂ 10
ದ್ಯರ ಅರಸನಾದ ಯೆಹೋಷಾಫಾಟನೂ ರಾಜವಸ್ತ್ರಗ
ಳನ್ನು ಧರಿಸಿಕೊಂಡು ಸಮಾರ್ಯಪಟ್ಟಣದ ಹೆಬ್ಬಾಗ
ಲಿನ ಹತ್ತಿರವಿರುವ ಬೈಲಿನಲ್ಲಿ ತಮ್ಮ ತಮ್ಮ ಆಸನಗಳ
ಮೇಲೆ ಕೂತುಕೊಂಡಿರಲು ಎಲ್ಲಾ ಪ್ರವಾದಿಗಳು ಅವರ 11
ಮುಂದೆ ಪರವಶರಾಗಿ ಮಾತಾಡುತ್ತಾ ಇದ್ದರು. ಅವ
ರಲ್ಲಿ ಕೆನಾನನ ಮಗನಾದ ಚಿದ್ಕೀಯ ಎಂಬವನು ಕಬ್ಬಿ
ಣದ ಕೊಂಬುಗಳನ್ನು ಮಾಡಿಸಿ ತಲೆಗೆ [ಕಟ್ಟಿಕೊಂಡು]
ಬಂದು—ಕೊಂಬುಗಳಿಂದಲೋ ಎಂಬಂತೆ ನೀನು
ಅರಾಮ್ಯರನ್ನು ಇರಿದು ಕೊಂದುಹಾಕುವಿ ಎಂದನು.
ಉಳಿದ ಪ್ರವಾದಿಗಳೂ ಇದೇ ತರದ ಮಾತುಗಳನ್ನು 12
ನುಡಿದು—ರಾಮೋತ್‍ಗಿಲ್ಯಾದಿಗೆ ಹೋಗು; ನೀನು
ಕೃತಾರ್ಥನಾಗಿ ಬರುವಿ; ಯೆಹೋವನು ಅದನ್ನು ಅರ
ಸನ ಕೈಗೆ ಒಪ್ಪಿಸುವನು ಅಂದರು. ಮೀಕಾಯೆಹು 13
ವನ್ನು ಕರೆಯುವದಕ್ಕೆ ಹೋದ ದೂತನು ಅವನಿಗೆ—
ಎಲ್ಲಾ ಪ್ರವಾದಿಗಳೂ ಏಕಮನಸ್ಸಿನಿಂದ ಅರಸನಿಗೆ
ಶುಭವನ್ನೇ ಮುಂತಿಳಿಸುತ್ತಿರುತ್ತಾರೆ; ದಯವಿಟ್ಟು
ನೀನೂ ಅವರಂತೆ ಶುಭವನ್ನೇ ಮುಂತಿಳಿಸು ಎಂದು
ಹೇಳಿದನು. ಅದಕ್ಕೆ ಮೀಕಾಯೆಹುವು—ಯೆಹೋವ 14
ನಾಣೆ, ಯೆಹೋವನು ಹೇಳುವದನ್ನೇ ನುಡಿಯು
ತ್ತೇನೆ ಎಂದು ಉತ್ತರಕೊಟ್ಟನು. ಅವನು ಅರಸನ 15
ಬಳಿಗೆ ಬಂದಾಗ ಅರಸನು—ಮೀಕಾಯೆಹುವೇ, ನಾವು
ರಾಮೋತ್‍ಗಿಲ್ಯಾದಿನ ಮೇಲೆ ಯುದ್ಧಕ್ಕಾಗಿ ಹೋಗ
ಬಹುದೋ ಬಾರದೋ ಎಂದು ಕೇಳಲು ಅವನು—
ಹೋಗಬಹುದು, ಕೃತಾರ್ಥನಾಗಿ ಬರುವಿ; ಯೆಹೋ
ವನು ಪಟ್ಟಣವನ್ನು ಅರಸನ ಕೈಗೆ ಒಪ್ಪಿಸುವನು
ಎಂದು ಹೇಳಿದನು. ಆಗ ಅರಸನು ಅವನಿಗೆ— 16
ಸತ್ಯವನ್ನೇ ತಿಳಿಸಬೇಕೆಂದು ಯೆಹೋವನ ಹೆಸರಿನಲ್ಲಿ
ನಿನ್ನಿಂದ ಎಷ್ಟು ಸಾರಿ ಪ್ರಮಾಣಮಾಡಿಸಬೇಕು ಅನ್ನ
ಲು ಅವನು—ಇಸ್ರಾಯೇಲ್ಯರೆಲ್ಲರೂ ಕುರುಬನಿಲ್ಲದ 17
ಕುರಿಗಳಂತೆ ಬೆಟ್ಟಗಳಲ್ಲಿ ಚದರಿಹೋದದ್ದನ್ನು ಕಂಡೆನು;
ಆಗ ಯೆಹೋವನು—ಇವರು ಒಡೆಯನಿಲ್ಲದವರಾ
ಗಿರುತ್ತಾರೆ; ಸಮಾಧಾನದಿಂದ ತಮ್ಮ ತಮ್ಮ ಮನೆ
ಗಳಿಗೆ ಹೋಗಲಿ ಅಂದನು ಎಂಬದಾಗಿ ಉತ್ತರಕೊಟ್ಟನು.
ಆಗ ಇಸ್ರಾಯೇಲ್ಯರ ಅರಸನು ಯೆಹೋಷಾಫಾಟ 18
ನಿಗೆ—ಇವನು ನನಗೆ ಯಾವಾಗಲೂ ಶುಭವನ್ನಲ್ಲ,
ಅಶುಭವನ್ನೇ ಮುಂತಿಳಿಸುತ್ತಾನೆಂದು ನಾನು ನಿನಗೆ
ಹೇಳಲಿಲ್ಲವೋ ಎಂದನು. ಅದಕ್ಕೆ ಮೀಕಾಯೆಹುವು— 19
ಅದಿರಲಿ, ಯೆಹೋವನ ವಾಕ್ಯವನ್ನು ಕೇಳು. ಯೆ
ಹೋವನು ತನ್ನ ಸಿಂಹಾಸನದ ಮೇಲೆ ಕೂತುಕೊಂಡ
ದ್ದನ್ನೂ ಪರಲೋಕಸೈನ್ಯಗಳು ಆತನ ಎಡಬಲಗಡೆ
ಗಳಲ್ಲಿ ನಿಂತದ್ದನ್ನೂ ಕಂಡೆನು. ಯೆಹೋವನು ತನ್ನ 20
ಹತ್ತಿರ ನಿಂತವರನ್ನು—ಅಹಾಬನು ಹತನಾಗಿ ಬೀಳು
ವಂತೆ ಅವನನ್ನು ರಾಮೋತ್‍ಗಿಲ್ಯಾದಿನ ಯುದ್ಧಕ್ಕೆ
ಯಾರು ಪ್ರೇರಿಸುವಿರಿ ಎಂದು ಕೇಳಿದಾಗ ಒಬ್ಬನು ಈ
ತರವಾಗಿಯೂ ಇನ್ನೊಬ್ಬನು ಆ ತರವಾಗಿಯೂ ಉತ್ತರ
ಕೊಟ್ಟರು. ಕಡೆಯಲ್ಲಿ ಒಂದು ಆತ್ಮವು ಯೆಹೋವನ 21
ಮುಂದೆ ಬಂದು ನಿಂತು ಆತನಿಗೆ—ನಾನು ಹೋಗಿ ಅವ

22 ನನ್ನು ಪ್ರೇರಿಸುವೆನು ಅಂದಿತು. ಹೇಗೆ ಪ್ರೇರಿಸುವಿ
ಎಂದು ಯೆಹೋವನು ಕೇಳಲು ಅದು—ನಾನು
ಅಸತ್ಯವನ್ನಾಡುವ ಆತ್ಮವಾಗಿ ಅವನ ಎಲ್ಲಾ ಪ್ರವಾದಿ
ಗಳಲ್ಲಿ ಸೇರುವೆನು ಎಂದು ಉತ್ತರಕೊಟ್ಟಿತು. ಆಗ
ಆತನು ಅದಕ್ಕೆ—ಹೋಗಿ ಅದರಂತೆ ಮಾಡು; ಅವ
23 ನನ್ನು ಪ್ರೇರಿಸಿ ಸಫಲನಾಗುವಿ ಅಂದನು. ನೋಡು,
ಯೆಹೋವನು ನಿನ್ನ ವಿಷಯದಲ್ಲಿ ಕೇಡುನುಡಿದು
ನಿನ್ನ ಎಲ್ಲಾ ಪ್ರವಾದಿಗಳಲ್ಲಿ ಅಸತ್ಯವನ್ನಾಡುವ ಆತ್ಮ
ವನ್ನು ಕಳುಹಿಸಿದ್ದಾನೆ ಎಂದು ಹೇಳಿದನು.
24 ಆಗ ಕೆನಾನನ ಮಗನಾದ ಚಿದ್ಕೀಯನು ಮೀಕಾ
ಯೆಹುವಿನ ಬಳಿಗೆ ಹೋಗಿ ಅವನ ಕೆನ್ನೆಗೆ ಒಂದು
ಏಟು ಹಾಕಿ—ಯೆಹೋವನ ಆತ್ಮವು ನನ್ನನ್ನು ಬಿಟ್ಟು
ನಿನ್ನೊಂದಿಗೆ ಮಾತಾಡುವದಕ್ಕೋಸ್ಕರ ಯಾವ ಮಾರ್ಗ
25 ವಾಗಿ ಬಂದಿತು ಅನ್ನಲು ಮೀಕಾಯೆಹುವು—ನೀನು
ಅಡಗಿಕೊಳ್ಳುವದಕ್ಕೆ ಒಳಗಿನ ಕೋಣೆಗೆ ಹೋಗುವ
ದಿನದಲ್ಲಿ ಅದು ನಿನಗೆ ಗೊತ್ತಾಗುವದು ಎಂದು ಉತ್ತರ
26 ಕೊಟ್ಟನು. ಆಗ ಇಸ್ರಾಯೇಲ್ಯರ ಅರಸನು [ಸೇವಕ
ರಿಗೆ]—ಮೀಕಾಯೆಹುವನ್ನು ಹಿಡಿದುಕೊಂಡು ಹೋಗಿ
ಪುರಾಧಿಕಾರಿಯಾದ ಆಮೋನನಿಗೂ ರಾಜಪುತ್ರನಾದ
27 ಯೋವಾಷನಿಗೂ ಒಪ್ಪಿಸಿ ಅವರಿಗೆ—ನಾನು ಸುರ
ಕ್ಷಿತನಾಗಿ ಹಿಂದಿರುಗುವ ವರೆಗೂ ಇವನನ್ನು ಸೆರೆಯ
ಲ್ಲಿಟ್ಟು ಸೆರೆಮನೆಯ ಅನ್ನಪಾನಗಳನ್ನೇ ಕೊಟ್ಟು
ಕುಗ್ಗಿಸಬೇಕೆಂದು ಅರಸನು ಅನ್ನುತ್ತಾನೆ ಎಂದು ಹೇಳಿರಿ
28 ಎಂಬದಾಗಿ ಆಜ್ಞಾಪಿಸಿದನು. ಮೀಕಾಯೆಹುವು ಅರಸ
ನಿಗೆ—ನೀನು ಸುರಕ್ಷಿತನಾಗಿ ಬರುವದಾದರೆ ನಾನು
ನುಡಿದದ್ದು ಯೆಹೋವನ ಮಾತಲ್ಲವೆಂದು ತಿಳಿದು
ಕೋ ಎಂದು ಹೇಳಿ—ಎಲ್ಲಾ ಜನರೇ, ಇದನ್ನು ಕೇಳಿರಿ
ಎಂದು ಕೂಗಿದನು.
29 ಇಸ್ರಾಯೇಲ್ಯರ ಅರಸನೂ ಯೆಹೂದ್ಯರ ಅರಸ
ನಾದ ಯೆಹೋಷಾಫಾಟನೂ ರಾಮೋತ್‌ಗಿಲ್ಯಾದಿಗೆ
30 ವಿರೋಧವಾಗಿ ಯುದ್ಧಕ್ಕೆ ಹೊರಟರು. ಇಸ್ರಾಯೇ
ಲ್ಯರ ಅರಸನು ಯೆಹೋಷಾಫಾಟನಿಗೆ—ನಾನು ವೇಷ
ಹಾಕಿಸಿಕೊಂಡು ರಣರಂಗಕ್ಕೆ ಬರುವೆನು; ನೀನಾ
ದರೋ ನಿನ್ನ ರಾಜವಸ್ತ್ರಗಳನ್ನು ಧರಿಸಿಕೊಂಡೇ ಬಾ
ಎಂದು ಹೇಳಿ ವೇಷಹಾಕಿಕೊಂಡು ರಣರಂಗಕ್ಕೆ
31 ಹೋದನು. ಅರಾಮ್ಯರ ಅರಸನು ತನ್ನ ರಥಬಲದ
ಮೂವತ್ತೆರಡು ಮಂದಿ ಅಧಿಪತಿಗಳಿಗೆ—ನೀವು ಶತ್ರು
ಗಳ ಸಾಧಾರಣ ಸೈನಿಕರನ್ನೂ ಅಧಿಪತಿಗಳನ್ನೂ ಬಿಟ್ಟು
ಇಸ್ರಾಯೇಲ್ಯರ ಅರಸನಿಗೇ ಗುರಿಯಿಡಿರಿ ಎಂದು
32 ಆಜ್ಞಾಪಿಸಿದ್ದನು. ಅವರು ಯೆಹೋಷಾಫಾಟನನ್ನು
ಕಂಡಾಗ ಅವನೇ ಇಸ್ರಾಯೇಲ್ಯರ ಅರಸನೆಂದು ನೆನಸಿ
ಅವನಿಗೆ ವಿರೋಧವಾಗಿ ಯುದ್ಧಮಾಡ ಬಂದರು.
33 ಅವನು ಕೂಗಿಕೊಂಡನು; ಆಗ ಇವನು ಇಸ್ರಾಯೇ
ಲ್ಯರ ಅರಸನಲ್ಲವೆಂಬದು ರಥಬಲದ ಅಧಿಪತಿಗಳಿಗೆ
ಗೊತ್ತಾದಾಗ ಅವರು ಅವನನ್ನು ಬಿಟ್ಟು ಹಿಂದಿರುಗಿದರು.
34 ಅರಾಮ್ಯರ ಒಬ್ಬ ಸೈನಿಕನು ಯಾರಿಗೂ ಗುರಿ
ಯಿಡದೆ ಬಾಣವನ್ನೆಸೆಯಲು ಆ ಬಾಣವು ಇಸ್ರಾ
ಯೇಲ್ಯರ ಅರಸನಿಗೆ ಅವನ ಕವಚದ ಸಂದಿನಲ್ಲಿ
ತಾಗಿತು. ಆಗ ಅವನು ತನ್ನ ಸಾರಥಿಗೆ—ರಥವನ್ನು
ತಿರುಗಿಸಿ ನನ್ನನ್ನು ರಣರಂಗದಿಂದ ಆಚೆಗೆ ತೆಗೆದು

ಕೊಂಡು ಹೋಗು; ನನಗೆ ದೊಡ್ಡ ಗಾಯವಾಗಿ
ಎಂದು ಹೇಳಿದನು. ಆದರೂ ಆ ದಿವಸ ಯುದ್ಧ
ಬಹುಘೋರವಾಗಿದ್ದದರಿಂದ ಅರಸನು ಅರಾಮ್ಯರಎದ
ರಾಗಿ ತನ್ನ ರಥದಲ್ಲೇ ಆತುಕೊಂಡು ನಿಂತಿದ
ಸಾಯಂಕಾಲವಾದಾಗ ಸತ್ತನು. ಗಾಯದಿಂದ ರಕ್ತ
ಸುರಿದು ಸುರಿದು ರಥದ ಅಡಿಯಲ್ಲಿ ನಿಂತಿತ
ಸೂರ್ಯಾಸ್ತಮಾನವಾದ ಕೂಡಲೆ—ಪ್ರತಿಯೊಬ್ಬನ
ತನ್ನ ಪ್ರಾಂತಕ್ಕೂ ಪಟ್ಟಣಕ್ಕೂ ಹೋಗಲಿ ಎಂಬ ಕೂಗ
ಇಸ್ರಾಯೇಲ್‌ಸೈನ್ಯದಲ್ಲಿ ಹಬ್ಬಿಕೊಂಡಿತು. ಅರಸನ
ಸಾಯಲು ಅವನನ್ನು ಸಮಾರ್ಯಕ್ಕೆ ತಂದು ಅ
ಸಮಾಧಿಮಾಡಿದರು. ದೇವದಾಸಿಯರು ಸ್ನಾನಮಾ
ಡುವ ಸಮಾರ್ಯದ ಕೆರೆಯಲ್ಲಿ ಅವನ ರಥವನ್ನು
ತೊಳೆಯುತ್ತಿದ್ದಾಗ ನಾಯಿಗಳು ಬಂದು ಅದರಲ್ಲಿದ
ರಕ್ತವನ್ನು ನೆಕ್ಕಿದವು; ಹೀಗೆ ಯೆಹೋವನು ಹೇಳಿ
ಮಾತು ನೆರವೇರಿತು.
ಅಹಾಬನ ಉಳಿದ ಚರಿತ್ರೆಯೂ ಅವನು ಕಟ್ಟಿಸಿ
ದಂತಮಂದಿರ, ಪಟ್ಟಣಗಳು ಇವುಗಳ ವಿವರವ
ಅವನ ಬೇರೆ ಎಲ್ಲಾ ಕೃತ್ಯಗಳೂ ಇಸ್ರಾಯೇಲ್‌ರಾ
ಕಾಲವೃತ್ತಾಂತ ಎಂಬ ಗ್ರಂಥದಲ್ಲಿ ಬರೆದಿರುತ್ತವ
ಅಹಾಬನು ಪಿತೃಗಳ ಬಳಿಗೆ ಸೇರಲು ಅವನಿಗೆ ಬ
ಲಾಗಿ ಅವನ ಮಗನಾದ ಅಹಜ್ಯ ಎಂಬವನು ಅರ
ನಾದನು.

ಯೆಹೂದ್ಯರ ಯೆಹೋಷಾಫಾಟ್, ಇಸ್ರಾಯೇಲ್ಯರ
ಅಹಜ್ಯ ಎಂಬ ಅರಸರು.

ಇಸ್ರಾಯೇಲ್ಯರ ಅರಸನಾದ ಅಹಾಬನ ಆಳಿಕೆಯ
ನಾಲ್ಕನೆಯ ವರುಷದಲ್ಲಿ ಆಸನ ಮಗನಾದ ಯೆಹೋ
ಷಾಫಾಟನು ಯೆಹೂದ್ಯರ ಅರಸನಾದನು. ಅವನ
ಅರಸನಾದಾಗ ಮೂವತ್ತೈದು ವರುಷದವನಾಗಿದ್ದು
ಯೆರೂಸಲೇಮಿನಲ್ಲಿ ಇಪ್ಪತ್ತೈದು ವರುಷ ಆಳಿದನು
ಶಿಲ್ಹಿಯ ಮಗಳಾದ ಅಜೂಬಳೆಂಬಾಕೆಯು ಇವನ
ತಾಯಿ. ಇವನು ತಪ್ಪದೆ ತನ್ನ ತಂದೆಯಾದ ಆಸನ
ಮಾರ್ಗದಲ್ಲಿ ನಡೆಯುತ್ತಾ ಯೆಹೋವನ ದೃಷ್ಟಿಯಲ್ಲಿ
ಒಳ್ಳೆಯವನಾಗಿದ್ದರೂ ಪೂಜಾಸ್ಥಳಗಳನ್ನು ಹಾಳ
ಮಾಡಲಿಲ್ಲ; ಜನರು ಆ ಸ್ಥಳಗಳಲ್ಲಿ ಯಜ್ಞಮಾಡುತ್ತಾ
ಧೂಪಸುಡುತ್ತಾ ಇದ್ದರು. ಇವನು ಇಸ್ರಾಯೇಲ್ಯ
ಅರಸನೊಡನೆ ಸಮಾಧಾನದಿಂದಿದ್ದನು. ಇವನ ಉಳಿ
ಚರಿತ್ರೆಯೂ ಇವನು ಯುದ್ಧಗಳಲ್ಲಿ ನಡಿಸಿದ ಶೂ
ಕೃತ್ಯಗಳ ವಿವರವೂ ಯೆಹೂದರಾಜಕಾಲವೃತ್ತಾಂ
ಎಂಬ ಗ್ರಂಥದಲ್ಲಿ ಬರೆದಿರುತ್ತವೆ. ಇವನು ತನ್ನ
ತಂದೆಯಾದ ಆಸನ ಕಾಲದಲ್ಲಿ ತಪ್ಪಿಸಿಕೊಂಡ ದೇ
ದಾಸದೇವದಾಸಿಯರನ್ನು ದೇಶದಿಂದ ತೆಗೆದುಹಾ
ದನು. ಆ ಕಾಲದಲ್ಲಿ ಎದೋಮ್‌ದೇಶದಲ್ಲಿ ಅರ
ನಿರಲಿಲ್ಲ. ಇವನ ಪ್ರತಿನಿಧಿಯೇ ಅದನ್ನು ಆಳ
ತ್ತಿದ್ದನು. ಇದಲ್ಲದೆ ಯೆಹೋಷಾಫಾಟನು ಓಫೀ
ರಿನಿಂದ ಬಂಗಾರತರುವದಕ್ಕಾಗಿ ತಾರ್ಷೀಷ್ ಹಡಗ
ಗಳನ್ನು ಮಾಡಿಸಿದನು. ಆಗ ಅಹಾಬನ ಮ
ನಾದ ಅಹಜ್ಯನು ಅವನನ್ನು—ನಿನ್ನ ಜನರ ಜೊ
ಯಲ್ಲಿ ನನ್ನ ಜನರೂ ಸಮುದ್ರಪ್ರಯಾಣಮಾಡ

ವದಕ್ಕೆ ಅಪ್ಪಣೆಯಾಗಲಿ ಎಂದು ಬೇಡಿಕೊಂಡನು;
ಅವನು ಅದಕ್ಕೆ ಒಪ್ಪಲಿಲ್ಲ. ಆದರೆ ಆ ಹಡಗುಗಳು
ಎಚ್ಯೋನ್ಗೆಬೆರಿಸಲ್ಲಿ ಒಡೆದುಹೋದದರಿಂದ ಓಫೀರನ್ನು
ಮುಟ್ಟಲಿಲ್ಲ. ಯೆಹೋಷಾಫಾಟನು ಪಿತೃಗಳ ಬಳಿಗೆ
ಸೇರಲು ಅವನ ಶವವನ್ನು ಅವನ ಪೂರ್ವಿಕನಾದ
ದಾವೀದನ ಪಟ್ಟಣದೊಳಗೆ ಕುಟುಂಬಶ್ಮಶಾನಭೂಮಿ
ಯಲ್ಲಿ ಸಮಾಧಿಮಾಡಿದರು. ಅವನಿಗೆ ಬದಲಾಗಿ ಅವನ
ಮಗನಾದ ಯೆಹೋರಾಮನು ಅರಸನಾದನು.
ಯೆಹೂದ್ಯರ ಅರಸನಾದ ಯೆಹೋಷಾಫಾಟನ
ಆಳಿಕೆಯ ಹದಿನೇಳನೆಯ ವರುಷದಲ್ಲಿ ಅಹಾಬನ ಮಗ
ನಾದ ಅಹಜ್ಯ ಎಂಬವನು ಅರಸನಾಗಿ ಸಮಾರ್ಯ
ದಲ್ಲಿ ಎರಡು ವರುಷ ಆಳಿದನು. ಇವನು ಇಸ್ರಾ 52
ಯೇಲ್ಯರನ್ನು ಪಾಪಕ್ಕೆ ಪ್ರೇರಿಸಿದ ನೆಬಾಟನ ಮಗ
ನಾದ ಯಾರೊಬ್ಬಾಮನ ಮತ್ತು ತನ್ನ ತಂದೆತಾಯಿ
ಗಳ ಮಾರ್ಗದಲ್ಲಿ ನಡೆದು ಯೆಹೋವನ ದೃಷ್ಟಿ
ಯಲ್ಲಿ ದ್ರೋಹಿಯಾದನು. ತನ್ನ ತಂದೆಯಂತೆ 53
ಬಾಳ್ ದೇವರನ್ನು ಪೂಜಿಸಿ ಇಸ್ರಾಯೇಲ್ಯರ ದೇವ
ರಾದ ಯೆಹೋವನನ್ನು ರೇಗಿಸಿದನು.

---

# THE SECOND BOOK OF THE

# KINGS

# ಅರಸುಗಳು

## ದ್ವಿತೀಯಭಾಗ

---

### ಅಹಜ್ಯನೂ ಎಲೀಯನೂ.

ಅಹಾಬನು ಮರಣಹೊಂದಿದನಂತರ ಮೋವಾಬ್ಯರು
ಇಸ್ರಾಯೇಲ್ಯರಿಗೆ ವಿರೋಧವಾಗಿ ತಿರುಗಿಬಿದ್ದರು.
ಅಹಜ್ಯನು ಸಮಾರ್ಯದಲ್ಲಿ ತನ್ನ ಮೇಲುಪ್ಪರಿ
ಗೆಯ ಜಾಳಾಂಧರ ಕಿಟಿಕಿಯಿಂದ ಬಿದ್ದು ಅಸ್ವಸ್ಥ
ನಾದಾಗ ತನ್ನ ಸೇವಕರನ್ನು ಕರೆದು ಅವರಿಗೆ— ನೀವು
ಎಕ್ರೋನಿನ ದೇವರಾದ ಬಾಳ್ಜೆಬೂಬನ ಸನ್ನಿಧಿಗೆ
ಹೋಗಿ ನಾನು ಈ ಅಸ್ವಸ್ಥತೆಯಿಂದ ವಾಸಿಯಾಗು
ವೆನೋ ಇಲ್ಲವೋ ಎಂಬದನ್ನು ವಿಚಾರಿಸಿರಿ ಎಂದು
ಹೇಳಿಕಳುಹಿಸಿದನು. ಆಗ ಯೆಹೋವನ ದೂತನು
ತಿಷ್ಬೀಯನಾದ ಎಲೀಯನಿಗೆ— ನೀನು ಹೋಗಿ ಸಮಾ
ರ್ಯದ ಅರಸನ ಸೇವಕರನ್ನು ಎದುರುಗೊಂಡು ಅವ
ರಿಗೆ— ನೀವು ಎಕ್ರೋನಿನ ದೇವರಾದ ಬಾಳ್ಜೆಬೂಬ
ನನ್ನು ವಿಚಾರಿಸುವದಕ್ಕೆ ಹೋಗುವದೇನು? ಇಸ್ರಾ
ಯೇಲ್ಯರಲ್ಲಿ ದೇವರಿಲ್ಲವೋ? ಅಹಜ್ಯನು ತಾನು ಹತ್ತಿದ
ಮಂಚದಿಂದಿಳಿಯದೆ ಸಾಯಲೇ ಬೇಕು ಎಂಬದಾಗಿ
ಯೆಹೋವನು ಅನ್ನುತ್ತಾನೆ ಎಂದು ಹೇಳು ಎಂದು
ಆಜ್ಞಾಪಿಸಿದನು. ಎಲೀಯನು ಹಾಗೆಯೇ ಮಾಡಿ
ದನು. ದೂತರು ಅರಸನ ಬಳಿಗೆ ಹಿಂದಿರುಗಿ ಬಂದಾಗ
ಅರಸನು— ನೀವು ಹಿಂದಿರುಗಿದ್ದೇಕೆ ಎಂದು ಕೇಳಿದನು.
ಅದಕ್ಕೆ ಅವರು— ಒಬ್ಬ ಮನುಷ್ಯನು ನಮ್ಮನ್ನು ಎದು
ರುಗೊಂಡು ನಮಗೆ— ನಿಮ್ಮನ್ನು ಕಳುಹಿಸಿದ ಅರಸನ
ಬಳಿಗೆ ಹೋಗಿ ಯೆಹೋವನ ಹೆಸರಿನಲ್ಲಿ ಅವನಿಗೆ—
ನೀನು ಎಕ್ರೋನಿನ ದೇವರಾದ ಬಾಳ್ಜೆಬೂಬನನ್ನು
ವಿಚಾರಿಸುವದಕ್ಕೆ ಕಳುಹಿಸುವದೇನು? ಇಸ್ರಾಯೇಲ್ಯ
ರಲ್ಲಿ ದೇವರಿಲ್ಲವೋ? ನೀನು ಹೀಗೆ ಮಾಡಿದ್ದರಿಂದ
ಹತ್ತಿದ ಮಂಚದಿಂದಿಳಿಯದೆ ಸಾಯಲೇ ಬೇಕು ಎಂಬ
ದಾಗಿ ಹೇಳಿರಿ ಎಂದು ಆಜ್ಞಾಪಿಸಿದನು ಎಂದು ಉತ್ತರ
ಕೊಟ್ಟರು. ಅರಸನು ತಿರಿಗಿ ಅವರನ್ನು— ನಿಮಗೆ ಎದು 7
ರಾಗಿ ಹೀಗೆ ಹೇಳಿದ ಮನುಷ್ಯನು ಹೇಗಿದ್ದನು ಎಂದು
ಕೇಳಲು ಅವರು— ಅವನು ಕಂಬಳಿಯನ್ನು ಹೊದ್ದು 8
ಕೊಂಡಿದ್ದನು; ಅವನ ಸೊಂಟಕ್ಕೆ ತೊಗಲಿನ ನಡುಕಟ್ಟು
ಇತ್ತು ಎಂದು ಉತ್ತರಕೊಟ್ಟರು. ಅದಕ್ಕೆ ಅರಸನು—
ಆ ಮನುಷ್ಯನು ತಿಷ್ಬೀಯನಾದ ಎಲೀಯನೇ ಆಗಿರ
ಬೇಕು ಅಂದನು.
ಆಗ ಅರಸನು ಎಲೀಯನನ್ನು ಕರತರುವದಕ್ಕಾಗಿ 9
ಪಂಚಾಶದಧಿಪತಿಯನ್ನು ಅವನ ಐವತ್ತು ಮಂದಿ ಸಿಪಾ
ಯಿಗಳೊಡನೆ ಕಳುಹಿಸಿದನು. ಇವನು ಹೋಗಿ ಎಲೀ
ಯನು ಬೆಟ್ಟದ ತುದಿಯಲ್ಲಿ ಕೂತಿರುವದನ್ನು ಕಂಡು
ಅವನಿಗೆ— ದೇವರ ಮನುಷ್ಯನೇ, ಇಳಿದು ಬಾ; ಅರ
ಸನು ನಿನ್ನನ್ನು ಕರೆಯುತ್ತಾನೆ ಎಂದು ಹೇಳಿದನು.
ಅದಕ್ಕೆ ಎಲೀಯನು— ನಾನು ದೇವರ ಮನುಷ್ಯನಾಗಿ 10
ರುವದಾದರೆ ಆಕಾಶದಿಂದ ಬೆಂಕಿಬಿದ್ದು ನಿನ್ನನ್ನೂ
ನಿನ್ನ ಐವತ್ತು ಮಂದಿ ಸಿಪಾಯಿಗಳನ್ನೂ ದಹಿಸಿಬಿಡಲಿ
ಅಂದನು. ಕೂಡಲೆ ಆಕಾಶದಿಂದ ಬೆಂಕಿಬಿದ್ದು ಅವ
ನನ್ನೂ ಅವನ ಐವತ್ತು ಮಂದಿ ಸಿಪಾಯಿಗಳನ್ನೂ
ದಹಿಸಿಬಿಟ್ಟಿತು. ತರುವಾಯ ಅರಸನು ಇನ್ನೊಬ್ಬ 11
ಪಂಚಾಶದಧಿಪತಿಯನ್ನು ಅವನ ಐವತ್ತು ಮಂದಿ ಸಿಪಾ
ಯಿಗಳೊಡನೆ ಕಳುಹಿಸಿದನು. ಇವನು ಹೋಗಿ ಎಲೀ
ಯನಿಗೆ— ದೇವರ ಮನುಷ್ಯನೇ, ಬೇಗನೆ ಇಳಿದು
ಬಾ; ಅರಸನು ನಿನ್ನನ್ನು ಕರೆಯುತ್ತಾನೆ ಎಂದು ಹೇಳಿ
ದನು. ಆಗ ಎಲೀಯನು ಅವನಿಗೆ— ನಾನು ದೇವರ 12
ಮನುಷ್ಯನಾಗಿರುವದಾದರೆ ಆಕಾಶದಿಂದ ಬೆಂಕಿಬಿದ್ದು

ನಿನ್ನನ್ನೂ ನಿನ್ನ ಐವತ್ತು ಮಂದಿ ಸಿಪಾಯಿಗಳನ್ನೂ
ದಹಿಸಿಬಿಡಲಿ ಎಂದನು. ಕೂಡಲೆ ದೇವರು ಆಕಾಶ
ದಿಂದ ಕಳುಹಿಸಿದ ಬೆಂಕಿಯು ಬಂದು ಅವನನ್ನೂ ಅವ
ನ ಐವತ್ತು ಮಂದಿ ಸಿಪಾಯಿಗಳನ್ನೂ ಸುಟ್ಟುಬಿಟ್ಟಿತು.
13 ಅರಸನು ಮತ್ತೊಬ್ಬ ಪಂಚಾಶದಧಿಪತಿಯನ್ನು ಅವನ
ಐವತ್ತು ಮಂದಿ ಸಿಪಾಯಿಗಳೊಡನೆ ಕಳುಹಿಸಿದನು.
ಇವನು ಬಂದು ಎಲೀಯನ ಮುಂದೆ ಮೊಣಕಾಲೂರಿ
ಅವನನ್ನು—ದೇವರ ಮನುಷ್ಯನೇ, ನನ್ನ ಮತ್ತು ನಿನ್ನ
ಸೇವಕರಾದ ಈ ಐವತ್ತು ಮಂದಿಯ ಪ್ರಾಣವು ನಿನ್ನ
14 ದೃಷ್ಟಿಯಲ್ಲಿ ಬೆಲೆಯುಳ್ಳದ್ದಾಗಿರಲಿ. ಆಕಾಶದಿಂದ
ಬೆಂಕಿಬಿದ್ದು ಮುಂಚೆ ಬಂದ ಇಬ್ಬರು ಪಂಚಾಶದಧಿ
ಪತಿಗಳನ್ನೂ ಅವರ ಸಿಪಾಯಿಗಳನ್ನೂ ದಹಿಸಿಬಿಟ್ಟಿ
ತಲ್ಲಾ; ನನ್ನ ಪ್ರಾಣವಾದರೋ ನಿನ್ನ ದೃಷ್ಟಿಯಲ್ಲಿ
ಬೆಲೆಯುಳ್ಳದ್ದೆಂದು ಎಣಿಸಲ್ಪಡಲಿ ಎಂದು ಬೇಡಿಕೊಂಡ
15 ನು. ಆಗ ಯೆಹೋವನ ದೂತನು ಎಲೀಯನಿಗೆ—
ನೀನು ಇವನ ಸಂಗಡ ಹೋಗು; ಇವನಿಗೆ ಹೆದರಬೇಡ
ಎಂದು ಹೇಳಿದ್ದರಿಂದ ಅವನು ಎದ್ದು ಇವನ ಜೊತೆ
16 ಯಲ್ಲಿ ಅರಸನ ಬಳಿಗೆ ಹೋಗಿ ಅವನಿಗೆ—ನೀನು
ಎಕ್ರೋನಿನ ದೇವರಾದ ಬಾಳ್ಜೆಬೂಬನನ್ನು ವಿಚಾರಿಸು
ವದಕ್ಕೆ ದೂತರನ್ನು ಕಳುಹಿಸಿದ್ದೇನು? ಅಂಥ ವಿಚಾರ
ಮಾಡುವದಕ್ಕೆ ಇಸ್ರಾಯೇಲ್ಯರಲ್ಲಿ ದೇವರಿಲ್ಲವೋ?
ನೀನು ಹೀಗೆ ಮಾಡಿದ್ದರಿಂದ ಹತ್ತಿದ ಮಂಚದಿಂದಿಳಿ
ಯದೆ ಸಾಯಲೇ ಬೇಕು ಎಂಬದಾಗಿ ಯೆಹೋವನು
17 ಅನ್ನುತ್ತಾನೆ ಎಂದು ಹೇಳಿದನು. ಯೆಹೋವನು ಎಲೀ
ಯನ ಮುಖಾಂತರವಾಗಿ ಮುಂತಿಳಿಸಿದಂತೆ ಅರಸನು
ಸತ್ತನು. ಅವನಿಗೆ ಮಗನಿಲ್ಲದ್ದರಿಂದ ಅವನಿಗೆ ಬದ
ಲಾಗಿ [ಅವನ ತಮ್ಮನಾದ] ಯೋರಾಮನೆಂಬವನು
ಯೆಹೂದ್ಯರ ಅರಸನಾದ ಯೆಹೋಷಾಫಾಟನ ಮಗ
ಯೆಹೋರಾಮನ ಆಳಿಕೆಯ ಎರಡನೆಯ ವರುಷದಲ್ಲಿ
18 ಅರಸನಾದನು. ಅಹಜ್ಯನ ಉಳಿದ ಚರಿತ್ರೆಯೂ ಅವನ
ಕೃತ್ಯಗಳೂ ಇಸ್ರಾಯೇಲ್ಯರ ರಾಜಕಾಲವೃತ್ತಾಂತ ಎಂಬ
ಗ್ರಂಥದಲ್ಲಿ ಬರೆದಿರುತ್ತವೆ.

### ಪ್ರವಾದಿಯಾದ ಎಲೀಷ, ಇಸ್ರಾಯೇಲ್‍ರಾಜನಾದ ಯೋರಾಮ ಎಂಬವರೂ ಇವರ ಕಾಲದಲ್ಲಿದ್ದ ಯೆಹೂದರಾಜರೂ. 2—8.

ಎಲೀಯನು ಸ್ವರ್ಗಾರೋಹಣವಾದದ್ದೂ ಅವನ ಉತ್ತರಾಧಿ
ಕಾರಿಯಾದ ಎಲೀಷನ ಮೊದಲನೆಯ ಮಹತ್ಕಾರ್ಯಗಳೂ.

2 ಯೆಹೋವನು ಎಲೀಯನನ್ನು ಸುಳಿಗಾಳಿಯ
ಮುಖಾಂತರವಾಗಿ ಪರಲೋಕಕ್ಕೆ ಸೇರಿಸುವ ಸಮಯ
ಬಂದಾಗ ಎಲೀಯನು ಎಲೀಷನೊಡನೆ ಗಿಲ್ಗಾಲನ್ನು
2 ಬಿಟ್ಟು ಹೊರಟನು. ಆಗ ಎಲೀಯನು ಎಲೀಷನಿಗೆ—
ದಯವಿಟ್ಟು ನೀನು ಇಲ್ಲೇ ಇರು; ಯೆಹೋವನು
ನನಗೆ ಬೇತೇಲಿಗೆ ಹೋಗಬೇಕೆಂದು ಆಜ್ಞಾಪಿಸಿದ್ದಾನೆ
ಅನ್ನಲು ಎಲೀಷನು—ಯೆಹೋವನಾಣೆ, ನಿನ್ನ ಜೀವ
ದಾಣೆ, ನಾನು ನಿನ್ನನ್ನು ಬಿಟ್ಟುಹೋಗುವದಿಲ್ಲ ಎಂದು
ಉತ್ತರಕೊಟ್ಟನು. ತರುವಾಯ ಅವರಿಬ್ಬರೂ ಬೇತೇ
3 ಲಿಗೆ ಹೋದರು. ಬೇತೇಲಿನ ಪ್ರವಾದಿಮಂಡಲಿಯ
ವರು ಎಲೀಷನನ್ನು ಎದುರುಗೊಂಡು ಅವನನ್ನು—

ಯೆಹೋವನು ಈಹೊತ್ತು ನಿನ್ನ ಯಜಮಾನನ
ನಿನ್ನ ಬಳಿಯಿಂದ ಮೇಲಕ್ಕೆ ತೆಗೆದುಕೊಳ್ಳುವನೆಂಬ
ನಿನಗೆ ಗೊತ್ತುಂಟೋ ಎಂದು ಕೇಳಿದರು. ಅದ
ಅವನು—ಗೊತ್ತುಂಟು, ಸುಮ್ಮನಿರ್ರಿ ಅಂದನು. ಎ
ಯನು ಎಲೀಷನಿಗೆ—ದಯವಿಟ್ಟು ಇಲ್ಲೇ ಇರು;
ಹೋವನು ನನಗೆ ಯೆರಿಕೋವಿಗೆ ಹೋಗಬೇಕೆಂ
ಆಜ್ಞಾಪಿಸಿದ್ದಾನೆ ಎಂದು ಹೇಳಿದನು. ಆದರೆ ಎ
ಷನು—ಯೆಹೋವನಾಣೆ, ನಿನ್ನ ಜೀವದಾಣೆ, ನಾ
ನಿನ್ನನ್ನು ಬಿಟ್ಟುಹೋಗುವದಿಲ್ಲ ಎಂದು ಉತ್ತರಕೊ
ಅವನ ಜೊತೆಯಲ್ಲಿ ಯೆರಿಕೋವಿಗೆ ಹೋದನು. ಅ
ನ ಪ್ರವಾದಿಮಂಡಲಿಯವರು ಅವನನ್ನು ಎದು
ಗೊಂಡು—ಯೆಹೋವನು ಈಹೊತ್ತು ನಿನ್ನ ಯ
ಮಾನನನ್ನು ನಿನ್ನ ಬಳಿಯಿಂದ ಮೇಲಕ್ಕೆ ಕರೆದುಕೆ
ಳ್ಳುವನೆಂದು ನಿನಗೆ ಗೊತ್ತುಂಟೋ ಎಂದು ಕೇಳಿದರ
ಅದಕ್ಕೆ ಅವನು—ಗೊತ್ತುಂಟು, ಸುಮ್ಮನಿರ್ರಿ ಎಂ
ಉತ್ತರಕೊಟ್ಟನು. ಎಲೀಯನು ತಿರಿಗಿ ಅವನಿಗೆ—
ದಯವಿಟ್ಟು ನೀನು ಇಲ್ಲೇ ಇರು; ಯೆಹೋವ
ನನಗೆ ಯೊರ್ದನಿಗೆ ಹೋಗಬೇಕೆಂದು ಆಜ್ಞಾಪಿ
ದ್ದಾನೆ ಎಂದು ಹೇಳಿದನು. ಆಗ ಅವನು—ಯೆಹೋ
ವನಾಣೆ, ನಿನ್ನ ಜೀವದಾಣೆ, ನಾನು ನಿನ್ನನ್ನು ಬಿಟ
ಹೋಗುವದಿಲ್ಲ ಎಂದು ಉತ್ತರಕೊಟ್ಟನು; ಆದದರಿ
ಇಬ್ಬರೂ ಹೊರಟು ಯೊರ್ದನ್‍ಹೊಳೆಯ ದಡ
ಬಂದರು. ಪ್ರವಾದಿಮಂಡಲಿಯವರಲ್ಲಿ ಐವತ್ತು ಜನ
ಇವರ ಹಿಂದಿನಿಂದಲೇ ಬಂದು ಸ್ವಲ್ಪ ದೂರದ
ನಿಂತುಕೊಂಡರು. ಅನಂತರ ಎಲೀಯನು ತನ್ನ ಕಂ
ಳಿಯನ್ನು ಮಡಚಿ ಅದರಿಂದ ನೀರನ್ನು ಹೊಡೆಯಲ
ನೀರು ಎರಡು ಭಾಗವಾಯಿತು; ಇಬ್ಬರೂ ಒಣನೆಲ
ಮೇಲೆ ದಾಟಿಹೋದರು.

ಅವರು—ಆಚೇದಡಕ್ಕೆ ಸೇರಿದ ಮೇಲೆ ಎಲೀಯನ
ಎಲೀಷನನ್ನು—ನಿನ್ನನ್ನು ಬಿಟ್ಟು ಹೋಗುವ ಮೊ
ಲು ನಾನು ನಿನಗೋಸ್ಕರ ಏನು ಮಾಡಬೇಕನ್ನುತ್ತೀ
ಹೇಳು ಎಂದು ಕೇಳಿದನು. ಅದಕ್ಕೆ ಎಲೀಷನು—
ನಿನಗಿರುವ ಆತ್ಮದಲ್ಲಿ ನನಗೆ ಎರಡು ಪಾಲನ್ನು ಅನು
ಗ್ರಹಿಸು ಎಂದು ಬೇಡಿಕೊಂಡನು. ಆಗ ಎಲೀ
ನು ಅವನಿಗೆ—ನೀನು ದುರ್ಲಭವಾದದ್ದನ್ನು ಕೇ
ಕೊಂಡಿ; ಆದರೂ ನಾನು ನಿನ್ನ ಬಳಿಯಿಂದ ತೆ
ಯಲ್ಪಡುವಾಗ ನೀನು ನನ್ನನ್ನು ನೋಡುವದಾದ
ಅದು ದೊರಕುವದು; ಇಲ್ಲವಾದರೆ ದೊರಕುವದಿ
ಅಂದನು. ಅವರು ಮಾತಾಡುತ್ತಾ ಮುಂದೆ ಹೋಗ
ತ್ತಿರುವಾಗ ಫಕ್ಕನೆ ಅಗ್ನಿಮಯವಾದ ರಥರಥಾ
ಗಳು ನಡುವೆ ಬಂದು ಅವರನ್ನು ವಿಂಗಡಿಸಿದ
ಎಲೀಯನು ಸುಳಿಗಾಳಿಯ ಮುಖಾಂತರವಾಗಿ ಪ
ಲೋಕಕ್ಕೆ ಹೋದನು. ಎಲೀಷನು ಅದನ್ನು ನೋಡ
ತ್ತಾ—ನನ್ನ ತಂದೆಯೇ, ನನ್ನ ತಂದೆಯೇ, ಇಸ
ಯೇಲ್ಯರಿಗೆ ರಥರಥಾಶ್ವಗಳಾಗಿದ್ದವನೇ ಎಂದು ಕೂ
ಎಲೀಯನು ತನಗೆ ಕಾಣಿಸದೆ ಹೋದ ಮೇಲೆ ತ
ಬಟ್ಟೆಗಳನ್ನು ಹರಿದು ಎರಡು ತುಂಡುಮಾಡಿದನ
ಅನಂತರ ಅವನು ಮೇಲಣಿಂದ ಬಿದ್ದ ಎಲೀಯನ ಕಂ
ಳಿಯನ್ನು ತೆಗೆದುಕೊಂಡು ಯೊರ್ದನ್ ನದೀ ತೀರ
ಬಂದು ಎಲೀಯನ ದೇವರಾದ ಯೆಹೋವನೆಲ್ಲಿ ಅಂ

ಕೊಂಡು ಆ ಕಂಬಳಿಯಿಂದ ನೀರನ್ನು ಹೊಡೆಯಲು
ಅದು ಎರಡು ಭಾಗವಾಯಿತು; ಅವನು ದಾಟಿಹೋ
15 ದನು. ದೂರದಲ್ಲಿ ನಿಂತಿದ್ದ ಯೆರಿಕೋವಿನ ಪ್ರವಾದಿ
ಮಂಡಲಿಯವರು ಇದನ್ನು ಕಂಡು ಎಲೀಯನಿಗಿದ್ದ
ಆತ್ಮವು ಎಲೀಷನ ಮೇಲೆ ಬಂದಿತೆಂದು ತಿಳಿದುಕೊಂಡು
ಅವನನ್ನು ಎದುರುಗೊಂಡು ಅವನಿಗೆ ಸಾಷ್ಟಾಂಗನಮ
16 ಸ್ಕಾರಮಾಡಿದರು. ಅನಂತರ ಅವರು ಅವನಿಗೆ—ನಿನ್ನ
ಸೇವಕರಾದ ನಮ್ಮಲ್ಲಿ ಐವತ್ತು ಮಂದಿ ಬಲಿಷ್ಠಜನರಿ
ದ್ದಾರೆ; ನಿನ್ನ ಯಜಮಾನನನ್ನು ಹುಡುಕಹೋಗುವ
ದಕ್ಕೆ ಅವರಿಗೆ ಅಪ್ಪಣೆಯಾಗಲಿ. ಯೆಹೋವನ
ಆತ್ಮವು ಅವನನ್ನು ಎತ್ತಿಕೊಂಡು ಹೋಗಿ ಒಂದು ಬೆಟ್ಟದ
ಮೇಲಾಗಲಿ ತಗ್ಗಿನಲ್ಲಾಗಲಿ ಇಟ್ಟಿರಬಹುದು ಎಂದು
ಹೇಳಿದರು; ಅವನು ಅವರಿಗೆ—ನೀವು ಕಳುಹಿಸಬೇಡಿರಿ
17 ಅಂದನು. ಆದರೆ ಅವರು ಅವನನ್ನು ಒತ್ತಾಯಪಡಿಸಿದ್ದ
ರಿಂದ ಅವನು ಬೇಸರಗೊಂಡು ಕಳುಹಿಸುವದಕ್ಕೆ ಅಪ್ಪ
ಣೆಕೊಟ್ಟನು. ಅವರು ಐವತ್ತು ಮಂದಿಯನ್ನು ಕಳು
ಹಿಸಿದರು. ಇವರು ಮೂರು ದಿವಸ ಹುಡುಕಿದರೂ
18 ಎಲೀಯನನ್ನು ಕಾಣದೆ ಇನ್ನೂ ಯೆರಿಕೋವಿನಲ್ಲೇ
ಇದ್ದ ಎಲೀಷನ ಬಳಿಗೆ ಬಂದರು; ಅವನು ಅವರಿಗೆ—
ಹೋಗಬೇಡಿರೆಂದು ನಾನು ಹೇಳಲಿಲ್ಲವೋ ಅಂದನು.
19 ಯೆರಿಕೋವಿನ ಜನರು ಎಲೀಷನಿಗೆ—ನಮ್ಮ ಒಡೆ
ಯನಾದ ನಿನಗೆ ಗೊತ್ತಿರುವಂತೆ ಈ ಊರು ಕಟ್ಟಲ್ಪ
ಟ್ಟಿರುವ ಸ್ಥಳವು ಒಳ್ಳೇದಾಗಿದೆ; ಆದರೆ ನೀರು ಕೆಟ್ಟ
ದ್ದಾಗಿರುವದರಿಂದ ಬಂಜೆತನ ಹೆಚ್ಚು ಎಂದು ಹೇಳಿ
20 ದರು. ಆಗ ಎಲೀಷನು ಅವರಿಗೆ—ಒಂದು ಹೊಸ
ಮಡಕೆಯಲ್ಲಿ ಉಪ್ಪು ಹಾಕಿ ಅದನ್ನು ತಂದುಕೊಡಿರಿ
21 ಅಂದನು. ಅವರು ತಂದುಕೊಡಲು ಅವನು ಬುಗ್ಗೆಗೆ
ಹೋಗಿ ಆ ನೀರಿನಲ್ಲಿ ಉಪ್ಪು ಹಾಕಿ—ಇನ್ನು ಮುಂದೆ
ಈ ನೀರಿನಿಂದ ಮರಣವೂ ಬಂಜೆತನವೂ ಉಂಟಾಗದಂತೆ
ಇದರಲ್ಲಿದ್ದ ದೋಷವನ್ನೆಲ್ಲಾ ಪರಿಹರಿಸಿದ್ದೇನೆ ಎಂಬ
ದಾಗಿ ಯೆಹೋವನು ಅನ್ನುತ್ತಾನೆ ಎಂದು ಹೇಳಿದನು.
22 ಕೂಡಲೆ ನೀರಿನಲ್ಲಿದ್ದ ದೋಷವೆಲ್ಲಾ ಪರಿಹಾರವಾ
ಯಿತು; ಎಲೀಷನ ವಾಕ್ಯಬಲದಿಂದ ಅದು ಇಂದಿನ
ವರೆಗೂ ಹಾಗೆಯೇ ಇರುತ್ತದೆ.
23 ಎಲೀಷನು ಅಲ್ಲಿಂದ ಬೇತೇಲಿಗೆ ಹೊರಟು ಅಲ್ಲಿನ
ಗುಡ್ಡವನ್ನು ಹತ್ತುತ್ತಿರುವಾಗ ಆ ಊರಿನ ಹುಡುಗರು
ಹೊರಗೆ ಬಂದು—ಬೋಳಮಂಡೆಯವನೇ, ಏರು;
ಬೋಳಮಂಡೆಯವನೇ, ಏರು ಎಂದು ಕೂಗಿ ಅವನನ್ನು
24 ಪರಿಹಾಸ್ಯಮಾಡಿದರು. ಅವನು ಅವರ ಕಡೆಗೆ ತಿರುಗಿ
ಕೊಂಡು ಯೆಹೋವನ ಹೆಸರಿನಲ್ಲಿ ಅವರನ್ನು ಶಪಿಸಿ
ದನು. ಕೂಡಲೆ ಕಾಡಿನಿಂದ ಎರಡು ಹೆಣ್ಣು ಕರಡಿಗಳು
ಬಂದು ಆ ಹುಡುಗರಲ್ಲಿ ನಾಲ್ವತ್ತೆರಡು ಮಂದಿಯನ್ನು
25 ಹರಿದುಬಿಟ್ಟವು. ಎಲೀಷನು ಅಲ್ಲಿಂದ ಕರ್ಮೆಲ್
ಬೆಟ್ಟಕ್ಕೆ ಹೋಗಿ ಅನಂತರ ಸಮಾರ್ಯಕ್ಕೆ ಬಂದನು.

ಇಸ್ರಾಯೇಲ್ಯರ ಅರಸನಾದ ಯೋರಾಮನು ಮೋವಾಬ್ಯರಿಗೆ
ವಿರೋಧವಾಗಿ ಯುದ್ಧಕ್ಕೆ ಹೋದದ್ದು.

3 ಯೆಹೂದ್ಯರ ಅರಸನಾದ ಯೆಹೋಷಾಫಾಟನ ಆಳಿ
ಕೆಯ ಹದಿನೆಂಟನೆಯ ವರುಷದಲ್ಲಿ ಅಹಾಬನ ಮಗ
ನಾದ ಯೋರಾಮನು ಇಸ್ರಾಯೇಲ್ಯರ ಅರಸನಾಗಿ
ಸಮಾರ್ಯದಲ್ಲಿ ಹನ್ನೆರಡು ವರುಷ ಆಳಿದನು. ಇವನು 2
ತನ್ನ ತಂದೆತಾಯಿಗಳಷ್ಟು ದುಷ್ಟನಾಗಿರಲಿಲ್ಲವಾದರೂ
ಯೆಹೋವನ ದೃಷ್ಟಿಯಲ್ಲಿ ದ್ರೋಹಿಯಾಗಿದ್ದನು.
ತನ್ನ ತಂದೆಯು ಬಾಳನಿಗೋಸ್ಕರ ನಿಲ್ಲಿಸಿದ ಕಲ್ಲಿನ
ಕಂಬವನ್ನು ತೆಗೆದುಹಾಕಿದನು. ಆದರೂ ಇಸ್ರಾಯೇ 3
ಲ್ಯರನ್ನು ಪಾಪಕ್ಕೆ ಪ್ರೇರಿಸಿದ ನೆಬಾಟನ ಮಗನಾದ
ಯಾರೊಬ್ಬಾಮನ ಮಾರ್ಗವನ್ನು ಬಿಡಲೇ ಇಲ್ಲ.
ಅನೇಕ ಕುರಿಹಿಂಡುಗಳುಳ್ಳವನಾಗಿದ್ದ ಮೋವಾ 4
ಬ್ಯರ ಅರಸನಾದ ಮೇಷನೆಂಬವನು ಇಸ್ರಾಯೇಲ್ಯರ
ಅರಸನಿಗೆ ಲಕ್ಷ ಕುರಿಗಳ ಮತ್ತು ಲಕ್ಷ ಟಗರುಗಳ
ಉಣ್ಣೆಯನ್ನು ಕಪ್ಪವಾಗಿ ಕೊಡುತ್ತಿದ್ದನು. ಆದರೆ 5
ಅಹಾಬನು ಮರಣಹೊಂದಿದನಂತರ ಇವನು ಇಸ್ರಾ
ಯೇಲ್ಯರ ಅರಸನಿಗೆ ವಿರೋಧವಾಗಿ ತಿರುಗಿಬಿದ್ದನು.
ಆದದರಿಂದ ಅರಸನಾದ ಯೋರಾಮನು ಒಡನೆ ಇಸ್ರಾ 6
ಯೇಲ್ಯರನ್ನು ಕೂಡಿಸಿಕೊಂಡು ಸಮಾರ್ಯದಿಂದ
ಹೊರಟು ಯೆಹೂದ್ಯರ ಅರಸನಾದ ಯೆಹೋಷಾಫಾಟ 7
ನಿಗೆ ದೂತರ ಮುಖಾಂತರವಾಗಿ—ಮೋವಾಬ್ಯರ ಅರ
ಸನು ನನಗೆ ವಿರೋಧವಾಗಿ ತಿರುಗಿಬಿದ್ದಿದ್ದಾನೆ; ಮೋ
ವಾಬ್ಯರೊಡನೆ ಯುದ್ಧಮಾಡುವದಕ್ಕೆ ನೀನೂ ನನ್ನ
ಜೊತೆಯಲ್ಲಿ ಬರುತ್ತೀಯೋ ಎಂದು ಹೇಳಿಕಳುಹಿಸಿ
ದನು. ಅದಕ್ಕೆ ಯೆಹೋಷಾಫಾಟನು—ಬರುತ್ತೇನೆ;
ನಾನೂ ನೀನೂ, ನನ್ನ ಜನರೂ ನಿನ್ನ ಜನರೂ, ನನ್ನ
ಕುದುರೆಗಳೂ ನಿನ್ನ ಕುದುರೆಗಳೂ ಒಂದೇಯಲ್ಲವೋ
ಎಂದು ಉತ್ತರಕೊಟ್ಟು ಯಾವ ಮಾರ್ಗವಾಗಿ ಹೋಗ 8
ಬೇಕೆಂದು ವಿಚಾರಿಸಿದಾಗ ಯೋರಾಮನು ಎದೋ
ಮ್ಯರ ಅರಣ್ಯಮಾರ್ಗವಾಗಿ ಅಂದನು. ಆಗ ಇಸ್ರಾ 9
ಯೇಲ್ ಯೆಹೂದ ಎದೋಮ್ ರಾಜ್ಯಗಳ ಅರ
ಸರು ಹೊರಟು ಸುತ್ತಾದ ದಾರಿಯಿಂದ ಏಳು ದಿವಸ
ಪ್ರಯಾಣಮಾಡಿದರು. ಮಾರ್ಗದಲ್ಲಿ ಅವರ ಸೈನಿಕ
ರಿಗೂ ಅವರು ತಂದ ಪಶುಗಳಿಗೂ ನೀರು ಸಿಕ್ಕದೆಹೋ
ದದರಿಂದ ಇಸ್ರಾಯೇಲ್ಯರ ಅರಸನು—ಅಯ್ಯೋ! 10
ಯೆಹೋವನು ಮೂರು ಮಂದಿ ಅರಸರಾದ ನಮ್ಮನ್ನು
ಮೋವಾಬ್ಯರ ಕೈಗೆ ಒಪ್ಪಿಸುವದಕ್ಕೋಸ್ಕರ ಇಲ್ಲಿಗೆ
ಬರಮಾಡಿದ್ದಾನೆ ಎಂದು ಗೋಳಾಡಿದನು. ಆದರೆ 11
ಯೆಹೋಷಾಫಾಟನು—ಯೆಹೋವನ ಸನ್ನಿಧಿಯಲ್ಲಿ
ನಮಗೋಸ್ಕರ ವಿಚಾರಿಸಬಲ್ಲವನಾದ ಒಬ್ಬ ಪ್ರವಾದಿ
ಯು ಇಲ್ಲಿರುವದಿಲ್ಲವೋ ಎಂದು ಕೇಳಿದನು. ಆಗ
ಇಸ್ರಾಯೇಲ್ಯರ ಅರಸನ ಸೇವಕರಲ್ಲೊಬ್ಬನು ಅವ
ನಿಗೆ—ಶಾಫಾಟನ ಮಗನೂ ಎಲೀಯನ ಕೈಗೆ ನೀರು
ಕೊಡುತ್ತಿದ್ದವನೂ ಆದ ಎಲೀಷನೆಂಬ ಪ್ರವಾದಿಯು
ಇಲ್ಲಿರುತ್ತಾನೆ ಎಂದು ಉತ್ತರಕೊಟ್ಟನು. ಯೆಹೋ 12
ಷಾಫಾಟನು—ಅವನು ಹೇಗೂ ಯೆಹೋವನ ಉತ್ತರ
ವನ್ನು ತಿಳಿಸುವನು ಅಂದದರಿಂದ ಇಸ್ರಾಯೇಲ್
ಎದೋಮ್ ರಾಜ್ಯಗಳ ಅರಸರು ಯೆಹೋಷಾಫಾಟ
ನೊಡನೆ ಎಲೀಷನ ಬಳಿಗೆ ಹೋದರು. ಎಲೀಷನು 13
ಇಸ್ರಾಯೇಲ್ಯರ ಅರಸನಿಗೆ—ನನಗೂ ನಿನಗೂ ಗೊಡ
ವೆಯೇನು? ನಿನ್ನ ತಂದೆತಾಯಿಗಳ ಪ್ರವಾದಿಗಳ
ಬಳಿಗೆ ಹೋಗು ಎಂದು ಹೇಳಿದನು. ಅದಕ್ಕೆ ಇಸ್ರಾ
ಯೇಲ್ಯರ ಅರಸನು—ಹಾಗನ್ನಬೇಡ; ಯೆಹೋ

ವನು ಈ ಮೂರು ಮಂದಿ ಅರಸರಾದ ನಮ್ಮನ್ನು ಮೋ
ವಾಬ್ಯರ ಕೈಗೆ ಒಪ್ಪಿಸುವದಕ್ಕೋಸ್ಕರ ಇಲ್ಲಿಗೆ ಬರ
14 ಮಾಡಿದನಲ್ಲವೋ ಅಂದನು. ಆಗ ಎಲೀಷನು—
ನಾನು ಸನ್ನಿಧಿಸೇವೆಮಾಡುತ್ತಿರುವ ಸೇನಾಧೀಶ್ವರ
ನಾದ ಯೆಹೋವನಾಣೆ, ಯೆಹೂದ್ಯರ ಅರಸನಾದ
ಯೆಹೋಷಾಫಾಟನು ನಿನ್ನ ಜೊತೆಯಲ್ಲಿರದಿದ್ದರೆ ನಾನು
15 ನಿನ್ನನ್ನು ನೋಡುತ್ತಿದ್ದಿಲ್ಲ, ಲಕ್ಷಿಸುತ್ತಿದ್ದಿಲ್ಲ. ಈಗ
ಒಬ್ಬ ವಾದ್ಯಗಾರನನ್ನು ನನ್ನ ಹತ್ತಿರ ಕರಕೊಂಡು
ಬನ್ನಿರಿ ಎಂದು ಹೇಳಿದನು. (ವಾದ್ಯಗಳ ಸ್ವರವನ್ನು
ಕೇಳುವಾಗೆಲ್ಲಾ ಎಲೀಷನಲ್ಲಿ ಯೆಹೋವನ ಬಲವು
16 ಬರುತ್ತಿತ್ತು.) ಅನಂತರ ಎಲೀಷನು ಇಸ್ರಾಯೇಲ್ಯರ
ಅರಸನಿಗೆ—ಈ ಹಳ್ಳದಲ್ಲಿ ತುಂಬಾ ಗುಂಡಿಗಳನ್ನು
17 ಮಾಡಿರಿ; ಗಾಳಿ ಮಳೆಗಳು ಕಾಣದಿದ್ದರೂ ಇದು
ನೀರಿನಿಂದ ತುಂಬುವದು. ನೀವೂ ನಿಮ್ಮ ಕುರಿದನ
ಗಳೂ ಎಲ್ಲಾ ಪಶುಗಳೂ ಕುಡಿಯಬಹುದು ಎಂಬ
18 ದಾಗಿ ಯೆಹೋವನು ಅನ್ನುತ್ತಾನೆ. ಆತನು ತನ್ನ
ದೃಷ್ಟಿಯಲ್ಲಿ ಅಲ್ಪವಾಗಿರುವ ಈ ಕಾರ್ಯದ ಹೊರ
ತಾಗಿ ಮೋವಾಬ್ಯರನ್ನೂ ನಿಮ್ಮ ಕೈಗೆ ಒಪ್ಪಿಸುವನು.
19 ನೀವು ಅವರ ಕೋಟೆಕೊತ್ತಲುಗಳುಳ್ಳ ಪಟ್ಟಣಗಳನ್ನೂ
ವಿಶೇಷವಾದ ಎಲ್ಲಾ ಊರುಗಳನ್ನೂ ಸ್ವಾಧೀನಮಾಡಿ
ಕೊಂಡು ಎಲ್ಲಾ ಹಣ್ಣಿನ ಮರಗಳನ್ನು ಕಡಿದುಹಾಕಿ
ಬಾವಿಗಳನ್ನು ಮುಚ್ಚಿಬಿಟ್ಟು ಹೊಲಗಳನ್ನು ಕಲ್ಲು
ತುಂಬಿಸಿ ಹಾಳುಮಾಡುವಿರಿ ಎಂದು ನುಡಿದನು.
20 ಪ್ರಾತಃಕಾಲನೈವೇದ್ಯವನ್ನು ಸಮರ್ಪಿಸುವ ಹೊತ್ತಿ
ನಲ್ಲಿ ಫಕ್ಕನೆ ಎದೋಮಿನ ಕಡೆಯಿಂದ ನೀರು ಬಂದು
ದೇಶದಲ್ಲೆಲ್ಲಾ ತುಂಬಿಕೊಂಡಿತು.
21 ಅರಸುಗಳು ತಮಗೆ ವಿರೋಧವಾಗಿ ಯುದ್ಧಕ್ಕೆ
ಬಂದಿದ್ದಾರೆಂಬದನ್ನು ಮೋವಾಬ್ಯರು ಕೇಳಿ ಆಯುಧ
ಗಳನ್ನು ಧರಿಸಶಕ್ತರಾದ ಎಲ್ಲಾ ಯೌವನಸ್ಥರನ್ನೂ
ಪ್ರಾಯಸ್ಥರನ್ನೂ ಕೂಡಿಸಿಕೊಂಡು ತಮ್ಮ ದೇಶದ
22 ಮೇರೆಗೆ ಬಂದು ಬೆಳಿಗ್ಗೆ ಎದ್ದು ನೋಡಲು ಎದುರಿ
ಗಿದ್ದ ನೀರು ಇವರ ದೃಷ್ಟಿಗೆ ಬಿದ್ದಿತು. ಸೂರ್ಯ
ಪ್ರಕಾಶದಿಂದ ಆ ನೀರು ರಕ್ತದಂತೆ ಕೆಂಪಾಗಿ ಕಾಣಿಸು
23 ತ್ತಿದ್ದದರಿಂದ ಇವರು—ಅದು ರಕ್ತ; ಅರಸರು ತಮ್ಮ
ತಮ್ಮೊಳಗೆ ಜಗಳವಾಡಿ ಸಂಹೃತರಾಗಿರಬೇಕು; ಮೋ
ವಾಬ್ಯರೇ, ಏಳಿರಿ, ಸುಲಿಗೆಗೆ ಹೋಗೋಣ ಎಂದು
24 ಕೂಗಿಕೊಂಡು ಇಸ್ರಾಯೇಲ್ಯರ ಪಾಳೆಯಕ್ಕೆ ಹೋ
ದರು. ಆದರೆ ಇಸ್ರಾಯೇಲ್ಯರು ಎದ್ದು ಮೋವಾಬ್ಯ
ರನ್ನು ಸೋಲಿಸಿ ಓಡಿಸಿಬಿಟ್ಟರು. ಇದಲ್ಲದೆ ಅವರು
ಮೋವಾಬ್ಯರನ್ನು ಸಂಹರಿಸುತ್ತಾ ಅವರ ದೇಶದೊಳಗೆ
25 ನುಗ್ಗಿ ಎಲ್ಲಾ ಪಟ್ಟಣಗಳನ್ನು ಕೆಡವಿ ಹೊಲಗಳನ್ನು
ಕಲ್ಲುಗಳಿಂದ ತುಂಬಿಸಿ ಬಾವಿಗಳನ್ನು ಮುಚ್ಚಿ ಹಣ್ಣಿನ
ಮರಗಳನ್ನು ಕಡಿದುಹಾಕಿದರು. ಕೀರ್ಹರೆಸೆತ್
ಎಂಬ ಒಂದೇ ದುರ್ಗ ಉಳಿಯಿತು. ಕವಣೆಹೊಡೆ
ಯುವವರು ಅದನ್ನೂ ಸುತ್ತಿಕೊಂಡು ಕಲ್ಲೆಸೆದರು.
26 ಮೋವಾಬ್ಯರ ಅರಸನು ತಾನು ಯುದ್ಧದಲ್ಲಿ ಗೆಲ್ಲಲಾರೆ
ನೆಂದು ತಿಳಿದು ಏಳು ನೂರು ಮಂದಿ ಭಟರೊಡನೆ
ಸೈನ್ಯದೊಳಗೆ ನುಗ್ಗಿ ಎದೋಮ್ಯರ ಅರಸನ ಕಡೆಗೆ
ಹೋಗಪ್ರಯತ್ನಿಸಿದನು; ಆದರೆ ಆಗದೆಹೋಯಿತು.
27 ಆಗ ಅವನು ತನಗೆ ಬದಲಾಗಿ ಅರಸನಾಗತಕ್ಕ ತನ್ನ

ಚೊಚ್ಚಲಮಗನನ್ನು ಹಿಡಿದು ವಧಿಸಿ ಗೋಡೆಯ ಮೇ
ಸರ್ವಾಂಗಹೋಮಮಾಡಿದನು. ಇದರಿಂದ ಮೋವಾ
ಬ್ಯರಿಗೆ ಇಸ್ರಾಯೇಲ್ಯರ ಮೇಲೆ ಕೋಪೋದ್ರೇ
ಉಂಟಾಗಲು ಅವರು ಅವನನ್ನು ಬಿಟ್ಟು ತಮ್ಮ ದೇಶಕ
ಹೊರಟುಹೋದರು.

### ಎಲೀಷನ ಕೆಲವು ಮಹತ್ಕಾರ್ಯಗಳು.

ಒಂದು ದಿವಸ ಪ್ರವಾದಿಮಂಡಲಿಯವರಲ್ಲೊಬ್ಬನ
ಹೆಂಡತಿಯು ಎಲೀಷನ ಹತ್ತಿರ ಬಂದು ಅವನಿಗೆ—ನಿನ್ನ
ಸೇವಕನಾದ ನನ್ನ ಗಂಡನು ಮರಣಹೊಂದಿದನು
ಅವನು ಯೆಹೋವನಲ್ಲಿ ಭಯಭಕ್ತಿಯುಳ್ಳವನಾಗಿದ್ದ
ನೆಂಬದು ನಿನಗೆ ಗೊತ್ತುಂಟಲ್ಲಾ; ಸಾಲಕೊಟ್ಟವನು
ನನ್ನ ಇಬ್ಬರು ಮಕ್ಕಳನ್ನು ದಾಸರನ್ನಾಗಿ ತೆಗೆದು
ಕೊಂಡು ಹೋಗುವದಕ್ಕೆ ಬಂದಿದ್ದಾನೆ ಎಂದು ಮೊ
ಯಿಟ್ಟಳು. ಎಲೀಷನು ಆಕೆಗೆ—ನಾನು ನಿನಗೇನು
ಮಾಡಬೇಕನ್ನುತ್ತೀ? ನಿನ್ನ ಮನೆಯಲ್ಲಿ ಏನಿರುತ್ತದ
ಹೇಳು ಅಂದನು. ಅದಕ್ಕೆ ಆಕೆಯು—ನಿನ್ನ ದಾ
ಯ ಮನೆಯಲ್ಲಿ ಒಂದು ಮೊಗೆ ಎಣ್ಣೆ ಹೊರತಾ
ಏನೂ ಇಲ್ಲ ಎಂದು ಉತ್ತರಕೊಟ್ಟಳು. ಆಗ ಎಲೀ
ಷನು ಆಕೆಗೆ—ಹೋಗಿ ನಿನ್ನ ನೆರೆಯವರಿಂದ ಸಿಕ್ಕು
ವಷ್ಟು ಬರೀ ಪಾತ್ರೆಗಳನ್ನು ಕೇಳಿಕೊಂಡು ಬಾ
ಅನಂತರ ನಿನ್ನ ಮಕ್ಕಳನ್ನು ಒಳಗೆ ಕರಕೊಂಡ
ಬಾಗಲನ್ನು ಮುಚ್ಚಿ ಎಣ್ಣೆಯನ್ನು ಪಾತ್ರೆಗಳ
ಹೊಯ್ದು ತುಂಬಿದವುಗಳನ್ನೆಲ್ಲಾ ಬತ್ತಟ್ಟಿಗಿಡು ಎಂದ
ಹೇಳಿದನು. ಆಕೆಯು ಹೋಗಿ ಮಕ್ಕಳನ್ನು ಒಳ
ಕರಕೊಂಡು ಬಾಗಲನ್ನು ಮುಚ್ಚಿ ಅವರು ಮುಂದಿಟ್ಟ
ಪಾತ್ರೆಗಳಲ್ಲೆಲ್ಲಾ ಎಣ್ಣೆ ಹೊಯ್ದಳು. ಪಾತ್ರೆಗಳ
ತುಂಬಿದಾಗ ಆಕೆಯು ಮಗನಿಗೆ—ಇನ್ನೊಂದು ಪಾತ್ರೆ
ಯನ್ನು ತಂದಿಡು ಅನ್ನಲು ಅವನು—ಪಾತ್ರೆಗಳ
ತೀರಿದವೆಂದು ಉತ್ತರಕೊಟ್ಟನು. ಕೂಡಲೆ ಎಣ್ಣೆಯ
ಕ್ಕುವದು ನಿಂತುಹೋಯಿತು. ತರುವಾಯ ಆಕೆಯ
ದೇವರ ಮನುಷ್ಯನ ಹತ್ತಿರ ಬಂದು ನಡೆದದ್ದನ್ನೆಲ್ಲಾ
ತಿಳಿಸಿದಳು. ಅವನು ಆಕೆಗೆ—ಹೋಗಿ ಎಣ್ಣೆಯನ್ನು
ಮಾರಿ ಸಾಲತೀರಿಸು; ಉಳಿದ ಹಣದಿಂದ ನೀನೂ
ನಿನ್ನ ಮಕ್ಕಳೂ ಜೀವನ ಮಾಡಿರಿ ಅಂದನು.
ಒಂದು ಸಾರಿ ಎಲೀಷನು ಶೂನೇಮಿಗೆ ಹೋದನು
ಅಲ್ಲಿನ ಒಬ್ಬ ಕುಲೀನ ಸ್ತ್ರೀಯು ಅವನನ್ನು ತನ್ನ
ಮನೆಯಲ್ಲಿ ಊಟಮಾಡಬೇಕೆಂದು ಒತ್ತಾಯಪಡಿ
ದಳು. ಅಂದಿನಿಂದ ಅವನು ಆ ಮಾರ್ಗದಿಂದ ಹೋ
ಗುವಾಗೆಲ್ಲಾ ಆ ಮನೆಯಲ್ಲೇ ಊಟಮಾಡುತ್ತಿದ್ದನು
ಆ ಸ್ತ್ರೀಯು ತನ್ನ ಗಂಡನಿಗೆ—ಯಾವಾಗಲೂ ಈ
ದಾರಿಯಿಂದ ಹೋಗುತ್ತಾ ಬರುತ್ತಾ ಇರುವ ಈ
ಮನುಷ್ಯನು ಪರಿಶುದ್ಧನೂ ದೇವರ ಮನುಷ್ಯನು
ಆಗಿರುತ್ತಾನೆಂದು ನನಗೆ ಗೊತ್ತಾಯಿತು. ಆದ
ರಿಂದ ನಾವು ಅವನಿಗೋಸ್ಕರ ಮಾಳಿಗೆಯ ಮೇ
ಒಂದು ಸಣ್ಣ ಕೋಣೆಯನ್ನು ಕಟ್ಟಿಸಿ ಅದರಲ್ಲಿ ಒಂದ
ಮಂಚ, ಮೇಜು, ಕುರ್ಚಿ, ದೀಪಸ್ತಂಭ, ಇವುಗಳನ
ಇಡೋಣ; ಅವನು ಇಲ್ಲಿ ಬಂದಾಗೆಲ್ಲಾ ಅದರಲ್ಲಿ ವಾಸ
ಮಾಡಲಿ ಎಂದು ಹೇಳಿದಳು. ಒಂದು ದಿವಸ ಎಲೀಷನ

ಅಲ್ಲಿಗೆ ಬಂದು ಆ ಕೋಣೆಯೊಳಗೆ ಪ್ರವೇಶಿಸಿ ದಣಿ
12 ವಾರಿಸಿಕೊಂಡನಂತರ ಆ ಶೂನೇಮ್ಯಳನ್ನು ಕರೆಯಬೇ
ಕೆಂದು ತನ್ನ ಸೇವಕನಾದ ಗೇಹಜಿಗೆ ಆಜ್ಞಾಪಿಸಿ
ದನು. ಅವನು ಹೋಗಿ ಆಕೆಯನ್ನು ಕರೆಯಲು ಆಕೆ
13 ಯು ಬಂದು ಮುಂದೆ ನಿಂತಳು. ಆಗ ಎಲೀಷನು
ಗೇಹಜಿಯ ಮುಖಾಂತರವಾಗಿ ಆಕೆಯನ್ನು—ನೀನು
ಕಷ್ಟಪಟ್ಟು ನಮಗೆ ಇಷ್ಟೆಲ್ಲಾ ಉಪಕಾರಮಾಡಿದಿ;
ನಾನು ನಿನಗೆ ಯಾವ ಪ್ರತ್ಯುಪಕಾರ ಮಾಡಲಿ? ನಿನ
ಗೋಸ್ಕರವಾಗಿ ಅರಸನ ಮುಂದಾಗಲಿ ಸೇನಾಪತಿಯ
ಮುಂದಾಗಲಿ ಮಾತಾಡಬೇಕೋ ಎಂದು ಕೇಳಲು
ಆಕೆಯು—ನಾನು ಸ್ವಕುಲದವರ ಮಧ್ಯದಲ್ಲಿ ಸುಖ
14 ವಾಗಿದ್ದೇನೆ ಎಂದು ಉತ್ತರಕೊಟ್ಟಳು. ಆ ಮೇಲೆ
ಎಲೀಷನು ಗೇಹಜಿಯನ್ನು—ನಾವು ಆಕೆಗೆ ಯಾವ
ಉಪಕಾರವನ್ನು ಮಾಡಬಹುದು ಎಂದು ಕೇಳಲು
ಅವನು—ಆಕೆಗೆ ಮಗನಿಲ್ಲ, ಗಂಡನು ಮುದುಕನಾ
15 ಗಿದ್ದಾನೆ ಅಂದನು. ಇದನ್ನು ಕೇಳಿ ಎಲೀಷನು ಆ
ಸ್ತ್ರೀಯನ್ನು ಕರೆಯಬೇಕೆಂದು ಆಜ್ಞಾಪಿಸಿದನು. ಅವನು
ಹೋಗಿ ಕರೆಯಲು ಆಕೆಯು ಬಂದು ಬಾಗಲಿನ ಹತ್ತಿರ
16 ನಿಂತಳು. ಎಲೀಷನು ಆಕೆಗೆ—ನೀನು ಬರುವ
ವರುಷ ಇದೇ ಕಾಲದಲ್ಲಿ ಒಬ್ಬ ಮಗನನ್ನು ಅಪ್ಪಿ
ಕೊಂಡಿರುವಿ ಅಂದನು. ಅದಕ್ಕೆ ಆಕೆಯು—ದೇವರ
ಮನುಷ್ಯನೇ, ಒಡೆಯನೇ, ಹೀಗೆ ಹೇಳಿ ನಿನ್ನ ದಾಸಿ
17 ಯನ್ನು ವಂಚಿಸಬೇಡ ಎಂದು ನುಡಿದಳು. ಆ ಸ್ತ್ರೀಯು
ಗರ್ಭಿಣಿಯಾಗಿ ಎಲೀಷನು ಹೇಳಿದಂತೆ ಮುಂದಿನ
ವರುಷ ಅದೇ ಕಾಲದಲ್ಲಿ ಒಬ್ಬ ಮಗನನ್ನು ಹೆತ್ತಳು.
18 ಹುಡುಗನು ದೊಡ್ಡವನಾದ ಮೇಲೆ ಒಂದು ದಿವಸ
ಹೊಲದಲ್ಲಿ ಕೊಯ್ಯುವವರ ಸಂಗಡ ಇದ್ದ ತನ್ನ
19 ತಂದೆಯ ಬಳಿಗೆ ಹೋದನು. ಅಲ್ಲಿದ್ದಾಗ ಅವನು
ಫಕ್ಕನೆ—ಅಪ್ಪಾ, ನನ್ನ ತಲೆ, ನನ್ನ ತಲೆ ಎಂದು ಕೂ
ಗಲು ತಂದೆಯು ಒಬ್ಬ ಸೇವಕನನ್ನು ಕರೆದು ಅವ
ನಿಗೆ—ಇವನನ್ನು ತಾಯಿಯ ಹತ್ತಿರ ತೆಗೆದುಕೊಂಡು
20 ಹೋಗು ಎಂದು ಆಜ್ಞಾಪಿಸಿದನು. ಸೇವಕನು ಹುಡು
ಗನನ್ನು ಅವನ ತಾಯಿಗೆ ತಂದೊಪ್ಪಿಸಿದನು. ಹುಡು
ಗನು ಮಧ್ಯಾಹ್ನದ ವರೆಗೂ ತಾಯಿಯ ತೊಡೆಯ
21 ಮೇಲೆಯೇ ಇದ್ದುಕೊಂಡು ಅನಂತರ ಸತ್ತನು. ಕೂಡಲೆ
ಆಕೆಯು ಅವನನ್ನು ದೇವರ ಮನುಷ್ಯನ ಕೋಣೆಗೆ
ತೆಗೆದುಕೊಂಡು ಹೋಗಿ ಅವನ ಮಂಚದ ಮೇಲೆ ಮಲ
22 ಗಿಸಿ ಬಾಗಲು ಮುಚ್ಚಿ ಗಂಡನನ್ನು ಕರಿಸಿ ಅವನಿಗೆ—
ದಯವಿಟ್ಟು ನನಗೋಸ್ಕರ ಒಬ್ಬ ಸೇವಕನನ್ನೂ ಒಂದು
ಕತ್ತೆಯನ್ನೂ ಕಳುಹಿಸು; ನಾನು ಬೇಗನೆ ದೇವರ
ಮನುಷ್ಯನ ಬಳಿಗೆ ಹೋಗಿ ಬರುತ್ತೇನೆ ಎಂದು ಹೇಳಿ
23 ದಳು. ಅದಕ್ಕೆ ಅವನು—ಇಂದು ಅಮಾವಾಸ್ಯೆಯಲ್ಲ,
ಸಬ್ಬತ್ತಲ್ಲ, ಈಹೊತ್ತು ಯಾಕೆ ಹೋಗುತ್ತೀ ಅಂದನು.
24 ಆಕೆಯು ಚಿಂತೆಯಿಲ್ಲ ಎಂದು ಹೇಳಿ ಕತ್ತೆಗೆ ತಡಿ
ಹಾಕಿಸಿ ಕೂತುಕೊಂಡು ಸೇವಕನಿಗೆ—ಹೊಡೆ, ಓಡಿ
ಸುತ್ತಾ ಬಾ; ನಾನು ಅಪ್ಪಣೆಮಾಡುವ ವರೆಗೂ ನಿಲ್ಲಿಸ
25 ಬೇಡ ಎಂದು ಆಜ್ಞಾಪಿಸಿದಳು. ಹೀಗೆ ಆಕೆಯು
ಪ್ರಯಾಣಮಾಡಿ ಕರ್ಮೆಲ್‌ಬೆಟ್ಟದ ಮೇಲಿದ್ದ ದೇವರ
ಮನುಷ್ಯನ ಬಳಿಗೆ ಬಂದಳು. ಅವನು ಆಕೆಯನ್ನು
ದೂರದಿಂದಲೇ ಕಂಡು ತನ್ನ ಸೇವಕನಾದ ಗೇಹಜಿಗೆ—
ಅಗೋ, ಅಲ್ಲಿ ಶೂನೇಮ್ಯಳು! ನೀನು ಓಡಿಹೋಗಿ 26
ಆಕೆಯನ್ನು ಎದುರುಗೊಂಡು—ನಿನಗೂ ನಿನ್ನ ಗಂಡ
ನಿಗೂ ಮಗನಿಗೂ ಕ್ಷೇಮವೋ ಎಂದು ವಿಚಾರಿಸು
ಎಂಬದಾಗಿ ಆಜ್ಞಾಪಿಸಿ ಕಳುಹಿಸಿದನು. ಆಕೆಯು
ಆ ಸೇವಕನಿಗೆ—ಕ್ಷೇಮ ಎಂದು ಉತ್ತರಕೊಟ್ಟು
ಬೆಟ್ಟದ ಮೇಲಿದ್ದ ದೇವರ ಮನುಷ್ಯನ ಬಳಿಗೆ ಬಂದು 27
ಅವನ ಪಾದಗಳನ್ನು ಹಿಡಿದಳು. ಗೇಹಜಿಯು ಆಕೆ
ಯನ್ನು ದೂಡುವದಕ್ಕಾಗಿ ಹತ್ತಿರ ಬರಲು ದೇವರ
ಮನುಷ್ಯನು ಅವನಿಗೆ—ಬಿಡು, ಆಕೆಯ ಮನಸ್ಸಿ
ನಲ್ಲಿ ಬಹುದುಃಖವಿರುವ ಹಾಗೆ ತೋರುತ್ತದೆ; ಯೆ
ಹೋವನು ಆಕೆಯ ದುಃಖವನ್ನು ನನಗೆ ಪ್ರಕಟಿಸ
ಲಿಲ್ಲ, ಮರೆಮಾಡಿದ್ದಾನೆ ಎಂದು ಹೇಳಿದನು. ಆಕೆ 28
ಯು ದೇವರ ಮನುಷ್ಯನಿಗೆ—ನನಗೆ ಮಗನು ಬೇ
ಕೆಂದು ಸ್ವಾಮಿಯಾದ ನಿನ್ನನ್ನು ಬೇಡಿಕೊಂಡೆನೋ?
ನನ್ನನ್ನು ವಂಚಿಸಬಾರದೆಂದು ಮೊರೆಯಿಟ್ಟೆನಲ್ಲಾ ಅಂದ
ಳು. ಆಗ ಎಲೀಷನು ಗೇಹಜಿಗೆ—ನೀನು ನಡುಕಟ್ಟಿ 29
ಕೊಂಡು ನನ್ನ ಕೋಲನ್ನು ತೆಗೆದುಕೊಂಡು ಹೋಗಿ
ಹುಡುಗನ ಮೋರೆಯ ಮೇಲಿಡು; ಹೋಗುವಾಗ ದಾರಿ
ಯಲ್ಲಿ ಯಾರನ್ನೂ ವಂದಿಸಬೇಡ; ಅವರ ವಂದನೆ
ಯನ್ನು ಸ್ವೀಕರಿಸಬೇಡ ಎಂದು ಹೇಳಿಕಳುಹಿಸಿದನು.
ಆದರೂ ಹುಡುಗನ ತಾಯಿ—ಯೆಹೋವನಾಣೆ, ನಿನ್ನ 30
ಜೀವದಾಣೆ, ನಾನು ನಿನ್ನನ್ನು ಬಿಟ್ಟು ಹೋಗುವದಿಲ್ಲ
ಎಂದು ಹೇಳಿದ್ದರಿಂದ ಎಲೀಷನು ಆಕೆಯ ಜೊತೆಯಲ್ಲಿ
ಹೊರಟನು. ಅವರ ಮುಂದಾಗಿ ಹೋದ ಗೇಹಜಿಯು 31
ಕೋಲನ್ನು ಹುಡುಗನ ಮುಖದ ಮೇಲಿಟ್ಟರೂ ಶಬ್ದ
ವಿಲ್ಲ, ಜೀವದ ಲಕ್ಷಣವಿಲ್ಲ. ಆದದರಿಂದ ಅವನು
ಹಿಂದಿರುಗಿ ಹೋಗಿ ಎಲೀಷನನ್ನು ಎದುರುಗೊಂಡು ಅವ
ನಿಗೆ—ಹುಡುಗನು ಎಚ್ಚರವಾಗಲಿಲ್ಲ ಅಂದನು. ಎಲೀ 32
ಷನು ಆ ಮನೆಯನ್ನು ಮುಟ್ಟಿದಾಗ ಸತ್ತ ಹುಡುಗನು
ತನ್ನ ಮಂಚದ ಮೇಲೆ ಇಡಲ್ಪಟ್ಟಿರುವದನ್ನು ಕಂಡು
ಯಾರೂ ಒಳಗೆ ಬಾರದಂತೆ ಆ ಕೋಣೆಯ ಬಾಗಲನ್ನು 33
ಮುಚ್ಚಿಕೊಂಡು ಯೆಹೋವನನ್ನು ಪ್ರಾರ್ಥಿಸಿದನು.
ಅನಂತರ ಹುಡುಗನ ಮೇಲೆ ಬೋರ್ಲ ಬಿದ್ದು ತನ್ನ 34
ಬಾಯಿ ಕಣ್ಣು ಕೈಗಳನ್ನು ಅವನ ಬಾಯಿ ಕಣ್ಣು
ಕೈಗಳಿಗೆ ಮುಟ್ಟಿಸಿದ್ದರಿಂದ ಹುಡುಗನ ದೇಹವು
ಬೆಚ್ಚಗಾಯಿತು. ಆ ಮೇಲೆ ಹುಡುಗನನ್ನು ಬಿಟ್ಟು 35
ಎದ್ದು ಮನೆಯಲ್ಲಿ ತುಸಹೊತ್ತು ಅತ್ತಿತ್ತ ಅಡ್ಡಾಡಿ
ತಿರಿಗಿ ಅವನ ಮೇಲೆ ಬೋರ್ಲ ಬೀಳಲು ಹುಡುಗನು
ಏಳು ಸಾರಿ ಸೀತು ಕಣ್ದೆರೆದನು. ಆಗ ಎಲೀಷನು 36
ಗೇಹಜಿಗೆ—ಶೂನೇಮ್ಯಳನ್ನು ಕರೆ ಎಂದು ಆಜ್ಞಾಪಿ
ಸಲು ಅವನು ಆಕೆಯನ್ನು ಕರೆದನು. ಆಕೆಯು
ಬಂದಾಗ ಎಲೀಷನು ಆಕೆಗೆ—ನಿನ್ನ ಮಗನನ್ನು ತೆಗೆದು
ಕೋ ಎಂದು ಹೇಳಿದನು. ಆಕೆಯು ಹತ್ತಿರ ಬಂದು 37
ಅವನ ಪಾದಗಳಿಗೆ ಬಿದ್ದು ಸಾಷ್ಟಾಂಗನಮಸ್ಕಾರಮಾಡಿ
ಮಗನನ್ನು ತೆಗೆದುಕೊಂಡು ಹೋದಳು.
ಎಲೀಷನು ತಿರಿಗಿ ಗಿಲ್ಗಾಲಿಗೆ ಹೋದನು. ಆಗ 38
ದೇಶದಲ್ಲಿ ಬರವಿದ್ದಿತು. ಪ್ರವಾದಿಮಂಡಲಿಯವರು
ತನ್ನ ಮುಂದೆ ಕೂಡಿಬರಲು ಅವನು ತನ್ನ ಸೇವ
ಕನಿಗೆ—ದೊಡ್ಡ ಹಂಡೆಯನ್ನು ತೆಗೆದುಕೊಂಡು ಇವ
ರಿಗೋಸ್ಕರ ಅಡಿಗೆಮಾಡು ಎಂದು ಆಜ್ಞಾಪಿಸಿದನು.

39 ಒಬ್ಬನು ಯಾವಪಾದರೊಂದು ಪಲ್ಯ ಸಿಕ್ಕೀತೆಂದು
ಕಾಡಿಗೆ ಹೋಗಿ ಅಲ್ಲಿ ಒಂದು ಕಾಡುಬಳ್ಳಿಯನ್ನು
ಕಂಡು ಉಡಿತುಂಬಾ ಅವರ ಕಾಯಿಗಳನ್ನು ಕಿತ್ತು
ಕೊಂಡು ಬಂದು ತುಂಡುತುಂಡುಮಾಡಿ ಆ ಪಾತ್ರೆ
ಯೊಳಗೆ ಹಾಕಿದನು. ಅದು ಎಂಥ ಕಾಯಿಯೆಂಬದು
40 ಯಾರಿಗೂ ಗೊತ್ತಿರಲಿಲ್ಲ. ಜನರಿಗೆ ಅದನ್ನೇ ಊಟಕ್ಕೆ
ಬಡಿಸಿದರು; ಅವರು ಅದನ್ನು ಬಾಯೊಳಗೆ ಹಾಕಿದ
ಕೂಡಲೆ ತಿನ್ನಲಾರದೆ—ದೇವರ ಮನುಷ್ಯನೇ, ಪಾತ್ರೆ
41 ಯಲ್ಲಿ ವಿಷ ಎಂದು ಕೂಗಿದರು. ಆಗ ಅವನು—
ಹಿಟ್ಟನ್ನು ತಂದುಕೊಡಿರಿ ಎಂದು ಹೇಳಿದನು; ಅವರು
ತರಲು ಅದನ್ನು ಆ ಪಾತ್ರೆಯೊಳಗೆ ಹಾಕಿ ಈಗ ಇದನ್ನು
ಬಡಿಸಬಹುದು ಅಂದನು. ಕೂಡಲೆ ಪಾತ್ರೆಯಲ್ಲಿದ್ದ
ವಿಷವೆಲ್ಲಾ ಹೋಯಿತು.
42 ಒಂದು ದಿವಸ ಬಾಳ್‌ಷಾಲಿಷಾ ಊರಿನ ಒಬ್ಬ
ಮನುಷ್ಯನು ಇಪ್ಪತ್ತು ಜವೆಗೋದಿಯ ರೊಟ್ಟಿಗಳನ್ನೂ
ಒಂದು ಚೀಲತುಂಬಾ ಹಸೀ ತೆನೆಗಳನ್ನೂ ಪ್ರಥಮಫಲದ
ಕಾಣಿಕೆಯಾಗಿ ತೆಗೆದುಕೊಂಡು ಬಂದು ದೇವರ ಮನು
ಷ್ಯನಿಗೆ ಸಮರ್ಪಿಸಿದನು. ಎಲೀಷನು ತನ್ನ ಸೇವಕ
ನಿಗೆ—ಇದನ್ನು ಜನರಿಗೆ ಕೊಡು; ಅವರು ಊಟಮಾ
43 ಡಲಿ ಎಂದು ಹೇಳಿದನು. ಅದಕ್ಕೆ ಅವನು—ಇಷ್ಟನ್ನು
ನೂರು ಮಂದಿಗೆ ಹೇಗೆ ಬಡಿಸಲಿ ಅಂದನು. ಎಲೀಷನು
ಅವನಿಗೆ—ಇರಲಿ, ಕೊಡು; ಅವರು ಊಟಮಾಡಲಿ.
ಅವರು ಅದನ್ನು ಊಟಮಾಡಿ ತೃಪ್ತರಾಗಿ ಇನ್ನೂ ಉಳಿ
ಸಿಕೊಳ್ಳುವರೆಂದು ಯೆಹೋವನು ಅನ್ನುತ್ತಾನೆ ಎಂದು
44 ಹೇಳಿದನು. ಸೇವಕನು ಬಡಿಸಲು ಯೆಹೋವನು ಹೇಳಿ
ದಂತೆ ಜನರು ಊಟಮಾಡಿ ತೃಪ್ತರಾಗಿ ಇನ್ನೂ ಉಳಿಸಿ
ಕೊಂಡರು.

### ಎಲೀಷನು ಕುಷ್ಠರೋಗಿಯಾದ ನಾಮಾನನನ್ನು ವಾಸಿಮಾಡಿದ್ದು.

5 ಅರಾಮ್ಯರ ಅರಸನಿಗೆ ನಾಮಾನನೆಂಬೊಬ್ಬ ಸೇನಾ
ಪತಿಯಿದ್ದನು. ಯೆಹೋವನು ಇವನ ಮುಖಾಂತರ
ವಾಗಿ ಅರಾಮ್ಯರಿಗೆ ಜಯವನ್ನು ಅನುಗ್ರಹಿಸಿದದ
ರಿಂದ ಅರಸನು ಇವನನ್ನು ಮಹಾಪುರುಷನೆಂದೂ
ಸನ್ಮಾನಯೋಗ್ಯನೆಂದೂ ಎಣಿಸುತ್ತಿದ್ದನು. ಆದರೆ
ಪರಾಕ್ರಮಶಾಲಿಯಾದ ಇವನು ಕುಷ್ಠರೋಗಿಯಾ
2 ಗಿದ್ದನು. ಅರಾಮ್ಯರು ಒಂದು ಸಾರಿ ಸುಲಿಗೆಮಾಡು
ವದಕ್ಕೋಸ್ಕರ ಇಸ್ರಾಯೇಲ್ಯರ ಪ್ರಾಂತಕ್ಕೆ ಹೋಗಿ
ಬರುವಾಗ ಅಲ್ಲಿನ ಒಬ್ಬ ಹುಡುಗಿಯನ್ನು ಹಿಡಿದು
ಕೊಂಡು ಬಂದರು; ಆಕೆಯು ನಾಮಾನನ ಹೆಂಡತಿಗೆ
3 ದಾಸಿಯಾದಳು. ಆಕೆಯು ಒಂದು ದಿವಸ ತನ್ನ ಯಜ
ಮಾನಿಗೆ—ನಮ್ಮ ದಣಿಯು ಸಮಾರ್ಯದಲ್ಲಿರುವ
ಪ್ರವಾದಿಯ ಹತ್ತಿರ ಇರುತ್ತಿದ್ದರೆ ಎಷ್ಟೋ ಒಳ್ಳೇದಾಗು
ತ್ತಿತ್ತು. ಅವನು ಇವನನ್ನು ಕುಷ್ಠರೋಗದಿಂದ ವಾಸಿ
4 ಮಾಡುತ್ತಿದ್ದನು ಎಂದು ಹೇಳಿದಳು. ನಾಮಾನನು
ಅರಸನ ಸನ್ನಿಧಿಗೆ ಹೋಗಿ ಇಸ್ರಾಯೇಲ್‌ದೇಶದ ಹುಡು
5 ಗಿಯು ಹೇಳಿದ್ದನ್ನು ತಿಳಿಸಲು ಅವನು—ನೀನು ಅಲ್ಲಿಗೆ

ಹೋಗಿ ಬಾ; ನಾನು ನಿನ್ನ ಕೈಯಲ್ಲಿ ಇಸ್ರಾಯೇಲ್ಯ
ಅರಸನಿಗೆ ಒಂದು ಪತ್ರವನ್ನು ಕೊಡುತ್ತೇನೆ ಅಂದನು
ನಾಮಾನನು [1])ಹತ್ತು ತಲಾಂತು ಬೆಳ್ಳಿ, ಆರು ಸಾವಿ
ತೊಲೆ ಬಂಗಾರ, ಹತ್ತು ದುಸ್ತುಬಟ್ಟೆಗಳು ಇವುಗಳನ್ನು
ತೆಗೆದುಕೊಂಡು ಸಮಾರ್ಯಕ್ಕೆ ಹೊರಟುಹೋಗಿ ಪ
ವನ್ನು ಇಸ್ರಾಯೇಲ್ಯರ ಅರಸನಿಗೆ ಕೊಟ್ಟನು. ಅ
ರಲ್ಲಿ—ನನ್ನ ಸೇವಕನಾದ ನಾಮಾನನನ್ನು ನಿನ್ನ ಬಳಿ
ಕಳುಹಿಸಿದ್ದೇನೆ; ನೀನು ಅವನ ಕುಷ್ಠರೋಗವನ್ನು
ವಾಸಿಮಾಡತಕ್ಕದ್ದೆಂದು ಈ ಪತ್ರದಿಂದ ತಿಳಿದುಕೊ
ಎಂಬದಾಗಿ ಬರೆದಿತ್ತು. ಇಸ್ರಾಯೇಲ್ಯರ ಅರಸನ
ಪತ್ರವನ್ನು ಓದಿದ ಕೂಡಲೆ ಬಟ್ಟೆಗಳನ್ನು ಹರಿದ
ಕೊಂಡು ತನ್ನ ಪರಿವಾರದವರಿಗೆ—ತಾನು ಕಳುಹಿಸಿ
ಮನುಷ್ಯನನ್ನು ಕುಷ್ಠರೋಗದಿಂದ ವಾಸಿಮಾಡಬ
ಕಂತೆ; ಇದು ಎಂಥ ಅಪ್ಪಣೆ! ನಾನೇನು ದೇವರೋ
ಜೀವದಾನಮಾಡುವದಕ್ಕಾಗಲಿ ಸಾಯಿಸುವದಕ್ಕಾಗ
ನನಗೆ ಸಾಮರ್ಥ್ಯವುಂಟೋ? ಇವನು ನನ್ನೊಡ
ಜಗಳವಾಡುವದಕ್ಕೆ ಕಾರಣಹುಡುಕುತ್ತಾನಲ್ಲದೆ ಮತ್ತೇ
ನು? ನೀವೇ ಆಲೋಚಿಸಿ ನೋಡಿರಿ ಎಂದು ಹೇಳಿದನ
ಇಸ್ರಾಯೇಲ್ಯರ ಅರಸನು ತನ್ನ ಬಟ್ಟೆಗಳನ್ನು ಹ
ದುಕೊಂಡನೆಂಬದನ್ನು ದೇವರ ಮನುಷ್ಯನಾದ ಎಲೀ
ಷನು ಕೇಳಿ ದೂತರ ಮುಖಾಂತರವಾಗಿ ಅವನಿಗೆ—
ನೀನು ನಿನ್ನ ಬಟ್ಟೆಗಳನ್ನು ಹರಿದುಕೊಂಡದ್ದೇಕೆ? ಅ
ನನ್ನು ನನ್ನ ಬಳಿಗೆ ಕಳುಹಿಸು; ಇಸ್ರಾಯೇಲ್ಯರ
ಒಬ್ಬ ಪ್ರವಾದಿಯಿದ್ದಾನೆಂಬದು ಅವನಿಗೆ ಗೊತ್ತಾಗ
ಎಂದು ಹೇಳಿಕಳುಹಿಸಿದನು. ನಾಮಾನನು ರಥರಥಾ
ಗಳೊಡನೆ ಎಲೀಷನ ಮನೆಗೆ ಹೋಗಿ ಬಾಗಲಿನ ಮುಂ
ನಿಂತನು. ಎಲೀಷನು ಅವನಿಗೆ—ಹೋಗಿ ಯೊರ್ದ
ಹೊಳೆಯಲ್ಲಿ ಏಳು ಸಾರಿ ಸ್ನಾನಮಾಡು; ಆಗ ನಿ
ದೇಹವು ಮುಂಚಿನಂತಾಗುವದು; ನೀನು ಶುದ್ಧನ
ಗುವಿ ಎಂದು ಹೇಳಿಕಳುಹಿಸಿದನು. ನಾಮಾನನ
ಇದನ್ನು ಕೇಳಿ ಕೋಪಗೊಂಡು—ಇದೇನು! ಅವನ
ಹೇಗೂ ಹೊರಗೆ ಬಂದು ನಿಂತು ತನ್ನ ದೇವರಾ
ಯೆಹೋವನ ಹೆಸರು ಹೇಳಿ ಕುಷ್ಠದ ಮೇಲೆ ಕೈಯ
ಡಿಸಿ ವಾಸಿಮಾಡುವನೆಂದು ನೆನಸಿದೆನು. ದಮಸ್ಕ
ಅಬಾನಾ, ಪರ್ಪರ್ ಎಂಬ ಹೊಳೆಗಳು ಇಸ್ರಾಯೇ
ಲ್ಯರ ಎಲ್ಲಾ ಹೊಳೆಹಳ್ಳಗಳಿಗಿಂತ ಉತ್ತಮವಾಗಿ
ಯಲ್ಲವೋ? ಸ್ನಾನದಿಂದ ವಾಸಿಯಾಗುವ ಹಾಗಿದ್ದ
ನಾನು ಅವುಗಳಲ್ಲಿಯೇ ಸ್ನಾನಮಾಡಬಹುದಲ್ಲ
ಎಂದು ಹೇಳಿ ಬಲು ಸಿಟ್ಟಿನಿಂದ ಹೊರಟುಹೋದನ
ಆಗ ಅವನ ಸೇವಕರು ಹತ್ತಿರ ಬಂದು ಅವನಿಗೆ—
ಅಪ್ಪನವರೇ, ಪ್ರವಾದಿಯು ಒಂದು ಕಠಿಣವಾದ ಕೆಲ
ವನ್ನು ಹೇಳಿದ್ದರೆ ಅದನ್ನು ಮಾಡುತ್ತಿದ್ದಿರಲ್ಲಾ; ಹಾಗ
ದರೆ ಸ್ನಾನಮಾಡಿ ಶುದ್ಧನಾಗು ಎಂದು ಹೇಳಿದ
ಯಾಕೆ ಅದರಂತೆ ಮಾಡಬಾರದು ಅಂದರು. ಅವನ
ಯೊರ್ದನಿಗೆ ಹೋಗಿ ಏಳು ಸಾರಿ ಅದರಲ್ಲಿ ಮುಳು
ಎದ್ದನು. ಕೂಡಲೆ ದೇವರ ಮನುಷ್ಯನ ಮಾತಿಗನ
ಸಾರವಾಗಿ ಅವನ ದೇಹವು ಕೂಸಿನ ದೇಹದಂ
ಶುದ್ಧವಾಯಿತು.

---

1) ಸುಮಾರು ಮೂವತ್ತು ಸಾವಿರ ತೊಲೆ.

15 ಅನಂತರ ಅವನು ತನ್ನ ಪರಿವಾರದವರೊಡನೆ ಹಿಂದಿ
ರುಗಿ ದೇವರ ಮನುಷ್ಯನ ಹತ್ತಿರ ಹೋಗಿ ಅವನ
ಮುಂದೆ ನಿಂತು—ಇಸ್ರಾಯೇಲ್ ದೇಶದಲ್ಲಿರುವ
ದೇವರ ಹೊರತಾಗಿ ಲೋಕದಲ್ಲಿ ಬೇರೆ ದೇವರು ಇರು
ವದೇ ಇಲ್ಲವೆಂಬದು ಈಗ ನನಗೆ ಗೊತ್ತಾಯಿತು;
ನೀನು ದಯವಿಟ್ಟು ಕಾಣಿಕೆಯನ್ನು ಅಂಗೀಕರಿಸಬೇಕು
16 ಎಂದು ಹೇಳಿದನು. ಅದಕ್ಕೆ ಎಲೀಷನು—ನಾನು ಸನ್ನಿಧಿ
ಸೇವೆಮಾಡುತ್ತಿರುವ ಯೆಹೋವನಾಣೆ, ನಿನ್ನಿಂದ ಏನೂ
ತೆಗೆದುಕೊಳ್ಳುವದಿಲ್ಲ ಅಂದನು. ನಾಮಾನನು ಎಷ್ಟು
ಒತ್ತಾಯಪಡಿಸಿದರೂ ಅವನು ತೆಗೆದುಕೊಳ್ಳಲೇ ಇಲ್ಲ.
17 ಆಗ ಅವನು ಎಲೀಷನಿಗೆ—ನೀನು ನನ್ನದನ್ನು ಸ್ವೀಕರಿ
ಸದಿದ್ದರೆ ನಿನ್ನ ಸೇವಕನಾದ ನನಗೆ ಎರಡು ಹೇಸರಕತ್ತೆ
ಗಳು ಹೊರುವಷ್ಟು ಮಣ್ಣನ್ನು ಕೊಡಿಸಬೇಕೆಂದು ಬೇಡಿ
ಕೊಳ್ಳುತ್ತೇನೆ. ನಾನು ಇನ್ನುಮುಂದೆ ಎಲ್ಲಾ ದೇವತೆ
ಗಳನ್ನು ಬಿಟ್ಟು ಯೆಹೋವನೊಬ್ಬನಿಗೇ ಸರ್ವಾಂಗ
ಹೋಮಯಜ್ಞಗಳನ್ನು ಸಮರ್ಪಿಸಬೇಕೆಂದಿರುತ್ತೇನೆ.
18 ಆದರೆ ಈ ವಿಷಯದಲ್ಲಿ ಯೆಹೋವನು ನನ್ನನ್ನು ಕ್ಷಮಿ
ಸಲಿ; ನನ್ನ ಒಡೆಯನು ಆರಾಧನೆಗೋಸ್ಕರ ರಿಮ್ಮೋನನ
ದೇವಸ್ಥಾನಕ್ಕೆ ಹೋಗಿ ನನ್ನ ಕೈಹಿಡಿದು ಆ ದೇವತೆಗೆ
ನಮಸ್ಕಾರಮಾಡುವಾಗ ನಾನೂ ನಮಸ್ಕಾರಮಾಡಬೇ
ಕಾಗುವದು. ಈ ಒಂದು ವಿಷಯದಲ್ಲಿ ಮಾತ್ರ
ಯೆಹೋವನು ನನಗೆ ಕ್ಷಮೆಯನ್ನು ಅನುಗ್ರಹಿಸ
19 ಬೇಕು ಅನ್ನಲು ಎಲೀಷನು ಅವನಿಗೆ—ಸಮಾಧಾನ
ದಿಂದ ಹೋಗು ಎಂದು ಉತ್ತರಕೊಟ್ಟನು. ಅವನು
ಹೊರಟುಹೋದನು.

20 ನಾಮಾನನು ಸ್ವಲ್ಪದೂರಕ್ಕೆ ಹೋದನಂತರ ದೇವ
ರ ಮನುಷ್ಯನಾದ ಎಲೀಷನ ಸೇವಕ ಗೇಹಜಿಯು
ಮನಸ್ಸಿನಲ್ಲಿ—ನನ್ನ ಯಜಮಾನನು ಆ ಅರಾಮ್ಯ
ನಾದ ನಾಮಾನನಿಂದ ಏನೂ ತೆಗೆದುಕೊಳ್ಳದೆ ಅವ
ನನ್ನು ಹಾಗೆಯೇ ಕಳುಹಿಸಿಬಿಟ್ಟನಲ್ಲಾ; ಯೆಹೋವ
ನಾಣೆ, ನಾನು ಅವನ ಹಿಂದೆ ಓಡುತ್ತಾ ಹೋಗಿ ಅವ
ನಿಂದ ಸ್ವಲ್ಪವನ್ನಾದರೂ ಬಾಚಿಕೊಂಡು ಬರುವೆನು
21 ಅಂದುಕೊಂಡು ಹೊರಟನು. ನಾಮಾನನು ತನ್ನ ಹಿಂದೆ
ಓಡುತ್ತಾ ಬರುವ ಗೇಹಜಿಯನ್ನು ಕಂಡು ರಥದಿಂದಿಳಿ
ದು ಅವನನ್ನು ಎದುರುಗೊಂಡು—ಕ್ಷೇಮವೋ ಎಂದು
22 ಕೇಳಿದನು. ಅವನು—ಕ್ಷೇಮ; ಎಫ್ರಾಯಿಮ್ ಪರ್ವ
ತಪ್ರದೇಶದಿಂದ ಪ್ರವಾದಿಮಂಡಲಿಯವರಾದ ಇಬ್ಬರು
ಯೌವನಸ್ಥರು ಬಂದಿರುತ್ತಾರೆ. ಆದದರಿಂದ ಅವರಿ
ಗೋಸ್ಕರ ಬೇಗನೆ [1]ಒಂದು ತಲಾಂತು ಬೆಳ್ಳಿಯನ್ನೂ
ಎರಡು ದುಸ್ತುಬಟ್ಟೆಗಳನ್ನೂ ತೆಗೆದುಕೊಂಡು ಬರಬೇ
ಕೆಂಬದಾಗಿ ನನ್ನ ಯಜಮಾನನು ನನ್ನನ್ನು ನಿನ್ನ ಬಳಿಗೆ
23 ಕಳುಹಿಸಿದನು ಎಂದು ಉತ್ತರಕೊಟ್ಟನು. ನಾಮಾ
ನನು—ಎರಡು ತಲಾಂತನ್ನಾದರೂ ತೆಗೆದುಕೊಳ್ಳಬಾ
ರದೇ ಎಂದು ಅವನನ್ನು ಒತ್ತಾಯಪಡಿಸಿ ಅದನ್ನು
ಎರಡು ಚೀಲಗಳಲ್ಲಿ ಹಾಕಿಸಿ ಆ ಚೀಲಗಳನ್ನೂ ಎರಡು
ದುಸ್ತುಬಟ್ಟೆಗಳನ್ನೂ ಇಬ್ಬರು ಸೇವಕರ ಮೇಲೆ ಹೊರಿಸಿ
ಅವರನ್ನು ಗೇಹಜಿಯ ಸಂಗಡ ಕಳುಹಿಸಿದನು. ಅವರು
24 ಹೊತ್ತುಕೊಂಡು ಇವನ ಮುಂದೆ ನಡೆದರು. ಗುಡ್ಡ
ವನ್ನು ಮುಟ್ಟಿದಾಗ ಗೇಹಜಿಯು ಅವುಗಳನ್ನು ತೆಗೆದು
ಕೊಂಡು ಮನೆಯಲ್ಲಿ ಅಡಗಿಸಿಟ್ಟು ಆಳುಗಳನ್ನು ಕಳು
ಹಿಸಿಬಿಟ್ಟನು. ಅವರು ಹೋದನಂತರ ಇವನು ತನ್ನ 25
ಯಜಮಾನನ ಬಳಿಗೆ ಬಂದನು. ಎಲೀಷನು ಅವ
ನನ್ನು—ಗೇಹಜಿಯೇ, ಎಲ್ಲಿಗೆ ಹೋಗಿ ಬಂದಿ ಎಂದು
ಕೇಳಿದನು. ಅದಕ್ಕೆ ಅವನು—ನಿನ್ನ ಸೇವಕನಾದ
ನಾನು ಎಲ್ಲಿಯೂ ಹೋಗಲಿಲ್ಲ ಎಂದು ಉತ್ತರಕೊಟ್ಟ
ನು. ಆಗ ಎಲೀಷನು ಅವನಿಗೆ—ಒಬ್ಬನು ರಥದಿಂದಿಳಿ 26
ದು ಬಂದು ನಿನ್ನನ್ನು ಎದುರುಗೊಂಡದು ನನ್ನ ಜ್ಞಾನ
ದೃಷ್ಟಿಗೆ ಕಾಣಿಸಲಿಲ್ಲವೆಂದು ನೆನಸುತ್ತೀಯೋ? ದ್ರವ್ಯ,
ಬಟ್ಟೆಗಳು, ಎಣ್ಣೇಮರದ ತೋಪುಗಳು, ದ್ರಾಕ್ಷೇತೋಟ
ಗಳು, ಕುರಿದನಗಳು, ದಾಸದಾಸೀಜನವು ಇವುಗಳನ್ನು
ಸಂಪಾದಿಸುವದಕ್ಕೆ ಇದು ಸಮಯವೋ? ನಾಮಾನನ 27
ಕುಷ್ಠವು ನಿನ್ನನ್ನೂ ನಿನ್ನ ಸಂತಾನದವರನ್ನೂ ಸದಾ
ಕಾಲ ಹಿಡಿದಿರುವದು ಅಂದನು. ಕೂಡಲೆ ಅವನಿಗೆ
ಕುಷ್ಠ ಹತ್ತಿತು. ಅವನು ಹಿಮದಂತೆ ಬಿಳುಪಾಗಿ
ಅವನ ಸನ್ನಿಧಿಯಿಂದ ಹೊರಟುಹೋದನು.

ಎಲೀಷನು ಕೊಡಲಿಯನ್ನು ತೇಲಾಡಿಸಿದ್ದೂ ಅರಾಮ್ಯರನ್ನು
ದಾರಿತಪ್ಪಿಸಿ ಅಲೆದಾಡಿಸಿದ್ದೂ.

6 ಒಂದು ಸಾರಿ ಪ್ರವಾದಿಮಂಡಲಿಯವರು ಎಲೀಷ
ನಿಗೆ—ನಾವು ನಿನ್ನ ಜೊತೆಯಲ್ಲಿ ವಾಸಿಸುತ್ತಿರುವ ಈ
ಸ್ಥಳವು ಬಲು ಇಕ್ಕಟ್ಟಾಗಿದೆ. ಆದದರಿಂದ ನಾವು ಯೊ 2
ರ್ದನಿಗೆ ಹೋಗಿ ಅಲ್ಲಿ ಪ್ರತಿಯೊಬ್ಬನೂ ಒಂದೊಂದು
ತೊಲೆಯನ್ನು ಕಡಿದುಕೊಂಡು ಬಂದು ನಮಗೋಸ್ಕರ
ಒಂದು ಮನೆಯನ್ನು ಮಾಡಿಕೊಳ್ಳೋಣ ಅಂದರು;
ಅವನು ಅವರಿಗೆ ಹೋಗಬಹುದು ಎಂದು ಹೇಳಲು
ಅವರಲ್ಲೊಬ್ಬನು—ದಯವಿಟ್ಟು ನೀನೂ ನಿನ್ನ ಸೇವಕ 3
ರಾದ ನಮ್ಮ ಜೊತೆಯಲ್ಲಿ ಬರಬೇಕು ಎಂದು ಬೇಡಿ
ಕೊಂಡನು. ಎಲೀಷನು—ಬರುತ್ತೇನೆ ಎಂದು ಹೇಳಿ
ಅವರೊಡನೆ ಹೊರಟನು. ಅವರು ಯೊರ್ದನನ್ನು 4
ಮುಟ್ಟಿ ಮರಗಳನ್ನು ಕಡಿಯುತ್ತಿರುವಾಗ ಒಬ್ಬನ 5
ಕೊಡಲಿಯು ಕಾವು ತಪ್ಪಿ ನೀರೊಳಗೆ ಬಿದ್ದಿತು. ಆದದ
ರಿಂದ ಅವನು—ಅಯ್ಯೋ, ಸ್ವಾಮಿಾ, ನಾನು ಅದನ್ನು
ಎರವಾಗಿ ತಂದಿದ್ದೆನು ಎಂದು ಕೂಗಿದನು. ದೇವರ ಮನು 6
ಷ್ಯನು ಅವನನ್ನು—ಅದು ಎಲ್ಲಿ ಬಿದ್ದಿತು ಎಂದು
ಕೇಳಲು ಅದು ಬಿದ್ದ ಸ್ಥಳವನ್ನು ಅವನು ತೋರಿಸಿ
ದನು. ಆಗ ದೇವರ ಮನುಷ್ಯನು ಮರದಿಂದ
ಒಂದು ತುಂಡು ಕಟ್ಟಿಗೆಯನ್ನು ಕಡಿದು ಅಲ್ಲಿ ಹಾಕಿ
ದನು; ಕೂಡಲೆ ಕೊಡಲಿಯು ತೇಲಾಡಿತು. ಎಲೀ 7
ಷನು ಅದನ್ನು ತೆಗೆದುಕೋ ಎಂದು ಅಜ್ಞಾಪಿಸಲು
ಆ ಮನುಷ್ಯನು ಕೈಚಾಚಿ ಅದನ್ನು ತೆಗೆದುಕೊಂಡನು.
ಅರಾಮ್ಯರ ಅರಸನು ಇಸ್ರಾಯೇಲ್ಯರಿಗೆ ವಿರೋಧ 8
ವಾಗಿ ಯುದ್ಧಕ್ಕೆ ಬಂದನು. ಅವನು ಯುದ್ಧದಲ್ಲಿ
ಹೊಂಚುಹಾಕತಕ್ಕ ಸ್ಥಳವನ್ನು ತನ್ನ ಸೇನಾಪತಿಗಳೊ
ಡನೆ ಗೊತ್ತುಮಾಡುವಷ್ಟು ಸಾರಿ ದೇವರ ಮನುಷ್ಯನು 9
ಇಸ್ರಾಯೇಲ್ಯರ ಅರಸನಿಗೆ—ಜಾಗರೂಕತೆಯಿಂದಿರು;

[1] ಒಂದು ತಲಾಂತು ಅಂದರೆ ಸುಮಾರು ಮೂರು ಸಾವಿರ ತೊಲೆ.

ನೀವು ಇಂಥಿಂಥ ಸ್ಥಳದಲ್ಲಿ ಹಾಯಬಾರದು, ಅಲ್ಲಿ
ಅರಾಮ್ಯರು ಅಡಗಿಕೊಂಡಿದ್ದಾರೆ ಎಂದು ತಿಳಿಸುತ್ತಿದ್ದ
10 ನು. ದೇವರ ಮನುಷ್ಯನು ಸೂಚಿಸುವ ಎಲ್ಲಾ ಸ್ಥಳ
ಗಳಿಗೂ ಇಸ್ರಾಯೇಲ್ಯರ ಅರಸನು [1]ಹೇಳಿಕಳುಹಿಸು
ತ್ತಿದ್ದನು. ಹೀಗೆ ಅವನು ಹಲವು ಸಾರಿ ಅರಾಮ್ಯರ ಅರ
11 ಸನ ಕೈಗೆ ಸಿಕ್ಕದಂತೆ ತಪ್ಪಿಸಿಕೊಂಡನು. ಇದರ ದೆಸೆ
ಯಿಂದ ಅರಾಮ್ಯರ ಅರಸನು ಕಳವಳಗೊಂಡು ತನ್ನ
ಸೇನಾಪತಿಗಳನ್ನು ಕರೆದು ಅವರನ್ನು—ನಮ್ಮವರಲ್ಲಿ
ಇಸ್ರಾಯೇಲ್ಯರ ಅರಸನ ಪಕ್ಷದವರು ಯಾರು? ನನಗೆ
12 ತಿಳಿಸುವದಿಲ್ಲವೋ ಎಂದು ಕೇಳಿದನು. ಆಗ ಅವರಲ್ಲೊ
ಬ್ಬನು ಅವನಿಗೆ—ನನ್ನ ಒಡೆಯನಾದ ಅರಸೇ, ಹಾಗಲ್ಲ;
ಇಸ್ರಾಯೇಲ್ಯರಲ್ಲಿ ಎಲೀಷನೆಂಬೊಬ್ಬ ಪ್ರವಾದಿಯಿರು
ತ್ತಾನೆ; ನೀನು ನಿನ್ನ ಮಲಗುವ ಕೋಣೆಯಲ್ಲಿ ಆಡುವ
ಮಾತುಗಳನ್ನು ಸಹ ಅವನು ಅರಿತುಕೊಂಡು ಎಲ್ಲ
ವನ್ನೂ ಇಸ್ರಾಯೇಲ್ಯರ ಅರಸನಿಗೆ ತಿಳಿಸುತ್ತಾನೆ
13 ಅಂದನು. ಅರಸನು ಇದನ್ನು ಕೇಳಿ—ಅವನು ಎಲ್ಲಿ
ರುತ್ತಾನೆಂದು ವಿಚಾರಿಸಿರಿ, ನಾನು ಅವನನ್ನು ಹಿಡಿಸು
ತ್ತೇನೆ ಎಂದು ಹೇಳಿದನು. ಪ್ರವಾದಿಯು ದೋತಾನಿ
14 ನಲ್ಲಿರುತ್ತಾನೆಂದು ತಿಳಿದುಕೊಂಡು ರಥರಥಾಶ್ವಸಹಿತ
ವಾದ ಮಹಾಸೈನ್ಯವನ್ನು ಅಲ್ಲಿಗೆ ಕಳುಹಿಸಿದನು.
ಸೈನ್ಯದವರು ರಾತ್ರಿಯಲ್ಲಿ ಆ ಪಟ್ಟಣವನ್ನು ಸಮೀಪಿಸಿ
15 ಅದಕ್ಕೆ ಮುತ್ತಿಗೆಹಾಕಿದರು. ದೇವರ ಮನುಷ್ಯನ
ಸೇವಕನು ಬೆಳಿಗ್ಗೆ ಎದ್ದು ಹೊರಗೆ ಹೋದಾಗ ರಥ
ರಥಾಶ್ವಸಹಿತವಾದ ಮಹಾ ಸೈನ್ಯವು ಬಂದು ಪಟ್ಟಣದ
ಸುತ್ತಲೂ ನಿಂತಿರುವದನ್ನು ಕಂಡು ತನ್ನ ಯಜಮಾನ
ನಿಗೆ—ಅಯ್ಯೋ, ಸ್ವಾಮೀ, ಏನು ಮಾಡೋಣ
16 ಎಂದನು. ಆಗ ಎಲೀಷನು ಅವನಿಗೆ—ಹೆದರಬೇಡ;
ಅವರ ಕಡೆಯಲ್ಲಿರುವವರಿಗಿಂತಲೂ ನಮ್ಮ ಕಡೆ
17 ಯಲ್ಲಿರುವವರು ಹೆಚ್ಚಾಗಿದ್ದಾರೆ ಎಂದು ಹೇಳಿ—ಯೆ
ಹೋವನೇ, ಇವನು ನೋಡುವಂತೆ ಇವನ ಕಣ್ಣುಗ
ಳನ್ನು ತೆರೆ ಎಂದು ಪ್ರಾರ್ಥಿಸಲು ಯೆಹೋವನು
ಅವನ ಕಣ್ಣುಗಳನ್ನು ತೆರೆದನು. ಆಗ ಎಲೀಷನ ರಕ್ಷ
ಣೆಗಾಗಿ ಸುತ್ತಣ ಗುಡ್ಡಗಳಲ್ಲಿ ಬಂದು ನಿಂತಿದ್ದ ಅಗ್ನಿ
ಮಯವಾದ ರಥರಥಾಶ್ವಗಳು ಆ ಸೇವಕನಿಗೆ ಕಂಡವು.
18 ಶತ್ರುಗಳು ಸಮೀಪಕ್ಕೆ ಬಂದಾಗ ಎಲೀಷನು—
ಸ್ವಾಮೀ, ಈ ಜನರನ್ನು ಕುರುಡರನ್ನಾಗಿಮಾಡು ಎಂದು
ಯೆಹೋವನನ್ನು ಪ್ರಾರ್ಥಿಸಿದನು. ಆತನು ಅವನ
ಮೊರೆಯನ್ನು ಲಾಲಿಸಿ ಅವರನ್ನು ಕುರುಡರನ್ನಾಗಿ
19 ಮಾಡಿದನು. ಆಗ ಎಲೀಷನು ಅವರಿಗೆ—ನೀವು
ಹೋಗಬೇಕೆಂದಿದ್ದ ಪಟ್ಟಣವೂ ದಾರಿಯೂ ಇದಲ್ಲ;
ನನ್ನ ಜೊತೆಯಲ್ಲಿ ಬನ್ನಿರಿ, ನೀವು ಹುಡುಕುತ್ತಿರುವ
ಮನುಷ್ಯನ ಬಳಿಗೆ ನಿಮ್ಮನ್ನು ಕರಕೊಂಡು ಹೋಗು
ತ್ತೇನೆ ಎಂದು ಹೇಳಿ ಅವರನ್ನು ಸಮಾರ್ಯಕ್ಕೆ ಕರ
20 ಕೊಂಡು ಹೋದನು. ಅವರು ಸಮಾರ್ಯದೊಳಗೆ
ಬಂದಾಗ ಎಲೀಷನು—ಇವರು ನೋಡುವಂತೆ ಇವರ
ಕಣ್ಣುಗಳನ್ನು ತೆರೆ ಎಂದು ಯೆಹೋವನನ್ನು ಬೇಡಿ
ಕೊಂಡದರಿಂದ ಆತನು ಅವರ ಕಣ್ಣುಗಳನ್ನು ತೆರೆ
ದನು. ಆಗ ಅವರಿಗೆ ತಾವು ಸಮಾರ್ಯದಲ್ಲಿದ್ದೇ
ವೆಂದು ತಿಳಿದುಬಂತು. ಇಸ್ರಾಯೇಲ್ಯರ ಅರಸನು
ಅವರನ್ನು ಕಂಡು ಎಲೀಷನಿಗೆ—ಅಪ್ಪಾ, ನಾನು ಇವ
ರನ್ನು ಸಂಹರಿಸಲೋ ಸಂಹರಿಸಲೋ ಎಂದು ಕೇಳಲು
ಅವನು—ಬೇಡ; ಕತ್ತಿಬಿಲ್ಲುಗಳಿಂದ ಸ್ವಾಧೀನಪಡಿಸಿ
ಕೊಂಡು ಸೆರೆಯಾಗಿ ತಂದವರನ್ನು ನೀನು ಸಂಹರಿಸು
ವಿಯೋ? ಇವರಿಗೆ ಅನ್ನಪಾನಗಳನ್ನು ಕೊಡು
ಉಂಡು ಕುಡಿದು ತಮ್ಮ ಯಜಮಾನನ ಬಳಿಗೆ ಹಿಂದಿ
ರುಗಿ ಹೋಗಲಿ ಎಂದು ಉತ್ತರಕೊಟ್ಟನು. ಆಗ ಅರ
ಸನು ಅವರಿಗೋಸ್ಕರ ದೊಡ್ಡ ಔತಣವನ್ನು ಮಾಡಿಸಿ
ಅವರು ಅನ್ನಪಾನಗಳನ್ನು ತೆಗೆದುಕೊಂಡ ಮೇಲೆ
ಅವರನ್ನು ಅವರ ಯಜಮಾನನ ಬಳಿಗೆ ಕಳುಹಿಸಿ
ದನು. ಅಂದಿನಿಂದ ಸುಲಿಗೆಮಾಡುವ ಅರಾಮ್ಯರ
ಗುಂಪುಗಳು ಇಸ್ರಾಯೇಲ್ಯರ ಪ್ರಾಂತದೊಳಗೆ ತಿರಿಗಿ
ಬರಲಿಲ್ಲ.

### ಅರಾಮ್ಯರು ಸಮಾರ್ಯಕ್ಕೆ ಮುತ್ತಿಗೆಹಾಕಿದದರಿಂದ ಅಲ್ಲಿ ಬರ ಘೋರವಾದದ್ದೂ ಯೆಹೋವನು ಆ ಪಟ್ಟಣದವರನ್ನು ರಕ್ಷಿಸಿದ್ದೂ.

ಆ ಮೇಲೆ ಅರಾಮ್ಯರ ಅರಸನಾದ ಬೆನ್ಹದದನು
ತನ್ನ ಎಲ್ಲಾ ಸೈನ್ಯವನ್ನು ಕೂಡಿಸಿಕೊಂಡು ಬಂದು
ಸಮಾರ್ಯಕ್ಕೆ ಮುತ್ತಿಗೆಹಾಕಿದನು. ಆಗ ಸಮಾ
ರ್ಯ ಪಟ್ಟಣದಲ್ಲಿ ಘೋರವಾದ ಬರವಿದ್ದಿತು.
ಮುತ್ತಿಗೆಯ ದೆಸೆಯಿಂದ ಅದು ಮತ್ತಷ್ಟು ಘೋರ
ವಾಗಿ ಕತ್ತೆಯ ತಲೆಯು ಎಂಭತ್ತು ರೂಪಾಯಿಗಳಿಗೂ
ಅರೆಸೇರು ಪಾರಿವಾಳದ ಮಲವು ಐದು ರೂಪಾಯಿಗ
ಳಿಗೂ ಮಾರಲ್ಪಟ್ಟವು. ಒಂದು ದಿವಸ ಇಸ್ರಾಯೇ
ಲ್ಯರ ಅರಸನು ಪೌಳಿಗೋಡೆಯ ಮೇಲೆ ಹಾದುಹೋ
ಗುತ್ತಿರುವಾಗ ಒಬ್ಬ ಸ್ತ್ರೀಯು—ಅರಸೇ, ನನ್ನ ಒಡೆ
ಯನೇ, ನನ್ನನ್ನು ರಕ್ಷಿಸು ಎಂದು ಮೊರೆಯಿಟ್ಟಳು
ಅರಸನು ಆಕೆಗೆ—ಯೆಹೋವನು ನಿನ್ನನ್ನು ರಕ್ಷಿಸದಿ
ದ್ದರೆ ನಾನು ಹೇಗೆ ರಕ್ಷಿಸಬಹುದು? ಕಣದಲ್ಲಾಗಲಿ
ದ್ರಾಕ್ಷೇ ಆಲೆಯಲ್ಲಾಗಲಿ ಏನಾದರೂ ಉಂಟೋ
ಎಂದು ಹೇಳಿ ನಿನಗಿರುವ ದುಃಖ ಯಾವದು ಎಂದು
ಕೇಳಿದನು. ಆಗ ಆಕೆಯು—ಈ ಸ್ತ್ರೀಯು ನನಗೆ—
ನಿನ್ನ ಮಗನನ್ನು ತೆಗೆದುಕೊಂಡು ಬಾ; ನಾವು ಈ
ಹೊತ್ತು ಅವನನ್ನು ತಿಂದುಬಿಡೋಣ; ನಾಳೆ ನನ್ನ
ಮಗನನ್ನು ತಿನ್ನೋಣ ಎಂದು ಹೇಳಿದ್ದರಿಂದ ನಾವಿ
ಬ್ಬರೂ ನನ್ನ ಮಗನನ್ನು ಕೊಂದು ಬೇಯಿಸಿ ತಿಂದು
ಬಿಟ್ಟೆವು. ಮರುದಿವಸ ನಾನು ಈಕೆಗೆ—ಈಹೊತ್ತು
ನಿನ್ನ ಮಗನನ್ನು ತೆಗೆದುಕೊಂಡು ಬಾ; ಅವನನ್ನು
ಕೊಂದು ತಿನ್ನೋಣ ಅಂದಾಗ ಈಕೆಯು ಅವನನ್ನು
ಎಲ್ಲಿಯೋ ಅಡಗಿಸಿಟ್ಟಳು ಎಂದು ಹೇಳಿದಳು. ಗೋ
ಡೆಯ ಮೇಲೆ ಹೋಗುತ್ತಿದ್ದ ಅರಸನು ಆ ಸ್ತ್ರೀಯ
ಮಾತನ್ನು ಕೇಳಿದೊಡನೆ ತನ್ನ ಬಟ್ಟೆಗಳನ್ನು ಹರಿದು
ಕೊಂಡನು. ಆಗ ಅವನ ಮೈಮೇಲೆ ಗೋಣೀತಟ್ಟು
ಇರುವದು ಜನರಿಗೆ ಕಂಡಿತು. ಇದಲ್ಲದೆ ಅವನು—
ನಾನು ಈಹೊತ್ತು ಶಾಫಾಟನ ಮಗನಾದ ಎಲೀಷನ

1) ಅಥವಾ, [ಸೈನ್ಯ] ಕಳುಹಿಸುತ್ತಿದ್ದನು.

ತಲೆಯನ್ನು ಹಾರಿಸದಿದ್ದರೆ ದೇವರು ನನಗೆ ಬೇಕಾದ
ದ್ದನ್ನು ಮಾಡಲಿ ಎಂದು ಆಣೆಯಿಟ್ಟುಕೊಂಡನು.
2 ಎಲೀಷನು ಊರಿನ ಹಿರಿಯರೊಡನೆ ತನ್ನ ಮನೆ
ಯಲ್ಲಿ ಕೂತುಕೊಂಡಿದ್ದನು; ಅರಸನು ತನ್ನ ಹತ್ತಿರ
ವಿದ್ದ ಒಬ್ಬ ಆಳನ್ನು ಕಳುಹಿಸಿದನು. ಅವನು ಇನ್ನೂ
ದೂರದಲ್ಲಿರುವಾಗಲೇ ಎಲೀಷನು ಹಿರಿಯರಿಗೆ—ನೋ
ಡಿರಿ, ಆ ಕೊಲೆಗಾರನ ಮಗನು ನನ್ನ ತಲೆಯನ್ನು ಹಾ
ರಿಸುವದಕ್ಕೆ ಆಳನ್ನು ಕಳುಹಿಸಿದ್ದಾನೆ. ಆಳು ಇಲ್ಲಿಗೆ
ಬಂದ ಕೂಡಲೆ ನೀವು ಬಾಗಲನ್ನು ಮುಚ್ಚಿ ಅವನು
ಒಳಗೆ ಬಾರದಂತೆ ಅದನ್ನು ಒತ್ತಿಹಿಡಿಯಿರಿ; ಅವನ
ಹಿಂದೆಯೇ ಬರುತ್ತಿರುವ ಅವನೊಡೆಯನ ಕಾಲು
ಸಪ್ಪಳವು ಕೇಳಿಸುತ್ತದಲ್ಲಾ ಎಂದು ಹೇಳಿದನು.
3 ಅವನು ಅವರೊಡನೆ ಮಾತಾಡುತ್ತಿರುವಾಗಲೇ ಆಳೂ
[ಅವನ ಹಿಂದಿನಿಂದ ಅರಸನೂ] ಅಲ್ಲಿಗೆ ಬಂದರು.
ಅರಸನು ಎಲೀಷನಿಗೆ—ನೋಡು, ಈ ಆಪತ್ತು ಯೆ
ಹೋವನಿಂದಲೇ ಬಂದದ್ದು. ಇನ್ನು ಮುಂದೆ ನಾನೇಕೆ
7 ಆತನನ್ನು ನಿರೀಕ್ಷಿಸಿಕೊಂಡಿರಬೇಕು ಅಂದನು. ಆಗ
ಎಲೀಷನು ಅವನಿಗೆ—ಯೆಹೋವನ ವಾಕ್ಯವನ್ನು
ಕೇಳು; ಆತನು—ನಾಳೆ ಇಷ್ಟು ಹೊತ್ತಿಗೆ ಸಮಾರ್ಯ
ಪಟ್ಟಣದ ಬಾಗಲಿನಲ್ಲಿ ಗೋದಿಹಿಟ್ಟು ರೂಪಾಯಿಗೆ
ಹನ್ನೆರಡು ಸೇರಿನಂತೆಯೂ ಜವೆಗೋದಿಯು ಇಪ್ಪತ್ತ
ನಾಲ್ಕು ಸೇರಿನಂತೆಯೂ ಮಾರಲ್ಪಡುವವು ಅನ್ನು
ತ್ತಾನೆ ಎಂದು ಹೇಳಿದನು. ಇದನ್ನು ಕೇಳಿ ಅರಸನ
ಹಸ್ತಕನಾದ ಸರದಾರನು ದೇವರ ಮನುಷ್ಯನಿಗೆ—
ಯೆಹೋವನು ಆಕಾಶದಲ್ಲಿ ದ್ವಾರಗಳನ್ನು ಮಾಡಿ
ದರೂ ಇದು ಸಂಭವಿಸಲಾರದು ಅನ್ನಲು ಎಲೀಷನು
ಅವನಿಗೆ—ಅದು ಸಂಭವಿಸುವದನ್ನು ನೀನು ಕಣ್ಣಾರೆ
ಕಾಣುವಿ, ಆದರೆ ಅದನ್ನು ಅನುಭವಿಸುವದಿಲ್ಲ ಎಂದು
ಹೇಳಿದನು.
ಊರುಬಾಗಲಿನ ಹತ್ತಿರ ನಾಲ್ಕು ಮಂದಿ ಕುಷ್ಠ
ರೋಗಿಗಳಿದ್ದರು. ಅವರು ತಮ್ಮೊಳಗೆ—ನಾವು ಸಾ
ಯುವ ತನಕ ಇಲ್ಲೇ ಕೂತಿರಬೇಕೋ? ಪಟ್ಟಣದೊ
ಳಗೆ ಬರವಿರುವದರಿಂದ ಅಲ್ಲಿ ಹೋದರೂ ಸಾಯಬೇಕು.
ಇಲ್ಲಿಯೇ ಕೂತಿದ್ದರೂ ಸಾಯಬೇಕು. ಆದದರಿಂದ
ಹೊರಟುಹೋಗಿ ಅರಾಮ್ಯರ ಪಾಳೆಯವನ್ನು ಸೇರೋಣ.
ಅವರು ನಮ್ಮನ್ನು ಉಳಿಸುವಪಾದರೆ ಉಳಿಸಲಿ, ಕೊಲ್ಲು
ವವಾದರೆ ಕೊಲ್ಲಲಿ ಎಂದು ಮಾತಾಡಿಕೊಂಡು ಸಾ
ಯಂಕಾಲವಾಗಲು ಅರಾಮ್ಯರ ಪಾಳೆಯಕ್ಕೆ ಹೊರ
ಟರು. ಅವರು ಪಾಳೆಯದ ಅಂಚಿಗೆ ಬಂದಾಗ ಅಲ್ಲಿ
ಒಬ್ಬನೂ ಕಾಣಿಸಲಿಲ್ಲ. ಕರ್ತನು ಅರಾಮ್ಯರ
ಪಾಳೆಯದವರಿಗೆ ರಥರಥಾಶ್ವಸಹಿತವಾದ ಮಹಾಸೈನ್ಯ
ಘೋಷವು ಕೇಳಿಸುವಂತೆ ಮಾಡಿದ್ದರಿಂದ ಅವರು—
ಇಸ್ರಾಯೇಲ್ಯರ ಅರಸನು ಹಿತ್ತಿಯ, ಐಗುಪ್ತ ಇವುಗಳ
ಅರಸರಿಗೆ ಹಣಕೊಟ್ಟು ಅವರನ್ನು ನಮಗೆ ವಿರೋಧ
ವಾಗಿ ಕರತಂದಿದ್ದಾನೆ ಅಂದುಕೊಂಡು ತಮ್ಮ ಗುಡಾರ
ಗಳನ್ನೂ ಕತ್ತೆಕುದುರೆಗಳನ್ನೂ ಪಾಳೆಯದಲ್ಲಿದ್ದದ್ದೆಲ್ಲ
ವನ್ನೂ ಬಿಟ್ಟು ತಮ್ಮ ಜೀವರಕ್ಷಣೆಗಾಗಿ ಅದೇ ಸಾಯಂ
ಕಾಲದಲ್ಲಿ ಓಡಿಹೋಗಿದ್ದರು. ಆ ಕುಷ್ಠರೋಗಿಗಳು
ಪಾಳೆಯದ ಅಂಚಿಗೆ ಬಂದಾಗ ಮೊದಲನೆಯ ಡೇರೆ
ಯನ್ನು ಹೊಕ್ಕು ಉಂಡು ಕುಡಿದು ಅದರಲ್ಲಿದ್ದ ಬೆಳ್ಳಿ
ಬಂಗಾರವನ್ನೂ ಬಟ್ಟೆಗಳನ್ನೂ ತೆಗೆದುಕೊಂಡು ಅಡಗಿ
ಸಿಟ್ಟರು. ಇನ್ನೊಂದು ಡೇರೆಯನ್ನು ಹೊಕ್ಕು ಅಲ್ಲಿಂ
ದಲೂ ತೆಗೆದುಕೊಂಡು ಅಡಗಿಸಿಟ್ಟರು.
ಅನಂತರ ಅವರು—ಇದು ಶುಭವಾರ್ತೆಯ ದಿವಸ 9
ವಾಗಿದೆ; ನಾವು ಇದನ್ನು ಪ್ರಕಟಿಸದಿರುವದು ಒಳ್ಳೇ
ದಲ್ಲ. ಬೆಳಗಾಗುವ ವರೆಗೆ ತಡಮಾಡಿದರೆ ಶಿಕ್ಷೆಗೆ
ಪಾತ್ರರಾದೇವು. ಆದದರಿಂದ ಹೋಗಿ ಅರಮನೆಯವ
ರಿಗೆ ಈ ಸಂಗತಿಯನ್ನು ತಿಳಿಸೋಣ ಎಂದು ಮಾತಾಡಿ
ಕೊಂಡು ಅಲ್ಲಿಂದ ಹೊರಟು ಊರುಬಾಗಲಿಗೆ ಬಂದು 10
ಕಾಯುವವರಿಗೆ—ನಾವು ಅರಾಮ್ಯರ ಪಾಳೆಯಕ್ಕೆ
ಹೋಗಿದ್ದೆವು; ಅಲ್ಲಿ ನಮಗೆ ಯಾರೂ ಕಾಣಿಸಲಿಲ್ಲ,
ಮನುಷ್ಯಶಬ್ದವೇ ಕೇಳಿಸಲಿಲ್ಲ. ಕತ್ತೆಕುದುರೆಗಳು
ಅಲ್ಲಲ್ಲಿ ಕಟ್ಟಲ್ಪಟ್ಟಿರುತ್ತವೆ, ಡೇರೆಗಳು ಇದ್ದ ಹಾಗೆ
ಯೇ ಇರುತ್ತವೆ ಎಂದು ಕೂಗಿ ತಿಳಿಸಿದರು. ಬಾಗಲು 11
ಕಾಯುವವರು ಕೂಡಲೆ ಅರಮನೆಯವರನ್ನು ಕೂಗಿ
ಅವರಿಗೆ ಈ ವರ್ತಮಾನವನ್ನು ಮುಟ್ಟಿಸಿದರು. ಅರ 12
ಸನು ರಾತ್ರಿಯಲ್ಲೇ ಎದ್ದು ತನ್ನ ಪರಿವಾರದವರಿಗೆ—
ಅರಾಮ್ಯರ ಹಂಚಿಕೆಯನ್ನು ಹೇಳುತ್ತೇನೆ ಕೇಳಿರಿ;
ನಾವು ಹಸಿವೆಯಿಂದ ಸಾಯುವವರಾಗಿದ್ದೇವೆಂಬದನ್ನು
ಅವರು ಬಲ್ಲರು. ಆದದರಿಂದ ಪಾಳೆಯವನ್ನು ಬಿಟ್ಟು
ಹೋಗಿ ಅಡವಿಯಲ್ಲಿ ಅಡಗಿಕೊಂಡಿದ್ದಾರೆ; ನಾವು
ಪಟ್ಟಣದಿಂದ ಹೊರಗೆ ಹೋದ ಕೂಡಲೆ ನಮ್ಮನ್ನು
ಸಜೀವಿಗಳನ್ನಾಗಿಯೇ ಹಿಡಿದು ಪಟ್ಟಣವನ್ನು ಪ್ರವೇಶಿ
ಸಬೇಕೆಂದಿದ್ದಾರೆ ಅಂದನು. ಆಗ ಅವರಲ್ಲೊಬ್ಬನು 13
ಅರಸನಿಗೆ—ರಾಹುತರು ಪಟ್ಟಣದಲ್ಲುಳಿದಿರುವ ಕುದು
ರೆಗಳಲ್ಲಿ ನಾಲ್ಕೈದು ಕುದುರೆಗಳನ್ನು ತೆಗೆದುಕೊಂಡು
ನೋಡುವದಕ್ಕೆ ಹೋಗಲಿ; ಅವರಿಗೆ ಪಟ್ಟಣದಲ್ಲುಳಿದಿ
ರುವ ಇಸ್ರಾಯೇಲ್ಯರ ಗತಿಯಾಗಲಿ ಸತ್ತುಹೋದವರ
ಗತಿಯಾಗಲಿ ಸಂಭವಿಸುವದಷ್ಟೆ ಎಂದು ಹೇಳಿದನು.
ಕೂಡಲೆ ಅರಸನು ಎರಡು ಜೋಡಿ ಕುದುರೆಗಳನ್ನು 14
ತರಿಸಿ ಅರಾಮ್ಯರ ಸೈನ್ಯವೆಲ್ಲಿರುತ್ತದೆಂಬದನ್ನು ನೋಡಿ
ಬರುವದಕ್ಕಾಗಿ ರಾಹುತರನ್ನು ಕಳುಹಿಸಿದನು. ಅವರು 15
ಯೊರ್ದನ್‍ಹೊಳೆಯ ವರೆಗೂ ಹೋಗಿ ಅವಸರ
ದಿಂದ ಓಡಿಹೋದ ಅರಾಮ್ಯರು ದಾರಿಯಲ್ಲೆಲ್ಲಾ
ತಮ್ಮ ಬಟ್ಟೆಗಳನ್ನೂ ಸಾಮಾನುಗಳನ್ನೂ ಬಿಸಾಡಿ
ದ್ದನ್ನು ಕಂಡು ಹಿಂದಿರುಗಿ ಬಂದು ಅರಸನಿಗೆ
ತಿಳಿಸಿದರು. ಆಗ ಜನರು ಹೊರಗೆ ಹೋಗಿ 16
ಅರಾಮ್ಯರ ಪಾಳೆಯವನ್ನು ಸೂರೆಮಾಡಿಬಿಟ್ಟರು.
ಯೆಹೋವನ ಮಾತಿನಂತೆ ಗೋದಿಹಿಟ್ಟು ರೂಪಾ
ಯಿಗೆ ಹನ್ನೆರಡು ಸೇರಿನಂತೆಯೂ ಜವೆಗೋದಿಯು
ಇಪ್ಪತ್ತನಾಲ್ಕು ಸೇರಿನಂತೆಯೂ ಮಾರಲ್ಪಟ್ಟವು. ಅರ 17
ಸನು ತನ್ನ ಹಸ್ತಕನಾದ ಸರದಾರನನ್ನು ಊರು
ಬಾಗಲುಕಾಯುವದಕ್ಕಾಗಿ ಕಳುಹಿಸಿದಲ್ಲಿ ಅವನು
ಜನರಿಂದ ತುಳಿಯಲ್ಪಟ್ಟು ಸತ್ತನು. ಹೀಗೆ ದೇವರ
ಮನುಷ್ಯನು ಅರಸನ ಜೊತೆಯಲ್ಲಿ ತನ್ನ ಬಳಿಗೆ ಬಂದಿ
ದ್ದ ಆ ಸರದಾರನಿಗೆ ಹೇಳಿದ ಮಾತು ನೆರವೇರಿತು.
ಅವನು ಅರಸನಿಗೆ—ನಾಳೆ ಇಷ್ಟು ಹೊತ್ತಿಗೆ ಸಮಾ 18
ರ್ಯಪಟ್ಟಣದ ಬಾಗಲಿನಲ್ಲಿ ಜವೆಗೋದಿಯು ರೂಪಾ
ಯಿಗೆ ಇಪ್ಪತ್ತನಾಲ್ಕು ಸೇರಿನಂತೆಯೂ ಗೋದಿಹಿಟ್ಟು
ಹನ್ನೆರಡು ಸೇರಿನಂತೆಯೂ ಮಾರಲ್ಪಡುವವು ಎಂದು

19 ಹೇಳಿದಾಗ ಆ ಸರದಾರನು—ಯೆಹೋವನು ಆಕಾಶ
ದಲ್ಲಿ ದ್ವಾರಗಳನ್ನು ಮಾಡಿದರೂ ಇದು ಸಂಭವಿಸ
ಲಾರದು ಅಂದದರಿಂದ ದೇವರ ಮನುಷ್ಯನು ಅವ
ನಿಗೆ—ನೀನು ಅದನ್ನು ಕಣ್ಣಾರೆ ಕಾಣುವಿ; ಆದರೆ
20 ಅನುಭವಿಸುವದಿಲ್ಲ ಎಂದು ನುಡಿದಿದ್ದನು. ಅವನು
ಊರುಬಾಗಲಿನಲ್ಲಿ ಜನರಿಂದ ತುಳಿಯಲ್ಪಟ್ಟು ಸತ್ತದ
ರಿಂದ ಈ ಮಾತು ನೆರವೇರಿತು.

ಶೂನೇಮ್ಯಳಾದ ಸ್ತ್ರೀಯು, ಪರಾಧೀನವಾಗಿದ್ದ ಸ್ವಾಸ್ತ್ಯವನ್ನು
ತಿರಿಗಿ ಪಡಕೊಂಡದ್ದು.

8 ಎಲೀಷನು ತಾನು ಬದುಕಿಸಿದ ಹುಡುಗನ ತಾಯಿ
ಗೆ—ಯೆಹೋವನು ಈ ದೇಶಕ್ಕೆ ಏಳು ವರುಷಗಳ
ಬರವನ್ನು ಕಳುಹಿಸುವದಕ್ಕಿರುತ್ತಾನೆ. ಆದದರಿಂದ
ನೀನು ನಿನ್ನ ಮನೆಯವರೊಡನೆ ಯಾವದಾದರೊಂದು
ಪರದೇಶಕ್ಕೆ ಹೋಗಿ ಅಲ್ಲಿ ವಾಸಿಸು ಎಂದು ಹೇಳಿ
2 ದನು. ಆಕೆಯು ದೇವರ ಮನುಷ್ಯನ ಅಪ್ಪಣೆಯಂತೆ
ತನ್ನ ಮನೆಯವರೊಡನೆ ಸ್ವದೇಶವನ್ನು ಬಿಟ್ಟುಹೋಗಿ
ಫಿಲಿಷ್ಟಿಯರ ದೇಶದಲ್ಲಿ ಏಳು ವರುಷ ವಾಸವಾಗಿ
3 ದ್ದಳು. ಏಳು ವರುಷಗಳಾದನಂತರ ಆಕೆಯು ಅಲ್ಲಿಂದ
ಸ್ವದೇಶಕ್ಕೆ ಬಂದು ಪರಾಧೀನವಾಗಿದ್ದ ತನ್ನ ಹೊಲ
ಮನೆಗಳಿಗಾಗಿ ಮೊರೆಯಿಡುವದಕ್ಕೋಸ್ಕರ ಅರಸನ ಬ
4 ಳಿಗೆ ಹೋದಳು. ಆ ಸಮಯದಲ್ಲಿ ಅರಸನು ದೇವರ
ಮನುಷ್ಯನ ಸೇವಕನಾದ ಗೇಹಜಿಗೆ—ಎಲೀಷನು ಮಾ
ಡಿದ ಎಲ್ಲಾ ಮಹತ್ಕಾರ್ಯಗಳನ್ನು ನನಗೆ ವಿವರಿಸು
5 ಎಂದು ಆಜ್ಞಾಪಿಸಿದ್ದನು. ಎಲೀಷನು ಸತ್ತ ಹುಡುಗ
ನಿಗೆ ಜೀವದಾನಮಾಡಿದ ಸಂಗತಿಯನ್ನು ಗೇಹಜಿಯು
ವಿವರಿಸುತ್ತಿರುವಾಗಲೇ ಜೀವದಾನಹೊಂದಿದ ಹುಡು
ಗನ ತಾಯಿಯು ತನ್ನ ಹೊಲಮನೆಗಳಿಗಾಗಿ ಮೊರೆ
ಯಿಡುವದಕ್ಕೋಸ್ಕರ ಅರಸನ ಬಳಿಗೆ ಬಂದಳು. ಕೂ
ಡಲೆ ಗೇಹಜಿಯು—ಅರಸನೇ, ನನ್ನ ಒಡೆಯನೇ, ಎಲೀ
ಷನು ಬದುಕಿಸಿದ ಹುಡುಗನು ಇವನೇ; ಈಕೆಯು
6 ಇವನ ತಾಯಿ ಎಂದು ಹೇಳಿದನು. ಅರಸನು ಈ ಸಂಗ
ತಿಯ ವಿಷಯವಾಗಿ ಆ ಸ್ತ್ರೀಯನ್ನು ವಿಚಾರಿಸಲು
ಆಕೆಯು ಅದರಂತೆಯೇ ಹೇಳಿದಳು. ಆಗ ಅರಸನು
ಒಬ್ಬ ಕಂಚುಕಿಯನ್ನು ಕರೆದು ಅವನಿಗೆ—ಹೋಗಿ
ಈಕೆಯ ಹೊಲಮನೆಗಳನ್ನೂ ಈಕೆಯು ದೇಶವನ್ನು
ಬಿಟ್ಟಂದಿನಿಂದ ಇಂದಿನ ವರೆಗೂ ಈಕೆಗೆ ಸಲ್ಲತಕ್ಕ
ಹೊಲದ ಆದಾಯವನ್ನೂ ಕೊಡಿಸು ಎಂದು ಆಜ್ಞಾ
ಪಿಸಿ ಅವನನ್ನು ಆಕೆಯ ಜೊತೆಯಲ್ಲಿ ಕಳುಹಿಸಿ
ದನು.

ಎಲೀಷನೂ ಹಜಾಯೇಲನೂ.

7 ಒಂದಾನೊಂದು ಸಮಯದಲ್ಲಿ ಎಲೀಷನು ದಮ
ಸ್ಕಕ್ಕೆ ಹೋದನು. ಆಗ ಅರಾಮ್ಯರ ಅರಸನಾದ
ಬೆನ್ಹದದನು ಅಸ್ವಸ್ಥನಾಗಿದ್ದನು. ದೇವರ ಮನು
ಷ್ಯನು ಬಂದಿದ್ದಾನೆಂಬ ವರ್ತಮಾನವನ್ನು ಕೇಳಿ ಅ
ನು ಹಜಾಯೇಲನನ್ನು ಕರೆದು ಅವನಿಗೆ—ನೀನ
ಕಾಣಿಕೆಯನ್ನು ತೆಗೆದುಕೊಂಡು ದೇವರ ಮನುಷ್ಯ
ಬಳಿಗೆ ಹೋಗಿ ನನಗೆ ವಾಸಿಯಾಗುವದೋ ಇಲ್ಲವೋ
ಎಂಬದನ್ನು ಅವನ ಮುಖಾಂತರವಾಗಿ ಯೆಹೋವ
ಸನ್ನಿಧಿಯಲ್ಲಿ ವಿಚಾರಿಸು ಎಂದು ಆಜ್ಞಾಪಿಸಿದನು
ಹಜಾಯೇಲನು ದಮಸ್ಕದ ಶ್ರೇಷ್ಠವಸ್ತುಗಳಲ್ಲಿ ನಾಲ
ತ್ತು ಒಂಟೆಗಳು ಹೊರುವಷ್ಟನ್ನು ತೆಗೆದುಕೊಂಡು ಎಲ
ಷನ ಬಳಿಗೆ ಹೋಗಿ ಅವನ ಮುಂದೆ ನಿಂತು—ನಿನ್ನ
ಮಗನೂ ಅರಾಮ್ಯರ ಅರಸನೂ ಆದ ಬೆನ್ಹದದನ
ತನಗೆ ಸ್ವಸ್ಥವಾಗುವದೋ ಇಲ್ಲವೋ ಎಂಬದನ್ನ
ವಿಚಾರಿಸುವದಕ್ಕಾಗಿ ನನ್ನನ್ನು ನಿನ್ನ ಹತ್ತಿರ ಕಳುಹಿ
ದ್ದಾನೆ ಎಂದು ಹೇಳಿದನು. ಆಗ ದೇವರ ಮನುಷ
ನಾದ ಎಲೀಷನು ಅವನಿಗೆ—[1]ಹೇಗೂ ನಿನಗೆ ವಾ
ಯಾಗುವದು ಎಂಬದಾಗಿ ಬೆನ್ಹದದನಿಗೆ ಹೇಳು
ಆದರೂ ಅವನು ಸತ್ತೇ ಹೋಗುವನೆಂದು ಯೆಹೋ
ವನು ನನಗೆ ತಿಳಿಸಿದ್ದಾನೆ ಎಂದು ಹೇಳಿ ಅವನು ನಾ
ಕೊಳ್ಳುವ ತನಕ ಸ್ಥಿರದೃಷ್ಟಿಯಿಂದ ಅವನನ್ನ
ನೋಡಿ ಅಳತೊಡಗಿದನು. ಹಜಾಯೇಲನು ಅ
ನನ್ನು—ನನ್ನ ಒಡೆಯಾ, ಯಾಕೆ ಅಳುತ್ತೀ ಎಂದ
ಕೇಳಿದನು. ಅದಕ್ಕೆ ಅವನು—ನೀನು ಇಸ್ರಾಯೆ
ಲ್ಯರಿಗೆ ಎಷ್ಟು ಕೇಡು ಮಾಡುವಿಯೆಂಬದು ನನ
ಪ್ರಕಟವಾಯಿತು. ನೀನು ಅವರ ಕೋಟೆಗಳಿಗೆ ಬೆಂ
ಹೊತ್ತಿಸುವಿ; ಯೌವನಸ್ಥರನ್ನು ಕತ್ತಿಯಿಂದ ಸಂಹ
ಸುವಿ; ಮಕ್ಕಳನ್ನು ಬಂಡೆಗೆ ಅಪ್ಪಳಿಸುವಿ; ಗರ್ಭಿಣಿ
ಯರ ಹೊಟ್ಟೆಯನ್ನು ಸೀಳುವಿ ಎಂದು ಉತ್ತರಕೊಟ್ಟ
ನು. ಹಜಾಯೇಲನು ಎಲೀಷನನ್ನು—ನಿನ್ನ ಸೇ
ಕನಾದ ನಾನು ನಾಯಿಯಂತಿರುತ್ತೇನಷ್ಟೆ; ನನ್ನಿಂದ
ಇಂಥ ಮಹಾಕಾರ್ಯವಾಗುವದು ಹೇಗೆ ಎಂದು ಕೇ
ಲು ಅವನು—ನೀನು ಅರಾಮ್ಯರ ಅರಸನಾಗು
ಯೆಂದು ಯೆಹೋವನು ನನಗೆ ತಿಳಿಸಿದ್ದಾನೆ ಅಂದನು
ಹಜಾಯೇಲನು ಎಲೀಷನನ್ನು ಬಿಟ್ಟು, ತನ್ನ ಯಜಮ
ನನ ಬಳಿಗೆ ಹೋದಾಗ ಅವನು ಇವನನ್ನು—ಎಲಿ
ಷನು ಏನು ಹೇಳಿದನು ಎಂದು ಕೇಳಿದನು. ಅದಕ್ಕೆ
ಇವನು—ನಿನಗೆ ಹೇಗೂ ಸ್ವಸ್ಥವಾಗುವದೆಂದು ಹೇ
ದನು ಎಂಬದಾಗಿ ಉತ್ತರಕೊಟ್ಟನು. ಮರುದಿನ ಬೆ
ಗ್ಗೆ ಇವನು ಕವುದಿಯನ್ನು ತೆಗೆದುಕೊಂಡು ನೀ
ನಲ್ಲಿ ತೋಯಿಸಿ ಅರಸನ ಮುಖದ ಮೇಲೆ ಹಾಕಿದದ
ರಿಂದ ಅವನು ಸತ್ತನು. ಹಜಾಯೇಲನು ಅವನಿ
ಬದಲಾಗಿ ಅರಸನಾದನು.

ಯೆಹೂದ್ಯರ ಅರಸನಾದ ಯೆಹೋರಾಮ್
ಅಹಜ್ಯ ಎಂಬವರು.

ಅಹಾಬನ ಮಗನೂ ಇಸ್ರಾಯೇಲ್ಯರ ಅರಸನೂ
ಆದ ಯೋರಾಮನ ಆಳಿಕೆಯ ಐದನೆಯ ವರುಷದಲ್ಲಿ
ಯೆಹೂದರಾಜನಾದ ಯೆಹೋಷಾಫಾಟನ ಮಗ ಯೆ

1) ಪಾಠಾಂತರ: ನಿನಗೆ ವಾಸಿಯಾಗುವದೇ ಇಲ್ಲ . . . ಏಕೆಂದರೆ

ಹೋರಾಮನು ಆಳತೊಡಗಿದನು. ಇವನು ಪಟ್ಟಕ್ಕೆ ಬಂದಾಗ ಮೂವತ್ತೆರಡು ವರುಷದವನಾಗಿದ್ದು ಯೆರೂಸಲೇಮಿನಲ್ಲಿ ಎಂಟು ವರುಷ ಆಳಿದನು. ಇವನು ಅಹಾಬನ ಮಗಳನ್ನು ಮದುವೆಮಾಡಿಕೊಂಡದರಿಂದ ಅಹಾಬನ ಕುಟುಂಬದವರಾದ ಇಸ್ರಾಯೇಲ್‌ರಾಜರ ಮಾರ್ಗವನ್ನು ಅನುಸರಿಸಿ ಯೆಹೋವನ ದೃಷ್ಟಿಯಲ್ಲಿ ದ್ರೋಹಿಯಾದನು. ಆದರೂ ಯೆಹೋವನು ಯೆಹೂದರಾಜ್ಯವನ್ನು ನಾಶಮಾಡಲಿಲ್ಲ. ನಿನ್ನ ಮತ್ತು ನಿನ್ನ ಸಂತಾನದವರ ದೀಪವನ್ನು ಎಂದೂ ನಂದಿಸುವದಿಲ್ಲ ಎಂಬದಾಗಿ ತನ್ನ ಸೇವಕನಾದ ದಾವೀದನಿಗೆ ಮಾಡಿದ ಪ್ರಮಾಣವನ್ನು ನೆನಸಿ ಅದನ್ನು ಉಳಿಸಿದನು. ಇವನ ಕಾಲದಲ್ಲಿ ಎದೋಮ್ಯರು ಯೆಹೂದ್ಯರಿಗೆ ವಿರೋಧವಾಗಿ ತಿರುಗಿಬಿದ್ದು ಸ್ವತಂತ್ರರಾಗಿ ತಮಗೆ ಒಬ್ಬ ಅರಸನನ್ನು ನೇಮಿಸಿಕೊಂಡರು. ಆಗ ಯೆಹೋರಾಮನು ತನ್ನ ಎಲ್ಲಾ ರಥಬಲಸಹಿತವಾಗಿ ಯೊರ್ದನ್‌ಹೊಳೆಯನ್ನು ದಾಟಿ ಚಾಯೀರಿಗೆ ಹೋದನು. ಎದೋಮ್ಯರು ಬಂದು ಅವನನ್ನು ಸುತ್ತಿಕೊಳ್ಳಲು ಅವನು ರಾತ್ರಿಯಲ್ಲೆದ್ದು ಅವರನ್ನೂ ಅವರ ರಥಬಲದ ಅಧಿಪತಿಗಳನ್ನೂ ಸೋಲಿಸಿ ಪಾರಾದನು. ಅವನ ಸೈನ್ಯದವರೂ ತಮ್ಮ ತಮ್ಮ ನಿವಾಸಗಳಿಗೆ ಓಡಿಹೋದರು. ಹೀಗೆ ಎದೋಮ್ಯರು ಯೆಹೂದ್ಯರಿಗೆ ವಿರೋಧವಾಗಿ ತಿರುಗಿಬಿದ್ದರು. ಅವರು ಅಂದಿನಿಂದ ಇಂದಿನ ವರೆಗೂ ಸ್ವತಂತ್ರರಾಗಿರುತ್ತಾರೆ. ಅದೇ ಕಾಲದಲ್ಲಿ ಲಿಬ್ನದವರೂ ಸ್ವತಂತ್ರರಾದರು. ಯೆಹೋರಾಮನ ಉಳಿದ ಚರಿತ್ರೆಯೂ ಅವನ ಕೃತ್ಯಗಳೂ ಯೆಹೂದರಾಜಕಾಲವೃತ್ತಾಂತ ಎಂಬ ಗ್ರಂಥದಲ್ಲಿ ಬರೆದಿರುತ್ತವೆ. ಅವನು ಪಿತೃಗಳ ಬಳಿಗೆ ಸೇರಲು ಅವನ ಶವವನ್ನು ದಾವೀದನಗರದೊಳಗೆ ಕುಟುಂಬಶ್ಮಶಾನಭೂಮಿಯಲ್ಲಿ ಸಮಾಧಿಮಾಡಿದರು. ಅವನಿಗೆ ಬದಲಾಗಿ ಅವನ ಮಗನಾದ ಅಹಜ್ಯನು ಅರಸನಾದನು.

ಅಹಾಬನ ಮಗನೂ ಇಸ್ರಾಯೇಲ್ಯರ ಅರಸನೂ ಆದ ಯೋರಾಮನ ಆಳಿಕೆಯ ಹನ್ನೆರಡನೆಯ ವರುಷದಲ್ಲಿ ಯೆಹೂದದ ಅರಸನಾದ ಯೆಹೋರಾಮನ ಮಗ ಅಹಜ್ಯನು ಅರಸನಾದನು. ಇವನು ಪಟ್ಟಕ್ಕೆ ಬಂದಾಗ ಇಪ್ಪತ್ತೆರಡು ವರುಷದವನಾಗಿದ್ದು ಯೆರೂಸಲೇಮಿನಲ್ಲಿ ಒಂದು ವರುಷ ಆಳಿದನು. ಇಸ್ರಾಯೇಲ್ಯರ ಅರಸನಾದ ಒಮ್ರಿಯ ಮೊಮ್ಮಗಳಾದ ಅತಲ್ಯ ಎಂಬಾಕೆಯು ಇವನ ತಾಯಿ. ಇವನಿಗೂ ಅಹಾಬನ ಕುಟುಂಬದವರಿಗೂ ಬೀಗತನವಿದ್ದದರಿಂದ ಇವನು ಅವರ ಮಾರ್ಗದಲ್ಲೇ ನಡೆದು ಯೆಹೋವನ ದೃಷ್ಟಿಯಲ್ಲಿ ದ್ರೋಹಿಯಾದನು. ಇದಲ್ಲದೆ ಇವನು ಅರಾಮ್ಯರ ಅರಸನಾದ ಹಜಾಯೇಲನೊಡನೆ ಯುದ್ಧಮಾಡುವದಕ್ಕಾಗಿ ಅಹಾಬನ ಮಗನಾದ ಯೋರಾಮನ ಜೊತೆಯಲ್ಲಿ ರಾಮೋತ್‌ಗಿಲ್ಯಾದಿಗೆ ಹೋದನು. ಅರಾಮ್ಯರು ಯೋರಾಮನನ್ನು ಗಾಯಪಡಿಸಲು ಅವನು ಯುದ್ಧದಲ್ಲಾದ ಗಾಯಗಳನ್ನು ಮಾಯಿಸಿಕೊಳ್ಳುವದಕ್ಕಾಗಿ ಇಜ್ರೇಲಿಗೆ ಬಂದನು. ಅವನು ಅಸ್ವಸ್ಥನಾಗಿದ್ದದರಿಂದ ಯೆಹೂದ್ಯರ ಅರಸನಾದ ಯೆಹೋರಾಮನ ಮಗ ಅಹಜ್ಯನು ಅವನನ್ನು ನೋಡುವದಕ್ಕೋಸ್ಕರ ಅಲ್ಲಿಗೆ ಹೋದನು.

### ಯೇಹುವಿನ ಆಳಿಕೆ ಮೊದಲುಗೊಂಡು ಇಸ್ರಾಯೇಲರಾಜ್ಯನಾಶನದ ವರೆಗಿದ್ದ ಕಾಲದ ಚರಿತ್ರೆಯು. 9—17.

ಯೇಹುವು ದಂಗೆ ಎಬ್ಬಿಸಿ ಯೋರಾಮ್ ಅಹಜ್ಯ ಈಜೆಬೆಲ್ ಇವರನ್ನು ಕೊಲ್ಲಿಸಿದ್ದು.

ಪ್ರವಾದಿಯಾದ ಎಲೀಷನು ಪ್ರವಾದಿಮಂಡಲಿಯವ 9
ರಲ್ಲಿ ಒಬ್ಬನನ್ನು ಕರೆದು ಅವನಿಗೆ—ನಡುಕಟ್ಟಿ ಈ
ಎಣ್ಣೆಯ ಕುಪ್ಪಿಯನ್ನು ತೆಗೆದುಕೊಂಡು ರಾಮೋತ್
ಗಿಲ್ಯಾದಿಗೆ ಹೋಗು. ಊರನ್ನು ಮುಟ್ಟಿದನಂತರ 2
ನಿಂಷಿಯ ಮೊಮ್ಮಗನೂ ಯೆಹೋಷಾಫಾಟನ ಮಗ
ನೂ ಆದ ಯೇಹುವು ಎಲ್ಲಿರುತ್ತಾನೆಂದು ವಿಚಾರಿಸಿ
ಅವನು ಸಿಕ್ಕಿದಾಗ ಅವನನ್ನು ಅವನ ಜೊತೆಗಾರರ
ಗುಂಪಿನಿಂದ ಒಳಗಿನ ಕೋಣೆಗೆ ಕರಕೊಂಡು ಹೋ
ಗು. ತರುವಾಯ ಕುಪ್ಪಿಯಲ್ಲಿರುವ ಎಣ್ಣೆಯನ್ನು 3
ಅವನ ತಲೆಯ ಮೇಲೆ ಹೊಯ್ದು—ನಾನು ನಿನ್ನನ್ನು
ಇಸ್ರಾಯೇಲ್ಯರ ಅರಸನಾಗುವದಕ್ಕೆ ಅಭಿಷೇಕಿಸಿದ್ದೇ
ನೆಂದು ಯೆಹೋವನು ಅನ್ನುತ್ತಾನೆ ಎಂಬದಾಗಿ ಹೇಳಿ
ಕೂಡಲೆ ಕದತೆರೆದು ಓಡಿಹೋಗು ಎಂದು ಆಜ್ಞಾ
ಪಿಸಿದನು. ಆಗ ಪ್ರವಾದಿಯ ಸೇವಕನಾದ ಆ 4
ಯೌವನಸ್ಥನು ರಾಮೋತ್‌ಗಿಲ್ಯಾದಿಗೆ ಹೋಗಿ
ಸೈನ್ಯಾಧಿಪತಿಗಳೆಲ್ಲಾ ಒಂದು ಕಡೆಯಲ್ಲಿ ಕೂಡಿರುವ 5
ದನ್ನು ಕಂಡು ಅವರನ್ನು ಸಮೀಪಿಸಿ—ಸೇನಾಪತಿಯೇ,
ನಿನಗೊಂದು ಮಾತು ಹೇಳುವದದೆ ಅಂದನು. ಯೇ
ಹುವು ಅವನನ್ನು—ನಮ್ಮಲ್ಲಿ ಯಾರಿಗೆ ಎಂದು ಕೇಳ
ಲು ಅವನು—ಸೇನಾಪತಿಯಾದ ನಿನಗೇ ಎಂದು ಉತ್ತ
ರಕೊಟ್ಟನು. ಯೇಹುವು ಎದ್ದು ಒಳಗಿನ ಕೋಣೆಗೆ 6
ಹೋಗಲು ಆ ಯೌವನಸ್ಥನು ಇವನ ತಲೆಯ ಮೇಲೆ
ಎಣ್ಣೆಯನ್ನು ಹೊಯ್ದು—ಇಸ್ರಾಯೇಲ್‌ದೇವರಾದ
ಯೆಹೋವನ ಮಾತನ್ನು ಕೇಳು; ಆತನು ನಿನಗೆ—
ನಾನು ನಿನ್ನನ್ನು ನನ್ನ ಪ್ರಜೆಯಾದ ಇಸ್ರಾಯೇಲ್ಯರ
ಅರಸನಾಗುವದಕ್ಕೆ ಅಭಿಷೇಕಿಸಿದ್ದೇನೆ. ನೀನು ನಿನ್ನ 7
ಯಜಮಾನನಾದ ಅಹಾಬನ ಮನೆಯವರನ್ನು ಸಂಹರಿ
ಸಿಬಿಡು; ಆಗ ನನ್ನ ಸೇವಕರಾದ ಪ್ರವಾದಿಗಳೇ ಮೊದ
ಲಾದ ಯೆಹೋವಭಕ್ತರ ರಕ್ತವನ್ನು ಸುರಿಸಿದ್ದಕ್ಕಾಗಿ
ನಾನು ಈಜೆಬೆಲಳಿಗೆ ಮುಯ್ಯಿತೀರಿಸಿದಂತಾಗುವದು.
ಅಹಾಬನ ಕುಟುಂಬದವರೆಲ್ಲಾ ನಿರ್ನಾಮವಾಗ 8
ಬೇಕು. ಅವನ ಸಂತಾನದ ಗಂಡಸರಲ್ಲಿ ಸ್ವತಂತ್ರ
ರಾಗಿರಲಿ ಪರತಂತ್ರರಾಗಿರಲಿ ಎಲ್ಲರನ್ನೂ ಇಸ್ರಾಯೇ
ಲ್ಯರೊಳಗಿಂದ ತೆಗೆದುಹಾಕುವೆನು. ನೆಬಾಟನ ಮಗ 9
ನಾದ ಯಾರೊಬ್ಬಾಮನ ಮನೆಗೂ ಅಹೀಯನ ಮಗ
ನಾದ ಬಾಷನ ಮನೆಗೂ ಆದ ಗತಿಯು ಅಹಾಬನ
ಮನೆಗೂ ಆಗುವದು. ಈಜೆಬೆಲಳ ಶವವು ಸಮಾ 10
ಧಿಯನ್ನು ಸೇರುವದಿಲ್ಲ; ನಾಯಿಗಳು ಅದನ್ನು ಇಜ್ರೇ
ಲಿನ ಹೊಲದಲ್ಲಿ ತಿಂದುಬಿಡುವವು ಅನ್ನುತ್ತಾನೆ ಎಂದು
ಹೇಳಿ ಕದತೆರೆದು ಓಡಿಹೋದನು. ಯೇಹುವು ತಿರಿಗಿ 11
ತನ್ನ ಒಡೆಯನ ಸೇವಕರ ಹತ್ತಿರ ಬರಲು ಅವರು ಅವ
ನನ್ನು—ಶುಭವಾರ್ತೆಯೋ? ಆ ಹುಚ್ಚನು ನಿನ್ನ ಬಳಿಗೆ
ಬಂದದ್ದೇಕೆ ಎಂದು ಕೇಳಿದರು. ಅದಕ್ಕೆ ಅವನು—
ಆ ಮನುಷ್ಯನು ಎಂಥವನು, ಅವನ ಮಾತು ಎಂಥದು

ಎಂಬದು ನಿಮಗೆ ಗೊತ್ತುಂಟಲ್ಲಾ ಎಂದು ಉತ್ತರ
12 ಕೊಟ್ಟನು. ಆದರೆ ಅವರು—ಅದು ಸುಳ್ಳು; ಅವನು
ಹೇಳಿದ್ದನ್ನು ತಿಳಿಸು ಎಂದು ಅವನನ್ನು ಒತ್ತಾಯಪಡಿ
ಸಿದದರಿಂದ ಅವನು—ನಿನ್ನನ್ನು ಇಸ್ರಾಯೇಲ್ಯರ ಅರಸ
ನಾಗುವದಕ್ಕೆ ಅಭಿಷೇಕಿಸಿದ್ದೇನೆಂಬದಾಗಿ ಯೆಹೋ
ವನು ಅನ್ನುತ್ತಾನೆ ಎಂಬೀ ಮೊದಲಾದ ಮಾತುಗಳನ್ನು
13 ಹೇಳಿದನು ಎಂದು ಉತ್ತರಕೊಟ್ಟನು. ಕೂಡಲೆ
ಅವರು ಅವನಿಗೋಸ್ಕರ ಮೆಟ್ಲುಗಳ ಮೇಲೆ ತಮ್ಮ
ಬಟ್ಟೆಗಳನ್ನು ಹಾಸಿ ತುತೂರಿಯನ್ನು ಊದಿಸಿ ಯೇ
14 ಹುವು ಅರಸನಾಗಿದ್ದಾನೆಂದು ಆರ್ಭಟಿಸಿದರು. ಹೀಗೆ
ನಿಂಷಿಯ ಮೊಮ್ಮಗನೂ ಯೆಹೋಷಾಫಾಟನ ಮಗ
ನೂ ಆದ ಯೇಹುವು ಯೋರಾಮನಿಗೆ ವಿರೋಧವಾಗಿ
ಒಳಸಂಚುಮಾಡಿದನು. (ಅರಾಮ್ಯರ ಅರಸನಾದ ಹಜಾ
ಯೇಲನು ರಾಮೋತ್‌ಗಿಲ್ಯಾದಿಗೆ ವಿರೋಧವಾಗಿ ಬರ
ಲು ಯೋರಾಮನು ಅದನ್ನು ಕಾಪಾಡುವದಕ್ಕೋಸ್ಕರ
ಎಲ್ಲಾ ಇಸ್ರಾಯೇಲ್ಯರ ಸಹಿತವಾಗಿ ಹೋಗಿ ಹಜಾ
15 ಯೇಲನೊಡನೆ ಯುದ್ಧಮಾಡುತ್ತಿರುವಾಗ ಗಾಯ
ಹೊಂದಿದದರಿಂದ ಅದನ್ನು ವಾಸಿಮಾಡಿಕೊಳ್ಳುವದಕ್ಕಾಗಿ
ಹಿಂದಿರುಗಿ ಇಜ್ರೇಲಿಗೆ ಬಂದಿದ್ದನು.)

ಯೇಹುವು ತನ್ನ ಜೊತೆಗಾರರಿಗೆ—ನೀವು ನನ್ನವ
ರಾಗಿದ್ದರೆ ಈ ಸುದ್ದಿಯು ಇಜ್ರೇಲನ್ನು ಮುಟ್ಟದಂತೆ
ಒಬ್ಬನನ್ನೂ ಈ ಪಟ್ಟಣದಿಂದ ಹೊರಗೆ ಬಿಡಬೇಡಿರಿ
16 ಎಂದು ಹೇಳಿದನು. ಅನಂತರ ಅವನು ರಥದಲ್ಲಿ
ಕೂತು ಇಜ್ರೇಲಿಗೆ ಹೋಗುವದಕ್ಕಾಗಿ ಹೊರಟನು.
ಅಲ್ಲಿ ಅಸ್ವಸ್ಥನಾದ ಯೋರಾಮನೂ ಅವನನ್ನು ನೋ
ಡುವದಕ್ಕೆ ಬಂದಿದ್ದ ಯೆಹೂದ್ಯರ ಅರಸನಾದ ಅಹಜ್ಯ
17 ನೂ ಇದ್ದರು. ಇಜ್ರೇಲಿನ ಬುರುಜಿನಲ್ಲಿದ್ದ ಕಾವಲು
ಗಾರನು ಯೇಹುವಿನ ಗುಂಪಿನವರನ್ನು ಕಂಡು—ಜನರ
ಒಂದು ಗುಂಪು ಕಾಣಿಸುತ್ತದೆ ಎಂದು ಯೋರಾಮನಿಗೆ
ತಿಳಿಸಿದನು. ಯೋರಾಮನು ಅವನಿಗೆ—ನೀನು ಒಬ್ಬ
ರಾಹುತನನ್ನು ಕರೆದು ಬರುತ್ತಿರುವವರು ಶುಭವಾರ್ತೆ
ಯನ್ನು ತರುತ್ತಾರೋ ಎಂದು ಕೇಳುವದಕ್ಕಾಗಿ ಕಳು
18 ಹಿಸು ಎಂಬದಾಗಿ ಆಜ್ಞಾಪಿಸಿದನು. ರಾಹುತನು
ಯೇಹುವನ್ನು ಎದುರುಗೊಂಡು—ಅರಸನು ಶುಭ
ವಾರ್ತೆಯುಂಟೋ ಎಂದು ಕೇಳುತ್ತಾನೆ ಅನ್ನಲು
ಅವನು—ಶುಭವಾರ್ತೆ ನಿನಗೇನು? ನನ್ನ ಹಿಂದೆ ಬಾ
ಎಂದು ಹೇಳಿದನು. ಕಾವಲುಗಾರನು ಅರಸನಿಗೆ—
ರಾಹುತನು ಆ ಗುಂಪನ್ನು ಮುಟ್ಟಿದನು; ಆದರೆ ತಿರಿಗಿ
ಬರುವದು ಕಾಣಿಸುವದಿಲ್ಲ ಎಂದು ತಿಳಿಸಿದಾಗ ಅರ
19 ಸನು ಇನ್ನೊಬ್ಬ ರಾಹುತನನ್ನು ಕಳುಹಿಸಿದನು. ಇವ
ನು ಹೋಗಿ ಯೇಹುವನ್ನು ಎದುರುಗೊಂಡು—ಅರ
ಸನು ಶುಭವಾರ್ತೆಯುಂಟೋ ಎಂದು ಕೇಳುತ್ತಾನೆ
ಅನ್ನಲು ಅವನು—ಶುಭವಾರ್ತೆ ನಿನಗೇನು? ನನ್ನ
20 ಹಿಂದೆ ಬಾ ಎಂದನು. ಕಾವಲುಗಾರನು ತಿರಿಗಿ ಅರಸ
ನಿಗೆ—ಎರಡನೆಯವನೂ ಆ ಗುಂಪನ್ನು ಮುಟ್ಟಿದನು;
ಆದರೆ ಹಿಂದಿರುಗಿ ಬರುವದು ಕಾಣಿಸುವದೇ ಇಲ್ಲ.
ರಥದಲ್ಲಿ ಕೂತಿರುವವನು ಕುದುರೆಗಳನ್ನು ಹುಚ್ಚು
ಹಿಡಿದವನಂತೆ ಓಡಿಸುವದನ್ನು ನೋಡಿದರೆ ಅವನು
ನಿಂಷಿಯ ಮೊಮ್ಮಗನಾದ ಯೇಹುವಾಗಿರಬೇಕು
21 ಎಂದು ಹೇಳಿದನು. ಯೋರಾಮನು ರಥಹೂಡಬೇ

ಕೆಂದು ತನ್ನ ಸೇವಕರಿಗೆ ಆಜ್ಞಾಪಿಸಿದನು. ಅವ
ಹೂಡಿದರು. ಆಗ ಇಸ್ರಾಯೇಲ್ಯರ ಅರಸನಾ
ಇವನೂ ಯೆಹೂದ್ಯರ ಅರಸನಾದ ಅಹಜ್ಯನೂ ತವ
ತಮ್ಮ ರಥಗಳಲ್ಲಿ ಕೂತುಕೊಂಡು ಯೇಹುವನ
ಎದುರುಗೊಳ್ಳುವದಕ್ಕಾಗಿ ಹೊರಟು ಇಜ್ರೇಲಿನ
ನಾದ ನಾಬೋತನ ಹೊಲದಲ್ಲಿ ಅವನನ್ನು ಸಂಧಿ
ದರು. ಯೋರಾಮನು ಅವನನ್ನು ಕಂಡ ಕೂಡಲೆ—
ಯೇಹುವೇ, ಶುಭವೋ ಎಂದು ಅವನನ್ನು ಕೇಳಿದನ
ಅದಕ್ಕೆ ಅವನು—ನಿನ್ನ ತಾಯಿಯ ದೇವದ್ರೋ
ಹವೂ ಮಂತ್ರತಂತ್ರವೂ ಪ್ರಬಲವಾಗಿರುವಲ್ಲಿ ಶುಭ
ಲ್ಲಿಂದ ಬರುವದು ಎಂದು ಉತ್ತರಕೊಟ್ಟನು. ಒಡ
ಯೋರಾಮನು ತನ್ನ ರಥವನ್ನು ತಿರುಗಿಸಿ ಅಹ
ನಿಗೆ—ಅಹಜ್ಯನೇ, ಇದು ಒಳಸಂಚು ಎಂದು ಹೇ
ಓಡಿಹೋದನು. ಯೇಹುವು ಪೂರ್ಣಬಲದಿಂದ ಬಿ
ನ್ನು ಬೊಗ್ಗಿಸಿ ಯೋರಾಮನ ಬೆನ್ನಿಗೆ ಬಾಣವನ್ನ
ದನು; ಅದು ಅವನ ಹೃದಯದಿಂದ ಹೊರಗೆ ಬಂದಿತ
ಅವನು ಮುದುರಿಕೊಂಡು ರಥದಲ್ಲಿ ಬಿದ್ದನು. ಆ
ಯೇಹುವು ತನ್ನ ಜೊತೆಯಲ್ಲಿದ್ದ ಬಿದ್ಕರನೆಂಬ ಸೇನ
ಪತಿಗೆ—ಯೋರಾಮನ ಶವವನ್ನು ಎತ್ತಿ ಇಜ್ರೇ
ನವನಾದ ನಾಬೋತನ ಹೊಲದಲ್ಲಿ ಹಾಕು. ಒಂ
ದಿವಸ ನಾವಿಬ್ಬರೂ ಕುದುರೆಹತ್ತಿ ಇವನ ತಂ
ಯಾದ ಅಹಾಬನ ಹಿಂದಿನಿಂದ ಹೋಗುತ್ತಿರುವಾ
ಯೆಹೋವನು ಅಹಾಬನಿಗೆ—ನನ್ನ ಮಾತನ್ನು ಕೇಳ
ನೀನು ನಿನ್ನೆ ಸುರಿಸಿದ ನಾಬೋತನ ಮತ್ತು ಅವ
ಮಕ್ಕಳ ರಕ್ತವನ್ನು ನಿಶ್ಚಯವಾಗಿ ನೋಡಿದ್ದೇ
ನೀನು ಅವರ ರಕ್ತವನ್ನು ಸುರಿಸಿದ ಹೊಲದಲ್ಲೇ ನಿನ
ಮುಯ್ಯಿತೀರಿಸುವೆನು ಎಂದು ಪ್ರವಾದಿಯಿಂದ ಹೇ
ಸಿದ್ದು ನಿನಗೆ ನೆನಪಿರುತ್ತದಲ್ಲಾ; ಯೆಹೋವನ
ಮಾತು ನೆರವೇರುವಂತೆ ಇವನ ಶವವನ್ನು ಆ ಹೊ
ದಲ್ಲಿ ಹಾಕಿಬಿಡು ಎಂದು ಹೇಳಿದನು. ಯೆಹೂದ್ಯ
ಅರಸನಾದ ಅಹಜ್ಯನು ಇದನ್ನೆಲ್ಲಾ ಕಂಡು ಬೇತ್‌ಹ
ನಿನ ಮಾರ್ಗವಾಗಿ ಓಡಿಹೋದನು. ಯೇಹುವು ಅ
ನನ್ನ ಹಿಂದಟ್ಟಿ—ಅವನನ್ನೂ ರಥದಲ್ಲಿಯೇ ಹೊ
ಯಿರಿ ಎಂದು ಕೂಗಲು ಅವನ ಜನರು ಇಬ್ಲೆಯ
ಮಿನ ಬಳಿಯಲ್ಲಿರುವ ಗೂರ್ ಗಟ್ಟದ ಮೇಲೆ ಅ
ನನ್ನು ಗಾಯಪಡಿಸಿದರು. ಅಹಜ್ಯನು ಮೆಗಿದ್ದೋವಿ
ಓಡಿಹೋಗಿ ಅಲ್ಲಿ ಸತ್ತನು. ಅವನ ಸೇವಕರು ಅವ
ಶವವನ್ನು ರಥದಲ್ಲಿ ಹಾಕಿಕೊಂಡು ಯೆರೂಸಲೇ
ನಲ್ಲಿರುವ ದಾವೀದನಗರಕ್ಕೆ ತಂದು ಅದನ್ನು ಅವ
ಕುಟುಂಬಶ್ಮಶಾನಭೂಮಿಯಲ್ಲಿ ಸಮಾಧಿಮಾಡಿದರ
ಅಹಜ್ಯನು ಅಹಾಬನ ಮಗನಾದ ಯೋರಾಮ
ಆಳಿಕೆಯ ಹನ್ನೊಂದನೆಯ ವರುಷದಲ್ಲಿ ಯೆಹೂದ್ಯ
ಅರಸನಾಗಿದ್ದನು.

ಯೇಹುವು ಇಜ್ರೇಲಿಗೆ ಬಂದನು. ಈಜೆಬೆಲ
ಅದನ್ನು ಕೇಳಿ ತಲೆಯನ್ನು ಆಭರಣಗಳಿಂದ ಅಲಂಕ
ಸಿಕೊಂಡು ಕಣ್ಣಿಗೆ ಕಾಡಿಗೆಹಚ್ಚಿಕೊಂಡು ಕಿಟ
ಯಿಂದ ನೋಡುತ್ತಾ ನಿಂತಳು. ಅನಂತರ ಅರ
ನೆಯ ಪ್ರಾಕಾರದೊಳಗೆ ಬಂದ ಯೇಹುವನ್ನು ಕಂ
ಅವನನ್ನು—ಯಜಮಾನನನ್ನು ಕೊಂದ ಜಿಮ್ರಿ
ಸಮಾನನೇ, ಕ್ಷೇಮವೋ ಎಂದು ಕೇಳಿದಳು. ಅವ

ಕಣ್ಣೆತ್ತಿ ಕಿಟಿಕಿಯ ಕಡೆಗೆ ನೋಡಿ—ಅಲ್ಲಿ ನನ್ನ ಪಕ್ಷ
ದವರು ಯಾರು ಎಂದು ಕೂಗಿದನು. ಕೂಡಲೆ ಆ
ಕಿಟಿಕಿಯಿಂದ ಇಬ್ಬರು ಮೂವರು ಕಂಚುಕಿಗಳು
33 ಅವನ ಕಡೆಗೆ ನೋಡಿದರು. ಅವನು ಅವರಿಗೆ—ಆಕೆ
ಯನ್ನು ಕೆಳಗೆ ದೊಬ್ಬಿರಿ ಎಂದು ಆಜ್ಞಾಪಿಸಲು ಅವರು
ದೊಬ್ಬಿದರು. ಆಕೆಯ ರಕ್ತವು ಗೋಡೆಗೂ ಕುದುರೆ
ಗಳಿಗೂ ಸಿಡಿಯಿತು. ಅವನು ಆಕೆಯ ಶವವನ್ನು
34 ತುಳಿಸಿಬಿಟ್ಟನು. ಅನಂತರ ಅವನು ಅರಮನೆಯೊಳಗೆ
ಹೋಗಿ ಅನ್ನಪಾನಗಳನ್ನು ತೆಗೆದುಕೊಂಡು ತನ್ನ ಸೇವ
ಕರಿಗೆ—ಆ ಶಾಪಗ್ರಸ್ತ ಸ್ತ್ರೀಯ ಶವವನ್ನು ನೋಡಿ
ಕೊಂಡು ಸಮಾಧಿಮಾಡಿರಿ; ಆಕೆಯು ರಾಜಪುತ್ರಿ
35 ಯಾಗಿರುತ್ತಾಳಷ್ಟೆ ಎಂದು ಆಜ್ಞಾಪಿಸಿದನು. ಸೇವ
ಕರು ಶವವನ್ನು ಸಮಾಧಿಮಾಡುವದಕ್ಕಾಗಿ ಹೋದರು;
ಆದರೆ ಅವರಿಗೆ ಆಕೆಯ ತಲೆಬುರುಡೆ, ಕೈಕಾಲುಗಳು
36 ಹೊರತಾಗಿ ಬೇರೇನೂ ಸಿಕ್ಕಲಿಲ್ಲ. ಅವರು ಹಿಂದಿ
ರುಗಿ ಯೇಹುವಿನ ಹತ್ತಿರ ಬಂದು ಆ ಸಂಗತಿಯನ್ನು
ತಿಳಿಸಲು ಅವನು ಅವರಿಗೆ—ನಾಯಿಗಳು ಈಜೆಬೆ
ಲಳ ದೇಹಮಾಂಸವನ್ನು ಇಜ್ರೇಲಿನ ಹೊಲದಲ್ಲಿ ತಿಂದು
37 ಬಿಡುವವು; ಆಕೆಯ ಶವವು ಆ ಹೊಲಕ್ಕೆ ಗೊಬ್ಬರವಾ
ಗುವದು; ಇದು ಈಜೆಬೆಲಳ ಶವವೆಂದು ಯಾರಿಗೂ
ಗುರುತು ಸಿಕ್ಕದ ಹಾಗಾಗುವದು ಎಂಬದಾಗಿ ಯೆಹೋ
ವನು ತಿಷ್ಬೀಯನೂ ತನ್ನ ಸೇವಕನೂ ಆದ ಎಲೀಯನ
ಮುಖಾಂತರವಾಗಿ ಹೇಳಿಸಿದ ಮಾತು ಈಗ ನೆರವೇ
ರಿತು ಅಂದನು.

ಯೇಹುವಿನ ಕ್ರೂರತನವೂ ಇಸ್ರಾಯೇಲ್‌ರಾಜ್ಯದ
ಕ್ಷಯವೂ.

10 ಸಮಾರ್ಯ ಪಟ್ಟಣದಲ್ಲಿ ಅಹಾಬನ ಸಂತಾನದ
ಎಪ್ಪತ್ತು ಮಂದಿ ರಾಜಪುತ್ರರಿದ್ದರು. ಯೇಹುವು
ಆ ಪಟ್ಟಣದಲ್ಲಿದ್ದ ಇಜ್ರೇಲಿನ ಅಧಿಕಾರಿಗಳಾದ ಹಿರಿ
ಯರಿಗೂ ರಾಜಪುತ್ರಪಾಲಕರಿಗೂ ಪತ್ರಗಳನ್ನು ಬರೆದು
ಅವುಗಳನ್ನು ದೂತರ ಮುಖಾಂತರವಾಗಿ ಕಳುಹಿಸಿ
2 ದನು. ಅವುಗಳಲ್ಲಿ—ನಿಮ್ಮ ವಶದಲ್ಲಿ ನಿಮ್ಮ ಯಜ
ಮಾನನ ಮಕ್ಕಳೂ ರಥಾಶ್ವಬಲಗಳೂ ಕೋಟೆಕೊತ್ತ
ಲುಗಳುಳ್ಳ ಪಟ್ಟಣವೂ ಯುದ್ಧಾಯುಧಗಳೂ ಇರುತ್ತ
3 ವಷ್ಟೆ. ಈ ಪತ್ರವು ನಿಮಗೆ ಮುಟ್ಟಿದೊಡನೆ ಆ ರಾಜ
ಪುತ್ರರಲ್ಲಿ ಉತ್ತಮನೂ ಸಮರ್ಥನೂ ಆದ ಒಬ್ಬ
ನನ್ನು ಆರಿಸಿಕೊಂಡು ಅವನನ್ನು ಅವನ ತಂದೆಯ
ಸಿಂಹಾಸನದ ಮೇಲೆ ಕುಳ್ಳಿರಿಸಿ ನಿಮ್ಮ ಯಜಮಾನನ
ಕುಟುಂಬದವರಿಗೋಸ್ಕರ ಯುದ್ಧಮಾಡಿರಿ ಎಂಬ
4 ದಾಗಿ ಬರೆದಿತ್ತು. ಅವನು ಬಹಳವಾಗಿ ಭಯಪಟ್ಟು—
ಇಬ್ಬರು ರಾಜರೂ ಅವನ ಮುಂದೆ ನಿಲ್ಲಲಾರದೆ
ಹೋದರು; ನಾವು ನಿಲ್ಲುವದು ಹೇಗೆ ಅಂದುಕೊಂಡರು.
5 ಅನಂತರ ರಾಜಗೃಹಾಧಿಪತಿ, ಪುರಾಧಿಕಾರಿ, ಹಿರಿಯರು,
ರಾಜಪುತ್ರಪಾಲಕರು ಇವರೆಲ್ಲಾ ಕೂಡಿ ಯೇಹು
ವಿಗೆ—ನಾವು ನಿನ್ನ ಆಜ್ಞಾಧಾರಕರಾದ ಸೇವಕರು;
ನಾವಾಗಿ ನಮಗೊಬ್ಬ ಅರಸನನ್ನು ನೇಮಿಸಿಕೊಳ್ಳುವ
ದಿಲ್ಲ; ನಿನ್ನ ಚಿತ್ತವೇ ನೆರವೇರಲಿ ಎಂದು ಹೇಳಿಕಳುಹಿಸಿ
6 ದರು. ಆಗ ಯೇಹುವು ಇನ್ನೊಂದು ಪತ್ರದ ಮೂಲಕ
ವಾಗಿ ಅವರಿಗೆ—ನೀವು ನನ್ನ ಪಕ್ಷದವರಾಗಿದ್ದು ನನ್ನ
ಆಜ್ಞಾನುಸಾರವಾಗಿ ನಡೆದುಕೊಳ್ಳ ಮನಸ್ಸುಳ್ಳವರಾ
ಗಿದ್ದರೆ ನಾಳೆ ಇಷ್ಟು ಹೊತ್ತಿಗೆ ನಿಮ್ಮ ಯಜಮಾ
ನನ ಸಂತಾನದವರ ತಲೆಗಳೊಡನೆ ಬನ್ನಿರಿ ಎಂದು
ಆಜ್ಞಾಪಿಸಿದನು. ಎಪ್ಪತ್ತು ಮಂದಿ ರಾಜಪುತ್ರರು
ಪಟ್ಟಣದ ಪ್ರಧಾನಪುರುಷರ ಪರಾಂಬರಿಕೆಯಲ್ಲಿದ್ದರು.
ಪ್ರಧಾನಪುರುಷರು ಪತ್ರವನ್ನು ಓದಿದೊಡನೆ ಆ 7
ಎಪ್ಪತ್ತು ಮಂದಿಯನ್ನು ಹಿಡಿದು ಕೊಂದು ಅವರ
ತಲೆಗಳನ್ನು ಪುಟ್ಟಿಗಳಲ್ಲಿ ಹಾಕಿ ಇಜ್ರೇಲಿನಲ್ಲಿದ್ದ
ಯೇಹುವಿಗೆ ಕಳುಹಿಸಿದರು. ರಾಜಪುತ್ರರ ತಲೆಗಳನ್ನು 8
ತಂದಿದ್ದಾರೆಂಬ ವರ್ತಮಾನವು ಯೇಹುವಿಗೆ ಮುಟ್ಟಿದಾ
ಗ ಅವನು—ಬೆಳಗಾಗುವ ತನಕ ಅವುಗಳನ್ನು ಹೆಬ್ಬಾ
ಗಲಿನ ಹತ್ತಿರ ಎರಡು ರಾಶಿಗಳಾಗಿ ಹಾಕಬೇಕೆಂದು
ಆಜ್ಞಾಪಿಸಿದನು. ಮರುದಿನ ಬೆಳಿಗ್ಗೆ ಅವನು ಅವುಗಳ 9
ಹತ್ತಿರ ಹೋಗಿ ಎಲ್ಲಾ ಜನರ ಎದುರಿಗೆ ನಿಂತು ಅವ
ರಿಗೆ—ನೀವು ನಿರಪರಾಧಿಗಳು; ನಾನಾದರೋ ನನ್ನ
ಯಜಮಾನನಿಗೆ ವಿರೋಧವಾಗಿ ಒಳಸಂಚುಮಾಡಿ ಅವ
ನನ್ನು ಕೊಂದವನು; ಆದರೆ ಇವರನ್ನೆಲ್ಲಾ ಹತಿಸಿದವ
ರಾರು? ಇಗೋ ಯೆಹೋವನು ಅಹಾಬನ ಮನೆಯವ 10
ರನ್ನು ಕುರಿತು ಹೇಳಿದ ಮಾತುಗಳೆಲ್ಲಾ ತಪ್ಪದೆ ನೆರ
ವೇರುವವೆಂದು ತಿಳಿದುಕೊಳ್ಳಿರಿ. ಯೆಹೋವನು ತನ್ನ
ಸೇವಕನಾದ ಎಲೀಯನ ಮುಖಾಂತರವಾಗಿ ಹೇಳಿ
ದ್ದನ್ನು ಮಾಡಿದ್ದಾನಷ್ಟೆ ಎಂದು ಹೇಳಿದನು. ಅನಂತರ 11
ಅವನು ಇಜ್ರೇಲಿನಲ್ಲಿ ಉಳಿದ ಅಹಾಬನ ಕುಟುಂಬದವ
ರನ್ನೂ ಅವನ ಸರದಾರರು, ಆಪ್ತಮಿತ್ರರು, ಪುರೋಹಿತ
ರು ಇವರನ್ನೂ ಸಂಹರಿಸಿದನು; ಒಬ್ಬನನ್ನೂ ಉಳಿಸಲಿಲ್ಲ.
ಆ ಮೇಲೆ ಯೇಹುವು ಸಮಾರ್ಯಕ್ಕೆ ಹೊರಟು 12
ಹೋದನು. ಅವನು ದಾರಿಯಲ್ಲಿ ಕುರುಬರ ಛತ್ರಕ್ಕೆ
ಬಂದಾಗ ಯೆಹೂದ್ಯರ ಅರಸನಾದ ಅಹಜ್ಯನ ಸಹೋ 13
ದರರನ್ನು ಕಂಡು ಅವರನ್ನು—ನೀವು ಯಾರು ಎಂದು
ಕೇಳಿದನು. ಅದಕ್ಕೆ ಅವರು—ನಾವು ಅಹಜ್ಯನ
ಸಹೋದರರು; ರಾಜಪುತ್ರರನ್ನೂ ರಾಜಮಾತೆಯ ಮಕ್ಕ
ಳನ್ನೂ ವಂದಿಸುವದಕ್ಕೋಸ್ಕರ ಇಲ್ಲಿಗೆ ಬಂದಿದ್ದೇವೆ
ಎಂದು ಉತ್ತರಕೊಟ್ಟರು. ಆಗ ಯೇಹುವು ತನ್ನ ಸೇವಕ 14
ರಿಗೆ—ಅವರನ್ನು ಸಜೀವಿಗಳಾಗಿ ಹಿಡಿಯಿರಿ ಎಂದು
ಆಜ್ಞಾಪಿಸಿದನು. ಅವರು ಅವರನ್ನು ಹಿಡಿದು ವಧಿಸಿ ಆ
ಛತ್ರದ ಬಾವಿಯಲ್ಲಿ ಹಾಕಿದರು. ಅವರು ನಾಲ್ವತ್ತೆರಡು
ಮಂದಿಯಿದ್ದರು; ಅವರಲ್ಲಿ ಒಬ್ಬನನ್ನೂ ಬಿಡಲಿಲ್ಲ.
ಅವನು ಅಲ್ಲಿಂದ ಮುಂದೆ ಹೋಗುತ್ತಿರುವಾಗ 15
ತನ್ನನ್ನು ಎದುರುಗೊಳ್ಳುವದಕ್ಕಾಗಿ ಬಂದ ರೇಕಾಬನ
ಮಗನಾದ ಯೆಹೋನಾದಾಬನನ್ನು ಕಂಡು ವಂದಿಸಿ—
ನಿನ್ನ ವಿಷಯದಲ್ಲಿ ನನ್ನ ಮನಸ್ಸು ಯಥಾರ್ಥವಾಗಿ
ರುವಂತೆ ನಿನ್ನ ಮನಸ್ಸೂ ಯಥಾರ್ಥವಾಗಿರುತ್ತದೋ
ಎಂದು ಕೇಳಿದನು. ಅವನು—ಹೌದು ಎಂದು ಉತ್ತರ
ಕೊಟ್ಟನು. ಆಗ ಯೇಹುವು—ಹಾಗಾದರೆ ನಿನ್ನ
ಕೈಕೊಡು ಅನ್ನಲು ಅವನು ಕೈಕೊಟ್ಟನು. ಯೇಹು
ವು ಅವನನ್ನು ತನ್ನ ರಥದಲ್ಲಿ ಕುಳ್ಳಿರಿಸಿಕೊಂಡು
ನನ್ನ ಜೊತೆಯಲ್ಲಿ ಬಂದು ಯೆಹೋವನಲ್ಲಿ ನನ 16
ಗಿರುವ ಆಸಕ್ತಿಯನ್ನು ನೋಡು ಎಂದು ಹೇಳಿ ಅವ
ನನ್ನು ಕೈಹಿಡಿದು ತನ್ನ ರಥದಲ್ಲಿ ಕರಕೊಂಡು

17 ಹೋದನು. ಸಮಾರ್ಯವನ್ನು ಸೇರಿದನಂತರ ಅಲ್ಲಿ
ಉಳಿದಿದ್ದ ಅಹಾಬನ ಸಂತಾನದವರನ್ನೆಲ್ಲಾ ಸಂಹರಿಸಿ
ಬಿಟ್ಟನು. ಹೀಗೆ ಯೆಹೋವನು ಎಲೀಯನ ಮುಖಾಂತ
ರವಾಗಿ ಹೇಳಿಸಿದ ಮಾತು ನೆರವೇರಿತು.
18 ತರುವಾಯ ಅವನು ಎಲ್ಲಾ ಜನರನ್ನು ಕೂಡಿಸಿ
ಅವರಿಗೆ—ಅಹಾಬನು ಬಾಳನನ್ನು ಸ್ವಲ್ಪ ಮಾತ್ರ
ಸೇವಿಸಿದನು; ಯೇಹುವಾದರೋ ಅಧಿಕವಾಗಿ ಸೇವಿಸ
19 ಬೇಕೆಂದಿರುತ್ತಾನೆ. ಆದದರಿಂದ ನೀವು ಬಾಳನ ಎಲ್ಲಾ
ಪ್ರವಾದಿಗಳನ್ನೂ ಭಕ್ತರನ್ನೂ ಯಾಜಕರನ್ನೂ ನನ್ನ
ಬಳಿಗೆ ಕರಕೊಂಡು ಬನ್ನಿರಿ; ನಾನು ಬಾಳನಿಗೋ
ಸ್ಕರ ಮಹಾಯಜ್ಞವನ್ನು ಸಮರ್ಪಿಸಬೇಕೆಂದಿರುತ್ತೇ
ನಾದದರಿಂದ ಅವರಲ್ಲಿ ಒಬ್ಬನೂ ಬಾರದಿರಕೂಡದು;
ಬಾರದವನು ಸಾಯಬೇಕು ಎಂದು ಹೇಳಿದನು. ಅವನು
ಬಾಳನ ಭಕ್ತರನ್ನು ಸಂಹರಿಸಬೇಕೆಂದು ಈ ಯುಕ್ತಿ
20 ಯನ್ನು ಮಾಡಿದನು. ಇದಲ್ಲದೆ ಅವನು ದೂತರ
ಮುಖಾಂತರವಾಗಿ—ಬಾಳನ ಎಲ್ಲಾ ಭಕ್ತರೂ ತಮ್ಮ
ನ್ನು ಶುದ್ಧಪಡಿಸಿಕೊಂಡು ಜಾತ್ರೆಗೆ ಬರಬೇಕೆಂದು ಇಸ್ರಾ
21 ಯೇಲ್ಯರ ಸಮಸ್ತ ಪ್ರಾಂತಗಳಲ್ಲಿ ಪ್ರಕಟಿಸಿದನು. ಆಗ
ಬಾಳನ ಭಕ್ತರಲ್ಲಿ ಒಬ್ಬನೂ ತಪ್ಪದೆ ಎಲ್ಲರೂ ಕೂಡಿ
ಬಂದದರಿಂದ ಬಾಳನ ದೇವಸ್ಥಾನವು ಪೂರ್ಣವಾಗಿ
22 ತುಂಬಿತು. ಯೇಹುವು ವಸ್ತ್ರಾಗಾರದ ಅಧಿಪತಿಗೆ—
ಬಾಳನ ಭಕ್ತರೆಲ್ಲರಿಗೂ ಬಟ್ಟೆಗಳನ್ನು ಕೊಡು ಎಂದು
23 ಆಜ್ಞಾಪಿಸಲು ಅವನು ತಂದುಕೊಟ್ಟನು. ಅನಂತರ
ಯೇಹುವು ರೇಕಾಬನ ಮಗನಾದ ಯೆಹೋನಾದಾಬ
ನೊಡನೆ ದೇವಸ್ಥಾನವನ್ನು ಪ್ರವೇಶಿಸಿ ಬಾಳನ ಭಕ್ತ
ರಿಗೆ—ಯೆಹೋವನ ಭಕ್ತರು ನಿಮ್ಮ ಮಧ್ಯದಲ್ಲಿ ಬಂದಿ
ರುತ್ತಾರೋ ವಿಚಾರಿಸಿ ನೋಡಿರಿ; ಬಾಳನ ಭಕ್ತರು
24 ಮಾತ್ರ ಇಲ್ಲಿರಬೇಕು ಎಂದು ಹೇಳಿದನು. ಆ ಮೇಲೆ
ಅವರು ಸರ್ವಾಂಗಹೋಮಯಜ್ಞಗಳನ್ನು ಸಮರ್ಪಿಸು
ವದಕ್ಕೆ ಹೋದರು. ಇದಕ್ಕೆ ಮೊದಲೇ ಅವನು ದೇವಸ್ಥಾ
ನದ ಹೊರಗೆ ಎಂಭತ್ತು ಮಂದಿಯನ್ನು ಕಾಯುವದ
ಕ್ಕಾಗಿ ಇರಿಸಿ ಅವರಿಗೆ—ನಾನು ಯಾರನ್ನು ನಿಮ್ಮ ಕೈಗೆ
ಸಿಕ್ಕುವ ಹಾಗೆ ಮಾಡುವೆನೋ ಅವರಲ್ಲಿ ಒಬ್ಬನನ್ನೂ
ಬಿಡಬೇಡಿರಿ; ಬಿಟ್ಟರೆ ಅವನ ಪ್ರಾಣಕ್ಕೆ ಬದಲಾಗಿ
ನಿಮ್ಮ ಪ್ರಾಣವು ಹೋಗುವದು ಎಂಬದಾಗಿ ಆಜ್ಞಾಪಿಸಿ
25 ದ್ದನು. ಸರ್ವಾಂಗಹೋಮವನ್ನು ಅರ್ಪಿಸಿದ ಕೂಡಲೆ
ಯೇಹುವು ಕಾವಲುಗಾರರಿಗೂ ಸೇನಾಪತಿಗಳಿಗೂ—
ಒಳಗೆ ಹೋಗಿ ಅವರನ್ನೆಲ್ಲಾ ಸಂಹರಿಸಿರಿ; ಒಬ್ಬನೂ
ತಪ್ಪಿಸಿಕೊಳ್ಳಕೂಡದು ಎಂದು ಹೇಳಿದನು. ಅವರು
ಒಳಗೆ ಹೋಗಿ ಅವರನ್ನು ಕತ್ತಿಯಿಂದ ಕೊಂದು ಅವರ
ಶವಗಳನ್ನು ಹೊರಗೆ ಹಾಕಿ ಬಾಳನ ದೇವಸ್ಥಾನಕ್ಕೆ
26 ಸೇರಿದ 1)ಕೇರಿಯನ್ನು ಪ್ರವೇಶಿಸಿ ಅಲ್ಲಿನ ವಿಗ್ರಹ
ಸ್ತಂಭಗಳನ್ನು ತೆಗೆದುಕೊಂಡು ಬಂದು ಸುಟ್ಟುಬಿಟ್ಟರು.
27 ಇದಲ್ಲದೆ ಬಾಳನ ವಿಗ್ರಹಸ್ತಂಭವನ್ನೂ ದೇವಸ್ಥಾ
ನವನ್ನೂ ಕೆಡವಿ ಹಾಳುಮಾಡಿದರು. ಅಂದಿನಿಂದ ಇಂದಿ
ನ ವರೆಗೂ ಆ ಸ್ಥಳವನ್ನು ಶೌಚಕ್ಕಾಗಿ ಉಪಯೋಗಿ
ಸುತ್ತಾರೆ.
28 ಹೀಗೆ ಯೇಹುವು ಇಸ್ರಾಯೇಲ್ಯರಲ್ಲಿ ಬಾಳನ

ಪೂಜೆಯನ್ನು ನಿಲ್ಲಿಸಿದನು. ಆದರೂ ಅವನು ಇಸ್ರಾ
ಯೇಲ್ಯರನ್ನು ಪಾಪಕ್ಕೆ ಪ್ರೇರಿಸಿದ ನೆಬಾಟನ ಮ
ನಾದ ಯಾರೊಬ್ಬಾಮನ ಮಾರ್ಗವನ್ನು ಬಿಡದೆ ಬೇ
ತೇಲ್, ದಾನ್ ಎಂಬ ಊರುಗಳಲ್ಲಿದ್ದ ಚಿನ್ನದ ಬಸ
ಗಳನ್ನು ಪೂಜಿಸುತ್ತಿದ್ದನು. ಯೆಹೋವನು ಯೇಹ
ವಿಗೆ—ನೀನು ನನ್ನ ದೃಷ್ಟಿಗೆ ಸರಿಯಾದದ್ದನ್ನು ನಡಿ
ನನ್ನ ಮೆಚ್ಚಿಕೆಯನ್ನು ಪಡೆದಿ; ಅಹಾಬನ ಮನೆಯ
ರನ್ನು ಕುರಿತು ನನ್ನ ಚಿತ್ತವನ್ನು ನೆರವೇರಿಸಿದಿ; ಆ
ದರಿಂದ ನಿನ್ನ ಸಂತಾನದವರು ನಾಲ್ಕನೆಯ ತಲೆಯ
ವರೆಗೂ ಇಸ್ರಾಯೇಲ್ ಸಿಂಹಾಸನದ ಮೇಲೆ ಕೂತ
ಕೊಳ್ಳುವರು ಎಂದು ಹೇಳಿದನು. ಆದರೆ ಅವನು ಇಸ್ರಾ
ಯೇಲ್‍ದೇವರಾದ ಯೆಹೋವನ ಧರ್ಮಶಾಸ್ತ್ರವನ
ಪೂರ್ಣಮನಸ್ಸಿನಿಂದ ಕೈಕೊಳ್ಳುವದಕ್ಕೆ ಪ್ರಯತ್ನಿ
ಲಿಲ್ಲ; ಇಸ್ರಾಯೇಲ್ಯರನ್ನು ಪಾಪಕ್ಕೆ ಪ್ರೇರಿಸಿ
ಯಾರೊಬ್ಬಾಮನ ಮಾರ್ಗವನ್ನು ಬಿಡಲಿಲ್ಲ.
ಯೆಹೋವನು ಈ ಕಾಲದಲ್ಲಿ ಇಸ್ರಾಯೇಲ್ಯರನ
ಕುಗ್ಗಿಸತೊಡಗಿದನು. ಹಜಾಯೇಲನು ಬಂದ
ಯೊರ್ದನಿನ ಪೂರ್ವದಿಕ್ಕಿಗೂ ಅರ್ನೋನ್‍ತಗ್ಗಿನ
ರೋಯೇರ್ ಪಟ್ಟಣದ ಉತ್ತರದಿಕ್ಕಿಗೂ ಇರು
ಗಿಲ್ಯಾದ್ ಬಾಷಾನ್ ಪ್ರಾಂತಗಳಲ್ಲಿ ವಾಸವಾಗಿದ್ದ
ಗಾದ್ ರೂಬೇನ್ ಮನಸ್ಸೆ ಕುಲಗಳವರನ್ನೂ ಬೇ
ಎಲ್ಲಾ ಪ್ರಾಂತಗಳಲ್ಲಿರುವ ಇಸ್ರಾಯೇಲ್ಯರನ್ನೂ ಬ
ಧಿಸಿದನು. ಯೇಹುವಿನ ಉಳಿದ ಚರಿತ್ರೆಯ
ಅವನ ಶೂರಕೃತ್ಯಗಳ ವಿವರವೂ ಇಸ್ರಾಯೇಲ್‍ರಾ
ಕಾಲವೃತ್ತಾಂತ ಎಂಬ ಗ್ರಂಥದಲ್ಲಿ ಬರೆದಿರುತ್ತ
ಅವನು ಪಿತೃಗಳ ಬಳಿಗೆ ಸೇರಲು ಅವನ ಶವವನ
ಸಮಾರ್ಯದಲ್ಲಿ ಸಮಾಧಿಮಾಡಿದರು. ಅವನಿಗೆ ಬ
ಲಾಗಿ ಅವನ ಮಗನಾದ ಯೆಹೋವಾಹಾಜನು ಅ
ಸನಾದನು. ಯೇಹುವು ಸಮಾರ್ಯಪಟ್ಟಣದಲ್ಲಿದ್ದು
ಕೊಂಡು ಇಸ್ರಾಯೇಲ್ಯರನ್ನು ಆಳಿದ್ದು ಇಪ್ಪತ್ತೆಂಟ
ವರುಷ.

ಅತಲ್ಯ.

ಅಹಜ್ಯನು ಮರಣಹೊಂದಿದನೆಂಬದನ್ನು ಅವನ
ತಾಯಿಯಾದ ಅತಲ್ಯಳು ಕೇಳಿದಾಗ ಫಕ್ಕನೆ ರಾಜ
ಸಂತಾನದವರನ್ನೆಲ್ಲಾ ಸಂಹರಿಸಿಬಿಟ್ಟಳು. ಆದರೆ ಅರ
ನಾದ ಯೆಹೋರಾಮನ ಮಗಳೂ ಅಹಜ್ಯನ ತಂಗಿಯ
ಆದ ಯೆಹೋಷೆಬಳೆಂಬಾಕೆಯು ಯಾರಿಗೂ ತಿಳಿಯ
ದಂತೆ ತನ್ನ ಅಣ್ಣನ ಮಗನಾದ ಯೆಹೋವಾಷನನ
ಹತವಾಗುವದಕ್ಕಿದ್ದ ರಾಜಪುತ್ರರ ಮಧ್ಯದಿಂದ ಅವ
ದಾದಿಯೊಡನೆ ತೆಗೆದುಕೊಂಡು ಹೋಗಿ ಮಲಗು
ಕೋಣೆಯಲ್ಲಿ ಅಡಗಿಸಿಟ್ಟಳು. ಹೀಗೆ ಅವನು ಅತಲ
ಳಿಂದ ಹತವಾಗದಂತೆ ತಪ್ಪಿಸಲ್ಪಟ್ಟು ಆರು ವರುಷಗ
ವರೆಗೂ ಯೆಹೋಷೆಬಳೊಡನೆ ಗುಪ್ತವಾಗಿ ಯೆಹೋ
ವನ ಆಲಯದಲ್ಲಿದ್ದನು. ಈ ಆರು ವರುಷಗಳಲ್ಲಿ
ಅತಲ್ಯಳೇ ದೇಶವನ್ನು ಆಳುತ್ತಿದ್ದಳು.
ಏಳನೆಯ ವರುಷದಲ್ಲಿ ಯೆಹೋಯಾದ

1) ಮೂಲ: ಪಟ್ಟಣವನ್ನು.

ವನು ಕಾರಿ ಎಂಬ ಸಿಪಾಯಿಗಳ ಮತ್ತು ಕಾವಲುದಂಡಿನ
ವರ ಶತಾಧಿಪತಿಗಳನ್ನು ತನ್ನ ಹತ್ತಿರ ಯೆಹೋವನ ಆಲ
ಯಕ್ಕೆ ಕರಿಸಿದನು. ಅಲ್ಲಿ ಅವನು ಅವರ ಸಂಗಡ
ಪ್ರಮಾಣಪೂರ್ವಕವಾದ ಒಡಂಬಡಿಕೆಯನ್ನು ಮಾಡಿ
5 ಕೊಂಡನಂತರ ರಾಜಕುಮಾರನನ್ನು ತೋರಿಸಿ ಅವ
ರಿಗೆ—ಸಬ್ಬತ್‌ದಿನದಲ್ಲಿ ಮನೆಗೆ ಹೋಗುವ ಸೈನ್ಯದ
ಮೂರರಲ್ಲೊಂದು ಭಾಗವು ಅರಮನೆಯನ್ನು ಕಾಯ
6 ಬೇಕು; ಇನ್ನೊಂದು ಭಾಗವು ಸೂರ್‌ಬಾಗಲಿನಲ್ಲಿ
ಯೂ ಮತ್ತೊಂದು ಭಾಗವು ಕಾವಲುದಂಡಿನ ಹಿಂದ
ಣ ಬಾಗಲಿನಲ್ಲಿಯೂ ಇರಬೇಕು. ಈ ಪ್ರಕಾರ ನೀವು
7 ಅರಮನೆಯನ್ನು ಭದ್ರವಾಗಿ ಕಾಯಬೇಕು. ಇದಲ್ಲದೆ
ಸಬ್ಬತ್‌ದಿನದಲ್ಲಿ ಕಾಯುವದಕ್ಕಾಗಿ ಬರುವ ನಿಮ್ಮ
ಇಮ್ಮಡಿಯಾದ ಸೈನ್ಯವು ಯೆಹೋವನ ಆಲಯ
8 ದಲ್ಲಿರುವ ಅರಸನನ್ನು ಕಾಯಬೇಕು. ನೀವು ಕೈಯಲ್ಲಿ
ಆಯುಧಗಳನ್ನು ಹಿಡಿದುಕೊಂಡು ಅವನ ಸುತ್ತಲೂ
ನಿಂತು ನಿಮ್ಮ ಗುಂಪಿನಲ್ಲಿ ನುಗ್ಗುವಂಥವರನ್ನು ಸಂಹ
ರಿಸಬೇಕು. ಅರಸನು ಹೊರಗೆ ಹೋಗಿ ಬರು
ವಾಗೆಲ್ಲಾ ನೀವು ಅವನ ಜೊತೆಯಲ್ಲೇ ಇರಬೇಕು.
9 ಇದೇ ನನ್ನ ಅಪ್ಪಣೆ ಎಂದು ಹೇಳಿದನು. ಯಾಜ
ಕನಾದ ಯೆಹೋಯಾದಾವನು ಆಜ್ಞಾಪಿಸಿದಂತೆ
ಶತಾಧಿಪತಿಗಳು ಸಬ್ಬತ್‌ದಿನದಲ್ಲಿ ಮನೆಗೆ ಹೋಗ
ತಕ್ಕ ಮತ್ತು ಕಾಯುವದಕ್ಕಾಗಿ ಬರತಕ್ಕ ಸಿಪಾ
ಯಿಗಳನ್ನು ಕರಕೊಂಡು ಅವನ ಬಳಿಗೆ ಬಂದರು.
0 ಅವನು ಆ ಶತಾಧಿಪತಿಗಳಿಗೆ ಯೆಹೋವನ ಆಲಯ
ದಲ್ಲಿ ಇಡಲ್ಪಟ್ಟಿದ್ದ ದಾವೀದನ ಬರ್ಜಿಯನ್ನೂ ಗುರಾಣಿ
1 ಗಳನ್ನೂ ಕೊಟ್ಟನು. ಕಾವಲುದಂಡಿನವರು ಆಯುಧ
ಹಿಡಿದುಕೊಂಡು ಅರಸನನ್ನು ಕಾಯುವದಕ್ಕೋಸ್ಕರ
ದೇವಾಲಯದ ದಕ್ಷಿಣದಿಕ್ಕಿನ ಮೂಲೆಯಿಂದ ಯಜ್ಞ
ವೇದಿಯ ವರೆಗೂ ಅಲ್ಲಿಂದ ಉತ್ತರದಿಕ್ಕಿನ ಮೂಲೆಯ
2 ವರೆಗೂ ಸಾಲಾಗಿ ನಿಂತರು. ಯೆಹೋಯಾದಾವನು
ರಾಜಪುತ್ರನನ್ನು ಹೊರಗೆ ಕರಕೊಂಡು ಬಂದು ಅವನ
ತಲೆಯ ಮೇಲೆ ಕಿರೀಟವನ್ನಿಟ್ಟು ಕೈಯಲ್ಲಿ ಧರ್ಮ
ಶಾಸ್ತ್ರವನ್ನು ಕೊಟ್ಟು ಅವನಿಗೆ ರಾಜ್ಯಾಭಿಷೇಕಮಾಡಿ
ದನು. ಕೂಡಲೆ ಜನರು ಚಪ್ಪಾಳೆಹೊಡೆದು ಅರಸನು
ಚಿರಂಜೀವಿಯಾಗಿರಲಿ ಎಂದು ಕೂಗಿದರು.
3 ಅತಲ್ಯಳು ಕಾವಲುದಂಡಿನವರ ಮತ್ತು ಇತರ
ಜನರ ಗದ್ದಲವನ್ನು ಕೇಳಿ ಅವರು ಕೂಡಿದ್ದ ಯೆಹೋ
4 ವನ ಆಲಯಕ್ಕೆ ಬಂದಳು. ಅಲ್ಲಿ ಅರಸನು ಪದ್ಧ
ತಿಯ ಪ್ರಕಾರ ಸ್ತಂಭದ ಬಳಿಯಲ್ಲಿ ನಿಂತಿದ್ದನು;
ಅಧಿಪತಿಗಳೂ ತುತೂರಿಗಳನ್ನು ಊದುವವರೂ ಅರ
ಸನ ಹತ್ತಿರ ಇದ್ದರು. ಸಾಧಾರಣ ಜನರೆಲ್ಲರೂ ಸಂತೋ
ಷದಿಂದ ಕೊಂಬೂದುತ್ತಿದ್ದರು. ಇದನ್ನು ಕಂಡ ಕೂಡ
ಲೆ ಆಕೆಯು ಬಟ್ಟೆಗಳನ್ನು ಹರಿದುಕೊಂಡು—ದ್ರೋಹ,
5 ದ್ರೋಹ ಎಂದು ಕೂಗಿದಳು. ಆಗ ಯಾಜಕನಾದ
ಯೆಹೋಯಾದಾವನು ಸೇನಾನಿಗಳಾದ ಶತಾಧಿಪತಿ
ಗಳಿಗೆ—ಈಕೆಯನ್ನು ಯೆಹೋವನ ಆಲಯದಲ್ಲಿ
ಕೊಲ್ಲಬೇಡಿರಿ; ಎರಡು ಸಾಲು ಸಿಪಾಯಿಗಳು ಈಕೆ
ಯನ್ನು ನಡುವೆ ಮಾಡಿ ಹೊರಗೆ ಕರಕೊಂಡು ಹೋಗ
ಲಿ; ಮತ್ತು ಈಕೆಯನ್ನು ಹಿಂಬಾಲಿಸುವಂಥವರನ್ನು
ಕತ್ತಿಯಿಂದ ಕೊಲ್ಲಿರಿ ಎಂದು ಆಜ್ಞಾಪಿಸಿದನು. ಅವ
ರು ಆಕೆಯನ್ನು ಹಿಡಿದು ಕುದುರೆಗಳ ಬಾಗಲಿನಿಂದ
ಅರಮನೆಗೆ ಒಯ್ದು ಅಲ್ಲಿ ಹತಿಸಿದರು.
ಅನಂತರ ಯೆಹೋಯಾದಾವನ ಪ್ರೇರಣೆಯಿಂದ 17
ಅರಸನೂ ಪ್ರಜೆಗಳೂ ತಾವು ಯೆಹೋವನ ಪ್ರಜೆ
ಗಳಾಗಿರುವದಾಗಿ ಆತನಿಗೆ ಪ್ರಮಾಣಮಾಡಿದರು.
ಇದಲ್ಲದೆ ರಾಜಪ್ರಜೆಗಳಿಗೂ ಒಡಂಬಡಿಕೆಯಾಯಿ
ತು. ಯೆಹೂದ್ಯರೆಲ್ಲರೂ ಬಾಳನ ದೇವಸ್ಥಾನಕ್ಕೆ ಹೋ 18
ಗಿ ಬಾಳನ ಪೂಜಾರಿಯಾದ ಮತ್ತಾನನನ್ನು ವೇದಿಗಳ
ಮುಂದೆಯೇ ಕೊಂದು ದೇವಸ್ಥಾನವನ್ನೂ ಅದರಲ್ಲಿದ್ದ
ವೇದಿ ವಿಗ್ರಹಗಳನ್ನೂ ಸಂಪೂರ್ಣವಾಗಿ ಹಾಳುಮಾಡಿ
ದರು. ಯೆಹೋಯಾದಾವನು ದೇವಾಲಯಕ್ಕೆ ಕಾವ
ಲಿಟ್ಟು ಶತಾಧಿಪತಿಗಳು, ಕಾರಿ ಎನಿಸಿಕೊಳ್ಳುವ ಸೈನ್ಯ, 19
ಕಾವಲುದಂಡು, ಸಾಧಾರಣ ಜನರು ಇವರೊಡನೆ
ಅರಸನನ್ನು ಯೆಹೋವನ ಆಲಯದಿಂದ ಕಾವಲು
ದಂಡಿನವರ ಬಾಗಲಿನ ಮಾರ್ಗವಾಗಿ ಅರಮನೆಗೆ ಕರ
ಕೊಂಡು ಹೋಗಿ ರಾಜಸಿಂಹಾಸನದ ಮೇಲೆ ಕುಳ್ಳಿರಿಸಿ
ದನು. ದೇಶದವರೆಲ್ಲರೂ ಬಹಳವಾಗಿ ಸಂತೋಷ 20
ಪಟ್ಟರು; ಪಟ್ಟಣದಲ್ಲಿ ಶಾಂತಿಯಿತ್ತು; ಅತಲ್ಯಳನ್ನು
ಅರಮನೆಯಲ್ಲಿ ಕತ್ತಿಯಿಂದ ಸಂಹರಿಸಿದರು. ಯೆಹೋ 21
ವಾಷನು ಅರಸನಾದಾಗ ಏಳು ವರುಷದವನಾಗಿದ್ದನು.

ಯೆಹೂದದ ಅರಸನಾದ ಯೆಹೋವಾಷನು.

**12**

ಯೆಹೋವಾಷನು ಯೇಹುವಿನ ಆಳಿಕೆಯ ಏಳ
ನೆಯ ವರುಷದಲ್ಲಿ ಅರಸನಾಗಿ ಯೆರೂಸಲೇಮಿನಲ್ಲಿ
ನಾಲ್ವತ್ತು ವರುಷ ಆಳಿದನು. ಬೇರ್ಷೆಬದವಳಾದ ಚಿಬ್ಯ
ಳು ಅವನ ತಾಯಿ. ಯಾಜಕನಾದ ಯೆಹೋಯಾ 2
ದಾವನು ಅವನಿಗೆ ಬೋಧಕನಾಗಿದ್ದ ಕಾಲದಲ್ಲಿ ಅವನು
ಯೆಹೋವನ ದೃಷ್ಟಿಯಲ್ಲಿ ಒಳ್ಳೆಯವನಾಗಿಯೇ ನಡೆ
ದುಕೊಳ್ಳುತ್ತಿದ್ದನು. ಆದರೆ ಅವನು ಪೂಜಾಸ್ಥಳಗ 3
ಳನ್ನು ತೆಗೆದುಹಾಕಲಿಲ್ಲವಾದದರಿಂದ ಜನರು ಅವುಗಳ
ಮೇಲೆಯೇ ಯಜ್ಞಧೂಪಗಳನ್ನು ಅರ್ಪಿಸುತ್ತಿದ್ದರು.
ಯೆಹೋವಾಷನು ಯಾಜಕರಿಗೆ—ನೀವು ಯೆ 4
ಹೋವನ ಆಲಯಕ್ಕೆ ಸೇರುವ ಎಲ್ಲಾ ಪರಿಶುದ್ಧದ್ರವ್ಯ
ವನ್ನು ಅಂದರೆ ಖಾನೇಷುಮಾರಿಯಲ್ಲಿ ಲೆಕ್ಕಿಸಲ್ಪಟ್ಟ
ಪ್ರತಿಯೊಬ್ಬನು ತಂದುಕೊಡುವ ಹಣ, ದೇವರಿಗೆ ಪ್ರತಿ
ಷ್ಠಿತನಾದ ಮನುಷ್ಯನು ತನ್ನ ಪ್ರಾಣವನ್ನು ಬಿಡಿಸಿಕೊ
ಳ್ಳುವದಕ್ಕಾಗಿ ತರುವ ಹಣ, ಜನರು ಯೆಹೋವನ
ಆಲಯಕ್ಕೆ ಸ್ವೇಚ್ಛೆಯಿಂದ ತಂದೊಪ್ಪಿಸುವ ಹಣ ಇವು
ಗಳನ್ನು ತೆಗೆದುಕೊಂಡು ದೇವಾಲಯವು ಎಲ್ಲೆಲ್ಲಿ 5
ಶಿಥಿಲವಾಗಿರುತ್ತದೆಂದು ನೋಡಿ ಅದನ್ನು ಸರಿಮಾಡು
ವದಕ್ಕೋಸ್ಕರ ವಿನಿಯೋಗಿಸಿರಿ; ಪ್ರತಿಯೊಬ್ಬನೂ ತನ್ನ
ತನ್ನ ಪರಿಚಿತರಿಂದಲೇ ಹಣತೆಗೆದುಕೊಳ್ಳಬೇಕು ಎಂದು
ಆಜ್ಞಾಪಿಸಿದನು. ಯಾಜಕರು ಅರಸನಾದ ಯೆಹೋ 6
ವಾಷನ ಆಳಿಕೆಯ ಇಪ್ಪತ್ತಮೂರನೆಯ ವರುಷದ
ವರೆಗೂ ದೇವಾಲಯವನ್ನು ಜೀರ್ಣೋದ್ಧಾರಮಾಡಿರ
ಲಿಲ್ಲ. ಆದದರಿಂದ ಅವನು ಯೆಹೋಯಾದಾವ 7
ಮೊದಲಾದ ಯಾಜಕರನ್ನು ಕರೆದು ಅವರಿಗೆ—ನೀವು
ಈ ವರೆಗೂ ದೇವಾಲಯವನ್ನೇಕೆ ಜೀರ್ಣೋದ್ಧಾರ
ಮಾಡಲಿಲ್ಲ? ಇನ್ನು ಮುಂದೆ ನಿಮ್ಮ ಪರಿಚಿತರು ತಂದು

ಕೊಡುವ ಹಣವನ್ನು ನಿಮ್ಮ ಕೈಯಲ್ಲಿಟ್ಟುಕೊಳ್ಳದೆ
ಕೂಡಲೆ ಅದನ್ನು ದೇವಾಲಯದ ಜೀರ್ಣೋದ್ಧಾರ
8 ಕ್ಕಾಗಿ ಕೊಡಿರಿ ಎಂದು ಹೇಳಿದನು. ಆಗ ಯಾಜಕರು
ಅವನಿಗೆ—ನಾವು ಇನ್ನು ಮುಂದೆ ಜನರಿಂದ ಹಣ
ತೆಗೆದುಕೊಳ್ಳುವದಿಲ್ಲ, ದೇವಾಲಯದ ಜೀರ್ಣೋದ್ಧಾ
ರಕ್ಕೆ ಕೈಹಾಕುವದಿಲ್ಲ ಎಂಬದಾಗಿ ಮಾತುಕೊಟ್ಟರು.
9 ಯಾಜಕನಾದ ಯೆಹೋಯಾದಾವನು ಒಂದು ಪೆಟ್ಟಿಗೆ
ಯನ್ನು ತೆಗೆದುಕೊಂಡು ಬಂದು ಅದರ ಮುಚ್ಚಳದಲ್ಲಿ
ತೂತುಮಾಡಿ ಅದನ್ನು ಯೆಹೋವನ ಆಲಯದ ಬಾಗ
ಲಿನ ಬಲಗಡೆಯಲ್ಲಿ ಯಜ್ಞವೇದಿಯ ಹತ್ತಿರ ಇಟ್ಟನು.
ದ್ವಾರಪಾಲಕರಾದ ಯಾಜಕರು ಯೆಹೋವನ ಆಲ
ಯಕ್ಕೆ ತರಲ್ಪಟ್ಟ ಹಣವನ್ನೆಲ್ಲಾ ಅದರಲ್ಲಿಯೇ ಹಾಕಿ
10 ಸುತ್ತಿದ್ದರು. ಪೆಟ್ಟಿಗೆಯಲ್ಲಿ ತಕ್ಕಷ್ಟು ಹಣಕೂಡಿದೆ
ಯೆಂದು ಕಂಡು ಬಂದಾಗೆಲ್ಲಾ ರಾಜಲೇಖಕನೂ ಮಹಾ
ಯಾಜಕನೂ ಬಂದು ಅದನ್ನು ಚೀಲಗಳಲ್ಲಿ ಹಾಕಿ
ತೂಕಮಾಡಿ ಯೆಹೋವನ ಆಲಯದ ಹಣವು ಇಷ್ಟಿ
11 ಷ್ಟು ಆಯಿತೆಂದು ಬರೆದುಕೊಂಡು ಅದನ್ನು ಆಲಯದ
ಕೆಲಸವನ್ನು ನಡಿಸುವ ಮೊಕ್ತೇಸರರಿಗೆ ಒಪ್ಪಿಸುವರು;
ಇವರು ಅದನ್ನು ಅಲ್ಲಿ ಕೆಲಸಮಾಡುವ ಬಡಗಿ, ಶಿಲ್ಪಿ,
12 ಉಪ್ಪಾರ, ಕಲ್ಲುಕುಟಿಕ ಇವರ ಸಂಬಳಕ್ಕಾಗಿಯೂ
ಮರ, ಕೆತ್ತಿದ ಕಲ್ಲು ಇವುಗಳನ್ನು ಕೊಂಡುಕೊಳ್ಳುವ
ದಕ್ಕಾಗಿಯೂ ಆಲಯದ ಜೀರ್ಣೋದ್ಧಾರದ ಬೇರೆ
13 ಎಲ್ಲಾ ವೆಚ್ಚಕ್ಕಾಗಿಯೂ ಉಪಯೋಗಿಸುವರು. ಯೆ
ಹೋವನ ಆಲಯಕ್ಕೆ ತರಲ್ಪಟ್ಟ ಹಣವನ್ನು ಜೀರ್ಣೋ
ದ್ಧಾರಕಾರ್ಯದವರ ಸಂಬಳಕ್ಕಾಗಿ ಉಪಯೋಗಿಸಿ
14 ದರೇ ಹೊರತು ಯೆಹೋವನ ಆಲಯದ ಬೆಳ್ಳಿಯ
ಬಟ್ಟಲು, ಕತ್ತರಿ, ಬೋಗುಣಿ, ತುತೂರಿ, ಬೆಳ್ಳಿಬಂಗಾರದ
ಪಾತ್ರೆ ಇವುಗಳನ್ನು ಮಾಡುವದಕ್ಕಾಗಿ ಉಪಯೋಗಿ
15 ಸಲಿಲ್ಲ. ಕೆಲಸಗಾರರಿಗೆ ಸಂಬಳಕೊಡುವ ಮೊಕ್ತೇ
ಸರರು ನಂಬಿಗಸ್ತರಾಗಿದ್ದದರಿಂದ ಅವರ ವಶಕ್ಕೆ ಕೊಡ
16 ಲ್ಪಟ್ಟ ಹಣದ ಲೆಕ್ಕವನ್ನು ಯಾರೂ ಕೇಳಲಿಲ್ಲ. ಅಪ
ರಾಧ ಪ್ರಾಯಶ್ಚಿತ್ತಕ್ಕಾಗಿಯೂ ದೋಷಪರಿಹಾರಕ್ಕಾಗಿ
ಯೂ ತರಲ್ಪಟ್ಟ ಹಣವು ಯಾಜಕರ ಭಾಗವಾಗಿತ್ತು;
ಅದು ಯೆಹೋವನ ಆಲಯಕ್ಕೆ ಸೇರಲಿಲ್ಲ.
17 ಇದೇ ಕಾಲದಲ್ಲಿ ಅರಾಮ್ಯರ ಅರಸನಾದ ಹಜಾ
ಯೇಲನು ಬಂದು ಗತ್ ಊರಿಗೆ ಮುತ್ತಿಗೆಹಾಕಿ
ಅದನ್ನು ಸ್ವಾಧೀನಪಡಿಸಿಕೊಂಡು ಅಲ್ಲಿಂದ ಯೆರೂ
18 ಸಲೇಮಿಗೆ ವಿರೋಧವಾಗಿ ಹೊರಟನು. ಯೆಹೂದದ
ಅರಸನಾದ ಯೆಹೋವಾಷನು ಇದನ್ನು ಕೇಳಿ ತಾನೂ
ತನ್ನ ಪೂರ್ವಿಕರಾದ ಯೆಹೋಷಾಫಾಟ್, ಯೆಹೋ
ರಾಮ್, ಅಹಜ್ಯ ಎಂಬ ಯೆಹೂದರಾಜರೂ ದೇವ
ಸ್ಥಾನಕ್ಕೆ ಕಾಣಿಕೆಯಾಗಿ ಕೊಟ್ಟ ಒಡವೆಗಳು, ಯೆಹೋ
ವನ ಆಲಯದ ಮತ್ತು ಅರಮನೆಯ ಭಂಡಾರಗಳ
ಲ್ಲಿದ್ದ ಬಂಗಾರ ಇವುಗಳನ್ನು ತೆಗೆದುಕೊಂಡು ಅರಾ
ಮ್ಯರ ಅರಸನಾದ ಹಜಾಯೇಲನಿಗೆ ಕಳುಹಿಸಿದನು.
ಆಗ ಅವನು ಯೆರೂಸಲೇಮನ್ನು ಬಿಟ್ಟು ಹೋದನು.
19 ಯೆಹೋವಾಷನ ಉಳಿದ ಚರಿತ್ರೆಯೂ ಅವನ ಎಲ್ಲಾ
ಕೃತ್ಯಗಳೂ ಯೆಹೂದರಾಜಕಾಲವೃತ್ತಾಂತ ಎಂಬ
20 ಗ್ರಂಥದಲ್ಲಿ ಬರೆದಿರುತ್ತವೆ. ಯೆಹೋವಾಷನ ಉ
ದ್ಯೋಗಸ್ಥರು ಅವನಿಗೆ ವಿರೋಧವಾಗಿ ಒಳಸಂಚು
ಮಾಡಿದರು. ಅವರಲ್ಲಿ ಶಿಮೆಯಾತನ ಮಗನಾದ
ಯೋಜಾಕಾರ್, ಶೋಮೇರನ ಮಗನಾದ ಯೆಹೋ
ಜಾಬಾದ್ ಎಂಬವರು ಸಿಲ್ಲಾ ಊರಿಗೆ ಹೋಗುವ
ಗಟ್ಟದ ದಾರಿಯಲ್ಲಿರುವ ಮಿಲ್ಲೋಕೋಟೆಯಲ್ಲಿ ಅವ
ನನ್ನು ಕೊಂದರು. ಅವನ ಜನರು ಅವನ ಶವವನ್ನು
ದಾವೀದನಗರದೊಳಗೆ ಅವನ ಕುಟುಂಬಶ್ಮಶಾನಭೂ
ಮಿಯಲ್ಲಿ ಸಮಾಧಿಮಾಡಿದರು. ಅವನಿಗೆ ಬದಲಾಗಿ
ಅವನ ಮಗನಾದ ಅಮಚ್ಯನು ಅರಸನಾದನು.

ಇಸ್ರಾಯೇಲ್ಯರ ಅರಸನಾದ ಯೆಹೋವಾಹಾಜನು.

ಯೆಹೂದದ ಅರಸನೂ ಅಹಜ್ಯನ ಮಗನೂ ಆದ 13
ಯೆಹೋವಾಷನ ಆಳಿಕೆಯ ಇಪ್ಪತ್ತಮೂರನೆಯ
ವರುಷದಲ್ಲಿ ಯೇಹುವಿನ ಮಗನಾದ ಯೆಹೋವಾ
ಹಾಜನು ಇಸ್ರಾಯೇಲ್ಯರ ಅರಸನಾಗಿ ಸಮಾರ್ಯ
ದಲ್ಲಿ ಹದಿನೇಳು ವರುಷ ಆಳಿದನು. ಅವನು ಇಸ್ರಾ
ಯೇಲ್ಯರನ್ನು ಪಾಪಕ್ಕೆ ಪ್ರೇರಿಸಿದ ನೆಬಾಟನ ಮಗ
ನಾದ ಯಾರೊಬ್ಬಾಮನ ಮಾರ್ಗವನ್ನು ಬಿಡದೆ ಯೆ
ಹೋವನ ದೃಷ್ಟಿಯಲ್ಲಿ ದ್ರೋಹಿಯಾದನು. ಆದ
ದರಿಂದ ಯೆಹೋವನು ಇಸ್ರಾಯೇಲ್ಯರ ಮೇಲೆ ಕೋ
ಪಗೊಂಡು ಅವರನ್ನು ಅರಾಮ್ಯರ ಅರಸನಾದ ಹಜಾ
ಯೇಲನ ಕೈಗೂ ಅವನ ಮಗನಾದ ಬೆನ್ಹದದನ
ಕೈಗೂ ಒಪ್ಪಿಸಿದನು. ಅವರು ಯೆಹೋವಾಹಾಜನ
ಜೀವಮಾನದಲ್ಲೆಲ್ಲಾ ಇವರ ಕೈಯಲ್ಲಿದ್ದರು. (ಯೆ
ಹೋವಾಹಾಜನು ಯೆಹೋವನಿಗೆ ಮೊರೆಯಿಟ್ಟನು
ಆತನು ಅವನ ಮೊರೆಯನ್ನು ಲಾಲಿಸಿ ಅರಾಮ್ಯರ
ಅರಸನಿಂದ ಬಹಳವಾಗಿ ಬಾಧಿಸಲ್ಪಟ್ಟ ಇಸ್ರಾಯೇ
ಲ್ಯರ ಮೇಲೆ ಕಟಾಕ್ಷವಿಟ್ಟು ಅವರಿಗೆ ಒಬ್ಬ ರಕ್ಷಕ
ನನ್ನು ಅನುಗ್ರಹಿಸಿದನು. ಇವನ ಮುಖಾಂತರವಾಗಿ
ಅವರು ಅರಾಮ್ಯರ ಕೈಯಿಂದ ಬಿಡುಗಡೆಯಾಗಿ
ಮುಂಚಿನಂತೆ ತಮ್ಮ ತಮ್ಮ ಮನೆಗಳಲ್ಲಿ ಸುರಕ್ಷಿತ
ರಾಗಿ ವಾಸಿಸುವವರಾದರು. ಆದರೂ ಅವರು ತಮ್ಮ
ನ್ನು ಪಾಪಕ್ಕೆ ಪ್ರೇರಿಸಿದ ಯಾರೊಬ್ಬಾಮನ ಮನೆಯ
ವರ ಮಾರ್ಗದಲ್ಲಿ ನಡೆದರು; ಅದನ್ನು ಬಿಡಲೇ ಇಲ್ಲ.
ಸಮಾರ್ಯದಲ್ಲಿ ಅಶೇರವಿಗ್ರಹಸ್ತಂಭವು ಇದ್ದೇ
ಇತ್ತು.) ಯೆಹೋವಾಹಾಜನಿಗೆ ಐವತ್ತು ಮಂದಿ
ರಾಹುತರು, ಹತ್ತು ರಥಗಳು, ಹತ್ತುಸಾವಿರ ಮಂದಿ
ಕಾಲಾಳುಗಳು ಮಾತ್ರ ಉಳಿದರು. ಅರಾಮ್ಯರ ಅರ
ಸನು ಬೇರೆ ಎಲ್ಲರನ್ನೂ ಸಂಹರಿಸಿ ಕಣದ ಧೂಳಿನಂತೆ
ಮಾಡಿದನು. ಯೆಹೋವಾಹಾಜನ ಉಳಿದ ಚರಿತ್ರೆಯೂ
ಅವನ ಶೂರಕೃತ್ಯಗಳ ವಿವರವೂ ಇಸ್ರಾಯೇಲ್‌ರಾಜ
ಕಾಲವೃತ್ತಾಂತ ಎಂಬ ಗ್ರಂಥದಲ್ಲಿ ಬರೆದಿರುತ್ತವೆ.
ಅವನು ಪಿತೃಗಳ ಬಳಿಗೆ ಸೇರಲು ಅವನ ಶವವನ್ನು
ಸಮಾರ್ಯದಲ್ಲಿ ಸಮಾಧಿಮಾಡಿದರು. ಅವನಿಗೆ ಬದ
ಲಾಗಿ ಅವನ ಮಗನಾದ ಯೋವಾಷನು ಅರಸನಾದನು.

ಇಸ್ರಾಯೇಲ್ಯರ ಅರಸನಾದ ಯೋವಾಷನೂ
ಎಲೀಷನ ಮರಣವೂ.

ಯೆಹೂದದ ಅರಸನಾದ ಯೆಹೋವಾಷನ ಆಳಿಕೆ
ಯ ಮೂವತ್ತೇಳನೆಯ ವರುಷದಲ್ಲಿ ಯೆಹೋವಾಹಾ

ಜನ ಮಗನಾದ ಯೋವಾಷನು ಇಸ್ರಾಯೇಲ್ಯರ ಅರಸ
ನಾಗಿ ಸಮಾರ್ಯದಲ್ಲಿ ಹದಿನಾರು ವರುಷ ಆಳಿದನು.
1 ಇವನು ಇಸ್ರಾಯೇಲ್ಯರನ್ನು ಪಾಪಕ್ಕೆ ಪ್ರೇರಿಸಿದ ನೆಬಾ
ಟನ ಮಗನಾದ ಯಾರೊಬ್ಬಾಮನ ಮಾರ್ಗವನ್ನು
ಬಿಡದೆ ಯೆಹೋವನ ದೃಷ್ಟಿಯಲ್ಲಿ ದ್ರೋಹಿಯಾದನು.
2 ಇವನ ಉಳಿದ ಚರಿತ್ರೆಯೂ ಎಲ್ಲಾ ಶೂರಕೃತ್ಯಗಳೂ
ಇವನು ಯೆಹೂದ್ಯರ ಅರಸನಾದ ಅಮಚ್ಯನು ಎಂಬವ
ನೊಡನೆ ನಡಿಸಿದ ಯುದ್ಧದ ವಿವರವೂ ಇಸ್ರಾಯೇಲ್
ರಾಜಕಾಲವೃತ್ತಾಂತ ಎಂಬ ಗ್ರಂಥದಲ್ಲಿ ಬರೆದಿರುತ್ತವೆ.
3 ಇವನು ಪಿತೃಗಳ ಬಳಿಗೆ ಸೇರಲು ಇವನ ಶವವನ್ನು
ಸಮಾರ್ಯದೊಳಗೆ ಇಸ್ರಾಯೇಲ್‌ರಾಜಶ್ಮಶಾನದಲ್ಲಿ
ಸಮಾಧಿಮಾಡಿದರು. ಇವನ ತರುವಾಯ ಯಾರೊ
ಬ್ಬಾಮನು ಸಿಂಹಾಸನವನ್ನೇರಿದನು.
4 ಎಲೀಷನು ಮರಣಕರರೋಗದಲ್ಲಿ ಬಿದ್ದನು. ಇಸ್ರಾ
ಯೇಲ್ಯರ ಅರಸನಾದ ಯೋವಾಷನು ಇದನ್ನು ಕೇಳಿ
ಅವನ ಬಳಿಗೆ ಹೋಗಿ—ನನ್ನ ತಂದೆಯೇ, ನನ್ನ
ತಂದೆಯೇ, ಇಸ್ರಾಯೇಲ್ಯರಿಗೆ ರಥರಥಾಶ್ವಬಲಗಳಾಗಿ
ದ್ದವನೇ ಎಂದು ಕೂಗುತ್ತಾ ಅವನ ಮುಖದ ಮೇಲೆ
5 ಬಿದ್ದು ಬಹಳವಾಗಿ ಅತ್ತನು. ಆಗ ಎಲೀಷನು ಇಸ್ರಾ
ಯೇಲ್ಯರ ಅರಸನಿಗೆ—ಬಿಲ್ಲನ್ನೂ ಬಾಣಗಳನ್ನೂ ತರಿಸು
6 ಎಂದು ಹೇಳಿದನು; ಅವನು ತರಿಸಿದನು. ಆಗ ಅವ
ನಿಗೆ—ಬಿಲ್ಲನ್ನು ಹಿಡಿದುಕೋ ಎಂದು ಆಜ್ಞಾಪಿಸಿದನು.
ಅವನು ಹಿಡಿದುಕೊಳ್ಳಲು ತನ್ನ ಕೈಯನ್ನು ಅವನ ಕೈ
7 ಮೇಲೆ ಇಟ್ಟು—ಮೂಡಣ ದಿಕ್ಕಿಗಿರುವ ಕಿಟಿಕಿಯನ್ನು
ತೆರೆ ಎಂದನು. ಅವನು ತೆರೆದನು. ಅನಂತರ—ಬಾಣವ
ನ್ನೆಸೆ ಎಂದು ಆಜ್ಞಾಪಿಸಿದನು. ಅವನು ಎಸೆಯಲು—

ಇದು ಜಯಪ್ರದವಾದ ಯೆಹೋವನ ಬಾಣ;
ಅರಾಮ್ಯರನ್ನು ಜಯಿಸುವ ಬಾಣ.
ನೀನು ಅರಾಮ್ಯರನ್ನು ಅಫೇಕದಲ್ಲಿ ಸೋಲಿಸಿ
ಸಂಹರಿಸಿಬಿಡುವಿ

8 ಎಂದು ಹೇಳಿದನು. ಇದಲ್ಲದೆ ಎಲೀಷನು ಇಸ್ರಾಯೇ
ಲ್ಯರ ಅರಸನಿಗೆ—ಬಾಣಗಳನ್ನು ತೆಗೆದುಕೋ ಎಂದು
ಆಜ್ಞಾಪಿಸಿದಾಗ ಅವನು ತೆಗೆದುಕೊಳ್ಳಲು—ಇವುಗ
ಳಿಂದ ನೆಲವನ್ನು ಹೊಡಿ ಅಂದನು. ಅವನು ಮೂರು
ಸಾರಿ ಹೊಡೆದು ಸುಮ್ಮನೆ ನಿಂತನು. ಆಗ ದೇವರ
ಮನುಷ್ಯನು ಅವನ ಮೇಲೆ ಕೋಪಗೊಂಡು—ನೀನು
ಐದಾರು ಸಾರಿ ಹೊಡೆಯಬೇಕಾಗಿತ್ತು. ಹಾಗೆ ಮಾಡಿ
ದ್ದರೆ ಅರಾಮ್ಯರು ನಿರ್ನಾಮವಾಗಿ ಹೋಗುವ ವರೆಗೂ
ಅವರ ಮೇಲೆ ನಿನಗೆ ಜಯದೊರಕುತ್ತಿತ್ತು. ನೀನು
ಮೂರೇ ಸಾರಿ ಹೊಡೆದದರಿಂದ ಅವರನ್ನು ಮೂರು
ಸಾರಿ ಮಾತ್ರ ಸೋಲಿಸುವಿ ಎಂದು ಹೇಳಿದನು.
ಎಲೀಷನು ಮೃತಿಹೊಂದಲು ಅವನ ಶವವನ್ನು
ಸಮಾಧಿಮಾಡಿದರು. ಮೋವಾಬ್ಯರು ಪ್ರತಿವರುಷದ
ಪ್ರಾರಂಭದಲ್ಲಿ ಸುಲಿಗೆಮಾಡುವದಕ್ಕೋಸ್ಕರ ಗುಂಪು
ಗುಂಪಾಗಿ ಬರುತ್ತಿದ್ದರು. ಒಂದು ದಿವಸ ಜನರು
ಒಬ್ಬ ಸತ್ತವನನ್ನು ಸಮಾಧಿಮಾಡುವದಕ್ಕೆ ಹೋದಾಗ
ಮೋವಾಬ್ಯರ ಗುಂಪು ಬರುತ್ತಿರುವದನ್ನು ಕಂಡು ಶವ
ವನ್ನು ಎಲೀಷನ ಸಮಾಧಿಯಲ್ಲಿ ಬಿಸಾಡಿ ಓಡಿಹೋ
ದರು. ಸತ್ತ ಮನುಷ್ಯನು ಎಲೀಷನ ಎಲುಬುಗಳಿಗೆ
ತಗುಲಿದ ಕೂಡಲೆ ಉಜ್ಜೀವಿಸಿ ಎದ್ದು ನಿಂತನು.

ಅರಾಮ್ಯರ ಅರಸನಾದ ಹಜಾಯೇಲನು ಯೆ 22
ಹೋವಾಹಾಜನ ಆಳಿಕೆಯಲ್ಲೆಲ್ಲಾ ಇಸ್ರಾಯೇಲ್ಯ
ರನ್ನು ಪೀಡಿಸುತ್ತಿದ್ದನು. ಆದರೂ ಯೆಹೋವನು 23
ಅವರನ್ನು ಸಂಪೂರ್ಣವಾಗಿ ಹಾಳುಮಾಡಗೊಡಲಿಲ್ಲ.
ಅವರನ್ನು ಈ ಕಾಲದಲ್ಲಿಯೂ ತನ್ನ ಸನ್ನಿಧಿಯಿಂದ
ತಳ್ಳಿಬಿಡಲಿಲ್ಲ. ತಾನು ಅಬ್ರಹಾಮ್ ಇಸಾಕ್
ಯಾಕೋಬರೊಡನೆ ಮಾಡಿಕೊಂಡ ಒಡಂಬಡಿಕೆಯನ್ನು
ನೆನಸಿ ಅವರಿಗೆ ದಯೆತೋರಿಸಿದನು; ಕರುಳುಮರು
ಗಿದವನಾಗಿ ಅವರಿಗೆ ಪ್ರಸನ್ನನಾದನು. ಅರಾಮ್ಯರ 24
ಅರಸನಾದ ಹಜಾಯೇಲನು ಮರಣಹೊಂದಲು ಅವ
ನಿಗೆ ಬದಲಾಗಿ ಅವನ ಮಗನಾದ ಬೆನ್ಹದದನು ಅರಸ
ನಾದನು. ಯೆಹೋವಾಹಾಜನ ಮಗನಾದ ಯೋವಾ 25
ಷನು ತನ್ನ ತಂದೆಯ ಕಾಲದಲ್ಲಿ ಹಜಾಯೇಲನು
ಯುದ್ಧಮಾಡಿ ಕಿತ್ತುಕೊಂಡಿದ್ದ ಪಟ್ಟಣಗಳನ್ನು ಬೆನ್ಹ
ದದನಿಂದ ತಿರಿಗಿ ತೆಗೆದುಕೊಂಡನು. ಅವನನ್ನು
ಮೂರು ಸಾರಿ ಸೋಲಿಸಿ ಇಸ್ರಾಯೇಲ್ಯರ ಎಲ್ಲಾ
ಪಟ್ಟಣಗಳನ್ನು ಹಿಂದಕ್ಕೆ ತೆಗೆದುಕೊಂಡನು.

### ಯೆಹೂದದ ಅರಸನಾದ ಅಮಚ್ಯನು.

**14**

ಇಸ್ರಾಯೇಲ್ಯರ ಅರಸನಾದ ಯೆಹೋವಾಹಾ
ಜನ ಮಗ ಯೋವಾಷನ ಆಳಿಕೆಯ ಎರಡನೆಯ
ವರುಷದಲ್ಲಿ ಯೆಹೂದದ ಅರಸನಾದ ಯೆಹೋವಾಷನ
ಮಗ ಅಮಚ್ಯ ಎಂಬವನು ಅರಸನಾದನು. ಇವನು 2
ಪಟ್ಟಕ್ಕೆ ಬಂದಾಗ ಇಪ್ಪತ್ತೈದು ವರುಷದವನಾಗಿದ್ದು
ಯೆರೂಸಲೇಮಿನಲ್ಲಿ ಇಪ್ಪತ್ತೊಂಭತ್ತು ವರುಷ ಆಳಿ
ದನು. ಯೆರೂಸಲೇಮಿನವಳಾದ ಯೆಹೋವದ್ದೀನ್
ಎಂಬಾಕೆಯು ಇವನ ತಾಯಿ. ಇವನು ತನ್ನ ತಂದೆ 3
ಯಾದ ಯೆಹೋವಾಷನ ಮಾರ್ಗದಲ್ಲಿ ತಪ್ಪದೆ ನಡೆದು
ಯೆಹೋವನ ದೃಷ್ಟಿಯಲ್ಲಿ ಒಳ್ಳೆಯವನಾದನು; ಆದ
ರೂ ತನ್ನ ಪೂರ್ವಿಕನಾದ ದಾವೀದನಷ್ಟು ಉತ್ತಮನಾ
ಗಿರಲಿಲ್ಲ. ಇವನ ಕಾಲದಲ್ಲಿ ಪೂಜಾಸ್ಥಳಗಳು 4
ಇನ್ನೂ ತೆಗೆಯಲ್ಪಡಲಿಲ್ಲವಾದದರಿಂದ ಜನರು ಅವುಗ
ಳಲ್ಲಿ ಯಜ್ಞಧೂಪಗಳನ್ನು ಅರ್ಪಿಸುತ್ತಿದ್ದರು. ಇವನು 5
ರಾಜ್ಯವನ್ನು ಭದ್ರಪಡಿಸಿಕೊಂಡ ಕೂಡಲೆ ತನ್ನ
ತಂದೆಯನ್ನು ಕೊಂದ ಉದ್ಯೋಗಸ್ಥರಿಗೆ ಮರಣವಿಧಿ
ಸಿದನು. ಆದರೆ ಮಕ್ಕಳ ಪಾಪದ ದೆಸೆಯಿಂದ 6
ತಂದೆಗೂ ತಂದೆಯ ಪಾಪದ ದೆಸೆಯಿಂದ ಮಕ್ಕಳಿಗೂ
ಮರಣಶಿಕ್ಷೆಯಾಗಬಾರದು; ಪ್ರತಿಯೊಬ್ಬನೂ ತನ್ನ
ಪಾಪಫಲವನ್ನು ತಾನೇ ಅನುಭವಿಸಬೇಕು ಎಂಬದಾಗಿ
ಮೋಶೆಯ ಧರ್ಮಶಾಸ್ತ್ರದಲ್ಲಿರುವ ಯೆಹೋವನ ಅಪ್ಪ
ಣೆಯನ್ನು ನೆನಪುಮಾಡಿಕೊಂಡು ಅವರ ಮಕ್ಕಳನ್ನು
ಕೊಲ್ಲಿಸಲಿಲ್ಲ. ಇದಲ್ಲದೆ ಉಪ್ಪಿನತಗ್ಗಿನಲ್ಲಿ ಎದೋ 7
ಮ್ಯರ ಹತ್ತು ಸಾವಿರ ಮಂದಿ ಸೈನಿಕರನ್ನು ಹೊಡೆದು
ಅವರಿಂದ ಸೆಲ ದುರ್ಗವನ್ನು ಕಿತ್ತುಕೊಂಡು ಅದಕ್ಕೆ
ಯೊಕ್ತೆಯೇಲ್ ಎಂಬ ಹೆಸರಿಟ್ಟನು. ಅದಕ್ಕೆ ಇಂದಿನ
ವರೆಗೂ ಇದೇ ಹೆಸರಿರುತ್ತದೆ.
ಅನಂತರ ಅಮಚ್ಯನು ಯೇಹುವಿನ ಮೊಮ್ಮಗನೂ 8
ಯೆಹೋವಾಹಾಜನ ಮಗನೂ ಇಸ್ರಾಯೇಲ್ಯರ ಅರ
ಸನೂ ಆದ ಯೋವಾಷನ ಬಳಿಗೆ ದೂತರನ್ನು ಕಳು

ಹಿಸಿ ಅವನಿಗೆ—ನಾವು ಒಬ್ಬರನ್ನೊಬ್ಬರು ಎದುರುಗೊ
9 ಳ್ಳೋಣ ಬಾ ಎಂದು ಹೇಳಿಸಿದನು. ಆಗ ಇಸ್ರಾಯೇ
ಲ್ಯರ ಅರಸನಾದ ಯೋವಾಷನು ಯೆಹೂದದ ಅರಸ
ನಾದ ಅಮಚ್ಯನಿಗೆ—ಲೆಬನೋನಿನ ಮುಳ್ಳುಗಿಡವು
ಅಲ್ಲಿನ ದೇವದಾರುಮರಕ್ಕೆ—ನನ್ನ ಮಗನಿಗೆ ನಿನ್ನ
ಮಗಳನ್ನು ಕೊಡು ಎಂದು ಹೇಳಿಕಳುಹಿಸಿತು. ತುಸ
ಹೊತ್ತಾದ ಮೇಲೆ ಲೆಬನೋನಿನ ಒಂದು ಕಾಡು ಮೃಗ
ವು ಅಲ್ಲಿಂದ ಹಾದುಹೋಗುತ್ತಿರುವಾಗ ಅದನ್ನು ತುಳಿ
10 ದುಬಿಟ್ಟಿತು. ನೀನು ಎದೋಮ್ಯರನ್ನು ಸೋಲಿಸಿದದ
ರಿಂದ ಬಹಳವಾಗಿ ಉಬ್ಬಿಕೊಂಡಿದ್ದೀ; ಆ ಕೀರ್ತಿಯು
ಸಾಕೆಂದು ನೆನಸಿ ಸುಮ್ಮನೆ ಮನೆಯಲ್ಲಿ ಕೂತುಕೋ.
ನನ್ನನ್ನು ಕೆಣಕಿ ನಿನ್ನ ಮೇಲೆಯೂ ನಿನ್ನ ರಾಜ್ಯದ
ಮೇಲೆಯೂ ಯಾಕೆ ಕೇಡನ್ನು ಬರಮಾಡಿಕೊಳ್ಳುತ್ತೀ
11 ಎಂದು ಉತ್ತರಕೊಟ್ಟು ಕಳುಹಿಸಿದನು. ಅಮಚ್ಯನು
ಇದನ್ನು ಲಕ್ಷಿಸಲಿಲ್ಲವಾದದರಿಂದ ಇಸ್ರಾಯೇಲ್ಯರ
ಅರಸನಾದ ಯೋವಾಷನು ಯುದ್ಧಕ್ಕೆ ಹೊರಟನು;
ಅವರು ಯೆಹೂದಪ್ರಾಂತದ ಬೇತ್ಷೆಮೆಷಿನಲ್ಲಿ ಒಬ್ಬರ
12 ನ್ನೊಬ್ಬರು ಎದುರುಗೊಂಡರು. ಯೆಹೂದ್ಯರು ಇಸ್ರಾ
ಯೇಲ್ಯರಿಂದ ಸೋಲಿಸಲ್ಪಟ್ಟು ತಮ್ಮ ತಮ್ಮ ನಿವಾಸ
13 ಗಳಿಗೆ ಓಡಿಹೋದರು. ಇಸ್ರಾಯೇಲ್ಯರ ಅರಸನಾದ
ಯೋವಾಷನು ಅಹಜ್ಯನ ಮೊಮ್ಮಗನೂ ಯೆಹೋವಾ
ಷನ ಮಗನೂ ಯೆಹೂದದ ಅರಸನೂ ಆದ ಅಮಚ್ಯ
ನನ್ನು ಬೇತ್ಷೆಮೆಷಿನಲ್ಲಿ ಹಿಡಿದು ಅವನನ್ನು ಯೆರೂಸ
ಲೇಮಿಗೆ ಕರಕೊಂಡುಬಂದು ಎಫ್ರಾಯಿಮ್ ಬಾಗ
ಲಿಗೂ ಮೂಲೆಯ ಬಾಗಲಿಗೂ ಮಧ್ಯದಲ್ಲಿದ್ದ ಯೆ
ರೂಸಲೇಮಿನ ನಾನೂರು ಮೊಳ ಗೋಡೆಯನ್ನು ಕೆಡವಿ
14 ಬಿಟ್ಟನು. ಇದಲ್ಲದೆ ಅವನು ಯೆಹೋವನ ಆಲಯದ
ಮತ್ತು ಅರಮನೆಯ ಭಂಡಾರಗಳಲ್ಲಿ ಸಿಕ್ಕಿದ ಎಲ್ಲಾ
ಬೆಳ್ಳಿ ಬಂಗಾರವನ್ನೂ ಪಾತ್ರೆಗಳನ್ನೂ ತೆಗೆದುಕೊಂಡು
ಹೊಣೆಗಾಗಿ ಕೆಲವರನ್ನು ಸೆರೆಹಿಡಿದು ಸಮಾರ್ಯಕ್ಕೆ
15 ಹಿಂದಿರುಗಿದನು. ಯೋವಾಷನ ಉಳಿದ ಚರಿತ್ರೆಯೂ
ಅವನ ಶೂರಕೃತ್ಯಗಳ ಮತ್ತು ಯೆಹೂದರಾಜನಾದ
ಅಮಚ್ಯನೊಡನೆ ನಡಿಸಿದ ಯುದ್ಧದ ವಿವರವೂ ಇಸ್ರಾ
ಯೇಲ್‌ರಾಜಕಾಲವೃತ್ತಾಂತ ಎಂಬ ಗ್ರಂಥದಲ್ಲಿ ಬರೆ
16 ದಿರುತ್ತವೆ. ಅವನು ಪಿತೃಗಳ ಬಳಿಗೆ ಸೇರಲು ಅವನ
ಶವವನ್ನು ಸಮಾರ್ಯದೊಳಗೆ ಇಸ್ರಾಯೇಲ್ಯರ ರಾಜ
ಶ್ಮಶಾನಭೂಮಿಯಲ್ಲಿ ಸಮಾಧಿಮಾಡಿದರು. ಅವನಿಗೆ
ಬದಲಾಗಿ ಅವನ ಮಗನಾದ ಯಾರೊಬ್ಬಾಮನು
ಅರಸನಾದನು.
17 ಇಸ್ರಾಯೇಲ್ಯರ ಅರಸನೂ ಯೆಹೋವಾಹಾಜನ
ಮಗನೂ ಆದ ಯೋವಾಷನು ಸತ್ತನಂತರ ಯೆಹೂ
ದದ ಅರಸನೂ ಯೆಹೋವಾಷನ ಮಗನೂ ಆದ
ಅಮಚ್ಯನು ಇನ್ನೂ ಹದಿನೈದು ವರುಷ ಬದುಕಿದನು.
18 ಅವನ ಉಳಿದ ಚರಿತ್ರೆಯು ಯೆಹೂದರಾಜಕಾಲ
19 ವೃತ್ತಾಂತ ಎಂಬ ಗ್ರಂಥದಲ್ಲಿ ಬರೆದಿರುತ್ತದೆ. ಯೆ
ರೂಸಲೇಮಿನವರು ಅವನಿಗೆ ವಿರೋಧವಾಗಿ ಒಳ
ಸಂಚು ಮಾಡಿದ್ದರಿಂದ ಅವನು ಲಾಕೀಷಿಗೆ ಓಡಿಹೋ
ದನು; ಆದರೆ ಅವರು ಅಲ್ಲಿಗೆ ಆಳುಗಳನ್ನು ಕಳು
20 ಹಿಸಿ ಅವನನ್ನು ಕೊಲ್ಲಿಸಿದರು. ಅವನ ಜನರು ಅವ
ನ ಶವವನ್ನು ಕುದುರೆಗಳಿಂದ ಯೆರೂಸಲೇಮಿಗೆ

ತಂದು ದಾವೀದನಗರದೊಳಗೆ ಅವನ ಕುಟುಂಬಶ್ಮಶಾ
ನಭೂಮಿಯಲ್ಲಿ ಸಮಾಧಿಮಾಡಿದರು. ಅನಂತರ
ಎಲ್ಲಾ ಯೆಹೂದ್ಯರು ಕೂಡಿ ಹದಿನಾರು ವರುಷದ
ನಾದ ಅಜರ್ಯನನ್ನು ಅವನ ತಂದೆಯಾದ ಅಮಚ್ಯ
ನಿಗೆ ಬದಲಾಗಿ ಅರಸನನ್ನಾಗಿ ಮಾಡಿದರು. ಅರ
ನು ಪಿತೃಗಳ ಬಳಿಗೆ ಸೇರಿದ ಮೇಲೆ ಇವನು ಏಲತ
ಎಂಬ ಪಟ್ಟಣವನ್ನು ತಿರಿಗಿ ಯೆಹೂದರಾಜ್ಯಕ್ಕೆ ಸೇರಿ
ಭದ್ರಪಡಿಸಿದನು.

ಇಸ್ರಾಯೇಲ್ಯರ ಅರಸನಾದ ಎರಡನೆಯ ಯಾರೊಬ್ಬಾಮನು

ಯೆಹೂದದ ಅರಸನೂ ಯೆಹೋವಾಷನ ಮಗನು
ಆದ ಅಮಚ್ಯನ ಆಳಿಕೆಯ ಹದಿನೈದನೆಯ ವರುಷದಲ್ಲಿ
ಇಸ್ರಾಯೇಲ್ಯರ ಅರಸನಾದ ಯೋವಾಷನ ಮ
ಯಾರೊಬ್ಬಾಮನು ಅರಸನಾಗಿ ಸಮಾರ್ಯದಲ್ಲಿ
ನಾಲ್ವತ್ತೊಂದು ವರುಷ ಆಳಿದನು. ಇವನು ಇಸ್ರಾ
ಯೇಲ್ಯರನ್ನು ಪಾಪಕ್ಕೆ ಪ್ರೇರಿಸಿದ ನೆಬಾಟನ ಮ
ನಾದ ಯಾರೊಬ್ಬಾಮನ ಮಾರ್ಗವನ್ನು ಬಿಡದೆ ಯೆ
ಹೋವನ ದೃಷ್ಟಿಯಲ್ಲಿ ದ್ರೋಹಿಯಾದನು. ಇಸ್ರಾ
ಯೇಲ್‌ದೇವರಾದ ಯೆಹೋವನು ತನ್ನ ಸೇವಕನು
ಗತ್‌ಹೇಫೆರಿನವನಾದ ಅಮಿತ್ತೈಯ ಮಗನೂ ಆ
ಯೋನಾ ಎಂಬ ಪ್ರವಾದಿಯ ಮುಖಾಂತರವಾ
ಮುಂತಿಳಿಸಿದಂತೆ ಹಮಾತಿನ ದಾರಿಯಿಂದ ಅರಾಬ
ತಗ್ಗಿನ ಸಮುದ್ರದ ವರೆಗಿದ್ದ ಇಸ್ರಾಯೇಲ್ಯರ ಮೇ
ಯನ್ನು ತಿರಿಗಿ ತೆಗೆದುಕೊಂಡವನು ಇವನೇ. ಇಸ್ರಾ
ಯೇಲ್ಯರು ಘೋರಕಷ್ಟವನ್ನು ಅನುಭವಿಸುತ್ತಿರುತ್ತಾರೆ
ಅವರಲ್ಲಿದ್ದ ಸ್ವತಂತ್ರರೂ ಪರತಂತ್ರರೂ ನಾಶವಾಗಿದ್ದಾರೆ
ಅವರನ್ನು ರಕ್ಷಿಸುವವನು ಒಬ್ಬನೂ ಇಲ್ಲ ಎಂಬದನ್ನು
ಯೆಹೋವನು ನೋಡಿ ಅವರನ್ನು ಭೂಲೋಕದಿಂ
ನಿರ್ನಾಮಮಾಡುವದಕ್ಕೆ ಮನಸ್ಸಿಲ್ಲದೆ ಯೋವಾಷ
ಮಗನಾದ ಯಾರೊಬ್ಬಾಮನ ಮುಖಾಂತರವಾಗಿ ರಕ್ಷಿ
ಸಿದನು. ಯಾರೊಬ್ಬಾಮನ ಉಳಿದ ಚರಿತ್ರೆಯು
ಅವನು ಯುದ್ಧದಲ್ಲಿ ನಡಿಸಿದ ಶೂರಕೃತ್ಯಗಳೂ ಮೊ
ಲು ಯೆಹೂದ್ಯರ ಸ್ವಾಧೀನದಲ್ಲಿದ್ದ ದಮಸ್ಕ
ಹಮಾತ್ ಎಂಬ ಪಟ್ಟಣಗಳು ಅವನಿಂದ ಇಸ್ರಾಯೇಲ
ರಾಜ್ಯಕ್ಕೆ ಸೇರಿಸಲ್ಪಟ್ಟ ವಿವರವೂ ಇಸ್ರಾಯೇಲ್‌ರಾ
ಕಾಲವೃತ್ತಾಂತ ಎಂಬ ಗ್ರಂಥದಲ್ಲಿ ಬರೆದಿರುತ್ತವೆ
ಅವನು ಇಸ್ರಾಯೇಲ್‌ರಾಜರಾಗಿದ್ದ ತನ್ನ ಪಿತೃಗಳ
ಬಳಿಗೆ ಸೇರಲು ಅವನಿಗೆ ಬದಲಾಗಿ ಅವನ ಮಗನಾ
ಜೆಕರ್ಯನು ಅರಸನಾದನು.

ಯೆಹೂದದ ಅರಸರಾದ ಅಜರ್ಯ, ಯೋತಾಮ್ ಎಂಬವರು
ಇವರ ಕಾಲದಲ್ಲಿದ್ದ ಇಸ್ರಾಯೇಲ್ಯರ ಅರಸರೂ.

ಇಸ್ರಾಯೇಲ್ಯರ ಅರಸನಾದ ಯಾರೊಬ್ಬಾಮನ
ಆಳಿಕೆಯ ಇಪ್ಪತ್ತೇಳನೆಯ ವರುಷದಲ್ಲಿ ಅಮಚ್ಯನ
ಮಗನಾದ ಅಜರ್ಯನು ಯೆಹೂದದ ಅರಸನಾ
ದನು. ಇವನು ಪಟ್ಟಕ್ಕೆ ಬಂದಾಗ ಹದಿನಾರು ವರು
ದವನಾಗಿದ್ದು ಯೆರೂಸಲೇಮಿನಲ್ಲಿ ಐವತ್ತೆರಡು ವರು
ಆಳಿದನು. ಯೆರೂಸಲೇಮಿನವಳಾದ ಯೆಕೊಲ್ಯ ಎಂಬ

3 ಕೆಯು ಇವನ ತಾಯಿ. ಇವನು ತನ್ನ ತಂದೆಯಾದ
ಅಮಚ್ಯನಂತೆ ಯೆಹೋವನ ದೃಷ್ಟಿಯಲ್ಲಿ ಒಳ್ಳೆಯವ
4 ನಾಗಿ ನಡೆದನು. ಆದರೆ ಇವನ ಕಾಲದಲ್ಲಿಯೂ
ಪೂಜಾಸ್ಥಳಗಳು ತೆಗೆಯಲ್ಪಡಲಿಲ್ಲವಾದದರಿಂದ ಜನರು
ಅವುಗಳಲ್ಲಿ ಯಜ್ಞಧೂಪಗಳನ್ನು ಅರ್ಪಿಸುತ್ತಿದ್ದರು.
5 ಯೆಹೋವನು ಇವನನ್ನು ಕುಷ್ಠರೋಗದಿಂದ ಬಾಧಿ
ಸಿದನು. ಆದದರಿಂದ ಇವನು ಜೀವದಿಂದಿರುವ ವರೆಗೂ
ಪ್ರತ್ಯೇಕವಾದ ಮನೆಯಲ್ಲಿ ವಾಸಿಸಬೇಕಾಯಿತು;
ರಾಜಗೃಹಾಧಿಪತ್ಯವನ್ನೂ ಪ್ರಜಾಪಾಲನೆಯನ್ನೂ ಇವನ
ಮಗನಾದ ಯೋತಾಮನು ನೋಡಿಕೊಳ್ಳುತ್ತಿದ್ದನು.
6 ಅಜರ್ಯನ ಉಳಿದ ಚರಿತ್ರೆಯೂ ಅವನ ಎಲ್ಲಾ ಕೃತ್ಯ
ಗಳೂ ಯೆಹೂದರಾಜಕಾಲವೃತ್ತಾಂತ ಎಂಬ ಗ್ರಂಥದಲ್ಲಿ
7 ಬರೆದಿರುತ್ತವೆ. ಅವನು ಪಿತೃಗಳ ಬಳಿಗೆ ಸೇರಲು ಅವನ
ಶವವನ್ನು ದಾವೀದನಗರದೊಳಗೆ ರಾಜಕುಟುಂಬದ
ಶ್ಮಶಾನಭೂಮಿಯಲ್ಲಿ ಸಮಾಧಿಮಾಡಿದರು. ಅವನಿಗೆ
ಬದಲಾಗಿ ಅವನ ಮಗನಾದ ಯೋತಾಮನು ಅರಸ
ನಾದನು.

8 ಯೆಹೂದದ ಅರಸನಾದ ಅಜರ್ಯನ ಆಳಿಕೆಯ
ಮೂವತ್ತೆಂಟನೆಯ ವರುಷದಲ್ಲಿ ಯಾರೊಬ್ಬಾಮನ
ಮಗನಾದ ಜೆಕರ್ಯ ಎಂಬವನು ಇಸ್ರಾಯೇಲ್ಯರ
ಅರಸನಾಗಿ ಸಮಾರ್ಯದಲ್ಲಿ ಆರು ತಿಂಗಳು ಆಳಿದನು.
9 ಅವನು ಇಸ್ರಾಯೇಲ್ಯರನ್ನು ಪಾಪಕ್ಕೆ ಪ್ರೇರಿಸಿದ ನೆಬಾ
ಟನ ಮಗನಾದ ಯಾರೊಬ್ಬಾಮನ ಮಾರ್ಗವನ್ನು
ಬಿಡದೆ ತನ್ನ ಪೂರ್ವಿಕರಂತೆ ಯೆಹೋವನ ದೃಷ್ಟಿಯಲ್ಲಿ
10 ದ್ರೋಹಿಯಾದನು. ಯಾಬೇಷನ ಮಗನಾದ ಶಲ್ಲೂ
ಮನು ಅವನಿಗೆ ವಿರೋಧವಾಗಿ ಒಳಸಂಚುಮಾಡಿ
1)ಪ್ರಜೆಗಳ ಮುಂದೆಯೇ ಅವನನ್ನು ಕೊಂದು ಅವನಿಗೆ
11 ಬದಲಾಗಿ ತಾನು ಅರಸನಾದನು. ಜೆಕರ್ಯನ ಉಳಿದ
ಚರಿತ್ರೆಯು ಇಸ್ರಾಯೇಲ್‌ರಾಜಕಾಲವೃತ್ತಾಂತ ಎಂಬ
12 ಗ್ರಂಥದಲ್ಲಿ ಬರೆದಿರುತ್ತದೆ. ನಿನ್ನ ಸಂತಾನದವರು
ನಾಲ್ಕನೆಯ ತಲೆಯ ವರೆಗೂ ಇಸ್ರಾಯೇಲ್‌ಸಿಂಹಾಸ
ನದ ಮೇಲೆ ಕೂತುಕೊಳ್ಳುವರು ಎಂಬದಾಗಿ ಯೆ
ಹೋವನು ಯೇಹುವಿಗೆ ಮುಂತಿಳಿಸಿದ ಮಾತು ನೆರ
ವೇರಿತು.

13 ಯೆಹೂದದ ಅರಸನಾದ 2)ಉಜ್ಜೀಯನ ಆಳಿ
ಕೆಯ ಮೂವತ್ತೊಂಭತ್ತನೆಯ ವರುಷದಲ್ಲಿ ಯಾಬೇ
ಷನ ಮಗನಾದ ಶಲ್ಲೂಮನು ಇಸ್ರಾಯೇಲ್ಯರ ಅರಸ
ನಾಗಿ ಸಮಾರ್ಯದಲ್ಲಿ ಒಂದು ತಿಂಗಳು ಆಳಿದನು.
14 ಗಾದಿಯ ಮಗನಾದ ಮೆನಹೇಮನೆಂಬವನು ತಿರ್ಚ
ದಿಂದ ಸಮಾರ್ಯಕ್ಕೆ ಬಂದು ಅಲ್ಲಿದ್ದ ಯಾಬೇಷನ
ಮಗನಾದ ಶಲ್ಲೂಮನನ್ನು ಕೊಂದು ಅವನಿಗೆ ಬದ
15 ಲಾಗಿ ತಾನು ಅರಸನಾದನು. ಶಲ್ಲೂಮನ ಉಳಿದ
ಚರಿತ್ರೆಯೂ ಅವನ ಒಳಸಂಚಿನ ವಿವರವೂ ಇಸ್ರಾ
ಯೇಲ್‌ರಾಜಕಾಲವೃತ್ತಾಂತ ಎಂಬ ಗ್ರಂಥದಲ್ಲಿ ಬರೆ
16 ದಿರುತ್ತವೆ. ಮೆನಹೇಮನು ತಿರ್ಚದಿಂದ 3)ತಿಪ್ಸಹುವಿಗೆ
ಹೋದಾಗ ಅಲ್ಲಿಯವರು ತಮ್ಮ ಊರುಬಾಗಲನ್ನು
ಅವನಿಗೆ ತೆರೆದುಕೊಡಲಿಲ್ಲವಾದದರಿಂದ ಅವನು ಅದ
ನ್ನೂ ಅದಕ್ಕೆ ಸೇರಿದ ಪ್ರದೇಶವನ್ನೂ ಹಾಳುಮಾಡಿ
ಅದರ ನಿವಾಸಿಗಳನ್ನು ಸಂಹರಿಸಿದನು; ಅದರಲ್ಲಿದ್ದ
ಎಲ್ಲಾ ಗರ್ಭಿಣಿಗಳನ್ನು ಹೊಟ್ಟೆಸೀಳಿಸಿದನು.

ಯೆಹೂದದ ಅರಸನಾದ ಅಜರ್ಯನ ಆಳಿಕೆಯ 17
ಮೂವತ್ತೊಂಭತ್ತನೆಯ ವರುಷದಲ್ಲಿ ಗಾದಿಯ ಮಗ
ನಾದ ಮೆನಹೇಮನು ಇಸ್ರಾಯೇಲ್ಯರ ಅರಸನಾಗಿ
ಸಮಾರ್ಯದಲ್ಲಿ ಹತ್ತು ವರುಷ ಆಳಿದನು. ಇವನು 18
ಜೀವದಿಂದಿರುವ ವರೆಗೂ ಇಸ್ರಾಯೇಲ್ಯರನ್ನು ಪಾಪಕ್ಕೆ
ಪ್ರೇರಿಸಿದ ನೆಬಾಟನ ಮಗನಾದ ಯಾರೊಬ್ಬಾಮನ
ಮಾರ್ಗವನ್ನು ಬಿಡದೆ ಯೆಹೋವನ ದೃಷ್ಟಿಯಲ್ಲಿ ದ್ರೋ
ಹಿಯಾದನು. ಅಶ್ಶೂರ್‌ದೇಶದ ಅರಸನಾದ ಪೂಲನೆಂಬ 19
ವನು ಇಸ್ರಾಯೇಲ್‌ದೇಶಕ್ಕೆ ವಿರೋಧವಾಗಿ ಬಂದಾಗ
ಮೆನಹೇಮನು ಅವನ ಮುಖಾಂತರವಾಗಿ ತನ್ನ ಅರಸು
ತನವನ್ನು ದೃಢಪಡಿಸಿಕೊಳ್ಳುವದಕ್ಕೋಸ್ಕರ ಅವನಿಗೆ
4)ಸಾವಿರ ತಲಾಂತು ಬೆಳ್ಳಿಯನ್ನು ಕೊಟ್ಟನು. ಅಶ್ಶೂ 20
ರದ ಅರಸನಿಗೆ ಆ ಹಣವನ್ನು ಕೊಡುವದಕ್ಕಾಗಿ
ಇಸ್ರಾಯೇಲ್ಯರ ಪ್ರತಿಯೊಬ್ಬ ಐಶ್ವರ್ಯವಂತನಿಂದ
ಐವತ್ತು ರೂಪಾಯಿಗಳನ್ನು ತೆಗೆದುಕೊಂಡನು. ಆ
ಹಣವು ಸಿಕ್ಕಿದನಂತರ ಅಶ್ಶೂರದ ಅರಸನು ಅಲ್ಲಿ
ನಿಲ್ಲದೆ ಹಿಂದಿರುಗಿ ಹೋದನು. ಮೆನಹೇಮನ ಉಳಿದ 21
ಚರಿತ್ರೆಯೂ ಅವನ ಎಲ್ಲಾ ಕೃತ್ಯಗಳೂ ಇಸ್ರಾಯೇಲ್
ರಾಜಕಾಲವೃತ್ತಾಂತ ಎಂಬ ಗ್ರಂಥದಲ್ಲಿ ಬರೆದಿರುತ್ತವೆ.
ಅವನು ಪಿತೃಗಳ ಬಳಿಗೆ ಸೇರಲು ಅವನ ಮಗನಾದ 22
ಪೆಕಹ್ಯನು ಅರಸನಾದನು.

ಯೆಹೂದದ ಅರಸನಾದ ಅಜರ್ಯನ ಆಳಿಕೆಯ 23
ಐವತ್ತನೆಯ ವರುಷದಲ್ಲಿ ಮೆನಹೇಮನ ಮಗನಾದ
ಪೆಕಹ್ಯ ಎಂಬವನು ಇಸ್ರಾಯೇಲ್ಯರ ಅರಸನಾಗಿ ಸಮಾ
ರ್ಯದಲ್ಲಿ ಎರಡು ವರುಷ ಆಳಿದನು. ಇವನು ಇಸ್ರಾ 24
ಯೇಲ್ಯರನ್ನು ಪಾಪಕ್ಕೆ ಪ್ರೇರಿಸಿದ ನೆಬಾಟನ ಮಗ
ನಾದ ಯಾರೊಬ್ಬಾಮನ ಮಾರ್ಗವನ್ನು ಬಿಡದೆ ಯೆ
ಹೋವನ ದೃಷ್ಟಿಯಲ್ಲಿ ದ್ರೋಹಿಯಾದನು. ಇವನ 25
ಸರದಾರನೂ ರೆಮಲ್ಯನ ಮಗನೂ ಆಗಿದ್ದ ಪೆಕಹನು
ಗಿಲ್ಯಾದಿನ ಐವತ್ತು ಮಂದಿ ಜನರನ್ನು ಕೂಡಿಸಿಕೊಂಡು
ಇವನಿಗೆ ವಿರೋಧವಾಗಿ ಒಳಸಂಚುಮಾಡಿ ಸಮಾರ್ಯ
ದಲ್ಲಿರುವ ಅರಮನೆಯ ಗರ್ಭಗೃಹದಲ್ಲಿ ಇವನನ್ನೂ
ಅರ್ಗೋಬ್, ಅರ್ಯೇ ಎಂಬವರನ್ನೂ ಕೊಂದು ಇವ
ನಿಗೆ ಬದಲಾಗಿ ತಾನು ಅರಸನಾದನು. ಪೆಕಹ್ಯನ ಉಳಿದ 26
ಚರಿತ್ರೆಯೂ ಅವನ ಎಲ್ಲಾ ಕೃತ್ಯಗಳೂ ಇಸ್ರಾಯೇಲ್
ರಾಜಕಾಲವೃತ್ತಾಂತ ಎಂಬ ಗ್ರಂಥದಲ್ಲಿ ಬರೆದಿರುತ್ತವೆ.

ಯೆಹೂದದ ಅರಸನಾದ ಅಜರ್ಯನ ಆಳಿಕೆಯ 27
ಐವತ್ತೆರಡನೆಯ ವರುಷದಲ್ಲಿ ರೆಮಲ್ಯನ ಮಗನಾದ
ಪೆಕಹನು ಇಸ್ರಾಯೇಲ್ಯರ ಅರಸನಾಗಿ ಸಮಾರ್ಯದಲ್ಲಿ
ಇಪ್ಪತ್ತು ವರುಷ ಆಳಿದನು. ಇವನು ಇಸ್ರಾಯೇಲ್ಯ 28
ರನ್ನು ಪಾಪಕ್ಕೆ ಪ್ರೇರಿಸಿದ ನೆಬಾಟನ ಮಗನಾದ
ಯಾರೊಬ್ಬಾಮನ ಮಾರ್ಗವನ್ನು ಬಿಡದೆ ಯೆಹೋ
ವನ ದೃಷ್ಟಿಯಲ್ಲಿ ದ್ರೋಹಿಯಾದನು. ಇಸ್ರಾಯೇ 29
ಲ್ಯರ ಅರಸನಾದ ಪೆಕಹನ ಕಾಲದಲ್ಲಿ ಅಶ್ಶೂರ್

1) ಪಾಠಾಂತರ : ಇಬ್ಲೆಯಾಮಿನಲ್ಲಿ. 2) ಅಂದರೆ ಅಜರ್ಯನ. 3) ಪಾಠಾಂತರ : ತಪ್ಪೂಹಕ್ಕೆ.
4) ಸುಮಾರು ಮೂವತ್ತು ಲಕ್ಷ ತೊಲೆ.

ದೇಶದ ಅರಸನಾದ ತಿಗ್ಲತ್ಪಿಲೆಸೆರನೆಂಬವನು ಬಂದು
ಇಯ್ಯೋನ್, ಆಬೇಲ್ಬೇತ್ಮಾಕಾ, ಯಾನೋಹ, ಕೆದೆಷ್,
ಹಾಚೋರ್ ಮೊದಲಾದ ನಫ್ತಾಲಿಯ ಊರುಗಳನ್ನೂ
ಗಿಲ್ಯಾದ್, ಗಲಿಲಾಯ ಪ್ರಾಂತಗಳನ್ನೂ ಸ್ವಾಧೀನ
ಪಡಿಸಿಕೊಂಡು ಅವುಗಳ ನಿವಾಸಿಗಳನ್ನು ಅಶ್ಶೂರ್
30 ದೇಶಕ್ಕೆ ಸೆರೆಯಾಗಿ ತೆಗೆದುಕೊಂಡುಹೋದನು. ಆಗ
ಏಲನ ಮಗನಾದ ಹೋಶೇಯನು ರೆಮಲ್ಯನ ಮಗನಾದ
ಪೆಕಹನಿಗೆ ವಿರೋಧವಾಗಿ ಒಳಸಂಚುಮಾಡಿ ಇವನನ್ನು
ಉಜ್ಜೀಯನ ಮಗನಾದ ಯೋತಾಮನ ಆಳಿಕೆಯ
ಇಪ್ಪತ್ತನೆಯ ವರುಷದಲ್ಲಿ ಕೊಂದು ಇವನಿಗೆ ಬದಲಾಗಿ
31 ತಾನು ಅರಸನಾದನು. ಪೆಕಹನ ಉಳಿದ ಚರಿತ್ರೆಯೂ
ಅವನ ಎಲ್ಲಾ ಕೃತ್ಯಗಳೂ ಇಸ್ರಾಯೇಲ್‌ರಾಜಕಾಲ
ವೃತ್ತಾಂತ ಎಂಬ ಗ್ರಂಥದಲ್ಲಿ ಬರೆದಿರುತ್ತವೆ.
32 ಇಸ್ರಾಯೇಲ್ಯರ ಅರಸನೂ ರೆಮಲ್ಯನ ಮಗನೂ
ಆದ ಪೆಕಹನ ಆಳಿಕೆಯ ಎರಡನೆಯ ವರುಷದಲ್ಲಿ
ಯೆಹೂದರಾಜನಾದ ಉಜ್ಜೀಯನ ಮಗ ಯೋತಾ
33 ಮನು ಆಳತೊಡಗಿದನು. ಇವನು ಪಟ್ಟಕ್ಕೆ ಬಂದಾಗ
ಇಪ್ಪತ್ತೈದು ವರುಷದವನಾಗಿದ್ದನು. ಇವನು ಯೆರೂಸ
ಲೇಮಿನಲ್ಲಿ ಹದಿನಾರು ವರುಷ ಆಳಿದನು. ಚಾದೋಕನ
34 ಮಗಳಾದ ಯೆರೂಷಾ ಇವನ ತಾಯಿ. ಇವನು
ತನ್ನ ತಂದೆಯಾದ ಉಜ್ಜೀಯನಂತೆ ಯೆಹೋವನ
35 ದೃಷ್ಟಿಯಲ್ಲಿ ಒಳ್ಳೆಯವನಾಗಿದ್ದನು; ಆದರೆ ಇವನ
ಕಾಲದಲ್ಲಿ ಪೂಜಾಸ್ಥಳಗಳು ಇನ್ನೂ ತೆಗೆಯಲ್ಪಡ
ಲಿಲ್ಲವಾದದರಿಂದ ಜನರು ಅವುಗಳಲ್ಲಿ ಯಜ್ಞಧೂಪ
ಗಳನ್ನು ಸಮರ್ಪಿಸುತ್ತಿದ್ದರು. ಯೆಹೋವನ ಆಲ
ಯಕ್ಕೆ ಮೇಲಣ ಹೆಬ್ಬಾಗಲನ್ನು ಇಡಿಸಿದವನು ಇವನೇ.
36 ಯೋತಾಮನ ಉಳಿದ ಚರಿತ್ರೆಯೂ ಅವನ ಎಲ್ಲಾ
ಕೃತ್ಯಗಳೂ ಯೆಹೂದರಾಜಕಾಲವೃತ್ತಾಂತ ಎಂಬ
37 ಗ್ರಂಥದಲ್ಲಿ ಬರೆದಿರುತ್ತವೆ. ಯೆಹೋವನು ಆ
ಕಾಲದಲ್ಲಿ ಅರಾಮ್ಯರ ಅರಸನಾದ ರೆಚೀನನನ್ನೂ
ರೆಮಲ್ಯನ ಮಗನಾದ ಪೆಕಹನನ್ನೂ ಯೆಹೂದ್ಯರಿಗೆ
38 ವಿರೋಧವಾಗಿ ಕಳುಹಿಸತೊಡಗಿದನು. ಯೋತಾಮನು
ಪಿತೃಗಳ ಬಳಿಗೆ ಸೇರಲು ಅವನ ಶವವನ್ನು ಅವನ
ಪೂರ್ವಿಕನಾದ ದಾವೀದನ ಪಟ್ಟಣದೊಳಗೆ ಕುಟುಂಬ
ಶ್ಮಶಾನದಲ್ಲಿ ಸಮಾಧಿಮಾಡಿದರು. ಅವನಿಗೆ ಬದ
ಲಾಗಿ ಅವನ ಮಗನಾದ ಆಹಾಜನು ಅರಸನಾದನು.

### ಯೆಹೂದದ ಅರಸನಾದ ಆಹಾಜನು.

16 ರೆಮಲ್ಯನ ಮಗನಾದ ಪೆಕಹನ ಆಳಿಕೆಯ ಹದಿ
ನೇಳನೆಯ ವರುಷದಲ್ಲಿ ಯೆಹೂದರಾಜನಾದ ಯೋ
2 ತಾಮನ ಮಗ ಆಹಾಜನು ಆಳತೊಡಗಿದನು. ಇವ
ನು ಪಟ್ಟಕ್ಕೆ ಬಂದಾಗ ಇಪ್ಪತ್ತು ವರುಷದವನಾಗಿದ್ದು
ಯೆರೂಸಲೇಮಿನಲ್ಲಿ ಹದಿನಾರು ವರುಷ ಆಳಿದನು.
ಇವನು ತನ್ನ ದೇವರಾದ ಯೆಹೋವನ ದೃಷ್ಟಿಯಲ್ಲಿ
ಒಳ್ಳೆಯವನಾಗಿರಲಿಲ್ಲ. ತನ್ನ ಪೂರ್ವಿಕನಾದ ದಾವೀ
3 ದನ ಮಾರ್ಗವನ್ನು ಬಿಟ್ಟು ಇಸ್ರಾಯೇಲ್‌ರಾಜರ
ಮಾರ್ಗದಲ್ಲಿ ನಡೆದನು; ಇದಲ್ಲದೆ ಯೆಹೋವನು
ಇಸ್ರಾಯೇಲ್ಯರ ಎದುರಿನಿಂದ ಓಡಿಸಿಬಿಟ್ಟ ಜನಾಂಗಗಳ
ಹೇಸಿಗೆಕೆಲಸಗಳನ್ನು ಅನುಸರಿಸಿ ತನ್ನ ಮಗನನ್ನು

ಆಹುತಿಕೊಟ್ಟನು. ಪೂಜಾಸ್ಥಳಗಳಲ್ಲಿಯೂ ದಿನ್ನೆಗಳ
ಮೇಲೆಯೂ ಎಲ್ಲಾ ಹಸುರು ಮರಗಳ ಕೆಳಗೆಯೂ
ಯಜ್ಞಧೂಪಗಳನ್ನು ಸಮರ್ಪಿಸಿದನು.
ಇವನ ಕಾಲದಲ್ಲಿ ಅರಾಮ್ಯರ ಅರಸನಾದ ರೆಚೀನ್
ಇಸ್ರಾಯೇಲ್ಯರ ಅರಸನೂ ರೆಮಲ್ಯನ ಮಗನೂ ಆದ
ಪೆಕಹ ಎಂಬವರು ಕೂಡಿಕೊಂಡು ಯೆರೂಸಲೇಮಿಗೆ
ವಿರೋಧವಾಗಿ ಬಂದು ಆಹಾಜನನ್ನು ಸುತ್ತಿಕೊಂಡರು;
ಆದರೆ ಅವನನ್ನು ಜಯಿಸುವದು ಅವರಿಂದ ಆಗಲಿಲ್ಲ.
ಇದೇ ಕಾಲದಲ್ಲಿ ಅರಾಮ್ಯರ ಅರಸನಾದ ರೆಚೀನನು
ಏಲತ್ ಪಟ್ಟಣವನ್ನು ಅರಾಮ್‌ರಾಜ್ಯಕ್ಕೆ ಸೇರಿಸಿ
ಕೊಂಡು ಅದರಲ್ಲಿದ್ದ ಯೆಹೂದ್ಯರನ್ನೆಲ್ಲಾ ಓಡಿಸಿ
ದನು. ಎದೋಮ್ಯರು ಬಂದು ಅಲ್ಲಿ ವಾಸಿಸಿದರು;
ಇಂದಿನ ವರೆಗೂ ಅದರಲ್ಲಿ ಅವರೇ ವಾಸವಾಗಿದ್ದಾರೆ.
ಆಹಾಜನು ಅಶ್ಶೂರ್‌ದೇಶದ ಅರಸನಾದ ತಿಗ್ಲತ್ಪಿಲೆ
ಸೆರನ ಬಳಿಗೆ ದೂತರನ್ನು ಕಳುಹಿಸಿ ಅವನಿಗೆ—ನಾನು
ನಿನ್ನ ದಾಸನೂ ಮಗನೂ ಆಗಿದ್ದೇನೆ; ನೀನು ಬಂದು
ನನ್ನನ್ನು ನನಗೆ ವಿರೋಧವಾಗಿ ಎದ್ದಿರುವ ಅರಾಮ್ಯರ
ಮತ್ತು ಇಸ್ರಾಯೇಲ್ಯರ ಅರಸುಗಳ ಕೈಗೆ ಸಿಕ್ಕದಂತೆ
ತಪ್ಪಿಸು ಎಂದು ಹೇಳಿಸಿದನು. ಇದಲ್ಲದೆ ಆಹಾಜನು
ಯೆಹೋವನ ಆಲಯದಲ್ಲಿಯೂ ಅರಮನೆಯ
ಭಂಡಾರದಲ್ಲಿಯೂ ಇದ್ದ ಬೆಳ್ಳಿಬಂಗಾರವನ್ನು ತೆಗೆದು
ಕೊಂಡು ಅಶ್ಶೂರದ ಅರಸನಿಗೆ ಕಾಣಿಕೆಯಾಗಿ ಕಳುಹಿ
ಸಿದನು. ಅವನು ಇವನ ಮಾತಿಗೆ ಒಪ್ಪಿ ದಮಸ್ಕ
ಪಟ್ಟಣಕ್ಕೆ ವಿರೋಧವಾಗಿ ಹೋಗಿ ರೆಚೀನನನ್ನು
ಕೊಂದು ನಿವಾಸಿಗಳನ್ನು ಸೆರೆಹಿಡಿದು ಕೀರ್‌ಪ್ರಾಂತಕ್ಕೆ
ಒಯ್ದನು.
ಅರಸನಾದ ಆಹಾಜನು ಅಶ್ಶೂರದ ಅರಸನಾದ
ತಿಗ್ಲತ್ಪಿಲೆಸೆರನ ದರ್ಶನಕ್ಕಾಗಿ ದಮಸ್ಕಕ್ಕೆ ಹೋದನು.
ಅವನು ಅಲ್ಲಿದ್ದ ಯಜ್ಞವೇದಿಯನ್ನು ಕಂಡು ಅದ
ಒಂದು ಚಿತ್ರವನ್ನೂ ಅದರ ಎಲ್ಲಾ ಅಲಂಕಾರದ ನಕ್ಷೆ
ಯನ್ನೂ ಬರೆಯಿಸಿ ಯಾಜಕನಾದ ಊರೀಯನಿ
ಕಳುಹಿಸಿದನು. ಅರಸನಾದ ಆಹಾಜನು ದಮಸ್ಕ
ದಿಂದ ಬರುವಷ್ಟರಲ್ಲಿ ಊರೀಯನು ಅರಸನಿಂದ ತನ
ಬಂದ ಮಾದರಿಯ ಪ್ರಕಾರ ಒಂದು ವೇದಿಯನ
ಮಾಡಿಸಿಟ್ಟಿದ್ದನು. ಅರಸನು ಹಿಂದಿರುಗಿ ಬಂದ ಮೇ
ಆ ಯಜ್ಞವೇದಿಯನ್ನು ಕಂಡು ಅದರ ಸಮೀಪಕ
ಹೋಗಿ ತಾನು ತಂದ ಸರ್ವಾಂಗಹೋಮದ್ರವ
ಧಾನ್ಯನೈವೇದ್ಯ, ಪಾನದ್ರವ್ಯ ಇವುಗಳನ್ನು ಸಮರ್ಪಿ
ಸಮಾಧಾನಯಜ್ಞಕ್ಕಾಗಿ ವಧಿಸಿದ ಪಶುಗಳ ರ
ವನ್ನು ಅದರ ಮೇಲೆ ಚಿಮಿಕಿಸಿದನು. ಇದಲ್ಲ
ಯೆಹೋವನ ಆಲಯಕ್ಕೂ ತನ್ನ ವೇದಿಗೂ ಮಧ್ಯ
ಲ್ಲಿದ್ದು ಆ ವರೆಗೂ ಯೆಹೋವನ ಸೇವೆಗೆ ಉ
ಯೋಗಿಸಲ್ಪಡುತ್ತಿದ್ದ ತಾಮ್ರವೇದಿಯನ್ನು ಆಲಯ
ಎದುರಿನಿಂದ ತೆಗೆಯಿಸಿ ತನ್ನ ವೇದಿಯ ಉತ್ತರ ದಿ
ನಲ್ಲಿಡಿಸಿ ಯಾಜಕನಾದ ಊರೀಯನಿಗೆ—ಪ್ರಾ
ಕಾಲದ ಸರ್ವಾಂಗಹೋಮವನ್ನೂ ಸಾಯಂಕಾಲ
ನೈವೇದ್ಯವನ್ನೂ ಅರಸನು ತರುವ ಸರ್ವಾಂಗಹೋಮ
ದ್ರವ್ಯ ಧಾನ್ಯನೈವೇದ್ಯ ಇವುಗಳನ್ನೂ ಜನರು ತರು
ಸರ್ವಾಂಗಹೋಮದ್ರವ್ಯ ಧಾನ್ಯನೈವೇದ್ಯ ಪಾನದ್ರ
ಇವುಗಳನ್ನೂ ಈ ಮಹಾವೇದಿಯ ಮೇಲೆ ಸಮರ್ಪಿ

ಬೇಕು; ಮತ್ತು ಸರ್ವಾಂಗಹೋಮಯಜ್ಞಗಳಿಗಾಗಿ
ವಧಿಸುವ ಪಶುಗಳ ರಕ್ತವನ್ನು ಇದರ ಮೇಲೆಯೇ
ಚಿಮಿಕಿಸಬೇಕು. ದೈವೋತ್ತರಗಳನ್ನು ತಿಳಿದುಕೊಳ್ಳು
ವದಕ್ಕಾಗಿ ತಾಮ್ರವೇದಿಯನ್ನು ಉಪಯೋಗಿಸುವೆನು
ಎಂದು ಹೇಳಿದನು.
16 ಯಾಜಕನಾದ ಊರೀಯನು ಅರಸನು ಹೇಳಿದಂತೆ
17 ಯೇ ಮಾಡಿದನು. ಅರಸನಾದ ಆಹಾಜನು ಅಶ್ಶೂ
ರದ ಅರಸನ ನಿಮಿತ್ತವಾಗಿ ಪೀಠಗಳ ಪಟ್ಟಿಗಳನ್ನು
ಕತ್ತರಿಸಿದನು; ಅವುಗಳ ಮೇಲಿದ್ದ ಗಂಗಾಳಗಳನ್ನು
ತೆಗೆದಿಟ್ಟನು; ಸಮುದ್ರವೆನಿಸುವ ಪಾತ್ರೆಯನ್ನು ತಾ
ಮ್ರದ ಹೋರಿಗಳ ಮೇಲಣಿಂದ ಇಳಿಸಿ ಕಲ್ಲುಕಟ್ಟೆಗಳ
18 ಮೇಲೆ ಇಡಿಸಿದನು. ಯೆಹೋವನ ಆಲಯದ ಪ್ರಾ
ಕಾರದೊಳಗೆ ಸಬ್ಬತ್‌ದಿನದ ಆರಾಧನೆಗಾಗಿ ರಾಜರಿಗೆ
ಕಟ್ಟಲ್ಪಟ್ಟಿದ್ದ ಮಂಟಪವನ್ನೂ ಅರಮನೆಯಿಂದ ದೇವ
ಸ್ಥಾನಕ್ಕೆ ಹೋಗುವ ಹೊರಗಿನ ಬಾಗಲನ್ನೂ ಬದಲಾ
19 ಯಿಸಿದನು. ಆಹಾಜನ ಉಳಿದ ಚರಿತ್ರೆಯೂ ಅವನ
ಕೃತ್ಯಗಳೂ ಯೆಹೂದರಾಜಕಾಲವೃತ್ತಾಂತ ಎಂಬ
20 ಗ್ರಂಥದಲ್ಲಿ ಬರೆದಿರುತ್ತವೆ. ಅವನು ಪಿತೃಗಳ ಬಳಿಗೆ
ಸೇರಲು ಅವನ ಶವವನ್ನು ದಾವೀದನಗರದೊಳಗೆ
ಅವನ ಕುಟುಂಬಶ್ಮಶಾನದಲ್ಲಿ ಸಮಾಧಿಮಾಡಿದರು.
ಅವನಿಗೆ ಬದಲಾಗಿ ಅವನ ಮಗನಾದ ಹಿಜ್ಕೀಯ ಎಂಬ
ವನು ಅರಸನಾದನು.

ಇಸ್ರಾಯೇಲ್‌ರಾಜ್ಯದ ಕಡೇ ಅರಸನೂ
ಅದರ ನಾಶನವೂ.

17 ಯೆಹೂದದ ಅರಸನಾದ ಆಹಾಜನ ಆಳಿಕೆಯ
ಹನ್ನೆರಡನೆಯ ವರುಷದಲ್ಲಿ ಏಲನ ಮಗನಾದ ಹೋ
ಶೇಯನು ಇಸ್ರಾಯೇಲ್ಯರ ಅರಸನಾಗಿ ಸಮಾರ್ಯ
ದಲ್ಲಿ ಒಂಭತ್ತು ವರುಷ ಆಳಿದನು. ಇವನು ತನ್ನ
ಪೂರ್ವಿಕರಾದ ಇಸ್ರಾಯೇಲ್ಯರ ಅರಸರಷ್ಟು ಕೆಟ್ಟವ
ನಾಗಿರಲಿಲ್ಲವಾದರೂ ಯೆಹೋವನ ದೃಷ್ಟಿಯಲ್ಲಿ
ದ್ರೋಹಿಯಾಗಿದ್ದನು. ಅಶ್ಶೂರದ ಅರಸನಾದ
ಶಲ್ಮನೆಸೆರನು ಇವನಿಗೆ ವಿರೋಧವಾಗಿ ಬಂದಾಗ
ಇವನು ಅವನಿಗೆ ಅಧೀನನಾಗಿ ಕಪ್ಪಕೊಡುವವನಾದನು.
ಕೆಲವು ವರುಷಗಳಾದನಂತರ ಇವನು ಪ್ರತಿವರ್ಷವೂ
ಕೊಡಬೇಕಾದ ಕಪ್ಪವನ್ನು ಕೊಡದೆಹೋದದರಿಂದಲೂ
ಐಗುಪ್ತದ ಅರಸನಾದ ಸೋ ಎಂಬವನ ಬಳಿಗೆ ರಾಯ
ಭಾರಿಗಳನ್ನು ಕಳುಹಿಸಿದದರಿಂದಲೂ ಅಶ್ಶೂರದ ಅರ
ಸನು ಇವನನ್ನು ದ್ರೋಹಿಯೆಂದು ತಿಳಿದು ಬಂಧಿಸಿ
ಸೆರೆಯಲ್ಲಿಟ್ಟನು. ಇದಲ್ಲದೆ ಅವನು ದೇಶವನ್ನೆಲ್ಲಾ
ಸ್ವಾಧೀನಮಾಡಿಕೊಂಡು ಸಮಾರ್ಯಕ್ಕೆ ಬಂದು
ಮೂರು ವರುಷಗಳ ವರೆಗೂ ಅದಕ್ಕೆ ಮುತ್ತಿಗೆಹಾಕಿ
ದನು. ಅದು ಹೋಶೇಯನ ಆಳಿಕೆಯ ಒಂಭತ್ತನೆ
ಯ ವರುಷದಲ್ಲಿ ಅವನ ಸ್ವಾಧೀನವಾಗಲು ಅವನು
ಎಲ್ಲಾ ಇಸ್ರಾಯೇಲ್ಯರನ್ನು ಅಶ್ಶೂರ್‌ದೇಶಕ್ಕೆ ಒಯ್ದು
ಹಲಹುಪ್ರಾಂತದಲ್ಲಿಯೂ ಹಾಬೋರ್‌ಹೊಳೆಯಿರುವ
ಗೋಜಾನ್‌ಪ್ರಾಂತದಲ್ಲಿಯೂ ಮೇದ್ಯರ ಪಟ್ಟಣಗಳಲ್ಲಿ
ಯೂ ಇರಿಸಿದನು.
ಇಸ್ರಾಯೇಲ್ಯರ ಈ ದುರ್ಗತಿಗೆ ಅವರ ದುರ್ನಡತೆ
ಯೇ ಕಾರಣ; ಹೇಗಂದರೆ—ಅವರು ತಮ್ಮನ್ನು ಐಗು
ಪ್ತದ ಅರಸನಾದ ಫರೋಹನ ಕೈಯಿಂದ ಬಿಡಿಸಿ ಅವನ
ರಾಜ್ಯದಿಂದ ಹೊರತಂದ ದೇವರಾದ ಯೆಹೋವನಿಗೆ
ವಿರುದ್ಧವಾಗಿ ಪಾಪಮಾಡಿ ಅನ್ಯದೇವತೆಗಳನ್ನು ಸೇವಿಸಿ
ದರು. ಯೆಹೋವನು ತಮ್ಮ ಎದುರಿನಿಂದ ಹೊರಡಿಸಿ 8
ಬಿಟ್ಟ ಜನಾಂಗಗಳ ಮತ್ತು ಇಸ್ರಾಯೇಲ್‌ರಾಜರ
ದುರಾಚಾರಗಳನ್ನು ಅನುಸರಿಸಿದರು; ಗುಪ್ತವಾಗಿ 9
ತಮ್ಮ ದೇವರಾದ ಯೆಹೋವನಿಗೆ ವಿರೋಧವಾದ ಕೃತ್ಯ
ಗಳನ್ನು ನಡಿಸಿದರು; ಕಾವಲುಗಾರರ ಬುರುಜುಳ್ಳ
ಚಿಕ್ಕ ಊರು ಮೊದಲುಗೊಂಡು ಕೋಟೆಕೊತ್ತಲುಗ
ಳುಳ್ಳ ಪಟ್ಟಣದ ವರೆಗಿರುವ ಎಲ್ಲಾ ಊರುಗಳಲ್ಲಿ
ತಮಗೋಸ್ಕರ ಪೂಜಾಸ್ಥಳಗಳನ್ನು ಏರ್ಪಡಿಸಿಕೊಂಡ
ರು; ಎಲ್ಲಾ ದಿನ್ನೆಗಳ ಮೇಲೆ ಮತ್ತು ಎಲ್ಲಾ 10
ಹಸುರು ಮರಗಳ ಕೆಳಗೆ ಕಲ್ಲುಕಂಬ, ಅಶೇರವಿಗ್ರಹ
ಸ್ತಂಭ ಇವುಗಳನ್ನು ನಿಲ್ಲಿಸಿದರು; ಯೆಹೋವನು 11
ತಮ್ಮ ಎದುರಿನಿಂದ ಹೊರಡಿಸಿಬಿಟ್ಟ ಅನ್ಯಜನಾಂಗಗ
ಳಂತೆ ಎಲ್ಲಾ ಪೂಜಾಸ್ಥಳಗಳಲ್ಲಿ ಧೂಪಸುಟ್ಟು ತಮ್ಮ
ದುಷ್ಕೃತ್ಯಗಳಿಂದ ಆತನನ್ನು ರೇಗಿಸಿದರು; ಯೆಹೋ 12
ವನ ಆಜ್ಞೆಯನ್ನು ಮೀರಿ ವಿಗ್ರಹಗಳನ್ನು ಆರಾಧಿಸಿ
ದರು; ಯೆಹೋವನು ದರ್ಶಿಗಳೆನಿಸಿಕೊಂಡ ತನ್ನ 13
ಪ್ರವಾದಿಗಳ ಮುಖಾಂತರವಾಗಿ ಇಸ್ರಾಯೇಲ್ಯಯೆಹೂ
ದ್ಯರಿಗೆ—ನೀವು ನಿಮ್ಮ ದುರಾಚಾರವನ್ನು ಬಿಟ್ಟು
ನಾನು ನಿಮ್ಮ ಪಿತೃಗಳಿಗೂ ನನ್ನ ಸೇವಕರಾದ ಪ್ರವಾದಿ
ಗಳ ಮುಖಾಂತರವಾಗಿ ನಿಮಗೂ ಕೊಟ್ಟಂಥ ನನ್ನ
ಎಲ್ಲಾ ಆಜ್ಞಾನಿಯಮವಿಧಿಗಳನ್ನು ಕೈಕೊಂಡು ನಡೆ
ಯಿರಿ ಎಂದು ಖಂಡಿತವಾಗಿ ಹೇಳಿದಾಗ ಅವರು ದೇವ 14
ರಾದ ಯೆಹೋವನನ್ನು ನಂಬದೆ ಆತನ ಆಜ್ಞೆಗಳಿಗೆ
ಮಣಿಯದೆ ಇದ್ದ ತಮ್ಮ ಹಿರಿಯರಂತೆ ಆತನಿಗೆ ಕಿವಿ
ಗೊಡದೆ ಹೋದರು; ಆತನು ತಮ್ಮ ಪಿತೃಗಳಿಗೆ 15
ಕೊಟ್ಟ ವಿಧಿನಿಬಂಧನೆಗಳನ್ನೂ ತಮಗೆ ಹೇಳಿಸಿದ ಬುದ್ಧಿ
ವಾಕ್ಯಗಳನ್ನೂ ತಿರಸ್ಕರಿಸಿ ಮಿಥ್ಯಾದೇವತೆಗಳನ್ನು
ಸೇವಿಸಿ ನಿಷ್ಪ್ರಯೋಜಕರಾದರು; ಸುತ್ತಣ ಜನಾಂಗ
ಗಳನ್ನು ಅನುಸರಿಸಬಾರದೆಂದು ಯೆಹೋವನು ಆಜ್ಞಾ
ಪಿಸಿದರೂ ಅವರು ಕೇಳದೆ ಅವರನ್ನು ಅನುಸರಿಸಿದರು;
ತಮ್ಮ ದೇವರಾದ ಯೆಹೋವನ ಆಜ್ಞೆಗಳನ್ನೆಲ್ಲಾ 16
ಮೀರಿ ಎರಡು ಎರಕದ ಬಸವಮೂರ್ತಿಗಳು,
ಅಶೇರವಿಗ್ರಹಸ್ತಂಭ ಇವುಗಳನ್ನು ಮಾಡಿಕೊಂಡರು;
ಆಕಾಶಸೈನ್ಯ ಬಾಳ್‌ದೇವತೆ ಇವುಗಳನ್ನು ಪೂಜಿಸಿ
ದರು; ತಮ್ಮ ಗಂಡು ಹೆಣ್ಣು ಮಕ್ಕಳನ್ನು ಆಹುತಿ 17
ಕೊಟ್ಟರು; ಯೆಹೋವನ ದೃಷ್ಟಿಯಲ್ಲಿ ಕೆಟ್ಟವುಗ
ಳಾಗಿರುವ ಕಣಿಹೇಳುವದು, ಯಂತ್ರಮಂತ್ರಗಳನ್ನು
ಮಾಡುವದು ಮೊದಲಾದ ದುಷ್ಕೃತ್ಯಗಳಿಗೆ ತಮ್ಮನ್ನು
ಮಾರಿಬಿಟ್ಟು ಆತನಿಗೆ ಕೋಪವನ್ನೆಬ್ಬಿಸಿದರು. ಅವರು 18
ಈ ಪ್ರಕಾರ ನಡೆದದರಿಂದ ಯೆಹೋವನು ಅವರ ಮೇಲೆ
ಬಹಳವಾಗಿ ಕೋಪಗೊಂಡು ಯೆಹೂದಕುಲದವರ
ಹೊರತು ಉಳಿದ ಎಲ್ಲಾ ಕುಲಗಳವರನ್ನು ತನ್ನ ಸನ್ನಿಧಿ
ಯಿಂದ ತಳ್ಳಿಬಿಟ್ಟನು. ಯೆಹೂದ್ಯರು ಸಹ ತಮ್ಮ 19
ದೇವರಾದ ಯೆಹೋವನ ಆಜ್ಞೆಯನ್ನು ಕೈಕೊಳ್ಳದೆ
ಇಸ್ರಾಯೇಲ್ಯರ ಪದ್ಧತಿಯನ್ನು ಅನುಸರಿಸಿದದರಿಂದ
ಆತನು ಇಸ್ರಾಯೇಲ್‌ಕುಲಗಳಲ್ಲಿ ಉಳಿದಿದ್ದ ಇವರನ್ನೂ 20
ಹೇಸಿ ತನ್ನ ಸನ್ನಿಧಿಯಿಂದ ತಳ್ಳಿಬಿಟ್ಟು ಸೂರೆಮಾಡುವವ

21 ರಿಗೆ ಒಪ್ಪಿಸಿ ಬಾಧಿಸಿದನು. ಆತನು ಇಸ್ರಾಯೇಲ್
ರಾಜ್ಯವನ್ನು ದಾವೀದಸಂತಾನದವರ ಕೈಯಿಂದ ಕಿತ್ತು
ಕೊಂಡನಂತರ ಇಸ್ರಾಯೇಲ್ಯರು ನೆಬಾಟನ ಮಗ
ನಾದ ಯಾರೊಬ್ಬಾಮನನ್ನು ಅರಸನನ್ನಾಗಿ ಮಾಡಿಕೊ
ಳ್ಳಲು ಅವನು ಅವರನ್ನು ಯೆಹೋವನ ಭಕ್ತಿಯಿಂದ
22 ಜಾರಿಸಿ ಮಹಾಪಾಪಕ್ಕೆ ಒಳಪಡಿಸಿದನು. ಅವರು
ಯಾರೊಬ್ಬಾಮನ ದುರ್ಮಾರ್ಗದಲ್ಲಿ ನಡೆಯುವದನ್ನು
23 ಬಿಡಲಿಲ್ಲವಾದದರಿಂದ ಯೆಹೋವನು ತನ್ನ ಸೇವಕರಾದ
ಎಲ್ಲಾ ಪ್ರವಾದಿಗಳ ಮುಖಾಂತರವಾಗಿ ಮುಂತಿಳಿಸಿ
ದಂತೆ ಅವರನ್ನು ತನ್ನ ಸನ್ನಿಧಿಯಿಂದ ತಳ್ಳಿಬಿಟ್ಟನು.
ಅವರು ಸೆರೆಯವರಾಗಿ ತಮ್ಮ ದೇಶದಿಂದ ಅಶ್ಶೂರ್
ದೇಶಕ್ಕೆ ಒಯ್ಯಲ್ಪಟ್ಟು ಇಂದಿನ ವರೆಗೂ ಅಲ್ಲೇ
ಇರುತ್ತಾರೆ.

### ಸಮಾರ್ಯದವರೆನಿಸಿಕೊಳ್ಳುವ ಮಿಶ್ರಜನಾಂಗದವರ ಉತ್ಪತ್ತಿ.

24 ಅಶ್ಶೂರದ ಅರಸನು ಸಮಾರ್ಯಪಟ್ಟಣಗಳಲ್ಲಿ
ವಾಸವಾಗಿದ್ದ ಇಸ್ರಾಯೇಲ್ಯರನ್ನು ಸೆರೆಯಾಗಿ ಒಯ್ದ
ನಂತರ ಅವರಿಗೆ ಬದಲಾಗಿ ಆ ಪಟ್ಟಣಗಳಿಗೆ ಬಾಬೆಲ್,
ಕೂತಾ, ಅವ್ವಾ, ಹಮಾತ್, ಸೆಫರ್ವಯಿಮ್ ಎಂಬ
ಊರುಗಳವರನ್ನು ಕಳುಹಿಸಿದನು. ಅವರು ಸಮಾ
ರ್ಯದೇಶವನ್ನು ಸ್ವತಂತ್ರಿಸಿಕೊಂಡು ಅದರ ಪಟ್ಟಣ
25 ಗಳಲ್ಲಿ ವಾಸಿಸಿದರು. ಅವರಿಗೆ ಆರಂಭದಲ್ಲಿ ಯೆ
ಹೋವನ ಭಯಭಕ್ತಿ ಇರಲಿಲ್ಲವಾದದರಿಂದ ಆತನು
ಸಿಂಹಗಳನ್ನು ಕಳುಹಿಸಿದನು; ಅವು ಅವರಲ್ಲಿ ಅನೇಕ
26 ರನ್ನು ಕೊಂದವು. ಅಶ್ಶೂರದ ಅರಸನ ಸೇವಕರು
ತಮ್ಮ ಅರಸನಿಗೆ—ನೀನು ಸಮಾರ್ಯಪಟ್ಟಣಗಳಿಗೆ
ಕಳುಹಿಸಿದ ಆಯಾ ಊರುಗಳ ಜನರು ಆ ದೇಶದ
ದೇವರಿಗೆ ನಡೆಯತಕ್ಕ ರೀತಿಯನ್ನು ಅರಿಯದವರಾಗಿ
ದ್ದಾರೆ. ಆದದರಿಂದ ಅಲ್ಲಿನ ದೇವರು ಸಿಂಹಗಳನ್ನು
ಕಳುಹಿಸಿ ಅವರನ್ನು ಸಂಹರಿಸುತ್ತಿರುತ್ತಾನೆ ಎಂದು
27 ತಿಳಿಸಿದರು. ಆಗ ಅವನು ಅವರಿಗೆ—ಅಲ್ಲಿಂದ ಇಲ್ಲಿಗೆ
ಸೆರೆಯವರಾಗಿ ಬಂದಿರುವ ಯಾಜಕರಲ್ಲೊಬ್ಬನನ್ನು
ಅಲ್ಲಿಗೆ ಕಳುಹಿಸಿರಿ. ಅವನು ಹೋಗಿ ಅಲ್ಲಿ ವಾಸವಾ
ಗಿದ್ದು ಆ ದೇಶದ ದೇವರಿಗೆ ನಡೆಯತಕ್ಕ ರೀತಿಯನ್ನು
28 ಅವರಿಗೆ ಕಲಿಸಲಿ ಎಂದು ಆಜ್ಞಾಪಿಸಿದನು. ಅವರು
ಸಮಾರ್ಯದಿಂದ ಸೆರೆಯವನಾಗಿ ಬಂದಿದ್ದ ಒಬ್ಬ
ಯಾಜಕನನ್ನು ಅಲ್ಲಿಗೆ ಕಳುಹಿಸಿದರು. ಇವನು ಬೇ
ತೇಲಿನಲ್ಲಿ ವಾಸವಾಗಿದ್ದು ಜನರಿಗೆ ಯೆಹೋವಭಕ್ತಿ
29 ಯನ್ನು ಬೋಧಿಸಿದನು. ಆದರೂ ಆ ಜನಾಂಗಗಳವರು
ತಮ್ಮ ದೇವತೆವಿಗ್ರಹಗಳನ್ನು ಮಾಡಿಕೊಂಡು ತಾವು
ವಾಸಿಸುವ ಊರುಗಳೊಳಗೆ ಸಮಾರ್ಯದವರು ಏರ್ಪ
ಡಿಸಿದ್ದ ಪೂಜಾಸ್ಥಳಗಳಲ್ಲಿ ಅವುಗಳನ್ನಿಟ್ಟು ಪೂಜಿಸು
30 ತ್ತಿದ್ದರು. ಬಾಬೆಲಿನವರು ಸುಕ್ಕೋತ್ಬೆನೋತ್, ಕೂತ
31 ದವರು ನೇರ್ಗಲ್, ಹಮಾತಿನವರು ಅಷೀಮಾ, ಅವ್ವೀ
ಯರು ನಿಭಜ್ ಮತ್ತು ತರ್ತಕ್ ಎಂಬ ದೇವತೆ
ಗಳನ್ನು ಪೂಜಿಸುತ್ತಿದ್ದರು. ಸೆಫರ್ವಯಿಮಿನವರು
ತಮ್ಮ ಕುಲದೇವತೆಗಳಾಗಿರುವ ಅದ್ರಮ್ಮೆಲೆಕ್,
ಅನಮ್ಮೆಲೆಕ್ ಎಂಬವುಗಳಿಗೋಸ್ಕರ ತಮ್ಮ ಮಕ್ಕಳನ್ನು
32 ಆಹುತಿಕೊಡುತ್ತಿದ್ದರು. ಅವರು ಯೆಹೋವನ ಭಕ್ತ

ರಾಗಿ ಕನಿಷ್ಠಜನರಲ್ಲಿ ಕೆಲವರನ್ನು ಪೂಜಾಸ್ಥಳಗ
ಯಾಜಕರನ್ನಾಗಿ ನೇಮಿಸಿಕೊಂಡು ಅವರ ಮುಖಾಂತ
ವಾಗಿ ಪೂಜಾಸ್ಥಳದ ಗುಡಿಗಳಲ್ಲಿ ಆರಾಧನೆನಡಿಸ
ತ್ತಿದ್ದರು. ಯೆಹೋವನ ಭಕ್ತರಾಗಿದ್ದರೂ ತಾ
ಬಿಟ್ಟು ಬಂದ ದೇಶಗಳ ಪದ್ಧತಿಯ ಪ್ರಕಾರ ತವ
ಕುಲದೇವತೆಗಳ ಆರಾಧನೆಯನ್ನೂ ಮಾಡುತ್ತಿದ್ದರ
ಅವರು ಆ ಕಾಲದಲ್ಲಿ ರೂಢಿಯಾದ ಪದ್ಧತಿಯ
ಇಂದಿನ ವರೆಗೂ ನಡೆಯುತ್ತಾರೆ. ಅವರು ಯೆಹೋ
ನಲ್ಲಿ ಭಯಭಕ್ತಿಯುಳ್ಳವರಲ್ಲ; ಆತನಿಂದ ಇಸ
ಯೇಲನೆಂಬ ಹೆಸರುಹೊಂದಿದ ಯಾಕೋಬನ ಸಂ
ನದವರಿಗೆ ಕೊಡಲ್ಪಟ್ಟ ಆಜ್ಞಾನಿಯಮವಿಧಿಧವ
ಶಾಸ್ತ್ರಗಳನ್ನು ಅನುಸರಿಸುವದಿಲ್ಲ. ಯೆಹೋವ
ಇಸ್ರಾಯೇಲ್ಯರಿಗೆ—ನೀವು ಅನ್ಯದೇವತೆಗಳನ್ನು ಆ
ಧಿಸಬಾರದು, ಅವುಗಳಿಗೆ ಕೈಮುಗಿಯಲೂ ಬಾರದ
ಸೇವೆಮಾಡಲೂ ಯಜ್ಞವರ್ಪಿಸಲೂ ಬಾರದು, ನಿ
ನ್ನು ಮಹಾಶಕ್ತಿ ಭುಜಪರಾಕ್ರಮ ಇವುಗಳ ಮ
ಲಕವಾಗಿ ಐಗುಪ್ತದೇಶದಿಂದ ಕರಕೊಂಡುಬಂದ
ಹೋವನಾದ ನನ್ನಲ್ಲಿ ಭಯಭಕ್ತಿಯುಳ್ಳವರಾಗಿ
ಗೊಬ್ಬನಿಗೇ ಕೈಮುಗಿದು ಯಜ್ಞವರ್ಪಿಸಬೇಕು, ನಾ
ನಿಮಗೆ ಬರೆಯಿಸಿ ಕೊಟ್ಟ ಆಜ್ಞಾನಿಯಮವಿಧಿಧವ
ಶಾಸ್ತ್ರಗಳನ್ನು ತಪ್ಪದೆ ಕೈಕೊಳ್ಳಬೇಕು, ಅನ್ಯದೇ
ಗಳನ್ನು ಪೂಜಿಸಬಾರದು, ನನ್ನ ನಿಬಂಧನೆಯ
ಮರೆತು ಅನ್ಯದೇವತೆಗಳನ್ನು ಪೂಜಿಸಬಾರದು, ನಿ
ದೇವರಾಗಿರುವ ಯೆಹೋವನಾದ ನನ್ನಲ್ಲಿ ಭಯಭ
ಯುಳ್ಳವರಾಗಿರಬೇಕು; ಆಗ ನಿಮ್ಮನ್ನು ಎಲ್ಲಾ ಶ
ಗಳ ಕೈಗೆ ಸಿಕ್ಕದಂತೆ ತಪ್ಪಿಸುವೆನು ಎಂದು ಹೇಳಿ
ರೊಡನೆ ಒಡಂಬಡಿಕೆಮಾಡಿಕೊಂಡನು; ಅವರು ಅದ
ಲಕ್ಷಿಸದೆ ತಮ್ಮ ಮುಂಚಿನ ಪದ್ಧತಿಗಳನ್ನೇ ಅನುಸ
ದರು. ಆ ಜನಾಂಗಗಳವರು ಯೆಹೋವಭಕ್ತ
ಗಿದ್ದರೂ ತಮ್ಮ ವಿಗ್ರಹಗಳನ್ನೂ ಆರಾಧಿಸುತ್ತಿದ್ದ
ಅವರ ಸಂತಾನದವರು ಇಂದಿನ ವರೆಗೂ ಹಾಗೆಯ
ಮಾಡುತ್ತಿರುತ್ತಾರೆ.

## ಇಸ್ರಾಯೇಲ್‌ರಾಜ್ಯವು ನಾಶವಾದನಂತರ ಯೆಹೂದರಾಜ್ಯದಲ್ಲಿ ಆಳಿದ ಅರಸರು.

18 — 25.

### ಅರಸನಾದ ಹಿಜ್ಕೀಯನು.

ಇಸ್ರಾಯೇಲ್ಯರ ಅರಸನೂ ಏಲನ ಮಗನೂ ಆದ
ಹೋಶೇಯನ ಆಳಿಕೆಯ ಮೂರನೆಯ ವರುಷದಲ್ಲಿ
ಯೆಹೂದರಾಜನಾದ ಆಹಾಜನ ಮಗ ಹಿಜ್ಕೀಯ
ಆಳತೊಡಗಿದನು. ಇವನು ಪಟ್ಟಕ್ಕೆ ಬಂದಾಗ ಇ
ತ್ತೈದು ವರುಷದವನಾಗಿದ್ದು ಯೆರೂಸಲೇಮಿನ
ಇಪ್ಪತ್ತೊಂಭತ್ತು ವರುಷ ಆಳಿದನು. ಜೆಕರ್ಯನ ಮ
ಳಾದ ಅಬೀ ಎಂಬಾಕೆಯು ಇವನ ತಾಯಿ. ಇವ
ಎಲ್ಲಾ ವಿಷಯಗಳಲ್ಲಿಯೂ ತನ್ನ ಪೂರ್ವಿಕನಾದ
ವೀದನಂತೆ ಯೆಹೋವನ ಚಿತ್ತಾನುಸಾರವಾಗಿ
ದನು. ಪೂಜಾಸ್ಥಳಗಳನ್ನು ಹಾಳುಮಾಡಿ ಕಲ್ಲುಕ
ಗಳನ್ನು ಒಡೆದು ಅಶೇರವಿಗ್ರಹಸ್ತಂಭಗಳನ್ನು ಕಡಿ

ಹಾಕಿದನು; ಮೋಶೆಯು ಮಾಡಿಸಿದ ತಾಮ್ರಸರ್ಪ
ವನ್ನು ಚೂರುಚೂರುಮಾಡಿದನು. ಇಸ್ರಾಯೇಲ್ಯರು
ಅದಕ್ಕೆ ಆ ವರೆಗೂ ಧೂಪಸುಡುತ್ತಿದ್ದರು. ಅದಕ್ಕೆ
1)ನೆಹುಷ್ಟಾನ್ ಎಂಬ 2)ಹೆಸರಿತ್ತು; ಇವನು ಇಸ್ರಾ
ಯೇಲ್‍ದೇವರಾದ ಯೆಹೋವನಲ್ಲಿ ಭರವಸವಿಟ್ಟಿದ್ದ
ನು. ಯೆಹೂದ್ಯರಲ್ಲಿ ಇವನಿಗೆ ಸಮಾನನಾದ ಅರಸನು
ಮುಂಚೆಯೂ ತರುವಾಯವೂ ಇರಲಿಲ್ಲ. ಇದಲ್ಲದೆ
ಇವನು ಯೆಹೋವನನ್ನೇ ಹೊಂದಿಕೊಂಡು ಆತನನ್ನು
ಬಿಡದೆ ಹಿಂಬಾಲಿಸಿ ಆತನು ಮೋಶೆಯ ಮುಖಾಂತರ
ವಾಗಿ ಅನುಗ್ರಹಿಸಿದ ಆಜ್ಞೆಗಳನ್ನು ಕೈಕೊಂಡನು.
ಯೆಹೋವನು ಇವನ ಸಂಗಡ ಇದ್ದದರಿಂದ ಎಲ್ಲಿಗೆ
ಹೋದರೂ ಕೃತಾರ್ಥನಾಗಿ ಬರುತ್ತಿದ್ದನು. ಇವನು
ಅಶ್ಶೂರದ ಅರಸನಿಗೆ ವಿರೋಧವಾಗಿ ತಿರುಗಿಬಿದ್ದು
ಸ್ವತಂತ್ರನಾದನು. ಗಾಜಪ್ರಾಂತದ ವರೆಗೆ ವಾಸ
ವಾಗಿದ್ದ ಫಿಲಿಷ್ಟಿಯರನ್ನು ಸೋಲಿಸಿ ಕಾವಲುಗಾರರ
ಬುರುಜಿರುವ ಚಿಕ್ಕ ಹಳ್ಳಿ ಮೊದಲುಗೊಂಡು ಕೋಟೆ
ಕೊತ್ತಲುಗಳುಳ್ಳ ಮಹಾನಗರಗಳ ವರೆಗೂ ಎಲ್ಲಾ
ಊರುಗಳನ್ನು ಹಾಳುಮಾಡಿದನು.
ಇಸ್ರಾಯೇಲ್ಯರ ಅರಸನೂ ಏಲನ ಮಗನೂ ಆದ
ಹೋಶೇಯನ ಆಳಿಕೆಯ ಏಳನೆಯ ವರುಷದಲ್ಲಿ ಅಂದರೆ
ಹಿಜ್ಕೀಯನ ಆಳಿಕೆಯ ನಾಲ್ಕನೆಯ ವರುಷದಲ್ಲಿ ಅಶ್ಶೂ
ರದ ಅರಸನಾದ ಶಲ್ಮನೆಸೆರನು ಸಮಾರ್ಯಕ್ಕೆ ವಿರೋ
ಧವಾಗಿ ಬಂದು ಮೂರು ವರುಷಗಳ ವರೆಗೂ ಅದಕ್ಕೆ
ಮುತ್ತಿಗೆಹಾಕಿ ಅದು ತನಗೆ ಇಸ್ರಾಯೇಲ್ಯರ ಅರಸ
ನಾದ ಹೋಶೇಯನ ಆಳಿಕೆಯ ಒಂಭತ್ತನೆಯ ವರುಷ
ದಲ್ಲಿ ಅಂದರೆ ಹಿಜ್ಕೀಯನ ಆಳಿಕೆಯ ಆರನೆಯ ವರುಷ
ದಲ್ಲಿ ಸ್ವಾಧೀನವಾಗಲು ಇಸ್ರಾಯೇಲ್ಯರನ್ನು ಸೆರೆ
ಹಿಡಿದು ಹಲಹು, ಹಾಬೋರ್‍ಹೊಳೆಯಿರುವ ಗೋ
ಜಾನ್ ಪ್ರಾಂತ, ಮೇದ್ಯರ ಪಟ್ಟಣಗಳು ಇವುಗಳಿಗೆ
ಕಳುಹಿಸಿದನು. ಅವರು ತಮ್ಮ ದೇವರಾದ ಯೆಹೋ
ವನ ಮಾತನ್ನು ಕೇಳದೆ ಹೋದದ್ದೂ ಆತನ ನಿಬಂಧನೆ
ಯನ್ನು ಉಲ್ಲಂಘಿಸಿದ್ದೂ ಆತನ ಸೇವಕನಾದ ಮೋ
ಶೆಯ ಆಜ್ಞೆಗಳಿಗೆ ಅವಿಧೇಯರಾಗಿ ನಡೆದದ್ದೂ ಇದಕ್ಕೆ
ಕಾರಣ.

ಹಿಜ್ಕೀಯನೂ ಅಶ್ಶೂರದ ಅರಸನಾದ ಸನ್ಹೇರೀಬನೂ.

ಅರಸನಾದ ಹಿಜ್ಕೀಯನ ಆಳಿಕೆಯ ಹದಿನಾಲ್ಕನೆಯ
ವರುಷದಲ್ಲಿ ಅಶ್ಶೂರದ ಅರಸನಾದ ಸನ್ಹೇರೀಬನು
ಬಂದು ಯೆಹೂದಪ್ರಾಂತದ ಕೋಟೆಕೊತ್ತಲುಗಳುಳ್ಳ
ಎಲ್ಲಾ ಪಟ್ಟಣಗಳನ್ನು ಸ್ವಾಧೀನಮಾಡಿಕೊಂಡನು.
ಆಗ ಯೆಹೂದದ ಅರಸನಾದ ಹಿಜ್ಕೀಯನು ಲಾಕೀಷಿ
ನಲ್ಲಿದ್ದ ಅಶ್ಶೂರದ ಅರಸನ ಬಳಿಗೆ ದೂತರನ್ನು ಕಳು
ಹಿಸಿ ಅವನಿಗೆ—ನಾನು ಅಪರಾಧಿ; ನೀನು ನನ್ನನ್ನು
ಬಿಟ್ಟುಹೋಗು, ನೀನು ನನಗೆ ವಿಧಿಸುವಷ್ಟನ್ನು ಕೊಡು
ತ್ತೇನೆ ಎಂದು ಹೇಳಿ ಕಳುಹಿಸಿದನು. ಅಶ್ಶೂ
ರದ ಅರಸನು 3)ಮುನ್ನೂರು ತಲಾಂತು ಬೆಳ್ಳಿಯನ್ನೂ
4)ಮೂವತ್ತು ತಲಾಂತು ಬಂಗಾರವನ್ನೂ ಕೊಡಬೇ
ಕೆಂದು ಆಜ್ಞಾಪಿಸಿದನು. ಆಗ ಹಿಜ್ಕೀಯನು 15
ಯೆಹೋವನ ಆಲಯದಲ್ಲಿಯೂ ಅರಮನೆಯ ಭಂಡಾ
ರದಲ್ಲಿಯೂ ಸಿಕ್ಕಿದ ಬೆಳ್ಳಿಯನ್ನೂ ತಾನು ಯೆಹೋ 16
ವನ ಆಲಯದ ಕದಗಳಿಗೂ ಕಂಬಗಳಿಗೂ ಹೊದಿ
ಸಿದ್ದ ಬಂಗಾರದ ತಗಡನ್ನೂ ತೆಗೆದುಕೊಂಡು ಅಶ್ಶೂರದ
ಅರಸನಿಗೆ ಕಳುಹಿಸಿದನು.
ಅಶ್ಶೂರದ ಅರಸನು ಲಾಕೀಷಿನಿಂದ ಮಹಾಸೈನ್ಯ 17
ಸಹಿತರಾದ ತರ್ತಾನ್, ರಬ್ಸಾರೀಸ್, ರಬ್ಷಾಕೆ ಎಂಬ
ವರನ್ನು ಯೆರೂಸಲೇಮಿನಲ್ಲಿದ್ದ ಹಿಜ್ಕೀಯನ ಬಳಿಗೆ
ಕಳುಹಿಸಿದನು. ಇವರು ಗಟ್ಟಾ ಹತ್ತಿ ಯೆರೂಸ
ಲೇಮಿಗೆ ಬಂದು ಮಡಿವಾಳರ ಹೊಲದ ಮೇಲೆ
ಹೋಗುವ ರಾಜಮಾರ್ಗದ ಹತ್ತಿರ ಅಲ್ಲಿನ ಕೆರೆಯ
ಕಾಲಿವೆಯ ಬಳಿಯಲ್ಲಿ ಪಾಳೆಯಮಾಡಿಕೊಂಡು ಅರಸ
ನನ್ನು ಕೂಗಿ ಕರೆದರು. ಆಗ ಹಿಲ್ಕೀಯನ ಮಗನೂ 18
ರಾಜಗೃಹಾಧಿಪತಿಯೂ ಆದ ಎಲ್ಯಾಕೀಮ್, ಲೇಖಕ
ನಾದ ಶೆಬ್ನ, ಆಸಾಫನ ಮಗನೂ ಮಂತ್ರಿಯೂ ಆಗಿದ್ದ
ಯೋವ ಎಂಬವರು ಬಂದರು. ರಬ್ಷಾಕೆಯು ಅವರಿಗೆ— 19
ನೀವು ಹೋಗಿ ಹಿಜ್ಕೀಯನಿಗೆ ಮಹಾರಾಜನಾದ ಅಶ್ಶೂ
ರದ ಅರಸನ ಮಾತುಗಳನ್ನು ತಿಳಿಸಿರಿ. ಅವನು—
ನಿನ್ನ ಭರವಸಕ್ಕೆ ಯಾವ ಆಧಾರವುಂಟು? ಬರೀ ಒಂದು 20
ಬಾಯಿಮಾತಿನ ಮೇಲೆ ಯುದ್ಧಕ್ಕೆ ಬೇಕಾದ ವಿವೇಕವೂ
ಬಲವೂ ಉಂಟೆಂದು ಅಂದುಕೊಳ್ಳುತ್ತೀ; ನೀನು ಯಾ
ರನ್ನು ನಂಬಿಕೊಂಡು ನನಗೆ ವಿರೋಧವಾಗಿ ತಿರುಗಿಬಿದ್ದಿ
ದ್ದೀ? ಜಜ್ಜಿದ ದಂಟಿಗೆ ಸಮಾನವಾಗಿರುವ ಐಗು 21
ಪ್ತದಲ್ಲಿ ಭರವಸವಿಟ್ಟಿರುತ್ತೀಯಷ್ಟೆ. ಒಬ್ಬನು ಅಂಥ
ದಂಟಿನ ಮೇಲೆ ಕೈಯೂರಿಕೊಳ್ಳುವದಾದರೆ ಅದು
ಅವನ ಕೈಯನ್ನು ತಿವಿದು ಒಳಗೆ ಹೋಗುತ್ತದಲ್ಲವೇ!
ಐಗುಪ್ತದ ಅರಸನಾದ ಫರೋಹನಲ್ಲಿ ಭರವಸವಿಟ್ಟ
ವರಿಗೆ ಅದೇ ಗತಿಯಾಗುವದು. ಒಂದು ವೇಳೆ 22
ನೀವು—ನಮ್ಮ ದೇವರಾದ ಯೆಹೋವನನ್ನು ನಂಬಿ
ಕೊಂಡಿದ್ದೇವೆಂದು ಹೇಳಬಹುದು. ಹಿಜ್ಕೀಯನು
ಯೆರೂಸಲೇಮಿನ ಯಜ್ಞವೇದಿಯ ಮುಂದೆಯೇ
ಆರಾಧನೆಮಾಡಬೇಕೆಂಬದಾಗಿ ಯೆಹೂದ್ಯರಿಗೂ ಯೆ
ರೂಸಲೇಮಿನವರಿಗೂ ಆಜ್ಞಾಪಿಸಿ ಆ ಯೆಹೋವನ
ಪೂಜಾಸ್ಥಳಗಳನ್ನೂ ಬೇರೆ ಎಲ್ಲಾ ಯಜ್ಞವೇದಿಗಳನ್ನೂ
ಹಾಳುಮಾಡಿದನಲ್ಲಾ! ನನ್ನ ಒಡೆಯನಾದ ಅಶ್ಶೂ 23
ರದ ಅರಸನೊಂದಿಗೆ ಪಂಥಹಾಕುವದಕ್ಕೆ ನಿನಗೆ ಮನ
ಸ್ಸುಂಟೋ? ಹಾಗಾದರೆ ಅವನು ನಿನಗೆ ಎರಡು ಸಾವಿರ
ಕುದುರೆಗಳನ್ನು ಕೊಡುತ್ತಾನೆ; ನೀನು ಅಷ್ಟು ಮಂದಿ
ಸವಾರರನ್ನು ಅವುಗಳ ಮೇಲೆ ಕುಳ್ಳಿರಿಸುವಿಯೋ?
ಇದೂ ನಿನಗೆ ಅಸಾಧ್ಯವಾಗುವದಾದರೆ ನನ್ನ ಒಡೆ 24
ಯನ ಸೇನಾಪತಿಗಳಲ್ಲಿ ಅತ್ಯಲ್ಪನನ್ನಾದರೂ ಸೋಲಿ
ಸುವದು ಹೇಗೆ? ರಥಾಶ್ವಬಲಗಳ ವಿಷಯವಾಗಿ ಐಗು
ಪ್ತ್ಯರನ್ನು ನಂಬಿರುತ್ತೀಯೆಂದು ಕಾಣುತ್ತದೆ. ಈ 25
ದೇಶವನ್ನು ಹಾಳುಮಾಡುವದಕ್ಕೆ ಯೆಹೋವನ ಚಿತ್ತ
ವಿಲ್ಲದೆ ಬಂದೆನೆಂದು ನೆನಸುತ್ತೀಯೋ? ಇಲ್ಲಿಗೆ ಬಂದು

1) ಅಂದರೆ ತಾಮ್ರದು. 2) ಅಥವಾ, ಹೆಸರಿಟ್ಟನು. 3) ಅಂದರೆ ಸುಮಾರು ಒಂಭತ್ತು ಲಕ್ಷ ಕೊಳಿ. 4) ಅಂದರೆ
ಮಾರು ತೊಂಭತ್ತು ಸಾವಿರ ಕೊಳಿ.

ಇದನ್ನು ಹಾಳುಮಾಡಿಬಿಡು ಎಂದು ಯೆಹೋವನೇ
ನನಗೆ ಆಜ್ಞಾಪಿಸಿದನು ಅನ್ನುತ್ತಾನೆ ಅಂದನು.
26 ಆಗ ಹಿಲ್ಕೀಯನ ಮಗನಾದ ಎಲ್ಯಾಕೀಮ್, ಶೆಬ್ನ,
ಯೋವ ಎಂಬವರು ರಬ್ಷಾಕೆಗೆ—ನೀನು ಮಾತಾಡು
ವದು ಪೌಳಿಗೋಡೆಯ ಮೇಲಿರುವವರಿಗೆ ಕೇಳಿಸು
ತ್ತದೆ. ಆದದರಿಂದ ದಯಪಿಟ್ಟು ನಿನ್ನ ಸೇವಕರಾದ
ನಮ್ಮೊಡನೆ ಅರಾಮ್ಯ ಭಾಷೆಯಲ್ಲಿ ಮಾತಾಡು; ಅದು
ನಮಗೆ ತಿಳಿಯುತ್ತದೆ. ಆದರೆ ಯೂದಾಯ ಭಾಷೆ
27 ಯಲ್ಲಿ ಮಾತಾಡಬೇಡ ಎಂದು ಹೇಳಿದರು. ಅದಕ್ಕೆ
ರಬ್ಷಾಕೆಯು—ನನ್ನ ಯಜಮಾನನು ನಿಮ್ಮ ಸಂಗಡ
ವಾಗಲಿ ನಿಮ್ಮ ಒಡೆಯನ ಸಂಗಡವಾಗಲಿ ಮಾತಾಡ
ಬೇಕೆಂದು ನನ್ನನ್ನು ಕಳುಹಿಸಲಿಲ್ಲ. ಈ ಗೋಡೆಯ
ಮೇಲೆ ಕೂತಿರುವ ಜನರ ಸಂಗಡ ಮಾತಾಡುವದಕ್ಕೋ
ಸ್ಕರ ಕಳುಹಿಸಿದ್ದಾನೆ. ಅವರು ನಿಮ್ಮೊಡನೆ ಇದ್ದರೆ
ಸ್ವಂತ ಮಲವನ್ನು ತಿಂದು ಸ್ವಂತ ಮೂತ್ರವನ್ನು ಕುಡಿ
ಯಬೇಕಾಗುವದು ಎಂದು ಉತ್ತರಕೊಟ್ಟು ಎದ್ದು
28 ಗೋಡೆಯ ಮೇಲೆ ನಿಂತವರಿಗೆ ಯೂದಾಯ ಭಾಷೆ
ಯಲ್ಲಿ—ಅಶ್ಶೂರದ ಮಹಾರಾಜನ ಮಾತನ್ನು ಕೇಳಿರಿ;
29 ಅವನು ನಿಮಗೆ—ಹಿಜ್ಕೀಯನಿಂದ ಮೋಸಹೋಗಬೇ
ಡಿರಿ. ಅವನು ನಿಮ್ಮನ್ನು ನನ್ನ ಕೈಯಿಂದ ಬಿಡಿಸಲಾರ
30 ನು. ಹಿಜ್ಕೀಯನು ನಿಮಗೆ—ಯೆಹೋವನನ್ನು ನಂ
ಬಿರಿ; ಆತನು ನಮ್ಮನ್ನು ಹೇಗೂ ರಕ್ಷಿಸುವನು; ಈ
ಪಟ್ಟಣವು ಅಶ್ಶೂರದ ಅರಸನ ವಶವಾಗುವದಿಲ್ಲ ಎಂಬ
ದಾಗಿ ಹೇಳಿದರೆ ಅವನಿಗೆ ಕಿವಿಗೊಡಬೇಡಿರಿ, ಒಪ್ಪಬೇಡಿ
31 ರಿ. ಅಶ್ಶೂರದ ಅರಸನಾದ ನನ್ನ ಮಾತನ್ನು ಕೇಳಿರಿ;
ನನ್ನೊಡನೆ ಒಡಂಬಡಿಕೆಮಾಡಿಕೊಂಡು ನನ್ನ ಆಶ್ರಯ
ದಲ್ಲಿ ಸೇರಿರಿ. ನಿಮ್ಮಲ್ಲಿ ಪ್ರತಿಯೊಬ್ಬನೂ ತನ್ನ ತನ್ನ
ಅಂಜೂರಮರ, ದ್ರಾಕ್ಷಾಲತೆ ಇವುಗಳ ಹಣ್ಣುಗಳನ್ನು
ತಿಂದು ತನ್ನ ತನ್ನ ಬಾವಿಯ ನೀರನ್ನು ಕುಡಿಯುವನು.
32 ಸ್ವಲ್ಪ ಕಾಲವಾದನಂತರ ನಾನು ಬಂದು ನಿಮ್ಮನ್ನು
ಧಾನ್ಯ ದ್ರಾಕ್ಷಾರಸ ಆಹಾರ ದ್ರಾಕ್ಷೇತೋಟ ಎಣ್ಣೇ
ಮರ ಜೇನುತುಪ್ಪ ಇವು ಸಮೃದ್ಧಿಯಾಗಿರುವ ನಿಮ್ಮ
ದೇಶಕ್ಕೆ ಸಮಾನವಾದ ಇನ್ನೊಂದು ದೇಶಕ್ಕೆ ಕರ
ಕೊಂಡುಹೋಗುವೆನು; ನೀವು ಸಾಯುವದಿಲ್ಲ, ಬದು
ಕುವಿರಿ. ಯೆಹೋವನು ನಮ್ಮನ್ನು ರಕ್ಷಿಸುವನು
ಎಂಬ ನಂಬಿಕೆಯನ್ನು ನಿಮ್ಮಲ್ಲಿ ಹುಟ್ಟಿಸುವದಕ್ಕೆ
ಪ್ರಯತ್ನಿಸುವ ಹಿಜ್ಕೀಯನಿಗೆ ಕಿವಿಗೊಡಬೇಡಿರಿ.
33 ಯಾವ ಜನಾಂಗದ ದೇವತೆಯು ತನ್ನ ದೇಶವನ್ನು
ಅಶ್ಶೂರದ ಅರಸನ ಕೈಗೆ ಸಿಕ್ಕದಂತೆ ತಪ್ಪಿಸಿ ಕಾಪಾ
34 ಡಿತು? ಹಮಾತ್, ಅರ್ಪಾದ್, ಸೆಫರ್ವಯಿಮ್,
ಹೇನ, ಇವ್ವಾ ಎಂಬ ಪಟ್ಟಣಗಳ ದೇವತೆಗಳೇನಾದವು?
ಅವು ಸಮಾರ್ಯವನ್ನು ನನ್ನ ಕೈಗೆ ಸಿಕ್ಕದಂತೆ ತಪ್ಪಿಸಿ
35 ದವೋ? ಯಾವ ಜನಾಂಗದ ದೇವತೆಯಾದರೂ ತನ್ನ
ದೇಶವನ್ನು ನನ್ನ ಕೈಯಿಂದ ಬಿಡಿಸಲಾರದೆ ಹೋದ
ಮೇಲೆ ಯೆಹೋವನು ಯೆರೂಸಲೇಮನ್ನು ನನ್ನ ಕೈಗೆ
ಸಿಕ್ಕದಂತೆ ತಪ್ಪಿಸಿ ಕಾಪಾಡುವನೋ ಅನ್ನುತ್ತಾನೆ ಎಂದು
36 ಹೇಳಿದನು. ಆ ಸೇನಾಪತಿಗಳಿಗೆ ಯಾವ ಉತ್ತರ
ವನ್ನೂ ಕೊಡಬಾರದೆಂದು ಅರಸನು ತನ್ನ ಪ್ರಜೆಗಳಿಗೆ
ಆಜ್ಞಾಪಿಸಿದ್ದರಿಂದ ಅವರು ಸುಮ್ಮನಿದ್ದರು; ಏನೂ
37 ಅನ್ನಲಿಲ್ಲ. ಹಿಲ್ಕೀಯನ ಮಗನೂ ರಾಜಗೃಹಾಧಿ

ಪತಿಯೂ ಆಗಿದ್ದ ಎಲ್ಯಾಕೀಮ್, ಲೇಖಕನಾದ ಶೆಬ್ನ
ಆಸಾಫನ ಮಗನೂ ಮಂತ್ರಿಯೂ ಆಗಿದ್ದ ಯೋ
ಎಂಬವರು ತಮ್ಮ ಬಟ್ಟೆಗಳನ್ನು ಹರಕೊಂಡು ಅರ
ನಾದ ಹಿಜ್ಕೀಯನ ಬಳಿಗೆ ಬಂದು ಅವನಿಗೆ ರಬ್ಷಾಕೆಯ
ಮಾತುಗಳನ್ನು ತಿಳಿಸಿದರು. ಹಿಜ್ಕೀಯನು ಅದ
ನ್ನು ಕೇಳಿ ಬಟ್ಟೆಗಳನ್ನು ಹರಿದುಕೊಂಡು ಗೋಣೀತ
ಟ್ಟನ್ನು ಕಟ್ಟಿಕೊಂಡು ಯೆಹೋವನ ಆಲಯಕ್ಕೆ ಹೋ
ದನು. ಇದಲ್ಲದೆ ಅವನು ರಾಜಗೃಹಾಧಿಪತಿಯಾದ
ಎಲ್ಯಾಕೀಮ್, ಲೇಖಕನಾದ ಶೆಬ್ನ, ವೃದ್ಧಯಾಜಕರು
ಇವರನ್ನು ಕರಿಸಿ ಅವರಿಗೆ ಆಜ್ಞಾಪಿಸಿದ್ದೇನಂದರೆ—
ನೀವು ಗೋಣೀತಟ್ಟನ್ನು ಕಟ್ಟಿಕೊಂಡು ಆಮೋಚನ
ಮಗನೂ ಪ್ರವಾದಿಯೂ ಆಗಿರುವ ಯೆಶಾಯನ ಬಳಿ
ಹೋಗಿ ಅವನಿಗೆ—ಈ ದಿವಸದಲ್ಲಿ ನಮಗೆ ಮಹಾ
ಕಷ್ಟವು ಸಂಭವಿಸಿರುತ್ತದೆ; ನಾವು ಶಿಕ್ಷೆಯನ್ನೂ ನಿಂದ
ಯನ್ನೂ ಅನುಭವಿಸಬೇಕಾಯಿತು. ಹೆರಿಗೆಯ ಕಾ
ಬಂದದೆ; ಆದರೆ ಹೆರುವದಕ್ಕೆ ಬಲ ಸಾಲದು. ಜೀ
ಸ್ವರೂಪನಾದ ದೇವರನ್ನು ದೂಷಿಸುವದಕ್ಕಾಗಿ ತನ್ನ
ಯಜಮಾನನಾದ ಅಶ್ಶೂರದ ಅರಸನಿಂದ ಕಳುಹಿಸಲ್ಪ
ಟ್ಟ ರಬ್ಷಾಕೆಯ ನಿಂದಾವಾಕ್ಯಗಳನ್ನು ನಿನ್ನ ದೇ
ರಾದ ಯೆಹೋವನು ಕೇಳಿರುವನು; ನಿನ್ನ ದೇವರಾ
ಯೆಹೋವನು ತಾನು ಹೇಳಿದ ವಾಕ್ಯಗಳ ನಿಮಿತ್ತ
ಮುಯ್ಯಿತೀರಿಸಾನು. ಆದದರಿಂದ ಉಳಿದಿರುವ ಸ್ವ
ಲ್ಪ ಜನರಿಗೋಸ್ಕರ ಆತನನ್ನು ಪ್ರಾರ್ಥಿಸು ಎಂಬದಾಗಿ
ಹಿಜ್ಕೀಯನು ಅನ್ನುತ್ತಾನೆ ಎಂದು ಹೇಳಿರಿ ಎಂಬದೇ
ಅರಸನಾದ ಹಿಜ್ಕೀಯನ ಸೇವಕರು ಯೆಶಾಯನ ಬ
ಗೆ ಬಂದಾಗ ಅವನು ಅವರಿಗೆ—ನೀನು ಕೇಳಿದ ಮಾತು
ಗಳ ದೆಸೆಯಿಂದ ಹೆದರಬೇಡ; ಅಶ್ಶೂರದ ಅರಸ
ಸೇವಕರು ಆ ಮಾತುಗಳಿಂದ ನನ್ನನ್ನೇ ದೂಷಿಸಿದ್ದಾರೆ
ಆದದರಿಂದ ನಾನು ಅವನ ಮೇಲೆ [ಭಯದ] ಆತ್ಮ
ವನ್ನು ಬರಮಾಡುವೆನು. ಅವನು ಒಂದು ಸುದ್ದಿ
ಯನ್ನು ಕೇಳಿ ತಿರುಗಿಕೊಂಡು ಸ್ವದೇಶಕ್ಕೆ ಹೋಗಿ
ಅಲ್ಲಿ ಕತ್ತಿಯಿಂದ ಸಂಹೃತನಾಗುವಂತೆ ಮಾಡುವೆನು
ಎಂಬದಾಗಿ ಯೆಹೋವನು ನಿಮ್ಮ ಯಜಮಾನನಿ
ಹೇಳುತ್ತಾನೆ ಎಂದು ಉತ್ತರಕೊಟ್ಟನು.

ರಬ್ಷಾಕೆಯು ಹಿಂದಿರುಗಿ ಹೋಗುವಾಗ ದಾ
ಯಲ್ಲಿ ಅಶ್ಶೂರದ ಅರಸನು ಲಾಕೀಷನ್ನು ಬಿಟ್ಟು
ಹೋದನೆಂಬ ವರ್ತಮಾನ ಕೇಳಿ ಲಿಬ್ನಕ್ಕೆ ಹೋಗಿ
ಅಲ್ಲಿ ಅವನನ್ನು ಕಂಡನು. ಆಗ ಅವನು ಆ ಪಟ್ಟ
ಣಕ್ಕೆ ವಿರೋಧವಾಗಿ ಯುದ್ಧಮಾಡುತ್ತಾ ಇದ್ದನು
ಅಷ್ಟರಲ್ಲಿ ಕೂಷಿನ ಅರಸನಾದ ತಿರ್ಹಾಕನು ತನಗ
ವಿರೋಧವಾಗಿ ಹೊರಟಿದ್ದಾನೆಂಬ ಸುದ್ದಿಯನ್ನು ಕೇ
ಯೆಹೂದದ ಅರಸನಾದ ಹಿಜ್ಕೀಯನ ಬಳಿಗೆ ತಿರಿ
ದೂತರನ್ನು ಕಳುಹಿಸಿ ಅವರ ಮುಖಾಂತರವಾಗಿ ಅ
ನಿಗೆ—ನೀನು ನಂಬುವ ದೇವರು—ನಾನು ಯೆ
ರೂಸಲೇಮನ್ನು ಅಶ್ಶೂರದ ಅರಸನ ಕೈಗೆ ಒಪ್ಪಿಸ
ವದಿಲ್ಲವೆಂದು ಹೇಳಿ ನಿನ್ನನ್ನು ಮೋಸಗೊಳಿಸಾನು
ಅಶ್ಶೂರದ ಅರಸರು ಎಲ್ಲಾ ರಾಜ್ಯಗಳನ್ನು ಪೂಣ
ವಾಗಿ ನಾಶಮಾಡಿದರೆಂದು ಕೇಳಿದಿಯಲ್ಲಾ; ಹೀಗಿದ್ದ
ಮೇಲೆ ನೀನು ಉಳಿಯುವಿಯೋ? ನನ್ನ ತಂ
ತಾತಂದಿರು ಗೋಜಾನ್, ಖಾರಾನ್, ರೆಚೆಫ್ ಎಂ

ಪಟ್ಟಣಗಳ ಜನರನ್ನೂ ತೆಲಸ್ಸಾರ್ ಪ್ರಾಂತದಲ್ಲಿರುವ
ಎದೆನಿನ ಜನರನ್ನೂ ನಾಶಮಾಡುವದಕ್ಕೆ ಹೋದಾಗ
ಅವರ ದೇವತೆಗಳು ಅವರನ್ನು ಕಾಪಾಡಿದವೋ? ಹಮಾ
ತ್, ಅರ್ಪಾದ್, ಸೆಫರ್ವಯಿಮ್, ಹೇನ, ಇವ್ವಾ
ಎಂಬ ಪಟ್ಟಣಗಳ ಅರಸರು ಏನಾದರು ಎಂದು ಹೇಳಿಸಿ
ದನು. ಹಿಜ್ಕೀಯನು ಆ ದೂತರು ತಂದ ಪತ್ರವನ್ನು
ತೆಗೆದುಕೊಂಡು ಓದಿದನಂತರ ಯೆಹೋವನ ಆಲ
ಯಕ್ಕೆ ಹೋಗಿ ಅದನ್ನು ಯೆಹೋವನ ಮುಂದೆ ತೆರೆ
ದಿಟ್ಟು ಆತನಿಗೆ—ಕೆರೂಬಿಗಳ ಮೇಲೆ ಆಸೀನನಾ
ಗಿರುವಾತನೇ, ಇಸ್ರಾಯೇಲ್‌ದೇವರೇ, ಯೆಹೋ
ವನೇ, ಎಲ್ಲಾ ಭೂರಾಜ್ಯಗಳನ್ನು ಆಳುವ ದೇವರು
ನೀನೊಬ್ಬನೇ; ಪರಲೋಕಭೂಲೋಕಗಳನ್ನುಂಟುಮಾ
ಡಿದವನು ನೀನೇ. ಯೆಹೋವನೇ, ಕಿವಿಗೊಟ್ಟು
ಕೇಳು; ಯೆಹೋವನೇ, ಕಣ್ಣಿಟ್ಟು ನೋಡು. ಸನ್ಹೇ
ರೀಬನು ಜೀವಸ್ವರೂಪದೇವರಾದ ನಿನ್ನನ್ನು ನಿಂದಿಸು
ವದಕ್ಕೋಸ್ಕರ ಹೇಳಿಕಳುಹಿಸಿದ ಮಾತುಗಳನ್ನು
ಮನಸ್ಸಿಗೆ ತಂದುಕೋ. ಯೆಹೋವನೇ, ಅಶ್ಶೂರದ
ಅರಸರು ದೇಶಜನಾಂಗಗಳನ್ನು ಹಾಳುಮಾಡಿ ಅವರ
ದೇವತೆಗಳನ್ನು ಬೆಂಕಿಯಲ್ಲಿ ಹಾಕಿದ್ದು ನಿಜ. ಅವು
ದೇವತೆಗಳಲ್ಲ, ಮನುಷ್ಯರು ಕೆತ್ತಿದ ಕಲ್ಲುಮರಗಳ
ಬೊಂಬೆಗಳಷ್ಟೆ; ಆದದರಿಂದಲೇ ಅವುಗಳನ್ನು ಹಾಳು
ಮಾಡುವದು ಅವರಿಗೆ ಸಾಧ್ಯವಾಯಿತು. ಯೆಹೋ
ವನೇ, ನಮ್ಮ ದೇವರೇ, ನೀನೊಬ್ಬನೇ ದೇವರೆಂಬ
ದನ್ನು ಭೂರಾಜ್ಯಗಳೆಲ್ಲವೂ ತಿಳಿದುಕೊಳ್ಳುವಂತೆ ನಮ್ಮ
ನ್ನು ಇವನ ಕೈಯಿಂದ ಬಿಡಿಸು ಎಂದು ಪ್ರಾರ್ಥಿಸಿದನು.
ಆಗ ಆಮೋಚನ ಮಗನಾದ ಯೆಶಾಯನು ಹಿಜ್ಕೀ
ಯನಿಗೆ ಹೇಳಿಕಳುಹಿಸಿದ್ದೇನಂದರೆ—ನೀನು ಅಶ್ಶೂ
ರದ ಅರಸನಾದ ಸನ್ಹೇರೀಬನ ವಿಷಯವಾಗಿ ಮಾಡಿದ
ಬಿನ್ನಹವನ್ನು ಕೇಳಿದ್ದೇನೆಂಬದಾಗಿ ಇಸ್ರಾಯೇಲ್‌ದೇವ
ರಾದ ಯೆಹೋವನು ಅನ್ನುತ್ತಾನೆ. ಯೆಹೋವನು
ಅವನನ್ನು ಕುರಿತು—

ಕನ್ನಿಕೆಯಾಗಿರುವ ಚೀಯೋನ್ ಕುಮಾರ್ತೆಯು
ನಿನ್ನನ್ನು ತಿರಸ್ಕರಿಸಿ ಪರಿಹಾಸ್ಯಮಾಡುತ್ತಾಳೆ;
ಯೆರೂಸಲೇಮ್ ಕುಮಾರ್ತೆಯು ನಿನ್ನ ಹಿಂದಿ
ನಿಂದ ತಲೆಯಾಡಿಸುತ್ತಾಳೆ.
ನೀನು ಯಾರನ್ನು ನಿಂದಿಸಿ ಯಾರನ್ನು ದೂಷಿಸಿದಿ?
ಯಾರಿಗೆ ವಿರೋಧವಾಗಿ ಬಾಯ್ದೆರೆದು ಒದರಿದಿ?
ನೀನು ಸೊಕ್ಕಿನಿಂದ ನೋಡಿದ್ದು ಯಾರನ್ನು ?
ಇಸ್ರಾಯೇಲ್ಯರ ಸದಮಲಸ್ವಾಮಿಯನ್ನಲ್ಲವೇ !

ನೀನು ನಿನ್ನ ದೂತರ ಮುಖಾಂತರವಾಗಿ ಕರ್ತ
ನನ್ನು ನಿಂದಿಸಿ—
ನನ್ನ ರಥಸಮೂಹದೊಡನೆ ಪರ್ವತಶಿಖರಗಳನ್ನು
ಹತ್ತಿದ್ದೇನೆ;
ಲೆಬನೋನಿನ ದುರ್ಗಮಸ್ಥಳಗಳಿಗೆ ಹೋಗಿದ್ದೇನೆ;
ಅದರ ಎತ್ತರವಾದ ದೇವದಾರುವೃಕ್ಷಗಳನ್ನೂ
ಶ್ರೇಷ್ಠವಾದ ತುರಾಯಿಮರಗಳನ್ನೂ ಕಡಿದುಬಿಟ್ಟಿ
ದ್ದೇನೆ;
ಅಲ್ಲಿನ ಬಹುದೂರನಿವಾಸಸ್ಥಳವನ್ನೂ ಉದ್ಯಾನವನ
ಗಳನ್ನೂ ಪ್ರವೇಶಿಸಿದ್ದೇನೆ;
ಪರದೇಶಗಳಲ್ಲಿ ಅಗೆದು ನೀರುತೆಗೆದು ಕುಡಿದಿದ್ದೇನೆ; 24
ನನ್ನ ಪಾದಗಳಿಂದ ಐಗುಪ್ತದ ಎಲ್ಲಾ ಹೊಳೆಗ
ಳನ್ನು ಬತ್ತಿಸಿದ್ದೇನೆ ಎಂಬದಾಗಿ ನೀನು ಕೊಚ್ಚಿ
ಕೊಂಡಿದ್ದೀ.

ಕೇಳು, ಹೀಗಾಗಬೇಕೆಂದು ಬಹುಕಾಲದ ಹಿಂದೆ 25
ಯೇ ಗೊತ್ತುಮಾಡಿದೆನು ;
ಪೂರ್ವಕಾಲದಲ್ಲಿ ನಿರ್ಣಯಿಸಿದ್ದನ್ನು ಈಗ ನೆರ
ವೇರಿಸಿದ್ದೇನೆ.
ಆದದರಿಂದ ಕೋಟೆಕೊತ್ತಲುಗಳುಳ್ಳ ಪಟ್ಟಣಗ
ಳನ್ನು ಹಾಳುದಿಬ್ಬಗಳನ್ನಾಗಿ ಮಾಡುವದು
ನಿನಗೆ ಸಾಧ್ಯವಾಯಿತು.
ಅವುಗಳ ನಿವಾಸಿಗಳು ಬಲವಿಲ್ಲದವರಾಗಿ ಆಶಾ 26
ಭಂಗಪಟ್ಟು ಕಳವಳಗೊಂಡರು ;
ಅವರು ಹೊಲದ ಕಾಯಿಪಲ್ಯಕ್ಕೂ ಎಳೆಗರಿಕೆಗೂ
ಮಾಳಿಗೆಯ ಮೇಲಣ ಹುಲ್ಲಿಗೂ
ಹೊಡೆಹಾಯುವದಕ್ಕಿಂತ ಮೊದಲೇ ಒಣಗಿಹೋದ
ಪೈರಿಗೂ ಸಮಾನರಾದರು.
ನೀನು ಕೂತುಕೊಳ್ಳುವದೂ ಹೋಗುವದೂ 27
ಬರುವದೂ ನನಗೆ ಗೊತ್ತುಂಟು ;
ನೀನು ನನ್ನ ಮೇಲೆ ರೌದ್ರಾವೇಶನಾಗಿರುವ
ದನ್ನು ಬಲ್ಲೆನು.
ನೀನು ನನಗೆ ವಿರೋಧವಾಗಿ ಉಬ್ಬಿಕೊಂಡಿರುವದೂ 28
ಕುಪಿತನಾಗಿರುವದೂ ನನಗೆ ತಿಳಿದುಬಂತು.
ಆದದರಿಂದ ನಿನಗೆ ಮೂಗುದಾಣವನ್ನೂ ಕಡಿವಾ
ಣವನ್ನೂ ಹಾಕಿ
ಬಂದ ದಾರಿಯಿಂದಲೇ ನಿನ್ನನ್ನು ಹಿಂದಕ್ಕೆ ಎಳೆ
ದುಕೊಂಡು ಹೋಗುವೆನು
ಎಂಬದಾಗಿ ಹೇಳಿದ್ದಾನೆ. ಈ ಮಾತುಗಳು ನೆರವೇರು 29
ವವೆಂಬದಕ್ಕೆ ನೀವು ಈ ವರುಷದಲ್ಲಿ ಕೂಳೆ ಬೆಳೆಯನ್ನೂ
ಮುಂದಿನ ವರುಷದಲ್ಲಿ ತನ್ನಷ್ಟಕ್ಕೆ ತಾನೇ ಬೆಳೆದದ್ದನ್ನೂ
ಮೂರನೆಯ ವರುಷ ಹೊಲಗಳಲ್ಲಿ ಬಿತ್ತಿ ಕೊಯ್ದು
ದ್ದನ್ನೂ ದ್ರಾಕ್ಷೆತೋಟಗಳಲ್ಲಿ ವ್ಯವಸಾಯಮಾಡಿ
ಕೂಡಿಸಿದ್ದನ್ನೂ ಅನುಭವಿಸುವದೇ ಗುರುತಾಗಿರುವದು.
ತಪ್ಪಿಸಿಕೊಂಡು ಉಳಿದ ಯೆಹೂದ್ಯರು ದೇಶದಲ್ಲಿ 30
ನೆಲೆಗೊಂಡು ಅಭಿವೃದ್ಧಿಯಾಗುವರು. ಯೆರೂಸಲೇ 31
ಮಿನಲ್ಲಿ ಉಳಿದವರು ಹರಡಿಕೊಳ್ಳುವರು; ಚೀಯೋ
ನ್‌ಪರ್ವತದಲ್ಲಿ ತಪ್ಪಿಸಿಕೊಂಡವರು ಅಭಿವೃದ್ಧಿ
ಹೊಂದುವರು; ಯೆಹೋವನ ಆಗ್ರಹವೇ ಇದನ್ನು
ನೆರವೇರಿಸುವದು. ಯೆಹೋವನು ಅಶ್ಶೂರದ ಅರಸನ 32
ವಿಷಯವಾಗಿ—ನನ್ನ ಮಾತನ್ನು ಕೇಳು, ಅವನು ಪಟ್ಟ
ಣವನ್ನು ಸಮೀಪಿಸುವದಿಲ್ಲ, ಅದಕ್ಕೆ ಬಾಣವನ್ನೆಸೆಯು
ವದಿಲ್ಲ, ಗುರಾಣಿಹಿಡಿದಿರುವವರನ್ನು ಕಳುಹಿಸುವದಿಲ್ಲ,
ಅದನ್ನು ಕೆಡವಿಬಿಡುವದಕ್ಕೋಸ್ಕರ ಅದರ ಎದುರಾಗಿ
ಮಣ್ಣಿನ ದಿಬ್ಬವನ್ನು ಮಾಡುವದಿಲ್ಲ. ಅವನು ಬಂದ 33
ದಾರಿಯಿಂದಲೇ ಹಿಂದಿರುಗಿ ಹೋಗುವನು ; ಈ ಪಟ್ಟ
ಣಕ್ಕೆ ಬರುವದೇ ಇಲ್ಲ. ನನಗೋಸ್ಕರವಾಗಿಯೂ 34
ನನ್ನ ಸೇವಕನಾದ ದಾವೀದನಿಗೋಸ್ಕರವಾಗಿಯೂ
ಇದನ್ನು ಉಳಿಸಿ ಕಾಪಾಡುವೆನು ಎಂದು ಹೇಳುತ್ತಾನೆ
ಎಂಬದೇ.

35 ಅದೇ ರಾತ್ರಿಯಲ್ಲಿ ಯೆಹೋವನ ದೂತನು ಹೊ
ರಟುಬಂದು ಅಶ್ಶೂರ್ಯರ ಪಾಳೆಯದಲ್ಲಿ ಲಕ್ಷದ
ಎಂಭತ್ತೈದು ಸಾವಿರ ಮಂದಿ ಸೈನಿಕರನ್ನು ಸಂಹರಿಸಿ
ದನು. ಅಶ್ಶೂರ್ಯರು ಬೆಳಿಗ್ಗೆ ಎದ್ದು ನೋಡುವಲ್ಲಿ
36 ಪಾಳೆಯತುಂಬಾ ಹೆಣಗಳಿದ್ದವು. ಆಗ ಅವರ ಅರಸ
ನಾದ ಸನ್ಹೇರೀಬನು ಹಿಂದಿರುಗಿ ನಿನೆವೆಪಟ್ಟಣಕ್ಕೆ
37 ಹೋಗಿ ಅಲ್ಲಿ ವಾಸಿಸಿದನು. ಅವನು ಒಂದು ದಿವಸ
ಗುಡಿಗೆ ಹೋಗಿ ತನ್ನ ದೇವರಾದ ನಿಸ್ರೋಕನನ್ನು
ಆರಾಧಿಸುತ್ತಿರುವಾಗ ಅದ್ರಮ್ಮೆಲೆಕ್, ಸರೆಚೆರ್ ಎಂಬ
ವರು ಅವನನ್ನು ಕತ್ತಿಯಿಂದ ಕೊಂದು ಅರರಾಟ್
ದೇಶಕ್ಕೆ ಓಡಿಹೋದರು. ಅವನಿಗೆ ಬದಲಾಗಿ ಅವನ
ಮಗನಾದ ಏಸರ್ಹದ್ದೋನನು ಅರಸನಾದನು.

ಹಿಜ್ಕೀಯನು ಅಸ್ವಸ್ಥನಾಗಲು ಯೆಹೋವನು ಅವನನ್ನು
ಗುಣಪಡಿಸಿದ್ದು.

20 ಆ ಕಾಲದಲ್ಲಿ ಹಿಜ್ಕೀಯನು ಮರಣಕರರೋಗ
ದಲ್ಲಿ ಬಿದ್ದನು. ಆಗ ಆಮೋಚನ ಮಗನೂ ಪ್ರ
ವಾದಿಯೂ ಆದ ಯೆಶಾಯನು ಅವನ ಬಳಿಗೆ ಬಂದು
ಅವನಿಗೆ—ನಿನ್ನ ಮನೆಯ ವಿಷಯವಾಗಿ ವ್ಯವಸ್ಥೆಮಾ
ಡು; ಯಾಕಂದರೆ ನೀನು ಉಳಿಯುವ ಹಾಗಿಲ್ಲ,
ಸಾಯಬೇಕಾಗಿದೆ ಎಂಬದಾಗಿ ಯೆಹೋವನು ಅನ್ನು
2 ತ್ತಾನೆ ಎಂದು ಹೇಳಿದನು. ಇದನ್ನು ಕೇಳಿದೊಡನೆ
ಹಿಜ್ಕೀಯನು ಮೋರೆಯನ್ನು ಗೋಡೆಯ ಕಡೆಗೆ ತಿರು
3 ಗಿಸಿ—ಯೆಹೋವನೇ, ನಾನು ನಂಬಿಗಸ್ತನಾಗಿಯೂ
ಯಥಾರ್ಥಚಿತ್ತನಾಗಿಯೂ ನಿನಗೆ ನಡೆದುಕೊಂಡು
ನಿನ್ನ ದೃಷ್ಟಿಯಲ್ಲಿ ಒಳ್ಳೆಯವನಾಗಿದ್ದದ್ದನ್ನು ನೆನಪು
ಮಾಡಿಕೋ ಎಂದು ಪ್ರಾರ್ಥಿಸಿ ಬಹಳವಾಗಿ ಅತ್ತನು.
4 ಯೆಶಾಯನು ಅರಮನೆಯ ಮಧ್ಯಪ್ರಾಕಾರವನ್ನು
ದಾಟುವದಕ್ಕೆ ಮೊದಲು ಯೆಹೋವನು ಅವನಿಗೆ—
5 ನೀನು ಹಿಂದಿರುಗಿ ಹೋಗಿ ನನ್ನ ಪ್ರಜೆಗಳ ಪ್ರಭು
ವಾಗಿರುವ ಹಿಜ್ಕೀಯನಿಗೆ—ನಾನು ನಿನ್ನ ಪ್ರಾರ್ಥನೆ
ಯನ್ನು ಕೇಳಿದ್ದೇನೆ; ನಿನ್ನ ಕಣ್ಣೀರನ್ನು ನೋಡಿ
ದ್ದೇನೆ; ನೀನು ಗುಣಹೊಂದಿ ನಾಡದು ನನ್ನ ಆಲ
6 ಯಕ್ಕೆ ಬರುವಿ. ಇದಲ್ಲದೆ ನಿನ್ನ ಆಯುಷ್ಯಕ್ಕೆ ಹದಿ
ನೈದು ವರುಷಗಳನ್ನು ಕೂಡಿಸುತ್ತೇನೆ. ನಿನ್ನನ್ನೂ ಈ
ಪಟ್ಟಣವನ್ನೂ ಅಶ್ಶೂರದ ಅರಸನ ಕೈಗೆ ಬೀಳದಂತೆ
ತಪ್ಪಿಸುವೆನು; ನನಗೋಸ್ಕರವಾಗಿಯೂ ನನ್ನ ಸೇವ
ಕನಾದ ದಾವೀದನಿಗೋಸ್ಕರವಾಗಿಯೂ ಈ ಪಟ್ಟಣ
ವನ್ನು ಉಳಿಸಿ ಕಾಪಾಡುವೆನು ಎಂಬದಾಗಿ ನಿನ್ನ ಪೂರ್ವಿ
ಕನಾದ ದಾವೀದನ ದೇವರಾಗಿರುವ ಯೆಹೋವನು
ಹೇಳುತ್ತಾನೆ ಎಂದು ತಿಳಿಸು ಎಂದು ಆಜ್ಞಾಪಿಸಿದನು.
7 ಯೆಶಾಯನು ಒಂದು ಅಂಜೂರಹಣ್ಣಿನ ಉಂಡೆಯನ್ನು
ತರಿಸಿ ಅದನ್ನು ಕುರುವಿನ ಮೇಲೆ ಇಡಿಸಿದಾಗ ಹಿಜ್ಕೀ
ಯನು ಗುಣಹೊಂದಿದನು.
8 ಹಿಜ್ಕೀಯನು ಯೆಶಾಯನನ್ನು—ಯೆಹೋವನು
ನನ್ನನ್ನು ಗುಣಪಡಿಸುವನೆಂಬದಕ್ಕೂ ನಾನು ನಾಡದು
ಆತನ ಆಲಯಕ್ಕೆ ಹೋಗುವೆನೆಂಬದಕ್ಕೂ ಗುರುತೇನು
ಎಂದು ಕೇಳಿದ್ದಕ್ಕೆ ಅವನು—ಯೆಹೋವನು ನುಡಿ
ದ್ದನ್ನು ನೆರವೇರಿಸುವನು ಎಂಬದಕ್ಕೆ ಯೆಹೋವನಿ
ಗುರುತು ಕೇಳುತ್ತೀ; ಹಾಗಾದರೆ ನೆರಳು ಹತ್ತು ಮೆ
ಮುಂದೆ ಹೋಗಬೇಕೋ ಹಿಂದೆ ಬರಬೇಕೋ ಹೇ
ಅಂದನು. ಹಿಜ್ಕೀಯನು—ನೆರಳು ಮುಂದೆ ಹೋ
ವದು ಸುಲಭ; ಆದದರಿಂದ ಹತ್ತು ಮೆಟ್ಲು ಹಿಂದೆ ಬ
ವಂತೆ ಮಾಡು ಎಂದು ಹೇಳಿದನು. ಆಗ ಪ್ರವಾ
ಯಾದ ಯೆಶಾಯನು ಯೆಹೋವನಿಗೆ ಮೊರೆಯಿ
ಲು ಆತನು ಆಹಾಜನ ಸೋಪಾನಪಂಕ್ತಿಯಲ್ಲಿ ಹತ
ಮೆಟ್ಲು ಮುಂದೆ ಹೋಗಿದ್ದ ನೆರಳನ್ನು ಹಿಂದೆ ಬ
ಮಾಡಿದನು.

ಬಾಬೆಲಿನ ಅರಸನು ಹಿಜ್ಕೀಯನ ಬಳಿಗೆ ದೂತರನ್ನು
ಕಳುಹಿಸಿದ್ದೂ ಹಿಜ್ಕೀಯನ ಮರಣವೂ.

ಅದೇ ಕಾಲದಲ್ಲಿ ಬಲದಾನನ ಮಗನೂ ಬಾ
ಲಿನ ಅರಸನೂ ಆದ [1]ಬೆರೋದಕಬಲದಾನನೆಂಬವ
ಹಿಜ್ಕೀಯನು ಅಸ್ವಸ್ಥನಾಗಿದ್ದಾನೆಂದು ಕೇಳಿ ದೂ
ಮುಖಾಂತರವಾಗಿ ಅವನಿಗೆ ಪತ್ರವನ್ನೂ ಬಹುಮಾ
ವನ್ನೂ ಕಳುಹಿಸಿದನು. ಹಿಜ್ಕೀಯನು ಬಂದಂಥ ದ
ತರ ಮಾತನ್ನು ಕೇಳಿ ಅವರಿಗೆ ಬೆಳ್ಳಿ ಬಂಗಾರ ಸುಗ
ದ್ರವ್ಯ ಪರಿಮಳತೈಲ ಮೊದಲಾದ ಪದಾರ್ಥಗಳಿರು
ಮನೆಯನ್ನೂ ಆಯುಧಶಾಲೆಯನ್ನೂ ತನ್ನ ಭಂಡಾ
ದಲ್ಲಿದ್ದದ್ದೆಲ್ಲವನ್ನೂ ತೋರಿಸಿದನು. ಅವನ ಅರಮ
ಯಲ್ಲಿಯೂ ರಾಜ್ಯದಲ್ಲಿಯೂ ಅವರಿಗೆ ತೋರಿಸದಿ
ವಸ್ತುವು ಒಂದೂ ಇರಲಿಲ್ಲ. ಆಗ ಪ್ರವಾದಿಯಾ
ಯೆಶಾಯನು ಹಿಜ್ಕೀಯನ ಬಳಿಗೆ ಬಂದು ಅವ
ನ್ನು—ಆ ಮನುಷ್ಯರು ಎಲ್ಲಿಯವರು, ಏನು ಹೇ
ದರು ಎಂದು ಕೇಳಲು ಅವನು—ಅವರು ಬಹುದೂ
ದೇಶವಾದ ಬಾಬೆಲಿನಿಂದ ಬಂದವರು ಎಂದು ಉತ್ತ
ಕೊಟ್ಟನು. ಯೆಶಾಯನು ತಿರಿಗಿ ಅವನನ್ನು—ಅವ
ನಿನ್ನ ಅರಮನೆಯಲ್ಲಿ ಏನು ನೋಡಿದರು ಎಂದು ಕೇ
ಲು ಅವನು—ಅರಮನೆಯಲ್ಲಿರುವದೆಲ್ಲವನ್ನೂ ನೋ
ದರು. ನನ್ನ ಭಂಡಾರದಲ್ಲಿ ನಾನು ಅವರಿಗೆ ತೋರಿ
ದಿದ್ದ ವಸ್ತುವು ಒಂದೂ ಇರುವದಿಲ್ಲ ಅಂದನ
ಆಗ ಅವನು ಹಿಜ್ಕೀಯನಿಗೆ—ಯೆಹೋವನ ಮಾ
ನ್ನು ಕೇಳು; ಆತನು—ನಿನ್ನ ಪೂರ್ವಿಕರ ಕಾಲದಿಂ
ಇಂದಿನ ವರೆಗೆ ಅರಮನೆಯಲ್ಲಿ ಸಂಗ್ರಹವಾದದ್ದೆಲ್ಲ
ಬಾಬೆಲಿಗೆ ಒಯ್ಯಲ್ಪಡುವ ದಿನ ಬರುವದು; ಇಲ್ಲೇನ
ಉಳಿಯುವದಿಲ್ಲ. ಬಾಬೆಲಿನ ಅರಸರು ಬಂದು ನೀನ
ಪಡೆದ ಮಕ್ಕಳನ್ನು ತೆಗೆದುಕೊಂಡುಹೋಗಿ ಅವರನ
ತಮ್ಮ ಅರಮನೆಯಲ್ಲಿ ಕಂಚುಕಿಗಳನ್ನಾಗಿ ನೇಮಿ
ಕೊಳ್ಳುವರು ಅನ್ನುತ್ತಾನೆ ಎಂದು ಹೇಳಿದನು. ನ
ಜೀವಮಾನದಲ್ಲಿ ಹೇಗೂ ತಪ್ಪದೆ ಸೌಭಾಗ್ಯವಿರುವ
ಅಂದುಕೊಂಡು ಹಿಜ್ಕೀಯನು ಯೆಶಾಯನಿಗೆ—ನೀನ
ತಿಳಿಸಿದ ಯೆಹೋವನ ಮಾತು ಒಳ್ಳೇದಾಗಿದೆ ಎಂ
ಉತ್ತರಕೊಟ್ಟನು. ಹಿಜ್ಕೀಯನ ಉಳಿದ ಚರಿತ್ರೆಯ
ಅವನ ಪರಾಕ್ರಮಕೃತ್ಯಗಳೂ ಅವನು ಕೆರೆಕಾಲಿ

1)ಯೆಶಾ. 38. 1 ಮೆರೋದಕ ಬಲದಾನ್.

ಳನ್ನು ಮಾಡಿಸಿ ಊರೊಳಗೆ ನೀರನ್ನು ತಂದ ವಿವರವೂ
ಯೆಹೂದರಾಜಕಾಲವೃತ್ತಾಂತ ಎಂಬ ಗ್ರಂಥದಲ್ಲಿ ಬರೆ
21 ದಿರುತ್ತವೆ. ಅವನು ಪಿತೃಗಳ ಬಳಿಗೆ ಸೇರಲು ಅವ
ನಿಗೆ ಬದಲಾಗಿ ಅವನ ಮಗನಾದ ಮನಸ್ಸೆಯು ಅರಸ
ನಾದನು.

ಅರಸನಾದ ಮನಸ್ಸೆಯು.

21 ಮನಸ್ಸೆಯು ಅರಸನಾದಾಗ ಹನ್ನೆರಡು ವರುಷ
ದವನಾಗಿದ್ದು ಯೆರೂಸಲೇಮಿನಲ್ಲಿ ಐವತ್ತೈದು
ವರುಷ ಆಳಿದನು; ಅವನ ತಾಯಿಯ ಹೆಸರು
2 ಹೆಫ್ಸಿಬಾ. ಯೆಹೋವನು ಇಸ್ರಾಯೇಲ್ಯರ ಎದುರಿ
ನಿಂದ ಹೊರಡಿಸಿಬಿಟ್ಟ ಅನ್ಯಜನಾಂಗಗಳ ಅಸಹ್ಯಕಾರ್ಯ
ಗಳನ್ನು ಅವನು ಅನುಸರಿಸಿ ಆತನ ಚಿತ್ತಕ್ಕೆ ವಿರುದ್ಧ
3 ವಾಗಿ ನಡೆದನು. ತನ್ನ ತಂದೆಯಾದ ಹಿಜ್ಕೀಯನು
ತೆಗೆದುಹಾಕಿದ ಪೂಜಾಸ್ಥಾನಗಳನ್ನು ತಿರಿಗಿ ಸ್ಥಾಪಿಸಿ
ಇಸ್ರಾಯೇಲ್ಯರ ಅರಸನಾದ ಅಹಾಬನಂತೆ ಬಾಳ
ನಿಗೋಸ್ಕರ ಯಜ್ಞವೇದಿಗಳನ್ನು ಕಟ್ಟಿಸಿ ಅಶೇರವಿಗ್ರಹ
ಸ್ತಂಭವನ್ನು ನಿಲ್ಲಿಸಿ ನಕ್ಷತ್ರಮಂಡಲಕ್ಕೆ ಕೈಮುಗಿದು
4 ಆರಾಧಿಸಿದನು. ಯೆಹೋವನು ತನ್ನ ಹೆಸರನ್ನು
ಸ್ಥಾಪಿಸುವದಕ್ಕಾಗಿ ಆರಿಸಿಕೊಂಡ ಯೆರೂಸಲೇಮಿನ
5 ದೇವಾಲಯದ ಎರಡು ಪ್ರಾಕಾರಗಳಲ್ಲಿಯೂ ಸರ್ವ
ನಕ್ಷತ್ರಮಂಡಲಕ್ಕೋಸ್ಕರ ಯಜ್ಞವೇದಿಗಳನ್ನು ಕಟ್ಟಿ
6 ಸಿದನು. ಇದಲ್ಲದೆ ಅವನು ತನ್ನ ಮಗನನ್ನು
ಆಹುತಿಕೊಟ್ಟನು. ಕಣಿಹೇಳಿಸುವದು, ಯಂತ್ರಮಂತ್ರ
ಗಳನ್ನು ಮಾಡಿಸುವದು, ಸತ್ತವರಲ್ಲಿ ವಿಚಾರಿಸುವವರ
ಮತ್ತು ಬೈತಾಳಿಕರ ಬಳಿಕೆಮಾಡುವದು ಇವೇ ಮೊದ
ಲಾದ ದುಷ್ಕೃತ್ಯಗಳಿಂದ ಯೆಹೋವನಿಗೆ ಕೋಪವನ್ನೆ
7 ಬ್ಬಿಸಿದನು. ತಾನು ಮಾಡಿಸಿದ ಅಶೇರವಿಗ್ರಹಸ್ತಂಭ
ವನ್ನು ದೇವಾಲಯದಲ್ಲಿ ಇಡಿಸಿದನು. ಯೆಹೋವನು
ಆ ಆಲಯದ ವಿಷಯದಲ್ಲಿ ದಾವೀದನಿಗೂ ಅವನ
ಮಗನಾದ ಸೊಲೊಮೋನನಿಗೂ—ಇಸ್ರಾಯೇಲ್ಯರು
ತಮಗೆ ಮೋಶೆಯ ಮುಖಾಂತರವಾಗಿ ಕೊಡಲ್ಪಟ್ಟ
ನನ್ನ ಧರ್ಮಶಾಸ್ತ್ರದ ನಿಬಂಧನೆಗಳನ್ನು ಅನುಸರಿಸಿ
8 ನಡೆಯುವದಾದರೆ ನನ್ನ ನಾಮಮಹತ್ತು ಈ ದೇವಾ
ಲಯದಲ್ಲಿಯೂ ಇಸ್ರಾಯೇಲ್ಯರ ಎಲ್ಲಾ ಊರು
ಗಳಲ್ಲಿ ನನಗೆ ಇಷ್ಟವಾಗಿರುವ ಯೆರೂಸಲೇಮಿನಲ್ಲಿ
ಯೂ ಸದಾಕಾಲವಿರುವದು. ಇಸ್ರಾಯೇಲ್ಯರು ಇನ್ನು
ಮುಂದೆ ದೇಶಭ್ರಷ್ಟರಾಗಿ ಅಲೆದಾಡದೆ ತಮ್ಮ ಪಿತೃ
ಗಳಿಗೆ ಕೊಡಲ್ಪಟ್ಟ ದೇಶದಲ್ಲಿಯೇ ವಾಸವಾಗಿರು
9 ವಂತೆ ಮಾಡುವೆನು ಎಂದು ಹೇಳಿದ್ದನು. ಆದರೆ
ಇಸ್ರಾಯೇಲ್ಯರು ಆತನ ಮಾತನ್ನು ಕೇಳದೆ ಮನಸ್ಸೆ
ಯಿಂದ ಪ್ರೇರಿತರಾಗಿ ತಮ್ಮ ಮುಂದೆಯೇ ಯೆಹೋವ
ನಿಂದ ಸಂಹೃತರಾದ ಅನ್ಯಜನಾಂಗಗಳಿಗಿಂತಲೂ ದುಷ್ಟ
10 ರಾದರು. ಆಗ ಯೆಹೋವನು ತನ್ನ ಸೇವಕರಾದ
11 ಪ್ರವಾದಿಗಳ ಮುಖಾಂತರವಾಗಿ—ಯೆಹೂದ್ಯರ ಅರ
ಸನಾದ ಮನಸ್ಸೆಯು ಮುಂಚೆ ಇದ್ದ ಅಮೋರಿಯರ
ಕೃತ್ಯಗಳಿಗಿಂತ ಅಸಹ್ಯವಾದ ಕೃತ್ಯಗಳನ್ನು ನಡಿಸಿದದ
ರಿಂದಲೂ ವಿಗ್ರಹಗಳಿಂದ ಯೆಹೂದ್ಯರನ್ನು ಪಾಪಕ್ಕೆ
12 ಪ್ರೇರಿಸಿದದರಿಂದಲೂ ಇಸ್ರಾಯೇಲ್ದೇವರಾದ ಯೆ
ಹೋವನೆಂಬ ನಾನು ಯೆರೂಸಲೇಮಿನವರ ಮೇಲೆ
ಯೂ ಯೆಹೂದದವರ ಮೇಲೆಯೂ ಕೇಡನ್ನು ಬರ
ಮಾಡುವೆನು; ಅದನ್ನು ಕೇಳುವವರ ಎರಡು ಕಿವಿ
ಗಳೂ ಮೊರ್ರೆನ್ನುವವು. ನೂಲು ಮಟ್ಟಗೋಲು ಇವು 13
ಗಳಿಂದಲೋ ಎಂಬಂತೆ ಸಮಾರ್ಯವನ್ನೂ ಅಹಾಬನ
ಮನೆಯನ್ನೂ ನೆಲಸಮಮಾಡಿಬಿಟ್ಟೆನಲ್ಲಾ; ಯೆರೂಸ
ಲೇಮನ್ನೂ ಅವುಗಳಂತೆಯೇ ಮಾಡುವೆನು. ಒಬ್ಬನು
ಪಾತ್ರೆಯನ್ನು ಒರಸಿ ಡಬ್ಬಹಾಕುವ ಮೇರೆಗೆ ನಾನು
ಯೆರೂಸಲೇಮನ್ನು ಒರಸಿ ಡಬ್ಬಹಾಕುವೆನು. ನನ್ನ 14
ಪ್ರಜೆಗಳಲ್ಲಿ ಉಳಿದಿರುವವರನ್ನು ತಳ್ಳಿಬಿಟ್ಟು ಶತ್ರುಗಳ
ಕೈಗೆ ಒಪ್ಪಿಸುವೆನು. ಅವರ ಎಲ್ಲಾ ಶತ್ರುಗಳು ಬಂದು
ಅವರನ್ನು ಸುಲಿದು ಸೂರೆಮಾಡುವರು. ಅವರು 15
ಐಗುಪ್ತದೇಶವನ್ನು ಬಿಟ್ಟುಬಂದ ಪಿತೃಗಳ ಕಾಲ ಮೊ
ದಲುಗೊಂಡು ಇಂದಿನ ವರೆಗೂ ತಮ್ಮ ಪಾಪಗಳಿಂದ
ನನ್ನನ್ನು ರೇಗಿಸುತ್ತಾ ಬಂದದ್ದೇ ಇದಕ್ಕೆ ಕಾರಣ
ಎಂದು ಹೇಳಿಸಿದನು. ಮನಸ್ಸೆಯು ಯೆಹೂದ್ಯರನ್ನು 16
ಯೆಹೋವನ ದೃಷ್ಟಿಯಲ್ಲಿ ಕೆಟ್ಟದ್ದಾಗಿರುವದನ್ನು
ಮಾಡ ಪ್ರೇರಿಸಿದ್ದಲ್ಲದೆ ಯೆರೂಸಲೇಮನ್ನೆಲ್ಲಾ ನಿರ
ಪರಾಧರಕ್ತದಿಂದ ತುಂಬಿಸಿದನು. ಮನಸ್ಸೆಯ 17
ಉಳಿದ ಚರಿತ್ರೆಯೂ ಅವನ ಎಲ್ಲಾ ಕ್ರಿಯೆಗಳೂ
ಅವನು ಮಾಡಿದ ಪಾಪಕೃತ್ಯಗಳೂ ಯೆಹೂದರಾಜ
ಕಾಲವೃತ್ತಾಂತ ಎಂಬ ಗ್ರಂಥದಲ್ಲಿ ಬರೆದಿರುತ್ತವೆ.
ಅವನು ಪಿತೃಗಳ ಬಳಿಗೆ ಸೇರಲು ಅವನ ಶವವನ್ನು 18
ಅವನ ಅರಮನೆಯಿರುವ ಉಜ್ಜನ ವನದಲ್ಲಿ ಸಮಾಧಿ
ಮಾಡಿದರು. ಅವನಿಗೆ ಬದಲಾಗಿ ಅವನ ಮಗನಾದ
ಆಮೋನನು ಅರಸನಾದನು.

ಅರಸನಾದ ಆಮೋನನು.

ಆಮೋನನು ಅರಸನಾದಾಗ ಇಪ್ಪತ್ತೆರಡು ವರುಷದ 19
ವನಾಗಿದ್ದು ಯೆರೂಸಲೇಮಿನಲ್ಲಿ ಎರಡು ವರುಷ ಆಳಿ
ದನು. ಯೊಟ್ಬಾ ಊರಿನವಳೂ ಹಾರೂಚನ ಮಗಳೂ
ಆದ ಮೆಷುಲ್ಲೆಮೆತ್ ಎಂಬಾಕೆಯು ಅವನ ತಾಯಿ.
ಅವನು ತನ್ನ ತಂದೆಯಾದ ಮನಸ್ಸೆಯ ಮಾರ್ಗದಲ್ಲಿ 20
ಯೇ ನಡೆದು ಯೆಹೋವನ ದೃಷ್ಟಿಯಲ್ಲಿ ದ್ರೋಹಿ
ಯಾದನು. ತನ್ನ ಪೂರ್ವಿಕರ ದೇವರಾದ ಯೆಹೋ 21
ವನನ್ನೂ ಆತನು ಮೆಚ್ಚುವ ಮಾರ್ಗವನ್ನೂ ಬಿಟ್ಟು
ತನ್ನ ತಂದೆಯ ಮಾರ್ಗದಲ್ಲಿ ನಡೆದು ಅವನು ಪೂಜಿ 22
ಸಿದ ವಿಗ್ರಹಗಳನ್ನು ತಾನೂ ಪೂಜಿಸಿ ಅವುಗಳಿಗೆ ಅಡ್ಡ
ಬಿದ್ದನು. ಅವನ ಸೇವಕರು ಅವನಿಗೆ ವಿರೋಧವಾಗಿ 23
ಒಳಸಂಚುಮಾಡಿ ಅವನನ್ನು ಅರಮನೆಯಲ್ಲಿಯೇ
ಕೊಂದರು. ಆದರೆ ದೇಶದ ಜನರು ಒಳಸಂಚು 24
ಮಾಡಿದವರನ್ನೆಲ್ಲಾ ಕೊಂದುಹಾಕಿ ಆಮೋನನಿಗೆ ಬದ
ಲಾಗಿ ಅವನ ಮಗನಾದ ಯೋಷೀಯನನ್ನು ಅರಸನ
ನ್ನಾಗಿಮಾಡಿದರು. ಆಮೋನನ ಉಳಿದ ಚರಿತ್ರೆಯೂ 25
ಅವನ ಕೃತ್ಯಗಳೂ ಯೆಹೂದರಾಜಕಾಲವೃತ್ತಾಂತ
ಎಂಬ ಗ್ರಂಥದಲ್ಲಿ ಬರೆದಿರುತ್ತವೆ. ಅವನ ಶವವನ್ನು 26
ಉಜ್ಜನ ವನದಲ್ಲಿ ಸಮಾಧಿಮಾಡಿದರು. ಅಲ್ಲಿ ಅವನು
ಮೊದಲೇ ತನಗೋಸ್ಕರ ಒಂದು ಸಮಾಧಿಯನ್ನು ಸಿದ್ಧ

ಪಡಿಸಿಟ್ಟಿದ್ದನು. ಅವನಿಗೆ ಬದಲಾಗಿ ಅವನ ಮಗ
ನಾದ ಯೋಷೀಯನು ಅರಸನಾದನು.

ಅರಸನಾದ ಯೋಷೀಯನೂ ಧರ್ಮೋಪದೇಶಗ್ರಂಥವೂ.

22 ಯೋಷೀಯನು ಅರಸನಾದಾಗ ಎಂಟು ವರು
ಷದವನಾಗಿದ್ದು ಯೆರೂಸಲೇಮಿನಲ್ಲಿ ಮೂವ
ತ್ತೊಂದು ವರುಷ ಆಳಿದನು. ಬೊಚ್ಕತೂರಿನವಳೂ
ಅದಾಯನ ಮಗಳೂ ಆದ ಯೆದೀದಾ ಎಂಬಾಕೆಯು
2 ಅವನ ತಾಯಿ. ಅವನು ಎಡಕ್ಕಾಗಲಿ ಬಲಕ್ಕಾಗಲಿ
ತಿರುಗಿಕೊಳ್ಳದೆ ತನ್ನ ಪೂರ್ವಿಕನಾದ ದಾವೀದನ
ಮಾರ್ಗದಲ್ಲಿಯೇ ನಡೆದು ಯೆಹೋವನ ದೃಷ್ಟಿಯಲ್ಲಿ
ಒಳ್ಳೆಯವನಾದನು.
3 ಯೋಷೀಯನು ತನ್ನ ಆಳಿಕೆಯ ಹದಿನೆಂಟನೆಯ
ವರುಷದಲ್ಲಿ ಅಚಲ್ಯನ ಮಗನೂ ಮೆಷುಲ್ಲಾಮನ
ಮೊಮ್ಮಗನೂ ಆದ ಶಾಫಾನನೆಂಬ ಲೇಖಕನನ್ನು
4 ಕರೆದು ಅವನಿಗೆ—ನೀನು ಮಹಾಯಾಜಕನಾದ
ಹಿಲ್ಕೀಯನ ಬಳಿಗೆ ಹೋಗಿ ಅವನಿಗೆ—ದ್ವಾರಪಾಲಕರು
ಯೆಹೋವನ ಆಲಯಕ್ಕೆ ಬರುವ ಜನರಿಂದ ಕೂಡಿಸಿದ
5 ಹಣವನ್ನು ಲೆಕ್ಕಿಸಿ ಆಲಯದ ಕೆಲಸಮಾಡಿಸುವ
ಮೊಕ್ತೇಸರರಿಗೆ ಅದನ್ನು ಒಪ್ಪಿಸು ಎಂದು ಹೇಳು.
ಮೊಕ್ತೇಸರರು ಅದನ್ನು ಯೆಹೋವನ ಆಲಯದ
6 ಜೀರ್ಣೋದ್ಧಾರಮಾಡುವ ಬಡಗಿ ಶಿಲ್ಪಿ ಉಪ್ಪಾರ
ಮೊದಲಾದವರ ಸಂಬಳಕ್ಕಾಗಿಯೂ ದೇವಾಲಯಕ್ಕೆ
ಬೇಕಾದ ಮರ, ಕೆತ್ತಿದ ಕಲ್ಲು ಇವುಗಳನ್ನು ಕೊಂಡು
7 ಕೊಳ್ಳುವದಕ್ಕಾಗಿಯೂ ಉಪಯೋಗಿಸಲಿ. ಅವರು
ನಂಬಿಗಸ್ತರಾಗಿರುವದರಿಂದ ಅವರ ವಶಕ್ಕೆ ಕೊಡಲ್ಪ
ಡುವ ಹಣದ ಲೆಕ್ಕವನ್ನು ಕೇಳಬಾರದು ಎಂದು ಆಜ್ಞಾ
ಪಿಸಿ ಅವನನ್ನು ಯೆಹೋವನ ಆಲಯಕ್ಕೆ ಕಳುಹಿಸಿ
ದನು.
8 ಮಹಾಯಾಜಕನಾದ ಹಿಲ್ಕೀಯನು ಲೇಖಕನಾದ
ಶಾಫಾನನಿಗೆ—ಯೆಹೋವನ ಆಲಯದಲ್ಲಿ ನನಗೆ
ಧರ್ಮೋಪದೇಶಗ್ರಂಥವು ಸಿಕ್ಕಿರುತ್ತದೆ ಎಂದು ಹೇಳಿ
ಅದನ್ನು ಅವನ ಕೈಯಲ್ಲಿ ಕೊಟ್ಟನು; ಶಾಫಾನನು
9 ಓದಿದನು. ಅನಂತರ ಅವನು ಹಿಂದಿರುಗಿ ಅರಸನ
ಬಳಿಗೆ ಹೋಗಿ—ನಿನ್ನ ಸೇವಕರು ದೇವಾಲಯದಲ್ಲಿ
ಸಂಗ್ರಹವಾದ ಹಣವನ್ನು ತೆಗೆದು ದೇವಾಲಯದ ಕೆಲ
ಸವನ್ನು ಮಾಡಿಸುವ ಮೊಕ್ತೇಸರರಿಗೆ ಒಪ್ಪಿಸಿದರು;
10 ಇದಲ್ಲದೆ ಯಾಜಕನಾದ ಹಿಲ್ಕೀಯನು ನನಗೆ ಒಂದು
ಗ್ರಂಥವನ್ನು ಕೊಟ್ಟಿದ್ದಾನೆ ಎಂದು ಹೇಳಿ ಅದನ್ನು ಅರ
ಸನ ಮುಂದೆ ಓದಿದನು.
11 ಅರಸನು ಧರ್ಮೋಪದೇಶಗ್ರಂಥವಾಕ್ಯಗಳನ್ನು ಕೇಳಿ
12 ದಾಗ ಬಟ್ಟೆಗಳನ್ನು ಹರಿದುಕೊಂಡು ಯಾಜಕನಾದ
ಹಿಲ್ಕೀಯನು, ಶಾಫಾನನ ಮಗನಾದ ಅಹೀಕಾಮ್,
ಮೀಕಾಯನ ಮಗನಾದ ಅಕ್ಬೋರ್, ಲೇಖಕನಾದ
ಶಾಫಾನ್, ತನ್ನ ಹಸ್ತಕನಾದ ಅಸಾಯ ಎಂಬವರಿಗೆ—
13 ನಮ್ಮ ಪೂರ್ವಿಕರು ನಮಗೆ ಸಿಕ್ಕಿರುವ ಈ ಗ್ರಂಥ
ವಾಕ್ಯಗಳಿಗೆ ಕಿವಿಗೊಡದೆಯೂ ಅವುಗಳನ್ನು ಕೈಕೊಳ್ಳ
ದೆಯೂ ಹೋದದರಿಂದ ನಾವು ಯೆಹೋವನ ಉಗ್ರ
ಕೋಪಕ್ಕೆ ಪಾತ್ರರಾಗಿದ್ದೇವೆ. ಆದದರಿಂದ ನೀವು

ನನಗೋಸ್ಕರವೂ ಜನರಿಗೋಸ್ಕರವೂ ಎಲ್ಲಾ ಯೆಹೂ
ರಿಗೋಸ್ಕರವೂ ಯೆಹೋವನ ಬಳಿಗೆ ಹೋಗಿ ಈ ಗ್ರಂ
ವಾಕ್ಯಗಳ ವಿಷಯವಾಗಿ ವಿಚಾರಿಸಿರಿ ಎಂದು ಆಜ್ಞಾ
ಸಿದನು. ಆಗ ಯಾಜಕನಾದ ಹಿಲ್ಕೀಯನು, ಅಹೀ
ಕಾಮ್, ಅಕ್ಬೋರ್, ಶಾಫಾನ್, ಅಸಾಯ ಎಂ
ವರು ಹುಲ್ದ ಎಂಬ ಪ್ರವಾದಿನಿಯ ಬಳಿಗೆ ಹೋ
ಆಕೆಯ ಹತ್ತಿರ ವಿಚಾರಿಸಿದರು. ಹರ್ಹಸನ ಮೊವ
ಗನೂ ತಿಕ್ವನ ಮಗನೂ ರಾಜವಸ್ತ್ರಾಗಾರದ ಅಧಿ
ಯೂ ಆಗಿದ್ದ ಶಲ್ಲೂಮನು ಈಕೆಯ ಗಂಡನು. ಈ
ಯು ಯೆರೂಸಲೇಮಿನ ಎರಡನೆಯ ಕೇರಿಯಲ್ಲಿ ವಾ
ವಾಗಿದ್ದಳು. ಹುಲ್ದಳು ಅವರಿಗೆ—ನಿಮ್ಮನ್ನು ಕಳು
ಸಿದವನಿಗೆ ಇಸ್ರಾಯೇಲ್‌ದೇವರಾದ ಯೆಹೋವ
ಮಾತುಗಳನ್ನು ತಿಳಿಸಿರಿ. ಆತನು—ಈ ದೇಶದ ಮೇ
ಯೂ ಜನರ ಮೇಲೆಯೂ ಯೆಹೂದದ ಅರಸನು ಓ
ಸಿದ ಗ್ರಂಥದಲ್ಲಿ ಬರೆದಿರುವ ಎಲ್ಲಾ ಶಿಕ್ಷೆಯನ್ನು ಬ
ಮಾಡುವೆನು. ಅವರು ನನ್ನನ್ನು ಬಿಟ್ಟು ಅನ್ಯದೇ
ತೆಗಳಿಗೆ ಧೂಪಸುಟ್ಟು ತಮ್ಮ ದುಷ್ಕೃತ್ಯಗಳಿಂದ ನ
ನ್ನು ರೇಗಿಸಿದ್ದರಿಂದ ನನ್ನ ಕೋಪಾಗ್ನಿಯು ಈ ದೇಶ
ಮೇಲೆ ಉರಿಯಹತ್ತಿ ಆರಿಹೋಗುವದೇ ಇಲ್ಲ ಅನ
ತ್ತಾನೆ. ತಾನು ಕೇಳಿದ ವಾಕ್ಯಗಳ ವಿಷಯವಾಗಿ
ಹೋವನ ಬಳಿಯಲ್ಲಿ ವಿಚಾರಿಸುವದಕ್ಕೆ ನಿಮ್ಮನ
ಕಳುಹಿಸಿದ ಯೆಹೂದದ ಅರಸನಿಗೆ ನೀವು ತಿಳಿಸ
ಕಾದ ಇಸ್ರಾಯೇಲ್‌ದೇವರಾದ ಯೆಹೋವನ ವ
ತೇನಂದರೆ—ನಾನು ಈ ದೇಶವನ್ನೂ ನಿವಾಸಿಗ
ನ್ನೂ ಶಾಪವಿಸ್ಮಯಗಳಿಗೆ ಗುರಿಮಾಡುವೆನೆಂಬದನ
ನೀನು ಕೇಳಿದಾಗ ದುಃಖಪಟ್ಟು ನನ್ನ ಮುಂದೆ ತಗ್ಗಿ
ಕೊಂಡದ್ದರಿಂದಲೂ ಬಟ್ಟೆಗಳನ್ನು ಹರಿದುಕೊಂ
ಕಣ್ಣೀರುಸುರಿಸಿದ್ದರಿಂದಲೂ ನಿನ್ನನ್ನು ಲಕ್ಷಿಸಿದೆನ
ನಾನು ಈ ದೇಶಕ್ಕೆ ಬರಮಾಡುವ ಶಿಕ್ಷೆಗಳಲ್ಲಿ ನೀ
ಒಂದನ್ನೂ ನೋಡದೆ ಸಮಾಧಾನದಿಂದ ಮೃತಿಹೊಂ
ಸಮಾಧಿಸೇರುವಂತೆ ಅನುಗ್ರಹಿಸುವೆನು ಎಂಬದೇ ಎಂ
ಹೇಳಿದಳು. ಅವರು ಹಿಂದಿರುಗಿ ಬಂದು ಅರಸನಿಗೆ
ಮಾತುಗಳನ್ನು ತಿಳಿಸಿದರು.

ಧರ್ಮಸಂಸ್ಥಾಪನೆಯೂ ಯೋಷೀಯನ ಮರಣವೂ.

ಅನಂತರ ಅರಸನು ದೂತರ ಮುಖಾಂತರವಾಗಿ
ಯೆರೂಸಲೇಮಿನ ಮತ್ತು ಯೆಹೂದಪ್ರಾಂತದ
ಬೇರೆ ಎಲ್ಲಾ ಊರುಗಳ ಹಿರಿಯರನ್ನು ತನ್ನ ಬಳ
ಕರಿಸಿ ಯೆರೂಸಲೇಮಿನವರನ್ನೂ ಬೇರೆ ಎಲ್ಲಾ
ಹೂದ್ಯರನ್ನೂ ಯಾಜಕರು ಪ್ರವಾದಿಗಳು ಇವರನ
ಕರಕೊಂಡು ಯೆಹೋವನ ಆಲಯಕ್ಕೆ ಹೋದನ
ಚಿಕ್ಕವರು ಮೊದಲುಗೊಂಡು ದೊಡ್ಡವರ ವರೆಗೆ ಎ
ರೂ ಅವನನ್ನು ಹಿಂಬಾಲಿಸಿದರು. ಅಲ್ಲಿ ಅವನು ಎ
ರಿಗೂ ಕೇಳಿಸುವಂತೆ ಯೆಹೋವನ ಆಲಯದ
ಸಿಕ್ಕಿದ ನಿಬಂಧನಗ್ರಂಥವನ್ನು ಸಂಪೂರ್ಣವಾಗಿ ಓದ
ಕಂಬದ ಬಳಿಯಲ್ಲಿ ನಿಂತು ತಾನು ಯೆಹೋವ
ಮಾರ್ಗದಲ್ಲಿ ನಡೆಯುವದಾಗಿಯೂ ಆತನ ಆಜ
ನಿಯಮವಿಧಿಗಳನ್ನು ಪೂರ್ಣಮನಸ್ಸಿನಿಂದಲೂ ಪೂ
ಪ್ರಾಣದಿಂದಲೂ ಕೈಕೊಳ್ಳುವದಾಗಿಯೂ ನಿಬಂ

ಗ್ರಂಥದಲ್ಲಿ ಬರೆದಿರುವ ಎಲ್ಲಾ ವಾಕ್ಯಗಳನ್ನು ನೆರವೇರಿ
ಸುವದಾಗಿಯೂ ಯೆಹೋವನಿಗೆ ಪ್ರಮಾಣಮಾಡಿ
ದನು. ಎಲ್ಲಾ ಜನರೂ ಹಾಗೆಯೇ ಪ್ರಮಾಣಮಾಡಿ
ದರು. ತರುವಾಯ ಅವನು ಮಹಾಯಾಜಕನಾದ
ಹಿಲ್ಕೀಯನು, ಎರಡನೆಯ ತರಗತಿಯ ಯಾಜಕರು,
ದ್ವಾರಪಾಲಕರು ಇವರ ಮುಖಾಂತರವಾಗಿ ಬಾಳ್,
ಅಶೇರ ಎಂಬ ದೇವತೆಗಳಿಗೋಸ್ಕರವೂ ಆಕಾಶಸೈನ್ಯ
ಕ್ಕೋಸ್ಕರವೂ ಉಪಯೋಗಿಸುತ್ತಿದ್ದ ಎಲ್ಲಾ ಸಾಮಾ
ನುಗಳನ್ನು ಯೆಹೋವನ ಆಲಯದಿಂದ ತರಿಸಿ
ಯೆರೂಸಲೇಮಿನ ಹೊರಗಿರುವ ಕಿದ್ರೋನ್ ಬೈಲಿ
ನಲ್ಲಿ ಅವುಗಳನ್ನು ಸುಡಿಸಿ ಬೂದಿಯನ್ನು ಬೇತೇಲಿಗೆ
ಕಳುಹಿಸಿದನು. ಇದಲ್ಲದೆ ಯೆಹೂದಪ್ರಾಂತದ ಪಟ್ಟ
ಣಗಳಲ್ಲಿಯೂ ಯೆರೂಸಲೇಮಿನ ಸುತ್ತಣ ಪ್ರದೇಶ
ದಲ್ಲಿಯೂ ಇದ್ದ ಪೂಜಾಸ್ಥಳಗಳ ವಿಗ್ರಹಗಳಿಗೂ
ಬಾಳನಿಗೂ ಸೂರ್ಯಚಂದ್ರನಕ್ಷತ್ರಗಳೆನಿಸಿಕೊಳ್ಳುವ
ಆಕಾಶಸೈನ್ಯಕ್ಕೂ ಧೂಪಸುಡುವದಕ್ಕಾಗಿ ಯೆಹೂದ
ರಾಜರಿಂದ ನೇಮಿಸಲ್ಪಟ್ಟ ಎಲ್ಲಾ ಪೂಜಾರಿಗಳನ್ನು
ತೆಗೆದುಹಾಕಿದನು. ಯೆಹೋವನ ಆಲಯದಲ್ಲಿದ್ದ
ಅಶೇರವಿಗ್ರಹಸ್ತಂಭವನ್ನು ತರಿಸಿ ಯೆರೂಸಲೇಮಿನ
ಹೊರಗಿರುವ ಕಿದ್ರೋನ್‌ಹಳ್ಳಕ್ಕೆ ತೆಗೆದುಕೊಂಡು
ಹೋಗಿ ಅಲ್ಲಿ ಅದನ್ನು ಸುಡಿಸಿ ಪುಡಿಪುಡಿಮಾಡಿಸಿ
ಆ ಪುಡಿಯನ್ನು ಕನಿಷ್ಠಜನರ ಶ್ಮಶಾನದಲ್ಲಿ ಹಾಕಿಸಿ
ದನು. ಯೆಹೋವನ ಆಲಯದ ಪ್ರಾಕಾರದೊಳ
ಗಿದ್ದ ದೇವದಾಸದೇವದಾಸಿಯರ ಮನೆಗಳನ್ನು ಕೆಡ
ವಿಸಿದನು. ಆ ಮನೆಗಳಲ್ಲಿ ಸ್ತ್ರೀಯರು ಅಶೇರ
ದೇವತೆಗೋಸ್ಕರ ಗುಡಾರಗಳನ್ನು ನೇಯುತ್ತಿದ್ದರು.
ಅನಂತರ ಗೆಬದಿಂದ ಬೇರ್ಷೆಬದ ವರೆಗಿರುವ ಯೆ
ಹೂದಪಟ್ಟಣಗಳ ಎಲ್ಲಾ ಯಾಜಕರನ್ನು ಕರಿಸಿಕೊಂಡು
ಅವರು ಧೂಪಸುಡುತ್ತಿದ್ದ ಪೂಜಾಸ್ಥಳಗಳನ್ನು ಹೊಲೆ
ಮಾಡಿದನು. ಪುರಾಧಿಕಾರಿಯಾದ ಯೆಹೋಶುವನ
ಬಾಗಲಿನ ಎಡಗಡೆಯಲ್ಲಿದ್ದ ದ್ವಾರಗಳ ದೇವತೆಯ
ಪೂಜಾಸ್ಥಳಗಳನ್ನು ಕೆಡವಿಬಿಟ್ಟನು. ಪೂಜಾಸ್ಥಳಗಳಿಂದ
ಬಂದ ಯಾಜಕರಿಗೆ ಇತರ ಯಾಜಕರೊಡನೆ ಹುಳಿ
ಯಿಲ್ಲದ ರೊಟ್ಟಿಗಳಲ್ಲಿ ಪಾಲುಸಿಕ್ಕಿದರೂ ಅವರಿಗೆ
ಯೆರೂಸಲೇಮಿನಲ್ಲಿದ್ದ ಯೆಹೋವನ ಯಜ್ಞವೇದಿ
ಯ ಸಮೀಪಕ್ಕೆ ಹೋಗುವದಕ್ಕೆ ಅಪ್ಪಣೆಯಿರಲಿಲ್ಲ.
ತಮ್ಮ ಗಂಡುಹೆಣ್ಣುಮಕ್ಕಳನ್ನು ಯಾರೂ ಮೋಲೆಕನಿ
ಗೋಸ್ಕರ ಆಹುತಿಕೊಡದಂತೆ ಬೆನ್‌ಹಿನ್ನೋಮ್ ತಗ್ಗಿ
ನಲ್ಲಿದ್ದ ತೋಫೆತ್ ಎಂಬ ಸ್ಥಳವನ್ನು ಹೊಲೆಮಾಡಿ
ದನು. ಯೆಹೂದರಾಜರು ಸೂರ್ಯದೇವತೆಗೋಸ್ಕರ
ಪ್ರತಿಷ್ಠಿಸಿದ ಕುದುರೆಗಳನ್ನು ತೆಗೆದುಹಾಕಿ ರಥಗಳನ್ನು
ಸುಡಿಸಿಬಿಟ್ಟನು. ಅವು ಯೆಹೋವನ ಆಲಯದ ಹೆಬ್ಬಾ
ಗಲಿನ ಹೊರಗೆ ಪರ್ವರೀಮೆಂಬ ಸ್ಥಳದಲ್ಲಿ ಕಂಚುಕಿ
ಯಾದ ನಾತಾನ್ ಮೆಲೆಕನ ಕೋಣೆಯ ಹತ್ತಿರ ಇಡ
ಲ್ಪಟ್ಟಿದ್ದವು. ಇದಲ್ಲದೆ ಯೆಹೂದ್ಯರ ಅರಸರು ದೇವ
ಸ್ಥಾನದ ಮಾಳಿಗೆಯ ಮೇಲೆ ಆಹಾಜನ ಉಪ್ಪರಿ
ಗೆಯ ಹತ್ತಿರ ಕಟ್ಟಿಸಿದ್ದ ಯಜ್ಞವೇದಿಗಳನ್ನೂ ಮನ
ಸ್ಸೆಯು ಯೆಹೋವನ ಆಲಯದ ಎರಡು ಪ್ರಾಕಾರ
ಗಳಲ್ಲಿ ಕಟ್ಟಿಸಿದ್ದ ಯಜ್ಞವೇದಿಗಳನ್ನೂ ಕೆಡವಿ ಪುಡಿ
ಪುಡಿಮಾಡಿ ಅವುಗಳ ಧೂಳನ್ನು ಕಿದ್ರೋನ್‌ಹಳ್ಳದಲ್ಲಿ
ಹಾಕಿಸಿದನು. ಇಸ್ರಾಯೇಲ್ಯರ ಅರಸನಾದ ಸೊ 13
ಲೊಮೋನನು ಚೀದೋನ್ಯರ ಅಷ್ಟೋರೆತ್, ಮೋವಾ
ಬ್ಯರ ಕೆಮೋಷ್, ಅಮ್ಮೋನಿಯರ ಮಿಲ್ಕೋಮ್
ಎಂಬ ಅಸಹ್ಯವಿಗ್ರಹಗಳಿಗೋಸ್ಕರ ಯೆರೂಸಲೇಮಿನ
ಎದುರಿನಲ್ಲಿಯೂ ವಿಘ್ನಪರ್ವತದ ದಕ್ಷಿಣದಿಕ್ಕಿನಲ್ಲಿ
ಯೂ ಸ್ಥಾಪಿಸಿದ ಪೂಜಾಸ್ಥಳಗಳನ್ನು ಇವನು ಹೊಲೆ
ಮಾಡಿದನು. ಕಲ್ಲುಕಂಬಗಳನ್ನು ಒಡೆದುಹಾಕಿ 14
ಅಶೇರವಿಗ್ರಹಸ್ತಂಭಗಳನ್ನು ಕಡಿದುಬಿಟ್ಟು ಅವುಗಳಿದ್ದ
ಸ್ಥಳವನ್ನು ಮನುಷ್ಯರ ಎಲುಬುಗಳಿಂದ ತುಂಬಿಸಿದನು.
ಇದಲ್ಲದೆ ಅವನು ಇಸ್ರಾಯೇಲ್ಯರನ್ನು ಪಾಪಕ್ಕೆ 15
ಪ್ರೇರಿಸಿದ ನೆಬಾಟನ ಮಗನಾದ ಯಾರೊಬ್ಬಾಮನು
ಬೇತೇಲಿನಲ್ಲಿ ಏರ್ಪಡಿಸಿದ ಪೂಜಾಸ್ಥಳವನ್ನೂ ಅದ
ರಲ್ಲಿದ್ದ ಯಜ್ಞವೇದಿಯನ್ನೂ ಕೆಡವಿಬಿಟ್ಟನು. ಪೂಜಾ
ಸ್ಥಳವನ್ನೂ ಅದರಲ್ಲಿದ್ದ ಅಶೇರವಿಗ್ರಹಸ್ತಂಭವನ್ನೂ
ಸುಟ್ಟು ಬೂದಿಮಾಡಿದನು. ಅವನು ಹಿಂದಿರುಗಿ 16
ನೋಡಿದಾಗ ಅಲ್ಲಿನ ಗುಡ್ಡದಲ್ಲಿ ಸಮಾಧಿಗಳನ್ನು
ಕಂಡು ಅವುಗಳಲ್ಲಿದ್ದ ಎಲುಬುಗಳನ್ನು ತರಿಸಿ ಆ
ಯಜ್ಞವೇದಿಯ ಮೇಲೆ ಸುಡಿಸಿ ಅದನ್ನು ಹೊಲೆ
ಮಾಡಿದನು; ಹೀಗೆ ದೇವರ ಮನುಷ್ಯನೊಬ್ಬನು ಪ್ರಕ
ಟಿಸಿದ ಯೆಹೋವನ ವಾಕ್ಯವು ನೆರವೇರಿತು. ಇದಲ್ಲದೆ 17
ಅವನು ಒಂದು ಸಮಾಧಿಶಿಲೆಯನ್ನು ಕಂಡು ಅದೇ
ನೆಂದು ವಿಚಾರಿಸಲು ಆ ಊರಿನವರು—ನೀನು ಈಗ
ಬೇತೇಲಿನ ಯಜ್ಞವೇದಿಗೆ ಮಾಡಿದ್ದನ್ನು ಮುಂತಿಳಿಸಿದ
ಯೆಹೂದದೇಶದವನಾದ ದೇವರ ಮನುಷ್ಯನ ಸಮಾಧಿ
ಯೆಂದು ಉತ್ತರಕೊಟ್ಟರು. ಆಗ ಅವನು—ಬಿಡಿರಿ, 18
ಆ ಮನುಷ್ಯನ ಎಲುಬುಗಳನ್ನು ಯಾರೂ ಮುಟ್ಟಬಾ
ರದು ಎಂದು ಹೇಳಿದನು. ಆದದರಿಂದ ಅವರು ಅವನ
ಮತ್ತು ಸಮಾರ್ಯದೇಶದ ಪ್ರವಾದಿಯ ಎಲುಬು
ಗಳನ್ನು ಮುಟ್ಟಲಿಲ್ಲ. ಇಸ್ರಾಯೇಲ್‌ರಾಜರು ಸಮಾ 19
ರ್ಯದ ಪಟ್ಟಣಗಳಲ್ಲಿ ಕಟ್ಟಿಸಿದಂಥ ಯೆಹೋವನ
ಕೋಪಕ್ಕೆ ಕಾರಣವಾಗಿದ್ದಂಥ ಪೂಜಾಸ್ಥಳಗಳ ಗುಡಿ
ಗಳಿಗೆ ಬೇತೇಲಿಗಾದ ಗತಿಯೇ ಆಯಿತು. ಯೋ 20
ಷೀಯನು ಅವುಗಳನ್ನು ಕೆಡವಿಬಿಟ್ಟು ಅವುಗಳ ಪೂಜಾರಿ
ಗಳನ್ನು ಯಜ್ಞವೇದಿಗಳ ಮೇಲೆ ವಧಿಸಿ ಮನುಷ್ಯರ
ಎಲುಬುಗಳನ್ನು ಸುಡಿಸಿ ಯೆರೂಸಲೇಮಿಗೆ ಹಿಂದಿರುಗಿ
ಹೋದನು.

ಅನಂತರ ಅರಸನು ಎಲ್ಲಾ ಜನರಿಗೆ—ಈ ನಿಬಂಧನ 21
ಗ್ರಂಥದಲ್ಲಿ ಬರೆದಿರುವ ಪ್ರಕಾರ ನೀವು ನಿಮ್ಮ ದೇವ
ರಾದ ಯೆಹೋವನಿಗೋಸ್ಕರ ಪಸ್ಕಹಬ್ಬವನ್ನು ಆಚ
ರಿಸಬೇಕು ಎಂದು ಆಜ್ಞಾಪಿಸಿದನು. ಇಂಥ ಪಸ್ಕ 22
ಹಬ್ಬವು ಇಸ್ರಾಯೇಲ್ಯರನ್ನು ಪಾಲಿಸಿದ ನ್ಯಾಯಸ್ಥಾ
ಪಕರ ಕಾಲದಲ್ಲಾಗಲಿ ಇಸ್ರಾಯೇಲ್ಯರ ಮತ್ತು ಯೆ
ಹೂದ್ಯರ ಅರಸರ ಕಾಲದಲ್ಲಾಗಲಿ ನಡೆಯಲೇ ಇಲ್ಲ.
ಈ ಹಬ್ಬವು ಅರಸನಾದ ಯೋಷೀಯನ ಆಳಿಕೆ 23
ಯ ಹದಿನೆಂಟನೆಯ ವರುಷದಲ್ಲಿ ಯೆರೂಸಲೇಮಿನಲ್ಲಿ
ಯೆಹೋವನಿಗೋಸ್ಕರ ಆಚರಿಸಲ್ಪಟ್ಟಿತು. ಇದಲ್ಲದೆ 24
ಅವನು ಸತ್ತವರಲ್ಲಿ ವಿಚಾರಿಸುವವರನ್ನೂ ಬೈತಾಳಿಕ
ರನ್ನೂ ಯೆರೂಸಲೇಮ್ ಯೆಹೂದಪ್ರಾಂತ ಇವುಗಳ
ಲ್ಲಿದ್ದ ಎಲ್ಲಾ ತೆರಾಫೀಮ್ ಎಂಬ ಬೊಂಬೆಗಳನ್ನೂ
ಮೂರ್ತಿಗಳನ್ನೂ ಎಲ್ಲಾ ಅಸಹ್ಯವಿಗ್ರಹಗಳನ್ನೂ

ತೆಗೆದುಹಾಕಿ ಯಾಜಕನಾದ ಹಿಲ್ಕೀಯನಿಗೆ ಯೆ
ಹೋವನ ಆಲಯದಲ್ಲಿ ಸಿಕ್ಕಿದ ಧರ್ಮೋಪದೇಶಗ್ರಂಥ
25 ದ ವಾಕ್ಯಗಳನ್ನು ನೆರವೇರಿಸಿದನು. ಯೆಹೋವನ
ಕಡೆಗೆ ತಿರುಗಿಕೊಂಡು ಪೂರ್ಣಮನಸ್ಸಿನಿಂದಲೂ ಪೂರ್ಣ
ಪ್ರಾಣದಿಂದಲೂ ಪೂರ್ಣಬಲದಿಂದಲೂ ಮೋಶೆಯ
ಧರ್ಮಶಾಸ್ತ್ರವನ್ನು ಅನುಸರಿಸಿದ ಯೋಷೀಯನಿಗೆ
ಸಮಾನನಾದ ಅರಸನು ಮುಂಚೆಯೂ ತರುವಾಯವೂ
26 ಇರಲಿಲ್ಲ. ಆದರೂ ಮನಸ್ಸೆಯ ದುಷ್ಕೃತ್ಯಗಳ
ದೆಸೆಯಿಂದ ಯೆಹೂದ್ಯರ ಮೇಲಿದ್ದ ಯೆಹೋವನ
27 ಉಗ್ರಕೋಪವು ಇಳಿಯಲಿಲ್ಲ. ಆತನು—ಇಸ್ರಾ
ಯೇಲ್ಯರನ್ನು ತೆಗೆದುಹಾಕಿದಂತೆ ಯೆಹೂದ್ಯರನ್ನೂ
ನನ್ನ ಸನ್ನಿಧಿಯಿಂದ ತೆಗೆದುಹಾಕುವೆನು; ನಾನು ಆರಿಸಿ
ಕೊಂಡ ಯೆರೂಸಲೇಮ್‌ಪಟ್ಟಣವನ್ನೂ ನನ್ನ ನಾಮ
ಮಹತ್ತಿಗೋಸ್ಕರ ಸ್ವೀಕರಿಸಿಕೊಂಡ ದೇವಾಲಯವನ್ನೂ
ತಿರಸ್ಕರಿಸುವೆನು ಎಂದು ಹೇಳಿದನು.
28 ಯೋಷೀಯನ ಉಳಿದ ಚರಿತ್ರೆಯೂ ಅವನ ಎಲ್ಲಾ
ಕೃತ್ಯಗಳೂ ಯೆಹೂದರಾಜಕಾಲವೃತ್ತಾಂತ ಎಂಬ
29 ಗ್ರಂಥದಲ್ಲಿ ಬರೆದಿರುತ್ತವೆ. ಅವನ ಕಾಲದಲ್ಲಿ ಐಗು
ಪ್ತದ ಅರಸನಾದ ಫರೋಹನೆಕೋ ಎಂಬವನು ಅಶ್ಶೂ
ರದ ಅರಸನಿಗೆ ವಿರೋಧವಾಗಿ ಯುದ್ಧಮಾಡುವದ
ಕ್ಕೋಸ್ಕರ ಯೂಫ್ರೇಟೀಸ್ ನದಿಯ ಬಳಿಗೆ ಹೋದ
ನು. ಅವನು ಅಲ್ಲಿಗೆ ಹೋಗುತ್ತಿರುವಾಗ ಯೋಷೀ
ಯನು ಮೆಗಿದ್ದೋವಿನಲ್ಲಿ ಅವನನ್ನು ಎದುರು
30 ಗೊಂಡು ಕೂಡಲೆ ಅವನಿಂದ ಹತನಾದನು. ಅವನ
ಸೇವಕರು ಅವನ ಶವವನ್ನು ರಥದಲ್ಲಿ ಹಾಕಿಕೊಂಡು
ಮೆಗಿದ್ದೋವಿನಿಂದ ಯೆರೂಸಲೇಮಿಗೆ ತಂದು ಅವನ
ಸ್ವಂತ ಸಮಾಧಿಯಲ್ಲಿ ಇಟ್ಟರು. ಜನರು ಅವನಿಗೆ
ಬದಲಾಗಿ ಅವನ ಮಗನಾದ ಯೆಹೋವಾಹಾಜನನ್ನು
ಅಭಿಷೇಕಿಸಿ ಅರಸನನ್ನಾಗಿಮಾಡಿದರು.

ಅರಸನಾದ ಯೆಹೋವಾಹಾಜನು.

31 ಯೆಹೋವಾಹಾಜನು ಅರಸನಾದಾಗ ಇಪ್ಪತ್ತಮೂ
ರು ವರುಷದವನಾಗಿದ್ದು ಯೆರೂಸಲೇಮಿನಲ್ಲಿ ಮೂರು
ತಿಂಗಳು ಆಳಿದನು. ಲಿಬ್ನದವಳೂ ಯೆರೆಮೀಯನ
ಮಗಳೂ ಆದ ಹಮೂಟಲ್ ಎಂಬಾಕೆಯು ಇವನ
32 ತಾಯಿ. ಇವನು ತನ್ನ ಪೂರ್ವಿಕರಂತೆ ಯೆಹೋ
ವನ ದೃಷ್ಟಿಯಲ್ಲಿ ದ್ರೋಹಿಯಾದನು. ಫರೋಹ
33 ನೆಕೋವನು ಇವನನ್ನು ಯೆರೂಸಲೇಮಿನಲ್ಲಿ ಬಹು
ದಿವಸಗಳ ವರೆಗೆ ಆಳಗೊಡಲಿಲ್ಲ. ಅವನು ಹಮಾತ್
ದೇಶದ ರಿಬ್ಲಾ ಎಂಬ ಊರಲ್ಲಿ ಇವನನ್ನು ಸೆರೆಯಲ್ಲಿ
ಟ್ಟನು. ಯೆಹೂದ್ಯರು ಅವನಿಗೆ [1]ನೂರು ತಲಾಂತು
ಬೆಳ್ಳಿಯನ್ನೂ [2]ಒಂದು ತಲಾಂತು ಬಂಗಾರವನ್ನೂ
34 ದಂಡತೆರಬೇಕಾಯಿತು. ಫರೋಹನೆಕೋವನು ಯೋ
ಷೀಯನಿಗೆ ಬದಲಾಗಿ ಅವನ ಮಗನಾದ ಎಲ್ಯಾಕೀ
ಮನನ್ನು ಅರಸನನ್ನಾಗಿ ನೇಮಿಸಿ ಅವನಿಗೆ ಯೆಹೋ
ಯಾಕೀಮನೆಂಬ ಹೊಸ ಹೆಸರನ್ನಿಟ್ಟು ಯೆಹೋವಾ
ಹಾಜನನ್ನು ಐಗುಪ್ತದೇಶಕ್ಕೆ ತೆಗೆದುಕೊಂಡು ಹೋ
ದನು; ಯೆಹೋವಾಹಾಜನು ಅಲ್ಲಿ ಮೃತಿಹೊಂದಿ
ನು. ಫರೋಹನು ಗೊತ್ತುಮಾಡಿದಷ್ಟು ಬೆಳ್ಳಿಬಂಗಾ
ವನ್ನು ಕೊಡುವದಕ್ಕಾಗಿ ಯೆಹೋಯಾಕೀಮನು ತ
ದೇಶದಲ್ಲಿ ಕರವನ್ನು ನೇಮಿಸಿದನು. ಕರಕೊಡಬ
ಕಾದ ಪ್ರತಿಯೊಬ್ಬನು ತನಗೆ ನೇಮಕವಾದಷ
ಬೆಳ್ಳಿಬಂಗಾರವನ್ನು ದೇಶದ ಜನರಿಂದ ಕೂಡಿಸಿ ಫರೋ
ಹನಿಗೋಸ್ಕರ ತಂದೊಪ್ಪಿಸಿದನು.

ಅರಸನಾದ ಯೆಹೋಯಾಕೀಮನು.

ಯೆಹೋಯಾಕೀಮನು ಅರಸನಾದಾಗ ಇಪ್ಪತ್ತೈದ
ವರುಷದವನಾಗಿದ್ದು ಯೆರೂಸಲೇಮಿನಲ್ಲಿ ಹನ್ನೊಂದ
ವರುಷ ಆಳಿದನು. ರೂಮದವಳೂ ಪೆದಾಯನ ಮ
ಳೂ ಆದ ಜೆಬೂದಾ ಎಂಬಾಕೆಯು ಅವನ ತಾಯಿ
ಅವನು ತನ್ನ ಪೂರ್ವಿಕರಂತೆ ಯೆಹೋವನ ದೃ
ಯಲ್ಲಿ ದ್ರೋಹಿಯಾಗಿದ್ದನು. ಅವನ ಕಾಲದಲ್ಲಿ
ಬಾಬೆಲಿನ ಅರಸನಾದ ನೆಬೂಕದ್ನೆಚ್ಚರನು ಬಂದನು;
ಯೆಹೋಯಾಕೀಮನು ಅವನಿಗೆ ಅಧೀನನಾಗಿ ಮೂರ
ವರುಷಗಳಾದನಂತರ ಅವನಿಗೆ ವಿರೋಧವಾಗಿ ತಿರ
ಬಿದ್ದನು. ಯೆಹೋವನು ತನ್ನ ಸೇವಕರಾ
ಪ್ರವಾದಿಗಳ ಮುಖಾಂತರವಾಗಿ ಮುಂತಿಳಿಸಿದ ಪ್ರಕಾ
ಯೆಹೂದರಾಜ್ಯವನ್ನು ಹಾಳುಮಾಡುವದಕ್ಕೋಸ್ಕ
ಕಸ್ದೀಯರ, ಅರಾಮ್ಯರ, ಮೋವಾಬ್ಯರ, ಅಮ್ಮೋ
ಯರ ಸುಲಿಗೆಯ ಗುಂಪುಗಳನ್ನು ಕಳುಹಿಸಿದನು. ಯೆ
ರೂಸಲೇಮನ್ನು ನಿರಪರಾಧರಕ್ತದಿಂದ ತುಂಬಿಸಿದ ಮ
ಸ್ಸೆಯ ದುಷ್ಕೃತ್ಯಗಳನ್ನು ಯೆಹೋವನು ಕ್ಷಮಿಸ
ಹೋದನು; ಅವುಗಳಿಗಾಗಿ ಆತನು ಯೆಹೂದ್ಯರನ್ನ
ತನ್ನ ಸನ್ನಿಧಿಯಿಂದ ತೆಗೆದುಹಾಕಬೇಕೆಂದಿದ್ದದರಿಂ
ಆತನ ಅಪ್ಪಣೆಯ ಪ್ರಕಾರ ಈ ಶಿಕ್ಷೆಯು ಅವರಿ
ಆಯಿತು. ಯೆಹೋಯಾಕೀಮನ ಉಳಿದ ಚರಿತ್ರೆಯ
ಅವನ ಎಲ್ಲಾ ಕೃತ್ಯಗಳೂ ಯೆಹೂದರಾಜಕಾಲವ
ತ್ತಾಂತವೆಂಬ ಗ್ರಂಥದಲ್ಲಿ ಬರೆದಿರುತ್ತವೆ. ಅವನು ಪಿತ
ಗಳ ಬಳಿಗೆ ಸೇರಲು ಅವನಿಗೆ ಬದಲಾಗಿ ಅವನ ಮ
ನಾದ ಯೆಹೋಯಾಖೀನನು ಅರಸನಾದನು. ಬಾ
ಲಿನ ಅರಸನು ಐಗುಪ್ತದ ಹಳ್ಳಕ್ಕೂ ಯೂಫ್ರೇಟೀಸ
ನದಿಗೂ ಮಧ್ಯದಲ್ಲಿದ್ದ ಐಗುಪ್ತರಾಜನ ಎಲ್ಲಾ ದೇ
ವನ್ನು ಸ್ವಾಧೀನಮಾಡಿಕೊಂಡನು. ಅಂದಿನಿಂದ ಐಗ
ಪ್ತದ ಅರಸನು ತನ್ನ ದೇಶದಿಂದ ಈಚೆಗೆ ಬರಲೇ ಇಲ್ಲ

ಬಾಬೆಲಿನ ಅರಸನು ಯೆಹೋಯಾಖೀನನನ್ನೂ ಹಲವು
ಮಂದಿ ಯೆಹೂದ್ಯರನ್ನೂ ಸೆರೆಯಾಗಿ ಒಯ್ದದ್ದು.

ಯೆಹೋಯಾಖೀನನು ಅರಸನಾದಾಗ ಹದಿನೆಂಟ
ವರುಷದವನಾಗಿದ್ದು ಯೆರೂಸಲೇಮಿನಲ್ಲಿ ಮೂರ
ತಿಂಗಳು ಆಳಿದನು. ಯೆರೂಸಲೇಮಿನ ಎಲ್ನಾತಾನ
ಮಗಳಾದ ನೆಹುಷ್ಟಾ ಎಂಬಾಕೆಯು ಇವನ ತಾಯಿ
ಇವನು ತನ್ನ ತಂದೆಯಂತೆ ಯೆಹೋವನ ದೃಷ್ಟಿಯಲ್ಲಿ
ದ್ರೋಹಿಯಾಗಿದ್ದನು. ಇವನ ಕಾಲದಲ್ಲಿ ಬಾಬೆಲಿನ
ಅರಸನಾದ ನೆಬೂಕದ್ನೆಚ್ಚರನ ಸೈನ್ಯದವರು ಯೆರೂಸ

1) ಸುಮಾರು ಮೂರು ಲಕ್ಷ ತೊಲೆ. 2) ಸುಮಾರು ಮೂರು ಸಾವಿರ ತೊಲೆ.

ಲೇಮಿಗೆ ವಿರೋಧವಾಗಿ ಬಂದು ಅದಕ್ಕೆ ಮುತ್ತಿಗೆ
ಹಾಕಿದರು. ಅಷ್ಟರಲ್ಲಿ ನೆಬೂಕದ್ನೆಚ್ಚರನೂ ಬಂದನು.
ಆಗ ಯೆಹೂದದ ಅರಸನಾದ ಯೆಹೋಯಾಖೀನನು
ತನ್ನ ತಾಯಿ ಪರಿವಾರದವರು ಸೇನಾಪತಿಗಳು
ಕಂಚುಕಿಗಳು ಇವರೊಡನೆ ಅವನ ಬಳಿಗೆ ಹೋದನು;
ಅವನು ಇವನನ್ನು ತನ್ನ ಆಳಿಕೆಯ ಎಂಟನೆಯ ವರುಷ
ದಲ್ಲಿ ಸೆರೆಹಿಡಿದನು. ಇದಲ್ಲದೆ ಯೆಹೋವನು ಮುಂ
ತಿಳಿಸಿದ ಪ್ರಕಾರ ಅವನು ಯೆಹೋವನ ಆಲಯದ
ಮತ್ತು ಅರಮನೆಯ ಭಂಡಾರಗಳಲ್ಲಿದ್ದ ಎಲ್ಲಾ
ದ್ರವ್ಯವನ್ನು ತೆಗೆದುಕೊಂಡುಹೋದನು. ಇಸ್ರಾ
ಯೇಲ್ಯರ ಅರಸನಾದ ಸೊಲೊಮೋನನು ಯೆಹೋ
ವನ ಆಲಯಕ್ಕಾಗಿ ಮಾಡಿಸಿದ್ದ ಬಂಗಾರದ ಎಲ್ಲಾ
ಸಾಮಾನುಗಳನ್ನು ಮುರಿದುಬಿಟ್ಟನು. ಯೆರೂಸ
ಲೇಮಿನಲ್ಲಿದ್ದ ಎಲ್ಲಾ ಪ್ರಭುಗಳನ್ನೂ ಭಟರನ್ನೂ
ಕಮ್ಮಾರರು ಮೊದಲಾದ ಕೈಗಾರಿಕೆಯವರನ್ನೂ
ಒಟ್ಟಾಗಿ ಹತ್ತು ಸಾವಿರ ಜನರನ್ನು ಸೆರೆಯೊಯ್ದನು.
ದೇಶದ ಜನರಲ್ಲಿ ಕೇವಲ ಬಡವರು ಹೊರತಾಗಿ ಯಾ
ರನ್ನೂ ಬಿಡಲಿಲ್ಲ. ಅವನು ಯೆಹೋಯಾಖೀನನನ್ನೂ
ಅವನ ತಾಯಿ ಹೆಂಡತಿಯರು ಕಂಚುಕಿಗಳು ದೇಶದ
ಪ್ರಧಾನಪುರುಷರು ಇವರನ್ನೂ ಏಳು ಸಾವಿರ ಮಂದಿ
ಭಟರನ್ನೂ ಸಾವಿರ ಮಂದಿ ಕಮ್ಮಾರರು ಮೊದಲಾದ
ಕೈಗಾರಿಕೆಯವರನ್ನೂ ಯೆರೂಸಲೇಮಿನಿಂದ ಬಾಬೆ
ಲಿಗೆ ಒಯ್ದನು; ಅವರೆಲ್ಲರೂ ಪುಷ್ಟರೂ ರಣವೀರರೂ
ಆಗಿದ್ದರು. ಬಾಬೆಲಿನ ಅರಸನು ಯೆಹೋಯಾ
ಖೀನನಿಗೆ ಬದಲಾಗಿ ಅವನ ಚಿಕ್ಕಪ್ಪನಾದ ಮತ್ತನ್ಯ
ಎಂಬವನನ್ನು ಅರಸನನ್ನಾಗಿ ನೇಮಿಸಿ ಅವನಿಗೆ ಚಿದ್ಕೀ
ಯ ಎಂಬ ಹೆಸರಿಟ್ಟನು.

ಅರಸನಾದ ಚಿದ್ಕೀಯನೂ ಉಳಿದ ಎಲ್ಲಾ ಯೆಹೂದ್ಯರೂ
ಸೆರೆಯಾಗಿ ಹೋದದ್ದು.

ಚಿದ್ಕೀಯನು ತನ್ನ ಇಪ್ಪತ್ತೊಂದನೆಯ ವರುಷ
ತುಂಬಿದ ಮೇಲೆ ಅರಸನಾಗಿ ಯೆರೂಸಲೇಮಿನಲ್ಲಿ
ಹನ್ನೊಂದು ವರುಷ ಆಳಿದನು. ಲಿಬ್ನದವಳೂ ಯೆರೆ
ಮೀಯನ ಮಗಳೂ ಆದ ಹಮೂಟಲ್ ಎಂಬಾಕೆಯು
ಇವನ ತಾಯಿ. ಇವನು ಯೆಹೋಯಾಕೀಮನಂತೆ
ಯೆಹೋವನ ದೃಷ್ಟಿಯಲ್ಲಿ ದ್ರೋಹಿಯಾಗಿದ್ದನು.
ಯೆಹೋವನು ಯೆರೂಸಲೇಮಿನವರ ಮೇಲೆಯೂ
ಬೇರೆ ಎಲ್ಲಾ ಯೆಹೂದ್ಯರ ಮೇಲೆಯೂ ಇದನ್ನೆಲ್ಲಾ
ಬರಮಾಡಿ ಕಡೆಯಲ್ಲಿ ಅವರನ್ನು ತನ್ನ ಸನ್ನಿಧಿಯಿಂದ
ತಳ್ಳಿಬಿಡುವಷ್ಟು ರೋಷವುಳ್ಳವನಾದನು. ಚಿದ್ಕೀಯನು
ಬಾಬೆಲಿನ ಅರಸನಾದ ನೆಬೂಕದ್ನೆಚ್ಚರನಿಗೆ ವಿರೋಧ
5 ವಾಗಿ ತಿರುಗಿಬಿದ್ದದರಿಂದ ಅವನು ಚಿದ್ಕೀಯನ
ಆಳಿಕೆಯ ಒಂಭತ್ತನೆಯ ವರುಷದ ಹತ್ತನೆ
ಯ ತಿಂಗಳಿನ ಹತ್ತನೆಯ ದಿನದಲ್ಲಿ ಸರ್ವಸೈನ್ಯಸಹಿತ
ನಾಗಿ ಯೆರೂಸಲೇಮಿಗೆ ಬಂದು ಅಲ್ಲಿ ಪಾಳೆಯಮಾಡಿ
ಕೊಂಡು ಅದರ ಸುತ್ತಲೂ ಮಣ್ಣಿನ ದಿಬ್ಬವನ್ನು ಮಾಡಿ
ಚಿದ್ಕೀಯನ ಆಳಿಕೆಯ ಹನ್ನೊಂದನೆಯ ವರುಷದ ವರೆಗೆ
ಅದಕ್ಕೆ ಮುತ್ತಿಗೆಹಾಕಿದನು. ಘೋರಕ್ಷಾಮದ ದೆಸೆ
ಯಿಂದ ಪಟ್ಟಣದಲ್ಲಿರುವವರಿಗೆ ಆಹಾರಸಿಕ್ಕದೆಹೋ

ಯಿತು. ಪಟ್ಟಣಕ್ಕೆ ಮುತ್ತಿಗೆಹಾಕಿದ್ದ ಕಸ್ದೀಯರು
ಹನ್ನೊಂದನೆಯ ವರುಷದ ನಾಲ್ಕನೆಯ ತಿಂಗಳಿನ ಒಂಭ
ತ್ತನೆಯ ದಿವಸ ಪೌಳಿಗೋಡೆಯಲ್ಲಿ ಒಂದು ದ್ವಾರವನ್ನು 4
ಮಾಡಿದ್ದರಿಂದ ಒಳಗಿದ್ದ ಅರಸನೂ ಅವನ ಎಲ್ಲಾ ಸೈನಿ
ಕರೂ ಅದೇ ರಾತ್ರಿಯಲ್ಲಿ ಅರಸನ ತೋಟದ ಬಳಿ
ಯಲ್ಲಿರುವ ಬಾಗಲಿನಿಂದ ಓಡಿಹೋದರು; ಅದು
ಎರಡು ಗೋಡೆಗಳ ಮಧ್ಯದಲ್ಲಿತ್ತು. ಅರಸನು ಅರಾಬಾ
ಎಂಬ ತಗ್ಗಾದ ಪ್ರದೇಶದ ಮಾರ್ಗವಾಗಿ ಓಡಿಹೋಗು
ತ್ತಿರುವಾಗ ಕಸ್ದೀಯರ ಸೈನ್ಯದವರು ಅವನನ್ನು 5
ಹಿಂದಟ್ಟಿ ಯೆರಿಕೋವಿನ ಬೈಲಿನಲ್ಲಿ ಹಿಡಿದರು. ಅಷ್ಟ
ರಲ್ಲಿ ಅವನ ಎಲ್ಲಾ ಸೈನಿಕರು ಅವನನ್ನು ಬಿಟ್ಟು ಚದರಿ
ಹೋಗಿದ್ದರು. ಅನಂತರ ಕಸ್ದೀಯರು ಅವನನ್ನು 6
ರಿಬ್ಲದಲ್ಲಿದ್ದ ತಮ್ಮ ಅರಸನ ಬಳಿಗೆ ತೆಗೆದುಕೊಂಡು
ಬಂದು ಅವನಿಗೆ ಶಿಕ್ಷೆಯನ್ನು ವಿಧಿಸಿದರು. ಅವನ 7
ಇಬ್ಬರು ಮಕ್ಕಳನ್ನು ಅವನ ಎದುರಿನಲ್ಲಿಯೇ ವಧಿಸಿ
ಅವನಿಗೆ ಬೇಡಿಹಾಕಿ ಎರಡು ಕಣ್ಣುಗಳನ್ನೂ ಕಿತ್ತು
ಬಾಬೆಲಿಗೆ ತೆಗೆದುಕೊಂಡು ಹೋದರು.
ಐದನೆಯ ತಿಂಗಳಿನ ಏಳನೆಯ ದಿನದಲ್ಲಿ ಅಂದರೆ 8
ಬಾಬೆಲಿನ ಅರಸನಾದ ನೆಬೂಕದ್ನೆಚ್ಚರನ ಆಳಿಕೆಯ
ಹತ್ತೊಂಭತ್ತನೆಯ ವರುಷದಲ್ಲಿ ಬಾಬೆಲಿನ ಅರಸನ
ಸೇವಕನೂ ಕಾವಲುದಂಡಿನ ಅಧಿಪತಿಯೂ ಆಗಿದ್ದ
ನೆಬೂಜರದಾನನೆಂಬವನು ಯೆರೂಸಲೇಮಿಗೆ ಬಂದು
ಯೆಹೋವನ ಆಲಯವನ್ನೂ ಅರಮನೆಯನ್ನೂ ಯೆ 9
ರೂಸಲೇಮಿನ ಎಲ್ಲಾ ದೊಡ್ಡ ಮನೆಗಳನ್ನೂ ಸುಟ್ಟು
ಬಿಟ್ಟನು. ಅವನ ಜೊತೆಯಲ್ಲಿ ಬಂದಿದ್ದ ಕಸ್ದೀಯ 10
ಸೈನ್ಯದವರು ಯೆರೂಸಲೇಮಿನ ಸುತ್ತುಗೋಡೆಗಳನ್ನು
ಕೆಡವಿದರು. ಕಾವಲುದಂಡಿನ ಅಧಿಪತಿಯಾದ ನೆಬೂ 11
ಜರದಾನನು ಪಟ್ಟಣದಲ್ಲಿ ಉಳಿದವರನ್ನೂ ಮೊದಲೇ
ಬಾಬೆಲಿನ ಅರಸನ ಮರೆಹೊಕ್ಕವರನ್ನೂ ಬೇರೆ ಎಲ್ಲಾ
ಜನರನ್ನೂ ಸೆರೆಯೊಯ್ದನು. ಹೊಲಗಳನ್ನೂ ದ್ರಾಕ್ಷೇ 12
ತೋಟಗಳನ್ನೂ ವ್ಯವಸಾಯಮಾಡುವದಕ್ಕಾಗಿ ದೇಶದ
ಜನರಲ್ಲಿ ಕೇವಲ ಬಡವರನ್ನು ಮಾತ್ರ ಬಿಟ್ಟುಹೋ
ದನು. ಕಸ್ದೀಯರು ಯೆಹೋವನ ಆಲಯದ 13
ಬಳಿಯಲ್ಲಿದ್ದ ತಾಮ್ರದ ಕಂಬಗಳನ್ನೂ ಪೀಠಗಳನ್ನೂ
ಸಮುದ್ರವೆನಿಸಿಕೊಂಡ ಪಾತ್ರೆಯನ್ನೂ ಒಡೆದು ಅವು
ಗಳ ತಾಮ್ರವನ್ನೂ ದೇವಾಲಯದ ಸೇವೆಗಾಗಿ ಉಪ 14
ಯೋಗಿಸುತ್ತಿದ್ದ ಬೋಗುಣಿ ಸಲಿಕೆ ಕತ್ತರಿ ಧೂಪಾ
ರತಿ ಮೊದಲಾದ ತಾಮ್ರದ ಸಾಮಾನುಗಳನ್ನೂ ಬಾಬೆ
ಲಿಗೆ ತೆಗೆದುಕೊಂಡುಹೋದರು. ಕಾವಲುದಂಡಿನ 15
ಅಧಿಪತಿಯು ಬೆಳ್ಳಿಬಂಗಾರದ ಅಗ್ಗಿಷ್ಟಿಗೆ ಬಟ್ಟಲು
ಮೊದಲಾದವುಗಳನ್ನು ತೆಗೆದುಕೊಂಡನು. ಸೊಲೊ 16
ಮೋನನು ಯೆಹೋವನ ಆಲಯಕ್ಕೋಸ್ಕರ ಮಾಡಿ
ಸಿದ ಎರಡು ಕಂಬಗಳು, ಸಮುದ್ರವೆನಿಸಿಕೊಂಡ ಪಾತ್ರೆ
ಯು, ಪೀಠಗಳು, ಇವುಗಳಿಗೆ ಲೆಕ್ಕವಿಲ್ಲದಷ್ಟು ತಾಮ್ರ
ಹಿಡಿದಿತ್ತು. ಪ್ರತಿಯೊಂದು ಕಂಬವು ಹದಿನೆಂಟು ಮೊಳ 17
ಎತ್ತರವಿತ್ತು; ಪ್ರತಿಯೊಂದರ ಮೇಲೆ ಮೂರು ಮೊಳ
ಎತ್ತರವಾದ ಒಂದು ತಾಮ್ರದ ಕುಂಭವಿತ್ತು. ಆ
ಕುಂಭಗಳ ಮೇಲೆ ಸುತ್ತಲೂ ತಾಮ್ರದ ಜಾಲರಿಯೂ
ದಾಳಿಂಬಹಣ್ಣುಗಳೂ ಇದ್ದವು. ಕಾವಲುದಂಡಿನ 18
ಅಧಿಪತಿಯಾದ ನೆಬೂಜರದಾನನು ಹಿಡಿದುಕೊಂಡು

ಹೋದ ಜನರಲ್ಲಿ ಮಹಾಯಾಜಕನಾದ ಸೆರಾಯನು,
ಎರಡನೆಯ ತರಗತಿಯ ಯಾಜಕನಾದ ಚೆಫನ್ಯನು,
19 ಮೂರು ಮಂದಿ ದ್ವಾರಪಾಲಕರು, ಸೈನ್ಯ ಸಂಬಂಧ
ವಾದ ಎಲ್ಲಾ ವ್ಯವಸ್ಥೆಯನ್ನು ಮಾಡುವ ಕಂಚುಕಿ,
ಪಟ್ಟಣದಲ್ಲಿ ಉಳಿದಿದ್ದ ಅರಸನಿಗೆ ಆಪ್ತರಾಗಿದ್ದ ಐದು
ಮಂದಿ ಮಂತ್ರಿಗಳು, ಯುದ್ಧಕ್ಕೆ ಹೋಗತಕ್ಕವರ ಪಟ್ಟಿ
ಯನ್ನು ಮಾಡುವ ಸೇನಾಪತಿಯ ಲೇಖಕನು, ಪಟ್ಟಣ
20 ದಲ್ಲಿದ್ದ ಅರುವತ್ತು ಮಂದಿ ರೈತರು ಇದ್ದರು. ಅವನು
ಇವರನ್ನೆಲ್ಲಾ ತೆಗೆದುಕೊಂಡುಹೋಗಿ ಹಮಾತ್ ಪ್ರದೇ
21 ಶದ ರಿಬ್ಲದಲ್ಲಿದ್ದ ಬಾಬೆಲಿನ ಅರಸನಿಗೆ ಒಪ್ಪಿಸಲು
ಅವನು ಇವರನ್ನು ಅಲ್ಲಿಯೇ ಕೊಲ್ಲಿಸಿದನು. ಹೀಗೆ
ಯೆಹೂದ್ಯರು ಸೆರೆಯವರಾಗಿ ತಮ್ಮ ದೇಶವನ್ನು ಬಿಟ್ಟು
ಹೋಗಬೇಕಾಯಿತು.

### ದೇಶಾಧಿಪತಿಯಾದ ಗೆದಲ್ಯನು.

22 ಬಾಬೆಲಿನ ಅರಸನಾದ ನೆಬೂಕದ್ನೆಚ್ಚರನು ತಾನು
ಯೆಹೂದದೇಶದಲ್ಲಿ ಉಳಿಸಿದ ಜನರ ಮೇಲೆ ಅಹೀ
ಕಾಮನ ಮಗನೂ ಶಾಫಾನನ ಮೊಮ್ಮಗನೂ ಆದ
ಗೆದಲ್ಯ ಎಂಬವನನ್ನು ಅಧಿಪತಿಯನ್ನಾಗಿ ನೇಮಿಸಿ
23 ದನು. [ತಪ್ಪಿಸಿಕೊಂಡು ಉಳಿದಿದ್ದ] ಯೆಹೂದ
ಸೇನಾಪತಿಗಳು ಗೆದಲ್ಯನು ಬಾಬೆಲಿನ ಅರಸನಿಂದ ಅಧಿ
ಪತಿಯಾಗಿ ನೇಮಿಸಲ್ಪಟ್ಟನೆಂಬ ವರ್ತಮಾನವನ್ನು
ಕೇಳಿ ತಮ್ಮ ಜನರೊಡನೆ ಮಿಚ್ಪದಲ್ಲಿ ವಾಸವಾಗಿದ್ದ
ಅವನ ಬಳಿಗೆ ಹೋದರು. ಅವರು ಯಾರಂದರೆ—
ನೆತನ್ಯನ ಮಗನಾದ ಇಷ್ಮಾಯೇಲನು, ಕಾರೇಹನ
ಮಗನಾದ ಯೋಹಾನಾನ್, ನೆಟೋಫದವನೂ ತನ್ಹು
ಮೆತನ ಮಗನೂ ಆದ ಸೆರಾಯನು, ಮಾಕಾ ಊರಿ
ನವನಾದ ಯಾಜನ್ಯನು ಇವರೇ. ಗೆದಲ್ಯನು ಇ
ರಿಗೂ ಇವರ ಜನರಿಗೂ—ಕಸ್ದೀಯರ ಸೈನ್ಯದವರಿ
ಹೆದರಬೇಡಿರಿ; ಬಾಬೆಲಿನ ಅರಸನಿಗೆ ಒಳಗಾಗಿದ
ಇಲ್ಲಿಯೇ ವಾಸಿಸಿರಿ; ಆಗ ನಿಮಗೆ ಸುಖವಾಗುವ
ಎಂದು ಆಣೆಯಿಟ್ಟು ಹೇಳಿದನು. ಆದರೆ ಏಳನೆ
ತಿಂಗಳಿನಲ್ಲಿ ರಾಜವಂಶದವನೂ ಎಲೀಷಾಮನ ಮೊ
ಗನೂ ನೆತನ್ಯನ ಮಗನೂ ಆದ ಇಷ್ಮಾಯೇಲ
ಹತ್ತು ಮಂದಿ ಆಳುಗಳೊಡನೆ ಬಂದು ಗೆದಲ್ಯನನ
ಅವನ ಸಂಗಡ ಮಿಚ್ಪದಲ್ಲಿದ್ದ ಯೆಹೂದ್ಯರನ್ನೂ ಕಸ್
ಯರನ್ನೂ ಸಂಹರಿಸಿದನು. ಆಗ ಎಲ್ಲಾ ಚಿಕ್ಕವ
ದೊಡ್ಡವರೂ ಸೇನಾಪತಿಗಳೂ ಕಸ್ದೀಯರಿಗೆ ಹೆದ
ಐಗುಪ್ತಕ್ಕೆ ಓಡಿಹೋದರು.

### ಯೆಹೋಯಾಖೀನನು ಬಿಡುಗಡೆಹೊಂದಿದ್ದು.

ಎವೀಲ್ಮೆರೋದಕನು ತಾನು ಪಟ್ಟಕ್ಕೆ ಬಂದ ಮೊ
ಲನೆಯ ವರುಷದಲ್ಲಿ ಅಂದರೆ ಯೆಹೂದದ ಅರಸನಾ
ಯೆಹೋಯಾಖೀನನ ಸೆರೆಯ ಮೂವತ್ತೇಳನೆ
ವರುಷದ ಹನ್ನೆರಡನೆಯ ತಿಂಗಳಿನ ಇಪ್ಪತ್ತೇಳನೆ
ದಿನದಲ್ಲಿ ಯೆಹೋಯಾಖೀನನನ್ನು ಸೆರೆಮನೆಯಿಂ
ಬಿಡಿಸಿ ಅವನನ್ನು ಮೇಲಕ್ಕೆ ಎತ್ತಿದನು. ಅವನೊಡ
ಪ್ರೀತಿಯಿಂದ ಮಾತಾಡಿ ತನ್ನ ಸಂಗಡ ಬಾಬೆಲಿನಲ್ಲಿ
ಎಲ್ಲಾ ಅರಸುಗಳಲ್ಲಿ ಅವನಿಗೆ ಉನ್ನತಸ್ಥಾನವನ
ಕೊಟ್ಟನು. ಯೆಹೋಯಾಖೀನನು ಸೆರೆಯ ಬಟ್ಟೆ
ಳನ್ನು ತೆಗೆದುಹಾಕಿ ಜೀವದಿಂದಿರುವ ವರೆಗೂ ಅರಸ
ಪಂಕ್ತಿಯಲ್ಲಿ ಊಟಮಾಡಿದನು. ಅವನು ಬದು
ರುವ ವರೆಗೂ ಅವನಿಗೆ ಬೇಕಾಗುವ ಎಲ್ಲಾ ಪದಾರ್ಥ
ಗಳು ಪ್ರತಿನಿತ್ಯವೂ ಅರಸನಿಂದಲೇ ದೊರಕುತ್ತಿದ್ದ

---

# THE FIRST BOOK OF THE
# CHRONICLES

## ಪೂರ್ವಕಾಲವೃತ್ತಾಂತ
## ಪ್ರಥಮಭಾಗ

### ವಂಶಾವಳಿಗಳು. 1—9.

#### ನೋಹನ ಮಕ್ಕಳಿಂದ ಉತ್ಪತ್ತಿಯಾದ ಜನಾಂಗಗಳ ಪಟ್ಟಿ.

1 ಆದಾಮನ ಸಂತಾನದವರು—ಶೇತ್, ಎನೋಷ್,
2, 3 ಕೇನಾನ್, ಮಹಲಲೇಲ್, ಯೆರೆದ್, ಹನೋ
4 ಕ್, ಮೆತೂಷೆಲಹ, ಲೆಮೆಕ್, ನೋಹ, ಶೇಮ್,
ಹಾಮ್, ಯೆಫೆತ್ ಎಂಬವರು.
ಯೆಫೆತನ ಸಂತಾನದವರು ಯಾರಂದರೆ—ಗೊ
ಮೆರ್, ಮಾಗೋಗ್, ಮಾದಯ್, ಯಾವಾನ
ತೂಬಲ್, ಮೆಷೆಕ್, ತೀರಾಸ್ ಎಂಬವರೇ. ಗೋ
ರನ ಸಂತಾನದವರು—ಅಷ್ಕೆನಜ್, ರೀಫತ್, ತೋ
ರ್ಮ ಎಂಬವರು. ಯಾವಾನನ ಸಂತಾನದವರು—
ಎಲೀಷ, ತಾರ್ಷೀಷ್, ಕಿತ್ತೀಮ್, ದೋದಾನೀ
ಎಂಬ ಸ್ಥಳಗಳವರು.

ಹಾಮನ ಸಂತಾನದವರು ಯಾರಂದರೆ— ಕೂಷ್,
ಮಿಚ್ರಯಿಮ್, ಪೂಟ್, ಕಾನಾನ್ ಎಂಬವರೇ. ಕೂಷನ
ಸಂತಾನದವರು—ಸೆಬ, ಹವೀಲ, ಸಬ್ತ, ರವ್ಮ, ಸಬ್ತೆಕ
ಎಂಬವರು. ರವ್ಮ ಸಂತಾನದವರು — ಶೆಬ, ದೆದಾನ್
ಎಂಬ ಜನಾಂಗಗಳು. ಕೂಷನು ನಿವ್ರೋದನನ್ನು ಪಡೆ
ದನು. ಇವನು ಪರಾಕ್ರಮದಿಂದ ಮೊದಲನೆಯ ಭೂ
ರಾಜನಾದನು. ಮಿಚ್ರಯಿಮ್ಯರಿಂದ ಲೂದ್ಯರೂ ಅನಾ
ಮ್ಯರೂ ಲೆಹಾಬ್ಯರೂ ನಫ್ತುಹ್ಯರೂ ಪತ್ರುಸ್ಯರೂ ಕಸ್ಲು
ಹ್ಯರೂ ಕಫ್ತೋರ್ಯರೂ ಹುಟ್ಟಿದರು. ಕಸ್ಲುಹ್ಯರ
ಬಳಿಯಿಂದ ಫಿಲಿಷ್ಟಿಯರು ಹೊರಟು ಬಂದರು. ಕಾನಾ
ನ್‌ವಂಶದಲ್ಲಿ ಮೊದಲು ಹುಟ್ಟಿದವನು ಸೀದೋನ್;
ಆ ಮೇಲೆ ಹೇತ್ ಹುಟ್ಟಿದನು. ಇದಲ್ಲದೆ ಯೆಬೂಸಿ
ಯರೂ ಅಮೋರಿಯರೂ ಗಿರ್ಗಾಷಿಯರೂ ಹಿವ್ವಿ
ಯರೂ ಅರ್ಕಿಯರೂ ಸೀನಿಯರೂ ಅರ್ವಾದಿಯರೂ
ಚೆಮಾರಿಯರೂ ಹಮಾತಿಯರೂ ಕಾನಾನನಿಂದ ಹುಟ್ಟಿ
ದರು.

ಶೇಮನ ಸಂತಾನದವರು—ಏಲಾಮ್, ಅಶ್ಶೂರ್,
ಅರ್ಪಕ್ಷದ್, ಲೂದ್, ಅರಾಮ್ ಎಂಬವರು. [1)ಅರಾ
ಮ್ ಸಂತಾನದವರು] — ಊಚ್, ಹೂಲ್, ಗೆತೆರ್,
ಮೆಷೆಕ್ ಎಂಬವರೇ. ಅರ್ಪಕ್ಷದನಿಂದ ಶೆಲಹನೂ
ಶೆಲಹನಿಂದ ಏಬೆರನೂ ಹುಟ್ಟಿದರು. ಏಬೆರನಿಗೆ
ಇಬ್ಬರು ಮಕ್ಕಳು ಹುಟ್ಟಿದರು. ಒಬ್ಬನಿಗೆ ಪೆಲೆಗೆಂಬ
ಹೆಸರು; ಇವನ ಕಾಲದಲ್ಲಿ ಭೂಮಿಯ ಜನಗಳು
ವಿಂಗಡವಾದವು. ಇವನ ತಮ್ಮನ ಹೆಸರು ಯೊಕ್ತಾನ್.
ಯೊಕ್ತಾನನ ಸಂತಾನದವರು — ಅಲ್ಮೋದಾದ್, ಶೆಲೆ
ಫ್, ಹಚರ್ಮಾವೆತ್, ಯೆರಹ, ಹದೋರಾಮ್, ಊ
ಜಾಲ್, ದಿಕ್ಲ, ಏಬಾಲ್, ಅಬೀಮಾಯೇಲ್, ಶೆಬಾ,
ಓಫೀರ್, ಹವೀಲಾ, ಯೋಬಾಬ್ ಎಂಬ ಸ್ಥಳಗಳ
ವರು. ಇವರೆಲ್ಲರೂ ಯೊಕ್ತಾನನ ಸಂತಾನದವರು.

ಯಾಕೋಬ ಏಸಾವರ ತನಕ ಶೇಮನ ವಂಶಾವಳಿ.

ಶೇಮನ ಸಂತಾನದವರು—ಅರ್ಪಕ್ಷದ್, ಶೆಲಹ,
26 ಏಬೆರ್, ಪೆಲೆಗ್, ರೆಯೂ, ಸೆರೂಗ್, ನಾಹೋರ್,
ತೆರಹ, ಅಬ್ರಹಾಮನೆಂಬ ಹೆಸರು ಹೊಂದಿದ ಅಬ್ರಾ
ಮ್ ಎಂಬವರು. ಅಬ್ರಹಾಮನ ಮಕ್ಕಳು—
ಇಸಾಕ್, ಇಷ್ಮಾಯೇಲ್ ಇವರೇ.

ಇಷ್ಮಾಯೇಲ್ಯರ ವಂಶಾವಳಿ— ಇಷ್ಮಾಯೇಲನಿಗೆ
ಮೊದಲು ಹುಟ್ಟಿದವನು ನೆಬಾಯೋತ್; ಆ ಮೇಲೆ
ಹುಟ್ಟಿದವರು—ಕೇದಾರ್, ಅದ್ಬೆಯೇಲ್, ಮಿಬ್ಸಾ
ಮ್, ಮಿಷ್ಮ, ದೂಮ, ಮಸ್ಸ, ಹದದ್, ತೇಮ,
ಯೆಟೂರ್, ನಾಫೀಷ್, ಕೇದೆಮ. ಇಷ್ಮಾಯೇಲನ
ಸಂತಾನದವರು ಇವರೇ.

ಅಬ್ರಹಾಮನ ಉಪಪತ್ನಿಯಾದ ಕೆಟೂರಳ ಸಂತಾ
ನದವರು — ಜಿವ್ರಾನ್, ಯೊಕ್ಷಾನ್, ಮೆದಾನ್,
ಮಿದ್ಯಾನ್, ಇಷ್ಬಾಕ್, ಶೂಹ ಎಂಬವರು. ಯೊಕ್ಷಾ
ನನು, ಶೆಬ, ದೆದಾನ್ ಎಂಬವರನ್ನು ಪಡೆದನು. ಏಫ,
ಏಫೆರ್, ಹನೋಕ್, ಅಬೀದ, ಎಲ್ದಾಯ ಎಂಬವರು
ಮಿದ್ಯಾನನಿಂದ ಹುಟ್ಟಿದರು. ಇವರೆಲ್ಲರೂ ಕೆಟೂರಳ
ಸಂತತಿಯವರು.

ಅಬ್ರಹಾಮನು ಇಸಾಕನನ್ನು ಪಡೆದನು; ಏಸಾವ 34
ಇಸ್ರಾಯೇಲರು ಇಸಾಕನ ಮಕ್ಕಳು.

ಎದೋಮ್ಯರ ಕುಲಗಳೂ ಕುಲಪತಿಗಳೂ.

ಏಸಾವನ ವಂಶಸ್ಥರು ಯಾರಂದರೆ—ಎಲೀಫಜ್, 35
ರೆಯೂವೇಲ್, ಯೆಯೂಷ್, ಯಳಾಮ್, ಕೋರಹ
ಇವರೇ. ಎಲೀಫಜನ ಮಕ್ಕಳು—ತೇಮಾನ್, ಓಮಾ 36
ರ್, ಚೆಫೀ, ಗತಾಮ್, ಕೆನಜ್, ತಿಮ್ನ, ಅಮಾಲೇಕ್
ಎಂಬವರು. ರೆಯೂವೇಲನ ಮಕ್ಕಳು—ನಹತ್, 37
ಜೆರಹ, ಶಮ್ಮ, ಮಿಜ್ಜ ಎಂಬವರೇ.

ಸೇಯಿರನಿಂದ ಹುಟ್ಟಿದವರು ಯಾರಂದರೆ— 38
ಲೋಟಾನ್, ಶೋಬಾಲ್, ಚಿಬ್ಯೋನ್, ಅನಾಹ,
ದೀಶೋನ್, ಏಚೆರ್, ದೀಶಾನ್ ಇವರೇ. ಲೋಟಾನನ 39
ಮಕ್ಕಳು—ಹೋರೀ, ಹೋಮಾಮ್; ಲೋಟಾನನ
ತಂಗಿಯು ತಿಮ್ನ. ಶೋಬಾಲನ ಮಕ್ಕಳು—ಅಲ್ಯಾ 40
ನ್, ಮಾನಹತ್, ಏಬಾಲ್, ಶೆಫೀ, ಓನಾಮ್.
ಚಿಬ್ಯೋನನ ಮಕ್ಕಳು—ಅಯ್ಯಾಹ, ಅನಾಹ. ಅನಾ 41
ಹನ ಮಗನು ದೀಶೋನ್. ದೀಶೋನನ ಮಕ್ಕಳು—
ಹಮ್ರಾನ್, ಎಷ್ಬಾನ್, ಇತ್ರಾನ್, ಕೆರಾನ್. ಏಚೆ 42
ರನ ಮಕ್ಕಳು—ಬಿಲ್ಹಾನ್, ಜಾವಾನ್, ಯಾಕಾನ್.
ದೀಶಾನನ ಮಕ್ಕಳು—ಊಚ್, ಅರಾನ್.

ಇಸ್ರಾಯೇಲ್ಯರಿಗೆ ಅರಸರಿದ್ದದ್ದಕ್ಕಿಂತ ಮುಂಚೆ 43
ಎದೋಮ್ ದೇಶದಲ್ಲಿ ಆಳುತ್ತಿದ್ದ ಅರಸರು—ಬೆಯೋ
ರನ ಮಗನಾದ ಬೆಳನು [ಮೊದಲನೆಯವನು]. ಅವನ
ರಾಜಧಾನಿಯ ಹೆಸರು ದಿನ್ಹಾಬಾ. ಬೆಳನು ಸತ್ತ 44
ಮೇಲೆ ಬೊಚ್ರದವನಾದ ಜೆರಹನ ಮಗ ಯೋಬಾ
ಬನು ಅಧಿಪತ್ಯಕ್ಕೆ ಬಂದನು. ಯೋಬಾಬನು ಸತ್ತ 45
ಮೇಲೆ ತೇಮಾನೀಯರ ದೇಶದವನಾದ ಹೂಷಾ
ಮನು ಅವನಿಗೆ ಬದಲಾಗಿ ಆಳಿದನು. ಹೂಷಾಮನು 46
ಸತ್ತ ಮೇಲೆ ಮೋವಾಬ್ಯರ ಬೈಲಿನಲ್ಲಿ ಮಿದ್ಯಾನರನ್ನು
ಸೋಲಿಸಿದ ಬೆದದನ ಮಗನಾದ ಹದದನು ಅರಸನಾ
ದನು. ಅವನ ರಾಜಧಾನಿಯ ಹೆಸರು ಅವೀತ್.
ಹದದನು ಸತ್ತ ಮೇಲೆ ಮಸ್ರೇಕದವನಾದ ಸವ್ಲಾ 47
ಹನು ಪಟ್ಟಕ್ಕೆ ಬಂದನು. ಸವ್ಲಾಹನು ಸತ್ತ ಮೇಲೆ 48
[2)ಯೂಫ್ರೇಟೀಸ್]ನದೀ ತೀರದಲ್ಲಿರುವ ರೆಹೋಬೋ
ತೂರಿನ ಸೌಲನು ಅರಸನಾದನು. ಸೌಲನು ಸತ್ತ 49
ಮೇಲೆ ಅಕ್ಬೋರನ ಮಗನಾದ ಬಾಳ್ಹಾನಾನನು ಅರಸ
ನಾದನು. ಬಾಳ್ಹಾನಾನನು ಸತ್ತ ಮೇಲೆ ಹದ 50
ದನು ಅರಸನಾದನು. ಅವನ ರಾಜಧಾನಿಯ ಹೆಸರು
ಪಾಗೀ. ಅವನ ಹೆಂಡತಿಯ ಹೆಸರು ಮೆಹೇಟಬೇಲ್;
ಆಕೆ ಮೇಜಾಹಾಬನ ಮಗಳಾದ ಮಟ್ರೇದಳ ಮಗಳು.
ಹದದನು ಸತ್ತನಂತರ ಎದೋಮ್ಯ ಕುಲಪತಿಗಳಾದ 51
ವರು ಯಾರಂದರೆ—ತಿಮ್ನ ಕುಲಪತಿ, ಅಲ್ಯ ಕುಲ

1) ಈ ಶಬ್ದಗಳು ಮೂಲದಲ್ಲಿ ಬಿದ್ದುಹೋದವು.

2) ಅಥವಾ, ಐಗುಪ್ತದೇಶದ.

52 ಪತಿ, ಯೆತೇತ್ ಕುಲಪತಿ, ಒಹೋಲಿಬಾಮ ಕುಲಪತಿ,
53 ಏಲ ಕುಲಪತಿ, ಪೀನೋನ್ ಕುಲಪತಿ, ಕೆನಜ್ ಕುಲ
ಪತಿ, ತೇಮಾನ್ ಕುಲಪತಿ, ಮಿಬ್ಜಾರ್ ಕುಲಪತಿ,
54 ಮಗ್ದೀಯೇಲ್ ಕುಲಪತಿ, ಗೀರಾಮ್ ಕುಲಪತಿ.
ಇವರೇ ಎದೋಮ್ಯರ ಕುಲಪತಿಗಳು.

ಯಾಕೋಬನ ಮಗನಾದ ಯೆಹೂದನ ವಂಶಾವಳಿ.

2 ಇಸ್ರಾಯೇಲನ ಮಕ್ಕಳು ಯಾರಂದರೆ—ರೂ
ಬೇನ್, ಸಿಮೆಯೋನ್, ಲೇವಿ, ಯೆಹೂದ, ಇಸ್ಸಾ
2 ಕಾರ್, ಜೆಬುಲೂನ್, ದಾನ್, ಯೋಸೇಫ್, ಬೆನ್ಯಾ
ಮೀನ್, ನಫ್ತಾಲಿ, ಗಾದ್, ಆಶೇರ್ ಇವರೇ.
3 ಯೆಹೂದನಿಗೆ ಶೂವನ ಮಗಳಾದ ಕಾನಾನ್
ಸ್ತ್ರೀಯಲ್ಲಿ ಏರ್, ಓನಾನ್, ಶೇಲಾಹ ಎಂಬ ಮೂರು
ಮಂದಿ ಮಕ್ಕಳು ಹುಟ್ಟಿದರು. ಯೆಹೂದನ ಚೊಚ್ಚಲ
ಮಗನಾದ ಏರನು ಯೆಹೋವನ ಚಿತ್ತಕ್ಕೆ ವಿರುದ್ಧ
ವಾಗಿ ನಡೆದದರಿಂದ ಯೆಹೋವನು ಅವನನ್ನು ಸಾಯಿ
4 ಸಿದನು. ಯೆಹೂದನ ಸೊಸೆಯಾದ ತಾಮಾರಳು
ಅವನಿಂದ ಪೆರೆಚ್, ಜೆರಹ ಎಂಬವರನ್ನು ಹೆತ್ತಳು.
5 ಯೆಹೂದನ ಎಲ್ಲಾ ಮಕ್ಕಳು ಐದು ಮಂದಿ. ಪೆರೆ
6 ಚನ ಮಕ್ಕಳು—ಹೆಚ್ರೋನ್, ಹಾಮೂಲ್. ಜೆರಹನ
ಮಕ್ಕಳು—ಜಿಮ್ರಿ, ಏತಾನ್, ಹೇಮಾನ್, ಕಲ್ಕೋ
7 ಲ್, ದಾರ; ಒಟ್ಟು ಐದು ಮಂದಿ. ಮೀಸಲಾದ
ವಸ್ತುಗಳನ್ನು ಕದ್ದುಕೊಂಡು ಇಸ್ರಾಯೇಲ್ಯರನ್ನು
ಆಪತ್ತಿಗೆ ಗುರಿಮಾಡಿದ 1)ಆಕಾರನು ಕರ್ಮೀಯಿಂದ
8 ಹುಟ್ಟಿದನು. ಏತಾನನಿಂದ ಅಜರ್ಯನು ಹುಟ್ಟಿದನು.
9 ಹೆಚ್ರೋನನ ಸಂತಾನದವರು—ಅವನಿಂದ ಯೆರ
ಹ್ಮೇಲ್, ರಾಮ್, 2)ಕೆಲೂಬಾಯ್ ಎಂಬವರು ಹುಟ್ಟಿ
ದರು.
10 ರಾಮನು ಅಮ್ಮೀನಾದಾಬನನ್ನು ಪಡೆದನು; ಅಮ್ಮೀ
ನಾದಾಬನು ಯೆಹೂದಕುಲಪ್ರಭುವಾದ ನಹಶೋನ
11 ನನ್ನು ಪಡೆದನು; ನಹಶೋನನು 3)ಸಲ್ಮನನ್ನು ಪಡೆ
12 ದನು; ಸಲ್ಮನು ಬೋವಜನನ್ನು ಪಡೆದನು; ಬೋವ
ಜನು ಓಬೇದನನ್ನು ಪಡೆದನು; ಓಬೇದನು ಇಷಯ
13 ನನ್ನು ಪಡೆದನು. ಇಷಯನ ಚೊಚ್ಚಲ ಮಗನು
ಎಲೀಯಾಬ್; ಮರುಚಲನು ಅಬೀನಾದಾಬ್; ಮೂರ
14 ನೆಯವನು ಶಿಮ್ಮ; ನಾಲ್ಕನೆಯವನು ನೆತನೇಲ್;
15 ಐದನೆಯವನು ರದ್ದೈ; ಆರನೆಯವನು ಓಚೆಮ್;
16 ಏಳನೆಯವನು ದಾವೀದ್. ಚೆರೂಯ ಅಬೀಗೈಲರು
ಅವರ ಸಹೋದರಿಯರು. ಅಬ್ಷೈ, ಯೋವಾಬ್,
ಅಸಾಹೇಲ್ ಎಂಬ ಮೂವರು ಚೆರೂಯಳ ಮಕ್ಕಳು.
17 ಅಬೀಗೈಲಳು ಅಮಾಸನ ತಾಯಿ; ಇಷ್ಮಾಯೇಲ್ಯ
ನಾದ ಯೆತೆರ್ ಎಂಬವನು ಅವನ ತಂದೆ.
18 ಹೆಚ್ರೋನನ ಮಗನಾದ ಕಾಲೇಬನು ತನ್ನ ಹೆಂಡತಿ
ಯಾದ ಅಜೂಬಳಿಂದಲೂ ಯೆರೀಯೋತಳಿಂದಲೂ [ಮ
ಕ್ಕಳನ್ನು] ಪಡೆದನು. ಆಕೆಯಲ್ಲಿ ಅವನಿಗೆ ಹುಟ್ಟಿದ
ಮಕ್ಕಳು—ಯೇಷೆರ್, ಶೋಬಾಬ್, ಅದೋರ್ನ್ ಎಂ
19 ಬವರು. ಅಜೂಬಳು ಸತ್ತ ಮೇಲೆ ಅವನು ಎಫ್ರಾ

ತಳನ್ನು ತೆಗೆದುಕೊಂಡನು. ಆಕೆಯಲ್ಲಿ ಅವ
ಹೂರನು ಹುಟ್ಟಿದನು. ಹೂರನು ಊರಿಯನ್ನು
ದನು; ಊರಿಯು ಬೆಚಲೇಲನನ್ನು ಪಡೆದ
ಹೆಚ್ರೋನನು ಅರುವತ್ತು ವರುಷದವನಾದಾಗ ಗಿ
ದ್ಯರ ಮೂಲಪುರುಷನಾದ ಮಾಕೀರನ ಮಗಳ
ಪರಿಗ್ರಹಿಸಲು ಆಕೆಯು ಅವನಿಂದ ಸೆಗೂಬನ
ಹೆತ್ತಳು. ಸೆಗೂಬನು ಯಾಯೀರನನ್ನು ಪಡೆದ
ಇವನಿಗೆ ಗಿಲ್ಯಾದ್ ದೇಶದಲ್ಲಿ ಇಪ್ಪತ್ತಮೂರು ಪ
ಣಗಳಿದ್ದವು. ಗೆಷೂರ್ಯರೂ ಅರಾಮ್ಯರೂ ಯಾಯಿ
ರನ ಸಂತಾನದವರಿಂದ ಯಾಯೀರನ ಗ್ರಾಮಗಳನ
ಕೆನತ್ ಪ್ರಾಂತದ ಗ್ರಾಮಗಳನ್ನೂ ಒಟ್ಟು ಅರುವ
ಸ್ಥಾನಗಳನ್ನು ಕಿತ್ತುಕೊಂಡರು. ಈ ಸ್ಥಾನಗಳ
ಲ್ಲರೂ ಗಿಲ್ಯಾದ್ಯರ ಮೂಲಪುರುಷನಾದ ಮಾಕೀ
ಗೋತ್ರದವರು. ಹೆಚ್ರೋನನು ಕಾಲೇಬ್ ಎಫ್ರಾ
ದಲ್ಲಿ ಸತ್ತನಂತರ ಅವನ ಹೆಂಡತಿಯಾದ ಅಬೀ
ಎಂಬಾಕೆಯು ಅಷ್ಹೂರನನ್ನು ಹೆತ್ತಳು. ಇವನು ತೆಕೆ
ವದವರ ಮೂಲಪುರುಷನು.
ಹೆಚ್ರೋನನ ಚೊಚ್ಚಲಮಗನಾದ ಯೆರಹ್ಮೇಲ
ಮಕ್ಕಳು—ರಾಮನು ಚೊಚ್ಚಲನು; ಬೂನ, ಓರೆ
ಓಚೆಮ್, ಅಹೀಯ ಎಂಬವರು ಅನಂತರ ಹುಟ್ಟಿ
ವರು. ಯೆರಹ್ಮೇಲನಿಗೆ ಅಟಾರ ಎಂಬ ಇನ್ನೊ
ಹೆಂಡತಿಯಿದ್ದಳು; ಈಕೆಯು ಓನಾಮನ ತಾ
ಯೆರಹ್ಮೇಲನ ಚೊಚ್ಚಲಮಗನಾದ ರಾಮನ ಮ
ಳು—ಮಾಚ್, ಯಾಮೀನ್, ಏಕೆರ್ ಇವರೇ. ಓ
ಮನ ಮಕ್ಕಳು—ಶಮ್ಮೈ, ಯಾದ ಎಂಬವ
ಶಮ್ಮೈಯ ಮಕ್ಕಳು—ನಾದಾಬ್, ಅಬೀಷೂರ
ಅಬೀಷೂರನ ಹೆಂಡತಿಯ ಹೆಸರು ಅಬೀಹೈಲ್. ಆ
ಯಲ್ಲಿ ಅವನಿಗೆ ಅಹ್ಬಾನ್, ಮೋಲೀದ್ ಎಂಬವ
ಹುಟ್ಟಿದರು. ನಾದಾಬನ ಮಕ್ಕಳು—ಸೆಲೆದ್, ಅ
ಯಿಮ್ ಎಂಬವರು. ಸೆಲೆದನು ಮಕ್ಕಳಿಲ್ಲದೆ ಸತ್ತನ
ಅಪ್ಪಯಿಮನ ಮಗನು ಇಷ್ಷೀ; ಇಷ್ಷೀಯ ಮಗ
ಶೇಷಾನ್; ಶೇಷಾನನ ಮಗನು ಅಹ್ಲೈ. ಶಮ್ಮೈ
ತಮ್ಮನಾದ ಯಾದನ ಮಕ್ಕಳು—ಯೆತೆರ್, ಯೋ
ತಾನ್ ಇವರೇ; ಯೆತೆರನು ಮಕ್ಕಳಿಲ್ಲದೆ ಸತ್ತನ
ಯೋನಾತಾನನ ಮಕ್ಕಳು—ಪೆಲೆತ್, ಜಾಜ ಎಂ
ವರು. ಇವರು ಯೆರಹ್ಮೇಲನ ಸಂತಾನದವ
ಶೇಷಾನನಿಗೆ ಹೆಣ್ಣುಮಕ್ಕಳಿದ್ದರೇ ಹೊರತು ಗಂ
ಮಕ್ಕಳಿರಲಿಲ್ಲ; ಇದಲ್ಲದೆ ಅವನಿಗೆ ಯರ್ಹನೆಂಬ ಒ
ಐಗುಪ್ತದಾಸನಿದ್ದನು. ಶೇಷಾನನು ತನ್ನ ಮಗಳನ
ದಾಸನಾದ ಯರ್ಹನಿಗೆ ಮದುವೆಮಾಡಿಕೊಟ್ಟನ
ಆಕೆಯು ಅವನಿಂದ ಅತ್ತೈಯನ್ನು ಹೆತ್ತಳು. ಅತ್ತೈ
ಯು ನಾತಾನನನ್ನು ಪಡೆದನು; ನಾತಾನನು ಜಾಬ
ದನನ್ನು ಪಡೆದನು. ಜಾಬಾದನು ಎಫ್ಲಾಲನನ್ನು ಪ
ದನು; ಎಫ್ಲಾಲನು ಓಬೇದನನ್ನು ಪಡೆದನು. ಓಬ
ದನು ಯೇಹೂವನ್ನು ಪಡೆದನು; ಯೇಹೂವು ಅ
ರ್ಯನನ್ನು ಪಡೆದನು. ಅಜರ್ಯನು ಹೆಲೆಚನನ
ಪಡೆದನು; ಹೆಲೆಚನು ಎಲ್ಲಾಸನನ್ನು ಪಡೆದನ
ಎಲ್ಲಾಸನು ಸಿಸ್ಮೈಯನ್ನು ಪಡೆದನು; ಸಿಸ್ಮೈಯ

1) ಯೆಹೋ. 7. 1—25ರಲ್ಲಿ ಆಕಾನನು. 2) ಕೆಲೂಬಾಯ್ = ಕಾಲೇಬ್. 3) ರೂತ 4. 20ರಲ್ಲಿ ಸಲ್ಮೋ

ಶಲ್ಲೂಮನನ್ನು ಪಡೆದನು. ಶಲ್ಲೂಮನು ಯೆಕಮ್ಯಾ
ಹನನ್ನು ಪಡೆದನು; ಯೆಕಮ್ಯಾಹನು ಎಲೀಷಾಮ
ನನ್ನು ಪಡೆದನು.

ಯೆರಹ್ಮೇಲನ ಸಹೋದರನಾದ ಕಾಲೇಬನ ಸಂತಾ
ನದವರು—ಚೊಚ್ಚಲನೂ ಜೀಫ್ಯರ ಮೂಲಪುರುಷನೂ
ಆದ ಮೇಷನು, ಮಾರೇಷ ವಂಶದವರು ಇವರೇ.
ಮಾರೇಷನು ಹೆಬ್ರೋನ್ಯರ ಮೂಲಪುರುಷನು. ಹೆಬ್ರೋ
ನ್ಯರಿಂದ ಕೋರಹ, ತಪ್ಪೂಹ, ರೆಕೆಮ್, ಶೆಮ ಎಂಬ
ಊರುಗಳವರು ಉತ್ಪತ್ತಿಯಾದರು. ಶೆಮ್ಯರಿಂದ ರಹ
ಮ್ಯರು, ರಹಮ್ಯರಿಂದ ಯೊರ್ಕೆಯಾಮ್ಯರು ಉತ್ಪತ್ತಿ
ಯಾದರು. ರೆಕೆಮನು ಶಮ್ಮೈಯನ್ನು ಪಡೆದನು.
ಶಮ್ಮೈಯಿಂದ ಮಾವೋನ್ಯರು, ಮಾವೋನ್ಯರಿಂದ
ಬೇತ್ಸೂರಿನವರು ಉತ್ಪತ್ತಿಯಾದರು. ಕಾಲೇಬನ ಉಪ
ಪತ್ನಿಯಾದ ಏಫಳಲ್ಲಿ ಹಾರಾನ್, ಮೋಚ, ಗಾಜೇಜ್
ಎಂಬವರು ಹುಟ್ಟಿದರು. ಹಾರಾನನು ಗಾಜೇಜನನ್ನು
ಪಡೆದನು. ಯಾದೈಯಳಲ್ಲಿ ರೆಗೆಮ್, ಯೋತಾಮ್,
ಗೇಷಾನ್, ಪೆಲೆಟ್, ಏಫ, ಶಾಫ್ ಎಂಬವರು ಹುಟ್ಟಿ
ದರು. ಕಾಲೇಬನ ಉಪಪತ್ನಿಯಾದ ಮಾಕಳಲ್ಲಿ ಶೆಬೆರ್,
ತಿರ್ಹನ ಎಂಬವರು ಹುಟ್ಟಿದರು. ಇವಳಲ್ಲಿ ಮದ್ಮನ್ನ
ದವರ ಮೂಲಪುರುಷನಾದ ಶಾಫ್, ಮಕ್ಬೇನ ಗಿಬ್ಯ
ಊರುಗಳವರ ಮೂಲಪುರುಷನಾದ ಶೆವ ಇವರು
ಹುಟ್ಟಿದರು. ಕಾಲೇಬನ ಮಗಳು ಅಕ್ಸಾಹ ಎಂಬಾ
ಕೆಯು. ಇವರು ಕಾಲೇಬನ ಮಕ್ಕಳು.

ಎಫ್ರಾತಳ ಚೊಚ್ಚಲಮಗನಾದ ಹೂರನ ಮಕ್ಕಳು—
ಕಿರ್ಯತ್ಯಾರೀಮ್ಯರ ಮೂಲಪುರುಷನಾದ ಶೋಬಾಲ್,
ಬೇತ್ಲೆಹೇಮ್ಯರ ಮೂಲಪುರುಷನಾದ ಸಲ್ಮ, ಬೇತ್ಗಾ
ದೇರಿನವರ ಮೂಲಪುರುಷನಾದ ಹಾರೇಫ್ ಎಂಬವರು.
ಕಿರ್ಯತ್ಯಾರೀಮಿನವರ ಮೂಲಪುರುಷನಾದ ಶೋಬಾ
ಲನ ಸಂತಾನದವರು—ಹಾರೋಯೆ, ಮಾನಹತಿ
ಯರ ಅರ್ಧಜನರು, ಕಿರ್ಯತ್ಯಾರೀಮ್ ಕುಟುಂಬ
ಗಳವರು, ಯೆತೆರಿನವರು, ಪೂತ್ಯರು, ಶುಮಾತ್ಯರು,
ಮಿಷ್ರಾಗ್ಯರು ಇವರೇ. ಇವರಿಂದ ಚೊರ್ರಾತ್ಯರೂ
ಎಷ್ಟಾವೋಲ್ಯರೂ ಹೊರಟುಬಂದರು. ಸಲ್ಮನಿಂದ ಬೇ
ತ್ಲೆಹೇಮ್ ನೆಟೋಫಾ ಅಟರೋತ್ ಬೇತ್ಯೋವಾಬ್
ಊರುಗಳವರೂ ಚೊರ್ಗದಲ್ಲಿ ವಾಸಿಸುವ ಮಾನಹತಿ
ಯರಲ್ಲಿ ಅರ್ಧಜನರೂ ಉತ್ಪತ್ತಿಯಾದರು. ಯಾಬೇ
ಚಿನಲ್ಲಿ ವಾಸಿಸುವ ಕುಲಕರಣಿಕುಟುಂಬದವರಾದ
ತಿರ್ರಾತ್ಯರು, ಶಿಮ್ಗಾತ್ಯರು, ಸೂಕಾತ್ಯರು ಇವರು ರೇ
ಕಾಬನ ಮನೆಯವರ ಮೂಲಪುರುಷನಾಗಿರುವ ಹಮತ
ನಿಂದ ಉತ್ಪನ್ನರಾದ ಕೇನ್ಯರು.

ಯೆಹೂದನ ಸಂತಾನದವನಾದ ದಾವೀದನ ವಂಶಾವಳಿ.

ಹೆಬ್ರೋನಿನಲ್ಲಿರುವಾಗ ದಾವೀದನಿಗೆ ಹುಟ್ಟಿದ
ಮಕ್ಕಳು—ಚೊಚ್ಚಲಮಗನು ಅಮ್ನೋನನು; ಇವನು
ಇಜ್ರೇಲಿನವಳಾದ ಅಹೀನೋವಮಳಲ್ಲಿ ಹುಟ್ಟಿದವನು.
ಎರಡನೆಯವನು ದಾನಿಯೇಲನು; ಇವನು ಕರ್ಮೆ
ಲ್ಯಳಾದ ಅಬೀಗೈಲಳಲ್ಲಿ ಹುಟ್ಟಿದವನು. ಮೂರನೆ
ಯವನು ಅಬ್ಷಾಲೋಮನು; ಇವನು ಗೆಷೂರಿನ ಅರಸ
ನಾದ ತಲ್ಮೈ ಎಂಬವನ ಮಗಳಾದ ಮಾಕಳ ಪುತ್ರನು.
ನಾಲ್ಕನೆಯವನು ಅದೋನೀಯ; ಇವನು ಹಗ್ಗೀತಳ
ಮಗನು. ಐದನೆಯವನು ಶೆಫಟ್ಯ, ಇವನು ಅಬೀಟ 3
ಲಳ ಮಗನು. ಆರನೆಯವನು ಇತ್ರಾಮನು; ಇವನು
ದಾವೀದನಿಂದ ಅವನ ಹೆಂಡತಿಯಾದ ಎಗ್ಲಳಲ್ಲಿ ಹುಟ್ಟಿ
ದವನು. ಹೆಬ್ರೋನಿನಲ್ಲಿರುವಾಗ ದಾವೀದನಿಗೆ ಆರು 4
ಮಂದಿ ಮಕ್ಕಳು ಹುಟ್ಟಿದರು. ಅಲ್ಲಿ ಅವನು ಏಳು
ವರುಷವೂ ಆರು ತಿಂಗಳೂ ಆಳಿದನು; ಮತ್ತು ಯೆರೂ
ಸಲೇಮಿನಲ್ಲಿ ಮೂವತ್ತಮೂರು ವರುಷ ಆಳಿದನು.
ಯೆರೂಸಲೇಮಿನಲ್ಲಿರುವಾಗ ಅವನಿಗೆ—ಶಿಮ್ಮ, ಶೋ 5
ಬಾಬ್, ನಾತಾನ್, ಸೊಲೊಮೋನ್ ಎಂಬ ನಾಲ್ವರು
[1]ಅಮ್ಮೀಯೇಲನ ಮಗಳಾದ ಬತ್ಷೂವಳಲ್ಲಿ ಹುಟ್ಟಿ
ದರು; ಇವರಲ್ಲದೆ ಇಬ್ಹಾರ್, ಎಲೀಷಾಮ, ಎಲೀ 6
ಫೆಲೆಟ್, ನೋಗ, ನೆಫೆಗ್, ಯಾಫೀಯ, ಎಲೀ 7, 8
ಷಾಮ, ಎಲ್ಯಾದ, ಎಲೀಫೆಲೆಟ್ ಎಂಬ ಒಂಬತ್ತು
ಮಂದಿ ಅವನಿಗೆ ಅಲ್ಲಿಯೇ ಹುಟ್ಟಿದರು. ಉಪಪತ್ನಿ 9
ಗಳಲ್ಲಿ ಹುಟ್ಟಿದ ಮಕ್ಕಳು ಹೊರತಾಗಿ ದಾವೀದನ
ಎಲ್ಲಾ ಮಕ್ಕಳು ಇವರೇ. ತಾಮಾರ್ ಎಂಬಾಕೆಯು
ಇವರ ತಂಗಿ.

ಸೊಲೊಮೋನನ ಮಗನು ರೆಹಬ್ಬಾಮನೆಂಬ 10
ವನು; ಇವನ ಮಗನು ಅಬೀಯ; ಇವನ ಮಗನು
ಆಸ; ಇವನ ಮಗನು ಯೆಹೋಷಾಫಾಟ್; ಇವನ 11
ಮಗನು ಯೆಹೋರಾಮ್; ಇವನ ಮಗನು ಅಹಜ್ಯ;
ಇವನ ಮಗನು ಯೆಹೋವಾಷ್; ಇವನ ಮಗನು 12
ಅಮಚ್ಯ; ಇವನ ಮಗನು ಅಜರ್ಯ; ಇವನ ಮಗನು
ಯೋತಾಮ್; ಇವನ ಮಗನು ಆಹಾಜ್; ಇವನ 13
ಮಗನು ಹಿಜ್ಕೀಯ; ಇವನ ಮಗನು ಮನಸ್ಸೆ; ಇವನ 14
ಮಗನು ಆಮೋನ್; ಇವನ ಮಗನು ಯೋಷೀಯ.
ಯೋಷೀಯನ ಮಕ್ಕಳು—ಚೊಚ್ಚಲನು [2]ಯೋಹಾ 15
ನಾನ್; ಎರಡನೆಯವನು ಯೆಹೋಯಾಕೀಮ್;
ಮೂರನೆಯವನು ಚಿದ್ಕೀಯ; ನಾಲ್ಕನೆಯವನು ಶಲ್ಲೂ
ಮ್. ಯೆಹೋಯಾಕೀಮನ ಮಗನು ಯೆಕೊನ್ಯ; 16
ಇವನ ಮಗನು ಚಿದ್ಕೀಯ.

ಸೆರೆಗೆ ಒಯ್ಯಲ್ಪಟ್ಟ ಯೆಕೊನ್ಯನಿಗೆ ಹುಟ್ಟಿದ 17
ಮಕ್ಕಳು — ಶೆಯಲ್ತೀಯೇಲ್, ಮಲ್ಕೀರಾಮ್, 18
ಪೆದಾಯ, ಶೆನಚ್ಚರ್, ಯೆಕಮ್ಯ, ಹೋಷಾಮ,
ನೆದಬ್ಯ ಎಂಬವರು. ಪೆದಾಯನ ಮಕ್ಕಳು—ಜೆರು 19
ಬ್ಬಾಬೆಲ್, ಶಿಮ್ಮಿ ಇವರೇ. ಜೆರುಬ್ಬಾಬೆಲನ ಮಕ್ಕ
ಳು—ಮೆಷುಲ್ಲಾಮ್, ಹನನ್ಯ ಎಂಬವರು; ಶೆಲೋ
ಮಿತ್ ಎಂಬವಳು ಇವರ ತಂಗಿ. ಇವರಲ್ಲದೆ 20
ಹಷುಬ, ಓಹೆಲ್, ಬೆರೆಕ್ಯ, ಹಸದ್ಯ, ಯೂಷಬ್ಹೆಸೆದ್
ಎಂಬ ಐದು ಮಂದಿ. ಹನನ್ಯನ ಸಂತಾನದವರು— 21
ಪೆಲಟ್ಯ, ಯೆಶಾಯ ಇವರೂ ರೆಫಾಯ, ಅರ್ನಾನ್,
ಓಬದ್ಯ, ಶೆಕನ್ಯ ಎಂಬ ಕುಟುಂಬಗಳವರೂ. ಶೆಕನ್ಯನ 22
ಸಂತಾನದವರು—ಶೆಮಾಯ, ಇವನ ಮಕ್ಕಳಾದ
ಹಟ್ಟೂಷ್, ಇಗಾಲ್, ಬಾರೀಹ, ನೆಯರ್ಯ, ಶಾ
ಫಾಟ್, ಒಟ್ಟು ಆರು ಮಂದಿ. ನೆಯರ್ಯನ ಮಕ್ಕ 23

[1] ೨ ಸಮು. 11. 3ರಲ್ಲಿ ಎಲೀಯಾಮನ ಮಗಳಾದ ಬತ್ಶೇಬಳು. [2] ೨ ಅರಸು. 23. 30ರಲ್ಲಿ ಯೆಹೋವಾಹಾಜ್.

ಳು—ಎಲ್ಯೋಗೇನೈ, ಹಿಜ್ಕೀಯ, ಅಜ್ರೀಕಾಮ್ ಎಂಬ
24 ಮೂರು ಮಂದಿ. ಎಲ್ಯೋಗೇನೈಯ ಮಕ್ಕಳು—
ಹೋದವ್ಯ, ಎಲ್ಯಾಷೀಬ್, ಪೆಲಾಯ, ಅಕ್ಕೂಬ್,
ಯೋಹಾನಾನ್, ದಲಾಯ, ಅನಾನೀ ಎಂಬ ಏಳು
ಮಂದಿ.

ಯೆಹೂದನ ವಂಶಾವಳಿಯ ಪೂರಣೆ.

4 ಯೆಹೂದನ ವಂಶಾವಳಿ—ಪೆರೆಚ್, ಹೆಚ್ರೋನ್
ಕರ್ಮಿ, ಹೂರ್, ಶೋಬಾಲ್.
2 ಶೋಬಾಲನ ಮಗನಾದ ರೆವಾಯನು ಯಹತ
ನನ್ನು ಪಡೆದನು. ಯಹತನು ಅಹೂಮೈ, ಲಹದ್
ಇವರನ್ನು ಪಡೆದನು; ಇವರು ಚೊರ್ರದ ಕುಟುಂಬ
ಗಳವರು.
3 ಇಜ್ರೆಯೇಲ್, ಇಷ್ಮ, ಇಜ್ಬಾಷ್ ಇವರೂ ಹಚೆ
ಲೆಲ್ಪೋನೀ ಎಂಬ ಹೆಸರುಳ್ಳ ಇವರ ತಂಗಿಯೂ
4 ಏಟಾಮನ ಮಕ್ಕಳು; ಗೆದೋರಿನ ಮೂಲಪುರುಷ
ನಾದ ಪೆನೂವೇಲ್, ಹೂಷಾಹ್ಯರ ಮೂಲಪುರುಷನಾದ
ಏಜೆರ್ ಇವರೂ ಎಫ್ರಾತಾಹಳ ಚೊಚ್ಚಲಮಗನಾದ
ಹೂರನ ಮಕ್ಕಳು; ಈ ಹೂರನೇ ಬೇತ್ಲೆಹೇಮ್ಯರ
ಮೂಲಪುರುಷನು.
5 ತೆಕೋವದವರ ಮೂಲಪುರುಷನಾದ ಅಷ್ಹೂರನಿಗೆ
ಹೆಲಾಹ, ನಾರ ಎಂಬ ಇಬ್ಬರು ಹೆಂಡತಿಯರಿದ್ದರು.
6 ಅಹುಜ್ಜಾಮ್, ಹೇಫೆರ್ ಎಂಬವರೂ ತೇಮಾನ್ಯರೂ
7 ಅಹಷ್ಟಾರ್ಯರೂ ನಾರಳ ಸಂತಾನದವರು. ಹೆಲಾ
ಹಳ ಮಕ್ಕಳು—ಚೆರೆತ್, ಇಚ್ಹಾರ್, ಎತ್ನಾನ್
8 ಎಂಬವರು. ಕೋಚನಿಂದ ಆನೂಬ್, ಚೋಬೇಬ
ಇವರೂ ಅಹರ್ಹೇಲ್ ಕುಲದವರೂ ಉತ್ಪನ್ನರಾದರು.
9 ಅಹರ್ಹೇಲನು ಹಾರುಮನ ಮಗನು; ಯಾಬೇಚನು
ತನ್ನ ಅಣ್ಣತಮ್ಮಂದಿರಲ್ಲಿ ಘನವಂತನಾಗಿದ್ದನು; ಇವ
ನನ್ನು ಬಹುವೇದನೆಯಿಂದ ಹೆತ್ತೆನೆಂದು ಹೇಳಿ ಇವನ
ತಾಯಿ ಇವನಿಗೆ 1)ಯಾಬೇಚೆಂದು ಹೆಸರಿಟ್ಟಳು.
10 ಯಾಬೇಚನು ಇಸ್ರಾಯೇಲ್‍ದೇವರಿಗೆ—ನೀನು ನನ್ನ
ನ್ನು ವಿಶೇಷವಾಗಿ ಆಶೀರ್ವದಿಸಿ ನನ್ನ ಪ್ರಾಂತವನ್ನು
ವಿಸ್ತರಿಸಿ ನಿನ್ನ ಹಸ್ತದಿಂದ ನನ್ನನ್ನು ಹಿಡಿದು ಯಾವ
ವೇದನೆಯೂ ಉಂಟಾಗದಂತೆ ನನ್ನನ್ನು ರಕ್ಷಿಸಬಾರದೇ
ಎಂದು ಮೊರೆಯಿಡಲು ದೇವರು ಅವನ ಮೊರೆಯನ್ನು
ಲಾಲಿಸಿದನು.
11 ಶೂಹನ ಸಹೋದರನಾದ ಕೆಲೂಬನು ಮೆಹೀ
ರನನ್ನು ಪಡೆದನು. ಮೆಹೀರನು ಎಷ್ಟೋನನ ತಂದೆ;
12 ಎಷ್ಟೋನನಿಂದ ಬೇತ್ರಾಫ, ಪಾಸೇಹ, ತೆಹಿನ್ನ ಎಂಬ
ಊರುಗಳವರು ಉತ್ಪನ್ನರಾದರು. ಇವರು 2)ರೇಕಾ
ಹ್ಯರು. ತೆಹಿನ್ನನು ನಾಹಾಷ್ ಪಟ್ಟಣದವರ ಮೂಲ
13 ಪುರುಷನು. ಕೆನಜನ ಮಕ್ಕಳು—ಒತ್ನೀಯೇಲ್,
ಸೆರಾಯ ಎಂಬವರು. ಒತ್ನೀಯೇಲನ ಮಗನು—
14 ಹತತ್. ಮೆಯೋನೋತೈಯು ಒಫ್ರಾಹನನ್ನು ಪಡೆ
ದನು. ಸೆರಾಯನು ಶಿಲ್ಪಿಗರಾಗಿರುವ ಗೇಹರಾಷೀಮ್ಯರ
ಮೂಲಪುರುಷನಾದ ಯೋವಾಬನನ್ನು ಪಡೆದನು.

ಯೆಫುನ್ನೆಯ ಮಗನಾದ ಕಾಲೇಬನ ಸಂತಾನ
ದವರು—ಈರು, ಏಲ, ನಾವಮ್, ಏಲನವರು, ಕೆನಜ್
ಇವರೇ.
ಯೆಹಲ್ಲೆಲೇಲನ ಮಕ್ಕಳು—ಜೀಫ್, ಜೀಫಾ,
ತೀರ್ಯ, ಅಸರೇಲ್ ಎಂಬವರು. ಎಜ್ರನ ಮಕ್ಕಳು—
ಯೆತೆರ್, ಮೆರೆದ್, ಏಫೆರ್, ಯಾಲೋನ್ ಎಂಬ
ವರು. ಮೆರೆದನು ಫರೋಹನ ಮಗಳಾದ ಬಿತ್ಯಳನ್ನು
ಮದುವೆಮಾಡಿಕೊಂಡನು. ಈಕೆಯು ಅವನಿಂದ
ಗರ್ಭಿಣಿಯಾಗಿ ಮಿರ್ಯಾಮ್, ಶಮ್ಮೈ, ಎಷ್ಟೆಮೋ
ವದವರ ಮೂಲಪುರುಷನಾದ ಇಷ್ಬಹ ಇವರನ್ನು
ಹೆತ್ತಳು. ಯೆಹೂದ್ಯಳಾದ ಅವನ ಇನ್ನೊಬ್ಬ ಹೆಂಡ
ತಿಯು ಗೆದೋರ್ಯರ ಮೂಲಪುರುಷನಾದ ಯೆರೆದ್,
ಸೋಕೋವಿನವರ ಮೂಲಪುರುಷನಾದ ಹೆಬೆರ್, ಜಾ
ನೋಹದವರ ಮೂಲಪುರುಷನಾದ ಯೆಕೂತೀಯೇಲ್
ಇವರನ್ನು ಹೆತ್ತಳು. ಅವನ ಮತ್ತೊಬ್ಬಳು ಹೆಂಡತಿ
ಯೂ ಕೆಯಿಲದವರ ಮೂಲಪುರುಷನಾದ ನಹಮನ
ತಂಗಿಯೂ ಆದ ಹೋದೀಯಳ ಸಂತಾನದವರು—
ಗರ್ಮ್ಯರು, ಎಷ್ಟೆಮೋವದವರು, ಮಾಕಾತ್ಯರು. ಶೀ 2
ಮೋನನ ಮಕ್ಕಳು—ಅಮ್ನೋನ್, ರಿನ್ನ, ಬೆನ್ಹಾ
ನಾನ್, ತೀಲೋನ್. ಇಷ್ಷೀಯ ಮಕ್ಕಳು—ಜೋ
ಹೇತ್, ಬೆನ್‍ಜೋಹೇತ್.
ಯೆಹೂದನ ಮಗನಾದ ಶೇಲನ ಸಂತಾನದವ 2
ರು—ಲೇಕಾಹ್ಯರ ಮೂಲಪುರುಷನಾದ ಏರ್, ಮರೇಷ
ದವರ ಮೂಲಪುರುಷನಾದ ಲದ್ದ, ಬೇತಷ್ಬೇಯದಲ್ಲಿ
ರುವ ನೇಯಿಗಾರರ ಕುಟುಂಬಗಳವರು, ಯೊಕೀ 2
ಮನು, ಕೋಜೇಬದವರು, ಮೋವಾಬ್ ದೇಶದಲ್ಲಿ
ದೊರೆತನನಡಿಸಿ ಬೇತ್ಲೆಹೇಮಿಗೆ ತಿರಿಗಿ ಬಂದ ಯೋವಾ
ಷನು, ಸಾರಾಫನು ಇವರೇ. (ಇವು ಪೂರ್ವಕಾಲ
ದಲ್ಲಿ ನಡೆದ ಸಂಗತಿಗಳು.) ಮೇಲೆ ಕಂಡ ಜನರು 2
ಕುಂಬಾರರು; ಅವರು ನೆಟಾಯಿಮ್, ಗೆದೇರ ಎಂಬ
ಊರುಗಳಲ್ಲಿ ವಾಸಿಸುತ್ತಾ ಅರಸನ ಸೇವೆಯನ್ನು
ಮಾಡುತ್ತಿದ್ದರು.

ಸಿಮೆಯೋನನ ವಂಶಾವಳಿ.

ಸಿಮೆಯೋನನ ಮಕ್ಕಳು—ನೆಮೂವೇಲ್, ಯಾ 2
ಮೀನ್, ಯಾರೀದ್, ಜೆರಹ, ಸೌಲ. ಸೌಲನ ಮಗನು 2
ಶಲ್ಲುಮ್; ಇವನ ಮಗನು ಮಿಬ್ಸಾಮ್; ಇವನ
ಮಗನು ಮಿಷ್ಮ. ಮಿಷ್ಮಾಗನ ಸಂತಾನದವರು— 2
ಇವನ ಮಗನು ಹಮ್ಮೂವೇಲ್; ಇವನ ಮಗನು
ಜಕ್ಕೂರ್; ಇವನ ಮಗನು ಶಿಮ್ಮೀ. ಶಿಮ್ಮಿಗೆ ಹದಿ 2
ನಾರು ಮಂದಿ ಗಂಡುಮಕ್ಕಳೂ ಆರು ಮಂದಿ ಹೆಣ್ಣು
ಮಕ್ಕಳೂ ಇದ್ದರು. ಅವನ ಸಹೋದರರಿಗೆ ಅನೇಕ
ಮಂದಿ ಮಕ್ಕಳಿರಲಿಲ್ಲ. ಆದದರಿಂದ ಅವರ ಕುಲವು
ಯೆಹೂದ ಕುಲಕ್ಕೆ ಸರಿಯಾಗಿರಲಿಲ್ಲ.
ದಾವೀದನ ಆಳಿಕೆಯ ತನಕ ಅವರ ಸ್ವಾಸ್ತ್ಯ 2
ಗಳಾಗಿದ್ದ ಬೇರ್ಷೆಬ, ಮೋಲಾದ, ಹಚರ್ ಷೂವಾಲ್,
ಬಿಲ್ಹ, ಎಚೆಮ್, ತೋಲಾದ್, ಬೆತೂವೇಲ್, 29, 3

1) ವೇದನೆಯೆಂಬ ಅರ್ಥವಿದ್ದಂತೆ. 2) ಪಾಠಾಂತರ: ರೇಕಾಬ್ಯರು.

31 ಹೊರ್ಮ, ಚಿಕ್ಲಗ್, ಬೇತ್‌ಮರ್ಕಾಬೋತ್, ಹಚರ್
ಸೂಸೀಮ್, ಬೇತ್‌ಬಿರೀ, ಶಾರಯಿಮ್ ಎಂಬ ನಗರ
32 ಗಳೂ ಇವುಗಳಿಗೆ ಸೇರಿದ ಗ್ರಾಮಗಳೂ ಏಟಾಮ್,
ಅಯಿನ್, ರಿಮ್ಮೋನ್, ತೋಕೆನ್, ಆಷಾನ್ ಎಂಬ
33 ಐದು ಪಟ್ಟಣಗಳೂ ಅವುಗಳ ಸುತ್ತಣ ಪ್ರದೇಶದಲ್ಲಿ
ಬಾಲ್ ಊರಿನ ವರೆಗಿರುವ ಗ್ರಾಮಗಳೂ ಅವರ
ನಿವಾಸಸ್ಥಾನಗಳಾಗಿದ್ದವು; ಅವರ ಹತ್ತಿರ ವಂಶಾವಳಿ
ಪುಸ್ತಕವಿರುತ್ತದೆ.
34 ಮೆಷೋಬಾಬ್, ಯಮ್ಲೇಕ್, ಅಮಚ್ಯನ ಮಗ
35 ನಾದ ಯೋಷ, ಯೋವೇಲ್, ಯೋಷಿಬ್ಯನ ಮಗನೂ
ಸೆರಾಯನ ಮೊಮ್ಮಗನೂ ಅಸಿಯೇಲನ ಮರಿಮಗ
36 ನೂ ಆಗಿರುವ ಯೇಹೂ, ಎಲ್ಯೋವೇನೈ, ಯಾಕೋಬ,
ಯೆಷೋಹಾಯ, ಅಸಾಯ, ಅದೀಯೇಲ್, ಯೆಸೀ
37 ಮಿಯೇಲ್, ಬೆನಾಯ, ಶೆಮಾಯನ ಮಗನಾದ ಶಿಮ್ರಿ
ಯಿಂದ ಹುಟ್ಟಿದ ಯೆದಾಯನ ಮರಿಮಗನೂ ಅಲ್ಲೋ
ನನ ಮೊಮ್ಮಗನೂ ಶಿಫ್ಷಿಯ ಮಗನೂ ಆದ ಜೀಜ
ಎಂಬ ಹೆಸರುಳ್ಳವರು ತಮ್ಮ ತಮ್ಮ ಗೋತ್ರಗಳಲ್ಲಿ
38 ಪ್ರಭುಗಳಾಗಿದ್ದರು. ಅವರ ಕುಟುಂಬಗಳು ಬಹಳ
39 ವಾಗಿ ಅಭಿವೃದ್ಧಿಯಾದವು. ಅವರು ತಮ್ಮ ಆಡುಕುರಿ
ಗಳಿಗೋಸ್ಕರ ಹುಲ್ಲುಗಾವಲನ್ನು ಹುಡುಕುತ್ತಾ ಗೆದೋ
ರಿಗೆ ಹೋಗುವ ಕಣಿವೆಯನ್ನು ದಾಟಿ ಆಚೆಯ ತಗ್ಗಿನ
40 ಪೂರ್ವದಿಕ್ಕಿಗೆ ಹೋದಾಗ ಅಲ್ಲಿ ಶ್ರೇಷ್ಠವಾದ ಹಸುರು
ಹುಲ್ಲುಗಾವಲನ್ನು ಕಂಡರು. ದೇಶವು ಎಲ್ಲಾ ಕಡೆ
ಗಳಲ್ಲಿಯೂ ವಿಸ್ತಾರವಾಗಿದ್ದು ಸುಖಸಮಾಧಾನಗ
ಳಿಂದಿತ್ತು; ಅಲ್ಲಿ ಪೂರ್ವದಿಂದ ವಾಸವಾಗಿದ್ದವರು
41 ಹಾಮ್ಯರೇ. ಮೇಲೆ ಹೇಳಿದ ಪ್ರಭುಗಳು ಯೆಹೂದ
ರಾಜನಾದ ಹಿಜ್ಕೀಯನ ಕಾಲದಲ್ಲಿ ಅಲ್ಲಿಗೆ ಹೋಗಿ
[ಆ ಹಾಮ್ಯರ] ಪಾಳೆಯಗಳನ್ನೂ ಅಲ್ಲಿ ಸಿಕ್ಕಿದ ಮೆಗೂ
ನ್ಯರನ್ನೂ ಜಯಿಸಿ ಎಲ್ಲರನ್ನೂ ನಿರ್ನಾಮಮಾಡಿದರು;
ಮತ್ತು ತಮ್ಮ ಆಡುಕುರಿಗಳಿಗೆ ಅಲ್ಲಿ ಮೇವು ಸಿಕ್ಕಿದದ
ರಿಂದ ಅಲ್ಲೇ ವಾಸಿಸಿದರು. ಅಲ್ಲಿನ ಮೂಲನಿವಾಸಿ
42 ಗಳು ಈಗ ಯಾರೂ ಉಳಿದಿರುವದಿಲ್ಲ. ಇದಲ್ಲದೆ
ಸಿಮೆಯೋನನ ಕುಲದ ಐನೂರು ಮಂದಿ ಸೇಯೀರ್
ಪರ್ವತಕ್ಕೆ ಹೋದರು; ಇಷ್ಷೀಯ ಮಕ್ಕಳಾದ ಪೆಲಟ್ಯ,
ನೆಗರ್ಯ, ರೆಫಾಯ, ಉಜ್ಜೀಯೇಲ್ ಎಂಬವರು
43 ಅವರ ಮುಖ್ಯಸ್ಥರು. ಅವರು ಅಮಾಲೇಕ್ಯರಲ್ಲಿ
ಉಳಿದವರನ್ನು ಸಂಹರಿಸಿ ಇಂದಿನ ವರೆಗೂ ಅಲ್ಲೇ
ವಾಸವಾಗಿದ್ದಾರೆ.

ರೂಬೇನನ ವಂಶಾವಳಿ.

5 ಇಸ್ರಾಯೇಲನ ಚೊಚ್ಚಲಮಗನಾದ ರೂಬೇನನ
ವಂಶಾವಳಿ. ರೂಬೇನನು ಚೊಚ್ಚಲನಾಗಿದ್ದರೂ ಅವನು
ತನ್ನ ತಂದೆಯ ಹಾಸಿಗೆಯನ್ನು ಹೊಲೆಮಾಡಿದ್ದರಿಂದ
ಅವನ ಹಕ್ಕು ಇಸ್ರಾಯೇಲನ ಮಗನಾದ ಯೋಸೇ
2 ಫನ ಕುಲಕ್ಕೆ ಕೊಡಲ್ಪಟ್ಟಿತು. ಆದರೆ ಯೆಹೂದನು
ಎಲ್ಲಾ ಸಹೋದರರಲ್ಲಿ ಪ್ರಬಲನಾದದರಿಂದಲೂ ರಾ
ಜ್ಯಾಧಿಕಾರವು ಇವನ ಕುಲಕ್ಕೆ ಬಂದದರಿಂದಲೂ ಯೋ
ಸೇಫನು ವಂಶಾವಳಿಯ ಪಟ್ಟಿಗಳಲ್ಲಿ ಚೊಚ್ಚಲನೆಂದು
ಲಿಖಿತನಾಗಲಿಲ್ಲ; ಆದರೂ ಚೊಚ್ಚಲನಿಗೆ ಸಿಕ್ಕತಕ್ಕ
ಪಾಲು ಅವನಿಗೆ ಸಿಕ್ಕಿತು. ಇಸ್ರಾಯೇಲನ ಚೊಚ್ಚಲ 3
ನಾದ ರೂಬೇನನ ಮಕ್ಕಳು — ಹನೋಕ್, ಫಲ್ಲೂ,
ಹೆಚ್ರೋನ್, ಕರ್ಮಿ. ಯೋವೇಲನ ವಂಶಾವಳಿ— 4
ಇವನ ಮಗನು ಶೆಮಾಯ; ಇವನ ಮಗನು ಗೋಗ್;
ಇವನ ಮಗನು ಶಿಮ್ಮಿ; ಇವನ ಮಗನು ಮೀಕ; 5
ಇವನ ಮಗನು ರೆವಾಯ; ಇವನ ಮಗನು ಬಾಳ್;
ಇವನ ಮಗನು ಬೇರ. ರೂಬೇನ್ಯರ ಪ್ರಭುಗಳಲ್ಲೊಬ್ಬ 6
ನಾಗಿದ್ದ ಇವನನ್ನು ಅಶ್ಶೂರದ ಅರಸನಾದ ತಿಗ್ಲತ್ಪಿಲೆ
ಸರನು ಸೆರೆಬಯ್ದನು. ವಂಶಾವಳಿಯ ಪಟ್ಟಿಯಲ್ಲಿ 7
ಇವನ ಗೋತ್ರಸಂಬಂಧಿಗಳಾಗಿ ಲಿಖಿತರಾದವರು—
ನಾಯಕನಾದ ಯೆಗೀಯೇಲ್, ಜೆಕರ್ಯ, ಬೆಳ
ಇವರೇ. ಬೆಳನು ಅಜಾಜನ ಮಗನು; ಇವನು ಶೆಮಯ 8
ನ ಮಗನು; ಇವನು ಯೋವೇಲನ ಮಗನು. ಯೋವೇ
ಲ್ಯರು ಅರೋಯೇರಿನಿಂದ ನೆಬೋ, ಬಾಳ್ಮೆಯೋನ್
ಎಂಬ ಸ್ಥಳಗಳ ವರೆಗೂ ವಾಸಿಸುತ್ತಿದ್ದರು. ಮೂಡಣ 9
ದಿಕ್ಕಿನಲ್ಲಿ ಯೂಫ್ರೇಟೀಸ್ ನದಿಯ ಈಚೆಯಲ್ಲಿರುವ
ಅರಣ್ಯವು ಇವರ ಮೇರೆ. ಇವರಿಗೆ ಗಿಲ್ಯಾದ್ ದೇಶ
ದಲ್ಲಿ ಅನೇಕ ಕುರಿಹಿಂಡುಗಳಿದ್ದವಷ್ಟೆ. ಇವರು 10
ಸೌಲನ ಕಾಲದಲ್ಲಿ ಹಗ್ರೀಯರೊಡನೆ ಯುದ್ಧಮಾಡಿ
ಅವರನ್ನು ಸಂಹರಿಸಿ ಗಿಲ್ಯಾದಿನ ಪೂರ್ವದಿಕ್ಕಿನ ಪ್ರಾಂತ
ಗಳಲ್ಲಿದ್ದ ಅವರ ಡೇರೆಗಳಲ್ಲಿ ವಾಸಿಸುವವರಾದರು.

ಗಾದನ ವಂಶಾವಳಿ.

ರೂಬೇನ್ಯರ ಎದುರಿನಲ್ಲಿ ಬಾಷಾನ್ ಸೀಮೆಯ 11
ಸಲ್ಕದ ವರೆಗೂ ವಾಸಿಸುತ್ತಿದ್ದ ಗಾದ್ ಕುಲದವರು —
ಪ್ರಧಾನನಾದ ಯೋವೇಲ, ಎರಡನೆಯವನಾದ ಶಾಫಾ 12
ಮ್, ಯನ್ನೈ, ಬಾಷಾನಿನಲ್ಲಿರುವ ಶಾಫಾಟ್ ಇವರೂ
ಇವರ ಕುಲಸಂಬಂಧಿಗಳಾದ ಮೀಕಾಯೇಲ್, ಮೆಷು 13
ಲ್ಲಾಮ್, ಶೆಬ, ಯೋರೈ, ಯಕ್ಕಾನ್, ಜೀಯ, ಏಬೆರ್
ಎಂಬ ಏಳು ಕುಟುಂಬಗಳೂ. ಇವರು ಅಬೀಹೈಲನ 14
ಮಕ್ಕಳು. ಅಬೀಹೈಲನು ಹೂರೀಯ ಮಗನು;
ಇವನು ಯಾರೋಹನ ಮಗನು; ಇವನು ಗಿಲ್ಯಾದನ
ಮಗನು; ಇವನು ಮೀಕಾಯೇಲನ ಮಗನು; ಇವ
ನು ಯೆಷೀಷೈಯ ಮಗನು; ಇವನು ಯಹ್ದೋವಿನ
ಮಗನು; ಇವನು ಅಹೀಬೂಜನ ಮಗನು; ಇವನು 15
ಅಬ್ದೀಯೇಲನ ಮಗನು; ಇವನು ಗೂನೀಯ
ಮಗನು. ಇವನು ಇವರ ಗೋತ್ರದ ಮೂಲಪುರುಷನು.
ಗಾದ್ಯರು ಗಿಲ್ಯಾದಿನಲ್ಲಿಯೂ ಬಾಷಾನಿನಲ್ಲಿಯೂ 16
ಅದರ ಗ್ರಾಮಗಳಲ್ಲಿಯೂ ಶಾರೋನಿನ ಎಲ್ಲಾ ಹುಲ್ಲು
ಗಾವಲುಗಳಲ್ಲಿಯೂ ಅವುಗಳ ಮೇರೆಗಳಲ್ಲಿಯೂ
ವಾಸಿಸುತ್ತಿದ್ದರು. ಅವರೆಲ್ಲರೂ ಯೆಹೂದ್ಯರ ಅರ 17
ಸನಾದ ಯೋತಾಮನ ಕಾಲದಲ್ಲಿಯೂ ಇಸ್ರಾಯೇ
ಲ್ಯರ ಅರಸನಾದ ಯಾರೊಬ್ಬಾಮನ ಕಾಲದಲ್ಲಿಯೂ
ವಂಶಾವಳಿಯ ಪಟ್ಟಿಯಲ್ಲಿ ಲಿಖಿತರಾದರು.
ರೂಬೇನ್ಯರು, ಗಾದ್ಯರು, ಮನಸ್ಸೆಕುಲದ ಅರ್ಧ 18
ಜನರು ಇವರಲ್ಲಿ ರಣವೀರರೂ ಗುರಾಣಿ ಖಡ್ಗಗಳನ್ನು
ಹಿಡಿಯುವವರೂ ಬಿಲ್ಲನ್ನು ಬೊಗ್ಗಿಸುವವರೂ ಯುದ್ಧ
ನಿಪುಣರೂ ಆಗಿರುವ ನಾಲ್ವತ್ತನಾಲ್ಕು ಸಾವಿರದ ಏಳು
ನೂರ ಅರುವತ್ತು ಮಂದಿ ಸೈನಿಕರು ಹೋಗಿ ಹಗ್ರೀಯ 19

ರೊಡನೆಯೂ ಯೆಟೂರ್, ನಾಫೀಷ್, ನೋದಾಬ್ ಇವ
20 ರೊಡನೆಯೂ ಯುದ್ಧಮಾಡಿದರು. ಅವರು ದೇವರ
ಮೇಲೆ ಭರವಸವಿಟ್ಟದರಿಂದ ಆತನು ತನಗೆ ಮೊರೆ
ಯಿಟ್ಟ ಅವರಿಗೆ ಕಿವಿಗೊಟ್ಟು ಯುದ್ಧದಲ್ಲಿ ಜಯವನ್ನು
ಅನುಗ್ರಹಿಸಿದನು. ಹಗ್ರೀಯರೂ ಇವರ ಜೊತೆಯಲ್ಲಿ
21 ದ್ದವರೂ ಅವರ ಕೈಯಲ್ಲಿ ಕೊಡಲ್ಪಟ್ಟರು. ದೇವ
ರಿಂದ ನಿಯಮಿತವಾದ ಈ ಯುದ್ಧದಲ್ಲಿ ಅವರು ವೈರಿ
22 ಗಳಲ್ಲಿ ಅನೇಕರನ್ನು ತಿವಿದು ಕೊಂದದ್ದಲ್ಲದೆ ಅವರ
ಹಿಂಡುಗಳನ್ನು ಅಂದರೆ ಐವತ್ತು ಸಾವಿರ ಒಂಟೆಗಳು,
ಎರಡು ಲಕ್ಷ ಐವತ್ತು ಸಾವಿರ ಕುರಿಗಳು, ಎರಡು
ಸಾವಿರ ಕತ್ತೆಗಳು ಇವುಗಳನ್ನೂ ಲಕ್ಷ ಜನವನ್ನೂ
ಕೊಳ್ಳೆಹಿಡಿದು ತಾವು ಸೆರೆಯಾಗಿ ಹೋಗುವ ವರೆ
ಗೂ ಅವರ ಊರುಗಳಲ್ಲಿ ವಾಸಿಸಿದರು.

### ಯೊರ್ದನಿನ ಪೂರ್ವದಿಕ್ಕಿನಲ್ಲಿರುವ ಮನಸ್ಸೆಯರು.

23 ಮನಸ್ಸೆಕುಲದ ಅರ್ಧಜನರು ಬಾಷಾನಿನಿಂದ ಬಾಳ್
ಹೆರ್ಮೋನ್, ಸೆನೀರ್, ಹೆರ್ಮೋನ್‍ಗಿರಿ ಇವುಗಳ ವರೆ
ಗೂ ವಿಸ್ತರಿಸಿಕೊಂಡಿರುವ ಪ್ರಾಂತಗಳಲ್ಲಿ ವಾಸಿಸಿದರು;
24 ಅವರು ಅನೇಕಜನರು. ಅವರ ಗೋತ್ರಗಳ ಪ್ರಧಾನ
ಪುರುಷರು — ಏಫೆರ್, ಇಷ್ಷೀ, ಎಲೀಯೇಲ್, ಅಜ್ರೀ
ಯೇಲ್, ಯೆರೆಮೀಯ, ಹೋದವ್ಯ, ಯೆಹ್ದೀಯೇಲ್.
ಇವರು ರಣವೀರರೂ ಹೆಸರುಗೊಂಡವರೂ ಗೋತ್ರ
25 ಪ್ರಧಾನರೂ ಆಗಿರುವವರು. ಅವರು ತಮ್ಮ ಪಿತೃಗಳ
ದೇವರಿಗೆ ದ್ರೋಹಿಗಳಾಗಿ ಆತನು ತಮ್ಮ ಮುಂದೆಯೇ
ಸಂಹರಿಸಿದ ಆ ದೇಶನಿವಾಸಿಗಳ ದೇವರುಗಳನ್ನು ಹಿಂಬಾ
26 ಲಿಸಿದರು. ಆದದರಿಂದ ಅಶ್ಶೂರದ ಅರಸನಾದ
ಪೂಲ್, ತಿಗ್ಲತ್ಪಿಲೆಸರ್ ಎಂಬವರು ಇಸ್ರಾಯೇಲ್
ದೇವರ ಪ್ರೇರಣೆಯಿಂದ ಬಂದು ರೂಬೇನ್ಯರು, ಗಾದ್ಯ
ರು, ಮನಸ್ಸೆಕುಲದ ಅರ್ಧ ಜನರು ಇವರನ್ನು ಹಲಹ,
ಹಾಬೋರ್, ಹಾರ ಎಂಬ ಪ್ರಾಂತಗಳಿಗೂ ಗೋಜಾನ್
ನದಿಯ ಪ್ರದೇಶಗಳಿಗೂ ಸೆರೆಒಯ್ದರು. ಅವರು
ಇಂದಿನ ವರೆಗೂ ಅಲ್ಲೇ ಇರುತ್ತಾರೆ.

### ಲೇವಿಯರಲ್ಲಿ ಮಹಾಯಾಜಕರ ಪಟ್ಟಿ.

6 ಲೇವಿಯ ಮಕ್ಕಳು — ಗೇರ್ಷೋನ್. ಕೆಹಾತ್,
2 ಮೆರಾರೀ. ಕೆಹಾತನ ಮಕ್ಕಳು — ಅಮ್ರಾಮ್,
3 ಇಚ್ಹಾರ್, ಹೆಬ್ರೋನ್, ಉಜ್ಜೀಯೇಲ್. ಅಮ್ರಾ
ಮನ ಮಕ್ಕಳು — ಆರೋನ್, ಮೋಶೆ, ಮಿರ್ಯಾಮ್.
ಆರೋನನ ಮಕ್ಕಳು — ನಾದಾಬ್, ಅಬೀಹೂ,
4 ಎಲ್ಲಾಜಾರ್, ಈತಾಮಾರ್. ಎಲ್ಲಾಜಾರನು ಫೀನೆ
ಹಾಸನನ್ನು ಪಡೆದನು; ಫೀನೆಹಾಸನು ಅಬೀಷೂವ
5 ನನ್ನು ಪಡೆದನು. ಅಬೀಷೂವನು ಬುಕ್ಕೀಯನ್ನು
ಪಡೆದನು; ಬುಕ್ಕೀಯು ಉಜ್ಜೀಯನ್ನು ಪಡೆದನು;
6 ಉಜ್ಜೀಯು ಜೆರಹ್ಯನನ್ನು ಪಡೆದನು; ಜೆರಹ್ಯನು ಮೆರಾ
7 ಯೋತನನ್ನು ಪಡೆದನು; ಮೆರಾಯೋತನು ಅಮ
ರ್ಯನನ್ನು ಪಡೆದನು; ಅಮರ್ಯನು ಅಹೀಟೂಬ
ನನ್ನು ಪಡೆದನು; ಅಹೀಟೂಬನು ಚಾದೋಕನನ್ನು
ಪಡೆದನು; ಚಾದೋಕನು ಅಹೀಮಾಚನನ್ನು ಪಡೆ
ದನು; ಅಹೀಮಾಚನು ಅಜರ್ಯನನ್ನು ಪಡೆದನು;
ಅಜರ್ಯನು ಯೋಹಾನಾನನನ್ನು ಪಡೆದನು; ಯೋ
ಹಾನಾನನು ಅಜರ್ಯನನ್ನು ಪಡೆದನು; ಸೊಲೊ
ಮೋನನು ಕಟ್ಟಿಸಿದ ಯೆರೂಸಲೇಮಿನ ದೇವಾಲಯ
ದಲ್ಲಿ ಯಾಜಕಸೇವೆಮಾಡುತ್ತಿದ್ದವನು ಇವನೇ. ಅಜ
ರ್ಯನು ಅಮರ್ಯನನ್ನು ಪಡೆದನು; ಅಮರ್ಯನು
ಅಹೀಟೂಬನನ್ನು ಪಡೆದನು; ಅಹೀಟೂಬನು ಚಾದೋ
ಕನನ್ನು ಪಡೆದನು; ಚಾದೋಕನು ಶಲ್ಲೂಮ
ನನ್ನು ಪಡೆದನು; ಶಲ್ಲೂಮನು ಹಿಲ್ಕೀಯನನ್ನು
ಪಡೆದನು; ಹಿಲ್ಕೀಯನು ಅಜರ್ಯನನ್ನು ಪಡೆದನು;
ಅಜರ್ಯನು ಸೆರಾಯನನ್ನು ಪಡೆದನು; ಸೆರಾಯನು
ಯೆಹೋಚಾದಾಕನನ್ನು ಪಡೆದನು. ನೆಬೂಕದ್ನೆಚ್ಚ
ರನು ಯೆಹೋವನ ಪ್ರೇರಣೆಯಿಂದ ಯೆಹೂದ್ಯರನ್ನೂ
ಯೆರೂಸಲೇಮಿನವರನ್ನೂ ಸೆರೆಒಯ್ದಾಗ ಈ ಯೆಹೋ
ಚಾದಾಕನೂ ಅವರೊಡನಿದ್ದನು.

### ಮಿಕ್ಕ ಲೇವಿಯರ ವಂಶಾವಳಿ.

ಲೇವಿಯ ಮಕ್ಕಳು — ಗೇರ್ಷೋಮ್, ಕೆಹಾತ್,
ಮೆರಾರೀ. ಗೇರ್ಷೋಮನ ಮಕ್ಕಳು — ಲಿಬ್ನೀ, ಶಿಮ್ಮೀ
ಎಂಬವರು. ಕೆಹಾತನ ಮಕ್ಕಳು — ಅಮ್ರಾಮ್,
ಇಚ್ಹಾರ್, ಹೆಬ್ರೋನ್, ಉಜ್ಜೀಯೇಲ್ ಇವರೇ.
ಮೆರಾರಿಯ ಮಕ್ಕಳು — ಮಹ್ಲೀ, ಮೂಷೀ; ಇವರೆ
ಲ್ಲರೂ ಲೇವಿಗೋತ್ರಗಳ ಮೂಲಪುರುಷರು.

ಗೇರ್ಷೋಮನ [ಗೋತ್ರ] — ಗೇರ್ಷೋಮನ ಮಗ
ನು ಲಿಬ್ನೀ; ಇವನ ಮಗನು ಯಹತ್; ಇವನ ಮಗ
ನು ಜಿಮ್ಮ; ಇವನ ಮಗನು ಯೋವಾಹ; ಇವನ
ಮಗನು ಇದ್ದೋ; ಇವನ ಮಗನು ಜೆರಹ; ಇವನ
ಮಗನು ಯೆವತ್ರೈ.

ಕೆಹಾತನ ಸಂತಾನದವರು — ಇವನ ಮಗನು
ಅಮ್ಮೀನಾದಾಬ್; ಇವನ ಮಗನು ಕೋರಹ;
ಇವನ ಮಗನು ಅಸ್ಸೀರ್; ಇವನ ಮಗನು ಎಲ್ಕಾನ;
ಇವನ ಮಗನು ಎಬ್ಯಾಸಾಫ್; ಇವನ ಮಗನು
ಅಸ್ಸೀರ್; ಇವನ ಮಗನು ತಹತ್; ಇವನ ಮಗನು
ಊರೀಯೇಲ್; ಇವನ ಮಗನು ಉಜ್ಜೀಯ; ಇವನ
ಮಗನು ಸೌಲ್. ಎಲ್ಕಾನನ ಮಕ್ಕಳು — ಅಮಾಸೈ,
ಅಹೀಮೋತ್, ಎಲ್ಕಾನ ಎಂಬವರು. ಎಲ್ಕಾನನ
ಸಂತಾನದವರು — ಇವನ ಮಗನು ಚೋಫೈ, ಇವನ
ಮಗನು ನಹತ್; ಇವನ ಮಗನು ಎಲೀ
ಯಾಬ್; ಇವನ ಮಗನು ಯೆರೋಹಾಮ್; ಇವನ
ಮಗನು ಎಲ್ಕಾನ; ಸಮುವೇಲನ ಮಕ್ಕಳು —
1)ಯೋವೇಲ್ ಚೊಚ್ಚಲನು; ಅಬೀಯ ಎರಡನೆಯ
ವನು.

ಮೆರಾರೀ ಸಂತಾನದವರು — ಇವನ ಮಗನು
ಮಹ್ಲೀ; ಇವನ ಮಗನು ಲಿಬ್ನೀ; ಇವನ ಮಗನು
ಶಿಮ್ಮೀ; ಇವನ ಮಗನು ಉಜ್ಜ; ಇವನ ಮಗನು

1) ಪಾಠಾಂತರ: ಚೊಚ್ಚಲನಾದ ವಷ್ನಿ, ಅಬೀಯ ಎಂಬವರು.

ಶಿಮ್ಮಾ; ಇವನ ಮಗನು ಹಗ್ಗೀಯು; ಇವನ ಮಗನು
ಅಸಾಯ.

### ಗಾಯಕರಾದ ಲೇವಿಯರ ವಂಶಾವಳಿ.

31 ಮಂಜೂಷವು ವಿಶ್ರಾಂತಿಹೊಂದಿದ ಮೇಲೆ ದಾ
ವೀದನಿಂದ ಯೆಹೋವನ ಆಲಯದಲ್ಲಿ ವಾದ್ಯಸೇವೆಗೆ
32 ನೇಮಿಸಲ್ಪಟ್ಟವರ ಪಟ್ಟಿ. ಸೊಲೊಮೋನನು ಯೆರೂ
ಸಲೇಮಿನಲ್ಲಿ ಯೆಹೋವನ ಆಲಯವನ್ನು ಕಟ್ಟುವ
ತನಕ ಅವರು ದೇವದರ್ಶನದ ಗುಡಾರವೆಂಬ ಆಲ
ಯದ ಮುಂದೆ ತಮ್ಮ ಕ್ರಮಾನುಸಾರವಾಗಿ ವಾದ್ಯ
ಸೇವೆಯನ್ನು ನಡಿಸುತ್ತಿದ್ದರು.
33 ದೇವಾಲಯಸೇವಕರೂ ಅವರ ವಂಶಾವಳಿಯೂ—
ಕೆಹಾತ್ಯನಾದ ಹೇಮಾನನು [ಮೊದಲನೆಯವನು].
ಗಾಯಕನಾದ ಇವನು ಯೋವೇಲನ ಮಗನು;
34 ಇವನು ಸಮುವೇಲನ ಮಗನು; ಇವನು ಎಲ್ಕಾನನ
ಮಗನು; ಇವನು ಯೆರೋಹಾಮನ ಮಗನು; ಇವನು
ಎಲೀಯೇಲನ ಮಗನು; ಇವನು ತೋಹನ ಮಗನು;
35 ಇವನು ಚೂಫನ ಮಗನು; ಇವನು ಎಲ್ಕಾನನ
ಮಗನು; ಇವನು ಮಹತನ ಮಗನು; ಇವನು
36 ಅಮಾಸೈಯ ಮಗನು; ಇವನು ಎಲ್ಕಾನನ ಮಗನು;
ಇವನು ಯೋವೇಲನ ಮಗನು; ಇವನು ಅಜರ್ಯನ
37 ಮಗನು; ಇವನು ಚೆಫನ್ಯನ ಮಗನು; ಇವನು ತಹ
ತನ ಮಗನು; ಇವನು ಅಸೀರನ ಮಗನು; ಇವನು
ಎಬ್ಯಾಸಾಫನ ಮಗನು; ಇವನು ಕೋರಹನ ಮಗನು;
38 ಇವನು ಇಚ್ಹಾರನ ಮಗನು; ಇವನು ಕೆಹಾತನ
ಮಗನು; ಇವನು ಲೇವಿಯ ಮಗನು; ಇವನು ಇಸ್ರಾ
ಯೇಲನ ಮಗನು.
39 ಇವನ ಬಲಗಡೆಯಲ್ಲಿ ನಿಲ್ಲುತ್ತಿದ್ದ ಇವನ
ಸಹೋದರನಾದ ಆಸಾಫನು [ಎರಡನೆಯವನು].
40 ಇವನು ಬೆರೆಕ್ಯನ ಮಗನು; ಇವನು ಶಿಮ್ಮನ
ಮಗನು; ಇವನು ಮೀಕಾಯೇಲನ ಮಗನು; ಇವನು
ಬಾಸೇಯನ ಮಗನು; ಇವನು ಮಲ್ಕೀಯನ
41 ಮಗನು; ಇವನು ಎತ್ನಿಯ ಮಗನು; ಇವನು ಜೆರ
42 ಹನ ಮಗನು; ಇವನು ಅದಾಯನ ಮಗನು; ಇವನು
ಏತಾನನ ಮಗನು; ಇವನು ಜಿಮ್ಮನ ಮಗನು;
43 ಇವನು ಶಿಮ್ಮಾಯ ಮಗನು; ಇವನು ಯಹತನ
ಮಗನು; ಇವನು ಗೇರ್ಷೋಮನ ಮಗನು; ಇವನು
ಲೇವಿಯ ಮಗನು.
44 ಇವನ ಎಡಗಡೆಯಲ್ಲಿ ನಿಲ್ಲುತ್ತಿದ್ದ ಇವನ ಸಹೋ
ದರನೂ ಮೆರಾರೀಯನೂ ಆದ ಏತಾನನು [ಮೂರನೆ
ಯವನು]. ಇವನು ಕೀಷೀಯನ ಮಗನು; ಇವನು
ಅಬ್ದೀಯ ಮಗನು; ಇವನು ಮಲ್ಲೂಕನ ಮಗನು;
45 ಇವನು ಹಷಬ್ಯನ ಮಗನು; ಇವನು ಅಮಚ್ಯನ
46 ಮಗನು; ಇವನು ಹಿಲ್ಕೀಯನ ಮಗನು. ಇವನು
ಅಮ್ಚೀಯ ಮಗನು; ಇವನು ಬಾನೀಯ ಮಗನು;
47 ಇವನು ಶೆಮೆರನ ಮಗನು; ಇವನು ಮಹ್ಲೀಯ
ಮಗನು; ಇವನು ಮೂಷೀಯ ಮಗನು; ಇವನು
ಮೆರಾರಿಯ ಮಗನು; ಇವನು ಲೇವಿಯ ಮಗನು.

### ಮಹಾಯಾಜಕನಾದ ಆರೋನನ ಸಂತಾನದವರು.

ಇವರ ಸಹೋದರರಾದ ಇತರ ಲೇವಿಯರು ದೇವಾ 48
ಲಯವಾಗಿರುವ ಮಂದಿರದ ಸೇವೆಗಾಗಿ ನೇಮಿಸಲ್ಪ
ಟ್ಟರು. ದೇವರ ಸೇವಕನಾದ ಮೋಶೆಯ ಎಲ್ಲಾ ಆಜ್ಞೆ 49
ಗಳಿಗನುಸಾರವಾಗಿ ಆರೋನನೂ ಅವನ ಮಕ್ಕಳೂ
ಇಸ್ರಾಯೇಲ್ಯರಿಗೋಸ್ಕರ ಯಜ್ಞವೇದಿ, ಧೂಪವೇದಿ
ಇವುಗಳ ಮೇಲೆ ಹೋಮಮಾಡುತ್ತಾ ಧೂಪಹಾಕು
ತ್ತಾ ಮಹಾಪರಿಶುದ್ಧಸ್ಥಳದ ಎಲ್ಲಾ ಸೇವೆಯನ್ನು
ಮಾಡುತ್ತಾ ದೋಷಪರಿಹಾರಮಾಡುತ್ತಾ ಇದ್ದರು.
ಆರೋನನ ಸಂತಾನದವರು—ಆರೋನನ ಮಗನು 50
ಎಲ್ಲಾಜಾರ್; ಇವನ ಮಗನು ಫೀನೆಹಾಸ್; ಇವನ
ಮಗನು ಅಬೀಷೂವ; ಇವನ ಮಗನು ಬುಕ್ಕೀ; 51
ಇವನ ಮಗನು ಉಜ್ಜೀ; ಇವನ ಮಗನು ಜೆರಹ್ಯಾಹ;
ಇವನ ಮಗನು ಮೆರಾಯೋತ್; ಇವನ ಮಗನು 52
ಅಮರ್ಯ; ಇವನ ಮಗನು ಅಹೀಟೂಬ್; ಇವನ 53
ಮಗನು ಚಾದೋಕ್; ಇವನ ಮಗನು ಅಹಿಮಾಚ್.

### ಲೇವಿಯರಿಗೆ ಸ್ವಾಸ್ತ್ಯವಾಗಿ ದೊರಕಿದ ಪಟ್ಟಣಗಳು.

ಇವರು ವಾಸಿಸತಕ್ಕ ಪ್ರಾಂತನಗರಗಳು—ಆರೋನನ 54
ಸಂತಾನದವರಾದ ಕೆಹಾತನ ಗೋತ್ರದವರಿಗೆ ಚೀಟು
ಮೊದಲು ಬಿದ್ದದರಿಂದ ಇಸ್ರಾಯೇಲ್ಯರು ಅವರಿಗೆ 55
ಯೆಹೂದ ಸೀಮೆಯ ಹೆಬ್ರೋನನ್ನೂ ಅದರ ಸುತ್ತ
ಲಿನ ಗೋಮಾಳಗಳನ್ನೂ ಕೊಟ್ಟರು. ಆದರೆ ಅದರ 56
ಹೊಲಗಳನ್ನೂ ಅದಕ್ಕೆ ಸೇರಿದ ಗ್ರಾಮಗಳನ್ನೂ ಯೆಫು
ನ್ನೆಯ ಮಗನಾದ ಕಾಲೇಬನಿಗೆ ಕೊಟ್ಟರು. ಆರೋನನ 57
ವಂಶದವರಿಗೆ ಹೆಬ್ರೋನೆಂಬ ಆಶ್ರಯನಗರವನ್ನೂ ಲಿಬ್ನ,
ಯತ್ತೀರ್, ಎಷ್ಟೆಮೋವ, ಹೀಲೇನ್, ದೆಬೀರ್, 58
ಆಷಾನ್, ಬೇತ್ಷೆಮೆಷ್ ಎಂಬ ಗೋಮಾಳಸಹಿತವಾದ 59
ಪಟ್ಟಣಗಳನ್ನೂ ಬೆನ್ಯಾಮೀನ್ ಕುಲದಿಂದ ಗೆಬ, 60
ಆಲೆಮೆತ್, ಅನಾತೋತ್ ಎಂಬ ಗೋಮಾಳಸಹಿತ
ವಾದ ಪಟ್ಟಣಗಳನ್ನೂ ಕೊಟ್ಟರು. ಅವರ ಕುಟುಂಬ
ಗಳಿಗೆ ದೊರಕಿದ ಪಟ್ಟಣಗಳು ಹದಿಮೂರು.
ಕೆಹಾತ್ಯರ ಉಳಿದ ಕುಟುಂಬಗಳಿಗೆ ಅರ್ಧಮನಸ್ಸೆ 61
ಕುಲದ ಸ್ವಾಸ್ತ್ಯದಿಂದ ಹತ್ತು ಪಟ್ಟಣಗಳು ದೊರಕಿ
ದವು. ಗೇರ್ಷೋಮ್ಯರ ಕುಟುಂಬಗಳಿಗೆ ಇಸ್ಸಾಕಾರ್, 62
ಆಶೇರ್, ನಫ್ತಾಲಿ, ಬಾಷಾನಿನಲ್ಲಿರುವ ಅರ್ಧಮನಸ್ಸೆ
ಈ ಕುಲಗಳ ಸ್ವಾಸ್ತ್ಯದಿಂದ ಹದಿಮೂರು ಪಟ್ಟಣಗಳು
ದೊರಕಿದವು. ಮೆರಾರೀ ಕುಟುಂಬಗಳಿಗೆ ರೂಬೇನ್ 63
ಗಾದ್ ಜೆಬುಲೂನ್ ಕುಲಗಳ ಸ್ವಾಸ್ತ್ಯದಿಂದ ಹನ್ನೆರಡು
ಪಟ್ಟಣಗಳು ಚೀಟಿನಿಂದ ದೊರಕಿದವು.
ಇಸ್ರಾಯೇಲ್ಯರು ಲೇವಿಯರಿಗೆ ಆ ಪಟ್ಟಣಗಳ 64
ನ್ನಲ್ಲದೆ ಅವುಗಳಿಗೆ ಸೇರಿದ ಗೋಮಾಳಗಳನ್ನೂ
ಕೊಟ್ಟರು. ಅವರು ಚೀಟುಹಾಕಿ ಯೆಹೂದ ಸಿಮೆ 65
ಯೋನ್ ಬೆನ್ಯಾಮೀನ್ ಕುಲಗಳಿಂದ ಮೇಲೆ ಹೆಸರು
ಹೇಳಿದ ಪಟ್ಟಣಗಳನ್ನು ಕೊಟ್ಟರು.
ಕೆಹಾತ್ಯರ ಕುಟುಂಬಗಳಿಗೆ ಎಫ್ರಾಯೀಮ್ಯರ 66
ಸ್ವಾಸ್ತ್ಯದಿಂದ ಎಫ್ರಾಯೀಮ್ ಬೆಟ್ಟದಲ್ಲಿರುವ ಶೆಕೆ 67

68 ವೆಂಬ ಆಶ್ರಯನಗರ, ಗೆಜೆರ್, ಯೊಕ್ಮೆಯಾಮ್,
69 ಬೇತ್‍ಹೋರೋನ್, ಅಯ್ಯಾಲೋನ್, ಗತ್ರಿಮ್ಮೋನ್
ಎಂಬ ಗೋಮಾಳಸಹಿತವಾದ ಪಟ್ಟಣಗಳು ಚೀಟಿ
70 ನಿಂದ ದೊರಕಿದವು. ಮನಸ್ಸೆಕುಲದ ಅರ್ಧಜನರ
ಸ್ವಾಸ್ತ್ಯದ ಆನೇರ್ 1)ಬಿಳ್ಯಾಮ್ ಎಂಬ ಗೋಮಾಳ
ಸಹಿತವಾದ ಪಟ್ಟಣಗಳು ಕೆಹಾತ್ಯರ ಉಳಿದ ಕುಟುಂಬ
ಗಳ ಪಾಲಿಗೆ ಬಂದವು.
71 ಗೇರ್ಷೋಮ್ಯರಿಗೆ ಮನಸ್ಸೆಕುಲದ ಅರ್ಧಜನರ
ಸ್ವಾಸ್ತ್ಯದಿಂದ ಬಾಷಾನಿನ ಗೋಲಾನ್, ಅಷ್ಟಾ
ರೋಟ್ ಎಂಬ ಗೋಮಾಳಸಹಿತವಾದ ಪಟ್ಟಣಗಳೂ
72 ಇಸ್ಸಾಕಾರ್ಯರ ಸ್ವಾಸ್ತ್ಯದಿಂದ ಕೆದೆಷ್ ದಾಬೆ
73 ರತ್, ರಾಮೋತ್, ಆನೇಮ್ ಎಂಬ ಗೋಮಾಳ
74 ಸಹಿತವಾದ ಪಟ್ಟಣಗಳೂ ಆಶೇರ್‍ಕುಲದ ಸ್ವಾಸ್ತ್ಯ
75 ದಿಂದ ಮಾಷಾಲ್, ಅಬ್ದೋನ್, ಹೂಕೋಕ್,
ರೆಹೋಬ್ ಎಂಬ ಗೋಮಾಳಸಹಿತವಾದ ಪಟ್ಟಣ
76 ಗಳೂ ನಫ್ತಾಲಿಕುಲದ ಸ್ವಾಸ್ತ್ಯದಿಂದ ಗಲಿಲಾಯದ
ಕೆದೆಷ್, ಹಮ್ಮೋನ್, ಕಿರ್ಯಾತಯಿಮ್ ಎಂಬ
ಗೋಮಾಳಸಹಿತವಾದ ಪಟ್ಟಣಗಳೂ ದೊರಕಿದವು.
77 ಮಿಕ್ಕ ಲೇವಿಯರಾದ ಮೆರಾರೀಯರಿಗೆ ಜೆಬು
ಲೂನ್‍ಕುಲದ ಸ್ವಾಸ್ತ್ಯದಿಂದ ರಿಮ್ಮೋನೋ, ತಾ
ಬೋರ್ ಎಂಬ ಗೋಮಾಳಸಹಿತವಾದ ಪಟ್ಟಣಗಳೂ
78 ಯೆರಿಕೋವಿನ ಬಳಿಯಲ್ಲಿ ಹರಿಯುವ ಯೊರ್ದನ್‍ನದಿ
ಯ ಪೂರ್ವದಿಕ್ಕಿನಲ್ಲಿರುವ ಅರಣ್ಯದ ಬೆಜೆರ್, ಯಹಚ,
79 ಕೆದೇಮೋತ್, ಮೇಫಾತ್ ಎಂಬ ರೂಬೇನ್‍ಕುಲದ
80 ಗೋಮಾಳಸಹಿತವಾದ ಪಟ್ಟಣಗಳೂ ಗಾದ್‍ಕುಲದ
ಸ್ವಾಸ್ತ್ಯದಿಂದ ಗಿಲ್ಯಾದಿನ ರಾಮೋತ್, ಮಹನ
81 ಯಿಮ್, ಹೆಷ್ಬೋನ್, ಯಗ್ಜೇರ್ ಎಂಬ ಗೋ
ಮಾಳಸಹಿತವಾದ ಪಟ್ಟಣಗಳೂ ದೊರಕಿದವು.

### ಇಸ್ಸಾಕಾರ್‍ಕುಲ.

7 ಇಸ್ಸಾಕಾರನ ಮಕ್ಕಳು—ತೋಲ, ಪೂವ, ಯಾ
2 ಶೂಬ್, ಶಿಮ್ರೋನ್ ಎಂಬ ನಾಲ್ಕು ಮಂದಿ. ತೋಲನ
ಮಕ್ಕಳಾದ ಉಜ್ಜೀ, ರೆಫಾಯ, ಯೆರೀಯೇಲ್,
ಯಹ್ಮೈ, ಇಬ್ಸಾಮ್, ಸಮುವೇಲ್ ಇವರು ತೋಲ
ವಂಶದ ಕುಟುಂಬಗಳಲ್ಲಿ ಪ್ರಧಾನಪುರುಷರೂ ರಣ
ವೀರರೂ ಆಗಿದ್ದರು. ತೋಲವಂಶದವರ ಸಂಖ್ಯೆಯು
ದಾವೀದನ ಕಾಲದಲ್ಲಿ ಇಪ್ಪತ್ತೆರಡು ಸಾವಿರದ ಆರು
3 ನೂರು. ಉಜ್ಜೀಯ ಮಗನು ಇಜ್ರಹ್ಯಾಹ; ಇಜ್ರ
ಹ್ಯಾಹನ ಮಕ್ಕಳು—ಮೀಕಾಯೇಲ್, ಓಬದ್ಯ, ಯೋ
ವೇಲ್, ಇಷ್ಷೀಯ. ಈ ಐದು ಮಂದಿಯೂ ಗೋತ್ರ
4 ಪ್ರಧಾನರು. ಅನೇಕ ಮಂದಿ ಹೆಂಡರೂ ಮಕ್ಕಳೂ
ಉಳ್ಳ ಇವರ ಗೋತ್ರ ಕುಟುಂಬಗಳಿಗೆ ಸೇರುವ ಯುದ್ಧ
5 ಭಟರು ಮೂವತ್ತಾರು ಸಾವಿರ ಮಂದಿ. ಇವರ ಗೋತ್ರ
ಸಂಬಂಧಿಗಳಾದ ಇಸ್ಸಾಕಾರ್ಯರೆಲ್ಲರೂ ರಣವೀರರು.
ವಂಶಾವಳಿಯ ಪಟ್ಟಿಯಲ್ಲಿ ಲೆಕ್ಕಿಸಲ್ಪಟ್ಟವರು ಒಟ್ಟಿಗೆ
ಎಂಭತ್ತೇಳು ಸಾವಿರ ಮಂದಿ.

### ಬೆನ್ಯಾಮೀನ್‍ಕುಲ.

ಬೆನ್ಯಾಮೀನನಿಗೆ ಬೆಳ, ಬೆಕೆರ್, ಯೆದೀಯಯೇಲ್
ಎಂಬ ಮೂರು ಮಂದಿ ಮಕ್ಕಳು. ಬೆಳನ ಮಕ್ಕಳು—
ಎಚ್ಬೋನ್, ಉಜ್ಜೀ, ಉಜ್ಜೀಯೇಲ್, ಯೆರೀಮೋತ್,
ಈರೀ ಎಂಬವರು. ಈ ಐದು ಮಂದಿಯು ಗೋತ್ರ
ಪ್ರಧಾನರೂ ರಣವೀರರೂ ಆಗಿದ್ದರು. ಅವರ ವಂಶಾ
ವಳಿಯ ಪಟ್ಟಿಯಲ್ಲಿ ಲೆಕ್ಕಿಸಲ್ಪಟ್ಟವರು ಇಪ್ಪತ್ತೆರಡು
ಸಾವಿರದ ಮೂವತ್ತನಾಲ್ಕು ಮಂದಿ. ಬೆಕೆರನ ಮಕ್ಕ
ಳು—ಜೆಮೀರ, ಯೋವಾಷ್, ಎಲೀಯೆಜೆರ್, ಎಲ್ಯೋ
ವೇನೈ, ಒಮ್ರಿ, ಯೆರೀಮೋತ್, ಅಬೀಯ, ಅನಾ
ತೋತ್, ಆಲೆಮೆತ್. ಇವರೆಲ್ಲರೂ ಬೆಕೆರನ ಸಂತಾನ
ದವರು. ರಣವೀರರಾದ ಈ ಗೋತ್ರಪ್ರಧಾನರ ವಂಶಾ
ವಳಿಯ ಪಟ್ಟಿಯಲ್ಲಿ ಲೆಕ್ಕಿಸಲ್ಪಟ್ಟ ಭಟರು ಇಪ್ಪತ್ತು
ಸಾವಿರದ ಇನ್ನೂರು ಮಂದಿ. ಯೆದೀಯಯೇಲನ ಮಗ
ನು ಬಿಲ್ಹಾನ್. ಬಿಲ್ಹಾನನ ಮಕ್ಕಳು—ಯೆಯೂಷ್,
ಬೆನ್ಯಾಮೀನ್, ಏಹೂದ್, ಕೆನಾನ, ಜೇತಾನ್, ತಾ
ರ್ಷೀಷ್, ಅಹೀಷೆಹರ್ ಎಂಬವರು. ಈ ಗೋತ್ರಪ್ರಧಾನ
ರಿಗೆ ಸೇರಿದವರೆಲ್ಲರೂ ಯೆದೀಯಯೇಲನ ಸಂತಾನ
ದವರು. ಇವರಲ್ಲಿ ಯುದ್ಧಕ್ಕೆ ಹೋಗತಕ್ಕ ಭಟರು
ಹದಿನೇಳು ಸಾವಿರದ ಇನ್ನೂರು ಮಂದಿ.

### ದಾನ್‍ಕುಲ.

ಶುಪ್ಪೀಮ್ ಹುಪ್ಪೀಮರು ಈರನ ಮಕ್ಕಳು; ಹುಶೀ
ಮನು ಅಹೇರನ ಮಗನು.

### ನಫ್ತಾಲಿಕುಲ.

ನಫ್ತಾಲಿಯ ಮಕ್ಕಳು. ಯಹಚಿಯೇಲ್, ಗೂನೀ,
ಯೇಜೆರ್, ಶಲ್ಲೂಮ್ ಎಂಬವರು. ಇವರು ಬಿಲ್ಹಳ
ಸಂತಾನದವರು.

### ಮನಸ್ಸೆಕುಲ.

ಮನಸ್ಸೆಯ ಸಂತಾನದವರು—ಮನಸ್ಸೆಯ ಅರಾ
ಮ್ಯಳಾದ ಉಪಪತ್ನಿಯು ಅವನಿಗೆ ಅಷ್ರೀಯೇಲ
ನನ್ನೂ ಮಾಕೀರನನ್ನೂ ಹೆತ್ತಳು; ಮಾಕೀರನು
ಗಿಲ್ಯಾದನ ತಂದೆ. ಮಾಕೀರನು ಹುಪ್ಪೀಮ್ ಶುಪ್ಪೀ
ಮ್ಯರಿಂದ ಹೆಣ್ಣನ್ನು ತೆಗೆದುಕೊಂಡನು; ಅವನ ತಂಗಿಯ
ಹೆಸರು ಮಾಕ; ಅವನ ತಮ್ಮನ ಹೆಸರು ಚೆಲೋ
ಫಾದ್; ಚೆಲೋಫಾದನಿಗೆ ಹೆಣ್ಣುಮಕ್ಕಳು ಮಾತ್ರ
ಇದ್ದರು. ಮಾಕೀರನ ಹೆಂಡತಿಯಾದ ಮಾಕಳು
ಮಗನನ್ನು ಹೆತ್ತು ಅವನಿಗೆ ಪೆರೆಷೆಂದು ಹೆಸರಿಟ್ಟಳು;
ಇವನ ತಮ್ಮನ ಹೆಸರು ಶೆರೆಷ್. ಶೆರೆಷನ ಮಕ್ಕಳು—
ಊಲಾಮ್, ರೆಕೆಮ್ ಎಂಬವರು. ಊಲಾಮನ
ಮಗನು ಬೆದಾನ್. ಇವರು ಮನಸ್ಸೆಯ ಮೊಮ್ಮ
ಗನೂ ಮಾಕೀರನ ಮಗನೂ ಆದ ಗಿಲ್ಯಾದನ ಸಂತಾನ

1) ಪಾಠಾಂತರ: ಇಬ್ಲೆಯಾಮ್.

18 ದವರು. ಗಿಲ್ಯಾದನ ತಂಗಿಯಾದ ಹಮ್ಮೋಲೆಕೆತಳು
ಈಷ್ಹೋದ್, ಅಬೀಯೆಜೆರ್, ಮಹ್ಲ ಎಂಬವರನ್ನು
19 ಹೆತ್ತಳು. ಶೆಮೀದನ ಮಕ್ಕಳು—ಅಹ್ಯಾನ್, ಶೆಕೆಮ್,
ಲಿಕ್ಹೀ, ಅನೀಯಾಮ್ ಎಂಬವರು.

ಎಫ್ರಾಯೀಮ್‌ಕುಲ.

20 ಎಫ್ರಾಯೀಮನ ಸಂತಾನದವರು—ಎಫ್ರಾಯೀಮನ
ಮಗನು ಶೂತೆಲಹ; ಇವನ ಮಗನು ಬೆರೆದ್;
ಇವನ ಮಗನು ತಹತ್; ಇವನ ಮಗನು ಎಲ್ಲಾದ;
21 ಇವನ ಮಗನು ತಹತ್. ಇವನ ಮಗನು ಜಾಬಾದ್;
ಇವನ ಮಕ್ಕಳು—ಶೂತೆಲಹ, ಎಜೆರ್, ಎಲ್ಲಾದ್
ಎಂಬವರು. ಇವರು ಗತ್ ಊರಿನವರ ದನಕುರಿಗ
ಳನ್ನು ಸುಲಿಗೆಮಾಡುವದಕ್ಕೋಸ್ಕರ ಗಟ್ಟಾ ಇಳಿದು
ಅವರ ದೇಶಕ್ಕೆ ಹೋದದರಿಂದ ಆ ದೇಶಮೂಲನಿವಾ
22 ಸಿಗಳು ಇವರನ್ನು ಕೊಂದುಹಾಕಿದರು. ಆದದರಿಂದ
ಇವರ ತಂದೆಯಾದ ಎಫ್ರಾಯೀಮನು ಬಹುದಿನಗಳ
ವರೆಗೂ ದುಃಖಪಡುತ್ತಿದ್ದನು. ಅವನ ಸಹೋದರರು
23 ಅವನನ್ನು ಸಂತೈಸುವದಕ್ಕೋಸ್ಕರ ಬಂದರು. ಅವನು
ತನ್ನ ಹೆಂಡತಿಯನ್ನು ಕೂಡಲು ಆಕೆಯು ಗರ್ಭಿಣಿ
ಯಾಗಿ ಮಗನನ್ನು ಹೆತ್ತಳು. ಇದು ಅವನ ಕುಟುಂಬ
ಕ್ಕೊದಗಿದ ಆಪತ್ತಿನಲ್ಲಿ ಸಂಭವಿಸಿದದರಿಂದ ಆ ಮಗ
24 ನಿಗೆ [1]ಬೆರೀಯ ಎಂದು ಹೆಸರಿಟ್ಟನು. ಶೇರ ಎಂಬ
ವಳು ಅವನ ಮಗಳು; ಈಕೆಯು ಮೇಲಣ ಮತ್ತು
ಕೆಳಗಣ ಬೇತ್‌ಹೋರೋನ್ ಎಂಬ ಪಟ್ಟಣಗಳನ್ನೂ
ಉಜ್ಜೇನ್‌ಶೇರ ಎಂಬ ಪಟ್ಟಣವನ್ನೂ ಕಟ್ಟಿಸಿದಳು.
25 ಬೆರೀಯ ಮಗನು ರೆಫಹ; [ಇವನ ಮಗನು] ರೆಷೆಫ್;
ಇವನ ಮಗನು ತೆಲಹ; ಇವನ ಮಗನು ತಹನ್;
26 ಇವನ ಮಗನು ಲದ್ದಾನ್; ಇವನ ಮಗನು ಅಮ್ಮೀ
27 ಹೂದ್; ಇವನ ಮಗನು ಎಲೀಷಾಮ; ಇವನ ಮಗ
ನು ನೋನ್; ಇವನ ಮಗನು ಯೆಹೋಷುವ.
28 ಅವರು ವಾಸಿಸುವ ಸ್ವಾಸ್ತ್ಯದ ಮೇರೆಗಳು—
[ದಕ್ಷಿಣ ದಿಕ್ಕಿನಲ್ಲಿ] ಬೇತೇಲ್ ಪಟ್ಟಣವೂ ಅದರ ಗ್ರಾಮ
ಗಳೂ; ಪೂರ್ವದಿಕ್ಕಿನಲ್ಲಿ ನಾರಾನ್; ಪಶ್ಚಿಮ ದಿಕ್ಕಿ
ನಲ್ಲಿ ಗೆಜೆರ್ ಪಟ್ಟಣವೂ ಅದರ ಗ್ರಾಮಗಳೂ; [ಉತ್ತರ
ದಿಕ್ಕಿನಲ್ಲಿ] ಶೆಕೆಮ್ ಅಯ್ಯಾ ಪಟ್ಟಣಗಳೂ ಅವುಗಳ
29 ಗ್ರಾಮಗಳೂ ಇವೇ. ಬೇತ್ಷಾನ್, ತಾನಾಕ್, ಮೆಗಿ
ದ್ದೋ, ದೋರ್ ಎಂಬ ಪಟ್ಟಣಗಳೂ ಅವುಗಳ ಗ್ರಾಮ
ಗಳೂ ಮನಸ್ಸೆಕುಲದವರ ವಶದಲ್ಲಿದ್ದವು. ಈ ಊರು
ಗಳಲ್ಲಿ ಇಸ್ರಾಯೇಲನ ಮಗನಾದ ಯೋಸೇಫನ ಸಂ
ತಾನದವರು ವಾಸಿಸುತ್ತಿದ್ದರು.

ಆಶೇರ್‌ಕುಲ.

30 ಆಶೇರನ ಸಂತಾನದವರು—ಇಮ್ನ, ಇಷ್ವ, ಇಷ್ವೀ,
ಬೆರೀಯ ಎಂಬವರೂ ಸೆರಹಳೆಂಬ ಇವರ ತಂಗಿಯೂ.
31 ಬೆರೀಯನ ಮಕ್ಕಳು—ಹೆಬೆರ್, ಬಿರ್ಜೈತ್ ಊರಿ
ನವರ ಮೂಲಪುರುಷನಾದ ಮಲ್ಕೀಯೇಲ್ ಎಂಬ
ವರು. ಹೆಬೆರನು ಯಫ್ಲೇಟ್, ಶೋಮೇರ್, ಹೋ 32
ತಾಮ್ ಇವರನ್ನೂ ಇವರ ತಂಗಿಯಾದ ಶೂವಳನ್ನೂ
ಪಡೆದನು. ಪಾಸಕ್, ಬಿಮ್ಹಾಲ್, ಅಶ್ವಾತ್ ಇವರು 33
ಯಫ್ಲೇಟನ ಮಕ್ಕಳು. ಅಹೀ, ರೊಹ್ಗ, ಹುಬ್ಬ, 34
ಅರಾಮ್ ಎಂಬವರು ಶೆಮೆರನ ಮಕ್ಕಳು. ಇವನ 35
ತಮ್ಮನಾದ ಹೆಲೆಮನ ಮಕ್ಕಳು—ಚೋಫಹ, ಇಮ್ನ,
ಶೇಲೆಷ್, ಆಮಾಲ್ ಇವರೇ. ಸೂಹ, ಹರ್ನೆಫೆರ್, 36
ಶೂಗಾಲ್, ಬೇರೀ, ಇಮ್ರ, ಬೆಚೆರ್, ಹೋದ್, 37
ಶಮ್ಮ, ಶಿಲ್ಷ, ಇತ್ರಾನ್, ಬೇರ ಇವರು ಚೋಫಹನ
ಮಕ್ಕಳು. ಯೆಫುನ್ನೆ, ಪಿಸ್ಪ, ಅರಾ ಎಂಬವರು ಯೆತೆ 38
ರನ ಮಕ್ಕಳು. ಆರಹ, ಹನ್ನೀಯೇಲ್, ರಿಚ್ಯ, ಇವರು 39
ಉಲ್ಲನ ಮಕ್ಕಳು. ಇವರೆಲ್ಲರೂ ಆಶೇರ್ಯರಲ್ಲಿ 40
ಗೋತ್ರಪ್ರಧಾನರೂ ಪರೀಕ್ಷಿತರಾದ ರಣವೀರರೂ
ಪ್ರಭುಶ್ರೇಷ್ಠರೂ ಆಗಿದ್ದರು. ಇವರ ವಂಶಾವಳಿಯ
ಪಟ್ಟಿಯ ಪ್ರಕಾರ ಯುದ್ಧಕ್ಕೆ ಹೋಗತಕ್ಕ ಭಟರ
ಸಂಖ್ಯೆಯು ಇಪ್ಪತ್ತಾರು ಸಾವಿರ.

ಬೆನ್ಯಾಮೀನ್‌ಕುಲ.

8 ಬೆನ್ಯಾಮೀನನ ಮಕ್ಕಳು—ಬೆಳನು ಚೊಚ್ಚಲನು;
ಅಷ್ಬೇಲ್ ಮರಡಲನು; ಅಹ್ರಹ ಮೂರನೆಯವನು;
[2]ನೋಹ ನಾಲ್ಕನೆಯವನು; ರಾಫ ಐದನೆಯವನು. 2
ಬೆಳನ ಮಕ್ಕಳು—ಅದ್ದಾರ್, ಗೇರ, ಅಬೀಹೂದ್, 3
ಅಬೀಷೂವ, ನಾವಮಾನ್, ಅಹೋಹ, ಗೇರ, ಶೆಫೂ 4, 5
ಫಾನ್, ಹೂರಾಮ್ ಎಂಬವರು.
[3]ಏಹೂದನ ಸಂತಾನದವರು. (ಗೆಬ ಊರಿನ 6
ಎಲ್ಲಾ ಕುಟುಂಬಗಳಲ್ಲಿ ಪ್ರಮುಖರಾದ ಏಹೂದನ
ಸಂತಾನದವರೂ ನಾವಮಾನ್, ಅಹೀಯ, ಗೇರ ಇವ 7
ರೂ ಮಾನಹತಿಗೆ ಒಯ್ಯಲ್ಪಟ್ಟರು.) [ಏಹೂದನು]
ಉಜ್ಜ, ಅಹೀಹುದ್ ಇವರನ್ನು ಪಡೆದನು. ಶಹರ 8
ಯಿಮನು ತನ್ನ ಹೆಂಡರಾದ ಹೂಷೀಮ್, ಬಾರ
ಎಂಬವರನ್ನು ತಳ್ಳಿಬಿಟ್ಟು ಮತ್ತೊಬ್ಬ ಹೆಂಡತಿಯಾದ 9
ಹೋದೆಷಳಿಂದ ಮೋವಾಬ್ ದೇಶದಲ್ಲಿ ಯೋವಾಬ್,
ಚಿಬ್ಯ, ಮೇಷ, ಮಲ್ಕಾಮ್, ಯೆಯೂಚ್, ಸಾಕ್ಯ,
ಮಿರ್ಮ ಇವರನ್ನು ಪಡೆದನು. ಶಹರಯಿಮನ ಮಕ್ಕ 10
ಳಾದ ಇವರು ಗೋತ್ರಪ್ರಧಾನರು. ಇದಲ್ಲದೆ ಅವನು 11
ಹುಷೀಮಳಿಂದ ಅಬೀಟೂಬ್, ಎಲ್ಪಾಲ ಇವರನ್ನು
ಪಡೆದನು. ಎಲ್ಪಾಲನ ಮಕ್ಕಳು—ಏಬೆರ್, ಮಿಷ್ಪಾಮ್ 12
ಇವರೂ ಓನೋ, ಲೋದ್ ಎಂಬ ಪಟ್ಟಣಗಳನ್ನೂ
ಅವುಗಳಿಗೆ ಸೇರುವ ಗ್ರಾಮಗಳನ್ನೂ ಕಟ್ಟಿಸಿದ
ಶೆಮೆದನೂ ಅಯ್ಯಾಲೋನ್ ಊರಿನ ಕುಟುಂಬ 13
ಗಳಲ್ಲಿ ಪ್ರಮುಖರೂ ಗತ್ ಊರಿನವರನ್ನು ಓಡಿಸಿ
ಬಿಟ್ಟವರೂ ಆದ ಬೆರೀಯ, ಶಮ ಇವರೂ.
ಅಹ್ಯೋ, ಶಾಷಕ್, ಯೆರೇಮೋತ್, ಜೆಬ 14, 15
ದ್ಯ, ಅರಾದ್, ಎದೆರ್, ಮೀಕಾಯೇಲ್, ಇಷ್ಪ, 16
ಯೋಹ ಇವರು ಬೆರೀಯನ ಮಕ್ಕಳು. ಜೆಬದ್ಯ, 17

[1] ಆಪತ್ತಿನಲ್ಲಿ ಎಂಬರ್ಥವಿದ್ದಂತೆ. [2] ಆದಿ 46. 21 ಈ ಹೆಸರುಗಳಿಗೆ ಬದಲಾಗಿ ನಾವಮಾನ್, ಗೇರಾ ಎಂಬ ಹೆಸರುಗಳು ಸಿಕ್ಕುತ್ತವೆ. [3] ವ. 6–8, ಈ ವಚನಗಳ ಮೂಲವು ಬಹಳವಾಗಿ ಕೆಟ್ಟುಹೋಗಿರುತ್ತದೆ; ಅರ್ಥವಾಗುವದಿಲ್ಲ.

18 ಮೆಷುಲ್ಲಾಮ್, ಹಿಜ್ಕೀ, ಹೆಬೆರ್, ಇಷ್ಮೆರೈ, ಇಜ್ಲೀಯ,
19 ಯೋಬಾಬ್ ಇವರು ಎಲ್ಪಾಲನ ಮಕ್ಕಳು. ಯಾ
20 ಕೀಮ್, ಜಿಕ್ರೀ, ಜಬ್ದೀ, ಎಲೀಗೇನೈ, ಚಿಲ್ಲೆತೈ, ಎಲೀ
21 ಯೇಲ್, ಅದಾಯ, ಬೆರಾಯ, ಶಿಮ್ರಾತ್ ಇವರು
22 ಶಿಮ್ಮಿಯ ಮಕ್ಕಳು. ಇಷ್ಪಾನ್, ಏಬೆರ್, ಎಲೀ
23, 24 ಯೇಲ್, ಅಬ್ದೋನ್, ಜಿಕ್ರೀ, ಹಾನಾನ್, ಹನನ್ಯ.
25 ಏಲಾಮ್, ಅನೆತೋತೀಯ, ಇಫ್ದೆಯಾಹ, ಪೆನೂ
26 ವೇಲ್ ಇವರು ಶಾಷಕನ ಮಕ್ಕಳು. ಶಂಷೆರೈ,
27 ಶೆಹರ್ಯ, ಅತಲ್ಯ, ಯಾರೆಷ್ಯ, ಏಲೀಯ, ಜಿಕ್ರೀ
28 ಇವರು ಯೆರೋಹಾಮನ ಮಕ್ಕಳು. ಇವರು ವಂಶಾ
ವಳಿಯ ಪ್ರಕಾರ ಗೋತ್ರಪ್ರಧಾನರೂ ಯೆರೂಸಲೇಮಿ
ನಲ್ಲಿ ವಾಸಿಸುವವರೂ ಆಗಿದ್ದರು.
29 ಗಿಬ್ಯೋನಿನಲ್ಲಿ ಗಿಬ್ಯೋನ್ಯರ ಮೂಲಪುರುಷನಾದ
[ಯೆಗೂವೇಲ್] ವಾಸಿಸುತ್ತಿದ್ದನು. ಅವನ ಹೆಂಡ
30 ತಿಯ ಹೆಸರು ಮಾಕ; ಚೊಚ್ಚಲಮಗನು ಅಬ್ದೋ
ನನು; ತರುವಾಯ ಹುಟ್ಟಿದವರು — ಚೂರ್, ಕೀಷ್,
31 ಬಾಳ್, ನಾದಾಬ್, ಗೆದೋರ್, ಅಹ್ಯೋ, ಜೆಕೆರ್
32 ಇವರು. ಮಿಕ್ಲೋತನು ಶಿಮಾಹನನ್ನು ಪಡೆದನು.
ಇವರು ತಮ್ಮ ಸಹೋದರರಿಗೆ ಎದುರಾಗಿ ಯೆರೂಸಲೇ
ಮಿನಲ್ಲಿ ಅವರೊಂದಿಗೆ ವಾಸಿಸುತ್ತಿದ್ದರು.
33 ನೇರನು ಕೀಷನನ್ನು ಪಡೆದನು; ಕೀಷನು ಸೌಲ
ನನ್ನು ಪಡೆದನು; ಸೌಲನು ಯೋನಾತಾನ್, ಮಲ್ಕೀ
ಷೂವ, ಅಬೀನಾದಾಬ್, ಎಷ್ಬಾಳ ಇವರನ್ನು ಪಡೆದನು.
34 ಯೋನಾತಾನನು ಮೆರೀಬ್ಬಾಳನನ್ನು ಪಡೆದನು;
35 ಮೆರೀಬ್ಬಾಳನು ಮೀಕನನ್ನು ಪಡೆದನು. ಮೀಕನ
ಮಕ್ಕಳು — ಪೀತೋನ್, ಮೆಲೆಕ್, ತರೇಯ, ಆಹಾ
36 ಜ್ ಇವರೇ. ಆಹಾಜನು ಯೆಹೋವದ್ದಾಹನನ್ನು
ಪಡೆದನು; ಯೆಹೋವದ್ದಾಹನು ಆಲೆಮೆತ್, ಅಜ್ಮಾ
37 ವೆತ್, ಜಿಮ್ರಿ ಇವರನ್ನು ಪಡೆದನು. ಜಿಮ್ರಿಯು
ಮೋಚನನ್ನು ಪಡೆದನು. ಮೋಚನು ಬಿನ್ನನನ್ನು ಪಡೆ
ದನು; ಇವನ ಮಗನು ರಾಫ; ಇವನ ಮಗನು
38 ಎಲ್ಲಾಸ; ಇವನ ಮಗನು ಆಚೇಲ್. ಆಚೇಲನಿಗೆ
ಆರು ಮಂದಿ ಮಕ್ಕಳಿದ್ದರು. ಅವರ ಹೆಸರುಗಳು —
ಅಜ್ರೀಕಾಮ್, ಬೋಕೆರೂ, ಇಷ್ಮಾಯೇಲ್, ಶೆಯರ್ಯ,
ಓಬದ್ಯ, ಹಾನಾನ್ ಇವೇ. ಅವರೆಲ್ಲರೂ ಆಚೇಲನ
ಮಕ್ಕಳು.
39 ಆಚೇಲನ ತಮ್ಮನಾದ ಏಷೆಕನ ಮಕ್ಕಳು — ಚೊಚ್ಚ
ಲನು ಊಲಾಮ್; ಮರಚಲನು ಯೆಯೂಷ್; ಮೂ
40 ರನೆಯವನು ಎಲೀಫೆಲೆಟ್. ಊಲಾಮನ ಮಕ್ಕಳು
ಬಿಲ್ಲನ್ನು ಉಪಯೋಗಿಸುವದರಲ್ಲಿ ಗಟ್ಟಿಗರಾದ ರಣ
ವೀರರು. ಅವರು ಅನೇಕ ಮಂದಿ ಮಕ್ಕಳನ್ನೂ ಮೊ
ಮ್ಮಕ್ಕಳನ್ನೂ ಪಡೆದರು; ಅವರು ಒಟ್ಟಿಗೆ ನೂರ ಐವ
ತ್ತು ಮಂದಿ. ಎಲ್ಲರೂ ಬೆನ್ಯಾಮೀನ್ಯರು.

ಯೆರೂಸಲೇಮಿನವರ ಪಟ್ಟಿ.

9 ಎಲ್ಲಾ ಇಸ್ರಾಯೇಲ್ಯರು ವಂಶಾವಳಿಗಳಲ್ಲಿ ಲಿಖಿತ
ರಾದರು; ಅವರ ಹೆಸರುಗಳು ಇಸ್ರಾಯೇಲ್ಯರ ಅರ
ಸರ ಪುಸ್ತಕದಲ್ಲಿ ಬರೆದಿರುತ್ತವೆ. ಯೆಹೂದ್ಯರು ದೇವ
ದ್ರೋಹಿಗಳಾದದರಿಂದ ಬಾಬೆಲಿಗೆ ಸೆರೆಯವರಾಗಿ ಹೋ
ಗಬೇಕಾಯಿತು. ಆಗ ಅವರ ಪಟ್ಟಣಗಳನ್ನೂ
ಸ್ವಾಸ್ತ್ಯವನ್ನೂ ಮೊದಲು ಸ್ವಾಧೀನಮಾಡಿಕೊಂಡವರು
ಇಸ್ರಾಯೇಲ್ಯರು, ಯಾಜಕರು, ಲೇವಿಯರು, ದೇವ
ಸ್ಥಾನದಾಸರು ಇವರೇ.

ಯೆಹೂದ್ಯರು, ಬೆನ್ಯಾಮೀನ್ಯರು, ಎಫ್ರಾಯೀಮ್ಯ
ರು, ಮನಸ್ಸೆಯರು ಇವರಲ್ಲಿ ಯೆರೂಸಲೇಮಿನಲ್ಲಿ
ವಾಸಿಸುತ್ತಿದ್ದವರ ಪಟ್ಟಿ —

[ಯೆಹೂದಕುಲದವರಲ್ಲಿ] — ಊತೈ, (ಇವನು
ಅಮ್ಮೀಹೂದನ ಮಗನು; ಇವನು ಒಮ್ರಿಯ ಮಗ
ನು; ಇವನು 1)ಇಮ್ರಿಯ ಮಗನು; ಇವನು ಬಾನೀ
ಯ ಮಗನು; ಇವನು ಯೆಹೂದನ ಮಗನಾದ
ಪೆರೆಚನ ಸಂತಾನದವನು) 2)ಶೇಲಾಹನ ಸಂತಾನದ
ಚೊಚ್ಚಲನಾದ ಅಸಾಯ ಮತ್ತು ಅವನ ಮಕ್ಕಳು,
ಜೆರಹನ ಸಂತಾನದ ಯೆಯೂವೇಲ್, ಇವರೂ ಇವರ
ಸಹೋದರರೂ; ಒಟ್ಟಿಗೆ ಆರುನೂರ ತೊಂಭತ್ತು ಮಂದಿ.

ಬೆನ್ಯಾಮೀನ್‌ಕುಲದವರಲ್ಲಿ ಮೆಷುಲ್ಲಾಮನ ಮಗ
ನೂ ಹೋದವ್ಯನ ಮೊಮ್ಮಗನೂ ಹಸ್ಸೆನುವಾಹನ
ಮರಿಮಗನೂ ಆಗಿರುವ ಸಲ್ಲೂ, ಯೆರೋಹಾಮನ
ಮಗನಾದ ಇಬ್ನೆಯಾಹ, ಉಜ್ಜೀಯ ಮಗನೂ ಮಿಕ್ರೀ
ಯ ಮೊಮ್ಮಗನೂ ಆದ ಏಲಾ, ಶೆಫಟ್ಯನ ಮಗನೂ
ರೆಯೂವೇಲನ ಮೊಮ್ಮಗನೂ ಇಬ್ನಿಯಾಹನ ಮರಿ
ಮಗನೂ ಆದ ಮೆಷುಲ್ಲಾಮ್ ಇವರೂ ಇವರ ಸಹೋ
ದರರೂ; ಒಟ್ಟಿಗೆ ಒಂಭೈನೂರ ಐವತ್ತಾರು ಮಂದಿ.
ಇವರೆಲ್ಲರೂ ತಮ್ಮ ಗೋತ್ರಗಳಲ್ಲಿ ಪ್ರಧಾನಪುರುಷರು.

ಯಾಜಕರಲ್ಲಿ — ಯೆದಾಯ, ಯೆಹೋಯಾ
ರೀಬ್, ಯಾಕೀನ್, ಅಹೀಟೂಬನ ಸಂತಾನದವನಾದ
ಮೆರಾಯೋತಸಿಂದ ಹುಟ್ಟಿದ ಚಾದೋಕನ ಮರಿಮಗ
ನೂ ಮೆಷುಲ್ಲಾಮನ ಮೊಮ್ಮಗನೂ ಹಿಲ್ಕೀಯನ
ಮಗನೂ ದೇವಾಲಯದ ಅಧಿಪತಿಯಾಗಿದ್ದವನೂ
ಆದ ಅಜರ್ಯ, ಯೆರೋಹಾಮನ ಮಗನಾದ ಅದಾ
ಯ ಇವರೂ ಇವರ ಸಹೋದರರೂ. ಯೆರೋಹಾ
ಮನು ಪಶ್ಹೂರನ ಮಗನು; ಇವನು ಮಲ್ಕೀಯನ
ಮಗನು; ಇವನು ಮಾಸೈಯ ಮಗನು; ಇವನು
ಅದೀಯೇಲನ ಮಗನು; ಇವನು ಯಹ್ಜೇರನ ಮಗ
ನು; ಇವನು ಮೆಷುಲ್ಲಾಮನ ಮಗನು; ಇವನು
ಮೆಷಿಲ್ಲೇಮೋತನ ಮಗನು; ಇವನು ಇಮ್ಮೇರನ
ಮಗನು. ಗೋತ್ರಪ್ರಧಾನರೂ ದೇವಾಲಯಸೇವೆ
ಯಲ್ಲಿ ಗಟ್ಟಿಗರೂ ಆಗಿದ್ದ ಇವರೂ ಇವರ ಸಹೋ
ದರರೂ ಒಟ್ಟಿಗೆ ಸಾವಿರದ ಏಳುನೂರ ಅರುವತ್ತು
ಮಂದಿ.

ಲೇವಿಯರಲ್ಲಿ — ಹಷ್ಷೂಬನ ಮಗನೂ ಅಜ್ರೀ
ಕಾಮನ ಮೊಮ್ಮಗನೂ ಹಷಬ್ಯನ ಮರಿಮಗನೂ
ಮೆರಾರೀಗೋತ್ರದವನೂ ಆದ ಶೆಮಾಯ, ಬಕ್ಬಕ್ಕರ್,
ಹೆರೆಷ್, ಗಾಲಾಲ್, ಮೀಕನ ಮಗನೂ ಜಿಕ್ರೀಯ
ಮೊಮ್ಮಗನೂ ಆಸಾಫನ ಮರಿಮಗನೂ ಆದ ಮತ್ತನ್ಯ,
ಶೆಮಾಯನ ಮಗನೂ ಗಾಲಾಲನ ಮೊಮ್ಮಗನೂ

1) ನೆಹೆ. 11. 4 ಅಮರ್ಯ. 2) ಪಾಠಾಂತರ: ಶಿಲೋಪಿನವರಲ್ಲಿ.

ಯೆದೂತೂನನ ಮರಿಮಗನೂ ಆದ ಓಬದ್ಯ, ನೆಟೋ
ಫಾತ್ಯರ ಗ್ರಾಮಗಳಲ್ಲಿ ವಾಸವಾಗಿದ್ದ ಎಲ್ಕಾನನ
ಮೊಮ್ಮಗನೂ ಆಸನ ಮಗನೂ ಆದ ಬೆರೆಕ್ಯ ಇವರೇ.
17 ದ್ವಾರಪಾಲಕರಲ್ಲಿ ಶಲ್ಲೂಮ್, ಅಕ್ಕೂಬ್,
ಟಲ್ಮೋನ್, ಅಹೀಮಾನ್, ಇವರೂ ಇವರ ಸಹೋದ
ರರೂ. ಇವರಲ್ಲಿ ಶಲ್ಲೂಮನು ಪ್ರಮುಖನಾಗಿದ್ದನು.
18 ಶಲ್ಲೂಮ್ಯರು ಇಂದಿನ ವರೆಗೂ ಪೂರ್ವದಿಕ್ಕಿನಲ್ಲಿ
ರುವ ಅರಸನ ಬಾಗಲನ್ನು ಕಾಯುತ್ತಿರುತ್ತಾರೆ. ಇವರು
19 ಲೇವಿಯರ ಪಾಳೆಯಗಳ ದ್ವಾರಪಾಲಕರು. ಕೋರೇ
ಯನ ಮಗನೂ ಎಬ್ಯಾಸಾಫನ ಮೊಮ್ಮಗನೂ ಕೋರ
ಹನ ಮರಿಮಗನೂ ಆದ ಶಲ್ಲೂಮನೂ ಅವನ ಗೋತ್ರ
ಬಂಧುಗಳಾದ ಮಿಕ್ಕ ಕೋರಹಿಯರೂ ಗುಡಾರದ
ದ್ವಾರಪಾಲಕಸೇವೆಗೆ ನೇಮಿಸಲ್ಪಟ್ಟರು. ಇವರ
ಪೂರ್ವಿಕರು ಯೆಹೋವನ ಪಾಳೆಯದ ಪ್ರವೇಶಸ್ಥಳ
20 ವನ್ನು ಕಾಯುವವರಾಗಿದ್ದರು. ಆಗ ಎಲ್ಲಾಜಾರನ
ಮಗನಾದ ಫೀನೆಹಾಸನು ಅವರ ನಾಯಕನಾಗಿ
ದ್ದನು; ಯೆಹೋವನು ಇವನ ಸಂಗಡ ಇದ್ದನು.
21 ಮೆಷೆಲೆಮ್ಯನ ಮಗನಾದ ಜೆಕರ್ಯನು ದೇವದರ್ಶನದ
22 ಗುಡಾರದ ದ್ವಾರಪಾಲಕನಾಗಿದ್ದನು. ದ್ವಾರಪಾಲಕ
ಸೇವೆಗೆ ಪ್ರತ್ಯೇಕಿಸಲ್ಪಟ್ಟವರು ಒಟ್ಟಿಗೆ ಇನ್ನೂರ ಹನ್ನೆ
ರಡು ಮಂದಿ; ಅವರ ಹೆಸರುಗಳು ಅವರವರ ಗ್ರಾಮ
ಗಳ ಪಟ್ಟಿಗಳಲ್ಲಿ ಲಿಖಿತವಾಗಿದ್ದವು. ದಾವೀದನೂ
ದರ್ಶಿಯಾದ ಸಮುವೇಲನೂ ಅವರನ್ನು ಈ ಉದ್ಯೋ
23 ಗಕ್ಕೆ ನೇಮಿಸಿದರು. ಅವರೂ ಅವರ ಮಕ್ಕಳೂ
ಯೆಹೋವನ ಮಂದಿರದ ಅಂದರೆ ಗುಡಾರದ ಬಾಗಲು
24 ಗಳನ್ನು ಕಾಯುತ್ತಿದ್ದರು. ಪೂರ್ವ ಪಶ್ಚಿಮ ಉತ್ತರ
ದಕ್ಷಿಣ ಈ ದಿಕ್ಕುಗಳಲ್ಲಿರುವ ಬಾಗಲುಗಳನ್ನು ಕಾ
25 ಯುವವರಾಗಿದ್ದರು. ಗ್ರಾಮಗಳಲ್ಲಿದ್ದ ಅವರ ಗೋತ್ರ
ಬಂಧುಗಳು ಅವರ ಸಂಗಡ ಕೆಲಸಮಾಡುವದ
ಕ್ಕೋಸ್ಕರ ಸರತಿಯ ಮೇಲೆ ಏಳೇಳು ದಿವಸ ಬರಬೇ
26 ಕಾಯಿತು. ಲೇವಿಯರಾದ ಮೇಲ್ಕಂಡ ನಾಲ್ಕು ಮಂದಿ
ದ್ವಾರಪಾಲಕಮುಖ್ಯಸ್ಥರು ಜವಾಬುದಾರರಾಗಿದ್ದು
ದೇವಾಲಯದ ಕೋಣೆಗಳನ್ನೂ ಭಂಡಾರಗಳನ್ನೂ
27 ನೋಡಿಕೊಳ್ಳುವವರಾಗಿದ್ದರು. ಅವರು ರಾತ್ರಿಯಲ್ಲಿ
ಯೂ ದೇವಾಲಯದ ಸುತ್ತಲೂ ಇಳುಕೊಂಡು ಅವುಗ
ಳನ್ನು ಕಾಯುತ್ತಿದ್ದರು; ಪ್ರತಿದಿನ ಬೆಳಿಗ್ಗೆ ಅವುಗಳನ್ನು
28 ತೆರೆಯುತ್ತಿದ್ದರು. ಇದಲ್ಲದೆ ಅವರಲ್ಲಿ ಕೆಲವರು
ಪೂಜಾಸಾಮಗ್ರಿಗಳನ್ನು ನೋಡಿಕೊಳ್ಳುವವರಾಗಿದ್ದರು.
ಅವುಗಳನ್ನು ಕೊಡುವಾಗಲೂ ತಿರಿಗಿ ತೆಗೆದುಕೊಳ್ಳು
29 ವಾಗಲೂ ಲೆಕ್ಕಿಸುತ್ತಿದ್ದರು. ಇನ್ನು ಕೆಲವರು ದೇವಾ
ಲಯದ ಎಲ್ಲಾ ಸಾಮಾನುಗಳ ಮೇಲ್ವಿಚಾರಕರೂ
ಗೋದಿಹಿಟ್ಟು, ದ್ರಾಕ್ಷಾರಸ, ಎಣ್ಣೆ, ಧೂಪ, ಪರಿಮಳ
ದ್ರವ್ಯ ಇವುಗಳ ಪಾರುಪತ್ಯಗಾರರೂ ಆಗಿದ್ದರು.
30 ಯಾಜಕಸಂತಾನದವರಲ್ಲಿ ಕೆಲವರು ಪರಿಮಳ
31 ದ್ರವ್ಯಗಳಿಂದ ತೈಲಮಾಡುತ್ತಿದ್ದರು. ಲೇವಿಯರಲ್ಲಿ
ಕೋರಹಿಯನಾದ ಶಲ್ಲೂಮನ ಚೊಚ್ಚಲಮಗನಾದ
ಮತ್ತಿತ್ಯನು ರೊಟ್ಟಿಸುಡುವ ಕೆಲಸದ ಮೇಲ್ವಿಚಾರ
32 ಕನು. ಅವರ ಸಹೋದರರಾದ ಮಿಕ್ಕ ಕೆಹಾತ್ಯ
ರಲ್ಲಿ ಕೆಲವರಿಗೆ ಪ್ರತಿ ಸಬ್ಬತ್ತಿನಲ್ಲಿ ನೈವೇದ್ಯದ ರೊಟ್ಟಿ
ಗಳನ್ನು ಕ್ರಮಪಡಿಸುವ ಕೆಲಸವಿತ್ತು.
[1])ವಾದ್ಯಗಾರರ ಪಟ್ಟಿ. ಅವರು ಲೇವಿಯ ಗೋತ್ರ 33
ಗಳಲ್ಲಿ ಪ್ರಧಾನರೂ ದೇವಾಲಯದ ಕೋಣೆಗಳಲ್ಲಿ
ವಾಸಿಸುವವರೂ ಆಗಿದ್ದರು. ಅವರು ಹಗಲಿರುಳೂ
ಕೆಲಸದಲ್ಲಿರುತ್ತಿದ್ದದರಿಂದ ಇತರ ಸೇವೆಯಿಂದ ಬಿಡು
ಗಡೆಹೊಂದಿದ್ದರು.
ಇವರು ವಂಶಾವಳಿಯ ಪ್ರಕಾರ ಲೇವಿಗೋತ್ರ 34
ಪ್ರಧಾನರೂ ಯೆರೂಸಲೇಮಿನಲ್ಲಿ ವಾಸಿಸುವವರೂ
ಆಗಿದ್ದರು.

ಸೌಲನ ವಂಶಾವಳಿ.

ಗಿಬ್ಯೋನಿನಲ್ಲಿ ಗಿಬ್ಯೋನ್ಯರ ಮೂಲಪುರುಷನಾದ 35
ಯೆಯೂವೇಲನು ವಾಸಿಸುತ್ತಿದ್ದನು. ಅವನ ಹೆಂಡ
ತಿಯ ಹೆಸರು ಮಾಕ; ಚೊಚ್ಚಲಮಗನು ಅಬ್ದೋ 36
ನನು; ತರುವಾಯ ಹುಟ್ಟಿದವರು—ಚೂರ್, ಕೀಷ್,
ಬಾಳ್, ನೇರ್, ನಾದಾಬ್, ಗೆದೋರ್, ಅಹ್ಯೋ, 37
ಜೆಕರ್ಯ, ಮಿಕ್ಲೋತ್ ಇವರೇ. ಮಿಕ್ಲೋತನು 38
ಶಿಮಾಮನನ್ನು ಪಡೆದನು. ಇವರು ತಮ್ಮ ಸಹೋದರ
ರಿಂದ ಬೇರೆಯಾಗಿ ಯೆರೂಸಲೇಮಿನಲ್ಲಿರುವ ತಮ್ಮ
ಕುಲಸಂಬಂಧಿಕರ ಜೊತೆಯಲ್ಲಿ ವಾಸಿಸುತ್ತಿದ್ದರು.
ನೇರನು ಕೀಷನನ್ನು ಪಡೆದನು; ಕೀಷನು ಸೌಲ 39
ನನ್ನು ಪಡೆದನು. ಸೌಲನು ಯೋನಾತಾನ್, ಮಲ್ಕೀ
ಷೂವ, ಅಬೀನಾದಾಬ್, ಎಷ್ಬಾಳ್ ಇವರನ್ನು ಪಡೆ
ದನು. ಯೋನಾತಾನನು ಮೆರೀಬ್ಬಾಳನನ್ನು ಪಡೆ 40
ದನು; ಮೆರೀಬ್ಬಾಳನು ಮೀಕನನ್ನು ಪಡೆದನು.
ಮೀಕನ ಮಕ್ಕಳು—ಪೀತೋನ್, ಮೆಲೆಕ್. ತಹ್ರೇಯ, 41
[ಆಹಾಜ್] ಇವರೇ. ಆಹಾಜನು ಯಗ್ರಾಹನನ್ನು 42
ಪಡೆದನು; ಯಗ್ರಾಹನು ಆಲೆಮೆತ್, ಅಜ್ಮಾವೆತ್,
ಜಿಮ್ರಿ ಇವರನ್ನು ಪಡೆದನು. ಜಿಮ್ರಿಯು ಮೋಚ
ನನ್ನು ಪಡೆದನು, ಮೋಚನು ಬಿನ್ನನನ್ನು ಪಡೆದನು; 43
ಇವನ ಮಗನು ರೆಫಾಯ; ಇವನ ಮಗನು ಎಲ್ಲಾಸ;
ಇವನ ಮಗನು ಆಚೇಲ್. ಆಚೇಲನಿಗೆ ಆರು ಮಂದಿ 44
ಮಕ್ಕಳಿದ್ದರು. ಅವರ ಹೆಸರುಗಳು—ಅಜ್ರೀಕಾಮ್,
ಬೋಕೆರೂ, ಇಷ್ಮಾಯೇಲ್, ಶೆಯರ್ಯ, ಓಬದ್ಯ,
ಹಾನಾನ್, ಇವೇ. ಇವರೆಲ್ಲರೂ ಆಚೇಲನ ಮಕ್ಕಳು.

ಅರಸನಾದ ದಾವೀದನ ಚರಿತ್ರೆ. 11—29.
ದಾವೀದನ ರಾಜಕೀಯಕಾರ್ಯಗಳು.
11. 1—21. 27.

ಸೌಲನ ಅಂತ್ಯವು.

10 ಫಿಲಿಷ್ಟಿಯರು ಇಸ್ರಾಯೇಲ್ಯರೊಡನೆ ಯುದ್ಧ
ಮಾಡಿದರು. ಇಸ್ರಾಯೇಲ್ಯರು ಅವರಿಂದ ಅಪ
ಜಯಹೊಂದಿ ಗಿಲ್ಬೋವ ಬೆಟ್ಟದಲ್ಲಿ ಹತರಾದರು.
ಫಿಲಿಷ್ಟಿಯರು ಸೌಲನನ್ನೂ ಅವನ ಮಕ್ಕಳನ್ನೂ 2
ಬಿಡದೆ ಹಿಂದಟ್ಟಿ ಅವನ ಮಕ್ಕಳಾದ ಯೋನಾತಾ

1) ಹೆಸರುಗಳ ಪಟ್ಟಿ ಬಿದ್ದುಹೋಯಿತು.

ನನನ್ನೂ ಅಬೀನಾದಾಬನನ್ನೂ ಮಲ್ಕೀಷೂವನನ್ನೂ
3 ಕೊಂದರು. ಸೌಲನಿದ್ದ ಕಡೆಯಲ್ಲಿ ಯುದ್ಧವು ಬಹು
ಘೋರವಾಗಿತ್ತು. ಬಿಲ್ಲುಗಾರರು ಅವನಿಗೆ ಗುರಿಯಿ
4 ಟ್ಟರು. ಆದದರಿಂದ ಸೌಲನು ಭೀತನಾಗಿ ತನ್ನ
ಆಯುಧವಾಹಕನಿಗೆ—ನಿನ್ನ ಕತ್ತಿಯನ್ನು ಹಿರಿದು
ನನ್ನನ್ನು ತಿವಿದು ಕೊಲ್ಲು; ಇಲ್ಲವಾದರೆ ಸುನ್ನತಿಯಿ
ಲ್ಲದ ಈ ಜನರು ಬಂದು ನನಗೆ ಅಪಕೀರ್ತಿಯನ್ನುಂಟು
ಮಾಡಾರು ಎಂದು ಹೇಳಲು ಅವನು ಹೆದರಿ ಒಲ್ಲೆನು
ಅಂದನು. ಆದದರಿಂದ ಸೌಲನು ತಾನೇ ಕತ್ತಿಯನ್ನು
5 ಹಿರಿದು ಅದರ ಮೇಲೆ ಬಿದ್ದನು. ಸೌಲನು ಸತ್ತ
ದ್ದನ್ನು ಅವನ ಆಯುಧವಾಹಕನು ಕಂಡು ತಾನೂ
6 ತನ್ನ ಕತ್ತಿಯ ಮೇಲೆ ಬಿದ್ದು ಸತ್ತನು. ಹೀಗೆ ಸೌಲ
ನೂ ಅವರ ಮೂರು ಮಂದಿ ಮಕ್ಕಳೂ ಅವನ ಮನೆ
7 ಯವರೆಲ್ಲರೂ ಅದೇ ದಿವಸದಲ್ಲಿ ಸತ್ತರು. ಇಸ್ರಾ
ಯೇಲ್ ಭಟರು ಸೋತರು, ಸೌಲನೂ ಅವನ ಮಕ್ಕ
ಳೂ ಸತ್ತರು ಎಂಬ ವರ್ತಮಾನವನ್ನು ತಗ್ಗಿನಲ್ಲಿ
ವಾಸವಾಗಿದ್ದ ಇಸ್ರಾಯೇಲ್ಯರೆಲ್ಲರೂ ಕೇಳಿ ತಮ್ಮ
ಪಟ್ಟಣಗಳನ್ನು ಬಿಟ್ಟು ಓಡಿಹೋದರು; ಫಿಲಿಷ್ಟಿಯರು
ಬಂದು ಅವುಗಳಲ್ಲಿ ವಾಸಿಸಿದರು.
8 ಮರುದಿನ ಬೆಳಿಗ್ಗೆ ಫಿಲಿಷ್ಟಿಯರು ಸತ್ತವರ ಒಡವೆ
ಗಳನ್ನು ಸುಲುಕೊಳ್ಳುವದಕ್ಕೆ ಬಂದಾಗ ಸೌಲನೂ
ಅವನ ಮೂರು ಮಂದಿ ಮಕ್ಕಳೂ ಗಿಲ್ಬೋವ ಬೆಟ್ಟ
9 ದಲ್ಲಿ ಸತ್ತುಬಿದ್ದಿರುವದನ್ನು ಕಂಡು ಸೌಲನಿಗಿರುವ
ದನ್ನು ಸುಲುಕೊಂಡು ಅವನ ತಲೆಯನ್ನೂ ಆಯುಧ
ಗಳನ್ನೂ ತಮ್ಮ ದೇಶದ ಎಲ್ಲಾ ಕಡೆಗೂ ಕಳುಹಿಸಿ
ತಮ್ಮ ದೇವತೆಗಳಿಗೂ ಜನರಿಗೂ ಜಯವಾರ್ತೆಯನ್ನು
ಮುಟ್ಟಿಸಿದರು. ಅವನ ಆಯುಧಗಳನ್ನು ತಮ್ಮ ದೇವ
10 ಸ್ಥಾನದಲ್ಲಿಟ್ಟರು; ಅವನ ಬುರುಡೆಯನ್ನು ದಾಗೋ
11 ನನ ಗುಡಿಯಲ್ಲಿ ಜಡಿದರು. ಫಿಲಿಷ್ಟಿಯರು ಸೌಲ
ನಿಗೆ ಏನೇನು ಮಾಡಿದರೆಂಬ ವರ್ತಮಾನವು ಯಾ
12 ಬೇಷ್ ಗಿಲ್ಯಾದಿನವರಿಗೆ ಮುಟ್ಟಿದಾಗ ಅವರಲ್ಲಿದ್ದ
ಶೂರರೆಲ್ಲರೂ ಹೊರಟುಹೋಗಿ ಸೌಲನ ಮತ್ತು ಅವನ
ಮಕ್ಕಳ ಶವಗಳನ್ನು ಯಾಬೇಷಿಗೆ ತೆಗೆದುಕೊಂಡು
ಬಂದು ಅವರ ಎಲುಬುಗಳನ್ನು ಅಲ್ಲಿದ್ದ ಏಲಾವೃಕ್ಷದ
ಕೆಳಗೆ ಸಮಾಧಿಮಾಡಿ ಏಳು ದಿವಸ ಉಪವಾಸಮಾಡಿ
ದರು.
13 ಸೌಲನು ಯೆಹೋವನ ಮಾತನ್ನು ಕೇಳದೆ ಆತನಿಗೆ
ವಿರೋಧವಾಗಿ ದ್ರೋಹಮಾಡಿದ್ದರಿಂದಲೂ ಯೆಹೋ
ವನ ಸನ್ನಿಧಿಯಲ್ಲಿ ವಿಚಾರಿಸದೆ ಪ್ರೇತಸಿದ್ಧರಲ್ಲಿ ವಿಚಾ
ರಿಸಿದ್ದರಿಂದಲೂ ಅವನಿಗೆ ಇಂಥ ಮರಣವಾಯಿತು.
14 ಯೆಹೋವನು ಅವನನ್ನು ಕೊಲ್ಲಿಸಿ ರಾಜ್ಯವನ್ನು ಇಷ
ಯನ ಮಗನಾದ ದಾವೀದನಿಗೆ ಒಪ್ಪಿಸಿದನು.

ದಾವೀದನು ಹೆಬ್ರೋನಿನಲ್ಲಿ ರಾಜ್ಯಾಭಿಷೇಕಹೊಂದಿದ್ದೂ
ಯೆರೂಸಲೇಮ್ ಪಟ್ಟಣವನ್ನು ಸ್ವಾಧೀನಮಾಡಿಕೊಂಡದ್ದೂ.

11 ಅನಂತರ ಇಸ್ರಾಯೇಲ್ಯರೆಲ್ಲರೂ ಹೆಬ್ರೋನಿನಲ್ಲಿ
ದ್ದ ದಾವೀದನ ಬಳಿಗೆ ಬಂದು ಕೂಡಿ ಅವನಿಗೆ—ನಾವು
ನಿನ್ನ ರಕ್ತಸಂಬಂಧಿಗಳಾಗಿದ್ದೇವೆ; ಹಿಂದಿನ ದಿವಸಗಳಲ್ಲಿ
ಅಂದರೆ ಸೌಲನ ಆಳಿಕೆಯಲ್ಲಿ ಇಸ್ರಾಯೇಲ್ಯರ ದಳಪತಿ
ಯಾಗಿ ಹೋಗುತ್ತಾ ಬರುತ್ತಾ ಇದ್ದವನು ನೀನೇ
ನಿನ್ನನ್ನು ಕುರಿತು ನಿನ್ನ ದೇವರಾದ ಯೆಹೋವನು—
ನೀನು ನನ್ನ ಪ್ರಜೆಗಳಾದ ಇಸ್ರಾಯೇಲ್ಯರ ನಾಯಕ
ನೂ ಪಾಲಕನೂ ಆಗಿರುವಿ ಎಂದು ಹೇಳಿದ್ದಾನಷ್ಟೆ
ಅಂದರು. ಆಗ ಅರಸನಾದ ದಾವೀದನು ತನ್ನ ಹತ್ತಿರ
ಹೆಬ್ರೋನಿಗೆ ಬಂದಿದ್ದ ಇಸ್ರಾಯೇಲ್ಯರ ಹಿರಿಯರೆಲ್ಲ
ರೊಡನೆ ಅಲ್ಲೇ ಯೆಹೋವನ ಸನ್ನಿಧಿಯಲ್ಲಿ ಒಡಂಬಡಿಕೆ
ಮಾಡಿಕೊಂಡನು. ಅವರು ಸಮುವೇಲನಿಗೆ ಯೆಹೋ
ವನಿಂದಾದ ಆಜ್ಞೆಗನುಸಾರವಾಗಿ ದಾವೀದನನ್ನು ಅಭಿಷೇ
ಕಿಸಿ ಇಸ್ರಾಯೇಲ್ಯರ ಅರಸನನ್ನಾಗಿ ಮಾಡಿದರು.
ದಾವೀದನು ಇಸ್ರಾಯೇಲ್ಯರೆಲ್ಲರನ್ನೂ ಕರಕೊಂಡು
ಯೆಬೂಸೆನಿಸಿಕೊಂಡಿದ್ದ ಯೆರೂಸಲೇಮಿಗೆ ವಿರೋಧ
ವಾಗಿ ಹೊರಟನು. ಆ ಪ್ರಾಂತದ ಮೂಲನಿವಾಸಿಗಳು
ಯೆಬೂಸಿಯರು. ಅವರು ದಾವೀದನಿಗೆ—ನೀನು ಒಳಗೆ
ಬರಲಾರಿ ಎಂದು ಹೇಳಿದರು. ಆದರೂ ಅವನು ದಾವೀ
ದನಗರವೆನಿಸಿಕೊಳ್ಳುವ ಚೀಯೋನ್ ಕೋಟೆಯನ್ನು
ಸ್ವಾಧೀನಮಾಡಿಕೊಂಡನು. ಆ ದಿವಸ ದಾವೀದನು—
ಯೆಬೂಸಿಯರನ್ನು ಯಾವನು ಮೊದಲು ಸೋಲಿಸು
ವನೋ ಅವನು ಪ್ರಮುಖನೂ ದಳಪತಿಯೂ ಆಗು
ವನು ಎಂದು ಹೇಳಲು ಚೆರೂಯಳ ಮಗನಾದ ಯೋ
ವಾಬನು ಮೊದಲು ಹತ್ತಿದ್ದರಿಂದ ಅವನೇ ಪ್ರಮುಖನಾ
ದನು. ದಾವೀದನು ಆ ಕೋಟೆಯನ್ನು ತನ್ನ ವಾಸಸ್ಥಾನ
ವನ್ನಾಗಿ ಮಾಡಿಕೊಂಡದರಿಂದ ಅದಕ್ಕೆ ದಾವೀದನಗರ
ವೆಂದು ಹೆಸರಾಯಿತು. ಅವನು ಮಿಲ್ಲೋವಿನಿಂದ
ಪ್ರಾರಂಭಿಸಿ ಸುತ್ತಲೂ ಪಟ್ಟಣವನ್ನು ಭದ್ರಪಡಿಸಿದನು.
ಯೋವಾಬನು ಪಟ್ಟಣದ ಉಳಿದ ಭಾಗವನ್ನು ಜೀರ್ಣೋ
ದ್ಧಾರಮಾಡಿದನು. ಸೈನ್ಯಾಧೀಶ್ವರನಾದ ಯೆಹೋವನು
ದಾವೀದನ ಸಂಗಡ ಇದ್ದದರಿಂದ ಅವನು ಅಭಿವೃದ್ಧಿ
ಯಾಗುತ್ತಾ ಹೋದನು.

ದಾವೀದನ ರಣವೀರರು.

ರಾಜ್ಯಸಂಬಂಧವಾಗಿ ದಾವೀದನಿಗೆ ವಿಶೇಷಸಹಾಯ
ಕರಾಗಿದ್ದು ಯೆಹೋವನ ಆಜ್ಞಾನುಸಾರವಾಗಿ ಇಸ್ರಾ
ಯೇಲ್ಯರೆಲ್ಲರೊಡನೆ ಅವನನ್ನು ಅರಸನನ್ನಾಗಿ ಮಾಡಿದ
ಮುಖ್ಯಸ್ಥರನ್ನು ಕುರಿತದ್ದು.

ದಾವೀದನ ರಣವೀರರ ಪಟ್ಟಿ—ಹಕ್ಮೋನಿಯನಾದ
ಯಾಷೊಬ್ಬಾಮನು ಮೂವತ್ತು ಮಂದಿ [1]ಶೂರರಲ್ಲಿ
ಮುಖ್ಯಸ್ಥನು. ಇವನು ತನ್ನ ಬರ್ಜಿಯನ್ನು ಬೀಸು
ತ್ತಾ ಹೋಗಿ ಒಂದೇ ಸಾರಿ ಮುನ್ನೂರು ಮಂದಿ
ಯನ್ನು ಕೊಂದನು. ಎರಡನೆಯವನು ಅಹೋಹ್ಯನಾದ
ದೋದೋ ಎಂಬವನ ಮಗನಾಗಿರುವ ಎಲ್ಲಾಜಾರನು;
ಇವನೂ ಆ ಮೂರು ಮಂದಿ ಶೂರರಲ್ಲಿ ಒಬ್ಬನು.
ಫಿಲಿಷ್ಟಿಯರು ಪಸ್ದಮ್ಮಿಮಿನಲ್ಲಿ ಯುದ್ಧಕ್ಕೆ ಕೂಡಿ
ಕೊಂಡಾಗ ಇವನು ದಾವೀದನ ಜೊತೆಯಲ್ಲಿದ್ದನು.
ಅಲ್ಲಿ ಒಂದು ಜವೆಗೋದಿಯ ಹೊಲವಿತ್ತು; ಇಸ್ರಾ

[1] ಪಾಠಾಂತರ: ನಾಯಕರಲ್ಲಿ.

ಯೇಲ್ಯರು ಫಿಲಿಷ್ಟಿಯರ ಎದುರಿನಿಂದ ಓಡಿಹೋಗಲು
14 ಆ ವೀರರು ಹೊಲದ ಮಧ್ಯದಲ್ಲೇ ನಿಂತುಕೊಂಡು
ಫಿಲಿಷ್ಟಿಯರನ್ನು ಕೊಂದು ಹೊಲವನ್ನು ಕಾಪಾಡಿದರು.
ಹೀಗೆ ಯೆಹೋವನು ಅವರಿಗೆ ಮಹಾಜಯವನ್ನುಂಟು
ಮಾಡಿದನು.
15 ದಾವೀದನು ಅದುಲ್ಲಾಮ್‌ಗಿರಿಯ ಗವಿಯಲ್ಲಿದ್ದಾಗ
ಅವನ ಮೂವತ್ತು ಮಂದಿ ಪ್ರಸಿದ್ಧಶೂರರಲ್ಲಿ ಮೂವರು
ಅವನ ಬಳಿಗೆ ಬಂದರು. ಫಿಲಿಷ್ಟಿಯರು ದಂಡೆತ್ತಿ
ಬಂದು ರೆಫಾಯಿಮ್ ತಗ್ಗಿನಲ್ಲಿ ಪಾಳೆಯಮಾಡಿ
16 ಕೊಂಡಿದ್ದು ಬೇತ್ಲೆಹೇಮಿನಲ್ಲಿ [1]ಒಂದು ಕಾವಲು
17 ದಂಡನ್ನು ಇಟ್ಟಿದ್ದರು. ಆಗ ದುರ್ಗದಲ್ಲಿದ್ದ ದಾವೀ
ದನು ಲವಲವಿಕೆಯಿಂದ—ಬೇತ್ಲೆಹೇಮ್ ಊರಿನ ಬಾ
ಗಲ ಬಳಿಯಲ್ಲಿರುವ ಬಾವಿಯ ನೀರನ್ನು ಯಾರಾದರೂ
ನನಗೆ ತಂದುಕೊಡುವದಾದರೆ ಎಷ್ಟೋ ಒಳ್ಳೇದು ಎಂದು
18 ಹೇಳಿದನು. ಕೂಡಲೆ ಆ ಮೂರು ಮಂದಿ ವೀರರು
ಫಿಲಿಷ್ಟಿಯರ ದಂಡಿನೊಳಗೆ ನುಗ್ಗಿ ಹೋಗಿ ಬೇತ್ಲೆಹೇಮಿನ
ಬಾಗಲ ಬಳಿಯಲ್ಲಿರುವ ಬಾವಿಯ ನೀರನ್ನು ಸೇದಿ
ದಾವೀದನಿಗೆ ತಂದುಕೊಟ್ಟರು. ಆದರೆ ಅವನು ಅದನ್ನು
19 ಕುಡಿಯಲೊಲ್ಲದೆ—ತಮ್ಮ ಜೀವವನ್ನು ಸಮರ್ಪಿಸಿದ
ಈ ಪುರುಷರ ರಕ್ತವನ್ನು ನಾನು ಕುಡಿಯಲೋ! ನನ್ನ
ದೇವರು ಈ ಕಾರ್ಯವನ್ನು ನನಗೆ ದೂರಮಾಡಲಿ.
ಅವರು ತಮ್ಮ ಜೀವವನ್ನೇ ಸಮರ್ಪಿಸಿ ಇದನ್ನು ತಂದು
ಕೊಟ್ಟರು. ನಾನು ಇದನ್ನು ಕುಡಿಯುವದೇ ಇಲ್ಲ
ಎಂದು ಹೇಳಿ ಅದನ್ನು ಯೆಹೋವನ ಮುಂದೆ ಹೊಯ್ದ
ನು. ಆ ಮೂರು ಮಂದಿಯ ಪರಾಕ್ರಮವು ಇದೇ.
20 ಯೋವಾಬನ ತಮ್ಮನಾದ ಅಬ್ಷೈಯು [ಬೇರೆ]
ಮೂರು ಮಂದಿಯಲ್ಲಿ ಮುಖ್ಯಸ್ಥನು. ಇವನು ತನ್ನ
ಬರ್ಜಿಯನ್ನು ಬೀಸುತ್ತಾ ಹೋಗಿ ಮುನ್ನೂರು ಮಂದಿ
ಯನ್ನು ಕೊಂದದರಿಂದ ಈ ಮೂವರಲ್ಲಿ ಕೀರ್ತಿಗೊಂಡ
21 ನು. ಉಳಿದ ಇಬ್ಬರಿಗಿಂತ ಇವನೇ ಘನವಾದವನಾದದ
ರಿಂದ ಅವರ ನಾಯಕನಾದನು. ಆದರೂ ಇವನು
ಮೊದಲಿನ ಮೂರು ಮಂದಿಗೆ ಸಮಾನನಾಗಿರಲಿಲ್ಲ.
22 ಅನೇಕಶೂರಕೃತ್ಯಗಳನ್ನು ನಡಿಸಿದ ಕಬ್ಜಯೇಲಿನವ
ನಾದ ಪರಾಕ್ರಮಶಾಲಿಯ ಮೊಮ್ಮಗನೂ ಯೆಹೋ
ಯಾದನ ಮಗನೂ ಆದ ಬೆನಾಯನು ಇನ್ನೊಬ್ಬನು.
ಇವನು ಒಂದು ಸಾರಿ ಮೋವಾಬ್ಯನಾದ ಅರೀಯೇಲನ
ಇಬ್ಬರು ಮಕ್ಕಳನ್ನು ಕೊಂದನು. ಇನ್ನೊಮ್ಮೆ ಹಿಮ
ಕಾಲದಲ್ಲಿ ಒಂದು ಸಿಂಹವು ಗುಂಡಿಯಲ್ಲಿ ಬಿದ್ದಿರಲು
ಇವನು ಆ ಗುಂಡಿಗೆ ಇಳಿದು ಹೋಗಿ ಅದನ್ನು
23 ಕೊಂದನು. ಮತ್ತೊಮ್ಮೆ ಐದು ಮೊಳ ಎತ್ತರವಾದ
ಒಬ್ಬ ಐಗುಪ್ತ್ಯನನ್ನು ಕೊಂದನು. ಆ ಐಗುಪ್ತ್ಯನ
ಕೈಯಲ್ಲಿ ನೇಯ್ಗೆಗಾರರ ಕುಂಟೆಯಂತಿರುವ ಒಂದು
ಬರ್ಜಿಯಿತ್ತು. ಇವನು ಕೈಯಲ್ಲಿ ಒಂದು ಕೋಲನ್ನು
ಮಾತ್ರ ಹಿಡಿದುಕೊಂಡು ಹೋಗಿ ಅವನ ಕೈಯಲ್ಲಿದ್ದ
ಬರ್ಜಿಯನ್ನು ಕಿತ್ತುಕೊಂಡು ಅದರಿಂದ ಅವನನ್ನು
24 ಕೊಂದನು. ಈ ಪರಾಕ್ರಮಕೃತ್ಯದಿಂದ ಯೆಹೋ
ಯಾದನ ಮಗನಾದ ಬೆನಾಯನು ಈ ಮೂವರಲ್ಲಿ
25 ಹೆಸರುಗೊಂಡನು. ಮೂವತ್ತು ಮಂದಿಯಲ್ಲಿ ಇವನು
ವಿಶೇಷಕೀರ್ತಿಯನ್ನು ಹೊಂದಿದರೂ ಮೊದಲಿನ ಮೂವ
ರಿಗೆ ಸಮಾನನಾಗಿರಲಿಲ್ಲ. ದಾವೀದನು ಇವನನ್ನು
ತನ್ನ ಕಾವಲುದಂಡಿನ ಮುಖ್ಯಸ್ಥನನ್ನಾಗಿ ಮಾಡಿದನು.
ರಣವೀರರ ಇನ್ನೊಂದು ಪಟ್ಟಿ—ಯೋವಾಬನ 26
ತಮ್ಮನಾದ ಅಸಾಹೇಲನು, ಬೇತ್ಲೆಹೇಮಿನ ದೋದೋ
ವಿನ ಮಗನಾದ ಎಲ್ಹಾನಾನ್, ಹರೋರಿನವನಾದ 27
ಶಮ್ಮೋತ್, ಪೆಲೋನ್ಯನಾದ ಹೆಲೆಚ್, ತೆಕೋವದ 28
ಇಕ್ಕೇಷನ ಮಗನಾದ ಈರ, ಅನತೋತಿನವನಾದ ಅಬೀ
ಯೆಜೆರ್, ಹುಷ ಊರಿನವನಾದ ಸಿಬ್ಕೈ, ಅಹೋಹಿ 29
ನವನಾದ ಈಲೈ, ನೆಟೋಫದವನಾದ ಮಹರೈ, 30
ನೆಟೋಫದವನಾದ ಬಾಣನ ಮಗ ಹೇಲೆದ್, ಬೆನ್ಯಾ 31
ಮೀನ್ ದೇಶದ ಗಿಬೆಯ ಊರಿನ ರೀಬೈ ಎಂಬವನ
ಮಗನಾದ ಈತೈ, ಪಿರಾತೋನ್ಯನಾದ ಬೆನಾಯ, ನಹ 32
ಲೇಗಾಷಿನವನಾದ ಹೂರೈ, ಅರಾಬಾತಗ್ಗಿನವನಾದ
ಅಬೀಯೇಲ್, ಬಹರೂಮ್ಯನಾದ ಅಜ್ಮಾವೆತ್, 33
ಶಾಲ್ಬೋನ್ಯನಾದ ಎಲೆಯಖ್ಬ, ಗೀಜೋನ್ಯನಾದ ಹಾಷೇ 34
ಮನ ಮಕ್ಕಳು, ಹರಾರ್ಯನಾದ ಶಾಗೇಯನ ಮಗ
ಯೋನಾತಾನನು, ಹರಾರ್ಯನಾದ ಶಾಕಾರನ ಮಗ 35
ಅಹೀಯಾಮ್, ಊರನ ಮಗನಾದ ಎಲೀಫಲ್, ಮೆಕೆ 36
ರಾತ್ಯನಾದ ಹೇಫೆರ್, ಫೆಲೋನ್ಯನಾದ ಅಹೀಯ,
ಕರ್ಮೆಲ್ಯನಾದ ಹೆಚ್ರೋ, ಎಜ್ಬೈಯ ಮಗನಾದ 37
ನಾರೈ, ನಾತಾನನ ತಮ್ಮನಾದ ಯೋವೇಲ್, ಹಗ್ರೀ 38
ಯನ ಮಗನಾದ ಮಿಬ್ಹಾರ್, ಅಮ್ಮೋನಿಯನಾದ 39
ಚೆಲೆಕ್, ಬೇರೋತ್ಯನೂ ಚೆರೂಯಳ ಮಗನಾದ ಯೋ
ವಾಬನ ಆಯುಧವಾಹಕನೂ ಆಗಿದ್ದ ನಹರೈ, ಇತ್ರೀ 40
ಯರಾದ ಈರ ಗಾರೇಬರು, ಹಿತ್ತೀಯನಾದ ಊರೀ 41
ಯ, ಅಹ್ಲೈಯ ಮಗನಾದ ಜಾಬಾದ್, ರೂಬೇನ್ಯನೂ
ತನ್ನ ಜೊತೆಯಲ್ಲಿ ಬಂದ ಮೂವತ್ತು ಮಂದಿ ರೂಬೇ 42
ನ್ಯರ ಮುಖ್ಯಸ್ಥನೂ ಶೀಜನ ಮಗನೂ ಆದ ಅದೀನ,
ಮಾಕನ ಮಗನಾದ ಹಾನಾನ್, ಮೆತೆನ ಊರಿನವನಾದ 43
ಯೋಷಾಫಾಟ್, ಅಷ್ಟೆರಾತ್ಯನಾದ ಉಜ್ಜೀಯ, ಅರೋ 44
ಯೇರಿನ ಹೋತಾಮನ ಮಕ್ಕಳಾದ ಶಾಮಾ ಯೆಗೀ
ಯೇಲರು, ಶಿಮ್ರಿಯ ಮಗನಾದ ಎದೀಗಯೇಲ್, 45
ಎದೀಗಯೇಲನ ತಮ್ಮನೂ ತೀಚೇಯನೂ ಆದ
ಯೋಹ, ಮಹವೀಯನಾದ ಎಲೀಯೇಲ್, ಎಲ್ನಾ 46
ಮನ ಮಕ್ಕಳಾದ ಯೆರೀಬೈ ಯೋಷವ್ಯರು, ಮೋವಾ
ಬ್ಯನಾದ ಇತ್ಮ, ಎಲೀಯೇಲ್ ಓಬೇದರು, ಮೆಚೋ 47
ಬಾಯದವನಾದ ಯಾಸೀಯೇಲನು ಇವರೇ.

ದಾವೀದನು ಸೌಲನಿಂದ ಓಡಿಹೋದ ಸಮಯದಲ್ಲಿ
ಅವನನ್ನು ಕೂಡಿಕೊಂಡ ಯುದ್ಧಸ್ಥರು.

12 ದಾವೀದನು ಕೀಷನ ಮಗನಾದ ಸೌಲನಿಗೆ
ಹೆದರಿ ಚಿಕ್ಲಗಿನಲ್ಲಿ ಅಡಗಿಕೊಂಡಿದ್ದಾಗ ಜಿಲ್ಲು 2
ಗಾರರೂ ಎಡಬಲಕೈಗಳಿಂದ ಕಲ್ಲುಗಳನ್ನೂ ಬಾಣಗ
ಳನ್ನೂ ಎಸೆಯಬಲ್ಲವರೂ ಆಗಿದ್ದು ಯುದ್ಧದಲ್ಲಿ
ಸಹಾಯಮಾಡುವದಕ್ಕಾಗಿ ಅವನ ಬಳಿಗೆ ಬಂದ ರಣ
ವೀರರ ಪಟ್ಟಿ.

[1] ಅಥವಾ, ಒಬ್ಬ ಅಧಿಕಾರಿಯನ್ನು.

3 ಸೌಲನ ಕುಲಬಂಧುಗಳಾದ ಬೆನ್ಯಾಮೀನ್ಯರಲ್ಲಿ—
ಮುಖ್ಯಸ್ಥನಾದ ಅಹೀಯೆಜೆರ್ ಮತ್ತು ಯೋವಾಷ
ಎಂಬ ಹೆಸರುಗಳುಳ್ಳ ಗಿಬೆಯ ಊರಿನ ಹಷ್ಷೆಮಾಹನ
ಮಕ್ಕಳು, ಅಜ್ಮಾವೆತನ ಮಕ್ಕಳಾದ ಯೆಜೀಯೇಲ್
ಪೆಲೆಟರು, ಅನತೋತ ಊರಿನವರಾದ ಯೇಹು ಬೆರಾ
4 ಕಾರು, ಮೂವತ್ತು ಮಂದಿ ಭಟರಲ್ಲಿ ಶೂರನೂ
ಮುಖ್ಯಸ್ಥನೂ ಆದ ಗಿಬ್ಯೋನಿನ ಇಷ್ಮಾಯ,
ಗೆದೇರಾ ಊರಿನವರಾದ ಯೆರೆಮೀಯ ಯಹಜೀ
5 ಯೇಲ್ ಯೋಹಾನಾನ್ ಯೋಜಾಬಾದರು, ಹರೀ
ಫ್ಯರಾದ ಎಲ್ಊಜೈ ಯೆರೀಮೋತ್ ಬೆಯಲ್ಯ
6 ಶೆಮರ್ಯ ಶೆಫಟ್ಯರು, ಕೋರಹಿಯರಾದ ಎಲ್ಕಾನ
ಇಷ್ಷೀಯ ಅಜರೇಲ್ ಯೋವೆಜೆರ್ ಯಾಷೊಬ್ಬಾ
7 ಮರು, ಗೆದೋರಿನ ಯೆರೋಹಾಮನ ಮಕ್ಕಳಾದ
ಯೋವೇಲ ಜೆಬದ್ಯರು ಇವರೇ.

8 ರಣವೀರರೂ ಯುದ್ಧನಿಪುಣರೂ ಗುರಾಣಿಬರ್ಜಿ
ಗಳಲ್ಲಿ ಪ್ರವೀಣರೂ ಸಿಂಹಮುಖರೂ ಬೆಟ್ಟದ ಜಿಂಕೆ
ಯಂತೆ ಪಾದತ್ವರಿತರೂ ಆಗಿದ್ದು ದಾವೀದನು ಅರಣ್ಯ
ದುರ್ಗದಲ್ಲಿದ್ದಾಗ ಅವನನ್ನು ಕೂಡಿಕೊಂಡ ಗಾದ್ಯ
9 ರು—ಮುಖ್ಯಸ್ಥನು ಏಜೆರ್, ಎರಡನೆಯವನು ಓಬದ್ಯ,
10 ಮೂರನೆಯವನು ಎಲೀಯಾಬ್, ನಾಲ್ಕನೆಯವನು
11 ಮಷ್ಮನ್ನ, ಐದನೆಯವನು ಯೆರೆಮೀಯ, ಆರನೆಯ
12 ವನು ಅತ್ತೈ, ಏಳನೆಯವನು ಎಲೀಯೇಲ್, ಎಂಟನೆ
ಯವನು ಯೋಹಾನಾನ್, ಒಂಭತ್ತನೆಯವನು ಎಲ್ಜಾ
13 ಬಾದ್, ಹತ್ತನೆಯವನು ಯೆರೆಮೀಯ, ಹನ್ನೊಂದನೆ
14 ಯವನು ಮಕ್ಬನ್ನೈ ಇವರೇ. ಗಾದ್ಯರಾದ ಇವರು
ಸೈನ್ಯಾಧಿಪತಿಗಳಾಗಿದ್ದರು; ಇವರಲ್ಲಿ ಕನಿಷ್ಠನಾದವನು
ನೂರು ಮಂದಿಗೆ ಸಮನು; ಶ್ರೇಷ್ಠನಾದವನು ಸಾವಿರ
15 ಮಂದಿಗೆ ಸಮಬಲನು. ಯೊರ್ದನ್ ನದಿಯು ಪ್ರಥ
ಮ ಮಾಸದಲ್ಲಿ ದಡತುಂಬಿ ಹರಿಯುತ್ತಿರುವಾಗ ಅದ
ನ್ನು ದಾಟಿ ನದಿಯ ತಗ್ಗಿನ ಪೂರ್ವಪಶ್ಚಿಮ ಪ್ರದೇಶಗ
ಳವರೆಲ್ಲರನ್ನೂ ಓಡಿಸಿಬಿಟ್ಟವರು ಇವರೇ.

16 [ಒಂದಾನೊಂದು ದಿವಸ] ಬೆನ್ಯಾಮೀನ್ ಯೂದ
ಕುಲದವರಲ್ಲಿ ಕೆಲವರು ದಾವೀದನಿದ್ದ ದುರ್ಗದ
ಬಳಿಗೆ ಬರಲು ದಾವೀದನು ಹೊರಗೆ ಹೋಗಿ ಅವ
17 ರೆದುರಿಗೆ ನಿಂತು ಅವರಿಗೆ—ನೀವು ಸ್ನೇಹಭಾವದಿಂದ
ಸಹಾಯಮಾಡುವದಕ್ಕಾಗಿ ನನ್ನ ಬಳಿಗೆ ಬಂದಿರುವ
ದಾದರೆ ನಿಮ್ಮೊಡನೆ ನನಗೆ ಐಕ್ಯಭಾವವಿರುವದು; ನಿರ
ಪರಾಧಿಯಾದ ನನ್ನನ್ನು ನನ್ನ ವಿರೋಧಿಗಳಿಗೆ ಒಪ್ಪಿ
ಸುವ ಕುಯುಕ್ತಿಯಿಂದ ಬಂದಿರುವದಾದರೆ ನಮ್ಮ
ಪಿತೃಗಳ ದೇವರು ನಿಮ್ಮನ್ನು ನೋಡಿ ದಂಡಿಸಲಿ ಅಂದ
18 ನು. ಆಗ ಮೂವತ್ತು ಮಂದಿಯಲ್ಲಿ ಮುಖ್ಯಸ್ಥನಾದ
ಅಮಾಸೈಯು ಆತ್ಮಾವೇಶವುಳ್ಳವನಾಗಿ—

ದಾವೀದನೇ, ನಾವು ನಿನ್ನವರು; ಶುಭವಾಗಲಿ!
ಇಷಯನ ಮಗನೇ, ನಾವು ನಿನ್ನ ಪಕ್ಷದವರು,
ಶುಭವಾಗಲಿ!
ನಿನಗೂ ನಿನ್ನ ಸಹಾಯಕರಿಗೂ ಶುಭವಾಗಲಿ!
ನಿನ್ನ ದೇವರು ನಿನಗೆ ಜಯಪ್ರದನಾಗಿದ್ದಾನೆ

ಎಂದು ನುಡಿದನು. ಆಗ ದಾವೀದನು ಅವರನ್ನು ತನ್ನ ಜೊತೆಯಲ್ಲಿ ಸೇರಿಸಿಕೊಂಡು ಸೈನ್ಯಾಧಿಪತಿಗಳನ್ನಾಗಿ ನೇಮಿಸಿದನು.

ಸೌಲನಿಗೆ ವಿರುದ್ಧವಾಗಿ ಯುದ್ಧಕ್ಕೆ ಹೋಗು ಫಿಲಿಷ್ಟಿಯರ ಜೊತೆಯಲ್ಲಿ ದಾವೀದನೂ ಹೋಗು ರುವಾಗ ಕೆಲವು ಮಂದಿ ಮನಸ್ಸೆಯವರು ಬಂ ಅವನನ್ನು ಕೂಡಿಕೊಂಡರು. ದಾವೀದನು ನಿಜವಾ ಫಿಲಿಷ್ಟಿಯರಿಗೆ ಸಹಾಯಕನಾಗಲಿಲ್ಲ; ಅವರ ಪ್ರಭ ಗಳು—ಇವನು ನಮ್ಮ ತಲೆಗಳನ್ನು ಕಡಿದು ತಿರಿ ತನ್ನ ಯಜಮಾನನಾದ ಸೌಲನೊಂದಿಗೆ ಸೇರಿಕೊಂಡ ನು ಎಂಬದಾಗಿ ಆಲೋಚಿಸಿ ಅವನನ್ನು ಹಿಂದ ಕಳುಹಿಸಿದರು. ಅವನು ಹಿಂದಿರುಗಿ ಚಿಕ್ಲಗಿಗೆ ಹೋ ಗುವಾಗ ಮನಸ್ಸೆಕುಲದ ಸಹಸ್ರಾಧಿಪತಿಗಳಾದ ಅದ್ನ ಯೋಜಾಬಾದ್, ಎದೀಗಯೇಲ್, ಮೀಕಾಯೇಲ ಯೋಜಾಬಾದ್, ಎಲೀಹೂ, ಚಿಲ್ಲೆತೈ ಎಂಬವರು ಬಂದ ಸೇರಿಕೊಂಡರು. ರಣವೀರರೂ ಸೇನಾಧಿಪತಿಗಳ ಆದ ಇವರೆಲ್ಲರೂ ಸುಲಿಗೆಗುಂಪುಗಳಿಗೆ ವಿರೋಧವಾ ದಾವೀದನಿಗೆ ಸಹಾಯಮಾಡುವವರಾದರು. ದಾವಿ ದನ ಸಹಾಯಕ್ಕೆ ಪ್ರತಿದಿನವೂ ಹೊಸ ಗುಂಪುಗಳ ಬರುತ್ತಿದ್ದವು; ಅವನ ಸೈನ್ಯವು ದೇವಸೈನ್ಯದಷ ದೊಡ್ಡದಾಯಿತು.

ದಾವೀದನ ಪಟ್ಟಾಭಿಷೇಕಕ್ಕೋಸ್ಕರ ಹೆಬ್ರೋನಿಗೆ
ಬಂದ ಭಟರು.

ಯೆಹೋವನ ಆಜ್ಞೆಯಂತೆ ಸೌಲನ ರಾಜ್ಯವನ ದಾವೀದನಿಗೆ ಒಪ್ಪಿಸುವದಕ್ಕೋಸ್ಕರ ಹೆಬ್ರೋನಿ ಲ್ಲಿದ್ದ ಅವನ ಬಳಿಗೆ ಗುಂಪುಗುಂಪುಗಳಾಗಿ ಬಂ ಯುದ್ಧಸನ್ನದ್ಧರ ಲೆಕ್ಕ—ಯೆಹೂದ್ಯರಿಂದ ಬರ್ಜಿಗ ರಾಣಿಗಳನ್ನು ಹಿಡಿದ ಸೈನಿಕರು ಆರು ಸಾವಿರದ ಎಂಟ ನೂರು ಮಂದಿ; ಸಿಮೆಯೋನ್ಯರಿಂದ ಏಳು ಸಾವಿರ ನೂರು ಮಂದಿ ರಣವೀರರು; ಲೇವಿಯರಿಂದ ನಾಲು ಸಾವಿರದ ಆರು ನೂರು ಮಂದಿಯಲ್ಲದೆ ಆರೋನ್ಯ ಮುಖ್ಯಸ್ಥನಾದ ಯೆಹೋಯಾದಾವನೂ ಅವ ಮೂರು ಸಾವಿರದ ಏಳು ನೂರು ಮಂದಿ ಸೈನಿಕರೂ ಪರಾಕ್ರಮಶಾಲಿಯಾದ ಚಾದೋಕನೆಂಬ ಯೌ ನಸ್ಥನೂ ಅವನ ಕುಟುಂಬದವರಾದ ಇಪ್ಪತ್ತೆರಡ ಮಂದಿ ಅಧಿಪತಿಗಳೂ; ಸೌಲನ ಸಂಬಂಧಿಕರಾ ಬೆನ್ಯಾಮೀನ್ಯರಲ್ಲಿ ಮೂರು ಸಾವಿರ ಮಂದಿ; ವರೆಗೆ ಬೆನ್ಯಾಮೀನ್ಯರಲ್ಲಿ ಹೆಚ್ಚಿನ ಭಾಗದವರು ಸೌಲ ಮನೆಯವರೊಂದಿಗೆ ಹೊಂದಿಕೊಂಡಿದ್ದರು. ಎಫ್ರಾ ಯೀಮಿನ ಆಯಾ ಗೋತ್ರಗಳಲ್ಲಿ ಪ್ರಸಿದ್ಧರಾದ ಇಪ್ ತ್ತು ಸಾವಿರದ ಎಂಟು ನೂರು ಮಂದಿ ಮಹಾರ ವೀರರು; ಮನಸ್ಸೆಯ ಅರ್ಧ ಕುಲದಿಂದ ದಾವೀದ ಪಟ್ಟಾಭಿಷೇಕಕ್ಕೆ ಹೋಗಬೇಕೆಂದು ಹೆಸರುಹೆಸರಾ ನೇಮಿಸಲ್ಪಟ್ಟ ಹದಿನೆಂಟು ಸಾವಿರ ಮಂದಿ; ಇಸ್ಸಾಕ ರ್ಯರಿಂದ ಇನ್ನೂರು ಮಂದಿ ಮುಖ್ಯಸ್ಥರು; ಇವರ ಸಮಯೋಚಿತಜ್ಞಾನವುಳ್ಳವರಾಗಿ ಇಸ್ರಾಯೇಲ್ಯರ ಮಾಡತಕ್ಕದ್ದನ್ನು ಅರಿತವರು; ಇವರ ಸಹೋದರ ಲ್ಲರೂ ಇವರ ಆಜ್ಞೆಗೆ ಒಳಗಾಗಿದ್ದರು; ಜೆಬುಲೂನ್ ರಿಂದ ಯುದ್ಧಪ್ರವೀಣರೂ ಸರ್ವಾಯುಧಗಳನ್ನು ಧರಿ ವ್ಯೂಹಕಟ್ಟ ಬಲ್ಲವರೂ ದೃಢಚಿತ್ತರೂ ಆದ ಐವತ್ ಸಾವಿರ ಮಂದಿ; ನಫ್ತಾಲಿಯರಿಂದ ಸಾವಿರ ಮಂ

ನಾಯಕರೂ ಗುರಾಣಿಬರ್ಜಿಗಳನ್ನು ಹಿಡಿದಿರುವ ಮೂ
5 ವತ್ತೇಳು ಸಾವಿರ ಮಂದಿ ಸೈನಿಕರೂ; ದಾನ್ಯರಿಂದ
ಇಪ್ಪತ್ತೆಂಟು ಸಾವಿರದ ಆರು ನೂರು ಮಂದಿ ಯುದ್ಧ
6 ನಿಪುಣರು; ಆಶೇರ್ಯರಿಂದ ಕಾಳಗಕ್ಕೆ ಸಿದ್ಧರಾದ
7 ನಾಲ್ವತ್ತು ಸಾವಿರ ಮಂದಿ ಯುದ್ಧನಿಪುಣರು; ಯೊರ್ದ
ನಿನ ಆಚೆಯಲ್ಲಿದ್ದ ರೂಬೇನ್ ಗಾದ್ ಅರ್ಧಮನಸ್ಸೆ
ಕುಲಗಳಿಂದ ಸರ್ವಾಯುಧಧಾರಿಗಳಾದ ಒಂದು ಲಕ್ಷದ
ಇಪ್ಪತ್ತು ಸಾವಿರ ಮಂದಿ.
8 ದಾವೀದನನ್ನು ಇಸ್ರಾಯೇಲ್ಯರೆಲ್ಲರ ಅರಸನನ್ನಾಗಿ
ಮಾಡುವದಕ್ಕೋಸ್ಕರ ಯುದ್ಧನಿಪುಣರಾದ ಈ ಎಲ್ಲಾ
ಸೈನಿಕರು ಪೂರ್ಣಮನಸ್ಸಿನಿಂದ ಹೆಬ್ರೋನಿಗೆ ಬಂದರು.
ಉಳಿದ ಎಲ್ಲಾ ಇಸ್ರಾಯೇಲ್ಯರು ದಾವೀದನಿಗೆ ರಾಜ್ಯಾ
ಭಿಷೇಕಮಾಡುವದರಲ್ಲಿ ಏಕಮನಸ್ಸುಳ್ಳವರಾಗಿದ್ದರು.
9 ಅವರು ಅಲ್ಲಿ ಮೂರು ದಿವಸ ದಾವೀದನ ಸಂಗಡ
ಇದ್ದು ಅನ್ನಪಾನಗಳನ್ನು ತೆಗೆದುಕೊಂಡರು; ಅವರ
ಸಹೋದರರು ಅವರಿಗೋಸ್ಕರ ಎಲ್ಲವನ್ನೂ ಸಿದ್ಧಪಡಿಸಿ
0 ದರು. ಇದಲ್ಲದೆ ಇಸ್ಸಾಕಾರ್ ಜೆಬುಲೂನ್ ನಫ್ತಾಲಿ
ಮೊದಲುಗೊಂಡು ಎಲ್ಲಾ ಸಮೀಪ ಪ್ರಾಂತಗಳವರು
ಎತ್ತು, ಕತ್ತೆ, ಹೇಸರಕತ್ತೆ, ಒಂಟೆ ಇವುಗಳ ಮೇಲೆ
ಆಹಾರಪದಾರ್ಥಗಳನ್ನು ಹೇರಿಕೊಂಡು ಬಂದರು.
ಅವರು ತಂದವುಗಳಾವವಂದರೆ—ತರತರದ ರೊಟ್ಟಿ,
ಅಂಜೂರಹಣ್ಣಿನ ಉಂಡೆ, ಒಣಗಿದ ದ್ರಾಕ್ಷೀಗೊಂಚಲು,
ದ್ರಾಕ್ಷಾರಸ, ಎಣ್ಣೆ, ಅನೇಕ ದನಕುರಿಗಳು ಇವೇ.
ಇಸ್ರಾಯೇಲ್ಯರೊಳಗೆ ಮಹಾ ಸಂತೋಷವಿತ್ತಷ್ಟೆ.

ಯೆಹೋವನ ಮಂಜೂಷವನ್ನು ಕಿರ್ಯತ್ಯಾರೀಮಿನಿಂದ
ತೆಗೆದುಕೊಂಡು ಬರುವಾಗ ದಾರಿಯಲ್ಲಿ ಆಪತ್ತು
ಸಂಭವಿಸಿದ್ದು.

13 ದಾವೀದನು ಸಹಸ್ರಾಧಿಪತಿ ಶತಾಧಿಪತಿ ಮೊದ
ಲಾದ ಸರ್ವಪ್ರಭುಗಳೊಡನೆ ಮಾತಾಡಿದನಂತರ
2 ಇಸ್ರಾಯೇಲ್‌ಸಮಸ್ತಸಮೂಹದವರಿಗೆ—ನಿಮ್ಮ ಸಮ್ಮ
ತಿಯೂ ನಮ್ಮ ದೇವರಾದ ಯೆಹೋವನ ಚಿತ್ತವೂ
ಇರುವದಾದರೆ ನಾವು ಎಲ್ಲಾ ಇಸ್ರಾಯೇಲ್‌ಪ್ರಾಂತ
ಗಳಲ್ಲಿರುವ ನಮ್ಮ ಸಹೋದರರನ್ನೂ ಗೋಮಾಳಸಹಿ
ತವಾದ ತಮ್ಮ ಪಟ್ಟಣಗಳಲ್ಲಿರುವ ಯಾಜಕ ಲೇವಿಯ
3 ರನ್ನೂ ಶೀಘ್ರವಾಗಿ ಕರೇಕಳುಹಿಸೋಣ. ಅವರು
ನಮ್ಮ ಬಳಿಗೆ ಕೂಡಿಬಂದ ಮೇಲೆ ನಾವು ಸೌಲನ
ಕಾಲದಲ್ಲಿ ಅಲಕ್ಷ್ಯಮಾಡಿದ ನಮ್ಮ ದೇವಮಂಜೂಷ
4 ವನ್ನು ತೆಗೆದುಕೊಂಡು ಬರೋಣ ಅನ್ನಲು ಅವರೆಲ್ಲರೂ
ಆ ಮಾತಿಗೆ ಮೆಚ್ಚಿ ಅದರಂತೆ ಮಾಡಬೇಕೆಂದು ಹೇಳಿ
5 ದರು. ಆಗ ದಾವೀದನು ದೇವಮಂಜೂಷವನ್ನು
ಕಿರ್ಯತ್ಯಾರೀಮಿನಿಂದ ತರುವದಕ್ಕೋಸ್ಕರ ಐಗುಪ್ತದ
ಶೀಹೋರ್ ಹಳ್ಳದಿಂದ ಹಮಾತಿನ ದಾರಿಯ ವರೆಗೂ
ವಾಸಿಸುತ್ತಿದ್ದ ಎಲ್ಲಾ ಇಸ್ರಾಯೇಲ್ಯರನ್ನೂ ಕೂಡಿಸಿ
6 ಅವರೆಲ್ಲರೊಡನೆ ಯೆಹೂದದೇಶದ ಬಾಳಾ ಎನಿಸಿ
ಕೊಳ್ಳುತ್ತಿದ್ದ ಕಿರ್ಯತ್ಯಾರೀಮಿಗೆ ಹೋದನು; ಆ
ಮಂಜೂಷವು ಕೆರೂಬಿಯರ ನಡುವೆ ಆಸೀನನಾಗಿರುವ
ಯೆಹೋವದೇವರ ನಾಮದಿಂದ ಪ್ರಸಿದ್ಧವಾದದ್ದು.
ಅವರು ದೇವಮಂಜೂಷವನ್ನು ಅಬೀನಾದಾಬನ ಮನೆ 7
ಯಿಂದ ಹೊರಗೆ ತಂದು ಒಂದು ಹೊಸ ಬಂಡಿಯ
ಮೇಲೆ ಏರಿಸಿದರು. ಉಜ್ಜನೂ ಅಹಿಯೋವನೂ ಬಂಡಿ
ಯನ್ನು ಹೊಡೆದರು. ದಾವೀದನೂ ಎಲ್ಲಾ ಇಸ್ರಾ 8
ಯೇಲ್ಯರೂ ಕಿನ್ನರಿ, ಸ್ವರಮಂಡಲ, ದಮ್ಮಡಿ, ತಾಳ,
ತುತೂರಿ ಇವುಗಳ ಧ್ವನಿಯೊಡನೆ ಪೂರ್ಣಾಸಕ್ತಿಯಿಂದ
ಗೀತಗಳನ್ನು ಹಾಡುತ್ತಾ ದೇವರ ಮುಂದೆ ನರ್ತನ
ಮಾಡುತ್ತಾ ಹೋದರು. ಅವರು [1]ಕೀದೋನನ ಕಣ 9
ಕ್ಕೆ ಬಂದಾಗ ಎತ್ತುಗಳು ಎಡವಿದ್ದರಿಂದ ಉಜ್ಜನು ಕೈ
ಚಾಚಿ ದೇವಮಂಜೂಷವನ್ನು ಹಿಡಿದನು. ಉಜ್ಜನು 10
ಮಂಜೂಷದ ಮೇಲೆ ಕೈಹಾಕಿದ್ದರಿಂದ ಯೆಹೋವನು
ಅವನ ಮೇಲೆ ಕೋಪಗೊಂಡು ಅವನನ್ನು ಹತಮಾಡಿ
ದನು; ಅವನು ಅಲ್ಲೇ ದೇವರ ಮುಂದೆ ಸತ್ತನು. ಯೆ 11
ಹೋವನು ಉಜ್ಜನನ್ನು ಮುರಿದುಬಿಟ್ಟದ್ದರಿಂದ ದಾವೀ
ದನು ಉರಿಗೊಂಡು ಆ ಸ್ಥಳಕ್ಕೆ [2]ಪೆರೆಚ್ ಉಜ್ಜ ಎಂಬ
ಹೆಸರಿಟ್ಟನು. ಅದಕ್ಕೆ ಇಂದಿನ ವರೆಗೂ ಇದೇ ಹೆಸರಿರು
ತ್ತದೆ. ಆ ದಿವಸ ದಾವೀದನು ದೇವರಿಗೆ ಭಯಪಟ್ಟು— 12
ದೇವರ ಮಂಜೂಷವನ್ನು ನಾನಿರುವಲ್ಲಿಗೆ ತೆಗೆದು
ಕೊಂಡು ಹೋಗುವದು ಹೇಗೆ ಎಂದುಕೊಂಡು ಅದನ್ನು 13
ದಾವೀದನಗರಕ್ಕೆ ತಾರದೆ ಗತ್ ಊರಿನ ಓಬೇದೆ
ದೋಮನ ಮನೆಗೆ ಕಳುಹಿಸಿದನು. ದೇವರ ಮಂಜೂ 14
ಷವು ಓಬೇದೆದೋಮನ ಮನೆಯ ಬಳಿಯಲ್ಲಿ ಸ್ವಂತ
ಆಲಯದೊಳಗೆ ಮೂರು ತಿಂಗಳು ಇತ್ತು. ಆ ಕಾಲ
ದಲ್ಲಿ ಯೆಹೋವನು ಓಬೇದೆದೋಮನ ಮನೆಯನ್ನೂ
ಅವನಿಗಿದ್ದದ್ದೆಲ್ಲವನ್ನೂ ಆಶೀರ್ವದಿಸಿದನು.

ದಾವೀದನು ಅರಮನೆಯನ್ನು ಕಟ್ಟಿಸಿಕೊಂಡದ್ದು;
ಅವನ ಮಕ್ಕಳು; ಫಿಲಿಷ್ಟಿಯರು ಎರಡಾವರ್ತಿ
ಅವನಿಂದ ಸೋತುಹೋದದ್ದು.

ತೂರಿನ ಅರಸನಾದ ಹೀರಾಮನು ದಾವೀದ 14
ನಿಗೆ ಅರಮನೆಯನ್ನು ಕಟ್ಟುವದಕ್ಕೋಸ್ಕರ ದೂತ
ರನ್ನೂ ದೇವದಾರುಮರಗಳನ್ನೂ ಶಿಲ್ಪಿಗಳನ್ನೂ ಬಡಿಗಿ
ಯವರನ್ನೂ ಅವನ ಬಳಿಗೆ ಕಳುಹಿಸಿದನು. ಇದ 2
ರಿಂದ ದಾವೀದನು ದೇವಪ್ರಜೆಗಳಾದ ಇಸ್ರಾಯೇಲ್ಯರ
ನಿಮಿತ್ತವಾಗಿ ತನ್ನ ರಾಜ್ಯವು ಉನ್ನತಸ್ಥಾನಕ್ಕೆ ಮುಟ್ಟಿ
ದ್ದನ್ನು ನೋಡಿ ಯೆಹೋವನು ತನ್ನನ್ನು ಇಸ್ರಾ
ಯೇಲ್‌ರಾಜನನ್ನಾಗಿ ಸ್ಥಿರಪಡಿಸಿದನೆಂದು ತಿಳಿದು
ಕೊಂಡನು.
ದಾವೀದನು ಯೆರೂಸಲೇಮಿನಲ್ಲಿ ಸಹ ಕೆಲವು 3
ಮಂದಿ ಸ್ತ್ರೀಯರನ್ನು ಮದುವೆಮಾಡಿಕೊಂಡು ಇನ್ನೂ
ಕೆಲವು ಮಂದಿ ಗಂಡು ಹೆಣ್ಣು ಮಕ್ಕಳನ್ನು ಪಡೆದನು.
ಅಲ್ಲಿ ಅವನಿಗೆ ಹುಟ್ಟಿದ ಗಂಡುಮಕ್ಕಳ ಹೆಸರು 4
ಗಳು—ಶಮ್ಮೂವ, ಶೋಬಾಬ್, ನಾತಾನ್, ಸೊಲೊ
ಮೋನ್, ಇಬ್ಹಾರ್, ಎಲೀಷೂವ, ಎಲ್ಪೆಲೆಟ್, ನೋ 5, 6
ಗಹ, ನೆಫೆಗ್, ಯಾಫೀಯ, ಎಲೀಷಾಮ, ಬೇಲ್ಯಾದ, 7
ಎಲೀಫೆಲೆಟ್.

1) ೨ ಸಮು. 6. 6 ನಾಕೋನನ. 2) ಅಂದರೆ ಉಜ್ಜನ ವಧೆ.

8 ಇಸ್ರಾಯೇಲ್ಯರೆಲ್ಲರೂ ದಾವೀದನನ್ನು ಅಭಿಷೇಕಿಸಿ
ತಮ್ಮ ಅರಸನನ್ನಾಗಿ ಮಾಡಿಕೊಂಡರೆಂಬ ವರ್ತಮಾ
ನವು ಫಿಲಿಷ್ಟಿಯರಿಗೆ ಮುಟ್ಟಿದಾಗ ಅವರು ಅವನನ್ನು
ಹಿಡಿಯುವದಕ್ಕೆ ಹೊರಟರು; ದಾವೀದನು ಇದನ್ನು
9 ಕೇಳಿ ತಾನೂ ಅವರೆದುರಿಗೆ ಹೋದನು. ಫಿಲಿಷ್ಟಿ
ಯರು ದೇಶದೊಳಗೆ ನುಗ್ಗಿ ರೆಫಾಯಿೂಮ್ ತಗ್ಗಿನಲ್ಲಿ
ಸುಲಿಗೆಮಾಡುತ್ತಿದ್ದದರಿಂದ ದಾವೀದನು ದೇವರಾದ
10 ಯೆಹೋವನನ್ನು—ನಾನು ಫಿಲಿಷ್ಟಿಯರಿಗೆ ವಿರೋಧ
ವಾಗಿ ಹೋಗಬಹುದೋ? ಅವರನ್ನು ನನ್ನ ಕೈಗೆ
ಒಪ್ಪಿಸಿಕೊಡುವಿಯೋ ಎಂದು ಕೇಳಲು ಆತನು—
ಹೋಗು, ನಾನು ಅವರನ್ನು ನಿನ್ನ ಕೈಗೆ ಒಪ್ಪಿಸುವೆನು
11 ಎಂದು ಉತ್ತರಕೊಟ್ಟನು. ಅಷ್ಟರಲ್ಲಿ ಬಾಳ್‍ಪೆರಾ
ಚೀಮಿಗೆ ಬಂದ ಅವರನ್ನು ದಾವೀದನು ಸೋಲಿಸಿ—
ಯೆಹೋವನು ಕಟ್ಟೆಯೊಡೆದ ಪ್ರವಾಹದಂತೆ ನನ್ನ
ಶತ್ರುಗಳ ಮೇಲೆ ಬಿದ್ದು ಅವರನ್ನು ನನ್ನ ಮುಖಾಂತರ
ವಾಗಿ ನಾಶಮಾಡಿದ್ದಾನೆಂದು ಹೇಳಿದ್ದರಿಂದ ಆ ಯುದ್ಧ
12 ಸ್ಥಳಕ್ಕೆ ಬಾಳ್‍ಪೆರಾಚೀಮೆಂದು ಹೆಸರಾಯಿತು. ಫಿಲಿ
ಷ್ಟಿಯರು ಅಲ್ಲಿ ಬಿಟ್ಟುಹೋಗಿದ್ದ ದೇವರುಗಳನ್ನು
ದಾವೀದನು ಸುಡಿಸಿಬಿಟ್ಟನು.
13 ಫಿಲಿಷ್ಟಿಯರು ಇನ್ನೊಮ್ಮೆ ಬಂದು ಅದೇ ತಗ್ಗಿನಲ್ಲಿ
14 ಸುಲಿಗೆಮಾಡುತ್ತಿದ್ದರು. ದಾವೀದನು ತಿರಿಗಿ ದೇವರ
ಸನ್ನಿಧಿಯಲ್ಲಿ ವಿಚಾರಿಸಿದಾಗ ಆತನು ಅವನಿಗೆ—ನೀನು
ಅವರನ್ನು ಬೆನ್ನಟ್ಟಬೇಡ; ಅವರ ಎದುರಿನಿಂದ ತಿರುಗಿ
ಕೊಂಡುಹೋಗಿ ಬಾಕಾಮರಗಳಿರುವ ಕಡೆಯಿಂದ
15 ಅವರ ಮೇಲೆ ಬೀಳು. ಆ ಮರಗಳ ತುದಿಯಲ್ಲಿ
ಹೆಜ್ಜೆಗಳ ಸಪ್ಪಳವು ಕೇಳಿಸುವಾಗಲೇ ದೇವರು ಫಿಲಿಷ್ಟಿ
ಯರ ಸೈನ್ಯವನ್ನು ಸೋಲಿಸುವದಕ್ಕೋಸ್ಕರ ನಿನ್ನ
ಮುಂದಾಗಿ ಹೊರಟನೆಂದು ತಿಳಿದುಕೊಂಡು ಯುದ್ಧಕ್ಕೆ
16 ಹೊರಡು ಅಂದನು. ದಾವೀದನು ದೇವರ ಆಜ್ಞಾನು
ಸಾರವಾಗಿ ಮಾಡಿದನು; ಇಸ್ರಾಯೇಲ್ಯರು ಫಿಲಿಷ್ಟಿಯ
ಸೈನ್ಯವನ್ನು ಗಿಬ್ಯೋನಿನಿಂದ ಗೆಜೆರಿನ ವರೆಗೂ ಸಂಹರಿ
17 ಸುತ್ತಾ ಹೋದರು. ದಾವೀದನ ಕೀರ್ತಿಯು ಎಲ್ಲಾ
ದೇಶಗಳಲ್ಲಿ ಹಬ್ಬಿತು; ಯೆಹೋವನು ಅವನಿಗೆ ಎಲ್ಲಾ
ಜನಾಂಗಗಳೂ ಹೆದರುವಂತೆ ಮಾಡಿದನು.

ದಾವೀದನು ಯೆಹೋವನ ಮಂಜೂಷವನ್ನು
ಚೀಯೋನಿಗೆ ತಂದದ್ದು.

15 ದಾವೀದನು ತನ್ನ ನಗರದಲ್ಲಿ ತನಗೋಸ್ಕರ ಮನೆ
ಗಳನ್ನು ಕಟ್ಟಿಸಿದ್ದಲ್ಲದೆ ದೇವಮಂಜೂಷಕ್ಕೋಸ್ಕ
ರವೂ ಸ್ಥಳವನ್ನು ಸಿದ್ಧಮಾಡಿ ಗುಡಾರವನ್ನು ಹಾಕಿಸಿ
2 ದನು. ಆ ಕಾಲದಲ್ಲಿ ದಾವೀದನು—ಲೇವಿಯರು
ಹೊರತಾಗಿ ಯಾರೂ ದೇವಮಂಜೂಷವನ್ನು ಹೊರ
ಬಾರದು; ಅದನ್ನು ಹೊರುವದಕ್ಕೂ ಸದಾಕಾಲ ತನ್ನ
ಸೇವೆಮಾಡುವದಕ್ಕೂ ಯೆಹೋವನು ಅವರನ್ನೇ ಆರಿಸಿ
3 ಕೊಂಡಿದ್ದಾನೆಂದು ಹೇಳಿ ಯೆಹೋವನ ಮಂಜೂಷ
ವನ್ನು ತಾನು ಸಿದ್ಧಮಾಡಿದ ಸ್ಥಳಕ್ಕೆ ತರುವದ
ಕ್ಕೋಸ್ಕರ ಎಲ್ಲಾ ಇಸ್ರಾಯೇಲ್ಯರನ್ನು ಯೆರೂಸಲೇ

ಮಿಗೆ ಕರಸಿದನು. ಅವನು ಕರಸಿದ ಆರೋನನ ವ
ದವರೂ ಲೇವಿಯರೂ—ಕೆಹಾತ್ಯರಲ್ಲಿ ಊರೀಯೇ
ನೆಂಬ ಪ್ರಧಾನನೂ ಅವನ ಕುಟುಂಬದವರಾದ ನೂ
ಪ್ಪತ್ತು ಮಂದಿಯೂ; ಮೆರಾರೀಯರಲ್ಲಿ ಅಸಾ
ನೆಂಬ ಪ್ರಧಾನನೂ ಅವನ ಕುಟುಂಬದವರಾದ ಇನ್ನೂ
ಪ್ಪತ್ತು ಮಂದಿಯೂ; ಗೇರ್ಷೋಮ್ಯರಲ್ಲಿ ಯೋವೇ
ನೆಂಬ ಪ್ರಧಾನನೂ ಅವನ ಕುಟುಂಬದವರಾದ ನೂ
ಮೂವತ್ತು ಮಂದಿಯೂ; ಎಲೀಚಾಫಾನ್ಯರ
ಶೆಮಾಯನೆಂಬ ಪ್ರಧಾನನೂ ಅವನ ಕುಟುಂಬದ
ರಾದ ಇನ್ನೂರು ಮಂದಿಯೂ; ಹೆಬ್ರೋನ್ಯರಲ್ಲಿ ಎ
ಯೇಲನೆಂಬ ಪ್ರಧಾನನೂ ಅವನ ಕುಟುಂಬದವರಾ
ಎಂಭತ್ತು ಮಂದಿಯೂ; ಉಜ್ಜೀಯೇಲ್ಯರಲ್ಲಿ ಅಮಿ
ನಾದಾಬನೆಂಬ ಪ್ರಧಾನನೂ ಅವನ ಕುಟುಂಬದವರಾ
ನೂರ ಹನ್ನೆರಡು ಮಂದಿಯೂ.
ಆ ಮೇಲೆ ದಾವೀದನು ಚಾದೋಕ್ ಎಬ್ಯಾತಾ
ರೆಂಬ ಯಾಜಕರನ್ನೂ ಊರೀಯೇಲ್, ಅಸಾಯ
ಯೋವೇಲ್, ಶೆಮಾಯ, ಎಲೀಯೇಲ್, ಅಮಿ
ನಾದಾಬ್ ಎಂಬ ಲೇವಿಯರನ್ನೂ ಕರೆದು ಅವರಿಗೆ
ಲೇವಿಯರಲ್ಲಿ ಗೋತ್ರಪ್ರಧಾನರಾದ ನೀವೂ ನಿ
ಸಹೋದರರೂ ನಿಮ್ಮನ್ನು ಶುದ್ಧಿಪಡಿಸಿಕೊಂಡು ಇಸ
ಯೇಲ್‍ದೇವರಾದ ಯೆಹೋವನ ಮಂಜೂಷವನ
ನಾನು ಸಿದ್ಧಮಾಡಿರುವ ಸ್ಥಳಕ್ಕೆ ತೆಗೆದುಕೊಂ
ಬನ್ನಿರಿ. ನೀವು ಮೊದಲನೆಯ ಸಾರಿ ಇರಲಿಲ್ಲ
ದದರಿಂದ ನಮ್ಮ ದೇವರಾದ ಯೆಹೋವನು ತನ್ನ ಸ
ಧಿಗೆ ಧರ್ಮವಿಧಿವಿರೋಧವಾಗಿ ಬಂದ ನಮ್ಮಲ್ಲಿ ಒ
ನನ್ನು ಸಂಹರಿಸಿದನಷ್ಟೆ ಎಂದು ಹೇಳಲು ಯಾಜಕರ
ಲೇವಿಯರೂ ಇಸ್ರಾಯೇಲ್‍ದೇವರಾದ ಯೆಹೋವ
ಮಂಜೂಷವನ್ನು ತರುವದಕ್ಕೋಸ್ಕರ ತಮ್ಮನ್ನು ಶು
ಪಡಿಸಿಕೊಂಡರು. ಮೋಶೆಯ ಮುಖಾಂತರವಾಗಿ ಕೊ
ಲ್ಪಟ್ಟ ಯೆಹೋವನ ಆಜ್ಞಾನುಸಾರವಾಗಿ ಲೇವಿಯ
ದೇವಮಂಜೂಷಕ್ಕೆ ಕೋಲುಗಳನ್ನು ಸಿಕ್ಕಿಸಿ ಅದನ
ಹೆಗಲಿನ ಮೇಲೆ ಹೊತ್ತುಕೊಂಡರು.
ಆಗ ದಾವೀದನು ಲೇವಿಯರ ಪ್ರಧಾನರಿಗೆ
ಗಾಯಕರಾದ ನಿಮ್ಮ ಸಹೋದರರನ್ನು ಸ್ವರಮಂಡ
ಕಿನ್ನರಿ ತಾಳ ಮೊದಲಾದ ವಾದ್ಯಗಳಿಂದ ಉತ್ಸಾ
ಧ್ವನಿಮಾಡುವದಕ್ಕಾಗಿ ನೇಮಿಸಿರಿ ಎಂದು ಆಜ್ಞಾ
ಪಲು ಅವರು ಯೋವೇಲನ ಮಗನಾದ ಹೇಮಾನ
ಅವನ ಗೋತ್ರಬಂಧುವೂ ಬೆರೆಕ್ಯನ ಮಗನೂ ಆ
ಆಸಾಫ್, ತಮ್ಮ ಸಹೋದರನಾದ ಮೆರಾರೀಯ
ಕುಟುಂಬಕ್ಕೆ ಸೇರಿದ ಕೂಷಾಯನ ಮಗನಾದ ಏತಾ
ಎಂಬವರನ್ನಲ್ಲದೆ ತಮ್ಮ ಸಹೋದರರೊಳಗೆ ಎರಡ
ಯ ತರಗತಿಯವರಾದ ಜೆಕರ್ಯ, ಬೇನ್, ಯಾ
ಯೇಲ್, ಶೆಮೀರಾಮೋತ್, ಯೆಹೀಯೇಲ್, ಉನ್ನಿ
ಎಲೀಯಾಬ್, ಬೆನಾಯ, ಮಾಸೇಯ, ಮತ್ತಿತ
ಎಲೀಫೆಲೇಹು, ಮಿಕ್ನೇಯ, ದ್ವಾರಪಾಲಕರಾದ ಓಬೇ
ದೋಮ್ ಯೆಗೀಯೇಲರು ಇವರನ್ನು ನೇಮಿಸಿದರ
ಗಾಯಕರಾದ ಹೇಮಾನ್ ಆಸಾಫ್ ಏತಾನರು ಗ
ಯಾಗಿ ಕಂಚಿನ ತಾಳಗಳನ್ನು ಹೊಡೆಯುವವರ

1) ಅಂದರೆ ಒಡೆಯನು ಕಿತ್ತುಹಾಕಿದ ಸ್ಥಳ.

0 ಜೆಕರ್ಯ, ಅಜೀಯೇಲ್, ಶೆಮಿರಾಮೋತ್, ಯೆಹೀ
ಯೇಲ್, ಉನ್ನೀ, ಎಲೀಯಾಬ್, ಮಾಸೇಯ, ಬೆನಾಯ
ಎಂಬವರು 1)ತಾರಕಸ್ಥಾಯಿಯ ಸ್ವರಮಂಡಲಗಳನ್ನು
1 ಬಾರಿಸುವವರು. ಮತ್ತಿತ್ಯ, ಎಲೀಫೆಲೇಹು, ಮಿಕ್ನೇಯ,
ಓಬೇದೆದೋಮ್, ಯೆಗೀಯೇಲ್, ಅಜಜ್ಯ ಎಂಬ
ವರು ಗಾಯನನಾಯಕರಾಗಿದ್ದು 2)ಮಂದರಸ್ಥಾಯಿ
2 ಯ ಕಿನ್ನರಿಗಳನ್ನು ಬಾರಿಸುವವರು. ಬುದ್ಧಿವಂತ
ನೂ ಹೊರೆಹೊರುವವರ ನಾಯಕನೂ ಆದ ಕೆನನ್ಯನು
3 ಮಂಜೂಷಹೊತ್ತವರನ್ನು ನಡಿಸುವವನು. ಬೆರೆಕ್ಯ,
ಎಲ್ಕಾನ ಇವರು ಮಂಜೂಷಾಲಯದ ದ್ವಾರಪಾಲ
4 ಕರು. ಶೆಬನ್ಯ, ಯೋಷಾಫಾಟ್, ನೆತನೇಲ್,
ಅಮಾಸೈ, ಜೆಕರ್ಯ, ಬೆನಾಯ, ಎಲೀಯೆಜೆರ್ ಎಂಬ
ಯಾಜಕರು ತುತೂರಿಗಳನ್ನು ಊದುತ್ತಾ ದೇವಮಂ
ಜೂಷದ ಮುಂದೆ ಹೋಗುವವರು. ಓಬೇದೆದೋಮ್,
ಯೆಹೀಯ ಎಂಬವರು ಮಂಜೂಷಾಲಯದ ದ್ವಾರ
ಪಾಲಕರು.

5 ದಾವೀದನೂ ಇಸ್ರಾಯೇಲ್ಯರ ಹಿರಿಯರೂ ಸಹ
ಸ್ರಾಧಿಪತಿಗಳೂ ಓಬೇದೆದೋಮನ ಮನೆಯಲ್ಲಿದ್ದ
ಯೆಹೋವನ ನಿಬಂಧನಮಂಜೂಷವನ್ನು ಉತ್ಸವ
6 ದಿಂದ ತರುತ್ತಿರುವಾಗ ಅದನ್ನು ಹೊತ್ತ ಲೇವಿಯರಿಗೆ
ದೇವರ ಸಹಾಯ ದೊರೆತದರಿಂದ ಏಳು ಹೋರಿಗ
ಳನ್ನೂ ಏಳು ಟಗರುಗಳನ್ನೂ ಯಜ್ಞಮಾಡಿದರು.
7 ದಾವೀದನೂ ಮಂಜೂಷವನ್ನು ಹೊತ್ತ ಮತ್ತು ವಾದ್ಯ
ಮಾಡುವ ಎಲ್ಲಾ ಲೇವಿಯರೂ ಹೊರುವವರ ಮುಖ್ಯ
ಸ್ಥನಾದ ಕೆನನ್ಯನೂ ನೂಲಿನ ನಿಲುವಂಗಿಯನ್ನು ಧರಿಸಿ
ಕೊಂಡಿದ್ದರು. ದಾವೀದನು ಇದರ ಹೊರತಾಗಿ ನಾರಿನ
8 ಏಫೋದನ್ನೂ ಧರಿಸಿಕೊಂಡಿದ್ದನು. ಹೀಗೆ ಎಲ್ಲಾ
ಇಸ್ರಾಯೇಲ್ಯರು ಆರ್ಭಟಿಸುತ್ತಾ ಕೊಂಬು ತುತೂರಿ
ಗಳನ್ನು ಗಟ್ಟಿಯಾಗಿ ಊದುತ್ತಾ ತಾಳಹೊಡೆಯು
ತ್ತಾ ಕಿನ್ನರಿಸ್ವರಮಂಡಲಗಳನ್ನು ಬಾರಿಸುತ್ತಾ ಯೆಹೋ
9 ವನ ನಿಬಂಧನಮಂಜೂಷವನ್ನು ತಂದರು. ಯೆಹೋ
ವನ ನಿಬಂಧನಮಂಜೂಷವು ದಾವೀದನಗರಕ್ಕೆ ಬರುತ್ತಿ
ರುವಾಗ ಸೌಲನ ಮಗಳಾದ ಮೀಕಲಳು ಕಿಟಿಕಿಯಿಂದ
ಹಣಕಿನೋಡಿ ದಾವೀದನು ಕುಣಿಯುತ್ತಾ ಹಾರುತ್ತಾ
ಇರುವುದನ್ನು ಕಂಡು ಮನಸ್ಸಿನಲ್ಲಿ ಅವನನ್ನು ತಿರಸ್ಕರಿ
ಸಿದಳು.

16 ಅವರು ದೇವಮಂಜೂಷವನ್ನು ತಂದು ದಾವೀ
ದನು ಅದಕ್ಕೋಸ್ಕರ ಹಾಕಿಸಿದ ಗುಡಾರದಲ್ಲಿಟ್ಟು
ದೇವರಿಗೋಸ್ಕರ ಸರ್ವಾಂಗಹೋಮಗಳನ್ನೂ ಸಮಾ
2 ಧಾನಯಜ್ಞಗಳನ್ನೂ ಸಮರ್ಪಿಸಿದರು. ಆ ಯಜ್ಞ
ಗಳೂ ಹೋಮಗಳೂ ಸಮರ್ಪಣೆಯಾದನಂತರ ದಾವೀ
ದನು ಇಸ್ರಾಯೇಲ್ಯರನ್ನು ಯೆಹೋವನ ಹೆಸರಿನಿಂದ
3 ಆಶೀರ್ವದಿಸಿ ಅವರಲ್ಲಿ ಪ್ರತಿಯೊಬ್ಬ ಗಂಡಸಿಗೂ ಹೆಂಗ
ಸಿಗೂ ಒಂದು ರೊಟ್ಟಿಯನ್ನೂ ಒಂದು ತುಂಡು ಮಾಂಸ
ವನ್ನೂ ದ್ರಾಕ್ಷೇಹಣ್ಣಿನ ಒಂದು ಗೊಂಚಲನ್ನೂ ಕೊಡಿ
ಸಿದನು.

ಮಂಜೂಷದ ಮುಂದೆ ಹಾಡಬೇಕಾದ ಕೀರ್ತನೆ.

ಯೆಹೋವನ ಮಂಜೂಷದ ಮುಂದೆ ದೇವಾರಾಧನೆ 4
ನಡಿಸುವದಕ್ಕೋಸ್ಕರ ದಾವೀದನು ಕೆಲವು ಮಂದಿ
ಲೇವಿಯರನ್ನು ನೇಮಿಸಿದನು. ಇಸ್ರಾಯೇಲ್‌ದೇವ
ರಾದ ಯೆಹೋವನನ್ನು ಸ್ತುತಿಸುವದೂ ಹಾಡಿಹರಸುವ
ದೂ ಅವರ ಕರ್ತವ್ಯ. ಅವರಲ್ಲಿ ಆಸಾಫನು ಪ್ರಧಾ 5
ನನು; ಜೆಕರ್ಯನು ಎರಡನೆಯವನು. ಯೆಗೀಯೇಲ್,
ಶೆಮಿರಾಮೋತ್, ಯೆಹೀಯೇಲ್, ಮತ್ತಿತ್ಯ, ಎಲೀ
ಯಾಬ್, ಬೆನಾಯ, ಓಬೇದೆದೋಮ್, ಯೆಗೀಯೇಲ್
ಇವರು ಸ್ವರಮಂಡಲ ಕಿನ್ನರಿ ಮೊದಲಾದ ವಾದ್ಯಗ
ಳನ್ನು ಬಾರಿಸುವವರು; ಆಸಾಫನು ತಾಳಹೊಡೆಯುವ
ವನು. ಬೆನಾಯ, ಯೆಹಜೀಯೇಲ್ ಎಂಬ ಯಾಜ 6
ಕರು ದೇವರ ನಿಬಂಧನಮಂಜೂಷದ ಮುಂದೆ ನಿತ್ಯ
ವೂ ತುತೂರಿಗಳನ್ನು ಊದುವವರು. ದಾವೀದನು 7
ಆಸಾಫನನ್ನೂ ಅವನ ಸಹೋದರರನ್ನೂ ಯೆಹೋವ
ಕೀರ್ತನೆಗೋಸ್ಕರ ಆ ದಿನದಲ್ಲೇ ಮೊದಲು ನೇಮಿಸಿ
ದನು [ಅವರು ಹಾಡಿದ್ದೇನಂದರೆ]—

ಯೆಹೋವನಿಗೆ ಕೃತಜ್ಞತಾಸ್ತುತಿಮಾಡಿರಿ; 8
ಆತನ ನಾಮದ ಮಹತ್ವವನ್ನು ವರ್ಣಿಸಿರಿ.
ಜನಾಂಗಗಳಲ್ಲಿ ಆತನ ಕೃತ್ಯಗಳನ್ನು ಪ್ರಸಿದ್ಧ
ಪಡಿಸಿರಿ.
ಆತನನ್ನು ಕೀರ್ತಿಸಿರಿ, ಭಜಿಸಿರಿ; 9
ಆತನ ಅದ್ಭುತಕೃತ್ಯಗಳನ್ನೆಲ್ಲಾ ಧ್ಯಾನಿಸಿರಿ.
ಆತನ ಪರಿಶುದ್ಧನಾಮದಲ್ಲಿ ಹಿಗ್ಗಿರಿ; 10
ಯೆಹೋವನ ದರ್ಶನವನ್ನು ಕೋರುವವರ
ಹೃದಯವು ಹರ್ಷಿಸಲಿ.
ಯೆಹೋವನನ್ನೂ ಆತನ ಬಲವನ್ನೂ ಆಶ್ರಯಿ 11
ಸಿರಿ;
ನಿತ್ಯವೂ ಆತನ ದರ್ಶನವನ್ನು ಅಪೇಕ್ಷಿಸಿರಿ.
ಆತನ ಸೇವಕನಾದ ಇಸ್ರಾಯೇಲನ ಸಂತತಿ 12
ಯವರೇ,
ಆತನು ಆರಿಸಿಕೊಂಡ ಯಾಕೋಬನ ವಂಶ
ದವರೇ,
ಆತನ ಅದ್ಭುತಕೃತ್ಯ ಮಹತ್ಕಾರ್ಯ ನ್ಯಾಯ 13
ನಿರ್ಣಯಗಳನ್ನು ನೆನಪುಮಾಡಿಕೊಳ್ಳಿರಿ.

ಯೆಹೋವನೆಂಬಾತನೇ ನಮ್ಮ ದೇವರು; 14
ಆತನ ನ್ಯಾಯವಿಧಿಗಳು ಭೂಲೋಕದಲ್ಲೆಲ್ಲಾ
ಇವೆ.
ಆತನು ಸಾವಿರ ತಲೆಗಳ ವರೆಗಿರುವವರಿಗೂ ಮಾ 15
ಡಿದ ವಾಗ್ದಾನ,
ಆತನ ಒಡಂಬಡಿಕೆ ಇವುಗಳನ್ನು ನಿತ್ಯವೂ ನೆನಪಿ
ನಲ್ಲಿಟ್ಟುಕೊಳ್ಳಿರಿ.
ಆತನು ಆ ಒಡಂಬಡಿಕೆಯನ್ನು ಅಬ್ರಹಾಮನ 16
ಸಂಗಡ ಮಾಡಿಕೊಂಡನು;

1) ಮೂಲ: ಅಲಾಮೋತ್. 46ನೇ ಕೀರ್ತನೆಯ ಶಿರೋಲೇಖವನ್ನು ನೋಡಿರಿ. 2) ಮೂಲ: ಶೆಮಿನೀತ್. 6. 12ನೇ ಕೀರ್ತನೆಗಳ ಶಿರೋಲೇಖಗಳನ್ನು ನೋಡಿರಿ.

ಇಸಾಕನಿಗೆ ಆಣೆಯಿಟ್ಟನು.
17 ಅದು ರಾಜಶಾಸನದಂತಿರುವದೆಂದು ಯಾಕೋಬ
ನಿಗೂ
ಶಾಶ್ವತವಾದ ಒಡಂಬಡಿಕೆಯಾಗಿರುವದೆಂದು ಇಸ್ರಾ
ಯೇಲನಿಗೂ ಮಾತುಕೊಟ್ಟನು.
18 ನೀವು ಇನ್ನೂ ಬಹು ಸ್ವಲ್ಪ ಜನರೂ ಕಾನಾನ್
ದೇಶದಲ್ಲಿ ಪ್ರವಾಸಿಗಳೂ ಆಗಿರುವಾಗಲೇ
19 ಆತನು—ನಿಮಗೆ ಈ ದೇಶವನ್ನು ಕೊಡುವೆನು;
ಅದು ನಿಮ್ಮ ಸಂತತಿಯವರಿಗೆ ಸ್ವಾಸ್ತ್ಯವಾಗಿರು
ವದು ಎಂದು ಹೇಳಿದನು.
20 ಅವರು ದೇಶದಿಂದ ದೇಶಕ್ಕೂ
ರಾಜ್ಯದಿಂದ ರಾಜ್ಯಕ್ಕೂ ಹೋಗುತ್ತಿರುವಲ್ಲಿ
21 ಅವರಿಗೆ ಯಾರಿಂದಲೂ ಅನ್ಯಾಯವಾಗಗೊಡಿಸ
ಲಿಲ್ಲ.
ಆತನು ಅವರ ವಿಷಯದಲ್ಲಿ ಅರಸರನ್ನೂ ಗದ
ರಿಸಿ—
22 ನಾನು ಅಭಿಷೇಕಿಸಿದವರನ್ನು ಮುಟ್ಟಬಾರದು,
ನನ್ನ ಪ್ರವಾದಿಗಳಿಗೆ ಯಾವ ಕೇಡನ್ನೂ ಮಾಡ
ಬಾರದು ಎಂದು ಹೇಳಿದನು.

23 ಎಲ್ಲಾ ಭೂನಿವಾಸಿಗಳೇ, ಯೆಹೋವನಿಗೆ
ಕೀರ್ತನೆಯನ್ನು ಹಾಡಿರಿ;
ಆತನ ರಕ್ಷಣೆಯನ್ನು ಪ್ರತಿನಿತ್ಯವೂ ಸಾರಿ
ಹೇಳಿರಿ.
24 ಜನಾಂಗಗಳಲ್ಲಿ ಆತನ ಘನತೆಯನ್ನೂ
ಎಲ್ಲಾ ಜನರಲ್ಲಿ ಆತನ ಅದ್ಭುತಕೃತ್ಯಗಳನ್ನೂ
ಪ್ರಸಿದ್ಧಪಡಿಸಿರಿ.
25 ಯೆಹೋವನು ದೊಡ್ಡವನೂ ಬಹಳವಾಗಿ
ಸ್ತುತ್ಯನೂ ಆಗಿದ್ದಾನೆ;
ಎಲ್ಲಾ ದೇವತೆಗಳಲ್ಲಿ ಆತನೇ ಭಯಂಕರನು.
26 ಜನಾಂಗಗಳ ದೇವತೆಗಳೆಲ್ಲಾ ಬೊಂಬೆಗಳೇ;
ಯೆಹೋವನಾದರೋ ಗಗನಮಂಡಲವನ್ನು
ನಿರ್ಮಿಸಿದವನು.
27 ಆತನ ಸಾನ್ನಿಧ್ಯದಲ್ಲಿ ಮಾನಮಹಿಮೆಗಳೂ
ಆತನ ಪವಿತ್ರಾಲಯದಲ್ಲಿ ಬಲಸಂತೋಷಗಳೂ
ಇರುತ್ತವೆ.

28 ಭೂಜನಾಂಗಗಳೇ, ಬಲಪ್ರಭಾವಗಳು ಯೆ
ಹೋವನವೇ ಯೆಹೋವನವೇ ಎಂದು ಹೇಳಿ
ಆತನನ್ನು ಘನಪಡಿಸಿರಿ.
29 ಯೆಹೋವನ ನಾಮಕ್ಕೆ ಯೋಗ್ಯವಾದ ಘನ
ವನ್ನು ಸಲ್ಲಿಸಿರಿ;
ಕಾಣಿಕೆಸಹಿತ ಆತನ ಸನ್ನಿಧಿಗೆ ಬನ್ನಿರಿ;
ಪರಿಶುದ್ಧತ್ವವೆಂಬ ಭೂಷಣದೊಡನೆ ಯೆ
ಹೋವನಿಗೆ ನಮಸ್ಕರಿಸಿರಿ.
30 ಎಲ್ಲಾ ಭೂನಿವಾಸಿಗಳೇ, ಆತನ ಮುಂದೆ ನಡು
ಗಿರಿ;

ಭೂಮಿಯು ಸ್ಥಿರವಾಗಿರುವದು, ಕದಲ
ದಿಲ್ಲ.
ಗಗನಮಂಡಲವು ಹರ್ಷಿಸಲಿ; ಭೂಲೋಕ
ಸಂತೋಷಿಸಲಿ;
ಯೆಹೋವನು ರಾಜ್ಯಾಧಿಕಾರವನ್ನು ವಹಿ
ದ್ದಾನೆಂದು ಜನಾಂಗಗಳಲ್ಲಿ ಪ್ರಸಿದ್ಧಪಡಿಸಿ
ಭೂನಿವಾಸಿಗಳಿಗೆ ನ್ಯಾಯತೀರಿಸುವದಕ್ಕೆ ಬ
ವ ಯೆಹೋವನ ಮುಂದೆ
ಸಮುದ್ರವೂ ಅದರಲ್ಲಿರುವದೆಲ್ಲವೂ ಘೋ
ಷಿಸಲಿ.
ಹೊಲಗಳೂ ಅವುಗಳ ಪೈರುಗಳೂ ಉಲ್ಲಾ
ಸಲಿ;
ಮತ್ತು ವನದ ಮರಗಳು ಉತ್ಸಾಹಧ್ವ
ಮಾಡಲಿ.
ಯೆಹೋವನಿಗೆ ಕೃತಜ್ಞತಾಸ್ತುತಿಮಾಡಿರಿ; ಆ
ನು ಒಳ್ಳೆಯವನು;
ಆತನ ಕೃಪೆಯು ಶಾಶ್ವತವಾಗಿರುವದು.
ನಮ್ಮ ಸಹಾಯಕನಾಗಿರುವ ದೇವರೇ, ನಮ
ನ್ನು ರಕ್ಷಿಸು;
ಅನ್ಯಜನಗಳಲ್ಲಿ ಚದರಿರುವ ನಮ್ಮನ್ನು ಬಿಡಿ
ಕೂಡಿಸು;
ಆಗ ನಿನ್ನ ಪರಿಶುದ್ಧನಾಮವನ್ನು ಕೊಂಡಾಡುವೆ
ನಿನ್ನ ಸ್ತೋತ್ರದಲ್ಲಿ ಹೆಚ್ಚಳಪಡುವೆವು ಅನ್ನಿರಿ.
ಇಸ್ರಾಯೇಲ್‌ದೇವರಾದ ಯೆಹೋವನಿಗೆ ಯು
ಯುಗಾಂತರಗಳ ವರೆಗೂ ಕೊಂಡಾಟವಾಗ
ಎಂಬದೇ. ಅವರು ಹೀಗೆ ಹಾಡಿದ್ದಕ್ಕೆ ಸರ್ವಜನರ
ಆಮೆನ್ ಎಂದು ಯೆಹೋವನನ್ನು ಸ್ತುತಿಸಿದರು.
ದಾವೀದನು ಯೆಹೋವನ ನಿಬಂಧನಮಂಜೂಷ
ಮುಂದೆ ಪ್ರತಿದಿನವೂ ಆರಾಧನೆನಡಿಸುತ್ತಿರುವ
ಕ್ಕೋಸ್ಕರ ಆಸಾಫನನ್ನೂ ಅವನ ಸಹೋದರರನ
ಬಾಗಲುಕಾಯುವದಕ್ಕೋಸ್ಕರ 1)ಯೆದುತೂನ
ಮಗನಾದ ಓಬೇದೆದೋಮ್ ಹೋಸ ಇವರನ
ಇವರ ಅರುವತ್ತೆಂಟು ಮಂದಿ ಸಹೋದರರನ್ನೂ ಅಲ್ಲ
ಇರಿಸಿದನು. ಯಾಜಕನಾದ ಚಾದೋಕನನ
ಅವನ ಸಹೋದರರನ್ನೂ ಗಿಬ್ಯೋನಿನ ಪೂಜಾಸ್ಥ
ದಲ್ಲಿದ್ದ ಯೆಹೋವನ ಗುಡಾರದ ಬಳಿಯಲ್ಲಿ ಇರಿ
ದನು. ಅವರು ಪ್ರತಿದಿನವೂ ಪ್ರಾತಃಕಾಲಸಾಯ
ಕಾಲಗಳಲ್ಲಿ ಯೆಹೋವನಿಗೋಸ್ಕರ ಯಜ್ಞವೇದಿ
ಮೇಲೆ ಸರ್ವಾಂಗಹೋಮಗಳನ್ನು ಮಾಡಿ ಯೆಹೋ
ನ ಧರ್ಮಶಾಸ್ತ್ರದಲ್ಲಿ ಇಸ್ರಾಯೇಲ್ಯರಿಗೆ ವಿಧಿತವಾ
ದ್ದೆಲ್ಲವನ್ನೂ ನೆರವೇರಿಸಬೇಕಾಯಿತು. ಅವರ ಬ
ಯಲ್ಲಿ ಯೆಹೋವನನ್ನು ಆತನ ಶಾಶ್ವತವಾದ ಕೃ
ಗೋಸ್ಕರ ಸ್ತುತಿಸುವದಕ್ಕೆ ಹೇಮಾನ್‌ಯೆದುತೂನರ
ಹೆಸರು ಹೆಸರಾಗಿ ನೇಮಿಸಲ್ಪಟ್ಟ ಬೇರೆ ಜನರೂ ಇ
ರು. ಹೇಮಾನ್‌ಯೆದುತೂನರ ಹತ್ತಿರ ವಾದ್ಯಗಾರ
ಗೋಸ್ಕರ ತುತೂರಿ ತಾಳ ಮೊದಲಾದ ದೇವಕೀರ್ತನ

1) ಮೂಲದಲ್ಲಿ ಓಬೇದೆದೋಮನನ್ನೂ ಅವರ ಸಹೋದರರನ್ನೂ ಯೆದೂತೂನನ ಮಗನಾದ ಓಬೇದೆದೋಮನನ್ನೂ ಹೋ
ಎಂಬದಾಗಿ ಬರೆದಿರುತ್ತದೆ.

ಸಾಹಿತ್ಯಗಳಿದ್ದವು. ಯೆದುತೂನನ ಮಕ್ಕಳು ದ್ವಾರ
ಪಾಲಕರಾಗಿ ನೇಮಿಸಲ್ಪಟ್ಟರು.
43 ತರುವಾಯ ಜನರೆಲ್ಲರೂ ತಮ್ಮ ತಮ್ಮ ಮನೆಗಳಿಗೆ
ಹೋದರು. ದಾವೀದನೂ ತನ್ನ ಮನೆಯವರನ್ನು
ಆಶೀರ್ವದಿಸುವದಕ್ಕೋಸ್ಕರ ಹೋದನು.

ದೇವರು ದಾವೀದನಿಗೆ ದೇವಾಲಯವನ್ನು ಕಟ್ಟಬಾರದೆಂದು
ಹೇಳಿದ್ದೂ ಅವನ ರಾಜ್ಯಸಂತಾನಗಳನ್ನು
ಶಾಶ್ವತವಾಗಿರಿಸುವೆನೆಂದು ವಾಗ್ದಾನಮಾಡಿದ್ದೂ.

17 ದಾವೀದನು ತನ್ನ ಅರಮನೆಯಲ್ಲಿ ವಾಸಿಸುತ್ತಿ
ದ್ದಾಗ ಒಂದು ದಿವಸ ಪ್ರವಾದಿಯಾದ ನಾತಾನ
ನಿಗೆ—ನೋಡು, ನಾನು ದೇವದಾರುಮರದ ಮನೆ
ಯಲ್ಲಿ ವಾಸವಾಗಿದ್ದೇನೆ; ಯೆಹೋವನ ನಿಬಂಧನ
ಮಂಜೂಷವಾದರೋ ಬಟ್ಟೆಯ ಮನೆಯಲ್ಲಿ ಇರುತ್ತದೆ
2 ಎಂದು ಹೇಳಿದನು. ನಾತಾನನು ದಾವೀದನಿಗೆ—ಮನ
ಸ್ಸಿದ್ದಂತೆ ಮಾಡು, ದೇವರು ನಿನ್ನ ಸಂಗಡ ಇರುತ್ತಾನೆ
ಅಂದನು.
3 ಅದೇ ರಾತ್ರಿಯಲ್ಲಿ ದೇವರು ನಾತಾನನಿಗೆ ಆಜ್ಞಾ
4 ಪಿಸಿದ್ದೇನಂದರೆ—ಹೋಗಿ ನನ್ನ ಸೇವಕನಾದ ದಾವೀದ
ನಿಗೆ—ನೀನು ನನಗೆ ಆಲಯವನ್ನು ಕಟ್ಟಬಾರದು.
5 ನಾನು ಇಸ್ರಾಯೇಲ್ಯರನ್ನು [ಐಗುಪ್ತ ದೇಶದಿಂದ]
ಬರಮಾಡಿದಂದಿನಿಂದ ಇಂದಿನ ವರೆಗೂ ಮನೆಯಲ್ಲಿ
ವಾಸಮಾಡಲಿಲ್ಲ; ಗುಡಾರಗಳಲ್ಲಿ ವಾಸಿಸುತ್ತಾ ಇದ್ದೆ
6 ನು. ನಾನು ಇಸ್ರಾಯೇಲ್ಯರ ಮಧ್ಯದಲ್ಲಿ ಸಂಚರಿ
ಸುತ್ತಿದ್ದಾಗೆಲ್ಲಾ ನನ್ನ ಜನರಾದ ಇಸ್ರಾಯೇಲ್ಯರನ್ನು
ಪಾಲಿಸುವದಕ್ಕೋಸ್ಕರ ನನ್ನಿಂದ ನೇಮಿಸಲ್ಪಟ್ಟ ಯಾವ
ನ್ಯಾಯಸ್ಥಾಪಕನನ್ನಾದರೂ—ನೀವು ನನಗೋಸ್ಕರ ದೇ
ವದಾರುಮರದ ಮನೆಯನ್ನೇಕೆ ಕಟ್ಟಲಿಲ್ಲ ಎಂದು
ಕೇಳಿದೆನೋ ಎಂಬದಾಗಿ ಯೆಹೋವನು ಅನ್ನುತ್ತಾನೆ
7 ಎಂದು ಹೇಳು. ಇದಲ್ಲದೆ ನೀನು ನನ್ನ ಸೇವಕನಾದ
ದಾವೀದನಿಗೆ ಹೇಳಬೇಕಾದದ್ದೇನಂದರೆ—ಸೇನಾಧೀಶ್ವ
ರನಾದ ಯೆಹೋವನು ಹೀಗನ್ನುತ್ತಾನೆ—ಕುರಿಗಳ
ಹಿಂದೆ ಹೋಗುತ್ತಿದ್ದ ನಿನ್ನನ್ನು ಅಡವಿಯಿಂದ ತೆಗೆದು
ಕೊಂಡು ನನ್ನ ಪ್ರಜೆಗಳಾದ ಇಸ್ರಾಯೇಲ್ಯರ ಮೇಲೆ
8 ನಾಯಕನನ್ನಾಗಿ ನೇಮಿಸಿದೆನು. ನೀನು ಹೋದ
ಲ್ಲೆಲ್ಲಾ ನಿನ್ನ ಸಂಗಡ ಇದ್ದೆನು. ನಿನ್ನ ಶತ್ರುಗಳನ್ನೆಲ್ಲಾ
ನಿನ್ನೆದುರಿನಲ್ಲಿಯೇ ಸಂಹರಿಸಿಬಿಟ್ಟೆನು. ಲೋಕದ
ಮಹಾಪುರುಷರ ಹೆಸರಿನಂತೆ ನಿನ್ನ ಹೆಸರನ್ನೂ ಪ್ರಸಿದ್ಧ
9 ಪಡಿಸುವೆನು. ನನ್ನ ಪ್ರಜೆಗಳಾದ ಇಸ್ರಾಯೇಲ್ಯರಿಗೆ
ಒಂದು ಸ್ಥಳವನ್ನು ಕೊಟ್ಟು ಅದರಲ್ಲಿ ಅವರನ್ನು ನೆಲೆ
ಗೊಳಿಸುವೆನು: ಅವರು ಇನ್ನು ಮೇಲೆ ಯಾವ ಭಯ
10 ವೂ ಇಲ್ಲದೆ ಅಲ್ಲಿ ವಾಸಿಸುವರು. ಪೂರ್ವಕಾಲದಲ್ಲೂ
ನಾನು ನನ್ನ ಜನರಾದ ಇಸ್ರಾಯೇಲ್ಯರ ಮೇಲೆ ನೇಮಿ
ಸಿದ ನ್ಯಾಯಸ್ಥಾಪಕರ ಕಾಲದಿಂದೀಚೆಗೂ ದುಷ್ಟರು
ಅವರನ್ನು ಕುಗ್ಗಿಸಿದಂತೆ ಇನ್ನು ಕುಗ್ಗಿಸುವದಿಲ್ಲ. ನಿನ್ನ
ಶತ್ರುಗಳೆಲ್ಲರನ್ನೂ ನಿನಗೆ ಅಧೀನಮಾಡುವೆನು. ಇದ
ಲ್ಲದೆ ಯೆಹೋವನಾದ ನಾನು ನಿನಗೋಸ್ಕರ ಒಂದು
ಮನೆಯನ್ನು ಕಟ್ಟುವೆನು ಎಂದು ಮಾತುಕೊಡು
11 ತ್ತೇನೆ. ನಿನ್ನ ಆಯುಷ್ಕಾಲವು ಮುಗಿದು ನೀನು
ಪಿತೃಗಳ ಬಳಿಗೆ ಸೇರಿದ ಮೇಲೆ ನಿನ್ನ ಮಕ್ಕಳಲ್ಲಿ
ಒಬ್ಬನನ್ನು ಅಭಿವೃದ್ಧಿಪಡಿಸಿ ಅವನ ರಾಜ್ಯವನ್ನು
ಸ್ಥಿರಪಡಿಸುವೆನು. ಅವನು ನನಗಾಗಿ ಒಂದು ಮನೆ 12
ಯನ್ನು ಕಟ್ಟುವನು; ನಾನು ಅವನ ಸಿಂಹಾಸನವನ್ನು
ನಿರಂತರವಾಗಿ ಸ್ಥಿರಪಡಿಸುವೆನು. ನಾನು ಅವನಿಗೆ 13
ತಂದೆಯಾಗಿರುವೆನು, ಅವನು ನನಗೆ ಮಗನಾಗಿರು
ವನು. ನನ್ನ ಕೃಪೆಯನ್ನು ನಿನಗಿಂತ ಮುಂಚೆ ಇದ್ದ
ವನಿಂದ ತೆಗೆದುಬಿಟ್ಟ ಹಾಗೆ ಅವನಿಂದ ತೆಗೆಯುವದಿಲ್ಲ.
ಅವನನ್ನು ನನ್ನ ಮನೆಯಲ್ಲಿಯೂ ನನ್ನ ರಾಜ್ಯದಲ್ಲಿ 14
ಯೂ ಸದಾ ಸ್ಥಿರಗೊಳಿಸುವೆನು, ಅವನ ಸಿಂಹಾಸನವು
ಶಾಶ್ವತವಾಗಿರುವದು ಎಂಬದೇ. ನಾತಾನನು ತನ 15
ಗುಂಟಾದ ದರ್ಶನದ ಈ ಎಲ್ಲಾ ಮಾತುಗಳನ್ನು ದಾವೀ
ದನಿಗೆ ಹೇಳಿದನು.
ಅನಂತರ ಅರಸನಾದ ದಾವೀದನು ಹೋಗಿ ಯೆ 16
ಹೋವನ ಸನ್ನಿಧಿಯಲ್ಲಿ ಕೂತುಕೊಂಡು—ದೇವರೇ,
ಯೆಹೋವನೇ, ನನ್ನಂಥವನಿಗೆ ನೀನು ಈ ಪದವಿ
ಯನ್ನು ಅನುಗ್ರಹಿಸಿದಿಯೇ! ನಾನೆಷ್ಟರವನು! ನನ್ನ
ಮನೆ ಎಷ್ಟರದು! ದೇವರೇ, ಇದು ಸಾಲದೆಂದೆಣಿಸಿ 17
ನಿನ್ನ ಸೇವಕನ ಬಹುದೂರಸಂತಾನದ ವಿಷಯದಲ್ಲಿ
ಯೂ ವಾಗ್ದಾನಮಾಡಿದಿ. ದೇವರೇ, ಯೆಹೋವನೇ,
ನೀನು ನನ್ನನ್ನು ಕುಲೀನನನ್ನೋ ಎಂಬಂತೆ ಕಟಾಕ್ಷಿ
ಸಿದ್ದೀ. ನೀನು ನಿನ್ನ ಸೇವಕನಾದ ದಾವೀದನನ್ನು 18
ಬಲ್ಲೆ; ಅವನು ತನಗುಂಟಾದ ಘನತೆಯನ್ನು ಕುರಿತು
ಇನ್ನೇನು ಹೇಳಾನು. ಯೆಹೋವನೇ, ನಿನ್ನ ಸೇವ 19
ಕನ ಮೇಲಿಗಾಗಿಯೂ ನಿನ್ನ ಚಿತ್ತಾನುಸಾರವಾಗಿಯೂ
ಈ ಎಲ್ಲಾ ಮಹತ್ಕಾರ್ಯಗಳನ್ನು ನಡಿಸಿ ನಿನ್ನ ಸರ್ವ
ಮಹತ್ವವನ್ನು ತೋರ್ಪಡಿಸಿದಿ. ಯೆಹೋವನೇ, ನಿನಗೆ 20
ಸಮಾನರು ಯಾರೂ ಇಲ್ಲ. ನಾವು ಕೇಳಿದವುಗಳ
ನ್ನೆಲ್ಲಾ ಆಲೋಚಿಸಿ ನೋಡಿದರೆ ನಿನ್ನ ಹೊರತು
ದೇವರೇ ಇಲ್ಲವೆಂಬದು ನಿಶ್ಚಯ. ನಿನ್ನ ಇಸ್ರಾಯೇ 21
ಲ್ ಪ್ರಜೆಗೆ ಸಮಾನವಾದ ಜನಾಂಗವು ಭೂಲೋಕದಲ್ಲಿ
ಯಾವದಿರುತ್ತದೆ? ದೇವನಾದ ನೀನೇ ಚಿತ್ತಯಿಸಿ ಅದ
ನ್ನು ವಿಮೋಚಿಸಿ ಸ್ವಪ್ರಜೆಯನ್ನಾಗಿ ಮಾಡಿಕೊಂಡಿ;
ಭಯಂಕರವಾದ ಮಹತ್ಕಾರ್ಯಗಳಿಂದ ನಿನ್ನ ಹೆಸ
ರನ್ನು ಪ್ರಸಿದ್ಧಪಡಿಸಿದಿ. ನೀನು ಐಗುಪ್ತ್ಯರ ಕೈಯೊಳ
ಗಿಂದ ತಪ್ಪಿಸಿ ರಕ್ಷಿಸಿದ ನಿನ್ನ ಪ್ರಜೆಯ ಎದುರಿನಿಂದ
ಅನ್ಯಜನಾಂಗಗಳನ್ನು ಹೊರಡಿಸಿಬಿಟ್ಟಿ. ಇಸ್ರಾಯೇ 22
ಲ್ಯರು ಸದಾಕಾಲವೂ ನಿನ್ನ ಪ್ರಜೆಗಳಾಗಿರಬೇಕೆಂದು
ನಿರ್ಣಯಿಸಿದಿ; ಯೆಹೋವನೇ, ನೀನು ಅವರಿಗೆ ದೇವ
ರಾದಿ. ಯೆಹೋವನೇ, ನೀನು ನಿನ್ನ ಸೇವಕನನ್ನೂ 23
ಅವನ ಮನೆಯನ್ನೂ ಕುರಿತು ಮಾಡಿದ ವಾಗ್ದಾನ
ವನ್ನು ಶಾಶ್ವತಪಡಿಸಿ ನೆರವೇರಿಸು; ಅದು ಸದಾ ಸ್ಥಿರ
ವಾಗಿರಲಿ. [ಜನರು—] ಸೇನಾಧೀಶ್ವರನಾದ ಯೆ 24
ಹೋವನು ಇಸ್ರಾಯೇಲ್ ದೇವರೂ ಇಸ್ರಾಯೇಲ್ಯರ
ಶರಣನೂ ಆಗಿದ್ದಾನೆ. ತನ್ನ ಸೇವಕನಾದ ದಾವೀದನ
ಮನೆಯನ್ನು ತನ್ನ ಸನ್ನಿಧಿಯಲ್ಲಿ ಸ್ಥಿರವಾಗಿ ಇಟ್ಟು
ಕೊಳ್ಳುತ್ತಾನೆ ಎಂದು ನಿನ್ನ ನಾಮವನ್ನು ಕೊಂಡಾಡಲಿ.
ನನ್ನ ದೇವರೇ, ನೀನು ನಿನ್ನ ಸೇವಕನಿಗೆ—ನಾನು ನಿನ 25
ಗೊಂದು ಮನೆ ಕಟ್ಟುವೆನು ಎಂದು ವಾಗ್ದಾನಮಾಡಿದ್ದ
ರಿಂದ ಅವನು ನಿನ್ನನ್ನು ಪ್ರಾರ್ಥಿಸುವದಕ್ಕೆ ಧೈರ್ಯ

26 ಗೊಂಡನು. ಯೆಹೋವನೇ, ನಿನ್ನ ಸೇವಕನಿಗೆ ಈ
ಶ್ರೇಷ್ಠವಾಗ್ದಾನಗಳನ್ನು ಮಾಡಿದ ನೀನು ದೇವರಾಗಿ
27 ರುತ್ತೀ. ಈಗ ನೀನು ನಿನ್ನ ಸೇವಕನ ಮನೆಯನ್ನು
ಆಶೀರ್ವದಿಸಿ ಅದನ್ನು ಸದಾಕಾಲವೂ ನಿನ್ನ ಆಶ್ರಯದ
ಲ್ಲಿಟ್ಟುಕೊಳ್ಳಬೇಕೆಂದು ಮನಸ್ಸುಮಾಡಿದ್ದೀ. ಯೆಹೋ
ವನೇ, ನೀನು ಅದನ್ನು ಆಶೀರ್ವದಿಸಿದ್ದೀ; ಅದು ನಿತ್ಯ
ವೂ ಸೌಭಾಗ್ಯದಿಂದಿರುವದು ಎಂದು ಪ್ರಾರ್ಥಿಸಿದನು.

ದಾವೀದನ ಕೆಲವು ಯುದ್ಧಗಳೂ ಅವನ ಸರದಾರರೂ.

18 ಅನಂತರ ದಾವೀದನು ಹೋಗಿ ಫಿಲಿಷ್ಟಿಯರ ಮೇಲೆ
ಬಿದ್ದು ಅವರನ್ನು ಸೋಲಿಸಿ ಅವರಿಂದ ಗತ್ ಪಟ್ಟಣ
ವನ್ನೂ ಅದರ ಗ್ರಾಮಗಳನ್ನೂ ತೆಗೆದುಕೊಂಡನು.
2 ಇದಲ್ಲದೆ ಅವನು ಮೋವಾಬ್ಯರನ್ನು ಸೋಲಿಸಿದನು;
ಅವರು ದಾವೀದನ ದಾಸರಾಗಿ ಅವನಿಗೆ ಕಪ್ಪಕೊಡ
ಬೇಕಾಯಿತು.
3 ದಾವೀದನು ಯೂಫ್ರೇಟೀಸ್ ನದಿಯ ಸುತ್ತಣ
ಪ್ರದೇಶದಲ್ಲಿ ತನ್ನ ರಾಜ್ಯಾಧಿಕಾರವನ್ನು ಸ್ಥಾಪಿಸುವ
ದಕ್ಕೆ [1])ಹೋಗುತ್ತಿದ್ದ ಚೋಬದ ಅರಸನಾದ ಹದರೆ
4 ಜರನನ್ನು ಹಮಾತಿನ ಬಳಿಯಲ್ಲಿ ಸೋಲಿಸಿ ಅವನ
ಸಾವಿರ ರಥಗಳನ್ನೂ ಏಳು ಸಾವಿರ ಮಂದಿ ರಾಹುತ
ರನ್ನೂ ಇಪ್ಪತ್ತು ಸಾವಿರ ಮಂದಿ ಕಾಲಾಳುಗಳನ್ನೂ
ಸೆರೆಹಿಡಿದು ನೂರು ಕುದುರೆಗಳನ್ನಿಟ್ಟುಕೊಂಡು ಮಿ
ಕ್ಕಾದ ಕುದುರೆಗಳ ಹಿಂಗಾಲಿನ ನರಗಳನ್ನು ಕೊಯ್ದು
5 ಬಿಟ್ಟನು. ದಮಸ್ಕದ ಅರಾಮ್ಯರು ಚೋಬದ ಅರಸ
ನಾದ ಹದರೆಜರನನ್ನು ರಕ್ಷಿಸ ಬಂದಾಗ ದಾವೀದನು ಅವ
ರನ್ನೂ ಸೋಲಿಸಿ ಅವರಲ್ಲಿ ಇಪ್ಪತ್ತೆರಡು ಸಾವಿರ ಜನ
6 ರನ್ನು ಕೊಂದನು. ಇದಲ್ಲದೆ ಅವನು ದಮಸ್ಕದ
ಅರಾಮ್ ದೇಶದಲ್ಲಿ ಕಾವಲುದಂಡನ್ನು ಇರಿಸಿದನು.
ಹೀಗೆ ಅರಾಮ್ಯರು ಅವನ ಸೇವಕರಾಗಿ ಅವನಿಗೆ ಕಪ್ಪ
ಕೊಡುವವರಾದರು. ಯೆಹೋವನ ಅನುಗ್ರಹದಿಂದ
ದಾವೀದನಿಗೆ ಎಲ್ಲಿ ಹೋದರೂ ಜಯದೊರಕಿತು.
7 ಅವನು ಹದರೆಜರನ ಸೇವಕರಿಗಿದ್ದ ಬಂಗಾರದ ಗುರಾ
ಣಿಗಳನ್ನು ಕಿತ್ತುಕೊಂಡು ಯೆರೂಸಲೇಮಿಗೆ ಒಯ್ದನು.
8 ಇದಲ್ಲದೆ ಹದರೆಜರನ ಪಟ್ಟಣಗಳಾದ ಟಿಭತಿನಿಂದಲೂ
ಕೂನಿಂದಲೂ ಬಹಳ ತಾಮ್ರವನ್ನು ತೆಗೆದುಕೊಂಡು
ಹೋದನು. ಸೊಲೊಮೋನನು ಆ ತಾಮ್ರದಿಂದ
ಸಮುದ್ರವೆನಿಸಿಕೊಳ್ಳುವ ಪಾತ್ರೆಯನ್ನೂ ಕಂಬಗಳ
ನ್ನೂ ಬೇರೆ ಸಾಮಾನುಗಳನ್ನೂ ಮಾಡಿಸಿದನು.
9 ದಾವೀದನು ಚೋಬದ ಅರಸನಾದ ಹದರೆಜರನ
ಸೈನ್ಯವನ್ನೆಲ್ಲಾ ಸೋಲಿಸಿದನೆಂಬ ವರ್ತಮಾನವು ಹಮಾ
10 ತಿನ ಅರಸನಾದ ತೋವಿಗೆ ಮುಟ್ಟಿತು. (ತೋವಿಗೂ
ಹದರೆಜರನಿಗೂ ವಿರೋಧವಿತ್ತು.) ದಾವೀದನು
ಹದರೆಜರನ ಮೇಲೆ ಬಿದ್ದು ಅವನನ್ನು ಸೋಲಿಸಿದ್ದರಿಂದ
ತೋವು ದಾವೀದನನ್ನು ವಂದಿಸುವದಕ್ಕೂ ಹರಸುವದ
ಕ್ಕೂ ತನ್ನ ಮಗನಾದ ಹದೋರಾಮನನ್ನು ಕಳುಹಿ
ಸಿದನು. ಇವನು ಬರುವಾಗ ದಾವೀದನಿಗೋಸ್ಕರ
ವಿಧವಿಧವಾದ ತಾಮ್ರ ಬೆಳ್ಳಿ ಬಂಗಾರಗಳ ಪಾತ್ರೆಗ
ಳನ್ನು ತಂದನು. ಅರಸನಾದ ದಾವೀದನು ಇವು
ಗಳನ್ನೂ ಎದೋಮ್ಯರು ಮೋವಾಬ್ಯರು ಅಮ್ಮೋ
ಯರು ಫಿಲಿಷ್ಟಿಯರು ಅಮಾಲೇಕ್ಯರು ಎಂಬ
ಸುತ್ತಣ ಜನಾಂಗಗಳಿಂದ ಕಿತ್ತುಕೊಂಡ ಬೆಳ್ಳಿಬಂಗಾ
ವನ್ನೂ ಯೆಹೋವನಿಗೋಸ್ಕರ ಪ್ರತಿಷ್ಠಿಸಿದನು.
ಇದಲ್ಲದೆ ಚೆರೂಯಳ ಮಗನಾದ ಅಬ್ಷೈಯ
ಉಪ್ಪಿನ ತಗ್ಗಿನಲ್ಲಿ ಎದೋಮ್ಯರ ಹದಿನೆಂಟು ಸಾವಿ
ಮಂದಿ ಸೈನಿಕರನ್ನು ಹೊಡೆದನು. ದಾವೀದನ
ಎದೋಮಿನಲ್ಲಿ ಕಾವಲುದಂಡುಗಳನ್ನಿರಿಸಿದನು. ಎದೋ
ಮ್ಯರೆಲ್ಲರೂ ದಾವೀದನ ದಾಸರಾದರು. ಯೆಹೋವ
ಅನುಗ್ರಹದಿಂದ ದಾವೀದನಿಗೆ ಎಲ್ಲಿ ಹೋದರೂ ಜಯ
ವುಂಟಾಯಿತು.
ದಾವೀದನು ಇಸ್ರಾಯೇಲ್ಯರೆಲ್ಲರ ಅರಸನಾ
ಎಲ್ಲಾ ಪ್ರಜೆಗಳಿಗೂ ಧರ್ಮತಪ್ಪದೆ ನ್ಯಾಯತೀರಿಸು
ದ್ದನು. ಚೆರೂಯಳ ಮಗನಾದ ಯೋವಾಬನ
ಅವನ ಸೇನಾಪತಿಯೂ ಅಹೀಲೂದನ ಮಗನಾ
ಯೆಹೋಷಾಫಾಟನು ಮಂತ್ರಿಯೂ ಆಗಿದ್ದರು. ಅಹಿ
ಟೂಬನ ಮಗನಾದ ಚಾದೋಕನೂ ಅಬೀಮೆಲೆಕ
ಮಗನಾದ ಎಬ್ಯಾತಾರನೂ ಅವನ ಯಾಜಕರು
ಶವ್ಷನು ಲೇಖಕನು. ಯೆಹೋಯಾದನ ಮ
ನಾದ ಬೆನಾಯನು ಕೆರೇತ್ಯ ಪೆಲೇತ್ಯ ಎಂಬ ಕಾವಲ
ದಂಡುಗಳ ಮುಖ್ಯಸ್ಥನು. ದಾವೀದನ ಮಕ್ಕಳ
ಅರಸನ ಒಡ್ಡೋಲಗದಲ್ಲಿ ಪ್ರಧಾನರಾಗಿದ್ದರು.

ದಾವೀದನು ಅಮ್ಮೋನಿಯರನ್ನು ಸೋಲಿಸಿದ್ದೂ ಅವನ ಭಟರ
ಕೆಲವು ಶೂರಕೃತ್ಯಗಳೂ.

ಇದಾದನಂತರ ಅಮ್ಮೋನಿಯರ ಅರಸನಾದ ನಾ
ಹಾಷನು ಸತ್ತನು. ಅವನಿಗೆ ಬದಲಾಗಿ ಅವನ ಮಗನು
ಅರಸನಾದನು. ದಾವೀದನು—ನಾಹಾಷನು ನನ
ದಯೆತೋರಿಸಿದ್ದರಿಂದ ನಾನೂ ಅವನ ಮಗನಾ
ಹಾನೂನನಿಗೆ ದಯೆತೋರಿಸುವೆನು ಅಂದುಕೊಂಡ
ಪಿತೃಶೋಕದಲ್ಲಿದ್ದ ಹಾನೂನನನ್ನು ಸಂತೈಸುವ
ಕ್ಕೋಸ್ಕರ ದೂತರನ್ನು ಕಳುಹಿಸಿದನು. ದಾವೀದ
ಸೇವಕರು ಹಾನೂನನನ್ನು ಸಂತೈಸುವದಕ್ಕೋಸ್ಕ
ಅಮ್ಮೋನಿಯರ ದೇಶಕ್ಕೆ ಬಂದಾಗ ಅಲ್ಲಿನ ಪ್ರಭುಗಳ
ಹಾನೂನನಿಗೆ— ದಾವೀದನು ನಿನ್ನ ಬಳಿಗೆ ಸಂತೈಸುವ
ರನ್ನು ಕಳುಹಿಸಿದ್ದರಿಂದ ಅವನು ನಿನ್ನ ತಂದೆಯನ್ನು
ಸನ್ಮಾನಿಸುವವನಾಗಿದ್ದಾನೆಂದು ನೆನಸುತ್ತೀಯೋ
ಅವನ ಆಳುಗಳು ದೇಶವನ್ನು ಸಂಚರಿಸಿನೋಡಿ ಅ
ನ್ನು ಸ್ವಾಧೀನಮಾಡಿಕೊಳ್ಳಬೇಕೆಂದು ಬಂದಿದ್ದಾ
ಎಂದು ಹೇಳಿದರು. ಆದದರಿಂದ ಹಾನೂನನು ದಾವಿ
ದನ ಸೇವಕರನ್ನು ಹಿಡಿಸಿ [ಗಡ್ಡದ ಅರ್ಧಭಾಗವನ್ನು
ಬೋಳಿಸಿ ಅವರ ಸೊಂಟದ ಕೆಳಭಾಗದ ನಿಲುವಂಗಿ
ಳನ್ನು ಕತ್ತರಿಸಿ ಕಳುಹಿಸಿಬಿಟ್ಟನು. ಅವರು ಹೋಗಿ
ಈ ವರ್ತಮಾನವನ್ನು ದಾವೀದನಿಗೆ ಹೇಳಿಕಳುಹಿಸಿ
ದಾಗ ಅವನು ಬಹಳ ಅಪಮಾನಹೊಂದಿದ ಅವರಿ
ಆಳುಗಳ ಮುಖಾಂತರವಾಗಿ— ನಿಮ್ಮ ಗಡ್ಡ ಬೆಳೆಯು

1) ಅಥವಾ: ಹೋದಾಗ.

ವರೆಗೆ ನೀವು ಯೆರಿಕೋವಿನಲ್ಲಿದ್ದು ಅನಂತರ ಬನ್ನಿರಿ
ಎಂದು ಹೇಳಿಸಿದನು.
6 ತಾವು ದಾವೀದನಿಗೆ ಅಸಹ್ಯರಾದೆವೆಂದು ಹಾನೂ
ನನೂ ಅಮ್ಮೋನಿಯರೂ ತಿಳಿದು [1]ಎರಡು ನದಿಗಳ
ಮಧ್ಯದಲ್ಲಿರುವ ಅರಾಮ್ ಸೀಮೆಯಿಂದಲೂ ಅರಾ
ಮ್ ಮಾಕದಿಂದಲೂ ಚೋಬಾರಾಜ್ಯದಿಂದಲೂ ರಥಗ
ಳನ್ನೂ ರಾಹುತರನ್ನೂ ತರಿಸುವದಕ್ಕೋಸ್ಕರ [2]ಸಾವಿರ
7 ತಲಾಂತು ಬೆಳ್ಳಿಯನ್ನು ಕಳುಹಿಸಿದರು. ಆಗ
ಮೂವತ್ತೆರಡು ಸಾವಿರ ಮಂದಿ ರಥಬಲದವರೂ ಮಾ
ಕದ ಅರಸನೂ ಅವನ ದಂಡಾಳುಗಳೂ ಬಂದು ಅವರ
ಸಹಾಯಕ್ಕೋಸ್ಕರ ಮೇದೆಬ ಊರಿನ ಮುಂದೆ ಪಾಳೆ
ಯಮಾಡಿಕೊಂಡರು. ಅಮ್ಮೋನಿಯರೂ ತಮ್ಮ
8 ಪಟ್ಟಣಗಳಿಂದ ಯುದ್ಧಕ್ಕೆ ಕೂಡಿಬಂದರು. ಈ ಸುದ್ದಿ
ಯು ದಾವೀದನಿಗೆ ಮುಟ್ಟಿದಾಗ ಅವನು ಯೋವಾಬ
ನನ್ನೂ ಎಲ್ಲಾ ಶೂರಸೈನಿಕರನ್ನೂ ಕಳುಹಿಸಿದನು.
9 ಕೂಡಲೆ ಅಮ್ಮೋನಿಯರು ಹೊರಗೆ ಬಂದು ಊರು
ಬಾಗಲಿನ ಬಳಿಯಲ್ಲಿ ವ್ಯೂಹಕಟ್ಟಿದರು. ಅವರ ಸಹಾ
ಕ್ಕಾಗಿ ಬಂದ ಅರಸರು ಪ್ರತ್ಯೇಕವಾಗಿ ಮೈದಾನದಲ್ಲಿ
10 ನಿಂತರು. ಯೋವಾಬನು ತನ್ನ ಮುಂದೆಯೂ ಹಿಂದೆಯೂ
ಯುದ್ಧಪ್ರಾರಂಭವಾದದ್ದನ್ನು ಕಂಡು ಇಸ್ರಾಯೇಲ್ಯ
ರಲ್ಲಿ ಶ್ರೇಷ್ಠರಾದ ಎಲ್ಲಾ ಸೈನಿಕರನ್ನು ಆರಿಸಿಕೊಂಡು
ಅವರನ್ನು ಅರಾಮ್ಯರಿಗೆ ವಿರೋಧವಾಗಿ ನಿಲ್ಲಿಸಿದನು.
11 ಉಳಿದ ಜನರನ್ನು ತನ್ನ ತಮ್ಮನಾದ ಅಬ್ಷೈಯ ವಶಕ್ಕೆ
12 ಕೊಟ್ಟು ಅವನಿಗೆ—ಅರಾಮ್ಯರು ನನ್ನನ್ನು ಸೋಲಿಸು
ವಂತೆ ಕಂಡರೆ ನೀನು ನನ್ನ ಸಹಾಯಕ್ಕೆ ಬಾ; ಅಮ್ಮೋ
ನಿಯರು ನಿನ್ನನ್ನು ಸೋಲಿಸುವಂತೆ ಕಂಡರೆ ನಾನು ನಿನ್ನ
13 ಸಹಾಯಕ್ಕೆ ಬರುವೆನು. ಧೈರ್ಯದಿಂದಿರು; ನಮ್ಮ
ಜನರಿಗೋಸ್ಕರವೂ ನಮ್ಮ ದೇವರ ಪಟ್ಟಣಗಳಿಗೋಸ್ಕ
ರವೂ ನಮ್ಮ ಪೌರುಷವನ್ನು ತೋರಿಸೋಣ. ಯೆಹೋ
ವನು ತನಗೆ ಸರಿಕಾಣುವಂಥದನ್ನು ಮಾಡಲಿ ಎಂದು
ಹೇಳಿ ಅವನನ್ನು ಅಮ್ಮೋನಿಯರಿಗೆ ವಿರೋಧವಾಗಿ
14 ಕಳುಹಿಸಿದನು. ಯೋವಾಬನೂ ಅವನ ಜನರೂ
ಅರಾಮ್ಯರಿಗೆ ವಿರೋಧವಾಗಿ ಯುದ್ಧಪ್ರಾರಂಭಿಸಿದಾಗ
15 ಅರಾಮ್ಯರು ಓಡಿಹೋದರು. ಇವರು ಓಡಿಹೋಗು
ವದನ್ನು ಅಮ್ಮೋನಿಯರು ಕಂಡು ಅವರೂ ಅವನ
ತಮ್ಮನಾದ ಅಬ್ಷೈಯ ಎದುರಿನಿಂದ ಓಡಿಹೋಗಿ ಪಟ್ಟಣ
ವನ್ನು ಹೊಕ್ಕರು. ಯೋವಾಬನು ಯೆರೂಸಲೇಮಿಗೆ
ಹೋದನು.
16 ಅರಾಮ್ಯರಿಗೆ ತಾವು ಇಸ್ರಾಯೇಲ್ಯರಿಂದ ಅಪಜಯ
ಹೊಂದಿದೆವೆಂದು ಗೊತ್ತಾದಾಗ ಅವರು ಯೂಫ್ರೇ
ಟೀಸ್ ನದಿಯ ಆಚೆಯಲ್ಲಿದ್ದ ಅರಾಮ್ಯರನ್ನು ಕರೇ
ಕಳುಹಿಸಿದರು. ಹದರೆಜರನ ಸೇನಾಪತಿಯಾದ
17 ಶೋಫಕನು ಅವರ ನಾಯಕನಾದನು. ಈ ಸುದ್ದಿ
ಯು ದಾವೀದನಿಗೆ ಮುಟ್ಟಿದಾಗ ಅವನು ಇಸ್ರಾ
ಯೇಲ್ಯರೆಲ್ಲರನ್ನೂ ಕೂಡಿಸಿಕೊಂಡು ಯೊರ್ದನ್
ಹೊಳೆ ದಾಟಿ ಅರಾಮ್ಯರ ಸಮೀಪಕ್ಕೆ ಬಂದು ಅವರೊ
ಡನೆ ಕಾದುವದಕ್ಕೋಸ್ಕರ ವ್ಯೂಹಕಟ್ಟಿದನು. ಅರಾ 18
ಮ್ಯರು ಯುದ್ಧಕ್ಕೆ ನಿಂತಾಗ ಇಸ್ರಾಯೇಲ್ಯರ ಮುಂದ
ನಿಂತು ಓಡಿಹೋದರು. ದಾವೀದನು ಅರಾಮ್ಯರ
ಏಳು ಸಾವಿರ ರಥಗಳನ್ನು ಹಾಳುಮಾಡಿ ನಾಲ್ವತ್ತು
ಸಾವಿರ ಮಂದಿ ಕಾಲಾಳುಗಳನ್ನು ಕೊಂದುಬಿಟ್ಟನು.
ಸೇನಾಪತಿಯಾದ ಶೋಫಕನನ್ನು ಕೊಂದನು. ಹದರೆ 19
ಜರನ ದಾಸರು ಇಸ್ರಾಯೇಲ್ಯರ ಮುಂದೆ ತಮ್ಮ ಕೈ
ಸಾಗದೆಂದು ತಿಳಿದು ದಾವೀದನೊಡನೆ ಒಪ್ಪಂದಮಾಡಿ
ಕೊಂಡು ಅವನ ದಾಸರಾದರು. ಅಂದಿನಿಂದ ಅರಾ
ಮ್ಯರು ಅಮ್ಮೋನಿಯರಿಗೆ ಸಹಾಯಮಾಡುವದಕ್ಕೆ
ಮನಸ್ಸಿಲ್ಲದವರಾದರು.

20

ಮರುವರುಷ ಅರಸರು ಯುದ್ಧಕ್ಕೆ ಹೊರಡುವ
ಸಮಯದಲ್ಲಿ ಯೋವಾಬನು ಬಲವಾದ ಸೈನ್ಯ
ವನ್ನು ಯುದ್ಧಕ್ಕೆ ನಡಿಸಿ ಅಮ್ಮೋನಿಯರ ಪ್ರಾಂತಗ
ಳನ್ನು ಹಾಳುಮಾಡಿ ರಬ್ಬಕ್ಕೆ ಹೋಗಿ ಅದಕ್ಕೆ ಮುತ್ತಿಗೆ
ಹಾಕಿದನು. ದಾವೀದನು ಯೆರೂಸಲೇಮಿನಲ್ಲಿಯೇ
ಇದ್ದನು. ಯೋವಾಬನು ರಬ್ಬಪಟ್ಟಣವನ್ನು ಸ್ವಾ
ಧೀನಮಾಡಿಕೊಂಡು ಹಾಳುಮಾಡಿಬಿಟ್ಟನು. ದಾ 2
ವೀದನು ಮಲ್ಕಾಮ್‌ಮೂರ್ತಿಯ ತಲೆಯ ಮೇಲಿದ್ದ
ಬಂಗಾರದ ಕಿರೀಟವನ್ನು ತೆಗೆದುಕೊಂಡನು; ಅದು
ನಾಲ್ಕು ಸಾವಿರ ತೊಲೆ ತೂಕದ್ದು; ಅದರಲ್ಲಿದ್ದ ಮಣಿ
ಯನ್ನು ದಾವೀದನು ತನ್ನ ಶಿರಸ್ಸಿನಲ್ಲಿ ಧರಿಸಿಕೊಂಡನು.
ಅವನು ಆ ಪಟ್ಟಣದಿಂದ ದೊಡ್ಡ ಕೊಳ್ಳೆಯನ್ನು
ಒಯ್ದನು. ಊರಿನ ನಿವಾಸಿಗಳನ್ನು ಹಿಡಿದು [3]ಗರ 3
ಗಸ ಗುದ್ದಲಿ ಕೊಡಲಿಗಳಿಂದ ಕೆಲಸಮಾಡುವದಕ್ಕೆ
ಹಚ್ಚಿದನು. ಅಮ್ಮೋನಿಯರ ಎಲ್ಲಾ ಪಟ್ಟಣದವರಿಗೂ
ಇದೇ ಗತಿಯಾಯಿತು. ಅನಂತರ ದಾವೀದನು ಸರ್ವ
ಸೈನಿಕರೊಡನೆ ಯೆರೂಸಲೇಮಿಗೆ ಬಂದನು.
ಅನಂತರ ಫಿಲಿಷ್ಟಿಯರ ಸಂಗಡ ಗೆಜೆರಿನಲ್ಲಿ ಯು 4
ದ್ಧ ನಡೆಯಿತು. ಆಗ ಹುಷ ಊರಿನವನಾದ ಸಿಬ್ಬೆಕೈ
ಎಂಬವನು ರೆಫಾಯನಾದ ಸಿಪ್ಪೈ ಎಂಬವನನ್ನು
ಕೊಲ್ಲಲು ಫಿಲಿಷ್ಟಿಯರು ಕುಗ್ಗಿಹೋದರು.
ಫಿಲಿಷ್ಟಿಯರೊಡನೆ ಇನ್ನೊಮ್ಮೆ ಯುದ್ಧ ನಡೆದಾಗ 5
ಯಾಯೀರನ ಮಗನಾದ ಎಲ್ಹಾನಾನನು ಗಿತ್ತೀಯ
ನಾದ ಗೊಲ್ಯಾತನ ತಮ್ಮನಾದ [4]ಲಹ್ಮೀಯನ್ನು ಕೊಂ
ದನು. ಲಹ್ಮೀಯ ಬರ್ಜಿಯ ಹಿಡಿಕೆಯು ನೇಯಿಗಾ
ರರ ಕುಂಟೆಯಷ್ಟು ಗಾತ್ರವಿತ್ತು.
ಮತ್ತೊಂದು ಸಾರಿ ಗತ್ ಊರಿನಲ್ಲಿ ಯುದ್ಧ ನಡೆ 6
ಯಿತು. ಅಲ್ಲಿ ಒಬ್ಬ ಎತ್ತರವಾದ ಪುರುಷನಿದ್ದನು;
ಅವನ ಕೈಕಾಲುಗಳಿಗೆ ಆರಾರು ಬೆರಳುಗಳಂತೆ ಒಟ್ಟಿಗೆ
ಇಪ್ಪತ್ತನಾಲ್ಕು ಬೆರಳುಗಳಿದ್ದವು; ಅವನೂ ರೆಫಾ
ಯನು. ಅವನು ಇಸ್ರಾಯೇಲ್ಯರನ್ನು ನಿಂದಿಸಿದಾಗ 7
ದಾವೀದನ ಅಣ್ಣನಾದ ಶಿಮ್ಮನ ಮಗ ಯೋನಾತಾ
ನನು ಅವನನ್ನು ಕೊಂದುಹಾಕಿದನು.
ಗತ್ ಊರಿನವರಾದ ಈ ರೆಫಾಯರು ದಾವೀದನಿಂ 8
ದಲೂ ಅವನ ಸೇವಕರಿಂದಲೂ ಹತರಾದರು.

1) ಅಂದರೆ, ಮೆಸೊಪೊತಾಮ್ಯ. 2) ಸುಮಾರು ಐವತ್ತಾರು ಲಕ್ಷ ಇಪ್ಪತ್ತೈದು ಸಾವಿರ ರೂಪಾಯಿ. 3) ಪಾಠಾಂತರ: [ಗ]ರಗಸ ಗುದ್ದಲಿ ಕೊಡಲಿಗಳಿಂದ ತುಂಡುಮಾಡಿಬಿಟ್ಟನು. 4) ೨ ಸಮು. 21. 19 ಗೊಲ್ಯಾತನನ್ನು.

ಖಾನೇಷುಮಾರಿಯೂ ಅದರ ಫಲವೂ.

21 ಸೈತಾನನು ಇಸ್ರಾಯೇಲ್ಯರಿಗೆ ವಿರೋಧವಾಗಿ
ಎದ್ದು ಇಸ್ರಾಯೇಲ್ಯರ ಖಾನೇಷುಮಾರಿಮಾಡುವ
2 ದಕ್ಕೆ ದಾವೀದನನ್ನು ಪ್ರೇರಿಸಿದನು. ದಾವೀದನು
ಯೋವಾಬನನ್ನೂ ಜನಾಧಿಪತಿಗಳನ್ನೂ ಕರೆದು—
ನನಗೆ ಜನರ ಲೆಕ್ಕ ಗೊತ್ತಾಗುವ ಹಾಗೆ ನೀವು ಬೇರ್ಷೆ
ಬದಿಂದ ದಾನ್ ಊರಿನ ವರೆಗೂ ಸಂಚರಿಸಿ ಇಸ್ರಾ
ಯೇಲ್ಯರನ್ನು ಲೆಕ್ಕಮಾಡಿಕೊಂಡು ಬನ್ನಿರಿ ಎಂದು
3 ಆಜ್ಞಾಪಿಸಿದನು. ಆಗ ಯೋವಾಬನು—ನನ್ನ ಒಡೆ
ಯನಾದ ಅರಸನೇ, ಯೆಹೋವನು ತನ್ನ ಪ್ರಜೆಗಳ
ನ್ನು ನೂರರಷ್ಟು ಹೆಚ್ಚಿಸಲಿ. ಅವರೆಲ್ಲರೂ ನನ್ನ ಒಡೆ
ಯನ ದಾಸರಷ್ಟೆ. ಒಡೆಯನು ಇಂಥದನ್ನು ಅಪೇಕ್ಷಿ
ಸುವದೇನು? ಇಸ್ರಾಯೇಲ್ಯರನ್ನು ಅಪರಾಧಕ್ಕೆ ಗುರಿ
4 ಮಾಡುವದೇಕೆ ಅಂದನು. ಆದರೆ ಅರಸನು ಯೋವಾ
ಬನಿಗೆ ಕಿವಿಗೊಡದೆ ತನ್ನ ಮಾತನ್ನೇ ಸಾಧಿಸಿದ್ದರಿಂದ
ಅವನು ಹೊರಟುಹೋಗಿ ಇಸ್ರಾಯೇಲ್ಯರ ಎಲ್ಲಾ
ಪ್ರಾಂತಗಳಲ್ಲಿ ಸಂಚರಿಸಿ ಯೆರೂಸಲೇಮಿಗೆ ಹಿಂದಿರು
5 ಗಿದನು. ಯೋವಾಬನು ದಾವೀದನಿಗೆ ಒಪ್ಪಿಸಿದ
ಖಾನೇಷುಮಾರಿಯ ಸಂಖ್ಯೆಯು—ಇಸ್ರಾಯೇಲ್ಯರಲ್ಲಿ
ಯುದ್ಧಕ್ಕೆ ಹೋಗತಕ್ಕ ಸೈನಿಕರು ಹನ್ನೊಂದು ಲಕ್ಷ;
ಯೆಹೂದರಲ್ಲಿ ನಾಲ್ಕು ಲಕ್ಷದ ಎಪ್ಪತ್ತು ಸಾವಿರ.
6 ಅರಸನ ಅಪ್ಪಣೆಯು ಯೋವಾಬನಿಗೆ ಅಸಹ್ಯವಾಗಿ
ದ್ದದರಿಂದ ಅವನು ಇವರೊಡನೆ ಲೇವಿ ಬೆನ್ಯಾಮೀನ್
ಕುಲಗಳವರ ಖಾನೇಷುಮಾರಿಯನ್ನು ಮಾಡಲಿಲ್ಲ.
7 ಖಾನೇಷುಮಾರಿಮಾಡಿದ್ದು ದೇವರಿಗೆ ಕೆಟ್ಟದ್ದೆಂದು
ಕಂಡದರಿಂದ ಆತನು ಇಸ್ರಾಯೇಲ್ಯರನ್ನು ಬಾಧಿಸಿ
8 ದನು. ಆಗ ದಾವೀದನು—ನಾನು ಬುದ್ಧಿಹೀನ
ಕಾರ್ಯವನ್ನು ಮಾಡಿ ಪಾಪಿಯಾಗಿದ್ದೇನೆ; ದಯ
ವಿಟ್ಟು ನಿನ್ನ ಸೇವಕನ ಅಪರಾಧವನ್ನು ಕ್ಷಮಿಸು
9 ಎಂದು ದೇವರನ್ನು ಪ್ರಾರ್ಥಿಸಲು ಆತನು ದಾವೀದನ
10 ದರ್ಶಿಯಾದ ಗಾದನಿಗೆ ಹೇಳಿದ್ದೇನಂದರೆ—ನೀನು
ದಾವೀದನ ಹತ್ತಿರ ಹೋಗಿ ಅವನಿಗೆ—ನಾನು ಮೂರು
ವಿಧವಾದ ಶಿಕ್ಷೆಯನ್ನು ನಿನ್ನ ಮುಂದೆ ಇಡುತ್ತೇನೆ.
ಅವುಗಳಲ್ಲಿ ಯಾವದನ್ನು ನಿನ್ನ ಮೇಲೆ ಬರಮಾಡ
ಬೇಕೋ ಆರಿಸಿಕೋ ಎಂದು ಯೆಹೋವನು ಅನ್ನು
11 ತ್ತಾನೆ ಎಂಬದಾಗಿ ಹೇಳು ಅಂದನು. ಆಗ ಗಾದನು
ದಾವೀದನ ಬಳಿಗೆ ಹೋಗಿ ಅವನಿಗೆ—ಯೆಹೋವನು
12 ಹೇಳುವದೇನಂದರೆ—ಮೂರು ವರುಷಗಳ ಕಾಲ ಬರವು
ಉಂಟಾಗಬೇಕೋ, ಇಲ್ಲವೆ ಮೂರು ತಿಂಗಳುಗಳ
ವರೆಗೆ ನಿನ್ನ ಶತ್ರುಗಳ ಕತ್ತಿಗೆ ಬಲಿಯಾಗುವದು
ಬೇಕೋ, ಇಲ್ಲವೆ ಇಸ್ರಾಯೇಲ್ಯರ ಸಮಸ್ತಪ್ರಾಂತಗ
ಳಲ್ಲಿ ಯೆಹೋವನು ಕಳುಹಿಸಿದ ಸಂಹಾರಕದೂತನಿಂ
ದುಂಟಾಗುವ ಮೂರು ದಿನಗಳ ಘೋರವ್ಯಾಧಿರೂಪ
ವಾದ ಯೆಹೋವನ ಕತ್ತಿಯು ಬೇಕೋ? ಈ ಮೂರ
ರಲ್ಲಿ ಒಂದನ್ನು ಆರಿಸಿಕೋ ಎಂಬದೇ. ನನ್ನನ್ನು
ಕಳುಹಿಸಿದವನಿಗೆ ಯಾವ ಉತ್ತರವನ್ನು ತೆಗೆದು
ಕೊಂಡು ಹೋಗಬೇಕು, ಆಲೋಚಿಸಿ ಹೇಳು ಎಂದು
13 ಹೇಳಿದನು. ಅದಕ್ಕೆ ದಾವೀದನು—ನಾನು ಬಲು

ಇಕ್ಕಟ್ಟಿನಲ್ಲಿರುತ್ತೇನೆ. ಯೆಹೋವನ ಹಸ್ತದಲ್ಲಿ ಬೀಳ
ತ್ತೇನೆ; ಆತನು ಕೃಪಾಪೂರ್ಣನು. ಮನುಷ್ಯರ
ಯಲ್ಲಿ ಬೀಳಲೊಲ್ಲೆನು ಎಂದು ಹೇಳಿದನು.
ಆಗ ಯೆಹೋವನು ಇಸ್ರಾಯೇಲ್ಯರ ಮೇಲೆ ವ್ಯಾ
ಯನ್ನು ಬರಮಾಡಿದನು; ಅವರಲ್ಲಿ ಎಪ್ಪತ್ತು ಸಾವಿ
ಜನರು ಸತ್ತರು. ದೇವರು ಯೆರೂಸಲೇಮನ್ನೂ ಸಂ
ರಿಸುವದಕ್ಕೆ ದೂತನನ್ನು ಕಳುಹಿಸಿದನು; ಆದರೆ
ದೂತನು ಸಂಹರಿಸುವದಕ್ಕಿದ್ದಾಗ ಯೆಹೋವನ
ಅದನ್ನು ಕಂಡು ಆ ಕೇಡಿನ ವಿಷಯದಲ್ಲಿ ಪಶ್ಚಾತ್ತಾ
ಪಟ್ಟು ಸಂಹಾರಕದೂತನಿಗೆ—ಸಾಕು, ನಿನ್ನ ಕೈಯನ
ಹಿಂದೆಗೆ ಎಂದು ಆಜ್ಞಾಪಿಸಿದನು. ಆಗ ಯೆಹೋ
ವನ ದೂತನು ಯೆಬೂಸಿಯನಾದ ಒರ್ನಾನನ ಕ
ದಲ್ಲಿ ನಿಂತನು. ದಾವೀದನು ಕಣ್ಣೆತ್ತಿ ನೋಡಿ ಯೆ
ಹೋವನ ದೂತನು ಭೂಮ್ಯಾಕಾಶಗಳ ನಡುವೆ ನಿಂ
ರುವದನ್ನೂ ಚಾಚಿದ ಕೈಯಲ್ಲಿ ಯೆರೂಸಲೇಮಿ
ವಿರೋಧವಾಗಿ ಹಿರಿದ ಕತ್ತಿಯಿರುವದನ್ನೂ ಕಂಡಾ
ಅವನೂ ಹಿರಿಯರೂ ಗೋಣೀತಟ್ಟನ್ನು ಹೊದ್ದುಕೊ
ಡವರಾಗಿ ಬೋರ್ಲಬಿದ್ದರು; ಮತ್ತು ದಾವೀದನ
ದೇವರಿಗೆ—ಜನರನ್ನು ಲೆಕ್ಕಿಸಬೇಕೆಂದು ಆಜ್ಞಾಪಿಸಿ
ವನು ನಾನಲ್ಲವೋ! ಮಹಾಪಾಪಮಾಡಿದವನು ನಾನೇ
ಕುರಿಗಳಂತಿರುವ ಈ ಜನರು ಏನು ಮಾಡಿದ್ದಾರೆ? ಯೆ
ಹೋವನೇ, ನನ್ನ ದೇವರೇ, ನಿನ್ನ ಹಸ್ತವು ನಿನ್ನ ಜ
ರನ್ನು ಬಾಧಿಸುವದಕ್ಕೆ ಅವರಿಗೆ ವಿರೋಧವಾಗಿರದೆ ನ
ಗೂ ನನ್ನ ಮನೆಯವರಿಗೂ ವಿರೋಧವಾಗಿರಲಿ ಎಂದ
ಬೇಡಿಕೊಂಡನು.
ಆಗ ಯೆಹೋವನ ದೂತನು ಗಾದನಿಗೆ—ಯೆಬೂ
ಸಿಯನಾದ ಒರ್ನಾನನ ಕಣದಲ್ಲಿ ಯೆಹೋವನಿಗೋ
ಸ್ಕರ ಒಂದು ಯಜ್ಞವೇದಿಯನ್ನು ಕಟ್ಟಿಸುವದಕ
ಹೋಗಬೇಕು ಎಂದು ದಾವೀದನಿಗೆ ಹೇಳು ಎಂಬದಾ
ಆಜ್ಞಾಪಿಸಿದನು. ದಾವೀದನು ಗಾದನ ಮುಖಾಂತ
ವಾಗಿ ತನಗಾದ ಯೆಹೋವನ ಅಪ್ಪಣೆಯಂತೆ ಹೊ
ಟನು. ಅಷ್ಟರಲ್ಲಿ ಗೋದಿಯನ್ನು ತುಳಿಸುತ್ತಿದ್ದ ಒರ್ನಾ
ನನು ತಿರುಗಿಕೊಂಡು ದೂತನನ್ನು ನೋಡಿದ್ದನು. ಅ
ನೊಡನಿದ್ದ ಅವನ ನಾಲ್ಕು ಮಂದಿ ಮಕ್ಕಳು ಅಡ
ಕೊಂಡಿದ್ದರು. ದಾವೀದನು ತನ್ನ ಬಳಿಗೆ ಬರುವದನ್ನು
ಒರ್ನಾನನು ಕಂಡು ಕಣವನ್ನು ಬಿಟ್ಟುಹೋಗಿ ಅವನಿ
ಅಡ್ಡಬಿದ್ದನು. ದಾವೀದನು ಅವನಿಗೆ—ನಿನ್ನ ಕ
ವನ್ನೂ ಭೂಮಿಯನ್ನೂ ನನಗೆ ಕೊಡು; ವ್ಯಾಧಿಯ
ಜನರನ್ನು ಬಿಟ್ಟುಹೋಗುವಂತೆ ನಾನು ಅದರಲ್ಲಿ ಯೆ
ಹೋವನಿಗೋಸ್ಕರ ಒಂದು ವೇದಿಯನ್ನು ಕಟ್ಟಿಸ
ತ್ತೇನೆ; ಪೂರ್ಣಕ್ರಯ ತೆಗೆದುಕೊಂಡು ಅದನ್ನು
ಕೊಡು ಎಂದು ಹೇಳಿದನು. ಆಗ ಒರ್ನಾನನು ದಾವಿ
ದನಿಗೆ—ನನ್ನ ಒಡೆಯನಾದ ಅರಸನು ತನಗೆ ಇಷ್ಟವಾ
ದದ್ದನ್ನು ತೆಗೆದುಕೊಂಡು ಯಜ್ಞಮಾಡೋಣವಾಗಲಿ
ಇಲ್ಲಿ ಯಜ್ಞಕ್ಕೆ ಹೋರಿಗಳೂ ಸೌದೆಗೆ ಹಂತೀಕುಂ
ಗಳೂ ನೈವೇದ್ಯಕ್ಕೋಸ್ಕರ ಗೋದಿಯೂ ಇರುತ್ತವೆ
ಇವೆಲ್ಲವನ್ನೂ ಕೊಡುತ್ತೇನೆ ಎಂದು ಹೇಳಿದನು. ಅರ
ನಾದ ದಾವೀದನು ಒರ್ನಾನನಿಗೆ—ಹಾಗಲ್ಲ, ನಾನ
ನಿನ್ನಿಂದ ಪೂರ್ಣಕ್ರಯಕ್ಕೆ ತೆಗೆದುಕೊಳ್ಳುತ್ತೇನೆ. ನಿನ
ದನ್ನು ಕ್ರಯವಿಲ್ಲದೆ ತೆಗೆದುಕೊಂಡು ಯೆಹೋವನಿ

25 ಯಜ್ಞವಾಗಿ ಅರ್ಪಿಸಲೊಲ್ಲೆನು ಎಂದು ಹೇಳಿ ಆ ಭೂ
ಮಿಗೋಸ್ಕರ ಅವನಿಗೆ [1]ಆರುನೂರು ತೊಲೆ ಬಂಗಾರ
26 ವನ್ನು ಕೊಟ್ಟು ಅಲ್ಲಿ ಯೆಹೋವನಿಗೋಸ್ಕರ ಯಜ್ಞವೇದಿ
ಯನ್ನು ಕಟ್ಟಿಸಿ ಅದರ ಮೇಲೆ ಆತನಿಗೆ ಸರ್ವಾಂಗಹೋ
ಮಗಳನ್ನೂ ಸಮಾಧಾನಯಜ್ಞಗಳನ್ನೂ ಅರ್ಪಿಸಿ ಯೆ
ಹೋವನನ್ನು ಪ್ರಾರ್ಥಿಸಿದನು. ಯೆಹೋವನು ಅವನ
ಮೊರೆಯನ್ನು ಲಾಲಿಸಿ ಆಕಾಶದಿಂದ ಯಜ್ಞವೇದಿಯ
27 ಮೇಲೆ ಬೆಂಕಿಯನ್ನು ಸುರಿಸಿ ಕತ್ತಿಯನ್ನು ಒರೆಯಲ್ಲಿ
ಹಾಕಬೇಕೆಂದು ದೂತನಿಗೆ ಆಜ್ಞಾಪಿಸಿದನು. ಅವನು
ಹಾಗೆಯೇ ಮಾಡಿದನು.

## ದಾವೀದನ ದೈವಿಕಕಾರ್ಯಗಳು.

21. 28—29. 30.

### ದಾವೀದನು ದೇವಾಲಯಕ್ಕೋಸ್ಕರ ಸ್ಥಳವನ್ನು ಗೊತ್ತುಮಾಡಿದ್ದು.

28 ಮೋಶೆಯು ಅರಣ್ಯದಲ್ಲಿ ಮಾಡಿಸಿದ ಯೆಹೋ
ವನ ಗುಡಾರವೂ ಯಜ್ಞವೇದಿಯೂ ಆ ಕಾಲದಲ್ಲಿ
29 ಗಿಬ್ಯೋನಿನ ಪೂಜಾಸ್ಥಳದಲ್ಲಿದ್ದವು. ಆದರೂ ದಾವೀ
ದನು ಯೆಹೋವದೂತನ ಕತ್ತಿಗೆ ಹೆದರಿ ದೇವದರ್ಶನ
ಕ್ಕೋಸ್ಕರ ಅಲ್ಲಿಗೆ ಹೋಗಲಾರದೆ ಯೆಬೂಸಿಯ
ನಾದ ಒರ್ನಾನನ ಕಣದಲ್ಲಿಯೇ ಯಜ್ಞವರ್ಪಿಸಿದನು.
30 ಆ ಕಾಲದಲ್ಲಿ ದಾವೀದನಿಗೆ ಯೆಹೋವನಿಂದ ಸದು
22 ತ್ತರದೊರಕಿದ್ದರಿಂದ ಅವನು—ಇದೇ ದೇವರಾದ
ಯೆಹೋವನ ಆಲಯ, ಇದೇ ಇಸ್ರಾಯೇಲ್ಯರು
ಯಜ್ಞವರ್ಪಿಸತಕ್ಕ ವೇದಿ ಎಂದು ಹೇಳಿದನು.

### ದಾವೀದನು ದೇವಾಲಯಕಟ್ಟುವದಕ್ಕೋಸ್ಕರ ಬೇಕಾದದ್ದನ್ನೆಲ್ಲಾ ಸಿದ್ಧಪಡಿಸಿದ್ದು.

2 ಅನಂತರ ದಾವೀದನು ಇಸ್ರಾಯೇಲ್‌ದೇಶದಲ್ಲಿದ್ದ
ಅನ್ಯಜನಗಳನ್ನು ಕೂಡಿಸುವದಕ್ಕೆ ಆಜ್ಞಾಪಿಸಿ ಅವರ
ಲ್ಲಿದ್ದ ಕಲ್ಲುಕುಟಿಗರನ್ನು ದೇವಾಲಯದ ಕಟ್ಟಡಕ್ಕಾಗಿ
3 ಕಲ್ಲುಗಳನ್ನು ಕೆತ್ತುವದಕ್ಕೆ ನೇಮಿಸಿದನು. ಇದಲ್ಲದೆ
ಬಾಗಲುಗಳ ಕದಗಳಿಗೋಸ್ಕರ ಬೇಕಾದ ಮೊಳೆಗಳ
ನ್ನೂ ಪಟ್ಟಿಗಳನ್ನು ಮಾಡುವದಕ್ಕೆ ಬಹಳ ಕಬ್ಬಿಣ
4 ವನ್ನೂ ಲೆಕ್ಕವಿಲ್ಲದಷ್ಟು ತಾಮ್ರವನ್ನೂ ಎಣಿಸಲಾರ
ದಷ್ಟು ದೇವದಾರುಮರಗಳನ್ನೂ ಸಿದ್ಧಪಡಿಸಿದನು;
ಚೀದೋನ್ಯರೂ ತೂರ್ಯರೂ ಅವನಿಗೆ ದೇವದಾರು
5 ಮರಗಳನ್ನು ತಂದುಕೊಟ್ಟರು. ದಾವೀದನು [ತನ್ನ
ಮನಸ್ಸಿನಲ್ಲಿ]—ನನ್ನ ಮಗನಾದ ಸೊಲೊಮೋನನು
ಎಳೇ ಪ್ರಾಯದವನಾಗಿದ್ದಾನೆ; ಯೆಹೋವನಿಗೋಸ್ಕರ
ಕಟ್ಟಿಸತಕ್ಕ ಆಲಯವು ಎಲ್ಲಾ ದೇಶಗಳಲ್ಲಿ ಕೀರ್ತಿ
ಘನಗಳನ್ನು ಹೊಂದಬೇಕಾದರೆ ಅದು ಅಧಿಕ ಶೋಭಾ
ಯಮಾನವಾದದ್ದಾಗಿರಬೇಕು; ಆದದರಿಂದ ಅದಕ್ಕೆ
ಬೇಕಾಗುವದನ್ನೆಲ್ಲಾ ಸಿದ್ಧಪಡಿಸುವೆನು ಅಂದುಕೊಂಡು
ಸಾಯುವದಕ್ಕೆ ಮೊದಲೇ ಬಹಳವಾಗಿ ಸೌರಣೆಮಾಡಿ
ದನು.
ಆ ಮೇಲೆ ಅವನು ತನ್ನ ಮಗನಾದ ಸೊಲೊಮೋ 6
ನನನ್ನು ಕರಿಸಿ ಇಸ್ರಾಯೇಲ್‌ದೇವರಾದ ಯೆಹೋವ
ನಿಗೋಸ್ಕರ ಆಲಯವನ್ನು ಕಟ್ಟಬೇಕೆಂದು ಅವನಿಗೆ
ಆಜ್ಞಾಪಿಸಿ—ನಾನು ನನ್ನ ದೇವರಾದ ಯೆಹೋವನ 7
ಹೆಸರಿಗೋಸ್ಕರ ಆಲಯವನ್ನು ಕಟ್ಟಬೇಕೆಂದು ಮನ
ಸ್ಸುಮಾಡಿದ್ದೆನು. ಆದರೆ ಯೆಹೋವನು ನನಗೆ— 8
ನೀನು ಬಹಳ ರಕ್ತವನ್ನು ಸುರಿಸಿದವನೂ ಮಹಾ
ಯುದ್ಧಗಳನ್ನು ನಡಿಸಿದವನೂ ಆಗಿರುತ್ತೀ. ನೀನು
ನನ್ನೆದುರಿನಲ್ಲಿ ಬಹಳ ರಕ್ತವನ್ನು ಸುರಿಸಿದ್ದರಿಂದ ನನ್ನ
ಹೆಸರಿಗಾಗಿ ಆಲಯವನ್ನು ಕಟ್ಟಬಾರದು. ನಿನಗೆ ಒಬ್ಬ 9
ಮಗನು ಹುಟ್ಟುವನು; ಅವನು ಸಮಾಧಾನಪುರುಷ
ನಾಗಿರುವನು. ನಾನು ಅವನ ಸುತ್ತಣ ಎಲ್ಲಾ ವಿರೋ
ಧಿಗಳನ್ನು ಅಣಗಿಸಿ ಅವನಿಗೆ ಸಮಾಧಾನವನ್ನು ಅನು
ಗ್ರಹಿಸುವೆನು. ಅವನಿಗೆ [2]ಸೊಲೊಮೋನನೆಂಬ ಹೆಸರಿ
ರುವದು. ಅವನ ಕಾಲದಲ್ಲಿ ಇಸ್ರಾಯೇಲ್ಯರಿಗೆ
ಸಮಾಧಾನವನ್ನೂ ಸೌಭಾಗ್ಯವನ್ನೂ ದಯಪಾಲಿಸು
ವೆನು. ಅವನೇ ನನ್ನ ಹೆಸರಿಗಾಗಿ ಒಂದು ಮನೆಯನ್ನು 10
ಕಟ್ಟುವನು. ಅವನು ನನಗೆ ಮಗನಾಗಿರುವನು,
ನಾನು ಅವನಿಗೆ ತಂದೆಯಾಗಿರುವೆನು; ಇಸ್ರಾಯೇಲ್ಯ
ರಲ್ಲಿ ಅವನ ರಾಜ್ಯಸಿಂಹಾಸನವನ್ನು ನಿರಂತರವಾಗಿ
ಸ್ಥಿರಪಡಿಸುವೆನು ಎಂಬದಾಗಿ ಹೇಳಿದನು. ನನ್ನ ಮಗ 11
ನೇ, ನೀನು ಕೃತಾರ್ಥನಾಗುವಂತೆಯೂ ನಿನ್ನ ದೇವ
ರಾದ ಯೆಹೋವನು ನಿನ್ನ ವಿಷಯದಲ್ಲಿ ಮಾಡಿದ
ವಾಗ್ದಾನದ ಪ್ರಕಾರ ನೀನು ದೇವಾಲಯವನ್ನು ಕಟ್ಟು
ವಂತೆಯೂ ಆತನು ನಿನ್ನ ಸಂಗಡ ಇರಲಿ. ನೀನು 12
ನಿನ್ನ ದೇವರಾದ ಯೆಹೋವನ ಧರ್ಮಶಾಸ್ತ್ರವನ್ನು
ಕೈಕೊಳ್ಳುವಂತೆ ಆತನು ನಿನಗೆ ಜ್ಞಾನವಿವೇಕಗಳನ್ನು
ದಯಪಾಲಿಸಿ ಇಸ್ರಾಯೇಲ್ಯರನ್ನು ಆಳುವದಕ್ಕೆ ನಿನ್ನ
ನ್ನು ನೇಮಿಸಲಿ. ಯೆಹೋವನು ಮೋಶೆಯ ಮುಖಾಂ 13
ತರವಾಗಿ ಇಸ್ರಾಯೇಲ್ಯರಿಗೆ ಕೊಟ್ಟ ವಿಧಿನ್ಯಾಯ
ಗಳನ್ನು ನೀನು ಕೈಕೊಳ್ಳುವದಾದರೆ ಸಫಲನಾಗುವಿ.
ಸ್ಥಿರಚಿತ್ತನಾಗಿರು, ಧೈರ್ಯದಿಂದಿರು; ಅಂಜಬೇಡ,
ಕಳವಳಗೊಳ್ಳಬೇಡ. ಇಗೋ, ನಾನು ಬಹು ಪ್ರಯಾಸ 14
ಪಟ್ಟು ಯೆಹೋವನ ಆಲಯಕ್ಕೋಸ್ಕರ [3]ಒಂದು
ಲಕ್ಷ ತಲಾಂತು ಬಂಗಾರವನ್ನೂ [4]ಹತ್ತು ಲಕ್ಷ
ತಲಾಂತು ಬೆಳ್ಳಿಯನ್ನೂ ಲೆಕ್ಕವಿಲ್ಲದಷ್ಟು ತಾಮ್ರ
ಕಬ್ಬಿಣ ಇವುಗಳನ್ನೂ ಕಲ್ಲುಮರಗಳನ್ನೂ ಕೂಡಿಸಿ
ದ್ದೇನೆ. ನೀನು ಇನ್ನೂ ಹೆಚ್ಚು ಕೂಡಿಸುವಿ. ಇದ 15
ಲ್ಲದೆ ಕಟ್ಟುವ ಕೆಲಸಕ್ಕಾಗಿ ಬೇಕಾದಷ್ಟು ಮಂದಿ
ಕಲ್ಲುಕುಟಿಗರೂ ಶಿಲ್ಪಿಗರೂ ಬಡಿಗಿಯವರೂ ಬಂಗಾರ 16
ಬೆಳ್ಳಿ ತಾಮ್ರ ಕಬ್ಬಿಣಗಳ ಎಲ್ಲಾ ತರದ ಕೆಲಸವನ್ನು
ಮಾಡುವದರಲ್ಲಿ ಜಾಣರೂ ನಿನಗಿರುತ್ತಾರೆ; ಅವರನ್ನು
ಲೆಕ್ಕಿಸುವದಕ್ಕಾಗುವದಿಲ್ಲ. ಏಳು, ಕೆಲಸಕ್ಕೆ ಕೈಹಾಕು;
ಯೆಹೋವನು ನಿನ್ನ ಸಂಗಡ ಇರಲಿ ಎಂದು ಹೇಳಿ
ದನು.

1) ಸುಮಾರು ಇಪ್ಪತ್ತು ಸಾವಿರ ರೂಪಾಯಿಗಳನ್ನು. 2) ಅಂದರೆ ಸೌಭಾಗ್ಯವುಳ್ಳವನು. 3) ಒಂದು ಸಾವಿರ ಹನ್ನೆರಡು ಕೋಟಿ ಐವತ್ತು ಲಕ್ಷ ರೂಪಾಯಿ ಕ್ರಯದ. 4) ಐನೂರ ಅರುವತ್ತೆರಡು ಕೋಟಿ ಐವತ್ತು ಲಕ್ಷ ರೂಪಾಯಿ ಕ್ರಯದ.

17 ಆ ಮೇಲೆ ತನ್ನ ಮಗನಾದ ಸೊಲೊಮೋನನಿಗೆ
ನೆರವಾಗಬೇಕೆಂದು ಇಸ್ರಾಯೇಲ್ಯರ ಎಲ್ಲಾ ಅಧಿಪತಿ
18 ಗಳಿಗೂ ಆಜ್ಞಾಪಿಸಿ ಅವರಿಗೆ—ನಿಮ್ಮ ದೇವರಾದ
ಯೆಹೋವನು ನಿಮ್ಮ ಸಂಗಡ ಇದ್ದು ಎಲ್ಲಾ ಕಡೆ
ಗಳಲ್ಲಿಯೂ ನಿಮಗೆ ವಿಶ್ರಾಂತಿಯನ್ನು ಅನುಗ್ರಹಿಸಿ
ದ್ದಾನಲ್ಲಾ. ಆತನು ಈ ದೇಶದ ಮೂಲನಿವಾಸಿಗಳ
ನ್ನು ನನ್ನ ಕೈಗೆ ಒಪ್ಪಿಸಿದ್ದಾನೆ. ದೇಶವು ಯೆಹೋವ
ನಿಗೂ ಆತನ ಪ್ರಜೆಗಳಿಗೂ ಸ್ವಾಧೀನವಾಯಿತು ನೋ
19 ಡಿರಿ. ಆದದರಿಂದ ನೀವು ಪೂರ್ಣಮನಸ್ಸಿನಿಂದಲೂ
ಪೂರ್ಣಪ್ರಾಣದಿಂದಲೂ ನಿಮ್ಮ ದೇವರಾದ ಯೆಹೋ
ವನ ದರ್ಶನವನ್ನು ಬಯಸಿರಿ. ಏಳಿರಿ, ನಿಮ್ಮ ದೇವ
ರಾದ ಯೆಹೋವನ ಪವಿತ್ರಾಲಯವನ್ನು ಕಟ್ಟಿರಿ.
ಯೆಹೋವನ ನಿಬಂಧನಮಂಜೂಷವನ್ನೂ ದೇವಾ
ರಾಧನ ಸಾಮಗ್ರಿಗಳನ್ನೂ ಯೆಹೋವನ ಹೆಸರಿಗೋ
ಸ್ಕರ ಕಟ್ಟಲ್ಪಡುವ ಮಂದಿರದಲ್ಲಿ ಇಡಿರಿ ಎಂದು ಹೇಳಿ
ದನು.

ಲೇವಿಯರ ವರ್ಗಗಳೂ ಅವರ ಕೆಲಸವೂ.

23 ದಾವೀದನು ಮುಪ್ಪಿನ ಮುದುಕನಾದಾಗ ತನ್ನ
ಮಗನಾದ ಸೊಲೊಮೋನನನ್ನು ಇಸ್ರಾಯೇಲ್ಯರ
2 ಅರಸನನ್ನಾಗಿ ಮಾಡಿ ಇಸ್ರಾಯೇಲ್ಯರ ಎಲ್ಲಾ ಅಧಿ
ಪತಿಗಳನ್ನೂ ಯಾಜಕರನ್ನೂ ಲೇವಿಯರನ್ನೂ ತನ್ನ
ಬಳಿಯಲ್ಲಿ ಕೂಡಿಸಿದನು.
3 ಮೂವತ್ತು ವರುಷ ಮೊದಲುಗೊಂಡು ಹೆಚ್ಚಾದ
ವಯಸ್ಸುಳ್ಳ ಲೇವಿಯರನ್ನು ಲೆಕ್ಕಿಸಿದಾಗ ಗಂಡಸರ
4 ಸಂಖ್ಯೆಯು ಮೂವತ್ತೆಂಟು ಸಾವಿರವಿತ್ತು. ದಾವೀ
ದನು ಇವರಲ್ಲಿ ಯೆಹೋವನ ಆಲಯವನ್ನು ಕಟ್ಟು
ವವರ ಮೇಲ್ವಿಚಾರಣೆಗಾಗಿ ಇಪ್ಪತ್ತನಾಲ್ಕು ಸಾವಿರ
ಮಂದಿಯನ್ನೂ ನ್ಯಾಯಾಧಿಪತಿಗಳನ್ನಾಗಿ ಮತ್ತು ಅಧಿ
5 ಕಾರಿಗಳನ್ನಾಗಿ ಆರು ಸಾವಿರ ಮಂದಿಯನ್ನೂ ದ್ವಾರ
ಪಾಲಕರನ್ನಾಗಿ ನಾಲ್ಕು ಸಾವಿರ ಮಂದಿಯನ್ನೂ
ತಾನು ಸಿದ್ಧಮಾಡಿಸಿದ ವಾದ್ಯಗಳಿಂದ ಯೆಹೋವ
ನನ್ನು ಭಜಿಸುವದಕ್ಕಾಗಿ ನಾಲ್ಕು ಸಾವಿರ ಮಂದಿ
ಯನ್ನೂ ನೇಮಿಸಿದನು.
6 ಇದಲ್ಲದೆ ಅವನು ಲೇವಿಯ ಸಂತಾನದವರಾದ
ಗೇರ್ಷೋನ್ಯರು, ಕೆಹಾತ್ಯರು, ಮೆರಾರೀಯರು ಇವ
ರನ್ನು ವರ್ಗವರ್ಗಗಳಾಗಿ ವಿಭಾಗಿಸಿದನು.
7 ಗೇರ್ಷೋನ್ಯರ ಮೂಲಪುರುಷರು—ಲದ್ದಾನ್,
8 ಶಿಮ್ಮೀ ಎಂಬವರು. ಲದ್ದಾನನಿಗೆ ಪ್ರಧಾನನಾದ
ಯೆಹೀಯೇಲ್, ಜೇತಾಮ್, ಯೋವೇಲ್ ಎಂಬ
9 ಮೂರು ಮಂದಿ ಮಕ್ಕಳಿದ್ದರು. ಶಿಮ್ಮೀಯ ಮಕ್ಕ
ಳು—ಶೆಲೋಮೋತ್, ಹಜೀಯೇಲ್, ಹಾರಾನ್ ಎಂಬ
ಮೂರು ಮಂದಿ. ಇವರು ಲದ್ದಾನ್ಯರ ಗೋತ್ರ
10 ಪ್ರಧಾನರು. ಶಿಮ್ಮೀಗೆ ಯಹತ್, ಜೀನ, ಯೆಯೂ
ಷ್, ಬೆರೀಯ ಎಂಬ ನಾಲ್ಕು ಮಂದಿ ಮಕ್ಕಳಿದ್ದರು.
11 ಯಹತನು ಪ್ರಧಾನನು. ಜೀಜನು ಎರಡನೆಯವನು.
ಯೆಯೂಷ್ ಬೆರೀಯರಿಗೆ ಬಹಳ ಮಂದಿ ಮಕ್ಕಳಿರ

ಲಿಲ್ಲವಾದದರಿಂದ ಅವರಿಬ್ಬರೂ ಒಂದೇ ಕುಟುಂ
ವಾಗಿಯೂ ವರ್ಗವಾಗಿಯೂ ಎಣಿಸಲ್ಪಟ್ಟರು.
ಕೆಹಾತನಿಗೆ ಅಮ್ರಾಮ್, ಇಚ್ಹಾರ್, ಹೆಬ್ರೋನ
ಉಜ್ಜೀಯೇಲ್ ಎಂಬ ನಾಲ್ಕು ಮಂದಿ ಮಕ್ಕಳಿದ್ದರು
ಅಮ್ರಾಮನ ಮಕ್ಕಳು—ಆರೋನ್, ಮೋಶೆ ಎಂ
ವರು. ಆರೋನನೂ ಅವನ ಸಂತಾನದವರೂ ಮಹಾ
ಪರಿಶುದ್ಧವಾದ ವಸ್ತುಗಳನ್ನು ಪ್ರತಿಷ್ಠಿಸುವದಕ್ಕೆ ಪ್ರತ್ಯೇ
ಕಿಸಲ್ಪಟ್ಟರು. ಇವರು ಯೆಹೋವನ ಸನ್ನಿಧಿಯಲ್ಲಿ
ಸದಾಕಾಲ ಧೂಪಹಾಕುವವರೂ ಸೇವಿಸುವವರೂ
ಆತನ ಹೆಸರಿನಿಂದ ಜನರನ್ನು ಆಶೀರ್ವದಿಸುವವರೂ
ಆಗಿರತಕ್ಕದ್ದು. ದೇವರ ಮನುಷ್ಯನಾದ ಮೋ
ಯ ಸಂತಾನದವರು ಸಾಧಾರಣ ಲೇವಿಯರೊಳಗೆ ಎ
ಸಲ್ಪಟ್ಟರು. ಮೋಶೆಯ ಮಕ್ಕಳು—ಗೇರ್ಷೋಮ
ಎಲೀಯೆಜೆರ್ ಎಂಬವರು. ಪ್ರಧಾನನಾದ [1]ಶೆಬು
ವೇಲನು ಗೇರ್ಷೋಮನ ಮಗನು. ಪ್ರಧಾನನಾ
ರೆಹಬ್ಯ ಎಲೀಯೆಜೆರನ ಮಗನು. ಎಲೀಯೆಜೆರನಿ
ಬೇರೆ ಮಕ್ಕಳಿರಲಿಲ್ಲ; ಆದರೆ ರೆಹಬ್ಯನಿಗೆ ಅನೇ
ಮಂದಿ ಮಕ್ಕಳಿದ್ದರು. ಪ್ರಧಾನನಾದ ಶೆಲೋಮೋ
ತನು ಇಚ್ಹಾರನ ಮಗನು. ಹೆಬ್ರೋನನ ಮಕ್ಕಳಲ್ಲಿ
ಯೆರೀಯ ಪ್ರಧಾನನು, ಅಮರ್ಯ ಎರಡನೆಯವನು,
ಯಹಜೀಯೇಲ್ ಮೂರನೆಯವನು, ಯೆಕಮ್ಮಾಮ
ನಾಲ್ಕನೆಯವನು. ಉಜ್ಜೀಯೇಲನ ಮಕ್ಕಳಲ್ಲಿ ಮೀ
ನು ಪ್ರಧಾನನು, ಇಷ್ಷೀಯನು ಎರಡನೆಯವನು.
ಮೆರಾರೀಯ ಮಕ್ಕಳು—ಮಹ್ಲೀ, ಮೂಷೀ ಎಂ
ವರು. ಮಹ್ಲೀಯ ಮಕ್ಕಳು—ಎಲ್ಲಾಜಾರ್, ಕೀಷ
ಇವರು. ಎಲ್ಲಾಜಾರನು ಗಂಡುಮಕ್ಕಳಿಲ್ಲದೆ ಸತ್ತನು
ಅವನಿಗೆ ಹೆಣ್ಣುಮಕ್ಕಳು ಮಾತ್ರ ಇದ್ದರು; ಇವರ
ತಮ್ಮ ಬಂಧುಗಳಾದ ಕೀಷನ ಮಕ್ಕಳಿಗೆ ಮದು
ಯಾದರು. ಮೂಷಿಗೆ ಮಹ್ಲೀ, ಏದೆರ್, ಯೆರೆ
ಮೋತ್ ಎಂಬ ಮೂರು ಮಂದಿ ಮಕ್ಕಳಿದ್ದರು.
ಲೇವಿಯರ ಪಟ್ಟಿಯಲ್ಲಿ ಬರೆಯಲ್ಪಟ್ಟ ಹೆಸರುಗ
ಪ್ರಕಾರ ಇವರೇ ಆಯಾ ಲೇವಿ ವರ್ಗಗಳ ಕುಟುಂ
ಪ್ರಧಾನರು. ಇವರಲ್ಲಿ ಇಪ್ಪತ್ತು ವರುಷ ಮೊದಲ
ಗೊಂಡು ಹೆಚ್ಚಾದ ವಯಸ್ಸುಳ್ಳವರು ಯೆಹೋವ
ಆಲಯದಲ್ಲಿ ಸೇವೆಮಾಡತಕ್ಕವರು. ಇಸ್ರಾಯೇಲ
ದೇವರಾದ ಯೆಹೋವನು ತನ್ನ ಪ್ರಜೆಗೆ ವಿಶ್ರಾಂ
ಯನ್ನು ಅನುಗ್ರಹಿಸಿ ಸದಾಕಾಲವೂ ಯೆರೂಸಲೇಮಿ
ನಲ್ಲಿ ವಾಸಿಸುವವನಾದದರಿಂದ ಲೇವಿಯರು ಇನ್ನು
ಮುಂದೆ ಆತನ ಗುಡಾರವನ್ನೂ ಆರಾಧನಾಸಾಮಗ್ರಿ
ಗಳನ್ನೂ ಹೊರುವದು ಅವಶ್ಯವಿಲ್ಲವೆಂದುಕೊಂಡ
ದಾವೀದನು ಈ ಪ್ರಕಾರ ವಿಧಿಸಿದನು. ದಾವೀದ
ಈ ಕಡೇ ಆಜ್ಞೆಯ ಮೇರೆಗೆ ಲೇವಿಯರಲ್ಲಿ ಇಪ್ಪತ್ತು
ವರುಷ ಮೊದಲುಗೊಂಡು ಹೆಚ್ಚಾದ ವಯಸ್ಸುಳ್ಳವ
ಲ್ಲರೂ ಲೆಕ್ಕಿಸಲ್ಪಟ್ಟರು. ಅವರು ಆರೋನ್ಯರ ಕೈಕೆ
ಗಿದ್ದುಕೊಂಡು ಯೆಹೋವನ ಆಲಯದ ಪರಿಚರ್ಯೆ
ಯನ್ನು ನಡಿಸುತ್ತಿದ್ದರು. ಅವರ ಕೆಲಸಗಳು ಯಾ
ವಂದರೆ—ಅಂಗಳಕೋಣೆಗಳನ್ನು ನೋಡಿಕೊಳ್ಳುವದು
ದೇವಾಲಯಕ್ಕೆ ಸಂಬಂಧಪಟ್ಟವುಗಳನ್ನೆಲ್ಲಾ ಶುದ್ಧಮಾ

1) ಅಥವಾ: ಶೂಬಾಯೇಲ್.

29 ಡುವದೂ ದೇವಾಲಯದಲ್ಲಿ ಸೇವೆಮಾಡುವದೂ ನೈ
ವೇದ್ಯದ ವಿಾಸಲ ರೊಟ್ಟಿ, ನೈವೇದ್ಯಕ್ಕೆ ಬೇಕಾದ
ಗೋದಿಹಿಟ್ಟು, ಹುಳಿಯಿಲ್ಲದ ರೊಟ್ಟಿ, ಕಬ್ಬಿಣದ ಹಂಚಿ
ನಲ್ಲಿ ಸುಟ್ಟ ರೊಟ್ಟಿ, ಎಣ್ಣೆಯಿಂದ ನೆನೆದ ಭಕ್ಷ್ಯ ಇವು
ಗಳನ್ನು ಒದಗಿಸುವದೂ ಸೇರು ಮೊಳಗೋಲು ಇವು
30 ಗಳನ್ನು ಪರೀಕ್ಷಿಸುವದೂ ಪ್ರತಿದಿನ ಪ್ರಾತಸ್ಸಾಯಂ
31 ಕಾಲಗಳಲ್ಲಿ ಮತ್ತು ನಿಯಮಿತ ಸಂಖ್ಯೆಗೆ ಸರಿಯಾಗಿ
ಸಬ್ಬತ್‌ದಿನ ಅಮಾವಾಸ್ಯೆ ಜಾತ್ರೆ ಇವುಗಳಲ್ಲಿ
ಯೆಹೋವನ ಮುಂದೆ ತಪ್ಪದೆ ನಡೆಯುವ ಸರ್ವಾಂಗ
ಹೋಮಸಮರ್ಪಣೆಯ ಹೊತ್ತಿನಲ್ಲಿ ಯೆಹೋವನಿಗೆ
32 ಕೃತಜ್ಞತಾಸ್ತುತಿಯನ್ನು ಸಲ್ಲಿಸುವದೂ ಇವೇ. ಹೀಗೆ
ಅವರು ತಮ್ಮ ಸಹೋದರರಾದ ಆರೋನ್ಯರ ಸಹಾಯ
ಕರಾಗಿದ್ದು ದೇವದರ್ಶನದ ಗುಡಾರವನ್ನೂ ಪರಿಶುದ್ಧ
ವಾದ ಎಲ್ಲಾ ಸಾಮಾನುಗಳನ್ನೂ ನೋಡಿಕೊಳ್ಳು
ವದೇ ಯೆಹೋವನ ಆಲಯದಲ್ಲಿ ಮಾಡತಕ್ಕ ಪರಿ
ಚರ್ಯ.

ಯಾಜಕವರ್ಗಗಳೂ ಉಳಿದ ಲೇವಿಯರ ಪಟ್ಟಿಯೂ.

24 ಆರೋನನ ಸಂತಾನದವರೂ ವರ್ಗಗಳಾಗಿ ವಿಭಾ
ಗಿಸಲ್ಪಟ್ಟರು. ಆರೋನನ ಮಕ್ಕಳು — ನಾದಾಬ್,
ಅಬೀಹೂ, ಎಲ್ಲಾಜಾರ್, ಈತಾಮಾರ್ ಎಂಬವರು.
2 ನಾದಾಬ್, ಅಬೀಹೂ ಎಂಬವರು ಮಕ್ಕಳಿಲ್ಲದೆ ತಮ್ಮ
ತಂದೆಗಿಂತ ಮೊದಲೇ ಸತ್ತುಹೋದದರಿಂದ ಎಲ್ಲಾಜಾರ್
ಈತಾಮಾರರು ಯಾಜಕೋದ್ಯೋಗವನ್ನು ನಡಿಸುತ್ತಿ
3 ದ್ದರು. ದಾವೀದನೂ ಎಲ್ಲಾಜಾರನ ಸಂತಾನದವ
ನಾದ ಚಾದೋಕನೂ ಈತಾಮಾರನ ಸಂತಾನದವನಾದ
ಅಹೀಮೆಲೆಕನೂ ಯಾಜಕರನ್ನು ಸರತಿಯ ಮೇಲೆ
4 ಸೇವಿಸತಕ್ಕ ವರ್ಗಗಳನ್ನಾಗಿ ವಿಭಾಗಿಸಿದರು. ಎಲ್ಲಾ
ಜಾರನ ಸಂತಾನದ ಕುಟುಂಬಪ್ರಧಾನರು ಈತಾಮಾ
ರ್ಯರಿಗಿಂತ ಹೆಚ್ಚೆಂದು ಕಂಡುಬಂದದರಿಂದ ಎಲ್ಲಾಜಾರ್ಯರ
ಕುಟುಂಬಗಳನ್ನು ಪ್ರಧಾನರ ಲೆಕ್ಕದ ಪ್ರಕಾರ ಹದಿ
ನಾರು ವರ್ಗಗಳನ್ನಾಗಿಯೂ ಈತಾಮಾರ್ಯರ ಕುಟುಂಬ
5 ಗಳನ್ನು ಎಂಟು ವರ್ಗಗಳನ್ನಾಗಿಯೂ ಮಾಡಿ ಈ
ವರ್ಗಗಳ ವಿಷಯವಾಗಿ ಚೀಟುಹಾಕಿದರು. ಎಲ್ಲಾ
ಜಾರನ ಸಂತಾನದವರಲ್ಲಿ ಹೇಗೋ ಹಾಗೆಯೇ ಈತಾ
ಮಾರನ ಸಂತಾನದವರಲ್ಲಿಯೂ ಪವಿತ್ರಾಲಯಾಧಿಪತಿ
ಗಳೂ ದೈವಿಕಕಾರ್ಯಗಳ ಅಧ್ಯಕ್ಷರೂ ಇರುವದರಿಂದ
ಉಭಯ ಸಂತಾನಗಳವರು ಸಮಾನಸ್ಥಾನದವರು.
6 ನೆತನೇಲನ ಮಗನಾದ ಶೆಮಾಯನೆಂಬ ಲೇವಿಯ ಲೇಖ
ಕನು ಅರಸನ ಮುಂದೆಯೂ ಅಧಿಪತಿಗಳು, ಯಾಜಕ
ನಾದ ಚಾದೋಕ್, ಎಬ್ಯಾತಾರನ ಮಗನಾದ ಅಹೀ
ಮೆಲೆಕ್, ಯಾಜಕರ ಮತ್ತು ಲೇವಿಯರ ಕುಟುಂಬ
ಪ್ರಧಾನರು ಇವರ ಮುಂದೆಯೂ ಆ ವರ್ಗಗಳ ಪಟ್ಟಿ
ಯನ್ನು ಬರೆದನು. ಎಲ್ಲಾಜಾರ್ಯರ ಒಂದು ವರ್ಗದವ
ರಾದನಂತರ ಈತಾಮಾರ್ಯರ ಒಂದು ವರ್ಗದವರು ಸೇವಿ
ಸಬೇಕೆಂದು ನೇಮಿಸಿ ಎಲ್ಲಾ ವರ್ಗಗಳ ಸರತಿಯನ್ನು
ಚೀಟಿನಿಂದಲೇ ಗೊತ್ತುಮಾಡಿದರು.

ಮೊದಲನೆಯ ಚೀಟು ಯೆಹೋಯಾರೀಬನಿಗೆ 7
ಬಿದ್ದಿತು; ಎರಡನೆಯದು ಯೆದಾಯನಿಗೆ; ಮೂರನೆಯ 8
ದು ಹಾರೀಮನಿಗೆ; ನಾಲ್ಕನೆಯದು ಸೆಯೋರೀಮನಿಗೆ; 9
ಐದನೆಯದು ಮಲ್ಕೀಯನಿಗೆ; ಆರನೆಯದು ಮಿಯ್ಯಾ
ಮಿಾನನಿಗೆ; ಏಳನೆಯದು ಹಕ್ಕೋಚನಿಗೆ; ಎಂಟನೆಯ 10
ದು ಅಬೀಯನಿಗೆ; ಒಂಭತ್ತನೆಯದು ಯೆಷೂವನಿಗೆ; 11
ಹತ್ತನೆಯದು ಶೆಕನ್ಯನಿಗೆ; ಹನ್ನೊಂದನೆಯದು ಎಲ್ಯಾ 12
ಷೀಬನಿಗೆ; ಹನ್ನೆರಡನೆಯದು ಯಾಕೀಮನಿಗೆ; ಹದಿ 13
ಮೂರನೆಯದು ಹುಪ್ಪನಿಗೆ; ಹದಿನಾಲ್ಕನೆಯದು ಎಷೆ
ಬಾಬನಿಗೆ; ಹದಿನೈದನೆಯದು ಬಿಲ್ಗನಿಗೆ; ಹದಿನಾರನೆ 14
ಯದು ಇಮ್ಮೇರನಿಗೆ; ಹದಿನೇಳನೆಯದು ಹೇಜೀರನಿಗೆ; 15
ಹದಿನೆಂಟನೆಯದು ಹಪ್ಪಿಚ್ಚೇಚನಿಗೆ; ಹತ್ತೊಂಭತ್ತನೆಯ 16
ದು ಪೆತಹ್ಯನಿಗೆ; ಇಪ್ಪತ್ತನೆಯದು ಯೆಹೆಜ್ಕೇಲನಿಗೆ;
ಇಪ್ಪತ್ತೊಂದನೆಯದು ಯಾಕೀನನಿಗೆ; ಇಪ್ಪತ್ತೆರಡನೆ 17
ಯದು ಗಾಮೂಲನಿಗೆ; ಇಪ್ಪತ್ತಮೂರನೆಯದು ದೆಲಾ 18
ಯನಿಗೆ; ಇಪ್ಪತ್ತನಾಲ್ಕನೆಯದು ಮಾಜ್ಯನಿಗೆ. ಆರೋ 19
ನ್ಯರು ಈ ವರ್ಗಕ್ರಮದಿಂದ ಯೆಹೋವನ ಆಲ
ಯಕ್ಕೆ ಬಂದು, ಇಸ್ರಾಯೇಲ್‌ದೇವರಾದ ಯೆಹೋ
ವನು ಲೇವಿಯರ ಮೂಲಪುರುಷನಾದ ಆರೋನನ
ಮುಖಾಂತರವಾಗಿ ನಿಯಮಿಸಿದ ಸೇವೆಯನ್ನು ನಡಿಸ
ತಕ್ಕದ್ದು.

ಉಳಿದ ಲೇವಿಯರ [ಪಟ್ಟಿ]. ಅಮ್ರಾಮನ ಸಂತಾ 20
ನದವನಾದ 1) ಶೂಬಾಯೇಲನ ಕುಟುಂಬದವರಲ್ಲಿ
ಯೆಹ್ದೆಯಾಹನೂ ರೆಹಬ್ಯನ ಸಂತಾನದವರಲ್ಲಿ ಇಷ್ಷೀ 21
ಯನೂ ಇಚ್ಹಾರನ ಸಂತಾನದವನಾದ ಶೆಲೋಮೋತನ 22
ಕುಟುಂಬದವರಲ್ಲಿ ಯಹತನೂ ಪ್ರಧಾನರು. [ಹೆಬ್ರೋ 23
ನನ] ಸಂತಾನದವರಲ್ಲಿ ಯೆರೀಯನು ಪ್ರಧಾನನು,
ಅಮರ್ಯನು ಎರಡನೆಯವನು, ಯಹಜೀಯೇಲನು
ಮೂರನೆಯವನು, ಯೆಕಮ್ಮಾಮನು ನಾಲ್ಕನೆಯ
ವನು. ಉಜ್ಜೀಯೇಲನ ಮಗನಾದ ಮಿಾಕನ ಸಂತಾ 24
ನದವರಲ್ಲಿ ಶಾಮಿಾರನೂ ಮಿಾಕನ ತಮ್ಮನಾದ ಇಷ್ಷೀ 25
ಯನ ಸಂತಾನದವರಲ್ಲಿ ಜೆಕರ್ಯನೂ ಪ್ರಧಾನರು. 26
ಮೆರಾರೀಯ ಮಕ್ಕಳು — ಮಹ್ಲೀ, ಮೂಷೀ ಎಂಬ
ವರು. ಅವನ ಮತ್ತೊಬ್ಬ ಮಗನಾದ ಯಾಜ್ಯನ
ವಂಶದವರು. ಮೆರಾರೀಯ ಸಂತಾನದವರಲ್ಲಿ ಯಾಜ್ಯ 27
ನಿಂದ ಹುಟ್ಟಿದವರು — ಬೆನೋ, ಶೋಹಮ್, ಜಕ್ಕೂರ್,
ಇಬ್ರೀ ಇವರೇ. ಮಹ್ಲೀಯಿಂದ ಹುಟ್ಟಿದವರು — ಮಕ್ಕ 28
ಳಿಲ್ಲದೆ ಸತ್ತ ಎಲ್ಲಾಜಾರನೂ ಕೀಷನೂ. ಕೀಷ 29
ನಿಂದ ಯೆರಹ್ಮೇಲನು ಹುಟ್ಟಿದನು. ಮೂಷೀಯ 30
ಮಕ್ಕಳು — ಮಹ್ಲೀ, ಏದೆರ್, ಯೆರೀಮೋತ್ ಎಂಬ
ವರು.

ಇವರೆಲ್ಲಾ ಲೇವಿಸಂತಾನದವರು. ಇವರ ಕುಟುಂಬ 31
ಗಳಲ್ಲಿ ಎಲ್ಲಾ ಹಿರಿಯರೂ ಕಿರಿಯರೂ ತಮ್ಮ ಕುಲ
ಬಂಧುಗಳಾದ ಆರೋನ್ಯರಂತೆ ಅರಸನಾದ ದಾವೀದ್,
ಚಾದೋಕ್, ಅಹೀಮೆಲೆಕ್ ಇವರ ಮುಂದೆಯೂ
ಯಾಜಕರ ಮತ್ತು ಲೇವಿಯರ ಕುಟುಂಬಪ್ರಧಾನರ
ಮುಂದೆಯೂ ಚೀಟಿನಿಂದ ತಮ್ಮಲ್ಲಿ ಸರತಿಗಳನ್ನು
ನೇಮಿಸಿಕೊಂಡರು.

1) ೧ ಪೂರ್ವ. 23. 16 ಶೆಬೂವೇಲ್.

ಗಾಯಕರ ಇಪ್ಪತ್ತನಾಲ್ಕು ವರ್ಗಗಳು.

25 ಆ ಮೇಲೆ ದಾವೀದನೂ ಆರಾಧಕಮಂಡಲಿಯವರ
ಪ್ರಧಾನರೂ ಕಿನ್ನರಿ ಸ್ವರಮಂಡಲ ತಾಳ ಇವುಗ
ಳನ್ನು ಬಾರಿಸುತ್ತಾ ಪರವಶರಾಗಿ ಗಾಯನಸೇವೆ
ಮಾಡುವದಕ್ಕೋಸ್ಕರ ಆಸಾಫ್ಯರನ್ನೂ ಹೇಮಾನ್ಯ
ರನ್ನೂ ಯೆದುತೂನ್ಯರನ್ನೂ ಆರಿಸಿದರು. ಈ ಸೇವೆ
2 ಯನ್ನು ಮಾಡತಕ್ಕ ಪುರುಷರ ಪಟ್ಟಿ—ಆಸಾಫ್ಯರಲ್ಲಿ
ಜಕ್ಕೂರ್, ಯೋಸೇಫ್, ನೆತನ್ಯ, ಅಶರೇಲ ಎಂಬವರು.
ಇವರು ಅರಮನೆಯ ಗಾಯಕನಾದ ಆಸಾಫನ ಸಹಾ
3 ಯಕರು. ಯೆದುತೂನ್ಯರಲ್ಲಿ—ಗೆದಲ್ಯ, ಚೆರೀ,
ಯೆಶಾಯ, 1) [ಶಿಮ್ಮೀ] ಹಷಬ್ಯ, ಮತ್ತಿತ್ಯ ಇವರೇ.
ಕಿನ್ನರಿಯನ್ನು ಬಾರಿಸುತ್ತಾ ಪರವಶರಾಗಿ ಯೆಹೋವ
ಕೀರ್ತನೆಮಾಡುವ ತಮ್ಮ ತಂದೆಯಾದ ಯೆದುತೂನ
4 ನಿಗೆ ಈ ಆರು ಮಂದಿಯೂ ಸಹಾಯಕರು. ಹೇಮಾ
ನ್ಯರಲ್ಲಿ—ಬುಕ್ಕೀಯ, ಮತ್ತನ್ಯ, ಉಜ್ಜೀಯೇಲ್,
2) ಶೆಬೂವೇಲ್, ಯೆರೀಮೋತ್, ಹನನ್ಯ, ಹನಾನೀ,
ಎಲೀಯಾತ, ಗಿದ್ದಲ್ತಿ, ರೋಮಮ್ತಿಯೆಜೆರ್, ಯೊಷ್ಬೆ
ಕಾಷ, ಮಲ್ಲೋತೀ, ಹೋತೀರ್, ಮಹಜೀಯೋತ್.
5 ಇವರೆಲ್ಲರೂ ಅರಸನ ದರ್ಶಿಯಾದ ಹೇಮಾನನ
ಮಕ್ಕಳು. ದೇವರು ಅವನಿಗೆ—ನೀನು ಅಭಿವೃದ್ಧಿ
ಯಾಗುವ ಹಾಗೆ ಮಾಡುವೆನು ಎಂಬದಾಗಿ ವಾಗ್ದಾನ
ಮಾಡಿದ್ದನು. ಅದರಂತೆಯೇ ಆತನು ಅವನಿಗೆ ಹದಿ
ನಾಲ್ಕು ಮಂದಿ ಗಂಡುಮಕ್ಕಳನ್ನೂ ಮೂರು ಮಂದಿ
6 ಹೆಣ್ಣುಮಕ್ಕಳನ್ನೂ ದಯಪಾಲಿಸಿದನು. ದೇವರಾದ
ಯೆಹೋವನ ಆಲಯದಲ್ಲಿ ಆರಾಧನೆನಡೆಯುತ್ತಿರು
ವಾಗ ಇವರೆಲ್ಲರೂ ತಮ್ಮ ತಂದೆಯ ಕೈಕೆಳಗಿದ್ದು
ಕೊಂಡು ತಾಳ, ಸ್ವರಮಂಡಲ, ಕಿನ್ನರಿ ಇವುಗಳಿಂದ
ಗಾಯನಮಾಡುತ್ತಿದ್ದರು. ಆಸಾಫ್ ಯೆದುತೂನ್
7 ಹೇಮಾನರು ಅರಸನ ಸೇವೆಯಲ್ಲಿದ್ದರು. ಇವರೂ
ಯೆಹೋವಕೀರ್ತನೆಗಳನ್ನು ಕಲಿತ ಇವರ ಸಹೋದ
ರರೂ ಒಟ್ಟು ಇನ್ನೂರ ಎಂಭತ್ತೆಂಟು ಮಂದಿ; ಇವರೆ
ಲ್ಲರೂ ಗಾಯನಪ್ರವೀಣರು.
8 ಇವರಲ್ಲಿ ಹಿರಿಕಿರಿಯರೂ ಗುರುಶಿಷ್ಯರೂ ಕೂಡಿ
ಕೊಂಡು ಚೀಟಿನಿಂದ ತಮ್ಮ ಸೇವಾಕ್ರಮವನ್ನು ಗೊತ್ತು
ಮಾಡಿಕೊಂಡರು. ಚೀಟಿನ ಪ್ರಕಾರವಾಗಿ
9 ಮೊದಲನೆಯವನು ಆಸಾಫ್ಯನಾದ ಯೋಸೇಫನು.
ಎರಡನೆಯವನು ಗೆದಲ್ಯ; ಇವನೂ ಇವನ ಸಹೋ
ದರರೂ ಮಕ್ಕಳೂ ಕೂಡಿ ಹನ್ನೆರಡು ಮಂದಿ.
10 ಮೂರನೆಯವನು ಜಕ್ಕೂರ್; ಇವನೂ ಇವನ
ಸಹೋದರರೂ ಮಕ್ಕಳೂ ಕೂಡಿ ಹನ್ನೆರಡು
ಮಂದಿ.
11 ನಾಲ್ಕನೆಯವನು ಇಚ್ರೀ; ಇವನೂ ಇವನ ಸಹೋ
ದರರೂ ಮಕ್ಕಳೂ ಕೂಡಿ ಹನ್ನೆರಡು ಮಂದಿ.
12 ಐದನೆಯವನು ನೆತನ್ಯ; ಇವನೂ ಇವನ ಸಹೋ
ದರರೂ ಮಕ್ಕಳೂ ಕೂಡಿ ಹನ್ನೆರಡು ಮಂದಿ.

ಆರನೆಯವನು ಬುಕ್ಕೀಯ; ಇವನೂ ಇವ
ಸಹೋದರರೂ ಮಕ್ಕಳೂ ಕೂಡಿ ಹನ್ನೆರಡ
ಮಂದಿ.
ಏಳನೆಯವನು ಯೆಸರೇಲ; ಇವನೂ ಇವ
ಸಹೋದರರೂ ಮಕ್ಕಳೂ ಕೂಡಿ ಹನ್ನೆರಡ
ಮಂದಿ.
ಎಂಟನೆಯವನು ಯೆಶಾಯ; ಇವನೂ ಇವ
ಸಹೋದರರೂ ಮಕ್ಕಳೂ ಕೂಡಿ ಹನ್ನೆರಡ
ಮಂದಿ.
ಒಂಭತ್ತನೆಯವನು ಮತ್ತನ್ಯ; ಇವನೂ ಇವ
ಸಹೋದರರೂ ಮಕ್ಕಳೂ ಕೂಡಿ ಹನ್ನೆರಡ
ಮಂದಿ.
ಹತ್ತನೆಯವನು ಶಿಮ್ಮೀ; ಇವನೂ ಇವನ ಸಹೋ
ದರರೂ ಮಕ್ಕಳೂ ಕೂಡಿ ಹನ್ನೆರಡು ಮಂದಿ
ಹನ್ನೊಂದನೆಯವನು ಅಜರೇಲ್; ಇವನೂ ಇವ
ಸಹೋದರರೂ ಮಕ್ಕಳೂ ಕೂಡಿ ಹನ್ನೆರಡ
ಮಂದಿ.
ಹನ್ನೆರಡನೆಯವನು ಹಷಬ್ಯ; ಇವನೂ ಇವ
ಸಹೋದರರೂ ಮಕ್ಕಳೂ ಕೂಡಿ ಹನ್ನೆರಡ
ಮಂದಿ.
ಹದಿಮೂರನೆಯವನು ಶೂಬಾಯೇಲ್; ಇವನ
ಇವನ ಸಹೋದರರೂ ಮಕ್ಕಳೂ ಕೂಡಿ ಹನ
ರಡು ಮಂದಿ.
ಹದಿನಾಲ್ಕನೆಯವನು ಮತ್ತಿತ್ಯ; ಇವನೂ ಇವ
ಸಹೋದರರೂ ಮಕ್ಕಳೂ ಕೂಡಿ ಹನ್ನೆರಡ
ಮಂದಿ.
ಹದಿನೈದನೆಯವನು ಯೆರೆಮೋತ್; ಇವನೂ ಇ
ನ ಸಹೋದರರೂ ಮಕ್ಕಳೂ ಕೂಡಿ ಹನ್ನೆರಡ
ಮಂದಿ.
ಹದಿನಾರನೆಯವನು ಹನನ್ಯ; ಇವನೂ ಇವ
ಸಹೋದರರೂ ಮಕ್ಕಳೂ ಕೂಡಿ ಹನ್ನೆರಡ
ಮಂದಿ.
ಹದಿನೇಳನೆಯವನು ಯೊಷ್ಬೆಕಾಷ; ಇವನೂ ಇ
ನ ಸಹೋದರರೂ ಮಕ್ಕಳೂ ಕೂಡಿ ಹನ್ನೆರಡ
ಮಂದಿ.
ಹದಿನೆಂಟನೆಯವನು ಹನಾನೀ; ಇವನೂ ಇವ
ಸಹೋದರರೂ ಮಕ್ಕಳೂ ಕೂಡಿ ಹನ್ನೆರಡ
ಮಂದಿ.
ಹತ್ತೊಂಭತ್ತನೆಯವನು ಮಲ್ಲೋತಿ; ಇವನ
ಇವನ ಸಹೋದರರೂ ಮಕ್ಕಳೂ ಕೂಡಿ ಹನ
ರಡು ಮಂದಿ.
ಇಪ್ಪತ್ತನೆಯವನು ಎಲೀಯಾತ; ಇವನೂ ಇವ
ಸಹೋದರರೂ ಮಕ್ಕಳೂ ಕೂಡಿ ಹನ್ನೆರಡ
ಮಂದಿ.
ಇಪ್ಪತ್ತೊಂದನೆಯವನು ಹೋತೀರ್; ಇವನೂ ಇ
ನ ಸಹೋದರರೂ ಮಕ್ಕಳೂ ಕೂಡಿ ಹನ್ನೆರಡ
ಮಂದಿ.

1) ಮೂಲದಲ್ಲಿ ಈ ಹೆಸರು ಬಿದ್ದುಹೋಯಿತು; ವ. 17 ನೋಡಿರಿ. 2) ವ. 20 ಶೂಬಾಯೇಲ್.

29 ಇಪ್ಪತ್ತೆರಡನೆಯವನು ಗಿದ್ದಲ್ತಿ; ಇವನೂ ಇವನ
ಸಹೋದರರೂ ಮಕ್ಕಳೂ ಕೂಡಿ ಹನ್ನೆರಡು
ಮಂದಿ.
30 ಇಪ್ಪತ್ತಮೂರನೆಯವನು ಮಹಜೀಯೋತ್; ಇವ
ನೂ ಇವನ ಸಹೋದರರೂ ಮಕ್ಕಳೂ ಕೂಡಿ
ಹನ್ನೆರಡು ಮಂದಿ.
31 ಇಪ್ಪತ್ತನಾಲ್ಕನೆಯವನು ರೋಮಮ್ತಿಯೆಜೆರ್;
ಇವನೂ ಇವನ ಸಹೋದರರೂ ಮಕ್ಕಳೂ
ಕೂಡಿ ಹನ್ನೆರಡು ಮಂದಿ.

ದ್ವಾರಪಾಲಕರೂ ದೇವಾಲಯದ ಭಂಡಾರಗಳನ್ನು ಕಾಯು
ವವರೂ ಲೌಕಿಕೋದ್ಯೋಗಸ್ಥರೂ ಆದ ಲೇವಿಯರು.

26 ದ್ವಾರಪಾಲಕವರ್ಗಗಳ ವಿಷಯ ಕೋರಹೀಯ
ನಾದ ಮೆಷೆಲೆಮ್ಯ ಎಂಬವನು ಕೋರೇಯನ
2 ಮಗನೂ ಆಸಾಫನ ಮೊಮ್ಮಗನೂ. ಮೆಷೆಲೆಮ್ಯನ
ಮಕ್ಕಳಲ್ಲಿ ಜೆಕರ್ಯನು ಚೊಚ್ಚಲನು; ಎದೀಯ
ಯೇಲನು ಮರಚಲನು; ಜೆಬದ್ಯನು ಮೂರನೆಯವನು;
3 ಯೆತ್ನಿಯೇಲನು ನಾಲ್ಕನೆಯವನು; ಏಲಾಮನು ಐದ
ನೆಯವನು; ಯೆಹೋಹಾನಾನನು ಆರನೆಯವನು;
ಎಲ್ಯೆಹೋಯೇನೈ ಏಳನೆಯವನು.
4 ಓಬೇದೆದೋಮನ ಮಕ್ಕಳಲ್ಲಿ ಶೆಮಾಯನು
ಚೊಚ್ಚಲನು; ಯೆಹೋಜಾಬಾದನು ಮರಚಲನು;
ಯೋವಾಹನು ಮೂರನೆಯವನು; ಸಾಕಾರನು ನಾಲ್ಕ
5 ನೆಯವನು; ನೆತನೇಲನು ಐದನೆಯವನು; ಅಮ್ಮೀ
ಯೇಲನು ಆರನೆಯವನು; ಇಸ್ಸಾಕಾರನು ಏಳನೆಯ
ವನು; ಪೆಯುಲ್ಲೆತೈಯು ಎಂಟನೆಯವನು. ಓಬೇ
ದೆದೋಮನು ದೇವರ ಆಶೀರ್ವಾದಕ್ಕೆ ಪಾತ್ರನಾಗಿ
6 ದ್ದನಷ್ಟೆ. ಅವನ ಮಗನಾದ ಶೆಮಾಯನ ಮಕ್ಕಳು
ಗೋತ್ರಪ್ರಧಾನರೂ ಮಹಾಸಮರ್ಥರೂ ಆಗಿದ್ದರು.
7 ಅವರು ಯಾರಂದರೆ—ಒತ್ನೀ, ರೆಫಾಯೇಲ್, ಓಬೇ
ದ್, ಎಲ್ಜಾಬಾದ್ ಇವರೂ ಬಹುಸಮರ್ಥರಾದ
ಎಲೀಹು, ಸೆಮಕ್ಯ ಎಂಬ ಇವರ ಸಹೋದರರೂ.
8 ಇವರೆಲ್ಲರೂ ಓಬೇದೆದೋಮನ ಸಂತಾನದವರು.
ಸಮರ್ಥರೂ ಸೇವೆಯಲ್ಲಿ ಗಟ್ಟಿಗರೂ ಆಗಿದ್ದ ಇವರೂ
ಇವರ ಮಕ್ಕಳೂ ಸಹೋದರರೂ ಕೂಡಿ ಅರವತ್ತೆರಡು
9 ಮಂದಿ. ಮೆಷೆಲೆಮ್ಯನ ಮಕ್ಕಳೂ ಸಹೋದರರೂ ಹದಿ
ನೆಂಟು ಮಂದಿ, ಇವರೂ ಸಮರ್ಥರು.
10 ಮೆರಾರೀಯನಾದ ಹೋಸನಿಗೂ ಮಕ್ಕಳಿದ್ದರು;
ಅವರಲ್ಲಿ ಶಿಮ್ರಿ ಎಂಬವನು ಪ್ರಧಾನನಾಗಿದ್ದನು.
ಇವನು ಚೊಚ್ಚಲನಲ್ಲದಿದ್ದರೂ ತಂದೆಯು ಅವನನ್ನೇ
11 ಪ್ರಧಾನನನ್ನಾಗಿ ನೇಮಿಸಿದನು. ಹಿಲ್ಕೀಯನು ಎರಡ
ನೆಯವನು; ಟೆಬಲ್ಯನು ಮೂರನೆಯವನು; ಜೆಕರ್ಯ
ನು ನಾಲ್ಕನೆಯವನು; ಹೋಸನ ಮಕ್ಕಳೂ ಸಹೋ
ದರರೂ ಒಟ್ಟಿಗೆ ಹದಿಮೂರು ಮಂದಿ.
12 ಈ ದ್ವಾರಪಾಲಕವರ್ಗಗಳ ಪ್ರಧಾನಪುರುಷರು
ತಮ್ಮ ಕುಲಬಂಧುಗಳಂತೆ ಯೆಹೋವನ ಆಲಯ
13 ದಲ್ಲಿ ಸೇವೆಮಾಡುವವರಾಗಿದ್ದರು. ಅವರು ಕನಿಷ್ಠ
ಕುಟುಂಬವೆಂದೂ ಶ್ರೇಷ್ಠಕುಟುಂಬವೆಂದೂ ವ್ಯತ್ಯಾಸ
ಮಾಡದೆ ತಮ್ಮಲ್ಲಿ ಪ್ರತಿಯೊಬ್ಬನು ಕಾಯತಕ್ಕ
ಹೆಬ್ಬಾಗಲುಗಳನ್ನು ಚೀಟಿನಿಂದಲೇ ಗೊತ್ತುಮಾಡಿ
ಕೊಂಡರು. ಮೂಡಣ ದಿಕ್ಕಿನ ಚೀಟು ಶೆಲೆಮ್ಯನ 14
ಹೆಸರಿಗೆ ಬಿದ್ದಿತು. ಬಹುವಿವೇಕವುಳ್ಳ ಪಂಚಾಯತ
ನಾಗಿರುವ ಅವನ ಮಗನಾದ ಜೆಕರ್ಯನ ಹೆಸರಿಗೆ
ಬಡಗಣ ದಿಕ್ಕಿನ ಚೀಟು ಬಿದ್ದಿತು. ಓಬೇದೆದೋಮ 15
ನಿಗೆ ತೆಂಕಣ ಬಾಗಲೂ ಅವನ ಮಕ್ಕಳಿಗೆ ಉಗ್ರಾಣ
ಮಂದಿರವೂ ಶುಪ್ಪೀಮ್, ಹೋಸ ಎಂಬವರಿಗೆ ಪಡು 16
ವಣ ಬಾಗಲೂ ಅದರ ಸಮೀಪದಲ್ಲಿರುವ ಶೆಲ್ಲೆಕೆ
ತೆಂಬ ಬಾಗಲೂ ಚೀಟಿನಿಂದ ನೇಮಕವಾದವು. ಶೆಲ್ಲೆ
ಕೆತ್ ಬಾಗಲು [ಪಟ್ಟಣದಿಂದ ದೇವಾಲಯಕ್ಕೆ] ಏರಿ
ಹೋಗುವ ದಾರಿಯಲ್ಲಿದೆ. ಲೇವಿಯರಲ್ಲಿ ಪ್ರತಿ ದಿನ 17
ವೂ ಮೂಡಣ ಬಾಗಲನ್ನು ಆರು ಮಂದಿ, ಪಡುವಣ
ಬಾಗಲನ್ನು ನಾಲ್ಕು ಮಂದಿ, ತೆಂಕಣ ಬಾಗಲನ್ನು
ನಾಲ್ಕು ಮಂದಿ, ಉಗ್ರಾಣಮಂದಿರದ ಎರಡು ಬಾಗ
ಲುಗಳನ್ನು ಇಬ್ಬಿಬ್ಬರು, ಪರ್ಬರೆಂಬ ಕಟ್ಟಡವಿರುವ 18
ಪಡುವಣ ದಿಕ್ಕಿನ ದಾರಿಯ ಬಾಗಲನ್ನು ನಾಲ್ಕು
ಮಂದಿ, ಪರ್ಬರನ್ನು ಇಬ್ಬರು ಕಾಯುತ್ತಿದ್ದರು.
ಕೋರಹೀಯರ ಮತ್ತು ಮೆರಾರೀಯರ ದ್ವಾರಪಾಲಕ 19
ವರ್ಗಗಳು ಇವೇ.
1)ಮೇಲೆ ಕಂಡವರ ಕುಲಬಂಧುಗಳೂ ದೇವಾ 20
ಲಯದ ಭಂಡಾರ, ಪರಿಶುದ್ಧವಸ್ತುಗಳ ಭಂಡಾರ
ಇವುಗಳನ್ನು ಕಾಯುವವರೂ ಆದ ಲೇವಿಯರ ಪಟ್ಟಿ—
ಗೇರ್ಷೋನಮನಿಗೆ ಹುಟ್ಟಿದ ಲದ್ದಾನ ಸಂತಾನ 21
ದವರಾದ ಲದ್ದಾನ್ಯ ಕುಟುಂಬಗಳ ಪ್ರಧಾನರಲ್ಲಿ—
ಯೆಹೀಯೇಲೀ; ಯೆಹೀಯೇಲ್ಯರಾದ ಜೇತಾಮನೂ 22
ಯೋವೇಲನೆಂಬ ಅವನ ತಮ್ಮನೂ ಯೆಹೋವನ
ಆಲಯದ ಭಂಡಾರಗಳನ್ನು ಕಾಯುವವರಾಗಿದ್ದರು.
ಅಮ್ರಾಮ್, ಇಚ್ಹಾರ್, ಹೆಬ್ರೋನ್, ಉಜ್ಜೀ 23
ಯೇಲ್ ಇವರ ಸಂತಾನದವರಲ್ಲಿ ಗೇರ್ಷೋಮನ 24
ಮಗನೂ ಮೋಶೆಯ ಮೊಮ್ಮಗನೂ ಆಗಿರುವ ಶೆಬೂ
ವೇಲನು ಭಂಡಾರಗಳನ್ನು ಕಾಯುವವರ ಮುಖ್ಯ
ಸ್ಥನು. ಎಲೀಯೆಜೆರನ ಮಗ ರೆಹಬ್ಯನಿಗೆ ಹುಟ್ಟಿದ 25
ಯೆಶಾಯನ ಮರಿಮಗನೂ ಯೋರಾಮನ ಮೊಮ್ಮ
ಗನೂ ಜಿಕ್ರೀಯ ಮಗನೂ ಆಗಿರುವ ಶೆಲೋಮೋ 26
ತನೂ ಅವನ ಸಹೋದರರೂ ಪ್ರತಿಷ್ಠಿತವಸ್ತುಗಳ
ಭಂಡಾರವನ್ನು ಕಾಯುವವರು; ಇವರು ಶೆಬೂವೇಲನ
ಗೋತ್ರಬಂಧುಗಳು. ಅರಸನಾದ ದಾವೀದನೂ ಗೋ 27
ತ್ರಪ್ರಧಾನರೂ ಸಹಸ್ರಾಧಿಪತಿಗಳೂ ಶತಾಧಿಪತಿಗಳೂ
ಸೇನಾನಾಯಕರೂ ಯೆಹೋವನ ಆಲಯದ ವೃದ್ಧಿ
ಗೋಸ್ಕರ ತಮಗೆ ಯುದ್ಧದಲ್ಲಿ ಸಿಕ್ಕಿದ ಕೊಳ್ಳೆಯ
ಒಂದು ಭಾಗವನ್ನು ಯೆಹೋವನಿಗೆಂದು ಮುಡುಪಾಗಿ
ಇಟ್ಟರು. ಇವರಲ್ಲದೆ ದರ್ಶಿಯಾದ ಸಮುವೇಲನೂ 28
ಕೀಷನ ಮಗನಾದ ಸೌಲನೂ ನೇರನ ಮಗನಾದ ಅಬ್ನೇ
ರನೂ ಚೆರೂಯಳ ಮಗನಾದ ಯೋವಾಬನೂ ಹಾಗೆ
ಯೇ ಮಾಡಿದ್ದರು. ಈ ಪ್ರಕಾರ ಪ್ರತಿಷ್ಠಿತವಾದದ್ದೆಲ್ಲ

1) ಪಾಠಾಂತರದಲ್ಲಿ ಒಂದು ಅಕ್ಷರದ ವ್ಯತ್ಯಾಸವಿರುವ ಅಹೀಯ ಎಂಬ ಹೆಸರು ಬರೆದಿರುತ್ತದೆ.

ವೂ ಶೆಲೋವೋತನ ಮತ್ತು ಅವನ ಸಹೋದರರ ವಶ
ದಲ್ಲಿತ್ತು.
29 ಇಚ್ಹಾರ್ಯರಲ್ಲಿ ಕೆನನ್ಯನೂ ಅವನ ಮಕ್ಕಳೂ
ಲೌಕಿಕೋದ್ಯೋಗದಲ್ಲಿದ್ದರು. ಅವರು ಇಸ್ರಾಯೇ
ಲ್ಯರ ಅಧಿಕಾರಿಗಳೂ ನ್ಯಾಯಾಧಿಪತಿಗಳೂ ಆಗಿದ್ದರು.
30 ಹೆಬ್ರೋನ್ಯರಲ್ಲಿ ಹಷಬ್ಯನೂ ಅವನ ಸಹೋದರ
ರೂ ಯೊರ್ದನ್ ಹೊಳೆಯ ಪಶ್ಚಿಮಪ್ರಾಂತಗಳ
ಲ್ಲಿದ್ದ ಇಸ್ರಾಯೇಲ್ಯರೊಳಗೆ ಯೆಹೋವನ ಸೇವಾ
ಕಾರ್ಯಗಳನ್ನೂ ರಾಜಕೀಯ ಕಾರ್ಯಗಳನ್ನೂ ನಡಿ
ಸುತ್ತಿದ್ದರು. ಸಮರ್ಥರಾದ ಅವರು ಸಾವಿರದ ಏಳು
31 ನೂರು ಮಂದಿ. ದಾವೀದನ ಆಳಿಕೆಯ ನಾಲ್ವತ್ತನೆಯ
ವರುಷದಲ್ಲಿ ಹೆಬ್ರೋನ್ಯರಿಗೆ ಸೇರಿದವರು ಯಾರಾ
ರೆಂದು ವಿಚಾರಣೆ ನಡೆದಾಗ ಗಿಲ್ಯಾದಿನ ಯಾಜೇ
ರಿನ ಶ್ರೀಮಂತರಲ್ಲಿ ಅನೇಕರು ಅವರ ಗೋತ್ರದವ
ರಾಗಿರುತ್ತಾರೆಂದು ಗೊತ್ತಾಯಿತು. ಈ ಹೆಬ್ರೋನ್ಯರಲ್ಲಿ
32 ಯೆರೀಯನು ಪ್ರಧಾನನು; ಶ್ರೀಮಂತರೂ ಕುಟುಂಬ
ಪ್ರಧಾನರೂ ಆದ ಅವನ ಗೋತ್ರಬಂಧುಗಳು
ಎರಡು ಸಾವಿರದ ಏಳು ನೂರು ಮಂದಿ. ಅರಸನಾದ
ದಾವೀದನು ರೂಬೇನ್ ಗಾದ್ ಅರ್ಧಮನಸ್ಸೆ ಕುಲ
ಗಳವರ ಮೇಲೆ ಇವರನ್ನೇ ದೈವಿಕಕಾರ್ಯಗಳಲ್ಲಿಯೂ
ರಾಜಕೀಯಕಾರ್ಯಗಳಲ್ಲಿಯೂ ಅಧಿಕಾರಿಗಳನ್ನಾಗಿ
ನೇಮಿಸಿದನು.

ಸೈನಿಕವರ್ಗಗಳೂ ಅರಸನ ಆಯಾ ಉದ್ಯೋಗಸ್ಥರೂ.

27 ಇಸ್ರಾಯೇಲ್ಯರ ಕುಲಪ್ರಧಾನರು, ಸಹಸ್ರಾಧಿ
ಪತಿಗಳು, ಶತಾಧಿಪತಿಗಳು, ಅರಸನ ವಿಧವಿಧವಾದ
ಸೇವೆಯನ್ನು ಮಾಡಬೇಕಾದ ವರ್ಗಗಳ ಅಧಿಪತಿಗಳು
ಇವರ ಲೆಕ್ಕ.
ವರುಷದ ಎಲ್ಲಾ ತಿಂಗಳುಗಳಲ್ಲಿ ತಿಂಗಳಿಗೆ ಒಂದು
ವರ್ಗದಂತೆ ಸರತಿಯ ಮೇಲೆ ಕೆಲಸಕ್ಕೋಸ್ಕರ ಬರುವ
ಪ್ರತಿಯೊಂದು ವರ್ಗದಲ್ಲಿ ಇಪ್ಪತ್ತನಾಲ್ಕು ಸಾವಿರ
2 ಮಂದಿ ಇದ್ದರು. ಪೆರೆಚನ ಸಂತಾನದವನೂ ಜಬ್ದೀ
ಯೇಲನ ಮಗನೂ ಆದ ಯಾಷೊಬ್ಬಾಮನು ಮೊದ
3 ಲನೆಯ ವರ್ಗದ ನಾಯಕನು. ಇವನು ಮೊದಲನೆಯ
ತಿಂಗಳಿನ ಸೇನಾಪತಿಗಳ ಮುಖ್ಯಸ್ಥನು. ಮೊದಲನೆಯ
ತಿಂಗಳಿನಲ್ಲಿ ಸೇವಿಸತಕ್ಕ ಅವನ ವರ್ಗದವರ ಸಂಖ್ಯೆ
4 ಯು ಇಪ್ಪತ್ತನಾಲ್ಕು ಸಾವಿರ. ಅಹೋಹಿಯನಾದ
ದೋದೈಯು ಎರಡನೆಯ ತಿಂಗಳಿನ ವರ್ಗದ ನಾಯ
ಕನು; ಆ ವರ್ಗದಲ್ಲಿ ಮಿಕ್ಲೋತನೆಂಬವನೂ ನಾಯ
ಕನು. ಅವನ ವರ್ಗದವರ ಸಂಖ್ಯೆಯು ಇಪ್ಪತ್ತನಾಲ್ಕು
5 ಸಾವಿರ. ಯಾಜಕನಾದ ಯೆಹೋಯಾದನ ಮಗನೂ
ಪ್ರಧಾನನೂ ಆದ ಬೆನಾಯನು ಮೂರನೆಯ ವರ್ಗದ
ನಾಯಕನು; ಮೂರನೆಯ ತಿಂಗಳಲ್ಲಿ ಸೇವಿಸತಕ್ಕ
ಅವನ ವರ್ಗದವರ ಸಂಖ್ಯೆಯು ಇಪ್ಪತ್ತನಾಲ್ಕು
6 ಸಾವಿರ. ಈ ಬೆನಾಯನು ಮೂವತ್ತು ಮಂದಿಯಲ್ಲಿ
ಪ್ರಸಿದ್ಧ ರಣವೀರನೂ ಅವರ ಮುಖ್ಯಸ್ಥನೂ ಆಗಿದ್ದನು.
ಅವನ ವರ್ಗದಲ್ಲಿ ಅವನ ಮಗನಾದ ಅಮ್ಮೀಜಾಬಾ
7 ದನೂ ಇದ್ದನು. ಯೋವಾಬನ ತಮ್ಮನಾದ ಅಸಾ
ಹೇಲನೂ ಅವನು ಸತ್ತನಂತರ ಅವನ ಮಗನಾದ ಜೆಬ

ದ್ಯನೂ ನಾಲ್ಕನೆಯ ವರ್ಗದ ನಾಯಕರು; ನಾಲ್ಕ
ಯ ತಿಂಗಳಿನಲ್ಲಿ ಸೇವಿಸತಕ್ಕ ಅವರ ವರ್ಗದ
ಸಂಖ್ಯೆಯು ಇಪ್ಪತ್ತನಾಲ್ಕು ಸಾವಿರ. ಇಜ್ರಾಹ್ಯನಾ
ಶಮ್ಹೂತನು ಐದನೆಯ ವರ್ಗದ ನಾಯಕನು; ಐ
ನೆಯ ತಿಂಗಳಿನಲ್ಲಿ ಸೇವಿಸತಕ್ಕ ಅವನ ವರ್ಗದ
ಸಂಖ್ಯೆಯು ಇಪ್ಪತ್ತನಾಲ್ಕು ಸಾವಿರ. ತೆಕೋ
ಇಕ್ಕೇಷನ ಮಗನಾದ ಈರ ಎಂಬವನು ಆರನೆ
ವರ್ಗದ ನಾಯಕನು; ಆರನೆಯ ತಿಂಗಳಿನಲ್ಲಿ ಸೇವಿ
ತಕ್ಕ ಅವನ ವರ್ಗದವರ ಸಂಖ್ಯೆಯು ಇಪ್ಪತ್ತನಾಲ
ಸಾವಿರ. ಎಫ್ರಾಯಿಮ್ ಕುಲದ ಪೆಲೋನ್ಯನಾ
ಹೆಲೆಚನು ಏಳನೆಯ ವರ್ಗದ ನಾಯಕನು; ಏಳನೆ
ತಿಂಗಳಿನಲ್ಲಿ ಸೇವಿಸತಕ್ಕ ಅವನ ವರ್ಗದವರ ಸಂ
ಯು ಇಪ್ಪತ್ತನಾಲ್ಕು ಸಾವಿರ. ಹುಷ ಊರಿನ ಜ
ಹೀಯನಾದ ಸಿಬ್ಬೆಕೈಯು ಎಂಟನೆಯ ವರ್ಗ
ನಾಯಕನು; ಎಂಟನೆಯ ತಿಂಗಳಿನಲ್ಲಿ ಸೇವಿಸತ
ಅವನ ವರ್ಗದವರ ಸಂಖ್ಯೆಯು ಇಪ್ಪತ್ತನಾಲ್ಕು ಸಾವಿ
ಬೆನ್ಯಾಮೀನ್ ಕುಲದ ಅನತೋತ್ ಊರಿನವನಾ
ಅಬೀಯೆಜೆರನು ಒಂಭತ್ತನೆಯ ವರ್ಗದ ನಾಯಕನ
ಒಂಭತ್ತನೆಯ ತಿಂಗಳಿನಲ್ಲಿ ಸೇವಿಸತಕ್ಕ ಅವನ ವರ್ಗ
ವರ ಸಂಖ್ಯೆಯು ಇಪ್ಪತ್ತನಾಲ್ಕು ಸಾವಿರ. ನೆಟೋ
ಊರಿನ ಜೆರಹೀಯನಾದ ಮಹರೈಯು ಹತ್ತನೆ
ವರ್ಗದ ನಾಯಕನು; ಹತ್ತನೆಯ ತಿಂಗಳಿನಲ್ಲಿ ಸೇವಿ
ತಕ್ಕ ಅವನ ವರ್ಗದವರ ಸಂಖ್ಯೆಯು ಇಪ್ಪತ್ತನಾಲ
ಸಾವಿರ. ಎಫ್ರಾಯಿಮ್ ಕುಲದ ಪಿರ್ರಾತೋನ್ಯನಾ
ಬೆನಾಯನು ಹನ್ನೊಂದನೆಯ ವರ್ಗದ ನಾಯಕನ
ಹನ್ನೊಂದನೆಯ ತಿಂಗಳಿನಲ್ಲಿ ಸೇವಿಸತಕ್ಕ ಅವನ ವರ
ದವರ ಸಂಖ್ಯೆಯು ಇಪ್ಪತ್ತನಾಲ್ಕು ಸಾವಿರ. ನೆಟೋ
ಊರಿನವನೂ ಒತ್ನೀಯೇಲನ ಸಂತಾನದವನೂ ಆ
ಹೆಲ್ದೈಯು ಹನ್ನೆರಡನೆಯ ವರ್ಗದ ನಾಯಕನ
ಹನ್ನೆರಡನೆಯ ತಿಂಗಳಿನಲ್ಲಿ ಸೇವಿಸತಕ್ಕ ಅವನ ವರ
ದವರ ಸಂಖ್ಯೆಯು ಇಪ್ಪತ್ತನಾಲ್ಕು ಸಾವಿರ.
ಇಸ್ರಾಯೇಲ್ ಕುಲಪ್ರಭುಗಳು—ರೂಬೇನ್ಯರ
ಜಿಕ್ರೀಯ ಮಗನಾದ ಎಲೀಯೆಜೆರ್; ಸಿಮೆಯೋ
ರಲ್ಲಿ ಮಾಕನ ಮಗನಾದ ಶೆಫಟ್ಯ; ಲೇವಿಯರ
ಕೆಮುವೇಲನ ಮಗನಾದ ಹಷಬ್ಯ; ಆರೋನ್ಯರ
ಚಾದೋಕ್; ಯೆಹೂದ್ಯರಲ್ಲಿ ದಾವೀದನ ಅಣ್ಣನಾ
ಎಲೀಹು; ಇಸ್ಸಾಕಾರ್ಯರಲ್ಲಿ ಮೀಕಾಯೇಲನ ಮ
ನಾದ ಒಮ್ರಿ; ಜೆಬೂಲೂನ್ಯರಲ್ಲಿ ಓಬದ್ಯನ ಮಗನಾ
ಇಷ್ಮಾಯ; ನಫ್ತಾಲ್ಯರಲ್ಲಿ ಅಜ್ರೀಯೇಲನ ಮಗನಾ
ಯೆರೀಮೋತ್; ಎಫ್ರಾಯಿಮ್ಯರಲ್ಲಿ ಅಜಜ್ಯನ ಮ
ನಾದ ಹೋಶೇಯ; ಮನಸ್ಸೆಯ ಅರ್ಧಕುಲದವರ
ಪೆದಾಯನ ಮಗನಾದ ಯೋವೇಲ್; ಗಿಲ್ಯಾದಿನ
ರುವ ಮನಸ್ಸೆಯ ಅರ್ಧಕುಲದವರಲ್ಲಿ ಜೆಕರ್ಯ
ಮಗನಾದ ಇದ್ದೋ; ಬೆನ್ಯಾಮೀನ್ಯರಲ್ಲಿ ಅಬ್ನೇರ
ಮಗನಾದ ಯಗಸೀಯೇಲ್; ದಾನ್ಯರಲ್ಲಿ ಯೆರೊ
ಹಾಮನ ಮಗನಾದ ಅಜರೇಲ್. ಇಸ್ರಾಯೇ
ಕುಲಾಧಿಪತಿಗಳು ಇವರೇ.
ಇಸ್ರಾಯೇಲ್ಯರನ್ನು ಆಕಾಶದ ನಕ್ಷತ್ರಗಳ
ಅಸಂಖ್ಯವಾಗಿ ಮಾಡುವೆನೆಂಬದಾಗಿ ಯೆಹೋವನ
ಕೊಟ್ಟ ಮಾತನ್ನು ದಾವೀದನು ನಂಬಿ ಇಪ್ಪತ್ತು ವರು

ಕ್ಕಿಂತ ಕಡಿಮೆಯಾದ ವಯಸ್ಸುಳ್ಳವರನ್ನು ಲೆಕ್ಕಿಸ
24 ಲಿಲ್ಲ. ಚೆರೂಯಳ ಮಗನಾದ ಯೋವಾಬನು ಅವ
ರನ್ನು ಲೆಕ್ಕಿಸಲಾರಂಭಿಸಿದರೂ ಇದರ ನಿಮಿತ್ತ ಇಸ್ರಾ
ಯೇಲ್ಯರ ಮೇಲೆ ದೇವರ ಕೋಪವುಂಟಾದದರಿಂದ
ಅದನ್ನು ಪೂರ್ತಿಗೊಳಿಸಲಿಲ್ಲ. ಈ ಖಾನೇಷುಮಾ
ರಿಯು ದಾವೀದನ ರಾಜವೃತ್ತಾಂತಗ್ರಂಥದಲ್ಲಿ ಲಿಖಿತ
ವಾಗಲಿಲ್ಲ.
25 ಅರಸನಾದ ದಾವೀದನ ಸೊತ್ತಿನ ಮೇಲೆ ಮೇಲ್ವಿ
ಚಾರಕರಾಗಿ ನೇಮಿಸಲ್ಪಟ್ಟವರು ಯಾರಂದರೆ—ಅರಸನ
ಭಂಡಾರಗಳ ಮೇಲೆ ಅದೀಯೇಲನ ಮಗನಾದ ಅಜ್ಮಾ
ವೆತ್, ಹೊಲದಲ್ಲಿಯೂ ಪಟ್ಟಣಗಳಲ್ಲಿಯೂ ಹಳ್ಳಿಗ
ಳಲ್ಲಿಯೂ ಬುರುಜುಗಳ ಮೇಲೆಯೂ ಇದ್ದ ಉಗ್ರಾಣ
ಗಳ ಮೇಲೆ ಉಜ್ಜೀಯನ ಮಗನಾದ ಯೋನಾತಾನ್,
26 ಹೊಲಗಳನ್ನು ವ್ಯವಸಾಯಮಾಡುವ ಆಳುಗಳ ಮೇಲೆ
27 ಕೆಲೂಬನ ಮಗನಾದ ಎಜ್ರೀ, ದ್ರಾಕ್ಷೇತೋಟಗಳ
ಮೇಲೆ ರಾಮಾ ಊರಿನ ಶಿಮ್ಮೀ, ದ್ರಾಕ್ಷೇತೋಟಗಳ
ಲ್ಲಿರುವ ದ್ರಾಕ್ಷಾರಸದ ಉಗ್ರಾಣಗಳ ಮೇಲೆ ಶಿಫ್ಮೀ
28 ಯನಾದ ಜಬ್ದೀ, ಎಣ್ಣೇಮರದ ತೋಪುಗಳ ಮೇಲೆ
ಯೂ ಇಳುಕಲಿನ ಪ್ರದೇಶದಲ್ಲಿರುವ ಅತ್ತಿಮರಗಳ
ತೋಪುಗಳ ಮೇಲೆಯೂ ಗೆದೆರೂರಿನವನಾದ ಬಾಳ್ಹಾ
ನಾನ್, ಎಣ್ಣೆಯ ಉಗ್ರಾಣಗಳ ಮೇಲೆ ಯೋವಾಷ್,
29 ಶಾರೋನಿನಲ್ಲಿ ಮೇಯುವ ದನಗಳ ಮೇಲೆ ಶಾರೋನ್ಯ
ನಾದ ಶಿಟ್ರೈ ತಗ್ಗುಗಳಲ್ಲಿ ಮೇಯುವ ದನಗಳ ಮೇಲೆ
30 ಅದ್ಲೈಯ ಮಗನಾದ ಶಾಫಾಟ್, ಒಂಟೆಗಳ ಮೇಲೆ
ಇಷ್ಮಾಯೇಲ್ಯನಾದ ಓಬೀಲ್, ಹೆಣ್ಣುಕತ್ತೆಗಳ ಮೇಲೆ
31 ಮೇರೋನೋತ್ಯನಾದ ಯೆಹ್ದೆಯ, ಆಡುಕುರಿಗಳ
ಮೇಲೆ ಹಗ್ರೀಯನಾದ ಯಾಜೀಜ್ ಇವರೇ.
32 ವಿವೇಕಿಯೂ ಶಾಸ್ತ್ರಜ್ಞನೂ ಆದ ಯೋನಾತಾನ
ನೆಂಬ ದಾವೀದನ ಚಿಕ್ಕಪ್ಪನು ಮಂತ್ರಿಯೂ ಹಕ್ಮೋ
ನಿಯ ಮಗನಾದ ಯೆಹೀಯೇಲನು ರಾಜಪುತ್ರಪಾಲ
33 ಕನೂ ಆಗಿದ್ದರು. ಅಹೀತೋಫೆಲನು ಅರಸನ
ಮಂತ್ರಿಯು; ಅರ್ಕೀಯನಾದ ಹೂಷೈಯು ಅರಸನ
34 ಮಿತ್ರನು; ಬೆನಾಯನ ಮಗನಾದ ಯೆಹೋಯಾ
ದಾವನೂ ಎಬ್ಯಾತಾರನೂ ಅಹೀತೋಫೆಲನ ಉತ್ತರಾಧಿ
ಕಾರಿಗಳು; ಯೋವಾಬನು ಅರಸನ ಸೈನ್ಯಾಧಿಪ
ತಿಯು.

ದಾವೀದನು ನೆರೆದ ಸಭೆಯ ಮುಂದೆ ಸೊಲೊಮೋನನನ್ನು ತನ್ನ
ಉತ್ತರಾಧಿಕಾರಿಯನ್ನಾಗಿ ನೇಮಿಸಿ ಅವನಿಗೆ ದೇವಾಲಯದ
ನಕ್ಷೆಯನ್ನು ಕೊಟ್ಟದ್ದು.

28 ದಾವೀದನು ಇಸ್ರಾಯೇಲ್ಯರ ಎಲ್ಲಾ ಅಧಿಪತಿಗ
ಳನ್ನು ಅಂದರೆ ಕುಲಾಧಿಪತಿಗಳು, ಅರಸನ ಸೇವೆ
ಮಾಡುತ್ತಿರುವ ವರ್ಗನಾಯಕರು, ಸಹಸ್ರಾಧಿಪತಿ
ಗಳು, ಶತಾಧಿಪತಿಗಳು, ಅರಸನ ದನಕುರಿ ಮೊದಲಾದ
ಸೊತ್ತಿನ ಮೇಲ್ವಿಚಾರಕರು, ರಾಜಪುತ್ರಪಾಲಕರು,
ಕಂಚುಕಿಗಳು, ರಣವೀರರು ಅಂತೂ ಎಲ್ಲಾ ಘನಸಂತ
2 ರನ್ನು ಯೆರೂಸಲೇಮಿಗೆ ಕರಿಸಿದನು. ಅವರು
ಕೂಡಿ ಬಂದಾಗ ಅರಸನಾದ ದಾವೀದನು ಎದ್ದು
ನಿಂತು ಅವರಿಗೆ ಹೇಳಿದ್ದೇನಂದರೆ—ನನ್ನ ಸಹೋದರರೇ,
ಪ್ರಜೆಗಳೇ, ಕೇಳಿರಿ. ಯೆಹೋವನ ನಿಬಂಧನಮಂ
ಜೂಷಕ್ಕೋಸ್ಕರವೂ ನಮ್ಮ ದೇವರ ಪಾದಪೀಠಕ್ಕೋ
ಸ್ಕರವೂ ಆಲಯವನ್ನು ಕಟ್ಟಿಸಬೇಕೆಂದು ಮನಸ್ಸು
ಮಾಡಿ ಅದಕ್ಕಾಗಿ ಎಲ್ಲವನ್ನೂ ಸಿದ್ಧಪಡಿಸಿದೆನು. ಆಗ 3
ದೇವರು ನನಗೆ—ನೀನು ಮಹಾಯುದ್ಧಗಳನ್ನು
ನಡಿಸಿ ಬಹಳ ರಕ್ತವನ್ನು ಸುರಿಸಿದವನು; ನನ್ನ ಹೆಸರಿ
ಗೋಸ್ಕರ ಆಲಯವನ್ನು ಕಟ್ಟಿಸಬಾರದು ಎಂದು ಹೇಳಿ
ದನು. ಇಸ್ರಾಯೇಲ್‌ದೇವರಾದ ಯೆಹೋವನು 4
ನನ್ನ ತಂದೆಯ ಮನೆಯವರೆಲ್ಲರಲ್ಲಿ ನನ್ನನ್ನೇ ಸದಾ
ಇಸ್ರಾಯೇಲ್ಯರ ಅರಸನಾಗಿರುವದಕ್ಕೆ ಆರಿಸಿಕೊಂ
ಡನು. ಆತನು ಯೆಹೂದಕುಲವು ರಾಜಕುಲವಾಗ
ಬೇಕೆಂದು ನೇಮಿಸಿ ಆ ಕುಲದಲ್ಲಿ ನನ್ನ ತಂದೆಯ
ಕುಟುಂಬವನ್ನು ಆರಿಸಿಕೊಂಡನು. ನನ್ನ ತಂದೆಯ
ಎಲ್ಲಾ ಮಕ್ಕಳಲ್ಲಿ ನನ್ನನ್ನೇ ಮೆಚ್ಚಿ ಇಸ್ರಾಯೇಲ್ಯರೆ
ಲ್ಲರ ಅರಸನನ್ನಾಗಿ ಮಾಡಿದನು. ನನಗೆ ದಯಪಾಲಿ 5
ಸಿದ ಅನೇಕ ಮಂದಿ ಮಕ್ಕಳಲ್ಲಿ ನನ್ನ ಮಗನಾದ
ಸೊಲೊಮೋನನನ್ನು ಯೆಹೋವನ ರಾಜ್ಯಸಿಂಹಾಸನ
ವಾಗಿರುವ ಇಸ್ರಾಯೇಲ್‌ಸಿಂಹಾಸನದ ಮೇಲೆ ಕುಳ್ಳಿರಿ
ಸುವದಕ್ಕೋಸ್ಕರ ಆರಿಸಿಕೊಂಡನು. ಆತನು ನನಗೆ— 6
ನಿನ್ನ ಮಗನಾದ ಸೊಲೊಮೋನನೇ ನನ್ನ ಆಲಯ
ವನ್ನೂ ಅದರ ಪ್ರಾಕಾರಗಳನ್ನೂ ಕಟ್ಟಿಸುವನು.
ಅವನು ನನಗೆ ಮಗನಾಗಿರಬೇಕೆಂದು ಅವನನ್ನು ಆರಿಸಿ
ಕೊಂಡಿದ್ದೇನೆ; ನಾನು ಅವನಿಗೆ ತಂದೆಯಾಗಿರುವೆನು.
ಅವನು ಈಗಿನಂತೆ ಯಾವಾಗಲೂ ನನ್ನ ಆಜ್ಞಾವಿಧಿಗ 7
ಳನ್ನು ಕೈಕೊಂಡು ನಡೆಯುವದಾದರೆ ಅವನ ರಾಜ್ಯ
ವನ್ನು ಸದಾಕಾಲವೂ ಸ್ಥಿರಪಡಿಸುವೆನೆಂದು ಹೇಳಿ
ದ್ದಾನೆ. ನಿಮ್ಮ ದೇವರಾದ ಯೆಹೋವನ ಎಲ್ಲಾ 8
ಆಜ್ಞೆಗಳನ್ನು ಧ್ಯಾನಿಸಿ ಕೈಕೊಳ್ಳಬೇಕೆಂದು ಯೆಹೋ
ವನ ಮಂಡಲಿಯಾದ ಸಮಸ್ತ ಇಸ್ರಾಯೇಲ್ಯರ ಎದು
ರಿನಲ್ಲಿ ನಮ್ಮ ದೇವರಿಗೆ ಕೇಳಿಸುವಂತೆ ನಿಮ್ಮನ್ನು
ಎಚ್ಚರಿಸುತ್ತೇನೆ. ಹಾಗೆ ಮಾಡಿದರೆ ಈ ಒಳ್ಳೇ ದೇಶವು
ಸದಾಕಾಲ ನಿಮ್ಮ ಮತ್ತು ನಿಮ್ಮ ಸಂತಾನದವರ
ಸ್ವಾಸ್ತ್ಯವಾಗಿರುವದು. ನನ್ನ ಮಗನಾದ ಸೊಲೊ 9
ಮೋನನೇ, ನೀನಂತೂ ನಿನ್ನ ತಂದೆಯ ದೇವರನ್ನು ಅರಿ
ತುಕೊಂಡು ಸಂಪೂರ್ಣಹೃದಯದಿಂದಲೂ ಮನಸ್ಸಂ
ತೋಷದಿಂದಲೂ ಆತನನ್ನೇ ಸೇವಿಸು; ಯೆಹೋವನು
ಎಲ್ಲಾ ಹೃದಯಗಳನ್ನು ವಿಚಾರಿಸುವವನೂ ಎಲ್ಲಾ
ಮನಸ್ಸಂಕಲ್ಪಗಳನ್ನು ಬಲ್ಲವನೂ ಆಗಿರುತ್ತಾನಲ್ಲಾ.
ನೀನು ಆತನನ್ನು ಹುಡುಕುವದಾದರೆ ಆತನು ನಿನಗೆ
ಸಿಕ್ಕುವನು; ಆತನನ್ನು ಬಿಟ್ಟರೆ ನಿನ್ನನ್ನು ಶಾಶ್ವತ
ವಾಗಿ ತಳ್ಳಿಬಿಡುವನು. ಆದದರಿಂದ ನೋಡಿಕೋ; 10
ಯೆಹೋವನು ತನಗೋಸ್ಕರ ಪವಿತ್ರಾಲಯವನ್ನು
ಕಟ್ಟಬೇಕೆಂದು ನಿನ್ನನ್ನು ಆರಿಸಿಕೊಂಡಿದ್ದಾನಷ್ಟೆ;
ಧೈರ್ಯದಿಂದ ಕೆಲಸಕ್ಕೆ ಕೈಹಚ್ಚು ಎಂಬದೇ.
ತರುವಾಯ ದಾವೀದನು ತನ್ನ ಮಗನಾದ 11
ಸೊಲೊಮೋನನಿಗೆ ದೇವಾಲಯದ ಮಂಟಪ, ಕೊಟ್ಟಾ
ರಗಳು, ಭಂಡಾರಗಳು, ಮೇಲುಪ್ಪರಿಗೆಗಳು, ಒಳಗಣ
ಕೋಣೆಗಳು ಕೃಪಾಸನಮಂದಿರ ಇವುಗಳ ನಕ್ಷೆಯನ್ನು
ಕೊಟ್ಟು ಯೆಹೋವನ ಆಲಯದ ಅಂಗಳಗಳು, ಸುತ್ತ 12
ಣ ಕೋಣೆಗಳು, ದೇವಾಲಯದ ಭಂಡಾರಗಳು, ಪ್ರತಿ

ಸ್ಥಿತವಸ್ತುಗಳ ಭಂಡಾರಗಳು ಇವುಗಳ ವಿಷಯವಾ
13 ಗಿಯೂ ಯಾಜಕರ ಮತ್ತು ಲೇವಿಯರ ವರ್ಗಗಳು,
ಯೆಹೋವನ ಆಲಯದಲ್ಲಿ ನಡೆಯತಕ್ಕ ಎಲ್ಲಾ ಆರಾ
14 ಧನೆ, ಆರಾಧನೆಯ ಎಲ್ಲಾ ಸಾಮಗ್ರಿಗಳು ಇವುಗಳ
ವಿಷಯವಾಗಿಯೂ ತಾನು 1)ನಿರ್ಣಯಿಸಿಕೊಂಡದ್ದೆಲ್ಲ
15 ವನ್ನೂ ವಿವರಿಸಿದನು. ಇದಲ್ಲದೆ ಆರಾಧನೆಯ ಆಯಾ
ಆಚಾರಗಳಲ್ಲಿ ಉಪಯೋಗವಾಗಬೇಕಾದ ಎಲ್ಲಾ ಸಾ
ಮಾನುಗಳ ಬೆಳ್ಳಿ ಬಂಗಾರದ ತೂಕ ಅಂದರೆ ಬಂಗಾರದ
ಹಣತೆಗಳಿರುವ ಬಂಗಾರದ ಪ್ರತಿಯೊಂದು ದೀಪಸ್ತಂ
ಭದ ತೂಕ, ಬೇರೆ ಬೇರೆ ಕೆಲಸಗಳಿಗೆ ಉಪಯೋಗ
ವಾಗುವ ಪ್ರತಿಯೊಂದು ಬೆಳ್ಳಿಯ ದೀಪಸ್ತಂಭದ ಮತ್ತು
16 ಅದರ ಹಣತೆಗಳ ತೂಕ, ಮೀಸಲ ರೊಟ್ಟಿಗಳನ್ನಿಡುವ
ಪ್ರತಿಯೊಂದು ಮೇಜಿಗೆ ಉಪಯೋಗಿಸಬೇಕಾದ ಬಂ
ಗಾರದ ತೂಕ, ಬೆಳ್ಳಿಯ ಮೇಜುಗಳ ಬೆಳ್ಳಿಯ ತೂಕ,
17 ಚೊಕ್ಕ ಬಂಗಾರದ ಮುಳ್ಳು ಬೋಗುಣಿ ಹೂಜೆಗಳ
ಮತ್ತು ಬೆಳ್ಳಿಬಂಗಾರದ ಆಯಾ ಪಾತ್ರೆಗಳ ತೂಕ,
18 ಧೂಪವೇದಿಗೆ ಉಪಯೋಗಿಸಬೇಕಾದ ಚೊಕ್ಕ ಬಂಗಾ
ರದ ತೂಕ ಎಷ್ಟೆಷ್ಟಾಗಿರಬೇಕೆಂಬದನ್ನು ವಿವರಿಸಿ ಹರ
ಡಿದ ರೆಕ್ಕೆಗಳಿಂದ ಯೆಹೋವನ ನಿಬಂಧನಮಂಜೂಷ
ವನ್ನು ಮರೆಮಾಡುವ ಬಂಗಾರದ ಕೆರೂಬಿವಾಹನದ
19 ನಕ್ಷೆಯನ್ನು ಕೊಟ್ಟು ಆ ನಕ್ಷೆಗಳಲ್ಲಿ ಸೂಚಿಸಿದ ಎಲ್ಲಾ
ಕೆಲಸಗಳ ವಿಷಯವಾದ ಜ್ಞಾನವು ತನಗೆ ಯೆಹೋವನ
ಲೇಖನದಿಂದಲೇ ಪ್ರಾಪ್ತವಾಯಿತೆಂದು ಹೇಳಿದನು.
20 ಆ ಮೇಲೆ ದಾವೀದನು ತನ್ನ ಮಗನಾದ ಸೊಲೊ
ಮೋನನಿಗೆ—ಸ್ಥಿರಚಿತ್ತನಾಗಿರು; ಧೈರ್ಯದಿಂದಿರು,
ಕೆಲಸಕ್ಕೆ ಕೈಹಾಕು; ಅಂಜಬೇಡ, ಕಳವಳಗೊಳ್ಳ
ಬೇಡ. ನನ್ನ ದೇವರಾಗಿರುವ ಯೆಹೋವ ದೇವರು
ನಿನ್ನ ಸಂಗಡ ಇರುತ್ತಾನೆ; ಆತನು ತನ್ನ ಆಲಯದ
ಎಲ್ಲಾ ಕೆಲಸವು ತೀರುವ ವರೆಗೂ ನಿನ್ನನ್ನು ಕೈಬಿಡುವ
21 ದಿಲ್ಲ, ತೊರೆಯುವದಿಲ್ಲ. ಇಗೋ, ಯಾಜಕರ ಮತ್ತು
ಲೇವಿಯರ ವರ್ಗಗಳವರು ದೇವಾಲಯಸಂಬಂಧವಾದ
ಬೇಕಾದ ಕೆಲಸವನ್ನು ಮಾಡುವದಕ್ಕೆ ಸಿದ್ಧರಾಗಿದ್ದಾರೆ.
ಯಾವ ಕೆಲಸವಿದ್ದರೂ ಎಲ್ಲವನ್ನೂ ಜಾಣತನದಿಂದ
ಮಾಡುವದಕ್ಕೆ ಸಿದ್ಧಮನಸ್ಸುಳ್ಳವರು ನಿನ್ನ ಹತ್ತಿರ
ಇರುತ್ತಾರೆ. ಅಧಿಪತಿಗಳೂ ಎಲ್ಲಾ ಪ್ರಜೆಗಳೂ ನಿನ್ನ
ಆಜ್ಞೆಗೆ ಒಳಗಾಗುವರು ಎಂದು ಹೇಳಿದನು.

ದಾವೀದನೂ ಪ್ರಧಾನರೂ ದೇವಾಲಯಕ್ಕಾಗಿ ಕೊಟ್ಟ ಕಾಣಿಕೆ;
ಸೊಲೊಮೋನನ ಪಟ್ಟಾಭಿಷೇಕವೂ ದಾವೀದನ ಪ್ರಾರ್ಥನೆಯೂ
ಮರಣವೂ.

**29** ತರುವಾಯ ಅರಸನಾದ ದಾವೀದನು—ದೇವರು
ನನ್ನ ಮಗನಾದ ಸೊಲೊಮೋನನನ್ನೇ ಆರಿಸಿಕೊಂಡಿ
ದ್ದಾನೆ; ಆದರೆ ಅವನು ಇನ್ನೂ ಎಳೇ ಪ್ರಾಯದವನು.
ಮಾಡತಕ್ಕ ಕೆಲಸವೋ ವಿಶೇಷವಾದದ್ದು. ಕಟ್ಟತಕ್ಕ
ಮಂದಿರವು ದೇವರಾದ ಯೆಹೋವನಿಗಾಗಿಯೇ ಅಲ್ಲ
ಮನುಷ್ಯನಿಗಾಗಿಯಲ್ಲ; ನಾನು ನನ್ನಿಂದಾಗುವಷ
ಪ್ರಯಾಸಪಟ್ಟು ಬಂಗಾರದ ಕೆಲಸಕ್ಕಾಗಿ ಬೇಕಾಗು
ಬಂಗಾರ, ಬೆಳ್ಳಿಯ ಕೆಲಸಕ್ಕಾಗಿ ಬೇಕಾಗುವ ಬೆಳ್
ತಾಮ್ರದ ಕೆಲಸಕ್ಕಾಗಿ ಬೇಕಾಗುವ ತಾಮ್ರ, ಕಬ್ಬಿಣ
ಕೆಲಸಕ್ಕಾಗಿ ಬೇಕಾಗುವ ಕಬ್ಬಿಣ, ಮರದ ಕೆಲಸಕ್ಕಾ
ಬೇಕಾಗುವ ಮರ ಇವುಗಳನ್ನೂ ಗೋಮೇಧಕ ರತ್
ಕೆತ್ತುವದಕ್ಕೆ ಬೇಕಾಗುವ ರತ್ನ, ಕೆಂಪರಲು, ವಿಚಿ
ವರ್ಣದ ಕಲ್ಲು, ಎಲ್ಲಾ ತರದ ಮಣಿ, ಚಂದ್ರಕಾಂ
ಇವುಗಳನ್ನೂ ನನ್ನ ದೇವರ ಮಂದಿರಕ್ಕೋಸ್ಕರ ರಾ
ರಾಶಿಯಾಗಿ ಸಂಗ್ರಹಿಸಿದ್ದೇನೆ. ನಾನು ಪವಿತ್ರಾ
ಯಕ್ಕೆ ಇವುಗಳನ್ನೆಲ್ಲಾ ಸಂಗ್ರಹಿಸಿದ್ದಲ್ಲದೆ ನನ್ನ ದೇವ
ಆಲಯದ ಮೇಲಣ ಅನುರಾಗದಿಂದ ಅದಕ್ಕೋಸ್ಕ
ನನ್ನ ಸ್ವಂತ ಸೊತ್ತಿನಿಂದ 2)ಮೂರು ಸಾವಿರ ತಲಾಂ
ಒಫೀರ್‌ದೇಶದ ಬಂಗಾರವನ್ನೂ ಏಳು ಸಾವಿರ ತಲಾಂ
ಚೊಕ್ಕ ಬೆಳ್ಳಿಯನ್ನೂ ಕೊಡುತ್ತೇನೆ. ಈ ಬೆ
ಬಂಗಾರಗಳಿಂದ ಆಲಯದ ಗೋಡೆಗಳನ್ನು ಹೊದಿ
ಬೇಕು, ಅಕ್ಕಸಾಲಿಗರು ಮಾಡಬಹುದಾದ ಎಲ
ತರದ ಬೆಳ್ಳಿಬಂಗಾರದ ಸಾಮಾನುಗಳನ್ನು ಮಾಡಿ
ಬೇಕು. ಈಹೊತ್ತು ಉದಾರಹಸ್ತದಿಂದ ಯೆಹೋ
ವನಿಗೋಸ್ಕರ ಕಾಣಿಕೆಯನ್ನರ್ಪಿಸುವದಕ್ಕೆ ಯಾ
ಮನಸ್ಸುಳ್ಳವರಾಗಿದ್ದಾರೆ ಎಂದು ನೆರೆದ ಸಭೆಗೆ ಹೇಳ
ಇಸ್ರಾಯೇಲ್ ಗೋತ್ರಕುಟುಂಬಗಳ ಪ್ರಧಾನರೂ ಸ
ಸ್ರಾಧಿಪತಿಗಳೂ ಶತಾಧಿಪತಿಗಳೂ ಅರಸನ ಕೆಲಸ
ವರ ಮುಖ್ಯಸ್ಥರೂ ದೇವಾಲಯದ ಕೆಲಸಕ್ಕೋಸ್ಕ
ಸ್ವೇಚ್ಛೆಯಿಂದ 3)ಐದು ಸಾವಿರ ತಲಾಂತು ಹತ
ಸಾವಿರ ಪವನು ಬಂಗಾರವನ್ನೂ ಹತ್ತು ಸಾವಿ
ತಲಾಂತು ಬೆಳ್ಳಿಯನ್ನೂ ಹದಿನೆಂಟು ಸಾವಿರ 4)ತಲಾಂ
ತಾಮ್ರವನ್ನೂ ಒಂದು ಲಕ್ಷ ತಲಾಂತು ಕಬ್ಬಿಣವನ
ಕೊಟ್ಟರು. ರತ್ನಗಳಿದ್ದವರು ಅವುಗಳನ್ನು ಯೆಹೋ
ವನ ಆಲಯದ ಭಂಡಾರಕ್ಕೋಸ್ಕರ ಗೇರ್ಷೋನ್ಯನಾ
ಯೆಹೀಯೇಲನ ವಶಕ್ಕೆ ಕೊಟ್ಟರು. ಅವರು ಪೂಣ
ಮನಸ್ಸಿನಿಂದಲೂ ಸ್ವೇಚ್ಛೆಯಿಂದಲೂ ಯೆಹೋ
ನಿಗೆ ಕಾಣಿಕೆ ಕೊಟ್ಟದ್ದಕ್ಕಾಗಿ ಜನರೆಲ್ಲರೂ ಸಂತೋ
ಪಟ್ಟರು. ಅರಸನಾದ ದಾವೀದನಿಗೂ ಬಹಳ ಸಂತೋ
ವಾಯಿತು.
ಅನಂತರ ದಾವೀದನು ನೆರೆದ ಸಭೆಯ ಮುಂ
ಯೆಹೋವನನ್ನು ಸ್ತುತಿಸಿ ಹೇಳಿದ್ದೇನಂದರೆ—ನವ
ಪಿತೃವಾಗಿರುವ ಇಸ್ರಾಯೇಲನ ದೇವರೇ, ಯೆಹೋ
ವನೇ, ಯುಗಯುಗಾಂತರಗಳಲ್ಲಿ ನಿನಗೆ ಕೊಂಡಾ
ವಾಗಲಿ. ಯೆಹೋವಾ, ಮಹಿಮಪ್ರತಾಪವೈಭ
ಪರಾಕ್ರಮಪ್ರಭಾವಗಳು ನಿನ್ನವು; ಭೂಮ್ಯಾಕಾಶಗ
ಲ್ಲಿರುವದೆಲ್ಲಾ ನಿನ್ನದೇ. ಯೆಹೋವನೇ, ರಾಜ್ಯ
ನಿನ್ನದು; ನೀನು ಮಹೋನ್ನತನಾಗಿ ಸರ್ವವನ
ಆಳುವವನಾಗಿರುತ್ತೀ. ಪ್ರಭಾವೈಶ್ವರ್ಯಗಳು ನಿನ

1) ದೇವಾತ್ಮನಿಂದ ತಿಳಿದುಕೊಂಡದ್ದೆಲ್ಲವನ್ನು. 2) ಮೂವತ್ತು ಕೋಟಿ ಮೂವತ್ತೇಳು ಲಕ್ಷ ಐವತ್ತು ಸಾವಿರ ರೂಪಾ
ಬಂಗಾರ, ಮೂರು ಕೋಟಿ ತೊಂಭತ್ತಮೂರು ಲಕ್ಷ ಎಪ್ಪತ್ತೈದು ಸಾವಿರ ರೂಪಾಯಿಗಳ ಬೆಳ್ಳಿ. 3) ಐವತ್ತು ಕೋಟಿ ಅರ
ನಾಲ್ಕು ಲಕ್ಷ ರೂಪಾಯಿಗಳ ಬಂಗಾರ, ಐದು ಕೋಟಿ ಅರುವತ್ತೆರಡು ಲಕ್ಷ ಐವತ್ತು ಸಾವಿರ ರೂಪಾಯಿಗಳ ಬೆಳ್ಳಿ. 4)
ತಲಾಂತಿಗೆ ಸುಮಾರು ೬೦ ಸೇರು ತೂಕ.

ಸನ್ನಿಧಿಯಿಂದ ಬರುತ್ತವೆ; ನೀನು ಸರ್ವಾಧಿಕಾರಿಯು,
ಬಲಪರಾಕ್ರಮಗಳು ನಿನ್ನ ಹಸ್ತದಲ್ಲಿರುತ್ತವೆ; ಎಲ್ಲಾ
3 ದೊಡ್ಡಸ್ತಿಕೆಗೂ ಶಕ್ತಿಗೂ ನೀನೇ ಮೂಲನು. ಆದ
ದರಿಂದ ನಮ್ಮ ದೇವರೇ, ನಾವು ನಿನಗೆ ಕೃತಜ್ಞತಾ
ಸ್ತುತಿಮಾಡುತ್ತಾ ನಿನ್ನ ಪ್ರಭಾವವುಳ್ಳ ನಾಮವನ್ನು
4 ಕೀರ್ತಿಸುತ್ತೇವೆ. ನಾವು ಈ ಪ್ರಕಾರ ಸ್ವೇಚ್ಛೆಯಿಂದ
ಕಾಣಿಕೆಗಳನ್ನು ಸಮರ್ಪಿಸಲು ಶಕ್ತಿಹೊಂದಿದ್ದಕ್ಕೆ
ನಾನಾಗಲಿ ನನ್ನ ಪ್ರಜೆಗಳಾಗಲಿ ಎಷ್ಟರವರು? ಸಮ
ಸ್ತವು ನಿನ್ನಿಂದಲೇ; ನೀನು ಕೊಟ್ಟದ್ದನ್ನೇ ನಿನಗೆ ಕೊಟ್ಟೆ
5 ವು. ನಾವು ನಿನ್ನ ದೃಷ್ಟಿಯಲ್ಲಿ ಪರದೇಶಿಗಳೂ ನಮ್ಮ
ಪಿತೃಗಳೆಲ್ಲರಂತೆ ಪ್ರವಾಸಿಗಳೂ ಆಗಿದ್ದೇವೆ, ನಮ್ಮ
ಆಯುಷ್ಕಾಲವು ನೆರಳಿನಂತಿದೆ; ನಮಗೆ ಯಾವ ನಿರೀ
6 ಕ್ಷೆಯೂ ಇಲ್ಲ. ನಮ್ಮ ದೇವರಾದ ಯೆಹೋವನೇ,
ನಿನ್ನ ಪರಿಶುದ್ಧನಾಮಕ್ಕೋಸ್ಕರ ಆಲಯಕಟ್ಟಿಸಬೇ
ಕೆಂದು ಸಂಗ್ರಹಿಸಿಟ್ಟಿರುವ ಈ ಎಲ್ಲಾ ವಸ್ತುಗಳು
ನಿನ್ನಿಂದಲೇ ನಮಗೆ ದೊರಕಿದವು; ಇವೆಲ್ಲಾ ನಿನ್ನವೇ.
7 ನನ್ನ ದೇವರೇ, ನೀನು ಹೃದಯವನ್ನು ಶೋಧಿಸುವ
ವನೂ ಯಥಾರ್ಥಚಿತ್ತರನ್ನು ಮೆಚ್ಚುವವನೂ ಆಗಿದ್ದೀ
ಎಂಬದನ್ನು ಬಲ್ಲೆನು. ನಾನಂತೂ ಯಥಾರ್ಥಮನಸ್ಸಿ
ನಿಂದಲೂ ಸ್ವೇಚ್ಛೆಯಿಂದಲೂ ಇದನ್ನೆಲ್ಲಾ ಕೊಟ್ಟಿ
ದ್ದೇನೆ. ಇಲ್ಲಿ ಕೂಡಿರುವ ನಿನ್ನ ಪ್ರಜೆಗಳೂ ಸ್ವೇಚ್ಛೆ
ಯಿಂದಲೇ ನಿನಗೆ ಕಾಣಿಕೆಗಳನ್ನರ್ಪಿಸಿದ್ದಾರೆಂದು
8 ನೋಡಿ ಸಂತೋಷಿಸುತ್ತೇನೆ. ನಮ್ಮ ಪಿತೃಗಳಾದ ಅಬ್ರ
ಹಾಮ್ ಇಸಾಕ್ ಇಸ್ರಾಯೇಲರ ದೇವರೇ, ಯೆಹೋ
ವನೇ, ನಿನ್ನ ಪ್ರಜೆಗಳಲ್ಲಿ ಇಂಥ ಮನಸ್ಸು ಯಾವಾ
ಗಲೂ ಇರುವಂತೆ ಮಾಡು. ನಿನ್ನಲ್ಲಿ ಭಯಭಕ್ತಿ
ಯುಳ್ಳವರಾಗಿರುವದಕ್ಕೆ ಅವರಿಗೆ ಸ್ಥಿರಚಿತ್ತವನ್ನು ಅನು
9 ಗ್ರಹಿಸು. ನನ್ನ ಮಗನಾದ ಸೊಲೊಮೋನನು ನಿನ್ನ
ಆಜ್ಞಾನಿಯಮವಿಧಿಗಳನ್ನು ಕೈಕೊಳ್ಳುತ್ತಿರುವಂತೆಯೂ
ನಾನು ಯಾವ ಮಂದಿರಕ್ಕೋಸ್ಕರ ಇಷ್ಟನ್ನೆಲ್ಲಾ ಸಿದ್ಧ
ಪಡಿಸಿರುತ್ತೇನೋ ಆ ನಿನ್ನ ಮಂದಿರವನ್ನು ಅವನು
ಯಥಾರ್ಥಮನಸ್ಸಿನಿಂದ ಕಟ್ಟಿಸಿ ತೀರಿಸುವಂತೆಯೂ
ದಯಪಾಲಿಸು ಎಂಬದೇ.

ತರುವಾಯ ದಾವೀದನು ನೆರೆದ ಸಭೆಯವರಿ
ಗೆಲ್ಲಾ—ನಿಮ್ಮ ದೇವರಾದ ಯೆಹೋವನನ್ನು ಸ್ತುತಿಸಿರಿ
ಎಂದು ಹೇಳಲು ಸಮೂಹದವರೆಲ್ಲರೂ ತಮ್ಮ ಪಿತೃ
ಗಳ ದೇವರಾದ ಯೆಹೋವನನ್ನು ಸ್ತುತಿಸುತ್ತಾ ತಲೆ
ಬಾಗಿ ಆತನನ್ನೂ ಅರಸನನ್ನೂ ನಮಸ್ಕರಿಸಿದರು.

ಮರುದಿನ ಅವರು ಯೆಹೋವನಿಗೆ ಯಜ್ಞಗಳನ್ನೂ 21
ಸರ್ವಾಂಗಹೋಮಗಳನ್ನೂ ಸಮರ್ಪಿಸಿದರು. ಅವರು
ಆ ದಿವಸ ಯಜ್ಞಕ್ಕಾಗಿ ಸಾವಿರ ಹೋರಿಗಳನ್ನೂ
ಸಾವಿರ ಟಗರುಗಳನ್ನೂ ಸಾವಿರ ಕುರಿಮರಿಗಳನ್ನೂ
ವಧಿಸಿದರು. ಇವುಗಳೊಡನೆ ಅರ್ಪಿಸತಕ್ಕ ಪಾನದ್ರವ್ಯ
ಗಳನ್ನೂ ಇಸ್ರಾಯೇಲ್ಯರೆಲ್ಲರಿಗೆ ಸಾಕಾಗುವಷ್ಟು
ಸಮಾಧಾನಯಜ್ಞಗಳನ್ನೂ ಸಮರ್ಪಿಸಿ ಯೆಹೋವನ 22
ಸನ್ನಿಧಿಯಲ್ಲಿ ಮಹಾ ಸಂತೋಷದಿಂದ ಅನ್ನಪಾನ
ಗಳನ್ನು ತೆಗೆದುಕೊಂಡರು. ಅವರು ದಾವೀದನ
ಮಗನಾದ ಸೊಲೊಮೋನನನ್ನು ತಿರಿಗಿ ಅರಸನನ್ನಾಗಿ
ಆರಿಸಿಕೊಂಡು ಪ್ರಭುವಾಗುವದಕ್ಕೂ ಚಾದೋಕ
ನನ್ನು ಯಾಜಕನಾಗುವದಕ್ಕೂ ಅಭಿಷೇಕಿಸಿ ಯೆಹೋ
ವನಿಗೋಸ್ಕರ ಪ್ರತಿಷ್ಠಿಸಿದರು. ಅಂದಿನಿಂದ ಸೊಲೊ 23
ಮೋನನು ತನ್ನ ತಂದೆಯಾದ ದಾವೀದನಿಗೆ ಬದಲಾಗಿ
ಅರಸನಾಗಿ ಯೆಹೋವನ ಸಿಂಹಾಸನದಲ್ಲಿ ಕೂತು
ಕೊಂಡು ವೃದ್ಧಿಯಾಗುತ್ತಾ ಬಂದನು. ಅರಸನಾದ
ಸೊಲೊಮೋನನಿಗೆ ಇಸ್ರಾಯೇಲ್ಯರೆಲ್ಲರೂ ವಿಧೇಯ
ರಾಗಿ ನಡೆಯುವವರಾದರು. ಎಲ್ಲಾ ಅಧಿಪತಿಗಳೂ 24
ದಂಡಿನವರೂ ಅರಸನಾದ ದಾವೀದನ ಎಲ್ಲಾ ಮಕ್ಕಳೂ
ಅವನಿಗೆ ಅಧೀನರಾದರು. ಯೆಹೋವನು ಇಸ್ರಾ 25
ಯೇಲ್ಯರೆಲ್ಲರಿಗೆ ಗೊತ್ತಾಗುವಂತೆ ಸೊಲೊಮೋನ
ನನ್ನು ಅಭಿವೃದ್ಧಿಪಡಿಸಿ ಅವನಿಗಿಂತ ಮೊದಲು ಇಸ್ರಾ
ಯೇಲ್ಯರನ್ನಾಳಿದ ಎಲ್ಲಾ ಅರಸರ ವೈಭವಕ್ಕಿಂತಲೂ
ಹೆಚ್ಚಿನ ವೈಭವವನ್ನು ಅವನಿಗೆ ಅನುಗ್ರಹಿಸಿದನು.

ಇಸ್ರಾಯೇಲ್ಯರೆಲ್ಲರ ಅರಸನಾಗಿದ್ದ ಇಷಯನ 26, 27
ಮಗನಾದ ದಾವೀದನು ಹೆಬ್ರೋನಿನಲ್ಲಿ ಏಳು
ವರುಷವೂ ಯೆರೂಸಲೇಮಿನಲ್ಲಿ ಮೂವತ್ತಮೂರು
ವರುಷವೂ ಒಟ್ಟಿಗೆ ನಾಲ್ವತ್ತು ವರುಷ ಆಳಿದನು. ಅವ 28
ನು ಐಶ್ವರ್ಯ ಮಾನ ದೀರ್ಘಾಯುಷ್ಯ ಇವುಗಳನ್ನು
ಅನುಭವಿಸಿದನಂತರ ತುಂಬಾ ವೃದ್ಧನಾಗಿ ಮರಣ
ಹೊಂದಿದನು. ಅವನಿಗೆ ಬದಲಾಗಿ ಅವನ ಮಗನಾದ
ಸೊಲೊಮೋನನು ಅರಸನಾದನು.

ದಾವೀದನ ಪೂರ್ವೋತ್ತರ ಚರಿತ್ರೆಯೂ ಅವನ 29
ಆಳಿಕೆ, ಪರಾಕ್ರಮ, ಅವನಿಗೂ ಇಸ್ರಾಯೇಲ್ಯರಿಗೂ
ಸುತ್ತಣ ರಾಜ್ಯಗಳಿಗೂ ಸಂಭವಿಸಿದ ಸುಖದುಃಖ ಇವು
ಗಳ ವೃತ್ತಾಂತವೂ ದರ್ಶಿಯಾದ ಸಮುವೇಲ, ಪ್ರವಾದಿ 30
ಯಾದ ನಾತಾನ, ದರ್ಶಿಯಾದ ಗಾದ ಇವರ ಚರಿ
ತ್ರೆಗಳಲ್ಲಿ ಬರೆದಿರುತ್ತವೆ.

# THE SECOND BOOK OF THE

# CHRONICLES

## ಪೂರ್ವಕಾಲವೃತ್ತಾಂತ

## ದ್ವಿತೀಯಭಾಗ

ಅರಸನಾದ ಸೊಲೊಮೋನನು. 1—9.

ಸೊಲೊಮೋನನಿಗೆ ಯೆಹೋವನಿಂದ ವಿಶೇಷಜ್ಞಾನವೂ
ಘನಧನೈಶ್ವರ್ಯಗಳೂ ದೊರಕಿದ್ದು.

1 ದಾವೀದನ ಮಗನಾದ ಸೊಲೊಮೋನನು ತನ್ನ
ದೇವರಾದ ಯೆಹೋವನಿಂದ ಸಹಾಯವನ್ನೂ ವಿಶೇ
ಷವೃದ್ಧಿಯನ್ನೂ ಹೊಂದಿದವನಾಗಿ ರಾಜ್ಯಾಧಿಕಾರವನ್ನು
2 ಸ್ಥಿರಪಡಿಸಿಕೊಂಡನು. ಅವನು ಎಲ್ಲಾ ಇಸ್ರಾಯೇಲ್ಯ
ರನ್ನು ಅಂದರೆ ಅವರ ಶತಾಧಿಪತಿ ಸಹಸ್ರಾಧಿಪತಿಗ
ಳನ್ನೂ ನ್ಯಾಯಾಧಿಪತಿಗಳನ್ನೂ ಗೋತ್ರಪ್ರಧಾನರಾದ
3 ಇಸ್ರಾಯೇಲ್‍ಪ್ರಭುಗಳನ್ನೂ ಕರಿಸಿಕೊಂಡು ಆ
ಸರ್ವಸಮೂಹದೊಡನೆ ಗಿಬ್ಯೋನಿನಲ್ಲಿದ್ದ ಪೂಜಾಸ್ಥ
ಳಕ್ಕೆ ಹೋದನು. ಯೆಹೋವನ ಸೇವಕನಾದ
ಮೋಶೆಯು ಅರಣ್ಯದಲ್ಲಿ ಮಾಡಿಸಿದ ದೇವದರ್ಶನದ
4 ಗುಡಾರವು ಅಲ್ಲಿತ್ತಷ್ಟೆ. ದಾವೀದನು ದೇವರ
ಮಂಜೂಷವನ್ನು ಕಿರ್ಯತ್ಯಾರೀಮಿನಿಂದ ತಾನು ಯೆ
ರೂಸಲೇಮಿನಲ್ಲಿ ಅದಕ್ಕೋಸ್ಕರ ಸಿದ್ಧಮಾಡಿಟ್ಟ ಡೇರೆಗೆ
5 ತೆಗೆದುಕೊಂಡು ಬಂದಿದ್ದರೂ ಊರೀಯ ಮಗನೂ
ಹೂರನ ಮೊಮ್ಮಗನೂ ಆದ ಬೆಚಲೇಲನು ಮಾಡಿದ
ತಾಮ್ರಯಜ್ಞವೇದಿಯು ಅಲ್ಲೇ ಯೆಹೋವನ ಗುಡಾ
ರದ ಮುಂದಿತ್ತು. ಆ ವೇದಿಗಾಗಿಯೇ ಸೊಲೊಮೋ
6 ನನೂ ಆ ಸಮೂಹದವರೂ ಅಲ್ಲಿಗೆ ಹೋದರು. ಸೊ
ಲೊಮೋನನು ದೇವದರ್ಶನದ ಗುಡಾರದ ಬಳಿಯಲ್ಲಿ
ಯೆಹೋವನ ಮುಂದಿದ್ದ ಆ ತಾಮ್ರವೇದಿಯ ಮೇಲೆ
ಸಾವಿರ ಸರ್ವಾಂಗಹೋಮಗಳನ್ನು ಸಮರ್ಪಿಸಿದನು.
7 ಅದೇ ರಾತ್ರಿಯಲ್ಲಿ ದೇವರು ಸೊಲೊಮೋನನಿಗೆ
ದರ್ಶನಕೊಟ್ಟು—ನಿನಗೆ ಯಾವ ವರ ಬೇಕು, ಕೇಳಿ
8 ಕೋ ಎಂದು ಹೇಳಲು ಸೊಲೊಮೋನನು ಆತನಿಗೆ—
ನೀನು ನನ್ನ ತಂದೆಯಾದ ದಾವೀದನಿಗೆ ಮಹಾಕೃಪೆ
ಯನ್ನು ತೋರಿಸಿ ಅವನಿಗೆ ಬದಲಾಗಿ ನನ್ನನ್ನು ಅರಸ
9 ನನ್ನಾಗಿ ನೇಮಿಸಿದ್ದೀ. ಹೀಗಿರಲಾಗಿ ದೇವರಾದ ಯೆ
ಹೋವನೇ, ನೀನು ನನ್ನ ತಂದೆಯಾದ ದಾವೀದನಿಗೆ
ನುಡಿದದ್ದು ಸಾರ್ಥಕವಾಗಲಿ; ಭೂಮಿಯ ಧೂಳಿ
ನಷ್ಟು ಅಸಂಖ್ಯವಾದ ಜನಾಂಗದ ಮೇಲೆ ನನ್ನನ್ನು

ಅರಸನನ್ನಾಗಿ ನೇಮಿಸಿದ್ದೀ. ನಿನ್ನ ಪ್ರಜೆಯಾದ
ಮಹಾಜನಾಂಗವನ್ನು ಆಳುವದಕ್ಕೆ ಸಮರ್ಥರಾರು
ನಾನು ಈ ಜನರ ನಾಯಕನಾಗಿ ಹೋಗುತ್ತಾ ಬರ
ತ್ತಾ ಇರುವದಕ್ಕೋಸ್ಕರ ನನಗೆ ಜ್ಞಾನವಿವೇಕಗಳನ್
ಅನುಗ್ರಹಿಸಬೇಕು ಎಂದು ದೇವರನ್ನು ಬೇಡಿಕೊ
ಡನು. ಆಗ ದೇವರು ಸೊಲೊಮೋನನಿಗೆ—ನೀನ
ಘನಧನೈಶ್ವರ್ಯಗಳನ್ನಾಗಲಿ ವೈರಿಗಳ ಪ್ರಾಣಹರ
ವನ್ನಾಗಲಿ ದೀರ್ಘಾಯುಷ್ಯವನ್ನಾಗಲಿ ಕೇಳಿಕೊಳ್ಳ
ನಾನು ಯಾರ ಮೇಲೆ ನಿನ್ನನ್ನು ಅರಸನನ್ನಾಗಿ ಮಾ
ದೆನೋ ಆ ನನ್ನ ಪ್ರಜೆಗಳನ್ನು ಪಾಲಿಸುವದಕ್ಕೋಸ್ಕ
ಜ್ಞಾನವಿವೇಕಗಳ ಮೇಲೆ ಮನಸ್ಸಿಟ್ಟು ಅವುಗಳನ
ಬೇಡಿಕೊಂಡದರಿಂದ ಅವು ನಿನಗೆ ದೊರಕುವವು. ಇ
ಲ್ಲದೆ ನಾನು ನಿನಗೆ ಘನಧನೈಶ್ವರ್ಯಗಳನ್ನೂ ಅನ
ಗ್ರಹಿಸುತ್ತೇನೆ. ಇಂಥ ಘನಧನೈಶ್ವರ್ಯಗಳು ನಿ
ಗಿಂತ ಮೊದಲಿದ್ದ ಅರಸರಲ್ಲಿ ಯಾರಿಗೂ ಇರಲಿಲ್ಲ
ನಿನ್ನ ಅನಂತರದವರಿಗೂ ಇರುವದಿಲ್ಲ ಅಂದನು.
ಮೇಲೆ ಸೊಲೊಮೋನನು ಗಿಬ್ಯೋನಿನ ಪೂಜಾಸ್ಥಳ
ಲ್ಲಿದ್ದ ದೇವದರ್ಶನದ ಗುಡಾರದಿಂದ ಯೆರೂಸಲ
ಮಿಗೆ ಬಂದು ಇಸ್ರಾಯೇಲ್‍ರಾಜ್ಯವನ್ನು ಆಳಿದನು

ಸೊಲೊಮೋನನ ವೈಭವವು.

ಅರಸನಾದ ಸೊಲೊಮೋನನು ರಥಗಳನ್ನೂ ರಾಹ
ತರನ್ನೂ ಸಂಗ್ರಹಿಸಿದನು. ಅವನ ರಥಗಳು ಸಾವಿರ
ನಾನೂರು, ರಾಹುತರು ಹನ್ನೆರಡು ಸಾವಿರ. ಇವು
ಳಲ್ಲಿ ಕೆಲವನ್ನು ಯೆರೂಸಲೇಮಿನಲ್ಲಿಟ್ಟುಕೊಂಡು ಉ
ದವುಗಳನ್ನು ರಥಗಳಿಗೋಸ್ಕರ ನೇಮಿಸಿದ ಪಟ್ಟ
ಗಳಲ್ಲಿರಿಸಿದನು. ಅವನ ಮುಖಾಂತರವಾಗಿ ಯೆರೂ
ಲೇಮಿನಲ್ಲಿ ಬೆಳ್ಳಿಬಂಗಾರವು ಕಲ್ಲಿನ ಹಾಗೂ ದೇ
ದಾರುಮರಗಳು ಇಳಕಲಿನ ಪ್ರದೇಶದಲ್ಲಿ ಬೆಳೆಯು
ಅತ್ತಿಮರಗಳ ಹಾಗೂ ಹೇರಳವಾದವು. ಅರಸನಾ
ಸೊಲೊಮೋನನ ಕುದುರೆಗಳು ಐಗುಪ್ತದೇಶದ
ಗಳು. ಅವನ ವರ್ತಕರು ಅವುಗಳನ್ನು ಹಿಂಡುಗಟ್ಟ
ಯಾಗಿ ಕೊಂಡುಕೊಂಡು ಬರುತ್ತಿದ್ದರು. ರಥಕ್

ಆರುನೂರು ರೂಪಾಯಿಗಳಂತೆಯೂ ಕುದುರೆಗೆ ನೂರೈ
ವತ್ತು ರೂಪಾಯಿಗಳಂತೆಯೂ ಕೊಟ್ಟು ರಥಗಳನ್ನೂ
ಕುದುರೆಗಳನ್ನೂ ಐಗುಪ್ತದೇಶದಿಂದ ತರಿಸುತ್ತಿದ್ದರು.
ಹೀಗೆಯೇ ಹಿತ್ತಿಯರ ಮತ್ತು ಅರಾಮ್ಯರ ಎಲ್ಲಾ ಅರ
ಸರು ಇವರ ಮುಖಾಂತರವಾಗಿಯೇ ತರಿಸುತ್ತಿದ್ದರು.

ಸೊಲೊಮೋನನು ದೇವಾಲಯವನ್ನು ಕಟ್ಟಿಸುವದಕ್ಕಾಗಿ
ವ್ಯವಸ್ಥೆ ಮಾಡಿದ್ದು.

2 ಸೊಲೊಮೋನನು ಯೆಹೋವನ ಹೆಸರಿಗೋಸ್ಕರ
ಆಲಯವನ್ನೂ ತನಗೋಸ್ಕರ ಅರಮನೆಯನ್ನೂ ಕಟ್ಟಿ
2 ಸಬೇಕೆಂದು ಮನಸ್ಸುಳ್ಳವನಾಗಿ ಎಪ್ಪತ್ತು ಸಾವಿರ
ಮಂದಿ ಹೊರೆಹೊರುವವರನ್ನೂ ಎಂಭತ್ತು ಸಾವಿರ
ಮಂದಿ ಕಲ್ಲುಗಣಿಯಲ್ಲಿ ಕೆಲಸಮಾಡುವವರನ್ನೂ
ಇವರ ಮೇಲ್ವಿಚಾರಣೆಗಾಗಿ ಮೂರು ಸಾವಿರದ ಅರು
ನೂರು ಮಂದಿ ಮೇಸ್ತ್ರಿಗಳನ್ನೂ ಲೆಕ್ಕಿಸಿ ನೇಮಿಸಿದನು.
3 ಇದಲ್ಲದೆ ಅವನು ದೂತರ ಮುಖಾಂತರವಾಗಿ ತೂ
ರಿನ ಅರಸನಾದ 1)ಹೂರಾಮನಿಗೆ— ನನ್ನ ತಂದೆ
ಯಾದ ದಾವೀದನು ತನ್ನ ವಾಸಕ್ಕೋಸ್ಕರ ಅರಮನೆ
ಯನ್ನು ಕಟ್ಟಿಸಿಕೊಳ್ಳುವದಕ್ಕಾಗಿ ನೀನು ಅವನಿಗೆ
4 ದೇವದಾರುಮರಗಳನ್ನು ಕಳುಹಿಸಿದಿಯಲ್ಲಾ. ಈಗ
ನಾನು ನನ್ನ ದೇವರಾದ ಯೆಹೋವನ ಹೆಸರಿಗಾಗಿ
ಒಂದು ಆಲಯವನ್ನು ಕಟ್ಟಿಸಿ ಇಸ್ರಾಯೇಲ್ಯರಿಗಿರುವ
ಶಾಶ್ವತನಿಯಮದ ಪ್ರಕಾರ ಆತನ ಸನ್ನಿಧಿಯಲ್ಲಿ
ಸುಗಂಧದ್ರವ್ಯಗಳಿಂದ ಧೂಪಹಾಕುವದಕ್ಕೂ ಪ್ರತಿನಿತ್ಯ
ನೈವೇದ್ಯ ರೊಟ್ಟಿಗಳನ್ನಿಡುವದಕ್ಕೂ ಪ್ರಾತಃಕಾಲ,
ಸಾಯಂಕಾಲ, ಸಬ್ಬತ್‌ದಿನ, ಅಮಾವಾಸ್ಯೆ, ನಮ್ಮ
ದೇವರಾದ ಯೆಹೋವನ ಜಾತ್ರೆ ಇವುಗಳಲ್ಲಿ ಸರ್ವಾಂಗ
ಹೋಮವನ್ನರ್ಪಿಸುವದಕ್ಕೂ ಆ ಆಲಯವನ್ನು ಆತ
5 ನಿಗೋಸ್ಕರ ಪ್ರತಿಷ್ಠಿಸಬೇಕೆಂದಿದ್ದೇನೆ. ನಮ್ಮ ದೇವರು
ಎಲ್ಲಾ ದೇವರುಗಳಿಗಿಂತ ದೊಡ್ಡವನು; ನಾನು ಕಟ್ಟಿ
6 ಸುವ ಆಲಯವೂ ದೊಡ್ಡದಾಗಿರಬೇಕು. ಆತನಿ
ಗೋಸ್ಕರ ಆಲಯವನ್ನು ಕಟ್ಟುವದಕ್ಕೆ ಶಕ್ತರಾರು!
ಆಕಾಶವೂ ಉನ್ನತೋನ್ನತವಾದ ಆಕಾಶವೂ ಆತನ
ವಾಸಕ್ಕೆ ಸಾಲದಿರುವಲ್ಲಿ ಆತನಿಗೋಸ್ಕರ ಆಲಯ
ವನ್ನು ಕಟ್ಟುವದಕ್ಕೆ ಶಕ್ತರಾರು! ನಾನು ಆತನ ಸನ್ನಿಧಿ
ಯಲ್ಲಿ ಧೂಪಹಾಕುವ ಉದ್ದೇಶದಿಂದ ಹೊರತು ಆತನ
ವಾಸಕ್ಕಾಗಿ ಆಲಯವನ್ನು ಕಟ್ಟಿಸುವದಕ್ಕೆ ಎಷ್ಟರ
7 ವನು! ಹೀಗಿರಲು ಬಂಗಾರ ಬೆಳ್ಳಿ ತಾಮ್ರ ಕಬ್ಬಿಣ
ಇವುಗಳ ಕೆಲಸಮಾಡುವದರಲ್ಲಿಯೂ ಧೂಮ್ರರಕ್ತ
ನೀಲವರ್ಣಗಳ ಬಟ್ಟೆಯನ್ನು ನೇಯುವದರಲ್ಲಿಯೂ
ಚಿತ್ರಕೆತ್ತುವದರಲ್ಲಿಯೂ ಜಾಣನಾದ ಮನುಷ್ಯನನ್ನು
ನನ್ನ ಬಳಿಗೆ ಕಳುಹಿಸು; ನನ್ನ ತಂದೆಯು ಗೊತ್ತು
ಮಾಡಿದಂಥ ಮತ್ತು ನನ್ನೊಡನೆ ಯೆಹೂದದಲ್ಲಿಯೂ
ಯೆರೂಸಲೇಮಿನಲ್ಲಿಯೂ ಇರುವಂಥ ಜಾಣರೊಂದಿಗೆ
8 ಅವನು ಕೆಲಸಮಾಡಲಿ. ಮತ್ತು ಲೆಬನೋನಿನಿಂದ
ದೇವದಾರುಮರವನ್ನೂ ತುರಾಯಿಮರವನ್ನೂ ಸುಗಂ
ಧದ ಮರವನ್ನೂ ನನಗೆ ಕಳುಹಿಸಬೇಕು. ನಿನ್ನ ಆಳು
ಗಳು ಲೆಬನೋನಿನ ಮರಗಳನ್ನು ಕಡಿಯುವದರಲ್ಲಿ
ಜಾಣರೆಂದು ನನಗೆ ಗೊತ್ತದೆ. ನಿನ್ನ ಆಳುಗಳ ಜೊತೆ
ಯಲ್ಲಿ ನನ್ನ ಆಳುಗಳೂ ಇರುವರು. ನಾನು ದೊಡ್ಡ 9
ದಾಗಿಯೂ ಸೋಜಿಗವಾಗಿಯೂ ಇರುವ ಆಲಯ
ವನ್ನು ಕಟ್ಟಿಸುವದರಿಂದ ನನಗೋಸ್ಕರ ಹೆಚ್ಚು ಮರ
ವನ್ನು ಸಿದ್ಧಪಡಿಸಬೇಕು. ಮರಕಡಿಯುವ ನಿನ್ನ 10
ಆಳುಗಳಿಗಾಗಿ 2)ಇಪ್ಪತ್ತು ಸಾವಿರ ಕೋರ್ ಗೋಧಿ,
ಇಪ್ಪತ್ತು ಸಾವಿರ ಕೋರ್ ಜವೆಗೋಧಿ, ಇಪ್ಪತ್ತು
ಸಾವಿರ ಬತ್ ದ್ರಾಕ್ಷಾರಸ, ಇಪ್ಪತ್ತು ಸಾವಿರ ಬತ್ ಎಣ್ಣೆ
ಇವುಗಳನ್ನು ಕೊಡುವೆನೆಂದು ಹೇಳಿಸಿದನು.

ತೂರಿನ ಅರಸನಾದ ಹೂರಾಮನು ಪತ್ರದ ಮೂಲ 11
ಕವಾಗಿ ಸೊಲೊಮೋನನಿಗೆ— ಯೆಹೋವನು ತನ್ನ
ಪ್ರಜೆಗಳನ್ನು ಪ್ರೀತಿಸುವವನಾಗಿರುವದರಿಂದ ನಿನ್ನನ್ನು
ಅವರ ಅರಸನನ್ನಾಗಿ ನೇಮಿಸಿದ್ದಾನೆ. ಭೂಮ್ಯಾ 12
ಕಾಶಗಳನ್ನುಂಟುಮಾಡಿದ ಇಸ್ರಾಯೇಲ್‌ದೇವರಾದ
ಯೆಹೋವನು ತನಗೋಸ್ಕರ ದೇವಾಲಯವನ್ನೂ
ರಾಜನಿಗೋಸ್ಕರ ಅರಮನೆಯನ್ನೂ ಕಟ್ಟಿಸತಕ್ಕ ಬುದ್ಧಿ
ಜ್ಞಾನವಿವೇಕಗಳುಳ್ಳ ಮಗನನ್ನು ಅರಸನಾದ ದಾವೀದ
ನಿಗೆ ಕೊಟ್ಟದರಿಂದ ಆತನಿಗೆ ಸ್ತೋತ್ರವಾಗಲಿ. ನಾನು 13
ಈಗ ಜ್ಞಾನವಿವೇಕಗಳುಳ್ಳ ಪುರುಷನನ್ನು ಕಳುಹಿಸು
ತ್ತೇನೆ; ಅವನ ಹೆಸರು ಹೂರಾಮಾಬೀ. ಅವನು 14
ದಾನ್‌ಕುಲದ ಸ್ತ್ರೀಯ ಮಗನು; ಅವನ ತಂದೆ ತೂರಿನ
ವನು. ಅವನು ಬಂಗಾರ ಬೆಳ್ಳಿ ತಾಮ್ರ ಕಬ್ಬಿಣ
ಕಲ್ಲು ಮರ ಇವುಗಳ ಕೆಲಸವನ್ನು ಮಾಡುವದಕ್ಕೂ
ಧೂಮ್ರನೀಲರಕ್ತವರ್ಣಗಳುಳ್ಳ ನಾರುಬಟ್ಟೆಗಳನ್ನು
ನೇಯುವದಕ್ಕೂ ಎಲ್ಲಾ ತರದ ಕೆತ್ತನೆಯ ಕೆಲಸವನ್ನು
ಮಾಡುವದಕ್ಕೂ ತನಗೆ ಒಪ್ಪಿಸಲ್ಪಟ್ಟ ಎಲ್ಲಾ ಚಮ
ತ್ಕಾರವಾದ ಕೆಲಸಗಳನ್ನು ನಡಿಸುವದಕ್ಕೂ ಸಮ
ರ್ಥನು. ನೀನೂ ನಿನ್ನ ತಂದೆಯಾದ ದಾವೀದನೂ
ಗೊತ್ತುಮಾಡಿದ ಜಾಣರೊಡನೆ ಅವನು ಕೆಲಸಮಾಡಲಿ.
ಈಗ ನನ್ನ ಒಡೆಯನು ತಾನು ಮಾತುಕೊಟ್ಟ ಮೇರೆಗೆ 15
ಗೋಧಿ ಜವೆಗೋಧಿ ಎಣ್ಣೆ ದ್ರಾಕ್ಷಾರಸ ಇವುಗಳನ್ನು
ತನ್ನ ದಾಸರಿಗೆ ಕಳುಹಿಸಬೇಕು. ನಾವಾದರೋ ನಿನಗೆ 16
ಬೇಕಾದ ಎಲ್ಲಾ ಮರಗಳನ್ನು ಲೆಬನೋನಿನಲ್ಲಿ ಕಡಿದು
ತೆಪ್ಪಗಳಾಗಿ ಕಟ್ಟಿ ಸಮುದ್ರಮಾರ್ಗವಾಗಿ ಯೊಪ್ಪಕ್ಕೆ
ಕಳುಹಿಸುವೆವು; ಅಲ್ಲಿಂದ ನೀನು ಅವುಗಳನ್ನು ಯೆರೂ
ಸಲೇಮಿಗೆ ತರಿಸಿಕೊಳ್ಳಬಹುದು ಎಂಬದಾಗಿ ಉತ್ತರ
ಕೊಟ್ಟನು.

ಆ ಮೇಲೆ ಸೊಲೊಮೋನನು ತನ್ನ ತಂದೆಯಾದ 17
ದಾವೀದನು ಮಾಡಿಸಿದ ಖಾನೇಷುಮಾರಿಯ ಆಧಾರ
ದಿಂದ ಇಸ್ರಾಯೇಲ್‌ದೇಶದಲ್ಲಿ ಪ್ರವಾಸಿಗಳಾಗಿದ್ದ
ಎಲ್ಲಾ ಅನ್ಯಜನರನ್ನು ಲೆಕ್ಕಿಸಲು ಒಂದು ಲಕ್ಷ ಐವತ್ತ
ಮೂರು ಸಾವಿರದ ಆರುನೂರು ಮಂದಿ ಸಿಕ್ಕಿದರು.
ಅವರಲ್ಲಿ ಹೊರೆಹೊರುವದಕ್ಕಾಗಿ ಎಪ್ಪತ್ತು ಸಾವಿರ 18
ಮಂದಿಯನ್ನೂ ಕಲ್ಲುಗಣಿಗಳಲ್ಲಿ ಕೆಲಸಮಾಡುವದ
ಕ್ಕಾಗಿ ಎಂಭತ್ತು ಸಾವಿರ ಮಂದಿಯನ್ನೂ ಕೆಲಸದವರ
ಮೇಲ್ವಿಚಾರಣೆಗಾಗಿ ಮೂರು ಸಾವಿರದ ಆರುನೂರು
ಮಂದಿಯನ್ನೂ ನೇಮಿಸಿದನು.

1) ೧ ಅರಸು. 5. 1ಲ್ಲಿ ಹೀರಾಮನು. 2) ಒಂದು ಕೋರ್ ಅಂದರೆ ಎರಡು ಕಂಡುಗ; ಒಂದು ಕೋರಿಗೆ ಹತ್ತು ಬತ್.

ದೇವಾಲಯುವನ್ನು ಕಟ್ಟಿಸಿದ್ದು.

3 ಸೊಲೊಮೋನನು ಯೆರೂಸಲೇಮ್ ಪಟ್ಟಣದೊಳಗೆ
ತನ್ನ ತಂದೆಯಾದ ದಾವೀದನಿಗೆ ದೇವದರ್ಶನವುಂಟಾದ
ಮೋರೀಯಾ ಗುಡ್ಡದಲ್ಲಿ ಯೆಹೋವನ ಆಲಯ
ವನ್ನು ಕಟ್ಟಿಸತೊಡಗಿದನು. ಮುಂಚೆ ಯೆಬೂಸಿಯ
ನಾದ ಒರ್ನಾನನ ಕಣವಾಗಿದ್ದ ಆ ಸ್ಥಳವನ್ನು ದಾವೀ
2 ದನು ಇದಕ್ಕೋಸ್ಕರ ಸಿದ್ಧಮಾಡಿದ್ದನು. ಸೊಲೊಮೋ
ನನು ತನ್ನ ಆಳಿಕೆಯ ನಾಲ್ಕನೆಯ ವರುಷದ ಎರಡನೆಯ
ತಿಂಗಳಿನ ಎರಡನೆಯ ದಿನದಲ್ಲಿ ಕಟ್ಟಿಸುವದಕ್ಕೆ ಪ್ರಾರಂಭಿ
3 ಸಿದನು. ಅವನು ಕಟ್ಟಿಸಿದ ದೇವಾಲಯದ ಅಸ್ತಿವಾರದ
ಉದ್ದವು ಮುಂಚಿನ ಮೊಳದ ಪ್ರಕಾರ ಅರುವತ್ತು
4 ಮೊಳ, ಅಗಲವು ಇಪ್ಪತ್ತು ಮೊಳ. ದೇವಾಲಯದ
ಮುಂದುಗಡೆಯಲ್ಲಿದ್ದ ಮಂಟಪದ ಉದ್ದವು ಆಲಯದ
ಅಗಲಕ್ಕೆ ಸರಿಯಾಗಿ ಇಪ್ಪತ್ತು ಮೊಳ, ಎತ್ತರವು
1)ಇಪ್ಪತ್ತು ಮೊಳ. ಸೊಲೊಮೋನನು ಅದರ ಒಳ
ಮೈಯನ್ನು ಚೊಕ್ಕಬಂಗಾರದ ತಗಡಿನಿಂದ ಹೊದಿಸಿ
5 ದನು. ದೊಡ್ಡ ಕೋಣೆಯನ್ನು ತುರಾಯಿಮರದ
ಹಲಿಗೆಗಳಿಂದಲೂ ಆ ಹಲಿಗೆಗಳನ್ನು ತೋರಣ ಖರ್ಜೂರ
ಗಳ ಚಿತ್ರಗಳುಳ್ಳ ಚೊಕ್ಕಬಂಗಾರದ ತಗಡಿನಿಂದಲೂ
6 ಹೊದಿಸಿ ಅದನ್ನು ರತ್ನಗಳಿಂದ ಅಲಂಕರಿಸಿದನು. ಆ
7 ಬಂಗಾರವು ಪರ್ವಯಿಮ್ ದೇಶದ್ದು. ಹೀಗೆ ಆಲಯ
ದಲ್ಲಿನ ತೊಲೆ ಹೊಸ್ತಲು ಗೋಡೆ ಕದ ಇವುಗಳನ್ನು
ಬಂಗಾರದ ತಗಡಿನಿಂದ ಹೊದಿಸಿ ಗೋಡೆಗಳ ಮೇಲೆ
ಕೆರೂಬಿಗಳ ಚಿತ್ರಗಳನ್ನು ಕೆತ್ತಿಸಿದನು.
8 ಇದಲ್ಲದೆ ಅವನು ಮಹಾಪರಿಶುದ್ಧಸ್ಥಳವನ್ನು ಮಾ
ಡಿಸಿದನು. ಅದರ ಉದ್ದವು ಆಲಯದ ಅಗಲಕ್ಕೆ ಸರಿ
ಯಾಗಿ ಇಪ್ಪತ್ತು ಮೊಳ; ಅದರ ಅಗಲವೂ ಇಪ್ಪತ್ತು
ಮೊಳ. ಅದನ್ನು ಆರುನೂರು ತಲಾಂತು ಚೊಕ್ಕ
9 ಬಂಗಾರದ ತಗಡಿನಿಂದ ಹೊದಿಸಿದನು. ಬಂಗಾರದ
ಮೊಳೆಗಳ ತೂಕ ಐವತ್ತು ತೊಲೆ. ಮೇಲುಪ್ಪರಿಗೆ
10 ಗಳನ್ನು ಬಂಗಾರದ ತಗಡಿನಿಂದ ಹೊದಿಸಿದನು. ಮಹಾ
ಪರಿಶುದ್ಧಸ್ಥಳದಲ್ಲಿ ಎರಡು ಕೆರೂಬಿಗಳ ಪ್ರತಿಮೆ
ಗಳನ್ನು ಮಾಡಿಸಿಟ್ಟು ಅವುಗಳನ್ನೂ ಬಂಗಾರದ ತಗಡಿ
11 ನಿಂದ ಹೊದಿಸಿದನು. ಕೆರೂಬಿಗಳ ರೆಕ್ಕೆಗಳು ಒಟ್ಟಾಗಿ
ಇಪ್ಪತ್ತು ಮೊಳ ಉದ್ದವಿದ್ದವು. [ಮೊದಲನೆಯ
ಕೆರೂಬಿಯ] ಒಂದು ರೆಕ್ಕೆಯು ಐದು ಮೊಳ ಉದ್ದ
ವಾಗಿದ್ದು ಮನೆಯ ಗೋಡೆಗೆ ತಗುಲಿತು. ಐದು
ಮೊಳ ಉದ್ದವಾದ ಇನ್ನೊಂದು ರೆಕ್ಕೆಯು ಎರಡನೆಯ
12 ಕೆರೂಬಿಯ ರೆಕ್ಕೆಗೆ ತಗುಲಿತು. ಅದರಂತೆಯೇ ಎರಡ
ನೆಯ ಕೆರೂಬಿಯ ಐದು ಮೊಳ ಉದ್ದವಾದ ಒಂದು
ರೆಕ್ಕೆಯು ಮನೆಯ ಗೋಡೆಗೂ ಇನ್ನೊಂದು ರೆಕ್ಕೆಯು
ಮೊದಲನೆಯ ಕೆರೂಬಿಯ ರೆಕ್ಕೆಗೂ ತಗುಲಿದ್ದವು.
13 ಈ ಕೆರೂಬಿಗಳು ತಮ್ಮ ರೆಕ್ಕೆಗಳನ್ನು ಇಪ್ಪತ್ತು ಮೊಳ
ಉದ್ದಕ್ಕೆ ಚಾಚಿ ಕಾಲೂರಿ ನಿಂತುಕೊಂಡು ಪರಿಶುದ್ಧ
14 ಸ್ಥಳದ ಕಡೆಗೆ ಮುಖಮಾಡಿದ್ದವು. ಸೊಲೊಮೋನನು
ಪರದೆಯನ್ನು ನೀಲಧೂಮ್ರರಕ್ತವರ್ಣಗಳುಳ್ಳ ನಾರಿ
ನಿಂದ ಮಾಡಿಸಿದನು. ಅದರಲ್ಲಿ ಕೆರೂಬಿಗಳನ್ನು ಕಸು
ಹಾಕಿಸಿದನು.
ಇದಲ್ಲದೆ ದೇವಾಲಯದ ಮುಂದೆ ಎರಡು ಕಂ
ಗಳನ್ನು ನಿಲ್ಲಿಸಿದನು. ಅವು ಮೂವತ್ತೈದು ಮೊ
ಎತ್ತರವಿದ್ದವು. ಅವುಗಳ ತಲೆಗಳ ಮೇಲಣ ಕುಂ
ಗಳು ಐದು ಮೊಳ ಎತ್ತರವಿದ್ದವು. ಅವನು ಗಭ
ಗೃಹದ ಸರಪಣಿಯಂತೆ ಸರಪಣಿಗಳನ್ನು ಮಾಡಿ
ಕಂಬಗಳ ಮೇಲಣ ಕುಂಭಗಳಿಗೆ ಸಿಕ್ಕಿಸಿ ಆ ಸರಪ
ಗಳಲ್ಲಿ ನೂರು ನೂರು ತಾಮ್ರದ ದಾಳಿಂಬಹಣ
ಗಳನ್ನು ಕಟ್ಟಿಸಿದನು. ಆ ಕಂಬಗಳನ್ನು ದೇ
ಲಯದ ಮುಂಭಾಗದಲ್ಲಿ ಒಂದನ್ನು ಬಲಗಡೆಗ
ಇನ್ನೊಂದನ್ನು ಎಡಗಡೆಗೂ ನಿಲ್ಲಿಸಿ ಬಲಗಡೆಯದ
2)ಯಾಕೀನ್ ಎಂದೂ ಎಡಗಡೆಯದಕ್ಕೆ 3)ಬೋವ
ಎಂದೂ ಹೆಸರಿಟ್ಟನು.

ದೇವಾಲಯದ ಸಾಮಾನುಗಳು.

ಇದಲ್ಲದೆ ಅವನು ತಾಮ್ರದ ಯಜ್ಞವೇದಿಯನ
ಮಾಡಿಸಿದನು. ಅದರ ಉದ್ದ ಇಪ್ಪತ್ತು ಮೊಳ, ಅಗ
ಇಪ್ಪತ್ತು ಮೊಳ, ಎತ್ತರ ಹತ್ತು ಮೊಳ. ಅನಂತ
ಅವನು ಸಮುದ್ರವೆನಿಸಿಕೊಳ್ಳುವ ಒಂದು ಎರಕ
ಪಾತ್ರೆಯನ್ನು ಮಾಡಿಸಿದನು. ಅದರ ಬಾಯಿ ಚಕ್ರ
ಕಾರವಾಗಿಯೂ ಅಂಚಿನಿಂದ ಅಂಚಿಗೆ ಹತ್ತು ಮೊ
ವಾಗಿಯೂ ಇತ್ತು. ಅದರ ಎತ್ತರ ಐದು ಮೊಳ, ಸು
ಳತೆ ಮೂವತ್ತು ಮೊಳ. ಅದನ್ನು ಎರಕಹೊಯು
ವಾಗ ಅದರ [ಅಂಚಿನ] ಕೆಳಗೆ ಸುತ್ತಲೂ ಮೊಳ
ಹತ್ತರಂತೆ ಹೋರಿಗಳ ಚಿತ್ರಗಳನ್ನು ಎರಡು ಸಾಲಾ
ಎರಕಹೊಯ್ಸಿದನು. ಹನ್ನೆರಡು ಎರಕದ ಹೋರಿಗಳ
ಅದನ್ನು ಹೊತ್ತಿದ್ದವು. ಅವುಗಳಲ್ಲಿ ಮೂರು ಉತ್ತರದಿ
ಗೂ ಮೂರು ಪಶ್ಚಿಮದಿಕ್ಕಿಗೂ ಮೂರು ದಕ್ಷಿಣದಿ
ಗೂ ಮೂರು ಪೂರ್ವದಿಕ್ಕಿಗೂ ಮುಖಮಾಡಿಕೊಂ
ದ್ದವು. ಸಮುದ್ರವು ಅವುಗಳ ಬೆನ್ನಿನ ಮೇಲಿತ್ತು
ಅವುಗಳ ಹಿಂಭಾಗವು ಒಳಗಡೆಗಿತ್ತು, ಪಾತ್ರೆಯ
ನಾಲ್ಕು ಬೆರಳು ದಪ್ಪವಾಗಿತ್ತು. ಅದರ ಅಂಚು ಕಮಲ
ಕಾರದ ಬಟ್ಟಲನ್ನು ಹೋಲುತ್ತಿತ್ತು. ಅದು 4)ಮೂರ
ಸಾವಿರ ಬತ್ ನೀರನ್ನು ಹಿಡಿಯುವದು. ಇದಲ್ಲ
ಅವನು ಹತ್ತು ಗಂಗಾಳಗಳನ್ನು ಮಾಡಿಸಿ ಸರ್ವಾಂ
ಹೋಮಸಮರ್ಪಣೆಯ ಸಾಮಾನು ತೊಳೆದು ಶುದ್ಧ
ಮಾಡುವದಕ್ಕಾಗಿ ಐದನ್ನು ಬಲಗಡೆಯಲ್ಲಿಯ
ಐದನ್ನು ಎಡಗಡೆಯಲ್ಲಿಯೂ ಇಡಿಸಿದನು; ಸಮುದ್ರ
ವೆನಿಸಿಕೊಳ್ಳುವ ಪಾತ್ರೆಯು ಯಾಜಕರ ಸ್ನಾನಕ್ಕಾ
ಇತ್ತು. ಮತ್ತು ನೇಮಕವಾದ ಮಾದರಿಯಂತೆ ಬಂಗ
ರದ ಹತ್ತು ದೀಪಸ್ತಂಭಗಳನ್ನು ಮಾಡಿಸಿ ಐದನ್ನು
ದೇವಾಲಯದೊಳಗೆ ಬಲಗಡೆಯಲ್ಲಿಯೂ ಐದನ್ನು
ಎಡಗಡೆಯಲ್ಲಿಯೂ ಇಡಿಸಿದನು. ಹತ್ತು ಮೇಜ
ಗಳನ್ನು ಮಾಡಿಸಿ ದೇವಾಲಯದೊಳಗೆ ಬಲಗಡೆಯಲ್ಲಿ
ಐದನ್ನೂ ಎಡಗಡೆಯಲ್ಲಿ ಐದನ್ನೂ ಇಡಿಸಿ ನೂರ

1) ಪಾಠಾಂತರ: ನೂರಿಪ್ಪತ್ತು. 2) ಯಾಕೀನ್ ಅಂದರೆ ಸ್ಥಾಪಿಸುವನು. 3) ಬೋವಜ್ ಅಂದರೆ ಶಕ್ತಿಯ
4) ಅಂದರೆ, ಇಪ್ಪತ್ತನಾಲ್ಕು ಸಾವಿರ ಗ್ಯಾಲನ್.

9 ಬಂಗಾರದ ಬೋಗುಣಿಗಳನ್ನು ಮಾಡಿಸಿದನು. ಇದ
ಲ್ಲದೆ ಯಾಜಕರ ಪ್ರಾಕಾರವನ್ನೂ ಮಹಾಪ್ರಾಕಾರ
ವನ್ನೂ ಮಹಾಪ್ರಾಕಾರಕ್ಕೆ ಬಾಗಲುಗಳನ್ನೂ ಮಾಡಿಸಿ
ದನು; ಅವುಗಳ ಕದಗಳನ್ನು ತಾಮ್ರದ ತಗಡಿನಿಂದ
10 ಹೊದಿಸಿದನು. ಸಮುದ್ರವೆನಿಸಿಕೊಳ್ಳುವ ಪಾತ್ರೆಯನ್ನು
[ದೇವಾಲಯದ] ಬಲಗಡೆಯಲ್ಲಿ ಅಂದರೆ ಪ್ರಾಕಾರದ
ಆಗ್ನೇಯದಿಕ್ಕಿನಲ್ಲಿ ಇರಿಸಿದನು.
11 ಇದಲ್ಲದೆ ಹೂರಾಮನು ಹಂಡೆಗಳನ್ನೂ ಸಲಿಕೆ
ಗಳನ್ನೂ ಬೋಗುಣಿಗಳನ್ನೂ ಮಾಡಿದನು. ಹೂರಾ
ಮನು ಸೊಲೊಮೋನನ ಅಪ್ಪಣೆಯಂತೆ ದೇವಾಲಯ
ಕ್ಕೋಸ್ಕರ ಮಾಡಿದ ಸಾಮಾನುಗಳು ಯಾವವಂದರೆ—
12 ಎರಡು ಕಂಬಗಳು, ಅವುಗಳ ಮೇಲಣ ಕುಂಭಾಕಾರದ
ಎರಡು ತಲೆಗಳು, ಕುಂಭಗಳ ಮೇಲೆ ಹಾಕುವದಕ್ಕೋ
13 ಸ್ಕರ ಎರಡು ಜಾಲರಿಗಳು, ಕಂಬಗಳ ತುದಿಯಲ್ಲಿರುವ
ಕುಂಭಗಳ ಜಾಲರಿಗಳ ಮೇಲೆ ಎರಡೆರಡು ಸಾಲಾಗಿ
ಸಿಕ್ಕಿಸುವದಕ್ಕೋಸ್ಕರ ತಾಮ್ರದ ನಾನೂರು ದಾಳಿಂಬ
14 ದ ಹಣ್ಣುಗಳು, ಪೀಠಗಳು, ಅವುಗಳ ಮೇಲಣ ಗಂಗಾಳ
15 ಗಳು, ಸಮುದ್ರವೆನಿಸಿಕೊಳ್ಳುವ ಪಾತ್ರೆಯು, ಅದನ್ನು
16 ಹೊರುವ ಹನ್ನೆರಡು ಎರಕದ ಹೋರಿಗಳು, ಹಂಡೆ,
ಸಲಿಕೆ, ಮುಳ್ಳು ಇವೇ. ಹೂರಾಮಾಬೀವನು ಅರಸ
ನಾದ ಸೊಲೊಮೋನನ ಅಪ್ಪಣೆಯ ಮೇರೆಗೆ ಯೆಹೋ
ವನ ಆಲಯಕ್ಕೋಸ್ಕರ ಅದರ ಎಲ್ಲಾ ಸಾಮಾನು
ಗಳನ್ನು ಒಪ್ಪಹಾಕಿದ ತಾಮ್ರದಿಂದ ಮಾಡಿ ತೀರಿಸಿ
ದನು. ಅರಸನು ಯೊರ್ದನ್ ತಗ್ಗಿನಲ್ಲಿ ಸುಕ್ಕೋತಿಗೂ
ಚೆರೇದಕ್ಕೂ ಮಧ್ಯದಲ್ಲಿರುವ ಮಣ್ಣುನೆಲದಲ್ಲಿ ಎರಕ
ಹೊಯ್ಸಿದನು. ಸೊಲೊಮೋನನು ಮಾಡಿಸಿದ ಸಾಮಾ
ನುಗಳು ಅನೇಕವಾಗಿದ್ದದರಿಂದ ಅವುಗಳ ತಾಮ್ರದ
ತೂಕ ಎಷ್ಟೆಂಬದು ಗೊತ್ತಾಗದೆ ಹೋಯಿತು. ಅವನು
ದೇವಾಲಯಕ್ಕೋಸ್ಕರ ಮಾಡಿಸಿದ ಒಳಗಿನ ಸಾಮಾನು
ಗಳು ಯಾವವಂದರೆ—ಬಂಗಾರದ ಧೂಪವೇದಿ, ನೈವೇ
ದ್ಯವಾದ ರೊಟ್ಟಿಗಳನ್ನಿಡತಕ್ಕ ಮೇಜುಗಳು, ನಿಯಮದ
ಪ್ರಕಾರ ಮಹಾಪರಿಶುದ್ಧಸ್ಥಳದ ಮುಂದೆ ಉರಿಯು
ತ್ತಿರುವದಕ್ಕಾಗಿ ಪುಷ್ಪಾಲಂಕಾರವುಳ್ಳ ಬಂಗಾರದ ದೀಪ
ಸ್ತಂಭಗಳು, ಉತ್ಕೃಷ್ಟವಾದ ಬಂಗಾರದಿಂದ ಮಾಡಿದ
ಅವುಗಳ ಹಣತೆ, ತಂಡಸ, ಚೊಕ್ಕಬಂಗಾರದ ಕತ್ತರಿ,
ಬೋಗುಣಿ, ಧೂಪಾರತಿ, ಅಗ್ಗಿಷ್ಟಿಗೆ, ದೇವಾಲಯದ
ಮಹಾಪರಿಶುದ್ಧಸ್ಥಳದೊಳಗಣ ಬಾಗಲಿನ ಬಂಗಾರ
ಕದಗಳು, ಪರಿಶುದ್ಧಸ್ಥಳದ ಬಂಗಾರಕದಗಳು ಇವೇ.
1 ಸೊಲೊಮೋನನು ಯೆಹೋವನ ಆಲಯಕ್ಕೋಸ್ಕರ
ಬೇಕಾದ ಎಲ್ಲಾ ಸಾಮಾನುಗಳನ್ನು ಸಿದ್ಧಪಡಿಸಿದ
ನಂತರ ತನ್ನ ತಂದೆಯಾದ ದಾವೀದನು ಯೆಹೋವ
ನಿಗೆ ಹರಕೆಹೊತ್ತು ಮುಡುಪಾಗಿಟ್ಟ ಬೆಳ್ಳಿಬಂಗಾರ
ವನ್ನೂ ಎಲ್ಲಾ ಸಾಮಾನುಗಳನ್ನೂ ದೇವಾಲಯದ
ಭಂಡಾರಕ್ಕೆ ಸೇರಿಸಿದನು.

ಯೆಹೋವನ ಮಂಜೂಷವನ್ನು ಮಹಾಪರಿಶುದ್ಧಸ್ಥಳದಲ್ಲಿ ಇಡಿಸಿದ್ದು.

2 ಅನಂತರ ಸೊಲೊಮೋನನು ದಾವೀದನಗರವಾದ
ಚೀಯೋನಿನಿಂದ ಯೆಹೋವನ ಒಡಂಬಡಿಕೆಯ ಮಂ
ಜೂಷವನ್ನು ಮೇಲೆ ತರುವದಕ್ಕಾಗಿ ಇಸ್ರಾಯೇಲ್ಯರ
ಹಿರಿಯರು ಕುಲಾಧಿಪತಿಗಳು ಇವರೇ ಮೊದಲಾದ
ಎಲ್ಲಾ ಇಸ್ರಾಯೇಲ್‍ಪ್ರಧಾನಪುರುಷರನ್ನು ಯೆರೂಸ
ಲೇಮಿಗೆ ಕರಿಸಿಕೊಂಡನು. ಇಸ್ರಾಯೇಲ್ಯರೆಲ್ಲರೂ 3
ಏಳನೆಯ ತಿಂಗಳಿನ ಜಾತ್ರೆಗೋಸ್ಕರ ಅರಸನ ಬಳಿಗೆ
ಕೂಡಿಬಂದರು. ಇಸ್ರಾಯೇಲ್ಯರ ಹಿರಿಯರೆಲ್ಲರೂ 4
ಕೂಡಿಬಂದಿರಲಾಗಿ ಲೇವಿಯರು ಯೆಹೋವನ ಮಂ
ಜೂಷವನ್ನು ಹೊತ್ತುಕೊಂಡರು. ಇದಲ್ಲದೆ ಯಾಜಕ 5
ರಾದ ಲೇವಿಯರು ದೇವದರ್ಶನದ ಗುಡಾರ, ಅದ
ರಲ್ಲಿದ್ದ ಎಲ್ಲಾ ಪರಿಶುದ್ಧವಸ್ತುಗಳು ಇವುಗಳನ್ನೂ
ಹೊತ್ತುಕೊಂಡುಹೋದರು. ಅರಸನಾದ ಸೊಲೊಮೋ 6
ನನೂ ಅಲ್ಲಿ ಕೂಡಿಬಂದಿದ್ದ ಎಲ್ಲಾ ಇಸ್ರಾಯೇಲ್ಯರೂ
ಮಂಜೂಷದ ಮುಂದೆ ಅಸಂಖ್ಯವಾದ ಕುರಿದನಗಳನ್ನು
ಯಜ್ಞಮಾಡಿದರು. ಯಾಜಕರು ಯೆಹೋವನ ಒಡಂ 7
ಬಡಿಕೆಯ ಮಂಜೂಷವನ್ನು ತೆಗೆದುಕೊಂಡು ಬಂದು
ಮಹಾಪರಿಶುದ್ಧಸ್ಥಳವೆನಿಸುವ ಗರ್ಭಗೃಹದಲ್ಲಿ ಕೆರೂ
ಬಿಗಳ ರೆಕ್ಕೆಗಳ ಕೆಳಗೆ ಅದಕ್ಕೆ ನೇಮಕವಾದ ಸ್ಥಳ
ದಲ್ಲಿಟ್ಟರು. ಕೆರೂಬಿಗಳ ರೆಕ್ಕೆಗಳು ಮಂಜೂಷವಿದ್ದ 8
ಸ್ಥಳದ ಮೇಲೆ ಚಾಚಿದವುಗಳಾಗಿದ್ದದರಿಂದ ಮಂಜೂ
ಷವೂ ಅದರ ಕೋಲುಗಳೂ ಪೂರ್ಣವಾಗಿ ಅವುಗಳ
ನೆರಳಿನಲ್ಲಿದ್ದವು. ಮಂಜೂಷಕ್ಕಿಂತಲೂ ಉದ್ದವಾಗಿದ್ದ 9
ಆ ಕೋಲುಗಳ ತುದಿಗಳು ಗರ್ಭಗೃಹದ ಎದುರಿನಲ್ಲಿ
ನಿಂತವರಿಗೆ ಕಾಣಿಸಿದರೂ ಹೊರಗೆ ನಿಂತವರಿಗೆ ಕಾಣಿ
ಸುತ್ತಿರಲಿಲ್ಲ; ಮಂಜೂಷವು ಇಂದಿನ ವರೆಗೂ ಅಲ್ಲೇ
ಇರುತ್ತದೆ. ಅದರಲ್ಲಿ ಎರಡು ಕಲ್ಲಿನ ಹಲಿಗೆಗಳು 10
ಹೊರತಾಗಿ ಬೇರೇನೂ ಇರಲಿಲ್ಲ; ಯೆಹೋವನು
ಐಗುಪ್ತದೇಶದಿಂದ ಬಂದ ಇಸ್ರಾಯೇಲ್ಯರೊಡನೆ
ಹೋರೇಬ್‍ಬೆಟ್ಟದ ಬಳಿಯಲ್ಲಿ ಒಡಂಬಡಿಕೆಮಾಡಿ
ಕೊಂಡ ಮೇಲೆ ಮೋಶೆಯು ಅವುಗಳನ್ನು ಅದರಲ್ಲಿಟ್ಟಿದ್ದ
ನು. ಕೂಡಿಬಂದಿದ್ದ ಯಾಜಕರು ವರ್ಗವ್ಯತ್ಯಾಸವಿಲ್ಲದೆ 11
ಎಲ್ಲರೂ ತಮ್ಮನ್ನು ಶುದ್ಧಪಡಿಸಿಕೊಂಡಿದ್ದರು. ನಾರು 12
ಬಟ್ಟೆಗಳನ್ನು ಧರಿಸಿಕೊಂಡು ತಾಳ ಸ್ವರಮಂಡಲ
ಕಿನ್ನರಿ ಇವುಗಳನ್ನು ಹಿಡಿದುಕೊಂಡ ಲೇವಿಯ ಗಾಯ
ಕರಾದ ಆಸಾಫ್ ಹೇಮಾನ್ ಯೆದುತೂನರೂ ಇವರ
ಮಕ್ಕಳೂ ಸಹೋದರರೂ ತುತೂರಿಗಳನ್ನು ಊದತಕ್ಕ
ನೂರಿಪ್ಪತ್ತು ಮಂದಿ ಯಾಜಕರೂ ಯಜ್ಞವೇದಿಯ
ಪೂರ್ವದಿಕ್ಕಿನಲ್ಲಿ ನಿಂತುಕೊಂಡರು. [ಮಂಜೂಷವನ್ನು 13
ಒಳಗಿಟ್ಟ] ಯಾಜಕರು ದೇವಾಲಯದಿಂದ ಹೊರಗೆ
ಬಂದಕೂಡಲೆ ಒಬ್ಬನೋ ಎಂಬಂತೆ ಸ್ವರವೆತ್ತಿ ಯೆಹೋ
ವನನ್ನು ಕೀರ್ತಿಸುವದಕ್ಕಾಗಿ ತುತೂರಿ ಊದುವವರೂ
ಗಾಯನಮಾಡುವವರೂ ಅಲ್ಲಿ ನಿಂತಿದ್ದರು. ತುತೂ
ರಿ ತಾಳ ಮೊದಲಾದ ವಾದ್ಯಗಳ ಧ್ವನಿಯೂ ಯೆ
ಹೋವನು ಒಳ್ಳೆಯವನು, ಆತನ ಕೃಪೆಯು ಶಾಶ್ವತ
ವಾಗಿರುವದು ಎಂದು ಕೃತಜ್ಞತಾಸ್ತುತಿಮಾಡುವವರ
ಸ್ವರವೂ ಕೇಳಿಸಿದೊಡನೆ ಮೇಘವು ಯೆಹೋವನ ಆಲ
ಯದಲ್ಲಿ ತುಂಬಿಕೊಂಡಿತು. ಯೆಹೋವನ ತೇಜಸ್ಸಿ 14
ನಿಂದ ವ್ಯಾಪ್ತವಾಗಿದ್ದ ಮೇಘವು ದೇವಾಲಯದಲ್ಲಿ
ತುಂಬಿಕೊಂಡದರಿಂದ ಯಾಜಕರು ಅಲ್ಲಿ ನಿಂತು ಸೇವೆ
ಮಾಡಲಾರದೆ ಹೋದರು.

ದೇವಾಲಯಪ್ರತಿಷ್ಠೆ.

6 ತರುವಾಯ ಸೊಲೊಮೋನನು—ಯೆಹೋವನೇ
2 ಕಾರ್ಗತ್ತಲಲ್ಲಿ ವಾಸಿಸುತ್ತೇನೆಂದು ಹೇಳಿದ್ದೀ; ನಾನು
ನಿನಗೋಸ್ಕರ ಒಂದು ಮಂದಿರವನ್ನು ಕಟ್ಟಿಸಿದ್ದೇನೆ;
ಅದು ನಿನಗೆ ಶಾಶ್ವತವಾದ ವಾಸಸ್ಥಳವಾಗಿರಲಿ ಎಂದು
ಪ್ರಾರ್ಥನೆಮಾಡಿದನು.
3 ಇದಾದ ಮೇಲೆ ಅರಸನು ಎದ್ದುನಿಂತಿದ್ದ ಇಸ್ರಾ
ಯೇಲ್‌ಸಮೂಹದವರ ಕಡೆಗೆ ತಿರುಗಿಕೊಂಡು ಅವ
4 ರನ್ನು ಆಶೀರ್ವದಿಸಿ—ಇಸ್ರಾಯೇಲ್‌ದೇವರಾದ ಯೆ
ಹೋವನಿಗೆ ಸ್ತೋತ್ರವಾಗಲಿ; ನನ್ನ ತಂದೆಯಾದ
ದಾವೀದನಿಗೆ ಆತನ ಬಾಯಿ ನುಡಿದದ್ದನ್ನು ಆತನ
5 ಹಸ್ತವು ಈಗ ನೆರವೇರಿಸಿಯದೆ. ಆತನು—ನನ್ನ
ಜನರಾದ ಇಸ್ರಾಯೇಲ್ಯರನ್ನು ಐಗುಪ್ತದೇಶದಿಂದ
ನಾನು ಬರಮಾಡಿದ್ದು ಮೊದಲುಗೊಂಡು ಇಸ್ರಾಯೇ
ಲ್‌ಕುಲಗಳಲ್ಲಿ ಯಾವ ಪಟ್ಟಣವನ್ನೂ ನನ್ನ ನಾಮದ
ನಿವಾಸಕ್ಕೋಸ್ಕರ ಆಲಯಸ್ಥಾನವನ್ನಾಗಿ ಆರಿಸಿಕೊಂ
ಡಿರಲಿಲ್ಲ; ನನ್ನ ಪ್ರಜೆಯಾದ ಇಸ್ರಾಯೇಲ್ಯರ ಪ್ರಭು
ವಾಗುವದಕ್ಕಾಗಿ ಯಾವನೊಬ್ಬ ಪುರುಷನನ್ನು ಆರಿಸಿ
6 ಕೊಂಡದ್ದೂ ಇಲ್ಲ. ಆದರೆ ಈಗ ನನ್ನ ನಾಮ
ಸ್ಥಾಪನೆಗೋಸ್ಕರ ಯೆರೂಸಲೇಮನ್ನೂ ನನ್ನ ಪ್ರಜೆ
ಗಳಾದ ಇಸ್ರಾಯೇಲ್ಯರನ್ನು ಆಳುವದಕ್ಕೋಸ್ಕರ
ದಾವೀದನನ್ನೂ ಆರಿಸಿಕೊಂಡಿದ್ದೇನೆ ಎಂದು ಹೇಳಿ
7 ದನು. ನನ್ನ ತಂದೆಯಾದ ದಾವೀದನು ಇಸ್ರಾ
ಯೇಲ್‌ದೇವರಾದ ಯೆಹೋವನ ಹೆಸರಿನದಾಗಿ ಆಲ
ಯವನ್ನು ಕಟ್ಟಬೇಕೆಂದು ಮನಸ್ಸುಮಾಡಿದಾಗ ಆತನು
8 ಅವನಿಗೆ—ನೀನು ನನ್ನ ಹೆಸರಿನದಾಗಿ ಒಂದು ಮನೆ
ಯನ್ನು ಕಟ್ಟುವದಕ್ಕೆ ಮನಸ್ಸುಮಾಡಿದ್ದು ಒಳ್ಳೇದೇ
9 ಸರಿ. ಆದರೂ ನೀನು ಅದನ್ನು ಕಟ್ಟಬಾರದು;
ನಿನ್ನಿಂದ ಹುಟ್ಟುವ ಮಗನು ಅದನ್ನು ನನ್ನ ಹೆಸರಿನ
10 ದಾಗಿ ಕಟ್ಟಬೇಕು ಎಂದು ಹೇಳಿದನು. ಯೆಹೋ
ವನು ತಾನು ಕೊಟ್ಟ ಮಾತನ್ನು ನೆರವೇರಿಸಿದನು.
ಆತನ ವಾಗ್ದಾನದಂತೆ ನಾನು ನನ್ನ ತಂದೆಯಾದ
ದಾವೀದನಿಗೆ ಬದಲಾಗಿ ಇಸ್ರಾಯೇಲ್‌ಸಿಂಹಾಸನದ
ಮೇಲೆ ಅರಸನಾಗಿ ಕೂತುಕೊಂಡು ಇಸ್ರಾಯೇಲ್
ದೇವರಾದ ಯೆಹೋವನ ಹೆಸರಿನದಾಗಿ ಈ ಆಲಯ
11 ವನ್ನು ಕಟ್ಟಿಸಿದ್ದೇನೆ. ಇದಲ್ಲದೆ ಇಸ್ರಾಯೇಲ್ಯರಿಗೆ
ಯೆಹೋವನಿಂದ ದೊರಕಿದ ನಿಬಂಧನಶಾಸನಗಳಿರುವ
ಮಂಜೂಷವನ್ನು ಅಲ್ಲಿಟ್ಟಿದ್ದೇನೆ ಎಂದು ಹೇಳಿದನು.
12 ತರುವಾಯ ಸೊಲೊಮೋನನು ಎಲ್ಲಾ ಇಸ್ರಾ
ಯೇಲ್ಯರ ಎದುರಿನಲ್ಲಿ ಯೆಹೋವನ ಯಜ್ಞವೇದಿಯ
13 ಮುಂದೆ ಕೈಗಳನ್ನೆತ್ತಿಕೊಂಡು ನಿಂತನು. ಅವನು
ಐದು ಮೊಳ ಉದ್ದ, ಐದು ಮೊಳ ಅಗಲ, ಮೂರು
ಮೊಳ ಎತ್ತರವಾಗಿರುವ ಒಂದು ತಾಮ್ರಪೀಠವನ್ನು
ಮಾಡಿಸಿ ಪ್ರಾಕಾರದ ಮಧ್ಯದಲ್ಲಿಡಿಸಿದ್ದನು. ಅವನು
ಇಸ್ರಾಯೇಲ್‌ಸರ್ವಸಮೂಹದ ಎದುರಿನಲ್ಲಿ ಅದನ್ನು
ಹತ್ತಿ ಅದರ ಮೇಲೆ ಮೊಣಕಾಲೂರಿಕೊಂಡು ಆಕಾ
ಶದ ಕಡೆಗೆ ಕೈಗಳನ್ನೆತ್ತಿ ಹೀಗೆ ಪ್ರಾರ್ಥಿಸಿದನು—
14 ಇಸ್ರಾಯೇಲ್‌ದೇವರಾದ ಯೆಹೋವನೇ, ಭೂಲೋ

ಕದಲ್ಲಿಯೂ ಪರಲೋಕದಲ್ಲಿಯೂ ನಿನಗೆ ಸಮಾ
ನಾದ ದೇವರಿಲ್ಲ; ಪೂರ್ಣಮನಸ್ಸಿನಿಂದ ನಿನಗೆ ನಡೆ
ಕೊಳ್ಳುವಂಥ ಸೇವಕರ ವಿಷಯದಲ್ಲಿ ನೀನು ನಿ
ಒಡಂಬಡಿಕೆಯನ್ನೂ ಕೃಪೆಯನ್ನೂ ನೆರವೇರಿಸುವವನ
ನಿನ್ನ ಸೇವಕನೂ ನನ್ನ ತಂದೆಯೂ ಆದ ದಾವೀ
ನಿಗೆ ಕೊಟ್ಟ ಮಾತನ್ನು ಕೈಕೊಂಡಿ; ನಿನ್ನ ಬಾ
ನುಡಿದದ್ದನ್ನು ನಿನ್ನ ಹಸ್ತವು ಈಗ ನೆರವೇರಿಸಿ
ಇಸ್ರಾಯೇಲ್‌ದೇವರಾದ ಯೆಹೋವನೇ, ನೀನು ನ
ತಂದೆಯಾದ ದಾವೀದನಿಗೆ—ನಿನ್ನ ಸಂತಾನದವ
ನಿನ್ನಂತೆ ಜಾಗರೂಕತೆಯಿಂದ ನನ್ನ ಕಟ್ಟಳೆಯನ
ಅನುಸರಿಸಿ ನಡೆದುಕೊಳ್ಳುವದಾದರೆ ಅವರು ತಪ್ಪ
ಇಸ್ರಾಯೇಲ್‌ಸಿಂಹಾಸನದ ಮೇಲೆ ಕೂತುಕೊಳ
ವಂತೆ ಮಾಡುವೆನು ಎಂಬದಾಗಿ ವಾಗ್ದಾನಮಾಡಿ
ಯಲ್ಲಾ, ಅದನ್ನು ನೆರವೇರಿಸು. ಇಸ್ರಾಯೇಲ್‌ದೇ
ರೇ, ಯೆಹೋವನೇ, ನೀನು ನಿನ್ನ ಸೇವಕನಾದ ದಾ
ದನಿಗೆ ನುಡಿದದ್ದೆಲ್ಲವೂ ಸಾರ್ಥಕವಾಗಲಿ.

ದೇವರು ನಿಜವಾಗಿ ಮನುಷ್ಯರೊಡನೆ ಭೂಲೋ
ದಲ್ಲಿ ವಾಸಿಸುವನೋ? ಆಕಾಶವೂ ಉನ್ನತೋನ್ನ
ವಾದ ಆಕಾಶವೂ ನಿನ್ನ ವಾಸಕ್ಕೆ ಸಾಲವು; ಹೀಗಿ
ವಲ್ಲಿ ನಾನು ಕಟ್ಟಿಸಿದ ಈ ಮಂದಿರವು ಹೇಗೆ ಸಾ
ದೀತು? ಆದರೂ ನನ್ನ ದೇವರೇ, ಯೆಹೋವನ
ನಿನ್ನ ಸೇವಕನ ಪ್ರಾರ್ಥನೆಗೂ ವಿಜ್ಞಾಪನೆಗೂ
ಗೊಡು; ನಿನ್ನನ್ನು ಪ್ರಾರ್ಥಿಸುತ್ತಿರುವ ನಿನ್ನ ಸೇವಕ
ಮೊರೆಯನ್ನು ಲಾಲಿಸು. ಈ ಸ್ಥಳವನ್ನು ಕುರಿತು
ನನ್ನ ನಾಮಪ್ರಭಾವವು ಇಲ್ಲಿ ವಾಸಿಸುವದು ಎಂ
ಹೇಳಿದವನೇ, ನಿನ್ನ ಕಟಾಕ್ಷವು ಹಗಲಿರುಳೂ
ಮಂದಿರದ ಮೇಲಿರಲಿ; ಇಲ್ಲಿ ನಿನ್ನ ಸೇವಕನು ಪ್ರಾ
ಸುವಾಗೆಲ್ಲಾ ಅವನಿಗೆ ಸದುತ್ತರವನ್ನು ದಯಪಾಲಿಸ
ನಿನ್ನ ಸೇವಕನಾದ ನಾನಾಗಲಿ ನಿನ್ನ ಪ್ರಜೆಗಳಾ
ಇಸ್ರಾಯೇಲ್ಯರಾಗಲಿ ಈ ಸ್ಥಳದ ಕಡೆಗೆ ತಿರುಗಿಕೊಂ
ನಿನ್ನನ್ನು ಪ್ರಾರ್ಥಿಸುವಾಗ ನಿನ್ನ ನಿವಾಸವಾಗಿರು
ಪರಲೋಕದಿಂದ ನಮ್ಮ ಬಿನ್ನಹಗಳನ್ನು ಕೇಳಿ ಕ್ಷ
ಯನ್ನು ಅನುಗ್ರಹಿಸು.

ನೆರೆಯವನಿಗೆ ವಿರೋಧವಾಗಿ ತಪ್ಪುಮಾಡಿದವನೇ
ಸಂಶಯಕ್ಕೆ ಗುರಿಯಾದ ಮನುಷ್ಯನು ತಾನು ನಿರ್ದೋ
ಷಿಯೆಂದು ಪ್ರಮಾಣಮಾಡಬೇಕಾದಾಗ ಅವನು
ಆಲಯಕ್ಕೆ ಬಂದು ನಿನ್ನ ವೇದಿಯ ಮುಂ
ನಿಂತು ಪ್ರಮಾಣಮಾಡುವದಾದರೆ ನೀನು ಪರಲೋ
ಕದಿಂದ ಅದನ್ನು ಕೇಳಿ ನಿನ್ನ ಸೇವಕರ ನ್ಯಾ
ವನ್ನು ತೀರಿಸು; ದುಷ್ಟನಿಗೆ ಅವನ ದುಷ್ಟತ್ವವನ
ಅವನ ತಲೆಯ ಮೇಲೆಯೇ ಬರಮಾಡಿ ಮುಯ
ತೀರಿಸು; ನೀತಿವಂತನಿಗೆ ಅವನ ನೀತಿಯ ಫಲವನ
ಅನುಗ್ರಹಿಸಿ ಅವನು ನೀತಿವಂತನೆಂದು ತೋ
ಕೊಡು.

ತಮ್ಮ ಪಾಪಗಳ ನಿಮಿತ್ತವಾಗಿ ಶತ್ರುಗಳಿಂದ ಕು
ಸಲ್ಪಟ್ಟ ನಿನ್ನ ಪ್ರಜೆಗಳಾದ ಇಸ್ರಾಯೇಲ್ಯರು ತಿರು
ಕೊಂಡು ನಿನ್ನ ನಾಮವನ್ನು ಎತ್ತಿ ಈ ಆಲಯ
ಬಂದು ನಿನ್ನ ಸನ್ನಿಧಿಯಲ್ಲಿ ವಿಜ್ಞಾಪನೆಯನ್ನೂ ಪ್ರಾರ್ಥ
ನೆಯನ್ನೂ ಮಾಡುವದಾದರೆ ನೀನು ಪರಲೋಕದಿಂ
ಲಾಲಿಸಿ ಅವರ ಪಾಪಗಳನ್ನು ಕ್ಷಮಿಸಿ ಅವರಿಗ

ಅವರ ಪಿತೃಗಳಿಗೂ ನೀನು ಕೊಟ್ಟ ದೇಶಕ್ಕೆ ಅವರನ್ನು
ತಿರಿಗಿ ಬರಮಾಡು.
26 ಅವರ ಪಾಪಗಳ ನಿಮಿತ್ತವಾಗಿ ನೀನು ಆಕಾಶವನ್ನು
ಮಳೆಗರೆಯದಂತೆ ಮುಚ್ಚಿ ಅವರನ್ನು ತಗ್ಗಿಸಿದಾಗ
ಅವರು ತಮ್ಮ ಪಾಪಗಳನ್ನು ಬಿಟ್ಟು ತಮ್ಮನ್ನು ತಗ್ಗಿಸಿ
ದವನು ನೀನೇ ಎಂದು ನಿನ್ನ ನಾಮವನ್ನು ಎತ್ತಿ ಈ
ಆಲಯದ ಕಡೆಗೆ ತಿರುಗಿಕೊಂಡು ನಿನ್ನನ್ನು ಪ್ರಾರ್ಥಿ
27 ಸುವದಾದರೆ ಪರಲೋಕದಲ್ಲಿರುವ ನೀನು ಲಾಲಿಸಿ
ನಿನ್ನ ಸೇವಕರೂ ಪ್ರಜೆಗಳೂ ಆದ ಇಸ್ರಾಯೇಲ್ಯರ
ಪಾಪಗಳನ್ನು ಕ್ಷಮಿಸಿ ಅವರು ನಡೆಯಬೇಕಾದ ಸನ್ಮಾ
ರ್ಗವನ್ನು ತೋರಿಸಿ ನಿನ್ನ ಪ್ರಜೆಗೆ ಸ್ವಾಸ್ತ್ಯವಾಗಿ
ಕೊಟ್ಟ ದೇಶಕ್ಕೆ ಮಳೆಯನ್ನು ಅನುಗ್ರಹಿಸು.
28 ದೇಶಕ್ಕೆ ಕ್ಷಾಮ, ಘೋರವ್ಯಾಧಿ, [ಬೆಳೆಗೆ] ಬಿಸಿ
ಗಾಳಿ ಬೂದಿ, ಮಿಡಿತೆ, ಜಟ್ಟೇಹುಳ, ಪಟ್ಟಣಗಳಿಗೆ
ಶತ್ರುಗಳ ಮುತ್ತಿಗೆ ಅಂತು ಯಾವ ಉಪದ್ರವದಿಂದಾ
ಗಲಿ ವ್ಯಾಧಿಯಿಂದಾಗಲಿ ಬಾಧೆಯುಂಟಾಗುವಲ್ಲಿ
29 ಎಲ್ಲಾ ಇಸ್ರಾಯೇಲ್ಯರಾಗಲಿ ಅವರಲ್ಲೊಬ್ಬನಾಗಲಿ
ತಾವು ಅನುಭವಿಸುತ್ತಿರುವ ಉಪದ್ರವ ದುಃಖಗಳ
ನಿಮಿತ್ತವಾಗಿ ಈ ಆಲಯದ ಕಡೆಗೆ ಕೈಯೆತ್ತಿ ನಿನಗೆ
ಪ್ರಾರ್ಥನೆಯನ್ನೂ ವಿಜ್ಞಾಪನೆಯನ್ನೂ ಮಾಡುವದಾ
30 ದರೆ ಮನುಷ್ಯರ ಹೃದಯಗಳನ್ನು ಬಲ್ಲಂಥ ನೀನು
ನಿನ್ನ ನಿವಾಸವಾಗಿರುವ ಪರಲೋಕದಿಂದ ಲಾಲಿಸಿ
ಅವರಿಗೆ ಪಾಪಪರಿಹಾರವನ್ನು ಅನುಗ್ರಹಿಸು. ನೀನೊ
ಬ್ಬನೇ ಮನುಷ್ಯರ ಹೃದಯಗಳನ್ನು ಬಲ್ಲವನಾಗಿರು
ವದರಿಂದ ಪ್ರತಿಯೊಬ್ಬನಿಗೂ ಅವನವನ ಹಿಡಿಯುವ
31 ಮಾರ್ಗಕ್ಕೆ ತಕ್ಕ ಹಾಗೆ ಫಲವನ್ನು ಕೊಡು. ಆಗ
ನಮ್ಮ ಪಿತೃಗಳಿಗೆ ನೀನು ಕೊಟ್ಟ ದೇಶದಲ್ಲಿ ಅವರು
ವಾಸಿಸುವ ಕಾಲದಲ್ಲೆಲ್ಲಾ ನಿನ್ನಲ್ಲಿ ಭಯಭಕ್ತಿಯುಳ್ಳ
ವರಾಗಿ ನಿನ್ನ ಮಾರ್ಗಗಳಲ್ಲಿ ನಡೆಯುವರು.
32 ನಿನ್ನ ಪ್ರಜೆಗಳಾದ ಇಸ್ರಾಯೇಲ್ಯರಿಗೆ ಸೇರದಂಥ
ಒಬ್ಬೊಬ್ಬ ಪರದೇಶಿಯೂ ನಿನ್ನ ನಾಮಮಹತ್ತು
ಭುಜಬಲ ಶಿಕ್ಷಾಹಸ್ತ ಇವುಗಳ ವರ್ತಮಾನ ಕೇಳಿ
ದೂರದೇಶದಿಂದ ಬಂದು ಈ ಆಲಯದ ಮುಂದೆ
ನಿಂತು ನಿನ್ನನ್ನು ಪ್ರಾರ್ಥಿಸುವವಾದರೆ ನಿನ್ನ ನಿವಾಸ
33 ವಾಗಿರುವ ಪರಲೋಕದಿಂದ ಅವರ ಪ್ರಾರ್ಥನೆಯನ್ನು
ಕೇಳಿ ಅವರು ಬೇಡಿಕೊಂಡದ್ದನ್ನು ಅನುಗ್ರಹಿಸು. ಆಗ
ಲೋಕದ ಎಲ್ಲಾ ಜನರೂ ನಿನ್ನ ನಾಮಮಹತ್ತನ್ನು
ತಿಳಿದು ನಿನ್ನ ಜನರಾದ ಇಸ್ರಾಯೇಲ್ಯರಂತೆ ನಿನ್ನಲ್ಲಿ
ಭಯಭಕ್ತಿಯುಳ್ಳವರಾಗಿ ನಾನು ಈ ಆಲಯವನ್ನು
ನಿನ್ನ ಹೆಸರಿನದಾಗಿ ಕಟ್ಟಿಸಿದ್ದೇನೆಂದು ತಿಳಿದುಕೊಳ್ಳು
ವರು.
34 ನೀನು ನಿನ್ನ ಜನರನ್ನು ಶತ್ರುಗಳೊಡನೆ ಯುದ್ಧ
ಮಾಡುವದಕ್ಕೋಸ್ಕರ ಎಲ್ಲಿಗಾದರೂ ಕಳುಹಿಸಿದಾಗ
ಅವರು ಅಲ್ಲಿಂದ ನೀನು ಆರಿಸಿಕೊಂಡ ಪಟ್ಟಣದ ಕಡೆ
ಗೂ ನಾನು ನಿನ್ನ ಹೆಸರಿಗಾಗಿ ಕಟ್ಟಿಸಿದ ಈ ಆಲಯದ
ಕಡೆಗೂ ತಿರುಗಿಕೊಂಡು ನಿನ್ನನ್ನು ಪ್ರಾರ್ಥಿಸುವದಾದರೆ
35 ನೀನು ಪರಲೋಕದಿಂದ ಅವರ ವಿಜ್ಞಾಪನೆಯನ್ನೂ
ಪ್ರಾರ್ಥನೆಯನ್ನೂ ಕೇಳಿ ಅವರ ನ್ಯಾಯವನ್ನು ಸ್ಥಾ
ಪಿಸು.
36 ಅವರು ನಿನಗೆ ವಿರುದ್ಧವಾಗಿ ಪಾಪಮಾಡಾರು;
ಪಾಪಮಾಡದ ಮನುಷ್ಯನು ಒಬ್ಬನೂ ಇಲ್ಲವಲ್ಲಾ.
ನೀನು ಅವರ ಮೇಲೆ ಕೋಪಗೊಂಡು ಅವರನ್ನು ಶತ್ರು
ಗಳ ಕೈಗೆ ಒಪ್ಪಿಸಿದಾಗ ಮತ್ತು ಆ ಶತ್ರುಗಳು ಅವ
ರನ್ನು ಸೆರೆಹಿಡಿದು ದೂರದಲ್ಲಾಗಲಿ ಸಮೀಪದಲ್ಲಾಗಲಿ
ಇರುವ ದೇಶಕ್ಕೆ ಒಯ್ದಾಗ ತಾವು ಸೆರೆಯವರಾಗಿ 37
ಬಿದ್ದುಕೊಂಡಿರುವ ದೇಶದಲ್ಲಿ ಅವರು ಪಶ್ಚಾತ್ತಾಪ
ಪಟ್ಟು ನಿನ್ನ ಅನುಗ್ರಹದಿಂದ ತಮ್ಮ ಪಿತೃಗಳಿಗೆ ದೊರಕಿದ 38
ದೇಶದ ಕಡೆಗೂ ನೀನು ಆರಿಸಿಕೊಂಡ ಪಟ್ಟಣದ ಕಡೆಗೂ
ನಾನು ನಿನ್ನ ಹೆಸರಿಗೋಸ್ಕರ ಕಟ್ಟಿಸಿದ ಈ ಆಲಯದ
ಕಡೆಗೂ ತಿರುಗಿಕೊಂಡು—ನಾವು ನಿನ್ನ ಆಜ್ಞೆಗಳನ್ನು
ಮೀರಿ ಪಾಪಮಾಡಿ ದ್ರೋಹಿಗಳಾದೆವು ಎಂದು ಒಪ್ಪಿ
ಪೂರ್ಣಮನಸ್ಸಿನಿಂದಲೂ ಪೂರ್ಣಪ್ರಾಣದಿಂದಲೂ ನಿನ್ನ
ನ್ನು ಪ್ರಾರ್ಥಿಸುವವಾದರೆ ನೀನು ನಿನ್ನ ನಿವಾಸವಾಗಿ 39
ರುವ ಪರಲೋಕದಿಂದ ಅವರ ವಿಜ್ಞಾಪನೆಯನ್ನೂ ಪ್ರಾ
ರ್ಥನೆಯನ್ನೂ ಲಾಲಿಸಿ ಅವರ ನ್ಯಾಯವನ್ನು ಸ್ಥಾಪಿಸಿ
ನಿನಗೆ ವಿರುದ್ಧವಾಗಿ ಪಾಪಮಾಡಿದ ನಿನ್ನ ಪ್ರಜೆಗೆ ಕ್ಷಮೆ
ಯನ್ನು ಅನುಗ್ರಹಿಸು.
ನನ್ನ ದೇವರೇ, ಕಟಾಕ್ಷವಿಟ್ಟು ಈ ಸ್ಥಳದಲ್ಲಿ 40
ಮಾಡುವ ಪ್ರಾರ್ಥನೆಗೆ ಕಿವಿಗೊಡು.
ದೇವರಾದ ಯೆಹೋವನೇ, ಎದ್ದು 41
ನಿನ್ನ ಪ್ರತಾಪಯುಕ್ತವಾದ ಮಂಜೂಷದೊಡನೆ
ನಿನ್ನ ವಾಸಸ್ಥಾನದೊಳಗೆ ಸೇರೋಣವಾಗಲಿ.
ದೇವರಾದ ಯೆಹೋವನೇ, ನಿನ್ನ ಯಾಜಕರು
ರಕ್ಷಣೆಯೆಂಬ ವಸ್ತ್ರವನ್ನು ಹೊದ್ದುಕೊಳ್ಳಲಿ;
ನಿನ್ನ ಭಕ್ತರು ಸೌಭಾಗ್ಯದಲ್ಲಿ ಹರ್ಷಿಸಲಿ.
ದೇವರಾದ ಯೆಹೋವನೇ, ನಿನ್ನಿಂದ ಅಭಿಷಿಕ್ತನಾದ 42
ವನನ್ನು ತಳ್ಳಿಬಿಡಬೇಡ;
ನಿನ್ನ ಸೇವಕನಾದ ದಾವೀದನಿಗೆ ಅನುಗ್ರಹಿಸಿದ
ಕೃಪೆಯನ್ನು ನೆನಪುಮಾಡಿಕೋ.
ಸೊಲೊಮೋನನು ಪ್ರಾರ್ಥಿಸುವದನ್ನು ಮುಗಿಸಿದ 7
ಕೂಡಲೆ ಆಕಾಶದಿಂದ ಬೆಂಕಿಬಿದ್ದು ಸರ್ವಾಂಗ
ಹೋಮದ್ರವ್ಯಗಳನ್ನೂ ಯಜ್ಞಮಾಂಸವನ್ನೂ ದಹಿಸಿ
ಬಿಟ್ಟಿತು, ಯೆಹೋವನ ತೇಜಸ್ಸು ಆಲಯದಲ್ಲಿ
ತುಂಬಿಕೊಂಡಿತು. ಯೆಹೋವನ ತೇಜಸ್ಸು ಆತನ 2
ಆಲಯದಲ್ಲಿ ತುಂಬಿಕೊಂಡದ್ದರಿಂದ ಯಾಜಕರು ಒಳಗೆ
ಪ್ರವೇಶಿಸಲಾರದೆ ಹೋದರು. ಇಸ್ರಾಯೇಲ್ಯರೆಲ್ಲರೂ 3
ಬೆಂಕಿ ಇಳಿದುಬರುವದನ್ನೂ ಯೆಹೋವನ ತೇಜಸ್ಸು
ಆಲಯದಲ್ಲಿರುವದನ್ನೂ ನೋಡಿ ನೆಲಗಟ್ಟಿನ ಮೇಲೆ
ಸಾಷ್ಟಾಂಗವೆರಗಿ ಆರಾಧಿಸಿ—ಯೆಹೋವನು ಒಳ್ಳೆ
ಯವನು, ಆತನ ಕೃಪೆಯು ಶಾಶ್ವತವಾಗಿದೆ ಎಂದು
ಕೃತಜ್ಞತಾಸ್ತುತಿಮಾಡಿದರು. ಅರಸನೂ ಎಲ್ಲಾ ಜನ 4
ರೂ ಯೆಹೋವನ ಸನ್ನಿಧಿಯಲ್ಲಿ ಯಜ್ಞಮಾಡಿದರು.
ಅರಸನಾದ ಸೊಲೊಮೋನನು ಯಜ್ಞಕ್ಕಾಗಿ ವಧಿಸಿದ 5
ಹೋರಿಗಳು ಇಪ್ಪತ್ತೆರಡು ಸಾವಿರ, ಕುರಿಗಳು ಲಕ್ಷದ
ಇಪ್ಪತ್ತು ಸಾವಿರ. ಈ ಪ್ರಕಾರ ಅರಸನೂ ಎಲ್ಲಾ
ಇಸ್ರಾಯೇಲ್ಯರೂ ದೇವಾಲಯವನ್ನು ಪ್ರತಿಷ್ಠಿಸಿದರು.
ಯಾಜಕರೂ ಲೇವಿಯರೂ ತಮ್ಮ ತಮ್ಮ ಸ್ಥಳಗಳಲ್ಲಿ 6
ನಿಂತರು. ದಾವೀದನು ಯೆಹೋವನ ಗಾಯನಸೇವೆ
ಗೋಸ್ಕರ ಮಾಡಿಸಿದ ವಾದ್ಯಗಳು ಈ ಲೇವಿಯರ ಕೈ
ಯಲ್ಲಿದ್ದವು. ಇವರು ರಾಜಸೇವೆಯಲ್ಲಿದ್ದುಕೊಂಡು

ದೇವಾರಾಧನೆನಡಿಸುತ್ತಾ—ಯೆಹೋವನಿಗೆ ಕೃತಜ್ಞ
ತಾಸ್ತುತಿಯನ್ನು ಸಮರ್ಪಿಸಿರಿ, ಆತನ ಕೃಪೆಯು
ಶಾಶ್ವತವಾಗಿದೆ ಎಂಬದಾಗಿ ಆ ವಾದ್ಯಗಳೊಡನೆ ಭಜಿ
ಸುತ್ತಿದ್ದರು. ಯಾಜಕರು ಇವರ ಎದುರಾಗಿ ನಿಂತು
ತುತೂರಿಯೂದುತ್ತಿದ್ದರು. ಇಸ್ರಾಯೇಲ್ಯರೆಲ್ಲರೂ
7 ನಿಂತಿದ್ದರು. ಸೊಲೊಮೋನನು ಮಾಡಿಸಿದ ತಾಮ್ರದ
ಯಜ್ಞವೇದಿಯು ಸಮರ್ಪಣೆಯಾಗುವ ಸರ್ವಾಂಗ
ಹೋಮದ್ರವ್ಯಗಳನ್ನೂ ಧಾನ್ಯನೈವೇದ್ಯಗಳನ್ನೂ ಸಮಾ
ಧಾನಯಜ್ಞದ ಕೊಬ್ಬನ್ನೂ ಹಿಡಿಯಲಾರದ್ದರಿಂದ
ಅವನು ಯೆಹೋವನ ಆಲಯದ ಮುಂದಿನ ಪ್ರಾಕಾ
ರದ ಮಧ್ಯಸ್ಥಳವನ್ನು ಪ್ರತಿಷ್ಠಿಸಿ ಅಲ್ಲಿ ಇವುಗಳನ್ನೆಲ್ಲಾ
8 ಸಮರ್ಪಿಸಿದನು. ಈ ಪ್ರಕಾರ ಸೊಲೊಮೋನನೂ
ಹಮಾತಿನ ದಾರಿಯಿಂದ ಐಗುಪ್ತದ ಹಳ್ಳದ ವರೆಗಿ
ರುವ ಪ್ರಾಂತಗಳಿಂದ ಮಹಾಸಮೂಹವಾಗಿ ಕೂಡಿ
ಬಂದಿದ್ದ ಎಲ್ಲಾ ಇಸ್ರಾಯೇಲ್ಯರೂ ಅದೇ ಕಾಲದಲ್ಲಿ
ಏಳು ದಿನಗಳ ವರೆಗೂ [ಪರ್ಣಶಾಲೆಗಳ] ಜಾತ್ರೆನಡಿಸಿ
9 ದರು. ತರುವಾಯ ಎಂಟನೆಯ ದಿನದಲ್ಲಿ ಸಭೆನೆರೆ
ಯಿತು. ಹೀಗೆ ಏಳು ದಿವಸ ಯಜ್ಞವೇದಿಪ್ರತಿಷ್ಠೆ
ಯನ್ನೂ ಇನ್ನು ಏಳು ದಿವಸ ಜಾತ್ರೆಯನ್ನೂ ನಡಿ
10 ಸಿದರು. ಏಳನೆಯ ತಿಂಗಳಿನ ಇಪ್ಪತ್ತಮೂರನೆಯ
ದಿನದಲ್ಲಿ ಅರಸನು ಜನರಿಗೆ ಅಪ್ಪಣೆಕೊಡಲು ಅವರು
ಯೆಹೋವನಿಂದ ದಾವೀದ ಸೊಲೊಮೋನರಿಗೂ
ಆತನ ಪ್ರಜೆಗಳಾದ ಇಸ್ರಾಯೇಲ್ಯರಿಗೂ ಉಂಟಾದ
ಉಪಕಾರಗಳನ್ನು ನೆನಸಿಕೊಂಡು ಆನಂದಭರಿತರಾಗಿ
ಹರ್ಷಿಸುತ್ತಾ ತಮ್ಮ ತಮ್ಮ ನಿವಾಸಗಳಿಗೆ ಹೋ
ದರು.

ಯೆಹೋವನು ಸೊಲೊಮೋನನಿಗೆ ಎರಡನೆಯ ಸಾರಿ
ಕಾಣಿಸಿಕೊಂಡು ಅವನ ಪ್ರಾರ್ಥನೆಗೆ ಉತ್ತರಕೊಟ್ಟದ್ದು.

11 ಸೊಲೊಮೋನನು ಯೆಹೋವನ ಆಲಯವನ್ನೂ
ತನ್ನ ಅರಮನೆಯನ್ನೂ ಕಟ್ಟಿಸಿ ಆ ಕಟ್ಟಡಗಳ ವಿಷಯ
ವಾಗಿ ತನ್ನ ಮನಸ್ಸಿನಲ್ಲಿದ್ದದ್ದನ್ನೆಲ್ಲಾ ಕೊನೆಗಾಣಿಸಿದ
12 ನಂತರ ಯೆಹೋವನು ಅವನಿಗೆ ರಾತ್ರಿಯಲ್ಲಿ ಪ್ರತ್ಯಕ್ಷ
ನಾಗಿ—ನೀನು ನನಗೆ ಮಾಡಿದ ಪ್ರಾರ್ಥನೆಯನ್ನು ಲಾ
ಲಿಸಿ ಈ ಮನೆಯನ್ನು ನನ್ನ ಯಜ್ಞಾಲಯಕ್ಕಾಗಿ
13 ಆರಿಸಿಕೊಂಡಿದ್ದೇನೆ. ನಾನು ಆಕಾಶವನ್ನು ಮಳೆಗರೆ
ಯದಂತೆ ಮುಚ್ಚುವಾಗಲೂ ದೇಶವನ್ನು ತಿಂದುಬಿಡು
ವದಕ್ಕೆ ಮಿಡಿತೆಗಳನ್ನು ಕಳುಹಿಸುವಾಗಲೂ ನನ್ನ ಪ್ರಜೆ
ಯ ಮೇಲೆ ಘೋರವ್ಯಾಧಿಯನ್ನು ಬರಮಾಡುವಾಗ
14 ಲೂ ನನ್ನವರೆಂದು ಹೆಸರುಗೊಂಡ ನನ್ನ ಪ್ರಜೆಗಳು
ತಮ್ಮನ್ನು ತಗ್ಗಿಸಿಕೊಂಡು ತಮ್ಮ ಕೆಟ್ಟ ನಡತೆಯನ್ನು
ಬಿಟ್ಟು ತಿರುಗಿಕೊಂಡು ನನ್ನನ್ನು ಪ್ರಾರ್ಥಿಸಿ ನನ್ನ
ದರ್ಶನವನ್ನು ಬಯಸುವದಾದರೆ ನಾನು ಪರಲೋಕ
ದಿಂದ ಲಾಲಿಸಿ ಅವರ ಪಾಪಗಳನ್ನು ಕ್ಷಮಿಸಿ ಅವರ
15 ದೇಶದಲ್ಲಿ ಆರೋಗ್ಯವನ್ನು ದಯಪಾಲಿಸುವೆನು. ಇನ್ನು
ಮುಂದೆ ಈ ಸ್ಥಳದಲ್ಲಿ ಪ್ರಾರ್ಥಿಸುವವರನ್ನು ಕಟಾ
16 ಕ್ಷಿಸಿ ಅವರ ವಿಜ್ಞಾಪನೆಗೆ ಕಿವಿಗೊಡುವೆನು. ನನ್ನ
ನಾಮಮಹತ್ತು ಈ ಆಲಯದಲ್ಲಿ ಶಾಶ್ವತವಾಗಿರು
ವಂತೆ ಇದನ್ನು ನನಗೋಸ್ಕರ ಆರಿಸಿ ಪ್ರತಿಷ್ಠಿಸಿಕೊಂಡಿ
ದ್ದೇನೆ; ನನ್ನ ದೃಷ್ಟಿಯೂ ಮನಸ್ಸೂ ಸದಾ ಅಲ್ಲೇ
ಇರುವವು. ನೀನು ನಿನ್ನ ತಂದೆಯಾದ ದಾವೀದನಂತೆ 1
ನನಗೆ ವಿಧೇಯನಾಗಿ ನಡೆದುಕೊಂಡು ನನ್ನ ಆಜ್ಞಾವಿಧಿ
ನ್ಯಾಯಗಳನ್ನು ಕೈಕೊಳ್ಳುವದಾದರೆ ನಿನ್ನ ರಾಜ್ಯಸಿಂ 1
ಹಾಸನವನ್ನು ಸ್ಥಿರಪಡಿಸುವೆನು; ಮತ್ತು ಇಸ್ರಾಯೇ
ಲ್ಯರಲ್ಲಿ ನಿನ್ನ ಸಂತಾನದವರು ತಪ್ಪದೆ ರಾಜ್ಯಾಧಿಕಾರ
ನಡಿಸುವರು ಎಂಬದಾಗಿ ನಿನ್ನ ತಂದೆಯಾದ ದಾವೀದ
ನಿಗೆ ಮಾಡಿದ ವಾಗ್ದಾನವನ್ನು ನೆರವೇರಿಸುವೆನು.
ಆದರೆ ನೀವು ದ್ರೋಹಿಗಳಾಗಿ ನನ್ನ ಆಜ್ಞಾವಿಧಿಗ 1
ಳನ್ನು ಉಲ್ಲಂಘಿಸಿ ಅನ್ಯದೇವತೆಗಳನ್ನು ಹಿಂಬಾಲಿಸಿ
ಅವುಗಳಿಗೆ ಕೈಮುಗಿಯುವದಾದರೆ ನಾನು ಇಸ್ರಾಯೇ 2
ಲ್ಯರಿಗೆ ಕೊಟ್ಟ ನನ್ನ ದೇಶದಿಂದ ಅವರನ್ನು ಕಿತ್ತುಹಾಕಿ
ನನ್ನ ಹೆಸರಿಗೋಸ್ಕರ ಪ್ರತಿಷ್ಠಿಸಿಕೊಂಡ ಈ ಆಲಯ
ವನ್ನು ನಿರಾಕರಿಸಿಬಿಟ್ಟು ಎಲ್ಲಾ ಜನಾಂಗಗಳವರು
ಗಾದೆಗಳನ್ನು ಕಲ್ಪಿಸುವದಕ್ಕೂ ನಿಂದಿಸುವದಕ್ಕೂ ಅದು
ಆಸ್ಪದವಾಗುವಂತೆ ಮಾಡುವೆನು. ಉನ್ನತವಾದ ಈ 2
ಮಂದಿರದ ಮಾರ್ಗವಾಗಿ ಹೋಗುವವರು ಅದನ್ನು
ನೋಡಿ ವಿಸ್ಮಿತರಾಗಿ—ಯೆಹೋವನು ಈ ದೇಶವ
ನ್ನೂ ಆಲಯವನ್ನೂ ಹೀಗೇಕೆ ಮಾಡಿದನು ಎಂದು
ಕೇಳುವರು. ಆಗ ಅವರಿಗೆ—ಈ ದೇಶದವರು ತಮ್ಮ 2
ನ್ನು ಐಗುಪ್ತದೇಶದಿಂದ ಬರಮಾಡಿದ ತಮ್ಮ ಪಿತೃಗಳ
ದೇವರಾದ ಯೆಹೋವನನ್ನು ಬಿಟ್ಟು ಅನ್ಯದೇವತೆ
ಗಳನ್ನು ಅವಲಂಬಿಸಿ ಅವುಗಳಿಗೆ ಅಡ್ಡಬಿದ್ದು ಸೇವಿ
ಸಿದ್ದರಿಂದಲೇ ಆತನು ಈ ಎಲ್ಲಾ ಆಪತ್ತನ್ನು ಅವ
ರಿಗೆ ಬರಮಾಡಿದ್ದಾನೆ ಎಂಬ ಉತ್ತರ ಸಿಕ್ಕುವದು
ಅಂದನು.

ಸೊಲೊಮೋನನ ರಾಜಕೀಯಕಾರ್ಯಗಳು.

8 ಸೊಲೊಮೋನನು ಇಪ್ಪತ್ತು ವರುಷಗಳಲ್ಲಿ ಯೆ
ಹೋವನ ಆಲಯವನ್ನೂ ತನ್ನ ಅರಮನೆಯನ್ನೂ
ಕಟ್ಟಿಸಿ ತೀರಿಸಿದನು. ಮತ್ತು ಹೂರಾಮನಿಂದ ತನಗೆ
ದೊರಕಿದ ಪಟ್ಟಣಗಳನ್ನು ಭದ್ರಪಡಿಸಿ ಅವುಗಳಲ್ಲಿ
ಇಸ್ರಾಯೇಲ್ಯರನ್ನು ಇರಿಸಿದನು. ಅನಂತರ ಅವನು
ಚೋಬರಾಜ್ಯದ ಹಮಾತಿಗೆ ಹೊರಟು ಅದನ್ನು ಸ್ವಾ
ಧೀನಮಾಡಿಕೊಂಡು ಅರಣ್ಯದಲ್ಲಿರುವ ತದ್ಮೋರ್
ಪಟ್ಟಣವನ್ನೂ ಹಮಾತಿನಲ್ಲಿ ತಾನು ಕಟ್ಟಿಸಿದ್ದ ಎಲ್ಲಾ
ಉಗ್ರಾಣದ ಪಟ್ಟಣಗಳನ್ನೂ ಭದ್ರಪಡಿಸಿದನು. ಇದ
ಲ್ಲದೆ ಮೇಲಿನ ಮತ್ತು ಕೆಳಗಿನ ಬೇತ್ಹೋರೋನ್ ಎಂಬ
ಊರುಗಳನ್ನು ಪೌಳಿಗೋಡೆ ಕದ ಅಗುಳಿ ಇವುಗಳನ್ನು
ಏರ್ಪಡಿಸಿ ಕೋಟೆಗಳನ್ನಾಗಿ ಮಾಡಿದನು. ಬಾಲಾ
ತೂರು, ತನ್ನ ಎಲ್ಲಾ ಉಗ್ರಾಣದ ಪಟ್ಟಣ, ಯುದ್ಧ
ರಥಗಳನ್ನಿರಿಸುವ ಪಟ್ಟಣ, ರಾಹುತರ ಪಟ್ಟಣ ಇವುಗ
ಳನ್ನೂ ಕಟ್ಟಿಸಿದನು. ಮತ್ತು ಯೆರೂಸಲೇಮಿನಲ್ಲಿ
ಯೂ ಲೆಬನೋನಿನಲ್ಲಿಯೂ ತನ್ನ ರಾಜ್ಯದ ಎಲ್ಲಾ
ಪ್ರಾಂತಗಳಲ್ಲಿಯೂ ತನ್ನ ಮನಸ್ಸಿಗೆ ಬಂದವುಗಳ
ನ್ನೆಲ್ಲಾ ಕಟ್ಟಿಸಿದನು. ಇದಲ್ಲದೆ ಇಸ್ರಾಯೇಲ್ಯರಿಂದ
ಸಂಹೃತರಾಗದೆ ಕಾನಾನ್‌ದೇಶದಲ್ಲಿ ಉಳಿದ ಹಿತ್ತಿಯ
ಅಮೋರಿಯ ಪೆರಿಜೀಯ ಹಿವ್ವಿಯ ಯೆಬೂಸಿಯ
ಮೊದಲಾದ ಅನ್ಯಜನಾಂಗಗಳ ಸಂತಾನದವರೆಲ್ಲರನ್ನೂ

8 [ತನ್ನ ಕೆಲಸಕ್ಕಾಗಿ] ಬಿಟ್ಟಿಹಿಡಿದನು. ಅವರು ಇಂದಿನ
9 ವರೆಗೂ ಬಿಟ್ಟೀಕೆಲಸದವರಾಗಿರುತ್ತಾರೆ. ಆದರೆ ಸೊ
ಲೊಮೋನನು ತನ್ನ ಕೆಲಸಕ್ಕಾಗಿ ಇಸ್ರಾಯೇಲ್ಯರನ್ನು
ಬಿಟ್ಟಿಹಿಡಿಯಲಿಲ್ಲ. ಅವರನ್ನು ಸೈನಿಕರನ್ನಾಗಿಯೂ
ಅಧಿಪತಿಗಳನ್ನಾಗಿಯೂ 1)ಸರದಾರರನ್ನಾಗಿಯೂ ರಥಾ
ಶ್ವಬಲಗಳ ನಾಯಕರನ್ನಾಗಿಯೂ ನೇಮಿಸಿಕೊಂಡನು.
10 ಈ ಇನ್ನೂರೈವತ್ತು ಮಂದಿ ಮುಖ್ಯಾಧಿಪತಿಗಳು ಅರಸ
ನಾದ ಸೊಲೊಮೋನನ ಆಳುಗಳ ಮೇಲೆ ಅಧಿಕಾರಿಗ
ಳಾಗಿದ್ದರು.
11 ಸೊಲೊಮೋನನು—ಯಾವ ಯಾವ ಸ್ಥಳಗಳಲ್ಲಿ
ಯೆಹೋವನ ಮಂಜೂಷವಿತ್ತೋ ಅವು ಪವಿತ್ರಸ್ಥಾನ
ಗಳೇ; ಆದದರಿಂದ ಇಸ್ರಾಯೇಲ್ಯರ ಅರಸನಾದ
ದಾವೀದನ ಮನೆಯಲ್ಲಿ ಫರೋಹನ ಮಗಳಾದ ನನ್ನ
ಹೆಂಡತಿಯು ವಾಸಿಸಬಾರದು ಅಂದುಕೊಂಡು ಆಕೆ
ಯನ್ನು ದಾವೀದನಗರದಿಂದ ತಾನು ಆಕೆಗೋಸ್ಕರ
ಕಟ್ಟಿಸಿದ ಮಂದಿರಕ್ಕೆ ಕರಕೊಂಡು ಬಂದನು.
12 ಆ ಕಾಲದಿಂದ ಸೊಲೊಮೋನನು, ತಾನು ಯೆಹೋ
ವನಿಗೋಸ್ಕರ ಮಂಟಪದ ಮುಂದೆ ಕಟ್ಟಿಸಿದ ಯೆಹೋ
13 ವನ ಯಜ್ಞವೇದಿಯ ಮೇಲೆ ಮೋಶೆಯ ಆಜ್ಞೆ
ಯಂತೆ ಸಬ್ಬತ್‌ದಿವಸ, ಅಮಾವಾಸ್ಯೆ ಇವುಗಳಲ್ಲಿಯೂ
ಹುಳಿಯಿಲ್ಲದ ರೊಟ್ಟಿಗಳ ಜಾತ್ರೆ, ಪಂಚಾಶತ್ತಮ
ದಿನದ ಜಾತ್ರೆ, ಪರ್ಣಶಾಲೆಗಳ ಜಾತ್ರೆ ಎಂಬೀ ಮೂರು
ವಾರ್ಷಿಕಜಾತ್ರೆಗಳಲ್ಲಿಯೂ ಆಯಾ ದಿವಸಗಳಿಗೆ ನೇ
ಮಕವಾದ ಸರ್ವಾಂಗಹೋಮಗಳನ್ನು ಸಮರ್ಪಿಸು
14 ತ್ತಿದ್ದನು. ಇದಲ್ಲದೆ ತನ್ನ ತಂದೆಯಾದ ದಾವೀದನ
ವಿಧಿಗನುಸಾರವಾಗಿ ಯಾಜಕವರ್ಗಗಳವರನ್ನೂ ಲೇವಿ
ಯರನ್ನೂ ಅವರವರ ಸೇವಾವೃತ್ತಿಗೆ ನೇಮಿಸಿದನು.
ಲೇವಿಯರು ಆಯಾ ದಿನದ ನೇಮದ ಪ್ರಕಾರ ದೇವ
ಭಜನೆಮಾಡಿ ಯಾಜಕರ ಕೈಕೆಳಗೆ ಸೇವೆಮಾಡುತ್ತಲೂ
ದ್ವಾರಪಾಲಕರು ತಮ್ಮ ತಮ್ಮ ವರ್ಗಗಳ ಸರತಿಯ
ಮೇಲೆ ಆಯಾ ಬಾಗಲುಗಳನ್ನು ಕಾಯುತ್ತಲೂ ಇರ
ಬೇಕಾಯಿತು. ಇದೇ ದೇವರ ಮನುಷ್ಯನಾದ ದಾವೀದ
15 ರಾಜನ ಅಪ್ಪಣೆ. ಅವನು ಯಾಜಕರನ್ನೂ ಲೇವಿಯ
ರನ್ನೂ ಭಂಡಾರಗಳನ್ನೂ ಕುರಿತು ಕೊಟ್ಟ ಅಪ್ಪಣೆ
16 ಯನ್ನು ಅವರು ಸ್ವಲ್ಪವಾದರೂ ಮೀರಲಿಲ್ಲ. ಈ
ಪ್ರಕಾರ ಅಸ್ತಿವಾರ ಮೊದಲುಗೊಂಡು ಸಮಾಪ್ತಿಯ
ವರೆಗೂ ಸೊಲೊಮೋನನ ಎಲ್ಲಾ ಕೆಲಸವೂ ಮುಗಿದು
ಯೆಹೋವನ ಆಲಯವು ಸಿದ್ಧವಾಯಿತು.
17 ಆ ಮೇಲೆ ಸೊಲೊಮೋನನು ಎದೋಮ್ ದೇಶದ
ಸಮುದ್ರತೀರದಲ್ಲಿರುವ ಎಚ್ಯೋನ್ಗೆಬೆರ್, ಏಲೋತ್
18 ಎಂಬ ಊರುಗಳಿಗೆ ಹೋದನು. ಹೂರಾಮನು
ಅವನಿಗೆ ತನ್ನ ಆಳುಗಳ ಮುಖಾಂತರ ಹಡಗುಗಳನ್ನು
ಕಳುಹಿಸಿದ್ದಲ್ಲದೆ ಸಮುದ್ರಪ್ರಯಾಣದಲ್ಲಿ ನಿಪುಣರಾದ
ನಾವಿಕರನ್ನೂ ಕಳುಹಿಸಿದನು. ಅವರು ಸೊಲೊಮೋ
ನನ ಸೇವಕರೊಡನೆ ಓಫೀರಿಗೆ ಪ್ರಯಾಣಮಾಡಿ ಅಲ್ಲಿಂದ
ಅರಸನಾದ ಸೊಲೊಮೋನನಿಗೆ 2)ನಾನೂರೈವತ್ತು ತ
ಲಾಂತು ಬಂಗಾರವನ್ನು ತಂದುಕೊಟ್ಟರು.

ಶೆಬಾ ದೇಶದ ರಾಣಿಯು ಸೊಲೊಮೋನನ ದರ್ಶನಕ್ಕೆ ಬಂದದ್ದು.

ಶೆಬದ ರಾಣಿಯು ಸೊಲೊಮೋನನ ಕೀರ್ತಿಯನ್ನು 9
ಕೇಳಿ ಅವನನ್ನು ಒಗಟುಗಳಿಂದ ಪರೀಕ್ಷಿಸುವದಕ್ಕೆ
ಯೆರೂಸಲೇಮಿಗೆ ಬಂದಳು. ಆಕೆಯು ಸುಗಂಧ
ದ್ರವ್ಯ, ಅಪರಿಮಿತವಾದ ಬಂಗಾರ, ರತ್ನ ಇವುಗಳನ್ನು
ಒಂಟೆಗಳ ಮೇಲೆ ಹೇರಿಸಿಕೊಂಡು ಮಹಾ ಪರಿವಾರ
ದೊಡನೆ ಸೊಲೊಮೋನನ ಬಳಿಗೆ ಬಂದು ತನ್ನ ಮನಸ್ಸಿ
ನಲ್ಲಿ ಗೊತ್ತುಮಾಡಿಕೊಂಡಿದ್ದ ಎಲ್ಲಾ ವಿಷಯಗಳನ್ನು
ಕುರಿತು ಅವನೊಡನೆ ಸಂಭಾಷಿಸಿದಳು. ಸೊಲೊಮೋ 2
ನನು ಆಕೆಯ ಪ್ರಶ್ನೆಗಳಿಗೆಲ್ಲಾ ಉತ್ತರಕೊಟ್ಟನು;
ಅವುಗಳಲ್ಲಿ ಅವನಿಗೆ ತಿಳಿಯದಂಥದು ಒಂದೂ ಇರ
ಲಿಲ್ಲವಾದದರಿಂದ ಎಲ್ಲವುಗಳಿಗೂ ಉತ್ತರಕೊಟ್ಟನು.
ಶೆಬದ ರಾಣಿಯು ಸೊಲೊಮೋನನ ಜ್ಞಾನ, ಅವನು 3
ಕಟ್ಟಿಸಿದ ಅರಮನೆ, ಅವನ ಭೋಜನಪೀಠದ ಆಹಾರ, 4
ಆ ಪೀಠದ ಸುತ್ತಲಿರುವ ಉದ್ಯೋಗಸ್ಥರ ಆಸನ
ಗಳು, ಅವನ ಪರಿಚಾರಕರ ಸೇವಾಕ್ರಮ ಮತ್ತು
ಅವರ ಉಡುಪುಗಳು, ಅವನ ಪಾನಸೇವಕರು, ಅವರ
ಉಡುಪುಗಳು ಇವುಗಳನ್ನೂ ಅವನು ಯೆಹೋವನ
ಆಲಯದಲ್ಲಿ 3)ಸಮರ್ಪಿಸುತ್ತಿದ್ದ ಸರ್ವಾಂಗಹೋಮ
ಗಳನ್ನೂ ನೋಡಿದಾಗ ವಿಸ್ಮಿತಳಾಗಿ ಅವನಿಗೆ—ನಾನು 5
ನನ್ನ ದೇಶದಲ್ಲಿ ನಿನ್ನ ಜ್ಞಾನವನ್ನೂ ಕೃತ್ಯಗಳನ್ನೂ
ಕುರಿತು ಕೇಳಿದ್ದು ಸತ್ಯವಾಗಿದೆ. ನಾನಾಗಿ ಇಲ್ಲಿಗೆ 6
ಬಂದು ಕಣ್ಣಾರೆ ನೋಡುವದಕ್ಕಿಂತ ಮೊದಲು ಜನರು
ಹೇಳಿದ ಸುದ್ದಿಯನ್ನು ನಂಬಲಿಲ್ಲ; ಈಗ ನೋಡಿದರೆ
ನಿನ್ನ ಜ್ಞಾನಾತಿಶಯವು ನಾನು ಕೇಳಿದ್ದಕ್ಕಿಂತ ಹೆಚ್ಚಾ
ಗಿದೆ; ಜನರು ನನಗೆ ಇದರಲ್ಲಿ ಅರ್ಧವನ್ನಾದರೂ ಹೇಳ
ಲಿಲ್ಲ. ನಿನ್ನ ಪ್ರಜೆಗಳೂ ಸದಾ ನಿನ್ನ ಮುಂದೆ ನಿಂತು 7
ಕೊಂಡು ನಿನ್ನ ಜ್ಞಾನವಾಕ್ಯಗಳನ್ನು ಕೇಳುವ ನಿನ್ನ
ಸೇವಕರೂ ಧನ್ಯರು. ನಿನ್ನನ್ನು ಮೆಚ್ಚಿ ತನ್ನ ಸನ್ನಿಧಿ 8
ಯಲ್ಲಿ ಅರಸನಾಗುವದಕ್ಕೆ ನಿನ್ನನ್ನು ತನ್ನ ಸಿಂಹಾಸನದ
ಮೇಲೆ ಕುಳ್ಳಿರಿಸಿದ ನಿನ್ನ ದೇವರಾದ ಯೆಹೋವನಿಗೆ
ಸ್ತೋತ್ರವಾಗಲಿ; ನಿನ್ನ ದೇವರು ಇಸ್ರಾಯೇಲ್ಯರನ್ನು
ಪ್ರೀತಿಸಿ ಅವರನ್ನು ನಿರಂತರವಾಗಿ ಸ್ಥಿರಗೊಳಿಸಬೇಕೆಂದಿ
ರುವದರಿಂದ ಅವರ ನೀತಿನ್ಯಾಯಗಳನ್ನು ಸ್ಥಾಪಿಸುವದ
ಕ್ಕೋಸ್ಕರ ನಿನ್ನನ್ನೇ ಅರಸನನ್ನಾಗಿ ನೇಮಿಸಿದ್ದಾನೆ
ಎಂದು ಹೇಳಿದಳು. ಆಕೆಯು ಅರಸನಿಗೆ 4)ನೂರಿಪ್ಪತ್ತು 9
ತಲಾಂತು ಬಂಗಾರವನ್ನೂ ಅಪರಿಮಿತಸುಗಂಧದ್ರವ್ಯ
ವನ್ನೂ ರತ್ನಗಳನ್ನೂ ಕೊಟ್ಟಳು. ಶೆಬದ ರಾಣಿಯು
ಅರಸನಾದ ಸೊಲೊಮೋನನಿಗೆ ಕೊಟ್ಟ ಸುಗಂಧ
ದ್ರವ್ಯಕ್ಕೆ ಸಮಾನವಾದದ್ದು ಇಲ್ಲ.
ಹೂರಾಮನ ಮತ್ತು ಸೊಲೊಮೋನನ ಆಳುಗಳು 10
ಓಫೀರ್‌ದೇಶದ ಬಂಗಾರವನ್ನಲ್ಲದೆ ಸುಗಂಧದ ಮರ
ವನ್ನೂ ರತ್ನಗಳನ್ನೂ ತಂದರು. ಅರಸನು ಸುಗಂಧದ 11

1) ಪಾಠಾಂತರ: ಸರದಾರರ ಮುಖ್ಯಸ್ಥರನ್ನಾಗಿಯೂ.
2) ಅಂದರೆ, ಸುಮಾರು ಹದಿನೂರು ಲಕ್ಷ ಐವತ್ತು ಸಾವಿರ ತೊಲೆ.
3) ಪಾಠಾಂತರ: ಹತ್ತಿಹೋಗುವ ಮೆಟ್ಟುಪ್ಪರಿಗೆಗಳನ್ನು.
4) ಸುಮಾರು ಮೂರು ಲಕ್ಷ ಅರುವತ್ತು ಸಾವಿರ ತೊಲೆ.

ಮರದಿಂದ ದೇವಾಲಯ, ಅರಮನೆ ಇವುಗಳಿಗೆ [1]ಸೋ
ಪಾನಗಳನ್ನೂ ಗಾಯಕರಿಗೋಸ್ಕರ ಕಿನ್ನರಿಗಳನ್ನೂ
ಸ್ವರಮಂಡಲಗಳನ್ನೂ ಮಾಡಿಸಿದನು. ಇಂಥ [ಸುಗಂ
ಧದ ಮರವು] ಮುಂಚೆ ಯೆಹೂದದೇಶದಲ್ಲಿ ಕಾಣ
ಲಿಲ್ಲ.
12 ಅರಸನಾದ ಸೊಲೊಮೋನನು ಶೆಬದ ರಾಣಿಯಿಂದ
ತನಗೆ ದೊರಕಿದ ಬಹುಮಾನಕ್ಕೆ ಪ್ರತಿಯಾಗಿ ಆಕೆಗೆ
ತಾನು ಕೊಟ್ಟ ವಸ್ತುಗಳನ್ನಲ್ಲದೆ ಆಕೆಯು ಕೇಳಿದವು
ಗಳನ್ನೆಲ್ಲಾ ಕೊಟ್ಟುಬಿಟ್ಟನು. ಅನಂತರ ಆಕೆಯು
ತನ್ನ ಪರಿವಾರದವರೊಡನೆ ಸ್ವದೇಶಕ್ಕೆ ಹೊರಟುಹೋ
ದಳು.

ಸೊಲೊಮೋನನ ವೈಭವವೂ ಚರಿತ್ರಸಮಾಪ್ತಿಯೂ.

13 ಸೊಲೊಮೋನನಿಗೆ ದೇಶಾಂತರವ್ಯಾಪಾರಿಗಳೂ ವರ್ತ
ಕರೂ ಅರಬಸ್ಥಾನದ ಅರಸರೂ ದೇಶಾಧಿಪತಿಗಳೂ
14 ತರುತ್ತಿದ್ದ ಬೆಳ್ಳಿಬಂಗಾರವಲ್ಲದೆ ಪ್ರತಿವರುಷ [2]ಆರು
ನೂರರುವತ್ತಾರು ತಲಾಂತು ಬಂಗಾರವು ದೊರಕು
15 ತ್ತಿತ್ತು. ಅರಸನಾದ ಸೊಲೊಮೋನನು ಬಂಗಾ
ರದ ತಗಡಿನಿಂದ ಇನ್ನೂರು ಗುರಾಣಿಗಳನ್ನು ಮಾಡಿಸಿ
ದನು; ಪ್ರತಿಯೊಂದು ಗುರಾಣಿಗೆ ಆರುನೂರು ತೊಲೆ
16 ಬಂಗಾರ ಹಿಡಿಯಿತು. ಇದಲ್ಲದೆ ಅವನು ಬಂಗಾರದ
ತಗಡಿನಿಂದ ಮುನ್ನೂರು ಖೇಡ್ಯಗಳನ್ನು ಮಾಡಿಸಿದನು;
ಪ್ರತಿಯೊಂದು ಖೇಡ್ಯಕ್ಕೆ ಮುನ್ನೂರು ತೊಲೆ ಬಂಗಾರ
ಹಿಡಿಯಿತು. ಅವನು ಇವುಗಳನ್ನು ಲೆಬನೋನಿನ
ತೋಪು ಎನಿಸಿಕೊಳ್ಳುವ ಮಂದಿರದಲ್ಲಿರಿಸಿದನು.
17 ಇದಲ್ಲದೆ ಅರಸನು ದೊಡ್ಡದಾದ ಒಂದು ದಂತ
ಸಿಂಹಾಸನವನ್ನು ಮಾಡಿಸಿ ಅದನ್ನು ಚೊಕ್ಕ ಬಂಗಾ
18 ರದ ತಗಡಿನಿಂದ ಹೊದಿಸಿದನು. [3]ಅದಕ್ಕೆ ಹೊಂದಿಕೆ
ಯಾಗಿ ಆರು ಮೆಟ್ಲುಗಳೂ ಬಂಗಾರದ ಪಾದಪೀಠವೂ
ಇದ್ದವು; ಆಸನಕ್ಕೆ ಎರಡು ಕೈಗಳೂ ಅವುಗಳ ಹತ್ತಿರ
19 ಎರಡು ಸಿಂಹಗಳೂ ಇದ್ದವು. ಆರು ಮೆಟ್ಲುಗಳ ಎರಡು
ಕಡೆಗಳಲ್ಲಿಯೂ ಒಟ್ಟು ಹನ್ನೆರಡು ಸಿಂಹಗಳು ನಿಂತಿ
ದ್ದವು. ಇಂಥ ಸಿಂಹಾಸನವು ಬೇರೆ ಯಾವ ರಾಜ್ಯದಲ್ಲಿ
20 ಯೂ ಇರಲಿಲ್ಲ. ಅರಸನಾದ ಸೊಲೊಮೋನನ ಎಲ್ಲಾ
ಪಾನಪಾತ್ರೆಗಳು ಬಂಗಾರದವುಗಳು. ಲೆಬನೋನಿನ
ತೋಪು ಎನಿಸಿಕೊಳ್ಳುವ ಮಂದಿರದ ಎಲ್ಲಾ ಸಾಮಾನು
ಗಳು ಚೊಕ್ಕ ಬಂಗಾರದವುಗಳು. ಸೊಲೊಮೋನನ
21 ಕಾಲದಲ್ಲಿ ಬೆಳ್ಳಿಗೆ ಬೆಲೆಯೇ ಇರಲಿಲ್ಲ. ಅರಸನ
ಹಡಗುಗಳು ಹೂರಾಮನ ನಾವಿಕರ ಜೊತೆಯಲ್ಲಿ
ತಾರ್ಷೀಷಿಗೆ ಹೋಗಿ ಮೂರು ವರುಷಕ್ಕೊಮ್ಮೆ ಬಂಗಾರ
ಬೆಳ್ಳಿ ದಂತ ಕಪಿ ನವಿಲು ಇವುಗಳನ್ನು ತರುತ್ತಿದ್ದವು.
22 ಈ ಪ್ರಕಾರ ಅರಸನಾದ ಸೊಲೊಮೋನನು ಐಶ್ವರ್ಯ
ದಲ್ಲಿಯೂ ಜ್ಞಾನದಲ್ಲಿಯೂ ಭೂಲೋಕದ ಎಲ್ಲಾ
23 ಅರಸರಿಗಿಂತ ಮಿಗಿಲಾಗಿದ್ದನು. ಭೂರಾಜರೆಲ್ಲರೂ
ದೇವರು ಅವನಿಗೆ ಅನುಗ್ರಹಿಸಿದ ಜ್ಞಾನವಾಕ್ಯಗಳನ್ನು
24 ಕೇಳುವದಕ್ಕೋಸ್ಕರ ಅವನ ದರ್ಶನಕ್ಕೆ ಬಂದರು. ಅವ
ರೆಲ್ಲರೂ ಅವನಿಗೆ ವರುಷ ವರುಷ ಬೆಳ್ಳಿ ಬಂಗಾರದ
ಸಾಮಾನು, ಉಡುಪು, ಯುದ್ಧಾಯುಧ, ಸುಗಂಧ
ದ್ರವ್ಯ, ಕುದುರೆ, ಹೇಸರಕತ್ತೆ ಇವುಗಳನ್ನು ಕಾಣಿಕೆ
ಯಾಗಿ ಕೊಡುತ್ತಿದ್ದರು. ಸೊಲೊಮೋನನ ಅಶ್ವ
ಸಹಿತವಾದ ರಥಗಳು ನಾಲ್ಕು ಸಾವಿರ, ರಾಹುತರು
ಹನ್ನೆರಡು ಸಾವಿರ. ಇವುಗಳನ್ನು ಯೆರೂಸಲೇಮಿನಲ್ಲಿ
ತನ್ನ ಬಳಿಯಲ್ಲಿಯೂ ರಥಗಳಿಗೋಸ್ಕರ ನೇಮಿಸಿದ
ಪಟ್ಟಣಗಳಲ್ಲಿಯೂ ಇರಿಸಿದನು. ಅವನು ಯೂಫ್ರೇ
ಟೀಸ್ ನದಿ ಮೊದಲುಗೊಂಡು ಫಿಲಿಷ್ಟಿಯರ ಮತ್ತು
ಐಗುಪ್ತ್ಯರ ದೇಶಗಳ ವರೆಗೂ ಇರುವ ಎಲ್ಲಾ ರಾಜ
ರನ್ನು ಆಳುತ್ತಿದ್ದನು. ಅರಸನ ಮುಖಾಂತರವಾಗಿ
ಯೆರೂಸಲೇಮಿನಲ್ಲಿ ಬೆಳ್ಳಿಯು ಕಲ್ಲಿನ ಹಾಗೂ ದೇವ
ದಾರು ಮರಗಳು ಇಳಕಲಿನ ಪ್ರದೇಶದಲ್ಲಿ ಬೆಳೆಯುವ
ಅತ್ತಿಮರಗಳ ಹಾಗೂ ಹೇರಳವಾದವು. ಸೊಲೊಮೋ
ನನಿಗೋಸ್ಕರ ಐಗುಪ್ತ ಮುಂತಾದ ಎಲ್ಲಾ ದೇಶಗಳಿಂದ
ಕುದುರೆಗಳನ್ನು ತರುತ್ತಿದ್ದರು.
ಸೊಲೊಮೋನನ ಉಳಿದ ಪೂರ್ವೋತ್ತರಚರಿತ್ರೆ
ಯು ಪ್ರವಾದಿಯಾದ ನಾತಾನನ ಚರಿತ್ರೆ, ಶೀಲೋವಿ
ನವನಾದ ಅಹೀಯನ ಪ್ರವಾದನೆ, ದಿವ್ಯದರ್ಶಿಯಾದ
ಇದ್ದೋವನು ನೆಬಾಟನ ಮಗನಾದ ಯಾರೊಬ್ಬಾಮ
ನನ್ನು ಕುರಿತು ನುಡಿದ ದರ್ಶನೋಕ್ತಿ ಎಂಬ ಗ್ರಂಥ
ಗಳಲ್ಲಿ ಬರೆದಿರುತ್ತದೆ. ಸೊಲೊಮೋನನು ಯೆರೂ
ಸಲೇಮಿನಲ್ಲಿದ್ದುಕೊಂಡು ಎಲ್ಲಾ ಇಸ್ರಾಯೇಲ್ಯರನ್ನು
ನಾಲ್ವತ್ತು ವರುಷ ಆಳಿದನಂತರ ಪಿತೃಗಳ ಬಳಿಗೆ ಸೇರಿ
ದನು; ಅವನ ಶವವನ್ನು ಅವನ ತಂದೆಯಾದ ದಾವೀ
ದನ ಪಟ್ಟಣದಲ್ಲಿ ಸಮಾಧಿಮಾಡಿದರು; ಅವನಿಗೆ ಬದ
ಲಾಗಿ ಅವನ ಮಗನಾದ ರೆಹಬ್ಬಾಮನು ಅರಸನಾ
ದನು.

ರಾಜ್ಯಭೇದವಾದಂದಿನಿಂದ ಯೆಹೂದರಾಜರ
ಚರಿತ್ರೆ. 10—36.

ರಾಜ್ಯಭೇದ.

ರೆಹಬ್ಬಾಮನು ಶೆಕೆಮಿಗೆ ಹೋದನು. ಅಲ್ಲಿ 1
ಎಲ್ಲಾ ಇಸ್ರಾಯೇಲ್ಯರೂ ಅವನನ್ನು ಅರಸನನ್ನಾಗಿ
ಮಾಡುವದಕ್ಕೆ ಕೂಡಿಬಂದಿದ್ದರು. ಇದಲ್ಲದೆ ಅರಸನಾದ
ಸೊಲೊಮೋನನಿಗೆ ತಪ್ಪಿಸಿಕೊಂಡು ಐಗುಪ್ತಕ್ಕೆ ಓಡಿ
ಹೋಗಿದ್ದ ನೆಬಾಟನ ಮಗನಾದ ಯಾರೊಬ್ಬಾಮನು
ನಡೆದ ಸಂಗತಿಗಳ ವರ್ತಮಾನವನ್ನು ಕೇಳಿದೊಡನೆ
ಐಗುಪ್ತದಿಂದ ಹಿಂದಿರುಗಿ ಬಂದಿದ್ದನು. ಇಸ್ರಾಯೇ
ಲ್ಯರು ಅವನನ್ನೂ ತಮ್ಮ ಬಳಿಗೆ ಕರಿಸಿಕೊಂಡರು.
ಅವನು ಎಲ್ಲಾ ಇಸ್ರಾಯೇಲ್ಯರೊಡನೆ ರೆಹಬ್ಬಾಮನ
ಬಳಿಗೆ ಹೋಗಿ ಅವನಿಗೆ— ನಿನ್ನ ತಂದೆಯು ನಮ್ಮ
ಮೇಲೆ ಭಾರವಾದ ನೊಗವನ್ನು ಹೇರಿದನು; ನಿನ್ನ ತಂದೆ
ಯು ನೇಮಿಸಿದ ಬಿಟ್ಟೀಕೆಲಸವನ್ನು ನೀನು ಕಡಿಮೆ
ಮಾಡಿ ನಮ್ಮ ಮೇಲಿರುವ ಭಾರವಾದ ನೊಗವನ್ನು
ಹಗುರಮಾಡುವದಾದರೆ ನಾವು ನಿನ್ನನ್ನು ಸೇವಿಸುವೆವು

1) ಅಥವಾ, ಕಟಕಟೆಗಳನ್ನು. 2) ಸುಮಾರು ಹತ್ತೊಂಭತ್ತು ಲಕ್ಷ ತೊಂಭತ್ತೆಂಟು ಸಾವಿರ ತೊಲೆ. 3) ಮೂಲಾರ್ಥ ಸ್ಪಷ್ಟವಿಲ್ಲ.

5 ಎಂದು ಹೇಳಲು ಅವನು—ನೀವು ಮೂರು ದಿನಗಳಾದ
ನಂತರ ತಿರಿಗಿ ಬನ್ನಿರಿ ಎಂದು ಉತ್ತರಕೊಟ್ಟನು; ಜನರು
6 ಹೋದರು. ಆಗ ಅರಸನಾದ ರೆಹಬ್ಬಾಮನು ತನ್ನ
ತಂದೆಯಾದ ಸೊಲೊಮೋನನ ಕಾಲದಲ್ಲಿ ಮಂತ್ರಿಗ
ಳಾಗಿದ್ದ ಹಿರಿಯರನ್ನು ಕೂಡಿಸಿ ತಾನು ಜನರಿಗೆ ಕೊಡ
ತಕ್ಕ ಉತ್ತರದ ವಿಷಯದಲ್ಲಿ ಅವರ ಆಲೋಚನೆಯನ್ನು
7 ಕೇಳಿದನು. ಅವರು ಅವನಿಗೆ—ನೀನು ಈ ಜನರಿಗೆ
ದಯತೋರಿಸಿ ಅವರನ್ನು ಮೆಚ್ಚಿಸುವ ಒಳ್ಳೇ ಉತ್ತರ
ಕೊಡುವದಾದರೆ ಅವರು ಯಾವಾಗಲೂ ನಿನಗೆ ಒಳ
8 ಗಾಗಿರುವರು ಅಂದರು. ಆದರೆ ಅವನು ಹಿರಿಯರ ಆ
ಲೋಚನೆಯನ್ನು ನಿರಾಕರಿಸಿ ತನ್ನ ಸಂಗಡಲೇ ಬೆಳೆದು
ತನಗೆ ಮಂತ್ರಿಗಳೂ ಆದ ಯೌವನಸ್ಥರನ್ನು ಕರಿಸಿ—
9 ನನ್ನ ತಂದೆಯು ಹೇರಿದ ನೊಗವನ್ನು ಹಗುರಮಾಡ
ಬೇಕೆಂದು ಬೇಡಿಕೊಳ್ಳುವ ಈ ಜನರಿಗೆ ಯಾವ ಉತ್ತರ
ವನ್ನು ಕೊಡತಕ್ಕದ್ದು? ಈ ವಿಷಯದಲ್ಲಿ ನಿಮ್ಮ
10 ಆಲೋಚನೆ ಏನು ಎಂದು ಕೇಳಲು ಅವರು ಅವನಿಗೆ—
ನಿನ್ನ ತಂದೆಯು ನಮ್ಮ ಮೇಲೆ ಹೇರಿರುವ ಭಾರವಾದ
ನೊಗವನ್ನು ಹಗುರಮಾಡು ಎಂಬದಾಗಿ ನಿನ್ನನ್ನು
ಬೇಡಿಕೊಂಡ ಜನರಿಗೆ ನೀನು—ನನ್ನ ತಂದೆಯ ನಡುವಿ
11 ಗಿಂತ ನನ್ನ ಕಿರಿಬೆರಳು ದಪ್ಪವಾಗಿದೆ; ನನ್ನ ತಂದೆಯು
ನಿಮ್ಮ ಮೇಲೆ ಭಾರವಾದ ನೊಗವನ್ನು ಹೇರಿರುವದು
ನಿಜ; ಆದರೆ ನಾನು ಅದಕ್ಕೆ ಇನ್ನೂ ಹೆಚ್ಚಿನ ಭಾರ
ವನ್ನು ಕೂಡಿಸುತ್ತೇನೆ; ಅವನು ನಿಮ್ಮನ್ನು ಬಾರುಕೋ
ಲುಗಳಿಂದ ಹೊಡೆದದ್ದು ನಿಜ; ನಾನಾದರೋ ನಿಮ್ಮ
ನ್ನು [1]ಮುಳ್ಳುಕೊರಡೆಗಳಿಂದ ದಂಡಿಸುವೆನು ಎಂಬ
12 ದಾಗಿ ಹೇಳಬೇಕು ಎಂದು ಉತ್ತರಕೊಟ್ಟರು. ಯಾರೊ
ಬ್ಬಾಮನೂ ಎಲ್ಲಾ ಜನರೂ ಅರಸನಾದ ರೆಹಬ್ಬಾಮನ
ಅಪ್ಪಣೆಯಂತೆ ಮೂರನೆಯ ದಿನದಲ್ಲಿ ತಿರಿಗಿ ಅವನ
13 ಬಳಿಗೆ ಬಂದರು. ಅರಸನು ಅವರಿಗೆ ಕಠಿನವಾದ ಉತ್ತ
ರವನ್ನು ಕೊಟ್ಟನು; ಅವನು ಹಿರಿಯರ ಆಲೋಚನೆ
14 ಯನ್ನು ನಿರಾಕರಿಸಿ ಯೌವನಸ್ಥರ ಆಲೋಚನೆಗನುಸಾ
ರವಾಗಿ ಜನರಿಗೆ—ನನ್ನ ತಂದೆಯು ನಿಮ್ಮ ಮೇಲೆ
ಭಾರವಾದ ನೊಗವನ್ನು ಹೇರಿರುವದು ನಿಜ; ಆದರೆ
ನಾನು ಅದಕ್ಕೆ ಇನ್ನೂ ಹೆಚ್ಚಿನ ಭಾರವನ್ನು ಕೂಡಿಸು
ವೆನು. ಅವನು ನಿಮ್ಮನ್ನು ಬಾರುಕೋಲುಗಳಿಂದ
ಹೊಡೆದದ್ದು ನಿಜ; ನಾನಾದರೋ ನಿಮ್ಮನ್ನು ಮು
ಳ್ಳುಕೊರಡೆಗಳಿಂದ ದಂಡಿಸುವೆನು ಎಂದು ನುಡಿದನು.
15 ಅರಸನು ಜನರ ಮಾತನ್ನು ಕೇಳದೆಹೋದದ್ದು ದೈವ
ಯೋಗದಿಂದಲೇ. ಈ ಪ್ರಕಾರ ಯೆಹೋವನು
ಶೀಲೋವಿನವನಾದ ಅಹೀಯನ ಮುಖಾಂತರವಾಗಿ
ನೆಬಾಟನ ಮಗನಾದ ಯಾರೊಬ್ಬಾಮನಿಗೆ ಹೇಳಿಸಿದ
16 ಮಾತು ನೆರವೇರಿತು. ಅರಸನು ತಮ್ಮ ಮಾತನ್ನು
ಲಕ್ಷ್ಯಸಲಿಲ್ಲವೆಂದು ತಿಳಿದು ಇಸ್ರಾಯೇಲ್ಯರೆಲ್ಲರೂ ಅವ
ನಿಗೆ—ದಾವೀದನಲ್ಲಿ ನಮಗೇನು ಪಾಲು? ಇಷಯನ
ಮಗನಲ್ಲಿ ನಮಗೇನು ಬಾಧ್ಯತೆ? ಇಸ್ರಾಯೇಲ್ಯರೇ,
ನಿಮ್ಮ ನಿಮ್ಮ ನಿವಾಸಗಳಿಗೆ ಹೋಗಿರಿ; ದಾವೀದನ
ವರೇ, ನಿಮ್ಮ ಕುಲವನ್ನು ನೀವೇ ನೋಡಿಕೊಳ್ಳಿರಿ
ಎಂದು ಹೇಳಿ ತಮ್ಮ ತಮ್ಮ ನಿವಾಸಗಳಿಗೆ ಹೋದರು.
ಯೆಹೂದಪ್ರಾಂತದಲ್ಲಿದ್ದ ಇಸ್ರಾಯೇಲ್ಯರಾದರೋ 17
ಅರಸನಾದ ರೆಹಬ್ಬಾಮನ ಅಧೀನದಲ್ಲಿದ್ದರು. ರೆಹ 18
ಬ್ಬಾಮನು ಬಿಟ್ಟೀಕೆಲಸದವರ ಮೇಲ್ವಿಚಾರಕನಾದ
ಹದೋರಾಮನನ್ನು ಇಸ್ರಾಯೇಲ್ಯರ ಬಳಿಗೆ ಕಳುಹಿ
ಸಲು ಅವರು ಇವನನ್ನು ಕಲ್ಲೆಸೆದು ಕೊಂದರು. ಆಗ
ಅರಸನಾದ ರೆಹಬ್ಬಾಮನು ಬೇಗನೆ ರಥವನ್ನೇರಿ ಯೆ
ರೂಸಲೇಮಿಗೆ ಓಡಿಹೋದನು. ಇಸ್ರಾಯೇಲ್ಯರು 19
ಅಂದಿನಿಂದ ಇಂದಿನ ವರೆಗೂ ದಾವೀದನ ಕುಟುಂಬದವ
ರೊಡನೆ ಸಮಾಧಾನವಾಗಲೇ ಇಲ್ಲ.

11 ರೆಹಬ್ಬಾಮನು ಯೆರೂಸಲೇಮನ್ನು ಮುಟ್ಟಿದ
ನಂತರ ಇಸ್ರಾಯೇಲ್ಯರಿಗೆ ವಿರೋಧವಾಗಿ ಯುದ್ಧ
ಮಾಡುವದಕ್ಕೂ ರಾಜ್ಯವನ್ನು ತಿರಿಗಿ ತನ್ನ ವಶಪಡಿಸಿ
ಕೊಳ್ಳುವದಕ್ಕೂ ಯೆಹೂದ ಬೆನ್ಯಾಮೀನ್ ಕುಲಗ
ಳಿಂದ ಲಕ್ಷದ ಎಂಭತ್ತು ಸಾವಿರ ಮಂದಿ ಶ್ರೇಷ್ಠಸೈನಿಕ
ರನ್ನು ಕೂಡಿಸಿದನು. ಆಗ ದೇವರ ಮನುಷ್ಯನಾದ 2
ಶೆಮಾಯನಿಗೆ—ನೀನು ಹೋಗಿ ಸೊಲೊಮೋನನ 3
ಮಗನೂ ಯೆಹೂದದ ಅರಸನೂ ಆದ ರೆಹಬ್ಬಾಮ
ನಿಗೂ ಯೆಹೂದ ಬೆನ್ಯಾಮೀನ್ ಕುಲಗಳ ಇಸ್ರಾ
ಯೇಲ್ಯರೆಲ್ಲರಿಗೂ—ಯೆಹೋವನು ಇಂತೆನ್ನುತ್ತಾನೆ, 4
ನೀವು ನಿಮ್ಮ ಸಹೋದರರೊಡನೆ ಯುದ್ಧಮಾಡುವ
ದಕ್ಕೆ ಹೋಗಬಾರದು. ಎಲ್ಲರೂ ಹಿಂದಿರುಗಿ ಹೋ
ಗಿರಿ; ಈ ಕಾರ್ಯವು ಯೆಹೋವನಿಂದಾಗಿದೆ ಎಂದು
ಹೇಳಬೇಕು ಎಂಬ ಯೆಹೋವನ ವಾಕ್ಯವುಂಟಾಗಲು
ಅವರು ಯೆಹೋವನ ಮಾತನ್ನು ಕೇಳಿ ಯಾರೊ
ಬ್ಬಾಮನಿಗೆ ವಿರೋಧವಾಗಿ ಹೊರಡದೆ ಹಿಂದಿರುಗಿ
ಹೋದರು.

### ಅರಸನಾದ ರೆಹಬ್ಬಾಮನು.

ರೆಹಬ್ಬಾಮನು ಯೆರೂಸಲೇಮಿನಲ್ಲಿ ವಾಸವಾಗಿದ್ದು 5
ಯೆಹೂದದ ಪಟ್ಟಣಗಳನ್ನು ಭದ್ರಪಡಿಸಿದನು. ಅವು 6
ಯಾವವೆಂದರೆ—ಬೇತ್ಲೆಹೇಮ್, ಏತಾಮ್, ತೆಕೋವ,
ಬೇತ್ಸೂರ್, ಸೋಕೋ, ಅದುಲ್ಲಾಮ್, ಗತ್ 7, 8
ಊರು, ಮಾರೇಷ, ಜೀಫ್, ಅದೋರೈಮ್, ಲಾಕೀಷ್, 9
ಅಜೇಕ, ಚೊರ್ಗ, ಅಯ್ಯಾಲೋನ್, ಹೆಬ್ರೋನ್ ಇವೇ. 10
ಕೋಟೆಕೊತ್ತಲುಗಳುಳ್ಳ ಈ ಪಟ್ಟಣಗಳು ಯೆಹೂದ
ಬೆನ್ಯಾಮೀನ್ ಪ್ರಾಂತದವುಗಳು. ಅವನು ಈ ಕೋಟೆ 11
ಗಳನ್ನು ಬಲಪಡಿಸಿ ನಾಯಕರ ವಶಕ್ಕೆ ಕೊಟ್ಟು ಪ್ರತಿ
ಯೊಂದರಲ್ಲಿ ಆಹಾರಪದಾರ್ಥ ಎಣ್ಣೆ ದ್ರಾಕ್ಷಾರಸ ಇವು
ಗಳನ್ನೂ ಗುರಾಣಿಬರ್ಜಿಗಳನ್ನೂ ಸಂಗ್ರಹಿಸಿಟ್ಟನು; ಈ 12
ಪ್ರಕಾರ ಇವುಗಳನ್ನು ಅತ್ಯಧಿಕವಾಗಿ ಭದ್ರಪಡಿಸಿ
ದನು.

ಯೆಹೂದ ಬೆನ್ಯಾಮೀನ್ ಕುಲಗಳವರು ಅವನ 13
ಸ್ವಾಧೀನದಲ್ಲಿದ್ದದ್ದಲ್ಲದೆ ಬೇರೆ ಎಲ್ಲಾ ಇಸ್ರಾಯೇಲ್
ಪ್ರಾಂತಗಳಲ್ಲಿದ್ದ ಯಾಜಕರೂ ಲೇವಿಯರೂ ಅವನೊ
ಡನೆ ಕೂಡಿಕೊಂಡರು. ಲೇವಿಯರು ಯೆಹೋವನಿಗೆ 14
ಯಾಜಕಸೇವೆಮಾಡದಂತೆ ಯಾರೊಬ್ಬಾಮನೂ ಅವನ
ಮಕ್ಕಳೂ ಅವರನ್ನು ತಳ್ಳಿಬಿಟ್ಟು ತಾವು ಏರ್ಪಡಿ 15

1) ಅಥವಾ, ಚೇಳುಗಳಿಂದ.

ಸಿದ ಪೂಜಾಸ್ಥಳ ಅಜದೇವತೆ ಬಸವಮೂರ್ತಿ ಇವುಗ
ಳಿಗೋಸ್ಕರ ಬೇರೆ ಪೂಜಾರಿಗಳನ್ನು ನೇಮಿಸಿಕೊಂಡದ
ರಿಂದ ಅವರು ಗೋಮಾಳಗಳುಳ್ಳ ತಮ್ಮ ಸ್ವಾಸ್ತ್ಯಗ
ಳನ್ನು ಬಿಟ್ಟು ಯೆಹೂದ ದೇಶಕ್ಕೂ ಯೆರೂಸಲೇಮಿ
16 ಗೂ ಬಂದರು. ಇಸ್ರಾಯೇಲ್ಯರ ಎಲ್ಲಾ ಕುಲಗಳಲ್ಲಿ
ಇಸ್ರಾಯೇಲ್‍ದೇವರಾದ ಯೆಹೋವನ ದರ್ಶನವನ್ನು
ಬಯಸುವವರು ತಮ್ಮ ಪಿತೃಗಳ ದೇವರಾದ ಯೆಹೋ
ವನಿಗೆ ಯಜ್ಞವರ್ಪಿಸುವದಕ್ಕಾಗಿ ಆ ಲೇವಿಯರನ್ನು
17 ಹಿಂಬಾಲಿಸಿ ಯೆರೂಸಲೇಮಿಗೆ ಬಂದರು. ಇವರೆಲ್ಲರೂ
ಮೊದಲನೆಯ ಮೂರು ವರುಷಗಳಲ್ಲಿ ದಾವೀದಸೊಲೊ
ಮೋನರ ಮಾರ್ಗದಲ್ಲಿ ನಡೆಯುತ್ತಿದ್ದದರಿಂದ ಯೆಹೂ
ದರಾಜ್ಯವು ಆ ವರುಷಗಳಲ್ಲಿ ವೃದ್ಧಿಯಾಗಿ ಸೊಲೊ
ಮೋನನ ಮಗನಾದ ರೆಹಬ್ಬಾಮನು ಬಲಗೊಂಡನು.
18 ರೆಹಬ್ಬಾಮನು ದಾವೀದನ ಮಗನಾದ ಯೆರೀಮೋ
ತನಿಗೆ ಇಷಯನ ಮೊಮ್ಮಗಳೂ ಎಲೀಯಾಬನ
ಮಗಳೂ ಆದ ಅಬೀಹೈಲಳಲ್ಲಿ ಹುಟ್ಟಿದ ಮಹ್ಲತ್
ಎಂಬಾಕೆಯನ್ನು ಹೆಂಡತಿಯನ್ನಾಗಿ ತೆಗೆದುಕೊಂಡನು.
19 ಆಕೆಯು ಅವನಿಂದ ಯೆಗೂಷ್, ಶೆಮರ್ಯ, ಜಾಹಮ್
20 ಎಂಬ ಗಂಡು ಮಕ್ಕಳನ್ನು ಹೆತ್ತಳು. ಅನಂತರ
ಅವನು ಅಬ್ಷಾಲೋಮನ ಮಗಳಾದ ಮಾಕ ಎಂಬಾಕೆ
ಯನ್ನು ಮದುವೆಮಾಡಿಕೊಂಡನು; ಆಕೆಯು ಅವ
ನಿಂದ ಅಬೀಯ, ಅತ್ತೈ, ಜೀಜ, ಶೆಲೋಮಿತ್ ಎಂಬ
21 ವರನ್ನು ಹೆತ್ತಳು. ರೆಹಬ್ಬಾಮನು ತನ್ನ ಎಲ್ಲಾ ಪತ್ನಿ
ಯರಲ್ಲಿಯೂ ಉಪಪತ್ನಿಯರಲ್ಲಿಯೂ ಅಬ್ಷಾ
ಲೋಮನ ಮಗಳಾದ ಮಾಕಳನ್ನು ಹೆಚ್ಚಾಗಿ ಪ್ರೀತಿ
ಸುತ್ತಿದ್ದನು. ಅವನಿಗೆ ಹದಿನೆಂಟು ಮಂದಿ ಪತ್ನಿಯರೂ
ಅರುವತ್ತು ಮಂದಿ ಉಪಪತ್ನಿಯರೂ ಇದ್ದರು. ಇವ
ರಲ್ಲಿ ಅವನಿಗೆ ಇಪ್ಪತ್ತೆಂಟು ಮಂದಿ ಗಂಡುಮಕ್ಕಳೂ
22 ಅರುವತ್ತು ಮಂದಿ ಹೆಣ್ಣುಮಕ್ಕಳೂ ಹುಟ್ಟಿದರು. ರೆಹ
ಬ್ಬಾಮನು ಮಾಕಳ ಮಗನಾದ ಅಬೀಯನನ್ನು ಅರಸ
ನನ್ನಾಗಿ ಮಾಡಬೇಕೆಂದು ಅವನನ್ನು ಅವನ ಅಣ್ಣ
ತಮ್ಮಂದಿರಲ್ಲಿ ಪ್ರಧಾನನನ್ನಾಗಿಯೂ ಪ್ರಭುವನ್ನಾಗಿ
23 ಯೂ ನೇಮಿಸಿದನು. ತನ್ನ ಉಳಿದ ಎಲ್ಲಾ ಮಕ್ಕ
ಳನ್ನು ಜಾಣತನದಿಂದ ವಿಂಗಡಿಸಿ ಯೆಹೂದ ಬೆನ್ಯಾ
ಮೀನ್ ಪ್ರದೇಶಗಳಲ್ಲಿದ್ದ ಕೋಟೆಕೊತ್ತಲುಗಳುಳ್ಳ
ಆಯಾ ಪಟ್ಟಣಗಳಲ್ಲಿಟ್ಟು ಅವರಿಗೆ ಬೇಕಾದಷ್ಟು ಆಹಾ
ರವನ್ನು ಏರ್ಪಡಿಸಿ ಅನೇಕ ಮಂದಿ ಹೆಂಡತಿಯರನ್ನೂ
ಗೊತ್ತುಮಾಡಿಕೊಟ್ಟನು.

12 ರೆಹಬ್ಬಾಮನು ತನ್ನ ರಾಜ್ಯಾಧಿಕಾರವನ್ನು
ಸ್ಥಿರಪಡಿಸಿಕೊಂಡು ಬಲಗೊಂಡ ಮೇಲೆ ಅವನೂ
ಅವನ ಪ್ರಜೆಗಳಾದ ಎಲ್ಲಾ ಇಸ್ರಾಯೇಲ್ಯರೂ ಯೆ
ಹೋವನ ಧರ್ಮೋಪದೇಶವನ್ನು ಬಿಟ್ಟುಬಿಟ್ಟರು;
2 ಅವರು ಯೆಹೋವನಿಗೆ ದ್ರೋಹಿಗಳಾದದರಿಂದ ಅರಸ
ನಾದ ರೆಹಬ್ಬಾಮನ ಆಳಿಕೆಯ ಐದನೆಯ ವರುಷದಲ್ಲಿ
3 ಐಗುಪ್ತದ ಅರಸನಾದ ಶೀಶಕನು ಸಾವಿರದ ಇನ್ನೂರು
ರಥಗಳನ್ನೂ ಅರುವತ್ತುಸಾವಿರ ಮಂದಿ ರಾಹುತರನ್ನೂ
ಐಗುಪ್ತದ ಅಸಂಖ್ಯರಾದ ಲೂಬ್ಯ ಸುಕ್ಕೀಯ ಕೂಷ್ಯ
ಸೈನಿಕರನ್ನೂ ಕೂಡಿಸಿಕೊಂಡು ಯೆರೂಸಲೇಮಿಗೆ
4 ವಿರೋಧವಾಗಿ ಹೊರಟು ಯೆಹೂದದೇಶದ ಕೋಟೆ
ಕೊತ್ತಲುಗಳುಳ್ಳ ಪಟ್ಟಣಗಳನ್ನು ಸ್ವಾಧೀನಮಾಡಿ

ಕೊಂಡನಂತರ ಯೆರೂಸಲೇಮನ್ನು ಸಮೀಪಿಸಿದನು.
ಆಗ ಪ್ರವಾದಿಯಾದ ಶೆಮಾಯನು ರೆಹಬ್ಬಾಮನ ಬಳಿ
ಗೂ ಶೀಶಕನಿಗೆ ಹೆದರಿ ಯೆರೂಸಲೇಮಿನಲ್ಲಿ ಕೂಡಿದ್ದ
ಯೆಹೂದ್ಯಪ್ರಧಾನರ ಬಳಿಗೂ ಬಂದು ಅವರಿಗೆ—ನೀವ
ನನ್ನನ್ನು ಬಿಟ್ಟದ್ದರಿಂದ ನಾನು ನಿಮ್ಮನ್ನು ಶೀಶಕನ ಕೈ
ಯಲ್ಲಿ ಬಿಟ್ಟುಬಿಟ್ಟಿದ್ದೇನೆಂಬದಾಗಿ ಯೆಹೋವನು
ಅನ್ನುತ್ತಾನೆ ಎಂದು ಹೇಳಿದನು. ಆಗ ಅರಸನೂ ಇಸ್ರಾ
ಯೇಲ್ ಪ್ರಧಾನರೂ ಯೆಹೋವನು ನ್ಯಾಯವಂತ
ನೆಂದು ಒಪ್ಪಿ ತಮ್ಮನ್ನು ತಗ್ಗಿಸಿಕೊಂಡರು. ಯೆಹೋ
ವನು ಇದನ್ನು ನೋಡಿ ಶೆಮಾಯನಿಗೆ—ಇವರು
ತಮ್ಮನ್ನು ತಗ್ಗಿಸಿಕೊಂಡದರಿಂದ ಇವರನ್ನು ಸಂಹರಿಸು
ವದಿಲ್ಲ; ಸ್ವಲ್ಪ ಕಾಲದಲ್ಲಿಯೇ ಇವರಿಗೆ ರಕ್ಷಣೆ
ಯನ್ನು ಅನುಗ್ರಹಿಸುವೆನು; ಶೀಶಕನ ಮುಖಾಂತರ
ವಾಗಿ ನನ್ನ ರೌದ್ರವನ್ನು ಯೆರೂಸಲೇಮಿನ ಮೇಲೆ
ಸುರಿದುಬಿಡುವದಿಲ್ಲ. ಆದರೂ ನನ್ನ ಸೇವೆಗೂ ಅನ್ಯರಾ
ಜ್ಯಗಳ ಸೇವೆಗೂ ಇರುವ ವ್ಯತ್ಯಾಸವು ಇವರಿಗೆ ಗೊತ್ತಾ
ಗುವಂತೆ ಇವರು ಶೀಶಕನಿಗೆ ದಾಸರಾಗಬೇಕು ಎಂದು
ಹೇಳಿದನು. ಹೀಗೆ ಯೆರೂಸಲೇಮಿಗೆ ವಿರೋಧವಾಗಿ
ಬಂದ ಐಗುಪ್ತ್ಯ ರಾಜನಾದ ಶೀಶಕನು ಯೆಹೋವನ
ಆಲಯದ ಮತ್ತು ಅರಮನೆಯ ಎಲ್ಲಾ ದ್ರವ್ಯವನ್ನೂ
ಸೊಲೊಮೋನನು ಮಾಡಿಸಿದ ಬಂಗಾರದ ಗುರಾಣಿಗಳ
ನ್ನೂ ತೆಗೆದುಕೊಂಡು ಹೋದನು. ಅರಸನಾದ ರೆಹ
ಬ್ಬಾಮನು ಅವುಗಳಿಗೆ ಬದಲಾಗಿ ತಾಮ್ರದ ಗುರಾಣಿ
ಗಳನ್ನು ಮಾಡಿಸಿ ಅವುಗಳನ್ನು ಅರಮನೆಯ ದ್ವಾರ
ಪಾಲಕರಾಗಿದ್ದ ಮೈಗಾವಲಿನವರ ದಳವಾಯಿಗಳಿಗೆ
ಒಪ್ಪಿಸಿದನು. ಅರಸನು ಯೆಹೋವನ ಆಲಯಕ್ಕೆ
ಹೋಗುವಾಗೆಲ್ಲಾ ಮೈಗಾವಲಿನವರು ಅವುಗಳನ್ನು
ಹಿಡಿದುಕೊಂಡು ಹೋಗುವರು; ಅಲ್ಲಿಂದ ತಿರಿಗಿ ಬಂದ
ಮೇಲೆ ತಮ್ಮ ಕೋಣೆಯಲ್ಲಿಡುವರು. ರೆಹಬ್ಬಾಮನು
ತನ್ನನ್ನು ತಗ್ಗಿಸಿಕೊಂಡದರಿಂದಲೂ ಯೆಹೂದ್ಯರಲ್ಲಿ
ಕೆಲವು ಸುಲಕ್ಷಣಗಳು ತೋರುತ್ತಿದ್ದದರಿಂದಲೂ ಯೆ
ಹೋವನು ರೆಹಬ್ಬಾಮನ ಮೇಲಣ ಕೋಪವನ್ನು
ಬಿಟ್ಟನು; ಅವನನ್ನು ಪೂರ್ಣವಾಗಿ ಹಾಳುಮಾಡಲಿಲ್ಲ.
ಅರಸನಾದ ರೆಹಬ್ಬಾಮನು ಯೆರೂಸಲೇಮಿನಲ್ಲಿ ತನ್ನ
ರಾಜ್ಯಾಧಿಕಾರವನ್ನು ಸ್ಥಿರಪಡಿಸಿಕೊಂಡು ಆಳುವವ
ನಾದನು. ಅವನು ತನ್ನ ನಾಲ್ವತ್ತೊಂದನೆಯ ವರುಷ
ತುಂಬಿದ ಮೇಲೆ ಪಟ್ಟಕ್ಕೆ ಬಂದು ಯೆಹೋವನು ತನ್ನ
ಹೆಸರಿಗೋಸ್ಕರ ಇಸ್ರಾಯೇಲ್ಯರ ಎಲ್ಲಾ ಕುಲಗಳಿಂದ
ಆರಿಸಿಕೊಂಡ ಯೆರೂಸಲೇಮಿನಲ್ಲಿ ಹದಿನೇಳು ವರುಷ
ಆಳಿದನು. ಅಮ್ಮೋನಿಯಳಾದ ನಯಮಾ ಎಂಬಾ
ಕೆಯು ಅವನ ತಾಯಿ. ಅವನು ಯೆಹೋವನನ್ನು
ಅನುಸರಿಸುವದಕ್ಕೆ ಮನಸ್ಸುಮಾಡದೆ ದ್ರೋಹಿಯಾ
ದನು. ರೆಹಬ್ಬಾಮನ ಪೂರ್ವೋತ್ತರಕೃತ್ಯಗಳು
ಪ್ರವಾದಿಯಾದ ಶೆಮಾಯ, ದರ್ಶಿಯಾದ ಇದ್ದೋ
ಎಂಬವರ ಚರಿತ್ರೆಗಳ ವಂಶಾವಳಿಭಾಗದಲ್ಲಿ ಬರೆದಿರು
ತ್ತವೆ. ರೆಹಬ್ಬಾಮನಿಗೂ ಯಾರೊಬ್ಬಾಮನಿಗೂ ಯಾ
ವಾಗಲೂ ಯುದ್ಧನಡೆಯುತ್ತಿತ್ತು. ರೆಹಬ್ಬಾಮನು
ಪಿತೃಗಳ ಬಳಿಗೆ ಸೇರಲು ಅವನ ಶವಕ್ಕೆ ದಾವೀದನಗರ
ದಲ್ಲಿ ಸಮಾಧಿಯಾಯಿತು. ಅವನ ಮಗನಾದ ಅಬೀ
ಯನು ಅವನಿಗೆ ಬದಲಾಗಿ ಅರಸನಾದನು.

ಅರಸನಾದ ಅಬೀಯನು.

13 ಅರಸನಾದ ಯಾರೊಬ್ಬಾಮನ ಆಳಿಕೆಯ ಹದಿ
ನೆಂಟನೆಯ ವರುಷದಲ್ಲಿ ಅಬೀಯನು ಯೆಹೂದದ
2 ಅರಸನಾಗಿ ಯೆರೂಸಲೇಮಿನಲ್ಲಿ ಮೂರು ವರುಷ
ಆಳಿದನು; ಗಿಬೆಯದ ಊರೀಯೇಲನ ಮಗಳಾದ
ಮೀಕಾಯ ಎಂಬಾಕೆಯು ಇವನ ತಾಯಿ. ಇವ
3 ನಿಗೂ ಯಾರೊಬ್ಬಾಮನಿಗೂ ಯುದ್ಧ ನಡೆಯಿತು. ಅಬೀ
ಯನು ನಾಲ್ಕು ಲಕ್ಷ ಮಂದಿ ರಣವೀರರನ್ನು ಆರಿಸಿ
ಕೊಂಡು ಬಂದು ಯುದ್ಧಪ್ರಾರಂಭಿಸಿದನು; ಯಾರೊ
ಬ್ಬಾಮನೂ ಎಂಟು ಲಕ್ಷ ಶ್ರೇಷ್ಠರಾದ ಭಟರೊಡನೆ
ಅವನಿಗೆ ವಿರೋಧವಾಗಿ ಬಂದು ವ್ಯೂಹಕಟ್ಟಿದನು.
4 ಆಗ ಅಬೀಯನು ಎಫ್ರಾಯಿಮ್ ಪರ್ವತಪ್ರದೇಶ
ದಲ್ಲಿರುವ ಚೆಮಾರೈಮೆಂಬ ಬೆಟ್ಟದಲ್ಲಿ ನಿಂತು—
ಯಾರೊಬ್ಬಾಮನೇ, ಎಲ್ಲಾ ಇಸ್ರಾಯೇಲ್ಯರೇ, ನನ್ನ
5 ಮಾತನ್ನು ಕೇಳಿರಿ. ಯೆಹೋವನು ಉಪ್ಪಿನ ಒಡಂಬ
ಡಿಕೆಯಿಂದ ದಾವೀದನಿಗೂ ಅವನ ಸಂತಾನದವ
ರಿಗೂ ಇಸ್ರಾಯೇಲ್ಯರ ಮೇಲೆ ಶಾಶ್ವತವಾದ ಅರಸು
ತನವನ್ನು ಕೊಟ್ಟಿದ್ದಾನೆಂದು ನಿಮಗೆ ಗೊತ್ತಿಲ್ಲವೋ?
6 ಹೀಗಿದ್ದರೂ ದಾವೀದನ ಮಗನಾದ ಸೊಲೊಮೋ
ನನ ಸೇವೆಯಲ್ಲಿದ್ದ ನೆಬಾಟನ ಮಗನಾದ ಯಾರೊ
ಬ್ಬಾಮನು ಎದ್ದು ತನ್ನ ದಣಿಗೆ ವಿರೋಧವಾಗಿ ತಿರುಗಿ
7 ಬೀಳುವಲ್ಲಿ ಕಾಕಪೋಕರೂ ದುಷ್ಟರೂ ಆಗಿರುವ ಜನರು
ಅವನನ್ನು ಕೂಡಿಕೊಂಡು ಆ ಸಮಯದಲ್ಲಿ ಎಳೇ
ಪ್ರಾಯದವನೂ ಮೃದುಸ್ವಭಾವವುಳ್ಳವನೂ ತಮ್ಮೆದುರಿ
ನಲ್ಲಿ ನಿಲ್ಲಲಾರದವನೂ ಆದ ಸೊಲೊಮೋನನ ಮಗ
8 ರೆಹಬ್ಬಾಮನಿಗೆ ಮಾರ್ಮಲೆತು ಬಲಗೊಂಡರು. ಈಗ
ನೀವು ದೊಡ್ಡ ಗುಂಪಾಗಿರುವದರಿಂದಲೂ ಯಾರೊಬ್ಬಾ
ಮನು ನಿಮಗೆ ದೇವರುಗಳೆಂದು ಮಾಡಿಕೊಟ್ಟ
ಬಂಗಾರದ ಬಸವಮೂರ್ತಿಗಳು ನಿಮ್ಮಲ್ಲಿರುವದರಿಂದ
ಲೂ ದಾವೀದನ ಸಂತಾನದವರ ಕೈಯಲ್ಲಿರುವ ಯೆಹೋ
ವನ ರಾಜ್ಯಕ್ಕೆ ವಿರೋಧವಾಗಿ ನಿಂತು ಗೆಲ್ಲಬಹುದೆಂದು
9 ನೆನಸುತ್ತೀರೋ? ನೀವು ಯೆಹೋವನ ಯಾಜಕ
ರಾದ ಆರೋನನ ಸಂತಾನದವರನ್ನೂ ಲೇವಿಯರನ್ನೂ
ಓಡಿಸಿಬಿಟ್ಟು ಅನ್ಯದೇಶಗಳವರಂತೆ ನಿಮಗೋಸ್ಕರ
ಪೂಜಾರಿಗಳನ್ನು ಮಾಡಿಕೊಂಡಿರಲ್ಲಾ; ತಾನು ಪೂಜಾ
ರಿಯಾಗಿ ಪ್ರತಿಷ್ಠಿತನಾಗಬೇಕೆಂದು ಒಂದು ಎಳೇ ಹೋರಿ
ಯನ್ನೂ ಏಳು ಟಗರುಗಳನ್ನೂ ತೆಗೆದುಕೊಂಡು ಬಂದ
ಪ್ರತಿಯೊಬ್ಬನೂ ದೇವರಲ್ಲದವುಗಳಿಗೆ ಪೂಜಾರಿ
10 ಯಾದನಷ್ಟೆ. ನಮಗಾದರೋ ಯೆಹೋವನು ದೇವ
ರಾಗಿರುತ್ತಾನೆ; ನಾವು ಆತನನ್ನು ಬಿಡಲಿಲ್ಲ. ಯೆಹೋ
ವನ ಆರಾಧನೆ ನಡಿಸುವ ಆರೋನನ ಸಂತಾನದವರಾದ
ಯಾಜಕರೂ ತಮಗೆ ನೇಮಕವಾದ ಕೆಲಸದಲ್ಲಿ ನಿರತ
11 ರಾದ ಲೇವಿಯರೂ ನಮಗಿರುತ್ತಾರೆ. ಆ ಯಾಜ
ಕರು ಪ್ರತಿದಿನ ಪ್ರಾತಸ್ಸಾಯಂಕಾಲಗಳಲ್ಲಿ ಯೆಹೋ
ವನಿಗೋಸ್ಕರ ಸರ್ವಾಂಗಹೋಮಗಳನ್ನು ಸಮರ್ಪಿ
ಸುತ್ತಾ ಸುಗಂಧದ್ರವ್ಯ ಧೂಪವನ್ನು ಹಾಕುತ್ತಾ ಚೊಕ್ಕ
[ಬಂಗಾರದ] ಮೇಜಿನ ಮೇಲೆ ನೈವೇದ್ಯವಾದ ರೊಟ್ಟಿ
ಗಳನ್ನಿಡುತ್ತಾ ಪ್ರತಿ ಸಾಯಂಕಾಲದಲ್ಲಿ ಬಂಗಾರದ
ದೀಪಸ್ತಂಭದ ದೀಪಗಳನ್ನು ಹಚ್ಚುತ್ತಾ ಇರುತ್ತಾರೆ.
ಹೀಗೆ ನಾವು ನಮ್ಮ ದೇವರಾದ ಯೆಹೋವನ ಕಟ್ಟಳೆ
ಗಳನ್ನು ಕೈಕೊಳ್ಳುತ್ತೇವೆ; ನೀವಾದರೋ ಆತನನ್ನು
ಬಿಟ್ಟವರು. ಇಗೋ, ದೇವರು ನಾಯಕನಾಗಿ ನಮ್ಮೊಂದಿ 12
ಗಿರುತ್ತಾನೆ; ನಿಮಗೆ ವಿರೋಧವಾಗಿ ಆರ್ಭಟದಿಂದ
ಊದತಕ್ಕ ತುತೂರಿಗಳನ್ನು ಹಿಡಿದಿರುವ ಯಾಜಕರೂ
ನಮ್ಮೊಂದಿಗಿರುತ್ತಾರೆ. ಇಸ್ರಾಯೇಲ್ಯರೇ, ನಿಮ್ಮ
ಪಿತೃಗಳ ದೇವರಾದ ಯೆಹೋವನೊಡನೆ ಯುದ್ಧಮಾಡ
ಬೇಡಿರಿ, ನೀವು ಸಫಲರಾಗಲಿಕ್ಕಿಲ್ಲ ಎಂದು ಕೂಗಿ
ಹೇಳಿದನು.
ಯಾರೊಬ್ಬಾಮನು ಯೆಹೂದ್ಯರ ಹಿಂದೆ ಹೊಂಚು 13
ಹಾಕುವದಕ್ಕೋಸ್ಕರ ತನ್ನ ಸೈನ್ಯದ ಒಂದು ಗುಂಪನ್ನು
ಕಳುಹಿಸಿದನು. ಹೀಗೆ ಸೈನ್ಯವು ಯೆಹೂದ್ಯರ ಎದುರಿ
ನಲ್ಲಿಯೂ ಹೊಂಚುಹಾಕುವವರು ಅವರ ಹಿಂದೆ
ಯೂ ಇದ್ದರು. ಯೆಹೂದ್ಯರು ತಿರುಗಿಕೊಂಡು ತಮ್ಮ 14
ಮುಂದೆಯೂ ಹಿಂದೆಯೂ ಯುದ್ಧಪ್ರಾರಂಭವಾಗಿರುವ
ದನ್ನು ಕಂಡು ಯೆಹೋವನಿಗೆ ಮೊರೆಯಿಟ್ಟರು, ಯಾಜ
ಕರು ತುತೂರಿಗಳನ್ನು ಊದಿದರು. ಅನಂತರ ಜನರು 15
ಆರ್ಭಟಿಸಿದರು. ಅವರು ಆರ್ಭಟಿಸಿದ ಕೂಡಲೆ ದೇವರು
ಯಾರೊಬ್ಬಾಮನನ್ನೂ ಎಲ್ಲಾ ಇಸ್ರಾಯೇಲ್ಯರನ್ನೂ
ಅಬೀಯನಿಂದಲೂ ಯೆಹೂದ್ಯರಿಂದಲೂ ಅಪಜಯ
ಪಡಿಸಿದ್ದರಿಂದ ಇಸ್ರಾಯೇಲ್ಯರು ಯೆಹೂದ್ಯರ ಎದುರಿ 16
ನಿಂದ ಓಡಿಹೋದರು. ದೇವರು ಅವರನ್ನು ಇವರ ಕೈಗೆ
ಒಪ್ಪಿಸಿದನು. ಅಬೀಯನೂ ಅವನ ಜನರೂ ಅವರಲ್ಲಿ 17
ಅನೇಕಾನೇಕರನ್ನು ಸಂಹರಿಸಿಬಿಟ್ಟರು. ಇಸ್ರಾಯೇಲ್
ಭಟರಲ್ಲಿ ಹತರಾಗಿ ಬಿದ್ದವರು ಐದು ಲಕ್ಷ ಮಂದಿ.
ಹೀಗೆ ಇಸ್ರಾಯೇಲ್ಯರು ಆ ಕಾಲದಲ್ಲಿ ತಗ್ಗಿಸಲ್ಪ 18
ಟ್ಟರು; ಯೆಹೂದ್ಯರು ತಮ್ಮ ಪಿತೃಗಳ ದೇವರಾದ
ಯೆಹೋವನಲ್ಲಿ ಭರವಸವಿಟ್ಟದರಿಂದ ಬಲಗೊಂಡರು.
ಅಬೀಯನು ಯಾರೊಬ್ಬಾಮನನ್ನು ಹಿಂದಟ್ಟಿ ಅವ 19
ನಿಂದ ಬೇತೇಲ್, ಯೆಷಾನಾ, ಎಫ್ರೋನ್ ಎಂಬ ಪಟ್ಟಣ
ಗಳನ್ನೂ ಅವುಗಳಿಗೆ ಸೇರಿದ ಗ್ರಾಮಗಳನ್ನೂ ಕಿತ್ತು
ಕೊಂಡನು. ಯಾರೊಬ್ಬಾಮನು ಅಬೀಯನ ಜೀವ 20
ಮಾನದಲ್ಲಿ ತಿರಿಗಿ ಬಲಗೊಳ್ಳಲೇ ಇಲ್ಲ. ಯೆಹೋ
ವನು ಅವನನ್ನು ಹೊಡೆದದರಿಂದ ಅವನು ಸತ್ತನು.
ಅಬೀಯನು ಬಲಗೊಂಡನು; ಅವನು ಹದಿನಾಲ್ಕು 21
ಮಂದಿ ಹೆಂಡತಿಯರನ್ನು ಮಾಡಿಕೊಂಡು ಇಪ್ಪತ್ತೆರಡು
ಮಂದಿ ಗಂಡುಮಕ್ಕಳನ್ನೂ ಹದಿನಾರು ಮಂದಿ ಹೆಣ್ಣು
ಮಕ್ಕಳನ್ನೂ ಪಡೆದನು. ಅಬೀಯನ ಉಳಿದ ಚರಿ 22
ತ್ರೆಯೂ ಅವನ ನಡೆನುಡಿಗಳೂ ಪ್ರವಾದಿಯಾದ
ಇದ್ದೋವಿನ ವ್ಯಾಖ್ಯಾನದಲ್ಲಿ ಬರೆದಿರುತ್ತವೆ.

ಅರಸನಾದ ಆಸನ ಭಕ್ತಿಯೂ ಜಯವೂ.

14 ಅಬೀಯನು ಪಿತೃಗಳ ಬಳಿಗೆ ಸೇರಲು ಅವನ
ಶವವನ್ನು ದಾವೀದನಗರದಲ್ಲಿ ಸಮಾಧಿಮಾಡಿದರು.
ಅವನಿಗೆ ಬದಲಾಗಿ ಅವನ ಮಗನಾದ ಆಸನು ಅರಸ
ನಾದನು. ಇವನ ಕಾಲದಲ್ಲಿ ದೇಶದಲ್ಲಿ ಹತ್ತು ವರುಷ
ಸಮಾಧಾನವಿತ್ತು. ಆಸನು ತನ್ನ ದೇವರಾದ ಯೆಹೋ 2
ವನ ದೃಷ್ಟಿಯಲ್ಲಿ ಒಳ್ಳೆಯವನಾಗಿಯೂ ನೀತಿವಂತ

3 ನಾಗಿಯೂ ನಡೆದನು. ಇವನು ಅನ್ಯದೇವತೆಗಳ
ಯಜ್ಞವೇದಿಗಳನ್ನೂ ಪೂಜಾಸ್ಥಳಗಳನ್ನೂ ತೆಗೆದುಹಾಕಿ
ಕಲ್ಲುಕಂಬಗಳನ್ನು ಒಡಿಸಿ ಅಶೇರವಿಗ್ರಹಸ್ತಂಭ
4 ಗಳನ್ನು ಕಡಿಸಿಬಿಟ್ಟು ಯೆಹೂದ್ಯರಿಗೆ—ನೀವು ನಿಮ್ಮ
ಪಿತೃಗಳ ದೇವರಾದ ಯೆಹೋವನನ್ನೇ ಆಶ್ರಯಿಸಿ
ಕೊಂಡು ಧರ್ಮಶಾಸ್ತ್ರವಿಧಿಗಳನ್ನು ಕೈಕೊಳ್ಳಿರಿ ಎಂದು
5 ಆಜ್ಞಾಪಿಸಿದನು. ಯೆಹೂದದ ಎಲ್ಲಾ ಪಟ್ಟಣಗಳೊಳ
ಗಿಂದ ಪೂಜಾಸ್ಥಳಗಳನ್ನೂ ಸೂರ್ಯಸ್ತಂಭಗಳನ್ನೂ
ತೆಗೆದುಹಾಕಿದನು. ಇವನ ಆಳಿಕೆಯಲ್ಲಿ ರಾಜ್ಯದೊಳಗೆ
6 ಸಮಾಧಾನವಿತ್ತು. ಯೆಹೋವನ ಅನುಗ್ರಹದಿಂದ
ಶತ್ರುಭಯ ತಪ್ಪಿ ಆ ವರುಷಗಳಲ್ಲಿ ಯಾವ ಯುದ್ಧವೂ
ಇಲ್ಲದೆ ದೇಶದಲ್ಲಿ ಸಮಾಧಾನವಿದ್ದದರಿಂದ ಇವನು
ಯೆಹೂದದಲ್ಲಿ ಕೋಟೆಕೊತ್ತಲುಗಳುಳ್ಳ ಪಟ್ಟಣಗ
7 ಳನ್ನು ಕಟ್ಟಿಸಿದನು. ಇವನು ಯೆಹೂದ್ಯರಿಗೆ—ನಾವು
ನಮ್ಮ ದೇವರಾದ ಯೆಹೋವನನ್ನು ಆಶ್ರಯಿಸಿಕೊಂಡ
ಕಾರಣ ಆತನ ಅನುಗ್ರಹದಿಂದ ಸುತ್ತಣ ವೈರಿಗಳ
ಭಯ ತಪ್ಪಿ ದೇಶವು ಇನ್ನೂ ನಿರಾತಂಕವಾಗಿರುತ್ತದೆ.
ಆದದರಿಂದ ನಾವು ಪಟ್ಟಣಗಳನ್ನು ಕಟ್ಟಿ ಅವುಗಳನ್ನು
ಸುತ್ತಣಗೋಡೆ ಬುರುಜು ಬಾಗಲು ಅಗುಳಿ ಇವು
ಗಳಿಂದ ಭದ್ರಪಡಿಸೋಣ ಅನ್ನಲಾಗಿ ಅವರು ಅವು
8 ಗಳನ್ನು ಚೆನ್ನಾಗಿ ಕಟ್ಟಿ ತೀರಿಸಿದರು. ಆಸನಿಗೆ ಸೈನ್ಯ
ವಿತ್ತು; ಅದರಲ್ಲಿ ಗುರಾಣಿಬರ್ಜಿಗಳನ್ನು ಹಿಡಿದಿರುವ
ಮೂರು ಲಕ್ಷ ಮಂದಿ ಯೆಹೂದ್ಯರೂ ಖೇಡ್ಯಹಿಡಿದವ
ರೂ ಬಿಲ್ಲುಗಾರರೂ ಆಗಿರುವ ಎರಡು ಲಕ್ಷದ ಎಂಭತ್ತು
ಸಾವಿರ ಮಂದಿ ಬೆನ್ಯಾಮೀನ್ಯರೂ ಇದ್ದರು. ಇವ
ರೆಲ್ಲರೂ ರಣವೀರರು.

9 ಕೂಷ್ಯನಾದ ಜೆರಹನು ಹತ್ತು ಲಕ್ಷ ಸೈನ್ಯವನ್ನೂ
ಮುನ್ನೂರು ರಥಗಳನ್ನೂ ತೆಗೆದುಕೊಂಡು ಇಸ್ರಾಯೇ
ಲ್ಯರಿಗೆ ವಿರುದ್ಧವಾಗಿ ಯುದ್ಧಕ್ಕೆ ಹೊರಟು ಮಾರೇ
10 ಷಕ್ಕೆ ಬಂದನು. ಆಸನು ಅವನೆದುರಿಗೆ ಹೋದನು.
ಮಾರೇಷದ ಬಳಿಯಲ್ಲಿರುವ ಚೆಫಾತಾ ಬೈಲಿನಲ್ಲಿ ಉಭ
11 ಯರೂ ವ್ಯೂಹಕಟ್ಟಿದರು. ಆಸನು ತನ್ನ ದೇವರಾದ
ಯೆಹೋವನಿಗೆ—ಯೆಹೋವನೇ, ಬಲಿಷ್ಠನು ಬಲ
ಹೀನನ ಮೇಲೆ ಬೀಳುವಲ್ಲಿ ನಿನ್ನ ಹೊರತು ರಕ್ಷಕನಿಲ್ಲ.
ನಮ್ಮ ದೇವರಾದ ಯೆಹೋವನೇ, ನಮ್ಮನ್ನು ರಕ್ಷಿಸು.
ನಿನ್ನಲ್ಲಿ ಭರವಸವಿಟ್ಟು ನಿನ್ನ ಹೆಸರಿನಲ್ಲಿ ಈ ಮಹಾ
ಸಮೂಹಕ್ಕೆ ವಿರೋಧವಾಗಿ ಯುದ್ಧಕ್ಕೆ ಬಂದೆವಲ್ಲಾ.
ಯೆಹೋವನೇ, ನಮ್ಮ ದೇವರು ನೀನು. ನರರು
ನಿನ್ನನ್ನು ಎದುರಿಸಿ ಗೆಲ್ಲಬಾರದು ಎಂದು ಮೊರೆಯಿಡಲು
12 ಯೆಹೋವನು ಕೂಷ್ಯರನ್ನು ಆಸನಿಂದಲೂ ಯೆಹೂದ್ಯ
13 ರಿಂದಲೂ ಅಪಜಯಪಡಿಸಿದನು. ಕೂಷ್ಯರು ಓಡಿಹೋ
ದಾಗ ಆಸನೂ ಅವನ ಜನರೂ ಗೆರಾರಿನ ವರೆಗೂ
ಅವರನ್ನು ಹಿಂದಟ್ಟಿ ಸಂಹರಿಸಿದರು; ಅವರಲ್ಲಿ ಯಾರೂ
ಜೀವದಿಂದುಳಿಯಲಿಲ್ಲ. ಯೆಹೋವನ ಮತ್ತು ಆತನ
ಸೈನ್ಯದ ಮುಂದೆ ಚೂರುಚೂರಾದರು. ಇಸ್ರಾಯೇಲ್ಯ
14 ರಿಗೆ ಅಪರಿಮಿತವಾದ ಕೊಳ್ಳೆ ಸಿಕ್ಕಿತು. ಇದಲ್ಲದೆ
ಅವರು ಯೆಹೋವನ ಭಯಕ್ಕೆ ಒಳಗಾದ ಗೆರಾರಿನ
ಸುತ್ತಣ ಪಟ್ಟಣಗಳನ್ನು ವಶಮಾಡಿಕೊಂಡು ಅವು
ಗಳನ್ನೆಲ್ಲಾ ಸುಲಿಗೆಮಾಡಿದರು. ಅವುಗಳಲ್ಲಿ ದೊಡ್ಡ
15 ಕೊಳ್ಳೆ ಸಿಕ್ಕಿತು. ದನಕಾಯುವವರ ಗುಡಾರಗಳ
ಮೇಲೆ ಬಿದ್ದು ಎಷ್ಟೋ ಒಂಟೆ ಕುರಿಗಳನ್ನು ಯೆರೂಸ
ಲೇಮಿಗೆ ಹೊಡೆದುಕೊಂಡು ಬಂದರು.

ಆಸನು ಯೆಹೋವಧರ್ಮವನ್ನು ಸಂಸ್ಥಾಪನೆಮಾಡಿದ್ದು.

೧೫ ಓದೇದನ ಮಗನಾದ ಅಜರ್ಯನ ಮೇಲೆ
ದೇವರ ಆತ್ಮವು ಬಂದದರಿಂದ ಅವನು ಆಸ 2
ನನ್ನು ಎದುರುಗೊಳ್ಳುವದಕ್ಕೆ ಹೋಗಿ ಅವನಿಗೆ—
ಆಸನೇ, ಎಲ್ಲಾ ಯೆಹೂದ ಬೆನ್ಯಾಮೀನ್ ಕುಲಗಳ
ವರೇ, ಕಿವಿಗೊಡಿರಿ. ನೀವು ಯೆಹೋವನನ್ನು ಹೊಂದಿ
ಕೊಂಡಿರುವ ತನಕ ಆತನೂ ನಿಮ್ಮೊಂದಿಗಿರುವನು
ನೀವು ಆತನನ್ನು ಹುಡುಕಿದರೆ ನಿಮಗೆ ಸಿಕ್ಕುವನು
ಆತನನ್ನು ಬಿಟ್ಟರೆ ಆತನೂ ನಿಮ್ಮನ್ನು ಬಿಟ್ಟುಬಿಡು
ವನು. ಇಸ್ರಾಯೇಲ್ಯರಿಗೆ ಬಹುಕಾಲದ ವರೆಗೆ ನಿಜ
ವಾದ ದೇವರೂ ಬೋಧಿಸುವ ಯಾಜಕರೂ ಧರ್ಮ
ಶಾಸ್ತ್ರವೂ ಇರಲಿಲ್ಲ. ಅವರು ತಮ್ಮ ಇಕ್ಕಟ್ಟಿನಲ್ಲಿ
ಇಸ್ರಾಯೇಲ್‌ದೇವರಾದ ಯೆಹೋವನ ಕಡೆಗೆ ತಿರುಗಿ
ಕೊಂಡರು. ಅವರು ಆತನನ್ನು ಹುಡುಕಿದಾಗ ಆತನು
ಅವರಿಗೆ ಸಿಕ್ಕಿದನು. ಆ ಕಾಲದಲ್ಲಿ ಯಾರಿಗೂ ನಿರ್ಭ
ಯವಾಗಿ ತಿರುಗಾಡುವದಕ್ಕೆ ಆಗುತ್ತಿರಲಿಲ್ಲ; ದೇಶ
ನಿವಾಸಿಗಳೆಲ್ಲರೂ ಕಳವಳಗೊಂಡಿದ್ದರು. ಒಂದು
ಜನಾಂಗವು ಇನ್ನೊಂದು ಜನಾಂಗವನ್ನೂ ಒಂದು ಪಟ್ಟ
ಣದವರು ಇನ್ನೊಂದು ಪಟ್ಟಣದವರನ್ನೂ ಹಾಳು
ಮಾಡುತ್ತಿದ್ದರು. ದೇವರು ಎಲ್ಲಾ ತರದ ಕಷ್ಟ
ದಿಂದಲೂ ಅವರನ್ನು ತಳಮಳಗೊಳಿಸಿದನು. ನೀವಾ
ದರೋ ಸ್ಥಿರಚಿತ್ತರಾಗಿರಿ; ನಿಮ್ಮ ಕೈಗಳು ಜೋಲು
ಬೀಳದಿರಲಿ. ನಿಮ್ಮ ಪ್ರಯತ್ನಕ್ಕೆ ಫಲತಪ್ಪದು ಎಂದು
ಹೇಳಿದನು.

ಆಸನು ಓದೇದನ [ಮಗನಾದ ಅಜರ್ಯನ] ಈ
ಪ್ರವಾದನೋಕ್ತಿಗಳನ್ನು ಕೇಳಿದಾಗ ಧೈರ್ಯಗೊಂಡು
ಯೆಹೂದ ಬೆನ್ಯಾಮೀನ್ ಪ್ರಾಂತಗಳಲ್ಲಿಯೂ ತಾನು
ಸ್ವಾಧೀನಮಾಡಿಕೊಂಡ ಎಫ್ರಾಯೀಮ್ ಪರ್ವತ
ಪ್ರದೇಶದ ಪಟ್ಟಣಗಳಲ್ಲಿಯೂ ಇದ್ದ ಅಸಹ್ಯ ಪ್ರತಿಮೆ
ಗಳನ್ನು ತೆಗೆದುಹಾಕಿ ಯೆಹೋವನ ಆಲಯಕ್ಕೆ ಸೇರಿದ
ಮಂಟಪದ ಮುಂದಿದ್ದ ಆತನ ಯಜ್ಞವೇದಿಯನ್ನು
ಜೀರ್ಣೋದ್ಧಾರಮಾಡಿಸಿದನು. ಆ ಮೇಲೆ ಆಸನು
ಎಲ್ಲಾ ಯೆಹೂದ ಬೆನ್ಯಾಮೀನ್ ಕುಲಗಳವರನ್ನೂ
ತನ್ನ ದೇವರಾದ ಯೆಹೋವನು ತನ್ನ ಸಂಗಡ ಇರುವ
ದನ್ನು ನೋಡಿ ತನ್ನೊಡನೆ ಗುಂಪುಗುಂಪಾಗಿ ಕೂಡಿ
ಕೊಂಡು ಯೆಹೂದದೇಶದಲ್ಲಿ ಇಳಕೊಂಡಿದ್ದ ಎಫ್ರಾ
ಯೀಮ್ ಮನಸ್ಸೆ ಸಿಮೆಯೋನ್ ಕುಲಗಳವರನ್ನೂ
ಕರಿಸಿಕೊಂಡನು. ಅವರು ಆಸನ ಆಳಿಕೆಯ ಹದಿನೈದ
ನೆಯ ವರುಷದ ಮೂರನೆಯ ತಿಂಗಳಲ್ಲಿ ಯೆರೂಸ
ಲೇಮಿನಲ್ಲಿ ಕೂಡಿಬಂದು ಯೆಹೋವನಿಗೋಸ್ಕರ ಅ
ದಿವಸ ತಾವು ತಂದ ಕೊಳ್ಳೆಯಿಂದ ಏಳು ನೂರು
ಹೋರಿಗಳನ್ನೂ ಏಳು ಸಾವಿರ ಕುರಿಗಳನ್ನೂ ಯಜ್ಞ
ಮಾಡಿದರು. ಇದಲ್ಲದೆ ಅವರು ತಾವು ಪೂರ್ಣ
ಹೃದಯದಿಂದಲೂ ಪೂರ್ಣಪ್ರಾಣದಿಂದಲೂ ತಮ್ಮ
ಪಿತೃಗಳ ದೇವರಾದ ಯೆಹೋವನ ಭಕ್ತರಾಗಿರು
ವೆಂದೂ ತಮ್ಮಲ್ಲಿ ಇಸ್ರಾಯೇಲ್‌ದೇವರಾದ ಯೆಹೋ

ವನ ಭಕ್ತಿಯನ್ನು ಬಿಟ್ಟವರು ಚಿಕ್ಕವರಾಗಲಿ ದೊಡ್ಡ
ವರಾಗಲಿ, ಗಂಡಸರಾಗಲಿ ಹೆಂಗಸರಾಗಲಿ, ಅವರೆಲ್ಲ
14 ರನ್ನೂ ಕೊಲ್ಲಬೇಕೆಂದೂ ತುತೂರಿಕೊಂಬುಗಳನ್ನೂ
ಊದಿ ದೊಡ್ಡ ಆರ್ಭಟದೊಡನೆ ಯೆಹೋವನಿಗೆ ಪ್ರಮಾ
15 ಣಮಾಡಿದರು. ಈ ಪ್ರಮಾಣದ ನಿಮಿತ್ತವಾಗಿ
ಯೆಹೂದ್ಯರೆಲ್ಲರಿಗೂ ಸಂತೋಷವಾಯಿತು. ಅವರು
ಪೂರ್ಣಮನಸ್ಸಿನಿಂದ ಪ್ರಮಾಣಮಾಡಿ ತುಂಬಾ ಲವ
ಲವಿಕೆಯಿಂದ ಯೆಹೋವನನ್ನು ಬಯಸಿದ ಕಾರಣ
ಆತನು ಅವರಿಗೆ ಪ್ರಸನ್ನನಾಗಿ ಎಲ್ಲಾ ಕಡೆಗಳಲ್ಲಿಯೂ
16 ಸಮಾಧಾನವನ್ನನುಗ್ರಹಿಸಿದನು. ಅರಸನಾದ ಆಸನ
ತಾಯಿ ಮಾಕಳು ಅಶೇರದೇವತೆಯ ಒಂದು ಅಸಹ್ಯ
ಮೂರ್ತಿಯನ್ನು ಮಾಡಿಸಿದದರಿಂದ ಅವನು ಆಕೆ
ಯನ್ನು ಗದ್ದುಗೆಯಿಂದ ತಳ್ಳಿ ಆ ಮೂರ್ತಿಯನ್ನು
ಕಡಿಸಿ ಕಿದ್ರೋನ್ ಹಳ್ಳದ ಬಳಿಯಲ್ಲಿ ಚೂರುಚೂರು
17 ಮಾಡಿ ಸುಡಿಸಿದನು. ಇಸ್ರಾಯೇಲ್‍ಪ್ರಾಂತದಲ್ಲಿದ್ದ
ಪೂಜಾಸ್ಥಳಗಳು ತೆಗೆದುಹಾಕಲ್ಪಡದಿದ್ದರೂ ಆಸನು
ತನ್ನ ಜೀವಮಾನದಲ್ಲೆಲ್ಲಾ ಯಥಾರ್ಥಚಿತ್ತನಾಗಿ ನಡೆ
18 ದುಕೊಂಡನು. ತನ್ನ ತಂದೆಯೂ ತಾನೂ ಪ್ರತಿಷ್ಠಿಸಿದ
ಬೆಳ್ಳಿಬಂಗಾರವನ್ನೂ ಪಾತ್ರೆಗಳನ್ನೂ ದೇವಾಲಯದಲ್ಲಿ
19 ತಂದಿಟ್ಟನು. ಅವನ ಆಳಿಕೆಯ ಮೂವತ್ತೈದನೆಯ
ವರುಷದ ವರೆಗೂ ಯುದ್ಧವಿರಲಿಲ್ಲ.

### ಇಸ್ರಾಯೇಲ್‍ರಾಜನಾದ ಬಾಷನಿಂದುಂಟಾದ ಕಾಟವೂ ಆಸನ ಅಂತ್ಯವೂ.

16 ಆಸನ ಆಳಿಕೆಯ ಮೂವತ್ತಾರನೆಯ ವರುಷ
ದಲ್ಲಿ ಇಸ್ರಾಯೇಲ್‍ರಾಜನಾದ ಬಾಷನು ಯೆಹೂ
ದ್ಯರಿಗೆ ವಿರೋಧವಾಗಿ ಬಂದು ಯಾರೂ ಯೆಹೂ
ದ್ಯರ ಅರಸನಾದ ಆಸನ ಬಳಿಗೆ ಹೋಗಿಬರುವದಕ್ಕಾಗ
2 ದಂತೆ ರಾಮಕೋಟೆಯನ್ನು ಕಟ್ಟಿಸಿದನು. ಆಗ ಆಸನು
ಯೆಹೋವನ ಆಲಯದ ಮತ್ತು ಅರಮನೆಯ ಭಂಡಾರ
ಗಳಿಂದ ಬೆಳ್ಳಿಬಂಗಾರವನ್ನು ತೆಗೆದುಕೊಂಡು ದಮಸ್ಕ
ದಲ್ಲಿದ್ದ ಅರಾಮ್ಯರ ಅರಸನಾದ ಬೆನ್ಹದದನಿಗೆ ಕಳು
3 ಹಿಸಿ ಅವನಿಗೆ— ನನಗೂ ನಿನಗೂ ನನ್ನ ತಂದೆಗೂ ನಿನ್ನ
ತಂದೆಗೂ ಒಡಂಬಡಿಕೆಯಿರುತ್ತದಲ್ಲಾ; ಇಗೋ,
ನಿನಗೆ ಬೆಳ್ಳಿಬಂಗಾರವನ್ನು ಕಳುಹಿಸಿದ್ದೇನೆ; ಇಸ್ರಾ
ಯೇಲ್ಯರ ಅರಸನಾದ ಬಾಷನು ನನ್ನನ್ನು ಬಿಟ್ಟು
ಹೋಗುವಂತೆ ಅವನ ಸಂಗಡ ನೀನು ಮಾಡಿಕೊಂಡಿ
ರುವ ಒಡಂಬಡಿಕೆಯನ್ನು ಮುರಿದುಬಿಡು ಎಂದು
4 ಹೇಳಿಕಳುಹಿಸಿದನು. ಬೆನ್ಹದದನು ಅರಸನಾದ ಆಸನ
ಮಾತನ್ನು ಕೇಳಿ ತನ್ನ ಸೈನ್ಯಾಧಿಪತಿಗಳನ್ನು ಇಸ್ರಾ
ಯೇಲ್ಯರ ಪಟ್ಟಣಗಳಿಗೆ ವಿರೋಧವಾಗಿ ಕಳುಹಿಸಿದನು;
ಅವರು ಇಯ್ಯೋನ್, ದಾನ್, ಆಬೇಲ್ಮಯಿಮ್ ಇವು
ಗಳನ್ನೂ ನಫ್ತಾಲ್ಯರ ಪಟ್ಟಣಗಳ ಎಲ್ಲಾ ಉಗ್ರಾಣ
5 ಗಳನ್ನೂ ಹಾಳುಮಾಡಿದರು. ಬಾಷನು ಈ ಸುದ್ದಿ
ಯನ್ನು ಕೇಳಿದಾಗ ರಾಮಕೋಟೆಕಟ್ಟಿಸುವ ಕೆಲಸ
6 ವನ್ನು ನಿಲ್ಲಿಸಿಬಿಟ್ಟನು. ಅನಂತರ ಅರಸನಾದ ಆಸನು
ಎಲ್ಲಾ ಯೆಹೂದ್ಯರನ್ನು ಕರಿಸಿ ಬಾಷನು ರಾಮ
ಕೋಟೆಗಾಗಿ ತರಿಸಿದ್ದ ಕಲ್ಲುಮರಗಳನ್ನು ಇವರ
ಮುಖಾಂತರವಾಗಿ ತೆಗೆದುಕೊಂಡುಹೋಗಿ ಗೆಬ, ಮಿಚ್ಪ
ಎಂಬ ಪಟ್ಟಣಗಳನ್ನು ಭದ್ರಪಡಿಸಿದನು.
ಆ ಕಾಲದಲ್ಲಿ ದರ್ಶಿಯಾದ ಹನಾನಿಯು ಯೆಹೂ 7
ದ್ಯರ ಅರಸನಾದ ಆಸನ ಬಳಿಗೆ ಬಂದು ಅವನಿಗೆ—
ನೀನು ನಿನ್ನ ದೇವರಾದ ಯೆಹೋವನ ಮೇಲೆ ಆತು
ಕೊಳ್ಳದೆ ಅರಾಮ್ಯರ ಅರಸನ ಮೇಲೆ ಆತುಕೊಂಡದ
ರಿಂದ ಅರಾಮ್‍ರಾಜನ ಸೈನ್ಯವು ನಿನ್ನ ಕೈಗೆ ಬೀಳದಂತೆ
ತಪ್ಪಿಸಿಕೊಂಡಿತು. ಕೂಷ್ಯಲೂಬ್ಯರ ಸೈನ್ಯವು ಅಪ 8
ರಿಮಿತ ರಥಾಶ್ವಬಲಗಳುಳ್ಳ ಮಹಾಸೈನ್ಯವಲ್ಲವೋ!
ನೀನು ಯೆಹೋವನ ಮೇಲೆ ಆತುಕೊಂಡದರಿಂದ
ಆತನು ಅದನ್ನು ನಿನ್ನ ಕೈಗೆ ಒಪ್ಪಿಸಿಕೊಟ್ಟನು.
ಯೆಹೋವನು ಭೂಲೋಕದ ಎಲ್ಲಾ ಕಡೆಗಳಲ್ಲಿ 9
ಯೂ ದೃಷ್ಟಿಯನ್ನು ಪ್ರಸರಿಸುತ್ತಾ ತನ್ನ ಕಡೆಗೆ
ಯಥಾರ್ಥಮನಸ್ಸುಳ್ಳವರ ರಕ್ಷಣೆಗಾಗಿ ತನ್ನ ಪ್ರತಾಪ
ವನ್ನು ತೋರ್ಪಡಿಸುತ್ತಾನೆ. ನೀನು ಈ ಕಾರ್ಯದಲ್ಲಿ
ಬುದ್ಧಿಹೀನನಾಗಿ ನಡೆದುಕೊಂಡಿದ್ದೀ; ಇಂದಿನಿಂದ ನಿನಗೆ
ಯುದ್ಧಗಳು ಇದ್ದೇ ಇರುವವು ಎಂದು ಹೇಳಿದನು.
ಆಸನು ಈ ಮಾತುಗಳ ದೆಸೆಯಿಂದ ಬೇಸರಗೊಂಡು 10
ದರ್ಶಿಯ ಮೇಲೆ ಕೋಪಗೊಂಡು ಅವನನ್ನು ಸೆರೆ
ಮನೆಯಲ್ಲಿಡಿಸಿ ಕೋಳಹಾಕಿಸಿದನು. ಇದಲ್ಲದೆ ಜನ
ರಲ್ಲಿ ಕೆಲವರನ್ನು ಪೀಡಿಸಿದನು. ಆಸನ ಪೂರ್ವೋ 11
ತ್ತರಚರಿತ್ರೆಯು ಯೆಹೂದ ಮತ್ತು ಇಸ್ರಾಯೇಲ್
ರಾಜರ ಗ್ರಂಥದಲ್ಲಿ ಬರೆದಿರುತ್ತದೆ. ಅವನ ಆಳಿಕೆಯ 12
ಮೂವತ್ತೊಂಭತ್ತನೆಯ ವರುಷದಲ್ಲಿ ಅವನ ಕಾಲು
ಗಳಿಗೆ ಬಹುಕಠಿನವಾದ ರೋಗವುಂಟಾಯಿತು. ಈ
ರೋಗದಲ್ಲಿಯೂ ಅವನು ಯೆಹೋವನ ಸಹಾಯ
ವನ್ನು ಕೋರದೆ ವೈದ್ಯರ ಸಹಾಯವನ್ನೇ ಕೋರಿದನು.
ಅವನು ತನ್ನ ಆಳಿಕೆಯ ನಾಲ್ವತ್ತೊಂದನೆಯ ವರುಷ 13
ದಲ್ಲಿ ತೀರಿಕೊಂಡು ಪಿತೃಗಳ ಬಳಿಗೆ ಸೇರಲು ಅವನ 14
ಶವವನ್ನು ಬುಕ್ಕಿಟ್ಟುಗಾರರ ಕಸಬಿನ ಮೇರೆಗೆ ಮಿಶ್ರ
ಮಾಡಲ್ಪಟ್ಟ ತರತರದ ಸುಗಂಧದ್ರವ್ಯಗಳಿಂದ ತುಂಬಿ
ರುವ ಹಾಸಿಗೆಯ ಮೇಲಿಟ್ಟು ಅವನು ತನಗೋಸ್ಕರ
ದಾವೀದನಗರದಲ್ಲಿ ತೋಡಿಸಿದ್ದ ಸಮಾಧಿಯಲ್ಲಿ ಅವ
ನ್ನು ಇಟ್ಟರು. ಅವನಿಗೋಸ್ಕರ ಬಹುಧೂಪವನ್ನು
ಸುಟ್ಟರು.

### ಅರಸನಾದ ಯೆಹೋಷಾಫಾಟನ ಯೆಹೋವಧರ್ಮಾಭಿಮಾನವೂ ರಾಜವೈಭವವೂ.

ಅವನಿಗೆ ಬದಲಾಗಿ ಅವನ ಮಗನಾದ ಯೆಹೋ 17
ಷಾಫಾಟನು ಅರಸನಾಗಿ ಇಸ್ರಾಯೇಲ್ಯರಿಂದ ಅಪಾ
ಯವಾಗದಂತೆ ತನ್ನನ್ನು ಭದ್ರಪಡಿಸಿಕೊಂಡನು. ಇವ 2
ನು ಯೆಹೂದದ ಕೋಟೆಕೊತ್ತಲಗಳುಳ್ಳ ಎಲ್ಲಾ
ಪಟ್ಟಣಗಳಲ್ಲಿಯೂ ಸೈನ್ಯವನ್ನಿರಿಸಿ ಯೆಹೂದ ದೇಶ
ದಲ್ಲಿಯೂ ತನ್ನ ತಂದೆಯಾದ ಆಸನು ಕಿತ್ತುಕೊಂಡಿ
ದ್ದ ಎಫ್ರಾಯಿಮ್ಯರ ಪಟ್ಟಣಗಳಲ್ಲಿಯೂ ಅಧಿಕಾರಿ
ಗಳನ್ನು ನೇಮಿಸಿದನು. ಇವನು ಬಾಳ್‍ದೇವರು 3
ಗಳನ್ನು ಅವಲಂಬಿಸದೆ ತನ್ನ ಪೂರ್ವಿಕನಾದ ದಾವೀ
ದನ ಮೊದಲಿನ ನಡತೆಯ ಪ್ರಕಾರ ನಡೆಯುತ್ತಿದ್ದ
ದರಿಂದ ಯೆಹೋವನು ಇವನ ಸಂಗಡ ಇದ್ದನು.

4 ಇವನು ಇಸ್ರಾಯೇಲ್ಯರಂತೆ ನಡೆಯದೆ ತನ್ನ ತಂದೆ
ಯ ದೇವರ ಭಕ್ತನಾಗಿ ಆತನ ಆಜ್ಞೆಗಳನ್ನು ಅನು
5 ಸರಿಸಿದನು. ಆದದರಿಂದ ಯೆಹೋವನು ಇವನ
ರಾಜ್ಯಾಧಿಕಾರವನ್ನು ಸ್ಥಿರಪಡಿಸಿದನು; ಯೆಹೂದ್ಯ
ರೆಲ್ಲರೂ ಯೆಹೋಷಾಫಾಟನಿಗೆ ಕಾಣಿಕೆಕೊಡುತ್ತಿದ್ದ
6 ದರಿಂದ ಇವನ ಧನಘನತೆಗಳು ಹೆಚ್ಚಾದವು. ಇವ
ನು ಯೆಹೋವನ ಮಾರ್ಗದಲ್ಲಿ ನಡೆದು ಧೈರ್ಯ
ಗೊಂಡನು; ಇದಲ್ಲದೆ ಯೆಹೂದದೇಶದಲ್ಲಿದ್ದ ಪೂಜಾ
ಸ್ಥಳಗಳನ್ನೂ ಅಶೇರವಿಗ್ರಹಸ್ತಂಭಗಳನ್ನೂ ತೆಗೆದು
ಹಾಕಿಸಿದನು.
7 ಇವನು ತನ್ನ ಆಳಿಕೆಯ ಮೂರನೆಯ ವರುಷದಲ್ಲಿ
ತನ್ನ ಸರದಾರರಾದ ಬೆನ್ಹೈಲ್, ಓಬದ್ಯ, ಜೆಕರ್ಯ,
8 ನೆತನೇಲ್, ಮೀಕಾಯ ಇವರನ್ನೂ ಇವರ ಜೊತೆ
ಯಲ್ಲಿ ಶೆಮಾಯ, ನೆತನ್ಯ, ಜೆಬದ್ಯ, ಅಸಾಹೇಲ್,
ಶೆಮೀರಾಮೋತ್, ಯೆಹೋನಾತಾನ್, ಅದೋನೀಯ,
ಟೋಬೀಯ, ಟೋಬದೋನೀಯ ಎಂಬ ಲೇವಿಯ
ರನ್ನೂ ಎಲೀಷಾಮಾ, ಯೆಹೋರಾಮ್ ಎಂಬ ಯಾಜ
ಕರನ್ನೂ ಧರ್ಮೋಪದೇಶಮಾಡುವದಕ್ಕೋಸ್ಕರ ಯೆ
9 ಹೂದದೇಶದ ಪಟ್ಟಣಗಳಿಗೆ ಕಳುಹಿಸಿದನು. ಇವರು
ಯೆಹೋವಧರ್ಮಶಾಸ್ತ್ರವನ್ನು ತೆಗೆದುಕೊಂಡು ಯೆ
ಹೂದದೇಶದಲ್ಲೆಲ್ಲಾ ಸಂಚಾರಮಾಡಿ ಜನರಿಗೆ ಬೋಧಿ
ಸಿದರು.
10 ಯೆಹೂದದ ಸುತ್ತಣ ದೇಶಗಳ ರಾಜ್ಯಗಳವರಿಗೆ
ಯೆಹೋವನ ಭಯವಿದ್ದದರಿಂದ ಅವರು ಯೆಹೋ
11 ಷಾಫಾಟನೊಡನೆ ಯುದ್ಧಕ್ಕೆ ಬರಲಿಲ್ಲ. ಫಿಲಿಷ್ಟಿಯ
ರಲ್ಲಿ ಕೆಲವರು ಯೆಹೋಷಾಫಾಟನಿಗೆ ಕಾಣಿಕೆ
ಯನ್ನೂ ಕಪ್ಪವನ್ನಾಗಿ ಬೆಳ್ಳಿಯನ್ನೂ ತಂದುಕೊಡು
ತ್ತಿದ್ದರು. ಅರಬಿಯರು ತಮ್ಮ ಪಶುಗಳಲ್ಲಿ ಏಳು
ಸಾವಿರದ ಏಳು ನೂರು ಟಗರುಗಳನ್ನೂ ಏಳು ಸಾವಿ
ರದ ಏಳು ನೂರು ಹೋತಗಳನ್ನೂ ಕೊಡುತ್ತಿದ್ದರು.
12 ಹೀಗೆ ಯೆಹೋಷಾಫಾಟನು ಅತ್ಯಧಿಕವಾಗಿ ಅಭಿವೃದ್ಧಿ
ಹೊಂದಿ ಯೆಹೂದದೇಶದಲ್ಲಿ ಕೋಟೆಗಳನ್ನೂ ಉಗ್ರಾ
13 ಣದ ಪಟ್ಟಣಗಳನ್ನೂ ಕಟ್ಟಿಸಿದನು. ಯೆಹೂದದ
ಪಟ್ಟಣಗಳಲ್ಲಿ ದೊಡ್ಡ ಪದಾರ್ಥಸಂಗ್ರಹವೂ ಯೆರೂಸ
14 ಲೇಮಿನಲ್ಲಿ ರಣವೀರರಾದ ಭಟರೂ ಇದ್ದರು. ಗೋತ್ರ
ಗಳ ಪ್ರಕಾರ ಲೆಕ್ಕಿಸಲ್ಪಟ್ಟ ಇವರ ಗೋತ್ರಪ್ರಧಾನರು
ಯಾರಂದರೆ— ಯೆಹೂದ್ಯರಲ್ಲಿ ಮೂರು ಲಕ್ಷ ಮಂದಿ
15 ರಣವೀರರ ಅಧಿಪತಿಯಾದ ಅದ್ನ; ಇವನ ತರುವಾಯ
ಎರಡು ಲಕ್ಷದ ಎಂಭತ್ತು ಸಾವಿರ ಮಂದಿ ರಣವೀರರ
16 ಅಧಿಪತಿಯಾದ ಯೆಹೋಹಾನಾನ್; ತರುವಾಯ
ಎರಡು ಲಕ್ಷ ಮಂದಿ ರಣವೀರರೊಡನೆ ಸ್ವೇಚ್ಛೆಯಿಂದ
ತನ್ನನ್ನು ಯೆಹೋವನಿಗೆ ಪ್ರತಿಷ್ಠಿಸಿಕೊಂಡ ಜಿಕ್ರಿಯ
17 ಮಗನಾದ ಅಮಸ್ಯ; ಬೆನ್ಯಾಮೀನ್ಯರಲ್ಲಿ ಬಿಲ್ಲುಗುರಾಣಿ
ಗಳನ್ನು ಹಿಡಿದುಕೊಂಡ ಎರಡು ಲಕ್ಷ ಸೈನಿಕರ ನಾಯ
18 ಕನೂ ರಣವೀರನೂ ಆದ ಎಲ್ಯಾದ; ಇವನ ತರು
ವಾಯ ಒಂದು ಲಕ್ಷದ ಎಂಭತ್ತುಸಾವಿರ ಮಂದಿ
ಯುದ್ಧಸನ್ನದ್ಧರ ನಾಯಕನಾದ ಯೆಹೋಜಾಬಾದ್
19 ಇವರೇ. ಅರಸನಿಗೆ ತನ್ನ ಸನ್ನಿಧಿಯಲ್ಲಿ ಸೇವೆಮಾಡು
ತ್ತಿರುವ ಇವರಲ್ಲದೆ ಕೋಟೆಕೊತ್ತಲಗಳುಳ್ಳ ಪಟ್ಟಣಗ
ಳಲ್ಲಿಯೂ ಸೈನಿಕರಿದ್ದರು.

ಯೆಹೋಷಾಫಾಟನು ಅಹಾಬನೊಡನೆ ಬೀಗತನಮಾಡಿದ್ದೂ
ಅದರ ಫಲವೂ.

ಯೆಹೋಷಾಫಾಟನಿಗೆ ಬಹಳ ಧನಘನತೆಗಳುಂಟಾ
ದವು. ಅವನು ಅಹಾಬನೊಡನೆ ಬೀಗತನಮಾಡಿ
ಕೆಲವು ವರುಷಗಳಾದನಂತರ ಅವನ ಬಳಿಗೆ ಸಮಾ
ರ್ಯಕ್ಕೆ ಹೋದಾಗ ಅಹಾಬನು ಅವನಿಗೋಸ್ಕರವೂ
ಅವನೊಡನೆ ಬಂದ ಜನರಿಗೋಸ್ಕರವೂ ಅನೇಕಾನೇಕ
ದನಕುರಿಗಳನ್ನು ವಧಿಸಿ ಔತಣಮಾಡಿಸಿ ತನ್ನ ಸಂಗಡ
ಯುದ್ಧಕ್ಕಾಗಿ ರಾಮೋತ್‌ಗಿಲ್ಯಾದಿಗೆ ಬರಬೇಕೆಂದು
ಅವನನ್ನು ಪ್ರೇರಿಸಿದನು. ಇಸ್ರಾಯೇಲ್ಯರ ಅರಸನಾದ
ಅಹಾಬನು ಯೆಹೂದ್ಯರ ಅರಸನಾದ ಯೆಹೋಷಾ
ಫಾಟನನ್ನು—ನನ್ನ ಜೊತೆಯಲ್ಲಿ ರಾಮೋತ್‌ಗಿಲ್ಯಾದಿಗೆ
ಬರುತ್ತೀಯೋ ಎಂದು ಕೇಳಲು ಅವನು—ನಾನೂ
ನೀನೂ ನನ್ನ ಜನರೂ ನಿನ್ನ ಜನರೂ ಒಂದೇಯ
ಲ್ಲವೋ. ನಿನ್ನ ಜೊತೆಯಲ್ಲಿ ಯುದ್ಧಕ್ಕೆ ಬರುವೆನು
ಎಂದು ಉತ್ತರಕೊಟ್ಟು ಅನಂತರ ಯೆಹೋವನ ಸನ್ನಿಧಿ
ಯಲ್ಲಿ ಈಗ ವಿಚಾರಿಸು ಎಂದು ಇಸ್ರಾಯೇಲ್ಯರ ಅರಸ
ನನ್ನು ಬೇಡಿಕೊಂಡನು. ಆಗ ಇಸ್ರಾಯೇಲ್ಯರ ಅರ
ಸನು ತನ್ನ ರಾಜ್ಯದಲ್ಲಿದ್ದ ನಾನೂರು ಮಂದಿ ಪ್ರವಾದಿ
ಗಳನ್ನು ಕೂಡಿಸಿ—ನಾವು ರಾಮೋತ್‌ಗಿಲ್ಯಾದಿನ ಮೇಲೆ
ಯುದ್ಧಕ್ಕಾಗಿ ಹೋಗಬಹುದೋ ಬಾರದೋ ಎಂದು
ಕೇಳಲು ಅವರು—ಹೋಗಬಹುದು, ದೇವರು ಅದನ್ನು
ಅರಸನ ಕೈಗೆ ಒಪ್ಪಿಸುವನು ಅಂದರು. ಆದರೆ ಯೆ
ಹೋಷಾಫಾಟನು ಇಸ್ರಾಯೇಲ್ಯರ ಅರಸನನ್ನು—
ಯೆಹೋವನ ಪ್ರವಾದಿಗಳಲ್ಲಿ ಇವರ ಹೊರತಾಗಿ ನಾವ
ವಿಚಾರಿಸಬಹುದಾದ ಬೇರೆ ಪ್ರವಾದಿಯಿರುವದಿಲ್ಲವೋ
ಎಂದು ಕೇಳಲು ಅವನು—ನಮಗೋಸ್ಕರ ಯೆಹೋ
ವನ ಸನ್ನಿಧಿಯಲ್ಲಿ ವಿಚಾರಿಸಬಲ್ಲವನಾದ ಇನ್ನೊಬ್ಬ
ಪ್ರವಾದಿಯಿರುತ್ತಾನೆ; ಅವನು ಇಮ್ಲನ ಮಗನಾದ
ಮೀಕಾಯೆಹು ಎಂಬವನು. ಆದರೆ ನಾನು ಅವನನ್ನು
ಹಗೆಮಾಡುತ್ತೇನೆ; ಅವನು ನನ್ನನ್ನು ಕುರಿತು ಯಾ
ವಾಗಲೂ ಶುಭವನ್ನಲ್ಲ, ಅಶುಭವನ್ನೇ ಮುಂತಿಳಿಸು
ತ್ತಾನೆ ಎಂದು ಉತ್ತರಕೊಟ್ಟನು. ಅದಕ್ಕೆ ಯೆಹೋ
ಷಾಫಾಟನು—ಅರಸನು ಹಾಗೆ ಹೇಳಬಾರದು ಅಂದನು.
ಆಗ ಇಸ್ರಾಯೇಲ್ಯರ ಅರಸನು ಒಬ್ಬ ಕಂಚುಕಿಯನ್ನು
ಕರೆದು ಅವನಿಗೆ—ಬೇಗ ಹೋಗಿ ಇಮ್ಲನ ಮಗನಾದ
ಮೀಕಾಯೆಹುವನ್ನು ಕರೆದುಕೊಂಡು ಬಾ ಎಂದು
ಆಜ್ಞಾಪಿಸಿದನು. ಇಸ್ರಾಯೇಲ್ಯರ ಅರಸನೂ ಯೆಹೂ
ದ್ಯರ ಅರಸನಾದ ಯೆಹೋಷಾಫಾಟನೂ ರಾಜವಸ್ತ್ರಗ
ಳನ್ನು ಧರಿಸಿಕೊಂಡು ಸಮಾರ್ಯಪಟ್ಟಣದ ಹೆಬ್ಬಾಗ
ಲಿನ ಹತ್ತಿರವಿರುವ ಬೈಲಿನಲ್ಲಿ ತಮ್ಮ ತಮ್ಮ ಆಸನಗಳ
ಮೇಲೆ ಕೂತುಕೊಂಡಿರಲು ಎಲ್ಲಾ ಪ್ರವಾದಿಗಳು ಅವ
ಮುಂದೆ ಪರವಶರಾಗಿ ಮಾತಾಡುತ್ತಾ ಇದ್ದರು. ಅ
ರಲ್ಲಿ ಕೆನಾನನ ಮಗನಾದ ಚಿದ್ಕೀಯ ಎಂಬವನು ಕಬ್ಬಿ
ಣದ ಕೊಂಬುಗಳನ್ನು ಮಾಡಿಸಿ [ತಲೆಗೆ ಕಟ್ಟಿಕೊಂಡು
ಬಂದು—ಕೊಂಬುಗಳಿಂದಲೋ ಎಂಬಂತೆ ನೀನು ಅರ
ಮ್ಯರನ್ನು ಇರಿದು ಕೊಂದುಹಾಕುವಿ ಎಂಬದಾಗಿ ಯೆ
ಹೋವನು ಹೇಳುತ್ತಾನೆ ಎಂದನು. ಉಳಿದ ಪ್ರವ

ದಿಗಳೂ ಇದೇ ತರದ ಮಾತುಗಳನ್ನು ನುಡಿದು—
ರಾಮೋತ್‍ಗಿಲ್ಯಾದಿಗೆ ಹೋಗು; ನೀನು ಕೃತಾರ್ಥ
ನಾಗಿ ಬರುವಿ; ಯೆಹೋವನು ಅದನ್ನು ಅರಸನ ಕೈಗೆ
ಒಪ್ಪಿಸುವನು ಅಂದರು.
12 ಮೀಕಾಯೆಹುವನ್ನು ಕರೆಯುವದಕ್ಕೆ ಹೋದ ದೂ
ತನು ಅವನಿಗೆ—ಎಲ್ಲಾ ಪ್ರವಾದಿಗಳೂ ಏಕ ಮನಸ್ಸಿ
ನಿಂದ ಅರಸನಿಗೆ ಶುಭವನ್ನೇ ಮುಂತಿಳಿಸುತ್ತಿರುತ್ತಾರೆ;
ದಯವಿಟ್ಟು ನೀನೂ ಅವರಂತೆ ಶುಭವನ್ನೇ ಮುಂತಿ
13 ಳಿಸು ಎಂದು ಹೇಳಿದನು. ಅದಕ್ಕೆ ಮೀಕಾಯೆ
ಹುವು—ಯೆಹೋವನಾಣೆ, ನನ್ನ ದೇವರು ಹೇಳುವ
ದನ್ನೇ ನುಡಿಯುತ್ತೇನೆ ಎಂದು ಉತ್ತರಕೊಟ್ಟನು.
14 ಅವನು ಅರಸನ ಬಳಿಗೆ ಬಂದಾಗ ಅರಸನು—ಮೀಕಾ
ಯೆಹುವೇ, ನಾವು ರಾಮೋತ್‍ಗಿಲ್ಯಾದಿನ ಮೇಲೆ ಯು
ದ್ಧಕ್ಕಾಗಿ ಹೋಗಬಹುದೋ ಬಾರದೋ ಎಂದು ಕೇಳ
ಲು ಅವನು—ಹೋಗಬಹುದು, ಕೃತಾರ್ಥರಾಗಿ ಬರು
ವಿರಿ; ವೈರಿಗಳು ನಿಮ್ಮ ಕೈವಶರಾಗುವರು ಎಂದು
15 ಹೇಳಿದನು. ಆಗ ಅರಸನು ಅವನಿಗೆ—ಸತ್ಯವನ್ನೇ ತಿಳಿ
ಸಬೇಕೆಂದು ಯೆಹೋವನ ಹೆಸರಿನಲ್ಲಿ ನಿನ್ನಿಂದ ಎಷ್ಟು
16 ಸಾರಿ ಪ್ರಮಾಣಮಾಡಿಸಬೇಕು ಅನ್ನಲು ಅವನು—
ಇಸ್ರಾಯೇಲ್ಯರೆಲ್ಲರೂ ಕುರುಬನಿಲ್ಲದ ಕುರಿಗಳಂತೆ
ಬೆಟ್ಟಗಳಲ್ಲಿ ಚದರಿಹೋದದ್ದನ್ನು ಕಂಡೆನು; ಆಗ ಯೆ
ಹೋವನು—ಇವರು ಒಡೆಯನಿಲ್ಲದವರಾಗಿರುತ್ತಾರೆ;
ಸಮಾಧಾನದಿಂದ ತಮ್ಮ ತಮ್ಮ ಮನೆಗಳಿಗೆ ಹೋಗಲಿ
17 ಅಂದನು ಎಂಬದಾಗಿ ಉತ್ತರಕೊಟ್ಟನು. ಆಗ ಇಸ್ರಾ
ಯೇಲ್ಯರ ಅರಸನು ಯೆಹೋಷಾಫಾಟನಿಗೆ—ಇವನು
ನನಗೆ ಯಾವಾಗಲೂ ಶುಭವನ್ನಲ್ಲ, ಅಶುಭವನ್ನೇ
ಮುಂತಿಳಿಸುತ್ತಾನೆಂದು ನಾನು ನಿನಗೆ ಹೇಳಲಿಲ್ಲವೋ?
18 ಎಂದನು. ಅದಕ್ಕೆ ಮೀಕಾಯೆಹುವು—ಅದಿರಲಿ,
ಯೆಹೋವನ ವಾಕ್ಯವನ್ನು ಕೇಳಿರಿ. ಯೆಹೋವನು
ತನ್ನ ಸಿಂಹಾಸನದ ಮೇಲೆ ಕೂತುಕೊಂಡದ್ದನ್ನೂ ಪರ
ಲೋಕಸೈನ್ಯಗಳು ಆತನ ಎಡಬಲಗಡೆಗಳಲ್ಲಿ ನಿಂತದ್ದ
19 ನ್ನೂ ಕಂಡೆನು. ಯೆಹೋವನು ತನ್ನ ಹತ್ತಿರ ನಿಂತವ
ರನ್ನು—ಇಸ್ರಾಯೇಲ್ಯರ ಅರಸನಾದ ಅಹಾಬನು ಹತ
ನಾಗಿ ಬೀಳುವಂತೆ ಅವನನ್ನು ರಾಮೋತ್‍ಗಿಲ್ಯಾದಿನ
ಯುದ್ಧಕ್ಕೆ ಯಾರು ಪ್ರೇರಿಸುವಿರಿ ಎಂದು ಕೇಳಿದಾಗ
ಒಬ್ಬನು ಈ ತರವಾಗಿಯೂ ಇನ್ನೊಬ್ಬನು ಆ ತರವಾಗಿ
20 ಯೂ ಉತ್ತರಕೊಟ್ಟರು. ಕಡೆಯಲ್ಲಿ ಒಂದು ಆತ್ಮವು
ಯೆಹೋವನ ಮುಂದೆ ಬಂದು ನಿಂತು ಆತನಿಗೆ—
ನಾನು ಹೋಗಿ ಅವನನ್ನು ಪ್ರೇರಿಸುವೆನು ಅಂದಿತು.
ಹೇಗೆ ಪ್ರೇರಿಸುವಿ ಎಂದು ಯೆಹೋವನು ಕೇಳಲು
21 ಅದು—ನಾನು ಅಸತ್ಯವನ್ನಾಡುವ ಆತ್ಮವಾಗಿ ಅವನ
ಎಲ್ಲಾ ಪ್ರವಾದಿಗಳಲ್ಲಿ ಸೇರುವೆನು ಎಂದು ಉತ್ತರಕೊ
ಟ್ಟಿತು. ಆಗ ಆತನು ಅದಕ್ಕೆ—ಹೋಗಿ ಅದರಂತೆ
ಮಾಡು; ಅವನನ್ನು ಪ್ರೇರಿಸಿ ಸಫಲನಾಗುವಿ ಅಂದನು.
22 ನೋಡು, ಯೆಹೋವನು ನಿನ್ನ ವಿಷಯದಲ್ಲಿ ಕೇಡು
ನುಡಿದು ನಿನ್ನ ಪ್ರವಾದಿಗಳಲ್ಲಿ ಅಸತ್ಯವನ್ನಾಡುವ ಆತ್ಮ
ವನ್ನು ಕಳುಹಿಸಿದ್ದಾನೆ ಎಂದು ಹೇಳಿದನು.
23 ಆಗ ಕೆನಾನನ ಮಗನಾದ ಚಿದ್ಕೀಯನು ಮೀಕಾ
ಯೆಹುವಿನ ಬಳಿಗೆ ಹೋಗಿ ಅವನ ಕೆನ್ನೆಗೆ ಒಂದು ಏಟು
ಹಾಕಿ—ಯೆಹೋವನ ಆತ್ಮವು ನನ್ನನ್ನು ಬಿಟ್ಟು ನಿನ್ನೊಂ
ದಿಗೆ ಮಾತಾಡುವದಕ್ಕೋಸ್ಕರ ಯಾವ ಮಾರ್ಗವಾಗಿ
ಬಂದಿತು ಅನ್ನಲು ಮೀಕಾಯೆಹುವು—ನೀನು ಅಡಗಿ 24
ಕೊಳ್ಳುವದಕ್ಕೆ ಒಳಗಿನ ಕೋಣೆಗೆ ಹೋಗುವ ದಿನ
ದಲ್ಲಿ ಅದು ನಿನಗೆ ಗೊತ್ತಾಗುವದು ಎಂದು ಉತ್ತರ
ಕೊಟ್ಟನು. ಆಗ ಇಸ್ರಾಯೇಲ್ಯರ ಅರಸನು [ಸೇವಕ 25
ರಿಗೆ]—ಮೀಕಾಯೆಹುವನ್ನು ಹಿಡಿದುಕೊಂಡು ಹೋಗಿ
ಪುರಾಧಿಕಾರಿಯಾದ ಆಮೋನನಿಗೂ ರಾಜಪುತ್ರನಾದ
ಯೋವಾಷನಿಗೂ ಒಪ್ಪಿಸಿ ಅವರಿಗೆ—ನಾನು ಸುರಕ್ಷಿತ 26
ನಾಗಿ ಹಿಂದಿರುಗುವ ವರೆಗೂ ಇವನನ್ನು ಸೆರೆಯಲ್ಲಿಟ್ಟು
ಸೆರೆಮನೆಯ ಅನ್ನಪಾನಗಳನ್ನೇ ಕೊಟ್ಟು ಕುಗ್ಗಿಸ
ಬೇಕು ಎಂದು ಅರಸನು ಅನ್ನುತ್ತಾನೆ ಎಂದು ಹೇಳಿರಿ
ಎಂಬದಾಗಿ ಆಜ್ಞಾಪಿಸಿದನು. ಮೀಕಾಯೆಹುವು ಅರಸ 27
ನಿಗೆ—ನೀನು ಸುರಕ್ಷಿತನಾಗಿ ಬರುವದಾದರೆ ನಾನು
ನುಡಿದದ್ದು ಯೆಹೋವನ ಮಾತಲ್ಲ ಎಂದು ಹೇಳಿ—
ಎಲ್ಲಾ ಜನರೇ, ಇದನ್ನು ಕೇಳಿರಿ ಎಂದು ಕೂಗಿದನು.
ಇಸ್ರಾಯೇಲ್ಯರ ಅರಸನೂ ಯೆಹೂದ್ಯರ ಅರಸ 28
ನಾದ ಯೆಹೋಷಾಫಾಟನೂ ರಾಮೋತ್‍ಗಿಲ್ಯಾದಿಗೆ
ವಿರೋಧವಾಗಿ ಯುದ್ಧಕ್ಕೆ ಹೊರಟರು. ಇಸ್ರಾಯೇ 29
ಲ್ಯರ ಅರಸನು ಯೆಹೋಷಾಫಾಟನಿಗೆ—ನಾನು ವೇಷ
ಹಾಕಿಕೊಂಡು ರಣರಂಗಕ್ಕೆ ಬರುವೆನು; ನೀನಾದರೋ
ನಿನ್ನ ರಾಜವಸ್ತ್ರಗಳನ್ನು ಧರಿಸಿಕೊಂಡೇ ಬಾ ಎಂದು
ಹೇಳಿ ವೇಷಹಾಕಿಕೊಂಡನು; ತರುವಾಯ ರಣರಂಗಕ್ಕೆ
ಹೋದರು. ಅರಾಮ್ಯರ ಅರಸನು ತನ್ನ ರಥಬಲದ 30
ಅಧಿಪತಿಗಳಿಗೆ—ನೀವು ಶತ್ರುಗಳ ಸಾಧಾರಣಸೈನಿಕರ
ನ್ನೂ ಅಧಿಪತಿಗಳನ್ನೂ ಬಿಟ್ಟು ಇಸ್ರಾಯೇಲ್ಯರ ಅರಸ
ನಿಗೇ ಗುರಿಯಿಡಿರಿ ಎಂದು ಆಜ್ಞಾಪಿಸಿದ್ದನು. ರಥಬಲದ 31
ಅಧಿಪತಿಗಳು ಯೆಹೋಷಾಫಾಟನನ್ನು ಕಂಡಾಗ ಅವ
ನೇ ಇಸ್ರಾಯೇಲ್ಯರ ಅರಸನೆಂದು ನೆನಸಿ ಅವನಿಗೆ
ವಿರೋಧವಾಗಿ ಯುದ್ಧಮಾಡುವದಕ್ಕೆ ಅವನನ್ನು ಸುತ್ತಿ
ಕೊಂಡರು. ಯೆಹೋಷಾಫಾಟನು ಕೂಗಿಕೊಳ್ಳಲು
ದೇವರಾದ ಯೆಹೋವನು ಅವನಿಗೆ ನೆರವಾಗಿ ಶತ್ರುಗ
ಳನ್ನು ಅವನ ಕಡೆಯಿಂದ ತೊಲಗಿಸಿದನು. ಅವನು 32
ಇಸ್ರಾಯೇಲ್ಯರ ಅರಸನಲ್ಲವೆಂಬದು ರಥಬಲದ ಅಧಿ
ಪತಿಗಳಿಗೆ ಗೊತ್ತಾದಾಗ ಅವರು ಅವನನ್ನು ಬಿಟ್ಟು
ಹಿಂದಿರುಗಿದರು.
ಅರಾಮ್ಯರ ಒಬ್ಬ ಸೈನಿಕನು ಯಾರಿಗೂ ಗುರಿಯಿ 33
ಡದೆ ಬಾಣವನ್ನೆಸೆಯಲು ಆ ಬಾಣವು ಇಸ್ರಾಯೇಲ್ಯರ
ಅರಸನಿಗೆ ಅವನ ಕವಚದ ಸಂದಿನಲ್ಲಿ ತಾಗಿತು. ಆಗ
ಅವನು ತನ್ನ ಸಾರಥಿಗೆ—ರಥವನ್ನು ತಿರುಗಿಸಿ ನನ್ನನ್ನು
ರಣರಂಗದಿಂದ ಆಚೆಗೆ ತೆಗೆದುಕೊಂಡು ಹೋಗು;
ನನಗೆ ದೊಡ್ಡ ಗಾಯವಾಗಿದೆ ಎಂದು ಹೇಳಿದನು.
ಆದರೂ ಆ ದಿವಸ ಯುದ್ಧವು ಬಹು ಘೋರವಾಗಿದ್ದ 34
ದರಿಂದ ಇಸ್ರಾಯೇಲ್ಯರ ಅರಸನು ಸಾಯಂಕಾಲದ
ವರೆಗೂ ಅರಾಮ್ಯರ ಎದುರಾಗಿ ತನ್ನ ರಥದಲ್ಲೇ ಆತು
ಕೊಂಡಿದ್ದು ಸೂರ್ಯಾಸ್ತಮಾನವಾದಾಗ ಸತ್ತನು.
ಯೆಹೂದದ ಅರಸನಾದ ಯೆಹೋಷಾಫಾಟನು
ಸುರಕ್ಷಿತವಾಗಿ ತನ್ನ ಮನೆಗೆ ಹಿಂದಿರುಗಿದನು. **19**
ಅವನು ಯೆರೂಸಲೇಮಿಗೆ ಬರಲು ಹನಾನೀಯನ 2
ಮಗನಾದ ಯೇಹೂ ಎಂಬ ದರ್ಶಿಯು ಅವನನ್ನು
ಎದುರುಗೊಂಡು ಅವನಿಗೆ—ನೀನು ಕೆಟ್ಟವನಿಗೆ ಸಹಾ

ಯಮಾಡತಕ್ಕದ್ದೋ? ಯೆಹೋವನ ಹಗೆಗಾರರನ್ನು
ಪ್ರೀತಿಸುವದೋ! ನೀನು ಹೀಗೆ ಮಾಡಿದ್ದರಿಂದ ಯೆ
3 ಹೋವನ ಕೋಪವು ನಿನ್ನ ಮೇಲಿರುತ್ತದೆ. ಆದರೂ
ನೀನು ದೇಶದೊಳಗಿಂದ ಅಶೇರವಿಗ್ರಹಸ್ತಂಭಗಳನ್ನು
ತೆಗೆದುಹಾಕಿ ಯೆಹೋವನ ಭಕ್ತಿಯಲ್ಲಿ ಮನಸ್ಸಿ
ಟ್ಟದ್ದರಿಂದ ನಿನ್ನಲ್ಲಿ ಸುಶೀಲತೆಯೂ ಉಂಟೆಂದು ತಿಳಿದು
ಬಂತು ಎಂಬದಾಗಿ ಹೇಳಿದನು.

### ಯೆಹೋಷಾಫಾಟನು ಸ್ಥಳಿಕನ್ಯಾಯಸ್ಥಾನಗಳನ್ನೂ ಮುಖ್ಯನ್ಯಾಯಸ್ಥಾನವನ್ನೂ ಸ್ಥಾಪಿಸಿದ್ದು.

4 ಯೆಹೋಷಾಫಾಟನು ಯೆರೂಸಲೇಮಿನಲ್ಲಿ ವಾಸವಾ
ಗಿದ್ದು ಇನ್ನೊಮ್ಮೆ ಬೇರ್ಷೆಬದಿಂದ ಎಫ್ರಾಯಿಮ್
ಪರ್ವತದ ವರೆಗೂ ಸಂಚರಿಸಿ ತನ್ನ ಪ್ರಜೆಗಳನ್ನು ಅವರ
ಪಿತೃಗಳ ದೇವರಾದ ಯೆಹೋವನ ಕಡೆಗೆ ತಿರುಗಿಸಿ
5 ದನು. ಅವನು ಯೆಹೂದದೇಶದ ಪ್ರತಿಯೊಂದು
ಕೋಟೆಕೊತ್ತಲಗಳುಳ್ಳ ಪಟ್ಟಣದಲ್ಲಿ ನ್ಯಾಯಾಧಿಪತಿ
6 ಗಳನ್ನು ನೇಮಿಸಿ ಅವರಿಗೆ—ನೀವು ಹೇಗೆ ಕೆಲಸನಡಿಸು
ತ್ತೀರಿ ಎಂಬದರ ವಿಷಯ ನೋಡಿಕೊಳ್ಳಿರಿ. ನೀವು
ನ್ಯಾಯತೀರಿಸುವದು ಮನುಷ್ಯರಿಗೋಸ್ಕರವಲ್ಲ, ಯೆ
ಹೋವನಿಗೋಸ್ಕರವೇ ನ್ಯಾಯವಿಚಾರಣೆನಡೆಯುವಾಗ
7 ಆತನು ನಿಮ್ಮ ಮಧ್ಯದಲ್ಲಿರುತ್ತಾನೆ. ಹೀಗಿರುವಲ್ಲಿ
ನಿಮಗೆ ಯೆಹೋವನ ಭಯವು ಇರಲಿ. ನಿಮ್ಮ ದೇವ
ರಾದ ಯೆಹೋವನಲ್ಲಿ ಅನ್ಯಾಯವೂ ಮುಖದಾ
ಕ್ಷಿಣ್ಯವೂ ಲಂಚತಿನ್ನುವದೂ ಇಲ್ಲವಾದದರಿಂದ ಜಾಗ
ರೂಕತೆಯಿಂದ ಕೆಲಸಮಾಡಿರಿ ಎಂದು ಎಚ್ಚರಿಸಿದನು.
8 ಇದಲ್ಲದೆ ಯೆಹೋಷಾಫಾಟನು ತನ್ನ ಪರಿವಾರದವ
ರೊಡನೆ ಯೆರೂಸಲೇಮಿಗೆ ಹಿಂದಿರುಗಿ ಬಂದು ಲೇವಿ
ಯರಿಂದಲೂ ಯಾಜಕರಿಂದಲೂ ಇಸ್ರಾಯೇಲ್‌ಗೋತ್ರ
ಪ್ರಧಾನರಿಂದಲೂ ಕೆಲವರನ್ನು ಆರಿಸಿ ಯೆಹೋವ
ಧರ್ಮಶಾಸ್ತ್ರಕ್ಕೆ ಸಂಬಂಧಪಟ್ಟ ವ್ಯಾಜ್ಯಗಳನ್ನೂ ಬೇರೆ
ವ್ಯಾಜ್ಯಗಳನ್ನೂ ವಿಚಾರಿಸಿ ತೀರಿಸುವದಕ್ಕೋಸ್ಕರ ಯೆ
9 ರೂಸಲೇಮಿನಲ್ಲಿ ಇರಿಸಿ ಅವರಿಗೆ—ನೀವು ಯೆಹೋ
ವನಲ್ಲಿ ಭಯಭಕ್ತಿಯುಳ್ಳವರಾಗಿ ನಂಬಿಕೆಯಿಂದಲೂ
ಯಥಾರ್ಥಮನಸ್ಸಿನಿಂದಲೂ ಮಾಡತಕ್ಕ ಕೆಲಸವು
10 ಯಾವದಂದರೆ—ಯೆಹೂದದ ಪಟ್ಟಣಗಳಲ್ಲಿ ವಾಸಿ
ಸುವ ನಮ್ಮ ಸಹೋದರರೊಳಗೆ ಜೀವಹತ್ಯಸಂಬಂಧ
ದಲ್ಲಿಯಾಗಲಿ ಧರ್ಮಶಾಸ್ತ್ರದ ಆಯಾ ಆಜ್ಞಾವಿಧಿ
ನ್ಯಾಯಗಳ ಸಂಬಂಧದಲ್ಲಿಯಾಗಲಿ ವ್ಯಾಜ್ಯವುಂಟಾಗಿ
ಅದು ನಿಮ್ಮ ಮುಂದೆ ಬರುವದಾದರೆ ನಿಮ್ಮ ಸಹೋ
ದರರು ಯೆಹೋವನ ದೃಷ್ಟಿಯಲ್ಲಿ ಅಪರಾಧಿಗಳಾಗ
ದಂತೆಯೂ ನೀವು ಅವರೊಂದಿಗೆ ದೇವಕೋಪಕ್ಕೆ ಗುರಿ
ಯಾಗದಂತೆಯೂ ಅವರನ್ನು ಎಚ್ಚರಿಸಿರಿ. ಹೀಗೆ
ಮಾಡುವದಾದರೆ ನೀವು ನಿರ್ದೋಷಿಗಳಾಗಿರುವಿರಿ.
11 ಇಗೋ, ಯೆಹೋವನ ಕಾರ್ಯಸಂಬಂಧವಾದ ಎಲ್ಲಾ
ವಿಚಾರಣೆಗಳಲ್ಲಿಯೂ ಮಹಾಯಾಜಕನಾದ ಅಮ
ರ್ಯನು ನಿಮ್ಮ ಅಧ್ಯಕ್ಷನು; ರಾಜಕೀಯಕಾರ್ಯ
ಸಂಬಂಧವಾದ ಎಲ್ಲಾ ವಿಚಾರಣೆಗಳಲ್ಲಿಯೂ ಇಷ್ಮಾ
ಯೇಲನ ಮಗನೂ ಯೆಹೂದಕುಲಪ್ರಭುವೂ ಆದ
ಜೆಬದ್ಯನು ಅಧ್ಯಕ್ಷನು; ಲೇವಿಯರು ನ್ಯಾಯಸ್ಥಾನ
ಲೇಖಕರು; ಧೈರ್ಯದಿಂದ ಕೆಲಸಮಾಡಿರಿ, ಯೆಹೋ
ವನು ಸಜ್ಜನರ ಸಹಾಯಕನು ಎಂದು ಹೇಳಿದನು.

### ಯೆಹೋಷಾಫಾಟನಿಗೆ ವಿರೋಧವಾಗಿ ಬಂದ ಶತ್ರುಗಳು ನಾಶವಾದದ್ದು.

2 ಇದಾದ ಮೇಲೆ ಮೋವಾಬ್ಯರೂ ಅಮ್ಮೋನಿ
ಯರೂ 1)ಮೆಗೂನ್ಯರಲ್ಲಿ ಕೆಲವರೂ ಯೆಹೋಷಾ
ಫಾಟನಿಗೆ ವಿರೋಧವಾಗಿ ಯುದ್ಧಕ್ಕೆ ಬಂದರು. ದೂತರ
ಬಂದು ಯೆಹೋಷಾಫಾಟನಿಗೆ—ಮಹಾಸಮೂಹವ
ನಿನಗೆ ವಿರೋಧವಾಗಿ ಲವಣಸಮುದ್ರದ ಆಚೆಯಲ್ಲಿ
ರುವ ಅರಾಮ್‌ಪ್ರಾಂತದ ಕಡೆಯಿಂದ ಬಂದು ಈಗ
ಏಂಗೆದಿಯೆನಿಸಿಕೊಳ್ಳುವ ಹಚೆಚೋನ್‌ತಾಮಾರಿನಲ್ಲಿ
ರುತ್ತಾರೆಂದು ತಿಳಿಸಿದಾಗ ಯೆಹೋಷಾಫಾಟನು ಹೆದರಿ
ಯೆಹೋವನನ್ನೇ ಆಶ್ರಯಿಸಿಕೊಳ್ಳಬೇಕೆಂದು ನಿಣ
ಯಿಸಿಕೊಂಡು ಯೆಹೂದ್ಯರೆಲ್ಲರೂ ಉಪವಾಸಮಾಡ
ಬೇಕೆಂದು ಪ್ರಕಟಿಸಿದನು. ಆಗ ಯೆಹೂದ್ಯರು
ಯೆಹೋವನ ಸಹಾಯವನ್ನು ಕೇಳಿಕೊಳ್ಳುವದಕ್ಕಾಗಿ
ತಮ್ಮ ಎಲ್ಲಾ ಪಟ್ಟಣಗಳಿಂದ ಆತನ ಸನ್ನಿಧಿಯಲ್ಲಿ
ಕೂಡಿಬಂದರು. ಯೆಹೂದ್ಯರೂ ಯೆರೂಸಲೇಮಿ
ನವರೂ ಯೆಹೋವನ ಆಲಯದ ಹೊಸ ಪ್ರಾಕಾರದಲ್ಲಿ
ಸಭೆಯಾಗಿ ನೆರೆದುಬಂದಾಗ ಯೆಹೋಷಾಫಾಟನು
ಅವರ ಮುಂಗಡೆಯಲ್ಲಿ ನಿಂತು—ಯೆಹೋವನೇ, ನಮ್ಮ
ಪಿತೃಗಳ ದೇವರೇ, ಪರಲೋಕದಲ್ಲಿ ದೇವರಾಗಿರುವಾ
ತನು ನೀನಲ್ಲವೋ? ನೀನು ಜನಾಂಗಗಳ ಎಲ್ಲಾ
ರಾಜ್ಯಗಳನ್ನು ಆಳುವವನಾಗಿರುತ್ತೀ. ನಿನ್ನ ಹಸ್ತ
ದಲ್ಲಿ ಬಲಪರಾಕ್ರಮಗಳಿರುತ್ತವೆ; ನಿನ್ನೆದುರಿನಲ್ಲಿ
ಯಾರೂ ನಿಲ್ಲಲಾರರು. ನಮ್ಮ ದೇವರಾದ ನೀನು
ನಿನ್ನ ಪ್ರಜೆಗಳಾದ ಇಸ್ರಾಯೇಲ್ಯರ ಎದುರಿನಿಂದ ಈ
ದೇಶದ ನಿವಾಸಿಗಳನ್ನು ಹೊರಡಿಸಿ ದೇಶವನ್ನು ನಿನ್ನ
ಸ್ನೇಹಿತನಾದ ಅಬ್ರಹಾಮನ ಸಂತಾನದವರಿಗೆ ಶಾಶ್ವ
ಸ್ವಾಸ್ತ್ಯವನ್ನಾಗಿ ಕೊಟ್ಟಿಯಲ್ಲಾ. ಅವರು ಈ ದೇ
ದಲ್ಲಿ ಇಳುಕೊಂಡು ಇದರಲ್ಲಿ ನಿನ್ನ ಹೆಸರಿಗೋಸ್ಕ
ಪವಿತ್ರಾಲಯವನ್ನು ಕಟ್ಟಿ—ತಮ್ಮ ಮೇಲೆ ಖಡ್ಗ
ವಿಧಿ ಘೋರವ್ಯಾಧಿ ಕ್ಷಾಮ ಮೊದಲಾದ ಆಪತ್ತು
ಗಳು ಬರುವಾಗ ತಾವು ನಿನ್ನ ನಾಮಮಹತ್ತು ಇರು
ಈ ಆಲಯದ ಮುಂದೆಯೂ ನಿನ್ನ ಮುಂದೆಯೂ
ನಿಂತು ತಮ್ಮ ಇಕ್ಕಟ್ಟಿನಲ್ಲಿ ನಿನಗೆ ಮೊರೆಯಿಡುವದಾ
ದರೆ ನೀನು ಕೇಳಿ ರಕ್ಷಿಸುವಿ ಎಂದುಕೊಂಡರಷ್ಟೆ. ಈ
ಅಮ್ಮೋನಿಯರನ್ನೂ ಮೋವಾಬ್ಯರನ್ನೂ ಸೇಯೀರ್
ಪರ್ವತಪ್ರದೇಶದವರನ್ನೂ ನೋಡು; ಇಸ್ರಾಯೇ
ಲ್ಯರು ಐಗುಪ್ತದೇಶದಿಂದ ಬರುತ್ತಿದ್ದಾಗ ಇವರ ದೇ
ದಲ್ಲಿ ನುಗ್ಗಬಾರದೆಂದು ನಿನ್ನಿಂದ ಅಪ್ಪಣೆಹೊಂ
ಇವರನ್ನು ಸಂಹರಿಸದೆ ಪಾರೆಯಾಗಿ ಹೋದರಲ್ಲಾ
ಈಗ ಅವರು ಉಪಕಾರಕ್ಕೆ ಅಪಕಾರಮಾಡಿ ನೀನು
ನಮಗೆ ಅನುಗ್ರಹಿಸಿದ ಸ್ವಾಸ್ತ್ಯದೊಳಗಿಂದ ನಮ್ಮನ್ನು

---

1) ಪಾಠಾಂತರ: ಅಮ್ಮೋನಿಯರಲ್ಲಿ.

ಹೊರಡಿಸುವದಕ್ಕೋಸ್ಕರ ನಮ್ಮ ಮೇಲೆ ಯುದ್ಧಕ್ಕೆ
12 ಬಂದಿರುತ್ತಾರೆ. ನಮ್ಮ ದೇವರೇ, ಅವರನ್ನು ದಂಡಿಸದೆ
ಬಿಡುವಿಯೋ? ನಮ್ಮ ಮೇಲೆ ಬಂದ ಈ ಮಹಾ
ಸಮೂಹದ ಮುಂದೆ ನಿಲ್ಲುವದಕ್ಕೆ ನಮ್ಮಲ್ಲಿ ಬಲವಿಲ್ಲ,
ಏನು ಮಾಡಬೇಕೆಂಬದೂ ತಿಳಿಯದು; ನಮ್ಮ ಕಣ್ಣು
ಗಳು ನಿನ್ನನ್ನೇ ನೋಡುತ್ತವೆ ಎಂದು ಪ್ರಾರ್ಥಿಸಿದನು.
13 ಎಲ್ಲಾ ಯೆಹೂದ್ಯರೂ ಅವರ ಹೆಂಡತಿಮಕ್ಕಳೂ ಯೆ
ಹೋವನ ಸನ್ನಿಧಿಯಲ್ಲಿ ನಿಂತಿದ್ದರು.
14 ಆಗ ಆ ಸಮೂಹದೊಳಗೆ ಆಸಾಫನ ವಂಶದವ
ನಾದ ಲೇವಿಯನೂ ಮತ್ತನ್ಯನಿಗೆ ಹುಟ್ಟಿದ ಯೆಗೀ
ಯೇಲನ ಮರಿಮಗನೂ ಬೆನಾಯನ ಮೊಮ್ಮಗನೂ
ಜೆಕರ್ಯನ ಮಗನೂ ಆದ ಯಹಜೀಯೇಲನ ಮೇಲೆ
15 ಯೆಹೋವನ ಆತ್ಮವು ಬಂದಿತು. ಅವನು—ಎಲ್ಲಾ
ಯೆಹೂದ್ಯರೇ, ಯೆರೂಸಲೇಮಿನವರೇ, ಅರಸನಾದ
ಯೆಹೋಷಾಫಾಟನೇ, ಯೆಹೋವನು ಹೇಳುವದನ್ನು
ಕೇಳಿರಿ! ಈ ಮಹಾಸಮೂಹದ ನಿಮಿತ್ತವಾಗಿ ಕಳವಳ
ಗೊಳ್ಳಬೇಡಿರಿ, ಹೆದರಬೇಡಿರಿ. ಯುದ್ಧವು ನಿಮ್ಮದಲ್ಲ,
16 ದೇವರದೇ. ನಾಳೆ ಬೆಳಿಗ್ಗೆ ಅವರಿಗೆ ವಿರೋಧವಾಗಿ
ಹೊರಡಿರಿ; ಇಗೋ ಅವರು ಹಚ್ಚೀಚ್ ಗಟ್ಟದ ಮಾರ್ಗ
ವಾಗಿ ಬರುತ್ತಾರೆ. ಯೆರೂವೇಲ್ ಅರಣ್ಯದ ಮುಂದಿ
ರುವ ಕಣಿವೆಯ ತುದಿಯಲ್ಲಿ ಅವರನ್ನು ಸಂಧಿಸುವಿರಿ.
17 ಈ ಸಾರಿ ನೀವು ಯುದ್ಧಮಾಡುವದು ಅವಶ್ಯವಿಲ್ಲ.
ಯೆಹೂದ್ಯರೇ, ಯೆರೂಸಲೇಮಿನವರೇ, ಸುಮ್ಮನೆ
ನಿಂತುಕೊಂಡು ಯೆಹೋವನು ನಿಮಗೋಸ್ಕರ ನಡಿ
ಸುವ ರಕ್ಷಣಾಕಾರ್ಯವನ್ನು ನೋಡಿರಿ; ಹೆದರಬೇ
ಡಿರಿ, ಕಳವಳಗೊಳ್ಳಬೇಡಿರಿ. ನಾಳೆ ಅವರೆದುರಿಗೆ
ಹೊರಡಿರಿ, ಯೆಹೋವನು ನಿಮ್ಮ ಸಂಗಡ ಇರುವನು
18 ಎಂದು ಹೇಳಿದನು. ಆಗ ಯೆಹೋಷಾಫಾಟನು
ನೆಲದ ಮಟ್ಟಿಗೂ ತಲೆಬಾಗಿಸಿದನು. ಎಲ್ಲಾ ಯೆಹೂ
ದ್ಯರೂ ಯೆರೂಸಲೇಮಿನವರೂ ಯೆಹೋವನ ಮುಂದೆ
19 ಅಡ್ಡಬಿದ್ದು ನಮಸ್ಕರಿಸಿದರು. ಆ ಮೇಲೆ ಲೇವಿಯ
ರಲ್ಲಿ ಕೆಹಾತ್ಯರೂ ಕೋರಹಿಯರೂ ಎದ್ದು ಇಸ್ರಾ
ಯೇಲ್‌ದೇವರಾದ ಯೆಹೋವನನ್ನು ಮಹಾಸ್ವರದಿಂದ
ಕೀರ್ತಿಸಿದರು.
20 ಅವರು ಮರುದಿನ ಬೆಳಿಗ್ಗೆ ಎದ್ದು ತೆಕೋವ ಅರ
ಣ್ಯಕ್ಕೆ ಹೊರಟರು. ಅವರು ಹೊರಡುವಾಗ ಯೆಹೋ
ಷಾಫಾಟನು ನಿಂತು ಅವರಿಗೆ—ಯೆಹೂದ್ಯರೇ, ಯೆರೂ
ಸಲೇಮಿನವರೇ, ನನ್ನ ಮಾತನ್ನು ಕೇಳಿರಿ. ಯೆಹೋವ
ನಲ್ಲಿ ಭರವಸವಿಡಿರಿ, ಆಗ ಸುರಕ್ಷಿತರಾಗಿರುವಿರಿ; ಆತನ
ಪ್ರವಾದಿಗಳನ್ನು ನಂಬಿರಿ, ಆಗ ಸಾರ್ಥಕರಾಗುವಿರಿ
21 ಎಂದು ಹೇಳಿದನು. ಆ ಮೇಲೆ ಅವನು ಜನರ ಸಮ್ಮತಿ
ಯಿಂದ ಯೆಹೋವನಿಗೋಸ್ಕರ ಗಾಯನಮಾಡುವದ
ಕ್ಕಾಗಿ ಕೆಲವರನ್ನು ಆರಿಸಿಕೊಂಡು ಅವರಿಗೆ—ಪರಿ
ಶುದ್ಧತ್ವವೆಂಬ ಭೂಷಣದೊಡನೆ ಭಟರ ಮುಂದೆ ಹೋ
ಗುತ್ತಾ—ಯೆಹೋವನಿಗೆ ಕೃತಜ್ಞತಾಸ್ತುತಿಮಾಡಿರಿ,
ಆತನ ಕೃಪೆಯು ಶಾಶ್ವತವಾಗಿದೆ ಎಂದು ಭಜಿಸಿರಿ ಎಂಬ
22 ದಾಗಿ ಆಜ್ಞಾಪಿಸಿದನು. ಅವರು ಉತ್ಸಾಹಧ್ವನಿಯಿಂದ
ಕೀರ್ತಿಸುವದಕ್ಕೆ ಪ್ರಾರಂಭಿಸಲು ಯೆಹೋವನು ಯೆ
ಹೂದ್ಯರಿಗೆ ವಿರೋಧವಾಗಿ ಬಂದ ಅಮ್ಮೋನಿಯರನ್ನೂ
ಮೋವಾಬ್ಯರನ್ನೂ ಸೇಯೀರ್ ಪರ್ವತದವರನ್ನೂ ನಶಿ
ಸುವದಕ್ಕೋಸ್ಕರ ಅವರಲ್ಲಿ ಹೊಂಚುಹಾಕುವವರನ್ನು
ಇರಿಸಿದ್ದರಿಂದ ಅಮ್ಮೋನಿಯರೂ ಮೋವಾಬ್ಯರೂ ಸೇ
ಯೀರ್ ಪರ್ವತದವರ ಮೇಲೆ ಬಿದ್ದು ಅವರನ್ನು ಪೂರ್ಣ
ವಾಗಿ ಸಂಹರಿಸಿಬಿಟ್ಟರು; ಅವರನ್ನು ಮುಗಿಸಿಬಿಟ್ಟ 23
ಮೇಲೆ ತಾವೇ ಒಬ್ಬರನ್ನೊಬ್ಬರು ಕೊಲ್ಲುವದಕ್ಕೆ ಪ್ರಾ
ರಂಭಿಸಿದರು. ಯೆಹೂದ್ಯರು ಅರಣ್ಯದಲ್ಲಿನ ಬುರುಜಿಗೆ 24
ಬಂದು ಆ ಸಮೂಹವಿದ್ದ ಕಡೆಗೆ ನೋಡಿದಾಗ ನೆಲದ
ಮೇಲೆ ಬಿದ್ದಿರುವ ಹೆಣಗಳು ಹೊರತಾಗಿ ಜೀವದಿಂದುಳಿ
ದವರು ಯಾರೂ ಕಾಣಿಸಲಿಲ್ಲ. ಯೆಹೋಷಾಫಾಟನೂ 25
ಅವನ ಜನರೂ ಸುಲಿಗೆಮಾಡುವದಕ್ಕೋಸ್ಕರ ಅಲ್ಲಿಗೆ
ಹೋಗಲು ಅವರಿಗೆ ದ್ರವ್ಯ [1]ವಸ್ತ್ರ ಶ್ರೇಷ್ಠಾಯುಧ
ಇವುಗಳು ರಾಶಿರಾಶಿಯಾಗಿ ಸಿಕ್ಕಿದವು. ಅವರು ಹೊರ
ಲಾರದಷ್ಟು ಸುಲುಕೊಂಡರು. ಕೊಳ್ಳೆಯು ಬಲು
ಹೆಚ್ಚಾಗಿದ್ದದರಿಂದ ಅವರು ಮೂರು ದಿನಗಳ ವರೆಗೂ
ಕೂಡಿಸುತ್ತಿದ್ದರು. ನಾಲ್ಕನೆಯ ದಿನದಲ್ಲಿ ಬೆರಾಕ 26
ತಗ್ಗಿನಲ್ಲಿ ಕೂಡಿಬಂದರು. ಅವರು ಅಲ್ಲಿ ಯೆಹೋವ
ನನ್ನು ಸ್ತುತಿಸಿದದರಿಂದ ಆ ಸ್ಥಳಕ್ಕೆ ಇಂದಿನ ವರೆಗೂ
[2]ಬೆರಾಕ ತಗ್ಗು ಎಂಬ ಹೆಸರಿದೆ. ಆ ಮೇಲೆ ಯೆಹೂ 27
ದ್ಯರೂ ಯೆರೂಸಲೇಮಿನವರೂ ಅವರ ಮುಂಗಡೆಯಲ್ಲಿ
ಯೆಹೋಷಾಫಾಟನೂ ಯೆಹೋವನು ತಮಗೆ ಶತ್ರು
ಗಳ ಮೇಲೆ ಜಯವನ್ನು ಅನುಗ್ರಹಿಸಿದ್ದಾನೆಂದು ಜಯ
ಘೋಷಮಾಡುತ್ತಾ ಯೆರೂಸಲೇಮಿಗೆ ಹಿಂದಿರುಗಿದರು.
ಅವರು ಸ್ವರಮಂಡಲ ಕಿನ್ನರಿ ತುತೂರಿ ಇವುಗಳೊಡನೆ 28
ಯೆರೂಸಲೇಮಿನಲ್ಲಿರುವ ಯೆಹೋವನ ಆಲಯಕ್ಕೆ
ಬಂದರು. ಯೆಹೋವನು ತಾನೇ ಇಸ್ರಾಯೇಲ್ಯರ 29
ಶತ್ರುಗಳೊಡನೆ ಯುದ್ಧಮಾಡಿದನೆಂಬ ಸುದ್ದಿಯು ಅನ್ಯ
ದೇಶಗಳ ರಾಜ್ಯಗಳವರಿಗೆ ಮುಟ್ಟಿದಾಗ ಅವರೆಲ್ಲರೂ
ಬಹುಭೀತರಾದರು. ಹೀಗೆ ದೇವಾನುಗ್ರಹದಿಂದ ಸುತ್ತ 30
ಣ ವೈರಿಗಳ ಭಯತಪ್ಪಿ ಯೆಹೋಷಾಫಾಟನ ರಾಜ್ಯಕ್ಕೆ
ಸಮಾಧಾನವುಂಟಾಯಿತು.

### ಯೆಹೋಷಾಫಾಟನ ಚರಿತ್ರಸಮಾಪ್ತಿಯು.

ಯೆಹೂದ್ಯರ ಅರಸನಾದ ಯೆಹೋಷಾಫಾಟನು 31
ಪಟ್ಟಕ್ಕೆ ಬಂದಾಗ ಮೂವತ್ತೈದು ವರುಷದವನಾ
ಗಿದ್ದನು; ಇವನು ಯೆರೂಸಲೇಮಿನಲ್ಲಿ ಇಪ್ಪತ್ತೈದು
ವರುಷ ಆಳಿದನು. ಶಿಲ್ಹಿಯ ಮಗಳಾದ ಅಜೂಬಳೆಂಬಾ
ಕೆಯು ಇವನ ತಾಯಿ. ಇವನು ತಪ್ಪದೆ ತಂದೆ 32
ಯಾದ ಆಸನ ಮಾರ್ಗದಲ್ಲಿ ನಡೆಯುತ್ತಾ ಯೆಹೋ
ವನ ದೃಷ್ಟಿಯಲ್ಲಿ ಒಳ್ಳೆಯವನಾಗಿದ್ದರೂ ಪೂಜಾಸ್ಥಳಗ 33
ಳನ್ನು ಹಾಳುಮಾಡಲಿಲ್ಲ. ಜನರು ಇನ್ನೂ ತಮ್ಮ
ಪಿತೃಗಳ ದೇವರ ಮೇಲೆ ಮನಸ್ಸಿಟ್ಟಿರಲಿಲ್ಲ. ಯೆಹೋ 34
ಷಾಫಾಟನ ಉಳಿದ ಪೂರ್ವೋತ್ತರ ಚರಿತ್ರೆಯು ಇಸ್ರಾ
ಯೇಲ್‌ರಾಜರ ಗ್ರಂಥದಲ್ಲಿ ಅಡಕವಾಗಿರುವ ಹನಾ
ನೀಯ ಮಗನಾದ ಯೇಹುವಿನ ವೃತ್ತಾಂತದಲ್ಲಿ ಬರೆ
ದಿರುತ್ತದೆ.

---

1) ಪಾಠಾಂತರ: ಶವ. 2) ಅಂದರೆ, ಸ್ತುತಿ.

35 ಯೆಹೂದ್ಯರ ಅರಸನಾದ ಯೆಹೋಷಾಫಾಟನು
ಇಸ್ರಾಯೇಲ್ಯರ ಅರಸನೂ ಬಹುದುರಾಚಾರಿಯೂ
ಆದ ಅಹಜ್ಯನೊಡನೆ ಒಡಂಬಡಿಕೆಮಾಡಿಕೊಂಡನು.
36 ಅವರು ತಾರ್ಷೀಷಿಗೆ ಹೋಗುವದಕ್ಕಾಗಿ ಹಡಗುಗಳನ್ನು
ಕಟ್ಟಬೇಕೆಂದು ಒಡಂಬಡಿಕೆಮಾಡಿಕೊಂಡು ಅವುಗಳನ್ನು
37 ಎಚ್ಯೋನ್ಗೆಬೆರಿನಲ್ಲಿ ಕಟ್ಟಿಸಿದರು. ಆಗ ಮಾರೇಷಾ
ಊರಿನ ದೋದಾವಾಹುವಿನ ಮಗನಾದ ಎಲೀಯೆಜ
ರನು ಯೆಹೋಷಾಫಾಟನಿಗೆ ವಿರೋಧವಾಗಿ—ನೀನು
ಅಹಜ್ಯನೊಡನೆ ಒಡಂಬಡಿಕೆಮಾಡಿಕೊಂಡದ್ದರಿಂದ ಯೆ
ಹೋವನು ನಿನ್ನ ಕೆಲಸವನ್ನು ಹಾಳುಮಾಡುವನು
ಎಂದು ಪ್ರವಾದಿಸಿದನು. ಆ ಹಡಗುಗಳು ಒಡೆದು
ಹೋದದರಿಂದ ತಾರ್ಷೀಷಿಗೆ ಹೊರಡಲೇ ಇಲ್ಲ.

### ಅರಸನಾದ ಯೆಹೋರಾಮನು.

21 ಯೆಹೋಷಾಫಾಟನು ಪಿತೃಗಳ ಬಳಿಗೆ ಸೇರಿ ದಾ
ವೀದನಗರದಲ್ಲಿ ಪೂರ್ವಿಕರ ಶ್ಮಶಾನಭೂಮಿಯಲ್ಲಿ
ಸಮಾಧಿಹೊಂದಿದ ಮೇಲೆ ಅವನಿಗೆ ಬದಲಾಗಿ ಅವನ
2 ಮಗನಾದ ಯೆಹೋರಾಮನು ಅರಸನಾದನು. ಇವ
ನಿಗೆ ಅಜರ್ಯ, ಯೆಹೀಯೇಲ್, ಜೆಕರ್ಯ, ಅಜರ್ಯ,
ಮೀಕಾಯೇಲ್, ಶೆಫಟ್ಯ ಎಂಬ ತಮ್ಮಂದಿರಿದ್ದರು.
ಇವರೆಲ್ಲರೂ [1])ಯೆಹೂದ್ಯರ ಅರಸನಾದ ಯೆಹೋಷಾ
3 ಫಾಟನ ಮಕ್ಕಳು. ಇವರ ತಂದೆಯು ಇವರಿಗೆ ಯೆ
ಹೂದದ ಕೋಟೆಕೊತ್ತಲಗಳುಳ್ಳ ಪಟ್ಟಣಗಳನ್ನಲ್ಲದೆ
ಬೆಳ್ಳಿ ಬಂಗಾರ ಶ್ರೇಷ್ಠವಸ್ತು ಇತ್ಯಾದಿ ವಿಶೇಷದಾನಗ
ಳನ್ನು ಕೊಟ್ಟನು; ಆದರೆ ಯೆಹೋರಾಮನು ಹಿರಿಯ
ಮಗನಾಗಿದ್ದದರಿಂದ ಅವನಿಗೆ ರಾಜ್ಯವನ್ನು ಕೊಟ್ಟನು.
4 ಯೆಹೋರಾಮನು ತನ್ನ ತಂದೆಯ ರಾಜ್ಯವನ್ನು ಪಡ
ಕೊಂಡು ತನ್ನ ಆಳಿಕೆಯನ್ನು ಸ್ಥಿರಗೊಳಿಸಿಕೊಂಡ
ಮೇಲೆ ತನ್ನ ಎಲ್ಲಾ ಸಹೋದರರನ್ನೂ ಕೆಲವು ಮಂದಿ
ಇಸ್ರಾಯೇಲ್‍ಪ್ರಧಾನರನ್ನೂ ಕತ್ತಿಯಿಂದ ಸಂಹರಿಸಿ
5 ದನು. ಇವನು ಪಟ್ಟಕ್ಕೆ ಬಂದಾಗ ಮೂವತ್ತೆರಡು
ವರುಷದವನಾಗಿದ್ದನು; ಇವನು ಯೆರೂಸಲೇಮಿನಲ್ಲಿ
6 ಎಂಟು ವರುಷ ಆಳಿದನು. ಇವನು ಅಹಾಬನ ಮಗ
ಳನ್ನು ಮದುವೆಮಾಡಿಕೊಂಡದ್ದರಿಂದ ಅಹಾಬನ
ಕುಟುಂಬದವರಾದ ಇಸ್ರಾಯೇಲ್‍ರಾಜರ ಮಾರ್ಗ
ವನ್ನು ಅನುಸರಿಸಿ ಯೆಹೋವನ ಚಿತ್ತಕ್ಕೆ ವಿರುದ್ಧವಾಗಿ
7 ನಡೆದನು. ಆದರೂ ಯೆಹೋವನು ದಾವೀದನಿಗೆ—
ನಿನ್ನ ಮತ್ತು ನಿನ್ನ ಸಂತಾನದವರ ದೀಪವನ್ನು
ಎಂದೂ ನಂದಿಸುವದಿಲ್ಲ ಎಂದು ಪ್ರಮಾಣಮಾಡಿ
ಹೇಳಿದ್ದದರಿಂದ ದಾವೀದನ ಮನೆತನದವರನ್ನು ನಾಶ
ಮಾಡುವದಕ್ಕೆ ಇಷ್ಟಪಡಲಿಲ್ಲ.
8 ಯೆಹೋರಾಮನ ಕಾಲದಲ್ಲಿ ಎದೋಮ್ಯರು ಯೆ
ಹೂದ್ಯರಿಗೆ ವಿರೋಧವಾಗಿ ತಿರುಗಿಬಿದ್ದು ಸ್ವತಂತ್ರರಾ
ಗಿದ್ದು ತಾವೇ ತಮಗೊಬ್ಬ ಅರಸನನ್ನು ನೇಮಿಸಿಕೊಂ
9 ಡರು. ಆಗ ಯೆಹೋರಾಮನು ತನ್ನ ಸರದಾರರನ್ನೂ
ಎಲ್ಲಾ ರಥಬಲವನ್ನೂ ಕೂಡಿಸಿಕೊಂಡು [ಯೊರ್ದನ್
ಹೊಳೆಯನ್ನು] ದಾಟಿದನು. ಎದೋಮ್ಯರು ಬಂದು
ಅವನನ್ನು ಸುತ್ತಿಕೊಳ್ಳಲು ಅವನು ರಾತ್ರಿಯಲ್ಲೆ
ದಂಡೆತ್ತಿಹೋಗಿ ಅವರನ್ನೂ ಅವರ ರಥಬಲದ ಅಧಿಪ
ಗಳನ್ನೂ ಸೋಲಿಸಿ ಪಾರಾದನು. ಯೆಹೂದ್ಯರಿ
ವಿರೋಧವಾಗಿ ತಿರುಗಿಬಿದ್ದ ಎದೋಮ್ಯರು ಅಂದಿನಿಂ
ಇಂದಿನ ವರೆಗೂ ಸ್ವತಂತ್ರರಾಗಿದ್ದಾರೆ. ಆ ಕಾಲದಲ್ಲ
ಯೇ ಲಿಬ್ನದವರೂ ಅವನ ಕೈಯಿಂದ ತಪ್ಪಿಸಿಕೊಂಡ
ಸ್ವತಂತ್ರರಾದರು. ಯೆಹೋರಾಮನು ತನ್ನ ಪಿತೃಗ
ದೇವರಾದ ಯೆಹೋವನನ್ನು ಬಿಟ್ಟದ್ದೇ ಇದಕ್ಕೆ ಕಾರಣ
ಮತ್ತು ಅವನು ಯೆಹೂದದ ಗುಡ್ಡಗಳಲ್ಲಿ ಪೂಜಾಸ್ಥ
ಳಗಳನ್ನು ಏರ್ಪಡಿಸಿ ಯೆರೂಸಲೇಮಿನವರನ್ನು ದೇ
ದ್ರೋಹಮಾಡುವಂತೆ ಪ್ರೇರಿಸಿ ಯೆಹೂದ್ಯರನ್ನು ಸನ್ಮಾ
ರ್ಗದಿಂದ ತಪ್ಪಿಸಿದನು. ಹೀಗಿರಲು ಪ್ರವಾದಿಯಾದ
ಎಲೀಯನು ಕಾಗದದ ಮೂಲಕವಾಗಿ ಅವನಿಗೆ—ನಿನ್ನ
ಪೂರ್ವಿಕನಾದ ದಾವೀದನ ದೇವರಾಗಿರುವ ಯೆಹೋ
ವನ ಮಾತನ್ನು ಕೇಳು. ನೀನು ನಿನ್ನ ತಂದೆಯಾದ
ಯೆಹೋಷಾಫಾಟನ ಮಾರ್ಗದಲ್ಲಿಯೂ ಯೆಹೂದ್ಯ
ಅರಸನಾದ ಆಸನ ಮಾರ್ಗದಲ್ಲಿಯೂ ನಡೆಯಲಿಲ್ಲ
ಇಸ್ರಾಯೇಲ್‍ರಾಜರ ಮಾರ್ಗದಲ್ಲಿ ನಡೆದು ಅಹಾಬ
ಮನೆಯವರಲ್ಲಿ ಪ್ರಬಲವಾಗಿದ್ದ ದೇವದ್ರೋಹಮಾಡ
ವಂತೆ ಯೆಹೂದ್ಯರನ್ನೂ ಯೆರೂಸಲೇಮಿನವರನ್ನೂ
ಪ್ರೇರಿಸಿದಿ; ಮತ್ತು ನಿನ್ನ ತಂದೆಯ ಕುಟುಂಬಕ್ಕೆ ಸೇ
ನಿನಗಿಂತ ಉತ್ತಮರೂ ನಿನ್ನ ಸಹೋದರರೂ ಆಗಿದ್ದ
ರನ್ನು ವಧಿಸಿದಿ; ಆದದರಿಂದ ಯೆಹೋವನು ನಿನ್ನ
ಪ್ರಜೆಯನ್ನೂ ಹೆಂಡರುಮಕ್ಕಳನ್ನೂ ಸರ್ವಸ್ವವನ್ನೂ
ಮಹಾಪತ್ತಿಗೆ ಗುರಿಮಾಡುವನು. ನಿನಗಾದರೋ
ಕರುಳುಬೇನೆಯೆಂಬ ಕಠಿನರೋಗವು ಬಂದು ಬಹ
ದಿನಗಳ ವರೆಗೂ ಇದ್ದು ಕಡೆಯಲ್ಲಿ ಅದರಿಂದ ನಿನ್ನ
ಕರುಳುಗಳು ಹೊರಗೆ ಬೀಳುವವು ಎಂದು ತಿಳಿಸಿದನು.
ಯೆಹೋವನು ಫಿಲಿಷ್ಟಿಯರನ್ನೂ ಕೂಷ್ಯರ ನೆರೆಯ
ವರಾದ ಅರಬಿಯರನ್ನೂ ಯೆಹೋರಾಮನಿಗೆ ವಿರೋ
ಧಿಗಳಾಗುವಂತೆ ಎಬ್ಬಿಸಿದ್ದರಿಂದ ಅವರು ಯೆಹೂದದ
ಮೇಲೆ ಯುದ್ಧಕ್ಕೆ ಬಂದು ದೇಶದೊಳಗೆ ನುಗ್ಗಿ ಅ
ಮನೆಯಲ್ಲಿ ಸಿಕ್ಕಿದ ಎಲ್ಲಾ ಸೊತ್ತನ್ನೂ ಅರಸನ ಹೆಂ
ರುಮಕ್ಕಳನ್ನೂ ಸೆರೆಒಯ್ದರು. ಅವನಿಗೆ ಕಿರಿಯ ಮ
ನಾದ ಯೆಹೋವಾಹಾಜನ ಹೊರತು ಮಕ್ಕಳ
ಉಳಿಯಲಿಲ್ಲ. ಇಷ್ಟೆಲ್ಲಾ ಆದ ಮೇಲೆ ಯೆಹೋ
ವನು ಅವನ ಕರುಳುಗಳಲ್ಲಿ ವಾಸಿಯಾಗಲಾರದ ರೋಗ
ವನ್ನು ಉಂಟುಮಾಡಿದನು. ಕಾಲಾಂತರದಲ್ಲಿ ಅಂದ
ಸುಮಾರು ಎರಡು ವರುಷಗಳಾದ ಮೇಲೆ ಆ ರೋಗ
ದಿಂದ ಕರುಳುಗಳು ಹೊರಬಿದ್ದವು. ಅವನು ಕಡುಬೇನ
ಯಿಂದ ಸತ್ತನು. ಅವನ ಪ್ರಜೆಗಳು ಅವನ ಪೂರ್ವಿಕ
ಗೋಸ್ಕರ ಧೂಪಹಾಕಿದ ಪ್ರಕಾರ ಅವನಿಗೆ ಹಾಕಲಿಲ್ಲ
ಅವನು ಪಟ್ಟಕ್ಕೆ ಬಂದಾಗ ಮೂವತ್ತೆರಡು ವರುಷ
ದವನಾಗಿದ್ದನು; ಅವನು ಯೆರೂಸಲೇಮಿನಲ್ಲಿ ಎಂಟ
ವರುಷ ಆಳಿದನು. ಅವನು ತೀರಿಹೋದಾಗ ಅವ
ನನ್ನು ಯಾರೂ ಹಂಬಲಿಸಲಿಲ್ಲ. ಅವನ ಶವವನ್ನು
ದಾವೀದನಗರದಲ್ಲಿ ಸಮಾಧಿಮಾಡಿದರು; ಆದ
ರಾಜಶ್ಮಶಾನದಲ್ಲಿ ಅಲ್ಲ.

1) ಪಾಠಾಂತರ: ಇಸ್ರಾಯೇಲ್ಯರ.

ಅರಸನಾದ ಅಹಜ್ಯನು.

22 ಯೆರೂಸಲೇಮಿನವರು ಯೆಹೋರಾಮನಿಗೆ ಬದ
ಲಾಗಿ ಅವನ ಕಿರಿಯ ಮಗನಾದ ಅಹಜ್ಯನನ್ನು
ಅರಸನನ್ನಾಗಿ ಮಾಡಿದರು. ಅರಬಿಯರೊಡನೆ
[ಯೆಹೋರಾಮನ] ಪಾಳೆಯಕ್ಕೆ ಬಂದ ಕೊಳ್ಳೆಗಾರರು
ಅವನ ಹಿರಿಯ ಮಕ್ಕಳನ್ನೆಲ್ಲಾ ಕೊಂದುಬಿಟ್ಟಿದ್ದರು.
ಆದದರಿಂದ ಯೆಹೂದದ ಅರಸನಾದ ಯೆಹೋರಾ
2 ಮನ ಮಗ ಅಹಜ್ಯನು ಅರಸನಾದನು. ಇವನು
ಪಟ್ಟಕ್ಕೆ ಬಂದಾಗ [1])ನಾಲ್ವತ್ತೆರಡು ವರುಷದವನಾಗಿ
ದ್ದನು; ಇವನು ಯೆರೂಸಲೇಮಿನಲ್ಲಿ ಒಂದು ವರುಷ
ಆಳಿದನು; ಒಮ್ರಿಯ ಮೊಮ್ಮಗಳಾದ ಅತಲ್ಯ
3 ಎಂಬಾಕೆಯು ಇವನ ತಾಯಿ. ತನ್ನ ತಾಯಿಯ
ದುರ್ಬೋಧೆಯನ್ನು ಅಲೈಸಿ ಇವನೂ ದುರಾಚಾರಿ
ಯಾಗಿ ಅಹಾಬನ ಮನೆಯವರ ಮಾರ್ಗದಲ್ಲೇ ನಡೆ
4 ದನು. ಇವನ ತಂದೆ ತೀರಿಹೋದ ಮೇಲೆ ಅಹಾಬನ
ಕುಟುಂಬದವರೇ ಇವನಿಗೆ ಸಲಹೆಕೊಟ್ಟು ಇವನನ್ನು
ಕೆಡಿಸುತ್ತಾ ಬಂದದರಿಂದ ಇವನು ಯೆಹೋವನಿಗೆ
5 ವಿರುದ್ಧವಾಗಿ ನಡೆದನು. ಅವರ ಪ್ರೇರಣೆಯಿಂದ
ಇಸ್ರಾಯೇಲ್ಯರ ಅರಸನೂ ಅಹಾಬನ ಮಗನೂ ಆದ
ಯೋರಾಮನ ಜೊತೆಯಲ್ಲಿ ಅರಾಮ್ಯರ ಅರಸನಾದ
ಹಜಾಯೇಲನಿಗೆ ವಿರುದ್ಧವಾಗಿ ಯುದ್ಧಮಾಡುವದಕ್ಕೆ
ರಾಮೋತ್‍ಗಿಲ್ಯಾದಿಗೆ ಹೋದನು. ಅರಾಮ್ಯರು
ಯೋರಾಮನನ್ನು ಯುದ್ಧದಲ್ಲಿ ಗಾಯಪಡಿಸಲು
6 ಅವನು ಆ ಗಾಯಗಳನ್ನು ವಾಸಿಮಾಡಿಸಿಕೊಳ್ಳುವದ
ಕ್ಕಾಗಿ ಇಜ್ರೇಲಿಗೆ ಬಂದನು. ಅವನು ಅಸ್ವಸ್ಥನಾಗಿ
ದ್ದದರಿಂದ ಯೆಹೂದ್ಯರ ಅರಸನಾದ ಯೆಹೋರಾಮ
ನಿಗೆ ಮಗನಾಗಿರುವ [2])ಅಹಜ್ಯನು ಅವನನ್ನು ನೋಡು
7 ವದಕ್ಕೋಸ್ಕರ ಅಲ್ಲಿಗೆ ಹೋದನು. ಅಹಜ್ಯನು ಯೋ
ರಾಮನ ಬಳಿಗೆ ಹೋಗಿ ನಾಶವಾದದ್ದು ದೈವಯೋಗ
ದಿಂದಲೇ. ಅವನು ಅಲ್ಲಿ ಮುಟ್ಟಿದ ಕೂಡಲೆ ಯೋ
ರಾಮನ ಜೊತೆಯಲ್ಲಿ ನಿಂಷಿಯ ಮಗನಾದ ಯೇಹು
ವನ್ನು ಎದುರುಗೊಳ್ಳುವದಕ್ಕೆ ಹೋದನು. ಯೆಹೋ
ವನು ಅಹಾಬನ ಮನೆಯನ್ನು ನಿರ್ನಾಮಮಾಡುವದ
ಕ್ಕೋಸ್ಕರ ಯೇಹುವಿಗೆ ರಾಜ್ಯಾಭಿಷೇಕ ಮಾಡಿಸಿದ್ದನು.
8 ಯೇಹುವು ಅಹಾಬನ ಮನೆಯವರ ಮೇಲೆ ಆ
ನಿರ್ಣಯವನ್ನು ನೆರವೇರಿಸುತ್ತಿರುವಾಗ ತನಗೆ ಸಿಕ್ಕಿದ
ಯೆಹೂದ್ಯ ಪ್ರಧಾನರನ್ನೂ ಅಹಜ್ಯನಿಗೆ ಸೇವೆಮಾಡು
ತ್ತಿದ್ದ ಅವನ ಅಣ್ಣತಮ್ಮಂದಿರ ಮಕ್ಕಳನ್ನೂ ಕೊಲ್ಲಿಸಿ
9 ದನು. ಆ ಮೇಲೆ ಅಹಜ್ಯನನ್ನು ಹುಡುಕಿಸಿದನು;
ಅವನು ಸಮಾರ್ಯದಲ್ಲಿ ಅಡಗಿಕೊಂಡಿದ್ದನು. ಜನರು
ಅವನನ್ನು ಯೇಹುವಿನ ಬಳಿಗೆ ಹಿಡಿದು ತಂದು ವಧಿಸಿ—
ಇವನು ಯೆಹೋವನ ಯಥಾರ್ಥಭಕ್ತನಾದ ಯೆಹೋ
ಷಾಫಾಟನ ಮೊಮ್ಮಗನಾಗಿರುತ್ತಾನಲ್ಲವೇ ಅಂದು
ಕೊಂಡು ಅವನನ್ನು ಸಮಾಧಿಮಾಡಿದರು. ರಾಜ್ಯಾಧಿ
ಕಾರವನ್ನು ವಹಿಸಿಕೊಳ್ಳುವದಕ್ಕೆ ಅಹಜ್ಯನ ಮನೆಯವ
ರಲ್ಲಿ ಸಮರ್ಥರಾರೂ ಉಳಿಯಲಿಲ್ಲ.

ಅತಲ್ಯಳು.

ಅಹಜ್ಯನು ಮರಣಹೊಂದಿದನೆಂಬದನ್ನು ಅವನ ತಾ 10
ಯಿಯಾದ ಅತಲ್ಯಳು ಕೇಳಿದ ಕೂಡಲೆ ಯೆಹೂದ
ರಾಜಸಂತಾನದವರನ್ನೆಲ್ಲಾ ಸಂಹರಿಸಿಬಿಟ್ಟಳು. ಆದರೆ 11
ರಾಜಪುತ್ರಿಯಾದ ಯೆಹೋಷಬತ್ ಎಂಬಾಕೆಯು ಹತ
ರಾಗುವದಕ್ಕಿದ್ದ ರಾಜಪುತ್ರರ ಮಧ್ಯದಿಂದ ಅಹಜ್ಯನ
ಮಗನಾದ ಯೆಹೋವಾಷನನ್ನು ಯಾರಿಗೂ ತಿಳಿಯ
ದಂತೆ ಅವನ ದಾದಿಯೊಡನೆ ತೆಗೆದುಕೊಂಡು ಹೋಗಿ
ಮಲಗುವ ಕೋಣೆಯಲ್ಲಿ ಅಡಗಿಸಿಟ್ಟಳು. ಅರಸನಾದ
ಯೆಹೋರಾಮನ ಮಗಳೂ ಅಹಜ್ಯನ ಸಹೋದರಿಯೂ
ಯಾಜಕನಾದ ಯೆಹೋಯಾದನ ಹೆಂಡತಿಯೂ
ಆಗಿದ್ದ ಯೆಹೋಷಬತಳು ಹೀಗೆ ಅವನನ್ನು ಅತಲ್ಯ
ಳಿಂದ ಹತನಾಗದಂತೆ ರಕ್ಷಿಸಿದಳು. ಅವನು ಆರು 12
ವರುಷಗಳ ವರೆಗೂ ಅವರೊಡನೆ ಗುಪ್ತವಾಗಿ ದೇವಾ
ಲಯದಲ್ಲಿದ್ದನು. ಆಗ ಅತಲ್ಯಳೇ ದೇಶವನ್ನಾಳುತ್ತಿ
ದ್ದಳು.

ಏಳನೆಯ ವರುಷದಲ್ಲಿ ಯೆಹೋಯಾದನು 23
ಧೈರ್ಯತಂದುಕೊಂಡು ಯೆರೋಹಾಮನ ಮಗ
ನಾದ ಅಜರ್ಯ, ಯೆಹೋಹಾನಾನನ ಮಗನಾದ
ಇಷ್ಮಾಯೇಲ್, ಓಬೇದನ ಮಗನಾದ ಅಜರ್ಯ,
ಅದಾಯನ ಮಗನಾದ ಮಾಸೇಯ, ಜಿಕ್ರಿಯ ಮಗ
ನಾದ ಎಲೀಷಾಫಾಟ್ ಎಂಬ ಶತಾಧಿಪತಿಗಳೊಡನೆ
ಒಡಂಬಡಿಕೆಯನ್ನು ಮಾಡಿಕೊಂಡನು. ಇವರು ಯೆ 2
ಹೂದದಲ್ಲೆಲ್ಲಾ ಸಂಚರಿಸಿ ಎಲ್ಲಾ ಪಟ್ಟಣಗಳಿಂದ ಲೇವಿ
ಯರನ್ನೂ ಇಸ್ರಾಯೇಲ್ಯರ ಗೋತ್ರಪ್ರಧಾನರನ್ನೂ
ಕೂಡಿಸಲು ಅವರು ಯೆರೂಸಲೇಮಿಗೆ ಬಂದರು.
ಕೂಡಿಬಂದವರೆಲ್ಲರೂ ದೇವಾಲಯದಲ್ಲಿ ಅರಸನೊಂದಿ 3
ಗೆ ಒಡಂಬಡಿಕೆಮಾಡಿಕೊಂಡರು. ಯೆಹೋಯಾ
ದನು ಅವರಿಗೆ—ಇಗೋ, ರಾಜಪುತ್ರನು! ಯೆಹೋ
ವನು ದಾವೀದನ ಸಂತಾನದವರಿಗೆ ಮಾಡಿದ ವಾಗ್ದಾನ
ಕ್ಕನುಸಾರವಾಗಿ ಅರಸನಾಗತಕ್ಕವನು ಇವನೇ. ಈಗ 4
ನೀವು ಮಾಡತಕ್ಕದ್ದೇನಂದರೆ—ಸಬ್ಬತ್‍ದಿವಸ ದೇವಾ
ಲಯಕ್ಕೆ ಬರತಕ್ಕ ಲೇವಿಯರಾಗಲಿ ಯಾಜಕರಾಗಲಿ
ಆದ ನಿಮ್ಮಲ್ಲಿ ಮೂರರಲ್ಲೊಂದು ಭಾಗವು ದೇವಸ್ಥಾ
ನದ ದ್ವಾರಪಾಲಕರಾಗಿ ನಿಲ್ಲಬೇಕು. ಇನ್ನೊಂದು 5
ಭಾಗವು ಅರಮನೆಯನ್ನೂ ಮತ್ತೊಂದು ಭಾಗವು
ಯೆಸೋದ್‍ಬಾಗಲನ್ನೂ ಕಾಯಬೇಕು. ಇತರ ಜನ
ರೆಲ್ಲರೂ ಯೆಹೋವನ ಆಲಯದ ಪ್ರಾಕಾರದಲ್ಲಿರ
ಬೇಕು. ಯಾಜಕರೂ ಸೇವೆಯಲ್ಲಿರುವ ಲೇವಿಯರೂ 6
ಹೊರತಾಗಿ ಯಾರೂ ಯೆಹೋವನ ಆಲಯದೊಳಗೆ
ಬರಬಾರದು. ಇವರು ಪರಿಶುದ್ಧರಾಗಿರುವದರಿಂದ ಬರ
ಬಹುದು. ಉಳಿದ ಜನರೆಲ್ಲರೂ ಯೆಹೋವನ ಆಜ್ಞಾ
ನುಸಾರವಾಗಿ ಹೊರಗಿರಬೇಕು. ಲೇವಿಯರು ಕೈ 7
ಯಲ್ಲಿ ಆಯುಧಗಳನ್ನು ಹಿಡಿದುಕೊಂಡು ಅರಸನ
ಸುತ್ತಲೂ ನಿಂತು ಆಲಯದೊಳಕ್ಕೆ ನುಗ್ಗುವವರನ್ನು
ಸಂಹರಿಸಬೇಕು. ಅರಸನು ಹೋಗಿ ಬರುವಾಗೆಲ್ಲಾ

1) ಅಥವಾ, ಇಪ್ಪತ್ತೆರಡನೆಯ. 2) ಪಾಠಾಂತರ: ಅಜರ್ಯ.

ಅವರು ಅವನ ಜೊತೆಯಲ್ಲೇ ಇರಬೇಕು ಎಂದು
8 ಹೇಳಿದನು. ಲೇವಿಯರೂ ಎಲ್ಲಾ ಯೆಹೂದ್ಯರೂ
ಯಾಜಕನಾದ ಯೆಹೋಯಾದನ ಆಜ್ಞೆಯಂತೆ ನಡೆ
ದುಕೊಂಡರು. ಅವನು [ಸಬ್ಬತ್‌ದಿವಸದಲ್ಲಿ ಸೇವಾ
ವಿಮುಕ್ತರಾದ] ವರ್ಗಗಳವರನ್ನು ಕಳುಹಿಸಿಬಿಡಲಿಲ್ಲ;
ಆದದರಿಂದ ಪ್ರತಿಯೊಬ್ಬನು ಸಬ್ಬತ್‌ದಿವಸ ಮನೆಗೆ
ಹೋಗಬೇಕಾಗಿದ್ದ ಮತ್ತು ಬರಬೇಕಾಗಿದ್ದ ತನ್ನ ಕೈ
9 ಕೆಳಗಿನವರನ್ನು ಕೂಡಿಸಿಕೊಂಡನು. ದೇವಾಲಯ
ದಲ್ಲಿಟ್ಟಿದ್ದ ಅರಸನಾದ ದಾವೀದನ ಬರ್ಜಿ ಗುರಾಣಿ
ಖೇಡ್ಯಗಳೇ ಮುಂತಾದ ಆಯುಧಗಳನ್ನು ಯಾಜಕ
ನಾದ ಯೆಹೋಯಾದನು ಶತಾಧಿಪತಿಗಳಿಗೆ ಕೊಟ್ಟು
10 ಆಯುಧಪಾಣಿಗಳಾದ ಎಲ್ಲಾ ಜನರನ್ನು ಅರಸನ
ಸುತ್ತಲೂ ದೇವಾಲಯದ ದಕ್ಷಿಣದಿಕ್ಕಿನ ಮೂಲೆ
ಯಿಂದ ಯಜ್ಞವೇದಿಯ ವರೆಗೂ ಅಲ್ಲಿಂದ ಉತ್ತರ
ದಿಕ್ಕಿನ ಮೂಲೆಯ ವರೆಗೂ ಸಾಲಾಗಿ ನಿಲ್ಲಿಸಿದನು.
11 ಆ ಮೇಲೆ ಅವನೂ ಅವನ ಮಕ್ಕಳೂ ರಾಜಪುತ್ರನನ್ನು
ಹೊರಗೆ ಕರಕೊಂಡು ಬಂದು ಅವನ ತಲೆಯ
ಮೇಲೆ ಕಿರೀಟವನ್ನಿಟ್ಟು ಕೈಯಲ್ಲಿ ಧರ್ಮಶಾಸ್ತ್ರವನ್ನು
ಕೊಟ್ಟು ಅವನಿಗೆ ರಾಜ್ಯಾಭಿಷೇಕಮಾಡಿದರು. ಕೂಡಲೆ
ಜನರು—ಅರಸನು ಚಿರಂಜೀವಿಯಾಗಿರಲಿ ಎಂದು ಹರ
ಸಿದರು.
12 ಜನರು ಅತ್ತಿತ್ತ ಓಡಾಡುತ್ತಾ ಅರಸನನ್ನು ಹರಸುವ
ಗದ್ದಲವನ್ನು ಅತಲ್ಯಳು ಕೇಳಿ ಅವರು ಕೂಡಿದ್ದ
13 ಯೆಹೋವನ ಆಲಯಕ್ಕೆ ಬಂದಳು. ಅಲ್ಲಿ ಅರಸನು
ಬಾಗಲಿನ ಬಳಿಯಲ್ಲಿರುವ ರಾಜಸ್ತಂಭದ ಹತ್ತಿರ ನಿಂತಿ
ದ್ದನು. ಅಧಿಪತಿಗಳೂ ತುತೂರಿಗಳನ್ನು ಊದುವವ
ರೂ ಅರಸನ ಹತ್ತಿರ ಇದ್ದರು; ಸಾಧಾರಣಜನರೆಲ್ಲರೂ
ಸಂತೋಷದಿಂದ ಕೊಂಬೂದುತ್ತಿದ್ದರು. ಗಾಯಕರು
ವಾದ್ಯಗಳನ್ನು ಬಾರಿಸುತ್ತಾ ಜನರ ಕೀರ್ತನೆಗಳನ್ನು
ನುಡಿಸುತ್ತಿದ್ದರು. ಇದನ್ನು ಕಂಡಕೂಡಲೆ ಆಕೆಯು
ಬಟ್ಟೆಗಳನ್ನು ಹರಿದುಕೊಂಡು—ದ್ರೋಹ, ದ್ರೋಹ
14 ಎಂದು ಕೂಗಿದಳು. ಆಗ ಯಾಜಕನಾದ ಯೆಹೋ
ಯಾದನು ಸೇನಾನಿಗಳಾದ ಶತಾಧಿಪತಿಗಳನ್ನು ಹೊ
ರಗೆ ಕರಕೊಂಡು ಹೋಗಿ ಅವರಿಗೆ—ಈಕೆಯನ್ನು
ಯೆಹೋವನ ಆಲಯದಲ್ಲಿ ಕೊಲ್ಲಬೇಡಿರಿ; ಎರಡು
ಸಾಲು ಸಿಪಾಯಿಗಳು ಈಕೆಯನ್ನು ನಡುವೆ ಸಾಗಿಸಿ
ಕೊಂಡು ಹೊರಗೆ ತಳ್ಳಲಿ; ಮತ್ತು ಈಕೆಯನ್ನು
ಹಿಂಬಾಲಿಸುವಂಥವರನ್ನು ಕತ್ತಿಯಿಂದ ಕೊಲ್ಲಿರಿ ಎಂದು
15 ಆಜ್ಞಾಪಿಸಿದನು. ಅವರು ಆಕೆಯನ್ನು ಹಿಡಿದು ಅರ
ಮನೆಗೆ ಹೋಗುವ ಕುದುರೆ ಬಾಗಲಿನ ತನಕ ಒಯ್ದು
ಅಲ್ಲಿ ಕೊಂದರು.
16 ಅನಂತರ ಯೆಹೋಯಾದನು ಎಲ್ಲಾ ಜನರನ್ನೂ
ಅರಸನನ್ನೂ ಪ್ರೇರಿಸಿ ತಾವೆಲ್ಲರೂ ಯೆಹೋವನ ಪ್ರಜೆ
ಗಳಾಗಿರುವೆವೆಂದು ಅವರೊಡನೆ ಪ್ರಮಾಣಮಾಡಿದನು.
17 ತರುವಾಯ ಜನರೆಲ್ಲರೂ ಬಾಳ್‌ದೇವಸ್ಥಾನಕ್ಕೆ ಹೋಗಿ
ಪೂಜಾರಿಯಾದ ಮತ್ತಾನನನ್ನು ಯಜ್ಞವೇದಿಗಳ
ಮುಂದೆಯೇ ಕೊಂದು ದೇವಸ್ಥಾನವನ್ನೂ ಅದರಲ್ಲಿದ್ದ
18 ವೇದಿವಿಗ್ರಹಗಳನ್ನೂ ಹಾಳುಮಾಡಿಬಿಟ್ಟರು. ಯೆಹೋ
ಯಾದನು ಲೇವಿಯರಾದ ಯಾಜಕರ ಕೈಕೆಳ
ಯೆಹೋವನ ಆಲಯದ ಕಾವಲುಗಾರರನ್ನು ನೇಮಿ
ಸಿದನು. ದಾವೀದನು ಆ ಯಾಜಕರನ್ನು ಯೆಹೋ
ವನ ಆಲಯದ ಸೇವೆಗೋಸ್ಕರ ವರ್ಗವರ್ಗಗಳಾ
ವಿಭಾಗಿಸಿದ್ದನು. ದಾವೀದನು ನೇಮಿಸಿದ ಉತ್ಸಾ
ಗಾಯನದೊಡನೆ ಮೋಶೆಯ ಧರ್ಮಶಾಸ್ತ್ರಾನ
ಸಾರ ಯೆಹೋವನಿಗೆ ಸರ್ವಾಂಗಹೋಮಸಮರ್ಪ
ಮಾಡುವದೇ ಅವರ ಕರ್ತವ್ಯ. ಯಾವ ವಿಷಯ
ದಲ್ಲಾದರೂ ಅಶುದ್ಧನಾದವನು ಯೆಹೋವನ ಆಲಯ
ದಲ್ಲಿ ಸೇರದಂತೆ ಯೆಹೋಯಾದನು ಆಯಾ ಬಾಗಲ
ಗಳಲ್ಲಿ ದ್ವಾರಪಾಲಕರನ್ನಿರಿಸಿದನು. ಆ ಮೇಲೆ ಅ
ನು ಶತಾಧಿಪತಿಗಳು ಶ್ರೀಮಂತರು ಜನನಾಯಕರ
ಸಾಧಾರಣಜನರು ಇವರೊಡನೆ ಅರಸನನ್ನು ಯೆಹೋ
ವನ ಆಲಯದಿಂದ ಮೇಲಣ ಬಾಗಲಿನ ಮಾರ್ಗವಾ
ಅರಮನೆಗೆ ಕರಕೊಂಡುಹೋಗಿ ರಾಜಸಿಂಹಾಸನ
ಮೇಲೆ ಕುಳ್ಳಿರಿಸಿದನು. ದೇಶದವರೆಲ್ಲರೂ ಬಹಳವಾ
ಸಂತೋಷಪಟ್ಟರು; ಪಟ್ಟಣವು ಶಾಂತವಾಯಿತು; ಅ
ಲ್ಯಳನ್ನು ಕತ್ತಿಯಿಂದ ಸಂಹರಿಸಿದರು.

ಅರಸನಾದ ಯೆಹೋವಾಷನು.

ಯೆಹೋವಾಷನು ಅರಸನಾದಾಗ ಏಳು ವರುಷ
ದವನಾಗಿದ್ದನು. ಅವನು ಯೆರೂಸಲೇಮಿನಲ್ಲಿ
ನಾಲ್ವತ್ತು ವರುಷ ಆಳಿದನು. ಬೇರ್ಷೆಬದವಳಾ
ಚಿಬ್ಯಳು ಅವನ ತಾಯಿ. ಅವನು ಯಾಜಕನಾ
ಯೆಹೋಯಾದನ ಜೀವಮಾನದಲ್ಲೆಲ್ಲಾ ಯೆಹೋವ
ಚಿತ್ತಾನುಸಾರವಾಗಿ ನಡೆದುಕೊಳ್ಳುತ್ತಿದ್ದನು. ಯೆಹೋ
ಯಾದನು ಅವನಿಗೆ ಇಬ್ಬರು ಕನ್ಯೆಯರನ್ನು ಮದು
ಮಾಡಿಕೊಟ್ಟನು; ಅವನು ಗಂಡು ಹೆಣ್ಣು ಮಕ್ಕಳನ್
ಪಡೆದನು.
ಕಾಲಾಂತರದಲ್ಲಿ ಯೆಹೋವಾಷನು ಯೆಹೋವ
ಆಲಯವನ್ನು ಜೀರ್ಣೋದ್ಧಾರಮಾಡುವದಕ್ಕೆ ಮ
ಸ್ಸುಮಾಡಿ ಯಾಜಕರನ್ನೂ ಲೇವಿಯರನ್ನೂ ಕೂಡಿ
ಅವರಿಗೆ—ನೀವು ಯೆಹೂದದ ಪಟ್ಟಣಗಳಿಗೆ ಹೋ
ನಿಮ್ಮ ದೇವರಾದ ಯೆಹೋವನ ಆಲಯವನ್ನು ವರು
ವರುಷ ಜೀರ್ಣೋದ್ಧಾರಮಾಡುವದಕ್ಕಾಗಿ ಎಲ್ಲಾ
ಇಸ್ರಾಯೇಲ್ಯರಿಂದ ಹಣಕೂಡಿಸಿರಿ; ಈ ಕಾರ್ಯವನ್
ಶೀಘ್ರವಾಗಿ ನೆರವೇರಿಸಿರಿ ಎಂದು ಆಜ್ಞಾಪಿಸಿದನು
ಆದರೂ ಲೇವಿಯರು ಅವಸರಪಡಲಿಲ್ಲ. ಆದದರಿಂ
ಅರಸನು ಅವರ ಮುಖ್ಯಸ್ಥನಾದ ಯೆಹೋಯಾ
ನನ್ನು ಕರಿಸಿ ಅವನಿಗೆ—ಯೆಹೋವನ ಸೇವಕನಾ
ಮೋಶೆಯ ವಿಧಿಗನುಸಾರವಾಗಿ ಇಸ್ರಾಯೇಲ
ಸಮೂಹದವರೆಲ್ಲಾ 1)ದೇವದರ್ಶನದ ಗುಡಾರಕ್ಕೋ
ಸ್ಕರ ಕೊಡಬೇಕಾದ ಕಾಣಿಕೆಯನ್ನು ಲೇವಿಯರ
ಯೆಹೂದ್ಯರಿಂದಲೂ ಯೆರೂಸಲೇಮಿನವರಿಂದಲ
ಕೂಡಿಸುವ ಹಾಗೆ ನೀನೇಕೆ ನೋಡಿಕೊಳ್ಳಲಿಲ್ಲ? ಅ
ದುಷ್ಟಳಾದ ಅತಲ್ಯಳ ಮನೆಯವರು ದೇವಾಲಯವನ್
ಹಾಳುಮಾಡಿ ಯೆಹೋವನ ಆಲಯದ ಪ್ರತಿಷ್ಠಿ

1) ಮೂಲ: ಆಜ್ಞಾಶಾಸನಗಳಿರುವ ಗುಡಾರ.

ವಸ್ತ್ರಗಳನ್ನು ಬಾಳ್‌ದೇವತೆಗಳಿಗೋಸ್ಕರ ಕೊಟ್ಟುಬಿಟ್ಟ
8 ರಲ್ಲಾ ಎಂದು ಹೇಳಿದನು. ಅನಂತರ ಅರಸನು ಒಂದು
ಪೆಟ್ಟಿಗೆಯನ್ನು ಮಾಡಿಸಿ ಅದನ್ನು ಯೆಹೋವನ ಆಲ
9 ಯದ ಬಾಗಲಿನ ಹೊರಗೆ ಇಡಿಸಿ—ದೇವರ ಸೇವಕ
ನಾದ ಮೋಶೆಯು ಅರಣ್ಯದಲ್ಲಿ ವಿಧಿಸಿದಂತೆ ಇಸ್ರಾ
ಯೇಲ್ಯರು ಯೆಹೋವನಿಗೋಸ್ಕರ ಕೊಡಬೇಕಾದ
ಕಾಣಿಕೆಯನ್ನು ತಂದುಕೊಡಬೇಕು ಎಂಬದಾಗಿ ಯೆಹೂ
ದದಲ್ಲಿಯೂ ಯೆರೂಸಲೇಮಿನಲ್ಲಿಯೂ ಪ್ರಕಟಿಸಿ
10 ದನು. ಎಲ್ಲಾ ಪ್ರಭುಗಳೂ ಜನರೂ ಸಂತೋಷದಿಂದ
ಬೇಕಾಗುವಷ್ಟು ಹಣವನ್ನು ತಂದು ಪೆಟ್ಟಿಗೆಯಲ್ಲಿ
11 ಹಾಕಿದರು. ಪೆಟ್ಟಿಗೆಯಲ್ಲಿ ತುಂಬಾ ಹಣವಿರುತ್ತ
ದೆಂದು ಕಂಡುಬಂದಾಗೆಲ್ಲಾ ಲೇವಿಯರು ಪೆಟ್ಟಿಗೆ
ಯನ್ನು ರಾಜಕೀಯ ಅಧ್ಯಕ್ಷರ ಬಳಿಗೆ ತರುವರು.
ಆಗ ಅರಸನ ಲೇಖಕನೂ ಮಹಾಯಾಜಕನ ಉದ್ಯೋ
ಗಸ್ಥನೂ ಬಂದು ಅದನ್ನು ತೆರವು ಮಾಡಿ ತಿರಿಗಿ
ಅದರ ಸ್ಥಳದಲ್ಲಿಡುವರು. ಅವರು ಪ್ರತಿದಿನವೂ
ಈ ಪ್ರಕಾರ ಮಾಡುತ್ತಿದ್ದದರಿಂದ ಬಹಳ ಹಣವನ್ನು
12 ಕೂಡಿಸಿದರು. ಅರಸನೂ ಯೆಹೋಯಾದನೂ ಅದ
ನ್ನು ಯೆಹೋವನ ಆಲಯದ ಕೆಲಸವನ್ನು ನಡಿಸು
ವವರಿಗೆ ಒಪ್ಪಿಸಿದರು. ಇವರು ಯೆಹೋವನ ಆಲ
ಯದ ಜೀರ್ಣೋದ್ಧಾರಕ್ಕಾಗಿ ಶಿಲ್ಪಿಗರನ್ನೂ ಬಡಿಗಿ
ಯರನ್ನೂ ಅದನ್ನು ಭದ್ರಪಡಿಸುವದಕ್ಕಾಗಿ ಕಮ್ಮಾರ
13 ರನ್ನೂ ಕಂಚುಗಾರರನ್ನೂ ಹಚ್ಚಿದರು. ಕೆಲಸಮಾಡು
ವವರು ಬಹುಪ್ರಯಾಸಪಡುತ್ತಿದ್ದದರಿಂದ ಜೀರ್ಣೋ
ದ್ಧಾರದ ಕೆಲಸವು ಮುಂದರಿಯಿತು. ಅವರು ದೇವಾ
ಲಯವನ್ನು ಭದ್ರಪಡಿಸಿ ಪೂರ್ವಸ್ಥಿತಿಗೆ ತಂದರು.
14 ಕೆಲಸ ತೀರಿದಾಗ ಅವರು ಉಳಿದ ಹಣವನ್ನು ಅರಸ
ನಿಗೂ ಯೆಹೋಯಾದನಿಗೂ ಒಪ್ಪಿಸಿದರು. ಇವರು
ಅದರಿಂದ ಯೆಹೋವನ ಆಲಯದ ಆರಾಧನೆಗಾಗಿ
ಯೂ ಯಜ್ಞಾರ್ಪಣೆಗಾಗಿಯೂ ಉಪಯೋಗವಾಗುವ
ಧೂಪಾರತಿ, ಬೆಳ್ಳಿಬಂಗಾರದ ಪಾತ್ರೆ ಮೊದಲಾದ
ಸಾಮಾನುಗಳನ್ನು ಮಾಡಿಸಿದರು.
ಯೆಹೋಯಾದನ ಜೀವಮಾನದಲ್ಲೆಲ್ಲಾ ಯೆಹೋ
ವನ ಆಲಯದಲ್ಲಿ ಪ್ರತಿನಿತ್ಯವೂ ಸರ್ವಾಂಗಹೋಮ
15 ಸಮರ್ಪಣೆಯಾಗುತ್ತಿತ್ತು. ಅವನು ಮುಪ್ಪಿನ ಮುದು
ಕನಾಗಿ ಮರಣಹೊಂದಿದನು; ಅವನು ಸಾಯುವಾಗ
16 ನೂರಮೂವತ್ತು ವರುಷದವನಾಗಿದ್ದನು. ಅವನು
ಇಸ್ರಾಯೇಲ್ಯರ ವಿಷಯದಲ್ಲಿಯೂ ದೇವರ ಮತ್ತು
ದೇವಾಲಯದ ವಿಷಯದಲ್ಲಿಯೂ ಸತ್ಕಾರ್ಯಮಾಡಿ
ದ್ದರಿಂದ ಅವನ ಶವವನ್ನು ದಾವೀದನಗರದೊಳಗೆ ರಾಜ
ತ್ಮಶಾನದಲ್ಲಿ ಸಮಾಧಿಮಾಡಿದರು.
17 ಯೆಹೋಯಾದನು ಮೃತನಾದ ಮೇಲೆ ಯೆಹೂ
ದಪ್ರಭುಗಳು ಅರಸನ ಬಳಿಗೆ ಬಂದು ಅವನಿಗೆ ಅಡ್ಡ
18 ಬಿದ್ದು ಅವನನ್ನು ಒಲಿಸಿಕೊಂಡರು; ಅಂದಿನಿಂದ
ಅವರು ತಮ್ಮ ಪಿತೃಗಳ ದೇವರಾದ ಯೆಹೋವನ
ಆಲಯವನ್ನು ನಿರಾಕರಿಸಿ ಅಶೇರಸ್ತಂಭಗಳನ್ನೂ
ವಿಗ್ರಹಗಳನ್ನೂ ಪೂಜಿಸುವವರಾದರು. ಅವರ ಈ
ಅಪರಾಧದ ದೆಸೆಯಿಂದ ಯೆಹೂದದ ಮೇಲೆಯೂ
ಯೆರೂಸಲೇಮಿನ ಮೇಲೆಯೂ ದೈವಕೋಪವುಂಟಾ
19 ಯಿತು. ಯೆಹೋವನು ಅವರನ್ನು ತನ್ನ ಕಡೆಗೆ
ತಿರುಗಿಸಿಕೊಳ್ಳುವದಕ್ಕಾಗಿ ಅವರ ಬಳಿಗೆ ಪ್ರವಾದಿಗಳ
ನ್ನು ಕಳುಹಿಸಿ ಇವರ ಮುಖಾಂತರ ಎಷ್ಟು ಎಚ್ಚರಿಸಿ
ದರೂ ಅವರು ಕಿವಿಗೊಡಲಿಲ್ಲ. ಆಗ ಯಾಜಕನಾದ 20
ಯೆಹೋಯಾದನ ಮಗ ಜೆಕರ್ಯನು ದೇವಾತ್ಮಾ
ವೇಶವುಳ್ಳವನಾದನು; ಆಗ ಅವನು ಜನರ ಎದುರಿಗೆ
ಉನ್ನತಸ್ಥಾನದಲ್ಲಿ ನಿಂತು ಅವರಿಗೆ—ದೇವರ ಮಾತ
ನ್ನು ಕೇಳಿರಿ; ನೀವು ಯೆಹೋವನ ಆಜ್ಞೆಗಳನ್ನು
ಮೀರಿ ನಿಮ್ಮನ್ನು ಕೆಡಿಸಿಕೊಳ್ಳುವದೇಕೆ? ನೀವು
ಯೆಹೋವನನ್ನು ಬಿಟ್ಟದರಿಂದ ಆತನೂ ನಿಮ್ಮನ್ನು
ಬಿಟ್ಟಿದ್ದಾನೆ ಅಂದನು. ಆಗ ಅವರು ಅವನಿಗೆ ವಿರೋ 21
ಧವಾಗಿ ಒಳಸಂಚುಮಾಡಿ ಯೆಹೋವನ ಆಲಯದ
ಪ್ರಾಕಾರದಲ್ಲಿ ಅವನನ್ನು ಕಲ್ಲೆಸೆದು ಕೊಂದರು.
ಇದು ಅರಸನಾದ ಯೆಹೋವಾಷನ ಅಪ್ಪಣೆಯಿಂದ
ಲೇ ಆಯಿತು. ಇವನು ಜೆಕರೀಯನ ತಂದೆಯಾದ 22
ಯೆಹೋಯಾದನಿಂದ ತನಗುಂಟಾದ ಕೃಪೆಯನ್ನು
ನೆನಪುಮಾಡಿಕೊಳ್ಳದೆ ಅವನ ಮಗನನ್ನು ಕೊಲ್ಲಿಸಿ
ದನು. ಜೆಕರೀಯನು ಸಾಯುವಾಗ—ಯೆಹೋವನೇ
ನೋಡಿ ವಿಚಾರಿಸಲಿ ಅಂದನು.
ವರುಷಾಂತ್ಯದಲ್ಲಿ ಅರಾಮ್ಯರ ಸೈನ್ಯವು ಯೆಹೋ 23
ವಾಷನಿಗೆ ವಿರೋಧವಾಗಿ ಹೊರಟಿತು. ಆ ಸೈನ್ಯ
ದವರು ಯೆಹೂದದೇಶದೊಳಗೆ ನುಗ್ಗಿ ಯೆರೂಸಲೇ
ಮಿಗೆ ಬಂದು ಇಸ್ರಾಯೇಲ್ಯರ ಎಲ್ಲಾ ಜನಾಧಿಪತಿ
ಗಳನ್ನು ನಿರ್ನಾಮಮಾಡಿ ಅವರಲ್ಲಿ ಸಿಕ್ಕಿದ ಕೊಳ್ಳೆ
ಯನ್ನೆಲ್ಲಾ ದಮಸ್ಕದ ಅರಸನಿಗೆ ಕಳುಹಿಸಿದರು. ಅರಾ 24
ಮ್ಯರ ಸೈನ್ಯದಿಂದ ಬಂದ ಗುಂಪು ಚಿಕ್ಕದಾಗಿದ್ದರೂ
ಯೆಹೂದ್ಯರು ತಮ್ಮ ಪಿತೃಗಳ ದೇವರಾದ ಯೆಹೋವ
ನನ್ನು ಬಿಟ್ಟುಬಿಟ್ಟದ್ದರಿಂದ ಮಹಾಸೈನ್ಯವಾಗಿದ್ದ ಅವ
ರನ್ನು ಆತನು ಅರಾಮ್ಯರ ಕೈಯಲ್ಲಿ ಬೀಳುವಂತೆ
ಮಾಡಿ ಯೆಹೋವಾಷನನ್ನು ಇವರ ಮುಖಾಂತರ ಶಿಕ್ಷಿ
ಸಿದನು. ಇವರು ಅವನನ್ನು ಬಿಟ್ಟುಹೋದಕೂಡಲೆ 25
ಅವನ ಸೇವಕರು ಯಾಜಕನಾದ ಯೆಹೋಯಾದನ
ಮಗನ ವಧೆಯ ನಿಮಿತ್ತ ಅವನಿಗೆ ವಿರೋಧವಾಗಿ
ಒಳಸಂಚುಮಾಡಿ ಕಠಿನರೋಗದಲ್ಲಿದ್ದ ಅವನನ್ನು
ಹಾಸಿಗೆಯಲ್ಲೇ ಕೊಂದುಹಾಕಿದರು. ಅವನ ಶವವನ್ನು
ದಾವೀದನಗರದೊಳಗೆ ಸಮಾಧಿಮಾಡಿದರು; ಆದರೆ
ರಾಜಶ್ಮಶಾನದಲ್ಲಿ ಅಲ್ಲ. ಅಮ್ಮೋನ್ ದೇಶದ ಶಿಮ್ಗಾ 26
ತೆಂಬಾಕೆಯ ಮಗನಾದ ಜಾಬಾದ್, ಮೋವಾಬ್
ದೇಶದ ಶಿಮ್ರಾತೆಂಬಾಕೆಯ ಮಗನಾದ ಯೆಹೋಜಾ
ಬಾದ್ ಎಂಬವರೇ ಅವನಿಗೆ ವಿರೋಧವಾಗಿ ಒಳಸಂಚು
ಮಾಡಿದವರು. ಅವನ ಮಕ್ಕಳ ವಿವರವೂ ಅವನಿಗೆ 27
ವಿರುದ್ಧವಾಗಿ ಹೇಳಲ್ಪಟ್ಟ ಅನೇಕದೈವೋಕ್ತಿಗಳೂ
ದೇವಾಲಯದ ಜೀರ್ಣೋದ್ಧಾರವೃತ್ತಾಂತವೂ ರಾಜರ
ಗ್ರಂಥದ ವ್ಯಾಖ್ಯಾನದಲ್ಲಿ ಬರೆದಿರುತ್ತವೆ. ಅವನಿಗೆ
ಬದಲಾಗಿ ಅವನ ಮಗನಾದ ಅಮಚ್ಯನು ಅರಸನಾ
ದನು.

ಅರಸನಾದ ಅಮಚ್ಯನು.

25
ಅಮಚ್ಯನು ಪಟ್ಟಕ್ಕೆ ಬಂದಾಗ ಇಪ್ಪತ್ತೈದು
ವರುಷದವನಾಗಿದ್ದನು. ಅವನು ಯೆರೂಸಲೇಮಿ

ನಲ್ಲಿ ಇಪ್ಪತ್ತೊಂಭತ್ತು ವರುಷ ಆಳಿದನು. ಯೆರೂಸ
ಲೇಮಿನವಳಾದ ಯೆಹೋವದ್ದಾನ್ ಎಂಬಾಕೆಯು
2 ಅವನ ತಾಯಿ. ಅವನು ಯೆಹೋವನ ಚಿತ್ತಾನುಸಾರ
ವಾಗಿ ನಡೆದನು; ಆದರೆ ಯಥಾರ್ಥಚಿತ್ತನಾಗಿರಲಿಲ್ಲ.
3 ಅವನು ರಾಜ್ಯವನ್ನು ಭದ್ರಪಡಿಸಿಕೊಂಡ ಕೂಡಲೆ ತನ್ನ
ತಂದೆಯನ್ನು ಕೊಂದ ಸೇವಕರನ್ನು ಕೊಲ್ಲಿಸಿದನು.
4 ಆದರೆ ಮಕ್ಕಳ ಪಾಪದ ದೆಸೆಯಿಂದ ತಂದೆಗೂ
ತಂದೆಯ ಪಾಪದ ದೆಸೆಯಿಂದ ಮಕ್ಕಳಿಗೂ ಮರಣ
ಶಿಕ್ಷೆಯಾಗಬಾರದು; ಪ್ರತಿಯೊಬ್ಬನೂ ತನ್ನ ಪಾಪದ
ಫಲವನ್ನು ತಾನೇ ಅನುಭವಿಸಬೇಕು ಎಂಬದಾಗಿ ಮೋಶೆ
ಯ ಧರ್ಮಶಾಸ್ತ್ರದಲ್ಲಿರುವ ಯೆಹೋವನ ಅಪ್ಪಣೆ
ಯನ್ನು ನೆನಪುಮಾಡಿಕೊಂಡು ಅವರ ಮಕ್ಕಳನ್ನು
ಕೊಲ್ಲಿಸಲಿಲ್ಲ.
5 ಆ ಮೇಲೆ ಅಮಚ್ಯನು ಯೆಹೂದ್ಯರನ್ನು ಕೂಡಿಸಿ
ಸಹಸ್ರಾಧಿಪತಿ ಶತಾಧಿಪತಿಗಳ ಕೈಕೆಳಗೆ ಕೊಟ್ಟು
ಯೆಹೂದ ಬೆನ್ಯಾಮೀನ್ ಕುಲಗಳಲ್ಲಿನ ಆಯಾ
ಗೋತ್ರಗಳ ಪ್ರಕಾರ ಅವರನ್ನು ನಿಲ್ಲಿಸಿ ಇಪ್ಪತ್ತು
ವರುಷದವರು ಮೊದಲುಗೊಂಡು ಹೆಚ್ಚಾದ ವಯಸ್ಸು
ಳ್ಳವರನ್ನು ಲೆಕ್ಕಮಾಡಲು ಅವರಲ್ಲಿ ಬರ್ಜಿ ಗುರಾಣಿ
ಗಳನ್ನು ಹಿಡಿದುಕೊಂಡು ಯುದ್ಧಕ್ಕೆ ಹೊರಡತಕ್ಕ
6 ಶೂರರು ಮೂರು ಲಕ್ಷ ಮಂದಿ ಸಿಕ್ಕಿದರು. ಇದಲ್ಲದೆ
ಅವನು ನೂರು ತಲಾಂತು ಬೆಳ್ಳಿಯನ್ನು ಕೊಟ್ಟು ಇಸ್ರಾ
ಯೇಲ್ಯರಿಂದಲೂ ಲಕ್ಷ ಮಂದಿ ಭಟರನ್ನು ತರಿಸಿದನು.
7 ಆಗ ದೇವರ ಮನುಷ್ಯನೊಬ್ಬನು ಅವನ ಬಳಿಗೆ ಬಂದು
ಅವನಿಗೆ—ಅರಸನೇ, ಇಸ್ರಾಯೇಲ್‌ಸೈನ್ಯದವರು ನಿನ್ನ
ಜೊತೆಯಲ್ಲಿ ಯುದ್ಧಕ್ಕೆ ಹೋಗಬಾರದು. ಯೆಹೋ
ವನು ಎಫ್ರಾಯಿಮ್ಯರಾದ ಇಸ್ರಾಯೇಲ್ಯರನ್ನೆಲ್ಲಾ
8 ಕೈಬಿಟ್ಟಿದ್ದಾನೆ. ನೀನೇ ಹೋಗಿ ಕಾರ್ಯವನ್ನು ನಡಿಸು;
ಧೈರ್ಯದಿಂದ ಯುದ್ಧಮಾಡು. [ಹಾಗೆ ಮಾಡದಿದ್ದರೆ]
ದೇವರು ಶತ್ರುಗಳಿಂದ ನಿನ್ನನ್ನು ಅಪಜಯಪಡಿಸುವನು.
ಜಯಾಪಜಯಗಳನ್ನುಂಟುಮಾಡುವದಕ್ಕೆ ಆತನು ಶಕ್ತ
9 ನಾಗಿರುತ್ತಾನಲ್ಲಾ ಅಂದನು. ಅಮಚ್ಯನು ದೇವರ
ಮನುಷ್ಯನನ್ನು—ಹಾಗಾದರೆ ನಾನು ಇಸ್ರಾಯೇಲ್
ಸೈನ್ಯಕ್ಕೋಸ್ಕರ ನೂರು ತಲಾಂತುಗಳನ್ನು ಕೊಟ್ಟ
ವಿಷಯದಲ್ಲಿ ಮಾಡುವದೇನು ಎಂದು ಕೇಳಲು
ಅವನು—ಯೆಹೋವನು ಅದಕ್ಕಿಂತ ಎಷ್ಟೋ ಹೆಚ್ಚಾಗಿ
10 ನಿನಗೆ ಕೊಡಬಲ್ಲನು ಅಂದನು. ಆಗ ಅಮಚ್ಯನು
ಎಫ್ರಾಯಿಮ್ಯರಿಂದ ಬಂದ ಸೈನಿಕರನ್ನು ಬೇರೆ ಮಾಡಿ
ಅವರನ್ನು ಅವರ ದೇಶಕ್ಕೆ ಕಳುಹಿಸಿದನು. ಅವರು
ಯೆಹೂದ್ಯರ ಮೇಲೆ ಬಹುಕೋಪಗೊಂಡು ಬಲುಸಿಟ್ಟಿ
11 ನಿಂದ ತಮ್ಮ ದೇಶಕ್ಕೆ ಹೋದರು. ಅಮಚ್ಯನಾದರೋ
ಧೈರ್ಯದಿಂದ ತನ್ನ ಸೈನ್ಯವನ್ನು ಕರಕೊಂಡು ಉಪ್ಪಿನ
ತಗ್ಗಿಗೆ ಹೋಗಿ ಸೇಯಿರಾರ್ಯರಲ್ಲಿ ಹತ್ತು ಸಾವಿರ
12 ಮಂದಿಯನ್ನು ವಧಿಸಿದನು. ಯೆಹೂದ್ಯರು ಬೇರೆ
ಹತ್ತು ಸಾವಿರ ಮಂದಿಯನ್ನು ಜೀವಸಹಿತವಾಗಿ ಹಿಡಿದು
ಕಡಿದಾದ ಬಂಡೆಯ ತುದಿಗೆ ಒಯ್ದು ಅವರೆಲ್ಲರೂ
ಚೂರುಚೂರಾಗುವ ಹಾಗೆ ಅವರನ್ನು ಕೆಳಕ್ಕೆ ದೊಬ್ಬಿ
ದರು. ಅಷ್ಟರಲ್ಲಿ ಅಮಚ್ಯನು ತನ್ನ ಜೊತೆಯಲ್ಲಿ
13 ಯುದ್ಧಕ್ಕೆ ಬರಬಾರದೆಂದು ಹಿಂದಕ್ಕೆ ಕಳುಹಿಸಿದ
ಗುಂಪಿನವರು ಸಮಾರ್ಯಕ್ಕೂ ಬೇತ್ಹೋರೋನಿಗೂ

ಮಧ್ಯದಲ್ಲಿರುವ ಯೆಹೂದಪಟ್ಟಣಗಳ ಮೇಲೆ ಬಿದ್ದು
ಮೂರು ಸಾವಿರ ಜನರನ್ನು ಕೊಂದು ದೊಡ್ಡ ಕೊಳ್ಳೆ
ಯನ್ನು ಕೂಡಿಸಿಕೊಂಡು ಹೋದರು.
ಅಮಚ್ಯನು ಎದೋಮ್ಯರನ್ನು ಸೋಲಿಸಿ ಮನೆಗೆ
ಬಂದ ಮೇಲೆ ತಾನು ತೆಗೆದುಕೊಂಡು ಬಂದಿದ್ದ
ಸೇಯಿರಾರಿನವರ ದೇವತಾಪ್ರತಿಮೆಗಳನ್ನು ತನ್ನ ದೇವ
ರುಗಳೆಂದು ನಿಲ್ಲಿಸಿ ಅವುಗಳಿಗೆ ಅಡ್ಡಬಿದ್ದು ಧೂಪ
ಹಾಕುತ್ತಿದ್ದನು. ಆಗ ಯೆಹೋವನು ಅಮಚ್ಯನ
ಮೇಲೆ ಬಹಳವಾಗಿ ಕೋಪಗೊಂಡು ಅವನ ಬಳಿಗೆ
ಪ್ರವಾದಿಯನ್ನು ಕಳುಹಿಸಿ ಅವನಿಗೆ—ನಿನ್ನ ಕೈಯಿಂದ
ತಮ್ಮ ಜನರನ್ನು ತಪ್ಪಿಸಲಾರದೆ ಹೋದ ಅನ್ಯದೇವತೆ
ಗಳಲ್ಲಿ ಭಕ್ತಿಯನ್ನೇಕೆ ಇಟ್ಟಿದ್ದೀ ಎಂದು ಹೇಳಿಸಿದನು.
ಈ ಮಾತನ್ನು ಹೇಳಿದ ಪ್ರವಾದಿಗೆ ಅರಸನು—ನಿನ್ನ
ನ್ನು ರಾಜಮಂತ್ರಿಯನ್ನಾಗಿ ನೇಮಿಸಿದ್ದೇವೋ? ಸುಮ್ಮ
ನಿರು, ನಿನಗೆ ಪೆಟ್ಟು ಬೇಕೋ ಅನ್ನಲು ಅವನು—
ನೀನು ನನ್ನ ಬುದ್ಧಿವಾದವನ್ನು ಲಾಲಿಸದೆ ಹೀಗೆ
ಮಾಡುವದರಿಂದ ದೇವರು ನಿನ್ನನ್ನು ನಾಶಮಾಡ
ಬೇಕೆಂದು ನಿಶ್ಚಯಿಸಿಕೊಂಡಿದ್ದಾನೆಂಬದಾಗಿ ನನಗೆ
ತಿಳಿಯಬಂತು ಎಂದು ಹೇಳಿ ಸುಮ್ಮನಾದನು.
ಅನಂತರ ಯೆಹೂದದ ಅರಸನಾದ ಅಮಚ್ಯನು
ಮಂತ್ರಾಲೋಚನೆ ಕೇಳಿ ಯೇಹುವಿನ ಮೊಮ್ಮಗನೂ
ಯೆಹೋವಾಹಾಜನ ಮಗನೂ ಇಸ್ರಾಯೇಲ್ಯರ ಅರ
ಸನೂ ಆದ ಯೋವಾಷನಿಗೆ—ನಾವು ಒಬ್ಬರನ್ನೊ
ಬ್ಬರು ಎದುರುಗೊಳ್ಳೋಣ ಎಂದು ದೂತರ ಮು
ಖಾಂತರವಾಗಿ ಹೇಳಿಸಿದನು. ಆಗ ಇಸ್ರಾಯೇಲ್ಯರ
ಅರಸನಾದ ಯೋವಾಷನು ಯೆಹೂದ್ಯದ ಅರಸನಾದ
ಅಮಚ್ಯನಿಗೆ—ಲೆಬನೋನಿನ ಮುಳ್ಳುಗಿಡವು ಅಲ್ಲಿನ
ದೇವದಾರುಮರಕ್ಕೆ—ನನ್ನ ಮಗನಿಗೆ ನಿನ್ನ ಮಗ
ಳನ್ನು ಕೊಡು ಎಂದು ಹೇಳಿಕಳುಹಿಸಿತು. ತುಸ
ಹೊತ್ತಾದ ಮೇಲೆ ಲೆಬನೋನಿನ ಒಂದು ಕಾಡು
ಮೃಗವು ಆ ಮಾರ್ಗವಾಗಿ ಹಾದುಹೋಗುತ್ತಿರು
ವಾಗ ಅದನ್ನು ತುಳಿದುಬಿಟ್ಟಿತು. ಅಹಹ, ಎದೋ
ಮ್ಯರನ್ನು ಸೋಲಿಸಿ ಬಹುಕೀರ್ತಿಯನ್ನು ಪಡಕೊಂಡ
ನಲ್ಲಾ ಎಂದು ನೀನು ಹೆಮ್ಮೆಗೊಂಡಿದ್ದೀ; ಸುಮ್ಮನೆ
ಮನೆಯಲ್ಲಿ ಕೂತುಕೊಳ್ಳಬಾರದೇ; ನನ್ನನ್ನು ಕೆಣಕ
ನಿನಗೂ ನಿನ್ನ ರಾಜ್ಯಕ್ಕೂ ಯಾಕೆ ಕೇಡನ್ನು ತಂದು
ಕೊಳ್ಳುತ್ತೀ ಎಂದು ಉತ್ತರಕೊಟ್ಟನು. ಅಮಚ್ಯನು
ಆ ಮಾತನ್ನು ಲಕ್ಷಿಸಲಿಲ್ಲ; ಹಾಗಾಗಬೇಕೆಂಬದೇ
ದೇವರ ಸಂಕಲ್ಪವಾಗಿತ್ತು. ಯೆಹೂದ್ಯರು ಎದೋ
ಮ್ಯರ ದೇವತೆಗಳಲ್ಲಿ ಭಕ್ತಿಯನ್ನಿಟ್ಟದರಿಂದ ಅವರನ್ನು
ಪರಾಧೀನಮಾಡಬೇಕೆಂದು ಆತನು ನಿರ್ಣಯಿಸಿದ್ದನು.
ಇಸ್ರಾಯೇಲ್ಯರ ಅರಸನಾದ ಯೋವಾಷನು ಯುದ್ಧ
ಕ್ಕೆ ಹೊರಟನು; ಅವನೂ ಯೆಹೂದದ ಅರಸನಾದ
ಅಮಚ್ಯನೂ ಯೆಹೂದಪ್ರಾಂತದ ಬೇತ್ಷೆಮೆಷಿನಲ್ಲಿ
ಒಬ್ಬರನ್ನೊಬ್ಬರು ಎದುರುಗೊಂಡರು. ಯೆಹೂದ್ಯರು
ಇಸ್ರಾಯೇಲ್ಯರಿಗೆ ಸೋತು ತಮ್ಮ ತಮ್ಮ ನಿವಾಸಗ
ಳಿಗೆ ಓಡಿಹೋದರು. ಇಸ್ರಾಯೇಲ್ಯರ ಅರಸನಾದ
ಯೋವಾಷನು ಯೆಹೋವಹಾಜನ ಮೊಮ್ಮಗನೂ
ಯೆಹೋವಾಷನ ಮಗನೂ ಯೆಹೂದದ ಅರಸನೂ
ಆದ ಅಮಚ್ಯನನ್ನು ಬೇತ್ಷೆಮೆಷಿನಲ್ಲಿ ಹಿಡಿದು ಅ

ನನ್ನು ಯೆರೂಸಲೇಮಿಗೆ ಕರಕೊಂಡು ಬಂದು ಎಫ್ರಾ
ಯಿಾಮ್ ಬಾಗಲಿಗೂ ಮೂಲೆಯ ಬಾಗಲಿಗೂ ಮಧ್ಯ
ದಲ್ಲಿದ್ದ ಯೆರೂಸಲೇಮಿನ ಗೋಡೆಯನ್ನು ನಾನೂರು
24 ಮೊಳದಷ್ಟು ಕೆಡವಿಬಿಟ್ಟನು. ಇದಲ್ಲದೆ ಅವನು ಓಬೇ
ದೆದೋಮನ ವಶದಲ್ಲಿದ್ದ ದೇವಾಲಯದ ಎಲ್ಲಾ ಬೆಳ್ಳಿ
ಬಂಗಾರವನ್ನೂ ಪಾತ್ರೆಗಳನ್ನೂ ಅರಮನೆಯ ಭಂಡಾರ
ಗಳಲ್ಲಿದ್ದದ್ದೆಲ್ಲವನ್ನೂ ತೆಗೆದುಕೊಂಡು ಹೊಣೆಗಾರ
ರನ್ನಾಗಿ ಕೆಲವರನ್ನು ಸೆರೆಹಿಡಿದು ಸಮಾರ್ಯಕ್ಕೆ ಹಿಂದಿ
ರುಗಿದನು.
25 ಇಸ್ರಾಯೇಲ್ಯರ ಅರಸನೂ ಯೆಹೋವಾಹಾಜನ
ಮಗನೂ ಆದ ಯೋವಾಷನು ಸತ್ತನಂತರ ಯೆಹೂ
ದದ ಅರಸನಾದ ಯೆಹೋವಾಷನ ಮಗ ಅಮಚ್ಯನು
26 ಇನ್ನೂ ಹದಿನೈದು ವರುಷ ಬದುಕಿದನು. ಅವನ
ಉಳಿದ ಪೂರ್ವೋತ್ತರಚರಿತ್ರೆಯು ಯೆಹೂದ್ಯರ ಮತ್ತು
ಇಸ್ರಾಯೇಲ್ಯರ ರಾಜರ ಗ್ರಂಥದಲ್ಲಿ ಬರೆದಿರುತ್ತದೆ.
27 ಅಮಚ್ಯನು ಯೆಹೋವಭಕ್ತಿಯನ್ನು ಬಿಟ್ಟಂದಿನಿಂದ
ಯೆರೂಸಲೇಮಿನವರು ಅವನಿಗೆ ವಿರೋಧವಾಗಿ ಒಳ
ಸಂಚುಮಾಡುತ್ತಿದ್ದರು. ಆದದರಿಂದ ಅವನು ಲಾಕೀ
ಷಿಗೆ ಓಡಿಹೋದನು; ಆದರೆ ಅವರು ಆಳುಗಳನ್ನು
28 ಕಳುಹಿಸಿ ಅವನನ್ನು ಅಲ್ಲಿಯೇ ಕೊಲ್ಲಿಸಿದರು. ಅವನ
ಜನರು ಆ ಶವವನ್ನು ಕುದುರೆಯ ಮೇಲೆ ಯೆರೂಸ
ಲೇಮಿಗೆ ತಂದು ಯೆಹೂದದ ರಾಜಧಾನಿಯೊಳಗೆ
ಅವನ ಪಿತೃಶ್ಮಶಾನದಲ್ಲಿ ಸಮಾಧಿಮಾಡಿದರು.

ಅರಸನಾದ ಉಜ್ಜೀಯನು.

26 ಆನಂತರ ಎಲ್ಲಾ ಯೆಹೂದ್ಯರೂ ಕೂಡಿ ಹದಿ
ನಾರು ವರುಷದವನಾಗಿದ್ದ ಉಜ್ಜೀಯನನ್ನು ಅವನ
ತಂದೆಯಾದ ಅಮಚ್ಯನಿಗೆ ಬದಲಾಗಿ ಅರಸನನ್ನಾಗಿ
2 ಮಾಡಿದರು. ಅರಸನು ಪಿತೃಗಳ ಬಳಿಗೆ ಸೇರಿದ
ಮೇಲೆ ಇವನು ಏಲೋತ್ ಪಟ್ಟಣವನ್ನು ತಿರಿಗಿ ಯೆ
ಹೂದರಾಜ್ಯಕ್ಕೆ ಸೇರಿಸಿಕೊಂಡು ಭದ್ರಪಡಿಸಿದನು.
3 ಉಜ್ಜೀಯನು ಪಟ್ಟಕ್ಕೆ ಬಂದಾಗ ಹದಿನಾರು ವರುಷ
ದವನಾಗಿದ್ದನು; ಅವನು ಯೆರೂಸಲೇಮಿನಲ್ಲಿ ಐವತ್ತೆ
ರಡು ವರುಷ ಆಳಿದನು. ಯೆರೂಸಲೇಮಿನವಳಾದ
4 ಯೆಕೊಲ್ಯ ಎಂಬಾಕೆಯು ಅವನ ತಾಯಿ. ಅವನು
ತನ್ನ ತಂದೆಯಾದ ಅಮಚ್ಯನಂತೆ ಯೆಹೋವನ ಚಿತ್ತಾ
5 ನುಸಾರವಾಗಿ ನಡೆದನು. [1]ದೇವಭಕ್ತಿಯನ್ನು ಬೋಧಿ
ಸುತ್ತಿದ್ದ ಜೆಕರ್ಯನ ಜೀವಮಾನಕಾಲದಲ್ಲಿ ಅವನು
ದೇವರನ್ನು ಅವಲಂಬಿಸಿಕೊಂಡಿದ್ದನು; ಹೀಗೆ ಅವ
ಲಂಬಿಸಿದ್ದ ಕಾಲದಲ್ಲೆಲ್ಲಾ ದೇವರಾದ ಯೆಹೋವನು
ಅವನನ್ನು ಅಭಿವೃದ್ಧಿಗೆ ತಂದನು.
6 ಅವನು ಫಿಲಿಷ್ಟಿಯರ ಮೇಲೆ ಯುದ್ಧಕ್ಕಾಗಿ ಹೊರ
ಟು ಗತ್ ಊರು, ಯಬ್ನೆ, ಅಷ್ಡೋದ್ ಎಂಬ ಪಟ್ಟಣ
ಗಳ ಗೋಡೆಗಳನ್ನು ಕೆಡವಿಬಿಟ್ಟು ಅಷ್ಡೋದಿನ ಮತ್ತು
ಫಿಲಿಷ್ಟಿಯರ ಪ್ರಾಂತಗಳಲ್ಲಿ ಪಟ್ಟಣಗಳನ್ನು ಕಟ್ಟಿಸಿ
7 ದನು. ಫಿಲಿಷ್ಟಿಯರೊಡನೆಯೂ ಗೂರ್ ಬಾಳಿನಲ್ಲಿ
ರುವ ಅರಬಿಯರೊಡನೆಯೂ ಮೆಗೂನ್ಯರೊಡನೆಯೂ
ಯುದ್ಧಮಾಡುವಾಗ ಅವನಿಗೆ ದೇವರ ಸಹಾಯವು
ದೊರೆಯಿತು. ಅಮ್ಮೋನಿಯರೂ ಉಜ್ಜೀಯನಿಗೆ ಕಪ್ಪ 8
ವನ್ನು ಕೊಡುವವರಾದರು. ಅವನು ಅಧಿಕಬಲವುಳ್ಳ
ವನಾದದರಿಂದ ಅವನ ಹೆಸರು ಐಗುಪ್ತದ ಮೇರೆಯ
ವರೆಗೂ ಹಬ್ಬಿತು. ಅವನು ಯೆರೂಸಲೇಮಿನಲ್ಲಿ 9
ಮೂಲೆಬಾಗಲು, ತಗ್ಗಿನ ಬಾಗಲು, ಗೋಡೆ ತಿರು
ಗುವ ಭಾಗ ಇವುಗಳ ಮೇಲೆ ಬುರುಜುಗಳನ್ನು ಕಟ್ಟಿಸಿ
ದನು. ಅವನಿಗೆ ಇಳಕಲಿನ ಪ್ರದೇಶದಲ್ಲಿಯೂ ತಪ್ಪಲ 10
ಸೀಮೆಯಲ್ಲಿಯೂ ಅಲ್ಲದೆ ಅಡವಿಯಲ್ಲಿಯೂ ಪಶು
ಗಳ ದೊಡ್ಡ ಮಂದೆಗಳಿದ್ದದ್ದರಿಂದ ಆ ಅಡವಿಯಲ್ಲಿ
ಬುರುಜುಗಳನ್ನು ಕಟ್ಟಿಸಿ ಹಲವು ಬಾವಿಗಳನ್ನು ತೋಡಿ
ಸಿದನು. ಅವನು ವ್ಯವಸಾಯದಲ್ಲಿ ಇಷ್ಟವುಳ್ಳವನಾ
ಗಿದ್ದದ್ದರಿಂದ ಗುಡ್ಡ, ಫಲವತ್ತಾದ ಬೈಲು ಇವುಗಳಲ್ಲಿ
ಹೊಲ ದ್ರಾಕ್ಷೇತೋಟಗಳ ಕೆಲಸಮಾಡುವವರನ್ನು
ನೇಮಿಸಿದನು.
ಇದಲ್ಲದೆ ಉಜ್ಜೀಯನಿಗೆ ಯುದ್ಧಕ್ಕೋಸ್ಕರ ಸೈನ್ಯ 11
ವೂ ಇತ್ತು. ಲೇಖಕನಾದ ಯೆಗೀಯೇಲ್, ಅಧಿ
ಕಾರಿಯಾದ ಮಾಸೇಯ ಇವರು ಅರಸನ ಸರದಾರರ
ಲ್ಲೊಬ್ಬನಾದ ಹನನ್ಯನ ಆಜ್ಞಾನುಸಾರವಾಗಿ ಅವರ
ಪಟ್ಟಿಯನ್ನು ಬರೆದಿದ್ದರು. ಆಯಾ ಗುಂಪುಗಳು
ಪಟ್ಟಿಯ ಕ್ರಮಾನುಸಾರ ಯುದ್ಧಕ್ಕೆ ಹೊರಡುತ್ತಿ
ದ್ದವು. ರಣವೀರರಾಗಿರುವ ಎಲ್ಲಾ ಗೋತ್ರಪ್ರಧಾನರ 12
ಸಂಖ್ಯೆಯು ಎರಡು ಸಾವಿರದ ಆರು ನೂರು. ಇವರ 13
ಕೈಕೆಳಗಿರುವ ಭಟರ ಸಂಖ್ಯೆಯು ಮೂರು ಲಕ್ಷದ
ಏಳು ಸಾವಿರದ ಐನೂರು; ಇವರು ಅರಸನ ಸೇವೆಯ
ಲ್ಲಿದ್ದು ಅವನ ವೈರಿಗಳಿಗೆ ವಿರೋಧವಾಗಿ ಪರಾಕ್ರಮ
ದಿಂದ ಯುದ್ಧಮಾಡುತ್ತಿದ್ದರು. ಉಜ್ಜೀಯನು ಈ 14
ಎಲ್ಲಾ ಸೈನ್ಯದವರಿಗೋಸ್ಕರ ಬೇಕಾದ ಗುರಾಣಿ ಬರ್ಜಿ
ಶಿರಸ್ತ್ರಾಣ ಕವಚ ಬಿಲ್ಲು ಕವಣೆಯಕಲ್ಲು ಇವುಗ
ಳನ್ನು ಒದಗಿಸಿಕೊಟ್ಟನು. ಇದಲ್ಲದೆ ಅವನು ಬಾಣಗ 15
ಳನ್ನೂ ದೊಡ್ಡ ಕಲ್ಲುಗಳನ್ನೂ ಎಸೆಯುವದಕ್ಕಾಗಿ
ಜಾಣರ ಕಲ್ಪನೆಯ ಮೇರೆಗೆ ಯಂತ್ರಗಳನ್ನು ಮಾಡಿಸಿ
ಅವುಗಳನ್ನು ಯೆರೂಸಲೇಮಿನಲ್ಲಿ ಬುರುಜುಗಳ ಮೇಲೆ
ಯೂ ಆಳುವೇರಿಗಳ ಮೇಲೆಯೂ ಇಡಿಸಿದನು. ಅವ
ನು ಬಲಿಷ್ಠನಾಗುವ ವರೆಗೂ ದೇವರ ಆಶ್ಚರ್ಯವಾದ
ಸಹಾಯವನ್ನು ಹೊಂದಿದನು; ಅವನ ಕೀರ್ತಿಯು ದೂ
ರದ ವರೆಗೆ ಹಬ್ಬಿತು.
ಆದರೆ ಅವನು ಬಲಿಷ್ಠನಾದ ಮೇಲೆ ಗರ್ವಿಷ್ಠನಾಗಿ 16
ಭ್ರಷ್ಟನಾದನು; ತನ್ನ ದೇವರಾದ ಯೆಹೋವನಿಗೆ ದ್ರೋ
ಹಿಯಾಗಿ ಧೂಪವೇದಿಯ ಮೇಲೆ ತಾನೇ ಧೂಪ
ಹಾಕಬೇಕೆಂದು ಯೆಹೋವನ ಆಲಯದೊಳಕ್ಕೆ ಹೋ
ದನು. ಆಗ ಮಹಾಯಾಜಕನಾದ ಅಜರ್ಯನೂ 17
ಧೈರ್ಯಶಾಲಿಗಳಾದ ಎಂಭತ್ತು ಮಂದಿ ಇತರ ಯಾಜ
ಕರೂ ಅರಸನಾದ ಉಜ್ಜೀಯನ ಹಿಂದೆಯೇ ಹೋಗಿ
ಅವನೆದುರಿಗೆ ನಿಂತು ಅವನಿಗೆ — ಉಜ್ಜೀಯನೇ, ಯೆ 18
ಹೋವನಿಗೋಸ್ಕರ ಧೂಪಹಾಕುವದು ನಿನ್ನ ಕೆಲಸ
ವಲ್ಲ; ಅದಕ್ಕೋಸ್ಕರ ಆರೋನನ ಸಂತಾನದವರಾದ
ಯಾಜಕರು ಪ್ರತಿಷ್ಠಿತರಾಗಿದ್ದಾರೆ. ಪವಿತ್ರಾಲಯ

1) ಪಾಠಾಂತರ : ದೇವದರ್ಶನಜ್ಞಾನಿಯಾದ.

ವನ್ನು ಬಿಟ್ಟುಹೋಗು; ನೀನು ದ್ರೋಹಿ. ಇದಕ್ಕಾಗಿ
ದೇವರಾದ ಯೆಹೋವನಿಂದ ನಿನಗೆ ಮಾನವುಂಟಾಗ
19 ಲಾರದು ಅನ್ನಲು ಧೂಪಹಾಕಬೇಕೆಂದು ಕೈಯಲ್ಲಿ
ಧೂಪಾರತಿಯನ್ನು ಹಿಡಿದಿದ್ದ ಉಜ್ಜೀಯನು ಕೋಪ
ವುಳ್ಳವನಾದನು. ಅವನು ಯೆಹೋವನ ಆಲಯದ
ಧೂಪವೇದಿಯ ಬಳಿಯಲ್ಲಿ ನಿಂತು ಯಾಜಕರೊಡನೆ
ಸಿಟ್ಟಿನಿಂದ ಮಾತಾಡುತ್ತಿರುವಾಗ ಯಾಜಕರ ಸಮಕ್ಷ
20 ದಲ್ಲೇ ಅವನ ಹಣೆಯಲ್ಲಿ ಕುಷ್ಠ ಹುಟ್ಟಿತು. ಮಹಾ
ಯಾಜಕನಾದ ಅಜರ್ಯನೂ ಎಲ್ಲಾ ಯಾಜಕರೂ
ಅವನನ್ನು ದೃಷ್ಟಿಸಿ ನೋಡಿದಾಗ ಅವನ ಹಣೆಯಲ್ಲಿ
ಕುಷ್ಠವು ಕಂಡುಬಂದಕಾರಣ ಅವನನ್ನು ಶೀಘ್ರವಾಗಿ
ಅಲ್ಲಿಂದ ಹೊರಡಿಸಿದರು. ಯೆಹೋವನು ತನ್ನನ್ನು
ಬಾಧಿಸಿದ್ದಾನೆಂದು ಅವನಿಗೆ ತಿಳಿದದರಿಂದ ಅವನೂ
21 ಶೀಘ್ರವಾಗಿ ಹೊರಗೆ ಹೋದನು. ಉಜ್ಜೀಯನು ಜೀವ
ದಿಂದಿರುವ ವರೆಗೂ ಕುಷ್ಠರೋಗಿಯಾಗಿದ್ದು ಯೆಹೋ
ವನ ಆಲಯಕ್ಕೆ ಬಾರದಂತೆ ಬಹಿಷ್ಕೃತನಾದನು.
ಅವನು ಕುಷ್ಠದ ದೆಸೆಯಿಂದ ಪ್ರತ್ಯೇಕವಾದ ಮನೆ
ಯಲ್ಲಿ ವಾಸಿಸಬೇಕಾಯಿತು. ರಾಜಗೃಹಾಧಿಪತ್ಯವನ್ನೂ
ಪ್ರಜಾಪಾಲನೆಯನ್ನೂ ಅವನ ಮಗನಾದ ಯೋತಾ
22 ಮನು ನೋಡಿಕೊಳ್ಳುತ್ತಿದ್ದನು. ಉಜ್ಜೀಯನ ಉಳಿ
ದ ಪೂರ್ವೋತ್ತರ ಚರಿತ್ರೆಯನ್ನು ಆಮೋಚನ
ಮಗನಾದ ಯೆಶಾಯನೆಂಬ ಪ್ರವಾದಿಯು ಬರೆದಿ
23 ದ್ದಾನೆ. ಉಜ್ಜೀಯನು ಪಿತೃಗಳ ಬಳಿಗೆ ಸೇರಲು ಅವ
ನ ಶವವನ್ನು ಕುಷ್ಠರೋಗಿಯದೆಂದು ರಾಜಕುಟುಂಬ
ಶ್ಮಶಾನವಿದ್ದ ಹೊಲದಲ್ಲಿ ಸಮಾಧಿಮಾಡಿದರು. ಅವ
ನಿಗೆ ಬದಲಾಗಿ ಅವನ ಮಗನಾದ ಯೋತಾಮನು
ಅರಸನಾದನು.

ಅರಸನಾದ ಯೋತಾಮನು.

27 ಯೋತಾಮನು ಪಟ್ಟಕ್ಕೆ ಬಂದಾಗ ಇಪ್ಪತ್ತೈದು
ವರುಷದವನಾಗಿದ್ದನು; ಅವನು ಯೆರೂಸಲೇಮಿ
ನಲ್ಲಿ ಹದಿನಾರು ವರುಷ ಆಳಿದನು. ಚಾದೋಕನ
ಮಗಳಾದ ಯೆರೂಷ ಎಂಬಾಕೆಯು ಇವನ ತಾಯಿ.
2 ಇವನು ತನ್ನ ತಂದೆಯಾದ ಉಜ್ಜೀಯನಂತೆ ಯೆಹೋ
ವನ ಚಿತ್ತಾನುಸಾರವಾಗಿ ನಡೆದನು; ಆದರೆ [ಅವ
ನಂತೆ] ಯೆಹೋವನ ಆಲಯವನ್ನು ಪ್ರವೇಶಿಸಲಿಲ್ಲ.
ಪ್ರಜೆಗಳಾದರೋ ದುರಾಚಾರಿಗಳಾಗಿಯೇ ಇದ್ದರು.
3 ಯೆಹೋವನ ಆಲಯಕ್ಕೆ ಮೇಲಣ ಹೆಬ್ಬಾಗಲನ್ನು
ಇಡಿಸಿ ಓಫೇಲ್‌ಗೋಡೆಯ ಹೆಚ್ಚಿನ ಭಾಗವನ್ನು
4 ಕಟ್ಟಿಸಿದವನು ಇವನೇ. ಇದಲ್ಲದೆ ಇವನು ಯೆಹೂದ
ಪರ್ವತಪ್ರದೇಶದಲ್ಲಿ ಪಟ್ಟಣಗಳನ್ನೂ ಕಾಡುಗಳಲ್ಲಿ
ದುರ್ಗಗಳನ್ನೂ ಬುರುಜುಗಳನ್ನೂ ಕಟ್ಟಿಸಿದನು.
5 ಮತ್ತು ಅಮ್ಮೋನಿಯರ ಅರಸನೊಡನೆ ಯುದ್ಧಮಾಡಿ
ಅವರನ್ನು ಜಯಿಸಿದನು; ಅಮ್ಮೋನಿಯರು ಆ ವರುಷ
ದಲ್ಲಿ ಇವನಿಗೆ ನೂರು ತಲಾಂತು ಬೆಳ್ಳಿ, ಹತ್ತುಸಾವಿರ
ಕೋರ್ ಗೋದಿ, ಹತ್ತುಸಾವಿರ ಕೋರ್ ಜವೆಗೋದಿ
ಇವುಗಳನ್ನು ಕೊಡಬೇಕಾಯಿತು. ಅಮ್ಮೋನಿಯರು
ಅವನಿಗೆ ಎರಡನೆಯ ಮತ್ತು ಮೂರನೆಯ ವರುಷಗಳ
6 ಲ್ಲಿಯೂ ಹೀಗೆಯೇ ಕೊಟ್ಟರು. ಯೋತಾಮನು
ತನ್ನ ದೇವರಾದ ಯೆಹೋವನ ಚಿತ್ತಾನುಸಾರವಾಗಿ
ನಡೆದುಕೊಂಡದ್ದರಿಂದ ಬಲವುಳ್ಳವನಾದನು. ಯೋತಾ
ಮನ ಉಳಿದ ಚರಿತ್ರೆಯೂ ಅವನ ಯುದ್ಧಗಳೂ ಪ್ರವ
ರ್ತನೆಗಳೂ ಇಸ್ರಾಯೇಲ್ಯರ ಮತ್ತು ಯೆಹೂದ್ಯರ
ರಾಜಗ್ರಂಥದಲ್ಲಿ ಬರೆದಿರುತ್ತವೆ. ಅವನು ತನ್ನ ಇಪ್ಪ
ತ್ತೈದನೆಯ ವರುಷ ತುಂಬಿದ ಮೇಲೆ ಪಟ್ಟಕ್ಕೆ ಬಂದು
ಯೆರೂಸಲೇಮಿನಲ್ಲಿ ಹದಿನಾರು ವರುಷ ಆಳಿದನು.
ಅವನು ಪಿತೃಗಳ ಬಳಿಗೆ ಸೇರಲು ಅವನ ಶವವನ್ನು
ದಾವೀದನಗರದಲ್ಲಿ ಸಮಾಧಿಮಾಡಿದರು. ಅವನಿಗೆ
ಬದಲಾಗಿ ಅವನ ಮಗನಾದ ಆಹಾಜನು ಅರಸನಾ
ದನು.

ಅರಸನಾದ ಆಹಾಜನು.

28 ಆಹಾಜನು ಪಟ್ಟಕ್ಕೆ ಬಂದಾಗ ಇಪ್ಪತ್ತು ವರುಷದ
ವನಾಗಿದ್ದನು; ಅವನು ಯೆರೂಸಲೇಮಿನಲ್ಲಿ ಹದಿ
ನಾರು ವರುಷ ಆಳಿದನು. ಅವನು ಯೆಹೋವನ
ಚಿತ್ತಾನುಸಾರವಾಗಿ ನಡೆಯಲಿಲ್ಲ. ತನ್ನ ಪೂರ್ವಿಕ
ನಾದ ದಾವೀದನ ಮಾರ್ಗವನ್ನು ಬಿಟ್ಟು ಇಸ್ರಾಯೇಲ
ರಾಜರ ಮಾರ್ಗದಲ್ಲಿ ನಡೆದು ಅವರಂತೆ ಬಾಳ್ ದೇವ
ರುಗಳ ಎರಕದ ವಿಗ್ರಹಗಳನ್ನು ಮಾಡಿಸಿದನು. ಅವನು
ಬೆನ್‌ಹಿನ್ನೋಮ್ ಎಂಬ ತಗ್ಗಿನಲ್ಲಿ ಧೂಪಹಾಕಿಸಿದ್ದ
ಲ್ಲದೆ ಯೆಹೋವನು ಇಸ್ರಾಯೇಲ್ಯರ ಎದುರಿನಿಂದ
ಓಡಿಸಿಬಿಟ್ಟ ಜನಾಂಗಗಳ ಅಸಹ್ಯಕಾರ್ಯಗಳನ್ನು ಅನು
ಸರಿಸಿ ತನ್ನ ಮಕ್ಕಳನ್ನು ಆಹುತಿಕೊಟ್ಟನು. ಪೂಜಾ
ಸ್ಥಳಗಳಲ್ಲಿಯೂ ದಿನ್ನೆಗಳ ಮೇಲೂ ಎಲ್ಲಾ ಹಸರು
ಮರಗಳ ಕೆಳಗೂ ಯಜ್ಞಗಳನ್ನೂ ಧೂಪಗಳನ್ನೂ
ಸಮರ್ಪಿಸಿದನು. ಆದದರಿಂದ ಅವನ ದೇವರಾದ
ಯೆಹೋವನು ಅವನನ್ನು ಅರಾಮ್ಯರ ಅರಸನ ಕೈಗೆ
ಒಪ್ಪಿಸಿದನು; ಅರಾಮ್ಯರು ಅವನನ್ನು ಸೋಲಿಸಿ ಅವನ
ಜನರಲ್ಲಿ ದೊಡ್ಡ ಗುಂಪನ್ನು ಸೆರೆಹಿಡಿದು ದಮಸ್ಕಕ್ಕೆ
ಒಯ್ದರು. ಇದಲ್ಲದೆ ಅವನು ಇಸ್ರಾಯೇಲ್‌ರಾಜನ
ಕೈಗೂ ಒಪ್ಪಿಸಲ್ಪಟ್ಟು ಅವನಿಂದಲೂ ಪೂರ್ಣವಾಗಿ
ಅಪಜಯಹೊಂದಿದನು. ರೆಮಲ್ಯನ ಮಗನಾದ ಪೆಕಹ
ಎಂಬವನು ಒಂದೇ ದಿವಸ ಯೆಹೂದ್ಯರಲ್ಲಿ ಲಕ್ಷ
ಇಪ್ಪತ್ತುಸಾವಿರ ಮಂದಿಯನ್ನು ಕೊಲ್ಲಿಸಿದನು. ಇವ
ಲ್ಲರೂ ರಣವೀರರು. ಯೆಹೂದ್ಯರು ತಮ್ಮ ಪಿತೃಗಳ
ದೇವರಾದ ಯೆಹೋವನನ್ನು ಬಿಟ್ಟದ್ದೇ ಇದಕ್ಕೆ ಕಾ
ರಣ. ರಾಜಪುತ್ರನಾದ ಮಾಸೇಯ, ರಾಜಗೃಹಾಧಿ
ಪತಿಯಾದ ಅಜ್ರೀಕಾಮ್, ರಾಜಪ್ರತಿನಿಧಿಯಾದ
ಎಲ್ಕಾನ ಎಂಬವರನ್ನು ಎಫ್ರಾಯಿಮ್ ದೇಶದ ಜಿಕ್ರಿ
ಯೆಂಬ ಶೂರನು ಕೊಂದನು. ಇದಲ್ಲದೆ ಇಸ್ರಾ
ಯೇಲ್ಯರು ತಮ್ಮ ಬಂಧುಗಳಾದ ಯೆಹೂದ್ಯರಲ್ಲಿ
ಎರಡು ಲಕ್ಷ ಮಂದಿ ಹೆಂಗಸರನ್ನೂ ಗಂಡು ಹೆಣ್ಣು
ಮಕ್ಕಳನ್ನೂ ಸೆರೆಹಿಡಿದು ದೊಡ್ಡ ಕೊಳ್ಳೆಯನ್ನೂ ಕೂಡಿ
ಸಿಕೊಂಡು ಸಮಾರ್ಯಕ್ಕೆ ಒಯ್ದರು.
ಅಲ್ಲಿ ಯೆಹೋವನ ಒಬ್ಬ ಪ್ರವಾದಿಯಿದ್ದನು;
ಅವನ ಹೆಸರು ಓದೇದ್. ಅವನು ಸಮಾರ್ಯಕ್ಕೆ
ಬರುತ್ತಿದ್ದ ಸೈನ್ಯದವರನ್ನು ಎದುರುಗೊಂಡು ಅವ
ರಿಗೆ—ನಿಮ್ಮ ಪಿತೃಗಳ ದೇವರಾದ ಯೆಹೋವನು

ಯೆಹೂದ್ಯರ ಮೇಲೆ ಕೋಪಗೊಂಡು ಅವರನ್ನು
ನಿಮ್ಮ ಕೈಗೆ ಒಪ್ಪಿಸಿಕೊಟ್ಟನಷ್ಟೆ. ಅವರನ್ನು ಸಂಹರಿ
ಸುವದರಲ್ಲಿ ನಿಮ್ಮ ರೌದ್ರವು ಆಕಾಶವನ್ನು ಮು
10 ಟ್ಟಿತು. ಇದು ಸಾಲದೆ ನೀವು ಯೆಹೂದ್ಯರನ್ನೂ ಯೆ
ರೂಸಲೇಮಿನವರನ್ನೂ ಬಲಾತ್ಕರಿಸಿ ದಾಸರನ್ನಾಗಿಯೂ
ದಾಸಿಯರನ್ನಾಗಿಯೂ ಮಾಡಿಕೊಳ್ಳಬೇಕೆಂದಿದ್ದೀರಿ.
ದೇವರಾದ ಯೆಹೋವನಿಗೆ ವಿರುದ್ಧವಾದ ಅಪರಾಧ
11 ಗಳು ನಿಮ್ಮಲ್ಲಿಯೂ ಇಲ್ಲವೋ? ಈಗ ನೀವು ನನ್ನ
ಮಾತಿಗೆ ಕಿವಿಗೊಟ್ಟು ನಿಮ್ಮ ಸಹೋದರರಿಂದ ಸೆರೆ
ಯಾಗಿ ತಂದವರನ್ನು ಹಿಂದಕ್ಕೆ ಕಳುಹಿಸಿರಿ; ಯೆಹೋ
ವನ ಕೋಪಾಗ್ನಿಯು ನಿಮ್ಮ ಮೇಲೆ ಉರಿಯುತ್ತಾ
12 ಇದೆ ಅಂದನು. ಆಗ ಎಫ್ರಾಯಿಮ್ಯರಲ್ಲಿ ಮುಖಂಡ
ರಾಗಿದ್ದ ಯೆಹೋಹಾನಾನನ ಮಗನಾದ ಅಜರ್ಯ,
ಮೆಷಿಲ್ಲೇಮೋತನ ಮಗನಾದ ಬೆರೆಕ್ಯ, ಶಲ್ಲೂಮನ
ಮಗನಾದ ಹಿಜ್ಕೀಯ, ಹದ್ಲೈಯನ ಮಗನಾದ
ಅಮಾಸ ಎಂಬವರು ಯುದ್ಧದಿಂದ ಬರುವವರ
13 ಮುಂದೆ ನಿಂತು ಅವರಿಗೆ—ನೀವು ಸೆರೆಹಿಡಿದವರನ್ನು
ಇಲ್ಲಿಗೆ ತರಬೇಡಿರಿ; ನೀವು ನಮ್ಮ ಪಾಪಾಪರಾಧಗಳ
ಜೊತೆಯಲ್ಲಿ ಯೆಹೋವನಿಗೆ ವಿರುದ್ಧವಾದ ಮತ್ತೊಂದು
ಅಪರಾಧವನ್ನು ಸೇರಿಸಬೇಕೆಂದಿರುತ್ತೀರಾ? ನಮ್ಮ
ಅಪರಾಧವು ದೊಡ್ಡದು; ಇಸ್ರಾಯೇಲ್ಯರ ಮೇಲಿರುವ
ದೇವಕೋಪವು ಉಗ್ರವಾಗಿದೆ ಎಂದು ಹೇಳಿದರು.
14 ಭಟರು ಇದನ್ನು ಕೇಳಿ ಸೆರೆಯವರನ್ನೂ ಕೊಳ್ಳೆಯನ್ನೂ
ಅಧಿಪತಿಗಳ ಮತ್ತು ಸಮೂಹದವರ ಮುಂದೆಯೇ
15 ಬಿಟ್ಟುಬಿಟ್ಟರು. ಆಗ ಮೇಲೆ ಹೇಳಿದ ಪುರುಷರು
ಎದ್ದುಬಂದು ಸೆರೆಯವರಲ್ಲಿ ಬೆತ್ತಲೆಯಾದವರೆಲ್ಲ
ರಿಗೆ ಕೊಳ್ಳೆಯಿಂದ ಉಡುವದಕ್ಕೆ ಬಟ್ಟೆಗಳನ್ನೂ
ಕಾಲಿಗೆ ಕೆರಗಳನ್ನೂ ಕೊಟ್ಟು ಅನ್ನಪಾನಗಳನ್ನಿತ್ತು
ತೈಲಹಚ್ಚಿ ಬಳಲಿಹೋದವರನ್ನು ಕತ್ತೆಗಳ ಮೇಲೆ
ಕುಳ್ಳಿರಿಸಿ ಎಲ್ಲರನ್ನೂ ಯೆರಿಕೋವೆಂಬ ಖರ್ಜೂರ
ನಗರಕ್ಕೆ ಕರಕೊಂಡುಹೋಗಿ ಅವರ ಬಂಧುಗಳ ಹತ್ತಿರ
ಬಿಟ್ಟು ಸಮಾರ್ಯಕ್ಕೆ ಹಿಂದಿರುಗಿದರು.
16 ಆ ಕಾಲದಲ್ಲಿ ಅರಸನಾದ ಆಹಾಜನು ತನಗೆ
ಸಹಾಯಮಾಡಬೇಕೆಂದು ಅಶ್ಶೂರದ ರಾಜರನ್ನು
17 ದೂತರ ಮುಖಾಂತರ ಬೇಡಿಕೊಂಡನು. ಯಾಕಂದರೆ
ಎದೋಮ್ಯರು ಯೆಹೂದ್ಯರ ಮೇಲೆ ತಿರಿಗಿ ಯುದ್ಧಕ್ಕೆ
ಬಂದು ಅವರನ್ನು ಸೋಲಿಸಿ ಅನೇಕಾನೇಕರನ್ನು ಸೆರೆ
18 ಯೊಯ್ದಿದ್ದರು. ಫಿಲಿಷ್ಟಿಯರು ಯೆಹೂದದ ಇಳಕ
ಲಿನ ಪ್ರದೇಶದ ಮತ್ತು ದಕ್ಷಿಣಪ್ರಾಂತದ ಪಟ್ಟಣಗಳ
ಮೇಲೆ ಬಿದ್ದು ಬೇತ್ಷೆಮೆಷ್, ಅಯ್ಯಾಲೋನ್, ಗೆದೇ
ರೋತ್ ಇವುಗಳನ್ನೂ ಸೋಕೋ, ತಿಮ್ನಾ, ಗಿಮ್ಜೋ
ಇವುಗಳನ್ನೂ ಇವುಗಳಿಗೆ ಸೇರಿದ ಗ್ರಾಮಗಳನ್ನೂ ಸ್ವಾ
ಧೀನಮಾಡಿಕೊಂಡು ಅವುಗಳಲ್ಲಿ ವಾಸವಾಗಿದ್ದರು.
19 ಯೆಹೂದ್ಯರನ್ನು ಅಧರ್ಮಕ್ಕೆ ಪ್ರೇರಿಸಿ ಯೆಹೋವ
ನಿಗೆ ದ್ರೋಹಮಾಡಿದ ಇಸ್ರಾಯೇಲ್‍ರಾಜನಾದ
ಆಹಾಜನ ನಿಮಿತ್ತವಾಗಿ ಯೆಹೋವನು ಯೆಹೂದ್ಯ
20 ರನ್ನು ಈ ಪ್ರಕಾರ ತಗ್ಗಿಸಿದ್ದನು. ಅಶ್ಶೂರದ ಅರಸ
ನಾದ ತಿಗ್ಲತ್ಪಿಲೆಸರನು ಬಂದು ಅವನಿಗೆ ನೆರವಾಗುವ
21 ದಕ್ಕೆ ಬದಲಾಗಿ ಅವನನ್ನು ಕುಗ್ಗಿಸಿದನು. ಆಹಾ
ಜನು ಯೆಹೋವನ ಆಲಯದ ಅರಮನೆಯ ಪ್ರಭು
ಗಳ ಆಸ್ತಿಯನ್ನು ಸೂರೆಮಾಡಿಕೊಂಡು ಹೋಗಿ
ಅಶ್ಶೂರದ ಅರಸನಿಗೆ ಕಾಣಿಕೆಯನ್ನಾಗಿ ಕೊಟ್ಟರೂ
ಅವನಿಂದ ಏನೂ ಸಹಾಯವಾಗಲಿಲ್ಲ. ಕಷ್ಟ ಬಂದಾಗ 22
ಅರಸನಾದ ಆಹಾಜನು ಯೆಹೋವನಿಗೆ ಮತ್ತಷ್ಟು
ದ್ರೋಹಿಯಾದನು. ಹೇಗೆಂದರೆ—ಅರಾಮ್‍ರಾಜರ 23
ದೇವತೆಗಳು ಅವರಿಗೆ ಜಯವನ್ನನುಗ್ರಹಿಸಿದವಲ್ಲಾ;
ನಾನೂ ಅವುಗಳಿಗೆ ಯಜ್ಞಸಮರ್ಪಿಸುವೆನು, ಆಗ
ನನಗೂ ಜಯವಾಗುವದು ಎಂದುಕೊಂಡು ಅವನು
ತನ್ನ ಅಪಜಯಕ್ಕೆ ಕಾರಣವಾಗಿದ್ದ ದಮಸ್ಕದ ದೇವತೆ
ಗಳಿಗೆ ಯಜ್ಞಸಮರ್ಪಿಸುವವನಾದನು. ಆ ದೇವತೆ
ಗಳ ದೆಸೆಯಿಂದ ಅವನಿಗೂ ಎಲ್ಲಾ ಇಸ್ರಾಯೇಲ್ಯ
ರಿಗೂ ಕೇಡುಂಟಾಯಿತು. ಇದಲ್ಲದೆ ಆಹಾಜನು 24
ದೇವಾಲಯದ ಸಾಮಾನುಗಳನ್ನು ಕೂಡಿಸಿ ಅವು
ಗಳನ್ನು ಕತ್ತರಿಸಿಬಿಟ್ಟನು; ಯೆಹೋವನ ಆಲ
ಯದ ಬಾಗಲುಗಳನ್ನು ಮುಚ್ಚಿ ಯೆರೂಸಲೇಮಿನ
ಪ್ರತಿಯೊಂದು ಮೂಲೆಯಲ್ಲಿಯೂ ಯಜ್ಞವೇದಿಗಳ
ನ್ನು ಕಟ್ಟಿಸಿದನು. ಅನ್ಯದೇವತೆಗಳಿಗೆ ಧೂಪಹಾಕು 25
ವದಕ್ಕಾಗಿ ಯೆಹೂದದ ಎಲ್ಲಾ ಪಟ್ಟಣಗಳಲ್ಲಿಯೂ
ಪೂಜಾಸ್ಥಳಗಳನ್ನು ಏರ್ಪಡಿಸಿದನು. ಹೀಗೆ ತನ್ನ
ಪಿತೃಗಳ ದೇವರಾದ ಯೆಹೋವನನ್ನು ರೇಗಿಸಿದನು.
ಆಹಾಜನ ಉಳಿದ ಪೂರ್ವೋತ್ತರಚರಿತ್ರೆಯೂ 26
ಅವನ ಎಲ್ಲಾ ಪ್ರವರ್ತನೆಗಳೂ ಯೆಹೂದ್ಯರ ಮತ್ತು
ಇಸ್ರಾಯೇಲ್ಯರ ರಾಜಗ್ರಂಥದಲ್ಲಿ ಬರೆದಿರುತ್ತವೆ.
ಅವನು ತನ್ನ ಪಿತೃಗಳ ಬಳಿಗೆ ಸೇರಲು ಅವನನ್ನು 27
ಇಸ್ರಾಯೇಲ್‍ರಾಜಶ್ಮಶಾನದಲ್ಲಿ ಹೂಣಿಡದೆ ಯೆರೂ
ಸಲೇಮ್ ಪಟ್ಟಣದೊಳಗಣ ಬಂದು ಸ್ಥಳದಲ್ಲಿ ಹೂಣಿ
ಟ್ಟರು. ಅವನಿಗೆ ಬದಲಾಗಿ ಅವನ ಮಗನಾದ ಹಿಜ್ಕೀ
ಯನು ಅರಸನಾದನು.

ಅರಸನಾದ ಹಿಜ್ಕೀಯನು ಯೆಹೋವಾರಾಧನೆಗಾಗಿ
ದೇವಾಲಯವನ್ನು ಪುನಃ ಪ್ರತಿಷ್ಠಿಸಿದ್ದು.

ಹಿಜ್ಕೀಯನು ಪಟ್ಟಕ್ಕೆ ಬಂದಾಗ ಇಪ್ಪತ್ತೈದು **29**
ವರುಷದವನಾಗಿದ್ದನು; ಅವನು ಯೆರೂಸಲೇಮಿ
ನಲ್ಲಿ ಇಪ್ಪತ್ತೊಂಭತ್ತು ವರುಷ ಆಳಿದನು. ಜೆಕರ್ಯನ
ಮಗಳಾದ ಅಬೀಯ ಎಂಬಾಕೆಯು ಅವನ ತಾಯಿ.
ಅವನು ಎಲ್ಲಾ ವಿಷಯಗಳಲ್ಲಿಯೂ ತನ್ನ ಪೂರ್ವಿಕ 2
ನಾದ ದಾವೀದನಂತೆ ಯೆಹೋವನ ಚಿತ್ತಾನುಸಾರ
ವಾಗಿ ನಡೆದನು.
ಅವನು ತನ್ನ ಆಳಿಕೆಯ ಮೊದಲನೆಯ ವರುಷದ 3
ಮೊದಲನೆಯ ತಿಂಗಳಲ್ಲಿ ಯೆಹೋವನ ಆಲಯದ
ಬಾಗಲುಗಳನ್ನು ತೆರೆಯಿಸಿ ಅವುಗಳನ್ನು ಭದ್ರಪಡಿ
ಸಿದನು. ಆ ಮೇಲೆ ಯಾಜಕರನ್ನೂ ಲೇವಿಯರನ್ನೂ 4
[ದೇವಾಲಯದ] ಮೂಡಣದಿಕ್ಕಿನ ಬೈಲಿನಲ್ಲಿ ಕೂಡಿಸಿ
ಅವರಿಗೆ—ಲೇವಿಯರೇ, ನನ್ನ ಮಾತನ್ನು ಕೇಳಿರಿ; 5
ಈಗ ನಿಮ್ಮನ್ನು ಶುದ್ಧಪಡಿಸಿಕೊಂಡು ನಿಮ್ಮ ಪಿತೃಗಳ
ದೇವರಾದ ಯೆಹೋವನ ಪವಿತ್ರಾಲಯದಲ್ಲಿರುವ
ಹೊಲಸನ್ನೆಲ್ಲಾ ಹೊರಗೆ ಹಾಕಿ ಆಲಯವನ್ನು ಶುದ್ಧೀ
ಕರಿಸಿರಿ. ನಿಮ್ಮ ಪಿತೃಗಳು ನಮ್ಮ ದೇವರಾದ ಯೆ 6
ಹೋವನಿಗೆ ದ್ರೋಹಮಾಡಿ ಆತನ ಚಿತ್ತಕ್ಕೆ ವಿರು

ದ್ಧವಾಗಿ ನಡೆದು ಆತನನ್ನು ಬಿಟ್ಟರು. ಅವರು ಆತನ
ನಿವಾಸಸ್ಥಳಕ್ಕೆ ಬೆನ್ನುಕೊಟ್ಟು ವಿಮುಖರಾದರು.
7 ಅದರ ಮಂಟಪದ ಬಾಗಲುಗಳನ್ನು ಮುಚ್ಚಿ ದೀಪ
ಗಳನ್ನು ನಂದಿಸಿ ಇಸ್ರಾಯೇಲ್‌ದೇವರ ಪವಿತ್ರಸ್ಥಾನ
ದಲ್ಲಿ ಧೂಪಹಾಕುವದನ್ನೂ ಸರ್ವಾಂಗಹೋಮಸಮ
8 ರ್ಪಿಸುವದನ್ನೂ ನಿಲ್ಲಿಸಿಬಿಟ್ಟರು. ಆದದರಿಂದ ಯೆ
ಹೋವನು ಯೆಹೂದದೇಶದ ಮೇಲೆಯೂ ಯೆರೂ
ಸಲೇಮಿನ ಮೇಲೆಯೂ ಕೋಪವುಳ್ಳವನಾಗಿ ಅವು
ಗಳನ್ನು ಭಯವಿಸ್ಮಯ ಪರಿಹಾಸಗಳಿಗೆ ಆಸ್ಪದವಾ
9 ಡಿದ್ದಾನೆ; ಇದಕ್ಕೆ ನೀವೇ ಸಾಕ್ಷಿಗಳು. ಅದೇ ಕಾರಣ
ದಿಂದ ನಮ್ಮ ಹಿರಿಯರು ಕತ್ತಿಯಿಂದ ಹತರಾದರು;
ನಮ್ಮ ಗಂಡು ಹೆಣ್ಣು ಮಕ್ಕಳೂ ಹೆಂಡತಿಯರೂ ಸೆರೆ
10 ಯವರಾಗಿ ಹೋಗಬೇಕಾಯಿತು. ಈಗ ನಮ್ಮ
ಮೇಲಿರುವ ಆತನ ಕೋಪಾಗ್ನಿಯು ತೊಲಗಿಹೋಗು
ವಂತೆ ಇಸ್ರಾಯೇಲ್‌ದೇವರಾದ ಯೆಹೋವನೊಡನೆ
ಒಡಂಬಡಿಕೆಮಾಡಿಕೊಳ್ಳುವದಕ್ಕೆ ಮನಸ್ಸುಳ್ಳವನಾಗಿ
11 ದ್ದೇನೆ. ಹೀಗಿರಲಾಗಿ ನನ್ನ ಮಕ್ಕಳೇ, ಉದಾಸೀನ
ರಾಗಿರಬೇಡಿರಿ; ಯೆಹೋವನು ತನ್ನನ್ನು ಆರಾಧಿಸು
ವದಕ್ಕೂ ಧೂಪಹಾಕುವದಕ್ಕೂ ನಿಮ್ಮನ್ನು ತನ್ನ
ಸಾನ್ನಿಧ್ಯಸೇವಕರನ್ನಾಗಿ ಆರಿಸಿಕೊಂಡನಲ್ಲಾ ಎಂದು
12 ಹೇಳಿದನು. ಕೂಡಲೆ ಕೆಹಾತ್ಯರಲ್ಲಿ ಅಮಾಸೈಯ
ಮಗನಾದ ಮಹತ್, ಅಜರ್ಯನ ಮಗನಾದ ಯೋ
ವೇಲ್, ಮೆರಾರೀಯರಲ್ಲಿ ಅಬ್ದೀಯ ಮಗನಾದ
ಕೀಷ್, ಯೆಹಲ್ಲೆಲೇಲನ ಮಗನಾದ ಅಜರ್ಯ, ಗೆ
ರ್ಷೋನ್ಯರಲ್ಲಿ ಜಿಮ್ಮನ ಮಗನಾದ ಯೋವಾಹ,
13 ಯೋವಾಹನ ಮಗನಾದ ಏದೆನ್, ಎಲೀಚಾಫಾನ್ಯ
ರಲ್ಲಿ ಶಿಮ್ರಿ, ಯೆಗೀಯೇಲ್, ಆಸಾಫ್ಯರಲ್ಲಿ ಜೆಕ
14 ರ್ಯ, ಮತ್ತನ್ಯ, ಹೇಮಾನ್ಯರಲ್ಲಿ ಯೆಹೀಯೇಲ್,
ಶಿಮ್ಮಿ, ಯೆದೂತೂನ್ಯರಲ್ಲಿ ಶೆಮಾಯ, ಉಜ್ಜೀ
15 ಯೇಲ್ ಎಂಬ ಲೇವಿಯರು ಎದ್ದು ತಮ್ಮ ಸಹೋದ
ರರನ್ನು ಕೂಡಿಸಿದರು. ಅವರು ಅರಸನ ಆಜ್ಞಾಧಾರ
ಕರಾಗಿ ಯೆಹೋವನ ಧರ್ಮಶಾಸ್ತ್ರವಿಧಿಯ ಮೇರೆಗೆ
ತಮ್ಮನ್ನು ಶುದ್ಧಪಡಿಸಿಕೊಂಡು ಯೆಹೋವನ ಆಲ
16 ಯವನ್ನು ಶುದ್ಧೀಕರಿಸುವದಕ್ಕೆ ಬಂದರು. ಯಾಜ
ಕರು ಯೆಹೋವನ ಆಲಯವನ್ನು ಶುದ್ಧಮಾಡುವದ
ಕ್ಕೋಸ್ಕರ ಒಳಗೆ ಹೋಗಿ ಪವಿತ್ರಸ್ಥಾನದಲ್ಲಿದ್ದ ಹೊಲ
ಸನ್ನೆಲ್ಲಾ ತಂದು ಪ್ರಾಕಾರದಲ್ಲಿ ಹಾಕಿದರು. ಲೇವಿ
ಯರು ಅದನ್ನು ಕೂಡಿಸಿ ಹೊರಗೆ ಒಯ್ದು ಕಿದ್ರೋನ್
17 ಹಳ್ಳದಲ್ಲಿ ಹಾಕಿದರು. ಅವರು ಮೊದಲನೆಯ ತಿಂಗಳಿ
ನ ಮೊದಲನೆಯ ದಿನದಲ್ಲಿ ಶುದ್ಧೀಕರಣವನ್ನು ಪ್ರಾರಂ
ಭಿಸಿದರು. ಎಂಟನೆಯ ದಿನದಲ್ಲಿ ಯೆಹೋವನ ಆಲ
ಯದ ಮಂಟಪಕ್ಕೆ ಕೈಹಾಕಿದರು; ಯೆಹೋವನ ಆಲ
ಯವನ್ನು ಶುದ್ಧಪಡಿಸುವದರಲ್ಲಿ ಎಂಟು ದಿನಗಳು ಕಳೆ
ದುಹೋದವು. ಮೊದಲನೆಯ ತಿಂಗಳಿನ ಹದಿನಾರನೆಯ
18 ದಿನದಲ್ಲಿ ಕೆಲಸವೆಲ್ಲಾ ತೀರಿತು. ಆ ಮೇಲೆ ಅವರು
ಅರಮನೆಯೊಳಕ್ಕೆ ಹೋಗಿ ಅರಸನಾದ ಹಿಜ್ಕೀಯ
ನಿಗೆ—ನಾವು ಯೆಹೋವನ ಸಮಸ್ತಾಲಯವನ್ನೂ
ಯಜ್ಞವೇದಿಯನ್ನೂ ಅದರ ಉಪಕರಣಗಳನ್ನೂ ನೈವೇ
ದ್ಯವಾದ ರೊಟ್ಟಿಗಳನ್ನಿಡತಕ್ಕ ಮೇಜನ್ನೂ ಅದರ
19 ಸಾಮಾನುಗಳನ್ನೂ ಶುದ್ಧಮಾಡಿದೆವು. ಅರಸನಾದ

ಆಹಾಜನು ತನ್ನ ಆಳಿಕೆಯಲ್ಲಿ ದೇವದ್ರೋಹಿಯಾ
ತಳ್ಳಿಬಿಟ್ಟ ಪಾತ್ರೆಗಳನ್ನು ತಿರಿಗಿ ತಂದಿಟ್ಟು ಪ್ರತಿಷ್ಠಿ
ದ್ದೇವೆ; ಅವು ಈಗ ಯೆಹೋವನ ಯಜ್ಞವೇದಿಯ
ಮುಂದಿರುತ್ತವೆ ಅಂದರು.

ಅರಸನಾದ ಹಿಜ್ಕೀಯನು [ಮರುದಿನ] ಬೆಳಗಿ
ಜಾವದಲ್ಲೆದ್ದು ಪಟ್ಟಣದ ಮುಖಂಡರನ್ನು ಕೂಡಿ
ಅವರೊಡನೆ ಯೆಹೋವನ ಆಲಯಕ್ಕೆ ಹೋದನು
ಅವರು ಸರಕಾರ ದೇವಾಲಯ ಯೆಹೂದಪ್ರ
ಇವುಗಳಿಗೋಸ್ಕರ ದೋಷಪರಿಹಾರಕಯಜ್ಞಮಾಡ
ವದಕ್ಕಾಗಿ ಹೋರಿ ಟಗರು ಕುರಿಮರಿ ಹೋ
ಇವುಗಳಲ್ಲಿ ಏಳೇಳನ್ನು ತಂದರು. ಅರಸನು ಯಾ
ಕರಾದ ಆರೋನನ ಸಂತಾನದವರಿಗೆ ಯೆಹೋವ
ಯಜ್ಞವೇದಿಯ ಮೇಲೆ ಸರ್ವಾಂಗಹೋಮವಾ
ಬೇಕೆಂದು ಆಜ್ಞಾಪಿಸಿದನು. ಹೋರಿಗಳನ್ನು ವ
ಸಿದ ಮೇಲೆ ಯಾಜಕರು ರಕ್ತವನ್ನು ಕೂಡಿಸಿ ಯ
ವೇದಿಗೆ ಎರಚಿದರು. ಅನಂತರ ಟಗರುಗಳನ್ನು ವಧಿ
ಅವುಗಳ ರಕ್ತವನ್ನು ಯಜ್ಞವೇದಿಗೆ ಎರಚಿದರು.
ಮೇಲೆ ಕುರಿಮರಿಗಳನ್ನು ವಧಿಸಿ ಅವುಗಳ ರ
ವನ್ನೂ ಯಜ್ಞವೇದಿಗೆ ಎರಚಿದರು. ಕಡೆಯ
ದೋಷಪರಿಹಾರಕಯಜ್ಞಕ್ಕಾಗಿ ತಂದ ಹೋತಗಳನ
ಅರಸನ ಮುಂದೆಯೂ ಸಮೂಹದವರ ಮುಂದೆಯ
ನಿಲ್ಲಿಸಿದರು. ಅವರು ಅವುಗಳ ಮೇಲೆ ತಮ್ಮ ಕೈಗ
ನ್ನಿಟ್ಟನಂತರ ಯಾಜಕರು ಅವುಗಳನ್ನು ವಧಿಸಿ ಅ
ಗಳ ರಕ್ತವನ್ನು ಸಮಸ್ತ ಇಸ್ರಾಯೇಲ್ಯರ ದೋ
ಪರಿಹಾರಕ್ಕಾಗಿ ಯಜ್ಞವೇದಿಯ ಮೇಲೆ ಸುರಿದರ
ಆ ಸರ್ವಾಂಗಹೋಮಗಳೂ ದೋಷಪರಿಹಾರ
ಯಜ್ಞಗಳೂ ಎಲ್ಲಾ ಇಸ್ರಾಯೇಲ್ಯರಿಗೋಸ್ಕರ ಆ
ಬೇಕೆಂದು ಅರಸನು ಆಜ್ಞಾಪಿಸಿದ್ದನು. ಇದಲ್ಲ
ಅವನು ತಾಳ ಸ್ವರಮಂಡಲ ಕಿನ್ನರಿ ಇವುಗಳಿಂ
ಭಜಿಸುವದಕ್ಕೋಸ್ಕರ ಲೇವಿಯರನ್ನು ದಾವೀ
ರಾಜದರ್ಶಿಯಾದ ಗಾದ್, ಪ್ರವಾದಿಯಾದ ನಾತಾ
ಇವರ ಆಜ್ಞಾನುಸಾರವಾಗಿ ಯೆಹೋವನ ಆಲ
ದಲ್ಲಿ ಇರಿಸಿದನು. ಯೆಹೋವನು ತಾನೇ ಪ್ರವಾ
ಗಳ ಮುಖಾಂತರ ಹೀಗೆ ಆಜ್ಞಾಪಿಸಿದ್ದನು. ಆ ಲೇ
ಯರು ದಾವೀದನ ವಾದ್ಯಗಳನ್ನೂ ಯಾಜಕ
ತುತೂರಿಗಳನ್ನೂ ಹಿಡಿದು ನಿಂತಿರಲು ಹಿಜ್ಕೀಯನ
ಯಜ್ಞವೇದಿಯ ಮೇಲೆ ಸರ್ವಾಂಗಹೋಮವನ
ಸಮರ್ಪಿಸುವದಕ್ಕೆ ಆಜ್ಞಾಪಿಸಿದನು. ಸರ್ವಾಂ
ಹೋಮಸಮರ್ಪಣೆಯು ಪ್ರಾರಂಭಿಸಿದೊಡನೆ ಇಸ್ರಾ
ಯೇಲ್‌ರಾಜನಾದ ದಾವೀದನ ವಾದ್ಯಗಳಿಂದ ಯ
ಹೋವನನ್ನು ಭಜಿಸುವದೂ ತುತೂರಿಯೂದುವದ
ಆರಂಭವಾಯಿತು. ಸರ್ವಾಂಗಹೋಮಸಮರ್ಪಣೆಯ
ತೀರುವ ವರೆಗೆ ಸರ್ವಸಮೂಹದವರು ಸಾಷ್ಟಾಂ
ನಮಸ್ಕಾರಮಾಡುತ್ತಲೂ ಗಾಯಕರು ಗಾನಮಾಡ
ತ್ತಲೂ ತುತೂರಿಯೂದುವವರು ತುತೂರಿಯೂ
ತ್ತಲೂ ಇದ್ದರು. ಸರ್ವಾಂಗಹೋಮಸಮರ್ಪಣೆಯ
ತೀರಿದ ಮೇಲೆ ಅರಸನೂ ಅವನ ಜೊತೆಯಲ್ಲಿದ್ದವ
ಲ್ಲರೂ ಸಾಷ್ಟಾಂಗನಮಸ್ಕಾರಮಾಡಿದರು. ಅರಸನಾ
ಹಿಜ್ಕೀಯನೂ ಪ್ರಭುಗಳೂ ದಾವೀದನ ಮತ್ತು ದರ
ಯಾದ ಆಸಾಫನ ಕೀರ್ತನೆಗಳಿಂದ ಯೆಹೋವನನ

ಸ್ತುತಿಸಬೇಕೆಂದು ಲೇವಿಯರಿಗೆ ಆಜ್ಞಾಪಿಸಲು ಅವರು
ಉತ್ಸಾಹದಿಂದ ಸ್ತುತಿಸುತ್ತಾ ಬೊಗ್ಗಿಕೊಂಡು ನಮಸ್ಕ
ರಿಸಿದರು.
31 ಆ ಮೇಲೆ ಹಿಜ್ಕೀಯನು ಸಮೂಹದವರಿಗೆ—
ನೀವು ಈಗ ಯೆಹೋವನಿಗೋಸ್ಕರ ನಿಮ್ಮನ್ನು ಪ್ರತಿಷ್ಠಿ
ಸಿಕೊಂಡಿರಲ್ಲಾ; ಹತ್ತಿರ ಬಂದು ಯೆಹೋವನ ಆಲ
ಯಕ್ಕೋಸ್ಕರ ಸಮಾಧಾನಯಜ್ಞಗಳನ್ನೂ ಕೃತಜ್ಞತಾ
ಯಜ್ಞಗಳನ್ನೂ ಸಮರ್ಪಿಸಿರಿ ಅನ್ನಲು ಸಮೂಹದವರು
ಸಮಾಧಾನಯಜ್ಞಗಳನ್ನೂ ಕೃತಜ್ಞತಾಯಜ್ಞಗಳನ್ನೂ
ಸಮರ್ಪಿಸಿದ್ದಲ್ಲದೆ ಅನೇಕರು ಸ್ವೇಚ್ಛೆಯಿಂದ
32 ಸರ್ವಾಂಗಹೋಮಗಳನ್ನೂ ಸಮರ್ಪಿಸಿದರು. ಸಮೂ
ಹದವರು ಸರ್ವಾಂಗಹೋಮಕ್ಕೋಸ್ಕರ ತಂದೊಪ್ಪಿ
ಸಿದ ಹೋರಿಗಳು ಎಪ್ಪತ್ತು, ಟಗರುಗಳು ನೂರು,
ಕುರಿಮರಿಗಳು ಇನ್ನೂರು. ಇವೆಲ್ಲಾ ಯೆಹೋವನಿಗೆ
33 ಸರ್ವಾಂಗಹೋಮಸಮರ್ಪಣೆಗಾಗಿಯೇ. ದೇವರಿಗೆ
ಕಾಣಿಕೆಯಾಗಿ ತರಲ್ಪಟ್ಟ ಹೋರಿಗಳು ಆರು ನೂರು,
34 ಕುರಿಗಳು ಮೂರು ಸಾವಿರ. ಚರ್ಮವನ್ನು ಸುಲಿಯು
ವದು [ಶುದ್ಧಿಪಡಿಸಿಕೊಂಡ] ಕೆಲವು ಮಂದಿ ಯಾಜಕ
ರಿಂದ ಆಗದೆ ಹೋಯಿತು. ಆದದರಿಂದ ಮಿಕ್ಕ ಯಾ
ಜಕರು ತಮ್ಮನ್ನು ಶುದ್ಧಿಪಡಿಸಿಕೊಳ್ಳುವ ವರೆಗೂ ಆ
ಕೆಲಸ ತೀರುವ ತನಕ ಅವರ ಬಂಧುಗಳಾದ ಲೇವಿ
ಯರು ಅವರಿಗೆ ಸಹಾಯಮಾಡುತ್ತಿದ್ದರು. ತಮ್ಮನ್ನು
ಶುದ್ಧಪಡಿಸಿಕೊಳ್ಳುವದರಲ್ಲಿ ಯಾಜಕರಿಗಿಂತ ಲೇವಿ
35 ಯರೇ ಹೆಚ್ಚು ಶ್ರದ್ಧೆಯುಳ್ಳವರಾಗಿದ್ದರು. ಇದಲ್ಲದೆ
ಯಾಜಕರು ಸಮರ್ಪಿಸಬೇಕಾಗಿದ್ದ ಸರ್ವಾಂಗ
ಹೋಮ, ಸಮಾಧಾನಯಜ್ಞಗಳ ಕೊಬ್ಬು, ಸರ್ವಾಂಗ
ಹೋಮ ಸಂಬಂಧವಾದ ಪಾನದ್ರವ್ಯ ಇವು ಅಪಾರ
ವಾಗಿದ್ದವು.
36 ಹೀಗೆ ಯೆಹೋವನ ಆಲಯದ ಸೇವಾಕ್ರಮವು
ಪುನಃಸ್ಥಾಪಿತವಾಯಿತು. ಯಾರೂ ನೆನಸದೆ ಇರು
ವಲ್ಲಿ ದೇವರು ತಾನೇ ತನ್ನ ಪ್ರಜೆಗಳಿಗೋಸ್ಕರ ಈ
ಕಾರ್ಯವನ್ನು ನೆರವೇರಿಸಿದ್ದರಿಂದ ಹಿಜ್ಕೀಯನೂ
ಎಲ್ಲಾ ಜನರೂ ಸಂತೋಷಿಸಿದರು.

ಹಿಜ್ಕೀಯನ ಪ್ರೇರಣೆಯಿಂದ ಇಸ್ರಾಯೇಲ್ಯರು
ಪಸ್ಕವನ್ನಾಚರಿಸಿದ್ದು.

30 ತರುವಾಯ ಹಿಜ್ಕೀಯನು—ಇಸ್ರಾಯೇಲ್‌ದೇವ
ರಾದ ಯೆಹೋವನ ಪಸ್ಕವನ್ನಾಚರಿಸುವದಕ್ಕಾಗಿ
ಯೆರೂಸಲೇಮಿನಲ್ಲಿರುವ ಯೆಹೋವನ ಆಲಯಕ್ಕೆ
ಬರಬೇಕೆಂದು ಎಲ್ಲಾ ಇಸ್ರಾಯೇಲ್ಯರಿಗೂ ಯೆಹೂದ್ಯ
ರಿಗೂ ಎಫ್ರಾಯಿಮ್ಯರಿಗೂ ಮನಸ್ಸೆಯವರಿಗೂ ದೂ
ತರ ಮುಖಾಂತರವಾಗಿ ಮತ್ತು ಪತ್ರಗಳ ಮೂಲಕ
2 ವಾಗಿ ತಿಳಿಯಪಡಿಸಿದನು. ಯಾಜಕರಲ್ಲಿ ತಕ್ಕಷ್ಟು
ಮಂದಿ ತಮ್ಮನ್ನು ಶುದ್ಧಿಪಡಿಸಿಕೊಂಡಿರಲಿಲ್ಲವಾದದ
ರಿಂದಲೂ ಜನರು ಯೆರೂಸಲೇಮಿನಲ್ಲಿ ಇನ್ನೂ ಕೂಡಿ
ರಲಿಲ್ಲವಾದದರಿಂದಲೂ ಕೂಡಲೆ ಪಸ್ಕವನ್ನು ಆಚರಿಸ
ಲಾಗದೆಂದು ಅರಸನೂ ಅವನ ಸರದಾರರೂ ಯೆರೂಸ
3 ಲೇಮಿನ ಸರ್ವಸಂಘದವರೂ ತಿಳಿದು ಎರಡನೆಯ
ತಿಂಗಳಿನಲ್ಲಿ ಅದನ್ನು ಆಚರಿಸಬೇಕೆಂದು ಅಭಿಪ್ರಾಯ
ಪಟ್ಟರು. ಈ ಅಭಿಪ್ರಾಯವು ಅರಸನಿಗೂ ಸರ್ವಸ 4
ಮೂಹಕ್ಕೂ ಸರಿಕಂಡದರಿಂದ ಅವರು—ಜನರು ಇಸ್ರಾ 5
ಯೇಲ್‌ದೇವರಾದ ಯೆಹೋವನಿಗೋಸ್ಕರ ಪಸ್ಕವನ್ನಾ
ಚರಿಸುವದಕ್ಕಾಗಿ ಯೆರೂಸಲೇಮಿಗೆ ಬರಬೇಕು ಎಂಬ
ದಾಗಿ ಬೇರ್ಷೆಬದಿಂದ ದಾನಿನ ವರೆಗೂ ವಾಸಿಸುವ
ಇಸ್ರಾಯೇಲ್ಯರೊಳಗೆ ಡಂಗುರಹೊಡಿಸಬೇಕೆಂದು
ನಿರ್ಣಯಿಸಿದರು. ಜನರಲ್ಲಿ ಹೆಚ್ಚು ಮಂದಿ ಆ ವರೆ
ಗೂ ಧರ್ಮಶಾಸ್ತ್ರವಿಧಿಯ ಮೇರೆಗೆ ಪಸ್ಕವನ್ನು ಆಚರಿ
ಸಿರಲಿಲ್ಲ.
ಅರಸನ ಮತ್ತು ಅವನ ಸರದಾರರ ಪತ್ರಗಳನ್ನು 6
ತೆಗೆದುಕೊಂಡುಹೋದ ದೂತರು ಇಸ್ರಾಯೇಲ್ ಯೆ
ಹೂದದೇಶಗಳಲ್ಲೆಲ್ಲಾ ಸಂಚರಿಸಿ ರಾಜಾಜ್ಞೆಯಂತೆ
ಪ್ರಕಟಿಸಿದ್ದೇನಂದರೆ—ಇಸ್ರಾಯೇಲ್ಯರೇ, ಅಬ್ರಹಾಮ್
ಇಸಾಕ್ ಇಸ್ರಾಯೇಲರ ದೇವರಾದ ಯೆಹೋವನ
ಕಡೆಗೆ ತಿರುಗಿಕೊಳ್ಳಿರಿ. ಆಗ ಆತನೂ ನಿಮ್ಮಲ್ಲಿ
ಅಶ್ಶೂರದ ಅರಸನ ಕೈಗೆ ಸಿಕ್ಕದಂತೆ ತಪ್ಪಿಸಿಕೊಂಡು
ಉಳಿದವರ ಕಡೆಗೆ ತಿರುಗಿಕೊಳ್ಳುವನು. ನಿಮ್ಮ ತಂದೆ 7
ಗಳೂ ಸಹೋದರರೂ ನಡೆದಂತೆ ನೀವೂ ನಡೆಯಬೇ
ಡಿರಿ. ಅವರು ತಮ್ಮ ಪಿತೃಗಳ ದೇವರಾದ ಯೆಹೋ
ವನಿಗೆ ವಿರೋಧವಾಗಿ ದ್ರೋಹಿಗಳಾದದರಿಂದ ಆತನು
ಅವರನ್ನು ನಾಶನಕ್ಕೆ ಒಪ್ಪಿಸಿದನು. ಅದಕ್ಕೆ ನೀವೇ
ಸಾಕ್ಷಿಗಳು. ಈಗ ನಿಮ್ಮ ಪಿತೃಗಳಂತೆ ಆಜ್ಞೆಗೆ 8
ಮಣಿಯದವರಾಗಿರಬೇಡಿರಿ, ಯೆಹೋವನಿಗೆ ಅಧೀನ
ರಾಗಿರಿ. ನಿಮ್ಮ ದೇವರಾದ ಯೆಹೋವನು ಸದಾಕಾ
ಲಕ್ಕೂ ಪ್ರತಿಷ್ಠಿಸಿಕೊಂಡ ಪವಿತ್ರಾಲಯಕ್ಕೆ ಬಂದು ಆತ
ನನ್ನು ಸೇವಿಸಿರಿ. ಆಗ ನಿಮ್ಮ ಮೇಲಿರುವ ಆತನ
ಉಗ್ರಕೋಪವು ತೊಲಗಿಹೋಗುವದು. ನೀವು ಯೆ 9
ಹೋವನ ಕಡೆಗೆ ತಿರುಗಿಕೊಳ್ಳುವದಾದರೆ ನಿಮ್ಮ
ಸಹೋದರರೂ ಮಕ್ಕಳೂ ತಮ್ಮನ್ನು ಸೆರೆಯೊಯ್ದವರ
ದೃಷ್ಟಿಯಲ್ಲಿ ದಯೆಗೆ ಪಾತ್ರರಾಗಿ ತಿರಿಗಿ ಸ್ವದೇಶಕ್ಕೆ
ಬರುವರು. ನಿಮ್ಮ ದೇವರಾದ ಯೆಹೋವನು
ದಯೆಯೂ ಕನಿಕರವೂ ಉಳ್ಳವನಾಗಿರುತ್ತಾನೆ. ಆತನು
ತನ್ನ ಕಡೆಗೆ ತಿರುಗಿಕೊಳ್ಳುವ ನಿಮ್ಮನ್ನು ಕಟಾಕ್ಷಿಸದೆ
ಇರುವದಿಲ್ಲ ಎಂಬದೇ.
ದೂತರು ಎಫ್ರಾಯಿಮ್ ಮನಸ್ಸೆ ಜೆಬುಲೂನ್ 10
ಪ್ರಾಂತಗಳಲ್ಲಿ ಪಟ್ಟಣದಿಂದ ಪಟ್ಟಣಕ್ಕೆ ಹೋಗುತ್ತಿ
ರಲು ಜನರು ಅವರನ್ನು ಕಂಡು ನಕ್ಕು ಗೇಲಿಮಾಡಿ
ದರು. ಕೆಲವು ಮಂದಿ ಆಶೇರ್ಯರೂ ಮನಸ್ಸೆಯ 11
ವರೂ ಜೆಬುಲೂನ್ಯರೂ ಮಾತ್ರ ತಮ್ಮನ್ನು ತಗ್ಗಿಸಿ
ಕೊಂಡು ಯೆರೂಸಲೇಮಿಗೆ ಬಂದರು. ಯೆಹೂದ್ಯ 12
ರಾದರೋ ದೇವರ ಕೃಪಾಹಸ್ತಪ್ರೇರಣೆಯಿಂದ ಏಕ
ಮನಸ್ಸುಳ್ಳವರಾಗಿ ಯೆಹೋವನ ಧರ್ಮಶಾಸ್ತ್ರಾನು
ಸಾರ ಅರಸನಿಂದಲೂ ಪ್ರಭುಗಳಿಂದಲೂ ಹೊರಟ ಆಜ್ಞೆ
ಯನ್ನು ಕೈಕೊಂಡರು. ಹೀಗೆ ಅನೇಕಾನೇಕ ಜನರು 13
ಎರಡನೆಯ ತಿಂಗಳಿನಲ್ಲಿ ಹುಳಿಯಿಲ್ಲದ ರೊಟ್ಟಿಗಳ
ಹಬ್ಬವನ್ನಾಚರಿಸುವದಕ್ಕಾಗಿ ಯೆರೂಸಲೇಮಿನಲ್ಲಿ
ಕೂಡಿದರು; ಆ ಕೂಟವು ಮಹಾಸಮೂಹವಾಗಿತ್ತು.
ಅವರು ಯೆರೂಸಲೇಮಿನಲ್ಲಿದ್ದ ಯಜ್ಞವೇದಿಗಳ 14
ನ್ನೂ ಎಲ್ಲಾ ಧೂಪವೇದಿಗಳನ್ನೂ ತೆಗೆದುಕೊಂಡು
ಹೋಗಿ ಕಿದ್ರೋನ್ ಹಳ್ಳದಲ್ಲಿ ಬೀಸಾಟುಬಿಟ್ಟರು.

15 ಆ ಮೇಲೆ ಎರಡನೆಯ ತಿಂಗಳಿನ ಹದಿನಾಲ್ಕನೆಯ
ದಿನದಲ್ಲಿ ಪಸ್ಕಹಬ್ಬಕ್ಕಾಗಿ ಕುರಿಮರಿಗಳನ್ನು ವಧಿಸಿ
ದರು. ಯಾಜಕರೂ ಲೇವಿಯರೂ [ಮೊದಲನೆಯ
ಸಾರಿ ತಪ್ಪಿದ್ದಕ್ಕಾಗಿ] ನಾಚಿಕೆಪಟ್ಟು ತಮ್ಮನ್ನು ಶುದ್ಧಿ
ಪಡಿಸಿಕೊಂಡು ಯೆಹೋವನ ಆಲಯದಲ್ಲಿ ಸರ್ವಾಂಗ
16 ಹೋಮಗಳನ್ನು ಸಮರ್ಪಿಸುತ್ತಾ ತಮ್ಮ ತಮ್ಮ ಸ್ಥಳ
ಗಳಲ್ಲಿ ನಿಂತು ದೇವರ ಮನುಷ್ಯನಾದ ಮೋಶೆಯ
ಧರ್ಮಶಾಸ್ತ್ರದಿಂದ ತಮಗೆ ನೇಮಕವಾದ ಸೇವೆಯನ್ನು
ಮಾಡುತ್ತಿದ್ದರು. ಯಾಜಕರು ಲೇವಿಯರ ಕೈಯಿಂದ
ರಕ್ತವನ್ನು ತೆಗೆದುಕೊಂಡು ಅದನ್ನು ಪ್ರೋಕ್ಷಿಸಿದರು.
17 ಸಮೂಹದಲ್ಲಿ ಅನೇಕರು ತಮ್ಮನ್ನು ಶುದ್ಧಿಪಡಿಸಿಕೊ
ಳ್ಳದೆ ಇದ್ದದರಿಂದ ಅಶುದ್ಧರಾದವರೆಲ್ಲರ ಯಜ್ಞಪಶು
ಗಳು ಯೆಹೋವನಿಗೆ ಮೀಸಲಾಗುವಂತೆ ಅವುಗಳನ್ನು
18 ಲೇವಿಯರೇ ವಧಿಸಿದರು. ಜನರಲ್ಲಿ ಅನೇಕಾನೇಕರು
ಅಂದರೆ ಹೆಚ್ಚಾಗಿ ಎಫ್ರಾಯಿಮ್ ಮನಸ್ಸೆ ಇಸ್ಸಾ
ಕಾರ್ ಜೆಬುಲೂನ್ ಪ್ರಾಂತಗಳವರು ತಮ್ಮನ್ನು ಶುದ್ಧಿ
ಪಡಿಸಿಕೊಳ್ಳದೆ ಧರ್ಮಶಾಸ್ತ್ರಕ್ಕೆ ವಿರುದ್ಧವಾದ ರೀತಿ
ಯಿಂದ ಪಸ್ಕಭೋಜನವನ್ನು ಮಾಡಿದರು. ಆದರೆ
ಹಿಜ್ಕೀಯನು—ಯೆಹೋವನೇ, ದಯಾಪರನಾದ ದೇವ
ರೇ, ದೇವಾಲಯಯಾತ್ರಿಕರಿಗಿರಬೇಕಾದ ಪರಿಶುದ್ಧ
19 ತ್ವವು ಅನೇಕರಲ್ಲಿ ಇಲ್ಲದಿದ್ದರೂ ಪಿತೃಗಳ ದೇವರಾದ
ನಿನ್ನನ್ನು ಹುಡುಕಬೇಕೆಂದು ಮನಸ್ಸುಮಾಡಿರುವವರಿ
ಗೆಲ್ಲಾ ಕ್ಷಮೆಯನ್ನು ಅನುಗ್ರಹಿಸು ಎಂದು ವಿಜ್ಞಾಪನೆ
20 ಮಾಡಿದ್ದರಿಂದ ಯೆಹೋವನು ಹಿಜ್ಕೀಯನ ಪ್ರಾರ್ಥನೆ
ಯನ್ನು ಲಾಲಿಸಿ ಜನರನ್ನು ಸ್ವಸ್ಥಗೊಳಿಸಿದನು.
21 ಯೆರೂಸಲೇಮಿನಲ್ಲಿ ಕೂಡಿಬಂದ ಇಸ್ರಾಯೇಲ್ಯರು
ಏಳು ದಿನಗಳ ವರೆಗೂ ಮಹಾ ಸಂತೋಷದಿಂದ
ಹುಳಿಯಿಲ್ಲದ ರೊಟ್ಟಿಗಳ ಹಬ್ಬವನ್ನು ಆಚರಿಸುತ್ತಾ
ಇದ್ದರು. ಲೇವಿಯರೂ ಯಾಜಕರೂ ಮಹಾವಾದ್ಯ
ದೊಡನೆ ಯೆಹೋವನನ್ನು ಪ್ರತಿದಿನವೂ ಕೀರ್ತಿಸುತ್ತಾ
22 ಇದ್ದರು. ಹಿಜ್ಕೀಯನು ಯೆಹೋವನ [ಭಜನೆಯಲ್ಲಿ]
ಗಟ್ಟಿಗರಾಗಿದ್ದ ಎಲ್ಲಾ ಲೇವಿಯರೊಡನೆ ಪ್ರೀತಿಯಿಂದ
ಮಾತಾಡಿದನು. ನೇಮಕವಾದ ಏಳು ದಿವಸಗಳ ವರೆ
ಗೂ ಜನರು ಸಮಾಧಾನಯಜ್ಞಗಳನ್ನರ್ಪಿಸುತ್ತಾ
ತಮ್ಮ ಪಿತೃಗಳ ದೇವರಾದ ಯೆಹೋವನನ್ನು ತಮ್ಮ
23 ದೇವರೆಂದು ಕೊಂಡಾಡುತ್ತಾ ಔತಣಮಾಡಿದರು. ಯೆ
ಹೂದದ ಅರಸನಾದ ಹಿಜ್ಕೀಯನು ಸಾವಿರ ಹೋರಿಗ
ಳನ್ನೂ ಏಳು ಸಾವಿರ ಕುರಿಗಳನ್ನೂ ಪ್ರಭುಗಳು ಸಾವಿರ
ಹೋರಿಗಳನ್ನೂ ಹತ್ತು ಸಾವಿರ ಕುರಿಗಳನ್ನೂ ತಮಗೆ
ಯಜ್ಞಕ್ಕಾಗಿ ದಾನಮಾಡಿದ್ದರಿಂದಲೂ ಯಾಜಕರಲ್ಲಿ
ಬಹು ಮಂದಿ ತಮ್ಮನ್ನು ಶುದ್ಧಿಪಡಿಸಿಕೊಂಡಿದ್ದರಿಂದ
24 ಲೂ ಸಮೂಹದವರು ಇನ್ನೂ ಏಳು ದಿವಸ ಹಬ್ಬ
ಮಾಡಬೇಕೆಂದು ಗೊತ್ತುಮಾಡಿಕೊಂಡು ಆ ಏಳು ದಿನ
ಗಳಲ್ಲಿಯೂ ಬಹಳವಾಗಿ ಸಂತೋಷದಿಂದ ಹಬ್ಬವನ್ನು
25 ಆಚರಿಸಿದರು. ಯೆಹೂದ್ಯರ ಸರ್ವಸಮೂಹದವರೂ
ಯಾಜಕರೂ ಲೇವಿಯರೂ ಇಸ್ರಾಯೇಲ್ ಪ್ರಾಂತಗ
ಳಿಂದ ನೆರೆದುಬಂದವರೆಲ್ಲರೂ ಇಸ್ರಾಯೇಲ್ ಯೆ
ಹೂದ ಪ್ರಾಂತಗಳಲ್ಲಿದ್ದ ಪ್ರವಾಸಿಗಳೂ ಈ ಉತ್ಸವ
26 ದಲ್ಲಿ ಪಾಲುಗಾರರಾಗಿದ್ದರು. ದಾವೀದನ ಮಗ
ನೂ ಇಸ್ರಾಯೇಲ್ಯರ ಅರಸನೂ ಆದ ಸೊಲೊಮೋ
ನನ ಕಾಲದಿಂದ ಯೆರೂಸಲೇಮಿನಲ್ಲಿ ಅಂಥ ಉ
ವವು ನಡೆದಿರಲಿಲ್ಲವಾದದರಿಂದ ಯೆರೂಸಲೇಮಿನ
ಬಹುಸಂತೋಷವುಂಟಾಯಿತು. ಆ ಮೇಲೆ ಯಾ
ಕರಾಗಿದ್ದ ಲೇವಿಯರು ಎದ್ದು ನಿಂತು ಜನರನ್ನು ಆ
ರ್ವದಿಸಿದರು. ಅವರ ಸ್ವರವು [ದೇವರಿಗೆ] ಕೇಳಿಸಿತು
ಅವರ ಪ್ರಾರ್ಥನೆಯು ಪರಲೋಕದಲ್ಲಿರುವ ಆತ
ಪರಿಶುದ್ಧನಿವಾಸಕ್ಕೆ ಮುಟ್ಟಿತು.

ಹಿಜ್ಕೀಯನು ಯಾಜಕರ ಮತ್ತು ಲೇವಿಯರ ವಿಷಯ
ಮಾಡಿದ ವ್ಯವಸ್ಥೆ.

ಇದಾದನಂತರ ನೆರೆದುಬಂದ ಇಸ್ರಾಯೇಲ್ಯರೆಲ್ಲ
ರೂ ಯೆಹೂದದೇಶದ ಪಟ್ಟಣಗಳಿಗೆ ಹೋಗಿ ಕಲ್ಲು
ಕಂಬಗಳನ್ನು ಒಡೆದು ಅಶೇರವಿಗ್ರಹಸ್ತಂಭಗಳನ
ಕಡಿದುಹಾಕಿ ಪೂಜಾಸ್ಥಳಗಳನ್ನೂ ಯಜ್ಞವೇದಿಗಳನ
ಹಾಳುಮಾಡಿಬಿಟ್ಟರು. ಯೆಹೂದ ಬೆನ್ಯಾಮೀ
ಪ್ರಾಂತಗಳಲ್ಲಲ್ಲದೆ ಎಫ್ರಾಯಿಮ್ ಮನಸ್ಸೆ ಪ್ರಾಂತ
ಳಲ್ಲಿಯೂ ಯಾವದೊಂದನ್ನೂ ಉಳಿಸಲಿಲ್ಲ.
ಮೇಲೆ ಇಸ್ರಾಯೇಲ್ಯರೆಲ್ಲರೂ ತಮ್ಮ ತಮ್ಮ ಸ್ವಾಸ್
ವಿರುವ ಪಟ್ಟಣಗಳಿಗೆ ಹೋದರು.
ಹಿಜ್ಕೀಯನು ಯಾಜಕರ ಮತ್ತು ಲೇವಿಯ
ಆಯಾ ವರ್ಗಗಳವರನ್ನು ಅವರವರಿಗೆ ನೇಮಕವಾ
ಸೇವೆಗೆ ಅಂದರೆ ಸರ್ವಾಂಗಹೋಮ ಸಮಾಧಾ
ಯಜ್ಞ ಇವುಗಳನ್ನು ಸಮರ್ಪಿಸುವದಕ್ಕೂ ಯೆಹೋ
ವನ ಪಾಳೆಯದ ದ್ವಾರಗಳಲ್ಲಿ ಸೇರಿ ಯೆಹೋವನನ
ಆರಾಧಿಸುತ್ತಾ ಕೀರ್ತಿಸುತ್ತಾ ಕೃತಜ್ಞತಾಸ್ತುತಿಮ
ಡುತ್ತಾ ಇರುವದಕ್ಕೂ ನೇಮಿಸಿದನು. ಇದಲ್ಲ
ಅವನು ಯೆಹೋವನ ಧರ್ಮಶಾಸ್ತ್ರವಿಧಿಗನುಸಾ
ವಾಗಿ ಪ್ರಾತಃಕಾಲ ಸಾಯಂಕಾಲ ಸಬ್ಬತ್‌ದಿ
ಅಮಾವಾಸ್ಯೆ ಜಾತ್ರೆ ಇವುಗಳಲ್ಲಿ ಸಮರ್ಪಣೆಯಾ
ತಕ್ಕ ಸರ್ವಾಂಗಹೋಮಗಳಿಗೋಸ್ಕರ ಆಗಬೇಕಾ
ದ್ದೆಲ್ಲಾ ತನ್ನ ಆಸ್ತಿಯಿಂದ ಸಲ್ಲಿಸಬೇಕೆಂತಲೂ ಯಾ
ಕರು ಮತ್ತು ಲೇವಿಯರು ಯೆಹೋವಧರ್ಮದ
ಆಸಕ್ತರಾಗಿರುವದಕ್ಕಾಗಿ ಅವರಿಗೆ ಸಲ್ಲತಕ್ಕ ಜೀ
ನಾಂಶವನ್ನು ಯೆರೂಸಲೇಮಿನಲ್ಲಿ ವಾಸಿಸುವ ಜನ
ಕೊಡಬೇಕೆಂತಲೂ ಗೊತ್ತುಮಾಡಿದನು. ಈ ರಾಜಾ
ಯು ಪ್ರಕಟವಾದ ಕೂಡಲೆ ಇಸ್ರಾಯೇಲ್ಯರು ಧಾ
ದ್ರಾಕ್ಷಾರಸ ಎಣ್ಣೆ ಜೇನು ಮುಂತಾದ ಎಲ
ಹುಟ್ಟುವಳಿಯಲ್ಲಿಯೂ ಪ್ರಥಮಫಲವನ್ನು ರಾಶಿರಾ
ಯಾಗಿ ತಂದುಕೊಟ್ಟರು; ಮತ್ತು ತಮ್ಮ ಎಲ
ಆದಾಯದ ದಶಮಾಂಶವನ್ನೂ ಉದಾರವಾಗಿ ಸಲ್ಲಿ
ದರು. ಯೆಹೂದದ ಪಟ್ಟಣಗಳಲ್ಲಿ ವಾಸಿಸುತ್ತಿರು
ಇಸ್ರಾಯೇಲ್ಯರೂ ಯೆಹೂದ್ಯರೂ ಕುರಿದನಗಳ
ದಶಮಾಂಶವನ್ನು ಕೊಟ್ಟದ್ದಲ್ಲದೆ ದೇವರಾದ ಯ
ಹೋವನಿಗೆ ಸಮರ್ಪಣೆಯಾಗತಕ್ಕ ಪರಿಶುದ್ಧದ್ರ
ಗಳಲ್ಲಿಯೂ ದಶಮಾಂಶವನ್ನು ತಂದು ರಾಶಿಮಾ
ದರು. ರಾಶಿಮಾಡುವದು ಮೂರನೆಯ ತಿಂಗಳ
ಪ್ರಾರಂಭವಾಯಿತು, ಏಳನೆಯ ತಿಂಗಳಲ್ಲಿ ತೀರಿತ
ಹಿಜ್ಕೀಯನೂ ಪ್ರಭುಗಳೂ ಬಂದು ಆ ರಾಶಿಗಳನ
ನೋಡಿದಾಗ ಯೆಹೋವನನ್ನು ಕೊಂಡಾಡಿ ಆತ

9 ಪ್ರಜೆಗಳಾದ ಇಸ್ರಾಯೇಲ್ಯರನ್ನು ಹರಸಿದರು. ಹಿಜ್ಕೀ
ಯನು ಯಾಜಕರ ಮತ್ತು ಲೇವಿಯರ ಹತ್ತಿರ ಆ ರಾಶಿ
10 ಗಳ ವಿಷಯದಲ್ಲಿ ವಿಚಾರಿಸಲು ಚಾದೋಕ್ ಸಂತಾ
ನದ ಮಹಾಯಾಜಕನಾದ ಅಜರ್ಯನು ಅವನಿಗೆ—
ಜನರು ದೇವರಾದ ಯೆಹೋವನಿಗೋಸ್ಕರ ಪ್ರತ್ಯೇಕಿ
ಸತಕ್ಕದ್ದನ್ನು ಆತನ ಆಲಯಕ್ಕೆ ತಂದಂದಿನಿಂದ
ಯೆಹೋವನು ತನ್ನ ಪ್ರಜೆಗೆ ಸಮೃದ್ಧಿಯನ್ನನು
ಗ್ರಹಿಸಿದ್ದಾನೆ. ನಾವು ಉಂಡು ತೃಪ್ತರಾಗಿ ಇನ್ನೂ
ಇಷ್ಟು ದೊಡ್ಡ ರಾಶಿಯನ್ನು ಉಳಿಸಿಕೊಂಡಿರುತ್ತೇವೆ
ಅಂದನು.
11 ಆಗ ಹಿಜ್ಕೀಯನು ಯೆಹೋವನ ಆಲಯದಲ್ಲಿ
ಕೊಠಡಿಗಳನ್ನು ಸಿದ್ಧಮಾಡಲಾಜ್ಞಾಪಿಸಿದನು. ಅವು
12 ಸಿದ್ಧವಾದ ಮೇಲೆ ಜನರು ಕಾಣಿಕೆಗಳನ್ನೂ ತಮ್ಮ
ಆದಾಯದ ದಶಮಾಂಶವನ್ನೂ ದೇವರಿಗೋಸ್ಕರ
ಪ್ರತ್ಯೇಕಿಸಿದ ಮುಡುಪನ್ನೂ ನಿರ್ವಂಚನೆಯಿಂದ
ತಂದು ಅವುಗಳಲ್ಲಿ ಹಾಕುತ್ತಿದ್ದರು. ಈ ಎಲ್ಲಾ
ಉಗ್ರಾಣಗಳ ಮೇಲ್ವಿಚಾರಣೆಯಲ್ಲಿ ಲೇವಿಯನಾದ
ಕೋನನ್ಯನು ಮುಖ್ಯಸ್ಥನು; ಅವನ ತಮ್ಮನಾದ
13 ಶಿಮ್ಮಿಯು ದ್ವಿತೀಯ ಸ್ಥಾನದವನು. ಅರಸನಾದ
ಹಿಜ್ಕೀಯನ ಮತ್ತು ಯೆಹೋವನ ಆಲಯದ ಅಧಿ
ಪತಿಯಾದ ಅಜರ್ಯನ ನಿಯಮದಿಂದ ಯೆಹೀ
ಯೇಲ್, ಅಜಜ್ಯ, ನಹತ್, ಅಸಾಹೇಲ್, ಯೆರೀ
ಮೋತ್, ಯೋಜಾಬಾದ್, ಎಲೀಯೇಲ್, ಇಸ್ಮಕ್ಯ,
ಮಹತ್, ಬೆನಾಯ ಇವರು ಕೋನನ್ಯನ ಮತ್ತು
ಅವನ ತಮ್ಮನಾದ ಶಿಮ್ಮಿಯ ಕೈಕೆಳಗಿನ ಪಾರುಪತ್ಯ
14 ಗಾರರು. ಮೂಡಣದಿಕ್ಕಿನ ದ್ವಾರಪಾಲಕನಾಗಿದ್ದ
ಇಮ್ನನ ಮಗನಾದ ಕೋರೆ ಎಂಬ ಲೇವಿಯನು
ಜನರು ಸ್ವೇಚ್ಛೆಯಿಂದ ದೇವರಿಗೆ ಕಾಣಿಕೆಯಾಗಿ
ಸಮರ್ಪಿಸುತ್ತಿದ್ದ ವಸ್ತುಗಳ ಮೇಲ್ವಿಚಾರಕನೂ ಯೆ
ಹೋವನಿಗೋಸ್ಕರ ಪ್ರತ್ಯೇಕಿಸಲ್ಪಟ್ಟ ದ್ರವ್ಯ, ಮಹಾ
ಪರಿಶುದ್ಧ ವಸ್ತು ಇವುಗಳನ್ನು ಹಂಚಿಕೊಡುವವನೂ
15 ಆಗಿದ್ದನು. ಇವನ ಕೈಕೆಳಗೆ ಏದೆನ್, ಮಿನ್ಯಾಮಿನ್,
ಯೇಷೂವ, ಶೆಮಾಯ, ಅಮರ್ಯ, ಶೆಕನ್ಯ ಎಂಬವ
ರಿದ್ದರು. ಇವರು ಯಾಜಕರ ಪಟ್ಟಣಗಳಲ್ಲಿದ್ದು
ತಮ್ಮ ಬಂಧುಗಳಿಗೆ ದೊಡ್ಡವರು ಚಿಕ್ಕವರು ಎಂಬ
ವ್ಯತ್ಯಾಸಮಾಡದೆ ವರ್ಗಗಳ ಪ್ರಕಾರ ಪಾಲುಕೊಡು
16 ತ್ತಿದ್ದರು. (ಆಯಾ ಉದ್ಯೋಗವರ್ಗಗಳಿಗನುಸಾರ
ವಾಗಿ ಅನುದಿನದ ಸೇವೆಗೋಸ್ಕರ ಯೆಹೋವನ ಆಲ
ಯಕ್ಕೆ ಬರತಕ್ಕ ಗಂಡಸರಲ್ಲಿ ಮೂರು ವರುಷ ಮೊದ
ಲುಗೊಂಡು ಹೆಚ್ಚು ವಯಸ್ಸುಳ್ಳವರ ಪಟ್ಟಿಯಲ್ಲಿ
17 ಬರೆಯಲ್ಪಟ್ಟವರಿಗೆ ಮಾತ್ರ ಕೊಡುತ್ತಿರಲಿಲ್ಲ. ಆ
ಪಟ್ಟಿಯಲ್ಲಿ ಗೋತ್ರಗಳಿಗನುಸಾರವಾಗಿಯೂ ಆಯಾ
ಉದ್ಯೋಗವರ್ಗಗಳಿಗನುಸಾರವಾಗಿಯೂ ಇಪ್ಪತ್ತು
ವರುಷ ಮೊದಲುಗೊಂಡು ಹೆಚ್ಚು ವಯಸ್ಸುಳ್ಳ ಯಾಜ
18 ಕರು, ಲೇವಿಯರು, ಅವರವರ ಹೆಂಡತಿಯರು, ಗಂಡು
ಹೆಣ್ಣು ಮಕ್ಕಳು ಅಂತು ತಮ್ಮ ಉದ್ಯೋಗದ ನಿಮಿತ್ತ
ತಮ್ಮನ್ನು ದೇವರಿಗೆ ಪ್ರತಿಷ್ಠಿಸಿಕೊಂಡ ಸಮೂಹದ
ವರೂ ಅವರಿಗೆ ಸೇರಿದವರೆಲ್ಲರೂ ಲಿಖಿತರಾಗಿದ್ದರು.)
19 ಇದಲ್ಲದೆ ಆರೋನನ ಸಂತಾನದವರಾದ ಯಾಜಕರ
ಆಯಾ ಪಟ್ಟಣಗಳಿಗೆ ಸೇರಿದ ಗೋಮಾಳಗಳಲ್ಲಿದ್ದ
ವರಿಗೆ ಪಾಲುಕೊಡುತ್ತಿದ್ದರು. ಇವರು ಯಾಜಕ
ಸಂತಾನದ ಎಲ್ಲಾ ಗಂಡಸರಿಗೂ ಪಟ್ಟಿಯಲ್ಲಿ ಲಿಖಿತ
ರಾದ ಎಲ್ಲಾ ಲೇವಿಯರಿಗೂ ಸಿಕ್ಕತಕ್ಕ ಭಾಗಗಳನ್ನು
ಹಂಚಿಕೊಡುವದಕ್ಕೆ ಹೆಸರು ಹೆಸರಾಗಿ ನೇಮಿಸಲ್ಪಟ್ಟ
ಪುರುಷರಿದ್ದರು. ಹಿಜ್ಕೀಯನು ಯೆಹೂದದಲ್ಲೆಲ್ಲಾ 20
ಇದೇ ವ್ಯವಸ್ಥೆಯನ್ನು ಮಾಡಿದನು. ಅವನು ತನ್ನ
ದೇವರಾದ ಯೆಹೋವನಿಗೆ ಒಳ್ಳೆಯವನೂ ನೀತಿವಂತ
ನೂ ನಂಬಿಗಸ್ತನೂ ಆಗಿ ನಡೆದನು. ಅವನು ತನ್ನ 21
ದೇವರ ಒಲುಮೆಯನ್ನು ಪಡಕೊಳ್ಳುವದಕ್ಕೋಸ್ಕರ
ದೇವಾಲಯದ ಸೇವಾಸಂಬಂಧದಲ್ಲಿಯೂ ಧರ್ಮ
ಶಾಸ್ತ್ರವಿಧಿಗಳ ಸಂಬಂಧದಲ್ಲಿಯೂ ತಾನು ಪ್ರಾರಂಭಿ
ಸಿದ ಎಲ್ಲಾ ಕಾರ್ಯಗಳನ್ನು ಯಥಾರ್ಥಚಿತ್ತದಿಂದ
ಮಾಡಿ ಕೊನೆಗಾಣಿಸಿದನು.

### ಹಿಜ್ಕೀಯನೂ ಅರಸನಾದ ಸನ್ಹೇರೀಬನೂ.

ಈ ಭಕ್ತಿಕಾರ್ಯಗಳಾದನಂತರ ಅಶ್ಶೂರದ ಅರಸ 32
ನಾದ ಸನ್ಹೇರೀಬನು ಯುದ್ಧಕ್ಕೆ ಹೊರಟು ಯೆಹೂ
ದದಲ್ಲಿ ನುಗ್ಗಿ ಕೋಟೆಕೊತ್ತಲುಗಳುಳ್ಳ ಪಟ್ಟಣಗಳ
ನ್ನು ಸ್ವಾಧೀನಮಾಡಿಕೊಳ್ಳಬೇಕೆಂದು ಅವುಗಳಿಗೆ
ಮುತ್ತಿಗೆಹಾಕಿದನು. ದೇಶದೊಳಗೆ ನುಗ್ಗಿದ ಸನ್ಹೇ 2
ರೀಬನು ಯೆರೂಸಲೇಮಿನ ಮೇಲೆಯೂ ಯುದ್ಧ
ಕ್ಕಾಗಿ ಬರಬೇಕೆಂದಿರುವದು ಹಿಜ್ಕೀಯನಿಗೆ ಗೊತ್ತಾ
ಗಲು ಅವನು ಪಟ್ಟಣದ ಹೊರಗಿರುವ ಎಲ್ಲಾ ಬಾವಿ 3
ಗಳನ್ನು ಮುಚ್ಚಿಸಬೇಕೆಂದು ಮನಸ್ಸುಮಾಡಿ ತನ್ನ
ಸರದಾರರ ಮತ್ತು ಶೂರರ ಮುಂದೆ ಆ ಪ್ರಸ್ತಾಪವ
ನ್ನಿಟ್ಟು ಅವರ ಸಹಾಯವನ್ನು ಪಡಕೊಂಡನು. ಆಗ 4
ಅನೇಕರು ಸೇರಿ—ಇಲ್ಲಿಗೆ ಬರುವ ಅಶ್ಶೂರದ ರಾಜ
ರಿಗೆ ಬೇಕಾದಷ್ಟು ನೀರು ಯಾಕೆ ಸಿಕ್ಕಬೇಕು ಎಂದು
ಕೊಂಡು ಎಲ್ಲಾ ಬಾವಿಗಳನ್ನೂ ದೇಶಮಧ್ಯದಲ್ಲಿ ಹರಿ
ಯುವ ಹಳ್ಳವನ್ನೂ ಮುಚ್ಚಿಬಿಟ್ಟರು. ಇದಲ್ಲದೆ 5
ಅರಸನು ಧೈರ್ಯಗೊಂಡು ಅಲ್ಲಲ್ಲಿ ಬಿದ್ದುಹೋದ
ಪೌಳಿಗೋಡೆಯನ್ನು ಜೀರ್ಣೋದ್ಧಾರಮಾಡಿಸಿ ಅದರ
ಮೇಲೆ ಬುರುಜುಗಳನ್ನೂ ಹೊರಗೆ ಇನ್ನೊಂದು
ಗೋಡೆಯನ್ನೂ ಕಟ್ಟಿಸಿ ದಾವೀದನಗರದ ಮಿಲ್ಲೋ
ಕೋಟೆಯನ್ನು ಭದ್ರಪಡಿಸಿ ಅನೇಕಾಯುಧಗಳನ್ನೂ
ಗುರಾಣಿಗಳನ್ನೂ ಮಾಡಿಸಿದನು. ಅನಂತರ ಅವನು 6
ಜನರ ಮೇಲೆ ಸೇನಾಪತಿಗಳನ್ನು ನೇಮಿಸಿ ಅವರನ್ನು
ಊರುಬಾಗಲಿನ ಬೈಲಿನಲ್ಲಿ ಕೂಡಿಸಿಕೊಂಡು ಅವ
ರಿಗೆ—ಶೂರರಾಗಿರಿ, ಧೈರ್ಯದಿಂದಿರಿ; ಅಶ್ಶೂರದ 7
ಅರಸನಿಗೂ ಅವನೊಂದಿಗಿರುವ ಆ ದೊಡ್ಡ ಗುಂಪಿಗೂ
ಅಂಜಬೇಡಿರಿ, ಕಳವಳಪಡಬೇಡಿರಿ. ಅವನಿಗಿರುವ
ಸಹಾಯಕ್ಕಿಂತ ನಮಗಿರುವ ಸಹಾಯವು ದೊಡ್ಡದು.
ಅವನಿಗಿರುವ ಸಹಾಯವು ಮಾಂಸದ ತೋಳು; 8
ನಮಗಾದರೋ ನಮ್ಮ ದೇವರಾದ ಯೆಹೋವನೇ.
ಆತನು ನಮಗೆ ನೆರವಾಗಿ ಯುದ್ಧಗಳಲ್ಲಿ ನಮಗೋ
ಸ್ಕರ ಕಾದಾಡುವನು ಎಂದು ಹೇಳಿ ಧೈರ್ಯಪಡಿಸಿ
ದನು. ಜನರು ಯೆಹೂದದ ಅರಸನಾದ ಹಿಜ್ಕೀಯನ
ಮಾತುಗಳನ್ನು ಕೇಳಿ ಭರವಸವುಳ್ಳವರಾದರು.
ಇದಾದ ಮೇಲೆ ಸರ್ವಸೇನೆಯೊಡನೆ ಲಾಕೀಷಿನ 9

ಎದುರಿನಲ್ಲಿ ಪಾಳೆಯಮಾಡಿಕೊಂಡಿದ್ದ ಅಶ್ಶೂರದ
ಅರಸನಾದ ಸನ್ಹೇರೀಬನು ತನ್ನ ಸೇವಕರನ್ನು ಯೆರೂ
ಸಲೇಮಿಗೆ ಕಳುಹಿಸಿ ಅವರಿಂದ ಯೆಹೂದದ ಅರಸ
ನಾದ ಹಿಜ್ಕೀಯನಿಗೂ ಯೆರೂಸಲೇಮಿನಲ್ಲಿದ್ದ ಎಲ್ಲಾ
10 ಯೆಹೂದ್ಯರಿಗೂ—ಅಶ್ಶೂರದ ಅರಸನಾದ ಸನ್ಹೇ
ರೀಬನ ಮಾತನ್ನು ಕೇಳಿರಿ. ನೀವು ಯಾವದರ
ಮೇಲೆ ಭರವಸವಿಟ್ಟು ಮುತ್ತಲ್ಪಡುವದಕ್ಕಿರುವ
11 ಯೆರೂಸಲೇಮಿನಲ್ಲಿ ನಿಂತಿದ್ದೀರಿ? ಹಿಜ್ಕೀಯನು—
ನಮ್ಮ ದೇವರಾದ ಯೆಹೋವನು ಅಶ್ಶೂರದ ಅರ
ಸನ ಕೈಯಿಂದ ನಮ್ಮನ್ನು ರಕ್ಷಿಸುವನು ಎಂಬ
ನಂಬಿಕೆಯನ್ನು ನಿಮ್ಮಲ್ಲಿ ಹುಟ್ಟಿಸುವದಕ್ಕೆ ಪ್ರಯತ್ನಿ
ಸುತ್ತಿರುವದು ನಿಮ್ಮನ್ನು ಹಸಿವೆ ನೀರಡಿಕೆಗಳಿಂದ
12 ಸಾಯಿಸುವದಕ್ಕೇ ಅಲ್ಲವೋ? ಆ ಹಿಜ್ಕೀಯನು
ಒಂದೇ ಯಜ್ಞವೇದಿಯ ಮುಂದೆ ಆರಾಧನೆಮಾಡಿ
ಅದರ ಮೇಲೆಯೇ ಧೂಪಹಾಕಬೇಕೆಂಬದಾಗಿ ಯೆ
ಹೂದ್ಯರಿಗೂ ಯೆರೂಸಲೇಮಿನವರಿಗೂ ಅಜ್ಞಾಪಿಸಿ
ಆತನ ಪೂಜಾಸ್ಥಳಗಳನ್ನೂ ಯಜ್ಞವೇದಿಗಳನ್ನೂ
13 ಹಾಳುಮಾಡಿದನಲ್ಲಾ! ನಾನೂ ನನ್ನ ತಂದೆತಾತಂದಿ
ರೂ ಎಲ್ಲಾ ದೇಶಗಳ ಜನಾಂಗಗಳಿಗೆ ಮಾಡಿದ್ದನ್ನು
ಕೇಳಲಿಲ್ಲವೋ? ಆ ಜನಾಂಗಗಳ ದೇವತೆಗಳಿಗೆ ಅವರ
ದೇಶವನ್ನು ನನ್ನ ಕೈಗೆ ಸಿಕ್ಕದಂತೆ ತಪ್ಪಿಸುವದಕ್ಕೆ ಶಕ್ತಿ
14 ಯಿತ್ತೋ? ನನ್ನ ತಂದೆತಾತಂದಿರು ನಾಶಮಾಡಿಬಿಟ್ಟ
ಆ ಜನಾಂಗಗಳ ದೇವರುಗಳಲ್ಲಿ ಯಾವನು ತನ್ನ
ಪ್ರಜೆಯನ್ನು ನನ್ನ ಕೈಯಿಂದ ಬಿಡಿಸುವದಕ್ಕೆ ಸಮ
ರ್ಥನಾಗಿದ್ದನು? ಹಾಗಾದರೆ ನಿಮ್ಮ ದೇವರು ನಿಮ್ಮ
ನ್ನು ನನ್ನ ಕೈಗೆ ಸಿಕ್ಕದಂತೆ ತಪ್ಪಿಸಿ ಕಾಪಾಡುವದಕ್ಕೆ
15 ಶಕ್ತನಾಗಿರುವನೋ? ನೀವು ಹಿಜ್ಕೀಯನಿಂದ ಮರು
ಳಾಗಿ ಈ ಪ್ರಕಾರ ಮೋಸಹೋಗಬೇಡಿರಿ, ಅವನನ್ನು
ನಂಬಲೂ ಬೇಡಿರಿ. ಯಾವ ರಾಜ್ಯ ಜನಾಂಗಗಳ ದೇವತ
ಯಾದರೂ ತನ್ನ ಪ್ರಜೆಯನ್ನು ನನ್ನ ಮತ್ತು ನನ್ನ
ಪೂರ್ವಿಕರ ಕೈಯಿಂದ ಬಿಡಿಸಲಾರದೆ ಹೋದ ಮೇಲೆ
ನಿಮ್ಮ ದೇವರಂಥವನು ನಿಮ್ಮನ್ನು ನನ್ನ ಕೈಗೆ ಸಿಕ್ಕ
16 ದಂತೆ ತಪ್ಪಿಸಬಲ್ಲನೇ ಎಂದು ಹೇಳಿಸಿದನು. ಸನ್ಹೇ
ರೀಬನು ದೇವರಾದ ಯೆಹೋವನಿಗೂ ಆತನ ಸೇವಕ
ನಾದ ಹಿಜ್ಕೀಯನಿಗೂ ವಿರೋಧವಾದ ಈ ಮೊದಲಾದ
ಮಾತುಗಳನ್ನು ತನ್ನ ಸೇವಕರ ಮುಖಾಂತರ ಹೇಳಿ
17 ಕಳುಹಿಸಿದ್ದಲ್ಲದೆ ಇಸ್ರಾಯೇಲ್‌ದೇವರಾದ ಯೆಹೋ
ವನನ್ನು ನಿಂದಿಸಿ ದೂಷಿಸುವದಕ್ಕಾಗಿ—ಅನ್ಯದೇಶಗಳ
ವರ ದೇವರುಗಳು ತಮ್ಮ ಜನರನ್ನು ನನ್ನ ಕೈಯಿಂದ
ಬಿಡಿಸಲಾರದೆ ಹೋದಂತೆ ಹಿಜ್ಕೀಯನ ದೇವರೂ ತನ್ನ
ಪ್ರಜೆಯನ್ನು ನನ್ನ ಕೈಯಿಂದ ಬಿಡಿಸಲಾರನು ಎಂಬ
18 ದಾಗಿ ಪತ್ರದಲ್ಲಿ ಬರೆದುಕಳುಹಿಸಿದನು. [ಯೆರೂ
ಸಲೇಮಿಗೆ ಬಂದ ಆ ಅಶ್ಶೂರ್ಯರು] ಗೋಡೆಯ
ಮೇಲಿದ್ದ ಜನರನ್ನು ಬೆದರಿಸಿ ಅಂಜಿಸಿ ಪಟ್ಟಣವನ್ನು
19 ಸ್ವಾಧೀನಮಾಡಿಕೊಳ್ಳುವದಕ್ಕಾಗಿ ಯೆರೂಸಲೇಮಿನ
ದೇವರು ಮನುಷ್ಯರ ಕೈಕೆಲಸವಾಗಿರುವ ಅನ್ಯದೇಶ
ಗಳವರ ದೇವತೆಗಳಿಗೆ ಸಮಾನನಾಗಿರುವನೋ ಎಂಬಂತೆ
ಆತನ ವಿಷಯದಲ್ಲಿ ಗಟ್ಟಿಯಾಗಿ ಕೂಗುತ್ತಾ ಅವರೊ
ಡನೆ ಯೂದಾಯ ಭಾಷೆಯಲ್ಲಿ ಮಾತಾಡಿದರು.
20 ಈ ಕಾರಣದಿಂದ ಅರಸನಾದ ಹಿಜ್ಕೀಯನೂ

ಆಮೋಚನ ಮಗನಾದ ಯೆಶಾಯನೆಂಬ ಪ್ರ
ದಿಯೂ ಪರಲೋಕಕ್ಕೆ ಮೊರೆಯಿಟ್ಟು ಪ್ರಾರ್ಥಿಸ
ಯೆಹೋವನು ದೂತನನ್ನು ಕಳುಹಿಸಿ ಅಶ್ಶೂ
ಅರಸನ ದಂಡಿನಲ್ಲಿದ್ದ ಎಲ್ಲಾ ಶೂರರನ್ನೂ ನಾ
ರನ್ನೂ ಅಧಿಪತಿಗಳನ್ನೂ ಸಂಹರಿಸಿದನು; ಅರ
ನಾಚಿಕೆಯಿಂದ ತನ್ನ ದೇಶಕ್ಕೆ ಹಿಂದಿರುಗಬೇ
ಯಿತು. ಅಲ್ಲಿ ಅವನು ತನ್ನ ದೇವರ ಗು
ಹೋಗಿದ್ದಾಗ ಅವನ ಸ್ವಂತ ಮಕ್ಕಳೇ ಅವನ
ಕತ್ತಿಯಿಂದ ಕೊಂದರು. ಹೀಗೆ ಯೆಹೋ
ಹಿಜ್ಕೀಯನನ್ನೂ ಯೆರೂಸಲೇಮಿನವರನ್ನೂ ಅ
ರದ ಅರಸನಾದ ಸನ್ಹೇರೀಬನ ಕೈಗೂ ಸುತ್ತಣ ಎ
ಶತ್ರುಗಳ ಕೈಗೂ ಸಿಕ್ಕದಂತೆ ತಪ್ಪಿಸಿ ಕಾಪಾಡುತ್ತಿದ್ದ
ಅನೇಕರು ಯೆಹೋವನಿಗೋಸ್ಕರ ಕಾಣಿಕೆಗಳ
ಯೆಹೂದ್ಯರ ಅರಸನಾದ ಹಿಜ್ಕೀಯನಿಗೋಸ್ಕರ ಶ್ರೇ
ವಸ್ತುಗಳನ್ನೂ ತೆಗೆದುಕೊಂಡು ಬಂದರು. ಅಂದಿನ
ಎಲ್ಲಾ ಜನಾಂಗಗಳವರು ಹಿಜ್ಕೀಯನನ್ನು ಬಲುದೊ
ವನೆಂದು ಎಣಿಸುತ್ತಿದ್ದರು.

### ಹಿಜ್ಕೀಯನ ಚರಿತ್ರದ ಸಮಾಪ್ತಿ.

ಆ ಕಾಲದಲ್ಲಿ ಹಿಜ್ಕೀಯನು ಮರಣಕರರೋಗದ
ಬಿದ್ದನು. ಆಗ ಅವನು ದೇವರನ್ನು ಪ್ರಾರ್ಥಿಸ
ಆತನು ಸದುತ್ತರವನ್ನು ದಯಪಾಲಿಸಿ ಅವನಿಗೆ ಒ
ಗುರುತನ್ನು ಅನುಗ್ರಹಿಸಿದನು. ಆದರೆ ಹಿಜ್ಕೀಯ
ಈ ಉಪಕಾರಕ್ಕೆ ತಕ್ಕಂತೆ ನಡೆಯದೆ ಅಹಂಕಾರಿಯ
ದರಿಂದ ಯೆಹೂದದ ಮೇಲೆಯೂ ಯೆರೂಸಲೇ
ನವರ ಮೇಲೆಯೂ ದೇವಕೋಪವುಂಟಾಯಿ
ಹಿಜ್ಕೀಯನು ತನ್ನ ಗರ್ವವನ್ನು ಬಿಟ್ಟು ಯೆರ
ಲೇಮಿನವರೊಡನೆ ತನ್ನನ್ನು ತಗ್ಗಿಸಿಕೊಂಡದ್ದರಿ
ಅವನ ಜೀವಮಾನದಲ್ಲಿ ಯೆಹೋವನ ಕೋಪವು ಅ
ಮೇಲೆ ಬರಲಿಲ್ಲ.

ಹಿಜ್ಕೀಯನಿಗೆ ಅತ್ಯಧಿಕವಾದ ಧನಘನತೆಗ
ಒದಗಿದವು; ಅವನು ಬೆಳ್ಳಿಬಂಗಾರ, ರತ್ನ, ಪರಿಮ
ದ್ರವ್ಯ, ಗುರಾಣಿ ಮುಂತಾದ ಶ್ರೇಷ್ಠಾಯುಧ
ಗಳನ್ನಿಡುವದಕ್ಕೋಸ್ಕರ ಭಂಡಾರಗಳನ್ನೂ ಧ
ದ್ರಾಕ್ಷಾರಸ ಎಣ್ಣೆ ಇವುಗಳನ್ನು ಸಂಗ್ರಹಿಸು
ಕ್ಕೋಸ್ಕರ ಉಗ್ರಾಣಗಳನ್ನೂ ಅಯಾ ಜಾತಿಯ ಪ
ಗಳಿಗೋಸ್ಕರ ಕೊಟ್ಟಿಗೆಗಳನ್ನೂ ಆಡುಕುರಿಗಳಿಗ
ಸ್ಕರ ಹಟ್ಟಿಗಳನ್ನೂ ಸಿದ್ಧಪಡಿಸಿಕೊಂಡನು.
ಲ್ಲದೆ ಪಟ್ಟಣಗಳನ್ನು ಕಟ್ಟಿಸಿ ದನಕುರಿಗಳ ದೊ
ಹಿಂಡುಗಳನ್ನು ಸಂಪಾದಿಸಿಕೊಂಡನು. ದೇವರು
ನಿಗೆ ಕೊಟ್ಟ ಸಂಪತ್ತು ಅಪರಿಮಿತವಾದದ್ದು. ಮೆ
ಣ ಗೀಹೋನ್ ಎಂಬ ಬುಗ್ಗೆಗೆ ಕಟ್ಟೆಕಟ್ಟಿಸಿ ಅ
ನೀರು ನೆಟ್ಟಗೆ ದಾವೀದನಗರದ ಪಡುವಣ ತ
ಹರಿಯುವಂತೆ ಮಾಡಿದವನು ಹಿಜ್ಕೀಯನೇ. ಅವ
ತನ್ನ ಎಲ್ಲಾ ಕಾರ್ಯಗಳಲ್ಲಿಯೂ ಸಾರ್ಥಕ
ದನು. ಆದದರಿಂದ ಅವನ ದೇಶದಲ್ಲುಂಟಾದ ಅ
ತದ ವಿಷಯವನ್ನು ವಿಚಾರಿಸುವದಕ್ಕಾಗಿ ಬಾಬೆ
ಪ್ರಭುಗಳ ರಾಯಭಾರಿಗಳು ಅವನ ಬಳಿಗೆ ಬಂದ
ದೇವರು ಅವನನ್ನು ಪರೀಕ್ಷಿಸುವದಕ್ಕೂ ಅ

ಸರ್ವಾಂತರ್ಯವನ್ನು ತಿಳುಕೊಳ್ಳುವದಕ್ಕೂ ಅವನನ್ನು ಕೈಬಿಟ್ಟನು.

ಹಿಜ್ಕೀಯನ ಉಳಿದ ಚರಿತ್ರೆಯೂ ಅವನ ಭಕ್ತಿಕಾರ್ಯಗಳೂ ಆಮೋಚನ ಮಗನಾದ ಯೆಶಾಯನ ದರ್ಶನಗ್ರಂಥದಲ್ಲಿಯೂ ಯೆಹೂದ್ಯರ ಮತ್ತು ಇಸ್ರಾಯೇಲ್ಯರ ರಾಜಗ್ರಂಥದಲ್ಲಿಯೂ ಬರೆದಿರುತ್ತವೆ. ಹಿಜ್ಕೀಯನು ಪಿತೃಗಳ ಬಳಿಗೆ ಸೇರಲು ಅವನ ಶವವನ್ನು ದಾವೀದವಂಶದವರ 1)ಕುಟುಂಬಶ್ಮಶಾನಭೂಮಿಯ ದಿಬ್ಬದ ಮೇಲೆ ಸಮಾಧಿಮಾಡಿದರು. ಅವನ ಉತ್ತರಕ್ರಿಯೆ ನಡೆಯುವಾಗ ಎಲ್ಲಾ ಯೆಹೂದ್ಯರೂ ಯೆರೂಸಲೇಮಿನವರೂ ಅವನನ್ನು ಬಹಳವಾಗಿ ಸನ್ಮಾನಿಸಿದರು. ಅವನಿಗೆ ಬದಲಾಗಿ ಅವನ ಮಗನಾದ ಮನಸ್ಸೆಯು ಅರಸನಾದನು.

ಅರಸನಾದ ಮನಸ್ಸೆಯು.

3 ಮನಸ್ಸೆಯು ಅರಸನಾದಾಗ ಹನ್ನೆರಡು ವರುಷದವನಾಗಿದ್ದನು; ಅವನು ಯೆರೂಸಲೇಮಿನಲ್ಲಿ ಐವತ್ತೈದು ವರುಷ ಆಳಿದನು. ಯೆಹೋವನು ಇಸ್ರಾಯೇಲ್ಯರ ಎದುರಿನಿಂದ ಹೊರಡಿಸಿಬಿಟ್ಟ ಅನ್ಯಜನಾಂಗಗಳ ಅಸಹ್ಯಕಾರ್ಯಗಳನ್ನು ಅವನು ಅನುಸರಿಸಿ ಆತನ ಚಿತ್ತಕ್ಕೆ ವಿರುದ್ಧವಾಗಿ ನಡೆದನು. ತನ್ನ ತಂದೆಯಾದ ಹಿಜ್ಕೀಯನು ತೆಗೆದುಹಾಕಿದ ಪೂಜಾಸ್ಥಳಗಳನ್ನು ತಿರಿಗಿ ಸ್ಥಾಪಿಸಿ ಬಾಳ್‌ದೇವತೆಗಳಿಗೋಸ್ಕರ ಯಜ್ಞವೇದಿಗಳನ್ನು ಕಟ್ಟಿಸಿ ಅಶೇರವಿಗ್ರಹಸ್ತಂಭಗಳನ್ನು ನಿಲ್ಲಿಸಿ ನಕ್ಷತ್ರಮಂಡಲಕ್ಕೆ ಕೈಮುಗಿದು ಆರಾಧಿಸಿದನು. ಯೆಹೋವನು ಯೆರೂಸಲೇಮಿನಲ್ಲಿ ತನ್ನ ಹೆಸರನ್ನು ಸದಾಕಾಲ ಸ್ಥಾಪಿಸುವದಕ್ಕಾಗಿ ಆರಿಸಿಕೊಂಡ ಆಲಯದ ಎರಡು ಪ್ರಾಕಾರಗಳಲ್ಲಿಯೂ ಸರ್ವನಕ್ಷತ್ರಮಂಡಲಕ್ಕೋಸ್ಕರ ಯಜ್ಞವೇದಿಗಳನ್ನು ಕಟ್ಟಿಸಿದನು. ಇದಲ್ಲದೆ ಅವನು ತನ್ನ ಮಕ್ಕಳನ್ನು ಬೆನ್‌ಹಿನ್ನೋಮ್ ತಗ್ಗಿನಲ್ಲಿ ಆಹುತಿಕೊಟ್ಟನು; ಕಣಿಹೇಳಿಸುವದು, ಶಕುನನೋಡಿಸುವದು, ಯಂತ್ರಮಂತ್ರಗಳನ್ನು ಮಾಡಿಸುವದು, ಸತ್ತವರಲ್ಲಿ ವಿಚಾರಿಸುವವರ ಮತ್ತು ಬೇತಾಳಿಕರ ಬಳಿಕೆಮಾಡುವದು ಇವೇ ಮೊದಲಾದ ದುಷ್ಕೃತ್ಯಗಳಿಂದ ಯೆಹೋವನಿಗೆ ಕೋಪವನ್ನೆಬ್ಬಿಸಿದನು. ತಾನು ಮಾಡಿಸಿದ ವಿಗ್ರಹಸ್ತಂಭವನ್ನು ದೇವಾಲಯದಲ್ಲಿಡಿಸಿದನು; ಯೆಹೋವನು ಆ ಆಲಯದ ವಿಷಯದಲ್ಲಿ ದಾವೀದನಿಗೂ ಅವನ ಮಗನಾದ ಸೊಲೊಮೋನನಿಗೂ—ಇಸ್ರಾಯೇಲ್ಯರು ಮೋಶೆಯ ಮುಖಾಂತರ ತಮಗೆ ಕೊಡಲ್ಪಟ್ಟ ನನ್ನ ಎಲ್ಲಾ ಧರ್ಮಶಾಸ್ತ್ರವಿಧಿನ್ಯಾಯಗಳನ್ನು ಅನುಸರಿಸಿ ನಡೆಯುವದಾದರೆ ನನ್ನ ನಾಮಮಹತ್ತು ಈ ದೇವಾಲಯದಲ್ಲಿಯೂ ಇಸ್ರಾಯೇಲ್ಯರ ಎಲ್ಲಾ ಊರುಗಳೊಳಗೆ ನನಗೆ ಇಷ್ಟವಾಗಿರುವ ಯೆರೂಸಲೇಮಿನಲ್ಲಿಯೂ ಸದಾಕಾಲವಿರುವದು; ಇಸ್ರಾಯೇಲ್ಯರು ಇನ್ನು ಮುಂದೆ ದೇಶಭ್ರಷ್ಟರಾಗಿರದೆ ತಮ್ಮ ಪಿತೃಗಳಿಗೆ ನೇಮಿಸಲ್ಪಟ್ಟ ದೇಶದಲ್ಲಿಯೇ ವಾಸವಾಗಿರುವಂತೆ ಮಾಡು

ವೆನು ಎಂದು ಹೇಳಿದ್ದನು. ಆದರೆ ಯೆಹೂದ್ಯರೂ 9
ಯೆರೂಸಲೇಮಿನವರೂ ಮನಸ್ಸೆಯಿಂದ ಪ್ರೇರಿತರಾಗಿ
ಇಸ್ರಾಯೇಲ್ಯರ ಮುಂದೆಯೇ ಯೆಹೋವನಿಂದ ನಾಶ
ಹೊಂದಿದ ಅನ್ಯಜನಾಂಗಗಳಿಗಿಂತಲೂ ದುಷ್ಟರಾದರು.
ಯೆಹೋವನು ಮನಸ್ಸೆಯನ್ನೂ ಅವನ ಪ್ರಜೆಗಳ 10
ನ್ನೂ ಎಚ್ಚರಿಸಿದರೂ ಅವರು ಲಕ್ಷಿಸಲಿಲ್ಲ. ಆದದ 11
ರಿಂದ ಆತನು ಅಶ್ಶೂರದ ಅರಸನ ಸೈನ್ಯಾಧಿಪತಿಗಳನ್ನು
ಅವರ ಮೇಲೆ ಬರಮಾಡಿದನು. ಅವರು ಮನಸ್ಸೆ
ಯನ್ನು ಹಿಡಿದು ಅವನಿಗೆ ಕೊಂಡಿಗಳನ್ನು ಸಿಕ್ಕಿಸಿ
ಬೇಡಿಹಾಕಿ ಬಾಬೆಲಿಗೆ ಒಯ್ದರು. ಆದರೆ ಆ ಕಷ್ಟ 12
ದಲ್ಲಿ ಮನಸ್ಸೆಯು ತನ್ನ ದೇವರಾದ ಯೆಹೋವನ
ಪ್ರಸನ್ನತೆಯನ್ನು ಬೇಡಿಕೊಂಡನು. ಅವನು ತನ್ನ ಪಿತೃ
ಗಳ ದೇವರ ಮುಂದೆ ತನ್ನನ್ನು ಬಹಳವಾಗಿ ತಗ್ಗಿಸಿ
ಕೊಂಡು ಆತನನ್ನು ಪ್ರಾರ್ಥಿಸಲು ಆತನು ಲಾಲಿಸಿ 13
ಅವನಿಗೆ ಸದುತ್ತರವನ್ನು ದಯಪಾಲಿಸಿ ಅವನನ್ನು
ತಿರಿಗಿ ಯೆರೂಸಲೇಮಿಗೆ ಬರಮಾಡಿ ಅರಸುತನವನ್ನು
ಕೊಟ್ಟನು. ಆಗ ಯೆಹೋವನೇ ದೇವರೆಂಬದು ಮನ
ಸ್ಸೆಗೆ ಮಂದಟ್ಟಾಯಿತು.
ಇದಾದ ಮೇಲೆ ಅವನು ಗೀಹೋನ್‌ಬುಗ್ಗೆಯ 14
ಪಡುವಣ ಕಡೆಯಿಂದ ಮೀನುಬಾಗಲಿನ ಮಾರ್ಗದ
ವರೆಗಿರುವ ತಗ್ಗಿನಲ್ಲಿ ಓಫೆಲ್ ಗುಡ್ಡದ ಸುತ್ತಲೂ
ದಾವೀದನಗರದ ಹೊರಗಣ ಬಲು ಎತ್ತರವಾದ ಗೋಡೆ
ಯನ್ನು ಕಟ್ಟಿಸಿ ಯೆಹೂದದೇಶದ ಕೋಟೆಕೊತ್ತಲು
ಗಳುಳ್ಳ ಎಲ್ಲಾ ಪಟ್ಟಣಗಳಲ್ಲಿ ಸೇನಾಪತಿಗಳನ್ನಿರಿಸಿ
ದನು. ಅನ್ಯದೇವತಾಪ್ರತಿಮೆಗಳನ್ನೂ ತಾನು ಮಾಡಿ 15
ಸಿದ್ದ ಸ್ತಂಭವನ್ನೂ ಯೆಹೋವನ ಆಲಯದಿಂದ
ತೆಗಿಸಿ ಯೆಹೋವಮಂದಿರವಿರುವ ಗುಡ್ಡದಲ್ಲಿಯೂ
ಯೆರೂಸಲೇಮಿನಲ್ಲಿಯೂ ಕಟ್ಟಿಸಿದ್ದ ಎಲ್ಲಾ ಯಜ್ಞ
ವೇದಿಗಳನ್ನು ಕೆಡವಿ ಪಟ್ಟಣದ ಹೊರಗೆ ಹಾಕಿಸಿದನು.
ಯೆಹೋವನ ಯಜ್ಞವೇದಿಯನ್ನು ತಿರಿಗಿ ಕಟ್ಟಿಸಿ ಅದರ 16
ಮೇಲೆ ಸಮಾಧಾನಯಜ್ಞಗಳನ್ನೂ ಕೃತಜ್ಞತಾಯಜ್ಞ
ಗಳನ್ನೂ ಅರ್ಪಿಸಿ ಇಸ್ರಾಯೇಲ್‌ದೇವರಾದ ಯೆಹೋ
ವನನ್ನೇ ಸೇವಿಸಬೇಕೆಂದು ಯೆಹೂದ್ಯರಿಗೆ ಆಜ್ಞಾಪಿ
ಸಿದನು. ಅವರು ಈ ಪ್ರಕಾರ ದೇವರಾದ ಯೆಹೋವ 17
ನೊಬ್ಬನಿಗೇ ಯಜ್ಞವನ್ನು ಅರ್ಪಿಸುವವರಾದರೂ ಆ
ಯಜ್ಞಗಳನ್ನು ಇನ್ನೂ ಪೂಜಾಸ್ಥಳಗಳಲ್ಲಿಯೇ ಸಮ
ರ್ಪಿಸುತ್ತಿದ್ದರು.
ಮನಸ್ಸೆಯ ಉಳಿದ ಚರಿತ್ರೆಯೂ ಅವನು ತನ್ನ 18
ದೇವರಿಗೆ ಮಾಡಿದ ಪ್ರಾರ್ಥನೆಯೂ ದರ್ಶಿಗಳು
ಇಸ್ರಾಯೇಲ್‌ದೇವರಾದ ಯೆಹೋವನ ಹೆಸರಿನಲ್ಲಿ
ಅವನಿಗೆ ಹೇಳಿದ ಮಾತುಗಳೂ ಇಸ್ರಾಯೇಲ್‌ರಾಜರ
ವೃತ್ತಾಂತದಲ್ಲಿ ಬರೆದಿರುತ್ತವೆ. ಅವನ ದೇವಪ್ರಾರ್ಥನೆ 19
ಯೂ ಅವನಿಗೆ ದೊರಕಿದ ಸದುತ್ತರವೂ ಅವನು
ತನ್ನನ್ನು ತಗ್ಗಿಸಿಕೊಳ್ಳುವದಕ್ಕಿಂತ ಮುಂಚೆ ಮಾಡಿದ
ಅಪರಾಧದ್ರೋಹಗಳೂ ಅವನು ಅಲ್ಲಲ್ಲಿ ಪೂಜಾಸ್ಥಳ
ಗಳನ್ನು ಏರ್ಪಡಿಸಿ ಅಶೇರಸ್ತಂಭವಿಗ್ರಹ ಇವುಗಳನ್ನು
ನಿಲ್ಲಿಸಿದ್ದೂ ದರ್ಶಿಗಳ ಚರಿತ್ರೆಯಲ್ಲಿ ಬರೆದಿರುತ್ತವೆ.
ಮನಸ್ಸೆಯು ಪಿತೃಗಳ ಬಳಿಗೆ ಸೇರಲು ಅವನ 20

1) ಅಥವಾ: ಕುಟುಂಬಶ್ಮಶಾನಭೂಮಿಗೆ ಹೋಗುವ ಮಾರ್ಗದ ಬಳಿಯಲ್ಲಿ.

ಶವವನ್ನು ಅರಮನೆಯ 1)ನಿವೇಶನದಲ್ಲಿ ಸಮಾಧಿ
ಮಾಡಿದರು. ಅವನಿಗೆ ಬದಲಾಗಿ ಅವನ ಮಗನಾದ
ಆಮೋನನು ಅರಸನಾದನು.

ಅರಸನಾದ ಆಮೋನನು.

21 ಆಮೋನನು ಅರಸನಾದಾಗ ಇಪ್ಪತ್ತೆರಡು ವರುಷದ
ವನಾಗಿದ್ದನು; ಅವನು ಯೆರೂಸಲೇಮಿನಲ್ಲಿ ಎರಡು
22 ವರುಷ ಆಳಿದನು. ಅವನು ತನ್ನ ತಂದೆಯಾದ ಮನ
ಸ್ಸೆಯ ಹಾಗೆಯೇ ಯೆಹೋವನ ಚಿತ್ತಕ್ಕೆ ವಿರುದ್ಧ
ವಾಗಿ ನಡೆದನು. ತನ್ನ ತಂದೆಯಾದ ಮನಸ್ಸೆಯು
ಮಾಡಿಸಿದ್ದ ಎಲ್ಲಾ ವಿಗ್ರಹಗಳಿಗೆ ಯಜ್ಞವರ್ಪಿಸಿ ಅವು
23 ಗಳನ್ನು ಪೂಜಿಸಿದನು. ಆಮೋನನ ತಂದೆಯಾದ
ಮನಸ್ಸೆಯು ಯೆಹೋವನ ಮುಂದೆ ತನ್ನನ್ನು ತಗ್ಗಿಸಿ
ಕೊಂಡಿದ್ದನಷ್ಟೆ. ಆಮೋನನಾದರೋ ತನ್ನನ್ನು ತಗ್ಗಿಸಿ
24 ಕೊಳ್ಳದೆ ಮಹಾಪರಾಧಿಯಾದನು. ಅವನ ಸೇವ
ಕರು ಅವನಿಗೆ ವಿರೋಧವಾಗಿ ಒಳಸಂಚುಮಾಡಿ ಅವ
25 ನನ್ನು ಅರಮನೆಯಲ್ಲಿಯೇ ಕೊಂದರು. ಆದರೆ
ದೇಶದ ಜನರು ಅರಸನಾದ ಆಮೋನನಿಗೆ ವಿರೋಧ
ವಾಗಿ ಒಳಸಂಚುಮಾಡಿದವರನ್ನೆಲ್ಲಾ ಕೊಂದುಹಾಕಿ
ಆಮೋನನಿಗೆ ಬದಲಾಗಿ ಅವನ ಮಗನಾದ ಯೋಷೀ
ಯನನ್ನು ಅರಸನನ್ನಾಗಿ ಮಾಡಿದರು.

ಯೋಷೀಯನು ಅರಸನಾದದ್ದೂ ಅವನ ಮತಾಭಿಮಾನವೂ
ಧರ್ಮೋಪದೇಶಗ್ರಂಥವೂ.

34 ಯೋಷೀಯನು ಅರಸನಾದಾಗ ಎಂಟು ವರುಷ
ದವನಾಗಿದ್ದನು; ಅವನು ಯೆರೂಸಲೇಮಿನಲ್ಲಿ
2 ಮೂವತ್ತೊಂದು ವರುಷ ಆಳಿದನು. ಅವನು ಎಡಕ್ಕಾ
ಗಲಿ ಬಲಕ್ಕಾಗಲಿ ತಿರುಗಿಕೊಳ್ಳದೆ ತನ್ನ ಪೂರ್ವಿಕನಾದ
ದಾವೀದನ ಮಾರ್ಗದಲ್ಲೇ ಯೆಹೋವನ ಚಿತ್ತಾನು
ಸಾರವಾಗಿ ನಡೆದನು.
3 ಅವನು ತನ್ನ ಆಳಿಕೆಯ ಎಂಟನೆಯ ವರುಷದಲ್ಲಿ
ಇನ್ನೂ ಯೌವನಸ್ಥನಾಗಿರುವಾಗಲೇ ತನ್ನ ಪೂರ್ವಿಕ
ನಾದ ದಾವೀದನ ದೇವರನ್ನು ಹುಡುಕುವವನಾದನು;
ಹನ್ನೆರಡನೆಯ ವರುಷ ಯೆಹೂದದಲ್ಲಿಯೂ ಯೆರೂಸ
ಲೇಮಿನಲ್ಲಿಯೂ ಇದ್ದ ಪೂಜಾಸ್ಥಳಗಳನ್ನೂ ಅಶೇರ
ಸ್ತಂಭಗಳನ್ನೂ ಕೆತ್ತಿದ ಮತ್ತು ಎರಕದ ವಿಗ್ರಹ
ಗಳನ್ನೂ ತೆಗೆದುಹಾಕಿ ದೇಶವನ್ನು ಶುದ್ಧಿಪಡಿಸಿದನು.
4 ಇದಲ್ಲದೆ ಅವನು ಬಾಳ್‍ದೇವತೆಗಳ ಯಜ್ಞವೇದಿಗ
ಳನ್ನು ತನ್ನೆದುರಿನಲ್ಲಿಯೇ ಹಾಳುಮಾಡಿಸಿ ಅವುಗಳ
ಮೇಲಿದ್ದ ಸೂರ್ಯಸ್ತಂಭಗಳನ್ನು ಕೆಡಿಸಿ ಅಶೇರಸ್ತಂಭ
ಕೆತ್ತಿದ ಮತ್ತು ಎರಕದ ವಿಗ್ರಹ ಇವುಗಳನ್ನು ಒಡಿಸಿ
ಪುಡಿಪುಡಿಮಾಡಿಸಿ ಅವುಗಳಿಗೆ ಯಜ್ಞವನ್ನರ್ಪಿಸಿದವರ
ಸಮಾಧಿಗಳ ಮೇಲೆ ಆ ದೂಳನ್ನು ಚೆಲ್ಲಿಸಿದನು.
5 ಅವುಗಳ ಪೂಜಾರಿಗಳ ಎಲುಬುಗಳನ್ನು ಆ ಯಜ್ಞ
ವೇದಿಗಳ ಮೇಲೆ ಸುಡಿಸಿ ಯೆಹೂದದ ಮತ್ತು ಯೆ
ರೂಸಲೇಮಿನ ಅಶುದ್ಧತ್ವವನ್ನೆಲ್ಲಾ ಪರಿಹರಿಸಿದನು.

ಮನಸ್ಸೆ ಎಫ್ರಾಯಿಮ್ ಸಿಮೆಯೋನ್ ನಫ್ತಾ
ಪ್ರಾಂತಗಳ ಊರುಗಳ ಸುತ್ತಣ ಹಾಳುಬೀಳುಗಳಲ್ಲಿ
ಯಜ್ಞವೇದಿಗಳನ್ನು ಕೆಡವಿಸಿ ಅಶೇರಸ್ತಂಭಗಳನ
ವಿಗ್ರಹಗಳನ್ನೂ ಒಡಿಸಿ ಪುಡಿಪುಡಿಮಾಡಿಸಿ ಇಸ್ರಾಯೆ
ಲ್‍ದೇಶದಲ್ಲಿದ್ದ ಸೂರ್ಯಸ್ತಂಭಗಳನ್ನು ಕಡಿಸಿ ಯ
ರೂಸಲೇಮಿಗೆ ಹಿಂದಿರುಗಿದನು.
ಅವನು ತನ್ನ ಆಳಿಕೆಯ ಹದಿನೆಂಟನೆಯ ವರು
ದಲ್ಲಿ ದೇಶವನ್ನೂ ದೇವಾಲಯವನ್ನೂ ಶುದ್ಧಿಪಡಿಸಿ
ಮೇಲೆ ತನ್ನ ದೇವರಾದ ಯೆಹೋವನ ಆಲಯವನ
ಜೀರ್ಣೋದ್ಧಾರಮಾಡಿಸುವದಕ್ಕೋಸ್ಕರ ಅಚಲ್ಯ
ಮಗನಾದ ಶಾಫಾನನನ್ನೂ ಪುರಾಧಿಕಾರಿಯಾದ ಮಾಸ
ಯನನ್ನೂ ಪ್ರಧಾನಮಂತ್ರಿಯಾಗಿದ್ದ ಯೋವಾಹಾಜ
ಮಗನಾದ ಯೋವಾಹನನ್ನೂ ಕಳುಹಿಸಿದನು. ಇವರ
ಮಹಾಯಾಜಕನಾದ ಹಿಲ್ಕೀಯನ ಬಳಿಗೆ ಹೋ
ದೇವಾಲಯಕ್ಕೋಸ್ಕರ ಸಂಗ್ರಹವಾದ ಹಣವನ
ಅಂದರೆ ದ್ವಾರಪಾಲಕರಾದ ಲೇವಿಯರು ಮನಸ್ಸೆ ಎಫ
ಯಿಮ್ ಮುಂತಾದ ಇಸ್ರಾಯೇಲ್‍ಕುಲಗಳ
ಉಳಿದವರಿಂದಲೂ ಎಲ್ಲಾ ಯೆಹೂದ ಬೆನ್ಯಾಮೀ
ರಿಂದಲೂ 2)ಯೆರೂಸಲೇಮಿನವರಿಂದಲೂ ಕೂಡಿಸಿ
ಹಣವನ್ನು ದೇವಾಲಯದ ಕೆಲಸಮಾಡಿಸುವವರಿ
ಕೊಡುವದಕ್ಕೋಸ್ಕರ ಅವನಿಗೆ ಒಪ್ಪಿಸಿದರು. ದೇವಾ
ಯದ ಕೆಲಸಮಾಡಿಸುತ್ತಿದ್ದವರು ಆ ಹಣವನ್ನು ಕೆತ್ತಿ
ಕಲ್ಲು, ಜೋಡಿಸತಕ್ಕ ತೊಲೆ ಇವುಗಳನ್ನು ಕೊಂ
ಕೊಳ್ಳುವದಕ್ಕಾಗಿಯೂ ಯೆಹೂದರಾಜರ ಅಲಕ್ಷ
ದಿಂದ ಹಾಳಾಗಿದ್ದ ಕಟ್ಟಡಗಳಿಗೆ ಮಾಳಿಗೆಹಾಕುವ
ಕ್ಕಾಗಿಯೂ ಅಂತು ದೇವಾಲಯವನ್ನು ಜೀರ್ಣೋದ್ಧಾ
ಮಾಡಿ ಭದ್ರಪಡಿಸುವದಕ್ಕೆ ಬಡಿಗಿಯವರಿಗೂ ಶಿ
ಯವರಿಗೂ ಕೊಟ್ಟರು. ಕೆಲಸಮಾಡುವವರು ನಂ
ಗಸ್ತರಾಗಿದ್ದರು; ಮೆರಾರಿಯರಲ್ಲಿ ಯಹತ್, ಓಬ
ಎಂಬ ಲೇವಿಯರೂ ಕೆಹಾತ್ಯರಲ್ಲಿ ಜೆಕರ್ಯ, ಮೆ
ಲ್ಲಾಮ್ ಎಂಬ ಲೇವಿಯರೂ ಅವರ ಮೇಲ್ವಿಚಾರಕರ
ಗಿದ್ದರು. ಗಾಯನ ನಿಪುಣರಾದ ಲೇವಿಯರೆಲ್ಲರ
ಹೊರೆಹೊರುವವರ ಮೇಲ್ವಿಚಾರಕರಾಗಿದ್ದು ಎಲ
ವಿಧವಾದ ಕೆಲಸಮಾಡುವವರನ್ನು ನಡಿಸುತ್ತಿದ್ದರು.
ಎಲ್ಲಾ ಲೇಖಕರೂ ಅಧಿಕಾರಿಗಳೂ ದ್ವಾರಪಾಲಕರ
ಲೇವಿಯರೇ.
ಯೆಹೋವನ ಆಲಯದಲ್ಲಿ ಸಂಗ್ರಹವಾಗಿದ್ದ ಹ
ವನ್ನು ಹೊರಗೆ ತೆಗೆಯುವಾಗ ಮೋಶೆಯ ಮುಖಾ
ತರವಾಗಿ ಕೊಡಲ್ಪಟ್ಟ ಯೆಹೋವನ ಧರ್ಮೋಪದೇಶ
ಗ್ರಂಥವು ಯಾಜಕನಾದ ಹಿಲ್ಕೀಯನಿಗೆ ಸಿಕ್ಕಿತ
ಹಿಲ್ಕೀಯನು ಲೇಖಕನಾದ ಶಾಫಾನನಿಗೆ—ಯೆಹೋ
ವನ ಆಲಯದಲ್ಲಿ ನನಗೆ ಧರ್ಮೋಪದೇಶಗ್ರಂಥ
ಸಿಕ್ಕಿರುತ್ತದೆ ಎಂದು ಹೇಳಿ ಅದನ್ನು ಅವನ ಕೈಯ
ಕೊಟ್ಟನು. ಶಾಫಾನನು ಆ ಗ್ರಂಥವನ್ನು ಅರಸ
ಬಳಿಗೆ ತೆಗೆದುಕೊಂಡು ಹೋಗಿ—ನೀನು ಆಜ್ಞಾಪಿಸಿ
ಲ್ಲವನ್ನೂ ನಿನ್ನ ಸೇವಕರು ಮಾಡುತ್ತಿದ್ದಾರೆ. ದೇವಾ
ಯದಲ್ಲಿ ಸಂಗ್ರಹವಾದ ಹಣವನ್ನು ತೆಗೆದು ಕೆಲಸಮ
ಡಿಸುವವರಿಗೂ ಮಾಡುವವರಿಗೂ ಒಪ್ಪಿಸಿದರು ಎಂ

1) ಪಾಠಾಂತರ: ತೋಟದಲ್ಲಿ. 2) ಪಾಠಾಂತರ: ವಂತಿಗೆ ಕೂಡಿಸಿ ಯೆರೂಸಲೇಮಿಗೆ ತಂದಿದ್ದ.

ತಿಳಿಸಿದನು. ಇದಲ್ಲದೆ ಲೇಖಕನಾದ ಶಾಫಾನನು
ಅರಸನಿಗೆ—ಯಾಜಕನಾದ ಹಿಲ್ಕೀಯನು ನನಗೊಂದು
ಗ್ರಂಥವನ್ನು ಕೊಟ್ಟಿದ್ದಾನೆ ಎಂದು ಹೇಳಿ ಅವನ ಮುಂದೆ
ಅದನ್ನು ಓದಿದನು.
ಅರಸನು ಧರ್ಮಶಾಸ್ತ್ರದ ವಾಕ್ಯಗಳನ್ನು ಕೇಳಿದಾಗ
ಬಟ್ಟೆಗಳನ್ನು ಹರಿದುಕೊಂಡು ಹಿಲ್ಕೀಯ, ಶಾಫಾನನ
ಮಗನಾದ ಅಹೀಕಾಮ್, ಮೀಕನ ಮಗನಾದ
ಅಬ್ದೋನ್, ಲೇಖಕನಾದ ಶಾಫಾನ್, ಸಹಕಾರಿಯಾದ
ಅಸಾಯ ಎಂಬವರಿಗೆ—ನಮ್ಮ ಪೂರ್ವಿಕರು ಈ ಗ್ರಂಥ
ದಲ್ಲಿ ಬರೆದಿರುವ ಯೆಹೋವನ ಆಜ್ಞೆಗಳನ್ನೆಲ್ಲಾ ಕೈ
ಕೊಳ್ಳದೆ ಹೋದದರಿಂದ ಯೆಹೋವನು ತನ್ನ ಮಹಾ
ರೌದ್ರವನ್ನು ನಮ್ಮ ಮೇಲೆ ಸುರಿದಿದ್ದಾನೆ; ಆದದ
ರಿಂದ ನೀವು ನನಗೋಸ್ಕರವೂ ಇಸ್ರಾಯೇಲ್ಯರಲ್ಲಿ
ಮತ್ತು ಯೆಹೂದ್ಯರಲ್ಲಿ ಉಳಿದಿರುವವರಿಗೋಸ್ಕರವೂ
ಯೆಹೋವನ ಬಳಿಗೆ ಹೋಗಿ ನಮಗೆ ಸಿಕ್ಕಿರುವ ಈ
ಗ್ರಂಥದ ವಾಕ್ಯಗಳ ವಿಷಯವಾಗಿ ವಿಚಾರಿಸಿರಿ ಎಂದು
ಆಜ್ಞಾಪಿಸಿದನು. ಆಗ ಹಿಲ್ಕೀಯನೂ ಅರಸನ ಜನರೂ
ಹುಲ್ದ ಎಂಬ ಪ್ರವಾದಿಸಿಯ ಬಳಿಗೆ ಹೋಗಿ ಅಪ್ಪಣೆ
ಯಾದಂತೆ ಆಕೆಯ ಹತ್ತಿರ ವಿಚಾರಿಸಿದರು. ಹಸ್ರನ
ಮೊಮ್ಮಗನೂ ತೊಕ್ಹತನ ಮಗನೂ ರಾಜವಸ್ತ್ರಾಗಾರದ
ಅಧಿಪತಿಯೂ ಆಗಿದ್ದ ಶಲ್ಲೂಮನು ಆಕೆಯ ಗಂಡನು.
ಆಕೆಯು ಯೆರೂಸಲೇಮಿನ ಎರಡನೆಯ ಕೇರಿಯಲ್ಲಿ
ವಾಸವಾಗಿದ್ದಳು. ಹುಲ್ದಳು ಅವರಿಗೆ— ನಿಮ್ಮನ್ನು
ಕಳುಹಿಸಿದವನಿಗೆ ಇಸ್ರಾಯೇಲ್‍ದೇವರಾದ ಯೆಹೋ
ವನ ಮಾತುಗಳನ್ನು ತಿಳಿಸಿರಿ. ಆತನು—ಈ ದೇಶದ
ಮೇಲೆಯೂ ಜನರ ಮೇಲೆಯೂ ಯೆಹೂದದ ಅರಸನ
ಮುಂದೆ ಪಾರಾಯಣವಾದ ಆ ಗ್ರಂಥದಲ್ಲಿ ಬರೆದಿರುವ
ಎಲ್ಲಾ ಶಾಪಗಳನ್ನು ಬರಮಾಡುವೆನು; ಅವರು ನನ್ನ
ನ್ನು ಬಿಟ್ಟು ಅನ್ಯದೇವತೆಗಳಿಗೆ ಧೂಪಹಾಕಿ ತಮ್ಮ
ದುಷ್ಕೃತ್ಯಗಳಿಂದ ನನ್ನನ್ನು ರೇಗಿಸಿದ್ದರಿಂದ ನನ್ನ ಕೋ
ಪಾಗ್ನಿಯು ಈ ದೇಶದ ಮೇಲೆ ಉರಿಯುತ್ತಿರುವದು,
ಆರಿಹೋಗುವದಿಲ್ಲ ಅನ್ನುತ್ತಾನೆ. ತಾನು ಕೇಳಿದ ವಾ
ಕ್ಯಗಳ ವಿಷಯವಾಗಿ ಯೆಹೋವನ ಬಳಿಯಲ್ಲಿ ವಿಚಾರಿ
ಸುವದಕ್ಕೆ ನಿಮ್ಮನ್ನು ಕಳುಹಿಸಿದ ಯೆಹೂದದ ಅರಸ
ನಿಗೆ ನೀವು ತಿಳಿಸಬೇಕಾದ ಮಾತೇನಂದರೆ—ಇಸ್ರಾ
ಯೇಲ್‍ದೇವರಾದ ಯೆಹೋವನು ಇಂತೆನ್ನುತ್ತಾನೆ, ಈ
ದೇಶದ ಮತ್ತು ಅದರ ನಿವಾಸಿಗಳ ವಿಷಯ ನಾನು
ಹೇಳಿದ ಮಾತುಗಳನ್ನು ಕೇಳಿದಾಗ ನೀನು ದುಃಖ
ಪಟ್ಟು ದೇವರಾದ ನನ್ನ ಮುಂದೆ ತಗ್ಗಿಸಿಕೊಂಡದ್ದರಿಂದ
ಲೂ ದೀನಮನಸ್ಸಿನಿಂದ ಬಟ್ಟೆಗಳನ್ನು ಹರಿದುಕೊಂಡು
ಕಣ್ಣೀರುಸುರಿಸಿದ್ದರಿಂದಲೂ ನಿನ್ನನ್ನು ಲಕ್ಷಿಸಿದೆನು.
ನಾನು ಈ ದೇಶದ ಮೇಲೆಯೂ ಅದರ ನಿವಾಸಿಗಳ
ಮೇಲೆಯೂ ಬರಮಾಡುವ ಶಿಕ್ಷೆಗಳಲ್ಲಿ ನೀನು ಒಂದ
ನ್ನೂ ನೋಡದೆ ಸಮಾಧಾನದಿಂದ ಮೃತಿಹೊಂದಿ ಸಮಾ
ಧಿಸೇರುವಂತೆ ಅನುಗ್ರಹಿಸುವೆನು ಎಂಬದೇ ಎಂದು
ಹೇಳಿದಳು. ಅವರು ಹಿಂದಿರುಗಿ ಬಂದು ಅರಸನಿಗೆ ಆ
ಮಾತುಗಳನ್ನು ತಿಳಿಸಿದರು.
ಅನಂತರ ಅರಸನು ದೂತರ ಮುಖಾಂತರ ಯೆರೂ
ಸಲೇಮಿನ ಮತ್ತು ಯೆಹೂದದ ಎಲ್ಲಾ ಹಿರಿಯರನ್ನು
ಕೂಡಿಸಿ ಯೆರೂಸಲೇಮಿನವರನ್ನೂ ಬೇರೆ ಎಲ್ಲಾ ಯೆ
ಹೂದ್ಯರನ್ನೂ ಯಾಜಕರನ್ನೂ ಲೇವಿಯರನ್ನೂ ಕರ
ಕೊಂಡು ಯೆಹೋವನ ಆಲಯಕ್ಕೆ ಹೋದನು. ದೊ
ಡ್ಡವರು ಮೊದಲುಗೊಂಡು ಚಿಕ್ಕವರ ವರೆಗೆ ಎಲ್ಲರೂ
ಅವನನ್ನು ಹಿಂಬಾಲಿಸಿದರು. ಅಲ್ಲಿ ಅವನು ಎಲ್ಲರಿಗೂ
ಕೇಳಿಸುವಂತೆ ಯೆಹೋವನ ಆಲಯದಲ್ಲಿ ಸಿಕ್ಕಿದ
ನಿಬಂಧನಗ್ರಂಥವನ್ನು ಸಂಪೂರ್ಣವಾಗಿ ಓದಿಸಿ ತನ್ನ 31
ಸ್ಥಳದಲ್ಲಿ ನಿಂತು ತಾನು ಯೆಹೋವನ ಮಾರ್ಗ
ದಲ್ಲಿ ನಡೆಯುವದಾಗಿಯೂ ಆತನ ಆಜ್ಞಾನಿಯಮ
ವಿಧಿಗಳನ್ನು ಪೂರ್ಣಮನಸ್ಸಿನಿಂದಲೂ ಪೂರ್ಣಪ್ರಾಣ
ದಿಂದಲೂ ಕೈಕೊಳ್ಳುವದಾಗಿಯೂ ನಿಬಂಧನಗ್ರಂಥ
ದಲ್ಲಿ ಬರೆದಿರುವ ಎಲ್ಲಾ ವಾಕ್ಯಗಳನ್ನು ನೆರವೇರಿಸುವ
ದಾಗಿಯೂ ಯೆಹೋವನಿಗೆ ಪ್ರಮಾಣಮಾಡಿದನು.
ಆ ಮೇಲೆ ಎಲ್ಲಾ ಯೆರೂಸಲೇಮಿನವರಿಂದಲೂ ಬೆನ್ಯಾ 32
ಮೀನ್ಯರಿಂದಲೂ ಪ್ರಮಾಣಮಾಡಿಸಿದನು. ಯೆರೂಸ
ಲೇಮಿನವರು ಏಕದೇವರಾದ ತಮ್ಮ ಪಿತೃಗಳ ದೇವರ
ನಿಬಂಧನೆಯನ್ನು ಕೈಕೊಳ್ಳುವವರಾದರು. ಯೋಷೀ 33
ಯನು ಇಸ್ರಾಯೇಲ್ಯರಿಗೆ ಸೇರಿದ ಎಲ್ಲಾ ಪ್ರಾಂತಗ
ಳೊಳಗಿನ ಅಸಹ್ಯಮೂರ್ತಿಗಳನ್ನೆಲ್ಲಾ ತೆಗೆದುಹಾಕಿಸಿ
ಇಸ್ರಾಯೇಲ್ಯರಲ್ಲಿ ಉಳಿದಿರುವವರು ತಮ್ಮ ದೇವ
ರಾದ ಯೆಹೋವನನ್ನೇ ಸೇವಿಸುವಂತೆ ಮಾಡಿದನು.
ಅವನ ಜೀವಮಾನದಲ್ಲೆಲ್ಲಾ ಅವರು ತಮ್ಮ ಪಿತೃ
ಗಳ ದೇವರಾದ ಯೆಹೋವನನ್ನು ಬಿಡದೆ ಹಿಂಬಾಲಿ
ಸಿದರು.

### ಯೋಷೀಯನ ಕಾಲದಲ್ಲಿ ನಡೆದ ದೊಡ್ಡ ಪಸ್ಕಹಬ್ಬವೂ ಅವನ ಮರಣವೂ.

**35** ಯೋಷೀಯನು ಯೆಹೋವನಿಗೋಸ್ಕರ ಯೆ
ರೂಸಲೇಮಿನಲ್ಲಿ ಪಸ್ಕಹಬ್ಬವನ್ನು ಆಚರಿಸುವಂತೆ
ಮಾಡಿದನು; ಮೊದಲನೆಯ ತಿಂಗಳಿನ ಹದಿನಾಲ್ಕನೆ
ಯ ದಿನದಲ್ಲಿ ಪಸ್ಕದ ಕುರಿಗಳನ್ನು ವಧಿಸಿದರು.
ಯೋಷೀಯನು ಯಾಜಕರನ್ನು ಅವರವರ ಕೆಲಸಕ್ಕೆ 2
ನೇಮಿಸಿ ಯೆಹೋವನ ಆಲಯದ ಸೇವೆಗಾಗಿ ಅವ
ರನ್ನು ಪ್ರೋತ್ಸಾಹಪಡಿಸಿ ಎಲ್ಲಾ ಇಸ್ರಾಯೇಲ್ಯರನ್ನು 3
ಉಪದೇಶಿಸತಕ್ಕವರೂ ಯೆಹೋವನಿಗೆ ಪ್ರತಿಷ್ಠಿತರೂ
ಆದ ಲೇವಿಯರಿಗೆ—ದಾವೀದನ ಮಗನೂ ಇಸ್ರಾ
ಯೇಲ್‍ರಾಜನೂ ಆದ ಸೊಲೊಮೋನನು ಕಟ್ಟಿಸಿದ
ದೇವಾಲಯದಲ್ಲಿ ಪವಿತ್ರಮಂಜೂಷವನ್ನು ಇಟ್ಟುಬಿ
ಡಿರಿ; ಅದನ್ನು ಹೆಗಲಿನ ಮೇಲೆ ಹೊತ್ತುಕೊಳ್ಳುವದು
ಅವಶ್ಯವಿಲ್ಲ; ಇನ್ನು ಮುಂದೆ ನಿಮ್ಮ ದೇವರಾದ ಯೆ
ಹೋವನನ್ನೂ ಆತನ ಪ್ರಜೆಗಳಾದ ಇಸ್ರಾಯೇಲ್ಯರ
ನ್ನೂ ಸೇವಿಸಿರಿ. ಇಸ್ರಾಯೇಲ್ಯರ ಅರಸನಾದ ದಾವೀ 4
ದನೂ ಅವನ ಮಗನಾದ ಸೊಲೊಮೋನನೂ ಬರೆದು
ನೇಮಿಸಿದಂತೆ ನಿಮ್ಮ ನಿಮ್ಮ ಗೋತ್ರವರ್ಗಗಳ ಪ್ರ
ಕಾರ ಸಿದ್ಧರಾಗಿದ್ದು ನಿಮ್ಮ ಸಹೋದರರಾದ ಇಸ್ರಾ 5
ಯೇಲ್ಯರ ಒಂದೊಂದು ಗೋತ್ರಶಾಖೆಗೋಸ್ಕರ ನಿಮ್ಮ
ಲ್ಲಿ ಒಂದೊಂದು ಗುಂಪಿನವರು ಪವಿತ್ರಸ್ಥಾನದಲ್ಲಿ
ನಿಂತು ಪಸ್ಕದ ಕುರಿಯನ್ನು ವಧಿಸಲಿ. ಮೋಶೆಯಿಂದ 6
ಪ್ರಕಟವಾದ ಯೆಹೋವನ ವಿಧಿಗನುಸಾರವಾಗಿ ನಿಮ್ಮ
ಸಹೋದರರು ಪಸ್ಕಭೋಜನಮಾಡುವಂತೆ ನೀವು ನಿಮ್ಮ

ನ್ನು ಶುದ್ಧಿಪಡಿಸಿಕೊಂಡು ಅವರಿಗೋಸ್ಕರ ಎಲ್ಲವನ್ನೂ
ಸಿದ್ಧಮಾಡಿರಿ ಎಂದು ಆಜ್ಞಾಪಿಸಿದನು.
7 ಯೋಷೀಯನು ಹಬ್ಬಕ್ಕೆ ಬಂದ ಜನರಿಗೆ ಪಸ್ಕ
ಯಜ್ಞಕ್ಕಾಗಿ ರಾಜಕೀಯ ಸೊತ್ತಿನಿಂದ ಮೂವತ್ತು
ಸಾವಿರ ಆಡುಮರಿಗಳನ್ನೂ ಕುರಿಮರಿಗಳನ್ನೂ ಮೂರು
8 ಸಾವಿರ ಹೋರಿಗಳನ್ನೂ ದಾನಮಾಡಿದನು. ಅವನ
ಸರದಾರರು ಜನರಿಗೂ ಯಾಜಕರಿಗೂ ಲೇವಿಯರಿಗೂ
[ಯಜ್ಞಪಶುಗಳನ್ನು] ಸಂತೋಷವಾಗಿ ಕೊಟ್ಟರು.
ದೇವಾಲಯದ ಪ್ರಧಾನರಾದ ಹಿಲ್ಕೀಯ, ಜೆಕರ್ಯ,
ಯೆಹೀಯೇಲ್ ಎಂಬವರು ಯಾಜಕರಿಗೆ ಎರಡು ಸಾವಿ
ರದ ಆರು ನೂರು ಪಸ್ಕದ ಕುರಿಮರಿಗಳನ್ನೂ ಮು
9 ನ್ನೂರು ಹೋರಿಗಳನ್ನೂ ಕೊಟ್ಟರು. ಲೇವಿಯರಲ್ಲಿ
ಮುಖ್ಯಸ್ಥರಾದ ಕೊನನ್ಯ, ಸೆಮಾಯ, ನೆತನೇಲ್
ಎಂಬ ಅಣ್ಣತಮ್ಮಂದಿರೂ ಹಷಲ್ಯ, ಯೆಗೀಯೇಲ್,
ಯೋಜಾಬಾದ್ ಎಂಬವರೂ ಲೇವಿಯರಿಗೆ ಐದು
ಸಾವಿರ ಪಸ್ಕದ ಕುರಿಮರಿಗಳನ್ನೂ ಐನೂರು ಹೋರಿ
10 ಗಳನ್ನೂ ದಾನಮಾಡಿದರು. ಸೇವೆಯ ಸಂಬಂಧವಾ
ದದ್ದೆಲ್ಲವನ್ನೂ ಏರ್ಪಡಿಸಿದನಂತರ ಯಾಜಕರು ತಮ್ಮ
ತಮ್ಮ ಸ್ಥಳಗಳಲ್ಲಿಯೂ ಲೇವಿಯರು ಅರಸನ ಅಪ್ಪಣೆ
11 ಯಂತೆ ವರ್ಗವರ್ಗಗಳಾಗಿಯೂ ನಿಂತರು; ಲೇವಿ
ಯರು ಪಸ್ಕದ ಪಶುಗಳನ್ನು ವಧಿಸಿದರು. ಯಾಜ
ಕರು ಇವರ ಕೈಯಿಂದ ರಕ್ತವನ್ನು ತೆಗೆದುಕೊಂಡು
12 ಪ್ರೋಕ್ಷಿಸಿದರು. ಲೇವಿಯರು ಚರ್ಮಸುಲಿದು ಹೋ
ಮಕ್ಕಾಗಿ ಪ್ರತ್ಯೇಕಿಸತಕ್ಕದ್ದನ್ನು ಪ್ರತ್ಯೇಕಿಸಿ ಜನರಿಗೆ
ಆಯಾ ಗೋತ್ರಶಾಖೆಗಳಿಗನುಸಾರವಾಗಿ ಕೊಟ್ಟರು.
ಇವರು ಅದನ್ನು ಮೋಶೆಯ ಧರ್ಮಶಾಸ್ತ್ರವಿಧಿಯ
ಮೇರೆಗೆ ಯೆಹೋವನಿಗೆ ಸಮರ್ಪಿಸಬೇಕಾಯಿತು.
ಹೋರಿಗಳ ವಿಷಯದಲ್ಲಿಯೂ ಅದೇ ಕ್ರಮವನ್ನು
13 ಅನುಸರಿಸಿದರು. ಆ ಮೇಲೆ ಲೇವಿಯರು ಪಸ್ಕದ
ಮಾಂಸವನ್ನು ನ್ಯಾಯಮದ ಪ್ರಕಾರ ಬೆಂಕಿಯಲ್ಲಿ
ಸುಟ್ಟು ದೇವರಿಗೆ ಕಾಣಿಕೆಯಾಗಿ ಸಮರ್ಪಿತವಾದ
ಪಶುಗಳ ಮಾಂಸವನ್ನು ಕೊಪ್ಪರಿಗೆ ಬಾನೆ ಹಂಡೆಗಳಲ್ಲಿ
14 ಬೇಯಿಸಿ ಬೇಗನೆ ತಂದು ಜನರಿಗೆ ಬಡಿಸಿದರು. ತರು
ವಾಯ ತಮಗೋಸ್ಕರವೂ ಯಾಜಕರಿಗೋಸ್ಕರವೂ
ಸಿದ್ಧಮಾಡಿದರು. ಆರೋನನ ಮಕ್ಕಳಾದ ಯಾಜ
ಕರು ರಾತ್ರಿಯ ವರೆಗೂ ಸರ್ವಾಂಗಹೋಮಗಳನ್ನೂ
ಕೊಬ್ಬನ್ನೂ ಸಮರ್ಪಿಸುತ್ತಾ ಇದ್ದದರಿಂದ ಲೇವಿಯರು
ತಮಗೋಸ್ಕರ ಹೇಗೋ ಹಾಗೆ ಆರೋನನ ಮಕ್ಕ
15 ಳಾದ ಯಾಜಕರಿಗೋಸ್ಕರವೂ ಸಿದ್ಧಮಾಡಿದರು. ಆಸಾ
ಫ್ಯರಾದ ಗಾಯಕರು ಅರಸನಾದ ದಾವೀದನ ಮತ್ತು
ಆಸಾಫ್, ಹೇಮಾನ್, ಅರಸನ ದರ್ಶಿಯಾದ ಯೆದು
ತೂನ್ ಇವರ ಆಜ್ಞಾನುಸಾರ ತಮ್ಮ ಸ್ಥಳದಲ್ಲಿ ನಿಂತಿ
ದ್ದರು; ದ್ವಾರಪಾಲಕರು ಆಯಾ ಬಾಗಲುಗಳನ್ನು
ಕಾಯುತ್ತಿದ್ದರು. ಅವರ ಸಹೋದರರಾದ ಲೇವಿ
ಯರು ಅವರ ಭೋಜನಕ್ಕೆ ಸಿದ್ಧಮಾಡುತ್ತಿದ್ದದರಿಂದ
ಅವರು ತಮ್ಮ ತಮ್ಮ ಸೇವೆಯನ್ನು ಬಿಡುವದಕ್ಕೆ
16 ಕಾರಣವಿರಲಿಲ್ಲ. ಈ ಪ್ರಕಾರ ಅರಸನಾದ ಯೋಷೀ
ಯನ ಅಪ್ಪಣೆಯಂತೆ ಪಸ್ಕವನ್ನು ಆಚರಿಸುವದಕ್ಕೂ
ಯೆಹೋವನ ಯಜ್ಞವೇದಿಯ ಮೇಲೆ ಸರ್ವಾಂಗಹೋ
ಮಗಳನ್ನರ್ಪಿಸುವದಕ್ಕೂ ಯೆಹೋವನ ಸೇವೆಯ

ಸಂಬಂಧವಾದದ್ದೆಲ್ಲವೂ ಆ ದಿವಸವೇ ಸಿದ್ಧವಾಯಿ
ಕೂಡಿಬಂದಿದ್ದ ಇಸ್ರಾಯೇಲ್ಯರು ಆ ಕಾಲದಲ್ಲಿ ಪ
ಹಬ್ಬವನ್ನೂ ಏಳು ದಿನಗಳ ವರೆಗೆ ಹುಳಿಯಿಲ
ರೊಟ್ಟಿಗಳ ಜಾತ್ರೆಯನ್ನೂ ಆಚರಿಸಿದರು. ಇಂ
ಪಸ್ಕಹಬ್ಬವು ಪ್ರವಾದಿಯಾದ ಸಮುವೇಲನ ದಿವ
ಳಿಂದ ಇಸ್ರಾಯೇಲ್ಯರಲ್ಲಿ ನಡೆಯಲೇ ಇಲ್ಲ. ಯೋ
ಯನೂ ಯಾಜಕರೂ ಲೇವಿಯರೂ ಕೂಡಿಬಂ
ಇಸ್ರಾಯೇಲ್ಯ ಯೆಹೂದ್ಯರೂ ಯೆರೂಸಲೇಮಿನವ
ಪಸ್ಕಹಬ್ಬವನ್ನು ಆಚರಿಸಿದಂತೆ ಇಸ್ರಾಯೇಲ್ ರ
ರಲ್ಲಿ ಒಬ್ಬನೂ ಆಚರಿಸಲಿಲ್ಲ. ಈ ಪಸ್ಕಹಬ್
ಯೋಷೀಯನ ಆಳಿಕೆಯ ಹದಿನೆಂಟನೆಯ ವ
ದಲ್ಲಿ ನಡೆಯಿತು.
ಯೋಷೀಯನು ದೇವಾಲಯದ ವಿಷಯದಲ್ಲಿ
ಎಲ್ಲಾ ವ್ಯವಸ್ಥೆಯನ್ನು ಮಾಡಿದನಂತರ ಐಗುಪ್
ಅರಸನಾದ ನೆಕೋ ಎಂಬವನು ಯುದ್ಧಮಾಡು
ಕ್ಕೋಸ್ಕರ ಯೂಫ್ರೇಟೀಸ್ ನದಿಯ ತೀರದಲ್ಲಿ
ಕರ್ಕೆಮೀಷಿಗೆ ಹೋದನು. ಯೋಷೀಯನು
ನಿಗೆ ವಿರೋಧವಾಗಿ ಹೊರಡಲು ನೆಕೋವನು ಅ
ಬಳಿಗೆ ದೂತರನ್ನು ಕಳುಹಿಸಿ—ಯೆಹೂದದ ಅರಸ
ನನ್ನ ಗೊಡವೆ ನಿನಗೇಕೆ? ನಾನು ಈ ಸಾರಿ ಯುದ್
ಹೊರಟದ್ದು ನಿನಗೆ ವಿರೋಧವಾಗಿ ಅಲ್ಲ, ನನ್ನ ಶ
ವಂಶಕ್ಕೆ ವಿರೋಧವಾಗಿಯೇ. ನನ್ನನ್ನು ಮುಂದ
ಬೇಕೆಂದು ದೇವರ ಅಪ್ಪಣೆಯಾಗಿದೆ, ನನ್ನೊಂ
ರುವ ದೇವರಿಗೆ ವಿರೋಧವಾಗಿ ಕೈಯೆತ್ತುವದ
ಬಿಡು. ಇಲ್ಲವಾದರೆ ಆತನು ನಿನ್ನನ್ನು ನಾಶಮಾ
ವನು ಎಂದು ಹೇಳಿಸಿದನು. ಆದರೆ ಯೋಷೀಯ
ಅವನನ್ನು ಬಿಟ್ಟು ಹಿಂದಿರುಗಲಿಲ್ಲ. ದೇವೋಕ್ತಿಂ
ಗಿದ್ದ ನೆಕೋವಿನ ಮಾತಿಗೆ ಕಿವಿಗೊಡದೆ ವೇಷಹ
ಕೊಂಡು ಅವನೊಡನೆ ಕಾದುವದಕ್ಕೆ ಮೆಗಿದ
ಬೈಲಿಗೆ ಹೋದನು. ಅಲ್ಲಿ ಬಿಲ್ಲುಗಾರರು ಅರಸನ
ಯೋಷೀಯನಿಗೆ ಬಾಣವನ್ನೆಸೆದಾಗ ಅವನು ತ
ಸೇವಕರಿಗೆ—ನನಗೆ ದೊಡ್ಡ ಗಾಯವಾಯಿತು, ನ
ನ್ನು ಆಚೆಗೆ ತೆಗೆದುಕೊಂಡು ಹೋಗಿರಿ ಅಂದನು. ಸೆ
ಕರು ಅವನನ್ನು ಯುದ್ಧರಥದಿಂದಿಳಿಸಿ ಅವನ ಎರ
ಯ ರಥದಲ್ಲಿ ಮಲಗಿಸಿ ಯೆರೂಸಲೇಮಿಗೆ ತೆಗೆ
ಕೊಂಡು ಹೋಗಲು ಅಲ್ಲಿ ಸತ್ತನು. ಅವನ ಶವವ
ಅವನ ಪೂರ್ವಿಕರ ಶ್ಮಶಾನದಲ್ಲಿ ಸಮಾಧಿಮಾಡಿದ
ಎಲ್ಲಾ ಯೆಹೂದ್ಯರೂ ಯೆರೂಸಲೇಮಿನವ
ಯೋಷೀಯನ ವಿಷಯವಾಗಿ ಗೋಳಾಡಿದರು. ಯ
ಮೀಯನು ಯೋಷೀಯನನ್ನು ಕುರಿತು ಶೋಕಗ
ವನ್ನು ರಚಿಸಿದನು. ಎಲ್ಲಾ ಗಾಯಕರೂ ಗಾ
ಕಿಯರೂ ಅವನನ್ನು ಇಂದಿನ ವರೆಗೆ ತಮ್ಮ ಶೋ
ಗೀತಗಳಲ್ಲಿ ವರ್ಣಿಸುತ್ತಿರುತ್ತಾರೆ. ಆ ಗೀತಗಳ
ಹಾಡುವದು ಇಸ್ರಾಯೇಲ್ಯರಲ್ಲಿ ಒಂದು ಪದ್ಧತಿಯ
ಯಿತು. ಅವು ಶೋಕಗೀತಗ್ರಂಥದಲ್ಲಿ ಬರೆದಿರುತ್
ಯೋಷೀಯನ ಉಳಿದ ಚರಿತ್ರೆಯೂ ಯೆಹೋ
ಧರ್ಮಶಾಸ್ತ್ರಾನುಸಾರವಾದ ಅವನ ಭಕ್ತಿಕಾಯ
ಗಳೂ ಅವನ ಪೂರ್ವೋತ್ತರವೃತ್ತಾಂತವೂ ಇಸ್ರಾಂ
ಲ್ಯರ ಮತ್ತು ಯೆಹೂದ್ಯರ ರಾಜಗ್ರಂಥದಲ್ಲಿ ಬರೆ
ತ್ತವೆ.

### ಯೆಹೋವಾಹಾಜ್, ಯೆಹೋಯಾಕೀಮ್, ಯೆಹೋಯಾಕೀನ್ ಎಂಬ ಅರಸರು.

36 ದೇಶದ ಜನರು ಯೋಷೀಯನ ಮಗನಾದ
ಯೆಹೋವಾಹಾಜನನ್ನು ತೆಗೆದುಕೊಂಡು ಅವನ
ತಂದೆಗೆ ಬದಲಾಗಿ ಯೆರೂಸಲೇಮಿನಲ್ಲಿ ಅರಸನನ್ನಾಗಿ
2 ಮಾಡಿದರು. ಯೆಹೋವಾಹಾಜನು ಪಟ್ಟಕ್ಕೆ ಬಂದಾಗ
ಇಪ್ಪತ್ತಮೂರು ವರುಷದವನಾಗಿದ್ದನು; ಅವನು ಯೆ
3 ರೂಸಲೇಮಿನಲ್ಲಿ ಮೂರು ತಿಂಗಳು ಆಳಿದನು. ಐಗು
ಪ್ತದ ಅರಸನು ಯೆರೂಸಲೇಮಿಗೆ ಬಂದು ಅವನನ್ನು
ಪಟ್ಟದಿಂದ ತೆಗೆದುಹಾಕಿ ಯೆಹೂದ್ಯರು ತನಗೆ 1)ನೂರು
ತಲಾಂತು ಬೆಳ್ಳಿಯನ್ನೂ ಒಂದು ತಲಾಂತು ಬಂಗಾರ
4 ವನ್ನೂ ದಂಡತೆರುವಂತೆ ಮಾಡಿದನು. ಐಗುಪ್ತದ
ಅರಸನಾದ ನೆಕೋವನು ಯೆಹೋವಾಹಾಜನ ಸಹೋ
ದರನಾದ ಎಲ್ಯಾಕೀಮನನ್ನು ಯೆಹೂದದ ಮತ್ತು
ಯೆರೂಸಲೇಮಿನ ಮೇಲೆ ಅರಸನನ್ನಾಗಿ ನೇಮಿಸಿ ಅವ
ನಿಗೆ ಯೆಹೋಯಾಕೀಮನೆಂಬ ಹೆಸರಿಟ್ಟನು; ಮತ್ತು
ಅವನ ಸಹೋದರನಾದ ಯೆಹೋವಾಹಾಜನನ್ನು
ಐಗುಪ್ತದೇಶಕ್ಕೆ ತೆಗೆದುಕೊಂಡು ಹೋದನು.
5 ಯೆಹೋಯಾಕೀಮನು ಅರಸನಾದಾಗ ಇಪ್ಪತ್ತೈ
ದು ವರುಷದವನಾಗಿದ್ದನು; ಅವನು ಯೆರೂಸಲೇಮಿ
ನಲ್ಲಿ ಹನ್ನೊಂದು ವರುಷ ಆಳಿದನು. ಅವನು ತನ್ನ
ದೇವರಾದ ಯೆಹೋವನ ಚಿತ್ತಕ್ಕೆ ವಿರುದ್ಧವಾಗಿ ನಡೆ
6 ದನು. ಬಾಬೆಲಿನ ಅರಸನಾದ ನೆಬೂಕದ್ನೆಚ್ಚರನು
ಅವನ ಮೇಲೆ ಯುದ್ಧಕ್ಕೆ ಬಂದು ಬಾಬೆಲಿಗೆ ಒಯ್ಯು
7 ವದಕ್ಕೋಸ್ಕರ ಅವನಿಗೆ ಬೇಡಿಹಾಕಿ ಯೆಹೋವನ
ಆಲಯದ ಹಲವು ಸಾಮಾನುಗಳನ್ನು ಬಾಬೆಲಿಗೆ ತೆಗೆ
ದುಕೊಂಡು ಹೋಗಿ ತನ್ನ 2)ದೇವಾಲಯದಲ್ಲಿಟ್ಟನು.
8 ಯೆಹೋಯಾಕೀಮನ ಉಳಿದ ಚರಿತ್ರೆಯೂ ಅವನು
ನಡಿಸಿದ ಅಸಹ್ಯಕೃತ್ಯಗಳೂ ಅವನಲ್ಲಿ ಕಂಡುಬಂದದ್ದೆ
ಲ್ಲವೂ ಇಸ್ರಾಯೇಲ್ಯರ ಮತ್ತು ಯೆಹೂದ್ಯರ ರಾಜ
ಗ್ರಂಥದಲ್ಲಿ ಬರೆದಿರುತ್ತವೆ. ಅವನಿಗೆ ಬದಲಾಗಿ ಅವನ
ಮಗನಾದ ಯೆಹೋಯಾಕೀನನು ಅರಸನಾದನು.
9 ಯೆಹೋಯಾಕೀನನು ಅರಸನಾದಾಗ 3)ಎಂಟು
ವರುಷದವನಾಗಿದ್ದನು; ಅವನು ಯೆರೂಸಲೇಮಿನಲ್ಲಿ
ಮೂರು ತಿಂಗಳು ಹತ್ತು ದಿವಸ ಆಳಿದನು. ಅವನು
10 ಯೆಹೋವನ ಚಿತ್ತಕ್ಕೆ ವಿರುದ್ಧವಾಗಿ ನಡೆದನು. ನೆಬೂ
ಕದ್ನೆಚ್ಚರನು ವರ್ಷಾರಂಭದಲ್ಲಿ ಅವನನ್ನೂ ದೇವಾಲಯ
ಯದ ಬೆಲೆಯುಳ್ಳ ಸಾಮಾನುಗಳನ್ನೂ ಬಾಬೆಲಿಗೆ
ತರಿಸಿಕೊಂಡು ಅವನ ಸಹೋದರನಾದ ಚಿದ್ಕೀಯ
ನನ್ನು ಯೆಹೂದದ ಮತ್ತು ಯೆರೂಸಲೇಮಿನ ಮೇಲೆ
ಅರಸನನ್ನಾಗಿ ಮಾಡಿದನು.

### ಅರಸನಾದ ಚಿದ್ಕೀಯನೂ ಯೆಹೂದರಾಜ್ಯದ ಅಂತ್ಯವೂ.

11 ಚಿದ್ಕೀಯನು ಅರಸನಾದಾಗ ಇಪ್ಪತ್ತೊಂದು ವರು
ಷದವನಾಗಿದ್ದನು; ಅವನು ಯೆರೂಸಲೇಮಿನಲ್ಲಿ
ಹನ್ನೊಂದು ವರುಷ ಆಳಿದನು. ಅವನು ತನ್ನ ದೇವ 12
ರಾದ ಯೆಹೋವನ ಚಿತ್ತಕ್ಕೆ ವಿರುದ್ಧವಾಗಿ ನಡೆದು
ಯೆಹೋವನ ಮಾತುಗಳನ್ನು ತನಗೆ ತಿಳಿಸುತ್ತಿದ್ದ
ಪ್ರವಾದಿಯಾದ ಯೆರೆಮೀಯನ ಮುಂದೆ ತನ್ನನ್ನು
ತಗ್ಗಿಸಿಕೊಳ್ಳಲಿಲ್ಲ. ಇದಲ್ಲದೆ ನೆಬೂಕದ್ನೆಚ್ಚರನಿಗೆ ಒಳ 13
ಗಾಗುತ್ತೇನೆಂದು ದೇವರ ಮೇಲೆ ಆಣೆಯಿಟ್ಟು ಪ್ರಮಾ
ಣಮಾಡಿದ್ದರೂ ಅವನಿಗೆ ವಿರುದ್ಧವಾಗಿ ತಿರುಗಿಬಿದ್ದು
ಇಸ್ರಾಯೇಲ್‌ದೇವರಾದ ಯೆಹೋವನ ಕಡೆಗೆ ತಿರುಗಿ
ಕೊಳ್ಳಲೊಲ್ಲದೆ ಹಟಹಿಡಿದು ಮನಸ್ಸನ್ನು ಕಠಿನಮಾಡಿ
ಕೊಂಡನು. ಪ್ರಧಾನಯಾಜಕರೂ ಪ್ರಜೆಗಳೂ ಕೂಡಾ 14
ಮಹಾದ್ರೋಹಿಗಳಾಗಿ ಅನ್ಯಜನಾಂಗಗಳ ಅಸಹ್ಯಕೃತ್ಯ
ಗಳನ್ನು ಅನುಸರಿಸಿ ಯೆಹೋವನು ತನಗೆ ಪ್ರತಿಷ್ಠಿಸಿ
ಕೊಂಡಿದ್ದ ಯೆರೂಸಲೇಮಿನ ದೇವಾಲಯವನ್ನು ಹೊ
ಲೆಮಾಡಿದರು. ಅವರ ಪಿತೃಗಳ ದೇವರಾದ ಯೆಹೋ 15
ವನು ತನ್ನ ಪ್ರಜೆಯನ್ನೂ ನಿವಾಸಸ್ಥಾನವನ್ನೂ ಕನಿಕ
ರಿಸಿ ಸಾವಕಾಶಮಾಡದೆ ತನ್ನ ದೂತರ ಮುಖಾಂತರ
ವಾಗಿ ಅವರನ್ನು ಎಚ್ಚರಿಸುತ್ತಾ ಇದ್ದರೂ ಅವರು ದೇವ 16
ಪ್ರೇಷಿತರನ್ನು ಗೇಲಿಮಾಡಿ ಆತನ ಮಾತುಗಳನ್ನು
ತುಚ್ಛೀಕರಿಸಿ ಆತನ ಪ್ರವಾದಿಗಳನ್ನು ಹೀಯಾಳಿಸಿದ್ದ
ರಿಂದ ಆತನ ಕೋಪಾಗ್ನಿಯು ಆತನ ಪ್ರಜೆಯ ಮೇಲೆ
ಉರಿಯಹತ್ತಿತು, ಅವರ ತಾಪವು ಆರಿಹೋಗಲೇ ಇಲ್ಲ.
ಆತನು ಕಸ್ದೀಯರ ಅರಸನನ್ನು ಅವರ ಮೇಲೆ ಬರ 17
ಮಾಡಿ ಎಲ್ಲರನ್ನೂ ಅವನ ಕೈಗೆ ಒಪ್ಪಿಸಿದನು. ಅವನು
ಅವರ ಯುವಭಟರನ್ನು ಅವರ ಪವಿತ್ರಾಲಯದಲ್ಲೇ
ಕತ್ತಿಯಿಂದ ಸಂಹರಿಸಿ ಯುವಕರನ್ನೂ ಕನ್ಯೆಯರನ್ನೂ
ಮುದುಕರನ್ನೂ ಅತಿವೃದ್ಧರನ್ನೂ ಕನಿಕರಿಸದೆ ಎಲ್ಲ
ರನ್ನೂ ಕೊಲ್ಲಿಸಿದನು. ದೇವಾಲಯದ ಎಲ್ಲಾ ಚಿಕ್ಕ 18
ದೊಡ್ಡ ಸಾಮಾನುಗಳನ್ನೂ ಯೆಹೋವನ ಮಂದಿರದ
ಭಂಡಾರ, ಅರಸನ ಮತ್ತು ಅವನ ಸರದಾರರ ಭಂಡಾರ
ಇವುಗಳ ದ್ರವ್ಯವನ್ನೂ ಬಾಬೆಲಿಗೆ ಒಯ್ದನು. [ಅವನ 19
ಜನರು] ಯೆರೂಸಲೇಮಿನ ಪೌಳಿಗೋಡೆಗಳನ್ನು ಕೆಡವಿ
ಅದರ ಎಲ್ಲಾ ರಾಜಮಂದಿರಗಳನ್ನೂ ದೇವಾಲಯ
ವನ್ನೂ ಸುಟ್ಟುಬಿಟ್ಟು ಅಮೂಲ್ಯವಸ್ತುಗಳನ್ನು ನಾಶ
ಮಾಡಿದರು. ಕತ್ತಿಗೆ ತಪ್ಪಿಸಿಕೊಂಡವರನ್ನು ಅರಸನು 20
ಬಾಬೆಲಿಗೆ ಸೆರೆಯೊಯ್ದನು. ಪಾರಸಿಯ ಪ್ರಭುತ್ವವು
ಅಲ್ಲಿ ಸ್ಥಾಪಿತವಾಗುವ ವರೆಗೆ ಅವರು ಅವನಿಗೂ
ಅವನ ಮಕ್ಕಳಿಗೂ ಸೇವಕರಾಗಿದ್ದರು. ಈ ಪ್ರಕಾರ 21
ಯೆಹೋವನು ಯೆರೆಮೀಯನ ಮುಖಾಂತರ ಹೇಳಿ
ಸಿದ ಮಾತು ನೆರವೇರಿ ದೇಶವು ತನ್ನ ಸಬ್ಬತ್‌ಕಾಲ
ವನ್ನು ಅನುಭವಿಸುವದಕ್ಕೆ ಮಾರ್ಗವಾಯಿತು. ದೇಶ
ವು ಎಪ್ಪತ್ತು ವರುಷ ಹಾಳುಬಿದ್ದು ಆ ಕಾಲದಲ್ಲೆಲ್ಲಾ
ವಿಶ್ರಾಂತಿಯನ್ನು ಅನುಭವಿಸುತ್ತಿತ್ತು.

### ಕೋರೆಷನ ಪ್ರಕಟನೆಯೂ ಯೆಹೂದ್ಯರ ಬಿಡುಗಡೆಯೂ.

ಪಾರಸಿಯ ಅರಸನಾದ ಕೋರೆಷನ ಮೊದಲನೆಯ 22
ವರುಷದಲ್ಲಿ ಯೆಹೋವನು ತಾನು ಯೆರೆಮೀಯನ

1) ಸುಮಾರು ಮೂರು ಲಕ್ಷ ತೊಲೆ ಬೆಳ್ಳಿಯನ್ನೂ ಮೂರು ಸಾವಿರ ತೊಲೆ ಬಂಗಾರವನ್ನೂ. 2) ಅಥವಾ: ಅರಮನೆ.
3) ೨ ಅರಸು. 24. 8ರಲ್ಲಿ ಹದಿನೆಂಟು ಎಂದು ಬರೆದಿರುತ್ತದೆ.

ಮುಖಾಂತರ ಹೇಳಿಸಿದ ವಾಕ್ಯವನ್ನು ನೆರವೇರಿಸು
ವದಕ್ಕಾಗಿ ಆ ಪಾರಸಿಯ ರಾಜನಾದ ಕೋರೆಷನ
ಮನಸ್ಸನ್ನು ಪ್ರೇರಿಸಿದ್ದರಿಂದ ಅವನು ತನ್ನ ರಾಜ್ಯ
23 ದಲ್ಲೆಲ್ಲಾ ಡಂಗುರದಿಂದಲೂ ಪತ್ರಗಳಿಂದಲೂ—ಪಾರ
ಸಿಯ ರಾಜನಾದ ಕೋರೆಷನೆಂಬ ನನ್ನ ಮಾತನ್ನು
ಕೇಳಿರಿ—ಪರಲೋಕದೇವರಾದ ಯೆಹೋವನು ನನಗೆ
ಭೂಲೋಕದ ಎಲ್ಲಾ ರಾಜ್ಯಗಳನ್ನು ಒಪ್ಪಿಸಿ ತನಗೋ
ಸ್ಕರ ಯೆಹೂದದೇಶದ ಯೆರೂಸಲೇಮಿನಲ್ಲಿ ಆಲಯ
ವನ್ನು ಕಟ್ಟಬೇಕೆಂದು ಆಜ್ಞಾಪಿಸಿದ್ದಾನೆ. ನಿಮ್ಮಲ್ಲಿ
ಯಾರು ಆತನ ಪ್ರಜೆಗಳಾಗಿರುತ್ತಾರೋ ಅವರು
ಸ್ವದೇಶಕ್ಕೆ ಹೋಗಲಿ; ಅವರ ದೇವರಾದ ಯೆಹೋ
ವನು ಅವರ ಸಂಗಡ ಇರುವನು ಎಂದು ಪ್ರಕಟಿಸಿದನು.

# THE BOOK OF EZRA

## ಎಜ್ರನು

ಜೆರುಬ್ಬಾಬೆಲನ ಜೊತೆಯಲ್ಲಿ ಸೆರೆಯಿಂದ ಹಿಂದಕ್ಕೆ ಬಂದ ಯೆಹೂದ್ಯರು ದೇವಾಲಯವನ್ನು ತಿರಿಗಿ ಕಟ್ಟಿದ್ದು. 1—6.

ಅರಸನಾದ ಕೋರೆಷನು ಯೆಹೂದ್ಯರಿಗೆ ಸ್ವದೇಶಕ್ಕೆ ಹೋಗುವದಕ್ಕೂ ಯೆಹೋವನ ಆಲಯವನ್ನು ಕಟ್ಟುವದಕ್ಕೂ ಅಪ್ಪಣೆಕೊಟ್ಟದ್ದು.

1 ಪಾರಸಿಯ ಅರಸನಾದ ಕೋರೆಷನ ಮೊದಲನೆಯ
ವರುಷದಲ್ಲಿ ಯೆಹೋವನು ತಾನು ಯೆರೆಮೀಾಯನ
ಮುಖಾಂತರ ಹೇಳಿಸಿದ ವಾಕ್ಯವನ್ನು ನೆರವೇರಿಸುವದ
ಕ್ಕಾಗಿ ಆ ಪಾರಸಿಯ ರಾಜನಾದ ಕೋರೆಷನ ಮನ
ಸ್ಸನ್ನು ಪ್ರೇರಿಸಿದ್ದರಿಂದ ಅವನು ತನ್ನ ರಾಜ್ಯದಲ್ಲೆಲ್ಲಾ
2 ಡಂಗುರದಿಂದಲೂ ಪತ್ರಗಳಿಂದಲೂ—ಪಾರಸಿಯ ರಾಜ
ನಾದ ಕೋರೆಷನೆಂಬ ನನ್ನ ಮಾತನ್ನು ಕೇಳಿರಿ—ಪರ
ಲೋಕದೇವರಾದ ಯೆಹೋವನು ನನಗೆ ಭೂಲೋ
ಕದ ಎಲ್ಲಾ ರಾಜ್ಯಗಳನ್ನೂ ಕೊಟ್ಟು ತನಗೋಸ್ಕರ
ಯೆಹೂದದೇಶದ ಯೆರೂಸಲೇಮಿನಲ್ಲಿ ಆಲಯವನ್ನು
3 ಕಟ್ಟಿಸಬೇಕು ಎಂದು ಆಜ್ಞಾಪಿಸಿದ್ದಾನೆ. ನಿಮ್ಮಲ್ಲಿ
ಯಾರು ಆತನ ಪ್ರಜೆಗಳಾಗಿರುತ್ತಾರೋ ಅವರು
ಯೆಹೂದದೇಶದ ಯೆರೂಸಲೇಮಿಗೆ ಹೋಗಿ ಅಲ್ಲಿ
ವಾಸಿಸುತ್ತಿರುವ ಇಸ್ರಾಯೇಲ್‍ದೇವರಾದ ಯೆಹೋ
ವನಿಗೋಸ್ಕರ ಆಲಯವನ್ನು ಕಟ್ಟಲಿ; ಅವರ ದೇವರು
4 ಅವರ ಸಂಗಡ ಇರಲಿ. ಸೆರೆಯವರಲ್ಲಿ ಉಳಿದವರು
ಯಾವ ಊರುಗಳಲ್ಲಿ ಪ್ರವಾಸಿಗಳಾಗಿರುತ್ತಾರೋ
ಆ ಊರುಗಳವರು ಯೆರೂಸಲೇಮಿನ ದೇವಾಲಯ
ಕ್ಕೋಸ್ಕರ ಕಾಣಿಕೆಗಳನ್ನಲ್ಲದೆ ಬೆಳ್ಳಿಬಂಗಾರ, ಸರಕು,
ಪಶು ಇವುಗಳನ್ನೂ ಕೊಟ್ಟು ಅವರಿಗೆ ಸಹಾಯ
ಮಾಡಲಿ ಎಂದು ಪ್ರಕಟಿಸಿದನು.
5 ಆಗ ಯೆಹೂದ ಮತ್ತು ಬೆನ್ಯಾಮೀನ್ ಗೋತ್ರ
ಪ್ರಧಾನರಲ್ಲಿಯೂ ಯಾಜಕರಲ್ಲಿಯೂ ಲೇವಿಯರ
ಲ್ಲಿಯೂ ದೇವಪ್ರೇರಣೆಗೆ ಒಳಗಾದವರೆಲ್ಲರೂ ಯೆರೂ
ಸಲೇಮಿನಲ್ಲಿ ಯೆಹೋವನಿಗೋಸ್ಕರ ಆಲಯಕಟ್ಟು
ವದಕ್ಕಾಗಿ ಹೊರಟುಹೋದರು. ಅವರ ನೆರೆಯವರೆ
ಲ್ಲರೂ ಕಾಣಿಕೆಗಳನ್ನು ಕೊಟ್ಟದ್ದಲ್ಲದೆ ಅವರಿಗೆ ಬೆಳ್ಳಿ
ಯ ಸಾಮಾನು, ಬಂಗಾರ, ಸರಕು, ಪಶು, ಶ್ರೇಷ್ಠ
ವಸ್ತು ಇವುಗಳನ್ನೂ ಕೊಟ್ಟು ಸಹಾಯಮಾಡಿದರು.
ನೆಬೂಕದ್ನೆಚ್ಚರನು ಯೆರೂಸಲೇಮಿನಿಂದ ಕೊಳ್ಳೆ
ಯಾಗಿ ತಂದು ತನ್ನ ದೇವರ ಗುಡಿಯಲ್ಲಿಟ್ಟಿದ್ದ ಯೆ
ಹೋವನ ಆಲಯದ ಸಾಮಾನುಗಳನ್ನು ಪಾರಸಿಯ
ರಾಜನಾದ ಕೋರೆಷನು ಅಲ್ಲಿಂದ ತೆಗಿಸಿ ಖಜಾನದಾ
ರನಾದ ಮಿತ್ರದಾತನಿಗೆ ಒಪ್ಪಿಸಿದನು; ಇವನು ಅವು
ಗಳನ್ನು ಯೆಹೂದಪ್ರಭುವಾಗಿರುವ ಶೆಷ್ಬಚ್ಚರನಿಗೆ
ಲೆಕ್ಕಮಾಡಿ ಕೊಟ್ಟನು. ಆ ಸಾಮಾನುಗಳ ಲೆಕ್ಕ—
ಬಂಗಾರದ ಬೋಗುಣಿಗಳು ಮೂವತ್ತು; ಬೆಳ್ಳಿಯ
ಬೋಗುಣಿಗಳು ಒಂದು ಸಾವಿರ; 1) ಕತ್ತಿಗಳು ಇಪ್ಪ
ತ್ತೊಂಭತ್ತು; ಚಿನ್ನದ ಬಟ್ಟಲುಗಳು ಮೂವತ್ತು; ಎರ
ಡನೆಯ ತರಗತಿಯ ಬೆಳ್ಳೀ ಬಟ್ಟಲುಗಳು ನಾನೂರ
ಹತ್ತು; ಇತರ ಪಾತ್ರೆಗಳು ಒಂದು ಸಾವಿರ. ಬೆಳ್ಳಿ
ಬಂಗಾರದ ಎಲ್ಲಾ ಸಾಮಾನುಗಳ ಒಟ್ಟು ಸಂಖ್ಯೆಯು
ಐದು ಸಾವಿರದ ನಾನೂರು. ಶೆಷ್ಬಚ್ಚರನು ಸೆರೆಯಲ್ಲಿ
ದ್ದವರನ್ನು ಬಾಬೆಲಿನಿಂದ ಯೆರೂಸಲೇಮಿಗೆ ಕರ
ಕೊಂಡು ಬಂದಾಗ ಈ ಎಲ್ಲಾ ಸಾಮಾನುಗಳನ್ನು
ತೆಗೆದುಕೊಂಡು ಬಂದನು.

ಸೆರೆಯಿಂದ ತಿರಿಗಿ ಬಂದವರ ಖಾನೇಷುಮಾರಿ.

ಸೆರೆಯಿಂದ ತಿರಿಗಿ ಬಂದ [ಯೆಹೂದ] ಸಂಸ್ಥಾನದ
ವರ ಖಾನೇಷುಮಾರಿ.
ಬಾಬೆಲಿನ ಅರಸನಾದ ನೆಬೂಕದ್ನೆಚ್ಚರನಿಂದ ಬಾಬೆ
ಲಿಗೆ ಸೆರೆಯೊಯ್ಯಲ್ಪಟ್ಟವರಲ್ಲಿ ಯೆರೂಸಲೇಮಿಗೂ
ಯೆಹೂದಪ್ರಾಂತದ ಸ್ವಂತ ಪಟ್ಟಣಗಳಿಗೂ ಜೆರು
ಬ್ಬಾಬೆಲ್, ಯೇಷೂವ, ನೆಹೆಮೀಾಯ, ಸೆರಾಯ

1) ಅಥವಾ: ಧೂಪಾರತಿಗಳು.

ರೆಗೇಲಾಯ, ಮೊರ್ದೆಕೈ, ಬಿಲ್ಷಾನ್, ಮಿಸ್ಪಾರ್,
ಬಿಗ್ವೈ, ರೆಹೂಮ್, ಬಾಣ ಎಂಬ ನಾಯಕರೊಡನೆ,
ತಿರಿಗಿ ಬಂದವರು ಯಾರಂದರೆ —

ಸಾಧಾರಣರಾದ ಇಸ್ರಾಯೇಲ್ ಪುರುಷರ ಸಂಖ್ಯೆ—

3 ಪರೋಷಿನವರು 2172
4 ಶೆಫಟ್ಯನವರು 372
5 ಆರಹನವರು 775
6 ಪಹತ್‌ಮೋವಾಬಿನವರಾದ ಯೇಷೂವ
ಮತ್ತು ಯೋವಾಬ್ ಸಂತಾನದವರು 2812
7 ಏಲಾಮಿನವರು 1254
8 ಜತ್ತೂವಿನವರು 945
9 ಜಕ್ಕೈಯವರು 760
10 ಬಾನೀಯವರು 642
11 ಬೇಬೈಯವರು 623
12 ಅಜ್ಗಾದಿನವರು 1222
13 ಅದೋನೀಕಾಮಿನವರು 666
14 ಬಿಗ್ವೈಯವರು 2056
15 ಆದೀನನವರು 454
16 ಅಟೇರಿನವರಾದ ಹಿಜ್ಕೀಯನ ಸಂತಾನ
ದವರು 98
17 ಬೇಚೈಯವರು 323
18 ಯೋರನವರು 112
19 ಹಾಷುಮಿನವರು 223
20 ಗಿಬ್ಬಾರಿನವರು 95
21 ಬೇತ್ಲೆಹೇಮಿನವರು 123
22 ನೆಟೋಫ ಊರಿನವರು 56
23 ಅನಾತೋತ್ ಊರಿನವರು 128
24 ಅಜ್ಮಾವೆತಿನವರು 42
25 ಕಿರ್ಯತ್ಯಾರೀಮ್ ಕೆಫೀರ ಬೇರೋತ್
ಊರುಗಳವರು 743
26 ರಾಮಾ ಗೆಬ ಊರುಗಳವರು 621
27 ಮಿಕ್ಮಾಸಿನವರು 122
28 ಬೇತೇಲ್ ಆಯಿ ಎಂಬ ಊರುಗಳವರು 223
29 ನೆಬೋವಿನವರು 52
30 ಮಗ್ಬೀಷಿನವರು 156
31 ಬೇರೆ ಏಲಾಮಿನವರು 1254
32 ಹಾರಿಮುನವರು 320
33 ಲೋದ್, ಹಾದೀದ್, ಓನೋ ಎಂಬ
ಊರುಗಳವರು 725
34 ಯೆರಿಕೋವಿನವರು 345
35 ಸೆನಾಹನವರು 3630
36 ಯಾಜಕರಲ್ಲಿ — ಯೆದಾಯನವರಾದ
ಯೇಷೂವನ ಮನೆಯವರು 973
37 ಇಮ್ಮೇರನವರು 1052
38 ಪಷ್ಹೂರನವರು 1247
ಹಾರಿಮನವರು 1017 39
ಲೇವಿಯರಲ್ಲಿ — ಹೋದವ್ಯನವರಾದ 40
ಯೇಷೂವ, ಕದ್ಮೀಯೇಲ್ ಇವರ ಸಂತಾನ
ದವರು 74
ಗಾಯಕರಲ್ಲಿ — ಆಸಾಫ್ಯರು 128 41
ದ್ವಾರಪಾಲಕರಲ್ಲಿ — ಶಲ್ಲೂಮ್, ಆಟೇ 42
ರ್, ಟಲ್ಮೋನ್, ಅಕ್ಕೂಬ್, ಹಟೀಟ. ಶೋಬೈ
ಇವರ ಸಂತಾನದವರು ಒಟ್ಟು 139
ದೇವಸ್ಥಾನದಾಸರಲ್ಲಿ — ಜೀಹ, ಹಸೂಫ, 43
ಟಬ್ಬಾವೋತ್, ಕೇರೋಸ್, ಸೀಯಹಾ, ಪಾದೋನ್, 44
ಲೆಬಾನ, ಹಗಾಬ, ಅಕ್ಕೂಬ್, ಹಾಗಾಬ್, 45, 46
ಶಮ್ಲೈ, ಹಾನಾನ್, ಗಿದ್ದೇಲ್, ಗಹರ್, ರೆವಾಯ, 47
ರೆಚೀನ್, ನೆಕೋದ, ಗಜ್ಜಾಮ್, ಉಜ್ಜ, ಪಾಸೇಹ, 48, 49
ಬೇಸೈ, ಅಸ್ನ, ಮೆಗೂನೀಮ್, ನೆಫೀಸೀಮ್, 50
ಬಕ್ಬೂಕ್, ಹಕ್ಕೂಫ, ಹರ್ಹೂರ್, ಬಚ್ಲೂತ್, 51, 52
ಮೆಹೀದ, ಹರ್ಷ, ಬರ್ಕೋಸ್, ಸೀಸೆರ, ತೆಮಹ, 53
ನೆಚೀಹ, ಹಟೀಫ, ಇವರ ಸಂತಾನದವರೂ. 54
ಸೊಲೊಮೋನನ ದಾಸರಲ್ಲಿ — ಸೋಟೈ, 55
ಹಸ್ಸೋಫೆರೆತ್, ಪೆರೂದ, ಯಾಲ, ದರ್ಕೋನ್, 56
ಗಿದ್ದೇಲ್, ಶೆಫಟ್ಯ, ಹಟ್ಟೀಲ್, ಪೋಕೆರೆತ್ ಹಚ್ಚೆ 57
ಬಾಯಿಮ್, ಆಮೀ ಇವರ ಸಂತಾನದವರೂ.
ಎಲ್ಲಾ ದೇವಸ್ಥಾನದಾಸರೂ ಸೊಲೊಮೋನನ 58
ದಾಸರೂ ಒಟ್ಟು 392
ತೇಲ್ಮೆಲಹ, ತೇಲ್ಹರ್ಷ, ಕೆರೂಬಅದ್ದಾನ್, ಇಮ್ಮೇ 59
ರ್ ಎಂಬ ಊರುಗಳಿಂದ ಬಂದವರಾಗಿ ತಮ್ಮ
ಗೋತ್ರವಂಶಾವಳಿಗಳನ್ನು ತೋರಿಸಿ ತಾವು ಇಸ್ರಾ
ಯೇಲ್ಯರೆಂಬದನ್ನು ಸ್ಥಾಪಿಸಲಾರದವರಾದ ದೆಲಾ 60
ಯ, ಟೋಬೀಯ, ನೆಕೋದ, ಇವರ ಸಂತಾನ
ದವರು 652
ಯಾಜಕರಲ್ಲಿ — ಹಬಯ್ಯ, ಹಕ್ಕೋಚ್, ಬರ್ಜಿ 61
ಲ್ಲೈ ಇವರ ಸಂತಾನದವರು. (ಈ ಬರ್ಜಿಲ್ಲೈ ಎಂಬವನು
ಗಿಲ್ಯಾದ್ಯನಾದ ಬರ್ಜಿಲ್ಲೈಯ ಹೆಣ್ಣುಮಕ್ಕಳಲ್ಲೊಬ್ಬ
ಳನ್ನು ಮದುವೆಮಾಡಿಕೊಂಡು ಅವನ ಹೆಸರನ್ನೂ
ಇಟ್ಟುಕೊಂಡಿದ್ದನು.) ಇವರು ತಮ್ಮ ವಂಶಾವಳಿಪತ್ರ 62
ಗಳನ್ನು ಹುಡುಕಿದರೂ ಅವು ಸಿಕ್ಕದ ಕಾರಣ ಅಶುದ್ಧ
ರೆಂದು ಯಾಜಕೋದ್ಯೋಗದಿಂದ ತಳ್ಳಲ್ಪಟ್ಟರು. ಊ 63
ರೀಮ್ ತುಮ್ಮೀಮುಗಳ ಮೂಲಕ ದೈವನಿರ್ಣಯ
ವನ್ನು ತಿಳಿಸಬಲ್ಲವನಾದ ಯಾಜಕನು ಬರುವ ತನಕ
ಇವರು ಮಹಾಪರಿಶುದ್ಧ ಪದಾರ್ಥಗಳಲ್ಲಿ ಭೋಜನ
ಮಾಡಬಾರದೆಂಬದಾಗಿ 1) ದೇಶಾಧಿಪತಿಯು ತೀರ್ಪು
ಮಾಡಿದನು.
ಸರ್ವಸಮೂಹದವರ ಒಟ್ಟು ಸಂಖ್ಯೆಯು ನಾಲ್ವ 64
ತ್ತೆರಡು ಸಾವಿರದ ಮುನ್ನೂರರುವತ್ತು. ಈ ಸಂಖ್ಯೆ 65
ಯಲ್ಲಿ ಲೆಕ್ಕಿಸಲ್ಪಡದ ಅವರ ದಾಸದಾಸಿಯರು ಏಳು
ಸಾವಿರದ ಮುನ್ನೂರ ಮೂವತ್ತೇಳು ಮಂದಿ. ಅವ
ರಲ್ಲಿ ಗಾಯಕರೂ ಗಾಯಕಿಯರೂ ಇನ್ನೂರು ಮಂದಿ
ಇದ್ದರು. ಅವರಿಗೆ ಏಳು ನೂರ ಮೂವತ್ತಾರು ಕುದುರೆ 66
ಗಳೂ ಇನ್ನೂರ ನಾಲ್ವತ್ತೈದು ಹೇಸರಕತ್ತೆಗಳೂ

1) ಮೂಲ: ತಿರ್ಷಾತಾ.

67 ನಾನೂರ ಮೂವತ್ತೈದು ಒಂಟೆಗಳೂ ಆರು ಸಾವಿರದ
ಏಳು ನೂರ ಇಪ್ಪತ್ತು ಕತ್ತೆಗಳೂ ಇದ್ದವು.
68 ಗೋತ್ರಪ್ರಧಾನರಲ್ಲಿ ಕೆಲವರು ಯೆರೂಸಲೇಮಿನಲ್ಲಿ
ಯೆಹೋವನ ಆಲಯವಿದ್ದ ಸ್ಥಳಕ್ಕೆ ಬಂದಾಗ ದೇವಾ
ಲಯವನ್ನು ತಿರಿಗಿ ಅದರ ಸ್ಥಳದಲ್ಲಿ ಕಟ್ಟುವದಕ್ಕೋ
69 ಸ್ಕರ ಕಾಣಿಕೆಗಳನ್ನು ಕೊಟ್ಟರು. ಅವರು ತಮ್ಮ ಸಾಮ
ರ್ಥ್ಯಾನುಸಾರ ಕಟ್ಟಡದ ಭಂಡಾರಕ್ಕೆ ಕೊಟ್ಟದ್ದು—
ಅರುವತ್ತೊಂದು ಸಾವಿರ ಬಂಗಾರದ ಪವನುಗಳು,
ಎರಡು ಲಕ್ಷದ 1)ಐವತ್ತುಸಾವಿರ ತೊಲೆ ಬೆಳ್ಳಿ, ನೂರು
ಯಾಜಕವಸ್ತ್ರಗಳು.
70 ಯಾಜಕ, ಲೇವಿಯ, ಗಾಯಕ, ದ್ವಾರಪಾಲಕ,
ದೇವಸ್ಥಾನದಾಸ ಇವರೂ ಸಾಧಾರಣಜನರಲ್ಲಿ ಕೆಲ
ವರೂ ತಮತಮಗೆ ನೇಮಕವಾದ ಪಟ್ಟಣಗಳಲ್ಲಿ ವಾಸಿ
ಸಿದರು; ಬೇರೆ ಎಲ್ಲಾ ಇಸ್ರಾಯೇಲ್ಯರು ತಮ್ಮ ತಮ್ಮ
ಪಟ್ಟಣಗಳಲ್ಲಿ ವಾಸಿಸಿದರು.

ಇಸ್ರಾಯೇಲ್ಯರು ಯಜ್ಞವೇದಿಯನ್ನು ಕಟ್ಟಿದ್ದೂ ದೇವಾಲಯದ
ಅಸ್ತಿವಾರವನ್ನು ಹಾಕಿದ್ದೂ.

3 ತಮ್ಮ ತಮ್ಮ ಪಟ್ಟಣಗಳಲ್ಲಿ ವಾಸಿಸುತ್ತಿದ್ದ ಇಸ್ರಾ
ಯೇಲ್ಯರು ಏಳನೆಯ ತಿಂಗಳಿನಲ್ಲಿ ಏಕಮನಸ್ಸಿನಿಂದ
2 ಯೆರೂಸಲೇಮಿಗೆ ಕೂಡಿಬಂದರು. ಆಗ ದೇವರ
ಮನುಷ್ಯನಾದ ಮೋಶೆಯ ಧರ್ಮಶಾಸ್ತ್ರದಲ್ಲಿ ಬರೆ
ದಿರುವ ಪ್ರಕಾರ ಸರ್ವಾಂಗಹೋಮಗಳನ್ನು ಸಮರ್ಪಿ
ಸುವದಕ್ಕಾಗಿ ಯೋಚಾದಾಕನ ಮಗನಾದ ಯೇಷೂ
ವನೂ ಯಾಜಕರಾದ ಅವನ ಬಂಧುಗಳೂ ಶೆಯಲ್ತೀ
ಯೇಲನ ಮಗನಾದ ಜೆರುಬ್ಬಾಬೆಲನೂ ಅವನ ಬಂಧು
ಗಳೂ ಇಸ್ರಾಯೇಲ್‍ದೇವರ ಯಜ್ಞವೇದಿಯನ್ನು ತಿರಿಗಿ
3 ಕಟ್ಟುವದಕ್ಕೆ ಪ್ರಾರಂಭಿಸಿದರು. ಅವರು ಸುತ್ತಣ
ಪ್ರಾಂತಗಳ ಜನರಿಗೆ ಹೆದರಿಕೊಂಡಿದ್ದರಿಂದ ವೇದಿಯನ್ನು
ಅದರ ಸ್ಥಳದಲ್ಲಿ ಕಟ್ಟಿ ಅದರ ಮೇಲೆ ಯೆಹೋವನಿ
ಗೋಸ್ಕರ ಪ್ರಾತಸ್ಸಾಯಂಕಾಲಗಳ ಸರ್ವಾಂಗಹೋಮ
4 ಗಳನ್ನು ಅರ್ಪಿಸಿದರು. ಇದಲ್ಲದೆ ಶಾಸ್ತ್ರದಲ್ಲಿ ಬರೆ
ದಿರುವಂತೆ ಅವರು ಪರ್ಣಶಾಲೆಗಳ ಜಾತ್ರೆಯನ್ನು ಆಚ
ರಿಸಿ ದಿನಕ್ಕೆ ಇಷ್ಟಿಷ್ಟೆಂಬ ವಿಧಿಗನುಸಾರವಾಗಿ ಪ್ರತಿದಿನವೂ
5 ಸರ್ವಾಂಗಹೋಮಗಳನ್ನರ್ಪಿಸಿದರು. ಅಂದಿನಿಂದ ನಿತ್ಯ
ಸರ್ವಾಂಗಹೋಮವೂ ಅಮಾವಾಸ್ಯೆ, ಯೆಹೋವನ
ಎಲ್ಲಾ ಉತ್ಸವದಿನ ಇವುಗಳಲ್ಲಿ ನೇಮಕವಾದ ಸರ್ವಾಂ
ಗಹೋಮಗಳೂ ಜನರು ಸ್ವೇಚ್ಛೆಯಿಂದ ತಂದುಕೊಟ್ಟ
ಯಜ್ಞಗಳೂ ಯೆಹೋವನಿಗೆ ಸಮರ್ಪಣೆಯಾಗುತ್ತಾ
6 ಬಂದವು. ಏಳನೆಯ ತಿಂಗಳಿನ ಮೊದಲನೆಯ ದಿನದಿಂದ
ಯೆಹೋವನಿಗೆ ಸರ್ವಾಂಗಹೋಮಗಳನ್ನರ್ಪಿಸತೊಡ
ಗಿದರು.
ಆಗ ಯೆಹೋವನ ಆಲಯದ ಅಸ್ತಿವಾರವು ಇನ್ನೂ
7 ಹಾಕಲ್ಪಟ್ಟಿರಲಿಲ್ಲ. ಆದರೆ ಪಾರಸಿಯ ರಾಜನಾದ
ಕೋರೆಷನಿಂದ ಪಡಕೊಂಡ ಅಪ್ಪಣೆಯ ಮೇರೆಗೆ ಅವರು
ಕಲ್ಲುಕುಟಿಗ ಬಡಿಗಿ ಇವರಿಗೆ ಹಣವನ್ನೂ ಲೆಬ
ನೋನಿನಿಂದ ಸಮುದ್ರಮಾರ್ಗವಾಗಿ ಯೊಪ್ಪಕ್ಕೆ ದೇವ
ದಾರುಮರಗಳನ್ನು ತರತಕ್ಕ ಚೀದೋನ್ಯರು, ತೂರ್ಯ
ರು ಇವರಿಗೆ ಅನ್ನಪಾನಗಳನ್ನೂ ಎಣ್ಣೆಯನ್ನೂ ಕೊಟ್ಟಿ
ದ್ದರು. ಅವರು ಯೆರೂಸಲೇಮಿನ ದೇವಾಲಯಕ್ಕೆ
ಮುಟ್ಟಿದ ಎರಡನೆಯ ವರುಷದ ಎರಡನೆಯ ತಿಂಗಳಲ್ಲಿ
ಶೆಯಲ್ತಿಯೇಲನ ಮಗನಾದ ಜೆರುಬ್ಬಾಬೆಲ್, ಯೋ
ಚಾದಾಕನ ಮಗನಾದ ಯೇಷೂವ ಇವರೂ ಇವರ
ಸಹೋದರರಾದ ಇತರ ಯಾಜಕರೂ ಲೇವಿಯರೂ
ಸೆರೆಯಿಂದ ಯೆರೂಸಲೇಮಿಗೆ ತಿರಿಗಿ ಬಂದ ಬೇರೆ
ಎಲ್ಲರೂ ದೇವಾಲಯವನ್ನು ಕಟ್ಟುವದಕ್ಕೆ ಪ್ರಾರಂಭಿಸಿ
ಇಪ್ಪತ್ತು ವರುಷ ಮೊದಲುಗೊಂಡು ಹೆಚ್ಚು ವಯ
ಸ್ಸುಳ್ಳ ಲೇವಿಯರನ್ನು ಯೆಹೋವನ ಆಲಯವನ್ನು
ಕಟ್ಟುವವರ ಮೇಲ್ವಿಚಾರಣೆಗೆ ನೇಮಿಸಿದರು. ಕೂಡಲೆ
ಲೇವಿಯರಲ್ಲಿ 2)ಹೋದವ್ಯನ ಸಂತಾನದವರಾದ ಯೇ
ಷೂವನು ಅವನ ಮಕ್ಕಳು ಸಹೋದರರು, ಕದ್ಮೀ
ಯೇಲನು ಅವನ ಮಕ್ಕಳು, ಹೇನಾದಾದನ ಮಕ್ಕಳು
ಅವರ ಮಕ್ಕಳು ಬಂಧುಗಳು ಇವರೆಲ್ಲರೂ ಕೂಡಿ
ಕೊಂಡು ದೇವಾಲಯ ಕಟ್ಟುವವರ ಮೇಲ್ವಿಚಾರಕರಾಗಿ
ನಿಂತರು. ಕಟ್ಟುವವರು ಯೆಹೋವನ ಮಂದಿರದ ಅಸ್ತಿ
ವಾರವನ್ನು ಹಾಕಿದಾಗ ಇಸ್ರಾಯೇಲ್ಯರ ಅರಸನಾದ
ದಾವೀದನು ನೇಮಿಸಿದ ಕ್ರಮಕ್ಕನುಸಾರವಾಗಿ ಯೆ
ಹೋವನನ್ನು ಕೀರ್ತಿಸುವದಕ್ಕೋಸ್ಕರ ದೀಕ್ಷಾವಸ್ತ್ರ
ಭೂಷಿತರಾದ ಯಾಜಕರು ತುತೂರಿಗಳೊಡನೆಯೂ
ಆಸಾಫನ ಮಕ್ಕಳಾದ ಲೇವಿಯರು ತಾಳಗಳೊಡನೆ
ಯೂ ನಿಂತುಕೊಂಡು ಪರಸ್ಪರವಾಗಿ ಹಾಡುತ್ತಾ ಯೆ
ಹೋವನನ್ನು ಕೀರ್ತಿಸುತ್ತಾ—ಆತನು ಒಳ್ಳೆಯವ
ನು; ಆತನ ಕೃಪೆಯು ಇಸ್ರಾಯೇಲ್ಯರ ಮೇಲೆ
ಶಾಶ್ವತವಾದದ್ದೆಂದು ಕೃತಜ್ಞತಾಸ್ತುತಿಮಾಡಿದರು. ಯೆ
ಹೋವ ಕೀರ್ತನೆ ಕೇಳಿಸಿದ ಕೂಡಲೆ ಯೆಹೋವನ
ಆಲಯದ ಅಸ್ತಿವಾರವು ಹಾಕಲ್ಪಟ್ಟಿರುತ್ತದೆಂದು ಜನ
ರೆಲ್ಲರೂ ಉತ್ಸಾಹಧ್ವನಿಯಿಂದ ಆರ್ಭಟಿಸಿದರು. ಆದರೆ
ಯಾಜಕರಲ್ಲಿಯೂ ಲೇವಿಯರಲ್ಲಿಯೂ ಗೋತ್ರಪ್ರಧಾ
ನರಲ್ಲಿಯೂ ಅನೇಕರು ಅಂದರೆ ಮುಂಚಿನ ದೇವಾ
ಲಯವನ್ನು ನೋಡಿದ್ದ ಮುದುಕರು ತಮ್ಮ ಕಣ್ಣು
ಮುಂದೆ ದೇವಾಲಯದ ಅಸ್ತಿವಾರವು ಹಾಕಲ್ಪಡುವ
ದನ್ನು ನೋಡುವಾಗ ಬಹಳವಾಗಿ ಅತ್ತರು; ಬೇರೆ
ಹಲವರು ಹರ್ಷಧ್ವನಿಯಿಂದ ಆರ್ಭಟಿಸಿದರು. ಜನರು
ಮಹಾಧ್ವನಿಯಿಂದ ಆರ್ಭಟಿಸುತ್ತಿದ್ದದರಿಂದ ಹರ್ಷ
ಧ್ವನಿ ಯಾವದೋ ಅಳುವವರ ಧ್ವನಿ ಯಾವದೋ
ಗೊತ್ತಾಗಲಿಲ್ಲ. ಗದ್ದಲವು ಬಹುದೂರದ ವರೆಗೂ
ಕೇಳಿಸಿತು.

ಸಮಾರ್ಯದವರು ಕಟ್ಟುವದಕ್ಕೆ ಅಡ್ಡಿಮಾಡಿದ್ದು.

ಸೆರೆಯಿಂದ ತಿರಿಗಿ ಬಂದವರು ಇಸ್ರಾಯೇಲ್‍ದೇವ
ರಾದ ಯೆಹೋವನಿಗೋಸ್ಕರ ಮಂದಿರವನ್ನು ಕಟ್ಟು
ತ್ತಿರುತ್ತಾರೆಂಬದನ್ನು ಯೆಹೂದ್ಯರ ಮತ್ತು ಬೆನ್ಯಾಮೀ
ನ್ಯರ ವಿರೋಧಿಗಳು ಕೇಳಿದಾಗ ಅವರು ಜೆರುಬ್ಬಾಬೆಲನ
ಬಳಿಗೂ ಗೋತ್ರಪ್ರಧಾನರ ಬಳಿಗೂ ಬಂದು ಅವರಿಗೆ—

1) ಮೂಲ: ಐದು ಸಾವಿರ ಮಾನೆ. 2) ಪಾಠಾಂತರ: ಯೆಹೂದನ.

ನಿಮ್ಮೊಡನೆ ಕಟ್ಟುವದಕ್ಕೆ ನಮಗೂ ಅಪ್ಪಣೆಯಾಗಲಿ;
ಯಾಕಂದರೆ ನಿಮ್ಮಂತೆ ನಾವೂ ನಿಮ್ಮ ದೇವರ ಭಕ್ತ
ರಾಗಿದ್ದೇವೆ; ನಮ್ಮನ್ನು ಇಲ್ಲಿ ತಂದಿರಿಸಿದ ಅಶ್ಶೂರದ
ಅರಸನಾದ ಏಸರ್ಹದ್ದೋನನ ಕಾಲದಿಂದ ನಾವು
ಆತನಿಗೇ 1)ಯಜ್ಞಾರ್ಪಣೆಮಾಡುತ್ತಾ ಬಂದಿದ್ದೇವೆ
3 ಎಂದು ಹೇಳಿದರು. ಆಗ ಜೆರುಬ್ಬಾಬೆಲ್, ಯೇಷೂವ
ಇವರೂ ಬೇರೆ ಇಸ್ರಾಯೇಲ್ ಗೋತ್ರಪ್ರಧಾನರೂ
ಅವರಿಗೆ—ನೀವು ನಮ್ಮ ದೇವರ ಆಲಯವನ್ನು ಕಟ್ಟು
ವದರಲ್ಲಿ ನಮ್ಮೊಡನೆ ಸೇರಲೇ ಕೂಡದು; ಪಾರಸಿಯ
ರಾಜನಾದ ಕೋರೆಷನಿಂದ ನಮಗಾದ ಅಪ್ಪಣೆಯ
ಮೇರೆಗೆ ನಾವೇ ಇಸ್ರಾಯೇಲ್‌ದೇವರಾದ ಯೆಹೋ
ವನ ಆಲಯವನ್ನು ಕಟ್ಟುತ್ತೇವೆ ಎಂದು ಉತ್ತರ
4 ಕೊಟ್ಟರು. ಆಗ ಆ ದೇಶನಿವಾಸಿಗಳು ಯೆಹೂದ್ಯ
ರನ್ನು ಕೈಗುಂದಿಸಿ ಕಟ್ಟದ ಹಾಗೆ ಬೆದರಿಸಿದ್ದಲ್ಲದೆ
5 ಅವರ ಉದ್ದೇಶವನ್ನು ಕೆಡಿಸುವದಕ್ಕೋಸ್ಕರ ಹಣ
ಕೊಟ್ಟು ವಕೀಲರನ್ನು ಇಟ್ಟುಕೊಂಡರು. ಪಾರಸಿಯ
ರಾಜನಾದ ಕೋರೆಷನ ಕಾಲ ಮೊದಲುಗೊಂಡು ಪಾರ
ಸಿಯ ರಾಜನಾದ ದಾರ್ಯಾವೆಷನ ಆಳಿಕೆಯ ವರೆಗೂ
ಈ ಪ್ರಕಾರ ನಡೆಯಿತು.

6 ಅಹಷ್ವೇರೋಷನ ಆಳಿಕೆಯ ಪ್ರಾರಂಭದಲ್ಲಿ ಅವ
ರು ಯೆಹೂದದಲ್ಲಿಯೂ ಯೆರೂಸಲೇಮಿನಲ್ಲಿಯೂ
ವಾಸಿಸುವವರಿಗೆ ವಿರೋಧವಾಗಿ ಆಪಾದನಪತ್ರವನ್ನು
ಬರೆದರು.

7 ಮತ್ತು ಅರ್ತಷಸ್ತನ ಕಾಲದಲ್ಲಿ ಬಿಷ್ಲಾಮ್, ಮಿತ್ರ
ದಾತ, ಟಾಬೆಯೇಲ್ ಈ ಮೊದಲಾದವರು ಪಾರಸಿಯ
ರಾಜನಾದ ಅರ್ತಷಸ್ತನಿಗೆ ಬರೆದರು. ಆ ಪತ್ರವು
ಅರಾಮ್ಯ ಲಿಪಿಯಲ್ಲಿಯೂ ಅರಾಮ್ಯ ಭಾಷೆಯಲ್ಲಿ
ಯೂ ಇತ್ತು.

8 ದೇಶಾಧಿಪತಿಯಾದ ರೆಹೂಮ್, ಲೇಖಕನಾದ
ಶಿಂಷೈ ಇವರೂ ಯೆರೂಸಲೇಮಿಗೆ ವಿರೋಧವಾಗಿ
ಮುಂದಿನ ಕಾಗದವನ್ನು ಬರೆದು ಅರ್ತಷಸ್ತನಿಗೆ ಕಳು
9 ಹಿಸಿದರು. ಅದರಲ್ಲಿ—ದೇಶಾಧಿಪತಿಯಾದ ರೆಹೂಮ್,
ಲೇಖಕನಾದ ಶಿಂಷೈ ಇವರೂ ಇವರ ಜೊತೆಗಾರರಾದ
ದಿನಾಯರು, ಅಪರ್ಸತ್ಕಾಯರು, ಟರ್ಪಲಾಯರು,
ಅಪಾರ್ಸಾಯರು, ಯೆರೆಕ್ಯರು, ಬಾಬೆಲಿನವರು, ಶೂಷ
10 ನಿನವರು, ದೆಹಾಯರು, ಏಲಾಮ್ಯರು ಇವರೂ ಮಹಾ
ಶ್ರೀಮತ್ ಆಸೆನಪ್ಪರನು ಕರತಂದು ಸಮಾರ್ಯಪಟ್ಟಣ
ದಲ್ಲಿ ಮತ್ತು ಹೊಳೆಯ ಈಚೆಗಿರುವ ಬೇರೆ ಊರು
ಗಳಲ್ಲಿ ಇರಿಸಿದ ಇತರ ಜನರೂ ಇತ್ಯಾದಿ ಶಿರೋಲೇಖ.
11 ಅವರು ಅರಸನಿಗೆ ಕಳುಹಿಸಿದ ಪತ್ರದ ಪ್ರತಿಯು—
ಅರ್ತಷಸ್ತರಾಜರಿಗೆ, ಖಾವಂದರ ಸೇವಕರಾದ ಹೊಳೆಯ
12 ಈಚೆಯವರು. ಅದಾಗಿ ಸನ್ನಿಧಿಯಿಂದ ನಮ್ಮ ಬಳಿಗೆ
ಬಂದ ಯೆಹೂದ್ಯರು ಯೆರೂಸಲೇಮನ್ನು ಸೇರಿ ರಾಜ
ಕಂಟಕವಾದ ಆ ಕೆಟ್ಟ ಪಟ್ಟಣವನ್ನೂ ಅದರ ಪೌಳಿ
ಗೋಡೆಯನ್ನೂ ತಿರಿಗಿ ಕಟ್ಟುವದಕ್ಕೆ ಪ್ರಾರಂಭಿಸಿ ಪೌಳಿ
ಗೋಡೆಯ ಅಸ್ತಿವಾರವನ್ನು ಜೀರ್ಣೋದ್ಧಾರಮಾಡಿ
ದ್ದಾರೆ ಎಂಬದಾಗಿ ನಾವು ರಾಜರಿಗೆ ಅರಿಕೆಮಾಡಿಕೊಳ್ಳು
ತ್ತೇವೆ. ಆ ಪಟ್ಟಣವನ್ನೂ ಅದರ ಗೋಡೆಗಳನ್ನೂ ಕಟ್ಟು 13
ವದು ಕೊನೆಗಾಣುವದಾದರೆ ಅವರು ಕಪ್ಪ ತೆರಿಗೆ
ಸುಂಕಗಳನ್ನು ಕೊಡಲಿಕ್ಕಿಲ್ಲ. ಮತ್ತು ಕಡೆಯಲ್ಲಿ
ಅರಸರಿಗೆ ನಷ್ಟವುಂಟಾಗುವದೆಂದು ಖಾವಂದರಿಗೆ ತಿಳಿ
ದಿರಲಿ. ನಾವಂತು ಅರಮನೆಯ ಉಪ್ಪನ್ನು ಉಣ್ಣುವವ 14
ರಾದದರಿಂದ ಅರಸರಿಗೆ ಅಪಮಾನವುಂಟಾಗುವದನ್ನು
ನೋಡಿ ಸುಮ್ಮನಿರುವದು ಉಚಿತವಲ್ಲವೆಂದು ತಿಳಿದು
ಅರಸರಿಗೆ ಈ ಪತ್ರಮೂಲಕವಾಗಿ ವರ್ತಮಾನಕಳುಹಿಸಿ
ದ್ದೇವೆ. ಈ ವಿಷಯವಾಗಿ ತಾವು ತಮ್ಮ ತಂದೆತಾತಂದಿರ 15
ಚರಿತ್ರಗ್ರಂಥದಲ್ಲಿ ಪರಿಶೋಧಿಸಬೇಕೆಂಬದು ನಮ್ಮ ಅಭಿ
ಪ್ರಾಯ. ಆ ಪಟ್ಟಣವು ರಾಜಕಂಟಕವಾದ ಪಟ್ಟಣವು,
ಅರಸರಿಗೂ ಸಂಸ್ಥಾನಗಳಿಗೂ ತೊಂದರೆಹುಟ್ಟಿಸು
ವಂಥದು, ಪೂರ್ವಕಾಲದಿಂದಲೇ ದಂಗೆಯೆಬ್ಬಿಸುವಂಥ
ದು ಎಂಬದೂ ಆ ಕಾರಣದಿಂದಲೇ ಹಾಳುಮಾಡ
ಲ್ಪಟ್ಟಿತೆಂಬದೂ ಆ ಚರಿತ್ರಗ್ರಂಥದಲ್ಲಿ ಕಂಡುಬರು
ವದು. ಆ ಪಟ್ಟಣವನ್ನೂ ಅದರ ಗೋಡೆಗಳನ್ನೂ 16
ತಿರಿಗಿ ಕಟ್ಟುವದಾದರೆ ತಮಗೆ ಹೊಳೆಯ ಈಚೆಯಲ್ಲಿ
ಒಂದು ಅಂಶವೂ ಉಳಿಯದು ಎಂಬದಾಗಿ ಅರಸರಿಗೆ
ಅರಿಕೆಮಾಡಿಕೊಳ್ಳುತ್ತೇವೆ ಎಂಬದೇ.

ಅರಸನು ಅವರಿಗೆ ಕೊಟ್ಟ ಉತ್ತರವು—ದೇಶಾಧಿ 17
ಪತಿಯಾದ ರೆಹೂಮ್, ಲೇಖಕನಾದ ಶಿಂಷೈ ಇವ
ರಿಗೂ ಸಮಾರ್ಯದಲ್ಲಿರುವ ಅವರ ಜೊತೆಗಾರರಿಗೂ
ಹೊಳೆಯ ಆಚೆಯಲ್ಲಿರುವ ಇತರರಿಗೂ ಕ್ಷೇಮ ಇತ್ಯಾ
ದಿ. ನೀವು ಕಳುಹಿಸಿದ ಪತ್ರವು ಸನ್ನಿಧಿಯಲ್ಲಿ ಚೆನ್ನಾಗಿ 18
ಪಠನವಾಯಿತು. ನನ್ನ ಆಜ್ಞಾನುಸಾರ ವಿಚಾರಣೆ 19
ಯಾಗುವಲ್ಲಿ ಆ ಪಟ್ಟಣದವರು ಪೂರ್ವಕಾಲದಿಂದಲೇ
ಅರಸರಿಗೆ ವಿರೋಧವಾಗಿ ತಿರುಗಿಬೀಳುತ್ತಾ ದ್ರೋಹ
ಮಾಡುತ್ತಾ ದಂಗೆಯೆಬ್ಬಿಸುತ್ತಾ ಇದ್ದದ್ದಲ್ಲದೆ ಯೆರೂ 20
ಸಲೇಮಿನಲ್ಲಿ ಬಲಿಷ್ಠರಾಜರು ಆಳುತ್ತಾ ಹೊಳೆಯಾ
ಚೆಯ ಎಲ್ಲಾ ಪ್ರದೇಶಗಳಲ್ಲಿ ಅಧಿಕಾರನಡಿಸುತ್ತಾ
ಕಪ್ಪ ತೆರಿಗೆ ಸುಂಕಗಳನ್ನು ತೆಗೆದುಕೊಳ್ಳುತ್ತಾ ಇದ್ದ
ರೆಂದು ಕಂಡುಬಂತು. ಆದದರಿಂದ ಆ ಮನುಷ್ಯರನ್ನು 21
ತಡಿಸಬೇಕೆಂತಲೂ ನನ್ನ ಅಪ್ಪಣೆಯಾಗುವ ವರೆಗೆ
ಆ ಪಟ್ಟಣವನ್ನು ಕಟ್ಟಗೊಡಬಾರದೆಂತಲೂ ಪ್ರಕಟಿ
ಸಿರಿ. ರಾಜರಿಗೆ ಹಾನಿಯುಂಟಾಗದ ಹಾಗೆ ಜಾಗರೂ 22
ಕತೆಯಿಂದಿರಿ, ಆಲಸ್ಯಮಾಡಬೇಡಿರಿ ಎಂಬದೇ.

ಅರಸನಾದ ಅರ್ತಷಸ್ತನ ಪತ್ರದ ಪ್ರತಿಯು ರೆಹೂ 23
ಮ್, ಲೇಖಕನಾದ ಶಿಂಷೈ ಇವರ ಮುಂದೆಯೂ ಇವರ
ಜೊತೆಗಾರರ ಮುಂದೆಯೂ ಪಠನವಾದ ಕೂಡಲೆ
ಅವರು ಶೀಘ್ರವಾಗಿ ಯೆರೂಸಲೇಮಿಗೆ ಹೋಗಿ ಬಲಾ
ತ್ಕಾರದಿಂದಲೂ ಅಧಿಕಾರದಿಂದಲೂ ಯೆಹೂದ್ಯರನ್ನು
ತಡೆದರು.

ಅಂದಿನಿಂದ ಪಾರಸಿಯ ರಾಜನಾದ ದಾರ್ಯಾ 24
ವೆಷನ ಆಳಿಕೆಯ ಎರಡನೆಯ ವರುಷದ ವರೆಗೂ ಯೆ
ರೂಸಲೇಮಿನ ದೇವಾಲಯವನ್ನು ಕಟ್ಟುವ ಕೆಲಸವು
ನಿಂತುಹೋಯಿತು.

---

1) ಪಾಠಾಂತರ: ಯಜ್ಞಮಾಡುತ್ತಾ ಬಂದಿಲ್ಲ.

ಯೆಹೂದ್ಯರು ಪಾರಸಿಯ ರಾಜನಾದ ದಾರ್ಯಾವೆಷನ
ಕಾಲದಲ್ಲಿ ದೇವಾಲಯಕಟ್ಟುವದಕ್ಕೆ ತಿರಿಗಿ
ಕೈಹಾಕಿದ್ದು.

5 ಆಗ ಪ್ರವಾದಿಗಳಾದ ಹಗ್ಗಾಯನೂ ಇದ್ದೋವಿನ
ಮಗನಾದ ಜೆಕರ್ಯನೂ ಇಸ್ರಾಯೇಲ್‍ದೇವರಿಂದ
ಪ್ರೇರಿತರಾಗಿ ಆತನ ಹೆಸರಿನಲ್ಲಿ ಯೆಹೂದದ ಮತ್ತು
ಯೆರೂಸಲೇಮಿನ ಯೆಹೂದ್ಯರನ್ನು ಪ್ರಬೋಧಿಸಲು
2 ಶೆಯಲ್ತಿಯೇಲನ ಮಗನಾದ ಜೆರುಬ್ಬಾಬೆಲ್, ಯೋ
ಚಾದಾಕನ ಮಗನಾದ ಯೇಷೂವ ಇವರು ಯೆರೂ
ಸಲೇಮಿನ ದೇವಾಲಯವನ್ನು ಕಟ್ಟಿಸುವದಕ್ಕೆ ಪ್ರಾ
ರಂಭಿಸಿದರು; ದೇವಪ್ರವಾದಿಗಳು ಅವರೊಡನಿದ್ದು
3 ಅವರಿಗೆ ಸಹಾಯಮಾಡುತ್ತಿದ್ದರು. ಆ ಸಮಯ
ದಲ್ಲಿ ಹೊಳೆಯ ಈಚೆಯ ಪ್ರದೇಶಗಳ ಅಧಿಪತಿಯಾದ
ತತ್ತೆನೈಯೂ ಶೆತಬೋರ್ಜೆನೈಯೂ ಇವರ ಜೊತೆಗಾ
ರರೂ ಅವರ ಬಳಿಗೆ ಬಂದು ಅವರನ್ನು—ಈ 1)ಅಸ್ತಿ
ವಾರವನ್ನು ಸರಿಪಡಿಸಿ ಈ ಆಲಯವನ್ನು ಕಟ್ಟುವ
ದಕ್ಕೆ ನಿಮಗೆ ಅಪ್ಪಣೆಕೊಟ್ಟವರು ಯಾರು ಎಂದು
4 ಕೇಳಿದ ಮೇಲೆ ಕಟ್ಟಡವನ್ನು ಕಟ್ಟುವವರ ಹೆಸರು
5 ಗಳಾವವೆಂದು 2)ವಿಚಾರಿಸಿದರು. ಯೆಹೂದ್ಯರ ಹಿರಿ
ಯರು ತಮ್ಮ ದೇವರ ಕಟಾಕ್ಷಕ್ಕೆ ಪಾತ್ರರಾಗಿದ್ದದ್ದ
ರಿಂದ ವಿಚಾರಿಸುವದಕ್ಕೆ ಬಂದವರು ಅವರಿಗೆ ಅಡ್ಡಿ
ಮಾಡದೆ ತಾವು ಇದರ ವಿಷಯವಾಗಿ ದಾರ್ಯಾವೆಷ
ನಿಗೆ ವರ್ತಮಾನ ಮುಟ್ಟಿಸಿ ಉತ್ತರವನ್ನು ಬರೆದು
ಕಳುಹಿಸುವೆವೆಂದು ಹೇಳಿ ಹೋದರು.

6 ಹೊಳೆಯ ಈಚೆಯ ಪ್ರದೇಶಗಳ ಅಧಿಪತಿಯಾದ
ತತ್ತೆನೈಯೂ ಶೆತಬೋರ್ಜೆನೈಯೂ ಹೊಳೆಯ ಈಚೆ
ಯಲ್ಲಿ ಅವನ ಜೊತೆಗಾರರಾದ ಅಪರ್ಸತ್ಕಾಯರೂ
ಅರಸನಾದ ದಾರ್ಯಾವೆಷನಿಗೆ ಕಳುಹಿಸಿದ ಪತ್ರದ
7 ಪ್ರತಿಯು. ಅವರು ಅರಸನಿಗೆ ಕಳುಹಿಸಿದ ಪತ್ರದ
ಲ್ಲಿದ್ದದ್ದೇನಂದರೆ—

8 ದಾರ್ಯಾವೆಷರಾಜರಿಗೆ ಸರ್ವಥಾ ಕ್ಷೇಮ. ನಾವು
ಯೆಹೂದಸೀಮೆಗೆ ಹೋಗಿ ಮಹೋನ್ನತದೇವರ ಆಲ
ಯವನ್ನು ನೋಡಿದೆವೆಂಬದಾಗಿ ರಾಜರಿಗೆ ಅರಿಕೆ
ಮಾಡುತ್ತೇವೆ. ಆ ಆಲಯವನ್ನು ದೊಡ್ಡ ಕಲ್ಲುಗ
ಳಿಂದ ಕಟ್ಟುತ್ತಾ ಗೋಡೆಗಳ ಮೇಲೆ ತೊಲೆಗಳನ್ನಿಡುತ್ತಾ
ಇದ್ದಾರೆ. ಈ ಕೆಲಸವು ಜಾಗರೂಕತೆಯಿಂದ ಮುಂದ
9 ರಿದು ಅವರ ಕೈಯಿಂದ ಬೆಳೆಯುತ್ತದೆ. ಅಲ್ಲಿನ ಹಿರಿ
ಯರ ಹತ್ತಿರ—ಈ 1)ಅಸ್ತಿವಾರವನ್ನು ಹಾಕಿ ಈ ಆಲ
ಯವನ್ನು ಕಟ್ಟುವದಕ್ಕೆ ನಿಮಗೆ ಅಪ್ಪಣೆಕೊಟ್ಟವರು
10 ಯಾರು ಎಂದು ವಿಚಾರಮಾಡಿದ್ದಲ್ಲದೆ ಅವರಲ್ಲಿ
ಪ್ರಧಾನರಾದವರು ಇಂಥಿಂಥವರೆಂದು ತಮಗೆ ಬರೆದು
ತಿಳಿಸುವದಕ್ಕೋಸ್ಕರ ಅವರ ಹೆಸರುಗಳನ್ನು ಕೇಳಿದೆವು.
11 ಅವರು ನಮಗೆ—

ನಾವು ಪರಲೋಕಭೂಲೋಕಗಳ ದೇವರ
ಸೇವಕರು. ಅನೇಕಾನೇಕ ವರುಷಗಳ ಹಿಂದೆ
ಕಟ್ಟಿದ್ದ ಆಲಯವನ್ನು ತಿರಿಗಿ ಕಟ್ಟುತ್ತಿರುತ್ತೇವೆ.
ಇಸ್ರಾಯೇಲ್ಯರ ಒಬ್ಬ ಮಹಾರಾಜನು ಅದನ್ನು
ಕಟ್ಟಿಸಿ ತೀರಿಸಿದ್ದನು. ಆದರೆ ನಮ್ಮ ಪೂರ್ವಿಕರು 12
ಪರಲೋಕದೇವರನ್ನು ರೇಗಿಸಿದ್ದರಿಂದ ಆತನು
ಅವರನ್ನು ಬಾಬೆಲಿನ ಕಸ್ದೀಯ ರಾಜನಾದ ನೆಬೂ
ಕದ್ನೆಚ್ಚರನ ಕೈಗೆ ಒಪ್ಪಿಸಿಕೊಟ್ಟನು. ಅವನು
ಈ ಆಲಯವನ್ನು ಹಾಳುಮಾಡಿ ಜನರನ್ನು ಸೆರೆ
ಹಿಡಿದು ಬಾಬೆಲಿಗೆ ಒಯ್ದನು. ಆದರೆ ಬಾಬೆಲಿನ 13
ಅರಸನಾದ ಕೋರೆಷನು ತನ್ನ ಆಳಿಕೆಯ ಮೊದ
ಲನೆಯ ವರುಷದಲ್ಲಿ ಈ ದೇವಾಲಯವನ್ನು ತಿರಿಗಿ
ಕಟ್ಟುವದಕ್ಕೆ ಅಪ್ಪಣೆಕೊಟ್ಟದ್ದಲ್ಲದೆ ನೆಬೂಕ 14
ದ್ನೆಚ್ಚರನು ಯೆರೂಸಲೇಮಿನ ದೇವಾಲಯ
ದಿಂದ ತೆಗೆದುಕೊಂಡುಹೋಗಿ ಬಾಬೆಲಿನ ದೇವಾ
ಲಯದಲ್ಲಿಟ್ಟಿದ್ದ ಬೆಳ್ಳಿಬಂಗಾರದ ದೇವಸ್ಥಾನ
ಪಾತ್ರೆಗಳನ್ನು ಅಲ್ಲಿಂದ ತೆಗಿಸಿ ತಾನು ದೇಶಾಧಿಪತಿ
ಯನ್ನಾಗಿ ನೇಮಿಸಿದ ಶೆಷ್ಬಚ್ಚರನೆಂಬವನ ವಶಕ್ಕೆ
ಕೊಟ್ಟು ಅವನಿಗೆ—ಈ ಸಾಮಾನುಗಳನ್ನು ಯೆ 15
ರೂಸಲೇಮಿನ ದೇವಾಲಯದಲ್ಲಿಡುವದಕ್ಕೋಸ್ಕರ
ತೆಗೆದುಕೊಂಡುಹೋಗಿ ಆ ದೇವಾಲಯವನ್ನು
ತಿರಿಗಿ ಅದರ ಸ್ಥಳದಲ್ಲಿ ಕಟ್ಟಿಸು ಎಂದು ಆಜ್ಞಾ
ಪಿಸಿದನು. ಆಗ ಆ ಶೆಷ್ಬಚ್ಚರನು ಬಂದು ಯೆರೂ 16
ಸಲೇಮಿನ ದೇವಾಲಯದ ಅಸ್ತಿವಾರವನ್ನು ಹಾಕಿ
ದನು. ಅಂದಿನಿಂದ ಇಂದಿನ ವರೆಗೂ ಕಟ್ಟುವ
ಕೆಲಸವು ನಡೆಯುತ್ತಿರುತ್ತದೆ. ಇನ್ನೂ ತೀರಲಿಲ್ಲ
ಎಂಬದಾಗಿ ಉತ್ತರಕೊಟ್ಟರು.

ಅರಸರಿಗೆ ಸರಿತೋಚುವದಾದರೆ ಯೆರೂಸಲೇ 17
ಮಿನ ಈ ದೇವಾಲಯವನ್ನು ತಿರಿಗಿ ಕಟ್ಟುವದಕ್ಕೆ
ಅರಸನಾದ ಕೋರೆಷನಿಂದ ಅಪ್ಪಣೆದೊರಕಿದ್ದು ಸತ್ಯ
ವೋ ಎಂಬದರ ವಿಷಯವಾಗಿ ಬಾಬೆಲಿನ ರಾಜಭಂಡಾ
ರದಲ್ಲಿ ಹುಡುಕಿ ನೋಡಲಿ. ಮತ್ತು ಈ ಸಂಗತಿ
ಯನ್ನು ಕುರಿತು ರಾಜರ ಚಿತ್ತವೇನೆಂಬದು ನಮಗೆ
ತಿಳಿಸೋಣವಾಗಲಿ ಎಂಬದೇ.

ಯೆಹೂದ್ಯರು ರಾಜಾಜ್ಞೆಯನ್ನು ಪಡಕೊಂಡು ದೇವಾಲಯವನ್ನು
ತೀರಿಸಿ ಪ್ರತಿಷ್ಠಿಸಿದ್ದು.

6 ಅರಸನಾದ ದಾರ್ಯಾವೆಷನ ಆಜ್ಞಾನುಸಾರವಾಗಿ
ಗ್ರಂಥಸಂಗ್ರಹವಾಗಿದ್ದ ಬಾಬೆಲಿನ ಭಂಡಾರದಲ್ಲಿ
ಹುಡುಕಿ ನೋಡಿದಾಗ ಮೇದ್ಯ ಸಂಸ್ಥಾನದಲ್ಲಿರುವ 2
ಅಹ್ಮೆತಾ ರಾಜಧಾನಿಯಲ್ಲಿ ಒಂದು ಸುರುಳಿ ಸಿಕ್ಕಿತು.
ಅದರಲ್ಲಿ—

ಅರಸನಾದ ಕೋರೆಷನ ಮೊದಲನೆಯ ವರುಷದಲ್ಲಿ 3
ಅರಸನಾದ ಕೋರೆಷನು ಯೆರೂಸಲೇಮಿನ ದೇವಾ
ಲಯದ ವಿಷಯ ಕೊಟ್ಟ ಅಪ್ಪಣೆ—ಬಲವಾದ ಅಸ್ತಿ
ವಾರವನ್ನು ಹಾಕಿ ಯಜ್ಞಸಮರ್ಪಣೆಗಾಗಿ ಆಲಯ
ವನ್ನು ತಿರಿಗಿ ಕಟ್ಟಬೇಕು. ಅದರ ಎತ್ತರ ಅರುವತ್ತು
ಮೊಳವೂ ಅಗಲ ಅರುವತ್ತು ಮೊಳವೂ ಇರಬೇಕು.
ದೊಡ್ಡ ಕಲ್ಲುಗಳ ಮೂರು ವರಸೆಗಳಾದ ಮೇಲೆ 4
ಹೊಸ ಮರದ ಒಂದು ವರಸೆಯನ್ನು ಹಾಕಿ ಕಟ್ಟ

1) ಅಥವಾ: ಗೋಡೆಯನ್ನು. 2) ಪಾಠಾಂತರ: ವಿಚಾರಿಸಿದೆವು.

ಬೇಕು. ವೆಚ್ಚವೆಲ್ಲಾ ರಾಜಭಂಡಾರದಿಂದ ಕೊಡಲ್ಪಡು
5 ವದು. ಇದಲ್ಲದೆ ನೆಬೂಕದ್ನೆಚ್ಚರನು ಯೆರೂಸಲೇ
ಮಿನ ದೇವಾಲಯದಿಂದ ಬಾಬೆಲಿಗೆ ತೆಗೆದುಕೊಂಡು
ಬಂದ ಬೆಳ್ಳಿಬಂಗಾರದ ದೇವಸ್ಥಾನಪಾತ್ರೆಗಳನ್ನು ತಿರಿಗಿ
ಕೊಡಬೇಕು. ಅವುಗಳನ್ನೆಲ್ಲಾ ಮೊದಲಿದ್ದ ಸ್ಥಳಕ್ಕೆ
ಅಂದರೆ ಯೆರೂಸಲೇಮಿನ ದೇವಾಲಯಕ್ಕೆ ತೆಗೆದು
ಕೊಂಡು ಹೋಗಿ ಅಲ್ಲಿಡಬೇಕು ಎಂಬದಾಗಿ ಬರೆ
ದಿತ್ತು.
6 [ಆಗ ದಾರ್ಯಾವೆಷನು ಬರೆದು ಕಳುಹಿಸಿದ್ದೇ
ನಂದರೆ—] ಹೊಳೆಯಾಚೆಯ ಪ್ರದೇಶಗಳ ಅಧಿಪತಿ
ಯಾದ ತತ್ತೆನೈ, ಶೆತಬೋರ್ಜೆನೈ, ಹೊಳೆಯಾಚೆ
ಯಲ್ಲಿ ಇವರ ಜೊತೆಗಾರರಾದ ಅಪರ್ಸತ್ಕಾಯರು
ಇವರಿಗೆ—ನೀವು ಅವರ ಗೊಡವೆಗೆ ಹೋಗಬೇಡಿರಿ.
7 ಆ ದೇವಾಲಯವನ್ನು ಕಟ್ಟುವ ಕೆಲಸಕ್ಕೆ ಅಡ್ಡಿಮಾಡ
ಬೇಡಿರಿ; ಯೆಹೂದ ದೇಶಾಧಿಪತಿಯು, ಯೆಹೂದ್ಯರ
ಹಿರಿಯರು ಇವರೇ ಅದನ್ನು ಅದರ ಸ್ಥಳದಲ್ಲಿ ಕಟ್ಟಲಿ.
8 ಆ ದೇವಾಲಯವನ್ನು ಕಟ್ಟುವದಕ್ಕಾಗಿ ನೀವು ಯೆ
ಹೂದ್ಯರ ಹಿರಿಯರಿಗೆ ರಾಜರ ಸೊತ್ತಿನಿಂದ ಅಂದರೆ
ಹೊಳೆಯಾಚೆಯ ಪ್ರಾಂತಗಳ ಕಪ್ಪದಿಂದ ತಡಮಾಡದೆ
9 ಎಲ್ಲಾ ವೆಚ್ಚವನ್ನು ಕೊಡಬೇಕೆಂಬದಾಗಿಯೂ ಪರಲೋ
ಕದೇವರ ಸರ್ವಾಂಗಹೋಮಗಳಿಗೋಸ್ಕರ ಬೇಕಾದ
ಹೋರಿ ಟಗರು ಕುರಿಮರಿಗಳನ್ನೂ ಗೋದಿ ಉಪ್ಪು
ದ್ರಾಕ್ಷಾರಸ ಎಣ್ಣೆ ಇವುಗಳನ್ನೂ ಯೆರೂಸಲೇಮಿನ
ಯಾಜಕರು ಹೇಳುವ ಪ್ರಕಾರ ಪ್ರತಿದಿನವೂ ತಪ್ಪದೆ
ಒದಗಿಸಿಕೊಡಬೇಕೆಂಬದಾಗಿಯೂ ಆಜ್ಞಾಪಿಸುತ್ತೇನೆ.
10 ಅವರಾದರೋ ಪರಲೋಕದೇವರಿಗೆ ಸುಗಂಧಹೋಮ
ಗಳನ್ನು ಸಮರ್ಪಿಸಿ ರಾಜನ ಮತ್ತು ರಾಜಪುತ್ರರ
11 ದೀರ್ಘಾಯುಷ್ಯಕ್ಕಾಗಿ ಪ್ರಾರ್ಥನೆಮಾಡಲಿ. ಈ ನನ್ನ
ಆಜ್ಞೆಯನ್ನು ಯಾವನಾದರೂ ಬದಲಾಯಿಸುವದಾ
ದರೆ ಅವನ ಮನೆಯಿಂದಲೇ ಒಂದು ತೊಲೆಯನ್ನು
ತೆಗೆದು ಅದನ್ನು ಶೂಲವನ್ನಾಗಿ ಮಾಡಿ ಅದಕ್ಕೆ ಅವ
ನನ್ನು ಎತ್ತಬೇಕೆಂದೂ ಆ ಮನೆಯನ್ನು ತಿಪ್ಪೆಯ
ನ್ನಾಗಿ ಮಾಡಿಬಿಡಬೇಕೆಂದೂ ತೀರ್ಮಾನಿಸುತ್ತೇನೆ.
12 ಮತ್ತು ತನ್ನ ಹೆಸರನ್ನು ಸ್ಥಾಪಿಸುವದಕ್ಕೋಸ್ಕರ ಆ
ಸ್ಥಳವನ್ನು ಆರಿಸಿಕೊಂಡ ದೇವರು ಈ ಆಜ್ಞೆಯನ್ನು
ಬದಲಿಸುವದಕ್ಕೂ ಯೆರೂಸಲೇಮಿನ ದೇವಾಲಯ
ವನ್ನು ನಾಶಮಾಡುವದಕ್ಕೂ ಕೈಯೆತ್ತುವ ಪ್ರತಿ
ಯೊಬ್ಬ ರಾಜನನ್ನೂ ಪ್ರತಿಯೊಂದು ಜನಾಂಗವನ್ನೂ
ಕೆಡವಿಹಾಕಲಿ. ದಾರ್ಯಾವೆಷನಾದ ನಾನು ಆಜ್ಞೆ
ಯನ್ನು ಕೊಟ್ಟಿದ್ದೇನೆ, ಅದನ್ನು ಆಲಸ್ಯವಿಲ್ಲದೆ ಕೈ
ಕೊಳ್ಳಬೇಕು ಎಂಬದೇ.
13 ಅರಸನಾದ ದಾರ್ಯಾವೆಷನು ಆಜ್ಞೆಯನ್ನು
ಕೊಟ್ಟದರಿಂದ ಹೊಳೆಯ ಈಚೆಯ ಅಧಿಪತಿಯಾದ
ತತ್ತೆನೈಯೂ ಶೆತಬೋರ್ಜೆನೈಯೂ ಅವರ ಜೊತೆಗಾ
ರರೂ ಜಾಗರೂಕರಾಗಿ ಅದನ್ನು ಅನುಸರಿಸಿದರು.
14 ಯೆಹೂದ್ಯರ ಹಿರಿಯರು ಪ್ರವಾದಿಯಾದ ಹಗ್ಗೈ,
ಇದ್ದೋವಿನ ಮಗನಾದ ಜೆಕರ್ಯ ಇವರ ಪ್ರಬೋ
ಧನೆಯಿಂದ ಪ್ರೇರಿತರಾಗಿ ಕಟ್ಟುವ ಕೆಲಸವನ್ನು
ಸಾಗಿಸುತ್ತಾ ಬಂದು ಇಸ್ರಾಯೇಲ್‌ದೇವರ ಆಜ್ಞಾನು
ಸಾರವಾಗಿಯೂ ಪಾರಸಿಯ ರಾಜರಾದ ಕೋರೆಷ್,
ದಾರ್ಯಾವೆಷ್, ಅರ್ತಷಸ್ತ ಇವರ ಅಪ್ಪಣೆಯ ಆಧಾರ
ದಿಂದಲೂ ಕಟ್ಟಡವನ್ನು ಮುಗಿಸಿದರು. ಅರಸನಾದ 15
ದಾರ್ಯಾವೆಷನ ಆಳಿಕೆಯ ಆರನೆಯ ವರುಷದ
1) ಫಾಲ್ಗುಣ ಮಾಸದ ಮೂರನೆಯ ದಿನದಲ್ಲಿ ಆಲ
ಯವನ್ನು ಪೂರೈಸಿದರು. ಯಾಜಕರೂ ಲೇವಿಯರೂ 16
ಸೆರೆಯಿಂದ ತಿರಿಗಿ ಬಂದ ಬೇರೆ ಇಸ್ರಾಯೇಲ್ಯರೂ
ಸಂತೋಷದಿಂದ ಆ ದೇವಾಲಯದ ಪ್ರತಿಷ್ಠೆಯನ್ನು
ಆಚರಿಸಿದರು. ಅವರು ಆ ದೇವಾಲಯದ ಪ್ರತಿಷ್ಠೆ 17
ಗೋಸ್ಕರ ನೂರು ಹೋರಿ, ಇನ್ನೂರು ಟಗರು,
ನಾನೂರು ಕುರಿಮರಿ ಇವುಗಳನ್ನೂ ಇಸ್ರಾಯೇಲ್ಯರ
ದೋಷಪರಿಹಾರಾರ್ಥವಾಗಿ ಅವರ ಕುಲಗಳ ಸಂಖ್ಯಾ
ನುಸಾರ ಹನ್ನೆರಡು ಹೋತಗಳನ್ನೂ ಸಮರ್ಪಿಸಿದರು.
ಆ ಮೇಲೆ ಯಾಜಕರ ಮತ್ತು ಲೇವಿಯರ ಆಯಾ 18
ವರ್ಗಗಳನ್ನು ಮೋಶೆಯ ಧರ್ಮಶಾಸ್ತ್ರನಿಯಮದ
ಪ್ರಕಾರ ಯೆರೂಸಲೇಮಿನ ದೇವರ ಸೇವೆಗೆ ನೇಮಿ
ಸಿದರು.
ಸೆರೆಯಿಂದ ಬಂದವರು ಮೊದಲನೆಯ ತಿಂಗಳಿನ 19
ಹದಿನಾಲ್ಕನೆಯ ದಿನದಲ್ಲಿ ಪಸ್ಕವನ್ನು ಆಚರಿಸಿದರು.
ಯಾಜಕರೂ ಲೇವಿಯರೂ ತಮ್ಮನ್ನು ಶುದ್ಧಿಪಡಿಸಿ 20
ಕೊಂಡರು. ಎಲ್ಲರೂ ಶುದ್ಧವಾದನಂತರ [ಲೇವಿಯ
ರು] ಸೆರೆಯಿಂದ ಬಂದವರಿಗೋಸ್ಕರವೂ ತಮ್ಮ ಬಂಧು
ಗಳಾದ ಯಾಜಕರಿಗೋಸ್ಕರವೂ ತಮಗೋಸ್ಕರವೂ
ಪಸ್ಕದ ಕುರಿಮರಿಗಳನ್ನು ವಧಿಸಿದರು. ಸೆರೆಯಿಂದ 21
ಬಂದ ಇಸ್ರಾಯೇಲ್ಯರೂ ಇಸ್ರಾಯೇಲ್‌ದೇವರಾದ
ಯೆಹೋವನನ್ನು ಹುಡುಕುವದಕ್ಕಾಗಿ ದೇಶನಿವಾಸಿ
ಗಳ ಅಶುದ್ಧತ್ವವನ್ನು ತೊರೆದುಬಿಟ್ಟು ಇವರೊಡನೆ
ಕೂಡಿಕೊಂಡವರೆಲ್ಲರೂ ಪಸ್ಕಭೋಜನಮಾಡಿದರು.
ಇದಲ್ಲದೆ ಇಸ್ರಾಯೇಲ್‌ದೇವರ ಆಲಯವನ್ನು ಕಟ್ಟು 22
ವದರಲ್ಲಿ ಅಶ್ಶೂರದ ಅರಸನು ತಮಗೆ ಸಹಾಯಮಾ
ಡುವಂತೆ ಯೆಹೋವನು ಅವನ ಮನಸ್ಸನ್ನು ತಿರುಗಿಸಿ
ತಮಗೆ ಸಂತೋಷವನ್ನು ಉಂಟುಮಾಡಿದ್ದಾನೆ ಎಂದು
ಹರ್ಷಿಸುತ್ತಾ ಏಳು ದಿವಸಗಳ ವರೆಗೂ ಹುಳಿಯಿ
ಲ್ಲದ ರೊಟ್ಟಿಗಳ ಜಾತ್ರೆಯನ್ನು ಆಚರಿಸಿದರು.

### ಯೆಹೋವಧರ್ಮಸಂಸ್ಥಾಪನೆಯಲ್ಲಿ ಆಸಕ್ತನಾಗಿದ್ದ ಎಜ್ರನೆಂಬ ಶಾಸ್ತ್ರಿಯು. 7—10.

#### ಎಜ್ರನು ಯೆರೂಸಲೇಮಿಗೆ ಹೋಗುವದಕ್ಕೆ ರಾಜಾಜ್ಞೆಯನ್ನು ಪಡಕೊಂಡದ್ದು.

ಇದಾದ ಮೇಲೆ ಪಾರಸಿಯ ರಾಜನಾದ ಅರ್ತಷಸ್ತನ 7
ಆಳಿಕೆಯಲ್ಲಿ ಎಜ್ರನು ಬಾಬೆಲಿನಿಂದ ಬಂದನು. ಇವ
ನು ಸೆರಾಯನ ಮಗನು; ಸೆರಾಯನು ಅಜರ್ಯನ
ಮಗನು; ಇವನು ಹಿಲ್ಕೀಯನ ಮಗನು; ಇವನು 2
ಶಲ್ಲೂಮನ ಮಗನು; ಇವನು ಚಾದೋಕನ ಮಗನು;
ಇವನು ಅಹೀಟೂಬನ ಮಗನು; ಇವನು ಅಮರ್ಯನ 3
ಮಗನು; ಇವನು ಅಜರ್ಯನ ಮಗನು; ಇವನು

1) ಮೂಲ: ಆದಾರ್.

4 ಮೆರಾಯೋತನ ಮಗನು; ಇವನು ಜೆರಹ್ಯನ ಮಗನು;
ಇವನು ಉಜ್ಜೀಯ ಮಗನು; ಇವನು ಬುಕ್ಕೀಯ
5 ಮಗನು; ಇವನು ಅಬೀಷೂವನ ಮಗನು; ಇವನು
ಫೀನೆಹಾಸನ ಮಗನು; ಇವನು ಎಲ್ಲಾಜಾರನ ಮಗ
ನು; ಇವನು ಪ್ರಧಾನಯಾಜಕನಾದ ಆರೋನನ
6 ಮಗನು. ಎಜ್ರನು ಇಸ್ರಾಯೇಲ್‌ದೇವರಾದ ಯೆ
ಹೋವನಿಂದ ದೊರಕಿದ ಮೋಶೆಯ ಧರ್ಮೋಪದೇಶ
ದಲ್ಲಿ ಪಾರಂಗತನಾದ ಶಾಸ್ತ್ರಿಯಾಗಿದ್ದನು. ಅವನ
ದೇವರಾದ ಯೆಹೋವನ ಹಸ್ತಪಾಲನೆಯಿಂದ ಅರ
ಸನು ಅವನಿಗೆ ಇಷ್ಟವಾದದ್ದನ್ನೆಲ್ಲಾ ಅನುಗ್ರಹಿಸಿದನು.
7 ಅವನೊಡನೆ ಕೆಲವು ಮಂದಿ ಇಸ್ರಾಯೇಲ್ಯರೂ ಯಾಜ
ಕರೂ ಲೇವಿಯರೂ ಗಾಯಕರೂ ದ್ವಾರಪಾಲಕರೂ
ದೇವಸ್ಥಾನದಾಸರೂ ಅರ್ತಷಸ್ತನ ಆಳಿಕೆಯ ಏಳನೆಯ
8 ವರುಷದಲ್ಲಿ ಯೆರೂಸಲೇಮಿಗೆ ಬಂದರು. ಎಜ್ರನು
ಆ ಅರಸನ ಆಳಿಕೆಯ ಏಳನೆಯ ವರುಷದಲ್ಲಿ ಐದನೆ
ಯ ತಿಂಗಳಲ್ಲಿ ಯೆರೂಸಲೇಮನ್ನು ಮುಟ್ಟಿದನು.
9 ಅವನು ಮೊದಲನೆಯ ತಿಂಗಳಿನ ಮೊದಲನೆಯ ದಿನ
ದಲ್ಲಿ ಬಾಬೆಲಿನಿಂದ ಹೊರಟನು; ತನ್ನ ದೇವರ ಕೃಪಾ
ಹಸ್ತಪಾಲನೆಯಿಂದ ಐದನೆಯ ತಿಂಗಳಿನ ಮೊದಲನೆಯ
10 ದಿನದಲ್ಲಿ ಯೆರೂಸಲೇಮಿಗೆ ಸೇರಿದನು. ಅವನು
ಯೆಹೋವಧರ್ಮಶಾಸ್ತ್ರವನ್ನು ಅಭ್ಯಾಸಿಸಿ ಅನುಸರಿಸ
ಲಿಕ್ಕೂ ಕಲಿಸಲಿಕ್ಕೂ ದೃಢಮಾಡಿಕೊಂಡಿದ್ದನು.
11 ಯಾಜಕನೂ ಶಾಸ್ತ್ರಿಯೂ ಇಸ್ರಾಯೇಲ್ಯರಿಗೆ ಕೊ
ಡಲ್ಪಟ್ಟ ಯೆಹೋವನ ಆಜ್ಞಾವಿಧಿಸೂತ್ರಗಳಲ್ಲಿ ವಿದ್ವಾಂ
ಸನೂ ಆದ ಎಜ್ರನಿಗೆ ಅರಸನಾದ ಅರ್ತಷಸ್ತನು ಕೊಟ್ಟ
ಪತ್ರದ ನಕಲು—
12 ರಾಜಾಧಿರಾಜನಾದ ಅರ್ತಷಸ್ತನು ಯಾಜಕನೂ
ಪರಲೋಕದೇವರ ಧರ್ಮಶಾಸ್ತ್ರದಲ್ಲಿ ಪ್ರವೀಣನೂ ಆದ
13 ಎಜ್ರನಿಗೆ ಇತ್ಯಾದಿ. ನನ್ನ ರಾಜ್ಯದಲ್ಲಿರುವ ಇಸ್ರಾ
ಯೇಲ್ಯರಲ್ಲಿಯೂ ಯಾಜಕರಲ್ಲಿಯೂ ಲೇವಿಯರಲ್ಲಿ
ಯೂ ಯೆರೂಸಲೇಮಿಗೆ ಹೋಗುವದಕ್ಕೆ ಮನಸ್ಸುಳ್ಳ
ವರೆಲ್ಲರೂ ನಿನ್ನೊಂದಿಗೆ ಹೋಗಬಹುದೆಂದು ಅಪ್ಪಣೆ
14 ಮಾಡುತ್ತೇನೆ. ನೀನು ಹೋಗಿ ಯೆಹೂದದವರ
ಮತ್ತು ಯೆರೂಸಲೇಮಿನವರ ಆಚರಣೆಯು ನಿನ್ನ
ಕೈಯಲ್ಲಿರುವ ನಿನ್ನ ದೇವರ ಧರ್ಮೋಪದೇಶಗ್ರಂಥಕ್ಕೆ
ಅನುಸಾರವಾಗಿದೆಯೋ ಇಲ್ಲವೋ ವಿಮರ್ಶೆಮಾಡ
15 ಬೇಕು. ಮತ್ತು ಅರಸನೂ ಅವನ ಮಂತ್ರಿಗಳೂ
ಯೆರೂಸಲೇಮಿನಲ್ಲಿ ವಾಸಿಸುತ್ತಿರುವ ಇಸ್ರಾಯೇ
ಲ್ ದೇವರಿಗೋಸ್ಕರ ಕಾಣಿಕೆಯಾಗಿ ಸಮರ್ಪಿಸಿದ
16 ಬೆಳ್ಳಿಬಂಗಾರ, ಬಾಬೆಲ್ ಸಂಸ್ಥಾನದಲ್ಲಿ ನಿನಗೆ ಸಿಕ್ಕುವ
ಬೆಳ್ಳಿಬಂಗಾರ, [ಇಸ್ರಾಯೇಲ್] ಸಾಧಾರಣಜನರೂ
ಯಾಜಕರೂ ಯೆರೂಸಲೇಮಿನಲ್ಲಿರುವ ತಮ್ಮ ದೇವರ
ಆಲಯಕ್ಕಾಗಿ ಸ್ವೇಚ್ಛೆಯಿಂದ ಕೊಡುವ ಕಾಣಿಕೆ ಇವು
ಗಳನ್ನು ಅಲ್ಲಿಗೆ ಒಪ್ಪಿಸಬೇಕು; ಹೀಗೆಂದು ನಾನೂ
ಮತ್ತು ನನ್ನ ಏಳು ಮಂದಿ ಮಂತ್ರಿಗಳೂ ನಿನ್ನನ್ನು
17 ಕಳುಹಿಸುತ್ತೇವೆ. ನೀನು ಈ ಹಣದಿಂದ ಹೋರಿ
ಟಗರು ಕುರಿ ಇವುಗಳನ್ನೂ ಮತ್ತು ಇವುಗಳೊಡನೆ
ಸಮರ್ಪಣೆಯಾಗತಕ್ಕ ಧಾನ್ಯದ್ರವ್ಯಪಾನದ್ರವ್ಯಗಳ
ನ್ನೂ ಕೊಂಡುಕೊಂಡು ಅವುಗಳನ್ನು ಯೆರೂಸಲೇಮಿ
ನಲ್ಲಿರುವ ನಿಮ್ಮ ದೇವರ ಆಲಯದ ಯಜ್ಞವೇದಿಯ
ಮೇಲೆ ಸಮರ್ಪಿಸಬೇಕು. ಉಳಿದ ಬೆಳ್ಳಿಬಂಗಾರ 18
ವನ್ನು ನಿಮ್ಮ ದೇವರ ಆಜ್ಞೆಯನ್ನು ಅನುಸರಿಸಿ ನಿನಗೂ
ನಿನ್ನ ಸಹೋದರರಿಗೂ ಸರಿತೋರುವಂತೆ ವೆಚ್ಚಮಾ
ಡಿರಿ. ನಿನ್ನ ದೇವರ ಆಲಯದ ಆರಾಧನೆಗಾಗಿ ನಿನ್ನ 19
ವಶಕ್ಕೆ ಕೊಡುವ ಸಾಮಾನುಗಳನ್ನು ಯೆರೂಸಲೇಮಿನ
ದೇವರ ಸನ್ನಿಧಿಗೆ ತೆಗೆದುಕೊಂಡು ಹೋಗು. ನಿನ್ನ 20
ದೇವರ ಆಲಯಕ್ಕೋಸ್ಕರ ನೀನು ಬೇರೆ ಯಾವದನ್ನಾ
ದರೂ ವೆಚ್ಚಮಾಡಬೇಕಾದರೆ ಅದನ್ನು ರಾಜಭಂಡಾರ
ದಿಂದ ತೆಗೆದುಕೊಂಡು ವೆಚ್ಚಮಾಡು.
ಅರ್ತಷಸ್ತರಾಜನಾದ ನಾನು ಹೊಳೆಯಾಚೆಯ 21
ಪ್ರಾಂತಗಳ ಭಂಡಾರಮುಖ್ಯಸ್ಥರಿಗೆ ಆಜ್ಞಾಪಿಸುವದು—
ಯಾಜಕನೂ ಪರಲೋಕದೇವರ ಧರ್ಮಾಚಾರ್ಯನೂ
ಆದ ಎಜ್ರನು ಕೇಳಿಕೊಳ್ಳುವದನ್ನೆಲ್ಲಾ ನೀವು ತಪ್ಪದೆ
ಕೊಡಬೇಕು. ಬೆಳ್ಳಿಯನ್ನು 1)ನೂರು ತಲಾಂತು, 22
ಗೋದಿಯನ್ನು ನೂರು ಕೋರ್, ದ್ರಾಕ್ಷಾರಸವನ್ನು
ನೂರು ಬತ್, ಎಣ್ಣೆಯನ್ನು ನೂರು ಬತ್ ಇಷ್ಟರ
ಮಟ್ಟಿಗೂ ಕೊಡಬಹುದು; ಉಪ್ಪನ್ನು ಎಷ್ಟು ಬೇಕಾ
ದರೂ ಕೊಡಬಹುದು. ಅರಸನ ಮತ್ತು ಅವನ ಸಂತಾ 23
ನದವರ ರಾಜ್ಯದ ಮೇಲೆ ದೇವಕೋಪವುಂಟಾಗದ
ಹಾಗೆ ನೀವು ಪರಲೋಕದೇವರ ಆಜ್ಞಾನುಸಾರ ಬೇಕಾ
ದದ್ದನ್ನೆಲ್ಲಾ ಯಾವ ಕೊರತೆಯೂ ಇಲ್ಲದೆ ಒದಗಿಸಿ
ಕೊಡಬೇಕು. ಇದಲ್ಲದೆ ಆ ದೇವಾಲಯದ ಯಾಜಕ 24
ಲೇವಿಯ ಗಾಯಕ ದ್ವಾರಪಾಲಕ ದಾಸ ಮುಂತಾದ
ಸೇವಕರಲ್ಲಿ ಯಾವನಿಂದಾದರೂ ಕಪ್ಪ, ತೆರಿಗೆ, ಸುಂಕ
ಇವುಗಳನ್ನು ವಸೂಲಿಮಾಡುವದಕ್ಕೆ ನಿಮಗೆ ಅಧಿಕಾರ
ವಿಲ್ಲ ಎಂಬದಾಗಿ ತಿಳಿದಿರಲಿ.
ಎಜ್ರನೇ, ನಿನ್ನ ಕೈಯಲ್ಲಿರುವ ನಿನ್ನ ದೇವರ ಜ್ಞಾ 25
ನೋಪದೇಶಗ್ರಂಥಕ್ಕನುಸಾರವಾಗಿ ನ್ಯಾಯಾಧೀಶರ
ನ್ನೂ ಪಂಚಾಯತರನ್ನೂ ನೇಮಿಸು. ಅವರು ಹೊಳೆ
ಯಾಚೆಯ ಇಸ್ರಾಯೇಲ್ಯರಲ್ಲಿ ನಿನ್ನ ದೇವರ ಧರ್ಮ
ವನ್ನರಿತಿರುವವರೆಲ್ಲರ ವ್ಯಾಜ್ಯಗಳನ್ನು ತೀರಿಸಲಿ. ಅರಿ
ಯದವರಿಗೆ ನೀವು ಅದನ್ನು ಕಲಿಸಬೇಕು. ನಿನ್ನ ದೇವರ 26
ಧರ್ಮವನ್ನೂ ರಾಜಾಜ್ಞೆಯನ್ನೂ ಕೈಕೊಳ್ಳದವರಿಗೆಲ್ಲಾ
ಮರಣದಂಡನೆ, ಗಡಿಪಾರುಮಾಡುವದು, ದಂಡತೆರಿಸು
ವದು, ಬೇಡಿಹಾಕುವದು ಈ ವಿಧವಾದ ಶಿಕ್ಷೆಯನ್ನು
ತಪ್ಪದೆ ವಿಧಿಸಬೇಕು ಎಂಬದೇ.
[ಎಜ್ರನು ಹೇಳಿದ್ದು —] ನಮ್ಮ ಪಿತೃಗಳ ದೇವರಾದ 27
ಯೆಹೋವನಿಗೆ ಸ್ತೋತ್ರವಾಗಲಿ. ಅರಸನು ಯೆರೂಸ
ಲೇಮಿನಲ್ಲಿರುವ ಯೆಹೋವನ ಆಲಯವನ್ನು ಶೋಭಿ
ಸುವ ಸ್ಥಿತಿಗೆ ತರುವದಕ್ಕೆ ಆತನ ಪ್ರೇರಣೆಯಿಂದಲೇ
ಮನಸ್ಸುಮಾಡಿದ್ದಾನೆ; ಅರಸನ, ಅವನ ಮಂತ್ರಿಗಳ 28
ಮತ್ತು ಅವನ ಎಲ್ಲಾ ಶ್ರೇಷ್ಠರಾದ ಸರದಾರರ ಮುಂದೆ
ನನಗೆ ದಯೆತೋರಿಸಿದ್ದಾನೆ. ನನ್ನ ದೇವರಾದ
ಯೆಹೋವನ ಹಸ್ತಪಾಲನೆಯು ನನಗೆ ದೊರಕಿದ್ದರಿಂದ

1) ಒಂದು ತಲಾಂತು ಅಂದರೆ ಮೂರು ಸಾವಿರ ತೊಲೆ; ಒಂದು ಕೋರ್ ಅಂದರೆ ಮುನ್ನೂರರುವತ್ತು ಸೇರು; ಒಂದು ಬತ್ ಅಂದರೆ ಮೂವತ್ತಾರು ಸೇರು.

ನಾನು ಧೈರ್ಯತಂದುಕೊಂಡು ನನ್ನೊಂದಿಗೆ ಪ್ರಯಾಣ
ಮಾಡುವದಕ್ಕೆ ಕೆಲವು ಮಂದಿ ಇಸ್ರಾಯೇಲ್‌ಪ್ರಧಾನ
ರನ್ನು ಕೂಡಿಸಿಕೊಂಡೆನು.

### ಎಜ್ರನು ಅನೇಕ ಯೆಹೂದ್ಯರನ್ನು ಕೂಡಿಸಿಕೊಂಡು ಯೆರೂಸಲೇಮಿಗೆ ಬಂದದ್ದು.

8 ಅರ್ತಷಸ್ತನ ಆಳಿಕೆಯಲ್ಲಿ ನನ್ನೊಂದಿಗೆ ಬಾಬೆಲಿನಿಂದ
ಹೊರಟ ಗೋತ್ರಪ್ರಧಾನರ ಮತ್ತು ಅವರ ಸಂತಾನದ
ವರ ವಿವರಣೆ—
2 ಫೀನೆಹಾಸನ ಸಂತಾನದವರಲ್ಲಿ ಗೇರ್ಷೋಮ್;
ಈತಾಮಾರನ ಸಂತಾನದವರಲ್ಲಿ ದಾನಿಯೇಲ್;
3 ದಾವೀದನ ಸಂತಾನದವರಲ್ಲಿ ಶೆಕನ್ಯನ ಮೊಮ್ಮಗ
ನಾದ ಹಟ್ಟೂಷ್; ಪರೋಷಿನವರಲ್ಲಿ ಜೆಕರ್ಯನೂ
ಅವನೊಡನೆ ಅವನ ವಂಶಕ್ಕೆ ಸೇರುವ 150 ಮಂದಿ
4 ಗಂಡಸರೂ; ಪಹತ್‌ಮೋವಾಬಿನವರಲ್ಲಿ ಜೆರಹ್ಯನ ಮಗ
ನಾದ ಎಲ್ಯೆಹೋವೇನೈಯೂ ಅವನೊಡನೆ 200 ಮಂದಿ
ಗಂಡಸರೂ;
5 [1][ಜತ್ತೂವಿನವರಲ್ಲಿ] ಯಹಜೀಯೇಲನ ಮಗ
ನಾದ ಶೆಕನ್ಯನೂ ಅವನೊಡನೆ 300 ಮಂದಿ ಗಂಡಸ
6 ರೂ; ಆದೀನನವರಲ್ಲಿ ಯೋನಾತಾನನ ಮಗನಾದ
7 ಎಬೆದನೂ ಅವನೊಡನೆ 50 ಮಂದಿ ಗಂಡಸರೂ; ಏಲಾ
ಮಿನವರಲ್ಲಿ ಅತಲ್ಯನ ಮಗನಾದ ಯೆಶಾಯನೂ ಅವ
8 ನೊಡನೆ 70 ಮಂದಿ ಗಂಡಸರೂ; ಶೆಫಟ್ಯನವರಲ್ಲಿ ಮೀ
ಕಾಯೇಲನ ಮಗನಾದ ಜೆಬದ್ಯನೂ ಅವನೊಡನೆ 80
9 ಮಂದಿ ಗಂಡಸರೂ; ಯೋವಾಬನವರಲ್ಲಿ ಯೆಹೀ
ಯೇಲನ ಮಗನಾದ ಓಬದ್ಯನೂ ಅವನೊಡನೆ 218
ಮಂದಿ ಗಂಡಸರೂ;
10 [ಬಾನೀಯವರಲ್ಲಿ] ಯೋಸಿಫ್ಯನ ಮಗನಾದ
ಶೆಲೋಮಿತನೂ ಅವನೊಡನೆ 160 ಮಂದಿ ಗಂಡಸ
11 ರೂ; ಬೇಬೈಯವರಲ್ಲಿ ಬೇಬೈಯ ಮಗನಾದ ಜೆಕ
12 ರ್ಯನೂ ಅವನೊಡನೆ 28 ಮಂದಿ ಗಂಡಸರೂ; ಅಜ್ಗಾ
ದನವರಲ್ಲಿ ಹಕ್ಕಾಟಾನನ ಮಗನಾದ ಯೋಹಾನಾ
ನನೂ ಅವನೊಡನೆ 110 ಮಂದಿ ಗಂಡಸರೂ;
13 ಅದೋನೀಕಾಮಿನವರಲ್ಲಿ ಕಡೆಯವರಾದ ಎಲೀಫೆ
ಲೆಟ್, ಎಮೀಯೇಲ್, ಶೆಮಾಯ ಎಂಬ ಹೆಸರುಳ್ಳ
14 ವರೂ ಅವರೊಡನೆ 60 ಮಂದಿ ಗಂಡಸರೂ; ಬಿಗ್ವೈ
ಯವರಲ್ಲಿ [2]ಜಕ್ಕೂರನ ಮಗನಾದ ಊತ್ತೈಯೂ ಅವ
ನೊಡನೆ 70 ಮಂದಿ ಗಂಡಸರೂ;
15 ಅಹವಾ ಪ್ರಾಂತದ ಕಡೆಗೆ ಹರಿಯುವ ನದಿಯ ಬಳಿ
ಯಲ್ಲಿ ನಾನು ಇವರನ್ನು ಕೂಡಿಸಿದೆನು. ಅಲ್ಲಿ ಮೂರು
ದಿನ ಪಾಳೆಯಮಾಡಿಕೊಂಡ ಮೇಲೆ ಸಾಧಾರಣಜನರೂ
ಯಾಜಕರೂ ಬಂದಿದ್ದಾರೆ, ಲೇವಿಯರಲ್ಲಿ ಯಾರೂ
16 ಒಬ್ಬರಿಲ್ಲ ಎಂದು ಕಂಡುಬಂದದರಿಂದ ಪ್ರಧಾನರಾದ
ಎಲೀಯೆಜೆರ್, ಅರೀಯೇಲ್, ಶೆಮಾಯ, ಎಲ್ನಾತಾ
ನ್, ಯಾರೀಬ್, ಎಲ್ನಾತಾನ್, ನಾತಾನ್, ಜೆಕರ್ಯ,
ಮೆಷುಲ್ಲಾಮ್ ಇವರನ್ನೂ ಪಂಡಿತರಾದ ಯೋಯಾ
ರೀಬ್, ಎಲ್ನಾತಾನ್ ಇವರನ್ನೂ ಕರಿಸಿ ಕಾಸಿಫ್ಯ 17
ಊರಿನ ಮುಖ್ಯಸ್ಥನಾದ ಇದ್ದೋವಿನ ಬಳಿಗೆ ಹೋಗ
ಬೇಕೆಂದು ಅಪ್ಪಣೆಮಾಡಿ ನಮ್ಮ ಬಳಿಗೆ ದೇವಾಲಯ
ಸೇವಕರನ್ನು ಕಳುಹಿಸುವ ಹಾಗೆ ಅವರು ಇದ್ದೋ
ವಿಗೂ ಕಾಸಿಫ್ಯ ಊರಿನಲ್ಲಿ ವಾಸಿಸುತ್ತಿದ್ದ ಅವನ
ಸಹೋದರರಾದ ದೇವಸ್ಥಾನ ದಾಸವರ್ಗದವರಿಗೂ
ಹೇಳತಕ್ಕ ಮಾತುಗಳನ್ನು ಹೇಳಿಕೊಟ್ಟೆನು. ಆ ಊರಿ
ನವರು ದೇವದಾಸವರ್ಗದವರಷ್ಟೆ. ನಮ್ಮ ದೇವರ 18
ಕೃಪಾಹಸ್ತಪಾಲನೆಯು ನಮಗೆ ದೊರಕಿದ್ದರಿಂದ ಅವರು
ಇಸ್ರಾಯೇಲನ ಮಗನಾದ ಲೇವಿಯ ಕುಲದ ಮಹ್ಲೀ
ಸಂತಾನದವರಲ್ಲಿ ಈಸ್ಸೆಕೆಲನನ್ನೂ ಶೇರೇಬ್ಯನನ್ನೂ
ಅವನ ಪುತ್ರಭ್ರಾತೃಗಳಲ್ಲಿ ಹದಿನೆಂಟು ಮಂದಿಯನ್ನೂ
ಮೆರಾರೀಯರಲ್ಲಿ ಹಷಬ್ಯನನ್ನೂ ಅವನೊಡನೆ ಯೆಶಾ 19
ಯನನ್ನೂ [3]ಅವರ ಪುತ್ರಭ್ರಾತೃಗಳಲ್ಲಿ ಇಪ್ಪತ್ತು
ಮಂದಿಯನ್ನೂ ದಾವೀದನೂ ಅವನ ಸರದಾರರೂ 20
ಲೇವಿಯರ ಸಹಾಯಕ್ಕಾಗಿ ಕೊಟ್ಟ ದೇವಸ್ಥಾನದಾಸ
ರಲ್ಲಿ ಇನ್ನೂರಿಪ್ಪತ್ತು ಮಂದಿಯನ್ನೂ ನಮ್ಮ ಬಳಿಗೆ
ಕರಕೊಂಡು ಬಂದರು. ಇವರೆಲ್ಲರ ಹೆಸರುಗಳು ಪಟ್ಟಿ
ಯಲ್ಲಿದ್ದವು.
ಆ ಮೇಲೆ ಆ ಅಹವಾ ನದಿಯ ಬಳಿಯಲ್ಲಿ — ನಾವು 21
ಉಪವಾಸದಿಂದಿದ್ದು ನಮ್ಮ ದೇವರ ಮುಂದೆ ನಮ್ಮ
ನ್ನು ತಗ್ಗಿಸಿಕೊಂಡು ನಮಗೂ ನಮ್ಮ ಮನೆಯವ
ರಿಗೂ ನಮ್ಮ ಎಲ್ಲಾ ಆಸ್ತಿಗೂ ಪ್ರಯಾಣದಲ್ಲಿ ಶುಭ
ವನ್ನು ಕೇಳಿಕೊಳ್ಳಬೇಕೆಂದು ಪ್ರಕಟಿಸಿದೆನು. ನಮ್ಮ 22
ದೇವರ ಹಸ್ತವು ಆತನ ಎಲ್ಲಾ ಶರಣಾರ್ಥಿಗಳನ್ನೂ
ಪಾಲಿಸುವದು; ಆತನ ಬಲವಾದ ರೌದ್ರಕ್ಕೆ ಆತನನ್ನು
ತೊರೆದುಬಿಟ್ಟವರೆಲ್ಲರೂ ಗುರಿಯಾಗುವರು ಎಂದು
ನಾವು ಅರಸನ ಮುಂದೆ ಹೇಳಿದ್ದರಿಂದ ದಾರಿಯಲ್ಲಿ
ನಮ್ಮನ್ನು ಶತ್ರುಗಳಿಂದ ರಕ್ಷಿಸುವದಕ್ಕೋಸ್ಕರ ಸೈನ್ಯ
ವನ್ನೂ ಅಶ್ವಬಲವನ್ನೂ ಕೇಳಿಕೊಳ್ಳುವದಕ್ಕೆ ನಾಚಿ
ಕೊಂಡಿದ್ದೆನು. ನಾವು ಈ ಕಾರಣದಿಂದ ಉಪವಾಸ 23
ಮಾಡಿ ದೇವರನ್ನು ಪ್ರಾರ್ಥಿಸಲು ಆತನು ನಮಗೆ ಪ್ರಸ
ನ್ನನಾದನು.
ಅನಂತರ ನಾನು ಯಾಜಕರ ಮುಖ್ಯಸ್ಥರಿಂದ 24
ಶೇರೇಬ್ಯ, ಹಷಬ್ಯ ಇವರನ್ನೂ ಇವರ ಸಹೋದರರಲ್ಲಿ
ಹತ್ತು ಮಂದಿಯನ್ನೂ ಆರಿಸಿಕೊಂಡು ಅರಸನಿಂದಲೂ 25
ಅವನ ಮಂತ್ರಿಗಳಿಂದಲೂ ಸರದಾರರಿಂದಲೂ ಅಲ್ಲಿದ್ದ
ಎಲ್ಲಾ ಇಸ್ರಾಯೇಲ್ಯರಿಂದಲೂ ನಮ್ಮ ದೇವರ ಆಲಯ
ಕ್ಕೋಸ್ಕರ ಕಾಣಿಕೆಯಾಗಿ ಕೊಡಲ್ಪಟ್ಟ ಬೆಳ್ಳಿಬಂಗಾರ
ವನ್ನೂ ಸಾಮಾನುಗಳನ್ನೂ ತೂಕಮಾಡಿ ಅವರಿಗೆ
ಒಪ್ಪಿಸಿದೆನು. ಅವರ ಕೈಯಲ್ಲಿ ಕೊಟ್ಟ ಸಾಮಾನು 26
ಗಳ ತೂಕ — ಬೆಳ್ಳಿಯು ಆರುನೂರೈವತ್ತು ತಲಾಂತು,
ಬೆಳ್ಳಿಯ ಸಾಮಾನುಗಳು ನೂರು ತಲಾಂತು, ಬಂಗಾ
ರವು ನೂರು ತಲಾಂತು, ಬಂಗಾರದ ಇಪ್ಪತ್ತು ಬಟ್ಟಲು 27
ಗಳು ಪ್ರತಿಯೊಂದೂ ಸಾವಿರ ಪವನು; ಇವುಗಳಲ್ಲದೆ
ಶ್ರೇಷ್ಠವಾದ ಶುಭ್ರತಾಮ್ರದ ಎರಡು ಪಾತ್ರೆಗಳಿ
ದ್ದವು. ಅವು ಬಂಗಾರದಷ್ಟು ಬೆಲೆಯುಳ್ಳವುಗಳು.

1) ಈ ಹೆಸರುಗಳು ಇಬ್ರಿಯ ಪ್ರತಿಗಳಲ್ಲಿ ಬಿದ್ದುಹೋದವು.
2) ಪಾಠಾಂತರ: ಊತ್ತೈಯೂ ಜಬ್ಬೂದನೂ.
3) ಪಾಠಾಂತರ: ಅವನ ಭ್ರಾತರನ್ನೂ ಅವರ ಪುತ್ರರನ್ನೂ.

28 ನಾನು ಅವರಿಗೆ— ನೀವು ಯೆಹೋವನ ಸ್ವಕೀಯರು;
ಆ ಪಾತ್ರೆಗಳೂ ದೇವರ ವಸ್ತುಗಳು; ಆ ಬೆಳ್ಳಿಬಂಗಾ
ರವೂ ನಿಮ್ಮ ಪಿತೃಗಳ ದೇವರಾದ ಯೆಹೋವನಿ
29 ಗೋಸ್ಕರ ಸಮರ್ಪಿತವಾದ ಕಾಣಿಕೆಯು. ಆದದ
ರಿಂದ ನೀವು ಜಾಗರೂಕರಾಗಿದ್ದು ಯೆರೂಸಲೇಮಿ
ನಲ್ಲಿರುವ ಯಾಜಕರ ಮತ್ತು ಲೇವಿಯರ ಪ್ರಧಾ
ನರ ಮುಂದೆಯೂ ಇಸ್ರಾಯೇಲ್‍ಗೋತ್ರಪ್ರಧಾ
ನರ ಮುಂದೆಯೂ ಇವುಗಳನ್ನು ತೂಕಮಾಡಿ ಯೆ
ಹೋವನ ಆಲಯದ ಕೊಠಡಿಗಳಲ್ಲಿಡುವ ವರೆಗೂ ಕಾ
ಯಿರಿ ಅಂದೆನು.
30 ಆ ಯಾಜಕರೂ ಲೇವಿಯರೂ ಯೆರೂಸಲೇಮಿನ
ದೇವಾಲಯಕ್ಕೆ ಮುಟ್ಟಿಸುವದಕ್ಕೋಸ್ಕರ ಬೆಳ್ಳಿಬಂಗಾ
ರವನ್ನೂ ಉಪಕರಣಗಳನ್ನೂ ತೂಕಮಾಡಿಸಿ ತಮ್ಮ
ವಶದಲ್ಲಿಟ್ಟುಕೊಂಡರು.
31 ನಾವು ಮೊದಲನೆಯ ತಿಂಗಳಿನ ಹನ್ನೆರಡನೆಯ ದಿನ
ದಲ್ಲಿ ಅಹವಾ ನದಿಯನ್ನು ಬಿಟ್ಟು ಯೆರೂಸಲೇಮಿಗೆ
ಹೊರಟೆವು. ನಮ್ಮ ದೇವರ ಹಸ್ತವು ನಮ್ಮನ್ನು
ಪಾಲಿಸುತ್ತಾ ಇತ್ತು. ಆತನು ಶತ್ರುಗಳ ಮತ್ತು ದಾರಿ
ಯಲ್ಲಿ ಹೊಂಚುಹಾಕುವವರ ಕೈಗೆ ಸಿಕ್ಕದಂತೆ ನಮ್ಮ
32 ನ್ನು ತಪ್ಪಿಸಿದನು. ನಾವು ಯೆರೂಸಲೇಮನ್ನು ಸೇರಿ
33 ಮೂರು ದಿವಸ ವಿಶ್ರಮಿಸಿಕೊಂಡೆವು. ನಾಲ್ಕನೆಯ
ದಿನ ನಮ್ಮ ದೇವರ ಆಲಯದಲ್ಲಿ ಊರೀಯನ ಮಗ
ನಾದ ಮೆರೇಮೋತ್ ಎಂಬ ಯಾಜಕನಿಗೆ ಬೆಳ್ಳಿಬಂಗಾರ
ವನ್ನೂ ಉಪಕರಣಗಳನ್ನೂ ತೂಕಮಾಡಿ ಒಂದೊಂದಾಗಿ
ಎಣಿಸಿಕೊಟ್ಟೆವು. ಫೀನೆಹಾಸನ ವಂಶದವನಾದ ಎಲ್ಲಾ
ಜಾರ್, ಯೇಷೂವನ ಮಗನಾದ ಯೋಜಾಬಾದ್,
ಬಿನ್ನೂಯನ ಮಗನಾದ ನೋವದ್ಯ ಎಂಬ ಲೇವಿಯರು
34 ಅವನ ಜೊತೆಯಲ್ಲಿದ್ದರು. ಆಗಲೇ ಎಲ್ಲವುಗಳ ತೂ
ಕವು ಲಿಖಿತವಾಯಿತು.
35 ದೇಶಾಂತರದ ಸೆರೆಯಿಂದ ತಿರಿಗಿ ಬಂದವರು ಇಸ್ರಾ
ಯೇಲ್‍ದೇವರಿಗೆ ತೊಂಭತ್ತಾರು ಟಗರುಗಳನ್ನೂ
ಎಪ್ಪತ್ತೇಳು ಕುರಿಮರಿಗಳನ್ನೂ ಸಮಸ್ತ ಇಸ್ರಾಯೇ
ಲ್ಯರ ನಿಮಿತ್ತವಾಗಿ ಹನ್ನೆರಡು ಹೋರಿಗಳನ್ನೂ ದೋಷ
ಪರಿಹಾರಾರ್ಥವಾಗಿ ಹನ್ನೆರಡು ಹೋತಗಳನ್ನೂ ಸರ್ವಾಂ
ಗಹೋಮವಾಗಿ ಸಮರ್ಪಿಸಿದರು. ಇವೆಲ್ಲಾ ಯೆಹೋ
36 ವನಿಗೆ ಸರ್ವಾಂಗಹೋಮವೇ. ಆ ಮೇಲೆ ಅವರು
ರಾಜಶಾಸನವನ್ನು ರಾಜೋದ್ಯೋಗಸ್ಥರಿಗೂ ಹೊಳೆ
ಯಾಚೆಯ ಪ್ರದೇಶಾಧಿಪತಿಗಳಿಗೂ ಒಪ್ಪಿಸಿದರು.
ಇವರು ಜನರಿಗೂ ದೇವಾಲಯಕ್ಕೂ ಸಹಾಯಮಾಡಿ
ದರು.

ನಿಷಿದ್ಧವಿವಾಹವಾಯಿತೆಂದು ಕೇಳಿ ಎಜ್ರನು ಪ್ರಲಾಪಿಸಿ
ದೇವರನ್ನು ಪ್ರಾರ್ಥಿಸಿದ್ದು.

9 ಇದಾದನಂತರ ಪ್ರಧಾನಪುರುಷರು ನನ್ನ ಬಳಿಗೆ
ಬಂದು—ಇಸ್ರಾಯೇಲ್ಯರಲ್ಲಿ ಸಾಧಾರಣಜನರೂ ಯಾ
ಜಕರೂ ಲೇವಿಯರೂ ಕಾನಾನ್ಯರು, ಹಿತ್ತಿಯರು,
ಪೆರಿಜ್ಜೀಯರು, ಯೆಬೂಸಿಯರು, ಅಮ್ಮೋನಿಯರು,
ಮೋವಾಬ್ಯರು, ಐಗುಪ್ತ್ಯರು, ಅಮೋರಿಯರು ಎಂಬ
ಅನ್ಯದೇಶಗಳವರ ಬಳಕೆಯನ್ನು ತೊರೆಯದೆ ಅವರ
ಅಸಹ್ಯಕಾರ್ಯಗಳನ್ನು ಅನುಸರಿಸಿ ತಮಗೂ ತಮ
ಗಂಡುಮಕ್ಕಳಿಗೂ ಅವರಿಂದ ಹೆಣ್ಣುಗಳನ್ನು ತೆಗೆದ
ಕೊಂಡದರಿಂದ ದೇವಕುಲವು ಅನ್ಯದೇಶಗಳವರೊ
ಡನೆ ಮಿಶ್ರವಾಯಿತು. ಪ್ರಭುಗಳೂ ಪ್ರಧಾನರೂ ಈ
ದ್ರೋಹಕ್ಕೆ ಮುಂದಾಳುಗಳಾದರು ಎಂದು ತಿಳಿಸಿದರು
ಈ ವರ್ತಮಾನವನ್ನು ಕೇಳಿದೊಡನೆ ನಾನು ಬಟ್ಟೆಮೇ
ಲಂಗಿಗಳನ್ನು ಹರಿದುಕೊಂಡು ತಲೆಯ ಮತ್ತು ಗಡ್ಡದ
ಕೂದಲುಗಳನ್ನು ಕಿತ್ತುಕೊಂಡು ಸ್ತಬ್ಧನಾಗಿ ಕೂತ
ಕೊಂಡೆನು. ಇಸ್ರಾಯೇಲ್‍ದೇವರ ವಿಧಿಗಳನ್ನು ಗೌ
ವಿಸಿದವರೆಲ್ಲರೂ ಸೆರೆಯಿಂದ ಬಂದವರ ದ್ರೋಹದ
ಸಲುವಾಗಿ ಕಳವಳಗೊಂಡು ನನ್ನನ್ನು ಕೂಡಿಕೊಂ
ಡರು. ನಾನು ಸಂಧ್ಯಾನೈವೇದ್ಯಸಮರ್ಪಣೆಯ ಹೊ
ತ್ತಿನ ವರೆಗೂ ಸ್ತಬ್ಧನಾಗಿ ಕೂತುಕೊಂಡಿದ್ದೆನು; ಆ
ಮೇಲೆ ದೇಹದಂಡನೆಮಾಡುವದನ್ನು ಬಿಟ್ಟು ಹರಿದ
ಬಟ್ಟೆಮೇಲಂಗಿಗಳಿಂದ ಕೂಡಿದವನಾಗಿಯೇ ಮೊಣಕಾ
ಲೂರಿ ನನ್ನ ದೇವರಾದ ಯೆಹೋವನ ಕಡೆಗೆ ಕೈಗಳ
ನ್ನೆತ್ತಿ ಪ್ರಾರ್ಥಿಸಿದ್ದೇನಂದರೆ—
ನನ್ನ ದೇವರೇ, ನಾನು ಮನಗುಂದಿದವನಾಗಿದ್ದೇನೆ
ನಿನ್ನ ಕಡೆಗೆ ಮುಖವನ್ನೆತ್ತುವದಕ್ಕೆ ನಾಚಿಕೊಳ್ಳು
ತ್ತೇನೆ. ನನ್ನ ದೇವರೇ, ನಮ್ಮ ಪಾಪಗಳು ನಮ
ತಲೆಮೀರಿ ಬೆಳೆದವು. ನಮ್ಮ ಅಪರಾಧವು ಆಕಾ
ವನ್ನು ಮುಟ್ಟುವಷ್ಟು ದೊಡ್ಡದಾಯಿತು. ನಾವ
ನಮ್ಮ ಪಿತೃಗಳ ಕಾಲದಿಂದ ಇಂದಿನ ವರೆಗೂ ಮಹಾ
ಪರಾಧಿಗಳೇ. ನಮ್ಮ ಪಾಪಗಳ ದೆಸೆಯಿಂದ ನಾವು
ನಮ್ಮ ಅರಸರೂ ಯಾಜಕರೂ ಅನ್ಯದೇಶಗಳ ರಾಜ
ಕೈಗೆ ಒಪ್ಪಿಸಲ್ಪಟ್ಟು ಈಗಿರುವಂತೆ ಕತ್ತಿಗೂ ಸೆರೆಗೂ
ಸುಲಿಗೆಗೂ ಅಪಮಾನಕ್ಕೂ ಗುರಿಯಾದೆವು. ಆದರೂ
ನಮ್ಮ ದೇವರಾದ ಯೆಹೋವನು ಒಂದು ಕ್ಷಣ ನಮಗ
ಪ್ರಸನ್ನನಾಗಿ ನಮ್ಮಲ್ಲಿ ಸ್ವಲ್ಪ ಜನರನ್ನು ರಕ್ಷಣೆಗಾಗಿ
ಉಳಿಸಿ ತನ್ನ ಪರಿಶುದ್ಧಸ್ಥಳದಲ್ಲಿ ಮೊಳೆಯಂ
ನಮ್ಮನ್ನು ನೆಲೆಗೊಳಿಸಿ ನಮ್ಮ ಕಣ್ಣುಗಳನ್ನು ಕ
ಗೊಳಿಸಿ ನಮ್ಮ ದಾಸತ್ವದಲ್ಲಿ ನಮಗೆ ಸ್ವಲ್ಪಮಟ್ಟಿಗ
ಉಜ್ಜೀವವನ್ನು ಅನುಗ್ರಹಿಸಿದ್ದಾನೆ. ನಾವು ದಾಸರಾ
ದರೂ ನಮ್ಮ ದೇವರು ನಮ್ಮ ದಾಸತ್ವದಲ್ಲಿ ನಮ್ಮ
ನ್ನು ಕೈಬಿಡಲಿಲ್ಲ; ಹಾಳುಬಿದ್ದ ನಮ್ಮ ದೇವರ ಆಲ
ಯವನ್ನು ತಿರಿಗಿ ಕಟ್ಟಿ ಭದ್ರಪಡಿಸುವದಕ್ಕೋಸ್ಕರ
ನಮಗೆ ಉಜ್ಜೀವನ ಪ್ರಾಪ್ತವಾಗುವಂತೆಯೂ ಯೆ
ಹೂದದಲ್ಲಿಯೂ ಯೆರೂಸಲೇಮಿನಲ್ಲಿಯೂ ನಮಗ
ಅಭಯಾಶ್ರಯ ಸಿಕ್ಕುವಂತೆಯೂ ಪಾರಸಿಯ ರಾಜರ
ಮುಂದೆ ನಮಗೆ ಕೃಪೆಯನ್ನು ಅನುಗ್ರಹಿಸಿದ್ದಾನೆ
ಇಷ್ಟು ಉಪಕಾರವನ್ನು ಪಡೆದ ನಾವು ಏನು ಅರಿಕೆ
ಮಾಡಿಕೊಳ್ಳೋಣ! ನಮ್ಮ ದೇವರೇ, ನಿನ್ನ ಆಜ್ಞೆಗ
ಳನ್ನು ಉಲ್ಲಂಘಿಸಿದ್ದೇವಕಟಾ! ನೀನು ನಿನ್ನ ಸೇವಕ
ರಾದ ಪ್ರವಾದಿಗಳ ಮುಖಾಂತರ ನಮಗೆ—ನೀವ
ಸ್ವತಂತ್ರಿಸಿಕೊಳ್ಳುವದಕ್ಕೆ ಹೋಗುವ ದೇಶವು ಅನ್ಯ
ದೇಶಗಳವರ ಅಶುದ್ಧತ್ವದಿಂದಲೂ ಅವರ ವಿಗ್ರಹಗ
ಳಿಂದಲೂ ಮಲಿನವಾಯಿತು. ಅದು ಒಂದು ಕಡೆ
ಯಿಂದ ಮತ್ತೊಂದು ಕಡೆಯ ವರೆಗೂ ಆ ವಿಗ್ರಹ
ಗಳ ಅಸಹ್ಯತೆಯಿಂದ ತುಂಬಿರುತ್ತದೆ. ಹೀಗಿರಲಾಗಿ
ನೀವು ನಿಮ್ಮ ಹೆಣ್ಣುಮಕ್ಕಳನ್ನು ಅವರ ಗಂಡುಮಕ್ಕ

ಳಿಗೆ ಕೊಡಲೂ ಬಾರದು, ನಿಮ್ಮ ಗಂಡುಮಕ್ಕಳಿಗೋ
ಸ್ಕರ ಅವರ ಹೆಣ್ಣುಮಕ್ಕಳನ್ನು ತೆಗೆದುಕೊಳ್ಳಲೂ ಬಾ
ರದು, ಅವರಿಗೋಸ್ಕರ ಸುಖಕ್ಷೇಮಗಳನ್ನು ಎಂದಿಗೂ
ಬಯಸಬಾರದು. ಈ ಪ್ರಕಾರ ನಡೆದರೆ ನೀವು ಬಲ
ಗೊಂಡು ಆ ದೇಶದ ಸಮೃದ್ಧಿಯನ್ನು ಅನುಭವಿಸಿ
ಅದನ್ನು ನಿಮ್ಮ ಸಂತಾನದವರಿಗೆ ಶಾಶ್ವತಸ್ವಾಸ್ತ್ಯವ
13 ನ್ನಾಗಿ ಬಿಡುವಿರಿ ಎಂದು ಹೇಳಿದಿಯಲ್ಲಾ. ನಮ್ಮ
ದುಷ್ಕರ್ಮಮಹಾಪರಾಧಗಳ ನಿಮಿತ್ತವಾಗಿ ಇಷ್ಟೆಲ್ಲಾ
ಕೇಡು ಬಂದರೂ ನಮ್ಮ ದೇವರಾದ ನೀನು ನಮ್ಮ
ಪಾಪಗಳಿಗೆ ತಕ್ಕಂತೆ ನಮ್ಮನ್ನು ದಂಡಿಸದೆ ನಮ್ಮಲ್ಲಿ
14 ಇಷ್ಟು ಮಂದಿಯನ್ನು ಉಳಿಸಿದಿ; ಹೀಗಿರುವಲ್ಲಿ ನಾವು
ತಿರಿಗಿ ನಿನ್ನ ಆಜ್ಞೆಗಳನ್ನು ಮೀರಿ ವಿಗ್ರಹಾರಾಧಕರಾದ
ಈ ಜನರ ಸಂಗಡ ಬೀಗತನ ಮಾಡುವದು ಯೋಗ್ಯ
ವೋ? ಹಾಗೆ ಮಾಡಿದರೆ ನೀನು ನಮ್ಮ ಮೇಲೆ ರೌದ್ರಾ
ವೇಶವುಳ್ಳವನಾಗಿ ಯಾರೂ ತಪ್ಪಿಸಿಕೊಂಡು ಉಳಿಯ
15 ದಂತೆ ನಮ್ಮನ್ನು ಮುಗಿಸಿಬಿಡುವಿಯಲ್ಲವೋ? ಯೆಹೋ
ವನೇ, ಇಸ್ರಾಯೇಲ್‌ದೇವರೇ, ಈಗಿರುವಷ್ಟು ಜನರನ್ನು
ನಮ್ಮಲ್ಲಿ ಉಳಿಸಿದ್ದರಿಂದ ನೀನು ಧರ್ಮಸ್ವರೂಪ
ನೆಂದು ಪ್ರಕಟವಾಯಿತು. ನಾವಾದರೋ ನಿನ್ನ
ದೃಷ್ಟಿಯಲ್ಲಿ ಅಪರಾಧಿಗಳು. ಈ ನಮ್ಮ ದುಷ್ಕೃತ್ಯದ
ನಿಮಿತ್ತವಾಗಿ ನಿನ್ನೆದುರಿನಲ್ಲಿ ನಿಲ್ಲಲಾರೆವು ಎಂಬದೇ.

### ನಿಷಿದ್ಧವಿವಾಹವು ಲೋಪವಾದದ್ದು.

10 ಎಜ್ರನು ದೇವಾಲಯದ ಮುಂದೆ ಅಡ್ಡಬಿದ್ದು
ಅಳುತ್ತಾ ವಿಜ್ಞಾಪನೆಯನ್ನೂ ಪಾಪನಿವೇದನವನ್ನೂ
ಮಾಡುತ್ತಿರುವಷ್ಟರಲ್ಲಿ ಇಸ್ರಾಯೇಲ್ಯರ ಗಂಡಸರೂ
ಹೆಂಗಸರೂ ಮಕ್ಕಳೂ ಮಹಾಸಮೂಹವಾಗಿ ಅವನ
ಬಳಿಗೆ ಬಂದು ಕೂಡಿದರು. ಅಲ್ಲಿನ ಜನರು ಬಹಳ
2 ವಾಗಿ ಅಳುತ್ತಿದ್ದರು. ಆಗ ಏಲಾಮ್ ಸಂತಾನದ
ಯೆಹೀಯೇಲನ ಮಗನಾದ ಶೆಕನ್ಯನು ಎಜ್ರನಿಗೆ—
ಇಸ್ರಾಯೇಲ್ಯರಾದ ನಾವು ಅನ್ಯಜನರಾದ ಈ ದೇಶ
ನಿವಾಸಿಗಳಿಂದ ಹೆಣ್ಣನ್ನು ತೆಗೆದುಕೊಂಡು ನಮ್ಮ ದೇವ
ರಿಗೆ ವಿರುದ್ಧವಾಗಿ ದ್ರೋಹಮಾಡಿದರೂ [ನಮ್ಮನ್ನು
ನಾವು ತಿದ್ದಿಕೊಳ್ಳುವ] ನಿರೀಕ್ಷೆಯು ಇನ್ನೂ ಉಂಟು.
3 ಸ್ವಾಮಿಯಾದ ನೀನೂ ನಮ್ಮ ದೇವರ ಆಜ್ಞೆಯನ್ನು
ಗೌರವಿಸುವವರೂ ಹೇಳಿಕೊಟ್ಟ ಬುದ್ಧಿವಾದಾನುಸಾರ
ಅಂಥ ಎಲ್ಲಾ ಹೆಂಡತಿಯರನ್ನೂ ಅವರ ಮಕ್ಕಳನ್ನೂ
ಕಳುಹಿಸಿಬಿಡುವದಾಗಿ ಈಗಲೇ ನಮ್ಮ ದೇವರಿಗೆ
ಪ್ರತಿಜ್ಞೆಮಾಡಿ ಧರ್ಮಶಾಸ್ತ್ರಕ್ಕನುಸಾರವಾಗಿ ನಡೆ
4 ಯೋಣ. ಏಳು, ಕಾರ್ಯವನ್ನು ವಹಿಸತಕ್ಕವನು
ನೀನು; ನಾವಾದರೋ ನಿನ್ನ ಸಹಾಯಕರು. ಧೈರ್ಯ
5 ದಿಂದ ಕೈಹಾಕು ಎಂದು ಹೇಳಿದನು. ಆಗ ಎಜ್ರನು
ಎದ್ದು ಯಾಜಕರ ಮತ್ತು ಲೇವಿಯರ ಮುಖ್ಯಸ್ಥರಿಗೂ
ಎಲ್ಲಾ ಇಸ್ರಾಯೇಲ್ಯರಿಗೂ ಈ ಪ್ರಕಾರ ನಡೆಯುವ
ದಾಗಿ ಪ್ರಮಾಣಮಾಡಬೇಕೆಂದು ಹೇಳಲು ಅವರು
6 ಹಾಗೆಯೇ ಪ್ರಮಾಣಮಾಡಿದರು. ಆ ಮೇಲೆ ಎಜ್ರನು
ದೇವಾಲಯದ ಮುಂದಣ ಸ್ಥಳವನ್ನು ಬಿಟ್ಟು ಎದ್ದು
ಎಲ್ಯಾಷೀಬನ ಮಗನಾದ ಯೆಹೋಹಾನಾನನ ಕೊಠ
ಡಿಗೆ ಹೋಗಿ ಅಲ್ಲಿ ಸೆರೆಯಿಂದ ಬಂದವರ ನಿಮಿತ್ತ
ದುಃಖಿಸುತ್ತಾ ಅನ್ನಪಾನಗಳನ್ನು ತೆಗೆದುಕೊಳ್ಳದೆ
ರಾತ್ರಿಯನ್ನು ಕಳೆದನು.
ತರುವಾಯ ಯೆಹೂದದಲ್ಲಿಯೂ ಯೆರೂಸಲೇ 7
ಮಿನಲ್ಲಿಯೂ—ಸೆರೆಯಿಂದ ಬಂದವರೆಲ್ಲರೂ ಯೆರೂ
ಸಲೇಮಿನಲ್ಲಿ ಬಂದು ಕೂಡಬೇಕು, ಪ್ರಭುಗಳ ಮತ್ತು 8
ಹಿರಿಯರ ನಿರ್ಣಯದ ಪ್ರಕಾರ ಮೂರು ದಿವಸಗಳೊ
ಳಗೆ ಬಾರದವನು ತನ್ನ ಎಲ್ಲಾ ಆಸ್ತಿಯನ್ನೂ ಕಳ
ಕೊಂಡು ಸೆರೆಯಿಂದ ಬಂದವರ ಸಭೆಯಿಂದ ಬಹಿಷ್ಕೃ
ತನಾಗುವನು ಎಂದು ಪ್ರಕಟಿಸಿದರು. ಆಗ ಮೂರ 9
ನೆಯ ದಿನದಲ್ಲಿ ಅಂದರೆ ಒಂಭತ್ತನೆಯ ತಿಂಗಳಿನ ಇಪ್ಪ
ತ್ತನೆಯ ದಿನದಲ್ಲಿ ಯೆಹೂದ್ಯರ ಮತ್ತು ಬೆನ್ಯಾಮೀನ್ಯರ
ಎಲ್ಲಾ ಪುರುಷರೂ ಯೆರೂಸಲೇಮಿನಲ್ಲಿ ಬಂದು ಕೂಡಿ
ಆ ಸಂಗತಿಯ ನಿಮಿತ್ತವಾಗಿಯೂ ದೊಡ್ಡ ಮಳೆಯ
ದೆಸೆಯಿಂದಲೂ ನಡುಗುತ್ತಾ ದೇವಾಲಯದ ಬೈಲಿ
ನಲ್ಲಿ ಕೂತುಕೊಂಡರು; ಯಾಜಕನಾದ ಎಜ್ರನು 10
ಎದ್ದು ನಿಂತು ಅವರಿಗೆ—ನೀವು ಅನ್ಯಜನರ ಹೆಣ್ಣು
ಗಳನ್ನು ಮದುವೆಮಾಡಿಕೊಂಡು ಇಸ್ರಾಯೇಲ್ಯರ ಅಪ
ರಾಧವನ್ನು ಹೆಚ್ಚಿಸಿದ್ದೀರಿ. ಈಗ ನಿಮ್ಮ ಪಿತೃಗಳ 11
ದೇವರಾದ ಯೆಹೋವನಿಗೆ ನಿಮ್ಮ ಪಾಪಗಳನ್ನು ಅರಿಕೆ
ಮಾಡಿ ಆತನ ಚಿತ್ತಕ್ಕನುಸಾರವಾಗಿ ದೇಶನಿವಾಸಿಗಳ
ನ್ನೂ ಅನ್ಯಜನರಿಂದ ತಂದ ಹೆಂಡತಿಯರನ್ನೂ ಬಿಟ್ಟು
ಬೇರೆಯಾಗಿರಿ ಅನ್ನಲು ಕೂಡಿಬಂದವರೆಲ್ಲರೂ ಗಟ್ಟಿ 12
ಯಾಗಿ— ನೀನು ಹೇಳಿದಂತೆಯೇ ಮಾಡುವದು ನಮ್ಮ
ಕರ್ತವ್ಯ. ಆದರೆ ಕೂಡಿಬಂದವರು ಬಹು ಜನರು; 13
ಈಗ ಮಳೆಗಾಲ; ಹೊರಗೆ ನಿಲ್ಲುವದು ಅಸಾಧ್ಯ. ಈ
ಕೆಲಸವು ಒಂದೆರಡು ದಿನಗಳಲ್ಲಿ ತೀರುವಂಥದಲ್ಲ; ಈ
ವಿಷಯದಲ್ಲಿ ನಮ್ಮ ಅಪರಾಧವು ದೊಡ್ಡದು. ಆದದ 14
ರಿಂದ ನಮ್ಮ ಪ್ರಭುಗಳು ಸರ್ವಸಮೂಹಕ್ಕೋಸ್ಕರ
ಕಾರ್ಯವನ್ನು ವಹಿಸಿಕೊಳ್ಳಲಿ; ನಮ್ಮ ನಮ್ಮ ಊರು
ಗಳಲ್ಲಿ ಅನ್ಯಜನರ ಸ್ತ್ರೀಯರನ್ನು ಮದುವೆಮಾಡಿ
ಕೊಂಡವರೆಲ್ಲರೂ ನೇಮಿತವಾದ ದಿನದಲ್ಲಿ ತಮ್ಮ
ಊರಿನ ಹಿರಿಯರೊಡನೆಯೂ ನ್ಯಾಯಾಧಿಪತಿಗಳೊಡನೆ
ಯೂ ಇಲ್ಲಿಗೆ ಬರಲಿ. ನಮ್ಮ ದೇವರು ಈ ವಿಷಯ
ದಲ್ಲಿ ನಮ್ಮ ಮೇಲೆ ಮಾಡಿಕೊಂಡಿರುವ ಉಗ್ರಕೋಪ
ವು ಹೀಗೆ ಪರಿಹಾರವಾಗಲಿ ಎಂದು ಉತ್ತರಕೊಟ್ಟರು.
ಅಸಾಹೇಲನ ಮಗನಾದ ಯೋನಾತಾನ್, ತಿಕ್ವನ ಮಗ 15
ನಾದ ಯಹ್ಜೆಯ ಎಂಬವರು ಮಾತ್ರ ಈ ಅಭಿ
ಪ್ರಾಯವನ್ನು ವಿರೋಧಿಸಿದರು; ಲೇವಿಯರಾದ ಮೆಷು
ಲ್ಲಾಮ್, ಶಬ್ಬೆತೈ ಎಂಬವರೂ ಇವರ ಪಕ್ಷವನ್ನು ಹಿಡಿ
ದರು. ಆದರೆ ಸೆರೆಯಿಂದ ಬಂದವರು ಮೇಲೆ ಹೇಳಿರು 16
ವದನ್ನೇ ಒಪ್ಪಿಕೊಂಡರು. ಈ ವಿಚಾರಣೆಯನ್ನು ನಡಿ
ಸುವದಕ್ಕೆ ಯಾಜಕನಾದ ಎಜ್ರನೂ ಆಯಾ ಗೋತ್ರ
ಗಳ ಪ್ರಧಾನಪುರುಷರೂ ಹೆಸರುಹೆಸರಾಗಿ ನೇಮಿಸ
ಲ್ಪಟ್ಟರು. ಹತ್ತನೆಯ ತಿಂಗಳಿನ ಮೊದಲನೆಯ ದಿನ
ದಲ್ಲಿ ಇವರ ಮೊದಲನೆಯ ಕೂಟ ನಡೆಯಿತು. ಅವರು 17
ಅನ್ಯಜನರ ಸ್ತ್ರೀಯರನ್ನು ಮದುವೆಮಾಡಿಕೊಂಡವರ
ಸಂಗತಿಯನ್ನು ಮೊದಲನೆಯ ತಿಂಗಳಿನ ಮೊದಲನೆಯ
ದಿನದೊಳಗಾಗಿ ಪೂರ್ಣವಾಗಿ ವಿಚಾರಿಸಿ ತೀರಿಸಿದರು.
ಅನ್ಯಜನರ ಸ್ತ್ರೀಯರನ್ನು ಮದುವೆಮಾಡಿಕೊಂಡ 18
ವರು ಯಾರಂದರೆ—

ಯಾಜಕರಲ್ಲಿ—
ಯೋಚಾದಾಕನ ಮಗ ಯೇಷೂವನ ಮತ್ತು ಅವನ
ಸಹೋದರರ ಸಂತಾನದವರಾದ ಮಾಸೇಯ, ಎಲೀ
19 ಯೆಜೆರ್, ಯಾರೀಬ್, ಗೆದಲ್ಯ ಎಂಬವರು. ಇವರು
ತಮ್ಮ ಹೆಂಡತಿಯರನ್ನು ಕಳುಹಿಸಿಬಿಡುವದಾಗಿ ಕೈ
ಮುಟ್ಟಿ ಪ್ರಮಾಣಮಾಡಿ ತಾವು ಅಪರಾಧಿಗಳೆಂದು
ಒಪ್ಪಿ ಪ್ರಾಯಶ್ಚಿತ್ತವಾಗಿ ಒಂದು ಟಗರನ್ನು ಸಮರ್ಪಿಸಿ
ದರು.
20 ಇಮ್ಮೇರನ ಸಂತಾನದವರಾದ ಹನಾನೀ, ಜೆಬದ್ಯ;
21 ಹಾರೀಮನ ಸಂತಾನದವರಾದ ಮಾಸೇಯ,
ಎಲೀಯ, ಶೆಮಾಯ, ಯೆಹೀಯೇಲ್, ಉಜ್ಜೀ
ಯ;
22 ಪಷ್ಹೂರನ ಸಂತಾನದವರಾದ ಎಲ್ಯೋವೇನೈ,
ಮಾಸೇಯ, ಇಷ್ಮಾಯೇಲ್, ನೆತನೇಲ್, ಯೋಜಾ
ಬಾದ್, ಎಲ್ಲಾಸ ಇವರೂ;
23 ಲೇವಿಯರಲ್ಲಿ—
ಯೋಜಾಬಾದ್, ಶಿಮ್ಮೀ, ಕೆಲೀಟ ಅನ್ನಿಸಿಕೊಳ್ಳು
ವ ಕೇಲಾಯ, ಪೆತಹ್ಯ, ಯೆಹೂದ, ಎಲೀಯೆಜೆರ್
ಇವರೂ;
24 ಗಾಯಕರಲ್ಲಿ—
ಎಲ್ಯಾಷೀಬ್,
ದ್ವಾರಪಾಲಕರಲ್ಲಿ—
ಶಲ್ಲೂಮ್, ಟೆಲೆಮ್, ಊರೀ ಎಂಬವರೂ;
25 ಬೇರೆ ಇಸ್ರಾಯೇಲ್ಯರಲ್ಲಿ—
ಪರೋಷ್ ಸಂತಾನದವರಾದ ರಮ್ಯಾಹ, ಇಜ್ಜೀಯ,
ಮಲ್ಕೀಯ, ಮಿಯ್ಯಾಮಿನ್, ಎಲ್ಲಾಜಾರ್, ಮಲ್ಕೀ
ಯ, ಬೆನಾಯ;
26 ಏಲಾಮ್ ಸಂತಾನದವರಾದ ಮತ್ತನ್ಯ, ಜೆಕರ್ಯ,
ಯೆಹೀಯೇಲ್, ಅಬ್ದೀ, ಯೆರೇಮೋತ್, ಏಲೀಯ;
27 ಜತ್ತೂ ಸಂತಾನದವರಾದ ಎಲ್ಯೋವೇನೈ, ಎಲ್ಯಾ
ಷೀಬ್, ಮತ್ತನ್ಯ, ಯೆರೇಮೋತ್, ಜಾಬಾದ್
ಅಜೀಜಾ;
ಬೇಬೈ ಸಂತಾನದವರಾದ ಯೆಹೋಹಾನಾನ್
ಹನನ್ಯ, ಜಬ್ಬೈ, ಅತ್ಲೈ;
ಬಾನೀ ಸಂತಾನದವರಾದ ಮೆಷುಲ್ಲಾಮ್, ಮ
ಲ್ಲೂಕ್, ಅದಾಯ, ಯಾಷೂಬ್, ಶೆಯಾಲ್, ರಾ
ಮೋತ್;
ಪಹತ್ ಮೋವಾಬ್ ಸಂತಾನದವರಾದ ಅದ್ನ
ಕೆಲಾಲ್, ಬೆನಾಯ, ಮಾಸೇಯ, ಮತ್ತನ್ಯ, ಬೆಚ
ಲೇಲ್, ಬಿನ್ನೂಯ್, ಮನಸ್ಸೆ;
ಹಾರೀಮ್ ಸಂತಾನದವರಾದ ಎಲೀಯೆಜೆರ್
ಇಷ್ಷೀಯ, ಮಲ್ಕೀಯ, ಶೆಮಾಯ, ಸಿಮೆಯೋನ್
ಬೆನ್ಯಾಮಿನ್, ಮಲ್ಲೂಕ್, ಶೆಮರ್ಯ;
ಹಾಷುಮ್ ಸಂತಾನದವರಾದ ಮತ್ತೆನೈ, ಮತ್ತತ್ತ
ಜಾಬಾದ್, ಎಲೀಫೆಲೆಟ್, ಯೆರೇಮೈ, ಮನಸ್ಸೆ
ಶಿಮ್ಮೀ;
ಬಾನೀ ಸಂತಾನದವರಾದ ಮಾದೈ, ಅಮ್ರಾಮ್
ಊವೇಲ್, ಬೆನಾಯ, ಬೇದೆಯ, ಕೆಲೂಹು
ವನ್ಯಾಹ, ಮೆರೇಮೋತ್, ಎಲ್ಯಾಷೀಬ್, ಮತ್ತನ್ಯ, 36
ಮತ್ತೆನೈ, ಯಾಸೈ, ಬಾನೀ, ಬಿನ್ನೂಯ್, ಶಿಮ್ಮೀ
ಶೆಲೆಮ್ಯ, ನಾತಾನ್, ಅದಾಯ,
ಮಕ್ನದೆಬೈ, ಶಾಷೈ, ಶಾರೈ, ಅಜರೇಲ್, 40
ಶೆಲೆಮ್ಯ, ಶೆಮರ್ಯ, ಶಲ್ಲೂಮ್, ಅಮರ್ಯ
ಯೋಸೇಫ್;
ನೇಬೋ ಸಂತಾನದವರಾದ ಯೆಗೀಯೇಲ್
ಮತ್ತಿತ್ಯ, ಜಾಬಾದ್, ಜೆಬೀನ, ಯದ್ದೈ, ಯೋವೇಲ್
ಬೆನಾಯ ಇವರೂ.
ಇವರೆಲ್ಲರೂ ಅನ್ಯಕುಲದ ಸ್ತ್ರೀಯರನ್ನು ಮದುವ
ಮಾಡಿಕೊಂಡವರು. ಕೆಲವರಿಗೆ ಆ ಸ್ತ್ರೀಯರಲ್ಲಿ
ಮಕ್ಕಳು ಹುಟ್ಟಿದ್ದರು.

# THE BOOK OF NEHEMIAH

## ನೆಹೆಮೀಯ

ನೆಹೆಮೀಯನ ಸ್ವಯಂಲಿಖಿತ ಜೀವನಚರಿತ್ರೆ.
1. 1—7. 73.

ಯೆರೂಸಲೇಮು ಹಾಳುಬಿದ್ದ ವರ್ತಮಾನವು ನೆಹೆಮೀಯನಿಗೆ ಮುಟ್ಟಿದ್ದೂ ಅವನ ಪ್ರಾರ್ಥನೆಯೂ.

1 ಹಕಲ್ಯನ ಮಗನಾದ ನೆಹೆಮೀಯನ ಮಾತುಗಳು—
ಇಪ್ಪತ್ತನೆಯ ವರುಷದ ಮಾರ್ಗಶೀರ್ಷ ಮಾಸ
ದಲ್ಲಿ ನಾನು ಶೂಷನ್ ಪಟ್ಟಣದ ಅರಮನೆಯಲ್ಲಿ
2 ದ್ದಾಗ ನನ್ನ ಸಹೋದರರಲ್ಲಿ ಒಬ್ಬನಾದ ಹನಾನೀಯ
ನೂ ಬೇರೆ ಕೆಲವು ಜನರೂ ಯೆಹೂದದಿಂದ ನನ್ನ ಬಳಿಗ
ಬಂದರು. ಸೆರೆಯವರೊಳಗೆ ತಪ್ಪಿಸಿಕೊಂಡ ಯೆಹೂ
ದ್ಯರ ಮತ್ತು ಯೆರೂಸಲೇಮಿನ ಸಮಾಚಾರವನ್ನು
ನಾನು ಅವರ ಹತ್ತಿರ ವಿಚಾರಿಸುವಲ್ಲಿ ಅವರು ನನ
ಗೆ—ಸೆರೆಯವರೊಳಗೆ ತಪ್ಪಿಸಿಕೊಂಡು ಆ ಸಂಸ್ಥಾನ
ದಲ್ಲಿ ವಾಸಿಸುತ್ತಿರುವವರು ಮಹಾಕಷ್ಟನಿಂದೆಗಳಿಗೆ
ಒಳಗಾಗಿದ್ದಾರೆ; ಯೆರೂಸಲೇಮಿನ ಪೌಳಿಗೋಡೆಯು
ಕೆಡವಲ್ಪಟ್ಟಿರುತ್ತದೆ; ಅದರ ಬಾಗಲುಗಳು ಬೆಂಕಿ
ಯಿಂದ ಸುಡಲ್ಪಟ್ಟಿರುತ್ತವೆ ಎಂದು ಹೇಳಿದರು.

4 ನಾನು ಈ ವರ್ತಮಾನವನ್ನು ಕೇಳಿದಾಗ ನೆಲದ
ಮೇಲೆ ಕೂತುಕೊಂಡು ಅತ್ತೆನು; ಕೆಲವು ದಿವಸಗಳ
ವರೆಗೂ ಶೋಕಿಸುತ್ತಾ ಉಪವಾಸವಾಗಿದ್ದು ಪರ
ಲೋಕದೇವರ ಮುಂದೆ ವಿಜ್ಞಾಪನೆಮಾಡುತ್ತಾ ಇದ್ದೆ
5 ನು. ಆ ವಿಜ್ಞಾಪನೆಗಳಲ್ಲಿ ನಾನು—ಯೆಹೋವನೇ,
ಮಹೋನ್ನತನೂ ಭಯಂಕರನೂ ಆಗಿರುವ ಪರ
ಲೋಕದೇವರೇ, ನಿನ್ನನ್ನು ಪ್ರೀತಿಸಿ ನಿನ್ನ ಆಜ್ಞೆಗ
ಳನ್ನು ಅನುಸರಿಸುವವರಿಗೆ ಮಾಡಿದ ಕೃಪಾವಾಗ್ದಾನ
6 ಗಳನ್ನು ನೆರವೇರಿಸುವವನೇ, ಕೃಪೆಮಾಡಿ ಕಿವಿಗೊಡ
ಬೇಕು, ಕಟಾಕ್ಷಿಸಬೇಕು; ನಿನ್ನ ಸೇವಕನ ಪ್ರಾರ್ಥನೆ
ಯನ್ನು ಲಾಲಿಸಬೇಕು. ನಾನು ಈಗ ಹಗಲಿರುಳೂ
ನಿನ್ನ ಸನ್ನಿಧಿಯಲ್ಲಿ ನಿನ್ನ ಸೇವಕರಾದ ಇಸ್ರಾಯೇ
ಲ್ಯರಿಗೋಸ್ಕರ ಪ್ರಾರ್ಥಿಸುತ್ತಾ ಅವರು ನಿನಗೆ ವಿರುದ್ಧ
ವಾಗಿ ಮಾಡಿದ ಪಾಪಗಳನ್ನು ಅರಿಕೆಮಾಡುತ್ತಾ ಇದ್ದೇ
ನೆ; ನಾನೂ ನನ್ನ ಪೂರ್ವಿಕರೂ ಆ ಪಾಪಗಳಲ್ಲಿ
7 ಪಾಲುಗಾರರು. ನಾವು ನಿನಗೆ ದ್ರೋಹಿಗಳಾಗಿ ನಡೆ
ಯುತ್ತಾ ಬಂದೆವು; ನೀನು ನಿನ್ನ ಸೇವಕನಾದ ಮೋಶೆ
ಯ ಮುಖಾಂತರ ಕೊಟ್ಟ ಆಜ್ಞಾವಿಧಿನ್ಯಾಯಗಳನ್ನು
8 ನಾವು ಕೈಕೊಳ್ಳಲಿಲ್ಲ. ನೀನು ಅವನ ಮುಖಾಂತರ
ವಾಗಿ—ನೀವು ಅವಿಧೇಯರಾದರೆ ನಿಮ್ಮನ್ನು ಜನಾಂ
9 ಗಗಳೊಳಗೆ ಚದರಿಸಿಬಿಡುವೆನು; ನನ್ನ ಕಡೆಗೆ ತಿರು
ಗಿಕೊಂಡು ನನ್ನ ಆಜ್ಞೆಗಳನ್ನು ಅನುಸರಿಸಿ ನಡೆ
ಯುವದಾದರೆ ನಿಮ್ಮವರು ಆಕಾಶದ ಕೊನೆಯ ವರೆಗೆ
ಒಯ್ಯಲ್ಪಟ್ಟರೂ ನಾನು ಅವರನ್ನು ಅಲ್ಲಿಂದ ಕೂಡಿಸಿ
ನನ್ನ ನಾಮಸ್ಥಾಪನೆಗೋಸ್ಕರ ಆರಿಸಿದ ಸ್ಥಳಕ್ಕೆ
ತಿರಿಗಿ ಬರಮಾಡುವೆನು ಎಂದು ಹೇಳಿದಿಯಲ್ಲಾ; ಆ
ಮಾತನ್ನು ನೆನಪುಮಾಡಿಕೊಳ್ಳಬೇಕು, ಸ್ವಾಮೀ.
10 ಅವರು ನಿನ್ನ ಸೇವಕರೂ ನೀನು ನಿನ್ನ ಮಹಾಶಕ್ತಿ
ಭುಜಪರಾಕ್ರಮಗಳಿಂದ ವಿಮೋಚಿಸಿದ ನಿನ್ನ ಪ್ರಜೆ
11 ಗಳೂ ಆಗಿರುತ್ತಾರಲ್ಲಾ. ಸ್ವಾಮೀ, ಕೃಪೆಮಾಡು;
ನಿನ್ನ ಸೇವಕನಾದ ನನ್ನ ಪ್ರಾರ್ಥನೆಗೂ ನಿನ್ನ ನಾಮ
ಸ್ಮರಣೆಯಲ್ಲಿ ಆನಂದಿಸುವ ನಿನ್ನ ಭಕ್ತರ ಪ್ರಾರ್ಥನೆಗೂ
ಕಿವಿಗೊಡು. ನಿನ್ನ ಸೇವಕನು ಈಹೊತ್ತು ಆ ಮನು
ಷ್ಯನ ದಯೆಗೆ ಪಾತ್ರನಾಗಿ ಕೃತಾರ್ಥನಾಗುವಂತೆ ಅನು
ಗ್ರಹಿಸಬೇಕು ಎಂದು ಪ್ರಾರ್ಥಿಸಿದೆನು.

ನೆಹೆಮೀಯನು ಯೆರೂಸಲೇಮನ್ನು ಭದ್ರಪಡಿಸುವದಕ್ಕೆ
ರಾಜಾಜ್ಞೆಹೊಂದಿದ್ದು.

2 ನಾನು ಅರಸನ ಪಾನಸೇವಕನಾಗಿದ್ದೆನು. ಅರಸ
ನಾದ ಅರ್ತಷಸ್ತನ ಇಪ್ಪತ್ತನೆಯ ವರುಷದ 1) ಚೈತ್ರ
ಮಾಸದಲ್ಲಿ ಅರಸನು ದ್ರಾಕ್ಷಾರಸಪಾನಮಾಡುವ
ಹೊತ್ತಿನಲ್ಲಿ ನಾನು ದ್ರಾಕ್ಷಾರಸವನ್ನು ತಂದು ಅವ
ನಿಗೆ ಕೊಟ್ಟೆನು. ನಾನು ಅವನ ಸನ್ನಿಧಿಯಲ್ಲಿ ಹಿಂದೆ
2 ಎಂದೂ ಖಿನ್ನನಾಗಿರಲಿಲ್ಲ. ಅರಸನು ನನಗೆ—
ನೀನು ಕಳೆಗುಂದಿದವನಾಗಿ ಕಾಣುವದೇಕೆ? ನಿನಗೆ
ದೇಹಾಲಸ್ಯವಿಲ್ಲವಲ್ಲಾ; ಇದಕ್ಕೆ ಮನೋವೇದನೆ
ಯೇ ಹೊರತು ಬೇರೇನೂ ಕಾರಣವಲ್ಲ ಎಂದು
ಹೇಳಲು ನನಗೆ ಮಹಾಭೀತಿಯುಂಟಾಯಿತು. ನಾನು 3
ಅರಸನಿಗೆ—ಅರಸನು ಚಿರಂಜೀವಿಯಾಗಿರಲಿ. ನನ್ನ
ಪೂರ್ವಿಕರ ಸಮಾಧಿಗಳಿರುವ ಪಟ್ಟಣವು ಹಾಳಾಗಿ
ಅದರ ಬಾಗಲುಗಳು ಬೆಂಕಿಯಿಂದ ಸುಟ್ಟು ಹೋ
ಗಿವೆ; ಹೀಗಿರುವಲ್ಲಿ ನನ್ನ ಮುಖವು ಕಳೆಗುಂದದೆ
ಇರುವದು ಹೇಗೆ ಎಂದು ಹೇಳಿದೆನು. ಆಗ ಅರ 4
ಸನು ನನ್ನನ್ನು—ನಿನ್ನ ಅಪೇಕ್ಷೆಯೇನು ಎಂದು ಕೇಳಿ
ದನು. ನಾನು ಪರಲೋಕದ ದೇವರನ್ನು ಪ್ರಾರ್ಥಿಸಿ
ಅರಸನಿಗೆ—ರಾಜರ ಚಿತ್ತವಿರುವದಾದರೆ ಮತ್ತು ತಮ್ಮ 5
ಸೇವಕನು ತಮ್ಮ ದೃಷ್ಟಿಯಲ್ಲಿ ದಯೆಗೆ ಪಾತ್ರನಾಗಿ
ದ್ದರೆ ನನ್ನ ಪಿತೃಗಳ ಸಮಾಧಿಗಳಿರುವ ಪಟ್ಟಣವನ್ನು
ತಿರಿಗಿ ಕಟ್ಟುವದಕ್ಕೋಸ್ಕರ ಯೆಹೂದದೇಶಕ್ಕೆ ಹೋಗ
ಲು ನನಗೆ ಅಪ್ಪಣೆಯಾಗಬೇಕು ಎಂದು ಹೇಳಿದೆನು.
ರಾಣಿಯು ಅರಸನ ಹತ್ತಿರದಲ್ಲೇ ಕೂತುಕೊಂಡಿದ್ದಳು. 6
ಅರಸನು—ಪ್ರಯಾಣಕ್ಕೆ ನಿನಗೆಷ್ಟು ಕಾಲ ಬೇಕು?
ಯಾವಾಗ ಹಿಂದಿರುಗುವಿ ಎಂದು ವಿಚಾರಿಸಿದಾಗ
ನಾನು ಕಾಲವನ್ನು ಸೂಚಿಸಲು ಅವನು ಒಪ್ಪಿಕೊಂಡು
ಅಪ್ಪಣೆಕೊಟ್ಟನು. ತರುವಾಯ ನಾನು ಅರಸನಿಗೆ— 7
ಹೊಳೆಯಾಚೆಯ ದೇಶಾಧಿಪತಿಗಳು ತಮ್ಮ ಪ್ರಾಂತ
ಗಳಲ್ಲಿ ಹಾದು ಯೆಹೂದ ಸೀಮೆಗೆ ಹೋಗುವದಕ್ಕೆ
ನನಗೆ ಅಪ್ಪಣೆಕೊಡುವ ಹಾಗೂ ರಾಜವನಪಾಲಕನಾದ 8
ಆಸಾಫನು ದೇವಾಲಯದ ಕೋಟೆಯ ಬಾಗಲು
ಗಳು, ಪಟ್ಟಣದ ಪೌಳಿಗೋಡೆ, ನಾನು ಸೇರುವ
ಮನೆ ಇವುಗಳಿಗೆ ಬೇಕಾಗುವ ತೊಲೆಗಳಿಗಾಗಿ ಮರ
ಗಳನ್ನು ಕೊಡುವ ಹಾಗೂ ರಾಜರು ನನ್ನ ಕೈಯಲ್ಲಿ
ಪತ್ರಗಳನ್ನು ದಯಮಾಡಬೇಕು ಎಂದು ಬಿನ್ನವಿಸಲು
ನನ್ನ ದೇವರ ಕೃಪಾಹಸ್ತಪಾಲನೆ ನನಗಿದ್ದದ್ದರಿಂದ
ಅರಸನು ಅವುಗಳನ್ನು ನನಗೆ ಕೊಟ್ಟದ್ದಲ್ಲದೆ ನನ್ನನ್ನು 9
ಸಾಗಕಳುಹಿಸುವದಕ್ಕೋಸ್ಕರ ಸೇನಾಧಿಪತಿಗಳನ್ನೂ
ರಾಹುತರನ್ನೂ ಕಳುಹಿಸಿದನು.

ನೆಹೆಮೀಯನು ರಾತ್ರಿಯಲ್ಲಿ ಪೌಳಿಗೋಡೆಯನ್ನು
ಪರೀಕ್ಷಿಸಿದ್ದು.

ಹೀಗೆ ನಾನು ಹೊಳೆಯಾಚೆಯ ದೇಶಾಧಿಪತಿಗಳ
ಬಳಿಗೆ ಬಂದು ಅರಸನ ಪತ್ರಗಳನ್ನು ಅವರಿಗೆ ಕೊಟ್ಟೆ
ನು. ಇಸ್ರಾಯೇಲ್ಯರ ಹಿತಚಿಂತಕನೊಬ್ಬನು ಬಂದ 10
ನೆಂಬ ವರ್ತಮಾನವು ಹೋರೋನಿನ ಸನ್ಬಲ್ಲಟನಿಗೂ
ಅಮ್ಮೋನ್‍ದೇಶದವನಾದ ಟೋಬೀಯ ಎಂಬ ದಾಸ
ನಿಗೂ ಮುಟ್ಟಿದಾಗ ಅವರು ಬಹಳವಾಗಿ ಹೊಟ್ಟೆಕಿಚ್ಚು
ಪಟ್ಟರು.
ಅನಂತರ ಯೆರೂಸಲೇಮಿಗೆ ಬಂದೆನು. ಅಲ್ಲಿ 11
ಮೂರು ದಿನಗಳಿದ್ದ ಮೇಲೆ ಯೆರೂಸಲೇಮಿಗೋ 12
ಸ್ಕರ ಮಾಡತಕ್ಕ ಕಾರ್ಯದ ವಿಷಯವಾಗಿ ನನ್ನ
ದೇವರು ನನ್ನಲ್ಲಿ ಯಾವ ಆಲೋಚನೆಯನ್ನು ಹುಟ್ಟಿಸಿ
ದ್ದಾನೆಂದು ಯಾರಿಗೂ ತಿಳಿಸದೆ ರಾತ್ರಿಯಲ್ಲಿದ್ದು
ಕೆಲವು ಜನರನ್ನು ಮಾತ್ರ ಕರಕೊಂಡು ಹೊರಟೆನು.
ನನ್ನ ವಾಹನಪಶುವಿನ ಹೊರತು ಬೇರೆ ಯಾವ ಪಶು

1) ಮೂಲ: ನೀಸಾನ್.

13 ವೂ ನನ್ನೊಂದಿಗಿರಲಿಲ್ಲ. ನಾನು ರಾತ್ರಿವೇಳೆಯಲ್ಲಿ
ತಗ್ಗಿನ ಬಾಗಲಿನಿಂದ ಹೊರಟು ಹಾಳುಬಿದ್ದ ಯೆ
ರೂಸಲೇಮಿನ ಗೋಡೆಗಳನ್ನೂ ಬೆಂಕಿಯಿಂದ ಸುಡ
ಲ್ಪಟ್ಟ ಅದರ ಬಾಗಲುಗಳನ್ನೂ ನೋಡುತ್ತಾ ಹೆಬ್ಬಾವು
ಬುಗ್ಗೆಯ ಮಾರ್ಗವಾಗಿ ತಿಪ್ಪೆಬಾಗಲಿಗೆ ಹೋದೆನು.
14 ಅಲ್ಲಿಂದ ಬುಗ್ಗೆಬಾಗಲನ್ನು ಹಾದು ಅರಸನ ಕೊಳ
15 ಕ್ಕೆ ಹೋದೆನು. ನನ್ನ ವಾಹನಪಶುವಿಗೆ ಅಲ್ಲಿಂದ
ಮುಂದೆ ಹೋಗುವದಕ್ಕೆ ಮಾರ್ಗವಿಲ್ಲದ್ದರಿಂದ ನಾನು
ರಾತ್ರಿಯಲ್ಲಿ ಹಳ್ಳದ ಮಾರ್ಗದಿಂದ ಹತ್ತುತ್ತಾ
ಗೋಡೆಯನ್ನು ಪರೀಕ್ಷಿಸಿದೆನು. ಆ ಮೇಲೆ ಪುನಃ
ತಗ್ಗಿನ ಬಾಗಲಿನಿಂದ ಮನೆಗೆ ಬಂದೆನು.
16 ನಾನು ಆ ವರೆಗೆ ಯೆಹೂದ್ಯರಿಗೂ ಯಾಜಕ
ರಿಗೂ ಶ್ರೀಮಂತರಿಗೂ ಅಧಿಕಾರಿಗಳಿಗೂ ಕೆಲಸನಡಿಸ
ತಕ್ಕ ಇತರರಿಗೂ ಏನೂ ತಿಳಿಸದೆ ಇದ್ದದರಿಂದ ನಾನು
ಎಲ್ಲಿ ಹೋಗಿದ್ದೆನು, ಏನು ಮಾಡಿದೆನು ಎಂಬದು
17 ಅಧಿಕಾರಿಗಳಿಗೆ ಗೊತ್ತಿರಲಿಲ್ಲ. ಆಗ ನಾನು ಅವ
ರಿಗೆ—ನಮ್ಮ ದುರವಸ್ಥೆ ನಿಮ್ಮ ಕಣ್ಣ ಮುಂದಿರು
ತ್ತದಲ್ಲವೋ; ಯೆರೂಸಲೇಮ್ ಪಟ್ಟಣವು ಹಾಳು
ಬಿದ್ದದೆ, ಅದರ ಬಾಗಲುಗಳು ಬೆಂಕಿಯಿಂದ ಸುಡ
ಲ್ಪಟ್ಟಿರುತ್ತವೆ; ಬನ್ನಿರಿ, ಯೆರೂಸಲೇಮಿನ ಗೋಡೆ
ಯನ್ನು ಕಟ್ಟೋಣ. ಹೀಗೆ ಮಾಡಿದರೆ ನಮ್ಮ
ಮೇಲಣ ನಿಂದೆಯು ಹೋಗುವದು ಎಂದು ಹೇಳಿ
18 ದೆನು. ಇದಲ್ಲದೆ ನನ್ನ ದೇವರ ಕೃಪಾಹಸ್ತವು
ನನ್ನನ್ನು ಪಾಲಿಸಿದ್ದನ್ನೂ ಅರಸನು ನನಗೆ ಹೇಳಿ
ದ್ದನ್ನೂ ಅವರಿಗೆ ವಿವರಿಸಿದೆನು. ಆಗ ಅವರು—
ಬನ್ನಿರಿ, ಕಟ್ಟೋಣ ಎಂದು ಹೇಳಿ ಆ ಒಳ್ಳೇ ಕೆಲಸಕ್ಕೆ
ಕೈಹಾಕಲು ಧೈರ್ಯಗೊಂಡರು.
19 ಹೋರೋನಿನವನಾದ ಸನ್ಬಲ್ಲಟನೂ ಅಮ್ಮೋನ್
ದೇಶದವನಾದ ಟೋಬೀಯ ಎಂಬ ದಾಸನೂ ಅರಬಿ
ಯನಾದ ಗೆಷೆಮನೂ ಈ ವರ್ತಮಾನವನ್ನು ಕೇಳಿ
ದಾಗ ಅವರು ನಮ್ಮನ್ನು ತಿರಸ್ಕರಿಸಿ ಗೇಲಿಮಾಡಿ—
ನೀವು ಇಲ್ಲಿ ಮಾಡುವದೇನು? ಅರಸನಿಗೆ ವಿರೋಧ
ವಾಗಿ ತಿರುಗಿಬೀಳಬೇಕೆಂದಿರುತ್ತೀರೋ ಎಂದು ಕೇಳಿ
20 ದರು. ನಾನು ಅವರಿಗೆ—ಪರಲೋಕದೇವರು ನಮಗೆ
ಸಾಫಲ್ಯವನ್ನನುಗ್ರಹಿಸುವನು. ಆದದರಿಂದ ಆತನ
ಸೇವಕರಾದ ನಾವು ಕಟ್ಟುವದಕ್ಕೆ ಮನಸ್ಸುಮಾಡಿ
ದ್ದೇವೆ. ನಿಮಗಾದರೋ ಯೆರೂಸಲೇಮಿನಲ್ಲಿ ಪಾಲೂ
ಹಕ್ಕೂ ಹೆಸರೂ ಇರುವದಿಲ್ಲ ಎಂದು ಉತ್ತರ
ಕೊಟ್ಟೆನು.

ಪೌಳಿಗೋಡೆಯನ್ನು ಕಟ್ಟಿದವರ ಪಟ್ಟಿ.

3 ಆಗ ಮಹಾಯಾಜಕನಾದ ಎಲ್ಯಾಷೀಬನೂ ಅವನ
ಕುಟುಂಬದ ಯಾಜಕರೂ ಕುರಿಬಾಗಲನ್ನು ಕಟ್ಟಿ
ಅದನ್ನು ಪ್ರತಿಷ್ಠಿಸಿ ಅದಕ್ಕೆ ಕದಗಳನ್ನು ಇಟ್ಟರು.
ಅಲ್ಲಿಂದ ಹಮ್ಮೆಯಾ ಬುರುಜಿನ ವರೆಗೆ ಗೋಡೆಕಟ್ಟಿ
ಅದನ್ನೂ ಪ್ರತಿಷ್ಠಿಸಿದರು. ಅಲ್ಲಿಂದ ಹನನೇಲ್ ಬು
ರುಜಿನ ವರೆಗೂ ಕಟ್ಟಿದರು. ಅಲ್ಲಿಂದ ಆಚೆಗೆ ಕಟ್ಟು
ತ್ತಿದ್ದವರು ಯೆರಿಕೋವಿನವರು; ಆಚೆಗೆ ಇಮ್ರಿಯ
ಮಗನಾದ ಜಕ್ಕೂರನು.
ಮೀನುಬಾಗಲನ್ನು ಕಟ್ಟಿದವರು ಹಸ್ಸೆನಾಹನ
ಮನೆಯವರು. ಇವರು ಅದರ ಮೇಲೆ ತೊಲೆಗಳ
ನ್ನಿಟ್ಟು ಅದಕ್ಕೆ ಕದ ತಿರುಗಣಿ ಅಗುಳಿಗಳನ್ನು ಹಚ್ಚಿ
ದರು. ಅಲ್ಲಿಂದ ಮುಂದಕ್ಕೆ ಗೋಡೆಯನ್ನು ಜೀ
ರ್ಣೋದ್ಧಾರಮಾಡಿಸಿದವನು ಊರೀಯನ ಮಗನೂ
ಹಕ್ಕೋಚನ ಮೊಮ್ಮಗನೂ ಆಗಿರುವ ಮೆರೇಮೋ
ತ್; ಆ ಮೇಲೆ ಬೆರೆಕ್ಯನ ಮಗನೂ ಮೆಷೇಜಬೇ
ಲನ ಮೊಮ್ಮಗನೂ ಆಗಿರುವ ಮೆಷುಲ್ಲಾಮ್;
ಆಚೆಗೆ ಬಾನನ ಮಗನಾದ ಚಾದೋಕ್; ಮುಂದಕ್ಕೆ
ತೆಕೋವದವರು. ತೆಕೋವದ ಶ್ರೀಮಂತರಾದರೋ
ತಮ್ಮ ಒಡೆಯರ ಸೇವೆಗಾಗಿ ಹೆಗಲನ್ನು ಕೊಡ
ಲಿಲ್ಲ.
ಹಳೆಯದು ಎಂಬ ಬಾಗಲನ್ನು ಜೀರ್ಣೋದ್ಧಾರ
ಮಾಡಿದವರು ಪಾಸೇಹನ ಮಗನಾದ ಯೋಯಾ
ದನೂ ಬೆಸೋದ್ಯನ ಮಗನಾದ ಮೆಷುಲ್ಲಾಮನೂ.
ಇವರು ಅದರ ಮೇಲೆ ತೊಲೆಗಳನ್ನಿಟ್ಟು ಅದಕ್ಕೆ
ಕದ ತಿರುಗಣಿ ಅಗುಳಿಗಳನ್ನು ಹಚ್ಚಿದರು. 1)ಅಲ್ಲಿಂದ
ಹೊಳೆಯಾಚೆಯ ದೇಶಾಧಿಪತಿಯ ನ್ಯಾಯಸ್ಥಾನದ
ವರೆಗೆ ಗಿಬ್ಯೋನಿನವನಾದ ಮೆಲಟ್ಯ, ಮೇರೋನೋತಿ
ನವನಾದ ಯಾದೋನ್ ಇವರೂ ಗಿಬ್ಯೋನ್ ಮತ್ತು
ಮಿಚ್ಪಾ ಊರುಗಳವರೂ ಜೀರ್ಣೋದ್ಧಾರಮಾಡಿ
ದರು. ಇದರ ಆಚೆಗೆ ಹರ್ಹಯನ ಮಗನಾದ ಅಕ್ಕ
ಸಾಲಿಗರ ಉಜ್ಜೀಯೇಲ್; ಆ ಮೇಲೆ ಬುಕ್ಕಿಟ್ಟು
ಗಾರರ ಹನನ್ಯ; ಇವರು ಅಗಲ ಗೋಡೆಯೆನಿಸಿ
ಕೊಳ್ಳುವ ಗೋಡೆಯ ಈಚೆಗಿರುವ ಯೆರೂಸಲೇಮಿನ
ಭಾಗವನ್ನು ಗೋಡೆಯೊಳಗೆ 2)ಸೇರಿಸಲಿಲ್ಲ. ಇದರ
ಆಚೆಗೆ ಯೆರೂಸಲೇಮಿನ ಅರೆನಾಡೊಡೆಯನೂ
ಹೂರನ ಮಗನೂ ಆದ ರೆಫಾಯ. ಇವನ ಮುಂದಕ್ಕೆ
ಹರೂಮಫನ ಮಗನಾದ ಯೆದಾಯ; ಇವನು ತನ್ನ
ಮನೆಯ ಎದುರಿಗಿರುವ ಗೋಡೆಯನ್ನು ಜೀರ್ಣೋ
ದ್ಧಾರಮಾಡಿದನು. ಇವನ ಆಚೆಗೆ ಹಷಬ್ನೆಯನ
ಮಗನಾದ ಹಟ್ಟೂಷ್. ಗೋಡೆಯ ಇನ್ನೊಂದು ಭಾಗ
ವನ್ನೂ ಒಲೆಬುರುಜನ್ನೂ ಜೀರ್ಣೋದ್ಧಾರಮಾಡಿದ
ವರು ಹಾರೀಮನ ಮಗನಾದ ಮಲ್ಕೀಯನೂ ಪಹತ್
ಮೋವಾಬ್ಯನಾದ ಹಷ್ಷೂಬನೂ. ಇವನ ಸಮೀಪ
ದಲ್ಲಿ ಗೋಡೆಯನ್ನು ಜೀರ್ಣೋದ್ಧಾರಮಾಡಿದವರು
ಯೆರೂಸಲೇಮಿನ ಅರೆನಾಡೊಡೆಯನೂ 3)ಹಲ್ಲೋ
ಹೇಷನ ಮಗನೂ ಆದ ಶಲ್ಲೂಮನೂ ಅವನ ಕುಮಾ
ರಿಯರೂ.
ತಗ್ಗಿನ ಬಾಗಲನ್ನು ಜೀರ್ಣೋದ್ಧಾರಮಾಡಿದ
ವರು ಹಾನೂನನೂ ಜಾನೋಹ ಊರಿನವರೂ. ಇವರು
ಅದರ ಗೋಡೆಯನ್ನು ಕಟ್ಟಿ ಅದಕ್ಕೆ ಕದ ತಿರುಗಣಿ ಅಗು

1) ಅಥವಾ: ಅಲ್ಲಿಂದ ಆಚೆಗೆ ಗಿಬ್ಯೋನಿನವನಾದ ಮೆಲಟ್ಯ, ಮೇರೋನೋತಿನವನಾದ ಯಾದೋನ್ ಇವರೂ ಗಿಬ್ಯೋನಿನ
ಹೊಳೆಯಾಚೆಯ ದೇಶಾಧಿಪತಿಯ ಅಧೀನದಲ್ಲಿದ್ದ ಮಿಚ್ಪಾ ಊರಿನವರೂ ಜೀರ್ಣೋದ್ಧಾರಮಾಡಿದರು. 2) ಅಥವಾ: ಬಲಕಾ
ದರು. 3) ಅಥವಾ: ಹಾವಾಡಿಗರ ಮಂಡಲಿಯವನೂ.

ಳಿಗಳನ್ನು ಹಚ್ಚಿ ಅಲ್ಲಿಂದ ತಿಪ್ಪೆಬಾಗಲಿನ ವರೆಗೂ
ಸಾವಿರ ಮೊಳದ ಗೋಡೆಯನ್ನು ಕಟ್ಟಿದರು.
14 ತಿಪ್ಪೆಬಾಗಲನ್ನು ಜೀರ್ಣೋದ್ಧಾರಮಾಡಿದವನು
ಬೇತ್‌ಹಕ್ಕೆರೆಮಿನ ನಾಡೊಡೆಯನೂ ರೇಕಾಬನ
ಮಗನೂ ಆದ ಮಲ್ಕೀಯನು; ಇವನು ಅದರ ಗೋಡೆ
ಯನ್ನು ಕಟ್ಟಿ ಅದಕ್ಕೆ ಕದ ತಿರುಗಣಿ ಅಗುಳಿಗಳನ್ನು
ಹಚ್ಚಿದನು.
15 ಬುಗ್ಗೆಬಾಗಲನ್ನು ಜೀರ್ಣೋದ್ಧಾರಮಾಡಿದವನು
ಮಿಚ್ಪದ ನಾಡೊಡೆಯನೂ ಕೊಲ್ಹೋಜೆಯ ಮಗನೂ
ಆದ ಶಲ್ಲೂನ್; ಇವನು ಅದರ ಗೋಡೆಯನ್ನು ಕಟ್ಟಿ
ಅದಕ್ಕೆ ಮಾಳಿಗೆಯನ್ನು ಹಾಕಿ ಕದ ತಿರುಗಣಿ ಅಗುಳಿ
ಗಳನ್ನು ಹಚ್ಚಿ ದಾವೀದನಗರದಿಂದಿಳಿದು ಬರುವ ಸೋ
ಪಾನಗಳ ಈಚೆ ಅರಸನ ತೋಟದ ಬಳಿಯಲ್ಲಿರುವ
ಸಿಲೋವ ಕೊಳದ ಗೋಡೆಯನ್ನು ಕಟ್ಟಿದನು.
16 ಇವನ ಆಚೆ ಅಂದರೆ ದಾವೀದನ ಸಮಾಧಿಯ ಎದುರಿ
ನಲ್ಲಿರುವ ಕೊಳ, ಸಿಪಾಯರ ಠಾಣ ಇವುಗಳ ವರೆ
ಗೂ ಜೀರ್ಣೋದ್ಧಾರಮಾಡಿದವನು ಬೇತ್ಚೂರಿನ ಅರೆ
ನಾಡೊಡೆಯನೂ ಅಜ್ಬೂಕನ ಮಗನೂ ಆದ ನೆಹೆ
ಮೀಯನು.
17 ಇವನ ಆಚೆ ಜೀರ್ಣೋದ್ಧಾರಮಾಡಿದವರು ಲೇವಿ
ಯರು. ಅವರಲ್ಲಿ ಮೊದಲು ಬಾನಿಯ ಮಗನಾದ
ರೆಹೂಮ್, ಇವನ ಸಮೀಪದಲ್ಲಿ ತನ್ನ ನಾಡಿನವರೊ
ಡನೆ ಕಟ್ಟುತ್ತಿದ್ದ ಕೆಯೀಲದ ಅರೆನಾಡೊಡೆಯನಾದ
18 ಹಷಬ್ಯ ಇವರು. ಇವರ ಆಚೆ ಇವರ ಬಂಧುಗಳಲ್ಲಿ
ಕೆಯೀಲದ [ಎರಡನೆಯ] ಅರೆನಾಡೊಡೆಯನೂ ಹೇನಾ
19 ದಾದನ ಮಗನೂ ಆದ ಬವ್ವೈ. ಇವನ ಸಮೀಪ
ದಲ್ಲಿ ಗೋಡೆಯ ಇನ್ನೊಂದು ಭಾಗವನ್ನು ಅಂದರೆ
ಗೋಡೆಯ ಮೂಲೆಯಲ್ಲಿರುವ ಆಯುಧಶಾಲೆಗೆ
ಹೋಗುವ ಮೆಟ್ಟಿಲುಗಳ ಎದುರಿಗಿರುವ ಭಾಗವನ್ನು
ಮಿಚ್ಪದ ಅಧಿಕಾರಿಯೂ ಯೇಷೂವನ ಮಗನೂ ಆದ
20 ಏಜೆರನು ಜೀರ್ಣೋದ್ಧಾರಮಾಡಿದನು. ಇವನ ಆಚೆ
ಗೋಡೆಯ ಇನ್ನೊಂದು ಭಾಗವನ್ನು ಅಂದರೆ ಮೂಲೆ
ಯಿಂದ ಮಹಾಯಾಜಕನಾದ ಎಲ್ಯಾಷೀಬನ ಮನೆ
ಯ ಬಾಗಲಿನ ವರೆಗೆ ಜಕ್ಕೈಯ ಮಗನಾದ ಬಾರೂ
21 ಕನು ಆಸಕ್ತಿಯಿಂದ ಭದ್ರಪಡಿಸಿದನು. ಇವನ ಆಚೆ
ಗೋಡೆಯ ಇನ್ನೊಂದು ಭಾಗವನ್ನು ಅಂದರೆ ಎಲ್ಯಾ
ಷೀಬನ ಮನೆಯ ಬಾಗಲಿನಿಂದ ಅದೇ ಮನೆಯ ಕೊ
ನೆಯ ವರೆಗೆ ಹಕ್ಕೋಚನ ಮೊಮ್ಮಗನೂ ಊರೀಯನ
ಮಗನೂ ಆದ ಮೆರೇಮೋತನು ಜೀರ್ಣೋದ್ಧಾರಮಾ
ಡಿದನು.
22 ಮುಂದಿನ ಭಾಗವನ್ನು ಜೀರ್ಣೋದ್ಧಾರಮಾಡಿದ
ವರು ಯೊರ್ದನ್ ಹೊಳೆಯ ತಗ್ಗಿನಲ್ಲಿ ವಾಸಿಸುತ್ತಿದ್ದ
23 ಯಾಜಕರು. ಇವರ ಆಚೆ ಬೆನ್ಯಾಮೀನ್ ಹಷ್ಷೂ
ಬರು; ಇವರು ತಮ್ಮ ತಮ್ಮ ಮನೆಗಳಿಗೆ ಎದುರಾಗಿ
ರುವ ಗೋಡೆಯನ್ನು ಜೀರ್ಣೋದ್ಧಾರಮಾಡಿದರು.
ಇವರ ಆಚೆ ಅನನ್ಯನ ಮೊಮ್ಮಗನೂ ಮಾಸೇಯನ
ಮಗನೂ ಆದ ಅಜರ್ಯ; ಇವನು ತನ್ನ ಮನೆಯ
ಹತ್ತಿರದಲ್ಲಿರುವ ಗೋಡೆಯನ್ನು ಜೀರ್ಣೋದ್ಧಾರಮಾ
24 ಡಿದನು. ಇವನ ಆಚೆ ಅಜರ್ಯನ ಮನೆಯಿಂದ
ಮೂಲೆಯ ವರೆಗಿರುವ ಗೋಡೆಯ ಇನ್ನೊಂದು ಭಾಗ
ವನ್ನು ಜೀರ್ಣೋದ್ಧಾರಮಾಡಿದವನು ಹೇನಾದಾದನ
ಮಗನಾದ ಬಿನ್ನೂಯ್. ಸೆರೆಮನೆಯ ಅಂಗಳದ 25
ಹತ್ತಿರ ಮೇಲಣ ಅರಮನೆಯ ಗೋಡೆಯನ್ನು ಮೀರಿ
ಬರುವ ಮೂಲೆಬುರುಜಿನ ಎದುರಿನ ಭಾಗವನ್ನು ಊ
ಜೈಯ ಮಗನಾದ ಪಾಲಾಲನೂ ಇವನ ಆಚೆಯಲ್ಲಿ
ಪರೋಷನ ಮಗನಾದ ಪೆದಾಯನೂ ಜೀರ್ಣೋದ್ಧಾರ
ಮಾಡಿದರು. ಆ ಮೂಲೆಬುರುಜಿನ ಮತ್ತು ನೀರು 23
ಬಾಗಲಿನ ಪೂರ್ವದಿಕ್ಕಿಗಿರುವ ಓಫೇಲ್ ಗುಡ್ಡವು ದೇವ
ಸ್ಥಾನದಾಸರ ನಿವಾಸಸ್ಥಾನವು. ಆ ದೊಡ್ಡ ಮೂಲೆ 27
ಬುರುಜಿನ ಎದುರಿನಿಂದ ಓಫೇಲ್ ಗೋಡೆಯ ವರೆಗಿ
ರುವ ಗೋಡೆಯ ಇನ್ನೊಂದು ಭಾಗವನ್ನು ತೆಕೋವದ
ವರು ಜೀರ್ಣೋದ್ಧಾರಮಾಡಿದರು.
ಯಾಜಕರು ಕುದುರೆಬಾಗಲಿನ ಆಚೆ ದಿನ್ನೆಯ 28
ಮೇಲಿರುವ ಗೋಡೆಯಲ್ಲಿ ತಮ್ಮ ತಮ್ಮ ಮನೆಗಳ
ಎದುರಿನ ಭಾಗಗಳನ್ನು ಜೀರ್ಣೋದ್ಧಾರಮಾಡಿದರು.
ಇವರ ಆಚೆ ಇಮ್ಮೇರನ ಮಗನಾದ ಚಾದೋಕನು 29
ತನ್ನ ಮನೆಯ ಎದುರಿಗಿರುವ ಗೋಡೆಯನ್ನು ಜೀರ್ಣೋ
ದ್ಧಾರಮಾಡಿದನು. ಇವನ ಆಚೆ ಪೂರ್ವದಿಕ್ಕಿನ ದ್ವಾರ
ಪಾಲಕನಾದ ಶೆಕನ್ಯನ ಮಗ ಶೆಮಾಯನು. ಇವನ 30
ಆಚೆ ಶೆಲೆಮ್ಯನ ಮಗನಾದ ಹನನ್ಯ; ಗೋಡೆಯ
ಇನ್ನೊಂದು ಭಾಗವನ್ನು ಜೀರ್ಣೋದ್ಧಾರಮಾಡಿದವನು
ಚಾಲಾಫನ ಆರನೆಯ ಮಗನಾದ ಹಾನೂನ್; ಇವನ
ಆಚೆ ಅಂದರೆ ತನ್ನ ಸ್ವಂತ ಕೊಠಡಿಯ ಮುಂದೆ ಬೆರೆ
ಕ್ಯನ ಮಗನಾದ ಮೆಷುಲ್ಲಾಮ್.
ಇನ್ನೂ ಮುಂದಕ್ಕೆ ಅಕ್ಕಸಾಲಿಗರ ಮಲ್ಕೀಯ; 31
ಇವನು ದಂಡುಕೂಡುವ ಬಾಗಲಿನೆದುರಿನಲ್ಲಿರುವ
ದೇವಸ್ಥಾನದಾಸರ ಮತ್ತು ವರ್ತಕರ ಕೇರಿಯ ವರೆ
ಗೂ ಮೂಲೆಯುಪ್ಪರಿಗೆಯ ವರೆಗೂ ಜೀರ್ಣೋದ್ಧಾರ
ಮಾಡಿದನು. ಈ ಮೂಲೆಯುಪ್ಪರಿಗೆಗೂ ಕುರಿಬಾಗ 32
ಲಿಗೂ ಮಧ್ಯದಲ್ಲಿದ್ದ ಗೋಡೆಯನ್ನು ಜೀರ್ಣೋ
ದ್ಧಾರಮಾಡಿದವರು ಅಕ್ಕಸಾಲಿಗರು, ವರ್ತಕರು
ಇವರೇ.

ವಿರೋಧಿಗಳು ಹೊಟ್ಟೆಕಿಚ್ಚಿನಿಂದ ಕಟ್ಟುವದಕ್ಕೆ
ಅಡ್ಡಿಮಾಡಿದ್ದು.

ನಾವು ಪೌಳಿಗೋಡೆಯನ್ನು ಕಟ್ಟುತ್ತಿದ್ದ ಸುದ್ದಿಯು 4
ಸನ್ಬಲ್ಲಟನಿಗೆ ಮುಟ್ಟಿದಾಗ ಅವನು ಬಲು ಹೊಟ್ಟೆ
ಕಿಚ್ಚೂ ಸಿಟ್ಟೂ ಉಳ್ಳವನಾಗಿ ತನ್ನ ಸಹೋದರರ 2
ಮುಂದೆಯೂ ಸಮಾರ್ಯದ ದಂಡಿನವರ ಮುಂದೆ
ಯೂ—ನಿತ್ರಾಣಿಗಳಾದ ಈ ಯೆಹೂದ್ಯರು ಮಾಡು
ವದೇನು? ಇವರು ತಮ್ಮನ್ನು ಬಲಪಡಿಸಿಕೊಳ್ಳಬೇಕೆಂ
ದಿರುವರೋ? ಯಜ್ಞವನ್ನರ್ಪಿಸುವರೋ? ಈಹೊತ್ತೇ
ಈ ಕೆಲಸವನ್ನು ತೀರಿಸುವರೇನು? ಸುಟ್ಟುಹೋದ
ಪಟ್ಟಣದ ಧೂಳಿನ ರಾಶಿಯೊಳಗೆ ಹುಗಿದುಹೋದ
ಕಲ್ಲುಗಳನ್ನು ಬದುಕಿಸುವರೇನೋ ಎಂದು ಹೇಳಿ ಯೆ
ಹೂದ್ಯರನ್ನು ಗೇಲಿಮಾಡಿದನು. ಅವನ ಬಳಿಯಲ್ಲಿ 3
ನಿಂತಿದ್ದ ಅಮ್ಮೋನಿಯನಾದ ಟೋಬೀಯನು—ಅವರು
ಕಟ್ಟುವ ಕಲ್ಲುಗೋಡೆಯ ಮೇಲೆ ನರಿ ಹಾರಿದರೆ ಅದು
ಬಿದ್ದುಹೋಗುವದು ಅಂದನು.

4 ನಮ್ಮ ದೇವರೇ ಕೇಳು; ಅವರು ನಮ್ಮನ್ನು ಎಷ್ಟು
ಹೀಯಾಳಿಸುತ್ತಾರೆ! ಈ ನಿಂದೆಯನ್ನು ಅವರ ತಲೆಯ
ಮೇಲೆಯೇ ಬರಮಾಡು. ಅವರು ದೇಶಭ್ರಷ್ಟರಾಗಿ
5 ಸೂರೆಹೋಗುವಂತೆ ಮಾಡು. ಅವರ ಅಪರಾಧವನ್ನು
ಕ್ಷಮಿಸಬೇಡ; ನಿನ್ನೆದುರಿಗಿರುವ ಅವರ ಪಾಪವನ್ನು
ಅಳಿಸಿಬಿಡಬೇಡ. ಕಟ್ಟುವವರ ಮುಂದೆಯೇ ಅವರು
ನಿನ್ನನ್ನು ಕೆಣಕಿದ್ದಾರಲ್ಲಾ.
6 ಆದರೂ ನಾವು ಕಟ್ಟುವ ಕೆಲಸವನ್ನು ಮುಂದರಿಸಿ
ದೆವು. ಜನರು ಅದಕ್ಕೆ ಮನಸ್ಸುಕೊಟ್ಟದ್ದರಿಂದ ಗೋಡೆ
ಯೆಲ್ಲಾ ಅರ್ಧ ಎತ್ತರದ ವರೆಗೂ ಜೋಡನೆಯಾ
7 ಯಿತು. ಸನ್ಬಲ್ಲಟನೂ ಟೋಬೀಯನೂ ಅರಬಿಯರೂ
ಅಮ್ಮೋನಿಯರೂ ಅಷ್ಡೋದಿನವರೂ ಯೆರೂಸಲೇಮಿನ
ಗೋಡೆಯ ಜೀರ್ಣೋದ್ಧಾರಕಾರ್ಯವು ಮುಂದರಿದು
ಅದರ ಸಂದುಗಳು ತಿರಿಗಿ ಕೂಡುತ್ತಾ ಬರುವದನ್ನು
8 ಕೇಳಿ ಬಹುಕೋಪವುಳ್ಳವರಾಗಿ—ನಾವು ಒಟ್ಟಾಗಿ ಯೆ
ರೂಸಲೇಮಿನವರಿಗೆ ವಿರುದ್ಧವಾಗಿ ಯುದ್ಧಕ್ಕೆ ಹೋಗಿ
ಅವರನ್ನು ತಳಮಳಗೊಳಿಸೋಣ ಎಂದು ಒಳಸಂಚು
9 ಮಾಡಿಕೊಂಡರು. ನಾವಾದರೋ ನಮ್ಮ ದೇವರಿಗೆ
ಮೊರೆಯಿಟ್ಟು ಅವರಿಗೆ ವಿರುದ್ಧವಾಗಿ ಅವರು ಬರುವ
10 ದಾರಿಯಲ್ಲಿ ಹಗಲಿರುಳು ಕಾವಲಿಟ್ಟೆವು. ಇತ್ತ ಯೆ
ಹೂದ್ಯರು—ಹೊರೆಹೊರುವವರ ಬಲವು ಕುಂದಿಹೋ
ಯಿತು, ಧೂಳಿನ ರಾಶಿಯು ವಿಪರೀತವಾಗಿದೆ; ಈ
ಗೋಡೆಯನ್ನು ಕಟ್ಟುವದು ನಮ್ಮಿಂದಾಗದು ಅಂದರು.
11 ಅತ್ತ ನಮ್ಮ ವಿರೋಧಿಗಳು—ಅವರಿಗೆ ತಿಳಿಯದೆಯೂ
ಗೋಚರವಾಗದೆಯೂ ಫಕ್ಕನೆ ಅವರೊಳಗೆ ನುಗ್ಗಿ ಅವ
ರನ್ನು ಕೊಂದು ಕೆಲಸವನ್ನು ನಿಲ್ಲಿಸಿಬಿಡೋಣ ಅಂದು
12 ಕೊಳ್ಳುತ್ತಿದ್ದರು. ಅವರ ನೆರೆಯೂರುಗಳಲ್ಲಿ ವಾಸಿಸು
ತ್ತಿದ್ದ ಯೆಹೂದ್ಯರು ಬಂದು ಬಂದು ನಮಗೆ—ನೀವು
ಯಾವ ಕಡೆಗೆ ತಿರುಗಿಕೊಂಡರೂ ಆ ಎಲ್ಲಾ ಕಡೆಗಳಿಂದ
ನಮಗೆ ವಿರೋಧವಾಗಿ ಯುದ್ಧಕ್ಕೆ ಬರುತ್ತಾರೆ ಎಂದು
13 ಪದೇ ಪದೇ ತಿಳಿಸಿದ್ದರಿಂದ ನಾನು ಜನರಿಗೆ—ಕತ್ತಿ
ಬಿಲ್ಲು ಬರ್ಜಿಗಳನ್ನು ಹಿಡಿದುಕೊಂಡು ಗೋಡೆಯ
ಹಿಂದಣ ತಗ್ಗಾದ ಬೈಲುಗಳಲ್ಲಿ ಗೋತ್ರಗೋತ್ರಗಳಾಗಿ
14 ನಿಲ್ಲಬೇಕೆಂದು ಆಜ್ಞಾಪಿಸಿ ಅವರನ್ನು ಸಂದರ್ಶಿಸಿ ಅವರ
ಮುಂದೆ ನಿಂತು ಶ್ರೀಮಂತರನ್ನೂ ಅಧಿಕಾರಿಗಳನ್ನೂ
ಉಳಿದ ಜನರನ್ನೂ ಸಂಬೋಧಿಸಿ—ನಿಮ್ಮ ಹಗೆಗಳಿಗೆ
ಹೆದರಬೇಡಿರಿ; ಮಹೋನ್ನತನೂ ಭಯಂಕರನೂ
ಆಗಿರುವ ಕರ್ತನನ್ನು ನೆನಪುಮಾಡಿಕೊಂಡು ನಿಮ್ಮ
ಸಹೋದರರಿಗೋಸ್ಕರವೂ ಗಂಡು ಹೆಣ್ಣು ಮಕ್ಕಳಿ
ಗೋಸ್ಕರವೂ ಕಾದಾಡಿರಿ ಎಂದು ಹೇಳಿದೆನು.
15 ನಮ್ಮ ಶತ್ರುಗಳು ತಮ್ಮ ಹಂಚಿಕೆಯು ನಮಗೆ ಗೊತ್ತಾ
ಯಿತೆಂದೂ ದೇವರು ಅದನ್ನು ವ್ಯರ್ಥಮಾಡಿದನೆಂದೂ
ತಿಳಿದುಕೊಂಡಾಗ [ಅವರು ನಮ್ಮನ್ನು ಬಿಟ್ಟು ಹೋ
ದರು;] ನಾವೆಲ್ಲರೂ ನಮ್ಮ ನಮ್ಮ ಗೋಡೆಯ ಕೆಲ
ಸಕ್ಕೆ ತಿರಿಗಿ ಹೋದೆವು.
16 ಅಂದಿನಿಂದ ನನ್ನ ಸ್ವಂತ ಆಳುಗಳಲ್ಲಿ ಅರ್ಧ ಮಂದಿ
ಕೆಲಸದಲ್ಲಿ ಸಹಾಯಮಾಡಿದರು; ಅರ್ಧ ಮಂದಿ ಕವ
ಚವನ್ನು ಧರಿಸಿಕೊಂಡು ಬರ್ಜಿ ಗುರಾಣಿ ಬಿಲ್ಲುಗಳನ್ನು
ಹಿಡಿದುಕೊಂಡು ನಿಂತರು. ಅದೇ ಪ್ರಕಾರ ಪ್ರಭುಗಳೂ
17 ಗೋಡೆಕಟ್ಟುವ ಯೆಹೂದ್ಯರ ಹಿಂದೆ ನಿಂತರು. ಹೊರೆ
ಹೊರುವವರು ಒಂದು ಕೈಯಿಂದ ಹೊರೆಹೊತ್ತುಕೊಳ್ಳು
ತ್ತಾ ಇನ್ನೊಂದು ಕೈಯಿಂದ ಈಟಿಹಿಡಿದುಕೊಳ್ಳುತ್ತಿ
ದ್ದರು. ಕಟ್ಟುವವರಲ್ಲಿ ಪ್ರತಿಯೊಬ್ಬನು ತನ್ನ ತನ್ನ ಕತ್ತಿ
ಯನ್ನು ಸೊಂಟಕ್ಕೆ ಬಿಗಿದುಕೊಂಡು ಕಟ್ಟುತ್ತಿದ್ದನು
ನಾನಂತೂ ಕೊಂಬೂದುವವನೊಬ್ಬನನ್ನು ನನ್ನ ಬ
ಯಲ್ಲಿರಿಸಿಕೊಂಡು ಶ್ರೀಮಂತರಿಗೂ ಅಧಿಕಾರಿಗಳಿಗೂ
ಉಳಿದ ಜನರಿಗೂ—ನಾವು ಮಾಡುವ ಕೆಲಸವು ಬಲು
ದೊಡ್ಡದೂ ಅನೇಕ ಸ್ಥಳಗಳಲ್ಲಿ ನಡೆಯುವಂಥದು
ಆಗಿದೆ; ನಾವು ಗೋಡೆಯ ಮೇಲೆ ಚದರಿ ಒಬ್ಬರಿಗೊ
ಬ್ಬರು ದೂರವಾಗಿರುತ್ತೇವೆ. ನಿಮಗೆ ಕೊಂಬಿನ ಧ್ವನಿ
ಯು ಯಾವ ಸ್ಥಳದಿಂದ ಕೇಳಿಬರುವದೋ ಆ ಸ್ಥಳಕ್ಕೆ
ನಮ್ಮ ಹತ್ತಿರ ಕೂಡಿಬನ್ನಿರಿ. ನಮ್ಮ ದೇವರು ನಮ
ಗೋಸ್ಕರ ಯುದ್ಧಮಾಡುವನು ಎಂದು ಹೇಳಿದೆನು
ಹೀಗೆ ನಾವು ಅರುಣೋದಯದಿಂದ ನಕ್ಷತ್ರಗಳು
ಮೂಡುವ ವರೆಗೂ ಕೆಲಸಮಾಡುತ್ತಿದ್ದೆವು; [ನನ್ನ
ಸೇವಕರಲ್ಲಿ] ಅರ್ಧ ಮಂದಿ ಬರ್ಜಿ ಹಿಡಿದುಕೊಂಡಿ
ದ್ದರು. ಇದಲ್ಲದೆ ನಾನು ಆ ಸಮಯದಲ್ಲಿ ಜನ
ರಿಗೆ—ನಿಮ್ಮ ಆಳುಗಳು ರಾತ್ರಿಯಲ್ಲಿ ನಮಗೆ ಕಾ
ಲಾಗಿರುವ ಹಾಗೂ ಹಗಲಿನಲ್ಲಿ ಕೆಲಸ ನಡಿಸು
ಹಾಗೂ ನೀವು ನಿಮ್ಮ ನಿಮ್ಮ ಆಳುಗಳೊಡನೆ ಯೆರೂಸ
ಲೇಮಿನಲ್ಲೇ ವಾಸಮಾಡಬೇಕು ಎಂದು ಅಪ್ಪಣೆಮಾಡಿ
ದೆನು. ನಾನೂ ನನ್ನ ಸಹೋದರರೂ ಸೇವಕರೂ ಮೈ
ಗಾವಲಿನವರೂ ಸ್ನಾನಸಮಯದಲ್ಲಿ ಹೊರತು ಬೇರೆ
ಸಮಯದಲ್ಲಿ ನಮ್ಮ ವಸ್ತ್ರಗಳನ್ನು ತೆಗೆದುಹಾಕ
ಲಿಲ್ಲ.

### ನೆಹೆಮಿಾಯನ ಪರಹಿತಚಿಂತನೆಯೂ ಔದಾರ್ಯವೂ.

ತರುವಾಯ ಸಾಧಾರಣಜನರೂ ಅವರ ಹೆಂಡತಿ
ಯರೂ ತಮ್ಮ ಬಂಧುಗಳಾದ ಯೆಹೂದ್ಯರಿಗೆ ವಿರು
ದ್ಧವಾಗಿ ಬಹಳ ಗುಣುಗುಟ್ಟ ತೊಡಗಿದರು. ಕೆ
ವರು—ನಾವೂ ನಮ್ಮ ಗಂಡು ಹೆಣ್ಣು ಮಕ್ಕಳೂ ಬಹ
ಮಂದಿ ಇದ್ದೇವೆ; ನಮ್ಮ ಜೀವನಕ್ಕಾಗಿ ಕಾಳುಕ
ಗಳನ್ನು ಹೇಗಾದರೂ ಸಂಪಾದಿಸಿಕೊಳ್ಳೋಣ; ಇನ್ನು
ಕೆಲವರು—ನಮ್ಮ ಹೊಲ ತೋಟ ಮನೆಗಳನ್ನು ಒತ್ತೆ
ಹಾಕಿ ಆಯಿತು; ಈ ಬರಗಾಲದಲ್ಲಿ ಧಾನ್ಯವನ್ನು
[ಹೇಗಾದರೂ] ಸಂಪಾದಿಸಿಕೊಳ್ಳೋಣ; ಮತ್ತು ಕೆ
ವರು—ಸರಕಾರಕ್ಕೆ ಕಂದಾಯಕೊಡುವದಕ್ಕಾಗಿ ನಾವು
ನಮ್ಮ ಹೊಲ ತೋಟಗಳ ಮೇಲೆ ಸಾಲ ತೆಗೆದು
ಕೊಳ್ಳಬೇಕಾಯಿತು; ಆ ನಮ್ಮ ಸಹೋದರರ ಕುಲ
ಕ್ಕೂ ನಮ್ಮ ಕುಲಕ್ಕೂ ಅವರ ಮಕ್ಕಳಿಗೂ ನಮ್ಮ
ಮಕ್ಕಳಿಗೂ ಏನು ಹೆಚ್ಚುಕಡಿಮೆ? ನೋಡಿರಿ, ನಾವು
ನಮ್ಮ ಗಂಡು ಹೆಣ್ಣು ಮಕ್ಕಳನ್ನು ಪರರಿಗೆ ದಾಸ
ರನ್ನಾಗಿ ಕೊಡಬೇಕಾಯಿತು; ನಮ್ಮ ಹೆಣ್ಣುಮಕ್ಕ
ಳಲ್ಲಿ ಕೆಲವರನ್ನು ಇಷ್ಟರಲ್ಲೇ ಅಪಹರಿಸಿದರು; ನಮ್ಮ
ಯತ್ನವೇನೂ ಸಾಗುವದಿಲ್ಲ, ನಮ್ಮ ಹೊಲತೋಟ
ಗಳು ಪರಾಧೀನವಾದವು ಎಂದು ಗುಣುಗುಟ್ಟಿದರು
ಅವರ ಬೊಬ್ಬೆಯನ್ನೂ ಮಾತುಗಳನ್ನೂ ಕೇಳಿದಾಗ
ನನಗೆ ಬಲು ಸಿಟ್ಟಾಯಿತು. ನಾನು ತುಸ ಆಲೋಚಿಸಿ
ಕೊಂಡು ಶ್ರೀಮಂತರಿಗೂ ಅಧಿಕಾರಿಗಳಿಗೂ—ನೀವು

ನಿಮ್ಮ ಸಹೋದರರಿಂದ ಬಡ್ಡಿತೆಗೆದುಕೊಳ್ಳುವದಂದ
ರೇನು ಎಂದು ಹೇಳಿ ಅವರೊಡನೆ ಬಹಳವಾಗಿ ಹೆಣ
ಗಾಡಿ ಅವರಿಗೆ ವಿರೋಧವಾಗಿ ಮಹಾಸಭೆಯನ್ನು
8 ಕೂಡಿಸಿ—ನಾವು ನಮ್ಮಿಂದಾಗುವಷ್ಟು ಮಟ್ಟಿಗೆ ನಮ್ಮ
ಸಹೋದರರಾದ ಯೆಹೂದ್ಯರಲ್ಲಿ ಅನ್ಯಜನರಿಗೆ ಮಾರ
ಲ್ಪಟ್ಟವರನ್ನು ಹಣಕೊಟ್ಟು ಬಿಡಿಸುತ್ತಿದ್ದೆವು. ಈಗ
ನೀವು ನಿಮ್ಮ ಸಹೋದರರನ್ನು ಮಾರಿಬಿಡುತ್ತೀರಿ; ಆ
ಮೇಲೆ ಅವರನ್ನು ನಾವು ಕೊಂಡುಕೊಳ್ಳಬೇಕೇನು
9 ಅನ್ನಲು ಅವರು ಉತ್ತರಕೊಡದೆ ಸುಮ್ಮನಿದ್ದರು. ಆ
ಮೇಲೆ ನಾನು ಅವರಿಗೆ— ನೀವು ಮಾಡಿದ್ದು ಒಳ್ಳೇದಲ್ಲ;
ನಾವು ನಮ್ಮ ವಿರೋಧಿಗಳಾಗಿರುವ ಅನ್ಯಜನರ ನಿಂದೆಗೆ
ಗುರಿಯಾಗದಂತೆ ದೇವರಲ್ಲಿ ಭಯಭಕ್ತಿಯುಳ್ಳವರಾಗಿ
10 ನಡೆದುಕೊಳ್ಳಬೇಕಲ್ಲವೇ. ನಾನೂ ನನ್ನ ಸಹೋದ
ರರೂ ಸೇವಕರೂ ಸಹ ಅವರಿಗೆ ಹಣವನ್ನೂ ಧಾನ್ಯ
ವನ್ನೂ ಬಡ್ಡಿಗೆ ಕೊಟ್ಟಿದ್ದೇವೆ. ಬಡ್ಡಿತೆಗೆದುಕೊಳ್ಳುವ
11 ಪದ್ಧತಿಯನ್ನು ಬಿಟ್ಟುಬಿಡೋಣ. ಅವರ ಹೊಲ, ದ್ರಾಕ್ಷೇ
ತೋಟ, ಎಣ್ಣೆಮರಗಳ ತೋಪು, ಮನೆ ಇವುಗಳನ್ನೂ
ನೀವು ಕೊಟ್ಟ ಹಣ, ಧಾನ್ಯ, ದ್ರಾಕ್ಷಾರಸ, ಎಣ್ಣೆ ಇವು
ಗಳಿಗೋಸ್ಕರ ಸೇಕಡಾ ಇಷ್ಟೆಂದು ತೆಗೆದುಕೊಂಡಿರುವ
ಬಡ್ಡಿಯನ್ನೂ ದಯವಿಟ್ಟು ಈಹೊತ್ತೇ ಹಿಂದಕ್ಕೆ ಕೊಡಿರಿ
12 ಎಂದು ಹೇಳಿದೆನು. ಅವರು—ಹಿಂದಕ್ಕೆ ಕೊಡುತ್ತೇವೆ;
ಅವರಿಂದ ಏನೂ ಕೇಳುವದಿಲ್ಲ. ನೀನು ಹೇಳಿದಂತೆಯೇ
ಮಾಡುತ್ತೇವೆ ಎಂದು ಉತ್ತರಕೊಟ್ಟರು. ಆಗ ನಾನು
ಯಾಜಕರನ್ನು ಕರಿಸಿ ಈ ಮಾತಿನಂತೆ ನಡೆಯುವದಾಗಿ
13 ಅವರಿಂದ ಪ್ರಮಾಣಮಾಡಿಸಿದೆನು. ಇದಲ್ಲದೆ ನನ್ನ
ಉಡಿಲನ್ನು ಝಾಡಿಸಿ ಅವರಿಗೆ—ಈಗ ಕೊಟ್ಟ ಮಾ
ತನ್ನು ಕೈಕೊಳ್ಳದ ಪ್ರತಿಯೊಬ್ಬನನ್ನು ದೇವರು ಅವನ
ಮನೆಯಿಂದಲೂ ಸ್ವಾಸ್ತ್ಯದಿಂದಲೂ ಈ ಪ್ರಕಾರವೇ
ಝಾಡಿಸಿಬಿಡಲಿ; ಅವನು ಉಡಿಲಿನಂತೆಯೇ ಝಾಡಿಸ
ಲ್ಪಟ್ಟು ಬರಿದಾಗಲಿ ಅಂದೆನು. ಕೂಡಲೆ ಸಭೆಯವ
ರೆಲ್ಲಾ ಹಾಗೆಯೇ ಆಗಲಿ ಎಂದು ಹೇಳಿ ಯೆಹೋವ
ನನ್ನು ಕೊಂಡಾಡಿ ಕೊಟ್ಟ ಮಾತನ್ನು ಕೈಕೊಂಡರು.
14 ಅರಸನಾದ ಅರ್ತಷಸ್ತನು ನನ್ನನ್ನು ಯೆಹೂದ
ದೇಶದ ಅಧಿಪತಿಯನ್ನಾಗಿ ನೇಮಿಸಿದಂದಿನಿಂದ ಹನ್ನೆ
ರಡು ವರುಷಗಳ ವರೆಗೆ ಅಂದರೆ ಅವನ ಆಳಿಕೆಯ
ಇಪ್ಪತ್ತನೆಯ ವರುಷದಿಂದ ಮೂವತ್ತೆರಡನೆಯ ವರು
ಷದ ವರೆಗೆ ನಾನಾಗಲಿ ನನ್ನ ಸಹೋದರರಾಗಲಿ
ದೇಶಾಧಿಪತಿಗೆ ಸಲ್ಲತಕ್ಕ ಆಯದಿಂದ ಜೀವನಮಾಡ
15 ಲಿಲ್ಲ. ನನಗಿಂತ ಮುಂಚೆಯಿದ್ದ ದೇಶಾಧಿಪತಿಗಳು ಜನ
ರ ಮೇಲೆ ಬಹಳ ಭಾರಹಾಕಿ ಅವರಿಂದ [ದಿನಕ್ಕೆ]
ನಾಲ್ವತ್ತು ರೂಪಾಯಿಯ ಆಹಾರವನ್ನೂ ದ್ರಾಕ್ಷಾ
ರಸವನ್ನೂ ತೆಗೆದುಕೊಂಡದ್ದಲ್ಲದೆ ಅವರ ಸೇವಕರೂ
ಜನರ ಮೇಲೆ ದೊರೆತನನಡಿಸಿದರು. ನಾನಾದರೋ
ದೇವರಲ್ಲಿ ಭಯಭಕ್ತಿಯುಳ್ಳವನಾಗಿರುವದರಿಂದ ಹಾಗೆ
16 ಮಾಡದೆ ಆ ಗೋಡೆ ಕಟ್ಟುವದರಲ್ಲಿ ನಿರತನಾಗಿದ್ದೆನು.
ಮತ್ತು ನನ್ನ ಎಲ್ಲಾ ಸೇವಕರೂ ಪ್ರತಿದಿನ ಆ ಕೆಲಸಕ್ಕೆ
ಬರುವಂತೆ ನೋಡುತ್ತಿದ್ದೆನು. ನಾವು ಅಲ್ಲಿ ಭೂಸ್ಥಿತಿ
17 ಯನ್ನು ಸಂಪಾದಿಸಿಕೊಂಡಿರಲಿಲ್ಲ. ಇದಲ್ಲದೆ ಯೆ
ಹೂದ್ಯರಲ್ಲಿ ನೂರೈವತ್ತು ಮಂದಿ ಅಧಿಕಾರಿಗಳೂ
ಸುತ್ತಣ ಜನಾಂಗಗಳ ಮಧ್ಯದಿಂದ ನಮ್ಮ ಬಳಿಗೆ ಬರು
ತ್ತಿದ್ದವರೂ ನನ್ನ ಪಂಕ್ತಿಯಲ್ಲಿ ಊಟಮಾಡುತ್ತಿದ್ದರು.
ಪ್ರತಿದಿನ ಒಂದು ಹೋರಿ ಆರು ಕೊಬ್ಬಿದ ಕುರಿ ಕೆಲವು 18
ಕೋಳಿಗಳು ನಮ್ಮ ಭೋಜನಕ್ಕಾಗಿ ಸಿದ್ಧವಾಗು
ತ್ತಿದ್ದವು. ಹತ್ತು ದಿವಸಕ್ಕೊಮ್ಮೆ ನಾನು ಎಲ್ಲಾ ತರದ
ದ್ರಾಕ್ಷಾರಸವನ್ನು ಬೇಕಾಗುವಷ್ಟು ಒದಗಿಸಿಕೊಡುತ್ತಿ
ದ್ದೆನು. ನನಗೆ ಇಷ್ಟು ವೆಚ್ಚವಾಗುತ್ತಿದ್ದರೂ ಆ ಜನರು
ಮಾಡತಕ್ಕ ಕೆಲಸವು ಬಹು ಭಾರವಾಗಿದ್ದದರಿಂದ
ನಾನು ದೇಶಾಧಿಪತಿಗೆ ಸಲ್ಲತಕ್ಕ ಆಯವನ್ನು ಕೇಳಲೇ
ಇಲ್ಲ. ನನ್ನ ದೇವರೇ, ನಾನು ಆ ಜನರಿಗೋಸ್ಕರ 19
ಮಾಡಿದ್ದೆಲ್ಲವನ್ನು ನನ್ನ ಹಿತಕ್ಕಾಗಿ ನೆನಪುಮಾಡಿಕೋ.

ನೆಹೆಮೀಯನು ಗೋಡೆಯನ್ನು ತೀರಿಸಿ ಕದಗಳನ್ನೂ ಹಚ್ಚಿಸಿ
ಕಾವಲುಗಾರರನ್ನು ನೇಮಿಸಿದ್ದು;
ವಿರೋಧಿಗಳ ಕುಯುಕ್ತಿತಂತ್ರಗಳು.

6 ನಾನು ಗೋಡೆಯನ್ನು ಕಟ್ಟಿಸಿ ತೀರಿಸಿ ಬಾಗಲು
ಗಳಿಗೆ ಕದಗಳನ್ನು ಇನ್ನೂ ಹಚ್ಚಿಸದಿದ್ದರೂ ಎಲ್ಲಾ
ಸಂದುಗಳನ್ನು ಕೂಡಿಸಿದ ಸಂಗತಿಯು ಸನ್ಬಲ್ಲಟ್,
ಟೋಬೀಯ, ಅರಬಿಯನಾದ ಗೆಷೆಮ್ ಇವರಿಗೂ
ನಮ್ಮ ಬೇರೆ ವಿರೋಧಿಗಳಿಗೂ ಗೊತ್ತಾದಾಗ ಅವರಲ್ಲಿ 2
ಸನ್ಬಲ್ಲಟ್ ಗೆಷೆಮರು ನನಗೆ—ಓನೋ ತಗ್ಗಿನ
[1]ಹಕ್ಕೆಫಿರೀಮಿನಲ್ಲಿ ಒಬ್ಬರನ್ನೊಬ್ಬರು ಎದುರುಗೊ
ಳ್ಳೋಣ ಬಾ ಎಂದು ಹೇಳಿಕಳುಹಿಸಿದರು. ಅವರು
ನನಗೆ ಕೇಡುಬಗೆಯುವವರು ಎಂದು ತಿಳಿದು
ನಾನು ದೂತರ ಮುಖಾಂತರವಾಗಿ ಅವರಿಗೆ—ನನಗೆ 3
ದೊಡ್ಡ ಜಂಬರವುಂಟು; ಅದನ್ನು ಬಿಟ್ಟು ನಿಮ್ಮ ಬಳಿಗೆ
ಬಂದರೆ ಕೆಲಸವು ನಿಂತುಹೋಗುವದು; ನಾನು ಬರ
ಲಾರೆನು ಎಂದು ಹೇಳಿಸಿದೆನು. ಅವರು ನಾಲ್ಕು 4
ಸಾರಿ ನನಗೆ ಅದೇ ಪ್ರಕಾರ ಹೇಳಿಕಳುಹಿಸಿದರೂ
ನಾನು ಅದೇ ಉತ್ತರಕೊಟ್ಟೆನು.
ಐದನೆಯ ಸಾರಿ ಸನ್ಬಲ್ಲಟನು ಅದೇ ಉದ್ದೇಶದಿಂದ 5
ತನ್ನ ಸ್ವಂತ ಸೇವಕನ ಮುಖಾಂತರವಾಗಿ ಮುಚ್ಚ
ದಿರುವ ಒಂದು ಪತ್ರವನ್ನು ಕಳುಹಿಸಿದನು. ಅದ 6
ರಲ್ಲಿ—ಗೆಷೆಮ್ ಎಂಬವನು ನನಗೆ ತಿಳಿಸಿದ ಪ್ರಕಾರ
ನೀನೂ ಯೆಹೂದ್ಯರೂ ತಿರುಗಿಬೀಳಬೇಕೆಂದಿದ್ದೀರಿ;
ಆದದರಿಂದಲೇ ನೀನು ಆ ಗೋಡೆಯನ್ನು ಕಟ್ಟಿಸುತ್ತೀ.
ಮತ್ತು ನೀನು ಅವರ ಅರಸನಾಗುವಿಯೆಂಬ ಸುದ್ದಿ
ಯು ಜನರಲ್ಲಿ ಹಬ್ಬಿರುತ್ತದೆ. ಇದಲ್ಲದೆ ಯೆಹೂದ 7
ದಲ್ಲಿ ಒಬ್ಬ ಅರಸನಿರುತ್ತಾನೆಂದು ನಿನ್ನನ್ನು ಕುರಿತು
ಯೆರೂಸಲೇಮಿನಲ್ಲಿ ಪ್ರಕಟಿಸುವದಕ್ಕೋಸ್ಕರ ಪ್ರವಾ
ದಿಗಳನ್ನು ನೇಮಿಸಿದ್ದೀ ಎಂಬದಾಗಿ ಹೇಳುತ್ತಾರೆ. ಈ
ಸುದ್ದಿ ರಾಜನಿಗೂ ಮುಟ್ಟುವದು; ಆದದರಿಂದ ಕೂಡಿ
ಮಾತಾಡೋಣ ಬಾ ಎಂದು ಬರೆದಿತ್ತು. ಅದಕ್ಕೆ— 8
ನೀನು ಬರೆದಂಥದು ಏನೂ ನಡೆದಿಲ್ಲ; ಅದನ್ನು ನೀನೇ
ನಿನ್ನ ಮನಸ್ಸಿನಲ್ಲಿ ಕಲ್ಪಿಸಿಕೊಂಡಿದ್ದೀ ಎಂದು ಹೇಳಿ
ಕಳುಹಿಸಿದೆನು. ಹೀಗೆ ಎಲ್ಲರೂ—ಇವರ ಕೈಗಳು 9

1) ಅಥವಾ: ಹಳ್ಳಿಗಳಲ್ಲಿ.

ಜೋಲು ಬಿದ್ದು ಕೆಲಸವನ್ನು ತೀರಿಸದೆ ಬಿಡಲಿ ಅಂದು
ಕೊಂಡು ನಮ್ಮನ್ನು ಹೆದರಿಸುವದಕ್ಕೆ ಪ್ರಯತ್ನಿಸಿದರು.
[ನನ್ನ ದೇವರೇ,] ನನ್ನ ಕೈಗಳನ್ನು ಬಲಪಡಿಸು.
10 ಒಂದು ದಿವಸ ನಾನು ಮೆಹೇಟಬೇಲನ ಮೊಮ್ಮಗ
ನೂ ದೆಲಾಯನ ಮಗನೂ ಆದ ಶೆಮಾಯನ ಮನೆಗೆ
ಹೋದೆನು. ಅವನು ಅಲ್ಲಿ ಅಡಗಿಕೊಂಡಿದ್ದನು. ಅವನು
ನನಗೆ—ನಿನ್ನನ್ನು ಕೊಲ್ಲುವದಕ್ಕೆ ಬರುತ್ತಾರೆ, ಈ
ರಾತ್ರಿಯೇ ಬರುತ್ತಾರೆ. ಆದದರಿಂದ ನಾವಿಬ್ಬರೂ
ದೇವಾಲಯಕ್ಕೆ ಹೋಗಿ ಪವಿತ್ರಸ್ಥಾನವನ್ನು ಪ್ರವೇ
ಶಿಸಿ ಅದರ ಕದಗಳನ್ನು ಮುಚ್ಚಿಕೊಳ್ಳೋಣ ಬಾ ಎಂದು
11 ಹೇಳಿದನು. ನಾನು—ನನ್ನಂಥ ಪುರುಷನು ಓಡಿಹೋ
ಗುವದು ಯೋಗ್ಯವೋ? ಇದಲ್ಲದೆ ನನ್ನಂಥವನು
ಪ್ರಾಣರಕ್ಷಣೆಗಾಗಿ ಪವಿತ್ರಸ್ಥಾನವನ್ನು ಪ್ರವೇಶಿಸುವ
ನೇ? ನಾನು ಬರುವದಿಲ್ಲ ಎಂದು ಉತ್ತರಕೊಟ್ಟೆನು.
12 ನಾನು ಸೂಕ್ಷ್ಮವಾಗಿ ವಿಚಾರಮಾಡಿದಾಗ ನನ್ನ ವಿಷಯ
ವಾಗಿ ಆ ಕಾಲಜ್ಞಾನವಚನವನ್ನು ಉಚ್ಚರಿಸುವದಕ್ಕೆ
ಇವನನ್ನು ಪ್ರೇರಿಸಿದವನು ದೇವರಲ್ಲ, ಟೋಬೀಯ
ನೂ ಸನ್ಬಲ್ಲಟನೂ ಇವನಿಗೆ ಲಂಚಕೊಟ್ಟು ಹಾಗೆ ಹೇಳಿ
13 ಸಿದರು ಎಂದು ನನಗೆ ಗೊತ್ತಾಯಿತು. ನಾನು ಅಂಜಿ
ಕೊಂಡು ಇವನ ಮಾತಿನಂತೆ ನಡೆದು ದೋಷಿಯಾಗಿ
ತಮ್ಮ ನಿಂದೆಗೂ ಕೆಟ್ಟ ಹೆಸರಿಗೂ ಒಳಗಾಗಲಿ ಎಂದು
14 ಅವರು ಇವನಿಗೆ ಲಂಚಕೊಟ್ಟಿದ್ದರು. ನನ್ನ ದೇವರೇ,
ಟೋಬೀಯ ಸನ್ಬಲ್ಲಟರು ಮಾಡಿದ ಈ ದುಷ್ಕೃತ್ಯಗಳು
ನಿನ್ನ ನೆನಪಿನಲ್ಲಿರಲಿ; ನನ್ನನ್ನು ಹೆದರಿಸುವದಕ್ಕೆ ಪ್ರಯ
ತ್ನಿಸಿದ ಪ್ರವಾದಿನಿಯಾದ ನೋವದ್ಯ ಮುಂತಾದ ಪ್ರವಾ
ದಿಗಳನ್ನು ಮರೆಯಬೇಡ.
15 ಗೋಡೆಯು [1]ಭಾದ್ರಪದ ಮಾಸದ ಇಪ್ಪತ್ತೈ
ದನೆಯ ದಿನದಲ್ಲಿ ತೀರಿತು. ಅದನ್ನು ಕಟ್ಟುವದಕ್ಕೆ
16 ಒಟ್ಟು ಐವತ್ತೆರಡು ದಿನಗಳು ಹಿಡಿದವು. ಈ ಸುದ್ದಿಯು
ನಮ್ಮ ವಿರೋಧಿಗಳಾದ ಸುತ್ತಣ ಎಲ್ಲಾ ಜನಾಂಗಗಳವ
ರಿಗೆ ಮುಟ್ಟಿದಾಗ ಅವರು ಭಯವುಳ್ಳವರಾಗಿ ಸೊಕ್ಕನ್ನು
ಬಿಟ್ಟು ಬಹಳ ಮನಗುಂದಿದವರಾದರು. ಈ ಕಾರ್ಯವು
ನಮ್ಮ ದೇವರಿಂದಲೇ ಪೂರೈಸಿತು ಎಂದು ಅವರಿಗೆ
ಮಂದಟ್ಟಾಯಿತು.
17 ಅದೇ ಸಮಯದಲ್ಲಿ ಯೆಹೂದ್ಯ ಶ್ರೀಮಂತರಿಗೂ
ಟೋಬೀಯನಿಗೂ ಬಹಳ ಪತ್ರವ್ಯವಹಾರನಡೆಯು
18 ತ್ತಿತ್ತು. ಯಾಕಂದರೆ ಅವನು ಆರಹನ ಮಗನಾದ
ಶೆಕನ್ಯನ ಅಳಿಯನೂ ಯೆಹೋಹಾನಾನನೆಂಬ ಅವನ
ಮಗನು ಬೆರೆಕ್ಯನ ಮಗನಾದ ಮೆಷುಲ್ಲಾಮನ ಮಗ
ಳನ್ನು ಮದುವೆಮಾಡಿಕೊಂಡವನೂ ಆಗಿದ್ದದರಿಂದ
ಯೆಹೂದ್ಯರಲ್ಲಿ ಅನೇಕರು ಅವನಿಗೆ ಪ್ರಮಾಣಮಾಡಿ
19 ವಶರಾಗಿದ್ದರು. ಅವರು ಅವನ ಒಳ್ಳೇತನವನ್ನೇ
ನನ್ನ ಮುಂದೆ ವರ್ಣಿಸುತ್ತಾ ನನ್ನ ಮಾತುಗಳನ್ನು
ಅವನಿಗೆ ತಿಳಿಸುತ್ತಾ ಇದ್ದರು. ಟೋಬೀಯನೂ
ನನ್ನಲ್ಲಿ ಭಯಹುಟ್ಟಿಸುವದಕ್ಕೋಸ್ಕರ ನನಗೆ ಪತ್ರ
ಗಳನ್ನು ಕಳುಹಿಸುತ್ತಿದ್ದನು.

7 ಗೋಡೆಯನ್ನು ಕಟ್ಟಿ ತೀರಿಸಿದನಂತರ ನಾನು
ಕದಗಳನ್ನು ಹಚ್ಚಿಸಿದೆನು; ದ್ವಾರಪಾಲಕರೂ ಗಾಯ
ಕರೂ ಲೇವಿಯರೂ ನೇಮಿಸಲ್ಪಟ್ಟರು. ಆ ಮೇಲ
ನನ್ನ ತಮ್ಮನಾದ ಹನಾನಿಗೂ ಬಲು ನಂಬಿಗಸ್ತನೂ
ದೇವರಲ್ಲಿ ವಿಶೇಷ ಭಯಭಕ್ತಿಯುಳ್ಳವನೂ ದುರ್ಗಾ
ಧಿಕಾರಿಯೂ ಆದ ಹನನ್ಯನಿಗೂ ಯೆರೂಸಲೇಮಿನ
ಮೇಲ್ವಿಚಾರಣೆಯನ್ನು ಒಪ್ಪಿಸಿ ಅವರಿಗೆ—ಬಿಸಿಲು
ಬಲಿಯುವದಕ್ಕಿಂತ ಮೊದಲು ಯೆರೂಸಲೇಮಿನ
ಬಾಗಲುಗಳನ್ನು ತೆರೆಯಬಾರದು; ಕಾವಲುಗಾರರು
ಇನ್ನೂ ಇರುವಷ್ಟರಲ್ಲೇ ಕದಗಳನ್ನು ಮುಚ್ಚಿ ಭದ್ರ
ಪಡಿಸಬೇಕು. ಇದಲ್ಲದೆ ಯೆರೂಸಲೇಮಿನ ನಿವಾಸಿ
ಗಳೊಳಗೆ ಕಾವಲುಗಾರರನ್ನು ಗೊತ್ತುಮಾಡಿರಿ
ಅವರಲ್ಲಿ ಪ್ರತಿಯೊಬ್ಬನನ್ನು ಅವನವನ ಮನೆಯ
ಎದುರಿನಲ್ಲಿ ಕಾವಲಿರುವಂತೆ ನೇಮಿಸಬೇಕು ಎಂದು
ಆಜ್ಞಾಪಿಸಿದೆನು.

ಪಟ್ಟಣಕ್ಕೋಸ್ಕರ ನಿವಾಸಿಗಳನ್ನು ದೊರಕಿಸುವ ಉಪಾಯ;
ಮುಂಚಿನ ಖಾನೇಷುಮಾರಿಯ ಪಟ್ಟಿ.

ಪಟ್ಟಣವು ಎಲ್ಲಾ ಕಡೆಗಳಲ್ಲಿ ವಿಸ್ತಾರವಾಗಿದ್ದರೂ
ಅದರೊಳಗೆ ಬಹು ಸ್ವಲ್ಪ ಜನರಿದ್ದರು. ಮನೆಗಳನ್ನು
ಇನ್ನೂ ಕಟ್ಟಿರಲಿಲ್ಲ. ಹೀಗಿರಲಾಗಿ ನಾನು ನನ್ನ
ದೇವರ ಪ್ರೇರಣೆಯಿಂದ ಶ್ರೀಮಂತರನ್ನೂ ಅಧಿಕಾರಿ
ಗಳನ್ನೂ ಸಾಧಾರಣಜನರನ್ನೂ ಖಾನೇಷುಮಾರಿ
ಗೋಸ್ಕರ ಕೂಡಿಸಿದೆನು. ಆಗ [ಯೆರೂಸಲೇಮಿಗೆ]
ಮೊದಲು ಬಂದವರ ಹೆಸರುಗಳ ಪಟ್ಟಿಯು ನನಗೆ
ಸಿಕ್ಕಿತು. ಅದರಲ್ಲಿ ಬರೆದಿದ್ದದ್ದೇನಂದರೆ—
ಸೆರೆಯಿಂದ ತಿರಿಗಿ ಬಂದ [ಯೆಹೂದ] ಸಂಸ್ಥಾನ
ದವರ ಖಾನೇಷುಮಾರಿ.
ಬಾಬೆಲಿನ ಅರಸನಾದ ನೆಬೂಕದ್ನೆಚ್ಚರನಿಂದ ಸೆರೆ
ಒಯ್ಯಲ್ಪಟ್ಟವರಲ್ಲಿ ಯೆರೂಸಲೇಮಿಗೂ ಯೆಹೂದ
ಪ್ರಾಂತದ ಸ್ವಂತ ಪಟ್ಟಣಗಳಿಗೂ ಜೆರುಬ್ಬಾಬೆಲ್,
ಯೇಷೂವ, ನೆಹೆಮೀಾಯ, ಅಜರ್ಯ, ರಗಮ್ಯ, ನಹ
ಮಾನೀ, ಮೊರ್ದೆಕೈ, ಬಿಲ್ಷಾನ್, ಮಿಸ್ಪೆರೆತ್, ಬಿಗ್ವೈ,
ನೆಹೂಮ್, ಬಾಣ ಎಂಬ ನಾಯಕರೊಡನೆ ತಿರಿಗಿ
ಬಂದವರು ಯಾರಂದರೆ—

ಸಾಧಾರಣರಾದ ಇಸ್ರಾಯೇಲ್
ಪುರುಷರಸಂಖ್ಯೆ—

| | |
|---|---|
| ಪರೋಷಿನವರು | 2172 |
| ಶೆಫಟ್ಯನವರು | 372 |
| ಆರಹನವರು | 652 |
| ಪಹತ್‌ಮೋವಾಬಿನವರಾದ ಯೇಷೂವ ಮತ್ತು ಯೋವಾಬ್ ಸಂತಾನದವರು | 2818 |
| ಏಲಾಮಿನವರು | 1254 |
| ಜತ್ತೂವಿನವರು | 845 |
| ಜಕ್ಕೈಯವರು | 760 |
| ಬಿನ್ನೂಯವರು | 648 |
| ಬೇಬೈಯವರು | 628 |

[1]ಮೂಲ: ಎಲೂಲ್.

7 ಅಜ್ಗಾದಿನವರು 2322
8 ಅದೋನೀಕಾಮಿನವರು 667
9 ಬಿಗ್ವೈಯುವರು 2067
0 ಆದೀನನವರು 655
1 ಅಟೇರಿನವರಾದ ಹಿಜ್ಕೀಯನ ಸಂತಾನದವರು 98
2 ಹಾಷುಮಿನವರು 328
3 ಬೇಚೈಯುವರು 324
4 ಹಾರಿಫಿನವರು 112
5 ಗಿಬ್ಯೋನಿನವರು 95
6 ಬೇತ್ಲೆಹೇಮ್ ನೆಟೋಫ ಊರುಗಳವರು 188
7 ಅನಾತೋತ್ ಊರಿನವರು 128
8 ಬೇತಜ್ಮಾವೇತಿನವರು 42
9 ಕಿರ್ಯತ್ಯಾರೀಮ್ ಕೆಫೀರಾ ಬೇರೋತ್ ಊರುಗಳವರು 743
0 ರಾಮಾ ಗೆಬ ಊರುಗಳವರು 621
1 ಮಿಕ್ಮಾಸಿನವರು 122
2 ಬೇತೇಲ್ ಆಯಿ ಎಂಬ ಊರುಗಳವರು 123
3 ಎರಡನೆಯ ನೆಬೋವಿನವರು 52
4 ಎರಡನೆಯ ಏಲಾಮಿನವರು 1254
5 ಹಾರಿಮನವರು 320
6 ಯೆರಿಕೋವಿನವರು 345
7 ಲೋದ್, ಹಾದೀದ್, ಓನೋ ಎಂಬ ಊರುಗಳವರು 721
8 ಸೆನಾಹನವರು 3930
9 ಯಾಜಕರಲ್ಲಿ — ಯೆದಾಯನವರಾದ ಯೇಷೂವನ ಮನೆಯವರು 973
0 ಇಮ್ಮೇರನವರು 1052
1 ಪಷ್ಹೂರನವರು 1247
2 ಹಾರಿಮನವರು 1017
3 ಲೇವಿಯರಲ್ಲಿ — ಹೋದವ್ಯನವರಾದ ಯೇಷೂವ, ಕದ್ಮೀಯೇಲ್ ಇವರ ಸಂತಾನದವರು 74
4 ಗಾಯಕರಲ್ಲಿ — ಆಸಾಫ್ಯರು 148
5 ದ್ವಾರಪಾಲಕರಲ್ಲಿ — ಶಲ್ಲೂಮ್, ಆಟೇರ್, ಟಲ್ಮೋನ್, ಅಕ್ಕೂಬ್, ಹಟೀಟಾ, ಶೋಬೈ ಇವರ ಸಂತಾನದವರು ಒಟ್ಟು 138
6 ದೇವಸ್ಥಾನದಾಸರಲ್ಲಿ — ಜೀಹ, ಹಸೂಫ,
7 ಟಬ್ಬಾವೋತ್, ಕೇರೋಸ್, ಸೀಯ, ಪಾದೋನ್,
8, 49 ಲೆಬಾನ, ಹಗಾಬ, ಸಲ್ಮೈ, ಹಾನಾನ್, ಗಿದ್ದೇಲ್,
0, 51 ಗಹರ್, ರೆವಾಯ, ರೆಚೀನ್, ನೆಕೋದ, ಗಜ್ಜಾ
2 ಮ್, ಉಜ್ಜ, ಪಾಸೇಹ, ಬೇಸೈ, ಮೆಯುನೀಮ್,
3 ನೆಫೀಷೆಸೀಮ್, ಬಕ್ಬೂಕ್, ಹಕ್ಕೂಫ, ಹರ್ಹೂರ್,
4, 55 ಬಚ್ಲೂತ್, ಮೆಹೀದ, ಹರ್ಷ, ಬರ್ಕೋಸ್,
6 ಸೀಸೆರ, ತೆಮಹ, ನೆಚೀಹ, ಹಟೀಫ ಇವರ ಸಂತಾನ
ದವರೂ.
7 ಸೊಲೊಮೋನನ ದಾಸರಲ್ಲಿ — ಸೋಟೈ,
8 ಸೋಫೆರೆತ್, ಪೆರೀದ, ಯಾಲ, ದರ್ಕೋನ್,
ಗಿದ್ದೇಲ್, ಶೆಫಟ್ಯ, ಹಟ್ಟೀಲ್, ಪೋಕೆರೆತ್ ಹಚ್ಚೆ 59
ಬಾಯಿಮ್, ಆಮೋನ್ ಇವರ ಸಂತಾನದವರೂ.
ಎಲ್ಲಾ ದೇವಸ್ಥಾನದಾಸರೂ ಸೊಲೊಮೋನನ 60
ದಾಸರೂ ಒಟ್ಟು 392 ಮಂದಿ.
ತೇಲ್ಮೆಲಹ, ತೇಲ್ಹರ್ಷ, ಕೆರೂಬದ್ದೋನ್, ಇಮ್ಮೇ 61
ರ್ ಎಂಬ ಊರುಗಳಿಂದ ಬಂದವರಾಗಿ ತಮ್ಮ
ಗೋತ್ರವಂಶಾವಳಿಗಳನ್ನು ತೋರಿಸಿ ತಾವು ಇಸ್ರಾ
ಯೇಲ್ಯರೆಂಬದನ್ನು ಸ್ಥಾಪಿಸಲಾರದವರಾದ ದೆಲಾ 62
ಯ, ಟೋಬೀಯ, ನೆಕೋದ ಇವರ ಸಂತಾನ
ದವರು 642 ಮಂದಿ.
ಯಾಜಕರಲ್ಲಿ ಹೋಬಾಯ, ಹಕ್ಕೋಚ್, ಬರ್ಜಿ 63
ಲ್ಲೈ ಇವರ ಸಂತಾನದವರು ತಮ್ಮ ವಂಶಾವಳಿಯನ್ನು
ತೋರಿಸಲಾರದೆ ಹೋದರು. (ಈ ಬರ್ಜಿಲ್ಲೈ ಎಂಬ
ವನು ಗಿಲ್ಯಾದ್ಯನಾದ ಬರ್ಜಿಲ್ಲೈಯ ಹೆಣ್ಣುಮಕ್ಕಳ
ಲ್ಲೊಬ್ಬಾಕೆಯನ್ನು ಮದುವೆಮಾಡಿಕೊಂಡು ಅವನ
ಹೆಸರನ್ನೂ ಇಟ್ಟುಕೊಂಡಿದ್ದನು.) ಇವರು ತಮ್ಮ 64
ವಂಶಾವಳಿಪತ್ರಗಳನ್ನು ಹುಡುಕಿದರೂ ಅವು ಸಿಕ್ಕದ
ಕಾರಣ ಅಶುದ್ಧರೆಂದು ಯಾಜಕೋದ್ಯೋಗದಿಂದ
ತಳ್ಳಲ್ಪಟ್ಟರು. ಊರೀಮ್‌ತುಮ್ಮೀಮುಗಳ ಮೂಲಕ 65
ದೈವನಿರ್ಣಯವನ್ನು ತಿಳಿಸಬಲ್ಲವನಾದ ಯಾಜಕನು
ಬರುವ ತನಕ ಇವರು ಮಹಾಪರಿಶುದ್ಧಪದಾರ್ಥ
ಗಳಲ್ಲಿ ಭೋಜನಮಾಡಬಾರದೆಂಬದಾಗಿ [1]ದೇಶಾಧಿ
ಪತಿಯು ತೀರ್ಪುಮಾಡಿದನು.
ಸರ್ವಸಮೂಹದವರ ಒಟ್ಟು ಸಂಖ್ಯೆಯು ನಾಲ್ವ 66
ತ್ತೆರಡು ಸಾವಿರದ ಮುನ್ನೂರರುವತ್ತು. ಈ ಸಂಖ್ಯೆ 67
ಯಲ್ಲಿ ಲೆಕ್ಕಿಸಲ್ಪಡದ ಅವರ ದಾಸದಾಸಿಯರು ಏಳು
ಸಾವಿರದ ಮುನ್ನೂರ ಮೂವತ್ತೇಳು ಮಂದಿ. ಅವರ
ಗಾಯಕರೂ ಗಾಯಕಿಗಳೂ ಇನ್ನೂರ ನಾಲ್ವತ್ತೈದು
ಮಂದಿ. [2]ಅವರಿಗೆ ಏಳು ನೂರ ಮೂವತ್ತಾರು ಕುದು 68
ರೆಗಳೂ ಇನ್ನೂರ ನಾಲ್ವತ್ತೈದು ಹೇಸರಕತ್ತೆಗಳೂ
ನಾನೂರ ಮೂವತ್ತೈದು ಒಂಟೆಗಳೂ ಆರು ಸಾವಿರದ 69
ಏಳುನೂರಿಪ್ಪತ್ತು ಕತ್ತೆಗಳೂ ಇದ್ದವು.
ಗೋತ್ರಪ್ರಧಾನರಲ್ಲಿ ಕೆಲವರು ಕೆಲಸಕ್ಕೋಸ್ಕರ 70
ದ್ರವ್ಯಸಹಾಯಮಾಡಿದರು. ತಿರ್ಷಾತಾ ಅನ್ನಿಸಿ
ಕೊಳ್ಳುವ ದೇಶಾಧಿಪತಿಯು ಭಂಡಾರಕ್ಕೆ ಕೊಟ್ಟದ್ದು —
ಸಾವಿರ ಬಂಗಾರದ ಪವನುಗಳು, ಐವತ್ತು ಬೋಗು
ಣಿಗಳು, ಐನೂರಮೂವತ್ತು ಯಾಜಕವಸ್ತ್ರಗಳು.
ಬೇರೆ ಕೆಲವು ಮಂದಿ ಗೋತ್ರಪ್ರಧಾನರು ಕಟ್ಟಡದ 71
ಭಂಡಾರಕ್ಕೆ ಕೊಟ್ಟದ್ದು — ಇಪ್ಪತ್ತು ಸಾವಿರ ಬಂಗಾರದ
ಪವನುಗಳು, [3]ಒಂದು ಲಕ್ಷ ಹತ್ತು ಸಾವಿರ ತೊಲೆ
ಬೆಳ್ಳಿ; ಉಳಿದ ಜನರು ಕೊಟ್ಟದ್ದು — ಇಪ್ಪತ್ತು ಸಾವಿರ 72
ಬಂಗಾರದ ಪವನುಗಳು, [4]ಒಂದು ಲಕ್ಷ ತೊಲೆ ಬೆಳ್ಳಿ,
ಅರುವತ್ತೇಳು ಯಾಜಕವಸ್ತ್ರಗಳು.
ಯಾಜಕರು, ಲೇವಿಯರು, ದ್ವಾರಪಾಲಕರು, 73
ಗಾಯಕರು, ಸಾಧಾರಣಜನರಿಗೆ ಸೇರಿದವರು, ದೇವ
ಸ್ಥಾನದಾಸರು ಅಂತೂ ಇಸ್ರಾಯೇಲ್ಯರೆಲ್ಲರೂ ತಮ್ಮ
ತಮ್ಮ ಪಟ್ಟಣಗಳಲ್ಲಿ ವಾಸಿಸುತ್ತಿದ್ದರು.

1) ಮೂಲ: ತಿರ್ಷಾತಾ. 2) ಅನೇಕ ಇಬ್ರಿಯ ಪ್ರತಿಗಳಲ್ಲಿ ಈ ವಚನವಿರುವದಿಲ್ಲ. 3) ಮೂಲ: ಎರಡು ಸಾವಿರದ ಇನ್ನೂರು ಮಾನೆ. 4) ಮೂಲ: ಎರಡು ಸಾವಿರ ಮಾನೆ.

ಧರ್ಮಸಂಸ್ಥಾಪನೆ. 7. 73—10. 39.

ಧರ್ಮಶಾಸ್ತ್ರಪಾರಾಯಣವೂ ಪರ್ಣಶಾಲೆಯ ಜಾತ್ರೆಯೂ.

ತಮ್ಮ ತಮ್ಮ ಪಟ್ಟಣಗಳಲ್ಲಿ ವಾಸಿಸುತ್ತಿದ್ದ ಇಸ್ರಾ
ಯೇಲ್ ಸರ್ವಸಮೂಹದವರು ಏಳನೆಯ ತಿಂಗಳಲ್ಲಿ
8 ನೀರುಬಾಗಲಿನ ಮುಂದಿನ ಬೈಲಿನಲ್ಲಿ ಒಟ್ಟಾಗಿ ಕೂಡಿ
ಬಂದು—ಯೆಹೋವನು ಮೋಶೆಯ ಮುಖಾಂತರ
ಇಸ್ರಾಯೇಲ್ಯರಿಗೆ ಕೊಟ್ಟ ಧರ್ಮಶಾಸ್ತ್ರದ ಗ್ರಂಥವನ್ನು
ತೆಗೆದುಕೊಂಡು ಬರಬೇಕು ಎಂದು ಧರ್ಮೋಪದೇಶ
2 ಕನಾದ ಎಜ್ರನನ್ನು ಕೇಳಿಕೊಂಡರು. ಯಾಜಕನಾದ
ಎಜ್ರನು ಗ್ರಹಿಸಶಕ್ತರಾದ ಸ್ತ್ರೀಪುರುಷರು ನೆರೆದಿದ್ದ
ಸಮೂಹದವರ ಮುಂದೆ ಏಳನೆಯ ತಿಂಗಳಿನ ಪ್ರಥಮ
3 ದಿನದಲ್ಲಿ ಆ ಧರ್ಮಶಾಸ್ತ್ರವನ್ನು ತಂದು ಪ್ರಾತಃಕಾಲ
ದಿಂದ ಮಧ್ಯಾಹ್ನದ ವರೆಗೂ ಓದಿದನು. ನೀರುಬಾಗ
ಲಿನ ಮುಂದಣ ಬೈಲಿನಲ್ಲಿ ಕೂಡಿಬಂದಿದ್ದ ಸ್ತ್ರೀಪುರುಷ
ರಲ್ಲಿ ಗ್ರಹಿಸಶಕ್ತರಾದವರೆಲ್ಲರೂ ಧರ್ಮಶಾಸ್ತ್ರಪಾರಾ
ಯಣವನ್ನು ಲಾಲಿಸುತ್ತಾ ಇದ್ದರು.
4 ಧರ್ಮೋಪದೇಶಕನಾದ ಎಜ್ರನು ಪಾರಾಯಣ
ಕ್ಕಾಗಿ ಮಾಡಲ್ಪಟ್ಟ ಮರದ ಪೀಠದ ಮೇಲೆ ನಿಂತನು.
ಅವನ ಬಲಗಡೆಯಲ್ಲಿ ಮತ್ತಿತ್ಯ, ಶೆಮ, ಅನಾಯ,
ಊರೀಯ, ಹಿಲ್ಕೀಯ, ಮಾಸೇಯ ಎಂಬವರೂ ಎಡ
ಗಡೆಯಲ್ಲಿ ಪೆದಾಯ, ಮಿಾಷಾಯೇಲ್, ಮಲ್ಕೀಯ,
ಹಾಷುಮ್, ಹಷ್ಬದ್ದಾನ, ಜೆಕರ್ಯ, ಮೆಷುಲ್ಲಾಮ್
5 ಎಂಬವರೂ ನಿಂತರು. ಸರ್ವಸಮೂಹಕ್ಕಿಂತಲೂ ಎತ್ತ
ರವಾದ ಸ್ಥಳದಲ್ಲಿ ನಿಂತಿದ್ದ ಎಜ್ರನು ಜನರ ಸಮಕ್ಷ
ದಲ್ಲಿ ಗ್ರಂಥವನ್ನು ತೆರೆದ ಕೂಡಲೆ ಎಲ್ಲರೂ ಎದ್ದು
6 ನಿಂತರು. ಎಜ್ರನು ಪರಾತ್ಪರ ದೇವರಾದ ಯೆಹೋವ
ನನ್ನು ಸ್ತುತಿಸಿದ್ದಕ್ಕೆ ಸರ್ವಜನರೂ ತಮ್ಮ ಕೈಗಳನ್ನೆ
ತ್ತಿ ಆಮೆನ್, ಆಮೆನ್ ಎಂದು ಹೇಳಿ ನೆಲದ ಮಟ್ಟಿಗೂ
7 ತಲೆಬಾಗಿ ಯೆಹೋವನನ್ನು ಆರಾಧಿಸಿದರು. ಆ
ಮೇಲೆ ಯೇಷೂವ, ಬಾನೀ, ಶೇರೇಬ್ಯ, ಯಾಮಿೂನ್,
ಅಕ್ಕೂಬ್, ಶಬ್ಬೆತೈ, ಹೋದೀಯ, ಮಾಸೇಯ, ಕೆಲೀಟ,
ಅಜರ್ಯ, ಯೋಜಾಬಾದ್, ಹಾನಾನ್, ಪೆಲಾಯ
[1])ಎಂಬ ಲೇವಿಯರು ಧರ್ಮಶಾಸ್ತ್ರವನ್ನು ಜನರು
8 ಗ್ರಹಿಸುವಂತೆ ಮಾಡಿದರು. ಜನರು ಎದ್ದುನಿಂತ
ನಂತರ ಅವರು ದೇವರ ಧರ್ಮಶಾಸ್ತ್ರವನ್ನು ಸ್ಪಷ್ಟವಾಗಿ
ಓದುತ್ತಾ ಅದರ ತಾತ್ಪರ್ಯವನ್ನು ವಿವರಿಸಲು ಜನರು
ಗ್ರಹಿಸಿದರು.
9 ಜನರೆಲ್ಲರೂ ಧರ್ಮೋಪದೇಶವಾಕ್ಯಗಳನ್ನು ಕೇಳು
ತ್ತಾ ಅಳುತ್ತಿದ್ದದರಿಂದ ದೇಶಾಧಿಪತಿಯಾದ ನೆಹೆಮಿಾ
ಯನೂ ಧರ್ಮೋಪದೇಶಮಾಡುವ ಯಾಜಕನಾದ
ಎಜ್ರನೂ ಜನರನ್ನು ಬೋಧಿಸುತ್ತಿದ್ದ ಲೇವಿಯರೂ ಅವ
ರಿಗೆ—ಈ ದಿನವು ನಿಮ್ಮ ದೇವರಾದ ಯೆಹೋವ
ನಿಗೆ ಪರಿಶುದ್ಧದಿನವಾಗಿರುವದರಿಂದ ನೀವು ದುಃಖಿ
10 ಸುತ್ತಾ ಅಳುತ್ತಾ ಇರಬೇಡಿರಿ ಎಂದು ಹೇಳಿದರು. ಇದ
ಲ್ಲದೆ ಎಜ್ರನು ಅವರಿಗೆ—ಹೋಗಿ ಮೃಷ್ಟಾನ್ನವನ್ನೂ
ಮಧುರಪಾನವನ್ನೂ ತೆಗೆದುಕೊಳ್ಳಿರಿ; ತಮಗೋ
ಸ್ಕರ ಏನೂ ಸಿದ್ಧಮಾಡದವರಿಗೆ ಭಾಗಗಳನ್ನು ಕಳು
ಸಿರಿ. ಈ ದಿನವು ನಮ್ಮ ಕರ್ತನಿಗೆ ಪ್ರತಿಷ್ಠಿತ ದಿನವ
ಗಿರುವದರಿಂದ ವ್ಯಸನಪಡಬೇಡಿರಿ; ಯೆಹೋವ
ಆನಂದವೇ ನಿಮ್ಮ ಆಶ್ರಯವಾಗಿದೆ ಅಂದನು. ಲೇ
ಯರೂ—ಸುಮ್ಮನಿರಿ. ಇದು ದೇವರ ದಿವಸ, ದುಃಖಿ
ಬೇಡಿರಿ ಎಂದು ಹೇಳಿ ಜನರನ್ನು ಸಂತೈಸಿದರು. ತಮ
ತಿಳಿಯಪಡಿಸಿದ ಮಾತುಗಳನ್ನು ಜನರೆಲ್ಲರೂ ಗವನಿ
ಹೋಗಿ ಅನ್ನಪಾನಗಳನ್ನು ತೆಗೆದುಕೊಂಡು ಏನ
ಇಲ್ಲದವರಿಗೆ ಭಾಗಗಳನ್ನು ಕಳುಹಿಸಿ ಬಹಳವಾ
ಸಂತೋಷಪಟ್ಟರು.
ಮರುದಿನ ಎಲ್ಲಾ ಇಸ್ರಾಯೇಲ್ ಗೋತ್ರಪ್ರಧ
ನರೂ ಯಾಜಕರೂ ಲೇವಿಯರೂ ಧರ್ಮಶಾಸ್ತ್ರ
ಅಧ್ಯಯನಕ್ಕಾಗಿ ಧರ್ಮೋಪದೇಶಕನಾದ ಎಜ್ರ
ಬಳಿಗೆ ಕೂಡಿಬಂದಾಗ ಏಳನೆಯ ತಿಂಗಳಿನ ಜಾ
ಯಲ್ಲಿ ಇಸ್ರಾಯೇಲ್ಯರು ಪರ್ಣಶಾಲೆಗಳಲ್ಲಿ ವಾಸಿ
ಬೇಕು; ಈ ನಿಯಮದ ಪ್ರಕಾರ ಆ ಪರ್ಣಶಾಲೆಗ
ಗಾಗಿ ಜನರು ಗುಡ್ಡಕ್ಕೆ ಹೋಗಿ ಓಲೀವ, ಕಾಡ
ಓಲೀವ, ಸುಗಂಧ, ಖರ್ಜೂರ ಮುಂತಾದ ಮರಗ
ದಟ್ಟವಾದ ಎಲೆಗಳುಳ್ಳ ಕೊಂಬೆಗಳನ್ನು ತರುವ ಹಾ
ಅವರ ಎಲ್ಲಾ ಪಟ್ಟಣಗಳಲ್ಲಿಯೂ ಯೆರೂಸಲೇಮಿ
ಲ್ಲಿಯೂ ಡಂಗುರದಿಂದ ಪ್ರಕಟಿಸಬೇಕು ಎಂಬದಾ
ಬರೆದಿರುವ ಶಾಸನವು ಮೋಶೆಗೆ ಯೆಹೋವನಿಂ
ದೊರಕಿದ ಧರ್ಮಶಾಸ್ತ್ರದಲ್ಲಿ ಸಿಕ್ಕಿತು. ಈ ಆಜ್ಞಾನ
ಸಾರವಾಗಿ ಜನರು ಹೋಗಿ ಕೊಂಬೆಗಳನ್ನು ತೆಗೆದ
ಕೊಂಡು ಬಂದು ತಮ್ಮ ತಮ್ಮ ಅಂಗಳಮಾಳಿಗೆಗ
ಲ್ಲಿಯೂ ದೇವಾಲಯದ ಪ್ರಾಕಾರಗಳಲ್ಲಿಯೂ ನೀರ
ಬಾಗಲು, ಎಫ್ರಾಯಿಮ್ ಬಾಗಲು ಇವುಗ
ಮುಂದಣ ಬೈಲುಗಳಲ್ಲಿಯೂ ಪರ್ಣಶಾಲೆಗಳನ
ಮಾಡಿಕೊಂಡರು. ನೂನನ ಮಗನಾದ ಯೆಹೋಶ
ವನ ಕಾಲದಿಂದ ಆ ವರೆಗೂ ಇಸ್ರಾಯೇಲ್ಯರು ಹೀ
ಮಾಡಿದ್ದಿಲ್ಲ. ಸೆರೆಯಿಂದ ತಿರಿಗಿ ಬಂದ ಸರ್ವಸಮ
ಹದವರಾದರೋ ಪರ್ಣಶಾಲೆಗಳನ್ನು ಮಾಡಿಕೊಂಡ
ಅವುಗಳಲ್ಲಿ ವಾಸಿಸುತ್ತಾ ಬಹು ಸಂತೋಷಪಟ್ಟರ
ಎಜ್ರನು ಮೊದಲನೆಯ ದಿನದಿಂದ ಕಡೆಯ ದಿನದ ವರ
ಪ್ರತಿದಿನವೂ ದೇವರ ಧರ್ಮಶಾಸ್ತ್ರವನ್ನು [ಜನರಿಗೋ
ಸ್ಕರ] ಪಾರಾಯಣಮಾಡುತ್ತಿದ್ದನು. ಏಳು ದಿನಗ
ವರೆಗೂ ಜಾತ್ರೆನಡೆಯಿತು. ನೇಮದ ಪ್ರಕಾ
ಎಂಟನೆಯ ದಿನದಲ್ಲಿ ದೇವಾರಾಧನೆಗಾಗಿ ಸಭೆಕ
ಡಿತು.

ಪಾಪನಿವೇದನ ದಿನ.

ಅದೇ ತಿಂಗಳಿನ ಇಪ್ಪತ್ತನಾಲ್ಕನೆಯ ದಿನದಲ್ಲಿ ಇಸ್ರಾ
ಯೇಲ್ಯರು ಉಪವಾಸವಾಗಿದ್ದು ಗೋಣೀತಟ್ಟನ
ಕಟ್ಟಿಕೊಂಡು ತಲೆಯ ಮೇಲೆ ಮಣ್ಣುಹಾಕಿಕೊಂಡ
ನೆರೆದುಬಂದರು. ಇಸ್ರಾಯೇಲ್ ಸಂತಾನದವ
ಎಲ್ಲಾ ಅನ್ಯಕುಲದವರಿಂದ ತಮ್ಮನ್ನು ಬೇರ್ಪಡಿ
ಕೊಂಡು ನಿಂತು ತಮ್ಮ ಪಾಪಗಳನ್ನೂ ತಮ್ಮ ಪಿತೃಗ

1) ಪಾಠಾಂತರ: ಇವರೂ ಲೇವಿಯರೂ.

3 ಪಾಪಗಳನ್ನೂ ಆತನಿಗೆ ಅರಿಕೆಮಾಡಿದರು. ಅವರು
ಮೂರು ತಾಸುಗಳ ವರೆಗೂ ತಮ್ಮ ತಮ್ಮ ಸ್ಥಳಗಳಲ್ಲಿ
ನಿಂತು ತಮ್ಮ ದೇವರಾದ ಯೆಹೋವನ ಧರ್ಮಶಾಸ್ತ್ರ
ಗ್ರಂಥವನ್ನು ಪಾರಾಯಣಮಾಡಿಸಿದರು. ತರುವಾಯ
ಇನ್ನೂ ಮೂರು ತಾಸು ತಮ್ಮ ದೇವರಾದ ಯೆ
ಹೋವನಿಗೆ ಅಡ್ಡಬಿದ್ದು ಪಾಪಗಳನ್ನು ಅರಿಕೆಮಾಡಿ
4 ದರು. ಯೇಷೂವ, ಬಾನೀ, ಕದ್ಮೀಯೇಲ್, ಶೆಬನ್ಯ,
ಬುನ್ನೀ, ಶೇರೇಬ್ಯ, ಬಾನೀ, ಕೆನಾನೀ ಎಂಬವರು ಲೇವಿ
ಯರ ಮೆಟ್ಲುಗಳ ಮೇಲೆ ನಿಂತು ಮಹಾಶಬ್ದದಿಂದ
ತಮ್ಮ ದೇವರಾದ ಯೆಹೋವನಿಗೆ ಮೊರೆಯಿಟ್ಟರು.
5 ಆ ಮೇಲೆ ಲೇವಿಯರಾದ ಯೇಷೂವ, ಕದ್ಮೀಯೇಲ್,
ಬಾನೀ, ಹಷಬ್ನೆಯ, ಶೇರೇಬ್ಯ, ಹೋದೀಯ, ಶೆಬನ್ಯ,
ಪೆತಹ್ಯ ಎಂಬವರು—ಏಳಿರಿ, ನಮ್ಮ ದೇವರಾದ ಯೆ
ಹೋವನಿಗೆ ಯುಗಯುಗಕ್ಕೂ ಸ್ತೋತ್ರವಾಗಲಿ ಅನ್ನಿರಿ
ಎಂದು ಹೇಳಿ—ಯೆಹೋವನೇ, ಸರ್ವಸ್ತುತಿಕೀರ್ತನೆಗ
ಳಿಗೆ ಮಿಗಿಲಾಗಿರುವ ನಿನ್ನ ಮಹಾನಾಮಕ್ಕೆ ಕೊಂಡಾಟ
6 ವಾಗಲಿ, ನೀನೊಬ್ಬನೇ ದೇವರು; ನೀನು ಉನ್ನ
ತೋನ್ನತವಾದ ಆಕಾಶವನ್ನೂ ಅದರ ಸೈನ್ಯವನ್ನೂ
ಭೂಮಿಯನ್ನೂ ಅದರ ಮೇಲಿರುವದನ್ನೂ ಸಮುದ್ರ
ಗಳನ್ನೂ ಎಲ್ಲಾ ಜಲಚರಗಳನ್ನೂ ಉಂಟುಮಾಡಿ ಸಮ
ಸ್ತಪ್ರಾಣಿಗಳ ಜೀವಾಧಾರನಾಗಿರುತ್ತೀ. ಆಕಾಶಸೈನ್ಯ
7 ದವರು ನಿನಗೆ ಅಡ್ಡಬೀಳುತ್ತಾರೆ. ಯೆಹೋವನೇ,
ಅಬ್ರಾಮನನ್ನು ಆರಿಸಿಕೊಂಡು ಕಸ್ದೀಯರ ಊರ್
ಎಂಬ ಪಟ್ಟಣದಿಂದ ಬರಮಾಡಿ ಅವನಿಗೆ ಅಬ್ರಹಾಮ
8 ನೆಂಬ ಹೆಸರನ್ನು ಕೊಟ್ಟ ದೇವರು ನೀನೇ. ಅವನು
ಯಥಾರ್ಥಚಿತ್ತನೆಂದು ಕಂಡು ಅವನಿಗೆ—ಕಾನಾನ್ಯರು,
ಹಿತ್ತಿಯರು, ಅಮೋರಿಯರು, ಪೆರಿಜ್ಜೀಯರು, ಯೆಬೂ
ಸಿಯರು, ಗಿರ್ಗಾಷಿಯರು ಇವರ ದೇಶವನ್ನು
ನಿನ್ನ ಸಂತಾನದವರಿಗೆ ಕೊಡುತ್ತೇನೆಂದು ವಾಗ್ದಾನ
ಮಾಡಿ ಅದನ್ನು ನೆರವೇರಿಸಿದ್ದೀ; ನೀನು ಧರ್ಮಸ್ವರೂ
9 ಪನೇ. ಐಗುಪ್ತದೇಶದಲ್ಲಿ ನಮ್ಮ ಪಿತೃಗಳಿಗಿದ್ದ
ಕಷ್ಟವನ್ನು ನೋಡಿದಿ; ಕೆಂಪುಸಮುದ್ರದ ಬಳಿಯಲ್ಲಿ
10 ಅವರು ಮೊರೆಯಿಟ್ಟಾಗ ನೀನು ಲಾಲಿಸಿದಿ. ಐಗು
ಪ್ತ್ಯರು ಗರ್ವಿಗಳಾಗಿ ಅವರನ್ನು ಕುಗ್ಗಿಸಿದಾಗ ನೀನು
ಫರೋಹನಲ್ಲಿಯೂ ಅವನ ಸೇವಕರಲ್ಲಿಯೂ ಅವನ
ದೇಶದ ಜನರಲ್ಲಿಯೂ ಅದ್ಭುತಕಾರ್ಯಗಳನ್ನೂ ಸೂ
ಚಕಕಾರ್ಯಗಳನ್ನೂ ನಡಿಸಿ ಈಗ ನಿನಗಿರುವ ಕೀರ್ತಿ
11 ಯನ್ನು ಸ್ಥಾಪಿಸಿದಿ. ನಮ್ಮ ಪಿತೃಗಳು ಸಮುದ್ರ
ಮಧ್ಯದಲ್ಲಿ ಒಣನೆಲದಲ್ಲೇ ಹಾದುಹೋಗುವಂತೆ ಅವರ
ಮುಂದೆ ಸಮುದ್ರವನ್ನು ಛೇದಿಸಿದಿ. ಅವರನ್ನು ಹಿಂದಟ್ಟು
ವವರನ್ನು ಕಲ್ಲಿನಂತೆ ಮಹಾಜಲರಾಶಿಯ ತಳದಲ್ಲಿ
12 ಮುಳುಗಿಸಿಬಿಟ್ಟೆ. ಹಗಲುಹೊತ್ತಿನಲ್ಲಿ ಮೇಘ
ಸ್ತಂಭದಲ್ಲಿಯೂ ರಾತ್ರಿವೇಳೆಯಲ್ಲಿ ಅವರು ನಡೆಯು
ತಕ್ಕ ದಾರಿಯಲ್ಲಿ ಬೆಳಕುಕೊಡುವದಕ್ಕೆ ಅಗ್ನಿಸ್ತಂಭ
13 ದಲ್ಲಿಯೂ ಅವರ ಮುಂದೆ ಹೋದಿ. ಸೀನಾಯಿ
ಬೆಟ್ಟದ ಮೇಲೆ ಇಳಿದುಬಂದು ಆಕಾಶದ ಕಡೆಯಿಂದ
ಅವರೊಡನೆ ಮಾತಾಡಿ ಅವರಿಗೆ ನೀತಿನಿಯಮಗಳನ್ನೂ
ಯಥಾರ್ಥ ಧರ್ಮೋಪದೇಶವನ್ನೂ ಶ್ರೇಷ್ಠವಾದ ಆಜ್ಞಾ
14 ವಿಧಿಗಳನ್ನೂ ಅನುಗ್ರಹಿಸಿದಿ. ನಿನ್ನ ಸೇವಕನಾದ
ಮೋಶೆಯ ಮುಖಾಂತರ ನಿನಗೆ ಮೀಸಲಾದ ಸಬ್ಬ
ತೆಂಬ ವಿಶ್ರಾಂತಿದಿನವನ್ನು ಅವರಿಗೆ ಪ್ರಕಟಿಸಿ ಆಜ್ಞಾ
ವಿಧಿಧರ್ಮಗಳನ್ನು ಕಲಿಸಿದಿ. ಅವರು ಹಸಿದಾಗ 15
ಆಕಾಶದಿಂದ ಆಹಾರವನ್ನು ಕೊಟ್ಟು ಬಾಯಾರಿ
ದಾಗ ಬಂಡೆಯೊಳಗಿಂದ ನೀರನ್ನು ಬರಮಾಡಿ ಪ್ರಮಾಣ
ಪೂರ್ವಕವಾಗಿ ವಾಗ್ದಾನಮಾಡಿದ ದೇಶದಲ್ಲಿ ನೀವು
ಸೇರಿ ಅದನ್ನು ಸ್ವಾಧೀನಮಾಡಿಕೊಳ್ಳಿರಿ ಎಂದು ಅವ
ರಿಗೆ ಆಜ್ಞಾಪಿಸಿದಿ. ಆದರೂ ನಮ್ಮ ಪಿತೃಗಳು ಗರ್ವಿ 16
ಗಳಾಗಿ ಹಟಹಿಡಿದು ನಿನ್ನ ಆಜ್ಞೆಗಳಿಗೆ ಅವಿಧೇಯರಾ
ದರು. ನೀನು ಅವರ ಮಧ್ಯದಲ್ಲಿ ಮಾಡಿದ ಮಹ 17
ತ್ಕಾರ್ಯಗಳನ್ನು ಅವರು ಮರೆತು ಮಾತುಕೇಳದೆ ಹಟ
ಹಿಡಿದು ತಮಗೊಬ್ಬ ನಾಯಕನನ್ನು ನೇಮಿಸಿಕೊಂಡು
ಮುಂಚಿನಂತೆ ದಾಸರಾಗಿರುವದಕ್ಕಾಗಿ ಐಗುಪ್ತಕ್ಕೆ
ಹಿಂದಿರುಗಬೇಕೆಂದಿದ್ದರು. ನೀನಾದರೋ ಪಾಪಗ
ಳನ್ನು ಕ್ಷಮಿಸುವವನೂ ಕನಿಕರದಯೆಗಳುಳ್ಳವನೂ
ದೀರ್ಘಶಾಂತನೂ ಕೃಪಾಳುವೂ ಆಗಿರುವ ದೇವರು;
ನೀನು ಅವರನ್ನು ಕೈಬಿಡಲಿಲ್ಲ. ಅವರು ತಮಗೆ 18
ಎರಕದ ಬಸವನನ್ನು ಮಾಡಿಕೊಂಡು—[ಇಸ್ರಾಯೇ
ಲ್ಯರೇ,] ನಿಮ್ಮನ್ನು ಐಗುಪ್ತದಿಂದ ಕರಕೊಂಡು ಬಂದ
ದೇವರು ಇದೇ ಎಂದು ಹೇಳಿ ನಿನ್ನನ್ನು ಅಸಡ್ಡೆಮಾಡಿ
ದಾಗಲೂ ಕರುಣಾನಿಧಿಯಾದ ನೀನು ಅವರನ್ನು 19
ಅರಣ್ಯದಲ್ಲಿ ಕೈಬಿಡಲಿಲ್ಲ, ಹಗಲಿನಲ್ಲಿ ಅವರಿಗೆ ದಾರಿ
ತೋರಿಸುತ್ತಿದ್ದ ಮೇಘಸ್ತಂಭವೂ ರಾತ್ರಿವೇಳೆಯಲ್ಲಿ
ಅವರು ನಡೆಯತಕ್ಕ ದಾರಿಯಲ್ಲಿ ಬೆಳಕುಕೊಡುತ್ತಿದ್ದ
ಅಗ್ನಿಸ್ತಂಭವೂ ಅವರನ್ನು ಬಿಟ್ಟುಹೋಗಲಿಲ್ಲ. ಅವರಿಗೆ 20
ಉಪದೇಶಿಸಲು ನಿನ್ನ ಒಳ್ಳೇ ಆತ್ಮನನ್ನು ಕೊಟ್ಟೆ. ಅವರ
ಬಾಯಿಂದ ಮನ್ನವನ್ನು ಹಿಂದೆಗೆಯಲಿಲ್ಲ. ಬಾಯಾರಿ
ದಾಗ ಅವರಿಗೆ ನೀರನ್ನು ಕೊಟ್ಟೆ. ನಾಲ್ವತ್ತು ವರುಷ 21
ಅವರನ್ನು ಅರಣ್ಯದಲ್ಲಿ ಸಾಕುತ್ತಾ ಇದ್ದಿ; ಅವರಿಗೆ
ಯಾವ ಕೊರತೆಯೂ ಇರಲಿಲ್ಲ. ಅವರ ಬಟ್ಟೆಗಳು
ಜೀರ್ಣವಾಗಲಿಲ್ಲ, ಕಾಲುಗಳು ಬಾತುಹೋಗಲಿಲ್ಲ.

ರಾಜ್ಯಜನಾಂಗಗಳನ್ನು ಅವರಿಗೆ ವಶಪಡಿಸಿ ಆ ರಾಜ್ಯ 22
ಗಳನ್ನು ಅವರಿಗೆ ಸ್ವಾಸ್ತ್ಯವನ್ನಾಗಿ ಹಂಚಿಕೊಟ್ಟೆ.
ಹೀಗೆ ಅವರು ಹೆಷ್ಬೋನಿನ ಅರಸನಾದ ಸೀಹೋನ್,
ಬಾಷಾನಿನ ಅರಸನಾದ ಓಗ್ ಇವರ ಪ್ರಾಂತಗಳನ್ನು
ಸ್ವಾಧೀನಪಡಿಸಿಕೊಂಡರು. ಅವರ ಮಕ್ಕಳನ್ನು ಆಕಾ 23
ಶದ ನಕ್ಷತ್ರಗಳಷ್ಟು ಹೆಚ್ಚಿಸಿ—ನೀವು ಈ ದೇಶದೊ
ಳಕ್ಕೆ ಪ್ರವೇಶಿಸಿ ಸ್ವಾಧೀನಮಾಡಿಕೊಳ್ಳಿರಿ ಎಂದು
ಅವರ ಪಿತೃಗಳಿಗೆ ವಾಗ್ದಾನಮಾಡಿದ್ದ ದೇಶಕ್ಕೆ ಅವ
ರನ್ನು ಬರಮಾಡಿದಿ. ಅವರು ಆ ದೇಶದಲ್ಲಿ ಸೇರಿ 24
ಅದನ್ನು ಸ್ವಾಧೀನಮಾಡಿಕೊಂಡರು. ನೀನು ಅವರ
ಮುಂದೆ ದೇಶನಿವಾಸಿಗಳಾಗಿದ್ದ ಕಾನಾನ್ಯರನ್ನು ಕುಗ್ಗಿಸಿ
ಮನಸ್ಸಿಗೆ ಬಂದಂತೆ ನಡಿಸುವ ಹಾಗೆ ಆ ದೇಶದ ರಾಜ
ರನ್ನೂ ಪ್ರಜೆಗಳನ್ನೂ ಅವರ ಕೈಗೆ ಒಪ್ಪಿಸಿದಿ. ಅವರು 25
ಕೋಟೆಕೊತ್ತಲುಗಳುಳ್ಳ ಪಟ್ಟಣಗಳನ್ನೂ ಸಾರವುಳ್ಳ
ಭೂಮಿಯನ್ನೂ ಸಮಸ್ತ ವಿಧವಾದ ಉತ್ತಮವಸ್ತುಗ
ಳಿಂದ ತುಂಬಿದ ಮನೆಗಳನ್ನೂ ತೋಡಿದ ಬಾವಿಗಳ
ನ್ನೂ ದ್ರಾಕ್ಷೇತೋಟ, ಎಣ್ಣೇಮರಗಳ ತೋಪು, ಎಷ್ಟೋ
ಹಣ್ಣಿನ ಮರ ಇವುಗಳನ್ನೂ ವಶಮಾಡಿಕೊಂಡು ಚೆನ್ನಾಗಿ
ತಿಂದು ತೃಪ್ತರಾಗಿ ಕೊಬ್ಬಿ ನೀನು ಕೊಟ್ಟ ಸಮೃದ್ಧಿ
ಯಲ್ಲಿ ಆನಂದಿಸುತ್ತಿದ್ದರು.

26 ಆಗ ಅವರು ನಿನಗೆ ಅವಿಧೇಯರಾಗಿ ತಿರುಗಿ
ಬಿದ್ದು ನಿನ್ನ ಧರ್ಮೋಪದೇಶವನ್ನು ಉಲ್ಲಂಘಿಸಿ
ತಮ್ಮನ್ನು ಎಚ್ಚರಿಸುವದಕ್ಕೂ ನಿನ್ನ ಕಡೆಗೆ ತಿರುಗಿಸು
ವದಕ್ಕೂ ಪ್ರಯತ್ನಿಸುತ್ತಿದ್ದ ನಿನ್ನ ಪ್ರವಾದಿಗಳನ್ನು
27 ಕೊಂದುಹಾಕಿ ನಿನ್ನನ್ನು ಅಸಡ್ಡೆಮಾಡಿದರು. ಆದ
ದರಿಂದ ನೀನು ಅವರನ್ನು ಬಾಧಿಸುವ ವಿರೋಧಿಗಳ
ಕೈಗೆ ಒಪ್ಪಿಸಿದಿ. ಅವರು ಆ ಕಷ್ಟಕಾಲದಲ್ಲಿ ನಿನಗೆ
ಮೊರೆಯಿಡಲು ಪರಲೋಕದಿಂದ ನೀನು ಅವರಿಗೆ ಕಿವಿ
ಗೊಟ್ಟು ನಿನ್ನ ಕರುಣಾತಿಶಯದಿಂದ ರಕ್ಷಕರನ್ನು
ಕಳುಹಿಸಿ ವಿರೋಧಿಗಳ ಕೈಯಿಂದ ಅವರನ್ನು ಬಿಡಿ
28 ಸಿದಿ. ಉಪಶಮನವನ್ನು ಪಡೆದ ಮೇಲೆ ಅವರು
ತಿರಿಗಿ ದ್ರೋಹಿಗಳಾಗಿ ನಡೆಯುತ್ತಿರುವದನ್ನು ನೀನು
ಕಂಡು ಅವರ ಮೇಲೆ ದೊರೆತನನಡಿಸತಕ್ಕ ವೈರಿಗಳ
ಕೈಗೆ ಅವರನ್ನು ಒಪ್ಪಿಸಿದಿ. ಆಗ ಅವರು ಪಶ್ಚಾತ್ತಾಪ
ಪಟ್ಟು ಕೂಗಿಕೊಳ್ಳಲು ಪರಲೋಕದಿಂದ ನೀನು
ಕೇಳಿ ನಿನ್ನ ಕರುಣಾತಿಶಯದಿಂದ ಅವರನ್ನು ಅನೇ
29 ಕಾವರ್ತಿ ರಕ್ಷಿಸಿ—ನನ್ನ ಧರ್ಮೋಪದೇಶಕ್ಕೆ ಪುನಃ
ಮನಗೊಟ್ಟು ಬನ್ನಿರಿ ಎಂದು ಎಷ್ಟೋ ಖಂಡಿತವಾಗಿ
ಎಚ್ಚರಿಸಿದಿ. ಆದರೂ ಅವರು ಲಾಲಿಸದೆ ಗರ್ವಿಗಳೂ
ನಿನ್ನ ಆಜ್ಞೆಗಳಿಗೆ ಅವಿಧೇಯರೂ ಆದರು; ಕೈ
ಕೊಳ್ಳುವ ಮನುಷ್ಯನಿಗೆ ಜೀವಾಧಾರವಾಗಿರುವ ನಿನ್ನ
ವಿಧಿನ್ಯಾಯಗಳನ್ನು ಮಿಾರಿ ಪಾಪಮಾಡಿ ಹೆಗಲು
ಕೊಡದೆ ಮೊಂಡಬಿದ್ದು ನಿನ್ನ ಮಾತನ್ನು ಕೇಳದೆ ಹೋ
30 ದರು. ನೀನು ಅನೇಕವರ್ಷಗಳ ತನಕ ಅವರ ವಿಷ
ಯದಲ್ಲಿ ತಾಳಿಕೊಂಡು ಪ್ರವಾದಿಗಳ ಮುಖಾಂತರ
ಮಾತಾಡುತ್ತಿದ್ದ ನಿನ್ನ ಆತ್ಮನಿಂದ ಅವರನ್ನು ಎಷ್ಟು
ಎಚ್ಚರಿಸುತ್ತಿದ್ದರೂ ಅವರು ಕಿವಿಗೊಡದೆ ಹೋದ
ಮೇಲೆ ನೀನು ಅವರನ್ನು ಅನ್ಯದೇಶಗಳವರ ಕೈಗೆ ಒಪ್ಪಿ
31 ಸಿಬಿಟ್ಟಿ. ಆದರೆ ನೀನು ದಯೆಯೂ ಕನಿಕರವೂ
ಉಳ್ಳ ದೇವರಾಗಿರುವದರಿಂದ ನಿನ್ನ ಮಹಾ ಕೃಪಾನು
ಸಾರವಾಗಿ ಅವರನ್ನು ನಾಶಮಾಡಿಬಿಡಲಿಲ್ಲ, ಕೈಬಿಡಲೂ
ಇಲ್ಲ.
32 ನಮ್ಮ ದೇವರೇ, ಮಹೋನ್ನತನೂ ಪರಾಕ್ರಮಿ
ಯೂ ಭಯಂಕರನೂ ಆಗಿರುವಾತನೇ, ಕೃಪಾವಾಗ್ದಾ
ನಗಳನ್ನು ನೆರವೇರಿಸುವ ದೇವರೇ, ಅಶ್ಶೂರದ ರಾಜರ
ಕಾಲದಿಂದ ಇಂದಿನ ವರೆಗೆ ನಮ್ಮ ಅರಸರಿಗೂ ಪ್ರಭು
ಗಳಿಗೂ ಯಾಜಕರಿಗೂ ಪ್ರವಾದಿಗಳಿಗೂ ಹಿರಿಯರಿಗೂ
ನಿನ್ನ ಎಲ್ಲಾ ಪ್ರಜೆಗಳಿಗೂ ಪ್ರಾಪ್ತವಾದ ಕಷ್ಟವು ಅಲ್ಪವು
33 ಎಂದೆಣಿಸಬೇಡ. ನೀನು ನಮ್ಮ ಮೇಲೆ ಎಷ್ಟು ಕೇಡ
ನ್ನು ಬರಮಾಡಿದರೂ ನೀನು ಧರ್ಮಸ್ವರೂಪನೇ;
ನೀನು ಸತ್ಯವನ್ನೇ ನಡಿಸಿದಿ; ನಾವಾದರೋ ದುಷ್ಟರು.
34 ನಮ್ಮ ಅರಸರೂ ಪ್ರಭುಗಳೂ ಯಾಜಕರೂ ಹಿರಿಯ
ರೂ ನಿನ್ನ ಧರ್ಮೋಪದೇಶವನ್ನು ಅನುಸರಿಸಲಿಲ್ಲ,
ನಿನ್ನ ಆಜ್ಞೆಗಳಿಗೆ ಕಿವಿಗೊಡಲಿಲ್ಲ; ನೀನು ಎಚ್ಚರಿಸಿ
35 ಹೇಳಿದ ಮಾತುಗಳನ್ನು ಲಕ್ಷಿಸಲಿಲ್ಲ. ಅವರು ಸ್ವರಾ
ಜ್ಯದಲ್ಲಿದ್ದುಕೊಂಡು ನೀನು ದಯಪಾಲಿಸಿದ ಸಮೃದ್ಧಿ
ಯನ್ನು ಅನುಭವಿಸುತ್ತಾ ನಿನ್ನ ಅನುಗ್ರಹದಿಂದ ದೊರ
ಕಿದ ಸಾರವುಳ್ಳ ವಿಸ್ತಾರದೇಶದಲ್ಲಿ ವಾಸಿಸುತ್ತಾ ಇರು
ವಾಗ ನಿನ್ನನ್ನು ಸೇವಿಸದೆಯೂ ತಮ್ಮ ದುಷ್ಕೃತ್ಯಗ
ಳನ್ನು ಬಿಡದೆಯೂ ಇದ್ದದರಿಂದಲೇ ನಾವು ಈಗ ದಾಸ
ರಾಗಿದ್ದೇವೆ. ನೀನು ನಮ್ಮ ಪಿತೃಗಳಿಗೆ—ಇದರ
ಉತ್ಪನ್ನವನ್ನೂ ಸಮೃದ್ಧಿಯನ್ನೂ ಅನುಭವಿಸಿರಿ ಎಂದು
ಹೇಳಿ ಕೊಟ್ಟ ದೇಶದಲ್ಲೇ ನಾವು ದಾಸರಾಗಿರಬೇಕಾ
ಗಿದೆ. ನಮ್ಮ ಪಾಪಗಳ ನಿಮಿತ್ತವಾಗಿ ನಿನ್ನಿಂದ
ನಮ್ಮ ಮೇಲೆ ನೇಮಿಸಲ್ಪಟ್ಟ ರಾಜರಿಗೆ ಈ ದೇಶದ
ಹೇರಳವಾದ ಹುಟ್ಟುವಳಿಯು ಹೋಗುತ್ತದೆ. ನಮ್ಮ
ಕಾಯಗಳ ಮೇಲೆಯೂ ಪಶುಗಳ ಮೇಲೆಯೂ
ಅವರು ಅಧಿಕಾರನಡಿಸುತ್ತಾರೆ. ನಾವು ಮಹಾ
ಸಂಕಟದಲ್ಲಿರುತ್ತೇವೆ ಅಯ್ಯೋ ಎಂದು ಪ್ರಾರ್ಥಿಸಿದರು.

ಮತಾಸಕ್ತರ ಪ್ರತಿಜ್ಞೆ.

ಈ ಎಲ್ಲಾ ಕಾರಣಗಳಿಂದ ನಾವು ಲೇಖನರೂಪವಾದ
ಪ್ರತಿಜ್ಞೆಯನ್ನು ಮಾಡಿದೆವು. ಅದಕ್ಕೆ ನಮ್ಮ ಪ್ರಭು
ಗಳೂ ಲೇವಿಯರೂ ಯಾಜಕರೂ ಸಹಿಮಾಡಿ ಮುದ್ರೆ
ಹಾಕಿದರು. ಸಹಿಮಾಡಿದವರು—
ಹಕಲ್ಯನ ಮಗನಾದ ನೆಹೆಮಿಾಯನೆಂಬ ದೇಶಾ 1
ಧಿಪತಿಯೂ ಚಿದ್ಕೀಯ, ಸೆರಾಯ, ಅಜರ್ಯ, ಯೆರೆ
ಮಿಾಯ, ಪಷ್ಹೂರ್, ಅಮರ್ಯ, ಮಲ್ಕೀಯ,
ಹಟ್ಟೂಷ್, ಶೆಬನ್ಯ, ಮಲ್ಲೂಕ್, ಹಾರಿಮ್, ಮೆರೇ 4
ಮೋತ್, ಓಬದ್ಯ, ದಾನೀಯೇಲ್, ಗಿನ್ನೆತೋನ್,
ಬಾರೂಕ್, ಮೆಷುಲ್ಲಾಮ್, ಅಬೀಯ, ಮಿಯ್ಯಾ
ಮಿಾನ್, ಮಾಜ್ಯ, ಬಿಲ್ಗೈ, ಶೆಮಾಯ ಎಂಬ ಯಾಜ
ಕರೂ.
ಲೇವಿಯರಲ್ಲಿ ಅಜನ್ಯನ ಮಗನಾದ ಯೇಷೂವ,
ಹೇನಾದಾದ್ ವಂಶದವನಾದ ಬಿನ್ನೂಯ್, ಕದ್ಮೀ
ಯೇಲ್ ಎಂಬವರೂ ಇವರ ಬಂಧುಗಳಾದ ಶೆಬನ್ಯ,
ಹೋದೀಯ, ಕೆಲೀಟ, ಪೆಲಾಯ, ಹಾನಾನ್, ಮಿಾಕ,
ರೆಹೋಬ್, ಹಷಬ್ಯ, ಜಕ್ಕೂರ್, ಶೇರೇಬ್ಯ, ಶೆಬನ್ಯ,
ಹೋದೀಯ, ಬಾನೀ, ಬೆನೀನೂ ಎಂಬವರೂ.
ಜನಪ್ರಧಾನರಲ್ಲಿ ಪರೋಷ್, ಪಹತ್‌ಮೋವಾಬ್,
ಏಲಾಮ್, ಜತ್ತೂ, ಬಾನೀ, ಬುನ್ನೀ, ಅಜ್ಗಾದ್,
ಬೇಬೈ, ಅದೋನೀಯ, ಬಿಗ್ವೈ, ಆದೀನ್, ಆಟೇರ್, 16,
ಹಿಜ್ಕೀಯ, ಅಜ್ಜೂರ್, ಹೋದೀಯ, ಹಾಷುಮ್,
ಬೇಚೈ, ಹಾರೀಫ್, ಅನಾತೋತ್, ನೇಬೈ, ಮಗ್ಪೀ 19,
ಯಾಷ್, ಮೆಷುಲ್ಲಾಮ್, ಹೇಜೀರ್, ಮೆಷೇಜ
ಬೇಲ್, ಚಾದೋಕ್, ಯದ್ದೂವ, ಪೆಲಟ್ಯ, ಹಾನಾನ್,
ಆನಾಯ, ಹೋಷೇಯ, ಹನನ್ಯ, ಹಷ್ಷೂಬ್,
ಹಲೋಹೇಷ್, ಪಿಲ್ಹ, ಶೋಬೇಕ್, ರೆಹೂಮ್, 24,
ಹಷಬ್ನ, ಮಾಸೇಯ, ಅಹೀಯ, ಹಾನಾನ್, ಆನಾನ್,
ಮಲ್ಲೂಕ್, ಹಾರಿಮ್, ಬಾನ ಎಂಬವರೂ.
ಯಾಜಕರು, ಲೇವಿಯರು, ದ್ವಾರಪಾಲಕರು, ಗಾ
ಯಕರು, ದೇವಸ್ಥಾನದಾಸರು, ಉಳಿದ ಜನರು ಇವ
ರಲ್ಲಿ ದೇವರ ಧರ್ಮೋಪದೇಶದ ನಿಮಿತ್ತವಾಗಿ ಅನ್ಯದೇಶ
ದವರ ಗೊಡವೆಯನ್ನು ತೊರೆದುಬಿಟ್ಟವರು ತಮ್ಮ
ತಮ್ಮ ಹೆಂಡತಿಯರು, ಗ್ರಹಿಸಶಕ್ತರಾದ ಗಂಡು ಹೆಣ್ಣು
ಮಕ್ಕಳು ಇವರೊಡನೆ ಬಂದು ಮುಖಂಡರಾದ ತಮ್ಮ
ಸಹೋದರರನ್ನು ಕೂಡಿಕೊಂಡು ತಾವು ದೇವರ ಸೇವ
ಕನಾದ ಮೋಶೆಯ ಮುಖಾಂತರ ಕೊಡಲ್ಪಟ್ಟ ದೇವರ
ಧರ್ಮೋಪದೇಶವನ್ನು ಅನುಸರಿಸಿ ತಮ್ಮ ಕರ್ತನಾದ

ಯೆಹೋವನ ಎಲ್ಲಾ ಅಜ್ಞಾನಿಯಮವಿಧಿಗಳನ್ನು ಕೈ
ಕೊಂಡು ನಡೆಯುವವರಾಗಿ ಆಣೆಯಿಟ್ಟು ಪ್ರಮಾಣಮಾ
ಡಿದರು. ಹೇಗಂದರೆ—
0 ದೇಶನಿವಾಸಿಗಳಿಗೆ ನಮ್ಮ ಹೆಣ್ಣುಗಳನ್ನು
ಕೊಡುವದಿಲ್ಲ, ನಮ್ಮ ಮಕ್ಕಳಿಗೋಸ್ಕರ ಅವರಿಂದ
ಹೆಣ್ಣು ತೆಗೆದುಕೊಳ್ಳುವದಿಲ್ಲ;
1 ದೇಶನಿವಾಸಿಗಳು ಮಾರುವದಕ್ಕೋಸ್ಕರ ತರುವ
ಯಾವ ಸರಕುಗಳನ್ನೂ ಧಾನ್ಯವನ್ನೂ ಸಬ್ಬತ್
ಮೊದಲಾದ ಪರಿಶುದ್ಧದಿನಗಳಲ್ಲಿ ಕೊಂಡುಕೊಳ್ಳು
ವದಿಲ್ಲ;
ಪ್ರತಿಯೊಂದು ಏಳನೆಯ ವರುಷ [ಭೂಮಿಯ
1) ಸಾಗುವಳಿಯನ್ನೂ] ಹೆರರು ಕೊಡಬೇಕಾದ ಸಾಲ
ವನ್ನೂ ಬಿಟ್ಟುಬಿಡುತ್ತೇವೆ;
2 ವರುಷಕ್ಕೆ 2)ಒಂದು ಶೆಕೆಲಿನ ಮೂರನೆಯ
ಭಾಗವನ್ನು ದೇವಾಲಯಸೇವೆಗಾಗಿ ಕೊಡಬೇಕೆಂಬ
3 ಕರ್ತವ್ಯವನ್ನು ವಹಿಸಿಕೊಳ್ಳುತ್ತೇವೆ; ಆ ಹಣವು
ದೇವರ ಸನ್ನಿಧಿಯಲ್ಲಿಡತಕ್ಕ ರೊಟ್ಟಿ, ನಿತ್ಯಧಾನ್ಯ
ನೈವೇದ್ಯ ಇವುಗಳಿಗೋಸ್ಕರವೂ ನಿತ್ಯ ಸರ್ವಾಂಗ
ಹೋಮ ಮತ್ತು ಸಬ್ಬತ್‌ದಿನ, ಅಮಾವಾಸ್ಯೆ,
ಜಾತ್ರೆ ಇವುಗಳಲ್ಲಿ ಮಾಡತಕ್ಕ ಸರ್ವಾಂಗಹೋಮ,
ಸಮಾಧಾನಯಜ್ಞ, ಇಸ್ರಾಯೇಲ್ಯರ ದೋಷ
ಪರಿಹಾರಾರ್ಥವಾದ ಯಜ್ಞ ಇವುಗಳಿಗೋಸ್ಕರವೂ
ನಮ್ಮ ದೇವಾಲಯಸಂಬಂಧವಾದ ಬೇರೆ ಎಲ್ಲಾ ಕೆಲ
ಸಕ್ಕೋಸ್ಕರವೂ ವೆಚ್ಚವಾಗಬೇಕು;
4 ಧರ್ಮಶಾಸ್ತ್ರವಿಧಿಗನುಸಾರವಾಗಿ ನಮ್ಮ ದೇವ
ರಾದ ಯೆಹೋವನ ಯಜ್ಞವೇದಿಯ ಮೇಲೆ ಬೆಂಕಿ
ಯುರಿಸುವದಕ್ಕಾಗಿ ವರುಷ ವರುಷ ನೇಮಿತವಾದ
ಕಾಲಗಳಲ್ಲಿ ನಮ್ಮ ದೇವಾಲಯಕ್ಕೆ ಕಟ್ಟಿಗೆ ದೊರ
ಕುವ ಹಾಗೆ ಆಯಾ ಗೋತ್ರಾನುಸಾರ ಕಾಷ್ಠ
ದಾನಮಾಡತಕ್ಕವರು ಇಂಥವರು ಎಂಬದನ್ನು
ಯಾಜಕರೂ ಲೇವಿಯರೂ ಸಾಧಾರಣಜನರೂ
ಆಗಿರುವ ನಮ್ಮಲ್ಲಿ ಚೀಟುಹಾಕಿ ಗೊತ್ತುಮಾಡು
ತ್ತೇವೆ;
5 ನಮ್ಮ ಭೂಮಿಯ ಮತ್ತು ಎಲ್ಲಾ ಹಣ್ಣಿನ ಮರ
ಗಳ ಪ್ರಥಮಫಲಗಳನ್ನು ಪ್ರತಿವರುಷವೂ ಯೆಹೋ
ವನ ಆಲಯಕ್ಕೆ ತಂದುಕೊಡುವೆವು;
3 ನಮ್ಮ ಚೊಚ್ಚಲಮಕ್ಕಳ ವಿಷಯದಲ್ಲೂ
ನಮ್ಮ ಪಶುಗಳ ಚೊಚ್ಚಲಮರಿಗಳ ವಿಷಯದಲ್ಲೂ
ಧರ್ಮಶಾಸ್ತ್ರವಿಧಿಗನುಸಾರವಾಗಿ ನಡೆಯುವೆವು;
ನಮ್ಮ ಚೊಚ್ಚಲ ಕರುಗಳನ್ನೂ ಚೊಚ್ಚಲ ಆಡು
ಕುರಿಮರಿಗಳನ್ನೂ ನಮ್ಮ ದೇವಾಲಯಕ್ಕೆ ತಂದು
ಅಲ್ಲಿ ಕೆಲಸನಡಿಸುತ್ತಿರುವ ಯಾಜಕರಿಗೆ ಕೊಡು
ವೆವು;
7 ನಾವು ದೇವರಿಗಾಗಿ ಪ್ರತ್ಯೇಕಿಸಿಡತಕ್ಕ ಪ್ರಥಮ
ಫಲದ ಹಿಟ್ಟು, ಹಣ್ಣುಹಂಪಲು, ದ್ರಾಕ್ಷಾರಸ,
ಎಣ್ಣೆ ಮೊದಲಾದವುಗಳನ್ನು ಯಾಜಕರಿಗೋಸ್ಕರ
ನಮ್ಮ ದೇವರ ಆಲಯದ ಕೊಠಡಿಗಳಲ್ಲಿ ತಂದಿಡು
ವೆವು;
ನಮ್ಮ ಭೂಮಿಯ ಹುಟ್ಟುವಳಿಯ ದಶಮಾಂ
ಶವು ಲೇವಿಯರದಾಗಬೇಕು; ಲೇವಿಯರು ತಾವೇ
ಬಂದು ನಮ್ಮ ಸಾಗುವಳಿಯ ಊರುಗಳಲ್ಲಿ ಅದ
ನ್ನು ಕೂಡಿಸಬೇಕು; ಅವರು ದಶಮಾಂಶವನ್ನು 38
ಕೂಡಿಸುವಾಗ ಆರೋನನ ವಂಶದವನಾದ ಯಾಜ
ಕನೊಬ್ಬನು ಅವರ ಸಂಗಡ ಇರಬೇಕು. ಲೇವಿ
ಯರು ತಮಗೆ ದೊರಕಿದ ಭಾಗದ ದಶಮಾಂಶ
ವನ್ನು ದೇವಾಲಯದ ಭಂಡಾರದ ಕೊಠಡಿಗಳಲ್ಲಿಡ
ಬೇಕು, ಇಸ್ರಾಯೇಲ್ಯರೂ ಲೇವಿಯರೂ ಧಾನ್ಯ, 39
ದ್ರಾಕ್ಷಾರಸ, ಎಣ್ಣೆ ಇವುಗಳಲ್ಲಿ ದೇವರಿಗೋಸ್ಕರ
ಪ್ರತ್ಯೇಕಿಸತಕ್ಕ ಭಾಗಗಳನ್ನು ತಂದು ಸೇವೆ ನಡಿಸು
ತ್ತಿರುವ ಯಾಜಕರು, ದ್ವಾರಪಾಲಕರು, ಗಾಯ
ಕರು ಇವರೂ ಪವಿತ್ರಾಲಯದ ಪಾತ್ರೆಗಳೂ ಇರುವ
ಕೊಠಡಿಗಳಲ್ಲಿ ಇಡಬೇಕು.
ನಮ್ಮ ದೇವರ ಆಲಯವನ್ನು ಎಂದೂ ಅಲಕ್ಷ್ಯ
ಮಾಡುವದಿಲ್ಲ ಎಂದು ಬರೆದುಕೊಟ್ಟರು.

## ನೆಹೆಮೀಯನ ಚರಿತ್ರೆಯ ಪೂರಣೆ. 11—13.

ಯೆರೂಸಲೇಮಿನಲ್ಲಿಯೂ ಯೆಹೂದದೇಶದ ಬೇರೆ ಪಟ್ಟಣ
ಗಳಲ್ಲಿಯೂ ವಾಸಿಸುತ್ತಿದ್ದವರ ಪಟ್ಟಿ.

11 ಇಸ್ರಾಯೇಲ್ಯರ ಪ್ರಭುಗಳು ಮಾತ್ರ ಯೆರೂಸ
ಲೇಮಿನಲ್ಲಿ ವಾಸಿಸುತ್ತಿದ್ದರು. ಉಳಿದ ಜನರೊಳಗೆ
ಹತ್ತತ್ತು ಮಂದಿಯಲ್ಲಿ ಒಂಭತ್ತು ಮಂದಿ ತಮ್ಮ ತಮ್ಮ
ಊರುಗಳಲ್ಲಿದ್ದುಕೊಂಡು ಒಬ್ಬನು ಪವಿತ್ರನಗರವಾ
ಗಿರುವ ಯೆರೂಸಲೇಮಿನಲ್ಲಿ ವಾಸಿಸುವದಕ್ಕಾಗಿ ಅಲ್ಲಿಗೆ
ಬರುವಂತೆ ಚೀಟುಹಾಕಿ ಗೊತ್ತುಮಾಡಿದರು. ಮತ್ತು 2
ಸ್ವೇಚ್ಛೆಯಿಂದ ಯೆರೂಸಲೇಮಿನಲ್ಲಿ ವಾಸಿಸುವದಕ್ಕೆ
ಮನಸ್ಸುಮಾಡಿದಂಥವರನ್ನು ಜನರು ಆಶೀರ್ವದಿಸಿ
ದರು.
ಯೆರೂಸಲೇಮಿನಲ್ಲಿ ವಾಸಿಸುತ್ತಿದ್ದ [ಯೆಹೂದ] 3
ಸಂಸ್ಥಾನಪ್ರಧಾನರ ಪಟ್ಟಿ. (ಸಾಧಾರಣ ಇಸ್ರಾಯೇ
ಲ್ಯರೂ ಯಾಜಕರೂ ಲೇವಿಯರೂ ದೇವಸ್ಥಾನದಾಸ
ರೂ ಸೊಲೊಮೋನನ ದಾಸರ ವಂಶದವರೂ ತಮ್ಮ
ತಮ್ಮ ಸ್ವಾಸ್ತ್ಯಗಳಿರುವ ಯೆಹೂದದೇಶದ ಪಟ್ಟಣ
ಗಳಲ್ಲಿ ವಾಸಿಸುತ್ತಿದ್ದರು. ಯೆರೂಸಲೇಮಿನಲ್ಲಿ ಯೆ 4
ಹೂದ ಬೆನ್ಯಾಮೀನ್ ಕುಲಗಳವರಲ್ಲಿ ಕೆಲವರು ವಾಸ
ವಾಗಿದ್ದರು.)
ಯೆಹೂದ ಕುಲದವರಲ್ಲಿ—ಒಬ್ಬನು ಅತಾ
ಯ; ಇವನು ಉಜ್ಜೀಯನ ಮಗನು; ಇವನು ಜೆಕ
ರ್ಯನ ಮಗನು; ಇವನು ಅಮರ್ಯನ ಮಗನು;
ಇವನು ಶೆಫಟ್ಯನ ಮಗನು; ಇವನು ಮಹಲಲೇಲನ
ಮಗನು; ಇವನು ಪೆರೆಚ್ ಸಂತಾನದವನು. ಇನ್ನೊ 5
ಬ್ಬನು ಮಾಸೇಯ; ಇವನು ಬಾರೂಕನ ಮಗನು;
ಇವನು ಕೊಲ್ಹೋಜೆಯ ಮಗನು; ಇವನು ಹಜಾ
ಯನ ಮಗನು; ಇವನು ಅದಾಯನ ಮಗನು;
ಇವನು ಯೋಯಾರೀಬನ ಮಗನು; ಇವನು ಜೆಕ
ರ್ಯನ ಮಗನು; ಇವನು 3)ಶೇಲಹನ ಸಂತಾನ

1) ಮೂಲ: ಏಳನೇ ವರುಷವನ್ನೂ. 2) ಸುಮಾರು ಐದಾಣೆ. 3) ಅಥವಾ, ಶೀಲೋವಿನವನ ಮಗನು.

6 ದವನು. ಯೆರೂಸಲೇಮಿನಲ್ಲಿ ವಾಸಿಸುತ್ತಿದ್ದ ಪೆರೆಚ್
ಸಂತಾನದ ರಣವೀರರು ನಾನೂರರುವತ್ತೆಂಟು ಮಂದಿ.
7 ಬೆನ್ಯಾಮೀನ್ ಕುಲದವರಲ್ಲಿ—ಸಲ್ಲು; ಇವ
ನು ಮೆಷುಲ್ಲಾಮನ ಮಗನು; ಇವನು ಯೋವೇ
ದನ ಮಗನು; ಇವನು ಪೆದಾಯನ ಮಗನು;
ಇವನು ಕೋಲಾಯನ ಮಗನು; ಇವನು ಮಾಸೇ
ಯನ ಮಗನು; ಇವನು ಈತೀಯೇಲನ ಮಗನು;
8 ಇವನು ಯೆಶಾಯನ ಮಗನು. 1)ರಣವೀರರಾದ
ಇವನ ಬಂಧುಜನರು ಒಂಭೈನೂರಿಪ್ಪತ್ತೆಂಟು ಮಂದಿ.
9 ಜಿಕ್ರಿಯ ಮಗನಾದ ಯೋವೇಲನು ಇವರ ನಾಯ
ಕನು; ಹಸ್ಸೆನೂವನ ಮಗನಾದ ಯೆಹೂದನು ಎರಡ
ನೆಯ ಪುರಾಧಿಕಾರಿ.
10 ಯಾಜಕರಲ್ಲಿ—2)ಯೆದಾಯ,ಯೋಯಾರೀಬ್,
11 ಯಾಕೀನ್, ಅಹೀಟೂಬನ ಸಂತಾನದವನಾದ ಮೆರಾ
ಯೋತನಿಂದ ಹುಟ್ಟಿದ ಚಾದೋಕನ ಮರಿಮಗನೂ
ಮೆಷುಲ್ಲಾಮನ ಮೊಮ್ಮಗನೂ ಹಿಲ್ಕೀಯನ ಮಗನೂ
ದೇವಾಲಯದ ಅಧಿಪತಿಯೂ ಆದ ಸೆರಾಯ ಇವರು.
12 ಇವರೂ ದೇವಾಲಯದ ಸೇವೆ ನಡಿಸುತ್ತಿದ್ದ ಇವರ
ಬಂಧುಗಳೂ ಎಂಟುನೂರಿಪ್ಪತ್ತೆರಡು ಮಂದಿ. ಇವ
ರಲ್ಲದೆ ಅದಾಯನೆಂಬವನು ಇನ್ನೊಬ್ಬನು. ಇವನು
ಯೆರೋಹಾಮನ ಮಗನು; ಇವನು ಪೆಲಲ್ಯನ ಮಗ
ನು; ಇವನು ಅಮ್ಚೀಯ ಮಗನು; ಇವನು ಜೆಕರ್ಯನ
ಮಗನು; ಇವನು ಪಷ್ಹೂರನ ಮಗನು; ಇವನು
13 ಮಲ್ಕೀಯನ ಮಗನು. ಗೋತ್ರಪ್ರಧಾನರಾದ ಈ
ಅದಾಯನ ಬಂಧುಗಳು ಇನ್ನೂರ ನಾಲ್ವತ್ತೆರಡು
ಮಂದಿ. ಅಮಷ್ಸೈ ಎಂಬವನು ಮತ್ತೊಬ್ಬನು. ಇವನು
ಅಜರೇಲನ ಮಗನು; ಇವನು ಅಹಜೈಯ ಮಗನು;
ಇವನು ಮೆಷಿಲ್ಲೇಮೋತನ ಮಗನು; ಇವನು ಇಮ್ಮೇ
14 ರನ ಮಗನು. ರಣವೀರರಾಗಿದ್ದ ಈ ಅಮಷ್ಸೈಯ
ಬಂಧುಗಳು ನೂರಿಪ್ಪತ್ತೆಂಟು ಮಂದಿ. ಹಗ್ಗೆದೋಲೀ
ಮನ ಮಗನಾದ ಜಬ್ದೀಯೇಲನು ಇವರ ನಾಯಕನು.
15 ಲೇವಿಯರಲ್ಲಿ—ಹಷ್ಷೂಬನ ಮಗನೂ ಅಜ್ರೀ
ಕಾಮನ ಮೊಮ್ಮಗನೂ ಹಷಬ್ಯನ ಮರಿಮಗನೂ
16 ಬುನ್ನೀವಂಶದವನೂ ಆದ ಶೆಮಾಯನೂ ಲೇವಿಗೋ
ತ್ರಪ್ರಧಾನರಲ್ಲಿ ದೇವಾಲಯದ ಲೌಕಿಕಕಾರ್ಯಗಳ
ಮೇಲ್ವಿಚಾರಕರಾದ ಶಬ್ಬೆತೈ, ಯೋಜಾಬಾದ್ ಎಂಬ
17 ವರೂ ಮೀಕನ ಮಗನೂ ಜಬ್ದೀಯ ಮೊಮ್ಮಗನೂ
ಆಸಾಫನ ಮರಿಮಗನೂ ಪ್ರಾರ್ಥನಾಸಮಯದಲ್ಲಿ—
ಕೃತಜ್ಞತಾಸ್ತುತಿಮಾಡಿರಿ ಎಂದು ಹೇಳಿ ಭಜಕರನ್ನು
ನಡಿಸುತ್ತಿದ್ದ ಮತ್ತನ್ಯ, ತನ್ನ ಬಂಧುಗಳಲ್ಲಿ ದ್ವಿತೀಯ
ಸ್ಥಾನದವನಾದ ಬಕ್ಬುಕ್ಯ, ಶಮ್ಮೂವನ ಮಗನೂ
ಗಾಲಾಲನ ಮೊಮ್ಮಗನೂ ಯೆದೂತೂನನ ಮರಿಮಗ
18 ನೂ ಆದ ಅಬ್ದ ಎಂಬವರೂ. ಪರಿಶುದ್ಧನಗರದಲ್ಲಿದ್ದ
ಎಲ್ಲಾ ಲೇವಿಯರು ಇನ್ನೂರೆಂಭತ್ತನಾಲ್ಕು ಮಂದಿ.
19 ದ್ವಾರಪಾಲಕರಲ್ಲಿ—ಅಕ್ಕೂಬ್ ಟಲ್ಮೋನರೂ
ಬಾಗಲುಗಳನ್ನು ಕಾಯುತ್ತಿದ್ದ ಇವರ ಬಂಧುಗಳೂ;
ಒಟ್ಟು ನೂರೆಪ್ಪತ್ತೆರಡು ಮಂದಿ.

ಉಳಿದ ಇಸ್ರಾಯೇಲ್ಯರೂ ಯಾಜಕರೂ ಲೇವಿ
ಯರೂ ತಮ್ಮ ತಮ್ಮ ಸ್ವಾಸ್ತ್ಯಗಳಿರುವ ಯೆಹೂದದ
ಎಲ್ಲಾ ಪಟ್ಟಣಗಳಲ್ಲಿ ವಾಸಿಸುತ್ತಿದ್ದರು. ದೇವಸ್ಥಾನ
ದಾಸರು ಓಫೇಲ್ ಗುಡ್ಡದಲ್ಲಿ ವಾಸಿಸುತ್ತಿದ್ದರು; ಚೀಹ
ಗಿಷ್ಪ ಎಂಬವರು ಇವರ ನಾಯಕರು. ದೇವಾಲಯ
ಸೇವಾಸಂಬಂಧದಲ್ಲಿ ಗಾಯಕರಾದ ಆಸಾಫ್ಯರಿಗೆ ಸೇ
ರಿದ ಬಾನೀಯ ಮಗನೂ ಹಷಬ್ಯನ ಮೊಮ್ಮಗನೂ
ಮತ್ತನ್ಯನ ಮರಿಮಗನೂ ಮೀಕನ ವಂಶದವನೂ
ಆದ ಉಜ್ಜೀಯು ಯೆರೂಸಲೇಮಿನಲ್ಲಿದ್ದ ಲೇವಿಯರ
ನಾಯಕನು. ಇವರ ಮತ್ತು ಗಾಯಕರ ಅನುದಿನದ
ಕರ್ತವ್ಯಾಂಶಗಳ ವಿಷಯವಾಗಿ ರಾಜನಿಯಮವಿತ್ತು
ಮೆಷೇಜಬೇಲನ ಮಗನೂ ಜೆರಹನ ಸಂತಾನದವನೂ
ಯೆಹೂದ ಕುಲದವನೂ ಆದ ಪೆತಹ್ಯನು ಪ್ರಜೆಗಳ
ಎಲ್ಲಾ ಕಾರ್ಯಗಳ ಸಂಬಂಧದಲ್ಲಿ ರಾಜನ ಕಾರ
ಭಾರಿಯಾಗಿದ್ದನು.
ಭೂಸ್ವಾಸ್ತ್ಯವಿದ್ದವರು ವಾಸಿಸುತ್ತಿದ್ದ ಊರು
ಗಳು—
ಕಿರ್ಯತರ್ಬ, ದೀಬೋನ್, ಯೆಕಬ್ಜೆಯೇಲ್,ಇವು
ಗಳೂ ಇವುಗಳ ಗ್ರಾಮಗಳೂ ಯೇಷೂವ, ಮೋಲಾದ
ಬೇತ್ಪೆಲೆಟ್, ಹಚರ್ಷೂವಲ್ ಇವುಗಳೂ ಬೇರ್ಷೆಬವು
ಅದರ ಗ್ರಾಮಗಳೂ ಚಿಕ್ಲಗ್ ಊರೂ ಮೆಕೋನ
ವೂ ಅದರ ಗ್ರಾಮಗಳೂ ಏನ್ರಿಮ್ಮೋನ್, ಚೊರ್ರ
ಯರ್ಮೂತ್ ಇವುಗಳೂ ಜನೋಹ, ಅದುಲ್ಲಾಮ
ಇವುಗಳೂ ಇವುಗಳ ಗ್ರಾಮಗಳೂ ಲಾಕೀಷ್ ಊರೂ
ಇದರ ಪ್ರಾಂತಗಳೂ ಅಜೇಕವೂ ಅದರ ಗ್ರಾಮಗಳೂ
ಯೆಹೂದ ಕುಲದವರ ನಿವಾಸಸ್ಥಾನಗಳು. ಅವರು
ಬೇರ್ಷೆಬದಿಂದ ಹಿನ್ನೋಮ್ ತಗ್ಗಿನ ವರೆಗೂ ವಾಸಿ
ಸುತ್ತಿದ್ದರು.
ಗೆಬ, ಮಿಕ್ಮಾಷ್, ಅಯ್ಯಾ, ಗ್ರಾಮಸಹಿತವಾದ
ಬೇತೇಲ್ ಎಂಬ ಊರುಗಳೂ, ಅನಾತೋತ್
ನೋಬ್, ಅನನ್ಯ, ಹಾಚೋರ್, ರಾಮಾ, ಗಿತ್ತ
ಯಿಮ್, ಹಾದೀದ್, ಚೆಬೋಯಿಮ್, ನೆಬಲ್ಲಾಟ್
ಲೋದ್, ಓನೋ, ಗೇಹರಾಷೀಮ್ ಎಂಬ ಊರು
ಗಳೂ ಬೆನ್ಯಾಮೀನ್ ಕುಲದವರ ನಿವಾಸಸ್ಥಾನಗಳು
ಲೇವಿಯರಲ್ಲಿ ಕೆಲವು ವರ್ಗಗಳವರು ಯೆಹೂದ್ಯ
ರಲ್ಲಿಯೂ ಕೆಲವರು ಬೆನ್ಯಾಮೀನ್ಯರಲ್ಲಿಯೂ ವಾಸಿ
ಸುತ್ತಿದ್ದರು.

ಯಾಜಕರ ಮತ್ತು ಲೇವಿಯರ ಪಟ್ಟಿಗಳು.

ಶೆಯಲ್ತಿಯೇಲನ ಮಗನಾದ ಜೆರುಬ್ಬಾಬೆಲ್,
ಯೇಷೂವ ಇವರೊಡನೆ [ಯೆಹೂದ ದೇಶಕ್ಕೆ]
ಬಂದ ಯಾಜಕರೂ ಲೇವಿಯರೂ.
ಸೆರಾಯ, ಯೆರೆಮೀಯ, ಎಜ್ರ, ಅಮರ್ಯ
ಮಲ್ಲೂಕ್, ಹಟ್ಟೂಷ್, ಶೆಕನ್ಯ, ರೆಹುಮ್, ಮೆರೇ
ಮೋತ್, ಇದ್ದೋ, 3)ಗಿನ್ನೆತೋನ್, ಅಬೀಯ
ಮಿಯ್ಯಾಮೀನ್, ಮಾದ್ಯ, ಬಿಲ್ಗ, ಶೆಮಾಯ.

1) ಅಥವಾ: ಸಲ್ಲು ಎಂಬವನಲ್ಲದೆ ಗಬ್ಬೈ, ಸಲ್ಲೈ ಎಂಬವರು ಒಟ್ಟು ಒಂಭೈನೂರಿಪ್ಪತ್ತೆಂಟು ಮಂದಿ. 2) ಪಾಠಾ
ಯೋಯಾರೀಬನ ಮಗನಾದ ಯೆದಾಯ. 3) ಪಾಠಾಂತರ: ಗಿನ್ನೆತೋಯ್.

ಯೋಯಾರೀಬ್, ಯೆದಾಯ, ಸಲ್ಲೂ, ಆಮೋಕ್,
ಹಿಲ್ಕೀಯ, ಯೆದಾಯ ಇವರು ಯೇಷೂವನ ಕಾಲ
ದಲ್ಲಿ ಯಾಜಕರ ಮತ್ತು ಅವರ ಬಂಧುಗಳ ಪ್ರಧಾ
ನರು.
8 ಲೇವಿಯರು—ಯೇಷೂವ, ಬಿನ್ನೂಯ್, ಕದ್ಮೀ
ಯೇಲ್, ಶೇರೇಬ್ಯ, ಯೆಹೂದ, ಮತ್ತನ್ಯ ಇವರು.
ಮತ್ತನ್ಯನೂ ಅವನ ಸಹೋದರರೂ ಕೃತಜ್ಞತಾಭಜನ
9 ನಾಯಕರು. ಇವರ ಸಹೋದರರಾದ ಬಕ್ಬುಕ್ಯ,
ಉನ್ನೀ ಎಂಬವರು ಭಜನಸೇವೆಯಲ್ಲಿ ಇವರೆದುರಿಗೆ
ನಿಂತು ಹಾಡುವವರು.
10 ಯೇಷೂವನು ಯೋಯಾಕೀಮನನ್ನೂ ಯೋ
ಯಾಕೀಮನು ಎಲ್ಯಾಷೀಬನನ್ನೂ ಎಲ್ಯಾಷೀಬನು
11 ಯೋಯಾದನನ್ನೂ ಯೋಯಾದನು ಯೋನಾತಾ
ನನನ್ನೂ ಯೋನಾತಾನನು ಯದ್ದೂವನನ್ನೂ ಪಡೆ
ದರು.
12 ಯೋಯಾಕೀಮನ ಕಾಲದಲ್ಲಿ ಯಾಜಕರಾಗಿದ್ದ
ಗೋತ್ರಪ್ರಧಾನರು—ಸೆರಾಯನ ಗೋತ್ರದ ಮೆರಾ
13 ಯ, ಯೆರೆಮೀಯನ ಗೋತ್ರದ ಹನನ್ಯ, ಎಜ್ರನ
ಗೋತ್ರದ ಮೆಷುಲ್ಲಾಮ್, ಅಮರ್ಯನ ಗೋತ್ರದ
14 ಯೆಹೋಹಾನಾನ್, ಮಲ್ಲೂಕಿಯ ಗೋತ್ರದ ಯೋ
15 ನಾತಾನ್, ಶೆಬನ್ಯನ ಗೋತ್ರದ ಯೋಸೇಫ್, ಹಾರಿ
ಮನ ಗೋತ್ರದ ಅದ್ನ, ಮೆರಾಯೋತನ ಗೋತ್ರದ
16 ಹೆಲ್ಕೈ, ಇದ್ದೋವಿನ ಗೋತ್ರದ ಜೆಕರ್ಯ, ಗಿನ್ನೆ
17 ತೋನನ ಗೋತ್ರದ ಮೆಷುಲ್ಲಾಮ್, ಅಬೀಯನ
ಗೋತ್ರದ ಜಿಕ್ರೀ, ಮಿನ್ಯಾಮೀನನ ಮತ್ತು ಮೋ
18 ವದ್ಯನ ಗೋತ್ರದ ಪಿಲ್ಟೈ, ಬಿಲ್ಗಾ ಗೋತ್ರದ ಶಮ್ಮೂವ,
19 ಶೆಮಾಯನ ಗೋತ್ರದ ಯೆಹೋನಾತಾನ್, ಯೋ
ಯಾರೀಬನ ಗೋತ್ರದ ಮತ್ತೆನೈ, ಯೆದಾಯನ ಗೋ
20 ತ್ರದ ಉಜ್ಜೀ, ಸಲ್ಲೈ ಗೋತ್ರದ ಕಲ್ಲೈ, ಆಮೋ
21 ಕನ ಗೋತ್ರದ ಏಬೆರ್, ಹಿಲ್ಕೀಯನ ಗೋತ್ರದ
ಹಷಬ್ಯ, ಯೆದಾಯನ ಗೋತ್ರದ ನೆತನೇಲ್ ಇವರು.
22 ಎಲ್ಯಾಷೀಬ್, ಯೋಯಾದ, ಯೋಹಾನಾನ್,
ಯದ್ದೂವ ಇವರ ಕಾಲಗಳಲ್ಲಿದ್ದ ಲೇವಿಯ ಗೋತ್ರ
ಪ್ರಧಾನರ ಪಟ್ಟಿಯೂ ಪಾರಸಿಯನಾದ ದಾರ್ಯಾವೆಷ
ರಾಜನ ಆಳಿಕೆಯ ವರೆಗಿದ್ದ ಯಾಜಕರ ಪಟ್ಟಿಯೂ
23 ಉಂಟು. ಎಲ್ಯಾಷೀಬನ ಮೊಮ್ಮಗನಾದ ಯೋಹಾ
ನಾನನ ಕಾಲದ ವರೆಗಿದ್ದ ಲೇವಿಯ ಗೋತ್ರಪ್ರಧಾನರ
ಪಟ್ಟಿಯು ಪೂರ್ವಕಾಲವೃತ್ತಾಂತವೆಂಬ ಗ್ರಂಥದಲ್ಲಿ
24 ಬರೆದಿರುತ್ತದೆ. ಈ ಲೇವಿಗೋತ್ರಪ್ರಧಾನರಲ್ಲಿ ಯೇ
ಷೂವನ ಮಗನೂ ಯೋಚಾದಾಕನ ಮೊಮ್ಮಗನೂ
ಆದ ಯೋಯಾಕೀಮ್, ದೇಶಾಧಿಪತಿಯಾದ ನೆಹೆ
ಮೀಯ, ಯಾಜಕನೂ ಧರ್ಮೋಪದೇಶಕನೂ ಆದ
25 ಎಜ್ರ ಇವರ ಕಾಲದಲ್ಲಿದ್ದವರು—ಹಷಬ್ಯ, ಶೇರೇಬ್ಯ,
ಯೇಷೂವ, ಬಿನ್ನೂಯ್, ಕದ್ಮೀಯೇಲ್ ಇವರು.
(ದೇವರ ಮನುಷ್ಯನಾದ ದಾವೀದನ ಅಪ್ಪಣೆಯ
ಮೇರೆಗೆ ಇವರೂ ಇವರ ಸಹೋದರರೂ ಸರತಿಗೆ ಎರ
ಡೆರಡು ವರ್ಗಗಳಾಗಿ ಪರಸ್ಪರ ಹಾಡುತ್ತಾ ಕೀರ್ತನೆ
ಯನ್ನೂ ಕೃತಜ್ಞತಾಸ್ತುತಿಯನ್ನೂ ಮಾಡುತ್ತಿದ್ದರು.)
26 ಇವರಲ್ಲದೆ ಬಾಗಲುಗಳ ಬಳಿಯಲ್ಲಿದ್ದ ಉಗ್ರಾಣ
ಗಳನ್ನು ಕಾಯತಕ್ಕ ದ್ವಾರಪಾಲಕರಾದ ಮತ್ತನ್ಯ,
ಬಕ್ಬುಕ್ಯ, ಓಬದ್ಯ, ಮೆಷುಲ್ಲಾಮ್, ಟಲ್ಮೋನ್,
ಅಕ್ಕೂಬ್ ಎಂಬವರು.

ಪೌಳಿಗೋಡೆಯ ಪ್ರತಿಷ್ಠೆ.

ಯೆರೂಸಲೇಮಿನ ಗೋಡೆಯನ್ನು ಪ್ರತಿಷ್ಠಿಸುವ 27
ಸಮಯ ಬಂದಾಗ ಆಯಾ ಸ್ಥಳಗಳಲ್ಲಿದ್ದ ಲೇವಿ
ಯರನ್ನು ಕೀರ್ತನಗಾಯನಗಳಿಂದಲೂ ತಾಳ ಸ್ವರ
ಮಂಡಲ ಕಿನ್ನರಿ ಇವುಗಳಿಂದಲೂ ಪ್ರತಿಷ್ಠೆಯ ಉತ್ಸವ
ವನ್ನು ಆಚರಿಸುವದಕ್ಕಾಗಿ ಯೆರೂಸಲೇಮಿಗೆ ಕರೆ
ಯಿಸಿದರು. ಆಗ ಯೆರೂಸಲೇಮಿನ ಸುತ್ತಣ ಪ್ರಾಂತ 28
ಗಳಲ್ಲಿ ತಮಗೋಸ್ಕರ ಹಳ್ಳಿಗಳನ್ನು ಕಟ್ಟಿಕೊಂಡಿದ್ದ
ಗಾಯಕಮಂಡಲಿಯವರು ಯೊರ್ದನ್ ಹೊಳೆಯ
ತಗ್ಗು, ಯೆರೂಸಲೇಮಿನ ಸುತ್ತಣಪ್ರದೇಶ, ನೆಟೋ
ಫಾತ್ಯರ ಗ್ರಾಮ, ಬೇತ್ಗಿಲ್ಗಾಲ್, ಗೆಬ ಮತ್ತು ಅಜ್ಮಾ 29
ವೇತ್ ಊರುಗಳಿಗೆ ಸೇರಿರುವ ಹಳ್ಳಿಗಳು ಇವುಗಳಿಂದ
ಕೂಡಿಬಂದರು. ಯಾಜಕರೂ ಲೇವಿಯರೂ ತಮ್ಮನ್ನು 30
ಶುದ್ಧಿಪಡಿಸಿಕೊಂಡ ಮೇಲೆ ಜನರನ್ನೂ ಊರುಬಾಗಲು
ಗಳನ್ನೂ ಗೋಡೆಯನ್ನೂ ಶುದ್ಧಪಡಿಸಿದರು.
ಆ ಮೇಲೆ ನಾನು ಯೆಹೂದ ಪ್ರಭುಗಳನ್ನು 31
ಗೋಡೆಯ ಮೇಲೆ ಕರಕೊಂಡು ಬಂದು ಭಜನ
ಮಂಡಲಿಯವರಿಗೆ—ಎರಡು ದೊಡ್ಡ ಗುಂಪುಗಳಾಗಿ
ಇಲ್ಲಿ ನಿಲ್ಲಬೇಕೆಂದು ಅಪ್ಪಣೆಮಾಡಿದೆನು. ಒಂದು
ಗುಂಪಿನವರು ಮೆರವಣಿಗೆಯಿಂದ ಗೋಡೆಯ ಮೇಲೆ
ತಿಪ್ಪೆಬಾಗಲಿನಿಂದ ಬಲಗಡೆಗೆ ಹೋದರು. ಅವರ 32
ಹಿಂದೆ ಯೆಹೂದ ಪ್ರಭುಗಳ ಅರ್ಧ ಜನರೊಡನೆ
ಹೋಷಾಯನೂ ತುತೂರಿಹಿಡಿದಿರುವ ಯಾಜಕರೊಡನೆ 33
ಅಜರ್ಯ, ಎಜ್ರ, ಮೆಷುಲ್ಲಾಮ್, ಯೆಹೂದ, ಬೆನ್ಯಾ 34
ಮೀನ್, ಶೆಮಾಯ, ಯೆರೆಮೀಯ ಎಂಬವರೂ
ಆಸಾಫ್ ಸಂತಾನದ ಜಕ್ಕೂರನಿಗೆ ಹುಟ್ಟಿದ ಮೀಕಾ 35
ಯನ ವಂಶದವನೂ ಮತ್ತನ್ಯನ ಮರಿಮಗನೂ
ಶೆಮಾಯನ ಮೊಮ್ಮಗನೂ ಯೋನಾತಾನನ ಮಗನೂ
ಆದ ಜೆಕರ್ಯನೂ ದೇವರ ಮನುಷ್ಯನಾದ ದಾವೀದನ 36
ವಾದ್ಯಗಳನ್ನು ಹಿಡಿದಿರುವ ಇವನ ಬಂಧುಗಳಾದ
ಶೆಮಾಯ, ಅಜರೇಲ್, ಮಿಲಲೈ, ಗಿಲಲೈ, ಮಾಯೈ,
ನೆತನೇಲ್, ಯೆಹೂದ, ಹನಾನೀ ಎಂಬವರೂ ಹೋದ
ರು. ಧರ್ಮೋಪದೇಶಕನಾದ ಎಜ್ರನು ಇವರ ಮುಂ
ದಾಳು. ಇವರು ಬುಗ್ಗೆಬಾಗಲನ್ನು ಹಾದು ನೆಟ್ಟಗೆ 37
ದಾವೀದನಗರದ ಸೋಪಾನಗಳ ಮಾರ್ಗವಾಗಿ ಗೋಡೆ
ಯನ್ನನುಸರಿಸಿ ಅರಮನೆಯ ಮೇಲಣ ದಿನ್ನೆಯನ್ನು
ಹತ್ತಿ ಪೂರ್ವದಿಕ್ಕಿನಲ್ಲಿರುವ ನೀರುಬಾಗಲಿನ ವರೆಗೆ
ಹೋದರು.
ಅವರನ್ನು ಎದುರುಗೊಳ್ಳುವ ಹಾಗೆ ಭಜನಮಂಡ 38
ಲಿಯ ಎರಡನೆಯ ಗುಂಪಿನವರೂ ನಾನೂ ಉಳಿದ
ಅರ್ಧಜನರೂ ಗೋಡೆಯ ಮೇಲೆ ಒಲೆಬುರುಜಿನಿಂದ
ಅಗಲಗೋಡೆಯ ವರೆಗೂ ಅಲ್ಲಿಂದ ಎಫ್ರಾಯೀಮ್ 39
ಬಾಗಲು, ಯೆಷಾನಾ ಬಾಗಲು, ಮೀನುಬಾಗಲು,
ಹನನೇಲ್ ಬುರುಜು, ಹಮ್ಮೇಯಾ ಬುರುಜು ಇವು
ಗಳ ಮಾರ್ಗವಾಗಿ ಕುರಿಬಾಗಲಿನ ವರೆಗೂ ಹೋಗಿ
ಸೆರೆಮನೆಯ ಬಾಗಲಿನ ಬಳಿಯಲ್ಲಿ ನಿಂತೆವು.

40 ಎರಡು ಭಜನಮಂಡಲಿಯ ಗುಂಪಿನವರೂ ನಾನೂ
ನನ್ನ ಜೊತೆಯಲ್ಲಿದ್ದ ಅರ್ಧ ಮಂದಿ ಅಧಿಕಾರಿಗಳೂ
41 ತುತೂರಿಹಿಡಿದಿರುವ ಯಾಜಕರಾದ ಎಲ್ಯಾಕೀಮ್,
ಮಾಸೇಯ, ಮಿನ್ಯಾಮೀನ್, ಮೀಕಾಯ, ಎಲ್ಯೋ
42 ವೇನೈ, ಜೆಕರ್ಯ, ಹನನ್ಯ ಇವರೂ ಮಾಸೇಯ,
ಶೆಮಾಯ, ಎಲ್ಲಾಜಾರ್, ಉಜ್ಜೀ, ಯೆಹೋಹಾನಾ
ನ್, ಮಲ್ಕೀಯ, ಏಲಾಮ್, ಏಜೆರ್ ಎಂಬವರೂ
ದೇವಾಲಯದ ಬಳಿಯಲ್ಲಿ ನಿಂತಿರಲು ಗಾಯಕರು
ಹಾಡತೊಡಗಿದರು. ಇಜ್ರಹ್ಯನು ಇವರ ನಾಯಕನು.
43 ದೇವರು ತಮಗೆ ವಿಶೇಷಾನಂದವನ್ನುಂಟುಮಾಡಿದ್ದ
ರಿಂದ ಜನರು ಆ ದಿನದಲ್ಲಿ ಅನೇಕಯಜ್ಞಗಳನ್ನು
ಸಮರ್ಪಿಸಿ ತಮ್ಮ ಹೆಂಡತಿ ಮಕ್ಕಳೊಡನೆ ಮಹೋತ್ಸ
ವಮಾಡಿದರು. ಯೆರೂಸಲೇಮಿನ ಉತ್ಸವದ ಹರ್ಷ
ಧ್ವನಿಯು ಬಹುದೂರದ ವರೆಗೂ ಕೇಳಿಸಿತು.

### ದೇವಾಲಯಸೇವಕರ ಜೀವನಾಂಶದ ವ್ಯವಸ್ಥೆ.

44 ಸೇವೆಮಾಡುತ್ತಿದ್ದ ಯಾಜಕರ ಮತ್ತು ಲೇವಿಯರ
ವಿಷಯದಲ್ಲಿ ಯೆಹೂದ್ಯರಿಗೆ ಬಹು ಸಂತೋಷವುಂಟಾ
ದದರಿಂದ ಆ ದಿನದಲ್ಲಿ ಅವರು ಧರ್ಮವಿಧಿಯ
ಪ್ರಕಾರ ಆಯಾ ಊರುಗಳ ಭೂಮಿಯಿಂದ ಯಾಜಕ
ರಿಗೂ ಲೇವಿಯರಿಗೂ ಸಿಕ್ಕತಕ್ಕ ಭಾಗಗಳನ್ನು ಅಂದರೆ
ದೇವರಿಗೋಸ್ಕರ ಪ್ರತ್ಯೇಕಿಸತಕ್ಕ ವಸ್ತು, ಪ್ರಥಮ
ಫಲ, ದಶಮಾಂಶ ಇವುಗಳನ್ನು ಸಂಗ್ರಹಮಾಡತಕ್ಕ
ಕೊಠಡಿಗಳ ಮೇಲೆ ಪಾರುಪತ್ಯಗಾರರನ್ನು ನೇಮಿ
45 ಸಿದರು. ಆ ಯಾಜಕರೂ ಲೇವಿಯರೂ ತಮ್ಮ ದೇವರ
ಸೇವಾಸಂಬಂಧದಲ್ಲಿಯೂ ಶುದ್ಧೀಕರಣಸಂಬಂಧದಲ್ಲಿ
ಯೂ ತಮ್ಮ ಕರ್ತವ್ಯವನ್ನು ಜಾಗರೂಕತೆಯಿಂದ
ನೆರವೇರಿಸುತ್ತಿದ್ದರು. ಅವರಂತೆ ಗಾಯಕರೂ ದ್ವಾರ
ಪಾಲಕರೂ ಸಹ ದಾವೀದನಿಂದಲೂ ಅವನ ಮಗ
ನಾದ ಸೊಲೊಮೋನನಿಂದಲೂ ಸ್ಥಾಪಿತವಾದ ಕ್ರಮಾ
46 ನುಸಾರ ನಡೆಯುತ್ತಿದ್ದರು. ಗಾಯನಮಂಡಲಿಗಳೂ
ಕೃತಜ್ಞತಾಸ್ತುತಿಕೀರ್ತನೆಗಳ ದೇವಸೇವೆಯೂ ಪೂರ್ವ
ಕಾಲದಲ್ಲಿ ಅಂದರೆ ದಾವೀದನ ಮತ್ತು ಆಸಾಫನ
47 ಕಾಲದಲ್ಲಿ ಇದ್ದವಷ್ಟೆ. ಜೆರುಬ್ಬಾಬೆಲ್, ನೆಹೆಮೀಯ
ಇವರ ಕಾಲಗಳಲ್ಲಿ ಎಲ್ಲಾ ಇಸ್ರಾಯೇಲ್ಯರು ಗಾಯ
ಕರಿಗೂ ದ್ವಾರಪಾಲಕರಿಗೂ ದಿನದಿನಕ್ಕೆ ಸಿಕ್ಕತಕ್ಕ
ಭಾಗಗಳನ್ನು ಕೊಡುತ್ತಿದ್ದರು. ಇವರು ಅವುಗಳಲ್ಲಿ
ದಶಮಾಂಶವನ್ನು ಲೇವಿಯರಿಗೂ ಲೇವಿಯರು ತಮ್ಮ
ದರಲ್ಲಿ ದಶಮಾಂಶವನ್ನು ಆರೋನನ ಮಕ್ಕಳಿಗೂ
ಕೊಡುತ್ತಿದ್ದರು.

### ನೆಹೆಮೀಯನು ಎರಡನೆಯ ಸಾರಿ ಅಧಿಪತಿಯಾಗಿ ಬಂದು ಮತಸಂಬಂಧವಾಗಿ ವ್ಯವಸ್ಥೆ ಮಾಡಿದ್ದು.

13 ಆ ಕಾಲದಲ್ಲಿ ಜನರ ಮುಂದೆ ಮೋಶೆಯ ಧರ್ಮ
ಶಾಸ್ತ್ರಪಾರಾಯಣವು ನಡೆಯುತ್ತಿರಲಾಗಿ ಅದರಲ್ಲಿ —
ಅಮ್ಮೋನಿಯರಾಗಲಿ ಮೋವಾಬ್ಯರಾಗಲಿ ದೇವರ
2 ಸಭೆಯಲ್ಲಿ ಎಂದಿಗೂ ಸೇರಬಾರದು; ಯಾಕಂದರೆ
ಅವರು ಇಸ್ರಾಯೇಲ್ಯರನ್ನು ಅನ್ನಪಾನಗಳೊಡನೆ ಎದು
ರುಗೊಳ್ಳಲಿಲ್ಲ; ಅವರನ್ನು ಶಪಿಸುವದಕ್ಕಾಗಿ ಬಿಳಾವ
ನಿಗೆ ಹಣಕೊಟ್ಟು ಅವನನ್ನು ಕರಿಸಿದರು. ನಮ್ಮ ದೇ
ರಾದರೋ ಅವನಿಂದ ಶಾಪವನ್ನಲ್ಲ, ಆಶೀರ್ವಾದವನ್ನೆ
ಹೇಳಿಸಿದನು ಎಂಬ ಮಾತು ಬರೆದಿರುವದಾಗಿ ಕಂಡ
ಬಂತು. ಇಸ್ರಾಯೇಲ್ಯರು ಈ ಧರ್ಮವಿಧಿಯನ್ನ
ಕೇಳಿದೊಡನೆ ಎಲ್ಲಾ ಮಿಶ್ರಜಾತಿಯವರನ್ನು ತಮ
ಮಧ್ಯದಿಂದ ಬೇರ್ಪಡಿಸಿದರು.
ಇದಕ್ಕಿಂತ ಮೊದಲು ಯಾಜಕನಾದ ಎಲ್ಯಾಷಿ
ಬನು ನಮ್ಮ ದೇವಾಲಯದ ಕೊಠಡಿಗಳ ಮೇಲ
ಚಾರಕನಾಗಿ ನೇಮಿಸಲ್ಪಟ್ಟಿದ್ದನು. ಇವನು ಟೋಬಿ
ಯನ ಬೀಗನಾಗಿದ್ದದರಿಂದ ನೈವೇದ್ಯದ್ರವ್ಯ ಧೂ
ಪಾತ್ರೆ ಇವುಗಳನ್ನೂ ಧಾನ್ಯ ದ್ರಾಕ್ಷಾರಸ ಎಣ್ಣೆ ಇವ
ಗಳ ದಶಮಾಂಶವನ್ನೂ ಲೇವಿಯ ಗಾಯಕ ದ್ವಾ
ಪಾಲಕ ಇವರಿಗೆ ಸಲ್ಲತಕ್ಕ ಪದಾರ್ಥಗಳನ್ನೂ ಯಾಜ
ಕರಿಗೋಸ್ಕರ ಪ್ರತ್ಯೇಕಿಸತಕ್ಕ ಪದಾರ್ಥಗಳನ್ನೂ ಇಡ
ವದಕ್ಕಾಗಿ ಉಪಯೋಗವಾಗುತ್ತಿದ್ದ ಕೊಠಡಿಯನ್ನು
ಅವನಿಗೋಸ್ಕರ ಸಿದ್ಧಮಾಡಿಸಿ ಕೊಟ್ಟಿದ್ದನು. ಬಾ
ಲಿನ ಅರಸನಾದ ಅರ್ತಷಸ್ತನ ಮೂವತ್ತೆರಡನೆಯ
ವರುಷದಲ್ಲಿ ಅರಸನ ಬಳಿಗೆ ಹೋಗಿದ್ದೆನಾದದರಿಂ
ಇದೆಲ್ಲಾ ನಡೆಯುವಾಗ ನಾನು ಯೆರೂಸಲೇಮಿನಲ್ಲಿ
ರಲಿಲ್ಲ. ಕಾಲಾಂತರದಲ್ಲಿ ನಾನು ಅರಸನಿಂದ ಅಪ್ಪಣ
ಪಡಕೊಂಡು ತಿರಿಗಿ ಯೆರೂಸಲೇಮಿಗೆ ಬಂದಾಗ ಎಲ್ಯಾ
ಷೀಬನು ಟೋಬೀಯನಿಗೋಸ್ಕರ ದೇವಾಲಯಪ್ರಾಕಾ
ರದೊಳಗೆ ಕೊಠಡಿಯನ್ನು ಸಿದ್ಧಮಾಡಿಕೊಟ್ಟಿದ್ದನ್ನು
ನೋಡಿ ಈ ದುಷ್ಕೃತ್ಯದ ದೆಸೆಯಿಂದ ಬಹಳವಾಗಿ
ವ್ಯಸನಗೊಂಡು ಟೋಬೀಯನ ಮನೆಯ ಸಾಮಾನ
ಗಳನ್ನು ಆ ಕೊಠಡಿಯಿಂದ ಹೊರಗೆ ಹಾಕಿಸಿ ಕೊಠ
ಯನ್ನು ಶುದ್ಧಿಮಾಡುವದಕ್ಕೆ ಅಪ್ಪಣೆಕೊಟ್ಟು ಅದು
ಶುದ್ಧವಾದ ಮೇಲೆ ದೇವಾಲಯದ ಪಾತ್ರೆ, ನೈವೇದ್ಯ
ದ್ರವ್ಯ, ಧೂಪ ಇವುಗಳನ್ನು ತಿರಿಗಿ ಅಲ್ಲಿಡಿಸಿದೆನು.
ಇದಲ್ಲದೆ ಲೇವಿಯರಿಗೆ ಸಲ್ಲತಕ್ಕ ಭಾಗಗಳು
ಅವರಿಗೆ ಸಿಕ್ಕಲಿಲ್ಲವೆಂದೂ ಆರಾಧನೆನಡಿಸತಕ್ಕ
ಲೇವಿಯರೂ ಗಾಯಕರೂ ತಮ್ಮ ತಮ್ಮ ಭೂಸ್ವಾಸ್ತ್ಯ
ಗಳಿಗೆ ಹೋಗಿಬಿಟ್ಟರೆಂದೂ ನನಗೆ ಗೊತ್ತಾಯಿತು
ಇದರ ದೆಸೆಯಿಂದ ನಾನು ಅಧಿಕಾರಿಗಳೊಡನೆ—
ದೇವಾಲಯವನ್ನು ಅಲಕ್ಷ್ಯಮಾಡಿದ್ದೇಕೆ ಎಂಬದಾಗಿ
ವಾದಿಸಿ ಬಿಟ್ಟುಹೋದವರನ್ನು ತಿರಿಗಿ ಕರಿಸಿ ಅವರನ್ನು
ಅವರವರ ಉದ್ಯೋಗಗಳಲ್ಲಿರಿಸಿದೆನು. ಆಗ ಎಲ್ಲಾ
ಯೆಹೂದ್ಯರು ತಮ್ಮ ತಮ್ಮ ಧಾನ್ಯ ದ್ರಾಕ್ಷಾರಸ
ಎಣ್ಣೆ ಇವುಗಳಲ್ಲಿ ದಶಮಾಂಶವನ್ನು ತಂದು ಭಂಡಾರ
ಗಳಲ್ಲಿ ಹಾಕಿದರು. ಆ ಮೇಲೆ ಉಗ್ರಾಣಗಳನ್ನು
ನೋಡುವದಕ್ಕೋಸ್ಕರ ಯಾಜಕನಾದ ಶೆಲೆಮ್ಯ, ಲೇಖ
ಕನಾದ ಚಾದೋಕ್, ಲೇವಿಕುಲದವನಾದ ಪೆದಾಯ
ಇವರನ್ನೂ ಇವರ ಸಹಾಯಕ್ಕಾಗಿ ಜಕ್ಕೂರನ ಮಗ
ನೂ ಮತ್ತನ್ಯನ ಮೊಮ್ಮಗನೂ ಆದ ಹಾನಾನನನ್ನೂ
ನೇಮಿಸಿದೆನು; ಇವರೆಲ್ಲರೂ ನಂಬಿಗಸ್ತರೆಂದು ಹೆಸ
ರುಗೊಂಡವರು. ತಮ್ಮ ಸಹೋದರರಿಗೆ ಸಿಕ್ಕತಕ್ಕ
ದ್ದನ್ನು ಹಂಚಿಕೊಡುವದು ಇವರ ಕರ್ತವ್ಯ. ನನ್ನ
ದೇವರೇ, ಇದನ್ನು ನನ್ನ ಹಿತಕ್ಕಾಗಿ ನೆನಪುಮಾಡಿಕೋ
ನಾನು ನನ್ನ ದೇವರ ಆಲಯದ ಮತ್ತು ಅದರ

ಸೇವೆಯ ಸಂಬಂಧವಾಗಿ ಮಾಡಿದ ಭಕ್ತಿಕಾರ್ಯ
ಗಳನ್ನು [ನಿನ್ನ ಪುಸ್ತಕದಿಂದ] ಅಳಿಸಿಬಿಡಬೇಡ.
ಆ ಕಾಲದಲ್ಲಿ ಜನರು ಸಬ್ಬತ್‌ದಿವಸ ಯೆಹೂದ
ದೇಶದಲ್ಲಿ ತೊಟ್ಟಿಯೊಳಗೆ ದ್ರಾಕ್ಷೆ ತುಳಿಯುವದನ್ನೂ
ಕಣದ ಕಾಳನ್ನು ಕೂಡಿಸಿ ಆ ಕಾಳು ದ್ರಾಕ್ಷಾರಸ
ದ್ರಾಕ್ಷೆ ಅಂಜೂರದ ಹಣ್ಣು ಈ ಮುಂತಾದವುಗಳನ್ನು
ಕತ್ತೆಗಳ ಮೇಲೆ ಹೇರಿಕೊಂಡು ಆ ದಿನದಲ್ಲೇ
ಯೆರೂಸಲೇಮಿಗೆ ತರುವದನ್ನೂ ಕಂಡು ಅವರು
ಆ ಆಹಾರಪದಾರ್ಥಗಳನ್ನು ಮಾರುವದಕ್ಕೆ ಬಂದಾಗ
ಅವರನ್ನು ಗದರಿಸಿದೆನು. ಇದಲ್ಲದೆ ದೇಶದಲ್ಲಿ
ವಾಸಿಸುತ್ತಿದ್ದ ತೂರ್ಯರೂ ಮೀನು ಮುಂತಾದ
ಸರಕುಗಳನ್ನು ತಂದು ಯೆಹೂದ್ಯರಿಗೆ ಸಬ್ಬತ್‌ದಿನ
ದಲ್ಲಿ ಯೆರೂಸಲೇಮಿನಲ್ಲೇ ಮಾರುತ್ತಿದ್ದರು. ಆಗ
ನಾನು ಯೆಹೂದ ಶ್ರೀಮಂತರಿಗೆ—ನೀವು ಮಾಡು
ವದು ಎಂಥ ದುಷ್ಕೃತ್ಯ! ನೀವು ಸಬ್ಬತ್‌ದಿನವನ್ನು
ಅಶುದ್ಧಮಾಡುತ್ತೀರಿ. ನಿಮ್ಮ ಪೂರ್ವಿಕರು ಹೀಗೆ
ಮಾಡಿದ್ದರಿಂದ ನಮ್ಮ ದೇವರು ಈ ಎಲ್ಲಾ ಕೇಡನ್ನು
ನಮ್ಮ ಮೇಲೆಯೂ ನಮ್ಮ ಪಟ್ಟಣದ ಮೇಲೆಯೂ
ಬರಮಾಡಿದನಲ್ಲವೇ. ಹೀಗಿರಲಾಗಿ ನೀವೂ ಸಬ್ಬತ್
ದಿನವನ್ನು ಅಶುದ್ಧಮಾಡಿ ಇಸ್ರಾಯೇಲ್ಯರ ಮೇಲಿದ್ದ
ದೇವಕೋಪವನ್ನು ಹೆಚ್ಚಿಸುತ್ತೀರೇನು ಎಂದು ಹೇಳಿ
ಅವರನ್ನು ಗದರಿಸಿದೆನು. ಇದಲ್ಲದೆ ಸಬ್ಬತ್‌ದಿನ
ಪ್ರಾರಂಭವಾಗುವದಕ್ಕಿಂತ ಮೊದಲು ಯೆರೂಸಲೇ
ಮಿನ ಬಾಗಲುಗಳಲ್ಲಿ ಕತ್ತಲಾಗುವಾಗಲೇ ಕದಗಳನ್ನು
ಮುಚ್ಚಿಸಿ ಸಬ್ಬತ್‌ದಿನವು ಗತಿಸುವದಕ್ಕಿಂತ ಮುಂಚೆ
ಅವುಗಳನ್ನು ತೆರೆಯಬಾರದೆಂದು ಆಜ್ಞಾಪಿಸಿ ಯಾವ
ಹೊರೆಯೂ ಒಳಗೆ ಬಾರದಂತೆ ನನ್ನ ಸೇವಕರಲ್ಲಿ
ಕೆಲವರನ್ನು ಬಾಗಲುಗಳ ಬಳಿಯಲ್ಲಿ ಕಾವಲಿರಿಸಿದೆನು.
ಆದದರಿಂದ ವರ್ತಕರೂ ಎಲ್ಲಾ ತರದ ದಿನಸು
ಗಳನ್ನು ಮಾರುವದಕ್ಕೆ ಬಂದವರೂ ಒಂದೆರಡು ಸಾರಿ
ಯೆರೂಸಲೇಮಿನ ಹೊರಗೆ ಇಳುಕೊಂಡರು. ಕಡೆ
ಯಲ್ಲಿ ನಾನು ಅವರನ್ನು—ನೀವು ಗೋಡೆಯ ಹೊರ
ಗೇಕೆ ಇಳುಕೊಂಡಿದ್ದೀರಿ? ನೀವು ತಿರಿಗಿ ಹೀಗೆ ಮಾಡಿ
ದರೆ ನಿಮ್ಮನ್ನು ಹಿಡಿಸುವೆನು ಎಂದು ಗದರಿಸಲು
ಅವರು ಅಂದಿನಿಂದ ಸಬ್ಬತ್‌ದಿನದಲ್ಲಿ ತಿರಿಗಿ ಬರಲಿಲ್ಲ.
ಆ ಮೇಲೆ ನಾನು ಲೇವಿಯರಿಗೆ—ಸಬ್ಬತ್‌ದಿನವನ್ನು
ಪರಿಶುದ್ಧದಿನವೆಂದು ಆಚರಿಸುವ ಹಾಗೆ ನೀವು ನಿಮ್ಮ
ನ್ನು ಶುದ್ಧಿಪಡಿಸಿಕೊಂಡು ಬಂದು ಬಾಗಲುಗಳನ್ನು
ಕಾಯಬೇಕು ಎಂದು ಆಜ್ಞಾಪಿಸಿದೆನು. ನನ್ನ ದೇವರೇ
ಇದನ್ನೂ ನನ್ನ ಹಿತಕ್ಕಾಗಿ ನೆನಪುಮಾಡಿಕೊಂಡು ನಿನ್ನ
ಮಹಾಕೃಪೆಗನುಸಾರವಾಗಿ ನನ್ನನ್ನು ಕನಿಕರಿಸು.
ಅದೇ ಕಾಲದಲ್ಲಿ ನಾನು ಅಷ್ಡೋದ್ ಅಮ್ಮೋ 23
ನಿಯ ಮೋವಾಬ್ ಸ್ತ್ರೀಯರನ್ನು ಮದುವೆಮಾಡಿ
ಕೊಂಡ ಯೆಹೂದ್ಯರನ್ನು ಕುರಿತು ವಿಚಾರಮಾಡಿ
ಅವರ ಮಕ್ಕಳಲ್ಲಿ ಅರ್ಧ ಮಂದಿ ಯೂದಾಯ ಭಾಷೆ 24
ಯಲ್ಲಿ ಮಾತಾಡಲರಿಯದೆ ಅಷ್ಡೋದ್ಯ ಮುಂತಾದ
ಜನರ ಭಾಷೆಯನ್ನಾಡುತ್ತಾರೆಂದು ತಿಳಿಯಲು ಕೋಪ 25
ಗೊಂಡು ಅವರನ್ನು ಶಪಿಸಿ ಅವರಲ್ಲಿ ಕೆಲವರನ್ನು ಹೊ
ಡೆದು ಅವರ ಕೂದಲುಗಳನ್ನು ಕಿತ್ತು—ಅಂಥ ಸ್ತ್ರೀ 26
ಯರ ದೆಸೆಯಿಂದ ಇಸ್ರಾಯೇಲ್‌ರಾಜನಾದ ಸೊಲೊ
ಮೋನನು ದೋಷಿಯಾದನಲ್ಲವೇ. ಅನೇಕಾನೇಕ
ಜನಾಂಗಗಳಲ್ಲಿ ಅವನಿಗೆ ಸಮಾನನಾದ ಅರಸನು ಇರ
ಲಿಲ್ಲ; ಅವನು ತನ್ನ ದೇವರಿಗೆ ವಿಶೇಷಪ್ರಿಯನು; ಆದ
ದರಿಂದ ದೇವರು ಅವನನ್ನು ಎಲ್ಲಾ ಇಸ್ರಾಯೇಲ್ಯರ
ಮೇಲೆ ಅರಸನನ್ನಾಗಿ ನೇಮಿಸಿದನು. ಆದರೂ ಅನ್ಯ
ದೇಶಸ್ತ್ರೀಯರು ಅವನನ್ನು ಪಾಪದಲ್ಲಿ ಬೀಳಿಸಿದರು.
ಹೀಗಿರಲಾಗಿ ನೀವೂ ಅನ್ಯಸ್ತ್ರೀಯರನ್ನು ಮದುವೆಮಾ 27
ಡಿಕೊಂಡು ಅದೇ ಘೋರವಾದ ದುಷ್ಟತ್ವವನ್ನು ನಡಿಸಿ
ದೇವರಿಗೆ ದ್ರೋಹಿಗಳಾಗುವದನ್ನು ನಾವು ಒಪ್ಪಿಕೊಳ್ಳ
ಬೇಕೋ ಎಂದು ಅವರನ್ನು ಗದರಿಸಿ ಅವರಿಂದ—ಅನ್ಯರ
ಮಕ್ಕಳಿಗೆ ಹೆಣ್ಣು ಕೊಡಬಾರದು, ನಿಮಗಾಗಲಿ ನಿಮ್ಮ
ಮಕ್ಕಳಿಗಾಗಲಿ ಅವರಿಂದ ತರಲೂ ಬಾರದು ಎಂಬ
ಧರ್ಮವಿಧಿಯನ್ನು ಕೈಕೊಳ್ಳುವದಾಗಿ ದೇವರ ಹೆಸರಿ
ನಲ್ಲಿ ಪ್ರಮಾಣಮಾಡಿಸಿದೆನು.
ಮಹಾಯಾಜಕ ಎಲ್ಯಾಷೀಬನ ಮಗನಾದ ಯೋ 28
ಯಾದನ ಮಕ್ಕಳಲ್ಲೊಬ್ಬನು ಹೊರೋನ್ಯನಾದ ಸನ್ಬ
ಲ್ಲಟನಿಗೆ ಅಳಿಯನಾದದರಿಂದ ಅವನನ್ನು ನನ್ನ ಸನ್ನಿಧಿ
ಯಿಂದ ಓಡಿಸಿಬಿಟ್ಟೆನು. ನನ್ನ ದೇವರೇ, ಅವರು 29
ಯಾಜಕತ್ವವನ್ನೂ ಯಾಜಕರ ಮತ್ತು ಲೇವಿಯರ
ಪ್ರತಿಜ್ಞೆಯನ್ನೂ ಹೊಲೆಮಾಡಿದ್ದಾರಲ್ಲಾ; ಇದನ್ನು
ನೆನಪುಮಾಡಿಕೋ. ನಾನು ಈ ಪ್ರಕಾರ ಅನ್ಯವಾದ 30
ದ್ದನ್ನೆಲ್ಲಾ ತೆಗಿಸಿ ಅವರನ್ನು ಶುದ್ಧಪಡಿಸಿದೆನಲ್ಲದೆ
ಯಾಜಕರಲ್ಲಿಯೂ ಲೇವಿಯರಲ್ಲಿಯೂ ಪ್ರತಿಯೊಬ್ಬ
ನಿಗಿರುವ ಕೆಲಸದ ವಿಷಯವಾಗಿಯೂ ನೇಮಿತ ಕಾಲ 31
ಗಳಲ್ಲಿ ಸಲ್ಲತಕ್ಕ ಕಾಷ್ಠದಾನದ ಮತ್ತು ಪ್ರಥಮ
ಫಲದ ವಿಷಯವಾಗಿಯೂ ಕ್ರಮಗಳನ್ನು ಏರ್ಪಡಿಸಿ
ದೆನು. ನನ್ನ ದೇವರೇ, ನನ್ನ ಹಿತಕ್ಕಾಗಿ ಇದನ್ನು ನೆನ
ಪುಮಾಡಿಕೋ.

# THE BOOK OF ESTHER

## ಎಸ್ತೇರಳು

ಪಾರಸಿಯ ರಾಜನಾದ ಅಹಷ್ವೇರೋಷನು ಪಟ್ಟದ ರಾಣಿಯಾದ
ವಷ್ಟಿಯನ್ನು ತಳ್ಳಿಬಿಟ್ಟದ್ದು.

1 ಹಿಂದುಸ್ಥಾನ ಮೊದಲುಗೊಂಡು ಕೂಷಿನ ವರೆಗೂ
ಇರುವ ನೂರಿಪ್ಪತ್ತೇಳು ಸಂಸ್ಥಾನಗಳನ್ನು ಆಳುತ್ತಿದ್ದ
2 ಅಹಷ್ವೇರೋಷನ ಕಾಲದಲ್ಲಿ ನಡೆದ ಚರಿತ್ರೆ. ಅಹಷ್ವೇ
ರೋಷನು ತನ್ನ ಆಳಿಕೆಯ ಮೂರನೆಯ ವರುಷ
ಶೂಷನ್ ಕೋಟೆಯಲ್ಲಿನ ತನ್ನ ರಾಜಸಿಂಹಾಸನವ
3 ನ್ನೇರಿದಾಗ ಎಲ್ಲಾ ಸರದಾರರಿಗೋಸ್ಕರವೂ ಪರಿವಾರದ
ವರಿಗೋಸ್ಕರವೂ ಔತಣಮಾಡಿಸಿದನು. ಪಾರಸಿಯ
ಮತ್ತು ಮೇದ್ಯ ಸೇನಾಧಿಪತಿಗಳೂ ಪ್ರಧಾನರೂ ಸಂಸ್ಥಾ
4 ನಾಧಿಕಾರಿಗಳೂ ಅವನ ಸನ್ನಿಧಿಗೆ ಬಂದಿದ್ದರು. ಅವನು
ಅನೇಕ ದಿವಸ ಅಂದರೆ ನೂರೆಂಭತ್ತು ದಿವಸಗಳ ವರೆ
ಗೂ ಅವರಿಗೆ ತನ್ನ ಘನವಾದ ರಾಜ್ಯದ ಐಶ್ವರ್ಯ
ವನ್ನೂ ಮಹಾಮಹಿಮೆಯ ವೈಭವಗಳನ್ನೂ ತೋರಿಸಿ
5 ದನು. ಈ ದಿನಗಳಾದನಂತರ ಅರಸನು ಶೂಷನ್
ಕೋಟೆಯಲ್ಲಿದ್ದ ಎಲ್ಲಾ ಶ್ರೇಷ್ಠರಿಗೂ ಕನಿಷ್ಠರಿಗೂ
ಅರಮನೆಯ ತೋಟದ ಬೈಲಿನಲ್ಲಿ ಏಳು ದಿನಗಳ
6 ವರೆಗೂ ಔತಣಮಾಡಿಸಿದನು. ಅಲ್ಲಿ ಬಿಳೀ ನೂಲಿನ
ಬಟ್ಟೆಗಳೂ ನೀಲಿಬಟ್ಟೆಗಳೂ ಧೂಮ್ರವರ್ಣವುಳ್ಳ ನಾ
ರಿನ ದಾರದಿಂದ ಸಂಗಮಾರ ಕಲ್ಲುಕಂಬಗಳಲ್ಲಿನ ಬೆಳ್ಳಿ
ಯ ಉಂಗುರಗಳಿಗೆ ಕಟ್ಟಲ್ಪಟ್ಟಿದ್ದವು.. ಜರತಾರೆ
ಯ ಕಸೂತಿ ಹಾಕಿರುವ ಲೋಡುಗಳು ಕೆಂಪು ಬಿಳಿ
ಹಳದಿ ಕಪ್ಪು ಬಣ್ಣಗಳುಳ್ಳ ಸಂಗಮಾರ ಕಲ್ಲುಗಳಿಂದ
7 ರಚಿತವಾದ ನೆಲಗಟ್ಟಿನ ಮೇಲೆ ಇಡಲ್ಪಟ್ಟಿದ್ದವು. ಪಾನ
ಪಾತ್ರೆಗಳು ಬಂಗಾರದವುಗಳೂ ನಾನಾ ಆಕಾರದವುಗ
ಳೂ ಆಗಿದ್ದವು. ರಾಜದ್ರಾಕ್ಷಾರಸವು ಅರಸರ ಔದಾ
8 ರ್ಯಕ್ಕೆ ತಕ್ಕಂತೆ ಧಾರಾಳವಾಗಿತ್ತು. ಪಾನಮಾಡುವ
ದರಲ್ಲಿ ಯಾರಿಗೂ ಒತ್ತಾಯಮಾಡಬಾರದೆಂದು ಕ್ರಮ
ವಿತ್ತು. ಪ್ರತಿಯೊಬ್ಬನಿಗೆ ಅವನವನ ಇಷ್ಟದಂತೆ ಕೊಡ
ಬೇಕೆಂದು ರಾಜನು ತನ್ನ ಎಲ್ಲಾ ಮನೆವಾರ್ತೆಯವ
9 ರಿಗೆ ಆಜ್ಞಾಪಿಸಿದ್ದನು. ವಷ್ಟಿರಾಣಿಯೂ ಅಹಷ್ವೇ
ರೋಷ್‍ರಾಜನ ಅರಮನೆಯಲ್ಲಿ ಸ್ತ್ರೀಯರಿಗೋಸ್ಕರ
ಔತಣಮಾಡಿಸಿದಳು.

10 ಏಳನೆಯ ದಿನದಲ್ಲಿ ಅರಸನಾದ ಅಹಷ್ವೇರೋಷನು
ದ್ರಾಕ್ಷಾರಸಪಾನಮಾಡಿ ಆನಂದಲಹರಿಯಲ್ಲಿದ್ದಾಗ
11 ಬಹು ಸುಂದರಿಯಾದ ರಾಣಿಯ ಸೌಂದರ್ಯವನ್ನು
ಜನರಿಗೂ ಸರದಾರರಿಗೂ ತೋರಿಸಬೇಕೆಂದು ತನ್ನ
ಸಾನ್ನಿಧ್ಯಸೇವಕರಾದ ಮೆಹೂಮಾನ್, ಬಿಜೆತಾ, ಹ
ರ್ಬೋನಾ, ಬಿಗೆತಾ, ಅಬಗೆತಾ, ಜೇತರ್, ಕರ್ಕಸ್

ಎಂಬ ಏಳು ಮಂದಿ ಕಂಚುಕಿಗಳಿಗೆ—ವಷ್ಟಿರಾಣಿಯ
ರಾಜಮುಕುಟವನ್ನು ಧರಿಸಿಕೊಂಡು ರಾಜಸನ್ನಿಧಿಗ
ಬರಬೇಕೆಂಬದಾಗಿ ಹೇಳಿರಿ ಎಂದು ಆಜ್ಞಾಪಿಸಿದನು
ಕಂಚುಕಿಗಳು ತಿಳಿಸಿದ ರಾಜಾಜ್ಞೆಗೆ ವಷ್ಟಿರಾಣಿಯು—
ಬರುವದಿಲ್ಲ ಎಂದು ಉತ್ತರಕೊಟ್ಟಳು. ಇದರಿಂದ
ಅರಸನು ಬಹುಕೋಪಗೊಂಡು ರೌದ್ರಾವೇಶನಾದನು
ವಿಧಿನ್ಯಾಯಗಳನ್ನು ಬಲ್ಲವರೆಲ್ಲರ ಮುಂದೆ ಅ
ಮನೆಯ ಸಂಗತಿಗಳನ್ನು ಇಡುವ ಪದ್ಧತಿಯಿತ್ತು. ಅ
ಸನಾದ ಅಹಷ್ವೇರೋಷನ ಒಡ್ಡೋಲಗದಲ್ಲಿ ರಾ
ಸಾನ್ನಿಧ್ಯಸೇವಕರೂ ರಾಜಸಭಾಪ್ರಧಾನರೂ ಆಗಿದ್ದ
ಕರ್ಷೆನಾ, ಶೇತಾರ್, ಅದ್ಮಾತಾ, ತರ್ಷೀಷ್, ಮೆರೆಸ್
ಮರ್ಸೆನಾ, ಮೆಮೂಕಾನ್ ಎಂಬ ಏಳು ಮಂದಿ ಪಾ
ಸಿಯ ಮತ್ತು ಮೇದ್ಯ ಪ್ರಭುಗಳಿದ್ದರು. ಅವನ
ಸಮಯೋಚಿತಜ್ಞಾನವುಳ್ಳವರಾದ ಇವರನ್ನು—ಕಂಚ
ಕಿಗಳ ಮುಖಾಂತರ ತನಗುಂಟಾದ ರಾಜಾಜ್ಞೆಯನ್ನು
ಕೈಕೊಳ್ಳದೆ ಹೋದ ವಷ್ಟಿರಾಣಿಗೆ ನಿಯಮದ ಪ್ರಕಾ
ಮಾಡತಕ್ಕದ್ದೇನು ಎಂದು ಕೇಳಲು ಮೆಮೂಕಾನನ
ಅರಸನ ಮತ್ತು ಸರದಾರರ ಮುಂದೆ—ವಷ್ಟಿರಾಣಿಯ
ಅಪರಾಧವು ಅರಸನೊಬ್ಬನಿಗೇ ವಿರುದ್ಧವಾದದ್ದಲ್ಲ
ಅರಸನಾದ ಅಹಷ್ವೇರೋಷನಿಗೆ ಸೇರಿರುವ ಎಲ್ಲಾ ಸ
ಸ್ಥಾನಗಳ ಸರದಾರರಿಗೂ ಜನರಿಗೂ ವಿರುದ್ಧವಾದದ್ದು
ರಾಣಿಯ ನಡತೆಯು ಎಲ್ಲಾ ಸ್ತ್ರೀಯರಿಗೂ ಗೊತ್ತಾ
ಅವರೂ ತಮ್ಮ ಗಂಡಂದಿರನ್ನು ತಿರಸ್ಕರಿಸುವದಕ್
ಕಾರಣವಾಗುವದು. ಅರಸನಾದ ಅಹಷ್ವೇರೋಷನ
ವಷ್ಟಿರಾಣಿಗೆ ಬರಬೇಕೆಂದು ಹೇಳಿಕಳುಹಿಸಿದಾಗ ಆ
ಯು ಹೋಗಲಿಲ್ಲವಲ್ಲಾ ಅನ್ನುವರು. ರಾಣಿಯ
ಮಾತನ್ನು ಕೇಳಿದ ಪಾರಸಿಯ ಮತ್ತು ಮೇದ್ಯ ಕುಲಿ
ನಸ್ತ್ರೀಯರು ಈ ಹೊತ್ತೇ ಅದನ್ನು ಅರಸನ ಎಲ್ಲಾ ಸ
ದಾರರಿಗೂ ಹೇಳುವರು. ಹೀಗೆ ಎಷ್ಟೋ ತಿರಸ್ಕಾರವ
ಕೋಪವೂ ಉಂಟಾಗುವದು. ಅರಸನು ಸಮ್ಮತಿಸು
ದಾದರೆ ವಷ್ಟಿಯು ತಿರಿಗಿ ಅಹಷ್ವೇರೋಷ್‍ರಾಜನ ಸನ್ನಿ
ಧಿಗೆ ಬರಲೇ ಬಾರದೆಂಬ ರಾಜಾಜ್ಞೆಯು ಪ್ರಕಟವಾ
ಅದು ಎಂದಿಗೂ ರದ್ದಾಗದ ಹಾಗೆ ಪಾರಸಿಯ ಮತ್ತು
ಮೇದ್ಯ ಶಾಸನಗಳಲ್ಲಿ ಲಿಖಿತವಾಗಲಿ; ಅರಸನು ಆ
ಯ ಪಟ್ಟವನ್ನು ಆಕೆಗಿಂತ ಉತ್ತಮಳಾದ ಇನ್ನೊಬ್ಬಾ
ಕೆಗೆ ಕೊಡಲಿ. ಈ ರಾಜನಿರ್ಣಯವು ಬಹು ವಿಸ್ತಾ
ವಾದ ಅವನ ರಾಜ್ಯದಲ್ಲೆಲ್ಲಾ ಗೊತ್ತಾದಾಗ ಶ್ರೇಷ್ಠರೂ
ಕನಿಷ್ಠರೂ ಆದ ಎಲ್ಲಾ ಸ್ತ್ರೀಯರು ತಮ್ಮ ಗಂಡಂ
ರಿಗೆ ಮಾನಸಲ್ಲಿಸುವರು ಅಂದನು. ಈ ಮಾತು ಅ
ಸನಿಗೂ ಅವನ ಸರದಾರರಿಗೂ ಒಳ್ಳೇದೆಂದು ಕಂಡ

ರಿಂದ ಅರಸನು ಮೆಮೂಕಾನನ ಮಾತಿನಂತೆಯೇ ಮಾ
2 ಡಿದನು. ಅವನು—ಪ್ರತಿಯೊಂದು ಕುಟುಂಬದಲ್ಲಿ
ಪುರುಷನೇ ಒಡೆಯನಾಗಿದ್ದು ಅವನ ಸ್ವಜನರ ಭಾಷೆ
ಯೇ ಉಪಯೋಗವಾಗಬೇಕೆಂಬದಾಗಿ ಎಲ್ಲಾ ರಾಜ
ಸಂಸ್ಥಾನಗಳಲ್ಲಿ ಪತ್ರಗಳ ಮೂಲಕ ಪ್ರಕಟಿಸಿದನು.
ಈ ಪತ್ರಗಳು ಆಯಾ ಸಂಸ್ಥಾನಗಳ ಬರಹಗಳಲ್ಲಿ
ಯೂ ಆಯಾ ಜನಾಂಗಗಳ ಭಾಷೆಗಳಲ್ಲಿಯೂ ಬರೆ
ಯಲ್ಪಟ್ಟವು.

ಯೆಹೂದ್ಯಳಾದ ಎಸ್ತೇರಳು ಪಟ್ಟದ ರಾಣಿಯಾದದ್ದು.

2 ಇದಾದನಂತರ ಅರಸನಾದ ಅಹಷ್ವೇರೋಷನು ಕೋ
ಪವನ್ನು ಬಿಟ್ಟು ವಷ್ಟಿಯನ್ನೂ ಆಕೆ ಮಾಡಿದ್ದನ್ನೂ
ಆಕೆಯ ವಿಷಯವಾದ ತೀರ್ಪನ್ನೂ ನೆನಪುಮಾಡಿಕೊ
2 ಳ್ಳುತ್ತಿರಲು ಅವನ ಸೇವೆಮಾಡುತ್ತಿರುವ ರಾಜಪರಿವಾ
ರದವರು ಅವನಿಗೆ—ಅರಸನಿಗೋಸ್ಕರ ಸುಂದರಿಯ
ರಾದ ಕನ್ಯೆಯರನ್ನು ಹುಡುಕುವದಕ್ಕೆ ಅಪ್ಪಣೆಮಾಡ
3 ಬೇಕು. ಅರಸನು ತನ್ನ ರಾಜ್ಯದ ಎಲ್ಲಾ ಸಂಸ್ಥಾನಗ
ಳಿಗೆ ಕಾರಭಾರಿಗಳನ್ನು ಕಳುಹಿಸಬೇಕು; ಅವರು
ಸುಂದರಿಯರಾದ ಎಲ್ಲಾ ಕನ್ಯೆಯರನ್ನು ಶೂಷನ್ ಕೋ
ಟೆಯ ಅಂತಃಪುರದಲ್ಲಿ ಕೂಡಿಸಿ ಅಂತಃಪುರಪಾಲಕನೂ
ರಾಜಕಂಚುಕಿಯೂ ಆದ ಹೇಗೈಯ ವಶಕ್ಕೆ ಕೊಡಲಿ!
ಅವನು ಅವರಿಗೆ ಕಾಂತಿಯನ್ನು ಹೆಚ್ಚಿಸುವ ಲೇಪನ
4 ದ್ರವ್ಯಗಳನ್ನು ಹಂಚಲಿ. ಮತ್ತು ಅರಸನಿಗೆ ಇಷ್ಟಳಾಗಿ
ಕಾಣುವ ಕನ್ಯೆಯು ವಷ್ಟಿಗೆ ಬದಲಾಗಿ ರಾಣಿಯಾಗಲಿ
ಎಂದು ಹೇಳಿದರು. ಅರಸನು ಈ ಅಭಿಪ್ರಾಯಕ್ಕೆ
ಸಮ್ಮತಿಸಿ ಅದರಂತೆಯೇ ಮಾಡಿದನು.
5 ಶೂಷನ್ ಕೋಟೆಯಲ್ಲಿ ಮೊರ್ದೆಕೈ ಎಂಬೊಬ್ಬ
ಯೆಹೂದಿ ಮನುಷ್ಯನು ವಾಸಿಸುತ್ತಿದ್ದನು. ಇವನು
ಬೆನ್ಯಾಮೀನ್ ಕುಲದ ಕೀಷನ ಮರಿಮಗನೂ ಶಿಮ್ಗಿ
ಯ ಮೊಮ್ಮಗನೂ ಯಾಯೀರನ ಮಗನೂ ಆಗಿ
6 ದ್ದನು. ಬಾಬೆಲಿನ ಅರಸನಾದ ನೆಬೂಕದ್ನೆಚ್ಚರನಿಂದ
ಯೆಹೂದರಾಜನಾದ ಯೆಹೋಯಾಕೀನನೊಡನೆ ಸೆರೆ
7 ಯೊಯ್ಯಲ್ಪಟ್ಟವರಲ್ಲಿ ಇವನೊಬ್ಬನು. ಇವನು ಎಸ್ತೇ
ರಳೆಂಬ ಹೆಸರನ್ನು ಪಡೆದ ಹದೆಸ್ಸಾ ಎಂಬ ತನ್ನ ಚಿಕ್ಕ
ಪ್ಪನ ಅನಾಥಳಾದ ಮಗಳನ್ನು ತಂದೆತಾಯಿಗಳು
ಸತ್ತಂದಿನಿಂದ ಪುತ್ರಿಯನ್ನಾಗಿ ಸ್ವೀಕರಿಸಿ ಸಾಕುತ್ತಿ
ದ್ದನು. ಈಕೆಯು ರೂಪವತಿಯೂ ಲಾವಣ್ಯವತಿಯೂ
8 ಆಗಿದ್ದಳು. ಅರಸನ ನಿರ್ಣಯವೂ ಆಜ್ಞೆಯೂ ಪ್ರಕ
ಟಿಸಲ್ಪಟ್ಟು [ಕಾರಭಾರಿಗಳು] ಅನೇಕಾನೇಕ ಕನ್ಯೆಯ
ರನ್ನು ಕೂಡಿಸಿ ಶೂಷನ್ ಕೋಟೆಯಲ್ಲಿ ಹೇಗೈಯ
ವಶಕ್ಕೆ ಒಪ್ಪಿಸಿದಾಗ ಎಸ್ತೇರಳೂ ಅರಮನೆಗೆ ತರ
ಲ್ಪಟ್ಟು ಅಂತಃಪುರಪಾಲಕನಾದ ಹೇಗೈಯ ಪರಾಂಬ
9 ರಿಕೆಯಲ್ಲಿದ್ದಳು. ಹೇಗೈಯು ಆಕೆಯನ್ನು ಮೆಚ್ಚಿ
ತನ್ನ ದಯೆಗೆ ಪಾತ್ರಳಾದ ಆಕೆಗೋಸ್ಕರ ತಕ್ಕ ಲೇಪನ
ದ್ರವ್ಯಗಳನ್ನೂ ಭೋಜನಾಂಶವನ್ನೂ ಆರಿಸಿದ ಏಳು
ಮಂದಿ ಸೇವಕಿಯರನ್ನೂ ಅರಮನೆಯಿಂದ ಬೇಗನೆ
ಏರ್ಪಡಿಸಿ ಆಕೆಯನ್ನೂ ಆಕೆಯ ಸೇವಕಿಯರನ್ನೂ
ಅಂತಃಪುರದ ಉತ್ತಮಭಾಗದಲ್ಲಿರಿಸಿದನು. ಎಸ್ತೇ 10
ರಳು ತಾನು ಇಂಥ ಜನಾಂಗದವಳು, ಇಂಥ ಕುಲ
ದವಳು ಎಂಬದನ್ನು ತೋರ್ಪಡಿಸಿಕೊಳ್ಳಲಿಲ್ಲ; ಮೊ
ರ್ದೆಕೈಯು ಹೀಗೆ ಅಪ್ಪಣೆಕೊಟ್ಟಿದ್ದನು. ಅವನು 11
ಆಕೆಯ ಈಗಿನ ಸ್ಥಿತಿಯನ್ನೂ ಮುಂದಿನ ಗತಿಯನ್ನೂ
ವಿಚಾರಿಸುವದಕ್ಕಾಗಿ ಪ್ರತಿದಿನವೂ ಅಂತಃಪುರದ ಪ್ರಾಕಾ
ರದ ಮುಂದೆ ತಿರುಗಾಡುತ್ತಿದ್ದನು.
ಕನ್ಯೆಯರ ಲೇಪನಕಾಲವು ಪೂರೈಸುವದಕ್ಕೆ ಗಂಥ 12
ರಸಪ್ರಯೋಗದಲ್ಲಿ ಆರು ತಿಂಗಳೂ ಪರಿಮಳದ್ರವ್ಯ
ಕಾಂತಿವರ್ಧಕದ್ರವ್ಯಗಳ ಪ್ರಯೋಗದಲ್ಲಿ ಆರು ತಿಂಗ
ಳೂ ಅಂತೂ ಹನ್ನೆರಡು ತಿಂಗಳು ಕಳೆದವು. ಈ
ಕಾಲ ಮುಗಿದನಂತರ ರಾಜಸ್ತ್ರೀಯರ ವಿಷಯವಾದ
ನಿಯಮದ ಮೇರೆಗೆ ತನ್ನನ್ನು ಸಿದ್ಧಪಡಿಸಿಕೊಂಡ
ಪ್ರತಿಯೊಬ್ಬ ಕನ್ಯೆಯು ಅರಸನಾದ ಅಹಷ್ವೇರೋಷನ
ಬಳಿಗೆ ಹೋಗುವಳು. ಅರಸನ ಬಳಿಗೆ ಹೋಗುವ 13
ಸರತಿ ಯಾವಾಕೆಗೆ ಬರುವದೋ ಆಕೆಯು ಅಂತಃಪುರ
ದಿಂದ ಅರಮನೆಗೆ ತೆಗೆದುಕೊಂಡು ಹೋಗುವದ
ಕ್ಕೋಸ್ಕರ ಏನು ಕೇಳಿದರೂ ಕೊಡಲ್ಪಡುವದು.
ಆಕೆಯು ಅಲ್ಲಿಗೆ ಸಾಯಂಕಾಲ ಹೋದವಳು [ಮರು 14
ದಿನ] ಬೆಳಿಗ್ಗೆ ಅರಸನ ಉಪಪತ್ನಿಗಳ ಪಾಲಕನಾದ
ಶವಷ್ಗಜನೆಂಬ ರಾಜಕಂಚುಕಿಯ ವಶದಲ್ಲಿದ್ದ ಎರ
ಡನೆಯ ಅಂತಃಪುರಕ್ಕೆ ಬರುವಳು. ಅರಸನು ಅವಳನ್ನು
ಮೆಚ್ಚಿ ಹೆಸರು ಹೇಳಿ ಕರಿಸಿದರೆ ಹೊರತಾಗಿ ಒಬ್ಬಳೂ
ಅರಸನ ಬಳಿಗೆ ತಿರಿಗಿ ಹೋಗುವ ಹಾಗಿರಲಿಲ್ಲ.
ಅರಸನ ಬಳಿಗೆ ಹೋಗುವದಕ್ಕೆ ಮೊರ್ದೆಕೈಯ 15
ದತ್ತಪುತ್ರಿಯೂ ಅವನ ಚಿಕ್ಕಪ್ಪನಾದ ಅಬೀಹೈಲನ
ಮಗಳೂ ಆದ ಎಸ್ತೇರಳ ಸರತಿ ಬಂದಾಗ ಅಂತಃಪುರ
ಪಾಲಕನಾದ ಹೇಗೈ ಎಂಬ ರಾಜಕಂಚುಕಿಯು ನೇಮಿ
ಸಿದ್ದನ್ನೇ ಹೊರತು ಆಕೆ ಬೇರೇನೂ ಕೇಳಲಿಲ್ಲ;
ನೋಡುವವರೆಲ್ಲರೂ ಆಕೆಯನ್ನು ಮೆಚ್ಚುತ್ತಿದ್ದರು.
ಅರಸನಾದ ಅಹಷ್ವೇರೋಷನ ಬಳಿಗೆ ಅವನ ಆಳಿಕೆಯ 16
ಏಳನೆಯ ವರುಷದ ಹತ್ತನೆಯ ತಿಂಗಳಾದ [1]ಪುಷ್ಯ
ಮಾಸದಲ್ಲಿ ಆಕೆಯನ್ನು ರಾಜಗೃಹಕ್ಕೆ ಕರತಂದರು.
ಅರಸನು ಎಲ್ಲಾ ಸ್ತ್ರೀಯರಲ್ಲಿ ಎಸ್ತೇರಳನ್ನು ಮೆಚ್ಚಿ 17
ದನು. ಎಲ್ಲಾ ಕನ್ಯೆಯರಲ್ಲಿ ಆಕೆಯು ಅವನ ದಯೆ
ಗೂ ಪ್ರೀತಿಗೂ ಪಾತ್ರಳಾದದರಿಂದ ಅವನು ರಾಜ
ಮುಕುಟವನ್ನು ಆಕೆಯ ತಲೆಯ ಮೇಲಿಟ್ಟು ಆಕೆ
ಯನ್ನು ವಷ್ಟಿಗೆ ಬದಲಾಗಿ ರಾಣಿಯನ್ನಾಗಿ ಮಾಡಿ
ಕೊಂಡು ತನ್ನ ಎಲ್ಲಾ ಸರದಾರರಿಗೂ ಪರಿವಾರದವರಿಗೂ 18
ಎಸ್ತೇರಳ ಔತಣವೆಂದು ದೊಡ್ಡ ಔತಣವನ್ನು ಮಾಡಿಸಿ
ಎಲ್ಲಾ ಸಂಸ್ಥಾನಗಳಲ್ಲಿಯೂ ಸೆರೆಯವರನ್ನು ಬಿಡಿಸಿ
ರಾಜರಿಗೆ ತಕ್ಕಂತೆ ಉದಾರವಾಗಿ ದಾನಧರ್ಮಗಳನ್ನು
ಮಾಡಿದನು.

ಮೊರ್ದೆಕೈಯು ರಾಜಕಂಟಕರ ಒಳಸಂಚನ್ನು ಬೈಲುಪಡಿಸಿದ್ದು.

ಕನ್ಯೆಯರು ಎರಡನೆಯ ಸಾರಿ ಕೂಡಿಸಲ್ಪಡುತ್ತಿರು 19
ವಾಗ ಮೊರ್ದೆಕೈಯು ಅರಮನೆಯ ಹೆಬ್ಬಾಗಲಲ್ಲಿ

1) ಮೂಲ: ಟೇಬೇತ್.

20 ಕೂತುಕೊಂಡಿದ್ದನು. ಎಸ್ತೇರಳಾದರೋ ಮೊರ್ದೆ
ಕೈಯ ಪರಾಂಬರಿಕೆಯಲ್ಲಿದ್ದ ದಿನಗಳಲ್ಲಿ ಹೇಗೋ
ಹಾಗೆ ಈಗಲೂ ಅವನ ಆಜ್ಞೆಯನ್ನು ಅನುಸರಿಸುವವ
ಳಾಗಿ ತಾನು ಇಂಥ ಕುಲದವಳು, ಇಂಥ ಜನಾಂಗ
21 ದವಳು ಎಂಬದನ್ನು ತೋರ್ಪಡಿಸಲಿಲ್ಲ. ಆ ದಿನಗ
ಳಲ್ಲಿ ಮೊರ್ದೆಕೈಯು ಅರಮನೆಯ ಹೆಬ್ಬಾಗಲಿನಲ್ಲಿ
ಕೂತುಕೊಂಡಿದ್ದಾಗ ಅರಮನೆಯ ದ್ವಾರಪಾಲಕರಾದ
ಬಿಗೆತಾನ್, ತೆರೆಷ್ ಎಂಬ ಇಬ್ಬರು ರಾಜಕಂಚುಕಿ
ಯರು ಕೋಪವುಳ್ಳವರಾಗಿ ಅರಸನಾದ ಅಹಷ್ವೇರೋ
ಷನಿಗೆ ವಿರೋಧವಾಗಿ ಕೈಯೆತ್ತಬೇಕೆಂದು ಒಳಸಂಚು
22 ಮಾಡಿದರು. ಈ ಸಂಗತಿಯು ಮೊರ್ದೆಕೈಗೆ ಗೊತ್ತಾ
ದಾಗ ಅವನು ಅದನ್ನು ಎಸ್ತೇರ್‌ರಾಣಿಗೆ ತಿಳಿಸಿದನು.
ಆಕೆಯು ಅವನ ಹೆಸರನ್ನು ಅರಸನಿಗೆ ಹೇಳಿ ಆ
23 ಸಂಗತಿಯನ್ನು ತಿಳಿಸಿದಳು. ಈ ವಿಷಯವು ವಿಚಾರ
ಣೆಗೆ ಬಂದಾಗ ಅದು ನಿಜವೆಂದು ಸ್ಥಾಪನೆಯಾದದರಿಂದ
ಆ ಇಬ್ಬರನ್ನೂ ಗಲ್ಲಿಗೆ ಹಾಕಿದರು. ಆ ಸಂಗತಿಯು
ರಾಜನ ದಿನಚರ್ಯಪುಸ್ತಕದಲ್ಲಿ ಬರೆಯಲ್ಪಟ್ಟಿತು.

ಹಾಮಾನನು ಪ್ರಧಾನಮಂತ್ರಿಯಾಗಿ ಯೆಹೂದ್ಯರನ್ನು ಸಂಹರಿಸ
ಬೇಕೆಂಬ ರಾಜಾಜ್ಞೆಯನ್ನು ಪ್ರಕಟಿಸಿದ್ದು.

3 ಇದಾದನಂತರ ಅರಸನಾದ ಅಹಷ್ವೇರೋಷನು ಅಗಾ
ಗನ ವಂಶದವನೂ ಹಮ್ಮೆದಾತನ ಮಗನೂ ಆದ
ಹಾಮಾನನನ್ನು ಪದವಿಯಲ್ಲಿ ಹೆಚ್ಚಿಸಿ ಅವನಿಗೆ
ದೊಡ್ಡ ಅಧಿಕಾರವನ್ನು ಕೊಟ್ಟು ತನ್ನ ಒಡ್ಡೋಲಗದ
ಎಲ್ಲಾ ಸರದಾರರಲ್ಲಿ ಅವನಿಗೆ ಪ್ರಥಮಾಸನವನ್ನು
2 ಅನುಗ್ರಹಿಸಿದನು. ಅರಸನು—ರಾಜನಿವೇಶನದಲ್ಲಿ
ರುವ ರಾಜಸೇವಕರೆಲ್ಲರೂ ಹಾಮಾನನಿಗೆ ಸಾಷ್ಟಾಂಗ
ನಮಸ್ಕಾರಮಾಡಬೇಕೆಂದು ಅಪ್ಪಣೆಮಾಡಿದ್ದರಿಂದ
ಎಲ್ಲರೂ ಹಾಗೆ ಮಾಡುತ್ತಿದ್ದರು; ಆದರೆ ಮೊರ್ದೆ
ಕೈಯು ಅವನಿಗೆ ಸಾಷ್ಟಾಂಗನಮಸ್ಕಾರಮಾಡಲಿಲ್ಲ.
3 ರಾಜಗೃಹನಿವೇಶನದಲ್ಲಿದ್ದ ರಾಜಸೇವಕರು—ನೀನು
4 ರಾಜಾಜ್ಞೆಯನ್ನು ಮೀರುವದೇಕೆ ಎಂದು ಹೇಳಿ ದಿನಂ
ಪ್ರತಿ ಅವನನ್ನು ಎಚ್ಚರಿಸಿದರೂ ಅವನು ಮಣಿಯ
ಲಿಲ್ಲ. ಆದದರಿಂದ ಅವರು—ತಾನು ಯೆಹೂದ್ಯ
ನೆನ್ನುವ ಮೊರ್ದೆಕೈಯ ಹೆಮ್ಮೆಯ ಹಟವು ಸಾಗುವ
ದೇನೋ ನೋಡೋಣ ಎಂದುಕೊಂಡು ಅದನ್ನು ಹಾಮಾ
ನನಿಗೆ ತಿಳಿಸಿದರು.
5 ಮೊರ್ದೆಕೈಯು ತನಗೆ ಸಾಷ್ಟಾಂಗನಮಸ್ಕಾರ
ಮಾಡುವದಿಲ್ಲವೆಂದು ಹಾಮಾನನು ನೋಡಿ ಬಹು
6 ಕೋಪವುಳ್ಳವನಾದನು. ಅವನು ಮೊರ್ದೆಕೈಯೊ
ಬ್ಬನ ಮೇಲೆಯೇ ಕೈಯೆತ್ತುವದು ಸಾಲದೆಂದೆಣಿಸಿ
ಇವನು ಯೆಹೂದಜನಾಂಗದವನೆಂದು ಕೇಳಿದ ಮೇಲೆ
ಅಹಷ್ವೇರೋಷನ ರಾಜ್ಯದಲ್ಲಿದ್ದ ಮೊರ್ದೆಕೈಯ ಬಂಧು
ಗಳನ್ನು ಅಂದರೆ ಎಲ್ಲಾ ಯೆಹೂದ್ಯರನ್ನು ಸಂಹರಿಸ
7 ಬೇಕೆಂದು ನಿರ್ಣಯಿಸಿಕೊಂಡನು. ಅರಸನಾದ ಅಹ
ಷ್ವೇರೋಷನ [ಆಳಿಕೆಯ] ಹನ್ನೆರಡನೆಯ ವರುಷದ
ಮೊದಲನೆಯ ತಿಂಗಳಾದ 1)ಚೈತ್ರಮಾಸದಲ್ಲಿ ಹಾಮಾ
ನನ ಮುಂದೆ ಶುಭಮಾಸವೂ ಶುಭದಿವಸವೂ ಯಾವ
ವೆಂದು ತಿಳಿದುಕೊಳ್ಳುವದಕ್ಕೆ ಪೂರನ್ನು ಅಂದರೆ ಚೀಟ
ನ್ನು ಹಾಕಲು 2)ಚೀಟು ಹನ್ನೆರಡನೆಯ ತಿಂಗಳಾದ
3)ಫಾಲ್ಗುನಮಾಸದ ಹದಿಮೂರನೆಯ ದಿನಕ್ಕೆ ಬಿತ್ತು.
ಹಾಮಾನನು ಅರಸನಾದ ಅಹಷ್ವೇರೋಷನಿಗೆ—ನಿನ್ನ
ರಾಜ್ಯದ ಎಲ್ಲಾ ಸಂಸ್ಥಾನಗಳಲ್ಲಿ ಒಂದು ಜನಾಂಗ
ವಿರುತ್ತದೆ; ಅದು ಇತರ ಜನಾಂಗಗಳವರ ಮಧ್ಯದಲ್ಲಿ
ಹರಡಿದ್ದರೂ ಅವರಿಂದ ಪ್ರತ್ಯೇಕವಾಗಿಯೇ ಇರುತ್ತದೆ.
ಆ ಜನಾಂಗದವರ ನಿಯಮಗಳು ಇತರ ಎಲ್ಲಾ
ಜನಾಂಗಗಳವರ ನಿಯಮಗಳಿಗೆ ಬೇರೆಯಾಗಿರುತ್ತವೆ.
ಅರಸನ ನಿಯಮಗಳನ್ನಂತೂ ಅವರು ಅನುಸರಿಸುವದೇ
ಇಲ್ಲ. ಅರಸನು ಅವರನ್ನು ಸುಮ್ಮನೆ ಬಿಡುವದು
ಉಚಿತವಲ್ಲ. ಅರಸನ ಚಿತ್ತ ಬಂದರೆ ಅವರನ್ನು ಸಂಹರಿ
ಸಬೇಕು ಎಂಬ ರಾಯಸವು ಹೊರಡಲಿ; ಹಾಗೆ ಮಾಡಿ
ದರೆ ನಾನು ರಾಜಭಂಡಾರಗಳಿಗೆ ಸೇರಿಸುವದಕ್ಕೋಸ್ಕರ
ಹತ್ತುಸಾವಿರ 4)ತಲಾಂತು ಬೆಳ್ಳಿಯನ್ನು ತೂಕ ಮಾಡಿ
ಉದ್ಯೋಗಸ್ಥರ ಕೈಗೆ ಒಪ್ಪಿಸುವೆನು ಎಂದು ಹೇಳಿದನು.
ಆಗ ಅರಸನು ತನ್ನ ಕೈಯಲ್ಲಿದ್ದ ಮುದ್ರೆಯುಂಗುರ
ವನ್ನು ತೆಗೆದು ಅಗಾಗನ ವಂಶದವನೂ ಹಮ್ಮೆದಾತನ
ಮಗನೂ ಯೆಹೂದದ್ವೇಷಿಯೂ ಆದ ಹಾಮಾನನಿಗೆ
ಒಪ್ಪಿಸಿ ಅವನಿಗೆ—ಆ ಬೆಳ್ಳಿ ನಿನ್ನಲ್ಲೇ ಇರಲಿ; ನೀನು
ಆ ಜನರನ್ನು ಏನು ಬೇಕಾದರೂ ಮಾಡಬಹುದು
ಎಂದು ಹೇಳಿದನು.
ಮೊದಲನೆಯ ತಿಂಗಳಿನ ಹದಿಮೂರನೆಯ ದಿನದಲ್ಲಿ
ರಾಜಲೇಖಕರು ಕೂಡಿ ಬರಬೇಕು ಎಂದು ಅಪ್ಪಣೆ
ಯಾಯಿತು. ಅವರು ಹಾಮಾನನ ಆಜ್ಞಾನುಸಾರ
ಉಪರಾಜರಿಗೂ ಆಯಾ ಸಂಸ್ಥಾನಗಳ ಅಧಿಕಾರಿ
ಗಳಿಗೂ ಆಯಾ ಜನಾಂಗಗಳ ಅಧಿಪತಿಗಳಿಗೂ ಪತ್ರ
ಗಳನ್ನು ಬರೆದರು. ಆಯಾ ಸಂಸ್ಥಾನಗಳ ಬರಹ
ದಲ್ಲಿಯೂ ಆಯಾ ಜನಾಂಗಗಳ ಭಾಷೆಯಲ್ಲಿಯೂ
ಇದ್ದ ಆ ಪತ್ರಗಳು ಅರಸನಾದ ಅಹಷ್ವೇರೋಷನ
ಹೆಸರಿನಲ್ಲೇ ಲಿಖಿತವಾಗಿದ್ದವು; ಅವುಗಳಿಗೆ ರಾಜ
ಮುದ್ರೆಯೂ ಇತ್ತು. ಪತ್ರಗಳು ಅಂಚೆಯವರ
ಮುಖಾಂತರ ಎಲ್ಲಾ ರಾಜಸಂಸ್ಥಾನಗಳಿಗೆ ಕಳುಹಿಸ
ಲ್ಪಟ್ಟವು. ಅವುಗಳಲ್ಲಿ—ಒಂದೇ ದಿನದಲ್ಲಿ ಅಂದರೆ
ಹನ್ನೆರಡನೆಯ ತಿಂಗಳಾದ ಫಾಲ್ಗುನಮಾಸದ ಹದಿ
ಮೂರನೆಯ ದಿನದಲ್ಲಿ ಹುಡುಗರು, ಮುದುಕರು,
ಹೆಂಗಸರು, ಮಕ್ಕಳು ಎಂದು ನೋಡದೆ ಎಲ್ಲಾ ಯೆ
ಹೂದ್ಯರನ್ನು ಕೊಲ್ಲಿರಿ, ಸಂಹರಿಸಿರಿ, ನಿರ್ನಾಮಗೊಳಿ
ಸಿರಿ, ಅವರ ಸೊತ್ತನ್ನು ಸೂರೆಮಾಡಿರಿ ಎಂದೂ ಎಲ್ಲರೂ
ಆ ದಿನದಲ್ಲಿ ಸಿದ್ಧರಾಗಿರುವ ಹಾಗೆ ಈ ಪತ್ರದ
ಒಂದೊಂದು ಪ್ರತಿಯು ಪ್ರತಿಯೊಂದು ಸಂಸ್ಥಾನದಲ್ಲಿ
ರಾಜವಿಧಿಯೆಂದು ಎಲ್ಲಾ ಜನರಲ್ಲಿಯೂ ಪ್ರಕಟಿಸಲ್ಪಡ
ಬೇಕು ಎಂದೂ ಬರೆದಿತ್ತು. ಈ ನಿರ್ಣಯವು ಶೂಷನ್
ಕೋಟೆಯಲ್ಲಿ ಪ್ರಕಟವಾದಾಗಲೇ ಅಂಚೆಯವರು
ರಾಜಾಜ್ಞೆಯ ಮೇರೆಗೆ ಶೀಘ್ರವಾಗಿ ಹೊರಟರು. ಅರ

1) ಮೂಲ: ನೀಸಾನ್. 2) ಈ ಶಬ್ದಗಳು ಇಬ್ರಿಯ ಗ್ರಂಥದಲ್ಲಿ ಲೇಖಕನ ತಪ್ಪಿನಿಂದ ಬಿದ್ದುಹೋಗಿರಬಹುದು. 3) ಮೂ
ಅದಾರ್. 4) ಒಂದು ತಲಾಂತು ಬೆಳ್ಳಿಯಂದರೆ ಮೂರು ಸಾವಿರ ರೂಪಾಯಿ.

ಸನಾದರೋ ಹಾಮಾನನೊಡನೆ ಸುರಾಪಾನಮಾಡುವ
ದಕ್ಕೆ ಕೂತುಕೊಂಡನು. ಅತ್ತ ಶೂಷನ್ ಪಟ್ಟಣದಲ್ಲಿ
ತಳಮಳ ಉಂಟಾಯಿತು.

ಅರಸನ ಹತ್ತಿರ ಹೋಗಿ ಯೆಹೂದ್ಯರಿಗೋಸ್ಕರ
ಬಿನ್ನಹಮಾಡುವದಕ್ಕೆ ಮೊರ್ದೆಕೈಯು ಎಸ್ತೇರಳನ್ನು
ಸಮ್ಮತಿಪಡಿಸಿದ್ದು.

4 ಮೊರ್ದೆಕೈಯು ನಡೆದದ್ದನ್ನೆಲ್ಲಾ ಕೇಳಿದಾಗ ಬಟ್ಟೆ
ಗಳನ್ನು ಹರಕೊಂಡು ಗೋಣಿತಟ್ಟನ್ನು ಕಟ್ಟಿಕೊಂಡು
ಬೂದಿಯನ್ನು ಹಾಕಿಕೊಂಡು ಪಟ್ಟಣದ ಮಧ್ಯದಲ್ಲಿ
2 ಹೋಗುತ್ತಾ ದುಃಖಾತಿಶಯದಿಂದ ಗೋಳಾಡಿ ಅರ
ಮನೆಯ ಹೆಬ್ಬಾಗಲಿನ ಮುಂದೆ ಬಂದನು; ಗೋಣಿ
ತಟ್ಟು ಕಟ್ಟಿಕೊಂಡವರು ಒಳಗೆ ಹೋಗಬಾರದೆಂದು
3 ಅಪ್ಪಣೆಯಾಗಿತ್ತು. ಯಾವ ಯಾವ ಸಂಸ್ಥಾನಗಳಲ್ಲಿ
ಅರಸನ ಆಜ್ಞೆಯೂ ನಿರ್ಣಯವೂ ಪ್ರಕಟವಾದವೋ
ಅಲ್ಲೆಲ್ಲಾ ಯೆಹೂದ್ಯರೊಳಗೆ ಮಹಾದುಃಖವೂ ಉಪ
ವಾಸರೋದನಪ್ರಲಾಪಗಳೂ ಉಂಟಾದವು. ಅನೇಕರು
ಗೋಣಿತಟ್ಟನ್ನು ಹಾಸಿ ಬೂದಿಹಾಕಿಕೊಂಡು ಅದರ
ಮೇಲೆ ಕೂತರು.

4 ಎಸ್ತೇರಳ ಸೇವಕಿಯರೂ ಕಂಚುಕಿಗಳೂ ರಾಣಿ
ಯಾದ ಆಕೆಯ ಬಳಿಗೆ ಬಂದು ಅದನ್ನು ತಿಳಿಸಿ
ದಾಗ ಆಕೆಯು ಬಹಳವಾಗಿ ಕಳವಳಗೊಂಡು
ಮೊರ್ದೆಕೈಗೆ ವಸ್ತ್ರಗಳನ್ನು ಕಳುಹಿಸಿ—ಗೋಣಿ
ತಟ್ಟನ್ನು ತೆಗೆದುಬಿಟ್ಟು ಇವುಗಳನ್ನು ಧರಿಸಿಕೋ
ಎಂದು ಹೇಳಿಸಿದಳು; ಆದರೆ ಅವನು ಅವುಗಳನ್ನು
5 ಸ್ವೀಕರಿಸಲಿಲ್ಲ. ಆಗ ಆಕೆ ಅರಸನಿಂದ ತನ್ನ ಸೇವೆ
ಗೋಸ್ಕರ ನೇಮಿಸಲ್ಪಟ್ಟಿದ್ದ ಹತಾಕನೆಂಬ ರಾಜ
ಕಂಚುಕಿಯನ್ನು ಕರಿಸಿ—ನೀನು ಮೊರ್ದೆಕೈಯ ಬಳಿ
ಗೆ ಹೋಗಿ ಇದೇನು, ಯಾಕೆ ಎಂದು ವಿಚಾರಿಸಿ
6 ಕೊಂಡು ಬಾ ಎಂದು ಹೇಳಿಕಳುಹಿಸಿದಳು. ಹತಾ
ಕನು ಅರಮನೆಯ ಬಾಗಲಿನ ಮುಂದಿರುವ ಪಟ್ಟ
ಣದ ಬೈಲಿಗೆ ಮೊರ್ದೆಕೈಯ ಹತ್ತಿರ ಹೋದಾಗ
7 ಮೊರ್ದೆಕೈಯು ತನಗೆ ಸಂಭವಿಸಿದದ್ದೆಲ್ಲವನ್ನೂ ಹಾ
ಮಾನನು ಯೆಹೂದ್ಯರನ್ನು ನಾಶಮಾಡಲು ಅಪ್ಪಣೆ
ಪಡಕೊಳ್ಳುವದಕ್ಕಾಗಿ ರಾಜಭಂಡಾರಕ್ಕೆ ತೂಕಮಾಡಿ
ಕೊಡುತ್ತೇನೆಂದು ವಾಗ್ದಾನಮಾಡಿದ ಸರಿಯಾದ ಹಣದ
8 ಗಂಟು ಇಷ್ಟೆಂಬದನ್ನೂ ಅವನಿಗೆ ತಿಳಿಸಿದ್ದಲ್ಲದೆ ತಮ್ಮನ್ನು
ಸಂಹರಿಸುವದಕ್ಕೋಸ್ಕರ ಶೂಷನಿನಲ್ಲಿ ಪ್ರಕಟವಾದ
ರಾಜಶಾಸನದ ಒಂದು ಪ್ರತಿಯನ್ನು ಕೊಟ್ಟು—ಇದನ್ನು
ಎಸ್ತೇರಳಿಗೆ ತೋರಿಸಿ ವಿವರಿಸು; ಮತ್ತು ಆಕೆಯು
ಅರಸನ ಬಳಿಗೆ ಹೋಗಿ ಅವನು ಕೃಪೆ ತೋರಿಸುವಂತೆ
ಅವನ ಸನ್ನಿಧಿಯಲ್ಲಿ ತನ್ನ ಜನರಿಗೋಸ್ಕರ ಬಿನ್ನಹ
ಮಾಡಲಿ ಎಂದು ಹೇಳಿಕಳುಹಿಸಿದನು.

9 ಹತಾಕನು ಹಿಂದಿರುಗಿ ಬಂದು ಎಸ್ತೇರಳಿಗೆ ಮೊರ್ದೆ
10 ಕೈಯ ಮಾತುಗಳನ್ನು ತಿಳಿಸಲು ಎಸ್ತೇರಳು ಅವ
ನನ್ನು ತಿರಿಗಿ ಮೊರ್ದೆಕೈಯ ಹತ್ತಿರ ಕಳುಹಿಸಿ—
11 ಅರಸನು ಕರಿಸಿದರೆ ಹೊರತು ಅವನ ಬಳಿಗೆ ಒಳ
ಗಣ ಪ್ರಾಕಾರಕ್ಕೆ ಹೋಗುವವರು ಮರಣದಂಡನೆಗೆ
ಪಾತ್ರರಾಗುವರು ಎಂಬ ಒಂದೇ ನಿಯಮವು ಎಲ್ಲಾ
ಸ್ತ್ರೀಪುರುಷರಿಗುಂಟು; ಯಾರ ಕಡೆಗೆ ಅವನು ತನ್ನ
ಸುವರ್ಣದಂಡವನ್ನು ಚಾಚುವನೋ ಅವರು ಮಾತ್ರ
ಜೀವದಿಂದುಳಿಯುವರೆಂಬದು ಅರಸನ ಎಲ್ಲಾ ಸೇವ
ಕರಿಗೂ ಸಂಸ್ಥಾನಗಳ ಎಲ್ಲಾ ಜನರಿಗೂ ಗೊತ್ತುಂಟ
ಲ್ಲಾ; ನನಗಂತೂ ಮೂವತ್ತು ದಿನಗಳಿಂದ ಅರಸನ
ಬಳಿಗೆ ಹೋಗುವದಕ್ಕೆ ಆಮಂತ್ರಣವಾಗಲಿಲ್ಲ ಎಂದು
ಹೇಳಿಸಿದಳು. ಹತಾಕನು ಎಸ್ತೇರಳ ಮಾತುಗ 12
ಳನ್ನು ಮೊರ್ದೆಕೈಗೆ ತಿಳಿಸಿದಾಗ ಅವನು ತಿರಿಗಿ ಎಸ್ತೇ 13
ರಳಿಗೆ—ಯೆಹೂದ್ಯರೆಲ್ಲಾ ನಾಶವಾದರೂ ನಾನೊ
ಬ್ಬಳು ಅರಮನೆಯಲ್ಲಿರುವದರಿಂದ ಉಳಿಯುವೆನು
ಎಂದು ಭಾವಿಸಿಕೊಳ್ಳಬೇಡ. ನೀನು ಈಗ ಸುಮ್ಮನಿ 14
ದ್ದುಬಿಟ್ಟರೆ ಬೇರೆ ಕಡೆಯಿಂದ ಯೆಹೂದ್ಯರಿಗೆ ಸಹಾ
ಯವೂ ವಿಮೋಚನೆಯೂ ಉಂಟಾದಾವು; ನೀನಾದ
ರೋ ನಿನ್ನ ತಂದೆಯ ಮನೆಯವರೊಡನೆ ನಾಶವಾ
ಗುವಿ. ಇದಲ್ಲದೆ ನೀನು ಇಂಥ ಸಂದರ್ಭಕ್ಕಾಗಿಯೇ
ಪಟ್ಟಕ್ಕೆ ಬಂದಿರಬಹುದು, ಯಾರು ಬಲ್ಲರು ಎಂದು
ಹೇಳಿಕಳುಹಿಸಿದನು. ಆಗ ಎಸ್ತೇರಳು—ನೀನು 15, 16
ಹೋಗಿ ಶೂಷನಿನಲ್ಲಿ ಸಿಕ್ಕುವ ಎಲ್ಲಾ ಯೆಹೂದ್ಯರನ್ನು
ಕೂಡಿಸು; ನೀವೆಲ್ಲರೂ ಮೂರು ದಿನ ಹಗಲಿರುಳು
ಅನ್ನಪಾನಗಳನ್ನು ಬಿಟ್ಟು ನನಗೋಸ್ಕರ ಉಪವಾಸ
ಮಾಡಿರಿ; ಅದರಂತೆ ನಾನೂ ನನ್ನ ಸೇವಕಿಯರೊಡನೆ
ಉಪವಾಸದಿಂದಿರುವೆನು. ಅನಂತರ ನಾನು ವಿಧಿ
ಮೀರಿ ಅರಸನ ಬಳಿಗೆ ಹೋಗುವೆನು, ಸತ್ತರೆ ಸಾಯು
ತ್ತೇನೆ ಎಂದು ಮೊರ್ದೆಕೈಗೆ ಮರಳಿ ಹೇಳಿಸಿದಳು.
ಮೊರ್ದೆಕೈಯು ಹಿಂದಿರುಗಿ ಹೋಗಿ ಎಸ್ತೇರಳು ಹೇಳಿ 17
ದಂತೆಯೇ ಮಾಡಿದನು.

ಎಸ್ತೇರಳು ಅರಸನ ದಯೆಗೆ ಪಾತ್ರಳಾಗಿ ಅವನನ್ನೂ
ಹಾಮಾನನನ್ನೂ ಔತಣಕ್ಕೆ ಕರಿಸಿದ್ದು.

ಮೂರನೆಯ ದಿನದಲ್ಲಿ ಎಸ್ತೇರಳು ರಾಜವಸ್ತ್ರಭೂ 5
ಷಿತಳಾಗಿ ಅರಮನೆಯ ಒಳಗಣ ಪ್ರಾಕಾರವನ್ನು ಪ್ರವೇ
ಶಿಸಿ ರಾಜಮಂದಿರದ ಎದುರಿನಲ್ಲಿ ನಿಂತಳು. ಅರಸನು
ಆ ಮಂದಿರದಲ್ಲಿ ರಾಜಸಿಂಹಾಸನದ ಮೇಲೆ ಬಾಗಲಿ
ಗೆದುರಾಗಿ ಕೂತುಕೊಂಡಿದ್ದನು. ಅವನು ಪ್ರಾಕಾರ 2
ದಲ್ಲಿ ನಿಂತಿರುವ ಎಸ್ತೇರ್ ರಾಣಿಯನ್ನು ಕಂಡ ಕೂಡಲೆ
ಆಕೆಯ ಮೇಲೆ ದಯವಿಟ್ಟು ತನ್ನ ಕೈಯಲ್ಲಿದ್ದ
ಸುವರ್ಣದಂಡವನ್ನು ಆಕೆಯ ಕಡೆಗೆ ಚಾಚಿದನು.
ಎಸ್ತೇರಳು ಸಮೀಪಕ್ಕೆ ಹೋಗಿ ದಂಡದ ತುದಿಯನ್ನು
ಮುಟ್ಟಲು ಅರಸನು ಆಕೆಗೆ—ಎಸ್ತೇರ್ ರಾಣಿಯೇ, 3
ನಿನಗೇನು ಬೇಕು? ನಿನ್ನ ವಿಜ್ಞಾಪನೆ ಯಾವದು?
ನನ್ನ ಅರ್ಧರಾಜ್ಯವನ್ನು ಕೇಳಿದರೂ ನಿನಗೆ ಕೊಡು
ತ್ತೇನೆ ಅಂದನು. ಅದಕ್ಕೆ ಎಸ್ತೇರಳು—ಅರಸರ ಚಿತ್ತಕ್ಕೆ 4
ಬಂದರೆ ನಾನು ಈಹೊತ್ತು ತಮಗೋಸ್ಕರ ಸಿದ್ಧಮಾಡಿ
ಸಿರುವ ಔತಣಕ್ಕೆ ಹಾಮಾನನೊಡನೆ ಬರೋಣವಾಗಲಿ
ಎಂದು ಅರಿಕೆಮಾಡಿದಳು. ಕೂಡಲೆ ಅರಸನು— 5
ಎಸ್ತೇರಳ ವಿಜ್ಞಾಪನೆಯನ್ನು ನೆರವೇರಿಸುವದಕ್ಕೆ ಹಾ
ಮಾನನನ್ನು ತ್ವರೆಪಡಿಸಿರಿ ಎಂದು ಅಪ್ಪಣೆಮಾಡಿದನು;
ಮತ್ತು ಎಸ್ತೇರಳು ಮಾಡಿಸಿದ್ದ ಔತಣಕ್ಕೆ ಹಾಮಾನನ
ಜೊತೆಯಲ್ಲಿ ಹೋದನು. ದ್ರಾಕ್ಷಾರಸಪಾನಮಾಡು 6

ವಾಗ ಅರಸನು ತಿರಿಗಿ ಎಸ್ತೇರಳಿಗೆ—ನಿನ್ನ ವಿಜ್ಞಾಪನೆ
ಯಾವದು, ಹೇಳು; ಅದನ್ನು ನೆರವೇರಿಸುವೆನು. ನೀನು
ನನ್ನ ಅರ್ಧರಾಜ್ಯವನ್ನು ಕೇಳಿಕೊಂಡರೂ ಸರಿಯೇ,
7 ಅದನ್ನು ನಿನಗೆ ಕೊಡುವೆನು ಅನ್ನಲು ಎಸ್ತೇರಳು—
ಅರಸರು ನನ್ನ ಮೇಲೆ ಕಟಾಕ್ಷವಿಟ್ಟು ನಾನು ಕೇಳುವ
ದನ್ನು ಕೊಡುವದಕ್ಕೂ ನನ್ನ ವಿಜ್ಞಾಪನೆಯನ್ನು ನೆರ
8 ವೇರಿಸುವದಕ್ಕೂ ಮನಸ್ಸುಳ್ಳವರಾಗಿದ್ದರೆ ನಾನು ತಮ
ಗೋಸ್ಕರ ಸಿದ್ಧಮಾಡಿಸುವ ಔತಣಕ್ಕೆ ನಾಳೆಯೂ
ಹಾಮಾನನ ಜೊತೆಯಲ್ಲಿ ಬರೋಣವಾಗಲಿ; ಆಗ
ಅರಸರು ಹೇಳಿದಂತೆ ಮಾಡುವೆನು. ಇದೇ ನನ್ನ ಮನವಿ
ಎಂದು ಉತ್ತರಕೊಟ್ಟಳು.

ಹಾಮಾನನು ಮೊರ್ದೆಕೈಯನ್ನು ಗಲ್ಲಿಗೆ ಹಾಕಬೇಕೆಂದು
ನಿರ್ಣಯಿಸಿಕೊಂಡದ್ದು.

9 ಆ ದಿನ ಹಾಮಾನನು ಆನಂದಲಹರಿಯಲ್ಲಿ ಮನೆಗೆ
ಹೋಗುತ್ತಿರುವಾಗ ಮೊರ್ದೆಕೈಯು ತನಗೆ ಭಯ
ಪಡದೆ ತನ್ನ ಮುಂದೆ ಏಳದೆ ಅರಮನೆಯ ಹೆಬ್ಬಾಗಲಿ
ನಲ್ಲಿ ಕೂತಿರುವದನ್ನು ಕಂಡು ಅವನ ಮೇಲೆ ಕೋಪ
10 ಭರಿತನಾದನು. ಆದರೂ ತನ್ನನ್ನು ಬಿಗಿಹಿಡಿದು
ಕೊಂಡು ಮನೆಗೆ ಹೋಗಿ ತನ್ನ ಆಪ್ತರನ್ನೂ ಪತ್ನಿ
11 ಯಾದ ಜೆರೆಷಳನ್ನೂ ಕರಿಸಿ ಅವರ ಮುಂದೆ ತನ್ನ
ಘನೈಶ್ವರ್ಯಗಳನ್ನೂ ಪುತ್ರಬಾಹುಳ್ಯಾತಿಶಯವನ್ನೂ ಅರ
ಸನು ತನ್ನನ್ನು ಸನ್ಮಾನಿಸಿ ಎಲ್ಲಾ ಸರದಾರರಲ್ಲಿಯೂ
ರಾಜಸೇವಕರಲ್ಲಿಯೂ ತನಗೆ ಶ್ರೇಷ್ಠಸ್ಥಾನವನ್ನು
12 ಅನುಗ್ರಹಿಸಿದ್ದನ್ನೂ ವರ್ಣಿಸಿದ ಮೇಲೆ—ಅಹಹ!
ಎಸ್ತೇರ್ ರಾಣಿಯು ತಾನು ಸಿದ್ಧಮಾಡಿಸಿದ ಔತ
ಣಕ್ಕೆ ಅರಸನ ಜೊತೆಯಲ್ಲಿ ನನ್ನನ್ನು ಹೊರತಾಗಿ
ಇನ್ನಾರನ್ನೂ ಕರಿಸಲಿಲ್ಲ. ನಾಳೆಯೂ ಅರಸನ ಜೊತೆ
13 ಯಲ್ಲಿ ಬರಬೇಕೆಂದು ನನಗೆ ಹೇಳಿದ್ದಾಳೆ. ಆದರೂ
ಮೊರ್ದೆಕೈ ಎಂಬ ಯೆಹೂದ್ಯನು ಅರಮನೆಯ ಬಾಗ
ಲಿನಲ್ಲಿ ನನ್ನ ಕಣ್ಣು ಮುಂದೆ ಕೂತಿರುವ ವರೆಗೂ
ಇದೆಲ್ಲದರಿಂದಲೂ ನನಗೆ ತೃಪ್ತಿಯಾಗುವದಿಲ್ಲ ಅಂದ
14 ನು. ಅದಕ್ಕೆ ಅವನ ಪತ್ನಿಯಾದ ಜೆರೆಷಳೂ ಅವನ
ಎಲ್ಲಾ ಆಪ್ತರೂ—ಐವತ್ತು ಮೊಳ ಎತ್ತರವಾದ ಒಂದು
ಗಲ್ಲುಮರವನ್ನು ಸಿದ್ಧಮಾಡಿಸಿ ನಾಳೆ ಅರಸನ ಅಪ್ಪಣೆ
ಯನ್ನು ಪಡಕೊಂಡು ಮೊರ್ದೆಕೈಯನ್ನು ಅದಕ್ಕೆ
ನೇತುಹಾಕಿಸಬೇಕು; ಆ ಮೇಲೆ ನೀನು ಸಂತೋಷ
ದಿಂದ ಅರಸನ ಜೊತೆಯಲ್ಲಿ ಔತಣಕ್ಕೆ ಹೋಗಬಹುದು
ಎಂದು ಹೇಳಿದರು. ಹಾಮಾನನು ಈ ಮಾತಿಗೆ ಮೆಚ್ಚಿ
ಗಲ್ಲುಮರವನ್ನು ಸಿದ್ಧಮಾಡಿಸಿದನು.

ಮೊರ್ದೆಕೈಗೆ ಅರಸನಿಂದ ಮಹಾಘನವುಂಟಾದದ್ದು.

6 ಆ ರಾತ್ರಿಯಲ್ಲಿ ಅರಸನಿಗೆ ನಿದ್ರೆಬರಲಿಲ್ಲ; ಆದದ
ರಿಂದ ಸ್ಮರಿಸತಕ್ಕ ಪೂರ್ವವೃತ್ತಾಂತಗಳ ಗ್ರಂಥವನ್ನು
ಅವನು ತರಿಸಿ ಪಾರಾಯಣಮಾಡಿಸುತ್ತಿರುವಾಗ
2 ಅಹಷ್ವೇರೋಷ್‌ರಾಜನನ್ನು ಕೊಲ್ಲಬೇಕೆಂದು ದ್ವಾರ
ಪಾಲಕರಾದ ಬಿಗೆತಾನ್, ತೆರೆಷ್ ಎಂಬಿಬ್ಬರು ರಾಜ
ಕಂಚುಕಿಗಳು ಒಳಸಂಚುಮಾಡಿದ ಸಂಗತಿಯೂ ಅದು

ಮೊರ್ದೆಕೈಯು ಮುಖಾಂತರ ಬೈಲಿಗೆ ಬಂದ ಸಂ
ತಿಯೂ ಅದರಲ್ಲಿ ಸಿಕ್ಕಿದವು. ಆಗ ಅರಸನು—ಇ
ಕ್ಕಾಗಿ ಮೊರ್ದೆಕೈಗೆ ಯಾವ ಸ್ಥಾನಮಾನಗಳು ದೊ
ಕಿದವೆಂದು ವಿಚಾರಿಸಿದಾಗ ಅವನ ಸಾನ್ನಿಧ್ಯಸೇವ
ರಾದ ಪರಿವಾರದವರು—ಏನೂ ದೊರಕಲಿಲ್ಲ ಎಂದ
ಹೇಳಿದರು. ಅರಸನು—ಪ್ರಾಕಾರದಲ್ಲಿ ಯಾರಿದ್ದಾ
ಎಂದು ಕೇಳಿದನು. ಅಷ್ಟರಲ್ಲಿ ಹಾಮಾನನೇ ತಾನ
ಸಿದ್ಧಮಾಡಿಸಿದ ಗಲ್ಲಿಗೆ ಮೊರ್ದೆಕೈಯನ್ನು ನೇತ
ಹಾಕಿಸುವದಕ್ಕೆ ಅರಸನ ಅಪ್ಪಣೆ ಪಡಕೊಳ್ಳಬೇಕೆಂದ
ಅರಮನೆಯ ಹೊರಗಣ ಪ್ರಾಕಾರದಲ್ಲಿ ಬಂದಿದ್ದನು
ಆದದರಿಂದ ರಾಜಸೇವಕರು—ಇಗೋ, ಪ್ರಾಕಾರದಲ್ಲಿ
ಹಾಮಾನನಿರುತ್ತಾನೆ ಎಂದು ಬಿನ್ನವಿಸಿದರು. ಆ
ಅರಸನು—ಅವನು ಒಳಗೆ ಬರಲಿ ಅಂದನು. ಹಾಮ
ನನು ಬಂದಾಗ—ಅರಸನು ಯಾವನನ್ನು ಸನ್ಮಾನಿ
ಬೇಕೆಂದು ಇಷ್ಟವುಳ್ಳವನಾಗಿರುತ್ತಾನೋ ಅಂಥವನಿ
ಮಾಡತಕ್ಕದ್ದೇನು ಎಂದು ಅವನನ್ನು ಕೇಳಿದನು
ಹಾಮಾನನು—ಅರಸನು ನನ್ನನ್ನಲ್ಲದೆ ಇನ್ನಾರನ್ನ
ಸನ್ಮಾನಿಸುವದಕ್ಕೆ ಇಷ್ಟವುಳ್ಳವನಾಗಿರುವನು ಅಂದ
ಕೊಂಡು ಅರಸನಿಗೆ—ಒಬ್ಬನನ್ನು ಸನ್ಮಾನಿಸಬೇಕೆಂದ
ಅರಸನಿಗೆ ಇಷ್ಟವಿದ್ದರೆ ತಾನು ಧರಿಸಿಕೊಳ್ಳುವ ರಾಜ
ವಸ್ತ್ರಗಳನ್ನೂ ಸವಾರಿಮಾಡುವ ಪಟ್ಟದ ಕುದುರೆಯ
ನ್ನೂ ತರಿಸಿ ಆ ವಸ್ತ್ರಗಳನ್ನೂ ಕುದುರೆಯನ್ನೂ ಪ್ರಧಾ
ನರಾದ ಅರಸನ ಸರದಾರರಲ್ಲೊಬ್ಬನ ವಶಕ್ಕೆ ಕೊಟ್ಟ
ಅರಸನು ಸನ್ಮಾನಿಸಬೇಕೆಂದಿರುವ ಪುರುಷನಿಗೆ ಆ
ರಾಜವಸ್ತ್ರಗಳನ್ನು ಧಾರಣೆಮಾಡಿಸಿ ಅವನನ್ನು ಆ
ಕುದುರೆಯ ಮೇಲೆ ಕುಳ್ಳಿರಿಸಿ ಪಟ್ಟಣದ ಮಧ್ಯದಲ್ಲಿ
ಮೆರವಣಿಗೆಮಾಡಿಸುತ್ತಾ ಅವನ ಮುಂದೆ—ಅರಸನ
ಸನ್ಮಾನಿಸಬೇಕೆಂದಿರುವವನನ್ನು ಗೌರವಿಸುವ ರೀ
ಯು ಇದೇ ಎಂದು ಪ್ರಕಟಣೆಮಾಡಿಸಬೇಕು ಎಂದ
ಹೇಳಿದನು. ಕೂಡಲೆ ಅರಸನು ಹಾಮಾನನಿಗೆ—
ನೀನು ಹೇಳಿದ ವಸ್ತ್ರಗಳನ್ನೂ ಕುದುರೆಯನ್ನೂ ಬೇಗ
ತೆಗೆದುಕೊಂಡು ಬಂದು ಅರಮನೆಯ ಬಾಗಲಿನಲ್ಲಿ
ಕೂತಿರುವ ಮೊರ್ದೆಕೈ ಎಂಬ ಯೆಹೂದ್ಯನಿಗೆ ಹಾ
ಯೇ ಮಾಡು; ನೀನು ಹೇಳಿದವುಗಳಲ್ಲಿ ಒಂದನ್ನೂ
ನೆರವೇರಿಸದೆ ಬಿಡಬೇಡ ಎಂದು ಅಪ್ಪಣೆಮಾಡಿದನು
ಹಾಮಾನನು ಆ ವಸ್ತ್ರಗಳನ್ನೂ ಕುದುರೆಯನ್ನೂ ತೆಗ
ದುಕೊಂಡು ಬಂದು ಮೊರ್ದೆಕೈಯನ್ನು ಭೂಷಿಸಿ
ಪಟ್ಟಣದ ಮಧ್ಯದಲ್ಲಿ ಮೆರವಣಿಗೆಮಾಡಿಸಿ ಅವನ
ಮುಂದೆ—ಅರಸನು ಸನ್ಮಾನಿಸಬೇಕೆಂದಿರುವವನನ್ನು
ಗೌರವಿಸುವ ರೀತಿಯು ಇದೇ ಎಂದು ಪ್ರಕಟಣೆಮಾಡಿ
ಸಿದನು.

ಮೊರ್ದೆಕೈಯು ತಿರಿಗಿ ಅರಮನೆಯ ಬಾಗಲಿಗ
ಹೋದನು. ಹಾಮಾನನಾದರೋ ಶೋಕಾರ್ತನಾಗಿ
ಮೋರೆಮುಚ್ಚಿಕೊಂಡು ಶೀಘ್ರವಾಗಿ ಮನೆಗೆ ಹೋಗಿ
ತನ್ನ ಹೆಂಡತಿಯಾದ ಜೆರೆಷಳ ಮತ್ತು ಎಲ್ಲಾ ಆಪ್ತರ
ಮುಂದೆ ತನಗೆ ಸಂಭವಿಸಿದ್ದನ್ನೆಲ್ಲಾ ತಿಳಿಸಿದನು. ಆಗ
ಅವನ ಪಂಡಿತರೂ ಹೆಂಡತಿಯೂ ಅವನಿಗೆ—ಯಾವನ
ಮುಂದೆ ನಿನ್ನ ಪತನವು ಪ್ರಾರಂಭವಾಯಿತೋ ಆ
ಮನುಷ್ಯನು ಯೆಹೂದಸಂತಾನದವನಾಗಿದ್ದರೆ ನೀನು
ಗೆಲ್ಲಲಾರಿ, ಅವನ ಮುಂದೆ ಬಿದ್ದು ಹಾಳಾಗುವಿ ಅಂದ

4 ರು. ಅವರು ಇನ್ನೂ ಅವನೊಡನೆ ಮಾತಾಡುತ್ತಿರು
ವಾಗಲೇ ರಾಜಕಂಚುಕಿಗಳು ಬಂದು ಎಸ್ತೇರಳು
ಮಾಡಿಸಿರುವ ಔತಣಕ್ಕೆ ಬೇಗ ಬರಬೇಕೆಂದು ಹಾಮಾ
ನನನ್ನು ಕರೆದರು.

### ಹಾಮಾನನಿಗೆ ಮರಣಶಿಕ್ಷೆಯಾದದ್ದೂ ಅವನ ಸ್ಥಾನಾಧಿಕಾರಗಳು ಮೊರ್ದೆಕೈಗೆ ಪ್ರಾಪ್ತವಾದದ್ದೂ.

7 ಅರಸನು ಹಾಮಾನನೊಡನೆ ಎಸ್ತೇರಳ ಗೃಹಕ್ಕೆ
2 ಔತಣಕ್ಕೋಸ್ಕರ ಬಂದನು. ಅವನು ಈ ಎರ
ಡನೆಯ ದಿನದಲ್ಲಿಯೂ ದ್ರಾಕ್ಷಾರಸಪಾನಮಾಡುತ್ತಿರು
ವಾಗ ಎಸ್ತೇರಳಿಗೆ—ಎಸ್ತೇರ್‌ರಾಣಿಯೇ, ನಿನ್ನ ವಿಜ್ಞಾ
ಪನೆ ಯಾವದು, ಹೇಳು; ಅದನ್ನು ನೆರವೇರಿಸುವೆನು.
ನೀನು ನನ್ನ ಅರ್ಧರಾಜ್ಯವನ್ನು ಕೇಳಿಕೊಂಡರೂ ಸರಿ
ಯೇ, ಅದನ್ನು ನಿನಗೆ ಕೊಡುವೆನು ಎಂದು ಹೇಳಿ
3 ದನು. ಆಗ ಎಸ್ತೇರ್‌ರಾಣಿಯು—ಅರಸನು ನನ್ನ
ಮೇಲೆ ಕಟಾಕ್ಷವಿಟ್ಟು ಸಮ್ಮತಿಸುವದಾದರೆ ನನ್ನ
ವಿಜ್ಞಾಪನೆಯನ್ನೂ ಪ್ರಾರ್ಥನೆಯನ್ನೂ ಲಾಲಿಸಿ ನನ್ನ
ಜೀವವನ್ನೂ ಜನಾಂಗವನ್ನೂ ಉಳಿಯಗೊಡಿಸಬೇಕು.
4 ಜನರು ನಮ್ಮನ್ನು ಕೊಂದು ಸಂಹರಿಸಿ ನಿರ್ನಾಮಗೊ
ಳಿಸುವ ಹಾಗೆ ನಾವು ಮಾರಲ್ಪಟ್ಟೆವು. ದಾಸದಾಸಿಯ
ರಾಗುವದಕ್ಕೆ ಮಾರಲ್ಪಟ್ಟಿದ್ದರೆ 1)ಆ ಕಷ್ಟದ ವಿಷಯ
ದಲ್ಲಿ ರಾಜನನ್ನು ತೊಂದರೆಪಡಿಸುವದು ಯೋಗ್ಯವಲ್ಲ
ವೆಂದು ಸುಮ್ಮನಿರುತ್ತಿದ್ದೆನು ಎಂದು ಉತ್ತರಕೊಟ್ಟಳು.
5 ಅಹಷ್ವೇರೋಷ್‌ರಾಜನು ಎಸ್ತೇರ್‌ರಾಣಿಯನ್ನು—
ಇಂಥ ದುಷ್ಕೃತ್ಯದ ಮೇಲೆ ಮನಸ್ಸಿಟ್ಟವನು ಯಾ
6 ವನು? ಅವನೆಲ್ಲಿ ಎಂದು ಕೇಳಲು ಆಕೆಯು—ನಮ್ಮ
ನ್ನು ಬಾಧಿಸಬೇಕೆಂದಿರುವ ಹಗೆಗಾರನು ಈ ದುಷ್ಟ
ಹಾಮಾನನೇ ಅಂದಳು. ಇದನ್ನು ಕೇಳಿದೊಡನೆ ಹಾ
ಮಾನನು ಅರಸನ ಮತ್ತು ರಾಣಿಯ ಮುಂದೆ ಬೆಪ್ಪಾ
7 ದನು. ಅರಸನು ರೌದ್ರಾವೇಶನಾಗಿ ದ್ರಾಕ್ಷಾರಸ
ಪಾನಮಾಡುವದನ್ನು ಬಿಟ್ಟೆದ್ದು ಅರಮನೆಯ ತೋಟಕ್ಕೆ
ಹೋದನು. ಹಾಮಾನನಾದರೋ ಅರಸನಿಂದ ತನಗೆ
ಕೇಡು ಸಿದ್ಧವಾಯಿತೆಂದು ತಿಳಿದು ಎಸ್ತೇರಳ ಹತ್ತಿರ
ತನ್ನ ಪ್ರಾಣರಕ್ಷಣೆಯ ನಿಮಿತ್ತವಾಗಿ ಬಿನ್ನಹಮಾ
8 ಡಲು ನಿಂತುಕೊಂಡನು. ಅರಸನು ಅರಮನೆಯ
ತೋಟದಿಂದ ತಾನು ದ್ರಾಕ್ಷಾರಸಪಾನಮಾಡಿದ ಗೃಹ
ಕ್ಕೆ ತಿರಿಗಿ ಬಂದು ಎಸ್ತೇರಳು ಒರಗಿಕೊಳ್ಳುವ ಲೋ
ಡಿನ ಮೇಲೆ ಹಾಮಾನನು ಬಿದ್ದುಕೊಂಡಿರುವದನ್ನು
ಕಂಡು—ಇವನು ರಾಣಿಯನ್ನು ನನ್ನ ಮುಂದೆಯೇ
ಅರಮನೆಯಲ್ಲಿ ಭಂಗಪಡಿಸಲೂ ಬೇಕೆಂದಿರುತ್ತಾನೋ
ಅಂದನು. ಅರಸನ ಬಾಯಿಂದ ಈ ಮಾತು ಹೊರಟ
ಕೂಡಲೆ ಸೇವಕರು ಹಾಮಾನನ ಮೋರೆಗೆ ಮುಸುಕು
9 ಹಾಕಿದರು. ಇದಲ್ಲದೆ ಅರಸನ ಸೇವೆಮಾಡುತ್ತಿದ್ದ
ಕಂಚುಕಿಗಳಲ್ಲೊಬ್ಬನಾದ ಹರ್ಬೋನನು—ಇಗೋ
ಈ ಹಾಮಾನನ ಮನೆಯ ಹತ್ತಿರ ಅರಸನ ಪ್ರಾಣರಕ್ಷಣೆ
ಗಾಗಿ ಸಮಾಚಾರವನ್ನು ತಿಳಿಸಿದ ಮೊರ್ದೆಕೈಯನ್ನು
ನೇತುಹಾಕಿಸುವದಕ್ಕೆ ಇವನಿಂದ ಸಿದ್ಧಮಾಡಲ್ಪಟ್ಟ
ಐವತ್ತು ಮೊಳ ಎತ್ತರವಾದ ಗಲ್ಲುಮರವಿರುತ್ತದಲ್ಲಾ
ಅನ್ನಲು ಅರಸನು—ಇವನನ್ನು ಅದಕ್ಕೆ ನೇತುಹಾಕಿರಿ
ಎಂದು ಆಜ್ಞಾಪಿಸಿದನು. ಹಾಮಾನನನ್ನು ಮೊರ್ದೆ 10
ಕೈಗೋಸ್ಕರ ಸಿದ್ಧಮಾಡಿದ ಗಲ್ಲಿಗೆ ಹಾಕಿದರು. ಅರಸನ
ಕೋಪವೂ ಶಾಂತವಾಯಿತು.

ಆ ದಿನದಲ್ಲಿ ಅರಸನಾದ ಅಹಷ್ವೇರೋಷನು ಯೆ 8
ಹೂದ್ಯರ ವೈರಿಯಾದ ಹಾಮಾನನ ಮನೆಯನ್ನು
ಎಸ್ತೇರ್‌ರಾಣಿಗೆ ಕೊಟ್ಟನು. ಆಕೆಯು ಮೊರ್ದೆಕೈ
ಗೂ ತನಗೂ ಇರುವ ಸಂಬಂಧವನ್ನು ತಿಳಿಸಿದ್ದರಿಂದ
ಅರಸನು ಮೊರ್ದೆಕೈಯನ್ನು ಒಡ್ಡೋಲಗದಲ್ಲಿ ಸೇರಿಸಿ
ತಾನು ಹಾಮಾನನಿಂದ ತೆಗಿಸಿದ್ದ ತನ್ನ ಮುದ್ರೆಯುಂಗು 2
ರವನ್ನು ಅವನಿಗೇ ಕೊಟ್ಟನು; ಎಸ್ತೇರಳು ಹಾಮಾ
ನನ ಮನೆಯ ಆಡಳಿತೆಯನ್ನು ಅವನಿಗೆ ಒಪ್ಪಿಸಿದಳು.

### ಯೆಹೂದ್ಯರನ್ನು ಸಂಹರಿಸಬೇಕೆಂಬ ರಾಜಶಾಸನವನ್ನು ಮೊರ್ದೆಕೈಯು ರದ್ದುಮಾಡಿಸಿದ್ದು.

ಎಸ್ತೇರಳು ತಿರಿಗಿ ಅರಸನನ್ನು ಮಾತಾಡಿಸುವದಕ್ಕೆ 3
ಹೋಗಿ ಅವನ ಪಾದಗಳಿಗೆ ಬಿದ್ದು ಅತ್ತು—ಅಗಾಗನ
ವಂಶದವನಾದ ಹಾಮಾನನು ಯೆಹೂದ್ಯರ ಹಾನಿಗಾಗಿ
ಕಲ್ಪಿಸಿದ ಅಪಾಯಗಳನ್ನು ನಿವಾರಿಸಬೇಕೆಂದು ವಿಜ್ಞಾ
ಪಿಸಲು ಅರಸನು ಸುವರ್ಣರಾಜದಂಡವನ್ನು ಆಕೆಯ 4
ಕಡೆಗೆ ಚಾಚಿದ್ದರಿಂದ ಆಕೆಯು ಎದ್ದು ಅರಸನ ಮುಂದೆ
ನಿಂತು ಅವನಿಗೆ—ಅರಸನು ನನ್ನ ಮೇಲೆ ಕಟಾಕ್ಷ 5
ವಿಟ್ಟು ನನ್ನನ್ನು ಮೆಚ್ಚಿ ನಾನು ಹೇಳುವ ಮಾತು
ಉಚಿತವಾದದ್ದೆಂದೆಣಿಸಿ ಅದಕ್ಕೆ ಸಮ್ಮತಿಸುವದಾದರೆ
ಅರಸನ ಎಲ್ಲಾ ಸಂಸ್ಥಾನಗಳಲ್ಲಿರುವ ಯೆಹೂದ್ಯ
ರನ್ನು ಸಂಹರಿಸುವದರ ವಿಷಯವಾಗಿ ಅಗಾಗನ ವಂಶ
ದವನೂ ಹಮ್ಮೆದಾತನ ಮಗನೂ ಆದ ಹಾಮಾನನು
ಬರಿಸಿದ ಪತ್ರಗಳನ್ನು ರದ್ದುಮಾಡುವದಕ್ಕಾಗಿ ರಾಯ
ಸವನ್ನು ಪ್ರಕಟಿಸಬೇಕು. ನನ್ನ ಜನರಿಗೆ ಕೇಡುಸಂಭ 6
ವಿಸುವದನ್ನು ನೋಡಿ ನಾನು ಸಹಿಸುವದು ಹೇಗೆ?
ನನ್ನ ಕುಲನಾಶನವನ್ನು ನೋಡುತ್ತಾ ಸುಮ್ಮನಿರುವದು
ಹೇಗೆ ಎಂದು ಬಿನ್ನವಿಸಿದಳು. ಆಗ ಅಹಷ್ವೇರೋಷ್ 7
ರಾಜನು ರಾಣಿಯಾದ ಎಸ್ತೇರಳಿಗೂ ಯೆಹೂದ್ಯನಾದ
ಮೊರ್ದೆಕೈಗೂ—ಹಾಮಾನನು ಯೆಹೂದ್ಯರಿಗೆ ವಿರೋ
ಧವಾಗಿ ಕೈಯೆತ್ತಿದದರಿಂದ ಅವನನ್ನು ಗಲ್ಲಿಗೆ ಹಾಕಿಸಿ
ಅವನ ಸೊತ್ತನ್ನು ಎಸ್ತೇರಳಿಗೆ ದಾನಮಾಡಿದ್ದೇನಲ್ಲಾ!
ಅರಸನ ಹೆಸರಿನಲ್ಲಿ ಬರೆಯಲ್ಪಟ್ಟು ರಾಜಮುದ್ರೆಯಿ 8
ರುವ ಲೇಖನವನ್ನು ಯಾರೂ ರದ್ದುಮಾಡಕೂಡ
ದಷ್ಟೆ. ಹೀಗಿರುವದರಿಂದ ಯೆಹೂದ್ಯರ ವಿಷಯವಾಗಿ
ನಿಮಗೆ ಸರಿತೋರುವದನ್ನು ಅರಸನ ಹೆಸರಿನಲ್ಲಿ ನೀವೂ
ಬರೆಯಿಸಿ ರಾಜಮುದ್ರೆಯನ್ನು ಹಾಕಿರಿ ಎಂದು ಹೇಳಿ
ದನು. ಆಗ ರಾಜಲೇಖಕರು ಕರೆಯಲ್ಪಟ್ಟರು. 9
ಅವರು ಮೂರನೆಯ ತಿಂಗಳಾದ 2)ಜೇಷ್ಠಮಾಸದ
ಇಪ್ಪತ್ತಮೂರನೆಯ ದಿನದಲ್ಲಿ ಬಂದು ಮೊರ್ದೆಕೈಯ
ಆಜ್ಞಾನುಸಾರ ಯೆಹೂದ್ಯರಿಗೂ ಹಿಂದುಸ್ಥಾನ ಮೊ
ದಲುಗೊಂಡು ಕೂಷಿನ ವರೆಗೂ ಇರುವ ನೂರಿಪ್ಪತ್ತೇಳು

1)ಮೂಲ: ಅಸ್ಪಷ್ಟ. 2) ಮೂಲ: ಸೀವಾನ್.

ಸಂಸ್ಥಾನಗಳ ಉಪರಾಜರಿಗೂ ದೇಶಾಧಿಪತಿಗಳಿಗೂ
ಅಧಿಕಾರಿಗಳಿಗೂ ಪತ್ರಗಳನ್ನು ಬರೆದರು. ಆ ಪತ್ರ
ಗಳು ಆಯಾ ಸಂಸ್ಥಾನಗಳ ಬರಹಗಳಲ್ಲಿಯೂ
ಆಯಾ ಜನಾಂಗಗಳ ಭಾಷೆಗಳಲ್ಲಿಯೂ ಇದ್ದವು.
ಯೆಹೂದ್ಯರಿಗೆ ಬರೆದ ಪತ್ರಗಳು ಯೆಹೂದ್ಯ ಬರಹದ
10 ಲ್ಲಿಯೂ ಭಾಷೆಯಲ್ಲಿಯೂ ಲಿಖಿತವಾದವು. ಮೊರ್ದೆ
ಕೈಯು ಅರಸನ ಹೆಸರಿನಲ್ಲಿ ಬರೆಯಲ್ಪಟ್ಟ ಅವುಗಳಿಗೆ
ರಾಜಮುದ್ರೆಯನ್ನು ಹಾಕಿ ಅರಮನೆಯ ಅಶ್ವಾಲಯ
ಗಳಲ್ಲಿ ಹುಟ್ಟಿ ಬೆಳೆದ ಸವಾರಿಕುದುರೆಗಳನ್ನು ಹತ್ತಿ
ಕೊಂಡಿದ್ದ ಅಂಚೆಯವರ ಮುಖಾಂತರ ಕಳುಹಿಸಿದನು.
11 ಆ ಪತ್ರಗಳಿಂದ ಅರಸನು—ಅಹಷ್ವೇರೋಷ್‍ರಾಜನ
ಎಲ್ಲಾ ಸಂಸ್ಥಾನಗಳ ಆಯಾ ಪಟ್ಟಣಗಳಲ್ಲಿರುವ ಯೆ
ಹೂದ್ಯರು ಒಂದೇ ದಿನದಲ್ಲಿ ಅಂದರೆ ಹನ್ನೆರಡನೆಯ
12 ತಿಂಗಳಾದ ಫಾಲ್ಗುನಮಾಸದ ಹದಿಮೂರನೆಯ ದಿನ
ದಲ್ಲಿ ಕೂಡಿಕೊಂಡು ತಮ್ಮ ಪ್ರಾಣರಕ್ಷಣೆಗಾಗಿ ಎದ್ದು
ತಮಗೆ ವಿರೋಧವಾಗಿ ಆಯುಧಗಳೊಡನೆ ನೆರೆದು
ಬರುವ ಎಲ್ಲಾ ಜನಾಂಗಗಳವರನ್ನೂ ಸಂಸ್ಥಾನಗಳವ
ರನ್ನೂ ಅವರ ಹೆಂಡತಿಯರು ಮಕ್ಕಳು ಸಹಿತವಾಗಿ
ಕೊಂದು ಸಂಹರಿಸಿ ನಿರ್ನಾಮಗೊಳಿಸಿ ಅವರ ಸೊತ್ತ
13 ನ್ನು ಸೂರೆಮಾಡಬೇಕೆಂದೂ ಈ ಪತ್ರದ ಒಂದೊಂದು
ಪ್ರತಿಯನ್ನು ಪ್ರತಿಯೊಂದು ಸಂಸ್ಥಾನದಲ್ಲಿ ರಾಜವಿಧಿ
ಯೆಂದು ಎಲ್ಲಾ ಜನರಲ್ಲಿ ಪ್ರಕಟಿಸಬೇಕೆಂದೂ ಆ ದಿನ
ದಲ್ಲಿ ಯೆಹೂದ್ಯರು ತಮ್ಮ ಶತ್ರುಗಳಿಗೆ ಮುಯ್ಯಿತೀರಿ
ಸುವದಕ್ಕೆ ಸಿದ್ಧರಾಗಿರಬೇಕೆಂದೂ ಅಪ್ಪಣೆಮಾಡಿದನು.
14 ಈ ರಾಜಾಜ್ಞೆಯು ಶೂಷನ್ ಕೋಟೆಯಲ್ಲಿ ಪ್ರಕಟವಾ
ದಾಗಲೇ ಅರಮನೆಯ ಸವಾರಿಕುದುರೆಗಳನ್ನು ಹತ್ತಿ
ಕೊಂಡಿದ್ದ ಅಂಚೆಯವರು ಅರಸನ ಅಪ್ಪಣೆಯಿಂದ ಪ್ರೇ
ರಿತರಾಗಿ ಅತಿಶೀಘ್ರವಾಗಿ ಹೊರಟರು.
15 ಮೊರ್ದೆಕೈಯಾದರೋ ನೀಲ ಶುಭ್ರ ವರ್ಣಗ
ಳುಳ್ಳ ರಾಜವಸ್ತ್ರಗಳನ್ನು ಧರಿಸಿ ಬಂಗಾರದ ದೊಡ್ಡ
ಪಟ್ಟವನ್ನು ಹಣೆಗೆ ಕಟ್ಟಿಕೊಂಡು ರಕ್ತವರ್ಣದ ನಾರಿನ
ಶಾಲನ್ನು ಹೊದ್ದು ರಾಜಸನ್ನಿಧಿಯಿಂದ ಹೊರಟನು.
ಶೂಷನ್ ಪಟ್ಟಣದಲ್ಲಿ ಸಂತೋಷದ ಆರ್ಭಟವು ಕೇಳಿ
16 ಸಿತು. ಅಲ್ಲಿನ ಯೆಹೂದ್ಯರು ಸಂತೋಷ ಹರ್ಷ
17 ಪ್ರಭಾವ ತೇಜಸ್ಸುಗಳುಳ್ಳವರಾದರು. ರಾಜನಿರ್ಣಯ
ಶಾಸನಗಳು ಪ್ರಕಟಿಸಲ್ಪಟ್ಟ ಪ್ರತಿಯೊಂದು ಸಂಸ್ಥಾನ
ದಲ್ಲಿಯೂ ಪಟ್ಟಣದಲ್ಲಿಯೂ ಇದ್ದ ಯೆಹೂದ್ಯರಿಗೆ
ಶುಭದಿನವುಂಟಾಯಿತು; ಅವರು ಸಂತೋಷದಿಂದಲೂ
ಉಲ್ಲಾಸದಿಂದಲೂ ಭಕ್ಷ್ಯಭೋಜನಮಾಡಿದರು. ದೇಶದ
ಜನರಲ್ಲಿ ಅನೇಕರು ಯೆಹೂದ್ಯರಿಗೆ ಭಯಪಟ್ಟು ಅವರ
ಮತಕ್ಕೆ ಸೇರಿದರು.

ಯೆಹೂದ್ಯರು ತಮ್ಮ ವೈರಿಗಳನ್ನು ವಧಿಸಿ
ಮಹೋತ್ಸವಮಾಡಿದ್ದು.

9 ಅರಸನ ಆಜ್ಞಾನಿರ್ಣಯಗಳನ್ನು ನೆರವೇರಿಸತಕ್ಕ
ಹನ್ನೆರಡನೆಯ ತಿಂಗಳಾದ ಫಾಲ್ಗುನಮಾಸದ ಹದಿಮೂ
ರನೆಯ ದಿನವು ಬಂತು. ಆ ದಿವಸದಲ್ಲಿ ಯೆಹೂದ್ಯ
ರನ್ನು ಸ್ವಾಧೀನಮಾಡಿಕೊಳ್ಳಬಹುದೆಂದು ಅವರ
ವೈರಿಗಳು ನಿರೀಕ್ಷಿಸಿಕೊಂಡಿದ್ದರು. ಆದರೆ ಅದಕ್ಕೆ
ಬದಲಾಗಿ ಯೆಹೂದ್ಯರೇ ತಮ್ಮ ಹಗೆಗಳನ್ನು ಸ್ವಾಧೀ
ಮಾಡಿಕೊಂಡರು. ಆದದರಿಂದ ಅರಸನಾದ ಅಹಷ್ವೇ
ರೋಷನ ಸಮಸ್ತಸಂಸ್ಥಾನಗಳ ಆಯಾ ಪಟ್ಟಣಗ
ಲ್ಲಿದ್ದ ಯೆಹೂದ್ಯರು ತಮಗೆ ಕೇಡುಬಯಸಿದವರಿ
ವಿರೋಧವಾಗಿ ಕೈಯೆತ್ತುವದಕ್ಕೆ ಕೂಡಿಕೊಂಡಾ
ಯಾರೂ ಅವರೆದುರಿನಲ್ಲಿ ನಿಲ್ಲಲಿಲ್ಲ. ಅವರಿಂ
ಎಲ್ಲಾ ಜನಾಂಗದವರಿಗೆ ಭಯವುಂಟಾಗಿತ್ತು; ಇ
ಲ್ಲದೆ ಅರಮನೆಯಲ್ಲಿ ಮೊರ್ದೆಕೈಯ ಪ್ರಾಬಲ್ಯ
ಹೆಚ್ಚಾಗುತ್ತಾ ಬಂದಹಾಗೆಲ್ಲಾ ಅವನ ಸುದ್ದಿಯ
ಸಕಲ ಸಂಸ್ಥಾನಗಳಲ್ಲಿಯೂ ಹಬ್ಬಿದ್ದರಿಂದ ಸಮ
ಸಂಸ್ಥಾನಾಧಿಕಾರಿಗಳೂ ಉಪರಾಜರೂ ದೇಶಾಧಿಪ
ಗಳೂ ಇತರ ರಾಜೋದ್ಯೋಗಸ್ಥರೂ ಅವನಿಗೆ ಹೆ
ಯೆಹೂದ್ಯರಿಗೆ ಸಹಾಯಕರಾದರು. ಹೀಗೆ ಯೆಹ
ದ್ಯರು ತಮ್ಮ ಎಲ್ಲಾ ವೈರಿಗಳನ್ನು ಸೋಲಿಸಿ ಕ
ಯಿಂದ ಹೊಡೆದು ಕೊಂದು ನಿರ್ನಾಮಗೊಳಿಸಿದರ
ತಮ್ಮ ಹಗೆಗಳನ್ನು ಇಷ್ಟವಿದ್ದಂತೆ ಮಾಡಿದರು. ಅವ
ಶೂಷನ್ ಕೋಟೆಯಲ್ಲೇ ಐನೂರು ಮಂದಿಯನ
ಕೊಂದುಬಿಟ್ಟರು. ಹತರಾದವರಲ್ಲಿ ಪರ್ಷಂದಾ
ದಲ್ಫೋನ್, ಅಸ್ಪಾತ, ಪೋರಾತ, ಅದಲ್ಯ, ಅ
ದಾತ, ಪರ್ಮಷ್ಟ, ಅರೀಸೈ, ಅರಿದೈ, ವೈಜಾತ ಎಂಬ
ರಿದ್ದರು. ಇವರು ಯೆಹೂದ್ಯರನ್ನು ದ್ವೇಷಿಸುತ್ತಿ
ಹಮ್ಮೆದಾತನ ಮಗನಾದ ಹಾಮಾನನ ಹತ್ತು ಮಂ
ಮಕ್ಕಳು. ಇಷ್ಟು ಮಂದಿಯನ್ನು ಕೊಂದರೂ ಯೆ
ಹೂದ್ಯರು ಸುಲಿಗೆಗೆ ಕೈಹಾಕಲಿಲ್ಲ.
ಆ ದಿವಸ ಶೂಷನ್‍ಕೋಟೆಯಲ್ಲಿ ಹತರಾದವ
ಸಂಖ್ಯೆಯು ಅರಸನಿಗೆ ತಿಳಿದುಬಂದಾಗ ಅರಸ
ಎಸ್ತೇರ್‍ರಾಣಿಗೆ—ಯೆಹೂದ್ಯರು ಶೂಷನ್‍ಕೋಟೆ
ಲ್ಲೇ ಐನೂರು ಮಂದಿಯನ್ನೂ ಹಾಮಾನನ ಹತ
ಮಂದಿ ಮಕ್ಕಳನ್ನೂ ಸಂಹರಿಸಿಬಿಟ್ಟಿದ್ದಾರೆ; ಉಳಿ
ರಾಜಸಂಸ್ಥಾನಗಳಲ್ಲಿ ಎಷ್ಟೋ ಮಂದಿ ಹತರಾಗಿ
ಬಹುದು. ನಿನ್ನ ವಿಜ್ಞಾಪನೆ ಇನ್ನು ಯಾವದಿದ್ದರ
ನೆರವೇರುವದು, ನೀನು ಏನು ಕೇಳಿಕೊಂಡರೂ ಕೊ
ವೆನು ಎಂದು ಹೇಳಿದನು. ಅದಕ್ಕೆ ಎಸ್ತೇರಳು
ಅರಸನ ಇಷ್ಟವಿದ್ದರೆ ನಾಳೆಯೂ ಇಂದಿನ ರಾಜಾಜ್ಞೆ
ಪ್ರಕಾರ ಮಾಡುವದಕ್ಕೂ ಹಾಮಾನನ ಹತ್ತು ಮಂ
ಮಕ್ಕಳ ಶವಗಳನ್ನು ಗಲ್ಲಿಗೆ ಹಾಕುವದಕ್ಕೂ ಯೆ
ಹೂದ್ಯರಿಗೆ ಅಪ್ಪಣೆಯಾಗಬೇಕು ಎಂದು ಬೇಡಿಕೊ
ಳ್ಳಲು ಅರಸನು ಹಾಗೆ ಮಾಡುವದಕ್ಕೆ ಅಪ್ಪಣೆಕೊ
ಟ್ಟನು. ಕೂಡಲೆ ಈ ಸಂಬಂಧವಾದ ರಾಜಾಜ್ಞೆಯ
ಶೂಷನ್‍ಕೋಟೆಯಲ್ಲಿ ಪ್ರಕಟವಾಯಿತು. ಮತ
ಹಾಮಾನನ ಹತ್ತು ಮಂದಿ ಮಕ್ಕಳನ್ನು ಗಲ್ಲಿಗೆ ಹಾ
ದರು. ಶೂಷನಿನ ಯೆಹೂದ್ಯರು ಫಾಲ್ಗುನಮಾಸ
ಹದಿನಾಲ್ಕನೆಯ ದಿನದಲ್ಲೂ ಕೂಡಿಕೊಂಡು ಅ
ಮುನ್ನೂರು ಮಂದಿಯನ್ನು ಕೊಂದರು; ಆದರೆ ಕ
ಳ್ಳಿಗೆ ಕೈಹಾಕಲಿಲ್ಲ.
ಅದೇ ಮೇರೆಗೆ ರಾಜಸಂಸ್ಥಾನಗಳಲ್ಲಿದ್ದ ಯೆಹ
ದ್ಯರು ತಮ್ಮ ವಿರೋಧಿಗಳ ಕಾಟವನ್ನು ನಿಲ್ಲಿ
ಪ್ರಾಣರಕ್ಷಿಸಿಕೊಳ್ಳುವದಕ್ಕಾಗಿ ಕೂಡಿಕೊಂಡು ಎದ
ತಮ್ಮ ಹಗೆಗಳಲ್ಲಿ ಎಪ್ಪತ್ತೈದುಸಾವಿರ ಮಂದಿಯನ
ಸಂಹರಿಸಿದರು; ಆದರೆ ಸುಲಿಗೆಮಾಡುವದಕ್ಕೆ

7 ಹಾಕಲಿಲ್ಲ. ಇದು ಫಾಲ್ಗುನಮಾಸದ ಹದಿಮೂರ
ನೆಯ ದಿನದಲ್ಲಿ ನಡೆಯಿತು. ಅವರು ಹದಿನಾಲ್ಕನೆಯ
ದಿನದಲ್ಲಿ ವಿಶ್ರಮಿಸಿಕೊಂಡು ಆ ದಿವಸವನ್ನು ಉತ್ಸವ
8 ಭೋಜನದಿನವನ್ನಾಗಿ ಆಚರಿಸಿದರು. ಆದರೆ ಶೂಷ
ನಿನ ಯೆಹೂದ್ಯರು ಹದಿಮೂರನೆಯ ಮತ್ತು ಹದಿ
ನಾಲ್ಕನೆಯ ದಿನಗಳಲ್ಲಿ [ವೈರಿಗಳನ್ನು ವಧಿಸುವದಕ್ಕೆ]
ಕೂಡಿಕೊಂಡಿದ್ದದರಿಂದ ಹದಿನೈದನೆಯ ದಿನದಲ್ಲಿ ವಿಶ್ರ
ಮಿಸಿಕೊಂಡು ಆ ದಿನವನ್ನು ಉತ್ಸವಭೋಜನದಿನ
9 ವನ್ನಾಗಿ ಆಚರಿಸಿದರು. ಆದದರಿಂದ ಪೌಳಿಗೋಡೆ
ಯಿಲ್ಲದ ಹಳ್ಳಿಪಳ್ಳಿಯ ಯೆಹೂದ್ಯರು ಫಾಲ್ಗುನಮಾಸ
ದ ಹದಿನಾಲ್ಕನೆಯ ದಿನವನ್ನೂ 1) ನಗರಗಳ ಯೆಹೂ
ದ್ಯರು ಹದಿನೈದನೆಯ ದಿನವನ್ನೂ ಶುಭದಿವಸವೆಂದು
ಆಚರಿಸಿ ಉತ್ಸವಭೋಜನಮಾಡಿ ಒಬ್ಬರಿಗೊಬ್ಬರು
ಭೋಜನಭಾಗಗಳನ್ನು ಕಳುಹಿಸುತ್ತಾರೆ.

ಮೊರ್ದೆಕೈಯೂ ಎಸ್ತೇರಳೂ ಪೂರೀಮ್‌ಹಬ್ಬದ
ಆಚರಣೆಯ ವಿಷಯ ಬರೆದ ಪತ್ರಗಳು.

0 ಮೊರ್ದೆಕೈಯು ಸಮೀಪದಲ್ಲಿಯೂ ದೂರದಲ್ಲಿ
ಯೂ ಇದ್ದ ಅಹಷ್ವೇರೋಷನ ಎಲ್ಲಾ ಸಂಸ್ಥಾನಗಳ
ಯೆಹೂದ್ಯರಿಗೆ ಪತ್ರಗಳ ಮುಖಾಂತರ ತಿಳಿಯಪಡಿ
1 ಸಿದ ಸಂಗತಿಗಳು—ಪ್ರತಿವರುಷವೂ ಫಾಲ್ಗುನಮಾಸದ
ಹದಿನಾಲ್ಕನೆಯ ಮತ್ತು ಹದಿನೈದನೆಯ ದಿನಗಳನ್ನು
ಉತ್ಸವದಿನಗಳನ್ನಾಗಿ ಆಚರಿಸುವದು ಶಾಶ್ವತನಿಯಮ
2 ಎಂದೆಣಿಸಬೇಕು. ಆ ದಿನಗಳಲ್ಲಿ ಯೆಹೂದ್ಯರಿಗೆ ಶತ್ರು
ಪೀಡೆ ತಪ್ಪಿ ವಿಶ್ರಾಂತಿಯುಂಟಾಯಿತು; ಆ ತಿಂಗಳಿನಲ್ಲಿ
ಸಂತಾಪವು ಪರಿಹಾರವಾಗಿ ಅವರಿಗೆ ಸಂತೋಷವುಂಟಾ
ಯಿತು; ದುಃಖವು ಹೋಗಿ ಸುಖಕಾಲವು ಬಂತು.
ಆದದರಿಂದ ಅವರು ಆ ದಿನಗಳಲ್ಲಿ ಉತ್ಸವಭೋಜನ
ಮಾಡಿ ಒಬ್ಬರಿಗೊಬ್ಬರು ಭೋಜನಭಾಗಗಳನ್ನು
ಕಳುಹಿಸಿ ಬಡವರಿಗೆ ದಾನಧರ್ಮಮಾಡಬೇಕು.
3 ಯೆಹೂದ್ಯರು ಮೊರ್ದೆಕೈಯ ಪತ್ರದಲ್ಲಿ ನಿರೂಪಿತ
ವಾದದ್ದನ್ನು ಸ್ವೀಕರಿಸಿ ಆ ವರುಷದಲ್ಲಿ ನಡೆದ ಉತ್ಸ
ವವು ತಮ್ಮಲ್ಲಿ ವಾರ್ಷಿಕೋತ್ಸವವಾಗಬೇಕೆಂದು ಗೊತ್ತು
4 ಮಾಡಿಕೊಂಡರು. ಎಲ್ಲಾ ಯೆಹೂದ್ಯರನ್ನು ದ್ವೇಷಿಸು
ತ್ತಿದ್ದ ಅಗಾಗನ ವಂಶದವನೂ ಹಮ್ಮೆದಾತನ ಮಗನೂ
ಆದ ಹಾಮಾನನು ಯೆಹೂದ್ಯರನ್ನು ಸಂಹರಿಸಬೇಕೆಂದು
ನಿರ್ಣಯಿಸಿಕೊಂಡು ಅವರನ್ನು ತಳಮಳಗೊಳಿಸಿ ಹಾಳು
ಮಾಡುವದರ ವಿಷಯವಾಗಿ ಪೂರನ್ನು ಅಂದರೆ ಚೀಟನ್ನು
25 ಹಾಕಿಸಿದನಲ್ಲಾ. (ಇದು ಅರಸನ ಮುಂದೆ ಬಂದಾಗ
ಅವನು—ಹಾಮಾನನು ಯೆಹೂದ್ಯರಿಗೆ ವಿರೋಧ
ವಾಗಿ ಕಲ್ಪಿಸಿದ ಕುತಂತ್ರವು ಅವನ ತಲೆಯ ಮೇಲೆ
ಯೇ ಬರಲಿ; ಅವನನ್ನೂ ಅವನ ಮಕ್ಕಳನ್ನೂ ಗಲ್ಲಿಗೆ
26 ಹಾಕಬೇಕೆಂದು ಅಪ್ಪಣೆಮಾಡಿದನಷ್ಟೆ.) ಆ ಪೂರ್
ಎಂಬ ಶಬ್ದದ ಆಧಾರದಿಂದ ಆ ದಿನಗಳಿಗೆ ಪೂರೀಮ್
ಎಂಬ ಹೆಸರಾಯಿತು. ಯೆಹೂದ್ಯರು ಆ ಪತ್ರದ ಮಾತು
ಗಳನ್ನೂ ಅವುಗಳ ಸಂಬಂಧವಾಗಿ ತಾವೇ ಅನುಭವಿಸಿ
ದ್ದನ್ನೂ ತಮಗೆ ಸಂಭವಿಸಿದ್ದನ್ನೂ ಮನಸ್ಸಿಗೆ ತೆಗೆದು
ಕೊಂಡು—ಪ್ರತಿವರುಷವೂ ಆ ಎರಡು ದಿವಸಗಳನ್ನು 27
ಅವುಗಳ ವಿಷಯವಾದ ಶಾಸನದ ಪ್ರಕಾರ ನೇಮಿತ
ವಾದ ಕಾಲದಲ್ಲಿ ಆಚರಿಸುವದು ತಮ್ಮಲ್ಲಿಯೂ ತಮ್ಮ
ಸಂತಾನದವರಲ್ಲಿಯೂ ತಮ್ಮೊಂದಿಗೆ ಕೂಡಿಕೊಳ್ಳು
ವವರಲ್ಲಿಯೂ ಮೀರಕೂಡದ ಪದ್ಧತಿನಿಯಮಗಳಾಗ
ಬೇಕೆಂದೂ ಯುಗಯುಗಾಂತರಗಳಲ್ಲಿ ಎಲ್ಲಾ ಗೋತ್ರ 28
ಸಂಸ್ಥಾನನಗರಗಳವರು ಈ ದಿನಗಳನ್ನು ನೆನಪುಮಾಡಿ
ಕೊಂಡು ಆಚರಿಸಬೇಕೆಂದೂ ಈ ಪೂರೀಮ್ ಹಬ್ಬವು
ಯೆಹೂದ್ಯರಲ್ಲಿ ಎಂದೂ ನಿಂತುಹೋಗಬಾರದು, ಅದರ
ಜ್ಞಾಪಕವು ಅವರ ಸಂತಾನದವರಲ್ಲಿ ಅಳಿದುಹೋಗಲೇ
ಬಾರದು ಎಂದೂ ಗೊತ್ತುಮಾಡಿಕೊಂಡರು.
ಇದಲ್ಲದೆ ಅಬೀಹೈಲನ ಮಗಳಾದ ಎಸ್ತೇರ್ ರಾಣಿ 29
ಯು ಅಧಿಕಾರಯುಕ್ತಳಾಗಿ ಪೂರೀಮ್ ಸಂಬಂಧವಾದ
ಆ ಎರಡನೆಯ ಶಾಸನವನ್ನು ದೃಢಪಡಿಸುವದಕ್ಕೋಸ್ಕರ
ಯೆಹೂದ್ಯನಾದ ಮೊರ್ದೆಕೈಯ ಸಹಾಯದಿಂದ ಪತ್ರ
ಗಳನ್ನು ಬರೆದಳು. ಅವನು ಅಹಷ್ವೇರೋಷನ ರಾಜ್ಯದ 30
ನೂರಿಪ್ಪತ್ತೇಳು ಸಂಸ್ಥಾನಗಳಲ್ಲಿದ್ದ ಯೆಹೂದ್ಯರೆಲ್ಲ
ರಿಗೂ ಕಳುಹಿಸಿದನು. ಆಕೆಯು ದಯಾಸತ್ಯತೆಗಳುಳ್ಳ
ಮಾತುಗಳಿಂದ ಆ ಪತ್ರಗಳಲ್ಲಿ—ಯೆಹೂದ್ಯರು ತಮ್ಮ 31
ಲ್ಲಿಯೂ ತಮ್ಮ ಸಂತಾನದವರಲ್ಲಿಯೂ ಉಪವಾಸ
ಪ್ರಲಾಪದಿನಗಳನ್ನು ಪ್ರತಿವರುಷ ತಪ್ಪದೆ ಆಚರಿಸಬೇ
ಕೆಂದು ತಾವೇ ಗೊತ್ತುಮಾಡಿಕೊಂಡ ಪ್ರಕಾರ ಈ
ಪೂರೀಮ್ ದಿನಗಳನ್ನೂ ನನ್ನ ಮತ್ತು ಯೆಹೂದ್ಯನಾದ
ಮೊರ್ದೆಕೈಯ ನಿರೂಪದಂತೆ ಪ್ರತಿವರುಷ ತಪ್ಪದೆ ನೇಮಿ
ತವಾದ ಕಾಲದಲ್ಲಿ ಆಚರಿಸಬೇಕು ಎಂದು ಬರೆದಿದ್ದಳು.
ಎಸ್ತೇರಳ ಆ ನಿರೂಪವು ಪೂರೀಮ್ ಹಬ್ಬವನ್ನು ಸ್ಥಾಪಿ 32
ಸಿತು. ಆ ನಿರೂಪವು ಗ್ರಂಥದಲ್ಲಿ ಬರೆಯಲ್ಪಟ್ಟಿತು.

ಮೊರ್ದೆಕೈಯ ದೊಡ್ಡಸ್ತಿಕೆಯು.

ಅಹಷ್ವೇರೋಷ್‌ರಾಜನು ತನ್ನ ರಾಜ್ಯಕ್ಕೆ ಸೇರಿ 10
ರುವ ದೇಶಗಳಲ್ಲಿಯೂ ಸಮುದ್ರದ್ವೀಪಗಳಲ್ಲಿ
ಯೂ 2)ತೆರಿಗೆಯನ್ನು ಎತ್ತಿದನು. ಅವನ ಬಲ 2
ಪ್ರತಾಪಯುಕ್ತವಾದ ಕೃತ್ಯಗಳೂ ಅವನ ಅನುಗ್ರಹ
ದಿಂದ ಮೊರ್ದೆಕೈಗೆ ಪ್ರಾಪ್ತವಾದ ದೊಡ್ಡಸ್ತಿಕೆಯ
ವಿವರವೂ ಮೇದ್ಯ ಮತ್ತು ಪಾರಸಿಯ ರಾಜಕಾಲ
ವೃತ್ತಾಂತಗ್ರಂಥದಲ್ಲಿ ಬರೆದಿರುತ್ತವೆ. ಯೆಹೂದ್ಯನಾದ 3
ಆ ಮೊರ್ದೆಕೈಯಾದರೋ ರಾಜ್ಯದಲ್ಲಿ ಅರಸನಾದ
ಅಹಷ್ವೇರೋಷನಿಗೆ ದ್ವಿತೀಯಸ್ಥಾನದವನೂ ಯೆಹೂ
ದ್ಯರಲ್ಲಿ ಸನ್ಮಾನಿತನೂ ತನ್ನ ಬಂಧುಜನಸಮೂಹಕ್ಕೆ
ಪ್ರೀತಿಪಾತ್ರನೂ ಸ್ವಜನರ ಹಿತಚಿಂತಕನೂ ಸ್ವಕುಲದವ
ರೆಲ್ಲರಿಗೋಸ್ಕರ ಸುಖಪ್ರಾರ್ಥನಾಪರನೂ ಆಗಿದ್ದನು.

1) ಈ ಮಾತುಗಳು ಗ್ರೀಕ್ ಪ್ರತಿಗಳಲ್ಲಿ ಮಾತ್ರ ಸಿಕ್ಕುತ್ತವೆ.
2) ಅಥವಾ: ಬಿಟ್ಟೀಕೆಲಸಮಾಡಿಸಿದನು.

# THE BOOK OF JOB

## ಯೋಬನು

1 ಊಚ್ ದೇಶದಲ್ಲಿ ಯೋಬನೆಂಬ ಒಬ್ಬ ಮನುಷ್ಯ
ನಿದ್ದನು; ಅವನು ದೇವರಲ್ಲಿ ಭಯಭಕ್ತಿಯುಳ್ಳವನಾಗಿ
ಕೆಟ್ಟದ್ದನ್ನು ನಿರಾಕರಿಸುತ್ತಾ ನಿರ್ದೋಷಿಯೂ ಯಥಾ
2 ರ್ಥಚಿತ್ತನೂ ಆಗಿದ್ದನು. ಅವನಿಗೆ ಏಳು ಮಂದಿ
ಗಂಡುಮಕ್ಕಳೂ ಮೂರು ಮಂದಿ ಹೆಣ್ಣುಮಕ್ಕಳೂ
3 ಇದ್ದರು. ಅವನಿಗೆ ಏಳು ಸಾವಿರ ಕುರಿಗಳೂ ಮೂರು
ಸಾವಿರ ಒಂಟೆಗಳೂ ಐನೂರು ಜೋಡಿ ಎತ್ತುಗಳೂ
ಐನೂರು ಹೆಣ್ಣು ಕತ್ತೆಗಳೂ ಅನೇಕಾನೇಕ ಸೇವಕರೂ
ಇದ್ದದರಿಂದ ಅವನು ಮೂಡಣ ದೇಶದವರಲ್ಲೆಲ್ಲಾ
4 ಹೆಚ್ಚು ಸ್ವಾಸ್ತ್ಯವುಳ್ಳವನಾಗಿದ್ದನು. ಅವನ ಕುಮಾ
ರರು ಒಂದೊಂದು ದಿನ ಒಬ್ಬೊಬ್ಬನ ಮನೆಯಲ್ಲಿ
ಔತಣವನ್ನು ನಡಿಸುತ್ತಾ ಆ ಭೋಜನಕ್ಕೆ ತಮ್ಮ
ಮೂವರು ಅಕ್ಕತಂಗಿಯರನ್ನೂ ಕರೆಕಳುಹಿಸುತ್ತಿದ್ದರು.
5 ಔತಣಸರದಿ ತೀರಿದನಂತರ ಯೋಬನು ತನ್ನ ಮಕ್ಕಳು
ಒಂದು ವೇಳೆ ಹೃದಯದಲ್ಲಿ ದೇವರನ್ನು ದೂಷಿಸಿ
ಪಾಪಮಾಡಿರಬಹುದು ಎಂದು ಅವರನ್ನು ಕರೆಸಿ ಶುದ್ಧಿ
ಪಡಿಸಿ ಬೆಳಿಗ್ಗೆ ಎದ್ದು ಅವರ ಸಂಖ್ಯೆಗೆ ತಕ್ಕಂತೆ ಹೋಮ
ಗಳನ್ನು ಅರ್ಪಿಸುತ್ತಿದ್ದನು. ಹೀಗೆ ಯೋಬನು ಕ್ರಮ
ವಾಗಿ ಮಾಡುತ್ತಿದ್ದನು.
6 ಒಂದಾನೊಂದು ದಿನ ದೇವದೂತರು ಯೆಹೋವನ
ಸನ್ನಿಧಿಯಲ್ಲಿ ಕಾಣಿಸಿಕೊಳ್ಳುವದಕ್ಕೆ ಬರಲಾಗಿ ಸೈತಾ
ನನು [ಎಂಬ ಆಪಾದಕ ದೂತನು] ಅವರ ಜೊತೆ
7 ಯಲ್ಲಿ ಬಂದನು. ಯೆಹೋವನು ಸೈತಾನನನ್ನು—
ಎಲ್ಲಿಂದ ಬಂದಿ ಎಂದು ಕೇಳಲು ಸೈತಾನನು ಯೆಹೋ
ವನಿಗೆ—ಭೂಲೋಕದಲ್ಲಿ ಸಂಚರಿಸುತ್ತಾ ಅಲ್ಲಲ್ಲಿ
8 ತಿರುಗುತ್ತಾ ಇದ್ದು ಬಂದೆನು ಎಂದು ಹೇಳಿದನು. ಆಗ
ಯೆಹೋವನು—ನನ್ನ ದಾಸನಾದ ಯೋಬನ ಮೇಲೆ
ಗಮನವಿಟ್ಟೆಯಾ? ಅವನು ದೇವರಲ್ಲಿ ಭಯಭಕ್ತಿ
ಯುಳ್ಳವನಾಗಿ ಕೆಟ್ಟದ್ದನ್ನು ನಿರಾಕರಿಸುತ್ತಾ ನಿರ್ದೋ
ಷಿಯೂ ಯಥಾರ್ಥಚಿತ್ತನೂ ಆಗಿದ್ದಾನೆ. ಅವನಿಗೆ
ಸಮಾನನು ಭೂಲೋಕದಲ್ಲಿ ಎಲ್ಲಿಯೂ ಸಿಕ್ಕುವ
9 ದಿಲ್ಲ ಎಂದು ಸೈತಾನನಿಗೆ ಹೇಳಿದನು. ಅದಕ್ಕೆ ಸೈತಾ
ನನು—ಯೋಬನು ದೇವರಲ್ಲಿ ಭಯಭಕ್ತಿಯನ್ನು
10 ಲಾಭವಿಲ್ಲದೆ ಇಟ್ಟಿದ್ದಾನೋ? ನೀನು ಅವನಿಗೂ
ಅವನ ಮನೆಗೂ ಅವನ ಎಲ್ಲಾ ಸ್ವಾಸ್ತ್ಯಕ್ಕೂ ಸುತ್ತು
ಮುತ್ತಲು ಬೇಲಿಯನ್ನು ಹಾಕಿದ್ದೀಯಲ್ಲಾ. ಅವನು
ಕೈಹಾಕಿದ ಕೆಲಸವನ್ನು ನೀನು ಸಫಲಪಡಿಸುತ್ತಿರುವದ

ರಿಂದ ಅವನ ಸಂಪತ್ತು ದೇಶದಲ್ಲಿ ವೃದ್ಧಿಯಾಗುತ
ಬಂದಿದೆ. ಆದರೆ ನಿನ್ನ ಕೈನೀಡಿ ಅವನ ಸೊತ್ತನ್ನೆಲ
ಅಳಿಸಿಬಿಡು. ಆಗ ಅವನು ನಿನ್ನ ಎದುರಿಗೆ ನಿನ್ನನ
ದೂಷಿಸಲೇ ದೂಷಿಸುವನು ಅಂದನು. ಯೆಹೋವ
ಸೈತಾನನಿಗೆ—ಅವನ ಸ್ವಾಸ್ತ್ಯವೆಲ್ಲಾ ನಿನ್ನ ಕೈಯಲ್ಲಿ
ನೋಡು. ಆದರೆ ಅವನ ಮೈಮೇಲೆ ಮಾತ್ರ ಕೈಹಾ
ಬೇಡ ಎಂದು ಅಪ್ಪಣೆಕೊಟ್ಟನು. ಆಗ ಸೈ
ನನು ಯೆಹೋವನ ಸನ್ನಿಧಾನದಿಂದ ಹೊರಟುಹ
ದನು.
ಒಂದಾನೊಂದು ದಿವಸದಲ್ಲಿ ಯೋಬನ ಗಂ
ಹೆಣ್ಣುಮಕ್ಕಳು ಹಿರಿಯವನ ಮನೆಯಲ್ಲಿ ಉಂ
ಕುಡಿಯುತ್ತಿರುವಾಗ ಒಬ್ಬ ದೂತನು ಯೋಬನ ಬಳ
ಬಂದು ನಿನ್ನ ಎತ್ತುಗಳು ಉಳುತ್ತಾ ಅವುಗಳ ಹತ್ತಿ
ಕತ್ತೆಗಳು ಮೇಯುತ್ತಾ ಇರುವಲ್ಲಿ ಶೆಬದವ
ಅವುಗಳ ಮೇಲೆ ಬಿದ್ದು ಹೊಡೆದುಕೊಂಡು ಹೋದರ
ಇದಲ್ಲದೆ ಆಳುಗಳನ್ನು ಕತ್ತಿಯಿಂದ ಸಂಹರಿಸಿದರ
ಇದನ್ನು ತಿಳಿಸುತ್ತಿರುವ ನಾನೊಬ್ಬನೇ ತಪ್ಪಿಸಿಕೊಂ
ಉಳಿದಿದ್ದೇನೆ ಎಂದು ಹೇಳಿದನು. ಅವನು ಮಾತಾ
ತ್ತಿರುವಾಗಲೇ ಮತ್ತೊಬ್ಬನು ಬಂದು ದೇವರ ಬೆ
ಆಕಾಶದಿಂದ ಬಿದ್ದು ಕುರಿಗಳನ್ನೂ ಆಳುಗಳನ್ನೂ ದಹ
ನುಂಗಿಬಿಟ್ಟಿದೆ; ಇದನ್ನು ತಿಳಿಸುತ್ತಿರುವ ನಾನೊಬ್ಬ
ತಪ್ಪಿಸಿಕೊಂಡು ಉಳಿದಿದ್ದೇನೆ ಅಂದನು. ಅಷ್ಟರ
ಇನ್ನೊಬ್ಬನು ಬಂದು ಕಸ್ದೀಯರು ಮೂರು ಗುಂಪ
ಳಾಗಿ ಬಂದು ಒಂಟೆಗಳ ಮೇಲೆ ಬಿದ್ದು ಹೊಡೆದುಕೊಂ
ಹೋದರು; ಇದಲ್ಲದೆ ಆಳುಗಳನ್ನು ಕತ್ತಿಯಿಂದ ಸ
ಮಾಡಿದರು; ಇದನ್ನು ತಿಳಿಸುತ್ತಿರುವ ನಾನೊಬ್ಬ
ತಪ್ಪಿಸಿಕೊಂಡು ಉಳಿದಿದ್ದೇನೆ ಅಂದನು. ಸಂಗಡಲೇ
ರೊಬ್ಬನು ಬಂದು ನಿನ್ನ ಕುಮಾರಕುಮಾರ್ತೆಯ
ತಮ್ಮ ಅಣ್ಣನ ಮನೆಯಲ್ಲಿ ಉಂಡು ಕುಡಿಯುತ್ತಿ
ವಾಗ ಇಗೋ ಅರಣ್ಯದ ಕಡೆಯಿಂದ ಬಿರುಗಾಳಿಯ
ಬೀಸಿ ಮನೆಯ ನಾಲ್ಕು ಮೂಲೆಗಳಿಗೆ ಬಡಿಯಿತ
ಮನೆಯು ಯೌವನಸ್ಥರ ಮೇಲೆ ಬಿದ್ದಿತು; ಸತ
ಹೋದರು; ಇದನ್ನು ತಿಳಿಸುತ್ತಿರುವ ನಾನೊಬ್ಬ
ತಪ್ಪಿಸಿಕೊಂಡು ಉಳಿದಿದ್ದೇನೆ ಅಂದನು. ಆಗ ಯೊ
ಬನು ಎದ್ದು ಮೇಲಂಗಿಯನ್ನು ಹರಿದುಕೊಂಡು ತ
ಬೋಳಿಸಿಕೊಂಡು ನೆಲದಲ್ಲಿ ಅಡ್ಡಬಿದ್ದು ನಮಸ್ಕರ

ಏನೂ ಇಲ್ಲದವನಾಗಿ ತಾಯಿಯ ಗರ್ಭದಿಂ
ಬಂದೆನು;

1)ಏನೂ ಇಲ್ಲದವನಾಗಿಯೇ ಗತಿಸಿಹೋಗುವೆನು;
ಯೆಹೋವನೇ ಕೊಟ್ಟನು, ಯೆಹೋವನೇ ತೆಗೆದು
ಕೊಂಡನು;
ಯೆಹೋವನ ನಾಮಕ್ಕೆ ಸ್ತೋತ್ರವಾಗಲಿ
ಎಂದು ಹೇಳಿದನು. ಇದೆಲ್ಲದರಲ್ಲಿಯೂ ಯೋಬನು
ಪಾಪಮಾಡಲಿಲ್ಲ, ದೇವರ ಮೇಲೆ ತಪ್ಪುಹೊರಿಸಲೂ
ಇಲ್ಲ.

ದೇವದೂತರು ಇನ್ನೊಂದು ದಿವಸ ಯೆಹೋವನ
ಸನ್ನಿಧಿಯಲ್ಲಿ ಕಾಣಿಸಿಕೊಳ್ಳುವದಕ್ಕೆ ಬಂದಾಗ ಸೈತಾ
ನನೂ ಅವರ ಸಂಗಡ ಬಂದು ಸನ್ನಿಧಿಯಲ್ಲಿ ಕಾಣಿಸಿ
ಕೊಂಡನು. ಯೆಹೋವನು—ಎಲ್ಲಿಂದ ಬಂದಿ ಎಂದು
ಸೈತಾನನನ್ನು ಕೇಳಲು ಸೈತಾನನು ಯೆಹೋವನಿಗೆ—
ಭೂಲೋಕದಲ್ಲಿ ಸಂಚರಿಸುತ್ತಾ ಅಲ್ಲಲ್ಲಿ ತಿರುಗುತ್ತಾ
ಇದ್ದು ಬಂದೆನು ಅಂದನು. ಆಗ ಯೆಹೋವನು
ಸೈತಾನನಿಗೆ—ನನ್ನ ದಾಸನಾದ ಯೋಬನ ಮೇಲೆ ಗಮ
ನವಿಟ್ಟೆಯಾ? ಅವನಿಗೆ ಸಮಾನನು ಭೂಲೋಕದಲ್ಲಿ
ಎಲ್ಲಿಯೂ ಸಿಕ್ಕುವದಿಲ್ಲ; ಅವನು ದೇವರಲ್ಲಿ ಭಯ
ಭಕ್ತಿಯುಳ್ಳವನಾಗಿ ಕೆಟ್ಟದ್ದನ್ನು ನಿರಾಕರಿಸುತ್ತಾ
ನಿರ್ದೋಷಿಯೂ ಯಥಾರ್ಥಚಿತ್ತನೂ ಆಗಿದ್ದಾನೆ.
2)ಅವನನ್ನು ಕಾರಣವಿಲ್ಲದೆ ನಾಶನಮಾಡುವದಕ್ಕೆ
ನೀನು ನನ್ನನ್ನು ಪ್ರೇರಿಸಿದರೂ ಆವನು ತನ್ನ ಯಥಾ
ರ್ಥತ್ವವನ್ನು ಬಿಡದೆ ಇದ್ದಾನೆ ಅಂದನು. ಯೆಹೋ
ವನ ಆ ಮಾತಿಗೆ ಸೈತಾನನು—ಚರ್ಮಕ್ಕೆ ಚರ್ಮ
ಎಂಬಂತೆ ಒಬ್ಬ ಮನುಷ್ಯನು ಪ್ರಾಣವನ್ನು ಉಳಿಸಿ
ಕೊಳ್ಳುವದಕ್ಕೋಸ್ಕರ ತನ್ನ ಸರ್ವಸ್ವವನ್ನೂ ಕೊಡು
ವನು. ಆದರೆ ನಿನ್ನ ಕೈಚಾಚಿ ಅವನ ಅಸ್ಥಿಮಾಂಸಗ
ಳನ್ನು ಹೊಡೆ; ಅವನು ನಿನ್ನ ಮುಖದೆದುರಿಗೆ ನಿನ್ನ
ನ್ನು ದೂಷಿಸಲೇ ದೂಷಿಸುವನು ಅಂದನು. ಯೆಹೋ
ವನು ಸೈತಾನನಿಗೆ—ಅವನು ನಿನ್ನ ಕೈಯಲ್ಲಿದ್ದಾನೆ,
ನೋಡು; ಅವನ ಪ್ರಾಣವನ್ನಾದರೋ ಉಳಿಸಲೇ ಬೇಕು
ಎಂದು ಅಪ್ಪಣೆಕೊಟ್ಟನು. ಆಗ ಸೈತಾನನು ಯೆ
ಹೋವನ ಸನ್ನಿಧಾನದಿಂದ ಹೊರಟು ಯೋಬನ ಅಂಗಾ
ಲು ಮೊದಲುಗೊಂಡು ನಡುನೆತ್ತಿಯ ವರೆಗೂ ಕೆಟ್ಟ
ಕುರುಗಳನ್ನು ಹುಟ್ಟಿಸಿ ಅವನನ್ನು ಬಾಧಿಸಿದನು.
ಯೋಬನು ಒಂದು ಬೋಕಿಯನ್ನು ತೆಗೆದುಕೊಂಡು
ತನ್ನ ಮೈಯನ್ನು ಕೆರೆದುಕೊಳ್ಳುತ್ತಾ ಬೂದಿಯಲ್ಲಿ
ಕೂತುಕೊಂಡಿದ್ದನು. ಹೀಗಿರುವಲ್ಲಿ ಅವನ ಹೆಂಡತಿ
ಅವನಿಗೆ—ನಿನ್ನ ಯಥಾರ್ಥತ್ವವನ್ನು ಇನ್ನೂ ಬಿಡಲಿಲ್ಲ
ವೋ? ದೇವರನ್ನು ದೂಷಿಸಿ ಸಾಯಿ ಎಂದು ಹೇಳಿ
ದಳು. ಆಗ ಯೋಬನು ಆಕೆಗೆ—ಮೂರ್ಖಳು
ಮಾತಾಡಿದಂತೆ ನೀನು ಮಾತಾಡುತ್ತೀ; ದೇವರ ಹಸ್ತ
ದಿಂದ ನಾವು ಒಳ್ಳೇದನ್ನು ಹೊಂದುತ್ತೇವಷ್ಟೆ; ಕೆಟ್ಟ
ದ್ದನ್ನು ಹೊಂದಬಾರದೋ ಎಂದು ಹೇಳಿದನು. ಈ
ಸಂದರ್ಭದಲ್ಲಿಯೂ ಪಾಪದ ಮಾತೊಂದೂ ಅವನ
ತುಟಿಗಳಿಂದ ಹೊರಡಲಿಲ್ಲ.

ತೇಮಾನ್ಯನಾದ ಎಲೀಫಜನು ಶೂಹ್ಯನಾದ ಬಿಲ್ದ 11
ದನು ನಾಮಾಥ್ಯನಾದ ಚೋಫರನು ಎಂಬ ಯೋ
ಬನ ಮೂವರು ಸ್ನೇಹಿತರು ಅವನಿಗೆ ಸಂಭವಿಸಿದ ಆಪ
ತ್ತಿನ ಸುದ್ದಿಯನ್ನು ಕೇಳಿದೊಡನೆ—ನಾವೆಲ್ಲರೂ ಕೂಡಿ
ನಮ್ಮ ಸಂತಾಪವನ್ನು ತೋರ್ಪಡಿಸಿ ಅವನನ್ನು ಸಂತ
ಯಿಸೋಣ ಬನ್ನಿರಿ ಎಂದು ಗೊತ್ತುಮಾಡಿಕೊಂಡು
ತಮ್ಮ ತಮ್ಮ ಸ್ಥಳಗಳಿಂದ ಅವನ ಬಳಿಗೆ ಬಂದರು.
ಅವರು ದೂರದಿಂದ ಕಣ್ಣೆತ್ತಿ ನೋಡಿ ಯೋಬನ ಗುರು 12
ತನ್ನು ಹಿಡಿಯಲಾರದೆ ಹೋದ ಕಾರಣ ಗಟ್ಟಿಯಾಗಿ
ಅತ್ತು ತಮ್ಮ ತಮ್ಮ ಮೇಲಂಗಿಗಳನ್ನು ಹರಿದುಕೊಂಡು
ಮಣ್ಣನ್ನು ಮೇಲಕ್ಕೆ ತೂರಿ ತಮ್ಮ ತಲೆಯ ಮೇಲೆ
ಸುರಿಸಿಕೊಂಡರು. ಬಳಿಕ ಅವನಿಗೆ ವಿಪರೀತ ಬಾಧೆ 13
ಎಂದು ತಿಳಿದು ಏಳು ದಿನಗಳ ವರೆಗೆ ಹಗಲಿರುಳೂ
ನೆಲದ ಮೇಲೆ ಅವನೊಂದಿಗೆ ಕುಳಿತು ಅವನ ಸಂಗಡ
ಒಬ್ಬರೂ ಮಾತಾಡದೆಯೇ ಇದ್ದರು.

ಆ ಮೇಲೆ ಯೋಬನು ಬಾಯಿ ತೆರೆದು ತನ್ನ ಜನ್ಮ 3
ದಿವಸವನ್ನು ಶಪಿಸಿ ಇಂತೆಂದನು— 2
ನಾನು ಹುಟ್ಟಿದ ದಿನವು ಹಾಳಾಗಿ ಹೋಗಲಿ, 3
ಗರ್ಭದಲ್ಲಿ ಪುರುಷಾಂಕುರವಾಯಿತೆಂದು ನುಡಿದ ರಾ
ತ್ರಿಯು ನಾಶವಾಗಲಿ;
ಆ ದಿವಸವು ಕತ್ತಲೆಯಾಗಲಿ, 4
ಮೇಲಿನಿಂದ ದೇವರು ಅದನ್ನು ಲೆಕ್ಕಿಸದಿರಲಿ,
ಅದರ ಮೇಲೆ ಬೆಳಕು ಪ್ರಕಾಶಿಸದಿರಲಿ;
ಕತ್ತಲೆಯೂ 3)ಘೋರಾಂಧಕಾರವೂ ಅದನ್ನು ವಶ 5
ಮಾಡಿಕೊಳ್ಳಲಿ;
ಮೋಡವು ಅದನ್ನು ಕವಿಯಲಿ,
ಹಗಲನ್ನು ಮುಚ್ಚಿಕೊಳ್ಳುವ ಮೊಬ್ಬು ಅದನ್ನು ಹೆದ
ರಿಸಲಿ;
ಕಾರ್ಗತ್ತಲು ಆ ರಾತ್ರಿಯನ್ನು ಹಿಡಿದುಕೊಳ್ಳಲಿ, 6
ಅದು ಮಾಸಗಳ ಲೆಕ್ಕದಲ್ಲಿ ಸೇರದೆ
ಸಂವತ್ಸರದ ದಿನಗಳಲ್ಲಿ ಹರ್ಷಿಸದೆ ಇರಲಿ.
ಹಾ, ಆ ರಾತ್ರಿಯು ಬಂಜೆಯಾಗಿ 7
ಅದರಲ್ಲಿ ಉತ್ಸಾಹಧ್ವನಿಯು ಉಂಟಾಗದಿರಲಿ.
4)ಘಟಸರ್ಪವನ್ನು ಎಬ್ಬಿಸುವದರಲ್ಲಿಯೂ ದಿನಗಳನ್ನು 8
ಶಪಿಸುವದರಲ್ಲಿಯೂ
ಜಾಣರಾದ [ಮಾಂತ್ರಿಕರು] ಅದಕ್ಕೆ ಶಾಪಕೊಡಲಿ.
ಆ ದಿನದಲ್ಲಿ ಮುಂಜಾನೆಯ ನಕ್ಷತ್ರಗಳೂ ಮಿಣುಕದೆ 9
ಹೋಗಲಿ,
ಅದು ಬೆಳಕನ್ನು ಎದುರುನೋಡಿದರೂ ಹೊಂದದಿರಲಿ,
ಅರುಣೋದಯವೆಂಬ ರೆಪ್ಪೆ ತೆರೆಯುವದನ್ನು ಅದು
ಕಾಣದಿರಲಿ.
ಆ ರಾತ್ರಿಯು ನನ್ನ ತಾಯಿಯ ಗರ್ಭದ್ವಾರವನ್ನು 10
ಮುಚ್ಚಿ
ನನ್ನ ಕಣ್ಣುಗಳಿಗೆ ಶ್ರಮೆಯನ್ನು ಮರೆಮಾಡಲಿಲ್ಲ
ವಲ್ಲಾ.

1) ಮೂಲ: ತಿರಿಗಿ ಅಲ್ಲಿಗೆ ಸೇರುವೆನು. 2) ಅಥವಾ: ಅವನನ್ನು ನಾಶನಮಾಡುವದಕ್ಕೆ ನನ್ನನ್ನು ಪ್ರೇರಿಸಿದ ನಿನ್ನ ಉದ್ದೇಶವು ...ರ್ಥವಾಯಿತು; ಅವನು ತನ್ನ ಯಥಾರ್ಥತ್ವವನ್ನು ಬಿಡದೆ ಇದ್ದಾನಲ್ಲಾ. 3) ಅಥವಾ: ಮರಣಾಂಧಕಾರವು. 4) ಮೂಲ: ...ಯಾತಾನ್.

11 ನಾನು ಹುಟ್ಟುವಾಗಲೇ ಏಕೆ ಸಾಯಲಿಲ್ಲ.
ಗರ್ಭದಿಂದ ಬಂದಾಗಲೇ ಏಕೆ ಪ್ರಾಣಬಿಡಲಿಲ್ಲ?
12 ತಂದೆಯ ತೊಡೆಯು ನನ್ನನ್ನು ಹೊತ್ತದ್ದೇಕೆ?
ತಾಯಿಯ ಮೊಲೆಗಳು ಕುಡಿಯಗೊಟ್ಟದ್ದೇಕೆ?
13 ಹಾಗಿಲ್ಲದಿದ್ದರೆ ನಾನು ಮಲಗಿ ಸುಮ್ಮನಿದ್ದು
ನಿದ್ರೆಮಾಡುತ್ತಿದ್ದೆನು;
14 ಭೂಲೋಕದಲ್ಲಿ ಹಾಳುಬಿದ್ದ ಪಟ್ಟಣಗಳನ್ನು ತಮಗಾಗಿ ಕಟ್ಟಿಸಿಕೊಂಡ
ಅರಸರೊಂದಿಗೂ ಮಂತ್ರಿಗಳೊಡನೆಯೂ
15 ಬಂಗಾರವನ್ನು ಕೂಡಿಸಿಟ್ಟು ತಮ್ಮ ಮನೆಗಳನ್ನು ಬೆಳ್ಳಿಯಿಂದ ತುಂಬಿಸಿದ
ಅಧಿಪತಿಗಳ ಸಂಗಡಲೂ ವಿಶ್ರಮಿಸಿಕೊಳ್ಳುತ್ತಿದ್ದೆನು.
16 ಒಂದು ವೇಳೆ ನಾನು ಗರ್ಭಸ್ರಾವವಾಗಿ ಬಿದ್ದ ಹೂಳಿಟ್ಟ ಪಿಂಡದಂತೆಯಾಗಲಿ
ಬೆಳಕನ್ನೇ ಕಾಣದೆ ಸತ್ತ ಕೂಸುಗಳಂತೆಯಾಗಲಿ ಆಗಿದ್ದರೆ
ಜನ್ಮವಿಲ್ಲದೆ ಇರುತ್ತಿದ್ದೆನು.
17 ಅಲ್ಲಿ ದುಷ್ಟರ ಆಗ್ರಹವು ಅಣಗಿಹೋಗುವದು,
ದಣಿದವರು ದಣುವಾರಿಸಿಕೊಳ್ಳುವರು,
18 ಸೆರೆಯಾದವರು ಬಾಧಿಸುವ ಅಧಿಕಾರಿಯ ಧ್ವನಿಯನ್ನೇ ಕೇಳದೆ
ಗುಂಪುಗುಂಪಾಗಿ ವಿಶ್ರಮಿಸಿಕೊಳ್ಳುವರು.
19 ಅಲ್ಲಿ [1]ದೊಡ್ಡವರು, ಚಿಕ್ಕವರು ಎಂಬ ಭೇದವಿಲ್ಲಾ,
ಆಳು, ಒಡೆಯ ಎಂಬ ಕಟ್ಟಳೆಯೂ ಇಲ್ಲ.

20 ಕಷ್ಟದಲ್ಲಿರುವವನಿಗೆ ಬೆಳಕನ್ನು
ಮನನೊಂದಿದವರಿಗೆ ಜೀವವನ್ನು ಕೊಡುವದೇಕೆ?
21 ಅವರು ನಿಕ್ಷೇಪಕ್ಕಾಗಿ ಅಗಿಯುವ ಆಶೆಗಿಂತಲೂ
ಹೆಚ್ಚಾದ ಆಶೆಯಿಂದ ಮರಣವನ್ನು ಹಾರೈಸಿ ಹುಡುಕಿದರೂ ಅದು ದೊರೆಯದು.
22 ಸಮಾಧಿಗೆ ಸೇರುವಾಗ
ಬಹಳವಾಗಿ ಹರ್ಷಿಸಿ ಉಲ್ಲಾಸಪಡುತ್ತಾರೆ.
23 ದೇವರು ಒಬ್ಬನ ಸುತ್ತಲೂ ಬೇಲಿ ಹಾಕಿ
ದಾರಿಕಟ್ಟಿದ ಮೇಲೆ
[ಅವನಿಗೆ ಏಕೆ ಬೆಳಕನ್ನು ಕೊಡುತ್ತಾನೆ?]
24 ನಿಟ್ಟುಸಿರೇ ನನ್ನೆದುರಿಗೆ ಬರುವ ಆಹಾರವಾಗಿದೆ.
ನನ್ನ ನರಳಾಟವು ಜಲಧಾರೆಯಂತಿದೆ.
25 ನನಗೆ ಭಯವು ಹುಟ್ಟಿದೊಡನೆಯೇ ಆಪತ್ತು ಸಂಭವಿಸುವದು.
ನಾನು ಯಾವದಕ್ಕೆ ಹೆದರುತ್ತೇನೋ ಅದು ತಪ್ಪದೆ ಬರುವದು.
26 ನನಗೆ ಯಾವ ಶಾಂತಿಯೂ ವಿಶ್ರಾಂತಿಯೂ ಉಪಶಮನವೂ ಇರುವದಿಲ್ಲ;
ಯಾವಾಗಲೂ ಕಳವಳವೇ.

4 ಇದಕ್ಕೆ ತೇಮಾನ್ಯನಾದ ಎಲೀಫಜನು ಹೀಗೆ ಉತ್ತರಕೊಟ್ಟನು—

ಒಬ್ಬನು ನಿನ್ನ ಸಂಗಡ ಮಾತಾಡ ತೊಡಗಿದರೆ ನಿನಗೆ ಬೇಸರಿಕೆ ಉಂಟಾಗುವದೋ?
ಮಾತಾಡದೆ ಸುಮ್ಮನೆ ಇರುವದಕ್ಕೆ ಯಾರಿಂದಾದೀತು?
ಇಗೋ, ನೀನು ಅನೇಕರನ್ನು ಶಿಕ್ಷಿಸಿ
ಜೋಲು ಬಿದ್ದ ಕೈಗಳನ್ನು ಬಲಗೊಳಿಸಿ
ಎಡವಿ ಬೀಳುವವರನ್ನು ನಿನ್ನ ಮಾತುಗಳಿಂದ ಉದ್ಧರಿಸಿ
ಕುಸಿಯುವ ಮೊಣಕಾಲುಗಳನ್ನು ದೃಢಪಡಿಸಿದ್ದೀ.
ಈಗಲಾದರೋ ನಿನಗೇ [ಶ್ರಮೆ] ಬಂತು. ಅದರಿಂದ ನೀನು ಬೇಸರಗೊಂಡಿರುವಿ,
ಅದು ನಿನ್ನನ್ನೇ ತಗಲಿರುವ ಕಾರಣ ನಿನಗೆ ಭ್ರಮೆಯುಂಟಾಗಿದೆ.
ನಿನ್ನ ನಂಬಿಕೆಗೆ ನಿನ್ನ ಭಯಭಕ್ತಿಯೂ
ನಿನ್ನ ನಿರೀಕ್ಷೆಗೆ ನಿನ್ನ ಸನ್ಮಾರ್ಗವೂ ಆಧಾರವಲ್ಲವೋ,
ನೀನೇ ಆಲೋಚನೆಮಾಡು, ನಿರಪರಾಧಿಯು ಎಂದಾದರೂ ನಾಶವಾದದ್ದುಂಟೇ,
ಯಥಾರ್ಥರು ಅಳಿದುಹೋದದ್ದೆಲ್ಲಿ?
ನಾನು ನೋಡಿರುವ ಮಟ್ಟಿಗೆ ಅಧರ್ಮವನ್ನು ಉತ್ತು
ಕೇಡನ್ನು ಬಿತ್ತುವವರು ಕೇಡನ್ನೇ ಕೊಯ್ಯುವರು.
ದೇವರ ಶ್ವಾಸದಿಂದ ನಾಶವಾಗುತ್ತಾರೆ,
ಆತನ ಸಿಟ್ಟೆಂಬ ಗಾಳಿಯಿಂದ ಹಾಳಾಗುತ್ತಾರೆ.
ಸಿಂಹಗರ್ಜನೆಯೂ ಆರ್ಭಟಿಸುವ ಸಿಂಹದ ಧ್ವನಿಯೂ [ಅಡಗಿ]
ಪ್ರಾಯದ ಸಿಂಹಗಳ ಕೋರೆಗಳು ಮುರಿಯಲ್ಪಡುವವು.
ಮೃಗೇಂದ್ರನು ಆಹಾರವಿಲ್ಲದೆ ಸತ್ತು
ಸಿಂಹದ ಮರಿಗಳು ಚದರಿಹೋಗುವವು.

ಒಂದು ಸಂಗತಿಯು ನನಗೆ ರಹಸ್ಯವಾಗಿ ತಿಳಿಯಬಂತು.
ಅದು ಗುಸುಗುಸಿನ ಸದ್ದಾಗಿ ನನ್ನ ಕಿವಿಗೆ ಬಿತ್ತು.
ಮನುಷ್ಯರಿಗೆ ಗಾಢನಿದ್ರೆ ಹತ್ತುವ ಸಮಯದಲ್ಲಿ
ರಾತ್ರಿಯ ಕನಸುಗಳಿಂದ ಯೋಚನೆಗಳಲ್ಲಿರುವಾಗ ನನಗೆ
ಎಲುವುಗಳೆಲ್ಲಾ ನಡುಗುವಷ್ಟು
ಭಯಂಕರವಾದ ದಿಗಿಲು ಉಂಟಾಯಿತು.
ಯಾವದೋ ಒಂದು ಉಸಿರು ನನ್ನ ಮುಖಕ್ಕೆ ಸುಳಿಯಲು
ಮೈಯೆಲ್ಲಾ ನಿಲುಗೂದಲಾಯಿತು.
ನನ್ನ ಕಣ್ಣು ಮುಂದೆ ಒಂದು ರೂಪವು ಇತ್ತು.
ನಿಂತಿದ್ದರೂ ಅದು ಏನೆಂಬದು ಗೊತ್ತಾಗಲಿಲ್ಲ.
ಒಂದು ಸೂಕ್ಷ್ಮ ಧ್ವನಿಯು ಕೇಳಬಂತು.
ಅದೇನಂದರೆ— ಮನುಷ್ಯನು ದೇವರ ದೃಷ್ಟಿಯಲ್ಲಿ ನೀತಿವಂತನಾದಾನೇ?
ಮಾನವನು ಸೃಷ್ಟಿಕರ್ತನ ಸನ್ನಿಧಿಯಲ್ಲಿ ಪರಿಶುದ್ಧನಾಗಿರಬಹುದೇ?
ಆಹಾ, ಆತನು ತನ್ನ ಪರಿಚಾರಕರಲ್ಲಿಯೂ ನಂಬಿಕೆಯನ್ನಿಡುವದಿಲ್ಲ,

1) ಅಥವಾ: ದೊಡ್ಡವರು ಚಿಕ್ಕವರು ಎಲ್ಲರೂ ಅಲ್ಲಿದ್ದಾರೆ.

ತನ್ನ ದೂತರ ಮೇಲೆಯೂ ತಪ್ಪುಹೊರಿಸುತ್ತಾನೆ.
19 ದೂಳಿನಲ್ಲಿರುವ ಅಸ್ತಿವಾರದ ಮೇಲೆ
ಮಣ್ಣಿನಿಂದಾದ [ಶರೀರಗಳೆಂಬ] ಮನೆಗಳೊಳಗೆ ವಾಸಿಸುವವರಲ್ಲಿ
ಇನ್ನೆಷ್ಟೋ ಹೆಚ್ಚಾಗಿ ತಪ್ಪು ಕಂಡುಹಿಡಿಯಬೇಕಲ್ಲವೇ.
ಅವರು ದೀಪದ ಹುಳದಂತೆ ಅಳಿದುಹೋಗುತ್ತಾರೆ.
20 ಉದಯಾಸ್ತಮಾನಗಳ ಮಧ್ಯದಲ್ಲಿ [ಜೀವಿಸಿ] ಜಜ್ಜಲ್ಪಡುತ್ತಾರೆ,
ಹೀಗೆ ನಿತ್ಯನಾಶನಹೊಂದುವದನ್ನು ಯಾರೂ ಲಕ್ಷಿಸುವದಿಲ್ಲ.
21 ಅವರ ಗುಡಾರದ ಹಗ್ಗವು ಬಿಚ್ಚಿಹೋಗುವದಷ್ಟೆ,
ಜ್ಞಾನವಿಲ್ಲದವರಾಗಿ ಸಾಯುವರು ಎಂಬದೇ.

5 ನೀನು ಕೂಗಿದರೆ ನಿನಗೆ ಉತ್ತರಕೊಡುವವರುಂಟೋ?
ದೇವದೂತರಲ್ಲಿ ಯಾರನ್ನು ಆಶ್ರಯಿಸುವಿ?
2 ಕರಕರೆಯಿಂದ ಮೂರ್ಖನಿಗೆ ನಾಶನವು,
ರೋಷದಿಂದ ಮೂಢನಿಗೆ ಮರಣವು ಸಂಭವಿಸುವದಲ್ಲವೇ.
3 ಮೂರ್ಖನು ಬೇರೂರುವದನ್ನು ನಾನು ನೋಡಿದೆನು;
ಕೂಡಲೆ ಅವನ ನಿವಾಸವು ಶಾಪಗ್ರಸ್ತವೆನ್ನುವದಕ್ಕೆ ಆಸ್ಪದವಾಯಿತು.
4 ಅವನ ಮಕ್ಕಳು ನಿರಾಶ್ರಯರಾಗಿ 1)ನ್ಯಾಯಸ್ಥಾನದಲ್ಲಿ ಸೋತುಹೋಗುವರು.
ಅವರನ್ನು ಬಿಡಿಸತಕ್ಕವರು ಯಾರೂ ಇಲ್ಲ.
5 ಹಸಿದವನು ಅವರ ಬೆಳೆಯನ್ನು ಮುಳ್ಳುಬೇಲಿಯೊಳಗಿಂದಲೇ ತಿಂದುಬಿಡುವನು.
2)ಅವರ ಸೊತ್ತನ್ನು ನುಂಗಲು ಬೋನು ಬಾಯಿತೆರೆದಿದೆ.
6 ಕೇಡು ಉದ್ಭವಿಸುವದು ಮಣ್ಣಿನಿಂದಲ್ಲಾ;
ಶ್ರಮೆಯು ಭೂಮಿಯಿಂದ ಮೊಳೆಯುವದಿಲ್ಲ.
7 ಕಿಡಿಗಳು ಮೇಲಕ್ಕೆ ಹಾರುವದೂ
ಮನುಷ್ಯರು ಶ್ರಮೆಯನ್ನು ಅನುಭವಿಸುವದೂ ಸಹಜ.

8 [ಈ ಸಂದರ್ಭದಲ್ಲಿ] ನಾನಾದರೋ ದೇವರನ್ನೇ ಆಶ್ರಯಿಸುತ್ತಿದ್ದೆನು;
ನನ್ನ ಸಂಗತಿಯನ್ನು ದೇವರಿಗೆ ಅರಿಕೆಮಾಡಿಕೊಳ್ಳುತ್ತಿದ್ದೆನು.
9 ಆತನು ಅಪ್ರಮೇಯಮಹಾಕಾರ್ಯಗಳನ್ನೂ
ಅಸಂಖ್ಯವಾದ ಅದ್ಭುತಕೃತ್ಯಗಳನ್ನೂ ಮಾಡುತ್ತಾನೆ;
10 ಭೂಮಿಯ ಮೇಲೆ ಮಳೆಸುರಿಸಿ,
ಹೊಲಗದ್ದೆಗಳಿಗೆ ನೀರನ್ನು ಒದಗಿಸುತ್ತಾನೆ.
11 ಹೀನಸ್ಥಿತಿಯವರನ್ನು ಉನ್ನತಸ್ಥಿತಿಗೆ ಏರಿಸಿ
ದುಃಖಿಸುವವರನ್ನು ನಿರಪಾಯಸ್ಥಳಕ್ಕೆ ಹತ್ತಿಸುತ್ತಾನೆ.
12 ಯುಕ್ತಿವಂತರ ಕೈಯಿಂದ ಏನೂ ಆಗದಂತೆ
ಅವರ ಉಪಾಯಗಳನ್ನು ಭಂಗಪಡಿಸುತ್ತಾನೆ.
13 ಜ್ಞಾನಿಗಳನ್ನು ಅವರ ತಂತ್ರಗಳಲ್ಲಿಯೇ ಹಿಡುಕೊಂಡು
ವಕ್ರಬುದ್ಧಿಯುಳ್ಳವರ ಆಲೋಚನೆಯನ್ನು ನಿರರ್ಥಕಮಾಡುತ್ತಾನೆ.
ಅವರು ಹಗಲಿನಲ್ಲಿ ಕತ್ತಲೆಗೊಳಗಾಗಿ 14
ಮಧ್ಯಾಹ್ನದಲ್ಲೂ ರಾತ್ರಿಯಲ್ಲಿರುವಂತೆ ತಡವಾಡುತ್ತಾರೆ.
ಇಂಥವರ ಬಾಯೆಂಬ ಕತ್ತಿಯಿಂದಲೂ ಬಲಿಷ್ಠರ 15
ಕೈಯಿಂದಲೂ
ದಿಕ್ಕಿಲ್ಲದವರನ್ನು ರಕ್ಷಿಸುತ್ತಾನೆ.
ಹೀಗೆ ಬಡವನಿಗೆ ನಿರೀಕ್ಷೆಯುಂಟಾಗುವದು, 16
ಅನ್ಯಾಯವು ಬಾಯಿಮುಚ್ಚಿಕೊಳ್ಳುವದು.
ಇಗೋ, ದೇವರು ಯಾವನನ್ನು ಶಿಕ್ಷಿಸುವನೋ 17
ಅವನು ಧನ್ಯನು;
ಸರ್ವಶಕ್ತನ ದಂಡನೆಯನ್ನು ತಾತ್ಸಾರಮಾಡಬೇಡ.
ಗಾಯಮಾಡುವವನೂ ಗಾಯಕಟ್ಟುವವನೂ ಆತ 18
ನೇ;
ಹೊಡೆಯುವ ಕೈಯೇ ವಾಸಿಮಾಡುತ್ತದೆ.
ಆರು ಇಕ್ಕಟ್ಟುಗಳಿಂದ ಆತನು ನಿನ್ನನ್ನು ಬಿಡಿಸು 19
ವನು;
ಏಳನೆಯ ಇಕ್ಕಟ್ಟು ಉಂಟಾದರೂ ಯಾವ ಕೇಡೂ ನಿನ್ನನ್ನು ಮುಟ್ಟದು.
ಬರಗಾಲದಲ್ಲಿ ಮರಣದಿಂದಲೂ 20
ಯುದ್ಧದಲ್ಲಿ ಕತ್ತಿಯಿಂದಲೂ ನಿನ್ನನ್ನು ಬಿಡಿಸುವನು.
ನಾಲಿಗೆಯೆಂಬ ಕೊರಡೆಗೆ ನೀನು ಮರೆಯಾಗಿರುವಿ; 21
ವಿನಾಶವುಂಟಾದರೂ ನೀನು ಹೆದರುವದಿಲ್ಲ.
ನೀನು ನಾಶನಕ್ಕೂ ಕ್ಷಾಮಕ್ಕೂ ನಗುವಿ; 22
ಕಾಡುಮೃಗಗಳಿಗೆ ಅಂಜಬೇಕಾಗಿಲ್ಲ.
ಹೊಲದ ಕಲ್ಲುಗಳೊಂದಿಗೂ ಒಪ್ಪಂದ ಮಾಡಿ 23
ಕೊಂಡಿರುವಿ;
ಕಾಡುಮೃಗಗಳೂ ನಿನ್ನ ಸಂಗಡ ಸಮಾಧಾನವಾಗಿರುವವು.
ನಿನ್ನ ಗುಡಾರಕ್ಕೆ ಅಪಾಯವಿಲ್ಲವೆಂದು ನಿನಗೆ ಗೊತ್ತೇ 24
ಇರುವದು;
ನಿನ್ನ ಹಟ್ಟಿಯನ್ನು ನೀನು ಪರೀಕ್ಷಿಸುವಾಗ ಏನೂ ಕಡಿಮೆಯಾಗಿರುವದಿಲ್ಲ;
ನಿನ್ನ ಸಂತಾನವು ದೊಡ್ಡದ್ದೆಂದೂ 25
ನಿನ್ನ ಸಂತತಿಯವರು ಭೂಮಿಯ ಹುಲ್ಲಿನಂತೆ [ಲೆಕ್ಕವಿಲ್ಲದವರು] ಎಂದೂ ನಂಬಿರುವಿ;
ಸುಗ್ಗೀಕಾಲದಲ್ಲಿ ತೆನೆಸಿವುಡು [ಮನೆಗೆ] ಸೇರುವಂತೆ 26
ನೀನು ವೃದ್ಧಾಪ್ಯದಲ್ಲಿ ಸಮಾಧಿಗೆ ಸೇರುವಿ.
ಇಗೋ, ಇದನ್ನು ವಿಚಾರಿಸಿದ್ದೇವೆ, ಯಥಾರ್ಥವಾಗಿ 27
ಯೇ ಇದೆ;
ಇದನ್ನು ಕೇಳು, ನಿನ್ನಷ್ಟಕ್ಕೆ ನೀನೇ ತಿಳಿದುಕೋ.

ಆ ಮೇಲೆ ಯೋಬನು ಮತ್ತೆ ಇಂತೆಂದನು — 6
ಆಹಾ, ತ್ರಾಸಿನಲ್ಲಿ ನನ್ನ ವಿಪತ್ತನ್ನು ಇಟ್ಟು, 2
ಅದರಿಂದ ನನ್ನ ಕರಕರೆಯ ಭಾರವನ್ನು ತೂಕಮಾಡುವದಾದರೆ ಎಷ್ಟೋ ಒಳ್ಳೇದು.

1) ಮೂಲ: ಬಾಗಲಿನಲ್ಲಿ. 2) ಪಾಠಾಂತರ: ಬಾಯಾರಿದವರು ಅವರ ಸೊತ್ತನ್ನು ನುಂಗಿಬಿಡುವರು.

3 ಆಗ ನನ್ನ ವಿಪತ್ತು ಸಮುದ್ರದ ಮರಳಿಗಿಂತಲೂ
ಹೆಚ್ಚು ಭಾರವುಳ್ಳದ್ದೆಂದು ಗೊತ್ತಾಗುವದು;
ಆದದರಿಂದಲೇ ಆತುರದಿಂದ ಮಾತಾಡಿದ್ದೇನೆ.
4 ಸರ್ವಶಕ್ತನ ಬಾಣಗಳು ನನ್ನಲ್ಲಿ ನಾಟಿರುತ್ತವೆ;
ನನ್ನ ಆತ್ಮವು ಅವುಗಳ ವಿಷವನ್ನು ಹೀರಿಕೊಳ್ಳುತ್ತದೆ;
ದೇವರು ಕಳುಹಿಸಿದ ಅಪಾಯಗಳು ನನಗೆ ವಿರೋಧ
ವಾಗಿ ವ್ಯೂಹಕಟ್ಟಿವೆ.

5 ಕಾಡುಕತ್ತೆಗೆ ಹುಲ್ಲಿರಲು ಅರಚೀತೇ,
ಎತ್ತಿಗೆ ಮೇವಿರಲು ಕೂಗೀತೇ?
6 ಸಪ್ಪೆಯನ್ನು ಉಪ್ಪಿಲ್ಲದೆ ತಿನ್ನಬಹುದೇ,
1)ಮೊಟ್ಟೆಯಲ್ಲಿರುವ ಲೋಳೆಯು ರುಚಿಯೇ?
7 ಇಂಥಾ ಆಹಾರವು ನನಗೆ ಅಸಹ್ಯವಾಗಿದೆ;
ಮುಟ್ಟಲಾರೆನು.

8 ಅಯ್ಯೋ, ನನ್ನ ವಿಜ್ಞಾಪನೆಯು ನೆರವೇರುವದಿಲ್ಲವೇ,
ನಾನು ಬಯಸುವದನ್ನು ದೇವರು ಕೊಡುವದಿಲ್ಲವೇ?
9 ಆತನು ದಯಮಾಡಿ ತನ್ನ ಕೈ ಜಾಡಿಸಿ
ನನ್ನನ್ನು ಜಜ್ಜಿ ಸಂಹರಿಸಿದರೆ
10 ಆಗ ನಾನು ಆದರಣೆ ಹೊಂದಿ
ಮಿತಿಯಿಲ್ಲದ ಯಾತನೆಯಲ್ಲಿಯೂ ಉಲ್ಲಾಸಿಸುವೆನು.
ಸದಮಲಸ್ವಾಮಿಯ ಆಜ್ಞೆಗಳನ್ನು ನಾನು ತೊರೆದು
ಬಿಟ್ಟವನಲ್ಲ.
11 ನನ್ನ ಬಲವು ಎಷ್ಟರದು, ನಾನು ಹೇಗೆ ಕಾದು
ಕೊಳ್ಳಲಿ?
ನನ್ನ ಅಂತ್ಯಸ್ಥಿತಿಯೇನು, ನಾನು ತಾಳ್ಮೆಯಿಂದಿರುವ
ದೇಕೆ?
12 ನನ್ನ ಬಲವು ಕಲ್ಲಿನ ಬಲವೋ?
ನನ್ನ ಶರೀರವು ತಾಮ್ರದ್ದೋ?
13 ನನ್ನಲ್ಲಿ ಏನೂ ಸಹಾಯವಿಲ್ಲವಲ್ಲಾ,
ನನ್ನ ಸಾಮರ್ಥ್ಯವು ತೊಲಗಿಹೋಗಿದೆ.

14 ಒಬ್ಬನು ಮನಗುಂದಿ ಸರ್ವಶಕ್ತನ ಮೇಲಣ
ಭಯಭಕ್ತಿಯನ್ನು ಬಿಡುವವನಾಗಿದ್ದರೂ
ಅವನ ಮಿತ್ರನು ಅವನಿಗೆ ದಯೆ ತೋರಿಸತಕ್ಕದ್ದು.
15 ನನ್ನ ಸಹೋದರರಾದರೋ ತೊರೆಯಹಾಗೂ
ಪ್ರವಾಹವು ಹಾದುಹೋಗಿ ಬತ್ತಿದ ಹಳ್ಳದ ಹಾಗೂ
ದ್ರೋಹಿಗಳಾಗಿದ್ದಾರೆ.
16 ಹಿಮವು ಅಡಗಿರುವ ಪ್ರವಾಹಗಳು
ಮಂಜುಗಡ್ಡೆಯಿಂದ ಕೂಡಿ ಕಪ್ಪಾಗಿರುವವು;
17 ಬೇಸಿಗೆ ಬರುತ್ತಲೇ ಮಾಯವಾಗುವವು,
ಸೆಕೆಯುಂಟಾದಾಗಲೋ ಅವು ಬತ್ತಿ ಕಾಣಿಸದೆ
ಹೋಗುವವು.
18 ಇಂಥಾ ತೊರೆಗಳ ಮಾರ್ಗವಾಗಿ ಪ್ರಯಾಣಮಾಡುವ
ವರ್ತಕರ ಗುಂಪುಗಳು
ವಾರೆಯಾಗಿ ಮರುಭೂಮಿಗೆ ತಿರುಗಿ ನಾಶವಾಗು
ತ್ತವೆ.
19 ತೇಮದ ಗುಂಪಿನವರು ಕಣ್ಣೆತ್ತಿ ನೋಡಿದರು,
ಶೆಬದ ಸಮೂಹದವರು ಆ ತೊರೆಗಳನ್ನು ಹಾರೈಸಿ
ದರು.
ಅಲ್ಲಿಗೆ ಸೇರಿ ಆಶಾಭಂಗಪಟ್ಟರು,
ನಂಬಿದಷ್ಟೂ ನಿರೀಕ್ಷೆಗೆಟ್ಟರು.
ಈಗ ನೀವು ಹಾಗೆಯೇ ಇದ್ದೀರಿ.
[ನನ್ನ] ವಿಪತ್ತನ್ನು ಕಂಡ ಕೂಡಲೆ ಹೆದರಿದಿರಿ.

ನನ್ನ ಬಿನ್ನಹವೇನು? ನನಗೆ ದಾನಮಾಡಿರಿ
ಎಂದು ಬಿನ್ನವಿಸಿದೆನೋ?
ನಿಮ್ಮ ಆಸ್ತಿಯಿಂದ ನನಗಾಗಿ ಲಂಚಕೊಡಿರಿ ಎಂದ
ನೋ?
ವಿರೋಧಿಯ ಕೈಯಿಂದ ನನ್ನನ್ನು ರಕ್ಷಿಸಿರಿ ಎಂದು
ಕೇಳಿಕೊಂಡೆನೋ?
ಬಲಾತ್ಕರಿಸುವವರಿಂದ ನನ್ನನ್ನು ವಿಮೋಚಿಸಿರಿ ಎಂದು
ಬೇಡಿಕೊಂಡೆನೋ?
ನನಗೆ ಉಪದೇಶಮಾಡಿ ನನ್ನ ತಪ್ಪನ್ನು ನನಗೆ ತಿಳಿಯ
ಪಡಿಸಿರಿ,
ನಾನು ಮೌನದಿಂದಿರುವೆನು.
ನೀತಿಯ ನುಡಿಗಳು ಎಷ್ಟೋ ಖಂಡಿತವಾಗಿವೆ,
ಆದರೆ ನಿಮ್ಮ ಖಂಡನೆಯು ಖಂಡಿಸುವದೇನು?
ಬರೀ ಮಾತುಗಳನ್ನು ಖಂಡಿಸ ಬೇಕೆನ್ನುವಿರೋ?
ದೆಸೆಗೆಟ್ಟವನ ಮಾತುಗಳು ಗಾಳಿಗೆ ಹೋಗತಕ್ಕವ
ಗಳಲ್ಲವೆ?
ನೀವು ಚೀಟಿಹಾಕಿ ಅನಾಥನನ್ನು ತೆಗೆದುಕೊಳ್ಳು
ವವರು;
ಸ್ನೇಹಿತನನ್ನೂ ವಿಕ್ರಯಿಸುವವರು.
ಈಗ ದಯಮಾಡಿ ನನ್ನನ್ನು ನೋಡಿರಿ,
ನಿಮ್ಮ ಮುಖದೆದುರಿಗೆ ನಾನು ಸುಳ್ಳಾಡುವೆನೋ?
ದಯವಿಟ್ಟು ನನ್ನ ವಿಚಾರಣೆಗೆ ತಿರುಗಿಕೊಳ್ಳಿರಿ, ಅನ್ಯಾ
ಯವಾಗದಿರಲಿ;
ಮತ್ತೆ ವಿಮರ್ಶೆಗೆ ತಿರುಗಿಕೊಳ್ಳಿರಿ.
ನನ್ನ ವ್ಯಾಜ್ಯವು ನ್ಯಾಯವಾದದ್ದು.
ರುಚಿವಿಮರ್ಶೆಯಲ್ಲಿ ನನ್ನ ನಾಲಿಗೆಯು ತಪ್ಪುಮಾಡು
ತ್ತದೋ?
ನನ್ನ ಅಂಗಳವು ವಿಪತ್ತುಗಳ [ನ್ಯಾಯಾನ್ಯಾಯವನ್ನು
ವಿವೇಚಿಸಲಾರದೋ?

ಭೂಲೋಕದಲ್ಲಿ ಮನುಷ್ಯನಿಗೆ ದುಡಿಯುವ ವಾ
ಯಿದೆಯುಂಟಲ್ಲವೇ.
ಅವನ ದಿನಗಳು ಕೂಲಿಯವನ ದಿನಗಳಂತೆ ಕಳೆಯು
ತ್ತವೆ.
ನಾನು ಸಂಜೆಯನ್ನು ಬಯಸುವ ದಾಸನಂತೆಯೂ
ಕೂಲಿಯನ್ನು ನಿರೀಕ್ಷಿಸುವ ಆಳಿನಂತೆಯೂ ಇದ್ದೇನೆ
ಬೇಸರಿಕೆಯ ಮಾಸಗಳೂ ಆಯಾಸದ ರಾತ್ರಿಗಳು
ನನ್ನ ಪಾಲಿಗೆ ನೇಮಕವಾಗಿವೆ.
ಮಲಗುವ ವೇಳೆಯಲ್ಲಿ ಯಾವಾಗ ಏಳುವೆನೋ
ಅಂದುಕೊಳ್ಳುವೆನು;
ರಾತ್ರಿಯು ಬೆಳೆಯುತ್ತಾ ಹೋಗುತ್ತದೆ.

1) ಅಥವಾ: ಗೋಳಿ ಪಲ್ಯದ ರಸದಲ್ಲಿ ರುಚಿಯಿರುವದೋ?

ಉದಯದ ವರೆಗೂ ಹೊರಹೊರಳಿ ಸಾಕಾಗುತ್ತದೆ.
5 ಹುಳಗಳೂ ಮಣ್ಣುಹಕ್ಕಳೆಗಳೂ ನನ್ನ ಮಾಂಸವನ್ನು
ಮುಸುಕಿವೆ.
[ಬಿರಿದ] ಚರ್ಮವು ಕೂಡುತ್ತಾ ಬಂದು ಬಿರಿಯುತ್ತದೆ.
6 ನನ್ನ ದಿವಸಗಳು ಮಗ್ಗದ ಲಾಳಿಗಿಂತ ವೇಗವಾಗಿ
ನಿರೀಕ್ಷೆಯಿಲ್ಲದೆ ಕಳೆದುಹೋಗುತ್ತವೆ.
7 ಎಲೈ, ನನ್ನ ಜೀವವು ಗಾಳಿಯಂತಿದೆಯೆಂತಲೂ
ನನ್ನ ಕಣ್ಣು ಇನ್ನೂ ಸುಖವನ್ನು ಕಾಣುವದಿಲ್ಲವೆಂತ
ಲೂ ನೆನಪು ಮಾಡಿಕೋ.
8 ನನ್ನನ್ನು ನೋಡುವವನ ಕಣ್ಣಿಗೆ ನಾನು ಕಾಣಿಸುವ
ದಿಲ್ಲ;
ನಿನ್ನ ಕಣ್ಣುಗಳು ನನ್ನ ಕಡೆ ಇದ್ದರೂ ನಾನು ಇರುವ
ದಿಲ್ಲ.
9 ಮೋಡ ಹರಿದು ಮಾಯವಾಗುವಂತೆ
ಪಾತಾಳಕ್ಕೆ ಇಳಿದು ಹೋದವನು ತಿರಿಗಿ ಬರುವದಿಲ್ಲ.
10 ಅವನು ತನ್ನ ಮನೆಗೆ ಪುನಃ ಸೇರುವದಿಲ್ಲ,
ಇನ್ನು ಮೇಲೆ ಅವನ ನಿವಾಸವು ಅವನನ್ನು ತಿಳಿಯು
ವದಿಲ್ಲ.

11 ನಾನಂತೂ ಬಾಯಿಮುಚ್ಚುವದಿಲ್ಲ;
ಆತ್ಮವೇದನೆಯಿಂದ ಮಾತಾಡುವೆನು,
ಮನೋವ್ಯಥೆಯಿಂದ ಪ್ರಲಾಪಿಸುವೆನು.
12 ನೀನು ನನ್ನ ಮೇಲೆ ಕಾವಲಿಡುವದೇಕೆ?
ನಾನು ಸಮುದ್ರವೋ [ಸಾಗರವೆಂಬ] ಘಟಸರ್ಪವೋ?
13 ನನ್ನ ಹಾಸಿಗೆಯು ನನ್ನನ್ನು ಸಂತಯಿಸುವದು.
ನನ್ನ ಮಂಚವು ನನ್ನ ಬಾಧೆಯನ್ನು ಹೊರುವದು
ಅಂದುಕೊಳ್ಳುವಾಗ
14 ನೀನು ಸ್ವಪ್ನಗಳಿಂದ ನನ್ನನ್ನು ಬೆದರಿಸಿ
ದರ್ಶನಗಳ ಮೂಲಕ ಭಯಪಡಿಸುವಿ.
15 ನನ್ನ ಆತ್ಮವು ಈ ಅಸ್ಥಿಪಂಜರದಲ್ಲಿ ಉಳಿಯುವದ
ಕ್ಕಿಂತಲೂ
ಉಸಿರುಕಟ್ಟಿ ಸಾಯುವದೇ ಲೇಸೆಂದು ಇಚ್ಛೈಸು
ತ್ತದೆ.
16 ನಾನು ಬೇಸರಗೊಂಡಿದ್ದೇನೆ, ನಿತ್ಯವಾಗಿ ಬದುಕುವ
ದಕ್ಕೆ ಇಷ್ಟವಿಲ್ಲ.
ನನ್ನನ್ನು ಬಿಟ್ಟುಬಿಡು; ನನ್ನ ದಿನಗಳು ಉಸಿರಿನಂತಿವೆ.
17 ಮಾನವನು ಎಷ್ಟರವನು, ಅವನನ್ನು ನೀನು ಏಕೆ
ಹೆಚ್ಚಿಸಬೇಕು?
ಅವನಲ್ಲಿ ಏಕೆ ಮನಸ್ಸಿಡಬೇಕು?
18 ದಿನಂಪ್ರತಿಯೂ ಅವನ ಮೇಲೆ ಲಕ್ಷ್ಯವಿಟ್ಟು
ಕ್ಷಣಕ್ಷಣಕ್ಕೂ ಅವನನ್ನು ಪರಿಶೋಧಿಸುವದೇಕೆ?
19 ಇನ್ನೆಷ್ಟರವರೆಗೂ ನೀನು ನನ್ನ ಕಡೆಯಿಂದ ದೃಷ್ಟಿ
ತಿರುಗಿಸದೆ ಇರುವಿ?
ಉಗುಳನ್ನು ನುಂಗುವಷ್ಟು ಕಾಲವಾದರೂ ನನ್ನನ್ನು
ಬಿಡುವದಿಲ್ಲವೇ.
20 ಮನುಷ್ಯರ ಮೇಲೆ ಕಾವಲಿಡುವವನೇ, ನಾನು ಪಾಪ
ಮಾಡಿದ್ದರೂ ನನ್ನ ಕೃತ್ಯದಿಂದ ನಿನಗೆ ಏನಾ
ಯಿತು?
ನನ್ನನ್ನು ಗುರಿಮಾಡಿಕೊಂಡದ್ದೇಕೆ? ನನಗೆ ನಾನೇ
ಭಾರವಾಗಿದ್ದೇನೆ.
ನೀನು ನನ್ನ ಅಪರಾಧವನ್ನು ಕ್ಷಮಿಸಿ ನನ್ನ ದೋಷ 21
ವನ್ನು ಏಕೆ ಪರಿಹರಿಸುವದಿಲ್ಲ?
ನಾನು ಈಗ ಮಣ್ಣಿನಲ್ಲಿ ಮಲಗಿಕೊಳ್ಳುವೆನು;
ನೀನು ನನ್ನನ್ನು ಹುಡುಕುವಾಗ ನಾನು ಇಲ್ಲದೆ
ಹೋಗಿರುವೆನು.

8
ಆಗ ಶೂಹ್ಯನಾದ ಬಿಲ್ದದನು ಹೀಗೆಂದನು—
ಬಿರುಗಾಳಿಯಂತಿರುವ ಮಾತುಗಳನ್ನಾಡಿ 2
ಇನ್ನೆಷ್ಟರವರೆಗೂ ಹೀಗೆ ನುಡಿಯುತ್ತಿರುವಿ?
ದೇವರು ಅನ್ಯಾಯವಾದ ತೀರ್ಪನ್ನು ಕೊಡುವನೋ? 3
ಸರ್ವಶಕ್ತನು ನೀತಿಯನ್ನು ಡೊಂಕುಮಾಡುವನೋ?
ಒಂದುವೇಳೆ ನಿನ್ನ ಮಕ್ಕಳು ಆತನಿಗೆ ವಿರುದ್ಧವಾಗಿ 4
ಪಾಪ ಮಾಡಿದ್ದಕಾರಣ
ಆತನು ಅವರನ್ನು ಅವರ ದುಷ್ಕೃತ್ಯದ ಕೈಗೆ ಒಪ್ಪಿಸಿ
ದನೋ ಏನೋ?
ನೀನು ಶುದ್ಧನೂ ಯಥಾರ್ಥನೂ ಆಗಿ ಕುತೂಹಲ 5
ದಿಂದ ಆತನ ಪ್ರಸನ್ನತೆಯನ್ನು ಬಯಸಿ
ಸರ್ವಶಕ್ತನಿಗೆ ನಿನ್ನ ವಿಜ್ಞಾಪನೆಯನ್ನು ಮಾಡಿ
ಕೊಂಡರೆ
ಆತನು ನಿಶ್ಚಯವಾಗಿ ನಿನಗೋಸ್ಕರ ಎಚ್ಚತ್ತು 6
ನಿನ್ನ ನೀತಿಯ ನಿವಾಸವನ್ನು ಸಮೃದ್ಧಿಗೊಳಿಸುವನು.
ನಿನ್ನ ಮೊದಲನೆಯ ಸ್ಥಿತಿಯು ಅಲ್ಪವಾಗಿದ್ದರೂ 7
ನಿನ್ನ ಕಡೆಯ ಸ್ಥಿತಿಯು ಬಹಳ ವೃದ್ಧಿಹೊಂದುವದು.

ದಯಮಾಡಿ ಪೂರ್ವಿಕರನ್ನು ವಿಚಾರಿಸಿ 8
ಅವರ ಪಿತೃಗಳು ಕಂಡುಕೊಂಡದ್ದಕ್ಕೂ ಮನಸ್ಸಿಡು.
ನಾವಾದರೋ ನಿನ್ನೆ ಹುಟ್ಟಿದವರು, ನಮಗೆ ಏನೂ 9
ತಿಳಿಯದು;
ಭೂಲೋಕದಲ್ಲಿನ ನಮ್ಮ ದಿನಗಳು ನೆರಳಿನಂತಿವೆ
ಯಷ್ಟೆ.
ಅವರು ನಿನಗೆ ಬೋಧಿಸಿ ಬುದ್ಧಿಹೇಳಿ 10
ಮನಃಪೂರ್ವಕವಾಗಿ ಮಾತಾಡುವದಿಲ್ಲವೋ?
ಜವುಗು ಇಲ್ಲದೆ ಜಂಬುಹುಲ್ಲು ಬೆಳೆಯುವದೇ? 11
ನೀರಿಲ್ಲದೆ ಆಪುಹುಲ್ಲು ಮೊಳೆಯುವದೇ?
ಇನ್ನೂ ಎಳೆದಾಗಿರುವಾಗಲೇ 12
ಮಿಕ್ಕ ಎಲ್ಲಾ ಸಸಿಗಳಿಗಿಂತಲೂ ಮುಂಚಿತವಾಗಿ
ಯಾರೂ ಕೊಯ್ಯದೆಯೇ ಇದು ಒಣಗಿ ಹೋಗು
ವದು.
ದೇವರನ್ನು ಮರೆತು ಬಿಟ್ಟವರೆಲ್ಲರ ಗತಿಯು ಹೀಗೆ 13
ಯೇ ಇರುವದು;
ಭ್ರಷ್ಟನ ನಿರೀಕ್ಷೆಯು ನಿರರ್ಥಕವಾಗುವದು.
ಅವನ ಭರವಸವು ಭಂಗವಾಗುವದು, 14
ಅವನ ಆಶ್ರಯವು ಜೇಡಹುಳದ ಮನೆಯಂತಿರುವದು.
ಅವನು ಆ ಮನೆಯನ್ನು ಆತುಕೊಂಡರೆ ಅದು ನಿಲ್ಲು 15
ವದಿಲ್ಲ;
ಅದನ್ನು ಹಿಡುಕೊಂಡರೆ ಅದು ಸ್ಥಿರವಾಗಿರದು.
ಅವನು ಬಳ್ಳಿಯಂತೆ ಬಿಸಿಲಿನಲ್ಲಿಯೂ ಹಸಿಯಾಗಿದ್ದು 16
ತೋಟದಲ್ಲೆಲ್ಲಾ ಕವಲೊಡೆದು ಹರಡಿ
[ಕಲ್ಲು] ಕುಪ್ಪೆಯ ಮೇಲೆ ತನ್ನ ಬೇರುಗಳನ್ನು ಹೆಣೆದು 17
ಕೊಂಡು

1)ಕಲ್ಲು ಸಂದಿನಲ್ಲಿಯೂ ನುಗ್ಗಬಲ್ಲನು.
18 ಅವನನ್ನು ಅಲ್ಲಿಂದ ಕಿತ್ತುಹಾಕಿದರೆ
ಆ ಸ್ಥಳವು—ನಿನ್ನನ್ನು ಕಾಣೆ ಎಂದು ಬೊಂಕುವದು.
19 ಆ ಮಣ್ಣಿನಿಂದ ಬೇರೆ ಸಸಿಗಳು ಮೊಳೆಯುವವು.
ಅಹಾ, ಇದೇ ಅವರ ಗತಿಯ ಸುಖ!

20 ಇಗೋ ದೇವರು ನಿರ್ದೋಷಿಯನ್ನು ತಳ್ಳಿಬಿಡುವದಿಲ್ಲ,
ಕೆಡುಕರನ್ನು ಕೈಹಿಡಿಯುವದಿಲ್ಲ.
21 ಆತನು ಇನ್ನು ಮೇಲೆ ನಿನ್ನ ಬಾಯನ್ನು ನಗೆಯಿಂದಲೂ
ತುಟಿಗಳನ್ನು ಉತ್ಸಾಹಧ್ವನಿಯಿಂದಲೂ ತುಂಬಿಸುವನು.
22 ನಿನ್ನ ಹಗೆಗಳನ್ನು ಅವಮಾನವು ಮುಸುಕುವದು;
ದುಷ್ಟರ ನಿವಾಸವು ನಿರ್ಮೂಲವಾಗುವದು ಅಂದನು.

9 ಆ ಮೇಲೆ ಯೋಬನು ಪ್ರತ್ಯುತ್ತರವಾಗಿ ಇಂತೆಂದನು—
2 ನೀನು ಹೇಳಿದ್ದು ಸತ್ಯವೇ ಸರಿ;
ಆದರೆ ಮನುಷ್ಯನು ದೇವರ ದೃಷ್ಟಿಯಲ್ಲಿ ನೀತಿವಂತನಾಗಿರುವದು ಹೇಗೆ?
3 ಆತನೊಂದಿಗೆ ವ್ಯಾಜ್ಯವಾಡಬೇಕೆಂದು ಇಷ್ಟಪಟ್ಟರೂ
ಆತನ ಸಾವಿರ ಪ್ರಶ್ನೆಗಳಲ್ಲಿ ಒಂದಕ್ಕೂ ಉತ್ತರಕೊಡಲಾರನು.
4 ದೇವರ ಹೃದಯವು ವಿವೇಕವುಳ್ಳದ್ದು, ಆತನ ಶಕ್ತಿಯು ಪ್ರಬಲವಾದದ್ದು;
ಆತನಿಗೆ ವಿರುದ್ಧವಾಗಿ ಮನಸ್ಸುಕಠಿಣಮಾಡಿಕೊಂಡವನು ಸಾರ್ಥಕನಾದದ್ದುಂಟೇ?
5 ಆತನು ಪರ್ವತಗಳನ್ನು ಅರಿಯದಂತೆ ಸರಿಸಿ
ಕೋಪದಿಂದ ಅವುಗಳನ್ನು ಉರುಳಿಸುತ್ತಾನೆ.
6 ಭೂಲೋಕವನ್ನು ಸ್ಥಳದೊಳಗಿಂದ ಕದಲಿಸಿ
ಅದರ ಸ್ತಂಭಗಳನ್ನು ನಡುಗಿಸುತ್ತಾನೆ.
7 ಹುಟ್ಟಬೇಡವೆಂದು ಆತನು ಅಪ್ಪಣೆ ಕೊಟ್ಟರೆ ಸೂರ್ಯನು ಹುಟ್ಟುವದಿಲ್ಲ;
ನಕ್ಷತ್ರಗಳನ್ನು ಮುಚ್ಚಿಟ್ಟು ಮುದ್ರೆಹಾಕುತ್ತಾನೆ.
8 ಆಕಾಶಮಂಡಲವನ್ನು ವಿಶಾಲಪಡಿಸಿದವನು ಆತನೊಬ್ಬನೇ.
ಅಲ್ಲೋಲಕಲ್ಲೋಲವಾದ ಸಮುದ್ರದ ಮೇಲೆ ನಡೆಯುತ್ತಾನೆ.
9 ಸಪ್ತರ್ಷಿಗಳನ್ನೂ ಮೃಗಶಿರವನ್ನೂ ಕೃತ್ತಿಕೆಯನ್ನೂ
ತೆಂಕಣ ದಿಕ್ಕಿನ ನಕ್ಷತ್ರಗೃಹಗಳನ್ನೂ ನಿರ್ಮಿಸಿದವನು ಆತನೇ.
10 ಅಪ್ರಮೇಯ ಮಹಾಕಾರ್ಯಗಳನ್ನೂ
ಅಸಂಖ್ಯವಾದ ಅದ್ಭುತಕೃತ್ಯಗಳನ್ನೂ ಮಾಡುತ್ತಾನೆ.
11 ಅಹಾ, ಆತನು ನನ್ನ ಪಕ್ಕದಲ್ಲಿ ದಾಟಿಹೋದರೂ ನಾನು ಕಾಣೆನು;
ಮುಂದಕ್ಕೆ ಹಾದುಹೋದರೂ ನನಗೆ ತಿಳಿಯುವದಿಲ್ಲ.

ಇಗೋ ಹಿಡಿದುಕೊಳ್ಳುತ್ತಾನೆ, ಆತನನ್ನು ತಳ್ಳುವವರು ಯಾರು?
ನೀನು ಏನು ಮಾಡುತ್ತಿ ಎಂದು ಆತನನ್ನು ಕೇಳುವವರಾರು?
ದೇವರು ತನ್ನ ಸಿಟ್ಟನ್ನು ತೊಲಗಿಸಿಬಿಡುವದಿಲ್ಲ;
2)ಘಟಸರ್ಪದ ಸಹಾಯಕರು ಆತನಿಗೆ ಪಾದಾಕ್ರಾಂತರಾದರಲ್ಲಾ.

ನಾನಾದರೋ ದೇವರೊಂದಿಗೆ ವಾದಿಸಿ
ಆತನಿಗೆ ಉತ್ತರಕೊಡುವದಕ್ಕೆ ಮತ್ತೂ ಅಶಕ್ತನು.
ನನಗೆ ನ್ಯಾಯವಿದ್ದರೂ ಪ್ರತಿವಾದ ಮಾಡಲಾರದೆ
ನನ್ನ ವಿರೋಧಿಗೆ ಶರಣಾಗತನಾಗುತ್ತಿದ್ದೆನು.
ನಾನು ಕರೆಸಿದಾಗ ಆತನು ನನಗೆ ಕಾಣಿಸಿಕೊಂಡಿದ್ದರೂ
ನನ್ನ ವಿಜ್ಞಾಪನೆಯನ್ನು ಲಾಲಿಸುವನೆಂದು ನಂಬುತ್ತಿರಲಿಲ್ಲ.
ಆತನು ಬಿರುಗಾಳಿಯಿಂದ ನನ್ನನ್ನು ಬಡಿಯುತ್ತಾ
ಸುಮ್ಮಸುಮ್ಮನೆ ಒಂದರ ಮೇಲೊಂದು ಗಾಯಮಾಡುತ್ತಾ
ಉಸಿರಾಡಗೊಡಿಸದೆ ಕಹಿಯಾದ ಪದಾರ್ಥದಿಂದ ನನ್ನ ಹೊಟ್ಟೆಯನ್ನು ತುಂಬಿಸುತ್ತಾನೆ.
ನಾನು ಬಲಿಷ್ಠನ ಶಕ್ತಿಯನ್ನು ಮರೆಹೊಗುವೆನೆಂದರೆ [ದೇವರು]—ಇಗೋ, [ಇದ್ದೇನೆ; ಅನ್ನುವನು] ನ್ಯಾಯವಿಚಾರಣೆಯು [ಆಗಲಿ ಎಂದರೆ ಆತನು] ನನಗೆ ಕಾಲನಿಯಾಮಕರು ಯಾರು [ಅನ್ನುವನು].
ನಾನು ನೀತಿವಂತನಾಗಿದ್ದರೂ ನನ್ನ ಬಾಯೇ ನನ್ನನ್ನು ಅಪರಾಧಿಯೆಂದು ತೋರ್ಪಡಿಸುವದು.
ನಾನು ನಿರ್ದೋಷಿಯಾಗಿದ್ದರೂ ಆತನು ನನ್ನನ್ನು ದುರ್ಮಾರ್ಗಿಯೆಂದು ನಿರೂಪಿಸುವನು.
ನಾನು ನಿರ್ದೋಷಿಯೇ ಹೌದು; ನನ್ನ ವಿಷಯದಲ್ಲಿ ನನಗೇನೂ ಚಿಂತೆಯಿಲ್ಲ;
ನನ್ನ ಪ್ರಾಣವನ್ನು ತೃಣೀಕರಿಸುತ್ತೇನೆ.
ಎಲ್ಲಾ ಒಂದೇ ಸರಿ. ಆದಕಾರಣ ನಾನು—
ನಿರ್ದೋಷಿಯನ್ನೂ ದೋಷಿಯನ್ನೂ ಆತನು ನಾಶಮಾಡುತ್ತಾನೆ ಎಂದು ಹೇಳುತ್ತೇನೆ.
ವಿಪತ್ತು ಅಕಸ್ಮಾತ್ತಾಗಿ ಜನರನ್ನು ಸಂಹರಿಸಲು
ನಿರ್ಮಲಚಿತ್ತರು ಮನಗುಂದುವದನ್ನು ಆತನು ನೋಡಿ ಹಾಸ್ಯಮಾಡುವನು.
ಭೂಲೋಕವು ದುಷ್ಟರ ಕೈ ಸೇರಿದೆ;
ಲೋಕದ ನ್ಯಾಯಾಧಿಪತಿಗಳ ಮುಖಗಳಿಗೆ ಮುಸುಕು ಹಾಕಿದ್ದಾನೆ.
ಇದನ್ನು ಮಾಡಿದವನು ಆತನಲ್ಲದೆ ಮತ್ತೆ ಯಾರು?

ನನ್ನ ದಿನಗಳು ಅಂಚೆಯವನಿಗಿಂತ ಶೀಘ್ರವಾಗಿರುತ್ತವೆ.
ಯಾವ ಸುಖವನ್ನೂ ಕಾಣದೆ ಓಡಿ ಹೋಗುತ್ತವೆ.
ಬೆಂಡಿನ ದೋಣಿಗಳು ದಾಟಿ ಹೋಗುವಂತೆಯೂ
ಹದ್ದು ತನ್ನ ಬೇಟೆಯ ಮೇಲೆ ಎರಗುವಂತೆಯೂ
ವೇಗವಾಗಿ ಗತಿಸಿ ಹೋಗುತ್ತವೆ.

1) ಅಥವಾ: ಕಲ್ಲುಗಳ ನಡುವೆ ಬದುಕುವವನು. 2) ಮೂಲ: ರಹಬನ.

7 ನಾನು ನನ್ನ ಪ್ರಲಾಪವನ್ನು ಮರೆತುಬಿಟ್ಟು
ಕಳೆಗುಂದಿದ ನನ್ನ ಮುಖವನ್ನು ಮಾರ್ಪಡಿಸಿಕೊಂಡು
ಹರ್ಷಿಸುವೆನೆಂದು ಮನಸ್ಸುಮಾಡಿದರೆ
8 ನನ್ನ ಎಲ್ಲಾ ಸಂಕಟಗಳಿಂದ ನನಗೆ ಭಯವುಂಟಾಗುತ್ತದೆ;
ನೀನು ನನ್ನನ್ನು ನಿರ್ದೋಷಿಯೆಂದೆಣಿಸುವದಿಲ್ಲವೆಂದು
ತಿಳಿದುಕೊಳ್ಳುತ್ತೇನೆ.
9 ನಾನು ಅಪರಾಧಿಯೆಂದು ನಿರ್ಣಯಿಸಲ್ಪಡಬೇಕಷ್ಟೆ.
ನಾನು ವ್ಯರ್ಥವಾಗಿ ಪ್ರಯಾಸಪಡುವದೇಕೆ?
0 ನಾನು ಹಿಮದಿಂದ ಸ್ನಾನಮಾಡಿದರೂ
ಚೌಳಿನಿಂದ ಕೈ ತೊಳಕೊಂಡರೂ
1 ನೀನು ನನ್ನನ್ನು ಗುಂಡಿಯಲ್ಲಿ ಮುಣುಗಿಸಿ
ನನ್ನ ಬಟ್ಟೆಗಳಿಗೇ ನಾನು ಅಸಹ್ಯನಾಗುವಂತೆ ಮಾಡುವಿ.
2 ಆತನು ನನ್ನಂಥವನಲ್ಲ, ಮನುಷ್ಯನಲ್ಲ, ನಾನು ಆತನೊಂದಿಗೆ ವಾದಿಸುವದು ಹೇಗೆ?
ನಾವಿಬ್ಬರೂ ನ್ಯಾಯಾಸನದ ಮುಂದೆ ಕೂಡುವದು ಹೇಗೆ?
3 ನಮ್ಮಿಬ್ಬರ ಮೇಲೆ ಕೈಯಿಡುವವನಾಗಿಯೂ
ಮಧ್ಯಸ್ಥನಾಗಿಯೂ ಇರುವ ನ್ಯಾಯಾಧಿಪತಿಯು ಯಾರೂ ಇಲ್ಲ.
4 ನನ್ನ ಮೇಲೆ ಎತ್ತಿರುವ ತನ್ನ ದಂಡವನ್ನು ಆತನು ತೆಗೆದುಹಾಕಲಿ,
ಆತನಿಂದಾಗುವ ದಿಗಿಲು ನನ್ನನ್ನು ಹೆದರಿಸದಿರಲಿ,
5 ಹೀಗಿದ್ದರೆ ನಾನು ಭಯಪಡದೆ ಮಾತಾಡುವೆನು;
ಭಯಕ್ಕೆ ನನ್ನಲ್ಲೇನೂ ಆಸ್ಪದವಿಲ್ಲ.

0 ನನ್ನ ಜೀವವೇ ನನಗೆ ಬೇಸರವಾಗಿದೆ.
ಎದೆಬಿಚ್ಚಿ ಮೊರೆಯಿಡುವೆನು; ಮನೋವ್ಯಥೆಯಿಂದ ನುಡಿಯುವೆನು.
2 ನಾನು ದೇವರ ಮುಂದೆ—ನನ್ನನ್ನು ಅಪರಾಧಿಯೆಂದು ನಿರ್ಣಯಿಸಬೇಡ,
ನನ್ನೊಡನೆ ಏಕೆ ವ್ಯಾಜ್ಯವಾಡುತ್ತೀ ತಿಳಿಸು ಅನ್ನುವೆನು.
3 ನೀನು ದುಷ್ಟರ ಆಲೋಚನೆಗೆ ಪ್ರಸನ್ನನಾಗಿ
ನಿನ್ನ ಕೈಕಷ್ಟದಿಂದ ಸೃಷ್ಟಿಸಿದ್ದನ್ನು ತಿರಸ್ಕರಿಸಿ ಬಾಧಿಸುವದು ನಿನಗೆ ಸಂತೋಷವೋ?
4 ನೀನು ಮಾಂಸದ ಕಣ್ಣುಳ್ಳವನೋ?
ಮನುಷ್ಯರು ನೋಡುವಂತೆ ನೋಡುತ್ತೀಯಾ?
5 ನಿನ್ನ ದಿನಗಳು ಮನುಷ್ಯನ ದಿನಗಳಷ್ಟು ಅಲ್ಪವಾಗಿವೆಯೋ?
ನಿನ್ನ ಸಂವತ್ಸರಗಳೂ ಮಾನವನ ದಿನಗಳಷ್ಟೇನೇ;
6 ನೀನು [ಇಷ್ಟು ಅವಸರದಿಂದ] ನನ್ನ ದೋಷವನ್ನು ಹುಡುಕಿ
ನನ್ನ ಪಾಪವನ್ನು ವಿಚಾರಿಸುವದೇಕೆ?
7 ನಾನು ಅಪರಾಧಿಯಲ್ಲವೆಂದು ನಿನಗೆ ಗೊತ್ತಾಯಿತಲ್ಲಾ;
ನಿನ್ನ ಕೈಯೊಳಗಿಂದ ಬಿಡಿಸತಕ್ಕವರು ಯಾರೂ ಇಲ್ಲವಷ್ಟೆ.

1)ನೀನು ನನ್ನನ್ನು ನಿರ್ಮಿಸಿ ರೂಪಿಸಿದ್ದರೂ 8
ಈಗ ಮನಸ್ಸು ಬೇರೆ ಮಾಡಿಕೊಂಡು ನನ್ನನ್ನು ನಾಶನಮಾಡಿಬಿಡುವಿಯಾ?
ನೀನು ನನ್ನನ್ನು ಜೇಡಿಮಣ್ಣಿನಿಂದಲೋ ಎಂಬಂತೆ ರೂಪಿಸಿದ್ದೀಯೆಂದು ಕೃಪೆಮಾಡಿ ನೆನಸಿಕೋ. 9
ನನ್ನನ್ನು ತಿರಿಗಿ ಮಣ್ಣಾಗುವಂತೆ ಮಾಡುವಿಯಾ?
ನೀನು ನನ್ನನ್ನು ಹಾಲಿನಂತೆ ಹೊಯ್ದು 10
ಮೊಸರಿನ ಹಾಗೆ ಹೆಪ್ಪುಗಟ್ಟಿಸಿದಿಯಲ್ಲಾ.
ನನ್ನನ್ನು ಎಲುಬು ನರಗಳಿಂದ ಹೆಣೆದು 11
ಮಾಂಸಚರ್ಮಗಳಿಂದ ಹೊದಿಸಿದಿ.
ನೀನು ನನಗೆ ಜೀವವನ್ನು ಅನುಗ್ರಹಿಸಿ ಕೃಪೆತೋರಿಸಿದ್ದೀ- 12
ನಿನ್ನ ಪರಾಮರಿಕೆ ನನ್ನ ಆತ್ಮವನ್ನು ಕಾಪಾಡಿದೆ.
ಆದರೂ ನಿನ್ನ ಹೃದಯದಲ್ಲಿ ಇವುಗಳನ್ನು ಮರೆಮಾಡಿಕೊಂಡಿದ್ದೀ, 13
2)ಇವು ನಿನ್ನಲ್ಲಿ ಇದ್ದೇ ಇರುತ್ತವೆಂದು ನನಗೆ ಗೊತ್ತುಂಟು.
ಅದೇನಂದರೆ—ನಾನು ತಪ್ಪುಮಾಡಿದರೆ ನೀನು ಗಮನಿಸುತ್ತೀ, 14
ನನ್ನ ದೋಷವನ್ನು ಕ್ಷಮಿಸುವದಿಲ್ಲ.
ಅಯ್ಯೋ, ನಾನು ದುರ್ಮಾರ್ಗಿಯಾದರಂತು ನನಗೇನು ಗತಿ! 15
ನಾನು ಸನ್ಮಾರ್ಗಿಯಾದರೂ ನನ್ನ ಶ್ರಮೆಗಳನ್ನು ನೋಡುತ್ತಾ
ಅವಮಾನಭರಿತನಾಗಿ ತಲೆಯೆತ್ತಲಾರೆನು.
ತಲೆಯೆತ್ತಿದರೆ ಸಿಂಹದಂತೆ ನನ್ನನ್ನು ಬೇಟೆಯಾಡುವಿ. 16
ನಿನ್ನ ಅದ್ಭುತಚಮತ್ಕಾರವನ್ನು ತಿರಿಗಿ ನನ್ನಲ್ಲಿ ತೋರಿಸುವಿ.
ನನಗೆ ವಿರೋಧವಾಗಿ ಹೊಸ ಹೊಸ ಸಾಕ್ಷಿಗಳನ್ನು ಬರಮಾಡಿ 17
ಹೆಚ್ಚೆಚ್ಚಾಗಿ ನನ್ನ ಮೇಲೆ ಸಿಟ್ಟುಗೊಳ್ಳುವಿ.
ಸೈನ್ಯವು ತರಂಗ ತರಂಗವಾಗಿ ನನ್ನ ಮೇಲೆ ಬೀಳುವದಲ್ಲಾ.
ನನ್ನನ್ನು ಗರ್ಭದಿಂದ ಏಕೆ ಹೊರದೆಗೆದಿ? 18
ಯಾರೂ ನನ್ನನ್ನು ನೋಡದಿರುವಾಗಲೇ ನಾನು ಪ್ರಾಣಬಿಡಬೇಕಾಗಿತ್ತು.
ಆಗ ಇಲ್ಲದವನಾಗಿರುತ್ತಿದ್ದೆನು. 19
ನನ್ನನ್ನು ಗರ್ಭದಿಂದ ಸಮಾಧಿಗೆ ಹೊತ್ತುಕೊಂಡು ಹೋಗುತ್ತಿದ್ದರು.
ನನ್ನ ದಿನಗಳು ಅಲ್ಪವಾಗಿರುತ್ತವಲ್ಲಾ. ಬಿಡು; 20
ನಿನ್ನ ದೃಷ್ಟಿಯನ್ನು ನನ್ನ ಕಡೆಯಿಂದ ತಿರುಗಿಸು.
ನಾನು ಅಂಧಕಾರದಿಂದಲೂ ಮರಣಾಂಧಕಾರದಿಂದಲೂ ತುಂಬಿದ ದೇಶಕ್ಕೆ ಹೋಗುವದರೊಳಗೆ 21
ಸ್ವಲ್ಪ ಹರ್ಷಗೊಳ್ಳಲು ಅವಕಾಶವಾಗಲಿ.
ಆ ದೇಶದಿಂದ ತಿರಿಗಿ ಬರಲಾರೆನು.
ರಾತ್ರಿಗೂ ಮರಣಾಂಧಕಾರಕ್ಕೂ ಸಮಾನವಾದ ಕಗ್ಗತ್ತಲು ಅದನ್ನು ಆವರಿಸಿದೆ, 22

1) ಪಾಠಾಂತರ: ನೀನು ನನ್ನನ್ನು ನಿರ್ಮಿಸಿ ನನ್ನ ಅಂಗಗಳನ್ನೆಲ್ಲಾ ಸುತ್ತಲೂ ರೂಪಿಸಿದ್ದರೂ ನನ್ನನ್ನು ನಾಶನ ಮಾಡುವಿಯಾ? ಮೂಲ: ಇದು . . . ಇರುತ್ತದೆಂದು.

ಅಲ್ಲಿ ಏನೂ ಕ್ರಮವಿಲ್ಲ,
ಆದರ ಬೆಳಕು ರಾತ್ರಿಯ ತಮಸ್ಸೇ.

11 ಆಗ ನಾಮಾಥ್ಯನಾದ ಚೋಫರನು ಹೀಗೆಂದನು—
2 ಬಹಳ ಮಾತುಗಳಿಗೆ ಉತ್ತರಕೊಡಬಾರದೋ?
ಹರಟೇಮಲ್ಲನು ನೀತಿವಂತನೆಂದು ಹೇಳಿಸಿಕೊಂಡಾನೇ?
3 ನೀನು ಬಡಾಯಿಕೊಚ್ಚಿದರೆ ಮನುಷ್ಯರು ಸುಮ್ಮನಿರಬೇಕೋ?
ನೀನು ಕುಚೋದ್ಯವಾಗಿ ಮಾತಾಡುವಾಗ ನಿನ್ನನ್ನು ಯಾರೂ ನಾಚಿಕೆಪಡಿಸಕೂಡದೋ?
4 ನನ್ನ ಬೋಧೆಯು ನಿರ್ಮಲವಾದದ್ದು,
ದೇವದೃಷ್ಟಿಯಲ್ಲಿ ಶುದ್ಧನಾಗಿದ್ದೇನೆ ಎಂದು ನೀನು ಹೇಳಿದ್ದೀಯಲ್ಲಾ.
5 ಆಹಾ, ದೇವರು ಬಾಯ್ದೆರೆದು
ನಿನಗೆ ವಿರುದ್ಧವಾಗಿ ಮಾತಾಡಿದರೆ ಎಷ್ಟೋ ಉತ್ತಮ!
6 ಆತನು ಜ್ಞಾನದ ರಹಸ್ಯಗಳನ್ನು ನಿನಗೆ ತಿಳಿಸಿ
1)ಸುಜ್ಞಾನವು ಬಹುಮುಖವಾಗಿದೆ ಎಂದು ತೋರಿಸಿಕೊಟ್ಟರೆ ಎಷ್ಟೋ ಲೇಸು!
ದೇವರು ನಿನ್ನ ಅಧರ್ಮವನ್ನೆಲ್ಲಾ ಗಣನೆಗೆ ತರಲಿಲ್ಲವೆಂದು ತಿಳಿದುಕೋ!

7 ದೇವರ ಅಗಾಧಗಳನ್ನು ಕಂಡುಕೊಳ್ಳಬಲ್ಲಿಯಾ?
ಸರ್ವಶಕ್ತನನ್ನು ಸಂಪೂರ್ಣವಾಗಿ ಗ್ರಹಿಸಿಕೊಳ್ಳಬಹುದೋ?
8 ಆಹಾ, [ಆತನ ಜ್ಞಾನವು] ಆಕಾಶದ ಹಾಗೆ ಉನ್ನತವಾಗಿದೆ; ನೀನು ಮಾಡುವದೇನು?
ಪಾತಾಳಕ್ಕಿಂತ ಆಳವಾಗಿದೆ, ನೀನು ತಿಳಿದುಕೊಳ್ಳುವದೇನು?
9 ಅದರ ಅಳತೆಯು ಭೂಮಿಗಿಂತಲೂ ಉದ್ದವಾಗಿದೆ,
ಸಮುದ್ರಕ್ಕಿಂತಲೂ ಅಗಲವಾಗಿದೆ.
10 ಆತನು ಹಾದುಹೋದರೂ ಸೆರೆಯಲ್ಲಿಟ್ಟರೂ
ನ್ಯಾಯವಿಚಾರಣೆಗೆ ಕರೆದರೂ ಆತನನ್ನು ತಳ್ಳಿಬಿಡುವವರು ಯಾರು?
11 ಆತನೇ ವ್ಯರ್ಥಜನರನ್ನು ತಿಳಿದುಕೊಳ್ಳುವನು;
ಯಾವ ವಿಮರ್ಶೆಯೂ ಇಲ್ಲದೆ ಅಧರ್ಮವನ್ನು ಕಂಡುಹಿಡಿಯುವನು.
12 2)ಕಾಡುಕತ್ತೆಯ ಮರಿಗೆ ನರಜನ್ಮವಾದರೆ
ಜಳ್ಳುಮನುಷ್ಯನು ಬುದ್ಧಿಯನ್ನು ಪಡೆದಾನು.

13 ನೀನಂತು ಮನಸ್ಸನ್ನು ತಿರುಗಿಸಿಕೊಂಡು
ದೇವರ ಕಡೆಗೆ ಕೈಗಳನ್ನೆತ್ತು.

ಅಧರ್ಮವು ನಿನ್ನ ಕೈಯಲ್ಲಿದ್ದರೆ ಅದನ್ನು ದೂರ
ಮಾಡಿಬಿಡು;
ಅನ್ಯಾಯವು ನಿನ್ನ ಗುಡಾರಗಳಲ್ಲಿ ವಾಸಿಸದಿರಲಿ.
ಆಗ ನೀನು ನಿಷ್ಕಳಂಕವಾದ ಮುಖವನ್ನೆತ್ತಿಕೊಂಡು
ಸ್ಥಿರಚಿತ್ತನೂ ನಿರ್ಭಯನೂ ಆಗಿರುವಿ.
ನಿನ್ನ ಕಷ್ಟವನ್ನು ಮರೆತುಬಿಡುವಿ;
ಹರಿದುಹೋದ ನೀರನ್ನೋ ಎಂಬಂತೆ ಅದನ್ನು ಜ್ಞಾಪಿಸಿ
ಕೊಳ್ಳುವಿ.
ನಿನ್ನ ಜೀವಮಾನವು 3)ಮಧ್ಯಾಹ್ನಕ್ಕಿಂತ ಪ್ರಜ್ವಲಿಸು
ವದು,
ಕತ್ತಲಿದ್ದರೂ ಬೆಳಗಿನಂತಿರುವದು.
ನಿರೀಕ್ಷೆಗೆ ಆಸ್ಪದವಿರುವದರಿಂದ ಧೈರ್ಯಗೊಂಡಿರುವಿ
ಸುತ್ತಲೂ ನೋಡಿ ಅಪಾಯವಿಲ್ಲವೆಂದು ವಿಶ್ರಮಿಸಿ
ಕೊಳ್ಳುವಿ.
ಮಲಗಿಕೊಂಡಾಗ ನಿನ್ನನ್ನು ಯಾರೂ ಹೆದರಿಸುವದಿಲ್ಲ
ಅನೇಕರು ನಿನ್ನ ಮುಖಪ್ರಸನ್ನತೆಯನ್ನು ಅಪೇಕ್ಷಿಸು
ವರು.
ಆದರೆ ದುಷ್ಟರು ನಿರಾಶ್ರಯರಾಗಿ ಕಂಗೆಡುವರು,
ಪ್ರಾಣಬಿಡಬೇಕೆಂಬದೇ ಅವರ ಆಶೆ.

ಆ ಮೇಲೆ ಯೋಬನು ಪ್ರತ್ಯುತ್ತರವಾಗಿ ಇಂತೆಂದ
ನು—
ಹೌದು, ನೀವೇ ಮನುಷ್ಯರು;
ಜ್ಞಾನವು ನಿಮ್ಮೊಡನೇ ಸಾಯುವದು, ನಿಜ.
ನಿಮ್ಮ ಹಾಗೆ ನನಗೂ ಬುದ್ಧಿಯುಂಟು,
ನಿಮಗಿಂತ ನಾನು ಕಡೆಯಲ್ಲ.
ಇಂಥವು ಯಾರಿಗೆ ತಾನೇ ಗೊತ್ತಿಲ್ಲ.
ನಾನು ಗೆಳೆಯನ ಗೇಲಿಗೆ ಗುರಿಯಾಗಿದ್ದೇನೆ!
ದೇವರನ್ನು ಪ್ರಾರ್ಥಿಸಿದೆನಲ್ಲಾ, ಆತನು ಲಾಲಿಸಿದ
ನಲ್ಲಾ,
ನೀತಿವಂತನೂ ನಿರ್ದೋಷಿಯೂ ಆದವನು ಹಾಸ್ಯಾ
ಸ್ಪದನಾಗಿದ್ದಾನೆ.
ಆಪತ್ತನ್ನು ಅನುಭವಿಸುವವರು ತಿರಸ್ಕಾರಕ್ಕೆ ಯೋಗ್ಯ
ರೆಂಬದು ನೆಮ್ಮದಿಯಿಂದಿರುವವನ ಯೋಚನೆ;
ಜಾರಿ ಬಿದ್ದವರಿಗೆ ಅಪಮಾನವು ಕಾದಿರುತ್ತದೆ.
ಕಳ್ಳರ ಗುಡಾರಗಳಾದರೋ ಸಮೃದ್ಧವಾಗಿರುವವು,
4)ಕೈಯಲ್ಲಿರುವದನ್ನೇ ದೇವರನ್ನಾಗಿ ಮಾಡಿಕೊಂಡು
ದೇವರನ್ನು ರೇಗಿಸುವವರು ಸುರಕ್ಷಿತರಾಗಿದ್ದಾರೆ.

ಆದರೆ ಮೃಗಗಳನ್ನು ವಿಚಾರಿಸು, ನಿನಗೆ ಉಪ
ದೇಶಮಾಡುವವು;
ಆಕಾಶದ ಪಕ್ಷಿಗಳನ್ನು ಕೇಳು, ನಿನಗೆ ತಿಳಿಸುವವು;

1) ಮೂಲ: ಸುಜ್ಞಾನವು ಇಮ್ಮಡಿಯಾಗಿದೆ.
2) ಅಥವಾ: ಜಳ್ಳುಮನುಷ್ಯನು ಬುದ್ಧಿಯನ್ನು ಪಡೆಯುವದಕ್ಕೂ
ಕಾಡುಕತ್ತೆಯ ಮರಿಯು ನರಜನ್ಮವನ್ನು ಹೊಂದುವದಕ್ಕೂ ಆತನಿಂದಲೇ ಆಸ್ಪದವಾಗುತ್ತದೆ.
3) ಮಧ್ಯಾಹ್ನದ ಮೇಲೆಯೂ ಏರುತ್ತಲೇ ಇರುವದು.
4) ಅಥವಾ: ದೇವರನ್ನು ರೇಗಿಸುವವರು ನೆಮ್ಮದಿಯಾಗಿದ್ದಾರೆ.
[ಬೇಕಾದದ್ದನ್ನು] ದೇವರು ಅವರ ಕೈಗೆ ಬರಮಾಡುತ್ತಾನೆ.

8 ಭೂಮಿಯನ್ನು ಮಾತಾಡಿಸು, ನಿನಗೆ ಬೋಧಿಸು
ವದು;
ಸಮುದ್ರದ ಮೀನುಗಳು ನಿನಗೆ ಹೇಳುವವು.
9 ಈ ಎಲ್ಲವುಗಳ ಸಾಕ್ಷಿಯಿಂದ ಯೆಹೋವನ ಕೈಯೇ
ಸಕಲ ಕಾರ್ಯಗಳನ್ನು ಮಾಡುತ್ತದೆ ಎಂದು
ಯಾರಿಗೆ ತಾನೇ ಗೊತ್ತಾಗುವದಿಲ್ಲ?
10 ಪ್ರತಿಪ್ರಾಣಿಯ ಪ್ರಾಣವೂ
ಸಮಸ್ತಮನುಷ್ಯನ ಆತ್ಮಗಳೂ ಆತನ ಕೈಯಲ್ಲಿರು
ವವು.

11 ಅಂಗಳವು ಆಹಾರವನ್ನು ರುಚಿನೋಡುವ ಪ್ರ
ಕಾರ
ಕಿವಿಯು ಮಾತುಗಳನ್ನು ವಿವೇಚಿಸುತ್ತದಲ್ಲಾ.
12 ಜ್ಞಾನವು ವೃದ್ಧರಲ್ಲೇ ಅಡಗಿದೆಯೋ?
ದೀರ್ಘಾಯುವೂ ವಿವೇಕವೂ ಒಂದೇನೋ?

13 ಆತನಲ್ಲಿ ಜ್ಞಾನವೂ ಶಕ್ತಿಯೂ ಉಂಟು,
ಆಲೋಚನೆಯೂ ವಿವೇಕವೂ ಆತನವೇ.
14 ಇಗೋ, ಯಾರೂ ಕಟ್ಟದಹಾಗೆ ಕೆಡವಿಬಿಡುವನು,
ಯಾರೂ ಬಿಡಿಸದಂತೆ ಸೆರೆಹಾಕುವನು.
15 ನೋಡಿರಿ, ಆತನು ನೀರುಗಳನ್ನು ತಡೆದರೆ ಅವು
ಒಣಗುತ್ತವೆ;
ಬಿಟ್ಟರೆ ಭೂಮಿಯನ್ನು ಹಾಳುಮಾಡುತ್ತವೆ.
16 ಆತನಲ್ಲಿ ಬಲವೂ ಸಾಮರ್ಥ್ಯವೂ ಉಂಟು;
ತಪ್ಪಿದವನೂ ತಪ್ಪಿಸಿದವನೂ ಆತನಿಗೆ ಒಳಪಟ್ಟಿರು
ವರು.
17 ಮಂತ್ರಿಗಳನ್ನು 1)ಸುಲಿಗೆಮಾಡಿ ಸಾಗಿಸಿಕೊಂಡು ಹೋ
ಗುವನು,
ನ್ಯಾಯಾಧಿಪತಿಗಳನ್ನು ಹುಚ್ಚರನ್ನಾಗಿ ಮಾಡುವನು.
18 ಅರಸರು ಹಾಕಿದ ಬಂಧನವನ್ನು ಬಿಚ್ಚಿಬಿಟ್ಟು
ಅವರ ಸೊಂಟಕ್ಕೆ 2)ಚಿಂದಿಯನ್ನು ಬಿಗಿಯುವನು.
19 ಯಾಜಕರನ್ನು 1)ಸುಲಿಗೆಮಾಡಿ ಸಾಗಿಸಿಕೊಂಡು ಹೋ
ಗುವನು,
ಪ್ರಧಾನರನ್ನು ದೊಬ್ಬಿಬಿಡುವನು.
20 ಆಲೋಚನಾಕರ್ತರ ವಾಕ್ಚಾತುರ್ಯವನ್ನು ಹಾರಿಸಿ
ಹಿರಿಯರ ವಿವೇಕವನ್ನು ತೆಗೆದುಹಾಕುವನು.
21 ಪ್ರಭುಗಳಿಗೆ ಅವಮಾನವನ್ನುಂಟುಮಾಡಿ
ಬಲಿಷ್ಠರ ನಡುಕಟ್ಟನ್ನು ಸಡಲಿಸುವನು.
22 ಅಗಾಧವಿಷಯಗಳನ್ನು ಕತ್ತಲೊಳಗಿಂದ ಬೈಲಿಗೆ
ತಂದು
ಗಾಢಾಂಧಕಾರವನ್ನು ಪ್ರಕಾಶಗೊಳಿಸುವನು.
23 ಜನಾಂಗಗಳನ್ನು ವೃದ್ಧಿಗೊಳಿಸಿ ನಾಶಪಡಿಸುವನು.
ಅವುಗಳನ್ನು ವಿಸ್ತರಿಸಿ ಗಡೀಪಾರುಮಾಡುವನು.
24 ಪ್ರಜಾಪ್ರಮುಖರ ಬುದ್ಧಿಯನ್ನು ತೊಲಗಿಸಿ
ಅವರನ್ನು ದಾರಿಯಿಲ್ಲದ ಅರಣ್ಯದಲ್ಲಿ ಅಲೆದಾಡಿಸು
ವನು.
ಅವರು ಬೆಳಕಿಲ್ಲದ ಕತ್ತಲಲ್ಲಿ ತಡವಾಡುವರು. 25
ಅವರನ್ನು ಅಮಲೇರಿದವರಂತೆ ಓಲಾಡಿಸುವನು.

13 ಇಗೋ, ಇವುಗಳನ್ನೆಲ್ಲಾ ನನ್ನ ಕಣ್ಣು ಕಂಡಿದೆ,
ಕಿವಿಯು ಕೇಳಿ ಗ್ರಹಿಸಿದೆ.
ನೀವು ತಿಳಿದಿರುವದನ್ನು ನಾನೂ ತಿಳಿದಿದ್ದೇನೆ. 2
ನಿಮಗಿಂತ ನಾನು ಕಡೆಯಲ್ಲ.
ಆದರೆ ನಾನು ಸರ್ವಶಕ್ತನ ಸಂಗಡ ಮಾತಾಡಬೇಕು, 3
ದೇವರೊಂದಿಗೆ ವಾದಿಸಲು ಅಪೇಕ್ಷಿಸುತ್ತೇನೆ.

ನೀವಾದರೋ ಸುಳ್ಳನ್ನು ಮೆತ್ತುವವರಾಗಿದ್ದೀರಿ, 4
ನೀವೆಲ್ಲರೂ ವ್ಯರ್ಥವೈದ್ಯರೇ.
ನೀವು ಬಾಯಿಮುಚ್ಚಿ ಸುಮ್ಮನಾದರೆ ಎಷ್ಟೋ 5
ಉತ್ತಮ!
ಮೌನವೇ ನಿಮಗೆ ಜ್ಞಾನವು.
ದಯಮಾಡಿ ನನ್ನ ಆಕ್ಷೇಪಣೆಯನ್ನು ಕೇಳಿರಿ, 6
ನನ್ನ ತುಟಿಗಳ ವಾದಕ್ಕೆ ಕಿವಿಗೊಡಿರಿ.
ದೇವರ ಪಕ್ಷವಾಗಿ ಅನ್ಯಾಯವನ್ನು ನುಡಿಯು 7
ವಿರೋ?
ಆತನಿಗೋಸ್ಕರ ಮೋಸದ ಮಾತುಗಳನ್ನಾಡುವಿರೋ?
ಆತನಿಗೆ ಮುಖದಾಕ್ಷಿಣ್ಯವನ್ನು ತೋರಿಸುವಿರಾ? 8
ದೇವರಿಗಾಗಿ ವಾದಿಸುವಿರಾ?
ಆತನು ನಿಮ್ಮನ್ನು ಶೋಧಿಸಿದರೆ ನಿಮಗೆ ಒಳ್ಳೇ 9
ದಾಗುವದೋ?
ಮನುಷ್ಯನನ್ನು ಮೋಸಗೊಳಿಸುವಂತೆ ಆತನನ್ನೂ
ಮೋಸಗೊಳಿಸುವಿರೋ?
ನೀವು ರಹಸ್ಯವಾಗಿ ಪಕ್ಷಪಾತಮಾಡಿದರೆ 10
ಆತನು ನಿಮ್ಮನ್ನು ಖಂಡಿಸೇ ಖಂಡಿಸುವನು.
ಆತನ ಶ್ರೇಷ್ಠತೆಯು ನಿಮ್ಮನ್ನು ಹೆದರಿಸುವದಿಲ್ಲವೋ? 11
ಆತನ ಭಯವು ನಿಮ್ಮ ಮೇಲೆ ಬೀಳುವದಿಲ್ಲವೋ?
ನಿಮ್ಮ ಸ್ಮೃತಿಗಳು ಬೂದಿಯ ಸಾಮತಿಗಳು; 12
ನಿಮ್ಮ ಕೋಟೆಯು ಬರೀ ಮಣ್ಣಿನದೇ.
ಸುಮ್ಮನಿರಿ, ನನ್ನನ್ನು ಬಿಡಿರಿ, ನಾನು ಮಾತಾಡಬೇಕು, 13
ನನಗೇನಾದರೂ ಆಗಲಿ.
3)ನನ್ನ ಪ್ರಾಣವನ್ನು ಬಾಯಿಂದ ಕಚ್ಚಿಕೊಂಡಿರುವೆನು, 14
ನನ್ನ ಜೀವವನ್ನು ಕೈಯಲ್ಲಿ ಹಿಡಿದುಕೊಂಡಿರುವೆನು.
ಆಹಾ, ಆತನು ನನ್ನನ್ನು ಕೊಲ್ಲುವನು, 4)ಅದಕ್ಕಾಗಿ 15
ಕಾದಿರುತ್ತೇನೆ.
ಆದರೂ ನನ್ನ ನಡತೆಯ ಒಳ್ಳೇತನವನ್ನು ಆತನ
ಮುಂದೆ ಸ್ಥಾಪಿಸುವೆನು.
ಭ್ರಷ್ಟನು ಆತನ ಮುಂದೆ ಬರುವದಿಲ್ಲವೆಂಬದೇ 16
ನಾನು ರಕ್ಷಣೆಯನ್ನು ಹೊಂದುವೆನೆಂಬದಕ್ಕೆ ಆಧಾರ
ವಾಗಿದೆ.

1) ಅಥವಾ: ಬರಿಗಾಲಿನಿಂದ 2) ಅಥವಾ: ಸಂಕೋಲೆಯನ್ನು.
3) ಪಾಠಾಂತರ: ನಾನು ಏಕೆ ನನ್ನ ಪ್ರಾಣವನ್ನು ಬಾಯಿಂದ ಎತ್ತಿಕೊಳ್ಳಬೇಕು?
ಜೀವವನ್ನು ಕೈಯಲ್ಲಿ ಹಿಡಿದುಕೊಳ್ಳುವದೇಕೆ?
4) ಅಥವಾ: ನಾನು ಇನ್ನು ಕಾದಿರುವದಿಲ್ಲ.

17 ನನ್ನ ಮಾತುಗಳನ್ನು ಚೆನ್ನಾಗಿ ಕೇಳಿರಿ,
ನನ್ನ ಅರಿಕೆಗೆ ಕಿವಿಗೊಡಿರಿ.
18 ಇಗೋ, ನನ್ನ ನ್ಯಾಯವನ್ನು ಸಿದ್ಧಪಡಿಸಿದ್ದೇನೆ;
ನಾನು ನೀತಿವಂತನೆಂಬದಾಗಿ ನಿರ್ಣಯವಾಗುವದೆಂದು
ನನಗೆ ಗೊತ್ತೇ ಇದೆ.
19 ನನಗೆ ಪ್ರತಿವಾದಿ ಇದ್ದಾನೋ?
ಇದ್ದರೆ ಸುಮ್ಮನಾಗಿ ಪ್ರಾಣಬಿಡುವೆನು.
20 ಆದರೆ ನಾನು ನನ್ನನ್ನು ನಿನ್ನ ದೃಷ್ಟಿಗೆ ಮರೆಮಾಡಿ
ಕೊಳ್ಳದಂತೆ
ಈ ಎರಡು ಕಾರ್ಯಗಳನ್ನು ಮಾಡಬೇಡ.
21 ನನ್ನ ಮೇಲೆತ್ತಿರುವ ನಿನ್ನ ಕೈಯನ್ನು ದೂರಮಾಡು,
ನಿನ್ನ ದಿಗಿಲು ನನ್ನನ್ನು ಅಂಜಿಸದಿರಲಿ.
22 ಆಗ ನೀನು ಕರೆದರೆ ನಾನು ಉತ್ತರಕೊಡುವೆನು,
ಇಲ್ಲವೆ ನಾನು ಮಾತಾಡುವೆ, ನೀನು ಉತ್ತರಕೊಡು.

23 ನನ್ನ ಪಾಪದೋಷಗಳೆಷ್ಟು?
ನನ್ನ ಪಾಪವನ್ನೂ ದ್ರೋಹವನ್ನೂ ನನಗೆ ತಿಳಿಯ
ಪಡಿಸು.
24 ನೀನು ವಿಮುಖನಾಗಿ
ನನ್ನನ್ನು ಶತ್ರುವೆಂದೆಣಿಸಿರುವದೇಕೆ?
25 ಹಾರಿಹೋಗುವ ಎಲೆಯನ್ನು ನಡುಗಿಸುವಿಯಾ?
ಒಣಗಿದ ಹೊಟ್ಟನ್ನು ಅಟ್ಟಿಬಿಡುವಿಯಾ?
26 ನನ್ನ ವಿಷಯವಾಗಿ ಕಠಿನವಾದ ತೀರ್ಪುಗಳನ್ನು
ಬರೆದು
ನನ್ನ ಯೌವನದ ಪಾಪಗಳ ಫಲದ ಬಾಧ್ಯತೆಯನ್ನು
ನನಗೆ ಕೊಟ್ಟಿದ್ದೀ.
27 ನೀನು ನನ್ನ ಕಾಲುಗಳನ್ನು ಕೋಳಕ್ಕೆ ಹಾಕಿದ್ದೀ;
ನನ್ನ ದಾರಿಗಳನ್ನೆಲ್ಲಾ ಮುಂದಟ್ಟುಮಾಡಿ
ನನ್ನ ಹೆಜ್ಜೆಗಳ ಸುತ್ತಲೂ ಗೆರೆಯೆಳೆದಿದ್ದೀ.
28 ಕೊಳೆಯುವ ಪದಾರ್ಥದಂತೆಯೂ ನುಸಿ ಹಿಡಿದ
ಬಟ್ಟೆಯ ಹಾಗೂ
1)ಕ್ಷಯಿಸಿಹೋಗುತ್ತಿದ್ದೇನೆ.

14 ಸ್ತ್ರೀಯಲ್ಲಿ ಹುಟ್ಟಿದ ಮನುಷ್ಯನು ಅಲ್ಪಾ
ಯುಷ್ಯನಾಗಿಯೂ
ಕಳವಳದಿಂದ ತುಂಬಿದವನಾಗಿಯೂ ಇರುವನು.
2 ಹೂವಿನ ಹಾಗೆ ಅರಳಿ ಬಾಡುವನು,
ನೆರಳಿನಂತೆ ನಿಲ್ಲದೆ ಓಡಿಹೋಗುವನು.
3 ನೀನು ಇಂಥವನಾದ ನನ್ನ ಮೇಲೆ ಕಣ್ಣಿಟ್ಟು
ನಿನ್ನ ನ್ಯಾಯಸ್ಥಾನಕ್ಕೆ ನನ್ನನ್ನು ಬರಮಾಡುವಿಯಾ?
4 2)ಅಶುದ್ಧದಿಂದ ಶುದ್ಧವು ಉಂಟಾದೀತೇ? ಎಂದಿಗೂ
ಇಲ್ಲ.
5 ಮನುಷ್ಯನ ದಿನಗಳು ಇಷ್ಟೇ ಎಂಬದು ತೀರ್ಮಾನ
ವಾಗಿದೆಯಲ್ಲಾ, ಅವನ ತಿಂಗಳುಗಳ ಲೆಕ್ಕವು
ನಿನಗೆ ಗೊತ್ತು;
ದಾಟಲಾರದ ಗಡಿಗಳನ್ನು ಅವನಿಗೆ ನೇಮಿಸಿದ್ದೀ.
ನಿನ್ನ ದೃಷ್ಟಿಯನ್ನು ಅವನ ಕಡೆಯಿಂದ ತಿರುಗಿಸು,
ಅವನಿಗೆ ಸ್ವಲ್ಪ ವಿರಾಮವಿರಲಿ,
3)ಕೂಲಿಯವನಿಗಿರುವಷ್ಟು ಸಂತೋಷದಿಂದಾದರೂ ತನ್ನ
ದಿನವನ್ನು ಕಳೆಯಲಿ.
ಕಡಿದ ಮರವೂ ತಾನು ಮೊಳೆಯುವದನ್ನು ನಿಲ್ಲಿಸದೆ
ಮತ್ತೆ ಚಿಗುರೇನೆಂದು ನಿರೀಕ್ಷಿಸುತ್ತದಲ್ಲವೇ!
ನೆಲದಲ್ಲಿ ಅದರ ಬುಡವು ಮುದಿಯಾದರೂ,
ಮಣ್ಣಿನಲ್ಲಿ ಬೇರು ಸತ್ತರೂ,
ನೀರಿನ ವಾಸನೆಯಿಂದಲೇ ಅದು ಮೊಳೆತು
ಗಿಡದ ಹಾಗೆ ಕವಲೊಡೆಯುವದು.
ಮನುಷ್ಯನಾದರೋ ಸತ್ತು ಬೋರಲಬೀಳುವನು,
ಪ್ರಾಣಹೋಗಲು ಅವನು ಎಲ್ಲಿಯೋ !
ಸರೋವರದ ನೀರು ಬತ್ತುವಂತೆಯೂ
ನದಿಯು ಆರಿ ಒಣಗುವ ಹಾಗೆಯೂ
ಮನುಷ್ಯರು ಮಲಗಿಕೊಂಡು ಏಳದೇ ಇರುವರು;
ಆಕಾಶವು ಅಳಿದು ಹೋಗುವ ತನಕ
ಅವರು ನಿದ್ರೆ ತಿಳಿಯುವದಿಲ್ಲ, ಎಬ್ಬಿಸಲ್ಪಡುವದಿಲ್ಲ.

ನೀನು ನನ್ನನ್ನು ಪಾತಾಳದಲ್ಲಿ ಬಚ್ಚಿಟ್ಟು
ನಿನ್ನ ಕೋಪವು ಇಳಿಯುವ ಪರ್ಯಂತ ನನ್ನನ್ನು
ಮರೆಮಾಡಿ
ನನಗೆ ಅವಧಿಯನ್ನು ಗೊತ್ತುಮಾಡಿ [ಕಡೆಯಲ್ಲಿ]
ನನ್ನನ್ನು ಜ್ಞಾಪಿಸಿಕೊಂಡರೆ ಎಷ್ಟೋ ಒಳ್ಳೇದು!
ಒಬ್ಬ ಮನುಷ್ಯನು ಸತ್ತು ಪುನಃ ಬದುಕಾನೇ?
ಹಾಗಾಗುವದಾದರೆ ನನಗೆ ಬಿಡುಗಡೆಯಾಗುವ
ವರೆಗೆ
ನನ್ನ ವಾಯಿದೆಯ ದಿನಗಳಲ್ಲೆಲ್ಲಾ ಕಾದುಕೊಂಡಿರು
ವೆನು;
ನೀನು ಕರೆದರೆ ಉತ್ತರಕೊಡುವೆನು,
ನೀನು ಸೃಷ್ಟಿಸಿದ ನನ್ನ ಮೇಲೆ ನಿನಗೆ ಹಂಬಲಿಕೆ
ಹುಟ್ಟೀತು.
4)ಈಗ ನೀನು ನನ್ನ ಹೆಜ್ಜೆಗಳನ್ನು ಲೆಕ್ಕಿಸಿ
ನನ್ನ ಪಾಪದ ಮೇಲೆ ಕಾವಲಾಗಿದ್ದೀಯಲ್ಲಾ!
ನನ್ನ ದ್ರೋಹವನ್ನು ಚೀಲದಲ್ಲಿಟ್ಟು ಮುದ್ರಿಸಿ
ನನ್ನ ದೋಷವನ್ನು ಭದ್ರವಾಗಿ ಕಟ್ಟಿದ್ದೀ.
ಆದರೆ ಪರ್ವತವೂ ಬಿದ್ದು ಕರಗಿಹೋಗುವದು,
ಬಂಡೆಯು ತನ್ನ ಸ್ಥಳದಿಂದ ಜರಗುವದು,
ನೀರು ಕಲ್ಲುಗಳನ್ನು ಸವೆಯಿಸುವದು,
ಜಲಪ್ರವಾಹಗಳು ಭೂಮಿಯ ಮಣ್ಣನ್ನು ಕೊಚ್ಚಿ
ಕೊಂಡು ಹೋಗುವವು.

1) ಮೂಲ: ಕ್ಷಯಿಸುತ್ತಿದ್ದಾನೆ. 2) ಅಥವಾ: ಅಶುದ್ಧದಿಂದ ಶುದ್ಧವು ಉಂಟಾದರೆ ಎಷ್ಟೋ ಲೇಸು! ಇದೆಂದೂ ಆಗುವ
3) ಅಥವಾ: ಕೂಲಿಯವನಂತೆ ತನ್ನ ದಿನವನ್ನು ತೀರಿಸಲಿ.
4) ವ. ೧೬, ೧೭) ಅಥವಾ: ಆಗ ನೀನು ನನ್ನ ಪಾಪದ ಮೇಲೆ ಕಾವಲಿಡದೆ
ನಾನಿಡುವ ಹೆಜ್ಜೆಗಳನ್ನು ಕಟಾಕ್ಷಿಸುವಿ.
ನನ್ನ ದ್ರೋಹವನ್ನು ಬಚ್ಚಿಟ್ಟ ಚೀಲಕ್ಕೆ ಮುದ್ರೆಹಾಕಿರುವದು.
ನೀನು ನನ್ನ ದೋಷವನ್ನು ಮುಚ್ಚಿಬಿಡುವಿ.

ಹೀಗೆಯೇ ಮನುಷ್ಯರ ನಿರೀಕ್ಷೆಯನ್ನು ಹಾಳುಮಾ
ಡುವಿ.
20 ನೀನು ಅವನಿಗೆ ಶಾಶ್ವತವಾದ ಅಪಜಯವನ್ನುಂಟು
ಮಾಡಿದ್ದರಿಂದ ಅವನು ಹೋಗೇಬಿಡುವನು,
ನೀನು ಅವನ ಮುಖವನ್ನು ಮಾರ್ಪಡಿಸಿ ಅವನನ್ನು
ತೊಲಗಿಸಿಬಿಡುವಿ.
21 ಅವನ ಮಕ್ಕಳು ಘನತೆಯನ್ನು ಹೊಂದುವದು ಅವ
ನಿಗೆ ತಿಳಿಯುವದಿಲ್ಲ.
ಅವರು ಕುಂದಿಹೋಗುವಾಗಲೂ ಅವರ ಸ್ಥಿತಿಯು
ಅವನಿಗೆ ಗೋಚರವಾಗುವದಿಲ್ಲ.
22 ಆದರೂ ಅವನ ಮಾಂಸವು ನೋಯುವದು,
ಅವನ ಆತ್ಮವು ಪ್ರಲಾಪಿಸುವದು.

15 ಆಗ ತೇಮಾನ್ಯನಾದ ಎಲೀಫಜನು ಮತ್ತೆ ಹೀ
ಗಂದನು—
2 ಜ್ಞಾನಿಯು ತನ್ನ ಹೊಟ್ಟೆಯಲ್ಲಿ ಮೂಡಣ ಗಾಳಿಯ
ನ್ನು ತುಂಬಿಕೊಂಡು
ಶೂನ್ಯವಾದ ತಿಳುವಳಿಕೆಯಿಂದ ಮಾತಾಡತಕ್ಕದ್ದೋ?
3 ಪ್ರಯೋಜನವಿಲ್ಲದ ನುಡಿಯಿಂದಲೂ
ಫಲವಿಲ್ಲದ ವಾಕ್ಯಗಳಿಂದಲೂ ತರ್ಕಿಸುವದು ಯು
ಕ್ತವೋ?
4 ಇದಲ್ಲದೆ ನೀನು ದೇವರ ಭಯವನ್ನು ಹಾಳುಮಾಡಿ
ದೇವಭಕ್ತಿಯನ್ನು ಕ್ಷಯಗೊಳಿಸುತ್ತೀ.
5 ನಿನ್ನ ಪಾಪವೇ ನಿನ್ನ ಬಾಯಿಗೆ [ಮಾತುಗಳನ್ನು]
ಕಲಿಸಿಕೊಡುತ್ತದೆ,
ಯುಕ್ತಿವಂತರ ಭಾಷೆಯನ್ನು ಆರಿಸಿಕೊಂಡಿದ್ದೀ.
6 ನಿನ್ನನ್ನು ಅಪರಾಧಿಯೆಂದು ನಿರ್ಣಯಿಸುವವನು
ನಾನಲ್ಲ, ನಿನ್ನ ಬಾಯೇ,
ನಿನ್ನ ತುಟಿಗಳು ಕೂಡಾ ನಿನಗೆ ವಿರುದ್ಧವಾಗಿ ಸಾಕ್ಷಿ
ಕೊಡುತ್ತವೆ.

7 ನೀನು ಆದಿಪುರುಷನೋ?
ಬೆಟ್ಟಗಳಿಗಿಂತ ಮುಂಚೆ ಹುಟ್ಟಿದಿಯಾ?
8 ದೇವರ ಆಲೋಚನಾಸಭೆಯಲ್ಲಿದ್ದುಕೊಂಡು ಅಲ್ಲಿ
ಹೇಳಿದ್ದನ್ನು ಕೇಳಿದಿಯೇನೋ?
ಜ್ಞಾನವನ್ನೆಲ್ಲಾ ನಿನ್ನ ಕಡೆಗೆ ಸೆಳೆದುಕೊಂಡಿದ್ದೀಯಾ?
9 ನಮಗೆ ತಿಳಿಯದಿರುವ ಯಾವದು ನಿನಗೆ ಗೊ
ತ್ತುಂಟು?
ನಮ್ಮಲ್ಲಿಲ್ಲದ ಯಾವ ಸಂಗತಿಯನ್ನು ಗ್ರಹಿಸಿದ್ದೀ?
10 ತಲೆನರೆತು ನಿಮ್ಮಪ್ಪನಿಗಿಂತ ವೃದ್ಧನಾದ ಮುದುಕನು
ನಮ್ಮಲ್ಲಿದ್ದಾನೆ.
11 ದೇವರ ಆದರಣೆಗಳೂ ನಿನಗೆ ದೊರೆತ ಶಾಂತಿಯ
ಮಾತುಗಳೂ ಸಾಲವೋ?

12 ನಿನ್ನ ಹೃದಯವು ಏಕೆ ನಿನ್ನನ್ನು ಸೆಳೆದುಕೊಂಡು
ಹೋಗುವದು?
ನಿನ್ನ ಕಣ್ಣುಗಳು ಕಿಡಿಕಿಡಿಯಾಗುವದೇಕೆ?

ನೀನು ದೇವರಿಗೆ ವಿರುದ್ಧವಾಗಿ ತಿರುಗಿಬಿದ್ದು 13
ಬಾಯಿಂದ ಮಾತುಗಳನ್ನು ಸುಮ್ಮನೆ ಸುರಿಸುತ್ತೀ
ಯಲ್ಲಾ!
ನರನು ಎಷ್ಟರವನು! ಅವನು ಪರಿಶುದ್ಧನಾಗಿರುವದು 14
ಸಾಧ್ಯವೋ?
ಸ್ತ್ರೀಯಲ್ಲಿ ಹುಟ್ಟಿದವನು ನೀತಿವಂತನಾಗಿರಬಹುದೇ?
ಆಹಾ, ತನ್ನ ದೂತರಲ್ಲಿಯೂ ಆತನು ನಂಬಿಕೆಯಿ 15
ಡುವದಿಲ್ಲ.
1)ಆಕಾಶವೂ ಆತನ ದೃಷ್ಟಿಯಲ್ಲಿ ನಿರ್ಮಲವಾಗಿರದು.
ಹೀಗಿರಲು ಅಧರ್ಮವನ್ನು ನೀರಿನಂತೆ ಕುಡಿಯುತ್ತಾ 16
ಅಸಹ್ಯನೂ ಕೆಟ್ಟವನೂ ಆದ ನರಜನ್ಮದವನು ಮತ್ತೂ
ಅಶುದ್ಧನಲ್ಲವೇ!

ಕೇಳು, ನಾನು ಒಂದು ಸಂಗತಿಯನ್ನು ತಿಳಿಸು 17
ವೆನು,
ಕಂಡದ್ದನ್ನೇ ವಿವರಿಸುವೆನು.
ದತ್ತದೇಶದ ಬಾಧ್ಯತೆಯನ್ನು ಕಳಕೊಳ್ಳದೆ 18
ಪರದೇಶಿಗಳ ಬಳಿಕೆಯಿಲ್ಲದ ಜ್ಞಾನಿಗಳು
ಇದೇ ಸಂಗತಿಯನ್ನು ತಮ್ಮ ಪಿತೃಗಳಿಂದ ಕೇಳಿ 19
ಮರೆಮಾಜದೆ ಪ್ರಕಟಿಸಿದ್ದಾರೆ.

ಹಿಂಸಕನಿಗೆ ಎಷ್ಟು ವರುಷಗಳು ನೇಮಕವಾಗಿ 20
ವೆಯೋ
ಅಷ್ಟು ಕಾಲವೂ ಆ ದುಷ್ಟನು ಪೀಡಿತನಾಗಿಯೇ
ಇರುವನು.
ಅಪಾಯಗಳ ಸಪ್ಪಳವು ಅವನ ಕಿವಿಯಲ್ಲೇ ಇರುವದು, 21
ತಾನು ಸುಖವಾಗಿರುವಾಗಲೂ ಸೂರೆಗಾರನು ತನ್ನ
ಮೇಲೆ ಬೀಳುವನೆಂದು ಭಯಪಡುವನು.
ಕತ್ತಲೊಳಗಿಂದ ತಾನು ಹಿಂದಿರುಗುವೆನೆಂಬ ನಂಬಿಕೆ 22
ಯಿಲ್ಲದೆ
ಕತ್ತಿಯು ತನಗಾಗಿ ಕಾದಿದೆ ಎಂಬದಾಗಿಯೂ
ರೊಟ್ಟಿ ಎಲ್ಲಿ ಎಂದು ಹುಡುಕುತ್ತಾ ಅಲೆದಾಡುವೆ 23
ನೆಂಬದಾಗಿಯೂ ನಿಶ್ಚಯಿಸಿಕೊಂಡು
ಆ ಕತ್ತಲಿನ ದಿನವು ತನ್ನ ಪಕ್ಕದಲ್ಲಿ ಸಿದ್ಧವಾಗಿದೆ
ಎಂದು ತಿಳಿದುಕೊಂಡಿರುವನು.
ಸಂಕಟವೂ ಪೇಚಾಟವೂ ಯುದ್ಧಸನ್ನದ್ಧರಾಜರಂತೆ 24
ಅವನನ್ನು ಹೆದರಿಸಿ ಸೋಲಿಸುವವು.
ಅವನು ದೇವರಿಗೆ ವಿರುದ್ಧವಾಗಿ ಕೈಚಾಚಿ 25
ಸರ್ವಶಕ್ತನಿಗೆ ಎದುರು ನಿಂತು ಶೂರನಂತೆ ಮೆರೆದ
ನಲ್ಲಾ.
ಹೆಬ್ಬುಗುಟುಗಳಿಂದ ಕೂಡಿದ ಗುರಾಣಿಯನ್ನು ಹಿಡಿದು 26
ಕುತ್ತಿಗೆಯನ್ನೆತ್ತಿಕೊಂಡು ಆತನ ಮೇಲೆ ಬೀಳ
ಬೇಕೆಂದು ಓಡಿದನು.
ಅವನು ಮುಖದಲ್ಲಿ ಕೊಬ್ಬೇರಿಸಿಕೊಂಡು 27
ಸೊಂಟದಲ್ಲಿ ಬೊಜ್ಜನ್ನು ಬೆಳಿಸಿಕೊಂಡಿದ್ದನು.
ಅವನು ಹಾಳು ಪಟ್ಟಣಗಳಲ್ಲಿ ಸೇರಿಕೊಂಡು 28
ದಿಬ್ಬಗಳಾಗಿ ಹೋಗಲಿ ಯಾರೂ ವಾಸಿಸದಿರಲಿ ಎಂದು
ಶಾಪಹೊಂದಿದ ಮನೆಗಳೊಳಗೆ ವಾಸವಾಗಿದ್ದನು.

1) ಅಥವಾ: ಆಕಾಶದವರೂ ಆತನ ದೃಷ್ಟಿಯಲ್ಲಿ ನಿರ್ಮಲರಾಗಿ ಕಾಣಿಸರು.

29 ಇಂಥವನು ಐಶ್ವರ್ಯವಂತನಾಗುವದಿಲ್ಲ, ಅವನ ಆಸ್ತಿಯು ನಿಲ್ಲುವದಿಲ್ಲ,
1)ಅವನ ಫಲವು ಭಾರದಿಂದ ಭೂಮಿಯ ಕಡೆಗೆ ಬಾಗುವದಿಲ್ಲ.
30 ಕತ್ತಲೊಳಗಿಂದ ಅವನು ಪಾರಾಗುವದಿಲ್ಲ,
ಕಿಚ್ಚು ಅವನ ಕೊಂಬೆಗಳನ್ನು ಒಣಗಿಸುವದು,
2)ದೇವರ ಬಾಯ ಶ್ವಾಸದಿಂದ ಬಡಿಸಿಕೊಂಡು ಹೋಗುವನು.
31 ಅವನು ಭ್ರಮೆಗೊಂಡು ಶೂನ್ಯವಾದದ್ದರ ಮೇಲೆ ನಂಬಿಕೆಯಿಡದಿರಲಿ,
ಇಟ್ಟರೆ ಅವನಿಗಾಗುವ ಪ್ರತಿಫಲವು ಶೂನ್ಯವೇ,
32 3)ಅವನ ಕಾಲವು ಕೊನೆಮುಟ್ಟುವದಕ್ಕೆ ಮುಂಚೆಯೇ ಆ ಪ್ರತಿಫಲವು ತಲಪಿಬಿಡುವದು.
ಅವನ ಗರಿಯು ಹಸುರಾಗಿರುವದಿಲ್ಲ,
33 ದ್ರಾಕ್ಷೆಯ ಬಳ್ಳಿಯಂತೆ ಅವನು ತನ್ನ ಮಾಗದ ಫಲವನ್ನು ಹಾಳುಮಾಡಿಕೊಳ್ಳುವನು,
ಎಣ್ಣೆಯ ಮರದ ಹಾಗೆ ತನ್ನ ಹೂವುಗಳನ್ನು ಉದುರಿಸಿಬಿಡುವನು.
34 ಭ್ರಷ್ಟರ ಸಂಘವು ನಿರರ್ಥಕ,
ಬೆಂಕಿಯು ಲಂಚಕೋರರ ಗುಡಾರಗಳನ್ನು ಸುಟ್ಟುಹಾಕುವದು.
35 ಅವರು ಹಿಂಸೆಯನ್ನು ಗರ್ಭಧರಿಸಿ ಶ್ರಮೆಯನ್ನು ಹೆರುವರು,
ಅವರ ಹೊಟ್ಟೆಯು ಕಲ್ಪಿಸುವದು ಮೋಸವೇ.

16 ಆಗ ಯೋಬನು ಹೀಗೆ ಉತ್ತರಕೊಟ್ಟನು —
2 ಇಂಥಾ ಮಾತುಗಳನ್ನು ಬಹಳವಾಗಿ ಕೇಳಿದ್ದೇನೆ,
ನೀವೆಲ್ಲರೂ ಬೇಸರಿಕೆಯನ್ನು ಹುಟ್ಟಿಸುವ ಆದರಣೆಯವರಾಗಿದ್ದೀರಿ.
3 ಒಣಮಾತುಗಳಿಗೆ ಪಾರವಿಲ್ಲವೋ?
ಯಾವ ನೋವಿನಿಂದ ಈ ಉತ್ತರ ಕೊಟ್ಟೆ?
4 ನಾನೂ ನಿಮ್ಮ ಹಾಗೆ ಮಾತಾಡಬಲ್ಲೆನು;
ನೀವು ನನ್ನ ಸ್ಥಿತಿಯಲ್ಲಿ ಇದ್ದಿದ್ದರೆ
ನಾನು ನಿಮಗೆ ವಿರುದ್ಧವಾಗಿ ಮಾತುಗಳನ್ನು ಹೊಸೆದು
ನಿಮ್ಮ ವಿಷಯದಲ್ಲಿ ತಲೆಯಾಡಿಸಬಹುದಾಗಿತ್ತು.
5 ನಾನೂ ಬಾಯಿಂದ ನಿಮ್ಮನ್ನು ಧೈರ್ಯಗೊಳಿಸಿ
ತುಟಿಗಳ ಆದರಣೆಯಿಂದ [ನಿಮ್ಮ ದುಃಖವನ್ನು] ಶಮನಪಡಿಸಬಹುದಾಗಿತ್ತು.
6 ನಾನು ಮಾತಾಡಿದರೂ ನನ್ನ ಮನೋವ್ಯಥೆಯು ಶಾಂತವಾಗುವದಿಲ್ಲ.
ಸುಮ್ಮನಾದರೂ ಕಷ್ಟ ನಿವಾರಣೆಯಾಗುವದಿಲ್ಲ.

7 ಈಗಲಂತು ಆತನು ನನ್ನನ್ನು ಕುಂದಿಸಿದ್ದಾನೆ;
[ದೇವಾ,] ನೀನು ನನ್ನ ಬಳಗದವರನ್ನೆಲ್ಲಾ ಹಾಳುಮಾಡಿದ್ದೀ.
ನೀನು ನನ್ನನ್ನು ಹಿಡಿದಿರುವದು ನನಗೆ ಪ್ರತಿಸಾಕ್ಷಿಯಾಗಿದೆ,
ನನ್ನ ಕ್ಷೀಣತ್ವವು ನನಗೆ ವಿರುದ್ಧವಾಗಿ ಎದ್ದು ನನ್ನ ಮುಖದ ಮುಂದೆ ಸಾಕ್ಷಿಕೊಡುತ್ತದೆ.
ಆತನ ಸಿಟ್ಟು ನನ್ನನ್ನು ಸೀಳಿ ಹಿಂಸಿಸುತ್ತಿದೆ;
ಆತನು ನನ್ನ ಮೇಲೆ ಹಲ್ಲುಕಡಿದಿದ್ದಾನೆ;
ನನ್ನ ವಿರೋಧಿಯು ನನ್ನ ಮೇಲೆ ದೃಷ್ಟಿಯನ್ನು ತೀಕ್ಷ್ಣಮಾಡಿದ್ದಾನೆ,
ನನಗೆ ವಿರುದ್ಧವಾಗಿ ಹಲವರು ಗುಂಪುಕೂಡಿ ಬಾಯಿಕಿಸಿದು ನನ್ನನ್ನು ಅಣಕಿಸಿ
ಛೀ ಎಂದು ನನ್ನ ದವಡೆಯ ಮೇಲೆ ಬಡಿದಿದ್ದಾರೆ.
ದೇವರು ನನ್ನನ್ನು ತುಂಟರಿಗೆ ಒಪ್ಪಿಸಿ
ಕೆಟ್ಟವರ ಕೈಗೆ ಎಸೆದುಬಿಟ್ಟಿದ್ದಾನೆ.
ನಾನು ನೆಮ್ಮದಿಯಿಂದಿದ್ದಾಗ ಆತನು ನನ್ನನ್ನು ಒಡೆದುಹಾಕಿದನು;
ಕತ್ತುಹಿಡಿದು ನನ್ನನ್ನು ಚೂರು ಚೂರು ಮಾಡಿದನು.
ನನ್ನನ್ನು ಗುರಿಮಾಡಿಕೊಂಡಿದ್ದಾನೆ;
4)ಆತನ ಬಾಣಗಳು ನನ್ನನ್ನು ಮುತ್ತಿಕೊಂಡಿವೆ.
ಆತನು ಕರುಣವಿಲ್ಲದೆ ನನ್ನ ಅಂತರಂಗಗಳನ್ನು ಇರಿದು
ಭೂಮಿಯ ಮೇಲೆ ನನ್ನ ಪಿತ್ತವನ್ನು ಸುರಿಸುತ್ತಾನೆ.
ನನ್ನನ್ನು ಒಡೆದೊಡೆದು ಸಿಥಿಲಪಡಿಸಿ
ಶೂರನ ಹಾಗೆ ನನ್ನ ಮೇಲೆ ಓಡಿಬರುತ್ತಾನೆ.
ಗೋಣಿಯನ್ನು ಹೊಲೆದು ಮೈಮೇಲೆ ಹಾಕಿಕೊಂಡಿದ್ದೇನೆ;
ನನ್ನ ಕೊಂಬನ್ನು ದೂಳಿನಲ್ಲಿ ತಗ್ಗಿಸಿಕೊಂಡಿದ್ದೇನೆ.
ಕಣ್ಣೀರು ಸುರಿಯುವದರಿಂದ ನನ್ನ ಮುಖವು ಕೆಂಪಾಗಿಹೋಗಿದೆ.
ರೆಪ್ಪೆಯ ಮೇಲೆ ಮರಣಾಂಧಕಾರವು ಕವಿದಿದೆ.
ಆದರೆ ನನ್ನ ಕೈ ಯಾವ ಬಲಾತ್ಕಾರವನ್ನೂ ಮಾಡಿರಲಿಲ್ಲವಲ್ಲಾ,
ನನ್ನ ವಿಜ್ಞಾಪನೆಯು ನಿರ್ಮಲವಾದದ್ದು.

ಭೂಮಿಯೇ, ನನ್ನ ರಕ್ತವನ್ನು ಮುಚ್ಚಬೇಡ!
ನನ್ನ ಮೊರೆಗೆ ಬಿಡುವು ಸಿಕ್ಕದಿರಲಿ!
ಆಹಾ, ಈಗಲೂ ನನ್ನ ಕಡೆಯ ಸಾಕ್ಷಿಯು ಆಕಾಶದಲ್ಲಿ ಉಂಟು,
ನನ್ನ ಪಕ್ಷದ ಹೊಣೆಗಾರನು ಮೇಲಣ ಲೋಕದಲ್ಲಿದ್ದಾನೆ.
ಗೆಳೆಯರೋ ನನ್ನನ್ನು ಹೀನೈಸುವವರಾಗಿದ್ದಾರೆ;
ನನ್ನ ನ್ಯಾಯವನ್ನು ದೇವರ ಮುಂದೆಯೂ
ಮಾನವನ ನ್ಯಾಯವನ್ನು ಅವನ ಮಿತ್ರನ ಮುಂದೆಯೂ
ಸ್ಥಾಪಿಸಲಿ ಎಂದು ದೇವರಿಗೇನೇ ಕಣ್ಣೀರುಸುರಿಸುತ್ತೇನೆ.
ನಾನು ಹಿಂದಿರುಗದ ದಾರಿಯನ್ನು
ಕೆಲವು ವರುಷಗಳೊಳಗೇ ಹಿಡಿಯುವೆನಲ್ಲವೆ.

1) ಅಥವಾ: ಅವನ ಸೊತ್ತು ಭೂಮಿಯಲ್ಲಿ ವಿಸ್ತರಿಸಿಕೊಳ್ಳುವದಿಲ್ಲ. 2) ಅಥವಾ: ಗಾಳಿಯು ಅವನ ಫಲವನ್ನು ಹೊ[illegible]ಕೊಂಡು ಹೋಗುವದು. 3) ಅಥವಾ: ಅವನ ಬುಡವು ಕಾಲಕ್ಕೆ ಮುಂಚೆಯೇ ಒಣಗುವದು. 4) ಪಾಠಾಂತರ: [illegible] ಬಿಲ್ಲುಗಾರರು ನನ್ನನ್ನು ಸುತ್ತಿಕೊಂಡಿದ್ದಾರೆ.

17 ನನ್ನ ಆತ್ಮವು ಒಡೆದುಹೋಗಿದೆ, ನನ್ನ ದಿನಗಳು ಮುಗಿದಿವೆ,
ಗೋರಿಯು ನನಗೆ ಕಾದಿದೆ.
2 ನನ್ನ ಬಳಿಯಲ್ಲಿರುವವರು ಹಾಸ್ಯಗಾರರೇ ಸರಿ,
ಅವರ ಕೆಣಕಾಟವು ಯಾವಾಗಲೂ ನನ್ನ ಕಣ್ಣಿನ ಮುಂದೆ ಇದೆ.

3 ಕೃಪೆಮಾಡಿ ಈಡನ್ನು ಕೊಡು, ನನಗಾಗಿ ನೀನೇ ನಿನ್ನ ಹತ್ತಿರ ಹೊಣೆಯಾಗು,
ಕೈ ಮೇಲೆ ಕೈ ಹಾಕತಕ್ಕವರು ನನಗೆ ಇನ್ನಾರೂ ಇಲ್ಲ.
4 ವಿವೇಕವು ಪ್ರವೇಶಿಸದಂತೆ ಅವರ ಹೃದಯವನ್ನು ಮುಚ್ಚಿಬಿಟ್ಟಿದ್ದೀಯಲ್ಲಾ.
ಇಂಥವರನ್ನು ಉನ್ನತಸ್ಥಿತಿಗೆ ತಂದೀಯಾ?
5 ಯಾವನು ಸ್ವಲಾಭಕ್ಕಾಗಿ ಮಿತ್ರರ ಮೇಲೆ ದೂರು ಹೊರಿಸುವನೋ
ಅವನ ಮಕ್ಕಳು ಕಂಗೆಡುವರು.
6 ಆತನು ನನ್ನನ್ನು ಅನ್ಯದೇಶದವರ ಕಟ್ಟುಗಾದೆಗೆ ಆಸ್ಪದ ಮಾಡಿದ್ದಾನೆ,
ಜನರ ಉಗುಳಾಟಕ್ಕೆ ನನ್ನ ಮುಖವು ಗುರಿಯಾಗಿದೆ.
7 ಕರಕರೆಯಿಂದ ನನ್ನ ಕಣ್ಣು ಮೊಬ್ಬಾಗಿದೆ,
ನನ್ನ ಅಂಗಗಳೆಲ್ಲಾ ನೆರಳಿನಂತೆ [ನಿಸ್ಸಾರ] ಆಗಿವೆ.
8 ಯಥಾರ್ಥಜನರು ಇದನ್ನು ನೋಡಿ ಬೆರಗಾಗಿದ್ದಾರೆ,
ಮತ್ತು ನಿರಪರಾಧಿಯು ಭ್ರಷ್ಟನ ವಿಷಯದಲ್ಲಿ ಎಚ್ಚರಗೊಳ್ಳುತ್ತಾನೆ.
9 ಹೀಗಾದರೂ ಶಿಷ್ಟನು ತನ್ನ ಮಾರ್ಗವನ್ನೇ ಹಿಡಿದು ನಡೆಯುವನು,
ಶುದ್ಧಹಸ್ತನು ಬಲಗೊಳ್ಳುತ್ತಲೇ ಇರುವನು.

10 ಆದರೆ ನೀವೆಲ್ಲರೂ ಮತ್ತೆ ವಿವಾದಕ್ಕೆ ಬನ್ನಿರಿ,
ನಿಮ್ಮಲ್ಲಿ ಒಬ್ಬ ಜ್ಞಾನಿಯನ್ನಾದರೂ ಕಾಣೆ.
11 ನನ್ನ ದಿನಗಳು ಮುಗಿದುಹೋದವು,
ನನ್ನ ಉದ್ದೇಶಗಳೂ ಮನೋಗತಗಳೂ ಭಂಗವಾದವು.
12 ಇವರು ಇರುಳನ್ನು ಹಗಲೆಂದು ಸಾಧಿಸಿ
ಕತ್ತಲಿಂದ ಬೆಳಕು ಬೇಗನೆ ಬರುವದೆಂದು ತಿಳಿಸುತ್ತಾರೆ.
13 [1])ನಾನು ಪಾತಾಳವನ್ನು ನನ್ನ ಮನೆಯೆಂದು ನಿರೀಕ್ಷಿಸಿ
ನನ್ನ ಹಾಸಿಗೆಯನ್ನು ಕತ್ತಲಲ್ಲಿ ಹಾಸಿ
14 ಶ್ಮಶಾನವನ್ನು, ನೀನು ನನ್ನ ತಂದೆ ಎಂದೂ
ಹುಳವನ್ನು, ನನ್ನ ತಾಯಿ, ನನ್ನ ತಂಗಿ ಎಂದೂ ಕರೆಯುವವನಾದರೆ
ನನ್ನ ನಿರೀಕ್ಷೆ ಎಂಥದು? 15
ನನ್ನ ನಿರೀಕ್ಷೆಯನ್ನು ಯಾರು ನೋಡಾರು?
[2])ಅದು ನನ್ನ ಸಂಗಡ ಪಾತಾಳಕ್ಕೆ ಇಳಿದು ಬಂದೀತೇ? 16
ನಾವು ಜೊತೆಯಾಗಿ ದೂಳಿಗೆ ಸೇರೇವೋ?

ಆಗ ಶೂಹ್ಯನಾದ ಬಿಲ್ದದನು ಪ್ರತ್ಯುತ್ತರವಾಗಿ ಹೀಗಂದನು — 18
ಇನ್ನೆಷ್ಟರ ವರೆಗೆ ಮಾತುಗಳನ್ನು ಹಿಡಿಯುವದಕ್ಕೆ [3])ಉರ್ಲೊಡ್ಡುತ್ತಿರುವಿ? 2
ನೀನು ಆಲೋಚಿಸು, ಆ ಮೇಲೆ ಮಾತಾಡೋಣ.
ಏಕೆ ನಮ್ಮನ್ನು ಮೃಗಗಳೆಂದು ಎಣಿಸಿದ್ದೀ? 3
ನಿನ್ನ ದೃಷ್ಟಿಯಲ್ಲಿ ನಾವು [4])ಹೆಡ್ಡರೋ?
ಸಿಟ್ಟಿನಿಂದ ನಿನ್ನನ್ನು ಸೀಳಿಕೊಳ್ಳುವವನೇ, 4
ನಿನಗಾಗಿ ಲೋಕವೇ ಹಾಳಾಗಬೇಕೋ,
ಬಂಡೆಯು ತನ್ನ ಸ್ಥಳದಿಂದ ಜರಗಬೇಕೋ?

ಹೇಗಾದರೂ ದುಷ್ಟನ ದೀಪವು ಆರುವದು, 5
ಅವನ ಒಲೆಯು ಉರಿಯುವದಿಲ್ಲ.
ಅವನ ಗುಡಾರದಲ್ಲಿ ಬೆಳಕು ಕತ್ತಲಾಗುವದು, 6
ಅವನ ಮೇಲಣ [ತೂಗು] ದೀವಿಗೆಯು ನಂದುವದು.
ಅವನ ಬಲವುಳ್ಳ ಹೆಜ್ಜೆಗಳಿಗೆ ಇಕ್ಕಟ್ಟಾಗುವದು, 7
ಅವನ ಆಲೋಚನೆಯೇ ಅವನನ್ನು ಕೆಡವಿಹಾಕುವದು.
ತನ್ನ ಹೆಜ್ಜೆಗಳಿಂದಲೇ ಬಲೆಗೆ ಬೀಳುವನು, 8
ಗುಂಡಿಯನ್ನು ಮುಚ್ಚಿದ ತಟ್ಟಿಯ ಮೇಲೆ ನಡೆಯುವನು,
ಕತ್ತರಿಬೋನು ಅವನ ಹಿಮ್ಮಡಿಯನ್ನು ಕಚ್ಚುವದು, 9
ಉರುಲು ಅವನನ್ನು ಹಿಡಿಯುವದು,
ನೆಲದ ಮೇಲೆ ಪಾಶವೂ ದಾರಿಯಲ್ಲಿ ಜಾಲವೂ 10
ಅವನಿಗೆ ಹೊಂಚಿಕೊಂಡಿರುವವು.
ಎಲ್ಲಾ ಕಡೆಯಲ್ಲಿಯೂ ಅಪಾಯಗಳು ಅವನನ್ನು ಅಂಜಿಸಿ 11
ಹಿಮ್ಮಡಿತುಳಿಯುತ್ತಾ ಬೆನ್ನಟ್ಟುವವು.
ಅವನ ಬಲವು ಕುಂದಿಹೋಗುವದು. 12
ಅವನು ಎಡವಿ ಬಿದ್ದಾನೇ ಎಂದು ವಿಪತ್ತು ಕಾದಿರುವದು.
ಮೃತ್ಯುವಿನ ಹಿರೀಮಗನು ಅವನ ಚರ್ಮವನ್ನು ಚೂರು ಚೂರಾಗಿ ತಿಂದು 13
ಅವನ ಅಂಗಗಳನ್ನು ನುಂಗಿಬಿಡುವನು;
ಅವನ ನಿರ್ಭಯದ ಗುಡಾರದಿಂದ ಅವನನ್ನು ಎಳೆದು 14
ಮಹಾಭೀತಿಗಳ ರಾಜನ ಸನ್ನಿಧಿಗೆ ಸಾಗಿಸಿಕೊಂಡು ಹೋಗುವನು.

---

1) ವ. 13, 14) ಅಥವಾ: ನನ್ನಲ್ಲಿ ನಿರೀಕ್ಷೆಯಿದ್ದರೆ ಅದು ಎಂಥದು? ನನ್ನ ಮನೆಯು ಪಾತಾಳವೇ,
ಕತ್ತಲಲ್ಲಿ ನನ್ನ ಹಾಸಿಗೆಯನ್ನು ಹಾಸಿ
ಗೋರಿಯನ್ನು ನೀನು ತಂದೆ ಎಂದು
ಹುಳವನ್ನು ನನ್ನ ತಾಯಿ, ನನ್ನ ತಂಗಿ ಎಂದು ಕರೆದಿರುವೆನು.
2) ಪಾಠಾಂತರ: ನಾವು ದೂಳಿನಲ್ಲಿ ಸುಧಾರಿಸಿಕೊಳ್ಳುವಾಗ
ಅದು ನನ್ನ ಜೊತೆಯಾಗಿ ಪಾತಾಳದ [ಬಾಗಲಿನ] ಕಂಬಿಗಳ ವರೆಗೂ ಇಳಿದು ಬಂದೀತೇ?
3) ಪಾಠಾಂತರ: ಪ್ರಯುಕ್ತಿಸುವಿರಿ? ನೀವು ಆಲೋಚಿಸಿರಿ.
4) ಅಥವಾ: ಅಶುದ್ಧರೋ.

15 ಅವನಿಗೆ ಸಂಬಂಧಿಗಳಲ್ಲದವರು ಅವನ ಗುಡಾ
ರದಲ್ಲಿ ವಾಸಿಸುವರು,
ಅವನ ಮನೆಯ ಮೇಲೆ ಗಂಧಕವು 1)ಎರಚಲ್ಪಡು
ವದು.
16 ಅವನ ಬುಡವು ಕೆಳಗೆ ಒಣಗುವದು,
ಅವನ ರೆಂಬೆಯು ಮೇಲೆ ಬಾಡುವದು.
17 ಅವನ ಸ್ಮರಣೆಯು ಭೂಮಿಯಲ್ಲಿ ಅಳಿದುಹೋಗು
ವದು,
ಅವನ ಹೆಸರು ಹೊರಗಣ ಪ್ರಾಂತ್ಯಗಳಲ್ಲಿಯೂ ನಿಲ್ಲು
ವದಿಲ್ಲ.
18 ಅವನನ್ನು ಬೆಳಕಿನಿಂದ ಕತ್ತಲೆಗೆ ನೂಕಿ
ಲೋಕದಿಂದಲೇ ಅಟ್ಟಿಬಿಡುವರು.
19 ಅವನಿಗೆ ಸ್ವಜನರಲ್ಲಿ ಮಗನಾಗಲಿ ಮೊಮ್ಮಗನಾಗಲಿ
ಇರುವದಿಲ್ಲ,
ಅವನು ವಾಸಿಸಿದ ಸ್ಥಳದಲ್ಲಿ ಯಾರೂ ಉಳಿಯು
ವದಿಲ್ಲ.
20 ಹಿಂದಿನವರು 2)ಅವನ [ನಾಶನ] ದಿನವನ್ನು ನೋಡಿ
ಹೇಗೆ ಬೆರಗಾದರೋ
ಹಾಗೆಯೇ ಮುಂದಿನವರೂ ಅದಕ್ಕೆ ವಿಸ್ಮಯಪಡುವರು.
21 ಕೆಡುಕರ ನಿವಾಸಗಳ ಅವಸ್ಥೆಯು ಇಂಥದೇ.
ದೇವರನ್ನು ಲಕ್ಷಿಸದವನ ಸ್ಥಿತಿಯು ಹೀಗೆಯೇ ಸರಿ.

19 ಆಗ ಯೋಬನು ಪುನಃ ಇಂತೆಂದನು—
2 ಎಷ್ಟರ ವರೆಗೆ ನನ್ನ ಆತ್ಮವನ್ನು ನೋಯಿಸಿ
ಮಾತುಗಳಿಂದ ನನ್ನನ್ನು ಜಜ್ಜುತ್ತಿರುವಿರಿ?
3 ಈ ವರೆಗೆ ಹತ್ತಾರು ಸಾರಿ ನನ್ನನ್ನು ಅವಮಾನಪಡಿಸಿ
ನನಗೆ ಕೇಡುಮಾಡುತ್ತಿರುವದಕ್ಕೆ ನಿಮಗೆ ನಾಚಿಕೆ
ಯಿಲ್ಲವಲ್ಲಾ.
4 ನಾನು ನಿಜವಾಗಿ ತಪ್ಪುಳ್ಳವನಾಗಿದ್ದರೆ
ಆ ತಪ್ಪು ನನ್ನದೇ.

5 ನನಗೆ ವಿರುದ್ಧವಾಗಿ ನಿಮ್ಮನ್ನು ನೀವೇ ಹೆಚ್ಚಿ
ಸಿಕೊಂಡು
ನನಗಾದ ಅವಮಾನವನ್ನು ನ್ಯಾಯವೆಂದು ಸ್ಥಾಪಿ
ಸುವದಕ್ಕೆ ನಿಜವಾಗಿ ಇಷ್ಟಪಡುವಿರೋ?
6 ಹೀಗಾದರೆ ನನ್ನ ನ್ಯಾಯವನ್ನು ತಿರುಗಿಸಿಬಿಟ್ಟು
ನನ್ನ ಸುತ್ತಲೂ ತನ್ನ ಬಲೆಯನ್ನೊಡ್ಡಿದವನು ದೇವರೇ
ಎಂದು ತಿಳಿದುಕೊಳ್ಳಿರಿ.

7 ಇಗೋ, ಬಲಾತ್ಕಾರವೆಂದು ನಾನು ಕೂಗಿ
ಕೊಂಡರೂ ಯಾವ ಉತ್ತರವೂ ಇಲ್ಲ.
ನಾನು ಮೊರೆಯಿಟ್ಟರೂ ನ್ಯಾಯವು ನೆರವೇರದು.
8 ನಾನು ಮುಂದೆ ಹೋಗದ ಹಾಗೆ ಆತನು ನನ್ನ
ದಾರಿಗೆ ಅಡ್ಡಗೋಡೆ ಹಾಕಿ
ನನ್ನ ಹಾದಿಗಳನ್ನು ಕತ್ತಲು ಕವಿಯುವಂತೆ ಮಾಡಿ
ದ್ದಾನೆ.
ನನ್ನ ಘನತೆಯನ್ನು ಸುಲಿದುಬಿಟ್ಟು
ಕಿರೀಟವನ್ನು ನನ್ನ ತಲೆಯಿಂದ ತೆಗೆದುಹಾಕಿದ್ದಾನೆ.
ಆತನು ನನ್ನನ್ನು ಸುತ್ತುಮುತ್ತಲೂ ಕೆಡವಿದ್ದರಿಂದ
ಇಲ್ಲದೆ ಹೋದೆನು.
ಮರವನ್ನು ಕೀಳುವ ಹಾಗೆ ನನ್ನ ನಿರೀಕ್ಷೆಯನ್ನು ಕಿತ್ತು
ಬಿಟ್ಟಿದ್ದಾನೆ.
ನನ್ನ ಮೇಲೆ ತನ್ನ ಕೋಪಾಗ್ನಿಯನ್ನು ಧಗಧಗಿಸಿ
ನನ್ನನ್ನು ವೈರಿಯೆಂದೆಣಿಸಿದ್ದಾನೆ.
ಆತನ ದಂಡುಗಳು ಒಟ್ಟಿಗೆ ಮುಂದರಿದು ನನಗೆ ವಿರು
ದ್ಧವಾಗಿ ದಿಬ್ಬಹಾಕಿ
ನನ್ನ ಗುಡಾರದ ಸುತ್ತಲೂ ಇಳಿದಿವೆ.

ನನ್ನ ಸಹೋದರರನ್ನು ನನ್ನಿಂದ ಅಗಲಿಸಿ
ದ್ದಾನೆ,
ನನ್ನ ಪರಿಚಿತರು ನನ್ನನ್ನು ಸಂಪೂರ್ಣವಾಗಿ ತೊರೆ
ದಿದ್ದಾರೆ,
ನನ್ನ ಬಂಧುಗಳು ನನ್ನನ್ನು ಬಿಟ್ಟುಬಿಟ್ಟಿದ್ದಾರೆ,
ನನಗೆ ಪರಿಚಯವಿದ್ದವರು ನನ್ನನ್ನು ಮರೆತಿದ್ದಾರೆ.
ನನ್ನ ಪರಿಜನರೂ ದಾಸಿಯರೂ ನನ್ನನ್ನು ಅನ್ಯನೆಂದೆಣಿ
ಸುತ್ತಾರೆ,
ಅವರ ದೃಷ್ಟಿಗೆ ಪರದೇಶಿಯಾಗಿದ್ದೇನೆ.
ನಾನು ನನ್ನ ಆಳನ್ನು ಕರೆದರೂ ಅವನು ಉತ್ತರ
ಕೊಡುವದಿಲ್ಲ,
ಬಾಯಿ ತೆರೆದು ಬೇಡಿಕೊಳ್ಳಬೇಕಾಗಿ ಬಂತು.
ನನ್ನ ಉಸಿರು 3)ನನ್ನ ಹೆಂಡತಿಗೆ ಅಸಹ್ಯವಾಗಿದೆ,
ನನ್ನ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳಿಗೂ ಹೇಸಿಕೆ
ಯಾಗಿದ್ದೇನೆ.
ಚಿಕ್ಕವರೂ ಕೂಡ ನನ್ನನ್ನು ಹೀನೈಸುತ್ತಾರೆ,
ನಾನು ಏಳಲು ಪ್ರಯಾಸಪಡುತ್ತಿರುವಾಗ ಅವರ ಹರ
ಟೆಗೆ ಗುರಿಯಾಗುತ್ತೇನೆ.
ನನ್ನ ಆಪ್ತಮಿತ್ರರೆಲ್ಲರೂ ನನ್ನನ್ನು ನೋಡಿ ಹೇಸಿ
ಕೊಳ್ಳುತ್ತಾರೆ;
ನನ್ನ ಪ್ರೀತಿಪಾತ್ರರು ಸಹ ನನ್ನ ಮೇಲೆ ತಿರುಗಿಬಿದ್ದಿ
ದ್ದಾರೆ.
ನನ್ನ ಎಲುಬು ಚರ್ಮಕ್ಕೂ ಮಾಂಸಕ್ಕೂ ಅಂಟಿ
ಹೋಗಿದೆ,
4)ಹಲ್ಲಿನ ಪರೆಯನ್ನು ಮಾತ್ರ ಉಳಿಸಿಕೊಂಡು [ಮರ
ಣಕ್ಕೆ] ಓರೆಯಾಗಿದ್ದೇನೆ.

ನನ್ನ ಮಿತ್ರರೇ, ಕರುಣಿಸಿರಿ, ನೀವಾದರೂ
ಕರುಣಿಸಿರಿ!
ದೇವರ ಕೈ ನನ್ನನ್ನು ಹೊಡೆಯಿತಲ್ಲಾ.
ದೇವರ ಹಾಗೆ ನೀವೂ ನನ್ನನ್ನು ಏಕೆ ಹಿಂಸಿಸುತ್ತೀರಿ?

1) ಅಂದರೆ, ಉಗ್ಗಲ್ಪಡುವದು.
2) ಅಥವಾ: ಪಡುವಣದವರು ಅವನ ನಾಶನದಿನಕ್ಕೆ ವಿಸ್ಮಯಪಡುವರು.
ಮೂಡಣದವರು ಬೆರಗಾಗುವರು.
3) ಅಥವಾ: ನನ್ನ ಹೆಂಡತಿಗೇ ಗೊತ್ತಿಲ್ಲ.
4) ಅಥವಾ: [ಮರಣಕ್ಕೆ] ಹಲ್ಲಿನ ಪರೆಯಷ್ಟು ದೂರದಲ್ಲಿ ತಪ್ಪಿಸಿಕೊಂಡಿದ್ದೇ

ನನ್ನನ್ನು ತಿಂದು ತಿಂದು ನಿಮಗೆ ಸಾಕಾಗಲಿಲ್ಲವೋ?
23 ಆಹಾ, ನನ್ನ ಮಾತುಗಳನ್ನು ಬರೆದಿಟ್ಟರೆ ಎಷ್ಟೋ ಲೇಸು!
ಪುಸ್ತಕದಲ್ಲಿ ಲೇಖಿಸಿದರೆ ಎಷ್ಟೋ ಮೇಲು!
24 ಕಬ್ಬಿಣದ ಕಂಠದಿಂದ ಬಂಡೆಯ ಮೇಲೆ ಕೆತ್ತಿ
ಸೀಸ ಎರೆದು ಶಾಶ್ವತಶಾಸನವಾಗಿ ಮಾಡಿದರೆ ನನಗೆ ಎಷ್ಟೋ ಉಪಕಾರ!

25 ನಾನಂತು ನನ್ನ ನ್ಯಾಯಸ್ಥಾಪಕನು ಜೀವಸ್ವರೂಪನೆಂದು ಬಲ್ಲೆನು;
ಆತನು ಕಡೆಗೆ 1)ದೂಳಿನ ಮೇಲೆ [ಸಾಕ್ಷಿಯಾಗಿ] ನಿಂತುಕೊಳ್ಳುವನು;
26 2)ನನ್ನ ಚರ್ಮವು ಹೀಗೆ ಬಿರಿದು ಹಾಳಾದ ಬಳಿಕ
3)ನಿರ್ದೇಹನಾಗಿ ದೇವರನ್ನು ನೋಡುವೆನು;
27 4)ಕಣ್ಣಾರೆ ಕಾಣುವೆನು,
ನಾನೇ ನಾನಾಗಿ ನೋಡುವೆನು, ಮತ್ತೊಬ್ಬನಾಗಿ ಅಲ್ಲ.
ನನ್ನ ಹೃದಯವು [ಹಂಬಲಿಕೆಯಿಂದ] ನನ್ನಲ್ಲಿ ಕುಂದಿದೆ.

28 ಅವನಿಗೆ ಆದಷ್ಟು ಹಿಂಸೆಯನ್ನು ಮಾಡೋಣ,
ಅವನಿಗೆ ಸಂಭವಿಸಿದ್ದಕ್ಕೆ 5)ಮೂಲವು 6)ಅವನಲ್ಲಿಯೇ ಅಡಗಿದೆ ಎಂದು ನೀವು ಆಡಿಕೊಂಡ ಕಾರಣ
29 ಕತ್ತಿಗೆ ಭಯಪಡಿರಿ,
ಕತ್ತಿಯ ದಂಡನೆಗಳು ತೀಕ್ಷ್ಣವಾಗಿವೆ;
ಇದರಿಂದ ನ್ಯಾಯನಿರ್ಣಯವುಂಟೆಂದು ತಿಳಿದುಕೊಳ್ಳುವಿರಿ.

# 20

ಆ ಮೇಲೆ ನಾಮಾಥ್ಯನಾದ ಚೋಫರನು ಹೀಗಂದನು—
2 ನನ್ನ ಮನೋವ್ಯಥೆಯು ಪ್ರತ್ಯುತ್ತರವನ್ನು ನನಗೆ ಹೇಳಿಕೊಡುತ್ತದೆ,
ಆತುರವು ನನ್ನಲ್ಲಿ ತುಂಬಿದೆ;
3 ಏಕೆಂದರೆ ನನಗೆ ಅಪಮಾನಕರವಾದ ನಿನ್ನ ಖಂಡನೆಯನ್ನು ಕೇಳಿದ್ದೇನೆ,
ಆದಕಾರಣ ನನ್ನ ಆತ್ಮವು ನನ್ನ ಬುದ್ಧಿಯಿಂದಲೇ ಕಲಿತ ಉತ್ತರವನ್ನು ನನಗೆ ತಿಳಿಸುತ್ತದೆ.

4 ಮನುಷ್ಯನು ಲೋಕದಲ್ಲಿ ಉದ್ಭವಿಸಿದ ಪುರಾತನಕಾಲದಿಂದಲೂ
5 ದುಷ್ಟರ ಉತ್ಸಾಹಧ್ವನಿಯು ಅಲ್ಪಕಾಲದ್ದು,
ಭ್ರಷ್ಟನ ಉಲ್ಲಾಸವು ಕ್ಷಣಿಕವಾದದ್ದು ಎಂದು ನಿನಗೆ ಗೊತ್ತಿಲ್ಲವೋ?
6 ಅವನ ಪ್ರತಿಷ್ಠೆಯು ಆಕಾಶಕ್ಕೆ ಏರಿದರೂ
ಅವನ ತಲೆಯು ಮೋಡಗಳಿಗೆ ತಗುಲಿದರೂ
ತನ್ನ ಮಲದ ಹಾಗೆ ನಿತ್ಯನಾಶನವನ್ನು ಹೊಂದುವನು, 7
ಅವನನ್ನು ಕಂಡವರು ಕೂಡ ಅವನೆಲ್ಲಿಯೋ ಅನ್ನುವರು.
ಅವನು ಸ್ವಪ್ನದಂತೆ ಹಾರಿಹೋಗಿ ಸಿಕ್ಕುವದಿಲ್ಲ. 8
ರಾತ್ರಿಯ ಕನಸಿನ ಹಾಗೆ ಓಡಿಹೋಗುವನು.
ಕಂಡವನ ಕಣ್ಣಿಗೆ ಮತ್ತೆ ಕಾಣಿಸನು. 9
ಅವನ ನಿವಾಸವು ಅವನನ್ನು ತಿರಿಗಿ ನೋಡುವದೇ ಇಲ್ಲ.
ಅವನ ಮಕ್ಕಳು ದರಿದ್ರರ ದಯೆಯನ್ನು ಬೇಡುವರು. 10
ಅವನು ತನ್ನ ಕೈಯಿಂದಲೇ ತನ್ನ ಆಸ್ತಿಯನ್ನು ಹಿಂದಕ್ಕೆ ಕೊಟ್ಟುಬಿಡಬೇಕಾಗುವದು.
ಯೌವನವು ಅವನ ಎಲುಬುಗಳಲ್ಲಿ ಇನ್ನೂ ತುಂಬಿರುವಾಗಲೇ 11
ಅದು ಅವನೊಂದಿಗೆ ದೂಳಿನಲ್ಲಿ ಮಲಗುವದು.

ಕೆಟ್ಟತನವು ಅವನ ಬಾಯಿಗೆ ಸಿಹಿಯಾಗಿರಲು 12
ಅವನು ನಾಲಿಗೆಯ ಕೆಳಗೆ ಅದನ್ನು ಅಡಗಿಸಿ
ನುಂಗದೆ ಕಾಪಾಡುತ್ತಾ 13
ಬಾಯಲ್ಲೇ ಇಟ್ಟುಕೊಂಡಿದ್ದರೂ
ತಿಂದ ಮೇಲೆ ಆ ಪದಾರ್ಥವು ಮಾರ್ಪಟ್ಟು 14
ಅವನೊಳಗೆ ಹಾವಿನ ವಿಷವಾಗುವದು.
ನುಂಗಿದ ಐಶ್ವರ್ಯವನ್ನು ಅವನು ಕಾರುವನು, 15
ದೇವರು ಅವನ ಹೊಟ್ಟೆಯೊಳಗಿಂದ ಅದನ್ನು ಕಕ್ಕಿಸಿಬಿಡುವನು.
ಅವನು ಚೀಪುವದು ಹಾವಿನ ವಿಷವೇ, 16
ಸರ್ಪದ ನಾಲಿಗೆಯು ಅವನನ್ನು ಕೊಲ್ಲುವದು.
ಜೇನೂ ಮೊಸರೂ ಸಮೃದ್ಧಿಯಾಗಿ ಹರಿಯುವ ನದಿಗಳನ್ನು 17
ಅವನು ನೋಡುವದೇ ಇಲ್ಲ.
ಅವನು ದುಡಿದದ್ದನ್ನು ಅನುಭವಿಸದೆ ಪರರ ಪಾಲು ಮಾಡುವನು, 18
ಅವನ ಲಾಭದಿಂದಾಗತಕ್ಕ ಆನಂದವು ಅವನಿಗೆ ಸಿಕ್ಕುವದಿಲ್ಲ.
ಅವನು ಬಡವರನ್ನು ಜಜ್ಜಿ ತ್ಯಜಿಸಿಬಿಟ್ಟಿದ್ದಾನಲ್ಲಾ; 19
ಸುಲಿಗೆಯಿಂದ ಕಿತ್ತುಕೊಂಡ ಮನೆಯನ್ನು ಭದ್ರಪಡಿಸಿಕೊಳ್ಳದೆ ಹೋಗುವನು.
ಅವನ ಹೊಟ್ಟೆಗೆ ತೃಪ್ತಿಯಿಲ್ಲವಾದ ಕಾರಣ 20
ಅವನು ತನ್ನ ಇಷ್ಟಸಂಪತ್ತಿನಲ್ಲಿ ಯಾವದನ್ನೂ ಉಳಿಸಿಕೊಳ್ಳುವದಿಲ್ಲ.
ಏನೂ ಮಿಗದಂತೆ ಅವನು ನುಂಗಿಬಿಟ್ಟದರಿಂದ 21
ಅವನ ಸುಖವು ಅಸ್ಥಿರವಾಗಿರುವದು.
ಸಮೃದ್ಧಿಯು ತುಂಬಿರುವಾಗಲೇ ಅವನಿಗೆ ಇಕ್ಕಟ್ಟಾಗುವದು. 22

1) ಅಥವಾ: ಭೂಮಿಯ. 2) ಅಥವಾ: ನನ್ನ ಚರ್ಮವು ಒಡೆದು ಹಾಳಾದ ಬಳಿಕ ಇಗೋ, ನಿರ್ದೇಹನಾಗಿ ದೇವರನ್ನು ನೋಡುವೆನು. 3) ಅಥವಾ: ದೇಹಧಾರಿಯಾಗಿ. 4) ಅಥವಾ: ಆತನನ್ನು ಅನ್ಯನನ್ನಾಗಿ ನಾನು ನೋಡುವದಿಲ್ಲ, ನನ್ನ ಕಡೆಯವನನ್ನಾಗಿಯೇ ಕಣ್ಣಾರೆ ಕಾಣುವೆನು.
5) ಅಥವಾ: ಭಕ್ತಿಯ ಮೂಲವು ನನ್ನಲ್ಲಿ ಊರಿಕೊಂಡೇ ಇದೆ,
ನೀವು ನನ್ನ ವಿಷಯವಾಗಿ, ಅವನಿಗೆ ಆದಷ್ಟು ಹಿಂಸೆಯನ್ನು ಮಾಡೋಣ ಎಂದು ಹೇಳಿದ ಕಾರಣ.
6) ಪಾಠಾಂತರ: ನನ್ನಲ್ಲಿ.

ಶ್ರಮೆಯನ್ನನುಭವಿಸುವ ಪ್ರತಿಯೊಬ್ಬನ ಕೈ ಅವನ ಮೇಲೆ ಬೀಳುವದು.

23 ಅವನ ಹೊಟ್ಟೆ ತುಂಬುವದು, ಹೌದು,
ದೇವರು ತನ್ನ ಕೋಪಾಗ್ನಿಯನ್ನು ಕಳುಹಿಸಿ
1)ಅದನ್ನೇ ಆಹಾರವನ್ನಾಗಿ ಅವನ ಮೇಲೆ ಸುರಿಸುವನು.
24 ಕಬ್ಬಿಣದ ಆಯುಧದ ದೆಸೆಯಿಂದ ಓಡಿಹೋಗುವನು,
ತಾಮ್ರದ ಬಿಲ್ಲು ಅವನನ್ನು ಇರಿಯುವದು.
25 ಅವನು ಬಾಣವನ್ನು ಕೀಳಲು ಅದು ಬೆನ್ನಿನಿಂದ ಬರುವದು,
ಥಳಥಳಿಸುತ್ತಾ ಅವನ ಪಿತ್ತಕೋಶದೊಳಗಿಂದ ಹೊರಡುತ್ತಿರುವದು,
ಭಯಭ್ರಾಂತಿಗಳು ಅವನನ್ನು ಮುತ್ತಿಕೊಳ್ಳುವವು.
26 2)ಅವನ ನಿಧಿನಿಕ್ಷೇಪಗಳಿಗಾಗಿ ಪೂರ್ಣಾಂಧಕಾರವು ಕಾದಿರುವದು,
ಯಾರೂ ಹೊತ್ತಿಸದ ಬೆಂಕಿಯು ಅವನನ್ನು ತಿಂದುಹಾಕಿ
ಅವನ ಗುಡಾರದಲ್ಲಿ ತಪ್ಪಿಸಿಕೊಂಡದ್ದನ್ನು ಮೇದುಬಿಡುವದು.
27 ಆಕಾಶವು ಅವನ ಪಾಪವನ್ನು ಬೈಲುಪಡಿಸುವದು.
ಭೂಮಿಯು ಅವನ ವಿರುದ್ಧಸಾಕ್ಷಿಯಾಗಿ ಏಳುವದು.
28 ದೇವರ ಸಿಟ್ಟಿನ ದಿನದಲ್ಲಿ ಅವನ ಮನೆಯ ಧನಧಾನ್ಯಗಳು
ಪ್ರವಾಹದಿಂದ ಕೊಚ್ಚಿಕೊಂಡು ತೊಲಗಿಹೋಗುವವು.
29 ದುಷ್ಟನಿಗೆ ದೇವರಿಂದ ದೊರೆಯುವ ಪಾಲೂ
ದೇವರು ನೇಮಿಸಿರುವ ಸ್ವಾಸ್ತ್ಯವೂ ಇವೇ.

**21** ಆಗ ಯೋಬನು ಇಂತೆಂದನು—
2 ನನ್ನ ಮಾತುಗಳನ್ನು ಚೆನ್ನಾಗಿ ಕೇಳಿರಿ.
ನಿಮ್ಮಿಂದ ನನಗಾಗಬೇಕಾದ ಆದರಣೆಯು ಇಷ್ಟೇ.
3 ತಾಳಿರಿ, ನಾನೂ ಮಾತಾಡುವೆನು.
ಆ ಮೇಲೆ 3)ಹಾಸ್ಯಮಾಡಿದರೂ ಮಾಡಿರಿ.
4 ನಾನೇನು ಮನುಷ್ಯನ ವಿಷಯದಲ್ಲಿ ಗುಣುಗುಟ್ಟುತ್ತಿದ್ದೇನೋ?
ನಾನೇಕೆ ಬೇಸರಗೊಳ್ಳಬಾರದು?
5 ನನ್ನ ಕಡೆಗೆ ಗಮನಿಸಿ ಬೆರಗಾಗಿ
ಬಾಯ ಮೇಲೆ ಕೈಯಿಟ್ಟುಕೊಳ್ಳಿರಿ.
6 ಈ ವಿಷಯವನ್ನು ನೆನಪಿಗೆ ತಂದುಕೊಂಡ ಹಾಗೆಲ್ಲಾ
ನಡುಕವು ನನ್ನ ಮಾಂಸವನ್ನು ಹಿಡಿಯುತ್ತದೆ.
7 ದುಷ್ಟರು ಬಾಳಿ ವೃದ್ಧರಾಗುವದಕ್ಕೂ
ಇದಲ್ಲದೆ ಪ್ರಬಲಿಸುವದಕ್ಕೂ ಕಾರಣವೇನು?
8 ಅವರ ಸಂತಾನದವರು ಅವರೊಂದಿಗಿರುತ್ತಾ ಅವರ ಮುಂದೆಯೇ ಸುಸ್ಥಿರವಾಗಿರುವರು,
ಅವರ ಮಕ್ಕಳು ಅವರ ಕಣ್ಣೆದುರಿನಲ್ಲಿ ಅಚಲವಾಗಿ ನಿಲ್ಲುವರು.
ಅವರ ಮನೆಗಳು ಸುರಕ್ಷಿತವಾಗಿ ನಿರ್ಭಯದಿಂದಿರುವವು;
ದೇವರ ದಂಡವು ಅವರ ಮೇಲೆ ಬೀಳದು.
ಅವರ ಗೂಳಿಯು ಬೇಸರಗೊಳ್ಳದೆ ಹಾರುವದು;
ಅವರ ಹಸುವು ಕಂದುಹಾಕದೆ ಈಯುವದು.
ತಮ್ಮ ಮಕ್ಕಳನ್ನು ಮಂದೆಮಂದೆಯಾಗಿ ನಡಿಸುವರು,
ಅವರ ಬಾಲಬಾಲೆಯರು ಕುಣಿದಾಡುವರು.
ಅವರು ದಮ್ಮಡಿಕಿನ್ನರಿಗಳೊಡನೆ ಸ್ವರವೆತ್ತಿ
ಕೊಳಲಿನ ಧ್ವನಿಗೆ ಉಲ್ಲಾಸಪಡುವರು.
ಹೀಗೆ ತಮ್ಮ ದಿನಗಳನ್ನು ಸುಖವಾಗಿ ಕಳೆದು
ಕ್ಷಣಮಾತ್ರದಲ್ಲಿ [ಅನಾಯಾಸವಾಗಿ] ಸಮಾಧಿಗೆ ಇಳಿಯುವರು.
ಆದರೆ ಇವರೇ ದೇವರನ್ನು ಕುರಿತು—ನಮ್ಮಿಂದ ತೊಲಗಿ ಹೋಗು,
ನಿನ್ನ ಮಾರ್ಗಗಳ ತಿಳುವಳಿಕೆಯೇ ನಮಗೆ ಬೇಡ ಎಂದೂ
ಆ ಸರ್ವಶಕ್ತನು ಎಷ್ಟರವನು, ಆತನನ್ನು ನಾವು ಏಕೆ ಸೇವಿಸಬೇಕು?
ಆತನಿಗೆ ವಿಜ್ಞಾಪನೆಮಾಡುವದರಿಂದ ಪ್ರಯೋಜನವೇನು? ಎಂದೂ ಹೇಳುತ್ತಿದ್ದರು.
4)ಆಹಾ, ಅವರ ಸುಖವು ಅವರ ಕೈಯಲ್ಲಿ ನೆಲಸಿರುವದಿಲ್ಲ,
5)ದುಷ್ಟರ ಆಲೋಚನೆಯು ನನಗೆ ದೂರವಾಗಿರಲಿ!
ದುಷ್ಟರ ದೀಪವು ಆರಿಹೋದದ್ದು ಎಷ್ಟು ಸಾರಿ?
ಎಷ್ಟು ಸಾರಿ ಉಪದ್ರವವು ಅವರಿಗೆ ಸಂಭವಿಸಿದೆ?
ದೇವರು ಕೋಪಗೊಂಡು ಅವರ ಪಾಲಿಗೆ ಸಂಕಟಗಳನ್ನು ಕೊಟ್ಟದ್ದು ಎಷ್ಟು ಸಲ?
ಅವರು ಗಾಳಿಗೆ ಸಿಕ್ಕಿಬಿದ್ದ ಹುಲ್ಲಿನಂತೆ ಆದದ್ದು ಎಷ್ಟು ಸರ್ತಿ?
ಎಷ್ಟಾವರ್ತಿ ಬಿರುಗಾಳಿಯು ಕೊಚ್ಚಿಕೊಂಡು ಹೋಗುವ ಹೊಟ್ಟಿನಂತಿದ್ದರು?

ದೇವರು ದುಷ್ಟನ ಪಾಪಫಲವನ್ನು ಅವನ ಮಕ್ಕಳಿಗಾಗಿ ಇಟ್ಟಿದ್ದಾನೆ [ಅನ್ನುತ್ತೀರೋ?]
ಆ ಫಲವನ್ನು ಅನುಭವಿಸುವ ಹಾಗೆ ದೇವರು ಅವನಿಗೇನೆ ಕೊಟ್ಟುಬಿಡಲಿ.
ಅವನು ತನ್ನ ನಾಶವನ್ನು ಕಣ್ಣಾರೆ ಕಾಣಲಿ,
ಸರ್ವಶಕ್ತನ ರೌದ್ರರಸವನ್ನು ಪಾನಮಾಡಲಿ.
ಅವನ ಆಯುಸ್ಸೇ ಕತ್ತರಿಸಿಹೋದ ಮೇಲೆ
ತನ್ನನ್ನು ಹಿಂಬಾಲಿಸುವ ಸಂತತಿಯವರ ಚಿಂತೆ ಏನು?

ಮೇಲಣ ಲೋಕದವರಿಗೂ ನ್ಯಾಯತೀರಿಸುವ ದೇವರಿಗೆ
ಜ್ಞಾನಬೋಧನೆಯನ್ನು ಮಾಡಬಹುದೇ?
ಒಬ್ಬನು ಸಮೃದ್ಧನಾಗಿ

1) ಅಥವಾ: ಅವನು ಊಟಮಾಡುತ್ತಿರುವಾಗಲೇ.
2) ಅಥವಾ: ಅವನ ನಿಧಿನಿಕ್ಷೇಪವಾಗಿ ಪೂರ್ಣಾಂಧಕಾರವು ಬಚ್ಚಿಟ್ಟಿ
3) ಮೂಲ: ಹಾಸ್ಯಮಾಡಿದರೂ ಮಾಡು.
4) ಅಥವಾ: ನೋಡಿರಿ, ಅವರ ಸುಖವು ಅವರ ಕೈಯಿಂದಲೇ ಉಂಟಾಗಲಿ
5) ಅಥವಾ: ಆಹಾ . . . . . . ದೂರವಾಗಿರಲಿ! [ಅನ್ನುತ್ತೀಯೋ?]

ತುಂಬಾ ಸುಖದಿಂದಲೂ ನೆಮ್ಮದಿಯಿಂದಲೂ ಇರು
ವಾಗ ಸಾಯುವನು.
24 ಅವನ ತೊಟ್ಟಿಗಳಲ್ಲಿ ಹಾಲು ತುಂಬಿರುವದು,
ಅವನ ಅಸ್ಥಿಗಳ ಮಜ್ಜೆಯು ಸಾರವಾಗಿರುವದು.
25 ಮತ್ತೊಬ್ಬನು ಲೇಶವೂ ಸುಖಾನುಭವವಿಲ್ಲದೆ
ಮನೋವ್ಯಥೆಪಡುತ್ತಾ ಸಾಯುವನು.
26 ಇಬ್ಬರೂ ದೂಳಿನಲ್ಲಿ ಮಲಗುವರು,
ಹುಳಗಳು ಅವರನ್ನು ಮುತ್ತಿಕೊಳ್ಳುವವು.

27 ಆಹಾ, ನಿಮ್ಮ ಯೋಚನೆಗಳನ್ನು ಬಲ್ಲೆ,
ನೀವು ನನಗೆ ವಿರುದ್ಧವಾಗಿ ಮಾಡುವ ಕುಯುಕ್ತಿ
ಗಳನ್ನು ತಿಳಿದುಕೊಂಡಿದ್ದೇನೆ.
28 ಪ್ರಧಾನನ ಮನೆ ಏನಾಯಿತು,
ದುಷ್ಟರು ವಾಸಿಸಿದ ಗುಡಾರವೆಲ್ಲಿ, ಅನ್ನುತ್ತೀರಷ್ಟೆ.
29 ನೀವು ಮಾರ್ಗಸ್ಥರನ್ನು ವಿಚಾರಿಸಲಿಲ್ಲವೋ?
ಅವರು ಕೊಟ್ಟ ದೃಷ್ಟಾಂತಗಳಿಂದ,
30 ಆಪತ್ತಿನ ದಿನದಲ್ಲಿ ದುಷ್ಟನು ಉಳಿದು
ಕೋಪವು ತುಂಬಿ ತುಳುಕುವ ದಿವಸದಲ್ಲಿ ತಪ್ಪಿಸಲ್ಪ
ಡುವನು ಎಂಬದು ನಿಮಗೆ ಗೊತ್ತಾಗಲಿಲ್ಲವೋ?
31 ನೀನು ದುರ್ಮಾರ್ಗಿ ಎಂದು ಅವನಿಗೆ ಮುಖಾಮುಖಿ
ಯಾಗಿ ಯಾರು ತಾನೇ ಹೇಳುವರು?
ಅವನ ಮುಯ್ಯಿಗೆ ಮುಯ್ಯಿ ತೀರಿಸುವವರಾರು?
32 ಅವನನ್ನು ಮೆರವಣಿಗೆಯಿಂದ ಸಮಾಧಿಗೆ ತೆಗೆದು
ಕೊಂಡು ಹೋಗುವರು;
ಅವನ ಗೋರಿಗೆ ಕಾವಲಿಡುವರು.
33 ಆ ತಗ್ಗಿನ ಪ್ರದೇಶದ ಹೆಂಟೆಗಳು ಅವನಿಗೆ ಒಪ್ಪಿತವಾ
ಗಿರುವವು.
ಅವನಿಗಿಂತ ಹಿಂದೆ ಲೆಕ್ಕವಿಲ್ಲದಷ್ಟು ಜನರು ಹೀಗೆ
ಯೇ ಇದ್ದರು,
ಇನ್ನು ಮುಂದೆ ಸಮಸ್ತರೂ ಹೀಗೆಯೇ ಅವನನ್ನು
ಹಿಂಬಾಲಿಸುವರು.
34 ನೀವು ನನಗೆ ಮಾಡುವ ಆದರಣೆಯು ಎಷ್ಟು
ವ್ಯರ್ಥವಾಗಿದೆ!
ನಿಮ್ಮ ಉತ್ತರಗಳಲ್ಲಿ ಉಳಿದಿರುವದು ಮಿತ್ರದ್ರೋ
ಹವೇ.

22 ಆ ಮೇಲೆ ತೇಮಾನ್ಯನಾದ ಎಲೀಫಜನು ಮತ್ತೆ
ಹೀಗಂದನು —
2 ಮನುಷ್ಯಮಾತ್ರದವನಿಂದ ದೇವರಿಗೆ ಏನು ಪ್ರಯೋ
ಜನವಾದೀತು?
ಒಬ್ಬನು ವಿವೇಕಿಯಾಗಿ ನಡೆದುಕೊಂಡರೆ ಅವನಿಗೇ
ಪ್ರಯೋಜನವಷ್ಟೆ.
3 ನೀನು ನೀತಿವಂತನಾಗಿರುವದು ಸರ್ವಶಕ್ತನಿಗೆ ಸುಖ
ವೋ?
ನಿನ್ನ ನಡತೆಯನ್ನು ಸರಿಪಡಿಸಿಕೊಂಡರೆ ಆತನಿಗೇನು
ಲಾಭ?
4 ನಿನ್ನ ಭಯಭಕ್ತಿಗಾಗಿಯೋ ಆತನು ನಿನ್ನನ್ನು ಶಿಕ್ಷಿಸಿ
ನ್ಯಾಯತೀರ್ಪಿಗೆ ಗುರಿಮಾಡುತ್ತಾನೋ?
5 ನಿನ್ನ ಕೆಟ್ಟತನವು ದೊಡ್ಡದೇ ಸರಿ,
ನಿನ್ನ ಪಾಪಗಳಿಗೆ ಮಿತಿಯೇ ಇಲ್ಲ.

6 ನೋಡು, ನಿನ್ನ ಸಹೋದರನಿಂದ ಸುಮ್ಮನೆ
ಒತ್ತೆಗಳನ್ನು ತೆಗೆದುಕೊಂಡಿದ್ದೀ,
ಬೆತ್ತಲೆಯವರ ಬಟ್ಟೆಯನ್ನೂ ಸೆಳಕೊಂಡಿದ್ದೀ.
7 ಬಳಲಿದವನಿಗೆ ನೀರು ಕೊಡದೆ
ಹಸಿದವನಿಗೆ ಅನ್ನವಿಕ್ಕದೆಹೋಗಿದ್ದೀ.
8 ಬಲಿಷ್ಠನಾದರೆ ದೇಶವೇ ಅವನದು,
ಅಲ್ಲಿ ಸನ್ಮಾನಯೋಗ್ಯನಾಗಿ ವಾಸಿಸತಕ್ಕವನು ಅವನೇ.
9 ನೀನು ವಿಧವೆಯರನ್ನು ಬರಿಗೈಯಾಗಿ ಕಳುಹಿಸಿ
ಬಿಟ್ಟು
ಅನಾಥರ ಕೈಗಳನ್ನು ಮುರಿದಿದ್ದೀ.
10 ಆದಕಾರಣ ಬೋನುಗಳು ನಿನ್ನ ಸುತ್ತಲು ಕಾದಿವೆ,
ಫಕ್ಕನೆ ಉಂಟಾದ ಭಯವು ನಿನ್ನನ್ನು ತಲ್ಲಣಗೊಳಿಸು
ತ್ತದೆ.
11 1)ಇದಲ್ಲದೆ ಮುಂಗಾಣದ ಕತ್ತಲೂ
ಜಲಪ್ರವಾಹವೂ ನಿನ್ನನ್ನು ಆವರಿಸಿರುತ್ತವೆ.

12 ದೇವರು ಉನ್ನತಾಕಾಶದಲ್ಲಿಲ್ಲವೋ?
ನಕ್ಷತ್ರಮಂಡಲದ ತುದಿಯು ಎಷ್ಟೋ ಎತ್ತರ, ನೋಡು!
13 ನೀನಾದರೋ, — ದೇವರಿಗೆ ಏನು ಗೊತ್ತು,
ಕಾರ್ಗತ್ತಲಿನ ಆಚೆಯಿಂದ ನ್ಯಾಯತೀರಿಸಬಲ್ಲನೋ?
14 ದಟ್ಟವಾದ ಮೋಡಗಳು ಆತನಿಗೆ ಪರದೆಯ ಹಾಗಿರು
ವದರಿಂದ ನೋಡಲಾರನು;
ಆಕಾಶಮಂಡಲದ ಮೇಲ್ಗಡೆಯಲ್ಲಿಯೇ ನಡೆದಾಡು
ತ್ತಾನೆ ಎಂದು ಹೇಳಿಕೊಂಡಿಯಲ್ಲವೇ.

15 ಕೆಟ್ಟವರು ಮೊದಲಿನಿಂದಲೂ ನಡೆದ ದಾರಿಯನ್ನು
ಹಿಡಿಯುವಿಯಾ?
16 ಅಕಾಲಮರಣವು ಅವರನ್ನು ಅಪಹರಿಸಿತು,
ಅವರಿಗೆ ಆಧಾರವಾಗಿದ್ದ ನೆಲವು ನೀರಾಗಿ ಹರಿಯಿತು.
17 ದೇವರು ಅವರ ಮನೆಗಳನ್ನು ಸಂಪತ್ತಿನಿಂದ ತುಂಬಿಸಿ
ದ್ದರೂ
ಅವರು ಆತನನ್ನು ಕುರಿತು, ನಮ್ಮಿಂದ ತೊಲಗಿ ಹೋಗು,
18 ಸರ್ವಶಕ್ತನು ನಮಗೇನು ಮಾಡಾನು ಎಂದು ಹೇಳಿ
ಕೊಳ್ಳುತ್ತಿದ್ದರು.
ಅಬ್ಬಾ, ದುಷ್ಟರ ಆಲೋಚನೆಯು ನನಗೆ ದೂರವಾ
ಗಿರಲಿ!
19 ನೀತಿವಂತರು ಇದನ್ನು ನೋಡಿ ಹಿಗ್ಗುವರು,
ನಮಗೆ ವಿರುದ್ಧವಾಗಿ ಎದ್ದವರು ಹಾಳಾಗಿಯೇ ಹೋ
ದರು,
20 ಅವರ ಉಳಿದ ಸೊತ್ತನ್ನು ಬೆಂಕಿಯು ನಾಶಮಾಡಿತು
ಎಂದು
ನಿರ್ದೋಷಿಗಳು ದುಷ್ಟರನ್ನು ಅಣಕಿಸುವರು.

1) ಅಥವಾ: ನಿನ್ನನ್ನು ಕವಿದಿರುವ ಕತ್ತಲನ್ನೂ ಮುಣುಗಿಸಿರುವ ಜಲರಾಶಿಗಳನ್ನೂ ಲಕ್ಷಿಸಲಿಲ್ಲವೋ?

21 1)ದೇವರ ಚಿತ್ತಕ್ಕೆ ಒಡಂಬಟ್ಟು ಸಮಾಧಾನ
ಹೊಂದು,
ಇದರಿಂದ ನಿನಗೆ ಶುಭವಾಗುವದು.
22 ಆತನ ಬಾಯಿಂದಲೇ ಬೋಧನೆಯನ್ನು ಸ್ವೀಕರಿಸಿ
ಆತನ ಮಾತುಗಳನ್ನು ಹೃದಯದಲ್ಲಿ ಇಟ್ಟುಕೋ.
23 ನೀನು ಸರ್ವಶಕ್ತನ ಕಡೆಗೆ ತಿರುಗಿಕೊಂಡು
ನಿನ್ನ ಗುಡಾರಗಳಿಂದ ಅನ್ಯಾಯವನ್ನು ದೂರಮಾಡಿದರೆ
ಉದ್ಧಾರವಾಗುವಿ.
24 ನಿನ್ನ ಚಿನ್ನವನ್ನು ದೂಳಿನಲ್ಲಿ ಹಾಕು,
ಓಫೀರ್ ದೇಶದ ಅಪರಂಜಿಯನ್ನು ಹೊಳೆಗಳ ಬಂಡೆ
ಗಳಿಗೆ ಎಸೆದುಬಿಡು.
25 ಸರ್ವಶಕ್ತನು ನಿನಗೆ ಚಿನ್ನವಾಗಿಯೂ
ಬೆಳ್ಳಿಯ ರಾಶಿಗಳಾಗಿಯೂ ಇರುವನು.
26 ಆಗ ನೀನು ಸರ್ವಶಕ್ತನಲ್ಲಿ ಆನಂದಪಟ್ಟು
ದೇವರ ಕಡೆಗೆ ಮುಖವನ್ನು ಎತ್ತಿಕೊಳ್ಳುವಿ.
27 ನೀನು ಪ್ರಾರ್ಥಿಸುವಿ, ಆತನು ಲಾಲಿಸುವನು,
ಆತನಿಗೆ ಹರಕೆಗಳನ್ನು ಒಪ್ಪಿಸುವಿ.
28 ಯಾವದನ್ನು ಸಂಕಲ್ಪಿಸಿಕೊಳ್ಳುವಿಯೋ ಅದು ನಿನಗೆ
ನೆರವೇರುವದು,
ಬೆಳಕು ನಿನ್ನ ಮಾರ್ಗಗಳಲ್ಲಿ ಪ್ರಕಾಶಿಸುವದು.
29 2)ಜನರು ನಿನ್ನನ್ನು ಕೆಳಕ್ಕೆ ಬೀಳಿಸುವಾಗ ಮೇಲಕ್ಕೆತ್ತ
ಲ್ಪಡುವೆನು ಅಂದುಕೊಳ್ಳುವಿ,
ಆಗ ದೀನದೃಷ್ಟಿಯುಳ್ಳ ನಿನ್ನನ್ನು ಆತನು ರಕ್ಷಿಸು
ವನು.
30 3)ನಿರ್ದೋಷಿಯಲ್ಲದವನನ್ನೂ ತಪ್ಪಿಸುವನು,
ಹೌದು, ಆತನು ಇಂಥವನನ್ನು ತಪ್ಪಿಸುವದಕ್ಕೆ ನಿನ್ನ
ಕೈಗಳ ಪರಿಶುದ್ಧತೆಯೇ ಕಾರಣವಾಗಿರುವದು.

**23** ಆಗ ಯೋಬನು ಇಂತೆಂದನು—
2 4)ನಾನು ನನ್ನ ನರಳಾಟವನ್ನು ಎಷ್ಟು ಬಿಗಿಹಿಡಿ
ದರೂ
ಆ ನನ್ನ ಮೂಲುಗುವಿಕೆಯು ದೇವದ್ರೋಹವೆಂದು ಈಗ
ಲೂ ಎಣಿಸುತ್ತೀರಾ?
3 ಆಹಾ, ಆತನ ದರ್ಶನವು ಎಲ್ಲಿ ಆದೀತು, ನನಗೆ
ಗೊತ್ತಾಗಿದ್ದರೆ ಎಷ್ಟೋ ಸಂತೋಷ!
ಆತನ ಸನ್ನಿಧಿಯನ್ನು ಸೇರೇನು.
4 ನನ್ನ ಬಾಯನ್ನು ತರ್ಕಗಳಿಂದ ತುಂಬಿಸಿಕೊಂಡು
ನನ್ನ ನ್ಯಾಯವನ್ನು ಆತನ ಮುಂದೆ ವಿವರಿಸಿ
5 ಆತನ ಪ್ರತ್ಯುತ್ತರದ ಮಾತುಗಳನ್ನು ತಿಳಿದುಕೊಂಡು
ಆತನು ನನಗೆ ಹೇಳುವದನ್ನು ವಿವೇಚಿಸೇನು.

ಆತನು ತನ್ನ ಮಹಾಶಕ್ತಿಯಿಂದ ನನ್ನ ಸಂಗಡ ವ್ಯಾಜ್ಯ
ವಾಡುವನೋ?
ಇಲ್ಲವೇ ಇಲ್ಲ; ನನ್ನ ವಿಜ್ಞಾಪನೆಯನ್ನು ಗಮನಿಸು
ವನು.
ಅಲ್ಲಿ ಯಥಾರ್ಥಚಿತ್ತನು ಆತನೊಂದಿಗೆ ವಾದಿಸಲು
ಅವಕಾಶವಾಗಿ
ನನ್ನ ನ್ಯಾಯಾಧಿಪತಿಯಿಂದ ನನಗೆ ನಿತ್ಯವಾದ ಬಿಡು
ಗಡೆಯಾಗುವದು.

ಅಯ್ಯೋ, ನಾನು ಮುಂದೆ ಹೋದರೂ ಆತನು
ಸಿಕ್ಕುವದಿಲ್ಲ,
ಹಿಂದೆ ಹೋದರೂ ಆತನನ್ನು ಕಾಣಲಾರೆನು.
5)ಎಡಗಡೆಯಲ್ಲಿ ಹುಡುಕಿದರೂ ನೋಡಲಾರೆನು,
ಬಲಗಡೆಗೆ ತಿರುಗಿಕೊಂಡರೂ ಆತನು ಕಾಣಿಸುವದಿಲ್ಲ.
ಆತನಾದರೋ ನನ್ನ ದಾರಿಯನ್ನು ಬಲ್ಲನು,
ಆತನೇ ನನ್ನನ್ನು ಶೋಧಿಸಿ ನೋಡಿದರೆ, ಚೊಕ್ಕ
ಬಂಗಾರವಾಗಿ ಕಾಣಿಸುವೆನು.
ಆತನ ಹೆಜ್ಜೆಯ ಜಾಡಿನಲ್ಲೇ ಕಾಲಿಟ್ಟಿದ್ದೇನೆ,
ಓರೆಯಾಗದೆ ಆತನ ದಾರಿಯನ್ನೇ ಹಿಡಿದಿದ್ದೇನೆ.
ಆತನ ತುಟಿಗಳಿಂದ ಹೊರಟ ನಿಯಮಗಳಿಗೆ ನಾನು
ಹಿಂದೆಗೆಯಲಿಲ್ಲ,
6)ಆತನ ಬಾಯಿಂದ ಬಂದ ಮಾತುಗಳನ್ನು ಎದೆಯಲ್ಲಿ
ನಿಧಿಯನ್ನಾಗಿ ಬಚ್ಚಿಟ್ಟುಕೊಂಡಿದ್ದೇನೆ.

ಆತನಂತು ಒಂದೇ ಮನಸ್ಸುಳ್ಳವನಾಗಿದ್ದಾನೆ,
ತಿರುಗಿಸಬಲ್ಲವರು ಯಾರು?
ತಾನು ಬಯಸಿದ್ದನ್ನೇ ಮಾಡುತ್ತಾನೆ.
ನನ್ನ ವಿಷಯದಲ್ಲಿ ನೇಮಕವಾದದ್ದನ್ನು ಪೂರೈಸುವ
ನಷ್ಟೆ.
ಆತನಲ್ಲಿ ಇಂಥಾ ಸಂಕಲ್ಪಗಳು ಅನೇಕವಾಗಿವೆ.
ಆದಕಾರಣ ನಾನು ಆತನ ಸನ್ನಿಧಿಗೆ ಗಾಬರಿಯಾಗಿ
ದ್ದೇನೆ;
ಇದನ್ನೆಲ್ಲಾ ಯೋಚಿಸಿಕೊಳ್ಳುವಾಗ ಆತನಿಗೆ ಅಂಜು
ತ್ತೇನೆ.
ನನ್ನ ಹೃದಯವನ್ನು ಕುಂದಿಸಿದವನು ದೇವರೇ,
ನನ್ನನ್ನು ಗಾಬರಿಪಡಿಸಿದವನು ಸರ್ವಶಕ್ತನೇ.
ನಾನು ಹಾಳಾದದ್ದಕ್ಕೆ ಈ ಅಂಧಕಾರವು ನಿಮಿತ್ತವಲ್ಲ,
ನನ್ನ ಮುಖವನ್ನು ಕವಿದಿರುವ ಕಾರ್ಗತ್ತಲು ಕಾರಣ
ವಲ್ಲ.

1) ಅಥವಾ: ದೇವರಲ್ಲಿ ಬಳಿಕೆ ಬೆಳೆಸಿ.
2) ಅಥವಾ: ನಿನ್ನ ಮಾರ್ಗಗಳು ಕೆಳಗಾದರೆ ಮೇಲಕ್ಕೆತ್ತು ಎಂದು ಬೇಡಿಕೊಳ
3) ಪಾಠಾಂತರ: ನಿರ್ದೋಷಿಯನ್ನು ತಪ್ಪಿಸುವನು.
ಹೌದು, ನಿನ್ನ ಕೈಗಳ ಪರಿಶುದ್ಧತ್ವದಿಂದಲೇ ತಪ್ಪಿಸಿಕೊಳ್ಳುವಿ.
4) ಮೂಲ: ನನ್ನ ನರಳಾಟದ ಮೇಲೆ ನನ್ನ ಕೈ ಭಾರವಾಗಿದೆ.
ಪಾಠಾಂತರ: ನನ್ನ ಪ್ರಲಾಪವು ಈಗಲೂ ಕಟುವಾಗಿರುತ್ತದೆ,
ನಾನು ನರಳಾಡುತ್ತಿರುವಾಗ ಆತನ ಹಸ್ತವು ನನ್ನ ಮೇಲೆ ಭಾರವಾಗಿ ಬೀಳುತ್ತಿದೆ.
5) ಪಾಠಾಂತರ: ಎಡಗಡೆಯಲ್ಲಿ ತನ್ನ ಕೆಲಸವನ್ನು ಮಾಡುತ್ತಿದ್ದರೂ ಆತನನ್ನು ನೋಡಲಾರೆನು,
ಬಲಗಡೆಗೆ ಆತನು ತಿರುಗಿದರೂ ಕಾಣಿಸನು.
6) ಪಾಠಾಂತರ: ಸ್ವಂತ ಜೀವನಾಧಾರಕ್ಕಿಂತಲೂ ಆತನ ಬಾಯಿಂದ ಬಂದ ಮಾತುಗಳನ್ನು ನಿಕ್ಷೇಪವನ್ನಾಗಿ ಕಾಪಾಡಿದ್ದೇನೆ.

24 ಸರ್ವಶಕ್ತನು ಏಕೆ [ದಂಡನೆಯ] ಕಾಲಗಳನ್ನು ನೇಮಿಸಿ ಇಟ್ಟುಕೊಂಡಿಲ್ಲ?
ಆತನನ್ನು ಅರಿತವರಿಗೆ ಆತನ [ನ್ಯಾಯತೀರ್ಪಿನ] ದಿನಗಳು ಏಕೆ ಗೋಚರವಾಗುವದಿಲ್ಲ?
2 ಮೇರೆಗಳನ್ನು ಸರಿಸಿಕೊಳ್ಳುವವರುಂಟು,
ದನಕುರಿಗಳನ್ನು ಅಪಹರಿಸಿ ಸಾಕಿಕೊಳ್ಳುವವರಿದ್ದಾರೆ,
3 ಅನಾಥರ ಕತ್ತೆಯನ್ನು ಹೊಡೆದುಕೊಂಡು ಹೋಗುತ್ತಾರೆ,
ವಿಧವೆಯ ಎತ್ತನ್ನು ಒತ್ತೆಯಾಗಿ ತೆಗೆದುಕೊಳ್ಳುತ್ತಾರೆ;
4 ದಿಕ್ಕಿಲ್ಲದವರನ್ನು ದಾರಿತಪ್ಪಿಸುತ್ತಾರೆ,
ನಾಡಿನ ಬಡವರು ಒಟ್ಟಾಗಿ ಅಡಗಿಕೊಳ್ಳುತ್ತಾರೆ.
5 ಇಗೋ, ಅಡವಿಯಲ್ಲಿ ಕಾಡುಕತ್ತೆಗಳು ಹೇಗೋ
ಹಾಗೆಯೇ ಇವರು ತಮ್ಮ ಹೊಟ್ಟೇಪಾಡಿಗಾಗಿ ಹೊರಟು ಕೂಳನ್ನು ಆತುರವಾಗಿ ಹುಡುಕುವರು;
ಅರಣ್ಯವೇ ಇವರ ಮಕ್ಕಳಿಗಾಗಿ ಕೂಳನ್ನು ಒದಗಿಸುವದು.
6 ತಮ್ಮ ಹೊಟ್ಟೆಗಾಗಿ ಬೈಲಿನಲ್ಲಿ ಸೊಪ್ಪುಸೆದೆಯನ್ನು ಕೊಯ್ದುಕೊಳ್ಳುವರು,
ದುಷ್ಟನ ದ್ರಾಕ್ಷೇತೋಟದಲ್ಲಿ ಹಕ್ಕಲಾಯುವರು.
7 ಹೊದಿಯುವದಕ್ಕಿಲ್ಲದೆ ಬೆತ್ತಲೆಯಾಗಿ ರಾತ್ರಿಯನ್ನು ಕಳೆಯುವರು,
ಚಳಿಗಾಲದಲ್ಲಿಯೂ ಅವರಿಗೆ ಬಟ್ಟೆಯಿಲ್ಲ.
8 ಮಲೆನಾಡಿನ ದೊಡ್ಡ ಮಳೆಯಿಂದ ನೆನೆದುಹೋಗಿ
ಮರೆಯಿಲ್ಲದೆ ಬಂಡೆಯನ್ನು ಅಪ್ಪಿಕೊಳ್ಳುವರು.
9 ತಂದೆಯಿಲ್ಲದ ಮಗುವನ್ನು ತಾಯಿಯ ಮೊಲೆಯಿಂದ ಕಿತ್ತು
ಬಡವರಿಂದ ಒತ್ತೆತೆಗೆದುಕೊಳ್ಳುವವರಿದ್ದಾರೆ.
10 ಬಟ್ಟೆಯಿಲ್ಲದೆ ಬೆತ್ತಲೆಯಾಗಿ ಅಲೆಯುವರು;
ಹಸಿವುಗೊಂಡೇ ಸಿವುಡುಗಳನ್ನು ಹೊರುವರು;
11 ಯಜಮಾನರ ಪೌಳಿಗೋಡೆಗಳೊಳಗೇ ಇದ್ದುಕೊಂಡು ಎಣ್ಣೆಗಾಣವನ್ನು ಆಡಿಸುವರು;
ದಾಹಗೊಂಡೇ ಅವರ ತೊಟ್ಟಿಗಳಲ್ಲಿ ದ್ರಾಕ್ಷೆಯನ್ನು ತುಳಿಯುವರು.
12 ತುಂಬಿದ ಪಟ್ಟಣದಲ್ಲಿ ನರಳುವರು,
ಗಾಯಪಟ್ಟವರು ಮೊರೆಯಿಡುವರು.
1)ದೇವರಾದರೋ ಅದನ್ನು ಅಯುಕ್ತವೆಂದೆಣಿಸುವದಿಲ್ಲ.

13 ಬೆಳಕಿನ ಮೇಲೆ ತಿರುಗಿಬಿದ್ದವರು ಇದ್ದಾರೆ;
ಇವರು ಹಗಲಿನ ದಾರಿಗಳನ್ನು ತಿಳಿಯದವರಾಗಿ
ಅದರ ಹಾದಿಗಳಲ್ಲಿ ಇರುವದಿಲ್ಲ.
14 ಕೊಲೆಪಾತಕನು ಮುಂಜಾನೆ ಎದ್ದು ದಿಕ್ಕಿಲ್ಲದ ಬಡವರನ್ನು ಕೊಂದು
ರಾತ್ರಿಯಲ್ಲಿ ಕಳ್ಳನಂತಿರುವನು.
15 ಜಾರನು ತಾನು ಯಾರ ಕಣ್ಣಿಗೂ ಬೀಳಬಾರದೆಂದು
ಸಂಜೆಯನ್ನೆದುರುನೋಡುತ್ತಿದ್ದು ಮುಖಕ್ಕೆಮುಸುಕು ಹಾಕಿಕೊಳ್ಳುವನು.
ಅವರು ಕತ್ತಲಲ್ಲಿ ಕನ್ನಕೊರೆದು ಮನೆಗಳೊಳಗೆ ನುಗ್ಗಿ 16
ಹಗಲಿನಲ್ಲಿ ಅಡಗಿಕೊಂಡಿದ್ದು ಬೆಳಕನ್ನು ಅರಿಯದಿರುವರು.
ಅವರೆಲ್ಲರಿಗೂ ಬೆಳಕು ಕಾರ್ಗತ್ತಲಿನಂತಿರುವದು, 17
ಕಾರ್ಗತ್ತಲಿನ ಅಪಾಯಗಳನ್ನು ಅವರು ಬಲ್ಲರಷ್ಟೆ.

[ನೀವು ಹೇಳುವದೇನಂದರೆ] — ದುಷ್ಟನು ಪ್ರವಾಹದಲ್ಲಿ ವೇಗವಾಗಿ ಕೊಚ್ಚಿಕೊಂಡು ಹೋಗುವನು, 18
ಭೂಲೋಕದ ಅವನ ಆಸ್ತಿಯು ಶಾಪಗ್ರಸ್ತವಾಗಿರುವದು.
ದ್ರಾಕ್ಷೇತೋಟಗಳ ಕಡೆಗೆ ತಿರುಗಲಾರನು.
ಬರಗಾಲವೂ ಬಿಸಿಲೂ ಹಿಮದ ನೀರನ್ನು ಹೀರುವ ಹಾಗೆ 19
ಪಾತಾಳವು ಪಾಪಿಗಳನ್ನು ಎಳೆದುಕೊಳ್ಳುವದು.
ಹೆತ್ತ ಹೊಟ್ಟೆಯೇ ಅವನನ್ನು ಮರೆತುಬಿಡುವದು; 20
ಹುಳವು ಅವನ ಹೆಣವನ್ನು ರುಚಿಯಿಂದ ತಿನ್ನುವದು;
ಇನ್ನು ಮೇಲೆ ಅವನ ನೆನಪಿರದು; ಅನ್ಯಾಯವು ಮರದ ಹಾಗೆ ಮುರಿಯಲ್ಪಡುವದು.
ಅವನು ಮಕ್ಕಳಿಲ್ಲದ ಬಂಜೆಯರನ್ನು ನುಂಗಿಬಿಟ್ಟು 21
ವಿಧವೆಯರನ್ನು ಉದ್ಧರಿಸದೆ ಹೋದನಷ್ಟೆ [ಎಂಬದೇ].
ದೇವರಂತು ತನ್ನ ಶಕ್ತಿಯಿಂದ ಬಲಿಷ್ಠರನ್ನು ಉಳಿಸುತ್ತಾನೆ, 22
ಅವರು ತಮ್ಮ ಜೀವವು ಇನ್ನುಳಿಯುವದಿಲ್ಲವೆಂದು ನಂಬಿದ್ದರೂ ಉದ್ಧಾರವಾಗುವರು.
ದೇವರು ಅವರಿಗೆ ಅಭಯವನ್ನು ಕೊಟ್ಟದರಿಂದ ಅವರು ಅದನ್ನು ಆಧಾರಮಾಡಿಕೊಳ್ಳುವರು; 23
ಆತನ ಕಟಾಕ್ಷವು ಅವರ ಮಾರ್ಗಗಳ ಮೇಲಿರುವದು.
ಅವರು ಉನ್ನತಿಗೆ ಬರುವರು; ಸ್ವಲ್ಪ ಕಾಲದ ಮೇಲೆ ಅವರು ಎಲ್ಲಿಯೋ? 24
ಸರ್ವಮನುಷ್ಯರೊಂದಿಗೆ ಸುಗ್ಗಿಯ ತೆನೆಗಳಂತೆ ಕೊಯ್ಯಲ್ಪಟ್ಟು
ಕೆಳಕ್ಕೆ ಬಿದ್ದು ಕೂಡಿಸಲ್ಪಡುವರು.
ಹೀಗಲ್ಲವೆಂದು ನೀವು ನಂಬಿದರೆ ನಾನು ಸುಳ್ಳುಗಾರನೆಂದೂ 25
ನನ್ನ ಮಾತುಗಳು ನಿರರ್ಥಕವೆಂದೂ [ನಿಮ್ಮಲ್ಲಿ] ಯಾರು ಸ್ಥಾಪಿಸಬಲ್ಲರು?

ಆ ಮೇಲೆ ಶೂಹ್ಯನಾದ ಬಿಲ್ದದನು ಹೀಗಂದನು— 25
ಆತನಲ್ಲಿ ಪ್ರಭುತ್ವವೂ ಭೀಕರತ್ವವೂ ಉಂಟು, 2
ತನ್ನ ಉನ್ನತಲೋಕದಲ್ಲಿ ಸಮಾಧಾನವನ್ನು ಸ್ಥಾಪಿಸಿದವನು ಆತನೇ.
ಆತನ ಸೈನ್ಯಗಳಿಗೆ ಲೆಕ್ಕವಿದೆಯೋ? 3
ಆತನ ತೇಜಸ್ಸು ಯಾರಲ್ಲಿ ಮೂಡುವದಿಲ್ಲ?

1) ಅಥವಾ: ದೇವರಾದರೋ ಈ ಅಯುಕ್ತವನ್ನು ಲಕ್ಷಿಸುವದಿಲ್ಲ.

4 ಮನುಷ್ಯನು ದೇವರ ಎಣಿಕೆಯಲ್ಲಿ ನೀತಿವಂತನಾಗಿ
ರುವದು ಹೇಗೆ?
ಸ್ತ್ರೀಯಲ್ಲಿ ಹುಟ್ಟಿದವನು ಪರಿಶುದ್ಧನಾಗಿರುವದು
ಸಾಧ್ಯವೋ?
5 ನೋಡಿರಿ, ಆತನ ದೃಷ್ಟಿಯಲ್ಲಿ ಚಂದ್ರನಿಗಾದರೂ
ಕಳೆಯಿಲ್ಲ,
ನಕ್ಷತ್ರಗಳೂ ಶುದ್ಧವಲ್ಲ.
6 ಹೀಗಿರುವಲ್ಲಿ ನರಹುಳವು ಎಷ್ಟೋ ಅಶುದ್ಧವು!
ನರಕ್ರಿಮಿಯು ಎಷ್ಟೋ ಅಪವಿತ್ರವು!

26 ಆಗ ಯೋಬನು ಹೀಗೆ ಉತ್ತರ ಕೊಟ್ಟನು—
2 ನಿನ್ನಿಂದ ಅಶಕ್ತನಿಗೆ ಎಷ್ಟೋ ಸಹಾಯವಾ
ಯಿತು!
ಬಲಹೀನವಾದ ಕೈಗೆ ಚೆನ್ನಾಗಿ ನೆರವಾಗಿದ್ದೀ!
3 ಬುದ್ಧಿಯಿಲ್ಲದವನಿಗೆ ನೀನು ಹೇಳಿದ ಬುದ್ಧಿಯನ್ನು
ಎಷ್ಟೆಂದು ಹೇಳಲಿ!
ಸುಜ್ಞಾನವನ್ನು ಎಷ್ಟೋ ಧಾರಾಳವಾಗಿ ಉಪದೇಶಿ
ಸಿದ್ದೀ!
4 ಯಾರಿಗೆ ಮಾತುಗಳನ್ನು ಕಲಿಸಿದ್ದೀ?
ನಿನ್ನಿಂದ ಹೊರಟ ನುಡಿಗಳನ್ನು ಯಾವ ಆತ್ಮವು
ಪ್ರೇರಿಸಿತು?

5 ಜಲಚರಗಳಿಂದ ತುಂಬಿರುವ ಸಾಗರದ ಕೆಳ
ಗಿನ ಲೋಕದಲ್ಲಿ
ಪ್ರೇತಗಳು [ಆತನ ಭಯದಿಂದ] ಯಾತನೆಪಡುವವು.
6 ಪಾತಾಳವು ಆತನ ದೃಷ್ಟಿಗೆ ತೆರೆದಿದೆ,
ನಾಶಲೋಕವು ಮರೆಯಾಗಿಲ್ಲ.
7 ಆತನು ಶೂನ್ಯದ ಮೇಲೆ [ಆಕಾಶದ] ಉತ್ತರ ದಿಕ್ಕನ್ನು
ವಿಸ್ತರಿಸಿ
ಭೂಲೋಕವನ್ನು ಯಾವ ಆಧಾರವೂ ಇಲ್ಲದೆ ತೂಗ
ಹಾಕಿದ್ದಾನೆ.
8 ತನ್ನ ಮೇಘಗಳೊಳಗೆ ನೀರನ್ನು ತುಂಬಿ ಕಟ್ಟುವನು,
ಯಾವ ಮೋಡವೂ ಅದರ ಭಾರದಿಂದ ಒಡೆದು
ಹೋಗದು.
9 ತನ್ನ ಸಿಂಹಾಸನಕ್ಕೆ ಮರೆಯಾಗಿ
ಮುಂಭಾಗದಲ್ಲಿ ಮೋಡವನ್ನು ಕವಿಸಿರುವನು.
10 ಬೆಳಕುಕತ್ತಲುಗಳ ಸಂಧಿಸ್ಥಾನದಲ್ಲಿ
ಸಮುದ್ರದ ಮೇಲೆ ಸುತ್ತಲೂ ಮೇರೆಯನ್ನು ಹಾಕಿ
ದ್ದಾನೆ.
11 ಆಕಾಶಮಂಡಲದ ಸ್ತಂಭಗಳು
ಆತನ ಗದರಿಕೆಯಿಂದ ಬೆರಗಾಗಿ ಕದಲುವವು.
12 1)ಆತನು ತನ್ನ ವಿವೇಕಶಕ್ತಿಯಿಂದ ಘಟಸರ್ಪವನ್ನು
ಹೊಡೆದುಹಾಕಿದನು;
ತನ್ನ ಪರಾಕ್ರಮದಿಂದ ಸಾಗರವನ್ನು ಶಾಂತಿಪಡಿಸಿದನು.
13 ಆತನ ಶ್ವಾಸವು ಆಕಾಶಮಂಡಲವನ್ನು ಶುಭ್ರಮಾಡು
ವದು,
ಆತನ ಹಸ್ತವು ವೇಗವಾಗಿ ಓಡುವ ಸರ್ಪವನ್ನು ಇರಿ
ಯುವದು.
ಆಹಾ, ಈ ಅದ್ಭುತಗಳು ಆತನ ಮಾರ್ಗಗಳ ಕಟ್ಟ
ಕಡೆಯಾಗಿವೆ.
ಆತನ ವಿಷಯವಾಗಿ ಸೂಕ್ಷ್ಮ ಶಬ್ದವನ್ನು ಮಾತ್ರ ಕೇಳಿ
ದ್ದೇವೆ,
ಆತನ ಪ್ರಾಬಲ್ಯದ ಘನಗರ್ಜನೆಯನ್ನು ಯಾರು ಗ್ರಹಿಸ
ಬಲ್ಲರು?

ಆಗ ಯೋಬನು ಮತ್ತೆ ಪ್ರಸ್ತಾಪವೆತ್ತಿ ಹೀಗಂದ 2
ನು—
ನನ್ನಲ್ಲಿ ಜೀವವು ಇನ್ನೂ ಪೂರ್ಣವಾಗಿದೆ,
ದೇವರು ಊದಿದ ಶ್ವಾಸವು ನನ್ನ ಮೂಗಿನಲ್ಲಿ ಇನ್ನೂ
ಆಡುತ್ತಿದೆ [ಕೇಳಿರಿ]!
ನನ್ನ ನ್ಯಾಯವನ್ನು ತಪ್ಪಿಸಿದ ದೇವರಾಣೆ,
ನನ್ನ ಆತ್ಮವನ್ನು ವ್ಯಥೆಪಡಿಸಿರುವ ಸರ್ವಶಕ್ತನಾಣೆ
ನನ್ನ ತುಟಿಗಳು ಅನ್ಯಾಯವನ್ನು ನುಡಿಯುವದೇ ಇಲ್ಲ
ನನ್ನ ನಾಲಿಗೆಯು ಎಷ್ಟು ಮಾತ್ರಕ್ಕೂ ಮೋಸದ
ಮಾತುಗಳನ್ನಾಡುವದಿಲ್ಲ.
ನೀವು ನ್ಯಾಯವಂತರೆಂದು ನಾನು ಒಪ್ಪುವದು ದೂರ
ವಾಗಿರಲಿ,
ಸಾಯುವ ತನಕ ನನ್ನ ಯಥಾರ್ಥತ್ವದ ಹೆಸರನ್ನು
ಕಳಕೊಳ್ಳೆನು.
ನನ್ನ ನೀತಿಯನ್ನು ಎಂದಿಗೂ ಬಿಡದೆ ಭದ್ರವಾಗಿ ಹಿಡಿ
ದುಕೊಳ್ಳುವೆನು.
ನನ್ನ ಜೀವಮಾನದ ಯಾವ ದಿನಚರ್ಯದಲ್ಲಿಯೂ
ಮನಸ್ಸಾಕ್ಷಿಯು ತಪ್ಪು ತೋರಿಸುವದಿಲ್ಲ.

ನನ್ನ ಹಗೆಗೆ ದುಷ್ಟನ ಗತಿಯಾಗಲಿ,
ನನಗೆ ವಿರುದ್ಧವಾಗಿ ಎದ್ದವನು ಅನ್ಯಾಯಗಾರನ
ಅವಸ್ಥೆಯನ್ನು ಹೊಂದಲಿ!
ದೇವರು ಭ್ರಷ್ಟನ ಆತ್ಮವನ್ನು ಕಡಿದೆಳೆಯುವಾಗ
ಅವನಿಗೆ ನಿರೀಕ್ಷೆಯೆಲ್ಲಿಯದು?
ಅವನಿಗೆ ಶ್ರಮೆಬರಲು
ದೇವರು ಅವನ ಮೊರೆಯನ್ನು ಆಲೈಸುವನೋ?
ಅವನು ಸರ್ವಶಕ್ತನಲ್ಲಿ ಆನಂದಪಟ್ಟು
ಆತನನ್ನು ಸರ್ವದಾ ಪ್ರಾರ್ಥಿಸುವನೇ?

ನಾನು ಸರ್ವಶಕ್ತನ ಕ್ರಮವನ್ನು ಮರೆಮಾಜದ
ದೇವರ ಹಸ್ತದ ವಿಷಯವನ್ನು ನಿಮಗೆ ಬೋಧಿಸುವೆನು
ಇಗೋ, ನೀವೆಲ್ಲರು ಸ್ವತಃ ನೋಡಿದ್ದೀರಿ;
ಹೀಗಾದರೂ ಏಕೆ ಇಂಥ ವ್ಯರ್ಥವಾದ ಆಲೋಚನೆ
ಗಳನ್ನು ಮಾಡಿಕೊಳ್ಳುತ್ತೀರಿ?
ದುಷ್ಟನಿಗೆ ದೇವರಿಂದ ದೊರೆಯುವ ಪಾಲೂ
ಹಿಂಸಕನಿಗೆ ಸರ್ವಶಕ್ತನಿಂದ ಸಿಕ್ಕುವ ಸ್ವಾಸ್ತ್ಯವು
ಹೀಗಿರುವದು:—

1) ಅಥವಾ: ಆತನು ತನ್ನ ಬಲದಿಂದ ಸಾಗರವನ್ನು ರೇಗಿಸಿ
ತನ್ನ ವಿವೇಕದಿಂದ ಆ ಘಟಸರ್ಪವನ್ನು ಹೊಡೆದು ಹಾಕುವನು.

14 ಅವನಿಗೆ ಮಕ್ಕಳು ಹೆಚ್ಚಿದರೆ ಕತ್ತಿಗೆ ತುತ್ತಾಗುವರು,
ಅವನ ಸಂತತಿಯವರಿಗೆ ಅನ್ನದ ಕೊರತೆ ತಪ್ಪದು;
15 ಅವನ ಮನೆಯವರಲ್ಲಿ ಯಾರಾದರೂ ಉಳಿದರೆ ವ್ಯಾಧಿಯು ಅವರನ್ನು ಮಣ್ಣಿಗೆ ಸೇರಿಸುವದು,
1)ಅವರ ವಿಧವೆಯರು ದುಃಖಕ್ರಿಯೆಗಳನ್ನು ನೆರವೇರಿಸುವದಿಲ್ಲ.
16 ಅವನು ಬೆಳ್ಳಿಯನ್ನು ದೂಳಿನ ಹಾಗೆ ಹೇರಳವಾಗಿ ಕೂಡಿಸಿಟ್ಟು
ವಸ್ತ್ರಗಳನ್ನು ಮಣ್ಣಿನಂತೆ ವಿಶೇಷವಾಗಿ ಸಿದ್ಧಮಾಡಿಕೊಂಡರೂ
17 ಆ ವಸ್ತ್ರಗಳನ್ನು ನೀತಿವಂತರು ಧರಿಸಿಕೊಳ್ಳುವರು.
ಆ ಬೆಳ್ಳಿಯನ್ನು ನಿರ್ದೋಷಿಗಳು ಹಂಚಿಕೊಳ್ಳುವರು.
18 ಅವನು ಕಟ್ಟಿಕೊಂಡ ಮನೆಯು ಜಾಡಹುಳದ ಗೂಡಿನಂತೆಯೂ
ಕಾವಲುಗಾರನು ಹಾಕಿಕೊಂಡ ಮಂಚಿಕೆಯಂತೆಯೂ ದುರ್ಬಲವಾಗಿರುವದು.
19 2)ಅವನು ಧನಿಕನಾಗಿ ನಿದ್ರಿಸಿದರೂ ಮತ್ತೆ ನಿದ್ರೆಯನ್ನು ಕಾಣದೆ ಹೋಗುವನು,
ತನ್ನ ಕಣ್ಣನ್ನು ತೆರೆಯುತ್ತಲೇ ಇಲ್ಲವಾಗುವನು.
20 ವಿಪತ್ತಿನ ಹೊಳೆಗಳು ಅವನನ್ನು ಹಿಂದಟ್ಟಿ ಹಿಡಿಯುವವು,
ರಾತ್ರಿಯಲ್ಲಿ ಬಿರುಗಾಳಿಯು ಅವನನ್ನು ಅಪಹರಿಸುವದು;
21 ಮೂಡಣ ಗಾಳಿಯು ಕೊಚ್ಚುವದರಿಂದ ಅವನು ಹೋಗೇ ಹೋಗುವನು,
ಅದು ಅವನನ್ನು ಬಡಿದು ಅವನ ಸ್ಥಳದೊಳಗಿಂದ ಹಾರಿಸಿಬಿಡುವದು.
22 ದೇವರು ಕರುಣವಿಲ್ಲದೆ ಅವನ ಮೇಲೆ [ತನ್ನ ಬಾಣಗಳನ್ನು] ಎಸೆಯುತ್ತಲಿರುವನು,
ಅವನು ಆತನ ಕೈಯಿಂದ ತಪ್ಪಿಸಿಕೊಳ್ಳಲೇ ಬೇಕೆಂದಿರುವನು.
23 ಜನರು ಅವನನ್ನು ನೋಡಿ ಚಪ್ಪಾಳೆಹೊಡೆದು
ಛೀ ಹಾಕಿ ಆಚೆಗೆ ಹೊರಡಿಸುವರು.

28 ಬೆಳ್ಳಿ ಸಿಕ್ಕುವ ಗಣಿಯೂ
ಚಿನ್ನದ ಅದುರು ದೊರಕುವ ಸ್ಥಳವೂ ಉಂಟಷ್ಟೆ.
2 ಮಣ್ಣಿನೊಳಗಿಂದ ಕಬ್ಬಿಣವನ್ನು ತೆಗೆಯುವರು,
ಕಲ್ಲನ್ನು ಕರಗಿಸಿ ತಾಮ್ರವನ್ನು ಪಡೆಯುವರು.
3 ಮನುಷ್ಯರು ಕತ್ತಲನ್ನು ಹೋಗಲಾಡಿಸಿ
ಕಾರ್ಗತ್ತಲಲ್ಲಿಯೂ ಘೋರಾಂಧಕಾರದಲ್ಲಿಯೂ ಮರೆಯಾಗಿರುವ ಕಲ್ಲುಗಳನ್ನು
ಕಟ್ಟಕಡೆಯ ತನಕ ಹುಡುಕುವರು.
4 ಗಣಿಯನ್ನು ತೋಡಿ ತೋಡಿ ಜನನಿವಾಸಗಳಿಗೆ ದೂರವಾಗಿ
[ಮೇಲೆ] ನಡೆದಾಡುವವರಿಗೆ ಮರೆತುಹೋಗಿ
ನರಲೋಕಕ್ಕೆ ಅನ್ಯರಾಗಿ ಅತ್ತಿತ್ತ ನೇತಾಡುವರು.
5 ಭೂಮಿಯು ಅನ್ನವನ್ನು ಕೊಡುವದು,
ಆದರ ಕೆಳಭಾಗವೋ ಬೆಂಕಿಬಿದ್ದಂತೆ ಹಾಳಾಗಿರುವದು.
ಅದರ ಕಲ್ಲುಗಳಲ್ಲಿ ಇಂದ್ರನೀಲ ಮಣಿಗಳು ಸಿಕ್ಕುವವು, 6
ಅದರಲ್ಲಿ ಚಿನ್ನದ ಪುಡಿಯೂ ಇರುವದು.
ಆ ದಾರಿಯು ಯಾವ ಹದ್ದಿಗೂ ತಿಳಿಯದು, 7
ಗಿಡಗದ ಕಣ್ಣಿಗೂ ಬಿದ್ದಿಲ್ಲ.
ಸೊಕ್ಕಿದ ಮೃಗಗಳು ಅದನ್ನು ತುಳಿದಿಲ್ಲ, 8
ಸಿಂಹವು ಆ ಮಾರ್ಗವನ್ನು ಹಾದಿಲ್ಲ.
ಮನುಷ್ಯನು ಕಗ್ಗಲ್ಲಿನ ಮೇಲೆ ಕೈಮಾಡಿ 9
ಬೆಟ್ಟಗಳನ್ನು ಬುಡಮುಟ್ಟ ಕೆಡವಿಬಿಡುವನು.
ಬಂಡೆಗಳಲ್ಲಿ ಸುರಂಗಗಳನ್ನು ಕೊರೆಯುವನು; 10
ಅವನ ಕಣ್ಣು ಅಮೂಲ್ಯಪದಾರ್ಥಗಳನ್ನೆಲ್ಲಾ ಕಾಣುವದು.
ಒರತೆಗಳ ನೀರು ಬಸಿಯದ ಹಾಗೆ ಅವುಗಳನ್ನು ಕಟ್ಟಿ 11
ಗುಪ್ತವಸ್ತುವನ್ನು ಬೈಲಿಗೆ ತರುವನು.

ಜ್ಞಾನವಾದರೋ ಎಲ್ಲಿ ಸಿಕ್ಕೀತು? 12
ವಿವೇಕವು ದೊರೆಯುವ ಸ್ಥಳವೆಲ್ಲಿ?
3)ಅದರ ಕ್ರಯವು ಯಾರಿಗೂ ಗೊತ್ತಿಲ್ಲ, 13
ಜೀವಲೋಕದಲ್ಲಿ ಅದನ್ನು ಯಾರೂ ಕಂಡುಕೊಳ್ಳಲಾರರು.
ಭೂಮಿಯ ಕೆಳಗಣ ಸಾಗರವು—ನನ್ನಲ್ಲಿಲ್ಲ ಎನ್ನುವದು, 14
ಸಮುದ್ರವು—ತನ್ನ ಹತ್ತಿರ ಸಿಕ್ಕದೆಂದು ಹೇಳುವದು.
ಚೊಕ್ಕ ಬಂಗಾರವನ್ನು ಕೊಟ್ಟು ಅದನ್ನು ಕೊಂಡುಕೊಳ್ಳುವದು ಅಸಾಧ್ಯ, 15
ಅದರ ಬೆಲೆಗೆ ಬೆಳ್ಳಿಯನ್ನು ತೂಗುವದು ಅಶಕ್ಯ.
ಓಫೀರ್ ದೇಶದ ಅಪರಂಜಿ, ಅಮೂಲ್ಯ ಗೋಮೇಧಿಕ, ಇಂದ್ರನೀಲ, 16
ಇವುಗಳ ಪ್ರಮಾಣದಿಂದ ಜ್ಞಾನದ ಬೆಲೆ ಇಷ್ಟೆಂದು ಗೊತ್ತುಮಾಡುವದಕ್ಕಾಗದು.
ಹೊನ್ನಾಗಲಿ ಗಾಜಾಗಲಿ ಅದಕ್ಕೆ ಸಮವಾದೀತೇ? 17
ಚಿನ್ನದ ಆಭರಣಗಳನ್ನು ಅದಕ್ಕೆ ಬದಲುಕೊಡುವದು ಸಾಧ್ಯವೋ?
[ಜ್ಞಾನವಿರುವಲ್ಲಿ] ಹವಳವೂ ಸ್ಫಟಿಕವೂ ನೆನಪಿಗೆ ಬರುವದಿಲ್ಲ. 18
ಮುತ್ತುಗಳನ್ನು ಸಂಪಾದಿಸುವದಕ್ಕಿಂತಲೂ ಜ್ಞಾನವನ್ನು ಸಂಪಾದಿಸುವದು ಎಷ್ಟೋ ಕಷ್ಟ!
ಕೂಷ್ ದೇಶದ ಪುಷ್ಯರಾಗವು ಅದಕ್ಕೆ ಸಾಟಿಯಲ್ಲ, 19
ಶುದ್ಧಕನಕದೊಡನೆ ಅದನ್ನು ತೂಗಲಾಗದು.

ಹೀಗಿರಲು ಜ್ಞಾನವು ಎಲ್ಲಿಂದ ಬರುವದು, 20
ವಿವೇಕವು ಯಾವ ಸ್ಥಳದಲ್ಲಿ ದೊರಕೀತು?
ಅದು ಎಲ್ಲಾ ಜೀವಿಗಳ ದೃಷ್ಟಿಗೆ ಅಗೋಚರವಾಗಿದೆ, 21
ಆಕಾಶದ ಪಕ್ಷಿಗಳಿಗೆ ಮರೆಯಾಗಿದೆ.
ನಾಶಲೋಕವೂ ಮೃತ್ಯುವೂ— 22
ಅದರ ಸುದ್ದಿ ಮಾತ್ರ ನಮ್ಮ ಕಿವಿಗೆ ಬಿದ್ದಿದೆಯೆಂದು ಹೇಳುವವು.

1) ಪಾಠಾಂತರ: ಅವನ. 2) ಅಥವಾ: ಅವನು ಧನಿಕನಾಗಿ ಸತ್ತರೂ ಯಾರೂ ಹೂಳುವದಿಲ್ಲ. 3) ಪಾಠಾಂತರ: …ದು ಲಭಿಸುವ ಮಾರ್ಗವು.

23 ಅದರ ಮಾರ್ಗವನ್ನು ಬಲ್ಲವನು ದೇವರೇ;
ಅದರ ಸ್ಥಳವು ಆತನೊಬ್ಬನಿಗೇ ಗೊತ್ತು.
24 ಆತನೊಬ್ಬನೇ ಭೂಮಿಯ ಕಟ್ಟಕಡೆಯ ತನಕ ದೃಷ್ಟಿಸಿ
ಆಕಾಶದ ಕೆಳಗಿನ ಸಮಸ್ತವನ್ನೂ ನೋಡುವವನಾಗಿದ್ದಾನೆ.
25 ಆತನು ಗಾಳಿಗೆ ತಕ್ಕಷ್ಟು ತೂಕವನ್ನು ನೇಮಿಸಿ
ನೀರುಗಳನ್ನು ತಕ್ಕ ಪರಿಮಾಣಗಳಿಂದ ಅಳತೆಮಾಡಿ
26 ಮಳೆಗೆ ಕಟ್ಟಳೆಯನ್ನೂ
ಗರ್ಜಿಸುವ ಸಿಡಿಲಿಗೆ ದಾರಿಯನ್ನೂ ಏರ್ಪಡಿಸಿದಾಗಲೇ
27 ಜ್ಞಾನವನ್ನು ಕಂಡು ಲಕ್ಷಿಸಿದನು,
ಅದನ್ನು ಸ್ಥಾಪಿಸಿದ್ದಲ್ಲದೆ ವಿಮರ್ಶೆಮಾಡಿದನು.
28 ಆ ಮೇಲೆ ಮನುಷ್ಯರಿಗೆ—
ಇಗೋ, ಕರ್ತನ ಭಯವೇ ಜ್ಞಾನವು
ದುಷ್ಟತನವನ್ನು ಬಿಡುವದೇ ವಿವೇಕವು ಎಂದು ಹೇಳಿದನು.

**29** ತರುವಾಯ ಯೋಬನು ಮತ್ತೆ ಪ್ರಸ್ತಾಪವನ್ನೆತ್ತಿ ಇಂತೆಂದನು—
2 ಅಯ್ಯೋ! ನಾನು ಹಿಂದಿನ ತಿಂಗಳುಗಳಲ್ಲಿ ಇದ್ದಂತೆ
ಈಗಲೂ ಇದ್ದರೆ ಎಷ್ಟೋ ಸಂತೋಷವಾಗಿತ್ತು!
ಆ ದಿನಗಳಲ್ಲಿ ದೇವರು ನನ್ನನ್ನು ಕಾಯುತ್ತಿದ್ದನಲ್ಲಾ!
3 ಆತನ ದೀಪವು ನನ್ನ ತಲೆಯ ಮೇಲೆ ಪ್ರಕಾಶಿಸುತ್ತಿತ್ತು.
ಆತನ ಬೆಳಕಿನಿಂದ ಕತ್ತಲಲ್ಲೂ ಸಂಚರಿಸುತ್ತಿದ್ದೆನು.
4 ಆ ದಿನಗಳು ನನ್ನ ಜೀವಮಾನದ ಸುಗ್ಗೀಕಾಲವು,
ದೇವರ ಸ್ನೇಹವು ನನ್ನ ಗುಡಾರವನ್ನು ಆವರಿಸಿಕೊಂಡಿತ್ತು.
5 ಸರ್ವಶಕ್ತನು ಇನ್ನೂ ನನ್ನೊಂದಿಗಿದ್ದನು,
ನನ್ನ ಮಕ್ಕಳು ನನ್ನ ಸುತ್ತಲಿದ್ದರು.
6 ನನ್ನ ಹೆಜ್ಜೆಗಳು ಮೊಸರಿನಲ್ಲಿ ಮುಣುಗುತ್ತಿದ್ದವು,
ಬಂಡೆಯು ನನಗೋಸ್ಕರ ಎಣ್ಣೆಯನ್ನು ಪ್ರವಾಹವಾಗಿ ಸುರಿಸುತ್ತಿತ್ತು.
7 ಊರ ಮುಂದಿನ ಚಾವಡಿಗೆ ಹೋದಾಗಲೂ
ಚೌಕದಲ್ಲಿ ಆಸನವನ್ನು ಹಾಕಿಸಿಕೊಂಡಾಗಲೂ
8 ಯೌವನಸ್ಥರು ನನ್ನನ್ನು ನೋಡಿ ಹಿಂದಾದರು,
ವೃದ್ಧರು ಎದ್ದು ನಿಂತರು,
9 ಪ್ರಭುಗಳು ಮೌನವಾಗಿ
ಬಾಯ ಮೇಲೆ ಕೈಯಿಟ್ಟುಕೊಂಡರು.
10 ಮುಖಂಡರ ನಾಲಿಗೆಯು ಸೇದಿಹೋಗಿ
ಧ್ವನಿಮಾಡಿತು.

11 ಕೇಳಿದ ಕಿವಿಯು ನನ್ನನ್ನು ಹರಸಿತು,
ನೋಡಿದ ಕಣ್ಣು ಸಾಕ್ಷಿಕೊಟ್ಟಿತು.
12 ಏಕಂದರೆ ಅಂಗಲಾಚುವ ಬಡವನನ್ನೂ
ಸಹಾಯಕನಿಲ್ಲದ ಅನಾಥನನ್ನೂ ರಕ್ಷಿಸುವವನಾಗಿದ್ದೆನು.
ಗತಿಯಿಲ್ಲದವನು ನನ್ನನ್ನು ಹರಸುತ್ತಿದ್ದನು,
ವಿಧವೆಯ ಹೃದಯವನ್ನು ಉತ್ಸಾಹಗೊಳಿಸುತ್ತಿದ್ದೆನು.
ನಾನು ಧರ್ಮವನ್ನು ಧರಿಸಿಕೊಂಡೆನು, ಧರ್ಮವು
ನನ್ನನ್ನು ಧರಿಸಿತು,
ನನ್ನ ನ್ಯಾಯವೇ ನನಗೆ ನಿಲುವಂಗಿಯೂ ಮುಂಡಾಸವೂ ಆಗಿತ್ತು.
ನಾನು ಕುರುಡನಿಗೆ ಕಣ್ಣಾಗಿಯೂ
ಕುಂಟನಿಗೆ ಕಾಲಾಗಿಯೂ ಇದ್ದೆನು.
ದರಿದ್ರರಿಗೆ ತಂದೆಯಾಗಿ
ಪರಿಚಯವಿಲ್ಲದವನ ವ್ಯಾಜ್ಯವನ್ನೂ ವಿಚಾರಿಸುತ್ತಿದ್ದೆನು,
ಅನ್ಯಾಯಗಾರನ ಕೋರೆಗಳನ್ನು ಮುರಿದು
ಅವನ ಹಲ್ಲುಗಳಿಂದ ಬೇಟೆಯನ್ನು ಕಿತ್ತು ತರುತ್ತಿದ್ದೆನು.

ಆಗ ನಾನು ಹೇಳಿಕೊಂಡದ್ದೇನಂದರೆ—
ನನ್ನ ಗೂಡಿನಲ್ಲಿಯೇ ನಾನು ಸಾಯುವೆನು,
1)ನನ್ನ ದಿನಗಳು ಮರಳಿನಂತೆ ಅಸಂಖ್ಯಾತವಾಗಿರುವವು,
ನನ್ನ ಬೇರುಗಳು ನೀರಿನ ವರೆಗೂ ವ್ಯಾಪಿಸಿಕೊಂಡಿರುವವು,
ರಾತ್ರಿಯಲ್ಲಿ ಇಬ್ಬನಿಯು ನನ್ನ ರೆಂಬೆಗಳ ಮೇಲೆ ಬಿದ್ದಿರುವದು.
ನನ್ನ ಮಾನವು ಹೊಸಹೊಸದಾಗುತ್ತಲೂ
ನನ್ನ ಬಿಲ್ಲು ಕೈಯಲ್ಲಿ ಬಲಗೊಳ್ಳುತ್ತಲೂ ಇರುವವು ಎಂಬದೇ.
ಜನರು ಕಾದುಕೊಂಡಿದ್ದು ನನ್ನ ಮಾತಿಗೆ ಕಿವಿಗೊಟ್ಟು
ನನ್ನ ಆಲೋಚನೆಯನ್ನು ತಿಳಿದುಕೊಳ್ಳಬೇಕೆಂದು ಮೌನವಾಗಿದ್ದರು.
ನಾನು ಮಾತಾಡಿದ ಮೇಲೆ ಮತ್ತೆ ಅವರು ಮಾತಾಡುತ್ತಿರಲಿಲ್ಲ,
ನನ್ನ ವಚನವೃಷ್ಟಿಯು ಅವರ ಮೇಲೆ ಬೀಳುತ್ತಿತ್ತು,
ಮಳೆಯನ್ನು ಹೇಗೋ ಹಾಗೆಯೇ ನನ್ನನ್ನು ಎದುರು ನೋಡುತ್ತಾ
ಮುಂಗಾರೆಗೋ ಎಂಬಂತೆ ಬಾಯ್ದೆರೆಯುತ್ತಿದ್ದರು
2)ನಾನು ಅವರನ್ನು ನೋಡಿ ನಗಲು ಅವರು ಧೈರ್ಯಗೆಟ್ಟರು,
ನನ್ನ ಮುಖಕಾಂತಿಯನ್ನೋ ಅವರು ಎಂದೂ ಕುಂದಿಸಲಿಲ್ಲ.
3)ನಾನು ಅವರಿಗೆ ತಕ್ಕ ಮಾರ್ಗವನ್ನು ಆರಿಸಿಕೊಟ್ಟು
ತನ್ನ ಸೈನ್ಯಗಳ ಮಧ್ಯದಲ್ಲಿ ಮುಂಡಿಸಿರುವ ರಾಜನಂತೆಯೂ
ದುಃಖಿತರನ್ನು ಸಂತೈಸುವವನಂತೆಯೂ ಮುಖಂಡನಾಗಿ ಕೂಡ್ರುತ್ತಿದ್ದೆನು.

**30** ಈಗಲಾದರೋ ನನಗಿಂತ ಚಿಕ್ಕವಯಸ್ಸಿನವರು
ನನ್ನನ್ನು ಪರಿಹಾಸ್ಯಮಾಡುತ್ತಾರೆ;

1) ಪಾಠಾಂತರ: ಹಂಸದಂತೆ ನಾನು ಚಿರಂಜೀವಿಯಾಗಿರುವೆನು. 2) ಅಥವಾ: ಅವರು ಎದೆಗೆಡಲು ನಗುಮೊಗದಿಂದ ಅವ[ರನ್ನು] ನೋಡಿದೆನು. 3) ಅಥವಾ: ನಾನು ಅವರ ಬಳಕೆಯನ್ನು ಬೆಳಿಸಿಕೊಂಡು.

ಇವರ ತಂದೆಗಳನ್ನು ನನ್ನ ಮಂದೆನಾಯಿಗಳೊಡನೆಯೂ
ಇರತಕ್ಕವರಲ್ಲವೆಂದು ತಳ್ಳಿಬಿಟ್ಟಿದ್ದೆನಲ್ಲಾ.
2 ಅವರ ಕೈಬಲದಿಂದ ನನಗೆ ಏನಾದೀತು?
ಅವರ ಪುಷ್ಟಿಯು ಕುಗ್ಗಿಹೋಗಿದೆಯಷ್ಟೆ,
3 ಅವರು ಕೊರತೆಯಿಂದಲೂ ಹಸಿವಿನಿಂದಲೂ ಸೊರಗಿ
1)ನಿನ್ನೆಯ ವರೆಗೂ ಹಾಳುಬೀಳಾಗಿದ್ದ ಒಣನೆಲವನ್ನು ನೆಕ್ಕುವರು.
4 ಪೊದೆಗಳಲ್ಲಿ ಚಕ್ಕೋತ ಸೊಪ್ಪನ್ನು ಕಿತ್ತು [ತಿಂದು]
ಜಾಲಿಯ ಬೇರುಗಳನ್ನೂ ಆಹಾರಮಾಡಿಕೊಳ್ಳುವರು,
5 ಜನರು ಅವರನ್ನು ತಮ್ಮ ಮಧ್ಯದಿಂದ ತಳ್ಳಿಬಿಟ್ಟು
ಕಳ್ಳನನ್ನು ಓಡಿಸುವ ಹಾಗೆ ಕೂಗಾಡುವರು.
6 ಅವರು ಭಯಂಕರವಾದ ಡೊಂಗರಗಳಲ್ಲಿ ವಾಸಿಸ ತಕ್ಕವರು,
ಭೂಮಿಯಲ್ಲಿಯೂ ಬಂಡೆಗಳಲ್ಲಿಯೂ ಸಿಕ್ಕುವ ಡೊಗರುಗಳೇ ಅವರ ಮನೆಗಳು.
7 ಪೊದೆಗಳ ಮಧ್ಯದಲ್ಲಿ ಅರಚುವರು,
ಮುಳ್ಳುಗಿಡಗಳ ಕೆಳಗೆ ಕೂಡಿಕೊಳ್ಳುವರು.
8 ಮೂರ್ಖರ ಮಕ್ಕಳಾದ ಈ ನೀಚ ಜಾತಿಯವರು
ದೇಶಭ್ರಷ್ಟರೇ ಸರಿ.
9 ಈಗಲಾದರೋ ನನ್ನ ಮೇಲೆ ಗೇಲಿ ಹಾಡುಗಳನ್ನು ಕಟ್ಟುವರು.
ಮತ್ತು ಅವರ ಗಾದೆಗಳಿಗೆ ಆಸ್ಪದವಾಗಿದ್ದೇನೆ.
10 ನನಗೆ ಅಸಹ್ಯಪಟ್ಟು ದೂರ ನಿಂತು
ನನ್ನ ಮೇಲೆ ಉಗುಳುವದಕ್ಕೂ ಹಿಂದೆಗೆಯರು.

11 ದೇವರು ತಾನು ಹಾಕಿದ್ದ ಕಟ್ಟನ್ನು ಸಡಲಿಸಿ ನನ್ನನ್ನು ಬಾಧಿಸುವದಕ್ಕೆ ಅವರನ್ನು ಬಿಟ್ಟಿದ್ದಾನೆ.
ಅವರು ನನ್ನ ಎದುರಿನಲ್ಲಿಯೇ ಕಡಿವಾಣವನ್ನು ಕಿತ್ತು ಹಾಕಿದ್ದಾರೆ.
12 ಆ ದುರ್ಜಾತಿಯವರು ನನ್ನ ಬಲಗಡೆ ಎದ್ದು
ನನ್ನ ಕಾಲುಗಳನ್ನು ಹಿಂದಕ್ಕೆ ನೂಕುತ್ತಾ
ನನ್ನ ನಾಶನಕ್ಕಾಗಿ ದಿಬ್ಬಹಾಕಿದ್ದಾರೆ.
13 ಅವರು ನನ್ನ ದಾರಿಯನ್ನು ಕಡಿದು
ನನ್ನ ಉಪದ್ರವವನ್ನು ಹೆಚ್ಚಿಸುತ್ತಾರೆ;
ಅವರನ್ನು ಎದುರಿಸತಕ್ಕ ಸಹಾಯಕನು ಯಾರೂ ಇಲ್ಲ.
14 ಅಗಲವಾಗಿ ಒಡೆದ ಕೋಟೆಯೊಳಗೋ ಎಂಬಂತೆ
ಅವರು ನುಗ್ಗಿ ಹಾಳುಬೀಳಿನಲ್ಲಿ ನಿಂತಿರುವ ನನ್ನ ಮೇಲೆ ಹೊರಳುತ್ತಾರೆ.
15 ಅಪಾಯಗಳು ನನ್ನ ಮೇಲೆ ತಿರುಗಿಬಿದ್ದು
ನನ್ನ ಮಾನವನ್ನು ಗಾಳಿಯಂತೆ ಹೊಡೆದುಕೊಂಡು ಹೋಗುತ್ತಿವೆ;
ನನ್ನ ಕ್ಷೇಮವು ಮೇಘದ ಹಾಗೆ ಹರಿದು ಹೋಯಿತು.
16 ಈಗ ನನ್ನ ಆತ್ಮವು ಕರಗಿಹೋಗಿದೆ.
ಬಾಧೆಯ ದಿನಗಳು ನನ್ನನ್ನು ಹಿಡಿದುಕೊಂಡಿವೆ.
ರಾತ್ರಿಯು ನನ್ನ ಎಲುಬುಗಳನ್ನು ಕೊರೆದು ಕೀಳುತ್ತದೆ, 17
ನನ್ನನ್ನು ಕಚ್ಚುತ್ತಿರುವ ಸಂಕಟಗಳು ಸುಮ್ಮನಿರುವದಿಲ್ಲ.
ನನ್ನ ಬಟ್ಟೆಯು [2)ರೋಗದ] ಅಧಿಕ ಬಲದಿಂದ ಕೆಟ್ಟು ಹೋಗಿ 18
ಅಂಗಿಯ ಕೊರಳ ಪಟ್ಟಿಯ ಹಾಗೆ ನನ್ನನ್ನು ಸುತ್ತಿಕೊಂಡಿದೆ.
ಆತನು ನನ್ನನ್ನು ಕೆಸರಿನಲ್ಲಿ ಕೆಡವಿದ್ದಾನೆ, 19
ದೂಳುಬೂದಿಗಳಿಗೆ ಸಮಾನನಾಗಿದ್ದೇನೆ.

ನಾನು ಮೊರೆಯಿಟ್ಟರೂ ನೀನು ಉತ್ತರಕೊಡುವದಿಲ್ಲ, 20
ಎದ್ದು ನಿಂತರೂ ನನ್ನನ್ನು [ಸುಮ್ಮನೆ] ನೋಡುತ್ತಿರುವಿ.
ನೀನು ನನಗೆ ಕ್ರೂರನಾಗಿ ಮಾರ್ಪಟ್ಟಿದ್ದೀ, 21
ನಿನ್ನ ಕೈಬಲದಿಂದ ನನ್ನನ್ನು ಹಿಂಸಿಸುತ್ತೀ.
ನನ್ನನ್ನು ಬಿರುಗಾಳಿಗೆ ಎತ್ತಿ ತೂರಬಿಟ್ಟು 22
ಅದರ ಆರ್ಬಟದಲ್ಲಿ ಮಾಯಮಾಡುತ್ತೀ.
ನೀನು ನನ್ನನ್ನು ಮರಣಕ್ಕೆ ಗುರಿಮಾಡಿ 23
ಸಮಸ್ತಜೀವಿಗಳು ಹೋಗಬೇಕಾದ ಮನೆಗೆ ಸೇರಿಸುವಿಯೆಂದು ನನಗೆ ಗೊತ್ತೇ ಇದೆ.
ಆದರೂ ನಾಶಕ್ಕೆ ಒಳಗಾದವನು ಕೈಚಾಚುವದಿಲ್ಲವೋ? 24
ಆಪತ್ತಿಗೆ ಒಳಪಟ್ಟವನು ಕೂಗಿಕೊಳ್ಳುವದಿಲ್ಲವೋ?
ಕಷ್ಟಾನುಭವಿಯನ್ನು ಕಂಡು ಅಳುವವನೂ 25
ದಿಕ್ಕಿಲ್ಲದವನಿಗೆ ದುಃಖಿಸುವವನೂ ಆಗಿದ್ದೆನಷ್ಟೆ.
ನಾನು ಒಳ್ಳೇದನ್ನು ನಿರೀಕ್ಷಿಸುತ್ತಿರುವಲ್ಲಿ ಕೇಡು ಬಂತು, 26
ಬೆಳಕನ್ನು ಎದುರುನೋಡುತ್ತಿರುವಾಗ ಕತ್ತಲಾಯಿತು.

ನನ್ನ ಹೊಟ್ಟೆಯು ಕುದಿಯುತ್ತಿದೆ, ಅದಕ್ಕೆ ಶಾಂತಿಯಿಲ್ಲ; 27
ಬಾಧೆಯ ದಿನಗಳು ನನಗೆ ಒದಗಿವೆ.
3)ನಾನು ಕರ್ರಗಾಗಿ ಅಲೆಯುತ್ತೇನೆ; ಆದರೆ ಆ ಕಪ್ಪು ಸೂರ್ಯಸಂತಾಪದಿಂದಲ್ಲ, 28
ಸಂಘದಲ್ಲಿ ನಿಂತು ಅಂಗಲಾಚಿಕೊಳ್ಳುತ್ತೇನೆ.
ನಾನು ನರಿಗಳ ತಮ್ಮನೂ 29
ಉಷ್ಟ್ರಪಕ್ಷಿಗಳ ಗೆಳೆಯನೂ ಆಗಿದ್ದೇನೆ.
ನನ್ನ ಚರ್ಮವು ಕರಿದಾಗಿ ಉದುರುತ್ತದೆ, 30
ನನ್ನ ಎಲುಬುಗಳು ತಾಪದಿಂದ ಬೇಯುತ್ತವೆ.
ಇದರಿಂದ ನನ್ನ ಕಿನ್ನರಿಯಲ್ಲಿ ಗೋಳಾಟವೂ, 31
ನನ್ನ ಕೊಳಲಿನಲ್ಲಿ ಅಳುವ ಧ್ವನಿಯೂ ಕೇಳಿಸುತ್ತವೆ.

31 ನನ್ನ ಕಣ್ಣುಗಳೊಡನೆ ನಿಬಂಧನೆಯನ್ನು ಮಾಡಿಕೊಂಡಿದ್ದೇನೆ,
ಯುವತಿಯ ಮೇಲೆ ಹೇಗೆ ಕಣ್ಣಿಟ್ಟೇನು?

---

1) ಅಥವಾ: ಒಣನೆಲವನ್ನು ನೆಕ್ಕುತ್ತಾ ಹಾಳುಬೀಳಾಗುವದಕ್ಕೆ ಹತ್ತಿರವಾಗಿರುವರು.
ಪಾಠಾಂತರ: ಕತ್ತಲು ಕವಿದು ಪಾಳಾಗಿ ಹಾಳಾದ ಮರುಭೂಮಿಗೆ ಓಡಿಹೋಗುವರು.
2) ಅಥವಾ: ಆತನ. 3) ಅಥವಾ: ದುಃಖದಿಂದ ವಿಕಾರಿಯಾಗಿ ಸೂರ್ಯನಿಲ್ಲದಿರುವಾಗ ಅಲೆಯುತ್ತೇನೆ.

2 ದೇವರು ಮೇಲಣ ಲೋಕದಿಂದ ಯಾವ ಪಾಲನ್ನು
ವಿಧಿಸುವನು,
ಸರ್ವಶಕ್ತನು ಉನ್ನತಾಕಾಶದಿಂದ ಕೊಡುವ ಬಾಧ್ಯತೆ
ಯಾವದು?
3 ಆತನು ಅನ್ಯಾಯಗಾರರಿಗೆ ವಿಪತ್ತನ್ನೂ
ಕೆಡುಕರಿಗೆ ಉಪದ್ರವವನ್ನೂ ಕೊಡುವನಲ್ಲವೆ.
4 ಆತನೇ ನನ್ನ ನಡತೆಯನ್ನು ನೋಡಿ
ನನ್ನ ಹೆಜ್ಜೆಗಳನ್ನೆಲ್ಲಾ ಎಣಿಸುತ್ತಿದ್ದಾನೆ ಎಂದು ಅಂದು
ಕೊಳ್ಳುತ್ತಿದ್ದೆನು.

5 ದೇವರು ನನ್ನನ್ನು ನ್ಯಾಯವಾದ ತ್ರಾಸಿನಲ್ಲಿ
ತೂಗಿ
ನನ್ನ ಯಥಾರ್ಥತ್ವವನ್ನು ತಿಳಿದುಕೊಳ್ಳಲಿ!
6 ಒಂದು ವೇಳೆ ನಾನು ಕಪಟದ ಜೊತೆಯಲ್ಲಿ ನಡೆದು
ಮೋಸವನ್ನು ಹಿಂಬಾಲಿಸಿ ಓಡಿ
7 ನನ್ನ ನಡತೆಯಲ್ಲಿ ದಾರಿತಪ್ಪಿದ್ದರೆ
ನನ್ನ ಹೃದಯವು ಕಂಡಕಂಡದ್ದನ್ನು ಹಿಂಬಾಲಿಸಿದ್ದರೆ
ನನ್ನ ಕೈಗಳಲ್ಲಿ ಕಲ್ಮಷವು ಅಂಟಿಕೊಂಡಿದ್ದರೆ
8 ನಾನು ಬಿತ್ತಿದ್ದನ್ನು ಮತ್ತೊಬ್ಬನು ಉಣ್ಣಲಿ,
ನನ್ನ ಬೆಳೆಯು ನಿರ್ಮೂಲವಾಗಲಿ!

9 ಒಂದು ವೇಳೆ ನನ್ನ ಹೃದಯವು ಪರಸ್ತ್ರೀಯಲ್ಲಿ
ಮರುಳುಗೊಂಡು
ನಾನು ನೆರೆಯವನ ಬಾಗಿಲಲ್ಲಿ ಹೊಂಚಿದ್ದರೆ
10 ನನ್ನ ಹೆಂಡತಿಯು ಮತ್ತೊಬ್ಬನಿಗೆ ಧಾನ್ಯ ಬೀಸುವ
ದಾಸಿಯಾಗಲಿ,
ಇತರರು ಆಕೆಯನ್ನು ಸಂಗಮಿಸಲಿ!
11 [ನಾನು ಹೀಗೆ ಮಾಡಿದ್ದರೆ] ಅದು ದುಷ್ಕಾರ್ಯವೇ
ಸರಿ,
ಆ ಅಪರಾಧವು ನ್ಯಾಯಾಧಿಪತಿಗಳ ದಂಡನೆಗೆ ಯೋಗ್ಯ
ವಾದದ್ದು,
12 ಅದು ನಾಶಲೋಕದ ವರೆಗೂ ನುಂಗುವ ಬೆಂಕಿಯಾ
ಗಿದ್ದು
ನನ್ನ ಆದಾಯವನ್ನೆಲ್ಲಾ ನಿರ್ಮೂಲಮಾಡುತ್ತಿತ್ತು.

13 ಒಂದು ವೇಳೆ ನನಗೂ ನನ್ನ ದಾಸನಿಗೂ ಇಲ್ಲ
ವೆ ದಾಸಿಗೂ ವ್ಯಾಜ್ಯವಾದಾಗ
ನಾನು ಅವರ ನ್ಯಾಯವನ್ನು ಅಲಕ್ಷ್ಯಮಾಡಿದ್ದರೆ
14 ದೇವರು [ನ್ಯಾಯಸ್ಥಾಪನೆಗೆ] ಏಳುವಾಗ ನಾನು ಏನು
ಮಾಡೇನು?
ಆತನು ವಿಚಾರಿಸುವಾಗ ಯಾವ ಉತ್ತರ ಕೊಟ್ಟೇನು?
15 ನನ್ನನ್ನು ಗರ್ಭದಲ್ಲಿ ನಿರ್ಮಿಸಿದಾತನೇ ಅವನನ್ನೂ
ನಿರ್ಮಿಸಲಿಲ್ಲವೋ?
ಆತನೊಬ್ಬನೇ ನಮ್ಮಿಬ್ಬರನ್ನೂ ಹೊಟ್ಟೆಯಲ್ಲಿ ರೂಪಿಸಿ
ದನಲ್ಲವೇ.

16 ನಾನು ಬಡವರ ಇಷ್ಟವನ್ನು ಭಂಗಪಡಿಸಿ
ವಿಧವೆಯನ್ನು ಕಂಗೆಡಿಸಿದೆನೋ?
17 ನನಗಿರುವ ತುತ್ತು ಅನ್ನದಲ್ಲಿ ಅನಾಥರಿಗೆ ಏನೂ
ಕೊಡದೆ

ನಾನೇ ಒಂಟಿಗನಾಗಿ ತಿಂದೆನೋ?
ಹಾಗಲ್ಲ, ನಾನು ಬಾಲ್ಯದಿಂದಲೂ ತಂದೆಯೋಪಾದಿ
ಯಲ್ಲಿ ಅನಾಥನನ್ನು ಸಾಕುತ್ತಾ
ನಾನು ಹುಟ್ಟಿದಂದಿನಿಂದಲೂ ಅನಾಥಳಿಗೆ ದಾರಿತೋ
ಸುತ್ತಾ ಇದ್ದೆನಷ್ಟೆ.
ಬಟ್ಟೆಯಿಲ್ಲದೆ ಅಳಿದುಹೋಗುವವನನ್ನೂ
ಹೊದಿಕೆಯಿಲ್ಲದ ಬಡವನನ್ನೂ ನಾನು ಕಂಡಾಗೆಲ್ಲಾ
ಅವರ ಸೊಂಟವು ನನ್ನ ಕುರಿಗಳ ಉಣ್ಣೆಯಿಂದ ಬೆಚ್ಚ
ಗಾಗಿ
ನಾನು ಹರಸಲ್ಪಡಲಿಲ್ಲವೋ?
ನ್ಯಾಯಸ್ಥಾನದಲ್ಲಿ ನನಗೆ ಸಹಾಯ ಉಂಟೆಂದು
ಅನಾಥನ ಮೇಲೆ ಕೈಮಾಡಿದೆನೋ?
ಹೀಗಿದ್ದರೆ ನನ್ನ ಹೆಗಲಿನ ಕೀಲು ತಪ್ಪಲಿ!
ತೋಳು ಸಂದಿನಿಂದ ಮುರಿದು ಬೀಳಲಿ.
ದೇವರಿಂದ ಬರುವ ವಿಪತ್ತಿಗೆ ಅಂಜಿಕೊಂಡಿದ್ದೆನಷ್ಟೆ
ಆತನ ಪ್ರಭಾವದ ದೆಸೆಯಿಂದ ನಾನು ಇಂಥ ಕೃತ್ಯ
ವನ್ನು ಮಾಡುವದಕ್ಕಾಗಲಿಲ್ಲ.

ಒಂದು ವೇಳೆ ನಾನು ಬಂಗಾರದಲ್ಲಿ ಭರವಸ
ವಿಟ್ಟು
ಅಪರಂಜಿಗೆ ನಿನ್ನನ್ನೇ ನಂಬಿದ್ದೇನೆ ಎಂದು ಹೇಳಿದ್ದ
ನನ್ನ ಆಸ್ತಿ ದೊಡ್ಡದೆಂದೂ
ನನ್ನ ಕೈಯೇ ಬಹು ಸಂಪತ್ತನ್ನು ಪಡೆಯಿತೆಂದೂ
ಹೆಚ್ಚಳಪಟ್ಟಿದ್ದರೆ
ಸೂರ್ಯನು ಪ್ರಕಾಶಿಸುವದನ್ನಾಗಲಿ
ಚಂದ್ರನು ಕಳೆದುಂಬಿದವನಾಗಿ ಚರಿಸುವದನ್ನಾಗಲಿ
ನಾನು ನೋಡಿದಾಗ
ಹೃದಯವು ಮರುಳುಗೊಂಡು
ಕೈಯನ್ನು ಬಾಯಿ ಮುದ್ದಾಡಿದ್ದರೆ
ಇದು ಸಹ ನ್ಯಾಯಾಧಿಪತಿಗಳ ದಂಡನೆಗೆ ಯೋಗ್ಯ
ವಾದದ್ದು,
ಮೇಲಣ ಲೋಕದ ದೇವರಿಗೆ ದ್ರೋಹಿಯಾದಂತಾ
ಯಿತು.

ನನ್ನನ್ನು ದ್ವೇಷಿಸುವವನಿಗೆ ಕೇಡುಬಂದಾಗ
ಉಬ್ಬಿಕೊಂಡು
ಅವನ ನಾಶನಕ್ಕೆ ಹಿಗ್ಗಿದೆನೋ?
ಇಲ್ಲ, ನನ್ನ ಬಾಯಿ ಅವನನ್ನು ಶಪಿಸಿ ಅವನ ಪ್ರಾ
ಹೋಗಲಿ ಎಂದು ಬೇಡಿಕೊಂಡು
ಪಾಪವಶವಾಗುವದಕ್ಕೆ ನಾನು ಒಪ್ಪಲೇ ಇಲ್ಲ.
ನನ್ನ ಗುಡಾರದ ಆಳುಗಳು—ನಮ್ಮ ಯಜಮಾನನ
ಕ್ಕಿದ ಮಾಂಸದಿಂದ ತೃಪ್ತರಾಗದವರು
ಎಲ್ಲಿಯೂ ಸಿಕ್ಕಲಾರರು ಎಂದು ಹೇಳಿಕೊಳ್ಳುತ್ತಿರಲಿ
ಲ್ಲವೋ?
ಪರಸ್ಥಳದವನು ಬೈಲಿನಲ್ಲಿ ಇಳಿದುಕೊಳ್ಳಲಿಲ್ಲವಲ್ಲಾ,
ದಾರಿಗೆ ನನ್ನ ಮನೇಬಾಗಲುಗಳನ್ನು ತೆರೆದಿದ್ದೆನಷ್ಟೆ
ನಾನು ಜನಸಮುದಾಯಕ್ಕೆ ಹೆದರಿದ್ದರಿಂದಾಗಲಿ
ಕುಲೀನರ ತಿರಸ್ಕಾರವು ನನಗೆ ಭಯಹುಟ್ಟಿಸಿದ್ದರಿಂದಾ
ಗಲಿ

34 ನಾನು ಬಾಗಲು ದಾಟದೆ ಮೌನವಾಗಿದ್ದು
ಸಾಮಾನ್ಯ ಜನರ ಹಾಗೆ ನನ್ನ ದ್ರೋಹಗಳನ್ನು ಮರೆ
ಮಾಜಿ
ಎದೆಯಲ್ಲಿ ನನ್ನ ಪಾಪವನ್ನು ಬಚ್ಚಿಟ್ಟುಕೊಂಡಿದ್ದರೆ—

35 ಅಯ್ಯೋ, ನನ್ನ ಕಡೆಗೆ ಕಿವಿಗೊಡತಕ್ಕವನು
ಇದ್ದರೆ ಎಷ್ಟೋ ಲೇಸು!
ಇದೇ ನನ್ನ ಕೈಗುರುತು, ನೋಡಿರಿ, ಸರ್ವಶಕ್ತನು
ನನಗೆ ಉತ್ತರಕೊಡಲಿ!
ನನ್ನ ವಿರೋಧಿಯು ಬರೆದುಕೊಂಡ ಅಪಾದನಪತ್ರವು
ನನಗೆ ಸಿಕ್ಕಿದರೆ ಎಷ್ಟೋ ಸಂತೋಷ!
36 ಅದನ್ನು ಹೆಗಲ ಮೇಲೆ ಇಟ್ಟುಕೊಳ್ಳುತ್ತಿದ್ದೆನು,
ಕಿರೀಟವನ್ನಾಗಿ ಧರಿಸುತ್ತಿದ್ದೆನು.
37 ಪ್ರಭುವಿನಂತೆ ಅತನ ಸಾನ್ನಿಧ್ಯದಲ್ಲಿ ಪ್ರವೇಶಿಸಿ
ನನ್ನ ಹೆಜ್ಜೆಗಳ ಲೆಕ್ಕವನ್ನು ಆತನಿಗೆ ಅರಿಕೆಮಾಡಿ
ಕೊಳ್ಳುತ್ತಿದ್ದೆನು.

38 ನನ್ನ ಭೂಮಿಯು ನನ್ನ ಮೇಲೆ ಕೂಗಿಕೊಂಡರೆ
ಅದರ ನೇಗಿಲಗೆರೆಗಳೆಲ್ಲಾ ಅತ್ತರೆ
39 ನಾನು ಹಣಕೊಡದೆ ಅದರ ಸಾರವನ್ನನುಭವಿಸಿ
ಅದರ ದಣಿಗಳ ಪ್ರಾಣ ಹೋದದ್ದಕ್ಕೆ ಕಾರಣನಾಗಿದ್ದರೆ
40 ಗೋದಿಗೆ ಬದಲಾಗಿ ಮುಳ್ಳುಗಳೂ
ಜವೆಗೋದಿಗೆ ಪ್ರತಿಯಾಗಿ ಕೆಟ್ಟ ಕಳೆಗಳೂ ಬೆಳೆಯಲಿ.

ಹೀಗೆ ಯೋಬನ ಮಾತುಗಳು ಮುಗಿದವು.

32 ಆಗ ಯೋಬನು ಸ್ವಂತ ಗಣನೆಯಲ್ಲಿ ನೀತಿ
ವಂತನಾಗಿದ್ದದ್ದರಿಂದ ಆ ಮೂವರು ಅವನಿಗೆ
2 ಉತ್ತರಕೊಡುವದನ್ನು ನಿಲ್ಲಿಸಿಬಿಟ್ಟರು. ಆ ಮೇಲೆ
ಬೂಜ್ ಕುಲಕ್ಕೂ ರಾಮ್ ಗೋತ್ರಕ್ಕೂ ಸೇರಿದ
ಬರಕೇಲನ ಮಗನಾದ ಎಲೀಹುವಿಗೆ ಸಿಟ್ಟೇರಿತು;
ಯೋಬನು ದೇವರಿಗಿಂತಲೂ ತಾನೇ ನ್ಯಾಯವಂತ
ನೆಂದು ಎಣಿಸಿಕೊಂಡದರಿಂದ ಅವನ ಮೇಲೆ ಎಲೀ
3 ಹುವಿಗೆ ಸಿಟ್ಟುಹತ್ತಿತು. ಇದಲ್ಲದೆ ಅವನ ಮೂವರು
ಸ್ನೇಹಿತರು ಯೋಬನನ್ನು ಖಂಡಿಸತಕ್ಕ ಉತ್ತರವನ್ನು
ಹೇಳಲಾರದೆ ಹೋದದರಿಂದ ಅವನು ಅವರ ಮೇಲೆಯೂ
4 ಕೋಪಿಸಿಕೊಂಡನು. ಅವರು ತನಗಿಂತ ವೃದ್ಧರಾಗಿದ್ದ
ಕಾರಣ ಎಲೀಹು ಯೋಬನೊಂದಿಗೆ ಮೊದಲು ಮಾತಾ
5 ಡದೆ ತಡೆದಿದ್ದನು. ಈ ಮೂವರ ಬಾಯಲ್ಲಿ ತಕ್ಕ
ಉತ್ತರವಿಲ್ಲದ್ದನ್ನು ಕಂಡು ರೋಷಗೊಂಡನು.
6 ಆಗ ಬೂಜ್ ಕುಲಕ್ಕೆ ಸೇರಿದ ಬರಕೇಲನ
ಮಗನಾದ ಆ ಎಲೀಹು ಇಂತೆಂದನು—
ನಾನು ಯೌವನಸ್ಥನು, ನೀವು ಅತಿವೃದ್ಧರು;
ಆದದರಿಂದ ಸಂಕೋಚಪಟ್ಟು ನನ್ನ ಅಭಿಪ್ರಾಯವನ್ನು
ಅರಿಕೆಮಾಡಲು ಅಂಜಿದೆನು.
7 ಹೆಚ್ಚು ದಿನಗಳವರು ಮಾತಾಡಲಿ,
ಬಹಳ ವರುಷದವರು ಜ್ಞಾನೋಪದೇಶಮಾಡಲಿ ಅಂದು
ಕೊಂಡಿದ್ದೆನು.
8 ಆದರೆ ಮನುಷ್ಯರಲ್ಲಿ ಆತ್ಮವೊಂದುಂಟು,
ಸರ್ವಶಕ್ತನ ಶ್ವಾಸದಿಂದ ಅವರಿಗೆ ವಿವೇಕ ದೊರೆಯು
ತ್ತದೆ.
ವೃದ್ಧರೇ ಜ್ಞಾನಿಗಳಲ್ಲ, 9
ಮುದುಕರು ಮಾತ್ರ ನ್ಯಾಯ ಬಲ್ಲವರಲ್ಲ.
ಆದಕಾರಣ—ನನ್ನ ಕಡೆಗೆ ಕಿವಿಗೊಡಿರಿ. 10
ನಾನೂ ನನ್ನ ಅಭಿಪ್ರಾಯವನ್ನು ಅರಿಕೆಮಾಡುವೆ
ನೆಂದು ಹೇಳಿಕೊಳ್ಳುತ್ತೇನೆ.
ಇಗೋ, ನೀವು ಆಡುತ್ತಿದ್ದ ಮಾತುಗಳನ್ನು ಕಾದು 11
ಕೇಳುತ್ತಿದ್ದೆನು;
ಏನು ಹೇಳಬೇಕೆಂದು ನೀವು ಆಲೋಚಿಸುತ್ತಿದ್ದಾಗ
ನಿಮ್ಮ ನ್ಯಾಯಗಳಿಗಾಗಿ ಕಿವಿಗೊಟ್ಟಿದ್ದೆನು;
ನಿಮ್ಮ ಮೇಲೆ ಲಕ್ಷ್ಯವಿಟ್ಟಿದ್ದೆನು; 12
ಆಹಾ, ನಿಮ್ಮಲ್ಲಿ ಯೋಬನನ್ನು ಖಂಡಿಸಬಲ್ಲವನು,
ಅವನ ಮಾತುಗಳಿಗೆ ಉತ್ತರಕೊಡತಕ್ಕವನು, ಯಾರೂ
ಸಿಕ್ಕಲಿಲ್ಲ.
ನಾವು [ಅವನಲ್ಲಿ] ಜ್ಞಾನವನ್ನು ಕಂಡುಕೊಂಡಿದ್ದೇವೆ, 13
ದೇವರೇ ಅವನನ್ನು ಖಂಡಿಸಿಬಿಡಲಿ, ಮನುಷ್ಯನಿಂದಾ
ಗುವದಿಲ್ಲ ಎಂದು ಅಂದುಕೊಳ್ಳಬೇಡಿರಿ;
ಅವನು ನನಗೆ ಪ್ರತಿಕೂಲವಾಗಿ [ಇನ್ನೂ] ವಾದ 14
ವನ್ನು ಹೂಡಲಿಲ್ಲ;
ನಾನು ಅವನಿಗೆ ಉತ್ತರಕೊಡುವಾಗ ನಿಮ್ಮ ಹಾಗೆ
ಮಾತಾಡೆನು.

ಅವರು ಬೆರಗಾಗಿ ಇನ್ನು ಉತ್ತರಕೊಡಲಾರರು, 15
ಅವರ ಸೊಲ್ಲೇ ಅಡಗಿಹೋಯಿತು.
ಅವರು ಇನ್ನು ಉತ್ತರಕೊಡದೆ 16
ಮೌನವಾಗಿ ಸುಮ್ಮನೆ ನಿಂತಿದ್ದರೆ ನಾನೂ ಕಾದು
ಕೊಂಡಿರಬೇಕೋ?
ನಾನೂ ನನ್ನ ಪಾಲಿನ ಉತ್ತರವನ್ನು ಹೇಳುವೆನು, 17
ನಾನೂ ನನ್ನ ಅಭಿಪ್ರಾಯವನ್ನು ತಿಳಿಸುವೆನು.
ನನ್ನಲ್ಲಿ ಮಾತುಗಳು ತುಂಬಿವೆ, 18
ನನ್ನ ಅಂತರಾತ್ಮವು ನನ್ನನ್ನು ಒತ್ತಾಯಮಾಡುತ್ತದೆ.
ಆಹಾ, ದ್ರಾಕ್ಷಾರಸವನ್ನು ತುಂಬಿ ಬಾಯಿಕಟ್ಟಿದ 19
ಹೊಸ ಬುದ್ದಲಿಗಳಂತೆ
ನನ್ನ ಹೊಟ್ಟೆಯು ಒಡೆದುಹೋಗುವ ಹಾಗಿದೆ.
ನನಗೆ ಉಪಶಮನವಾಗುವ ಹಾಗೆ ಮಾತಾಡುವೆನು. 20
ನನ್ನ ತುಟಿಗಳನ್ನು ತೆರೆದು ಉತ್ತರಹೇಳುವೆನು.
ಆದರೆ ನಾನು ಯಾರಿಗೂ ಮುಖದಾಕ್ಷಿಣ್ಯವನ್ನು 21
ತೋರಿಸಬಾರದು,
ಯಾವ ಮನುಷ್ಯನಿಗಾದರೂ ಮುಖಸ್ತುತಿಯನ್ನು
ಮಾಡಕೂಡದು.
ಮುಖಸ್ತುತಿಯನ್ನು ಮಾಡುವದಕ್ಕೆ ನನ್ನಿಂದಾಗುವ 22
ದಿಲ್ಲ;
ಮಾಡಿದರೆ ನನ್ನ ಸೃಷ್ಟಿಕರ್ತನು ನನ್ನನ್ನು ಬೇಗ
ಹೊತ್ತುಕೊಂಡು ಹೋದಾನು.

ಆದಿರಲಿ; ಯೋಬನೇ, ನನ್ನ ನುಡಿಯನ್ನು ಕೇಳು, 33
ನನ್ನ ಮಾತುಗಳಿಗೆಲ್ಲಾ ಕಿವಿಗೊಡು,
ಇಗೋ, ನನ್ನ ಬಾಯನ್ನು ತೆರೆದಿದ್ದೇನೆ, 2

ನನ್ನ ನಾಲಿಗೆಯು ಅಂಗಳದೊಳಗಿಂದ ಮಾತಾಡುತ್ತಿದೆ.
3 ನನ್ನ ಹೃದಯದ ಯಥಾರ್ಥತ್ವವನ್ನು ನನ್ನ ಮಾತುಗಳೇ ತಿಳಿಸುವವು.
ನನ್ನ ತುಟಿಗಳು ತಿಳಿದುಕೊಂಡದ್ದನ್ನೇ ಸತ್ಯವಾಗಿ ಹೇಳುವವು.
4 ನಾನು ದೇವರಾತ್ಮನಿಂದಲೇ ನಿರ್ಮಿತನಾಗಿದ್ದೇನೆ,
ನನ್ನ ಜೀವವು ಸರ್ವಶಕ್ತನ ಶ್ವಾಸದಿಂದುಂಟಾಗಿದೆ.
5 ನಿನಗೆ ಸಾಮರ್ಥ್ಯವಿದ್ದರೆ ನನಗೆ ಉತ್ತರಕೊಡು,
ನನ್ನೆದುರಿನಲ್ಲಿಯೇ ವಾದವನ್ನು ಹೂಡಿ ನಿಂತುಕೋ.
6 ನೋಡು, ನಾನೂ ಜೇಡಿಮಣ್ಣಿನಿಂದ ರೂಪಿಸಲ್ಪಟ್ಟು
ದೇವರ ದೃಷ್ಟಿಯಲ್ಲಿ ನಿನ್ನ ಹಾಗೆಯೇ ಇದ್ದೇನೆ.
7 ಇಗೋ, ನನ್ನ ದಿಗಿಲು ನಿನ್ನನ್ನು ಹೆದರಿಸಲಾರದು,
ನನ್ನ ಒತ್ತಾಯವು ನಿನಗೆ ಹೊರೆಯಾಗಿರದು.

8 ನಿನ್ನ ನುಡಿಯ ಧ್ವನಿಯನ್ನು ಕೇಳಿದ್ದೇನೆ,
ನನ್ನ ಕಿವಿಗೆ ಬಿದ್ದ ಈ ಮಾತುಗಳನ್ನು ಆಡೇ ಆಡಿದ್ದೀ—
9 ನಾನು ಪರಿಶುದ್ಧನು, ನನ್ನೊಳಗೆ ದೋಷವಿಲ್ಲ,
ನಾನು ನಿರ್ಮಲನು, ನನ್ನಲ್ಲಿ ಏನೂ ಪಾಪವಿಲ್ಲ.
10 ಆಹಾ, ಆತನು ನನ್ನ ವಿರೋಧಕ್ಕೆ ಕಾರಣಗಳನ್ನು ಕಂಡುಹಿಡಿಯುತ್ತಾ
ನನ್ನನ್ನು ಶತ್ರುವೆಂದೆಣಿಸಿಕೊಂಡಿದ್ದಾನೆ;
11 ನನ್ನ ಕಾಲುಗಳನ್ನು ಕೋಳಕ್ಕೆ ಹಾಕಿ
ನನ್ನ ಮಾರ್ಗಗಳನ್ನೆಲ್ಲಾ ಕಂಡುಕೊಂಡಿದ್ದಾನೆ ಎಂದು ಆಡಿದ್ದೀಯಲ್ಲಾ.
12 ಇಗೋ, ನೀನು ಹೀಗೆ ಆಡಿದ್ದು ನ್ಯಾಯವಲ್ಲವೆಂಬದೇ ನನ್ನ ಉತ್ತರ,
ದೇವರು ಮನುಷ್ಯನಿಗಿಂತ ದೊಡ್ಡವನಾಗಿದ್ದಾನಷ್ಟೆ.
13 ಆತನು [1]ನಿನ್ನ ಮಾತುಗಳಲ್ಲಿ ಒಂದಕ್ಕಾದರೂ ಉತ್ತರ ದಯಪಾಲಿಸನೆಂಬದಾಗಿ
ನೀನು ಆತನೊಂದಿಗೆ ವ್ಯಾಜ್ಯವಾಡುವದೇಕೆ?

14 ದೇವರು ಮಾತಾಡುವ ರೀತಿ ಒಂದುಂಟು
ಹೌದು, ಎರಡೂ ಉಂಟು, ಮನುಷ್ಯನಾದರೋ ಲಕ್ಷಿಸುವದಿಲ್ಲ.
15 ಮನುಷ್ಯರಿಗೆ ಗಾಢನಿದ್ರೆಯುಂಟಾದಾಗಲೂ
ಹಾಸಿಗೆಯ ಮೇಲೆ ಜಂಪುಹತ್ತಿದಾಗಲೂ
ಆತನು ಸ್ವಪ್ನದಲ್ಲಿ ರಾತ್ರಿಯ ಕನಸಿನಲ್ಲಿ
16 ಅವರ ಕಿವಿಗಳನ್ನು ತೆರೆದು
ಅವರಿಗೆ ಶಿಕ್ಷಾವಚನವನ್ನು ಉಪದೇಶಿಸಿ ಅದಕ್ಕೆ ಮುದ್ರೆ ಹಾಕುವನು.
17 ಹೀಗೆ ಮನುಷ್ಯನನ್ನು ಅವನ ದುಷ್ಕಾರ್ಯದಿಂದ ತಪ್ಪಿಸುವನು,
ಮಾನವನಿಗೆ ಗರ್ವವನ್ನು ಮರೆಮಾಡುವನು;
18 ಅವನ ಆತ್ಮವನ್ನು ಅಧೋಲೋಕಕ್ಕೆ ಬೀಳದಂತೆ ತಡೆದು
ಅವನ ಜೀವವನ್ನು [2]ದೈವಾಸ್ತ್ರದಿಂದ ಅಳಿದುಹೋಗ
ಹಾಗೆ ನಿಲ್ಲಿಸುವನು.

ಇದಲ್ಲದೆ ಸಂಕಟದಿಂದಲೂ ನಿತ್ಯವಾದ ಅಸ್
ಪೀಡನದಿಂದಲೂ
ಮನುಷ್ಯನು ಹಾಸಿಗೆಯ ಮೇಲೆ ಶಿಕ್ಷಿಸಲ್ಪಡುವನು
ಅವನ ಜೀವವು ಆಹಾರಕ್ಕೆ ಬೇಸರಗೊಳ್ಳುವದು,
ಅವನ ಆತ್ಮವು ಮೃಷ್ಟಾನ್ನಕ್ಕೂ ಅಸಹ್ಯಪಡುವದು.
ಅವನ ಮಾಂಸವು ಕ್ಷಯಿಸಿ ಕಾಣದೆಹೋಗುವದು,
ಕಾಣದಿದ್ದ ಅವನ ಎಲುಬುಗಳು ಬಯಲಾಗುವವು.
ಅವನ ಆತ್ಮವು ಅಧೋಲೋಕವನ್ನು ಸಮೀಪಿಸುವದು
ಅವನ ಪ್ರಾಣವು ಸಂಹಾರದೂತರಿಗೆ ಹತ್ತಿರವಾಗುವದು
[3]ಮನುಷ್ಯಕರ್ತವ್ಯವನ್ನು ತೋರಿಸತಕ್ಕ ಸಹಸ್ರದೂ
ರಲ್ಲಿ ಒಬ್ಬನು
ಅವನಿಗೆ ಮಧ್ಯಸ್ಥನಾಗಿ ಬೇಡುವದರಿಂದ
ದೇವರು ಒಂದು ವೇಳೆ ಆ ಮನುಷ್ಯನಿಗೆ ಮೆಚ್ಚಿ—
ಈಡು ಸಿಕ್ಕಿತು,
ಅಧೋಲೋಕಕ್ಕೆ ಇಳಿಯದಂತೆ ಇವನನ್ನು ರಕ್ಷಿಸ
ಎಂದು ಅಪ್ಪಣೆಕೊಟ್ಟರೆ
ಅವನ ದೇಹವು ಬಾಲ್ಯಕ್ಕಿಂತಲೂ ಕೋಮಲವಾಗು
ವದು,
ಅವನು ಪುನಃ ಎಳೆಯತನದ ದಿನಗಳನ್ನು ಅನುಭ
ಸುವನು.
ಅವನು ದೇವರನ್ನು ಪ್ರಾರ್ಥಿಸಿ ಆತನ ಒಲುಮೆಗೆ
ಪಾತ್ರನಾಗಿ
ಆತನ ದರ್ಶನ ಮಾಡಿ ಉತ್ಸಾಹಧ್ವನಿಗೈದು
ತಿರಿಗಿ ಆತನಿಂದ ನೀತಿವಂತನೆನಿಸಿಕೊಳ್ಳುವನು.
ಅವನು ಮನುಷ್ಯರ ಮುಂದೆ ನಿಂತು—ನಾನು ಪಾ
ಮಾಡಿ
ನ್ಯಾಯವನ್ನು ಕೆಡಿಸಿದ್ದರೂ ಆತನು ಮುಯ್ಯಿತೀರಿಸ
ನನ್ನ ಆತ್ಮವನ್ನು ಅಧೋಲೋಕಕ್ಕೆ ಹೋಗದಂತೆ ವಿಮೋ
ಚಿಸಿದ್ದಾನೆ,
ನನ್ನ ಜೀವವು ಬೆಳಕನ್ನು ಕಾಣುತ್ತಿರುವದು ಎಂದು
ಕೀರ್ತನೆಹಾಡುವನು.

ನೋಡು, ಮನುಷ್ಯನ ಆತ್ಮವು ಅಧೋಲೋ
ದಿಂದ ಹಿಂದಿರುಗಿ
ಜೀವಲೋಕದ ಬೆಳಕನ್ನು ಅನುಭವಿಸುವಂತೆ
ದೇವರು ಎರಡು ಸಾರಿಯಲ್ಲದೆ
ಮೂರು ಸಾರಿ ಈ ಕಾರ್ಯಗಳನ್ನೆಲ್ಲಾ ಮಾಡುವನು
ಯೋಬನೇ, ನನ್ನ ಕಡೆಗೆ ಗಮನವಿಟ್ಟು ಕೇಳು,
ಮೌನವಾಗಿರು, ನಾನೇ ಮಾತಾಡುವೆನು.
ನೀನು ಏನಾದರೂ ಹೇಳಬೇಕೆಂದಿದ್ದರೆ ನನಗೆ ಉತ್ತ
ವಾಗಿ ಹೇಳು,
ಮಾತಾಡು, ನಿನ್ನನ್ನು ನೀತಿವಂತನೆಂದು ಸ್ಥಾಪಿಸಬೇ
ಕೆಂಬದೇ ನನ್ನ ಆಶೆ.

---

1) ಪಾಠಾಂತರ: ಅವನ. 2) ಮೂಲ: ಅಸ್ತ್ರ. 3) ಅಥವಾ: ಮಧ್ಯಸ್ಥರಾದ ಸಹಸ್ರದೂತರಲ್ಲಿ ಒಬ್ಬನು ಒಂದು ಅವನ ಸಹಾಯಕ್ಕೆ ಬಂದು ಮನುಷ್ಯಕರ್ತವ್ಯವನ್ನು ಅವನಿಗೆ ತೋರಿಸಿ ಅವನಲ್ಲಿ ಒಲುಮೆಪಟ್ಟು—ಈಡು ಸಿಕ್ಕಿತು, ಅಧೋಲೋಕಕ್ಕೆ ಯದಂತೆ ಇವನನ್ನು ಬಿಟ್ಟುಬಿಡು ಎಂದು ಕೇಳಿಕೊಂಡರೆ.

ಇಲ್ಲವಾದರೆ ನೀನೇ ನನಗೆ ಕಿವಿಗೊಟ್ಟು ಮೌನವಾಗಿರು,
ನಾನು ನಿನಗೆ ಜ್ಞಾನವನ್ನು ಬೋಧಿಸುವೆನು.

34 ಆಗ ಎಲೀಹು ಮತ್ತೆ ಇಂತೆಂದನು—
2 ವಿವೇಕಿಗಳೇ, ನನ್ನ ಮಾತುಗಳನ್ನು ಕೇಳಿರಿ,
ಜ್ಞಾನಿಗಳೇ, ನನಗೆ ಕಿವಿಗೊಡಿರಿ!
3 ಅಂಗಳವು ಆಹಾರವನ್ನು ರುಚಿನೋಡುವಂತೆ
ಕಿವಿಯು ಮಾತುಗಳನ್ನು ವಿವೇಚಿಸುತ್ತದಲ್ಲಾ.
4 ನ್ಯಾಯವನ್ನೇ ಆರಿಸಿಕೊಳ್ಳೋಣ,
ಒಳ್ಳೇದು ಇಂಥದೆಂದು ನಮ್ಮನಮ್ಮೊಳಗೆ ನಿಶ್ಚಯಿಸಿಕೊಳ್ಳೋಣ.
5 ಯೋಬನು—ನಾನು ನೀತಿವಂತನು,
ದೇವರು ನನ್ನ ನ್ಯಾಯವನ್ನು ತಪ್ಪಿಸಿದ್ದಾನೆ.
6 1)ನನ್ನಲ್ಲಿ ನ್ಯಾಯವಿದ್ದರೂ ಸುಳ್ಳುಗಾರನೆನಿಸಿಕೊಂಡಿದ್ದೇನೆ,
ನಾನು ನಿರ್ದೋಷಿಯಾಗಿದ್ದರೂ ಆತನ ಬಾಣದ ಪೆಟ್ಟು ವಿಪರೀತವಾಗಿದೆ ಎಂದು ಹೇಳಿಕೊಂಡಿದ್ದಾನೆ.
7 ಯೋಬನಿಗೆ ಸಮಾನರು ಯಾರು?
2)ದೇವದೂಷಣೆಯನ್ನು ನೀರಿನಂತೆ ಕುಡಿಯುತ್ತಾನಲ್ಲಾ.
ಅವನು ಅಧರ್ಮಿಗಳ ಜೊತೆಯಲ್ಲಿ ಸಂಚರಿಸುವವನು;
ಕೆಟ್ಟವರ ಸಂಗಡ ನಡೆದಾಡುವವನು.
ಒಬ್ಬನು ದೇವರ ಅನ್ಯೋನ್ಯತೆಯಲ್ಲಿ ಸಂತೋಷಪಟ್ಟರೂ
ಅವನಿಗೆ ಯಾವ ಪ್ರಯೋಜನವೂ ಇಲ್ಲವೆಂದು ಹೇಳಿದ್ದಾನಷ್ಟೆ.

ಹೀಗಿರಲು, ಬುದ್ಧಿವಂತರೇ, ನನ್ನ ಮಾತುಗಳನ್ನು ಕೇಳಿರಿ,
ದೇವರು ಕೆಟ್ಟದ್ದನ್ನು ಮಾಡಾನೆಂಬ ಯೋಚನೆಯೂ
ಸರ್ವಶಕ್ತನು ಅನ್ಯಾಯವನ್ನು ನಡಿಸಾನೆಂಬ ಭಾವನೆಯೂ ದೂರವಾಗಿರಲಿ!
ಆತನು ಮನುಷ್ಯನಿಗೆ ಅವನ ಕೃತ್ಯದ ಫಲವನ್ನು ತೀರಿಸಿಬಿಡುವನು,
ಪ್ರತಿಯೊಬ್ಬನು ತನ್ನ ನಡತೆಗೆ ತಕ್ಕಂತೆ ಅನುಭವಿಸ ಮಾಡುವನು.
ಹೌದು, ದೇವರು ಕೆಟ್ಟದ್ದನ್ನು ನಡಿಸುವದೇ ಇಲ್ಲ,
ಸರ್ವಶಕ್ತನು ನೀತಿಯನ್ನು ಡೊಂಕುಮಾಡುವದೇ ಇಲ್ಲ.

ಭೂಲೋಕವನ್ನು ಆತನ ವಶಕ್ಕೆ ಕೊಟ್ಟವನು ಯಾವನು?
ಯಾವನು ಭೂಮಂಡಲವನ್ನೆಲ್ಲಾ ಕ್ರಮಪಡಿಸಿದನು?
3)ಆತನು ಸ್ವಾರ್ಥದಲ್ಲಿ ಮನಸ್ಸಿಟ್ಟು
ತನ್ನ ಆತ್ಮವನ್ನೂ ಶ್ವಾಸವನ್ನೂ ಹಿಂದಕ್ಕೆ ತೆಗೆದುಕೊಳ್ಳುವದಾದರೆ
ಸಮಸ್ತಜನರು ಒಟ್ಟಾಗಿ ಅಳಿದುಹೋಗುವರು, 15
ಪುನಃ ಮನುಷ್ಯರು ದೂಳೇ ಆಗುವರು.

ನಿನಗೆ ವಿವೇಕವಿದ್ದರೆ ಇದನ್ನು ಕೇಳು, 16
ನನ್ನ ಮಾತುಗಳ ಧ್ವನಿಗೆ ಕಿವಿಗೊಡು!
ನ್ಯಾಯವನ್ನು ದ್ವೇಷಿಸುವವನು ಕಟ್ಟುಪಾಡು ಮಾಡಾನೇ? 17
ಧರ್ಮಸ್ವರೂಪನೂ ಮಹಾಶಕ್ತನೂ ಆಗಿರುವಾತನನ್ನು ಕೆಟ್ಟವನೆಂದು ನಿರ್ಣಯಿಸುವಿಯಾ?
4)ಆತನು ರಾಜನಿಗೆ—ನೀನು ಮೂರ್ಖ, 18
ಪ್ರಭುಗಳಿಗೆ—ನೀವು ಕೆಟ್ಟವರು ಎಂದು ಹೇಳಬಲ್ಲನು.
ಅಧಿಪತಿಗಳಿಗೆ ಮುಖದಾಕ್ಷಿಣ್ಯವನ್ನು ತೋರಿಸದೆ 19
ಬಡವರು ಬಲ್ಲಿದರು ಎಂಬ ಭೇದವನ್ನು ಮಾಡದೆ ಇರುವನು;
ಅವರೆಲ್ಲರೂ ಆತನ ಸೃಷ್ಟಿಯಾಗಿದ್ದಾರಷ್ಟೆ.
ಕ್ಷಣಮಾತ್ರದೊಳಗೆ ಮಧ್ಯರಾತ್ರಿಯಲ್ಲೇ ಸಾಯುವರು, 20
ಪ್ರಜೆಗಳು ಕದಲಿ ಇಲ್ಲವಾಗುವರು,
ಮನುಷ್ಯನ ಕೈ ಸೋಕದೆ ಬಲಿಷ್ಠರೂ ಅಪಹರಿಸಲ್ಪಡುವರು.

ಆತನು ಮನುಷ್ಯನ ಮಾರ್ಗಗಳ ಮೇಲೆ ಕಣ್ಣಿಟ್ಟು 21
ಅವನ ಹೆಜ್ಜೆಗಳನ್ನೆಲ್ಲಾ ನೋಡುವನು.
ಅಧರ್ಮಿಗಳು ಅಡಗಿಕೊಳ್ಳುವದಕ್ಕೆ 22
ಅನುಕೂಲವಾದ ಯಾವ ಕತ್ತಲೂ ಯಾವ ಗಾಢಾಂಧಕಾರವೂ ಇರುವದಿಲ್ಲ.
ಆತನು ಮನುಷ್ಯನ ಮೇಲೆ ಹೆಚ್ಚು ಗಮನವಿಡುವದೂ 23
ಮನುಷ್ಯನು ಆತನ ನ್ಯಾಯವಿಚಾರಣೆಗೆ ಬರುವದೂ ಅವಶ್ಯವಿಲ್ಲ.
ಯಾವ ವಿಮರ್ಶೆಯೂ ಇಲ್ಲದೆ ತೀರ್ಮಾನಿಸಿ ಬಲಿಷ್ಠರನ್ನು ಮುರಿದು 24
ಅವರ ಸ್ಥಾನದಲ್ಲಿ ಇತರರನ್ನು ನಿಲ್ಲಿಸುವನು.
ಈ ಪ್ರಕಾರ ಆತನು ಅವರ ಕಾರ್ಯಗಳನ್ನು ಲಕ್ಷಿಸಿ 25
ರಾತ್ರಿಯಲ್ಲಿ ಅವರನ್ನು ಕೆಡವಿ ನಾಶಕ್ಕೆ ಗುರಿಮಾಡುವನು.
ಅಪರಾಧಿಗಳಿಗೋ ಎಂಬಂತೆ ಬಹಿರಂಗವಾಗಿ ಅವರಿಗೆ 26
ಪೆಟ್ಟುಹಾಕುವನು.
ಅವರು ಆತನನ್ನು ಹಿಂಬಾಲಿಸದೆ ತಿರುಗಿಕೊಂಡು 27
ಆತನ ಮಾರ್ಗಗಳನ್ನೆಲ್ಲಾ ಅಲಕ್ಷ್ಯಮಾಡಿದ್ದರಷ್ಟೆ.
ಹೀಗೆ ಬಡವರ ಗೋಳಾಟವು ದೇವರಿಗೆ ಮುಟ್ಟುವಂತೆ ಮಾಡಿದ್ದರು, 28
ಆತನು ದಿಕ್ಕಿಲ್ಲದವರ ಮೊರೆಯನ್ನು ಆಲೈಸಿದ್ದನು.

1) ಅಥವಾ: ನನ್ನ ನ್ಯಾಯಕ್ಕೆ ವಿರುದ್ಧವಾಗಿ ನಾನು ಸುಳ್ಳಾಡಬೇಕೋ? 2) ಮೂಲ: ಅಪಹಾಸ್ಯವನ್ನು. 3) ಅಥವಾ: ...ಷ್ಯನ ಮೇಲೆ ಕಣ್ಣಿಟ್ಟು. 4) ಅಥವಾ: ನೀನು ಮೂರ್ಖನೆಂದು ರಾಜನಿಗೂ ನೀವು ಕೆಟ್ಟವರೆಂದು ಪ್ರಧಾನರಿಗೂ ಹೇಳಬಹುದೇ? ...ತಿಗಳಿಗೆ ಮುಖದಾಕ್ಷಿಣ್ಯವನ್ನು ತೋರಿಸದೆ ಬಡವರು ಬಲ್ಲಿದರು ಎಂಬ ಭೇದವನ್ನು ಮಾಡದೆ ಇರುವಾತನಿಗೆ ಇಂಥ ಮಾತುಗಳನ್ನು ಹೇಗೆ ...ಬಹುದು!

29 ಆತನು 1)ನೆಮ್ಮದಿಯನ್ನು ದಯಪಾಲಿಸಿದರೆ
ತಪ್ಪುಹೊರಿಸುವವರು ಯಾರು?
ವಿಮುಖನಾದರೆ ಆತನ ದರ್ಶನ ಮಾಡುವವರಾರು?
ಆತನು ಜನಾಂಗಕ್ಕಾಗಲಿ ಮನುಷ್ಯನಿಗಾಗಲಿ ಮಾಡು
ವದೆಲ್ಲಾ ಹೀಗೆಯೇ.
30 ಭ್ರಷ್ಟನು ಆಳಬಾರದು,
ಯಾರೂ ಜನರಿಗೆ ಉರುಲಾಗಕೂಡದು ಎಂಬದೇ
ಆತನ ಉದ್ದೇಶ.
31 ಮನುಷ್ಯನು ದೇವರನ್ನು ಕುರಿತು—
ನಾನು ಕೆಟ್ಟದ್ದನ್ನು ಮಾಡದಿದ್ದರೂ [ದಂಡನೆಯನ್ನು]
ಸಹಿಸಿಕೊಂಡಿದ್ದೇನೆ.
32 ನಾನು ಕಾಣದಿರುವದನ್ನು ನೀನೇ ಸೂಚಿಸು;
ನಾನು ಒಂದು ವೇಳೆ ಅನ್ಯಾಯವನ್ನು ಮಾಡಿದ್ದರೂ
ಇನ್ನು ಮಾಡುವದಿಲ್ಲ ಎಂದು ಹೇಳುವದಕ್ಕಾ
ದೀತೇ?
33 ಆತನು ಕೊಡುವ ಪ್ರತಿಫಲವನ್ನು ಬೇಡವೆನ್ನುವದೇಕೆ?
ಅದು ನಿನ್ನ ಮನಸ್ಸಿಗೆ ಒಪ್ಪಿತವಾಗಿರಬೇಕೋ?
ನೀನೇ ಆರಿಸಿಕೋ, ನಾನು ಆರಿಸಿಕೊಳ್ಳಲಾರೆನು.
ನಿನಗೆ ತಿಳಿದದ್ದನ್ನು ತಿಳಿಸು.
34 ಬುದ್ಧಿವಂತರೂ ನನ್ನ ಕಡೆಗೆ ಕಿವಿಗೊಡುವ ಪ್ರತಿಯೊಬ್ಬ
ಜ್ಞಾನಿಯೂ [ನಿನ್ನ ವಿಷಯವಾಗಿ]—
35 ಯೋಬನು ತಿಳುವಳಿಕೆಯಿಲ್ಲದೆ ನುಡಿಯುತ್ತಾನೆ,
ಅವನ ಮಾತುಗಳಲ್ಲಿ ಬುದ್ಧಿಯಿಲ್ಲ.
36 ಯೋಬನ ಪರಿಶೋಧನೆಯು ನಿರಂತರವಾಗಿದ್ದರೆ
ಸಂತೋಷ!
ದುಷ್ಟರ ಹಾಗೆ ಉತ್ತರಕೊಡುತ್ತಾನಲ್ಲವೆ;
37 ಅವನು ಅಪರಾಧವನ್ನಲ್ಲದೆ ದೇವದ್ರೋಹವನ್ನೂ ಮಾಡಿ
ದ್ದಾನೆ;
ನಮ್ಮ ಮಧ್ಯದಲ್ಲಿ ಚಪ್ಪಾಳೆಹೊಡೆದು
ದೇವರಿಗೆ ವಿರುದ್ಧವಾಗಿ ಅಧಿಕಪ್ರಸಂಗಮಾಡುತ್ತಾನೆ
ಎಂದು ನನಗೆ ಹೇಳುವರು.

35 ಆ ಮೇಲೆ ಎಲೀಹು ಮತ್ತೆ ಇಂತೆಂದನು—
2 [ನೀತಿಯಿಂದ] 2)ನನಗೇನು ಪ್ರಯೋಜನವಾ
ಯಿತು.
ಪಾಪಮಾಡದೆ ಇದ್ದದರಿಂದ ನನಗಾದ ಹೆಚ್ಚು ಲಾಭ
ವೇನು ಅಂದುಕೊಳ್ಳುವದು
3 ನ್ಯಾಯವೆಂದು ನೀನು ಊಹಿಸಿಕೊಂಡು
3)ನನ್ನ ನೀತಿಯು ದೇವರ ನೀತಿಗಿಂತ ಹೆಚ್ಚೆಂದುಕೊಳ್ಳು
ತ್ತೀಯಾ?
4 ನಾನು ನಿನಗೂ ನಿನ್ನ ಜೊತೆಗಾರರಿಗೂ ಕೂಡ ಉತ್ತರ
ಕೊಡುವೆನು.

5 ಕಣ್ಣೆತ್ತಿ ಗಗನಮಂಡಲವನ್ನು ನೋಡು,
ಮೇಘಮಾರ್ಗವನ್ನು ದೃಷ್ಟಿಸು, ಅವು ನಿನಗಿಂತ ಎಷ್ಟೊ
ಎತ್ತರವಾಗಿವೆ!
ನೀನು ಪಾಪಮಾಡಿದ್ದರೆ ಆತನಿಗೆ ಏನು ಮಾಡಿದಂತ
ಯಿತು?
ನಿನ್ನ ದ್ರೋಹಗಳು ಹೆಚ್ಚಾಗಿದ್ದರೂ ಆತನಿಗೇನು?
ನೀನು ನೀತಿವಂತನಾಗಿದ್ದರೆ ಆತನಿಗೇನು ಕೊಟ್ಟಂತ
ಯಿತು?
ನಿನ್ನ ಕೈಯಿಂದ ಆತನಿಗೆ ಲಾಭವೇನು?
ನಿನ್ನ ಕೆಟ್ಟತನದಿಂದ ನಿನ್ನಂಥವನಿಗೇ [ನಷ್ಟವಾದೀತು]
ನಿನ್ನ ನೀತಿಯಿಂದ ನರಜನ್ಮದವನಿಗೇ [ಲಾಭ ಸಿಕ್ಕೀತು]

ಅಪಾರವಾದ ಹಿಂಸೆಗಳಿಗೆ ಒಳಪಟ್ಟವರು ಮೊ
ಯಿಡುತ್ತಾ
ಬಲಿಷ್ಠರ ಭುಜಬಲದಿಂದ ಪೀಡಿತರಾಗಿ ಕೂಗಿಕೊಳ್ಳು
ವರೇ ಹೊರತು
ನನ್ನ ಸೃಷ್ಟಿಕರ್ತನಾದ ದೇವರು ಎಲ್ಲಿ,
ಆತನು ರಾತ್ರಿಯಲ್ಲಿಯೂ ಕೀರ್ತನೆಗಳನ್ನು ಹಾ
ಮಾಡುತ್ತಾನಲ್ಲಾ;
ಕಾಡುಮೃಗಗಳಿಗಿಂತ ನಮಗೆ ಹೆಚ್ಚು ಜ್ಞಾನವನ್ನು
ಬೋಧಿಸುತ್ತಾ
ಆಕಾಶದ ಪಕ್ಷಿಗಳಿಗಿಂತ ಹೆಚ್ಚು ಬುದ್ಧಿಯನ್ನು ನಮ
ಕಲಿಸುತ್ತಾನೆ ಎಂದು ಹೇಳಿಕೊಳ್ಳುವದೇ ಇಲ್ಲ.
ಇಂಥಾ ಸಂದರ್ಭದಲ್ಲಿ ಅವರು ದುಷ್ಟರ ಸೊಕ್ಕಿನಿಂ
ನೊಂದು ಗೋಳಾಡುವರು,
ಆದರೂ ಆತನು ಉತ್ತರವನ್ನು ದಯಪಾಲಿಸುವದಿಲ್ಲ
ದೇವರು ಪೊಳ್ಳುಮಾತಿಗೆ ಕಿವಿಗೊಡುವದೇ ಇಲ್ಲ,
ಸರ್ವಶಕ್ತನು ಅದನ್ನು ಎಂದಿಗೂ ಲಕ್ಷಿಸುವದಿಲ್ಲ.
4)ಹೀಗಿರಲು ಆತನು ಕಾಣುವದಿಲ್ಲ, ನನ್ನ ವ್ಯಾಜ್ಯ
ಆತನ ಮುಂದೆ ಬಿದ್ದೇ ಇದೆ,
ಆತನನ್ನು ಕಾದಿರುತ್ತೇನೆ ಎಂದು ನೀನು ಹೇಳಿದ
ಆತನು ಕೇಳಾನೇ?
ಆತನು [ದುಷ್ಟರ ಮೇಲೆ] ತನ್ನ ಕೋಪವನ್ನು ತೀ
ಸದೆ ಇರುವ ಕಾರಣ
ಆಹಾ, ಆತನು ದ್ರೋಹವನ್ನು ವಿಶೇಷವಾಗಿ ಗವ
ನಿಸುವದಿಲ್ಲವೆಂದು
ಈಗ ಯೋಬನು ಸುಮ್ಮನೆ ಬಾಯಿಬಿಟ್ಟುಕೊಂಡ
ಯಾವ ತಿಳುವಳಿಕೆಯೂ ಇಲ್ಲದೆ ಬಹಳ ಮಾತಾಡ
ತ್ತಾನೆ.

ಆ ಮೇಲೆ ಎಲೀಹು ಮತ್ತೆ ಹೀಗೆಂದನು—
ಸ್ವಲ್ಪ ತಾಳು, ನಾನು ತಿಳಿಸುತ್ತೇನೆ, 2
ದೇವರ ಪಕ್ಷವಾಗಿ ಹೇಳತಕ್ಕ ಮಾತುಗಳು ಇನ
ಕೆಲವುಂಟು.
ದೂರದಿಂದ ಸಂಪಾದಿಸಿದ ನನ್ನ ತಿಳುವಳಿಕೆಯ ಪ್ರಕ

1) ಅಥವಾ: ಸುಮ್ಮನಿದ್ದರೆ. 2) ಅಥವಾ: ನಿನಗೇನು. 3) ಅಥವಾ: ನನ್ನ ನೀತಿಯು ದೇವರ ಮುಂದೆ ಕಾಣಿಸು
ಕೊಳ್ಳುತ್ತೀಯಾ?
4) ಅಥವಾ: ಹೀಗಿರಲು ಆತನ ದರ್ಶನವಾಗುವದಿಲ್ಲವೆಂದು ನೀನು ಹೇಳಿದರೆ ಆತನು ಕೇಳಾನೇ?
ನಿನ್ನ ವ್ಯಾಜ್ಯವು ಆತನ ಚಿತ್ತಕ್ಕೆ ಬಂದಿದೆ, ಆತನನ್ನು ಕಾದುಕೊಂಡಿರು.

ನನ್ನ ಸೃಷ್ಟಿಕರ್ತನನ್ನು ಧರ್ಮಸ್ವರೂಪನೆಂದು ಹೊಗಳುವೆನು.
4 ನನ್ನ ಮಾತುಗಳು ಸುಳ್ಳಲ್ಲವೆಂಬದು ನಿಶ್ಚಯ,
ನಿನ್ನ ಬಳಿಯಲ್ಲಿ ಜ್ಞಾನಪೂರ್ಣನೊಬ್ಬನು ಇದ್ದಾನೆ.

5 ಇಗೋ, ದೇವರು ಮಹಾಶಕ್ತನಾಗಿದ್ದರೂ ಯಾರನ್ನೂ ತಿರಸ್ಕರಿಸುವದಿಲ್ಲ,
ಆತನ ಬುದ್ಧಿಸಾಮರ್ಥ್ಯವು ಅಪಾರವಾಗಿದೆ.
6 ಆತನು ದುಷ್ಟರ ಪ್ರಾಣವನ್ನು ಉಳಿಸುವದಿಲ್ಲ,
ಗತಿಹೀನರ ನ್ಯಾಯವನ್ನು ಸ್ಥಾಪಿಸುವನು.
7 ನೀತಿವಂತರಿಂದ ತನ್ನ ಕಟಾಕ್ಷವನ್ನು ತಿರುಗಿಸದೆ
ಅರಸರೊಂದಿಗೆ ಸಿಂಹಾಸನದ ಮೇಲೆ ಶಾಶ್ವತವಾಗಿ ಕೂತುಕೊಳ್ಳುವ
ಉನ್ನತಪದವಿಗೆ ಅವರನ್ನು ತರುವನು.
8 ಅವರು ಒಂದು ವೇಳೆ ಬಂಧಕ್ಕೆ ಸಿಕ್ಕಿ
ಬಾಧೆಗಳೆಂಬ ಹಗ್ಗಗಳಿಂದ ಕಟ್ಟಲ್ಪಟ್ಟಿದ್ದರೆ,
9 ಆತನು ಅವರ ದುಷ್ಕೃತ್ಯವನ್ನೂ
ಸೊಕ್ಕಿನ ದ್ರೋಹಗಳನ್ನೂ ಅವರಿಗೆ ತೋರಿಸುವನು.
10 ಇದಲ್ಲದೆ ಶಿಕ್ಷಣವನ್ನು ಕೇಳುವಂತೆ ಅವರ ಕಿವಿಯನ್ನು ತೆರೆದು
ಅಧರ್ಮವನ್ನು ಬಿಟ್ಟುಬಿಡಬೇಕೆಂದು ಅವರಿಗೆ ಆಜ್ಞಾಪಿಸುವನು.
11 ಅವರು ಅದನ್ನು ಕೇಳಿ ಆತನನ್ನು ಸೇವಿಸಿದರೆ
ತಮ್ಮ ದಿನಗಳನ್ನು ಸುಖದಲ್ಲಿಯೂ
ವರುಷಗಳನ್ನು ಸಂತೋಷದಲ್ಲಿಯೂ ಕಳೆಯುವರು.
12 ಕೇಳದಿದ್ದರೆ ದೈವಾಸ್ತ್ರದಿಂದ ಅಳಿದುಹೋಗುವರು,
ಜ್ಞಾನಹೀನರಾಗಿಯೇ ಪ್ರಾಣಬಿಡುವರು.
13 ಭ್ರಷ್ಟಹೃದಯವುಳ್ಳವರಾದರೋ ಸಿಟ್ಟುಗೊಂಡಿರುವರು,
ಆತನು ಅವರನ್ನು ಬಂಧಿಸುವಾಗಲೂ [ಆತನಿಗೆ] ಮೊರೆಯಿಡುವದಿಲ್ಲ.
14 ಯೌವನದಲ್ಲೇ ಸಾಯುವರು.
ಅವರ ಜೀವವು ಪುರುಷಗಾಮಿಗಳ ಜೀವದಂತೆ ಕ್ಷಯಿಸುವದು.
15 ಬಾಧೆಪಡುವವರನ್ನು ಅವರ ಬಾಧೆಗಳ ಮೂಲಕವೇ ರಕ್ಷಿಸುವನು,
ಅವರು ಅನುಭವಿಸುವ ಹಿಂಸೆಯಿಂದಲೇ ಅವರ ಕಿವಿಯನ್ನು ತೆರೆಯುವನು.

16 ಇದೇ ಮೇರೆಗೆ ನಿನ್ನನ್ನೂ ಕಷ್ಟದೊಳಗಿಂದ ತಪ್ಪಿಸಿ
ಇಕ್ಕಟ್ಟಿಲ್ಲದ ವಿಶಾಲಸ್ಥಳಕ್ಕೆ ಬರಮಾಡಬೇಕೆಂಬದೂ,
ನಿನ್ನ ಮೇಜಿನ ಆಹಾರಗಳು ತುಪ್ಪದಿಂದ ತುಂಬಿರಬೇಕೆಂಬದೂ ಆತನ ಉದ್ದೇಶವಾಗಿದೆ.
17 ನೀನಾದರೋ ದುಷ್ಟನಿರ್ಣಯಗಳಿಂದ ತುಂಬಿದವನಾಗಿ
ನ್ಯಾಯವಿಚಾರಣೆಗೂ ನ್ಯಾಯತೀರ್ಪಿಗೂ ಒಳಗಾಗಿದ್ದೀ.
18 ನಿನ್ನ ಸಿಟ್ಟು ನಿನ್ನನ್ನು ಮರುಳುಗೊಳಿಸಿ ಕುಚೋದ್ಯಕ್ಕೆ ನೂಕೀತು, ನೋಡಿಕೋ!
ಕೊಡಬೇಕಾದ ಈಡು ದೊಡ್ಡದೆಂದು ಹಿಂದೆಗೆಯಬೇಡ!
ಕಷ್ಟಾನುಭವವಿಲ್ಲದೆ ನಿನ್ನ ಐಶ್ವರ್ಯವೂ 19
ಘನಸಾಮರ್ಥ್ಯವೂ ಈಡಾದಾವೇ?
ಜನಾಂಗಗಳು ತಟ್ಟನೆ ನಿರ್ಮೂಲವಾಗುವ ರಾತ್ರಿ 20
ಯನ್ನು ಬಯಸಬೇಡ.
ಎಚ್ಚರಿಕೆಯಾಗಿರು, ಅಧರ್ಮದ ಕಡೆಗೆ ಕಾಲಿಕ್ಕಬೇಡ. 21
ಕಷ್ಟವನ್ನು ಅನುಭವಿಸಲೊಲ್ಲದೆ ಅಧರ್ಮವನ್ನೇ ಆರಿಸಿಕೊಂಡಿದ್ದೀ.

ಇಗೋ, ದೇವರು ತನ್ನ ಶಕ್ತಿಯಿಂದ ಉನ್ನತ 22
ಕಾರ್ಯಗಳನ್ನು ನಡಿಸುವನು,
ಆತನಂಥ ಉಪದೇಶಕನು ಯಾರು?
ಆತನ ಮಾರ್ಗವನ್ನು ಆತನಿಗೆ ಯಾರು ನೇಮಿಸಿದರು? 23
ನೀನು ಅನ್ಯಾಯವನ್ನು ನಡಿಸಿದಿ ಎಂದು ಹೇಳಬಲ್ಲವರಾರು?
ಮನುಷ್ಯರು ಕೀರ್ತಿಸಿರುವ ಆತನ ಕೆಲಸವನ್ನು 24
ಹೊಗಳಲು ಮರೆಯಬೇಡ.
ಎಲ್ಲಾ ಮನುಷ್ಯರೂ ಅದನ್ನು ಕಂಡಿದ್ದಾರೆ; 25
ನರನು ದೂರದಿಂದ ನೋಡುತ್ತಾನಷ್ಟೆ.

ಆಹಾ, ದೇವರು ಮಹೋನ್ನತನಾಗಿದ್ದಾನೆ, 26
ನಾವು ಆತನನ್ನು ಅರಿಯಲಾರೆವು;
ಆತನ ವರುಷಗಳು ಅಸಂಖ್ಯಾತವಾಗಿವೆ.
ನೀರಿನ ಹನಿಗಳನ್ನು ಎಳೆದುಕೊಳ್ಳುವನು, 27
ಅವು ತಿಳಿಮಳೆಯಾಗಿ ಆತನ ಮಂಜಿನಿಂದ ಉದುರುವವು.
ಮೋಡಗಳು ಅದನ್ನು ಸುರಿಸಿ 28
ಬಹುಜನರ ಮೇಲೆ ಚಿಮುಕಿಸುವವು.

ಹಾ, ಮೇಘಗಳ ಹಬ್ಬುಗೆಯನ್ನೂ 29
ಆತನ ಗುಡಾರದಲ್ಲಿನ ಗರ್ಜನೆಗಳನ್ನೂ ಗ್ರಹಿಸಬಹುದೇ?
ಇಗೋ, ತನ್ನ ಪ್ರಕಾಶವನ್ನು ಸುತ್ತಲು ಹರಡಿ 30
ಕೊಂಡು
ಅದನ್ನು ಜಲಸಮೂಹಗಳಿಂದ ಕವಿಸಿಕೊಳ್ಳುವನು.
ಮೋಡಗಳ ಮುಖಾಂತರವಾಗಿಯೇ ಜನಾಂಗಗಳಿಗೆ 31
ನ್ಯಾಯವನ್ನು ವಿಧಿಸಿ
ಆಹಾರವನ್ನು ಧಾರಾಳವಾಗಿ ದಯಪಾಲಿಸುವನಷ್ಟೆ.
ಕೈತುಂಬಾ ಸಿಡಿಲನ್ನು ಹಿಡಿದು 32
ನೀನು ವೈರಿಯನ್ನು 1)ಹೊಡೆ ಎಂದು ಅದನ್ನು ಬಿಡುವನು.
ಅದರ ಆರ್ಭಟವು ಆತನ ವಿಷಯವಾಗಿ ಪ್ರಕಟಿಸು 33
ವದು,
ದನಗಳು ಸಹ ಆತನ ಆಗಮನವನ್ನು ತಿಳಿಸುವವು.

37
ಇದಲ್ಲದೆ ನನ್ನ ಎದೆಯು ಅದಕ್ಕೆ ತತ್ತರಗೊಂಡು
ತನ್ನ ಸ್ಥಳದಿಂದ ಹಾರುವದು.

1) ಪಾಠಾಂತರ: ಗುರಿಗೆ ತಗಲು.

2 ಗುಡುಗುಟ್ಟುವ ಆತನ ಧ್ವನಿಗೆ ಕಿವಿಗೊಡಿರಿ,
ಆತನ ಬಾಯಿಂದ ಹೊರಡುವ ಮೊಳಗನ್ನು ಕೇಳಿರಿ!
3 ಆತನು ಅದನ್ನು ಆಕಾಶಮಂಡಲದಲ್ಲೆಲ್ಲಾ ಹಬ್ಬಿಸಿ
ತನ್ನ ಸಿಡಿಲನ್ನು ಭೂಮಿಯ ಅಂಚುಗಳ ವರೆಗೂ ಬಿಡುವನು.
4 ಸಿಡಿಲಿನ ತರುವಾಯ ಗರ್ಜನೆಯುಂಟಾಗುವದು,
ಆತನು ತನ್ನ ಮಹಿಮೆಯ ಶಬ್ದದಿಂದ ಗುಡುಗುವನು.
ಈ ಶಬ್ದವು ಕೇಳಿಸಿದ ಮೇಲೆಯೂ ಆತನು ಸಿಡಿಲುಗಳನ್ನು ತಡೆಯುವದಿಲ್ಲ.
5 ದೇವರು ತನ್ನ ಧ್ವನಿಯಿಂದ ಅದ್ಭುತವಾಗಿ ಗುಡುಗುವನು;
ನಾವು ಗ್ರಹಿಸಲಾಗದ ಮಹಾಕಾರ್ಯಗಳನ್ನು ನಡಿಸುವನು.

6 ಆತನು ಹಿಮಕ್ಕೂ ಹದ ಮಳೆಗೂ ತನ್ನ ಶಕ್ತಿಯ ದೊಡ್ಡ ಮಳೆಗೂ
ಭೂಮಿಯ ಮೇಲೆ ಬೀಳು ಎಂದು ಅಪ್ಪಣೆಮಾಡುವನು.
7 ಆತನು ತನ್ನ ಕೆಲಸವನ್ನು ಎಲ್ಲರೂ ತಿಳಿದುಕೊಳ್ಳಬೇಕೆಂದು
ಪ್ರತಿಯೊಬ್ಬನ ಕೈಯನ್ನು ಮುದ್ರಿಸುವನು.
8 ಆಗ ಮೃಗಗಳೂ ಗುಹೆಗಳನ್ನು ಸೇರಿ
ತಮ್ಮ ಹಕ್ಕೆಗಳಲ್ಲಿ ವಾಸಿಸುವವು.
9 ಆತನ ಭಂಡಾರದಲ್ಲಿಂದ ಬಿರುಗಾಳಿಯೂ
ಉತ್ತರದಿಕ್ಕಿನಿಂದ ಚಳಿಯೂ ಬರುವವು.
10 ದೇವರ ಶ್ವಾಸದಿಂದ ನೀರು ಮಂಜುಗಡ್ಡೆಯಾಗುವದು,
ವಿಶಾಲವಾದ ನೀರು ಗಟ್ಟಿಯಾಗುವದು.

11 ಇದಲ್ಲದೆ ಮೋಡಗಳ ಮೇಲೆ ಮಂಜಿನ ಭಾರವನ್ನು [1]ಹೇರಿ
ತನ್ನ ಮಿಂಚಿನ ಮೇಘಮಂಡಲವನ್ನು ಹರಡುವನು.
12 ಸಿಡಿಲುಗಳು ಭೂಮಂಡಲದಲ್ಲೆಲ್ಲಾ ತಾನು ವಿಧಿಸುವದನ್ನೇ ಮಾಡಲಿ ಎಂದು
ಅವುಗಳನ್ನು ನಡೆಯಿಸಿ ಸುತ್ತಮುತ್ತಲು ತಿರುಗಿಸುವನು.
13 ಆತನು ದಂಡನೆಗಾಗಲಿ ತನ್ನ ಭೂಮಿಯ ಹಿತಕ್ಕಾಗಲಿ
ಕೃಪೆದೋರುವದಕ್ಕಾಗಲಿ ಆ ಮೇಘಗಳನ್ನು ಬರಮಾಡುವನು.

14 ಯೋಬನೇ, ಇದನ್ನು ಕೇಳು!
ಸುಮ್ಮನೆ ನಿಂತು ದೇವರ ಅದ್ಭುತಕಾರ್ಯಗಳನ್ನು ಧ್ಯಾನಿಸು.
15 ದೇವರು ಇವುಗಳಿಗೆ ನಿಯಮಮಾಡಿ
ತನ್ನ ಮೇಘದ ಸಿಡಿಲು ಹೊಳೆಯ ಮಾಡುವ ರೀತಿ ನಿನಗೆ ಗೊತ್ತಿದೆಯೋ?
16 ಮೋಡಗಳ ತೂಗಾಟವನ್ನೂ
ಜ್ಞಾನಪೂರ್ಣನ ಅದ್ಭುತಕಾರ್ಯಗಳನ್ನೂ ತಿಳಿದುಕೊಂಡಿದ್ದೀಯಾ?

ಭೂಮಿಯು ತೆಂಕಣಗಾಳಿಯ ದೆಸೆಯಿಂದ ಸ್ತಬ್ಧವಾಗಿರುವ ಸಮಯದಲ್ಲಿ
ಉಡುಪಿನ ಬಿಸಿಯನ್ನು ಅನುಭವಿಸಿದವನೇ,
ತಗಡು ಬಡಿದು ಎರಕದ ದರ್ಪಣದಷ್ಟು ಗಟ್ಟಿಯಾಗಿರುವ
ಆಕಾಶಮಂಡಲವನ್ನು ಆತನ ಹಾಗೆ ನಿರ್ಮಿಸಬಹುದೇ?
ಆತನಿಗೆ ಹೇಳತಕ್ಕದ್ದನ್ನು ನಮಗೆ ನೀನೇ ತಿಳಿಸು,
ಅಂಧಕಾರವು ನಮಗೆ ಕವಿದಿರುವದರಿಂದ ವಾಕ್ಯವನ್ನು ಸರಿಪಡಿಸಿಕೊಳ್ಳಲಾರೆವು.
ನಾನು ಮಾತಾಡಬೇಕೆಂದು ಆತನಿಗೆ ಹೇಳಿ ಕಳುಹಿಸೇನೋ?
ತಾನು ನಾಶವಾಗಬೇಕೆಂದು ಯಾವನಾದರೂ ಅರಿಕೆಮಾಡುವದುಂಟೇ?

ಇಗೋ, ಗಾಳಿಯು ಬೀಸಿ ಗಗನವನ್ನು ಶುಭ್ರಪಡಿಸಲು
ಅಲ್ಲಿ ಪ್ರಜ್ವಲಿಸುವ ಪ್ರಕಾಶವನ್ನು ಯಾರೂ ದಿಟ್ಟಿಸಿ ನೋಡಲಾರರು.
ಬಡಗಣ ದಿಕ್ಕಿನಿಂದ ಹೊನ್ನಿನ ಹೊಳಪು ಹೊರಡುವದು,
ದೇವರು ಭಯಂಕರತೇಜಸ್ಸನ್ನು ಧರಿಸಿಕೊಂಡಿದ್ದಾನೆ.
ಇಂಥ ಸರ್ವಶಕ್ತನನ್ನು ನಾವು ಕಂಡುಹಿಡಿಯಲಾರೆವು; ಆತನ ಪರಾಕ್ರಮವು ಬಹಳ;
ಆತನು ನ್ಯಾಯವನ್ನಾಗಲಿ ಪರಿಪೂರ್ಣ ಧರ್ಮವನ್ನಾಗಲಿ ಕುಂದಿಸುವದಿಲ್ಲ.
ಆದಕಾರಣ ಮನುಷ್ಯರು ಆತನಿಗೆ ಭಯಪಡುವರು,
ಜ್ಞಾನಿಗಳೆಂದು ಎಣಿಸಿಕೊಳ್ಳುವವರನ್ನು ಆತನು ಲಕ್ಷಿಸುವದೇ ಇಲ್ಲ.

3 ಆಗ ಯೆಹೋವನು ಬಿರುಗಾಳಿಯೊಳಗಿಂದ ಯೋಬನಿಗೆ ಪ್ರತ್ಯುತ್ತರವಾಗಿ ಹೀಗೆಂದನು—
ಅಜ್ಞಾನದ ಮಾತುಗಳಿಂದ ಸತ್ಯಾಲೋಚನೆಯನ್ನು ಮಂಕುಮಾಡುವ ಇವನು ಯಾರು?
ಶೂರನಂತೆ ನಡುಕಟ್ಟಿಕೋ;
ನಾನು ಪ್ರಶ್ನೆಮಾಡುವೆನು, ನೀನೇ ನನಗೆ ಉಪದೇಶಿಸು.

ನಾನು ಲೋಕಕ್ಕೆ ಅಸ್ತಿವಾರಹಾಕಿದಾಗ ನೀನು ಎಲ್ಲಿದ್ದಿ?
ನೀನು ಜ್ಞಾನಿಯಾಗಿದ್ದರೆ ಹೇಳು.
ಅದರ ಅಳತೆಗಳನ್ನು ಯಾರು ಗೊತ್ತುಮಾಡಿದರು? ನೀನೇ ಬಲ್ಲೆ.
ಅದರ ಮೇಲೆ ನೂಲುಹಿಡಿದವರು ಯಾರು?
ಮುಂಜಾನೆ ನಕ್ಷತ್ರಗಳು ಒಟ್ಟಾಗಿ ಉತ್ಸಾಹಧ್ವನಿಯೆತ್ತುತ್ತಾ
ದೇವಕುಮಾರರೆಲ್ಲರೂ ಆನಂದಘೋಷಮಾಡುತ್ತಾ ಇರಲು

1) ಪಾಠಾಂತರ: ಹೇರುವನು, ಮೇಘಮಂಡಲವು ಆತನ ಸಿಡಿಲನ್ನು ಅಲ್ಲಲ್ಲಿ ಎಸೆಯುವದು.

7 ಭೂಲೋಕದ 1)ಸುಣ್ಣಪಾದಗಳು ಯಾವದರಲ್ಲಿ ನೆಲೆಗೊಂಡವು?
ಅದರ ಮೂಲೆಗಲ್ಲನ್ನು ಹಾಕಿದವರು ಯಾರು?

8 ಸಮುದ್ರವು ಗರ್ಭವನ್ನು ಭೇದಿಸಿಕೊಂಡು ಬರಲು
ಅದರ ದ್ವಾರಗಳನ್ನು ಮುಚ್ಚಿದವರು ಯಾರು?
9 ಆ ಕಾಲದಲ್ಲಿ ನಾನು ಮೋಡಗಳನ್ನು ಅದಕ್ಕೆ ವಸ್ತ್ರವನ್ನಾಗಿಯೂ
ಕಾರ್ಗತ್ತಲನ್ನು ಸುತ್ತುಬಟ್ಟೆಯನ್ನಾಗಿಯೂ ಮಾಡಿದೆನಲ್ಲವೆ!
10 ಇದಲ್ಲದೆ ಸಮುದ್ರಕ್ಕೆ ನನ್ನ ಇಷ್ಟದ ಎಲ್ಲೆಯನ್ನು 2)ಕಟ್ಟಿ
ಅಗುಳಿ ಕದಗಳನ್ನು ಹಾಕಿ
11 ಇಲ್ಲಿಯ ತನಕ ಬರಬಹುದು; ಮೀರಿ ಬರಬೇಡ,
ನಿನ್ನ ತೆರೆಗಳ ಹೆಮ್ಮೆಗೆ ಇಲ್ಲೇ ತಡೆಯಾಗುವದು
ಎಂದು ಅಪ್ಪಣೆಕೊಟ್ಟೆನು.

12 ನಿನ್ನ ಜೀವಮಾನದಲ್ಲಿ ಬೆಳಗಿಗೆ ಇರತಕ್ಕ ಸ್ಥಳವನ್ನು ಗೊತ್ತುಮಾಡಿದಿಯಾ?
ಭೂಮಿಯ ಅಂಚುಗಳನ್ನು ಹಿಡಿದು,
13 ದುಷ್ಟರನ್ನು ಅದರೊಳಗಿಂದ 3)ಒದರಿಬಿಡು ಎಂದು
ಉದಯಕ್ಕೆ ಅಪ್ಪಣೆಕೊಟ್ಟೆಯಾ?
14 ಮುದ್ರೆ ಒತ್ತಿದ ಜೇಡಿಮಣ್ಣಿನಂತೆ [ಬೆಳಗಾಗುವಾಗ]
ಭೂಮಿಯು ರೂಪಗಾಣುವದು.
[ಎಲ್ಲಾ ವಸ್ತುಗಳು] ಮುಂಗೊಂಡು ಹೊದಿಕೆಯೋಪಾದಿಯಲ್ಲಿ ಕಾಣಿಸುವವು.
15 ಮತ್ತು ದುಷ್ಟರಿಗೆ ಬೆಳಕಿಲ್ಲವಾಗುವದು,
ಎತ್ತಿದ ಕೈ ಮುರಿಯುವದು.

16 ಎಂದಾದರೂ ಸಮುದ್ರದ ಬುಗ್ಗೆಗಳೊಳಗೆ ಸೇರಿದ್ದೆಯೋ?
ಭೂಮಿಯ ಕೆಳಗಣ ಸಾಗರದ ಗುಪ್ತಪ್ರದೇಶಗಳಲ್ಲಿ ತಿರುಗಾಡಿದ್ದೀಯೋ?
17 ಮರಣದ ಬಾಗಲುಗಳು ನಿನಗೆ ಗೋಚರವಾದವೋ?
ಘೋರಾಂಧಕಾರದ ಕದಗಳನ್ನು ಕಂಡಿಯಾ?
18 ಭೂವಿಸ್ತಾರವನ್ನು ಗ್ರಹಿಸಿದ್ದೀಯೋ?
ಇದೆಲ್ಲಾ ನಿನಗೆ ತಿಳಿದಿದ್ದರೆ ತಿಳಿಸು.

19 ಬೆಳಕಿನ ನಿವಾಸಕ್ಕೆ ಹೋಗುವ ದಾರಿ ಎಲ್ಲಿ?
ಕತ್ತಲಿನ ಸ್ವಸ್ಥಳವು ಎಲ್ಲಿ?
20 ನೀನು ಆ ಒಂದೊಂದನ್ನೂ ಅದರದರ ಪ್ರಾಂತ್ಯಕ್ಕೆ ಕರಕೊಂಡು ಹೋಗಿ
ಅವುಗಳ ಮನೆಯ ಹಾದಿಗಳನ್ನು ಕಂಡುಕೊಳ್ಳಬಲ್ಲಿಯಾ?
21 ನಿನಗೆ ತಿಳಿದಿರಬೇಕು; ಆಗಲೂ ಹುಟ್ಟಿದ್ದೆಯಲ್ಲವೆ;
ನಿನ್ನ ದಿನಗಳ ಸಂಖ್ಯೆ ಬಹಳ ದೊಡ್ಡದು!

22 ನಾನು ಇಕ್ಕಟ್ಟಿನ ಕಾಲಕ್ಕಾಗಿಯೂ
ಯುದ್ಧಕದನಗಳ ದಿನಕ್ಕಾಗಿಯೂ ಇಟ್ಟುಕೊಂಡಿರುವ
ಹಿಮದ ಭಂಡಾರಗಳನ್ನು ಪ್ರವೇಶಿಸಿದ್ದೆಯೋ? 23
ಕಲ್ಮಳೆಯ ಬೊಕ್ಕಸಗಳನ್ನು ನೋಡಿದ್ದೆಯಾ?
ಬೆಳಕನ್ನು ಭಾಗಿಸುವದಕ್ಕೂ 24
ಬಿಸಿಗಾಳಿಯನ್ನು ಭೂಮಿಯ ಮೇಲೆ ವಿಸ್ತರಿಸುವದಕ್ಕೂ ಮಾರ್ಗವೆಲ್ಲಿ?
ನಿರ್ಜನಪ್ರದೇಶದಲ್ಲಿಯೂ 25
ಮನುಷ್ಯರೇ ಇಲ್ಲದ ಕಾಡಿನಲ್ಲಿಯೂ ಮಳೆಯನ್ನು ಸುರಿಸಿ
ಹಾಳುಬೀಳಾದ ಭೂಮಿಯನ್ನು ತೃಪ್ತಿಪಡಿಸಿ 26
ಹಸಿಯ ಹುಲ್ಲನ್ನು ಬೆಳೆಯಿಸಬೇಕೆಂದು
ವೃಷ್ಟಿಯ ಪ್ರವಾಹಕ್ಕೆ ಕಾಲಿವೆಯನ್ನೂ 27
ಗರ್ಜಿಸುವ ಸಿಡಿಲಿಗೆ ದಾರಿಯನ್ನೂ ಯಾರು ಕಡಿದರು?

ಮಳೆಗೆ ತಂದೆಯುಂಟೋ? 28
ಮಂಜಿನ ಹನಿಗಳನ್ನು ಪಡೆದವನು ಯಾರು?
ಹಿಮದ ಗಡ್ಡೆಯು ಯಾರ ಗರ್ಭದಿಂದ ಹೊರಟಿತು? 29
ಆಕಾಶದ ಇಬ್ಬನಿಯನ್ನು ಯಾರು ಹೆತ್ತರು?
ನೀರು ಕಲ್ಲಿನಂತೆ ಗಟ್ಟಿಯಾಗುವದು; 30
ಸಾಗರದ ಮೇಲ್ಭಾಗವೂ ಹೆಪ್ಪುಗೊಳ್ಳುವದು.

ನೀನು ಕೃತ್ತಿಕೆಯ ಸರಪಣಿಯನ್ನು ಬಿಗಿದು 31
ಮೃಗಶಿರದ ಬಂಧವನ್ನು ಬಿಚ್ಚುವಿಯಾ?
ಆಯಾ ಸಮಯದಲ್ಲಿ ನಕ್ಷತ್ರರಾಶಿಗಳನ್ನು ಬರಮಾಡುವಿಯೋ? 32
ಸಪ್ತರ್ಷಿಗಳನ್ನು ಪರಿವಾರದೊಡನೆ ನಡಿಸುವಿಯಾ?
ಖಗೋಲದ ಕಟ್ಟಳೆಗಳನ್ನು ತಿಳಿದುಕೊಂಡಿದ್ದೀಯೋ? 33
ಅದರ ಆಳಿಕೆಯನ್ನು ಭೂಮಿಯಲ್ಲಿ ಸ್ಥಾಪಿಸಿದ್ದೀಯಾ?

ಮೋಡಗಳನ್ನು ಮುಟ್ಟುವಂತೆ ನೀನು ಧ್ವನಿಯೆತ್ತಿದ ಮಾತ್ರಕ್ಕೆ 34
ಹೇರಳವಾದ ನೀರು ನಿನ್ನನ್ನು ಆವರಿಸುವದೋ?
ಸಿಡಿಲುಗಳು ನಿನ್ನ ಅಪ್ಪಣೆಯಂತೆ ಹೋಗಿ ಬಂದು— 35
ಇಗೋ, ಬಂದಿದ್ದೇವೆ ಎನ್ನುವವೋ?
ಯಾರು ಕಾರ್ಮುಗಿಲಿಗೆ ಜ್ಞಾನವನ್ನು ದಯಪಾಲಿಸಿದರು? 36
ಉತ್ಪಾತಗಳಿಗೆ ವಿವೇಕವನ್ನು ಅನುಗ್ರಹಿಸಿದವರು ಯಾರು?
ಜ್ಞಾನದಿಂದ ಯಾರು ಮೇಘಗಳನ್ನು ಲೆಕ್ಕಿಸುವರು? 37
ಆಕಾಶದಲ್ಲಿನ ಬುದ್ದಲಿಗಳನ್ನು ಮೊಗಚಿಹಾಕಿ
ದೂಳು ಹರಿದು ಒತ್ತಟ್ಟಿಗೆ ಸೇರುವಂತೆಯೂ 38
ಹೆಂಟೆಗಳು ಒಂದಕ್ಕೊಂದು ಅಂಟಿಕೊಳ್ಳುವಂತೆಯೂ ಯಾರು ಮಾಡುವರು?

ಗವಿಯಲ್ಲಿ ಮಲಗಿರುವ ಸಿಂಹದ ಆಹಾರಕ್ಕೋಸ್ಕರ 39
ಬೇಟೆಯಾಡುವಿಯಾ?
ಪೊದೆಯಲ್ಲಿ ಹೊಂಚುಹಾಕಿರುವ 40

---

1) ಅಂದರೆ ಗದ್ದುಗೇ ಕಲ್ಲು. 2) ಮೂಲ: ಕಡಿದು. 3) ಅಂದರೆ ಉದುರಿಸು.

ಪ್ರಾಯದ ಸಿಂಹಗಳ ಆಶೆಯನ್ನು ತೀರಿಸುವಿಯೋ?
41 ತಮ್ಮ ಮರಿಗಳು ಗುಟುಕಿಲ್ಲದೆ ಅಲೆಯುತ್ತಾ ದೇವರಿಗೆ ಮೊರೆಯಿಡುವಾಗ
ಕಾಗೆಗಳಿಗೆ ಆಹಾರವನ್ನು ಯಾರು ಒದಗಿಸುವರು?

39 ಬೆಟ್ಟದ ಮೇಕೆಗಳು ಈಯುವ ಸಮಯವನ್ನು ತಿಳಿದುಕೊಂಡಿದ್ದೀಯೋ?
ಹುಲ್ಲೆಗಳ ಹೆರಿಗೆಯನ್ನು ನೋಡಿಕೊಳ್ಳುವಿಯಾ?
2 ಅವು ಗಬ್ಬವನ್ನು ಹೊರುವ ತಿಂಗಳುಗಳನ್ನು ಲೆಕ್ಕಿಸಿ
ಈಯುವ ಕಾಲವನ್ನು ಗೊತ್ತುಮಾಡುವಿಯೋ?
3 ಅವು ಬೊಗ್ಗಿಕೊಂಡು ಮರಿಗಳನ್ನು ಹಾಕಿದೊಡನೆಯೇ
ತಮ್ಮ ವೇದನೆಯನ್ನೂ ತೊರೆದುಬಿಡುವವು.
4 ಅವುಗಳ ಮರಿಗಳು ಪುಷ್ಟಿಯಾಗಿ ಬಯಲಿನಲ್ಲಿ ಬೆಳೆದು
ಅಗಲಿದ ಮೇಲೆ ತಾಯಿಯ ಬಳಿಗೆ ಪುನಃ ಸೇರುವದೇ ಇಲ್ಲ.

5 ಕಾಡುಕತ್ತೆಯನ್ನು ಸ್ವತಂತ್ರವಾಗಿರುವಂತೆ ಯಾರು ಕಳುಹಿಸಿಬಿಟ್ಟರು?
ಅದರ ಕಟ್ಟನ್ನು ಬಿಚ್ಚಿದವರು ಯಾರು?
6 ನಾನು ಅಡವಿಯನ್ನು ಅದಕ್ಕೆ ಮನೆಯನ್ನಾಗಿಯೂ
ಸವುಳು ಭೂಮಿಯನ್ನು ಅದರ ನಿವಾಸವನ್ನಾಗಿಯೂ ಮಾಡಿದ್ದೇನಷ್ಟೆ.
7 ಅದು ಊರುಗದ್ದಲವನ್ನು ಧಿಕ್ಕರಿಸಿ
ಹೊಡೆಯುವವನ ಕೂಗಾಟವನ್ನು ಕೇಳಿದ್ದೇ ಇಲ್ಲ.
8 ಅದರ ಕಾವಲು ವಿಶಾಲವಾದ ಬೆಟ್ಟಗಳೇ.
ಹಸುರು ಎಲ್ಲಿದ್ದರೂ ಅದನ್ನು ಹುಡುಕುತ್ತಲೇ ಇರುವದು.

9 ಕಾಡುಕೋಣವು ನಿನ್ನನ್ನು ಸೇವಿಸಲು ಒಪ್ಪಿ
ನಿನ್ನ ಗೋದಲಿಯ ಹತ್ತಿರ ತಂಗುವದೋ?
10 ನೇಗಿಲಸಾಲಿಗೆ ತಪ್ಪದಂತೆ ಅದನ್ನು ಹಗ್ಗದಿಂದ ಕಟ್ಟುವಿಯಾ?
ಅದು ತಗ್ಗಿನ ಭೂಮಿಯಲ್ಲಿ ನಿನ್ನನ್ನು ಹಿಂಬಾಲಿಸಿ ಕುಂಟೆ ಎಳೆಯುವದೋ?
11 ಬಲ ಹೆಚ್ಚಾಗಿರುವದರಿಂದ ಅದರಲ್ಲಿ ನಂಬಿಕೆಯಿಟ್ಟು
ನಿನ್ನ ಕೆಲಸವನ್ನು ಅದಕ್ಕೆ ಒಪ್ಪಿಸಿಬಿಡುವಿಯೋ?
12 ಅದು ನಿನ್ನ ಕಣದಲ್ಲಿ ಕಾಳನ್ನು ಕೂಡಿಸಿ
ನಿನ್ನ ಬೆಳೆಯನ್ನು ಹೊತ್ತುಕೊಂಡು ಬರುವದೆಂದು ಭರವಸವಿಡುವಿಯಾ?

13 ಉಷ್ಟ್ರಪಕ್ಷಿಯ ಪಕ್ಷವು ಸಂತೋಷದಿಂದ ಬಡಿದಾಡುವದು,
ಆದರೆ ಅದರ ರೆಕ್ಕೆಗರಿಗಳಿಗೆ ಪ್ರೀತಿಭಾವವುಂಟೋ?
14 ಅದು ತನ್ನ ಮೊಟ್ಟೆಗಳನ್ನು ಭೂಮಿಯಲ್ಲಿಟ್ಟುಬಿಟ್ಟು
ದೂಳಿನಿಂದಲೇ ಅವುಗಳಿಗೆ ಕಾವು ಕೊಡಿಸುವದಲ್ಲವೇ.
15 ಕಾಲಿನಿಂದ ಮೆಟ್ಟಿಯಾರು,
ಕಾಡುಮೃಗ ತುಳಿದೀತು ಎಂದು ನೆನಸುವದೇ ಇಲ್ಲ.
16 ತನ್ನ ಮರಿಗಳನ್ನು ತನ್ನವುಗಳೆಂದೆಣಿಸದೆ ಬಾಧೆಗೊಳಪಡಿಸುವದು,
ತನ್ನ ಹೆರಿಗೆ ನಿಷ್ಫಲವಾದರೂ ಅದಕ್ಕೆ ಏನೂ ಚಿಂತ ಇಲ್ಲ.
ದೇವರು ಅದಕ್ಕೆ ಜ್ಞಾನವನ್ನು ಮರೆಮಾಡಿ
ವಿವೇಕವನ್ನು ದಯಪಾಲಿಸದೆ ಇದ್ದಾನಷ್ಟೆ!
ಅದು ರೆಕ್ಕೆಬಡಿಯುತ್ತಾ ನೀಳವಾಗಿ ಓಡುವ ಸಮಯದಲ್ಲಾದರೋ
ಕುದುರೆಯನ್ನೂ ಸವಾರನನ್ನೂ ಹೀಯಾಳಿಸುವದು.

ನೀನು ಕುದುರೆಗೆ ಶಕ್ತಿಯನ್ನು ಕೊಟ್ಟು
ಅದರ ಕೊರಳಿಗೆ ಅದರಾಟವನ್ನು ಸುತ್ತಿಸಿದಿಯೋ?
ಅದು ಮಿಡತೆಯ ಹಾಗೆ ಕುಪ್ಪಳಿಸಿ ಹಾರುವಂತೆ ಮಾಡಿದಿಯಾ?
ಅದರ ಕೆನೆತದ ಪ್ರತಾಪವು ಭಯಂಕರವಾಗಿದೆ.
ಅದು ತಗ್ಗಿನ ನೆಲವನ್ನು ಕೆರೆದು ತನ್ನ ಬಲಕ್ಕೆ ಹಿಗ್ಗಿ
ಸನ್ನಾಹದ ಸೈನ್ಯವನ್ನು ಎದುರಿಸಲು ಹೋಗುವದು
ಅದು ಕಳವಳಗೊಳ್ಳದೆ ಖಡ್ಗಕ್ಕೆ ಹಿಂದೆಗೆಯದೆ
ಭಯವನ್ನು ತಾತ್ಸಾರಮಾಡುವದು.
ಬತ್ತಳಿಕೆಯೂ ಥಳಥಳಿಸುವ ಬರ್ಜಿಯೂ ಈಟಿಯೂ
ಅದರ ಮೇಲೆ ಜಣಜಣಿಸುವವು.
ಅದು ತುತೂರಿಯ ಶಬ್ದವನ್ನು ಕೇಳಿದರೂ ನಿಲ್ಲದೆ
ಉಗ್ರತೆಯಿಂದ ಕಂಪಿಸುತ್ತಾ ನೆಲವನ್ನು ನುಂಗಿಬಿಡುವದೋ ಎಂಬಂತೆ ಓಡುವದು.
ತುತೂರಿಯೂದಿದಾಗೆಲ್ಲಾ ಆಹಾ ಎಂದುಕೊಂಡು
ಕಾಳಗ, ಆರ್ಬಟ, ಸೇನಾಪತಿಗಳ ಗರ್ಜನೆ,
ಇವುಗಳನ್ನು ದೂರದಲ್ಲಿದ್ದರೂ ಮೂಸಿನೋಡಿ ತಿಳಿಯುವದು.

ಗಿಡಗವು ತನ್ನ ರೆಕ್ಕೆಗಳನ್ನು ಹರಡಿ
ತೆಂಕಣ ದಿಕ್ಕಿಗೆ ಹಾರುವದು ನಿನ್ನ ವಿವೇಕದಿಂದಲೋ?
ಹದ್ದು ಮೇಲಕ್ಕೆ ಹಾರಿ
ಉನ್ನತದಲ್ಲಿ ಗೂಡುಮಾಡುವದು ನಿನ್ನ ಅಪ್ಪಣೆಯಿಂದಲೋ?
ಅದಕ್ಕೆ ಬಂಡೆಯೇ ನಿವಾಸವು;
ಅದು ಶಿಲಾಶಿಖರದಲ್ಲಿಯೂ ದುರ್ಗದಲ್ಲಿಯೂ ತಂಗುವದು.
ಅಲ್ಲಿಂದಲೇ ಬೇಟೆಯನ್ನು ನೋಡುತ್ತಾ
ದೂರದಲ್ಲಿದ್ದರೂ ಅದನ್ನು ಕಂಡುಹಿಡಿಯುವದು.
ಅದರ ಮರಿಗಳೂ ರಕ್ತವನ್ನು ಕುಡಿಯುವವು;
ಹತರಿದ್ದಲ್ಲಿ ಹದ್ದು.

4 ಇದಲ್ಲದೆ ಯೆಹೋವನು ಯೋಬನಿಗೆ—
ಆಕ್ಷೇಪಕನು ಸರ್ವಶಕ್ತನ ಸಂಗಡಲೂ ವ್ಯಾಜ್ಯವಾಡುವನೋ? 2
ದೇವರೊಂದಿಗೆ ವಿವಾದಮಾಡುವವನು ಇದಕ್ಕೆಲ್ಲಾ ಉತ್ತರಕೊಡಲಿ ಎಂದು ಹೇಳಿದನು.

ಆಗ ಯೋಬನು—
ಅಯ್ಯೋ, ನಾನು ಅಲ್ಪನೇ ಸರಿ, ನಿನಗೆ ಪ್ರತ್ಯುತ್ತರವಾಗಿ ಏನು ಹೇಳಲಿ?
ಬಾಯ ಮೇಲೆ ಕೈಯಿಟ್ಟುಕೊಳ್ಳುವೆನು.

5 ಒಂದು ಸಾರಿ ಮಾತಾಡಿದ್ದೇನೆ, ಪ್ರತಿವಾದಮಾಡ
ಲಾರೆನು;
ಎರಡು ಸಲ ಹೌದು; ಇನ್ನೇನೂ ನುಡಿಯಲೊಲ್ಲೆನು
ಎಂದು ಯೆಹೋವನಿಗೆ ಹೇಳಿದನು.

6 ಆ ಮೇಲೆ ಯೆಹೋವನು ಬಿರುಗಾಳಿಯೊಳ
ಗಿಂದ ಯೋಬನಿಗೆ ಪ್ರತ್ಯುತ್ತರವಾಗಿ ಹೀ
ಗೆಂದನು—
7 ಶೂರನಂತೆ ನಡುಕಟ್ಟಿಕೋ!
ನಾನು ಪ್ರಶ್ನೆಮಾಡುವೆನು, ನೀನೇ ನನಗೆ ಉಪದೇಶಿಸು.
8 ಏನು! ನನ್ನ ನೀತಿಯನ್ನು ಖಂಡಿಸಿಬಿಡುವಿಯಾ?
ನಿನ್ನ ನ್ಯಾಯವನ್ನು ಸ್ಥಾಪಿಸಿಕೊಳ್ಳಲಿಕ್ಕೆ ನನ್ನನ್ನು ಕೆಟ್ಟ
ವನೆಂದು ನಿರ್ಣಯಿಸುವಿಯೋ?
9 ನಿನ್ನ ಕೈಯೂ ದೇವರ ಕೈಯೂ ಸಮವೋ?
ದೇವರ ಧ್ವನಿಯಂತೆ ಗುಡುಗಬಲ್ಲಿಯಾ?
10 ನಿನ್ನನ್ನು ನೀನೇ ಮಹಿಮೆಘನತೆಗಳಿಂದ ಭೂಷಿಸಿ
ಕೊಂಡು
ಪ್ರಭಾವಮಹತ್ವಗಳನ್ನು ಧರಿಸಿಕೋ.
11 ತುಂಬಿ ತುಳುಕುವ ನಿನ್ನ ಕೋಪವನ್ನು ಎರಚಿ
ಪ್ರತಿಯೊಬ್ಬ ಗರ್ವಿಷ್ಠನ ಮೇಲೆ ಕಣ್ಣಿಟ್ಟು ಅವನನ್ನು
ತಗ್ಗಿಸು.
12 ಪ್ರತಿಯೊಬ್ಬ ಗರ್ವಿಷ್ಠನ ಮೇಲೆ ಕಣ್ಣಿಟ್ಟು ಕುಗ್ಗಿಸಿ
ದುಷ್ಟರನ್ನು ತಟ್ಟನೆ ಕೆಡವಿಬಿಡು.
13 ಅವರನ್ನು ಒಟ್ಟಿಗೆ ದೂಳಿನಲ್ಲಡಗಿಸಿ
ಅಂಧಕಾರಲೋಕದಲ್ಲಿ ಅವರ ಮುಖಕ್ಕೆ ಮುಸುಕು
ಹಾಕು.
14 ಹೀಗಾದರೆ ನಿನ್ನ ಬಲಭುಜವು ನಿನ್ನನ್ನು ರಕ್ಷಿಸಬಲ್ಲ
ದೆಂದು
ನಾನೇ ನಿನ್ನನ್ನು ಹೊಗಳುವೆನು.

15 ನಿನ್ನಂತೆ ನನ್ನ ಸೃಷ್ಟಿಯಾಗಿರುವ 1)ನೀರಾನೆ
ಯನ್ನು ನೋಡು;
ಎತ್ತಿನ ಹಾಗೆ ಹುಲ್ಲನ್ನು ಮೇಯುವದು.
16 ಇಗೋ, ಅದರ ಬಲವು ಸೊಂಟದಲ್ಲಿಯೂ
ಅದರ ಶಕ್ತಿಯು ಹೊಟ್ಟೆಯ ನರಗಳಲ್ಲಿಯೂ ಸೇರಿ
ಕೊಂಡಿವೆ.
17 ತನ್ನ ಬಾಲವನ್ನು ದೇವದಾರುವಿನ ಮರದಂತೆ ಬಾಗಿ
ಸುವದು;
ಅದರ ತೊಡೆಯ ನರಗಳು ಹೆಣೆದುಕೊಂಡಿವೆ.
18 ಅದರ ಮೂಳೆಗಳು ತಾಮ್ರದ ನಳಗಳಂತೆಯೂ
ಅದರ ಎಲುಬುಗಳು ಕಬ್ಬಿಣದ ಹಾರೆಗಳಂತೆಯೂ
ಇರುವವು.
19 ಅದು ದೇವರ ಸೃಷ್ಟಿಗಳಲ್ಲಿ ಮುಖ್ಯವಾದದ್ದು;
ಅದನ್ನು ನಿರ್ಮಿಸಿದವನು ಅದಕ್ಕೆ ಕೋರೆಹಲ್ಲೆಂಬ ಶಸ್ತ್ರ
ವನ್ನೂ ಒದಗಿಸಿದ್ದಾನೆ.
20 ಗುಡ್ಡಗಳು ಅದಕ್ಕೆ ಮೇವನ್ನು ಕೊಡುವವು;
ಕಾಡುಮೃಗಗಳೆಲ್ಲಾ ಅಲ್ಲಿ ಆಡುತ್ತಿರುವವು;
21 ಎಲಚಿ ಗಿಡಗಳ ಕೆಳಗೂ ಆಪಿನ ಮರೆಯಲ್ಲಿಯೂ
ಜವುಗು ಭೂಮಿಯಲ್ಲಿಯೂ ಮಲಗಿಕೊಳ್ಳುವದು.
ಎಲಚಿ ಗಿಡಗಳು ತಮ್ಮ ನೆರಳನ್ನು ಅದರ ಮೇಲೆ 22
ಹರಡುವವು,
ನದಿಯ ನೀರವಂಜಿಗಳು ಅದನ್ನು ಸುತ್ತಿಕೊಂಡಿರುವವು.
ಓಹೋ, ಹೊಳೆಯು ಹೊಡೆದರೂ ಅದು ಹೆದರುವದಿಲ್ಲ. 23
2)ಪ್ರವಾಹವು ಅದರ ಬಾಯೊಳಗೆ ನುಗ್ಗಿದರೂ ಧೈರ್ಯ
ದಿಂದಿರುವದು.
ಯಾವನಾದರೂ ಕಣ್ಣೆದುರಿಗೆ ಬಂದು ಅದನ್ನು ಹಿಡಿ 24
ದಾನೇ?
ಗಾಳದಿಂದ ಅದರ ಮೂಗನ್ನು ಚುಚ್ಚಬಲ್ಲನೇ?

41
ನೀನು 3)ಮೊಸಳೆಯನ್ನು ಗಾಳದಿಂದ ಎಳೆದು
ಹುರಿಯಿಂದ ಅದರ ನಾಲಿಗೆಯನ್ನು ಅದುಮಿ ಬಿಗಿ
ಯುವಿಯೋ?
ಅದರ ಮೂಗಿಗೆ ಆಪನ್ನು ಪೋಣಿಸುವಿಯಾ? 2
ದವಡೆಗೆ ಮುಳ್ಳನ್ನು ಚುಚ್ಚುವಿಯಾ?
ಅದು ನಿನಗೆ ಬಹಳವಾಗಿ ವಿಜ್ಞಾಪಿಸುವದೋ? 3
ನಿನ್ನ ಸಂಗಡ ಸವಿಮಾತಾಡೀತೇ?
ಅದನ್ನು ನೀನು ಸದಾ ಆಳಾಗಿ ಸೇರಿಸಿಕೊಳ್ಳುವಂತೆ 4
ನಿನ್ನೊಂದಿಗೆ ಒಪ್ಪಂದಮಾಡಿಕೊಳ್ಳುವದೋ?
ಅದನ್ನು ಪಕ್ಷಿಯಂತೆ ಆಡಿಸುವಿಯಾ? 5
ನಿನ್ನ ಹುಡುಗಿಯರ ವಿನೋದಕ್ಕಾಗಿ ಅದನ್ನು ಕಟ್ಟು
ವಿಯಾ?
ಪಾಲುಗಾರರಾದ ಬೆಸ್ತರು ಅದನ್ನು ವ್ಯಾಪಾರಕ್ಕೆ ಇಡು 6
ವರೋ?
ವರ್ತಕರಿಗೆ ಹಂಚಿ ಮಾರುವರೋ?
ಅದರ ಚರ್ಮವನ್ನೆಲ್ಲ ಕೊಂಡಿಗಳಿಂದಲೂ 7
ತಲೆಯನ್ನೆಲ್ಲ ಮೀನಿನ ಈಟಿಗಳಿಂದಲೂ ಚುಚ್ಚಬಲ್ಲಿ
ಯಾ?
ಅದರ ಮೇಲೆ ಕೈಹಾಕಿ ನೋಡು! 8
ಆ ಜಗಳವನ್ನು ನೆನಸಿಕೊಂಡರೆ ನೀನು ಮತ್ತೆ ಅದನ್ನು
ಮುಟ್ಟುವದೇ ಇಲ್ಲ.
ಆಹಾ, ಅದನ್ನು ಹಿಡಿಯಬೇಕೆಂಬ ನಿರೀಕ್ಷೆಯು ವ್ಯರ್ಥ! 9
ಹಿಡಿಯ ಬಂದವನು ನೋಡಿದ ಮಾತ್ರಕ್ಕೆ ಬಿದ್ದು
ಹೋಗುವನು.
ಅದನ್ನು ಕೆಣಕಲು ಧೈರ್ಯಗೊಳ್ಳುವಷ್ಟು ಉಗ್ರತೆಯು 10
ಯಾರಲ್ಲಿಯೂ ಇಲ್ಲ;
ಹೀಗಿರಲು ನನ್ನ ಮುಂದೆ ನಿಲ್ಲಬಲ್ಲವರು ಯಾರು?
ನಾನು ಸಾಲತೀರಿಸಬೇಕಾದರೆ ಮೊದಲು ಅದನ್ನು 11
ನನಗೆ ಕೊಟ್ಟವರು ಯಾರು?
ಆಕಾಶಮಂಡಲದ ಕೆಳಗಿರುವ ಸರ್ವಸ್ವವೂ ನನ್ನದೇ.

ನಾನು ಅದರ ಅಂಗಗಳನ್ನೂ ಶಕ್ತಿವಿಧಾನವನ್ನೂ 12
ಸೊಗಸಾದ ಜೋಡನೆಯನ್ನೂ ವರ್ಣಿಸದೆ ಸುಮ್ಮನಿರ
ಲಾರೆನು.
ಅದರ ಹೊರಬಟ್ಟೆಯನ್ನು ಯಾರು ತೆಗೆಯುವರು? 13
ಜೋಡು ದವಡೆಗಳೊಳಗೆ ಪ್ರವೇಶಿಸುವವರು ಯಾರು?
ಮುಖದ ಕದಗಳನ್ನು ಯಾರು ತೆರೆದಾರು? 14

1) ಮೂಲ: ಬೆಹೇಮೋತ್. 2) ಮೂಲ: ಯೊರ್ದನ್. 3) ಮೂಲ: ಲಿವ್ಯಾತಾನ್.

ಭಯವು ಅದರ ಹಲ್ಲುಗಳನ್ನು ಆವರಿಸಿಕೊಂಡಿದೆ.
15 [1])ಗುರಾಣಿಗಳ ಸಾಲುಗಳು ಅದರ ಹೆಚ್ಚಳಕ್ಕೆ ಆಸ್ಪದ ವಾಗಿವೆ.
ಅವು ಬಿಗಿದು ಮುದ್ರಿಸಲ್ಪಟ್ಟಿವೆ.
16 ಗಾಳಿಯು ಕೂಡ ನುಗ್ಗದಂತೆ
ಅವು ಒಂದಕ್ಕೊಂದು ಹೊಂದಿಕೊಂಡಿವೆ.
17 ಪರಸ್ಪರ ಅಂಟಿಕೊಂಡು
ವಿಂಗಡಿಸದ ಹಾಗೆ ಹಿಡಿದುಕೊಂಡಿವೆ.
18 ಅದರ ಸೀನಿನ ತುಂತುರುಗಳು ತಳತಳಿಸುವವು,
ಕಣ್ಣು ಅರುಣನೇತ್ರಕ್ಕೆ ಸಮಾನವಾಗಿದೆ.
19 ಬಾಯೊಳಗಿಂದ ಕೊಳ್ಳಿಗಳು ಹೊರಡುವವು,
ಬೆಂಕಿಕಿಡಿಗಳು ಹಾರುವವು.
20 ಆಪುಹುಲ್ಲಿಗೆ ಬೆಂಕಿಯಿಕ್ಕಿ ಊದಿ ಕಾಸಿದ ಕೊಪ್ಪರಿಗೆ ಯಿಂದಲೋ ಎಂಬಂತೆ
ಮೂಗಿನ ಸೊಳ್ಳೆಗಳಿಂದ ಹೊಗೆ ಹಾಯುವದು.
21 ಅದರ ಉಸಿರೇ ಇದ್ದಲನ್ನು ಹೊತ್ತಿಸುವದು,
ಜ್ವಾಲೆಯು ಬಾಯಿಂದೇಳುವದು.
22 ಬಲವು ಕುತ್ತಿಗೆಯಲ್ಲಿ ನೆಲೆಗೊಂಡಿದೆ,
ಅದರ ಮುಂದೆ ಭಯವು ಕುಣಿದಾಡುವದು.
23 ಮಾಂಸದ ಮಡತೆಗಳು ಸಡಿಲವಿಲ್ಲದೆ
ಅದಕ್ಕೆ ಗಟ್ಟಿಯಾಗಿ ಅಂಟಿಕೊಂಡಿವೆ.
24 ಹೃದಯವು ಬಂಡೆಯ ಹಾಗೂ
ಬೀಸುವ ಕೆಳಗಲ್ಲಿನಂತೆಯೂ ಗಟ್ಟಿಯಾಗಿದೆ.
25 ಅದು ಎದ್ದರೆ ಶೂರರು ಕೂಡ ಅಂಜಿ
ಹೊಡೆತಗಳಿಂದ ಭಯಭ್ರಾಂತರಾಗುವರು.
26 ಒಬ್ಬನು ಕತ್ತಿಯೊಡನೆ ಮೇಲೆ ಬಿದ್ದರೂ ಅದಕ್ಕೇನೂ ಆಗಲಾರದು;
ಬಾಣ ಬರ್ಜಿ ಈಟಿ ಇವುಗಳೂ ವ್ಯರ್ಥವೇ.
27 ಅದು ಕಬ್ಬಿಣವನ್ನು ಒಣಹುಲ್ಲನ್ನಾಗಿಯೂ
ತಾಮ್ರವನ್ನು ಲೊಡ್ಡುಮರವನ್ನಾಗಿಯೂ ಭಾವಿಸು ವದು.
28 ಅಂಬು ಅದನ್ನು ಓಡಿಸಲಾರದು,
ಕವಣೆಯ ಕಲ್ಲುಗಳು ಅದಕ್ಕೆ ಹೊಟ್ಟಿನಂತಿರುವವು.
29 ಅದು ದೊಣ್ಣೆಗಳನ್ನು ಹುಲ್ಲುಕಡ್ಡಿಯಾಗಿ ಎಣಿಸು ವದು;
ಬಿರ್ರನೆ ಬರುವ ಈಟಿಗೆ ನಗುವದು.
30 ಅದರ ಕೆಳಭಾಗವು ಮೊನೆ ಮೊನೆಯಾದ ಬೋಕಿಗಳಾ ಗಿದೆ,
ಅದು ಕೆಸರಿನ ಮೇಲೆ ಹಲಿವೆಯ ಹಾಗೆ ನೀಡಿಕೊಂಡಿ ರುವದು.
31 ಜಲನಿಧಿಯನ್ನು ಹಂಡೆಯ ನೀರಿನ ಹಾಗೆ ಕುದಿಸು ವದು;
ಸಮುದ್ರವನ್ನು ಕಲಕಿದ ತೈಲಪಾತ್ರೆಯಂತೆ ಮಾಡು ವದು.
32 ಸಾಗರಕ್ಕೆ ನೆರೆ ಬಂತೋ ಎಂದು ಊಹಿಸುವ ಹಾಗೆ
ತಾನು ಬಂದ ದಾರಿಯನ್ನು ಶುಭ್ರಪಡಿಸುವದು.
33 ಇದಕ್ಕೆ ಸಮಾನವಾದದ್ದು ಭೂಲೋಕದಲ್ಲಿ ಎಲ್ಲಿಯೂ ಸಿಕ್ಕುವದಿಲ್ಲ,
ಭಯವಿಲ್ಲದ್ದಾಗಿ ಸೃಷ್ಟಿಸಲ್ಪಟ್ಟಿದೆ.
ಇದು ಪ್ರತಿಯೊಂದು ದೊಡ್ಡ ಪ್ರಾಣಿಯನ್ನೂ ದಿಟ್ಟಿಸಿ ನೋಡುವದು,
ಸೊಕ್ಕಿದ ಮೃಗಗಳಿಗೆಲ್ಲಾ ರಾಜನಾಗಿರುವದು.

ಆಗ ಯೋಬನು ಯೆಹೋವನಿಗೆ ಪ್ರತ್ಯುತ್ತರ ವಾಗಿ ಹೀಗೆಂದನು— **4**
ನೀನು ಸಕಲ ಕಾರ್ಯಗಳನ್ನು ನಡಿಸಬಲ್ಲಿಯೆಂತಲೂ
ಯಾವ ಸಂಕಲ್ಪವೂ ನಿನಗೆ ಅಸಾಧ್ಯವಲ್ಲವೆಂತಲೂ ತಿಳಿದುಕೊಂಡೇ ಇದ್ದೇನೆ.
ಜ್ಞಾನವಿಲ್ಲದೆ ಸತ್ಯಾಲೋಚನೆಯನ್ನು ಮಂಕುಮಾಡು ವ ಇವನು ಯಾರು ಎಂಬ ನಿನ್ನ ಮಾತಿನಂತೆ
ನಾನು ತಿಳಿಯದ ಸಂಗತಿಗಳನ್ನೂ
ನನಗೆ ಗೊತ್ತಿಲ್ಲದೆ ಬುದ್ಧಿಗೆ ಮೀರಿರುವ ಅದ್ಭುತ ಗಳನ್ನೂ ಕುರಿತು ಮಾತಾಡಿದ್ದೇನೆ.
ದಯೆಮಾಡಿ ಕೇಳು, ನಾನೇ ಮಾತಾಡುವೆನು,
ನಾನು ಪ್ರಶ್ನೆಮಾಡುವೆನು, ನೀನೇ ನನಗೆ ಉಪದೇಶಿಸು [ಎಂದು ಅಪ್ಪಣೆಕೊಟ್ಟೆಯಷ್ಟೆ].
ಕಿವಿಯಿಂದ ನಿನ್ನ ವಿಷಯವನ್ನು ಕೇಳಿದ್ದೆನು,
ಈಗಲಾದರೋ ನಿನ್ನನ್ನೇ ಕಣ್ಣಾರೆ ಕಂಡೆನು.
ಆದಕಾರಣ [ನಾನು ಆಡಿದ್ದನ್ನು] ತಿರಸ್ಕರಿಸಿ
ಧೂಳಿಯಲ್ಲಿಯೂ ಬೂದಿಯಲ್ಲಿಯೂ ಕುಳಿತು ಪಶ್ಚಾತ್ತಾಪಪಡುತ್ತೇನೆ.

ಯೆಹೋವನು ಈ ಮಾತುಗಳನ್ನು ಯೋಬನಿಗೆ ಹೇಳಿದ ಮೇಲೆ ತೇಮಾನ್ಯನಾದ ಎಲೀಫಜನನ್ನು ಕುರಿತು—ನಿನ್ನ ಮೇಲೆಯೂ ನಿನ್ನ ಇಬ್ಬರು ಸ್ನೇಹಿತರ ಮೇಲೆಯೂ ಕೋಪಗೊಂಡಿದ್ದೇನೆ; ನನ್ನ ದಾಸನಾದ ಯೋಬನು ನನ್ನ ವಿಷಯವಾಗಿ ಯಥಾರ್ಥವನ್ನಾಡಿದಂತೆ ನೀವು ಆಡಲಿಲ್ಲ. ಈಗ ಏಳು ಹೋರಿಗಳನ್ನೂ ಏಳು ಟಗರುಗಳನ್ನೂ ತೆಗೆದುಕೊಂಡು ನನ್ನ ದಾಸನಾದ ಯೋಬನ ಬಳಿಗೆ ಹೋಗಿ ನಿಮ್ಮ ದೋಷಪರಿಹಾರಕ್ಕಾಗಿ ಹೋಮಮಾಡಿರಿ; ನನ್ನ ದಾಸನಾದ ಯೋಬನು ನಿಮ್ಮ ಪಕ್ಷವಾಗಿ ಪ್ರಾರ್ಥನೆ ಮಾಡುವನು; ನಾನು ಅವನ ವಿಜ್ಞಾಪನೆಯನ್ನು ಲಾಲಿಸಿ ನಿಮ್ಮ ಮೂರ್ಖತನಕ್ಕೆ ತಕ್ಕ ದಂಡನೆಯನ್ನು ನಿಮಗೆ ವಿಧಿಸುವದಿಲ್ಲ. ನನ್ನ ದಾಸನಾದ ಯೋಬನು ನನ್ನ ವಿಷಯವಾಗಿ ಸತ್ಯವನ್ನು ನುಡಿದಂತೆ ನೀವು ನುಡಿಯಲಿಲ್ಲ ಎಂದು ಹೇಳಿದನು. ಆಗ ತೇಮಾನ್ಯನಾದ ಎಲೀಫಜನೂ ಶೂಹ್ಯನಾದ ಬಿಲ್ದದನೂ ನಾಮಾಥ್ಯನಾದ ಚೋಫರನೂ ಹೋಗಿ ಯೆಹೋವನು ತಮಗೆ ಆಜ್ಞಾಪಿಸಿದ ಪ್ರಕಾರ ಮಾಡಲು ಯೆಹೋವನು ಯೋಬನ ವಿಜ್ಞಾಪನೆಯನ್ನು ಲಾಲಿಸಿದನು.

ಯೋಬನು ತನ್ನ ಸ್ನೇಹಿತರಿಗೋಸ್ಕರ ಪ್ರಾರ್ಥಿಸಿದ ಬಳಿಕ ಯೆಹೋವನು ಅವನ ದುಸ್ಥಿತಿಯನ್ನು ಹೋಗಲಾಡಿಸಿ ಅವನ ಸೊತ್ತನ್ನು ಮೊದಲಿಗಿಂತ ಎರಡರಷ್ಟಾಗಿ ಹೆಚ್ಚಿಸಿದನು. ಆಗ ಅವನ ಎಲ್ಲಾ

1) ಪಾಠಾಂತರ: ಅದರ ಬೆನ್ನು ಮುದ್ರಿಸಿದ ಗುರಾಣಿಗಳನ್ನು ಸಾಲಾಗಿ ಹೊದಿಸಿ ಬಿಗಿದಂತಿವೆ.

ಅಣ್ಣತಮ್ಮಂದಿರೂ ಎಲ್ಲಾ ಅಕ್ಕತಂಗಿಯರೂ ಮೊದಲು
ಅವನ ಮನೆಯಲ್ಲಿ ಅವನೊಂದಿಗೆ ಭೋಜನಮಾಡು
ತ್ತಿದ್ದ ಎಲ್ಲಾ ಪರಿಚಿತರೂ ಅವನ ಬಳಿಗೆ ಬಂದು
ಯೆಹೋವನು ಅವನ ಮೇಲೆ ಬರಮಾಡಿದ್ದ ಆಪತ್ತಿನ
ವಿಷಯವಾಗಿ ತಮ್ಮ ತಮ್ಮ ಅನುತಾಪವನ್ನು ತೋರ್ಪ
ಡಿಸಿ ಅವನನ್ನು ಸಂತೈಸಿದರು. ಇದಲ್ಲದೆ ಪ್ರತಿ
ಯೊಬ್ಬರೂ ಒಂದೊಂದು ವರಹವನ್ನೂ ಒಂದೊಂದು
ಚಿನ್ನದ ಉಂಗುರವನ್ನೂ ಅವನಿಗೆ ಕೊಟ್ಟರು.
12 ಯೆಹೋವನು ಯೋಬನ ಮೊದಲನೆಯ ಸ್ಥಿತಿಗಿಂತ
ಲೂ ಅವನ ಕಡೆಯ ಸ್ಥಿತಿಯನ್ನು ಹೀಗೆ ಹೆಚ್ಚಾಗಿ
ಆಶೀರ್ವದಿಸಿದನು; ಅವನಿಗೆ ಹದಿನಾಲ್ಕು ಸಾವಿರ
ಕುರಿಗಳೂ ಆರು ಸಾವಿರ ಒಂಟೆಗಳೂ ಒಂದು ಸಾವಿರ
ಜೋಡಿ ಎತ್ತುಗಳೂ ಒಂದು ಸಾವಿರ ಹೆಣ್ಣುಕತ್ತೆಗಳೂ
ಉಂಟಾದವು. ಇಷ್ಟು ಮಾತ್ರವಲ್ಲದೆ ಏಳು ಮಂದಿ 13
ಗಂಡುಮಕ್ಕಳೂ ಮೂರು ಮಂದಿ ಹೆಣ್ಣುಮಕ್ಕಳೂ
ಆದರು. ಮೊದಲನೆಯವಳಿಗೆ ಯೆಮೀಮಾ, ಎರಡನೆ 14
ಯವಳಿಗೆ ಕೆಚೀಯ, ಮೂರನೆಯವಳಿಗೆ ಕೆರೆನ್ಹ
ಪ್ಪೂಕ್ ಎಂದು ಹೆಸರಿಟ್ಟನು. ಯೋಬನ ಮಕ್ಕಳಷ್ಟು 15
ಸುಂದರಸ್ತ್ರೀಯರು ಆ ದೇಶದಲ್ಲಿ ಎಲ್ಲಿಯೂ ಸಿಕ್ಕು
ತ್ತಿರಲಿಲ್ಲ. ತಂದೆಯು ಅಣ್ಣತಮ್ಮಂದಿರಿಗೆ ಕೊಟ್ಟ
ಹಾಗೆ ಅವರಿಗೂ ಸ್ವಾಸ್ತ್ಯವನ್ನು ಹಂಚಿದನು. ಆ 16
ಮೇಲೆ ಯೋಬನು ನೂರನಾಲ್ವತ್ತು ವರುಷ ಬಾಳಿ
ತನ್ನ ಮಕ್ಕಳನ್ನು ಮೊಮ್ಮಕ್ಕಳನ್ನು ಅಂತು ತನ್ನ
ಸಂತಾನದ ನಾಲ್ಕು ತಲೆಗಳನ್ನು ಕಂಡನು. ತರು 17
ವಾಯ ಯೋಬನು ಮುಪ್ಪಿನ ಮುದುಕನಾಗಿ
ಗತಿಸಿದನು.

---

# THE PSALMS

## ಕೀರ್ತನೆಗಳು

### ಪ್ರಥಮ ಭಾಗವು (1–41).

ಸನ್ಮಾರ್ಗದವರು ದುರ್ಮಾರ್ಗದವರು ಇವರ ವ್ಯತ್ಯಾಸ.
(ಯೆರೆಮೀಯ 17. 5—8; ಮತ್ತಾಯ 7. 13, 14.)

1 ಯಾವನು ದುಷ್ಟರ ಆಲೋಚನೆಯಂತೆ ನಡೆ
ಯದೆ
ಪಾಪಾತ್ಮರ ಮಾರ್ಗದಲ್ಲಿ ನಿಂತುಕೊಳ್ಳದೆ
ಧರ್ಮನಿಂದಕರೊಡನೆ ಕೂತುಕೊಳ್ಳದೆ
2 ಯೆಹೋವನ ಧರ್ಮಶಾಸ್ತ್ರದಲ್ಲಿ ಆನಂದಪಡುವವ
ನಾಗಿ
ಅದನ್ನೇ ಹಗಲಿರುಳು ಧ್ಯಾನಿಸುತ್ತಿರುವನೋ
ಅವನು ಎಷ್ಟೋ ಧನ್ಯನು.
3 ಅವನು ನೀರಿನ ಕಾಲಿವೆಗಳ ಬಳಿಯಲ್ಲಿ ಬೆಳೆದಿರುವ
ಮರದ ಹಾಗಿರುವನು.
ಅಂಥ ಮರವು ತಕ್ಕ ಕಾಲದಲ್ಲಿ ಫಲಕೊಡುತ್ತದಲ್ಲಾ;
ಅದರ ಎಲೆ ಬಾಡುವದೇ ಇಲ್ಲ.
ಅದರಂತೆ ಅವನ ಕಾರ್ಯವೆಲ್ಲವೂ ಸಫಲವಾಗುವದು.

4 ದುಷ್ಟರೋ ಹಾಗಲ್ಲ; ಗಾಳಿ ಬಡುಕೊಂಡು ಹೋಗು
ವ ಹೊಟ್ಟಿನಂತಿದ್ದಾರೆ.
5 ಆದದರಿಂದ ದುಷ್ಟರು ನ್ಯಾಯವಿಚಾರಣೆಯಲ್ಲೂ
ಪಾಪಾತ್ಮರು ನೀತಿವಂತರ ಸಭೆಯಲ್ಲೂ ನಿಲ್ಲುವದಿಲ್ಲ.
6 ಯೆಹೋವನು ನೀತಿವಂತರ ಮಾರ್ಗವನ್ನು ಲಕ್ಷಿಸು
ವನು;
ದುಷ್ಟರ ಮಾರ್ಗವೋ ನಾಶವಾಗುವದು.

ಯೆಹೋವನು ಅಭಿಷೇಕಿಸಿದವನ ಸರ್ವಾಧಿಪತ್ಯ.
(ಕೀರ್ತನೆ 110.)

2 ಅನ್ಯಜನಗಳು ದೊಂಬಿಮಾಡುವದೂ
ಜನಾಂಗಗಳವರು ವ್ಯರ್ಥಕಾರ್ಯಗಳನ್ನು ಯೋಚಿಸು
ವದೂ ಯಾಕೆ?
2 ಯೆಹೋವನಿಗೂ ಆತನು ಅಭಿಷೇಕಿಸಿದವನಿಗೂ
ವಿರೋಧವಾಗಿ
ಭೂಪತಿಗಳು ಸನ್ನದ್ಧರಾಗಿ ನಿಂತಿದ್ದಾರೆ, ಅಧಿಕಾರಿಗಳು
ಒಟ್ಟಾಗಿ ಸೇರಿ ಆಲೋಚಿಸುತ್ತಿದ್ದಾರೆ.
3 ನಮಗೆ ಅವರು ಹಾಕಿದ ಬಂಧನಗಳನ್ನು ಕಿತ್ತು
ಬೇಡಿಗಳನ್ನು ಮುರಿದು ಬೀಸಾಡೋಣ ಎಂದು
ಮಾತಾಡಿಕೊಳ್ಳುತ್ತಾರಲ್ಲಾ.

4 ಪರಲೋಕದಲ್ಲಿ ಆಸನಾರೂಢನಾಗಿರುವಾತನು ಅದ
ಕ್ಕೆ ನಗುವನು;
ಕರ್ತನು ಅವರನ್ನು ಪರಿಹಾಸ್ಯಮಾಡುವನು.
5 ಅನಂತರ ಆತನು ಸಿಟ್ಟಾಗಿ—
ನಾನು ನೇಮಿಸಿದ ಅರಸನನ್ನು
ಚೀಯೋನೆಂಬ ನನ್ನ ಪರಿಶುದ್ಧ ಪರ್ವತದಲ್ಲಿಯೇ
ಸ್ಥಾಪಿಸಿದ್ದಾಯಿತು ಎಂದು ಹೇಳಿ
6 ಕೋಪಾವೇಶದಿಂದ ಅವರನ್ನು ಕಳವಳಗೊಳಿಸುವನು.
7 ನಾನು ಯೆಹೋವನ ಆಜ್ಞೆಯನ್ನು ತಿಳಿಸುತ್ತೇನೆ,
ಕೇಳಿರಿ; ಆತನು ನನಗೆ—

ನನಗೆ ನೀನು ಮಗನು; 1)ನಾನೇ ಈಹೊತ್ತು ನಿನ್ನನ್ನು ಪಡೆದಿದ್ದೇನೆ.
8 ನೀನು ಕೇಳಿಕೊಂಡರೆ ನಾನು ಅನ್ಯಜನಗಳನ್ನೆಲ್ಲಾ ನಿನಗೆ ಅಧೀನಮಾಡುವೆನು;
ಭೂಮಿಯ ಕಟ್ಟಕಡೆಯ ವರೆಗೂ ಇರುವ ಎಲ್ಲಾ ದೇಶಗಳನ್ನೂ ನಿನಗೆ ಸ್ವಾಸ್ತ್ಯವಾಗಿ ಕೊಡುವೆನು.
9 ಕಬ್ಬಿಣದ ಗದೆಯಿಂದ ಅವರನ್ನು ನಾಶಮಾಡುವಿ;
ಮಣ್ಣಿನ ಮಡಿಕೆಗಳನ್ನೋ ಎಂಬಂತೆ ಅವರನ್ನು ಒಡೆದುಹಾಕುವಿ ಎಂದು ಹೇಳಿದನು.

10 ಆದದರಿಂದ ಅರಸುಗಳಿರಾ, ವಿವೇಕಿಗಳಾಗಿರ್ರಿ;
ದೇಶಾಧಿಪತಿಗಳಿರಾ, ಬುದ್ಧಿಮಾತುಗಳಿಗೆ ಕಿವಿಗೊಡಿರಿ.
11 ಯೆಹೋವನನ್ನು ಭಯಭಕ್ತಿಯಿಂದ ಸೇವಿಸಿರಿ; ನಡುಗುತ್ತಾ ಉಲ್ಲಾಸಪಡಿರಿ.
12 ಆತನ ಮಗನಿಗೆ ಮುದ್ದಿಡಿರಿ;
ಇಲ್ಲವಾದರೆ ಆತನ ಕೋಪವು ಬೇಗನೆ ಪ್ರಜ್ವಲಿಸಲು ನೀವು ದಾರಿಯಲ್ಲೇ ನಾಶವಾದೀರಿ.
ಆತನ ಮರೆಹೊಕ್ಕವರೆಲ್ಲರು ಧನ್ಯರು.

ಶತ್ರುಬಾಧಿತನಾದ ದೇವಭಕ್ತನ ಉದಯಗೀತ.

ದಾವೀದನ ಕೀರ್ತನೆ; ಅವನು ತನ್ನ ಮಗನಾದ ಅಬ್ಷಾಲೋಮನಿಂದ ಓಡಿಹೋದಾಗ ರಚಿಸಿದ್ದು.

(೨ ಸಮುವೇಲ 15—18.)

3 ಯೆಹೋವನೇ, ನನ್ನ ವಿರೋಧಿಗಳು ಎಷ್ಟೋ ಹೆಚ್ಚಾಗಿದ್ದಾರೆ;
ನನಗೆ ವೈರಿಗಳಾಗಿ ನಿಂತವರು ಬಹಳ ಮಂದಿ.
2 ಅನೇಕರು ನನ್ನ ವಿಷಯದಲ್ಲಿ—
ಅವನಿಗೆ ದೇವರಿಂದ ಸಹಾಯವು ಆಗುವದೇ ಇಲ್ಲವೆಂದು ಹೇಳಿಕೊಳ್ಳುತ್ತಾರೆ. ಸೆಲಾ.

3 ಆದರೂ ಯೆಹೋವನೇ, ನೀನು ನನ್ನನ್ನು ಕಾಯುವ ಗುರಾಣಿ;
ನೀನು ನನ್ನ ಗೌರವಕ್ಕೆ ಆಧಾರನೂ ನನ್ನ ತಲೆಯನ್ನು ಎತ್ತುವಂತೆ ಮಾಡುವವನೂ ಆಗಿದ್ದೀ.
4 ನಾನು ಯೆಹೋವನಿಗೆ ಮೊರೆಯಿಡುವಾಗ
ಆತನು ತನ್ನ ಪರಿಶುದ್ಧಪರ್ವತದಿಂದ ಸದುತ್ತರವನ್ನು ಅನುಗ್ರಹಿಸುತ್ತಾನೆ. ಸೆಲಾ.

5 ಯೆಹೋವನು ನನ್ನನ್ನು ಕಾಪಾಡುವವನಾದ್ದರಿಂದ
ನಾನು ಮಲಗಿಕೊಂಡು ನಿದ್ದೆಮಾಡಿ ಸುಖವಾಗಿ ಎಚ್ಚರಗೊಂಡೆನು.
6 ನನ್ನ ಸುತ್ತಲು ಸನ್ನದ್ಧರಾಗಿ ನಿಂತಿರುವ ಸಾವಿರಾರು ವೈರಿಗಳಿಗಾದರೂ ನಾನು ಹೆದರೆನು.

7 ಯೆಹೋವನೇ, ನನ್ನ ದೇವರೇ,
ನನ್ನ ಎಲ್ಲಾ ಶತ್ರುಗಳ ದವಡೆಯ ಮೇಲೆ ಬ
ಅವರ ಹಲ್ಲುಗಳನ್ನು ಉದುರಿಸಿಬಿಟ್ಟವನೇ,
ಎದ್ದು ಬಂದು ನನ್ನನ್ನು ರಕ್ಷಿಸು.
8 ಜಯವು ಯೆಹೋವನಿಂದಲೇ ಉಂಟಾಗುವದು
[ಯೆಹೋವನೇ,] ನಿನ್ನ ಆಶೀರ್ವಾದವು ನಿನ್ನ ಪ್ರಜೆ
ಮೇಲೆ ಇರಲಿ. ಸೆಲಾ

ವಿಶ್ವಾಸಯುಕ್ತವಾದ ಅಸ್ತಮಾನ ಗೀತ.

ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು;
ತಂತಿವಾದ್ಯದೊಡನೆ ಹಾಡತಕ್ಕದ್ದು; ದಾವೀದನ ಕೀರ್ತನೆ

4 ನ್ಯಾಯವನ್ನು ಸ್ಥಾಪಿಸುವ ನನ್ನ ದೇವರೇ,
ನಿನಗೆ ಮೊರೆಯಿಡುತ್ತೇನೆ; ಸದುತ್ತರವನ್ನು ದ
ಪಾಲಿಸು.
ನನ್ನನ್ನು ಇಕ್ಕಟ್ಟಿನಿಂದ ಬಿಡಿಸಿ ಇಂಬಾದ ಸ್ಥಳ
ಸೇರಿಸಿದಾತನೇ,
ನನ್ನನ್ನು ಕರುಣಿಸಿ ನನ್ನ ಪ್ರಾರ್ಥನೆಯನ್ನು ಅ
ಕರಿಸು.

2 ಮಹನೀಯರೇ, ನೀವು ಎಷ್ಟರ ವರೆಗೆ ನನ್ನ ಗೌ
ವನ್ನು ಕೆಡಿಸಿ ನನ್ನನ್ನು ಅವಮಾನಪಡಿಸುವಿರಿ?
ಯಾಕೆ ನಿರರ್ಥಕವಾದದ್ದನ್ನು ಪ್ರೀತಿಸಿ ಸುಳ್
ಹಿಂಬಾಲಿಸುವಿರಿ? ಸೆಲಾ.
3 ಯೆಹೋವನು ತನ್ನ ಭಕ್ತನನ್ನು ತನಗೋಸ್ಕರ ಪ್ರ
ಕಿಸಿಕೊಂಡಿದ್ದಾನೆಂದು ತಿಳಿದುಕೊಳ್ಳಿರಿ.
ನಾನು ಆತನಿಗೆ ಮೊರೆಯಿಡುವಾಗೆಲ್ಲಾ ಆತನು ಕೆ
ತ್ತಾನೆ.
4 2)ಭಯಪಡಿರಿ, ಪಾಪಮಾಡಬೇಡಿರಿ, ಮೌನವಾಗಿರಿ
ಹಾಸಿಗೆಯ ಮೇಲೆ ಇರುವಾಗ ಹೃದಯದಲ್ಲೇ ಆ
ಚಿಸಿಕೊಳ್ಳಿರಿ. ಸೆಲಾ.
5 ನ್ಯಾಯವಾದ ಯಜ್ಞಗಳನ್ನು ಸಮರ್ಪಿಸಿರಿ;
ಯೆಹೋವನಲ್ಲಿಯೇ ಭರವಸವಿಡಿರಿ.

6 ನಮಗೆ ಒಳ್ಳೆಯದನ್ನು ಮಾಡುವವರು ಯಾರಿ
ರೆಂದು ಅನೇಕರು ಹೇಳಿಕೊಳ್ಳುತ್ತಾರೆ.
ಯೆಹೋವನೇ, ನೀನು ಪ್ರಸನ್ನಮುಖದಿಂದ ನ
ನ್ನು ನೋಡಬೇಕು.
7 ಧಾನ್ಯದ್ರಾಕ್ಷೆಗಳು ಸಮೃದ್ಧಿಯಾಗಿ ಬೆಳೆದ ಸ
ಕಾಲದಲ್ಲಿ ಅವರಿಗಿರುವ ಸಂತೋಷಕ್ಕಿಂತಲೂ
ನೀನು ನನ್ನ ಹೃದಯದಲ್ಲಿ ಹೆಚ್ಚಾದ ಆನಂದವ
ಉಂಟುಮಾಡಿದ್ದೀ.
8 3)ನಾನು ನಿರ್ಭಯವಾಗಿರುವದರಿಂದ ಮಲಗಿಕೊ
ಕೂಡಲೆ ನಿದ್ದೆಮಾಡುವೆನು;
ಯಾಕಂದರೆ ಯೆಹೋವನೇ, ನಾನು ಯಾವ
ಯವೂ ಇಲ್ಲದೆ ಸುರಕ್ಷಿತನಾಗಿರುವಂತೆ ನಿ
ಕಾಪಾಡುತ್ತೀ.

---

1) ಮೂಲ: ನಿನ್ನನ್ನು ಪಡೆದಿದ್ದೇನೆ. 2) ಅಥವಾ: ಕೋಪಮಾಡಬೇಕಾದರೂ ಪಾಪಮಾಡಬೇಡಿರಿ. 3) ನ
ಸುರಕ್ಷಿತನಾಗಿರುವಂತೆ ನೀನೊಬ್ಬನೇ ಕಾಪಾಡುತ್ತೀ.

ಭಕ್ತರಕ್ಷಕನಾದ ಯೆಹೋವನಿಗೆ ಉದಯಕೀರ್ತನೆ.
ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು;
ರಂಧ್ರವಾದ್ಯದೊಡನೆ ಹಾಡತಕ್ಕದ್ದು;
ದಾವೀದನದು.

5 ಯೆಹೋವನೇ, ನನ್ನ ಮಾತುಗಳಿಗೆ ಕಿವಿಗೊಡು;
ನನ್ನ ಧ್ಯಾನವನ್ನು ಲಕ್ಷ್ಯಕ್ಕೆ ತಂದುಕೋ.
2 ನನ್ನ ಅರಸೇ, ನನ್ನ ದೇವರೇ, ನಿನ್ನನ್ನೇ ಪ್ರಾರ್ಥಿಸುವೆನು;
ನನ್ನ ಮೊರೆಯನ್ನು ಆಲೈಸು.
3 ಯೆಹೋವನೇ, ಉದಯಕಾಲದಲ್ಲಿ ನನ್ನ ಸ್ವರವು ನಿನಗೆ ಕೇಳಿಸುವದು;
ಉದಯಕಾಲದಲ್ಲಿಯೇ [ಪ್ರಾರ್ಥನೆಯನ್ನು] ಸಮರ್ಪಿಸಿ ಸದುತ್ತರವನ್ನು ಎದುರುನೋಡುತ್ತಿರುವೆನು.

4 ನೀನು ದುಷ್ಟತ್ವದಲ್ಲಿ ಸಂತೋಷಿಸುವ ದೇವರಲ್ಲ;
ಕೆಟ್ಟದ್ದು ನಿನ್ನ ಬಳಿಯಲ್ಲಿ ತಂಗಲಾರದು.
5 ಸೊಕ್ಕಿನವರು ನಿನ್ನ ಸನ್ನಿಧಿಯಲ್ಲಿ ನಿಲ್ಲಲಾರರು;
ಅಧರ್ಮಿಗಳೆಲ್ಲರನ್ನು ನೀನು ಹಗೆಮಾಡುವಿ.
6 ಸುಳ್ಳುಹೇಳುವವರನ್ನು ನಾಶಮಾಡುವಿ;
ಯೆಹೋವನೇ, ನರಹತ್ಯಮಾಡುವವರೂ ಕಪಟಿಗಳೂ ನಿನಗೆ ಹೇಯವಾಗಿದ್ದಾರೆ.
7 ನಾನಂತು ನಿನ್ನ ಮಹಾಕೃಪೆಯನ್ನು ಹೊಂದಿದವನಾಗಿ ನಿನ್ನ ಮಂದಿರದೊಳಕ್ಕೆ ಪ್ರವೇಶಿಸುವೆನು;
ನಿನ್ನಲ್ಲಿಯೇ ಭಯಭಕ್ತಿಯುಳ್ಳವನಾಗಿ ನಿನ್ನ ಪರಿಶುದ್ಧ ಆಲಯದ ಕಡೆಗೆ ಅಡ್ಡಬೀಳುವೆನು.

8 ಯೆಹೋವನೇ, ವಿರೋಧಿಗಳು ನನ್ನ ಕೇಡನ್ನೇ ಹಾರೈಸುತ್ತಿರುವದರಿಂದ
ನಿನ್ನ ನೀತಿಗೆ ಸರಿಯಾಗಿ ನನ್ನನ್ನು ನಡಿಸು;
ನನ್ನ ಮುಂದೆ ನಿನ್ನ ಮಾರ್ಗವನ್ನು ಸರಾಗಮಾಡು.
9 ಅವರ ಬಾಯಲ್ಲಿ ಯಥಾರ್ಥತ್ವವಿಲ್ಲ;
ಅವರು ನಾಲಿಗೆಯಿಂದ ಸವಿಮಾತಾಡಿದರೂ ಅವರ ಹೃದಯವು ನಾಶಕರವಾದ ಗುಂಡಿ,
ಅವರ ಗಂಟಲು ತೆರೆದಿರುವ ಸಮಾಧಿ.
10 ದೇವರೇ, ಅವರು ನಿನಗೆ ವಿರೋಧವಾಗಿ ತಿರುಗಿಬಿದ್ದವರು;
ಆದದರಿಂದ ಅವರನ್ನು ಅಪರಾಧಿಗಳೆಂದು ನಿರ್ಣಯಿಸು;
ಅವರು ತಮ್ಮ ಕುಯುಕ್ತಿಯಿಂದಲೇ ಮೋಸಹೋಗಲಿ;
ಅವರ ದ್ರೋಹವು ಅಪಾರವಾಗಿರುವದರಿಂದ ಅವರನ್ನು ದೊಬ್ಬಿಬಿಡು.

ಯೆಹೋವನೇ, ನೀತಿವಂತನನ್ನು ಆಶೀರ್ವದಿಸುವವನು ನೀನೇ;
ನಿನ್ನ ದಯವು ದೊಡ್ಡ ಗುರಾಣಿಯಂತೆ ಅವನನ್ನು ಆವರಿಸಿಕೊಳ್ಳುವದು.

12 ಆದಕಾರಣ ನಿನ್ನನ್ನು ಮರೆಹೊಕ್ಕವರೆಲ್ಲರು ಸಂತೋಷಪಡುವರು;
ನೀನು ಕಾಪಾಡುವವನೆಂದು ಅವರು ಯಾವಾಗಲೂ ಆನಂದಧ್ವನಿಮಾಡುವರು.
ನಿನ್ನ ನಾಮವನ್ನು ಪ್ರೀತಿಸುವವರು ನಿನ್ನಲ್ಲಿ ಉಲ್ಲಾಸಗೊಳ್ಳುವರು.

ಕಷ್ಟಪೀಡಿತನಾದ ಭಕ್ತನ ಪ್ರಾರ್ಥನೆ.
ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು;
ತಂತಿವಾದ್ಯದ ಮಂದರಸ್ಥಾಯಿಯೊಡನೆ ಹಾಡತಕ್ಕದ್ದು;
ದಾವೀದನು ರಚಿಸಿದ ಕೀರ್ತನೆ.

6 ಯೆಹೋವನೇ, ಕೋಪದಿಂದ ನನ್ನನ್ನು ಶಿಕ್ಷಿಸಬೇಡ;
ರೋಷದಿಂದ ದಂಡಿಸಬೇಡ.
2 ಯೆಹೋವನೇ, ಕನಿಕರಿಸು; ನಾನು ನಿಶ್ಶಕ್ತನಾಗಿ ಹೋಗಿದ್ದೇನೆ.
ಯೆಹೋವನೇ, ವಾಸಿಮಾಡು; ನನ್ನ ಎಲುಬುಗಳೆಲ್ಲಾ ತತ್ತರಿಸುತ್ತವೆ.
3 ನನ್ನ ಪ್ರಾಣವು ಸಹ ಬಹಳವಾಗಿ ತತ್ತರಿಸುತ್ತದೆ;
ಯೆಹೋವನೇ, ಎಷ್ಟರ ವರೆಗೂ [ನನ್ನ ಕೈಬಿಟ್ಟಿರುವಿ]?

4 ಯೆಹೋವನೇ, ಅಭಿಮುಖನಾಗಿ ನನ್ನನ್ನು ಬಿಡಿಸು;
ನಿನ್ನ ಕೃಪೆಯ ನಿಮಿತ್ತವೇ ನನ್ನನ್ನು ರಕ್ಷಿಸು.
5 ಮೃತರಿಗೆ ನಿನ್ನ ಜ್ಞಾಪಕವಿರುವದಿಲ್ಲವಲ್ಲಾ;
ಪಾತಾಳದಲ್ಲಿ ನಿನ್ನನ್ನು ಸ್ತುತಿಸುವವರು ಯಾರು?
6 ನಾನು ನರನರಳಿ ದಣಿದಿದ್ದೇನೆ;
ಪ್ರತಿರಾತ್ರಿಯೂ ನನ್ನ ಕಣ್ಣೀರಿನಿಂದ ಮಂಚವು ತೇಲಾಡುತ್ತದೆ.
ಹಾಸಿಗೆಯು ಕಣ್ಣೀರಿನಿಂದ ನೆನದುಹೋಗುತ್ತದೆ.
7 ದುಃಖದಿಂದ ನನ್ನ ಕಣ್ಣು ಡೊಗರಾಯಿತು;
ವಿರೋಧಿಗಳ ಬಾಧೆಯ ದೆಸೆಯಿಂದಲೇ ಮೊಬ್ಬಾಯಿತು.

8 ಧರ್ಮವನ್ನು ಮೀರಿ ನಡೆಯುವವರೇ, ನೀವೆಲ್ಲರು ನನ್ನಿಂದ ತೊಲಗಿಹೋಗಿರಿ;
ಯೆಹೋವನು ನನ್ನ ಗೋಳಾಟಕ್ಕೆ ಕಿವಿಗೊಟ್ಟು
9 ನನ್ನ ವಿಜ್ಞಾಪನೆಯನ್ನು ಕೇಳಿದ್ದಾನಲ್ಲಾ;
ನನ್ನ ಪ್ರಾರ್ಥನೆಯನ್ನು ಅಂಗೀಕರಿಸುವನು.
10 ನನ್ನ ವಿರೋಧಿಗಳೆಲ್ಲರು ಆಶೆಗೆಟ್ಟು ಕಳವಳಗೊಳ್ಳುವರು;
ಅವರು ಥಟ್ಟನೆ ಆಶಾಭಂಗಪಟ್ಟು ಹಿಂದಿರುಗುವರು.

ಅನ್ಯಾಯವಾದ ದೋಷಾರೋಪಣೆಗೆ ಗುರಿಯಾದ
ದೇವಭಕ್ತನು ಪ್ರಾರ್ಥಿಸುವದು.
ಬೆನ್ಯಾಮೀನ್ ಕುಲದವನಾದ ಕೂಷನ ಮಾತುಗಳ ವಿಷಯದಲ್ಲಿ
ದಾವೀದನು ಯೆಹೋವನಿಗಾಗಿ ಆವೇಶದಿಂದ ಹಾಡಿದ ಗೀತ.
(೧ ಸಮುವೇಲ 24. 9.)

7 ಯೆಹೋವನೇ, ನನ್ನ ದೇವರೇ, ನಿನ್ನ ಮರೆಹೊಕ್ಕಿದ್ದೇನೆ;

ಹಿಂದಟ್ಟುವವರೆಲ್ಲರಿಂದ ತಪ್ಪಿಸಿ ನನ್ನನ್ನು ಕಾಪಾಡು.
2 ಇಲ್ಲವಾದರೆ ನನಗೆ ರಕ್ಷಕನಿಲ್ಲವೆಂದು ತಿಳಿದು
ಶತ್ರುವು ಸಿಂಹದಂತೆ ಮೇಲೆ ಬಿದ್ದು ನನ್ನನ್ನು ಹರಿದು ಬಿಟ್ಟಾನು.
3 ಯೆಹೋವನೇ, ನನ್ನ ದೇವರೇ, ನಾನು ಕೈಗಳಲ್ಲಿ ಅನ್ಯಾಯವುಳ್ಳವನೂ
4 ಮಿತ್ರದ್ರೋಹಿಯೂ ಆಗಿದ್ದರೆ
ಶತ್ರುವು ಹಿಂದಟ್ಟಿ ಬಂದು ನನ್ನನ್ನು ಹಿಡಿದು ನೆಲಕ್ಕೆ ಕೆಡವಿ ತುಳಿಯಲಿ;
5 ನನ್ನ ಮಾನವನ್ನು ಮಣ್ಣುಪಾಲುಮಾಡಲಿ.
ನಾನಂಥವನಲ್ಲ; ನಿಷ್ಕಾರಣವೈರಿಯನ್ನೂ ರಕ್ಷಿಸಿದೆನಲ್ಲಾ. ಸೆಲಾ.

6 ಯೆಹೋವನೇ, ನ್ಯಾಯಸ್ಥಾಪಕನೇ, ನನಗೋಸ್ಕರ ಎಚ್ಚರವಾಗು.
ಮಹಾಕೋಪದಿಂದ ಎದ್ದುಬಂದು ನನ್ನ ವಿರೋಧಿಗಳ ಕ್ರೋಧವನ್ನು ಭಂಗಪಡಿಸು.
7 ಎಲ್ಲಾ ಜನಾಂಗಗಳು ನಿನ್ನ ಸುತ್ತಲು ಸಭೆಯಾಗಿ ಕೂಡಿರುವಲ್ಲಿ ನೀನು ಪುನಹ ಆರೋಹಣಮಾಡು.
8 ಯೆಹೋವನು ಎಲ್ಲಾ ಜನಾಂಗಗಳಿಗೂ ನ್ಯಾಯತೀರಿಸುವವನಾಗಿದ್ದಾನೆ.
ಯೆಹೋವನೇ, ನಿರಪರಾಧಿಯೂ ನೀತಿವಂತನೂ ಆಗಿರುವ ನನಗೋಸ್ಕರ ನ್ಯಾಯತೀರಿಸು.
9 ಮನುಷ್ಯರ ಹೃದಯವನ್ನೂ ಅಂತರಿಂದ್ರಿಯವನ್ನೂ ಪರಿಶೋಧಿಸುವ ನೀತಿಸ್ವರೂಪನಾದ ದೇವರೇ,
ದುಷ್ಟರ ಕೆಟ್ಟತನವು ಇಲ್ಲದೆ ಹೋಗುವಂತೆ ಮಾಡು;
ನೀತಿವಂತರನ್ನು ದೃಢಪಡಿಸು.
10 ನನ್ನನ್ನು ರಕ್ಷಿಸುವ ಗುರಾಣಿಯು ದೇವರೇ;
ಆತನು ಯಥಾರ್ಥರನ್ನು ಕಾಪಾಡುತ್ತಾನೆ.

11 ದೇವರು ನ್ಯಾಯಕ್ಕೆ ಸರಿಯಾಗಿ ತೀರ್ಪುಕೊಡುವವನು;
ಯಾವಾಗಲೂ [ದುಷ್ಟರ ವಿಷಯದಲ್ಲಿ] ಕೋಪವುಳ್ಳವನು.
12 ದ್ರೋಹಿಯು ಮನಸ್ಸನ್ನು ಬೇರೆಮಾಡಿಕೊಳ್ಳದೆ ಹೋದರೆ
ಆತನು ತನ್ನ ಕತ್ತಿಯನ್ನು ಮಸೆಯುವನು.
ತನ್ನ ಬಿಲ್ಲನ್ನು ಬೊಗ್ಗಿಸಿ ಸಿದ್ಧಮಾಡಿದ್ದಾನೆ.
13 ಆತನು ಅದಕ್ಕೆ ಮರಣಕರವಾದ ಅಗ್ನಿಬಾಣಗಳನ್ನು ಹೂಡಿ
ಅವನ ಮೇಲೆ ಪ್ರಯೋಗಿಸುವದಕ್ಕೆ ಗುರಿಯಿಟ್ಟು ನಿಂತಿದ್ದಾನೆ.

14 ನನ್ನ ಶತ್ರುವು ಕೆಡುಕನ್ನು ಹೆರಬೇಕೆಂದು ಪ್ರಸವವೇದನೆಯಲ್ಲಿದ್ದಾನೆ;
ಅವನು ಹಾನಿಯನ್ನು ಹಡೆಯುವೆನೆಂದು ನೆನಸಿಕೊಂಡರೂ ಶೂನ್ಯವನ್ನೇ ಹೆತ್ತನು ನೋಡಿರಿ.
15 ಅವನು ಅಗಿದು ಅಗಿದು ಗುಂಡಿಯನ್ನು ತೋಡಿ
ಅದರೊಳಗೆ ತಾನೇ ಬಿದ್ದುಹೋದನಲ್ಲಾ.
16 ಅವನು ಮಾಡಿದ ಕುಯುಕ್ತಿ ಅವನ ತಲೆಯ
ಯೇ ಬರುವದು;
ಅವನು ಮಾಡಬೇಕೆಂದಿದ್ದ ಅನ್ಯಾಯವು ಸ್ವಂತ
ಡೆಯ ಮೇಲೆ ಬೀಳುವದು.
17 ಯೆಹೋವನು ಮಾಡಿದ ನ್ಯಾಯವಾದ ತೀ
ಗಾಗಿ ನಾನು ಆತನನ್ನು ಕೊಂಡಾಡುವೆನು
ಪರಾತ್ಪರದೇವನಾದ ಯೆಹೋವನ ನಾಮ
ಸಂಕೀರ್ತಿಸುವೆನು.

ಮನುಷ್ಯನಿಗೆ ದೇವರು ಅನುಗ್ರಹಿಸಿರುವ ಗೌರವಕ್ಕಾ
ಆತನನ್ನು ಕೊಂಡಾಡುವದು.
ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು; ಗಿತ್ತೀಯ ರಾಗದಿಂದ ಹಾಡತಕ್ಕದ್ದು; ದಾವೀದನದು.

8 ನಮ್ಮ ಕರ್ತನಾದ ಯೆಹೋವನೇ,
ನಿನ್ನ ನಾಮವು ಭೂಲೋಕದಲ್ಲೆಲ್ಲಾ ಎ
ಮಹಿಮೆಯುಳ್ಳದ್ದು.
ಆಕಾಶಮಂಡಲದಲ್ಲಿ ನಿನ್ನ ವೈಭವವನ್ನು ಪ್ರಕಾ
ಸಿದ್ದೀ.
2 ನಿನಗೆ ವಿರೋಧವಾಗಿ ನಿಂತು ಮುಯ್ಯಿತೀರಿಸುವ
ಗಳ ಬಾಯನ್ನು ಕಟ್ಟುವದಕ್ಕೋಸ್ಕರ
ನೀನು ಬಾಲಕರ ಮತ್ತು ಮೊಲೆಕೂಸುಗಳ
ಯಿಂದ [1]ಬಲವಾದ ಸಾಕ್ಷಿ ಉಂಟಾಗು
ಮಾಡಿದ್ದೀ.

3 ನಿನ್ನ ಕೈಕೆಲಸವಾಗಿರುವ ಆಕಾಶಮಂಡಲವನ್ನೂ
ನೀನು ಉಂಟುಮಾಡಿದ ಚಂದ್ರನಕ್ಷತ್ರಗಳನ್ನೂ ನ
ನೋಡುವಾಗ—
4 ಮನುಷ್ಯನು ಎಷ್ಟು ಮಾತ್ರದವನು, ಅವನನ್ನು ನೀ
ಯಾಕೆ ನೆನಸಬೇಕು?
ಮಾನವನು ಎಷ್ಟರವನು, ಅವನಲ್ಲಿ ಯಾಕೆ ಆ
ವಿಡಬೇಕು.

5 ಅವನನ್ನು ದೇವದೂತರಿಗಿಂತ ಸ್ವಲ್ಪವೇ ಕಡಿಮೆಯ
ಮಾಡಿದಿಯಲ್ಲಾ;
ಪ್ರಭಾವವನ್ನೂ ಮಾನವನ್ನೂ ಅವನಿಗೆ ಕಿರೀಟ
ಇಟ್ಟಿ.
6 ನೀನು ಸೃಷ್ಟಿಸಿದ ಎಲ್ಲಾ ವಸ್ತುಗಳ ಮೇಲೆ ಪ್ರ
ತ್ವವನ್ನು ಅವನಿಗೆ ಅನುಗ್ರಹಿಸಿದಿ;
7 ನೀನು ಎಲ್ಲಾ ಕುರಿದನಗಳನ್ನು ಮಾತ್ರವೇ ಅ
ಕಾಡುಮೃಗಗಳು,
8 ಆಕಾಶಪಕ್ಷಿಗಳು, ಸಮುದ್ರದ ಮೀನುಗಳು,
ಆದರಲ್ಲಿ ಸಂಚರಿಸುವ ಸಕಲವಿಧವಾದ ಜೀವ
ಗಳು
ಇವೆಲ್ಲವನ್ನೂ ಅವನಿಗೆ ಅಧೀನಮಾಡಿದ್ದೀಯಲ್ಲ
9 ನಮ್ಮ ಕರ್ತನಾದ ಯೆಹೋವನೇ,

1) ಅಥವಾ: ಸ್ತೋತ್ರವನ್ನು [ಮೂಲ: ಬಲವನ್ನು] ಸಿದ್ಧಿಗೆ ತಂದಿ.

ನಿನ್ನ ನಾಮವು ಭೂಲೋಕದಲ್ಲೆಲ್ಲಾ ಎಷ್ಟೋ
ಮಹಿಮೆಯುಳ್ಳದ್ದು.

ನ್ಯಾಯಸ್ಥಾಪಕನಾದ ಯೆಹೋವನನ್ನು ಕೊಂಡಾಡುವ ಇಬ್ರಿಯ
ಅಕ್ಷರಕ್ರಮಾನುಸಾರವಾದ ಕೀರ್ತನೆ.
ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು;
ಮೂತ್ಲಬ್ಬೇನೆಂಬ ರಾಗ; ದಾವೀದನ ಕೀರ್ತನೆ.

9 א ಯೆಹೋವನೇ, ಮನಃಪೂರ್ವಕವಾಗಿ ನಿನ್ನನ್ನು
ಕೊಂಡಾಡುವೆನು;
ನೀನು ಮಾಡಿದ ಅದ್ಭುತಕಾರ್ಯಗಳನ್ನೆಲ್ಲಾ ವರ್ಣಿಸು
ವೆನು.
2 ಪರಾತ್ಪರನೇ, ನಿನ್ನಲ್ಲಿ ನಾನು ಸಂತೋಷಿಸಿ ಉತ್ಸಾಹ
ಪಡುವೆನು;
ನಿನ್ನ ಹೆಸರನ್ನು ಕೀರ್ತಿಸುವೆನು.

3 ב ನನ್ನ ಹಗೆಗಳು ನಿನ್ನ ಎದುರಿನಿಂದ ಹಿಂದಿರುಗಿ
ಎಡವಿಬಿದ್ದು ಹಾಳಾದರಲ್ಲಾ.
4 ನನ್ನ ವ್ಯಾಜ್ಯದಲ್ಲಿ ನೀನು ನ್ಯಾಯವನ್ನು ಸ್ಥಾಪಿಸಿದಿ;
ನೀನು ಆಸನಾರೂಢನಾಗಿ ನೀತಿಯಿಂದ ನ್ಯಾಯವನ್ನು
ನಿರ್ಣಯಿಸುತ್ತೀ.

5 ג ನೀನು ಜನಾಂಗಗಳನ್ನು ಭಂಗಿಸಿ ದುಷ್ಟರನ್ನು ನಾಶ
ಮಾಡಿದ್ದೀ;
ಅವರ ಹೆಸರನ್ನು ಯುಗಯುಗಾಂತರಕ್ಕೂ ಅಳಿಸಿ
ಬಿಟ್ಟಿದ್ದೀ.
6 ה ಶತ್ರುಗಳು ನಿಶ್ಶೇಷವಾದರು;
ನೀನು ಕೆಡವಿಸಿದ ಅವರ ಕೋಟೆಗಳು ಸಂಪೂರ್ಣವಾಗಿ
ಹಾಳಾದವು.
ಅವರ ಸ್ಮರಣೆಯೇ ಇಲ್ಲವಾಯಿತು.

7 ו ಯೆಹೋವನಾದರೋ ಯಾವಾಗಲೂ ನೆಲೆ
ಗೊಂಡಿದ್ದು
ನ್ಯಾಯವಿಚಾರಿಸುವದಕ್ಕಾಗಿ ತನ್ನ ಸಿಂಹಾಸನವನ್ನು
ಸ್ಥಾಪಿಸಿದ್ದಾನೆ.
8 ಆತನೇ ನೀತಿಗನುಸಾರವಾಗಿ ಲೋಕಕ್ಕೆ ನ್ಯಾಯ
ತೀರಿಸುವವನು;
ಆತನು ಜನಾಂಗಗಳಿಗೆ ಸತ್ಯವಾಗಿಯೇ ತೀರ್ಪುಕೊಡು
ವನು.

9 ו ಯೆಹೋವನು ಕುಗ್ಗಿಹೋದವರಿಗೆ ಆಶ್ರಯವೂ
ಆಪತ್ಕಾಲದಲ್ಲಿ ದುರ್ಗವೂ ಆಗಿರುವನು.
10 ಯೆಹೋವನೇ, ನಿನ್ನ ನಾಮಮಹಿಮೆಯನ್ನು ಬಲ್ಲ
ವರು ನಿನ್ನಲ್ಲಿ ಭರವಸವಿಡುವರು;
ಯಾಕಂದರೆ ನಿನ್ನ ಮರೆಹೊಗುವವರನ್ನು ನೀನು ಕೈ
ಬಿಡುವವನಲ್ಲ.

11 ז ಚೀಯೋನಿನಲ್ಲಿ ವಾಸಿಸುವ ಯೆಹೋವನನ್ನು ಕೀ
ರ್ತಿಸಿರಿ;
ಆತನ ಮಹತ್ಕಾರ್ಯಗಳನ್ನು ಜನಾಂಗಗಳಲ್ಲಿ ಪ್ರಕ
ಟಿಸಿರಿ.
12 ಆತನು ಕುಗ್ಗಿದವರ ಮೊರೆಯನ್ನು ಮರೆಯದೆ
ಪ್ರಾಣಾಪರಾಧಕ್ಕೆ ಮುಯ್ಯಿತೀರಿಸುವವನಾಗಿ ಅವ
ರನ್ನು ಜ್ಞಾಪಕಮಾಡಿಕೊಂಡನು.

13 ח ಯೆಹೋವನೇ, ಮರಣದ್ವಾರದೊಳಗೆ ಸೇರದಂತೆ
ನನ್ನನ್ನು ಉದ್ಧರಿಸುವವನೇ, ಕನಿಕರಿಸು;
ಹಗೆಗಳಿಂದ ನನಗುಂಟಾದ ಬಾಧೆಯನ್ನು ಲಕ್ಷ್ಯಕ್ಕೆ
ತಂದುಕೋ.
14 ಆಗ ನಾನು ನಿನ್ನ ಸ್ತೋತ್ರವನ್ನು ಪ್ರಸಿದ್ಧಪಡಿಸುವೆನು;
ನಿನ್ನಿಂದಾದ ರಕ್ಷಣೆಗಾಗಿ ಚೀಯೋನೆಂಬ ಕುಮಾ
ರಿಯ ಬಾಗಲುಗಳಲ್ಲಿ ಹರ್ಷಿಸುವೆನು.

15 ט ಜನಾಂಗಗಳವರು ತಾವು ಮಾಡಿದ ಕುಣಿಯಲ್ಲಿ
ತಾವೇ ಬಿದ್ದುಹೋದರು;
ಅವರು ಹಾಸಿದ ಬಲೆಯಲ್ಲಿ ಅವರ ಕಾಲೇ ಸಿಕ್ಕಿ
ಕೊಂಡಿತು.
16 ಯೆಹೋವನು ನ್ಯಾಯತೀರಿಸುವವನಾಗಿ ತನ್ನನ್ನು
ಪ್ರಕಟಿಸಿಕೊಂಡಿದ್ದಾನೆ,
ದುಷ್ಟರು ತಾವೇ ಕಲ್ಪಿಸಿದ ಕುಯುಕ್ತಿಯಲ್ಲಿ ಸಿಕ್ಕಿ
ಕೊಂಡಿದ್ದಾರಲ್ಲಾ. ಹಿಗ್ಗಾಯೋನ್ ಸೆಲಾ.

17 י ದುಷ್ಟರು ಅಂದರೆ ದೇವರನ್ನು ಅಲಕ್ಷ್ಯಮಾಡುವ
ಜನಾಂಗಗಳವರೆಲ್ಲಾ
ಪಾತಾಳಕ್ಕೆ ಇಳಿದುಹೋಗುವರು.
18 כ ದಿಕ್ಕಿಲ್ಲದವರು ಕಡೆಯ ವರೆಗೆ ಮರೆಯಲ್ಪಡು
ವದಿಲ್ಲ;
ದೀನರ ನಿರೀಕ್ಷಣೆಯು ಕೆಡುವದೇ ಇಲ್ಲ.

19 ಯೆಹೋವನೇ, ಏಳು; ಮನುಷ್ಯಮಾತ್ರದವರು
ಬಲಗೊಳ್ಳಬಾರದು.
ಜನಾಂಗಗಳಿಗೆ ನಿನ್ನ ಸನ್ನಿಧಿಯಲ್ಲಿ ತೀರ್ಪು
ಉಂಟಾಗಲಿ.
20 ಯೆಹೋವನೇ, ಅವರಿಗೆ ಭಯವನ್ನು ಹುಟ್ಟಿಸು;
ಜನಾಂಗಗಳು ತಾವು ಮನುಷ್ಯಮಾತ್ರದವರೆಂದು
ತಿಳಿದುಕೊಳ್ಳಲಿ. ಸೆಲಾ.

ಯೆಹೋವನು ಸೊಕ್ಕಿದವರನ್ನು ಶಿಕ್ಷಿಸಿ ಕುಗ್ಗಿದವರನ್ನು
ರಕ್ಷಿಸಬೇಕೆಂದು ಬೇಡಿಕೊಳ್ಳುವ ಇಬ್ರಿಯ ಅಕ್ಷರಕ್ರಮಾನು
ಸಾರವಾದ ಕೀರ್ತನೆ.

10 ל ಯೆಹೋವನೇ, ನೀನು ಯಾಕೆ ದೂರವಾಗಿ
ನಿಂತಿದ್ದೀ;
ಕಷ್ಟಕಾಲದಲ್ಲಿ ಯಾಕೆ ಮರೆಯಾಗುತ್ತೀ?
2 ದುಷ್ಟರು ಗರ್ವಿಷ್ಠರಾಗಿ ದೀನರನ್ನು ಬಹಳವಾಗಿ ಹಿಂಸಿ
ಸುತ್ತಾರೆ;
ಅವರು ಕಲ್ಪಿಸಿದ ಕುಯುಕ್ತಿಯಲ್ಲಿ ತಾವೇ ಸಿಕ್ಕಿ
ಬೀಳಲಿ.

3 ದುಷ್ಟನು ತನ್ನ ಮನೋರಥವು ನೆರವೇರಿತೆಂದು ಕೊಚ್ಚಿ
ಕೊಳ್ಳುತ್ತಾನೆ;
ಪರರ ಸೊತ್ತನ್ನು ಅಪಹರಿಸಿದವನು ಯೆಹೋವನನ್ನು
ಅಲ್ಲಗಳೆದು ಬಿಟ್ಟುಬಿಡುತ್ತಾನೆ.
4 ಯೆಹೋವನು ವಿಚಾರಿಸುವದಿಲ್ಲ ಎಂದು ದುಷ್ಟನು
ಸೊಕ್ಕಿನ ಮುಖದಿಂದ ಹೇಳಿಕೊಂಡು
ದೇವರಿಲ್ಲವೆಂಬದಾಗಿ ಸದಾ ಯೋಚಿಸುತ್ತಾನೆ.
5 ಅವನ ಪ್ರಯತ್ನಗಳು ಯಾವಾಗಲೂ ಕೈಗೂಡುತ್ತವೆ;
ನಿನ್ನ ನ್ಯಾಯತೀರ್ಪು ಮಹೋನ್ನತವಾಗಿರುವದರಿಂದ
ಅವನ ಗ್ರಹಿಕೆಗೆ ಬರುವದಿಲ್ಲ;
ವೈರಿಗಳ ಗುಂಪನ್ನಾದರೋ ತಾತ್ಸಾರಮಾಡುತ್ತಾನೆ.
6 ತಾನು ಕದಲುವದೇ ಇಲ್ಲ;
ತನಗೆ ವಿಪತ್ತು ಎಂದೆಂದಿಗೂ ಸಂಭವಿಸುವದಿಲ್ಲ ಅಂದು
ಕೊಂಡಿದ್ದಾನೆ.
7 ಅವನ ಬಾಯಿಯು ಶಾಪಬಲಾತ್ಕಾರವಂಚನೆಗಳಿಂದ
ತುಂಬಿದೆ;
ಅವನ ನಾಲಿಗೆಯ ಕೆಳಗೆ ಹಾನಿಯೂ ನಾಶವೂ
ಕೂತಿವೆ.
8 ಅವನು ಗ್ರಾಮಗಳ ಸಂದುಗೊಂದುಗಳಲ್ಲಿ ಹೊಂಚಿ
ಕೊಂಡಿದ್ದು
ಮರೆಯಾದ ಸ್ಥಳಗಳಲ್ಲಿ ನಿರಪರಾಧಿಗಳನ್ನು ಕೊಲ್ಲು
ತ್ತಾನೆ.
ಅವನು ಗತಿಹೀನನನ್ನು ಹಿಡಿಯುವದಕ್ಕೆ ಸಮಯ
ನೋಡುತ್ತಾನೆ.
9 ಗವಿಯಲ್ಲಿ ಅಡಗಿಕೊಂಡಿರುವ ಸಿಂಹದಂತೆ ಅವನು
ಮರೆಯಾಗಿ ಹೊಂಚಿಕೊಂಡಿರುವನು.
ಅವನು ಬಲೆಯೊಡ್ಡಿ ಕಾದಿದ್ದು ಕುಗ್ಗಿದವನನ್ನು ಹಿಡಿದು
ಎಳೆದುಕೊಂಡುಹೋಗುತ್ತಾನೆ.
10 [ಕುಗ್ಗಿದವನು] ಜಜ್ಜಲ್ಪಟ್ಟು ಉರುಳಿಕೊಳ್ಳುತ್ತಾನೆ,
ಗತಿಯಿಲ್ಲದವನು ಅವನ ಬಲಾತ್ಕಾರದಿಂದ ಬಿದ್ದು
ಹೋಗುತ್ತಾನೆ.
11 [ಆ ದುಷ್ಟನು] ತನ್ನೊಳಗೆ—ದೇವರು ಇವನನ್ನು
ಬಿಟ್ಟು ವಿಮುಖನಾಗಿದ್ದಾನೆ;
ಆತನು ನೋಡುವದೇ ಇಲ್ಲ ಅಂದುಕೊಳ್ಳುತ್ತಾನೆ.
12 ק ಯೆಹೋವನೇ, ಏಳು; ದೇವರೇ, ಕುಗ್ಗಿದವನನ್ನು
ಮರೆಯಬೇಡ;
ಅವನನ್ನು ರಕ್ಷಿಸುವದಕ್ಕೆ ಕೈ ಚಾಚು.
13 ದುಷ್ಟನು ನಿನ್ನನ್ನು ಯಾಕೆ ಅಲಕ್ಷ್ಯಮಾಡಬೇಕು?
ದೇವರು ವಿಚಾರಿಸುವದೇ ಇಲ್ಲವೆಂದು ಹೇಳಿಕೊಳ್ಳು
ವದೇಕೆ?

14 ר ನೀನು ಅವರ ಅನ್ಯಾಯಬಲಾತ್ಕಾರಗಳನ್ನು ನೋಡಿ
ಯೇ ಇದ್ದೀ;
ಅವುಗಳನ್ನು ವಿಚಾರಿಸುತ್ತೀ.
ಗತಿಯಿಲ್ಲದವನು ತನ್ನನ್ನು ನಿನಗೇ ಒಪ್ಪಿಸುವನು,
ದಿಕ್ಕಿಲ್ಲದವನಿಗೆ ನೀನೇ ದಿಕ್ಕು.

15 ש ದುಷ್ಟನ ಭುಜಬಲವನ್ನು ಮುರಿದುಹಾಕು;
ಕೆಡುಕನ ದುಷ್ಟತ್ವವನ್ನು ಶೋಧಿಸಿ ನಿರ್ಮೂಲಮಾಡಿ
ಬಿಡು.

16 ಯೆಹೋವನು ಯುಗಯುಗಾಂತರಗಳಲ್ಲಿಯೂ
ಸನಾಗಿರುವನು;
ಆತನ ದೇಶದಲ್ಲಿ ಅನ್ಯಜನಗಳು ನಿಶ್ಶೇಷರಾದರು.

17 ת ಯೆಹೋವನೇ, ನೀನು ದೀನರ ಕೋರಿಕೆಯ
ನೆರವೇರಿಸುವವನೇ ಆಗಿದ್ದೀ;
ಅವರ ಹೃದಯವನ್ನು ಧೈರ್ಯಪಡಿಸುತ್ತೀ; ಅ
ಮೊರೆಗೆ ಕಿವಿಗೊಡುತ್ತೀ.
18 ನೀನು ದಿಕ್ಕಿಲ್ಲದವರ ಮತ್ತು ಕುಗ್ಗಿದವರ ನ್ಯಾ
ವನ್ನು ವಿಚಾರಿಸುತ್ತೀ.
ಹೀಗಿರುವಲ್ಲಿ ಇನ್ನು ಮುಂದೆ ಮಣ್ಣಿನಿಂದಾದ ಮನು
ರಿಂದ ಅವರಿಗೆ ಹೆದರಿಕೆ ಉಂಟಾಗುವದಿಲ್ಲ.

ಯೆಹೋವನ ಶರಣರಿಗೆ ದುರ್ಗತಿಯಿಲ್ಲವೆಂಬದು.
ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು;
ದಾವೀದನದು.

**11** ಯೆಹೋವನನ್ನು ಆಶ್ರಯಿಸಿಕೊಂಡಿದ್ದೇನೆ.
2 ನೀವು—ದುಷ್ಟರು ಕತ್ತಲಲ್ಲಿ ಯಥಾರ್ಥಹೃದ
ವುಳ್ಳವರನ್ನು ಕೊಲ್ಲಬೇಕೆಂದು
ಬಿಲ್ಲುಬೊಗ್ಗಿಸಿ ಹೆದೆಗೆ ಬಾಣವನ್ನು ಹೂಡಿದ
ನೋಡಿರಿ;
3 ಪಕ್ಷಿಗಳಂತೆ ನಿಮ್ಮ ಬೆಟ್ಟಗಟ್ಟಗಳಿಗೆ ಓಡಿಹೋ
ಆಧಾರಗಳೇ ಕೆಡವಲ್ಪಟ್ಟ ಮೇಲೆ
ನೀತಿವಂತನ ಗತಿ ಏನಾದೀತು ಎಂದು ನನಗೆ ಹೇಳ
ದೇಕೆ?

4 ಯೆಹೋವನು ತನ್ನ ಪರಿಶುದ್ಧಮಂದಿರದಲ್ಲಿದ್ದಾನೆ
ಆತನು ತನ್ನ ಸಿಂಹಾಸನವನ್ನು ಪರಲೋಕದಲ್ಲಿ ಸ್ಥಾ
ಸಿದ್ದಾನೆ.
ಆತನ ಕಣ್ಣುಗಳು ಮಾನವರನ್ನು ನೋಡುತ್ತವೆ;
ಆತನು ಅವರನ್ನು ಬಹು ಸೂಕ್ಷ್ಮವಾಗಿ ಪರಿಶೋಧಿ
ತ್ತಾನೆ.
5 ಯೆಹೋವನು ನೀತಿವಂತರನ್ನೂ ಅನೀತಿವಂತರ
ಪರೀಕ್ಷಿಸುತ್ತಾನೆ;
ಬಲಾತ್ಕಾರಿಗಳನ್ನು ದ್ವೇಷಿಸುತ್ತಾನೆ.
6 ಆತನು ದುಷ್ಟರ ಮೇಲೆ ಪಾಶಗಳನ್ನು ಸುರಿಸಲಿ.
ಬೆಂಕಿ ಗಂಧಕ ಉರಿಗಾಳಿ ಇವುಗಳನ್ನು ಅ
ಪಾನವಾಗಮಾಡಲಿ.
7 ಯಾಕಂದರೆ ನೀತಿಸ್ವರೂಪನಾದ ಯೆಹೋವ
ನೀತಿಯನ್ನು ಮೆಚ್ಚುವವನಾಗಿದ್ದಾನೆ.
ಸಜ್ಜನರು ಆತನ ಸಾನ್ನಿಧ್ಯವನ್ನು ಸೇರುವರು.

ದುಷ್ಟಾಧಿಕಾರದಲ್ಲಿ ಭಕ್ತನು ಪ್ರಾರ್ಥಿಸುವದು.
ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು;
ಮಂದರಸ್ಥಾಯಿಯೊಡನೆ ಹಾಡತಕ್ಕದ್ದು;
ದಾವೀದನ ಕೀರ್ತನೆ.

**12** ಯೆಹೋವನೇ, ರಕ್ಷಿಸು; ಭಕ್ತರು ಮುಗಿ
ಹೋಗಿದ್ದಾರೆ.

ಜನರೊಳಗೆ ನಂಬಿಕೆಯುಳ್ಳವರು ಕಾಣಿಸುವದೇ ಇಲ್ಲ.
2 ಪ್ರತಿಯೊಬ್ಬರು ನೆರೆಯವರೊಡನೆ ಹುಸಿಯನ್ನಾಡುತ್ತಾರೆ,
ಅವರು ವಂಚನೆಯ ತುಟಿಗಳಿಂದ ಹೊರಗೊಂದು ಒಳಗೊಂದು ಮಾತಾಡುತ್ತಾರೆ.

3 ಯೆಹೋವನು ವಂಚನೆಯ ತುಟಿಗಳನ್ನೂ
ಬಡಾಯಿ ನಾಲಿಗೆಯನ್ನೂ ಕಡಿದುಬಿಡಲಿ.
4 ಅವರು—ನಮ್ಮ ಮಾತುಗಳಿಗೆ ತಡೆಯಿಲ್ಲವಲ್ಲಾ; ನಮ್ಮ ತುಟಿಗಳು ನಮ್ಮವೇ;
ನಮಗೆ ಒಡೆಯನು ಯಾವನು ಎಂದು ಹೇಳಿಕೊಳ್ಳುತ್ತಾರಲ್ಲಾ.

5 ಯೆಹೋವನು—ಕುಗ್ಗಿದವರ ಬಾಧೆಯನ್ನು ನೋಡಿದ್ದೇನೆ;
ಗತಿಯಿಲ್ಲದವರ ನರಳುವಿಕೆಯು ನನಗೆ ಕೇಳಿಸಿತು.
ಈಗ ಎದ್ದು ಬಂದು ಅವರ ಇಷ್ಟಾರ್ಥವನ್ನು ನೆರವೇರಿಸಿ
ಅವರನ್ನು ಸುರಕ್ಷಿತವಾಗಿ ಇರಿಸುವೆನು ಎಂದು ಹೇಳುತ್ತಾನೆ.

6 ಯೆಹೋವನ ಮಾತುಗಳು ಯಥಾರ್ಥವಾದವುಗಳೇ;
ಅವು ಏಳು ಸಾರಿ ಪುಟಕ್ಕೆ ಹಾಕಿದ ಚೊಕ್ಕ ಬೆಳ್ಳಿಯೋಪಾದಿಯಲ್ಲಿವೆ.
7 ಯೆಹೋವನೇ, ದುಷ್ಟತ್ವಕ್ಕೆ ಆಳಿಕೆ ಬಂದು
ಎಲ್ಲೆಲ್ಲೂ ನೀಚರೇ ತುಂಬಿಕೊಂಡಿದ್ದರೂ
8 ನೀನು ನಮ್ಮನ್ನು ಅವರಿಂದ ತಪ್ಪಿಸಿ ಕಾಪಾಡುವಿ;
ಸದಾಕಾಲವೂ ನಮ್ಮನ್ನು ಕಾಯುವಿ.

ಶತ್ರುಪೀಡಿತನು ಪ್ರಾರ್ಥಿಸುವದು.
ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು;
ದಾವೀದನು ರಚಿಸಿದ ಕೀರ್ತನೆ.

13 ಯೆಹೋವನೇ, ನೀನು ಇನ್ನೆಷ್ಟರ ವರೆಗೆ ನನ್ನನ್ನು ಸಂಪೂರ್ಣವಾಗಿ ಮರೆತಿರುವಿ?
ಇನ್ನೆಲ್ಲಿಯ ತನಕ ನನಗೆ ವಿಮುಖನಾಗಿರುವಿ?
2 ನಾನು ಇನ್ನೆಷ್ಟರ ವರೆಗೆ ಹಗಲೆಲ್ಲಾ ದುಃಖಾಕ್ರಾಂತನಾಗಿ ಆಲೋಚಿಸಿಕೊಳ್ಳುತ್ತಾ ಇರಬೇಕು?
ಇನ್ನೆಷ್ಟರ ವರೆಗೆ ವಿರೋಧಿಯು ನನಗೆ ದೊರೆಯಾಗಿರಬೇಕು?

3 ಯೆಹೋವನೇ, ನನ್ನ ದೇವರೇ, ನನ್ನಲ್ಲಿ ದೃಷ್ಟಿಯಿಟ್ಟು ಸದುತ್ತರವನ್ನು ದಯಪಾಲಿಸು;
ನನಗೆ ಮರಣನಿದ್ರೆಯು ಉಂಟಾಗದಂತೆ ನನ್ನ ಕಣ್ಣುಗಳನ್ನು ಕಳೆಗೊಳಿಸು.
4 ನನ್ನ ಶತ್ರುವು—ಅವನನ್ನು ಜಯಿಸಿದೆನೆಂದು ಹೇಳಿಕೊಳ್ಳಬಾರದು;
ವೈರಿಗಳು ಜಾರಿಬಿದ್ದನೆಂದು ಹಿಗ್ಗಬಾರದು.

5 ನಾನಂತೂ ನಿನ್ನ ಕೃಪೆಯಲ್ಲಿ ಭರವಸವಿಟ್ಟಿದ್ದೇನೆ;
ನೀನು ನನ್ನನ್ನು ರಕ್ಷಿಸಿದ್ದರಿಂದ ನನ್ನ ಹೃದಯವು ಹರ್ಷಗೊಳ್ಳುವದು.
6 ಯೆಹೋವನ ಮಹೋಪಕಾರಕ್ಕಾಗಿ ಆತನಿಗೆ ಹಾಡುವೆನು.

ದುಷ್ಟನಾಸ್ತಿಕರಿಂದ ತಪ್ಪಿಸಿ ಕಾಪಾಡಬೇಕೆಂದು
ಪ್ರಾರ್ಥಿಸುವದು. (ಕೀರ್ತನೆ 53.)
ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು;
ದಾವೀದನದು.

14 ದುರ್ಮತಿಗಳು—ದೇವರಿಲ್ಲವೆಂದು ಮನಸ್ಸಿನಲ್ಲಿ ಅಂದುಕೊಳ್ಳುತ್ತಾರೆ;
ಅವರು ಕೆಟ್ಟುಹೋದವರು; ಹೇಯಕೃತ್ಯಗಳನ್ನು ನಡಿಸುತ್ತಾರೆ.
ಅವರಲ್ಲಿ ಒಳ್ಳೆಯದನ್ನು ಮಾಡುವವರೇ ಇಲ್ಲ.

2 ಮನುಷ್ಯರಲ್ಲಿ ತನ್ನ ಸಾನ್ನಿಧ್ಯವನ್ನು ಅಪೇಕ್ಷಿಸುವ ಬುದ್ಧಿವಂತರು ಇದ್ದಾರೋ ಎಂದು
ಯೆಹೋವನು ಆಕಾಶದಿಂದ ಮನುಷ್ಯರನ್ನು ನೋಡಲಾಗಿ
3 ಒಳ್ಳೆಯದನ್ನು ಮಾಡುವವನು ಇಲ್ಲ, ಒಬ್ಬನಾದರೂ ಇಲ್ಲ.
ಪ್ರತಿಯೊಬ್ಬನು ದಾರಿತಪ್ಪಿದವನು, ಎಲ್ಲರೂ ಕೆಟ್ಟುಹೋದವರೇ.

4 ದುಷ್ಟತ್ವವನ್ನು ನಡಿಸುವವರೆಲ್ಲರು ತಿಳಿಯುವದಿಲ್ಲವೋ?
ಅವರು ನನ್ನ ಜನರನ್ನು ಆಹಾರವನ್ನೋ ಎಂಬಂತೆ ನುಂಗಿಬಿಡುತ್ತಾರೆ;
ಯೆಹೋವನನ್ನು ಸ್ಮರಿಸುವದಿಲ್ಲ.
5 ಫಕ್ಕನೆ ಅವರು ಭಯಭ್ರಾಂತರಾಗುವರು;
ಯಾಕಂದರೆ ದೇವರು ನೀತಿವಂತರ ಪಕ್ಷದಲ್ಲಿದ್ದಾನೆ.
6 ನೀವು ಕುಗ್ಗಿದವರ ಸಂಕಲ್ಪವನ್ನು ಭಂಗಪಡಿಸಿದರೂ
ಯೆಹೋವನು ಅವರ ಆಶ್ರಯವಲ್ಲವೇ.

7 ಚೀಯೋನಿನಿಂದ ಇಸ್ರಾಯೇಲ್ಯರಿಗೆ ರಕ್ಷಣೆಯು ಬೇಗನೆ ಬರಲಿ.
ಯೆಹೋವನು ದುರವಸ್ಥೆಯಿಂದ ತಪ್ಪಿಸಿದಾಗ
ಆತನ ಪ್ರಜೆಗಳಾಗಿರುವ ಯಾಕೋಬವಂಶದವರು ಉಲ್ಲಾಸಗೊಳ್ಳುವರು; ಇಸ್ರಾಯೇಲ್ಯರು ಹರ್ಷಿಸುವರು.

ಯೆಹೋವನ ಸನ್ನಿಧಿಗೆ ಯೋಗ್ಯರು ಯಾರೆಂಬದು.
(ಯೆಶಾಯ 33. 14—16.)
ದಾವೀದನ ಕೀರ್ತನೆ.

15 ಯೆಹೋವನೇ, ನಿನ್ನ ಗುಡಾರದಲ್ಲಿ ಇಳುಕೊಂಡಿರುವದಕ್ಕೆ ಯೋಗ್ಯನು ಯಾವನು?
ನಿನ್ನ ಪರಿಶುದ್ಧಪರ್ವತದಲ್ಲಿ ವಾಸಿಸತಕ್ಕವನು ಎಂಥವನಾಗಿರಬೇಕು?

2 ಅವನು ಸಜ್ಜನನೂ ನೀತಿವಂತನೂ
ಮನಃಪೂರ್ವಕವಾಗಿ ಸತ್ಯವಚನವನ್ನಾಡುವವನೂ ಆಗಿ
ರಬೇಕು.
3 ಅವನು ಚಾಡಿಯನ್ನು ಹೇಳದವನೂ
ಮತ್ತೊಬ್ಬರಿಗೆ ಅನ್ಯಾಯಮಾಡದವನೂ
ಯಾರನ್ನೂ ನಿಂದಿಸದವನೂ ಆಗಿರಬೇಕು.
4 ಅವನು ಭ್ರಷ್ಟರನ್ನು ಜರಿದುಬಿಟ್ಟವನೂ
ಯೆಹೋವನಲ್ಲಿ ಭಯಭಕ್ತಿಯುಳ್ಳವರನ್ನು ಸನ್ಮಾನಿಸು
ವವನೂ
ನಷ್ಟವಾದರೂ ಪ್ರಮಾಣತಪ್ಪದವನೂ ಆಗಿರಬೇಕು.
5 ಅವನು ಸಾಲಕ್ಕೆ ಬಡ್ಡಿ ಕೇಳದವನೂ
ನಿರಪರಾಧಿಯ ಕೇಡಿಗಾಗಿ ಲಂಚತೆಗೆದುಕೊಳ್ಳದವನೂ
ಆಗಿರಬೇಕು.
ಇಂಥವನು ಎಂದಿಗೂ ಕದಲುವದಿಲ್ಲ.

ಯೆಹೋವನ ಸೇವೆಯು ಪೂರ್ಣಾನಂದಕರವಾದದ್ದು.
ದಾವೀದನ ಕಾವ್ಯ.

16 ದೇವರೇ, ನಾನು ನಿನ್ನ ಶರಣಾಗತನು; ನನ್ನನ್ನು
ಕಾಪಾಡು.

2 ನಾನು ಯೆಹೋವನನ್ನು ಕುರಿತು—ನೀನೇ ನನ್ನ ಒಡೆ
ಯನು;
ನನ್ನ ಸುಖವು ನಿನ್ನಲ್ಲಿಯೇ ಹೊರತು ಬೇರೆ ಇಲ್ಲ
ಎಂತಲೂ
3 ಭೂಲೋಕದಲ್ಲಿರುವ ದೇವಜನರ ವಿಷಯದಲ್ಲಿ—
ಇವರೇ ಶ್ರೇಷ್ಠರು,
ಇವರೇ ನನಗೆ ಇಷ್ಟರಾದವರು ಎಂತಲೂ ಹೇಳುವೆನು.
4 ಇತರ ದೇವರುಗಳನ್ನು ಅವಲಂಬಿಸಿದವರಿಗೆ ಬಹಳ
ಕಷ್ಟನಷ್ಟಗಳು ಉಂಟಾಗುವವು.
ಅವರಂತೆ ನಾನು ರಕ್ತವನ್ನು ಪಾನದ್ರವ್ಯವಾಗಿ
ಸಮರ್ಪಿಸುವದೇ ಇಲ್ಲ;
ಅವರ ನಾಮಗಳನ್ನಾದರೂ ಉಚ್ಚರಿಸುವದಿಲ್ಲ.

5 ನನ್ನ ಪಾಲೂ ಪಾನವೂ ಯೆಹೋವನೇ;
ನೀನೇ ನನ್ನ ಸ್ವಾಸ್ತ್ಯವನ್ನು ಭದ್ರಗೊಳಿಸುತ್ತೀ.
6 ನನಗೆ ಪ್ರಾಪ್ತವಾಗಿರುವ ಸ್ವಾಸ್ತ್ಯವು ರಮಣೀಯ
ವಾದದ್ದು;
ಅದು ನನಗೆ ಸಂತೃಪ್ತಿಕರವಾಗಿದೆ.
7 ಯೆಹೋವನು ನನಗೆ ಆಲೋಚನೆಯನ್ನು ಹೇಳಿ
ಕೊಡುತ್ತಾನೆ; ಆತನನ್ನು ಕೊಂಡಾಡುವೆನು.
ರಾತ್ರಿಸಮಯಗಳಲ್ಲಿ ನನ್ನ ಅಂತರಾತ್ಮವು ನನ್ನನ್ನು
ಬೋಧಿಸುತ್ತದೆ.
8 ನಾನು ಯೆಹೋವನನ್ನು ಯಾವಾಗಲೂ ನನ್ನೆದು
ರಿಗೇ ಇಟ್ಟುಕೊಂಡಿದ್ದೇನೆ;
ಆತನು ನನ್ನ ಬಲಗಡೆಯಲ್ಲಿ ಇರುವದರಿಂದ ನಾನು
ಎಂದಿಗೂ ಕದಲುವದಿಲ್ಲ.
9 ಆದಕಾರಣ ನನ್ನ ಹೃದಯವು ಹರ್ಷಿಸುತ್ತದೆ;
ನನ್ನ ಮನವು ಉಲ್ಲಾಸಗೊಳ್ಳುತ್ತದೆ;
ನನ್ನ ಶರೀರವೂ ಸುರಕ್ಷಿತವಾಗಿರುವದು.
10 ಯಾಕಂದರೆ ನೀನು ನನ್ನ ಜೀವಾತ್ಮವನ್ನು ಪಾತಾ
ದಲ್ಲಿ ಬಿಡುವದಿಲ್ಲ;
ನಿನ್ನ ಪ್ರಿಯನಿಗೆ ಅಧೋಲೋಕವನ್ನು ನೋಡಗೊ
ಸುವದಿಲ್ಲ.
11 ನೀನು ನನಗೆ ಜೀವಮಾರ್ಗವನ್ನು ತಿಳಿಯಪಡಿಸು
ನಿನ್ನ ಸಮ್ಮುಖದಲ್ಲಿ ಪರಿಪೂರ್ಣಸಂತೋಷವಿದೆ;
ನಿನ್ನ ಬಲಗೈಯಲ್ಲಿ ಶಾಶ್ವತಭಾಗ್ಯವಿದೆ.

ಶತ್ರುಗಳಿಂದ ಕಾಪಾಡಬೇಕೆಂದು ನಿರಪರಾಧಿಯು
ಬೇಡಿಕೊಳ್ಳುವದು.
ದಾವೀದನ ಪ್ರಾರ್ಥನೆ.

17 ಯೆಹೋವನೇ, ನ್ಯಾಯವಾದದ್ದನ್ನು ಆಲೈ
ನನ್ನ ಮೊರೆಗೆ ಲಕ್ಷ್ಯವಿಡು.
ನನ್ನ ಪ್ರಾರ್ಥನೆಗೆ ಕಿವಿಗೊಡು; ಅದು ಕಪಟವ
ಬಾಯಿಂದ ಬಂದದ್ದಲ್ಲ.
2 ನಿನ್ನಿಂದ ನನಗೆ ನ್ಯಾಯವಾದ ತೀರ್ಪು ಉಂಟಾಗ
ನೀನು ನೀತಿಗನುಸಾರವಾಗಿ ನೋಡುವವನಲ್ಲವೇ.
3 ನೀನು ನನ್ನ ಹೃದಯವನ್ನು ಪರೀಕ್ಷಿಸಿದರೂ ರ
ವೇಳೆ ವಿಚಾರಿಸಿದರೂ
ನನ್ನನ್ನು ಪುಟಕ್ಕೆ ಹಾಕಿ ಶೋಧಿಸಿದರೂ
ಯಾವ ದುರಾಲೋಚನೆಯಾದರೂ ನನ್ನಲ್ಲಿ ದೊ
ಯುವದಿಲ್ಲ; ನನ್ನ ಬಾಯಲ್ಲಿಯೂ ತಪ್ಪಿಲ್ಲ.
4 ನಾನಂತೂ ಲೋಕವ್ಯವಹಾರಗಳಲ್ಲಿ ಬಲಾತ್ಕಾರಿಗಳ
ನಡೆಯದೆ
ನಿನ್ನ ಮಾತನ್ನೇ ಅನುಸರಿಸಿದ್ದೇನೆ.
5 ನಿನ್ನ ಮಾರ್ಗದಲ್ಲೇ ಹೆಜ್ಜೆಯಿಟ್ಟು ನಡೆಯು
ಇದ್ದೇನೆ;
ನನ್ನ ಕಾಲು ಜಾರಲಿಲ್ಲ.

6 ದೇವರೇ, ನನಗೆ ಸದುತ್ತರವನ್ನು ದಯಪಾಲಿಸ
ಯೆಂದು
ಮೊರೆಯಿಡುತ್ತೇನೆ, ಕಿವಿಗೊಟ್ಟು ಕೇಳು.
7 ಭುಜಬಲವನ್ನು ಪ್ರಯೋಗಿಸಿ ಶರಣಾಗತರ
ವಿರೋಧಿಗಳಿಂದ ರಕ್ಷಿಸುವಾತನೇ,
ನಿನ್ನ ಪ್ರೀತಿಯನ್ನು ವಿಶೇಷವಾಗಿ ತೋರಿಸು.
8 ನನ್ನನ್ನು ಸುತ್ತಿಕೊಂಡು ಬಾಧಿಸುತ್ತಿರುವ ದುಷ್ಟರಿ
ಲೂ ಪ್ರಾಣವೈರಿಗಳಿಂದಲೂ ತಪ್ಪಿಸಿ
9 ನಿನ್ನ ರೆಕ್ಕೆಗಳ ಮರೆಯಲ್ಲಿಟ್ಟುಕೊಂಡು ನನ್ನ
ಕಾಯಿ;
ಕಣ್ಣುಗುಡ್ಡಿನಂತೆಯೇ ಕಾಪಾಡು.
10 ಅವರು ತಮ್ಮ ಹೃದಯವನ್ನು ಬಿಗಿಮಾಡಿದ್ದಾರೆ;
ಅಹಂಕಾರದಿಂದ ಮಾತಾಡುತ್ತಾರೆ.
11 ನಾವು ಎಲ್ಲಿ ಕಾಲಿಟ್ಟರೂ ಅಲ್ಲೆಲ್ಲಾ ನಮ್ಮನ್ನು ಸ
ಕೊಳ್ಳುತ್ತಾರೆ;
ನಮ್ಮನ್ನು ನೆಲಕ್ಕೆ ಹಾಕಬೇಕೆಂದು ಸಮಯನೋ
ತ್ತಾರೆ.
12 ನನ್ನ ಶತ್ರುವು ಸೀಳಿಬಿಡಲಾತಿಸುವ ಸಿಂಹದಂತೆಯ
ಮರೆಯಲ್ಲಿ ಹೊಂಚುಹಾಕಿರುವ ಪ್ರಾಯದ ಸಿಂಹದ
ಯೂ ಇದ್ದಾನೆ.

13 ಯೆಹೋವನೇ, ನೀನು ಅವನಿಗೆ ಎದುರಾಗಿ ನಿಂತು
ಅವನನ್ನು ಕೆಡವಿಬಿಡು;
ನಿನ್ನ ಕತ್ತಿಯಿಂದ ನನ್ನ ಪ್ರಾಣವನ್ನು ದುಷ್ಟರಿಗೆ
ತಪ್ಪಿಸಿ ಕಾಪಾಡು.
14 ಯೆಹೋವನೇ, ಇಹಲೋಕವೇ ತಮ್ಮ ಪಾಲೆಂದು
ನಂಬಿದ ನರರಿಗೆ ಸಿಕ್ಕದಂತೆ ನಿನ್ನ ಕೈಯಿಂದ ನನ್ನನ್ನು
ತಪ್ಪಿಸು;
ನಿನ್ನ ಐಶ್ವರ್ಯದಿಂದ ಅವರ ಹೊಟ್ಟೆಯನ್ನು ತುಂಬಿ
ಸಿದ್ದೀಯಲ್ಲಾ.
ಅವರು ಸಂತಾನವೃದ್ಧಿಹೊಂದಿ ಮಿಕ್ಕ ಆಸ್ತಿಯನ್ನು
ತಮ್ಮ ಮಕ್ಕಳಿಗೆ ಬಿಡುತ್ತಾರೆ.
15 ನಾನಾದರೋ ನಿರಪರಾಧಿಯು; ನಿನ್ನ ಸಾನ್ನಿಧ್ಯವನ್ನು
ಸೇರುವೆನು.
ಎಚ್ಚತ್ತಾಗ ನಿನ್ನ ಸ್ವರೂಪದರ್ಶನದಿಂದ ತೃಪ್ತನಾಗಿ
ರುವೆನು.

ಜಯಪ್ರದನಾದ ಯೆಹೋವನ ಸ್ತುತಿ.
(೨ ಸಮುವೇಲ 22.)
ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು.
ಯೆಹೋವನ ಸೇವಕನಾದ ದಾವೀದನು ಸೌಲನ ಕೈಯಿಂದಲೂ
ಎಲ್ಲಾ ಶತ್ರುಗಳ ಕೈಯಿಂದಲೂ ತಪ್ಪಿಸಲ್ಪಟ್ಟಾಗ ಯೆಹೋವನ
ಘನಕ್ಕಾಗಿ ಈ ಪದ್ಯವನ್ನು ರಚಿಸಿ ಹೇಳಿದನು.

**18** ನನ್ನ ಬಲವಾಗಿರುವ ಯೆಹೋವನೇ, ನಿನ್ನ
ಲ್ಲಿಯೇ ಮಮತೆಯಿಡುತ್ತೇನೆ.
2 ಯೆಹೋವನು ನನ್ನ ಬಂಡೆಯೂ ನನ್ನ ಕೋಟೆಯೂ
ನನ್ನ ವಿಮೋಚಕನೂ
ನನ್ನ ದೇವರೂ ನನ್ನ ಆಶ್ರಯಗಿರಿಯೂ
ನನ್ನ ಗುರಾಣಿಯೂ ನನ್ನ ರಕ್ಷಣೆಯ ಕೊಂಬೂ ನನ್ನ
ದುರ್ಗವೂ ಆಗಿದ್ದಾನೆ.
3 ಯೆಹೋವನು ಸ್ತೋತ್ರಕ್ಕೆ ಅರ್ಹನು;
ಆತನಿಗೆ ನಾನು ಮೊರೆಯಿಡಲು ಆತನು ನನ್ನನ್ನು
ಶತ್ರುಗಳಿಂದ ರಕ್ಷಿಸುತ್ತಾನೆ.

4 ಮೃತ್ಯುಪಾಶಗಳು ನನಗೆ ಸುತ್ತಿಕೊಂಡವು;
ನಾಶಪ್ರವಾಹವು ನನ್ನನ್ನು ನಡುಗಿಸಿತು.
5 ಪಾತಾಳಪಾಶಗಳು ನನ್ನನ್ನು ಆವರಿಸಿಕೊಂಡವು;
ಮರಣಕರವಾದ ಉರುಲುಗಳು ನನ್ನೆದುರಿನಲ್ಲಿದ್ದವು.
6 ಅಂಥ ಕಷ್ಟದಲ್ಲಿ ನಾನು ಯೆಹೋವನಿಗೆ ಮೊರೆ
ಯಿಟ್ಟೆನು;
ನನ್ನ ದೇವರನ್ನು ಪ್ರಾರ್ಥಿಸಿದೆನು.
ಆತನು ತನ್ನ ಮಂದಿರದಲ್ಲಿ ನನ್ನ ಶಬ್ದವನ್ನು ಕೇಳಿ
ದನು;
ನನ್ನ ಕೂಗು ಆತನ ಸನ್ನಿಧಿಗೆ ಸೇರಿ ಕೇಳಿಸಿತು.

7 ಆಗ ಆತನಿಗೆ ಸಿಟ್ಟೇರಿದ್ದರಿಂದ ಭೂಮಿಯು ಗಡ
ಗಡನೆ ಕಂಪಿಸಿತು;
ಪರ್ವತಗಳ ಬುಡಗಳು ನಡುಗಿ ಕದಲಿದವು.
8 ಆತನ ಮೂಗಿನಿಂದ ಹೊಗೆಯು ಬಂತು;
ಆತನ ಬಾಯಿಂದ ಅಗ್ನಿಜ್ವಾಲೆ ಹೊರಟು ಸಿಕ್ಕಿದ್ದೆಲ್ಲ
ವನ್ನು ದಹಿಸಿ ಕೆಂಡವನ್ನಾಗಿ ಮಾಡಿತು.
9 ಆತನು ಆಕಾಶವನ್ನು ತಗ್ಗಿಸಿ ಇಳಿದುಬಂದನು;
ಆತನ ಪಾದಗಳ ಕೆಳಗೆ ಕಾರ್ಗತ್ತಲು ಇತ್ತು.
10 ಕೆರೂಬಿವಾಹನನಾಗಿ ಹಾರಿ
ವಾಯುವೇ ಆತನ ರೆಕ್ಕೆಗಳೋ ಎಂಬಂತೆ ಇಳಿದು
ಬಂದನು.
11 ಕತ್ತಲನ್ನು ತನ್ನ ಸುತ್ತಲು ಗುಡಾರದಂತೆ ಕವಿಸಿ
ಕೊಂಡು
ಜಲಮಯವಾಗಿರುವ ನೀಲಮೇಘಗಳ ಮಧ್ಯದಲ್ಲಿ
ಮರೆಯಾದನು.
12 ಆತನ ಸನ್ನಿಧಿಯ ಪ್ರಕಾಶದಿಂದ ಕಲ್ಮಳೆಯೂ ಉರಿ
ಗೆಂಡಗಳೂ ಹೊರಟು
ಆತನ ಸುತ್ತಲಿದ್ದ ಕರೀ ಮೋಡಗಳನ್ನು ದಾಟಿ ಸುರಿ
ದವು.
13 ಯೆಹೋವನು ಆಕಾಶದಲ್ಲಿ ಗುಡುಗಿದನು; ಪರಾತ್ಪ
ರನು ಧ್ವನಿಕೊಟ್ಟನು.
ಇಗೋ, ಕಲ್ಮಳೆಯೂ ಉರಿಗೆಂಡಗಳೂ.
14 ಆತನು ಬಾಣಗಳನ್ನೆಸೆದು ಶತ್ರುಗಳನ್ನು ಚದರಿಸಿ
ಬಿಟ್ಟನು;
ಸಿಡಿಲುಗಳಿಂದ ಕಳವಳಗೊಳಿಸಿದನು.
15 ಆಗ ಯೆಹೋವನೇ, ನಿನ್ನ ಗದರಿಕೆಯಿಂದಲೂ ನಿನ್ನ
ಶ್ವಾಸಭರದಿಂದಲೂ ಸಮುದ್ರದ ತಳವು ಕಾಣಿ
ಸಿತು.
ಭೂಮಂಡಲದ ಅಸ್ತಿವಾರಗಳು ತೋರಬಂದವು.
16 ಆತನು ಮೇಲಣ ಲೋಕದಿಂದ ಕೈಚಾಚಿ ನನ್ನನ್ನು
ಹಿಡಿದು
ಮಹಾಜಲರಾಶಿಗಳೊಳಗಿಂದ ಎಳೆದನು.
17 ನನಗಿಂತ ಬಲಿಷ್ಠರೂ ಪುಷ್ಟರೂ ಆಗಿ ದ್ವೇಷಿಸುತ್ತಿದ್ದ
ಶತ್ರುಗಳಿಂದ
ನನ್ನನ್ನು ಬಿಡಿಸಿ ರಕ್ಷಿಸಿದನು.
18 ಅವರು ನನ್ನ ವಿಪತ್ಕಾಲದಲ್ಲಿ ನನ್ನ ಮೇಲೆ ಬಿದ್ದರು;
ಆಗ ಯೆಹೋವನು ನನಗೆ ಉದ್ಧಾರಕನಾದನು.
19 ಆತನು ನನ್ನನ್ನು ಬಿಡಿಸಿ ವಿಶಾಲಸ್ಥಳದಲ್ಲಿ ಸೇರಿಸಿ
ದನು;
ನನ್ನನ್ನು ಮೆಚ್ಚಿ ರಕ್ಷಿಸಿದನು.

20 ಯೆಹೋವನು ನನ್ನ ನೀತಿಗೆ ಸರಿಯಾಗಿ ಮೇಲು
ಮಾಡಿದನು;
ನನ್ನ ಕೈಗಳ ಶುದ್ಧತ್ವಕ್ಕೆ ತಕ್ಕಂತೆ ಪ್ರತಿಫಲಕೊಟ್ಟನು.
21 ಯೆಹೋವನ ಮಾರ್ಗವನ್ನೇ ಅನುಸರಿಸಿದೆನಲ್ಲಾ;
ನನ್ನ ದೇವರನ್ನು ಬಿಟ್ಟು ದುಷ್ಟನಾಗಲಿಲ್ಲವಲ್ಲಾ.
22 ನಾನು ಆತನ ಆಜ್ಞೆಗಳನ್ನು ಯಾವಾಗಲೂ ನನ್ನ
ಎದುರಿನಲ್ಲಿ ಇಟ್ಟುಕೊಂಡೆನು;
ಆತನ ವಿಧಿಗಳನ್ನು ಅಲಕ್ಷ್ಯಮಾಡಲೇ ಇಲ್ಲ.
23 ನಾನು ಆತನ ದೃಷ್ಟಿಯಲ್ಲಿ ನಿರ್ದೋಷಿಯು;
ಪಾಪದಲ್ಲಿ ಬೀಳದಂತೆ ಜಾಗರೂಕತೆಯಿಂದ ನಡೆದು
ಕೊಂಡೆನು.
24 ಆದದರಿಂದ ನಾನು ನೀತಿವಂತನೂ ನಿರಪರಾಧಿಯೂ
ಎಂದು ನೋಡಿ

ಯೆಹೋವನು ತಕ್ಕ ಪ್ರತಿಫಲವನ್ನು ಕೊಟ್ಟನು.
25 ನೀನು ಕೃಪೆಯುಳ್ಳವನಿಗೆ ಕೃಪಾವಂತನೂ
ದೋಷವಿಲ್ಲದವನಿಗೆ ನಿರ್ದೋಷಿಯೂ
26 ಶುದ್ಧನಿಗೆ ಪರಿಶುದ್ಧನೂ
ಮೂರ್ಖನಿಗೆ ವಕ್ರನೂ ಆಗಿರುವಿ.
27 ದೀನರನ್ನು ಉದ್ಧರಿಸುವವನೂ
ಹಮ್ಮಿನ ಕಣ್ಣುಳ್ಳವರನ್ನು ತಗ್ಗಿಸಿಬಿಡುವವನೂ ನೀನಲ್ಲವೋ?
28 ನೀನೇ ನನ್ನ ದೀಪವನ್ನು ಹೊತ್ತಿಸುವವನಲ್ಲವೇ;
ನನ್ನ ದೇವರಾದ ಯೆಹೋವನು ನನಗೆ ಬೆಳಕನ್ನು ಕೊಟ್ಟು ಕತ್ತಲನ್ನು ಪರಿಹರಿಸುವವನು.
29 ನಿನ್ನ ಬಲಧಿಂದ ದಂಡಿನ ಮೇಲೆ ಬೀಳುವೆನು;
ನನ್ನ ದೇವರ ಸಹಾಯದಿಂದ ಪ್ರಾಕಾರವನ್ನು ಹಾರುವೆನು.
30 ದೇವರ ಮಾರ್ಗವು ಯಾವ ದೋಷವೂ ಇಲ್ಲದ್ದು;
ಯೆಹೋವನ ವಚನವು ಶುದ್ಧವಾದದ್ದು.
ಆತನು ಆಶ್ರಿತರೆಲ್ಲರಿಗೆ ಗುರಾಣಿಯಾಗಿದ್ದಾನೆ.

31 ಯೆಹೋವನಲ್ಲದೆ ದೇವರು ಯಾರು?
ನಮ್ಮ ದೇವರ ಹೊರತು ಶರಣನು ಎಲ್ಲಿ?
32 ನನಗೆ ಶೌರ್ಯವೆಂಬ ನಡುಕಟ್ಟನ್ನು ಬಿಗಿಯುವವನೂ
ನನ್ನ ಮಾರ್ಗವನ್ನು ಸರಾಗಮಾಡುವವನೂ ಆತನೇ.
33 ನನ್ನ ಕಾಲನ್ನು ಜಿಂಕೆಯ ಕಾಲಿನಂತೆ ಚುರುಕು ಮಾಡುತ್ತಾನೆ;
ನನ್ನನ್ನು ಉನ್ನತಪ್ರದೇಶಗಳಲ್ಲಿ ನಿಲ್ಲಿಸುತ್ತಾನೆ.
34 ಆತನೇ ನನಗೆ ಯುದ್ಧವಿದ್ಯೆಯನ್ನು ಕಲಿಸಿದ್ದರಿಂದ
ನಾನು ತಾಮ್ರದ ಬಿಲ್ಲನ್ನಾದರೂ ಉಪಯೋಗಿಸಬಲ್ಲೆನು.
35 ನೀನೇ ನನಗೋಸ್ಕರ ಗುರಾಣಿಯನ್ನು ಹಿಡಿದು ರಕ್ಷಿಸಿದ್ದೀ.
ನಿನ್ನ ಬಲಗೈ ನನಗೆ ಆಧಾರ; ನಿನ್ನ ಕೃಪಾಕಟಾಕ್ಷವು ನನಗೆ ದೊಡ್ಡಸ್ತಿಕೆಯನ್ನು ಉಂಟುಮಾಡಿದೆ.
36 ನೀನು ನನ್ನ ಕಾಲುಗಳಿಗೆ ವಿಶಾಲಸ್ಥಳವನ್ನು ಕೊಟ್ಟದ್ದರಿಂದ
ನನ್ನ ಹರಡುಗಳು ಕದಲುವದಿಲ್ಲ.
37 ನನ್ನ ಶತ್ರುಗಳನ್ನು ಹಿಂದಟ್ಟಿ ಹಿಡಿದುಕೊಳ್ಳುವೆನು;
ಅವರನ್ನು ಇಲ್ಲದಂತೆ ಮಾಡುವ ವರೆಗೂ ಹಿಂದಿರುಗುವದಿಲ್ಲ.
38 ಅವರನ್ನು ಹೊಡೆದು ಏಳಲಾರದಂತೆ ಮಾಡುವೆನು;
ನನ್ನ ಪಾದದ ಕೆಳಗೆ ಬೀಳುವರು.
39 ನೀನು ನನಗೆ ಯುದ್ಧಕ್ಕಾಗಿ ಶೌರ್ಯವೆಂಬ ನಡುಕಟ್ಟನ್ನು ಬಿಗಿದಿದ್ದೀ;
ಎದುರಾಳಿಗಳನ್ನು ಕುಗ್ಗಿಸಿ ನನಗೆ ಅಧೀನಮಾಡಿದ್ದೀ.
40 ನನ್ನ ಶತ್ರುಗಳನ್ನು ಬೆಂಗೊಟ್ಟು ಓಡಮಾಡಿದ್ದೀ;
ನನ್ನ ಹಗೆಯವರನ್ನು ನಿರ್ಮೂಲಮಾಡುವೆನು.
41 ಅವರು ಕೂಗಿಕೊಂಡರೂ ರಕ್ಷಿಸುವವನಿಲ್ಲ;
ಯೆಹೋವನಿಗೆ ಮೊರೆಯಿಟ್ಟರೂ ಆತನು ಉತ್ತರವನ್ನು ಕೊಡಲೇ ಇಲ್ಲ.
42 ಗಾಳಿಯಿಂದ ಬಡಿಸಿಕೊಂಡು ಹೋಗುವ ಧೂಳನ್ನೋ ಎಂಬಂತೆ ಅವರನ್ನು ಪುಡಿಪುಡಿಮಾಡಿದೆನು.
ಬೀದಿಯಲ್ಲಿರುವ ಕೆಸರನ್ನೋ ಎಂಬಂತೆ ಅವರ
ಎಸೆದುಬಿಟ್ಟೆನು.
43 ಜನರ ಕಲಹಗಳಿಗೆ ನನ್ನನ್ನು ತಪ್ಪಿಸಿ
ಜನಾಂಗಗಳಿಗೆ ದೊರೆಯಾಗುವಂತೆ ಮಾಡಿದ್ದೀ;
ನರಿಯುದ ಜನಾಂಗದವರು ಸಹ ನನಗೆ ಅಧೀ
ಗುವರು.
44 ನನ್ನ ಸುದ್ದಿಯನ್ನು ಕೇಳಿದ ಮಾತ್ರಕ್ಕೆ ನನಗೆ
ಯರಾಗುವರು;
ದೇಶಾಂತರದವರು ನನ್ನ ಮುಂದೆ ಮುದುರಿ
ಳ್ಳುವರು.
45 ಅವರು ಧೈರ್ಯಗುಂದಿದವರಾಗಿ ತಮ್ಮ ತಮ್ಮ
ಟೆಗಳಿಂದ ನಡುಗುತ್ತಾ ಬರುವರು.

46 ಯೆಹೋವನು ಚೈತನ್ಯಸ್ವರೂಪನು;
ನನ್ನ ಶರಣನಿಗೆ ಸ್ತೋತ್ರ;
ನನ್ನನ್ನು ರಕ್ಷಿಸುವ ದೇವರಿಗೆ ಕೊಂಡಾಟ.
47 ಆತನು ನನ್ನ ಶತ್ರುಗಳಿಗೆ ಪ್ರತಿದಂಡನೆಮಾ
ದೇವರು;
ಜನಾಂಗಗಳನ್ನು ನನಗೆ ಅಧೀನಪಡಿಸುತ್ತಾನೆ.
48 ಶತ್ರುಗಳಿಂದ ನನ್ನನ್ನು ಬಿಡಿಸುವಾತನೇ,
ನೀನು ನನ್ನನ್ನು ನನ್ನ ಎದುರಾಳಿಗಳಿಗೆ ತಪ್ಪಿಸಿ ಉ
ಪಡಿಸುತ್ತೀ;
ಬಲಾತ್ಕಾರಿಗಳಿಂದ ನನ್ನನ್ನು ರಕ್ಷಿಸುತ್ತೀ.
49 ಈ ಕಾರಣದಿಂದ ಯೆಹೋವನೇ, ಅನ್ಯಜನ
ಮಧ್ಯದಲ್ಲಿ ನಿನ್ನನ್ನು ಸ್ತುತಿಸುವೆನು;
ನಿನ್ನ ನಾಮವನ್ನು ಸಂಕೀರ್ತಿಸುವೆನು.
50 ಆತನು ತಾನು ನೇಮಿಸಿದ ಅರಸನಿಗೋಸ್ಕರ ವಿ
ರಕ್ಷಣೆಯನ್ನು ದಯಪಾಲಿಸುವವನಾಗಿದ್ದಾನೆ;
ತಾನು ಅಭಿಷೇಕಿಸಿದ ದಾವೀದನಿಗೂ ಅವನ ಸ
ಯವರಿಗೂ
ಸದಾಕಾಲ ಕೃಪೆಯನ್ನು ಅನುಗ್ರಹಿಸುವವನಾಗಿದ್ದಾ

ದೇವರ ಸೃಷ್ಟಿ ಧರ್ಮಶಾಸ್ತ್ರ ಇವುಗಳ ಮಹಿಮೆ.

ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು;
ದಾವೀದನ ಕೀರ್ತನೆ.

19 ಆಕಾಶವು ದೇವರ ಪ್ರಭಾವವನ್ನು ಪ್ರಚುರ
ಸುತ್ತದೆ;
ಗಗನವು ಆತನ ಕೈಕೆಲಸವನ್ನು ತಿಳಿಸುತ್ತದೆ.
2 ದಿನವು ದಿನಕ್ಕೆ ಪ್ರಕಟಿಸುತ್ತಿರುವದು;
ರಾತ್ರಿಯು ರಾತ್ರಿಗೆ ಅರುಹುತ್ತಿರುವದು.
3 ಶಬ್ದವಿಲ್ಲ, ಮಾತಿಲ್ಲ, ಅವುಗಳ ಸ್ವರ ಕೇಳಿಸುವದಿ
4 ಆದರೂ ಅವುಗಳ ಪ್ರಭುತ್ವವು ಭೂಮಿಯಲ್ಲೆ
ಪ್ರಸರಿಸಿದೆ;
ಅವುಗಳ ನುಡಿಗಳು ಲೋಕದ ಕಟ್ಟಕಡೆಯ ವರೆ
ವ್ಯಾಪಿಸಿರುತ್ತವೆ.

ಅಲ್ಲಿ ದೇವರು ಸೂರ್ಯನಿಗೋಸ್ಕರ ಗುಡಾರವ
ಏರ್ಪಡಿಸಿದ್ದಾನೆ.

5 ಅವನು ತನ್ನ ಮಂಟಪದೊಳಗಿಂದ ಬರುವ ಮದಲಿಂಗ
ನೋ ಎಂಬಂತೆ ಹೊರಟುಬರುವನು.
ಅವನು ಶೂರನಂತೆ ತನಗೆ ನೇಮಕವಾದ ಮಾರ್ಗ
ದಲ್ಲಿ ಓಡುವದಕ್ಕೆ ಉಲ್ಲಾಸಗೊಂಡಿದ್ದಾನೆ.
6 ಆಕಾಶದ ಒಂದು ಕಡೆಯಿಂದ ಹೊರಟು ಮತ್ತೊಂದು
ಕಡೆಗೆ ಬರುತ್ತಾನೆ;
ಅವನ ಬಿಸಲಿಗೆ ಮರೆಯಾದದ್ದು ಒಂದೂ ಇಲ್ಲ.

7 ಯೆಹೋವನ ಧರ್ಮಶಾಸ್ತ್ರವು ಲೋಪವಿಲ್ಲದ್ದು; ಅದು
ಪ್ರಾಣವನ್ನು ಉಜ್ಜೀವಿಸಮಾಡುವಂಥದ್ದು.
ಯೆಹೋವನ ಕಟ್ಟಳೆ ನಂಬಿಕೆಗೆ ಯೋಗ್ಯವಾದದ್ದು;
ಬುದ್ಧಿಹೀನರಿಗೆ ವಿವೇಕಪ್ರದವಾಗಿದೆ.
8 ಯೆಹೋವನ ನಿಯಮಗಳು ನೀತಿಯುಳ್ಳವುಗಳಾಗಿವೆ;
ಮನಸ್ಸನ್ನು ಹರ್ಷಪಡಿಸುತ್ತವೆ.
ಯೆಹೋವನ ಆಜ್ಞೆ ಪವಿತ್ರವಾದದ್ದು; ಕಣ್ಣುಗಳನ್ನು
ಕಳೆಗೊಳಿಸುತ್ತದೆ.
9 ಯೆಹೋವನ ಭಯ ಪರಿಶುದ್ಧವಾಗಿದೆ; ಅದು ಶಾಶ್ವತ
ವಾದದ್ದೇ.
ಯೆಹೋವನ ವಿಧಿಗಳು ಯಥಾರ್ಥವಾದವುಗಳು; ಅವು
ಕೇವಲ ನ್ಯಾಯವಾಗಿವೆ.
10 ಅವು ಬಂಗಾರಕ್ಕಿಂತಲೂ ಅಪರಂಜಿರಾಶಿಗಿಂತಲೂ ಅಪೇ
ಕ್ಷಿಸತಕ್ಕವುಗಳು.
ಅವು ಜೇನಿಗಿಂತಲೂ ಶೋಧಿಸಿದ ಜೇನುತುಪ್ಪಕ್ಕಿಂತಲೂ
ಸಿಹಿಯಾಗಿವೆ.
11 ಅವುಗಳ ಮೂಲಕ ನಿನ್ನ ದಾಸನಿಗೆ ಎಚ್ಚರಿಕೆಯಾಗು
ತ್ತದೆ;
ಅವುಗಳನ್ನು ಕೈಕೊಳ್ಳುವದರಿಂದ ಬಹಳ ಫಲ ಉಂಟಾ
ಗುತ್ತದೆ.

12 ತನ್ನ ತಪ್ಪುಗಳನ್ನೆಲ್ಲಾ ತಿಳಿದುಕೊಳ್ಳುವವನು ಯಾ
ವನು?
ಮರೆಯಾದವುಗಳಿಂದ ನನ್ನನ್ನು ನಿರ್ಮಲಮಾಡು.
13 ಅದಲ್ಲದೆ ಬೇಕೆಂದು ಪಾಪಮಾಡದಂತೆ ನಿನ್ನ ದಾಸನನ್ನು
ಕಾಪಾಡು.
ಅಂಥ ಪಾಪಗಳು ನನ್ನನ್ನು ಆಳದಿರಲಿ.
ಆಗ ನಾನು ತಪ್ಪಿಲ್ಲದವನಾಗಿ ಮಹಾದ್ರೋಹಕ್ಕೆ ಒಳ
ಗಾಗುವದಿಲ್ಲ.

14 ಯೆಹೋವನೇ, ನನ್ನ ಶರಣನೇ, ನನ್ನ ವಿಮೋಚಕನೇ,
ನನ್ನ ಮಾತುಗಳೂ ನನ್ನ ಹೃದಯದ ಧ್ಯಾನವೂ
ನಿನಗೆ ಸಮರ್ಪಕವಾಗಿರಲಿ.

ಅರಸನ ಜಯಕ್ಕೋಸ್ಕರ ಪ್ರಾರ್ಥಿಸುವದು.
ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು;
ದಾವೀದನ ಕೀರ್ತನೆ.

20 ಇಕ್ಕಟ್ಟಿನಲ್ಲಿ ಯೆಹೋವನು ನಿನ್ನ ಪ್ರಾರ್ಥನೆಯ
ಯನ್ನು ಕೇಳಲಿ;
ಯಾಕೋಬನ ದೇವರ ನಾಮವು ನಿನ್ನನ್ನು ಉದ್ಧಾರ
ಮಾಡಲಿ.
2 ತನ್ನ ಪರಿಶುದ್ಧನಿವಾಸದಿಂದ ನಿನಗೆ ಸಹಾಯಮಾಡಲಿ;
ಚೀಯೋನಿನಿಂದ ನಿನಗೆ ಆಧಾರದಯಪಾಲಿಸಲಿ.
3 ನೀನು ಸಮರ್ಪಿಸಿದ ನೈವೇದ್ಯಗಳು ಆತನ ನೆನಪಿಗೆ
ಬರಲಿ;
ನೀನು ಮಾಡಿದ ಸರ್ವಾಂಗಹೋಮಗಳು ಆತನಿಗೆ
ಮೆಚ್ಚಿಕೆಯಾಗಲಿ. ಸೆಲಾ.
4 ಆತನು ನಿನ್ನ ಇಷ್ಟಾರ್ಥವನ್ನು ನೆರವೇರಿಸಲಿ;
ನಿನ್ನ ಎಲ್ಲಾ ಸಂಕಲ್ಪಗಳನ್ನು ಸಫಲಮಾಡಲಿ.
5 ನಿನ್ನ ಜಯದಲ್ಲಿ ಉತ್ಸಾಹಧ್ವನಿಮಾಡುವೆವು;
ನಮ್ಮ ದೇವರ ಹೆಸರಿನಲ್ಲಿ ಧ್ವಜ ಎತ್ತುವೆವು.
ಯೆಹೋವನು ನಿನ್ನ ಎಲ್ಲಾ ವಿಜ್ಞಾಪನೆಗಳನ್ನು ನೆರ
ವೇರಿಸಲಿ.

6 ಯೆಹೋವನು ತಾನು ಅಭಿಷೇಕಿಸಿದ ಅರಸನಿಗೆ ಜಯ
ವನ್ನು ಅನುಗ್ರಹಿಸುವನೆಂದು ಈಗ ನನಗೆ ಗೊತ್ತಾ
ಯಿತು.
ಆತನು ತನ್ನ ಪವಿತ್ರಲೋಕದಿಂದ ಅವನ ಪ್ರಾರ್ಥನೆಗೆ
ಸದುತ್ತರವನ್ನು ಕೊಡುವನು;
ತನ್ನ ಭುಜಬಲದಿಂದ ಅವನಿಗೆ ವಿಜಯವನ್ನುಂಟುಮಾ
ಡುವನು.
7 ಕೆಲವರು ರಥಬಲದಲ್ಲಿ, ಕೆಲವರು ಅಶ್ವಬಲದಲ್ಲಿ
ಹೆಚ್ಚಳಪಡುತ್ತಾರೆ;
ನಾವಾದರೋ ನಮ್ಮ ದೇವರಾದ ಯೆಹೋವನಲ್ಲಿಯೇ.
8 ಅವರು ಬಿದ್ದುಹೋಗಿದ್ದಾರೆ; ನಾವಾದರೋ ಎದ್ದು
ನಿಂತಿದ್ದೇವೆ.
9 ಯೆಹೋವನೇ, ನಮ್ಮ ಅರಸನಿಗೆ ಜಯವನ್ನುಂಟು
ಮಾಡು;
ನಾವು ಮೊರೆಯಿಡುವಾಗ ಸದುತ್ತರವನ್ನು ದಯ
ಪಾಲಿಸು.

ಅರಸನ ವಿಜಯದಲ್ಲಿ ಯೆಹೋವನನ್ನು ಸ್ತುತಿಸುವ ಕೀರ್ತನೆ.
ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು;
ದಾವೀದನ ಕೀರ್ತನೆ.

21 ಯೆಹೋವನೇ, ನಿನ್ನ ಪರಾಕ್ರಮದಲ್ಲಿ ಅರಸನು
ಸಂತೋಷಿಸುತ್ತಾನೆ;
ನೀನು ಉಂಟುಮಾಡಿದ ಜಯಕ್ಕಾಗಿ ಎಷ್ಟೋ ಆನಂದ
ಪಡುತ್ತಾನೆ.
2 ನೀನು ಅವನ ಪ್ರಾರ್ಥನೆಯನ್ನು ನಿರಾಕರಿಸದೆ
ಅವನ ಇಷ್ಟಾರ್ಥವನ್ನು ನೆರವೇರಿಸಿದಿಯಲ್ಲಾ.
ಸೆಲಾ.
3 ನಾನಾ ಶುಭಗಳೊಡನೆ ನೀನೇ ಅವನನ್ನು ಎದುರುಗೊಂ
ಡಿಯಲ್ಲಾ;
ಅವನ ತಲೆಯ ಮೇಲೆ ಸುವರ್ಣಕಿರೀಟವನ್ನು ಇಟ್ಟಿದ್ದೀ.
4 ಅವನು ದೀರ್ಘಾಯುಷ್ಯವನ್ನು ಬೇಡಿಕೊಳ್ಳಲು
ನೀನು ಯುಗಯುಗಾಂತರಗಳ ಆಯುಷ್ಯವನ್ನು ಅನು
ಗ್ರಹಿಸಿದ್ದೀ.
5 ನಿನ್ನ ರಕ್ಷಣಕಾರ್ಯದಿಂದ ಅವನ ಘನತೆಯು ಬಹು
ವೃದ್ಧಿಯಾಯಿತು;

ಮಹಿಮಪ್ರಭಾವಗಳನ್ನು ಅವನಿಗೆ ಬರಮಾಡಿದ್ದೀ.
6 ಅವನಿಗೆ ಶಾಶ್ವತವಾದ ಸೌಭಾಗ್ಯನಿಧಿಯನ್ನು ದಯ
ಪಾಲಿಸಿದ್ದೀ;
ಅವನನ್ನು ನಿನ್ನ ಸನ್ನಿಧಿಯಲ್ಲಿ ಅತ್ಯಾನಂದಪಡಿಸಿದ್ದೀ.
7 ಅರಸನು ಯೆಹೋವನಲ್ಲಿಯೇ ಭರವಸವಿಟ್ಟಿದ್ದಾನೆ;
ಪರಾತ್ಪರನ ಕೃಪೆಯ ದೆಸೆಯಿಂದ ಅವನು ಕದಲು
ವದೇ ಇಲ್ಲ.
8 ಶತ್ರುಗಳೆಲ್ಲರು ನಿನಗೆ ಸಿಕ್ಕುವರು;
ಭುಜಬಲದಿಂದ ನಿನ್ನ ಹಗೆಗಳನ್ನು ಹಿಡಿಯುವಿ.
9 ನೀನು ಪ್ರತ್ಯಕ್ಷನಾಗುವಾಗ ಉರಿಯುವ ಕುಲಿಮೆ
ಯಂತಿದ್ದು ಅವರನ್ನು ಬೂದಿಮಾಡುವಿ.
ಯೆಹೋವನು ಮಹಾಕೋಪದಿಂದ ಅವರನ್ನು ನಾಶ
ಮಾಡುವನು;
ಆತನ ಕೋಪಾಗ್ನಿ ಅವರನ್ನು ದಹಿಸಿಬಿಡುವದು.
10 ನೀನು ಅವರನ್ನು ಸಂಹರಿಸಿ ಭೂಮಿಯ ಮೇಲೆ ಅವರ
ಸಂತತಿಯೇ ಇಲ್ಲದಂತೆ ಮಾಡುವಿ;
ಅವರ ವಂಶದವರು ಮನುಷ್ಯರೊಳಗೆ ಉಳಿಯುವದೇ
ಇಲ್ಲ.
11 ಅವರು ತಂತ್ರೋಪಾಯಗಳನ್ನು ಕಲ್ಪಿಸಿ ನಿನಗೆ ಕೇಡ
ನ್ನು ಮಾಡಬೇಕೆಂದು ಆಲೋಚಿಸಿದರೂ
ಅದು ನಡೆಯುವದಿಲ್ಲ.
12 ನೀನು ನಿನ್ನ ಬಾಣಗಳನ್ನು ಬಿಲ್ಲಿಗೆ ಹೂಡಿ ಅವರ
ಮುಖಗಳ ಮೇಲೆ ಎಸೆದು
ಅವರು ಬೆನ್ನುತೋರಿಸಿ ಓಡಿಹೋಗುವಂತೆ ಮಾಡುವಿ.
13 ಯೆಹೋವನೇ, ಪರಾಕ್ರಮದಿಂದ ನಿನ್ನನ್ನು ಪ್ರಸಿದ್ಧಿ
ಪಡಿಸಿಕೋ;
ನಾವು ಗಾಯನಮಾಡುತ್ತಾ ನಿನ್ನ ಶೂರತ್ವವನ್ನು
ಕೊಂಡಾಡುವೆವು.

ಘೋರಬಾಧಾನುಭವಿಯಾದ ಭಕ್ತನ ಮನಃಪೂರ್ವಕ
ಪ್ರಾರ್ಥನೆ.
(ಕೀರ್ತನೆ 69. 71. 102; ಯೆಶಾಯ 53.)
ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು;
ಉದಯದ ಜಿಂಕೆ ಎಂಬ ರಾಗದ ಮೇಲೆ ಹಾಡತಕ್ಕದ್ದು;
ದಾವೀದನ ಕೀರ್ತನೆ.

**22** ನನ್ನ ದೇವರೇ, ನನ್ನ ದೇವರೇ, ಯಾಕೆ ನನ್ನನ್ನು
ಕೈಬಿಟ್ಟಿದ್ದೀ?
ನೀನು ಯಾಕೆ ನನಗೆ ಸಹಾಯಮಾಡದೆಯೂ ನನ್ನ
ಕೂಗನ್ನು ಕೇಳದೆಯೂ ದೂರವಾಗಿದ್ದೀ?
2 ನನ್ನ ದೇವರೇ, ಹಗಲಿನಲ್ಲಿ ಮೊರೆಯಿಡುತ್ತೇನೆ;
ಪ್ರತ್ಯುತ್ತರವೇ ಇಲ್ಲ;
ಇರುಳಿನಲ್ಲಿಯೂ ನನಗೆ ಉಪಶಮನವಿಲ್ಲ.
3 ಇಸ್ರಾಯೇಲ್ಯರ ಸ್ತೋತ್ರಸಿಂಹಾಸನದಲ್ಲಿರುವಾ
ತನೇ, ನೀನು ಪವಿತ್ರಸ್ವರೂಪನು.
4 ನಮ್ಮ ಪೂರ್ವಿಕರು ನಿನ್ನಲ್ಲಿ ಭರವಸವಿಟ್ಟರು;
ನಿನ್ನನ್ನು ನಂಬಿ ಉದ್ಧಾರವಾದರು.
5 ನಿನಗೆ ಮೊರೆಯಿಟ್ಟು ವಿಮುಕ್ತರಾದರು;
ನಿನ್ನಲ್ಲಿ ವಿಶ್ವಾಸವಿಟ್ಟು ಆಶಾಭಂಗಪಡಲಿಲ್ಲ.

6 ನಾನಾದರೋ ಹುಳದಂಥವನೇ ಹೊರತು ಮನ
ನಲ್ಲ;
ಮನುಷ್ಯರಿಂದ ನಿಂದಿಸಲ್ಪಟ್ಟು ಜನರಿಂದ ತಿರಸ
ಹೊಂದಿದ್ದೇನೆ.
7 ನನ್ನನ್ನು ನೋಡುವವರೆಲ್ಲರೂ ಹಾಸ್ಯಮಾಡುತ್ತಾ
ಅವರು ಓರೇ ತುಟಿ ಮಾಡಿ ತಲೆ ಆಡಿಸುತ್ತಾ—
8 ಯೆಹೋವನು ತನ್ನನ್ನು ರಕ್ಷಿಸುವನೆಂದು ಆತ
ಭರವಸವಿಟ್ಟಿದ್ದಾನಲ್ಲಾ;
ಆತನು ಇವನನ್ನು ಮೆಚ್ಚಿದ್ದಾದರೆ ರಕ್ಷಿಸಲಿ ಎ
ಹೇಳುತ್ತಾರೆ.
9 ತಾಯಿಯ ಗರ್ಭದೊಳಗಿಂದ ನನ್ನನ್ನು
ಮಾಡಿದವನು ನೀನೇ ಅಲ್ಲವೇ.
ತಾಯಿಯ ಎದೆಯಲ್ಲಿ ನನ್ನನ್ನು ನಿಶ್ಚಿಂತೆಯಿ
ಇರಿಸಿದವನು ನೀನೇ ಅಲ್ಲವೇ.
10 ಹುಟ್ಟಿದಂದಿನಿಂದ ನೀನೇ ನನಗೆ ಆಧಾರ;
ತಾಯಿ ಹೆತ್ತಂದಿನಿಂದ ನನ್ನ ದೇವರು ನೀನೇ,
11 ನನಗೀಗ ಕಷ್ಟವು ಪ್ರಾಪ್ತವಾಗಿದೆ;
ಸಹಾಯಕರು ಯಾರೂ ಇಲ್ಲ, ದೂರವಾಗಿರಬೇ

12 ಬಹಳ ಗೂಳಿಗಳು ನನ್ನನ್ನು ಸುತ್ತಿಕೊಂಡಿವೆ;
ಬಾಷಾನಿನ ಬಲವುಳ್ಳ ಹೋರಿಗಳು ನನ್ನನ್ನು ಮು
ಕೊಂಡಿವೆ.
13 ಅವರು ಗರ್ಜಿಸುವ ಉಗ್ರಸಿಂಹಗಳಂತೆ
ನನ್ನನ್ನು ನುಂಗುವದಕ್ಕೆ ಬಾಯಿ ತೆರೆದಿದ್ದಾರೆ.
14 ನಾನು ಹೊಯ್ಯಲ್ಪಟ್ಟ ನೀರಿನಂತಿದ್ದೇನೆ;
ನನ್ನ ಎಲುಬುಗಳೆಲ್ಲಾ ಸಡಲಿಹೋಗಿವೆ.
ನನ್ನ ಗುಂಡಿಗೆ ಮೇಣದಂತೆ ನನ್ನಲ್ಲಿ ಕರಗಿಹೋಗಿ
15 ನನ್ನ ಶಕ್ತಿಯು ಬೋಕಿಯ ಹಾಗೆ ಒಣಗಿಹೋಗಿ
ನನ್ನ ನಾಲಿಗೆಯು ಅಂಗಳಕ್ಕೆ ಹತ್ತಿಹೋಗಿದೆ.
ನೀನು ನನ್ನನ್ನು ಮಣ್ಣಿಗೆ ಸೇರಿಸುತ್ತೀ.
16 ನಾಯಿಗಳು ನನ್ನನ್ನು ಸುತ್ತಿಕೊಂಡಿವೆ;
ದುಷ್ಟರ ಗುಂಪು ನನ್ನನ್ನು ಆವರಿಸಿಕೊಂಡಿದೆ.
ನನ್ನ ಕೈಕಾಲುಗಳನ್ನು ತಿವಿದಿದ್ದಾರೆ.
17 ನನ್ನ ಎಲುಬುಗಳನ್ನೆಲ್ಲಾ ಎಣಿಸುವದಕ್ಕಾಗುವದು;
ಅವರೋ ನನ್ನನ್ನು ನೋಡಿ ನೋಡಿ ಹಿಗ್ಗುತ್ತಾರೆ.
18 ನನ್ನ ಮೇಲ್ಹೊದಿಕೆಯನ್ನು ತಮ್ಮಲ್ಲಿ ಪಾಲುಮ
ಕೊಳ್ಳುತ್ತಾರೆ;
ನನ್ನ ಅಂಗಿಗೋಸ್ಕರ ಚೀಟುಹಾಕುತ್ತಾರೆ.
19 ಯೆಹೋವನೇ, ನನ್ನ ರಕ್ಷಕನೇ, ನೀನಾದರೆ
ದೂರವಾಗಿರಬೇಡ;
ಬೇಗ ಬಂದು ಸಹಾಯಮಾಡು.
20 ಕತ್ತಿಗೆ ಸಿಕ್ಕದಂತೆ ನನ್ನನ್ನು ತಪ್ಪಿಸು;
ನನ್ನ ಪ್ರಿಯ ಪ್ರಾಣವು ನಾಯಿಯ ವಶವಾಗದ
ಕಾಪಾಡು.
21 ಸಿಂಹಗಳ ಬಾಯಿಂದಲೂ ಕಾಡುಕೋಣ
ಕೊಂಬುಗಳಿಂದಲೂ ನನ್ನನ್ನು ತಪ್ಪಿಸು.
ನನಗೆ ಸದುತ್ತರವನ್ನು ಕೊಟ್ಟಿದ್ದೀಯಲ್ಲಾ.

22 ನಿನ್ನ ನಾಮಮಹಿಮೆಯನ್ನು ನನ್ನ ಸಹೋದರ
ತಿಳಿಸುವೆನು;

ಸಭಾಮಧ್ಯದಲ್ಲಿ ನಿನ್ನನ್ನು ಸ್ತುತಿಸುವೆನು.
23 ಯೆಹೋವನ ಭಕ್ತರೇ, ಆತನನ್ನು ಸ್ತುತಿಸಿರಿ;
ಯಾಕೋಬವಂಶದವರೇ, ನೀವೆಲ್ಲರೂ ಆತನನ್ನು ಕೊಂಡಾಡಿರಿ.
ಇಸ್ರಾಯೇಲ ವಂಶಸ್ಥರೇ, ನೀವೆಲ್ಲರೂ ಆತನಲ್ಲಿ ಭಯ ಭಕ್ತಿಯುಳ್ಳವರಾಗಿರ್ರಿ.
24 ಆತನು ಕುಗ್ಗಿಹೋದವನ ದುರವಸ್ಥೆಯನ್ನು ತಿರಸ್ಕರಿಸಲಿಲ್ಲ. ಅದಕ್ಕೆ ಅಸಹ್ಯಪಡಲಿಲ್ಲ;
ತನ್ನ ಮುಖವನ್ನು ಅವನಿಗೆ ಮರೆಮಾಡದೆ ಅವನ ಪ್ರಾರ್ಥನೆಗೆ ಕಿವಿಗೊಟ್ಟನು.
25 ನಾನು ಮಹಾಸಭೆಯಲ್ಲಿ ಮಾಡುವ ಸ್ತೋತ್ರಕ್ಕೆ ನೀನೇ ಆಧಾರನು;
ನನ್ನ ಹರಕೆಗಳನ್ನು ನಿನ್ನ ಭಕ್ತರ ಮುಂದೆ ಸಲ್ಲಿಸುವೆನು.
26 ದೀನರು ಉಂಡು ತೃಪ್ತರಾಗುವರು;
ಯೆಹೋವನ ಭಕ್ತರೆಲ್ಲರೂ ಆತನನ್ನು ಕೊಂಡಾಡುವರು.
ನಿಮ್ಮ ಅಂತರಾತ್ಮವು ಯಾವಾಗಲೂ ಚೈತನ್ಯವುಳ್ಳದ್ದಾಗಿರಲಿ.

27 ಭೂಮಂಡಲದವರೆಲ್ಲರು ಎಚ್ಚರಗೊಂಡು ಯೆಹೋವನ ಕಡೆಗೆ ತಿರುಗಿಕೊಳ್ಳುವರು;
[ಯೆಹೋವನೇ,] ಎಲ್ಲಾ ಜನಾಂಗಗಳವರು ನಿನಗೆ ಅಡ್ಡಬೀಳುವರು.
28 ರಾಜ್ಯವು ಯೆಹೋವನದೇ;
ಎಲ್ಲಾ ಜನಾಂಗಗಳಿಗೂ ಆತನೇ ಒಡೆಯನು.
29 ಭೂಲೋಕದಲ್ಲಿರುವ ಪುಷ್ಟರೆಲ್ಲರೂ ಉಂಡು ಆರಾಧಿಸುವರು;
ತಮ್ಮ ಜೀವವನ್ನು ಉಳಿಸಿಕೊಳ್ಳಲಾರದೆ ಮಣ್ಣುಪಾಲಾಗುವವರೆಲ್ಲರೂ ಆತನಿಗೆ ಅಡ್ಡಬೀಳುವರು.
30 ಆತನನ್ನು ಸೇವಿಸುವವರ ಸಂತಾನದವರು
ಯೆಹೋವನ ಸಂತಾನದವರೆಂದು ಎಣಿಸಲ್ಪಡುವರು.
31 ಅವರು ಬಂದು ಆತನ ನೀತಿಯನ್ನೂ ಆತನು ನಡಿಸಿದ ಕಾರ್ಯಗಳನ್ನೂ
ಮುಂದೆ ಹುಟ್ಟುವ ಜನಕ್ಕೆ ತಿಳಿಸುವರು.

ಭಕ್ತರೆಂಬ ಕುರಿಗಳಿಗೆ ಯೆಹೋವನು ಒಳ್ಳೇ ಕುರುಬನು.
(ಯೆಹೆಜ್ಕೇಲ 34. ಯೋಹಾನ 10.)
ದಾವೀದನ ಕೀರ್ತನೆ.

23 ಯೆಹೋವನು ನನಗೆ ಕುರುಬನು; ಕೊರತೆ ಪಡೆನು.
2 ಆತನು ಹಸುರುಗಾವಲುಗಳಲ್ಲಿ ನನ್ನನ್ನು ತಂಗಿಸುತ್ತಾನೆ.
ವಿಶ್ರಾಂತಿಕರವಾದ ನೀರುಗಳ ಬಳಿಗೆ ಬರಮಾಡುತ್ತಾನೆ.
3 ನನ್ನ ಪ್ರಾಣವನ್ನು ಉಜ್ಜೀವಿಸಮಾಡಿ
ತನ್ನ ಹೆಸರಿಗೆ ತಕ್ಕಂತೆ ನೀತಿಮಾರ್ಗದಲ್ಲಿ ನನ್ನನ್ನು ನಡಿಸುತ್ತಾನೆ.
4 ನಾನು 1)ಕಾರ್ಗತ್ತಲಿನ ಕಣಿವೆಯಲ್ಲಿ ನಡೆಯುವಾಗಲೂ
ನೀನು ಹತ್ತಿರವಿರುವದರಿಂದ ಕೇಡಿಗೆ ಹೆದರೆನು;
ನಿನ್ನ ದೊಣ್ಣೆಯೂ ನಿನ್ನ ಕೋಲೂ ನನಗೆ ಧೈರ್ಯ ಕೊಡುತ್ತವೆ.
5 ವೈರಿಗಳ ಮುಂದೆಯೇ ನೀನು ನನಗೋಸ್ಕರ ಔತಣವನ್ನು ಸಿದ್ಧಪಡಿಸುತ್ತೀ;
ನನ್ನ ತಲೆಗೆ ತೈಲವನ್ನು ಹಚ್ಚಿಸುತ್ತೀ.
ನನ್ನ ಪಾತ್ರೆಯು ತುಂಬಿ ಹೊರಸೂಸುತ್ತದೆ.
6 ನಿಶ್ಚಯವಾಗಿ ನನ್ನ ಜೀವಮಾನದಲ್ಲೆಲ್ಲಾ ಶುಭವೂ ಕೃಪೆಯೂ ನನ್ನನ್ನು ಹಿಂಬಾಲಿಸುವವು.
ನಾನು ಸದಾಕಾಲವೂ ಯೆಹೋವನ ಮಂದಿರದಲ್ಲಿ ವಾಸಿಸುವೆನು.

ಯೆಹೋವನ ಸನ್ನಿಧಿಯಲ್ಲಿ ಸೇರತಕ್ಕವರು ಯಾರೆಂಬದು.
ದಾವೀದನ ಕೀರ್ತನೆ.

24 ಭೂಮಿಯೂ ಅದರಲ್ಲಿರುವ ಸಮಸ್ತವೂ ಯೆಹೋವನದು.
ಲೋಕವೂ ಅದರ ನಿವಾಸಿಗಳೂ ಆತನವೇ.
2 ಆತನೇ ಅದರ ಅಸ್ತಿವಾರವನ್ನು ಸಾಗರದ ಮೇಲೆ ಹಾಕಿದವನು;
ಅದನ್ನು ಜಲರಾಶಿಗಳ ಮೇಲೆ ಸ್ಥಿರಪಡಿಸಿದವನು ಆತನೇ.

3 ಯೆಹೋವನ ಪರ್ವತವನ್ನು ಹತ್ತತಕ್ಕವನು ಯಾರು?
ಆತನ ಪವಿತ್ರಸ್ಥಾನದಲ್ಲಿ ನಿಲ್ಲುವದಕ್ಕೆ ಎಂಥವನು ಯೋಗ್ಯನು?
4 ಯಾವನು ಅಯೋಗ್ಯಕಾರ್ಯಗಳಲ್ಲಿ ಮನಸ್ಸಿಡದೆ ಮೋಸಪ್ರಮಾಣಮಾಡದೆ
ಶುದ್ಧಹಸ್ತವೂ ನಿರ್ಮಲಮನಸ್ಸೂ ಉಳ್ಳವನಾಗಿದ್ದಾನೋ
5 ಅವನೇ ಯೆಹೋವನಿಂದ ಶುಭವನ್ನು ಹೊಂದುವನು;
ತನ್ನ ರಕ್ಷಕನಾದ ದೇವರಿಂದ ನೀತಿಫಲವನ್ನು ಪಡೆಯುವನು.
6 ಇಂಥವರೇ ಆತನ ದರ್ಶನವನ್ನು ಬಯಸುವವರು.
ಯಾಕೋಬ್ಯರ ದೇವರೇ, ನಿನ್ನ ಸಾನ್ನಿಧ್ಯವನ್ನು ಸೇರುವವರು ಇಂಥವರೇ. ಸೆಲಾ.

7 ದ್ವಾರಗಳೇ, ಉನ್ನತವಾಗಿರ್ರಿ;
ಪುರಾತನವಾದ ಕದಗಳೇ, ತೆರೆದುಕೊಂಡಿರ್ರಿ;
ಮಹಾಪ್ರಭಾವವುಳ್ಳ ಅರಸನು ಆಗಮಿಸುತ್ತಾನೆ.
8 ಮಹಾಪ್ರಭಾವವುಳ್ಳ ಈ ಅರಸನು ಯಾರು?
ಮಹಾ ಬಲಿಷ್ಠನೂ ವಿಶೇಷ ಪರಾಕ್ರಮಿಯೂ ಆಗಿರುವ ಯೆಹೋವ,
ಯುದ್ಧವೀರನಾಗಿರುವ ಯೆಹೋವ.

1) ಅಥವಾ: ಮರಣಾಂಧಕಾರದ.

9 ದ್ವಾರಗಳೇ, ಉನ್ನತವಾಗಿರ್ರಿ;
ಪುರಾತನವಾದ ಕದಗಳೇ, ತೆರೆದುಕೊಂಡಿರ್ರಿ;
ಮಹಾಪ್ರಭಾವವುಳ್ಳ ಅರಸನು ಆಗಮಿಸುತ್ತಾನೆ.
10 ಮಹಾಪ್ರಭಾವವುಳ್ಳ ಈ ಅರಸನು ಯಾರು?
ಸೇನಾಧೀಶ್ವರನಾದ ಯೆಹೋವನೇ;
ಮಹಾಪ್ರಭಾವವುಳ್ಳ ಅರಸನು ಈತನೇ. ಸೆಲಾ.

ಇಬ್ರಿಯ ಅಕ್ಷರಕ್ರಮಾನುಸಾರವಾದ ಪ್ರಾರ್ಥನೆ.
(ಕೀರ್ತನೆ 34.)
ದಾವೀದನ ಕೀರ್ತನೆ.

25 א ಯೆಹೋವನೇ, ನಿನ್ನಲ್ಲಿ ಮನಸ್ಸಿಟ್ಟಿದ್ದೇನೆ;
2 ב ನನ್ನ ದೇವರೇ, ನಿನ್ನನ್ನೇ ನಂಬಿದ್ದೇನೆ,
ನನಗೆ ಆಶಾಭಂಗಪಡಿಸಬೇಡ.
ಶತ್ರುಗಳ ಉತ್ಸಾಹಕ್ಕೆ ಆಸ್ಪದಮಾಡಬೇಡ.
3 ג ವೃಥಾದ್ರೋಹಿಗಳಿಗೆ ಆಶಾಭಂಗವಾಗಬೇಕೇ ಹೊರತು
ನಿನ್ನನ್ನು ನಿರೀಕ್ಷಿಸಿದವರಿಗೆ ಎಂದಿಗೂ ಆಗಬಾರದು.

4 ד ಯೆಹೋವನೇ, ನಿನ್ನ ಮಾರ್ಗವನ್ನು ನನಗೆ ತಿಳಿಸು;
ನೀನು ಒಪ್ಪುವ ದಾರಿಯನ್ನು ತೋರಿಸು.
5 ה ನಿನ್ನ ಸತ್ಯಾನುಸಾರವಾಗಿ ನನ್ನನ್ನು ನಡಿಸುತ್ತಾ ಉಪದೇಶಿಸು;
ನೀನೇ ನನ್ನನ್ನು ರಕ್ಷಿಸುವ ದೇವರು; ಹಗಲೆಲ್ಲಾ ನಿನ್ನನ್ನೇ ನಿರೀಕ್ಷಿಸುವವನಾಗಿದ್ದೇನೆ.
6 ו ಯೆಹೋವನೇ, ನೀನು ಆದಿಯಿಂದಲೂ ನನ್ನನ್ನು ಕರುಣಿಸುವವನಾಗಿ
ನನಗೆ ಮಾಡಿದ ಮಹೋಪಕಾರಗಳನ್ನು ನೆನಸಿಕೋ.
7 ח ಯೆಹೋವನೇ, ನನ್ನ ಯೌವನದ ತಪ್ಪುಗಳನ್ನೂ ದ್ರೋಹಗಳನ್ನೂ ಮನಸ್ಸಿನಲ್ಲಿಡದೆ
ನಿನ್ನ ಕೃಪೆಗೆ ತಕ್ಕಂತೆ ದಯಾಪೂರ್ವಕವಾಗಿ ನನ್ನನ್ನು ನೆನಸು.

8 ט ಯೆಹೋವನು ದಯಾಳುವೂ ಸತ್ಯಸ್ವರೂಪನೂ ಆಗಿದ್ದಾನೆ;
ದಾರಿತಪ್ಪಿದವರನ್ನು ಬೋಧಿಸಿ ಸನ್ಮಾರ್ಗದಲ್ಲಿ ನಡಿಸುವನು;
9 י ಆತನು ದೀನರನ್ನು ತನ್ನ ವಿಧಿಗನುಗುಣವಾಗಿ ನಡಿಸುವನು;
ಅವರಿಗೆ ತನ್ನ ಮಾರ್ಗವನ್ನು ತೋರಿಸುವನು.
10 כ ಯೆಹೋವನ ವಿಧಿನಿಬಂಧನೆಗಳನ್ನು ಕೈಕೊಂಡು ನಡೆಯುವವರಿಗೆ
ಆತನ ಎಲ್ಲಾ ಮಾರ್ಗಗಳು ಕೃಪೆಯೂ ಸತ್ಯತೆಯೂ ಉಳ್ಳವು.
11 ל ಯೆಹೋವನೇ, ನನ್ನ ಪಾಪವು ಬಹುಘೋರವಾಗಿದೆ;
ಆದರೂ ನಿನ್ನ ಹೆಸರಿನ ನಿಮಿತ್ತ ಅದನ್ನು ಕ್ಷಮಿಸು.

12 מ ಯಾವನು ಯೆಹೋವನಲ್ಲಿ ಭಯಭಕ್ತಿಯ... ವನೋ
ಅವನಿಗೆ ಉಚಿತವಾದ ಮಾರ್ಗವನ್ನು ಆತನು ಬೋ... ಸುವನು.
13 נ ಅವನು ಸುಖದಿಂದಲೇ ಇರುವನು;
ಅವನ ಸಂತತಿಯವರು ದೇಶವನ್ನು ಅನುಭವಿಸುವ...
14 ס ಯೆಹೋವನು ತನ್ನ ಸದ್ಭಕ್ತರಿಗೆ ಆಪ್ತ... ನಂತಿರುವನು;
ಅವರಿಗೇ ತನ್ನ ಒಡಂಬಡಿಕೆಯ ಅನುಭವವನ್ನು ... ಪಾಲಿಸುವನು.

15 ע ನನ್ನ ದೃಷ್ಟಿ ಯಾವಾಗಲೂ ಯೆಹೋವನ...
ಆತನೇ ನನ್ನ ಕಾಲುಗಳನ್ನು ಬಲೆಯಿಂದ ಬಿ... ವವನು.
16 פ ನಾನು ಒಬ್ಬೊಂಟಿಗನೂ ಬಾಧೆಪಡುವವನೂ ... ದ್ದೇನೆ;
ನೀನು ಕಟಾಕ್ಷವಿಟ್ಟು ನನ್ನನ್ನು ಕರುಣಿಸು.
17 צ ನನ್ನ ಮನೋವ್ಯಥೆಗಳನ್ನು ನಿವಾರಿಸು;
ಸಂಕಟಗಳಿಂದ ನನ್ನನ್ನು ಬಿಡಿಸು.
18 ר ನಾನು ಕುಗ್ಗಿರುವದನ್ನೂ ಕಷ್ಟಪಡುವದನ್ನೂ ನೆ...
ನನ್ನ ಎಲ್ಲಾ ಪಾಪಗಳನ್ನು ಪರಿಹರಿಸು.
19 ר ನನಗೆ ಎಷ್ಟೋ ಮಂದಿ ಶತ್ರುಗಳು ಇದ್ದಾರ...
ಅವರು ಕಡು ವೈರದಿಂದ ನನ್ನನ್ನು ಹಗೆಮಾಡುತ...

20 ש ನನ್ನ ಪ್ರಾಣವನ್ನು ಕಾಪಾಡಿ ಉಳಿಸು;
ನಿನ್ನನ್ನೇ ಆಶ್ರಯಿಸಿಕೊಂಡಿದ್ದೇನೆ, ನನಗೆ ಆಶಾ... ವಾಗಬಾರದು.
21 ת ನಿನ್ನನ್ನೇ ನಿರೀಕ್ಷಿಸಿಕೊಂಡಿದ್ದೇನೆ;
ನಿರ್ದೋಷಭಕ್ತಿಯೂ ಯಥಾರ್ಥತ್ವವೂ ನನ್... ಕಾಯಲಿ.
22 ದೇವರೇ, ಇಸ್ರಾಯೇಲ್ಯರನ್ನು ಎಲ್ಲಾ ಬಾಧೆಗ... ವಿಮೋಚಿಸು.

ಸದ್ಭಕ್ತನು ಬಲಾತ್ಕಾರಿಗಳಿಗೆ ತಪ್ಪಿಸಬೇಕೆಂದು
ಪ್ರಾರ್ಥಿಸುವದು.
ದಾವೀದನ ಕೀರ್ತನೆ.

26 ಯೆಹೋವನೇ, ನನಗೋಸ್ಕರ ನ್ಯಾಯ... ನಿರ್ಣಯಿಸು.
ನಾನಾದರೋ ನಿರ್ದೋಷಿಯಾಗಿಯೇ ನಡೆದುಕೊ... ದ್ದೇನೆ.
ನಾನು ಕದಲದೆ ಯೆಹೋವನಲ್ಲೇ ಭರವಸ... ದ್ದೇನೆ.
2 ಯೆಹೋವನೇ, ನನ್ನನ್ನು ಪರೀಕ್ಷಿಸು, ಪರಿಶೀ...
ನನ್ನ ಅಂತರಿಂದ್ರಿಯವನ್ನೂ ಹೃದಯವನ್ನೂ ... ಶೋಧಿಸು.
3 ನಿನ್ನ ಕೃಪೆಯನ್ನು ನನ್ನ ದೃಷ್ಟಿಯಲ್ಲೇ ಇಟ್ಟುಕೊ... ದ್ದೇನೆ;
ನಿನ್ನ ಸತ್ಯದಲ್ಲಿ ನಡೆದುಕೊಂಡಿದ್ದೇನೆ.

4 ನಾನು ಕುಟಿಲಸ್ವಭಾವಿಗಳ ಸಹವಾಸಮಾಡುವವನಲ್ಲ;
ಕಪಟಿಗಳನ್ನು ಸೇರುವವನಲ್ಲ.
5 ನನಗೆ ದುರ್ಜನರ ಕೂಟವು ಅಸಹ್ಯ;
ದುಷ್ಟರ ಸಂಗವು ಬೇಕಿಲ್ಲ.

6 ಯೆಹೋವನೇ, ನಾನು ನಿರ್ಮಲತ್ವದಲ್ಲಿ ಕೈಗಳನ್ನು ತೊಳೆದುಕೊಂಡವನಾಗಿ
7 ನಿನ್ನ ಅದ್ಭುತಕೃತ್ಯವರ್ಣನೆಯ ಪದಗಳನ್ನು ಹಾಡುತ್ತಾ
ನಿನ್ನ ಯಜ್ಞವೇದಿಯನ್ನು ಪ್ರದಕ್ಷಿಣೆಮಾಡುವೆನು.
8 ಯೆಹೋವನೇ, ನಿನ್ನ ನಿವಾಸವು ನನಗೆ ಎಷ್ಟೋ ಪ್ರಿಯ;
ನಿನ್ನ ಪ್ರಭಾವಸ್ಥಾನವು ನನಗೆ ಇಷ್ಟ.

9 ಪಾಪಿಷ್ಠರ ಪ್ರಾಣದ ಸಂಗಡ ನನ್ನ ಪ್ರಾಣವನ್ನೂ ತೆಗೆಯಬೇಡ;
ಕೊಲೆಪಾತಕರ ಜೀವದೊಂದಿಗೆ ನನ್ನ ಜೀವವನ್ನೂ ತೆಗೆಯಬೇಡ.
10 ಅವರ ಕೈಗಳು ಬಲಾತ್ಕಾರ ನಡಿಸುತ್ತವೆ;
ಅವರ ಬಲಗೈ ಲಂಚದಿಂದ ತುಂಬಿದೆ.
11 ನಾನಾದರೋ ನಿರ್ದೋಷಿಯಾಗಿಯೇ ನಡೆದುಕೊಳ್ಳುವವನು;
ಯೆಹೋವನೇ, ಅವರಿಂದ ನನ್ನನ್ನು ವಿಮೋಚಿಸಿ ಪ್ರಸನ್ನನಾಗಿರು.

12 ನನ್ನ ಪಾದವು ಸಮಭೂಮಿಯಲ್ಲಿ ನಿಂತಿದೆ;
ಕೂಡಿದ ಸಭೆಗಳಲ್ಲಿ ಯೆಹೋವನನ್ನು ಕೊಂಡಾಡುವೆನು.

ಗಂಡಾಂತರದಲ್ಲಿ ,ಭಕ್ತನು ತನ್ನ ನಂಬಿಕೆಯನ್ನು ಪ್ರಕಟಿಸುವದು.
ದಾವೀದನ ಕೀರ್ತನೆ.

27 ಯೆಹೋವನು ನನಗೆ ಬೆಳಕೂ ರಕ್ಷಕನೂ ಆಗಿದ್ದಾನೆ; ನಾನು ಯಾರಿಗೆ ಭಯಪಟ್ಟೇನು?
ಯೆಹೋವನು ನನ್ನ ಪ್ರಾಣದ ಆಧಾರವು; ನಾನು ಯಾರಿಗೆ ಹೆದರೇನು?
ನನ್ನನ್ನು ಬಾಧಿಸುತ್ತಿರುವ ದುರ್ವೈರಿಗಳು ನನ್ನನ್ನು ನುಂಗಿಬಿಡಬೇಕೆಂದು ಬಂದು
ತಾವೇ ನೆಲಕ್ಕೆ ಬಿದ್ದುಹೋದರು.
ನನಗೆ ವಿರೋಧವಾಗಿ ದಂಡುಬಂದಿಳಿದರೂ ನನಗೇನೂ ಭಯವಿಲ್ಲ;
ಚತುರಂಗಬಲವು ಯುದ್ಧಸನ್ನದ್ಧವಾಗಿ ನಿಂತರೂ ಭರವಸವುಳ್ಳವನಾಗಿಯೇ ಇರುವೆನು.

ನನ್ನ ಜೀವಮಾನದಲ್ಲೆಲ್ಲಾ ಯೆಹೋವನ ಮನೆಯಲ್ಲಿ ವಾಸಮಾಡುತ್ತಾ
ಆತನ ಪ್ರಸನ್ನತೆಯನ್ನು ನೋಡುವದಕ್ಕೂ ಆತನ ಮಂದಿರದಲ್ಲಿ ಧ್ಯಾನಮಾಡುವದಕ್ಕೂ
ನನಗೆ ಅಪ್ಪಣೆಯಾಗಬೇಕೆಂಬ ಒಂದೇ ವರವನ್ನು
ಯೆಹೋವನಿಂದ ಕೇಳಿಕೊಂಡು ಅದನ್ನೇ ಎದುರು ನೋಡುತ್ತಿರುವೆನು.

5 ಅಪಾಯಕಾಲದಲ್ಲಿ ಆತನು ನನ್ನನ್ನು ಗುಪ್ತಸ್ಥಳದಲ್ಲಿ ಅಡಗಿಸುವನು;
ತನ್ನ ಗುಡಾರವೆಂಬ ಆಶ್ರಯಸ್ಥಾನದಲ್ಲಿ ನನ್ನನ್ನು ಭದ್ರಪಡಿಸುವನು;
ಪರ್ವತಾಗ್ರದಲ್ಲಿ ನನ್ನನ್ನು ಸುರಕ್ಷಿತವಾಗಿ ಇರಿಸುವನು.
6 ಹೀಗಿರುವದರಿಂದ ನನ್ನ ಸುತ್ತಲಿರುವ ವೈರಿಗಳ ಮೇಲೆ ನನ್ನ ತಲೆ ಎತ್ತಲ್ಪಟ್ಟಿರುವದು;
ನಾನು ಯೆಹೋವನ ಗುಡಾರದಲ್ಲಿ ಉತ್ಸಾಹಧ್ವನಿಯೊಡನೆ ಯಜ್ಞಗಳನ್ನು ಸಮರ್ಪಿಸುವೆನು.
ಆತನನ್ನು ಹಾಡುತ್ತಾ ವಾದ್ಯಬಾರಿಸುವೆನು.

7 ಯೆಹೋವನೇ, ನಿನಗೆ ಗಟ್ಟಿಯಾಗಿ ಮೊರೆಯಿಡುತ್ತೇನೆ;
ನನ್ನನ್ನು ಕರುಣಿಸಿ ಸದುತ್ತರವನ್ನು ದಯಪಾಲಿಸು.
8 ನನ್ನ ಸಾನ್ನಿಧ್ಯಕ್ಕೆ ಬಾ ಎಂಬ ನಿನ್ನ ಮಾತಿಗೆ ನಾನು—
ಯೆಹೋವನೇ, ನಿನ್ನ ಸಾನ್ನಿಧ್ಯಕ್ಕೆ ಬರಲೇ ಬರುವೆನು ಎಂದು ಉತ್ತರಕೊಟ್ಟೆನು.
9 ನನಗೆ ವಿಮುಖನಾಗಿರಬೇಡ; ನಿನ್ನ ಸೇವಕನನ್ನು ಕೋಪದಿಂದ ತಳ್ಳಬೇಡ.
ನೀನೇ ನನಗೆ ಸಹಾಯಕನಾಗಿದ್ದೆಯಲ್ಲವೇ;
ನನ್ನನ್ನು ರಕ್ಷಿಸಿದ ದೇವರೇ, ಕೈಬಿಡಬೇಡ, ತೊರೆದುಬಿಡಬೇಡ.
10 ತಂದೆತಾಯಿಗಳು ನನ್ನನ್ನು ತೊರೆದುಬಿಟ್ಟರೇನು;
ಯೆಹೋವನು ನನ್ನನ್ನು ಸೇರಿಸಿಕೊಳ್ಳುವನು.

11 ಯೆಹೋವನೇ, ನಿನ್ನ ಮಾರ್ಗವನ್ನು ನನಗೆ ಬೋಧಿಸು;
ಹೊಂಚುಹಾಕಿರುವವರಿಗೆ ಸಿಕ್ಕದ ಹಾಗೆ ನನ್ನನ್ನು ಸಮವಾದ ದಾರಿಯಲ್ಲಿ ನಡಿಸು.
12 ಸುಳ್ಳುಸಾಕ್ಷಿಗಳೂ ಬೆದರಿಸುವವರೂ ನನಗೆ ವಿರೋಧವಾಗಿ ಎದ್ದಿದ್ದಾರೆ;
ಇಂಥ ವೈರಿಗಳ ವಶಕ್ಕೆ ನನ್ನನ್ನು ಕೊಡಬೇಡ.
13 ಜೀವಲೋಕದಲ್ಲಿಯೇ ಯೆಹೋವನ ದಯೆಯನ್ನು ಅನುಭವಿಸುವೆನೆಂದು ದೃಢವಾಗಿ ನಂಬಿದ್ದೇನೆ.

14 ಯೆಹೋವನನ್ನು ನಿರೀಕ್ಷಿಸಿಕೊಂಡಿರು; ದೃಢವಾಗಿರು;
ನಿನ್ನ ಹೃದಯವು ಧೈರ್ಯದಿಂದಿರಲಿ; ಯೆಹೋವನನ್ನು ನಿರೀಕ್ಷಿಸಿಕೊಂಡೇ ಇರು.

ಕಷ್ಟದಲ್ಲಿದ್ದ ಭಕ್ತನು ಪ್ರಾರ್ಥಿಸಿ ರಕ್ಷಣೆಹೊಂದಿ ಸ್ತುತಿಸುವದು.
ದಾವೀದನ ಕೀರ್ತನೆ.

28 ಯೆಹೋವನೇ, ನನ್ನ ಶರಣನೇ, ನಿನಗೆ ಮೊರೆಯಿಡುತ್ತೇನೆ; ಕೇಳದೆ ಇರಬೇಡ.
ನೀನು ಕಿವಿಗೊಡದೆ ಹೋದರೆ ನಾನು ಸತ್ತವರಿಗೆ ಸಮಾನನಾಗುವೆನಲ್ಲವೇ.
2 ನೀನು ವಾಸಿಸುವ ಮಹಾಪರಿಶುದ್ಧಸ್ಥಾನದ ಕಡೆಗೆ ನಾನು ಕೈಯೆತ್ತಿಕೊಂಡು ಮೊರೆಯಿಡುತ್ತೇನಲ್ಲಾ;

ನನ್ನ ವಿಜ್ಞಾಪನೆಯನ್ನು ಲಾಲಿಸು.

3 ನೀನು ದುಷ್ಟರೊಡನೆಯೂ ಪಾತಕಿಗಳ ಸಂಗಡಲೂ
ನನ್ನನ್ನೂ ಎಳೆದುಕೊಂಡು ಹೋಗಬೇಡ.
ಅವರು ಹೊರಗೆ ಒಳ್ಳೇದಾಗಲಿ ಎಂದು ಹೇಳಿದರೂ
ಒಳಗೆ ಕೇಡಾಗಲಿ ಎಂದು ಯೋಚಿಸುವವರು.
4 ಅವರ ದುಷ್ಕೃತ್ಯಗಳಿಗೂ ಕೆಡಕುಗಳಿಗೂ ಸರಿಯಾದ
ಪ್ರತಿಫಲವನ್ನು ಅವರಿಗೆ ಕೊಡು;
ಅವರು ಮತ್ತೊಬ್ಬರಿಗೆ ಮಾಡಿದಂತೆಯೇ ಅವರಿಗೆ
ಮಾಡು.
5 ಅವರು ಯೆಹೋವನ ಕಾರ್ಯಗಳನ್ನೂ ಆತನ ಕೈ
ಕೆಲಸಗಳನ್ನೂ ವಿವೇಚಿಸಿ ತಿಳಿದುಕೊಳ್ಳದೆ ಹೋ
ದರು;
ಆದದರಿಂದ ಆತನು ಅವರನ್ನು ಹಾಳುಮಾಡುವನೇ
ಹೊರತು ವೃದ್ಧಿಪಡಿಸುವದಿಲ್ಲ.

6 ಯೆಹೋವನು ನನ್ನ ವಿಜ್ಞಾಪನೆಗಳನ್ನು ಕೇಳಿದ್ದಾನೆ;
ಆತನಿಗೆ ಸ್ತೋತ್ರವಾಗಲಿ.
7 ಯೆಹೋವನು ನನಗೆ ಬಲವೂ ಗುರಾಣಿಯೂ ಆಗಿ
ದ್ದಾನೆ;
ನಾನು ಆತನಲ್ಲಿ ಭರವಸವಿಟ್ಟೆನು, ನನಗೆ ಸಹಾಯವು
ಉಂಟಾಯಿತು.
ಆದಕಾರಣ ನನ್ನ ಹೃದಯವು ಹರ್ಷಿಸುವದು; ಕೀರ್ತ
ನಾರೂಪವಾಗಿ ಆತನನ್ನು ಸ್ತುತಿಸುವೆನು.
8 ಯೆಹೋವನು ತನ್ನ ಜನರಿಗೆ ಬಲವೂ
ತಾನು ಅಭಿಷೇಕಿಸಿದವನಿಗೆ ಆಶ್ರಯದುರ್ಗವೂ ಆಗಿ
ದ್ದಾನೆ.

9 [ಯೆಹೋವನೇ,] ನಿನ್ನ ಜನರನ್ನು ರಕ್ಷಿಸು; ನಿನ್ನ
ಸ್ವಕೀಯ ಪ್ರಜೆಯನ್ನು ಆಶೀರ್ವದಿಸು.
ಅವರನ್ನು ಯಾವಾಗಲೂ ಪರಿಶೀಲಿಸುತ್ತಾ ಆಧಾರ
ವಾಗಿರು.

ಮೇಘಮಂಡಲದಲ್ಲಿ ಕಾಣಿಸುವ ಯೆಹೋವನ ಮಹಿಮೆ.
(ಯೆರೆಮೀಯ 10. 13; ಯೆಶಾಯ 30. 30.)
ದಾವೀದನ ಕೀರ್ತನೆ.

29 1)ದೇವದೂತರುಗಳಿರಾ, ಪರಮಪ್ರಭಾವವು ಯೆ
ಹೋವನದೇ ಯೆಹೋವನದೇ ಎಂದು ಹೇಳಿ
ಕೊಂಡಾಡಿರಿ.
2 ಯೆಹೋವನ ನಾಮಕ್ಕೆ ಯೋಗ್ಯವಾದ ಘನವನ್ನು
ಸಲ್ಲಿಸಿರಿ;
ಪರಿಶುದ್ಧತ್ವವೆಂಬ ಭೂಷಣದೊಡನೆ ಯೆಹೋವ
ನಿಗೆ ಅಡ್ಡಬೀಳಿರಿ.

3 ಯೆಹೋವನ ಮಹಾಧ್ವನಿಯು 2)ಮೇಘಮಂಡಲ
ದಲ್ಲಿ ಕೇಳಿಸುತ್ತದೆ;
ಪ್ರಭಾವಸ್ವರೂಪನಾದ ದೇವರು ಗುಡುಗುತ್ತಾನೆ;
ಯೆಹೋವನು ಆಕಾಶದ ಜಲರಾಶಿಗಳ ಮೇ
ಇದ್ದಾನೆ.
4 ಯೆಹೋವನ ಧ್ವನಿಯು ಎಷ್ಟೋ ಬಲವುಳ್ಳ
ಎಷ್ಟೋ ಗಂಭೀರವಾದದ್ದು.
5 ಯೆಹೋವನ ಗರ್ಜನೆಗೆ ದೇವದಾರುವೃಕ್ಷಗಳು ದ
ಎಂದು ಮುರಿದು ಬೀಳುತ್ತವೆ;
ಯೆಹೋವನು ಲೆಬನೋನ್ ಪರ್ವತದಲ್ಲಿನ ಮ
ದೇವದಾರುಗಳನ್ನೂ ಮುರಿದುಬಿಡುತ್ತಾನೆ.
6 ಲೆಬನೋನ್ ಪರ್ವತವು ಕರುವಿನೋಪಾದಿಯಲ್ಲಿ
ಸಿರ್ಯೋನ್ ಬೆಟ್ಟವು ಕಾಡುಕೋಣದ ಮರಿಯಂತೆ
ಹಾರಾಡುವ ಹಾಗೆ ಮಾಡುತ್ತಾನೆ.
7 ಯೆಹೋವನ ಗರ್ಜನೆಗೆ ಮಿಂಚುಗಳು ಥಳಥಳನೆ ಹ
ಯುತ್ತವೆ.
8 ಯೆಹೋವನ ಗರ್ಜನೆಗೆ ಕಾಡು ಹೊರಳಾಡುತ್ತ
ಕಾದೇಶ್ ಅರಣ್ಯವು ಕಂಪಿಸುತ್ತದೆ.
9 ಯೆಹೋವನ ಗರ್ಜನೆಗೆ ಗರ್ಭದ ಜಿಂಕೆಗಳು ಈ
ತ್ತವೆ;
ಕಾಡಿನ ಮರಗಳು ಬರೀದಾಗುತ್ತವೆ.
ಆಗ ಆತನ ಮಂದಿರದಲ್ಲಿರುವವರೆಲ್ಲರು—ಎಷ
ಪ್ರಭಾವ! ಎನ್ನುತ್ತಾರೆ.

10 ಯೆಹೋವನು ಜಲಪ್ರಳಯದಲ್ಲಿ ಆಸೀನ
ದ್ದನು;
ಆತನು ಸದಾಕಾಲವೂ ಅರಸನಾಗಿ ಕೂ
ವನು.
11 ಯೆಹೋವನು ತನ್ನ ಜನರಿಗೆ ಬಲವನ್ನು ಅ
ಹಿಸುವನು;
ಆತನು ತನ್ನ ಪ್ರಜೆಗೆ ಸುಕ್ಷೇಮವನ್ನು ದಯ
ಸುವನು.

ವಿಶೇಷವಾದ ಅಪಾಯದಿಂದ ತಪ್ಪಿಸಲ್ಪಟ್ಟವರು ಯೆಹೋವನ
ಕೊಂಡಾಡುವದು. (ಕೀರ್ತನೆ 6.)
ದಾವೀದನ ಕೀರ್ತನೆ. ದೇವಾಲಯಪ್ರತಿಷ್ಠೆಯಲ್ಲಿ ಹಾಡತಕ್ಕ
(ಯೋಹಾನ 10. 22.)

30 ಯೆಹೋವನೇ, ನನ್ನ ಶತ್ರುಗಳು ಸಂತೋ
ವದಕ್ಕೆ ಅವಕಾಶಕೊಡದೆ
ನನ್ನನ್ನು ಉದ್ಧರಿಸಿದ್ದರಿಂದ ನಿನ್ನನ್ನು ಕೊಂಡ
ವೆನು.
2 ಯೆಹೋವನೇ, ನನ್ನ ದೇವರೇ, ನಿನಗೆ ಮೊ
ಡಲು ನನ್ನನ್ನು ಸ್ವಸ್ಥಮಾಡಿದಿ.
3 ಯೆಹೋವನೇ, ನನ್ನ ಪ್ರಾಣವನ್ನು ಪಾತಾಳದಿಂ
ಎತ್ತಿದಿಯಲ್ಲಾ;
ನನ್ನನ್ನು ಸಮಾಧಿಯಲ್ಲಿ ಸೇರಗೊಡದೆ ಬದು
ಯಲ್ಲಾ.

4 ಯೆಹೋವನ ಭಕ್ತರೇ, ಆತನನ್ನು ಕೀರ್ತಿಸಿರಿ;
ಆತನ ಪರಿಶುದ್ಧನಾಮವನ್ನು ಕೊಂಡಾಡಿರಿ.

1) ಮೂಲ: ದೇವಪುತ್ರರುಗಳಿರಾ. 2) ಮೂಲ: ಜಲಸಮೂಹಗಳ ಮೇಲೆ.

ಆತನ ಕೋಪವು ಕ್ಷಣಮಾತ್ರವೇ;
ಆತನ ಅನುಗ್ರಹವೋ ಜೀವಮಾನವೆಲ್ಲಾ ಇರುವದು;
ಸಂಜೆಗೆ ದುಃಖವೆಂಬದು ಬಂದು ನಮ್ಮ ಬಳಿಯಲ್ಲಿ ಇಳಿದುಕೊಂಡರೂ
ಮುಂಜಾನೆ ಹರ್ಷಧ್ವನಿಯು ಕೇಳಿಸುವದು.

ನಾನಂತೂ ಸುಖದಿಂದಿದ್ದಾಗ—
ನನಗೆ ಎಂದಿಗೂ ಚಲನವೇ ಇಲ್ಲವೆಂದು ಹೇಳಿಕೊಂಡಿದ್ದೆನು.
ಯೆಹೋವನೇ, ಕೃಪೆಮಾಡಿ ನಾನಿರುವ ಬೆಟ್ಟಕ್ಕೆ ಸ್ಥಿರವಾದ ಬಲವನ್ನು ಅನುಗ್ರಹಿಸಿದಿಯಲ್ಲಾ,
ಆದರೂ ನೀನು ನಿನ್ನ ಮುಖವನ್ನು ಮರೆಮಾಡಿಕೊಂಡಾಗ ನಾನು ಕಳವಳಗೊಂಡು
ಯೆಹೋವನೇ, ನಿನಗೆ ಮೊರೆಯಿಟ್ಟೆನು; ನನ್ನ ಒಡೆಯನಿಗೆ ಬಿನ್ನವಿಸಿದೆನು.
ನನ್ನನ್ನು ಕೊಂದುಹಾಕಿ ಸಮಾಧಿಗೆ ಸೇರಿಸಿದರೆ ನಿನಗೆ ಲಾಭವೇನು?
ಮಣ್ಣು ನಿನ್ನನ್ನು ಸ್ತುತಿಸುವದೋ? ಅದು ನಿನ್ನ ನಂಬಿಕೆಯನ್ನು ಹೊಗಳುವದೇನು?
ಯೆಹೋವನೇ, ನನ್ನ ಪ್ರಾರ್ಥನೆಯನ್ನು ಕೇಳಿ ಕರುಣಿಸು;
ಯೆಹೋವನೇ, ನನ್ನ ಸಹಾಯಕ್ಕೆ ಬಾ ಎಂದು ಹೇಳಿದೆನು.

ಆಗ ನೀನು ನನ್ನ ಗೋಳಾಟವನ್ನು ತಪ್ಪಿಸಿ ಸಂತೋಷದಿಂದ ಕುಣಿದಾಡುವಂತೆ ಮಾಡಿದಿ;
ನಾನು ಕಟ್ಟಿಕೊಂಡಿದ್ದ ಗೋಣಿತಟ್ಟನ್ನು ತೆಗೆದುಬಿಟ್ಟು ಹರ್ಷವಸ್ತ್ರವನ್ನು ನನಗೆ ಧಾರಣೆಮಾಡಿಸಿದಿ.
ಇದರಿಂದ ಯೆಹೋವನೇ, ನನ್ನ ಮನಸ್ಸು ಎಡೆಬಿಡದೆ ನಿನ್ನನ್ನು ಕೀರ್ತಿಸುತ್ತಿರುವದು;
ನನ್ನ ದೇವರೇ, ನಿನ್ನನ್ನು ಸದಾಕಾಲವೂ ಸ್ತುತಿಸುವೆನು.

ಕಷ್ಟದಲ್ಲಿರುವವರು ವಿಶ್ವಾಸದಿಂದ ಪ್ರಾರ್ಥಿಸುವದು.
ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು;
ದಾವೀದನ ಕೀರ್ತನೆ.

ಯೆಹೋವನೇ, ನಿನ್ನ ಮರೆಹೊಕ್ಕಿದ್ದೇನೆ; ನನಗೆ ಎಂದಿಗೂ ಆಶಾಭಂಗಪಡಿಸಬೇಡ.
ನಿನ್ನ ನೀತಿಗನುಸಾರವಾಗಿ ನನ್ನನ್ನು ರಕ್ಷಿಸು.
ಕಿವಿಗೊಟ್ಟು ಕೇಳಿ ಬೇಗ ನನ್ನನ್ನು ಬಿಡಿಸು;
ನನ್ನನ್ನು ರಕ್ಷಿಸುವ ಆಶ್ರಯಗಿರಿಯೂ ದುರ್ಗಸ್ಥಾನವೂ ಆಗಿರು.

ನೀನೇ ನನ್ನ ಬಂಡೆಯೂ ಕೋಟೆಯೂ ಆಗಿದ್ದೀಯಲ್ಲಾ;
ಆದದರಿಂದ ನಿನ್ನ ಹೆಸರಿನ ನಿಮಿತ್ತ ದಾರಿತೋರಿಸಿ ನನ್ನನ್ನು ನಡಿಸು.
ಶತ್ರುಗಳು ನನಗೆ ರಹಸ್ಯವಾಗಿ ಒಡ್ಡಿದ ಬಲೆಯೊಳಗೆ ಸಿಕ್ಕಿಬೀಳದಂತೆ ನನ್ನನ್ನು ಕಾಪಾಡು;

5 ನೀನೇ ನನಗೆ ಆಧಾರವಲ್ಲವೇ; ನನ್ನ ಆತ್ಮವನ್ನು ನಿನ್ನ ಕೈಗೆ ಒಪ್ಪಿಸಿಕೊಟ್ಟಿದ್ದೇನೆ.
ಯೆಹೋವನೇ, ನಂಬಿಕೆಯುಳ್ಳ ದೇವರೇ, ನನ್ನನ್ನು ವಿಮೋಚಿಸಿದ್ದೀ.
6 ಸುಳ್ಳುವಿಗ್ರಹಗಳನ್ನು ಅವಲಂಬಿಸಿದವರನ್ನು ನಾನು ದ್ವೇಷಿಸುತ್ತೇನೆ;
ನಾನಾದರೋ ಯೆಹೋವನಲ್ಲಿ ಭರವಸವಿಟ್ಟಿದ್ದೇನೆ.
7 ನಿನ್ನ ಕೃಪೆಯಲ್ಲಿ ಸಂತೋಷಿಸಿ ಉಲ್ಲಾಸದಿಂದಿರುವೆನು;
ನಾನು ಕುಗ್ಗಿಹೋಗಿರುವದನ್ನು ನೋಡಿ ನನ್ನ ಬಾಧೆಗಳನ್ನು ನೀನು ಲಕ್ಷ್ಯಕ್ಕೆ ತೆಗೆದುಕೊಂಡಿಯಲ್ಲಾ.
8 ನೀನು ನನ್ನನ್ನು ಶತ್ರುಗಳ ಕೈಕೆಳಗೆ ಬೀಳಿಸಲಿಲ್ಲ;
ನಿರಾತಂಕಸ್ಥಾನದಲ್ಲಿ ನನ್ನನ್ನು ನಿಲ್ಲಿಸಿದಿ.

9 ಯೆಹೋವನೇ, ಕರುಣಿಸು; ಕಷ್ಟದಲ್ಲಿ ಬಿದ್ದಿದ್ದೇನೆ.
ನನಗುಂಟಾದ ಬಾಧೆಯ ದೆಸೆಯಿಂದ ನನ್ನ ಕಣ್ಣು ಗುಡ್ಡು ಸೇದಿಕೊಂಡಿದೆ;
ದೇಹಾತ್ಮಗಳು ಕುಗ್ಗಿಹೋದವು.
10 ನನ್ನ ಜೀವಮಾನವೆಲ್ಲಾ ದುಃಖದಲ್ಲಿಯೂ ನಿಟ್ಟುಸಿರಿನಲ್ಲಿಯೂ ಕಳೆದುಹೋಗುತ್ತಾ ಇದೆ;
ನನ್ನ ಅಪರಾಧದಿಂದ ನನ್ನ ಶಕ್ತಿಯು ಕುಂದಿಹೋಯಿತು;
ನನ್ನ ಎಲುಬುಗಳು ಸವೆದುಹೋಗಿವೆ.
11 ನನ್ನ ಎಲ್ಲಾ ಹಿಂಸಕರ ದೆಸೆಯಿಂದ ದೂಷಣೆಗೆ ಗುರಿಯಾದೆನು;
ವಿಶೇಷವಾಗಿ ನೆರೆಯವರು ನನ್ನನ್ನು ನಿಂದಿಸುತ್ತಾರೆ.
ನನ್ನ ಪರಿಚಿತರಿಗೆ ನನ್ನಲ್ಲಿ ಭೀತಿಯುಂಟಾಯಿತು;
ನನ್ನನ್ನು ದಾರಿಯಲ್ಲಿ ಕಂಡವರೆಲ್ಲರು ಓರೆಯಾಗಿ ಹೋಗುತ್ತಾರೆ.
12 ನಾನು ಸತ್ತವರಂತೆ ಯಾರ ಜ್ಞಾಪಕಕ್ಕೂ ಬಾರದವನಾದೆನು;
ಒಡೆದ ಬೋಕಿಯಂತಿದ್ದೇನೆ.
13 ಅನೇಕರು ನನ್ನ ಪ್ರಾಣ ತೆಗೆಯಬೇಕೆಂದು ಒಳಸಂಚು ಮಾಡುತ್ತಿದ್ದಾರೆ;
ಅವರು ಪಿಸುಗುಟ್ಟುವ ಮಾತುಗಳು ನನ್ನ ಕಿವಿಗೆ ಬಿದ್ದವೆ;
ಎಲ್ಲಾ ಕಡೆಯಲ್ಲಿಯೂ ನನಗೆ ಭೀತಿಯುಂಟಾಗಿದೆ.

14 ನಾನಾದರೋ ಯೆಹೋವನೇ, ನಿನ್ನಲ್ಲೇ ಭರವಸವಿಟ್ಟಿದ್ದೇನೆ;
ನೀನೇ ನನ್ನ ದೇವರೆಂದು ಹೇಳಿಕೊಂಡಿದ್ದೇನೆ.
15 ನನ್ನ ಆಯುಷ್ಕಾಲವು ನಿನ್ನ ಕೈಯಲ್ಲಿದೆ;
ಹಿಂದಟ್ಟುವ ಶತ್ರುಗಳಿಗೆ ನನ್ನನ್ನು ತಪ್ಪಿಸಿ ಕಾಪಾಡು.
16 ನಿನ್ನ ಸೇವಕನನ್ನು ಪ್ರಸನ್ನಮುಖದಿಂದ ನೋಡು;
ಪ್ರೀತಿಯಿಂದ ನನ್ನನ್ನು ರಕ್ಷಿಸು.
17 ಯೆಹೋವನೇ, ಮೊರೆಯಿಟ್ಟಿದ್ದೇನೆ; ನನಗೆ ಆಶಾಭಂಗಪಡಿಸಬೇಡ.
ದುಷ್ಟರಿಗೇ ಆಶಾಭಂಗವಾಗಲಿ; ಅವರು ಸ್ತಬ್ಧರಾಗಿ ಪಾತಾಳಕ್ಕೆ ಬೀಳಲಿ.
18 ಯಾರು ನೀತಿವಂತರನ್ನು ತಾತ್ಸಾರಮಾಡಿ

ಗರ್ವದಿಂದಲೂ ಕೊಬ್ಬಿನಿಂದಲೂ ಅವರಿಗೆ ವಿರೋಧ
ವಾಗಿ ಸುಳ್ಳುಹೇಳುತ್ತಾರೋ
ಅವರ ತುಟಿಗಳು ಮುಚ್ಚಿಹೋಗಲಿ.

19 ಸದ್ಭಕ್ತರಿಗೋಸ್ಕರ ನೀನು ಇಟ್ಟುಕೊಂಡಿರುವ
ಮೇಲೂ
ಆಶ್ರಿತರಿಗೋಸ್ಕರ ನೀನು ಎಲ್ಲರ ಮುಂದೆ ಮಾಡಿದ
ಉಪಕಾರಗಳೂ ಎಷ್ಟೋ ವಿಶೇಷವಾಗಿವೆ.
20 ಮನುಷ್ಯರ ಒಳಸಂಚುಗಳಿಂದ ಹಾನಿ ಉಂಟಾಗದಂತೆ
ಅವರನ್ನು ನಿನ್ನ ಸಾನ್ನಿಧ್ಯದಲ್ಲಿಯೇ ಮರೆಮಾ
ಡುತ್ತೀ;
ವಿವಾದಿಸುವ ನಾಲಿಗೆಗಳಿಂದ ಕೇಡಾಗದಂತೆ ಅವರನ್ನು
ಗೋಪ್ಯಸ್ಥಳಗಳಲ್ಲಿ ಅಡಗಿಸುತ್ತೀ.
21 [1]ಮುತ್ತಿಗೆಹಾಕಲ್ಪಟ್ಟಿರುವ ನಗರದಲ್ಲಿದ್ದ ನನಗೆ
ತನ್ನ ಕೃಪೆಯನ್ನು ಆಶ್ಚರ್ಯಕರವಾಗಿ ತೋರಿಸಿದ
ಯೆಹೋವನಿಗೆ ಸ್ತೋತ್ರ.
22 ನಾನಂತೂ ಭಯಭ್ರಾಂತನಾಗಿ—ನಿನ್ನ ಸಾನ್ನಿಧ್ಯದಿಂದ
ತೆಗೆದುಹಾಕಲ್ಪಟ್ಟೆನೆಂದು ಹೇಳಿಕೊಂಡಿದ್ದೆನು;
ಆದರೂ ನಾನು ಮೊರೆಯಿಡಲು ನೀನು ಕೇಳಿದಿ.
23 ಭಕ್ತರೇ, ನೀವೆಲ್ಲರೂ ಯೆಹೋವನನ್ನು ಪ್ರೀತಿ
ಸಿರಿ.
ಆತನು ನಂಬಿಗಸ್ತರನ್ನು ಕಾಪಾಡುತ್ತಾನೆ;
ಅಹಂಕಾರಿಗಳಿಗೆ ಚೆನ್ನಾಗಿ ಮುಯ್ಯಿತೀರಿಸುತ್ತಾನೆ.
24 ಯೆಹೋವನನ್ನು ನಿರೀಕ್ಷಿಸುವವರೇ, ದೃಢ
ವಾಗಿರ್ರಿ;
ನಿಮ್ಮ ಹೃದಯವು ಧೈರ್ಯದಿಂದಿರಲಿ.

ಪಾಪಪರಿಹಾರದಿಂದಲೂ ದೇವರ ನಂಬಿಕೆಯಿಂದಲೂ
ಉಂಟಾಗುವ ಭಾಗ್ಯದ ವರ್ಣನೆ.
ದಾವೀದನ ಪದ್ಯ.

32 ಯಾವನ ದ್ರೋಹವು ಪರಿಹಾರವಾಗಿದೆಯೋ
ಯಾವನ ಪಾಪವು ಕ್ಷಮಿಸಲ್ಪಟ್ಟಿದೆಯೋ ಅವನೇ
ಧನ್ಯನು.
2 ಯೆಹೋವನು ಯಾವನ ಲೆಕ್ಕಕ್ಕೆ ಅಪರಾಧವನ್ನು
ಎಣಿಸುವದಿಲ್ಲವೋ
ಯಾವನ ಹೃದಯದಲ್ಲಿ ಕಪಟವಿರುವದಿಲ್ಲವೋ ಅವನು
ಧನ್ಯನು.
3 ನಾನು [ನನ್ನ ಪಾಪವನ್ನು] ಅರಿಕೆಮಾಡದೆ ಇದ್ದಾಗ
ದಿನವೆಲ್ಲಾ ನರಳುವದರಿಂದ ನನ್ನ ಎಲುಬುಗಳು
ಸವೆದುಹೋಗುತ್ತಿದ್ದವು.
4 ಹಗಲಿರುಳು ನಿನ್ನ ಶಿಕ್ಷಾಹಸ್ತವು ನನ್ನ ಮೇಲೆ ಭಾರ
ವಾಗಿತ್ತು;
ಬೇಸಿಗೆಯ ನೀರಿನಂತೆ ನನ್ನ ಶರೀರದ ಸಾರವೆಲ್ಲಾ
ಬತ್ತಿಹೋಯಿತು. ಸೆಲಾ.

5 [ಹೀಗಿರುವಲ್ಲಿ] ಯೆಹೋವನ ಸನ್ನಿಧಿಯಲ್ಲಿ ನನ್ನ
ದ್ರೋಹವನ್ನು ಒಪ್ಪಿಕೊಳ್ಳುವೆನು ಅಂದುಕೊಂಡು
ನನ್ನ ಪಾಪವನ್ನು ಮರೆಮಾಡದೆ ನಿನಗೆ ನನ್ನ ದು
ವನ್ನು ತಿಳಿಸಿದೆನು.
ನೀನು ನನ್ನ ಅಪರಾಧಪಾಪಗಳನ್ನು ಪರಿಹರಿಸಿಬಿ
ಸೆಲಾ
6 ಇದರಿಂದ ಭಕ್ತರೆಲ್ಲರು [2]ಸಕಾಲದಲ್ಲಿ ನಿನ್ನ
ಪ್ರಾರ್ಥಿಸಲಿ;
ಮಹಾಪ್ರವಾಹವು ಅಂಥವರನ್ನು ಮುಟ್ಟುವದೇ ಇ
7 ನೀನೇ ನನಗೆ ಮರೆಯು; ನಿರಪಾಯವಾಗಿ ನನ್ನ
ಕಾಯುವಿ;
ವಿಮೋಚನಧ್ವನಿಯಿಂದ ನನ್ನನ್ನು ಆವರಿಸಿಕೊಳ್ಳು
ಸೆಲಾ

8 [ಯೆಹೋವನು]—ನಿನ್ನನ್ನು ಉಪದೇಶಿಸಿ ನಿ
ಬೇಕಾದ ಮಾರ್ಗವನ್ನು ತಿಳಿಸುವೆನು;
ನಿನ್ನನ್ನು ಕಟಾಕ್ಷಿಸಿ ಆಲೋಚನೆಹೇಳುವೆನು [ಅ
ತ್ತಾನಲ್ಲಾ].
9 [ಆದದರಿಂದ] ನೀವು ವಿವೇಕಹೀನರಾಗಿ ಕುದುರೆಯ
ಗಲಿ ಹೇಸರಕತ್ತೆಯಂತಾಗಲಿ ಇರಬೇಡಿರಿ;
ಅವುಗಳು ಬಾರುಕಡಿವಾಣಗಳಿಂದಲ್ಲದೆ ಸ್ವಾ
ವಾಗುವದಿಲ್ಲವಷ್ಟೆ.

10 ದುಷ್ಟರಿಗೆ ಅನೇಕ ಕಷ್ಟನಷ್ಟಗಳು ಉಂಟಾಗು
ಆದರೆ ಯೆಹೋವನಲ್ಲಿ ಭರವಸವಿಟ್ಟವರನ್ನು ಆ
ಕೃಪೆಯು ಆವರಿಸಿಕೊಳ್ಳುವದು.
11 ನೀತಿವಂತರೇ, ಯೆಹೋವನಲ್ಲಿ ಸಂತೋಷಿಸು
ಉಲ್ಲಾಸವಾಗಿರ್ರಿ;
ಯಥಾರ್ಥಚಿತ್ತರೇ, ಆತನ ವಿಷಯದಲ್ಲಿ ಉತ್ಸ
ಧ್ವನಿಮಾಡಿರಿ.

ಭಕ್ತರಕ್ಷಕನನ್ನು ಕೀರ್ತಿಸುವದು.

33 ನೀತಿವಂತರೇ, ಯೆಹೋವನ ವಿಷಯದಲ್ಲಿ
ಲ್ಲಾಸ ಧ್ವನಿಮಾಡಿರಿ;
ಯಥಾರ್ಥಚಿತ್ತರು ಆತನನ್ನು ಸ್ತುತಿಸು
ಯುಕ್ತವಾಗಿದೆ.
2 ಕಿನ್ನರಿಯನ್ನು ನುಡಿಸುತ್ತಾ ಯೆಹೋವ
ಕೊಂಡಾಡಿರಿ;
ಹತ್ತುತಂತಿಗಳ ಸ್ವರಮಂಡಲವನ್ನು ಬಾರಿಸ
ಸಂಕೀರ್ತಿಸಿರಿ.
3 ಆತನ ಘನಕ್ಕಾಗಿ ನೂತನಕೀರ್ತನೆಯ
ಹಾಡಿರಿ;
ಉತ್ಸಾಹಧ್ವನಿಯೊಡನೆ ಇಂಪಾಗಿ ಬಾರಿಸಿರಿ.

4 ಯೆಹೋವನ ವಚನವು ಯಥಾರ್ಥವಾದದ್ದು;
ಆತನ ಕೃತ್ಯವೆಲ್ಲಾ ನಂಬಿಕೆಯಾಗಿದೆ.
5 ಆತನು ನೀತಿನ್ಯಾಯಗಳನ್ನು ಪ್ರೀತಿಸುವವನು;

1) ಅಥವಾ: ಕೋಟೆಕೊತ್ತಲುಗಳುಳ್ಳ ಪಟ್ಟಣವನ್ನು ಕೊಟ್ಟು.
2) ಮೂಲ: [ನೀನು] ಸಿಕ್ಕುವ ಕಾಲದಲ್ಲಿ.

ಭೂಲೋಕವೆಲ್ಲಾ ಯೆಹೋವನ ಕೃಪೆಯಿಂದ ತುಂಬಿದೆ.
ಯೆಹೋವನ ಅಪ್ಪಣೆಯಿಂದಲೇ ಆಕಾಶವು ಉಂಟಾಯಿತು;
ಅದರಲ್ಲಿರುವದೆಲ್ಲವೂ ಆತನ ಶ್ವಾಸದಿಂದ ನಿರ್ಮಿತವಾಯಿತು.
ನೀರುಗಳನ್ನು ಒಟ್ಟುಗೂಡಿಸಿ ಸಮುದ್ರವನ್ನು ಮಾಡಿದವನು ಆತನೇ;
ಭೂಮಿಯ ಕೆಳಗೆ ಜಲಾಶಯಗಳನ್ನು ಇಟ್ಟವನು ಆತನೇ.
ಭೂಲೋಕದವರೆಲ್ಲರೂ ಯೆಹೋವನಿಗೆ ಭಯಪಡಲಿ;
ಭೂನಿವಾಸಿಗಳೆಲ್ಲರೂ ಆತನಿಗೆ ಹೆದರಲಿ.
ಆತನು ನುಡಿದ ಮಾತ್ರಕ್ಕೆ ಸಮಸ್ತವೂ ಉಂಟಾಯಿತು;
ಆತನು ಆಜ್ಞಾಪಿಸುತ್ತಲೇ ಸರ್ವವೂ ಸ್ಥಾಪನೆಯಾಯಿತು.
ಯೆಹೋವನು ಅನ್ಯಜನರ ಸಂಕಲ್ಪಗಳನ್ನು ವ್ಯರ್ಥಮಾಡುತ್ತಾನೆ;
ಅವರ ಯೋಚನೆಗಳನ್ನು ನಿಷ್ಫಲಮಾಡುತ್ತಾನೆ.
ಯೆಹೋವನ ಆಲೋಚನೆಯೋ ಶಾಶ್ವತವಾಗಿಯೇ ನಿಲ್ಲುವದು;
ಆತನ ಸಂಕಲ್ಪವು ಎಂದಿಗೂ ಕದಲುವದಿಲ್ಲ.
ಯಾವ ಜನರಿಗೆ ಯೆಹೋವನೇ ದೇವರಾಗಿದ್ದಾನೋ
ಯಾವ ಜನಾಂಗದವರನ್ನು ಸ್ವಕೀಯರನ್ನಾಗಿ ಆದುಕೊಂಡಿದ್ದಾನೋ ಅವರೇ ಧನ್ಯರು.
ಯೆಹೋವನು ಆಕಾಶದಿಂದ ಮನುಷ್ಯರೆಲ್ಲರನ್ನು ನೋಡುತ್ತಾನೆ;
ತಾನಿರುವ ಸ್ಥಾನದಿಂದ ಭೂನಿವಾಸಿಗಳೆಲ್ಲರನ್ನು ದೃಷ್ಟಿಸುತ್ತಾನೆ.
ಅವರೆಲ್ಲರ ಹೃದಯಗಳನ್ನು ನಿರ್ಮಿಸಿದವನೂ
ಅವರ ಕೃತ್ಯಗಳನ್ನೆಲ್ಲಾ ವಿವೇಚಿಸುವವನೂ ಆತನೇ.
ಮಹಾಸೇನಾಬಲದಿಂದಲೇ ಯಾವ ಅರಸನಿಗೂ ಜಯವಾಗುವದಿಲ್ಲ;
ಯಾವ ಶೂರನೂ ಅಧಿಕವಾದ ಭುಜಬಲದ ದೆಸೆಯಿಂದ ಸುರಕ್ಷಿತನಾಗುವದಿಲ್ಲ.
ಜೀವರಕ್ಷಣೆಗಾಗಿ ಕುದುರೆಯು ಪ್ರಯೋಜನವಿಲ್ಲ;
ಅದು ತನ್ನ ವಿಶೇಷಬಲದಿಂದ ಯಾರನ್ನೂ ರಕ್ಷಿಸಲಾರದು.
ಯೆಹೋವನಾದರೋ ತನ್ನಲ್ಲಿ ಭಯಭಕ್ತಿಯುಳ್ಳವರನ್ನು ಕಟಾಕ್ಷಿಸುತ್ತಾನೆ;
ತನ್ನ ಕೃಪೆಯನ್ನು ನಿರೀಕ್ಷಿಸುವವರನ್ನು ಲಕ್ಷಿಸುತ್ತಾನೆ.
ಅವರ ಪ್ರಾಣವನ್ನು ಮರಣದಿಂದ ತಪ್ಪಿಸುವನು;
ಬರಗಾಲದಲ್ಲಿ ಅವರ ಜೀವವನ್ನು ಉಳಿಸುವನು.

ನಮ್ಮ ಮನಸ್ಸು ಯೆಹೋವನಿಗೋಸ್ಕರ ಕಾದಿದೆ;
ನಮ್ಮ ಸಹಾಯವೂ ಗುರಾಣಿಯೂ ಆತನೇ.
ಆತನಲ್ಲಿ ನಮ್ಮ ಹೃದಯವು ಸಂತೋಷಿಸುವದು;
ಆತನ ಪರಿಶುದ್ಧನಾಮದಲ್ಲಿ ಭರವಸವಿಟ್ಟಿದ್ದೇವೆ.
ಯೆಹೋವನೇ, ನಾವು ನಿನ್ನನ್ನೇ ನಿರೀಕ್ಷಿಸಿಕೊಂಡಿದ್ದೇವೆ;
ನಿನ್ನ ಕೃಪೆಯು ನಮ್ಮ ಮೇಲೆ ಇರಲಿ.

ಯೆಹೋವನು ಸದಾ ಭಕ್ತಪಾಲಕನೆಂದು ವರ್ಣಿಸುವ ಇಬ್ರಿಯ ಅಕ್ಷರಕ್ರಮಾನುಸಾರವಾದ ಕೀರ್ತನೆ. (ಕೀರ್ತನೆ 25.)

ದಾವೀದನು ಅಬೀಮೆಲೆಕನ ಎದುರಿನಲ್ಲಿ ಹುಚ್ಚನಂತೆ ತೋರ್ಪಡಿಸಿಕೊಂಡು ಅವನ ಬಳಿಯಿಂದ ಹೊರಡಿಸಲ್ಪಟ್ಟಾಗ ರಚಿಸಿದ ಕೀರ್ತನೆ.

(೧ ಸಮುವೇಲ 21. 12—15.)

34 א ನಾನು ಯೆಹೋವನನ್ನು ಎಡೆಬಿಡದೆ ಕೊಂಡಾಡುವೆನು;
ಆತನ ಸ್ತೋತ್ರವು ಯಾವಾಗಲೂ ಬಾಯಲ್ಲಿ ಇರುವದು.
2 ב ನನ್ನ ಮನಸ್ಸು ಯೆಹೋವನಲ್ಲಿ ಹಿಗ್ಗುತ್ತಿರುವದು;
ಇದನ್ನು ದೀನರು ಕೇಳಿ ಸಂತೋಷಿಸುವರು.
3 ג ನನ್ನೊಡನೆ ಯೆಹೋವನನ್ನು ಕೊಂಡಾಡಿರಿ;
ನಾವು ಒಟ್ಟಾಗಿ ಆತನ ಹೆಸರನ್ನು ಘನಪಡಿಸೋಣ.
4 ד ನಾನು ಯೆಹೋವನ ಸನ್ನಿಧಿಯಲ್ಲಿ ಬೇಡಿಕೊಳ್ಳಲು ಆತನು ಸದುತ್ತರವನ್ನು ಕೊಟ್ಟು
ಎಲ್ಲಾ ಭೀತಿಯಿಂದ ನನ್ನನ್ನು ತಪ್ಪಿಸಿದನು.
5 ה ಆತನನ್ನೇ ದೃಷ್ಟಿಸಿದವರು ಪ್ರಕಾಶವನ್ನು ಹೊಂದಿದರು;
ו ಅವರ ಮುಖವು ಲಜ್ಜೆಯಿಂದ ಕೆಡುವದೇ ಇಲ್ಲ.
6 ז ಕಷ್ಟದಲ್ಲಿದ್ದ ಈ ಮನುಷ್ಯನು ಮೊರೆಯಿಡಲು
ಯೆಹೋವನು ಕೇಳಿ ಎಲ್ಲಾ ಬಾಧೆಗಳಿಂದ ಬಿಡಿಸಿದನು.
7 ח ಯೆಹೋವನ ಭಯಭಕ್ತಿಯುಳ್ಳವರ ಸುತ್ತಲು ಆತನ ದೂತನು ದಂಡಿಳಿಸಿ
ಕಾವಲಾಗಿದ್ದು ಕಾಪಾಡುತ್ತಾನೆ.
8 ט ಯೆಹೋವನು ಸರ್ವೋತ್ತಮನೆಂದು ಅನುಭವದಿಂದ ತಿಳಿದುಕೊಳ್ಳಿರಿ;
ಆತನನ್ನು ಆಶ್ರಯಿಸಿಕೊಂಡವರು ಎಷ್ಟೋ ಧನ್ಯರು.
9 י ಯೆಹೋವನ ಜನರೇ, ಆತನಲ್ಲಿ ಭಯಭಕ್ತಿಯುಳ್ಳವರಾಗಿರ್ರಿ!
ಆತನಲ್ಲಿ ಭಯಭಕ್ತಿಯುಳ್ಳವರಿಗೆ ಯಾವ ಕೊರತೆಯೂ ಇರುವದಿಲ್ಲ.
10 כ ಪ್ರಾಯದ ಸಿಂಹಗಳಾದರೋ ಹೊಟ್ಟೆಗಿಲ್ಲದೆ ಹಸಿದಾವು;
ಯೆಹೋವನ ಸನ್ನಿಧಿಯಲ್ಲಿ ಬೇಡಿಕೊಳ್ಳುವವರಿಗೆ ಯಾವ ಮೇಲಿಗೂ ಕಡಿಮೆಯಿಲ್ಲ.

11 ל ಮಕ್ಕಳಿರಾ, ಬನ್ನಿರಿ, ನನ್ನ ಮಾತನ್ನು ಕೇಳಿರಿ;
ನಾನು ಯೆಹೋವನ ಭಯವನ್ನು ನಿಮಗೆ ಕಲಿಸುವೆನು.
12 מ ದೀರ್ಘಾಯುಷ್ಯವು ಬೇಕೋ?
ಬಹುದಿವಸ ಬದುಕಿ ಸುಖವನ್ನು ಅನುಭವಿಸಬೇಕೋ?
13 נ ಹಾಗಾದರೆ ಕೆಟ್ಟದ್ದಕ್ಕೆ ಹೋಗದಂತೆ ನಾಲಿಗೆಯನ್ನು ಕಾದುಕೋ;
ವಂಚನೆಯ ಮಾತುಗಳಿಗೆ ಬಿಡದೆ ತುಟಿಗಳನ್ನು ಇಟ್ಟುಕೋ.

14 ס ಕೆಟ್ಟದ್ದನ್ನು ಬಿಟ್ಟು ಒಳ್ಳೆಯದನ್ನೇ ಮಾಡು;
ಸಮಾಧಾನವನ್ನು ಹಾರೈಸಿ ಅದಕ್ಕಾಗಿ ಪ್ರಯತ್ನಪಡು.

15 ע ಯೆಹೋವನು ನೀತಿವಂತರನ್ನು ಕಟಾಕ್ಷಿಸುತ್ತಾನೆ;
ಅವರು ಮೊರೆಯಿಡುವಾಗ ಕಿವಿಗೊಡುತ್ತಾನೆ.
16 פ ಕೆಡುಕರಿಗೋ ಯೆಹೋವನು ಕೋಪದ ಮುಖ
ವುಳ್ಳವನಾಗಿರುವನು;
ಲೋಕದಲ್ಲಿ ಅವರ ನೆನಪೇ ಉಳಿಯದಂತೆ ತೆಗೆದು
ಹಾಕುವನು.
17 צ ಯೆಹೋವನು ನೀತಿವಂತರ ಕೂಗನ್ನು ಕೇಳಿ
ಎಲ್ಲಾ ಕಷ್ಟಗಳಿಂದ ಅವರನ್ನು ಬಿಡಿಸುತ್ತಾನೆ.
18 ק ಮುರಿದ ಮನಸ್ಸುಳ್ಳವರಿಗೆ ಯೆಹೋವನು ನೆರ
ವಾಗುತ್ತಾನೆ;
ಕುಗ್ಗಿಹೋದವರನ್ನು ಉದ್ಧಾರಮಾಡುತ್ತಾನೆ.
19 ר ನೀತಿವಂತನಿಗೆ ಸಂಭವಿಸುವ ಕಷ್ಟಗಳು ಅನೇಕ
ವಿದ್ದರೂ
ಯೆಹೋವನು ಅವೆಲ್ಲವುಗಳಿಂದ ಅವನನ್ನು ಬಿಡಿಸು
ತ್ತಾನೆ.
20 ש ಆತನು ಅವನ ಎಲುಬುಗಳನ್ನೆಲ್ಲಾ ಕಾಪಾಡು
ತ್ತಾನೆ;
ಅವುಗಳಲ್ಲಿ ಒಂದಾದರೂ ಮುರಿದುಹೋಗುವದಿಲ್ಲ.
21 ת ದುಷ್ಟನ ಕೆಡುಕು ಅವನನ್ನೇ ಕೊಲ್ಲುವದು;
ನೀತಿವಂತನನ್ನು ದ್ವೇಷಿಸುವವರು ಅಪರಾಧಿಗಳೆಂದು
ಎಣಿಸಲ್ಪಡುವರು.
22 ಯೆಹೋವನು ತನ್ನ ಸೇವಕರ ಪ್ರಾಣವನ್ನು ವಿಮೋ
ಚಿಸುತ್ತಾನೆ;
ಆತನ ಆಶ್ರಿತರಲ್ಲಿ ಒಬ್ಬರಾದರೂ ಅಪರಾಧಿಯೆಂದು
ಎಣಿಸಲ್ಪಡುವದಿಲ್ಲ.

ಅಕಾರಣವೈರಿಗಳಿಂದ ಬಿಡಿಸಬೇಕೆಂಬದು. (ಕೀರ್ತನೆ 7.)
ದಾವೀದನ ಕೀರ್ತನೆ.

**35** ಯೆಹೋವನೇ, ನನ್ನ ಸಂಗಡ ವ್ಯಾಜ್ಯವಾಡುವವ
ರೊಡನೆ ವ್ಯಾಜ್ಯವಾಡು;
ನನ್ನ ಮೇಲೆ ಯುದ್ಧಮಾಡುವವರ ಸಂಗಡ ಯುದ್ಧ
ಮಾಡು.
2 ಖೇಡ್ಯಗುರಾಣಿಗಳನ್ನು ಹಿಡಿದುಕೊಂಡು ನನಗೆ ಸಹಾ
ಯಕನಾಗಿ ನಿಲ್ಲು.
3 ನೀನು ಭಲ್ಲೆಯನ್ನೂ ಯುದ್ಧದ ಕೊಡಲಿಯನ್ನೂ ಹಿಡಿ
ದು ನನ್ನನ್ನು ಹಿಂದಟ್ಟುವ ವೈರಿಗಳನ್ನು ಪ್ರತಿಭಟಿಸು;
ನಾನೇ ನಿನ್ನನ್ನು ರಕ್ಷಿಸುವೆನೆಂದು ಅಭಯಕೊಡು.
4 ನನ್ನ ಪ್ರಾಣವನ್ನು ತೆಗೆಯಬೇಕೆಂದಿರುವವರು ಆಶಾ
ಭಂಗಪಟ್ಟು ಅವಮಾನಹೊಂದಲಿ;
ನನಗೆ ಕೇಡನ್ನು ಯೋಚಿಸುವವರು ಮಾನಭಂಗ
ದಿಂದ ಹಿಂದಿರುಗಿ ಓಡಲಿ.
5 ಅವರು ಗಾಳಿ ಹಾರಿಸುವ ಹೊಟ್ಟಿನಂತಾಗಲಿ;
ಯೆಹೋವನ ದೂತನು ಅವರನ್ನು ನೂಕಿಬಿಡಲಿ.
6 ಕತ್ತಲೆಯೂ ಜಾರಿಕೆಯೂ ಇರುವ ದಾರಿಯಲ್ಲಿ
ಯೆಹೋವನ ದೂತನು ಅವರನ್ನು ಹಿಂದಟ್ಟಲಿ.
7 ಅವರು ನಿಷ್ಕಾರಣವಾಗಿ ನನಗೆ ಬಲೆಯೊಡ್ಡಿದ್ದಾರೆ;
ಅಕಾರಣವಾಗಿ ನನ್ನ ಪ್ರಾಣವನ್ನು ತೆಗೆಯಬೇಕೆಂ
ಗುಂಡಿಯನ್ನು ತೋಡಿದ್ದಾರೆ.
8 ಅವನಿಗೆ ನಾಶನವು ಅಕಸ್ಮಾತ್ತಾಗಿ ಬರಲಿ;
ತಾನು ಒಡ್ಡಿದ ಬಲೆಯಲ್ಲಿ ತಾನೇ ಸಿಕ್ಕಿಬೀಳಲಿ.
ತಾನು ತೋಡಿದ ಕುಣಿಯಲ್ಲಿ ತಾನೇ ಬಿದ್ದುಹೋಗ
9 ಆಗ ನನ್ನ ಮನಸ್ಸಿಗೆ ಯೆಹೋವನ ದೆಸೆಯಿಂ
ಹರ್ಷವುಂಟಾಗುವದು;
ಆತನಿಂದಾದ ರಕ್ಷಣೆಯ ನಿಮಿತ್ತ ಆನಂದಪಡುವೆನ
10 ಯೆಹೋವನೇ, ಕುಗ್ಗಿದವನನ್ನು ಬಲಾತ್ಕಾ
ಯಿಂದಲೂ
ದಿಕ್ಕಿಲ್ಲದ ಬಡವನನ್ನು ಸೂರೆಮಾಡುವವನಿಂದಲ
ತಪ್ಪಿಸಿ ರಕ್ಷಿಸುವಾತನೇ,
ನಿನಗೆ ಸಮಾನರು ಯಾರಿದ್ದಾರೆಂದು ನನ್ನ ಎಲುಬ
ಗಳೆಲ್ಲಾ ಹೇಳುವವು.

11 ನ್ಯಾಯವಿರುದ್ಧಸಾಕ್ಷಿಗಳು ನನಗೆ ವಿರೋಧವಾಗಿ ಎ
ದ್ದಾರೆ;
ನಾನರಿಯದ ಸಂಗತಿಗಳ ವಿಷಯದಲ್ಲಿ ನನ್ನನ
ವಿಚಾರಿಸುತ್ತಾರೆ.
12 ಅವರು ಉಪಕಾರಕ್ಕೆ ಅಪಕಾರವನ್ನೇ ಮಾ
ತ್ತಾರೆ;
ನಾನು ದಿಕ್ಕಿಲ್ಲದವನಾದೆನು.
13 ನಾನಾದರೋ ಅವರ ಅಸ್ವಸ್ಥಕಾಲದಲ್ಲಿ ಗೋ
ತಟ್ಟನ್ನೇ ಕಟ್ಟಿಕೊಂಡಿದ್ದೆನು;
ಉಪವಾಸದಿಂದ ನನ್ನ ಆತ್ಮವನ್ನು ನೋಯಿಸಿದೆನ
ನನ್ನ ಪ್ರಾರ್ಥನೆಯು ನನ್ನ ಎದೆಗೆ ತಿರುಗಿತು.
14 ಅಸ್ವಸ್ಥನಾದವನನ್ನು ಸ್ನೇಹಿತನೂ ಅಣ್ಣನೂ ಎಂದ
ಭಾವಿಸಿ ನಡೆದುಕೊಂಡೆನು;
ತಾಯಿ ಸತ್ತದ್ದಕ್ಕಾಗಿ ದುಃಖಿಸುವವನಂತೆ ನಾನ
ತಲೆಬಾಗಿ ಅಳುತ್ತಿದ್ದೆನು.
15 ಆದರೂ ನನಗೆ ಆಪತ್ತು ಬಂದಾಗ ಅವರು ಸಂತೋ
ಷಿಸುತ್ತಾ ಕೂಡಿಕೊಂಡರು;
ಅಕಾರಣವಾಗಿ ಈ ಭ್ರಷ್ಟರು ನನಗೆ ವಿರೋಧವಾ
ಕೂಡಿಕೊಂಡು ಸೂರೆಮಾಡುವದನ್ನು ಬಿಡಲೇ ಇಲ್ಲ
16 ದೋಸೆಗೋಸ್ಕರ ಗೇಲಿಮಾಡುವ ಮೂರ್ಖರ ಸಂಗ
ನನ್ನ ಮೇಲೆ ಹಲ್ಲುಕಡಿಯುತ್ತಾರೆ.
17 ಕರ್ತನೇ, ಇನ್ನೆಷ್ಟರ ವರೆಗೆ ಸುಮ್ಮನೆ ನೋಡುತ್ತಾ
ಇರುವಿ? ಅವರ ಅಪಾಯದಿಂದ ನನ್ನ ಪ್ರಾಣವನ್ನು
ಬಿಡಿಸು;
ನನ್ನ ಪರಮಪ್ರಿಯಪ್ರಾಣವನ್ನು ಆ ಸಿಂಹಗಳ ಬಾಯಿ
ಸಿಕ್ಕದಂತೆ ತಪ್ಪಿಸು.
18 ಆಗ ನಾನು ಮಹಾಸಭೆಯಲ್ಲಿ ನಿನ್ನನ್ನು ಕೊಂಡ
ಡುವೆನು;
ಬಹುಜನರ ಮುಂದೆ ಸ್ತುತಿಸುವೆನು.

19 ನಿರ್ನಿಮಿತ್ತವಿರೋಧಿಗಳು ನನ್ನ ವಿಷಯದಲ್ಲಿ ಹಿಗ್ಗು
ವದಕ್ಕೆ ಅವಕಾಶಕೊಡಬೇಡ;
ನಿಷ್ಕಾರಣವೈರಿಗಳ ಕಣ್ಣುಸನ್ನೆಗೆ ಆಸ್ಪದಕೊ
ಬೇಡ.
20 ಅವರ ಮಾತುಗಳು ಸಮಾಧಾನಕರವಾದವುಗಳಲ್ಲ

ದೇಶದ ಸಾಧುಜನರನ್ನು ಕೆಡಿಸುವದಕ್ಕೆ ಮೋಸವನ್ನು ಕಲ್ಪಿಸುತ್ತಾರೆ.
21 ಅವರು ನನ್ನನ್ನು ನೋಡಿ ಬಾಯಿಕಿಸಿದು—
ಆಹಾ, ಆಹಾ, ನಮ್ಮ ಕಣ್ಣು ಕಂಡಿತಲ್ಲಾ ಅನ್ನುತ್ತಾರೆ.
22 ಯೆಹೋವನೇ, ನೀನೇ ನೋಡಿದಿಯಲ್ಲವೇ; ಸುಮ್ಮನಿರಬೇಡ;
ನನ್ನ ಒಡೆಯನೇ, ನನಗೆ ದೂರವಾಗಿರುವದೇಕೆ?
23 ನನ್ನ ದೇವರೇ, ಎದ್ದು ನನಗಾಗಿ ನ್ಯಾಯವನ್ನು ನಿರ್ಣಯಿಸು;
ನನ್ನ ಕರ್ತನೇ, ಎಚ್ಚತ್ತು ನನ್ನ ವಿವಾದವನ್ನು ವಿಚಾರಿಸು.
24 ಯೆಹೋವನೇ, ನನ್ನ ದೇವರೇ, ನಿನ್ನ ನೀತಿಗನುಸಾರವಾಗಿ ನನಗೆ ತೀರ್ಪುಕೊಡು;
ನನ್ನ ವಿಷಯದಲ್ಲಿ ಹಿಗ್ಗುವದಕ್ಕೆ ಶತ್ರುಗಳಿಗೆ ಆಸ್ಪದವಿರಬಾರದು.
25 ಆಹಾ, ನಮ್ಮ ಆಶೆ ನೆರವೇರಿತು ಅಂದುಕೊಳ್ಳುವದಕ್ಕೆ ಅವರಿಗೆ ಅವಕಾಶವಿರಬಾರದು;
ಅವನನ್ನು ನುಂಗಿಬಿಟ್ಟಿದ್ದೇವೆಂದು ಅವರು ಕೊಚ್ಚಿಕೊಳ್ಳಬಾರದು.
26 ನನ್ನ ಕೇಡಿನಲ್ಲಿ ಹಿಗ್ಗುವವರೆಲ್ಲರು ಆಶಾಭಂಗಪಟ್ಟು ಅವಮಾನಹೊಂದಲಿ;
ನನ್ನನ್ನು ಹೀಯಾಳಿಸಿ ಆತ್ಮಸ್ತುತಿಮಾಡಿಕೊಳ್ಳುವವರು ಮಾನಭಂಗವನ್ನೂ ದುಷ್ಕೀರ್ತಿಯನ್ನೂ ಹೊದ್ದುಕೊಳ್ಳಲಿ.
27 ನನ್ನ ನ್ಯಾಯಸ್ಥಾಪನೆಯನ್ನು ಬಯಸುವವರು ಆನಂದದೊಡನೆ ಜಯಧ್ವನಿಮಾಡಲಿ;
ತನ್ನ ಸೇವಕನ ಹಿತವನ್ನು ಕೋರುವ ಯೆಹೋವನಿಗೆ ಸ್ತೋತ್ರ ಎಂದು ಯಾವಾಗಲೂ ಹೇಳುವವರಾಗಲಿ.
28 ನನ್ನ ನಾಲಿಗೆಯು ನಿನ್ನ ನೀತಿಯನ್ನೂ ಮಹಿಮೆಯನ್ನೂ ದಿನವೆಲ್ಲಾ ವರ್ಣಿಸುವದು.

ದುಷ್ಟರ ದುರ್ಲಕ್ಷಣ, ದೇವರ ಮಹಾಪ್ರೀತಿ ಇವುಗಳನ್ನು ವಿವರಿಸುವ ಕೀರ್ತನೆ.

ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು; ಯೆಹೋವನ ಸೇವಕನಾದ ದಾವೀದನ ಕೀರ್ತನೆ.

36 ಪಾಪವು ದುಷ್ಟನ ಮನಸ್ಸಿನೊಳಗೆ ನುಡಿಯುತ್ತಿರುವದರಿಂದ
ಅವನ ಕಣ್ಣೆದುರಿಗೆ ದೇವರ ಭಯವೇ ಇಲ್ಲ.
2 ಅದು ಅವನನ್ನು ವಂಚಿಸಿ—ನಿನ್ನ ತಪ್ಪು ಬೈಲಿಗೆ ಬರುವದಿಲ್ಲ.
ಹೇಯವಾಗುವದಿಲ್ಲ ಎಂದು ಊದಿಬಿಡುತ್ತದೆ.
3 ಅವನ ಬಾಯಿಂದ ಕೆಡುಕೂ ವಂಚನೆಯೂ ಬರುತ್ತವೆ;
ವಿವೇಕಮಾರ್ಗವನ್ನೂ ಪರಹಿತವನ್ನೂ ಬಿಟ್ಟೇಬಿಟ್ಟಿದ್ದಾನೆ.
4 ಹಾಸಿಗೆಯ ಮೇಲೆ ಇರುವಾಗಲೂ ಕೆಡುಕನ್ನೇ ಯೋಚಿಸುತ್ತಿರುವನು;
ಅಲ್ಲದ ದಾರಿಯಲ್ಲಿ ನಿಂತುಕೊಂಡಿದ್ದಾನೆ; ಎಂಥ ದುಷ್ಕೃತ್ಯಕ್ಕೂ ಹೇಸುವದಿಲ್ಲ.

5 ಯೆಹೋವನೇ, ನಿನ್ನ ಪ್ರೀತಿಯು ಆಕಾಶದಷ್ಟು ಉನ್ನತವಾಗಿದೆ;
ನಿನ್ನ ನಂಬಿಗಸ್ತಿಕೆಯು ಮೇಘಮಾರ್ಗವನ್ನು ಮುಟ್ಟುತ್ತದೆ.
6 ನಿನ್ನ ನೀತಿಯು ದಿವ್ಯಪರ್ವತಗಳಂತೆಯೂ
ನಿನ್ನ ನ್ಯಾಯವು ಮಹಾಸಾಗರದಂತೆಯೂ ಇವೆ;
ಯೆಹೋವನೇ, ನೀನು ಮನುಷ್ಯರನ್ನೂ ಮೃಗಗಳನ್ನೂ ಸಂರಕ್ಷಿಸುತ್ತೀ.
7 ದೇವರೇ, ನಿನ್ನ ಪ್ರೀತಿ ಎಷ್ಟೋ ಅಮೂಲ್ಯವಾದದ್ದು;
ಮಾನವರು ನಿನ್ನ ರೆಕ್ಕೆಗಳ ಮರೆಯನ್ನು ಆಶ್ರಯಿಸಿಕೊಳ್ಳುತ್ತಾರೆ.
8 ನಿನ್ನ ಮಂದಿರದ ಸಮೃದ್ಧಿಯಿಂದ ಅವರನ್ನು ಸಂತೃಪ್ತಿಪಡಿಸುತ್ತೀ;
ನಿನ್ನ ಸಂಭ್ರಮಪ್ರವಾಹದಲ್ಲಿ ಅವರಿಗೆ ಪಾನಮಾಡಿಸುತ್ತೀ.
9 ನಿನ್ನ ಬಳಿಯಲ್ಲಿ ಜೀವದ ಬುಗ್ಗೆ ಉಂಟಲ್ಲಾ;
ನಿನ್ನ ತೇಜಸ್ಸು ನಮಗೆ ಬೆಳಕು ಕೊಡುತ್ತದೆ.

10 ನಿನ್ನನ್ನು ಅರಿತವರಿಗೆ ನಿನ್ನ ಪ್ರೀತಿಯನ್ನು ಯಾವಾಗಲೂ ದಯಪಾಲಿಸು;
ಯಥಾರ್ಥಚಿತ್ತರಿಗೆ ನಿನ್ನ ನ್ಯಾಯವನ್ನು ನಿರಂತರವೂ ಅನುಗ್ರಹಿಸು.
11 ಗರ್ವಿಷ್ಠರ ಕಾಲಕೆಳಗೆ ನಮ್ಮನ್ನು ಬೀಳಲೀಸಬೇಡ;
ದುರ್ಜನರಿಂದ ನಾವು ದೇಶಭ್ರಷ್ಟರಾಗದಂತೆ ಮಾಡು.
12 ಇಗೋ, ಕೆಡುಕರು ಕೆಡವಲ್ಪಟ್ಟು ಏಳಲಾರದೆ ಬಿದ್ದಿದ್ದಾರೆ.

ದುಷ್ಟರ ಸಂಪತ್ತಿನಲ್ಲಿ ಸದ್ಭಕ್ತರು ನಂಬಿಕೆಯಿಂದಲೇ ಇರಬೇಕೆಂದು ಬೋಧಿಸುವ ಇಬ್ರಿಯ ಅಕ್ಷರಕ್ರಮಾನುಸಾರವಾದ ಕೀರ್ತನೆ.
(ಕೀರ್ತನೆ 39; 73.)

ದಾವೀದನ ಕೀರ್ತನೆ.

37 א ಕೆಟ್ಟ ನಡತೆಯುಳ್ಳವರನ್ನು ನೋಡಿ ಉರಿಗೊಳ್ಳಬೇಡ;
ದುರಾಚಾರಿಗಳಿಗೋಸ್ಕರ ಹೊಟ್ಟೆಕಿಚ್ಚುಪಡಬೇಡ.
2 ಅವರು ಹುಲ್ಲಿನಂತೆ ಬೇಗ ಒಣಗಿಹೋಗುವರು;
ಸೊಪ್ಪಿನ ಪಲ್ಯದಂತೆ ಬಾಡಿಹೋಗುವರು.
3 ב ಯೆಹೋವನಲ್ಲಿ ಭರವಸವಿಟ್ಟು ಒಳ್ಳೆಯದನ್ನು ಮಾಡು;
ದೇಶದಲ್ಲಿ ವಾಸವಾಗಿದ್ದು ನಂಬಿಕೆಯನ್ನು ಅನುಸರಿಸು.
4 ಆಗ ಯೆಹೋವನಲ್ಲಿ ಸಂತೋಷಿಸುವಿ;
ಮತ್ತು ಅತನು ನಿನ್ನ ಇಷ್ಟಾರ್ಥಗಳನ್ನು ನೆರವೇರಿಸುವನು.
5 ג ನಿನ್ನ ಭೂಯಾತ್ರೆಯ ಚಿಂತೆಯನ್ನು ಯೆಹೋವನಿಗೆ ವಹಿಸಿಬಿಟ್ಟು ಭರವಸದಿಂದಿರು;
ಆತನೇ ಅದನ್ನು ಸಾಗಿಸುವನು.

6 ಆತನು ನಿನ್ನ ನೀತಿಯನ್ನು ಉದಯದ ಬೆಳಕಿನಂತೆ
ಯೂ
ನಿನ್ನ ನ್ಯಾಯವನ್ನು ಮಧ್ಯಾಹ್ನದ ತೇಜಸ್ಸಿನಂತೆಯೂ
ಪ್ರಕಾಶಗೊಳಿಸುವನು.
7 ד ಯೆಹೋವನ ಸನ್ನಿಧಿಯಲ್ಲಿ ಶಾಂತನಾಗಿ ಆತನಿ
ಗೋಸ್ಕರ ಕಾದಿರು;
ಕುಯುಕ್ತಿಗಳನ್ನು ನೆರವೇರಿಸಿಕೊಂಡು ಅಭಿವೃದ್ಧಿ
ಹೊಂದುವವನನ್ನು ನೋಡಿ ಉರಿಗೊಳ್ಳಬೇಡ.
8 ה ಕೋಪವನ್ನು ಅಣಗಿಸಿಕೋ; ರೋಷವನ್ನು
ಬಿಡು.
ಉರಿಗೊಳ್ಳಬೇಡ; ಕೆಡುಕಿಗೆ ಕಾರಣವಾದೀತು.
9 ಕೆಡುಕರು ತೆಗೆದುಹಾಕಲ್ಪಡುವರು;
ಯೆಹೋವನನ್ನು ನಿರೀಕ್ಷಿಸುವವರೇ ದೇಶವನ್ನು ಅನು
ಭವಿಸುವರು.
10 ו ಇನ್ನು ಸ್ವಲ್ಪಕಾಲದೊಳಗೆ ದುಷ್ಟನು ಕಾಣಿಸದೆ
ಹೋಗುವನು;
ಅವನಿದ್ದ ಸ್ಥಳದಲ್ಲಿ ಎಷ್ಟು ವಿಚಾರಿಸಿದರೂ ಅವನು
ಸಿಕ್ಕುವದೇ ಇಲ್ಲ.
11 ಆದರೆ ದೀನರು ದೇಶವನ್ನು ಅನುಭವಿಸುವರು;
ಅವರು ಮಹಾಸೌಖ್ಯದಿಂದ ಆನಂದಿಸುವರು.

12 ז ದುಷ್ಟನು ನೀತಿವಂತನಿಗೆ ವಿರೋಧವಾಗಿ ಆಲೋಚಿಸು
ತ್ತಾನೆ;
ಅವನನ್ನು ನೋಡಿ ಹಲ್ಲುಕಡಿಯುತ್ತಾನೆ.
13 ಆದರೆ ಕರ್ತನು ಅವನಿಗೆ ಶಿಕ್ಷಾಕಾಲ ಬರುತ್ತದೆಂದು
ನಗುತ್ತಾನೆ.
14 ח ದುಷ್ಟರು ದೀನದರಿದ್ರರನ್ನು ಕಡಿದುಬಿಡಬೇಕೆಂದು
ಕತ್ತಿಯನ್ನು ಹಿರಿದಿದ್ದಾರೆ;
ಯಥಾರ್ಥರನ್ನು ಕೊಂದುಹಾಕಬೇಕೆಂದು ಬಿಲ್ಲನ್ನು
ಎತ್ತಿದ್ದಾರೆ.
15 ಆದರೆ ಅವರ ಕತ್ತಿ ಅವರ ಎದೆಯನ್ನೇ ಇರಿದುಬಿಡು
ವದು;
ಅವರ ಬಿಲ್ಲುಗಳು ಸಿಡಿದು ಮುರಿದುಹೋಗುವವು.
16 ט ದುಷ್ಟರ ಮಹಾಸಮೃದ್ಧಿಗಿಂತಲೂ ನೀತಿವಂತನ
ಬಡತನವೇ ಲೇಸು.
17 ದುಷ್ಟರ ತೋಳುಗಳು ಮುರಿದುಹೋಗುವವು;
ನೀತಿವಂತರನ್ನು ಯೆಹೋವನೇ ಉದ್ಧರಿಸುವನು.
18 י ಯೆಹೋವನು ಸದ್ಭಕ್ತರ ಜೀವಮಾನವನ್ನು ಲಕ್ಷಿ
ಸುತ್ತಾನೆ;
ಅವರ ಸ್ವಾಸ್ತ್ಯವು ಶಾಶ್ವತವಾಗಿ ನಿಲ್ಲುವದು.
19 ಅವರಿಗೆ ವಿಪತ್ಕಾಲದಲ್ಲಿಯೂ ಆಶಾಭಂಗವಾಗುವದಿಲ್ಲ;
ಬರಗಾಲದಲ್ಲಿಯೂ ಅವರಿಗೆ ಕೊರತೆಯಿಲ್ಲ.
20 כ ದುಷ್ಟರೋ ನಾಶವಾಗಿ ಹೋಗುವರು;
ಯೆಹೋವನ ವೈರಿಗಳು ಹುಲ್ಲುಗಾವಲುಗಳ ಸೊಗ
ಸಿನಂತಿದ್ದು ಮಾಯವಾಗುವರು.
ಅವರು ಹಬೆಯಂತೆ ತೋರಿ ಅಡಗಿಹೋಗುವರು.
21 ל ದುಷ್ಟನು ಸಾಲಮಾಡಿಕೊಂಡು ತೀರಿಸಲಾರದೆ
ಹೋಗುವನು;
ನೀತಿವಂತನು ಪರೋಪಕಾರಿಯಾಗಿ ಧರ್ಮಕೊಡು
ವನು.

22 ಯೆಹೋವನ ಆಶೀರ್ವಾದವು ಯಾರಿಗಿರುವದೋ
ಅವರು ದೇಶವನ್ನು ಅನುಭವಿಸುವರು;
ಆತನ ಶಾಪವು ಯಾರಿಗಿರುವದೋ ಅವರು ತೆಗೆದ
ಹಾಕಲ್ಪಡುವರು.

23 מ ಸತ್ಪುರುಷನ ಗತಿಸ್ಥಾಪನೆಯು ಯೆಹೋವನಿಂದಲ
ಆಗಿದೆ,
ಆತನು ಅವನ ಪ್ರವರ್ತನೆಯನ್ನು ಮೆಚ್ಚುತ್ತಾನೆ.
24 ಅವನು ಕೆಳಗೆ ಬಿದ್ದರೂ ಏಳದೆ ಹೋಗುವದಿಲ್ಲ;
ಯೆಹೋವನು ಅವನನ್ನು ಕೈಹಿಡಿದು ಉದ್ಧಾರಮಾಡ
ವನು.
25 נ ನಾನು ಬಾಲಕನಾಗಿದ್ದೆನು, ಈಗ ವೃದ್ಧನಾಗಿದ್ದೇನ
ಈ ವರೆಗೂ ನೀತಿವಂತನು ದಿಕ್ಕಿಲ್ಲದೆ ಬಿದ್ದಿರುವ
ನ್ನಾಗಲಿ
ಅವನ ಸಂತತಿಯವರು ಭಿಕ್ಷಬೇಡಿ ತಿನ್ನುವದನ್ನಾಗ
ನೋಡಲಿಲ್ಲ.
26 ಅವನು ಯಾವಾಗಲೂ ಧರ್ಮಿಷ್ಠನಾಗಿ ಹಣಸಹಾಂ
ವನ್ನು ಮಾಡುತ್ತಾನೆ;
ಅವನ ಸಂತತಿಯವರು ಆಶೀರ್ವಾದಹೊಂದುವರು.
27 ס ಕೆಟ್ಟದ್ದಕ್ಕೆ ಹೋಗದೆ ಒಳ್ಳೆಯದನ್ನೇ ಮಾಡ
ಆಗ ನೀನು ಯಾವಾಗಲೂ [ದೇಶದಲ್ಲಿ] ವಾಸವಾ
ರುವಿ.
28 ಯೆಹೋವನು ನ್ಯಾಯವನ್ನು ಮೆಚ್ಚುವವನು; ತ
ಭಕ್ತರನ್ನು ಎಂದಿಗೂ ಕೈಬಿಡುವವನಲ್ಲ.
ע ಅವರು ಸದಾಕಾಲವೂ ಸುರಕ್ಷಿತರಾಗಿರುವರು.
ದುಷ್ಟರ ಸಂತತಿ ತೆಗೆದುಹಾಕಲ್ಪಡುವದು.
29 ನೀತಿವಂತರೋ ದೇಶವನ್ನು ಅನುಭವಿಸುವವರಾಗಿ
ಅದರಲ್ಲಿ ಶಾಶ್ವತವಾಗಿ ವಾಸಿಸುವರು.
30 פ ನೀತಿವಂತನ ಬಾಯಿಯು ಸುಜ್ಞಾನವನ್ನು ನು
ಯುತ್ತದೆ;
ಅವನ ನಾಲಿಗೆ ನ್ಯಾಯವನ್ನೇ ಹೇಳುತ್ತದೆ.
31 ದೇವರ ಧರ್ಮೋಪದೇಶವು ಅವನ ಹೃದಯದಲ್ಲಿ
ವದು; ಅವನು ಜಾರುವದೇ ಇಲ್ಲ.

32 צ ದುಷ್ಟನು ಹೊಂಚುಹಾಕಿ ನೀತಿವಂತನನ್ನು ಕೊ
ಬೇಕೆಂದು ಸಮಯನೋಡುತ್ತಾನೆ.
33 ಆದರೆ ಯೆಹೋವನು ಅವನನ್ನು ಸಿಕ್ಕಗೊಡಿಸುವದಿ
ಅವನನ್ನು ನ್ಯಾಯವಿಚಾರಣೆಯಲ್ಲಿ ಅಪರಾಧಿಯೆಂ
ಎಣಿಸುವದಿಲ್ಲ.
34 ק ಯೆಹೋವನನ್ನು ನಿರೀಕ್ಷಿಸುವವನಾಗಿ ಆ
ಮಾರ್ಗವನ್ನೇ ಅನುಸರಿಸು;
ಆಗ ಆತನು ನಿನ್ನನ್ನು ಮುಂದಕ್ಕೆ ತಂದು ದೇಶವ
ಅನುಭವಿಸುವಂತೆ ಮಾಡುವನು;
ದುಷ್ಟರು ತೆಗೆದುಹಾಕಲ್ಪಡುವದನ್ನು ನೀನು ನ
ಡುವಿ.
35 ר ದುಷ್ಟನು ಭೀಕರನಾಗಿ
ಸ್ವಸ್ಥಳದಲ್ಲಿ ಹಸುರಾಗಿ ಬೆಳೆದ ಮರದಂತೆ ವಿಸ್ತ
ಕೊಂಡಿರುವದನ್ನು ನೋಡಿದ್ದೆನು.
36 ತರುವಾಯ ನಾನು ಆ ದಾರಿಯಲ್ಲಿ ಹೋಗಿ ನೋ
ಲಾಗಿ ಅವನು ಇಲ್ಲದೆ ಹೋಗಿದ್ದನು;

ಅವನನ್ನು ಹುಡುಕಿದರೂ ಸಿಕ್ಕಲೇ ಇಲ್ಲ.
37 ש ಒಳ್ಳೇ ನಡತೆಯುಳ್ಳವನನ್ನು ನೋಡು, ಯಥಾ
ರ್ಥನನ್ನು ಲಕ್ಷಿಸು;
ಶಾಂತನಿಗೆ ಸಂತಾನವೃದ್ಧಿ ಆಗುವದು.
38 ದ್ರೋಹಿಗಳೆಲ್ಲರೂ ನಾಶವಾಗುವರು;
ದುಷ್ಟರ ಸಂತಾನವು ತೆಗೆದುಹಾಕಲ್ಪಡುವದು.
39 ת ನೀತಿವಂತರ ರಕ್ಷಣೆ ಯೆಹೋವನಿಂದಲೇ;
ಇಕ್ಕಟ್ಟಿನಲ್ಲಿ ಆತನೇ ಅವರಿಗೆ ದುರ್ಗಸ್ಥಾನ.
40 ಯೆಹೋವನು ಸಹಾಯಕನಾಗಿ ಅವರನ್ನು ತಪ್ಪಿಸಿ
ಬಿಡುವನು;
ಅವರು ಆತನ ಆಶ್ರಿತರಾದ್ದರಿಂದ ದುಷ್ಟರ ಕೈಯಿಂದ
ತಪ್ಪಿಸಿ ರಕ್ಷಿಸುವನು.

ದುರವಸ್ಥೆಯಲ್ಲಿರುವ ಭಕ್ತನು ದೇವರ ಸಹಾಯವನ್ನು
ಬೇಡಿಕೊಳ್ಳುವದು. (ಕೀರ್ತನೆ 6; ಪ್ರಲಾಪ 3.)
ದಾವೀದನ ಕೀರ್ತನೆ; ಜ್ಞಾಪಕಾರ್ಥನೈವೇದ್ಯ ಸಮರ್ಪಣೆಯಲ್ಲಿ
ಹಾಡತಕ್ಕದ್ದು. (ಯಾಜಕ 2. 2; 6. 15; 24. 7, 8.)

**38** ಯೆಹೋವನೇ, ಕೋಪದಿಂದ ನನ್ನನ್ನು ಶಿಕ್ಷಿಸ
ಬೇಡ;
ರೋಷದಿಂದ ದಂಡಿಸಬೇಡ.
2 ನಿನ್ನ ಬಾಣಗಳು ನನ್ನೊಳಗೆ ಹೊಕ್ಕಿವೆ;
ನಿನ್ನ ಶಿಕ್ಷಾಹಸ್ತವು ನನ್ನ ಮೇಲೆ ಭಾರವಾಗಿದೆ.
3 ನಿನ್ನ ಸಿಟ್ಟಿನಿಂದ ನನ್ನ ಶರೀರದಲ್ಲಿ ಸ್ವಸ್ಥವೇ ತಪ್ಪಿ
ಹೋಗಿದೆ;
ನನ್ನ ಪಾಪದಿಂದ ನನ್ನ ಎಲುಬುಗಳಲ್ಲಿ ಸ್ವಲ್ಪವೂ
ಕ್ಷೇಮವಿಲ್ಲ.
4 ನನ್ನ ಅಪರಾಧಗಳು ನನ್ನನ್ನು ಮುಣುಗಿಸಿಬಿಟ್ಟವೆ;
ಅವು ಹೊರಲಾರದಷ್ಟು ಭಾರವಾದ ಹೊರೆಯಂತೆ ನನ್ನ
ನ್ನು ಅದಿಮಿಬಿಟ್ಟವೆ.
5 ನನ್ನ ಮೂರ್ಖತನದ ಫಲವಾದ ಬಾಸುಂಡೆಗಳು
ಕೀವು ಸೋರಿ ದುರ್ವಾಸನೆಯಾಗಿವೆ.
6 ನಾನು ಬಹಳವಾಗಿ ಬಾಗಿ ಕುಗ್ಗಿದ್ದೇನೆ;
ಯಾವಾಗಲೂ ದುಃಖದಿಂದ ವಿಕಾರಿಯಾಗಿ ಅಲೆಯು
ತ್ತೇನೆ.
7 ನನ್ನ ಸೊಂಟಕ್ಕೆ ಉರಿಬಡಿದಂತಿದೆ;
ನನ್ನ ದೇಹದಲ್ಲಿ ಸ್ವಲ್ಪವಾದರೂ ಕ್ಷೇಮವಿಲ್ಲ.
8 ನನಗೆ ಜೋಮುಹಿಡಿದಂತಿದೆ; ಬಹಳ ಮನಗುಂದಿದವ
ನಾದೆನು.
ಹೃದಯದ ಸಂಕಟದ ದೆಸೆಯಿಂದ ಅರಚಿಕೊಳ್ಳುತ್ತಾ
ಇದ್ದೇನೆ.

9 ಕರ್ತನೇ, ನನ್ನ ಅಪೇಕ್ಷೆ ನಿನಗೆ ಗೊತ್ತುಂಟು;
ನನ್ನ ನಿಟ್ಟುಸುರು ನಿನಗೆ ಮರೆಯಾಗಿಲ್ಲ.
10 ನನ್ನ ಗುಂಡಿಗೆ ಒಡುಕೊಳ್ಳುತ್ತದೆ; ನನ್ನ ಚೈತನ್ಯವು
ಕುಗ್ಗಿಹೋಯಿತು;
ನನ್ನ ಕಣ್ಣುಗಳೂ ಮೊಬ್ಬಾಗಿಹೋದವು.
11 ನನ್ನ ಆಪ್ತಸ್ನೇಹಿತರು ನನ್ನ ಜಾಡ್ಯವನ್ನು ನೋಡಿ ಓರೆ
ಯಾಗಿ ಹೋಗುತ್ತಾರೆ;
ನನ್ನ ಬಂಧುಗಳು ದೂರ ನಿಲ್ಲುತ್ತಾರೆ.
12 ನನ್ನ ಪ್ರಾಣವನ್ನು ತೆಗೆಯಬೇಕೆಂಬವರು ನನಗೆ ಉರು
ಲುಗಳನ್ನು ಒಡ್ಡಿದ್ದಾರೆ;
ನನ್ನ ವಿಪತ್ತನ್ನು ಕೋರುವವರು ನನಗೆ ನಾಶನವನ್ನೇ
ನಿಶ್ಚಯಿಸಿಕೊಂಡು
ಯಾವಾಗಲೂ ಮೋಸವನ್ನು ಕಲ್ಪಿಸುತ್ತಿದ್ದಾರೆ.
13 ನಾನಂತೂ ಕಿವುಡನಂತೆ ಕೇಳದವನಾಗಿದ್ದೇನೆ;
ಮೂಕನಂತೆ ಬಾಯಿತೆರೆಯುವದೇ ಇಲ್ಲ.
14 ನಾನು ಕಿವಿಕೇಳಿಸದವನಂತೆಯೂ ಪ್ರತ್ಯುತ್ತರಕೊಡ
ಲಾರದವನಂತೆಯೂ ಆದೆನು.

15 ಯೆಹೋವನೇ, ನಿನ್ನನ್ನೇ ನಿರೀಕ್ಷಿಸಿಕೊಂಡಿದ್ದೇನೆ;
ನನ್ನ ಕರ್ತನೇ, ನನ್ನ ದೇವರೇ, ನೀನೇ ಸದುತ್ತರ
ವನ್ನು ಕೊಡುವವನು.
16 ನನ್ನ ವಿಷಯದಲ್ಲಿ ಶತ್ರುಗಳಿಗೆ ಸಂತೋಷವಾಗಬಾ
ರದು;
ನಾನು ಜಾರಿಬಿದ್ದರೆ ಹಿಗ್ಗುವರಲ್ಲಾ ಅಂದುಕೊಂಡೆನು.
17 ನನಗೆ ಅಪತ್ತೇ ಸಿದ್ಧವಾಗಿದೆ; ಯಾವಾಗಲೂ ನನಗೆ
ಸಂಕಟವದೆ.
18 ನಾನು ಅಪರಾಧಿಯೇ ಹೌದೆಂದು ಒಪ್ಪಿಕೊಳ್ಳುತ್ತೇನೆ;
ನನ್ನ ಪಾಪದ ದೆಸೆಯಿಂದಲೇ ನನಗೆ ವ್ಯಸನವುಂಟಾ
ಯಿತು.
19 ನನ್ನ ಶತ್ರುಗಳು ಚುರುಕಾದವರೂ ಬಲಿಷ್ಠರೂ ಆಗಿ
ದ್ದಾರೆ;
ನನ್ನನ್ನು ಅನ್ಯಾಯವಾಗಿ ದ್ವೇಷಿಸುವವರು ಬಹು
ಮಂದಿ.
20 ಉಪಕಾರಕ್ಕೆ ಪ್ರತಿಯಾಗಿ ಅಪಕಾರಸಲ್ಲಿಸುವವರು
ಒಳ್ಳೆಯದನ್ನು ಅನುಸರಿಸುವ ನನ್ನನ್ನು ಎದುರಿಸು
ತ್ತಾರೆ.

21 ಯೆಹೋವನೇ, ಕೈ ಬಿಡಬೇಡ;
ನನ್ನ ದೇವರೇ, ದೂರವಾಗಿರಬೇಡ.
22 ನನ್ನ ಕರ್ತನೇ, ನನ್ನ ರಕ್ಷಕನೇ,
ಬೇಗ ಬಂದು ಸಹಾಯಮಾಡು.

ಮನುಷ್ಯನ ಅಸ್ಥಿರತ್ವವನ್ನು ದೇವರ ಮುಂದೆ
ಅರಿಕೆಮಾಡುವದು.
ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು;
ಯೆದೂತೂನನ ರಾಗದ ಪ್ರಕಾರ ಹಾಡತಕ್ಕದ್ದು;
ದಾವೀದನ ಕೀರ್ತನೆ.

**39** ನನ್ನ ನಾಲಿಗೆ ಪಾಪಕ್ಕೆ ಹೋಗದಂತೆ ಜಾಗರೂಕ
ನಾಗಿರುವೆನು;
ದುಷ್ಟರು ನನ್ನ ಮುಂದೆ ಇರುವಾಗ ಬಾಯಿಗೆ ಕುಕ್ಕೆ
ಹಾಕಿಕೊಂಡಿರುವೆನು ಅಂದುಕೊಂಡೆನು.
2 ನಾನು ಮೌನವಾಗಿದ್ದೆನು; ಒಳ್ಳೆಯದನ್ನಾದರೂ ಆಡದೆ
ಸುಮ್ಮನಿದ್ದೆನು;
ಆದರೆ ನನ್ನ ಸಂಕಟವು ಹೆಚ್ಚಿತು.
3 ನನ್ನ ಹೃದಯದಲ್ಲಿ ಸಂತಾಪ ಉಕ್ಕಿತು;

ನಾನು ಯೋಚಿಸುತ್ತಿರುವಲ್ಲಿ ಬೆಂಕಿಯುರಿಯಿತು.
ಆಗ ನಾನು ಬಾಯಿ ಬಿಟ್ಟು—
4 ಯೆಹೋವನೇ, ನನಗೆ ಅವಸಾನವುಂಟೆಂದೂ
ನನ್ನ ಜೀವಮಾನವು ಅತ್ಯಲ್ಪವೆಂದೂ
ನಾನು ಎಷ್ಟೋ ಅಸ್ಥಿರನೆಂದೂ ನನಗೆ ತಿಳಿಯಪಡಿಸು.
5 ನನ್ನ ಆಯುಸ್ಸನ್ನು ಗೇಣುದ್ದವಾಗಿ ಮಾಡಿದ್ದೀಯಲ್ಲಾ;
ನನ್ನ ಜೀವಿತಕಾಲ ನಿನ್ನ ಎಣಿಕೆಯಲ್ಲಿ ಏನೂ ಅಲ್ಲ ಅಂದೆನು.
ಮನುಷ್ಯನೆಂಬವನು ಎಷ್ಟು ಸ್ಥಿರನೆಂದು ಕಂಡರೂ ಬರೀ ಉಸಿರೇ. ಸೆಲಾ.

6 ನರರು ನಿಜವಲ್ಲದ ಮಾಯಾರೂಪದಿಂದ ಸಂಚರಿಸುವವರು;
ಅವರು ಸುಮ್ಮಸುಮ್ಮನೆ ಗಡಿಬಿಡಿಮಾಡುವವರು;
ಆಸ್ತಿಯನ್ನು ಕೂಡಿಸಿಟ್ಟುಕೊಳ್ಳುತ್ತಾರೆ.
ಆದರೆ ಅದು ಯಾರ ಪಾಲಾಗುವದೋ ತಾವೇ ತಿಳಿಯರು.

7 ಹೀಗಿರಲಾಗಿ ಕರ್ತನೇ, ಇನ್ನು ಯಾವದಕ್ಕೆ ಕಾದುಕೊಳ್ಳಲಿ?
ನೀನೇ ನನ್ನ ನಿರೀಕ್ಷೆ.
8 ಎಲ್ಲಾ ದ್ರೋಹಗಳಿಂದ ನನ್ನನ್ನು ಬಿಡುಗಡೆಮಾಡು;
ಮೂರ್ಖರ ನಿಂದೆಗೆ ಗುರಿಮಾಡಬೇಡ.
9 ನೀನೇ ಇದನ್ನು ಬರಮಾಡಿದ್ದರಿಂದ
ನಾನು ಏನೂ ಹೇಳದೆ ಮೌನವಾಗಿರುವೆನು.
10 ನಿನ್ನ ದಂಡನೆಯನ್ನು ಪರಿಹರಿಸು;
ನಿನ್ನ ಕೈಹೊಡೆತದಿಂದ ಸಾಯುವ ಹಾಗಿದ್ದೇನಲ್ಲಾ.
11 ನೀನು ನರನನ್ನು ಪಾಪದ ನಿಮಿತ್ತ ಗದರಿಸಿ ಶಿಕ್ಷಿಸುವಾಗ
ಅವನ ಚೆಲುವಿಕೆಯು ನುಸಿಹತ್ತಿತೋ ಎಂಬಂತೆ ಹಾಳಾಗಿ ಹೋಗುತ್ತದೆ.
ಮನುಷ್ಯನೆಂಬವನು ಬರೀ ಉಸಿರೇ. ಸೆಲಾ.

12 ಯೆಹೋವನೇ, ನನ್ನ ಪ್ರಾರ್ಥನೆಯನ್ನು ಲಾಲಿಸು;
ನನ್ನ ಮೊರೆಗೆ ಕಿವಿಗೊಡು.
ನನ್ನ ಕಣ್ಣೀರನ್ನು ನೋಡು, ಸುಮ್ಮನಿರಬೇಡ.
ನನ್ನ ಪೂರ್ವಿಕರಂತೆಯೇ ನಾನು ನಿನ್ನ ಮರೆಹೊಕ್ಕಿರುವ ಪ್ರವಾಸಿಯೂ
ಪರದೇಶದವನೂ ಆಗಿದ್ದೇನಲ್ಲಾ.
13 ನಾನು ಬಿಟ್ಟುಹೋಗಿ ಇಲ್ಲವಾಗುವದಕ್ಕಿಂತ ಮುಂಚೆ ಸ್ವಲ್ಪ ಸಂತೋಷಪಡುವಂತೆ
ನಿನ್ನ ಕೋಪದೃಷ್ಟಿಯನ್ನು ನನ್ನ ಕಡೆಯಿಂದ ತಿರುಗಿಸಿಕೊಳ್ಳಬೇಕು, ದೇವಾ.

ವಿಶೇಷರಕ್ಷಣೆಗಾಗಿ ಯೆಹೋವನನ್ನು ಸ್ತುತಿಸುವದೂ
ಶತ್ರುಗಳಿಂದ ರಕ್ಷಿಸಬೇಕೆಂದು ಪ್ರಾರ್ಥಿಸುವದೂ.
ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು;
ದಾವೀದನ ಕೀರ್ತನೆ.

**40** ನಾನು ಯೆಹೋವನಿಗೋಸ್ಕರ ನಿರೀಕ್ಷಿಸಿಯೇ ನಿರೀಕ್ಷಿಸಿದೆನು;
ಆತನು ನನ್ನ ಮೊರೆಗೆ ಕಿವಿಗೊಟ್ಟು ಲಕ್ಷಿಸಿದನು.
2 ನನ್ನನ್ನು ನಾಶನದ ಗುಂಡಿಯೊಳಗಿಂದ ಎತ್ತಿದನು;
ಕೆಸರಿನೊಳಗಿಂದ ನನ್ನನ್ನು ತೆಗೆದು ಬಂಡೆಯ ಮೆ
ನಿಲ್ಲಿಸಿ
ನಾನು ದೃಢವಾಗಿ ಹೆಜ್ಜೆಯಿಡುವಂತೆ ಮಾಡಿದನು.
3 ಆತನು ನನ್ನ ಬಾಯಲ್ಲಿ ನೂತನಕೀರ್ತನೆಯ
ಹುಟ್ಟಿಸಿದ್ದಾನೆ;
ಅದು ನಮ್ಮ ದೇವರ ಸ್ತೋತ್ರವೇ.
ಆತನ ಮಹತ್ಕಾರ್ಯಗಳನ್ನು ನೋಡಿದ ಅನೇಕ
ಭಯಭಕ್ತಿಯುಳ್ಳವರಾಗಿ ಯೆಹೋವನಲ್ಲಿ ನಂ
ಯಿಡುವರು.

4 ಯಾವನು ಅಹಂಕಾರಿಗಳಲ್ಲಿಯೂ ಸುಳ್ಳನ್ನು ಹಿಂ
ಲಿಸುವವರಲ್ಲಿಯೂ ಸೇರದೆ
ಯೆಹೋವನನ್ನೇ ನಂಬುತ್ತಾನೋ ಅವನೇ ಧನ್ಯ
5 ಯೆಹೋವನೇ, ನನ್ನ ದೇವರೇ, ನಿನಗೆ ಸಮಾನನಾ
ದೇವರು ಯಾರು?
ನಮ್ಮ ಹಿತಕ್ಕಾಗಿ ನೀನು ಮಾಡಿದ ಆಲೋಚ
ಗಳೂ ಅದ್ಭುತಕಾರ್ಯಗಳೂ ಎಷ್ಟೋ ವಿಶೇ
ವಾಗಿವೆ;
ಅವುಗಳನ್ನು ವಿವರಿಸಿ ಹೇಳೋಣವೆಂದರೆ ಅಸಾಧ್ಯ
ಅವು ಅಸಂಖ್ಯಾತವಾಗಿವೆ.

6 ಯಜ್ಞನೈವೇದ್ಯಗಳು ನಿನಗೆ ಇಷ್ಟವಲ್ಲ;
ಸರ್ವಾಂಗಹೋಮಗಳನ್ನಾಗಲಿ ದೋಷಪರಿಹಾ
ಯಜ್ಞಗಳನ್ನಾಗಲಿ ನೀನು ಅಪೇಕ್ಷಿಸಲಿಲ್ಲ.
ಆದರೆ ಶ್ರವಣಶಕ್ತಿಯನ್ನು ನನಗೆ ಅನುಗ್ರಹಿಸಿದಿ.
7 ಆಗ ನಾನು—ಇಗೋ ಇದ್ದೇನೆ; ನನ್ನ ಕರ್ತವ್
ಗ್ರಂಥದ ಸುರಳಿಯಲ್ಲಿ ಬರೆದದೆ.
8 ನನ್ನ ದೇವರೇ, ನಿನ್ನ ಚಿತ್ತವನ್ನು ಅನುಸರಿಸುವ
ನನ್ನ ಸಂತೋಷವು;
ನಿನ್ನ ಧರ್ಮೋಪದೇಶವು ನನ್ನ ಅಂತರಂಗದಲ್ಲಿ
ಅಂದೆನು.

9 ನೀನು ನೀತಿಯನ್ನು ಸಾಧಿಸಿದ ಶುಭಸಮಾಚಾರವನ
ಧಾರಾಳವಾಗಿ ಮಹಾಸಭೆಯಲ್ಲಿ ಪ್ರಕಟಿಸಿದೆನ
ಯೆಹೋವನೇ, ನೀನೇ ಬಲ್ಲೆ.
10 ನಿನ್ನ ನೀತಿಸಾಧನೆಯನ್ನು ಮರೆಮಾಜಲಿಲ್ಲ;
ನಿನ್ನ ನಂಬಿಕೆಯನ್ನೂ ರಕ್ಷಣೆಯನ್ನೂ ಪ್ರಸಿದ್ಧಿಪಡಿ
ದೆನು;
ನಿನ್ನ ಕೃಪಾಸತ್ಯತೆಗಳನ್ನು ಮಹಾಸಮುದಾಯದ
ತಿಳಿಸದೆ ಇರಲಿಲ್ಲ.

11 ಯೆಹೋವನೇ, ನೀನಂತೂ ನಿನ್ನ ಕರುಣೆಯನ
ನನ್ನಿಂದ ಅಗಲಿಸಬೇಡ;
ನಿನ್ನ ಕೃಪಾಸತ್ಯತೆಗಳು ನನ್ನನ್ನು ಯಾವಾಗಲ
ಕಾಪಾಡಲಿ.
12 ಯಾಕಂದರೆ ಲೆಕ್ಕವಿಲ್ಲದ ಆಪತ್ತುಗಳು ನನ್ನನ್ನು ಸು
ಕೊಂಡಿವೆ;

ನನ್ನ ಪಾಪಗಳು ನನ್ನನ್ನು ಹಿಂದಟ್ಟಿ ಹಿಡಿದಿರುತ್ತವೆ,
ನನಗೆ ದಿಕ್ಕೇ ತೋರುವದಿಲ್ಲ.
ಅವು ನನ್ನ ತಲೇ ಕೂದಲುಗಳಿಗಿಂತಲೂ ಹೆಚ್ಚಾಗಿವೆ,
ನಾನು ಎದೆಗುಂದಿ ಹೋದೆನು.

13 ಯೆಹೋವನೇ, ದಯವಿಟ್ಟು ನನ್ನನ್ನು ರಕ್ಷಿಸು;
ಯೆಹೋವನೇ, ಬೇಗ ಬಂದು ಸಹಾಯಮಾಡು.
14 ನನ್ನ ಪ್ರಾಣವನ್ನು ತೆಗೆಯುವದಕ್ಕೆ ಸಮಯನೋಡುವವರು
ಆಶಾಭಂಗಪಟ್ಟು ಅವಮಾನಹೊಂದಲಿ;
ನನ್ನ ಆಪತ್ತಿನಲ್ಲಿ ಸಂತೋಷಿಸುವವರು ಮಾನಭಂಗದಿಂದ ಹಿಂದಿರುಗಿ ಓಡಲಿ.
15 ಅಹಾ, ಅಹಾ ಎಂದು ನನ್ನನ್ನು ಪರಿಹಾಸ್ಯಮಾಡುವವರು
ತಮಗೆ ಆಗುವ ಅವಮಾನದಿಂದ ವಿಸ್ಮಯಗೊಳ್ಳಲಿ.
16 ನಿನ್ನ ದರ್ಶನವನ್ನು ಕೋರುವವರೆಲ್ಲರು ನಿನ್ನಲ್ಲಿ ಉಲ್ಲಾಸದಿಂದ ಸಂತೋಷಿಸಲಿ;
ನಿನ್ನ ಜಯದಲ್ಲಿ ಆನಂದಿಸುವವರು
ಯೆಹೋವನಿಗೆ ಸ್ತೋತ್ರವೆಂದು ಯಾವಾಗಲೂ ಹೇಳುವವರಾಗಲಿ.
17 ನಾನಾದರೋ ಕುಗ್ಗಿದವನೂ ದಿಕ್ಕಿಲ್ಲದವನೂ ಆಗಿದ್ದೇನೆ;
ಕರ್ತನೇ ನನ್ನ ಹಿತಚಿಂತಕನು.
ನನ್ನ ದೇವರೇ, ನೀನೇ ನನಗೆ ಸಹಾಯಕನೂ ರಕ್ಷಕನೂ ಆಗಿದ್ದೀ;
ತಡಮಾಡಬೇಡ.

ಶತ್ರುಬಾಧಿತನ ಮೊರೆ.
ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು;
ದಾವೀದನ ಕೀರ್ತನೆ.

41 ದಿಕ್ಕಿಲ್ಲದವನನ್ನು ಪರಾಂಬರಿಸುವವನು ಧನ್ಯನು;
ಯೆಹೋವನು ಅವನನ್ನು ಆಪತ್ಕಾಲದಲ್ಲಿ ರಕ್ಷಿಸುವನು,
2 ಯೆಹೋವನು ಅವನ ಪ್ರಾಣವನ್ನು ಕಾಪಾಡಿ ಉಳಿಸುವನು;
ಅವನು ದೇಶದಲ್ಲಿ ಧನ್ಯನೆನಿಸಿಕೊಳ್ಳುವನು;
ಯೆಹೋವನೇ, ಅವನನ್ನು ಶತ್ರುಗಳ ಅಧೀನಕ್ಕೆ ಕೊಡಬೇಡ!
3 ಅವನು ಅಸ್ವಸ್ಥನಾಗಿ ಬಿದ್ದುಕೊಂಡಿರುವಾಗ ಯೆಹೋವನು ಅವನನ್ನು ಉದ್ಧರಿಸುವನು;
ಅವನ ರೋಗವನ್ನೆಲ್ಲಾ ಪರಿಹರಿಸಿ ಆರೋಗ್ಯವನ್ನುಂಟುಮಾಡಿದಿಯಲ್ಲಾ, ಸ್ವಾಮೀ.

4 ನಾನಂತೂ—ಯೆಹೋವನೇ, ನಿನ್ನ ಆಜ್ಞೆಯನ್ನು ಮೀರಿ ಪಾಪಮಾಡಿದ್ದೇನೆ;
ನನ್ನನ್ನು ಕರುಣಿಸಿ ಸ್ವಸ್ಥಮಾಡು ಅಂದೆನು.
5 ನನ್ನ ಹಾನಿಯನ್ನು ಅಪೇಕ್ಷಿಸುವ ಶತ್ರುಗಳು—ಅವನು ಯಾವಾಗ ಸತ್ತಾನು?
ಅವನ ಹೆಸರು ಯಾವಾಗ ಇಲ್ಲದೆಹೋದೀತು ಎಂದು ಹೇಳಿಕೊಳ್ಳುತ್ತಾರೆ.
6 ಅವರಲ್ಲೊಬ್ಬನು ನನ್ನನ್ನು ನೋಡುವದಕ್ಕೆ ಬಂದರೆ ಕಪಟದ ಮಾತನ್ನಾಡುವನು;
ಮನಸ್ಸಿನಲ್ಲಿ ಅಶುಭಗಳನ್ನು ಸಂಗ್ರಹಿಸಿಕೊಂಡು ಹೋಗಿ ಹೊರಗೆ ಪ್ರಕಟಿಸುತ್ತಾನೆ.
7 ನನ್ನ ಹಗೆಯವರೆಲ್ಲರು ನನಗೆ ವಿರೋಧವಾಗಿ ಕಿವಿಗಳಲ್ಲಿ ಗುಜುಗುಜು ಮಾತಾಡಿಕೊಳ್ಳುತ್ತಾರೆ;
ನನಗೆ ಕೇಡನ್ನು ಕಲ್ಪಿಸುತ್ತಾರೆ.
8 ಅವನನ್ನು ಅಸಾಧ್ಯರೋಗ ಹಿಡಿದದೆ;
ಅವನು ಹಾಸಿಗೆಯನ್ನು ಬಿಟ್ಟು ತಿರಿಗಿ ಏಳುವದೇ ಇಲ್ಲವೆಂದು ಹೇಳಿಕೊಳ್ಳುತ್ತಾರೆ.
9 ನಾನು ಯಾವನನ್ನು ನಂಬಿದ್ದೆನೋ ಯಾವನು ನನ್ನ ಮನೆಯಲ್ಲಿ ಅನ್ನಪಾನಗಳನ್ನು ತೆಗೆದುಕೊಂಡನೋ
ಅಂಥ ಆಪ್ತಸ್ನೇಹಿತನು ನನಗೆ ಕಾಲನ್ನು ಅಡ್ಡಗೊಟ್ಟಿದ್ದಾನೆ.

10 ಯೆಹೋವನೇ, ನೀನಾದರೋ ಕರುಣಿಸಿ ನನ್ನನ್ನು ಏಳಮಾಡು;
ಆಗ ನಾನು ಅವರಿಗೆ ಮುಯ್ಯಿತೀರಿಸುವೆನು.
11 ಶತ್ರುಗಳ ಜಯಧ್ವನಿ ಇಲ್ಲದ್ದರಿಂದಲೇ ನಿನ್ನ ಒಲುಮೆ ನನಗುಂಟೆಂದು ತಿಳಿದುಕೊಳ್ಳುವೆನು.
12 ನಿರ್ದೋಷಿಯಾದ ನನ್ನನ್ನಾದರೋ ನೀನು ಉದ್ಧಾರಮಾಡಿ
ನಿನ್ನ ಸನ್ನಿಧಿಯಲ್ಲಿ ಶಾಶ್ವತವಾಗಿ ನಿಲ್ಲಿಸುವಿ.

13 ಇಸ್ರಾಯೇಲ್ಯರ ದೇವರಾದ ಯೆಹೋವನಿಗೆ
ಯುಗಯುಗಾಂತರಗಳ ವರೆಗೂ ಕೊಂಡಾಟವಾಗಲಿ.
ಆಮೆನ್. ಆಮೆನ್.

## ದ್ವಿತೀಯ ಭಾಗವು (42—72).

ದೇಶಾಂತರದಲ್ಲಿರುವ ಭಕ್ತನು ದೇವದರ್ಶನಕ್ಕೆ ಕುತೂಹಲಪಡುವದು.
ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು;
ಕೋರಹೀಯರ ಪದ್ಯ.

42 ದೇವರೇ, ಬಾಯಾರಿದ ಜಿಂಕೆಯು ನೀರಿನ ತೊರೆಗಳನ್ನು ಹೇಗೋ
ಹಾಗೆಯೇ ನನ್ನ ಮನವು ನಿನ್ನನ್ನು ಬಯಸುತ್ತದೆ.
2 ನನ್ನ ಮನಸ್ಸು ದೇವರಿಗಾಗಿ, ಚೈತನ್ಯಸ್ವರೂಪನಾದ ದೇವರಿಗಾಗಿ ಹಾರೈಸುತ್ತದೆ;
ನಾನು ಯಾವಾಗ ಹೋಗಿ ದೇವರ ಸನ್ನಿಧಿಯಲ್ಲಿ ಸೇರುವೆನೋ?
3 ನಿನ್ನ ದೇವರು ಎಲ್ಲಿ ಎಂದು ಜನರು ಯಾವಾಗಲೂ ನನ್ನನ್ನು ಗೇಲಿಮಾಡುವದರಿಂದ
ಹಗಲಿರುಳು ನನಗೆ ಕಣ್ಣೀರೇ ಆಹಾರವಾಯಿತು.
4 ನಾನು ಭಜನೋತ್ಸವದಲ್ಲಿ ಸೇರಿ

ಜನಸಮೂಹದೊಡನೆ ಹರ್ಷಧ್ವನಿಮಾಡುತ್ತಾ ಸ್ತೋತ್ರ
ಪದಗಳನ್ನು ಹಾಡುತ್ತಾ
ದೇವಾಲಯಕ್ಕೆ ಹೋಗುತ್ತಿದ್ದದ್ದನ್ನೇ ನೆನಪಿಗೆ ತಂದು
ಕೊಂಡು
ನನ್ನೊಳಗೆ ನಾನೇ ಹಂಬಲಿಸುತ್ತಿರುವೆನು.
5 ನನ್ನ ಮನವೇ, ನೀನು ಕುಗ್ಗಿಹೋಗಿರುವದೇನು?
ಹೀಗೆ ವ್ಯಥೆಪಡುವದೇಕೆ?
ದೇವರನ್ನು ನಿರೀಕ್ಷಿಸು; ಆತನೇ ನನಗೆ ರಕ್ಷಕನೂ
ದೇವರೂ ಆಗಿದ್ದಾನೆ.
ನಾನು ಇನ್ನೂ ಆತನನ್ನು ಸ್ತುತಿಸುತ್ತಿರುವೆನು.

6 ನನ್ನ ದೇವರೇ, ನನ್ನ ಪ್ರಾಣವು ಕುಗ್ಗಿಹೋಗಿದೆ;
ಆದದರಿಂದ ಯೊರ್ದನ್ ಹೊಳೆಯ ದೇಶ, ಹೆ
ರ್ಮೋನ್ ಪರ್ವತ, ಮಿಸಾರ್ ಬೆಟ್ಟ ಇವುಗಳಲ್ಲಿರು
ವವನಾಗಿ
ನಿನ್ನನ್ನು ಸ್ಮರಿಸುತ್ತೇನೆ.
7 ನಿನ್ನ ಜಲಪಾತಗಳಿಂದುಂಟಾಗುವ ಮಹಾಘೋಷವು
ಒಂದು ಪ್ರವಾಹವು ಮತ್ತೊಂದು ಪ್ರವಾಹವನ್ನು ಕೂಗು
ತ್ತದೋ ಎಂಬಂತಿರುವದು.
ಹಾಗೆಯೇ ನೀನು ಅಲ್ಲಕಲ್ಲೋಲವಾದ [ದುಃಖ
ಪ್ರವಾಹದ] ತೆರೆಗಳನ್ನು ನನ್ನ ತಲೆಯ ಮೇಲೆ ದಾಟಿ
ಸಿದಿಯಲ್ಲಾ.
8 ಯೆಹೋವನು ಹಗಲಿನಲ್ಲಿ ತನ್ನ ಪ್ರೀತಿಯನ್ನು ನನಗೆ
ಅನುಗ್ರಹಿಸುವನು;
ರಾತ್ರಿವೇಳೆಯಲ್ಲಿಯೂ ಆತನ ಕೀರ್ತನೆ ನನ್ನಲ್ಲಿರು
ವದು.
ನನ್ನ ಜೀವಾಧಾರಕನಾದ ದೇವರನ್ನು ಪ್ರಾರ್ಥಿಸುವೆನು.
9 ನಾನು ನನ್ನ ಶರಣನಿಗೆ—ದೇವರೇ, ಯಾಕೆ ನನ್ನನ್ನು
ಮರೆತುಬಿಟ್ಟೆ?
ನಾನು ಯಾಕೆ ಶತ್ರುಬಾಧೆಯಿಂದ ದುಃಖಿಸುತ್ತಾ
ವಿಕಾರಿಯಾಗಿ ಅಲೆಯಬೇಕು ಎಂದು ಮೊರೆಯಿಡು
ವೆನು.
10 ನನ್ನ ವಿರೋಧಿಗಳು—ನಿನ್ನ ದೇವರು ಎಲ್ಲಿ ಎಂದು
ಯಾವಾಗಲೂ ನನ್ನನ್ನು ಗೇಲಿಮಾಡುವದರಿಂದ
ನನ್ನ ಎಲುಬುಗಳೆಲ್ಲಾ ಮುರಿದ ಹಾಗಿವೆ.
11 ನನ್ನ ಮನವೇ, ನೀನು ಕುಗ್ಗಿಹೋಗಿರುವದೇನು?
ಹೀಗೆ ವ್ಯಥೆಪಡುವದೇಕೆ?
ದೇವರನ್ನು ನಿರೀಕ್ಷಿಸು; ಆತನೇ ನನಗೆ ರಕ್ಷಕನೂ
ದೇವರೂ ಆಗಿದ್ದಾನೆ;
ನಾನು ಇನ್ನೂ ಆತನನ್ನು ಸ್ತುತಿಸುತ್ತಿರುವೆನು.

43 ದೇವರೇ, ನ್ಯಾಯವನ್ನು ನಿರ್ಣಯಿಸು;
ನನಗೋಸ್ಕರ ವ್ಯಾಜ್ಯವನ್ನು ನಡಿಸಿ 1)ನಿರ್ದಯ
ವಾದ ಜನಾಂಗದಿಂದ ತಪ್ಪಿಸು,
ದುರಾಚಾರಿಗಳಾದ ಮೋಸಗಾರರಿಂದ ನನ್ನನ್ನು ಬಿಡಿಸು.
2 ದೇವರೇ, ನೀನು ನನಗೆ ದುರ್ಗಸ್ಥಾನವಲ್ಲವೇ; ಯಾಕೆ
ನನ್ನನ್ನು ತಳ್ಳಿಬಿಟ್ಟೆ?

ನಾನು ಯಾಕೆ ಶತ್ರುಬಾಧೆಯಿಂದ ದುಃಖಿಸುತ
ವಿಕಾರಿಯಾಗಿ ಅಲೆಯಬೇಕು?
3 ನಿನ್ನ ಸತ್ಯಪ್ರಸನ್ನತೆಗಳನ್ನು [ದೂತರನ್ನೋ ಎಂಬಂ
ಕಳುಹಿಸು;
ಅವೇ ನಿನ್ನ ಪರಿಶುದ್ಧಪರ್ವತಕ್ಕೆ ನನ್ನನ್ನು ಕರೆ
ಕೊಂಡು ಹೋಗಿ ನಿನ್ನ ನಿವಾಸಕ್ಕೆ ಸೇರಿಸಲಿ.
4 ದೇವರೇ, ನನ್ನ ದೇವರೇ, ಆಗ ನಾನು ನಿನ್ನ ಯ
ವೇದಿಯ ಬಳಿಗೆ, ನನ್ನ ಆನಂದನಿಧಿಯಾಗಿರು
ನಿನ್ನ ಹತ್ತಿರಕ್ಕೆ, ಸೇರಿ
ಕಿನ್ನರಿಯನ್ನು ಬಾರಿಸುತ್ತಾ ನಿನ್ನನ್ನು ಕೊಂಡಾಡುವೆ
5 ನನ್ನ ಮನವೇ, ನೀನು ಕುಗ್ಗಿಹೋಗಿರುವದೇನ
ಹೀಗೆ ವ್ಯಥೆಪಡುವದೇಕೆ?
ದೇವರನ್ನು ನಿರೀಕ್ಷಿಸು; ಆತನೇ ನನಗೆ ರಕ್ಷಕನ
ದೇವರೂ ಆಗಿದ್ದಾನೆ;
ನಾನು ಇನ್ನೂ ಆತನನ್ನು ಸ್ತುತಿಸುತ್ತಿರುವೆನು.

ಮುಂಚಿನಂತೆ ಈಗಲೂ ರಕ್ಷಿಸಬೇಕೆಂದು ದೇವರನ್ನು
ಪ್ರಾರ್ಥಿಸುವದು. (ಕೀರ್ತನೆ 79.)
ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು;
ಕೋರಹೀಯರ ಪದ್ಯ.

44 ದೇವರೇ, ಪೂರ್ವಕಾಲದಲ್ಲಿ ನಮ್ಮ ಪಿತೃಗಳ ದಿ
ದಲ್ಲಿ ನೀನು ನಡಿಸಿದ ಮಹತ್ಕಾರ್ಯಗಳ ವ
ಯವನ್ನು ಕೇಳಿದ್ದೇವೆ;
ಅವರೇ ನಮಗೆ ತಿಳಿಸಿದರು.
2 ನಿನ್ನ ಹಸ್ತವೇ ಈ ದೇಶದಲ್ಲಿದ್ದ ಜನಾಂಗಗಳನ
ಹೊರಡಿಸಿ ನಮ್ಮ ಪಿತೃಗಳನ್ನೇ ನೆಲೆಗೊ
ಸಿದೆ;
ನೀನು ಆ ಅನ್ಯಜನಗಳನ್ನು ತೆಗೆದುಬಿಟ್ಟು ನವ
ವರನ್ನು ಹಬ್ಬಿಸಿದಿ.
3 ನಮ್ಮ ಪಿತೃಗಳಿಗೆ ಕತ್ತಿಯೇ ಈ ದೇಶವನ
ಸ್ವಾಧೀನಮಾಡಿಕೊಡಲಿಲ್ಲ;
ಅವರ ಭುಜಬಲವೇ ಅವರಿಗೆ ಜಯಕೊಡಲಿಲ್ಲ.
ನಿನ್ನ ಭುಜಬಲ, ಹಸ್ತ, ಪ್ರಸನ್ನತೆ ಇವೇ ಅವರ
ಜಯವನ್ನುಂಟುಮಾಡಿದವು;
ನಿನ್ನ ಒಲುಮೆ ಅವರಿಗಿತ್ತಲ್ಲಾ.

4 ದೇವರೇ, ನೀನೇ ನನ್ನ ಅರಸನು;
ಯಾಕೋಬವಂಶಕ್ಕೆ ಜಯಪ್ರದನಾಗು.
5 ನಿನ್ನ ಸಹಾಯದಿಂದಲೇ ವೈರಿಗಳನ್ನು ಕೆಡವಿಬಿ
ವೆವು;
ನಿನ್ನ ನಾಮಧೇಯದ ಬಲದಿಂದ ಎದುರಾಳಿಗಳನ
ತುಳಿದುಬಿಡುವೆವು.
6 ನಾನು ಬಿಲ್ಲಿನಲ್ಲಿ ಭರವಸವಿಡುವದಿಲ್ಲ;
ಕತ್ತಿಯು ನನ್ನನ್ನು ರಕ್ಷಿಸಲಾರದು.
7 ಹಿಂಸಕರಿಂದ ಬಿಡಿಸಿದವನು ನೀನೇ;
ನೀನೇ ಹಗೆಗಳಿಗೆ ಆಶಾಭಂಗಪಡಿಸಿದವನು.

1) ಅಥವಾ: ಭಕ್ತಿಹೀನ.

8 ದೇವರೇ, ನಿನ್ನಲ್ಲಿಯೇ ಯಾವಾಗಲೂ ಹಿಗ್ಗುತ್ತಿ
ದ್ದೇವೆ;
ನಿನ್ನ ನಾಮವನ್ನೇ ಸದಾಕಾಲವೂ ಕೀರ್ತಿಸುವೆವು.
ಸೆಲಾ.

9 ಆದರೆ ಈಗ ನೀನು ಕೈಬಿಟ್ಟದ್ದರಿಂದ ಅವಮಾನಕ್ಕೆ
ಒಳಗಾದೆವಲ್ಲಾ;
ನಮ್ಮ ಸೈನ್ಯಗಳ ಸಂಗಡ ನೀನು ಹೊರಡಲಿಲ್ಲ.
10 ನಾವು ಹಗೆಗಳಿಗೆ ಬೆನ್ನುಕೊಟ್ಟು ಓಡಿಹೋಗುವಂತೆ
ಮಾಡಿದ್ದೀ;
ವೈರಿಗಳು ನಮ್ಮ ಸೊತ್ತನ್ನು ಬೇಕಾದ ಹಾಗೆ ಸೂರೆ
ಮಾಡುತ್ತಾರೆ.
11 ಕುರಿಗಳನ್ನೋ ಎಂಬಂತೆ ನಮ್ಮನ್ನು ಘಾತುಕರಿಗೆ ಒಪ್ಪಿ
ಸಿದ್ದೀ;
ಜನಾಂಗಗಳಲ್ಲಿ ನಮ್ಮನ್ನು ಚದರಿಸಿಬಿಟ್ಟಿದ್ದೀ.
12 ನೀನು ಯಾವ ಲಾಭವನ್ನೂ ಹೊಂದದೆ
ನಿಷ್ಪ್ರಯೋಜನವಾಗಿ ನಿನ್ನ ಪ್ರಜೆಯನ್ನು ಮಾರಿಬಿಟ್ಟಿ
ದ್ದೀ.
13 ನಮ್ಮನ್ನು ನೆರೆಯವರ ನಿಂದೆಗೆ ಗುರಿಮಾಡಿದ್ದೀ;
ಸುತ್ತಣ ಜನಾಂಗಗಳವರ ಪರಿಹಾಸ್ಯಕ್ಕೂ ಕುಚೋ
ದ್ಯಕ್ಕೂ ಈಡಾದೆವು.
14 ನಮ್ಮನ್ನು ಅನ್ಯದೇಶೀಯರ ಗಾದೆಗೆ ಆಸ್ಪದಮಾಡಿದ್ದೀ;
ಅವರು ನಮ್ಮನ್ನು ನೋಡಿ ತಲೆ ಆಡಿಸುತ್ತಾರೆ.
15 ದೂಷಕರ ನಿಂದಾವಚನಗಳಿಂದಲೂ
ಮುಯ್ಯಿತೀರಿಸುವ ವೈರಿಗಳ ದೃಷ್ಟಿಯಿಂದಲೂ
16 ನನಗುಂಟಾಗಿರುವ ಅವಮಾನವು ಯಾವಾಗಲೂ ನನ್ನ
ಮುಂದೆಯೇ ಇದೆ;
ನಾಚಿಕೆಯು ನನ್ನ ಮುಖವನ್ನು ಕವಿದದೆ.

17 ನಾವು ನಿನ್ನನ್ನು ಮರೆಯದೆಯೂ ನಿನ್ನ ನಿಬಂಧನೆಗಳ
ನ್ನು ಮೀರದೆಯೂ ಇದ್ದರೂ
ಇದೆಲ್ಲಾ ನಮ್ಮ ಮೇಲೆ ಬಂದಿದೆಯಲ್ಲಾ!
18 ನಮ್ಮ ಹೃದಯವು ಹಿಂದಿರುಗಲಿಲ್ಲ;
ನಮ್ಮ ಕಾಲು ನಿನ್ನ ದಾರಿಯಿಂದ ಅಗಲಲಿಲ್ಲ.
19 ನೀನು ನಮ್ಮನ್ನು ಪರಾಜಯಪಡಿಸಿ ನಮ್ಮ ದೇಶವನ್ನು
ನರಿಗಳಿರುವ ಕಾಡನ್ನಾಗಿ ಮಾಡಿದ್ದೇಕೆ?
ಕಾರ್ಗತ್ತಲು ನಮ್ಮನ್ನು ಕವಿಯುವಂತೆ ಮಾಡಿದ್ದೇಕೆ?
20 ನಾವು ನಮ್ಮ ದೇವರ ಹೆಸರನ್ನು ಮರೆತು ಅನ್ಯದೇವತೆ
ಗಳಿಗೆ ಕೈಯೆತ್ತಿದ್ದರೆ
21 ಹೃದಯರಹಸ್ಯಗಳನ್ನು ಬಲ್ಲವನಾದ ದೇವರು ವಿಚಾ
ರಿಸುತ್ತಿರಲಿಲ್ಲವೋ?
22 ದೇವರೇ, ನಾವು ನಿನ್ನ ನಿಮಿತ್ತ ದಿನವೆಲ್ಲಾ ಕೊಲೆಗೆ
ಗುರಿಯಾಗಿದ್ದೇವೆ;
ಜನರು ನಮ್ಮನ್ನು ಕೊಯ್ಗುರಿಗಳಂತೆ ಎಣಿಸಿದ್ದಾರೆ.

23 ಕರ್ತನೇ, ಯಾಕೆ ನಿದ್ರಿಸುತ್ತೀ? ಎಚ್ಚರವಾಗು;
ಏಳು, ನಮ್ಮನ್ನು ಬಿಟ್ಟೇಬಿಡಬೇಡ.
24 ಯಾಕೆ ವಿಮುಖನಾಗಿದ್ದೀ?
ನಮಗಿರುವ ಬಾಧೆಯನ್ನೂ ಹಿಂಸೆಯನ್ನೂ ಯಾಕೆ
ಲಕ್ಷಿಸುವದಿಲ್ಲ?
25 ನಮ್ಮ ಪ್ರಾಣವು ಧೂಳಿನಲ್ಲಿ ಅಣಗಿಹೋಗಿದೆ;
ಶರೀರವು ನೆಲಕ್ಕೆ ಹತ್ತಿಕೊಂಡಿದೆ.
26 ಎದ್ದು ಬಂದು ಸಹಾಯಮಾಡು; ನಿನ್ನ ಕೃಪೆಯ
ನಿಮಿತ್ತ ನಮ್ಮನ್ನು ವಿಮೋಚಿಸು.

ರಾಜವಿವಾಹವರ್ಣನೆ.

(ಯೆಶಾಯ 61. 10—62. 5.)

ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು;
ಶೋಶನ್ನೀಮ್ ಎಂಬ ರಾಗದ ಮೇಲೆ ಹಾಡತಕ್ಕದ್ದು;
ಕೋರಹೀಯರ ಪದ್ಯ; ಪ್ರೇಮಗೀತ.

45 ಒಂದು ದಿವ್ಯ ವಿಷಯವನ್ನು ಹೇಳುವದಕ್ಕೆ ನನ್ನ
ಹೃದಯವು ತವಕಪಡುತ್ತದೆ;
ನಾನು ರಾಜನನ್ನು ಕುರಿತು ಈ ಪದ್ಯವನ್ನು ರಚಿಸು
ವೆನು.
ನನ್ನ ನಾಲಿಗೆಯು ಒಳ್ಳೆ ಬರವಣಿಗಸ್ತನ ಲೇಖನಿ
ಯಂತೆ ಸಿದ್ಧವಾಗಿದೆ.

2 ನೀನು ಎಲ್ಲಾ ಮನುಷ್ಯರಿಗಿಂತ ಅತಿಸುಂದರನು;
ನಿನ್ನ ಮಾತುಗಳು ಬಹಳ ಮಧುರ;
ಇದರಿಂದಲೇ ದೈವಾನುಗ್ರಹವು ಯಾವಾಗಲೂ ನಿನ್ನ
ಮೇಲಿದೆ ಎಂಬದು ಸ್ಪಷ್ಟವಾಗುತ್ತದೆ.
3 ಶೂರನೇ, ಮಹಿಮಪ್ರಭಾವಗಳನ್ನು ಧರಿಸಿಕೊಂಡು
ಸೊಂಟಕ್ಕೆ ಪಟ್ಟದ ಕತ್ತಿಯನ್ನು ಕಟ್ಟಿಕೋ.
4 ಸತ್ಯತೆದೈನ್ಯನೀತಿಗಳನ್ನು ಸ್ಥಾಪಿಸುವದಕ್ಕಾಗಿ
ಆಡಂಬರದಿಂದ ವಾಹನಾರೂಢನಾಗಿ ವಿಜಯೋತ್ಸವ
ದೊಡನೆ ಹೊರಡೋಣವಾಗಲಿ.
ನಿನ್ನ ಭುಜವೀರ್ಯದಿಂದ ಭಯಂಕರಕೃತ್ಯಗಳು ನಡೆ
ಯುವವು.
5 ನಿನ್ನ ಬಾಣಗಳು ಮಹಾತೀಕ್ಷ್ಣವಾಗಿರುವವು;
ಅವು ರಾಜವಿರೋಧಿಗಳ ಎದೆಯನ್ನು ಭೇದಿಸುವವು;
ಶತ್ರುಜನಾಂಗಗಳು ನಿನ್ನ ಪಾದದ ಕೆಳಗೆ ಬೀಳು
ವವು.
6 ದೇವರೇ, ನಿನ್ನ ಸಿಂಹಾಸನವು ಯುಗಯುಗಾಂತರಗಳ
ಲ್ಲಿಯೂ ಇರುವದು;
ನಿನ್ನ ರಾಜದಂಡವು ನ್ಯಾಯಸ್ಥಾಪಕವಾದದ್ದೇ.
7 ನೀನು ಧರ್ಮವನ್ನು ಪ್ರೀತಿಸಿದಿ, ಅಧರ್ಮವನ್ನು
ದ್ವೇಷಿಸಿದಿ;
ಆದದರಿಂದ ದೇವರು, ನಿನ್ನ ದೇವರೇ, ನಿನ್ನನ್ನು ನಿನ್ನ
ಜೊತೆಗಾರರಿಗಿಂತ ಉನ್ನತಸ್ಥಾನಕ್ಕೆ ಏರಿಸಿ
ಪರಮಾನಂದತೈಲದಿಂದ ಅಭಿಷೇಕಿಸಿದ್ದಾನೆ.
8 ನಿನ್ನ ದಿವ್ಯಾಂಬರಗಳು ರಕ್ತಬೋಳ ಅಗರು ಚಂದನ
ಗಳಿಂದ ಎಷ್ಟೋ ಸುವಾಸನೆಯುಳ್ಳವುಗಳಾಗಿವೆ;
ಗಜದಂತಮಂದಿರಗಳೊಳಗೆ ಉತ್ಕೃಷ್ಟವಾದ್ಯಗಳು
ನಿನ್ನನ್ನು ಆನಂದಗೊಳಿಸುವವು.
9 ನಿನ್ನ ಸ್ತ್ರೀಪರಿವಾರದಲ್ಲಿ ರಾಜಕುಮಾರಿಯರೂ ಇದ್ದಾ
ರೆ;
ಪಟ್ಟದ ರಾಣಿಯು ಓಫೀರ್ ದೇಶದ ಬಂಗಾರದ
ಆಭರಣಗಳಿಂದ ಭೂಷಿತಳಾಗಿ
ನಿನ್ನ ಬಲಭಾಗದಲ್ಲಿ ನಿಂತಿರುವಳು.

10 ಎಲೌ ಕುಮಾರಿಯೇ, ನನ್ನ ಮಾತನ್ನು ಕೇಳಿ ಆಲೋಚಿಸು;
ಸ್ವಜನರನ್ನೂ ತೌರಮನೆಯನ್ನೂ ಮರೆತುಬಿಡು.
11 ಆಗ ರಾಜನು ನಿನ್ನ ಲಾವಣ್ಯವನ್ನು ನೋಡಲಪೇಕ್ಷಿಸುವನು.
ಆತನೇ ನಿನಗೆ ಒಡೆಯನು; ಆತನಿಗೆ ನಮಸ್ಕರಿಸು.
12 ತೂರ್ ಸಂಸ್ಥಾನದವರು ಕಾಣಿಕೆಗಳಿಂದ ನಿನ್ನನ್ನು ಸನ್ಮಾನಿಸುವರು;
ಪ್ರಜೆಗಳಲ್ಲಿ ಸ್ಥಿತಿವಂತರು ನಿನ್ನ ದಯೆಯನ್ನು ಕೋರುವರು.
13 ಅಂತಃಪುರದಲ್ಲಿ ರಾಜಕುಮಾರಿಯು ಎಷ್ಟೋ ವೈಭವದಿಂದಿದ್ದಾಳೆ;
ಆಕೆಯು ಜರತಾರಿಯ ವಸ್ತ್ರವನ್ನು ಧರಿಸಿಕೊಂಡಿದ್ದಾಳೆ.
14 ಆಕೆಯು ಬೂಟೇದಾರೀ ಕಸೂತಿಕೆಲಸದ ವಸ್ತ್ರಗಳನ್ನು ಧರಿಸಿಕೊಂಡು
ಸಖಿಯರಾದ ಕನ್ಯೆಯರ ಪರಿವಾರದೊಡನೆ ಅರಸನ ಬಳಿಗೆ ಬರುವಳು.
15 ಅವರು ಸಂಭ್ರಮೋತ್ಸವದಿಂದ ಬಂದು
ಅರಮನೆಯೊಳಕ್ಕೆ ಪ್ರವೇಶಿಸುವರು.

16 [ಅರಸನೇ,] ವಂಶಪಾರಂಪರ್ಯವಾಗಿ ಬಂದ ಸ್ಥಾನದಲ್ಲಿರುವದಕ್ಕೆ ನಿನಗೆ ಮಕ್ಕಳು ಹುಟ್ಟುವರು;
ಅವರನ್ನು ದೇಶದಲ್ಲೆಲ್ಲಾ ಅಧಿಕಾರಿಗಳನ್ನಾಗಿ ನೇಮಿಸುವಿ.
17 ನಿನ್ನ ಹೆಸರು ಯಾವಾಗಲೂ ಜ್ಞಾಪಕದಲ್ಲಿರುವಂತೆ ನಾನು ಮಾಡುವೆನು;
ಆದದರಿಂದ ಎಲ್ಲಾ ಜನಗಳು ನಿನ್ನನ್ನು ಯುಗಯುಗಾಂತರಗಳಲ್ಲಿಯೂ ಹೊಗಳುವರು.

ಯೆಹೋವನು ಭಕ್ತಪಾಲಕನೂ ಸರ್ವಾಧಿಪತಿಯೂ ಎಂಬದು.
(ಕೀರ್ತನೆ 76.)
ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು;
ಕೋರಹೀಯರ ಗೀತ; ತಾರಕಸ್ಥಾಯಿಯಲ್ಲಿ ಹಾಡತಕ್ಕದ್ದು.
(೧ ಪೂರ್ವಕಾಲ 15. 20.)

**46** ದೇವರು ನಮಗೆ ಆಶ್ರಯದುರ್ಗವಾಗಿದ್ದಾನೆ;
ಆತನು ಇಕ್ಕಟ್ಟಿನಲ್ಲಿ ನಮಗೆ ವಿಶೇಷಸಹಾಯಕನು.
2 ಆದದರಿಂದ ಭೂಮಿಯು ಮಾರ್ಪಟ್ಟರೂ ಬೆಟ್ಟಗಳು ಸಮುದ್ರದಲ್ಲಿ ಮುಣುಗಿಹೋದರೂ
ನಮಗೇನೂ ಭಯವಿಲ್ಲ.
3 ಸಮುದ್ರವು ಘೋಷಿಸುತ್ತಾ ನೊರೆಯನ್ನು ಕಾರಿದರೇನು?
ಅದರ ಅಲ್ಲಕಲ್ಲೋಲಗಳಿಂದ ಪರ್ವತಗಳು ಚಲಿಸಿದರೇನು? ಸೆಲಾ.

4 ಒಂದು ನದಿ ಅದೆ; ಅದರ ಕಾಲಿವೆಗಳು
ಪರಾತ್ಪರನ ಪರಿಶುದ್ಧನಿವಾಸಸ್ಥಾನವಾಗಿರುವ ದೇವನಗರವನ್ನು ಸಂತೋಷಪಡಿಸುತ್ತವೆ.
5 ದೇವರು ಇದರಲ್ಲಿದ್ದಾನೆ; ಇದಕ್ಕೆ ಚಲನವೇ ಇಲ್ಲ.
ಉದಯಕಾಲದಲ್ಲಿಯೇ ದೇವರು ಇದರ ಸಹಾಯ ಬರುವನು.
6 ಜನಾಂಗಗಳು ಕಳವಳಗೊಂಡವು; ರಾಜ್ಯಗಳು ತತ್ತರಿದವು.
ಆತನು ಗರ್ಜಿಸಲು ಭೂಲೋಕವೆಲ್ಲಾ ಕರಗಿಹೋಯಿತು.
7 ಸೇನಾಧೀಶ್ವರನಾದ ಯೆಹೋವನು ನಮ್ಮ ಸಂಗ ಇದ್ದಾನೆ;
ಯಾಕೋಬವಂಶದವರ ದೇವರು ನಮಗೆ ಆಶ್ರ ದುರ್ಗವಾಗಿದ್ದಾನೆ. ಸೆಲಾ.

8 ಬನ್ನಿರಿ, ಯೆಹೋವನ ಕಾರ್ಯವನ್ನು ನೋಡಿರಿ;
ಆತನು ಭೂಲೋಕದಲ್ಲಿ ಎಂಥಾ ಪ್ರಳಯವನ ನಡಿಸಿದ್ದಾನೆ.
9 ಲೋಕದ ಎಲ್ಲಾ ಭಾಗದಲ್ಲೂ ಯುದ್ಧವನ್ನು ನಿಲ್ಲಿ ಬಿಟ್ಟಿದ್ದಾನೆ;
ಬಿಲ್ಲುಗಳನ್ನೂ ಭಲ್ಲೆಯಗಳನ್ನೂ ಮುರಿದುಹಾಕಿದ ನೆ; ರಥಗಳನ್ನು ದಹಿಸಿಬಿಟ್ಟಿದ್ದಾನೆ.
10 ಬಿಡಿರಿ, ನಾನೇ ದೇವರು;
ಲೋಕದ ಸಮಸ್ತ ಜನಗಳಿಗೂ ಸರ್ವಾಧಿಪತಿಯ ನಾನೇ ಎಂದು ತಿಳಿದುಕೊಳ್ಳಿರಿ.
11 ಸೇನಾಧೀಶ್ವರನಾದ ಯೆಹೋವನು ನಮ್ಮ ಸಂಗ ಇದ್ದಾನೆ;
ಯಾಕೋಬವಂಶದವರ ದೇವರು ನಮಗೆ ಆಶ್ರ ದುರ್ಗವಾಗಿದ್ದಾನೆ. ಸೆಲಾ.

ಸಾರ್ವಭೌಮನಾದ ಯೆಹೋವನು ಸಿಂಹಾಸನಾರೂಢನಾಗಿರುವದು.
(ಕೀರ್ತನೆ 93; 95—100.)
ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು;
ಕೋರಹೀಯರ ಕೀರ್ತನೆ.

**47** ಸರ್ವ ಜನಾಂಗಗಳಿರಾ, ಚಪ್ಪಾಳೆ ಹೊಡೆಯಿರಿ;
ಆರ್ಭಟದಿಂದ ದೇವರಿಗೆ ಜಯಧ್ವನಿ ಮಾಡಿರಿ.
2 ಪರಾತ್ಪರನಾದ ಯೆಹೋವನು ಭಯಂಕರನಾಗಿದ್ದಾ
ಆತನು ಭೂಲೋಕಕ್ಕೆಲ್ಲಾ ಅಧಿರಾಜನಾಗಿದ್ದಾನೆ.

3 ಆತನು ಜನಾಂಗಗಳನ್ನು ನಮಗೆ ಅಧೀನಪಡಿಸಿ
ಪರಕುಲದವರನ್ನು ನಮ್ಮ ಕಾಲಕೆಳಗೆ ಹಾಕಿದ್ದಾನೆ.
4 ಆತನು ಯಾಕೋಬವಂಶದವರಾದ ನಮ್ಮನ್ನು ಪ್ರೀತಿ
ನಾವು ಅಭಿಮಾನಿಸುವ ಸ್ವಾಸ್ತ್ಯವನ್ನು ನಿರ್ಣಯಿ ಕೊಟ್ಟಿದ್ದಾನೆ. ಸೆಲಾ.

5 ದೇವರು ಜಯಘೋಷದಿಂದ ಏರಿದ್ದಾನೆ;
ಯೆಹೋವನು ತುತೂರಿಯ ಧ್ವನಿಯೊಡನೆ ಆರೋಹ ಮಾಡಿದ್ದಾನೆ.
6 ದೇವರನ್ನು ಸಂಕೀರ್ತಿಸಿರಿ, ಕೀರ್ತಿಸಿರಿ;
ನಮ್ಮ ಅರಸನನ್ನು ಕೀರ್ತಿಸಿರಿ, ಕೀರ್ತಿಸಿರಿ.

7 ದೇವರು ಭೂಲೋಕಕ್ಕೆಲ್ಲಾ ರಾಜನು;
ಆತನನ್ನು ಜ್ಞಾನಯುಕ್ತರಾಗಿ ಕೀರ್ತಿಸಿರಿ.
8 ದೇವರು ಸರ್ವಾಧಿಪತ್ಯವನ್ನು ವಹಿಸಿಕೊಂಡಿದ್ದಾನೆ;
ತನ್ನ ಪರಿಶುದ್ಧಸಿಂಹಾಸನದಲ್ಲಿ ಕೂತಿದ್ದಾನೆ.

9 ಜನಾಂಗಗಳಲ್ಲಿ ಶ್ರೇಷ್ಠರಾದವರು
ಅಬ್ರಹಾಮನ ದೇವರ ಪ್ರಜೆಯಾಗಿರುವದಕ್ಕೆ ಕೂಡಿ ಬರುತ್ತಾರೆ;
ಯಾಕಂದರೆ ಭೂಪಾಲಕರೆಲ್ಲಾ ದೇವರಿಗೇ ಅಧೀನರಾಗಿದ್ದಾರೆ.
ಆತನೇ ಸರ್ವೋನ್ನತನು.

ಚೀಯೋನನ್ನು ರಕ್ಷಿಸಿದ್ದಕ್ಕಾಗಿ ಯೆಹೋವನನ್ನು ಕೊಂಡಾಡುವದು.
(ಕೀರ್ತನೆ 46.)
ಹಾಡು; ಕೋರಹೀಯರ ಕೀರ್ತನೆ.

**48** ಯೆಹೋವನು ಮಹೋನ್ನತನು;
ನಮ್ಮ ದೇವರು ತನ್ನ ಪರಿಶುದ್ಧ ಪರ್ವತನಗರದಲ್ಲಿ ಸರ್ವಸ್ತುತಿಪಾತ್ರನಾಗಿದ್ದಾನೆ.
2 ರಾಜಾಧಿರಾಜನ ಪಟ್ಟಣವಿರುವ ಚೀಯೋನ್ ಪರ್ವತವು
ಉತ್ತರದಿಕ್ಕಿನಲ್ಲಿ ಉನ್ನತವಾಗಿಯೂ ರಮ್ಯವಾಗಿಯೂ ಭೂಲೋಕದಲ್ಲೆಲ್ಲಾ ಕಂಗೊಳಿಸುತ್ತಿರುವದು.
3 ದೇವರು ಅದರ ಕೊತ್ತಲುಗಳಲ್ಲಿ
ತಾನೇ ಭದ್ರವಾದ ಬುರುಜೆಂದು ಕೀರ್ತಿಪಡೆದನು.

4 ರಾಜರು ಕೂಡಿಕೊಂಡರು; ಅವರು ಒಗ್ಗಟ್ಟಾಗಿ ಬಂದರು.
5 ನೋಡಿ ಬೆರಗಾದರು; ತಲ್ಲಣಿಸಿ ಓಡಿಹೋದರು.
6 ಕಂಪನವೂ ಹೆರುವವಳಂತೆ ವೇದನೆಯೂ ಅವರಿಗುಂಟಾಯಿತು.
7 ದೇವರೇ, ನೀನು ಬಿರುಗಾಳಿಯಿಂದ
ತಾರ್ಷೀಷ್ ದೇಶದ ದೊಡ್ಡ ದೊಡ್ಡ ಹಡಗುಗಳನ್ನು ಒಡೆದುಬಿಟ್ಟಂತಾಯಿತು.
8 ನಾವು ಕಿವಿಯಿಂದ ಕೇಳಿದಂತೆಯೇ ಈಗ ಕಣ್ಣಾರೆ ಕಂಡೆವು;
ನಮ್ಮ ದೇವರೂ ಸೇನಾಧೀಶನೂ ಆಗಿರುವ ಯೆಹೋವನ ಸಂಸ್ಥಾನದಲ್ಲಿ ಆತನ ಮಹತ್ತನ್ನು ನೋಡಿದ್ದೇವೆ.
ದೇವರು ಅದನ್ನು ಶಾಶ್ವತವಾಗಿಯೇ ಸ್ಥಾಪಿಸುವನು. ಸೆಲಾ.

9 ದೇವರೇ, ನಾವು ನಿನ್ನ ಆಲಯದಲ್ಲಿ ನಿನ್ನ ಪ್ರೀತಿಯನ್ನು ಸ್ಮರಿಸುತ್ತೇವೆ;
10 ದೇವರೇ, ನಿನ್ನ ನಾಮದ ಘನತೆಗೆ ತಕ್ಕಂತೆಯೇ ಲೋಕವೆಲ್ಲಾ ನಿನ್ನನ್ನು ಹೊಗಳುವದು.
ನಿನ್ನ ಬಲಗೈ ನೀತಿಯನ್ನು ನೆರವೇರಿಸಿತು.
11 ಚೀಯೋನ್ ಪಟ್ಟಣದವರು ಹರ್ಷಿಸಲಿ;
ನೀನು ನ್ಯಾಯವನ್ನು ನಿರ್ಣಯಿಸಿದ್ದರಿಂದ ಯೆಹೂದಸೀಮೆಯ ನಿವಾಸಿಗಳು ಆನಂದಪಡಲಿ.

12 ಚೀಯೋನ್ ಸಂಸ್ಥಾನದ ಸುತ್ತಲು ಸಂಚರಿಸಿ
ಅದರ ಬುರುಜುಗಳನ್ನು ಲೆಕ್ಕಿಸಿರಿ.
13 ಅದರ ಪ್ರಾಕಾರಗಳನ್ನು ಚೆನ್ನಾಗಿ ನೋಡಿರಿ;
ಅದರ ಕೊತ್ತಲುಗಳನ್ನು ಸೂಕ್ಷ್ಮವಾಗಿ ಗಮನಿಸಿರಿ.
14 ಆಗ ನೀವು ನಿಮ್ಮ ಮುಂದಣ ಸಂತತಿಯವರಿಗೆ—ದೇವರು ಇಂಥವನು;
ಆತನು ಯುಗಯುಗಾಂತರಗಳಲ್ಲಿಯೂ ನಮ್ಮ ದೇವರು,
ನಿರಂತರವೂ ನಮ್ಮನ್ನು ನಡಿಸುವವನಾಗಿದ್ದಾನೆ ಎಂದು ತಿಳಿಸುವಿರಿ.

ಐಶ್ವರ್ಯ ವ್ಯರ್ಥ; ಮರಣ ನಿಶ್ಚಯ; ಸದ್ಭಕ್ತರಿಗೆ ಗತಿಯುಂಟು ಎಂಬದು. (ಕೀರ್ತನೆ 73.)
ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು;
ಕೋರಹೀಯರ ಕೀರ್ತನೆ.

**49** ಸಕಲ ದೇಶಗಳವರೇ, ಕೇಳಿರಿ; ಭೂಲೋಕದ ನಿವಾಸಿಗಳಿರಾ, ಕಿವಿಗೊಡಿರಿ.
2 ಜನಗಳೇ ಜನಾಧಿಪತಿಗಳೇ, ಬಡವರೇ ಬಲ್ಲಿದರೇ, ನೀವೆಲ್ಲರೂ ಒಂದಾಗಿ ಬಂದು ಆಲೈಸಿರಿ.
3 ನನ್ನ ಬಾಯಿ ಸುಜ್ಞಾನವನ್ನು ಬೋಧಿಸುವದು;
ನನ್ನ ಹೃದಯವು ವಿವೇಕವನ್ನು ಫಲಿಸುವದು.
4 ನಾನು ಧರ್ಮರಹಸ್ಯವನ್ನು ಕಿವಿಗೊಟ್ಟು ಕೇಳಿ
ಕಿನ್ನರಿಯನ್ನು ಬಾರಿಸುತ್ತಾ ಅದರ ಗೂಢಾರ್ಥವನ್ನು ಪ್ರಕಟಿಸುವೆನು.

5 ಆಪತ್ತಿನಲ್ಲಿ ಯಾಕೆ ಭಯಪಡಬೇಕು?
ದ್ವೇಷಿಗಳು ಮೋಸದಿಂದ ಸುತ್ತಿಕೊಂಡಿರುವಾಗ ನಾನು ಹೆದರುವದೇಕೆ?
6 ಅವರು ತಮ್ಮ ಐಶ್ವರ್ಯವನ್ನೇ ನಂಬಿದ್ದಾರೆ;
ತಾವು ಬಹಳ ಆಸ್ತಿವಂತರೆಂದು ಉಬ್ಬಿದ್ದಾರೆ.
7 ಆದರೆ ಯಾವನಾದರೂ ತನ್ನ ಸಹೋದರನು ಸಮಾಧಿಯಲ್ಲಿ ಸೇರದೆ
ಶಾಶ್ವತವಾಗಿ ಬದುಕಿರುವದಕ್ಕಾಗಿ
8 ದೇವರಿಗೆ ಈಡನ್ನು ಕೊಟ್ಟು ಅವನ ಪ್ರಾಣವನ್ನು ಬಿಡಿಸಲಾರನು.
9 ಮರಣವನ್ನು ತಪ್ಪಿಸಿಕೊಳ್ಳುವದಕ್ಕೆ ಎಷ್ಟು ಹಣ ಕೊಟ್ಟರೂ ಸಾಲುವದೇ ಇಲ್ಲ;
ಅಂಥ ಪ್ರಯತ್ನವನ್ನು ನಿಷ್ಫಲವೆಂದು ಬಿಟ್ಟೇಬಿಡಬೇಕು.
10 ಸುಜ್ಞಾನಿಗಳು ಸಾಯುವದನ್ನು ನೋಡುತ್ತೇವಲ್ಲಾ;
ಹಾಗೆಯೇ ಪಶುಗಳಂತಿರುವ ಜ್ಞಾನಹೀನರೂ ನಾಶವಾಗುತ್ತಾರೆ.
ಅವರು ನಂಬಿದ್ದ ಆಸ್ತಿಯು ಇತರರ ಪಾಲಾಗುತ್ತದೆ.
11 ಯಾರು ವಿಸ್ತಾರವಾದ ಭೂಸ್ಥಿತಿಗಳಿಗೆ ತಮ್ಮ ಹೆಸರುಗಳನ್ನು ಕೊಟ್ಟಿದ್ದಾರೋ
ಅಂಥವರಿಗೂ ಸಮಾಧಿಯೇ ಶಾಶ್ವತಮಂದಿರವು; ಅದೇ ಅವರ ನಿತ್ಯನಿವಾಸಸ್ಥಾನ.

12 ಮನುಷ್ಯನು ಎಷ್ಟು ಘನವಾದ ಪದವಿಯಲ್ಲಿ
ದ್ದರೂ ಸ್ಥಿರವಿಲ್ಲ;
ಪಶುಗಳಂತೆಯೇ ಇಲ್ಲವಾಗುತ್ತಾನೆ.

13 ಮೂರ್ಖರಿಗೂ ಅವರ ಮಾತಿನಂತೆ ನಡೆಯುವವರಿಗೂ
ಇದೇ ಗತಿ. ಸೆಲಾ.
14 ಅವರು ಕುರಿಗಳಂತೆ ಪಾತಾಳದಲ್ಲಿ ದಟ್ಟವಾಗಿ ಸೇರಿ
ಸಲ್ಪಡುವರು;
ಮೃತ್ಯುವೇ ಅವರ ಪಾಲಕನು.
ಅವರಿಗೆ ನಿವಾಸವಿಲ್ಲದ ಹಾಗೆ ಪಾತಾಳವು ಅವರ
ರೂಪವನ್ನು ನಾಶಮಾಡುವದು;
ಉದಯಕಾಲದಲ್ಲಿ ಯಥಾರ್ಥರು ಅವರ ಮೇಲೆ
ದೊರೆತನನಡಿಸುವರು.
15 ಆದರೆ ದೇವರು ನನ್ನ ಪ್ರಾಣವನ್ನು ಮೃತ್ಯುಹಸ್ತದಿಂದ
ತಪ್ಪಿಸಿ
ಸ್ವೀಕಾರಮಾಡುವನು. ಸೆಲಾ.
16 ಒಬ್ಬನ ಐಶ್ವರ್ಯವೂ ಗೃಹವೈಭವವೂ ವೃದ್ಧಿಯಾದಾಗ
ಕಳವಳಿಸಬೇಡ.
17 ಅವನು ಸಾಯುವಾಗ ಏನೂ ತೆಗೆದುಕೊಂಡುಹೋಗ
ಲಾರನಷ್ಟೆ;
ಅವನ ವೈಭವವು ಅವನೊಡನೆ ಹೋಗುವದಿಲ್ಲ.
18 ಸಿರಿ ಬಂದಾಗ ಹೆರರ ಹೊಗಳಿಕೆ ತಪ್ಪದು ಎಂಬಂತೆ
ಅವನು ಜೀವಮಾನದಲ್ಲಿ ಆತ್ಮಸ್ತುತಿಯಿಂದಲೂ ಜನ
ಸ್ತುತಿಯಿಂದಲೂ ಕೂಡಿದವನಾದರೂ
19 ಪಿತೃಗಳ ಬಳಿಗೆ ಸೇರಿ ಅವರಂತೆಯೇ ಎಂದಿಗೂ ಬೆಳ
ಕನ್ನು ಕಾಣದೆ ಇರುವನು.
20 ವಿವೇಕಹೀನಮನುಷ್ಯನು ಎಷ್ಟು ಘನವಾದ ಪದವಿ
ಯಲ್ಲಿದ್ದರೂ
ಪಶುಗಳಂತೆಯೇ ಇಲ್ಲವಾಗುತ್ತಾನೆ.

ದೇವರು ಸದಾಚಾರವನ್ನೇ ಮೆಚ್ಚುವವನೆಂಬದು.

ಆಸಾಫನ ಕೀರ್ತನೆ.

**50** ದೇವದೇವನಾದ ಯೆಹೋವನು ಪೂರ್ವದಿಂದ ಪಶ್ಚಿ
ಮದಿಕ್ಕಿನ ವರೆಗೂ ಇರುವ ಭೂನಿವಾಸಿಗಳೆಲ್ಲ
ರನ್ನೂ
ತನ್ನ ಸನ್ನಿಧಿಯಲ್ಲಿ ಬರಬೇಕೆಂದು ಆಜ್ಞಾಪಿಸುತ್ತಾನೆ.
2 ಅತ್ಯಂತ ರಮಣೀಯವಾದ ಚೀಯೋನಿನಲ್ಲಿರುವ
ದೇವರು ಪ್ರಕಾಶಿಸುತ್ತಾನೆ.
3 ನಮ್ಮ ದೇವರು ಪ್ರತ್ಯಕ್ಷನಾಗುವನು, ಎಷ್ಟು ಮಾತ್ರವೂ
ಸುಮ್ಮನಿರುವದಿಲ್ಲ;
ಆತನ ಮುಂಭಾಗದಲ್ಲಿ ಬೆಂಕಿ ಪ್ರಜ್ವಲಿಸುತ್ತದೆ;
ಆತನ ಸುತ್ತಲು ಬಿರುಗಾಳಿ ಬೀಸುತ್ತದೆ.
4 ಆತನು ತನ್ನ ಪ್ರಜೆಗಳ ನ್ಯಾಯವಿಚಾರಣೆಯಲ್ಲಿ
ಭೂಮ್ಯಾಕಾಶಗಳನ್ನು ಸಾಕ್ಷಿಗಳಾಗಿ ನೇಮಿಸುತ್ತಾನೆ.
5 ನನ್ನೊಡನೆ ಯಜ್ಞದ ಮೂಲಕ ಒಡಂಬಡಿಕೆಯನ್ನು
ಮಾಡಿಕೊಂಡ ನನ್ನ ಭಕ್ತರನ್ನು
ನನ್ನ ಬಳಿಗೆ ಕರಕೊಂಡು ಬನ್ನಿರಿ ಎಂದು ಆಜ್ಞಾಪಿಸು
ತ್ತಾನೆ.
6 ದೇವರು ತಾನೇ ನ್ಯಾಯಾಧಿಪತಿ;
ಆತನು ನೀತಿಸ್ವರೂಪನೆಂದು ಆಕಾಶಮಂಡಲವು ಘೋ
ಷಿಸುತ್ತದೆ. ಸೆಲಾ.

7 [ಆತನು ಆಜ್ಞಾಪಿಸುವದೇನಂದರೆ—]
ಪ್ರಜೆಗಳಿರಾ, ಇಸ್ರಾಯೇಲ್ಯರೇ, ದೇವರಾದ ನಾ
ನಿಮ್ಮ ದೇವರು;
ನಿಮಗೆ ಖಂಡಿತವಾಗಿ ಹೇಳುತ್ತೇನೆ, ಕೇಳಿರಿ.
8 ನಾನು ನಿಮ್ಮ ಯಜ್ಞಗಳ ವಿಷಯದಲ್ಲಿ ತಪ್ಪೆಣಿಸು
ದಿಲ್ಲ;
ಸರ್ವಾಂಗಹೋಮಗಳನ್ನು ನೀವು ನಿತ್ಯವೂ ನನ
ಸಮರ್ಪಿಸುತ್ತೀರಲ್ಲಾ,
9 ಆದರೂ ನಿಮ್ಮ ಮನೆಗಳಿಂದ ನನಗೆ ಹೋರಿ ಬೇಕ
ಗಿಲ್ಲ;
ನಿಮ್ಮ ದೊಡ್ಡಿಗಳಿಂದ ಹೋತ ಬೇಕಿಲ್ಲ.
10 ಕಾಡಿನಲ್ಲಿರುವ ಸರ್ವಮೃಗಗಳೂ ಗುಡ್ಡಗಳ
ರುವ ಸಾವಿರಾರು ಪಶುಗಳೂ ನನ್ನವೇ.
11 ಬೆಟ್ಟಗಳ ಪಕ್ಷಿಗಳನ್ನೆಲ್ಲಾ ಬಲ್ಲೆ;
ಅಡವಿಯ ಜೀವಜಂತುಗಳೆಲ್ಲಾ ನನಗೆ ಗೊತ್ತುಂಟು
12 ನನಗೆ ಹಸಿವೆಯಿದ್ದರೆ ನಿಮಗೆ ತಿಳಿಸುವದಿಲ್ಲ;
ಲೋಕವೂ ಅದರಲ್ಲಿರುವದೆಲ್ಲವೂ ನನ್ನದಲ್ಲವೇ.
13 ನಾನು ಹೋರಿಗಳ ಮಾಂಸವನ್ನು ತಿನ್ನುವದೂ
ಹೋತಗಳ ರಕ್ತವನ್ನು ಕುಡಿಯುವದೂ ಉಂಟೆ
14 ಸ್ತುತಿಯಜ್ಞವನ್ನೇ ದೇವರಿಗೆ ಸಮರ್ಪಿಸಿರಿ;
ಮಾಡಿದ ಹರಕೆಗಳನ್ನು ಪರಾತ್ಪರನಿಗೆ ಸಲ್ಲಿಸಿ
15 ಕಷ್ಟಕಾಲದಲ್ಲಿ ನನಗೆ ಮೊರೆಯಿಡಿರಿ; ಬಿಡಿಸುವೆನ
ಆಗ ನನ್ನನ್ನು ಕೊಂಡಾಡುವಿರಿ.

16 ದುಷ್ಟರಿಗಾದರೋ ದೇವರು ಹೇಳುವದೇನಂದರೆ—
ನನ್ನ ವಿಧಿಗಳನ್ನು ಪಠಿಸುವದಕ್ಕೆ ನಿಮಗೇನು ಬ
ಧ್ಯತೆ ಉಂಟು?
ನನ್ನ ನಿಬಂಧನೆಯನ್ನು ಉಚ್ಚರಿಸುವದು ನಿಮಗೇನ
ಕೆಲಸ?
17 ನೀವೋ ನನ್ನ ಸುಶಿಕ್ಷಣವನ್ನು ಹಗೆಮಾಡುತ್ತಿ
ರಲ್ಲಾ;
ನನ್ನ ಆಜ್ಞೆಯನ್ನು ಉಲ್ಲಂಘಿಸುತ್ತೀರಿ.
18 ನೀವು ಚೋರರೊಡನೆ ಸಂತೋಷದಿಂದ ಸೇರ
ತ್ತೀರಿ;
ಜಾರರ ಒಡನಾಟವೇ ನಿಮಗೆ ಇಷ್ಟ.
19 ನಿಮ್ಮ ಬಾಯನ್ನು ಕೇಡಿಗೆ ಒಪ್ಪಿಸುತ್ತೀರಿ;
ನಾಲಿಗೆಯು ಮೋಸವನ್ನು ನೇಯುತ್ತದೆ.
20 ಸಹೋದರನನ್ನು ಕ್ಷುದ್ರಮಾಡುತ್ತಾ ಕೂತುಕೆ
ಳ್ಳುತ್ತೀರಿ;
ಒಡಹುಟ್ಟಿದವರನ್ನು ದೂರುತ್ತೀರಿ.
21 ನೀವು ಹೀಗೆ ಮಾಡಿದರೂ ನಾನು ಸುಮ್ಮ
ಇದ್ದದರಿಂದ
ದೇವರೂ ನಮ್ಮಂಥವನೇ ಎಂದು ನೆನಸಿಕೊಂಡಿ
ಈಗಲಾದರೋ ನಾನು ಎಲ್ಲವನ್ನು ನಿಮ್ಮ ಮುಂ
ವಿವರಿಸಿ
ನಿಮ್ಮನ್ನು ಅಪರಾಧಿಗಳೆಂದು ಸ್ಥಾಪಿಸುವೆನು.

2 ದೇವರನ್ನು ಬಿಟ್ಟವರೇ, ಇದನ್ನು ಮನಸ್ಸಿಗೆ ತಂದು ಕೊಳ್ಳಿರಿ;
ಇಲ್ಲವಾದರೆ ನಿಮ್ಮನ್ನು ಹರಿದುಬಿಟ್ಟೇನು.
ನಿಮ್ಮನ್ನು ತಪ್ಪಿಸುವವರು ಯಾರೂ ಇರುವದಿಲ್ಲ.
3 ಯಾರು ಸ್ತುತಿಯಜ್ಞವನ್ನು ಸಮರ್ಪಿಸುತ್ತಾರೋ ಅವರೇ ನನ್ನನ್ನು ಗೌರವಿಸುವವರು;
[1])ತಮ್ಮ ನಡತೆಯನ್ನು ಸರಿಪಡಿಸಿಕೊಳ್ಳುವವರಿಗೆ ನನ್ನ ವಿಶೇಷವಾದ ರಕ್ಷಣೆಯನ್ನು ತೋರಿಸು ವೆನು.

ಪಾಪಕ್ಷಮಾಪಣೆಯನ್ನು ಬೇಡಿಕೊಳ್ಳುವದು.
(ಎಜ್ರ 9. 5—9; ನೆಹೆಮೀಯ 1. 4—7; 9. ದಾನಿಯೇಲ 9.)
ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು;
ದಾವೀದನು ಬತ್ಸೇಬಳ ಬಳಿಗೆ ಹೋದ ಮೇಲೆ ಪ್ರವಾದಿಯಾದ
ನಾತಾನನು ಅವನ ಹತ್ತಿರ ಬಂದಾಗ ಆತನು ರಚಿಸಿದ ಕೀರ್ತನೆ.
(೨ ಸಮುವೇಲ 11; 12.)

51 ಪ್ರೀತಿಸ್ವರೂಪನಾದ ದೇವರೇ, ನನ್ನನ್ನು ಕರುಣಿಸು;
ಕರುಣಾನಿಧಿಯೇ, ನನ್ನ ದ್ರೋಹವನ್ನೆಲ್ಲಾ ಅಳಿಸಿ ಬಿಡು.
2 ನನ್ನ ಪಾಪವನ್ನು ಸಂಪೂರ್ಣವಾಗಿ ತೊಳೆದುಬಿಡು;
ನನ್ನ ದೋಷವನ್ನು ಪರಿಹರಿಸಿ ನನ್ನನ್ನು ಶುದ್ಧಿ ಗೊಳಿಸು.

3 ನಾನು ದ್ರೋಹಿ ಎಂದು ನಾನೇ ಒಪ್ಪಿಕೊಂಡಿದ್ದೇನೆ;
ನನ್ನ ಪಾಪವು ಯಾವಾಗಲೂ ನನ್ನ ಮುಂದೆ ಇದೆ.
4 ನಿನಗೇ ಕೇವಲ ನಿನಗೇ ತಪ್ಪುಮಾಡಿದ್ದೇನೆ;
ನಿನ್ನ ದೃಷ್ಟಿಗೆ ಕೆಟ್ಟದ್ದಾಗಿರುವದನ್ನೇ ಮಾಡಿದ್ದೇನೆ.
ನಿನ್ನ ನಿರ್ಣಯು ನ್ಯಾಯವಾಗಿಯೂ ನಿನ್ನ ತೀರ್ಪು ನಿಷ್ಕಳಂಕವಾಗಿಯೂ ಇರುತ್ತದಲ್ಲಾ.
5 ಹುಟ್ಟಿದಂದಿನಿಂದ ನಾನು ಪಾಪಿಯೇ;
ಮಾತೃಗರ್ಭವನ್ನು ಹೊಂದಿದ ದಿನದಿಂದ ದ್ರೋಹಿಯೇ.
6 ಯಥಾರ್ಥಚಿತ್ತವೇ ನಿನಗೆ ಸಂತೋಷ;
ಸುಜ್ಞಾನದ ರಹಸ್ಯಗಳನ್ನು ನನಗೆ ತಿಳಿಯಪಡಿಸು.

7 ಹಿಸ್ಸೋಪ್ ಗಿಡದ ಬರಲಿನಿಂದ ನೀರನ್ನು ಚಿಮಕಿಸಿ ಯೋ ಎಂಬಂತೆ
ನನ್ನ ಅಶುದ್ಧತ್ವವನ್ನು ತೆಗೆದುಬಿಡು, ಆಗ ಶುದ್ಧನಾ ಗಿರುವೆನು;
ನನ್ನನ್ನು ತೊಳೆ, ಆಗ ಹಿಮಕ್ಕಿಂತಲೂ ಬೆಳ್ಳಗಾಗು ವೆನು.
8 ನನ್ನಲ್ಲಿ ಸಂಭ್ರಮೋತ್ಸವದ ಧ್ವನಿ ಉಂಟಾಗುವಂತೆ ಮಾಡು;
ಆಗ ನೀನು ಜಜ್ಜಿದ ಎಲುಬುಗಳು ಆನಂದಪಡು ವವು.
9 ನನ್ನ ದೋಷಕ್ಕೆ ವಿಮುಖನಾಗು;
ನನ್ನ ಪಾಪಗಳನ್ನೆಲ್ಲಾ ಅಳಿಸಿಬಿಡು.

10 ದೇವರೇ, ನನ್ನಲ್ಲಿ ಶುದ್ಧಹೃದಯವನ್ನು ನಿರ್ಮಿಸು;
ನನಗೆ ಸ್ಥಿರಚಿತ್ತವನ್ನು ಅನುಗ್ರಹಿಸಿ ನನ್ನನ್ನು ನೂತನ ಪಡಿಸು.
11 ನಿನ್ನ ಸನ್ನಿಧಿಯಿಂದ ನನ್ನನ್ನು ತಳ್ಳಬೇಡ;
ನಿನ್ನ ಪರಿಶುದ್ಧಾತ್ಮವನ್ನು ನನ್ನಿಂದ ತೆಗೆಯಬೇಡ.
12 ನಿನ್ನ ರಕ್ಷಣಾನಂದವನ್ನು ನಾನು ತಿರಿಗಿ ಅನುಭವಿಸು ವಂತೆ ಮಾಡು;
ನನ್ನಲ್ಲಿ ಸಿದ್ಧಮನಸ್ಸನ್ನು ಹುಟ್ಟಿಸಿ ನನಗೆ ಆಧಾರ ನಾಗು.
13 ಆಗ ನಿನ್ನ ಮಾರ್ಗವನ್ನು ದ್ರೋಹಿಗಳಿಗೆ ಬೋಧಿಸು ವೆನು;
ಪಾಪಿಗಳು ನಿನ್ನ ಕಡೆಗೆ ತಿರುಗಿಕೊಳ್ಳುವರು.

14 ದೇವರೇ, ನನ್ನ ರಕ್ಷಣಕರ್ತನೇ, ಪ್ರಾಣಹತ್ಯದ ಅಪರಾಧದಿಂದ ನನ್ನನ್ನು ಬಿಡಿಸು;
ಆಗ ನನ್ನ ನಾಲಿಗೆಯು ಉತ್ಸಾಹದಿಂದ ನಿನ್ನ ಸತ್ಯ ಸಂಧತೆಯನ್ನು ಕೊಂಡಾಡುವದು.
15 ಕರ್ತನೇ, ನನ್ನ ಬಾಯಿ ನಿನ್ನನ್ನು ಸ್ತೋತ್ರಮಾಡು ವಂತೆ
ನನ್ನ ತುಟಿಗಳನ್ನು ತೆರೆಯಮಾಡು.
16 ನಿನಗೆ ಯಜ್ಞಗಳಲ್ಲಿ ಅಪೇಕ್ಷೆಯಿಲ್ಲ, ಇದ್ದರೆ ಸಮ ರ್ಪಿಸೇನು;
ಸರ್ವಾಂಗಹೋಮಗಳಲ್ಲಿ ನಿನಗೆ ಸಂತೋಷವಿಲ್ಲ.
17 ಕುಗ್ಗಿದ ಮನಸ್ಸೇ ದೇವರಿಗೆ ಇಷ್ಟಯಜ್ಞ;
ದೇವರೇ, ಪಶ್ಚಾತ್ತಾಪದಿಂದ ಜಜ್ಜಿಹೋದ ಮನಸ್ಸನ್ನು ನೀನು ತಿರಸ್ಕರಿಸುವದಿಲ್ಲ.

18 ಚೀಯೋನ್ ಪಟ್ಟಣವನ್ನು ಕಟಾಕ್ಷಿಸಿ ಅದಕ್ಕೆ ಶುಭವನ್ನುಂಟುಮಾಡು;
ಯೆರೂಸಲೇಮಿನ ಪೌಳಿಗೋಡೆಯನ್ನು ಕಟ್ಟಿಸು.
19 ಜನರು ನ್ಯಾಯವಾದ ಯಜ್ಞಗಳನ್ನೂ ಸರ್ವಾಂಗ ಹೋಮಗಳನ್ನೂ ಸಮರ್ಪಿಸಿ
ನಿನಗೆ ಸಂತೋಷವನ್ನುಂಟುಮಾಡುವರು.
ನಿನ್ನ ಯಜ್ಞವೇದಿಯ ಮೇಲೆ ಹೋರಿಗಳನ್ನು ಸಮರ್ಪಿಸುವರು.

ದುಷ್ಟಾಧಿಕಾರಿಯ ದುಸ್ವಭಾವವನ್ನು ಖಂಡಿಸುವದು.
(ಯೆಶಾಯ 22. 15—18; ಯೆರೆಮೀಯ 20. 1—6.)
ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು;
ದಾವೀದನು ಅಹೀಮೆಲೆಕನ ಮನೆಗೆ ಬಂದ ವರ್ತಮಾನವನ್ನು
ಎದೋಮ್ಯನಾದ ದೋಯೇಗನು ಸೌಲನಿಗೆ ತಿಳಿಸಿದಾಗ
ದಾವೀದನು ರಚಿಸಿದ ಪದ್ಯ.
(೧ ಸಮುವೇಲ 21; 22.)

52 ದುಷ್ಟಾಧಿಕಾರಿಯೇ, ನೀನು ಕೆಡುಕುಮಾಡಿ ಹಿಗ್ಗು ವದೇನು?
ದೇವರ ಕೃಪೆಯು ಯಾವಾಗಲೂ ಇರುವದು.

1) ಅಥವಾ, ನಾನು ನನ್ನ ವಿಶೇಷವಾದ ರಕ್ಷಣೆಯನ್ನು ತೋರಿಸುವದಕ್ಕೆ ಅವರು ಮಾರ್ಗವನ್ನು ಸಿದ್ಧಮಾಡಿಕೊಳ್ಳುತ್ತಾರೆ.

2 ಮೋಸಗಾರನೇ, ನಿನ್ನ ನಾಲಿಗೆಯು ಹದವಾದ ಕ್ಷೌರ
ಕತ್ತಿಯಂತೆ
ಅಪಾಯಗಳನ್ನೇ ಕಲ್ಪಿಸುತ್ತದೆ.
3 ಉಪಕಾರಕ್ಕಿಂತಲೂ ಅಪಕಾರವೇ ನಿನಗೆ ಇಷ್ಟ;
ನೀತಿಯನ್ನು ಬಿಟ್ಟು ಸುಳ್ಳನ್ನು ಸ್ಥಾಪಿಸುವದೇ ನಿನಗೆ
ಸಂತೋಷ. ಸೆಲಾ.
4 ಮೋಸದ ನಾಲಿಗೆಯೇ, ಹಾನಿಕರವಾದ ಮಾತುಗಳೇ
ನಿನಗೆ ಇಷ್ಟ.

5 ದೇವರು ನಿನ್ನನ್ನು ಎಂದಿಗೂ ಏಳದಂತೆ ಕೆಡವಿಬಿಡು
ವನು; ನಿನ್ನನ್ನು ಹಿಡಿದು ನಿವಾಸದೊಳಗಿಂದ ಕಿತ್ತು
ಬೀಸಾಡುವನು;
ಆತನು ನಿನ್ನನ್ನು ಜೀವಲೋಕದಿಂದ ಬೇರು ಸಹಿತ
ವಾಗಿ ಕಿತ್ತುಹಾಕುವನು. ಸೆಲಾ.
6 ನೀತಿವಂತರು ಅದನ್ನು ನೋಡಿ ಭಯಪಡುವರು;
ಅವರು ಪರಿಹಾಸ್ಯಮಾಡುತ್ತಾ—
7 ನೋಡಿರಿ, ದೇವರನ್ನು ಆಶ್ರಯಿಸಿಕೊಳ್ಳದೆ ತನ್ನ ಅಧಿಕ
ವಾದ ಐಶ್ವರ್ಯದಲ್ಲಿ ಭರವಸವಿಟ್ಟು
ತನ್ನ ದುಷ್ಟತ್ವವೇ ತನಗೆ ಬಲವೆಂದು ನಂಬಿಕೊಂಡ
ಮೂಢನು ಇವನೇ ಎಂದು ಹೇಳುವರು.

8 ಆದರೆ ನಾನು ದೇವಾಲಯದ ಸೊಗಸಾದ ಎಣ್ಣೇ
ಮರದಂತಿರುವೆನು;
ದೇವರ ಕೃಪೆಯನ್ನು ಯುಗಯುಗಾಂತರಗಳಲ್ಲಿಯೂ
ನಂಬಿಕೊಂಡಿರುವೆನು.
9 [ದೇವರೇ,] ನಿನ್ನ ಉಪಕಾರಕ್ಕಾಗಿ ಯಾವಾಗಲೂ
ನಿನ್ನನ್ನು ಸ್ತುತಿಸುವೆನು;
ನಿನ್ನ ನಾಮವು ಸರ್ವೋತ್ತಮವೆಂದು ನಿನ್ನ ಭಕ್ತರ
ಮುಂದೆ ಅದನ್ನೇ ನಿರೀಕ್ಷಿಸಿಕೊಂಡಿರುವೆನು.

ದುಷ್ಟನಾಸ್ತಿಕರಿಂದ ತಪ್ಪಿಸಿ ಕಾಪಾಡಬೇಕೆಂದು ಪ್ರಾರ್ಥಿಸುವದು.
(ಕೀರ್ತನೆ 14.)
ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು;
ಮಹಲಾತ್ ಎಂಬ ರಾಗದ ಪ್ರಕಾರ ಹಾಡತಕ್ಕದ್ದು;
ದಾವೀದನ ಪದ್ಯ.

53 ದುರ್ಮತಿಗಳು—ದೇವರಿಲ್ಲವೆಂದು ಮನಸ್ಸಿನಲ್ಲಿ
ಅಂದುಕೊಳ್ಳುತ್ತಾರೆ;
ಅವರು ಕೆಟ್ಟುಹೋದವರು; ಹೇಯಕೃತ್ಯಗಳನ್ನು
ನಡಿಸುತ್ತಾರೆ;
ಅವರಲ್ಲಿ ಒಳ್ಳೆಯದನ್ನು ಮಾಡುವವರೇ ಇಲ್ಲ.
2 ಮನುಷ್ಯರಲ್ಲಿ ತನ್ನ ಸಾನ್ನಿಧ್ಯವನ್ನು ಅಪೇಕ್ಷಿಸುವ
ಬುದ್ಧಿವಂತರು ಇದ್ದಾರೋ ಎಂದು
ದೇವರು ಆಕಾಶದಿಂದ ಮನುಷ್ಯರನ್ನು ನೋಡಲಾಗಿ
3 ಒಳ್ಳೆಯದನ್ನು ನಡಿಸುವವರು ಒಬ್ಬರಾದರೂ ಇಲ್ಲ;
ಅವರೆಲ್ಲರೂ ದ್ರೋಹಿಗಳಾಗಿ ಕೆಟ್ಟುಹೋದವರೇ.

4 ದುಷ್ಟತ್ವವನ್ನು ನಡಿಸುವವರು ತಿಳಿಯುವದಿಲ್ಲವೋ?
ಅವರು ನನ್ನ ಜನರನ್ನು ಆಹಾರವನ್ನೋ ಎಂಬಂತೆ
ನುಂಗಿಬಿಡುತ್ತಾರೆ;
ದೇವರನ್ನು ಸ್ಮರಿಸುವದಿಲ್ಲ.
5 ಭಯಪಡುವದಕ್ಕೆ ಕಾರಣವಿಲ್ಲದಿದ್ದರೂ ಅವರು ಪಕ್
ಭಯಭ್ರಾಂತರಾದರು;
ನಿಮಗೆ ಮುತ್ತಿಗೆಹಾಕಿದವರನ್ನು ದೇವರು ಸಂಹ
ಅವರ ಎಲುಬುಗಳನ್ನು ಚದರಿಸಿಬಿಟ್ಟನಲ್ಲಾ.
ದೇವರು ಅವರನ್ನು ಕೈಬಿಟ್ಟದ್ದರಿಂದ ನೀವು ಅವರ
ಅಪಜಯಪಡಿಸಿದಿರಿ.

6 ಚೀಯೋನಿನಿಂದ ಇಸ್ರಾಯೇಲ್ಯರಿಗೆ ರಕ್ಷಣೆಯು
ಗನೆ ಬರಲಿ.
ದೇವರು ದುರವಸ್ಥೆಯಿಂದ ತಪ್ಪಿಸಿದಾಗ
ಆತನ ಪ್ರಜೆಗಳಾಗಿರುವ ಯಾಕೋಬವಂಶದವ
ಉಲ್ಲಾಸಗೊಳ್ಳುವರು;
ಇಸ್ರಾಯೇಲ್ಯರು ಹರ್ಷಿಸುವರು.

ವೈರಿಗಳಿಂದ ರಕ್ಷಿಸಬೇಕೆಂದು ಪ್ರಾರ್ಥಿಸುವದು.
(ಕೀರ್ತನೆ 55—59.)
ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು;
ತಂತಿವಾದ್ಯದೊಡನೆ ಹಾಡತಕ್ಕದ್ದು;
ಜೀಫೆಂಬ ಸ್ಥಳದವರು ಸೌಲನ ಬಳಿಗೆ ಬಂದು ದಾವೀದನು
ತಮ್ಮಲ್ಲೇ ಅಡಗಿಕೊಂಡಿದ್ದಾನೆಂದು ತಿಳಿಸಿದಾಗ ದಾವೀದನು
ರಚಿಸಿದ ಪದ್ಯ.
(೧ ಸಮುವೇಲ 23. 19; 26. 1.)

54 ದೇವರೇ, ನಿನ್ನ ನಾಮಮಹತ್ತಿನಿಂದ ನನ್ನನ
ರಕ್ಷಿಸು;
ನಿನ್ನ ಪರಾಕ್ರಮದಿಂದ ನನ್ನ ನ್ಯಾಯವನ್ನು ಸ್ಥಾಪಿಸ
2 ದೇವರೇ, ನನ್ನ ಪ್ರಾರ್ಥನೆಯನ್ನು ಲಾಲಿಸು;
ನನ್ನ ಮಾತುಗಳಿಗೆ ಕಿವಿಗೊಡು.

3 ಅನ್ಯರು ನನಗೆ ವಿರೋಧವಾಗಿ ನಿಂತಿದ್ದಾರೆ;
ಬಲಾತ್ಕಾರಿಗಳು ನನ್ನ ಪ್ರಾಣವನ್ನು ತೆಗೆಯಬೇಕೆಂ
ದ್ದಾರೆ.
ಅವರು ದೇವರನ್ನು ಲಕ್ಷಿಸುವದೇ ಇಲ್ಲ. ಸೆಲಾ.

4 ಇಗೋ, ದೇವರೇ ನನಗೆ ಸಹಾಯಕನು;
ಕರ್ತನೇ ನನ್ನ ಪ್ರಾಣವನ್ನು ಕಾಪಾಡುವವನು.
5 ನನ್ನ ಕೆಡುಕಿಗೆ ಸಮಯನೋಡುವವರು ತಾ
ಕೇಡನ್ನು ಅನುಭವಿಸಲಿ.
ನೀನು ನಂಬಿಗಸ್ತನಲ್ಲವೇ; ಅವರನ್ನು ನಿರ್ಮೂ
ಮಾಡು.

6 ಯೆಹೋವನೇ, ನೀನು ನನ್ನನ್ನು ಸರ್ವಾಪತ್ತುಗಳ
ಬಿಡಿಸಿ
ನನ್ನ ಕಣ್ಣಮುಂದೆಯೇ ನನ್ನ ವೈರಿಗಳನ್ನು ಶಿಕ್ಷಿಸಿ
ರಿಂದ
7 ನಾನು ಸಂತೋಷದಿಂದ ನಿನಗೆ ಯಜ್ಞವನ್ನು ಸಮ
ಸುವೆನು;
ಉತ್ತಮೋತ್ತಮವಾಗಿರುವ ನಿನ್ನ ಹೆಸರನ್ನು ಕೊಂ
ಡುವೆನು.

ದ್ರೋಹಿಗಳನ್ನು ನಾಶಮಾಡಬೇಕೆಂದು ಯೆಹೋವನಿಗೆ
ಪ್ರಾರ್ಥಿಸುವದು.
ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು.
ತಂತಿವಾದ್ಯದೊಡನೆ ಹಾಡತಕ್ಕದ್ದು:
ದಾವೀದನ ಪದ್ಯ.

**55** ದೇವರೇ, ನನ್ನ ಮೊರೆಯನ್ನು ಲಾಲಿಸು;
ನನ್ನ ವಿಜ್ಞಾಪನೆಗೆ ಕಿವಿಮುಚ್ಚಿಕೊಳ್ಳಬೇಡ.
2 ನನ್ನ ಕಡೆಗೆ ಲಕ್ಷ್ಯಕೊಟ್ಟು ಸದುತ್ತರವನ್ನು ದಯ
ಪಾಲಿಸು.

3 ಶತ್ರುಗಳ ಅಬ್ಬರ, ದುಷ್ಟರ ಹಿಂಸೆ ಇವುಗಳ ದೆಸೆ
ಯಿಂದ ಪ್ರಲಾಪಿಸುವವನಾಗಿ
ಹೊಯ್ದಾಡುತ್ತಾ ನರಳುತ್ತೇನೆ.
ಅವರು ನನ್ನ ಮೇಲೆ ಅಪಾಯವನ್ನು ಬರಮಾಡಿ
ಕೋಪದಿಂದ ನನ್ನನ್ನು ದ್ವೇಷಿಸುತ್ತಾರೆ.
4 ನನ್ನ ಹೃದಯವು ನೊಂದು ಬೆಂದದೆ;
ಮರಣಭಯವು ಆವರಿಸಿಕೊಂಡದೆ.
5 ಅಂಜಿ ನಡುಗುತ್ತೇನೆ;
ದಿಗಿಲು ನನ್ನನ್ನು ಹಿಡಿದದೆ.
6 ಆಹಾ, ನನಗೆ ರೆಕ್ಕೆಗಳಿದ್ದರೆ
ಪಾರಿವಾಳದಂತೆ ಹಾರಿಹೋಗಿ ಆಶ್ರಯಸೇರಿಕೊಳ್ಳುತ್ತಿ
ದ್ದೆನು.
7 ಅವಸರದಿಂದ ಹಾನಿಕರವಾದ ಬಿರುಗಾಳಿಗೆ ತಪ್ಪಿಸಿ
ಕೊಂಡು
8 ದೂರ ಹೋಗಿ ಅರಣ್ಯಸ್ಥಳದಲ್ಲಿ ಪ್ರವಾಸಿಯಾಗಿರು
ತ್ತಿದ್ದೆನು ಅಂದುಕೊಂಡೆನು. ಸೆಲಾ.

9 ಕರ್ತನೇ, ಅವರ ಭಾಷೆಯನ್ನು ತಾರುಮಾರುಮಾಡಿ
ಅವರನ್ನು ಭ್ರಾಂತಿಗೊಳಿಸು.
ಪಟ್ಟಣದಲ್ಲಿ ಕಲಹಬಲಾತ್ಕಾರಗಳು ಕಾಣಬರುತ್ತವೆ.
10 ಅವೇ ಅದರ ಪೌಳಿಗೋಡೆಗಳ ಮೇಲೆ ಹಗಲಿರುಳು
ಸುತ್ತುತ್ತಿರುವ ಕಾವಲುಗಾರರು;
ಊರೊಳಗೆ ಕೇಡುತೊಂದರೆಗಳು ಪ್ರಬಲವಾಗಿವೆ.
11 ಅದರೊಳಗೆಲ್ಲಾ ನಾಶನವೇ;
ತಿಪ್ಪಲಾಟವೂ ವಂಚನೆಯೂ ಅದರ ಬೀದಿಗಳಿಂದ
ತೊಲಗವು.
12 ನನ್ನನ್ನು ದೂಷಿಸುವವನು ವೈರಿಯಾಗಿದ್ದರೆ ತಾಳಿ
ಕೊಂಡೇನು;
ನನ್ನನ್ನು ತಿರಸ್ಕರಿಸಿ ಉಬ್ಬಿಕೊಳ್ಳುವವನು ದ್ವೇಷಿಯಾ
ಗಿದ್ದರೆ ಅಡಗಿಕೊಂಡೇನು.
13 ಅದರೆ ನೀನು ನನಗೆ ಸ್ವಕೀಯನೂ ಆಪ್ತಮಿತ್ರನೂ
ಅಲ್ಲವೇ.
14 ನಾವು ಪರಸ್ಪರವಾಗಿ ರಸಭರಿತಸಂಭಾಷಣೆಮಾಡುತ್ತಾ
ಭಕ್ತಸಮೂಹದೊಡನೆ ದೇವಾಲಯಕ್ಕೆ ಹೋಗುತ್ತಿದ್ದೆ
ವಲ್ಲಾ.
15 ಆ ದುಷ್ಟರಿಗೆ ಮರಣವು ತಟ್ಟನೆ ಬರಲಿ;
ಸಜೀವರಾಗಿಯೇ ಪಾತಾಳಕ್ಕೆ ಇಳಿದುಹೋಗಲಿ.
ಅವರ ಮನೆಯಲ್ಲಿಯೂ ಮನಸ್ಸಿನಲ್ಲಿಯೂ ಕೆಟ್ಟ
ತನವೇ.

16 ನಾನಂತೂ ದೇವರಾದ ಯೆಹೋವನಿಗೆ ಮೊರೆಯಿಡು
ವೆನು;
ಆತನು ನನ್ನನ್ನು ರಕ್ಷಿಸುವನು.
17 ತ್ರಿಕಾಲದಲ್ಲಿಯೂ ಹಂಬಲಿಸುತ್ತಾ ಮೊರೆಯಿಡುವೆನು.
ಆತನು ಹೇಗೂ ನನ್ನ ಮೊರೆಯನ್ನು ಕೇಳಿ
18 ನನ್ನ ವಿರೋಧಿಗಳು ಅನೇಕರಿದ್ದರೂ
ಅವರು ನನ್ನನ್ನು ಮುಟ್ಟದಂತೆ ಸುರಕ್ಷಿತವಾಗಿ ಇಡು
ವನು.
19 ಅನಾದಿಕಾಲದಿಂದ ಆಸನಾರೂಢನಾಗಿರುವ ದೇವರು
ಲಕ್ಷ್ಯವಿಟ್ಟು ಅವರನ್ನು ತಗ್ಗಿಸಿಬಿಡುವನು. ಸೆಲಾ.
ಅವರು ತಮ್ಮ ಸುಖವು ಕದಲದೆಂದುಕೊಂಡು ದೇವ
ರಿಗೆ ಹೆದರುವದಿಲ್ಲ.
20 [1]ಆ ದ್ರೋಹಿಯಾದರೋ ತನ್ನೊಡನೆ ಸಮಾಧಾನ
ದಿಂದಿದ್ದವರ ಮೇಲೆ ವಿರೋಧವಾಗಿ ಕೈಯೆತ್ತಿ
ತಾನು ಮಾಡಿಕೊಂಡ ಒಡಂಬಡಿಕೆಯನ್ನು ಭಂಗಪಡಿಸಿ
ದ್ದಾನೆ.
21 ಅವನ ಬಾಯಿ ಬೆಣ್ಣೆಯಂತೆ ನುಣುಪು; ಹೃದಯವೋ
ಕಲಹಮಯವೇ.
ಅವನ ನುಡಿಗಳು ಎಣ್ಣೆಗಿಂತ ನಯವಾಗಿದ್ದರೂ ಬಿಚ್ಚು
ಕತ್ತಿಗಳೇ ಸರಿ.

22 ನಿನ್ನ ಚಿಂತಾಭಾರವನ್ನು ಯೆಹೋವನ ಮೇಲೆ
ಹಾಕು;
ಆತನು ನಿನ್ನನ್ನು ಉದ್ಧಾರಮಾಡುವನು.
ನೀತಿವಂತನನ್ನು ಎಂದಿಗೂ ಕದಲಗೊಡಿಸನು.
23 ದೇವರೇ, ನೀನು [2]ದುಷ್ಟರನ್ನು ಪಾತಾಳದ
ಕೆಳಕ್ಕೆ ದೊಬ್ಬಿಬಿಡುವಿ.
ಕೊಲೆಪಾತಕರೂ ವಂಚಕರೂ ನರಾಯುಷ್ಯದ
ಅರ್ಧಾಂಶವಾದರೂ ಬದುಕರು.
ನಾನಂತೂ ನಿನ್ನನ್ನೇ ನಂಬಿಕೊಂಡಿರುವೆನು.

ಶತ್ರುಪೀಡಿತರಾದ ಭಕ್ತರ ಪ್ರಾರ್ಥನೆ.
ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು;
ಯೋನತ್ ಏಲೆಮ್ ರೆಹೋಕೀಮೆಂಬ ರಾಗ; ದಾವೀದನು
ಗತ್ ಎಂಬ ಊರಲ್ಲಿ ಫಿಲಿಷ್ಟಿಯರ ಕೈವಶವಾದಾಗ
ರಚಿಸಿದ ಕಾವ್ಯ.
(೧ ಸಮುವೇಲ 21. 10—15.)

**56** ದೇವರೇ, ಕರುಣಿಸು; ನರರು ನನ್ನನ್ನು ನುಂಗಿ
ಬಿಡಬೇಕೆಂದು ಎದ್ದಿದ್ದಾರೆ.
ಹಗಲೆಲ್ಲಾ ಯುದ್ಧಕ್ಕೆ ನಿಂತು ಬಾಧಿಸುತ್ತಾರೆ.
2 ಹೊಂಚುಹಾಕಿ ನನ್ನನ್ನು ನುಂಗಿಬಿಡಬೇಕೆಂದು ಯಾ
ವಾಗಲೂ ಬಾಯ್ದೆರೆದಿದ್ದಾರೆ;
ಸೊಕ್ಕಿನಿಂದ ನನ್ನ ಮೇಲೆ ಯುದ್ಧಕ್ಕೆ ನಿಂತವರು
ಎಷ್ಟೋ ಮಂದಿ.

1) ಮೂಲ: ಅವನಾದರೋ. 2) ಮೂಲ: ಅವರನ್ನು.

3 ನನಗೆ ಹೆದರಿಕೆಯುಂಟಾದಾಗ
ನಿನ್ನನ್ನೇ ಆಶ್ರಯಿಸಿಕೊಳ್ಳುವೆನು.
4 ದೇವರ ವಾಗ್ದಾನಕ್ಕೋಸ್ಕರ ಆತನಲ್ಲಿಯೇ ಹೆಚ್ಚಳಪಡುವೆನು;
ದೇವರನ್ನು ನಂಬಿ ನಿರ್ಭಯದಿಂದಿರುವೆನು.
ನರಪ್ರಾಣಿಗಳು ನನಗೆ ಮಾಡುವದೇನು?

5 ಹಗಲೆಲ್ಲಾ ನನ್ನ ಮಾತುಗಳಿಗೆ ಅಪಾರ್ಥಮಾಡುತ್ತಾರೆ;
ಅವರು ಬಗೆಯುವದೆಲ್ಲ ನನಗೆ ಕೇಡೇ.
6 ಅವರು ಒಟ್ಟುಗೂಡಿ ನನ್ನ ಜೀವ ತೆಗೆಯಬೇಕೆಂದು ಹೊಂಚುಹಾಕಿ
ನನ್ನ ಹೆಜ್ಜೆ ಹಿಡಿದು ಬರುತ್ತಾರೆ.
7 ಇಂಥ ಅನ್ಯಾಯಗಾರರು ತಪ್ಪಿಸಿಕೊಳ್ಳಬಹುದೋ?
ದೇವರೇ, ರೌದ್ರದಿಂದ ಜನಾಂಗಗಳನ್ನು ಉರುಳಿಸಿಬಿಡು.

8 ನಾನು ದೇಶಭ್ರಷ್ಟನಾಗಿ ಅಲೆದಾಡಿದ್ದನ್ನು ನೀನೇ ಬಲ್ಲೆ.
1)ನನ್ನ ಕಣ್ಣೀರು ನಿನ್ನ ಬುದ್ದಲಿಯಲ್ಲಿ ತುಂಬಿದೆ;
ಅದರ ವಿಷಯ ನಿನ್ನ ಪುಸ್ತಕದಲ್ಲಿ ಬರದದೆಯಲ್ಲಾ.
9 ದೇವರು ನನ್ನ ಸಂಗಡ ಇರುವದು ನಿಶ್ಚಯ;
ನಾನು ಆತನಿಗೆ ಮೊರೆಯಿಡುವಾಗಲೇ ನನ್ನ ಶತ್ರುಗಳು ಫಕ್ಕನೆ ಪಲಾಯನಮಾಡುವರು.
10 2)ದೇವರಲ್ಲಿ ಹೆಚ್ಚಳಪಟ್ಟು ಹಾಡಿ ಹರಸುತ್ತೇನೆ.
ಯೆಹೋವನಲ್ಲಿ ಹೆಚ್ಚಳಪಟ್ಟು ಹಾಡಿ ಹರಸುತ್ತೇನೆ.
11 ದೇವರನ್ನು ನಂಬಿ ನಿರ್ಭಯದಿಂದಿರುವೆನು;
ನರಪ್ರಾಣಿಗಳು ನನಗೆ ಮಾಡುವದೇನು?

12 ದೇವರೇ, ನಾನು ಜೀವದಿಂದ ಬೆಳಕಿನಲ್ಲಿದ್ದು ನಿನಗೆ ನಡೆದುಕೊಳ್ಳಬೇಕೆಂದು
ನೀನು ನನ್ನ ಪ್ರಾಣವನ್ನು ಮರಣಕ್ಕೆ ತಪ್ಪಿಸಿ ನನ್ನ ಪಾದಗಳನ್ನು ಎಡವದಂತೆ ಕಾದಿದ್ದೀ.
13 ನಿನಗೆ ಹೊತ್ತ ಹರಕೆಗಳನ್ನು ಸಲ್ಲಿಸುವೆನು;
ಕೃತಜ್ಞತಾಯಜ್ಞಗಳನ್ನು ಸಮರ್ಪಿಸುವೆನು.

ಶತ್ರುಬಾಧಿತನಾದ ಸದ್ಭಕ್ತನ ವಿಜ್ಞಾಪನೆಯೂ ಸ್ತೋತ್ರವೂ.
ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು;
ಅಲ್ತಷ್ಹೇತೆಂಬ ರಾಗ; ದಾವೀದನು ಸೌಲನ ಭೀತಿಯಿಂದ
ಓಡಿಹೋಗಿ ಗುಹೆಯಲ್ಲಿ ಅಡಗಿಕೊಂಡಿದ್ದಾಗ ರಚಿಸಿದ ಕಾವ್ಯ.
(೧ ಸಮುವೇಲ 22. 1; 24. 3.)

57 ದೇವರೇ, ಕರುಣಿಸು; ನನ್ನನ್ನು ಕರುಣಿಸು.
ನೀನೇ ನನ್ನ ಆಶ್ರಯಸ್ಥಾನವಲ್ಲವೇ!
ಆಪತ್ತುಗಳು ಕಳೆದುಹೋಗುವ ತನಕ ನಿನ್ನ ರೆಕ್ಕೆಗಳ ಮರೆಯನ್ನು ಆಶ್ರಯಿಸಿಕೊಳ್ಳುವೆನು.

2 ಪರಾತ್ಪರನಾದ ದೇವರಿಗೆ ಮೊರೆಯಿಡುವೆನು, ನ
ಕಾರ್ಯವನ್ನು ಸಿದ್ಧಿಗೆ ತರುವ ದೇವರನ್ನು ಕೂ
ಕೊಳ್ಳುವೆನು.
3 ಆತನು ಪರಲೋಕದಿಂದ ಸಹಾಯಮಾಡಿ ನಿಂದಕ
ಬಾಯಿಗೆ ನನ್ನನ್ನು ತಪ್ಪಿಸುವನು; ಸೆಲಾ.
ತನ್ನ ಕಾರುಣ್ಯವನ್ನೂ ಸತ್ಯತೆಯನ್ನೂ ತೋರ್ಪಡಿಸು
ವನು.
4 ಸಿಂಹಗಳ ಮಧ್ಯದಲ್ಲಿ ಸಿಕ್ಕಿದ್ದೇನೆ;
ಬೆಂಕಿಕಾರುವ ಮನುಷ್ಯರ ನಡುವೆ ಬಿದ್ದಿದ್ದೇನೆ.
ಅವರ ಹಲ್ಲುಗಳು ಶಸ್ತ್ರಬಾಣಗಳು;
ನಾಲಿಗೆಗಳು ಹದವಾದ ಕತ್ತಿಗಳೇ.
5 ದೇವರೇ, ಮೇಲಣ ಲೋಕಗಳಲ್ಲಿ ನಿನ್ನ ಪ್ರಭಾ
ವವು ಮೆರೆಯಲಿ;
ಭೂಮಂಡಲದ ಮೇಲೆಲ್ಲಾ ನಿನ್ನ ಮಹತ್ವ
ಹಬ್ಬಲಿ.

6 ನನ್ನ ಕಾಲಿಗೆ ಬಲೆಯನ್ನು ಹಾಸಿದ್ದಾರೆ;
ನನ್ನ ಪ್ರಾಣವು ಕುಂದಿಹೋಯಿತು.
ನನ್ನ ದಾರಿಯಲ್ಲಿ ಕುಣಿಯನ್ನು ಅಗಿದರು;
ತಾವೇ ಅದರಲ್ಲಿ ಬಿದ್ದುಹೋದರು. ಸೆಲಾ.

7 ದೇವರೇ, ನನ್ನ ಹೃದಯವು ಸ್ಥಿರವಾಗಿದೆ, ಸ್ಥಿ
ವಾಗಿದೆ.
ನಾನು ಬಾರಿಸುತ್ತಾ ಹಾಡುವೆನು.
8 ನನ್ನ ಮನವೇ, ಚುರುಕಾಗು; ಸ್ವರಮಂಡಲವೇ, ಕಿನ್ನ
ಯೇ, ಎಚ್ಚರವಾಗಿರಿ.
ಸಂಕೀರ್ತನೆಯಿಂದ ಉದಯವನ್ನು ಮುಂಗೊಳ್ಳುವೆನ
9 ಕರ್ತನೇ, ಜನಾಂಗಗಳಲ್ಲಿ ನಿನ್ನನ್ನು ಸ್ತುತಿಸುವೆನ
ಸರ್ವದೇಶದವರೊಳಗೆ ನಿನ್ನನ್ನು ಕೊಂಡಾಡುವೆನು.
10 ಯಾಕಂದರೆ ನಿನ್ನ ಕೃಪೆಯು ಆಕಾಶವನ್ನೂ
ನಿನ್ನ ಸತ್ಯತೆಯು ಮುಗಿಲನ್ನೂ ನಿಲುಕುವಷ್ಟು ದೊ
ವಾಗಿವೆ.
11 ದೇವರೇ, ಮೇಲಣ ಲೋಕಗಳಲ್ಲಿ ನಿನ್ನ ಪ್ರ
ವವು ಮೆರೆಯಲಿ;
ಭೂಮಂಡಲದ ಮೇಲೆಲ್ಲಾ ನಿನ್ನ ಮಹತ್
ಹಬ್ಬಲಿ.

ಅನ್ಯಾಯಾಧಿಕಾರಿಗಳಿಗೆ ಪ್ರತಿದಂಡನೆಯಾಗಬೇಕೆಂದು ಪ್ರಾರ್ಥ
ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು;
ಅಲ್ತಷ್ಹೇತೆಂಬ ರಾಗ; ದಾವೀದನ ಕಾವ್ಯ.
(ಕೀರ್ತನೆ 57.)

58 ಅಧಿಕಾರಿಗಳೇ, ನೀವು ಕೊಡುವ ತೀರ್ಪುಗಳು ನಿ
ಗನುಸಾರವಾಗಿವೆಯೋ?
ಜನರ ವ್ಯಾಜ್ಯಗಳನ್ನು ಯಥಾರ್ಥವಾಗಿ ಬಗೆಹರಿಸು
ದುಂಟೋ?

1) ಅಥವಾ: ನನ್ನ ಕಣ್ಣೀರನ್ನು ನಿನ್ನ ಬುದ್ದಲಿಯಲ್ಲಿ ತುಂಬು. 2) ಅಥವಾ: ದೇವರ ವಾಗ್ದಾನಕ್ಕೋಸ್ಕರ ಆತನಲ್ಲಿ
ಹೆಚ್ಚಳಪಡುವೆನು. ಯೆಹೋವನ ವಾಗ್ದಾನಕ್ಕೋಸ್ಕರ ಆತನಲ್ಲಿಯೇ ಹೆಚ್ಚಳಪಡುವೆನು.

ನಿಮ್ಮ ಮನಸ್ಸಿನ ಕಲ್ಪನೆಯೆಲ್ಲಾ ಕೆಟ್ಟತನವೇ;
ನೀವು ದೇಶದವರಿಗೆ ಅನ್ಯಾಯವನ್ನೇ ತೂಗಿಕೊಡುವವರಾಗಿದ್ದೀರಲ್ಲಾ.

ದುಷ್ಟರು ಜನ್ಮದಿಂದಲೇ ಧರ್ಮಭ್ರಷ್ಟರು;
ಅವರು ಹುಟ್ಟಿದಂದಿನಿಂದ ಸುಳ್ಳುಗಾರರಾಗಿ ದಾರಿಬಿಟ್ಟವರು.
ಅವರು ಸರ್ಪದಂತೆ ವಿಷಭರಿತರು.
ಜಾಣತನದಿಂದ ಮಂತ್ರಿಸುವ ಹಾವಾಡಿಗರ ನಾಗಸ್ವರಕ್ಕೂ ಮರುಳಾಗದೆ
ಕಿವಿಗೊಡದ ಕಳ್ಳಹಾವಿನಂತೆ ಇರುತ್ತಾರೆ.
ದೇವರೇ, ಅವರ ಹಲ್ಲುಗಳನ್ನು ಮುರಿದುಬಿಡು;
ಯೆಹೋವನೇ, ಪ್ರಾಯದ ಸಿಂಹಗಳ ಕೋರೇದಾಡೆಗಳನ್ನು ಕಿತ್ತುಹಾಕು.
ಕ್ಷಣದಲ್ಲಿ ಹರಿದು ಕಾಣದೆಹೋಗುವ ನೀರಿನಂತೆ ಅವರು ಮಾಯವಾಗಲಿ;
ಬಾಣ ತಾಗಿತೋ ಎಂಬಂತೆ ಅವರು ಬೀಳಲಿ.
ಒಣಗಿ ಸತ್ತ ಬಸವನಹುಳದಂತೆ ನಿರ್ನಾಮವಾಗಲಿ;
ಗರ್ಭವಿಳಿದ ಪಿಂಡದಂತೆ ಸೂರ್ಯನನ್ನು ನೋಡದೆ ಹೋಗಲಿ.
ಇನ್ನೂ ಬೇಯದಿರುವಾಗಲೇ ಒಲೆಗಿಕ್ಕಿದ ಮುಳ್ಳಿನ ಕೊಂಪೆಯನ್ನು ಬಿರುಗಾಳಿಯು ಹಾರಿಸಿಬಿಡುವಂತೆ
ದೇವರ ಉಗ್ರಕೋಪವು ಅವರನ್ನು ನಿಶ್ಶೇಷಮಾಡಲಿ.

ದುಷ್ಟರಿಗಾಗುವ ಪ್ರತಿದಂಡನೆಯನ್ನು ಭಕ್ತರು ನೋಡಿ ಹರ್ಷಿಸಿ
ಅವರ ರಕ್ತದಲ್ಲಿ ಕಾಲಾಡಿಸುವರು.
ನೀತಿವಂತನಿಗೆ ಫಲವುಂಟೆಂತಲೂ
ಲೋಕದಲ್ಲಿ ನ್ಯಾಯಸ್ಥಾಪಕನಾದ ದೇವರು ಇದ್ದಾನೆಂತಲೂ ಸರ್ವರು ಒಪ್ಪಿಕೊಳ್ಳುವರು.

ಹಿಂಸೆಗೊಳಗಾದ ನಿರಪರಾಧಿಯ ಪ್ರಾರ್ಥನೆ.
ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು;
ಅಲ್ತಷ್ಹೇತೆಂಬ ರಾಗ;
ಸೌಲನು ಕಳುಹಿಸಿದವರು ದಾವೀದನ ಜೀವತೆಗೆಯಬೇಕೆಂದು ಅವನ ಮನೆಯ ಸುತ್ತಲೂ ಹೊಂಚುಹಾಕುತ್ತಿದ್ದಾಗ ಅವನು ರಚಿಸಿದ ಕಾವ್ಯ.
(ಕೀರ್ತನೆ 57; ೧ ಸಮುವೇಲ 19. 11.)

9 ನನ್ನ ದೇವರೇ, ಶತ್ರುಗಳ ಕೈಯಿಂದ ನನ್ನನ್ನು ಬಿಡಿಸು;
ನನಗೆ ವಿರೋಧವಾಗಿ ಎದ್ದಿರುವವರಿಗೆ ನನ್ನನ್ನು ತಪ್ಪಿಸಿ ಭದ್ರಸ್ಥಳದಲ್ಲಿರಿಸು.
ಕೇಡುಕರಿಂದ ಬಿಡಿಸು;
ಕೊಲೆಪಾತಕರಿಂದ ನನ್ನನ್ನು ರಕ್ಷಿಸು.
ಇಗೋ, ನನ್ನ ಜೀವಕ್ಕೆ ಹೊಂಚುಹಾಕುತ್ತಾರೆ;
ಬಲಿಷ್ಠರು ನನಗೆ ವಿರೋಧವಾಗಿ ಗುಂಪುಕೂಡಿದ್ದಾರೆ.
ಯೆಹೋವನೇ, ನಾನು ವಿದ್ರೋಹಿಯೂ ನಿರಪರಾಧಿಯೂ ಅಲ್ಲವೇ!

4 ನಿಷ್ಕಾರಣವಾಗಿ ನನ್ನ ಮೇಲೆ ಬೀಳಲು ಓಡಿಬಂದು ನಿಂತಿದ್ದಾರೆ;
ಎದ್ದು ಬಂದು ಪರಾಂಬರಿಸಿ ನನಗೆ ಸಹಾಯಮಾಡು.
5 ಸೇನಾಧೀಶ್ವರನಾದ ಯೆಹೋವನೇ, ಇಸ್ರಾಯೇಲ್ಯರ ದೇವರೇ,
ನೀನು ಎಚ್ಚರವಾಗಿ ಎಲ್ಲಾ ಅನ್ಯಜನಾಂಗಗಳನ್ನು ದಂಡಿಸು.
ದುಷ್ಟದ್ರೋಹಿಗಳಲ್ಲಿ ಒಬ್ಬನಿಗೂ ದಯತೋರಿಸಬೇಡ. ಸೆಲಾ.

6 ಅವರು ಪ್ರತಿಸಾಯಂಕಾಲವೂ ಬಂದು ಬಂದು
ನಾಯಿಗಳಂತೆ ಗುರುಗುಟ್ಟುತ್ತಾ ಪಟ್ಟಣವನ್ನೆಲ್ಲಾ ಸುತ್ತುತ್ತಾರೆ.
7 ಇಗೋ, ಅವರ ಬಾಯಿಗಳು ಎಷ್ಟೋ ಮಾತುಗಳನ್ನು ಕಕ್ಕುತ್ತವೆ; ಅವೆಲ್ಲಾ ಕತ್ತಿಗಳೇ.
ನಮ್ಮನ್ನು ಕೇಳುವವರು ಯಾರು ಅಂದುಕೊಳ್ಳುತ್ತಾರೆ.
8 ಯೆಹೋವನೇ, ನೀನಾದರೋ ನೋಡಿ ನಗುವಿ;
ಎಲ್ಲಾ ಅನ್ಯಜನಾಂಗಗಳನ್ನು ಪರಿಹಾಸ್ಯಮಾಡುವಿ.
9 ನನ್ನ ಬಲವೇ, ನಿನ್ನನ್ನು ನಿರೀಕ್ಷಿಸುತ್ತಿದ್ದೇನೆ.
ನನ್ನ ಆಶ್ರಯದುರ್ಗವು ದೇವರೇ.
10 ನನ್ನ ದೇವರು ಪ್ರಸನ್ನನಾಗಿ ನನಗೆ ಸಹಾಯಮಾಡುವನು;
ನನ್ನ ವಿರೋಧಿಗಳಿಗುಂಟಾದ ಶಿಕ್ಷೆಯನ್ನು ನಾನು ನೋಡುವಂತೆ ಮಾಡುವನು.

11 ಕರ್ತನೇ, ನಮ್ಮ ಗುರಾಣಿಯೇ, ಅವರನ್ನು ಫಕ್ಕನೆ ಸಂಹರಿಸಬೇಡ;
ನನ್ನ ಜನರು ಮರೆತುಬಿಡದ ಹಾಗೆ ಅವರು ಉಳಿಯಲಿ.
ನಿನ್ನ ಸೇನಾಬಲದಿಂದ ಚದರಿಸಿ ಭ್ರಾಂತಿಯಿಂದ ಅಲೆದಾಡಿಸಿ ಅವರನ್ನು ಕೆಡವಿಬಿಡು.
12 ಅವರ ಬಾಯಿಂದ ಬರುವದೆಲ್ಲಾ ಪಾಪವೇ.
ಅವರ ಅಹಂಕಾರದಿಂದಲೇ ಅವರು ಸಿಕ್ಕಿಬೀಳಲಿ.
13 ಅವರು ನುಡಿಯುವ ಶಾಪಕ್ಕಾಗಿಯೂ ಸುಳ್ಳಿಗಾಗಿಯೂ ಅವರನ್ನು ರೌದ್ರದಿಂದ ಸಂಹರಿಸಿ ನಿರ್ನಾಮಗೊಳಿಸು.
ಯಾಕೋಬನ ವಂಶದವರನ್ನು ಆಳುವವನು ದೇವರೇ ಎಂಬದು ಭೂಲೋಕದಲ್ಲೆಲ್ಲಾ ಗೊತ್ತಾಗಲಿ. ಸೆಲಾ.

14 ಅವರು ಪ್ರತಿಸಾಯಂಕಾಲವೂ ಬಂದು ಬಂದು
ನಾಯಿಗಳಂತೆ ಗುರುಗುಟ್ಟುತ್ತಾ ಪಟ್ಟಣವನ್ನೆಲ್ಲಾ ಸುತ್ತುತ್ತಾರೆ.
15 ಆಹಾರಕ್ಕಾಗಿ ಅತ್ತಿತ್ತ ತಿರುಗುತ್ತಾರೆ;
ಹೊಟ್ಟೆಗಿಲ್ಲದಿದ್ದರೆ ಬೊಗಳುತ್ತಾರೆ.
16 ನಾನಾದರೋ, ಇಕ್ಕಟ್ಟಿನ ಕಾಲದಲ್ಲಿ ಆಶ್ರಯವೂ ದುರ್ಗವೂ ಆಗಿರುವ ನಿನ್ನ ಬಲವನ್ನು ಹಾಡಿ ಹೊಗಳುವೆನು;
ಪ್ರಾತಃಕಾಲದಲ್ಲಿ ನಿನ್ನ ಪ್ರೇಮವನ್ನು ಉಲ್ಲಾಸದಿಂದ ಕೊಂಡಾಡುವೆನು.

17 ನನ್ನ ಬಲವೇ, ನಿನ್ನನ್ನು ಹಾಡಿಹರಸುವೆನು.
ನನ್ನ ಆಶ್ರಯದುರ್ಗವೂ ಕೃಪಾನಿಧಿಯೂ ದೇವರೇ.

ಪರಾಜಿತನು ದೈವೋತ್ತರವನ್ನು ಆಧಾರಮಾಡಿಕೊಂಡು ಪ್ರಾರ್ಥಿಸುವದು.

ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು; ಷೂಷನ್ ಎದೂತೆಂಬ ರಾಗ; ದಾವೀದನು ಎರಡು ನದಿಗಳ ಮಧ್ಯದಲ್ಲಿರುವ ಮತ್ತು ಸೋಬ ಎಂಬ ರಾಜಧಾನಿಯುಳ್ಳ ಅರಾಮ್ ರಾಜ್ಯಗಳ ಸಂಗಡ ಕಾದುವಷ್ಟರೊಳಗೆ ಯೋವಾಬನು ಹಿಂದಿರುಗಿ ಹೋಗಿ ಉಪ್ಪಿನ ತಗ್ಗಿನಲ್ಲಿ ಹನ್ನೆರಡು ಸಾವಿರ ಎದೋಮ್ಯರನ್ನು ಹೊಡೆದಾಗ ದಾವೀದನು ರಚಿಸಿದ ಕಾವ್ಯ. ಬಾಯಿಪಾಠಮಾಡಿಸತಕ್ಕದ್ದು.

(೨ ಸಮುವೇಲ 8. 3—13.)

60 ದೇವರೇ, ಕೋಪದಿಂದ ನಮ್ಮನ್ನು ತಳ್ಳಿ ಕೆಡವಿ
ಬಿಟ್ಟಿದ್ದೀ;
ನಮ್ಮನ್ನು ಎತ್ತಿ ನಿಲ್ಲಿಸು.
2 ನೀನು ದೇಶವನ್ನು ಕಂಪನಗೊಳಿಸಿ ಒಡೆದುಬಿಟ್ಟಿದ್ದೀ.
ಅದರ ಒಡಕುಗಳನ್ನು ಸರಿಮಾಡು; ಅದು ನಡುಗುತ್ತಿ
ರುವದಲ್ಲಾ.
3 ನಿನ್ನ ಜನರನ್ನು ಸಂಕಟಕ್ಕೆ ಗುರಿಪಡಿಸಿದ್ದೀ;
ನೀನು ನಮಗೆ ಭ್ರಮಣಮದ್ಯವನ್ನು ಕುಡಿಸಿದ್ದೀ.
4 1)ನೀನು ನಿನ್ನ ಭಕ್ತರಿಗೆ ಧ್ವಜವನ್ನು ಕೊಟ್ಟದ್ದು
ಅವರು ಬಿಲ್ಲುಗಾರರಿಗೆ ಹೆದರಿ ಓಡುವದಕ್ಕೋ?
ಸೆಲಾ.
5 ನಿನ್ನ ಪ್ರಿಯರಾದ ನಮ್ಮ ಮೊರೆಯನ್ನು ಲಾಲಿಸಿ
ರಕ್ಷಿಸು.
ನಿನ್ನ ಭುಜಬಲದಿಂದ ನಮ್ಮನ್ನು ಜಯಗೊಳಿಸು.

6 ದೇವರು ತನ್ನ 2)ಪವಿತ್ರತ್ವವನ್ನು ಸಾಕ್ಷಿಮಾಡಿ
ನುಡಿದಿದ್ದಾನೆ.
ಜಯಘೋಷಮಾಡುವೆನು; ಶೆಖೆಮ್ ಪ್ರದೇಶ
ವನ್ನು ಹಂಚುವೆನು.
ಸುಖೋತ್ ಬೈಲನ್ನು ಅಳೆದುಕೊಡುವೆನು.
7 ಗಿಲ್ಯಾದ್ ಸೀಮೆಯೂ ಮನಸ್ಸೆಯ ದೇಶವೂ
ನನ್ನವು;
ಎಫ್ರಾಯಿಮ್ ಗೋತ್ರವು ನನಗೆ ಶಿರಸ್ತ್ರಾಣವು.
ನನ್ನ ರಾಜದಂಡವು ಯೆಹೂದಕುಲವೇ.
8 ಮೋವಾಬ್ ಪ್ರದೇಶವು ನನ್ನ ಸ್ನಾನಪಾತ್ರೆಯು;
ಎದೋಮ್ ಸೀಮೆಯು ನನ್ನ ಕೆರಗಳನ್ನು ಬಿಡುವ
ಸ್ಥಳ.
ಫಿಲಿಷ್ಟಿಯರು ನನ್ನ ವಿಷಯವಾಗಿ ಕೂಗಿಕೊ
ಳ್ಳಲಿ.

9 ಕೋಟೆಕೊತ್ತಲುಗಳುಳ್ಳ ನಗರಕ್ಕೆ ನನ್ನನ್ನು ಕರೆ
ಕೊಂಡು ಹೋಗುವವರು ಯಾರು?
ಎದೋಮ್ ಪ್ರಾಂತದೊಳಗೆ ನನ್ನನ್ನು ಸೇರಿಸುವವ
ಯಾರು?
10 ದೇವರೇ, ನೀನು ನಮ್ಮ ಸೈನ್ಯಗಳ ಸಂಗಡ
ಲಿಲ್ಲವಲ್ಲಾ!
ದೇವರೇ, ನಮ್ಮನ್ನು ಕೈಬಿಟ್ಟಿಯಾ?
11 ನಮಗೆ ಕೈಕೊಟ್ಟು ಶತ್ರುಬಾಧೆಯಿಂದ ಪಾರುಮಾಡ
ಮನುಷ್ಯರ ಸಹಾಯವು ವ್ಯರ್ಥ.
12 ದೇವರಿಂದ ಶೂರಕೃತ್ಯಗಳನ್ನು ನಡಿಸುವೆವು;
ನಮ್ಮ ವೈರಿಗಳನ್ನು ತುಳಿದುಬಿಡುವವನು ಆತನೇ.

ಪ್ರವಾಸಿಗಳಾದ ಸದ್ಭಕ್ತರು ತಮಗಾಗಿಯೂ ತಮ್ಮ ಅಧಿರಾಜನಿಗಾಗಿಯೂ ಮಾಡುವ ವಿಜ್ಞಾಪನೆ.

(ಕೀರ್ತನೆ 63.)

ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು; ತಂತಿವಾದ್ಯದೊಡನೆ ಹಾಡತಕ್ಕದ್ದು; ದಾವೀದನ ಕೀರ್ತನೆ.

61 ದೇವರೇ, ನನ್ನ ಕೂಗನ್ನು ಕೇಳಿ ನನ್ನ ಪ್ರಾರ್ಥ
ನೆಗೆ ಕಿವಿಗೊಡು.
2 ನಾನು ಎದೆಗುಂದಿದವನಾಗಿ ಭೂಮಿಯ ಕಡೇ ಭಾ
ದಿಂದ ನಿನಗೆ ಮೊರೆಯಿಡುತ್ತೇನೆ;
ನಾನು ಹತ್ತಲಾರದ ಆಶ್ರಯಗಿರಿಯ ಮೇಲೆ ನನ್ನ
ಹತ್ತಿಸು.
3 ನೀನು ನನಗೆ ಶರಣನೂ ಶತ್ರುಗಳಿಂದ ತಪ್ಪಿಸ
ಭದ್ರವಾದ ಬುರುಜೂ ಆಗಿದ್ದೀ.
4 ನನಗೆ ನಿರಂತರವೂ ನಿನ್ನ ಗುಡಾರದಲ್ಲಿ ಬಿಡ
ವಾಗಲಿ;
ನಿನ್ನ ರೆಕ್ಕೆಗಳ ಮರೆಯನ್ನು ಆಶ್ರಯಿಸಿಕೊಳ್ಳುವ
ಅನುಗ್ರಹಿಸು. ಸೆಲಾ.

5 ದೇವರೇ, ನೀನು ನನ್ನ ಹರಕೆಗಳಿಗೆ ಲಕ್ಷ್ಯ
ಟ್ಟಿದ್ದೀ;
ನಿನ್ನಲ್ಲಿ ಭಯಭಕ್ತಿಯುಳ್ಳವರಿಗೆ ಸಿಕ್ಕತಕ್ಕ ಬಾಧ
ಯನ್ನು ನನಗೂ ದಯಪಾಲಿಸಿದ್ದೀ.
6 ಅರಸನಿಗೆ ದೀರ್ಘಕಾಲದ ಬಾಳಿಕೆಯನ್ನು ಅ
ಗ್ರಹಿಸು;
ಅವನ ಆಯುಸ್ಸು ಅನೇಕ ತಲೆಗಳ ವರೆಗೆ ವೃದ್ಧಿಯ
ಗಲಿ.
7 ಅವನು ನಿನ್ನ ಸಾನ್ನಿಧ್ಯವನ್ನು ಪಡೆದು ಸದಾಕಾಲ
ಸಿಂಹಾಸನಾರೂಢನಾಗಿರಲಿ;
ನಿನ್ನ ಪ್ರೇಮಸತ್ಯತೆಗಳು ಅವನ ಬೆಂಗಾವಲಾಗಿರ
8 ಹೀಗಾದರೆ ನಾನು ಪ್ರತಿದಿನವೂ ನನ್ನ ಹರಕೆಗಳ
ಸಲ್ಲಿಸುವವನಾಗಿ
ನಿನ್ನ ನಾಮವನ್ನು ಸದಾ ಸ್ಮರಿಸಿ ಕೀರ್ತಿಸುತ್ತಿರುವೆ

1) ಅಥವಾ: ನೀನು ನಿನ್ನ ಭಕ್ತರಿಗೆ ಸತ್ಯದ ಪರವಾಗಿ ಎತ್ತುವದಕ್ಕೋಸ್ಕರ ಧ್ವಜವನ್ನು ಕೊಟ್ಟಿದ್ದೀ. 2) ಅಥವಾ: ಪರಿ
ಸ್ಥಳದಲ್ಲಿ.

ದೇವರ ಆಶ್ರಯದಲ್ಲಿರುವವರ ಮನಶ್ಶಾಂತಿ.
(ಕೀರ್ತನೆ 49.)

ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು;
ಯೆದುತೂನನ ರೀತಿಯಲ್ಲಿ ಹಾಡತಕ್ಕದ್ದು; ದಾವೀದನ ಕೀರ್ತನೆ.
(ಕೀರ್ತನೆ 39; 77.)

62 ನನ್ನ ಮನಸ್ಸು ದೇವರನ್ನೇ ನಂಬಿ ಶಾಂತವಾಗಿರುವದು.
ನನ್ನ ರಕ್ಷಣೆಯು ಆತನಿಂದಲೇ.
ಆತನೇ ನನಗೆ ಶರಣನೂ ರಕ್ಷಕನೂ ದುರ್ಗವೂ;
ನಾನು ಕದಲಿದರೂ ಬೀಳೆನು.
ನೀವೆಲ್ಲರೂ ಒಬ್ಬ ಪುರುಷನ ಮೇಲೆ ಬಿದ್ದು
ಅವನು ಬಾಗಿದ ಗೋಡೆಯೋ ಕುಸಿದ ಪ್ರಾಕಾರವೋ ಎಂಬಂತೆ
ಅವನನ್ನು ಹೊಡೆದು ಕೆಡವಬೇಕೆಂದಿರುವದು ಇನ್ನೆಷ್ಟರ ವರೆಗೆ?
ಅವನನ್ನು ಉನ್ನತಸ್ಥಾನದಿಂದ ದೊಬ್ಬುವದೇ ಅವರ ಆಲೋಚನೆ.
ಸುಳ್ಳಾಡುವದು ಅವರಿಗೆ ಅತಿಸಂತೋಷ;
ಬಾಯಿಂದ ಹರಸಿ ಮನಸ್ಸಿನಿಂದ ಶಪಿಸುತ್ತಾರೆ.
ಸೆಲಾ.

ನನ್ನ ಮನವೇ, ದೇವರನ್ನೇ ನಂಬಿ ಶಾಂತವಾಗಿರು.
ನನ್ನ ನಿರೀಕ್ಷೆಯು ನೆರವೇರುವದು ಆತನಿಂದಲೇ.
ಆತನೇ ನನಗೆ ಶರಣನೂ ರಕ್ಷಕನೂ ದುರ್ಗವೂ;
ನಾನು ಕದಲುವದಿಲ್ಲ.
ನನ್ನ ರಕ್ಷಣೆಗೂ ಮಾನಕ್ಕೂ ದೇವರೇ ಆಧಾರ;
ನನಗೆ ಬಲವಾದ ದುರ್ಗವೂ ಆಶ್ರಯವೂ ದೇವರಲ್ಲಿಯೇ.
ಜನರೇ, ಯಾವಾಗಲೂ ಆತನನ್ನೇ ನಂಬಿ ನಿಮ್ಮ ಹೃದಯವನ್ನು ಆತನ ಮುಂದೆ ಬಿಚ್ಚಿರಿ;
ದೇವರು ನಮ್ಮ ಆಶ್ರಯವು. ಸೆಲಾ.

ನರರು ಬರೀ ಉಸಿರೇ;
ನರಾಧಿಪತಿಗಳು ಬರೀ ಮಾಯವೇ.
ಅವರೆಲ್ಲರನ್ನು ತ್ರಾಸಿನಲ್ಲಿ ತೂಗಿ ನೋಡಿದರೆ ಉಸಿರಿಗಿಂತಲೂ ಲಘು.
ಅನ್ಯಾಯದಿಂದ ಸಂಪಾದಿಸಿದ್ದನ್ನು ನೆಚ್ಚಬೇಡಿರಿ;
ಸುಲಿಗೆಯಿಂದ ಗಳಿಸಿ ಸೊಕ್ಕಿರಬೇಡಿರಿ;
ಹೆಚ್ಚಿದ ಆಸ್ತಿಯಲ್ಲಿ ಮನಸ್ಸಿಡಬೇಡಿರಿ.
ಸರ್ವಾಧಿಕಾರವು ದೇವರದೇ ಎಂದು ದೇವರು ಒಮ್ಮೆ ಅಲ್ಲ, ಎರಡಾವರ್ತಿ ಹೇಳಿದ್ದನ್ನು ಕೇಳಿದ್ದೇನೆ.
ಕರ್ತನೇ, ನೀನು ಪ್ರೀತಿಸ್ವರೂಪನಾಗಿ
ಪ್ರತಿಯೊಬ್ಬನಿಗೆ ಅವನವನ ಕೃತ್ಯಗಳಿಗೆ ತಕ್ಕ ಪ್ರತಿಫಲವನ್ನು ಕೊಡುವಂಥವನಲ್ಲವೇ.

ಭಕ್ತನು ದೇವದರ್ಶನವನ್ನು ಕಾಂಕ್ಷಿಸಿ ಸಂತೃಪ್ತಿಹೊಂದಿದ್ದು.
(ಕೀರ್ತನೆ 42; 61.)

ದಾವೀದನು ಯೆಹೂದ ಸೀಮೆಯ ಅರಣ್ಯದಲ್ಲಿದ್ದಾಗ ರಚಿಸಿದ ಕೀರ್ತನೆ.

63 ದೇವರೇ, ನೀನೇ ನನ್ನ ದೇವರು;
ನಾನು ನಿನ್ನ ದರ್ಶನವನ್ನು ಕುತೂಹಲದಿಂದ ಎದುರುನೋಡುತ್ತೇನೆ.
ನೀರಿಲ್ಲದೆ ಒಣಗಿದ ಭೂಮಿಯಲ್ಲಿದ್ದವನು ನೀರಿಗಾಗಿಯೋ ಎಂಬಂತೆ
ನನ್ನ ಆತ್ಮವು ನಿನಗಾಗಿ ಆತುರಗೊಳ್ಳುತ್ತದೆ;
ಶರೀರವು ಕಂದಿಹೋಗುತ್ತದೆ.
2 ನಿನ್ನ ಮಂದಿರದಲ್ಲಿ ನಾನು ನಿನ್ನ ಮಹತ್ತನ್ನೂ ಪ್ರಭಾವವನ್ನೂ ಕಂಡ ಪ್ರಕಾರ
ಈಗಲೂ ಕಾಣಬೇಕೆಂದು ಅಪೇಕ್ಷಿಸುತ್ತೇನೆ.

3 ನಿನ್ನ ಪ್ರೇಮಾನುಭವವು ಜೀವಕ್ಕಿಂತಲೂ ಶ್ರೇಷ್ಠ;
ನನ್ನ ಬಾಯಿ ನಿನ್ನನ್ನು ಕೀರ್ತಿಸುವದು.
4 ನನ್ನ ಜೀವಮಾನದಲ್ಲೆಲ್ಲಾ ಹೀಗೆಯೇ ನಿನ್ನನ್ನು ಹಾಡಿ ಹರಸುತ್ತಾ
ನಿನ್ನ ಹೆಸರೆತ್ತಿ ಕೈಮುಗಿಯುವೆನು.
5 ಮೃಷ್ಟಭೋಜನದಿಂದಲೋ ಎಂಬಂತೆ ನನ್ನ ಮನಸ್ಸು ಸಂತುಷ್ಟವಾಗಿರುವದು;
ನನ್ನ ಬಾಯಿ ಉತ್ಸಾಹಧ್ವನಿಮಾಡುತ್ತಾ ನಿನ್ನನ್ನು ಕೊಂಡಾಡುವದು.
6 ನಾನು ಹಾಸಿಗೆಯ ಮೇಲಿದ್ದುಕೊಂಡು ನಿನ್ನನ್ನು ಸ್ಮರಿಸುವಾಗ
ರಾತ್ರಿಯ ಜಾವಗಳಲ್ಲಿ ನಿನ್ನನ್ನು ಧ್ಯಾನಿಸುತ್ತಿರುವೆನು.
7 ನೀನು ನನಗೆ ಸಹಾಯಕನಾಗಿದ್ದೀಯಲ್ಲಾ;
ನಿನ್ನ ರೆಕ್ಕೆಗಳ ಮರೆಯಲ್ಲಿ ಸುರಕ್ಷಿತನಾಗಿದ್ದುಕೊಂಡು ಆನಂದಘೋಷಮಾಡುತ್ತಿರುವೆನು.
8 ನನ್ನ ಆತ್ಮವು ನಿನ್ನನ್ನು ಅಂಟಿಕೊಂಡು ಹಿಂಬಾಲಿಸಿರುವದು;
ನಿನ್ನ ಬಲಗೈ ನನಗೆ ಆಧಾರವಾಗಿರುವದು.

9 ನನ್ನ ಜೀವಕ್ಕೆ ಕೇಡುಬಗೆಯುವವರೋ
ಅಧೋಲೋಕಕ್ಕೆ ಇಳಿದುಹೋಗುವರು.
10 ಕತ್ತಿಗೆ ಬಲಿಯಾಗುವರು;
ನರಿಗಳ ಪಾಲಾಗುವರು.
11 ಅರಸನೋ ದೇವರಲ್ಲಿ ಆನಂದಿಸುವನು.
ದೇವರ ಮೇಲೆ ಆಣೆಯಿಡುವವರೆಲ್ಲರು
ಸುಳ್ಳುಬಾಯಿ ಮುಚ್ಚಿಹೋಗುವದನ್ನು ಕಂಡು ಹಿಗ್ಗುವರು.

ದುಷ್ಟರಾದ ಒಳಸಂಚುಗಾರರಿಗೆ ದಂಡನೆಯುಂಟಾಗುವದೆಂದು ನಂಬುವವರ ಪ್ರಾರ್ಥನೆ.
ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು;
ದಾವೀದನ ಕೀರ್ತನೆ.

64 ದೇವರೇ, ನನ್ನ ಆರ್ತಸ್ವರವನ್ನು ಕೇಳಿ
ಶತ್ರುಭಯದಿಂದ ನನ್ನ ಜೀವವನ್ನು ರಕ್ಷಿಸು.

2 ದುಷ್ಟರ ಒಳಸಂಚಿಗೂ ಕೆಡುಕರ ದೊಂಬಿಗೂ ಸಿಕ್ಕ
ದಂತೆ ನನ್ನನ್ನು ತಪ್ಪಿಸಿ ಭದ್ರಪಡಿಸು.
3 ಅವರು ನಾಲಿಗೆಯೆಂಬ ಕತ್ತಿಯನ್ನು ಮಸೆದಿದ್ದಾರೆ;
ವಿಷವಚನವೆಂಬ ಬಾಣವನ್ನು ಹೂಡಿ
4 ಗುಪ್ತಸ್ಥಳಗಳಲ್ಲಿದ್ದು ಸಜ್ಜನನಿಗೆ ಗುರಿಯಿಟ್ಟಿದ್ದಾರೆ.
ಸ್ವಲ್ಪವೂ ಹೆದರದೆ ಅವನ ಮೇಲೆ ಫಕ್ಕನೆ ಎಸೆಯು
ತ್ತಾರೆ.

5 ದುಷ್ಕೃತ್ಯಕ್ಕಾಗಿ ಮನಸ್ಸನ್ನು ದೃಢಪಡಿಸಿಕೊಂಡು
ತಮ್ಮೊಳಗೆ—ರಹಸ್ಯವಾಗಿ ಬಲೆಗಳನ್ನು ಒಡ್ಡೋಣ;
ನಮ್ಮನ್ನು ನೋಡುವವರು ಯಾರು ಅಂದುಕೊಳ್ಳು
ತ್ತಾರೆ.
6 ಅವರು ಕೆಡುಕನ್ನು ಕಲ್ಪಿಸಿ
ಒಳ್ಳೇ ಉಪಾಯವನ್ನು ಕಂಡುಕೊಂಡಿದ್ದೇವೆ ಅಂದು
ಕೊಳ್ಳುತ್ತಾರೆ;
ಅವರ ಹೃದಯವೂ ಅಂತರಂಗದ ಆಲೋಚನೆಯೂ
ಅಶೋಧ್ಯವಾಗಿವೆ.

7 ಆದರೆ ದೇವರು ಬಾಣವನ್ನು ಎಸೆಯಲು
ಫಕ್ಕನೆ ಅವರಿಗೆ ಗಾಯವಾಗುವದು.
8 ಅವರ ನಾಲಿಗೆಗಳೇ ಅವರಿಗೆ ವಿಘ್ನವಾಗಿ ಎಡವಿಬೀಳು
ವರು;
ಆಗ ನೋಡುವವರೆಲ್ಲರು ತಲೆ ಅಲ್ಲಾಡಿಸಿ ಅಣಕಿಸು
ವರು.
9 ಎಲ್ಲಾ ಮನುಷ್ಯರು ಭಯಪಟ್ಟು
ದೇವರ ಕೆಲಸವೆಂದು ಹೇಳಿ
ಆತನ ಕೃತ್ಯಗಳನ್ನು ಆಲೋಚಿಸಿಕೊಳ್ಳುವರು.
10 ಸದ್ಭಕ್ತರು ಯೆಹೋವನಲ್ಲಿ ಆನಂದಪಟ್ಟು
ಆತನನ್ನೇ ಆಶ್ರಯಿಸಿಕೊಳ್ಳುವರು;
ಸರಳಹೃದಯರೆಲ್ಲರೂ ಹಿಗ್ಗುವರು.

ಲೋಕಪರಿಪಾಲನೆಗಾಗಿಯೂ ಫಲಸಮೃದ್ಧಿಗಾಗಿಯೂ
ದೇವರನ್ನು ಸ್ತುತಿಸುವ ಕೀರ್ತನೆ.
ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು;
ದಾವೀದನ ಕೀರ್ತನೆ; ಹಾಡು.

65 ದೇವರೇ, ಚೀಯೋನಿನಲ್ಲಿ ನಿನಗೋಸ್ಕರ ಸ್ತೋತ್ರವು
ಸಿದ್ಧವಾಗಿದೆ;
ಹರಕೆಗಳು ನಿನಗೆ ಸಲ್ಲುತ್ತವೆ.
2 ಪ್ರಾರ್ಥನೆಯನ್ನು ಕೇಳುವವನೇ, ನರರೆಲ್ಲರು ನಿನ್ನ
ಬಳಿಗೆ ಬರುವರು.
3 ನನ್ನ ಪಾಪಗಳನ್ನು ನಿವಾರಿಸಲು ನನ್ನಿಂದಾಗುವದಿಲ್ಲ.
ಆದರೆ ನಮ್ಮ ದೋಷಪರಿಹಾರಕನು ನೀನೇ.
4 ನಿನ್ನ ಅಂಗಳದಲ್ಲಿ ವಾಸಿಸುವವರಾಗಿ ನಿನ್ನ ಸನ್ನಿಧಿ
ಯಲ್ಲಿ ಸೇವೆಮಾಡುವದಕ್ಕೋಸ್ಕರ
ಯಾರನ್ನು ಆರಿಸಿಕೊಳ್ಳುತ್ತೀಯೋ ಅವರೇ ಧನ್ಯರು.
ನೀನು ವಾಸಿಸುವ ಮಹಾಪವಿತ್ರಾಲಯದ ಸೌಭಾಗ್ಯ
ದಿಂದ ನಮಗೆ ಸಂತೃಪ್ತಿಯಾಗಲಿ.

5 ನಮ್ಮ ರಕ್ಷಕನಾದ ದೇವರೇ, ನೀನು ಭಯಂಕ
ಮಹತ್ಕಾರ್ಯಗಳನ್ನು ನಡಿಸಿ
ನಿನ್ನ ನೀತಿಗನುಸಾರವಾಗಿ ನಮಗೆ ಸದುತ್ತರವನ
ದಯಪಾಲಿಸುವಿ.
ಭೂಮಿಯ ಎಲ್ಲಾ ಕಡೆಯವರ, ಬಹುದೂರಸಮ
ದ್ರದ ಆಚೆ ಎಲ್ಲಾ ನಿವಾಸಿಗಳ ನಂಬಿಕೆಗೆ ಆಧ
ರನು ನೀನೇ.
6 ನೀನು ಶೌರ್ಯವೆಂಬ ನಡುಕಟ್ಟನ್ನು ಬಿಗಿದುಕೊಂಡ
ಬಲದಿಂದ ಪರ್ವತಗಳನ್ನು ಸ್ಥಿರವಾಗಿ ನಿಲ್ಲಿಸಿದವನೂ
7 ಸಮುದ್ರತರಂಗಗಳ ಘೋಷವನ್ನು ತಡೆಯುವವನೂ
ಜನಾಂಗಗಳ ದೊಂಬಿಯನ್ನು ಶಾಂತಿಪಡಿಸುವವನ
ಆಗಿದ್ದೀ.
8 ಭೂಮಿಯ ಕಟ್ಟಕಡೆಗಳಲ್ಲಿ ವಾಸಿಸುವವರೂ ನಿ
ಅದ್ಭುತಕೃತ್ಯಗಳಿಗಾಗಿ ಭಯಪಡುತ್ತಾರೆ;
ಮೂಡಣದಿಂದ ಪಡುವಣವರೆಗೂ ಇರುವವರನ್ನು ಹಷ
ಗೊಳಿಸುವಿ.

9 ನೀನು ನಮ್ಮ [1]ದೇಶವನ್ನು ಕಟಾಕ್ಷಿಸಿ ಅದರ ಮೇ
ಮಳೆಸುರಿಸಿ ಚೆನ್ನಾಗಿ ಹದಗೊಳಿಸುತ್ತೀ;
ದೇವರೇ, ನಿನ್ನ ಕಾಲಿವೆಗಳಲ್ಲಿ ನೀರಿಗೆ ಕೊರತೆ ಇಲ್ಲ
ಹೀಗೆ ಭೂಮಿಯನ್ನು ಸಿದ್ಧಮಾಡಿ ಮನುಷ್ಯರಿಗೆ ಧಾ
ವನ್ನು ಒದಗಿಸುತ್ತೀ.
10 ನೇಗಿಲಗೆರೆಗಳನ್ನು ತ್ಯಾವಿಸಿ
ಮಳೆಯಿಂದ ಅದರ ಹೆಂಟೆಗಳನ್ನು ಕರಗಿಸಿ ಸ
ಮಾಡುತ್ತೀ;
ಅದರ ಬೆಳೆಯನ್ನು ವೃದ್ಧಿಪಡಿಸುತ್ತೀ.
11 ನಿನ್ನ ಕೃಪೆಯಿಂದ ಸಂವತ್ಸರಕ್ಕೆ ಸುಭಿಕ್ಷಕಿರೀಟವನ
ಇಟ್ಟಿದ್ದೀ;
ನೀನು ಹಾದುಹೋಗುವ ಮಾರ್ಗದಲ್ಲೆಲ್ಲಾ ಸಮೃ
ಕರವಾದ ವೃಷ್ಟಿಯು ಸುರಿಯುವದು.
12 ಮೇವುಗಾಡುಗಳು ಹಚ್ಚಗೆ ಕಂಗೊಳಿಸುತ್ತವೆ;
ಗುಡ್ಡಗಳು ಹರ್ಷವೆಂಬ ನಡುಕಟ್ಟನ್ನು ಬಿಗಿದುಕೊ
ಡಂತಿವೆ.
13 ಹುಲ್ಲುಗಾವಲುಗಳು ಕುರಿಹಿಂಡುಗಳೆಂಬ ವಸ್ತ್ರವನ
ಹೊದೆದುಕೊಂಡಿವೆ;
ತಗ್ಗುಗಳು ಬೆಳೆಯಿಂದ ಶೋಭಿಸುತ್ತವೆ;
ಅವು ಆನಂದಘೋಷಮಾಡಿ ಹಾಡುತ್ತವೋ ಎಂ
ತಿವೆ.

ತನ್ನ ಪ್ರಜೆಯನ್ನು ಅದ್ಭುತರೀತಿಯಿಂದ ನಡಿಸಿದ
ದೇವರನ್ನು ಸ್ತುತಿಸುವದು.
ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು;
ಹಾಡು; ಕೀರ್ತನೆ.

66 ಸರ್ವಭೂನಿವಾಸಿಗಳೇ, ದೇವರಿಗೆ ಜಯಘ
ಮಾಡಿರಿ.
2 ಆತನ ನಾಮದ ಮಹತ್ತನ್ನು ಕೀರ್ತಿಸಿರಿ;

1) ಅಥವಾ: ಭೂಮಿಯನ್ನು.

ಆತನ ಪ್ರಭಾವವನ್ನು ವರ್ಣಿಸುತ್ತಾ ಕೊಂಡಾಡಿರಿ.
3 ನೀವು ದೇವರಿಗೆ—ನಿನ್ನ ಕೃತ್ಯಗಳು ಎಷ್ಟೋ ಭಯಂಕರ
ವಾಗಿವೆ;
ನಿನ್ನ ಪರಾಕ್ರಮದ ಮಹತ್ತಿನ ದೆಸೆಯಿಂದ ನಿನ್ನ
ಶತ್ರುಗಳು ನಿನ್ನ ಮುಂದೆ ಮುದುರಿಕೊಳ್ಳುವರು;
4 ಸರ್ವಭೂನಿವಾಸಿಗಳು ನಿನಗೆ ಎರಗಿ ಭಜಿಸುತ್ತಾ
ನಿನ್ನ ನಾಮವನ್ನು ಕೀರ್ತಿಸುವರು ಎಂದು ಬಿನ್ನೈಸಿರಿ.
ಸೆಲಾ.

5 ಬನ್ನಿರಿ, ದೇವರ ಕಾರ್ಯಗಳನ್ನು ನೋಡಿರಿ;
ಆತನ ಆಳಿಕೆ ನರರಲ್ಲಿ ಭಯಹುಟ್ಟಿಸತಕ್ಕದ್ದಾಗಿದೆ.
6 ಸಮುದ್ರವನ್ನು ಒಣನೆಲವಾಗುವಂತೆ ಮಾಡಿದನು;
ಜನರು ನದಿಯನ್ನು ಕಾಲಿನಿಂದ ದಾಟಿದರು;
ಅದಕ್ಕಾಗಿ ನಾವು ಆತನಲ್ಲಿ ಆನಂದಪಡೋಣ.
7 ಆತನು ಪರಾಕ್ರಮದಿಂದ ಸದಾಕಾಲವೂ ಆಳುತ್ತಾನೆ;
ಜನಾಂಗಗಳನ್ನು ನೋಡಿಕೊಳ್ಳುತ್ತಾನೆ.
ದಂಗೆಖೋರರು ಏಳದಿರಲಿ. ಸೆಲಾ.

8 ಜನಾಂಗಗಳೇ, ನಮ್ಮ ದೇವರನ್ನು ವಂದಿಸಿರಿ;
ಆತನನ್ನು ಸ್ತುತಿಸುವ ಧ್ವನಿ ಕೇಳಿಸಲಿ.
9 ಆತನು ನಮ್ಮನ್ನು ಜೀವದಿಂದುಳಿಸಿ
ನಮ್ಮ ಕಾಲುಗಳನ್ನು ಜಾರದಂತೆ ಕಾಪಾಡಿದನು.
0 ದೇವರೇ, ನಮ್ಮನ್ನು ಶೋಧಿಸಿದಿ; ಬೆಳ್ಳಿಯನ್ನು ಪುಟಕ್ಕೆ
ಹಾಕುವ ಮೇರೆಗೆ ಶುದ್ಧಿಮಾಡಿದಿ.
1 ನಮ್ಮನ್ನು ಬಲೆಯಲ್ಲಿ ಸಿಕ್ಕಿಸಿದಿ;
ನಮ್ಮ ಸೊಂಟಕ್ಕೆ ಭಾರವಾದ ಕೊರಡನ್ನು ಕಟ್ಟಿದಿ;
2 ಮನುಷ್ಯರು ನಮ್ಮ ತಲೆಗಳ ಮೇಲೆಯೇ ತಮ್ಮ
ರಥಗಳನ್ನು ಹಾಯಿಸುವಂತೆ ಮಾಡಿದಿ.
ನಾವು ಬೆಂಕಿಯನ್ನೂ ನೀರನ್ನೂ ದಾಟಬೇಕಾಯಿತು;
ಆದರೂ ಸುಸ್ಥಿತಿಗೆ ನಮ್ಮನ್ನು ಪಾರುಗಾಣಿಸಿದ್ದೀ.

3 ನಾನು ನಿನ್ನ ಆಲಯಕ್ಕೆ ಬಂದು ಸರ್ವಾಂಗಹೋ
ಮಗಳನ್ನು ಸಮರ್ಪಿಸುವೆನು.
4 ಇಕ್ಕಟ್ಟಿನ ವೇಳೆಯಲ್ಲಿ ನನ್ನ ತುಟಿಗಳು ಬಿಚ್ಚಿ
ಬಾಯಿ ಉಚ್ಚರಿಸಿದ ಹರಕೆಗಳನ್ನು ನಿನಗೆ ಸಲ್ಲಿ
ಸುವೆನು.
5 ನಿನಗೆ ಟಗರು ಮುಂತಾದ ಪುಷ್ಟಪಶುಗಳನ್ನು
ಯಜ್ಞರೂಪವಾಗಿ ಸಮರ್ಪಿಸಿ
ಸುವಾಸನೆಯನ್ನುಂಟುಮಾಡುವೆನು;
ಯಜ್ಞಕ್ಕಾಗಿ ಹೋತುಹೋರಿಗಳನ್ನು ತರುವೆನು.
ಸೆಲಾ.
16 ಎಲ್ಲಾ ದೇವಭಕ್ತರೇ, ಬಂದು ಕೇಳಿರಿ;
ಆತನು ನನಗಾಗಿ ಮಾಡಿದ್ದೆಲ್ಲವನ್ನು ನಿಮಗೆ ತಿಳಿ
ಸುವೆನು.
7 ನನ್ನ ಮೊರೆಯೊಡನೆ ಕೃತಜ್ಞತಾಸ್ತುತಿಯೂ ನನ್ನ
ನಾಲಿಗೆಯ ಮೇಲಿತ್ತು.
18 ನಾನು ಕೆಟ್ಟತನದ ಮೇಲೆ ಮನಸ್ಸಿಟ್ಟಿದ್ದರೆ
ಸ್ವಾಮಿಯು ನನ್ನ ವಿಜ್ಞಾಪನೆಯನ್ನು ಕೇಳುತ್ತಿ
ದ್ದಿಲ್ಲ.
9 ಆದರೆ ದೇವರು ನನ್ನ ಮೊರೆಯನ್ನು ಲಕ್ಷಿಸಿ
ಕೇಳಿದ್ದಾನಲ್ಲಾ.
20 ಆತನು ನನ್ನ ಬಿನ್ನಹವನ್ನು ತಿರಸ್ಕರಿಸಲಿಲ್ಲ;
ನನ್ನ ಮೇಲಿನ ತನ್ನ ದಯೆಯನ್ನು ತಪ್ಪಿಸಿಬಿಡ
ಲಿಲ್ಲ.
ದೇವರಿಗೆ ಸ್ತೋತ್ರವಾಗಲಿ.

ದೇವಸ್ತುತಿಪ್ರೋತ್ಸಾಹ. (ಕೀರ್ತನೆ 98.)
ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು;
ತಂತಿವಾದ್ಯದೊಡನೆ ಹಾಡತಕ್ಕದ್ದು; ಕೀರ್ತನೆ; ಹಾಡು.

**67** ದೇವರೇ, ನಮ್ಮನ್ನು ಕಟಾಕ್ಷಿಸಿ ಆಶೀರ್ವದಿಸು;
ಪ್ರಸನ್ನ ಮುಖದಿಂದ ನಮ್ಮನ್ನು ನೋಡು.
ಸೆಲಾ.
2 ಇದರಿಂದ ಭೂಲೋಕದಲ್ಲಿ ನಿನ್ನ ಪರಿಪಾಲನ
ಮಾರ್ಗವೂ
ಎಲ್ಲಾ ಜನಾಂಗಗಳಲ್ಲಿ ನಿನ್ನ ರಕ್ಷಣೆಯೂ ಪ್ರಸಿದ್ಧ
ವಾಗುವವು.

3 ದೇವರೇ, ಜನಾಂಗಗಳು ನಿನ್ನನ್ನು ಕೀರ್ತಿಸಲಿ;
ಸರ್ವಜನಾಂಗಗಳು ನಿನ್ನನ್ನು ಕೀರ್ತಿಸಲಿ.
4 ನೀನು ಸಮಸ್ತ ದೇಶಗಳವರನ್ನು ನೀತಿಯಿಂದ ಆಳಿ
ಭೂಪ್ರಜೆಗಳನ್ನೆಲ್ಲಾ ನಡಿಸುವಾತನಾಗಿರುವದರಿಂದ
ಜನಾಂಗಗಳು ಹರ್ಷಿಸಿ ಆನಂದಘೋಷಮಾಡಲಿ.
ಸೆಲಾ.

5 ದೇವರೇ, ಜನಾಂಗಗಳು ನಿನ್ನನ್ನು ಕೀರ್ತಿಸಲಿ;
ಸರ್ವಜನಾಂಗಗಳು ನಿನ್ನನ್ನು ಕೀರ್ತಿಸಲಿ.
6 ಭೂಮಿಯು ಒಳ್ಳೇ ಬೆಳೆಯನ್ನು ಕೊಟ್ಟಿರುತ್ತದೆ.
ದೇವರು, ನಮ್ಮ ದೇವರೇ, ನಮ್ಮನ್ನು ಆಶೀರ್ವದಿಸು
ವನು;
7 ಆತನು ನಮ್ಮನ್ನು ಆಶೀರ್ವದಿಸುವನು.
ಭೂಮಂಡಲದವರೆಲ್ಲರೂ ಆತನಲ್ಲಿ ಭಯಭಕ್ತಿಯುಳ್ಳ
ವರಾಗಿರುವರು.

ರಕ್ಷಾಧ್ಯಕ್ಷನಾದ ದೇವರ ಪ್ರತಾಪವರ್ಣನೆ.
(ನ್ಯಾಯಸ್ಥಾಪಕ 5; ಧರ್ಮೋಪದೇಶ 33; ಹಬಕ್ಕೂಕ 3.)
ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು;
ದಾವೀದನ ಕೀರ್ತನೆ; ಹಾಡು.

**68** ದೇವರು ಎದ್ದು ಹೊರಡುವಾಗ ಆತನ ವೈರಿ
ಗಳು ಚದರಿಹೋಗುವರು;
ಆತನ ಹಗೆಗಾರರು ಬೆಂಗೊಟ್ಟು ಓಡಿಹೋಗುವರು.
2 ಹೊಗೆಯು [ಗಾಳಿಯಿಂದ] ಹೇಗೋ ಹಾಗೆ ಅವರು
ಆತನಿಂದ ಹಾರಿಹೋಗುವರು;
ಬೆಂಕಿಯ ಮುಂದೆ ಮೇಣವು ಕರಗಿ ಲಯವಾಗಿ
ಹೋಗುವಂತೆ
ದೇವರ ಎದುರಿನಲ್ಲಿ ದುಷ್ಟರು ನಾಶವಾಗಿ ಹೋಗು
ವರು.

3 ನೀತಿವಂತರಾದರೋ ದೇವರ ಸನ್ನಿಧಿಯಲ್ಲಿ ಹರ್ಷಿಸುವರು;
ಉಲ್ಲಾಸಿಸುವರು, ಆನಂದಧ್ವನಿಮಾಡುವರು.

4 ದೇವರಿಗೆ ಗಾನಮಾಡಿರಿ; ಆತನ ನಾಮವನ್ನು ಭಜಿಸಿರಿ;
ಅರಣ್ಯದಲ್ಲಿ ಸವಾರಿಮಾಡುತ್ತಾ ಬರುವಾತನಿಗೆ ರಾಜಮಾರ್ಗವನ್ನು ಸಿದ್ಧಮಾಡಿರಿ.
ಆತನ ನಾಮಧೇಯ ಯಾಹು; ಆತನ ಸನ್ನಿಧಿಯಲ್ಲಿ ಉಲ್ಲಾಸಿಸಿರಿ.
5 ಪರಿಶುದ್ಧವಾಸಸ್ಥಾನದಲ್ಲಿರುವ ದೇವರು
ದಿಕ್ಕಿಲ್ಲದವರಿಗೆ ತಂದೆಯೂ ವಿಧವೆಯರಿಗೆ ಸಹಾಯಕನೂ ಆಗಿದ್ದಾನೆ.
6 ಒಬ್ಬೊಂಟಿಗರನ್ನು ಸಂಸಾರಿಕರಾಗುವಂತೆ ಮಾಡುತ್ತಾನೆ;
ಸೆರೆಯಲ್ಲಿರುವವರನ್ನು ಬಿಡಿಸಿ ಸುಖಾವಸ್ಥೆಗೆ ತರುತ್ತಾನೆ.
ದ್ರೋಹಿಗಳಾದರೋ ಮರುಭೂಮಿಯಲ್ಲಿ ಉಳಿಯಬೇಕಾಗುವದು.

7 ದೇವರೇ, ನೀನು ನಿನ್ನ ಪ್ರಜೆಯ ಮುಂಗಡೆಯಲ್ಲಿ ಹೊರಟು
ಅರಣ್ಯಮಾರ್ಗವಾಗಿ ಪಯಣಮಾಡುತ್ತಾ ಬರುವಾಗ ಸೆಲಾ.
8 ದೇವರು ಪ್ರತ್ಯಕ್ಷನಾಗಿದ್ದಾನೆಂದು
ಭೂಮಿಯು ಕಂಪಿಸಿತು; ಮೇಘಮಂಡಲವು ಮಳೆಗರಿಯಿತು.
ಇಸ್ರಾಯೇಲ್ಯರ ದೇವನಾದ ದೇವರು ಪ್ರತ್ಯಕ್ಷನಾಗಿದ್ದಾನೆಂದು
ಆ ಸೀನಾಯಿಬೆಟ್ಟವು ಕದಲಿತು.
9 ದೇವರೇ, ನೀನು ಹೇರಳ ಮಳೆಸುರಿಸಿ
ಬಾಯ್ದೆರೆದಿದ್ದ ನಿನ್ನ ಸ್ವಾಸ್ತ್ಯವನ್ನು ಶಾಂತಿಪಡಿಸಿದಿ.
10 ನಿನ್ನ ಪ್ರಜಾಮಂಡಲಿಯು ಅದರಲ್ಲಿ ವಾಸಿಸಿಕೊಂಡಿತು.
ದೇವರೇ, ನೀನು ದಯಾಪರನಾಗಿ ದರಿದ್ರರಿಗೆ ಬೇಕಾದದ್ದೆಲ್ಲವನ್ನು ಸವರಿಸಿ ಕೊಟ್ಟಿ.

11 ಕರ್ತನು ನುಡಿದನು;
ಶುಭವಾರ್ತೆಯನ್ನು ಪ್ರಸಿದ್ಧಪಡಿಸುವ ಸ್ತ್ರೀಸಮೂಹವು ಎಷ್ಟೋ ದೊಡ್ಡದು.
12 ಓಡಿ ಹೋಗುತ್ತಾರೆ; ಸೈನ್ಯದೊಡನೆ ಅರಸುಗಳು ಓಡಿ ಹೋಗುತ್ತಾರೆ;
ಮನೆಯಲ್ಲಿದ್ದ ಸ್ತ್ರೀಯರು ಕೊಳ್ಳೆಯನ್ನು ಹಂಚುತ್ತಾರೆ.
13 ನೀವು ಕುರಿಹಟ್ಟಿಗಳಲ್ಲಿ ಮಲಗಿಕೊಂಡಿರುವದೇನು?
ಪಾರಿವಾಳದ ರೆಕ್ಕೆಗಳು ಬೆಳ್ಳಿಯಿಂದಲೂ ಅದರ ಗರಿಗಳು ಬಂಗಾರದಿಂದಲೂ ಥಳಥಳಿಸುತ್ತವೆ.
14 ಸರ್ವಶಕ್ತನು ಅಲ್ಲಿ ರಾಜರನ್ನು ಚದರಿಸಿದಾಗ
ಸಲ್ಮೋನಿನ ಮೇಲೆ ಹಿಮವು ಬಿದ್ದಿತು.

15 ಬಾಷಾನಿನ ಪರ್ವತವು ಮಹೋನ್ನತವಾಗಿದೆ;
ಆ ಬಾಷಾನ್ ಗಿರಿಯು ಶಿಖರಗಳುಳ್ಳದ್ದೇ.
16 ಎಲೈ ಶಿಖರೋನ್ನತಪರ್ವತಗಳೇ,
ದೇವರು ತನ್ನ ನಿವಾಸಾರ್ಥವಾಗಿ ಆರಿಸಿಕೊಂಡಿರು ಈ ಪರ್ವತವನ್ನು
ನೀವು ಓರೆಗಣ್ಣಿನಿಂದ ನೋಡುವದೇಕೆ?
ಯೆಹೋವನು ಸದಾಕಾಲವೂ ಇದರಲ್ಲೇ ವಾಸಿಸ ವನು.
17 ದೇವರಿಗೆ ಸಹಸ್ರಾವಧಿ ಮಾತ್ರವಲ್ಲ, ಲಕ್ಷಾಂತರ ರ ಗಳು ಇವೆ.
ಕರ್ತನಾದ ಯೆಹೋವನು ಅವುಗಳ ಸಮೇತವಾ ಸೀನಾಯಿಬೆಟ್ಟದಲ್ಲಿದ್ದ ಹಾಗೆ ಪವಿತ್ರಾಲಯದಲ್ ದ್ದಾನೆ.
18 ನೀನು ಜಯಿಸಿದ ಬಹು ಜನರನ್ನು ಸೆರೆಹಿಡುಕೊಂಡ ಹೋಗಿ
ನಿನಗೆ ದ್ರೋಹಿಗಳಾದ ಮನುಷ್ಯರಿಂದಲೇ ಕಪ್ಪಗಳನು ಸಂಗ್ರಹಿಸಿ ಉನ್ನತಸ್ಥಾನಕ್ಕೆ ಏರಿದ್ದೀ.
ದೇವನಾದ ಯಾಹುವೇ, ಅಲ್ಲೇ ವಾಸಿಸುವಿ.

19 ಅನುದಿನವೂ ನಮ್ಮ ಭಾರವನ್ನು ಹೊರುವ ಕತ ನಿಗೆ ಸ್ತೋತ್ರವಾಗಲಿ.
ನಮ್ಮನ್ನು ರಕ್ಷಿಸುವ ದೇವರು ಆತನೇ. ಸೆಲಾ.
20 ನಮ್ಮ ದೇವರು ನಮ್ಮನ್ನು ವಿಮೋಚಿಸುವದಕ್ಕೋಸ್ಕ ದೇವರಾಗಿದ್ದಾನೆ;
ಕರ್ತನಾದ ಯೆಹೋವನು ಮರಣಕ್ಕೆ ತಪ್ಪಿಸ ಶಕ್ ನಾಗಿದ್ದಾನೆ.
21 ಆಹಾ, ಆತನು ತನ್ನ ವೈರಿಗಳ ಶಿರಸ್ಸುಗಳನ್ನೂ
ಸ್ವೇಚ್ಛೆಯಿಂದ ಪಾಪದಲ್ಲಿ ಪ್ರವರ್ತಿಸುವವರ ತುಂಬ ಗೂದಲಿನ ತಲೆಗಳನ್ನೂ ಒಡೆದುಬಿಡುವನು.
22 ಕರ್ತನು — ನಾನು ಅವರನ್ನು ಬಾಷಾನಿನಿಂದಲ ಸಮುದ್ರತಲದಿಂದಲೂ ಹಿಡಿದುತರುವೆನು.
23 ಆಗ ನೀನು ನಿನ್ನ ಶತ್ರುಗಳ ರಕ್ತದಲ್ಲಿ ಕಾಲಾಡಿಸುವಿ
ನಿನ್ನ ನಾಯಿಗಳ ನಾಲಿಗೆಗಳಿಗೆ ವೈರಿಗಳ ದೇಹದಲ್ ಪಾಲುಸಿಕ್ಕುವದು ಎಂದು ನುಡಿದನು.

24 ದೇವರೇ, ನಿನ್ನ ಮೆರವಣಿಗೆ ಶೋಭಿಸುತ್ತದೆ;
ನನ್ನ ಅರಸನಾದ ದೇವರು ತನ್ನ ಪರಿಶುದ್ಧಾಲಯಕ ಮೆರವಣಿಗೆಯಾಗಿ ಚಿತ್ತೈಸುತ್ತಾನೆ.
25 ಮುಂಗಡೆಯಲ್ಲಿ ಹಾಡುವವರೂ ಹಿಂಗಡೆಯಲ್ಲಿ ವಾದ ಬಾರಿಸುವವರೂ
ಸುತ್ತಲು ದಮ್ಮಡಿಬಡಿಯುವ ಸ್ತ್ರೀಯರೂ ಹೊ ಗುತ್ತಾ--
26 ಇಸ್ರಾಯೇಲ್‌ಸಂಭವರೇ, ಸಮ್ಮೇಳವಾಗಿ
ದೇವನಾದ ಕರ್ತನನ್ನು ಕೊಂಡಾಡಿರಿ ಎಂದು ಹಾಡ ತ್ತಾರೆ.
27 ಅಲ್ಲಿ ಎಲ್ಲರಿಗೆ ನಾಯಕರಾಗಿರುವ ಬೆನ್ಯಾಮೀನೆಂ ಸಣ್ಣ ಗೋತ್ರದವರೂ
ಗುಂಪಾಗಿ ಬರುವ ಯೆಹೂದಕುಲಪ್ರಭುಗಳೂ
ಜೆಬುಲೂನ ನಫ್ತಾಲಿ ಗೋತ್ರಗಳ ಪ್ರಧಾನರ ಇದ್ದಾರೆ.

28 ದೇವರೇ, [1]ನಿನ್ನ ಪ್ರತಾಪವನ್ನು ತೋರ್ಪಡಿಸು.
ನಿನ್ನ ಮಂದಿರದಲ್ಲಿ ಆಸೀನನಾಗಿ ನಮಗೋಸ್ಕರ ಮಹ
ತ್ಕಾರ್ಯಗಳನ್ನು ನಡಿಸಿದ ದೇವರೇ,
ನಿನ್ನ ಬಲವನ್ನು ಪ್ರಕಟಿಸು.
29 ಅರಸುಗಳು ಯೆರೂಸಲೇಮ್ ಪಟ್ಟಣಕ್ಕೆ ನಿನಗೋ
ಸ್ಕರ ಕಾಣಿಕೆಗಳನ್ನು ತಂದು ಸಮರ್ಪಿಸಲಿ.
30 ಆಪಿನೊಳಗೆ ವಾಸಿಸುವ ನೀರಾನೆ, ಕರುಗಳ ಸಹಿತ
ವಾದ ಹೋರಿಗಳ ಗುಂಪು,
ಇವುಗಳಂತಿರುವ ಶತ್ರುಜನಾಂಗಗಳನ್ನು ಬೆದರಿಸು.
ಅವು ಬೆಳ್ಳೀಗಟ್ಟಿಗಳನ್ನು ತಂದು ನಿನಗೆ ಅಡ್ಡಬೀಳಲಿ.
ಯುದ್ಧಾಸಕ್ತಜನಾಂಗಗಳನ್ನು [2]ಚದರಿಸಿಬಿಡು.
31 ಐಗುಪ್ತ ದೇಶದಿಂದ ರಾಯಭಾರಿಗಳು ಬರುವರು;
ಕೂಷ್ ದೇಶದವರ ಕೈಗಳು ದೇವರಿಗೆ ಕಾಣಿಕೆ
ಗಳನ್ನು ನೀಡಲಿಕ್ಕೆ ಅವಸರಪಡುವವು.

32 ಭೂರಾಜ್ಯಗಳೇ, ದೇವರಿಗೆ ಗಾನಮಾಡಿರಿ;
ಕರ್ತನನ್ನು ಸಂಕೀರ್ತಿಸಿರಿ. ಸೆಲಾ.
33 ಅನಾದಿಕಾಲದಿಂದಿರುವ ಮಹೋನ್ನತಾಕಾಶದಲ್ಲಿ
ವಾಹನಾರೂಢನಾಗಿರುವಾತನನ್ನು ಸ್ತುತಿಸಿರಿ.
ಕೇಳಿರಿ; ಆತನ ಗರ್ಜನೆಯು ಮಹಾಘೋರವಾದದ್ದು.
34 ದೇವರ ಪ್ರತಾಪವನ್ನು ಕೊಂಡಾಡಿರಿ.
ಆತನ ಗಾಂಭೀರ್ಯವು ಇಸ್ರಾಯೇಲ್ಯರ ಆಶ್ರಯ
ವಾಗಿದೆ;
ಆತನ ಶಕ್ತಿಯು ಮೇಘಮಾರ್ಗದಲ್ಲೆಲ್ಲಾ ವ್ಯಾಪಿಸಿದೆ.
35 ದೇವರೇ, ಪರಿಶುದ್ಧಾಲಯದಲ್ಲಿರುವ ನೀನು ಮಹಾ
ಭಯಂಕರನು.
ಇಸ್ರಾಯೇಲ್ಯರ ದೇವರು ತನ್ನ ಪ್ರಜೆಗೆ ಬಲಪರಾಕ್ರಮ
ಗಳನ್ನು ದಯಪಾಲಿಸುವನು.
ದೇವರಿಗೆ ಸ್ತೋತ್ರ.

ಭಕ್ತನು ಸ್ವರಕ್ಷಣೆ ವೈರಿಶಿಕ್ಷಣೆ ಇವುಗಳಿಗಾಗಿ ವಿಜ್ಞಾಪಿಸುವದು.
(ಕೀರ್ತನೆ 22; 35; 40.)
ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು;
ಶೋಶನ್ನೀಮೆಂಬ ರಾಗದ ಮೇಲೆ ಹಾಡತಕ್ಕದ್ದು;
ದಾವೀದನ ಕೀರ್ತನೆ.
(ಕೀರ್ತನೆ 45.)

69 ದೇವರೇ, ರಕ್ಷಿಸು; ಪ್ರಾಣಾಪಾಯವಾಗುವಷ್ಟು
ಜಲವು ಏರಿಬಂದದೆ.
2 ಆಳವಾದ ಕಳ್ಳುಸುಬಿನಲ್ಲಿ ಮುಳುಗುತ್ತಿದ್ದೇನೆ; ನೆಲೆ
ಸಿಕ್ಕುವದಿಲ್ಲ.
ದೊಡ್ಡ ಮಡುವಿನೊಳಕ್ಕೆ ಬಂದಿದ್ದೇನೆ; ಪ್ರವಾಹವು
ನನ್ನನ್ನು ಬಡಕೊಂಡು ಹೋಗುತ್ತದೆ.
3 ಮೊರೆಯಿಟ್ಟೆಟ್ಟು ಬೇಸತ್ತುಹೋಗಿದ್ದೇನೆ; ಗಂಟಲು
ಒಣಗಿಹೋಯಿತು.
ನನ್ನ ದೇವರನ್ನು ನಿರೀಕ್ಷಿಸುತ್ತಾ ದೃಷ್ಟಿ ಮಂದವಾ
ಯಿತು.
4 ನಿಷ್ಕಾರಣದ್ವೇಷಿಗಳು ನನ್ನ ತಲೆಗೂದಲುಗಳಿಗಿಂತ
ಹೆಚ್ಚಾಗಿದ್ದಾರೆ;
ನಿರ್ನಿಮಿತ್ತವಾಗಿ ನನ್ನನ್ನು ಮುಗಿಸಿಬಿಡಬೇಕೆಂದಿರುವ
ವೈರಿಗಳು ಬಲಿಷ್ಠರಾಗಿದ್ದಾರೆ.
ನಾನು ಅಪಹರಿಸದಿದ್ದರೂ ನನ್ನಿಂದ ದಂಡತೆಗೆದು
ಕೊಂಡರಲ್ಲಾ.

5 ದೇವರೇ, ನನ್ನ ಮೂರ್ಖತನವು ನಿನಗೆ ಗೊತ್ತು;
ನನ್ನ ಅಪರಾಧಗಳು ನಿನಗೆ ಮರೆಯಾಗಿಲ್ಲ.
6 ಸೇನಾಧೀಶ್ವರನೇ, ಯೆಹೋವನೇ, ನಿನ್ನನ್ನು ನಂಬಿದವ
ರಿಗೆ ನನ್ನಿಂದ ನಿರಾಶೆಯಾಗದಿರಲಿ;
ಇಸ್ರಾಯೇಲ್ಯರ ದೇವರೇ, ನಿನ್ನ ದರ್ಶನಾರ್ಥಿಗಳು
ನನ್ನಿಂದ ಅಪಮಾನಕ್ಕೆ ಗುರಿಯಾಗದಿರಲಿ.
7 ನಿನಗೋಸ್ಕರವಾಗಿ ನಿಂದೆಗೆ ಒಳಗಾದೆನಲ್ಲಾ;
ನಾಚಿಕೆಯು ನನ್ನ ಮುಖವನ್ನು ಕವಿದದೆ.
8 ನನ್ನ ಅಣ್ಣತಮ್ಮಂದಿರಿಗೆ ಹೆರನಂತಾದೆನು;
ಒಡಹುಟ್ಟಿದವರಿಗೆ ಪರಕೀಯನಂತಿದ್ದೇನೆ.
9 ನಿನ್ನ ಆಲಯಾಭಿಮಾನವು ನನ್ನನ್ನು ಬೆಂಕಿಯಂತೆ
ದಹಿಸಿದೆ.
ನಿನ್ನನ್ನು ದೂಷಿಸುವವರ ದೂಷಣೆಗಳು ನನ್ನ ಮೇಲೆ
ಬಂದಿವೆ.
10 ನಾನು ಅತ್ತತ್ತು ಉಪವಾಸಬಿದ್ದದ್ದೆಲ್ಲಾ ಪರಿಹಾಸ್ಯಕ್ಕೆ
ಕಾರಣವಾಯಿತು.
11 ನಾನು ಗೋಣೀತಟ್ಟು ಕಟ್ಟಿಕೊಂಡದ್ದು ಅವರ ಗಾದೆಗೆ
ಆಸ್ಪದವಾಯಿತು.
12 ಊರುಬಾಗಲಲ್ಲಿ ಕೂತುಕೊಳ್ಳುವವರ ಆಡಿಕೆಗೆ ಗುರಿ
ಯಾಗಿದ್ದೇನೆ.
ಕುಡಿಕರು ನನ್ನ ವಿಷಯ ಹಾಡಿ ಗೇಲಿಮಾಡುತ್ತಾರೆ.
13 ಯೆಹೋವನೇ, ನಾನಾದರೋ ನಿನಗೆ ಮೊರೆಯಿಟ್ಟಿ
ದ್ದೇನೆ; ಇದು ನಿನ್ನ ಪ್ರಸನ್ನತೆಗೆ ಸಕಾಲ.
ಪ್ರೇಮಪೂರ್ಣನಾದ ದೇವನೇ, ಸತ್ಯಸಂಧನಾದ ರಕ್ಷ
ಕನೇ, ಸದುತ್ತರವನ್ನು ದಯಪಾಲಿಸು.

14 ನಾನು ಕಳ್ಳುಸುಬಿನಲ್ಲಿ ಮುಳುಗಿಹೋಗದಂತೆ ಮೇ
ಲೆತ್ತು;
ವೈರಿಗಳ ಕೈಯೊಳಗಿಂದ ಬಿಡಿಸು; ಮಹಾಜಲರಾಶಿ
ಯಿಂದ ಎಳೆದುಕೋ.
15 ಪ್ರವಾಹವು ನನ್ನನ್ನು ಬಡಕೊಂಡು ಹೋಗದಿರಲಿ;
ಮಡುವು ನನ್ನನ್ನು ಒಳಗೆ ಎಳಕೊಳ್ಳದಿರಲಿ;
ಪಾತಾಳವು ನನ್ನನ್ನು ನುಂಗದಿರಲಿ.
16 ಯೆಹೋವನೇ, ನನ್ನ ಮೊರೆಯನ್ನು ಲಾಲಿಸು; ನಿನ್ನ
ಕೃಪೆಯು ಶುಭಕರವಾಗಿದೆಯಲ್ಲಾ.
ಕರುಣಾಸಿಧುಯೇ, ನನ್ನನ್ನು ಕಟಾಕ್ಷಿಸು.
17 ನಿನ್ನ ದಾಸನಿಗೆ ವಿಮುಖನಾಗಬೇಡ.
ಇಕ್ಕಟ್ಟಿನಲ್ಲಿದ್ದೇನೆ; ತಡೆಮಾಡದೆ ಸಹಾಯಕೊಡು.
18 ಸಮೀಪಿಸಿ ನನ್ನ ಪ್ರಾಣವನ್ನು ವಿಮೋಚಿಸು.
ಶತ್ರುನಿಮಿತ್ತವಾಗಿ ನನ್ನನ್ನು ರಕ್ಷಿಸು.

1) ಪಾಠಾಂತರ: ದೇವರು ತನ್ನ ಪ್ರತಾಪವನ್ನು ತೋರ್ಪಡಿಸಿದ್ದಾನೆ. 2) ಪಾಠಾಂತರ: ಚದರಿಸಿಬಿಟ್ಟಿದ್ದಾನೆ.

19 ನನಗುಂಟಾದ ನಿಂದೆ, ಲಜ್ಜೆ, ಅಪಮಾನ ಇವು
ನಿನಗೇ ಗೊತ್ತು;
ನನ್ನ ವಿರೋಧಿಗಳು ನಿನಗೆ ಮರೆಯಾಗಿಲ್ಲವಲ್ಲಾ.
20 ನಿಂದೆಯಿಂದ ಖಿನ್ನನಾಗಿ ಕುಂದಿಹೋಗಿದ್ದೇನೆ.
ಕರುಣಾಳುಗಳನ್ನು ನಿರೀಕ್ಷಿಸಿದೆ; ದೊರೆಯಲಿಲ್ಲ.
ಸಂತೈಸುವವರನ್ನು ಹಾರೈಸಿದೆ; ಸಿಕ್ಕಲಿಲ್ಲ.
21 ನನಗೆ ಉಣ್ಣುವದಕ್ಕೆ ಕಹಿಯಾದ ವಸ್ತುವನ್ನೂ
ಬಾಯಾರಿದಾಗ ಹುಳಿತ ದ್ರಾಕ್ಷಾರಸವನ್ನೂ ಕೊ
ಟ್ಟರು.

22 ಅವರ ಊಟವೇ ಅವರಿಗೆ ಉರುಲಾಗಲಿ;
ನಿಶ್ಚಿಂತರಾಗಿರುವಾಗಲೇ ಅದು ಅವರಿಗೆ ಬೋ
ನಾಗಲಿ.
23 ಅವರ ಕಣ್ಣು ಮೊಬ್ಬಾಗಿ ಕಾಣದೆಹೋಗಲಿ;
ಅವರ ನಡುವು ಯಾವಾಗಲೂ ಬಳುಕುತ್ತಿರಲಿ.
24 ನಿನ್ನ ರೌದ್ರವನ್ನು ಅವರ ಮೇಲೆ ಸುರಿದುಬಿಡು;
ನಿನ್ನ ಕೋಪಾಗ್ನಿಯು ಅವರನ್ನು ಆಹುತಿಗೊಳ್ಳಲಿ.
25 ಅವರ ಪಾಳೆಯವು ಹಾಳುಬೀಳಲಿ;
ಅವರ ನಿವಾಸಗಳು ಜನಶೂನ್ಯವಾಗಲಿ.
26 ನೀನು ಹೊಡೆದವನನ್ನು ಅವರು ಹಿಂಸಿಸುತ್ತಾರೆ;
ನೀನು ಗಾಯಮಾಡಿದವರ ನೋವು ಅವರ ಆಡಿ
ಕೆಗೆ ಕಾರಣವಾಗಿದೆ.
27 ಅವರ ಅಪರಾಧಗಳು ಒಂದೊಂದಾಗಿ ಹೆಚ್ಚುತ್ತಾ
ಬರಲಿ.
ನಿನ್ನ ನೀತಿಯಲ್ಲಿ ಅವರಿಗೆ ಪಾಲುಕೊಡಬೇಡ.
28 ಜೀವಿತರ ಪಟ್ಟಿಯಿಂದ ಅವರ ಹೆಸರು ತೆಗೆಯಲ್ಪ
ಡಲಿ,
ಸದ್ಭಕ್ತರ ಹೆಸರಿನ ಸಂಗಡ ಅವರದು ಬರೆಯ
ಲ್ಪಡದಿರಲಿ.

29 ದೇವರೇ, ನೊಂದು ಕುಗ್ಗಿದವನಾದ ನನ್ನನ್ನಾ
ದರೋ
ನಿನ್ನ ರಕ್ಷಣೆಯು ಭದ್ರಸ್ಥಳದಲ್ಲಿರಿಸುವದು.
30 ನಾನು ಸಂಕೀರ್ತಿಸುತ್ತಾ ದೇವರ ನಾಮವನ್ನು
ಕೊಂಡಾಡುವೆನು;
ಕೃತಜ್ಞತಾಸ್ತುತಿಯಿಂದ ಘನಪಡಿಸುವೆನು.
31 ಇದು ಯೆಹೋವನಿಗೆ ಕೊಂಬುಗೊರಸುಗಳುಳ್ಳ
ಎಳೇ ಹೋರಿಗಳ ಯಜ್ಞಕ್ಕಿಂತ ಬಹು ಪ್ರಿಯ
ವಾದದ್ದು.
32 ದೀನರು ಇದನ್ನು ನೋಡಿ ಹರ್ಷಿಸುವರು.
ದೇವದರ್ಶನವನ್ನು ಅಪೇಕ್ಷಿಸುವವರೇ, ನಿಮ್ಮ
ಆತ್ಮವು ಉಜ್ಜೀವಿಸಲಿ.
33 ಯೆಹೋವನು ಬಡವರ ಮೊರೆಗೆ ಲಕ್ಷ್ಯಕೊಡು
ವನು;
ಸೆರೆಯಲ್ಲಿರುವ ತನ್ನವರನ್ನು ತಿರಸ್ಕರಿಸುವದಿಲ್ಲ.

34 ಭೂಮ್ಯಾಕಾಶಗಳೂ ಸಮುದ್ರಗಳೂ ಜಲಚರ
ಗಳೂ ಆತನನ್ನು ಕೊಂಡಾಡಲಿ.
35 ದೇವರು ಚೀಯೋನ್ ಪಟ್ಟಣವನ್ನು ರಕ್ಷಿಸಿ
ಯೆಹೂದ ದೇಶದ ನಗರಗಳನ್ನು ಕಟ್ಟಿಸುವನು;
ಆತನ ಪ್ರಜೆಗಳು ಅಲ್ಲಿ ವಾಸಮಾಡುತ್ತಾ ಸ್ವದೇ
ವಾಗಿ ಮಾಡಿಕೊಳ್ಳುವರು.
36 ಅವರ ಸಂತತಿಗೇ ಅದರ ಹಕ್ಕಿರುವದು;
ಆತನ ನಾಮವನ್ನು ಪ್ರೀತಿಸುವವರು ಅದರ
ವಾಸಿಸುವರು.

ಶತ್ರುಗಳಿಂದ ಬೇಗನೆ ಸಂರಕ್ಷಿಸಬೇಕೆಂದು ಯೆಹೋವನನ್ನು
ಬೇಡಿಕೊಳ್ಳುವದು.
(ಕೀರ್ತನೆ 40. 13—17.)
ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು;
ದಾವೀದನ ಕೀರ್ತನೆ; ಜ್ಞಾಪಕಾರ್ಥನೈವೇದ್ಯಸಮರ್ಪಣೆ
ಯಲ್ಲಿ ಹಾಡತಕ್ಕದ್ದು.

70 ದೇವರೇ, ದಯವಿಟ್ಟು ನನ್ನನ್ನು ರಕ್ಷಿಸು.
ಯೆಹೋವನೇ, ಬೇಗ ಬಂದು ಸಹಾ
ಮಾಡು.
2 ನನ್ನ ಪ್ರಾಣಕ್ಕಾಗಿ ಸಮಯನೋಡುವವರು ಆ
ಭಂಗಪಟ್ಟು ಅಪಮಾನಹೊಂದಲಿ;
ನನ್ನ ಆಪತ್ತಿನಲ್ಲಿ ಸಂತೋಷಿಸುವವರು ಮಾನಭಂ
ದಿಂದ ಹಿಂದಿರುಗಿ ಓಡಲಿ.
3 ಆಹಾ, ಆಹಾ ಎಂದು ಪರಿಹಾಸ್ಯಮಾಡುವವರು
ತಮಗಾಗುವ ಅಪಮಾನದಿಂದ ಬೆಂಗೊಟ್ಟು ಓಡಿಹೋ
ಗಲಿ.
4 ನಿನ್ನ ದರ್ಶನವನ್ನು ಕೋರುವವರೆಲ್ಲರು ನಿನ್ನಲ್ಲಿ ಉಲ
ಸದಿಂದ ಸಂತೋಷಿಸಲಿ;
ನಿನ್ನ ಜಯದಲ್ಲಿ ಆನಂದಿಸುವವರು—ದೇವರಿಗೆ ಸ್ತೋ
ತ್ರವೆಂದು ಯಾವಾಗಲೂ ಅನ್ನುವವರಾಗಲಿ.
5 ನಾನಾದರೋ ಕುಗ್ಗಿದವನೂ ದಿಕ್ಕಿಲ್ಲದವನೂ ಆ
ದ್ದೇನೆ;
ದೇವರೇ, ಶೀಘ್ರವಾಗಿ ಬಾ.
ಯೆಹೋವನೇ, ನೀನೇ ನನಗೆ ಸಹಾಯಕನೂ ರ
ಕನೂ ಆಗಿದ್ದೀ;
ತಡಮಾಡಬೇಡ.

ಬಾಲ್ಯದಿಂದಾದ ರಕ್ಷಣೆಯನ್ನು ಜ್ಞಾಪಿಸಿಕೊಂಡು ವೃದ್ಧಾಪ್ಯ
ದಲ್ಲಿಯೂ ರಕ್ಷಿಸಬೇಕೆಂದು ಪ್ರಾರ್ಥಿಸುವದು.
(ಕೀರ್ತನೆ 22; 31; 35; 40.)

71 ಯೆಹೋವನೇ, ನಿನ್ನ ಮರೆಹೊಕ್ಕಿದ್ದೇನೆ;
ಎಂದಿಗೂ ಆಶಾಭಂಗಪಡಿಸಬೇಡ.
2 ನೀತಿಸ್ಥಾಪಕನಾದ ನೀನು ನನ್ನನ್ನು ಬಿಡಿಸಿ ಪಾ
ಮಾಡು;
ನನ್ನ ಪ್ರಾರ್ಥನೆಗೆ ಕಿವಿಗೊಟ್ಟು ಉದ್ಧರಿಸು.
3 ನಾನು ಯಾವಾಗಲೂ ಮರೆಹೊಗುವ ಆಶ್ರಯ
ಯಾಗಿರು;
ನನ್ನ ರಕ್ಷಣೆಗೋಸ್ಕರ ಆಜ್ಞಾಪಿಸಿದ್ದೀಯಲ್ಲವೇ.
ನೀನೇ ನನ್ನ ಬಂಡೆಯೂ ಕೋಟೆಯೂ ಆಗಿ
ಯಲ್ಲಾ.
4 ದೇವರೇ, ನನ್ನನ್ನು ದುಷ್ಟನ ಕೈಯಿಂದಲೂ ಅನ್ಯಾ
ಬಲಾತ್ಕಾರಿಯ ವಶದಿಂದಲೂ ತಪ್ಪಿಸು.

5 ಕರ್ತನಾದ ಯೆಹೋವನೇ, ಬಾಲ್ಯಾರಭ್ಯ ನನ್ನ ನಿರೀ
ಕ್ಷೆಯೂ ಭರವಸವೂ ನೀನಲ್ಲವೋ?
6 ನಾನು ಹುಟ್ಟಿದಂದಿನಿಂದ ನಿನ್ನನ್ನೇ ಆತುಕೊಂಡಿ
ದ್ದೇನೆ;
ತಾಯಿ ಹೆತ್ತಂದಿನಿಂದ ನನ್ನ ಉದ್ಧಾರಕನು ನೀನೇ.
ನಾನು ಯಾವಾಗಲೂ ಹಿಗ್ಗುತ್ತಿರುವದು ನಿನ್ನಲ್ಲಿಯೇ.
7 ಅನೇಕರು ನನ್ನ ದುಸ್ಥಿತಿಗೆ ಬೆರಗಾಗುತ್ತಾರೆ;
ಆದರೂ ನೀನು ನನಗೆ ಬಲವಾದ ಆಶ್ರಯಸ್ಥಾನವಾ
ಗಿರುತ್ತೀ.
8 ನನ್ನ ಬಾಯಲ್ಲಿ ನಿನ್ನ ಸ್ತೋತ್ರವಲ್ಲದೆ ಮತ್ತೊಂದಿಲ್ಲ;
ದಿನವೆಲ್ಲಾ ನಿನ್ನ ಘನತೆಯನ್ನು ವರ್ಣಿಸುತ್ತಿರುವೆನು.

9 ವೃದ್ಧಾಪ್ಯದಲ್ಲಿ ನನ್ನನ್ನು ಧಿಕ್ಕರಿಸಬೇಡ;
ನನ್ನ ಬಲವು ಕುಂದಿದಾಗ ಕೈಬಿಡಬೇಡ.
10 ನನ್ನ ಜೀವಕ್ಕೆ ಹೊಂಚುಹಾಕುವ ವೈರಿಗಳು ಒಟ್ಟಾಗಿ
ಆಲೋಚಿಸುತ್ತಾ—
11 ದೇವರು ಅವನನ್ನು ಕೈಬಿಟ್ಟಿದ್ದಾನೆ;
ಬೆನ್ನಟ್ಟಿ ಹಿಡಿಯಿರಿ; ಬಿಡಿಸುವವರು ಯಾರೂ ಇಲ್ಲ
ಎಂದು ಹೇಳಿಕೊಳ್ಳುತ್ತಾರೆ.
12 ದೇವರೇ, ದೂರವಾಗಿರಬೇಡ.
ನನ್ನ ದೇವರೇ, ಬೇಗ ಸಹಾಯಮಾಡು.
13 ನನ್ನ ಪ್ರಾಣಕ್ಕೆ ಕಂಟಕರಾದವರು ಆಶಾಭಂಗ
ಪಟ್ಟು ನಾಶವಾಗಲಿ;
ನನಗೆ ಕೇಡುಬಗೆಯುವವರನ್ನು ನಿಂದಾಪಮಾನ
ಗಳು ಕವಿಯಲಿ.

14 ನಾನಂತೂ ನಿರೀಕ್ಷಿಸಿಕೊಂಡೇ ಇರುವೆನು;
ನಿನ್ನನ್ನು ಅಧಿಕಾಧಿಕವಾಗಿ ಹೊಗಳುತ್ತಿರುವೆನು.
15 ನನ್ನ ಬಾಯಿ ನಿನ್ನ ನೀತಿಯನ್ನೂ ರಕ್ಷಣೆಯನ್ನೂ
ಹಗಲೆಲ್ಲಾ ವರ್ಣಿಸುತ್ತಿರುವದು;
ಆದರೂ ಅವುಗಳ ವಿವರಣೆ ನನಗೆ ಅಸಾಧ್ಯ.
16 ಕರ್ತನಾದ ಯೆಹೋವನೇ, ನಾನು ನಿನ್ನ ಮಹತ್ಕೃತ್ಯ
ಗಳನ್ನು ಸ್ಮರಿಸುವವನಾಗಿ
ನಿನ್ನೊಬ್ಬನ ನೀತಿಯನ್ನೇ ಪ್ರಕಟಪಡಿಸುವೆನು.

17 ದೇವರೇ, ನೀನು ಬಾಲ್ಯಾರಭ್ಯ ನನ್ನನ್ನು ಉಪದೇಶಿಸು
ತ್ತಾ ಬಂದಿದ್ದೀ;
ನಾನು ನಿನ್ನ ಅದ್ಭುತಕೃತ್ಯಗಳನ್ನು ಇಂದಿನ ವರೆಗೂ
ಪ್ರಚುರಪಡಿಸುತ್ತಿದ್ದೇನೆ.
18 ದೇವರೇ, ನಾನು ನರೆಯ ಮುದುಕನಾದಾಗಲೂ ಕೈ
ಬಿಡಬೇಡ;
ಆಗ ಮುಂದಿನ ತಲೆಯವರಿಗೆ ನಿನ್ನ ಭುಜಬಲವನ್ನು
ಸಾರುವೆನು,
ತಲತಲಾಂತರದವರಿಗೆಲ್ಲಾ ನಿನ್ನ ಪ್ರತಾಪವನ್ನು ಪ್ರಕ
ಟಿಸುವೆನು.
19 ದೇವರೇ, ನಿನ್ನ ನೀತಿಯು ಆಕಾಶವನ್ನು ನಿಲುಕು
ವಷ್ಟು ಮಹೋನ್ನತವಾಗಿದೆ.
ಮಹತ್ಕೃತ್ಯಗಳನ್ನು ನಡಿಸಿದ ದೇವರೇ, ನಿನಗೆ ಸಮಾ
ನರು ಯಾರು?
20 ನಮ್ಮನ್ನು ಅನೇಕ ಕಷ್ಟನಷ್ಟಗಳಿಗೆ ಗುರಿಮಾಡಿದ ನೀನೇ
ಪುನಃ ಉಜ್ಜೀವಿಸಮಾಡು;
ನಮ್ಮನ್ನು ಭೂಮಿಯ ಅಧೋಭಾಗದಿಂದ ಮೇಲೆತ್ತು.

21 ನನ್ನ ಗೌರವವನ್ನು ಹೆಚ್ಚಿಸು;
ನನಗೆ ಅಭಿಮುಖನಾಗಿ ಸಂತೈಸು.
22 ನನ್ನ ದೇವರೇ, ನಿನ್ನ ಸತ್ಯತೆಯನ್ನು ಸ್ಮರಿಸುವೆನು;
ಸ್ವರಮಂಡಲದಿಂದ ನಿನ್ನನ್ನು ಸಂಕೀರ್ತಿಸುವೆನು.
ಇಸ್ರಾಯೇಲ್ಯರ ಸದಮಲಸ್ವಾಮಿಯೇ,
ಕಿನ್ನರಿಯನ್ನು ನುಡಿಸುತ್ತಾ ನಿನ್ನನ್ನು ಭಜಿಸುವೆನು.
23 ನನ್ನ ತುಟಿಗಳೂ ನೀನು ರಕ್ಷಿಸಿದ ನನ್ನ ಪ್ರಾಣವೂ
ನಿನ್ನನ್ನು ಹಾಡಿಹರಸುವವು.
24 ನನ್ನ ಕೇಡಿಗೆ ಪ್ರಯತ್ನಿಸಿದವರು ಆಶಾಭಂಗಪಟ್ಟು
ಅಪಮಾನಹೊಂದಿದ್ದಾರೆ.
ಆದದರಿಂದ ನನ್ನ ನಾಲಿಗೆಯು ದಿನವೆಲ್ಲಾ ನಿನ್ನ ನೀತಿ
ಸಾಧನೆಯನ್ನು ವರ್ಣಿಸುತ್ತಿರುವದು.

ರಾಜಾಶೀರ್ವಾದ.

(ಕೀರ್ತನೆ 21; 45.)

ಸೊಲೊಮೋನನ ಕೀರ್ತನೆ.

**72** ದೇವರೇ, ಅರಸನಿಗೆ ನಿನ್ನ ನ್ಯಾಯವನ್ನು ಕಲಿಸಿ
ಕೊಡು;
ರಾಜಕುಮಾರನಾದ ಅವನಿಗೆ ನಿನ್ನ ನೀತಿಯನ್ನು ಅನು
ಗ್ರಹಿಸು.
2 [1]ಅವನು ನಿನ್ನ ಜನರಿಗೆ ನೀತಿಯಿಂದಲೂ
ಕುಗ್ಗಿಹೋದ ನಿನ್ನವರಿಗೆ ನ್ಯಾಯವಾಗಿಯೂ ತೀರ್ಪು
ಕೊಡಲಿ.
3 ಗುಡ್ಡದಿನ್ನೆಗಳೆಲ್ಲವು ನಿನ್ನ ಜನರಿಗೋಸ್ಕರ
ನೀತಿಗನುಸಾರವಾಗಿ ಸುಕ್ಷೇಮವನ್ನು ಫಲಿಸಲಿ.
4 ಅವನು ಬಡವರ ನ್ಯಾಯವನ್ನು ಸ್ಥಾಪಿಸಲಿ;
ದೀನರ ಮಕ್ಕಳನ್ನು ಉದ್ಧರಿಸಲಿ;
ಪ್ರಜಾಹಿಂಸಕರನ್ನು ಖಂಡಿಸಿಬಿಡಲಿ.

5 ಆಚಂದ್ರಾರ್ಕವಾಗಿ ತಲತಲಾಂತರಗಳೆಲ್ಲಾ ನಿನಗೆ
ಭಯಪಡಲಿ.
6 ಹುಲ್ಲುಕೊಯಿದ ಮೇಹುಗಾಡಿನ ಮೇಲೆ ಸುರಿಯುವ
ವೃಷ್ಟಿಯಂತೆಯೂ
ಭೂಮಿಯನ್ನು ನೆನಸುವ ಹದಮಳೆಯಂತೆಯೂ ಅವ
ನು ಇರಲಿ.
7 ಅವನ ದಿವಸಗಳಲ್ಲಿ ನೀತಿಯು ವೃದ್ಧಿಯಾಗಲಿ;
ಚಂದ್ರನಿರುವ ವರೆಗೂ ಪರಿಪೂರ್ಣಸೌಭಾಗ್ಯವಿರಲಿ.

8 ಅವನು ಸಮುದ್ರದಿಂದ ಸಮುದ್ರದ ವರೆಗೂ

[1]) ಇದರಲ್ಲಿನ ವಿಧಿರೂಪಗಳಿಗೆ ಬದಲಾಗಿ ಭವಿಷ್ಯದ್ರೂಪಗಳನ್ನು ಉಪಯೋಗಿಸಬಹುದು.

[ಯೂಫ್ರೇಟೀಸ್] ನದಿಯಿಂದ ಭೂಮಿಯ ಕಟ್ಟ
ಕಡೆಯ ವರೆಗೂ ಆಳಲಿ.
9 ಅರಣ್ಯವಾಸಿಗಳು ಅವನಿಗೆ ಅಡ್ಡಬೀಳಲಿ;
ಅವನ ವೈರಿಗಳು ಮಣ್ಣುಮುಕ್ಕಲಿ.
10 ತಾರ್ಷೀಷ್‍ಪ್ರಾಂತದ ಮತ್ತು ಸಮುದ್ರದ ಕರಾವಳಿ
ಯ ಅರಸರು ಕಪ್ಪಗಳನ್ನು ಸಲ್ಲಿಸಲಿ;
ಶೆಬಾ ಮತ್ತು ಸೆಬಾ ಎಂಬ ಪ್ರದೇಶಗಳ ರಾಜರೂ
ಕಾಣಿಕೆಗಳನ್ನು ತಂದೊಪ್ಪಿಸಲಿ.
11 ಎಲ್ಲಾ ಅರಸರೂ ಅವನಿಗೆ ಸಾಷ್ಟಾಂಗವೆರಗಲಿ;
ಸರ್ವಜನಾಂಗಗಳು ಅವನನ್ನು ಸೇವಿಸಲಿ.

12 ಯಾಕಂದರೆ ಅವನು ಮೊರೆಯಿಡುವ ಬಡವರನ್ನೂ
ದಿಕ್ಕಿಲ್ಲದೆ ಕುಗ್ಗಿದವರನ್ನೂ ಉದ್ಧರಿಸುವನು.
13 ದೀನದರಿದ್ರರ ಮೇಲೆ ಕರುಣೆಯುಳ್ಳವನಾಗಿ
ಅವರ ಪ್ರಾಣಗಳನ್ನು ಸಂತೈಸುವನು.
14 ಕುಯುಕ್ತಿಬಲಾತ್ಕಾರಗಳಿಗೆ ತಪ್ಪಿಸಿ ಅವರನ್ನು ಕಾಯು
ವನು;
ಅವರ ಜೀವವು ಅವನ ದೃಷ್ಟಿಯಲ್ಲಿ ಅಮೂಲ್ಯವಾಗಿರು
ವದು.
15 ಅವನು ಬಾಳಲಿ; ಶೆಬಾ ಪ್ರಾಂತದ ಬಂಗಾರವು ಅವ
ನಿಗೆ ಸಮರ್ಪಣೆಯಾಗಲಿ.
ಅವನಿಗೋಸ್ಕರ ಯಾವಾಗಲೂ ದೇವರಲ್ಲಿ ವಿಜ್ಞಾಪನೆ
ಯು ನಡೆಯಲಿ;
ದಿನದಿನವೂ ಅವನಿಗೆ ಆಶೀರ್ವಾದಗಳುಂಟಾಗಲಿ.
16 ದೇಶದಲ್ಲಿ ಬೆಟ್ಟಗಳ ಮೇಲೆಲ್ಲಾ ಬೆಳೆಯು ಸಮೃದ್ಧಿ
ಯಾಗಲಿ;
ಪೈರುಗಳ ಶಬ್ದವು ಲೆಬನೋನಿನ ಮರಗಳ ಸಪ್ಪಳದಂತಿ
ರಲಿ.
ಹೊಲದಲ್ಲಿ ಕಾಯಿಪಲ್ಯದಂತೆ ಪಟ್ಟಣಗಳಲ್ಲಿ ಜನರು
ಹೆಚ್ಚಲಿ.
17 ಅವನ ನಾಮವು ಸ್ಥಿರವಾಗಿರಲಿ;
ಅವನ ಹೆಸರು ಸೂರ್ಯನಿರುವ ವರೆಗೆ ಇರಲಿ.
ಎಲ್ಲಾ ಜನಾಂಗಗಳವರು ಅವನನ್ನು ಧನ್ಯನೆಂದು
ಹೇಳಿ
ಅವನಿಗಿದ್ದ ಆಶೀರ್ವಾದವು ತಮಗೂ ಆಗಬೇಕೆಂದು
ಕೋರುವವರಾಗಲಿ.

18 ಮಹತ್ಕಾರ್ಯಗಳನ್ನು ನಡಿಸುವದರಲ್ಲಿ ಅದ್ವಿತೀ
ಯನೂ
ಇಸ್ರಾಯೇಲ್ಯರ ದೇವರೂ ಆದ ಯೆಹೋವದೇವ
ರಿಗೆ ಸ್ತೋತ್ರವು.
19 ಆತನ ಪ್ರಭಾವವುಳ್ಳ ನಾಮಕ್ಕೆ ಸದಾಕಾಲವೂ
ಪ್ರಣಾಮವಿರಲಿ.
ಭೂಮಂಡಲವೆಲ್ಲಾ ಆತನ ಪ್ರಭಾವದಿಂದ ತುಂಬಿ
ರಲಿ. ಆಮೆನ್. ಆಮೆನ್.

20 ಇಲ್ಲಿಗೆ ಇಷಯನ ಮಗನಾದ ದಾವೀದನ ಪ್ರಾರ್ಥ
ನೆಗಳ ಸಮಾಪ್ತಿ.

## ತೃತೀಯ ಭಾಗವು (73—89).

ದುಷ್ಟರ ಸೌಭಾಗ್ಯವನ್ನು ಕಂಡು ವಿಶ್ವಾಸಭ್ರಷ್ಟರಾಗಬಾರದೆಂ
ಸದ್ಬೋಧೆ. (ಕೀರ್ತನೆ 49.)
ಆಸಾಫನ ಕೀರ್ತನೆ.

73 ದೇವರು ನಿರ್ಮಲಚಿತ್ತರಾದ ಇಸ್ರಾಯೇಲ್ಯರಿಗೆ
ದಯಾಪರನೇ ಹೌದು.

2 ಆದರೆ ನಾನು ದುಷ್ಟರ ಸೌಭಾಗ್ಯವನ್ನು ಕಂಡು
ಸೊಕ್ಕಿನವರ ಮೇಲೆ ಉರಿಗೊಂಡೆನು.
3 ನನ್ನ ಕಾಲುಗಳು ಜಾರಿದವುಗಳೇ;
ನನ್ನ ಹೆಜ್ಜೆಗಳು ತಪ್ಪಿದವುಗಳೇ.
4 1)ಅವರ ಮರಣವು ನಿರ್ಬಾಧಕವಾಗಿದೆ;
ಅವರ ಕಾಯವು ಕೊಬ್ಬುಳ್ಳದ್ದಾಗಿದೆ.
5 ಮನುಷ್ಯರ ಕಷ್ಟದಲ್ಲಿ ಅವರು ಭಾಗಿಗಳಾಗುವದಿಲ್ಲ
ಇತರರಿಗೆ ತಗುಲುವಂತೆ ಅವರಿಗೆ ಅಂಟುರೋಗವ
ತಗುಲುವದಿಲ್ಲ.
6 ಆದದರಿಂದ ಅವರಿಗೆ ಗರ್ವವು ಕಂಠಮಾಲೆಯಾಗಿದ
ಬಲಾತ್ಕಾರವು ಉಡುಪಾಗಿದೆ.
7 ಕೊಬ್ಬಿನಿಂದ ಅವರ ಕಣ್ಣುಗಳು ಮೇಲೆ ಅವೆ;
ಅವರ ದುಷ್ಕಲ್ಪನೆಗಳು ತುಂಬಿತುಳುಕುತ್ತವೆ.
8 ಹಾಸ್ಯಮಾಡುವವರಾಗಿ ಕೆಡುಕಿನ ವಿಷಯ ಮಾತಾ
ಕೊಳ್ಳುತ್ತಾರೆ;
ಬಲಾತ್ಕಾರನಡಿಸಬೇಕೆಂದು ಹೆಮ್ಮೆಕೊಚ್ಚುತ್ತಾರೆ.
9 ತಾವು ಮೇಲುಲೋಕದವರೋ ಎಂಬಂತೆ ದೊ
ಬಾಯಿಮಾಡುತ್ತಾರೆ.
ಭೂಲೋಕದಲ್ಲೆಲ್ಲಾ ಅವರ ಮಾತೇ ಮುಂದು.
10 ಆದದರಿಂದ ಜನರು ಅವರ ಪಕ್ಷವನ್ನು ಹಿಡಿಯುತ್ತಾರ
ಅವರಿಗೆ ಪಾನವು ಯಥೇಚ್ಛವಾಗಿ ದೊರಕುವದು.
11 ದೇವರು ವಿಚಾರಿಸುವದೆಲ್ಲಿ?
ಪರಾತ್ಪರನು ಚಿಂತಿಸುವದುಂಟೋ ಅಂದುಕೊಳ್ಳುತ್ತಾ
12 ನೋಡಿರಿ, ದುಷ್ಟರು ಇಂಥವರೇ;
ಅವರು ಸದಾ ಸುಖದಿಂದಿದ್ದು ಸ್ಥಿತಿವಂತರಾಗಿ ಹೊ
ಗುತ್ತಾರೆ.

13 ನನ್ನ ಮನಸ್ಸನ್ನು ನಿರ್ಮಲಮಾಡಿಕೊಂಡದ್ದೂ
ಶುದ್ಧತ್ವದಲ್ಲಿ ಕೈತೊಳಕೊಂಡದ್ದೂ ವ್ಯರ್ಥವೇ ಸರಿ.
14 ನಾನು ಯಾವಾಗಲೂ ವ್ಯಾಧಿಪೀಡಿತನಾಗಿದ್ದು
ಪ್ರತಿದಿನವೂ ದಂಡಿಸಲ್ಪಡುತ್ತಾ ಇದ್ದೇನಲ್ಲಾ.
15 ನಾನು ಈ ಪ್ರಕಾರ ಬಾಯಿಬಿಡುವದಕ್ಕೆ ಮನಸು
ಮಾಡಿಕೊಂಡಿದ್ದರೆ
ನಿನ್ನ ಭಕ್ತಕುಲಕ್ಕೆ ದ್ರೋಹಿಯಾಗುತ್ತಿದ್ದೆನು.
16 ನಾನು ಇದನ್ನು ಗ್ರಹಿಸಿಕೊಳ್ಳಬೇಕೆಂದು ಎಷ್ಟು ಚಿಂ
ಸಿದರೂ
ಅದು ಒಂದು ಕಷ್ಟಕರವಾದ ಮರ್ಮವೆಂದು ತೋಚಿತು
17 ಆದರೆ ದೇವಾಲಯಕ್ಕೆ ಹೋಗಿ

1) ಅಥವಾ: ಅವರಿಗೆ ಯಾತನೆಯೊಂದೂ ಇಲ್ಲ; ಅವರ ಕಾಯವು ಕ್ಷೇಮವೂ ಪುಷ್ಟಿಯೂ ಉಳ್ಳದ್ದಾಗಿದೆ.

ಅವರ ಅಂತ್ಯಾವಸ್ಥೆಯನ್ನು ಆಲೋಚಿಸಿದಾಗ ನನಗೆ
ಗೊತ್ತಾಯಿತು.

18 ಹೌದು, ನೀನು ಅವರನ್ನು ಅಪಾಯಕರ ಸ್ಥಳದಲ್ಲಿಟ್ಟು
ಬೀಳಿಸಿ ನಾಶಮಾಡಿಬಿಡುತ್ತೀ.
19 ಅವರು ನಿಮಿಷಮಾತ್ರದಲ್ಲಿಯೇ ಹಾಳಾಗಿ ಹೋಗು
ತ್ತಾರೆ;
ಭಯಂಕರರೀತಿಯಿಂದ ಸಂಹಾರವಾಗಿ ಮುಗಿದು
ಹೋಗುತ್ತಾರೆ.
20 ಎಚ್ಚರವಾದವನು ಕನಸನ್ನು ಹೇಗೋ
ಹಾಗೆ ಯೆಹೋವನೇ, ನೀನು ಏಳುವಾಗ ಅವರನ್ನು
ಮಾಯಾರೂಪರೆಂದು ಭಾವಿಸುತ್ತೀ.

21 ನನ್ನ ಮನಸ್ಸು ನೊಂದುಹೋಗಿತ್ತು;
ಅಂತರ್ಯದಲ್ಲಿ ಅಲಗು ನೆಟ್ಟಂತಿತ್ತು.
22 ನಾನು ವಿವೇಕಹೀನಪಾಮರನಾಗಿ
ನಿನ್ನ ದೃಷ್ಟಿಯಲ್ಲಿ ಕೇವಲ ಪಶುವೇ ಆಗಿದ್ದೆನು.
23 ಆದರೂ ಸದಾ ನಿನ್ನ ಸನ್ನಿಧಿಯಲ್ಲಿಯೇ ಇದ್ದೇನೆ.
ನೀನು ನನ್ನ ಬಲಗೈಯನ್ನು ಹಿಡಿದು
24 ನಿನ್ನ ಚಿತ್ತವನ್ನು ತಿಳಿಯಪಡಿಸಿ ನನ್ನನ್ನು ನಡಿಸಿ
ತರುವಾಯ ಮಹಿಮೆಗೆ ಸೇರಿಸಿಕೊಳ್ಳುವಿ.
25 ಪರಲೋಕದಲ್ಲಿ ನನಗೆ ನೀನಲ್ಲದೆ ಮತ್ತಾರು ಅವಶ್ಯ?
ಇಹಲೋಕದಲ್ಲಿ ನಿನ್ನನ್ನಲ್ಲದೆ ಇನ್ನಾರನ್ನೂ ಬಯಸು
ವದಿಲ್ಲ.
26 ತನುಮನಗಳು ಕ್ಷಯಿಸಿದರೂ
ನನ್ನ ಆತ್ಮಕ್ಕೆ ಶರಣನೂ ನನ್ನ ಶಾಶ್ವತವಾದ ಪಾಲೂ
ದೇವರೇ.

27 ಇಗೋ, ನಿನ್ನನ್ನು ಬಿಟ್ಟವರು ನಾಶವಾಗುವರು;
ನಿನಗೆ ದ್ರೋಹಮಾಡಿದವರೆಲ್ಲರನ್ನು ನಿರ್ಮೂಲ
ಮಾಡುತ್ತೀ.
28 ನನಗಾದರೋ ದೇವರ ಸಾನ್ನಿಧ್ಯವೇ ಭಾಗ್ಯವು.
ಕರ್ತನೇ, ಯೆಹೋವನೇ, ನಾನು ನಿನ್ನನ್ನು ಆಶ್ರ
ಯಿಸಿಕೊಂಡವನಾಗಿ
ನಿನ್ನ ಮಹತ್ಕಾರ್ಯಗಳನ್ನು ಪ್ರಕಟಿಸುವೆನು.

ದೇವಾಲಯವನ್ನು ಹಾಳುಮಾಡಿದ ಶತ್ರುಗಳನ್ನು ತಗ್ಗಿಸಿ
ಸಹಾಯಮಾಡಬೇಕೆಂದು ಪ್ರಾರ್ಥಿಸುವದು.
(ಕೀರ್ತನೆ 79.)
ಆಸಾಫನ ಪದ್ಯ.

74 ದೇವರೇ, ನೀನು ನಮ್ಮನ್ನು ಸಂಪೂರ್ಣವಾಗಿ ತಳ್ಳಿ
ಬಿಟ್ಟದ್ದೇಕೆ?
ನೀನು ಪಾಲಿಸುವ ಹಿಂಡಿನ ಮೇಲೆ ನಿನ್ನ ಕೋಪಾಗ್ನಿ
ಯು ಹೊಗೆ ಆಡುವದೇನು?
2 ನೀನು ಹಿಂದಿನ ಕಾಲದಲ್ಲಿ ಸ್ವಕುಲವಾಗಿರಬೇಕೆಂದು
ಬಿಡಿಸಿ ಸಂಪಾದಿಸಿಕೊಂಡ ನಿನ್ನ ಮಂಡಲಿಯನ್ನು
ಜ್ಞಾಪಿಸಿಕೋ;
ನಿನ್ನ ವಾಸಸ್ಥಾನವಾಗಿದ್ದ ಚೀಯೋನ್ ಗಿರಿಯನ್ನು
ಮರೆಯಬೇಡ.
3 ಬಹುಕಾಲದಿಂದ ಹಾಳುಬಿದ್ದಿರುವ ಈ ಸ್ಥಾನದ
ಕಡೆಗೆ ಬಿಜಯಮಾಡು.
ನೋಡು, ವೈರಿಯು ಪವಿತ್ರಾಲಯದಲ್ಲಿ ಎಲ್ಲವನ್ನು
ಕೆಡಿಸಿಬಿಟ್ಟಿದ್ದಾನೆ.

4 ನಿನ್ನ ದರ್ಶನಾಲಯಮಧ್ಯದಲ್ಲಿ ನಿನ್ನ ವಿರೋಧಿಗಳು
ಆರ್ಭಟಿಸುತ್ತಾರೆ;
ನಮ್ಮ ಆರಾಧನಾಚಿಹ್ನೆಗಳನ್ನು ತೆಗೆದು ತಮ್ಮ ಚಿಹ್ನೆ
ಗಳನ್ನು ಇಟ್ಟಿದ್ದಾರೆ.
5 ಮರಗಳ ಗುಂಪಿನಲ್ಲಿ ಕೊಡಲಿಗಳನ್ನು ಮೇಲೆತ್ತುವ
ಜನರೋ ಎಂಬಂತಿದ್ದಾರೆ.
6 ನೋಡು, ಅವರು ಈಗ ಕೈಕೊಡಲಿಸುತ್ತಿಗೆಗಳಿಂದ
ದೇವಾಲಯದ ಕೆತ್ತನೆಯ ಕೆಲಸವನ್ನೆಲ್ಲಾ ಹೊಡೆದು
ಹಾಕುತ್ತಿದ್ದಾರೆ.
7 ಅವರು ನಿನ್ನ ಪವಿತ್ರಾಲಯಕ್ಕೆ ಬೆಂಕಿಹಾಕಿ
ನಿನ್ನ ನಾಮಕ್ಕೆ ಪ್ರತಿಷ್ಠಿತವಾದ ಮಂದಿರವನ್ನು ಹೊಲೆ
ಮಾಡಿ ನೆಲಸಮಗೊಳಿಸಿದ್ದಾರೆ.
8 ನಾವು ಈ ಜನವನ್ನೆಲ್ಲಾ ಸಂಹರಿಸಿಬಿಡೋಣ ಅಂದು
ಕೊಂಡಿದ್ದಾರೆ;
ದೇಶದಲ್ಲಿರುವ ಎಲ್ಲಾ ದೇವಸಭಾಮಂದಿರಗಳನ್ನು
ಸುಟ್ಟುಬಿಟ್ಟಿದ್ದಾರೆ.

9 ನಮ್ಮ ಆರಾಧನಾಚಿಹ್ನೆಗಳು ಈಗ ಕಾಣುವದಿಲ್ಲ.
ಮುಂಚೆ ಇದ್ದಂತೆ ನಮಗೆ ಪ್ರವಾದಿಗಳು ಯಾರೂ
ಇಲ್ಲ;
ಇದು ಎಷ್ಟರವರೆಗೆ ಇರುವದೆಂದು ಬಲ್ಲವರು ನಮ್ಮಲ್ಲಿ
ಯಾರೂ ಇಲ್ಲ.
10 ದೇವರೇ, ವಿರೋಧಿಗಳು ಇನ್ನೆಲ್ಲಿಯತನಕ ನಿಂದಿಸು
ತ್ತಿರಬೇಕು?
ವೈರಿಗಳು ನಿನ್ನ ನಾಮವನ್ನು ಸದಾಕಾಲವೂ ತಿರ
ಸ್ಕರಿಸಬಹುದೋ?
11 ಚಾಚಿದ ಬಲಗೈಯನ್ನು ಯಾಕೆ ಹಿಂದೆಗೆದಿದ್ದೀ?
ಅದನ್ನು ಎದೆಯ ಮೇಲಿಂದ ತೆಗೆದು ಅವರನ್ನು
ಸಂಹರಿಸಿಬಿಡು.

12 ದೇವರೇ, ನೀನು ಮೊದಲಿಂದಲೂ ನನ್ನ ಅರಸನೂ
ಲೋಕಮಧ್ಯದಲ್ಲಿ ರಕ್ಷಣೆಗಳನ್ನು ನಡಿಸಿದಾತನೂ
ಆಗಿದ್ದೀಯಲ್ಲವೇ?
13 ಸ್ವಶಕ್ತಿಯಿಂದ ಸಮುದ್ರವನ್ನು ಭೇದಿಸಿದವನು
ನೀನು;
ಜಲರಾಶಿಯ ಮೇಲೆ ತಿಮಿಂಗಿಲಗಳ ತಲೆಗಳನ್ನು
ಜಜ್ಜಿಬಿಟ್ಟವನು ನೀನು.
14 ಲಿವ್ಯಾತಾನನ ಶಿರಃಖಂಡನಮಾಡಿ
ಅಡವಿಯ ಮೃಗಸಮುದಾಯಕ್ಕೆ ತಿನ್ನಕೊಟ್ಟವನು
ನೀನು.
15 ಬುಗ್ಗೆಹಳ್ಳಗಳನ್ನು ಉಕ್ಕಿಸಿದವನು ನೀನು;
ಮಹಾನದಿಗಳನ್ನು ಬಣಗಿಸಿಬಿಟ್ಟವನು ನೀನು.
16 ಹಗಲಿರುಳುಗಳಿಗೆ ನಿಯಾಮಕನು ನೀನು;
ಸೂರ್ಯಾದಿ ಜ್ಯೋತಿರ್ಮಂಡಲಗಳ ನಿರ್ಮಾಣ
ಕನು ನೀನು;

17 ಭೂಮಿಯ ಎಲ್ಲಾ ಮೇರೆಗಳನ್ನು ಸ್ಥಾಪಿಸಿದವನು ನೀನು;
ಶೀತೋಷ್ಣಕಾಲಗಳನ್ನು ನೇಮಿಸಿದವನು ನೀನು.

18 ಯೆಹೋವನೇ, ವೈರಿಗಳು ನಿನ್ನನ್ನು ನಿಂದಿಸಿ
ದುರ್ಮತಿಗಳು ನಿನ್ನ ನಾಮವನ್ನು ತಿರಸ್ಕರಿಸಿದ್ದನ್ನು ಜ್ಞಾಪಿಸಿಕೋ.
19 ನಿನ್ನ ಬೆಳವದ ಜೀವವನ್ನು ಕಾಡುಮೃಗಕ್ಕೆ ಕೊಡಬೇಡ;
ನಿನ್ನ ದೀನಮಂಡಲಿಯನ್ನು ಸದಾ ಮರೆತೇ ಬಿಡಬೇಡ.
20 ನಿನ್ನ ಒಡಂಬಡಿಕೆಯನ್ನು ಲಕ್ಷ್ಯಕ್ಕೆ ತಂದುಕೋ.
ದೇಶದ ಅಂಧಕಾರಸ್ಥಾನಗಳಲ್ಲಿ ಬಲಾತ್ಕಾರವು ತುಂಬಿವಾಸಿಸುತ್ತದಲ್ಲಾ.
21 ಕುಗ್ಗಿದವರು ಆಶಾಭಂಗದಿಂದ ಹಿಂದಿರುಗದಿರಲಿ;
ದುಃಖಿತರೂ ಬಡವರೂ ನಿನ್ನ ನಾಮವನ್ನು ಕೀರ್ತಿಸಲಿ.
22 ದೇವರೇ, ಎದ್ದು ನಿನ್ನ ನ್ಯಾಯವನ್ನು ನಡಿಸುವವನಾಗು;
ದುರ್ಮತಿಯು ಯಾವಾಗಲೂ ನಿನ್ನನ್ನು ನಿಂದಿಸುತ್ತಿರುವದನ್ನು ಜ್ಞಾಪಿಸಿಕೋ.
23 ಮೇಲಣ ಲೋಕವನ್ನು ಎಡೆಬಿಡದೆ ಮುಟ್ಟುತ್ತಿರುವ
ನಿನ್ನ ವೈರಿಗಳ ಗದ್ದಲವನ್ನೂ ನಿನ್ನ ವಿರೋಧಿಗಳ ದೊಂಬಿಯನ್ನೂ ಮರೆಯದಿರು.

ಗರ್ವಿಷ್ಠರನ್ನು ತಗ್ಗಿಸುವ ದೇವರ ಸ್ತುತಿ.
ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು;
ಅಲ್ತಷ್ಹೇತೆಂಬ ರಾಗ; ಕೀರ್ತನೆ; ಹಾಡು; ಆಸಾಫನದು.
(ಕೀರ್ತನೆ 57.)

75 ದೇವರೇ, ಕೊಂಡಾಡುತ್ತೇವೆ; ನಿನ್ನನ್ನು ಕೊಂಡಾಡುತ್ತೇವೆ.
ನಿನ್ನ ನಾಮಮಹತ್ವವು ಸಮೀಪವಾಗಿದೆ; ನಿನ್ನ ಮಹತ್ಕಾರ್ಯಗಳನ್ನು ವರ್ಣಿಸುತ್ತಾರೆ.
2 [ದೇವರು ನುಡಿದದ್ದು —] ಕ್ಲುಪ್ತಕಾಲವು ಬಂದಾಗ
ನಾನೇ ನೀತಿಯಿಂದ ತೀರ್ಪುಕೊಡುವೆನು.
3 ಎಲ್ಲಾ ನಿವಾಸಿಗಳೊಡನೆ ಭೂಮಿಯು ಕರಗಿಹೋದರೂ
ಅದರ ಸ್ತಂಭಗಳನ್ನು ಸ್ಥಾಪಿಸುವವನು ನಾನೇ [ಎಂಬದು]. ಸೆಲಾ.

4 ಹೆಮ್ಮೆಗಾರರೇ, ಕೊಚ್ಚಿಕೊಳ್ಳಬೇಡಿರಿ;
ದುಷ್ಟರೇ, ನಿಮ್ಮ ಕೊಂಬುಗಳನ್ನು ಮೇಲೆತ್ತಬೇಡಿರಿ;
5 ಕೊಂಬುಗಳನ್ನು ಮೇಲೆತ್ತಬೇಡಿರಿ;
ಸೊಕ್ಕಿನ ಕುತ್ತಿಗೆಯಿಂದ ಮಾತಾಡಬೇಡಿರಿ ಎಂದು ಹೇಳುವೆನು.

6 ಯಾಕಂದರೆ ಉದ್ಧಾರವು ಮೂಡಲಿಂದಾಗಲಿ
ಪಡುವಲಿಂದಾಗಲಿ ಅರಣ್ಯದಿಂದಾಗಲಿ ಬರುವದಿಲ್ಲ.
7 ದೇವರೇ ನ್ಯಾಯಾಧೀಶನಾಗಿ
ಒಬ್ಬನನ್ನು ತಗೆದು ಇನ್ನೊಬ್ಬನನ್ನು ಸ್ಥಾಪಿಸುತ್ತಾನೆ.
8 ಯೆಹೋವನ ಕೈಯಲ್ಲಿ ಪಾತ್ರೆಯದೆ;
ಅದು ಔಷಧಿಮಿಶ್ರವಾಗಿ ಉಕ್ಕುವ ದ್ರಾಕ್ಷಾರಸದಿಂದ ತುಂಬಿದೆ.
ಅದರಿಂದ ಹೊಯ್ದು ಹಂಚುತ್ತಾನೆ.
ಲೋಕದ ದುಷ್ಟರೆಲ್ಲರೂ ಅದರೊಳಗಿನ ಮಡ್ಡಿಯನ್ನು ಸಹ ಕುಡಿದು ಮುಗಿಸಬೇಕು.

9 ನಾನಾದರೋ ಸದಾ ವರ್ಣಿಸುವವನಾಗಿ
ಯಾಕೋಬವಂಶದವರ ದೇವರನ್ನು ಸಂಕೀರ್ತಿಸುವೆನು.
10 ದುಷ್ಟರ ಕೊಂಬುಗಳನ್ನೆಲ್ಲಾ ಮುರಿದುಬಿಡುವೆನು;
ಆದರೆ ಭಕ್ತರ ಕೊಂಬುಗಳು ಎತ್ತಲ್ಪಡುವವು.

ಶತ್ರುಭೀಕರನಾದ ದೇವರ ಸ್ತುತಿ.
(ಕೀರ್ತನೆ 75.)
ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು;
ತಂತಿವಾದ್ಯದೊಡನೆ ಹಾಡತಕ್ಕದ್ದು; ಕೀರ್ತನೆ; ಹಾಡು;
ಆಸಾಫನದು.

76 ದೇವರು ಯೆಹೂದದೇಶದಲ್ಲಿ ಖ್ಯಾತಿಗೊಂಡವನು
ಇಸ್ರಾಯೇಲ್ಯರಲ್ಲಿ ಆತನ ನಾಮವು ದೊಡ್ಡದು.
2 ಸಾಲೇಮಿನಲ್ಲಿ ಆತನ ಬೀಡಾರವಿದೆ;
ಚೀಯೋನಿನಲ್ಲಿ ಆತನು ನಿವಾಸಿಸುತ್ತಾನೆ.
3 ಅಲ್ಲಿ ಆತನು ಮಿಂಚಿನಂತೆ ಹಾರಿ ಬರುವ ಬಾಣಗಳನ್ನೂ
ಗುರಾಣಿ ಖಡ್ಗ ಮುಂತಾದ ಯುದ್ಧಾಯುಧಗಳನ್ನೂ ಮುರಿದುಬಿಟ್ಟಿದ್ದಾನೆ. ಸೆಲಾ.

4 ತೇಜೋಮಯನು ನೀನು;
ಬೆಟ್ಟಗಳಲ್ಲಿ ಕೊಳ್ಳೆಹೊಡೆದದರಿಂದ ಹೆಸರುಗೊಂಡವನು.
5 ಧೀರಹೃದಯರು ಸುಲಿಗೆಯಾಗಿ ದೀರ್ಘನಿದ್ರೆಗೈದಿದ್ದಾರೆ;
ಎಲ್ಲಾ ಶೂರರ ಕೈ ನಿಂತುಹೋದವು.
6 ಯಾಕೋಬವಂಶದವರ ದೇವರೇ, ನಿನ್ನ ಗದರಿಕೆಯಿಂದ
ರಥಬಲವೂ ಅಶ್ವಬಲವೂ ಮೈಮರೆತು ಬಿದ್ದವು.

7 ನೀನು ಮಹಾಭಯಂಕರನು;
ನೀನು ಸಿಟ್ಟುಗೊಂಡಾಗ ನಿನ್ನ ಮುಂದೆ ಯಾರು ನಿಂತಾರು?
8 ಪರಲೋಕದಲ್ಲಿರುವ ನೀನು ನಿನ್ನ ನ್ಯಾಯವಿಧಿಯನ್ನು ಆಜ್ಞಾಪಿಸುವಾಗ
9 ದೇವರು ಲೋಕದ ದೀನರನ್ನು ರಕ್ಷಿಸಿ
ನ್ಯಾಯವನ್ನು ಸ್ಥಾಪಿಸುವದಕ್ಕೋಸ್ಕರ ಎದ್ದಿದ್ದಾನೆಂದು
ಭೂನಿವಾಸಿಗಳು ಭಯದಿಂದ ಸ್ತಬ್ಧರಾದರು. ಸೆಲಾ.

10 ಮನುಷ್ಯರ ಕೋಪವೂ ನಿನ್ನ ಘನಕ್ಕೇ ಸಾಧಕವಾಗುವದು;
ಕೋಪಶೇಷವನ್ನು ನಡುಕಟ್ಟಿನಂತೆ ಬಿಗಿದುಕೊಳ್ಳುವಿ.
11 ನಿಮ್ಮ ದೇವನಾದ ಯೆಹೋವನಿಗೆ ಹರಕೆಮಾಡಿ ಸಲ್ಲಿಸಿರಿ;

ಸುತ್ತಣವರೆಲ್ಲರು ಭಯಂಕರನಿಗೆ ಕಾಣಿಕೆಗಳನ್ನು ಸಮರ್ಪಿಸಲಿ.
12 ಆತನು ಭೂಪತಿಗಳಿಗೆ ಭಯಪ್ರದನಾಗಿ
ಪ್ರಭುಗಳ ಅಹಂಭಾವವನ್ನು ತೊಡೆದುಬಿಡುವನು.

ದೇವರ ಪ್ರಜಾಪಾಲನೆಯ ವಿಷಯ ಉಂಟಾದ ಸಂಶಯವನ್ನು ಆತನ ಮಹತ್ಕಾರ್ಯಗಳ ಧ್ಯಾನದಿಂದ ನೀಗಿಸಿಕೊಂಡದ್ದು.
(ಹಬಕ್ಕೂಕ 3.)
ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು; ಯೆದುತೂನನ ರೀತಿಯಲ್ಲಿ ಹಾಡತಕ್ಕದ್ದು; ಆಸಾಫನ ಕೀರ್ತನೆ.
(ಕೀರ್ತನೆ 39.)

77 ದೇವರಿಗೆ ಮೊರೆಯಿಡುವೆನು, ಕೂಗಿ ಮೊರೆಯಿಡುವೆನು; ನನಗೆ ಕಿವಿಗೊಡುವನು.
2 ಇಕ್ಕಟ್ಟಿನಲ್ಲಿ ಸ್ವಾಮಿಯನ್ನು ಕರೆದೆನು;
ಬೇಸರವಿಲ್ಲದೆ ಇರುಳೆಲ್ಲಾ ಕೈಯೊಡ್ಡಿಕೊಂಡೇ ಇದ್ದೆನು.
ನನ್ನ ಮನಸ್ಸು ಶಾಂತಿಹೊಂದಲೊಲ್ಲದೆ ಇತ್ತು.
3 ನಾನು ವ್ಯಥೆಪಡುತ್ತಾ ದೇವರನ್ನು ಸ್ಮರಿಸುವೆನು;
ಮನಗುಂದಿದವನಾಗಿಯೇ ಹಂಬಲಿಸುವೆನು.

4 ನಾನು ರೆಪ್ಪೆಗಳನ್ನು ಹಚ್ಚದಂತೆ ಮಾಡಿದಿ.
ತಳಮಳಗೊಂಡು ಮಾತಾಡಲಾರದೆ ಇದ್ದೆನು.
5 ಹಳೆಯ ದಿನಗಳನ್ನೂ ಪುರಾತನವರುಷಗಳನ್ನೂ ಯೋಚಿಸಿದೆನು.
6 ನಾನು ರಾತ್ರಿಯಲ್ಲಿ ಮಾಡುತ್ತಿದ್ದ ಗಾನವನ್ನು ನೆನಸಿಕೊಳ್ಳುವೆನು,
ನನ್ನ ಅಂತರ್ಯದಲ್ಲಿ ಮಾತಾಡಿಕೊಳ್ಳುವೆನು
ಅಂದುಕೊಂಡು ಮನಸ್ಸಿನಲ್ಲಿ ವಿಚಾರಿಸಿಕೊಂಡದ್ದೇನಂದರೆ—
7 ಕರ್ತನು ಸದಾಕಾಲಕ್ಕೂ ಬಿಟ್ಟೇಬಿಡುವನೋ?
ಆತನು ಪುನಃ ಪ್ರಸನ್ನನಾಗುವದಿಲ್ಲವೋ?
8 ಆತನ ಕೃಪಾವಾತ್ಸಲ್ಯವು ನಿಂತೇ ಹೋಯಿತೋ?
ಆತನ ವಾಗ್ದಾನವು ಎಂದೆಂದಿಗೂ ಬಿದ್ದೇ ಹೋಯಿತೋ?
9 ದೇವರು ದಯವಿಡಲಿಕ್ಕೆ ಮರೆತುಬಿಟ್ಟನೋ?
ಕೋಪದಿಂದ ತನ್ನ ಕರಳುಗಳನ್ನು ಬಿಗಿಹಿಡಿದಿದ್ದಾನೋ? ಸೆಲಾ.

10 ಮತ್ತೂ ನಾನು ಅಂದುಕೊಂಡದ್ದೇನಂದರೆ—
ಹೀಗೆ ನೆನಸುವದು ನನ್ನ ಬಲಹೀನತೆಯೇ.
1)ಪರಾತ್ಪರನ ಭುಜಬಲವು ಪ್ರಕಟವಾದ ವರುಷಗಳನ್ನು ಜ್ಞಾಪಿಸಿಕೊಳ್ಳುವೆನು.
11 ಯೆಹೋವನ ಕೃತ್ಯಗಳನ್ನು ವರ್ಣಿಸುವೆನು;
ಪೂರ್ವದಿಂದ ನೀನು ನಡಿಸಿದ ಅದ್ಭುತಗಳನ್ನು ನೆನಪು ಮಾಡಿಕೊಳ್ಳುವೆನು.
12 ನಿನ್ನ ಕಾರ್ಯಗಳನ್ನೆಲ್ಲಾ ಧ್ಯಾನಿಸುವೆನು;
ನಿನ್ನ ಪ್ರವರ್ತನೆಗಳನ್ನು ಸ್ಮರಿಸುವೆನು.
13 ದೇವರೇ, ನಿನ್ನ ಮಾರ್ಗವು ಪರಿಶುದ್ಧವಾದದ್ದು.
ನಮ್ಮ ದೇವರಂತೆ ಮಹತ್ವವುಳ್ಳ ದೇವರು ಯಾರು?
14 ಅದ್ಭುತಗಳನ್ನು ನಡಿಸುವ ದೇವರು ನೀನೇ;
ಜನಾಂಗಗಳಲ್ಲಿ ಪರಾಕ್ರಮವನ್ನು ತೋರ್ಪಡಿಸಿದಿ.
15 ಯಾಕೋಬಯೋಸೇಫರ ವಂಶೀಯವಾದ ನಿನ್ನ ಪ್ರಜೆಯನ್ನು ಭುಜಬಲದಿಂದ ಬಿಡುಗಡೆಮಾಡಿದಿ. ಸೆಲಾ.

16 ದೇವರೇ, ಜಲರಾಶಿಗಳು ನಿನ್ನನ್ನು ಕಂಡವು;
ಕಾಣುತ್ತಲೇ ತಳಮಳಗೊಂಡು ತಳದ ವರೆಗೂ ಅಲ್ಲಕಲ್ಲೋಲವಾದವು.
17 ಮೇಘಮಂಡಲವು ಮಳೆಗರೆಯಿತು;
ಅಂತರಿಕ್ಷವು ಗರ್ಜಿಸಿತು;
ನಿನ್ನ ಬಾಣಗಳು ಎಲ್ಲಾ ಕಡೆಯೂ ಹಾರಿದವು.
18 ಬಿರುಗಾಳಿಯಲ್ಲಿ ನಿನ್ನ ಗುಡುಗು ಕೇಳಿಸಿತು;
ಮಿಂಚುಗಳು ಭೂಮಂಡಲವನ್ನು ಬೆಳಗಿಸಿದವು;
ಭೂಮಿಯು ಅಲ್ಲಾಡಿ ಕಂಪಿಸಿತು.
19 ನೀನು ಸಮುದ್ರದಲ್ಲಿ ಮಾರ್ಗಮಾಡಿದಿ;
ಮಹಾಜಲರಾಶಿಗಳನ್ನು ದಾಟಿದಿ; ನಿನ್ನ ಹೆಜ್ಜೆಯ ಗುರುತು ಕಾಣಲಿಲ್ಲ.
20 ಕುರುಬನು ಕುರಿಹಿಂಡನ್ನು ಹೇಗೋ
ಹಾಗೆ ನೀನು ಮೋಶೆಆರೋನರ ಮುಖಾಂತರ ನಿನ್ನ ಪ್ರಜೆಯನ್ನು ಕರದೊಯ್ದಿ.

ಇಸ್ರಾಯೇಲ್ಯರ ಉಪದೇಶಯುಕ್ತವಾದ ಪೂರ್ವಚರಿತ್ರೆ.
(ಕೀರ್ತನೆ 105; 106; ಧರ್ಮೋಪದೇಶ 32.)
ಆಸಾಫನ ಪದ್ಯ.

78 ನನ್ನ ಜನರೇ, ನನ್ನ ಉಪದೇಶಕ್ಕೆ ಕಿವಿಗೊಡಿರಿ;
ನನ್ನ ನುಡಿಗಳನ್ನು ಲಾಲಿಸಿರಿ.
2 ನಾನು ಬಾಯ್ದೆರೆದು ಸಾಮ್ಯರೂಪವಾಗಿ ಉಪದೇಶಿಸುವೆನು.
ಪೂರ್ವಕಾಲದ ಗೂಢಾರ್ಥಗಳನ್ನು ಹೊರಪಡಿಸುವೆನು.
3 ನಾವು ನಮ್ಮ ಹಿರಿಯರ ಬಾಯಿಂದಲೇ ತಿಳಿದ ಸಂಗತಿಗಳನ್ನು
ಅವರ ಸಂತಾನದವರಿಗೆ ಮರೆಮಾಡದೆ
4 ಯೆಹೋವನ ಘನತೆಯನ್ನೂ ಆತನ ಪರಾಕ್ರಮವನ್ನೂ ಅದ್ಭುತಕೃತ್ಯಗಳನ್ನೂ
ಮುಂದಣ ಸಂತತಿಯವರಿಗೆ ವಿವರಿಸುವೆವು.

5 ಆತನು ಯಾಕೋಬವಂಶದಲ್ಲಿ ಕಟ್ಟಳೆಯನ್ನಿಟ್ಟು
ಇಸ್ರಾಯೇಲ್ಯರಿಗೆ ನಿಯಮಮಾಡಿ
ನಮ್ಮ ಹಿರಿಯರಿಗೆ ಆಜ್ಞಾಪಿಸಿದ್ದೇನಂದರೆ—
ಅವುಗಳನ್ನು ನಿಮ್ಮ ಮಕ್ಕಳಿಗೆ ಹೇಳಿಕೊಡಿರಿ;
6 ಇದರಿಂದ ಅವು ಮುಂದಿನ ತಲೆಯವರಿಗೆ ಗೊತ್ತಾಗಿ

1) ಅಥವಾ: ಪರಾತ್ಪರನ ಹಸ್ತವು ವ್ಯತ್ಯಾಸವಾಗುವದುಂಟೇ?

ಅವರ ಮಕ್ಕಳು ಅವುಗಳನ್ನು ತಮ್ಮ ಮಕ್ಕಳು ಮೊಮ್ಮಕ್ಕಳಿಗೆ ತಿಳಿಸುತ್ತಾ ಹೋಗುವರು.
7 ಆಗ ಅವರು ಮೊಂಡರೂ ಅವಿಧೇಯರೂ
ಚಪಲಚಿತ್ತರೂ ದೇವದ್ರೋಹಿಗಳೂ ಆದ ತಮ್ಮ ಪೂರ್ವಿಕರಂತಾಗದೆ
8 ನನ್ನ ಮಹತ್ಕೃತ್ಯಗಳನ್ನು ಮರೆಯದೆ
ನನ್ನಲ್ಲಿಯೇ ಭರವಸವಿಟ್ಟು
ನನ್ನ ಆಜ್ಞೆಗಳನ್ನು ಕೈಕೊಂಡಾರು ಎಂಬದೇ.

9 ಎಫ್ರಾಯಿಮ್ ಕುಲದವರು ಧನುರ್ಧಾರಿಗಳಾಗಿ ಹೋಗಿ
ಯುದ್ಧಸಮಯದಲ್ಲಿ ಬೆಂಗೊಟ್ಟು ಓಡಿಹೋದರು.
10 ಅವರು ದೇವರ ನಿಬಂಧನೆಯನ್ನು ಪಾಲಿಸದೆ
ಆತನ ಧರ್ಮಶಾಸ್ತ್ರವನ್ನು ಅನುಸರಿಸಲೊಲ್ಲದೆ
11 ಆತನ ಕಾರ್ಯಗಳನ್ನೂ
ಆತನು ತಮ್ಮೆದುರಿನಲ್ಲಿ ನಡಿಸಿದ ಅದ್ಭುತಗಳನ್ನೂ ಮರೆತುಬಿಟ್ಟರು.

12 ಐಗುಪ್ತ ದೇಶದ ಸೋನ್ ಸೀಮೆಯಲ್ಲಿ
ಅವರ ಪೂರ್ವಿಕರ ಸಮಕ್ಷದಲ್ಲಿಯೇ ಆಶ್ಚರ್ಯಕ್ರಿಯೆಗಳನ್ನು ನಡಿಸಿದನು.
13 ಆತನು ಸಮುದ್ರವನ್ನು ಭೇದಿಸಿ
ಅದರ ನೀರನ್ನು ರಾಶಿಯಂತೆ ನಿಲ್ಲಿಸಿ
ಅವರನ್ನು ದಾಟಿಸಿದನು.
14 ಹಗಲು ಮೋಡದಿಂದಲೂ
ಇರುಳು ಬೆಂಕಿಯ ಬೆಳಕಿನಿಂದಲೂ
ಅವರನ್ನು ಕರೆದೊಯ್ದನು.
15 ಆತನು ಅರಣ್ಯದಲ್ಲಿ ಬಂಡೆಗಳನ್ನು ಸೀಳಿ
ಅವರಿಗೆ ಸಾಗರದಿಂದಲೋ ಎಂಬಂತೆ ಧಾರಾಳವಾಗಿ ನೀರು ಕುಡಿಸಿದನು.
16 ಗಿರಿಶಿಲೆಯಿಂದ ಜಲಪ್ರವಾಹಗಳನ್ನು ಹೊರಡಿಸಿ
ನದಿಗಳಾಗಿ ಹರಿಯಮಾಡಿದನು.

17 ಆದರೂ ಅವರು ನಿರ್ಜಲಪ್ರದೇಶದಲ್ಲಿ ಪರಾತ್ಪರನಿಗೆ ಪದೇಪದೇ ಅವಿಧೇಯರಾಗಿ
ಇನ್ನೂ ಹೆಚ್ಚು ಪಾಪಮಾಡುತ್ತಾ ಬಂದರು.
18 ಅವರು ಇಷ್ಟಭೋಜನವನ್ನು ಕೇಳಿಕೊಳ್ಳುವಲ್ಲಿ
ಸಂಶಯಾತ್ಮರಾಗಿ ದೇವರನ್ನು ಪರೀಕ್ಷಿಸಿದರು.
19 ಅವರು ಆತನಿಗೆ ವಿರೋಧವಾಗಿ ಅಂದದ್ದೇನಂದರೆ—
ದೇವರು ಅರಣ್ಯದಲ್ಲಿ ಊಟಕ್ಕೆ ಬಡಿಸಬಲ್ಲನೋ?
20 ಬಂಡೆಯನ್ನು ಹೊಡೆದು ನೀರು ಚಿಮ್ಮಿ ಹೊರಗೆ ಬರುವಂತೆಯೂ
ಪ್ರವಾಹವು ದಡಮೀರಿ ಹರಿಯುವಂತೆಯೂ ಮಾಡಿದನಲ್ಲವೋ?
ಆತನು ರೊಟ್ಟಿಯನ್ನೂ ಕೊಡಶಕ್ತನೋ?
ತನ್ನ ಜನರಿಗೆ ಮಾಂಸವನ್ನೂ ಒದಗಿಸುವನೋ ಎಂಬದೇ.

21 ಯೆಹೋವನು ಕೇಳಿ ರೋಷಗೊಂಡನು.
ಅವರು ದೇವರಲ್ಲಿ ಭರವಸವಿಡದೆಯೂ ಆತನ ರಕ್ಷಣೆಯನ್ನು ನಂಬದೆಯೂ ಹೋದದರಿಂದ
22 ಆತನಿಗೆ ಇಸ್ರಾಯೇಲ್ಯರ ಮೇಲೆ ಕೋಪವುಂಟಾಯಿತು;
ಯಾಕೋಬ್‌ವಂಶದವರಲ್ಲಿ ಬೆಂಕಿಹತ್ತಿತು.
23 ಆತನು ಮೇಘಗಳಿಗೆ ಅಪ್ಪಣೆಕೊಟ್ಟು
ಆಕಾಶದ್ವಾರಗಳನ್ನು ತೆರೆದು
24 ಸ್ವರ್ಗಧಾನ್ಯವಾದ ಮನ್ನವನ್ನು
ಅವರಿಗೋಸ್ಕರ ಸುರಿಸಿ ಉಣ್ಣಲಿಕ್ಕೆ ಕೊಟ್ಟನು.
25 ಅವರಲ್ಲಿ ಪ್ರತಿಯೊಬ್ಬನು ದೇವದೂತರ ಆಹಾರವನ್ನು ಭುಜಿಸಿದನು.
ಆತನು ಅವರಿಗೆ ತೃಪ್ತಿಭೋಜನವನ್ನು ಕೊಟ್ಟನು.
26 ಆತನು ಗಗನಮಂಡಲದಲ್ಲಿ ಮೂಡಣ ಗಾಳಿಯನ್ನುಂಟುಮಾಡಿ
ಪ್ರತಾಪದಿಂದ ತೆಂಕಣ ಗಾಳಿಯನ್ನೂ ಹೊಡೆದುಕೊಂಡು ಬಂದು
27 ಧೂಳಿನಷ್ಟು ಮಾಂಸವೃಷ್ಟಿಯನ್ನು ಸುರಿಸಿದನು;
ಸಮುದ್ರದ ಮರಳಿನಷ್ಟು ಪಕ್ಷಿಗಳು ಅವರಿದ್ದಲ್ಲಿ ಬೀಳುವಂತೆ ಮಾಡಿದನು.
28 ಅವು ಪಾಳೆಯದ ಮಧ್ಯದಲ್ಲಿಯೇ ಅವರ ಬೀಡಾರಗಳ ಸುತ್ತಲೂ ಬಿದ್ದವು.
29 ಅವರು ತಿಂದು ಸಂತೃಪ್ತರಾದರು;
ಆತನು ಅವರಿಗೆ ಬಯಸಿದ್ದನ್ನು ಕೊಟ್ಟನು.
30 ಅವರ ಇಷ್ಟಭೋಜನವು ಅವರಿಗೆ ಅಸಹ್ಯವಾಗುವದಕ್ಕಿಂತ ಮೊದಲು,
ಅವರು ಅದನ್ನು ಇನ್ನೂ ಭುಜಿಸುತ್ತಿರುವಾಗಲೇ
31 ದೇವರ ಕೋಪವು ಅವರಿಗೆ ವಿರೋಧವಾಗಿ ಎದ್ದು
ಅವರಲ್ಲಿ ಕೊಬ್ಬಿದವರನ್ನು ವಧಿಸಿ
ಇಸ್ರಾಯೇಲ್ಯಪ್ರಾಯಸ್ಥರನ್ನು ನೆಲಕ್ಕುರುಳಿಸಿತು.
32 ಇಷ್ಟಾದರೂ ಪುನಃ ಪುನಃ ಪಾಪಮಾಡುತ್ತಾ ಬಂದರು;
ಅವರು ಆತನ ಅದ್ಭುತಕೃತ್ಯಗಳನ್ನು ನಂಬದೆ ಹೋದರು.
33 ಆದದರಿಂದ ಆತನು ಅವರ ಜೀವಿತದಿನಗಳನ್ನು ಉಸಿರಿನಂತೆಯೂ
ಅವರ ವರುಷಗಳನ್ನು ಭೀಕರವಾಗಿಯೂ ಮುಗಿಸಿದನು.
34 ಸಂಹಾರವಾಗುವಾಗೆಲ್ಲಾ ಅವರು ದೇವರನ್ನು ನೆನಸಿ
ತಿರುಗಿ ಆತನ ಪ್ರಸನ್ನತೆಯನ್ನು ಆಶಿಸಿ—
35 ದೇವರು ತಮ್ಮ ಶರಣನೂ
ಪರಾತ್ಪರನು ತಮ್ಮ ವಿಮೋಚಕನೂ ಆಗಿದ್ದಾನೆ ಎಂಬದನ್ನು ನೆನಪಿಗೆ ತಂದುಕೊಳ್ಳುವರು.

36 ಆದರೆ ಆತನ ಮುಂದೆ ಅವರ ಬಾಯಿ ವಂಚಿಸಿ
ನಾಲಿಗೆ ಸುಳ್ಳಾಡಿತು.
37 ಅವರ ಹೃದಯವು ಆತನಲ್ಲಿ ನೆಲೆಗೊಳ್ಳಲಿಲ್ಲ;
ಆತನ ನಿಬಂಧನೆಯನ್ನು ನಿಷ್ಠೆಯಿಂದ ಕೈಕೊಳ್ಳಲಿಲ್ಲ.
38 ಆದರೂ ಆತನು ಕರುಣಾಳುವೂ ಅಪರಾಧಿಗಳನ್ನು ಸಂಹರಿಸದೆ ಕ್ಷಮಿಸುವವನೂ ಆಗಿ
ತನ್ನ ಸಿಟ್ಟನ್ನೆಲ್ಲಾ ಏರಗೊಡದೆ

ಆದನ್ನು ಹಲವು ಸಾರಿ ತಡೆಯುತ್ತಾ ಬಂದನು.
39 ಅವರು ಮಾಂಸಮಾತ್ರರೂ
ತಿರಿಗಿ ಬಾರದ ಶ್ವಾಸಮಾತ್ರರೂ
ಆಗಿದ್ದಾರೆಂಬದನ್ನು ನೆನಪುಮಾಡಿಕೊಳ್ಳುತ್ತಿದ್ದನು.

40 ಅರಣ್ಯದಲ್ಲಿ ಅವರು ಎಷ್ಟೋ ಸಾರಿ ಅವಿಧೇಯರಾಗಿ
ಅಲ್ಲಿ ಆತನನ್ನು ನೋಯಿಸಿದರು.
41 ಆತನನ್ನು ಪದೇಪದೇ ಪರೀಕ್ಷಿಸಿ
ಇಸ್ರಾಯೇಲ್ಯರ ಸದಮಲಸ್ವಾಮಿಯನ್ನು ಕರಕರೆಗೊಳಿ
ಸಿದರು.
42 ಅವರು ಆತನ ಭುಜಬಲವನ್ನೂ
ಶತ್ರುಗಳಿಂದ ಬಿಡಿಸಿದ ಸಮಯವನ್ನೂ ಮರೆತು
ಬಿಟ್ಟರು.
43 ಬಿಡಿಸುವ ಸಮಯದಲ್ಲಿ ಆತನು ಐಗುಪ್ತದಲ್ಲಿ ಮಹ
ತ್ಕಾರ್ಯಗಳನ್ನೂ
ಸೋನ್ ಸೀಮೆಯಲ್ಲಿ ಅದ್ಭುತಗಳನ್ನೂ ನಡಿಸಿದ್ದು
ಹೇಗಂದರೆ—

44 ಆತನು ಅಲ್ಲಿನ ನದಿಗಳನ್ನು ರಕ್ತವಾಗುವಂತೆಯೂ
ಪ್ರವಾಹಗಳನ್ನು ಕುಡಿಯಕೂಡದಂತೆಯೂ ಮಾಡಿ
ದನು.
45 ಅವರನ್ನು ನಾಶಮಾಡುವ ವಿಷದ ಹುಳಗಳನ್ನೂ
ಹಾಳುಮಾಡುವ ಕಪ್ಪೆಗಳನ್ನೂ ಕಳುಹಿಸಿಕೊಟ್ಟನು.
46 ಅವರ ಬೆಳೆಗಳನ್ನು ಜಿಟ್ಟೆಹುಳಗಳಿಗೂ
ಕಷ್ಟಫಲವನ್ನು ಮಿಡಿತೆಗಳಿಗೂ ಕೊಟ್ಟುಬಿಟ್ಟನು.
47 ಅವರ ದ್ರಾಕ್ಷಾಲತೆಗಳನ್ನು ಆನೆಕಲ್ಲಿನಿಂದಲೂ
ಅತ್ತಿಮರಗಳನ್ನು ಕಲ್ಮಳೆಯಿಂದಲೂ ಹಾಳುಮಾಡಿ
ದನು.
48 ಅವರ ದನಗಳನ್ನು ಕಲ್ಮಳೆಗೂ
ಕುರಿಹಿಂಡುಗಳನ್ನು ಸಿಡಿಲಿಗೂ ಒಪ್ಪಿಸಿದನು.
49 ಆತನು ಅವರ ಮೇಲೆ ತನ್ನ ಕೋಪರೌದ್ರಗಳನ್ನೂ
ಉಗ್ರಹಿಂಸೆಗಳನ್ನೂ
ಸಂಹಾರದೂತಗಣವನ್ನೋ ಎಂಬಂತೆ ಕಳುಹಿಸಿದನು.
50 ತನ್ನ ರೌದ್ರಕ್ಕೆ ಇಂಬುಗೊಟ್ಟು
ಅವರನ್ನು ಬದುಕಗೊಡದೆ
ಅವರ ಜೀವವನ್ನು ಮರಣವ್ಯಾಧಿಗೆ ಆಹುತಿಕೊಟ್ಟನು.
51 ಹಾಮನ ಮನೆತನದವರ ವೀರ್ಯಕ್ಕೆ ಪ್ರಥಮಫಲ
ವಾಗಿರುವ
ಐಗುಪ್ತ್ಯರ ಚೊಚ್ಚಲುಮಕ್ಕಳನ್ನು ಸಂಹರಿಸಿದನು.
52 ಆತನು ಕುರಿಗಳನ್ನೋ ಎಂಬಂತೆ ತನ್ನ ಜನವನ್ನು
ಹೊರತಂದು
ಅಡವಿಯಲ್ಲಿ ಅದನ್ನು ಪೋಷಿಸಿ ನಡಿಸಿದನು.
53 ಆತನು ಸುರಕ್ಷಿತವಾಗಿ ನಡಿಸಿದ್ದರಿಂದ ಅವರು
ಅಂಜಲಿಲ್ಲ;
ಅವರ ಶತ್ರುಗಳನ್ನು ಸಮುದ್ರವು ಮುಚ್ಚಿಬಿಟ್ಟಿತು.
54 ಅವರನ್ನು ತನ್ನ ಪವಿತ್ರದೇಶಕ್ಕೆ
ಅಂದರೆ ತನ್ನ ಭುಜಬಲದಿಂದ ಸಂಪಾದಿಸಿದ ಈ
ಪರ್ವತಸೀಮೆಗೆ ಕರತಂದನು.
55 ಜನಾಂಗಗಳನ್ನು ಅವರ ಮುಂಗಡೆಯಿಂದ ಓಡಿಸಿ
ಬಿಟ್ಟು
ಅವರ ದೇಶವನ್ನು ಇಸ್ರಾಯೇಲ್‍ಗೋತ್ರಗಳಿಗೆ
ಸ್ವಾಸ್ತ್ಯವಾಗಿರುವಂತೆ ಹಂಚಿಕೊಟ್ಟು
ಆ ಜನಾಂಗಗಳ ಬೀಡಾರಗಳಲ್ಲಿ ಅವರನ್ನು ನೆಲೆ
ಗೊಳಿಸಿದನು.

56 ಅದರೂ ಅವರು ಪರಾತ್ಪರನಾದ ದೇವರನ್ನು ಪರೀ
ಕ್ಷಿಸಿ ಅವಿಧೇಯರಾದರು.
ಆತನ ವಿಧಿಗಳನ್ನು ಕೈಕೊಳ್ಳದೆ
57 ಆತನಿಗೆ ವಿಮುಖರಾಗಿ ತಮ್ಮ ಹಿರಿಯರಂತೆ ದ್ರೋಹಿ
ಗಳಾದರು.
ಮೋಸದ ಬಿಲ್ಲಿನಂತೆ ತಿರುಗಿಕೊಂಡರು.
58 ಅವರು ತಮ್ಮ ಪೂಜಾಸ್ಥಳಗಳಿಂದ ಆತನನ್ನು ಬೇಸ
ರಗೊಳಿಸಿ
ವಿಗ್ರಹಗಳಿಂದ ರೇಗಿಸಿದರು.

59 ದೇವರು ಇದನ್ನು ತಿಳಿದು ರೌದ್ರನಾಗಿ
ಇಸ್ರಾಯೇಲ್ಯರನ್ನು ಅಸಹ್ಯದಿಂದ ನಿರಾಕರಿಸಿಬಿಟ್ಟನು.
60 ತಾನು ಜನಮಧ್ಯದಲ್ಲಿ ವಾಸಿಸುವದಕ್ಕೋಸ್ಕರ
ಸಿಲೋವಿನಲ್ಲಿ ಹಾಕಿಸಿದ ಗುಡಾರವನ್ನು ತ್ಯಜಿಸಿಬಿಟ್ಟು
61 ತನ್ನ ಪ್ರತಾಪವನ್ನು ಸೆರೆಗೂ
ಮಹಿಮೆಯನ್ನು ವಿರೋಧಿಗಳಿಗೂ ಒಪ್ಪಿಸಿಬಿಟ್ಟನು.

62 ಆತನು ತನ್ನ ಪ್ರಜೆಯನ್ನು ಖಡ್ಗಕ್ಕೆ ಗುರಿಮಾಡಿ
ತನ್ನ ಬಾಧ್ಯತೆಯ ಮೇಲೆ ಉಗ್ರನಾದನು.
63 ಅವರ ಯೌವನಸ್ಥರು ಅಗ್ನಿಗೆ ಆಹುತಿಯಾದರು;
ಅವರ ಕನ್ಯೆಯರಿಗೆ ಶೋಭನವಾಗಲಿಲ್ಲ.
64 ಯಾಜಕರು ಕತ್ತಿಯಿಂದ ಸಂಹೃತರಾದರು;
ಇವರ ವಿಧವೆಯರು ದುಃಖಕ್ರಿಯೆಗಳನ್ನು ನೆರವೇರಿ
ಸಲಿಲ್ಲ.

65 ಆ ವರೆಗೆ ನಿದ್ರಿಸುವವನಂತೆಯೂ
ದ್ರಾಕ್ಷಾರಸದಿಂದ ಮೈಮರೆತ ವೀರನಂತೆಯೂ
ಇದ್ದ ಕರ್ತನು ಫಕ್ಕನೆ ಎಚ್ಚತ್ತು
66 ತನ್ನ ಶತ್ರುಗಳನ್ನು ಮುರಿಬಡಿದು
ನಿತ್ಯನಿಂದೆಗೆ ಅವರನ್ನು ಗುರಿಮಾಡಿದನು.

67 ಯೋಸೇಫಕುಲದ ಗುಡಾರವನ್ನು ವರ್ಜಿಸಿ
ಎಫ್ರಾಯಿಮ್ ಕುಲವನ್ನು ತ್ಯಜಿಸಿ
68 ಯೆಹೂದಕುಲವನ್ನೂ ತನ್ನ ಪ್ರಿಯ ಚೀಯೋನ್
ಗಿರಿಯನ್ನೂ ಆರಿಸಿಕೊಂಡನು.
69 ಆತನು ತನ್ನ ಆಲಯವನ್ನು ಪರ್ವತದಂತೆಯೂ
ತಾನು ಸ್ಥಾಪಿಸಿದ ಭೂಮಿಯಂತೆಯೂ ಶಾಶ್ವತ
ವಾಗಿ ಕಟ್ಟಿದನು.

70 ಇದಲ್ಲದೆ ಆತನು ತನ್ನ ಸೇವಕನಾದ ದಾವೀದ
ನನ್ನು ಆರಿಸಿ
ಕುರಿಹಟ್ಟಿಯಿಂದ ತೆಗೆದುಕೊಂಡು
71 ಮರೀಕುರಿಗಳನ್ನು ರಕ್ಷಿಸುವ ಕೆಲಸದಿಂದ ಬಿಡಿಸಿ

ಅವನನ್ನು ತನ್ನ ಪ್ರಜೆಗಳಾದ ಯಾಕೋಬ್ಯರನ್ನು
ಅಂದರೆ ತನ್ನ ಸ್ವಾಸ್ತ್ಯವಾಗಿರುವ ಇಸ್ರಾಯೇಲ್ಯ
ರನ್ನು ಸಾಕುವದಕ್ಕೆ ನೇಮಿಸಿದನು.
72 ಇವನು ಅವರನ್ನು ಯಥಾರ್ಥಹೃದಯದಿಂದ
ಸಾಕಿ
ತನ್ನ ಹಸ್ತಕೌಶಲ್ಯದಿಂದ ನಡಿಸಿದನು.

ದೇವಪ್ರಜೆಯನ್ನು ಸಂಹರಿಸಿದ ಮ್ಲೇಚ್ಛರಿಗೆ ದಂಡನೆಯಾಗ
ಬೇಕೆಂಬ ಪ್ರಾರ್ಥನೆ. (ಕೀರ್ತನೆ 74.)
ಆಸಾಫನ ಕೀರ್ತನೆ.

**79** ದೇವರೇ, ಮ್ಲೇಚ್ಛರು ನಿನ್ನ ಸ್ವಾಸ್ತ್ಯವನ್ನು ಹೊಕ್ಕು
ನಿನ್ನ ಪರಿಶುದ್ಧಾಲಯವನ್ನು ಹೊಲೆಮಾಡಿದರು;
ಯೆರೂಸಲೇಮ್‌ಪಟ್ಟಣವನ್ನು ಹಾಳು ದಿಬ್ಬಗಳಾಗಿ
ಮಾಡಿಬಿಟ್ಟರು.
2 ಅವರು ನಿನ್ನ ಸೇವಕರ ಹೆಣಗಳನ್ನು ಆಕಾಶದ ಪಕ್ಷಿ
ಗಳಿಗೆ ಆಹಾರಮಾಡಿದರು;
ನಿನ್ನ ಭಕ್ತರ ದೇಹಮಾಂಸವನ್ನು ಕಾಡುಮೃಗಗಳಿಗೆ
ಹಾಕಿದರು.
3 ಯೆರೂಸಲೇಮಿನ ಸುತ್ತಲೂ ಅವರ ರಕ್ತವನ್ನು ನೀರಿನ
ಹಾಗೆ ಚೆಲ್ಲಿದರು;
ಅವರನ್ನು ಹೂಣಿಡುವವರು ಯಾರೂ ಇರಲಿಲ್ಲ.
4 ನಾವು ನಮ್ಮ ನೆರೆಹೊರೆಯ ಜನಾಂಗಗಳಿಗೆ ನಿಂದಾ
ಸ್ಪದರಾದೆವು;
ಸುತ್ತಣವರ ಪರಿಹಾಸ್ಯಕುಚೋದ್ಯಗಳಿಗೆ ಗುರಿಯಾ
ದೆವು.

5 ಯೆಹೋವನೇ, ಇನ್ನೆಷ್ಟರ ವರೆಗೆ ಕೋಪವುಳ್ಳವನಾ
ಗಿರುವಿ?
ನಿನ್ನ ರೋಷಾಗ್ನಿಯು ಸದಾಕಾಲವೂ ಉರಿಯುತ್ತಲೇ
ಇರಬೇಕೋ?
6 ನಿನ್ನನ್ನು ಅರಿಯದ ಮ್ಲೇಚ್ಛರ ಮೇಲೆಯೂ
ನಿನ್ನ ನಾಮವನ್ನು ಉಚ್ಚರಿಸದ ರಾಜ್ಯಗಳ ಮೇಲೆಯೂ
ನಿನ್ನ ರೌದ್ರವನ್ನು ಸುರಿದುಬಿಡು.
7 ಅವರು ಯಾಕೋಬ್‌ವಂಶದವರನ್ನು ನುಂಗಿಬಿಟ್ಟು
ಅವರ ವಾಸಸ್ಥಳಗಳನ್ನು ಹಾಳುಮಾಡಿದರಲ್ಲಾ.
8 ಪೂರ್ವಿಕರ ಅಪರಾಧಗಳನ್ನು ನಮ್ಮ ಹಾನಿಗಾಗಿ ನೆನಸಿ
ಕೊಳ್ಳಬೇಡ.
ಬೇಗನೆ ನಿನ್ನ ಕನಿಕರವು ನಮ್ಮನ್ನು ಎದುರುಗೊಳ್ಳಲಿ;
ಬಹುವಾಗಿ ಕುಗ್ಗಿ ಹೋಗಿದ್ದೇವೆ.

9 ನಮ್ಮನ್ನು ರಕ್ಷಿಸುವ ದೇವರೇ, ನಿನ್ನ ನಾಮದ ಘನತೆ
ಗೋಸ್ಕರ ಸಹಾಯಮಾಡು;
ನಿನ್ನ ಹೆಸರಿಗೆ ತಕ್ಕಂತೆ ರಕ್ಷಿಸಿ ನಮ್ಮ ಪಾಪಗಳನ್ನು
ಅಳಿಸಿಬಿಡು.
10 ಮ್ಲೇಚ್ಛರು—ಅವರ ದೇವರು ಎಲ್ಲಿ ಎಂದು ಅನ್ನುವ
ದೇಕೆ?
ನಿನ್ನ ಸೇವಕರ ರಕ್ತವನ್ನು ಸುರಿಸಿದವರಿಗೆ
ನಮ್ಮ ಮುಂದೆಯೇ ದಂಡನೆಯಾದದ್ದು ಜನಾಂಗಗಳಿ
ಗೊತ್ತಾಗಲಿ.
11 ಸೆರೆಹೋದವರ ನರಳುವಿಕೆಯು ನಿನ್ನ ಲಕ್ಷ್ಯಕ
ಬರಲಿ;
ಸಾಯಲಿರುವವರನ್ನು ನಿನ್ನ ಭುಜಮಹತ್ತಿನಿಂದ ಉಳಿಸು
12 ಸ್ವಾಮಿಯೇ, ನಿನ್ನನ್ನು ನಿಂದಿಸಿದ ಸುತ್ತಣ ಜನಾಂ
ಗಳ ಉಡಿಲಲ್ಲಿ
ಏಳರಷ್ಟು ಪ್ರತಿಫಲವು ತುಂಬಿರುವಂತೆ ಮಾಡು.

13 ನಿನ್ನ ಪ್ರಜೆಯೂ ನೀನು ಪಾಲಿಸುವ ಮಂದೆಯು
ಆಗಿರುವ ನಾವಾದರೋ ಸದಾ ನಿನ್ನನ್ನು ಸ್ತು
ಸುವವರಾಗಿ
ಮುಂದಣ ಸಂತಾನದವರೆಲ್ಲರಿಗೂ ನಿನ್ನ ಮ
ತ್ತನ್ನು ವರ್ಣಿಸುತ್ತಾ ಹೋಗುವೆವು.

ದೇವರು ತಾನು ನೆಟ್ಟ ದ್ರಾಕ್ಷಾಲತೆಯಂತಿರುವ
ಇಸ್ರಾಯೇಲ್ಯರನ್ನು ಉನ್ನತಸ್ಥಿತಿಯಲ್ಲಿ ಪುನಃ ಸ್ಥಾಪಿಸಬೇಕೆಂಬ
ಪ್ರಾರ್ಥನೆ.
ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು;
ಶೋಶನ್ನೀಮ್ ಎದೂತೆಂಬ ರಾಗ; ಆಸಾಫನ ಕೀರ್ತನೆ.

**80** ಇಸ್ರಾಯೇಲ್ಯರನ್ನು ಕಾಯುವ ಕುರುಬನೇ, ಕಿ
ಗೊಡು;
ಯೋಸೇಫನ ವಂಶದವರನ್ನು ಕುರಿಹಿಂಡಿನಂತೆ ಕ
ತಂದವನೇ,
ಕೆರೂಬಿಯರ ಮಧ್ಯದಲ್ಲಿ ಆಸೀನನಾಗಿರುವಾತನೆ
ಪ್ರಕಾಶಿಸು.
2 ಎಫ್ರಾಯಿಮ್ ಬೆನ್ಯಾಮೀನ್ ಮನಸ್ಸೆ ಕುಲಗ
ಮುಂದೆ ಹೋಗುವವನಾಗಿ
ನಿನ್ನ ಶೌರ್ಯವನ್ನು ತೋರ್ಪಡಿಸು;
ಬಂದು ನಮಗೆ ಜಯಪ್ರದನಾಗು.
3 ದೇವರೇ, ನಮ್ಮನ್ನು ತಿರಿಗಿ ಉನ್ನತಸ್ಥಿತಿಗೇರಿಸ
ಪ್ರಸನ್ನಮುಖದಿಂದ ನೋಡು; ಆಗ ಉದ್ಧಾ
ವಾಗುವೆವು.

4 ಸೇನಾಧೀಶ್ವರನಾದ ಯೆಹೋವದೇವರೇ,
ನಿನಗೆ ಮೊರೆಯಿಡುವ ನಿನ್ನ ಪ್ರಜೆಗೆ ಇನ್ನೆಷ್ಟರ ವರೆ
ಮುನಿದಿರುವಿ?
5 ರೋದನವೇ ಅವರ ಅನ್ನವಾಗುವಂತೆಯೂ
ಅಶ್ರುಧಾರೆಯೇ ಪಾನವಾಗುವಂತೆಯೂ ಮಾಡಿದಿ.
6 ಸುತ್ತಣ ಜನಾಂಗಗಳಿಗೆ ನಮ್ಮನ್ನು ಕಚ್ಚಾಟದ ಹೇತ
ವನ್ನಾಗಿಯೂ
ಶತ್ರುನಿಂದೆಗೆ ಗುರಿಯನ್ನಾಗಿಯೂ ಮಾಡಿದಿ.
7 ಸೇನಾಧೀಶ್ವರನಾದ ದೇವರೇ, ನಮ್ಮನ್ನು ತಿರಿ
ಉನ್ನತಸ್ಥಿತಿಗೇರಿಸು.
ಪ್ರಸನ್ನಮುಖದಿಂದ ನೋಡು; ಆಗ ಉದ್ಧಾರವ
ಗುವೆವು.

8 ನೀನು ಐಗುಪ್ತದೇಶದಿಂದ ಒಂದು ದ್ರಾಕ್ಷಾಲತೆಯನ
ತಂದು

ಜನಾಂಗಗಳನ್ನು ಹೊರಗೆ ಹಾಕಿ ಅದನ್ನು ನೆಟ್ಟಿ.
9 ಅದಕ್ಕೋಸ್ಕರ ನೆಲವನ್ನು ಹಸನಮಾಡಿದ ಮೇಲೆ
ಅದು ಬೇರು ಬಿಟ್ಟು ದೇಶದಲ್ಲೆಲ್ಲಾ ಹಬ್ಬಿಕೊಂಡಿತು.
10 ಅದರ ನೆರಳಿನಿಂದ ಗುಡ್ಡಗಳೆಲ್ಲಾ ಕವಿಯಲ್ಪಟ್ಟವು.
ಅದರ ಕುಡಿಗಳು ದೇವದಾರುವೃಕ್ಷಗಳ ಮೇಲೆ ಹಬ್ಬಿ
ಅವುಗಳನ್ನು ಮುಚ್ಚಿಬಿಟ್ಟವು.
11 ಅದರ ಕೊಂಬೆಗಳು ಸಮುದ್ರದ ವರೆಗೂ
ಅದರ ರೆಂಬೆಗಳು ಮಹಾನದಿಯ ವರೆಗೂ ಹರಡಿಕೊಂಡವು.

12 ನೀನು ಅದರ ಬೇಲಿಯನ್ನೇಕೆ ಕಿತ್ತುಹಾಕಿದಿ?
ದಾರಿಗರೆಲ್ಲರು ಅದನ್ನು ತರೆದುಬಿಡುತ್ತಾರೆ.
13 ಕಾಡುಹಂದಿಯು ಅದನ್ನು ನಿರ್ಮೂಲಮಾಡುತ್ತದೆ;
ಅರಣ್ಯಮೃಗಗಳು ಅದನ್ನು ತಿಂದುಹಾಕುತ್ತವೆ.
14 ಸೇನಾಧೀಶ್ವರನಾದ ದೇವರೇ, ಅಭಿಮುಖನಾಗಬೇಕು;
ನೀನು ಪರಲೋಕದಿಂದ ಕಟಾಕ್ಷಿಸಿ
ಈ ದ್ರಾಕ್ಷಾಲತೆಯನ್ನು ಪರಾಂಬರಿಸು.

15 ನಿನ್ನ ಬಲಗೈ ನೆಟ್ಟು ಸಾಕಿ ಬೆಳಸಿದ ಸಸಿಯನ್ನು ಕಾಪಾಡು.
16 ಅದು ಕಡಿದು ಬೆಂಕಿಯಿಂದ ಸುಡಲ್ಪಟ್ಟಿದೆ.
ಅವರು ನಿನ್ನ ಬಾಯಿಗದರಿಕೆಯಿಂದ ನಾಶವಾಗುತ್ತಾರೆ.
17 ನಿನ್ನ ಬಲಗೈ ಉದ್ಧರಿಸಿದ ಪುರುಷನೂ
ನೀನು ನಿನಗೋಸ್ಕರ ಸಾಕಿ ಬೆಳಸಿದ ನರಪುತ್ರನೂ
ಆಗಿರುವವನನ್ನು ಹಸ್ತದಿಂದ ಹಿಡಿದಿರು.
18 ಆಗ ನಾವು ನಿನ್ನಿಂದ ಅಗಲುವದಿಲ್ಲ.
ನಿನ್ನ ಹೆಸರನ್ನು ಹೇಳಿಕೊಂಡು ಆರಾಧಿಸುವಂತೆ
ನಮ್ಮನ್ನು ಚೈತನ್ಯಗೊಳಿಸು.
19 ಸೇನಾಧೀಶ್ವರನಾದ ಯೆಹೋವದೇವರೇ, ನಮ್ಮನ್ನು ತಿರಿಗಿ ಉನ್ನತಸ್ಥಿತಿಗೇರಿಸು.
ಪ್ರಸನ್ನಮುಖದಿಂದ ನೋಡು; ಆಗ ಉದ್ಧಾರವಾಗುವೆವು.

ಉತ್ಸವಕ್ಕಾಗಿ ಕೂಡಿಬಂದವರಲ್ಲಿ ದೇವಭಕ್ತಿಯನ್ನು ಹುಟ್ಟಿಸುವ ಪ್ರಬೋಧನೆ.
(ಧರ್ಮೋಪದೇಶ 32.)
ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು;
ಗಿತ್ತೀಯ ರಾಗದಿಂದ ಹಾಡತಕ್ಕದ್ದು; ಆಸಾಫನ ಕೀರ್ತನೆ.
(ಕೀರ್ತನೆ 8; 84.)

**81** ನಮಗೆ ಬಲಪ್ರದನಾಗಿರುವ ದೇವರಿಗೆ ಉತ್ಸಾಹಧ್ವನಿಮಾಡಿರಿ;
ಯಾಕೋಬ್ಯರ ದೇವರಿಗೆ ಜಯಘೋಷಮಾಡಿರಿ.
2 ರಾಗವನ್ನು ಎತ್ತಿರಿ; ದಮ್ಮಡಿಯನ್ನು ಬಡಿಯಿರಿ;
ಇಂಪಾದ ಕಿನ್ನರಿಯನ್ನೂ ಸ್ವರಮಂಡಲವನ್ನೂ ಬಾರಿಸಿರಿ.
3 ಅಮಾವಾಸ್ಯೆಯಲ್ಲಿಯೂ ನಮ್ಮ ಉತ್ಸವದಿನವಾಗಿರುವ ಪೂರ್ಣಿಮೆಯಲ್ಲಿಯೂ
ಕೊಂಬನ್ನು ಊದಿರಿ.
4 ಇದು ಇಸ್ರಾಯೇಲ್ಯರಲ್ಲಿ ಒಂದು ಕಟ್ಟಳೆ;
ಇದು ಯಾಕೋಬ್ಯರ ದೇವರು ವಿಧಿಸಿದ್ದು.
5 ಆತನು ಐಗುಪ್ತದೇಶವನ್ನು ಬಾಧಿಸಲಿಕ್ಕೆ ಹೊರಟಾಗ
ನೆನಪಿಗಾಗಿ ಯೋಸೇಫ್ಯರಲ್ಲಿ ಇದನ್ನು ನೇಮಿಸಿದನು.

ಗುರುತಿಲ್ಲದವನ ಮಾತು ನನಗೆ ಕೇಳಿಸುತ್ತದೆ;
ಏನಂದರೆ—
6 ಅವನ ಹೆಗಲನ್ನು ಹೊರೆಗೆ ತಪ್ಪಿಸಿದೆನು;
ಅವನ ಕೈಗಳನ್ನು ಪುಟ್ಟಿಯಿಂದ ಬಿಡಿಸಿದೆನು.
7 ಕಷ್ಟದಲ್ಲಿ ಮೊರೆಯಿಟ್ಟ ನಿನ್ನನ್ನು ವಿಮೋಚಿಸಿದೆನು;
ಗುಡುಗುವ ಮೋಡದಲ್ಲಿದ್ದು ನಿನಗೆ ಉತ್ತರವನ್ನು ಕೊಟ್ಟೆನು;
ಮೆರೀಬಾ ಪ್ರವಾಹಗಳ ಬಳಿಯಲ್ಲಿ ನಿನ್ನನ್ನು ಪರೀಕ್ಷಿಸಿದೆನು. ಸೆಲಾ.

8 ನನ್ನ ಜನರೇ, ಕೇಳಿರಿ; ಖಂಡಿತವಾಗಿ ಹೇಳುತ್ತೇನೆ.
ಇಸ್ರಾಯೇಲ್ಯರೇ, ಕಿವಿಗೊಟ್ಟರೆ ಎಷ್ಟೋ ಒಳ್ಳೇದು—
9 ನಿಮ್ಮಲ್ಲಿ ಅನ್ಯದೇವತೆಗಳು ಇರಬಾರದು;
ಪರರ ದೇವತೆಗಳನ್ನು ಪೂಜಿಸಬಾರದು;
10 ನಿಮ್ಮನ್ನು ಐಗುಪ್ತದಿಂದ ಕರತಂದ ಯೆಹೋವನೆಂಬ ನಾನೇ ನಿಮ್ಮ ದೇವರು;
ಅಗಲವಾಗಿ ಬಾಯಿತೆರೆಯಿರಿ; ಅದನ್ನು ತುಂಬಿಸುವೆನು ಅಂದೆನು.

11 ಆದರೆ ನನ್ನ ಜನರು ನನ್ನ ಮಾತುಕೇಳಲಿಲ್ಲ;
ಇಸ್ರಾಯೇಲ್ಯರು ನನಗೆ ಸಮ್ಮತಿಸಲಿಲ್ಲ.
12 ಆದದರಿಂದ—ಇವರು ಹಟಮಾರಿಗಳು;
ತಮ್ಮ ಮನಸ್ಸಿನಂತೆ ನಡೆಯಲಿ ಎಂದು ಸಡಿಲಬಿಟ್ಟೆನು.

13 ನನ್ನ ಪ್ರಜೆಗಳಾದ ಇಸ್ರಾಯೇಲ್ಯರು ನನ್ನ ಮಾತನ್ನು ಕೇಳಿ
ನನ್ನ ಮಾರ್ಗದಲ್ಲಿ ನಡೆದರೆ ಎಷ್ಟೋ ಒಳ್ಳೇದು!
14 ನಾನು ಅವರ ಎದುರಾಳಿಗಳ ಮೇಲೆ ಕೈಯೆತ್ತಿ
ಅವರ ಶತ್ರುಗಳನ್ನು ಸುಲಭವಾಗಿ ಅಣಗಿಸುವೆನು.
15 ಯೆಹೋವನ ದ್ವೇಷಿಗಳು ಅವರ ಮುಂದೆ ಮುದುರಿಕೊಳ್ಳುವರು;
ಅವರಾದರೋ ಸದಾಕಾಲವೂ ಇರುವರು.
16 ನಾನು ಅವರಿಗೆ ಶ್ರೇಷ್ಠವಾದ ಗೋದಿಯನ್ನು ಊಟಕ್ಕೆ ಕೊಟ್ಟು
ಬಂಡೆಯೊಳಗಿನ ಜೇನಿನಿಂದ ತೃಪ್ತಿಪಡಿಸುವೆನು.

ದೇವರು ಅನೀತಿವಂತರಾದ ಅಧಿಪತಿಗಳಿಗೆ ವಿಧಿಸುವದು.
(ಕೀರ್ತನೆ 58.)
ಆಸಾಫನ ಕೀರ್ತನೆ.

**82** ದೇವರು ತನ್ನ ಸಭೆಯಲ್ಲಿ ನಿಂತುಕೊಂಡವನಾಗಿ
ದೇವರುಗಳೊಳಗೆ ನ್ಯಾಯವಿಧಿಸುತ್ತಾನೆ—

2 ನೀವು ಅನ್ಯಾಯವಾಗಿ ತೀರ್ಪುಕೊಡುವದೂ
ದುಷ್ಟರಿಗೆ ಮುಖದಾಕ್ಷಿಣ್ಯತೋರಿಸುವದೂ ಇನ್ನೆಷ್ಟರ ವರೆಗೆ? ಸೆಲಾ.
3 ಕುಗ್ಗಿದವರ ಮತ್ತು ಅನಾಥರ ನ್ಯಾಯವನ್ನು ಸ್ಥಾಪಿಸಿರಿ.
ದುಃಖಿತರ ಮತ್ತು ದರಿದ್ರರ ನೀತಿಯನ್ನು ಉಳಿಸಿರಿ.
4 ಕುಗ್ಗಿದವರನ್ನೂ ಬಡವರನ್ನೂ ದುಷ್ಟರ ಕೈಯಿಂದ ಬಿಡಿಸಿ ರಕ್ಷಿಸಿರಿ.

5 ಇವರು ಬುದ್ಧಿಹೀನರೂ ವಿವೇಕಶೂನ್ಯರೂ ಆಗಿ ಅಂಧಕಾರದಲ್ಲಿ ಅಲೆಯುತ್ತಾರೆ.
ಭೂಮಿಯ ಅಸ್ತಿವಾರಗಳೆಲ್ಲಾ ಕದಲುತ್ತವೆ.
6 ನೀವು ದೇವರುಗಳು, ಎಲ್ಲರೂ ಪರಾತ್ಪರನ ಮಕ್ಕಳು ಎಂದು ನಾನು ಹೇಳಿದೆನು.
7 ಆದರೂ ನರರಂತೆ ಸತ್ತೇ ಹೋಗುವಿರಿ;
ಪ್ರತಿಯೊಬ್ಬ ಪ್ರಭುವಿನಂತೆ ನೀವೆಲ್ಲರೂ ಬಿದ್ದುಹೋಗುವಿರಿ.

8 ದೇವರೇ, ಏಳು; ಭೂಲೋಕದಲ್ಲಿ ನ್ಯಾಯವನ್ನು ಸ್ಥಾಪಿಸು.
ನೀನು ಎಲ್ಲಾ ಜನಾಂಗಗಳ ಒಡೆಯನು ಅಲ್ಲವೋ?

ದೇವಪ್ರಜಾವಿರುದ್ಧವಾಗಿ ಒಳಸಂಚುಮಾಡಿದ ಜನಾಂಗಗಳನ್ನು ಆಕ್ರೋಶಿಸುವದು.

ಆಸಾಫನ ಕೀರ್ತನೆ; ಗೀತ.

83 ದೇವರೇ, ಸುಮ್ಮನಿರಬೇಡ;
ನಿಶ್ಚಿಂತನಾಗಿ ಮೌನದಿಂದಿರಬೇಡ ಸ್ವಾಮಿ.
2 ನೋಡು, ನಿನ್ನ ಶತ್ರುಗಳು ಘೋಷಿಸುತ್ತಾರೆ;
ನಿನ್ನ ದ್ವೇಷಿಗಳು ತಲೆಯೆತ್ತಿದ್ದಾರೆ.
3 ಅವರು ನಿನ್ನ ಪ್ರಜೆಗಳಿಗೆ ವಿರೋಧವಾಗಿ ಒಳಸಂಚುಮಾಡಿ
ನಿನ್ನ ಮರೆಹೊಕ್ಕವರನ್ನು ಕೆಡಿಸಬೇಕೆಂದು ಆಲೋಚಿಸಿ—
4 ಬನ್ನಿರಿ; ಅವರು ಜನಾಂಗವಾಗಿ ಉಳಿಯದಂತೆಯೂ
ಇಸ್ರಾಯೇಲೆಂಬ ಹೆಸರು ಅಳಿದುಹೋಗುವಂತೆಯೂ
ಅವರನ್ನು ಸಂಹರಿಸೋಣ ಅಂದುಕೊಳ್ಳುತ್ತಾರೆ.
5 ಎದೋಮ್ಯರ ಮತ್ತು ಇಷ್ಮಾಯೇಲ್ಯರ ಪಾಳೆಯಗಳವರು,
ಮೋವಾಬ್ಯರು, ಹಗ್ರೀಯರು,
6 ಗೆಬಾಲ್ಯರು, ಅಮ್ಮೋನಿಯರು, ಅಮಾಲೇಕ್ಯರು,
ಫಿಲಿಷ್ಟಿಯರು, ತೂರ್ ಸಂಸ್ಥಾನದವರು,
7 ಇವರೆಲ್ಲಾ ಏಕಮನಸ್ಸಿನಿಂದ ಕೂಡಿ
ನಿನಗೇ ವಿರೋಧವಾಗಿ ಒಳಸಂಚುಮಾಡುತ್ತಾರಲ್ಲಾ;
8 ಅಶ್ಶೂರ್ಯರೂ ಇವರೊಡನೆ ಕೂಡಿಕೊಂಡು
ಲೋಟನ ವಂಶದವರಿಗೆ ಭುಜವಾಗಿದ್ದಾರೆ. ಸೆಲಾ.

9 ನೀನು ಮಿದ್ಯಾನ್ಯರನ್ನು ಸಂಹರಿಸಿದಂತೆ ಇವರನ್ನೂ ಸಂಹರಿಸು.
ಕೀಷೋನ್‌ಹಳ್ಳದ ಬಳಿಯಲ್ಲಿ ಸೀಸೆರ ಯಾಬೀ
ಎಂಬವರಿಗೆ ಮಾಡಿದಂತೆ ಇವರಿಗೂ ಮಾಡು.
10 ಅವರು ಎಂದೋರಿನಲ್ಲಿ ವಧಿಸಲ್ಪಟ್ಟು ಹೊಲದ ಗೊಬ್ಬ
ವಾಗಿಹೋದರಲ್ಲಾ.
11 ಓರೇಬ್ ಜೇಬ್ ಎಂಬವರ ಗತಿಯು ಇವರ ಶ್ರೀ
ಮಂತರಿಗೂ ಸಂಭವಿಸಲಿ;
ಜೇಬಹ ಚಲ್ಮುನ್ನ ಎಂಬವರ ಪಾಡು ಇವರ ಪ್ರಭು
ಗಳಿಗೂ ಆಗಲಿ.
12 ದೇವರು ಅವರಿಗೆ ಕೊಟ್ಟ ದೇಶವನ್ನು
ಸ್ವಾಧೀನಮಾಡಿಕೊಳ್ಳುವಾ ಅಂದುಕೊಳ್ಳುತ್ತಾರಲ್ಲಾ
13 ನನ್ನ ದೇವರೇ, ಅವರನ್ನು ಗಾಳಿಯಲ್ಲಿ ಸುತ್ತಿಯಾಡು
ಧೂಳಿನಂತೆಯೂ
ಹಾರಿಹೋಗುವ ಹೊಟ್ಟಿನಂತೆಯೂ ಮಾಡು.
14 ನೀನು ಕಾಡನ್ನು ಸುಟ್ಟುಬಿಡುವ ಬೆಂಕಿಯಂತೆಯ
ಪರ್ವತಗಳನ್ನು ದಹಿಸಿಬಿಡುವ ಜ್ವಾಲೆಯಂತೆಯ
ಇದ್ದು
15 ನಿನ್ನ ಸುಂಟರಗಾಳಿಯಿಂದ ಅವರನ್ನು ಬೆನ್ನಟ್ಟು,
ತುಫಾನಿನಿಂದ ಅವರನ್ನು ಕಳವಳಗೊಳಿಸು.

16 ನಾಚಿಕೆಯು ಅವರ ಮುಖವನ್ನು ಕವಿಯಲಿ.
ಯೆಹೋವನೇ, ಆಗ ಅವರು ನಿನ್ನ ಹೆಸರನ
ಕೇಳಿಕೊಂಡು ಬಂದಾರು.
17 ಅವರು ನಿರಂತರವೂ ಆಶಾಭಂಗದಿಂದ ಕಳವ
ಗೊಳ್ಳಲಿ;
ಅಪಮಾನದಿಂದ ನಾಶವಾಗಲಿ.
18 ಆಗ ಯೆಹೋವನಾಮದಿಂದ ಪ್ರಸಿದ್ಧನಾದ ನೀನೊ
ಬ್ಬನೇ
ಭೂಲೋಕದಲ್ಲೆಲ್ಲಾ ಸರ್ವೋನ್ನತನೆಂದು ಗ್ರಹಿಸ
ವರು.

ದೇವಾಲಯದ ಯಾತ್ರಾರ್ಥಿಗಳ ಕೀರ್ತನೆ.

(ಕೀರ್ತನೆ 42; 43.)

ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು;
ಗಿತ್ತೀಯ ರಾಗದಿಂದ ಹಾಡತಕ್ಕದ್ದು;
ಕೋರಹೀಯರ ಕೀರ್ತನೆ.

(ಕೀರ್ತನೆ 8; 81.)

84 ಸೇನಾಧೀಶ್ವರನಾದ ಯೆಹೋವನೇ, ನಿನ್ನ ನಿವಾಸ
ಗಳು ಎಷ್ಟೋ ರಮ್ಯವಾಗಿವೆ.
2 ಯೆಹೋವನ ಆಲಯದ ಅಂಗಳಗಳಲ್ಲಿ ಸೇರಬೇಕೆಂದ
ನನ್ನ ಆತ್ಮವು ಹಂಬಲಿಸುತ್ತಾ ಕುಂದಿಹೋಗಿತ್ತು.
[ಆದರೆ ಈಗ] ಚೈತನ್ಯಸ್ವರೂಪನಾದ ದೇವರಿಗೆ
ನನ್ನ ತನುಮನಗಳಿಂದ ಹರ್ಷಧ್ವನಿಮಾಡುತ್ತೇನೆ.
3 ಆಹಾ, ಸೇನಾಧೀಶ್ವರನಾದ ಯೆಹೋವದೇವರೇ, ನನ್ನ
ಅರಸನೇ,
ನಿನ್ನ ವೇದಿಗಳ ಸಮೀಪದಲ್ಲಿಯೇ
ಗುಬ್ಬಿಗೆ ಮನೆಯೂ ಪಾರಿವಾಳಕ್ಕೆ ಮರಿಮಾಡುವ
ಗೂಡೂ ದೊರಕಿತಲ್ಲಾ!
4 ನಿನ್ನ ಮಂದಿರದಲ್ಲಿ ವಾಸಿಸುವವರು ಧನ್ಯರು.
ಅವರು ನಿತ್ಯವೂ ನಿನ್ನನ್ನು ಕೀರ್ತಿಸುತ್ತಾ ಇರ
ತ್ತಾರೆ. ಸೆಲಾ.

5 ನಿನ್ನನ್ನೇ ಆಧಾರಮಾಡಿಕೊಂಡ ಮನುಷ್ಯರು ಧನ್ಯರು.
ಅವರು ಯಾತ್ರಾಪರರಾಗಿ
6 ಕಣ್ಣೀರಿನ ತಗ್ಗನ್ನು ದಾಟುವಾಗ
ಅಲ್ಲಿ ಒರತೆಗಳನ್ನು ತೋಡಿ ನೀರಿನ ಸ್ಥಳವಾಗ ಮಾಡುತ್ತಾರೆ.
ಮುಂಗಾರು ಮಳೆಯೂ ಅದನ್ನು ಸಮೃದ್ಧಿಗೊಳಿಸುತ್ತದೆ.
7 ಅವರು ಹೆಚ್ಚುಹೆಚ್ಚಾಗಿ ಬಲಹೊಂದಿ
ಚೀಯೋನ್ ಗಿರಿಯಲ್ಲಿ ದೇವರ ಸನ್ನಿಧಿಯನ್ನು ಸೇರಿ—
8 ಸೇನಾಧೀಶ್ವರನಾದ ಯೆಹೋವದೇವರೇ, ನನ್ನ ಮೊರೆಯನ್ನು ಕೇಳು;
ಯಾಕೋಬ್ಯರ ದೇವರೇ, ಕಿವಿಗೊಡು ಅನ್ನುತ್ತಾರೆ.
ಸೆಲಾ.

9 ದೇವರೇ, ನಮಗೆ ಗುರಾಣಿಯಾಗಿರುವವನನ್ನು ನೋಡು;
ನಿನ್ನ ಅಭಿಷಿಕ್ತನ ಮುಖವನ್ನು ಕಟಾಕ್ಷಿಸು.
10 ನಿನ್ನ ಆಲಯದ ಅಂಗಳಗಳಲ್ಲಿ ಕಳೆದ ಒಂದು ದಿನವು
ಬೇರೆ ಸಹಸ್ರದಿನಗಳಿಗಿಂತ ಉತ್ತಮವಾಗಿದೆ.
ದುಷ್ಟರ ಗುಡಾರಗಳಲ್ಲಿ ವಾಸಿಸುವದಕ್ಕಿಂತ
ನನ್ನ ದೇವರ ಆಲಯದ ಹೊಸ್ತಿಲಲ್ಲಿ ಬಿದ್ದುಕೊಂಡಿರುವದೇ ಲೇಸು.
11 ಯೆಹೋವದೇವರು ಸೂರ್ಯನೂ ಗುರಾಣಿಯೂ ಆಗಿದ್ದಾನಲ್ಲಾ.
ಯೆಹೋವನು ಕೃಪೆಯನ್ನೂ ಘನವನ್ನೂ ಅನುಗ್ರಹಿಸುವನು;
ಆತನು ಸದ್ಭಕ್ತರಿಗೆ ಯಾವ ಶುಭವನ್ನು ದಯಪಾಲಿಸದೆ ಇದ್ದಾನು?
12 ಸೇನಾಧೀಶ್ವರನಾದ ಯೆಹೋವನೇ,
ನಿನ್ನಲ್ಲಿ ಭರವಸವಿಡುವ ಮನುಷ್ಯನು ಧನ್ಯನು.

ಸಂಪೂರ್ಣರಕ್ಷಣೆಯನ್ನು ನಿರೀಕ್ಷಿಸುವ ಭಕ್ತನ ವಿಜ್ಞಾಪನೆ.
ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು;
ಕೋರಹೀಯರ ಕೀರ್ತನೆ.

85 ಯೆಹೋವನೇ, ನಿನ್ನ ದೇಶವನ್ನು ಕಟಾಕ್ಷಿಸಿದ್ದೀ;
ಯಾಕೋಬ್ಯರನ್ನು ಸೆರೆಯಿಂದ ಬಿಡಿಸಿ ಬರಮಾಡಿದ್ದೀ.
2 ನಿನ್ನ ಪ್ರಜೆಯ ದ್ರೋಹವನ್ನು ಕ್ಷಮಿಸಿದ್ದೀ;
ಅವರ ಎಲ್ಲಾ ಪಾಪಗಳನ್ನು ಅಳಿಸಿಬಿಟ್ಟಿದ್ದೀ.
ಸೆಲಾ,
3 ನಿನ್ನ ರೌದ್ರವನ್ನೆಲ್ಲಾ ತೊರೆದಿದ್ದೀ;
ನಿನ್ನ ಉಗ್ರಕೋಪವನ್ನು ಬಿಟ್ಟಿದ್ದೀ.
4 ನಮ್ಮನ್ನು ರಕ್ಷಿಸುವ ದೇವರೇ, [1]ನಮಗೆ ಅಭಿಮುಖನಾಗು;
ನಮ್ಮ ವಿಷಯದಲ್ಲಿ ಬೇಸರವನ್ನು ಬಿಡು.
5 ಸದಾಕಾಲವೂ ನಮ್ಮ ಮೇಲೆ ಸಿಟ್ಟುಮಾಡುವಿಯಾ?
ತಲತಲಾಂತರಗಳಿಗೂ ಕೋಪವನ್ನು ಬೆಳೆಸುವಿಯೋ?
6 ನಿನ್ನ ಪ್ರಜೆಯಾದ ನಾವು ನಿನ್ನಲ್ಲಿ ಆನಂದಿಸುವಂತೆ
ನೀನು ನಮ್ಮನ್ನು ಚೈತನ್ಯಪಡಿಸುವದಿಲ್ಲವೋ?
7 ಯೆಹೋವನೇ, ನಿನ್ನ ಕೃಪೆಯನ್ನು ನಮಗೆ ತೋರಿಸು;
ನಿನ್ನ ರಕ್ಷಣೆಯನ್ನು ಅನುಗ್ರಹಿಸು.

8 ಯೆಹೋವದೇವರು ಏನು ಹೇಳುತ್ತಾನೋ ಕೇಳುತ್ತೇನೆ.
ಆತನು ತನ್ನ ಭಕ್ತಜನರಿಗೆ ಸಮಾಧಾನವಾಕ್ಯವನ್ನು ಹೇಳುತ್ತಾನಲ್ಲಾ.
ಅವರಾದರೋ ತಿರಿಗಿ ಮೂರ್ಖತನದಲ್ಲಿ ಬೀಳದಿರಲಿ.
9 ಭಯಭಕ್ತಿಯುಳ್ಳ ಜನರಿಗೆ ಆತನ ರಕ್ಷಣೆಯು ಹತ್ತಿರವಿರುವದು ಸತ್ಯ.
ಇದರಿಂದ ಆತನ ಮಹಿಮೆ ನಮ್ಮ ದೇಶದಲ್ಲಿ ನೆಲೆಗೊಳ್ಳುವದು.
10 ಕೃಪೆಯೂ ಸತ್ಯವೂ ಒಂದನ್ನೊಂದು ಕೂಡಿರುವವು;
ನೀತಿಯೂ ಸಮಾಧಾನವೂ ಮುದ್ದಿಟ್ಟುಕೊಳ್ಳುವವು.
11 ಸತ್ಯತೆಯು ಭೂಮಿಯಿಂದ ಹುಟ್ಟುವದು;
ನೀತಿಯು ಆಕಾಶದಿಂದ ಕೆಳಗೆ ದೃಷ್ಟಿಸುವದು.
12 ನಿಜವಾಗಿ ಯೆಹೋವನು ಒಳ್ಳೆಯದನ್ನು ಅನುಗ್ರಹಿಸುವನು;
ನಮ್ಮ ದೇಶವು ತನ್ನ ಬೆಳೆ ಕೊಡುವದು.
13 ನೀತಿಯು ಆತನ ಮುಂದೆ ಹೋಗುತ್ತಾ
ನಾವು ಆತನ ಹೆಜ್ಜೆಹಿಡಿದು ನಡೆಯುವಂತೆ ದಾರಿಮಾಡುವದು.

ಶತ್ರುಪೀಡಿತನ ವಿಜ್ಞಾಪನೆ.
(ಕೀರ್ತನೆ 25.)
ದಾವೀದನ ಕೀರ್ತನೆ.

86 ಯೆಹೋವನೇ, ಕಿವಿಗೊಡು; ನನಗೆ ಸದುತ್ತರವನ್ನು ದಯಪಾಲಿಸು;
ಕುಗ್ಗಿದವನೂ ದಿಕ್ಕಿಲ್ಲದವನೂ ಆಗಿದ್ದೇನೆ.
2 ನಾನು ನಿನ್ನ ಭಕ್ತನು; ನನ್ನ ಪ್ರಾಣವನ್ನು ಉಳಿಸು;
ನೀನೇ ನನ್ನ ದೇವರು; ನಿನ್ನಲ್ಲಿ ಭರವಸವಿಟ್ಟಿರುವ ಸೇವಕನನ್ನು ರಕ್ಷಿಸು.
3 ಕರ್ತನೇ, ಕರುಣಿಸು;
ದಿನವೆಲ್ಲಾ ನಿನಗೆ ಮೊರೆಯಿಡುತ್ತೇನೆ.
4 ಕರ್ತನೇ, ನಿನ್ನ ಸೇವಕನ ಹೃದಯವನ್ನು ಆನಂದಗೊಳಿಸು;
ನಿನ್ನನ್ನೇ ನಿರೀಕ್ಷಿಸುತ್ತಿರುವೆನಲ್ಲಾ.
5 ಕರ್ತನೇ, ನೀನು ಒಳ್ಳೆಯವನೂ ಕ್ಷಮಿಸುವವನೂ
ನಿನಗೆ ಮೊರೆಯಿಡುವವರೆಲ್ಲರಲ್ಲಿ ಕೃಪಾಪೂರ್ಣನೂ ಆಗಿದ್ದೀಯಲ್ಲಾ.
6 ಯೆಹೋವನೇ, ನನ್ನ ಪ್ರಾರ್ಥನೆಗೆ ಕಿವಿಗೊಡು;

[1] ಅಥವಾ: ನಮ್ಮನ್ನು ಪುನಃ ಚೈತನ್ಯಪಡಿಸು.

ನನ್ನ ವಿಜ್ಞಾಪನೆಗಳ ಶಬ್ದವನ್ನು ಲಾಲಿಸು.
7 ನೀನು ಸದುತ್ತರವನ್ನು ದಯಪಾಲಿಸುವಿಯೆಂದು ನಂಬಿ
ನನ್ನ ಇಕ್ಕಟ್ಟಿನ ದಿನದಲ್ಲಿ ನಿನ್ನನ್ನೇ ಕರೆಯುವೆನು.

8 ಕರ್ತನೇ, ದೇವರುಗಳಲ್ಲಿ ನಿನಗೆ ಸಮಾನನೇ ಇಲ್ಲ;
ನಿನ್ನ ಕೃತ್ಯಗಳಿಗೆ ಸರಿಯಾದದ್ದು ಇನ್ನೊಂದಿಲ್ಲ.
9 ಕರ್ತನೇ, ನಿನ್ನಿಂದುಂಟಾದ ಎಲ್ಲಾ ಜನಾಂಗಗಳು ಬಂದು
ನಿನಗೆ ಅಡ್ಡಬಿದ್ದು ನಿನ್ನ ನಾಮವನ್ನು ಘನಪಡಿಸುವವು.
10 ಮಹೋನ್ನತನೂ ಮಹತ್ಕಾರ್ಯಗಳನ್ನು ನಡಿಸುವವನೂ ನೀನು;
ದೇವರು ನೀನೊಬ್ಬನೇ.
11 ಯೆಹೋವನೇ, ನಿನ್ನ ಮಾರ್ಗವನ್ನು ನನಗೆ ಬೋಧಿಸು;
ನಿನ್ನ ಸತ್ಯತೆಯನ್ನು ನನ್ನ ದೃಷ್ಟಿಯಲ್ಲೇ ಇಟ್ಟುಕೊಂಡು ನಡೆಯುವೆನು.
ನಾನು ನಿನ್ನ ನಾಮದಲ್ಲಿ ಭಯಭಕ್ತಿಯಿಂದಿರುವಂತೆ ಏಕಮನಸ್ಸನ್ನು ಅನುಗ್ರಹಿಸು.
12 ಕರ್ತನೇ, ನನ್ನ ದೇವರೇ, ಮನಃಪೂರ್ವಕವಾಗಿ ನಿನ್ನನ್ನು ಕೊಂಡಾಡುವೆನು;
ಎಂದೆಂದಿಗೂ ನಿನ್ನ ನಾಮವನ್ನು ಘನಪಡಿಸುವೆನು.
13 ನೀನು ಬಹಳವಾಗಿ ಕನಿಕರಿಸಿ ನನ್ನ ಪ್ರಾಣವನ್ನು ಪಾತಾಳತಲದಿಂದ ತಪ್ಪಿಸಿದ್ದೀಯಲ್ಲಾ.

14 ದೇವರೇ, ಗರ್ವಿಗಳು ನನಗೆ ವಿರೋಧವಾಗಿ ಎದ್ದಿದ್ದಾರೆ;
ಬಲಾತ್ಕಾರಿಗಳ ಗುಂಪು ನನ್ನ ಪ್ರಾಣಕ್ಕೆ ಕಾದಿದೆ.
ಅವರು ನಿನ್ನನ್ನು ಲಕ್ಷಿಸುವದಿಲ್ಲ.
15 ಕರ್ತನೇ, ನೀನು ಕನಿಕರವೂ ದಯೆಯೂ ಉಳ್ಳ ದೇವರು;
ದೀರ್ಘಶಾಂತನು, ಬಹಳ ಪ್ರೀತಿಯೂ ನಂಬಿಕೆಯೂ ಉಳ್ಳವನು.
16 ಕಟಾಕ್ಷವಿಟ್ಟು ನನ್ನನ್ನು ಕರುಣಿಸು;
ನಿನ್ನ ಸೇವಕನಿಗೆ ಬಲವನ್ನು ಅನುಗ್ರಹಿಸು;
ನಿನ್ನ ಸೇವಕಳ ಮಗನನ್ನು ರಕ್ಷಿಸು.
17 ನನಗಾಗಿ ಒಂದು ಶುಭಸೂಚನೆಯನ್ನು ತೋರಿಸು;
ನನ್ನ ಹಗೆಗಾರರು ನೋಡಿ—ಯೆಹೋವನು ನೆರವಾಗಿ ಇವನನ್ನು ಸಂತೈಸಿದ್ದಾನೆಂದು ನಾಚಿಕೆಪಡಲಿ.

ಚೀಯೋನೇ ಎಲ್ಲಾ ದೇವಜನರ ಮಾತೃಭೂಮಿ.
(ಯೆಶಾಯ 2. 2—4; 19. 19—24.)
ಕೋರಹೀಯರ ಕೀರ್ತನೆ; ಗೀತ.

**87** ಯೆಹೋವನು ಸ್ಥಾಪಿಸಿದ್ದು ಪರಿಶುದ್ಧಪರ್ವತಗಳಲ್ಲಿದೆ.
2 ಆತನು ಯಾಕೋಬ್‌ವಂಶದವರ ಎಲ್ಲಾ ನಿವಾಸ[ಗಳಿ]ಗಿಂತ
ಚೀಯೋನಿನ ದ್ವಾರಗಳನ್ನು ಹೆಚ್ಚಾಗಿ ಪ್ರೀತಿಸುತ್ತಾ[ನೆ]
3 ದೇವನಗರವೇ, ನಿನ್ನ ವಿಷಯವಾದ ಗೌರವೋ[ಕ್ತಿ]ಯೇನಂದರೆ— ಸೆಲಾ.
4 1)ಐಗುಪ್ತ ಬಾಬೆಲ್ ದೇಶಗಳವರನ್ನು ನನ್ನ[ನ್ನು] ಬಲ್ಲವರಲ್ಲಿ ಎಣಿಸುವೆನು.
ಇಗೋ ಫಿಲಿಷ್ಟಿಯ, ತೂರ್, 2)ಕೂಷ್ ಜನಾ[ಂ]ಗಗಳು
ಅಲ್ಲೇ ಹುಟ್ಟಿದವು ಎಂಬದೇ.

5 ಇದರಿಂದ ಚೀಯೋನೇ 3)ಪ್ರತಿಯೊಂದು ಜನಾಂ[ಗದ] ಜನ್ಮನಗರವೆಂದು ಹೇಳಲ್ಪಡುವದು;
ಅದನ್ನು ಪರಾತ್ಪರನು ತಾನೇ ಸ್ಥಿರಪಡಿಸುವನು.
6 ಯೆಹೋವನು ಜನಾಂಗಗಳ ಪಟ್ಟಿಯನ್ನು ಮಾ[ಡು]ವಾಗ
[ಪ್ರತಿಯೊಂದರ ವಿಷಯ]—4)ಇದು ಅಲ್ಲಿಯೇ ಹು[ಟ್ಟಿ]ದ್ದು ಎಂದು ಬರೆಯುವನು. ಸೆಲಾ.
7 ಇವರು ಹಾಡುತ್ತಾ ಕುಣಿಯುತ್ತಾ—
ನನ್ನ [ಜೀವಜಲದ] ಒರತೆಗಳೆಲ್ಲಾ ನಿನ್ನಲ್ಲಿಯೇ [ಇವೆ] ಅನ್ನುವರು.

ದುಃಖದಲ್ಲಿ ಮುಳುಗಿರುವವನ ಮೊರೆ.
(ಪ್ರಲಾಪ 3.)
ಹಾಡು; ಕೋರಹೀಯರ ಕೀರ್ತನೆ; ಪ್ರಧಾನಗಾಯಕನ[ಾ]
ಕೀರ್ತನಸಂಗ್ರಹದಿಂದ ತೆಗೆದದ್ದು;
ಮಹಲಾತ್ ಎಂಬ ರಾಗದ ಪ್ರಕಾರ ಹಾಡತಕ್ಕದ್ದು;
ಜೇರಹಕುಲದವನಾದ ಹೇಮಾನನ ಪದ್ಯ.

**88** ಯೆಹೋವನೇ, ನನ್ನನ್ನು ರಕ್ಷಿಸುವ ದೇವ[ನೇ,] ಹಗಲಿರುಳು ನಿನಗೆ ಮೊರೆಯಿಡುತ್ತೇನೆ.
2 ನನ್ನ ಪ್ರಾರ್ಥನೆಯು ನಿನ್ನ ಸನ್ನಿಧಿಯನ್ನು [ಮು]ಟ್ಟಲಿ;
ಕಿವಿಗೊಟ್ಟು ನನ್ನ ಕೂಗನ್ನು ಕೇಳು.
3 ನನ್ನ ಜೀವವು ಕಷ್ಟಗಳಿಂದ ತುಂಬಿಹೋಯಿತು;
ನನ್ನ ಪ್ರಾಣವು ಪಾತಾಳಕ್ಕೆ ಹತ್ತಿರವಾಯಿತು.
4 ಸಮಾಧಿಯಲ್ಲಿ ಸೇರುವವರೊಳಗೆ ಎಣಿಸಲ್ಪಟ್ಟಿದ್ದೇ[ನೆ;]
ಗತಿಗೆಟ್ಟ ಮನುಷ್ಯನಂತಿದ್ದೇನೆ.
5 ಸತ್ತವನ ಹಾಗೆ ನನ್ನನ್ನು ಹೊರಗೆ ಹಾಕಿದ್ದಾರೆ;
ಸಮಾಧಿಯಲ್ಲಿ ಬಿದ್ದಿರುವ ಹತರಂತಿದ್ದೇನೆ.
ಅವರು ನಿನ್ನ ಪರಿಪಾಲನೆಗೆ ಹೊರಗಾದವರು;
ಅಂಥವರನ್ನು ನೀನು ಜ್ಞಾಪಿಸುವದೇ ಇಲ್ಲ.
6 ಅಧೋಲೋಕದಲ್ಲಿಯೂ ಗಾಢಾಂಧಕಾರದಲ್ಲಿ[ಯೂ]
ಅಗಾಧಸ್ಥಳದಲ್ಲಿಯೂ ನನ್ನನ್ನು ದೊಬ್ಬಿಬಿಟ್ಟಿದ್ದೀ[ಯೆ.]
7 ನಿನ್ನ ಕೋಪಭಾರವು ನನ್ನನ್ನು ಕುಗ್ಗಿಸಿಬಿಟ್ಟಿದೆ;

1) ಮೂಲ: ರಹಬ. 2)ಅಥವಾ: ಕೂಷ್ ನಾಡುಗಳವರಲ್ಲಿ ಇಂಥಿಂಥವನು ಅಲ್ಲೀ ಹುಟ್ಟಿದವನು. 3) ಅ[...]
ಇಂಥಿಂಥವನಿಗೆ. 4) ಅಥವಾ: ಇವನು ಅಲ್ಲಿಯೇ ಹುಟ್ಟಿದವನು.

ನಿನ್ನ ಎಲ್ಲಾ ತೆರೆಗಳಿಂದ ನನ್ನನ್ನು ಬಾಧಿಸಿದ್ದೀ.
ಸೆಲಾ.
8 ನನ್ನ ಆಪ್ತರು ನನ್ನನ್ನು ಹೇಸಿ ಬಿಟ್ಟುಹೋಗುವಂತೆ ಮಾಡಿದ್ದೀ;
ಕಟ್ಟಲ್ಪಟ್ಟಿದ್ದೇನೆ, ಬಿಡಿಸಿಕೊಳ್ಳಲಾರೆ.
9 ಬಾಧೆಯಿಂದ ನನ್ನ ಕಣ್ಣುಗಳು ಮೊಬ್ಬಾಗಿಹೋಗಿವೆ.
ಯೆಹೋವನೇ, ಹಗಲೆಲ್ಲಾ ಕೈಯೊಡ್ಡಿ ನಿನಗೆ ಮೊರೆಯಿಡುತ್ತೇನೆ.

10 ನೀನು ಸತ್ತವರಿಗೆ ಅದ್ಭುತಕಾರ್ಯಗಳನ್ನು ತೋರಿಸುವಿಯೋ?
ಪ್ರೇತಗಳು ಎದ್ದು ನಿನ್ನನ್ನು ಕೊಂಡಾಡುವವೋ?
ಸೆಲಾ.

11 ಸಮಾಧಿಯಲ್ಲಿ ನಿನ್ನ ಕೃಪೆಯನ್ನೂ
ನಾಶಲೋಕದಲ್ಲಿ ನಿನ್ನ ಸತ್ಯತೆಯನ್ನೂ ಸಾರುವದುಂಟೋ?
12 ಕತ್ತಲೆಯ ಲೋಕದಲ್ಲಿ ನಿನ್ನ ಮಹತ್ಕಾರ್ಯಗಳೂ
ಮರವೆಯ ದೇಶದಲ್ಲಿ ನಿನ್ನ ನೀತಿಯೂ ತಿಳಿಯಲ್ಪಡುವವೋ?

13 ನಾನಾದರೋ, ಯೆಹೋವನೇ, ನಿನಗೆ ಮೊರೆಯಿಡುತ್ತೇನೆ;
ಉದಯದಲ್ಲಿ ನನ್ನ ವಿಜ್ಞಾಪನೆಯು ನಿನ್ನ ಮುಂದೆ ಬರುವದು.
14 ಯೆಹೋವನೇ, ನನ್ನ ಪ್ರಾಣವನ್ನೇಕೆ ತಳ್ಳಿಬಿಟ್ಟಿ?
ನಿನ್ನ ಮುಖವನ್ನು ಮರೆಮಾಡಿದ್ದೇಕೆ?
15 ಯೌವನಾರಭ್ಯ ಕುಗ್ಗಿದವನೂ ಮೃತಪ್ರಾಯನೂ
ನಿನ್ನ ಗದರಿಕೆಯಿಂದ ದೆಸೆಗೆಟ್ಟವನೂ ಆಗಿದ್ದೇನಲ್ಲಾ.
16 ನಿನ್ನ ಕೋಪಜ್ವಾಲೆಯು ನನ್ನನ್ನು ಕವಿದದೆ;
ನಿನ್ನಿಂದುಂಟಾದ ದಿಗಿಲಿನಿಂದ ಹಾಳಾದೆನು.
17 ಅವು ದಿನವೆಲ್ಲಾ ನೀರಿನಂತೆ ನನ್ನನ್ನು ಆವರಿಸಿಕೊಂಡವೆ;
ಒಟ್ಟುಗೂಡಿ ನನ್ನನ್ನು ಸುತ್ತಿಬಿಟ್ಟವೆ.
18 ನನ್ನ ಆಪ್ತಮಿತ್ರರನ್ನು ದೂರಮಾಡಿದಿ;
ಅಂಧಕಾರವೇ ನನ್ನ ಪರಿಚಯವು.

ಸರ್ವಶಕ್ತನೂ ಸತ್ಯಸಂಧನೂ ಆಗಿರುವ ದೇವರು ತಾನು ದಾವೀದನಿಗೆ ಮಾಡಿದ ವಾಗ್ದಾನವನ್ನು ನೆರವೇರಿಸಬೇಕೆಂಬ ಪ್ರಾರ್ಥನೆ.
(೨ ಸಮುವೇಲ 7; ಕೀರ್ತನೆ 44; 80.)
ಜೇರಹಕುಲದವನಾದ ಏತಾನನ ಪದ್ಯ.

89 ಯೆಹೋವನೇ, ನಿತ್ಯವೂ ನಿನ್ನ ಕೃಪಾತಿಶಯವನ್ನು ಹಾಡಿಹರಸುವೆನು;
ನಿನ್ನ ಸತ್ಯತೆಯನ್ನು ಮುಂದಣ ಸಂತಾನದವರೆಲ್ಲರಿಗೂ ನನ್ನ ಬಾಯಿ ತಿಳಿಯಮಾಡುವದು.
2 ನಿನ್ನ ಪ್ರೀತಿಸಂಕಲ್ಪವು ನಿತ್ಯವೂ ಸಿದ್ಧಿಗೆ ಬರುತ್ತಲೇ ಇರುವದು;
ಆಕಾಶದಲ್ಲಿ ನಿನ್ನ ಸತ್ಯತೆಯನ್ನು ಸ್ಥಾಪಿಸುವಿ ಎಂದು ತಿಳಿದುಕೊಂಡಿದ್ದೇನೆ.
3 [ನೀನು ನುಡಿದದ್ದೇನಂದರೆ—]
ನಾನು ಆರಿಸಿಕೊಂಡ ಸೇವಕನಾದ ದಾವೀದನ ಸಂಗಡ
ಒಡಂಬಡಿಕೆಮಾಡಿಕೊಂಡು ಆಣೆಯಿಟ್ಟು—
4 ಶಾಶ್ವತವಾಗಿ ನಿನ್ನ ಸಂತತಿಯನ್ನು ಸ್ಥಾಪಿಸುವೆನು,
ತಲತಲಾಂತರಗಳಿಗೂ ನಿನ್ನ ಸಿಂಹಾಸನವನ್ನು ಸ್ಥಿರಪಡಿಸುವೆನು ಎಂದು ಹೇಳಿದ್ದೇನೆ
ಎಂಬದೇ. ಸೆಲಾ.

5 ಯೆಹೋವನೇ, ಗಗನವು ನಿನ್ನ ಮಹತ್ವನ್ನು ಪ್ರಸಿದ್ಧಪಡಿಸುವದು;
ನಿನ್ನ ಸತ್ಯತೆಯನ್ನು ಪರಿಶುದ್ಧರ ಸಭೆಯಲ್ಲಿ ಕೀರ್ತಿಸುವದು.
6 ಮೇಘಮಂಡಲದಲ್ಲಿ ಯೆಹೋವನಿಗೆ ಸಮಾನರು ಯಾರು?
ದೇವದೂತರಲ್ಲಿ ಯೆಹೋವನಿಗೆ ಸರಿಯಾದವರು ಯಾರು?
7 ಆತನು ಪರಿಶುದ್ಧರ ಸಭೆಯಲ್ಲಿ ಭಯಂಕರನಾದ ದೇವರು;
ತನ್ನ ಎಲ್ಲಾ ಪರಿವಾರದವರಿಗಿಂತ ಭೀಕರನು.
8 ಯೆಹೋವನೇ, ಸೇನಾಧೀಶ್ವರನಾದ ದೇವರೇ, ನಿನಗೆ ಸಮಾನರು ಯಾರು?
ಯಾಹುವೇ, ನೀನು ಶಕ್ತನು, ಸತ್ಯತೆಯಿಂದ ಆವರಿಸಲ್ಪಟ್ಟವನು.

9 ಸಮುದ್ರದ ಅಲ್ಲಕಲ್ಲೋಲಗಳನ್ನು ಅಂಕೆಯಲ್ಲಿಟ್ಟುಕೊಂಡಿರುವವನು ನೀನು;
ತೆರೆಗಳು ಏಳುವಾಗ ಅವುಗಳನ್ನು ತಡೆಯುವವನು ನೀನು.
10 ರಹಬನ್ನು ಛೇದಿಸಿ ಸಾಯಿಸಿದವನು ನೀನು;
ನಿನ್ನ ಭುಜಬಲದಿಂದ ಶತ್ರುಗಳನ್ನು ಚದರಿಸಿಬಿಟ್ಟಿ.
11 ಆಕಾಶವು ನಿನ್ನದು, ಭೂಮಿಯೂ ನಿನ್ನದೇ;
ಲೋಕವನ್ನೂ ಅದರಲ್ಲಿರುವದೆಲ್ಲವನ್ನೂ ನಿರ್ಮಿಸಿದವನು ನೀನು.
12 ದಕ್ಷಿಣೋತ್ತರದಿಕ್ಕುಗಳನ್ನು ಉಂಟುಮಾಡಿದವನು ನೀನು.
ತಾಬೋರ್ ಹೆರ್ಮೋನ್ ಪರ್ವತಗಳು ನಿನ್ನ ನಾಮದಲ್ಲಿ ಆನಂದಧ್ವನಿಮಾಡುತ್ತವೆ.
13 ನಿನ್ನ ಭುಜವು ಮಹಾಬಲವುಳ್ಳದ್ದು.
ನಿನ್ನ ಹಸ್ತವು ಶಕ್ತಿಯುಳ್ಳದ್ದು; ನಿನ್ನ ಬಲಗೈ ಮಹತ್ತುಗಳನ್ನು ನಡಿಸುತ್ತದೆ.
14 ನೀತಿನ್ಯಾಯಗಳು ನಿನ್ನ ಸಿಂಹಾಸನದ ಅಸ್ತಿವಾರವು;
ನಿನ್ನ ಸಾನ್ನಿಧ್ಯದೂತರು ಪ್ರೀತಿಸತ್ಯತೆಗಳೇ.
15 ಉತ್ಸಾಹಧ್ವನಿಯನ್ನು ಕೇಳಿದ ಜನರು ಧನ್ಯರು;
ಯೆಹೋವನೇ, ಅವರು ನಿನ್ನ ಮುಖಪ್ರಕಾಶದಲ್ಲಿ ಸಂಚರಿಸುತ್ತಾರೆ.
16 ಯಾವಾಗಲೂ ನಿನ್ನ ನಾಮದಲ್ಲಿ ಆನಂದಿಸುತ್ತಾರೆ;
ನಿನ್ನ ನೀತಿಯಿಂದ ಏಳಿಗೆಹೊಂದುತ್ತಾರೆ.
17 ಅವರು ಹಿಗ್ಗುವ ಬಲವು ನೀನೇ.

ನಿನ್ನ ಕರುಣಾಕಟಾಕ್ಷದಿಂದ ನಮ್ಮ ಕೊಂಬು ಎತ್ತಲ್ಪ
ಟ್ಟಿರುವದು.
18 ನಮಗೆ ಗುರಾಣಿಯಂತಿರುವ ನಮ್ಮ ಅರಸನು ಯೆ
ಹೋವನವನೇ;
ಅವನು ಇಸ್ರಾಯೇಲ್ಯರ ಸದಮಲಸ್ವಾಮಿಯ ಸ್ವಕೀ
ಯನು.

19 ಆ ಕಾಲದಲ್ಲಿ ನೀನು ದರ್ಶನದಲ್ಲಿ ನಿನ್ನ ಭಕ್ತ
ರಿಗೆ ಹೇಳಿದ್ದೇನಂದರೆ—
ಒಬ್ಬ ಶೂರನಿಗೆ ರಕ್ಷಾಬಲವನ್ನು ಅನುಗ್ರಹಿಸಿದ್ದೇನೆ;
ಪ್ರಜೆಗಳಲ್ಲಿ ಒಬ್ಬ ಯೌವನಸ್ಥನನ್ನು ಆರಿಸಿ ಉನ್ನತ
ಸ್ಥಾನದಲ್ಲಿಟ್ಟಿದ್ದೇನೆ.
20 ನನ್ನ ಸೇವಕನಾದ ದಾವೀದನನ್ನು ಕಂಡು
ಪರಿಶುದ್ಧತೈಲದಿಂದ ಅವನನ್ನು ಅಭಿಷೇಕಿಸಿದ್ದೇನೆ.
21 ನನ್ನ ಹಸ್ತವು ಅವನ ಮೇಲೆ ಸ್ಥಿರವಾಗಿರುವದು;
ನನ್ನ ಭುಜವು ಅವನನ್ನು ಬಲಪಡಿಸುವದು.
22 ವೈರಿಯ ಕುತಂತ್ರವು ಅವನಲ್ಲಿ ಸಾಗದು;
ಯಾವ ಕೆಡುಕನೂ ಅವನನ್ನು ಕುಗ್ಗಿಸಲಾರನು.
23 ಅವನ ವಿರೋಧಿಗಳನ್ನು ಅವನ ಮುಂದೆಯೇ
ಜಜ್ಜಿಹಾಕುವೆನು;
ಅವನ ದ್ವೇಷಿಗಳನ್ನು ಹತಮಾಡಿಬಿಡುವೆನು.
24 ಆದರೆ ನನ್ನ ಪ್ರೀತಿಸತ್ಯತೆಗಳು ಅವನೊಡನೆ ಇರು
ವವು;
ನನ್ನ ಹೆಸರಿನಿಂದ ಅವನ ಕೊಂಬು ಎತ್ತಲ್ಪಡು
ವದು.
25 ಸಮುದ್ರದಿಂದ ನದಿಗಳ ವರೆಗೂ
ಅವನ ಹಸ್ತಕ್ಕೆ ಅಧಿಕಾರವನ್ನು ಕೊಡುವೆನು.
26 ಅವನು ನನ್ನೊಡನೆ—ನನ್ನ ತಂದೆಯೂ ದೇವರೂ
ಆಶ್ರಯದುರ್ಗವೂ ನೀನೇ ಎಂದು ಹೇಳುವನು.
27 ನಾನಾದರೋ ಅವನನ್ನು ಜ್ಯೇಷ್ಠಪುತ್ರನನ್ನೂ
ಭೂರಾಜರಲ್ಲಿ ಉನ್ನತನನ್ನೂ ಮಾಡಿಕೊಳ್ಳು
ವೆನು.
28 ನನ್ನ ಕೃಪೆಯು ಅವನಲ್ಲಿ ಶಾಶ್ವತವಾಗಿ ಇರುವದು;
ನನ್ನ ಒಡಂಬಡಿಕೆಯು ಅವನಲ್ಲಿ ಸ್ಥಿರವಾಗಿರು
ವದು.
29 ಅವನ ಸಂತಾನವನ್ನು ಯಾವಾಗಲೂ ಉಳಿಸು
ವೆನು.
ಅವನ ಸಿಂಹಾಸನವು ಆಕಾಶವಿರುವ ವರೆಗೂ
ಇರುವದು.

30 ಅವನ ಸಂತಾನದವರು ನನ್ನ ಧರ್ಮಶಾಸ್ತ್ರವನ್ನು
ಬಿಟ್ಟು
ನನ್ನ ಆಜ್ಞೆಗಳಲ್ಲಿ ನಡೆಯದೆ
31 ನನ್ನ ವಿಧಿಗಳನ್ನು ಮೀರಿ ನನ್ನ ನೇಮಗಳನ್ನು
ಪಾಲಿಸದೆಹೋದರೆ
32 ನಾನು ಅವರ ದ್ರೋಹಕ್ಕಾಗಿ ಅವರನ್ನು ಬೆತ್ತದಿಂದ
ಹೊಡೆಯುವೆನು;
ಅವರ ಅಪರಾಧಕ್ಕಾಗಿ ಪೆಟ್ಟುಕೊಡುವೆನು.
33 ಆದರೂ ನಾನು ಅವನಲ್ಲಿಟ್ಟಿರುವ ಕೃಪೆಯನ್ನು
ತಪ್ಪಿಸುವದಿಲ್ಲ;
ನನ್ನ ನಂಬಿಕೆಯಿಂದ ಜಾರುವದಿಲ್ಲ.
34 ನನ್ನ ಒಡಂಬಡಿಕೆಯನ್ನು ಭಂಗಪಡಿಸುವದಿಲ್ಲ;
ನನ್ನ ಮಾತನ್ನು ಬದಲಿಸುವದಿಲ್ಲ.
35 ನನ್ನ ಪವಿತ್ರತ್ವದಲ್ಲಿ ಆಣೆಯಿಟ್ಟು ಒಂದು ಸ
ಹೇಳಿದ್ದೇನೆ;
ಅದರ ವಿಷಯ ದಾವೀದನಿಗೆ ಸುಳ್ಳುಗಾರನಾ
ದಿಲ್ಲ. ಅದೇನಂದರೆ—
36 ಅವನ ಸಂತತಿಯು ಶಾಶ್ವತವಾಗಿ ಇರುವದು;
ಅವನ ಸಿಂಹಾಸನವು ಸೂರ್ಯನಂತೆ ನನ್ನ ಎ
ನಲ್ಲಿದ್ದು
37 ಚಂದ್ರನಂತೆ ನಿತ್ಯಕ್ಕೂ ಸ್ಥಿರವಾಗಿರುವದು.
ಪರಲೋಕದ ಸಾಕ್ಷಿ ಸತ್ಯವೇ ಸರಿ. ಸೆಲಾ

38 ಹೀಗೆ ಹೇಳಿದ ನೀನು ನಿನ್ನ ಅಭಿಷಿಕ್ತನ ವ
ರೇಗಿದವನಾಗಿ
ಅವನನ್ನು ಅಸಹಿಸಿ ತಳ್ಳಿಬಿಟ್ಟಿದ್ದೀ.
39 ನೀನು ನಿನ್ನ ಸೇವಕನ ಸಂಗಡ ಮಾಡಿಕೊಂಡ ಒಡ
ಡಿಕೆಯನ್ನು ಭಂಗಪಡಿಸಿ
ಅವನ ಕಿರೀಟವನ್ನು ನೆಲಕ್ಕೆ ಹಾಕಿ ಅಪವಿತ್ರ
ಡಿದ್ದೀ.
40 ಅವನ ದೇಶದ ಮೇರೆಗಳನ್ನು ಕೆಡವಿ
ದುರ್ಗಗಳನ್ನು ಹಾಳುಮಾಡಿದ್ದೀ.
41 ದಾರಿಗರೆಲ್ಲರೂ ಅವನನ್ನು ಸುಲಿಗೆಮಾಡುತ್ತಾರೆ;
ಸುತ್ತಣವರ ಪರಿಹಾಸ್ಯಕ್ಕೆ ಗುರಿಯಾಗಿದ್ದಾನೆ.
42 ಅವನ ವಿರೋಧಿಗಳ ಹಸ್ತವನ್ನು ಉನ್ನತಪಡಿಸಿದ್ದೀ;
ಅವನ ವೈರಿಗಳಿಗೆಲ್ಲಾ ಆನಂದವಾಗುವಂತೆ ಮಾಡಿ
43 ಇದಲ್ಲದೆ ಅವನ ಕತ್ತಿಯನ್ನು ತಿರುಗಿಸಿಬಿಟ್ಟಿದ್ದೀ;
ಅವನನ್ನು ಕಾಳಗದಲ್ಲಿ ನಿಲ್ಲದಂತೆ ಮಾಡಿದ್ದೀ.
44 ಅವನ ತೇಜಸ್ಸನ್ನು ತಡೆದುಬಿಟ್ಟಿದ್ದೀ;
ಅವನ ಸಿಂಹಾಸನವನ್ನು ನೆಲಕ್ಕುರುಳಿಸಿದ್ದೀ.
45 ಅವನ ಯೌವನವನ್ನು ಬೇಗ ಮುಗಿಸಿ
ನಾಚಿಕೆಯು ಅವನನ್ನು ಕವಿಯುವಂತೆ ಮಾಡಿ
ಸೆಲಾ.

46 ಯೆಹೋವನೇ, ಇನ್ನೆಷ್ಟರ ವರೆಗೆ ಮರೆಯಾಗಿರ
ನಿನ್ನ ಕೋಪಾಗ್ನಿಯು ನಮ್ಮ ಮೇಲೆ ಸದಾ
ಯುತ್ತಿರಬೇಕೋ?
47 ನನ್ನ ಆಯುಷ್ಯವು ಎಷ್ಟು ಅಲ್ಪವೆಂದೂ
ಎಂಥಾ ವ್ಯರ್ಥಕ್ಕಾಗಿಯೇ ಮನುಷ್ಯರನ್ನು ನಿ
ಸಿದ್ದೀ ಎಂದೂ ಜ್ಞಾಪಿಸಿಕೋ.
48 ತನ್ನನ್ನು ಪಾತಾಳಕ್ಕೆ ತಪ್ಪಿಸಿಕೊಂಡು
ಮರಣಹೊಂದದೆ ಚಿರಂಜೀವಿಯಾಗಿರುವ ಮ
ಷ್ಯನು ಯಾವನಿದ್ದಾನೆ? ಸೆಲಾ.

49 ಕರ್ತನೇ, ನೀನು ನಿನ್ನ ಸತ್ಯತೆಯಲ್ಲಿ ಆಣೆಯಿಟ್ಟು
ದಾವೀದನಿಗೆ ವಾಗ್ದಾನಮಾಡಿ ನಡಿಸುತ್ತಿದ್ದ ಮುಂ
ಕೃಪಾಕಾರ್ಯಗಳು ಎಲ್ಲಿ?
50 ಯೆಹೋವನೇ, ನಿನ್ನ ವೈರಿಗಳು ನಿಂದಿಸುತ್ತಾರೆ;
ನಿನ್ನ ಅಭಿಷಿಕ್ತನನ್ನು ಹೆಜ್ಜೆಹೆಜ್ಜೆಗೂ ಅಪಮಾನಮ
ತ್ತಾರೆ.
51 ಕರ್ತನೇ, ನಿನ್ನ ಸೇವಕರಿಗಾಗುವ ಅಪವಾದವ

ನಾನು ಎಲ್ಲಾ ಜನಾಂಗಗಳ ನಿಂದಾಭಾರವನ್ನು ಉಡಿ
ಲಲ್ಲಿ ಕಟ್ಟಿರುವದನ್ನೂ ಜ್ಞಾಪಿಸಿಕೋ.

ಯೆಹೋವನಿಗೆ ಸದಾಕಾಲವೂ ಕೊಂಡಾಟವಾ
ಗಲಿ. ಆಮೆನ್, ಆಮೆನ್.

## ಚತುರ್ಥ ಭಾಗವು (90—106).

ಅನಿತ್ಯರಾದ ಪಾಪಾತ್ಮರಿಗೆ ನಿತ್ಯನಾದ ದೇವರ ದಯವೇ ಆಶ್ರಯ.
(ಧರ್ಮೋಪದೇಶ 32.)
ದೇವರ ಮನುಷ್ಯನಾದ ಮೋಶೆಯ ಪ್ರಾರ್ಥನೆ.

90 ಕರ್ತನೇ, ತಲತಲಾಂತರಗಳಿಂದಲೂ ನಮ್ಮ
ವಾಸಸ್ಥಾನವು ನೀನೇ.
ಬೆಟ್ಟಗಳು ಉಂಟಾಗುವದಕ್ಕಿಂತ,
ಭೂಮಿಯೂ ಅದರ ದೇಶಗಳೂ ನಿರ್ಮಾಣವಾಗು
ವದಕ್ಕಿಂತ ಮುಂಚಿನಿಂದ
ಯುಗಯುಗಾಂತರಗಳಲ್ಲಿಯೂ ನೀನೇ ದೇವರು.
ಮನುಷ್ಯರೇ, ಸಾಯಿರಿ ಎಂದು ಆಜ್ಞಾಪಿಸಿ
1)ಅವರನ್ನು ಪುನಃ ಮಣ್ಣಿಗೆ ಸೇರಿಸುತ್ತೀ.
ಸಾವಿರ ವರುಷಗಳು ನಿನ್ನ ದೃಷ್ಟಿಯಲ್ಲಿ
ಗತಿಸಿಹೋದ ನಿನ್ನಿನ ದಿನದಂತೆಯೂ ರಾತ್ರಿಯ
ಜಾವದಂತೆಯೂ ಅವೆ.
ನೀನು ಮನುಷ್ಯರನ್ನು ಪ್ರವಾಹದಿಂದ ಬಡಕೊಂಡು
ಹೋಗುತ್ತೀ, ಅವರು ನಿದ್ರೆಗೆ ಸಮಾನರೇ.
ಅವರು ಹೊತ್ತಾರೆಯಲ್ಲಿ ಚಿಗುರುವ ಹುಲ್ಲಿನಂತಿ
ದ್ದಾರೆ.
ಅದು ಉದಯದಲ್ಲಿ ಬೆಳೆದು ಹೂಬಿಡುತ್ತದೆ.
ಸಂಜೆಯಲ್ಲಿ ಕೊಯ್ಯಲ್ಪಟ್ಟು ಒಣಗಿಹೋಗುತ್ತದೆ.

ನಿನ್ನ ಕೋಪದಿಂದ ಇಲ್ಲವಾದೆವು,
ನಿನ್ನ ರೌದ್ರದಿಂದ ತಲ್ಲಣಗೊಂಡೆವು.
ನಮ್ಮ ದ್ರೋಹಗಳನ್ನು ನಿನ್ನ ಮುಂದೆಯೂ
ನಮ್ಮ ಗುಪ್ತಪಾಪಗಳನ್ನು ನಿನ್ನ ತೇಜೋದೃಷ್ಟಿಯಲ್ಲಿ
ಯೂ ಇಟ್ಟುಕೊಂಡಿದ್ದೀ.
ನಿನ್ನ ರೋಷದಿಂದ ನಮ್ಮ ಕಾಲವೆಲ್ಲಾ ಸಂದುಹೋ
ಯಿತು;
ನಮ್ಮ ವರುಷಗಳು ನಿಟ್ಟುಸಿರಿನಂತೆ ತೀರಿಹೋದವು.
ನಮ್ಮ ಆಯುಷ್ಕಾಲವು ಎಪ್ಪತ್ತು ವರುಷ; ಬಲ ಹೆಚ್ಚಿ
ದ್ದರೆ ಎಂಭತ್ತು.
ಕಷ್ಟಸಂಕಟಗಳೇ ಅದರ ಆಡಂಬರ.
ಅದು ಬೇಗನೆ ಗತಿಸಿಹೋಗುತ್ತದೆ; ನಾವು ಹಾರಿ
ಹೋಗುತ್ತೇವೆ.
ನಿನ್ನ ಕೋಪದ ಬಲವನ್ನೂ
ಭಯಭಕ್ತಿಗೆ ಕಾರಣವಾಗಿರತಕ್ಕ ನಿನ್ನ ರೌದ್ರ
ವನ್ನೂ ಗ್ರಹಿಸುವವರಾರು?
ನಮ್ಮ ದಿನಗಳು ಕೊಂಚವೇ ಎಂದು ಎಣಿಸಿ
ಕೊಳ್ಳುವ ಹಾಗೆ ನಮಗೆ ಕಲಿಸು;
ಆಗ ಜ್ಞಾನದ ಹೃದಯವನ್ನು ಪಡಕೊಳ್ಳುವೆವು.

13 ಯೆಹೋವನೇ, ಮನಸ್ಸನ್ನು ಬೇರೆ ಮಾಡಿಕೋ;
ಎಷ್ಟರ ವರೆಗೂ [ಕೋಪ ಮಾಡುವಿ]?
ನಿನ್ನ ಸೇವಕರ ಮೇಲೆ ಅಂತಃಕರಣವಿರಲಿ.
14 ಉದಯದಲ್ಲಿ ನಿನ್ನ ಕೃಪೆಯಿಂದ ನಮ್ಮನ್ನು ಸಂತೃಪ್ತಿ
ಪಡಿಸು;
ಆಗ ಜೀವಮಾನದಲ್ಲೆಲ್ಲಾ ಉಲ್ಲಾಸಿಸಿ ಹರ್ಷಿಸುವೆವು.
15 ನೀನು ನಮ್ಮನ್ನು ಕುಗ್ಗಿಸಿದ ದಿವಸಗಳಿಗೂ
ನಾವು ಕೇಡನ್ನು ಅನುಭವಿಸಿದ ವರುಷಗಳಿಗೂ ತಕ್ಕಂತೆ
ನಮ್ಮನ್ನು ಸಂತೋಷಪಡಿಸು.
16 ನಿನ್ನ ಸೇವಕರಿಗೆ ನಿನ್ನ ರಕ್ಷಾಕಾರ್ಯವೂ
ಅವರ ಮಕ್ಕಳಿಗೋಸ್ಕರ ನಿನ್ನ ಮಹತ್ತೂ ಪ್ರಕಟ
ವಾಗಲಿ.
17 ನಮ್ಮ ಯೆಹೋವದೇವರ ಪ್ರಸನ್ನತೆಯು ನಮ್ಮ
ಮೇಲೆ ಇರಲಿ.
ನಾವು ಕೈಹಾಕಿದ ಕೆಲಸವನ್ನು ನಮಗೆ ಸಫಲ
ಪಡಿಸು;
ನಾವು ಕೈಹಾಕಿದ ಕೆಲಸವನ್ನು ಸಫಲಪಡಿಸು.

ದೇವಾಶ್ರಿತನು ಸುರಕ್ಷಿತನಾಗಿರುವನು.
(ವಿಮೋಚನ 23. 20—26.)

91 ಪರಾತ್ಪರನ ಮರೆಹೊಕ್ಕಿರುವವನು ಸರ್ವಶಕ್ತನ
ಆಶ್ರಯದಲ್ಲಿ ಸುರಕ್ಷಿತನಾಗಿರುವನು.
2 ನಾನು ಯೆಹೋವನಿಗೆ—ನೀನೇ ನನ್ನ ಶರಣನು
ನನ್ನ ದುರ್ಗವು
ನಾನು ಭರವಸವಿಟ್ಟಿರುವ ನನ್ನ ದೇವರು ಎಂದು
ಹೇಳುವೆನು.

3 ನಿನ್ನನ್ನು ಬೇಟೆಗಾರನ ಬಲೆಯಿಂದಲೂ
ಮರಣಕರವ್ಯಾಧಿಯಿಂದಲೂ ತಪ್ಪಿಸುವವನು ಆತನೇ.
4 ಆತನು ನಿನ್ನನ್ನು ತನ್ನ ರೆಕ್ಕೆಗಳಿಂದ ಹೊದಗಿಸುವನು;
ಆತನ ಪಕ್ಕಗಳ ಮರೆಯನ್ನು ಆಶ್ರಯಿಸಿಕೊಳ್ಳುವಿ.
ಆತನ ಸತ್ಯತೆಯೇ ನಿನಗೆ ಖೇಡ್ಯವೂ ಗುರಾಣಿಯೂ
ಆಗಿದೆ.

5 ಇರುಳಲ್ಲಿ ಭಯಹುಟ್ಟಿಸುವ ಯಾವದಕ್ಕೂ
ಹಗಲಲ್ಲಿ ಹಾರಿಬರುವ ಬಾಣಕ್ಕೂ
6 ಕತ್ತಲೆಯಲ್ಲಿ ಸಂಚರಿಸುವ ವಿಪತ್ತಿಗೂ
ಹಾಸಿಕರವಾದ ಮಧ್ಯಾಹ್ನದ ಕೇಡಿಗೂ ಅಂಜ ಕಾರಣ
ವಿಲ್ಲ.
7 ನಿನ್ನ ಮಗ್ಗುಲಲ್ಲಿ ಸಾವಿರ ಜನರು,
ನಿನ್ನ ಬಲಗಡೆಯಲ್ಲಿ ಹತ್ತುಸಾವಿರ ಜನರು ಸತ್ತು
ಬಿದ್ದರೂ ನಿನಗೇನೂ ತಟ್ಟದು.
8 ನೀನು ಅದನ್ನು ಕಣ್ಣಾರೆ ಕಂಡು
ದುಷ್ಟರಿಗೆ ಪ್ರತಿದಂಡನೆಯುಂಟೆಂಬದಕ್ಕೆ ಸಾಕ್ಷಿಯಾ
ಗಿರುವಿಯಷ್ಟೆ.

9 ಯೆಹೋವನೇ ನನ್ನ ಶರಣನು!

1) ಅಥವಾ: ನೀನು ಮನುಷ್ಯರನ್ನು ಪುನಃ ಮಣ್ಣಿಗೆ ಸೇರಿಸಿ ಹೊಸ ಸಂತತಿಯು ಹುಟ್ಟಲಿ ಎಂದು ಆಜ್ಞಾಪಿಸುತ್ತೀ.

ಪರಾತ್ಪರನನ್ನು ನಿವಾಸಸ್ಥಾನ ಮಾಡಿಕೊಂಡಿದ್ದೀಯಲ್ಲಾ.
10 ಯಾವ ಕೇಡೂ ನಿನಗೆ ಸಂಭವಿಸದು;
ಉಪದ್ರವವು ನಿನ್ನ ಗುಡಾರದ ಸಮೀಪಕ್ಕೂ ಬಾರದು.
11 ನೀನು ಹೋಗುವಲ್ಲೆಲ್ಲಾ ನಿನ್ನನ್ನು ಕಾಯುವದಕ್ಕೆ
ಆತನು ನಿನ್ನ ವಿಷಯವಾಗಿ ತನ್ನ ದೂತರಿಗೆ ಅಪ್ಪಣೆ ಕೊಡುವನು.
12 ನಿನ್ನ ಕಾಲು ಕಲ್ಲಿಗೆ ತಗಲದಂತೆ ಅವರು ನಿನ್ನನ್ನು ಕೈಗಳಲ್ಲಿ ಎತ್ತಿಕೊಳ್ಳುವರು.
13 ಸಿಂಹಸರ್ಪಗಳ ಮೇಲೆ ನಡೆಯುವಿ;
ಪ್ರಾಯದ ಸಿಂಹವನ್ನೂ ಘಟಸರ್ಪವನ್ನೂ ತುಳಿದುಬಿಡುವಿ.

14 ಅವನು ನನ್ನಲ್ಲಿ ಆಸಕ್ತನಾಗಿರುವದರಿಂದ ಅವನನ್ನು ರಕ್ಷಿಸುವೆನು;
ನನ್ನ ನಾಮವನ್ನು ಅರಿತವನಾಗಿರುವದರಿಂದ ಅವನನ್ನು ಉದ್ಧರಿಸುವೆನು.
15 ಅವನು ನನಗೆ ಮೊರೆಯಿಡುವಾಗ ಸದುತ್ತರವನ್ನು ದಯಪಾಲಿಸುವೆನು;
ಇಕ್ಕಟ್ಟಿನಲ್ಲಿ ಹತ್ತಿರವಿದ್ದು ಅವನನ್ನು ತಪ್ಪಿಸಿ ಘನಪಡಿಸುವೆನು;
16 ದೀರ್ಘಾಯುಷ್ಯವನ್ನು ಅನುಗ್ರಹಿಸಿ ಅವನನ್ನು ತೃಪ್ತಿಪಡಿಸುವೆನು;
ನನ್ನ ವಿಶೇಷವಾದ ರಕ್ಷಣೆಯನ್ನು ತೋರಿಸುವೆನು.

ದೇವರ ನೀತಿಸಾಧನೆಗಳನ್ನು ಹೊಗಳುವದು.

ಕೀರ್ತನೆ; ಸಬ್ಬತ್ ದಿನದ ಗೀತ.

**92** ಯೆಹೋವನೇ, ನಿನ್ನನ್ನು ಕೊಂಡಾಡುವದೂ
ಪರಾತ್ಪರನೇ, ನಿನ್ನ ನಾಮವನ್ನು ಸಂಕೀರ್ತಿಸುವದೂ ಯುಕ್ತವಾಗಿದೆ.
2 ವೀಣಾಸ್ವರಮಂಡಲಗಳಿಂದಲೂ ಕಿನ್ನರಿಯ ಘನಸ್ವರದಿಂದಲೂ
3 ಹೊತ್ತಾರೆಯಲ್ಲಿ ನಿನ್ನ ಪ್ರೇಮವನ್ನೂ
ರಾತ್ರಿಯಲ್ಲಿ ನಿನ್ನ ಸತ್ಯತೆಯನ್ನೂ ವರ್ಣಿಸುವದು ಉಚಿತವಾಗಿದೆ.

4 ಯೆಹೋವನೇ, ನಿನ್ನ ಕ್ರಿಯೆಗಳಿಂದ ನನ್ನನ್ನು ಸಂತೋಷಪಡಿಸಿದ್ದೀ,
ನಿನ್ನ ಕೆಲಸಗಳ ದೆಸೆಯಿಂದ ಉತ್ಸಾಹಧ್ವನಿಮಾಡುತ್ತೇನೆ.
5 ಯೆಹೋವನೇ, ನಿನ್ನ ಕೃತ್ಯಗಳು ಎಷ್ಟೋ ಶ್ರೇಷ್ಠವಾಗಿವೆ;
ನಿನ್ನ ಆಲೋಚನೆಗಳು ಅತೋಧ್ಯವಾಗಿವೆ.
6 ಪಶುಪ್ರಾಯನು ಅರಿಯನು; ಹುಚ್ಚನು ತಿಳಿಯನು.
7 ದುಷ್ಟರು ಹುಲ್ಲಿನಂತೆ ಬೆಳೆಯುವದೂ ಕೆಡುಕರು ಹೂವಿನಂತೆ ಮೆರೆಯುವದೂ
ತೀರಾ ಹಾಳಾಗುವದಕ್ಕಾಗಿಯೇ.

8 ಯೆಹೋವನೇ, ನೀನಾದರೋ ಸದಾ ಉನ್ನತಸ್ಥಾ
ದಲ್ಲಿರುತ್ತೀ.
9 ಯೆಹೋವನೇ, ಇಗೋ ನಿನ್ನ ಶತ್ರುಗಳು! ಅವರೆ
ನಾಶವಾಗುತ್ತಿದ್ದಾರೆ.
ಅಧರ್ಮಿಗಳೆಲ್ಲಾ ಚದರಿಹೋಗುವರು.
10 ಆದರೆ ನನ್ನ ಕೊಂಬನ್ನು ಕಾಡುಕೋಣದ ಕೊ
ನಂತೆ ಎತ್ತಿದ್ದೀ;
ಚೈತನ್ಯತೈಲದಿಂದ ನನ್ನನ್ನು ಅಭಿಷೇಕಿಸಿದ್ದೀ.
11 ನನ್ನ ಶತ್ರುಗಳಿಗುಂಟಾದ ದುರ್ಗತಿಯನ್ನು ಕಣ್ಣಾ
ಕಂಡಿದ್ದೇನೆ;
ನನಗೆ ವಿರೋಧವಾಗಿ ಎದ್ದವರ ವಿಪತ್ತನ್ನು ಕಿವಿಯ
ಕೇಳಿದ್ದೇನೆ.

12 ನೀತಿವಂತರು ಖರ್ಜೂರದ ಮರದಂತೆ ಬೆಳೆಯುವರ
ಲೆಬನೋನಿನ ದೇವದಾರುವೃಕ್ಷದ ಹಾಗೆ ವೃದ್ಧಿಯ
ಗುವರು.
13 ಯೆಹೋವನ ಆಲಯದಲ್ಲಿ [ಸಸಿಗಳಂತೆ] ನೆಡಲ್ಪ
ವರು
ನಮ್ಮ ದೇವರ ಅಂಗಳದಲ್ಲಿ ಚೆನ್ನಾಗಿ ಬೆಳೆಯುವ
14 ಮುಪ್ಪಿನಲ್ಲಿಯೂ ಫಲಿಸುವರು; ಪುಷ್ಟಿಯಾಗಿ
ಶೋಭಿಸುವರು.
15 ಹೀಗೆ ಅವರು ಯೆಹೋವನ ಸತ್ಯಸಂಧತೆಗೆ ದೃಷ್ಟಾ
ರಾಗಿರುವರು.
ಆತನೇ ನನ್ನ ಬಂಡೆಯು; ಆತನು ನಿರ್ವಂಚಕನು.

ಯೆಹೋವನೇ ನಿತ್ಯನಾದ ರಾಜಾಧಿರಾಜನು.

(ವಿಮೋಚನ 15; ಯೆಶಾಯ 52. 7;
ಕೀರ್ತನೆ 96; 97; 99.)

**93** ಯೆಹೋವನು ರಾಜ್ಯಾಧಿಕಾರವನ್ನು ವಹಿಸಿದ್ದಾ
ಮಹಿಮಾವಸ್ತ್ರವನ್ನು ಧರಿಸಿದ್ದಾನೆ, ಧರಿಸಿದ್ದಾನೆ
ಶೌರ್ಯವನ್ನು ನಡುಕಟ್ಟಾಗಿ ಬಿಗಿದಿದ್ದಾನೆ;
ಭೂಲೋಕವು ಸ್ಥಿರವಾಗಿರುವದು, ಕದಲುವದಿಲ್ಲ.
2 ಪೂರ್ವದಿಂದಲೂ ನಿನ್ನ ಸಿಂಹಾಸನವು ಸ್ಥಿರವಾಗಿದೆ;
ಅನಾದಿಯಿಂದ ನೀನು ಇದ್ದೀ.

3 ಯೆಹೋವನೇ, ನದಿಗಳು ಮೊರೆದವು, ನದಿ
ಭೋರಿಟ್ಟವು;
ನದಿಗಳು ಘೋಷಿಸುತ್ತವೆ.
4 ಜಲರಾಶಿಗಳ ಘೋಷಕ್ಕಿಂತಲೂ ಮಹಾತರಂ
ಗರ್ಜನೆಗಿಂತಲೂ
ಉನ್ನತದಲ್ಲಿರುವ ಯೆಹೋವನ ಮಹಿಮೆ
ಗಾಂಭೀರ್ಯವುಳ್ಳದ್ದು.

5 ಯೆಹೋವನೇ, ನಿನ್ನ ಆಜ್ಞೆಗಳು ಬಹುಖಂಡಿ
ಗಿವೆ;
ಸದಾ ನಿನ್ನ ಮನೆಗೆ ಯೋಗ್ಯವಾದದ್ದು
ಶುದ್ಧತ್ವವೇ.

ದೇವರ ಶಿಕ್ಷೆರಕ್ಷೆಗಳಿಗೆ ಒಳಗಾದವನು ಧನ್ಯನು.

**94** ಯೆಹೋವನೇ, ಮುಯ್ಯಿತೀರಿಸುವ ದೇವರೇ,
ಮುಯ್ಯಿತೀರಿಸುವ ದೇವರೇ, ಪ್ರಕಾಶಿಸು.
2 ಲೋಕದ ನ್ಯಾಯಾಧಿಪತಿಯೇ, ಏಳು;
ಗರ್ವಿಷ್ಠರಿಗೆ ಪ್ರತಿಫಲವನ್ನು ಕೊಡು.
3 ಯೆಹೋವನೇ, ದುಷ್ಟರು ಎಲ್ಲಿಯ ವರೆಗೆ,
ದುಷ್ಟರು ಎಲ್ಲಿಯ ವರೆಗೆ ಹಿಗ್ಗುತ್ತಿರಬೇಕು?

4 ಕೆಡುಕರೆಲ್ಲರು ಉಬ್ಬಿಕೊಂಡು
ಅಹಂಕಾರವನ್ನು ಕಕ್ಕುತ್ತಾರೆ.
5 ಯೆಹೋವನೇ, ನಿನ್ನ ಪ್ರಜೆಯನ್ನು ಜಜ್ಜಿಹಾಕುತ್ತಾರೆ;
ನಿನ್ನ ಸ್ವಾಸ್ತ್ಯವನ್ನು ಕುಗ್ಗಿಸಿಬಿಡುತ್ತಾರೆ;
೬ ವಿಧವೆಯನ್ನೂ ಪರದೇಶಿಯನ್ನೂ ಕೊಲ್ಲುತ್ತಾರೆ;
ಅನಾಥರನ್ನು ಹತಮಾಡುತ್ತಾರೆ.
7 ಯಾಹು ನೋಡುವದೇ ಇಲ್ಲ;
ಯಾಕೋಬ್ಯರ ದೇವರು ಲಕ್ಷಿಸುವದೇ ಇಲ್ಲ ಅನ್ನು
ತ್ತಾರೆ.

8 ಪಶುಪ್ರಾಯರಾದ ಪ್ರಜೆಗಳಿರಾ, ಲಕ್ಷಿಸಿರಿ;
ಹುಚ್ಚರೇ, ನಿಮಗೆ ಬುದ್ಧಿ ಬರುವದು ಯಾವಾಗ?
9 ಕಿವಿಮಾಡಿದವನು ಕೇಳನೋ?
ಕಣ್ಣು ಕೊಟ್ಟವನು ನೋಡನೋ?
10 ಜನಾಂಗಗಳನ್ನು ಶಿಕ್ಷಿಸುವವನೂ ಮನುಷ್ಯರಿಗೆ ಬುದ್ಧಿ
ಕಲಿಸುವವನೂ ಗದರಿಸನೋ?
11 ಮನುಷ್ಯನ ಯೋಚನೆಗಳು ಉಸಿರೇ ಎಂದು ಯೆಹೋ
ವನು ತಿಳುಕೊಳ್ಳುತ್ತಾನೆ.

12 ಯಾಹುವೇ, ನೀನು ಯಾವನನ್ನು ಶಿಕ್ಷಿಸಿ
ಧರ್ಮೋಪದೇಶಮಾಡುತ್ತೀಯೋ ಅವನೇ ಧನ್ಯನು.
13 ಅಂಥವನನ್ನು, ದುಷ್ಟನಿಗೋಸ್ಕರ ಗುಂಡಿಯು ಅಗೆ
ಯಲ್ಪಡುವ ತನಕ,
ಆಪತ್ತಿನಲ್ಲಿಯೂ ಸಮಾಧಾನಪಡಿಸುತ್ತೀ.
14 ಯೆಹೋವನು ತನ್ನ ಜನರನ್ನು ಬೇಡವೆಂದು ತಳ್ಳಿ
ಬಿಡುವದಿಲ್ಲ;
ತನ್ನ ಸ್ವಾಸ್ತ್ಯವನ್ನು ಕೈಬಿಡುವದಿಲ್ಲ.
15 ನ್ಯಾಯತೀರ್ಪು ನೀತಿಗೆ ತಿರುಗಿಕೊಳ್ಳುವದು;
ಯಥಾರ್ಥಚಿತ್ತರೆಲ್ಲರೂ ಅದನ್ನೇ ಅನುಸರಿಸುವರು.

16 ದುಷ್ಟರಿಗೆ ವಿರೋಧವಾಗಿ ನನಗೋಸ್ಕರ ಏಳುವವರು
ಯಾರು?
ಕೆಡುಕರಿಗೆ ವಿರೋಧವಾಗಿ ನನಗೋಸ್ಕರ ಎದ್ದು ನಿಲ್ಲು
ವವರು ಯಾರು?
17 ಯೆಹೋವನ ಸಹಾಯವಿಲ್ಲದಿದ್ದರೆ
ಇಷ್ಟರಲ್ಲೇ ಸಮಾಧಿಸೇರುತ್ತಿದ್ದೆನು.
18 ಯೆಹೋವನೇ, ನನ್ನ ಕಾಲು ಜಾರಿತೆಂದು ಅಂದಾ
ಗಲೇ
ನಿನ್ನ ಕೃಪೆಯು ನನಗೆ ಆಧಾರವಾಯಿತು.
19 ನನ್ನಲ್ಲಿ ಅನೇಕ ಚಿಂತೆಗಳಿರುವಾಗ
ನಿನ್ನ ಸಂತೈಸುವಿಕೆಯಿಂದಲೇ ನನ್ನ ಪ್ರಾಣಕ್ಕೆ ಸಂತೋ
ಷವುಂಟಾಗುತ್ತದೆ.

20 ಧರ್ಮಶಾಸ್ತ್ರದ ನೆವನದಿಂದ ಕೇಡುಕಲ್ಪಿಸುವ
ನಾಶಕರನ್ಯಾಯಾಸನಕ್ಕೂ ನಿನಗೂ ಸಂಬಂಧವೇನು?
21 ಜೀವತೆಗೆಯಬೇಕೆಂದು ನೀತಿವಂತರ ಮೇಲೆ ಬೀಳು
ತ್ತಾರೆ;
ನಿರಪರಾಧಿಗಳಿಗೆ ಮರಣಶಿಕ್ಷೆ ವಿಧಿಸುತ್ತಾರೆ.
22 ಆದರೆ ಯೆಹೋವನು ನನ್ನ ದುರ್ಗವೂ
ನನ್ನ ದೇವರು ಆಶ್ರಯಗಿರಿಯೂ ಆಗಿದ್ದಾನೆ.
23 ಅವರ ಕೆಟ್ಟತನವನ್ನು ಅವರಿಗೇ ತಿರುಗಿಸುವನು;
ಅವರ ದುಷ್ಟತನದಿಂದಲೇ ಅವರನ್ನು ನಿರ್ಮೂಲ
ಮಾಡುವನು.
ನಮ್ಮ ಯೆಹೋವದೇವರು ಅವರನ್ನು ಸಂಹರಿಸಿಬಿಡು
ವನು.

ದೇವರನ್ನು ವಿಶ್ವಾಸಪೂರ್ವಕವಾಗಿ ಆರಾಧಿಸುವದು.
(ಕೀರ್ತನೆ 81; 96—100.)

**95** ಬನ್ನಿರಿ, ಯೆಹೋವನಿಗೆ ಉತ್ಸಾಹಧ್ವನಿ ಗೈಯುವಾ;
ನಮ್ಮ ರಕ್ಷಕನಾದ ಶರಣನಿಗೆ ಜಯಘೋಷ
ಮಾಡೋಣ.
2 ಕೃತಜ್ಞತಾಸ್ತುತಿಯೊಡನೆ ಆತನ ಸನ್ನಿಧಿಗೆ ಸೇರೋಣ;
ಕೀರ್ತನೆಗಳಿಂದ ಆತನಿಗೆ ಜಯಘೋಷಮಾಡೋಣ.

3 ಯೆಹೋವನು ಮಹಾದೇವರೂ
ಎಲ್ಲಾ ದೇವರುಗಳಲ್ಲಿ ಮಹಾರಾಜನೂ ಆಗಿದ್ದಾನೆ.
4 ಭೂಮಿಯ ಅಗಾಧವು ಆತನ ಕೈಯಲ್ಲಿರುತ್ತದೆ;
ಪರ್ವತಶಿಖರಗಳು ಆತನವೇ.
5 ಆತನೇ ಸಮುದ್ರವನ್ನು ನಿರ್ಮಿಸಿದವನು; ಅದು ಆತ
ನದೇ.
ಒಣನೆಲವು ಆತನ ಕೈಕೆಲಸವೇ.

6 ಬನ್ನಿರಿ; ನಮ್ಮ ನಿರ್ಮಾಣಿಕನಾದ ಯೆಹೋವನಿಗೆ
ಸಾಷ್ಟಾಂಗವೆರಗಿ ಆರಾಧಿಸೋಣ.
7 ಆತನು ನಮ್ಮ ದೇವರು;
ನಾವೋ ಆತನು ಪಾಲಿಸುವ ಪ್ರಜೆಯೂ
ಆತನ ಕೈಕೆಳಗಿರುವ ಹಿಂಡೂ ಆಗಿದ್ದೇವೆ.

ನೀವು ಈ ಹೊತ್ತು ಆತನ ಶಬ್ದಕ್ಕೆ ಕಿವಿಗೊಟ್ಟರೆ
ಎಷ್ಟೋ ಒಳ್ಳೇದು—
8 ನಿಮ್ಮ ಹಿರಿಯರು ಅರಣ್ಯದಲ್ಲಿರುವ ಮೆರೀಬದಲ್ಲಿ
ಮಸ್ಸಾದಿನದಲ್ಲಿ ಮಾಡಿದಂತೆ
ನೀವು ನಿಮ್ಮ ಹೃದಯವನ್ನು ಕಠಿನಮಾಡಿಕೊಳ್ಳ
ಬೇಡಿರಿ.
9 ಅಲ್ಲಿ ಅವರು ನನ್ನನ್ನು ಪರೀಕ್ಷಿಸಿದರು;
ಅವರು ನನ್ನ ಮಹತ್ಕಾರ್ಯಗಳನ್ನು ನೋಡಿದರೂ
ನನ್ನನ್ನು ಶೋಧಿಸಿದರು.
10 ನಾನು ನಾಲ್ವತ್ತು ವರುಷ ಆ ಸಂತತಿಯವರ
ವಿಷಯ ಬೇಸರಗೊಂಡೆನು;

ಈ ಜನರು ಹೃದಯದಲ್ಲಿ ತಪ್ಪಿಹೋಗುವವರು,
ನನ್ನ ಮಾರ್ಗವನ್ನು ತಿಳಿಯದವರು, ಎಂದು
ಹೇಳಿದೆನು.
11 ಆದದರಿಂದ ಇವರು ನನ್ನ ವಿಶ್ರಾಂತಿಯಲ್ಲಿ ಸೇರು
ವದೇ ಇಲ್ಲವೆಂದು
ಕೋಪಗೊಂಡು ಪ್ರಮಾಣಮಾಡಿದೆನು.

ಜಗತ್ಪ್ರಭುವಾದ ಯೆಹೋವನ ಆಗಮನ.
(೧ ಪೂರ್ವಕಾಲವೃತ್ತಾಂತ 16. 23–33.)

96 ಯೆಹೋವನಿಗೆ ಹೊಸ ಕೀರ್ತನೆಯನ್ನು ಹಾ
ಡಿರಿ;
ಎಲ್ಲಾ ಭೂನಿವಾಸಿಗಳೇ, ಯೆಹೋವನಿಗೆ ಹಾಡಿರಿ.
2 ಯೆಹೋವನಿಗೆ ಹಾಡಿರಿ; ಆತನ ನಾಮವನ್ನು
ಕೊಂಡಾಡಿರಿ.
ಆತನ ರಕ್ಷಣೆಯನ್ನು ಪ್ರತಿನಿತ್ಯವೂ ಸಾರಿಹೇಳಿರಿ.
3 ಜನಾಂಗಗಳಲ್ಲಿ ಆತನ ಘನತೆಯನ್ನೂ
ಎಲ್ಲಾ ಜನರಲ್ಲಿ ಆತನ ಅದ್ಭುತಕೃತ್ಯಗಳನ್ನೂ ಪ್ರಸಿದ್ಧ
ಪಡಿಸಿರಿ.

4 ಯೆಹೋವನು ದೊಡ್ಡವನೂ ಬಹಳವಾಗಿ ಸ್ತುತ್ಯನೂ
ಆಗಿದ್ದಾನೆ;
ಎಲ್ಲಾ ದೇವರುಗಳಲ್ಲಿ ಆತನೇ ಭಯಂಕರನು.
5 ಜನಾಂಗಗಳ ದೇವತೆಗಳೆಲ್ಲಾ ಬೊಂಬೆಗಳೇ;
ಯೆಹೋವನಾದರೋ ಗಗನಮಂಡಲವನ್ನು ನಿರ್ಮಿಸಿ
ದವನು.
6 ಆತನ ಸಾನ್ನಿಧ್ಯದಲ್ಲಿ ಮಾನಮಹಿಮೆಗಳೂ
ಆತನ ಪವಿತ್ರಾಲಯದಲ್ಲಿ ಬಲಸೌಂದರ್ಯಗಳೂ ಇರು
ತ್ತವೆ.

7 ಭೂಜನಾಂಗಗಳೇ, ಬಲಪ್ರಭಾವಗಳು ಯೆಹೋವನವೇ
ಯೆಹೋವನವೇ ಎಂದು ಹೇಳಿ
ಆತನನ್ನು ಘನಪಡಿಸಿರಿ.
8 ಯೆಹೋವನ ನಾಮಕ್ಕೆ ಯೋಗ್ಯವಾದ ಘನವನ್ನು
ಸಲ್ಲಿಸಿರಿ;
ಕಾಣಿಕೆಯೊಡನೆ ಆತನ ಅಂಗಳಗಳಿಗೆ ಬನ್ನಿರಿ.
9 ಪರಿಶುದ್ಧತ್ವವೆಂಬ ಭೂಷಣದೊಡನೆ ಯೆಹೋವನಿಗೆ
ನಮಸ್ಕರಿಸಿರಿ;
ಎಲ್ಲಾ ಭೂನಿವಾಸಿಗಳೇ, ಆತನ ಮುಂದೆ ನಡುಗಿರಿ.

10 ಯೆಹೋವನು ರಾಜ್ಯಾಧಿಕಾರವನ್ನು ವಹಿಸಿದ್ದಾನೆ;
ಭೂಮಿಯು ಸ್ಥಿರವಾಗಿರುವದು, ಕದಲುವದಿಲ್ಲ;
ಸರ್ವರಿಗೂ ನ್ಯಾಯಾನುಸಾರವಾಗಿ ತೀರ್ಪುಕೊಡುವ
ನೆಂದು ಜನಾಂಗಗಳಲ್ಲಿ ಪ್ರಸಿದ್ಧಪಡಿಸಿರಿ.
11 ಯೆಹೋವನ ಮುಂದೆ ಗಗನಮಂಡಲವು ಹರ್ಷಿಸಲಿ;
ಭೂಲೋಕವು ಸಂತೋಷಿಸಲಿ;
ಸಮುದ್ರವೂ ಅದರಲ್ಲಿರುವದೆಲ್ಲವೂ ಘೋಷಿಸಲಿ.
12 ಹೊಲಗಳೂ ಅವುಗಳ ಪೈರುಗಳೂ ಉಲ್ಲಾಸಿಸಲಿ;
ಮತ್ತು ವನದ ಎಲ್ಲಾ ಮರಗಳು ಉತ್ಸಾಹಧ್ವ
ಮಾಡಲಿ.

13 ಆತನು ಬರುತ್ತಾನೆ;
ಭೂನಿವಾಸಿಗಳಿಗೆ ನ್ಯಾಯತೀರಿಸಲಿಕ್ಕೆ ಬರುತ್ತಾ
ಆತನು ಲೋಕಕ್ಕೆ ನೀತಿಗನುಸಾರವಾಗಿಯೂ
ಜನಾಂಗಗಳಿಗೆ ಸತ್ಯತೆಯಿಂದಲೂ ನ್ಯಾಯತೀರಿಸ
ವನು.

ಧರ್ಮಸ್ಥಾಪಕನಾದ ಯೆಹೋವರಾಜನನ್ನು ಸ್ತುತಿಸುವದು.

97 ಯೆಹೋವನು ರಾಜ್ಯಾಧಿಕಾರವನ್ನು ವಹಿಸಿದ್ದಾ
ಭೂಲೋಕವು ಸಂತೋಷಿಸಲಿ;
ಸಮುದ್ರದ ತೀರಪ್ರದೇಶಗಳೆಲ್ಲಾ ಹರ್ಷಿಸಲಿ.
2 ಮುಗಿಲೂ ಕಾರ್ಗತ್ತಲೆಯೂ ಆತನ ಸುತ್ತಲೂ ಇ
ತ್ತವೆ;
ನೀತಿನ್ಯಾಯಗಳು ಆತನ ಸಿಂಹಾಸನದ ಅಸ್ತಿವಾರ.
3 ಬೆಂಕಿಯು ಆತನ ಮುಂಗಡೆಯಿಂದ ಹೋಗಿ
ಸುತ್ತಲೂ ಆತನ ವೈರಿಗಳನ್ನು ದಹಿಸಿಬಿಡುತ್ತದೆ.

4 ಆತನ ಮಿಂಚುಗಳು ಲೋಕವನ್ನು ಬೆಳಗಿಸಿದವು;
ಭೂಮಿಯು ಅದನ್ನು ಕಂಡು ನಡುಗಿತು.
5 ಸಾರ್ವಭೌಮನಾದ ಯೆಹೋವನ ಎದುರಿನಲ್ಲಿ
ಪರ್ವತಗಳು ಮೇಣದಂತೆ ಕರಗಿಹೋದವು.
6 ಗಗನಮಂಡಲವು ಆತನ ನೀತಿಯನ್ನು ಪ್ರಸಿದ್ಧಪ
ಸಿತು;
ಎಲ್ಲಾ ಜನರು ಆತನ ಮಹಿಮೆಯನ್ನು ಕಂಡರು.

7 ವಿಗ್ರಹಗಳಲ್ಲಿ ಹಿಗ್ಗುವ ಮೂರ್ತಿಪೂಜಕರೆಲ್ಲಾ ತ
ಬೊಗ್ಗಿಸಲಿ;
ದೇವರುಗಳಿರಾ, ನೀವೆಲ್ಲರೂ ಆತನಿಗೆ ಅಡ್ಡಬೀಳಿರಿ.
8 ಯೆಹೋವನೇ, ನೀನು ನ್ಯಾಯಸ್ಥಾಪಿಸಿದ ವಾ
ಯನ್ನು ಕೇಳಿ
ಚೀಯೋನ್ ಪಟ್ಟಣವು ಹರ್ಷಿಸಿತು;
ಯೆಹೂದ ಪ್ರಾಂತದ ಊರುಗಳು ಸಂತೋಷಿಸಿದ
9 ಯೆಹೋವನೇ, ನೀನು ಭೂಲೋಕದ ಸರ್ವಾ
ಕಾರಿ;
ಎಲ್ಲಾ ದೇವರುಗಳಲ್ಲಿ ಮಹೋನ್ನತನು ನೀನೇ.

10 ಯೆಹೋವನನ್ನು ಪ್ರೀತಿಸುವವರೇ, ಕೆಟ್ಟತನವನ್ನು ಹ
ಮಾಡಿರಿ.
ಆತನು ತನ್ನ ಭಕ್ತರ ಪ್ರಾಣಗಳನ್ನು ಕಾಯುವ
ನಾಗಿ
ದುಷ್ಟರ ಕೈಯೊಳಗಿಂದ ಅವರನ್ನು ಬಿಡಿಸುವನು.
11 ನೀತಿವಂತರಿಗೋಸ್ಕರ ಪ್ರಕಾಶವೂ
ಯಥಾರ್ಥಹೃದಯವುಳ್ಳವರಿಗೆ ಸಂತೋಷವೂ ಬಿತ್ತ
ಟ್ಟಿವೆ.
12 ನೀತಿವಂತರೇ, ಯೆಹೋವನಲ್ಲಿ ಆನಂದಿಸಿರಿ;
ಆತನ ಪರಿಶುದ್ಧನಾಮವನ್ನು ಕೊಂಡಾಡಿರಿ.

ಯೆಹೋವರಾಜನ ರಕ್ಷಣೆಯನ್ನು ಕೊಂಡಾಡುವದು.
(ಕೀರ್ತನೆ 67.)
ಕೀರ್ತನೆ.

**98** ಯೆಹೋವನಿಗೆ ಹೊಸ ಕೀರ್ತನೆಯನ್ನು ಹಾಡಿರಿ:
ಆತನು ಅದ್ಭುತಕೃತ್ಯಗಳನ್ನು ನಡಿಸಿದ್ದಾನೆ.
ಆತನ ಬಲಗೈಯೂ ಪರಿಶುದ್ಧಬಾಹುವೂ ಜಯವನ್ನು ಉಂಟುಮಾಡಿವೆ.
2 ಯೆಹೋವನು ತನ್ನ ರಕ್ಷಣೆಯನ್ನು ಪ್ರಕಟಿಸಿದ್ದಾನೆ;
ಜನಾಂಗಗಳೆದುರಿಗೆ ತನ್ನ ನೀತಿಯನ್ನು ತೋರ್ಪಡಿಸಿದ್ದಾನೆ.
3 ಆತನು ಇಸ್ರಾಯೇಲನ ಮನೆತನದವರ ಕಡೆಗಿದ್ದ
ತನ್ನ ಪ್ರೀತಿಸತ್ಯತೆಗಳನ್ನು ನೆನಪುಮಾಡಿಕೊಂಡಿದ್ದಾನೆ.
ಭೂಲೋಕದ ಎಲ್ಲಾ ಕಡೆಯವರೂ ನಮ್ಮ ದೇವರ ರಕ್ಷಾಕಾರ್ಯವನ್ನು ನೋಡಿದ್ದಾರೆ.

4 ಸಮಸ್ತಭೂನಿವಾಸಿಗಳೇ, ಯೆಹೋವನಿಗೆ ಜಯಘೋಷಮಾಡಿರಿ;
ಹರ್ಷಿಸಿರಿ, ಉತ್ಸಾಹಧ್ವನಿಮಾಡಿ ಹಾಡಿರಿ.
5 ಕಿನ್ನರಿಯೊಡನೆ ಯೆಹೋವನನ್ನು ಸ್ತುತಿಸಿರಿ;
ಕಿನ್ನರಿಯನ್ನು ನುಡಿಸುತ್ತಾ ಭಜಿಸಿರಿ.
6 ತುತೂರಿಗಳನ್ನೂ ಕೊಂಬನ್ನೂ ಊದುತ್ತಾ
ಯೆಹೋವರಾಜನಿಗೆ ಜಯಘೋಷಮಾಡಿರಿ.

7 ಯೆಹೋವನ ಮುಂದೆ ಸಮುದ್ರವೂ ಅದರಲ್ಲಿರುವದೆಲ್ಲವೂ
ಭೂಮಿಯೂ ಅದರ ನಿವಾಸಿಗಳೂ ಘೋಷಿಸಲಿ.
8 ನದಿಗಳು ಚಪ್ಪಾಳೆಹೊಡೆಯಲಿ;
ಪರ್ವತಗಳೆಲ್ಲಾ ಉತ್ಸಾಹಧ್ವನಿಮಾಡಲಿ.
9 ಆತನು ಭೂನಿವಾಸಿಗಳಿಗೆ ನ್ಯಾಯತೀರಿಸಲಿಕ್ಕೆ ಬರುತ್ತಾನೆ;
ಆತನು ಲೋಕಕ್ಕೆ ನೀತಿಗನುಸಾರವಾಗಿಯೂ
ಜನಾಂಗಗಳಿಗೆ ಯಥಾರ್ಥವಾಗಿಯೂ ತೀರ್ಪುಕೊಡುವನು.

ಯೆಹೋವರಾಜನ ಪವಿತ್ರತೆಯನ್ನು ಕೊಂಡಾಡುವದು.
(ಯೆಶಾಯ 6.)

**99** ಯೆಹೋವನು ರಾಜ್ಯಾಧಿಕಾರವನ್ನು ವಹಿಸಿದ್ದಾನೆ;
ಜನಾಂಗಗಳು ನಡುಗಲಿ.
ಕೆರೂಬಿಯರ ಮಧ್ಯದಲ್ಲಿ ಆಸೀನನಾಗಿರುವಾತನು ಆಳುತ್ತಾನೆ; ಭೂಮಿಯು ಕಂಪಿಸಲಿ.
2 ಚೀಯೋನಿನಲ್ಲಿರುವ ಯೆಹೋವನು ದೊಡ್ಡವನು;
ಆತನು ಎಲ್ಲಾ ಜನಾಂಗಗಳಲ್ಲಿ ಮಹೋನ್ನತನು.
3 ಅವರು [1]ಯೆಹೋವನ ಪೂಜ್ಯವಾದ ಮಹಾನಾಮವನ್ನು ಕೊಂಡಾಡಲಿ;
ಆತನು ಪರಿಶುದ್ಧನು.
4 ಅರಸನ ಬಲವು ನೀತಿಯಲ್ಲಿ ಆಸಕ್ತವಾಗಿದೆ;
ಯಥಾರ್ಥವಾದದ್ದನ್ನು ಸ್ಥಾಪಿಸಿದವನೂ
ಯಾಕೋಬ್ಯರಲ್ಲಿ ನ್ಯಾಯನೀತಿಗಳನ್ನು ಸಿದ್ಧಿಗೆ ತಂದವನೂ ನೀನೇ.
5 ನಮ್ಮ ಯೆಹೋವದೇವರನ್ನು ಘನಪಡಿಸಿರಿ;
ಆತನ ಪಾದಪೀಠದ ಮುಂದೆ ಅಡ್ಡಬೀಳಿರಿ.
ಆತನು ಪರಿಶುದ್ಧನು.

6 ಆತನ ಯಾಜಕರಲ್ಲಿ ಮೋಶೆ ಆರೋನರೂ
ಆತನ ಹೆಸರಿನಲ್ಲಿ ಪ್ರಾರ್ಥಿಸುವವರೊಳಗೆ ಸಮುವೇಲನೂ
ಪ್ರಾರ್ಥಿಸಿಕೊಂಡಾಗೆಲ್ಲಾ ಯೆಹೋವನು ಅವರಿಗೆ ಸದುತ್ತರವನ್ನು ದಯಪಾಲಿಸುತ್ತಿದ್ದನು.
7 ಆತನು ಮೇಘಸ್ತಂಭದಲ್ಲಿದ್ದು ಅವರೊಡನೆ ಮಾತಾಡುತ್ತಿದ್ದನು;
ಅವರು ಆತನ ವಿಧಿನಿಯಮಗಳನ್ನು ಕೈಕೊಂಡವರು.
8 ನಮ್ಮ ಯೆಹೋವದೇವರೇ, ಅವರಿಗೆ ಉತ್ತರಕೊಟ್ಟವನು ನೀನೇ.
ನೀನು ದುಷ್ಕೃತ್ಯಗಳಿಗಾಗಿ ಅವರನ್ನು ದಂಡಿಸುತ್ತಿದ್ದರೂ
ಕ್ಷಮಿಸುವ ದೇವರಾಗಿದ್ದಿ.

9 ನಮ್ಮ ಯೆಹೋವದೇವರನ್ನು ಘನಪಡಿಸಿರಿ;
ಆತನ ಪರಿಶುದ್ಧಪರ್ವತದ ಕಡೆಗೆ ಅಡ್ಡಬೀಳಿರಿ.
ನಮ್ಮ ಯೆಹೋವದೇವರು ಪರಿಶುದ್ಧನು.

ಲೋಕವೆಲ್ಲಾ ಇಸ್ರಾಯೇಲ್ಯರ ದೇವರನ್ನು ಆರಾಧಿಸಬೇಕೆಂಬ ಪ್ರಬೋಧನೆ. (ಕೀರ್ತನೆ 95.)
ಕೃತಜ್ಞತಾಯಜ್ಞಕೀರ್ತನೆ.

**100** ಸಮಸ್ತಭೂನಿವಾಸಿಗಳೇ, ಯೆಹೋವನಿಗೆ ಜಯಘೋಷಮಾಡಿರಿ.
2 ಯೆಹೋವನನ್ನು ಸಂತೋಷದಿಂದ ಸೇವಿಸಿರಿ;
ಉತ್ಸಾಹಧ್ವನಿಮಾಡುತ್ತಾ ಆತನ ಸನ್ನಿಧಿಗೆ ಬನ್ನಿರಿ.
3 ಯೆಹೋವನೇ ದೇವರೆಂದು ತಿಳಿದುಕೊಳ್ಳಿರಿ;
ನಮ್ಮನ್ನು ಉಂಟುಮಾಡಿದವನು ಆತನೇ; ನಾವು ಆತನವರು.
ಆತನ ಪ್ರಜೆಯೂ ಆತನು ಪಾಲಿಸುವ ಹಿಂಡೂ ಆಗಿದ್ದೇವೆ.
4 ಕೃತಜ್ಞತಾಸ್ತುತಿಯೊಡನೆ ಆತನ ಮಂದಿರದ್ವಾರಗಳಿಗೂ
ಕೀರ್ತನೆಯೊಡನೆ ಆತನ ಅಂಗಳಗಳಿಗೂ ಬನ್ನಿರಿ;
ಆತನ ಉಪಕಾರ ಸ್ಮರಿಸಿರಿ; ಆತನ ನಾಮವನ್ನು ಕೊಂಡಾಡಿರಿ.
5 ಯೆಹೋವನು ಒಳ್ಳೆಯವನು; ಆತನ ಕೃಪೆಯು ಯುಗಯುಗಕ್ಕೂ
ಆತನ ಸತ್ಯತೆಯು ತಲತಲಾಂತರಕ್ಕೂ ಇರುವವು.

[1] ಮೂಲ: ನಿನ್ನ.

ರಾಜಶ್ರೇಷ್ಠನ ಪ್ರತಿಜ್ಞೆ.
(ಕೀರ್ತನೆ 15; 24.)
ದಾವೀದನ ಕೀರ್ತನೆ.

**101** ಪ್ರೀತಿನೀತಿಗಳನ್ನು ಕುರಿತು ಹಾಡುವೆನು;
ಯೆಹೋವನೇ, ನಿನ್ನನ್ನು ಕೊಂಡಾಡುವೆನು.
2 ಸನ್ಮಾರ್ಗವನ್ನು ಲಕ್ಷಿಸಿ ನಡೆಯುವೆನು;
ನನಗೆ ಯಾವಾಗ ದರ್ಶನಕೊಡುವಿ?
ಮನೆಯೊಳಗೂ ಯಥಾರ್ಥಹೃದಯದಿಂದಲೇ ಪ್ರವರ್ತಿಸುವೆನು.
3 ಯಾವ ನೀಚವಾದ ಕಾರ್ಯವನ್ನೂ ದೃಷ್ಟಿಸುವದಿಲ್ಲ;
ದುರಾಚಾರವನ್ನು ಹಗೆಮಾಡುತ್ತೇನೆ, ಅದರ ಗೊಡವೆಯೇ ನನಗೆ ಬೇಡ.
4 ಮೂರ್ಖತನವು ನನ್ನನ್ನು ಬಿಟ್ಟುಹೋಗಲಿ;
ಕೆಟ್ಟತನವನ್ನು ಅರಿಯದಿರುವೆನು.

5 ಗುಪ್ತದಲ್ಲಿ ನೆರೆಯವನ ಮೇಲೆ ಚಾಡಿಹೇಳುವವನನ್ನು ಸಂಹರಿಸುವೆನು;
ಸೊಕ್ಕಿನ ಕಣ್ಣೂ ಉಬ್ಬಿದ ಮನಸ್ಸೂ ಉಳ್ಳವನನ್ನು ಸಹಿಸುವದಿಲ್ಲ.
6 ದೇಶದಲ್ಲಿರುವ ನಂಬಿಗಸ್ತರನ್ನು ಆರಿಸಿಕೊಳ್ಳುವೆನು;
ಅವರೇ ನನ್ನ ಸನ್ನಿಧಿಯಲ್ಲಿ ವಾಸಿಸಬೇಕು.
ಸನ್ಮಾರ್ಗಿಯೇ ನನ್ನ ಸೇವೆಯಲ್ಲಿರಬೇಕು.
7 ಮೋಸಗಾರನು ನನ್ನ ಮನೆಯಲ್ಲಿರಲೇ ಬಾರದು;
ಸುಳ್ಳುಗಾರನು ನನ್ನ ಮುಂದೆ ನಿಲ್ಲಕೂಡದು.
8 ಯೆಹೋವನ ಪಟ್ಟಣದಲ್ಲಿ ಕೆಡುಕರೇ ಉಳಿಯದಂತೆ
ಪ್ರತಿದಿನವೂ ಬೆಳಗಿನಲ್ಲಿ ದೇಶದ ದುಷ್ಟರನ್ನು ಸಂಹರಿಸುತ್ತಾ ಬರುವೆನು.

ದುಃಖಿತನಾಗಿ ಯೆಹೋವನ ಮುಂದೆ ತನ್ನ ಚಿಂತೆಗಳನ್ನು
ಹೇಳಿಕೊಳ್ಳುವ ದೀನನ ಪ್ರಾರ್ಥನೆ.

**102** ಯೆಹೋವನೇ, ನನ್ನ ಪ್ರಾರ್ಥನೆಯನ್ನು ಕೇಳು;
ನನ್ನ ಕೂಗು ನಿನಗೆ ಮುಟ್ಟಲಿ.
2 ನನ್ನ ಕಷ್ಟದಲ್ಲಿ ವಿಮುಖನಾಗಬೇಡ;
ನನ್ನ ಮೊರೆಗೆ ಕಿವಿಗೊಡು;
ನಾನು ಕೂಗಿಕೊಳ್ಳುವ ದಿನದಲ್ಲೇ ಬೇಗನೆ ಸದುತ್ತರವನ್ನು ದಯಪಾಲಿಸು.
3 ನನ್ನ ಜೀವಮಾನವು ಹೊಗೆಯಂತೆ ಮಾಯವಾಗುತ್ತದೆ;
ನನ್ನ ಎಲುಬುಗಳು ಕೊಳ್ಳಿಯಂತೆ ಸುಟ್ಟುಹೋಗುತ್ತವೆ.
4 ನನ್ನ ಹೃದಯವು ಬಿಸಿಲಿನಿಂದ ಬಾಡಿಹೋದ ಹುಲ್ಲಿನಂತಿದೆ;
ಊಟವನ್ನು ಮರೆತೆನು.
5 ನಿಟ್ಟುಸುರಿನಿಂದ
ನನ್ನಲ್ಲಿ ಎಲುಬು ತೊಗಲು ಮಾತ್ರ ಉಳಿದಿರುತ್ತವೆ.
6 ಅಡವಿಯ ಬಕದಂತಿದ್ದೇನೆ;
ಹಾಳೂರಿನ ಗೂಗೆಯಂತಿದ್ದೇನೆ.
7 ನಿದ್ರೆಯಿಲ್ಲದವನಾಗಿ
ಮನೆಮಾಳಿಗೆ ಮೇಲಿರುವ ಒಂಟಿಯಾದ ಪಕ್ಷಿಯ[...]ರುತ್ತೇನೆ.
8 ವೈರಿಗಳು ಹಗಲೆಲ್ಲಾ ನನ್ನನ್ನು ನಿಂದಿಸುತ್ತಾರೆ;
ನನ್ನ ಮೇಲೆ ಕೋಪಾವೇಶವುಳ್ಳವರು ಯಾರನ್ನಾದರ[...] ಶಪಿಸುವಾಗ
ನನ್ನನ್ನು ದೃಷ್ಟಾಂತಮಾಡಿ ಶಪಿಸುತ್ತಾರೆ.
9 ಬೂದಿಯೇ ನನಗೆ ಆಹಾರವಾಯಿತು;
ನನ್ನ ಪಾನದಲ್ಲಿ ಕಣ್ಣೀರು ಮಿಶ್ರವಾಯಿತು.
10 ಇದಕ್ಕೆಲ್ಲಾ ನಿನ್ನ ಕೋಪರೌದ್ರಗಳೇ ಕಾರಣ.
ನೀನು ನನ್ನನ್ನು ಎತ್ತಿ ಒಗೆದುಬಿಟ್ಟಿದ್ದೀಯಲ್ಲಾ!
11 ನನ್ನ ಜೀವಮಾನವು ಸಂಜೆಯ ನೆರಳಿನಂತಿದೆ;
ನಾನು ಬಾಡಿದ ಹುಲ್ಲಿನಂತಿದ್ದೇನೆ.

12 ಯೆಹೋವನೇ, ನೀನಾದರೋ ಸದಾ ಸಿಂಹಾಸ[...]ರೂಢನಾಗಿರುವಿ;
ನಿನ್ನ ನಾಮವು ತಲತಲಾಂತರಕ್ಕೂ ಸ್ಮರಿಸಲ್ಪಡುವದ[...]
13 ನೀನು ಎದ್ದು ಚೀಯೋನನ್ನು ಕರುಣಿಸುವಿ.
ಅದಕ್ಕೆ ಕೃಪೆತೋರಿಸುವ ಸಮಯ ಇದೇ;
ನಿಯಮಿತಕಾಲವು ಬಂದದೆ.
14 ಅದು ಕಲ್ಲುಕುಪ್ಪೆಯಾಗಿ ಹೋಗಿದ್ದರೂ ನಿನ್ನ ಸೇ[...]ರಿಗೆ ಅತಿಪ್ರಿಯವಾಗಿದೆ;
ಅದರ ಧೂಳಿಗೆ ಅವರು ಮರಗುತ್ತಾರೆ.
15 ಯೆಹೋವನು ಗತಿಹೀನರ ಮೊರೆಯನ್ನು ತಿರಸ್ಕರಿ[...] ನೆರವೇರಿಸಿದನೆಂದೂ
16 ಆತನು ಮಹಿಮೆಯಲ್ಲಿ ಬಂದು ಚೀಯೋನ[...] ತಿರಿಗಿ ಕಟ್ಟಿಸಿದನೆಂದೂ
17 ಜನಾಂಗಗಳು ಯೆಹೋವ ಎಂಬ ನಿನ್ನ ನಾಮಕ್ಕೂ
ಭೂರಾಜರು ನಿನ್ನ ಪ್ರತಾಪಕ್ಕೂ ಭಯಪಡುವರು.
18 ಇದು ಮುಂದಣ ಸಂತಾನದವರಿಗೋಸ್ಕರ ಶಾಸನ[...]ಗಿರಲಿ.
ಮುಂದೆ ಹುಟ್ಟುವ ಪ್ರಜೆಯು ಯಾಹುವನ್ನು ಕೊಂ[...]ಡುತ್ತಾ—
19 ಯೆಹೋವನು ತನ್ನ ಮಹೋನ್ನತವಾದ ಪವ[...]ಸ್ಥಾನದಿಂದ ಕೆಳಕ್ಕೆ ನೋಡಿದ್ದಾನೆ;
ಆತನು ಪರಲೋಕದಿಂದ ಭೂಮಿಯನ್ನು ದೃಷ್[...]ದ್ದಾನೆ.
20 ಸೆರೆಯವರ ಗೋಳಾಟವನ್ನು ಲಕ್ಷಿಸಿ
ಮರಣಪಾತ್ರರನ್ನು ಬಿಡಿಸಿ
21 ಅವರು ಚೀಯೋನಿನಲ್ಲಿ ಯೆಹೋವನಾಮವ[...] ವರ್ಣಿಸುವಂತೆಯೂ
ಯೆರೂಸಲೇಮಿನಲ್ಲಿ ತನ್ನ ಕೀರ್ತನೆಯನ್ನು ಹಾ[...]ವಂತೆಯೂ ಮಾಡಿದ್ದಾನೆ.
22 ಜನಾಂಗಗಳೂ ರಾಜ್ಯಗಳೂ ಕೂಡಿಬಂದು [...]ರೊಡನೆ ಯೆಹೋವನನ್ನು ಸೇವಿಸುತ್ತವೆ
ಎಂದು ಹೇಳುವದು.

23 ಆತನು ದಾರಿಯಲ್ಲಿಯೇ ನನ್ನ ಬಲವನ್ನು ಕುಂ[...]ದ್ದಾನೆ;

24 ನನ್ನ ಆಯುಷ್ಯವನ್ನು ಕಡಿಮೆಮಾಡಿಬಿಟ್ಟಿದ್ದಾನೆ. ಆದ
ದರಿಂದ—
ನನ್ನ ದೇವರೇ, ಅರ್ಧಾಯುಷ್ಯದಲ್ಲಿಯೇ ನನ್ನನ್ನು
ಒಯ್ಯಬೇಡ;
ನಿನ್ನ ವರುಷಗಳು ತಲತಲಾಂತರಕ್ಕೂ ಇರುತ್ತವೆ.
25 ಆದಿಯಲ್ಲಿ ನೀನು ಭೂಮಿಗೆ ಅಸ್ತಿವಾರವನ್ನು
ಹಾಕಿದಿ;
ಗಗನಮಂಡಲವು ನಿನ್ನ ಕೈಕೆಲಸವಾಗಿದೆ.
26 ಅವು ನಾಶವಾಗುವವು; ಆದರೆ ನೀನು ಶಾಶ್ವತ
ವಾಗಿರುತ್ತೀ.
ಅವೆಲ್ಲವೂ ವಸ್ತ್ರದಂತೆ ಹಳೆಯವಾಗುವವು.
ಉಡುಪಿನಂತೆ ಅವುಗಳನ್ನು ಬದಲಿಸುತ್ತೀ; ಅವು
ಮಾರ್ಪಡುವವು.
27 ನೀನಾದರೋ ಏಕರೀತಿಯಾಗಿದ್ದೀ;
ನಿನ್ನ ವರುಷಗಳು ಮುಗಿದುಹೋಗುವದಿಲ್ಲ.
28 ನಿನ್ನ ಸೇವಕರ ಮಕ್ಕಳು ಬಾಳುವರು.
ಅವರ ಸಂತತಿಯವರು ನಿನ್ನ ಸನ್ನಿಧಿಯಲ್ಲಿ ಸ್ಥಿರ
ವಾಗಿರುವರು
ಎಂದು ಮೊರೆಯಿಡುತ್ತೇನೆ.

ದೇವಕೃಪಾಕೀರ್ತನೆ.
ದಾವೀದನ ಕೀರ್ತನೆ.

**103** ನನ್ನ ಮನವೇ, ಯೆಹೋವನನ್ನು ಕೊಂಡಾಡು;
ನನ್ನ ಸರ್ವೇಂದ್ರಿಯಗಳೇ, ಆತನ ಪವಿತ್ರನಾಮ
ವನ್ನು ಕೀರ್ತಿಸಿರಿ.
2 ನನ್ನ ಮನವೇ, ಯೆಹೋವನನ್ನು ಕೊಂಡಾಡು;
ಆತನ ಉಪಕಾರಗಳಲ್ಲಿ ಒಂದನ್ನೂ ಮರೆಯ
ಬೇಡ.
3 ಆತನು ನಿನ್ನ ಎಲ್ಲಾ ಅಪರಾಧಗಳನ್ನು ಕ್ಷಮಿಸು
ವವನೂ
ಸಮಸ್ತರೋಗಗಳನ್ನು ವಾಸಿಮಾಡುವವನೂ
4 ನಿನ್ನ ಜೀವವನ್ನು ನಾಶದಿಂದ ತಪ್ಪಿಸುವವನೂ
ಪ್ರೀತಿಕೃಪೆಗಳೆಂಬ ಕಿರೀಟದಿಂದ ನಿನ್ನನ್ನು ಶೃಂಗರಿಸು
ವವನೂ ಆಗಿದ್ದಾನೆ.
5 ಶ್ರೇಷ್ಠವರಗಳಿಂದ ನಿನ್ನ ಆಶೆಯನ್ನು ಪೂರ್ತಿಗೊಳಿಸು
ತ್ತಾನೆ;
ಹದ್ದಿಗೆ ಬರುವಂತೆಯೇ ನಿನಗೆ ಯೌವನವನ್ನು ತಿರಿಗಿ
ಬರಮಾಡುತ್ತಾನೆ.

6 ಯೆಹೋವನು ನೀತಿಯನ್ನು ಸಾಧಿಸುವವನಾಗಿ
ಕುಗ್ಗಿಹೋದವರೆಲ್ಲರ ನ್ಯಾಯವನ್ನು ಸ್ಥಾಪಿಸುತ್ತಾನೆ.
7 ಆತನು ಮೋಶೆಗೆ ತನ್ನ ಮಾರ್ಗವನ್ನೂ
ಇಸ್ರಾಯೇಲ್ಯರಿಗೆ ತನ್ನ ಕೃತ್ಯಗಳನ್ನೂ ಪ್ರಕಟಿಸಿ
ದನು.
8 ಯೆಹೋವನು ಕನಿಕರವೂ ದಯೆಯೂ
ದೀರ್ಘಶಾಂತಿಯೂ ಪೂರ್ಣಪ್ರೀತಿಯೂ ಉಳ್ಳವನು.
9 ಆತನು ಯಾವಾಗಲೂ ತಪ್ಪು ಹುಡುಕುವವನಲ್ಲ;
ನಿತ್ಯವೂ ಕೋಪಿಸುವವನಲ್ಲ.
10 ಆತನು ನಮ್ಮ ಪಾಪಗಳಿಗೆ ಸರಿಯಾಗಿ ನಮ್ಮನ್ನು
ಶಿಕ್ಷಿಸಲಿಲ್ಲ;
ನಮ್ಮ ಅಪರಾಧಗಳಿಗೆ ತಕ್ಕಂತೆ ದಂಡಿಸಲಿಲ್ಲ.

11 ಭೂಮಿಯ ಮೇಲೆ ಆಕಾಶವು ಎಷ್ಟು ಉನ್ನತವೋ
ಆತನಲ್ಲಿ ಭಯಭಕ್ತಿಯುಳ್ಳವರ ಮೇಲೆ ಆತನ ಕೃಪೆ
ಯು ಅಷ್ಟು ಅಪಾರವಾಗಿದೆ.
12 ಪೂರ್ವಕ್ಕೂ ಪಶ್ಚಿಮಕ್ಕೂ ಎಷ್ಟು ದೂರವೋ
ನಮ್ಮ ದ್ರೋಹಗಳನ್ನು ನಮ್ಮಿಂದ ತೆಗೆದು ಅಷ್ಟು ದೂರ
ಮಾಡಿದ್ದಾನೆ.
13 ತಂದೆಯು ಮಕ್ಕಳನ್ನು ಕನಿಕರಿಸುವಂತೆ
ಯೆಹೋವನು ತನ್ನಲ್ಲಿ ಭಯಭಕ್ತಿಯುಳ್ಳವರನ್ನು
ಕನಿಕರಿಸುತ್ತಾನೆ.
14 ಆತನು ನಮ್ಮ ಪ್ರಕೃತಿಯನ್ನು ಬಲ್ಲನು;
ನಾವು ಧೂಳಿಯಾಗಿದ್ದೇವೆಂಬದನ್ನು ನೆನಪುಮಾಡಿಕೊ
ಳ್ಳುತ್ತಾನೆ.

15 ಮನುಷ್ಯನ ಆಯುಷ್ಕಾಲವು ಹುಲ್ಲಿನಂತಿದೆ;
ಅವನು ಅಡವಿಯ ಹೂವಿನ ಹಾಗೆ ಶೋಭಿಸುತ್ತಾನೆ.
16 ಗಾಳಿಬಡಿಯುತ್ತಲೇ ಅದು ಹೋಗುವದು;
ಅದರ ಸ್ಥಳವು ಅದನ್ನು ತಿರಿಗಿ ಕಾಣುವದಿಲ್ಲ.
17 ಆದರೆ ಯೆಹೋವನಲ್ಲಿ ಭಯಭಕ್ತಿಯುಳ್ಳವರ ಮೇಲೆ
ಆತನ ದಯವು ಯುಗಯುಗಾಂತರಗಳ ವರೆಗೂ
ಇರುತ್ತದೆ.
18 ಆತನ ನಿಬಂಧನೆಗಳನ್ನು ಕೈಕೊಂಡು
ಆತನ ವಿಧಿಗಳನ್ನು ನೆನಪಿನಲ್ಲಿಟ್ಟುಕೊಂಡು ನಡೆಯು
ವವರ ಮಕ್ಕಳುಮೊಮ್ಮಕ್ಕಳ ವರೆಗೂ
ಆತನು ತನ್ನ ನೀತಿಯನ್ನು ಸಾಧಿಸುವನು.

19 ಯೆಹೋವನು ಮೇಲಣ ಲೋಕದಲ್ಲಿ ತನ್ನ ಸಿಂಹಾ
ಸನವನ್ನು ಸ್ಥಾಪಿಸಿದ್ದಾನೆ;
ಆತನು ಸಮಸ್ತವನ್ನೂ ಆಳುತ್ತಾನೆ.
20 ದೇವದೂತರೇ, ಆತನ ಶಬ್ದಕ್ಕೆ ಕಿವಿಗೊಡುವವರೇ,
ಆತನ ಆಜ್ಞೆಯನ್ನು ನೆರವೇರಿಸುವ ಪರಾಕ್ರಮ
ಶಾಲಿಗಳೇ,
ಯೆಹೋವನನ್ನು ಕೊಂಡಾಡಿರಿ.
21 ಆತನ ಸೈನ್ಯಗಳೇ, ಆತನ ಮೆಚ್ಚಿಕೆಯನ್ನು ನೆರ
ವೇರಿಸುವ ಸೇವಕರೇ,
ಯೆಹೋವನನ್ನು ಕೊಂಡಾಡಿರಿ.
22 ಆತನ ರಾಜ್ಯದ ಸರ್ವಸ್ಥಳಗಳಲ್ಲಿರುವ ಎಲ್ಲಾ ಸೃಷ್ಟಿ
ಗಳೇ,
ಯೆಹೋವನನ್ನು ಕೊಂಡಾಡಿರಿ.
ನನ್ನ ಮನವೇ, ಯೆಹೋವನನ್ನು ಕೊಂಡಾಡು.

ಯೆಹೋವನ ಸೃಷ್ಟಿಮಹತ್ತು.
(ಆದಿಕಾಂಡ 1; ಯೋಬ 38—41.)

**104** ನನ್ನ ಮನವೇ, ಯೆಹೋವನನ್ನು ಕೊಂಡಾಡು.
ಯೆಹೋವನೇ, ನನ್ನ ದೇವರೇ, ನೀನು ಸರ್ವೋ
ತ್ಕೃಷ್ಟನು;

ಪ್ರಭಾವಮಹತ್ವಗಳಿಂದ ಭೂಷಿತನಾಗಿದ್ದೀ.
2 ಬೆಳಕನ್ನು ವಸ್ತ್ರದಂತೆ ಹೊದ್ದುಕೊಂಡಿದ್ದೀ;
ಆಕಾಶವನ್ನು ಗುಡಾರದಂತೆ ಎತ್ತಿ ಹರಡಿದ್ದೀ.
3 ಜಲರಾಶಿಗಳ ಮೇಲೆ ಉಪ್ಪರಿಗೆಗಳನ್ನು ಕಟ್ಟಿಕೊಂಡಿದ್ದೀ;
ಮೋಡಗಳನ್ನು ವಾಹನವಾಗಿ ಮಾಡಿಕೊಂಡಿದ್ದೀ;
ವಾಯುವಿನ ರೆಕ್ಕೆಗಳ ಮೇಲೆ ಸಂಚರಿಸುತ್ತೀ.
4 [1]ಗಾಳಿಗಳನ್ನು [2]ನಿನ್ನ ದೂತರನ್ನಾಗಿಯೂ
ಅಗ್ನಿಜ್ವಾಲೆಯನ್ನು ಸೇವಕರನ್ನಾಗಿಯೂ ಮಾಡಿಕೊಳ್ಳುತ್ತೀ.

5 ಭೂಮಿಯು ಯುಗಯುಗಾಂತರಕ್ಕೂ ಕದಲದ ಹಾಗೆ
ಅದನ್ನು ದೃಢವಾದ ಅಸ್ತಿವಾರದ ಮೇಲೆ ಸ್ಥಾಪಿಸಿದ್ದೀ.
6 ನೀನು ಅದನ್ನು ಆದಿಸಾಗರವೆಂಬ ವಸ್ತ್ರದಿಂದ ಹೊದಿಸಿದ್ದೀ;
ನೀರು ಪರ್ವತಗಳನ್ನೂ ಮುಚ್ಚಿಬಿಟ್ಟಿತ್ತು.
7 ನೀನು ಗದರಿಸಲು ಅದು ಓಡಿಹೋಯಿತು;
ನಿನ್ನ ಗರ್ಜನೆಗೆ ಹೆದರಿ ನೀನು ನೇಮಿಸಿದ ಸ್ಥಳಕ್ಕೆ ಹೋಗಲು
8 ಪರ್ವತಗಳು ಎದ್ದವು;
ತಗ್ಗುಗಳು ಇಳಿದವು.
9 ಜಲರಾಶಿಗಳು ಬಂದು ಪುನಃ ಭೂಮಿಯನ್ನು ಮುಚ್ಚಿಕೊಳ್ಳದ ಹಾಗೆ
ನೀನು ಮೇರೆಯನ್ನು ಗೊತ್ತುಮಾಡಿದಿ.

10 ಬುಗ್ಗೆಗಳನ್ನು ತಗ್ಗುಗಳಿಗೆ ಬರಮಾಡುತ್ತೀ;
ಅವು ಪರ್ವತಗಳ ನಡುವೆ ಹರಿದುಹೋಗುತ್ತವೆ.
11 ಅವು ಅಡವಿಯ ಮೃಗಗಳಿಗೆ ನೀರುಕೊಡುತ್ತವೆ;
ಕಾಡುಕತ್ತೆಗಳು ದಾಹತೀರಿಸಿಕೊಳ್ಳುತ್ತವೆ.
12 ಪಕ್ಷಿಗಳು ಅವುಗಳ ಬಳಿಯ ಮರಗಳ ಕೊಂಬೆಗಳಲ್ಲಿ ವಾಸವಾಗಿದ್ದು ಗಾನಮಾಡುತ್ತವೆ.
13 ನೀನು ನಿನ್ನ ಮೇಲಂತಸ್ತುಗಳಿಂದ ಪರ್ವತಗಳಿಗೆ ನೀರು ಕೊಡುತ್ತೀ;
ನಿನ್ನ ಕಾರ್ಯಫಲದಿಂದ ಭೂಮಿಯು ತೃಪ್ತಿಹೊಂದುತ್ತದೆ.
14 ಪಶುಗಳಿಗೋಸ್ಕರ ಹುಲ್ಲನ್ನು ಮೊಳಿಸುತ್ತೀ;
ಮನುಷ್ಯರಿಗೋಸ್ಕರ ಪೈರುಗಳನ್ನು ಹುಟ್ಟಿಸುತ್ತೀ.
ಅವರು ಭೂವ್ಯವಸಾಯಮಾಡಿ ಆಹಾರವನ್ನೂ
15 ಹೃದಯಾನಂದಕರವಾದ ದ್ರಾಕ್ಷಾರಸವನ್ನೂ
ಮುಖಕ್ಕೆ ಕಾಂತಿಯನ್ನುಂಟುಮಾಡುವ ಎಣ್ಣೆಯನ್ನೂ
ಪ್ರಾಣಾಧಾರವಾದ ರೊಟ್ಟಿಯನ್ನೂ ಸಂಪಾದಿಸಿಕೊಳ್ಳುತ್ತಾರೆ.
16 ಯೆಹೋವನು ನೆಟ್ಟ ಮರಗಳಾದ ಲೆಬನೋನಿನ ದೇವದಾರುವೃಕ್ಷಗಳಿಗೆ
ಬೇಕಾದಷ್ಟು ಜಲವಿರುತ್ತದೆ.
17 ಪಕ್ಷಿಗಳು ಅವುಗಳಲ್ಲಿ ಗೂಡು ಕಟ್ಟಿಕೊಳ್ಳುತ್ತವೆ;
ತುರಾಯಿಮರಗಳಲ್ಲಿ ಬಕಪಕ್ಷಿಗಳು ವಾಸಿಸುತ್ತವೆ.
18 ಕಾಡುಕುರಿಗಳಿಗೆ ಉನ್ನತವಾದ ಪರ್ವತಗಳೂ
ಬೆಟ್ಟದ ಮೊಲಗಳಿಗೆ ಬಂಡೆಗಳೂ ಆಶ್ರಯಸ್ಥಾನ ಳಾಗಿವೆ.

19 ವಿಶೇಷಕಾಲಗಳ ಸೂಚನೆಗಾಗಿ ಚಂದ್ರನನ್ನು ನಿಮಿ ಸಿದ್ದೀ;
ಸೂರ್ಯನು ತನ್ನ ಅಸ್ತಮಾನಸಮಯವನ್ನು ಬಲ್ಲನ
20 ನೀನು ಕತ್ತಲೆಯನ್ನು ಬರಮಾಡಲು ರಾತ್ರಿಯಾಗ ತ್ತದೆ.
ಆಗ ಕಾಡಿನ ಮೃಗಗಳೆಲ್ಲಾ ಹೊರಬರುತ್ತವೆ.
21 ಪ್ರಾಯದ ಸಿಂಹಗಳು ಬೇಟೆಗಾಗಿ ಗರ್ಜಿಸುತ್ತವೆ;
ದೇವರಿಂದ ಆಹಾರವನ್ನು ಕೇಳಿಕೊಳ್ಳುತ್ತವೆ.
22 ಸೂರ್ಯೋದಯವಾಗಲು ಅವು ಬಂದು
ತಮ್ಮ ಗವಿಗಳಲ್ಲಿ ಮಲಗಿಕೊಳ್ಳುತ್ತವೆ.
23 ಮನುಷ್ಯನು ತನ್ನ ಕೆಲಸಕ್ಕೆ ಹೊರಟುಹೋಗುತ್ತಾ
ಸಾಯಂಕಾಲದ ವರೆಗೆ ದುಡಿಯುತ್ತಾನೆ.

24 ಯೆಹೋವನೇ, ನಿನ್ನ ಕೈಕೆಲಸಗಳು ಎಷ್ಟೋ ವಿ ವಾಗಿವೆ.
ಅವುಗಳನ್ನೆಲ್ಲಾ ಜ್ಞಾನದಿಂದಲೇ ಮಾಡಿದ್ದೀ;
ಭೂಲೋಕವು ನಿನ್ನ ಆಸ್ತಿಯಿಂದ ತುಂಬಿರುತ್ತದೆ.
25 ಇಗೋ, ಬಹುವಿಶಾಲವಾದ ಸಮುದ್ರವು!
ಅದರೊಳಗೆ ಲೆಕ್ಕವಿಲ್ಲದಷ್ಟು ಸಣ್ಣ ದೊಡ್ಡ ಜೀ ಜಂತುಗಳು ಚಲಿಸುತ್ತಿರುತ್ತವೆ.
26 ಅದರಲ್ಲಿ ಹಡಗುಗಳು ಸಂಚರಿಸುತ್ತವೆ;
ನೀನು ಉಂಟುಮಾಡಿದ ಲಿವ್ಯಾತಾನವು ಅದರಲ್ಲಿ ಆ ತ್ತದೆ.
27 ಇವೆಲ್ಲಾ ಹೊತ್ತುಹೊತ್ತಿಗೆ
ಆಹಾರಕ್ಕೋಸ್ಕರ ನಿನ್ನನ್ನೇ ನಿರೀಕ್ಷಿಸುತ್ತವೆ.
28 ನೀನು ಕೊಡಲು ಅವು ತೆಗೆದುಕೊಳ್ಳುತ್ತವೆ;
ನೀನು ಕೈತೆರೆಯಲು ಅವು ಒಳ್ಳೇದನ್ನು ಹೊಂದಿ ತೃ ಗೊಳ್ಳುತ್ತವೆ.
29 ನೀನು ವಿಮುಖನಾಗಲು ತಲ್ಲಣಿಸುತ್ತವೆ;
ಅವುಗಳ ಶ್ವಾಸವನ್ನು ತೆಗೆದುಕೊಳ್ಳಲು
ಅವು ಸತ್ತು ತಿರಿಗಿ ಮಣ್ಣಿಗೆ ಸೇರುತ್ತವೆ.
30 ನೀನು ಜೀವಶ್ವಾಸವನ್ನು ಊದಲು ಅವು ಹೊ ದಾಗಿ ಹುಟ್ಟುತ್ತವೆ.
ಭೂಮಿಯನ್ನು ನೂತನಪಡಿಸುತ್ತಿರುತ್ತೀ.

31 ಯೆಹೋವನ ಮಹಿಮೆಯು ಸದಾಕಾಲವೂ ಇರಲ
ಯೆಹೋವನಿಗೆ ಆತನ ಸೃಷ್ಟಿಗಳಿಂದ ಸಂತೋ ವಾಗಲಿ.
32 ಆತನು ದೃಷ್ಟಿಸಿದ ಮಾತ್ರದಿಂದಲೇ ಭೂಮಿಯ ಕಂಪಿಸುತ್ತದೆ;
ಮುಟ್ಟುತ್ತಲೇ ಪರ್ವತಗಳು ಹೊಗೆಹಾಯುತ್ತವೆ.
33 ನಾನು ಬದುಕಿರುವ ವರೆಗೂ ಯೆಹೋವನನ್ನು ಕೀತಿ ಸುತ್ತಿರುವೆನು;

1) ಅಥವಾ: ನಿನ್ನ ದೂತರನ್ನು ಗಾಳಿಗಳನ್ನಾಗಿಯೂ ಸೇವಕರನ್ನು ಅಗ್ನಿಜ್ವಾಲೆಯನ್ನಾಗಿಯೂ ಮಾಡುತ್ತೀ. 2) ಮೂಲ: ಆತ

ಜೀವಮಾನವೆಲ್ಲಾ ನನ್ನ ದೇವರನ್ನು ಭಜಿಸುತ್ತಿರು
ವೆನು.
34 ನನ್ನ ಧ್ಯಾನದಿಂದ ಆತನಿಗೆ ಮೆಚ್ಚಿಕೆಯಾಗಲಿ;
ನಾನಾದರೋ ಯೆಹೋವನಲ್ಲಿ ಆನಂದಿಸುವೆನು.
35 ಪಾಪಾತ್ಮರು ಭೂಲೋಕದಲ್ಲಿ ಮುಗಿದುಹೋಗಲಿ;
ದುಷ್ಟರು ನಿರ್ಮೂಲವಾಗಲಿ.
ನನ್ನ ಮನಸ್ಸೇ, ಯೆಹೋವನನ್ನು ಕೊಂಡಾಡು;
ಯಾಹುವಿಗೆ ಸ್ತೋತ್ರ.

ಯೆಹೋವನು ಇಸ್ರಾಯೇಲ್ಯರಲ್ಲಿ ತನ್ನ ವಾಗ್ದಾನವನ್ನು ನೆರವೇರಿಸಿದ್ದಕ್ಕಾಗಿ ಸ್ತೋತ್ರ.
(ಕೀರ್ತನೆ 78; 106.)

105 ಯೆಹೋವನಿಗೆ ಕೃತಜ್ಞತಾಸ್ತುತಿಮಾಡಿರಿ;
ಆತನ ನಾಮದ ಮಹತ್ವವನ್ನು ವರ್ಣಿಸಿರಿ;
ಜನಾಂಗಗಳಲ್ಲಿ ಆತನ ಕೃತ್ಯಗಳನ್ನು ಪ್ರಸಿದ್ಧ
ಪಡಿಸಿರಿ.
2 ಆತನನ್ನು ಕೀರ್ತಿಸಿರಿ, ಭಜಿಸಿರಿ;
ಆತನ ಅದ್ಭುತಕೃತ್ಯಗಳನ್ನೆಲ್ಲಾ ಧ್ಯಾನಿಸಿರಿ.
3 ಆತನ ಪರಿಶುದ್ಧನಾಮದಲ್ಲಿ ಹಿಗ್ಗಿರಿ;
ಯೆಹೋವನ ದರ್ಶನವನ್ನು ಕೋರುವವರ ಹೃದ
ಯವು ಹರ್ಷಿಸಲಿ.
4 ಯೆಹೋವನನ್ನೂ ಆತನ ಬಲವನ್ನೂ ಆಶ್ರಯಿಸಿರಿ;
ನಿತ್ಯವೂ ಆತನ ದರ್ಶನವನ್ನು ಅಪೇಕ್ಷಿಸಿರಿ.
5 ಆತನ ಸೇವಕನಾದ ಅಬ್ರಹಾಮನ ಸಂತತಿಯವರೇ,
ಆತನು ಆರಿಸಿಕೊಂಡ ಯಾಕೋಬನ ವಂಶ
ದವರೇ,
6 ಆತನು ಮಾಡಿದ ಅದ್ಭುತಕೃತ್ಯ, ಆತನ ಮಹ
ತ್ಕಾರ್ಯ, ಆತನ ಬಾಯಿಂದ ಹೊರಟ ನ್ಯಾಯ
ನಿರ್ಣಯ ಇವುಗಳನ್ನು
ನೆನಪುಮಾಡಿಕೊಳ್ಳಿರಿ.

7 ಯೆಹೋವನೆಂಬಾತನೇ ನಮ್ಮ ದೇವರು;
ಆತನ ನ್ಯಾಯವಿಧಿಗಳು ಭೂಲೋಕದಲ್ಲೆಲ್ಲಾ ಇವೆ.
8 ಆತನು ತನ್ನ ವಾಗ್ದಾನವನ್ನು ಸಾವಿರ ತಲೆಗಳ
ವರೆಗೂ
ತನ್ನ ಒಡಂಬಡಿಕೆಯನ್ನು ನಿತ್ಯವೂ ನೆನಪಿನಲ್ಲಿಟ್ಟು
ಕೊಳ್ಳುತ್ತಾನೆ.
9 ಆತನು ಆ ಒಡಂಬಡಿಕೆಯನ್ನು ಅಬ್ರಹಾಮನ ಸಂಗಡ
ಮಾಡಿಕೊಂಡನು;
ಇಸಾಕನಿಗೆ ಆಣೆಯಿಟ್ಟನು.
10 ಅದು ರಾಜಶಾಸನದಂತಿರುವದೆಂದು ಯಾಕೋಬ
ನಿಗೂ
ಶಾಶ್ವತವಾದ ಒಡಂಬಡಿಕೆಯಾಗಿರುವದೆಂದು ಇಸ್ರಾ
ಯೇಲನಿಗೂ ಮಾತುಕೊಟ್ಟನು.
11 ಅವರು ಇನ್ನೂ ಬಹು ಸ್ವಲ್ಪ ಜನರೂ ಕಾನಾನ್ ದೇಶ
ದಲ್ಲಿ ಪ್ರವಾಸಿಗಳೂ ಆಗಿರುವಾಗಲೇ
12 ಆತನು— ನಿಮಗೆ ಈ ದೇಶವನ್ನು ಕೊಡುವೆನು;
ಅದು ನಿಮ್ಮ ಸಂತತಿಯವರಿಗೆ ಸ್ವಾಸ್ತ್ಯವಾಗಿರುವದು
ಎಂದು ಹೇಳಿದನು.
13 ಅವರು ದೇಶದಿಂದ ದೇಶಕ್ಕೂ
ರಾಜ್ಯದಿಂದ ರಾಜ್ಯಕ್ಕೂ ಹೋಗುತ್ತಿರುವಲ್ಲಿ
14 ಆವರಿಗೆ ಯಾರಿಂದಲೂ ಅನ್ಯಾಯವಾಗಗೊಡಿಸಲಿಲ್ಲ.
ಆತನು ಅವರ ವಿಷಯದಲ್ಲಿ ಅರಸರನ್ನೂ ಗದರಿಸಿ—
15 ನಾನು ಅಭಿಷೇಕಿಸಿದವರನ್ನು ಮುಟ್ಟಬಾರದು,
ನನ್ನ ಪ್ರವಾದಿಗಳಿಗೆ ಯಾವ ಕೇಡನ್ನೂ ಮಾಡಬಾರದು
ಎಂದು ಹೇಳಿದನು.
16 ಅನಂತರ ಆತನು ದೇಶದಲ್ಲಿ ಕ್ಷಾಮವನ್ನು ಬರಮಾಡಿ
ಆಹಾರವೆಂಬ ಊರುಕೋಲನ್ನು ಮುರಿದುಬಿಟ್ಟನು.
17 ಆತನು ಅವರ ಮುಂದಾಗಿ ಒಬ್ಬನನ್ನು ಕಳುಹಿಸಿ
ದನು;
ದಾಸತ್ವಕ್ಕೆ ಮಾರಲ್ಪಟ್ಟ ಯೋಸೇಫನೇ ಅವನು.
18 ಅವನ ಕಾಲುಗಳು ಕೋಳದಲ್ಲಿ ನೊಂದವು;
ಕಬ್ಬಿಣದ ಬೇಡಿಗಳಿಂದ ಅವನು ಬಂಧಿತನಾದನು.
19 ಅವನು ತನ್ನ ಮಾತು ನೆರವೇರುವ ತನಕ
ಯೆಹೋವನ ವಾಕ್ಯದಿಂದ ಶೋಧಿತನಾದನು.
20 ಅರಸನು ಅಪ್ಪಣೆಮಾಡಿ ಅವನನ್ನು ತಪ್ಪಿಸಿದನು;
ಜನಪತಿಯು ಅವನನ್ನು ಬಿಡಿಸಿದನು.
21 ಅವನನ್ನು ತನ್ನ ಮನೆಗೆ ಯಜಮಾನನನ್ನಾಗಿಯೂ
ತನ್ನ ಆಸ್ತಿಗೆಲ್ಲಾ ಅಧಿಕಾರಿಯನ್ನಾಗಿಯೂ ಮಾಡಿದನು.
22 ತನ್ನ ಪ್ರಧಾನರನ್ನು ಇಷ್ಟಾನುಸಾರವಾಗಿ ಬಂಧಿಸುವ
ದಕ್ಕೂ
ತನ್ನ ಮಂತ್ರಿಗಳಿಗೆ ಬುದ್ಧಿಕಲಿಸುವದಕ್ಕೂ ಅವನಿಗೆ ಅಧಿ
ಕಾರಕೊಟ್ಟನು.

23 ಆಗ ಇಸ್ರಾಯೇಲನು ಐಗುಪ್ತಕ್ಕೆ ಬಂದನು;
ಯಾಕೋಬನು ಹಾಮನ ದೇಶದಲ್ಲಿ ಪ್ರವಾಸಿಯಾ
ದನು.
24 ದೇವರು ತನ್ನ ಜನರನ್ನು ಬಹಳವಾಗಿ ವೃದ್ಧಿಮಾಡಿ
ಅವರು ಶತ್ರುಗಳಿಗಿಂತ ಬಲಿಷ್ಠರಾಗುವಂತೆ ಮಾಡಿ
ದನು.
25 ಆತನು ಆ ದೇಶದವರ ಹೃದಯವನ್ನು ಮಾರ್ಪಡಿ
ಸಿದ್ದರಿಂದ
ಅವರು ಆತನ ಜನರನ್ನು ದ್ವೇಷಿಸಿ
ಆತನ ಸೇವಕರನ್ನು ಕುಯುಕ್ತಿಯಿಂದ ನಡಿಸಿದರು.
26 ಆಗ ಆತನು ತನ್ನ ಸೇವಕನಾದ ಮೋಶೆಯನ್ನೂ
ತಾನು ಆರಿಸಿಕೊಂಡ ಆರೋನನನ್ನೂ ಕಳುಹಿಸಿದನು.
27 ಅವರು ಹಾಮನ ದೇಶದವರ ಮಧ್ಯದಲ್ಲಿ
ಆತನು ಆಜ್ಞಾಪಿಸಿದ ವಿವಿಧ ಮಹತ್ಕಾರ್ಯಗಳನ್ನೂ
ಅದ್ಭುತಗಳನ್ನೂ ನಡಿಸಿದರು.
28 ಆತನು ಕತ್ತಲೆಯನ್ನು ಕಳುಹಿಸಲು ಕತ್ತಲೆಯಾ
ಯಿತು.
ಅವರು ಆತನ ಆಜ್ಞೆಗಳನ್ನು ತಿರಸ್ಕರಿಸಲಿಲ್ಲ.

29 ಆತನು ಐಗುಪ್ತ್ಯರ ನೀರನ್ನು ರಕ್ತಮಾಡಿ
ಮೀನುಗಳನ್ನು ಸಾಯಿಸಿದನು.
30 ಅವರ ದೇಶದಲ್ಲೆಲ್ಲಾ ಕಪ್ಪೆಗಳು ತುಂಬಿಕೊಂಡವು;
ಅರಮನೆಯಲ್ಲಿಯೂ ವ್ಯಾಪಿಸಿಕೊಂಡವು.
31 ಆತನು ಆಜ್ಞಾಪಿಸಲು ಅವರ ಎಲ್ಲಾ ಪ್ರಾಂತಗಳಲ್ಲಿ
ವಿಷದ ಹುಳಗಳೂ ಹೇನುಗಳೂ ಉಂಟಾದವು.

32 ಆತನು ಅವರ ದೇಶದಲ್ಲಿ ಕಲ್ಮಳೆಯನ್ನೂ ಬೆಂಕಿಯುರಿ
ಯನ್ನೂ ಬರಮಾಡಿ
33 ಅವರ ದ್ರಾಕ್ಷಾಲತೆಗಳನ್ನೂ ಅಂಜೂರದ ಗಿಡಗಳನ್ನೂ
ಹೊಡೆದು
ಅವರ ಪ್ರಾಂತಗಳಲ್ಲಿದ್ದ ಮರಗಳನ್ನು ಮುರಿದು
ಬಿಟ್ಟನು.
34 ಆತನು ಆಜ್ಞಾಪಿಸಲು ಮಿಡಿತೆಗಳೂ
ಲೆಕ್ಕವಿಲ್ಲದಷ್ಟು ಜಿಟ್ಟೆಹುಳಗಳೂ ಬಂದು
35 ಅವರ ದೇಶದಲ್ಲಿದ್ದ ಎಲ್ಲಾ ಪೈರುಗಳನ್ನೂ
ಭೂಮಿಯ ಬೆಳೆಗಳನ್ನೂ ತಿಂದುಬಿಟ್ಟವು.
33 ಆ ದೇಶದವರ ವೀರ್ಯಕ್ಕೆ ಪ್ರಥಮಫಲವಾಗಿದ್ದ
ಚೊಚ್ಚಲ ಮಕ್ಕಳನ್ನು ಸಂಹರಿಸಿದನು.

37 ಇಸ್ರಾಯೇಲ್ಯರನ್ನು ಬೆಳ್ಳಿಬಂಗಾರಗಳ ಸಹಿತವಾಗಿ
ಹೊರಗೆ ಬರಮಾಡಿದನು;
ಅವರ ಕುಲಗಳಲ್ಲಿ ಒಬ್ಬನಾದರೂ ಎಡವುವವನಿರಲಿಲ್ಲ.
38 ಐಗುಪ್ತ್ಯರು ಅವರ ವಿಷಯದಲ್ಲಿ ಹೆದರಿಕೆಯುಳ್ಳವ
ರಾದ್ದರಿಂದ
ಅವರು ಹೊರಟು ಹೋದದಕ್ಕೆ ಸಂತೋಷಿಸಿದರು.
39 ಅವರಿಗೆ [ಹಗಲಲ್ಲಿ] ನೆರಳಿಗೋಸ್ಕರ ಮೋಡವನ್ನೂ
ಇರುಳಲ್ಲಿ ಬೆಳಕಿಗೋಸ್ಕರ ಬೆಂಕಿಯನ್ನೂ ಮೇಲೆ ಹರ
ವಿದನು.
40 ಅವರು ಬೇಡಿಕೊಳ್ಳಲು ಲಾವಕ್ಕಿಗಳನ್ನು ಬರಮಾಡಿ
ದನು;
ದಿವ್ಯಾಹಾರದಿಂದ ಅವರನ್ನು ತೃಪ್ತಿಗೊಳಿಸಿದನು.
41 ಆತನು ಬಂಡೆಯನ್ನು ಸೀಳಲು ನೀರು ಚಿಮ್ಮಿ ಬಂದು
ಅರಣ್ಯದಲ್ಲಿ ನದಿಯಾಗಿ ಹರಿಯಿತು.

42 ಹೀಗೆ ಆತನು ತನ್ನ ಪರಿಶುದ್ಧವಚನವನ್ನೂ ತನ್ನ
ಸೇವಕನಾದ ಅಬ್ರಹಾಮನನ್ನೂ
ನೆನಪುಮಾಡಿಕೊಂಡು
43 ತನ್ನ ಪ್ರಜೆಯು ಉಲ್ಲಾಸದಿಂದಲೂ
ತಾನು ಆರಿಸಿಕೊಂಡವರು ಉತ್ಸಾಹಧ್ವನಿಯಿಂದ
ಲೂ ಹೊರಗೆ ಬರುವಂತೆ ಮಾಡಿದನು.
44 ಮತ್ತು ಆತನು ಅವರಿಗೆ ಪರಜನರ ದೇಶಗಳನ್ನು
ಕೊಟ್ಟನು;
ಅನ್ಯಜನಾಂಗಗಳ ಕಷ್ಟಾರ್ಜಿತವು ಅವರಿಗೆ ಕೈ
ಸೇರಿತು.
45 ಅವರು ತನ್ನ ವಿಧಿಗಳನ್ನು ಕೈಕೊಂಡು
ತನ್ನ ಧರ್ಮಶಾಸ್ತ್ರವನ್ನು ಅನುಸರಿಸಬೇಕೆಂಬದೇ
ಆತನ ಉದ್ದೇಶ.
ಯಾಹುವಿಗೆ ಸ್ತೋತ್ರ!

ಯೆಹೋವಕ್ಷಮಾಕೀರ್ತನೆ.
(ಕೀರ್ತನೆ 78; 105.)

**106** ಯಾಹುವಿಗೆ ಸ್ತೋತ್ರ!
ಯೆಹೋವನಿಗೆ ಕೃತಜ್ಞತಾಸ್ತುತಿಮಾಡಿರಿ. ಆತ
ನು ಒಳ್ಳೆಯವನು.
ಆತನ ಕೃಪೆಯು ಶಾಶ್ವತವಾಗಿರುವದು.
2 ಯೆಹೋವನ ಮಹತ್ಕಾರ್ಯಗಳನ್ನು ಯಾರು ವರ್ಣಿ
ಸಬಲ್ಲರು?
ಆತನನ್ನು ತಕ್ಕಂತೆ ಕೀರ್ತಿಸುವದು ಯಾರಿಂದಾದೀತು
3 ಯಾವಾಗಲೂ ನ್ಯಾಯವನ್ನು ಕಾಪಾಡುವವರೂ
ನೀತಿಯನ್ನು ಪಾಲಿಸುವವರೂ ಧನ್ಯರು.
4 ಯೆಹೋವನೇ, ನನ್ನನ್ನು ನೆನಪುಮಾಡಿಕೊಂಡು ನಿ
ಪ್ರಜೆಗೆ ತೋರಿಸುವ ದಯೆಯನ್ನು ನನಗ
ತೋರಿಸು.
ನನ್ನನ್ನು ರಕ್ಷಿಸಲಿಕ್ಕೆ ಬಾ,
5 ಆಗ ನೀನು ಆರಿಸಿಕೊಂಡ ಪ್ರಜೆಯ ಏಳಿಗೆಯನ
ನೋಡಿ
ನಾನೂ ಅವರೊಂದಿಗೆ ಸಂತೋಷಿಸುವೆನು;
ನಿನ್ನ ಸ್ವಕೀಯರೊಂದಿಗೆ ನಾನೂ ಹಿಗ್ಗುವೆನು.

6 ನಮ್ಮ ಪಿತೃಗಳಂತೆ ನಾವೂ ಪಾಪಿಗಳು;
ಅಪರಾಧಮಾಡಿದೆವು; ದುಷ್ಟತನವನ್ನು ನಡಿಸಿದೆವು.
7 ನಮ್ಮ ಪೂರ್ವಿಕರು ಐಗುಪ್ತದಲ್ಲಿ ನಿನ್ನ ಅದ್ಭು
ಕ್ರಿಯೆಗಳನ್ನು ಲಕ್ಷಿಸಲಿಲ್ಲ;
ನಿನ್ನ ಕೃಪಾತಿಶಯವನ್ನು ಸ್ಮರಿಸಲಿಲ್ಲ.
ಕೆಂಪು ಸಮುದ್ರದ ಬಳಿಯಲ್ಲಿ ನಿನಗೆ ತಿರುಗಿಬಿದ್ದರು
8 ಆದರೂ ಆತನು ತನ್ನ ಹೆಸರಿನ ನಿಮಿತ್ತನಾಗಿಯು
ತನ್ನ ಶೌರ್ಯವನ್ನು ಪ್ರಕಟಿಸುವದಕ್ಕಾಗಿಯೂ ಅ
ರನ್ನು ರಕ್ಷಿಸಿದನು.
9 ಆತನು ಗದರಿಸಲು ಕೆಂಪು ಸಮುದ್ರವು ಒಣಗಿಹೋ
ಯಿತು;
ಅಡವಿಯನ್ನೋ ಎಂಬಂತೆ ಸಾಗರವನ್ನು ದಾಟಿ
ದನು.
10 ಹಗೆಗಳ ಕೈಯಿಂದ ಅವರನ್ನು ತಪ್ಪಿಸಿದನು;
ವೈರಿಹಸ್ತದಿಂದ ಬಿಡಿಸಿದನು.
11 ಜಲರಾಶಿಯು ಅವರ ವಿರೋಧಿಗಳನ್ನು ಮು
ಬಿಟ್ಟಿತು;
ಒಬ್ಬನೂ ಉಳಿಯಲಿಲ್ಲ.
12 ಆಗ ಅವರು ಆತನ ಮಾತು ನಂಬಿ
ಆತನನ್ನು ಕೀರ್ತಿಸಿದರು.

13 ಆದರೆ ಅವರು ಬೇಗನೆ ಆತನ ಕೆಲಸಗಳನ
ಮರೆತು
ಆತನ ಸಂಕಲ್ಪವನ್ನು ಕಾದಿರದೆ
14 ಅರಣ್ಯದಲ್ಲಿ ಆಶಾತುರರಾಗಿ
ಅಡವಿಯಲ್ಲಿ ದೇವರನ್ನು ಪರೀಕ್ಷಿಸಿದರು.
15 ಆತನು ಅವರ ಆಶೆಯನ್ನು ಪೂರೈಸಿದರೂ
ಅವರ ಪ್ರಾಣಕ್ಕೆ ಕ್ಷಯವನ್ನು ಬರಮಾಡಿದನು.
16 ಅವರು ಪಾಳೆಯದಲ್ಲಿ ಮೋಶೆಯ ಮೇಲೆಯ
ಯೆಹೋವನು ಪ್ರತಿಷ್ಠಿಸಿದ ಆರೋನನ ಮೇಲೆಯ
ಹೊಟ್ಟೆಕಿಚ್ಚುಪಡಲು
17 ಭೂಮಿಯು ಬಾಯ್ದೆರೆದು ದಾತಾನನನ್ನು ನು
ಬಿಟ್ಟಿತು;
ಅಬಿರಾಮನ ಕಡೆಯವರನ್ನು ಮುಚ್ಚಿಬಿಟ್ಟಿತು.
18 ಮತ್ತು ಅವರ ಮಧ್ಯದಲ್ಲಿ ಬೆಂಕಿಯುಂಟಾಯಿತ

ಅಗ್ನಿಜ್ವಾಲೆಯು ದುಷ್ಟರನ್ನು ದಹಿಸಿಬಿಟ್ಟಿತು.
19 ಹೋರೇಬಿನಲ್ಲಿ ಎರಕದ ಬಸವನನ್ನು ಮಾಡಿ
ಅದಕ್ಕೆ ಅಡ್ಡಬಿದ್ದರು.
20 ಹೀಗೆ ಅವರು ತಮ್ಮ ದಿವ್ಯಮಹಿಮೆಯನ್ನು ಬಿಟ್ಟು
ಹುಲ್ಲುತಿನ್ನುವ ಎತ್ತಿನ ಜಡಮೂರ್ತಿಯನ್ನು ಹಿಡಿದು
ಕೊಂಡರು.
21 ಐಗುಪ್ತದಲ್ಲಿ ಮಹತ್ತುಗಳನ್ನೂ
ಹಾಮನ ದೇಶದಲ್ಲಿ ಅದ್ಭುತಗಳನ್ನೂ
22 ಕೆಂಪು ಸಮುದ್ರದ ಬಳಿಯಲ್ಲಿ ಘೋರಕೃತ್ಯಗಳನ್ನೂ
ನಡಿಸಿದ
ತಮ್ಮ ರಕ್ಷಕನಾದ ದೇವರನ್ನು ಮರತೇ ಬಿಟ್ಟರು.
23 ಆದದರಿಂದ ಆತನು ಅವರನ್ನು ಸಂಹರಿಸುವೆನೆನ್ನಲು
ಆತನು ಆರಿಸಿಕೊಂಡ ಮೋಶೆಯು ಮಧ್ಯಸ್ಥನಾಗಿ
ಅವರನ್ನು ಸಂಹರಿಸದಂತೆ ಆತನ ಕೋಪವನ್ನು ಶಾಂತ
ಪಡಿಸಿದನು.
24 ಮತ್ತು ಅವರು ಆ ರಮಣೀಯದೇಶವನ್ನು ತಿರ
ಸ್ಕರಿಸಿ
ಆತನ ಮಾತನ್ನು ನಂಬಲಿಲ್ಲ.
25 ತಮ್ಮ ತಮ್ಮ ಗುಡಾರಗಳಲ್ಲಿ ಗುಣುಗುಟ್ಟಿ
ಯೆಹೋವನ ಮಾತಿಗೆ ಕಿವಿಗೊಡಲಿಲ್ಲ.
26 ಇದರಿಂದ ಆತನು ಅವರನ್ನು ಅರಣ್ಯದಲ್ಲಿಯೇ ಬೀಳಿ
ಸುವೆನೆಂದೂ
27 ಅವರ ಸಂತಾನವನ್ನು ದೇಶಾಂತರಗಳಲ್ಲಿ ಚದರಿಸಿ
ಅನ್ಯಜನಾಂಗಗಳ ನಡುವೆ ನಾಶಮಾಡುವೆನೆಂದೂ ಕೈ
ಯೆತ್ತಿದನು.
28 ಅವರು ತಮ್ಮನ್ನು ಬಾಳ್‍ಪೆಗೋರನ ಸೇವೆಗೆ
ಒಪ್ಪಿಸಿ
ಜಡಮೂರ್ತಿಗಳಿಗೆ ಅರ್ಪಿಸಿದ್ದನ್ನು ಊಟಮಾಡಿದರು.
29 ಈ ತಮ್ಮ ಕ್ರಿಯೆಗಳಿಂದ ಆತನನ್ನು ಕೆಣಕಿದರು;
ಅವರಲ್ಲಿ ವ್ಯಾಧಿಯುಂಟಾಯಿತು.
30 ಫಿನೆಹಾಸನು ಎದ್ದು ಅವರನ್ನು ದಂಡಿಸಲು
ಆ ವ್ಯಾಧಿಯು ನಿಂತುಹೋಯಿತು.
31 ಅವನು ಮಾಡಿದ್ದು ತಲತಲಾಂತರಕ್ಕೂ ನೀತಿಯೆಂದು
ಎಣಿಸಲ್ಪಟ್ಟಿತು.
32 ಮತ್ತು ಅವರು ಮೆರೀಬದ ಪ್ರವಾಹಸಮೀಪ
ದಲ್ಲಿ ಆತನನ್ನು ರೇಗಿಸಿದರು.
ಅವರ ದೆಸೆಯಿಂದ ಮೋಶೆಗೆ ಕೇಡುಂಟಾಯಿತು.
33 ಅವರು ದೇವರಾತ್ಮನಿಗೆ ವಿರೋಧವಾಗಿ ನಿಂತದ್ದರಿಂದ
ಮೋಶೆ ದುಡುಕಿ ಮಾತಾಡಿದನು.

34 ಅನ್ಯಜನಾಂಗದವರನ್ನು ಸಂಹರಿಸಬೇಕೆಂಬ ಯೆಹೋ
ವನ ಆಜ್ಞೆಗೆ ಅವಿಧೇಯರಾಗಿ
35 ಅವರೊಡನೆ ಕೂಡಿಕೊಂಡು ಅವರ ದುರಾಚಾರಗಳ
ನ್ನು ಕಲಿತುಕೊಂಡರು.
36 ಅವರ ವಿಗ್ರಹಗಳನ್ನು ಸೇವಿಸಿದರು;
ಅವು ಅವರಿಗೆ ಉರುಲಿನಂತಾದವು.
37 ಅವರು ತಮ್ಮ ಗಂಡು ಹೆಣ್ಣು ಮಕ್ಕಳನ್ನು ಭೂತ
ಗಳಿಗೆ ಬಲಿಕೊಟ್ಟರು.
38 ಕಾನಾನ್ಯರ ಮೂರ್ತಿಗಳ ಅರ್ಪಣೆಗೋಸ್ಕರ ತಮ್ಮ
ಮಕ್ಕಳ ನಿರಪರಾಧರಕ್ತವನ್ನು ಸುರಿಸಿದರು;
ಇಂಥ ಕೊಲೆಗಳಿಂದ ದೇಶವನ್ನು ಹೊಲೆಮಾಡಿದರು.
39 ಅವರು ತಮ್ಮ ದುಷ್ಕೃತ್ಯಗಳಿಂದ ಅಶುದ್ಧರಾದರು.
ದುರಾಚಾರಗಳಿಂದ ದೇವದ್ರೋಹಿಗಳಾದರು.

40 ಆಗ ಯೆಹೋವನ ಕೋಪವು ಅವರ ಮೇಲೆ ಉರಿ
ಗೊಂಡಿತು;
ಆತನು ತನ್ನ ಸ್ವಾಸ್ತ್ಯವಾದ ಪ್ರಜೆಗಳನ್ನು ಅಸಹಿಸಿ
41 ಅವರನ್ನು ಅನ್ಯಜನಾಂಗಗಳ ಕೈಗೆ ಒಪ್ಪಿಸಿದನು.
ವೈರಿಗಳು ಅವರ ಮೇಲೆ ಅಧಿಕಾರನಡಿಸಿದರು;
42 ಶತ್ರುಗಳು ಅವರನ್ನು ಕುಗ್ಗಿಸಿದರು;
ಅವರ ಕೈಕೆಳಗೆ ತಗ್ಗಿಹೋದರು.
43 ಆತನು ಅವರನ್ನು ಅನೇಕಾವರ್ತಿ ರಕ್ಷಿಸಿದರೂ
ಅವರು ತಮ್ಮ ಆಲೋಚನೆಯನ್ನು ಅನುಸರಿಸಿ ಅವಿ
ಧೇಯರಾದರು;
ತಮ್ಮ ಅಕ್ರಮದಿಂದಲೇ ಹೀನಸ್ಥಿತಿಗೆ ಬಂದರು.
44 ಆದರೆ ಆತನು ಕಷ್ಟದಲ್ಲಿದ್ದ ಅವರ ಮೊರೆಯನ್ನು ಕೇಳಿ
ಪರಾಂಬರಿಸಿದನು.
45 ತನ್ನ ಒಡಂಬಡಿಕೆಯನ್ನು ನೆನಪುಮಾಡಿಕೊಂಡು
ತನ್ನ ಕೃಪಾತಿಶಯದಿಂದ ಅವರನ್ನು ಕನಿಕರಿಸಿದನು.
46 ಅವರನ್ನು ಸೆರೆಯೊಯ್ದವರಲ್ಲಿ ಅವರ ಮೇಲೆ ದಯೆ
ಹುಟ್ಟಿಸಿದನು.

47 ಯೆಹೋವನೇ, ನಮ್ಮ ದೇವರೇ, ರಕ್ಷಿಸು;
ಅನ್ಯಜನಗಳಲ್ಲಿ ಚದರಿರುವ ನಮ್ಮನ್ನು ತಿರುಗಿ ಕೂಡಿಸು.
ಆಗ ನಿನ್ನ ಪರಿಶುದ್ಧನಾಮವನ್ನು ಕೊಂಡಾಡುವೆವು;
ನಿನ್ನ ಸ್ತೋತ್ರದಲ್ಲಿ ಹೆಚ್ಚಳಪಡುವೆವು.

48 ಇಸ್ರಾಯೇಲ್‍ದೇವನಾದ ಯೆಹೋವನಿಗೆ ಯುಗ
ಯುಗಾಂತರಗಳ ವರೆಗೂ ಕೊಂಡಾಟವಾಗಲಿ;
ಸರ್ವಜನರೂ ಆಮೆನ್ ಎನ್ನಲಿ.
ಯಾಹುವಿಗೆ ಸ್ತೋತ್ರ!

## ಪಂಚಮ ಭಾಗವು (107—150).

ವಿಮುಕ್ತರ ಕೊಂಡಾಟ.

**107** ಯೆಹೋವನಿಗೆ ಕೃತಜ್ಞತಾಸ್ತುತಿ ಮಾಡಿರಿ;
ಆತನು ಒಳ್ಳೆಯವನು.
ಆತನ ಕೃಪೆಯು ಶಾಶ್ವತವಾಗಿರುವದು.
2 ಯೆಹೋವನ ವಿಮುಕ್ತರು
ಅಂದರೆ ಆತನು ಶತ್ರುಗಳಿಂದ ಬಿಡಿಸಿ
3 ಪೂರ್ವಪಶ್ಚಿಮೋತ್ತರಗಳಲ್ಲಿಯೂ ಸಮುದ್ರದ ಕಡೆ
ಯಲ್ಲಿಯೂ ಇರುವ ದೇಶಗಳಿಂದ
ಕೂಡಿಸಿದವರೆಲ್ಲರೂ ಸ್ತುತಿಮಾಡಲಿ.

4 ಅವರು ಅರಣ್ಯದಲ್ಲಿಯೂ ಮರಳುಕಾಡಿನಲ್ಲಿಯೂ
ದಾರಿತಪ್ಪಿ ಅಲೆಯುವವರಾಗಿ
ಜನವಿರುವ ಊರನ್ನು ಕಾಣದೆ
5 ಹಸಿವೆನೀರಡಿಕೆಗಳಿಂದ ಬಲಗುಂದಿದವರಾಗಿದ್ದರು.

6 ಅವರು ತಮ್ಮ ಇಕ್ಕಟ್ಟಿನಲ್ಲಿ ಯೆಹೋವನಿಗೆ ಮೊರೆ
ಯಿಡಲು
ಆತನು ಅವರನ್ನು ಕಷ್ಟದಿಂದ ಬಿಡಿಸಿದನು.
7 ಜನವಿರುವ ಊರನ್ನು ಸೇರುವಂತೆ ಅವರನ್ನು ಸರಿ
ಯಾದ ದಾರಿಯಲ್ಲಿ ನಡಿಸಿದನು.
8 ಅವರು ಯೆಹೋವನ ಕೃಪೆಗೋಸ್ಕರವೂ
ಆತನು ಮಾನವರಿಗಾಗಿ ನಡಿಸಿದ ಅದ್ಭುತಗಳಿಗೋ
ಸ್ಕರವೂ
ಆತನನ್ನು ಕೊಂಡಾಡಲಿ.
9 ಆತನು ಬಾಯಾರಿದವರ ಆಶೆಯನ್ನು ಪೂರೈಸಿ
ಹಸಿದವರನ್ನು ಮೃಷ್ಟಾನ್ನದಿಂದ ತೃಪ್ತಿಗೊಳಿಸುತ್ತಾನೆ.

10 ಕತ್ತಲಲ್ಲಿಯೂ ಘೋರಾಂಧಕಾರದಲ್ಲಿಯೂ ಬೇಡಿಗ
ಳಿಂದ ಬಂಧಿಸಲ್ಪಟ್ಟು
ನೋವಿನಿಂದ ಬಿದ್ದುಕೊಂಡಿದ್ದರು.
11 ಅವರು ದೇವರ ಕಟ್ಟಳೆಗಳಿಗೆ ವಿರೋಧವಾಗಿ ನಿಂತು
ಪರಾತ್ಪರನ ಸಂಕಲ್ಪವನ್ನು ನಿರಾಕರಿಸಿದ್ದರಿಂದ
12 ಆತನು ಅವರನ್ನು ಕಷ್ಟಗಳಿಂದ ಕುಗ್ಗಿಸಿದನು;
ನಿರಾಶ್ರಯರಾಗಿ ಬಿದ್ದುಹೋದರು.
13 ಅವರು ತಮ್ಮ ಇಕ್ಕಟ್ಟಿನಲ್ಲಿ ಯೆಹೋವನಿಗೆ ಮೊರೆ
ಯಿಡಲು
ಆತನು ಅವರನ್ನು ಕಷ್ಟದಿಂದ ತಪ್ಪಿಸಿದನು.
14 ಆತನು ಅವರ ಬಂಧನಗಳನ್ನು ತೆಗೆದುಹಾಕಿ
ಕತ್ತಲೆಯಿಂದಲೂ ಘೋರಾಂಧಕಾರದಿಂದಲೂ
ಅವರನ್ನು ಹೊರತಂದನು.
15 ಅವರು ಯೆಹೋವನ ಕೃಪೆಗೋಸ್ಕರವೂ
ಆತನು ಮಾನವರಿಗಾಗಿ ನಡಿಸಿದ ಅದ್ಭುತಗಳಿಗೋ
ಸ್ಕರವೂ
ಆತನನ್ನು ಕೊಂಡಾಡಲಿ.
16 ಆತನು ತಾಮ್ರದ ಕದಗಳನ್ನು ಒಡೆದು
ಕಬ್ಬಿಣದ ಅಗುಳಿಗಳನ್ನು ಮುರಿದುಬಿಟ್ಟಿದ್ದಾನೆ.

17 ಮೂರ್ಖರು ಅಪರಾಧದುರಾಚಾರಗಳ ದೆಸೆಯಿಂದ
ಬಾಧೆಗೊಳಗಾದರು.
18 ಎಲ್ಲಾ ಆಹಾರಕ್ಕೂ ಅಸಹ್ಯಪಟ್ಟು
ಮರಣದ್ವಾರಕ್ಕೆ ಸಮೀಪವಾದರು.
19 ಅವರು ತಮ್ಮ ಇಕ್ಕಟ್ಟಿನಲ್ಲಿ ಯೆಹೋವನಿಗೆ ಮೊರೆ
ಯಿಡಲು
ಆತನು ಅವರನ್ನು ಕಷ್ಟದಿಂದ ತಪ್ಪಿಸಿದನು.
20 ಆತನು [ದೂತನನ್ನೋ ಎಂಬಂತೆ] ತನ್ನ ವಾಕ್ಯವನ್ನು
ಕಳುಹಿಸಿ ಅವರನ್ನು ಗುಣಪಡಿಸಿದನು;
ಸಮಾಧಿಗೆ ಸೇರದಂತೆ ಮಾಡಿದನು.
21 ಅವರು ಯೆಹೋವನ ಕೃಪೆಗೋಸ್ಕರವೂ
ಆತನು ಮಾನವರಿಗಾಗಿ ನಡಿಸಿದ ಅದ್ಭುತಗಳಿಗೋ
ಸ್ಕರವೂ
ಆತನನ್ನು ಕೊಂಡಾಡಲಿ.
22 ಕೃತಜ್ಞತಾಯಜ್ಞಗಳನ್ನು ಸಮರ್ಪಿಸಿ
ಉತ್ಸಾಹಧ್ವನಿಮಾಡುತ್ತಾ ಆತನ ಮಹತ್ಕಾರ್ಯಗಳ
ನ್ನು ವರ್ಣಿಸಲಿ.

23 ಹಡಗುಹತ್ತಿ ಸಮುದ್ರಪ್ರಯಾಣಮಾಡುತ್ತಾ
ಮಹಾಜಲರಾಶಿಯಲ್ಲಿ ತಮ್ಮ ಉದ್ಯೋಗವನ್ನು ನಡಿಸು
ವವರು
24 ಯೆಹೋವನ ಮಹತ್ಕಾರ್ಯಗಳನ್ನೂ
ಅಗಾಧಜಲದಲ್ಲಿ ಆತನ ಅದ್ಭುತಗಳನ್ನೂ ನೋಡು
ತ್ತಾರೆ.
25 ಆತನು ಅಪ್ಪಣೆಕೊಡಲು ಬಿರುಗಾಳಿಯುಂಟಾಗಿ
ಅದರಲ್ಲಿ ತೆರೆಗಳನ್ನು ಎಬ್ಬಿಸಿತು.
26 ಅವರು ಆಕಾಶಕ್ಕೆ ಏರುತ್ತಲೂ
ಅಗಾಧಕ್ಕೆ ಇಳಿಯುತ್ತಲೂ
ಕಂಗೆಟ್ಟು ಕರಗಿಹೋದರು.
27 ಅವರು ದಿಕ್ಕುತೋರದವರಾಗಿ
ಸುತ್ತುತ್ತಾ ಕುಡಿಕರಂತೆ ಹೊಯ್ದಾಡುತ್ತಿದ್ದರು.
28 ಅವರು ತಮ್ಮ ಇಕ್ಕಟ್ಟಿನಲ್ಲಿ ಯೆಹೋವನಿಗೆ ಮೊರೆ
ಯಿಡಲು
ಆತನು ಅವರನ್ನು ಕಷ್ಟದಿಂದ ಹೊರತಂದನು.
29 ಆತನು ಬಿರುಗಾಳಿಯನ್ನು ಶಾಂತಪಡಿಸಿದನು;
ತೆರೆಗಳು ನಿಂತವು.
30 ಆಗ ಹಡಗಿನವರು ಸಮುದ್ರವು ಶಾಂತವಾದದ್ದರಿಂದ
ಸಂತೋಷಪಟ್ಟರು.
ಅವರು ಮುಟ್ಟಬೇಕಾದ ರೇವಿಗೆ ಆತನು ಅವರನ್ನು
ಸೇರಿಸಿದನು.
31 ಅವರು ಯೆಹೋವನ ಕೃಪೆಗೋಸ್ಕರವೂ
ಆತನು ಮಾನವರಿಗಾಗಿ ನಡಿಸಿದ ಅದ್ಭುತಗಳಿಗೋ
ಸ್ಕರವೂ
ಆತನನ್ನು ಕೊಂಡಾಡಲಿ.
32 ನೆರೆದ ಸಭೆಯಲ್ಲಿ ಆತನನ್ನು ಕೀರ್ತಿಸಲಿ;
ಹಿರಿಯರ ಕೂಟದಲ್ಲಿ ಕೊಂಡಾಡಲಿ.

33 ಆತನು ನಿವಾಸಿಗಳ ದುಷ್ಟತನಕ್ಕಾಗಿ
ನದಿಗಳನ್ನು ಅರಣ್ಯವಾಗುವಂತೆಯೂ
34 ಬುಗ್ಗೆಗಳನ್ನು ಒಣನೆಲವಾಗುವಂತೆಯೂ
ಫಲಭೂಮಿಯನ್ನು ಉಪ್ಪುನೆಲವಾಗುವಂತೆಯೂ ಮಾಡಿ
ದನು.
35 ಅರಣ್ಯವನ್ನು ಕೆರೆಯಾಗಿಯೂ
ಒಣನೆಲವನ್ನು ಬುಗ್ಗೆಗಳಾಗಿಯೂ ಮಾಡಿ
36 ಅಲ್ಲಿ ಹಸಿದವರನ್ನು ನೆಲೆಗೊಳಿಸಿದನು;
ಅವರು ನಿವಾಸಪಟ್ಟಣವನ್ನು ಕಟ್ಟಿಕೊಂಡು
37 ಹೊಲಗಳನ್ನು ಬಿತ್ತಿ ದ್ರಾಕ್ಷಾಲತೆಗಳನ್ನು ನೆಟ್ಟು
ಆದಾಯವನ್ನು ಕೂಡಿಸಿಕೊಂಡರು.
38 ಆತನು ಆಶೀರ್ವದಿಸಿದ್ದರಿಂದ ಅವರು ಬಹಳವಾಗಿ
ಹೆಚ್ಚಿದರು.
ಅವರಿಗೆ ದನಕರುಗಳೇನೂ ಕಡಿಮೆ ಇರಲಿಲ್ಲ.

39 ಅವರು ಕೇಡುತೊಂದರೆಗಳಿಂದಲೂ ಸಂಕಟದಿಂದಲೂ
ಕುಗ್ಗಿಹೋಗಿ ಸ್ವಲ್ಪ ಜನರಾದರು.
40 ಪ್ರಭುಗಳಿಗೆ ಅಪಮಾನವನ್ನುಂಟುಮಾಡಿ
ಅವರನ್ನು ದಾರಿಯಿಲ್ಲದ ಅರಣ್ಯದಲ್ಲಿ ಅಲೆದಾಡಿಸು
ವಾತನು
41 ಕಷ್ಟದಲ್ಲಿದ್ದ ದೀನರನ್ನು ಉನ್ನತಸ್ಥಿತಿಗೇರಿಸಿ

ಕುರಿಹಿಂಡಿನಂತೆ ಹೆಚ್ಚಿಸಿದನು.
42 ಯಥಾರ್ಥರು ಇದನ್ನು ನೋಡಿ ಹಿಗ್ಗುವರು;
ಕೆಡುಕುಬಾಯಿ ಮುಚ್ಚಿಹೋಗುವದು.

43 ಜ್ಞಾನಿಗಳು ಈ ಸಂಗತಿಗಳನ್ನು ಗಮನಿಸಿ
ಯೆಹೋವನ ಕೃಪಾಕಾರ್ಯಗಳನ್ನು ಗ್ರಹಿಸಿಕೊಳ್ಳಲಿ.

ಸ್ತೋತ್ರವೂ ಜಯವಾಗ್ದಾನ ನೆರವೇರಬೇಕೆಂಬ ಪ್ರಾರ್ಥನೆಯೂ.
ಹಾಡು; ದಾವೀದನ ಕೀರ್ತನೆ.

**108** ದೇವರೇ, ನನ್ನ ಹೃದಯವು ಸ್ಥಿರವಾಗಿದೆ;
ನಾನು ಬಾರಿಸುತ್ತಾ ಹಾಡುವೆನು; ನನ್ನ ಅಂತ
ರಂಗವೂ ಸಹ.
2 ಸ್ವರಮಂಡಲವೇ, ಕಿನ್ನರಿಯೇ, ಎಚ್ಚರವಾಗಿರಿ.
ಸಂಕೀರ್ತನೆಯಿಂದ ಉದಯವನ್ನು ಮುಂಗೊಳ್ಳುವೆನು.
3 ಯೆಹೋವನೇ, ಜನಾಂಗಗಳಲ್ಲಿ ನಿನ್ನನ್ನು ಸ್ತುತಿಸು
ವೆನು;
ಸರ್ವದೇಶದವರೊಳಗೆ ನಿನ್ನನ್ನು ಕೊಂಡಾಡುವೆನು.
4 ಯಾಕಂದರೆ ನಿನ್ನ ಕೃಪೆಯು ಆಕಾಶಕ್ಕಿಂತ ದೊಡ್ಡ
ದಾಗಿದೆ.
ನಿನ್ನ ಸತ್ಯತೆಯು ಮುಗಿಲನ್ನು ಸಿಲುಕುತ್ತದೆ.
5 ದೇವರೇ, ಮೇಲಣ ಲೋಕಗಳಲ್ಲಿ ನಿನ್ನ ಪ್ರಭಾವವು
ಮೆರೆಯಲಿ;
ಭೂಮಂಡಲದ ಮೇಲೆಲ್ಲಾ ನಿನ್ನ ಮಹತ್ವವು ಹಬ್ಬಲಿ.

6 ನಿನ್ನ ಪ್ರಿಯರಾದ ನಮ್ಮ ಮೊರೆಯನ್ನು ಲಾಲಿಸಿ ರಕ್ಷಿಸು,
ನಿನ್ನ ಭುಜಬಲದಿಂದ ನಮ್ಮನ್ನು ಜಯಗೊಳಿಸು.
7 ದೇವರು ತನ್ನ [1]ಪವಿತ್ರತ್ವವನ್ನು ಸಾಕ್ಷಿಮಾಡಿ
ನುಡಿದಿದ್ದಾನೆ.
ಜಯಘೋಷಮಾಡುವೆನು; ಶೆಕೆಮ್ ಪ್ರದೇಶವ
ನ್ನು ಹಂಚುವೆನು.
ಸುಖೋತ್ ಬೈಲನ್ನು ಅಳೆದುಕೊಡುವೆನು.
8 ಗಿಲ್ಯಾದ್ ಸೀಮೆಯೂ ಮನಸ್ಸೆಯ ದೇಶವೂ
ನನ್ನವು.
ಎಫ್ರಾಯಿಮ್ ಗೋತ್ರವು ನನಗೆ ಶಿರಸ್ತ್ರಾಣವು.
ನನ್ನ ರಾಜದಂಡವು ಯೆಹೂದಕುಲವೇ.
9 ಮೋವಾಬ್ ಪ್ರದೇಶವು ನನ್ನ ಸ್ನಾನಪಾತ್ರೆಯು;
ಎದೋಮ್ ಸೀಮೆಯು ನನ್ನ ಕೆರಗಳನ್ನು ಬಿಡುವ
ಸ್ಥಳ.
ಫಿಲಿಷ್ಟಿಯರ ವಿಷಯ ಜಯಘೋಷಮಾಡುವೆನು.
10 ಕೋಟೆಕೊತ್ತಲುಗಳುಳ್ಳ ನಗರಕ್ಕೆ ನನ್ನನ್ನು ಕರೆದು
ಕೊಂಡು ಹೋಗುವವರು ಯಾರು?
ಎದೋಮ್ ಪ್ರಾಂತದೊಳಗೆ ನನ್ನನ್ನು ಸೇರಿಸುವವರು
ಯಾರು?
11 ದೇವರೇ, ನೀನು ನಮ್ಮ ಸೈನ್ಯಗಳ ಸಂಗಡ ಬರಲಿಲ್ಲ
ವಲ್ಲಾ!
ದೇವರೇ, ನಮ್ಮನ್ನು ಕೈಬಿಟ್ಟೆಯಾ?
12 ನಮಗೆ ಕೈಕೊಟ್ಟು ಶತ್ರುಬಾಧೆಯಿಂದ ಪಾರುಮಾಡು.
ಮನುಷ್ಯರ ಸಹಾಯವು ವ್ಯರ್ಥ.
13 ದೇವರಿಂದ ಶೂರಕೃತ್ಯಗಳನ್ನು ನಡಿಸುವೆವು;
ನಮ್ಮ ವೈರಿಗಳನ್ನು ತುಳಿದುಬಿಡುವವನು ಆತನೇ.

ಶತ್ರುವನ್ನು ಶಿಕ್ಷಿಸಿ ನನ್ನನ್ನು ರಕ್ಷಿಸಬೇಕೆಂಬ ಭಕ್ತನ ಪ್ರಾರ್ಥನೆ.
(ಯಾಜಕ 26; ಧರ್ಮೋಪದೇಶ 28; ಕೀರ್ತನೆ 35; 69;
ಮತ್ತಾಯ 5. 38—44.)
ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು;
ದಾವೀದನ ಕೀರ್ತನೆ.

**109** ನಾನು ಸ್ತುತಿಸುವ ದೇವರೇ, ಸುಮ್ಮನಿರಬೇಡ.
2 ದುಷ್ಟನೂ ವಂಚಕನೂ ನನಗೆ ವಿರೋಧವಾಗಿ
ಬಾಯ್ದೆರೆಯ ಮಾಡಿದ್ದಾರೆ.
ಸುಳ್ಳುನಾಲಿಗೆಯು ನನ್ನೊಡನೆ ಮಾತಾಡಿತು.
3 ಅವರು ಹಗೆನುಡಿಗಳಿಂದ ನನ್ನನ್ನು ಮುತ್ತಿಕೊಂಡು
ನಿಷ್ಕಾರಣವಾಗಿ ನನ್ನ ಸಂಗಡ ಯುದ್ಧಮಾಡಿದ್ದಾರೆ.
4 ನಾನು ಅವರನ್ನು ಪ್ರೀತಿಸಿದರೂ ಅವರು ನನ್ನನ್ನು
ವಿರೋಧಿಸುತ್ತಾರೆ;
ನಾನಾದರೋ ನಿನಗೆ ಮೊರೆಯಿಡುತ್ತೇನೆ.
5 ಉಪಕಾರಕ್ಕೆ ಅಪಕಾರವನ್ನು ಮಾಡಿದ್ದಾರೆ;
ನಾನು ಪ್ರೀತಿಸಿದ್ದಕ್ಕೆ ಪ್ರತಿಯಾಗಿ ನನ್ನನ್ನು ದ್ವೇಷಿಸಿ
ದ್ದಾರೆ.

6 ದುಷ್ಟಾಧಿಕಾರಿಯನ್ನು ಅವನ ಮೇಲೆ ನೇಮಿಸು;
ತಪ್ಪುಹೊರಿಸುವವನನ್ನು ಅವನ ಬಲಗಡೆಯಲ್ಲಿ
ನಿಲ್ಲಿಸು.
7 ನ್ಯಾಯವಿಚಾರಣೆಯಲ್ಲಿ ಅವನು ಅಪರಾಧಿಯೆಂದು
ತೀರ್ಪುಹೊಂದಲಿ;
ಅವನ ಪ್ರಾರ್ಥನೆಯೂ ಪಾಪವೆಂದು ಎಣಿಸಲ್ಪಡಲಿ.
8 ಅವನ ಜೀವಿತದಿವಸಗಳು ಸ್ವಲ್ಪವಾಗಿರಲಿ;
ಅವನ ಉದ್ಯೋಗವು ಮತ್ತೊಬ್ಬನಿಗಾಗಲಿ.
9 ಅವನ ಮಕ್ಕಳು ಅನಾಥರೂ, ಹೆಂಡತಿ ವಿಧವೆಯೂ
ಆಗಲಿ.
10 ಅವನ ಮಕ್ಕಳು ತಮ್ಮ ಹಾಳಾದ ಸ್ಥಳಗಳನ್ನು
ಬಿಟ್ಟು
ತಿರುಕರಂತೆ ಅಲೆಯುತ್ತಾ ಭಿಕ್ಷೆಬೇಡಲಿ.

11 ಸಾಲಕೊಟ್ಟವನು ಅವನ ಆಸ್ತಿಯನ್ನೆಲ್ಲಾ ಕಸು
ಕೊಳ್ಳಲಿ;
ಪರರು ಅವನ ಕಷ್ಟಾರ್ಜಿತವನ್ನು ಸುಲುಕೊಳ್ಳಲಿ.
12 ಅವನಿಗೆ ಕೃಪೆಮಾಡುತ್ತಿರುವವನೂ
ಅವನ ದಿಕ್ಕಿಲ್ಲದ ಮಕ್ಕಳಿಗೆ ದಯೆತೋರಿಸುವವ
ನೂ ಯಾವನೂ ಇಲ್ಲವಾಗಲಿ.
13 ಅವನ ಸಂತತಿಯು ನಿರ್ಮೂಲವಾಗಲಿ;
ಎರಡನೆಯ ತಲೆಯಲ್ಲಿಯೇ ಅದು ನಿರ್ನಾಮ
ವಾಗಿ ಹೋಗಲಿ.
14 ಯೆಹೋವನು ಅವನ ಹಿರಿಯರ ಪಾಪವನ್ನು ಮರೆ
ಯದಿರಲಿ;

1) ಅಥವಾ: ಪರಿಶುದ್ಧಸ್ಥಳದಲ್ಲಿ.

ಅವನ ತಾಯಿಯ ಪಾಪವು ಅಳಿದುಹೋಗದಿರಲಿ.
15 ಅವು ಯೆಹೋವನ ಜ್ಞಾಪಕದಲ್ಲಿ ಇದ್ದೇ ಇರಲಿ.
ಆತನು ಅವರ ಹೆಸರನ್ನು ಭೂಮಿಯೊಳಗಿಂದ ತೆಗೆದು ಹಾಕಲಿ.

16 ಯಾಕಂದರೆ ಅವನು ಪ್ರೀತಿಸುವದನ್ನು ಮರೆತು ಬಿಟ್ಟನು.
ಬಡವನನ್ನೂ ದೀನನನ್ನೂ ಮನಗುಂದಿದವನನ್ನೂ ಹಿಂಸಿಸಿ ಕೊಲ್ಲಬೇಕೆಂದು ಯತ್ನಿಸಿದನು.
17 ಶಪಿಸುವದು ಇಷ್ಟವಾಗಿದ್ದದರಿಂದ ಅದು ಅವನಿಗೆ ಬಂತು;
ಆಶೀರ್ವದಿಸುವದು ಇಷ್ಟವಲ್ಲದ್ದರಿಂದ ಅದು ಅವನಿಗೆ ದೂರವಾಯಿತು.
18 ಶಪಿಸುವದೇ ಅವನಿಗೆ ವಸ್ತ್ರವಾಗಿತ್ತು.
ಅದು ನೀರಿನಂತೆ ಅವನ ಅಂತರಂಗದಲ್ಲಿಯೂ
ಎಣ್ಣೆಯಂತೆ ಎಲುಬುಗಳಲ್ಲಿಯೂ ಸೇರಿತು.
19 ಶಾಪವೇ ಅವನ ಹೊದಿಕೆಯೂ
ನಿತ್ಯವಾದ ನಡುಕಟ್ಟೂ ಆಗಲಿ.
20 ನನ್ನನ್ನು ಎದುರಿಸಿ ಕೇಳುಮಾತಾಡುವವರಿಗೆ
ಯೆಹೋವನಿಂದ ಬರುವ ಪ್ರತಿಫಲ ಇದೇ.

21 ಕರ್ತನೇ, ಯೆಹೋವನೇ, ನಿನ್ನ ಕೃಪೆಯು ಹಿತಕರವಾಗಿದೆ;
ನಿನ್ನ ಹೆಸರಿನ ನಿಮಿತ್ತ ನನ್ನ ಪಕ್ಷವನ್ನು ಹಿಡಿದು ರಕ್ಷಿಸು.
22 ನಾನು ಬಡವನೂ ದೀನನೂ ಆಗಿದ್ದೇನಲ್ಲಾ!
ನನ್ನ ಹೃದಯದಲ್ಲಿ ಅಲಗು ನೆಟ್ಟಂತಾಗಿದೆ.
23 ಸಂಜೆಯ ನೆರಳಿನಂತೆ ಗತಿಸಿಹೋಗುತ್ತಿದ್ದೇನೆ;
ಗಾಳಿಯು ಬಡಕೊಂಡುಹೋಗುವ ಮಿಡಿತೆಯಂತಿದ್ದೇನೆ.
24 ಉಪವಾಸದಿಂದ ನನ್ನ ಮೊಣಕಾಲುಗಳು ಬಲಹೀನವಾದವು;
ನನ್ನ ದೇಹವು ಎಣ್ಣೆಯಿಲ್ಲದೆ ಕ್ಷೀಣವಾಯಿತು.
25 ನಾನು ಜನಹಾಸ್ಯಕ್ಕೆ ಗುರಿಯಾಗಿದ್ದೇನೆ;
ನನ್ನನ್ನು ನೋಡುವವರು ತಲೆಯಾಡಿಸುತ್ತಾರೆ.

26 ಯೆಹೋವನೇ, ನನ್ನ ದೇವರೇ, ಸಹಾಯಮಾಡು;
ನಿನ್ನ ಕೃಪೆಗೆ ತಕ್ಕಂತೆ ರಕ್ಷಿಸು.
27 ಆಗ ಅವರು ಇದು ನಿನ್ನ ಕೈಕೆಲಸವೆಂದೂ
ಯೆಹೋವನಾದ ನೀನೇ ಮಾಡಿದ್ದೆಂದೂ ತಿಳಿದುಕೊಳ್ಳುವರು.
28 ಅವರು ಶಪಿಸಲಿ, ಚಿಂತೆಯಿಲ್ಲ; ನೀನು ಆಶೀರ್ವದಿಸುವಿ.
ಅವರು ಎದ್ದು ಅಪಮಾನಹೊಂದುವರು.
ಆದರೆ ನಿನ್ನ ಸೇವಕನಾದ ನಾನು ಉಲ್ಲಾಸಿಸುವೆನು.
29 ಮಾನಭಂಗವೇ ನನ್ನ ವಿರೋಧಿಗಳಿಗೆ ವಸ್ತ್ರವಾಗಲಿ;
ನಾಚಿಕೆಯೇ ಅವರ ಹೊದಿಕೆಯಾಗಲಿ.
30 ಯೆಹೋವನನ್ನು ಬಹಳವಾಗಿ ಕೊಂಡಾಡುವೆನು;
ಜನಸಮೂಹದ ಮಧ್ಯದಲ್ಲಿ ಆತನನ್ನು ಕೀರ್ತಿಸುವೆನು.
31 ಆತನು ದೀನನ ಬಲಗಡೆಯಲ್ಲಿ ನಿಂತುಕೊಂಡು
ಪ್ರಾಣಶಿಕ್ಷೆ ವಿಧಿಸುವವರ ಕೈಯಿಂದ ತಪ್ಪಿಸಿ ರಕ್ಷಿಸುವನು.

ಚೀಯೋನಿನ ಅರಸನಿಗೆ ಯೆಹೋವನ ಸಿಂಹಾಸನವೂ ಮಹಾಯಾಜಕೋದ್ಯೋಗವೂ ಸಿಕ್ಕುವವೆಂಬ ವಾಗ್ದಾನ.
(ಕೀರ್ತನೆ 2; 21.)
ದಾವೀದನ ಕೀರ್ತನೆ.

**110** ಯೆಹೋವನು ನನ್ನ ಒಡೆಯನಿಗೆ—
ನಾನು ನಿನ್ನ ವಿರೋಧಿಗಳನ್ನು ನಿನಗೆ ಪಾದಪೀಠವಾಗ ಮಾಡುವ ತನಕ
ನನ್ನ ಬಲಗಡೆಯಲ್ಲಿ ಕೂತುಕೊಂಡಿರು
ಎಂದು ನುಡಿದನು.
2 ಯೆಹೋವನು ನಿನ್ನ ರಾಜದಂಡದ ಆಳಿಕೆಯನ್ನು ಚೀಯೋನಿನ ಹೊರಗೂ ಹಬ್ಬಿಸುವನು;
ನಿನ್ನ ವೈರಿಗಳ ಮಧ್ಯದಲ್ಲಿ ದೊರೆತನಮಾಡು.
3 ನೀನು ಸೈನ್ಯವನ್ನು ಕೂಡಿಸುವ ದಿನದಲ್ಲಿ
ನಿನ್ನ ಪ್ರಜೆಗಳು ಸಂತೋಷದಿಂದ ತಾವಾಗಿಯೇ ಸೇರಿಕೊಳ್ಳುವರು.
ಪರಿಶುದ್ಧವಸ್ತ್ರಭೂಷಿತರಾದ ನಿನ್ನ ಯುವಕಸೈನಿಕರು
ಉದಯಕಾಲದ ಇಬ್ಬನಿಯಂತಿರುವರು.

4 ನೀನು ಸದಾಕಾಲವೂ ಮೆಲ್ಕಿಜೆದೇಕನ ತರಹ ಯಾಜಕನು ಎಂದು
ಯೆಹೋವನು ಆಣೆಯಿಟ್ಟು ನುಡಿದಿದ್ದಾನೆ; ಪಶ್ಚಾತ್ತಾಪಪಡುವದಿಲ್ಲ.
5 ನಿನ್ನ ಬಲಗಡೆಯಲ್ಲಿರುವ ಕರ್ತನು
ತನ್ನ ಕೋಪದ ದಿನದಲ್ಲಿ ರಾಜರನ್ನು ಖಂಡಿಸುವನು.
6 ಆತನು ಜನಾಂಗಗಳಲ್ಲಿ ನ್ಯಾಯಸ್ಥಾಪಿಸುವಾಗ
ವಿಸ್ತಾರವಾದ ರಣರಂಗದಲ್ಲಿ ಶತ್ರುಗಳ ಶಿರಸ್ಸನ್ನು ಛೇದಿಸಿ
ಹೆಣಗಳಿಂದ ಅದನ್ನು ತುಂಬಿಸುವನು.
7 [ಒಡೆಯನು] ದಾರಿಯಲ್ಲಿ ಹಳ್ಳದ ನೀರು ಕುಡಿದು
ತಲೆಯೆತ್ತುವನು.

ದೇವಸ್ತುತಿ.
(ಕೀರ್ತನೆ 112.)

**111** ಯಾಹುವಿಗೆ ಸ್ತೋತ್ರ!
א ನಾನು ಯೆಹೋವನನ್ನು ಕೊಂಡಾಡುವೆನು;
ב ಯಥಾರ್ಥರ ಕೂಟದಲ್ಲಿಯೂ ನೆರೆದ ಸಭೆಯಲ್ಲಿಯೂ ಮನಃಪೂರ್ವಕವಾಗಿ ಕೀರ್ತಿಸುವೆನು.
2 ג ಯೆಹೋವನ ಕೃತ್ಯಗಳು ಮಹತ್ತಾದವುಗಳು;
ד ಅವುಗಳಲ್ಲಿ ಸಂತೋಷಿಸುವವರು ಅವುಗಳನ್ನು ಧ್ಯಾನಿಸುವರು.
3 ה ಆತನ ಕಾರ್ಯವು ಘನಮಾನಗಳುಳ್ಳದ್ದು;
ו ಆತನ ನೀತಿಯು ಸದಾಕಾಲವೂ ಇರುವದು.
4 ז ಆತನು ತನ್ನ ಅದ್ಭುತಕೃತ್ಯಗಳ ಜ್ಞಾಪಕವನ್ನು ಉಳಿಯಮಾಡಿದ್ದಾನೆ.

ח ಯೆಹೋವನು ದಯೆಯೂ ಕನಿಕರವೂ ಉಳ್ಳವನು.
5 ט ತನ್ನಲ್ಲಿ ಭಯಭಕ್ತಿಯುಳ್ಳವರಿಗೆ ಆಹಾರವನ್ನು ಕೊಟ್ಟಿದ್ದಾನೆ;
י ತನ್ನ ಒಡಂಬಡಿಕೆಯನ್ನು ಯಾವಾಗಲೂ ನೆನಪಿನಲ್ಲಿಡುವನು.
6 כ ಆತನು ಅನ್ಯಜನಗಳ ಸ್ವಾಸ್ತ್ಯವನ್ನು ತನ್ನ ಪ್ರಜೆಗೆ ಕೊಡುವದರ ಮೂಲಕ
ל ಸ್ವಪ್ರತಾಪವನ್ನು ತೋರ್ಪಡಿಸಿದ್ದಾನೆ.

7 מ ಆತನ ಕೈಕೆಲಸಗಳು ನೀತಿಸತ್ಯತೆಗಳನ್ನು ಪ್ರಕಟಿಸುತ್ತವೆ;
נ ಆತನ ನಿಯಮಗಳೆಲ್ಲಾ ಸ್ಥಿರವಾಗಿವೆ.
8 ס ಅವು ದೃಢವಾದ ಆಧಾರವುಳ್ಳವು; ಯುಗಯುಗಾಂತರಕ್ಕೂ ಇರುವವು.
ע ಸತ್ಯನೀತಿಗಳಿಗನುಸಾರವಾಗಿ ವಿಧಿಸಲ್ಪಟ್ಟಿವೆ.
9 פ ಯೆಹೋವನು ತನ್ನ ಜನರಿಗೆ ವಿಮೋಚನೆಯನ್ನುಂಟುಮಾಡಿದ್ದಾನೆ;
צ ತನ್ನ ಒಡಂಬಡಿಕೆಯನ್ನು ನಿತ್ಯಕ್ಕೂ ಸ್ಥಾಪಿಸಿದ್ದಾನೆ;
ק ಆತನ ನಾಮವು ಪರಿಶುದ್ಧವೂ ಭಯಂಕರವೂ ಆಗಿದೆ.
10 ר ಯೆಹೋವನ ಭಯವೇ ಜ್ಞಾನಕ್ಕೆ ಮೂಲವು;
ש ಆತನ ಕಟ್ಟಳೆಗಳನ್ನು ನಡಿಸುವವರು ಪೂರ್ಣವಿವೇಕಿಗಳು.
ת ಆತನ ಸ್ತುತಿಯು ನಿರಂತರವಾದದ್ದು.

ಭಕ್ತರ ಧನ್ಯತೆ.
(ಕೀರ್ತನೆ 111.)

**112** ಯಾಹುವಿಗೆ ಸ್ತೋತ್ರ!
א ಯಾವನು ಯೆಹೋವನಲ್ಲಿ ಭಯಭಕ್ತಿಯುಳ್ಳವನಾಗಿ
ב ಆತನ ಆಜ್ಞೆಗಳಲ್ಲಿ ಅತ್ಯಾನಂದಪಡುವನೋ ಅವನೇ ಧನ್ಯನು.
2 ג ಅವನ ಸಂತಾನವು ಲೋಕದಲ್ಲಿ ಬಲಿಷ್ಠವಾಗುವದು;
ד ನೀತಿವಂತನ ವಂಶವು ಶುಭಹೊಂದುವದು.
3 ה ಅವನ ಮನೆಯಲ್ಲಿ ಧನೈಶ್ವರ್ಯಗಳಿರುವವು;
ו ಅವನ ನೀತಿಯು ಸದಾಕಾಲವೂ ಫಲಿಸುತ್ತಿರುವದು.
4 ז ಯಥಾರ್ಥರಿಗೆ ಕತ್ತಲೆಯಲ್ಲಿಯೂ ಜ್ಯೋತಿ ಮೂಡುವದು;
ח ದಯೆಯೂ ಕನಿಕರವೂ ನೀತಿಯೂ ಉಳ್ಳ ದೇವರೇ ಆ ಜ್ಯೋತಿ.
5 ט ದಯಾಳುವಾಗಿ ಧನಸಹಾಯಮಾಡುವವನೂ
י ತನ್ನ ಕಾರ್ಯಗಳನ್ನು ನೀತಿಯಿಂದ ನಡಿಸುವವನೂ ಭಾಗ್ಯವಂತನು.
6 כ ಅವನು ಎಂದೂ ಕದಲುವದಿಲ್ಲ;
ל ನೀತಿವಂತನನ್ನು ಯಾವಾಗಲೂ ನೆನಸುವರು.
7 מ ಅವನಿಗೆ ಕೆಟ್ಟ ಸುದ್ದಿಯ ಭಯವಿರುವದಿಲ್ಲ;
נ ಯೆಹೋವನಲ್ಲಿ ಭರವಸವಿಟ್ಟಿರುವದರಿಂದ ಅವನ ಮನಸ್ಸು ಸ್ಥಿರವಾಗಿರುವದು.
8 ס ದುಷ್ಟರಿಗಾಗುವ ಶಿಕ್ಷೆಯನ್ನು ಕಣ್ಣಾರೆ ಕಾಣುವೆನೆಂಬ ಭರವಸವಿರುವದರಿಂದ
ע ಅವನ ಮನಸ್ಸು ದೃಢವಾಗಿದೆ, ಹೆದರುವದಿಲ್ಲ.
9 פ 1) ಬಡವರಿಗೆ ಉದಾರವಾಗಿ ಕೊಡುತ್ತಾನೆ;
צ ಅವನ ನೀತಿಯ ಫಲವು ಸದಾಕಾಲವೂ ಇರುವದು.
ק ಮಹಿಮೆಯೊಡನೆ ಅವನ ಕೊಂಬು ಎತ್ತಲ್ಪಡುವದು.
10 ר ದುಷ್ಟನು ನೋಡಿ ವ್ಯಥೆಪಡುವನು;
ש ಅವನು ಹಲ್ಲುಕಡಿಯುತ್ತಾ ಲಯಹೊಂದುವನು.
ת ದುಷ್ಟರ ನಿರೀಕ್ಷೆಯು ಭಂಗವಾಗುವದು.

ಮಹೋನ್ನತನೂ ದೀನಬಂಧುವೂ ಆಗಿರುವ
ಯೆಹೋವನನ್ನು ಸ್ತುತಿಸುವದು.

**113** ಯಾಹುವಿಗೆ ಸ್ತೋತ್ರ!
ಯೆಹೋವನ ಸೇವಕರೇ, ಸ್ತೋತ್ರಮಾಡಿರಿ;
ಯೆಹೋವನಾಮಸ್ತುತಿಮಾಡಿರಿ.
2 ಇಂದಿನಿಂದ ಯುಗಯುಗಕ್ಕೂ ಯೆಹೋವನಾಮವು ಕೀರ್ತಿಸಲ್ಪಡಲಿ.
3 ಯೆಹೋವನ ನಾಮವು ಮೂಡಣದಿಂದ ಪಡುವಣ ವರೆಗೂ ಸ್ತುತಿಹೊಂದಲಿ.

4 ಯೆಹೋವನು ಎಲ್ಲಾ ಜನಾಂಗಗಳಲ್ಲಿ ಮಹೋನ್ನತನು;
ಆತನ ಪ್ರಭಾವವು ಮೇಲಣ ಲೋಕಗಳಲ್ಲಿ ಮೆರೆಯುತ್ತದೆ.
5 ನಮ್ಮ ಯೆಹೋವದೇವರಿಗೆ ಸಮಾನರು ಯಾರು?
ಆತನು ಉನ್ನತಲೋಕದಲ್ಲಿ ಆಸನಾರೂಢನಾಗಿ
6 ಆಕಾಶವನ್ನೂ ಭೂಮಿಯನ್ನೂ ನೋಡಲಿಕ್ಕೆ ಬಾಗುತ್ತಾನೆ.

7 ಆತನು ದೀನರನ್ನು ಧೂಳಿಯಿಂದ ಎಬ್ಬಿಸಿ
ಬಡವರನ್ನು ತಿಪ್ಪೆಯಿಂದ ಎತ್ತುತ್ತಾನೆ.
8 ಪ್ರಭುಗಳ ಜೊತೆಯಲ್ಲಿ
ಅಂದರೆ ಅವರ ಜನಾಧಿಪತಿಗಳೊಡನೆ ಅವರನ್ನು ಕುಳ್ಳಿರಿಸುತ್ತಾನೆ.
9 ಬಂಜೆಯು ಮಕ್ಕಳೊಂದಿಗಾಗಿ
ಸಂತೋಷದಿಂದ ಮನೆಯಲ್ಲಿ ವಾಸಿಸುವ ಹಾಗೆ ಮಾಡುತ್ತಾನೆ.
ಯಾಹುವಿಗೆ ಸ್ತೋತ್ರ!

---

1) ಅಥವಾ: ದಯಾಳುವಾಗಿ ಸಾಲಕೊಡುವವನು ಭಾಗ್ಯವಂತನು; ಅಂಥವನು ವ್ಯಾಜ್ಯವಾಗುವಲ್ಲಿ ಜಯಹೊಂದುವನು.

ಇಸ್ರಾಯೇಲ್ಯರಕ್ಷಕನ ಮಹತ್ತು.

114 ಇಸ್ರಾಯೇಲ್ಯರು ಐಗುಪ್ತದೇಶವನ್ನೂ
ಯಾಕೋಬನ ಮನೆತನದವರು ಅನ್ಯಭಾಷೆಯ ಜನಾಂಗವನ್ನೂ ಬಿಟ್ಟಮೇಲೆ
2 ಯೆಹೂದವು ದೇವರ ಪರಿಶುದ್ಧವಾಸಸ್ಥಾನವೂ
ಇಸ್ರಾಯೇಲು ಆತನ ರಾಜ್ಯವೂ ಆದವು.

3 ಸಮುದ್ರವು ಕಂಡು ಓಡಿಹೋಯಿತು;
ಯೊರ್ದನ್ ಹೊಳೆಯು ಹಿಂದಿರುಗಿತು.
4 ಪರ್ವತಗಳು ಟಗರುಗಳಂತೆಯೂ
ಗುಡ್ಡಗಳು ಕುರಿಮರಿಗಳಂತೆಯೂ ಹಾರಾಡಿದವು.

5 ಸಮುದ್ರವೇ, ನಿನಗೇನಾಯಿತು? ಯಾಕೆ ಓಡಿಹೋಗುತ್ತೀ?
ಯೊರ್ದನೇ, ಯಾಕೆ ಹಿಂದಿರುಗುತ್ತೀ?
6 ಪರ್ವತಗಳೇ, ನೀವು ಟಗರುಗಳಂತೆಯೂ
ಗುಡ್ಡಗಳೇ, ನೀವು ಕುರಿಮರಿಗಳಂತೆಯೂ ಯಾಕೆ ಹಾರಾಡುತ್ತೀರಿ?

7 ಭೂಲೋಕವೇ, ಕರ್ತನು ಪ್ರತ್ಯಕ್ಷನಾಗಿದ್ದಾನೆ,
ಯಾಕೋಬನ ದೇವರು ನಿನ್ನ ಮುಂದೆ ಇದ್ದಾನೆ, ಕಂಪಿಸು.
8 ಆತನು ಬಂಡೆಯನ್ನು ಕೆರೆಯನ್ನಾಗಿಯೂ
ಶಿಲೆಯನ್ನು ಬುಗ್ಗೆಯನ್ನಾಗಿಯೂ ಮಾರ್ಪಡಿಸುತ್ತಾನೆ.

ರಕ್ಷಕನು ಯೆಹೋವನೊಬ್ಬನೇ.

115 ನಮ್ಮನ್ನಲ್ಲ, ಯೆಹೋವನೇ, ನಮ್ಮನ್ನಲ್ಲ,
ನಿನ್ನ ಪ್ರೀತಿಸತ್ಯತೆಗಳ ನಿಮಿತ್ತವಾಗಿ ನಿನ್ನ ಹೆಸರನ್ನೇ ಘನಪಡಿಸು.
2 ಅವರ ದೇವರು ಎಲ್ಲಿದ್ದಾನೆಂದು ಅನ್ಯರು ಯಾಕೆ ಹೇಳಬೇಕು?
3 ನಮ್ಮ ದೇವರು ಪರಲೋಕದಲ್ಲಿದ್ದಾನೆ;
ಆತನು ತನಗೆ ಬೇಕಾದದ್ದನ್ನೆಲ್ಲಾ ಮಾಡುತ್ತಾನೆ.

4 ಅವರ ವಿಗ್ರಹಗಳೋ ಬೆಳ್ಳಿಬಂಗಾರದವುಗಳೇ;
ಅವು ಮನುಷ್ಯರ ಕೈಕೆಲಸವಷ್ಟೇ.
5 ಅವು ಬಾಯಿದ್ದರೂ ಮಾತಾಡುವದಿಲ್ಲ;
ಕಣ್ಣಿದ್ದರೂ ನೋಡುವದಿಲ್ಲ.
6 ಕಿವಿಯಿದ್ದರೂ ಕೇಳುವದಿಲ್ಲ;
ಮೂಗಿದ್ದರೂ ಮೂಸುವದಿಲ್ಲ.
7 ಕೈಯುಂಟು, ಮುಟ್ಟುವದಿಲ್ಲ;
ಕಾಲುಂಟು, ನಡೆಯುವದಿಲ್ಲ;
ಅವುಗಳ ಗಂಟಲಲ್ಲಿ ಶಬ್ದವೇ ಇಲ್ಲ.
8 ಅವುಗಳನ್ನು ಮಾಡುವವರೂ
ಅವುಗಳಲ್ಲಿ ಭರವಸವಿಡುವವರೂ ಅವುಗಳಂತೆಯೇ.

9 ಇಸ್ರಾಯೇಲ್ಯರೇ, ಯೆಹೋವನಲ್ಲಿ ಭರವಸವಿಡಿರಿ.
ಅವರ ಸಹಾಯಕನೂ ಗುರಾಣಿಯೂ ಆತನೇ.
10 ಆರೋನನ ಮನೆತನದವರೇ, ಯೆಹೋವನಲ್ಲಿ ಭರವಸ
ವಿಡಿರಿ.
ಅವರ ಸಹಾಯಕನೂ ಗುರಾಣಿಯೂ ಆತನೇ.
11 ಯೆಹೋವನ ಭಕ್ತರೇ, ಯೆಹೋವನಲ್ಲಿ ಭರವಸ
ವಿಡಿರಿ.
ಅವರ ಸಹಾಯಕನೂ ಗುರಾಣಿಯೂ ಆತನೇ.

12 ಯೆಹೋವನು ನಮ್ಮನ್ನು ನೆನಪುಮಾಡಿಕೊಂಡಿದ್ದಾನೆ
ಸಣ್ಣವರು ಮೊದಲುಗೊಂಡು ದೊಡ್ಡವರ ಪರ್ಯಂತರ
ಎಲ್ಲರನ್ನೂ ಆಶೀರ್ವದಿಸುವನು.
13 ಇಸ್ರಾಯೇಲನ ಮನೆತನದವರನ್ನು ಆಶೀರ್ವದಿಸು
ವನು;
ಆರೋನನ ಮನೆತನದವರನ್ನು ಆಶೀರ್ವದಿಸುವನು.
ತನ್ನ ಭಕ್ತರನ್ನು ಆಶೀರ್ವದಿಸುವನು.

14 ಯೆಹೋವನು ನಿಮ್ಮನ್ನೂ ನಿಮ್ಮ ಮಕ್ಕಳನ್ನೂ ಅಭಿ
ವೃದ್ಧಿಪಡಿಸಲಿ;
15 ಯೆಹೋವನಿಂದ ನಿಮಗೆ ಆಶೀರ್ವಾದವಾಗಲಿ.
ಆತನು ಭೂಪರಲೋಕಗಳನ್ನು ಉಂಟುಮಾಡಿದ್ದಾನೆ

16 ಪರಲೋಕವು ಯೆಹೋವನದು;
ಭೂಲೋಕವನ್ನು ನರಸಂತಾನಕ್ಕೆ ಕೊಟ್ಟಿದ್ದಾನೆ.
17 ಸತ್ತವರು ಯಾಹುವನ್ನು ಸ್ತುತಿಸುವದಿಲ್ಲ;
ಮೌನಲೋಕವನ್ನು ಸೇರಿದವರಲ್ಲಿ ಯಾರೂ ಆತನನ್ನು ಕೀರ್ತಿಸುವದಿಲ್ಲ.
18 ನಾವೋ ಇಂದಿನಿಂದ ಸದಾಕಾಲವೂ
ಯಾಹುವನ್ನು ಕೊಂಡಾಡುವೆವು.
ಯಾಹುವಿಗೆ ಸ್ತೋತ್ರ!

ಕೃತಜ್ಞತಾಯಜ್ಞಕೀರ್ತನೆ.
(ಯೆಶಾಯ 38.)

116 ಯೆಹೋವನನ್ನು ಪ್ರೀತಿಸುತ್ತೇನೆ;
ಆತನು ನನ್ನ ಮೊರೆಯನ್ನು ಕೇಳುವವನು.
2 ಆತನು ನನ್ನ ವಿಜ್ಞಾಪನೆಗೆ ಕಿವಿಗೊಟ್ಟಿದ್ದಾನೆ;
ಜೀವದಿಂದಿರುವ ವರೆಗೂ ಆತನನ್ನೇ ಪ್ರಾರ್ಥಿಸುವೆನು
3 ಮರಣಪಾಶಗಳು ನನ್ನನ್ನು ಸುತ್ತಿಕೊಂಡಿದ್ದವು;
ಪಾತಾಳವೇದನೆಗಳು ನನ್ನನ್ನು ಹಿಡಿದಿದ್ದವು.
ಚಿಂತೆಯಲ್ಲಿಯೂ ಇಕ್ಕಟ್ಟಿನಲ್ಲಿಯೂ ಬಿದ್ದುಹೋ
ದ್ದೆನು.
4 ಆಗ ಯೆಹೋವನ ಹೆಸರು ಹೇಳಿ—
ಯೆಹೋವನೇ, ಕೃಪೆಮಾಡಿ ನನ್ನ ಪ್ರಾಣವನ್ನು ರಕ್
ಸು ಎಂದು ಪ್ರಾರ್ಥಿಸಿದೆನು.

5 ಯೆಹೋವನು ಕೃಪಾಳುವೂ ನೀತಿವಂತನೂ ಆಗಿದ್ದಾನೆ
ನಮ್ಮ ದೇವರು ಕನಿಕರವುಳ್ಳವನು.
6 ಯೆಹೋವನು ಸಾಧುಜನರನ್ನು ಕಾಪಾಡುವವನು;
ಕುಗ್ಗಿದವನಾದ ನನ್ನನ್ನು ರಕ್ಷಿಸಿದನು.
7 ನನ್ನ ಮನವೇ, ನಿನ್ನ ವಿಶ್ರಾಂತಿಯ ನೆಲೆಗೆ ತಿರುಗು
ಯೆಹೋವನು ನಿನಗೆ ಮಹೋಪಕಾರಗಳನ್ನು ಮಾ
ಡಿದ್ದಾನಲ್ಲಾ.

8 ಯೆಹೋವನೇ, ನಾನು ಜೀವಲೋಕದಲ್ಲಿದ್ದು
ನಿನಗೆ ನಡೆದುಕೊಳ್ಳಬೇಕೆಂದು
9 ನೀನು ನನ್ನ ಪ್ರಾಣವನ್ನು ಮರಣಕ್ಕೆ ತಪ್ಪಿಸಿ ಕಣ್ಣೀರನ್ನು ನಿಲ್ಲಿಸಿ
ನನ್ನ ಪಾದಗಳನ್ನು ಎಡವದಂತೆ ಕಾದಿದ್ದೀ.

10 [1]ನಾನು ಬಹಳವಾಗಿ ಕುಗ್ಗಿಹೋದೆನೆಂದು ಹೇಳಿದಾಗಲೂ
ಮನುಷ್ಯರೆಲ್ಲಾ ಟೊಳ್ಳೇ ಎಂದು ಭ್ರಾಂತಿಯಿಂದ ಉಸಿರಿದಾಗಲೂ
11 ಭರವಸವುಳ್ಳವನಾಗಿಯೇ ಇದ್ದೆನು.
12 ಯೆಹೋವನ ಮಹೋಪಕಾರಗಳಿಗೆ ಬದಲೇನು ಮಾಡಲಿ?
13 ರಕ್ಷಣಾಪಾತ್ರೆಯನ್ನು ತೆಗೆದುಕೊಂಡು
ಯೆಹೋವನಾಮವನ್ನು ಪ್ರಖ್ಯಾತಿಪಡಿಸುವೆನು.
14 ಯೆಹೋವನಿಗೆ ಹೊತ್ತ ಹರಕೆಗಳನ್ನು
ಆತನ ಎಲ್ಲಾ ಜನರ ಮುಂದೆಯೇ ಸಲ್ಲಿಸುವೆನು.

15 ಯೆಹೋವನು ತನ್ನ ಭಕ್ತರ ಮರಣವನ್ನು ಅಲ್ಪವೆಂದು ಎಣಿಸುವದಿಲ್ಲ.
16 ಯೆಹೋವನೇ, ಕರುಣಿಸು, ನಾನು ನಿನ್ನ ಕಿಂಕರನು;
ನಿನ್ನ ದಾಸಿಯ ಮಗನೂ ನಿನ್ನ ಸೇವಕನೂ ಆಗಿದ್ದೇನೆ.
ನನ್ನ ಬಂಧನಗಳನ್ನು ಬಿಚ್ಚಿಬಿಟ್ಟಿದ್ದೀ.
17 ನಾನು ನಿನಗೆ ಕೃತಜ್ಞತಾಯಜ್ಞಗಳನ್ನು ಸಮರ್ಪಿಸುವೆನು;
ಯೆಹೋವನಾಮವನ್ನು ಪ್ರಖ್ಯಾತಿಪಡಿಸುವೆನು.
18 ಯೆರೂಸಲೇಮೇ, ನಿನ್ನ ಮಧ್ಯದಲ್ಲಿ,
ಯೆಹೋವನ ಮಂದಿರದ ಅಂಗಳಗಳಲ್ಲಿ
19 ಆತನಿಗೆ ಹೊತ್ತ ಹರಕೆಗಳನ್ನು
ಆತನ ಎಲ್ಲಾ ಜನರ ಮುಂದೆಯೇ ಸಲ್ಲಿಸುವೆನು
ಯಾಹುವಿಗೆ ಸ್ತೋತ್ರ!

ಭೂಲೋಕವೆಲ್ಲಾ ಯೆಹೋವನನ್ನು ಕೊಂಡಾಡಬೇಕು.
(ಕೀರ್ತನೆ 66.)

117 ಸರ್ವಜನಾಂಗಗಳೇ, ಯೆಹೋವನನ್ನು ಕೀರ್ತಿಸಿರಿ;
ಸಮಸ್ತಪ್ರಜೆಗಳೇ, ಆತನನ್ನು ಕೊಂಡಾಡಿರಿ.
2 ಆತನ ಕೃಪೆಯು ನಮ್ಮ ಮೇಲೆ ಅಪಾರವಾಗಿದೆ;
ಯೆಹೋವನ ಸತ್ಯತೆಯು ಸದಾ ಇರುವದು.
ಯಾಹುವಿಗೆ ಸ್ತೋತ್ರ!

ಹಬ್ಬದ ಗೀತ.
(ನೆಹೆಮೀಯ 8. 14—18. ಯೆಶಾಯ 12.)

118 ಯೆಹೋವನಿಗೆ ಕೃತಜ್ಞತಾಸ್ತುತಿಮಾಡಿರಿ;
ಆತನು ಒಳ್ಳೆಯವನು.
ಆತನ ಕೃಪೆಯು ಶಾಶ್ವತವು.
2 ಇಸ್ರಾಯೇಲ್ಯರು—
ಆತನ ಕೃಪೆಯು ಶಾಶ್ವತವೆಂದು ಹೇಳಲಿ.
3 ಆರೋನನ ಮನೆತನದವರು—
ಆತನ ಕೃಪೆಯು ಶಾಶ್ವತವೆಂದು ಹೇಳಲಿ.
4 ಯೆಹೋವನ ಭಕ್ತರು—
ಆತನ ಕೃಪೆಯು ಶಾಶ್ವತವೆಂದು ಹೇಳಲಿ.

5 ಇಕ್ಕಟ್ಟಿನಲ್ಲಿ ಯಾಹುವಿಗೆ ಮೊರೆಯಿಟ್ಟೆನು;
ಆತನು ಸದುತ್ತರವನ್ನು ದಯಪಾಲಿಸಿ ನನ್ನನ್ನು ವಿಶಾಲಸ್ಥಳದಲ್ಲಿ ಇಟ್ಟನು.
6 ಯೆಹೋವನು ನನಗಿದ್ದಾನೆ; ಭಯಪಡೆನು.
ಮನುಷ್ಯನು ನನಗೆ ಏನು ಮಾಡಾನು?
7 ಯೆಹೋವನು ನನಗೆ ಇದ್ದಾನೆ; ಆತನೇ ನನಗೆ ಸಹಾಯಕನು;
ನನ್ನ ವೈರಿಗಳಿಗಾಗುವ ಶಿಕ್ಷೆಯನ್ನು ನೋಡುವೆನು.
8 ಮನುಷ್ಯರಲ್ಲಿ ಭರವಸವಿಡುವದಕ್ಕಿಂತ
ಯೆಹೋವನನ್ನು ಆಶ್ರಯಿಸುವದು ಒಳ್ಳೇದು.
9 ಪ್ರಭುಗಳಲ್ಲಿ ಭರವಸವಿಡುವದಕ್ಕಿಂತ
ಯೆಹೋವನನ್ನು ಆಶ್ರಯಿಸುವದು ಒಳ್ಳೇದು.

10 ಜನಾಂಗದವರೆಲ್ಲಾ ನನ್ನನ್ನು ಸುತ್ತಿಕೊಂಡರು;
ಯೆಹೋವನ ಹೆಸರಿನಿಂದ ಅವರನ್ನು ಸಂಹರಿಸುವೆನು.
11 ಅವರು ಸುತ್ತಲೂ ನನ್ನನ್ನು ಮುತ್ತಿದರು;
ಯೆಹೋವನ ಹೆಸರಿನಿಂದ ಅವರನ್ನು ಸಂಹರಿಸುವೆನು.
12 ಅವರು ಜೇನ್ನೊಣಗಳಂತೆ ನನ್ನನ್ನು ಕವಿದರು;
ಮುಳ್ಳಿನ ಬೆಂಕಿಯಂತೆ ಕ್ಷಣದಲ್ಲಿ ಅಳಿದುಹೋಗುವರು.
ಯೆಹೋವನ ಹೆಸರಿನಿಂದ ಅವರನ್ನು ಸಂಹರಿಸುವೆನು.

13 [ವೈರಿಯೇ,] ನನ್ನನ್ನು ಬೀಳ ನೂಕಿದಿ;
ಆದರೆ ಯೆಹೋವನು ನನಗೆ ಸಹಾಯಮಾಡಿದನು.
14 ನನ್ನ ಬಲವೂ ಕೀರ್ತನೆಯೂ ಯಾಹುವೇ;
ಆತನಿಂದ ನನಗೆ ರಕ್ಷಣೆಯುಂಟಾಯಿತು.
15 ಉತ್ಸಾಹಧ್ವನಿಯೂ ಜಯಘೋಷವೂ ನೀತಿವಂತರ ಗುಡಾರಗಳಲ್ಲಿವೆ;
ಯೆಹೋವನ ಬಲಗೈ ಪರಾಕ್ರಮವನ್ನು ನಡಿಸುತ್ತದೆ.
16 ಯೆಹೋವನ ಬಲಗೈ ಉನ್ನತವಾಗಿದೆ;
ಯೆಹೋವನ ಬಲಗೈ ಪರಾಕ್ರಮವನ್ನು ನಡಿಸುತ್ತದೆ.

17 ನಾನು ಸಾಯುವದಿಲ್ಲ;
ಜೀವದಿಂದಿದ್ದು ಯಾಹುವಿನ ಕ್ರಿಯೆಗಳನ್ನು ಸಾರುವೆನು.
18 ಯಾಹು ನನ್ನನ್ನು ಕಠಿನವಾಗಿ ಶಿಕ್ಷಿಸಿದನು;
ಮರಣಕ್ಕೆ ಒಪ್ಪಿಸಲಿಲ್ಲ.

---

1) ಗ್ರೀಕ್ ಮೂಲ: ನಂಬಿದೆನು ಆದದರಿಂದ ಮಾತಾಡಿದೆನು. ಬಹಳವಾಗಿ ಕುಗ್ಗಿಹೋದೆನು. ಎಲ್ಲಾ ಮನುಷ್ಯರು ಸುಳ್ಳುಗಾರರೆಂದು ಭ್ರಾಂತಿಯಿಂದ ಉಸಿರಿದೆನು.

19 ನೀತಿದ್ವಾರಗಳನ್ನು ತೆರೆಯಿರಿ;
ಒಳಗೆ ಪ್ರವೇಶಿಸಿ ಯಾಹುವನ್ನು ಕೊಂಡಾಡುವೆನು.

20 ಇದು ಯೆಹೋವನ ಮಂದಿರದ್ವಾರವು;
ಇದರೊಳಗೆ ಪ್ರವೇಶಿಸತಕ್ಕವರು ನೀತಿವಂತರೇ.

21 ನನಗೆ ಸದುತ್ತರವನ್ನು ದಯಪಾಲಿಸಿ ರಕ್ಷಿಸಿದಾತನೇ,
ನಿನ್ನನ್ನು ಕೊಂಡಾಡುತ್ತೇನೆ.
22 ಮನೆಕಟ್ಟುವವರು ಬೇಡವೆಂದು ಬಿಟ್ಟ ಕಲ್ಲೇ
ಮುಖ್ಯವಾದ ಮೂಲೆಗಲ್ಲಾಯಿತು;
23 ಇದು ಯೆಹೋವನಿಂದಲೇ ಆಯಿತು;
ನಮಗೆ ಆಶ್ಚರ್ಯವಾಗಿ ತೋರುತ್ತದೆ.
24 ಈ ದಿನವು ಯೆಹೋವನಿಂದಲೇ ನೇಮಕವಾದದ್ದು;
ಇದರಲ್ಲಿ ನಾವು ಉಲ್ಲಾಸದಿಂದ ಆನಂದಿಸೋಣ.

25 ಯೆಹೋವನೇ, ದಯವಿಟ್ಟು ರಕ್ಷಿಸು;
ಯೆಹೋವನೇ, ದಯವಿಟ್ಟು ಸಾಫಲ್ಯಕೊಡು.

26 ಯೆಹೋವನ ಹೆಸರಿನಲ್ಲಿ ಒಳಗೆ ಬರುವವನಿಗೆ ಆಶೀರ್ವಾದ;
ಯೆಹೋವನ ಮಂದಿರದಲ್ಲಿರುವ ನಾವು ನಿಮ್ಮನ್ನು ಆಶೀರ್ವದಿಸುತ್ತೇವೆ.

27 ಯೆಹೋವನೇ ದೇವರು; ಆತನು ನಮಗೆ ಪ್ರಕಾಶವನ್ನು ಅನುಗ್ರಹಿಸಿದ್ದಾನೆ.
1)ರೆಂಬೆಗಳನ್ನು ಹಿಡಿದುಕೊಂಡು ಮೆರವಣಿಗೆಯಾಗಿ ಯಜ್ಞವೇದಿಯ ಕೊಂಬುಗಳ ಸಮೀಪಕ್ಕೆ ಬನ್ನಿರಿ.
28 ನೀನು ನನ್ನ ದೇವರು; ನಿನ್ನನ್ನು ಕೊಂಡಾಡುತ್ತೇನೆ;
ನನ್ನ ದೇವರೇ, ನಿನ್ನನ್ನು ಘನಪಡಿಸುತ್ತೇನೆ.
29 ಯೆಹೋವನಿಗೆ ಕೃತಜ್ಞತಾಸ್ತುತಿಮಾಡಿರಿ; ಆತನು ಒಳ್ಳೆಯವನು.
ಆತನ ಕೃಪೆಯು ಶಾಶ್ವತವಾದದ್ದು.

ಧರ್ಮಶಾಸ್ತ್ರಮಹತ್ತನ್ನು ವರ್ಣಿಸುವ, ಇಬ್ರಿಯ ಅಕ್ಷರ ಕ್ರಮಾನುಸಾರವಾದ ಕೀರ್ತನೆ.
(ಕೀರ್ತನೆ 19. 7—11.)

א

**119** ಯೆಹೋವನ ಧರ್ಮಶಾಸ್ತ್ರವನ್ನು ಅನುಸರಿಸಿ ಸದಾಚಾರಿಗಳಾಗಿ ನಡೆಯುವವರು ಧನ್ಯರು.
2 ಆತನ ಕಟ್ಟಳೆಗಳನ್ನು ಕೈಕೊಂಡು
ಸಂಪೂರ್ಣಮನಸ್ಸಿನಿಂದ ಆತನನ್ನು ಹುಡುಕುವವರು ಭಾಗ್ಯವಂತರು.
3 ಅವರು ಆತನ ಮಾರ್ಗದಲ್ಲಿ ನಡೆಯುತ್ತಾರೆ;
ಅನ್ಯಾಯಮಾಡುವದೇ ಇಲ್ಲ.
4 ನಿನ್ನ ನೇಮಗಳನ್ನು ಜಾಗರೂಕತೆಯಿಂದ ಕೈಕೊಂಡು ನಡಿಸಬೇಕೆಂದು
ನೀನೇ ಆಜ್ಞಾಪಿಸಿರುತ್ತೀ.
5 ನಿನ್ನ ನಿಬಂಧನೆಗಳನ್ನು ಕೈಕೊಳ್ಳುವದರಲ್ಲಿ
ನಾನು ಸ್ಥಿರಮನಸ್ಸುಳ್ಳವನಾಗಿದ್ದರೆ ಒಳ್ಳೇದು!
6 ಹೀಗೆ ನಿನ್ನ ಆಜ್ಞೆಗಳನ್ನೆಲ್ಲಾ ಲಕ್ಷಿಸುವವನಾದರೆ
ಆಶಾಭಂಗಪಡೆನು.
7 ನಾನು ನಿನ್ನ ನೀತಿವಿಧಿಗಳನ್ನು ಕಲಿತಹಾಗೆಲ್ಲಾ
ನಿನ್ನನ್ನು ಯಥಾರ್ಥಹೃದಯದಿಂದ ಕೊಂಡಾಡುತ್ತಾ ಹೋಗುವೆನು.
8 ನಿನ್ನ ನಿಬಂಧನೆಗಳನ್ನು ಅನುಸರಿಸುವ ನನ್ನನ್ನು
ಸಂಪೂರ್ಣವಾಗಿ ಕೈಬಿಡಬೇಡ.

ב

9 ಯೌವನಸ್ಥನು ತನ್ನ ನಡತೆಯನ್ನು ಶುದ್ಧಪಡಿಸಿಕೊಳ್ಳುವದು ಯಾವದರಿಂದ?
ನಿನ್ನ ವಾಕ್ಯವನ್ನು ಗಮನಿಸಿ ನಡೆಯುವದರಿಂದಲೇ
10 ನಾನು ಪೂರ್ಣಮನಸ್ಸಿನಿಂದ ನಿನ್ನನ್ನು ಹುಡುಕುತ್ತೇನೆ;
ನಿನ್ನ ಆಜ್ಞೆಗಳಿಗೆ ತಪ್ಪಿಹೋಗದಂತೆ ನನ್ನನ್ನು ಕಾಯಿ
11 ನಿನಗೆ ವಿರೋಧವಾಗಿ ಪಾಪಮಾಡದಂತೆ
ನಿನ್ನ ನುಡಿಗಳನ್ನು ನನ್ನ ಹೃದಯದಲ್ಲಿಟ್ಟುಕೊಂಡಿದ್ದೇನೆ.
12 ಸ್ತುತಿಪಾತ್ರನಾದ ಯೆಹೋವನೇ,
ನಿನ್ನ ನಿಬಂಧನೆಗಳನ್ನು ನನಗೆ ಕಲಿಸು.
13 ನನ್ನ ತುಟಿಗಳು ನಿನ್ನ ವಿಧಿವಚನಗಳನ್ನೆಲ್ಲಾ ವರ್ಣಿಸುತ್ತವೆ.
14 ಸರ್ವಸಂಪತ್ತಿನಲ್ಲಿ ಹೇಗೋ
ಹಾಗೆಯೇ ನಿನ್ನ ಕಟ್ಟಳೆಯ ಮಾರ್ಗದಲ್ಲಿ ಆನಂದಿಸುತ್ತೇನೆ.
15 ನಿನ್ನ ನೇಮಗಳನ್ನು ಧ್ಯಾನಿಸುತ್ತಾ
ನಿನ್ನ ದಾರಿಯನ್ನು ಲಕ್ಷ್ಯೀಕರಿಸಿಕೊಳ್ಳುವೆನು.
16 ನಿನ್ನ ನಿಬಂಧನೆಗಳಲ್ಲಿ ಉಲ್ಲಾಸಪಡುವೆನು;
ನಿನ್ನ ವಾಕ್ಯವನ್ನು ಮರೆಯುವದಿಲ್ಲ.

ג

17 ನಿನ್ನ ಸೇವಕನಾದ ನನ್ನ ಮೇಲೆ ದಯವಿಡು;
ಆಗ ಜೀವದಿಂದಿದ್ದು ನಿನ್ನ ವಾಕ್ಯವನ್ನು ಕೈಕೊಳ್ಳುವೆನು.
18 ನನ್ನ ಕಣ್ಣು ತೆರೆ;
ಆಗ ನಿನ್ನ ಧರ್ಮಶಾಸ್ತ್ರದ ಅದ್ಭುತಗಳನ್ನು ಕಂಡುಕೊಳ್ಳುವೆನು.
19 ನಾನು ಭೂಲೋಕದಲ್ಲಿ ಪ್ರವಾಸಿಯಾಗಿದ್ದೇನೆ;
ನಿನ್ನ ಆಜ್ಞೆಗಳನ್ನು ನನಗೆ ಮರೆಮಾಡಬೇಡ.
20 ಯಾವಾಗಲೂ ನಿನ್ನ ವಿಧಿಗಳನ್ನೇ ಹಂಬಲಿಸುತ್ತಿರು
ನನ್ನ ಪ್ರಾಣವು ಜಜ್ಜಿಹೋಗಿದೆ.
21 ನೀನು ಗರ್ವಿಷ್ಠರನ್ನು ಗದರಿಸುತ್ತೀ;
ನಿನ್ನ ಆಜ್ಞೆಗಳನ್ನು ಮೀರಿದವರು ಶಾಪಗ್ರಸ್ತರು.
22 ನಿನ್ನ ಕಟ್ಟಳೆಗಳನ್ನು ಕೈಕೊಂಡವನಾದ
ನನಗಿರುವ ನಿಂದಾಪಮಾನಗಳನ್ನು ತೊಲಗಿಸು.

1) ಅಥವಾ: ಯಜ್ಞಪಶುವಿಗೆ ಹಗ್ಗಹಾಕಿ ಯಜ್ಞವೇದಿಯ ಕೊಂಬುಗಳ ಸಮೀಪಕ್ಕೆ ತನ್ನಿರಿ.

23 ಪ್ರಭುಗಳು ಕೂತುಕೊಂಡು ನನಗೆ ವಿರೋಧವಾಗಿ ಒಳಸಂಚುಮಾಡಿದರೂ
ನಿನ್ನ ಸೇವಕನು ನಿನ್ನ ನಿಬಂಧನೆಗಳನ್ನೇ ಧ್ಯಾನಿಸುತ್ತಿರುವನು.
24 ನಿನ್ನ ಕಟ್ಟಳೆಗಳು ನನ್ನ ಆನಂದವು, ಅವೇ ನನ್ನ ಮಂತ್ರಾಲೋಚಕರು.

ד

25 ನನ್ನ ಪ್ರಾಣವು ಧೂಳಿನಲ್ಲಿ ಸೇರಿಹೋಗುತ್ತದೆ;
ನಿನ್ನ ವಾಗ್ದಾನಕ್ಕನುಸಾರವಾಗಿ ನನ್ನನ್ನು ಉಜ್ಜೀವಿಸಮಾಡು.
26 ನನ್ನ ಯಾತ್ರಾನುಭವವನ್ನು ನಿನಗೆ ಹೇಳಿಕೊಂಡಾಗ
ನನಗೆ ಸದುತ್ತರವನ್ನು ದಯಪಾಲಿಸಿದಿ;
ನಿನ್ನ ನಿಬಂಧನೆಗಳನ್ನು ನನಗೆ ಉಪದೇಶಿಸು.
27 ನಿನ್ನ ನೇಮಗಳ ದಾರಿಯನ್ನು ತಿಳಿಯಪಡಿಸು;
ಆಗ ನಿನ್ನ ಅದ್ಭುತಕೃತ್ಯಗಳನ್ನು ಧ್ಯಾನಿಸುವೆನು.
28 ಮನೋವ್ಯಥೆಯಿಂದ ಕಣ್ಣೀರುಸುರಿಸುತ್ತೇನೆ;
ನಿನ್ನ ವಾಗ್ದಾನಕ್ಕನುಸಾರವಾಗಿ ನನ್ನನ್ನು ಬಲಪಡಿಸು.
29 ಮಿಥ್ಯಾಮಾರ್ಗವನ್ನು ನನಗೆ ದೂರಮಾಡು;
ನಿನ್ನ ಧರ್ಮಶಾಸ್ತ್ರವನ್ನು ನನಗೆ ಅನುಗ್ರಹಿಸು.
30 ಭಕ್ತಿಮಾರ್ಗವನ್ನು ಆರಿಸಿಕೊಂಡಿದ್ದೇನೆ;
ನಿನ್ನ ವಿಧಿಗಳನ್ನು ಮುಂದೆಯೇ ಇಟ್ಟುಕೊಂಡಿದ್ದೇನೆ.
31 ನಾನು ನಿನ್ನ ಕಟ್ಟಳೆಗಳನ್ನು ಅಪ್ಪಿಕೊಂಡಿದ್ದೇನೆ;
ಯೆಹೋವನೇ, ನನಗೆ ಆಶಾಭಂಗಪಡಿಸಬೇಡ.
32 ನೀನು ನನ್ನ ಅಂತರಾತ್ಮವನ್ನು ಬಿಡುಗಡೆಮಾಡು;
ಆಗ ಆಸಕ್ತಿಯಿಂದ ನಿನ್ನ ಆಜ್ಞಾಮಾರ್ಗವನ್ನು ಅನುಸರಿಸುವೆನು.

ה

33 ಯೆಹೋವನೇ, ನಿನ್ನ ನಿಬಂಧನೆಗಳ ಮಾರ್ಗವನ್ನು ಉಪದೇಶಿಸು;
ಕಡೇತನಕ ಅದರಲ್ಲಿಯೇ ನಡೆಯುವೆನು.
34 ನನಗೆ ಜ್ಞಾನವನ್ನು ದಯಪಾಲಿಸು;
ಆಗ ನಿನ್ನ ಧರ್ಮಶಾಸ್ತ್ರವನ್ನು ಪೂರ್ಣಮನಸ್ಸಿನಿಂದ ಕೈಕೊಂಡು ನಡೆಯುವೆನು.
35 ನಿನ್ನ ಆಜ್ಞಾಮಾರ್ಗದಲ್ಲಿ ನನ್ನನ್ನು ನಡಿಸು;
ಅದೇ ನನ್ನ ಇಷ್ಟ.
36 ನನ್ನ ಮನಸ್ಸನ್ನು ದ್ರವ್ಯಾಶೆಗಲ್ಲ,
ನಿನ್ನ ಕಟ್ಟಳೆಗಳಿಗೆ ತಿರುಗಿಸು.
37 ವ್ಯರ್ಥಕಾರ್ಯಗಳಲ್ಲಿ ದೃಷ್ಟಿಯಿಡದಂತೆ ನನ್ನನ್ನು ಕಾಪಾಡು;
ನಿನ್ನ ಮಾರ್ಗದಲ್ಲಿ ನಡೆಯುವಂತೆ ನನ್ನನ್ನು ಚೈತನ್ಯಗೊಳಿಸು.
38 ನೀನು ನಿನ್ನಲ್ಲಿ ಭಯಭಕ್ತಿಯುಳ್ಳವರಿಗೋಸ್ಕರ ಹೇಳಿದ ನುಡಿಯನ್ನು
ನಿನ್ನ ಸೇವಕನ ವಿಷಯದಲ್ಲಿ ನೆರವೇರಿಸು.
39 ನನ್ನ ಅವಮಾನವನ್ನು ತೊಲಗಿಸು;
ಅದಕ್ಕೋಸ್ಕರ ಅಂಜುತ್ತಿದ್ದೇನೆ.
ನಿನ್ನ ವಿಧಿಗಳು ಹಿತಕರವಾಗಿವೆ.
40 ಇಗೋ, ನಿನ್ನ ನೇಮಗಳನ್ನು ಪ್ರೀತಿಸುತ್ತೇನೆ;
ನಿನ್ನ ನೀತಿಗನುಸಾರವಾಗಿ ನನ್ನನ್ನು ಚೈತನ್ಯಗೊಳಿಸು.

ו

41 ಯೆಹೋವನೇ, ನಿನ್ನ ಕೃಪೆಯು ನನಗೆ ದೊರಕಲಿ;
ನಿನ್ನ ನುಡಿಗನುಸಾರವಾಗಿ ರಕ್ಷಣೆಯುಂಟಾಗಲಿ.
42 ಆಗ ನನ್ನನ್ನು ನಿಂದಿಸುವವನಿಗೆ ಉತ್ತರಕೊಡುವೆನು;
ನಾನು ನಿನ್ನ ವಾಕ್ಯದಲ್ಲಿ ಭರವಸವಿಟ್ಟಿದ್ದೇನಲ್ಲಾ.
43 ಸತ್ಯವಾಕ್ಯವನ್ನು ನನ್ನ ಬಾಯಿಂದ ತೆಗೆಯಬೇಡ.
ನಿನ್ನ ನ್ಯಾಯವಿಧಿಗಳನ್ನು ನಿರೀಕ್ಷಿಸಿಕೊಂಡಿದ್ದೇನೆ.
44 ನಿನ್ನ ಧರ್ಮಶಾಸ್ತ್ರವನ್ನು ಸದಾ ತಪ್ಪದೆ ಕೈಕೊಳ್ಳುವೆನು.
45 ನಾನು ನಿನ್ನ ನಿಯಮಗಳನ್ನು ಅಭ್ಯಾಸಿಸುವವನಾದ್ದರಿಂದ
ಅಟಂಕವಿಲ್ಲದೆ ನಡೆಯುವೆನು.
46 ಅರಸುಗಳ ಮುಂದೆಯೂ ನಿನ್ನ ಕಟ್ಟಳೆಗಳ ವಿಷಯ ಮಾತಾಡುವೆನು;
ನಾಚಿಕೆಪಡುವದಿಲ್ಲ.
47 ನಿನ್ನ ಆಜ್ಞೆಗಳಲ್ಲಿ ಆನಂದಪಡುತ್ತೇನೆ;
ಅವು ನನಗೆ ಇಷ್ಟವಾಗಿವೆ.
48 ನಿನ್ನ ಆಜ್ಞೆಗಳಿಗಾಗಿಯೇ ಕೈಯೊಡ್ಡುತ್ತೇನೆ, ಅವು ನನಗೆ ಇಷ್ಟವಾಗಿವೆ;
ನಿನ್ನ ನಿಬಂಧನೆಗಳನ್ನು ಧ್ಯಾನಿಸುವೆನು.

ז

49 ನಿನ್ನ ವಾಗ್ದಾನವನ್ನು ನಿನ್ನ ಸೇವಕನಿಗೋಸ್ಕರ ನೆನಪುಮಾಡಿಕೋ;
ನನ್ನಲ್ಲಿ ನಿರೀಕ್ಷೆಯನ್ನು ಹುಟ್ಟಿಸಿದ್ದೀಯಲ್ಲಾ!
50 ನಿನ್ನ ನುಡಿಯು ನನ್ನನ್ನು ಚೈತನ್ಯಗೊಳಿಸುತ್ತದೆ;
ಆಪತ್ಕಾಲದಲ್ಲಿ ಇದೇ ನನಗೆ ಆದರಣೆ.
51 ಗರ್ವಿಷ್ಠರು ನನ್ನನ್ನು ಬಹಳವಾಗಿ ಹಾಸ್ಯಮಾಡಿದರು;
ಆದರೂ ನಾನು ನಿನ್ನ ಧರ್ಮಶಾಸ್ತ್ರವನ್ನು ಬಿಡಲಿಲ್ಲ.
52 ಯೆಹೋವನೇ, ನಿನ್ನ ಪುರಾತನ ವಿಧಿಗಳನ್ನು ನೆನಪುಮಾಡಿಕೊಂಡು
ನನ್ನನ್ನು ಸಂತೈಸಿಕೊಂಡಿದ್ದೇನೆ.
53 ನಿನ್ನ ಧರ್ಮಶಾಸ್ತ್ರಭ್ರಷ್ಟರಾದ ದುಷ್ಟರಿಗಾಗಿ ಉರಿಗೊಂಡಿದ್ದೇನೆ.
54 ನನ್ನ ಪ್ರವಾಸದ ಮನೆಯಲ್ಲಿ
ನಿನ್ನ ನಿಬಂಧನೆಗಳು ನನಗೆ ಗಾಯನವಾದವು.
55 ಯೆಹೋವನೇ, ರಾತ್ರಿಯಲ್ಲಿ ನಿನ್ನ ನಾಮವನ್ನು ಸ್ಮರಿಸಿಕೊಳ್ಳುತ್ತೇನೆ;
ನಿನ್ನ ಧರ್ಮಶಾಸ್ತ್ರವನ್ನು ಕೈಕೊಳ್ಳುತ್ತೇನೆ.
56 ನಿನ್ನ ನೇಮಗಳನ್ನು ಅನುಸರಿಸಿದ್ದರಿಂದ
ಇದೆಲ್ಲಾ ನನಗೆ ದೊರಕಿತು.

ח

57 ಯೆಹೋವನೇ, ನನ್ನ ಪಾಲು ನೀನೇ;
ನಿನ್ನ ವಾಕ್ಯಗಳನ್ನು ಕೈಕೊಳ್ಳುವೆನೆಂದು ನಿರ್ಣಯಿಸಿಕೊಂಡಿದ್ದೇನೆ.
58 ಪೂರ್ಣಮನಸ್ಸಿನಿಂದ ನಿನ್ನ ದಯೆಯನ್ನು ಅಪೇಕ್ಷಿಸಿದ್ದೇನೆ;
ನಿನ್ನ ನುಡಿಗನುಸಾರವಾಗಿ ನನಗೆ ಪ್ರಸನ್ನನಾಗು.
59 ನನ್ನ ನಡತೆಯನ್ನು ಶೋಧಿಸಿದೆನು;
ನಿನ್ನ ಕಟ್ಟಳೆಗಳ ಕಡೆಗೆ ತಿರುಗಿಕೊಂಡಿದ್ದೇನೆ.
60 ನಿನ್ನ ಆಜ್ಞೆಗಳನ್ನು ಅನುಸರಿಸುವದರಲ್ಲಿ ಆಸಕ್ತನಾದೆನು;
ಆಲಸ್ಯಮಾಡಲಿಲ್ಲ.
61 ದುಷ್ಟರ ಪಾಶಗಳು ನನ್ನನ್ನು ಸುತ್ತಿಕೊಂಡವು;
ಆದರೂ ನಾನು ನಿನ್ನ ಧರ್ಮಶಾಸ್ತ್ರವನ್ನು ಮರೆಯಲಿಲ್ಲ.
62 ನಿನ್ನ ನೀತಿವಿಧಿಗಳಿಗೋಸ್ಕರ ನಿನ್ನನ್ನು ಕೊಂಡಾಡಲು
ಮಧ್ಯರಾತ್ರಿಯಲ್ಲಿ ಏಳುವೆನು.
63 ನಿನ್ನ ನೇಮಗಳನ್ನು ಕೈಕೊಂಡು ನಿನ್ನಲ್ಲಿ ಭಯಭಕ್ತಿಯುಳ್ಳವರಿಗೆ ನಾನು ಸಂಗಡಿಗನು.
64 ಯೆಹೋವನೇ, ಭೂಲೋಕವು ನಿನ್ನ ಕೃಪೆಯಿಂದ ಪೂರ್ಣವಾಗಿದೆ.
ನಿನ್ನ ನಿಬಂಧನೆಗಳನ್ನು ನನಗೆ ಬೋಧಿಸು.

ט

65 ಯೆಹೋವನೇ, ನೀನು ನಿನ್ನ ವಾಗ್ದಾನಕ್ಕೆ ತಕ್ಕಂತೆ
ನಿನ್ನ ಸೇವಕನಿಗೆ ಮಹೋಪಕಾರಮಾಡಿದ್ದೀ.
66 ಉತ್ಕೃಷ್ಟವಾದ ಜ್ಞಾನವಿವೇಕಗಳನ್ನು ನನಗೆ ಹೇಳಿಕೊಡು;
ನಿನ್ನ ಆಜ್ಞೆಗಳನ್ನು ನಂಬಿಕೊಂಡಿದ್ದೇನಲ್ಲಾ.
67 ಕಷ್ಟಾನುಭವಕ್ಕಿಂತ ಮುಂಚೆ ತಪ್ಪಿಹೋಗುತ್ತಿದ್ದೆನು;
ಈಗಲಾದರೋ ನಿನ್ನ ನುಡಿಗಳನ್ನು ಕೈಕೊಳ್ಳುತ್ತೇನೆ.
68 ನೀನು ಒಳ್ಳೆಯವನೂ ಒಳ್ಳೆಯದನ್ನು ಮಾಡುವವನೂ ಆಗಿದ್ದೀ;
ನಿನ್ನ ನಿಬಂಧನೆಗಳನ್ನು ನನಗೆ ಬೋಧಿಸು.
69 ಗರ್ವಿಷ್ಠರು ನನಗೆ ವಿರೋಧವಾಗಿ ಸುಳ್ಳುಕಲ್ಪಿಸಿದ್ದಾರೆ;
ನಾನಾದರೋ ಪೂರ್ಣಮನಸ್ಸಿನಿಂದ ನಿನ್ನ ನೇಮಗಳನ್ನು ಕೈಕೊಳ್ಳುವೆನು.
70 ಕೊಬ್ಬಿನಂತೆ ಅವರ ಬುದ್ಧಿ ಮಂದವಾಯಿತು;
ನಾನಾದರೋ ನಿನ್ನ ಧರ್ಮಶಾಸ್ತ್ರದಲ್ಲಿ ಉಲ್ಲಾಸಪಡುತ್ತೇನೆ.
71 ಕಷ್ಟಾನುಭವವು ಹಿತಕರವಾಯಿತು;
ಅದರಿಂದಲೇ ನಿನ್ನ ನಿಬಂಧನೆಗಳನ್ನು ಕಲಿತೆನು.
72 ನೀನು ಉಸಿರಿದ ಧರ್ಮಶಾಸ್ತ್ರವು
ಸಾವಿರಾರು ಚಿನ್ನಬೆಳ್ಳಿಯ ನಾಣ್ಯಗಳಿಗಿಂತಲೂ ನನಗೆ ಅತಿಪ್ರಿಯವಾಗಿದೆ.

י

73 ನಿನ್ನ ಕೈಗಳು ನನ್ನನ್ನು ರೂಪಿಸಿ ನಿಲ್ಲಿಸಿದವು;
ನಿನ್ನ ಆಜ್ಞೆಗಳನ್ನು ಕಲಿಯುವದಕ್ಕೆ ನನಗೆ ಬು
ಯನ್ನು ಕೊಡು.
74 ನಿನ್ನಲ್ಲಿ ಭಯಭಕ್ತಿಯುಳ್ಳವರು ನನ್ನನ್ನು ನೋ
ಸಂತೋಷಿಸಲಿ;
ನಾನು ನಿನ್ನ ವಾಕ್ಯವನ್ನೇ ನಿರೀಕ್ಷಿಸಿಕೊಂಡಿದ್ದೇನಲ್ಲಾ
75 ಯೆಹೋವನೇ, ನಿನ್ನ ವಿಧಿಗಳು ನೀತಿಯುಳ್ಳವುಗಳ
ಗಿವೆ ಎಂದೂ
ನೀನು ನಂಬಿಕೆಯಿಂದಲೇ ನನ್ನನ್ನು ಕುಗ್ಗಿಸಿದ್ದೀ ಎಂದ
ತಿಳಿದುಕೊಂಡಿದ್ದೇನೆ.
76 ನಿನ್ನ ಸೇವಕನಿಗೆ ನುಡಿದ ಪ್ರಕಾರ ನನ್ನ ಸಮಾಧಾ
ಕ್ಕೋಸ್ಕರ ಕೃಪೆಯನ್ನು ದಯಪಾಲಿಸು.
77 ನಾನು ಬದುಕುವಂತೆ ನಿನ್ನ ಕರುಣೆಯು ನನ
ದೊರೆಯಲಿ;
ನಿನ್ನ ಧರ್ಮಶಾಸ್ತ್ರವೇ ನನ್ನ ಆನಂದವಾಗಿದೆ.
78 ಗರ್ವಿಷ್ಠರು ಮಾನಭಂಗಹೊಂದಲಿ;
ಅವರು ಮೋಸದಿಂದ ನನಗೆ ಕೇಡುಮಾಡಿದ್ದಾರೆ.
ನಾನಾದರೋ ನಿನ್ನ ನೇಮಗಳನ್ನು ಧ್ಯಾನಿಸುತ್ತಿ
ವೆನು.
79 ನಿನ್ನಲ್ಲಿ ಭಯಭಕ್ತಿಯುಳ್ಳವರು ನನ್ನ ಕಡೆಗೆ ತಿರು
ಕೊಂಡು
ನಿನ್ನ ಕಟ್ಟಳೆಗಳನ್ನು ಗ್ರಹಿಸಿಕೊಳ್ಳಲಿ.
80 ನನ್ನ ಮನಸ್ಸು ನಿನ್ನ ನಿಬಂಧನೆಗಳಲ್ಲಿ ಆಸ
ವಾಗಲಿ;
ಆಗ ನನ್ನ ಆಶಾಭಂಗಕ್ಕೆ ಕಾರಣವಿರುವದಿಲ್ಲ.

כ

81 ನಿನ್ನ ರಕ್ಷಣೆಯ ಬಯಕೆಯಿಂದಲೇ ನನ್ನ ಮನ
ಬಲಗುಂದಿತು;
ನಾನು ನಿನ್ನ ವಾಕ್ಯದಲ್ಲೇ ನಿರೀಕ್ಷೆಯುಳ್ಳವನಾ
ದ್ದೇನೆ.
82 ನಿನ್ನ ನುಡಿಯನ್ನು ನೆರವೇರಿಸಿ ಯಾವಾಗ ನನ್ನನ
ಸಂತೈಸುವಿ
ಎಂಬದಕ್ಕೋಸ್ಕರವೇ ನನ್ನ ದೃಷ್ಟಿ ಮಂದವಾಯಿತ
83 ಹೊಗೆಯಲ್ಲಿ ನೇತುಹಾಕಿರುವ ಬುದ್ದಲಿಯಂತಿದ್ದೇನ
ಆದರೂ ನಿನ್ನ ನಿಬಂಧನೆಗಳನ್ನು ಮರೆಯಲಿಲ್ಲ.
84 ನಿನ್ನ ಸೇವಕನ ದಿವಸಗಳು ಬಹುಸ್ವಲ್ಪವಲ್ಲಾ!
ನನ್ನನ್ನು ಬಾಧಿಸುವವರಿಗೆ ಶಿಕ್ಷೆವಿಧಿಸುವದು ಯ
ವಾಗ?
85 ನಿನ್ನ ಧರ್ಮಶಾಸ್ತ್ರವನ್ನು ಅನುಸರಿಸದ ಗರ್ವಿಷ್ಠ
ನನಗಾಗಿ ಗುಂಡಿಗಳನ್ನು ಅಗಿದಿದ್ದಾರೆ.
86 ನಿನ್ನ ಆಜ್ಞೆಗಳೆಲ್ಲಾ ಸ್ಥಿರವಾಗಿವೆ;
ಅವರು ಮೋಸದಿಂದ ಹಿಂಸಿಸುತ್ತಾರೆ; ನನಗೆ ಸಹಾ
ಮಾಡು.
87 ನನ್ನನ್ನು ಭೂಮಿಯಿಂದ ತೆಗೆದೇಬಿಟ್ಟಿದ್ದರು;
ಆದರೆ ನಾನು ನಿನ್ನ ನೇಮಗಳನ್ನು ಬಿಡಲೇ ಇಲ್ಲ

88 ನಿನ್ನ ಕೃಪೆಗನುಸಾರವಾಗಿ ನನ್ನನ್ನು ಚೈತನ್ಯಗೊಳಿಸು;
ಆಗ ನೀನು ಉಸಿರಿದ ಕಟ್ಟಳೆಯನ್ನು ಕೈಕೊಳ್ಳು
ವೆನು.

ל

89 ಯೆಹೋವನೇ, ನಿನ್ನ ವಾಕ್ಯವು
ಪರಲೋಕದಲ್ಲಿ ಶಾಶ್ವತವಾಗಿ ಸ್ಥಾಪಿಸಲ್ಪಟ್ಟದೆ.
90 ನಿನ್ನ ಸತ್ಯತೆಯು ತಲತಲಾಂತರಕ್ಕೂ ಇರುವದು.
ನೀನು ಭೂಮಿಯನ್ನು ಸ್ಥಾಪಿಸಿರುತ್ತೀ; ಅದು ಕದ
ಲುವದಿಲ್ಲ.
91 ನಿನ್ನ ವಿಧಿಗಳಿಗನುಸಾರವಾಗಿ
ಅವು ಇಂದಿನ ವರೆಗೂ ಸ್ಥಿರವಾಗಿ ನಿಂತಿರುತ್ತವೆ,
ಯಾಕಂದರೆ ಸರ್ವವಸ್ತುಗಳೂ ನಿನ್ನನ್ನು ಸೇವಿಸು
ತ್ತವೆ.
92 ನಿನ್ನ ಧರ್ಮಶಾಸ್ತ್ರವು ನನಗೆ ಆನಂದಕರವಾಗದಿದ್ದರೆ
ನನಗೊದಗಿದ ಆಪತ್ತಿನಲ್ಲಿ ಹಾಳಾಗಿ ಹೋಗುತ್ತಿ
ದ್ದೆನು.
93 ನಾನು ನಿನ್ನ ನೇಮಗಳನ್ನು ಎಂದಿಗೂ ಮರೆಯುವ
ದಿಲ್ಲ;
ಅವುಗಳಿಂದಲೇ ನನ್ನನ್ನು ಬದುಕಿಸಿದ್ದೀ.
94 ನಾನು ನಿನ್ನವನು, ರಕ್ಷಿಸು;
ನಿನ್ನ ನೇಮಗಳಲ್ಲಿ ಆಸಕ್ತನಾಗಿದ್ದೇನಲ್ಲಾ.
95 ದುಷ್ಟರು ನನ್ನನ್ನು ಸಂಹರಿಸಬೇಕೆಂದು ಹೊಂಚಿನೋ
ಡುತ್ತಾರೆ;
ನಾನು ನಿನ್ನ ಕಟ್ಟಳೆಗಳನ್ನೇ ಲಕ್ಷಿಸಿಕೊಂಡಿರುವೆನು.
96 ಎಲ್ಲಾ ಸಂಪೂರ್ಣತೆಗೂ ಮೇರೆಯುಂಟೆಂದು ಬಲ್ಲೆನು;
ಆದರೆ ನಿನ್ನ ಆಜ್ಞಾಶಾಸನವು ಅಪಾರವಾದದ್ದು.

מ

97 ನಿನ್ನ ಧರ್ಮಶಾಸ್ತ್ರವು ನನಗೆ ಎಷ್ಟೋ ಪ್ರಿಯ
ವಾಗಿದೆ;
ದಿನವೆಲ್ಲಾ ಅದೇ ನನ್ನ ಧ್ಯಾನ.
98 ನಿನ್ನ ಆಜ್ಞೆಗಳ ಮೂಲಕ ನನ್ನ ವೈರಿಗಳಿಗಿಂತ ಬುದ್ಧಿ
ವಂತನಾಗಿದ್ದೇನೆ;
ಸದಾಕಾಲವೂ ಅವೇ ನನಗಿವೆ.
99 ನಿನ್ನ ಕಟ್ಟಳೆಗಳು ನನ್ನ ಧ್ಯಾನವಾಗಿರುವದರಿಂದ
ನನ್ನ ಉಪಾಧ್ಯಾಯರಿಗಿಂತ ಜ್ಞಾನಿಯಾಗಿದ್ದೇನೆ.
100 ನಿನ್ನ ನೇಮಗಳನ್ನು ಕೈಕೊಂಡಿರುವದರಿಂದ
ಹಿರಿಯರಿಗಿಂತ ವಿವೇಕಿಯಾಗಿದ್ದೇನೆ.
101 ನಿನ್ನ ವಾಕ್ಯವನ್ನೇ ಅನುಸರಿಸಬೇಕೆಂದು
ನನ್ನ ಕಾಲುಗಳನ್ನು ಯಾವ ಕೆಟ್ಟ ದಾರಿಗೂ ಹೋಗ
ದಂತೆ ಕಾದಿದ್ದೇನೆ.
102 ನಾನು ನಿನ್ನ ವಿಧಿಗಳಿಂದ ಸ್ವಲ್ಪವೂ ತಪ್ಪಿಹೋಗ
ಲಿಲ್ಲ;
ಯಾಕಂದರೆ ನೀನು ನನ್ನನ್ನು ಬೋಧಿಸಿದ್ದೀ.
103 ನಿನ್ನ ನುಡಿಗಳು ನನ್ನ ನಾಲಿಗೆಗೆ ಎಷ್ಟೋ ರುಚಿ
ಯಾಗಿವೆ;
ಅವು ನನ್ನ ಬಾಯಿಗೆ ಜೇನುತುಪ್ಪಕ್ಕಿಂತಲೂ ಸಿಹಿ
ಯಾಗಿವೆ.
104 ನಿನ್ನ ನೇಮಗಳ ಮೂಲಕ ವಿವೇಕಿಯಾದೆನು;
ಮಿಥ್ಯಾಮಾರ್ಗವನ್ನೆಲ್ಲಾ ಹಗೆಮಾಡುತ್ತೇನೆ.

נ

105 ನಿನ್ನ ವಾಕ್ಯವು ನನ್ನ ಕಾಲಿಗೆ ದೀಪವೂ
ನನ್ನ ದಾರಿಗೆ ಬೆಳಕೂ ಆಗಿದೆ.
106 ನಿನ್ನ ನೀತಿವಿಧಿಗಳನ್ನು ಅನುಸರಿಸುವೆನೆಂದು ಪ್ರ
ಮಾಣಮಾಡಿದ್ದೇನೆ;
ಅದನ್ನು ನೆರವೇರಿಸುವೆನು.
107 ನಾನು ಬಹಳವಾಗಿ ಕುಗ್ಗಿಹೋಗಿದ್ದೇನೆ;
ಯೆಹೋವನೇ, ನಿನ್ನ ವಾಕ್ಯಾನುಸಾರವಾಗಿ ನನ್ನ
ನ್ನು ಚೈತನ್ಯಗೊಳಿಸು.
108 ಯೆಹೋವನೇ, ನನ್ನ ಮನಃಪೂರ್ವಕವಾದ ಸ್ತುತಿ
ಸಮರ್ಪಣೆಗಳನ್ನು ದಯವಿಟ್ಟು ಅಂಗೀಕರಿಸು;
ನಿನ್ನ ವಿಧಿಗಳನ್ನು ನನಗೆ ಕಲಿಸು.
109 ನಾನು ಯಾವಾಗಲೂ ಕೈಯಲ್ಲಿ ಜೀವಹಿಡಿದಿದ್ದೇನೆ;
ಆದರೂ ನಿನ್ನ ಧರ್ಮಶಾಸ್ತ್ರವನ್ನು ಮರೆಯುವದಿಲ್ಲ.
110 ದುಷ್ಟರು ಬಲೆಯೊಡ್ಡಿದ್ದಾರೆ;
ನಾನು ನಿನ್ನ ನೇಮಗಳನ್ನು ತಪ್ಪಿಹೋಗುವದಿಲ್ಲ.
111 ನಿನ್ನ ಕಟ್ಟಳೆಗಳನ್ನು ನನ್ನ ನಿತ್ಯಸ್ವಾಸ್ತ್ಯವನ್ನಾಗಿ
ಆರಿಸಿಕೊಂಡಿದ್ದೇನೆ;
ಅವು ನನ್ನ ಹೃದಯಕ್ಕೆ ಉಲ್ಲಾಸಕರವಾಗಿವೆ.
112 ಕಡೇವರೆಗೂ ಯಾವಾಗಲೂ ನಿನ್ನ ನಿಬಂಧನೆಗಳ
ನ್ನು ಕೈಕೊಳ್ಳುವದಕ್ಕೆ
ಮನಸ್ಸುಮಾಡಿದ್ದೇನೆ.

ס

113 ಚಪಲಚಿತ್ತರನ್ನು ದ್ವೇಷಿಸುತ್ತೇನೆ;
ನಿನ್ನ ಧರ್ಮಶಾಸ್ತ್ರವನ್ನು ಪ್ರೀತಿಸುತ್ತೇನೆ.
114 ನನ್ನ ಆಶ್ರಯವೂ ಗುರಾಣಿಯೂ ನೀನೇ;
ನಿನ್ನ ವಾಕ್ಯವನ್ನೇ ನಿರೀಕ್ಷಿಸಿಕೊಂಡಿದ್ದೇನೆ.
115 ದುಷ್ಟರೇ, ತೊಲಗಿರಿ;
ನನ್ನ ದೇವರ ಆಜ್ಞೆಗಳನ್ನು ಕೈಕೊಳ್ಳುವೆನು.
116 ನಿನ್ನ ನುಡಿಯ ಪ್ರಕಾರ ನನ್ನನ್ನು ಉದ್ಧಾರಮಾಡು;
ಆಗ ಬದುಕುವೆನು.
ನಾನು ನಿರೀಕ್ಷೆಯುಳ್ಳವನಾಗಿದ್ದೇನೆ, ನನ್ನನ್ನು ನಿರಾಶೆ
ಪಡಿಸಬೇಡ.
117 ನೀನು ನನಗೆ ಆಧಾರವಾಗಿರು;
ಆಗ ನಾನು ಸುರಕ್ಷಿತನಾಗಿ ಸದಾ ನಿನ್ನ ನಿಬಂಧನೆ
ಗಳನ್ನು ಲಕ್ಷಿಸುವೆನು.
118 ನಿನ್ನ ನಿಬಂಧನೆಗಳಿಗೆ ತಪ್ಪಿದವರೆಲ್ಲರನ್ನು ನೀನು
ತಳ್ಳಿಬಿಡುತ್ತೀ;
ಅವರ ಕುಯುಕ್ತಿಯು ವ್ಯರ್ಥವಾದದ್ದೇ.
119 ಭೂಲೋಕದ ದುಷ್ಟರೆಲ್ಲರನ್ನು ಕಿಟ್ಟದಂತೆ ತೆಗೆದು
ಬಿಡುತ್ತೀ;
ಆದದರಿಂದ ನಾನು ನಿನ್ನ ಕಟ್ಟಳೆಗಳನ್ನು ಪ್ರೀತಿಸು
ತ್ತೇನೆ.
120 ನಿನ್ನ ಭಯದಿಂದ ನನ್ನ ಮಾಂಸವು ಕಂಪಿಸುತ್ತದೆ;
ನಿನ್ನ ವಿಧಿಗಳಿಗೆ ಅಂಜಿಕೊಂಡಿದ್ದೇನೆ.

ע

121 ನಾನು ನಿನ್ನ ನೀತಿವಿಧಿಗಳನ್ನು ಅನುಸರಿಸಿದ್ದೇನೆ;
ಬಲಾತ್ಕಾರಿಗಳಿಗೆ ನನ್ನನ್ನು ಒಪ್ಪಿಸಬೇಡ.
122 ನಿನ್ನ ಸೇವಕನ ಮೇಲಿಗಾಗಿ ಹೊಣೆಗಾರನಾಗು,
ಗರ್ವಿಷ್ಠರು ನನ್ನನ್ನು ಬಾಧಿಸದಿರಲಿ.
123 ನಿನ್ನ ರಕ್ಷಣೆಯನ್ನೂ ನಿನ್ನ ನೀತಿಯುಳ್ಳ ನುಡಿಯು ನೆರವೇರುವದನ್ನೂ ನಿರೀಕ್ಷಿಸುತ್ತಾ
ನನ್ನ ದೃಷ್ಟಿ ಮೊಬ್ಬಾಯಿತು.
124 ನಿನ್ನ ಸೇವಕನನ್ನು ಕೃಪೆಯಿಂದ ನಡಿಸು;
ನಿನ್ನ ನಿಬಂಧನೆಗಳನ್ನು ನನಗೆ ಕಲಿಸು.
125 ನಾನು ನಿನ್ನ ಸೇವಕನು;
ನಿನ್ನ ಕಟ್ಟಳೆಗಳನ್ನು ತಿಳಿದುಕೊಳ್ಳುವಂತೆ ವಿವೇಕವನ್ನು ದಯಪಾಲಿಸು.
126 ಯೆಹೋವನೇ, ನೀನು ಕಾರ್ಯನಡಿಸುವದಕ್ಕೆ ಸಮಯಬಂದದೆ;
ನಿನ್ನ ಧರ್ಮಶಾಸ್ತ್ರವನ್ನು ಉಲ್ಲಂಘಿಸಿದ್ದಾರೆ.
127 ನಿಜವಾಗಿ ನಿನ್ನ ಆಜ್ಞೆಗಳು ಬಂಗಾರಕ್ಕಿಂತಲೂ
ಅಪರಂಜಿಗಿಂತಲೂ ನನಗೆ ಬಹುಪ್ರಿಯವಾಗಿವೆ.
128 ನಿಜವಾಗಿ ನಿನ್ನ ಎಲ್ಲಾ ನೇಮಗಳು ನ್ಯಾಯವಾಗಿವೆ ಎಂದು ಒಪ್ಪಿಕೊಂಡಿದ್ದೇನೆ;
ಎಲ್ಲಾ ಮಿಥ್ಯಾಮಾರ್ಗಗಳನ್ನು ಹಗೆಮಾಡುತ್ತೇನೆ.

פ

129 ನಿನ್ನ ಕಟ್ಟಳೆಗಳು ಮಹತ್ವವುಳ್ಳವುಗಳೇ;
ಪೂರ್ಣಹೃದಯದಿಂದ ಅವುಗಳನ್ನು ಕೈಕೊಳ್ಳುತ್ತೇನೆ.
130 ನಿನ್ನ ವಾಕ್ಯವಿವರಣೆಯಿಂದ ಯುಕ್ತಿಹೀನರಿಗೆ ಜ್ಞಾನೋದಯವಾಗುವದು.
131 ನಾನು ಬಾಯ್ದೆರೆದು [1]ಏದುತ್ತಿದ್ದೇನೆ;
ನಿನ್ನ ಆಜ್ಞೆಗಳನ್ನು ಲವಲವಿಕೆಯಿಂದ ಆಶಿಸುತ್ತೇನೆ.
132 ಅಭಿಮುಖನಾಗಿ ಕರುಣಿಸು;
ನಿನ್ನ ಹೆಸರನ್ನು ಪ್ರೀತಿಸುವವರಿಗೆ ಹೀಗೆ ಮಾಡುವದು ನಿನಗೆ ವಿಧಿಯಷ್ಟೆ.
133 ನಿನ್ನ ನುಡಿಗನುಸಾರವಾಗಿ ನನ್ನ ಹೆಜ್ಜೆಯನ್ನು ದೃಢಪಡಿಸು;
ಯಾವ ಅನ್ಯಾಯವಾದರೂ ನನ್ನನ್ನು ಆಳದಂತೆ ಮಾಡು.
134 ನರರ ಬಲಾತ್ಕಾರದಿಂದ ನನ್ನನ್ನು ಬಿಡಿಸು;
ಆಗ ನಿನ್ನ ನೇಮಗಳನ್ನು ಕೈಕೊಳ್ಳುವೆನು.
135 ನಿನ್ನ ದಾಸನ ಮೇಲೆ ನಿನ್ನ ಮುಖಪ್ರಸನ್ನತೆಯಿರಲಿ;
ನಿನ್ನ ನಿಬಂಧನೆಗಳನ್ನು ನನಗೆ ಕಲಿಸು.
136 ನಿನ್ನ ಧರ್ಮಶಾಸ್ತ್ರವನ್ನು ಅನುಸರಿಸದವರ ನಿಮಿತ್ತ
ನನಗೆ ಕಣ್ಣೀರು ಪ್ರವಾಹವಾಗಿ ಹರಿಯುತ್ತದೆ.

צ

137 ಯೆಹೋವನೇ, ನೀನು ನೀತಿಸ್ವರೂಪನು;
ನಿನ್ನ ವಿಧಿಗಳು ನ್ಯಾಯವಾಗಿವೆ.
138 ನೀತಿಸತ್ಯತೆಗಳಿಂದಲೇ ನಿನ್ನ ಕಟ್ಟಳೆಗಳನ್ನು ಸ್ಥಾ... ಸಿದ್ದೀ;
139 ಮತಾಸಕ್ತಿಯು ನನ್ನನ್ನು ದಹಿಸಿಬಿಟ್ಟಿತು;
ವೈರಿಗಳು ನಿನ್ನ ವಾಕ್ಯಗಳನ್ನು ಮರೆತುಬಿಟ್ಟಿದ... ರಲ್ಲಾ.
140 ನಿನ್ನ ನುಡಿಯು ಪರಿಶುದ್ಧವಾದದ್ದು;
ನಿನ್ನ ಸೇವಕನು ಅದನ್ನೇ ಪ್ರೀತಿಸುತ್ತಾನೆ.
141 ನಾನು ಅಲ್ಪನೂ ತಿರಸ್ಕಾರಹೊಂದಿದವನೂ ಆ... ದ್ದೇನೆ;
ಆದರೂ ನಿನ್ನ ನೇಮಗಳನ್ನು ಮರೆಯುವದಿಲ್ಲ.
142 ನಿನ್ನ ನೀತಿಯು ಸತ್ಯವಾದದ್ದೇ;
ನಿನ್ನ ಧರ್ಮಶಾಸ್ತ್ರವು ಸತ್ಯವಾಗಿದೆ.
143 ಕಷ್ಟಸಂಕಟಗಳು ನನ್ನನ್ನು ಹಿಡಿದವೆ;
ನಿನ್ನ ಆಜ್ಞೆಗಳು ನನಗೆ ಸಂತೋಷಕರವಾಗಿವೆ.
144 ನಿನ್ನ ಕಟ್ಟಳೆಗಳು ಸದಾಕಾಲವೂ ನೀತಿಯುಳ್ಳ... ಗಳು;
ನನಗೆ ವಿವೇಕವನ್ನು ದಯಪಾಲಿಸು, ಆಗ ಬದುಕ... ವೆನು.

ק

145 ಯೆಹೋವನೇ, ಸಂಪೂರ್ಣಮನಸ್ಸಿನಿಂದ ಮೊರೆಯಿ... ದ್ದೇನೆ, ಸದುತ್ತರವನ್ನು ದಯಪಾಲಿಸು;
ನಿನ್ನ ನಿಬಂಧನೆಗಳನ್ನು ಅನುಸರಿಸುವೆನು.
146 ನಿನಗೇ ಮೊರೆಯಿಟ್ಟಿದ್ದೇನೆ; ರಕ್ಷಿಸು.
ನಿನ್ನ ಕಟ್ಟಳೆಗಳನ್ನು ಕೈಕೊಳ್ಳುವೆನು.
147 ಅರುಣೋದಯದಲ್ಲಿ ಎದ್ದು ಮೊರೆಯಿಟ್ಟೆನು;
ನಿನ್ನ ವಾಕ್ಯವನ್ನು ನಿರೀಕ್ಷಿಸಿಕೊಂಡಿದ್ದೇನೆ.
148 ಇರುಳಿನ ಒಂದೊಂದು ಜಾವವನ್ನು ಮುಂಗೊಂ...
ನಿನ್ನ ನುಡಿಯನ್ನು ಧ್ಯಾನಿಸುತ್ತೇನೆ.
149 ಯೆಹೋವನೇ, ನಿನ್ನ ಕೃಪೆಗೆ ತಕ್ಕಂತೆ ನನ್ನ ಮೊ... ಯನ್ನು ಕೇಳು;
ನಿನ್ನ ವಿಧಿಗನುಸಾರವಾಗಿ ನನ್ನನ್ನು ಚೈತನ್ಯಗೊಳಿಸ...
150 ನಿನ್ನ ಧರ್ಮಶಾಸ್ತ್ರವನ್ನು ಬಿಟ್ಟು ಕೆಟ್ಟದ್ದ... ಅನುಸರಿಸುವವರು
ನನ್ನ ಸಮೀಪಕ್ಕೆ ಬಂದಿದ್ದಾರೆ.
151 ಯೆಹೋವನೇ, ನೀನು ನನ್ನ ಹತ್ತಿರವೇ ಇದ್ದೀ;
ನಿನ್ನ ಆಜ್ಞೆಗಳೆಲ್ಲಾ ಯಥಾರ್ಥವಾಗಿವೆ.
152 ನೀನು ನಿನ್ನ ಕಟ್ಟಳೆಗಳನ್ನು ಯುಗಯುಗಾಂ... ಕ್ಕೂ ಸ್ಥಾಪಿಸಿದ್ದೀ ಎಂದು
ನಾನು ಮೊದಲಿನಿಂದಲೇ ಅವುಗಳ ಮೂಲಕ ತಿಳಿ... ಕೊಂಡಿದ್ದೇನೆ.

ר

153 ನನ್ನ ಕಷ್ಟವನ್ನು ನೋಡಿ ನನ್ನನ್ನು ರಕ್ಷಿಸು;
ನಾನು ನಿನ್ನ ಧರ್ಮಶಾಸ್ತ್ರವನ್ನು ಮರೆತವನ...

[1] ಅಥವಾ: ಅಸರುಸುರಾಗಿದ್ದೇನೆ.

154 ನನ್ನ ವ್ಯಾಜ್ಯವನ್ನು ನಡಿಸಿ ನನ್ನನ್ನು ಬಿಡಿಸು;
ನಿನ್ನ ನುಡಿಗನುಸಾರವಾಗಿ ನನ್ನನ್ನು ಚೈತನ್ಯಗೊಳಿಸು.
155 ನಿನ್ನ ನಿಬಂಧನೆಗಳನ್ನು ಅಲಕ್ಷ್ಯಮಾಡುವ ದುಷ್ಟರಿಗೆ ರಕ್ಷಣೆಯೇ ಇಲ್ಲ.
156 ಯೆಹೋವನೇ, ನಿನ್ನ ಕೃಪಾಕಾರ್ಯಗಳು ಬಹಳವಾಗಿವೆ;
ನಿನ್ನ ವಿಧಿಗಳಿಗೆ ತಕ್ಕಂತೆ ನನ್ನನ್ನು ಚೈತನ್ಯಗೊಳಿಸು.
157 ನನ್ನನ್ನು ಹಿಂಸಿಸುವ ವೈರಿಗಳು ಅನೇಕರಿದ್ದರೂ
ನಾನು ನಿನ್ನ ಕಟ್ಟಳೆಗಳನ್ನು ಬಿಟ್ಟು ನಡೆಯಲಿಲ್ಲ.
158 ನಿನ್ನ ನುಡಿಯನ್ನು ಕೈಕೊಳ್ಳದ ಧರ್ಮಭ್ರಷ್ಟರನ್ನು ನೋಡಿ ಅಸಹ್ಯಪಟ್ಟಿದ್ದೇನೆ.
159 ಯೆಹೋವನೇ, ನೋಡು, ನಿನ್ನ ನೇಮಗಳು ನನಗೆ ಎಷ್ಟೋ ಪ್ರಿಯವಾಗಿವೆ;
ನಿನ್ನ ಕೃಪಾನುಸಾರವಾಗಿ ನನ್ನನ್ನು ಚೈತನ್ಯಗೊಳಿಸು.
160 ನಿನ್ನ ವಾಕ್ಯದ ಸಾರಾಂಶವು ಸತ್ಯವೇ;
ನಿನ್ನ ನೀತಿವಿಧಿಗಳೆಲ್ಲಾ ಯುಗಯುಗಕ್ಕೂ ಇರುವವು.

ש

161 ಪ್ರಭುಗಳು ನಿಷ್ಕಾರಣವಾಗಿ ನನ್ನನ್ನು ಹಿಂಸಿಸುತ್ತಾರೆ;
ನನ್ನ ಹೃದಯವು ನಿನ್ನ ವಾಕ್ಯಕ್ಕೆ ಮಾತ್ರ ಭಯಪಡುತ್ತದೆ.
162 ಒಬ್ಬನು ತಾನು ಸಂಪಾದಿಸಿದ ದೊಡ್ಡ ಕೊಳ್ಳೆಯಲ್ಲಿ ಹೇಗೋ
ಹಾಗೆಯೇ ನಾನು ನಿನ್ನ ನುಡಿಯಲ್ಲಿ ಆನಂದಿಸುತ್ತೇನೆ.
163 ಮಿಥ್ಯವಾದದ್ದನ್ನು ಹಗೆಮಾಡುತ್ತೇನೆ, ಅದು ನನಗೆ ಅಸಹ್ಯವಾಗಿದೆ;
ನಿನ್ನ ಧರ್ಮಶಾಸ್ತ್ರವು ನನಗೆ ಪ್ರಿಯವಾಗಿದೆ.
164 ನಿನ್ನ ನೀತಿವಿಧಿಗಳಿಗೋಸ್ಕರ
ನಿನ್ನನ್ನು ದಿನಕ್ಕೆ ಏಳು ಸಾರಿ ಕೊಂಡಾಡುತ್ತೇನೆ.
165 ನಿನ್ನ ಧರ್ಮಶಾಸ್ತ್ರವನ್ನು ಪ್ರೀತಿಸುವವರಿಗೆ ಸಂಪೂರ್ಣಸಮಾಧಾನವಿರುತ್ತದೆ;
ಅಂಥವರಿಗೆ ವಿಘ್ನಕರವಾದದ್ದೇನೂ ಇರುವದಿಲ್ಲ.
166 ಯೆಹೋವನೇ, ಯಾವಾಗ ರಕ್ಷಿಸುವಿಯೋ ಎಂದು ನಿರೀಕ್ಷಿಸುತ್ತಾ ಇದ್ದೇನೆ;
ನಿನ್ನ ಆಜ್ಞೆಗಳನ್ನು ಕೈಕೊಂಡಿದ್ದೇನೆ.
167 ನಿನ್ನ ಕಟ್ಟಳೆಗಳನ್ನು ಮನಃಪೂರ್ವಕವಾಗಿ ಅನುಸರಿಸಿದ್ದೇನೆ;
ಅವು ನನಗೆ ಬಹುಪ್ರಿಯವಾಗಿವೆ.
168 ನಿನ್ನ ನೇಮಗಳನ್ನೂ ಕಟ್ಟಳೆಗಳನ್ನೂ ಅನುಸರಿಸಿದ್ದೇನೆ;
ನನ್ನ ನಡತೆಯೆಲ್ಲಾ ನಿನಗೆ ಗೊತ್ತದೆ.

ת

169 ಯೆಹೋವನೇ, ನನ್ನ ಕೂಗು ನಿನ್ನ ಸನ್ನಿಧಿಯನ್ನು ಮುಟ್ಟಲಿ;
ನಿನ್ನ ವಾಕ್ಯಾನುಸಾರವಾಗಿ ನನಗೆ ಜ್ಞಾನವನ್ನು ದಯಪಾಲಿಸು.
170 ನನ್ನ ವಿಜ್ಞಾಪನೆಯು ನಿನ್ನ ಸನ್ನಿಧಿಗೆ ಸೇರಲಿ;
ನಿನ್ನ ನುಡಿಗೆ ತಕ್ಕಂತೆ ನನ್ನನ್ನು ರಕ್ಷಿಸು.
171 ನನ್ನ ತುಟಿಗಳಿಂದ ಸ್ತುತಿ ಹೊರಡಲಿ;
ನಿನ್ನ ನಿಬಂಧನೆಗಳನ್ನು ನನಗೆ ಕಲಿಸಿದ್ದೀಯಲ್ಲಾ.
172 ನನ್ನ ನಾಲಿಗೆಯು ನಿನ್ನ ನುಡಿಗಳನ್ನು ವರ್ಣಿಸಲಿ;
ನಿನ್ನ ಆಜ್ಞೆಗಳೆಲ್ಲಾ ನೀತಿಯೇ.
173 ನಿನ್ನ ನೇಮಗಳನ್ನು ಆರಿಸಿಕೊಂಡಿದ್ದೇನೆ.
ನಿನ್ನ ಕೈ ನನಗೆ ನೆರವಾಗಲಿ.
174 ಯೆಹೋವನೇ, ನಿನ್ನಿಂದುಂಟಾಗುವ ರಕ್ಷಣೆಯನ್ನು ಕೋರುತ್ತೇನೆ;
ನಿನ್ನ ಧರ್ಮಶಾಸ್ತ್ರವೇ ನನ್ನ ಆನಂದವು.
175 ನನ್ನ ಪ್ರಾಣವನ್ನು ಉಳಿಸು; ಅದು ನಿನ್ನನ್ನು ಕೊಂಡಾಡಲಿ.
ನಿನ್ನ ವಿಧಿಗಳಿಂದ ನನಗೆ ಸಹಾಯವಾಗಲಿ.
176 ನಾನು ತಪ್ಪಿಹೋದ ಕುರಿಯಂತೆ ಅಲೆಯುತ್ತಿದ್ದೇನೆ;
ನಿನ್ನ ಸೇವಕನನ್ನು ಪರಾಂಬರಿಸು.
ನಾನು ನಿನ್ನ ಆಜ್ಞೆಗಳನ್ನು ಮರೆಯುವದಿಲ್ಲ.

ಮೋಸಗಾರರ ಮಧ್ಯದಲ್ಲಿ ವಾಸಿಸುವವನ ಪ್ರಾರ್ಥನೆ.
1)ಯಾತ್ರಾಗೀತ.

**120** ಇಕ್ಕಟ್ಟಿನಲ್ಲಿ ಯೆಹೋವನಿಗೆ ಮೊರೆಯಿಟ್ಟೆನು;
ಆತನು ಸದುತ್ತರವನ್ನು ದಯಪಾಲಿಸಿದನು.

2 ಯೆಹೋವನೇ, ಸುಳ್ಳುಬಾಯಿಯೂ ವಂಚಿಸುವ ನಾಲಿಗೆಯೂ ಉಳ್ಳವರಿಂದ ನನ್ನನ್ನು ಬಿಡಿಸು.
3 2)ವಂಚಿಸುವ ನಾಲಿಗೆಯೇ, ದೇವರು ನಿನಗೇನು ಕೊಡಬೇಕು?
ಯಾವ ಹೆಚ್ಚಿನ ಶಿಕ್ಷೆಯನ್ನು ಒದಗಿಸಬೇಕು?
4 ಶೂರನ ಹದವಾದ ಬಾಣಗಳನ್ನೂ
ಜಾಲಿಯ ಕೆಂಡಗಳನ್ನೂ ನಿನಗೆ ಕೊಡಲಿ.

5 ಅಯ್ಯೋ, ನಾನು ಮೇಷೆಕಿನವರಲ್ಲಿ ತಂಗಬೇಕಲ್ಲಾ!
ಕೇದಾರಿನವರ ಪಾಳೆಯಗಳಲ್ಲಿ ವಾಸಿಸಬೇಕಾಯಿತಲ್ಲಾ!
6 ಸಮಾಧಾನವನ್ನು ಹಗೆಮಾಡುವವರೊಳಗೆ ಇದ್ದು ಇದ್ದು ಸಾಕಾಯಿತು.
7 ನಾನು ಸಮಾಧಾನಪ್ರಿಯನು;
ಅವರೋ, ಮಾತಾಡಿದರೆ ಯುದ್ಧಕ್ಕೆ ಬರುತ್ತಾರೆ.

1) 120—134) ಈ ಕೀರ್ತನೆಗಳು ಯಾತ್ರಾಗೀತಗಳೆನ್ನಿಸಿಕೊಳ್ಳುತ್ತವೆ. 2) ವ. 3, 4) ಅಥವಾ: ಶೂರನ ಹದವಾದ ಬಾಣಗಳಂತೆಯೂ ಜಾಲಿಯ ಕೆಂಡಗಳಂತೆಯೂ ಇರುವ ವಂಚನೆಯ ನಾಲಿಗೆಯೇ, ದೇವರು ನಿನಗೇನು ಕೊಡಬೇಕು? ಯಾವ ಹೆಚ್ಚಿನ ಶಿಕ್ಷೆಯನ್ನು ಒದಗಿಸಬೇಕು?

ಯೆಹೋವನ ಭಕ್ತಪಾಲನೆ.
(ಆದಿಕಾಂಡ 28. 15)
ಯಾತ್ರಾಗೀತ.

**121** ನಾನು ಕಣ್ಣೆತ್ತಿ ಪರ್ವತಗಳ ಕಡೆಗೆ ನೋಡು ತ್ತೇನೆ;
ನನ್ನ ಸಹಾಯವು ಎಲ್ಲಿಂದ ಬರುವದು?
2 ಭೂಮ್ಯಾಕಾಶಗಳನ್ನು ನಿರ್ಮಿಸಿದ ಯೆಹೋವನಿಂದಲೇ
ನನ್ನ ಸಹಾಯವು ಬರುತ್ತದೆ.

3 ಆತನು ನಿನ್ನ ಪಾದಗಳನ್ನು ಕದಲಗೊಡಿಸದಿರಲಿ;
ನಿನ್ನನ್ನು ಕಾಯುವವನು ತೂಕಡಿಸದಿರಲಿ.
4 ಇಗೋ, ಇಸ್ರಾಯೇಲ್ಯರನ್ನು ಕಾಯುವಾತನು
ತೂಕಡಿಸುವದಿಲ್ಲ, ನಿದ್ರಿಸುವದಿಲ್ಲ.

5 ನಿನ್ನನ್ನು ಕಾಯುವವನು ಯೆಹೋವನೇ;
ನಿನ್ನ ಬಲಗಡೆಯಲ್ಲಿ ನೆರಳಿನಂತೆ ನಿಂತಿರುವಾತನು ಯೆಹೋವನೇ.
6 ಹಗಲಲ್ಲಿ ಸೂರ್ಯನೂ
ಇರುಳಲ್ಲಿ ಚಂದ್ರನೂ ನಿನ್ನನ್ನು ಬಾಧಿಸುವದಿಲ್ಲ.

7 ಯೆಹೋವನು ನಿನ್ನನ್ನು ಎಲ್ಲಾ ಕೇಡಿನಿಂದ ತಪ್ಪಿಸುವನು;
ನಿನ್ನ ಪ್ರಾಣವನ್ನು ಕಾಯುವನು.
8 ನೀನು ಹೋಗುವಾಗಲೂ ಬರುವಾಗಲೂ
ಇಂದಿನಿಂದ ಸದಾಕಾಲವೂ ಯೆಹೋವನು ನಿನ್ನನ್ನು ಕಾಪಾಡುವನು.

ಯಾತ್ರಿಕರು ಯೆರೂಸಲೇಮನ್ನು ವಂದಿಸುವದು.
ಯಾತ್ರಾಗೀತ; ದಾವೀದನದು.

**122** ಯೆಹೋವನ ಮಂದಿರಕ್ಕೆ ಹೋಗೋಣ, ಬಾ ಎಂದು
ಜನರು ನನ್ನನ್ನು ಕರೆದಾಗ ನನಗೆ ಸಂತೋಷವಾಯಿತು.
2 ಯೆರೂಸಲೇಮೇ, ನಮ್ಮ ಕಾಲುಗಳು ನಿನ್ನ ಬಾಗಲುಗಳಲ್ಲಿ ಸೇರಿರುತ್ತವಲ್ಲಾ!
3 ಯೆರೂಸಲೇಮೇ, ನೀನು ಸರಿಯಾದ ಹೊಂದಿಕೆಯಿಂದ ಕಟ್ಟಲ್ಪಟ್ಟ ನಗರವಾಗಿದ್ದೀ.
4 ಕುಲಗಳು ಅಂದರೆ ಯಾಹುವಿನ ಕುಲದವರು
ಯೆಹೋವನಾಮಕೀರ್ತನೆಗೋಸ್ಕರ ಇಲ್ಲಿಗೇ ಯಾತ್ರೆ ಮಾಡುತ್ತಿದ್ದರು.
ಇದು ಇಸ್ರಾಯೇಲ್ಯರಲ್ಲಿದ್ದ ಕಟ್ಟಳೆಯಷ್ಟೆ.
5 ನ್ಯಾಯಪೀಠಗಳಾಗಿರುವ ದಾವೀದನ ಮನೆತನದವರ ಸಿಂಹಾಸನಗಳು ಇಲ್ಲಿಯೇ ಇದ್ದವಲ್ಲಾ.

6 ಯೆರೂಸಲೇಮಿನ ಶುಭಕ್ಕೋಸ್ಕರ ಪ್ರಾರ್ಥಿಸಿರಿ.
[ಯೆರೂಸಲೇಮೇ,] ನಿನ್ನನ್ನು ಪ್ರೀತಿಸುವವರಿಗೆ ಸೌಭಾಗ್ಯವುಂಟಾಗಲಿ.
7 ನಿನ್ನ ಪೌಳಿಗೋಡೆಗಳೊಳಗೆ ಶುಭವುಂಟಾಗಲಿ;
ನಿನ್ನ ಅರಮನೆಗಳಲ್ಲಿ ಸೌಭಾಗ್ಯವಿರಲಿ,
8 ನನ್ನ ಬಂಧುಮಿತ್ರರ ನಿಮಿತ್ತವಾಗಿ
ನಿನಗೆ ಶುಭವಾಗಲೆಂದು ಹೇಳುತ್ತೇನೆ.
9 ನಮ್ಮ ಯೆಹೋವದೇವರ ಮಂದಿರನಿಮಿತ್ತವಾಗಿ
ನಿನಗೆ ಸುಕ್ಷೇಮವನ್ನು ಹಾರೈಸುತ್ತೇನೆ.

ಬಾಧಿಸಲ್ಪಟ್ಟವನ ನಿರೀಕ್ಷೆ.
(ನೆಹೆಮೀಯ 4. 1–6.)
ಯಾತ್ರಾಗೀತ.

**123** ಪರಲೋಕದಲ್ಲಿ ಆಸೀನನಾಗಿರುವಾತನೇ,
ನನ್ನ ಕಣ್ಣುಗಳನ್ನು ನಿನ್ನ ಕಡೆಗೆ ಎತ್ತಿದ್ದೇನೆ
2 ಯಜಮಾನನ ಕೈಯನ್ನು ದಾಸನ ಕಣ್ಣುಗಳೂ
ಯಜಮಾನಿಯ ಕೈಯನ್ನು ದಾಸಿಯ ಕಣ್ಣುಗ
ನೋಡುವ ಪ್ರಕಾರವೇ
ನಮ್ಮ ಕಣ್ಣುಗಳು ನಮ್ಮ ಯೆಹೋವದೇವರ
ನೋಡುತ್ತಾ
ಆತನ ಕಟಾಕ್ಷವನ್ನು ನಿರೀಕ್ಷಿಸಿಕೊಂಡಿವೆ.

3 ಯೆಹೋವನೇ, ನಮ್ಮನ್ನು ಕಟಾಕ್ಷಿಸು, ಕಟಾಕ್ಷಿ
ಅಪಮಾನ ಹೊಂದಿ ಹೊಂದಿ ನಮಗೆ ಸಾಕಾಯಿ
4 ಲೋಕಭೋಗಿಗಳ ಹಾಸ್ಯದಿಂದಲೂ
ಗರ್ವಿಷ್ಠರ ನಿಂದೆಯಿಂದಲೂ ನಮ್ಮ ಮನಸ್ಸು ಬೇಸ
ಹೋಯಿತು.

ಯೆಹೋವನೊಬ್ಬನೇ ರಕ್ಷಕನು.
(ಕೀರ್ತನೆ 129; ನೆಹೆಮೀಯ 4. 7–23.)
ಯಾತ್ರಾಗೀತ; ದಾವೀದನದು.

**124** ಯೆಹೋವನು ನಮಗಿಲ್ಲದಿದ್ದರೆ ನಮ್ಮ ಏನಾಗುತ್ತಿತ್ತೆಂದು
ಇಸ್ರಾಯೇಲ್ಯರೇ ಹೇಳಲಿ.
2 ನರರು ನಮಗೆ ವಿರೋಧವಾಗಿ ಎದ್ದಾಗ
ಯೆಹೋವನು ನಮಗಿಲ್ಲದಿದ್ದರೆ
3 ನಿಶ್ಚಯವಾಗಿ ಅವರು ಕೋಪದಿಂದ ಉರಿಗೊಂಡು
ನಮ್ಮನ್ನು ಜೀವಸಹಿತ ನುಂಗಿಬಿಡುತ್ತಿದ್ದರು;
4 ನಿಶ್ಚಯವಾಗಿ ಪ್ರವಾಹವು ನಮ್ಮನ್ನು ಬಡುಕೊಂ
ಹೋಗುತ್ತಿತ್ತು;
ನದಿಯು ನಮ್ಮನ್ನು ಮುಣುಗಿಸುತ್ತಿತ್ತು;
5 ಮೀರಿದ ಪ್ರವಾಹವು ನಮ್ಮನ್ನು ಮುಣುಗಿಸಿಬಿ
ತ್ತಿತ್ತು.

6 ಯೆಹೋವನಿಗೆ ಕೊಂಡಾಟವಾಗಲಿ;
ಆತನು ನಮ್ಮನ್ನು ಅವರ ಹಲ್ಲುಗಳಿಗೆ ಕೊಳ್ಳೆಕೆ
ಲಿಲ್ಲ.
7 ನಮ್ಮ ಜೀವವು ಬೇಟೆಗಾರನ ಬಲೆಯಿಂದ ತ
ಕೊಂಡ ಪಕ್ಷಿಯಂತಿದೆ;
ಬಲೆಯು ಹರಿದುಹೋಯಿತು, ನಾವು ತಪ್ಪಿಸಿಕೊಂ

8 ಭೂಮ್ಯಾಕಾಶಗಳನ್ನು ಉಂಟುಮಾಡಿದ
ಯೆಹೋವನ ನಾಮದಲ್ಲಿ ನಮಗೆ ರಕ್ಷಣೆಯಾಗುವದು.

ಯೆಹೋವನೇ ವಿಶ್ವಾಸಿಗಳ ಆಶ್ರಯ.
ಯಾತ್ರಾಗೀತ.

125 ಯೆಹೋವನಲ್ಲಿ ಭರವಸವಿಡುವವರು
ಚೀಯೋನ್ ಪರ್ವತದ ಹಾಗೆ ಇದ್ದಾರೆ; ಅದು
ಕದಲುವದಿಲ್ಲ, ಸದಾ ಸ್ಥಿರವಾಗಿರುತ್ತದೆ.
2 ಪರ್ವತಗಳು ಯೆರೂಸಲೇಮಿನ ಸುತ್ತಲೂ ಹೇಗೋ
ಹಾಗೆಯೇ ಯೆಹೋವನು ಇಂದಿನಿಂದ ಸದಾಕಾಲವೂ
ತನ್ನ ಜನರ ಸುತ್ತಲೂ ಇರುವನು.

3 ದುಷ್ಟರ ದಂಡಾಧಿಕಾರವು ನೀತಿವಂತರ ಸ್ವಾಸ್ತ್ಯದಲ್ಲಿ
ಉಳಿಯುವದೇ ಇಲ್ಲ;
ಉಳಿದರೆ ನೀತಿವಂತರೂ ಅಕ್ರಮಕ್ಕೆ ಕೈಹಚ್ಚಾರು.

4 ಯೆಹೋವನೇ, ಒಳ್ಳೆಯವರೂ ಯಥಾರ್ಥಚಿತ್ತರೂ
ಆಗಿರುವವರಿಗೆ ಉಪಕಾರಮಾಡು.
5 ಯೆಹೋವನು ಡೊಂಕುದಾರಿಹಿಡಿದವರನ್ನು
ಪಾತಕಿಗಳ ಗತಿಗೆ ಹೋಗಮಾಡಲಿ.
ಇಸ್ರಾಯೇಲ್ಯರಿಗೆ ಶುಭವುಂಟಾಗಲಿ,

ಸೆರೆಯಿಂದ ಬಿಡುಗಡೆಹೊಂದಿದವರು ತಮಗೆ ಸಂಪೂರ್ಣಸೌಭಾಗ್ಯ
ದೊರೆಯಬೇಕೆಂದು ದೇವರನ್ನು ಪ್ರಾರ್ಥಿಸುವದು.
(ಕೀರ್ತನೆ 85.)
ಯಾತ್ರಾಗೀತ.

126 ಸೆರೆಯಲ್ಲಿದ್ದ ನಮ್ಮನ್ನು ಯೆಹೋವನು ತಿರಿಗಿ
ಚೀಯೋನಿಗೆ ಬರಮಾಡಿದಾಗ
ನಾವು ಕನಸುಕಂಡವರಂತಿದ್ದೆವು.
2 ಆಗ ನಮ್ಮ ಬಾಯಿ ಬಲು ನಗೆಯಿಂದಲೂ
ನಮ್ಮ ನಾಲಿಗೆ ಹರ್ಷಗೀತದಿಂದಲೂ ತುಂಬಿದವು.
ಅನ್ಯಜನರು—ಯೆಹೋವನು ಇವರಿಗೋಸ್ಕರ ಮಹ
ತ್ಕಾರ್ಯಗಳನ್ನು ಮಾಡಿದ್ದಾನೆಂದು
ತಮ್ಮೊಳಗೆ ಮಾತಾಡಿಕೊಳ್ಳುತ್ತಿದ್ದರು.
3 ಯೆಹೋವನು ನಮಗೋಸ್ಕರ ಮಹತ್ಕಾರ್ಯಗಳನ್ನು
ಮಾಡಿದ್ದು ನಿಜ;
ಆದದರಿಂದ ನಾವು ಸಂತೋಷವುಳ್ಳವರಾಗಿದ್ದೇವೆ.

4 ಯೆಹೋವನೇ, ನೀನು ದಕ್ಷಿಣದೇಶದ ಹಳ್ಳಗಳನ್ನೋ
ಎಂಬಂತೆ
ಸೆರೆಯಲ್ಲಿ ಉಳಿದಿರುವ ನಮ್ಮವರನ್ನೂ ತಿರಿಗಿ ಬರ
ಮಾಡು.
5 ಅಳುತ್ತಾ ಬಿತ್ತುವವರು
ಹಾಡುತ್ತಾ ಕೊಯ್ಯುವರು.
6 ದುಃಖಿಸುತ್ತಾ ಬೀಜವನ್ನು ತೆಗೆದುಕೊಂಡು ಹೋಗು
ವವನು
ಹರ್ಷಿಸುತ್ತಾ ಸಿವುಡುಗಳನ್ನು ಹೊತ್ತುಕೊಂಡು ಬರು
ವನು.

ಯೆಹೋವನ ಕೃಪೆಯಿಂದಲೇ ಕೃತಾರ್ಥರಾಗುವೆವು.
(ನೆಹೆಮೀಯ 7. 3, 4.)
ಯಾತ್ರಾಗೀತ; ಸೊಲೊಮೋನನದು.

127 ಯೆಹೋವನು ಮನೇ ಕಟ್ಟದಿದ್ದರೆ
ಅದನ್ನು ಕಟ್ಟುವವರು ಕಷ್ಟಪಡುವದು ವ್ಯರ್ಥ;
ಯೆಹೋವನು ಪಟ್ಟಣವನ್ನು ಕಾಯದಿದ್ದರೆ
ಕಾವಲುಗಾರರು ಅದನ್ನು ಕಾಯುವದು ವ್ಯರ್ಥ.
2 ಬೆಳಗಾಗುವದಕ್ಕಿಂತ ಮುಂಚೆ ಏಳುವವರೇ, ಹೊತ್ತು
ಮೀರಿ ಮಲಗುವವರೇ,
ನೀವು ಆಹಾರಕ್ಕಾಗಿ ಇಷ್ಟು ಕಷ್ಟಪಡುವದು ವ್ಯರ್ಥ;
ಆತನು ಅದನ್ನು ತನ್ನ ಪ್ರಿಯರಿಗೆ ನಿದ್ರೆಯಲ್ಲಿಯೂ
ಕೊಡುತ್ತಾನೆ.

3 ಪುತ್ರಸಂತಾನವು ಯೆಹೋವನಿಂದ ಬಂದ ಸ್ವಾಸ್ತ್ಯವು;
ಗರ್ಭಫಲವು ಆತನ ಬಹುಮಾನವೇ.
4 ಯೌವನದಲ್ಲಿ ಹುಟ್ಟಿದ ಮಕ್ಕಳು
ಯುದ್ಧವೀರನ ಕೈಯಲ್ಲಿರುವ ಅಂಬುಗಳಂತಿದ್ದಾರೆ;
5 ಇವುಗಳಿಂದ ತನ್ನ ಬತ್ತಳಿಕೆಯನ್ನು ತುಂಬಿದವನು
ಧನ್ಯನು.
ಊರುಬಾಗಲಲ್ಲಿ ವೈರಿಗಳ ಸಂಗಡ ವ್ಯಾಜ್ಯವಾಡು
ವಾಗ
ಅಂಥವರು ಅಪಮಾನಹೊಂದುವದಿಲ್ಲ.

ಭಕ್ತನ ಭಾಗ್ಯ.
(ಕೀರ್ತನೆ 127; 144. 12—15.)
ಯಾತ್ರಾಗೀತ.

128 ಯೆಹೋವನಲ್ಲಿ ಭಯಭಕ್ತಿಯುಳ್ಳವನಾಗಿ ಆತ
ನ ಮಾರ್ಗಗಳಲ್ಲಿ ನಡೆಯುವವನು ಧನ್ಯನು.
2 ನಿನ್ನ ಕಷ್ಟಾರ್ಜಿತವನ್ನು ನೀನೇ ಅನುಭವಿಸುವಿ;
ನೀನು ಧನ್ಯನು, ನಿನಗೆ ಶುಭವಿರುವದು.

3 ಅಂತಃಪುರದಲ್ಲಿರುವ ನಿನ್ನ ಹೆಂಡತಿಯು ಫಲಭರಿತ
ವಾದ ದ್ರಾಕ್ಷಾಲತೆಯಂತಿರುವಳು;
ನಿನ್ನ ಸಂಗಡ ಊಟದ ಮಣೆಯ ಸುತ್ತಲೂ ಕೂತು
ಕೊಳ್ಳುವ ನಿನ್ನ ಮಕ್ಕಳು ಎಣ್ಣೇಮರದ ಸಸಿ
ಗಳಂತಿರುವರು.
4 ಇಗೋ, ಯೆಹೋವನಲ್ಲಿ ಭಯಭಕ್ತಿಯುಳ್ಳ ಪುರು
ಷನು
ಈ ರೀತಿಯಾಗಿ ಆಶೀರ್ವಾದಹೊಂದುವನು.

5 ಚೀಯೋನಿನಲ್ಲಿರುವ ಯೆಹೋವನು ನಿನ್ನನ್ನು ಆಶೀ
ರ್ವದಿಸಲಿ;
ಜೀವಮಾನವೆಲ್ಲಾ ಯೆರೂಸಲೇಮಿನ ಸೌಭಾಗ್ಯವನ್ನು
ನೋಡುವವನಾಗು.
6 ಮಕ್ಕಳ ಮಕ್ಕಳನ್ನು ಕಾಣುವವನಾಗು.
ಇಸ್ರಾಯೇಲ್ಯರಿಗೆ ಶುಭವಾಗಲಿ.

ಯೆಹೋವನು ತನ್ನ ಭಕ್ತರನ್ನು ಪೀಡಿಸುವವರಿಂದ ಬಿಡಿಸುವನೆಂಬ ನಿರೀಕ್ಷೆ.
(ಕೀರ್ತನೆ 124.)
ಯಾತ್ರಾಗೀತ.

**129** ನಮ್ಮ ಯೌವನಾರಭ್ಯ ಶತ್ರುಗಳು ನಮ್ಮನ್ನು ಹಲವು ಸಾರಿ ಬಾಧಿಸಿದ್ದಾರೆಂದು
ಇಸ್ರಾಯೇಲು ಹೇಳಲಿ.
2 ನಾವು ಯೌವನಾರಭ್ಯ ಎಷ್ಟೋ ಸಾರಿ ಬಾಧೆಹೊಂದಿದರೂ
ಅವರು ನಮ್ಮನ್ನು ಜಯಿಸಲಿಲ್ಲ.
3 ಉಳುವವರು ನಮ್ಮ ಬೆನ್ನಿನ ಮೇಲೆ ಉತ್ತುತ್ತು
ಉದ್ದವಾದ ಗೆರೆಗಳನ್ನು ಮಾಡಿದರು;
4 ಆದರೆ ನೀತಿಸ್ವರೂಪನಾದ ಯೆಹೋವನು
ದುಷ್ಟರು ಹಾಕಿದ ಬಂಧನಗಳನ್ನು ಛೇದಿಸಿಬಿಟ್ಟನು.
5 ಚೀಯೋನನ್ನು ದ್ವೇಷಿಸುವವರೆಲ್ಲರು
ಅವಮಾನದಿಂದ ಹಿಂದಿರುಗಲಿ.
6 ಅವರು ಮಾಳಿಗೆಯ ಮೇಲಣ ಹುಲ್ಲಿನಂತಾಗಲಿ;
ಅದು ಹೂವುಬಿಡುವದಕ್ಕೆ ಮೊದಲೇ ಒಣಗಿಹೋಗುತ್ತದೆ;
7 ಅದನ್ನು ಕೊಯ್ಯುವವನ ಹಿಡಿಯೂ
ಸಿವುಡುಕಟ್ಟುವವನ ಉಡಿಲೂ ತುಂಬುವದಿಲ್ಲ.
8 ಹಾದುಹೋಗುವವರು—
ಯೆಹೋವನು ನಿಮ್ಮನ್ನು ಆಶೀರ್ವದಿಸಲಿ ಎಂದೂ
ಯೆಹೋವನಾಮದಲ್ಲಿ ನಿಮ್ಮನ್ನು ಆಶೀರ್ವದಿಸುತ್ತೇವೆ ಎಂದೂ ಹೇಳುವದಿಲ್ಲ.

ಪಾಪಪರಿಹಾರಕ್ಕಾಗಿ ಪ್ರಾರ್ಥನೆ.
(ನೆಹೆಮೀಯ 1. 4—11.)
ಯಾತ್ರಾಗೀತ.

**130** ಯೆಹೋವನೇ, ಜಲಾಗಾಧದಲ್ಲಿದ್ದು ನಿನ್ನನ್ನು ಕೂಗಿಕೊಳ್ಳುತ್ತೇನೆ.
2 ಕರ್ತನೇ, ನನ್ನ ಮೊರೆಯನ್ನು ಕೇಳು;
ನನ್ನ ವಿಜ್ಞಾಪನಶಬ್ದಕ್ಕೆ ಕಿವಿದೆರೆ.
3 ಕರ್ತನೇ, ಯಾಹುವೇ, ನೀನು ಪಾಪಗಳನ್ನು ಎಣಿಸುವದಾದರೆ
ನಿನ್ನ ಮುಂದೆ ಯಾರು ನಿಂತಾರು?
4 ನೀನು ಪಾಪವನ್ನು ಕ್ಷಮಿಸುವವನಾದ್ದರಿಂದ
ಮನುಷ್ಯರ ಭಯಭಕ್ತಿಗೆ ನೀನೇ ಪಾತ್ರನು.
5 ನಾನು ಯೆಹೋವನನ್ನು ಎದುರುನೋಡುತ್ತೇನೆ; ನನ್ನ ಪ್ರಾಣವು ಆತನನ್ನು ಕಾದುಕೊಂಡಿದೆ;
ಆತನ ನುಡಿಯನ್ನು ನಿರೀಕ್ಷಿಸಿಕೊಂಡಿದ್ದೇನೆ.
6 ಕಾವಲುಗಾರರು ಬೆಳಗಾಗುವದನ್ನು ಮುನ್ನೋಡುತ್ತಾರಲ್ಲಾ;
ಕಾವಲುಗಾರರು ಬೆಳಗಾಗುವದನ್ನು ಮುನ್ನೋಡುವದಕ್ಕಿಂತ ವಿಶೇಷವಾಗಿ
ನನ್ನ ಅಂತರಾತ್ಮವು ಕರ್ತನನ್ನು ಮುನ್ನೋಡುತ್ತದೆ.
7 ಇಸ್ರಾಯೇಲೇ, ಯೆಹೋವನನ್ನು ಮುಂಗಾದಿರು;
ಯೆಹೋವನು ಕೃಪಾಸಂಪನ್ನನು;
ಪೂರ್ಣವಿಮೋಚನೆಯು ಆತನಿಂದಲೇ ದೊರಕುವದ
8 ಆತನೇ ಇಸ್ರಾಯೇಲನ್ನು ಅದರ ಸಕಲ ಪಾಪಗಳಿಂ
ವಿಮೋಚಿಸುವನು.

ಭಕ್ತರ ಬಾಲಭಾವ.
(ಜ್ಞಾನೋಕ್ತಿ 23. 26; ಮತ್ತಾ. 18. 3.)
ಯಾತ್ರಾಗೀತ; ದಾವೀದನದು.

**131** ಯೆಹೋವನೇ, ನನ್ನ ಎದೆಯಲ್ಲಿ ಹಮ್ಮಿಲ್ಲ; ನನಗೆ ಸೊಕ್ಕಿನ ಕಣ್ಣಿಲ್ಲ;
ಅಸಾಧ್ಯಕಾರ್ಯಗಳಲ್ಲಿ ಕೈಹಾಕುವದಿಲ್ಲ.
2 ನಿಜವಾಗಿ ನನ್ನ ಮನಸ್ಸನ್ನು ಸಮಾಧಾನಪಡಿಸಿದ್ದೇ
ತಾಯಿಯ ಬಳಿಯಲ್ಲಿರುವ ಮೊಲೆಬಿಡಿಸಿದ ಕೂಸಿನಂ
ನೆಮ್ಮದಿಯಿಂದಿದೆ.
ನನ್ನಲ್ಲಿ ನನ್ನ ಮನಸ್ಸು ಮೊಲೆಬಿಡಿಸಿದ ಕೂಸಿನಂತಿ
3 ಇಸ್ರಾಯೇಲೇ, ಇಂದಿನಿಂದ ಯುಗಯುಗಕ್ಕೂ
ಯೆಹೋವನನ್ನೇ ನಿರೀಕ್ಷಿಸಿಕೊಂಡಿರು.

ದಾವೀದನ ಮನೆತನದವರನ್ನು ಪುನಃಸ್ಥಾಪಿಸಬೇಕೆಂದು ಪ್ರಾರ್ಥಿಸುವದು.
(ಕೀರ್ತನೆ 89; 2 ಸಮುವೇಲ 7.)
ಯಾತ್ರಾಗೀತ.

**132** ಯೆಹೋವನೇ, ದಾವೀದನ ಹಿತಕ್ಕೋಸ್ಕರ ಅವ ಶ್ರಮಗಳನ್ನು ನೆನಪುಮಾಡಿಕೋ.
2 ಯಾಕೋಬ್ಯರ ಶೂರನಾದ ಯೆಹೋವನಿಗಾಗಿ
ಒಂದು ವಾಸಸ್ಥಾನವನ್ನು ಏರ್ಪಡಿಸುವ ತನಕ
3 ನಾನು ನನ್ನ ಮನೆಯೊಳಗೆ ಪ್ರವೇಶಿಸುವದಿಲ್ಲ,
ಮಂಚವನ್ನು ಹತ್ತುವದಿಲ್ಲ,
4 ಕಣ್ಣುಗಳನ್ನು ಮುಚ್ಚುವದಿಲ್ಲ,
ರೆಪ್ಪೆಗಳನ್ನು ಕೂಡಿಸುವದಿಲ್ಲ ಎಂದು
5 ಅವನು ಯಾಕೋಬ್ಯರ ಶೂರನಾದ ಯೆಹೋವನಿ
ಪ್ರಮಾಣದಿಂದ ಹರಕೆಮಾಡಿಕೊಂಡನಲ್ಲಾ.
6 ಇಗೋ, ಅದು ಎಫ್ರಾತದಲ್ಲಿರುತ್ತದೆಂದು ಕೇಳಿದೆ
ಯಹಾರ್ ಮೈದಾನದಲ್ಲಿ ನಮಗೆ ಸಿಕ್ಕಿತು.
7 ಬನ್ನಿರಿ, ಆತನ ಮಂದಿರಕ್ಕೆ ಹೋಗಿ
ಆತನ ಪಾದಪೀಠದ ಮುಂದೆ ಅಡ್ಡಬೀಳೋಣ.
8 ಯೆಹೋವನೇ, ಎದ್ದು ನಿನ್ನ ಪ್ರತಾಪಯುಕ್ತವಾ
ಮಂಜೂಷದೊಡನೆ
ನಿನ್ನ ವಾಸಸ್ಥಾನದಲ್ಲಿ ಸೇರೋಣವಾಗಲಿ.
9 ನಿನ್ನ ಯಾಜಕರು ನೀತಿಯೆಂಬ ವಸ್ತ್ರವ ಹೊದ್ದುಕೊಳ್ಳಲಿ;
ನಿನ್ನ ಭಕ್ತರು ಉತ್ಸಾಹಧ್ವನಿಮಾಡಲಿ.
10 ನಿನ್ನ ಸೇವಕನಾದ ದಾವೀದನನ್ನು ನೆನಪುಮಾಡಿಕೊ
ನಿನ್ನ ಅಭಿಷಿಕ್ತನನ್ನು ತಳ್ಳಿಬಿಡಬೇಡ.

11 ಯೆಹೋವನು ದಾವೀದನಿಗೆ ಮಾಡಿದ ಪ್ರಮಾಣವು
ಸ್ಥಿರವಾಗಿದೆ;
ಆತನು ಅದನ್ನು ಬದಲಿಸುವದಿಲ್ಲ—
ನಿನ್ನ ಸಂತಾನದವರನ್ನು ನಿನ್ನ ಸಿಂಹಾಸನದ ಮೇಲೆ
ಕುಳ್ಳಿರಿಸುವೆನು;
12 ನಿನ್ನ ಮಕ್ಕಳು ನನ್ನ ನಿಬಂಧನೆಯನ್ನೂ ನಾನು ಆಜ್ಞಾ
ಪಿಸಿದ ಕಟ್ಟಳೆಗಳನ್ನೂ
ಕೈಕೊಂಡು ನಡೆಯುವವರಾದರೆ
ಅವರ ಮಕ್ಕಳು ನಿನ್ನ ಸಿಂಹಾಸನದಲ್ಲಿ ಸದಾಕಾಲ
ಕೂತುಕೊಳ್ಳುವರು.

13 ನಿಶ್ಚಯವಾಗಿ ಯೆಹೋವನು ಚೀಯೋನನ್ನು ಅಪೇ
ಕ್ಷಿಸಿ
ತನ್ನ ನಿವಾಸಕ್ಕಾಗಿ ಆರಿಸಿಕೊಂಡಿದ್ದಾನೆ.
14 ಆತನು—ಇದು ನನ್ನ ಶಾಶ್ವತವಾಸಸ್ಥಾನ;
ಇಲ್ಲೇ ಇರುವೆನು; ಇದು ನನಗೆ ಇಷ್ಟವು.
15 ಇದರ ಆದಾಯವನ್ನು ಆಶೀರ್ವದಿಸುವೆನು;
ಇಲ್ಲಿಯ ಬಡವರನ್ನು ಆಹಾರದಿಂದ ತೃಪ್ತಿಗೊಳಿಸು
ವೆನು;
16 ಯಾಜಕರಿಗೆ ರಕ್ಷಣೆಯೆಂಬ ವಸ್ತ್ರವನ್ನು ಹೊದಿಸು
ವೆನು;
ಭಕ್ತರು ಉತ್ಸಾಹಧ್ವನಿಮಾಡುವರು.
17 ಇಲ್ಲಿಯೇ ದಾವೀದನ ಕೊಂಬು ಚಿಗುರುವಂತೆ
ಮಾಡುವೆನು;
ನನ್ನ ಅಭಿಷಿಕ್ತನ ದೀಪವು ಉರಿಯುತ್ತಲೇ ಇರಬೇ
ಕೆಂದು ನೇಮಿಸಿದ್ದೇನೆ.
18 ಅವನ ವೈರಿಗಳನ್ನು ನಾಚಿಕೆಯೆಂಬ ವಸ್ತ್ರದಿಂದ
ಹೊದಿಸುವೆನು;
ಆದರೆ ಅವನ ಮೇಲೆ ಕಿರೀಟವು ಶೋಭಿಸುತ್ತಿರುವದು.

ಐಕಮತ್ಯವು ಶ್ರೇಷ್ಠವಾದದ್ದು.
ಯಾತ್ರಾಗೀತ; ದಾವೀದನದು.

**133** ಆಹಾ, ಸಹೋದರರು ಒಂದಾಗಿರುವದು
ಎಷ್ಟೋ ಒಳ್ಳೇದು, ಎಷ್ಟೋ ರಮ್ಯವಾದದ್ದು!
2 ಅದು ಆರೋನನ ತಲೆಯ ಮೇಲೆ ಹಾಕಲ್ಪಟ್ಟು
ಅವನ ಗಡ್ಡದ ಮೇಲೆಯೂ
ಅಲ್ಲಿಂದ ಅವನ ಅಂಗಿಗಳ ಕೊರಳಪಟ್ಟಿಯ ವರೆಗೂ
ಹರಿದುಬರುವ ಶ್ರೇಷ್ಠತೈಲದಂತೆಯೂ
3 ಹೆರ್ಮೋನ್ ಪರ್ವತದಲ್ಲಿ ಹುಟ್ಟಿ ಚೀಯೋನ್ ಪರ್ವ
ತದ ಮೇಲೆ ಬೀಳುವ ಮಂಜಿನಂತೆಯೂ ಇದೆ.
ಅಲ್ಲಿ ಆಶೀರ್ವಾದವೂ ಜೀವವೂ
ಸದಾಕಾಲ ಇರಬೇಕೆಂದು ಯೆಹೋವನು ಆಜ್ಞಾ
ಪಿಸಿದ್ದಾನೆ.

ದೇವಾಲಯದ ರಾತ್ರಿಸೇವಕರನ್ನು ಎಚ್ಚರಿಸುವದು.
ಯಾತ್ರಾಗೀತ.

**134** ಎಳೈ ರಾತ್ರಿಯಲ್ಲಿ ಯೆಹೋವನ ಮಂದಿರದಲ್ಲಿ
ರುವ ಆತನ ಸರ್ವಸೇವಕರೇ,
ಯೆಹೋವನನ್ನು ಕೊಂಡಾಡಿರಿ.
2 ಮಹಾಪರಿಶುದ್ಧಸ್ಥಳದ ಕಡೆಗೆ ಕೈಯೆತ್ತಿ
ಯೆಹೋವನನ್ನು ಕೊಂಡಾಡಿರಿ.
3 ಭೂಮ್ಯಾಕಾಶಗಳನ್ನು ಉಂಟುಮಾಡಿದ ಯೆಹೋ
ವನು
ಚೀಯೋನಿನೊಳಗಿಂದ ನಿನ್ನನ್ನು ಆಶೀರ್ವದಿಸಲಿ.

ಸೃಷ್ಟಿಕರ್ತನೂ ಪರಿಪಾಲಕನೂ ಆಗಿರುವ ಏಕದೇವರಿಗೆ ಸ್ತೋತ್ರ.
(ಕೀರ್ತನೆ 136.)

**135** ಯಾಹುವಿಗೆ ಸ್ತೋತ್ರ!
ಯೆಹೋವನಾಮವನ್ನು ಸ್ತುತಿಸಿರಿ.
ಯೆಹೋವನ ಸೇವಕರೇ,
2 ಯೆಹೋವನ ಮಂದಿರದಲ್ಲಿಯೂ
ನಮ್ಮ ದೇವರ ಆಲಯದ ಅಂಗಳಗಳಲ್ಲಿಯೂ ಸೇವೆ
ಮಾಡುವವರೇ,
ಆತನನ್ನು ಕೀರ್ತಿಸಿರಿ.
3 ಯಾಹುವಿಗೆ ಸ್ತೋತ್ರ!
ಯೆಹೋವನು ಒಳ್ಳೆಯವನು.
ಆತನ ನಾಮವನ್ನು ಕೊಂಡಾಡಿರಿ; ಅದು ಮನೋ
ಹರವಾಗಿದೆ.
4 ಯಾಹುವು ಯಾಕೋಬನ ವಂಶದವರಾದ ಇಸ್ರಾ
ಯೇಲ್ಯರನ್ನು
ಸ್ವಕೀಯಜನವನ್ನಾಗಿ ಆದುಕೊಂಡನಲ್ಲಾ.

5 ಯೆಹೋವನು ದೊಡ್ಡವನೆಂದೂ
ನಮ್ಮ ಕರ್ತನು ಎಲ್ಲಾ ದೇವರುಗಳಿಗಿಂತ ಹೆಚ್ಚಿನವ
ನೆಂದೂ ತಿಳಿದಿದ್ದೇನೆ.
6 ಯೆಹೋವನು ಭೂಮಿಯಲ್ಲಿಯೂ ಆಕಾಶದಲ್ಲಿಯೂ
ಸಮುದ್ರಗಳಲ್ಲಿಯೂ ಬೇರೆ ಎಲ್ಲಾ ಜಲರಾಶಿಗಳಲ್ಲಿ
ಯೂ
ತನಗೆ ಬೇಕಾದದ್ದನ್ನು ಮಾಡುತ್ತಾನೆ.
7 ಆತನು ಭೂಮಿಯ ಕಟ್ಟಕಡೆಯಿಂದ ಮೋಡಗಳನ್ನು
ಏರಮಾಡುತ್ತಾನೆ;
ಮಳೆಗೋಸ್ಕರ ಮಿಂಚನ್ನು ಹೊಳೆಯಮಾಡುತ್ತಾನೆ;
ತನ್ನ ಉಗ್ರಾಣದಿಂದ ಗಾಳಿಯನ್ನು ಬೀಸಮಾಡುತ್ತಾನೆ.

8 ಐಗುಪ್ತದ ಮನುಷ್ಯರು ಮೊದಲುಗೊಂಡು ಪಶು
ಗಳವರೆಗೂ
ಚೊಚ್ಚಲುಗಳನ್ನೆಲ್ಲಾ ಸಂಹರಿಸಿದನು.
9 ಐಗುಪ್ತವೇ, ಆತನು ನಿನ್ನ ಮಧ್ಯದಲ್ಲಿ
ಫರೋಹನಿಗೂ ಅವನ ಸೇವಕರಿಗೂ ವಿರೋಧವಾಗಿ
ಅದ್ಭುತಗಳನ್ನೂ ಮಹತ್ಕಾರ್ಯಗಳನ್ನೂ ನಡಿಸಿದನು.

10 ಆತನು ದೊಡ್ಡ ಜನಾಂಗಗಳನ್ನು ಹೊಡೆದುಬಿಟ್ಟನು;
ಬಲಿಷ್ಠರಾಜರನ್ನು ಕೊಂದುಹಾಕಿದನು.
11 ಅವರಲ್ಲಿ ಅಮೋರಿಯರ ಅರಸನಾದ ಸೀಹೋನನೂ
ಬಾಷಾನಿನ ಅರಸನಾದ ಓಗನೂ ಇದ್ದರು.
ಕಾನಾನ್ ದೇಶದ ಎಲ್ಲಾ ರಾಜ್ಯಗಳನ್ನು ನಿರ್ಮೂಲ
ಮಾಡಿದನು.

12 ಅವರ ದೇಶವನ್ನು ಇಸ್ರಾಯೇಲ್ಯರಿಗೆ ಕೊಟ್ಟನು;
ಆತನ ಪ್ರಜೆಗೆ ಅದು ಸ್ವಾಸ್ತ್ಯವಾಯಿತು.

13 ಯೆಹೋವನೇ, ನಿನ್ನ ನಾಮವು ಶಾಶ್ವತವಾದದ್ದು;
ಯೆಹೋವನೇ, ನೀನು ತಲತಲಾಂತರಕ್ಕೂ ಸ್ಮರಿಸಲ್ಪ
ಡುತ್ತೀ.
14 ನಿಜವಾಗಿ ಯೆಹೋವನು ತನ್ನ ಪ್ರಜೆಯ ನ್ಯಾಯವನ್ನು
ಸ್ಥಾಪಿಸುವನು;
ತನ್ನ ಸೇವಕರನ್ನು ಕನಿಕರಿಸುವನು.

15 ಅನ್ಯಜನಗಳ ವಿಗ್ರಹಗಳು ಬೆಳ್ಳಿಬಂಗಾರದವುಗಳೇ;
ಅವು ಮನುಷ್ಯರ ಕೈಕೆಲಸವಷ್ಟೇ.
16 ಅವುಗಳಿಗೆ ಬಾಯಿದ್ದರೂ ಮಾತಾಡುವದಿಲ್ಲ;
ಕಣ್ಣಿದ್ದರೂ ನೋಡುವದಿಲ್ಲ;
17 ಕಿವಿಯಿದ್ದರೂ ಕೇಳುವದಿಲ್ಲ;
ಇದಲ್ಲದೆ ಅವುಗಳ ಬಾಯಲ್ಲಿ ಶ್ವಾಸವೇ ಇಲ್ಲ.
18 ಅವುಗಳನ್ನು ಮಾಡುವವರೂ
ಅವುಗಳಲ್ಲಿ ಭರವಸವಿಡುವವರೂ ಅವುಗಳಂತೆಯೇ.

19 ಇಸ್ರಾಯೇಲನ ಮನೆತನದವರೇ, ಯೆಹೋವನನ್ನು
ಕೊಂಡಾಡಿರಿ;
ಆರೋನನ ಮನೆತನದವರೇ, ಯೆಹೋವನನ್ನು ಕೊಂ
ಡಾಡಿರಿ;
20 ಲೇವಿಯ ಮನೆತನದವರೇ, ಯೆಹೋವನನ್ನು ಕೊಂ
ಡಾಡಿರಿ;
ಯೆಹೋವನ ಭಕ್ತರೇ, ಯೆಹೋವನನ್ನು ಕೊಂಡಾಡಿರಿ.

21 ಯೆರೂಸಲೇಮಿನಲ್ಲಿ ವಾಸಿಸುವ ಯೆಹೋವನ ಕೀರ್ತಿ
ಯು
ಚೀಯೋನಿನಿಂದ ಹೊರಗೂ ಹಬ್ಬಲಿ.
ಯಾಹುವಿಗೆ ಸ್ತೋತ್ರ!

ಯೆಹೋವಸ್ತುತಿ.
(ಕೀರ್ತನೆ 135.)

136 ಯೆಹೋವನಿಗೆ ಕೃತಜ್ಞತಾಸ್ತುತಿಮಾಡಿರಿ; ಆತ
ನು ಒಳ್ಳೆಯವನು.
ಆತನ ಕೃಪೆಯು ಶಾಶ್ವತವಾದದ್ದು.
2 ದೇವಾಧಿದೇವನಿಗೆ ಕೃತಜ್ಞತಾಸ್ತುತಿಮಾಡಿರಿ;
ಆತನ ಕೃಪೆಯು ಶಾಶ್ವತವಾದದ್ದು.
3 ಕರ್ತರ ಕರ್ತನಿಗೆ ಕೃತಜ್ಞತಾಸ್ತುತಿಮಾಡಿರಿ;
ಆತನ ಕೃಪೆಯು ಶಾಶ್ವತವಾದದ್ದು.

4 ಮಹತ್ಕಾರ್ಯಗಳನ್ನು ನಡಿಸುವದಕ್ಕೆ ಆತನೊಬ್ಬನೇ
ಶಕ್ತನು;
ಆತನ ಕೃಪೆಯು ಶಾಶ್ವತವಾದದ್ದು.
5 ಆತನು ಆಕಾಶವನ್ನು ಜ್ಞಾನದಿಂದ ನಿರ್ಮಿಸಿದ್ದಾನೆ;
ಆತನ ಕೃಪೆಯು ಶಾಶ್ವತವಾದದ್ದು.
6 ಆತನು ಭೂಮಿಯನ್ನು ಜಲರಾಶಿಗಳ ಮೇಲೆ ಹಾಸಿ
ದ್ದಾನೆ;
ಆತನ ಕೃಪೆಯು ಶಾಶ್ವತವಾದದ್ದು.
7 ಆತನು ಮಹಾಜ್ಯೋತಿರ್ಮಂಡಲಗಳನ್ನು ಸೃಷ್ಟಿಸಿದ
ನೆ;
ಆತನ ಕೃಪೆಯು ಶಾಶ್ವತವಾದದ್ದು.
8 ಸೂರ್ಯನು ಹಗಲನ್ನಾಳುತ್ತಾನೆ;
ಆತನ ಕೃಪೆಯು ಶಾಶ್ವತವಾದದ್ದು.
9 ಚಂದ್ರನಕ್ಷತ್ರಗಳು ರಾತ್ರಿಯನ್ನಾಳುತ್ತವೆ;
ಆತನ ಕೃಪೆಯು ಶಾಶ್ವತವಾದದ್ದು.

10 ಆತನು ಐಗುಪ್ತ್ಯರ ಚೊಚ್ಚಲ ಮಕ್ಕಳನ್ನು ಸಂಹರಿ
ದನು;
ಆತನ ಕೃಪೆಯು ಶಾಶ್ವತವಾದದ್ದು.
11 ಇಸ್ರಾಯೇಲ್ಯರನ್ನು ಅವರ ಮಧ್ಯದಿಂದ ಹೊರತಂ
ನು;
ಆತನ ಕೃಪೆಯು ಶಾಶ್ವತವಾದದ್ದು.
12 ತನ್ನ ಭುಜಬಲ, ಶಿಕ್ಷಾಹಸ್ತ ಇವುಗಳಿಂದ ಅವರನ
ಬಿಡಿಸಿದನು;
ಆತನ ಕೃಪೆಯು ಶಾಶ್ವತವಾದದ್ದು.
13 ಆತನು ಕೆಂಪು ಸಮುದ್ರವನ್ನು ಭೇದಿಸಿದನು;
ಆತನ ಕೃಪೆಯು ಶಾಶ್ವತವಾದದ್ದು.
14 ಇಸ್ರಾಯೇಲ್ಯರನ್ನು ಅದರ ಮಧ್ಯದಲ್ಲಿಯೇ ನಡಿ
ದನು;
ಆತನ ಕೃಪೆಯು ಶಾಶ್ವತವಾದದ್ದು.
15 ಫರೋಹನನ್ನೂ ಅವನ ಸೈನ್ಯವನ್ನೂ ಕೆಂಪು ಸಮು
ದಲ್ಲಿ ಕೆಡವಿಬಿಟ್ಟನು;
ಆತನ ಕೃಪೆಯು ಶಾಶ್ವತವಾದದ್ದು.
16 ಆತನು ತನ್ನ ಪ್ರಜೆಯನ್ನು ಅರಣ್ಯದೊಳಗೆ ಕರತಂ
ನು;
ಆತನ ಕೃಪೆಯು ಶಾಶ್ವತವಾದದ್ದು.
17 ದೊಡ್ಡ ಅರಸರನ್ನು ಹೊಡೆದನು;
ಆತನ ಕೃಪೆಯು ಶಾಶ್ವತವಾದದ್ದು.
18 ಶ್ರೇಷ್ಠರಾಜರನ್ನು ಸಂಹರಿಸಿದನು;
ಆತನ ಕೃಪೆಯು ಶಾಶ್ವತವಾದದ್ದು.
19 ಅಮೋರಿಯರ ಅರಸನಾದ ಸೀಹೋನನು ಅವರಲ
ಬ್ಬನು;
ಆತನ ಕೃಪೆಯು ಶಾಶ್ವತವಾದದ್ದು.
20 ಬಾಷಾನಿನ ಅರಸನಾದ ಓಗನು ಇನ್ನೊಬ್ಬನು;
ಆತನ ಕೃಪೆಯು ಶಾಶ್ವತವಾದದ್ದು.
21 ಅವರ ದೇಶವನ್ನು ಇಸ್ರಾಯೇಲ್ಯರಿಗೆ ಕೊಟ್ಟನು;
ಆತನ ಕೃಪೆಯು ಶಾಶ್ವತವಾದದ್ದು.
22 ಆತನ ಸೇವಕರಿಗೆ ಅದು ಸ್ವಾಸ್ತ್ಯವಾಯಿತು;
ಆತನ ಕೃಪೆಯು ಶಾಶ್ವತವಾದದ್ದು.

23 ನಾವು ದೀನಾವಸ್ಥೆಯಲ್ಲಿದ್ದಾಗ ನಮ್ಮನ್ನು ನೆನಪುಮಾ
ಕೊಂಡನು;
ಆತನ ಕೃಪೆಯು ಶಾಶ್ವತವಾದದ್ದು.
24 ನಮ್ಮ ಶತ್ರುಗಳಿಂದ ನಮ್ಮನ್ನು ಬಿಡಿಸಿದನು;
ಆತನ ಕೃಪೆಯು ಶಾಶ್ವತವಾದದ್ದು.
25 ಎಲ್ಲಾ ಜೀವಿಗಳಿಗೂ ಆಹಾರಕೊಡುವವನು ಆತನ
ಆತನ ಕೃಪೆಯು ಶಾಶ್ವತವಾದದ್ದು.

26 ಪರಲೋಕದಲ್ಲಿರುವ ದೇವರಿಗೆ ಕೃತಜ್ಞತಾಸ್ತುತಿ
ಮಾಡಿರಿ;
ಆತನ ಕೃಪೆಯು ಶಾಶ್ವತವಾದದ್ದು.

ಸೆರೆಯವರ ಪ್ರಲಾಪ.

(೨ ಪೂರ್ವಕಾಲವೃತ್ತಾಂತ 36.)

**137** ನಾವು ಬಾಬೆಲ್ ದೇಶದ ನದಿಗಳ ಬಳಿಯಲ್ಲಿ
ಕೂತುಕೊಂಡು
ಚೀಯೋನನ್ನು ನೆನಸಿ ಅತ್ತೆವು.
2 ಆ ದೇಶದ ನೀರವಂಜಿ ಮರಗಳಿಗೆ
ನಮ್ಮ ಕಿನ್ನರಿಗಳನ್ನು ತೂಗಹಾಕಿದೆವು.
3 ನಮ್ಮನ್ನು ಸೆರೆಹಿಡಿದು ಪೀಡಿಸುತ್ತಿದ್ದವರು ನಮಗೆ—
ನೀವು ಚೀಯೋನಿನ ಗೀತಗಳಲ್ಲಿ ಒಂದನ್ನು
ನಮ್ಮ ವಿನೋದಕ್ಕಾಗಿ ಹಾಡಿರಿ ಎಂದು ಹೇಳುತ್ತಿದ್ದರು.

4 ನಾವು ಪರದೇಶದಲ್ಲಿ ಯೆಹೋವಗೀತಗಳನ್ನು ಹಾ
ಡುವದು ಹೇಗೆ?
5 ಯೆರೂಸಲೇಮೇ, ನಾನು ನಿನ್ನನ್ನು ಮರೆತುಬಿಟ್ಟರೆ
ನನ್ನ ಬಲಗೈ ಮರೆತುಹೋಗಲಿ.
6 ಯೆರೂಸಲೇಮೇ, ನಾನು ನಿನ್ನನ್ನು ನೆನಸದಿದ್ದರೆ,
ಎಲ್ಲಾದಕ್ಕಿಂತ ಹೆಚ್ಚಾಗಿ ನಾನು ನಿನ್ನಲ್ಲಿ ಆನಂದಿಸ
ದಿದ್ದರೆ,
ನನ್ನ ನಾಲಿಗೆಯು ಸೇದಿಹೋಗಲಿ.

7 ಯೆಹೋವನೇ, ಎದೋಮ್ಯರ ಹಾನಿಗಾಗಿ ಯೆರೂಸ
ಲೇಮಿನ ನಾಶನದಿನವನ್ನು ನೆನಪುಮಾಡಿಕೋ.
ಅವರು—ಅದನ್ನು ಹಾಳುಮಾಡಿರಿ, ಅಸ್ತಿವಾರಸಹಿತ
ಹಾಳುಮಾಡಿರಿ ಎಂದು ಹೇಳಿದರಲ್ಲಾ.
8 ಹಾಳಾಗುವದಕ್ಕಿರುವ ಬಾಬೆಲ್ ಪಟ್ಟಣವೇ,
ನೀನು ನಮಗೆ ಮಾಡಿದ್ದಕ್ಕೆ ಮುಯ್ಯಿಸಲ್ಲಿಸುವವನು
ಧನ್ಯನು.
9 ನಿನ್ನ ಮಕ್ಕಳನ್ನು ಹಿಡಿದು ಬಂಡೆಗೆ ಅಪ್ಪಳಿಸುವವನು
ಭಾಗ್ಯಹೊಂದಲಿ.

ರಕ್ಷಾಕರ್ತನ ಸ್ತುತಿ.

(ಕೀರ್ತನೆ 102. 13—23.)

ದಾವೀದನ ಕೀರ್ತನೆ.

**138** [ಯೆಹೋವನೇ,] ಪೂರ್ಣಮನಸ್ಸಿನಿಂದ ನಿನ್ನನ್ನು
ಕೊಂಡಾಡುವೆನು;
ದೇವರುಗಳಿದುರಿನಲ್ಲಿ ನಿನ್ನನ್ನು ಕೀರ್ತಿಸುವೆನು.
2 ನಿನ್ನ ಪರಿಶುದ್ಧಾಲಯದ ಕಡೆಗೆ ಅಡ್ಡಬೀಳುತ್ತೇನೆ;
ನಿನ್ನ ಕೃಪೆ, ಸತ್ಯತೆ ಇವುಗಳಿಗೋಸ್ಕರ ನಿನ್ನ ನಾಮ
ವನ್ನು ಕೊಂಡಾಡುತ್ತೇನೆ.
ವಾಗ್ದಾನವನ್ನು ವಿಶೇಷರೀತಿಯಿಂದ ನೆರವೇರಿಸಿ ನಿನ್ನ
ನಾಮಮಹತ್ತನ್ನು ಹೆಚ್ಚಿಸಿದ್ದೀ.
3 ನಾನು ಮೊರೆಯಿಟ್ಟಾಗ ಸದುತ್ತರವನ್ನು ದಯಪಾಲಿ
ಸಿದಿ;
ನನ್ನ ಆತ್ಮಕ್ಕೆ ಬಲಕೊಟ್ಟು ನನ್ನನ್ನು ಧೈರ್ಯಪಡಿ
ಸಿದ್ದೀ.
4 ಯೆಹೋವನೇ, ಭೂರಾಜರೆಲ್ಲರು ನೀನು ಉಸಿರಿದ
ನುಡಿಗಳನ್ನು ಕೇಳಿ
ನಿನ್ನನ್ನು ಸ್ತುತಿಸುವರು;
5 ಅವರು ಯೆಹೋವನ ಮಾರ್ಗಗಳನ್ನು ಹಾಡಿಹರಸು
ವರು;
ಯೆಹೋವನ ಪ್ರಭಾವವು ದೊಡ್ಡದಾಗಿದೆಯಲ್ಲಾ.
6 ಯೆಹೋವನು ಮಹೋನ್ನತನು; ಆದರೂ ದೀನರನ್ನು
ಲಕ್ಷಿಸುತ್ತಾನೆ;
ಗರ್ವಿಷ್ಠರನ್ನು ದೂರದಿಂದಲೇ ಗುರುತುಹಿಡಿಯುತ್ತಾನೆ.

7 ನಾನು ಇಕ್ಕಟ್ಟಿನ ದಾರಿಯಲ್ಲಿ ನಡೆಯುವಾಗ
ನನ್ನನ್ನು ಚೈತನ್ಯಗೊಳ್ಳಿಸುವಿ;
ನನ್ನ ಶತ್ರುಗಳ ಕೋಪಕ್ಕೆ ವಿರೋಧವಾಗಿ ನಿನ್ನ ಕೈ
ಚಾಚುವಿ;
ನಿನ್ನ ಬಲಗೈ ನನ್ನನ್ನು ರಕ್ಷಿಸುವದು.
8 ಯೆಹೋವನು ನನ್ನ ಕಾರ್ಯವನ್ನು ಸಿದ್ಧಿಗೆ ತರು
ವನು.
ಯೆಹೋವನೇ, ನಿನ್ನ ಕೃಪೆಯು ಶಾಶ್ವತವಾದದ್ದು;
ನೀನು ಕೈಹಚ್ಚಿದ ಕೆಲಸವನ್ನು ನೆರವೇರಿಸದೆ ಬಿಡ
ಬೇಡ.



ದೇವರ ಸರ್ವಜ್ಞತ್ವವೂ ಸರ್ವವ್ಯಾಪಕತ್ವವೂ.

ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು;

ದಾವೀದನ ಕೀರ್ತನೆ.

**139** ಯೆಹೋವನೇ, ನೀನು ನನ್ನನ್ನು ಪರೀಕ್ಷಿಸಿ ತಿಳು
ಕೊಂಡಿದ್ದೀ;
2 ನಾನು ಕೂತುಕೊಳ್ಳುವದೂ ಏಳುವದೂ ನಿನಗೆ
ಗೊತ್ತದೆ;
ದೂರದಿಂದಲೇ ನನ್ನ ಆಲೋಚನೆಗಳನ್ನು ಬಲ್ಲವನಾ
ಗಿರುತ್ತೀ;
3 ನಾನು ನಡೆಯುವದನ್ನೂ ಮಲಗುವದನ್ನೂ ಶೋಧಿಸಿ
ಗ್ರಹಿಸಿಕೊಳ್ಳುತ್ತೀ;
ನನ್ನ ನಡತೆಯೆಲ್ಲಾ ನಿನಗೆ ಗೋಚರವಾಗಿದೆ.
4 ಯೆಹೋವನೇ, ನನ್ನ ನಾಲಿಗೆಯ ಮಾತುಗಳಲ್ಲಿ
ನೀನು ಅರಿಯದೆ ಇರುವಂಥದು ಒಂದೂ ಇಲ್ಲ.
5 ಸುತ್ತಲೂ ನನ್ನನ್ನು ಆವರಿಸಿ
ನಿನ್ನ ಕೈಯನ್ನು ನನ್ನ ಮೇಲೆ ಇಟ್ಟಿದ್ದೀ.
6 ಇಂಥ ಜ್ಞಾನವು ನನಗೆ ಬಹು ಆಶ್ಚರ್ಯವಾಗಿದೆ;
ಅದು ಉನ್ನತವಾದದ್ದು, ನನಗೆ ನಿಲುಕುವದಿಲ್ಲ.

7 ನಾನು ನಿನ್ನ ಆತ್ಮಕ್ಕೆ ತಪ್ಪಿಸಿಕೊಳ್ಳುವಂತೆ ಎಲ್ಲಿಗೆ
ಹೋಗಲಿ?
ನಿನ್ನ ಕಣ್ಣಿಗೆ ಮರೆಯಾಗುವಂತೆ ಎಲ್ಲಿಗೆ ಓಡಲಿ?
8 ಮೇಲಣ ಲೋಕಕ್ಕೆ ಏರಿಹೋದರೆ ಅಲ್ಲಿ ನೀನಿರುತ್ತೀ;
ಪಾತಾಳಕ್ಕೆ ಹೋಗಿ ಮಲಗಿಕೊಂಡೇನಂದರೆ ಅಲ್ಲಿಯೂ
ನೀನಿರುವಿ.
9 ಅರುಣನ ರೆಕ್ಕೆಗಳನ್ನು ಕಟ್ಟಿಕೊಂಡು ಹಾರಿಹೋಗಿ
ಸಮುದ್ರದ ಕಟ್ಟಕಡೆಯಲ್ಲಿ ವಾಸಮಾಡೇನಂದರೆ

10 ಅಲ್ಲಿಯೂ ನಿನ್ನ ಕೈ ನನ್ನನ್ನು ನಡಿಸುವದು;
ನಿನ್ನ ಬಲಗೈ ನನ್ನನ್ನು ಹಿಡಿದಿರುವದು.
11 ಕಾರ್ಗತ್ತಲೆಯು ನನ್ನನ್ನು ಕವಿಯುವದು,
ಹಗಲು ಹೋಗಿ ನನ್ನ ಸುತ್ತಲು ಇರುಳಾಗುವದು
ಎಂದು ಹೇಳಿಕೊಂಡರೇನು?
12 ನಿನಗೆ ಕತ್ತಲೆಯು ಕತ್ತಲೆಯಲ್ಲ;
ಇರುಳು ಹಗಲಾಗಿಯೇ ಇರುತ್ತದೆ;
ಕತ್ತಲುಬೆಳಕುಗಳೆರಡೂ ನಿನಗೆ ಒಂದೇ.

13 ನನ್ನ ಅಂತರಿಂದ್ರಿಯಗಳನ್ನು ಉಂಟುಮಾಡಿದವನೂ
ತಾಯಿಯ ಗರ್ಭದಲ್ಲಿ ನನ್ನನ್ನು ರೂಪಿಸಿದವನೂ ನೀನ
ಲ್ಲವೋ?
14 ನೀನು ನನ್ನನ್ನು ಅದ್ಭುತವಾಗಿಯೂ ವಿಚಿತ್ರವಾಗಿಯೂ
ರಚಿಸಿದ್ದರಿಂದ ನಿನ್ನನ್ನು ಕೊಂಡಾಡುತ್ತೇನೆ.
ನಿನ್ನ ಕೃತ್ಯಗಳು ಆಶ್ಚರ್ಯವಾಗಿವೆಯೆಂದು
ನನ್ನ ಹೃದಯವು ಚೆನ್ನಾಗಿ ಗ್ರಹಿಸಿಕೊಂಡಿದೆ.
15 ನಾನು ಗುಪ್ತಸ್ಥಳದಲ್ಲಿ ಏರ್ಪಡುತ್ತಾ
ಭೂಗರ್ಭದಲ್ಲಿ ರಚಿಸಲ್ಪಡುತ್ತಾ ಇದ್ದಾಗ
ನನ್ನ ಅಸ್ಥಿಪಂಜರವು ನಿನಗೆ ಮರೆಯಾಗಿದ್ದಿಲ್ಲ.
16 ನಾನು ಇನ್ನೂ ಕೇವಲ ಪಿಂಡವಾಗಿರುವಾಗ ನಿನ್ನ
ಕಣ್ಣುಗಳು ನನ್ನನ್ನು ನೋಡಿದವು;
ನನ್ನ ಆಯುಷ್ಕಾಲದ ಪ್ರಥಮದಿನವು ಪ್ರಾರಂಭವಾ
ಗುವ ಮೊದಲೇ
ಅದರ ಎಲ್ಲಾ ದಿನಗಳು ನಿನ್ನ ಪುಸ್ತಕದಲ್ಲಿ ಬರೆಯ
ಲ್ಪಟ್ಟವು.
17 ದೇವರೇ, ನಿನ್ನ ಸಂಕಲ್ಪಗಳು ನನ್ನ ಎಣಿಕೆಯಲ್ಲಿ
ಎಷ್ಟೋ ಗೌರವವಾಗಿವೆ;
ಅವುಗಳ ಒಟ್ಟು ಅಸಂಖ್ಯವಾಗಿದೆ.
18 ಅವುಗಳನ್ನು ಲೆಕ್ಕಿಸುವದಾದರೆ [ಸಮುದ್ರದ] ಮರಳಿ
ಗಿಂತ ಹೆಚ್ಚಾಗಿವೆ.
ನಾನು ಎಚ್ಚರವಾಗಲು ಮುಂಚಿನಂತೆಯೇ ನಿನ್ನ ಬಳಿ
ಯಲ್ಲಿದ್ದೇನೆ.

19 ಯೆಹೋವನೇ, ನೀನು ದುಷ್ಟರನ್ನು ಸಂಹರಿಸಿಬಿಟ್ಟರೆ
ಎಷ್ಟೋ ಒಳ್ಳೇದು.
ಕೊಲೆಪಾತಕರೇ, ನನ್ನಿಂದ ತೊಲಗಿಹೋಗಿರಿ.
20 [ದೇವರೇ,] ಅವರು ನಿನ್ನ ಶತ್ರುಗಳು;
ಅಯೋಗ್ಯಕಾರ್ಯಕ್ಕಾಗಿ ನಿನ್ನ ಹೆಸರೆತ್ತುತ್ತಾರೆ,
ಸುಳ್ಳಾಣೆಯಿಡುತ್ತಾರೆ.
21 ಯೆಹೋವನೇ, ನಿನ್ನನ್ನು ದ್ವೇಷಿಸುವವರನ್ನು ನಾನು
ದ್ವೇಷಿಸುತ್ತೇನಲ್ಲವೋ?
ನಿನ್ನ ವಿರೋಧಿಗಳಿಗೆ ನಾನು ಬೇಸರಗೊಳ್ಳುವದಿಲ್ಲ
ವೋ?
22 ನಾನು ಅವರನ್ನು ಸಂಪೂರ್ಣವಾಗಿ ಹಗೆಮಾಡುತ್ತೇನೆ;
ಅವರು ನನಗೂ ವೈರಿಗಳೇ ಆಗಿದ್ದಾರೆ.
23 ದೇವಾ, ನನ್ನನ್ನು ಪರೀಕ್ಷಿಸಿ ನನ್ನ ಹೃದಯವನ್ನು
ತಿಳಿದುಕೋ;
ನನ್ನನ್ನು ಶೋಧಿಸಿ ನನ್ನ ಆಲೋಚನೆಗಳನ್ನು
ಗೊತ್ತುಮಾಡು.
24 ನಾನು ಕೇಡಿನ ಮಾರ್ಗದಲ್ಲಿರುತ್ತೇನೋ ಏನೋ
ನೋಡಿ
ಸನಾತನಮಾರ್ಗದಲ್ಲಿ ನನ್ನನ್ನು ನಡಿಸು.

ಶತ್ರುಪೀಡಿತನ ಪ್ರಾರ್ಥನೆ.
(ಕೀರ್ತನೆ 7; 35; 64; 141—143.)
ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು;
ದಾವೀದನ ಕೀರ್ತನೆ.

**140** ಯೆಹೋವನೇ, ಕೇಡುಕರಿಂದ ನನ್ನನ್ನು ಬಿಡಿಸು
ಬಲಾತ್ಕಾರಿಗಳಿಗೆ ತಪ್ಪಿಸಿ ಕಾಪಾಡು,
2 ಅವರು ಕೇಡು ಕಲ್ಪಿಸುತ್ತಾರೆ;
ಯಾವಾಗಲೂ ಜಗಳವೆಬ್ಬಿಸುತ್ತಾರೆ
3 ತಮ್ಮ ನಾಲಿಗೆಯನ್ನು ಸರ್ಪದಂತೆ ಹದಮಾಡಿದ್ದಾ
ಅವರ ತುಟಿಗಳ ಹಿಂದೆ ಹಾವಿನ ವಿಷವದೆ. ಸೆಲಾ

4 ಯೆಹೋವನೇ, ದುಷ್ಟರ ಕೈಗೆ ಸಿಕ್ಕದಂತೆ ನನ್ನನ
ಕಾಪಾಡು;
ಬಲಾತ್ಕಾರಿಗಳಿಗೆ ತಪ್ಪಿಸಿ ರಕ್ಷಿಸು.
ಅವರು ನನ್ನ ಕಾಲುಗಳನ್ನು ಎಡವಿಸಿಬಿಡಬೇಕೆಂದ
ಯೋಚಿಸಿದ್ದಾರೆ.
5 ಗರ್ವಿಷ್ಠರು ನನಗೋಸ್ಕರ ಗುಪ್ತಸ್ಥಳದಲ್ಲಿ
ಉರುಲನ್ನೂ ಪಾಶಗಳನ್ನೂ ಒಡ್ಡಿದ್ದಾರೆ;
ದಾರಿಯ ಮಗ್ಗುಲಲ್ಲಿ ಬಲೆಹಾಸಿದ್ದಾರೆ;
ನನಗಾಗಿ ಬೋನಿಟ್ಟಿದ್ದಾರೆ. ಸೆಲಾ

6 ನಾನು ಯೆಹೋವನಿಗೆ—ನೀನೇ ನನ್ನ ದೇವರು;
ಯೆಹೋವನೇ, ನನ್ನ ವಿಜ್ಞಾಪನೆಗೆ ಕಿವಿಗೊಡು;
7 ಕರ್ತನೇ, ಯೆಹೋವನೇ, ನನ್ನ ಆಶ್ರಯದುರ್ಗವೇ
ಯುದ್ಧಸಮಯದಲ್ಲಿ ನೀನೇ ನನ್ನ ಶಿರಸ್ತ್ರಾಣ;
8 ಯೆಹೋವನೇ, ದುಷ್ಟರು ತಮ್ಮನ್ನು ಹೆಚ್ಚಿಸಿಕೊಳ್ಳ
ಹಾಗೆ ಅವರ ಆಶೆಗಳನ್ನು ನೆರವೇರಿಸಬೇಡ;
ಅವರ ಕುಯುಕ್ತಿಯನ್ನು ಸಾಗಗೊಡಬೇಡ ಎಂದ
ಹೇಳುತ್ತೇನೆ. ಸೆಲಾ.

9 ನನ್ನನ್ನು ಸುತ್ತಿಕೊಂಡಿರುವವರ ತುಟಿಗಳ ಕೇಡ
ಅವರ ತಲೆಯ ಮೇಲೆ ಬರಲಿ;
10 ಅವರ ಮೇಲೆ ಕೆಂಡಗಳು ಸುರಿಯಲಿ;
ಅವರು ಅಗ್ನಿಕುಂಡದೊಳಕ್ಕೂ ದೊಡ್ಡ ಮಡುವಿನೊ
ಳಕ್ಕೂ
ದೊಬ್ಬಲ್ಪಟ್ಟು ತಿರಿಗಿ ಏಳದಿರಲಿ.
11 ಚಾಡಿಗಾರನು ದೇಶದಲ್ಲಿ ಉಳಿಯನು;
ಕೇಡು ಬಲಾತ್ಕಾರಿಯನ್ನು ಹಿಂದಟ್ಟಿ ಕೆಡವಿಬಿಡುವದ
12 ಯೆಹೋವನು ದೀನರ ವ್ಯಾಜ್ಯವನ್ನು ನಡಿಸುವನೆಂ
ತಲೂ
ಬಡವರ ನ್ಯಾಯವನ್ನು ಸ್ಥಾಪಿಸುವನೆಂತಲೂ ಬಲ್ಲೆನು
13 ನಿಶ್ಚಯವಾಗಿ ನೀತಿವಂತರು ನಿನ್ನ ಹೆಸರನ್ನು ಕೊಂಡಾ
ಡುವರು;
ಯಥಾರ್ಥರು ನಿನ್ನ ಸನ್ನಿಧಿಯಲ್ಲಿ ಬದುಕುವರು.

ಕೆಡುಕರ ಬಲಾತ್ಕಾರದುಷ್ಪ್ರೇರಣೆಗಳಿಗೆ ತಪ್ಪಿಸಬೇಕೆಂಬ ಪ್ರಾರ್ಥನೆ.
(ಕೀರ್ತನೆ 140.)
ದಾವೀದನ ಕೀರ್ತನೆ.

**141** ಯೆಹೋವನೇ, ಮೊರೆಯಿಡುತ್ತೇನೆ; ಬೇಗನೆ ಬಾ.
ನಾನು ಮೊರೆಯಿಡುವಾಗ ನನ್ನ ಕೂಗನ್ನು ಲಾಲಿಸು.
2 ನನ್ನ ಪ್ರಾರ್ಥನೆಯು ಧೂಪದಂತೆಯೂ
ನಾನು ಕೈಯೆತ್ತುವದು ಸಂಧ್ಯಾನೈವೇದ್ಯದಂತೆಯೂ ನಿನಗೆ ಸಮರ್ಪಕವಾಗಲಿ.

3 ಯೆಹೋವನೇ, ನನ್ನ ಬಾಯಿಗೆ ಕಾವಲಿರಿಸು;
ನನ್ನ ತುಟಿಗಳೆಂಬ ಕದವನ್ನು ಕಾಯಿ.
4 ನನ್ನ ಹೃದಯವು ದುರಾಚಾರವನ್ನು ಮೆಚ್ಚದಂತೆಯೂ
ನಾನು ದುಷ್ಟರೊಡನೆ ಕೂಡಿ ಕೆಟ್ಟ ಕೆಲಸಗಳನ್ನು ನಡಿಸದಂತೆಯೂ ನನ್ನನ್ನು ಕಾಪಾಡು.
ಅವರ ಮೃಷ್ಟಾನ್ನವು ನನಗೆ ಬೇಡವೇ ಬೇಡ.

5 ನೀತಿವಂತರು ನನ್ನನ್ನು ಹೊಡೆಯಲಿ, ಅದು ನನಗುಪಕಾರ;
ಅವರು ನನ್ನನ್ನು ಶಿಕ್ಷಿಸಲಿ, ಅದು ನನ್ನ ತಲೆಗೆ ಎಣ್ಣೆಯಂತಿದೆ;
ನನ್ನ ತಲೆಯು ಅದನ್ನು ಬೇಡವೆನ್ನದಿರಲಿ.
ಆದರೆ ದುಷ್ಟರ ಕೆಟ್ಟತನಕ್ಕೆ ವಿರೋಧವಾಗಿ ದೇವರನ್ನು ಪ್ರಾರ್ಥಿಸುತ್ತಿರುವೆನು.
6 ಅವರ ಪ್ರಮುಖರು ಕಡುಬಂಡೆಯಿಂದ ಕೆಳಕ್ಕೆ ದೊಬ್ಬಲ್ಪಟ್ಟ ಮೇಲೆ
ಜನರು ನನ್ನ ಮಾತುಗಳಿಗೆ ಕಿವಿಗೊಡುವರು; ಅವು ಅವರಿಗೆ ಚೆನ್ನಾಗಿರುವವು.
7 ಒಬ್ಬನು ಹೊಲವನ್ನು ಉತ್ತು ಹೆಂಟೆಗಳನ್ನು ಒಡೆದು ಚದರಿಸುವ ಪ್ರಕಾರವೇ
ನಮ್ಮ ಎಲುಬುಗಳು ಪಾತಾಳದ್ವಾರದಲ್ಲಿ ಚದರಿಸಲ್ಪಟ್ಟಿರುತ್ತವೆ.
8 ಕರ್ತನೇ, ಯೆಹೋವನೇ, ನನ್ನ ದೃಷ್ಟಿ ನಿನ್ನಲ್ಲಿದೆ;
ನಿನ್ನನ್ನು ಆಶ್ರಯಿಸಿಕೊಂಡಿದ್ದೇನೆ, ನನ್ನ ಪ್ರಾಣವನ್ನು ಮರಣಕ್ಕೆ ಒಪ್ಪಿಸಬೇಡ.
9 ಕೆಡುಕರು ಒಡ್ಡಿದ ಉರುಲಿನಲ್ಲಿ ಸಿಕ್ಕಿಬೀಳದಂತೆ ನನ್ನನ್ನು ಕಾಪಾಡು;
ಅವರಿಟ್ಟ ಬೋನಿಗೆ ನನ್ನನ್ನು ತಪ್ಪಿಸು.
10 ದುಷ್ಟರು ತಮ್ಮ ಬಲೆಯಲ್ಲಿ ತಾವೇ ಬಿದ್ದುಹೋಗಲಿ;
ಆಗಲೇ ನಾನು ತಪ್ಪಿಸಿಕೊಳ್ಳುವೆನು.

ಇಕ್ಕಟ್ಟಿನಲ್ಲಿದ್ದವನು ಪ್ರಾರ್ಥಿಸುವದು.
(ಕೀರ್ತನೆ 140.)
ದಾವೀದನ ಪದ್ಯ; ಅವನು ಗುಹೆಯಲ್ಲಿ ಅಡಗಿಕೊಂಡಿದ್ದಾಗ ಮಾಡಿದ ಪ್ರಾರ್ಥನೆ.
(೧ ಸಮುವೇಲ 22; 24.)

**142** ನಾನು ಯೆಹೋವನಿಗೆ ಮೊರೆಯಿಡುವೆನು;
ಯೆಹೋವನಿಗೆ ಕೂಗಿ ಬಿನ್ನೈಸುವೆನು.
2 ನನ್ನ ಚಿಂತೆಗಳನ್ನು ಆತನ ಮುಂದೆ ಬಿಚ್ಚುವೆನು;
ನನ್ನ ಕಷ್ಟವನ್ನು ಆತನಿಗೆ ಅರಿಕೆಮಾಡುವೆನು.
3 ನನ್ನ ಆತ್ಮವು ಕುಂದಿಹೋಗಿದೆ; ನೀನೇ ನನ್ನ ಮಾರ್ಗವನ್ನು ಬಲ್ಲವನು;
ನಾನು ಹೋಗಬೇಕಾದ ದಾರಿಯಲ್ಲಿ ಉರುಲನ್ನೊಡ್ಡಿದ್ದಾರೆ.
4 ನನ್ನ ಬಲಗಡೆಗೆ ನೋಡಿ ಪರಾಂಬರಿಸು; ಅಲ್ಲಿ ಸಹಾಯಕರು ಯಾರೂ ಇಲ್ಲ.
ಆಶ್ರಯವು ನಾಶವಾಯಿತು; ನನ್ನ ಪ್ರಾಣಕ್ಕೆ ಹಿತಚಿಂತಕರು ಒಬ್ಬರೂ ಇಲ್ಲ.

5 ಯೆಹೋವನೇ, ನಾನು ನಿನಗೆ—
ನೀನೇ ನನ್ನ ಶರಣನೂ ಜೀವಲೋಕದಲ್ಲಿ ನನ್ನ ಪಾಲೂ ಆಗಿದ್ದೀ ಎಂದು ಕೂಗಿ ಮೊರೆಯಿಟ್ಟಿದ್ದೇನೆ.
6 ನನ್ನ ಕೂಗನ್ನು ಲಾಲಿಸು, ಬಲು ಕುಗ್ಗಿಹೋಗಿದ್ದೇನೆ.
ಹಿಂಸಕರ ಕೈಯಿಂದ ನನ್ನನ್ನು ತಪ್ಪಿಸು; ಅವರು ನನಗಿಂತ ಬಲಿಷ್ಠರಾಗಿದ್ದಾರಲ್ಲಾ.
7 ಸೆರೆಯಿಂದ ನನ್ನನ್ನು ಬಿಡಿಸು; ನಿನ್ನ ನಾಮವನ್ನು ಕೀರ್ತಿಸುವೆನು.
ನೀತಿವಂತರು ನಿನ್ನ ಮಹೋಪಕಾರಕ್ಕಾಗಿ ನನ್ನನ್ನು ಸುತ್ತಿಕೊಂಡು ಉತ್ಸಾಹಗೊಳ್ಳುವರು.

ಶಿಕ್ಷಾರಕ್ಷಣೆಗಳಿಗಾಗಿ ಪ್ರಾರ್ಥಿಸುವದು.
(ಕೀರ್ತನೆ 140.)
ದಾವೀದನ ಕೀರ್ತನೆ.

**143** ಯೆಹೋವನೇ, ನನ್ನ ಪ್ರಾರ್ಥನೆಯನ್ನು ಆಲಿಸು;
ನನ್ನ ಬಿನ್ನಹಕ್ಕೆ ಕಿವಿಗೊಡು;
ನಿನ್ನ ನೀತಿಸತ್ಯತೆಗಳಿಗನುಸಾರವಾಗಿ ಸದುತ್ತರವನ್ನು ದಯಪಾಲಿಸು.
2 ನಿನ್ನ ಸೇವಕನನ್ನು ವಿಚಾರಣೆಗೆ ಗುರಿಮಾಡಬೇಡ;
ನಿನ್ನ ಸನ್ನಿಧಿಯಲ್ಲಿ ಯಾವ ಜೀವಿಯೂ ನೀತಿವಂತನಲ್ಲ.

3 ವೈರಿಯು ನನ್ನ ಪ್ರಾಣವನ್ನು ಹಿಂಸಿಸಿದ್ದಾನೆ;
ಜೀವವನ್ನು ನೆಲಕ್ಕೆ ಹಾಕಿ ಜಜ್ಜಿದ್ದಾನೆ.
ಕಾರ್ಗತ್ತಲೆಯಲ್ಲಿ ನನ್ನನ್ನು ಹಾಕಿದ್ದಾನೆ; ಬಹುಕಾಲದಲ್ಲಿ ಸತ್ತವರಂತಿದ್ದೇನೆ.
4 ನನ್ನ ಆತ್ಮವು ಕುಂದಿಹೋಗಿದೆ;
ನನ್ನ ಮನಸ್ಸು ಬೆರಗಾಗಿದೆ.

5 ಹಳೇ ದಿನಗಳನ್ನು ನೆನಸಿಕೊಳ್ಳುತ್ತೇನೆ;
ನಿನ್ನ ಎಲ್ಲಾ ಕಾರ್ಯಗಳನ್ನು ಧ್ಯಾನಿಸುತ್ತೇನೆ;
ನಿನ್ನ ಕೈಕೆಲಸಗಳನ್ನು ಸ್ಮರಿಸುತ್ತೇನೆ.
6 ಕೈಯೊಡ್ಡಿ ಬೇಡುತ್ತೇನೆ;
ಒಣನೆಲವು ನೀರಿಗಾಗಿ ಹೇಗೋ
ಹಾಗೆಯೇ ನನ್ನ ಆತ್ಮವು ನಿನಗಾಗಿ ತವಕಪಡುತ್ತದೆ. ಸೆಲಾ.

7 ಯೆಹೋವನೇ, ಬೇಗನೆ ಸದುತ್ತರವನ್ನು ದಯ ಪಾಲಿಸು;
ನನ್ನ ಆತ್ಮವು ಕುಂದಿಹೋಗಿದೆ.
ನೀನು ವಿಮುಖನಾದರೆ
ಸಮಾಧಿಯಲ್ಲಿ ಸೇರಿದವರಿಗೆ ನಾನು ಸಮಾನನಾಗಿರುವೆನು.
8 ಹೊತ್ತಾರೆ ನಿನ್ನ ಕೃಪೆಯು ನನಗೆ ಪ್ರಕಟವಾಗಲಿ;
ನಿನ್ನಲ್ಲಿ ಭರವಸವಿಟ್ಟಿದ್ದೇನಲ್ಲಾ.
ನಾನು ನಡೆಯತಕ್ಕ ಮಾರ್ಗವನ್ನು ತಿಳಿಸು; ನನ್ನ ಮನಸ್ಸನ್ನು ನಿನ್ನಲ್ಲಿಯೇ ಇಟ್ಟಿದ್ದೇನೆ.

9 ಯೆಹೋವನೇ, ನಿನ್ನನ್ನೇ ಮರೆಹೊಕ್ಕಿದ್ದೇನೆ;
ಶತ್ರುಗಳಿಂದ ನನ್ನನ್ನು ಬಿಡಿಸು.
10 ನಿನ್ನ ಚಿತ್ತದಂತೆ ನಡಕೊಳ್ಳುವದನ್ನು ನನಗೆ ಕಲಿಸು;
ನನ್ನ ದೇವರು ನೀನಲ್ಲವೋ?
ಶುಭಕಾರಿಯಾಗಿರುವ ನಿನ್ನ ಆತ್ಮನು ನನ್ನನ್ನು ಮಟ್ಟ ನೆಲದಲ್ಲಿ ನಡಿಸಲಿ.

11 ಯೆಹೋವನೇ, ನಿನ್ನ ಹೆಸರಿನ ನಿಮಿತ್ತ ನನ್ನನ್ನು ಉಜ್ಜೀವಿಸಮಾಡು;
ನಿನ್ನ ನೀತಿಗನುಸಾರವಾಗಿ ನನ್ನ ಪ್ರಾಣವನ್ನು ವಿಪತ್ತಿನಿಂದ ಬಿಡಿಸು.
12 ನನಗೆ ಕೃಪೆತೋರಿಸಿ ನನ್ನ ವೈರಿಗಳನ್ನು ಖಂಡಿಸಿಬಿಡು.
ನನ್ನ ಪ್ರಾಣಕಂಟಕರನ್ನೆಲ್ಲಾ ಕಡಿದುಹಾಕು;
ನಾನು ನಿನ್ನ ಸೇವಕನಲ್ಲವೇ.

ಜಯಪ್ರಾರ್ಥನೆಯೂ ಸೌಭಾಗ್ಯನಿರೀಕ್ಷಣೆಯೂ.
(ಕೀರ್ತನೆ 18. ಧರ್ಮೋಪದೇಶ 33. 26–29.)
ದಾವೀದನ ಕೀರ್ತನೆ.

**144** ನನ್ನ ಶರಣನಾದ ಯೆಹೋವನಿಗೆ ಕೊಂಡಾಟವಾಗಲಿ.
ಆತನು ನನ್ನ ಕೈಗಳಿಗೆ ಯುದ್ಧವಿದ್ಯೆಯನ್ನೂ
ನನ್ನ ಬೆರಳುಗಳಿಗೆ ಕಾಳಗವನ್ನೂ ಕಲಿಸಿದ್ದಾನೆ.
2 ನನ್ನ ಪ್ರೀತಿಯೂ ನನ್ನ ಕೋಟೆಯೂ
ನನ್ನ ದುರ್ಗವೂ ನನ್ನ ರಕ್ಷಕನೂ
ನನ್ನ ಗುರಾಣಿಯೂ ಆಶ್ರಯವೂ
ನನ್ನ ಜನವನ್ನು ನನಗೆ ಅಧೀನಮಾಡಿದವನೂ ಆತನೇ.

3 ಯೆಹೋವನೇ, ಮನುಷ್ಯನು ಎಷ್ಟು ಮಾತ್ರದವನು?
ಅವನನ್ನು ನೀನು ಯಾಕೆ ನೆನಸಬೇಕು?
ಮಾನವನು ಎಷ್ಟರವನು? ಅವನಲ್ಲಿ ಯಾಕೆ ಲಕ್ಷ್ಯವಿಡಬೇಕು?
4 ಮನುಷ್ಯನು ಬರೀ ಉಸಿರೇ;
ಅವನ ಜೀವಕಾಲವು ಬೇಗನೆ ಗತಿಸಿಹೋಗುವ ನೆರಳಿನಂತಿದೆ.

5 ಯೆಹೋವನೇ, ಆಕಾಶವನ್ನು ತಗ್ಗಿಸಿ ಇಳಿದು ಬಾ;
ಪರ್ವತಗಳನ್ನು ಮುಟ್ಟು, ಆಗ ಅವು ಹೊಗೆಹಾಯುವವು.
6 ಸಿಡಿಲಿನಿಂದ ಶತ್ರುಗಳನ್ನು ಚದರಿಸಿಬಿಡು;
ನಿನ್ನ ಬಾಣಗಳಿಂದ ಅವರನ್ನು ಭ್ರಾಂತಿಗೊಳಿಸು.
7 ಮೇಲಣ ಲೋಕದಿಂದ ಕೈಚಾಚಿ
ಮಹಾಜಲರಾಶಿಯೊಳಗಿಂದ ನನ್ನನ್ನು ಎಳೆದುಕೋ
8 ಕಪಟವಚನದವರೂ
ಬಲಗೈಯೆತ್ತಿ ಸುಳ್ಳಾಣೆಯಿಡುವವರೂ ಆಗಿ
ಅನ್ಯಜನಗಳ ಕೈಯಿಂದ ನನ್ನನ್ನು ಬಿಡಿಸು.

9 ದೇವರೇ, ನಿನಗೆ ನೂತನಕೀರ್ತನೆಯನ್ನು ಹಾಡುವೆ
ಹತ್ತುತಂತಿಗಳ ಸ್ವರಮಂಡಲವನ್ನು ಬಾರಿಸುತ್ತಾ
ನ್ನು ಕೊಂಡಾಡುವೆನು.
10 ಅರಸುಗಳಿಗೆ ಜಯಪ್ರದನೂ
ಸೇವಕನಾದ ದಾವೀದನನ್ನು ಹಾನಿಕರವಾದ ಕ
ತಪ್ಪಿಸಿದವನೂ ನೀನೇ.
11 ಕಪಟವಚನದವರೂ
ಬಲಗೈಯೆತ್ತಿ ಸುಳ್ಳಾಣೆಯಿಡುವವರೂ ಆಗಿ
ಅನ್ಯಜನಗಳ ಕೈಯಿಂದ ನನ್ನನ್ನು ಬಿ
ಕಾಪಾಡು.

12 ಯೌವನಸ್ಥರಾದ ನಮ್ಮ ಗಂಡುಮಕ್ಕಳು
ಹೊರವಾಗಿ ಬೆಳದಿರುವ ಸಸಿಗಳಂತಿರುವರು;
ಹೆಣ್ಣುಮಕ್ಕಳು ಅರಮನೆಯಲ್ಲಿರುವ ವಿಚಿತ್ರ
ಕೆತ್ತಿದ ಮೂಲೆಗಂಬದಂತಿರುವರು.
13 ನಮ್ಮ ಕಣಜಗಳು ಸಕಲವಿಧವಾದ ಧಾನ್ಯಗ
ತುಂಬಿರುವವು;
ನಮ್ಮ ಹೊಲಗಳಲ್ಲಿರುವ ಕುರಿಗಳು ಸಾವಿ
ಮರಿಗಳನ್ನು ಈಯುವವು.
14 ನಮ್ಮ ಎತ್ತುಗಳು ದೊಡ್ಡ ಹೇರುಗಳನ್ನು ಹ
ಬರುವವು.
ವೈರಿಗಳು ಒಳಗೆ ನುಗ್ಗುವದಾಗಲಿ
ನಮ್ಮವರನ್ನು ಒಯ್ಯುವದಾಗಲಿ ಇರುವದಿಲ್ಲ;
ಬೀದಿಗಳಲ್ಲಿ ಗೋಳಾಟವು ಕೇಳಿಸುವದಿಲ್ಲ.
15 ಇಂಥ ಸುಸ್ಥಿತಿಯಲ್ಲಿರುವ ಜನರು ಧನ್ಯರು;
ಯಾರಿಗೆ ಯೆಹೋವನು ದೇವರಾಗಿರುತ್ತಾ
ಅವರು ಭಾಗ್ಯವಂತರು.

ಕೃಪಾಪ್ರಭಾವಭರಿತನಾಗಿರುವ ಯೆಹೋವನನ್ನು ಕೊಂಡಾಡುವದು. ದಾವೀದನ ಕೀರ್ತನೆ.

**145** א ನನ್ನ ದೇವರೇ, ಒಡೆಯನೇ, ನಿನ್ನನ್ನು
ಪಡಿಸುವೆನು;
ನಿನ್ನ ನಾಮವನ್ನು ಯುಗಯುಗಾಂತರಗಳಲ್ಲಿ
ಕೊಂಡಾಡುವೆನು.

2 ב ದಿನಂಪ್ರತಿ ನಿನ್ನನ್ನು ಕೀರ್ತಿಸುವೆನು;
ನಿನ್ನ ನಾಮವನ್ನು ಯುಗಯುಗಾಂತರಗಳಲ್ಲಿ
ಸ್ತುತಿಸುವೆನು.
3 ג ಯೆಹೋವನು ಮಹೋನ್ನತನೂ ಮಹಾಸ್ತು
ತ್ರನೂ ಆಗಿದ್ದಾನೆ;
ಆತನ ಮಹತ್ತು ಅಪಾರವಾದದ್ದು.

4 ד ಜನರು ಪಾರಂಪರ್ಯವಾಗಿ ನಿನ್ನ ಕೃತ್ಯಗಳನ್ನು
ಹೊಗಳುವರು;
ನಿನ್ನ ಮಹತ್ಕಾರ್ಯಗಳನ್ನು ವರ್ಣಿಸುವರು.
5 ה ನಾನು ನಿನ್ನ ಮಹಾಪ್ರಭಾವಯುಕ್ತವಾದ ಮಹಿಮೆ
ಯನ್ನೂ
ಅದ್ಭುತಕಾರ್ಯಗಳನ್ನೂ ಧ್ಯಾನಿಸುವೆನು.
6 ו ಮನುಷ್ಯರು ನಿನ್ನ ಭಯಂಕರಕೃತ್ಯಗಳಲ್ಲಿ ಕಂಡು
ಬಂದ ಪ್ರತಾಪವನ್ನು ಕೊಂಡಾಡುವರು.
ನಾನು ನಿನ್ನ ಮಹತ್ತನ್ನು ಪ್ರಸಿದ್ಧಪಡಿಸುವೆನು.

7 ז ಜನರು ನಿನ್ನ ಮಹೋಪಕಾರವನ್ನು ನೆನಪಿನಲ್ಲಿಟ್ಟು
ಕೊಂಡು ಪ್ರಕಟಿಸುವರು;
ನಿನ್ನ ನೀತಿಯನ್ನು ಹೊಗಳುವರು.
8 ח ಯೆಹೋವನು ದಯೆಯೂ ಕನಿಕರವೂ ಉಳ್ಳ
ವನು;
ದೀರ್ಘಶಾಂತನೂ ಪ್ರೀತಿಪೂರ್ಣನೂ ಆಗಿದ್ದಾನೆ.
9 ט ಯೆಹೋವನು ಸರ್ವೋಪಕಾರಿಯೂ
ತಾನು ನಿರ್ಮಿಸಿದವುಗಳನ್ನೆಲ್ಲಾ ಕರುಣಿಸುವಾತನೂ
ಆಗಿದ್ದಾನೆ.
10 י ಯೆಹೋವನೇ, ನಿನ್ನ ಸೃಷ್ಟಿಯೆಲ್ಲವು ನಿನ್ನನ್ನು ಸ್ತುತಿ
ಸುವದು;
ನಿನ್ನ ಭಕ್ತರು ನಿನ್ನನ್ನು ಕೊಂಡಾಡುವರು.

11 כ ಅವರು ನಿನ್ನ ರಾಜ್ಯಮಹತ್ತನ್ನು ಪ್ರಸಿದ್ಧಪಡಿಸು
ವರು;
ನಿನ್ನ ಪ್ರತಾಪವನ್ನು ವರ್ಣಿಸುವರು.
12 ל ಹೀಗೆ ಮಾನವರು 1)ನಿನ್ನ ಶೂರಕೃತ್ಯಗಳನ್ನೂ
ನಿನ್ನ ರಾಜ್ಯದ ಮಹಾಪ್ರಭಾವವನ್ನೂ ಗ್ರಹಿಸಿಕೊಳ್ಳು
ವರು.
13 מ ನಿನ್ನ ರಾಜ್ಯವು ಶಾಶ್ವತವಾಗಿದೆ;
ನಿನ್ನ ಆಳಿಕೆಯು ತಲತಲಾಂತರಕ್ಕೂ ಇರುವದು.

14 ס ಯೆಹೋವನು ಬಿದ್ದವರನ್ನೆಲ್ಲಾ ಎತ್ತುವವನೂ
ಕುಗ್ಗಿದವರನ್ನೆಲ್ಲಾ ಉದ್ಧರಿಸುವವನೂ ಆಗಿದ್ದಾನೆ.
15 ע [ಯೆಹೋವನೇ,] ಎಲ್ಲಾ ಜೀವಿಗಳ ಕಣ್ಣುಗಳು
ನಿನ್ನನ್ನೇ ನೋಡುತ್ತವೆ;
ನೀನು ಅವುಗಳಿಗೆ ಹೊತ್ತುಹೊತ್ತಿಗೆ ಆಹಾರಕೊಡುತ್ತೀ.
16 פ ನೀನು ಕೈದೆರೆದು ಎಲ್ಲಾ ಜೀವಿಗಳ ಇಷ್ಟವನ್ನು
ನೆರವೇರಿಸುತ್ತೀ.
17 צ ಯೆಹೋವನ ಮಾರ್ಗಗಳೆಲ್ಲಾ ನೀತಿಯುಳ್ಳವು
ಗಳು;
ಆತನು ಎಲ್ಲಾ ಕಾರ್ಯಗಳಲ್ಲಿ ಕೃಪೆತೋರಿಸು
ವವನು.
18 ק ಯೆಹೋವನಿಗೆ ಮೊರೆಯಿಡುವವರು
ಯಥಾರ್ಥವಾಗಿ ಮೊರೆಯಿಡುವವರಾದರೆ ಆತನು ಹತ್ತಿರ
ವಾಗಿಯೇ ಇದ್ದಾನೆ.
19 ר ತನ್ನಲ್ಲಿ ಭಯಭಕ್ತಿಯುಳ್ಳವರ ಇಷ್ಟವನ್ನು ನೆರ
ವೇರಿಸುತ್ತಾನೆ;
ಅವರ ಕೂಗನ್ನು ಕೇಳಿ ರಕ್ಷಿಸುತ್ತಾನೆ.
20 ש ಯೆಹೋವನು ತನ್ನನ್ನು ಪ್ರೀತಿಸುವವರೆಲ್ಲರನ್ನು
ಕಾಪಾಡುತ್ತಾನೆ;
ಆದರೆ ಎಲ್ಲಾ ದುಷ್ಟರನ್ನು ಸಂಹರಿಸುತ್ತಾನೆ.
21 ת ನನ್ನ ಬಾಯಿ ಯೆಹೋವನನ್ನು ಕೀರ್ತಿಸುವದು;
ಎಲ್ಲಾ ಜೀವಿಗಳು ಆತನ ಪರಿಶುದ್ಧನಾಮವನ್ನು
ಯುಗಯುಗಾಂತರಗಳಲ್ಲಿಯೂ ಕೊಂಡಾಡಲಿ.

ಯೆಹೋವನನ್ನು ಆಶ್ರಯಿಸಿಕೊಂಡವನು ಧನ್ಯನು.

**146** ಯಾಹುವಿಗೆ ಸ್ತೋತ್ರ!
ನನ್ನ ಮನವೇ, ಯೆಹೋವನನ್ನು ಸ್ತುತಿಸು.
2 ಪ್ರಾಣವಿರುವ ವರೆಗೂ ಯೆಹೋವನನ್ನು ಸ್ತುತಿಸು
ವೆನು;
ಜೀವಮಾನವೆಲ್ಲಾ ನನ್ನ ದೇವರನ್ನು ಕೊಂಡಾಡುವೆನು.
3 ಪ್ರಭುಗಳಲ್ಲಿ ಭರವಸವಿಡಬೇಡಿರಿ;
ಮಾನವನನ್ನು ನೆಚ್ಚಬೇಡಿರಿ, ಅವನು ಸಹಾಯ ಮಾಡ
ಶಕ್ತನಲ್ಲ;
4 ಅವನ ಉಸಿರು ಹೋಗಲು ಮಣ್ಣಿಗೆ ಸೇರುತ್ತಾನೆ;
ಅವನ ಸಂಕಲ್ಪಗಳೆಲ್ಲಾ ಅದೇ ದಿನದಲ್ಲಿ ಹಾಳಾಗುವವು.

5 ಯಾವನಿಗೆ ಯಾಕೋಬನ ದೇವರು ಸಹಾಯ
ಕನೋ
ಯಾವನು ತನ್ನ ದೇವರಾದ ಯೆಹೋವನನ್ನು
ನಂಬಿರುತ್ತಾನೋ ಅವನೇ ಧನ್ಯನು.

6 ಭೂಮಿ, ಆಕಾಶ, ಸಾಗರ, ಚರಾಚರ ಇವುಗಳನ್ನು
ನಿರ್ಮಿಸಿದವನೂ
ವಾಗ್ದಾನವನ್ನು ಯಾವಾಗಲೂ ನೆರವೇರಿಸುವವನೂ
7 ಹಿಂಸೆಗೆ ಗುರಿಯಾದವರ ನ್ಯಾಯವನ್ನು ಸ್ಥಾಪಿಸು
ವವನೂ
ಹಸಿದವರಿಗೆ ಆಹಾರಕೊಡುವವನೂ ಆತನೇ.
ಯೆಹೋವನು ಸೆರೆಯಲ್ಲಿರುವವರನ್ನು ಬಿಡಿಸುತ್ತಾನೆ.
8 ಯೆಹೋವನು ಕುರುಡರಿಗೆ ಕಣ್ಣುಕೊಡುತ್ತಾನೆ.
ಯೆಹೋವನು ಕುಗ್ಗಿದವರನ್ನು ಉದ್ಧರಿಸುತ್ತಾನೆ.
ಯೆಹೋವನು ನೀತಿವಂತರನ್ನು ಪ್ರೀತಿಸುತ್ತಾನೆ.
9 ಯೆಹೋವನು ಪರದೇಶದವರನ್ನು ಕಾಪಾಡುತ್ತಾನೆ.
ಆತನು ಅನಾಥರಿಗೂ ವಿಧವೆಯರಿಗೂ ಆಧಾರವಾಗಿ
ದ್ದಾನೆ.
ಆದರೆ ದುಷ್ಟರ ಮಾರ್ಗವನ್ನು ಡೊಂಕುಮಾಡಿಬಿಡು
ತ್ತಾನೆ.

10 ಯೆಹೋವನು ಸದಾಕಾಲವೂ ಅರಸನಾಗಿರುವನು;
ಚೀಯೋನೇ, ನಿನ್ನ ದೇವರು ತಲತಲಾಂತರಕ್ಕೂ
ಆಳುವನು.
ಯಾಹುವಿಗೆ ಸ್ತೋತ್ರ!

1) ಮೂಲ: ಆತನ.

ಸೃಷ್ಟಿಪಾಲಕನೂ ಸ್ವಪ್ರಜಾರಕ್ಷಕನೂ ಆಗಿರುವ ಯೆಹೋವನಿಗೆ ಸ್ತೋತ್ರ.
(ಕೀರ್ತನೆ 33.)

**147** ಯಾಹುವಿಗೆ ಸ್ತೋತ್ರ!
ನಮ್ಮ ದೇವರನ್ನು ಸ್ತುತಿಸುವದು ಒಳ್ಳೇದೂ ಸಂತೋಷಕರವೂ ಆಗಿದೆ;
ಆತನನ್ನು ಕೀರ್ತಿಸುವದು ಯುಕ್ತವಾಗಿದೆ.
2 ಯೆಹೋವನು ಯೆರೂಸಲೇಮನ್ನು ಕಟ್ಟಿಸುತ್ತಿದ್ದಾನೆ;
ಚದರಿಹೋಗಿದ್ದ ಇಸ್ರಾಯೇಲ್ಯರನ್ನು ಕೂಡಿಸುತ್ತಿದ್ದಾನೆ.
3 ಮುರಿದ ಮನಸ್ಸುಳ್ಳವರನ್ನು ವಾಸಿಮಾಡುತ್ತಾನೆ;
ಅವರ ಗಾಯಗಳನ್ನು ಕಟ್ಟುತ್ತಾನೆ.
4 ಆತನು ನಕ್ಷತ್ರಗಳ ಸಂಖ್ಯೆಯನ್ನು ಗೊತ್ತುಮಾಡಿ
ಪ್ರತಿಯೊಂದಕ್ಕೆ ಹೆಸರಿಟ್ಟಿದ್ದಾನೆ.
5 ನಮ್ಮ ಕರ್ತನು ದೊಡ್ಡವನೂ ಪರಾಕ್ರಮಿಯೂ ಆಗಿದ್ದಾನೆ;
ಆತನ ಜ್ಞಾನವು ಅಪರಿಮಿತವಾಗಿದೆ.
6 ಯೆಹೋವನು ದೀನರಿಗೆ ಆಧಾರವಾಗಿದ್ದಾನೆ;
ದುಷ್ಟರನ್ನು ನೆಲಕ್ಕೆ ಹತ್ತಿಸಿಬಿಡುತ್ತಾನೆ.

7 ಯೆಹೋವನಿಗೆ ಕೃತಜ್ಞತಾಸ್ತುತಿಮಾಡಿರಿ;
ಕಿನ್ನರಿಯೊಡನೆ ನಮ್ಮ ದೇವರನ್ನು ಕೊಂಡಾಡಿರಿ.
8 ಆತನು ಆಕಾಶದಲ್ಲಿ ಮೋಡಗಳನ್ನು ಕವಿಸುತ್ತಾನೆ;
ಭೂಮಿಗೋಸ್ಕರ ಮಳೆಯನ್ನು ಸಿದ್ಧಮಾಡುತ್ತಾನೆ;
ಬೆಟ್ಟಗಳಲ್ಲಿ ಹುಲ್ಲನ್ನು ಬೆಳಸುತ್ತಾನೆ.
9 ಆತನು ಪಶುಗಳಿಗೂ ಕೂಗುತ್ತಿರುವ ಕಾಗೇಮರಿಗಳಿಗೂ
ಬೇಕಾದ ಆಹಾರಕೊಡುತ್ತಾನೆ.
10 ಕುದುರೆಯ ಶಕ್ತಿಯಲ್ಲಿ ಆತನಿಗೆ ಇಷ್ಟವಿಲ್ಲ;
ಆಳಿನ ತೊಡೆಯ ಬಲವನ್ನು ಮೆಚ್ಚುವದಿಲ್ಲ.
11 ಯೆಹೋವನು ಆನಂದಿಸುವದು ತನ್ನ ಕೃಪೆಯನ್ನು ನಿರೀಕ್ಷಿಸುವ ಭಕ್ತರಲ್ಲೇ.

12 ಯೆರೂಸಲೇಮೇ, ಯೆಹೋವನನ್ನು ಕೀರ್ತಿಸು;
ಚೀಯೋನೇ, ನಿನ್ನ ದೇವರನ್ನು ಸ್ತುತಿಸು.
13 ಆತನು ನಿನ್ನ ಹೆಬ್ಬಾಗಲುಗಳ ಅಗುಳಿಗಳನ್ನು ಬಲಪಡಿಸಿದ್ದಾನೆ;
ನಿನ್ನ ಮಕ್ಕಳನ್ನು ಆಶೀರ್ವದಿಸಿದ್ದಾನೆ.
14 ಆತನು ನಿನ್ನ ಪ್ರಾಂತದೊಳಗೆ ಸೌಭಾಗ್ಯವನ್ನುಂಟುಮಾಡುತ್ತಾನೆ;
ಶ್ರೇಷ್ಠವಾದ ಗೋದಿಯಿಂದ ನಿನ್ನನ್ನು ತೃಪ್ತಿಗೊಳಿಸುತ್ತಾನೆ.
15 ತನ್ನ ನುಡಿಯನ್ನು ಭೂಲೋಕಕ್ಕೆ ಕಳುಹಿಸುತ್ತಾನೆ;
ಆತನ ವಾಕ್ಯವು ಬಹುವೇಗಶಾಲಿಯಾಗಿದೆ.
16 ಉಣ್ಣೆಯಂತಿರುವ ಹಿಮವನ್ನು ಬೀಳಿಸುತ್ತಾನೆ;
ಇಬ್ಬನಿಯನ್ನು ಬೂದಿಯಂತೆ ಹರವುತ್ತಾನೆ.
17 ರೊಟ್ಟೀ ತುಂಡುಗಳಂತಿರುವ ಆನೆಕಲ್ಲುಗಳನ್ನು ಸುರಿಸುತ್ತಾನೆ;
ಆತನು ಚಳಿಯನ್ನು ಬರಮಾಡಲು ಅದನ್ನು ಸ[...]ವವರು ಯಾರು?
18 ಆತನು ಅಪ್ಪಣೆಕೊಡಲು ಅವು ಕರಗುತ್ತವೆ;
ತನ್ನ ಗಾಳಿಯನ್ನು ಬೀಸಮಾಡಲು ನೀರು ಹರಿ[...]ತ್ತದೆ.
19 ಆತನು ತನ್ನ ವಾಕ್ಯವನ್ನು ಯಾಕೋಬ್ಯರಿಗೆ ತಿ[...]ತ್ತಾನೆ;
ತನ್ನ ನಿಯಮವಿಧಿಗಳನ್ನು ಇಸ್ರಾಯೇಲ್ಯರಿಗೆ ಪ್ರ[...]ಸುತ್ತಾನೆ.
20 ಬೇರೆ ಯಾವ ಜನಾಂಗದವರಿಗೂ ಆತನು ಹೀಗೆ ಮ[...]ಲಿಲ್ಲ;
ಆತನ ನ್ಯಾಯವಿಧಿಗಳನ್ನು ಅವರು ಅರಿಯರು.
ಯಾಹುವಿಗೆ ಸ್ತೋತ್ರ!

ಭೂವ್ಯಾಕಾಶಗಳು ಯೆಹೋವನನ್ನು ಕೊಂಡಾಡಲಿ.

**148** ಯಾಹುವಿಗೆ ಸ್ತೋತ್ರ!
ಆಕಾಶಮಂಡಲದಿಂದ ಯೆಹೋವನಿಗೆ ಯುಂಟಾಗಲಿ;
ಮಹೋನ್ನತದಲ್ಲಿ ಆತನ ಸ್ತೋತ್ರವು ಕೇಳಿಸಲಿ.
2 ಆತನ ಎಲ್ಲಾ ದೂತರೇ, ಆತನನ್ನು ಸ್ತುತಿಸಿರಿ;
ಆತನ ಎಲ್ಲಾ ಸೈನ್ಯಗಳೇ, ಆತನನ್ನು ಸ್ತುತಿಸಿರಿ.
3 ಸೂರ್ಯಚಂದ್ರರೇ, ಆತನನ್ನು ಸ್ತುತಿಸಿರಿ;
ಹೊಳೆಯುವ ಎಲ್ಲಾ ನಕ್ಷತ್ರಗಳೇ, ಆತನನ್ನು [...]ಸಿರಿ.
4 ಉನ್ನತೋನ್ನತವಾದ ಆಕಾಶವೇ,
ಅದರ ಮೇಲಿರುವ ಜಲರಾಶಿಗಳೇ, ಆತನನ್ನು [...]ಸಿರಿ.
5 ಅವು ಯೆಹೋವನ ನಾಮವನ್ನು ಸ್ತುತಿಸಲಿ;
ಆತನು ಅಪ್ಪಣೆಕೊಡಲು ಅವು ಉಂಟಾದವು.
6 ಅವನ್ನು ಯುಗಯುಗಾಂತರಕ್ಕೂ ಸ್ಥಾಪಿಸಿದ್ದಾನೆ[...]
ಆತನು ಎಂದಿಗೂ ಮೀರಲಾಗದಂಥ ಕಟ್ಟಳೆಯ[...]ವಿಧಿಸಿದ್ದಾನೆ.

7 ಭೂಮಂಡಲದಿಂದ ಯೆಹೋವನಿಗೆ ಸ್ತುತಿಯು[...]ಗಲಿ.
ತಿಮಿಂಗಿಲಗಳೂ ಆದಿಸಾಗರಗಳೂ
8 ಬೆಂಕಿ, ಕಲ್ಮಳೆ, ಹಿಮ, ಹಬೆ ಇವುಗಳೂ
ಆತನ ಅಪ್ಪಣೆಯನ್ನು ನೆರವೇರಿಸುವ ಬಿರುಗಾಳಿ[...]
9 ಬೆಟ್ಟಗಳೂ ಎಲ್ಲಾ ಗುಡ್ಡಗಳೂ
ಹಣ್ಣಿನ ಮರಗಳೂ ಎಲ್ಲಾ ತುರಾಯಿ ಗಿಡಗಳೂ
10 ಎಲ್ಲಾ ಮೃಗಪಕ್ಷಿಕ್ರಿಮಿಕೀಟಗಳೂ
11 ಭೂರಾಜರೂ ಎಲ್ಲಾ ಜನಾಂಗಗಳೂ
ಪ್ರಭುಗಳೂ ಸರ್ವದೇಶಾಧಿಪತಿಗಳೂ
12 ಪ್ರಾಯಸ್ಥರಾದ ಸ್ತ್ರೀಪುರುಷರೂ
ಮುದುಕರೂ ಹುಡುಗರೂ
13 ಯೆಹೋವನನ್ನು ಕೊಂಡಾಡಲಿ.
ಆತನ ನಾಮವೊಂದೇ ಮಹತ್ವವುಳ್ಳದ್ದು;
ಆತನ ಪ್ರಭಾವವು ಭೂವ್ಯಾಕಾಶಗಳಲ್ಲಿ ಮೆ[...]ತ್ತದೆ.

14 ಆತನು ತನ್ನ ಪ್ರಜೆಗೋಸ್ಕರ [ಘನದ] ಕೊಂಬನ್ನು
ಎಬ್ಬಿಸಿದ್ದಾನೆ.
ಆದದರಿಂದ ಆತನ ಎಲ್ಲಾ ಭಕ್ತರೂ
ಆತನ ಸಮೀಪಪ್ರಜೆಗಳಾದ ಇಸ್ರಾಯೇಲ್ಯರೂ
ಹಿಗ್ಗುತ್ತಾರೆ.
ಯಾಹುವಿಗೆ ಸ್ತೋತ್ರ!

ಜಯಗೀತ.
(ಪ್ರಕಟನೆ 19.)

**149** ಯಾಹುವಿಗೆ ಸ್ತೋತ್ರ!
ಯೆಹೋವನಿಗೆ ನೂತನಕೀರ್ತನೆಯನ್ನು ಹಾಡಿರಿ;
ಭಕ್ತಸಭೆಯಲ್ಲಿ ಆತನನ್ನು ಸ್ತುತಿಸಿರಿ.
2 ಇಸ್ರಾಯೇಲ್ಯರು ತಮ್ಮ ಸೃಷ್ಟಿಕರ್ತನಲ್ಲಿ ಹೆಚ್ಚಳ
ಪಡಲಿ;
ಚೀಯೋನಿನವರು ತಮ್ಮ ರಾಜನಲ್ಲಿ ಹರ್ಷಿಸಲಿ.
3 ಕುಣಿಯುತ್ತಾ ಆತನ ನಾಮವನ್ನು ಕೀರ್ತಿಸಲಿ;
ದಮ್ಮಡಿಕಿನ್ನರಿಗಳಿಂದ ಆತನನ್ನು ಭಜಿಸಲಿ.
4 ಯೆಹೋವನು ತನ್ನ ಪ್ರಜೆಗೆ ಪ್ರಸನ್ನನಾದನು;
ದೀನರನ್ನು ರಕ್ಷಣೆಯಿಂದ ಭೂಷಿಸುತ್ತಾನೆ.
5 ಭಕ್ತರು ತಮಗುಂಟಾದ ಮಹಿಮೆಯಲ್ಲಿ ಹಿಗ್ಗಲಿ;
ಹಾಸಿಗೆಯ ಮೇಲಿರುವಾಗಲೂ ಉತ್ಸಾಹಧ್ವನಿ
ಮಾಡಲಿ.

6 ಅವರ ಬಾಯಲ್ಲಿ ಯೆಹೋವನ ಸ್ತೋತ್ರವೂ
ಕೈಯಲ್ಲಿ ಇಬ್ಬಾಯಿಕತ್ತಿಯೂ ಇರಲಿ.
7 ಅವರು ಜನಾಂಗಗಳಿಗೆ ಮುಯ್ಯಿತೀರಿಸುವರು;
ಅನ್ಯಜನಗಳನ್ನು ದಂಡಿಸುವರು;
8 ಅವರ ರಾಜರನ್ನು ಸಂಕೋಲೆಯಿಂದ ಬಂಧಿಸುವರು;
ಪ್ರಭುಗಳಿಗೆ ಕಬ್ಬಿಣದ ಬೇಡಿಗಳನ್ನು ಹಾಕುವರು.
9 ಲಿಖಿತದಂತೆ ಅವರಿಗೆ ಶಿಕ್ಷೆಯನ್ನು ವಿಧಿಸುವರು;
ಇದು ಆತನ ಭಕ್ತರೆಲ್ಲರಿಗೆ ಗೌರವವಾಗಿರುವದು.
ಯಾಹುವಿಗೆ ಸ್ತೋತ್ರ!

ಸಮಾಪ್ತಿಕೀರ್ತನೆ.

**150** ಯಾಹುವಿಗೆ ಸ್ತೋತ್ರ!
ದೇವರನ್ನು ಆತನ ಪರಿಶುದ್ಧಾಲಯದಲ್ಲಿ ಸ್ತುತಿ
ಸಿರಿ;
ಆತನ ಶಕ್ತಿಪ್ರದರ್ಶಕವಾದ ಆಕಾಶಮಂಡಲದಲ್ಲಿ ಆತ
ನನ್ನು ಸ್ತುತಿಸಿರಿ.
2 ಆತನ ಮಹತ್ಕಾರ್ಯಗಳಿಗಾಗಿ ಆತನನ್ನು ಸ್ತುತಿಸಿರಿ;
ಆತನ ಮಹಾಪ್ರಭಾವಕ್ಕೆ ಸರಿಯಾಗಿ ಆತನನ್ನು
ಸ್ತುತಿಸಿರಿ.
3 ಕೊಂಬೂದುತ್ತಾ ಆತನನ್ನು ಸ್ತುತಿಸಿರಿ;
ಸ್ವರಮಂಡಲಕಿನ್ನರಿಗಳಿಂದ ಆತನನ್ನು ಸ್ತುತಿಸಿರಿ.
4 ದಮ್ಮಡಿಬಡಿಯುತ್ತಾ ಕುಣಿಯುತ್ತಾ ಆತನನ್ನು ಸ್ತುತಿ
ಸಿರಿ;
ತಂತೀವಾದ್ಯಗಳಿಂದಲೂ ಕೊಳಲುಗಳಿಂದಲೂ ಆತ
ನನ್ನು ಸ್ತುತಿಸಿರಿ.
5 ತಾಳದಿಂದ ಆತನನ್ನು ಸ್ತುತಿಸಿರಿ;
ಝುಲ್ಲರಿಯಿಂದ ಆತನನ್ನು ಸ್ತುತಿಸಿರಿ.
6 ಶ್ವಾಸವಿರುವದೆಲ್ಲವೂ ಯೆಹೋವನನ್ನು ಸ್ತುತಿಸಲಿ;
ಯಾಹುವಿಗೆ ಸ್ತೋತ್ರ!

# PROVERBS

## ಜ್ಞಾನೋಕ್ತಿಗಳು

**1** ಇಸ್ರಾಯೇಲ್ಯರ ಅರಸನಾಗಿದ್ದ ದಾವೀದನ ಮಗ
ನಾದ ಸೊಲೊಮೋನನ ಜ್ಞಾನೋಕ್ತಿಗಳು.
2 ಇವುಗಳಿಂದ ಜನರು ಜ್ಞಾನವನ್ನೂ ಶಿಕ್ಷೆಯನ್ನೂ
ಪಡೆದು
ಬುದ್ಧಿವಾದಗಳನ್ನು ಗ್ರಹಿಸಿ
3 ವಿವೇಕಮಾರ್ಗದಲ್ಲಿ ಅಂದರೆ ನೀತಿನ್ಯಾಯಧರ್ಮಗಳ
ಲ್ಲಿ ಶಿಕ್ಷಿತರಾಗುವರು.
4 ಇವು ಮೂಢರಿಗೆ ಜಾಣತನವನ್ನೂ
ಯೌವನಸ್ಥರಿಗೆ ತಿಳುವಳಿಕೆಯನ್ನೂ ಬುದ್ಧಿಯನ್ನೂ
ಉಂಟುಮಾಡುವವು.
ಜ್ಞಾನಿಯು ಇವುಗಳನ್ನು ಕೇಳಿ ಹೆಚ್ಚಾದ ಪಾಂಡಿತ್ಯ 5
ವನ್ನು ಹೊಂದುವನು,
1)ವಿವೇಕಿಯು [ಮತ್ತಷ್ಟು] ಉಚಿತಾಲೋಚನೆಯುಳ್ಳ
ವನಾಗುವನು.
ಇವು ಗಾದೆ, ಸಾಮ್ಯ, 6
ಜ್ಞಾನಿಗಳ ನುಡಿ, ಒಗಟು ಇವುಗಳನ್ನು ತಿಳಿಯಲು
ಸಾಧನವಾಗಿವೆ.

1) ಮೂಲ: ವಿವೇಕಿಯು ಯುಕ್ತ್ಯಾಲೋಚನೆಗಳನ್ನು ಪಡೆಯುವನು.

7 ಯೆಹೋವನ ಭಯವೇ ತಿಳುವಳಿಕೆಗೆ ಮೂಲವು,
ಮೂರ್ಖರಾದರೋ ಜ್ಞಾನವನ್ನೂ ಶಿಕ್ಷೆಯನ್ನೂ ಅಸಡ್ಡೆ
ಮಾಡುವರು.
8 ಮಗನೇ, ನಿನ್ನ ತಂದೆಯ ಉಪದೇಶವನ್ನು ಕೇಳು,
ನಿನ್ನ ತಾಯಿಯ ಬೋಧನೆಯನ್ನು ತೊರೆಯಬೇಡ.
9 ಅವು ನಿನ್ನ ತಲೆಗೆ ಅಂದದ ಪುಷ್ಪಕಿರೀಟ;
ಕೊರಳಿಗೆ ಹಾರ.
10 ಮಗನೇ, ಪಾಪಿಗಳು ದುಷ್ಪ್ರೇರಣೆಯನ್ನು ಮಾಡಿದರೆ
ನೀನು ಒಪ್ಪಲೇ ಬೇಡ.
11 ಅವರು—ನಮ್ಮೊಂದಿಗೆ ಬಾ,
ರಕ್ತಕ್ಕಾಗಿ ಹೊಂಚುಹಾಕೋಣ,
ನಿರಪರಾಧಿಯನ್ನು ಕಾರಣವಿಲ್ಲದೆಯೇ ಹಿಡಿಯುವದಕ್ಕೆ
ಕಾದಿರೋಣ,
12 ಪಾತಾಳವು ತನ್ನೊಳಗೆ ಇಳಿಯುವವರನ್ನು ಸಂಪೂರ್ಣ
ವಾಗಿ ನುಂಗುವಂತೆ
ನಾವೂ ಇವರನ್ನು ಜೀವದೊಡನೆ ನುಂಗಿಬಿಡುವ.
13 ಸಕಲವಿಧವಾದ ಅಮೂಲ್ಯಸಂಪತ್ತನ್ನು ಕಂಡುಹಿಡಿದು
ಕೊಳ್ಳೆಮಾಡಿ ನಮ್ಮ ಮನೆಗಳಲ್ಲಿ ತುಂಬುವೆವು.
14 ನಮ್ಮ ಸಂಗಡ ಪಾಲುಗಾರನಾಗು;
ನಮ್ಮೆಲ್ಲರಿಗೂ ಹುದುವಾದ ಒಂದೇ ಹಮ್ಮಿಣಿ ಇರು
ವದು ಎಂದು ಹೇಳಿದರೆ
15 ಮಗನೇ, ಅವರೊಡನೆ ದಾರಿಯಲ್ಲಿ ನಡೆಯಬಾರದು,
ಅವರ ಮಾರ್ಗದಲ್ಲಿ ನೀನು ಹೆಜ್ಜೆಯಿಡಬೇಡ.
16 ಅವರ ಕಾಲುಗಳು ಕೇಡನ್ನು ಹಿಂಬಾಲಿಸಿ ಓಡುವವು,
ಅವರು ರಕ್ತವನ್ನು ಸುರಿಸಲು ಆತುರಪಡುವರು.
17 ಪಕ್ಷಿಗಳ ಕಣ್ಣೆದುರಿಗೆ ಬಲೆಯನ್ನೊಡ್ಡುವದು ವ್ಯರ್ಥ.
18 ಇವರಾದರೋ ಸ್ವರಕ್ತವನ್ನು ಸುರಿಸಿಕೊಳ್ಳುವದಕ್ಕೆ
ಹೊಂಚುಹಾಕುತ್ತಾರೆ,
ಸ್ವಜೀವವನ್ನು ತೆಗೆದುಕೊಳ್ಳುವದಕ್ಕೆ ಕಾದಿರುತ್ತಾರೆ.
19 ಸೂರೆಮಾಡುವವರೆಲ್ಲರ ದಾರಿಯೂ ಹೀಗೆಯೇ ಸರಿ;
ಕೊಳ್ಳೆಯು ಕೊಳ್ಳೆಗಾರರ ಜೀವವನ್ನೇ ಕೊಳ್ಳೆಮಾಡು
ವದು.

20 ಜ್ಞಾನವೆಂಬಾಕೆಯು ಬೀದಿಗಳಲ್ಲಿ ಕೂಗುತ್ತಾಳೆ,
ಚೌಕಗಳಲ್ಲಿ ದನಿಗೈಯುತ್ತಾಳೆ.
21 ಪೇಟೆಯ ಅಗ್ರಸ್ಥಾನದಲ್ಲಿಯೂ
ಊರ ಬಾಗಿಲಿನಲ್ಲಿಯೂ ಆಕೆಯು ನುಡಿಯುವದೇ
ನಂದರೆ—
22 ಮೂಢರೇ, ಮೂಢತನವನ್ನು ಎಂದಿನ ತನಕ ಪ್ರೀತಿ
ಸುವಿರಿ?
ಧರ್ಮನಿಂದಕರು ನಿಂದಿಸುವದಕ್ಕೆ ಎಷ್ಟುಕಾಲ ಇಷ್ಟ
ಪಡುವರು?
ಜ್ಞಾನಹೀನರು ತಿಳುವಳಿಕೆಯನ್ನು ಎಷ್ಟರ ವರೆಗೆ ಹಗೆ
ಮಾಡುವರು?
23 ನನ್ನ ಗದರಿಕೆಯನ್ನು ಕೇಳಿ ತಿರುಗಿಕೊಳ್ಳಿರಿ;
ಇಗೋ, ನಿಮ್ಮ ಮೇಲೆ ನನ್ನ ಆತ್ಮವನ್ನು ಸುರಿಸಿ
ನನ್ನ ಮಾತುಗಳನ್ನು ನಿಮಗೆ ತಿಳಿಯಪಡಿಸುವೆನು.
24 ನಾನು ಕರೆದಾಗ ನೀವು ತಿರಸ್ಕರಿಸಿದಿರಿ.
ಕೈ ಚಾಚಿದರೂ ಯಾರೂ ಗಮನಿಸಲಿಲ್ಲ;
25 ನನ್ನ ಬುದ್ಧಿವಾದವನ್ನು ಲಕ್ಷ್ಯಕ್ಕೆ ತಾರದೆ
ನನ್ನ ತಿದ್ದುಪಾಟನ್ನು ಬೇಡವೆಂದು ತಳ್ಳಿಬಿಟ್ಟಿದ್ದೀರಿ.
ಆದಕಾರಣ ಬಿರುಗಾಳಿಯಂತೆ ಅಪಾಯವೂ
ತುಫಾನಿನಂತೆ ಆಪತ್ತೂ ಬಂದು
ನಿಮಗೆ ಶ್ರಮಸಂಕಟಗಳು ಸಂಭವಿಸುವಾಗ
ನಿಮ್ಮ ಅಪಾಯದಲ್ಲಿ ನಾನೂ ನಗುವೆನು;
ನಿಮ್ಮ ಆಪತ್ತಿನಲ್ಲಿ ಪರಿಹಾಸ್ಯಮಾಡುವೆನು.
ಆಗ ಅವರು ನನಗೆ ಮೊರೆಯಿಟ್ಟರೂ ನಾನು ಉತ್ತರ
ಕೊಡೆನು,
ನನ್ನನ್ನು ಆತುರದಿಂದ ಹುಡುಕಿದರೂ ನಾನು ಕಾಣಿ
ಸೆನು.
ಯಾಕಂದರೆ ಯೆಹೋವನ ಭಯಭಕ್ತಿಗೆ ಮನಸ್ಸಿಲ್ಲದೆ
ತಿಳುವಳಿಕೆಯನ್ನು ಹಗೆಮಾಡಿದರು.
ನನ್ನ ಆಲೋಚನೆಯನ್ನು ಕೇಳಲೊಲ್ಲದೆ
ನನ್ನ ಗದರಿಕೆಯನ್ನೆಲ್ಲಾ ತಾತ್ಸಾರಮಾಡಿದರು.
ಆದದರಿಂದ ಅವರು ತಮ್ಮ ನಡತೆಯ ಫಲವನ್ನು
ಅನುಭವಿಸಿ
ಸ್ವಂತ ಕುಯುಕ್ತಿಗಳನ್ನೇ ಹೊಟ್ಟೆತುಂಬಾ ಉಣ್ಣ
ಬೇಕಾಗುವದು.
ಮೂಢರು ತಮ್ಮ ಉದಾಸೀನತೆಯಿಂದಲೇ ಹತರಾಗು
ವರು,
ಜ್ಞಾನಹೀನರು ತಮ್ಮ ನಿಶ್ಚಿಂತೆಯಿಂದಲೇ ನಾಶವಾಗು
ವರು.
ನನ್ನ ಮಾತಿಗೆ ಕಿವಿಗೊಡುವವನಾದರೋ ಸ್ವಸ್ಥವಾಗಿ
ರುತ್ತಾ
ಯಾವ ಕೇಡಿಗೂ ಭಯಪಡದೆ ಸುರಕ್ಷಿತನಾಗಿರುವನು
ಎಂಬದೇ.

ಕಂದಾ, ನನ್ನ ಮಾತುಗಳನ್ನು ಅಂಗೀಕರಿಸಿ
ನನ್ನ ವಿಧಿಗಳನ್ನು ನಿಧಿಯಂತೆ ಕಾಪಾಡಿಕೋ,
ನಿನ್ನ ಕಿವಿಯನ್ನು ಜ್ಞಾನದ ಕಡೆಗೂ
ಹೃದಯವನ್ನು ವಿವೇಕದ ಕಡೆಗೂ ತಿರುಗಿಸು;
ಬುದ್ಧಿಗಾಗಿ ಮೊರೆಯಿಟ್ಟು
ವಿವೇಕಕ್ಕಾಗಿ ಕೂಗಿಕೊಂಡು
ಅದನ್ನು ಬೆಳ್ಳಿಯಂತೆಯೂ ನಿಕ್ಷೇಪದಂತೆಯೂ ಹುಡು
ಕು;
ಆಗ ನೀನು ಯೆಹೋವನ ಭಯವನ್ನು ಅರಿತು
ದೈವಜ್ಞಾನವನ್ನು ಪಡೆದುಕೊಳ್ಳುವಿ.
ಯೆಹೋವನೇ ಜ್ಞಾನವನ್ನು ಕೊಡುವಾತನು,
ಆತನ ಬಾಯಿಂದಲೇ ತಿಳುವಳಿಕೆಯೂ ವಿವೇಕವೂ
ಹೊರಟು ಬರುತ್ತವೆ.
ಆತನು ಯಥಾರ್ಥಚಿತ್ತರಿಗಾಗಿ ಸುಜ್ಞಾನವನ್ನು ಕೂಡಿ
ಸಿಡುವನು.
ದೋಷವಿಲ್ಲದೆ ನಡೆಯುವವರಿಗೆ ಗುರಾಣಿಯಾಗಿದ್ದು
ನ್ಯಾಯಮಾರ್ಗವನ್ನು ರಕ್ಷಿಸುತ್ತಾ
ತನ್ನ ಭಕ್ತರ ದಾರಿಯನ್ನು ನೋಡಿಕೊಳ್ಳುವನು.
ಹೀಗಿರಲು ನೀನು ನೀತಿನ್ಯಾಯಗಳನ್ನೂ
ಧರ್ಮವನ್ನೂ ಅಂದರೆ ಸಕಲ ಸನ್ಮಾರ್ಗಗಳನ್ನು
ತಿಳಿದುಕೊಳ್ಳುವಿ.
ಜ್ಞಾನವು ನಿನ್ನ ಹೃದಯದೊಳಗೆ ಪ್ರವೇಶಿಸುವದು,
ತಿಳುವಳಿಕೆಯು ನಿನ್ನ ಆತ್ಮಕ್ಕೆ ಅಂದವಾಗಿರುವದು.

11 ಬುದ್ಧಿಯು ನಿನಗೆ ಕಾವಲಾಗಿರುವದು,
ವಿವೇಕವು ನಿನ್ನನ್ನು ಕಾಪಾಡುವದು;
12 ಇದರಿಂದ ನೀನು ದುರ್ಮಾರ್ಗದಿಂದಲೂ
ಕೆಟ್ಟ ಮಾತನಾಡುವವರಿಂದಲೂ ತಪ್ಪಿಸಿಕೊಳ್ಳುವಿ.
13 ಅವರಾದರೋ ಕತ್ತಲ ಹಾದಿಗಳನ್ನು ಹಿಡಿಯ ಬೇಕೆಂದು
ಧರ್ಮಮಾರ್ಗಗಳನ್ನು ತೊರೆದುಬಿಡುವರು;
14 ಅವರು ಕೆಟ್ಟದ್ದನ್ನು ಮಾಡುವದರಲ್ಲಿ ಸಂತೋಷಿಸಿ
ಕೆಟ್ಟವರ ದುಷ್ಟತನಕ್ಕೆ ಒಲಿಯುವರು.
15 ಅವರ ಮಾರ್ಗಗಳು ವಕ್ರವಾಗಿವೆ.
ಅವರ ನಡತೆಗಳು ದುರ್ನಡತೆಗಳೇ.
16 ವಿವೇಕವು ನಿನ್ನನ್ನು ಜಾರಳಿಂದ ಎಂದರೆ
ಸವಿಮಾತನಾಡುವ ಪರಸ್ತ್ರೀಯಿಂದ, ತಪ್ಪಿಸುವದು.
17 ಅವಳು ತನ್ನ ಯೌವನಕಾಲದ ಕಾಂತನನ್ನು ತ್ಯಜಿಸಿ
ತನ್ನ ದೇವರ ಮುಂದೆ ಮಾಡಿಕೊಂಡ ಒಡಂಬಡಿಕೆಯನ್ನು ಮರೆತುಬಿಟ್ಟಿದ್ದಾಳಷ್ಟೆ.
18 [1]ಅವಳ ಮನೆಯೇ ಪಾತಾಳಕ್ಕೆ ಇಳಿಯುವ ದಾರಿ,
ಅವಳ ಮಾರ್ಗಗಳು ಪ್ರೇತಲೋಕಕ್ಕೆ ಹೋಗುತ್ತವೆ.
19 ಅವಳ ಬಳಿಗೆ ಹೋಗುವವರು ಯಾರೂ ಹಿಂದಿರುಗುವದಿಲ್ಲ.
ಅವರಿಗೆ ಜೀವದ ಮಾರ್ಗವು ದೊರೆಯುವದೇ ಇಲ್ಲ.
20 ಒಳ್ಳೆಯವರ ನಡತೆಯನ್ನು ಅನುಸರಿಸುವಂತೆ [ವಿವೇಕವು] ನಿನ್ನನ್ನು ಪ್ರೇರಿಸಿ
ನೀತಿವಂತರ ಹಾದಿಗಳನ್ನು ಹಿಡಿಯುವ ಹಾಗೆ [ಮಾಡುವದು].
21 ಯಥಾರ್ಥವಂತರು ದೇಶದಲ್ಲಿ ಸ್ವತಂತ್ರರಾಗಿರುವರು,
ನಿರ್ದೋಷಿಗಳು ಅದರಲ್ಲಿ ನೆಲೆಯಾಗಿರುವರು.
22 ದುಷ್ಟರಾದರೋ ದೇಶದೊಳಗಿಂದ ಕೀಳಲ್ಪಡುವರು,
ದ್ರೋಹಿಗಳು ನಿರ್ಮೂಲರಾಗುವರು.

3 ಕಂದಾ, ನನ್ನ ಉಪದೇಶವನ್ನು ಮರೆಯಬೇಡ,
ನನ್ನ ಆಜ್ಞೆಗಳನ್ನು ಮನಃಪೂರ್ವಕವಾಗಿ ನಡಿಸು.
2 ಅವು ನಿನ್ನ ದಿನಗಳನ್ನು ಹೆಚ್ಚಿಸಿ ನಿನ್ನ ಆಯುಷ್ಯವನ್ನು ವೃದ್ಧಿಗೊಳಿಸಿ
ನಿನಗೆ ಸುಕ್ಷೇಮವನ್ನುಂಟುಮಾಡುವವು.
3 ಪ್ರೀತಿಸತ್ಯತೆಗಳು ನಿನ್ನನ್ನು ಬಿಡದಿರಲಿ,
ಅವುಗಳನ್ನು ನಿನ್ನ ಕೊರಳಿಗೆ ಕಟ್ಟು.
ನಿನ್ನ ಹೃದಯದ ಹಲಗೆಯಲ್ಲಿ ಅವುಗಳನ್ನು ಬರೆ;
4 ಇದರಿಂದ ನೀನು ದೇವರ ಮತ್ತು ಮನುಷ್ಯರ
ದಯೆಯನ್ನೂ ಸಮ್ಮತಿಯನ್ನೂ ಪಡೆದುಕೊಳ್ಳುವಿ.
5 ಸ್ವಬುದ್ಧಿಯನ್ನೇ ಆಧಾರಮಾಡಿಕೊಳ್ಳದೆ
ಪೂರ್ಣ ಮನಸ್ಸಿನಿಂದ ಯೆಹೋವನಲ್ಲಿ ಭರವಸವಿಡು.
6 ನಿನ್ನ ಎಲ್ಲಾ ನಡವಳಿಯಲ್ಲಿ ಆತನ ಚಿತ್ತಕ್ಕೆ ವಿಧೇಯನಾಗಿರು;
ಆತನೇ ನಿನ್ನ ಮಾರ್ಗಗಳನ್ನು ಸರಾಗಮಾಡುವನು.
7 ನೀನೇ ಬುದ್ಧಿವಂತನು ಎಂದೆಣಿಸದೆ
ಯೆಹೋವನಿಗೆ ಭಯಪಟ್ಟು ಕೆಟ್ಟದ್ದನ್ನು ತೊರೆದುಬಿಡು.
ಇದರಿಂದ ನಿನ್ನ [2]ದೇಹಕ್ಕೆ ಆರೋಗ್ಯವೂ 8
ಎಲುಬುಗಳಿಗೆ ಸಾರವೂ ಉಂಟಾಗುವವು.
ನಿನ್ನ ಆದಾಯದಿಂದಲೂ ಬೆಳೆಯ ಪ್ರಥಮಫಲದಿಂದಲೂ 9
ಯೆಹೋವನನ್ನು ಸನ್ಮಾನಿಸು.
ಹೀಗೆ ಮಾಡಿದರೆ ನಿನ್ನ ಕಣಜಗಳು ಸಮೃದ್ಧಿಯಿಂದ ತುಂಬುವವು, 10
ತೊಟ್ಟಿಗಳಲ್ಲಿ ದ್ರಾಕ್ಷಾರಸವು ತುಂಬಿ ತುಳುಕುವದು.

ಮಗನೇ, ಯೆಹೋವನ ಶಿಕ್ಷೆಯನ್ನು ತಾತ್ಸಾರಮಾಡಬೇಡ. 11
ಆತನು ನಿನ್ನನ್ನು ಗದರಿಸುವಾಗ ಬೇಸರಗೊಳ್ಳಬೇಡ;
ತಂದೆಯು ತನ್ನ ಮುದ್ದುಮಗನನ್ನು ಗದರಿಸುವಂತೆ 12
ಯೆಹೋವನು ತಾನು ಪ್ರೀತಿಸುವವನನ್ನೇ ಗದರಿಸುತ್ತಾನೆ.
ಜ್ಞಾನವನ್ನು ಪಡೆಯುವವನು ಧನ್ಯನು, 13
ವಿವೇಕವನ್ನು ಸಂಪಾದಿಸುವವನು ಭಾಗ್ಯವಂತನು.
ಅದರ ಲಾಭವು ಬೆಳ್ಳಿಯ ಲಾಭಕ್ಕಿಂತಲೂ 14
ಅದರಿಂದಾಗುವ ಆದಾಯವು ಬಂಗಾರಕ್ಕಿಂತಲೂ ಅಮೂಲ್ಯವೇ ಸರಿ.
ಅದರ ಬೆಲೆಯು ಹವಳಕ್ಕಿಂತಲೂ ಹೆಚ್ಚು, 15
ನಿನ್ನ ಇಷ್ಟವಸ್ತುಗಳೆಲ್ಲವೂ ಅದಕ್ಕೆ ಸಮವಲ್ಲ.
ಜ್ಞಾನವೆಂಬಾಕೆಯ ಬಲಗೈಯಲ್ಲಿ ದೀರ್ಘಾಯುಷ್ಯವೂ, 16
ಎಡಗೈಯಲ್ಲಿ ಧನವೂ ಘನತೆಯೂ ಉಂಟು.
ಆಕೆಯ ದಾರಿಗಳು ಸುಖಕರವಾಗಿವೆ, 17
ಆಕೆಯ ಮಾರ್ಗಗಳೆಲ್ಲಾ ಸಮಾಧಾನವೇ.
ಜ್ಞಾನವು ತನ್ನನ್ನು ಹಿಡಿದುಕೊಳ್ಳುವವರಿಗೆ ಜೀವದ ಮರವಾಗಿದೆ; 18
ಅದನ್ನು ಅವಲಂಬಿಸುವ ಪ್ರತಿಯೊಬ್ಬನೂ ಧನ್ಯನು.
ಯೆಹೋವನು ಜ್ಞಾನದ ಮೂಲಕ ಭೂಮಿಯನ್ನು ಸ್ಥಾಪಿಸಿ 19
ವಿವೇಕದ ಮುಖಾಂತರ ಆಕಾಶಮಂಡಲವನ್ನು ಸ್ಥಿರಪಡಿಸಿದನು.
ಭೂಮಿಯ ಕೆಳಗಣ ಸಾಗರವು ಒಡೆದದ್ದಕ್ಕೂ 20
ಆಕಾಶವು ಇಬ್ಬನಿಯನ್ನು ಸುರಿಸುವದಕ್ಕೂ ಆತನ ತಿಳುವಳಿಕೆಯೇ ಸಾಧನವು.

ಮಗನೇ, ಸುಜ್ಞಾನವನ್ನೂ ಬುದ್ಧಿಯನ್ನೂ ಭದ್ರವಾಗಿಟ್ಟುಕೋ, 21
ನಿನ್ನ ದೃಷ್ಟಿಯು ಅವುಗಳ ಮೇಲೆ ತಪ್ಪದೇ ಇರಲಿ.
ಅವು ನಿನಗೆ ಜೀವವೂ 22
ನಿನ್ನ ಕೊರಳಿಗೆ ಭೂಷಣವೂ ಆಗಿರುವವು.
ಆಗ ನೀನು ಎಡವದೆ 23
ನಿನ್ನ ಮಾರ್ಗದಲ್ಲಿ ನಿರ್ಭಯವಾಗಿ ನಡೆಯುವಿ.
ನೀನು ಮಲಗುವಾಗ ಹೆದರಿಕೆ ಇರುವದಿಲ್ಲ, 24
ಮಲಗಿದ ಮೇಲೆ ಸುಖವಾಗಿ ನಿದ್ರೆಮಾಡುವಿ.
ಫಕ್ಕನೆ ಬರುವ ಅಪಾಯಕ್ಕಾಗಲಿ 25

1) ಅಥವಾ: ಅವಳು ತನ್ನ ಮನೆಯಾದ ಪಾತಾಳಕ್ಕೆ ಇಳಿಯುವಳು. 2) ಪಾಠಾಂತರ: ಹೊಕ್ಕಳಿಗೆ.

ದುಷ್ಟರಿಗೆ ಸಂಭವಿಸುವ ನಾಶನಕ್ಕಾಗಲಿ ನೀನು ಅಂಜು
ವದೇ ಇಲ್ಲ.
26 ಯೆಹೋವನು ನಿನ್ನ ಭರವಸಕ್ಕೆ ಆಧಾರನಾಗಿದ್ದು
ನಿನ್ನ ಕಾಲು ಪಾಶಕ್ಕೆ ಸಿಕ್ಕದಂತೆ ನಿನ್ನನ್ನು ಕಾಪಾಡು
ವನು.

27 ಉಪಕಾರಮಾಡುವದಕ್ಕೆ ನಿನ್ನ ಕೈಲಾದಾಗ
ಹೊಂದತಕ್ಕವರಿಗೆ ಅದನ್ನು ತಪ್ಪಿಸಬೇಡ.
28 ಕೊಡತಕ್ಕದ್ದು ನಿನ್ನಲ್ಲಿದ್ದರೆ
ನೆರೆಯವನಿಗೆ—ಹೋಗಿ ಬಾ
ನಾಳೆ ಕೊಡುತ್ತೇನೆ ಎಂದು ಹೇಳಬೇಡ.
29 ನೆರೆಯವನಿಗೆ ಕೇಡನ್ನು ಕಲ್ಪಿಸಬಾರದು,
ಅವನು ನಿನ್ನ ಪಕ್ಕದಲ್ಲಿ ನಂಬಿಕೆಯಿಂದ ವಾಸಮಾಡು
ತ್ತಾನಲ್ಲವೇ.
30 ನಿನಗೆ ಅಪಕಾರಮಾಡದವನ ಸಂಗಡ
ಸುಮ್ಮನೆ ಜಗಳವಾಡಬೇಡ.
31 ಬಲಾತ್ಕಾರಿಯನ್ನು ನೋಡಿ ಹೊಟ್ಟೆಕಿಚ್ಚುಪಡದಿರು,
ಅವನ ನಡತೆಯನ್ನು ಎಷ್ಟು ಮಾತ್ರಕ್ಕೂ ಅನುಸರಿಸ
ಬೇಡ.
32 ವಕ್ರಬುದ್ಧಿಯವನು ಯೆಹೋವನಿಗೆ ಅಸಹ್ಯನು,
ಯಥಾರ್ಥರಿಗೆ ಆತನ ಸ್ನೇಹವು ದೊರೆಯುವದು.
33 ಯೆಹೋವನು ದುಷ್ಟನ ಮನೆಯನ್ನು ಶಪಿಸುವನು,
ನೀತಿವಂತರ ನಿವಾಸವನ್ನೋ ಆಶೀರ್ವದಿಸುವನು.
34 ಯಾರು ಧರ್ಮವನ್ನು ತಿರಸ್ಕರಿಸುವರೋ ಅವರನ್ನು
ಆತನು ತಿರಸ್ಕರಿಸುವನು.
ದೀನರಿಗಾದರೋ ಕೃಪೆಯನ್ನು ಅನುಗ್ರಹಿಸುವನು.
35 ಜ್ಞಾನವಂತರು ಸನ್ಮಾನಕ್ಕೆ ಬಾಧ್ಯರಾಗುವರು;
ಜ್ಞಾನಹೀನರಿಗಾಗುವ ಬಹುಮಾನವೋ ಅವಮಾನವೇ.

4 ಮಕ್ಕಳಿರಾ, ತಂದೆಯ ಶಿಕ್ಷಣವನ್ನು ಕೇಳಿರಿ,
ವಿವೇಕವನ್ನು ಗ್ರಹಿಸಲಿಕ್ಕೆ ಕಿವಿಗೊಡಿರಿ.
2 ನಾನು ನಿಮಗೆ ಸುಬೋಧೆಯನ್ನು ಮಾಡುವೆನು,
ನನ್ನ ಉಪದೇಶವನ್ನು ಬಿಡಬೇಡಿರಿ.
3 ನಾನೂ ನನ್ನ ತಂದೆಗೆ [ಅಧೀನನಾದ] ಮಗನೂ,
ತಾಯಿಯ ದೃಷ್ಟಿಗೆ ಕೋಮಲನಾದ ಏಕಪುತ್ರನೂ
ಆಗಿದ್ದೆನು.
4 ತಂದೆಯು ನನಗೆ ಬೋಧಕನಾಗಿ ಹೀಗೆಂದನು—
ನಿನ್ನ ಮನಸ್ಸು ನನ್ನ ಮಾತುಗಳನ್ನು ಹಿಡಿದುಕೊಳ್ಳಲಿ,
ನನ್ನ ಆಜ್ಞೆಯನ್ನು ಕೈಕೊಂಡು ಸುಖವಾಗಿ ಬಾಳು.
5 ಜ್ಞಾನವನ್ನು ಪಡೆ, ವಿವೇಕವನ್ನು ಸಂಪಾದಿಸು,
ಮರೆಯಬೇಡ, ನನ್ನ ಮಾತುಗಳಿಗೆ ಓರೆಯಾಗಬೇಡ.
6 ಜ್ಞಾನವನ್ನು ಬಿಡದಿದ್ದರೆ ಅದು ನಿನ್ನನ್ನು ಕಾಪಾಡು
ವದು,
ಪ್ರೀತಿಸಿದರೆ, ನಿನ್ನನ್ನು ಕಾಯುವದು.
7 ಜ್ಞಾನವನ್ನು ಪಡೆಯಬೇಕೆಂಬದೇ ಜ್ಞಾನಬೋಧೆಯ
ಪ್ರಥಮಪಾಠ;
ನಿನ್ನ ಎಲ್ಲಾ ಸಂಪತ್ತಿನಿಂದಲೂ ವಿವೇಕವನ್ನು ಪಡೆ.

ಜ್ಞಾನವೆಂಬಾಕೆಯು ಶ್ರೇಷ್ಠಳು ಎಂದು ನೀನು ಭಾವಿ
ಸಿದರೆ ಆಕೆಯು ನಿನ್ನನ್ನು ಉನ್ನತಿಗೆ ತರುವಳು;
ಆಕೆಯನ್ನು ಅಪ್ಪಿಕೊಂಡರೆ ನಿನ್ನನ್ನು ಘನಪಡಿಸುವಳು.
ಆಕೆಯು ನಿನ್ನ ತಲೆಗೆ ಅಂದದ ಪುಷ್ಪಮಾಲೆಯನ್ನಿಟ್ಟು
ಸುಂದರ ಕಿರೀಟವನ್ನು ನಿನಗೆ ಒಪ್ಪಿಸುವಳು.
ಕಂದಾ, ಆಲಿಸಿ ನನ್ನ ಮಾತುಗಳನ್ನು ಕೇಳು;
ಕೇಳಿದರೆ, ನಿನ್ನ ಜೀವಮಾನದ ವರುಷಗಳು ಹೆಚ್ಚು
ವವು.
ನಾನು ಜ್ಞಾನಮಾರ್ಗವನ್ನು ಉಪದೇಶಿಸಿ
ಧರ್ಮಮಾರ್ಗದಲ್ಲಿ ನಿನ್ನನ್ನು ನಡಿಸುವೆನು.
ನೀನು ನಡೆಯುವಾಗ ನಿನ್ನ ಹೆಜ್ಜೆಗೆ ಇಕ್ಕಟ್ಟಾಗದು,
ಓಡಿದರೆ, ಮುಗ್ಗರಿಸುವದಿಲ್ಲ.
ಸದುಪದೇಶವನ್ನು ಹಿಡಿ, ಸಡಿಲಬಿಡಬೇಡ;
ಅದನ್ನು ಕಾಪಾಡಿಕೋ, ಅದೇ ನಿನ್ನ ಜೀವವು.
ದುಷ್ಟರ ಮಾರ್ಗದಲ್ಲಿ ಸೇರದಿರು;
ಕೆಟ್ಟವರ ದಾರಿಯಲ್ಲಿ ನಡೆಯಬೇಡ.
ಅದಕ್ಕೆ ದೂರವಾಗಿರು, ಅದರಲ್ಲಿ ನಡೆಯದೆ ಓರೆ
ಯಾಗು;
ಮುಂದೆ ಮುಂದೆ ನಡೆ.
ಕೇಡುಮಾಡದಿದ್ದರೆ ಅವರಿಗೆ ನಿದ್ರೆಹತ್ತದು;
ಯಾರನ್ನಾದರೂ ಎಡವಿಬೀಳಿಸದಿದ್ದರೆ ಅವರ ನಿದ್ರೆಗೆ
ಭಂಗವಾಗುವದು.
ದುಷ್ಟತನವೇ ಅವರ ಅನ್ನ;
ಬಲಾತ್ಕಾರವೇ ಅವರ ದ್ರಾಕ್ಷಾರಸಪಾನ.
ನೀತಿವಂತರ ಮಾರ್ಗವು ಮಧ್ಯಾಹ್ನದ ವರೆಗೂ ಹೆಚ್ಚು
ತ್ತಾ ಬರುವ
ಬೆಳಗಿನ ಬೆಳಕಿನಂತಿದೆ.
ದುಷ್ಟರ ಮಾರ್ಗವೋ ಕತ್ತಲಿನಂತಿದೆ;
ತಾವು ಯಾವದಕ್ಕೆ ಎಡವಿಬಿದ್ದೆವೆಂದು ಅವರಿಗೆ ಗೊತ್ತಾ
ಗದು.

ಕಂದಾ, ನನ್ನ ಮಾತುಗಳನ್ನು ಆಲಿಸು,
ನನ್ನ ನುಡಿಗಳಿಗೆ ಕಿವಿಗೊಡು.
ನಿನ್ನ ದೃಷ್ಟಿಯು ಅವುಗಳ ಮೇಲೆ ತಪ್ಪದಿರಲಿ,
ಅವುಗಳನ್ನು ನಿನ್ನ ಹೃದಯದೊಳಗೆ ಇಟ್ಟುಕೋ.
ಅವುಗಳನ್ನು ಹೊಂದುವವರಿಗೆ ಅವು ಜೀವವು,
ದೇಹಕ್ಕೆಲ್ಲಾ ಅವೇ ಆರೋಗ್ಯವು.
ನಿನ್ನ ಹೃದಯವನ್ನು ಬಹು ಜಾಗರೂಕತೆಯಿಂದ ಕಾಪಾ
ಡಿಕೋ;
ಅದರೊಳಗಿಂದ ಜೀವಧಾರೆಗಳು ಹೊರಡುವವು.
ಸೊಟ್ಟಮಾತುಗಳನ್ನು ನಿನ್ನಿಂದ ತೊಲಗಿಸಿಬಿಡು,
ತುಟಿಗಳ ವಕ್ರತೆಯನ್ನು ದೂರಮಾಡು.
ನೆಟ್ಟಗೆ ದೃಷ್ಟಿಸು;
ನಿನ್ನ ಕಣ್ಣುಗಳು ನಿನ್ನ ಮುಂದೆಯೇ ಇರಲಿ.
ನೀನು ನಡೆಯುವ ದಾರಿಯನ್ನು [1])ಸಮಮಾಡು;
ನಿನ್ನ ಮಾರ್ಗಗಳೆಲ್ಲಾ ದೃಢವಾಗಿರಲಿ.
ಎಡಕ್ಕಾಗಲಿ ಬಲಕ್ಕಾಗಲಿ ತಿರುಗಬೇಡ;
ನಿನ್ನ ಕಾಲನ್ನು ಕೇಡಿಗೆ ದೂರಮಾಡು.

---

1) ಅಥವಾ: ಗಮನಿಸು.

5 ಕಂದಾ, ನನ್ನ ಜ್ಞಾನೋಪದೇಶವನ್ನು ಆಲಿಸು,
ನನ್ನ ವಿವೇಕಬೋಧೆಗೆ ಕಿವಿಗೊಡು.
2 ಹೀಗಾದರೆ ನೀನು ಸುಬುದ್ಧಿಯನ್ನು ಕೈಗೊಳ್ಳುವಿ,
ನಿನ್ನ ತುಟಿಗಳು ತಿಳುವಳಿಕೆಯನ್ನು ಕಾಪಾಡುವವು.
3 ಜಾರಸ್ತ್ರೀಯ ತುಟಿಗಳಲ್ಲಾದರೋ ಜೇನುಗರೆಯುವದು,
ಅವಳ ಮಾತು ಎಣ್ಣೆಗಿಂತಲೂ ನಯವಾಗಿದೆ.
4 ಅವಳು ಕಡೆಯಲ್ಲಿ ವಿಷದಂತೆ ಕಹಿಯೂ
ಇಬ್ಬಾಯಿಕತ್ತಿಯಂತೆ ತೀಕ್ಷ್ಣವೂ ಆಗುವಳು.
5 ಅವಳು ಮರಣದ ಕಡೆಗೆ ನಡೆಯುತ್ತಾ ಇಳಿದುಹೋಗುವಳು,
ಅವಳ ಹೆಜ್ಜೆಗಳು ಪಾತಾಳದ ದಾರಿಯನ್ನು ಹಿಡಿಯುವವು.
6 ಅವಳ ನಡತೆಯು ಚಂಚಲವಾಗಿರುವದರಿಂದ
ಅವಳು ಜೀವದ ಮಾರ್ಗವನ್ನು ವಿವೇಚಿಸಲಾರಳು,
ಅದು ಅವಳಿಗೆ ಗೊತ್ತೇ ಇಲ್ಲ.
7 ಹೀಗಿರಲು, 1)ಮಗನೇ, ನನ್ನ ಕಡೆಗೆ ಕಿವಿಗೊಡು,
ನನ್ನ ಮಾತುಗಳಿಂದ ತೊಲಗಬಾರದು.
8 ನಿನ್ನ ಮಾರ್ಗವು ಅವಳಿಗೆ ದೂರವಾಗಿರಲಿ,
ಅವಳ ಮನೆಬಾಗಿಲ ಹತ್ತಿರ ಹೋದೀಯೆ.
9 ನೋಡಿಕೋ, ನಿನ್ನ ಪುರುಷತ್ವವು ಪರಾಧೀನವಾದೀತು,
ನಿನ್ನ ಆಯುಷ್ಯವು ಕ್ರೂರರ ವಶವಾದೀತು.
10 ನಿನ್ನ ಸಂಪತ್ತನ್ನು ಪರರು ತುಂಬಿಕೊಳ್ಳುವರು,
ನೀನು ಅನ್ಯನ ಮನೆಯಲ್ಲಿ ದುಡಿಯುವಿ.
11 ಕಟ್ಟಕಡೆಗೆ ನಿನ್ನ ದೇಹವೆಲ್ಲಾ ಕ್ಷೀಣವಾಗಿ
ನೀನು ಅಂಗಲಾಚಿಕೊಂಡು—
12 ಅಯ್ಯೋ, ನಾನು ಸದುಪದೇಶವನ್ನು ಎಷ್ಟು ದ್ವೇಷಿಸಿದೆ,
ನನ್ನ ಹೃದಯವು ಬುದ್ಧಿವಾದವನ್ನು ಎಷ್ಟು ತಾತ್ಸಾರ ಮಾಡಿತು,
13 ನನ್ನ ಬೋಧಕರ ಮಾತನ್ನು ಕೇಳದೆ ಹೋದೆನಲ್ಲಾ,
ನನ್ನ ಉಪದೇಶಕರ ಕಡೆಗೆ ಕಿವಿಗೊಡಲಿಲ್ಲವಲ್ಲಾ!
14 ನಾನು 2)ಮಹಾಜನಸಭೆಯ ನಡುವೆ
ಎಲ್ಲಾ ಕೇಡಿಗೂ ಸಿಕ್ಕಿಕೊಳ್ಳುವ ಹಾಗೆ ಆದೆನು ಎಂದು ಅಂದುಕೊಳ್ಳುವಿ.

15 ಸ್ವಂತ ಕೊಳದ ನೀರನ್ನು,
ಸ್ವಂತ ಬಾವಿಯಲ್ಲಿ ಉಕ್ಕುವ ಜಲವನ್ನು ಮಾತ್ರ ಕುಡಿ.
16 ನಿನ್ನ ಒರತೆಗಳು ಬೈಲಿನಲ್ಲಿಯೂ
ನಿನ್ನ ಕಾಲಿವೆಗಳು ಚೌಕದಲ್ಲಿಯೂ ಹರಡಿ ಹರಿಯುವದು ವಿಹಿತವೇ?
17 ಅವು ನಿನಗೊಬ್ಬನಿಗೋಸ್ಕರವೇ ಹರಿಯಲಿ,
ಪರರು ನಿನ್ನೊಂದಿಗೆ ಸೇರಿ ಕುಡಿಯಬಾರದು.
18 ನಿನ್ನ ಬುಗ್ಗೆಯು [ದೇವರ] ಆಶೀರ್ವಾದವನ್ನು ಹೊಂದಲಿ,
ನಿನ್ನ ಯೌವನಕಾಲದ ಪತ್ನಿಯಲ್ಲಿ ಆನಂದಿಸು.
ಆಕೆ ಮನೋಹರವಾದ ಜಿಂಕೆಯಂತೆಯೂ ಅಂದವಾದ 19
ದುಪ್ಪಿಯ ಹಾಗೂ ಇರುವಳಲ್ಲಾ;
ಆಕೆಯ ಸ್ತನಗಳು ನಿನ್ನನ್ನು ಸರ್ವದಾ ತೃಪ್ತಿಪಡಿಸಲಿ,
ಆಕೆಯ ಪ್ರೀತಿಯಲ್ಲೇ ನಿರಂತರ ಲೀನವಾಗಿರು.
ಮಗನೇ, ಏಕೆ ಪರಸ್ತ್ರೀಯಲ್ಲಿ ಭ್ರಮೆಗೊಳ್ಳುವಿ, 20
ಅನ್ಯಳ ಎದೆಯನ್ನು ತಬ್ಬಿಕೊಳ್ಳುವದೇಕೆ?
ಮನುಷ್ಯನ ಮಾರ್ಗಗಳು ಯೆಹೋವನಿಗೆ ಕಾಣು 21
ತ್ತಲೇ ಇವೆ,
ಆತನು ಮನುಷ್ಯನ ನಡತೆಯನ್ನೆಲ್ಲಾ ಪರೀಕ್ಷಿಸುವವನಾಗಿದ್ದಾನೆ.
ದುಷ್ಟನ ದುಷ್ಕೃತ್ಯಗಳೇ ಅವನನ್ನು ಆಕ್ರಮಿಸುವವು, 22
ಅವನ ಪಾಪಪಾಶಗಳೇ ಅವನನ್ನು ಬಂಧಿಸುವವು.
ಸದುಪದೇಶದ ಕೊರತೆಯಿಂದಲೇ ಸಾಯುವನು, 23
ತನ್ನ ಅತಿಮೂರ್ಖತನದಿಂದ ಭ್ರಾಂತನಾಗುವನು.

ಮಗನೇ, ನೀನು ನೆರೆಯವನಿಗೆ ಹೊಣೆಯಾಗಿದ್ದರೆ, 6
ಪರನಿಗಾಗಿ ಕೈ ಮೇಲೆ ಕೈ ಹಾಕಿದ್ದರೆ,
ನೀನು ಮಾತುಕೊಟ್ಟು ಪಾಶಕ್ಕೆ ಸಿಕ್ಕಿದ್ದೀ, 2
ನಿನ್ನ ವಾಗ್ದಾನವು ನಿನ್ನನ್ನು ಹಿಡಿದಿದೆ.
ಹೀಗಿರಲು, ಮಗನೇ, ನೀನು ನೆರೆಯವನ ಕೈಗೆ ಸಿಕ್ಕ 3
ಕೊಂಡದರಿಂದ
ತಪ್ಪಿಸಿಕೊಳ್ಳುವ ಒಂದು ಕೆಲಸ ಮಾಡು;
ನಡೆ, 3)ತ್ವರೆಪಡು, ಆ ನೆರೆಯವನನ್ನು ಕಾಡು;
ನಿನ್ನ ಕಣ್ಣುಗಳಿಗೆ ನಿದ್ರೆಕೊಡಬೇಡ, 4
ರೆಪ್ಪೆಗಳನ್ನು ಮುಚ್ಚದಿರು;
ಬೇಟೆಗಾರನ ಕೈಯಿಂದ ಜಿಂಕೆಯು ಓಡುವಂತೆಯೂ 5
ಪಕ್ಷಿಯು ಹಾರಿಹೋಗುವ ಹಾಗೂ ತಪ್ಪಿಸಿಕೋ.

ಸೋಮಾರಿಯೇ, ಇರುವೆಯ ಹತ್ತಿರ ಹೋಗಿ 6
ಅದರ ನಡವಳಿಕೆಯನ್ನು ನೋಡಿ ಜ್ಞಾನವನ್ನು ತಂದುಕೋ.
ಅದಕ್ಕೆ ನಾಯಕ ಅಧಿಕಾರಿ ಪ್ರಭುಗಳಿಲ್ಲದಿದ್ದರೂ 7
ಸುಗ್ಗಿಯಲ್ಲಿ ತನ್ನ ತೀನಿಯನ್ನು ಕೂಡಿಸಿಡುವದು, 8
ಕೊಯ್ಲಿನ ಕಾಲದಲ್ಲಿ ತನಗೆ ಬೇಕಾದಷ್ಟು ಆಹಾರವನ್ನು ಸಂಗ್ರಹಿಸಿಟ್ಟುಕೊಳ್ಳುವದು.
ಸೋಮಾರಿಯೇ, ಎಷ್ಟು ಹೊತ್ತು ನಿದ್ರೆ? 9
ನಿದ್ರೆಯಿಂದ ಯಾವಾಗ ಎಚ್ಚರಗೊಳ್ಳುವಿ?
ಇನ್ನು ಸ್ವಲ್ಪ ನಿದ್ದೆ, ಇನ್ನು ತುಸ ತೂಕಡಿಕೆ, 10
ಇನ್ನೂ ಕೊಂಚ ನಿದ್ದೆಗಾಗಿ ಕೈಮುದುರಿಕೊಳ್ಳುವೆ ಅಂದುಕೊಳ್ಳುವಿಯಾ?
ಬಡತನವು ದಾರಿಗಳ್ಳನ ಹಾಗೂ 11
ಕೊರತೆಯು ಪಂಜುಗಳ್ಳನಂತೆಯೂ ನಿನ್ನ ಮೇಲೆ ಬೀಳುವವು.

ನೀಚನೂ ದುಷ್ಟನೂ ಆಗಿರುವ ಅವನ ನಡತೆ 12
ಯನ್ನು ನೋಡು; ಸೊಟ್ಟುಬಾಯಿಯವನಾಗಿದ್ದಾನೆ,

1) ಪಾಠಾಂತರ: ಮಕ್ಕಳೇ, ನನ್ನ ಕಡೆಗೆ ಕಿವಿಗೊಡಿರಿ. 2) ಅಥವಾ: ದೇವಜನರ ಸಭೆಯ ಮಧ್ಯದಲ್ಲಿ ಹೆಚ್ಚುಕಡಿಮೆ ಎಲ್ಲಾ ಅಪರಾಧಗಳನ್ನು ನಡಿಸುವವನಾಗಿದ್ದೆನು. 3) ಅಥವಾ: ತಗ್ಗಿಕೋ.

13 ಕಣ್ಣನ್ನು ಮಿಟಕಿಸುತ್ತಾನೆ, ಕಾಲಿನಿಂದ ಕೆರೆಯುತ್ತಾನೆ,
ಬೆರಳ ಸನ್ನೆಮಾಡುತ್ತಾನೆ.
14 ಅವನ ಮನಸ್ಸಿನಲ್ಲಿರುವದು ದ್ರೋಹವೇ; ಕೇಡನ್ನು ನಿರಂತರ ಕಲ್ಪಿಸುತ್ತಾನೆ.
ಜಗಳದ ಬೀಜವನ್ನು ಬಿತ್ತುತ್ತಾನೆ.
15 ಆದಕಾರಣ ಅವನಿಗೆ ತಟ್ಟನೆ ವಿಪತ್ತು ಸಂಭವಿಸುವದು,
ಏಳದ ಹಾಗೆ ಫಕ್ಕನೆ ಮುರಿಯಲ್ಪಡುವನು.
16 ಯೆಹೋವನು ಹಗೆಮಾಡುವ ವಸ್ತುಗಳು ಆರು ಇವೆ.
ಹೌದು, ಏಳು ಆತನಿಗೆ ಅಸಹ್ಯಗಳಾಗಿ ತೋರುತ್ತವೆ.
17 ಯಾವವಂದರೆ, ಹೆಮ್ಮೆಯ ಕಣ್ಣು, ಸುಳ್ಳಿನ ನಾಲಿಗೆ,
ನಿರ್ದೋಷರಕ್ತವನ್ನು ಸುರಿಸುವ ಕೈ,
18 ದುರಾಲೋಚನೆಗಳನ್ನು ಕಲ್ಪಿಸುವ ಹೃದಯ,
ಕೇಡುಮಾಡಲು ತ್ವರೆಪಡುವ ಕಾಲು,
19 ಅಸತ್ಯವಾಡುವ ಸುಳ್ಳುಸಾಕ್ಷಿ,
ಒಡಹುಟ್ಟಿದವರಲ್ಲಿ ಜಗಳಗಳನ್ನು ಬಿತ್ತುವವನು, ಈ ಏಳೇ.

20 ಕಂದಾ, ತಂದೆಯ ಆಜ್ಞೆಯನ್ನು ಕೈಕೊಳ್ಳು,
ತಾಯಿಯ ಉಪದೇಶವನ್ನು ಬಿಡಬೇಡ.
21 ಅವುಗಳನ್ನು ನಿನ್ನ ಹೃದಯಕ್ಕೆ ನಿರಂತರವಾಗಿ ಬಂಧಿಸು,
ನಿನ್ನ ಕಂಠಕ್ಕೆ ಧರಿಸಿಕೋ.
22 ನೀನು ನಡೆಯುವಾಗ ಆ ಉಪದೇಶವು ನಿನ್ನನ್ನು ನಡಿಸುವದು,
ಮಲಗಿಕೊಂಡಾಗ ಕಾಯುವದು,
ಎಚ್ಚರಗೊಂಡಾಗ ನಿನ್ನೊಂದಿಗೆ ಮಾತಾಡುವದು.
23 ಆಜ್ಞೆಯೇ ದೀಪ, ಉಪದೇಶವೇ ಬೆಳಕು,
ಶಿಕ್ಷಣಪೂರ್ವಕವಾದ ಬೋಧನೆಯೇ ಜೀವದ ಮಾರ್ಗ.
24 ಅದು ಕೆಟ್ಟ ಹೆಂಗಸಿನಿಂದಲೂ
ಪರಸ್ತ್ರೀಯ ನಾಲಿಗೆಯ ಸಿಹಿನುಡಿಯಿಂದಲೂ ನಿನ್ನನ್ನು ರಕ್ಷಿಸತಕ್ಕದ್ದಾಗಿದೆ.
25 ನಿನ್ನ ಹೃದಯವು ಆವಳ ಬೆಡಗನ್ನು ಮೋಹಿಸದಿರಲಿ,
ಅವಳು ತನ್ನ ಕಣ್ಣುರೆಪ್ಪೆಗಳಿಂದ ನಿನ್ನನ್ನು ವಶಮಾಡಿಕೊಂಡಾಳು, ನೋಡಿಕೋ.
26 ವೇಶ್ಯೆಯಿಂದ ಯಾವನಿಗಾದರೂ ಒಂದು ರೊಟ್ಟಿಮಾತ್ರ ಗತಿಯಾಗುವದು,
ಪರಸ್ತ್ರೀಯೋ ಅಮೂಲ್ಯವಾದ ಜೀವವನ್ನು ಬೇಟೆಯಾಡುವಳು.
27 ಮಡಲಲ್ಲಿ ಬೆಂಕಿಯನ್ನಿಟ್ಟುಕೊಂಡರೆ
ಬಟ್ಟೆ ಸುಡುವದಿಲ್ಲವೇ?
28 ಧಗಧಗಿಸುವ ಕೆಂಡದ ಮೇಲೆ ನಡೆದರೆ
ಕಾಲು ಬೇಯುವದಿಲ್ಲವೋ?
29 ನೆರೆಯವನ ಹೆಂಡತಿಯ ಹತ್ತಿರ ಹೋಗುವವನಿಗೆ ಹೀಗೆಯೇ ಆಗುವದು,
ಯಾವನು ಅವಳನ್ನು ಮುಟ್ಟುವನೋ ಅವನು ದಂಡನೆಯನ್ನು ಹೊಂದದೇ ಇರನು.
30 ಕಳ್ಳನು ಹೊಟ್ಟೆಗಿಲ್ಲದೆ ಹಸಿವೆಯನ್ನು ನೀಗಿಸಲು ಕಳವು ಮಾಡಿದರೆ
ಜನರು ಅಷ್ಟೇನೂ ಹೀಯಾಳಿಸರು.
ಅವನ ತಪ್ಪು ಬೈಲಾದರೆ ಅವನು ಏಳರಷ್ಟು ಕೊಡಬೇಕಾಗುವದು, 3
ಅಥವಾ ತನ್ನ ಮನೆಯ ಆಸ್ತಿಯನ್ನೆಲ್ಲಾ ತೆತ್ತೇ ತೀರಬೇಕು.
ವ್ಯಭಿಚಾರಿಯೋ ಕೇವಲ ಬುದ್ಧಿಶೂನ್ಯನು; 3
ಇಂಥಾ ಕಾರ್ಯವನ್ನು ಮಾಡುವವನು ತನ್ನನ್ನೇ ನಾಶಪಡಿಸಿಕೊಳ್ಳುವನು.
ಅವನಿಗೆ ಗಾಯವೂ ಅವಮಾನವೂ ಆಗುವವು, 3
ಅವನ ಕೆಟ್ಟ ಹೆಸರು ಎಂದಿಗೂ ಅಳಿಸಲ್ಪಡದು.
ಏಕೆಂದರೆ ಮತ್ಸರವು ಪತಿಗೆ ಕ್ರೋಧವನ್ನು ಉಂಟುಮಾಡುತ್ತದೆ, 3
ಮುಯ್ಯಿತೀರಿಸತಕ್ಕ ದಿನದಲ್ಲಿ ವ್ಯಭಿಚಾರಿಯನ್ನು ಉಳಿಸನು.
ಅವನು ಯಾವ ಈಡನ್ನೂ ಮುಟ್ಟನು; 3
ಎಷ್ಟು ಲಂಚಕೊಟ್ಟರೂ ಒಪ್ಪನು.

7 ಕಂದಾ, ನನ್ನ ಮಾತುಗಳನ್ನು ಅನುಸರಿಸು,
ನನ್ನ ಆಜ್ಞೆಗಳನ್ನು ಮನಸ್ಸಿನಲ್ಲಿಟ್ಟುಕೋ.
ನನ್ನ ಉಪದೇಶವನ್ನು ಕಣ್ಣುಗುಡ್ಡೆನಂತೆ ಪಾಲಿಸು,
ನನ್ನ ಆಜ್ಞೆಗಳನ್ನು ಕೈಕೊಂಡು ಬಾಳು.
ಅವುಗಳನ್ನು ನಿನ್ನ ಬೆರಳುಗಳಿಗೆ ಉಂಗುರವಾಗಿ ಇಟ್ಟುಕೋ,
ಹೃದಯದ ಹಲಗೆಯಲ್ಲಿ ಬರೆ.
ಜ್ಞಾನವನ್ನು ಅಕ್ಕಾ ಎಂದು ಹೇಳು,
ವಿವೇಕವನ್ನು ಆಪ್ತಮಿತ್ರಳೇ ಎಂದು ಕರೆ.
ಅವು ಜಾರಳಿಂದ,
ಸವಿಮಾತನಾಡುವ ಪರಸ್ತ್ರೀಯಿಂದ, ನಿನ್ನನ್ನು ರಕ್ಷಿಸುವವು.

ನಾನು ನನ್ನ ಮನೆಯ ಜಾಲರಿಯಿಂದ ಇಣಿಕಿ ನೋಡಲು
ಅಲ್ಪಬುದ್ಧಿಯುಳ್ಳ ಅನೇಕ ಯುವಕರು ಕಾಣಿಸಿದರು.
ಅವರಲ್ಲಿ ಜ್ಞಾನಹೀನನಾದ ಒಬ್ಬ ಯೌವನಸ್ಥನು
ಸಂಜೆಯ ಮೊಬ್ಬಿನಲ್ಲಿ, ಮಧ್ಯರಾತ್ರಿಯ ಅಂಧಕಾರದಲ್ಲಿ,
ಅವಳ [ಮನೆಯ] ಮೂಲೆಯ ಹತ್ತಿರ ಬೀದಿಯಲ್ಲಿ ಹಾದುಹೋಗುತ್ತಾ
ಅವಳ ಮನೆಯ ಕಡೆಗೆ ತಿರುಗಿದ್ದನ್ನು ಕಂಡೆನು.
ಇಗೋ ವೇಶ್ಯಾವೇಷವನ್ನು ಧರಿಸಿರುವ ಒಬ್ಬ ಕಪಟಸ್ತ್ರೀಯು 1
ಅವನನ್ನು ಎದುರುಗೊಳ್ಳುತ್ತಾಳೆ.
(ಇವಳು ಕೂಗಾಟದವಳು, ಹಟಮಾರಿ, 1
ಮನೆಯಲ್ಲಿ ನಿಲ್ಲತಕ್ಕವಳೇ ಅಲ್ಲ;
ಒಂದು ವೇಳೆ ಬೀದಿಗಳಲ್ಲಿರುವಳು, ಮತ್ತೊಂದು ವೇಳೆ ಚೌಕಗಳಲ್ಲಿರುವಳು, 1
ಅಂತು ಪ್ರತಿಯೊಂದು ಮೂಲೆಯಲ್ಲಿಯೂ ಹೊಂಚುಹಾಕುವಳು.)
ಅವನನ್ನು ಹಿಡಿದು ಮುದ್ದಾಡಿ 1
ನಾಚಿಕೆಗೆಟ್ಟವಳಾಗಿ—

14 ಎಲೈ, ಈ ದಿವಸ ನನ್ನ ಹರಕೆಗಳನ್ನು ಸಲ್ಲಿಸಿದ್ದೇನೆ,
ಸಮಾಧಾನಯಜ್ಞಶೇಷವು ನನ್ನಲ್ಲಿದೆ,
15 ಆದಕಾರಣ ನಿನ್ನನ್ನು ಎದುರುಗೊಳ್ಳಲು ಬಂದೆ,
ನಿನ್ನನ್ನು ಆತುರದಿಂದ ಹುಡುಕಿ ಕಂಡುಕೊಂಡೆನು.
16 ನನ್ನ ಮಂಚದಲ್ಲಿ ಸುಪ್ಪತ್ತಿಯನ್ನೂ
ಐಗುಪ್ತದೇಶದ ನೂಲಿನ ವಿಚಿತ್ರವಸ್ತ್ರಗಳನ್ನೂ ಹಾಸಿದ್ದೇನೆ.
17 ಹಾಸಿಗೆಯ ಮೇಲೆ ರಕ್ತಬೋಳ, ಅಗುರು, ಲವಂಗ ಚಕ್ಕೆ,
ಇವುಗಳ ಚೂರ್ಣವನ್ನು ಉದರಿಸಿದ್ದೇನೆ.
18 ಬಾ, ಬೆಳಗಿನ ತನಕ ಬೇಕಾದಷ್ಟು ರಮಿಸುವ,
ಕಾಮುವಿಲಾಸಗಳಿಂದ ಸಂತೋಷಿಸುವ.
19 ಯಜಮಾನನು ಮನೆಯಲ್ಲಿಲ್ಲ,
ದೂರ ಪ್ರಯಾಣದಲ್ಲಿದ್ದಾನೆ.
20 ಹಣದ ಗಂಟನ್ನು ತೆಗೆದುಕೊಂಡು ಹೋಗಿದ್ದಾನೆ,
ಹುಣ್ಣಿಮೆಗೆ ಮನೆಗೆ ಬರುವನು ಎಂಬದಾಗಿ
21 ಅವನನ್ನು ತನ್ನ ಸವಿಮಾತುಗಳಿಂದ ಬಲಾತ್ಕರಿಸಿ
ಬಹಳವಾಗಿ ಪ್ರೇರಿಸಿ ಸಮ್ಮತಿಪಡಿಸುತ್ತಾಳೆ.
22 ಹೋರಿಯು ವಧ್ಯಸ್ಥಾನಕ್ಕೆ ಹೋಗುವ ಹಾಗೂ
ಬೇಡಿಬಿದ್ದಿರುವ ಮೂರ್ಖನು ದಂಡನೆಗೆ ನಡೆಯುವಂತೆಯೂ
ಪಕ್ಷಿಯು ಬಲೆಯ ಕಡೆಗೆ ಓಡುವ ಮೇರೆಗೂ
23 ಅವನು ತನ್ನ ಪ್ರಾಣಾಪಾಯವನ್ನು ತಿಳಿಯದೆ
ಬಾಣವು ತನ್ನ ಕಾಳಿಜವನ್ನು ತಿವಿಯುವ ಕಡೆಗೆ
ತಟ್ಟನೆ ಅವಳ ಹಿಂದೆ ಹೋಗುತ್ತಾನೆ.

24 ಈಗ, 1)ಕಂದಾ, ನನ್ನ ಕಡೆಗೆ ಕಿವಿಗೊಡು,
ನನ್ನ ಮಾತುಗಳನ್ನು ಆಲಿಸು.
25 ನಿನ್ನ ಹೃದಯವು ಅವಳ ನಡತೆಯ ಕಡೆಗೆ ತಿರುಗದಿರಲಿ,
ತಪ್ಪಿಹೋಗಿ ಅವಳ ಮಾರ್ಗದಲ್ಲಿ ನಡೆಯಬೇಡ.
26 ಅವಳಿಂದ ಗಾಯಪಟ್ಟು ಬಿದ್ದವರು ಬಹು ಮಂದಿ,
ಹತರಾದವರೋ ಲೆಕ್ಕವೇ ಇಲ್ಲ.
27 ಅವಳ ಮನೆಯು ಪಾತಾಳದ ದಾರಿ.
ಅದು ಮೃತ್ಯುವಿನ ಅಂತಃಪುರಕ್ಕೆ ಇಳಿದುಹೋಗುತ್ತದೆ.

8 ಜ್ಞಾನವೆಂಬಾಕೆಯು ಕರೆಯುತ್ತಾಳೆ,
ವಿವೇಕವೆಂಬ ಆಕೆಯೇ ದನಿಗೈಯುತ್ತಾಳೆ.
2 ಆಕೆಯು ರಾಜಮಾರ್ಗಗಳ ಅಗ್ರಸ್ಥಾನದಲ್ಲಿ, ದಾರಿಯ ಪಕ್ಕದಲ್ಲಿ,
ನಡುಬೀದಿಯಲ್ಲಿ, ನಿಂತುಕೊಳ್ಳುತ್ತಾಳೆ.
3 ಪುರಪ್ರವೇಶದ ದ್ವಾರಗಳಲ್ಲಿ,
ಬಾಗಿಲುಗಳೊಳಗೆ ಜನಸೇರುವ ಸ್ಥಳದಲ್ಲಿ ಹೀಗೆ ಕೂಗುತ್ತಾಳೆ—
4 ಮನುಷ್ಯರೇ, ನಿಮ್ಮನ್ನೇ ಕರೆಯುತ್ತೇನೆ,
ಮಾನವರಿಗಾಗಿಯೇ ದನಿಗೈಯುತ್ತೇನೆ.
5 ಮೂಢರೇ, ಜಾಣತನವನ್ನು ಕಲಿತುಕೊಳ್ಳಿರಿ,
ಜ್ಞಾನಹೀನರೇ, ಬುದ್ಧಿಯನ್ನು ಗ್ರಹಿಸಿರಿ.
ಕೇಳಿರಿ, ನಾನು ಶ್ರೇಷ್ಠವಾದ ಸಂಗತಿಗಳನ್ನು ಹೇಳುವೆನು. 6
ಯಥಾರ್ಥಕ್ಕಾಗಿಯೇ ತುಟಿಗಳನ್ನು ತೆರೆಯುವೆನು,
ನನ್ನ ಬಾಯಿ ಸತ್ಯವನ್ನೇ ಆಡುವದು, 7
ದುಷ್ಟತನವು ನನ್ನ ತುಟಿಗಳಿಗೆ ಅಸಹ್ಯವಾಗಿದೆ.
ನನ್ನ ಮಾತುಗಳೆಲ್ಲಾ ನೀತಿಭರಿತವಾಗಿವೆ, 8
ಅವುಗಳಲ್ಲಿ ಕಪಟವೂ ವಕ್ರತೆಯೂ ಇಲ್ಲ.
ಅವೆಲ್ಲಾ ಗ್ರಹಿಕೆಯುಳ್ಳವನಿಗೆ ನ್ಯಾಯವಾಗಿಯೂ 9
ತಿಳುವಳಿಕೆಯನ್ನು ಪಡೆದವರಿಗೆ ಯಥಾರ್ಥವಾಗಿಯೂ ತೋರುವವು.
ನನ್ನ ಬೋಧನೆಯನ್ನು ಬೆಳ್ಳಿಗಿಂತಲೂ 10
ಜ್ಞಾನೋಪದೇಶವನ್ನು ಅಪರಂಜಿಗಿಂತಲೂ ಉತ್ತಮವೆಂದು ಹೊಂದಿಕೊಳ್ಳಿರಿ.
ಜ್ಞಾನವು ಹವಳಕ್ಕಿಂತಲೂ ಶ್ರೇಷ್ಠ, 11
ಇಷ್ಟವಸ್ತುಗಳೆಲ್ಲವೂ ಅದಕ್ಕೆ ಸಮವಲ್ಲ.
ಜ್ಞಾನವೆಂಬ ನನಗೆ ಜಾಣ್ಮೆಯೇ ನಿವಾಸ, 12
ಯುಕ್ತಿಗಳ ತಿಳುವಳಿಕೆಯನ್ನು ಹೊಂದಿದ್ದೇನೆ.
ಯೆಹೋವನ ಭಯವು ಪಾಪದ್ವೇಷವನ್ನು ಹುಟ್ಟಿಸುತ್ತದೆ; 13
ಗರ್ವ, ಅಹಂಭಾವ, ದುರ್ಮಾರ್ಗತನ, ಕುಟಿಲ ಭಾಷಣ
ಇವುಗಳನ್ನು ಹಗೆಮಾಡುತ್ತೇನೆ.
ಸದ್ಯೋಚನೆಯೂ ಸುಜ್ಞಾನವೂ ಸಾಮರ್ಥ್ಯವೂ ನನ್ನಲ್ಲಿವೆ; 14
ವಿವೇಕವು ನಾನೇ.
ನನ್ನ ಸಹಾಯದಿಂದ ರಾಜರು ಆಳುವರು, 15
ಅಧಿಪತಿಗಳು ಸಹ ನ್ಯಾಯತೀರಿಸುವರು.
ನನ್ನ ಮೂಲಕ ಪ್ರಭುಗಳು, 16
ನಾಯಕರು, ಅಂತು ಭೂಪತಿಗಳೆಲ್ಲರೂ ದೊರೆತನ ಮಾಡುವರು.
ನನ್ನನ್ನು ಪ್ರೀತಿಸುವವರನ್ನು ನಾನು ಪ್ರೀತಿಸುತ್ತೇನೆ, 17
ಆತುರದಿಂದ ಹುಡುಕುವವರು ನನ್ನನ್ನು ಕಂಡುಕೊಳ್ಳುವರು.
ನನ್ನಲ್ಲಿ ಧನಘನತೆಗಳೂ 18
ಶ್ರೇಷ್ಠಸಂಪತ್ತೂ ನೀತಿಯೂ ಇರುತ್ತವೆ.
ನನ್ನಿಂದಾಗುವ ಫಲವು ಬಂಗಾರಕ್ಕಿಂತಲೂ ಹೌದು 19
ಅಪರಂಜಿಗಿಂತಲೂ ಉತ್ತಮ;
ನನ್ನ ಮೂಲಕವಾದ ಆದಾಯವು ಚೊಕ್ಕ ಬೆಳ್ಳಿಗಿಂತಲೂ ಅಮೂಲ್ಯವಾಗಿದೆ.
ನಾನು ಹಿಡಿದಿರುವ ದಾರಿಯು ನೀತಿಯೇ, 20
ನ್ಯಾಯಮಾರ್ಗಗಳಲ್ಲಿ ನಡೆಯುತ್ತೇನೆ.
ಹೀಗಿರಲು ನನ್ನನ್ನು ಪ್ರೀತಿಸುವವರಿಗೆ ಧನದ ಬಾಧ್ಯತೆಯನ್ನು ದೊರಕಿಸಿ 21
ಅವರ ಬೊಕ್ಕಸಗಳನ್ನು ತುಂಬಿಸುವೆನು.

ಯೆಹೋವನು ತನ್ನ ಸೃಷ್ಟಿಕ್ರಮದಲ್ಲಿ ಮೊದಲು ನನ್ನನ್ನು ನಿರ್ಮಿಸಿದನು; 22

1) ಮೂಲ: ಮಕ್ಕಳೇ . . . . . ಕಿವಿಗೊಡಿರಿ . . . . . ಆಲಿಸಿರಿ.

ಆತನ ಪುರಾತನಕಾರ್ಯಗಳಲ್ಲಿ ನಾನೇ ಪ್ರಥಮ.
23 ಪ್ರಾರಂಭದಲ್ಲಿ, ಭೂಮಿಯು ಹುಟ್ಟುವದಕ್ಕಿಂತ ಮುಂಚೆ,
ಅನಾದಿಕಾಲದಲ್ಲಿ ಸ್ಥಾಪಿಸಲ್ಪಟ್ಟೆನು.
24 ಜಲನಿಧಿಗಳಾಗಲಿ ನೀರುತುಂಬಿದ ಬುಗ್ಗೆಗಳಾಗಲಿ
ಇಲ್ಲದಿರುವಾಗ ನಾನು ಹುಟ್ಟಿದೆನು.
25 ಬೆಟ್ಟಗುಡ್ಡಗಳು ಬೇರೂರಿ ನಿಲ್ಲುವದಕ್ಕೆ ಮುಂಚೆ
ಆತನು ಭೂಲೋಕವನ್ನಾಗಲಿ ಬೈಲನ್ನಾಗಲಿ
26 ಭೂಮಿಯ ಮೊದಲನೆಯ ಅಣುರೇಣನ್ನಾಗಲಿ
ನಿರ್ಮಿಸದೆ ಇರುವಾಗ ನಾನು ಹುಟ್ಟಿದೆನು.
27 ಆತನು ಸಾಗರದ ಮೇಲೆ ಚಕ್ರಾಕಾರವಾದ ಗೀಟನ್ನು ಎಳೆದು
ಆಕಾಶಮಂಡಲವನ್ನು ಸ್ಥಾಪಿಸುವಾಗ ಅಲ್ಲಿದ್ದೆನು.
28 ಆತನು ಗಗನವನ್ನು ಮೇಲೆ ಸ್ಥಿರಪಡಿಸಿ
ಸಾಗರದ ಸೆಲೆಗಳನ್ನು ನೆಲೆಗೊಳಿಸಿ
29 ಪ್ರವಾಹಗಳು ತನ್ನ ಅಪ್ಪಣೆಯನ್ನು ಮೀರದ ಹಾಗೆ
ಸಮುದ್ರಕ್ಕೆ ಎಲ್ಲೆಕಟ್ಟನ್ನು ನೇಮಿಸಿ
ಭೂಮಿಯ ಅಸ್ತಿವಾರಗಳನ್ನು ಗೊತ್ತುಮಾಡುವಾಗ
30 ನಾನು ಆತನ ಹತ್ತಿರ ಶಿಲ್ಪಿಯಾಗಿದ್ದುಕೊಂಡು
1)ಪ್ರತಿದಿನವೂ ಆನಂದಿಸುತ್ತಾ
ಯಾವಾಗಲೂ ಆತನ ಮುಂದೆ ವಿನೋದಿಸುತ್ತಾ
31 ಆತನ ಭೂಲೋಕದಲ್ಲಿ ಉಲ್ಲಾಸಿಸುತ್ತಾ
ಮಾನವಸಂತಾನದಲ್ಲಿ ಹರ್ಷಿಸುತ್ತಾ ಇದ್ದೆನು.

32 ಮಕ್ಕಳಿರಾ, ಈಗ ನನ್ನ ಕಡೆಗೆ ಕಿವಿಗೊಡಿರಿ,
ನನ್ನ ಮಾರ್ಗಗಳನ್ನು ಅನುಸರಿಸುವವರು ಧನ್ಯರೇ ಸರಿ.
33 ಉಪದೇಶವನ್ನು ಕೇಳಿರಿ,
ಅದನ್ನು ಬಿಡದೆ ಜ್ಞಾನವಂತರಾಗಿರಿ.
34 ನನ್ನ ದ್ವಾರಗಳ ಬಳಿಯಲ್ಲಿ ಪ್ರತಿದಿನವೂ ಕಾಯುತ್ತಾ
ಬಾಗಲಿನ ನಿಲುವುಗಳ ಹತ್ತಿರ ಜಾಗರೂಕನಾಗಿ
ನನ್ನ ಮಾತುಗಳನ್ನು ಕೇಳುವವನು ಭಾಗ್ಯವಂತನು.
35 ಯಾವನು ನನ್ನನ್ನು ಹೊಂದುತ್ತಾನೋ ಅವನು ಜೀವವನ್ನು ಹೊಂದುತ್ತಾನೆ;
ಯೆಹೋವನ ಕಟಾಕ್ಷಕ್ಕೆ ಗುರಿಯಾಗುವನು.
36 2)ಯಾವನು ನನಗೆ ತಪ್ಪುಮಾಡುತ್ತಾನೋ ಅವನು ತನ್ನ ಆತ್ಮಕ್ಕೆ ಕೇಡುಮಾಡಿಕೊಳ್ಳುತ್ತಾನೆ;
ನನ್ನನ್ನು ಹಗೆಮಾಡುವವರೆಲ್ಲರೂ ಮರಣವನ್ನು ಪ್ರೀತಿಸುತ್ತಾರೆ.

9 ಜ್ಞಾನವೆಂಬಾಕೆಯು ಏಳು ಕಂಬಗಳನ್ನು ಕಡಿದು
ತನ್ನ ಮನೆಯನ್ನು ಕಟ್ಟಿಕೊಂಡಿದ್ದಾಳೆ.
2 ಪಶುಗಳನ್ನು ಕೊಯಿಸಿ [ಪಾನದ್ರವ್ಯಗಳೊಡನೆ] ದ್ರಾಕ್ಷಾರಸವನ್ನು ಬೆರಸಿ
ಔತಣವನ್ನು ಸಿದ್ಧಪಡಿಸಿದ್ದಾಳೆ.
3 ಆಕೆಯು ತನ್ನ ದಾಸಿಯರನ್ನು ಕಳುಹಿಸಿ
ಮೂಢನಾಗಿರುವವನು ಈ ಕಡೆಗೆ ತಿರುಗಲಿ ಎಂದು
ಪಟ್ಟಣದ ರಾಜಮಾರ್ಗಗಳ ಅಗ್ರಸ್ಥಾನಗಳಲ್ಲಿ ಪ್ರಕಟಿಸುತ್ತಾಳೆ.
ಆಕೆಯು ಬುದ್ಧಿಹೀನರಿಗೆ—
ಬನ್ನಿರಿ, ನಾನು ಬಡಿಸುವ ಆಹಾರವನ್ನು ಉಣ್ಣಿರಿ,
ನಾನು ಬೆರಸಿರುವ ದ್ರಾಕ್ಷಾರಸವನ್ನು ಕುಡಿಯಿರಿ.
ಮೂಢರೇ [ಮೂಢತ್ವವನ್ನು] ಬಿಟ್ಟು ಬಾಳಿರಿ,
ವಿವೇಕಮಾರ್ಗದಲ್ಲಿ ನೆಟ್ಟಗೆ ನಡೆಯಿರಿ ಎಂದು ಪ್ರಬೋಧಿಸುತ್ತಾಳೆ.

ಧರ್ಮನಿಂದಕನನ್ನು ಶಿಕ್ಷಿಸುವವನು ತನ್ನನ್ನು ಅವಮಾನಕ್ಕೆ ಗುರಿಮಾಡಿಕೊಳ್ಳುವನು,
ಕೆಟ್ಟವನನ್ನು ಗದರಿಸುವವನಿಗೇ ಕಳಂಕವಾಗುವದು.
ಧರ್ಮನಿಂದಕನನ್ನು ಗದರಿಸಬೇಡ, ನಿನ್ನನ್ನು ಹಗೆಮಾಡುವನು;
ಜ್ಞಾನವಂತನನ್ನು ಗದರಿಸಿದರೆ ನಿನ್ನನ್ನು ಪ್ರೀತಿಸುವನು.
ಜ್ಞಾನಿಗೆ ಉಪದೇಶಿಸಿದರೆ ಹೆಚ್ಚು ಜ್ಞಾನವನ್ನು ಹೊಂದುವನು,
ನೀತಿವಂತನಿಗೆ ಬೋಧಿಸಿದರೆ ಹೆಚ್ಚು ತಿಳುವಳಿಕೆಯನ್ನು ಪಡೆಯುವನು.
ಯೆಹೋವನ ಭಯವೇ ಜ್ಞಾನಕ್ಕೆ ಮೂಲವು,
ಪರಿಶುದ್ಧನ ತಿಳುವಳಿಕೆಯೇ ವಿವೇಕವು.
ನನ್ನಿಂದ ನಿನ್ನ ದಿನಗಳು ಹೆಚ್ಚುವವು,
ನಿನ್ನ ಆಯುಸ್ಸಿನ ವರುಷಗಳು ವೃದ್ಧಿಯಾಗುವವು.
ನೀನು ಜ್ಞಾನವಂತನಾದರೆ ನಿನ್ನ ಜ್ಞಾನವು ನಿನಗೇ ಲಾಭಕರ,
ಧರ್ಮನಿಂದಕನಾದರೆ ನೀನೇ ಅದರ ಫಲವನ್ನು ಅನುಭವಿಸುವಿ.

ಅಜ್ಞಾನವೆಂಬವಳಾದರೋ ಕೂಗಾಟದವಳು,
ಮೂಢಳು, ಏನೂ ತಿಳಿಯದವಳು.
ಅವಳು ತನ್ನ ಮನೆಯ ಬಾಗಿಲಿನಲ್ಲಿ
ಪಟ್ಟಣದ ರಾಜಮಾರ್ಗಗಳಲ್ಲಿ ಗದ್ದುಗೆಯ ಮೇಲೆ ಕೂತುಕೊಂಡವಳಾಗಿ
ತಮ್ಮ ಮಾರ್ಗವನ್ನು ಹಿಡಿದು
ಹೋಗಿ ಬರುವವರನ್ನು ನೋಡಿ—
ಮೂಢನಾಗಿರುವವನು ಈ ಕಡೆಗೆ ತಿರುಗಲಿ ಎಂದು ಕೂಗಿ
ಕದ್ದ ನೀರು ಸಿಹಿಯಾಗಿದೆ,
ಗುಟ್ಟಾಗಿ ತಿನ್ನುವ ತಿಂಡಿಯು ರುಚಿಯಾಗಿದೆ ಎಂದು ಬುದ್ಧಿಹೀನನಿಗೆ ಹೇಳುತ್ತಾಳೆ.
ಆ ಮನೆಯು ಪ್ರೇತನಿವಾಸವೆಂದೂ
ಅವಳ ಅತಿಥಿಗಳು ಅಗಾಧಪಾತಾಳದಲ್ಲಿ ಬಿದ್ದಿರುವರೆಂದೂ ಅವನಿಗೆ ತಿಳಿಯದು.

## ಸೊಲೊಮೋನನ ಜ್ಞಾನೋಕ್ತಿಗಳು.

10 ಮಗನು ಜ್ಞಾನಿಯಾದರೆ ತಂದೆಗೆ ಸುಖ;
ಅಜ್ಞಾನಿಯಾದರೆ ತಾಯಿಗೆ ದುಃಖ.
ದುರ್ದ್ರವ್ಯವು ವ್ಯರ್ಥ;
ಧರ್ಮವು ಮೃತ್ಯುವಿನಿಂದ ರಕ್ಷಕ.

1) ಅಥವಾ: ಪ್ರತಿದಿನವೂ ನಾನೇ ಆತನಿಗೆ ಆನಂದವಾಗಿ. 2) ಅಥವಾ: ಯಾವನು ನನಗೆ ತಪ್ಪುತ್ತಾನೋ.

3 ಯೆಹೋವನು ನೀತಿವಂತನನ್ನು ಹಸಿವೆಗೊಳಿಸನು;
ದುಷ್ಟನ ಆಶೆಯನ್ನು ಭಂಗಪಡಿಸುತ್ತಾನೆ.
4 ಜೋಲುಗೈ ದಾರಿದ್ರ್ಯ;
ಚುರುಕುಗೈ ಐಶ್ವರ್ಯ.
5 ಸುಗ್ಗಿಯಲ್ಲಿ ಕೂಡಿಸುವವನು ಬುದ್ಧಿವಂತನು;
ಕೊಯ್ಲಿನಲ್ಲಿ ತೂಕಡಿಸುವವನು ನಾಚಿಕೆಗೆಟ್ಟವನು.
6 ಶಿಷ್ಟನ ತಲೆ ಆಶೀರ್ವಾದದ ನೆಲೆ;
ದುಷ್ಟನ ಬಾಯಿಗೆ ಬಲಾತ್ಕಾರವೇ ಮುಚ್ಚಳ.
7 ಶಿಷ್ಟರ ಸ್ಮರಣೆಯು ಆಶೀರ್ವಾದಕ್ಕಾಸ್ಪದ;
ದುಷ್ಟರ ನಾಮವು 1)ನಿರ್ನಾಮ.
8 ಜ್ಞಾನಹೃದಯನು ಆಜ್ಞೆಗಳನ್ನು ವಹಿಸುವನು;
ಹರಟೆಯ ಮೂರ್ಖನು ಕೆಡವಲ್ಪಡುವನು.
9 ನಿರ್ದೋಷದ ನಡತೆಯವನು ನಿರ್ಭಯವಾಗಿ ನಡೆಯುವನು;
ವಕ್ರಮಾರ್ಗಿಯು ಬೈಲಿಗೆ ಬೀಳುವನು.
10 ಕಣ್ಣುಮಿಟುಕಿಸುವವನು ಕಷ್ಟಕರನು;
2)ಧೈರ್ಯದಿಂದ ಗದರಿಸುವವನು ಸಮಾಧಾನಕರನು.
11 ಶಿಷ್ಟನ ಬಾಯಿ ಜೀವದ ಬುಗ್ಗೆ;
ದುಷ್ಟನ ಬಾಯಲ್ಲಿ ಬಲಾತ್ಕಾರವು ತುಂಬಿ ತುಳುಕುತ್ತದೆ.
12 ದ್ವೇಷವು ಜಗಳಗಳನ್ನೆಬ್ಬಿಸುತ್ತದೆ;
ಪ್ರೀತಿಯು ಪಾಪಗಳನ್ನೆಲ್ಲಾ ಮುಚ್ಚುತ್ತದೆ.
13 ವಿವೇಕಿಯ ತುಟಿಗಳಿಂದ ಜ್ಞಾನ;
ಬುದ್ಧಿಹೀನನ ಬೆನ್ನಿಗೆ ಬೆತ್ತ.
14 ಜ್ಞಾನಿಗಳು ತಿಳಿದ ಸಂಗತಿಯನ್ನು 3)ಹೊರಪಡಿಸುವದಿಲ್ಲ.
ಮೂರ್ಖನ ಭಾಷಣ ಸಮೀಪನಾಶನ.
15 ಐಶ್ವರ್ಯವಂತನಿಗೆ ಐಶ್ವರ್ಯವು ಬಲವಾದ ಕೋಟೆ;
ಬಡವನಿಗೆ ಬಡತನವು ಅಳಿವು.
16 ಶಿಷ್ಟನ ದುಡಿತ ಜೀವಾಸ್ಪದ;
ದುಷ್ಟನ ಆದಾಯ ಪಾಪಾಸ್ಪದ.
17 4)ಶಿಕ್ಷೆಯನ್ನು ಕೈಕೊಳ್ಳುವವನು ಜೀವದ ಮಾರ್ಗವನ್ನು ತೋರಿಸುವನು;
ಗದರಿಕೆಯನ್ನು ಕೈಕೊಳ್ಳದವನು ಸನ್ಮಾರ್ಗದಿಂದ ತಪ್ಪಿಸುವನು.
18 ಹೊಟ್ಟೆಯಲ್ಲಿ ಹಗೆಯನ್ನಿಟ್ಟುಕೊಂಡವನು ಸುಳ್ಳುಗಾರ;
ಚಾಡಿಗಾರನು ಜ್ಞಾನಹೀನ.
19 ಮಾತಾಳಿಗೆ ಪಾಪ ತಪ್ಪದು;
ಮೌನಿಯು ಮತಿವಂತ.
20 ಶಿಷ್ಟರ ನಾಲಿಗೆ ಚೊಕ್ಕಬೆಳ್ಳಿ;
ದುಷ್ಟನ ಹೃದಯ ಹುಲ್ಲುಕಡ್ಡಿ.
21 ಶಿಷ್ಟರ ಭಾಷಣ ಬಹುಜನಪೋಷಣ;
ಬುದ್ಧಿಯ ಕೊರತೆ ಮೂರ್ಖರ ನಾಶನ.
22 ಯೆಹೋವನ ಆಶೀರ್ವಾದವು ಭಾಗ್ಯದಾಯಕವು;
ಅದು ವ್ಯಸನವನ್ನು ಸೇರಿಸದು.
ಅವಿವೇಕಿಗೆ ಕುಯುಕ್ತಿ ವಿನೋದ; 23
ವಿವೇಕಿಗೆ ಜ್ಞಾನ ವಿನೋದ.
ದುಷ್ಟನಿಗೆ ಶಂಕಿಸಿದ್ದೇ ಸಂಭವಿಸುವದು; 24
ಶಿಷ್ಟನಿಗೆ ಇಷ್ಟವು ಲಭಿಸುವದು.
ಬಿರುಗಾಳಿ ಬೀಸಿದರೆ ದುಷ್ಟನು ಎಲ್ಲೋ! 25
ಶಿಷ್ಟನು ಶಾಶ್ವತವಾದ ಕಟ್ಟಡ.
ಹಲ್ಲುಗಳಿಗೆ ಹುಳಿಯೂ ಕಣ್ಣುಗಳಿಗೆ ಹೊಗೆಯೂ ಹೇಗೋ 26
ಯಜಮಾನನಿಗೆ ಸೋಮಾರಿಯು ಹಾಗೆ.
ಯೆಹೋವನಿಗೆ ಭಯಪಡುವವರ ದಿನಗಳಿಗೆ ವೃದ್ಧಿ; 27
ದುಷ್ಟರ ವರುಷಗಳಿಗೆ ಕ್ಷಯ.
ಶಿಷ್ಟನ ನಂಬಿಕೆಗೆ ಆನಂದವು ಫಲ; 28
ದುಷ್ಟನ ನಿರೀಕ್ಷೆ ನಿಷ್ಫಲ.
5)ಯೆಹೋವನು ಸನ್ಮಾರ್ಗಿಗೆ ಆಶ್ರಯ, 29
ಕೆಡುಕನಿಗೆ ನಾಶನ.
ಶಿಷ್ಟರು ಎಂದಿಗೂ ಕದಲರು; 30
ದುಷ್ಟರು ದೇಶದಲ್ಲಿ ನಿಲ್ಲರು.
ಶಿಷ್ಟನ ಬಾಯಲ್ಲಿ ಜ್ಞಾನವು ಮೊಳೆಯುವದು; 31
ನೀಚನ ನಾಲಿಗೆ ಕತ್ತರಿಸಲ್ಪಡುವದು.
ಶಿಷ್ಟನ ತುಟಿಯಲ್ಲಿ ಉಚಿತವಚನ; 32
ದುಷ್ಟನ ಬಾಯಲ್ಲಿ ನೀಚವಚನ.

11 ಮೋಸದ ತ್ರಾಸು ಯೆಹೋವನಿಗೆ ಅಸಹ್ಯ;
ನ್ಯಾಯದ ತೂಕ ಆತನಿಗೆ ಸಂತೋಷ.
ಎಲ್ಲಿ ಹೆಮ್ಮೆಯೋ ಅಲ್ಲಿ ನಾಚಿಕೆ; 2
ದೀನರಲ್ಲಿ ಜ್ಞಾನ.
ಯಥಾರ್ಥವಂತರಿಗೆ ಸರಳತೆಯು ಮಾರ್ಗದರ್ಶಕ; 3
ವಂಚಕರಿಗೆ ವಕ್ರತೆಯು ನಾಶಕ.
ಧನವು ಕೋಪದ ದಿನದಲ್ಲಿ ವ್ಯರ್ಥ; 4
ಧರ್ಮವು ಮರಣವಿಮೋಚಕ.
ನಿರ್ದೋಷಿಯ ಧರ್ಮವು ಅವನ ಮಾರ್ಗವನ್ನು ಸರಾಗಮಾಡುವದು; 5
ದೋಷಿಯು ತನ್ನ ದೋಷದಿಂದಲೇ ಬಿದ್ದುಹೋಗುವನು.
ಧರ್ಮವು ಯಥಾರ್ಥವಂತರನ್ನು ಉದ್ಧರಿಸುವದು; 6
ವಂಚಕರು ತಮ್ಮ ಆಶಾಪಾಶಕ್ಕೆ ಸಿಕ್ಕಿಬೀಳುವರು.
ದುಷ್ಟನು ಸಾಯುವಾಗ ಅವನ ನಿರೀಕ್ಷೆಯು ಹಾಳಾಗುವದು; 7
ಬಲದ ಮೇಲಣ ನಂಬಿಕೆಯು ಬಿದ್ದುಹೋಗುವದು.
ಶಿಷ್ಟನು ಇಕ್ಕಟ್ಟಿನಿಂದ ಪಾರಾಗುವನು; 8
ದುಷ್ಟನು ಅವನಿಗೆ ಬದಲಾಗಿ ಅದರಲ್ಲಿ ಬೀಳುವನು.
ಧರ್ಮಭ್ರಷ್ಟನು ಬಾಯಿಂದ ನೆರೆಯವನನ್ನು ಹಾಳುಮಾಡುವನು; 9
ಶಿಷ್ಟನು ತಿಳುವಳಿಕೆಯಿಂದ ಉದ್ಧಾರವಾಗುವನು.
ಸಜ್ಜನರು ಸುಖಿಗಳಾದರೆ ಪಟ್ಟಣಕ್ಕೆ ಉಲ್ಲಾಸ; 10
ದುರ್ಜನರು ಹಾಳಾದರೆ ಜಯಘೋಷ.

1) ಅಥವಾ: ಅಸತ್ಯ. 2) ಪಾಠಾಂತರ: ಹರಟೆಯ ಮೂರ್ಖನು ಕೆಡವಲ್ಪಡುವನು. 3) ಮೂಲ: ಮುಚ್ಚಿಟ್ಟುಕೊಳ್ಳುವರು. 4) ಅಥವಾ: ಶಿಕ್ಷೆಯನ್ನು ಕೈಕೊಳ್ಳುವವನು ಜೀವಮಾರ್ಗಿಯು; ಗದರಿಕೆಯನ್ನು ಕೈಕೊಳ್ಳದವನು ದಾರಿತಪ್ಪಿದವನು. 5) ಅಥವಾ: ಯೆಹೋವನ ಕ್ರಮವು ನಿರ್ದೋಷಿಗೆ ಆಶ್ರಯ.

11 ಯಥಾರ್ಥವಂತರ ಆಶೀರ್ವಾದದಿಂದ ಪಟ್ಟಣವು ಉನ್ನ
ತಿಗೆ ಬರುವದು,
ಕೆಟ್ಟವರ ಬಾಯಿಂದ ಕೆಡವಲ್ಪಡುವದು.
12 ನೆರೆಯವನನ್ನು ಹೀನೈಸುವವನು ಬುದ್ಧಿಹೀನನು;
ವಿವೇಕಿಯು ಬಾಯಿಬಿಡನು.
13 ಚಾಡಿಕೋರನು ಗುಟ್ಟು 1)ರಟ್ಟುಮಾಡುವನು;
ನಂಬಿಗಸ್ತನು ಸಂಗತಿಯನ್ನು ಗುಪ್ತಪಡಿಸುವನು.
14 ಉಚಿತಾಲೋಚನೆಯಿಲ್ಲದ ಕಡೆ ಪ್ರಜೆಯು ಬಿದ್ದು
ಹೋಗುವದು;
ಬಹು ಸುಮಂತ್ರಿಗಳು ಇರುವಲ್ಲಿ ಸುರಕ್ಷಣೆಯಿರು
ವದು.
15 ಹೆರರಿಗೆ ಹೊಣೆಯಾದರೆ ಹಾನಿ;
ಹೊಣೆಗೆ ಅಸಹ್ಯಪಟ್ಟರೆ ನಿರ್ಭಯ.
16 ದಯಾಳುವಾದ ಹೆಂಗಸು ಮಾನವನ್ನು ಪಡೆಯು
ವಳು;
ಬಲಾತ್ಕಾರಿಗಳು ಧನವನ್ನು ಮಾತ್ರ ಆರ್ಜಿಸುವರು.
17 ಪರೋಪಕಾರವು ತನಗೂ ಉಪಕಾರ;
ಕ್ರೂರನು ತನ್ನ ಶರೀರವನ್ನೂ ಹಿಂಸಿಸುವನು.
18 ಅಧರ್ಮಿಯ ಸಂಬಳವು ಜೊಳ್ಳು;
ಧರ್ಮವನ್ನು ಬಿತ್ತುವವನ ಲಾಭವು ಗಟ್ಟಿ.
19 ಧರ್ಮನಿರತನಿಗೆ ಜೀವ,
ಅಧರ್ಮಾಸಕ್ತನಿಗೆ ಮರಣ.
20 ವಕ್ರಹೃದಯರು ಯೆಹೋವನಿಗೆ ಅಸಹ್ಯರು;
ಸನ್ಮಾರ್ಗಿಗಳು ಆತನ ದಯೆಗೆ ಆಸ್ಪದರು.
21 ದುಷ್ಟನಿಗೆ ದಂಡನೆ ಖಂಡಿತ;
ಶಿಷ್ಟವಂಶಕ್ಕೆ ರಕ್ಷಣೆ.
22 ಹಂದಿಯ ಮೂತಿಗೆ ಚಿನ್ನದ ಮೂಗುತಿಯು ಹೇಗೋ
ಅವಿವೇಕಳಿಗೆ ಸೌಂದರ್ಯವು ಹಾಗೆ.
23 ಸಜ್ಜನರ ಆಶೆಯು ಮಂಗಳಾಸ್ಪದ;
ದುರ್ಜನರ ನಿರೀಕ್ಷೆಯು ರೋಷಾಸ್ಪದ.
24 ಒಬ್ಬನು ತನ್ನ ಧನವನ್ನು ಚೆಲ್ಲಿದರೂ ಅವನಿಗೆ ವೃದ್ಧಿ;
ಮತ್ತೊಬ್ಬನು ನ್ಯಾಯವಾದದ್ದನ್ನು ಬಿಗಿಹಿಡಿದರೂ ಅವ
ನಿಗೆ ಬಡತನ.
25 ಉಪಕಾರಿಯು ಪುಷ್ಟನಾಗುವನು;
ನೀರು ಹಾಯಿಸುವವನಿಗೆ ನೀರು ಸಿಕ್ಕುವದು.
26 ಧಾನ್ಯವನ್ನು ಬಿಗಿಹಿಡಿಯುವವನ ಮೇಲೆ ಜನರ ಶಾಪ;
ಮಾರುವವನ ತಲೆಯ ಮೇಲೆ ಆಶೀರ್ವಾದ.
27 ಧರ್ಮಕ್ಕೆ ಆತುರಪಡುವವನಿಗೆ ದಯೆ;
ಕೇಡನ್ನು ಹುಡುಕುವವನಿಗೆ ಕೇಡೇ.
28 ಧನವನ್ನೇ ನಂಬಿದವನು ಬಿದ್ದುಹೋಗುವನು;
ಸದ್ಧರ್ಮಿಯು ಕುಡಿಯ ಹಾಗೆ ಚಿಗುರುವನು.
29 ತನ್ನ ಕುಟುಂಬವನ್ನು ಬಾಧಿಸುವವನಿಗೆ ಗಾಳಿಯೇ
ಗಂಟು;
ಮೂರ್ಖನು ಜ್ಞಾನವಂತನ ಅಧೀನದಲ್ಲಿ ಬಿದ್ದಿರುವನು;
30 ಧರ್ಮಾತ್ಮನ ಫಲ ಜೀವವೃಕ್ಷ;
ಜ್ಞಾನಿಯು ಆತ್ಮಗಳನ್ನು ಆಕರ್ಷಿಸುವನು.
31 ಶಿಷ್ಟನೇ ಭೂಮಿಯಲ್ಲಿ ತನ್ನ ಕ್ರಿಯಾಫಲವನ್ನು
ಅನುಭವಿಸುವಲ್ಲಿ

ದುಷ್ಟನೂ ಪಾಪಿಯೂ ಅನುಭವಿಸುವರು ಎಂದು ಹೇಳ
ಬೇಕಾಗಿಲ್ಲ.

ತಿಳುವಳಿಕೆಯನ್ನು ಪ್ರೀತಿಸುವವನು ಶಿಕ್ಷಣವನ್ನು
ಪ್ರೀತಿಸುತ್ತಾನೆ;
ಪಶುಪ್ರಾಯನು ಗದರಿಕೆಯನ್ನು ದ್ವೇಷಿಸುತ್ತಾನೆ.
ಯೆಹೋವನು ಒಳ್ಳೆಯವನಿಗೆ ದಯೆಮಾಡುವನು;
ಕುಯುಕ್ತಿಯುಳ್ಳವನನ್ನು ಕೆಟ್ಟವನೆಂದು ನಿರ್ಣಯಿ
ಸುವನು.
ಯಾವನೂ ದುಷ್ಟತನದಿಂದ ಸ್ಥಿರನಾಗನು;
ಶಿಷ್ಟನು ಯಾವಾಗಲೂ ದೃಢಮೂಲನೇ.
ಗುಣವಂತೆಯು ಪತಿಯ ತಲೆಗೆ ಕಿರೀಟ;
ಮಾನ ಕಳೆಯುವವಳು ಪತಿಯ ಎಲುಬಿಗೆ ಕ್ಷಯ
ಶಿಷ್ಟರ ಉದ್ದೇಶ ನ್ಯಾಯ;
ದುಷ್ಟರ ಆಲೋಚನೆ ಮೋಸ.
ಕೆಟ್ಟವರ ಮಾತು ರಕ್ತಕ್ಕೆ ಹೊಂಚು;
ಯಥಾರ್ಥವಂತರ ನುಡಿ ರಕ್ಷಣೆ.
ದುರ್ಜನರು ಕೆಡವಲ್ಪಟ್ಟು ನಿರ್ಮೂಲರಾಗುವರು;
ಸಜ್ಜನರ ಮನೆಯು ಸ್ಥಿರವಾಗಿ ನಿಲ್ಲುವದು.
ಬುದ್ಧಿವಂತನನ್ನು ಅವನ ಬುದ್ಧಿಗೆ ತಕ್ಕಂತೆ ಹೊಗಳು
ವರು;
ವಕ್ರಬುದ್ಧಿಯುಳ್ಳವನನ್ನು ತಿರಸ್ಕರಿಸುವರು.
ಹೊಟ್ಟೆಗಿಲ್ಲದ ಡಾಂಭಿಕನಿಗಿಂತಲೂ
ಸೇವಕನುಳ್ಳ ಸಾಧಾರಣ ಮನುಷ್ಯನ ಸ್ಥಿತಿಯು
ಲೇಸು.
ಶಿಷ್ಟನು ತನ್ನ ದನದ ಕ್ಷೇಮವನ್ನು ಲಕ್ಷಿಸುತ್ತಾನೆ;
ದುಷ್ಟನ ವಾತ್ಸಲ್ಯವೋ ಕ್ರೂರತನವೇ.
ದುಡಿದು ಹೊಲಗೇಯುವವನು ಹೊಟ್ಟೆತುಂಬಾ ಉಣ್ಣು
ವನು;
ವ್ಯರ್ಥಕಾರ್ಯಾಸಕ್ತನು ಬುದ್ಧಿಹೀನನೇ.
ಕೆಡುಕರ ಕೊಳ್ಳೆ ದುಷ್ಟರಿಗೆ ಇಷ್ಟ;
ಶಿಷ್ಟರ ಬುಡ ಫಲದಾಯಕ.
ದುಷ್ಟನು ತುಟಿಗಳ ದೋಷದಿಂದ ಬೋನಿಗೆ ಬೀಳು
ವನು;
ಶಿಷ್ಟನು ಇಕ್ಕಟ್ಟಿನಿಂದ ಪಾರಾಗುವನು.
ಬಾಯ ಫಲವಾಗಿ ಮನುಷ್ಯನು ಬೇಕಾದಷ್ಟು ಸುಖ
ವನ್ನನುಭವಿಸುವನು;
ಅವನ ಕೈಕೆಲಸದ ಫಲವು ಅವನಿಗೇ ಪ್ರಾಪ್ತವಾಗು
ವದು.
ಮೂರ್ಖನ ನಡತೆ ಅವನ ಗಣನೆಗೆ ಸರಿ;
ಜ್ಞಾನಿಯು ಉಚಿತಾಲೋಚನೆಯನ್ನು ಗಮನಿಸುವನು
ಮೂರ್ಖನ ಸಿಟ್ಟು ತಟ್ಟನೆ ರಟ್ಟಾಗುವದು;
ಜಾಣನು ಅವಮಾನವನ್ನು ಮರೆಮಾಡುವನು.
ಸತ್ಯವನ್ನಾಡುವವನು ನ್ಯಾಯವನ್ನು ತೋರ್ಪಡಿಸು
ವನು;
ಸುಳ್ಳುಸಾಕ್ಷಿಯು ಅಸತ್ಯಮಾಡುವನು.
ಕತ್ತಿತಿವಿದ ಹಾಗೆ ದುಡುಕಿ ಮಾತಾಡುವವರುಂಟು
ಮತಿವಂತರ ಮಾತೇ ಮದ್ದು.

1) ಅಂದರೆ ಬೈಲುಮಾಡುವವನು.

9 ಸತ್ಯದ ತುಟಿ ಶಾಶ್ವತ;
ಸುಳ್ಳಿನ ನಾಲಿಗೆ ಕ್ಷಣಿಕ.
0 ಕೇಡನ್ನು ಕಲ್ಪಿಸುವವರ ಹೃದಯದಲ್ಲಿ ಮೋಸ;
ಹಿತೋಪದೇಶಕರ ಮನಸ್ಸಿನಲ್ಲಿ ಉಲ್ಲಾಸ.
1 ಸಜ್ಜನರಿಗೆ ಯಾವ ಹಾನಿಯೂ ಸಂಭವಿಸದು;
ದುರ್ಜನರಿಗೆ ಕೇಡು ತುಂಬಿ ತುಳುಕುವದು.
2 ಸುಳ್ಳುತುಟಿ ಯೆಹೋವನಿಗೆ ಹೇಸು;
ಸತ್ಯವಂತರು ಆತನಿಗೆ ಲೇಸು.
3 ಜಾಣನು ತಿಳಿದದ್ದನ್ನು ಗುಪ್ತಪಡಿಸುವನು;
ಮೂಢರ ಮನಸ್ಸು ಮೂರ್ಖತನವನ್ನು ಪ್ರಕಟಿಸುವದು.
4 ಚುರುಕುಗೈಯವನಿಗೆ ರಾಜ್ಯಾಧಿಕಾರ;
ಮೈಗಳ್ಳನಿಗೆ ಬಿಟ್ಟಿಯ ಬದುಕು.
5 ಕಳವಳವು ಮನಸ್ಸನ್ನು ಕುಗ್ಗಿಸುವದು;
ಕನಿಕರದ ಮಾತು ಅದನ್ನು ಹಿಗ್ಗಿಸುವದು.
6 ಸನ್ಮಾರ್ಗಿಯು ನೆರೆಯವನಿಗೆ ಮಾರ್ಗತೋರಿಸುವನು;
ದುರ್ಮಾರ್ಗಿಯು ಮಾರ್ಗತಪ್ಪಿಸುವನು.
7 ಮೈಗಳ್ಳನು ಹಿಡಿದ ಬೇಟೆಯನ್ನೂ ಬೇಯಿಸನು;
ಚಟುವಟಿಕೆಯವನಿಗೆ ಅಮೂಲ್ಯಸಂಪತ್ತು ದೊರಕುವದು.
8 ಧರ್ಮಮಾರ್ಗದಿಂದ ಜೀವಲಾಭವು;
1)ಆ ಸುಪಥಮಾರ್ಗವು ಅಮರಣವೇ.

3 ಜ್ಞಾನಿಯಾದ ಮಗನು ತಂದೆಯ ಶಿಕ್ಷೆಯನ್ನು ಕೇಳುವನು;
ಧರ್ಮನಿಂದಕನೋ ಗದರಿಕೆಯನ್ನು ಕೇಳನು.
2 ಬಾಯ ಫಲವಾಗಿ ಮನುಷ್ಯನು ಸುಖವನ್ನನುಭವಿಸುವನು;
ಬಲಾತ್ಕಾರವೇ ದ್ರೋಹಿಗಳ ಕೋರಿಕೆ.
3 ಬಾಯನ್ನು ಕಾಯುವವನು ಜೀವವನ್ನು ಕಾಯುತ್ತಾನೆ;
ತುಟಿಗಳನ್ನು ತೆರೆದುಬಿಡುವವನು ನಾಶವಾಗುವನು.
4 ಸೋಮಾರಿಯ ಆಶೆಯು ವ್ಯರ್ಥ;
ಉದ್ಯೋಗಿಯ ಆತ್ಮಕ್ಕೆ ಪುಷ್ಟಿ.
5 ಶಿಷ್ಟನು ಮೋಸಕ್ಕೆ ಅಸಹ್ಯಪಟ್ಟು ಮಾಡಲೊಲ್ಲನು;
ದುಷ್ಟನ ನಡತೆಯು ಹೇಸಿಕೆಗೂ ನಾಚಿಕೆಗೂ ಆಸ್ಪದ.
6 ಧರ್ಮವು ನಿರ್ದೋಷಿಯನ್ನು ಕಾಯುವದು;
ಅಧರ್ಮವು ದೋಷಿಯನ್ನು ಕೆಡವಿಬಿಡುವದು.
7 ಒಬ್ಬನು ಧನವನ್ನು ಸಂಗ್ರಹಿಸಿದರೂ ಏನೂ ಇಲ್ಲದ ದರಿದ್ರನೇ;
ಮತ್ತೊಬ್ಬನು ಧನವನ್ನೆಲ್ಲಾ ವ್ಯಯಮಾಡಿ ಬಡವನಾದರೂ ಬಹು ಐಶ್ವರ್ಯವಂತನೇ.
8 ಧನವಂತನ ಪ್ರಾಣರಕ್ಷಣೆಗೆ ಅವನ ಧನವೇ ಈಡು;
ಬಡವನಿಗೆ ಯಾವ ಬೆದರಿಕೆಯೂ ಇಲ್ಲ.
9 ಶಿಷ್ಟರ ಬೆಳಕು 2)ಬೆಳಗುವದು;
ದುಷ್ಟರ ದೀಪವು ಆರುವದು.

ಹೆಮ್ಮೆಯ ಫಲವು ಕಲಹವೇ; 10
ಬುದ್ಧಿವಾದಕ್ಕೆ ಕಿವಿಗೊಡುವವರಲ್ಲಿ ಜ್ಞಾನ.
ಸುಮ್ಮನೆ ಸಿಕ್ಕಿದ ಸಂಪತ್ತು ಕ್ಷಯಿಸುವದು; 11
ದುಡಿದು ಕೂಡಿಸಿಕೊಂಡವನಿಗೆ ಅಭಿವೃದ್ಧಿಯಾಗುವದು.
ಕೋರಿದ್ದಕ್ಕೆ ತಡವಾದರೆ ಮನಸ್ಸು ಬಳಲುವದು; 12
ಕೈಗೂಡಿದ ಇಷ್ಟಾರ್ಥವು ಜೀವವೃಕ್ಷವು.
[ದೇವರ] ವಾಕ್ಯವನ್ನು ಉಲ್ಲಂಘಿಸುವವನು 3)ನಾಶವಾಗುವನು; 13
ಆಜ್ಞೆಯನ್ನು ಭಯಭಕ್ತಿಯಿಂದ ಕೈಕೊಳ್ಳುವವನು ಸುಫಲವನ್ನು ಹೊಂದುವನು.
ಜ್ಞಾನಿಯ ಬೋಧೆ ಜೀವದ ಬುಗ್ಗೆ; 14
ಅದನ್ನಾಲಿಸುವವನು ಮೃತ್ಯುಪಾಶದಿಂದ ತಪ್ಪಿಸಿಕೊಳ್ಳುವನು.
ಸುಬುದ್ಧಿಯು ದಯಾಸ್ಪದವು; 15
ದ್ರೋಹಿಯ ಮಾರ್ಗವು 4)ನಾಶಕರ.
ಪ್ರತಿಯೊಬ್ಬ ಜಾಣನು ತನ್ನ ಕೆಲಸವನ್ನು ತಿಳುವಳಿಕೆಯಿಂದ ನಡಿಸುವನು; 16
ಮೂಢನು ತನ್ನ ಮೂರ್ಖತನವನ್ನು ಡಂಭವಾಗಿ ತೋರ್ಪಡಿಸುವನು.
ಕೆಟ್ಟ ದೂತನು ಕೇಡಿಗೆ ಬೀಳುವನು; 17
ನಂಬಿಕೆಯಾದ ರಾಯಭಾರಿಯು ಕ್ಷೇಮಕರನು.
ಶಿಕ್ಷೆಯನ್ನು ತ್ಯಜಿಸುವವನಿಗೆ ಬಡತನ ಮತ್ತು ಅವಮಾನ; 18
ಗದರಿಕೆಯನ್ನು ಗಮನಿಸುವವನಿಗೆ ಮಾನ.
ಇಷ್ಟಸಿದ್ಧಿ ಮನಸ್ಸಿಗೆ ಸಿಹಿ; 19
ಕೆಟ್ಟದ್ದನ್ನು ಬಿಡುವದು ಮೂಢರಿಗೆ ಕಹಿ.
ಜ್ಞಾನಿಗಳ ಸಹವಾಸಿ ಜ್ಞಾನಿಯಾಗುವನು; 20
ಜ್ಞಾನಹೀನರ ಒಡನಾಡಿ ಸಂಕಟಪಡುವನು.
ಅಮಂಗಳವು ಪಾಪಿಗಳನ್ನು ಹಿಂಬಾಲಿಸುವದು; 21
ಮಂಗಳವು ಸಜ್ಜನರಿಗೆ ಪ್ರತಿಫಲವಾಗುವದು.
ಒಳ್ಳೆಯವನ ಆಸ್ತಿ ಸಂತತಿಯವರಿಗೆ ಬಾಧ್ಯ; 22
ಪಾಪಿಯ ಸೊತ್ತು ಸಜ್ಜನರಿಗೆ ಗಂಟು.
ಬಡವರಿಗೆ ಬಂಜರುಭೂಮಿಯೂ ಬಹು ಬೆಳೆಯನ್ನೀಯುವದು; 23
ಅನ್ಯಾಯದಿಂದ ಹಾಳಾದ ಸುಗ್ಗಿಯು ಉಂಟು.
ಬೆತ್ತಹಿಡಿಯದ ಪಿತ ಪುತ್ರನಿಗೆ ಶತ್ರು; 24
ಚೆನ್ನಾಗಿ ಶಿಕ್ಷಿಸುವ ಪಿತ ಪುತ್ರನಿಗೆ ಮಿತ್ರ.
ಶಿಷ್ಟನು ಹೊಟ್ಟೆತುಂಬಾ ಉಣ್ಣುವನು; 25
ದುಷ್ಟನ ಹೊಟ್ಟೆ ಹಸಿದಿರುವದು.

ಜ್ಞಾನವಂತೆಯು ತನ್ನ ಮನೆಯನ್ನು ಕಟ್ಟಿಕೊಳ್ಳುವಳು; 14
ಜ್ಞಾನಹೀನಳು ಅದನ್ನು ಸ್ವಂತ ಕೈಯಿಂದ ಮುರಿದುಬಿಡುವಳು.
ಸರಳಮಾರ್ಗಿಯು ಯೆಹೋವನಿಗೆ ಭಯಪಡುವನು; 2
ವಕ್ರಮಾರ್ಗಿಯು ಆತನನ್ನು ಅಸಡ್ಡೆಮಾಡುವನು.

---

1) ಪಾಠಾಂತರ: ಅಧರ್ಮಿಗಳ ಮಾರ್ಗವು ಮರಣದ ದಾರಿ. 2) ಮೂಲ: ಹಿಗ್ಗುವದು. 3) ಅಥವಾ: ಅದಕ್ಕೆ ಒತ್ತೆ
ಳುವನು. 4) ಗ್ರೀಕ್ ಪಾಠ: ನಾಶಕರ. ಇಬ್ರಿಯ ಪಾಠ: ಶಾಶ್ವತ.

3 ಮೂರ್ಖನ ಬಾಯಲ್ಲಿ ಗರ್ವವು ಅಂಕುರಿಸುವದು;
ಜ್ಞಾನಿಗಳ ತುಟಿಗಳು ಅವರನ್ನು ಕಾಯುವವು.
4 ಎತ್ತುಗಳಿಲ್ಲದಿರುವಾಗ ಗೋದಲಿಯು ಶುದ್ಧ,
ಆದರೆ ಎತ್ತಿನ ಶಕ್ತಿಯಿಂದಲೇ ಬೆಳೆಯ ವೃದ್ಧಿಯಲ್ಲವೆ.
5 ಸತ್ಯಸಾಕ್ಷಿಯು ಸುಳ್ಳಾಡನು;
ಸುಳ್ಳುಸಾಕ್ಷಿಯು ಅಸತ್ಯವನ್ನೇ ಆಡುವನು.
6 ಧರ್ಮನಿಂದಕನಿಗೆ ಹುಡುಕಿದರೂ ಜ್ಞಾನವು ಸಿಕ್ಕದು;
ವಿವೇಕಿಗೆ ತಿಳುವಳಿಕೆಯು ಸುಲಭವಾಗಿ ದೊರೆಯುವದು.
7 ನೀನು ಜ್ಞಾನಹೀನನ ಬಳಿಗೆ ಹೋದರೆ
ಅವನ ತುಟಿಗಳಲ್ಲಿ ಯಾವ ತಿಳುವಳಿಕೆಯನ್ನೂ ಕಾಣಲಾರೆ.
8 ಮಾರ್ಗವನ್ನು ಗ್ರಹಿಸಿಕೊಳ್ಳುವದೇ ಜಾಣನ ಜ್ಞಾನ;
ಮೂಢರ ಮೂರ್ಖತನ ಮೋಸಕರ.
9 1)ಮೂರ್ಖರನ್ನು ಅವರ ದೋಷವೇ ಹಾಸ್ಯಮಾಡುವದು;
ಯಥಾರ್ಥವಂತರಲ್ಲಿ [ದೇವರ] ದಯೆಯಿರುವದು.
10 ಪ್ರತಿಯೊಬ್ಬನು ತನ್ನ ಹೃದಯದ ವ್ಯಾಕುಲವನ್ನು ತಾನು ಗ್ರಹಿಸಿಕೊಳ್ಳುವನು;
ಅವನ ಆನಂದದಲ್ಲಿಯೂ ಯಾರೂ ಪಾಲುಗಾರರಾಗುವದಿಲ್ಲ.
11 ದುಷ್ಟರ ಮನೆಗೆ ನಾಶನ;
ಶಿಷ್ಟರ ಗುಡಾರಕ್ಕೆ ಏಳಿಗೆ.
12 ಮನುಷ್ಯದೃಷ್ಟಿಗೆ ಸರಳವಾಗಿ ತೋರುವ ಒಂದು ದಾರಿಯುಂಟು.
ಆದು ಕಟ್ಟಕಡೆಗೆ ಮರಣಮಾರ್ಗವೇ.
13 ನಗುವವನಿಗೂ ಮನೋವ್ಯಥೆಯುಂಟು;
ಉಲ್ಲಾಸದ ಅಂತ್ಯವು ವ್ಯಾಕುಲವೇ.
14 ಭ್ರಷ್ಟನು ಕರ್ಮಫಲವನ್ನು ತಿಂದು ತಿಂದು ದಣಿಯುವನು;
ಶಿಷ್ಟನು ತನ್ನಲ್ಲಿ ತಾನೇ ತೃಪ್ತನಾಗುವನು.
15 ಮೂಢನು ಯಾವ ಮಾತನ್ನಾದರೂ ನಂಬುವನು;
ಜಾಣನು ತನ್ನ ನಡತೆಯನ್ನು ಚೆನ್ನಾಗಿ ಗಮನಿಸುವನು.
16 ಜ್ಞಾನಿಯು ಕೇಡಿಗೆ ಭಯಪಟ್ಟು ಓರೆಯಾಗುವನು;
ಜ್ಞಾನಹೀನನು ಸೊಕ್ಕೇರಿ ಭಯವನ್ನು ಲಕ್ಷಿಸನು.
17 ಮುಂಗೋಪಿಯು ಬುದ್ಧಿಗೆಡುವನು;
2)ಕುಯುಕ್ತಿಯುಳ್ಳವನು ದ್ವೇಷಕ್ಕೆ ಪಾತ್ರನು.
18 ಮೂರ್ಖರಿಗೆ ಮೂರ್ಖತನವೇ ಸ್ವಾಸ್ತ್ಯ;
ಜಾಣರಿಗೆ ಜ್ಞಾನವೇ ಮುಕುಟ.
19 ಕೆಟ್ಟವರು ಒಳ್ಳೆಯವರಿಗೆ ಬಾಗುವರು;
ದುಷ್ಟರು ಶಿಷ್ಟರ ಬಾಗಿಲಲ್ಲಿ ಅಡ್ಡಬೀಳುವರು.
20 ಬಡವನು ನೆರೆಯವನಿಗೂ ಅಸಹ್ಯ;
ಧನವಂತನಿಗೆ ಬಹು ಜನ ಮಿತ್ರರು.
21 ನೆರೆಯವನನ್ನು ತಿರಸ್ಕರಿಸುವವನು ದೋಷಿ;
ದರಿದ್ರನನ್ನು ಕನಿಕರಿಸುವವನು ಧನ್ಯನು.
22 ಕುಯುಕ್ತಿಯುಳ್ಳವರು ದಾರಿತಪ್ಪಿದವರೇ ಸರಿ;
ಸುಯುಕ್ತಿಯುಳ್ಳವರು ಪ್ರೀತಿಸತ್ಯತೆಗಳಿಗೆ ಪಾತ್ರರು.
ಶ್ರಮೆಯಿಂದ ಸಮೃದ್ಧಿ;
ಹರಟೆಯಿಂದ ಕೊರತೆ.
3)ಜ್ಞಾನಿಗಳ [ಜ್ಞಾನ]ಕಿರೀಟವೇ ಅವರ ಶ್ರೇಷ್ಠ ಸಂಪತ್ತು;
ಜ್ಞಾನಹೀನರ ಮೂರ್ಖತನವು ಬರೀ ಮೂರ್ಖತನವೇ.
ಸತ್ಯಸಾಕ್ಷಿಯು ಪ್ರಾಣರಕ್ಷಕ;
ಸುಳ್ಳುಸಾಕ್ಷಿಯು ವಂಚಕ.
ಯೆಹೋವನಿಗೆ ಭಯಪಡುವದರಿಂದ ಕೇವಲ ನಿರ್ಭಯ;
ಆತನ ಮಕ್ಕಳಿಗೆ ಆಶ್ರಯವಿದ್ದೇ ಇರುವದು.
ಯೆಹೋವನ ಭಯ ಜೀವದ ಬುಗ್ಗೆ;
ಮೃತ್ಯುಪಾಶದಿಂದ ತಪ್ಪಿಸಿಕೊಳ್ಳಲು ಅದು ಸಾಧನ.
ಪ್ರಜೆಗಳ ವೃದ್ಧಿ ರಾಜನ ಮಹಿಮೆ;
ಪ್ರಜೆಗಳ ಕ್ಷಯ ಪ್ರಭುವಿಗೆ ಭಯ.
ದೀರ್ಘಶಾಂತನು ಕೇವಲ ಬುದ್ಧಿವಂತನು;
ಮುಂಗೋಪಿಯು ಮೂರ್ಖತನವನ್ನು [ಧ್ವಜವಾಗಿ] ಎತ್ತುವನು.
ಶಾಂತಿಗುಣವು ದೇಹಕ್ಕೆ ಜೀವಾಧಾರವು;
ಕ್ರೋಧವು ಎಲುಬಿಗೆ ಕ್ಷಯವು.
ಬಡವರನ್ನು ಹಿಂಸಿಸುವವನು ಸೃಷ್ಟಿಕರ್ತನನ್ನು ಹೀನೈಸುವನು;
ಗತಿಯಿಲ್ಲದವರನ್ನು ಕರುಣಿಸುವವನು ಆತನನ್ನು ಘನಪಡಿಸುವನು.
ದುಷ್ಟನು ವಿಪತ್ತಿಗೊಳಗಾಗಿ ಹಾಳಾಗುವನು;
ಶಿಷ್ಟನು ಮರಣಕಾಲದಲ್ಲಿಯೂ ಆಶ್ರಯಹೊಂದುವನು.
ವಿವೇಕಿಯ ಹೃದಯ ಜ್ಞಾನಾಶ್ರಯ;
ಜ್ಞಾನಹೀನನ ಒಳಗುಟ್ಟು ರಟ್ಟು.
ಪ್ರಜೆಗೆ ಧರ್ಮವು ಉನ್ನತಿ,
ಅಧರ್ಮವು ಅವಮಾನ.
ಜಾಣನಾದ ಸೇವಕನಿಗೆ ರಾಜನ ಕೃಪೆ;
ಮಾನಗೇಡಿಗೆ ರಾಜನ ರೌದ್ರ.

ಮೃದುವಾದ ಪ್ರತ್ಯುತ್ತರವು ಸಿಟ್ಟನ್ನಾರಿಸುವದು;
ಬಿರುನುಡಿಯು ಸಿಟ್ಟನ್ನೇರಿಸುವದು.
ಜ್ಞಾನಿಗಳ ನಾಲಿಗೆಯು ತಿಳುವಳಿಕೆಯನ್ನು ಸಾರ್ಥಕಮಾಡುವದು;
ಜ್ಞಾನಹೀನರ ಬಾಯಿಯು ಮೂರ್ಖತನವನ್ನು ಕಕ್ಕುವದು.
ಯೆಹೋವನ ದೃಷ್ಟಿಯು ಎಲ್ಲೆಲ್ಲಿಯೂ ಇರುವದು;
ಆತನು ಕೆಟ್ಟವರನ್ನೂ ಒಳ್ಳೆಯವರನ್ನೂ ನೋಡುತ್ತಲೇ ಇರುವನು.
ಸಂತೈಸುವ ನಾಲಿಗೆ ಜೀವವೃಕ್ಷವು;
ಬಲಾತ್ಕರಿಸುವ ನಾಲಿಗೆ ಮನಮುರಿಯುವದು.

1) ಅಥವಾ: ಮೂರ್ಖರು ದೋಷವನ್ನು ನೋಡಿ ಹಾಸ್ಯಮಾಡುವರು; ಯಥಾರ್ಥವಂತರು ಕನಿಕರಪಡುವರು. 2) ಶಾಂ…
ಬುದ್ಧಿವಂತನು ಕೋಪಿಸದೆ ಸಹಿಸುವನು. 3) ಅಥವಾ: ಜ್ಞಾನಿಗಳಿಗೆ ಸಂಪತ್ತು ಕಿರೀಟವಾಗಿದೆ.

5 ಮೂರ್ಖನು ತಂದೆಯ ಶಿಕ್ಷೆಯನ್ನು ತಿರಸ್ಕರಿಸುವನು;
ಗದರಿಕೆಯನ್ನು ಗಮನಿಸುವವನು ಜಾಣನು.
6 ಶಿಷ್ಟನ ಮನೆಯಲ್ಲಿ ದೊಡ್ಡ ನಿಧಿ;
ದುಷ್ಟನ ಆದಾಯವು ಕಳವಳವೇ.
7 ಜ್ಞಾನಿಗಳ ತುಟಿಗಳು ತಿಳುವಳಿಕೆಯನ್ನು ಬಿತ್ತುವವು.
ಜ್ಞಾನಹೀನರ ಹೃದಯವು 1)ಅದನ್ನು ಬಿತ್ತುವದೇ ಇಲ್ಲ.
8 ದುಷ್ಟರ ಯಜ್ಞ ಯೆಹೋವನಿಗೆ ಅಸಹ್ಯ;
ಶಿಷ್ಟರ ಬಿನ್ನಪ ಆತನಿಗೆ ಒಪ್ಪಿತ.
9 ದುಷ್ಟನ ನಡತೆಯು ಯೆಹೋವನಿಗೆ ಅಸಹ್ಯ;
ಧರ್ಮಾಸಕ್ತನು ಆತನಿಗೆ ಪ್ರಿಯ.
10 ಧರ್ಮಮಾರ್ಗವನ್ನು ಬಿಟ್ಟವನಿಗೆ ತೀಕ್ಷ್ಣಶಿಕ್ಷಣ;
ಗದರಿಕೆಯನ್ನು ಕೇಳಲೊಲ್ಲದವನಿಗೆ ಸಾವು.
11 ಪಾತಾಳವೂ ನಾಶಲೋಕವೂ ಯೆಹೋವನಿಗೆ ಗೋಚರವಾಗಿರುವಲ್ಲಿ
ನರವಂಶದವರ ಹೃದಯಗಳು ಮತ್ತೂ ಸ್ಪಷ್ಟ.
12 ಧರ್ಮನಿಂದಕನು ಗದರಿಕೆಯನ್ನೊಲ್ಲನು;
ಜ್ಞಾನಿಗಳ ಸಂಗಡ ಸೇರನು.
13 ಹರ್ಷಹೃದಯದಿಂದ ಹಸನ್ಮುಖ;
ಮನೋವ್ಯಥೆಯಿಂದ ಆತ್ಮಭಂಗ.
14 ವಿವೇಕಿಯ ಹೃದಯ ತಿಳುವಳಿಕೆಯನ್ನು ಹುಡುಕುವದು;
ಮೂಢರ ಬಾಯಿ ಮೂರ್ಖತನವನ್ನು ಮುಕ್ಕುವದು.
15 ದೀನನ ದಿನಗಳೆಲ್ಲಾ ದುಃಖಭರಿತ;
ಹರ್ಷಹೃದಯನಿಗೆ ನಿತ್ಯವೂ ಔತಣ.
16 ಕಳವಳದಿಂದ ಕೂಡಿದ ಬಹುಧನಕ್ಕಿಂತಲೂ
ಯೆಹೋವನ ಭಯದಿಂದ ಕೂಡಿದ ಅಲ್ಪ ಧನವೇ ಲೇಸು.
17 ದ್ವೇಷವಿರುವಲ್ಲಿ ಕೊಬ್ಬಿದ ದನದ ಮಾಂಸಕ್ಕಿಂತಲೂ
ಪ್ರೇಮವಿರುವಲ್ಲಿ ಸೊಪ್ಪಿನ ಊಟವೇ ಉತ್ತಮ.
18 ಕೋಪಿಷ್ಠನು ವ್ಯಾಜ್ಯವನ್ನೆಬ್ಬಿಸುವನು;
ದೀರ್ಘಶಾಂತನು ಜಗಳವನ್ನು ಶಮನಪಡಿಸುವನು.
19 ಸೋಮಾರಿಯ ದಾರಿ ಮುಳ್ಳುಬೇಲಿ;
ಯಥಾರ್ಥವಂತನ ಮಾರ್ಗ ರಾಜಮಾರ್ಗ.
20 ಜ್ಞಾನವಂತನಾದ ಮಗನು ತಂದೆಯನ್ನು ಉಲ್ಲಾಸಗೊಳಿಸುವನು;
ಜ್ಞಾನಹೀನನು ತಾಯಿಯನ್ನು ತಿರಸ್ಕರಿಸುವನು.
21 ಬುದ್ಧಿಹೀನನು ಮೂರ್ಖತನದಲ್ಲಿ ಆನಂದಿಸುವನು;
ಬುದ್ಧಿವಂತನು ತನ್ನ ಮಾರ್ಗವನ್ನು ಸರಳಮಾಡಿಕೊಳ್ಳುವನು.
22 ಯೋಚನೆ ಹೇಳುವವರಿಲ್ಲದೆ ಉದ್ದೇಶಗಳು ನೆರವೇರವು,
ಬಹು ಮಂದಿ ಆಲೋಚನಾಪರರಿರುವಲ್ಲಿ ಈಡೇರುವವು.
23 ತಕ್ಕ ಉತ್ತರಕೊಡುವವನಿಗೆ ಎಷ್ಟೋ ಉಲ್ಲಾಸ!
ಸಮಯೋಚಿತವಾದ ವಚನದಲ್ಲಿ ಎಷ್ಟೋ ಸ್ವಾರಸ್ಯ!
24 ವಿವೇಕಿಗೆ ಜೀವದ ಮಾರ್ಗವು ಮೇಲುಮೇಲಕ್ಕೆ ಹೋಗುತ್ತದೆ;
ಅದನ್ನು ಹಿಡಿದವನು ಪಾತಾಳದಿಂದ ತಪ್ಪಿಸಿಕೊಳ್ಳುವನು.
ಯೆಹೋವನು ಗರ್ವಿಷ್ಠನ ಮನೆಯನ್ನು ಕಿತ್ತುಹಾಕುವನು; 25
ವಿಧವೆಯ ಮೇರೆಯನ್ನು ನೆಲೆಗೊಳಿಸುವನು.
ಕುಯುಕ್ತಿಯು ಯೆಹೋವನಿಗೆ ಅಸಹ್ಯ; 26
ನಯನುಡಿಯು ನಿರ್ಮಲ.
ಸೂರೆಮಾಡುವವನು ಸ್ವಂತ ಮನೆಯನ್ನು ಬಾಧಿಸುವನು. 27
ಲಂಚವನ್ನೊಪ್ಪದವನು ಸುಖವಾಗಿ ಬಾಳುವನು.
ಶಿಷ್ಟನ ಹೃದಯ ವಿವೇಚಿಸಿ ಉತ್ತರಕೊಡುತ್ತದೆ; 28
ದುಷ್ಟನ ಬಾಯಿ ಕೆಟ್ಟದ್ದನ್ನು ಕಕ್ಕುತ್ತದೆ.
ಯೆಹೋವನು ದುಷ್ಟರಿಗೆ ದೂರ, 29
ಶಿಷ್ಟರ ಬಿನ್ನಹಕ್ಕೆ ಹತ್ತಿರ.
ಕಣ್ಣಿಗೆ ಬಿದ್ದ ಬೆಳಕು ಹೃದಯಕ್ಕೆ ಆನಂದ; 30
ಕಿವಿಗೆ ಬಿದ್ದ ಒಳ್ಳೇ ಸುದ್ದಿ ಎಲುಬಿಗೆ ಪುಷ್ಟಿ.
ಜೀವಪ್ರದವಾದ ಗದರಿಕೆಗೆ ಕಿವಿಗೊಡುವವನು 31
ಜ್ಞಾನಿಗಳ ನಡುವೆ ನೆಲೆಗೊಳ್ಳುವನು.
ಶಿಕ್ಷೆಯನ್ನೊಲ್ಲದವನು ತನ್ನನ್ನೇ ನಿರಾಕರಿಸುವನು; 32
ಗದರಿಕೆಯನ್ನು ಕೇಳುವವನು ಬುದ್ಧಿಯನ್ನು ಪಡೆಯುವನು.
ಯೆಹೋವನ ಭಯವೇ ಜ್ಞಾನೋಪದೇಶ; 33
ಗೌರವಕ್ಕೆ ಮೊದಲು ವಿನಯ.

16

ಹೃದಯದ ಸಂಕಲ್ಪವು ಮನುಷ್ಯನ ವಶವು;
ತಕ್ಕ ಉತ್ತರಕೊಡುವ ಶಕ್ತಿಯು ಯೆಹೋವನಿಂದಾಗುವದು.
ಮನುಷ್ಯನ ನಡತೆಯೆಲ್ಲಾ ಸ್ವಂತ ದೃಷ್ಟಿಗೆ ಶುದ್ಧ; 2
ಯೆಹೋವನು ಅಂತರಂಗವನ್ನೇ ಪರೀಕ್ಷಿಸುವನು.
ನಿನ್ನ ಕಾರ್ಯಭಾರವನ್ನು ಯೆಹೋವನಿಗೆ ವಹಿಸಿದರೆ 3
ನಿನ್ನ ಉದ್ದೇಶಗಳು ಸಫಲವಾಗುವವು.
ಯೆಹೋವನು ಒಂದೊಂದನ್ನೂ ತಕ್ಕ ಗುರಿಯಿಂದ ಸೃಷ್ಟಿಸಿದ್ದಾನೆ, 4
ಹೌದು, ಕೇಡಿನ ದಿನಕ್ಕಾಗಿ ಕೆಡುಕರನ್ನುಂಟುಮಾಡಿದ್ದಾನೆ.
ಅಹಂಕಾರಿಗಳೆಲ್ಲಾ ಯೆಹೋವನಿಗೆ ಅಸಹ್ಯ; 5
ಅವರಿಗೆ ದಂಡನೆ ಖಂಡಿತ.
ಕೃಪಾಸತ್ಯತೆಗಳಿಂದ ಪಾಪನಿವಾರಣೆ; 6
ಯೆಹೋವನ ಭಯಭಕ್ತಿಯಿಂದ ಹಾನಿನಿವಾರಣೆ.
ಯೆಹೋವನು ಒಬ್ಬನ ನಡತೆಗೆ ಮೆಚ್ಚಿದರೆ 7
ಅವನ ಶತ್ರುಗಳನ್ನೂ ಮಿತ್ರರನ್ನಾಗಿ ಮಾಡುವನು.
ಅನ್ಯಾಯದಿಂದ ಗಳಿಸಿದ ಬಹು ಧನಕ್ಕಿಂತಲೂ 8
ನ್ಯಾಯದಿಂದ ಕೂಡಿಸಿದ ಅಲ್ಪ ಧನವೇ ಲೇಸು.
ಮನುಷ್ಯನು ತನ್ನ ಮನದಂತೆ ದಾರಿಯನ್ನಾರಿಸಿಕೊಂಡರೂ 9
ಯೆಹೋವನೇ ಅವನಿಗೆ ಗತಿಯನ್ನು ಏರ್ಪಡಿಸುವನು.
ರಾಜನ ತುಟಿಗಳಲ್ಲಿ ದೈವೋಕ್ತಿ; 10
ನ್ಯಾಯತೀರಿಸುವದರಲ್ಲಿ ಅವನ ಬಾಯಿ ತಪ್ಪಿಹೋಗದು.

1) ಅಥವಾ: ಯಥಾರ್ಥವಲ್ಲ.

11 ನ್ಯಾಯದ ತ್ರಾಸುತಕ್ಕಡಿಗಳು ಯೆಹೋವನ ಏರ್ಪಾಡು;
ಕಟ್ಲೆಚೀಲದ ಕಲ್ಲುಗಳೆಲ್ಲಾ ಆತನ ಕೈಕೆಲಸವೇ.
12 ರಾಜರು ಸಿಂಹಾಸನಕ್ಕೆ ಧರ್ಮವೇ ಆಧಾರವೆಂದು ತಿಳಿದು
ಅಧರ್ಮವನ್ನಾಚರಿಸಲು ಅಸಹ್ಯಪಡುವರು.
13 ರಾಜರು ಸತ್ಯದ ತುಟಿಗಳನ್ನು ಮೆಚ್ಚುವರು;
ಯಥಾರ್ಥವಾದಿಯನ್ನು ಪ್ರೀತಿಸುವರು.
14 ಭೂಪನ ಕೋಪ ಮೃತ್ಯುವಿನ ದೂತ;
ಜಾಣನು ಅದನ್ನು ಶಮನಪಡಿಸುವನು.
15 ಪ್ರಭುವಿನ ಮುಖಪ್ರಸನ್ನತೆ ಜೀವ;
ಆತನ ದಯೆ ಮುಂಗಾರುಮುಗಿಲು.
16 ಬಂಗಾರಕ್ಕಿಂತಲೂ ಜ್ಞಾನವನ್ನು ಪಡೆಯುವದು ಎಷ್ಟೋ ಮೇಲು;
ಬೆಳ್ಳಿಗಿಂತಲೂ ವಿವೇಕವನ್ನು ಹೊಂದುವದು ಲೇಸು.
17 ಸತ್ಯವಂತನ ರಾಜಮಾರ್ಗ ಹಾನಿಗೆ ದೂರ;
ತನ್ನ ನಡತೆಯನ್ನು ಗಮನಿಸುವವನು ತನ್ನ ಆತ್ಮವನ್ನು ಕಾಯುವನು.
18 ಗರ್ವದಿಂದ ಭಂಗ;
ಉಬ್ಬಿನಿಂದ ದೊಬ್ಬು.
19 ಸೊಕ್ಕಿನವರ ಸಂಗಡ ಸೂರೆಯನ್ನು ಹಂಚಿಕೊಳ್ಳುವದಕ್ಕಿಂತಲೂ
ದೀನರ ಸಂಗಡ ದೈನ್ಯದಿಂದಿರುವದು ವಾಸಿ.
20 [ದೇವರ] ವಾಕ್ಯವನ್ನು ಸ್ಮರಿಸುವವನು ಸುಕ್ಷೇಮವನ್ನು ಪಡೆಯುವನು;
ಯೆಹೋವನಲ್ಲಿ ಭರವಸವಿಡುವವನು ಭಾಗ್ಯವಂತನು.
21 ಜ್ಞಾನಹೃದಯರಿಗೆ ಜಾಣರೆಂಬ ಬಿರುದು ಬರುವದು;
ಸವಿತುಟಿಯಿಂದ ಉಪದೇಶಶಕ್ತಿಯು ಹೆಚ್ಚುವದು.
22 ವಿವೇಕಿಗೆ ವಿವೇಕವೇ ಜೀವದ ಬುಗ್ಗೆ;
ಮೂರ್ಖನಿಗೆ ಮೂರ್ಖತನವೇ ದಂಡನೆ.
23 ಜ್ಞಾನಿಯ ಹೃದಯವು ಅವನ ಬಾಯಿಗೆ ಚಾಣತನವನ್ನೂ
ಅವನ ತುಟಿಗಳಿಗೆ ಉಪದೇಶಶಕ್ತಿಯನ್ನೂ ಹೆಚ್ಚಿಸುವದು.
24 ಸವಿನುಡಿಯು ಜೇನುಕೊಡ;
ಅದು ಆತ್ಮಕ್ಕೆ ಸಿಹಿ, ಎಲುಬಿಗೆ ಕ್ಷೇಮ.
25 ಮನುಷ್ಯದೃಷ್ಟಿಗೆ ಸರಳವಾಗಿ ತೋರುವ ಒಂದು ದಾರಿಯುಂಟು;
ಕಟ್ಟಕಡೆಗೆ ಅದು ಮರಣಮಾರ್ಗವೇ.
26 ದುಡಿಯುವವನಿಗೆ ಅವನ ಹೊಟ್ಟೆಯೇ ದುಡಿಯುವದು;
ಅವನನ್ನು [ದುಡಿಯಲಿಕ್ಕೆ] ಅವನ ಬಾಯೇ ಒತ್ತಾಯಮಾಡುವದು.
27 ನೀಚನು ಕೇಡೆಂಬ ಕುಣಿಯನ್ನು ತೋಡುತ್ತಾನೆ;
ಅವನ ತುಟಿಗಳಲ್ಲಿ ಬೆಂಕಿಯುರಿಯುತ್ತದೆ.
28 ತುಂಟನು ಜಗಳ ಬಿತ್ತುತ್ತಾನೆ;
ಚಾಡಿಕೋರನು ಮಿತ್ರರನ್ನು ಅಗಲಿಸುತ್ತಾನೆ.
29 ಬಲಾತ್ಕಾರಿಯು ನೆರೆಯವನನ್ನು ಮರುಳುಗೊಳಿಸಿ
ದುರ್ಮಾರ್ಗಕ್ಕೆ ಎಳೆಯುವನು.
ಕಣ್ಣನ್ನು ಮುಚ್ಚಿಕೊಳ್ಳುವವನು ಕುಯುಕ್ತಿಗಳನ್ನು ಕಲ್ಪಿಸುವನು;
ತುಟಿಯನ್ನು ಮಡಸಿಕೊಳ್ಳುವವನು ಕೇಡನ್ನು ಸಾಧಿಸುವನು.
ನರೆಗೂದಲೇ ಸುಂದರ ಕಿರೀಟವು,
ಅದು ಧರ್ಮಮಾರ್ಗದಲ್ಲಿ ದೊರಕುವದು.
ದೀರ್ಘಶಾಂತನು ಶೂರನಿಗಿಂತಲೂ ಶ್ರೇಷ್ಠ;
ತನ್ನನ್ನು ಆಳುವವನು ಪಟ್ಟಣವನ್ನು ಗೆದ್ದವನಿಗಿಂತಲೂ ಬಲಿಷ್ಠ.
ಉಡಿಯಲ್ಲಿ ಚೀಟು ಹಾಕಬಹುದು;
ಆದರ ತೀರ್ಪು ಯೆಹೋವನದೇ.

ವ್ಯಾಜ್ಯದ ಮನೆಯಲ್ಲಿ ತುಂಬಿದ ಔತಣಕ್ಕಿಂತಲೂ
ಸಮಾಧಾನದ ಒಣತುತ್ತೇ ಮೇಲು.
ಜಾಣನಾದ ಆಳು ಮಾನಕಳೆದ ಮನೆಮಗನ ಮೇಲೆ ಅಧಿಕಾರಮಾಡುವನು;
ಮನೆಮಕ್ಕಳೊಂದಿಗೆ ಬಾಧ್ಯತೆಯನ್ನು ಹೊಂದುವನು.
ಬೆಳ್ಳಿಬಂಗಾರಗಳನ್ನು ಪುಟಕುಲಿಮೆಗಳು ಶೋಧಿಸುವವು;
ಹೃದಯಗಳನ್ನು ಶೋಧಿಸುವವನು ಯೆಹೋವನೇ.
ಕೆಡುಕನು ಕೆಟ್ಟ ತುಟಿಗಳನ್ನು ಗಮನಿಸುವನು;
ಸುಳ್ಳುಗಾರನು ನಾಶನದ ನಾಲಿಗೆಗೆ ಕಿವಿಗೊಡುವನು.
ಬಡವರನ್ನು ಹಾಸ್ಯಮಾಡುವವನು ಸೃಷ್ಟಿಕರ್ತನನ್ನೇ ಹೀನೈಸುವನು;
[ಪರರ] ವಿಪತ್ತಿಗೆ ಹಿಗ್ಗುವವನು ದಂಡನೆಯನ್ನು ಹೊಂದದಿರನು.
ಮಕ್ಕಳ ಸಂತತಿಯವರು ವೃದ್ಧರಿಗೆ ಕಿರೀಟ;
ಹೆತ್ತವರು ಮಕ್ಕಳಿಗೆ ಭೂಷಣ.
ಉತ್ತಮವಾದ ಮಾತು ಮೂರ್ಖನಿಗೆ ಅಯುಕ್ತ;
ಸುಳ್ಳುಮಾತು ಉತ್ತಮನಿಗೆ ಮತ್ತೂ ಅಯುಕ್ತ.
ಕೊಡುವವನ ದೃಷ್ಟಿಗೆ ಲಂಚವು [1]ಚಿಂತಾಮಣಿಯಾಗಿದೆ,
ಎಲ್ಲಿ ಹೋದರೂ ಅವನಿಗೆ ಅನುಕೂಲವೇ.
ದೋಷವನ್ನು ಮುಚ್ಚಿಡುವವನು ಪ್ರೇಮವನ್ನು ಸೆಳೆಯುವನು;
ಎತ್ತಿ ಆಡುತ್ತಿರುವವನು ಸ್ನೇಹವನ್ನು ಕಳೆದುಕೊಳ್ಳುವನು.
ಮಂದನಿಗೆ ನೂರು ಪೆಟ್ಟು ಹೊಡೆಯುವದಕ್ಕಿಂತಲೂ
ಗದರಿಕೆಯೇ ವಿವೇಕಿಗೆ ಹೆಚ್ಚಾದ ಶಿಕ್ಷೆ.
ದುರಾತ್ಮನಿಗೆ ದಂಗೆಯ ಮೇಲೇ ಮನಸ್ಸು;
ಕ್ರೂರದೂತನು ಅವನ ಮೇಲೆ ಬರುವನು.
ಮೂರ್ಖತನದಲ್ಲಿ ಮುಣುಗಿರುವ ಮೂಢನಿಗೆ ಎದುರಾಗುವದಕ್ಕಿಂತಲೂ
ಮರಿಗಳನ್ನು ಕಳೆದುಕೊಂಡ ಕರಡಿಗೆ ಎದುರಾಗುವದು ಲೇಸು.
ಉಪಕಾರಕ್ಕೆ ಅಪಕಾರಮಾಡುವವನ ಮನೆಗೆ ಕೇಡು ತಪ್ಪದು.

1) ಅಂದರೆ ಕೋರಿದ್ದನ್ನು ಕೊಡುವ ರತ್ನ.

14 ವ್ಯಾಜ್ಯದ ಆರಂಭವು ಏರಿಗೆ ಬಿಲಬಿದ್ದಂತೆ;
ಸಿಟ್ಟೇರುವದಕ್ಕೆ ಮುಂಚೆ ಜಗಳವನ್ನು ಬಿಟ್ಟುಬಿಡು.
15 ದುಷ್ಟನನ್ನು ಶಿಷ್ಟನೆಂದು ಶಿಷ್ಟನನ್ನು ದುಷ್ಟನೆಂದು
ನಿರ್ಣಯಿಸುವವರಿಬ್ಬರೂ ಯೆಹೋವನಿಗೆ ಅಸಹ್ಯರು.
16 ಜ್ಞಾನವನ್ನು ಕೊಳ್ಳಲು ಮೂಢನ ಕೈಯಲ್ಲಿ ಹಣವೇಕೆ?
ಅವನಿಗೆ ಬುದ್ಧಿಯೇ ಇಲ್ಲವಲ್ಲಾ.
17 ಮಿತ್ರನ ಪ್ರೀತಿಯು ನಿರಂತರ;
ಸಹೋದರನ ಜನ್ಮವು ಆಪತ್ತಿನಲ್ಲಿ ಸಾರ್ಥಕ.
18 ನೆರೆಯವನಿಗಾಗಿ ಕೈ ಮೇಲೆ ಕೈ ಹಾಕಿ
ಹೊಣೆಯಾದವನು ಬುದ್ಧಿಹೀನನೇ ಸರಿ.
19 ಪಾಪಪ್ರಿಯನು ಕಲಹಪ್ರಿಯ;
ತನ್ನ ಬಾಗಿಲನ್ನು ಎತ್ತರಿಸುವವನು ಹಾಳಾಗುವನು.
20 ವಕ್ರಹೃದಯನು ಶುಭವನ್ನು ಪಡೆಯನು;
ಕೆಟ್ಟನಾಲಿಗೆಯವನು ವಿಪತ್ತಿಗೆ ಸಿಕ್ಕಬೀಳುವನು.
21 ಹೆಡ್ಡನನ್ನು ಹೆತ್ತವನಿಗೆ ವ್ಯಥೆ,
ಮೂರ್ಖನ ತಂದೆಗೆ ವ್ಯಸನ.
22 ಹರ್ಷಹೃದಯವು ಒಳ್ಳೇ ಔಷಧ,
ಕುಗ್ಗಿದ ಮನದಿಂದ ಒಣಮೈ.
23 ದುಷ್ಟನು ಲಂಚವನ್ನು ಮಡಲಿನಿಂದ ತೆಗೆದುಕೊಂಡು
ನ್ಯಾಯವನ್ನು ತಪ್ಪಿಸುವನು.
24 ವಿವೇಕಿಗೆ ಜ್ಞಾನವೇ ಗುರಿಯಾಗಿರುವದು;
ಮೂಢನ ದೃಷ್ಟಿಯು ದಿಗಂತಗಳಲ್ಲಿಯೂ ಅಲೆಯು
ವದು.
25 ಜ್ಞಾನಹೀನನಾದ ಮಗನು ತಂದೆಗೆ ಕಿರಿಕಿರಿ,
ತಾಯಿಗೆ ಕರಕರೆ.
26 ಶಿಷ್ಟನಿಗೆ ದಂಡ ಅಯುಕ್ತ;
ಧರ್ಮಿಷ್ಠನಿಗೆ ಪೆಟ್ಟು ಅಧರ್ಮ.
27 ಹಿಡಿದು ಮಾತಾಡುವವನು ಜ್ಞಾನಿ.
ಶಾಂತಾತ್ಮನು ವಿವೇಕಿ.
28 ಮೂಢನು ಕೂಡ ಸುಮ್ಮನಿದ್ದರೆ, ಜ್ಞಾನಿಯೆಂತಲೂ
ತುಟಿಗಳನ್ನು ಬಿಗಿಹಿಡಿದರೆ ವಿವೇಕಿಯೆಂತಲೂ ಅನ್ನಿಸಿ
ಕೊಳ್ಳುವನು.

18 ಬೆನದಲ್ಲಿ ಸೇರದವನು ಸ್ವೇಚ್ಛಾನುಸಾರ ನಡೆ
ಯುತ್ತಾ
ಸಮಸ್ತ ಸುಜ್ಞಾನಕ್ಕೂ ರೇಗುವನು.
2 ಮೂಢನಿಗೆ ವಿವೇಕವು ಅನಿಷ್ಟ;
ಸ್ವಭಾವವನ್ನು ಹೊರಪಡಿಸಿಕೊಳ್ಳುವದೇ ಅವನಿಗಿಷ್ಟ.
3 ದುರಾಚಾರವಿದ್ದಲ್ಲಿ ತಾತ್ಸಾರ;
ಅವಮಾನವಿದ್ದಲ್ಲಿ ಧಿಕ್ಕಾರ.
4 [1]ಸತ್ಪುರುಷನ ನುಡಿಯು ಆಳವಾದ ನೀರು,
ಜ್ಞಾನದ ಬುಗ್ಗೆ, ಹರಿಯುವ ತೊರೆ.
5 ದುಷ್ಟನಿಗೆ ಪ್ರಸನ್ನನಾಗಿ
ಶಿಷ್ಟನಿಗೆ ನ್ಯಾಯತಪ್ಪಿಸುವದು ಅಧರ್ಮ.
6 ಜ್ಞಾನಹೀನನ ತುಟಿಗಳು ಜಗಳವನ್ನು ಹೂಡುತ್ತವೆ;
ಅವನ ಬಾಯಿ ಪೆಟ್ಟುತಿನ್ನುವದಕ್ಕೆ ಕೂಗಿಕೊಳ್ಳುತ್ತದೆ.
7 ಜ್ಞಾನಹೀನನಿಗೆ ಬಾಯಿ ನಾಶ;
ತುಟಿಗಳು ಪಾಶ.
ಚಾಡಿಕೋರನ ಮಾತುಗಳು ರುಚಿಯಾದ ತುತ್ತು 8
ಗಳು;
ಹೊಟ್ಟೆಯೊಳಕ್ಕೇ ಇಳಿಯುವವು.
ಕೆಲಸಗಳ್ಳನು ಕೆಡುಕನಿಗೆ ತಮ್ಮ. 9
ಯೆಹೋವನ ನಾಮವು ಬಲವಾದ ಬುರುಜು; 10
ಶಿಷ್ಟನು ಅದರೊಳಕ್ಕೆ ಓಡಿಹೋಗಿ ಭದ್ರವಾಗಿರುವನು.
ಧನವಂತನು ತನ್ನ ಐಶ್ವರ್ಯವನ್ನು ಬಲವಾದ ಕೋಟೆ 11
ಯೆಂದೂ
ಎತ್ತರವಾದ ಗೋಡೆಯೆಂದೂ ಭಾವಿಸಿಕೊಳ್ಳುತ್ತಾನೆ.
ಭಂಗಕ್ಕೆ ಮೊದಲು ಗರ್ವದ ಹೃದಯ; 12
ಮಾನಕ್ಕೆ ಮುಂಚೆ ದೈನ್ಯ.
ಗಮನಿಸದೆ ಉತ್ತರಕೊಡುವವನು 13
ಮೂರ್ಖನೆಂಬ ಅವಮಾನಕ್ಕೆ ಗುರಿಯಾಗುವನು.
ಆತ್ಮವು ವ್ಯಾಧಿಯನ್ನು ಸಹಿಸಬಲ್ಲದು, 14
ಆತ್ಮವೇ ನೊಂದರೆ ಸಹಿಸುವವರು ಯಾರು?
ವಿವೇಕಿಯ ಹೃದಯವು ತಿಳುವಳಿಕೆಯನ್ನು ಸಂಪಾದಿ 15
ಸುವದು;
ಜ್ಞಾನಿಯ ಕಿವಿಯು ತಿಳುವಳಿಕೆಯನ್ನು ಹುಡುಕು
ವದು.
ಕಾಣಿಕೆಯು ಅನುಕೂಲತೆಗೂ 16
ಶ್ರೀಮಂತರ ಸಾನ್ನಿಧ್ಯಪ್ರವೇಶಕ್ಕೂ ಸಾಧನ.
ಮೊದಲು ವಾದಿಸುವವನು ನ್ಯಾಯವಾದಿ ಎಂದು ತೋ 17
ರುವನು;
ಪ್ರತಿವಾದಿ ಎದ್ದ ಮೇಲೆ ಅವನ ಪರೀಕ್ಷೆ ಆಗುವದು.
ಚೀಟುಹಾಕುವದರಿಂದ ವ್ಯಾಜ್ಯಶಮನವೂ, 18
ಬಲಿಷ್ಠರ ನ್ಯಾಯಾನ್ಯಾಯಗಳ ವಿವೇಚನೆಯೂ ಆಗು
ವದು.
ಅನ್ಯಾಯಹೊಂದಿದ ಸಹೋದರನು ಬಲವಾದ ಪಟ್ಟಣ 19
ಕ್ಕಿಂತಲೂ ಅಸಾಧ್ಯ;
ಕೋಟೆಯ ಅಗುಳಿಗಳಂತೆ ಜಗಳಗಳು ಜನರನ್ನು ಅಗ
ಲಿಸುತ್ತವೆ.
ಮನುಷ್ಯನು ತನ್ನ ಬಾಯ ಬೆಳೆಯನ್ನು ಹೊಟ್ಟೆತುಂಬಾ 20
ಉಣ್ಣುವನು;
ತನ್ನ ತುಟಿಗಳ ಫಲವನ್ನು ಸಾಕಾದಷ್ಟು ತಿನ್ನುವನು.
ಜೀವನಮರಣಗಳು ನಾಲಿಗೆಯ ವಶ, 21
ವಚನಪ್ರಿಯರು ಅದರ ಫಲವನ್ನು ಅನುಭವಿಸುವರು.
ಪತ್ನೀಲಾಭವು ರತ್ನಲಾಭ, 22
ಅದು ಯೆಹೋವನ ಅನುಗ್ರಹವೇ.
ಬಡವನು ಬಿನ್ನೈಸುವನು; 23
ಬಲ್ಲಿದನು ಉತ್ತರವನ್ನು ಉಗ್ರವಾಗಿ ಕೊಡುವನು.
ಬಹು ಮಂದಿ ಗೆಳೆಯರನ್ನು ಸೇರಿಸಿಕೊಂಡವನಿಗೆ 24
ನಾಶನ;
ಸಹೋದರನಿಗಿಂತಲೂ ಹತ್ತಿರ ಹೊಂದಿಕೊಳ್ಳುವ ಮಿತ್ರ
ನುಂಟು.

19 ಕಪಟವಾಗಿ ಮಾತಾಡುವ ಮೂಢನಿಗಿಂತಲೂ
ನಿರ್ದೋಷವಾಗಿ ನಡೆಯುವ ದರಿದ್ರನೇ ಶ್ರೇಷ್ಠ.

1) ಮೂಲ: ಮನುಷ್ಯನ.

2 ತಿಳುವಳಿಕೆಯಿಲ್ಲದೆ ಕೋರುವದು ಅಯುಕ್ತ;
ದುಡುಕುವ ಕಾಲು ದಾರಿತಪ್ಪುವದು.
3 ಮನುಷ್ಯನು ಮೂರ್ಖತನದಿಂದ ತನ್ನ ಗತಿಯನ್ನು ಕೆಡಿಸಿಕೊಂಡು
ಯೆಹೋವನ ಮೇಲೆ ಕುದಿಯುವನು.
4 ಭಾಗ್ಯವಂತನಿಗೆ ಬಹು ಮಂದಿ ಸ್ನೇಹಿತರು;
ಬಡವನಿಗೆ ಇದ್ದ ಸ್ನೇಹಿತನೂ ಅಗಲುವನು.
5 ಕಳ್ಳಸಾಕ್ಷಿಯು ದಂಡನೆಯನ್ನು ಹೊಂದದಿರನು;
ಸುಳ್ಳಾಡುವವನು ತಪ್ಪಿಸಿಕೊಳ್ಳನು.
6 ಉದಾರಿಯ ಕಟಾಕ್ಷವನ್ನು ಅನೇಕರು ಕೋರುವರು;
ದಾನಶೂರನಿಗೆ ಪ್ರತಿಯೊಬ್ಬನೂ ಸ್ನೇಹಿತನಲ್ಲವೆ.
7 ಬಡವನನ್ನು ಬಂಧುಗಳೆಲ್ಲಾ ಹಗೆಮಾಡುವರು;
ಹೌದು, ಮಿತ್ರರೂ ಅವನಿಗೆ ದೂರವಾಗುವರು.
[ಅವರ] ಬರೀ ಮಾತುಗಳನ್ನು [ನಂಬಿ] ಹಿಂಬಾಲಿಸಿದರೆ ಏನೂ ಸಿಕ್ಕದು.
8 ಬುದ್ಧಿಯನ್ನು ಸಂಪಾದಿಸುವವನು ತನಗೆ ತಾನೇ ಮಿತ್ರನು;
ವಿವೇಕವನ್ನು ಕಾಪಾಡುವವನು ಮೇಲನ್ನು ಪಡೆಯುವನು.
9 ಕಳ್ಳಸಾಕ್ಷಿಯು ದಂಡನೆಯನ್ನು ಹೊಂದದಿರನು;
ಸುಳ್ಳಾಡುವವನು ಹಾಳಾಗುವನು.
10 ಮೂಢನಿಗೆ ಮೃದುಜೀವನವು ಅಯುಕ್ತ;
ದಾಸನಿಗೆ ದೊರೆಗಳ ಮೇಲಣ ದೊರೆತನ ಇನ್ನೂ ಅಯುಕ್ತ.
11 ಮನುಷ್ಯನ ವಿವೇಕವು ಅವನ ಸಿಟ್ಟಿಗೆ ಅಡ್ಡಿ;
[ಪರರ] ದೋಷವನ್ನು ಲಕ್ಷಿಸದಿರುವದು ಅವನಿಗೆ ಭೂಷಣ.
12 ರಾಜನ ರೋಷವು ಸಿಂಹದ ಗರ್ಜನೆ;
ಅವನ ದಯೆಯು ಪೈರಿನ ಇಬ್ಬನಿ.
13 ಜ್ಞಾನಹೀನನಾದ ಮಗನು ತಂದೆಗೆ ಹಾನಿ,
ಹೆಂಡತಿಯ ತಂಟೆಯು ತಟತಟನೆ ತೊಟ್ಟಿಕ್ಕುವ ಹನಿ.
14 ಮನೆಮಾರೂ ಆಸ್ತಿಪಾಸ್ತಿಯೂ ಪಿತೃಗಳಿಂದ ದೊರಕುವವು;
ವಿವೇಕಿನಿಯಾದ ಹೆಂಡತಿಯು ಯೆಹೋವನ ಅನುಗ್ರಹವೇ.
15 ಮೈಗಳ್ಳತನವು ಗಾಢನಿದ್ರೆಯಲ್ಲಿ ಮುಳುಗಿಸುವದು;
ಸೋಮಾರಿಯು ಹಸಿವೆಗೊಳ್ಳುವನು.
16 ಆಜ್ಞೆಯನ್ನು ಪಾಲಿಸುವವನು ಆತ್ಮವನ್ನು ಪಾಲಿಸುವನು,
ನಡತೆಯನ್ನು ಲಕ್ಷಿಸದವನು ಸಾಯುವನು.
17 ಬಡವರಿಗೆ ದಯೆತೋರಿಸುವವನು ಯೆಹೋವನಿಗೆ ಸಾಲಕೊಡುವವನು;
ಆ ಉಪಕಾರಕ್ಕೆ ಯೆಹೋವನೇ ಪ್ರತ್ಯುಪಕಾರಮಾಡುವನು.
18 ಬುದ್ಧಿ ಬರುವದೆಂದು ಮಗನನ್ನು ಶಿಕ್ಷಿಸು;
ಹಾಳುಮಾಡಲು ಮನಸ್ಸುಮಾಡಬೇಡ.
19 ಕೋಪಿಷ್ಠನು ತನಗಾಗುವ ದಂಡನೆಯನ್ನು ಅನುಭವಿಸಲಿ;
ಬಿಡಿಸಿದರೆ ಬಾರಿಬಾರಿಗೆ ಬಿಡಿಸಬೇಕಾಗುವದು.
ಬುದ್ಧಿವಾದವನ್ನು ಕೇಳು, ಉಪದೇಶವನ್ನಾಲಿಸು,
ಮುಂದೆ ಜ್ಞಾನಿಯಾಗುವಿ.
ಮನುಷ್ಯನ ಮನಸ್ಸಿನಲ್ಲಿ ಅನೇಕ ಸಂಕಲ್ಪಗಳಿವೆ;
ಯೆಹೋವನ ಸಂಕಲ್ಪವೇ ಈಡೇರುವದು.
1)ಇಷ್ಟವು ಔದಾರ್ಯದ ಪ್ರಮಾಣ;
[ಇದ್ದರೂ ಇಲ್ಲವೆಂದು] ಸುಳ್ಳಾಡುವವನಿಗಿಂತಲೂ ಏನೂ ಇಲ್ಲದವನೇ ಲೇಸು.
ಯೆಹೋವನ ಭಯವು ಜೀವದಾಯಕವು;
[ಭಯಭಕ್ತಿಯುಳ್ಳವನು] ತೃಪ್ತನಾಗಿ ನೆಲೆಗೊಳ್ಳುವನು;
ಅವನಿಗೆ ಕೇಡು ಸಂಭವಿಸದು.
ಮೈಗಳ್ಳನು ಪಾತ್ರೆಯೊಳಗೆ ಕೈ ಮುಳುಗಿಸಿದ ಮೇಲೆ
ತಿರಿಗಿ ಬಾಯ ಹತ್ತಿರಕ್ಕೆ ತರಲಾರನು.
ಧರ್ಮನಿಂದಕನಿಗೆ ಪೆಟ್ಟುಹೊಡೆ, [ನೋಡಿದ] ಮಂದಮತಿಯು ಜಾಣನಾಗುವನು;
ವಿವೇಕಿಯನ್ನು ಗದರಿಸು, ತಾನೇ ತಿಳುವಳಿಕೆಯನ್ನು ಗ್ರಹಿಸುವನು.
ತಂದೆಯನ್ನು ಹೊಡೆದು ತಾಯಿಯನ್ನು ಓಡಿಸುವ ಮಗನು
ನಾಚಿಕೆಯನ್ನೂ ಅವಮಾನವನ್ನೂ ಉಂಟುಮಾಡುವನು.
ಮಗನೇ, ಬುದ್ಧಿವಾದಗಳನ್ನು ಅನುಸರಿಸಲಿಕ್ಕೆ ಮನಸ್ಸಿಲ್ಲದಿದ್ದರೆ
ಉಪದೇಶ ಕೇಳುವದನ್ನೇ ಬಿಟ್ಟುಬಿಡು.
ನೀಚ ಸಾಕ್ಷಿಯು ನ್ಯಾಯವನ್ನು ಗೇಲಿಮಾಡುವನು;
ದುಷ್ಟರ ಬಾಯಿ ದ್ರೋಹವನ್ನು ಆತುರದಿಂದ ನುಂಗುವದು.
ಧರ್ಮನಿಂದಕರಿಗೆ [ದಂಡನೆಯ] ತೀರ್ಪು ಸಿದ್ಧ,
ಮೂಢರ ಬೆನ್ನಿಗೆ ಪೆಟ್ಟು ಖಂಡಿತ.

20 ದ್ರಾಕ್ಷಾರಸವು ಪರಿಹಾಸ್ಯ, ಮದ್ಯವು ಕೂಗಾಟ;
ಇವುಗಳಿಂದ ಓಲಾಡುವವನು ಜ್ಞಾನಿಯಲ್ಲ.
ರಾಜನು ಗರ್ಜಿಸುವ ಸಿಂಹದಂತೆ ಭಯಂಕರನು,
ಅವನನ್ನು ಕೆಣಕುವವನು ತನಗೇ ಕೆಡುಕುಮಾಡಿಕೊಳ್ಳುವನು.
ವ್ಯಾಜ್ಯಕ್ಕೆ ದೂರನು ಮಾನಕ್ಕೆ ಯೋಗ್ಯನು;
ಜಗಳವು ಪ್ರತಿಯೊಬ್ಬ ಮೂರ್ಖನಿಗೂ ಸಹಜ.
ಮೈಗಳ್ಳನು ಮಳೆಗಾಲದಲ್ಲಿ ಹೊಲಗೇಯನು;
ಸುಗ್ಗೀಕಾಲದಲ್ಲಿ 2)ಅಪೇಕ್ಷಿಸಲು ಏನು ಸಿಕ್ಕೀತು?
ಮನುಷ್ಯನ ಹೃದಯಸಂಕಲ್ಪವು ಆಳವಾದ [ಬಾವಿಯ] ನೀರು.
ಆದರೆ ವಿವೇಕಿಯು ಅದನ್ನು ಸೇದಬಲ್ಲನು.
ಸ್ನೇಹಿತರೆಂದು ಹೇಳಿಕೊಳ್ಳುವವರು ಬಹು ಮಂದಿ;
ನಂಬಿಗಸ್ತನಾದ ಸ್ನೇಹಿತನು ಎಲ್ಲಿ ಸಿಕ್ಕುವನು?
ಸದ್ಧರ್ಮಿಯು ನಿರ್ದೋಷವಾಗಿ ನಡೆಯುವನು;

1) ಅಥವಾ: ದಯಾಳುವು ಇತರರಿಗೆ ಪ್ರಿಯನು. 2) ಅಥವಾ: ಭಿಕ್ಷೆಬೇಡಲು.

ಅವನು ಗತಿಸಿದ ಮೇಲೆಯೂ ಅವನ ಮಕ್ಕಳು ಭಾಗ್ಯ
ವಂತರು.
8 ರಾಜನು ನ್ಯಾಯಾಸನಾರೂಢನಾಗಿ
ತನ್ನ ದೃಷ್ಟಿಯಿಂದ ಸಕಲ ಕೆಟ್ಟತನವನ್ನು ತೂರುವನು.
9 ನನ್ನ ಹೃದಯವನ್ನು ಶುದ್ಧಿಮಾಡಿಕೊಂಡಿದ್ದೇನೆ;
ನನ್ನ ಪಾಪವನ್ನು ಕಳೆದುಕೊಂಡು ನಿರ್ಮಲನಾಗಿದ್ದೇನೆ
ಎಂದು ಯಾರು ಹೇಳಬಲ್ಲರು?
10 ತೂಕದ ಕಲ್ಲನ್ನೂ ಅಳತೆಯ ಪಾತ್ರೆಯನ್ನೂ ಹೆಚ್ಚಿಸು
ವದು, ತಗ್ಗಿಸುವದು
ಇವೆರಡೂ ಯೆಹೋವನಿಗೆ ಅಸಹ್ಯ.
11 ಒಬ್ಬ ಹುಡುಗನಾದರೂ ಶುದ್ಧವೂ ಸತ್ಯವೂ ಆದ ನಡತೆ
ಯಿಂದಲೇ
ತನ್ನ ಗುಣವನ್ನು ತೋರ್ಪಡಿಸಿಕೊಳ್ಳುವನು.
12 ಕೇಳುವ ಕಿವಿ, ನೋಡುವ ಕಣ್ಣು,
ಇವೆರಡನ್ನೂ ಯೆಹೋವನು ನಿರ್ಮಿಸಿದ್ದಾನೆ.
13 ನಿದ್ರಾನಿರತನಾಗಿರಬೇಡ! ಬಡವನಾದೀಯೆ;
ಕಣ್ಣು ತೆರೆ! ಆಹಾರದಿಂದ ತೃಪ್ತಿಗೊಳ್ಳುವಿ.
14 ಕೊಳ್ಳುವವನು—ಚೆನ್ನಾಗಿಲ್ಲ, ಚೆನ್ನಾಗಿಲ್ಲ ಎಂದು
ಹೇಳುತ್ತಾನೆ,
ಕೊಂಡುಕೊಂಡು ಹೋಗಿ ಹೆಚ್ಚಳಪಡುತ್ತಾನೆ.
15 ಹೊನ್ನು ಉಂಟು, ಹವಳದ ರಾಶಿ ಉಂಟು,
ಆದರೆ ಜ್ಞಾನದ ತುಟಿಗಳೇ ಅಮೂಲ್ಯಾಭರಣ.
16 ಮತ್ತೊಬ್ಬನಿಗೆ ಹೊಣೆಯಾದವನ ಬಟ್ಟೆಯನ್ನು ಕಿತ್ತು
ಕೋ;
[1]ಮತ್ತೊಬ್ಬಳಿಗೆ ಹೊಣೆಯಾದವನನ್ನೇ ಒತ್ತೆ ಮಾಡಿ
ಕೋ.
17 ಮೋಸದಿಂದ ಸಿಕ್ಕಿದ ಆಹಾರವು ಮನುಷ್ಯನಿಗೆ ರುಚಿ,
ಆ ಮೇಲೆ ಅವನ ಬಾಯಿ ಮರಳಿನಿಂದ ತುಂಬುವದು.
18 ಉದ್ದೇಶಗಳು ಮಂತ್ರಾಲೋಚನೆಯಿಂದ ನೆರವೇರು
ವವು;
ಮಂತ್ರಾಲೋಚನೆಯಿಂದಲೇ ಯುದ್ಧವನ್ನು ನಡಿಸು.
19 ಚಾಡಿಕೋರನು ಗುಟ್ಟು ರಟ್ಟುಮಾಡುವನು;
ಆದದರಿಂದ ತುಟಿಬಿಗಿಹಿಡಿಯದವನ ಗೊಡವೆಗೆ ಹೋಗ
ಬೇಡ.
20 ತಂದೆಯನ್ನಾಗಲಿ ತಾಯಿಯನ್ನಾಗಲಿ ಶಪಿಸುವವನ
ದೀಪವು
ಮಧ್ಯರಾತ್ರಿಯ ಅಂಧಕಾರದಲ್ಲಿ ಆರಿಹೋಗುವದು.
21 ಮೊದಲು ಬೇಗನೆ ಬಾಚಿಕೊಂಡ ಸ್ವಾಸ್ತ್ಯವು
ಕೊನೆಯಲ್ಲಿ ಶುಭವನ್ನು ಹೊಂದದು.
22 ಕೇಡಿಗೆ ಮುಯ್ಯಿತೀರಿಸುವೆನು ಅನ್ನಬೇಡ;
ಯೆಹೋವನನ್ನು ನಿರೀಕ್ಷಿಸಿಕೊಂಡಿರು, ಆತನೇ ನಿನ್ನ
ನ್ನುದ್ಧರಿಸುವನು.
23 ತೂಕದ ಕಲ್ಲನ್ನು ಹೆಚ್ಚಿಸುವದು ತಗ್ಗಿಸುವದು ಯೆ
ಹೋವನಿಗೆ ಅಸಹ್ಯ;
ಮೋಸದ ತ್ರಾಸು ಒಳ್ಳೇದಲ್ಲ.
24 ಮನುಷ್ಯನಿಗೆ ಗತಿಯನ್ನು ಏರ್ಪಡಿಸುವವನು ಯೆಹೋ
ವನೇ ಆಗಿರುವಲ್ಲಿ
ಮನುಷ್ಯನು ತನ್ನ ಮಾರ್ಗವನ್ನು ಹೇಗೆ ತಿಳಿದು
ಕೊಂಡಾನು?
ದುಡುಕಿ ಮುಡುಪುಕಟ್ಟುವದು ಮನುಷ್ಯನಿಗೆ ಉರು 25
ಲು;
ಹರಕೆಹೊತ್ತಮೇಲೆ ವಿಚಾರಪಡಬೇಕಾಗುತ್ತದೆ.
ಜ್ಞಾನಿಯಾದ ಅರಸನು ದುಷ್ಟರ ಮೇಲೆ ಕಣದ 26
ಗುಂಡನ್ನು ಉರುಳಿಸಿ
ಅವರನ್ನು ತೂರಿಬಿಡುವನು.
ಮನುಷ್ಯನ ಆತ್ಮವು ಯೆಹೋವನ ದೀಪವಾಗಿದೆ; 27
ಅದು ಅಂತರಂಗವನ್ನೆಲ್ಲಾ ಶೋಧಿಸುತ್ತದೆ.
ರಾಜನ ಕೃಪಾಸತ್ಯತೆಗಳು ಅವನನ್ನು ಕಾಯುವವು; 28
ಅವನ ಕರುಣೆಯೇ ಅವನ ಸಿಂಹಾಸನಕ್ಕೆ ಆಧಾರ.
ಯುವಕರಿಗೆ ಬಲವು ಭೂಷಣ, 29
ಮುದುಕರಿಗೆ ನರೆಯು ಒಡವೆ.
ಗಾಯಮಾಡುವ ಪೆಟ್ಟುಗಳು ಕೆಟ್ಟದ್ದನ್ನು ತೊಳೆದು 30
ಬಿಡುವವು;
ಏಟುಗಳು ಅಂತರಂಗಕ್ಕೂ ತಗಲುವವು.

21

ರಾಜನ [2]ಸಂಕಲ್ಪಗಳು ಯೆಹೋವನ ಕೈಯಲ್ಲಿ
ನೀರಿನ ಕಾಲುವೆಗಳಂತೆ ಇವೆ;
ತನಗೆ ಬೇಕಾದ ಕಡೆಗೆ ತಿರುಗಿಸುತ್ತಾನೆ.
ನರನ ನಡತೆಯು ಸ್ವಂತ ದೃಷ್ಟಿಗೆ ನೆಟ್ಟಗೆ; 2
ಯೆಹೋವನು ಹೃದಯಗಳನ್ನೇ ಪರೀಕ್ಷಿಸುವನು.
ಯಜ್ಞಕ್ಕಿಂತಲೂ ನೀತಿನ್ಯಾಯಗಳು ಯೆಹೋವನಿಗೆ 3
ಇಷ್ಟ.
ಗರ್ವದ ದೃಷ್ಟಿ, ಕೊಬ್ಬಿದ ಹೃದಯ, 4
ದುಷ್ಟರ ಭಾಗ್ಯ, ಇವು ಧರ್ಮವಿರುದ್ಧ.
ಶ್ರಮಶೀಲರಿಗೆ ತಮ್ಮ ಯತ್ನಗಳಿಂದ ಸಮೃದ್ಧಿ; 5
ಆತುರಪಡುವವರಿಗೆಲ್ಲಾ ಕೊರತೆಯೇ.
ಸುಳ್ಳಿನಿಂದ ಸಿಕ್ಕಿದ ಸಂಪತ್ತು 6
[3]ಹಬೆಯಂತೆ ಅಸ್ಥಿರ, ಮೃತ್ಯುಪಾಶದಂತೆ [ನಾಶಕರ].
ದುಷ್ಟರು ನ್ಯಾಯವನ್ನು ನಿರಾಕರಿಸುವ ಕಾರಣ 7
ಅವರ ಬಲಾತ್ಕಾರವು ಅವರನ್ನೇ ಎಳೆದುಕೊಂಡು ಹೋ
ಗುವದು.
ದೋಷಿಯ ದಾರಿ ಡೊಂಕು; 8
ಶುದ್ಧನ ನಡತೆ ಸರಲ.
[4]ಮನೆಯಲ್ಲಿ ಜಗಳಗಂಟಿಯ ಜೊತೆಯಲ್ಲಿರುವದ 9
ಕ್ಕಿಂತಲೂ
ಮಾಳಿಗೆಯ ಒಂದು ಮೂಲೆಯಲ್ಲಿ ವಾಸಿಸುವದೇ
ಲೇಸು.
ದುರಾತ್ಮನು ಕೇಡಿನ ಮೇಲೇ ಮನಸ್ಸಿಡುವನು; 10
ನೆರೆಯವನಿಗೂ ದಯೆತೋರಿಸನು.
ಧರ್ಮನಿಂದಕನಿಗೆ ದಂಡನೆಯಾದರೆ [ನೋಡಿದ] 11
ಮಂದಮತಿಯು ಜ್ಞಾನವನ್ನು ಪಡೆಯುವನು;
ಜ್ಞಾನಿಗೆ ಶಿಕ್ಷೆಯಾದರೆ ತಾನೇ ತಿಳುವಳಿಕೆಯನ್ನು
ಹೊಂದುವನು.

1) ಪಾಠಾಂತರ: ಅನ್ಯರಿಗೆ. 2) ಮೂಲ: ಹೃದಯವು. 3) ಪಾಠಾಂತರ: ಚದರುವ ಹಬೆ; [ಅದನ್ನು ಹುಡುಕುವವರು] ಮರಣವನ್ನೇ ಹುಡುಕಿಕೊಳ್ಳುವರು. 4) ಅಥವಾ: ದೊಡ್ಡ ಮನೆಯಲ್ಲಿ; ಮೂಲ: ಸಹವಾಸದ ಮನೆಯಲ್ಲಿ.

12 ಧರ್ಮಸ್ವರೂಪನು ಅಧರ್ಮಿಯ ಮನೆಯನ್ನು ಲಕ್ಷ್ಯಕ್ಕೆ ತಂದು
ಅಧರ್ಮಿಗಳನ್ನು ಕೆಡವಿ ಕೇಡಿಗೆ ದೊಬ್ಬುವನು.
13 ಬಡವನ ಮೊರೆಗೆ ಕಿವಿಮುಚ್ಚಿಕೊಳ್ಳುವವನು ತಾನೇ ಮೊರೆಯಿಡುವಾಗ
ಯಾರೂ ಉತ್ತರಕೊಡರು.
14 ಗುಪ್ತ ಬಹುಮಾನವು ಕೋಪವನ್ನಾರಿಸುವದು;
ಮಡಲಲ್ಲಿಟ್ಟ ಲಂಚವು ಬಲು ಸಿಟ್ಟನ್ನಣಗಿಸುವದು.
15 ನ್ಯಾಯಮಾರ್ಗವು ಶಿಷ್ಟರಿಗೆ ಸಂತೋಷ,
ಕೆಡುಕರಿಗೆ ಕೇಡು.
16 ಜ್ಞಾನಮಾರ್ಗದಿಂದ ತಪ್ಪಿದವನಿಗೆ
ಪ್ರೇತಸಮೂಹವೇ ವಿಶ್ರಾಂತಿಸ್ಥಾನ.
17 ಭೋಗಾಸಕ್ತನು ಕೊರತೆಪಡುವನು;
ದ್ರಾಕ್ಷಾರಸವನ್ನೂ [ಸುಗಂಧ] ತೈಲವನ್ನೂ ಆಶಿಸುವವನು ನಿರ್ಭಾಗ್ಯನಾಗುವನು.
18 ಶಿಷ್ಟನಿಗೆ ಪ್ರತಿಯಾಗಿ ದುಷ್ಟನೂ
ಸತ್ಯವಂತರಿಗೆ ಬದಲಾಗಿ ದ್ರೋಹಿಯೂ ದಂಡನೆಗೆ ಈಡು.
19 ಕಾಡುವ ಜಗಳಗಂಟಿಯ ಸಹವಾಸಕ್ಕಿಂತಲೂ
ಕಾಡಿನ ವಾಸವೇ ಲೇಸು.
20 ಜ್ಞಾನಿಯ ನಿವಾಸದಲ್ಲಿ ಎಣ್ಣೆಯೂ ಶ್ರೇಷ್ಠಸಂಪತ್ತೂ ಇರುವವು,
ಜ್ಞಾನಹೀನನು ಇದ್ದದ್ದನ್ನೆಲ್ಲಾ ನುಂಗಿಬಿಡುವನು.
21 ನೀತಿ ಕೃಪೆಗಳನ್ನು ಹುಡುಕುವವನು
ನೀತಿ ಜೀವಕೀರ್ತಿಗಳನ್ನು ಪಡೆಯುವನು.
22 ಜ್ಞಾನಿಯು ಬಲಿಷ್ಠರ ಪಟ್ಟಣವನ್ನು ಲಗ್ಗೆಹತ್ತಿ
ಅವರು ನಂಬಿದ್ದ ಬಲವಾದ ಕೋಟೆಯನ್ನು ಕೆಡವಿ ಹಾಕುವನು.
23 ತನ್ನ ಬಾಯನ್ನೂ ನಾಲಿಗೆಯನ್ನೂ ಕಾಯುವವನು
ತೊಂದರೆಗಳಿಂದ ರಕ್ಷಿಸಿಕೊಳ್ಳುವನು.
24 ಧರ್ಮನಿಂದಕನೆನಿಸಿಕೊಳ್ಳುವ ಸೊಕ್ಕೇರಿದ ಅಹಂಕಾರಿಯು
ಗರ್ವಮದದಿಂದ ಪ್ರವರ್ತಿಸುವನು.
25 ಸೋಮಾರಿಯ ಆಶೆಯು ಅವನನ್ನು ಕೊಲ್ಲುವದು,
ಅವನ ಕೈಗಳು ದುಡಿಯಲೊಲ್ಲವಷ್ಟೆ.
26 ಧರ್ಮಿಯು ಹಿಂತೆಗೆಯದೆ ಕೊಡುವನು,
ಲೋಭಿಯು ದಿನವೆಲ್ಲಾ ಆಶಿಸುತ್ತಲೇ ಇರುವನು.
27 ದುಷ್ಟರ ಯಜ್ಞವೇ ಅಸಹ್ಯ,
ಅದನ್ನು ದುರ್ಬುದ್ಧಿಯಿಂದ ಅರ್ಪಿಸುವದು ಮತ್ತೂ ಅಸಹ್ಯ.
28 ಸುಳ್ಳುಸಾಕ್ಷಿಯು ಅಳಿದುಹೋಗುವದು;
[1]ಕೇಳಿದ್ದದ್ದನ್ನೇ ಹೇಳುವವನ ಸಾಕ್ಷಿಯು ಶಾಶ್ವತವಾರುವದು.
29 ದುಷ್ಟನ ಮುಖದಲ್ಲಿ ಲಜ್ಜೆಯಿಲ್ಲ;
ಸತ್ಯವಂತನು ತನ್ನ ನಡತೆಯನ್ನು ಸರಿಪಡಿಸಿಕೊಳ್ಳುತ್ತಿರುವನು.
30 ಯಾವ ಜ್ಞಾನವೂ ಯಾವ ವಿವೇಕವೂ ಯಾವ ಆಲೋಚನೆಯೂ
ಯೆಹೋವನೆದುರಿಗೆ ನಿಲ್ಲುವದಿಲ್ಲ.
ಅಶ್ವಬಲವು ಯುದ್ಧದಿನಕ್ಕಾಗಿ ಸನ್ನದ್ಧವಾಗಿದ್ದರೂ
ಜಯವು ಯೆಹೋವನಿಂದಲೇ.

ಬಹುಧನಕ್ಕಿಂತಲೂ ಒಳ್ಳೆಯ ಹೆಸರು ಉತ್ತಮ; 2
ಬೆಳ್ಳಿ ಬಂಗಾರಕ್ಕಿಂತಲೂ ಸತ್ಕೀರ್ತಿಯು ಅಮೂಲ್ಯ.
ಬಡವರು ಬಲ್ಲಿದರು ಸ್ಥಿತಿಯಲ್ಲಿ ಎದುರುಬದುರಾಗಿದ್ದಾರೆ,
ಯೆಹೋವನೇ ಅವರನ್ನೆಲ್ಲಾ ಸೃಷ್ಟಿಸಿದನು.
ಜಾಣನು ಕೇಡನ್ನು ಕಂಡು ಅಡಗಿಕೊಳ್ಳುವನು;
ಬುದ್ಧಿಹೀನನು ಮುಂದೆ ಹೋಗಿ ನಷ್ಟಪಡುವನು.
ಧನ ಮಾನ ಜೀವಗಳು
ದೀನಭಾವಕ್ಕೂ ಯೆಹೋವನ ಭಯಕ್ಕೂ ಫಲ.
ವಕ್ರಬುದ್ಧಿಯುಳ್ಳವನ ಮಾರ್ಗದಲ್ಲಿ ಮುಳ್ಳುಗಳೂ ಉರುಲುಗಳೂ ತುಂಬಿವೆ;
ತನ್ನನ್ನು ರಕ್ಷಿಸಿಕೊಳ್ಳುವವನು ಅವುಗಳಿಗೆ ದೂರವಾಗಿರುವನು.
ನಡೆಯಬೇಕಾದ ಮಾರ್ಗಕ್ಕೆ ತಕ್ಕಂತೆ ಹುಡುಗನನ್ನು ಶಿಕ್ಷಿಸು;
ಮುಪ್ಪಿನಲ್ಲಿಯೂ ಓರೆಯಾಗನು.
ಬಲ್ಲಿದನು ಬಡವನಿಗೆ ಒಡೆಯ;
ಸಾಲಗಾರನು ಸಾಲಕೊಟ್ಟವನಿಗೆ ಸೇವಕ.
ಕೆಟ್ಟತನವನ್ನು ಬಿತ್ತುವವನು ಕೇಡನ್ನೇ ಕೊಯ್ಯುವನು;
[2]ಹೆಮ್ಮೆಯಿಂದ ಹಿಡಿದ ದಂಡವು ಅವನ ಕೈಯಿಂದ ಬಿದ್ದುಹೋಗುವದು.
ದಯಾದೃಷ್ಟಿಯವನು ಆಶೀರ್ವಾದವನ್ನು ಪಡೆಯುವನು;
ತನ್ನ ಅನ್ನವನ್ನು ಬಡವರಿಗೆ ಕೊಡುತ್ತಾನಲ್ಲವೆ.
ಧರ್ಮನಿಂದಕನನ್ನು ಓಡಿಸಿಬಿಟ್ಟರೆ ಜಗಳವು ತೊಲಗುವದು;
ಹೌದು, ವ್ಯಾಜ್ಯವು ತೀರಿ ಅವಮಾನವು ಇಲ್ಲವಾಗುವದು.
ಹೃದಯಶುದ್ಧಿಯನ್ನಪೇಕ್ಷಿಸುವ ಸವಿಮಾತಾಡುವ ಮನುಷ್ಯನಿಗೆ
ರಾಜನ ಸ್ನೇಹವು ದೊರೆಯುವದು.
ಯೆಹೋವನ ಕಣ್ಣು [3]ತಿಳುವಳಿಕೆಗೆ ಕಾವಲು;
ಆತನು ವಂಚಕನ ಮಾತುಗಳನ್ನು ಕೆಡವಿಬಿಡುವನು.
ಹೊರಗೆ ಸಿಂಹವಿದೆ,
ನನ್ನನ್ನು ಬೀದಿಯಲ್ಲಿ ಕೊಂದೀತು ಎಂಬದು ಸೋಮಾರಿಯ ನೆವ.
ಜಾರಸ್ತ್ರೀಯ ಬಾಯಿ ಆಳವಾದ ಹಳ್ಳ;
ಯೆಹೋವನಿಗೆ ಸಿಟ್ಟನ್ನೆಬ್ಬಿಸಿದವನು ಅದರಲ್ಲಿ ಬೀಳುವನು.
ಮೂರ್ಖತನವು ಹುಡುಗನ ಮನಸ್ಸಿಗೆ ಸಹಜ,
ಆದರೆ ಶಿಕ್ಷಕನ ಬೆತ್ತವು ಅದನ್ನು ತೊಲಗಿಸುವದು.
ಸ್ವಂತ ಲಾಭಕ್ಕಾಗಿ ಬಡವರನ್ನು ಹಿಂಸಿಸುವವನಿಗೂ
ಬಲ್ಲಿದರಿಗೆ ಲಂಚಕೊಡುವವನಿಗೂ ಕೊರತೆಯೇ ಗತಿ.

1) ಮೂಲ: ಕೇಳಿದವನು ಶಾಶ್ವತವಾಗಿ ಮಾತಾಡುವನು. 2) ಅಥವಾ: ಸಿಟ್ಟಿನಿಂದ. 3) ಮೂಲ: ಯಥಾರ್ಥಕ್ಕೆ.

17 ಕಿವಿಗೊಟ್ಟು ಜ್ಞಾನಿಗಳ ಮಾತುಗಳನ್ನು ಕೇಳು;
ನನ್ನ ಜ್ಞಾನಬೋಧೆಗೆ ಮನಸ್ಸಿಡು.
18 ನೀನು ಆ ಮಾತುಗಳನ್ನು ಅಂತರಂಗದಲ್ಲಿ ಕಾಪಾಡುತ್ತಾ
ತುಟಿಗಳಲ್ಲಿ ಸಿದ್ಧಪಡಿಸಿಕೊಂಡಿದ್ದರೆ ಎಷ್ಟೋ ರಮ್ಯ.
19 ನೀನು ಯೆಹೋವನಲ್ಲಿ ಭರವಸಪಡಬೇಕೆಂದು
ಅವುಗಳನ್ನು ಈ ದಿನ ನಿನಗೇ ತಿಳಿಯಪಡಿಸಿದ್ದೇನೆ.
20 ಸತ್ಯವಚನಗಳು ಎಷ್ಟೋ ಯಥಾರ್ಥವೆಂದು ನೀನು ತಿಳಿದುಕೊಂಡು
ನಿನ್ನನ್ನು ಕಳುಹಿಸಿದವರಿಗೆ ಸತ್ಯವಚನಗಳನ್ನೇ ಅರಿಕೆ ಮಾಡುವಂತೆ
21 ಉಚಿತಾಲೋಚನೆ, ತಿಳುವಳಿಕೆ ಇವುಗಳ ವಿಷಯವಾಗಿ
ಇದಕ್ಕೆ ಮುಂಚೆಯೇ ನಿನಗೋಸ್ಕರ ಬರೆದಿದ್ದೇನಲ್ಲವೆ.

22 ಬಡವರಿಗೆ ದಿಕ್ಕಿಲ್ಲವೆಂದು ತಿಳಿದು ಅವರನ್ನು ಸೂರೆ ಮಾಡಬೇಡ;
ನ್ಯಾಯಸ್ಥಾನದಲ್ಲಿ ದರಿದ್ರರನ್ನು ತುಳಿಯದಿರು.
23 ಯೆಹೋವನೇ ಅವರ ವ್ಯಾಜ್ಯವನ್ನು ನಡಿಸಿ
ಸೂರೆಮಾಡಿದವರ ಜೀವವನ್ನು ಸೂರೆಮಾಡುವನು.
24 ಕೋಪಿಷ್ಠನ ಸಂಗಡ ಸ್ನೇಹ ಬೆಳಸಬೇಡ;
ಸಿಟ್ಟುಗಾರನ ಸಹವಾಸ ಮಾಡಬೇಡ.
25 ಮಾಡಿದರೆ ಅವನ ದುರ್ನಡತೆಯನ್ನನುಸರಿಸಿ
ನಿನ್ನ ಆತ್ಮವನ್ನು ಉರುಲಿಗೆ ಸಿಕ್ಕಿಸಿಕೊಳ್ಳುವಿ ನೋಡಿಕೋ.
26 ಕೈಮೇಲೆ ಕೈಹಾಕಿ
ಸಾಲಕ್ಕೆ ಹೊಣೆಯಾಗುವವರಲ್ಲಿ ನೀನೂ ಒಬ್ಬನಾಗಬೇಡ.
27 ಆ ಸಾಲವನ್ನು ತೀರಿಸುವದಕ್ಕೆ ನಿನ್ನಿಂದಾಗದಿರಲು
ಸಾಲಕೊಟ್ಟವನು ನಿನ್ನ ಕೆಳಗಿನ ಹಾಸಿಗೆಯನ್ನು ಕಿತ್ತುಹಾಕುವನಲ್ಲವೆ, ಇದೇಕೆ?
28 ನಿನ್ನ ಪಿತೃಗಳು ಹಾಕಿದ
ಪೂರ್ವಕಾಲದ ಮೇರೆಯನ್ನು ಒತ್ತಬೇಡ.
29 ತನ್ನ ಕೆಲಸದಲ್ಲಿ ಚಟವಟಿಕೆಯಾಗಿರುವವನನ್ನು ನೋಡು;
ಇಂಥವನು ರಾಜರನ್ನು ಸೇವಿಸುವನಲ್ಲದೆ ನೀಚರನ್ನು ಸೇವಿಸುವದಿಲ್ಲ.

23 ನೀನು ಅಧಿಪತಿಯ ಸಂಗಡ ಊಟಕ್ಕೆ ಕೂತಿರುವಾಗ
ಯಾರ ಸನ್ನಿಧಾನದಲ್ಲಿದ್ದೇನೆಂಬದನ್ನು ಮರೆಯದಿರು.
2 ನೀನು ಹೊಟ್ಟೆಬಾಕನಾಗಿದ್ದರೆ
ಕಂಠಕ್ಕೆ ಕತ್ತಿಹಾಕಿಕೋ.
3 ಅವನ ರುಚಿಪದಾರ್ಥಗಳನ್ನು ಬಯಸಬೇಡ,
ಅದು ಮೋಸದ ಆಹಾರವೇ ಸರಿ.
4 ದುಡ್ಡಿನಾಸೆಯಿಂದ ದುಡಿಯಬೇಡ;
ಸ್ವಬುದ್ಧಿಯನ್ನೇ ಆಶ್ರಯಿಸಬೇಡ.
5 ನಿನ್ನ ದೃಷ್ಟಿಯು ಧನದ ಮೇಲೆ ಎರಗುತ್ತದೋ? ಧನವು ಅಷ್ಟರೊಳಗೆ ಮಾಯವಾಗುವದು;
ಆಕಾಶದ ಕಡೆಗೆ ಹಾರುವ ಹದ್ದಿನಂತೆ
ಅದು ರೆಕ್ಕೆಗಳನ್ನು ಕಟ್ಟಿಕೊಂಡಿದೆ.
[1])ಲೋಭಿಯ ಅನ್ನವನ್ನು ಉಣ್ಣದಿರು; 6
ಅವನ ರುಚಿಪದಾರ್ಥಗಳನ್ನು ಬಯಸಬೇಡ.
ಅವನು ತನ್ನ ಒಳಗಿನ ಯೋಚನೆಯಂತೆಯೇ ಇದ್ದಾನೆ. 7
ಉಣ್ಣು, ಕುಡಿ, ಎಂದು ಹೇಳಿದರೂ
ನಿನ್ನಲ್ಲಿ ಅವನಿಗೆ ಪ್ರೀತಿಯಿಲ್ಲ.
ನೀನು ತಿಂದ ತುತ್ತನ್ನು ಕಕ್ಕಿಬಿಡುವಿ; 8
ನಿನ್ನ ಸವಿಮಾತುಗಳು ವ್ಯರ್ಥ.
ಮೂಢನ ಸಂಗಡ ಮಾತಾಡಬೇಡ; 9
ನಿನ್ನ ಮಾತುಗಳ ವಿವೇಕವನ್ನು ತಿರಸ್ಕರಿಸುವನು.
ಪೂರ್ವಕಾಲದ ಮೇರೆಯನ್ನು ಒತ್ತಬೇಡ; 10
ಅನಾಥರ ಹೊಲಗಳಲ್ಲಿ ನುಗ್ಗದಿರು.
ಅವರ ರಕ್ಷಕನು ಬಲಶಾಲಿಯಾಗಿದ್ದಾನೆ; 11
ಅವರಿಗಾಗಿ ನಿನ್ನ ಸಂಗಡ ವ್ಯಾಜ್ಯವಾಡುವನು.
ಉಪದೇಶವನ್ನು ಮನಸ್ಸಿಗೆ ತೆಗೆದುಕೋ; 12
ತಿಳುವಳಿಕೆಯ ಮಾತುಗಳಿಗೆ ಕಿವಿಗೊಡು.
ಹುಡುಗನ ಶಿಕ್ಷೆಗೆ ಹಿಂತೆಗೆಯಬೇಡ; 13
ಬೆತ್ತದ ಏಟಿಗೆ ಸಾಯನು.
ಬೆತ್ತದಿಂದ ಹೊಡೆ; 14
ಅವನ ಆತ್ಮವನ್ನು ಪಾತಾಳಕ್ಕೆ ಬೀಳದಂತೆ ಕಾಪಾಡು.
ಕಂದಾ, ನಿನ್ನ ಮನಸ್ಸಿಗೆ ಜ್ಞಾನವುಂಟಾದರೆ 15
ನನ್ನ ಮನಸ್ಸಿಗೂ ಉಲ್ಲಾಸವಾಗುವದು.
ಹೌದು, ನಿನ್ನ ತುಟಿಗಳು ನೀತಿಯನ್ನಾಡಿದರೆ 16
ನನ್ನ ಅಂತರಾತ್ಮವು ಹಿಗ್ಗುವದು.
ಪಾಪಿಗಳನ್ನು ನೋಡಿ ಹೊಟ್ಟೆಕಿಚ್ಚುಪಡಬೇಡ; 17
ಯೆಹೋವನಲ್ಲಿ ದಿನವೆಲ್ಲಾ ಭಯಭಕ್ತಿಯುಳ್ಳವನಾಗಿರು.
[2])ಒಂದು ಕಾಲ ಉಂಟು, 18
ನಿನ್ನ ನಿರೀಕ್ಷೆಯು ನಿರರ್ಥಕವಾಗದು.
ಕಂದಾ, ಕೇಳು, ಜ್ಞಾನವಂತನಾಗಿರು, 19
ನಿನ್ನ ಮನಸ್ಸನ್ನು [ಜ್ಞಾನ]ಮಾರ್ಗದಲ್ಲಿ ಮುಂದೆ ನಡೆಯಿಸು.
ಕುಡುಕರಲ್ಲಿಯೂ ಅತಿಮಾಂಸಭಕ್ಷಕರಲ್ಲಿಯೂ ಸೇರದಿರು. 20
ಕುಡುಕನೂ ಹೊಟ್ಟೆಬಾಕನೂ ದುರ್ಗತಿಗೆ ಬರುವರು; 21
ನಿದ್ರಾಸಕ್ತಿಯು ಹರಕು ಬಟ್ಟೆಗಳನ್ನು ಹೊದಿಸುವದು.
ಹೆತ್ತ ತಂದೆಯ ಮಾತಿಗೆ ಕಿವಿಗೊಡು; 22
ಮುಪ್ಪಿನಲ್ಲಿಯೂ ತಾಯಿಯನ್ನು ಅಸಡ್ಡೆಮಾಡಬೇಡ.
ಸತ್ಯವನ್ನು ಎಂದರೆ ಜ್ಞಾನ ಸುಶಿಕ್ಷೆ ವಿವೇಕಗಳನ್ನು ಕೊಂಡುಕೋ; 23
ಮಾರಿ ಬಿಡಬೇಡ.
ಧರ್ಮಿಯ ತಂದೆಯು ಅತಿ ಸಂತೋಷಪಡುವನು; 24
ಜ್ಞಾನಿಯನ್ನು ಹೆತ್ತವನು ಅವನಲ್ಲಿ ಆನಂದಿಸುವನು.
ನಿನ್ನ ತಂದೆತಾಯಿಗಳು ಉಲ್ಲಾಸಗೊಳ್ಳಲಿ, 25
ನಿನ್ನನ್ನು ಹೆತ್ತವಳು ಆನಂದಪಡಲಿ.
ಕಂದಾ, [3])ನನ್ನ ಕಡೆಗೆ ಮನಸ್ಸುಕೊಡು, 26

1) ಮೂಲ: ಕೆಟ್ಟ ಕಣ್ಣಿನವನ. 2) ಅಥವಾ: ಪ್ರತಿಫಲವಾಗುವದು. 3) ಅಥವಾ: ನಿನ್ನ ಹೃದಯವನ್ನೇ ನನಗೊಪ್ಪಿಸು.

ನಿನ್ನ ಕಣ್ಣುಗಳು ನನ್ನ ಮಾರ್ಗಗಳಲ್ಲಿ ಆನಂದಿಸಲಿ.
27 ಸೂಳೆಯು ಆಳವಾದ ಹಳ್ಳ,
ಜಾರಸ್ತ್ರೀಯು ಇಕ್ಕಟ್ಟಾದ ಗುಂಡಿ.
28 ಹೌದು, ಕಳ್ಳನಂತೆ ಹೊಂಚುಹಾಕುತ್ತಾಳೆ,
ಜನರಲ್ಲಿ ದ್ರೋಹಿಗಳನ್ನು ಹೆಚ್ಚಿಸುತ್ತಾಳೆ.
29 ಅಯ್ಯಯ್ಯೋ ಅನ್ನುವವರು ಯಾರು? ಅಕಟಾ ಎಂದು ಕೂಗಿಕೊಳ್ಳುವವರು ಯಾರು?
ಯಾರು ಜಗಳವಾಡುತ್ತಾರೆ? ಯಾರು ಗೋಳಾಡುತ್ತಾರೆ?
ಯಾರು ಸುಮ್ಮಸುಮ್ಮನೆ ಗಾಯಪಡುತ್ತಾರೆ?
ಕೆಂಪೇರಿದ ಕಣ್ಣುಳ್ಳವರು ಯಾರು?
30 ಮಿಶ್ರಮದ್ಯಪಾನಾಸಕ್ತರಾಗಿ
ದ್ರಾಕ್ಷಾರಸವನ್ನು ಕುಡಿಯುತ್ತಾ ಕಾಲಹರಣಮಾಡುವವರೇ.
31 ಪಾತ್ರೆಯಲ್ಲಿ ಕೆಂಪಗೆ ಥಳಥಳಿಸುವ
ದ್ರಾಕ್ಷಾರಸದ ಮೇಲೆ ಕಣ್ಣಿಡಬೇಡ.
ಅದು [ಗಂಟಲಿನೊಳಗೆ] ಇಳಿದುಹೋಗಿ
32 ಆಮೇಲೆ ಹಾವಿನಂತೆ ಕಚ್ಚುತ್ತದೆ,
ಹೌದು, ನಾಗದ ಹಾಗೆ ಕಡಿಯುತ್ತದೆ.
33 ನಿನ್ನ ಕಣ್ಣು ಇಲ್ಲದ್ದನ್ನೇ ಕಾಣುವದು,
ಮನಸ್ಸು ವಿಪರೀತಗಳನ್ನು ಹೊರಪಡಿಸುವದು.
34 ನೀನು ಸಮುದ್ರದ ನಡುವೆಯಾಗಲಿ
ಹಡಗಿನ ಕಂಬದ ತುದಿಯಲ್ಲಿಯಾಗಲಿ ಮಲಗಿರುವವನಂತೆ ಇರುವಿ.
35 ಜನರು ನನ್ನನ್ನು ಹೊಡೆದರೂ ನೋವಾಗಲಿಲ್ಲ,
ಬಡಿದರೂ ತಿಳಿಯಲಿಲ್ಲ;
ಯಾವಾಗ ಎಚ್ಚತ್ತೇನು? ಪುನಃ ಅದನ್ನೇ ಹುಡುಕೇನು ಎಂದುಕೊಳ್ಳುವಿ.

24 ಕೆಟ್ಟವರನ್ನು ನೋಡಿ ಹೊಟ್ಟೆಕಿಚ್ಚುಪಡಬೇಡ,
ಅವರ ಸಹವಾಸವನ್ನು ಬಯಸದಿರು.
2 ಅವರ ಮನಸ್ಸು ಹಿಂಸೆಯನ್ನು ಯೋಚಿಸುತ್ತಿರುವದು,
ಅವರ ತುಟಿಯು ಹಾನಿಯನ್ನು ಪ್ರಸ್ತಾಪಿಸುತ್ತಿರುವದು.
3 ಮನೆಯನ್ನು ಕಟ್ಟುವದಕ್ಕೆ ಜ್ಞಾನವೇ ಸಾಧನ;
ಅದನ್ನು ಸ್ಥಿರಪಡಿಸುವದಕ್ಕೆ ವಿವೇಕವೇ ಆಧಾರ;
4 ಅದರ ಕೋಣೆಗಳನ್ನು ಅಮೂಲ್ಯವಾದ ಎಲ್ಲಾ ಇಷ್ಟಸಂಪತ್ತಿನಿಂದ ತುಂಬಿಸುವದಕ್ಕೆ
ತಿಳುವಳಿಕೆಯೇ ಉಪಕರಣ.
5 ಜ್ಞಾನಿಗೆ ತ್ರಾಣ,
ಬಲ್ಲವನಿಗೆ ಬಹು ಬಲ.
6 ಮಂತ್ರಾಲೋಚನೆಯಿಂದ ಯುದ್ಧವನ್ನು ನಡಿಸು;
ಬಹು ಸುಮಂತ್ರಿಗಳು ಇರುವಲ್ಲಿ ಸುರಕ್ಷಣೆಯಿರುವದು.
7 ಜ್ಞಾನವು ಮೂರ್ಖನಿಗೆ ದುರ್ಲಭ;
ಅವನು ನ್ಯಾಯಸ್ಥಾನದಲ್ಲಿ ಬಾಯಿಬಿಡಲಾರನು.
8 ಕೇಡನ್ನು ಕಲ್ಪಿಸುವವನು
ಕುಯುಕ್ತಿಕನು ಎನಿಸಿಕೊಳ್ಳುವನು.
ಮೂರ್ಖನ ಸಂಕಲ್ಪವು ಪಾಪವೇ;
ಧರ್ಮನಿಂದಕನು ಮನುಷ್ಯರಿಗೆ ಅಸಹ್ಯ.
ಇಕ್ಕಟ್ಟಿನ ದಿನದಲ್ಲಿ ನೀನು ಬಳಲಿಹೋದರೆ
ನಿನ್ನ ಬಲವೂ ಇಕ್ಕಟ್ಟೇ.
ಕೊಲೆಗೆ ಸೆಳೆಯಲ್ಪಟ್ಟವರನ್ನು ರಕ್ಷಿಸು!
ಸಂಹಾರಕ್ಕೆ ಗುರಿಯಾದವರನ್ನು ತಪ್ಪಿಸುವದಿಲ್ಲವೇ.
ಇದು [1]ನನಗೆ ಗೊತ್ತಿರಲಿಲ್ಲ ಎಂದು ನೀನು ನೆವಹೇಳಿದರೆ
ಹೃದಯಶೋಧಕನು ಗ್ರಹಿಸುವದಿಲ್ಲವೋ?
ನಿನ್ನ ಆತ್ಮವನ್ನು ಕಾಯುವಾತನು ತಿಳಿಯುವದಿಲ್ಲವೋ?
ಪ್ರತಿಯೊಬ್ಬನ ಕರ್ಮಕ್ಕೆ ಪ್ರತಿಫಲವನ್ನು ಕೊಡದೆ ಬಿಟ್ಟಾನೇ?
ಕಂದಾ, ಜೇನು ಚೆನ್ನಾಗಿದೆಯಲ್ಲವೆ,
ಜೇನುತುಪ್ಪವು ನಿನ್ನ ಬಾಯಿಗೆ ಸಿಹಿಯಷ್ಟೆ. ಅದನ್ನು ತಿನ್ನು.
ಜ್ಞಾನವು ನಿನ್ನ ಆತ್ಮಕ್ಕೆ ಹೀಗೆಯೇ ಇರುವದೆಂದು ತಿಳಿದುಕೋ;
ಅದನ್ನು ಪಡೆದುಕೊಂಡರೆ ಮುಂದೆ ಫಲಕಾಲ ಬರುವದು;
ನಿನ್ನ ನಿರೀಕ್ಷೆಯು ನಿರರ್ಥಕವಾಗದು.
ದುಷ್ಟನೇ, ಶಿಷ್ಟನ ಮನೆಗೆ ಹೊಂಚುಹಾಕಬೇಡ;
ಅವನ ನಿವಾಸವನ್ನು ಸೂರೆಮಾಡಬೇಡ.
ಶಿಷ್ಟನು ಏಳು ಸಾರಿ ಬಿದ್ದರೂ ಮತ್ತೆ ಏಳುವನು,
ದುಷ್ಟನು ಕೇಡಿನಿಂದ ಬಿದ್ದೇಹೋಗುವನು.
ನಿನ್ನ ಶತ್ರು ಬಿದ್ದರೆ ಹಿಗ್ಗಬೇಡ,
ಎಡವಿದರೆ ನಿನ್ನ ಹೃದಯವು ಹರ್ಷಿಸದಿರಲಿ!
ಯೆಹೋವನು ನಿನ್ನ ಹರ್ಷವನ್ನು ಕಂಡು ಬೇಸರಗೊಂಡು
ತನ್ನ ಕೋಪವನ್ನು ಅವನ ಕಡೆಯಿಂದ ತಿರುಗಿಸಾನು.
ಕೆಡುಕರ ಮೇಲೆ ಉರಿಗೊಳ್ಳದಿರು;
ದುಷ್ಟರನ್ನು ನೋಡಿ ಹೊಟ್ಟೆಕಿಚ್ಚುಪಡಬೇಡ.
ಕೆಟ್ಟವನಿಗೆ ಶುಭಕಾಲವು ಬಾರದು,
ದುಷ್ಟರ ದೀಪವು ಆರಿಯೇ ಹೋಗುವದು.
ಮಗನೇ, ಯೆಹೋವನಿಗೂ ರಾಜನಿಗೂ ಭಯಪಡು;
ತಿರುಗಿಬೀಳುವವರ ಗೊಡವೆಗೆ ಹೋಗಬೇಡ.
ಅವರಿಬ್ಬರು ವಿಧಿಸುವ ವಿಪತ್ತು ಫಕ್ಕನೆ ಸಂಭವಿಸುವದು;
ಅವರಿಂದಾಗುವ ನಾಶವು ಯಾರಿಗೆ ತಿಳಿದೀತು?

ಇವು ಕೂಡ ಜ್ಞಾನಿಗಳ ಉಕ್ತಿಗಳೇ:—

ನ್ಯಾಯವಿಚಾರಣೆಯಲ್ಲಿ ಪಕ್ಷಪಾತವು ಧರ್ಮವಲ್ಲ.
ಯಾವನು ಅಧರ್ಮಿಗೆ— ನೀನು ಧರ್ಮಾತ್ಮ ಎಂದು ಹೇಳುತ್ತಾನೋ ಅವನನ್ನು
ಜನರು ಶಪಿಸುವರು, ಪ್ರಜೆಗಳು ದೂಷಿಸುವರು.
ದುಷ್ಟನನ್ನು ಗದರಿಸುವವರಿಗಾದರೋ ಶುಭವಾಗುವದು.

1) ಪಾಠಾಂತರ: ನಮಗೆ.

ಸುಖಕರವಾದ ಆಶೀರ್ವಾದವೂ ಲಭಿಸುವದು.
26 ಯಥಾರ್ಥವಾದ ಉತ್ತರವು
ತುಟಿಗೆ ಮುದ್ದು.
27 ನಿನ್ನ ಕೆಲಸದ ಸಾಮಾನುಗಳನ್ನು ಸುತ್ತಲು ಅಣಿ ಮಾಡು.
ನಿವೇಶನದಲ್ಲಿ ಸಿದ್ಧಪಡಿಸು,
ಆಮೇಲೆ ನಿನ್ನ ಮನೆಯನ್ನು ಕಟ್ಟು.
28 ಕಾರಣವಿಲ್ಲದೆ ನೆರೆಯವನಿಗೆ ವಿರುದ್ಧವಾಗಿ ಸಾಕ್ಷಿ ಹೇಳಬೇಡ;
ಮಾತಿನಿಂದ ಮೋಸಮಾಡುವಿಯಾ?
29 ಅವನು ನನಗೆ ಮಾಡಿದಂತೆ ನಾನೂ ಅವನಿಗೆ ಮಾಡುವೆನು,
ಅವನು ಮಾಡಿದ್ದಕ್ಕೆ ಸರಿಯಾಗಿ ಮುಯ್ಯಿತೀರಿಸುವೆನು ಅಂದುಕೊಳ್ಳಬೇಡ.
30 ಸೋಮಾರಿಯ ಹೊಲದ ಮೇಲೆಯೂ
ಬುದ್ಧಿಹೀನನ ತೋಟದ ಮೇಲೆಯೂ ಹಾದು ಹೋದೆನು.
31 ಆಹಾ, ಮುಳ್ಳುಗಿಡಗಳು ಅದರಲ್ಲಿ ಹರಡಿಕೊಂಡಿದ್ದವು;
ಕಳೆಗಳು ಅದನ್ನು ಮುಚ್ಚಿದ್ದವು,
ಅದರ ಕಲ್ಲಿನ ಗೋಡೆಯು ಹಾಳಾಗಿತ್ತು.
32 ಆಗ ನಾನು ನೋಡಿ ಮನಸ್ಸಿಟ್ಟೆನು;
ದೃಷ್ಟಿಸಿ ಶಿಕ್ಷಿತನಾದೆನು.
33 ಇನ್ನು ಸ್ವಲ್ಪ ನಿದ್ದೆ, ಇನ್ನು ತುಸ ತೂಕಡಿಕೆ,
ಇನ್ನೂ ಕೊಂಚ ನಿದ್ದೆಗಾಗಿ ಕೈಮುದುರಿಕೊಳ್ಳುವೆ ಅಂದುಕೊಳ್ಳುವಿಯಾ?
34 ಬಡತನವು ದಾರಿಗಳ್ಳನ ಹಾಗೂ
ಕೊರತೆಯು ಪಂಜುಗಳ್ಳನಂತೆಯೂ ನಿನ್ನ ಮೇಲೆ ಬೀಳುವವು.

25 ಇವು ಕೂಡ ಸೊಲೊಮೋನನ ಜ್ಞಾನೋಕ್ತಿಗಳು; ಯೆಹೂದದ ಅರಸನಾದ ಹಿಜ್ಕೀಯನ ಲೇಖಕರು ಇವುಗಳನ್ನು ಸಂಗ್ರಹಿಸಿ ಬರೆದರು.

2 ವಿಷಯವನ್ನು ರಹಸ್ಯಮಾಡುವದು ದೇವರ ಪ್ರಭಾವ;
ವಿಷಯವನ್ನು ವಿಮರ್ಶೆಮಾಡುವದು ರಾಜರ ಪ್ರಭಾವ.
3 ಆಕಾಶವು ಉನ್ನತ, ಭೂಮಿಯು ಅಗಾಧ.
ರಾಜನ ಹೃದಯವು ಅಗೋಚರ.
4 ಬೆಳ್ಳಿಯಿಂದ ಕಲ್ಮಷವನ್ನು ತೆಗೆದುಹಾಕಿದರೆ
ಅಕ್ಕಸಾಲಿಗನಿಗೆ ಬೇಕಾದ ಪಾತ್ರೆಯಾಗುವದು;
5 ರಾಜನ ಸಮುಖದಿಂದ ದುಷ್ಟರನ್ನು ತೆಗೆದುಹಾಕಿದರೆ
ಅವನ ಸಿಂಹಾಸನವು ಧರ್ಮದಿಂದ ಸ್ಥಿರವಾಗುವದು.
6 ರಾಜನ ಸನ್ನಿಧಾನದಲ್ಲಿ ನಿನ್ನನ್ನು ಹೆಚ್ಚಿಸಿಕೊಳ್ಳಬೇಡ;
ಶ್ರೀಮಂತರಿಗೆ ಮೀಸಲಿರಿಸಿರುವ ಸ್ಥಾನದಲ್ಲಿ ನಿಂತುಕೊಳ್ಳದಿರು.
7 ನೀನು ಪ್ರಭುವನ್ನು ದರ್ಶನಮಾಡುತ್ತಿರಲು
ಅವನ ಸಮಕ್ಷಮ ಕೆಳಗಣಸ್ಥಾನಕ್ಕೆ ನೂಕಿಸಿಕೊಳ್ಳುವದಕ್ಕಿಂತಲೂ
ಇನ್ನೂ ಮೇಲಕ್ಕೆ ಬಾ ಎಂದು ಕರೆಯಿಸಿಕೊಳ್ಳುವದು ಲೇಸು.
ದುಡುಕಿ ನೆರೆಯವನ ಮೇಲೆ ವ್ಯಾಜ್ಯಕ್ಕೆ ಹೋಗಬೇಡ; 8
ಅವನು ನಿನ್ನ ಮಾನ ಕಳೆದ ಮೇಲೆ
ಕಡೆಯಲ್ಲಿ ಏನು ಮಾಡಬಲ್ಲೆ, ನೋಡಿಕೋ!
ವ್ಯಾಜ್ಯವಾಡಿದವನ ಸಂಗಡಲೇ ಅದನ್ನು ಚರ್ಚಿಸು; 9
ಒಬ್ಬನ ಗುಟ್ಟನ್ನೂ ಹೊರಪಡಿಸಬೇಡ.
ಅದನ್ನು ಕೇಳುವವನು ನಿನ್ನನ್ನು ದೂಷಿಸಾನು; 10
1)ನಿನಗೆ ಬಂದ ಅಪಕೀರ್ತಿಯು ಹೋಗದು.
ಸಮಯೋಚಿತವಾದ ಮಾತುಗಳು 11
ಬೆಳ್ಳಿಯ ನಕಾಸಿಯಲ್ಲಿ ಖಚಿತವಾದ ಬಂಗಾರದ ಹಣ್ಣುಗಳಿಗೆ ಸಮಾನ.
ಕೇಳುವ ಕಿವಿಗೆ ಮುಟ್ಟುವ ಬುದ್ಧಿವಾದವು 12
ಹೊನ್ನಿನ ಮುರುವಿಗೂ ಅಪರಂಜಿಯ ಆಭರಣಕ್ಕೂ ಸಮಾನ.
ಸುಗ್ಗೀಕಾಲದಲ್ಲಿ ಹಿಮದ ಶೈತ್ಯವು ಹೇಗೋ 13
ಕಳುಹಿಸಿದ ಒಡೆಯರಿಗೆ ಆಪ್ತದೂತನು ಹಾಗೆಯೇ ಹಿತ.
ಬರೀ ಗಾಳಿ ಮೋಡಗಳು ಹೇಗೋ 14
ದಾನಕೊಡುತ್ತೇನೆಂದು ಸುಳ್ಳಾಡಿ ಜಂಬಮಾಡುವವನೂ ಹಾಗೆಯೇ.
ದೀರ್ಘಶಾಂತಿಯಿಂದ ಪ್ರಭುವನ್ನೂ ಸಮ್ಮತಿಪಡಿಸಬಹುದು; 15
ಮೃದುವಚನವು ಎಲುಬನ್ನು ಮುರಿಯುವದು.
ಜೇನು ಸಿಕ್ಕಿತೋ? ಮಿತವಾಗಿ ತಿನ್ನು, 16
ಹೊಟ್ಟೆತುಂಬ ತಿಂದರೆ ಕಾರಿಬಿಟ್ಟೀಯೆ.
ನೆರೆಯವನು ಬೇಸರಗೊಂಡು ಹಗೆಮಾಡದ ಹಾಗೆ 17
ಅವನ ಮನೆಯಲ್ಲಿ ಅಪರೂಪವಾಗಿ ಹೆಜ್ಜೆಯಿಡು.
ನೆರೆಯವನ ಮೇಲೆ ಸುಳ್ಳುಸಾಕ್ಷಿಹೇಳುವವನು 18
ಚಮಟಿಕೆ, ಕತ್ತಿ, ಚೂಪಾದ ಬಾಣ ಇವುಗಳೇ.
ಕಷ್ಟಕಾಲದಲ್ಲಿ 2)ದ್ರೋಹಿಯಲ್ಲಿಡುವ ನಂಬಿಕೆಯು 19
ಮುರುಕಹಲ್ಲು, ಜಾರುವ ಕಾಲು.
ಮನಗುಂದಿದವನಿಗೆ ಸಂಗೀತಹಾಡುವದು 20
ಚಳಿದಿನದಲ್ಲಿ ಬಟ್ಟೆ ತೆಗೆದ ಹಾಗೂ 3)ಸೋಡಉಪ್ಪಿಗೆ ಹುಳಿಹೊಯ್ದ ಹಾಗೂ.
ನಿನ್ನ ವೈರಿ ಹಸಿದಿದ್ದರೆ ಅನ್ನವಿಡು, 21
ಬಾಯಾರಿದ್ದರೆ ನೀರುಕೊಡು;
ಹೀಗೆ ಅವನ ತಲೆಯ ಮೇಲೆ ಕೆಂಡಸುರಿದಂತಾಗುವದು; 22
ಯೆಹೋವನೇ ನಿನಗೆ ಪ್ರತಿಫಲಕೊಡುವನು.
ಬಡಗಣಗಾಳಿ ಮಳೆ ಬರಮಾಡುವದು; 23
ಚಾಡಿಯ ನಾಲಿಗೆ ಕೋಪದ ಮುಖ ಮಾಡುವದು.
ಮನೆಯಲ್ಲಿ ಜಗಳಗಂಟಿಯ ಜೊತೆಯಲ್ಲಿರುವದಕ್ಕಿಂತಲೂ 24
ಮಾಳಿಗೆಯ ಒಂದು ಮೂಲೆಯಲ್ಲಿ ವಾಸಿಸುವದೇ ಲೇಸು.
ಬಳಲಿ ಬಾಯಾರಿದವನಿಗೆ ತಣ್ಣೀರು ಹೇಗೋ 25

1) ಅಥವಾ: ನೀನು ಹೇಳಿದ ಕ್ಷುದ್ರವು ಅಸ್ತಕ್ಕೇ ನಿಲ್ಲುವದಿಲ್ಲ. 2) ಅಥವಾ: ದ್ರೋಹಿಯು ನಂಬಿದ್ದು. 3) ಪಾಠಾಂತರ: ಗಾಯಕ್ಕೆ.

ದೇಶಾಂತರದಿಂದ ಬಂದ ಒಳ್ಳೆಯ ಸಮಾಚಾರವು ಹಾಗೆಯೇ.
26 ದುಷ್ಟರಿಂದ ಸೋತ ಶಿಷ್ಟನು
ಹಾಳು ಬಾವಿ, ತುಳಿದಾಡಿದ ಒರತೆ.
27 ಜೇನನ್ನು ಹೆಚ್ಚಾಗಿ ತಿನ್ನುವದು ಹಿತವಲ್ಲ;
ಸ್ವಂತಮಾನವನ್ನು ಹೆಚ್ಚಾಗಿ ಯೋಚಿಸುವದು 1)ಮಾನವಲ್ಲ.
28 ಆತ್ಮವನ್ನು ಸ್ವಾಧೀನಮಾಡಿಕೊಳ್ಳದವನು
ಗೋಡೆ ಬಿದ್ದ ಹಾಳೂರಿಗೆ ಸಮಾನ.

**26** ಬೇಸಿಗೆಯಲ್ಲಿ ಹಿಮ, ಸುಗ್ಗಿಯಲ್ಲಿ ಮಳೆ ಹೇಗೋ ಮೂಢನಿಗೆ ಮಾನ ಹಾಗೆ ಸರಿಯಲ್ಲ.
2 ಕುಪ್ಪಳಿಸುತ್ತಿರುವ ಗುಬ್ಬಿಯಂತೆ, ಹಾರಾಡುವ ಬಾನಕ್ಕಿಯ ಹಾಗೆ,
ನಿಮಿತ್ತವಿಲ್ಲದೆ ಕೊಟ್ಟ ಶಾಪವು ಎರಗಿ ನಿಲ್ಲದು.
3 ಕುದುರೆಗೆ ಚಬುಕು, ಕತ್ತೆಗೆ ಕಡಿವಾಣ,
ಮೂಢನ ಬೆನ್ನಿಗೆ ಬೆತ್ತ.
4 ಮೂಢನ ಮೂರ್ಖತನಕ್ಕೆ ಸರಿಯಾಗಿ ಉತ್ತರ ಕೊಡಬೇಡ,
ನೀನೂ ಅವನಿಗೆ ಸಮಾನನಾದೀಯೆ.
5 ಮೂಢನ ಮೂರ್ಖತನಕ್ಕೆ ಸರಿಯಾಗಿ ಉತ್ತರಕೊಡು;
ತನ್ನನ್ನು ಜ್ಞಾನಿಯೆಂದು ಎಣಿಸಿಕೊಂಡಾನು.
6 ಮೂಢನ ಮೂಲಕ ಮಾತನ್ನು ಹೇಳಿಕಳುಹಿಸುವವನು
ತನ್ನ ಕಾಲುಗಳನ್ನು ತಾನೇ ಕಡಿದುಕೊಂಡು ಕೇಡನ್ನು ಕುಡಿಯುವನು.
7 ಮೂಢನ ಬಾಯ ಜ್ಞಾನೋಕ್ತಿಯು
ಜೋಲಾಡುವ ಕುಂಟಕಾಲು.
8 ಮೂಢನಿಗೆ ಕೊಡುವ ಮಾನವು
ಕವಣೆಯಲ್ಲಿಟ್ಟ ಕಲ್ಲಿನ ಹಾಗೆ.
9 ಮೂಢನ ಬಾಯಿಗೆ ಸಿಕ್ಕಿದ ಜ್ಞಾನೋಕ್ತಿಯು
ಕುಡುಕನ 2)ಕೈಗೆ ಸಿಕ್ಕಿದ ಮುಳ್ಳುಗೋಲಿನ ಹಾಗೆ.
10 3)ಮೂಢರನ್ನೂ ತಿರುಗಾಡುವವರನ್ನೂ ಕೂಲಿಗೆ ಕರೆಯುವವನು
ಯಾರಿಗೋ ತಗಲಲಿ ಎಂದು ಬಾಣವನ್ನು ಎಸೆಯುವವನ ಹಾಗೆ.
11 ನಾಯಿ ತಾನು ಕಕ್ಕಿದ್ದನ್ನು ನೆಕ್ಕುವದಕ್ಕೆ ತಿರುಗಿಕೊಳ್ಳುವ ಹಾಗೆ
ಮೂಢನು ತಾನು ಮಾಡಿದ ಮೂರ್ಖತನವನ್ನೇ ಪುನಃ ಮಾಡುವನು.
12 ತಾನೇ ಜ್ಞಾನಿಯೆಂದೆಣಿಸಿಕೊಳ್ಳುವವನನ್ನು ನೋಡು;
ಅಂಥವನಿಗಿಂತಲೂ ಮೂಢನ ವಿಷಯದಲ್ಲಿ ಹೆಚ್ಚು ನಿರೀಕ್ಷೆಯನ್ನಿಡಬಹುದು.
13 ದಾರಿಯಲ್ಲಿ ಸಿಂಹವಿದೆ,
ಬೀದಿಗಳಲ್ಲಿ ತಿರುಗಾಡುತ್ತಿದೆ ಎಂಬದು ಸೋಮಾರಿಯ ನೆವ.
14 ಕದವು ತಿರುಗುಣಿಯಲ್ಲಿ ಹೇಗೋ
ಹಾಗೆ ಸೋಮಾರಿಯು ಹಾಸಿಗೆಯಲ್ಲಿ ಸುತ್ತಾಡುತ್ತಿರುವನು.
ಸೋಮಾರಿಯು ಪಾತ್ರೆಯೊಳಗೆ ಕೈ ಮುಳುಗಿಸಿ ಮೇಲೆ
ತಿರಿಗಿ ಬಾಯ ಹತ್ತಿರ ತರಲಾರದಷ್ಟು ಆಯಾಸ ಪಡುತ್ತಾನೆ.
ವಿವೇಕದಿಂದ ಉತ್ತರಕೊಡಬಲ್ಲ ಏಳು ಜನರಿಗಿಂತಲೂ
ತಾನೇ ಜ್ಞಾನಿಯೆಂದು ಸೋಮಾರಿಯು ಎಣಿಸಿಕೊಳ್ಳುವನು.
ಒಬ್ಬನು ದಾರಿಯಲ್ಲಿ ಹೋಗುತ್ತಾ ಪರರ ವ್ಯಾಜ್ಯಕ್ಕೆ ಸೇರಿ ರೇಗಿಕೊಳ್ಳುವದು
ನಾಯಿಯನ್ನು ಕಿವಿಹಿಡಿದ ಹಾಗೆ.
ನೆರೆಯವನನ್ನು ಮೋಸಗೊಳಿಸಿ ತಮಾಷೆಗೋಸ್ಕರ ಮಾಡಿದೆನಲ್ಲಾ ಎನ್ನುವವನು
ಕೊಳ್ಳಿಗಳನ್ನೂ ಅಂಬುಗಳನ್ನೂ ಸಾವನ್ನೂ ಬೀರುವ ದೊಡ್ಡ ಹುಚ್ಚನ ಹಾಗೆ.
ಕಟ್ಟಿಗೆಯಿಲ್ಲದಿದ್ದರೆ ಬೆಂಕಿ ಆರುವದು;
ಚಾಡಿಕೋರನು ಇಲ್ಲದಿದ್ದರೆ ಜಗಳ ಶಮನವಾಗುವದು.
ಕೆಂಡಕ್ಕೆ ಇದ್ದಲು, ಉರಿಗೆ ಕಟ್ಟಿಗೆ,
ವ್ಯಾಜ್ಯದ ಕಿಚ್ಚನ್ನೆಬ್ಬಿಸುವದಕ್ಕೆ ಜಗಳಗಂಟಿಗ.
ಚಾಡಿಕೋರನ ಮಾತುಗಳು ರುಚಿಯಾದ ತುತ್ತುಗಳು
ಇವು ಹೊಟ್ಟೆಯೊಳಕ್ಕೇ ಇಳಿಯುವವು.
ಕೆಟ್ಟ ಹೃದಯದಿಂದ ಪ್ರೀತಿಯನ್ನಾಡುವ ತುಟಿಯು
ಕೊಟ್ಟಿಬೆಳ್ಳಿ ಮುಲಾಮು ಮಾಡಿದ ಮಣ್ಣುಮಡಿಕೆಯ ಹಾಗೆ.
ಹಗೆಯವನು ತುಟಿಯಲ್ಲಿ ಸ್ನೇಹಭಾವವನ್ನು ನಡಿಸುತ್ತಾನೆ,
ಅಂತರಂಗದಲ್ಲಿ ಬರೀ ಮೋಸವನ್ನು ಇಟ್ಟುಕೊಂಡಿದ್ದಾನೆ;
ಸವಿಮಾತಾಡಿದರೂ ಅವನನ್ನು ನಂಬಬೇಡ,
ಅವನ ಹೃದಯದಲ್ಲಿ ಎಷ್ಟೋ ಅಸಹ್ಯಗಳು;
ತನ್ನ ಹಗೆಯನ್ನು ವಂಚನೆಯಿಂದ ಮರೆಮಾಚಿಕೊಂಡಿದ್ದರೂ
ಅವನ ಕೆಟ್ಟತನವು ಸಭೆಯಲ್ಲಿ ಬೈಲಾಗುವದು.
ಗುಂಡಿಯನ್ನು ತೋಡುವವನು ತಾನೇ ಅದರಲ್ಲಿ ಬೀಳುವನು;
ಹೊರಳಿಸುವವನ ಮೇಲೆಯೇ ಕಲ್ಲು ಹೊರಳುವದು.
ಸುಳ್ಳು ನಾಲಿಗೆಯವನು ತಾನು ಬಾಧಿಸಿದವರನ್ನೇ ದ್ವೇಷಿಸುವನು;
ಕಪಟದ ಬಾಯಿ ನಾಶಕರ.

**2** ನಾಳೆ ಎಂದು ಕೊಚ್ಚಿಕೊಳ್ಳಬೇಡ;
ಒಂದು ದಿನದೊಳಗೇ ಏನಾಗುವದೋ ನಿನಗೆ ತಿಳಿಯದು.
ನಿನ್ನನ್ನು ನೀನೇ ಹೊಗಳಿಕೊಳ್ಳಬೇಡ, ಮತ್ತೊಬ್ಬನು ಹೊಗಳಿದರೆ ಹೊಗಳಲಿ;

1) ಮೂಲ: ಮಾನ. 2) ಅಥವಾ: ಕೈ ಚುಚ್ಚುವ. 3) ಅಥವಾ: ಬಾಹುಳ್ಯದಿಂದ ಸಮಸ್ತವೂ ಉಂಟಾಗುತ್ತದೆ. ಮ ಕೂಲಿಯಾಗಲಿ ಅವನನ್ನು ಕೂಲಿಗೆ ಕರೆಯುವವನಾಗಲಿ ನಿಲ್ಲುವದಿಲ್ಲ. ಮೂಲ ಕೇವಲ ಅಸ್ಪಷ್ಟವಾಗಿದೆ.

ಆತ್ಮಸ್ತುತಿ ಬೇಡ, ಪರನು ನಿನ್ನನ್ನು ಸ್ತುತಿಸಿದರೆ ಸ್ತುತಿ
ಸಲಿ.
ಕಲ್ಲು ಭಾರ, ಮರಳು ಭಾರ,
ಎರಡಕ್ಕಿಂತಲೂ ಮೂಢನ ಕೋಪವು ಬಲು ಭಾರ.
ಕೋಪವು ಕ್ರೂರ, ಕ್ರೋಧವು ಪ್ರವಾಹ;
ಮಾತ್ಸರ್ಯಕ್ಕೆ ಎದುರಾಗಿ ಯಾರು ನಿಂತಾರು?
[ಕಾರ್ಯದಿಂದ] ಹೊರಪಡದ ಪ್ರೀತಿಗಿಂತಲೂ
ಬಹಿರಂಗವಾದ ಗದರಿಕೆಯು ಲೇಸು.
ಮಿತ್ರನು ಮಾಡುವ ಗಾಯಗಳು ಮೇಲಿಗಾಗಿಯೇ;
ಶತ್ರುವಿನ ಮುದ್ದುಗಳು ಹೇರಳವಾಗಿವೆ.
ಹೊಟ್ಟೆತುಂಬಿದವನಿಗೆ ಜೇನುತುಪ್ಪವೂ ಅಸಹ್ಯ;
ಹೊಟ್ಟೆಹಸಿದವನಿಗೆ ಕಹಿಯೆಲ್ಲಾ ಸಿಹಿ.
ಸ್ಥಳವನ್ನು ಬಿಟ್ಟು ಅಲೆಯುವ ಮನುಷ್ಯನು
ಗೂಡನ್ನು ಬಿಟ್ಟು ಅಲೆಯುವ ಹಕ್ಕಿಯ ಹಾಗೆ.
ತೈಲವೂ ಸುಗಂಧದ್ರವ್ಯಗಳೂ ಹೇಗೋ
ಮಿತ್ರನ ಸಂಭಾಷಣೆಯಿಂದ ಅನುಭವಕ್ಕೆ ಬರುವ
ಸ್ನೇಹರಸವು ಹಾಗೆ ಮನೋಹರ.
ನಿನಗೂ ನಿನ್ನ ತಂದೆಗೂ ಮಿತ್ರನಾದವನನ್ನು ಬಿಡ
ಬೇಡ;
ನಿನ್ನ ಇಕ್ಕಟ್ಟಿನ ದಿನದಲ್ಲಿ ಅಣ್ಣನ ಮನೆಯನ್ನು ಆಶ್ರ
ಯಿಸದಿರು;
ದೂರವಾಗಿರುವ ಅಣ್ಣನಿಗಿಂತ ಹತ್ತಿರವಾಗಿರುವ ನೆರೆಯ
ವನು ಲೇಸು.
ಮಗನೇ, ಜ್ಞಾನವನ್ನು ಪಡೆದುಕೊಂಡು ನನ್ನ ಮನ
ಸ್ಸನ್ನು ಸಂತೋಷಪಡಿಸು;
ಹಾಗಾದರೆ ನನ್ನನ್ನು ದೂರುವವನಿಗೆ ನಾನು ಉತ್ತರ
ಕೊಡಲಾಗುವದು.
ಜಾಣನು ಕೇಡನ್ನು ಕಂಡು ಅಡಗಿಕೊಳ್ಳುವನು;
ಬುದ್ಧಿಹೀನನು ಮುಂದೆ ಹೋಗಿ ನಷ್ಟಪಡುವನು.
ಮತ್ತೊಬ್ಬನಿಗೆ ಹೊಣೆಯಾದವನ ಬಟ್ಟೆಯನ್ನು ಕಿತ್ತು
ಕೋ!
ಮತ್ತೊಬ್ಬಳಿಗೆ ಹೊಣೆಯಾದವನನ್ನೇ ಒತ್ತೆಮಾಡಿ
ಕೋ!
ಮುಂಜಾನೆ ಎದ್ದು ತನ್ನ ಸ್ನೇಹಿತನನ್ನು ದೊಡ್ಡ ಕೂಗಿ
ನಿಂದ ಆಶೀರ್ವದಿಸುವವನು
ಶಪಿಸುವವನೆನಿಸಿಕೊಳ್ಳುವನು.
ದೊಡ್ಡ ಮಳೆಯ ದಿನದಲ್ಲಿ ತಟತಟನೆ ತೊಟ್ಟಿಕ್ಕುವ
ಹನಿ,
ತಂಟೆಮಾಡುವ ಹೆಂಡತಿ, ಎರಡು ಒಂದೇ;
ಅವಳನ್ನು ಅಡಗಿಸುವವನು ಗಾಳಿಯನ್ನು ಅಡಗಿಸು
ವನು;
ಅವಳನ್ನು ಹಿಡಿಯುವ ಬಲಗೈ ಜಿಡ್ಡಿನ [ವಸ್ತುವನ್ನು]
ಹಿಡಿಯುವದು.
ಕಬ್ಬಿಣವು ಕಬ್ಬಿಣವನ್ನು ಹೇಗೋ
ಮಿತ್ರನು ಮಿತ್ರನ ಬುದ್ಧಿಯನ್ನು ಹಾಗೆ ಹರಿತಮಾ
ಡುವನು.
ಅಂಜೂರದ ಮರವನ್ನು ಕಾಯುವವನು ಅದರ ಫಲ
ವನ್ನು ತಿನ್ನುವನು;
ಯಜಮಾನನ ಮಾತಿಗೆ ಕಾಯುವವನು ಮಾನವನ್ನ
ನುಭವಿಸುವನು.
[1])ನೀರು ಮುಖಕ್ಕೆ ಮುಖವನ್ನು ಹೇಗೆ ಪ್ರತಿಬಿಂಬಗೊ 19
ಳಿಸುತ್ತದೋ
ಮನುಷ್ಯನಿಗೆ ಮನುಷ್ಯನನ್ನು ಹೃದಯವು ಹಾಗೆ ತೋ
ರ್ಪಡಿಸುತ್ತದೆ.
ಪಾತಾಳಕ್ಕೂ ನಾಶಲೋಕಕ್ಕೂ ಹೇಗೆ ತೃಪ್ತಿಯಿಲ್ಲವೋ 20
ಹಾಗೆ ಮನುಷ್ಯನ ಕಣ್ಣುಗಳಿಗೆ ತೃಪ್ತಿಯಿಲ್ಲ.
ಪುಟಕುಲುಮೆಗಳಿಂದ ಬೆಳ್ಳಿಬಂಗಾರಗಳಿಗೆ ಶೋಧನೆ 21
ಯು ಹೇಗೋ
ಹೊಗಳಿಕೆಯಿಂದ ಮನುಷ್ಯನಿಗೆ ಶೋಧನೆಯು ಹಾಗೆ.
ಗೋದಿರವೆಯ ಸಂಗಡ ಮೂರ್ಖನನ್ನು ಒರಳಿನಲ್ಲಿ 22
ಒನಕೆಯಿಂದ ಕುಟ್ಟಿದರೂ
ಮೂರ್ಖತನವು ಅವನಿಂದ ತೊಲಗದು.
ನಿನ್ನ ಹಿಂಡುಗಳ ಸ್ಥಿತಿಯನ್ನು ಚೆನ್ನಾಗಿ ತಿಳಿದುಕೊಂ 23
ಡಿರು;
ನಿನ್ನ ಮಂದೆಗಳ ಮೇಲೆ ಮನಸ್ಸಿಡು.
ಸಂಪತ್ತು ಶಾಶ್ವತವಾಗಿರುವದಿಲ್ಲವಷ್ಟೆ; 24
ಕಿರೀಟವು ತಲತಲಾಂತರಗಳ ವರೆಗೆ ನಿಂತೀತೋ?
ಹುಲ್ಲನ್ನು [ಕೊಯ್ದು] ಹೊತ್ತುಕೊಂಡು ಬಂದ 25
ಮೇಲೆ ಹಸಿಹುಲ್ಲು ತಲೆದೋರುವದು;
ಬೆಟ್ಟಗಳ ಸೊಪ್ಪನ್ನೂ ಕೂಡಿಸಿಡುವರು.
ಕುರಿಗಳಿಂದ ನಿನಗೆ ಉಡುಪಾಗುವದು, 26
ಆಡುಗಳಿಂದ ಹೊಲದ ಕ್ರಯವೇಳುವದು.
ನಿನ್ನ ಊಟಕ್ಕೂ ಮನೆಯವರ ಆಹಾರಕ್ಕೂ ಮೇಕೆಯ 27
ಹಾಲು ಬೇಕಾದಷ್ಟಾಗುವದು;
ನಿನ್ನ ತೊತ್ತುಗಳಿಗೂ ಜೀವನವಾಗುವದು.

## 28

ಹಿಂದಟ್ಟದಿದ್ದರೂ ದುಷ್ಟನು ಹೆದರಿ ಓಡುವನು.
ಶಿಷ್ಟನು ಸಿಂಹದಂತೆ ಧೈರ್ಯದಿಂದಿರುವನು.
ದೇಶವು ಅಧರ್ಮದಿಂದ ಬಹುನಾಯಕವಾಗುವದು; 2
ಜ್ಞಾನಿಗಳೂ ವಿವೇಕಿಗಳೂ ಆದವರಿಂದ ಧರ್ಮವು ಶಾ
ಶ್ವತವಾಗುವದು.
ಬಡವರನ್ನು ಹಿಂಸಿಸುವ ದರಿದ್ರನು 3
ಒಂದು ಕಾಳೂ ಉಳಿಯದಂತೆ [ಪೈರನ್ನು] ಬಡಿಯುವ
ಮಳೆಯ ಹಾಗೆ.
ಧರ್ಮೋಪದೇಶವನ್ನು ಕೈಕೊಳ್ಳದವರು ದುಷ್ಟರನ್ನು 4
ಹೊಗಳುವರು,
ಕೈಕೊಳ್ಳುವವರು ಅವರನ್ನು ಎದುರಿಸುವರು.
ಕೆಟ್ಟವರು ನ್ಯಾಯವನ್ನು ಗ್ರಹಿಸರು; 5
ಯೆಹೋವನ ಭಕ್ತರು ಸಮಸ್ತವನ್ನು ಗ್ರಹಿಸುವರು.
ವಕ್ರಮಾರ್ಗಿಯಾದ ಐಶ್ವರ್ಯವಂತನಿಗಿಂತ 6
ನಿರ್ದೋಷವಾಗಿ ನಡೆಯುವ ದರಿದ್ರನು ಶ್ರೇಷ್ಠನು.
ಧರ್ಮೋಪದೇಶವನ್ನು ಕೈಕೊಳ್ಳುವವನು ವಿವೇಕಿಯಾ 7
ದ ಮಗನು;
ಹೊಟ್ಟೆಬಾಕರ ಗೆಳೆಯನು ತಂದೆಯ ಮಾನವನ್ನು ಕಳೆ
ಯುವನು.

---

1) ಅಥವಾ: ಮುಖಕ್ಕೆ ನೀರಿನಲ್ಲಿ ಕಾಣುವ ಮುಖವು ಹೇಗೋ ಹಾಗೆ ಮನುಷ್ಯಹೃದಯವು ಮನುಷ್ಯಹೃದಯಕ್ಕೆ ಸಮಾನ.

8 ಬಡ್ಡಿಬಾಚಿಗಳಿಂದ ವೃದ್ಧಿಯಾದ ಆಸ್ತಿಯು
ಬಡವರಲ್ಲಿ ಕನಿಕರಪಡುವವನ ಪಾಲಾಗುವದು.
9 ಧರ್ಮೋಪದೇಶಕ್ಕೆ ಕಿವಿಗೊಡದವನು
ಮಾಡುವ ದೇವಪ್ರಾರ್ಥನೆಯೂ ಅಸಹ್ಯ.
10 ಯಥಾರ್ಥವಂತರನ್ನು ದುರ್ಮಾರ್ಗಕ್ಕೆ ಎಳೆಯುವವನು
ತಾನು ತೋಡಿದ ಗುಂಡಿಯಲ್ಲಿ ತಾನೇ ಬೀಳುವನು;
ನಿರ್ದೋಷಿಗಳಿಗೋ ಸುಖವು ಸೊತ್ತಾಗುವದು.
11 ಐಶ್ವರ್ಯವಂತನು ತಾನು ಜ್ಞಾನಿಯೆಂದೆಣಿಸಿಕೊಳ್ಳುವನು,
ವಿವೇಕಿಯಾದ ಬಡವನು ಅವನನ್ನು ಇಂಥವನೆಂದು ಗೊತ್ತುಮಾಡುವನು.
12 ಶಿಷ್ಟರಿಗೆ ಉಲ್ಲಾಸವಾದರೆ ದೊಡ್ಡ ಸಂಭ್ರಮವಾಗುವದು;
ದುಷ್ಟರಿಗೆ ಏಳಿಗೆಯಾದರೆ ಜನರು ಅಡಗಿಕೊಳ್ಳುವರು.
13 ದೋಷಗಳನ್ನು ಮುಚ್ಚಿಕೊಳ್ಳುವವನಿಗೆ ಶುಭವಾಗದು;
ಅವುಗಳನ್ನು ಒಪ್ಪಿಕೊಂಡು ಬಿಟ್ಟುಬಿಡುವವನಿಗೆ ಕರುಣೆ ದೊರೆಯುವದು.
14 ಭಯದಿಂದ ನಡೆದುಕೊಳ್ಳುವವನು ಧನ್ಯನು;
ಕಠಿನಹೃದಯನು ಕೇಡಿಗೆ ಸಿಕ್ಕಿಬೀಳುವನು.
15 ಬಡವರಾದ ಪ್ರಜೆಗಳನ್ನು ಆಳುವ ದುಷ್ಟರಾಜನು
ಗರ್ಜಿಸುವ ಸಿಂಹ, ಹುಡುಕಾಡುವ ಕರಡಿ.
16 ವಿವೇಕಶೂನ್ಯನಾದ ಒಡೆಯನು ಮಹಾಹಿಂಸಕನು;
ದೋಚಿಕೊಳ್ಳಲೊಲ್ಲದವನು ದೀರ್ಘಾಯುಷ್ಯನು.
17 ನರಪ್ರಾಣ ತೆಗೆದ ದೋಷವನ್ನು ಕಟ್ಟಿಕೊಂಡವನು
ಸಮಾಧಿಯ ಕಡೆಗೆ ಓಡುವನು; ಅವನನ್ನು ಯಾರೂ ತಡೆಯಬಾರದು.
18 ಸನ್ಮಾರ್ಗಿಗೆ ಉದ್ಧಾರ,
ವಕ್ರಮಾರ್ಗಿಗೆ ತಟ್ಟನೆ ಪತನ.
19 ದುಡಿದು ಹೊಲಗೇಯುವವನಿಗೆ ಹೊಟ್ಟೆತುಂಬಾ ಅನ್ನ;
ವ್ಯರ್ಥಕಾರ್ಯಾಸಕ್ತನಿಗೆ ಹೊಟ್ಟೆತುಂಬಾ ಬಡತನ.
20 ನಂಬಿಗಸ್ತನು ಆಶೀರ್ವಾದಪೂರ್ಣನಾಗುವನು;
ಧನವಂತನಾಗಲು ಆತುರಪಡುವವನು ದಂಡನೆಯನ್ನು ಹೊಂದದಿರನು.
21 ಪಕ್ಷಪಾತವು ಅಧರ್ಮ;
ತುತ್ತನ್ನಕ್ಕಾಗಿ ಜನರು ದ್ರೋಹಮಾಡುವದುಂಟು.
22 [1]ಲೋಭಿಯು ಆಸ್ತಿಯನ್ನು ಗಳಿಸಲು ಆತುರಪಡುವನು;
ತನಗೆ ಕೊರತೆಯಾಗುವದೆಂದು ಅರಿಯನು.
23 ಮುಖಸ್ತುತಿ ಮಾಡುವವನಿಗಿಂತಲೂ
ಗದರಿಸುವವನು ಬಳಿಕ ಹೆಚ್ಚು ದಯಾಪಾತ್ರನಾಗುವನು.
24 ದೋಷವಲ್ಲವೆಂದು ತಾಯಿತಂದೆಗಳ ಧನವನ್ನು ಕದಿಯುವವನು
ಕೇಡಿಗನಿಗೆ ಜೊತೆಗಾರನು.
25 ಆಸೆಬಡುಕನು ಜಗಳವನ್ನೆಬ್ಬಿಸುವನು;
ಯೆಹೋವನಲ್ಲಿ ಭರವಸವಿಡುವವನು ಪುಷ್ಟನಾಗ[ುವನು.]
26 ತನ್ನಲ್ಲೇ ಭರವಸವಿಡುವವನು ಮೂಢನು;
ಜ್ಞಾನದಿಂದ ನಡೆಯುವವನು ಉದ್ಧಾರವನ್ನು ಪಡೆಯು[ವ]ವನು.
27 ಬಡವರಿಗೆ ದಾನಮಾಡುವವನು ಕೊರತೆಪಡನು;
ಕಣ್ಣು ಮುಚ್ಚಿಕೊಳ್ಳುವವನು ಬಹುಶಾಪಕ್ಕೆ ಒಳಗಾಗುವನು.
28 ದುಷ್ಟರು ಎದ್ದರೆ ಜನರು ಅಡಗಿಕೊಳ್ಳುವರು;
ನಾಶವಾದರೆ ಶಿಷ್ಟರು ವೃದ್ಧಿಯಾಗುವರು.

2[9]

1 ಬಹಳವಾಗಿ ಗದರಿಸಿದರೂ ತಗ್ಗದವನು
ಏಳದ ಹಾಗೆ ಫಕ್ಕನೆ ಮುರಿದು ಬೀಳುವನು.
2 ಶಿಷ್ಟರ ವೃದ್ಧಿ ಜನರಿಗೆ ಉಲ್ಲಾಸ;
ದುಷ್ಟನ ಆಳಿಕೆ ಜನರಿಗೆ ನರಳಾಟ.
3 ಜ್ಞಾನಾಸಕ್ತನು ತಂದೆಯನ್ನು ಹರ್ಷಗೊಳಿಸುವನು;
ವೇಶ್ಯಾಸಂಗಿಯು ಆಸ್ತಿಯನ್ನು ಹಾಳುಮಾಡಿಕೊಳ್ಳುವನು.
4 ನ್ಯಾಯಪಾಲಕನಾದ ರಾಜನು ದೇಶವನ್ನು ವೃದ್ಧಿ[ಗೆ] ತರುವನು;
ಅನ್ಯಾಯವಾಗಿ ತೆರಿಗೆಯನ್ನು ಕಸಕೊಳ್ಳುವವನು ದೇ[ಶ]ವನ್ನು ನಾಶಮಾಡುವನು.
5 ನೆರೆಯವನೊಂದಿಗೆ ವಂಚಿಸುವ ಸವಿನುಡಿಗಳನ್ನಾಡುವವನು
ಅವನ ಹೆಜ್ಜೆಗೆ ಬಲೆಯನ್ನೊಡ್ಡುವನು.
6 ಕೆಟ್ಟವನ ದುರ್ಮಾರ್ಗದಲ್ಲಿ ಉರುಲುಂಟು;
ಒಳ್ಳೆಯವನು ಉಲ್ಲಾಸಗೊಂಡು ಹರ್ಷಧ್ವನಿಗೈಯುವನು.
7 ಶಿಷ್ಟನು ಬಡವರ ನ್ಯಾಯವನ್ನು ತಿಳಿದಿರುವನು;
ದುಷ್ಟನಿಗೆ ಅದನ್ನು ಗ್ರಹಿಸುವಷ್ಟು ವಿವೇಕವಿಲ್ಲ.
8 ಧರ್ಮನಿಂದಕರು ಪಟ್ಟಣಕ್ಕೆ ಬೆಂಕಿಯನ್ನು ಹತ್ತಿಸುವರು;
ಜ್ಞಾನಿಗಳೋ ರೋಷಾಗ್ನಿಯನ್ನಾರಿಸುವರು.
9 ಮೂರ್ಖನ ಸಂಗಡ ಜ್ಞಾನಿಯು ವ್ಯಾಜ್ಯವಾಡುವಾ[ಗ]
ರೇಗಿದರೂ ನಕ್ಕರೂ ಜಗಳವು ತೀರುವದಿಲ್ಲ.
10 ಕೊಲೆಪಾತಕರು ನಿರ್ದೋಷಿಯನ್ನು ದ್ವೇಷಿಸುವರು;
ಯಥಾರ್ಥವಂತನ ಪ್ರಾಣಕ್ಕೂ ಹೊಂಚುಹಾಕುವರು.
11 ಮೂಢನು ತನ್ನ ಕೋಪವನ್ನೆಲ್ಲಾ ತೋರಿಸುವನು;
ಜ್ಞಾನಿಯು ತನ್ನ ಕೋಪವನ್ನು ತಡೆದು ಶಮನಪಡಿ[ಸಿ]ಕೊಳ್ಳುವನು.
12 ಸುಳ್ಳಿಗೆ ಕಿವಿಗೊಡುವ ಅಧಿಪತಿಯ ಸೇವಕರೆಲ್ಲಾ ದುಷ್ಟರೇ.
13 ತಗ್ಗುವವನು ತಗ್ಗಿಸುವವನು ಸ್ಥಿತಿಯಲ್ಲಿ ಎದುರ[ು] ಬದುರಾಗಿದ್ದಾರೆ;
ಯೆಹೋವನೇ ಅವರಿಬ್ಬರ ಕಣ್ಣುಗಳಿಗೆ ಕಳೆಕೊ[ಡು]ವನು.

[1] ಮೂಲ: ಕೆಟ್ಟಕಣ್ಣಿನವನು.

4 ಬಡವರನ್ನು ನ್ಯಾಯವಾಗಿ ಆಳುವ ರಾಜನ ಸಿಂಹಾಸನ
ವು ಶಾಶ್ವತವು.
5 ಬೆತ್ತಬೆದರಿಕೆಗಳಿಂದ ಜ್ಞಾನವುಂಟಾಗುವದು;
ಶಿಕ್ಷಿಸದೆ ಬಿಟ್ಟ ಹುಡುಗನು ತಾಯಿಯ ಮಾನವನ್ನು
ಕಳೆಯುವನು.
6 ದುಷ್ಟರ ವೃದ್ಧಿ ಪಾಪವೃದ್ಧಿ;
ಶಿಷ್ಟರೋ ಅವರ ಪತನವನ್ನು ಕಣ್ಣಾರೆ ನೋಡುವರು.
7 ಮಗನನ್ನು ಶಿಕ್ಷಿಸು; ನಿನ್ನನ್ನು ಸುಧಾರಿಸುವನು;
ಅವನೇ ನಿನ್ನ ಆತ್ಮಕ್ಕೆ ಮೃಷ್ಟಾನ್ನವಾಗುವನು.
8 ದೇವದರ್ಶಕರಿಲ್ಲದಿರುವಲ್ಲಿ ಜನರು ಅಂಕೆಮೀರುವರು;
ಧರ್ಮೋಪದೇಶವನ್ನು ಕೈಕೊಳ್ಳುವವನೋ ಧನ್ಯನಾಗು
ವನು.
9 ಆಳು ಮಾತಿನಿಂದ ಮಾತ್ರ ಶಿಕ್ಷಿತನಾಗಲಾರನು;
ಅವನು ತಿಳಿದುಕೊಂಡರೂ ಗಮನಿಸನು.
0 ದುಡುಕಿ ಮಾತಾಡುವವನನ್ನು ನೋಡು;
ಅಂಥವನಿಗಿಂತಲೂ ಮೂಢನ ವಿಷಯದಲ್ಲಿ ಹೆಚ್ಚು
ನಿರೀಕ್ಷೆಯನ್ನಿಡಬಹುದು.
1 ಆಳನ್ನು ಚಿಕ್ಕತನದಿಂದ ಕೋಮಲವಾಗಿ ಸಾಕಿದರೆ
ತರುವಾಯ ಅವನು 1)ಎದುರುಬೀಳುವನು.
2 ಕೋಪಿಷ್ಠನು ಜಗಳವನ್ನೆಬ್ಬಿಸುವನು;
ಕ್ರೋಧಶೀಲನು ದೋಷಭರಿತನು.
3 ಗರ್ವವು ಮನುಷ್ಯನನ್ನು ದೀನಸ್ಥಿತಿಗೆ ತರುವದು;
ದೀನಮನಸ್ಸುಳ್ಳವನು ಮಾನವನ್ನು ಪಡೆಯುವನು.
4 ಕಳ್ಳನೊಡನೆ ಪಾಲುಗಾರನಾದವನು ತನಗೆ ತಾನೇ
ಶತ್ರು;
ಆಣೆಯಿಡುವದನ್ನು ಕೇಳಿದರೂ ಸುಮ್ಮನಿರುವನು.
5 ಮನುಷ್ಯನ ಭಯ ಉರುಲು;
ಯೆಹೋವನ ಭರವಸ ಉದ್ಧಾರ.
6 ಅನೇಕರು ನ್ಯಾಯಾಧಿಪತಿಯ ಕಟಾಕ್ಷವನ್ನು ಕೋರು
ವರು;
ನ್ಯಾಯತೀರ್ಪು ಯೆಹೋವನಿಂದಲೇ ಆಗುವದು.
7 ಶಿಷ್ಟರಿಗೆ ದುರ್ಮಾರ್ಗಿಯು ಅಸಹ್ಯನು;
ದುಷ್ಟರಿಗೆ ಸರಳಮಾರ್ಗಿಯು ಅಸಹ್ಯನು.

30 ದೈವೋಕ್ತಿ. ಯಾಕೆ ಎಂಬವನ ಮಗನಾದ ಆಗೂ
ರನ ಮಾತುಗಳು.
2)ಇವನು ಇಥಿಯೇಲನಿಗೆ, ಇಥಿಯೇಲನಿಗೂ ಉಕ್ಕಾ
ಲನಿಗೂ ಹೀಗೆ ಹೇಳಿದನು.
2 ಮನುಷ್ಯರಲ್ಲಿ ನನ್ನಂಥ ಪಶುಪ್ರಾಯನು ಇಲ್ಲವಷ್ಟೆ!
ಮಾನುಷವಿವೇಕವು ನನಗಿಲ್ಲ.
3 ನಾನು ಜ್ಞಾನವನ್ನು ಪಡೆದುಕೊಂಡಿಲ್ಲ,
ಪರಿಶುದ್ಧನ ವಿಷಯವಾದ ತಿಳುವಳಿಕೆಯನ್ನು ಹೊಂದಿ
ಲ್ಲ.
4 ಆಕಾಶಕ್ಕೆ ಏರಿ ಇಳಿದಿರುವವನಾರು?
ಮುಷ್ಟಿಯಲ್ಲಿ ಗಾಳಿಯನ್ನು ಕೂಡಿಸಿರುವವರು ಯಾ
ರು?
ತನ್ನ ಬಟ್ಟೆಯಲ್ಲಿ ನೀರನ್ನು ಮೂಟೆಕಟ್ಟಿರುವವರು
ಯಾರು?
ಭೂಮಿಯ ಎಲ್ಲೆಗಳನ್ನೆಲ್ಲಾ ಸ್ಥಾಪಿಸಿರುವವರು ಯಾ
ರು?
ಅವನ ಹೆಸರೇನು? ಅವನ ಮಗನ ಹೆಸರೇನು?
ನೀನೇ ಬಲ್ಲವನು.
ದೇವರ ಪ್ರತಿಯೊಂದು ಮಾತು ಶುದ್ಧವಾದದ್ದು; 5
ಆತನು ಶರಣಾಗತರಿಗೆ ಗುರಾಣಿಯಾಗಿದ್ದಾನೆ.
ಅವನ ಮಾತುಗಳಿಗೆ ಯಾವದನ್ನೂ ಸೇರಿಸಬೇಡ; 6
ಆತನು ನಿನ್ನನ್ನು ಖಂಡಿಸುವಾಗ ನೀನು ಸುಳ್ಳುಗಾರ
ನೆಂದು ತೋರಿಬಂದೀಯೆ.

ನಿನ್ನಿಂದ ಎರಡು ವರಗಳನ್ನು ಬೇಡಿಕೊಂಡಿದ್ದೇನೆ; 7
ಅನುಗ್ರಹಿಸದಿರಬೇಡ, ನಾನು ಸಾಯುವದರೊಳಗಾಗಿ
ಅವುಗಳನ್ನು ಕೈಗೂಡಿಸು.
ನನ್ನಿಂದ ಕಪಟವನ್ನೂ ಸುಳ್ಳುಮಾತನ್ನೂ ತೊಲಗಿಸು, 8
ಬಡತನವನ್ನಾಗಲಿ ಐಶ್ವರ್ಯವನ್ನಾಗಲಿ ಕೊಡದೆ
ನನಗೆ ತಕ್ಕಷ್ಟು ಆಹಾರವನ್ನು ಭೋಜನಮಾಡಿಸು.
ಹಾಗಾಗದೆ ಹೊಟ್ಟೆತುಂಬಿದವನಾದರೆ ಯೆಹೋವನು 9
ಯಾರೋ ಎಂದು ನಿನ್ನನ್ನು ತಿರಸ್ಕರಿಸೇನು;
ಬಡವನಾದರೆ ಕಳ್ಳತನಮಾಡಿ ನನ್ನ ದೇವರಾದ ನಿನ್ನ
ಹೆಸರನ್ನು ಅಯೋಗ್ಯವಾಗಿ ಎತ್ತೇನು.

ಆಳಿನ ಮೇಲೆ ದಣಿಗೆ ದೂರನ್ನು ಹೇಳಬೇಡ; 10
ಅವನು ಶಪಿಸಾನು; ನಿನ್ನಲ್ಲೇ ದೋಷವು ಕಂಡು
ಬಂದೀತು.

ತಾಯಿಗೆ ಶುಭವನ್ನು ಕೋರದೆ 11
ತಂದೆಯನ್ನು ಶಪಿಸುವ ಒಂದು ತರದವರುಂಟು.
ತಮ್ಮ ಕೊಳೆಯನ್ನು ತೊಳಕೊಳ್ಳದೆ 12
ತಾವೇ ಶುದ್ಧರೆಂದು ಎಣಿಸಿಕೊಳ್ಳುವ ಬೇರೊಂದು
ತರದವರುಂಟು.
ಕಣ್ಣುರೆಪ್ಪೆಗಳನ್ನೆತ್ತಿಕೊಂಡು 13
ಎಷ್ಟೋ ಮೇಲೆ ಮೇಲೆಯೇ ನೋಡುತ್ತಿರುವ ಇನ್ನೊಂ
ದು ತರದವರುಂಟು.
ಖಡ್ಗದಂತಿರುವ ಹಲ್ಲುಗಳೂ ಕತ್ತಿಯಂತಿರುವ ಕೋರೆ 14
ಗಳೂ ಉಳ್ಳವರಾಗಿ
ಭೂಮಿಯೊಳಗಿಂದ ಬಡವರನ್ನೂ ಮನುಷ್ಯರ ಮಧ್ಯ
ದೊಳಗಿಂದ ದಿಕ್ಕಿಲ್ಲದವರನ್ನೂ
ಅಗಿದು ನುಂಗಿಬಿಡುವ ಮತ್ತೊಂದು ತರದವರುಂಟು.
ಕೊಡು, ಕೊಡು ಅನ್ನುವ ಎರಡು ಹೆಣ್ಣುಮಕ್ಕಳು 15
ಜಿಗಣೆಗೆ ಉಂಟು.
ತೃಪ್ತಿಪಡದವುಗಳು ಮೂರು ಉಂಟು;
ಹೌದು, ಸಾಕೆನ್ನದವುಗಳು ನಾಲ್ಕು ಉಂಟು.
ಯಾವವಂದರೆ, ಪಾತಾಳ, ಬರದ ಗರ್ಭ, 16
ನೀರಿನಿಂದ ತೃಪ್ತಿಪಡದ ಭೂಮಿ,
ಸಾಕಾಯಿತೆಂದು ಹೇಳದ ಬೆಂಕಿ, ಇವೇ.

1) ಅಥವಾ: ಪುತ್ರಸ್ಥಾನಹಿಡಿಕೊಳ್ಳುವನು
2) ಪಾಠಾಂತರ: ಇವನು ಹೀಗೆ ಹೇಳಿದನು: ದೇವರೇ, ಬೇಸರಗೊಂಡಿದ್ದೇನೆ.
ದೇವರೇ, ಬೇಸರಗೊಂಡಿದ್ದೇನೆ, ಸತ್ತಿದ್ದೇನೆ!

17 ತಂದೆಯನ್ನು ಹಾಸ್ಯಮಾಡಿ ತಾಯಿಯ ಅಪ್ಪಣೆಯನ್ನು
ಧಿಕ್ಕರಿಸುವವನ ಕಣ್ಣನ್ನು
ಹಳ್ಳಕೊಳ್ಳದ ಕಾಗೆಗಳು ಕುಕ್ಕುವವು, ರಣಹದ್ದು
ಗಳು ತಿಂದುಬಿಡುವವು.

18 ಮೂರು ವಿಷಯಗಳು ನನ್ನ ಬುದ್ಧಿಯನ್ನು ಮೀರಿವೆ,
ಹೌದು, ನಾಲ್ಕನ್ನು ಗ್ರಹಿಸಲಾರೆನು.
19 ಯಾವವಂದರೆ, ಆಕಾಶದಲ್ಲಿ ಹದ್ದಿನ ಹಾದಿ,
ಬಂಡೆಯ ಮೇಲೆ ಸರ್ಪದ ಸರಣಿ,
ಸಾಗರದ ನಡುವೆ ಹಡಗಿನ ಮಾರ್ಗ,
ಸ್ತ್ರೀಯಲ್ಲಿ ಪುರುಷನ ಪದ್ಧತಿ, ಇವೇ.
20 ಜಾರಳ ನಡತೆಯು ಹೀಗೆಯೇ ಸರಿ;
ಅವಳು ತಿಂದು ಬಾಯಿ ಒರಸಿಕೊಂಡು
ನಾನು ತಪ್ಪುಮಾಡಲಿಲ್ಲವಲ್ಲವೆ ಅಂದುಕೊಳ್ಳುವಳು.

21 ಮೂರರ ಭಾರದಿಂದ ಭೂಮಿಯು ಕಂಪಿಸುತ್ತದೆ,
ಹೌದು, ನಾಲ್ಕರ ಹೊರೆಯನ್ನು ತಾಳಲಾರದು.
22 ಯಾವವಂದರೆ, ಪಟ್ಟಕ್ಕೆ ಬಂದ ದಾಸನು,
ಹೊಟ್ಟೆತುಂಬಿದ ನೀಚನು,
23 ಮದುವೆಯಾದ ಚಂಡಿಯು,
1)ಸವತಿಯಾದ ತೊತ್ತು, ಇವೇ.

24 ಭೂಮಿಯ ಮೇಲೆ ಅಧಿಕ ಜ್ಞಾನವುಳ್ಳ ನಾಲ್ಕು ಸಣ್ಣ
ಜಂತುಗಳುಂಟು.
25 ಇರುವೆಗಳು ದುರ್ಬಲಜಾತಿಯಾದರೂ
ಸುಗ್ಗಿಯಲ್ಲಿ ತಮ್ಮ ಆಹಾರವನ್ನು ಅಣಿಮಾಡಿಕೊಳ್ಳು
ವವು.
26 ಬೆಟ್ಟದ ಮೊಲಗಳು ದೊಡ್ಡ ಜಾತಿಯಲ್ಲದಿದ್ದರೂ
ಬಂಡೆಗಳಲ್ಲಿ ತಮ್ಮ ಮನೆಗಳನ್ನು ಮಾಡಿಕೊಳ್ಳುವವು.
27 ಮಿಡತೆಗಳಿಗೆ ಅರಸನಿಲ್ಲ,
ಆದರೂ ಅವೆಲ್ಲಾ ದಂಡುದಂಡಾಗಿ ಹೊರಡುವವು.
28 2)ಹಲ್ಲಿಯು ಅಂಗೈಯ ಆಸರೆಯಿಂದ ಹಿಡಿದು
ಅರಮನೆಗಳಲ್ಲಿ ವಾಸಮಾಡುವದು.

29 ಗಂಭೀರಗಮನದ ಮೂರು ಪ್ರಾಣಿಗಳುಂಟು,
ಹೌದು, ಗಂಭೀರಗತಿಯ ನಾಲ್ಕುಂಟು.
30 ಯಾವದಕ್ಕೂ ಹೆದರಿ ಓರೆಯಾಗದ
ಮೃಗರಾಜನಾದ ಸಿಂಹ,
31 3)ಬೇಟೆಯ ನಾಯಿ, ಹೋತವು ಸಹ,
4)ಸೈನ್ಯಸಮೇತನಾದ ರಾಜ.

32 ನೀನು ಉಬ್ಬಿಕೊಂಡು ಮೂರ್ಖನಾಗಿ ನಡೆದಿದ್ದರೆ
ಅಥವಾ ದುರಾಲೋಚನೆಮಾಡಿದ್ದರೆ ಬಾಯ ಮೇಲೆ
ಕೈಯಿಟ್ಟುಕೋ.
33 ಹಾಲು ಕಡೆಯುವದರಿಂದ ಬೆಣ್ಣೆ,
ಮೂಗು ಹಿಂಡುವದರಿಂದ ರಕ್ತ,
ಕೋಪಕಲಕುವದರಿಂದ ಜಗಳ.

5)ಅರಸನಾದ ಲೆಮೂವೇಲನ ಮಾತುಗಳು ಎಂದರೆ 3
ಅವನ ತಾಯಿಯು ಅವನಿಗೆ ಉಪದೇಶಿಸಿದ
ದೈವೋಕ್ತಿಯು—
ಏನು, ಕಂದಾ! ನನ್ನ ಗರ್ಭಪುತ್ರನೇ, ಏನು!
ನನ್ನ ಹರಕೆಯ ಮಗುವೇ, ನಾನು ಏನು ಹೇಳಲಿ!
ನಿನ್ನ ತ್ರಾಣವನ್ನು ಸ್ತ್ರೀಯರಲ್ಲಿ ಒಪ್ಪಿಸದಿರು,
ರಾಜರಿಗೆ ವಿನಾಶಕರವಾದ ದಾರಿಗೆ ತಿರುಗಬೇಡ.
ದ್ರಾಕ್ಷಾರಸವನ್ನು ಕುಡಿಯುವದು ರಾಜರಿಗೆ ಯೋ
ಗ್ಯವಲ್ಲ;
ಲೆಮೂವೇಲನೇ, ಅದು ರಾಜರಿಗೆ ಯೋಗ್ಯವಲ್ಲ;
ಮದ್ಯವೆಲ್ಲಿ ಎನ್ನುವದು ಪ್ರಭುಗಳಿಗೆ ವಿಹಿತವಲ್ಲ.
ಕುಡಿದರೆ ಅವರು ಧರ್ಮನಿಯಮಗಳನ್ನು ಮರೆತು
ಬಿಟ್ಟು
ಬಾಧೆಪಡುವವರೆಲ್ಲರ ನ್ಯಾಯವನ್ನು ವ್ಯತ್ಯಾಸಮಾಡು
ವರು.
ಮದ್ಯವನ್ನು ಗತಿಯಿಲ್ಲದವನಿಗೂ
ದ್ರಾಕ್ಷಾರಸವನ್ನು ಮನೋವ್ಯಥೆಪಡುವವನಿಗೂ ಕೊ
ಟ್ಟರೆ ಕೊಡು.
ಕುಡಿದು ಬಡತನವನ್ನು ಮರೆತುಬಿಡಲಿ,
ಶ್ರಮೆಯನ್ನು ಇನ್ನೂ ಜ್ಞಾಪಕಕ್ಕೆ ತಾರದಿರಲಿ.
ಬಾಯಿಲ್ಲದವರಿಗೂ ಹಾಳಾಗಿಹೋಗುತ್ತಿರುವವರೆಲ್ಲ
ರಿಗೂ
ನ್ಯಾಯವಾಗುವಂತೆ ಬಾಯಿ ತೆರೆ.
ಬಾಯಿ ತೆರೆದು ಧರ್ಮವನ್ನು ನಡಿಸು,
ದೀನದರಿದ್ರರಿಗೆ ನ್ಯಾಯವನ್ನು ತೀರಿಸು.

א ಗುಣವತಿಯಾದ ಸತಿಯು ಎಲ್ಲಿ ಸಿಕ್ಕಾಳು?
ಆಕೆಯು ಹವಳಕ್ಕಿಂತಲೂ ಬಹು ಅಮೂಲ್ಯಳು.
ב ಪತಿಹೃದಯವು ಆಕೆಯಲ್ಲಿ ಭರವಸವಿಡುವದು;
ಅವನು ಕೊಳ್ಳೆಕೊಳ್ಳೆಯಾಗಿ ಸಂಪಾದಿಸುವನು.
ג ಆಕೆಯು ಜೀವಮಾನದಲ್ಲೆಲ್ಲಾ ಅವನಿಗೆ ಅಹಿತ
ವನ್ನು ಮಾಡದೆ
ಹಿತವನ್ನೇ ಮಾಡುತ್ತಿರುವಳು.
ד ಉಣ್ಣೆಯನ್ನೂ ಸಣಬನ್ನೂ ಹುಡುಕಿ ತಂದು
6)ಕೈಗೆಲಸವನ್ನೆಸಗುವಳು.
ה ವ್ಯಾಪಾರದ ಹಡಗುಗಳಂತೆ
ದೂರದಿಂದ ಬೇಕಾದ ಆಹಾರವನ್ನು ತರುವಳು.
ו ಇನ್ನೂ ಕತ್ತಲಿರುವಾಗಲೇ ಎದ್ದು
ಮನೆಯವರಿಗೆ ತೀನಿಯನ್ನಿಕ್ಕಿ
ತೊತ್ತುಗಳಿಗೆ 7)ದಿನದ ಬತ್ಯವನ್ನು ಹಂಚುವಳು.
ז ಹೊಲವನ್ನು ನೋಡಿ ಯೋಚಿಸಿ ಕೊಂಡುಕೊಳ್ಳು
ವಳು;

1) ಅಥವಾ: ಯಜಮಾನಿಗೆ ಬಾಧ್ಯಸ್ತಳಾದ ತೊತ್ತು. 2) ಅಥವಾ: ಹಲ್ಲಿಯನ್ನು ಕೈಯೊಳಗೆ ಹಿಡಿದುಕೊಳ್ಳಬಹುದು, ಆ
ಅದು. 3) ಅಥವಾ: ಯುದ್ಧದ ಕುದುರೆ; ಅಥವಾ, ಹುಂಜ; ಮೂಲ, ಬಿಗಿದ ನಡುವಿನ ಪ್ರಾಣಿ. 4) ಅಥವಾ: ಯ
ಪ್ರತಿಭಟಿಸದ. 5) ಅಥವಾ: ಮಸ್ಸಾರಾಜ್ಯದ ಅರಸನಾದ ಲೆಮೂವೇಲನ ಮಾತುಗಳು; ಎಂದರೆ ಅವನ ತಾಯಿಯು ಅವನಿಗೆ ಉಪ
ಸಿದ್ದು. 6) ಅಥವಾ: ಕೈಗೆಲಸವನ್ನು ಸಂತೋಷದಿಂದ ಎಸಗುವಳು. 7) ಅಥವಾ: ದಿನಗೆಲಸವನ್ನು ನೇಮಿಸುವಳು.

ತನ್ನ ಕೈಗೆಲಸದ ಲಾಭದಿಂದ ತೋಟಮಾಡಿಸುವಳು.
17 ח ನಡುವಿಗೆ ಬಲವೆಂಬ ಪಟ್ಟಿಯನ್ನು ಕಟ್ಟಿಕೊಂಡು
ತೋಳುಗಳನ್ನು ಶಕ್ತಿಗೊಳಿಸುವಳು.
18 ט ವಿವೇಚಿಸಿ ಬಹುಲಾಭವಾಯಿತೆಂದು ತಿಳುಕೊಳ್ಳು
ವಳು;
ಆಕೆಯ ದೀಪವು ರಾತ್ರಿಯೆಲ್ಲಾ ಆರದು.
19 י ರಾಟೆಯ ಮೇಲೆ ಕೈ ಹಾಕಿ
ಕದರನ್ನು ಹಿಡಿಯುವಳು.
20 כ ಬಡವರಿಗಾಗಿ ಕೈ ಬಿಚ್ಚಿ
ದಿಕ್ಕಿಲ್ಲದವರಿಗೆ ಕೈ ನೀಡುವಳು.
21 ל ಮನೆಯವರೆಲ್ಲರಿಗೂ ಸಕಲಾತಿಯನ್ನು ಹೊದಿಸಿ
ರುವದರಿಂದ
ಅವರ ವಿಷಯವಾಗಿ ಆಕೆಗೆ ಹಿಮದ ಭಯವಿಲ್ಲ.
22 מ ತನಗಾಗಿ ರತ್ನಗಂಬಳಿಗಳನ್ನು ಮಾಡುವಳು;
ಆಕೆಯ ಉಡುಪೋ ನಾರುಮಡಿ, ರಕ್ತಾಂಬರ.
23 נ ಆಕೆಯ ಪತಿಯು ನ್ಯಾಯಸ್ಥಾನದಲ್ಲಿ
ದೇಶದ ಹಿರಿಯರ ಮಧ್ಯೆ ಕೂತಿರುವಾಗ ಪ್ರಸಿದ್ಧ
ನಾಗಿ ಕಾಣುವನು.
24 ס ಹಚ್ಚಡಗಳನ್ನು ನೆಯ್ದು ಮಾರಾಟಮಾಡುವಳು,
ನಡುಕಟ್ಟುಗಳನ್ನು ವರ್ತಕನಿಗೆ ಒದಗಿಸುವಳು.
ע ಬಲವನ್ನೂ ತೇಜಸ್ಸನ್ನೂ ಹೊದ್ದುಕೊಂಡಿರುವಳು; 25
ಭವಿಷ್ಯತ್ತಿನ ಭಯವಿಲ್ಲದೆ ನಗುತ್ತಿರುವಳು.
פ ಬಾಯಿದೆರೆದು ಜ್ಞಾನವನ್ನು ತೋರ್ಪಡಿಸುವಳು. 26
ಆಕೆಯ ನಾಲಿಗೆಯು ಬುದ್ಧಿಯನ್ನು ಪ್ರೀತಿಪೂರ್ವಕ
ವಾಗಿ ಹೇಳುವದು.
צ ಸೋಮಾರಿತನದ ಅನ್ನವನ್ನು ತಿನ್ನದೆ 27
ಗೃಹಕೃತ್ಯಗಳನ್ನೆಲ್ಲಾ ನೋಡಿಕೊಳ್ಳುವಳು.
ק ಮಕ್ಕಳು ಎದ್ದುನಿಂತು ಆಕೆಯನ್ನು ಧನ್ಯಳು 28
ಎಂದು ಹೇಳುವರು;
ר ಪತಿಯು ಸಹ—ಬಹುಮಂದಿ ಸ್ತ್ರೀಯರು ಗುಣ 29
ವತಿಯರಾಗಿ ನಡೆದಿದ್ದಾರೆ,
ಅವರೆಲ್ಲರಿಗಿಂತಲೂ ನೀನೇ ಶ್ರೇಷ್ಠಳು ಎಂದು ಆಕೆ
ಯನ್ನು ಕೊಂಡಾಡುವನು.
ש ಸೌಂದರ್ಯವು ನೆಚ್ಚತಕ್ಕದ್ದಲ್ಲ, ಲಾವಣ್ಯವು ನೆಲೆ 30
ಯಲ್ಲ;
ಯೆಹೋವನಲ್ಲಿ ಭಯಭಕ್ತಿಯುಳ್ಳವಳೇ ಸ್ತೋತ್ರ
ಪಾತ್ರಳು.
ת ಆಕೆಯ ಕೈಗೆಲಸಕ್ಕೆ ಪ್ರತಿಫಲವನ್ನು ಸಲ್ಲಿಸಿರಿ; 31
ಆಕೆಯ ಕಾರ್ಯಗಳೇ ಪುರದ್ವಾರಗಳಲ್ಲಿ ಆಕೆಯನ್ನು
ಪ್ರಶಂಸಿಸಲಿ.

---

# ECCLESIASTES

## ಪ್ರಸಂಗಿ

1 ದಾವೀದನ ಮಗನೂ ಯೆರೂಸಲೇಮಿನಲ್ಲಿ ಆಳುವ
ಅರಸನೂ ಆಗಿದ್ದ ಪ್ರಸಂಗಿಯ ಮಾತುಗಳು.
2 ಪ್ರಸಂಗಿಯು ಹೀಗೆ ಹೇಳುತ್ತಾನೆ—ವ್ಯರ್ಥವೇ
ವ್ಯರ್ಥ, ವ್ಯರ್ಥವೇ ವ್ಯರ್ಥ, ಸಮಸ್ತವೂ ವ್ಯರ್ಥ!
3 ಮನುಷ್ಯನು ಈ ಲೋಕದಲ್ಲಿ ಪಡುವ ಎಲ್ಲಾ
4 ಪ್ರಯಾಸದಿಂದ ಅವನಿಗೆ ಏನು ಲಾಭ? ಒಂದು
ತಲಾಂತರವು ಗತಿಸುವದು, ಇನ್ನೊಂದು ತಲಾಂತರವು
ಬರುವದು. ಭೂಮಿಯಾದರೋ ಶಾಶ್ವತವಾಗಿ
5 ನಿಲ್ಲುವದು. ಸೂರ್ಯನು ಏರುವನು, ಸೂರ್ಯನು
ಇಳಿಯುವನು, ಹೊರಟ ಸ್ಥಾನಕ್ಕೆ ಅಸುರುಸುರಾಗಿ
6 ತಿರಿಗಿ ಓಡುವನು. ಗಾಳಿಯು ತೆಂಕಣಕ್ಕೆ ಬೀಸಿ
ಬಡಗಣಕ್ಕೆ ತಿರುಗುವದು; ಅದು ತಿರುತಿರುಗುತ್ತಾ
7 ಹೋಗಿ ತಿರುತಿರುಗುತ್ತಾ ಬರುವದು. ನದಿಗಳೆಲ್ಲಾ
ಸಮುದ್ರಕ್ಕೆ ಹರಿದು ಹೋಗುವವು; ಆದರೂ ಸಮು
ದ್ರವು ತುಂಬುವದಿಲ್ಲ; ಅವು ಎಲ್ಲಿಗೆ ಹರಿದು ಹೋಗು
8 ತ್ತವೋ ಅಲ್ಲಿಗೇ ತಿರಿಗಿ ಹೋಗುವವು. ಎಲ್ಲಾ
ವಸ್ತುಗಳು ಬಳಲಿ ಹೋಗುವವು; ಇದನ್ನು ಮನು
ಷ್ಯನು ವಿವರಿಸಲಾರನು. ಕಣ್ಣು ನೋಡಿ ನೋಡಿ
ತೃಪ್ತಿಗೊಳ್ಳದು, ಕಿವಿಯು ಕೇಳಿ ಕೇಳಿ ದಣಿಯದು.
ಇದ್ದದ್ದೇ ಇರುವದು, ನಡೆದದ್ದೇ ನಡೆಯುವದು, 9
ಲೋಕದಲ್ಲಿ ಹೊಸದೇನೂ ಇಲ್ಲ. ಇಗೋ, ಹೊಸದು 10
ಎನಿಸಿಕೊಳ್ಳುವ ವಸ್ತುವಿದ್ದರೂ ಅದು ಪೂರ್ವದಲ್ಲಿ
ನಮಗಿಂತ ಮುಂಚಿನ ಯುಗಗಳಲ್ಲಿಯೂ ಇದ್ದದ್ದೇ.
ಹಿಂದಿನ ತಲಾಂತರಗಳ ಜ್ಞಾಪಕವು [ಈಗಿನವರಿಗೆ] 11
ಇಲ್ಲ; ಮುಂದಿನ ತಲಾಂತರಗಳ ಜ್ಞಾಪಕವೂ ಅವುಗಳ
ಮುಂದಿನ ತಲಾಂತರಗಳಿಗೆ ಇರುವದಿಲ್ಲ.
ಪ್ರಸಂಗಿಯಾದ ನಾನು ಯೆರೂಸಲೇಮಿನಲ್ಲಿ 12
ಇಸ್ರಾಯೇಲ್ಯರಿಗೆ ಅರಸನಾಗಿದ್ದೆನು. ಆಕಾಶದ 13
ಕೆಳಗೆ ನಡೆಯುವ ಎಲ್ಲಾ ಕೆಲಸಗಳನ್ನು ಜ್ಞಾನದಿಂದ
ವಿಚಾರಿಸಿ ವಿಮರ್ಶಿಸಲು ಮನಸ್ಸಿಟ್ಟೆನು, ನರಜನ್ಮ
ದವರ ಕರ್ತವ್ಯವೆಂದು ದೇವರು ನೇಮಿಸಿರುವ ಆ
ಕೆಲಸವೆಲ್ಲಾ ಬಹು ಪ್ರಯಾಸವೇ. ಲೋಕದಲ್ಲಿ 14
ನಡೆಯುವ ಕೆಲಸಗಳನ್ನೆಲ್ಲಾ ನೋಡಿದ್ದೇನೆ; ಆಹಾ,
ಗಾಳಿಯನ್ನು ಹಿಂದಟ್ಟಿದ ಹಾಗೆ ಸಮಸ್ತವೂ ವ್ಯರ್ಥ.
ವಕ್ರವಾದದ್ದನ್ನು ಸರಿಮಾಡುವದು ಅಸಾಧ್ಯ; ಇಲ್ಲ 15
ದ್ದನ್ನು ಲೆಕ್ಕಿಸುವದು ಅಶಕ್ಯ. ನಾನು ಮನಸ್ಸಿ 16

ನಲ್ಲಿ ಯೋಚಿಸುತ್ತಾ—ಅಹಾ, ನನಗಿಂತ ಮೊದಲು
ಯೆರೂಸಲೇಮನ್ನು ಆಳಿದವರೆಲ್ಲರಿಗಿಂತಲೂ ಹೆಚ್ಚು
ಜ್ಞಾನವನ್ನು ಸಂಪಾದಿಸಿಕೊಂಡಿದ್ದೇನೆ; ನನ್ನ ಹೃದ
ಯವು ಜ್ಞಾನವನ್ನೂ ತಿಳುವಳಿಕೆಯನ್ನೂ ವಿಶೇಷವಾಗಿ
17 ಹೊಂದಿದೆ ಎಂದುಕೊಂಡೆನು. ಜ್ಞಾನವನ್ನಲ್ಲದೆ ಮರು
ಳುತನವನ್ನೂ ಬುದ್ಧಿಹೀನತೆಯನ್ನೂ ಗ್ರಹಿಸಲು ಮನ
ಸ್ಸಿಟ್ಟೆನು. ಇದು ಸಹ ಗಾಳಿಯನ್ನು ಹಿಂದಟ್ಟಿದ
18 ಹಾಗೆ ಎಂದು ಅರಿತುಕೊಂಡೆನು. ಬಹು ಜ್ಞಾನವಿ
ದ್ದಲ್ಲಿ ಬಹು ಸಂಕಟ, ಹೆಚ್ಚು ತಿಳುವಳಿಕೆಯನ್ನು ಪಡೆ
ದವನಿಗೆ ಹೆಚ್ಚು ವ್ಯಥೆ.

**2** ನಾನು ಮನಸ್ಸಿನಲ್ಲಿ,—ಬಾ, ನಿನ್ನನ್ನು ಸಂತೋ
ಷದ ಮೂಲಕ ಪರೀಕ್ಷಿಸುವೆನು; ಸುಖದ ರುಚಿ
ನೋಡು ಅಂದುಕೊಂಡೆನು. ಅಹಾ, ಇದೂ ವ್ಯರ್ಥ
2 ವೇ. ನಗೆಯು ಹುಚ್ಚುತನ, ಸಂತೋಷದಿಂದೇನು
3 ಅಂದುಕೊಂಡೆನು. ಆಕಾಶದ ಕೆಳಗೆ ನರಜನ್ಮದ
ವರು ಅಲ್ಪಾಯುಷ್ಯದಲ್ಲಿ ಏನು ಮಾಡುವದು
ಯುಕ್ತವೆಂದು ನಾನು ತಿಳಿದುಕೊಳ್ಳುವದಕ್ಕೋಸ್ಕರ
ನನ್ನ ಮನಸ್ಸು ಜ್ಞಾನದಿಂದಿರುವಾಗಲೇ ದೇಹವನ್ನು
ದ್ರಾಕ್ಷಾರಸದಿಂದ ಉತ್ತೇಜನ ಮಾಡುವದಕ್ಕೂ ಬುದ್ಧಿ
ಹೀನತೆಯನ್ನು ಅವಲಂಬಿಸುವದಕ್ಕೂ ಮನಸ್ಸಿನಲ್ಲಿ
4 ವಿಚಾರಮಾಡಿಕೊಂಡೆನು. ಮತ್ತು ವಿಶೇಷ ಕಾರ್ಯ
ಗಳನ್ನು ನಡಿಸಿದೆನು; ಮನೆಗಳನ್ನು ಕಟ್ಟಿಸಿಕೊಂಡೆ
5 ನು, ತೋಟಗಳನ್ನೂ ಉದ್ಯಾನವನಗಳನ್ನೂ ಮಾಡಿಸಿ
ಅವುಗಳಲ್ಲಿ ಸಕಲ ವಿಧವಾದ ಫಲವೃಕ್ಷಗಳನ್ನು
6 ನಾಟಿಸಿಕೊಂಡೆನು. ಬೆಳೆಯುವ ಗಿಡಗಳ ತೋಪು
ಗಳಿಗೆ ನೀರು ಹಾಯಿಸುವದಕ್ಕೆ ಕುಂಟೆಗಳನ್ನು
7 ತೆಗೆಯಿಸಿಕೊಂಡೆನು. ಗಂಡು ಹೆಣ್ಣಾಳುಗಳನ್ನು
ಕೊಂಡುಕೊಂಡೆನು; [ಇವರಿಂದ] ಹುಟ್ಟುಗುಲಾ
ಮರು ಉಂಟಾದರು; ಇದಲ್ಲದೆ ಯೆರೂಸಲೇಮಿನಲ್ಲಿ
ಹಿಂದೆ ಇದ್ದವರೆಲ್ಲರಿಗಿಂತಲೂ ನಾನು ಬಲು ದನ
8 ಕುರಿಗಳ ಧನವುಳ್ಳವನಾದೆನು; ಮತ್ತು ಬೆಳ್ಳಿಬಂಗಾರ
ಗಳನ್ನೂ ಅರಸರ ನಜರನ್ನೂ ದಿಗ್ದೇಶಗಳಿಂದ ಕಪ್ಪ
ವನ್ನೂ ಸಂಗ್ರಹಿಸಿಕೊಂಡೆನು; ಗಾಯಕಗಾಯಕಿ
ಯರನ್ನೂ ಮನುಷ್ಯರಿಗೆ ಭೋಗ್ಯರಾದ 1)ಅನೇಕ
9 ಉಪಪತ್ನಿಯರನ್ನೂ ಸಂಪಾದಿಸಿಕೊಂಡೆನು. ಹೀಗೆ
ಯೆರೂಸಲೇಮಿನಲ್ಲಿ ಹಿಂದೆ ಇದ್ದವರೆಲ್ಲರಿಗಿಂತಲೂ
ಹೆಚ್ಚು ಅಭಿವೃದ್ಧಿಹೊಂದಿ ದೊಡ್ಡವನಾದೆನು; ಇದ
ಲ್ಲದೆ ನನ್ನ ಜ್ಞಾನವು ನನ್ನಲ್ಲಿ ನೆಲೆಯಾಗಿತ್ತು,
10 ನನ್ನ ಕಣ್ಣು ಬಯಸಿದ್ದೆಲ್ಲವನ್ನೂ ಅದಕ್ಕೆ ನಾನು
ಒಪ್ಪಿಸದೆ ಬಿಡಲಿಲ್ಲ; ಯಾವ ಸಂತೋಷವನ್ನನು
ಭವಿಸುವದಕ್ಕೂ ನನ್ನ ಹೃದಯವನ್ನು ತಡೆಯಲಿಲ್ಲ;
ಏಕೆಂದರೆ ನನ್ನ ಹೃದಯವು ನನ್ನ ಕಾರ್ಯಗಳಲ್ಲೆಲ್ಲಾ
ಹರ್ಷಿಸುತ್ತಿತ್ತು; ನನ್ನ ಪ್ರಯಾಸದಿಂದೆಲ್ಲಾ ನನಗಾದ
11 ಲಾಭವು ಇದೇ. ಆಗ ನನ್ನ ಕೈಯಿಂದ ನಡಿಸಿದ
ಎಲ್ಲಾ ಕೆಲಸಗಳಲ್ಲಿಯೂ ನಾನು ಪಟ್ಟ ಪ್ರಯಾಸದಲ್ಲಿ
ಯೂ ದೃಷ್ಟಿಯಿಟ್ಟೆನು; ಅಹಾ, ಗಾಳಿಯನ್ನು ಹಿಂದ
ಟ್ಟಿದ ಹಾಗೆ ಸಮಸ್ತವೂ ವ್ಯರ್ಥವಾಯಿತು, ಲೋಕ
ದಲ್ಲಿ ಯಾವ ಲಾಭವೂ ಕಾಣಲಿಲ್ಲ.

ರಾಜನ ಪ್ರಯತ್ನವಾದ ಮೇಲೆ ಮತ್ತೊಬ್ಬನಿಂದ
ಏನಾದೀತು? ಆದದ್ದೇ ಆಗುವದು ಎಂದುಕೊಂಡು
ಜ್ಞಾನವನ್ನೂ ಮರುಳುತನವನ್ನೂ ಬುದ್ಧಿಹೀನತೆಯ
ನ್ನೂ ನೋಡುವದಕ್ಕೆ ತಿರುಗಿಕೊಂಡೆನು. ಆಗ ಬೆಳ
ಕು ಕತ್ತಲಿಗಿಂತ ಶ್ರೇಷ್ಠವಾಗಿರುವಂತೆ ಜ್ಞಾನವೂ
ಮೂಢತ್ವಕ್ಕಿಂತ ಶ್ರೇಷ್ಠವೆಂದು ಗೋಚರವಾಯಿತು.
ಜ್ಞಾನಿಯ ಕಣ್ಣು ಅವನ ತಲೆಯಲ್ಲಿರುವದು,
ಮೂಢನು ಕತ್ತಲಲ್ಲಿ ನಡೆಯುವನು; ಇವರಿಬ್ಬರಿಗೂ
ಒಂದೇ ಗತಿಯೆಂದು ನನಗೆ ಕಂಡುಬಂತು. ಆಗ
ನಾನು—ಮೂಢನಿಗೆ ಸಂಭವಿಸುವ ಗತಿಯೂ ನನಗೂ
ಸಂಭವಿಸುವದು; ನನ್ನ ಹೆಚ್ಚು ಜ್ಞಾನದಿಂದೇನು?
ಇದೂ ವ್ಯರ್ಥವಲ್ಲವೆ ಅಂದುಕೊಂಡೆನು. ಏಕಂದರೆ
ಮೂಢನು ಹೇಗೋ ಹಾಗೆಯೇ ಜ್ಞಾನಿಯೂ ನಿರಂತ
ರವಾಗಿ ಮರೆತುಹೋಗುವನು. ಈಗಿನವರೆಲ್ಲಾ
ಮುಂದಿನ ಕಾಲದೊಳಗಾಗಿಯೇ ಮರೆತುಹೋಗುವ
ರಷ್ಟೆ. ಅಹಾ, ಮೂಢನಂತೆ ಜ್ಞಾನಿಯೂ ಸಾಯು
ವನು! ಲೋಕವ್ಯವಹಾರವು ಕೆಟ್ಟದ್ದೆಂದು ನನಗೆ
ಕಂಡುಬಂದದರಿಂದ ಜೀವವೇ ಅಸಹ್ಯವಾಗಿ ತೋರಿತು;
ಗಾಳಿಯನ್ನು ಹಿಂದಟ್ಟಿದ ಹಾಗೆ ಸಮಸ್ತವೂ ವ್ಯರ್ಥ.

ನನ್ನ ಪ್ರಯಾಸದ ಫಲವನ್ನು ಮುಂದಿನವನಿಗೆ
ಬಿಟ್ಟುಬಿಡಬೇಕೆಂದು ನಾನು ಲೋಕದಲ್ಲಿ ಪಟ್ಟ
ಪ್ರಯಾಸಕ್ಕೆಲ್ಲಾ ಬೇಸರಗೊಂಡೆನು. ಅವನು ಜ್ಞಾನಿ
ಯೋ ಮೂಢನೋ ಯಾರಿಗೆ ಗೊತ್ತು? ಎಂಥವ
ನಾದರೂ ನಾನು ಲೋಕದೊಳಗೆ ಯಾವದರಲ್ಲಿ
ಜ್ಞಾನವನ್ನೂ ಪ್ರಯಾಸವನ್ನೂ ವ್ಯಯಮಾಡಿದ್ದೇನೋ
ಅದರ ಮೇಲೆ ದೊರೆತನಮಾಡುವನು. ಇದೂ
ವ್ಯರ್ಥ. ಹೀಗಿರಲು ನಾನು ಲೋಕದಲ್ಲಿ ಪ್ರಯಾಸ
ಪಟ್ಟ ಕೆಲಸದ ವಿಷಯವಾಗಿ ನಿರಾಶೆಗೊಳಗಾದೆನು
ಒಬ್ಬನು ಜ್ಞಾನದಿಂದಲೂ ತಿಳುವಳಿಕೆಯಿಂದಲೂ
ತನ್ನ ಕೆಲಸವನ್ನು ನಡಿಸಿ ಸಾಫಲ್ಯಕ್ಕೆ ತಂದ ಮೇಲೆ
ಆ ಕೆಲಸದಲ್ಲಿ ಪ್ರಯಾಸಪಡದವನಿಗೆ ಅದರ ಫಲ
ವನ್ನು ಬಾಧ್ಯತೆಯಾಗಿ ಬಿಡಬೇಕಾಗುವದು. ಇದು
ಸಹ ವ್ಯರ್ಥವೂ ಕೇವಲ ಅನ್ಯಾಯವೂ ಆಗಿದೆ. ಲೋಕ
ದಲ್ಲಿ ಮನುಷ್ಯನು ಹೃದಯಪೂರ್ವಕವಾಗಿ ಪಡುವ
ಪ್ರಯಾಸದಿಂದ ಅವನಿಗೆ ಲಾಭವೇನು? ಅವನ ದಿನ
ಗಳೆಲ್ಲಾ ವ್ಯಸನಮಯವೇ, ಅವನ ಕೆಲಸವು ತೊಂದ
ರೆಯೇ; ರಾತ್ರಿಯಲ್ಲಿಯೂ ಅವನ ಮನಸ್ಸಿಗೆ ನಿಲಗಡೆ
ಯಿಲ್ಲ. ಇದೂ ವ್ಯರ್ಥ.

ಅನ್ನಪಾನಗಳನ್ನು ತೆಗೆದುಕೊಂಡು ತನ್ನ ಪ್ರಯಾಸ
ದಲ್ಲಿಯೂ ಸುಖವನ್ನನುಭವಿಸುವದಕ್ಕಿಂತ ಇನ್ನೇನೂ
ಮನುಷ್ಯನಿಗೆ ಮೇಲಿಲ್ಲ. ಇದು ದೇವರಿಂದಾಯಿ
ತೆಂಬದನ್ನೂ ಕಂಡುಕೊಂಡೆನು. 2)ಆತನಿಲ್ಲದೆ ಯಾರು
ಭೋಜನಮಾಡಿ ಸುಖವನ್ನನುಭವಿಸಾರು? ದೇವರು
ತಾನು ಮೆಚ್ಚಿದವನಿಗೆ ಜ್ಞಾನವನ್ನೂ ತಿಳುವಳಿಕೆಯನ್ನೂ
ಸಂತೋಷವನ್ನೂ ದಯಪಾಲಿಸುತ್ತಾನಲ್ಲವೆ; ಪಾ

1) ಅಥವಾ: ನಾನಾ ವಾದ್ಯಗಳನ್ನೂ. ಮೂಲ ಕೇವಲ ಅಸ್ಪಷ್ಟವಾಗಿದೆ. ಪಾಠಾಂತರ: ಪಾನಸೇವಕ ಸೇವಕಿಯರ
2) ಪಾಠಾಂತರ: ನನಗಿಂತಲೂ ವಿಶೇಷ ಭೋಜನಮಾಡಿ ಹೆಚ್ಚು ಸುಖವನ್ನನುಭವಿಸುವವರು ಯಾರು?

ಗಾದರೋ ತನ್ನ ಮೆಚ್ಚಿಕೆಯಾದವನಿಗೆ ಒದಗತಕ್ಕವು
ಗಳನ್ನು ಕೂಡಿಸಿಡುವ ಪ್ರಯಾಸವನ್ನೇ ನೇಮಿಸು
ತ್ತಾನೆ. ಇದೂ ಗಾಳಿಯನ್ನು ಹಿಂದಟ್ಟಿದ ಹಾಗೆ
ವ್ಯರ್ಥ.

3 ಪ್ರತಿಯೊಂದು ಕಾರ್ಯಕ್ಕೂ ಕಾಲವು ಕ್ಲುಪ್ತ
ವಾಗಿದೆ; ಆಕಾಶದ ಕೆಳಗೆ ನಡೆಯುವ ಒಂದೊಂದು
2 ಕೆಲಸಕ್ಕೂ ತಕ್ಕ ಸಮಯವುಂಟು. ಹುಟ್ಟುವ ಸಮ
ಯ, ಸಾಯುವ ಸಮಯ, ನೆಡುವ ಸಮಯ, ನೆಟ್ಟ
3 ದ್ದನ್ನು ಕಿತ್ತುಹಾಕುವ ಸಮಯ, ಕೊಲ್ಲುವ ಸಮ
ಯ, ಸ್ವಸ್ಥಮಾಡುವ ಸಮಯ, ಕೆಡವಿಬಿಡುವ ಸಮ
4 ಯ, ಕಟ್ಟುವ ಸಮಯ, ಅಳುವ ಸಮಯ. ನಗುವ
ಸಮಯ, ಗೋಳಾಡುವ ಸಮಯ, ಕುಣಿದಾಡು
5 ವ ಸಮಯ, ಕಲ್ಲುಗಳನ್ನು ಚೆಲ್ಲುವ ಸಮಯ,
ಕಲ್ಲುಗಳನ್ನು ಕೂಡಿಸುವ ಸಮಯ, ಅಪ್ಪುವ
6 ಸಮಯ, ಅಪ್ಪದಿರುವ ಸಮಯ, ಗಳಿಸುವ ಸಮಯ,
ಕಳೆಯುವ ಸಮಯ, ಕಾಪಾಡುವ ಸಮಯ, ಬಿಸಾ
7 ಡುವ ಸಮಯ, ಹರಿಯುವ ಸಮಯ, ಹೊಲಿಯುವ
ಸಮಯ, ಸುಮ್ಮನಿರುವ ಸಮಯ, ಮಾತಾಡುವ
8 ಸಮಯ, ಪ್ರೀತಿಸುವ ಸಮಯ, ದ್ವೇಷಿಸುವ ಸಮಯ,
ಯುದ್ಧದ ಸಮಯ, ಸಮಾಧಾನದ ಸಮಯ,—
ಅಂತೂ ಒಂದೊಂದು ಕೆಲಸಕ್ಕೂ ತಕ್ಕ ಸಮಯ
ವುಂಟು.

9 ದುಡಿಯುವವನಿಗೆ ಅವನ ಪ್ರಯಾಸದಿಂದ ಲಾಭ
0 ವೇನು? ನರಜನ್ಮದವರ ಕರ್ತವ್ಯವೆಂದು ದೇವರು
1 ನೇಮಿಸಿರುವ ಪ್ರಯಾಸವನ್ನು ನೋಡಿದ್ದೇನೆ. ಒಂ
ದೊಂದು ವಸ್ತುವನ್ನು ಸಮಯಕ್ಕೆ ತಕ್ಕ ಹಾಗೆ ಅಂದ
ವಾಗಿ ನಿರ್ಮಿಸಿದ್ದಾನೆ; ಇದಲ್ಲದೆ ಮನುಷ್ಯರ ಹೃದ
ಯದಲ್ಲಿ ಅನಂತಕಾಲದ ಯೋಚನೆಯನ್ನು ಇಟ್ಟಿ
ದ್ದಾನೆ; ಆದರೂ ದೇವರು ಆದ್ಯಂತವಾಗಿ ನಡಿಸು
ತ್ತಿರುವ ಕೆಲಸವನ್ನು ಅವರು ಗ್ರಹಿಸಲಾರದಂತೆ
2 ಮಾಡಿದ್ದಾನೆ. ಮನುಷ್ಯರು ತಮ್ಮ ಜೀವಮಾನ
ದಲ್ಲೆಲ್ಲಾ ಉಲ್ಲಾಸವಾಗಿ ಸುಖವನ್ನನುಭವಿಸುವದ
ಕ್ಕಿಂತ ಇನ್ನೇನೂ ಅವರಿಗೆ ಮೇಲಿಲ್ಲವೆಂದು ನಾನು
3 ಗ್ರಹಿಸಿದ್ದೇನೆ. ಇದಲ್ಲದೆ ಪ್ರತಿಯೊಬ್ಬನು ಅನ್ನಪಾನ
ಗಳನ್ನು ತೆಗೆದುಕೊಂಡು ತನ್ನ ನಾನಾ ಪ್ರಯಾಸಗಳ
ಲ್ಲಿಯೂ ಸುಖವನ್ನನುಭವಿಸುವದು ದೇವರ ಅನು
4 ಗ್ರಹವೇ ಎಂದು ನನಗೆ ಗೊತ್ತಿದೆ. ದೇವರ ಕಾರ್ಯ
ವೆಲ್ಲವೂ ನಿತ್ಯವೆಂದು ಬಲ್ಲೆನು; ಅದಕ್ಕೆ ಯಾವದನ್ನೂ
ಸೇರಿಸಲಾರೆವು, ಅದರಿಂದ ಯಾವದನ್ನೂ ತೆಗೆಯಲಾ
ರೆವು; ದೇವರ ಈ ನಿಯಮಕ್ಕೆ ಮನುಷ್ಯರು ತನ್ನ
ಎದುರಿನಲ್ಲಿ ಭಯಭಕ್ತಿಯುಳ್ಳವರಾಗಿರಬೇಕೆಂಬದೇ
5 ಕಾರಣವು. ಈಗಿನದು ಹಿಂದೆ ಇತ್ತು, ಮುಂದಿನದು
ಈಗಲೂ ಇದೆ, ಕಳೆದದ್ದನ್ನು ದೇವರು ತಿರಿಗಿ ಬರ
ಮಾಡುವನು.

6 ಇದಲ್ಲದೆ ನಾನು ಲೋಕವನ್ನು ದೃಷ್ಟಿಸಿ ನ್ಯಾಯ
ಸ್ಥಾನದಲ್ಲಿಯೂ ಧರ್ಮಸ್ಥಾನದಲ್ಲಿಯೂ ಅಧರ್ಮ
7 ವಿರುವದೆಂದು ನೋಡಿದೆನು. ಆಗ ನಾನು ಮನಸ್ಸಿ
ನಲ್ಲಿ—ದೇವರು ಧರ್ಮಿಗಳಿಗೂ ಅಧರ್ಮಿಗಳಿಗೂ
ನ್ಯಾಯತೀರಿಸುವನು; ಆತನ ನ್ಯಾಯಕ್ರಮದಲ್ಲಿ
ಎಲ್ಲಾ ಕೆಲಸಕಾರ್ಯಗಳಿಗೂ ತಕ್ಕ ಸಮಯವುಂಟ
ಲ್ಲವೆ ಅಂದುಕೊಂಡೆನು. ಮತ್ತೆ ಮನಸ್ಸಿನಲ್ಲಿ ಹೀಗೆ 18
ಯೋಚಿಸಿದೆನು—ದೇವರು ಮನುಷ್ಯರನ್ನು ಪರೀಕ್ಷಿ
ಸುವದಕ್ಕೂ ಮನುಷ್ಯರು ಪಶುಪ್ರಾಯರಾಗಿದ್ದೇ
ವೆಂದು ತಾವೇ ಗ್ರಹಿಸಿಕೊಳ್ಳುವದಕ್ಕೂ ಆಸ್ಪದವಾಗು
ವಂತೆ ಇದು ನರಜನ್ಮದವರ ನಿಮಿತ್ತವಾಗಿ ಆಯಿ
ತಲ್ಲವೆ. ಮನುಷ್ಯನ ಗತಿಯೂ ಪಶುವಿನ ಗತಿಯೂ 19
ಒಂದೇ; ಪಶುವಿಗೆ ಸಾವು ಬರುವ ಹಾಗೆ ಮನುಷ್ಯ
ನಿಗೂ ಬರುವದು; ಎಲ್ಲಕ್ಕೂ ಪ್ರಾಣ ಒಂದೇ;
ಮನುಷ್ಯನು ಪಶುವಿಗಿಂತ ಶ್ರೇಷ್ಠನಲ್ಲ; ಎಲ್ಲಾ ಬರೀ
ಗಾಳಿಯೇ. ಎಲ್ಲಾ ಪ್ರಾಣಿಗಳು ಒಂದೇ ಸ್ಥಳಕ್ಕೆ 20
ಹೋಗುವವು; ಎಲ್ಲಾ ಮಣ್ಣಿನಿಂದಾದವು, ಎಲ್ಲಾ
ಮಣ್ಣಿಗೆ ಪುನಃ ಸೇರುವವು. ಮನುಷ್ಯನ ಆತ್ಮವು 21
ಮೇಲಕ್ಕೆ ಏರುತ್ತದೋ ಪಶುವಿನ ಆತ್ಮವು ಕೆಳಕ್ಕೆ
ಇಳಿದು ಭೂಮಿಗೆ ಸೇರುತ್ತದೋ ಯಾರಿಗೆ ಗೊತ್ತು?
ಈ ಪ್ರಕಾರ ನಾನು ಯೋಚಿಸಿ, ಮನುಷ್ಯನು ತನ್ನ 22
ಕಾರ್ಯಗಳಲ್ಲಿ ಉಲ್ಲಾಸಗೊಳ್ಳುವದಕ್ಕಿಂತ ಅವನಿಗೆ
ಯಾವ ಮೇಲೂ ಇಲ್ಲ; ಇದೇ ಅವನ ಪಾಲು ಎಂದು
ಗ್ರಹಿಸಿಕೊಂಡೆನು. ಜೀವಮಾನದನಂತರ ಸಂಭವಿಸುವ
ವುಗಳನ್ನು ನೋಡುವದಕ್ಕೆ ಮನುಷ್ಯನನ್ನು ಯಾರು
ಪುನಃ ಬರಮಾಡುವರು?

ಆ ಮೇಲೆ ತಿರಿಗಿ ದೃಷ್ಟಿಸಿ ಲೋಕದಲ್ಲಿನ ಹಿಂಸೆಗಳ 4
ನ್ನೆಲ್ಲಾ ನೋಡಿದೆನು; ಆಹಾ, ಹಿಂಸೆಗೊಂಡವರ
ಕಣ್ಣೀರು ಏನೆಂದು ಹೇಳಲಿ! ಸಂತಯಿಸುವವರು
ಯಾರೂ ಇರಲಿಲ್ಲ; ಹಿಂಸಕರಿಗೆ ಬಹು ಬಲ; ಸಂತ
ಯಿಸುವವರೋ ಒಬ್ಬರೂ ಇರಲಿಲ್ಲ. ಇದನ್ನು 2
ನೋಡಿ ಇನ್ನೂ ಜೀವದಿಂದಿರುವವರಿಗಿಂತ ಸತ್ತವರೇ
ಮೇಲೆಂದು ಹೊಗಳಿದೆನು; ಹೌದು, ಈ ಉಭಯರಿ 3
ಗಿಂತಲೂ ಇನ್ನು ಹುಟ್ಟದೆ ಲೋಕದಲ್ಲಿನ ಅಧರ್ಮ
ವನ್ನು ನೋಡದೆ ಇರುವವನೇ ಲೇಸೆಂದು ತಿಳಿದು
ಕೊಂಡೆನು.

ಮತ್ತು ಸಮಸ್ತಪ್ರಯಾಸವನ್ನೂ ಕೈಗೂಡುವ 4
ಸಕಲ ಕಾರ್ಯವನ್ನೂ ನೋಡಿ ಇವು ಪರಸ್ಪರ ಮತ್ಸ
ರಕ್ಕೆ ಆಸ್ಪದವೆಂದು ಗ್ರಹಿಸಿಕೊಂಡೆನು. ಇದೂ ಗಾಳಿ
ಯನ್ನು ಹಿಂದಟ್ಟಿದ ಹಾಗೆ ವ್ಯರ್ಥ. ಮೂಢನು 5
ಅಪ್ಪುಗೈ ಮಾಡಿಕೊಂಡು ತನ್ನ ಮಾಂಸವನ್ನು ತಾನೇ
ತಿನ್ನುವನು. ಗಾಳಿಯನ್ನು ಹಿಂದಟ್ಟುವ ವ್ಯರ್ಥ 6
ಪ್ರಯಾಸದ ಬೊಗಸೆಗಿಂತಲೂ ನೆಮ್ಮದಿಯ ಸೇರೆಯೇ
ಲೇಸು.

ಲೋಕದಲ್ಲಿ ಮತ್ತೊಂದು ವ್ಯರ್ಥ ವಿಷಯವನ್ನು 7
ಕಂಡೆನು. ಎರಡನೆಯವನಿಲ್ಲದೆ ಒಬ್ಬೊಂಟಿಗನೊಬ್ಬನಿ 8
ದ್ದಾನೆ; ಅವನಿಗೆ ಅಣ್ಣತಮ್ಮಂದಿರೂ ಇಲ್ಲ, ಮಕ್ಕಳೂ
ಇಲ್ಲ; ಆದರೂ ಅವನ ಶ್ರಮೆಗೆ ಪಾರವಿಲ್ಲ, ಧನದಿಂದ
ಅವನ ಕಣ್ಣಿಗೆ ತೃಪ್ತಿಯಿಲ್ಲ. ನಾನು ಸುಖವನ್ನು
ತೊರೆದು ಯಾರಿಗೋಸ್ಕರ ಪ್ರಯಾಸಪಡುತ್ತಲೇ
ಇದ್ದೇನೆ ಅಂದುಕೊಳ್ಳುವನು. ಇದೂ ವ್ಯರ್ಥ, ಕೇ
ವಲ ಪ್ರಯಾಸವೇ ಸರಿ. ಒಬ್ಬನಿಗಿಂತ ಇಬ್ಬರು ಲೇಸು; 9
ಅವರ ಪ್ರಯಾಸಕ್ಕೆ ಒಳ್ಳೆಯ ಲಾಭ. ಒಬ್ಬನು 10
ಬಿದ್ದರೆ ಇನ್ನೊಬ್ಬನು ಎತ್ತುವನು; ಬಿದ್ದಾಗ ಎತ್ತು

ವವನು ಇನ್ನೊಬ್ಬನಿಲ್ಲದಿದ್ದರೆ ಅವನ ಗತಿ ದುರ್ಗತಿ
11 ಯೇ. ಮತ್ತು ಒಬ್ಬನ ಮಗ್ಗುಲಲ್ಲೊಬ್ಬನು ಮಲಗಿ
ಕೊಂಡರೆ ಇಬ್ಬರಿಗೂ ಬೆಚ್ಚಗಾಗುವದು; ಒಂಟಿಗ
12 ನಿಗೆ ಹೇಗೆ ಬೆಚ್ಚಗಾದೀತು. ಒಬ್ಬೊಂಟಿಗನನ್ನು ಜಯಿಸ
ಬಲ್ಲವನಿಗೆ ಇಬ್ಬರು ಎದುರಾಗಿ ನಿಲ್ಲಬಹುದು;
ಮೂರು ಹುರಿಯ ಹಗ್ಗ ಬೇಗ ಕಿತ್ತುಹೋಗುವದಿಲ್ಲ
ವಷ್ಟೆ.
13 ಎಚ್ಚರದ ಮಾತಿಗೆ ಕಿವಿಗೊಡುವದನ್ನು ಬಿಟ್ಟ
ಮೂರ್ಖನಾದ ಮುದಿಯರಸನಿಗಿಂತ ಜ್ಞಾನಿಯಾದ
14 ಬಡ ಯೌವನಸ್ಥನೇ ಮೇಲು. ಇಂಥ ಯುವಕನೊ
ಬ್ಬನು ರಾಜನಾಗಲು ಸೆರೆಮನೆಯಿಂದ ತರಲ್ಪಟ್ಟನು;
ಹೌದು, ತನ್ನ ರಾಜ್ಯದಲ್ಲಿ ಬಡ ಪ್ರಜೆಯಾಗಿ ಹುಟ್ಟಿ
15 ದ್ದನು. ಸೂರ್ಯನ ಕೆಳಗೆ ಚರಿಸುವ ಜೀವಂತ
ರೆಲ್ಲಾ ರಾಜನಿಗೆ ಪ್ರತಿಯಾಗಿ ನಿಂತ ಯುವಕನಾದ
ಈ ಎರಡನೆಯವನ ಪಕ್ಷ ವಹಿಸುವದನ್ನು ನೋಡಿದೆನು.
16 ಇವನ ಆಧಿಪತ್ಯಕ್ಕೆ ಒಳಪಟ್ಟ ಎಲ್ಲಾ ಜನರ ಸಂಖ್ಯೆ
ಯು ಅಪಾರ. ಇವನ ಆಳಿಕೆಯ ಕೊನೆಗಾಲದವರಾ
ದರೋ ಇವನಲ್ಲಿ ಆನಂದಿಸಲಿಲ್ಲ. ಇದೂ ಗಾಳಿಯನ್ನು
ಹಿಂದಟ್ಟಿದ ಹಾಗೆ ವ್ಯರ್ಥ.

5 ದೇವಸ್ಥಾನಕ್ಕೆ ಹೋಗುವಾಗ ನಿನ್ನ ಹೆಜ್ಜೆಯ
ನ್ನು ಗಮನಿಸು; ಮೂಢರ ಯಜ್ಞಕ್ಕಿಂತ ಸಾನ್ನಿ
ಧ್ಯಕ್ಕೆ ಬಂದು ಕಿವಿಗೊಡುವದು ಲೇಸು; 1)ತಾವು
ಮಾಡುವದು ಅಧರ್ಮವೆಂದು ಮೂಢರಿಗೆ ಗೊತ್ತೇ
2 ಇಲ್ಲ. ಬಾಯಿದುಡುಕಬೇಡ, ದೇವರ ಮುಂದೆ ಮಾ
ತಾಡಲು ನಿನ್ನ ಹೃದಯದಲ್ಲಿ ಆತುರಪಡದಿರು; ದೇ
ವರು ಆಕಾಶದಲ್ಲಿದ್ದಾನಲ್ಲವೆ, ನೀನು ಭೂಮಿಯಲ್ಲಿ
ದ್ದೀ; ಆದಕಾರಣ ನಿನ್ನ ಮಾತುಗಳು ಕೊಂಚವಾಗಿ
3 ರಲಿ. ಕನಸು ಬಹು ಪ್ರಯಾಸದಿಂದಲೂ ಉಂಟಾಗು
ತ್ತದೆ, ಮೂಢನ ಧ್ವನಿಯು ಬಹು ಮಾತುಗಳಿಂದಲೂ
4 ಕೂಡಿದ್ದಾಗಿದೆ. ನೀನು ದೇವರಿಗೆ ಹರಕೆಯನ್ನು ಕಟ್ಟಿ
ದರೆ ಅದನ್ನು ತೀರಿಸಲು ತಡಮಾಡಬೇಡ; ಆತನು
ಮೂಢರಿಗೆ ಒಲಿಯನು; ನಿನ್ನ ಹರಕೆಯನ್ನು ಒಪ್ಪಿಸು.
5 ನೀನು ಹರಸಿಕೊಂಡು ತೀರಿಸದೆ ಇರುವದಕ್ಕಿಂತ ಹರಕೆ
6 ಮಾಡಿಕೊಳ್ಳದೆ ಇರುವದು ವಾಸಿ. ನಿನ್ನ ಬಾಯಿ
ನಿನ್ನನ್ನು ಪಾಪಕ್ಕೆ ಗುರಿಮಾಡದಂತೆ ನೋಡಿಕೋ;
ಇದು ಅಜಾಗ್ರತೆಯಿಂದಾಯಿತೆಂದು ದೂತನ ಮುಂದೆ
ಹೇಳಬೇಡ; ದೇವರು ನಿನ್ನ ಮಾತಿಗೆ ರೋಷಗೊಂಡು
ನಿನ್ನ ಕೈಗೆಲಸವನ್ನು ಏಕೆ ಹಾಳುಮಾಡಬೇಕು?
7 ಬಹಳ ಕನಸುಗಳಿಂದಲೂ ವ್ಯರ್ಥವಿಷಯಗಳಿಂದಲೂ
ಹೆಚ್ಚು ಮಾತುಗಳು ಹೊರಡುತ್ತವಷ್ಟೆ; ನೀನಂತು ದೇವ
ರಲ್ಲಿ ಭಯಭಕ್ತಿಯುಳ್ಳವನಾಗಿರು.
8 ಸಂಸ್ಥಾನದಲ್ಲಿ ಬಡವರ ಹಿಂಸೆಯನ್ನೂ ನೀತಿನ್ಯಾ
ಯಗಳ ನಾಶನವನ್ನೂ ನೀನು ನೋಡಿದರೆ ಆಶ್ಚರ್ಯ
ಪಡಬೇಡ; 2)ಉನ್ನತೋನ್ನತನು ಲಕ್ಷ್ಯಕ್ಕೆ ತರುವನು;
ಆ ಹಿಂಸಕರಿಗಿಂತ 3)ಮಹೋನ್ನತನು ಇದ್ದಾನಲ್ಲಾ.

ಭೂಮಿಯಿಂದ ಸರ್ವಕ್ಕೂ ಲಾಭವಿದೆ. 4)ಹೊಲಗದ್ದೆ
ಗಳಿಂದ ರಾಜನಿಗೂ ಸೇವೆಯಾಗುತ್ತದೆ.
ಬೆಳ್ಳಿಯನ್ನು ಆಶಿಸುವವನಿಗೆ ಎಷ್ಟು ಬೆಳ್ಳಿಯಿಂದ
ಲೂ ತೃಪ್ತಿಯಾಗದು; ಸಮೃದ್ಧಿಯನ್ನು ಬಯಸು
ತ್ತಲೇ ಇರುವವನಿಗೆ ಆದಾಯವೆಷ್ಟಾದರೂ ಸಾಲದು
ಇದು ಸಹ ವ್ಯರ್ಥ. ಸೊತ್ತು ಹೆಚ್ಚಿದರೆ ಅನುಭವಿಸು
ವವರ ಸಂಖ್ಯೆಯೂ ಹೆಚ್ಚುವದು; ಅದನ್ನು ಕಣ್ಣಿಂದ
ನೋಡುವದೇ ಹೊರತು ಯಜಮಾನನಿಗೆ ಇನ್ನಾವ
ಲಾಭವೂ ಇಲ್ಲ, ದುಡಿಯುವವನು ಸ್ವಲ್ಪವೇ ಉಣ್ಣಲಿ
ಹೆಚ್ಚೇ ಉಣ್ಣಲಿ ಹಾಯಾಗಿ ನಿದ್ರಿಸುವನು; ಐಶ್ವರ್ಯ
ವಂತನ ಸಮೃದ್ಧಿಯೋ ಅವನಿಗೆ ನಿದ್ರೆ ಬರಲೀಸದು
ಲೋಕದಲ್ಲಿ ಕೇವಲ ಈ ದುರ್ದಶೆಯನ್ನು ನೋಡಿ
ದೆನು; ಆಸ್ತಿವಂತನು ತನ್ನ ಆಸ್ತಿಯನ್ನು ಕಾಪಾ
ಡುವದರಲ್ಲಿಯೇ ಕೊರಗುತ್ತಿರುವನು; ಆ ಆಸ್ತಿಯು
ವ್ಯರ್ಥ ಪ್ರಯತ್ನದಿಂದ ಹಾಳಾಗುವದು; ಅವನಿಗೆ
ಮಗನಿದ್ದರೆ [ಆ ಮಗನಿಗಾಗಿ] ಅವನ ಕೈಯಲ್ಲಿ
ಏನೂ ಇರದು. ತಾಯಿಯ ಗರ್ಭದಿಂದ ಹೇಗೆ
ಬಂದನೋ ಹಾಗೆಯೇ ಏನೂ ಇಲ್ಲದವನಾಗಿ ಗತಿಸಿ
ಹೋಗುವನು; ಅವನು ಪ್ರಯಾಸಪಟ್ಟದ್ದಕ್ಕೆಲ್ಲಾ
ತನ್ನ ಕೈಯಲ್ಲಿ ಏನೂ ತೆಗೆದುಕೊಂಡು ಹೋಗನು
ಬಂದಂತೆಯೇ ಗತಿಸುವನು; ಗಾಳಿಗಾಗಿ ಪಟ್ಟ
ಪ್ರಯಾಸದಿಂದ ಅವನಿಗೆ ಲಾಭವೇನು? ಇದೇ
ಕೇವಲ ದುರ್ದಶೆ. ಅವನ ಜೀವಮಾನವೆಲ್ಲಾ ಅವನ
ಊಟದಲ್ಲಿ ಕತ್ತಲು ಕವಿದಿರುವದು; ಅವನಿಗೆ ಕ
ಕರೆಯು ಶಾನೆ; ರೋಗರೋಷಗಳು ಇದ್ದೇ ಇರು
ವವು.
ಇಗೋ ನಾನು ಕಂಡದ್ದು ಇದೇ; ದೇವರು ಒಬ್ಬ
ನಿಗೆ ದಯಪಾಲಿಸಿರುವ ಜೀವಮಾನದ ದಿನಗಳಲ್ಲೆಲ್ಲಾ
ಅವನು ಅನ್ನಪಾನಗಳನ್ನು ತೆಗೆದುಕೊಂಡು ತಾನು
ಲೋಕದೊಳಗೆ ಪಡುವ ಪ್ರಯಾಸದಲ್ಲಿಯೂ ಸುಖವ
ನ್ನನುಭವಿಸುವದು ಮೇಲಾಗಿಯೂ ಉಚಿತವಾಗಿಯೂ
ಇದೆ; ಇದೇ ಅವನ ಪಾಲು. ಮತ್ತೂ ಆತನು ಯಾವ
ನಿಗೆ ಆಸ್ತಿಪಾಸ್ತಿಗಳನ್ನು ದಯಪಾಲಿಸುವದಲ್ಲದ
ಅದನ್ನು ಅನುಭವಿಸಿ ಪಾಲಿಗೆ ಬಂದದ್ದನ್ನು ಹೊಂದಿ
ತನ್ನ ಪ್ರಯಾಸದಲ್ಲಿ ಸಂತೋಷಪಡಲು ಶಕ್ತಿಕೊಡು
ವನೋ, ಅವನ ಸುಖವು ದೇವರ ಅನುಗ್ರಹ. ಇಂಥ
ವನು ತನ್ನ ಜೀವಮಾನದ ದಿನಗಳನ್ನು ಹೆಚ್ಚಾಗಿ ಗಣ
ನೆಗೆ ತಾರನು; ಇವನು ತನ್ನ ಹೃದಯಾನಂದದಲ್ಲಿ
ಮಗ್ನನಾಗಿರುವಂತೆ ದೇವರು ಮಾಡಿದ್ದಾನಷ್ಟೆ.

ಲೋಕದಲ್ಲಿ ಮನುಷ್ಯರಿಗೆ ವಿಪರೀತವಾಗಿ ಉಂಟಾ
ಗಿರುವ ದುರವಸ್ಥೆಯನ್ನು ಕಂಡೆನು; ಏನಂದರೆ 2
ದೇವರು ಒಬ್ಬನಿಗೆ ಯಾವ ಇಷ್ಟಾರ್ಥಕ್ಕೂ ಕೊರತೆ
ಯಿಲ್ಲದಂತೆ ಧನಸಂಪತ್ತನ್ನೂ ಘನತೆಯನ್ನೂ ಅನು
ಗ್ರಹಿಸುವನು; ಆದರೆ ಅದನ್ನು ಅನುಭವಿಸುವದಕ್ಕೆ
ದೇವರು ಅವನನ್ನು ಶಕ್ತಿಗೊಳಿಸುವದಿಲ್ಲ; ಅದನ್ನು

1) ಅಥವಾ: ಮೂಢರಿಗೆ ಅಧರ್ಮವೇ ಹೊರತು ಇನ್ನೇನೂ ಗೊತ್ತಿಲ್ಲ. 2) ಅಥವಾ: ಅಧಿಪತಿಯ ಮೇಲೆ ಅಧಿಪ
ವಿಚಾರಕನಾಗಿದ್ದಾನೆ; ಇವರಿಬ್ಬರಿಗಿಂತಲೂ ಮೇಲ್ಪಟ್ಟವರು ಇದ್ದಾರಲ್ಲಾ. 3) ಮೂಲ: ಮಹೋನ್ನತರು. 4) ಅಥವಾ: ಗ
ಹೊಲಕ್ಕೆ ರಾಜನು ಸರ್ವ ವಿಷಯದಲ್ಲಿಯೂ ಪ್ರಯೋಜನಕರನು. ಮೂಲವು ಅಸ್ಪಷ್ಟವು.

ಮತ್ತೊಬ್ಬನು ಅನುಭವಿಸುವನು; ಇದು ಸಹ
3 ವ್ಯರ್ಥವೂ ದೊಡ್ಡ ರೋಗವೂ ಆಗಿದೆ. ನೂರಾರು
ಮಕ್ಕಳನ್ನು ಪಡೆದು ಮುಪ್ಪಿನ ಮುದುಕನಾಗುವ
ತನಕ ಬಹು ವರುಷ ಬದುಕಿದವನಿಗೆ ಸುಖತೃಪ್ತಿ
ಯೂ ಉತ್ತರಕ್ರಿಯೆಯೂ ಇಲ್ಲದಿದ್ದರೆ ಇವನಿ
ಗಿಂತಲೂ ಗರ್ಭಸ್ರಾವದ ಪಿಂಡವೇ ಉತ್ತಮ ಅಂದು
4 ಕೊಂಡೆನು. ಅದು ವ್ಯರ್ಥತ್ವದಲ್ಲಿ ಬರುತ್ತದೆ, ಕತ್ತ
ಲಲ್ಲಿ ಹೋಗುತ್ತದೆ, ಅಂಧಕಾರವು ಅದರ ಹೆಸರನ್ನು
5 ಕವಿದಿರುತ್ತದೆ; ಅದು ಸೂರ್ಯನನ್ನು ಕಂಡಿಲ್ಲ,
ಅದಕ್ಕೆ ತಿಳುವಳಿಕೆಯೇ ಇಲ್ಲ; ಆದರೂ ಅವನಿಗಿಂತ
6 ಅದರ ಶಾಂತಿಯೇ ಹೆಚ್ಚು. ಸಾವಿರದ ಮೇಲೆ ಸಾವಿರ
ವರುಷ ಬದುಕಿಯೂ ಸುಖವನ್ನು ಅನುಭವಿಸದಿದ್ದರೆ
[ಏನು ಪ್ರಯೋಜನ?] ಇವೆರಡು ಒಂದೇ ಸ್ಥಳಕ್ಕೆ
7 ಹೋಗುತ್ತವಲ್ಲವೆ. ಮನುಷ್ಯನು ಪಡುವ ಪ್ರಯಾಸ
ವೆಲ್ಲಾ ತನ್ನ ಹೊಟ್ಟೆಗಾಗಿಯೇ, ಆದರೂ ಅವನಿಗೆ
8 ತೃಪ್ತಿಯಿಲ್ಲ. ಜ್ಞಾನಿಯಾಗಲಿ ಜನರ ಮುಂದೆ ಸರಿ
ಯಾಗಿ ನಡೆಯಬಲ್ಲ ಬಡವನಾಗಲಿ ಮೂಢನಿಗಿಂತ
9 ಯಾವ ವಿಷಯದಲ್ಲಿ ಶ್ರೇಷ್ಠ? ಬಗೆಬಗೆಯಾಗಿ
ಆಶಿಸುವದಕ್ಕಿಂತ ಕಣ್ಣೆದುರಿಗಿರುವದನ್ನು ಅನುಭವಿ
ಸುವದೇ ಲೇಸು; ಇದು ಕೂಡ ಗಾಳಿಯನ್ನು ಹಿಂದ
10 ಟ್ಟಿದ ಹಾಗೆ ವ್ಯರ್ಥ. ಮನುಷ್ಯನು ಎಂಥವನಾದರೂ
ಪೂರ್ವದಲ್ಲಿ ಅವನಿಗೆ ವಿಧಿಸಲ್ಪಟ್ಟ ಹೆಸರಿನಿಂದ
ಅವನು ಮಣ್ಣಿನವನೇ ಎಂದು ಗೊತ್ತಾಗಿದೆ.
ತನಗಿಂತ ಬಲಿಷ್ಠನ ಸಂಗಡ ಹೋರಾಡಲಾರನು.
11 ನಿರರ್ಥಕವಾದ ಮಾತುಗಳು ಬಹಳ, ಅವುಗಳಿಂದ
12 ಮನುಷ್ಯನಿಗೆ ಏನು ಪ್ರಯೋಜನ? ನೆರಳಿನಂತೆ
ವ್ಯರ್ಥವಾಗಿ ಕಳೆದುಹೋಗುವ ಮನುಷ್ಯನ ಜೀವ
ಮಾನದ ದಿನಗಳಲ್ಲೆಲ್ಲಾ ಅವನಿಗೆ ಯಾವದು
ಮೇಲೆಂದು ಯಾರಿಗೆ ಗೊತ್ತು? ತಾನು ಕಾಲವಾದ
ಮೇಲೆ ಇಹಲೋಕದಲ್ಲಿ ಏನಾಗುವದೆಂದು ಅವನು
ಯಾರಿಂದ ತಿಳಿದುಕೊಂಡಾನು?

7 ಸುಗಂಧತೈಲಕ್ಕಿಂತ ಒಳ್ಳೆಯ ಹೆಸರು ಉತ್ತಮ;
2 ಜನನ ದಿನಕ್ಕಿಂತ ಮರಣದಿನ ಮೇಲು. ಔತಣದ
ಮನೆಗಿಂತ ಮರಣದುಃಖದ ಮನೆಗೆ ಹೋಗುವದು
ಲೇಸು; ಎಲ್ಲಾ ಮನುಷ್ಯರಿಗೂ ಕೊನೆಗೆ ಇದೇ ಗತಿ;
ಜೀವಂತನು ಇದನ್ನು ನೋಡಿ ಸ್ಮರಿಸಿಕೊಳ್ಳುವನು.
3 ನಗೆಗಿಂತ ಕರಕರೆಯು ವಾಸಿ; ಮುಖವು ಸಪ್ಪಗಿರು
4 ವಲ್ಲಿ ಹೃದಯಕ್ಕೆ ಮೇಲು. ದುಃಖದ ಮನೆಯು
ಜ್ಞಾನಿಗಳ ಮನಸ್ಸಿಗೆ ನೆಲೆ; ಉಲ್ಲಾಸದ ಮನೆಯು
5 ಮೂಢರ ಮನಸ್ಸಿಗೆ ನಿವಾಸ. ಅಜ್ಞಾನಿಗಳ ಗಾನ
ಕ್ಕಿಂತ ಜ್ಞಾನಿಗಳ ಗದರಿಕೆಯನ್ನು ಕೇಳುವದು
6 ಲೇಸು. ಮೂಢರ ನಗುವಾಟವು ಹಂಡೆಯ ಕೆಳಗೆ
ಉರಿಯುವ ಮುಳ್ಳಿನ ಚಟಪಟ ಶಬ್ದದ ಹಾಗೆ.
7 ಇದೂ ವ್ಯರ್ಥ. ಕಸುಕೊಳ್ಳುವದು ಜ್ಞಾನಿಗೆ ಬುದ್ಧಿ
8 ಗೇಡು; ಲಂಚವು ವಿವೇಕನಾಶಕ. ಆದಿಗಿಂತ ಅಂತ್ಯವು
ಲೇಸು; ಹಮ್ಮುಗಾರನಿಗಿಂತ ತಾಳ್ಮೆಯುಳ್ಳವನು ಉತ್ತ
9 ಮ. ನಿನ್ನ ಮನಸ್ಸು ಕೋಪಕ್ಕೆ ಆತುರಪಡದಿರಲಿ;
ಕೋಪಕ್ಕೆ ಮೂಢರ ಎದೆಯೇ ನೆಲೆ.
10 ಹಿಂದಿನ ಕಾಲವು ಈ ಕಾಲಕ್ಕಿಂತ ಮೇಲಾದದ್ದಕ್ಕೆ
ಕಾರಣವೇನು ಅನ್ನಬೇಡ; ನೀನು ಈ ವಿಷಯದಲ್ಲಿ
ವಿಚಾರಿಸುವದು ಜ್ಞಾನಕಾರ್ಯವಲ್ಲ. ಜ್ಞಾನವು 11
ಸ್ವಾಸ್ತ್ಯದಂತೆ ಪ್ರಯೋಜನಕರ; ಹೌದು, ಸ್ವಾಸ್ತ್ಯ
ಕ್ಕಿಂತ ಜೀವಿತರಿಗೆ ಉತ್ತಮೋತ್ತಮವಾಗಿದೆ. ಧನವು 12
ಹೇಗೋ ಹಾಗೆ ಜ್ಞಾನವೂ ಆಶ್ರಯ; ಜ್ಞಾನಕ್ಕೆ
ವಿಶೇಷವೇನಂದರೆ ತನ್ನನ್ನು ಹೊಂದಿದವನಿಗೆ ಅದು
ಜೀವದಾಯಕವೆಂಬದೇ. ದೇವರ ಕಾರ್ಯವನ್ನು 13
ನೋಡು; ಆತನು ಸೊಟ್ಟಗೆ ಮಾಡಿದ್ದನ್ನು ನೆಟ್ಟಗೆ
ಮಾಡುವದಕ್ಕೆ ಯಾರಿಂದಾದೀತು? ಸುಖದ ದಿನ 14
ದಲ್ಲಿ ಸುಖದಿಂದಿರು; ದುಃಖದ ದಿನದಲ್ಲಿ ಯೋಚಿಸು;
ಮನುಷ್ಯನು ತನ್ನ ಕಾಲವಾದ ಮೇಲೆ ಸಂಭವಿಸುವ
ಯಾವದನ್ನೂ ಗ್ರಹಿಸಲಾರದಂತೆ ದೇವರು ಇವುಗಳ
ನ್ನು ದ್ವಂದ್ವ ಮಾಡಿದ್ದಾನೆ.

ಧರ್ಮಿಯು ತನ್ನ ಧರ್ಮದಲ್ಲಿಯೇ ನಶಿಸುವ 15
ದುಂಟು; ಅಧರ್ಮಿಯು ತನ್ನ ಅಧರ್ಮದಲ್ಲಿಯೇ
ಬಹು ದಿನ ಬದುಕುವದುಂಟು; ಇದನ್ನೆಲ್ಲಾ ನನ್ನ
ವ್ಯರ್ಥವಾದ ಜೀವಮಾನದಲ್ಲಿ ನೋಡಿದ್ದೇನೆ. ಧರ್ಮ 16
ವನ್ನು ಅತಿಯಾಗಿ ಆಚರಿಸದಿರು; ಜ್ಞಾನವನ್ನು ಅಧಿಕ
ವಾಗಿ ಆರ್ಜಿಸಬೇಡ; ನಿನ್ನನ್ನು ನೀನೇ ನಾಶನಕ್ಕೆ
ಏಕೆ ಗುರಿಮಾಡಿಕೊಳ್ಳುವಿ? ಅಧರ್ಮವನ್ನು ಹೆಚ್ಚಾಗಿ 17
ಆಚರಿಸದಿರು; ಬುದ್ಧಿಹೀನನಾಗಿರಬೇಡ; ಏಕೆ ಅಕಾಲ
ಮರಣವನ್ನು ಹೊಂದುವಿ? ನೀನು ಇದನ್ನು ಹಿಡಿದು 18
ಕೊಳ್ಳುವದು ಒಳ್ಳೇದು; ಅದರಿಂದಲೂ ಕೈದೆಗೆಯ
ಬೇಡ; ದೇವರಲ್ಲಿ ಭಯಭಕ್ತಿಯುಳ್ಳವನು ಇವೆರಡ
ರಿಂದಲೂ ಪಾರಾಗುವನು.

ಹತ್ತು ಮಂದಿ ಅಧಿಕಾರಿಗಳಿಂದ ಪಟ್ಟಣಕ್ಕೆ ಉಂಟಾ 19
ಗುವ ಬಲಕ್ಕಿಂತಲೂ ಜ್ಞಾನದಿಂದ ಜ್ಞಾನಿಗೆ ಉಂಟಾ
ಗುವ ಬಲವು ಹೆಚ್ಚು. ಪಾಪಮಾಡದೆ ಧರ್ಮವನ್ನೇ 20
ಆಚರಿಸುತ್ತಿರುವ ಸತ್ಪುರುಷನು ಲೋಕದಲ್ಲಿ ಇಲ್ಲವೇ
ಇಲ್ಲ. ಆಡುವ ಮಾತುಗಳನ್ನೆಲ್ಲಾ ಲಕ್ಷ್ಯಕ್ಕೆ ತಾರ 21
ದಿರು; ನಿನ್ನ ಆಳು ನಿನ್ನನ್ನು ಶಪಿಸುವದು ಕಿವಿಗೆ
ಬಿದ್ದೀತು. ನೀನೂ ಅನೇಕ ವೇಳೆ ಇತರರನ್ನು ಶಪಿ 22
ಸಿದ್ದೀ ಎಂಬದಕ್ಕೆ ನಿನ್ನ ಮನಸ್ಸೇ ಸಾಕ್ಷಿ.

ಇದನ್ನೆಲ್ಲಾ ಜ್ಞಾನದಿಂದ ಪರೀಕ್ಷಿಸಿದೆನು; ಜ್ಞಾನಿ 23
ಯಾಗುವೆನು ಎಂದುಕೊಂಡೆನು; ಆದು ನನಗೆ ದೂರ
ವಾಯಿತು. ತತ್ವವು ಬಹು ದೂರ, ಅಗಾಧವೇ 24
ಅಗಾಧ; ಅದನ್ನು ಯಾರು ಕಂಡುಕೊಂಡಾರು?
ನಾನು ತಿರುಗಿಕೊಂಡು ಜ್ಞಾನವನ್ನೂ ಮೂಲತತ್ವ 25
ವನ್ನೂ ಹುಡುಕಿ ವಿಚಾರಿಸಿ ಗ್ರಹಿಸುವದಕ್ಕೂ
ಅಧರ್ಮವು ಮೂಢತನ, ಅಜ್ಞಾನವು ಹುಚ್ಚುತನ
ಎಂದು ತಿಳಿದುಕೊಳ್ಳುವದಕ್ಕೂ ಮನಸ್ಸಿಟ್ಟೆನು. ಆಗ 26
ಮರಣಕ್ಕಿಂತ ಹೆಚ್ಚು ವಿಷವೊಂದು ಕಂಡುಬಂತು,
ಯಾವದಂದರೆ, ಕೆಟ್ಟ ಹೆಂಗಸೇ. ಅವಳು ಬೋನು,
ಅವಳ ಹೃದಯ ಬಲೆ, ಅವಳ ಕೈ ಪಾಶ; ದೇವರು
ಒಲಿದವನು ಇವಳಿಂದ ತಪ್ಪಿಸಿಕೊಳ್ಳುವನು; ಪಾಪಿ
ಯೋ ಅವಳ ಕೈಗೆ ಸಿಕ್ಕಿಬೀಳುವನು. ಪ್ರಸಂಗಿಯು 27
ಹೀಗೆ ಹೇಳುತ್ತಾನೆ—ನೋಡು, ನಾನು ತೀರ್ಮಾನ
ವನ್ನು ನಿಶ್ಚಯಿಸಬೇಕೆಂದು ಒಂದೊಂದು ವಿಚಾರಿಸಿ
ಒಂದು ವಿಷಯವನ್ನು ಕಂಡೆನು. ಎಷ್ಟು ಹುಡುಕು
ತ್ತಿದ್ದರೂ ಇದುವರೆಗೆ ಅದು ದೊರೆತಿರಲಿಲ್ಲ. ಸಹಸ್ರ 28

ಪುರುಷರಲ್ಲಿ ಯೋಗ್ಯನೊಬ್ಬನನ್ನು ಕಂಡಿದ್ದರೂ ಕಂಡಿ
ರಬಹುದು; ಸಹಸ್ರಸ್ತ್ರೀಯರಲ್ಲಿ ಯೋಗ್ಯಳೊಬ್ಬ
29 ಳನ್ನೂ ಕಂಡಿಲ್ಲ. ನೋಡು, ದೇವರು ಮನುಷ್ಯ
ರನ್ನು ಸತ್ಯವಂತರನ್ನಾಗಿ ಸೃಷ್ಟಿಸಿದನು, ಅವರಾದರೋ
ಬಹು ಯುಕ್ತಿಗಳನ್ನು ಕಲ್ಪಿಸಿಕೊಂಡಿದ್ದಾರೆ; ಇದನ್ನು
ಮಾತ್ರ ಕಂಡೆನು.

8 ಜ್ಞಾನಿಯ ಹಾಗಿರುವವನು ಯಾರು? ವಿಷಯವನ್ನು
ವಿವರಿಸಬಲ್ಲವರು ಯಾರು? ಜ್ಞಾನದಿಂದ ಒಬ್ಬನ
ಮುಖವು ಪ್ರಕಾಶಗೊಳ್ಳುವದು, ಒರಟುಮೋರೆಯು
2 ಮಾರ್ಪಡುವದು. ದೇವರ ಮೇಲೆ ಇಟ್ಟ ಆಣೆಯ
ನಿಮಿತ್ತ ರಾಜನ ಆಜ್ಞೆಯನ್ನು ಕೈಕೊಳ್ಳಬೇಕೆಂಬದು
3 ನನ್ನ ಬೋಧೆ. ರಾಜಸನ್ನಿಧಿಯಿಂದ ತೊಲಗಿಬಿಡಲು
ಆತುರಪಡಬೇಡ; ದ್ರೋಹಕ್ಕೆ ಸೇರದಿರು; ಅವನು
4 ಇಷ್ಟಬಂದಂತೆ ಮಾಡಬಲ್ಲನಲ್ಲವೆ. ರಾಜನ ಮಾತಿಗೆ
ಅಧಿಕಾರವುಂಟು; ಏನು ಮಾಡುತ್ತೀ ಎಂದು ಅವ
5 ನನ್ನು ಯಾರು ತಾನೆ ಕೇಳಬಹುದು? ಆಜ್ಞೆಯನ್ನು
ಕೈಕೊಳ್ಳುವವನು ಕೇಡನ್ನು ಅನುಭವಿಸನು; ಕಾಲವೂ
ನ್ಯಾಯತೀರ್ಪೂ ಉಂಟೆಂಬದು ಜ್ಞಾನಿಯ ಬುದ್ಧಿಗೆ
6 ಗೊತ್ತು; ಪ್ರತಿಯೊಂದು ಕಾರ್ಯಕ್ಕೆ ಕಾಲವೂ
ನ್ಯಾಯತೀರ್ಪೂ ಇರುವವಲ್ಲವೆ; [1]ಮನುಷ್ಯನು
7 ಪಡುವ ಕಷ್ಟವು ಅವನಿಗೆ ಘೋರವಾಗಿದೆ. ಏಕಂದರೆ
ಮುಂದೆ ಆಗುವದು ಅವನಿಗೆ ಗೊತ್ತಿಲ್ಲ; ಅದು
ಹೇಗೆ ಆಗುವದೋ ಅವನಿಗೆ ವಿವರಿಸಬಲ್ಲವರು
8 ಯಾರು? ಗಾಳಿಯನ್ನು ತಡೆಯುವ ಶಕ್ತಿಯು ಹೇಗೆ
ಯಾರಿಗೂ ಇಲ್ಲವೋ ಹಾಗೆ ತಮ್ಮ ಮರಣದಿನವನ್ನು
ತಡೆಯುವ ಶಕ್ತಿಯು ಯಾರಿಗೂ ಇಲ್ಲ; ಯುದ್ಧ
ಕಾಲದಲ್ಲಿ ಹೇಗೆ ವಿರಾಮ ದೊರೆಯುವದಿಲ್ಲವೋ
ಹಾಗೆ ಅಧರ್ಮಕ್ಕೊಳಪಟ್ಟವನಿಗೆ ಬಿಡುಗಡೆಯಿಲ್ಲ.
9 ಒಬ್ಬನು ಮತ್ತೊಬ್ಬನ ಮೇಲೆ ಅಧಿಕಾರನಡಿಸಿ
ಅವನಿಗೆ ಹಾನಿಯನ್ನುಂಟುಮಾಡುವ ಈ ಕಾಲದಲ್ಲಿ
ಇದನ್ನೆಲ್ಲಾ ನೋಡಿ ಲೋಕದೊಳಗೆ ನಡೆಯುವ ಸಕಲ
ಕಾರ್ಯಗಳನ್ನೂ ಪರಿಶೀಲಿಸಿದ್ದೇನೆ.
10 ಇದಲ್ಲದೆ ದುಷ್ಟರಿಗೆ ಸಮಾಧಿಯಾಗುವದನ್ನು
ಕಂಡೆನು; ಅವರು [ಸುಖವಾಗಿ] ಗತಿಸಿದರು; ಧಾರ್ಮಿ
ಕರೋ ಪರಿಶುದ್ಧ ಸ್ಥಾನದಿಂದ [2]ತೊಲಗಬೇಕಾ
ಯಿತು; ಪಟ್ಟಣದಲ್ಲಿ ಅವರ ಜ್ಞಾಪಕವೇ ಇಲ್ಲ
11 ವಾಯಿತು; ಇದೂ ವ್ಯರ್ಥ. ಅಪರಾಧಕ್ಕೆ ವಿಧಿಸಿದ
ದಂಡನೆಯು ಕೂಡಲೆ ನಡೆಯದಿರುವ ಕಾರಣ ಅಪ
ರಾಧಮಾಡಬೇಕೆಂಬ ಯೋಚನೆಯು ನರಜನ್ಮದವರ
12 ಹೃದಯದಲ್ಲಿ ತುಂಬಿ ತುಳುಕುವದು. ಪಾಪಿಯು
ನೂರು ಸಲ ಅಧರ್ಮಮಾಡಿ ಬಹುಕಾಲ ಬದುಕಿ
ದರೂ ದೇವರ ಮುಂದೆ ಹೆದರಿ ಆತನಲ್ಲಿ ಭಯಭಕ್ತಿ
ಯುಳ್ಳವರಿಗೆ ಮೇಲೇ ಆಗುವದೆಂದು ಬಲ್ಲೆನು.
13 ಆದರೆ ದುಷ್ಟನಿಗೆ ಮೇಲಾಗದು, ನೆರಳಿನಂತಿರುವ

ಅವನ ದಿನಗಳು ಹೆಚ್ಚುವದಿಲ್ಲ; ಅವನು ದೇವರಿ
ಹೆದರುವವನಲ್ಲವಷ್ಟೆ. ಲೋಕದಲ್ಲಿ ನಡೆಯು
ವ್ಯರ್ಥಕಾರ್ಯವೊಂದುಂಟು; ದುಷ್ಟರ ನಡತೆಗೆ ತಕ
ಗತಿಯು ಶಿಷ್ಟರಿಗೆ ಆಗುವದು; ಶಿಷ್ಟರ ನಡತೆಗೆ ತಕ
ಗತಿಯು ದುಷ್ಟರಿಗೆ ಆಗುವದು; ಇದೂ ವ್ಯರ್ಥವೆಂದ
ನಾನು ಹೇಳಿದೆನು. ಮತ್ತು ಮನುಷ್ಯನು ಅನ್ನಪಾ
ಗಳನ್ನು ತೆಗೆದುಕೊಂಡು ಸಂತೋಷಪಡುವದಕ್ಕಿಂ
ಅವನಿಗೆ ಲೋಕದಲ್ಲಿ ಇನ್ನಾವ ಮೇಲೂ ಇಲ್ಲ
ವೆಂದು ಸಂತೋಷವನ್ನೇ ಸ್ತುತಿಸಿದೆನು; ದೇವರ
ಅವನಿಗೆ ಲೋಕದಲ್ಲಿ ಅನುಗ್ರಹಿಸುವ ದಿನಗಳಲ್ಲೆಲ್ಲಾ
ಅವನು ಪಡುವ ಪ್ರಯಾಸದಲ್ಲಿ ಸಂತೋಷವೇ ಸೇ
ರುವದು. ರಾತ್ರಿ ಹಗಲು ಮನುಷ್ಯರ ಕಣ್ಣು
ಗಳಿಗೆ ನಿದ್ರೆ ಹತ್ತಗೊಡದ [3]ಲೋಕದ ಶ್ರಮೆಯನ್ನು
ನೋಡಲೂ ಜ್ಞಾನವನ್ನು ಪಡೆಯಲೂ ನಾನು ಮನಸ್ಸಿ
ಟ್ಟಾಗ ಲೋಕದಲ್ಲಿ ನಡೆಯುವದನ್ನು ಮನುಷ್ಯನ
ಗ್ರಹಿಸಲಾರನು, ಎಷ್ಟು ಪ್ರಯಾಸಪಟ್ಟು ವಿಚಾರಿ
ದರೂ ಗ್ರಹಿಸಲಾರನು; ಹೌದು, ಜ್ಞಾನಿಯು ಗ್ರಹಿ
ಬಹುದೆಂದರೂ ಗ್ರಹಿಸಲಾರನು ಎಂಬದಾಗಿ ನಾನ
ದೇವರ ಕೆಲಸವನ್ನೆಲ್ಲಾ ದೃಷ್ಟಿಸಿ ತಿಳಿದುಕೊಂಡೆನು
ಏಕಂದರೆ ಧರ್ಮಿಗಳೂ ಜ್ಞಾನಿಗಳೂ ಅವರ ಕೃತ್ಯ
ಗಳೂ ದೇವರ ಕೈಯಲ್ಲುಂಟು; ತಾವು ಪ್ರೀತಿಗ
ಗುರಿಯೋ ದ್ವೇಷಕ್ಕೆ ಗುರಿಯೋ ಮನುಷ್ಯರಿಗೆ ಗೊತ್ತಿ
ಲ್ಲ, ಅವರ ಮುಂದೆ ಸಮಸ್ತವೂ ಕಾದಿದೆ ಎಂಬೀ ವಿ
ಯಗಳನ್ನೆಲ್ಲಾ ವಿಚಾರಿಸಬೇಕೆಂದು ಮನಸ್ಸಿಗೆ ತೆಗೆದ
ಕೊಂಡೆನು. ಎಲ್ಲವೂ ಎಲ್ಲರಿಗೂ ಒಂದೇ ಬಗೆಯಾಗಿ
ಸಂಭವಿಸುವದು; ಶಿಷ್ಟನಿಗೂ ದುಷ್ಟನಿಗೂ ಒಳ್ಳೆಯ
ವನಿಗೂ ಶುದ್ಧನಿಗೂ ಅಶುದ್ಧನಿಗೂ ಯಜ್ಞಮಾಡ
ವವನಿಗೂ ಮಾಡದವನಿಗೂ ಒಂದೇ ಗತಿ; ನಿದೋ
ಷಿಯಂತೆ ದೋಷಿಯಿರುವನು; ಆಣೆಯಿಡುವವನ
ಹಾಗೆ ಆಣೆಗೆ ಅಂಜುವವನು ಇರುವನು. ಎಲ್ಲರಿಗೂ
ಒಂದೇ ಗತಿಯೆಂಬ ಸಂಕಟವು ಲೋಕವ್ಯವಹಾ
ದಲ್ಲೆಲ್ಲಾ ಸೇರಿಕೊಂಡಿದೆ; ಇದಲ್ಲದೆ ನರವಂಶದವ
ಎದೆಯಲ್ಲಿ ಕೆಟ್ಟತನವು ತುಂಬಿದೆ; ಅವರು ಬದುಕಿರು
ತನಕ ಮರುಳುತನವು ಅವರ ಮನಸ್ಸನ್ನು ಹಿಡಿದಿರ
ವದು; ಆ ಮೇಲೆ ಪ್ರೇತಲೋಕವೇ ಗತಿ. ಜೀವಿತ
ಗುಂಪಿನಲ್ಲಿ ಸೇರಿದವನಿಗೆ ನಿರೀಕ್ಷೆಯುಂಟು; ಸತ್ತ
ಸಿಂಹಕ್ಕಿಂತ ಬದುಕಿರುವ ನಾಯಿಯೇ ಲೇಸು. ಜೀ
ತರಿಗೆ ಸಾಯುತ್ತೇವೆಂಬ ತಿಳುವಳಿಕೆಯು ಉಂಟಷ್ಟೆ
ಸತ್ತವರಿಗೋ ಯಾವ ತಿಳುವಳಿಕೆಯೂ ಇಲ್ಲ; ಅ
ರಿಗೆ ಇನ್ನು ಮೇಲೆ ಪ್ರತಿಫಲವೇನೂ ಇಲ್ಲ, ಅವ
ಜ್ಞಾಪಕವೇ ಹೋಯಿತಲ್ಲವೆ. ಅವರು ಸತ್ತಾಗಲೆ
ಅವರ ಪ್ರೀತಿಯೂ ಹಗೆಯೂ ಹೊಟ್ಟೇಕಿಚ್ಚೂ ಅಳಿದ
ಹೋದವು; ಲೋಕದೊಳಗೆ ನಡೆಯುವ ಯಾವ ಕೆಲ
ದಲ್ಲಿಯೂ ಅವರಿಗೆ ಇನ್ನೆಂದಿಗೂ ಪಾಲೇ ಇಲ್ಲ.
ಹೋಗು, ನಿನ್ನ ಅನ್ನವನ್ನು ಸಂತೋಷದಿಂ

1) ಅಥವಾ: ಮನುಷ್ಯನ ಅಧರ್ಮದ ಹೊರೆಯು ಬಹು ದೊಡ್ಡದು. 2) ಮೂಲ: ತೊಲಗಿದರು. 3) ಅಥವಾ: ಲ
ದಲ್ಲಿನ ಶ್ರಮೆಯನ್ನು ನೋಡಲೂ ಜ್ಞಾನವನ್ನು ಪಡೆಯಲೂ ನಾನು ಮನಸ್ಸಿಟ್ಟಾಗ (ಆಹಾ, ರಾತ್ರಿ ಹಗಲು ನನ್ನ ಕಣ್ಣಿಗೆ ನಿದ್ರೆ ಹತ್ತ
ವಲ್ಲಾ).

ಉಣ್ಣು; ನಿನ್ನ ದ್ರಾಕ್ಷಾರಸವನ್ನು ಒಳ್ಳೆಯ ಮನಸ್ಸಿ
ನಿಂದ ಕುಡಿ; ದೇವರು ನಿನ್ನ ನಡತೆಗೆ ಈಗ ಮೆಚ್ಚಿದ
8 ನಷ್ಟೆ. ನಿನ್ನ ಬಟ್ಟೆಗಳು ಬೆಳ್ಳಗಿರಲಿ; ತಲೆಗೆ ತೈಲದ
9 ಕೊರತೆ ಇಲ್ಲದಿರಲಿ. ಲೋಕದೊಳಗೆ ದೇವರು ನಿನಗೆ
ನೇಮಿಸಿರುವ ವ್ಯರ್ಥ ಜೀವಮಾನದ ವ್ಯರ್ಥ ದಿನಗಳ
ಲ್ಲೆಲ್ಲಾ ನಿನ್ನ ಪ್ರಿಯಪತ್ನಿಯೊಡನೆ ಸುಖದಿಂದ
ಬದುಕು; ನಿನ್ನ ಬಾಳಿನಲ್ಲಿಯೂ ನೀನು ಲೋಕದೊ
ಳಗೆ ಪಡುವ ಪ್ರಯಾಸದಲ್ಲಿಯೂ ಇದೇ ನಿನಗೆ
10 ಬಂದ ಪಾಲು. ನಿನ್ನ ಕೈಗೆ ಸಿಕ್ಕಿದ ಕೆಲಸವನ್ನೆಲ್ಲಾ
ನಿನ್ನ ಪೂರ್ಣ ಶಕ್ತಿಯಿಂದ ಮಾಡು; ನೀನು ಸೇರಬೇ
ಕಾದ ಪಾತಾಳದಲ್ಲಿ ಯಾವ ಕೆಲಸವೂ ಯುಕ್ತಿಯೂ
ತಿಳುವಳಿಕೆಯೂ ಜ್ಞಾನವೂ ಇರುವದಿಲ್ಲ.
11 ನಾನು ಲೋಕದಲ್ಲಿ ತಿರಿಗಿ ದೃಷ್ಟಿಸಲು ವೇಗಿ
ಗಳಿಗೆ ಓಟದಲ್ಲಿ ಗೆಲವಿಲ್ಲ, ಬಲಿಷ್ಠರಿಗೆ ಯುದ್ಧದಲ್ಲಿ
ಜಯವಾಗದು, ಜ್ಞಾನಿಗಳಿಗೆ ಅನ್ನ ಸಿಕ್ಕದು, ವಿವೇಕಿ
ಗಳಿಗೆ ಧನ ಲಭಿಸದು, ಪ್ರವೀಣರಿಗೆ ದಯೆ ದೊರೆ
ಯದು; ಕಾಲವೂ ಪ್ರಾಪ್ತಿಯೂ ಯಾರಿಗೂ ತಪ್ಪಿ
12 ದ್ದಲ್ಲ ಎಂದು ತಿಳಿದುಕೊಂಡೆನು. ಮನುಷ್ಯನೋ
ತನ್ನ ಕಾಲಗತಿಯನ್ನು ತಿಳಿಯನಷ್ಟೆ; ಮೀನುಗಳು
ಕೆಟ್ಟ ಬಲೆಗೂ ಪಕ್ಷಿಗಳು ಜಾಲಕ್ಕೂ ಸಿಕ್ಕಿಬೀಳುವ
ಹಾಗೆ ನರಜನ್ಮದವರು ತಮ್ಮ ಮೇಲೆ ತಟ್ಟನೆ ಬೀಳುವ
ಕೆಟ್ಟ ಕಾಲಪಾಶಕ್ಕೆ ಸಿಕ್ಕಿಕೊಳ್ಳುವರು.
13 ನಾನು ಲೋಕದಲ್ಲಿ ಜ್ಞಾನವನ್ನು ಈ ವಿಧವಾ
ಗಿಯೂ ಕಂಡುಕೊಂಡೆನು; ಅದು ದೊಡ್ಡದೆಂದು
14 ತೋಚಿತು; ಇಗೋ, ಒಂದು ಚಿಕ್ಕ ಪಟ್ಟಣ, ಅದರಲ್ಲಿ
ಕೊಂಚ ಜನರೇ ಇದ್ದರು; ಒಬ್ಬ ದೊಡ್ಡ ಅರಸು
ಅದಕ್ಕೆ ವಿರುದ್ಧವಾಗಿ ಬಂದು ಮುತ್ತಿಗೆಹಾಕಿ ಅಲ್ಲಿ
15 ದೊಡ್ಡ ದಿಬ್ಬಗಳನ್ನು ಹಾಕಿದನು. ಆಗ ಅಲ್ಲಿದ್ದವರು
ತಮ್ಮಲ್ಲಿ ಒಬ್ಬ ಬಡ ಜ್ಞಾನಿಯನ್ನು ಕಂಡುಕೊಂಡರು.
ಅವನು ತನ್ನ ಜ್ಞಾನದಿಂದಲೇ ಆ ಪಟ್ಟಣವನ್ನು ರಕ್ಷಿಸಿ
ದನು; ಆದರೆ ಆ ಬಡ ಜ್ಞಾನಿಯನ್ನು ಯಾರೂ ಸ್ಮರಿ
16 ಸಲಿಲ್ಲ. ನಾನು ಇದನ್ನು ನೋಡಿ, ಬಲಕ್ಕಿಂತ
ಜ್ಞಾನವೇ ಶ್ರೇಷ್ಠ; ಆದರೆ ಜನರು ಬಡವನ ಜ್ಞಾನ
ವನ್ನು ತಾತ್ಸಾರಮಾಡಿ ಅವನ ಮಾತುಗಳನ್ನು ಗಮ
ನಿಸರು ಅಂದುಕೊಂಡೆನು.
17 ಹುಚ್ಚರೊಡೆಯನ ಕೂಗಿಗಿಂತ ಜ್ಞಾನಿಯ ಮೆಲ್ಲ
18 ನೆಯ ಮಾತುಗಳು ಕಿವಿಗೆ ಅಂಟುತ್ತವೆ. ಯುದ್ಧಾ
ಯುಧಗಳಿಗಿಂತ ಜ್ಞಾನವೇ ಉತ್ತಮ; ಒಬ್ಬ ಪಾಪಿ
ಯು ಬಹು ಶುಭವನ್ನು ಹಾಳುಮಾಡುವನು.

**10** ಸತ್ತ ನೊಣಗಳಿಂದ ಗಂಧಿಗನ ತೈಲವು ಕೊಳೆತು
ನಾರುವದು; ಹಾಗೆಯೇ ಹುಚ್ಚುತನ ಸ್ವಲ್ಪವಾ
ದರೂ ಜ್ಞಾನಮಾನಗಳನ್ನು ಮುಚ್ಚಿ ಮೀರುವದು.
2 ಜ್ಞಾನಿಯ ಬುದ್ಧಿಯು ಅವನ ಬಲಗಡೆಯಿರುವದು,
ಅಜ್ಞಾನಿಯ ಬುದ್ಧಿಯು ಅವನ ಎಡಗಡೆಯಿರುವದು.
3 ಇದಲ್ಲದೆ ಹುಚ್ಚನು ಬುದ್ಧಿತಪ್ಪಿ ತಿರುಗುವ ದಾರಿ
ಯಲ್ಲಿ ತನ್ನ ಹುಚ್ಚುತನವನ್ನು ಎಲ್ಲರಿಗೆ ಪ್ರಕಟಮಾ
4 ಡುವನು. ದೊರೆಯು ನಿನ್ನ ಮೇಲೆ ಸಿಟ್ಟುಗೊಂಡರೆ
ಉದ್ಯೋಗವನ್ನು ಬಿಡಬೇಡ; ತಾಳ್ಮೆಯು ದೊಡ್ಡ
5 ದೋಷಗಳನ್ನು ಅಡಗಿಸುತ್ತದಲ್ಲವೆ. ಲೋಕದಲ್ಲಿ
ಒಂದು ಸಂಕಟವನ್ನು ಕಂಡಿದ್ದೇನೆ. ಅದು ದೊರೆಯ
ಪ್ರಮಾದದಿಂದಾದದ್ದೆಂದು ತೋರುತ್ತದೆ; ಮೂಢರಿಗೆ 6
ಮಹಾಪದವಿ ದೊರೆತಿರುವದು, ಧನವಂತರು ಹೀನ
ಸ್ಥಿತಿಯಲ್ಲಿರುವರು. ಆಳುಗಳು ಕುದುರೆಸವಾರಿ 7
ಮಾಡುವದನ್ನೂ ಪ್ರಭುಗಳು ಆಳುಗಳಂತೆ ನೆಲದ
ಮೇಲೆ ನಡೆಯುವದನ್ನೂ ನೋಡಿದ್ದೇನೆ. ಗುಂಡಿ 8
ಯನ್ನು ತೋಡುವವನು ತಾನೇ ಅದರಲ್ಲಿ ಬೀಳು
ವನು; ಗೋಡೆಯೊಡೆಯುವವನನ್ನು ಹಾವು ಕಚ್ಚು
ವದು. ಎಲ್ಲೆಕಲ್ಲೆತ್ತುವವನಿಗೆ ಹಾನಿಯಾಗುವದು; 9
ಮರವನ್ನು ಕಡಿಯುವವನಿಗೆ ಅಪಾಯವಿದೆ. ಮೊಂಡು 10
ಕೊಡಲಿಯ ಬಾಯಿ ಮೊನೆಮಾಡದಿದ್ದರೆ ಹೆಚ್ಚು
ಬಲವನ್ನು ಪ್ರಯೋಗಿಸಬೇಕಲ್ಲವೆ; ಕಾರ್ಯಸಿದ್ಧಿಗೆ
ಜ್ಞಾನವೇ ಸಾಧನ. ಮಂತ್ರಿಸಿ ತಡೆಯುವದರೊಳ 11
ಗಾಗಿ ಹಾವು ಕಚ್ಚಿದರೆ ಮಂತ್ರಿಸುವವನಿಗೆ ಏನು
ಪ್ರಯೋಜನ? ಜ್ಞಾನಿಯ ಮಾತು ಹಿತ; ಅಜ್ಞಾನಿಯ 12
ಬಾಯಿ ತನ್ನನ್ನೇ ನುಂಗಿಬಿಡುವದು. ಅಜ್ಞಾನಿಯ 13
ಮಾತುಗಳ ಆರಂಭದಲ್ಲಿ ಬುದ್ಧಿಹೀನತೆ, ಅಂತ್ಯದಲ್ಲಿ
ಅಪಾಯದ ಮರುಳುತನ. ಮನುಷ್ಯನು ಮುಂದಿನ 14
ದನ್ನು ತಿಳಿಯನು; ತಾನು ಕಾಲವಾದ ಮೇಲೆ
ಹೀಗೆಯೋ ಆಗುವದೆಂದು ಅವನು ಯಾರಿಂದ ತಿಳಿದು
ಕೊಂಡಾನು? ಅಜ್ಞಾನಿಯ ಮಾತುಗಳೋ ಬಹಳ.
ಪಟ್ಟಣದ ದಾರಿ ತಿಳಿಯದವನಿಗೆ ಮೂಢರು [ತಿಳಿ 15
ಸಲು] ಪಡುವ ಪ್ರಯಾಸದಿಂದ ಆಯಾಸವೇ. ಎಲೆ 16
ದೇಶವೇ, ನಿನ್ನ ರಾಜನು ಬಾಲನಾಗಿದ್ದು ಪ್ರಭುಗಳು
ಹೊತ್ತಾರೆ ಔತಣಕ್ಕೆ ಕೂತುಕೊಂಡರೆ ನಿನಗೆ ದೌರ್ಭಾ
ಗ್ಯವೇ. ದೇಶವೇ, ನಿನ್ನ ರಾಜನು ಕುಲೀನನಾಗಿದ್ದು 17
ಪ್ರಭುಗಳು ಅಮಲನ್ನೊಲ್ಲದೆ ಶಕ್ತಿಗೊಳ್ಳುವೆವೆಂದು
ಸರಿಯಾದ ಸಮಯದಲ್ಲಿ ಊಟಕ್ಕೆ ಕುಳಿತರೆ
ನಿನಗೆ ಭಾಗ್ಯವೇ ಸರಿ. ಸೋಮಾರಿತನದಿಂದ ತೊಲೆ 18
ಗಳು ಬೊಗ್ಗುವವು, ಜೋಲುಗೈಯಿಂದ ಮನೆ ಸೋ
ರುವದು. ನಗುವಿಗಾಗಿ ಔತಣವು, ದ್ರಾಕ್ಷಾರಸದಿಂದ 19
ಜೀವನಕ್ಕೆ ಆನಂದವು; ಧನವು ಎಲ್ಲವನ್ನೂ ಒದಗಿಸಿ
ಕೊಡುವದು. ಮನಸ್ಸಿನಲ್ಲಿಯೂ ರಾಜನನ್ನು ದೂಷಿ 20
ಸದಿರು, ಮಲಗುವ ಮನೆಯಲ್ಲಿಯೂ ಧನಿಕನನ್ನು
ಬಯ್ಯದಿರು; ಆಕಾಶದ ಹಕ್ಕಿಯು ಆ ಶಬ್ದವನ್ನು
ಮುಟ್ಟಿಸೀತು; ಪಕ್ಷಿಯು ಆ ವಿಷಯವನ್ನು ತಿಳಿಸೀತು.

**11** ನಿನ್ನ ಆಹಾರವನ್ನು ನೀರಿನ ಮೇಲೆ ಚೆಲ್ಲು,
ಬಹು ದಿನದ ಮೇಲೆ ಅದು ನಿನಗೆ ಸಿಕ್ಕುವದು.
ಏಳು ಮಂದಿಗೆ, ಹೌದು, ಎಂಟು ಮಂದಿಗೆ ಹಂಚಿ 2
ಬಿಡು; ಲೋಕದಲ್ಲಿ ಮುಂದೆ ಸಂಭವಿಸುವ ಕೇಡು
ನಿನಗೆ ಗೊತ್ತಿಲ್ಲ. ಮಳೆ ತುಂಬಿದ ಮೋಡಗಳು ಭೂ 3
ಮಿಯ ಮೇಲೆ ಸುರಿದುಬಿಡುವವು; ಮರವು ತೆಂಕಣ
ಕ್ಕಾಗಲಿ ಬಡಗಣಕ್ಕಾಗಲಿ ಬಿದ್ದರೆ ಬಿದ್ದ ಹಾಗೆಯೇ
ಇರುವದು. ಗಾಳಿಯನ್ನು ನೋಡುತ್ತಲೇ ಇರುವವನು 4
ಬೀಜಬಿತ್ತನು; ಮೋಡಗಳನ್ನು ಗಮನಿಸುತ್ತಲೇ
ಇರುವವನು ಪೈರು ಕೊಯ್ಯನು. ಗಾಳಿಯ ಗತಿ 5
ಯನ್ನೂ ಗರ್ಭಿಣಿಯ ಗರ್ಭದೊಳಗೆ ಎಲುಬು
ಬೆಳೆಯುವ ರೀತಿಯನ್ನೂ ನೀನು ಹೇಗೆ ತಿಳಿಯುವ
ದಿಲ್ಲವೋ ಹಾಗೆ ಸರ್ವಕರ್ತನಾದ ದೇವರ ಕಾರ್ಯ

6 ವನ್ನು ಅರಿಯೆ. ಮುಂಜಾನೆ ಬೀಜಬಿತ್ತು. 1)ಸಂಜೆಯ
ತನಕ ಕೈದೆಗೆಯಬೇಡ; ಇದು ಸಫಲವೋ, ಅದು
ಸಫಲವೋ, ಒಂದು ವೇಳೆ ಎರಡೂ ಚೆನ್ನಾಗುವವೋ
7 ನಿನಗೆ ತಿಳಿಯದು. ಬೆಳಕು ಇಂಪು; ಸೂರ್ಯನನ್ನು
8 ಕಾಣುವದು ಕಣ್ಣಿಗೆ ಹಿತ. ಬಹು ವರುಷ ಬದುಕು
ವವನು ಅವುಗಳಲ್ಲೆಲ್ಲಾ 2)ಆನಂದಿಸಲಿ; ಆದರೆ ಅಂಧ
ಕಾರದ ದಿನಗಳು ಬಹಳವೆಂದು ನೆನಪಿಗೆ ತರಲಿ.
ಮುಂದಾಗುವದೆಲ್ಲಾ ವ್ಯರ್ಥವೇ.
9 ಯೌವನಸ್ಥನೇ, ಪ್ರಾಯದಲ್ಲಿ ಆನಂದಿಸು; ಯೌವ
ನದ ದಿನಗಳಲ್ಲಿ ಹೃದಯವು ನಿನ್ನನ್ನು ಹರ್ಷಗೊಳಿ
ಸಲಿ; ಮನಸ್ಸಿಗೆ ತಕ್ಕಂತೆಯೂ ಕಣ್ಣಿಗೆ ಸರಿಬೀಳುವ
ಹಾಗೆಯೂ ನಡೆದುಕೋ; ಆದರೆ ಈ ಎಲ್ಲಾ ವಿಷಯ
ಗಳಲ್ಲಿಯೂ ದೇವರು ನಿನ್ನನ್ನು ನ್ಯಾಯವಿಚಾರಣೆಗೆ
10 ಗುರಿಮಾಡುವನೆಂದು ತಿಳಿದಿರು. ನಿನ್ನ ಹೃದಯ
ದಿಂದ ಕರಕರೆಯನ್ನೂ ದೇಹದಿಂದ ಶ್ರಮೆಯನ್ನೂ
ತೊಲಗಿಸು; ಬಾಲ್ಯವೂ ಪ್ರಾಯವೂ ವ್ಯರ್ಥವಷ್ಟೆ.

12 ಕಷ್ಟದ ದಿನಗಳೂ ಸಂತೋಷವಿಲ್ಲವೆಂದು ನೀನು
ಹೇಳುವ ವರುಷಗಳೂ ಸಮೀಪಿಸುವದರೊಳಗಾಗಿ
ಯೌವನದಲ್ಲಿಯೇ ನಿನ್ನ ಸೃಷ್ಟಿಕರ್ತನನ್ನು ಸ್ಮರಿಸು.
2 ಆ ಕಷ್ಟದ ದಿನಗಳಲ್ಲಿ ಸೂರ್ಯನೂ ಬೆಳಕೂ
ಚಂದ್ರನೂ ನಕ್ಷತ್ರಗಳೂ ಮೊಬ್ಬಾಗುವವು; ಮಳೆ
ಯಾದ ಮೇಲೆಯೂ ಮೋಡಗಳು ಮತ್ತೆ ಬರುವವು.
3 ಅದೇ ಕಾಲದಲ್ಲಿ ಮನೆಗಾವಲಿನವರು ನಡುಗುವರು,
ಬಲಿಷ್ಠರು ಬೊಗ್ಗುವರು, ಅರೆಯುವವರು ಕೊಂಚ
ವಾದದರಿಂದ ಕೆಲಸವನ್ನು ನಿಲ್ಲಿಸಿಬಿಡುವರು, ಕಿಟಕಿ
4 ಗಳಿಂದ ನೋಡುವವರು ಮಂಕಾಗುವರು. ಬೀದಿಯ
ಬಾಗಿಲುಗಳು ಮುಚ್ಚಿರುವವು; ಅರೆಯುವ ಸ್ಥಳದ
ಶಬ್ದವು ತಗ್ಗಿ ಹಕ್ಕಿಯ ಧ್ವನಿಯಷ್ಟು ಕೀಲ್ಗಾಗು
5 ವದು; ಗಾಯಕಿಯರೆಲ್ಲಾ ಕುಗ್ಗುವರು. ಇದಲ್ಲದೆ
ಆ ದಿನಗಳಲ್ಲಿ ದಿನ್ನೆ ಕಂಡರೆ ಭಯ, ದಾರಿಯಲ್ಲಿ
ಅಪಾಯ; ಬಾದಾಮಿಯ ಮರವು ಹೂಬಿಡುವದು
ಮಿಡತೆಯು ಕೂಡ ಭಾರವಾಗುವದು; 3)ಆಶೆಯು
ಕುಂದುವದು, ಮನುಷ್ಯನು ತನ್ನ ನಿತ್ಯಗೃಹಕ
ಹೊರಡುವದಕ್ಕಿದ್ದಾನಲ್ಲಾ; ಗೋಳಾಟದವರು ಬೀ
ಯಲ್ಲಿ ತಿರುಗುವರು. ಇನ್ನು ಮುಂದೆ ಬೆಳ್ಳಿಯ
ತಂತಿ ಕಿತ್ತು ಚಿನ್ನದ ಬಟ್ಟಲು ಜಜ್ಜಿಹೋಗುವದು
ಮಡಿಕೆ ಬುಗ್ಗೆಯ ಹತ್ತಿರ ಒಡೆಯುವದು; ಬಾವಿಯ
ರಾಟೆ ಮುರಿಯುವದು; ಮಣ್ಣು ಭೂಮಿಗೆ ಸೇ
ಇದ್ದ ಹಾಗಾಗುವದು; ಆತ್ಮವು ತನ್ನನ್ನು ದಯಪ
ಲಿಸಿದ ದೇವರ ಬಳಿಗೆ ಸೇರುವದು; ಇಷ್ಟರೊಳಗಾ
[ನಿನ್ನ ಸೃಷ್ಟಿಕರ್ತನನ್ನು ಸ್ಮರಿಸದಿರಬೇಡ.] ವ್ಯರ್ಥವೆ
ವ್ಯರ್ಥ, ಸಮಸ್ತವೂ ವ್ಯರ್ಥ ಎಂದು ಪ್ರಸಂಗಿಯು
ಹೇಳುತ್ತಾನೆ.
ಮತ್ತು ಪ್ರಸಂಗಿಯು ಜ್ಞಾನಿಯಾಗಿದ್ದದ್ದಲ್ಲದ
ಜನರಿಗೆ ತಿಳುವಳಿಕೆಯನ್ನು ಬೋಧಿಸುತ್ತಾ ಬಂದನು
ಅನೇಕಾನೇಕ ಜ್ಞಾನೋಕ್ತಿಗಳನ್ನು ಧ್ಯಾನಿಸಿ ಪರಿ
ಕ್ಷಿಸಿ ಕ್ರಮಪಡಿಸಿದನು. ಪ್ರಸಂಗಿಯು ಯಥಾರ್ಥ
ಭಾವದಿಂದ ರಚಿಸಿದ ಒಪ್ಪಿಗೆಯ ಸತ್ಯದ ಮಾತು
ಗಳನ್ನು ಹುಡುಕಿ ಆರಿಸಿದನು.
ಜ್ಞಾನಿಗಳ ಮಾತುಗಳು ಮುಳ್ಳುಗೋಲುಗಳು
4)ಸಂಗ್ರಹವಾಕ್ಯಗಳು ಬಿಗಿಯಾಗಿ ಬಡಿದ ಮೊಳೆಗಳು
ಒಬ್ಬನೇ 5)ಕರ್ತನಿಂದ ಬಂದಿವೆ. ಕಂದಾ, ಇವಲ್ಲದ
ಉಳಿದವುಗಳಲ್ಲಿಯೂ ಎಚ್ಚರದಿಂದಿರು; ಬಹುಗ್ರಂಥಗಳ
ರಚನೆಗೆ ಮಿತಿಯಿಲ್ಲ; ಅತಿವ್ಯಾಸಂಗವು ದೇಹಕ್ಕೆ
ಆಯಾಸ.
ವಿಷಯವು ತೀರಿತು; ಎಲ್ಲವೂ ಕೇಳಿ ಮುಗಿ
ಯಿತು; ದೇವರಿಗೆ ಭಯಪಟ್ಟು ಆತನ ಆಜ್ಞೆಗಳನ್ನು
ಕೈಕೊಳ್ಳು; ಮನುಷ್ಯರೆಲ್ಲರ [ಕರ್ತವ್ಯವು] ಇದೇ.
ಒಳ್ಳೇದಾಗಲಿ ಕೆಟ್ಟದಾಗಲಿ ಸಕಲ ರಹಸ್ಯ ಸಂಗತಿ
ಗಳನ್ನು ವಿಮರ್ಶಿಸುವ ನ್ಯಾಯವಿಚಾರಣೆಗೆ ದೇವರು
ಪ್ರತಿಯೊಂದು ಕಾರ್ಯವನ್ನು ಗುರಿಮಾಡುವನು.

# THE SONG OF SONGS

## ಪರಮ ಗೀತ.

1 ಪರಮ ಗೀತವು; ಸೊಲೊಮೋನನು ರಚಿಸಿದ್ದು.

2 ಬಾಯ ಮುದ್ದುಗಳಿಂದ ನನ್ನನ್ನು ಮುದ್ದಿಸಲಿ;
ನಿನ್ನ ಲಾಲನೆಯು ದ್ರಾಕ್ಷಾರಸಕ್ಕಿಂತಲೂ ಮೇಲು.
ನಿನ್ನ ತೈಲವು ಸುಗಂಧ;
ನಿನ್ನ ಹೆಸರು ಸುರಿದ ತೈಲದ ಸುಗಂಧದಂತೆ ವ್ಯಾಪಿ
ಸಿರುವದರಿಂದ
ತರುಣಿಯರು ನಿನ್ನನ್ನು ಪ್ರೀತಿಸುವರು.
ನನ್ನನ್ನು ತುಸ ಎಳೆ; ನಿನ್ನ ಹಿಂದೆ ಓಡಿ ಬರುವೆವು;

1) ಅಥವಾ: ಸಂಜೆಗೂ. 2) ಅಥವಾ: ಆನಂದಿಸುತ್ತಾ. 3) ಮೂಲ: ಕಪ್ಪರ್‌ಕಾಯಿ ವ್ಯರ್ಥವಾಗುವ
4) ಅಥವಾ: ಸಂಘಾಧಿಪತಿಗಳ ಮಡಿಗಳು. 5) ಮೂಲ: ಕುರುಬನಿಂದ.

ರಾಜನು ನನ್ನನ್ನು ಅಂತಃಪುರಕ್ಕೆ ಬರಮಾಡಿದ್ದಾನೆ;
ನಿನ್ನಲ್ಲಿ ಹರ್ಷಿಸಿ ಉಲ್ಲಾಸಿಸುವೆವು,
ದ್ರಾಕ್ಷಾರಸಕ್ಕಿಂತಲೂ ನಿನ್ನ ಲಾಲನೆಯನ್ನು ಹೆಚ್ಚಾಗಿ ಕೊಂಡಾಡುವೆವು;
ನಿನ್ನನ್ನು ಯಥಾರ್ಥವಾಗಿ ಪ್ರೀತಿಸುವರು.

5 ಯೆರೂಸಲೇಮಿನ ನಾರಿಯರೇ,
ನಾನು ಕೇದಾರಿನ ಗುಡಾರಗಳಂತೆ ಕಪ್ಪಾಗಿದ್ದರೂ
ಸೊಲೊಮೋನನ ಪರದೆಗಳಂತೆ ಚಂದವುಳ್ಳವಳು.
6 ಸೂರ್ಯನ ದೃಷ್ಟಿಗೆ ಬಿದ್ದು
ಕಪ್ಪಾಗಿರುವದರಿಂದ ನನ್ನನ್ನು ದಿಟ್ಟಿಸಿ ನೋಡಬೇಡಿರಿ.
ನನ್ನ ಸಹೋದರರು ನನ್ನ ಮೇಲೆ ಉರಿಗೊಂಡು
ತೋಟಗಳನ್ನು ಕಾಯುವದಕ್ಕೆ ಹಾಕಿದರು;
ನನ್ನ ತೋಟವನ್ನೋ ನಾನು ಕಾಯಲಿಲ್ಲ.
7 ನನ್ನ ಪ್ರಾಣಪ್ರಿಯನೇ, [ಮಂದೆಯನ್ನು] ಎಲ್ಲಿ ಮೇಯಿಸುತ್ತೀ,
ಮಧ್ಯಾಹ್ನಕ್ಕೆ ಎಲ್ಲಿ ಮಲಗಿಸುತ್ತೀ? ನನಗೆ ತಿಳಿಸು.
ನಾನು ಏಕೆ ನಿನ್ನ ಒಡನಾಡಿಗಳ ಮಂದೆಗಳ ಹತ್ತಿರ 1)ಮುಸುಕಿನವಳಂತಿರಬೇಕು?

8 ನಾರೀಮಣಿಯೇ, ನಿನಗೆ ಗೊತ್ತಿಲ್ಲವಾದರೆ
ಹಿಂದಿನ ಹೆಜ್ಜೆಯ ಜಾಡನ್ನು ಹಿಡಿದು ಹೋಗಿ
ಕುರುಬರ ಗುಡಾರಗಳ ಬಳಿಯಲ್ಲಿ ನಿನ್ನ ಮೇಕೆಮರಿಗಳನ್ನು ಮೇಯಿಸು.

9 ಪ್ರಿಯಳೇ ನಿನ್ನನ್ನು ಫರೋಹನ ರಥಗಳ ಕುದುರೆಗೆ ಹೋಲಿಸಿದ್ದೇನೆ.
0 ನಿನ್ನ ಕೆನ್ನೆಗಳು ಜಡೆಗಳಿಂದಲೂ
ನಿನ್ನ ಕಂಠವು ಹಾರಗಳಿಂದಲೂ ಎಷ್ಟೋ ಅಂದವಾಗಿವೆ!
1 ನಾವು ನಿನಗೆ ಬೆಳ್ಳಿಯ ತಿರುಪಿನ
ಜಡೆ ಬಂಗಾರಗಳನ್ನು ಮಾಡಿಸುವೆವು.

2 ರಾಜನು ಅತ್ತ ಓಲಗದಲ್ಲಿದ್ದಾಗ
ನನ್ನ ಜಟಾಮಾಂಸಿಯು ಇತ್ತ ಪರಿಮಳವನ್ನು ಬೀರುತ್ತಿತ್ತು.
3 ಎನ್ನಿನಿಯನು ನನ್ನ ಸ್ತನಗಳ ಮಧ್ಯದಲ್ಲಿನ ರಕ್ತಬೋಳದ ಚೀಲ;
4 ನನ್ನ ನಲ್ಲನು ನನ್ನ ಭಾಗಕ್ಕೆ ಏಗ್ಗೆದಿಯ ತೋಟಗಳ ಗೋರಂಟಿಯ ಪೂಗೊಂಚಲು.

5 ಆಹಾ, ನನ್ನ ಪ್ರಿಯಳೇ, ನೀನು ಎಷ್ಟು ಚೆಲುವೆ!
ಆಹಾ, ನೀನು ಎಷ್ಟು ಸುಂದರಿ! ನಿನ್ನ ನೇತ್ರಗಳು ಪಾರಿವಾಳಗಳಂತಿವೆ.

3 ಆಹಾ, ಎನ್ನಿನಿಯನೇ, ನೀನು ಎಷ್ಟು ಸುಂದರ, ಎಷ್ಟು ರಮ್ಯ!
ಚಿಗುರುಗಳು ನಮ್ಮ ಮಂಚ,
ನಮ್ಮ ಮನೆಯ ತೊಲೆಗಳು ದೇವದಾರುವೃಕ್ಷಗಳು, 17
ಜಂತೆಗಳು ತುರಾಯಿ ಮರಗಳು.

## 2

ನಾನು ಬೈಲಿನ ನೆಲಸಂಪಿಗೆ,
ತಗ್ಗಿನ ತಾವರೆ.

ನನ್ನ ಪ್ರಿಯಳು ಮುಳ್ಳುಗಳ ಮಧ್ಯದಲ್ಲಿನ ತಾವರೆಯಂತೆ 2
ಸ್ತ್ರೀಯರಲ್ಲಿ ಶ್ರೇಷ್ಠಳು.

ಉದ್ಯಾನ ವೃಕ್ಷಗಳಲ್ಲಿ ಸೇಬು ಹೇಗೋ 3
ಪುರುಷರಲ್ಲಿ ನನ್ನ ಕಾಂತನು ಹಾಗೆಯೇ ಇಷ್ಟನು.
ನಾನು ಅವನ ನೆರಳಿನಲ್ಲಿ ಕೂತು ಸಂತಸಗೊಂಡೆನು,
ಅವನ ಫಲವು ನನ್ನ ನಾಲಿಗೆಗೆ ರುಚಿಯಾಗಿತ್ತು.
ಅವನು ನನ್ನನ್ನು ಔತಣಶಾಲೆಗೆ ಬರಮಾಡಿಕೊಂಡನು, 4
ನನ್ನ ಮೇಲೆ ಅವನು ಎತ್ತಿದ ಧ್ವಜವು ಪ್ರೀತಿಯೇ.
ನಾನು ಅನುರಾಗದಿಂದ ಅಸ್ವಸ್ಥಳಾಗಿದ್ದೇನೆ, ದೀಪದ್ರಾಕ್ಷೆಯಿಂದ ನನ್ನನ್ನು ಉಪಚರಿಸಿರಿ, 5
ಸೇಬು ಹಣ್ಣುಗಳಿಂದ ನನ್ನನ್ನು ಆದರಿಸಿರಿ.
ಅವನ ಎಡಗೈ ನನಗೆ ತಲೆದಿಂಬಾಗಿ 6
ಬಲಗೈ ತಬ್ಬುವದಾದರೆ ಎಷ್ಟೋ ಸಂತೋಷ!

ಯೆರೂಸಲೇಮಿನ ಸ್ತ್ರೀಯರೇ, ಉಚಿತಕಾಲಕ್ಕೆ ಮುಂಚೆ 7
ಪ್ರೀತಿಯನ್ನು 2)ಹುಟ್ಟಿಸಿ ಬೆಳೆಯಿಸಬಾರದೆಂದು
ಅಡವಿಯ ಹುಲ್ಲೆಗಳ ಮೇಲೆಯೂ ಹರಿಣಿಗಳ ಮೇಲೆಯೂ ನಿಮ್ಮಿಂದ ಪ್ರಮಾಣಮಾಡಿಸುತ್ತೇನೆ.

ಆಗೋ ನನ್ನ ಕಾಂತನ ಸಪ್ಪಳ! ಅವನು ಬೆಟ್ಟಗಳ ಮೇಲೆ ಹಾರುತ್ತಾ 8
ಗುಡ್ಡಗಳಲ್ಲಿ ಕುಪ್ಪಳಿಸುತ್ತಾ ಬರುತ್ತಿದ್ದಾನೆ;
ಎನ್ನಿನಿಯನು ಜಿಂಕೆಯಂತೆಯೂ ಪ್ರಾಯದ ಎರಳೆಯ ಹಾಗೂ ಇದ್ದಾನೆ. 9
ಆಹಾ, ನಮ್ಮ ಗೋಡೆಯ ಆಚೆ ನಿಂತಿದ್ದಾನೆ, ಕಿಟಕಿಗಳಲ್ಲಿ ನೋಡುತ್ತಾನೆ,
ಜಾಲಾಂತರಗಳಲ್ಲಿ ಇಣಿಕುಹಾಕುತ್ತಾನೆ!
ನನ್ನ ನಲ್ಲನು ಎನಗೆ ಹೀಗೆಂದನು— 10
ನನ್ನ ಪ್ರಿಯಳೇ, ಎನ್ನ ಸುಂದರಿಯೇ, ಎದ್ದು ಬಾ!
ಇಗೋ, ಮಳೆಗಾಲ ಕಳೆಯಿತು, 11
ವೃಷ್ಟಿಯು ನಿಂತುಹೋಯಿತು;
ಭೂಮಿಯಲ್ಲೆಲ್ಲಾ ಹೂವುಗಳು ಕಾಣುತ್ತವೆ, 12
3)ಕುಡಿ ಸವರುವ ಕಾಲ ಬಂತು,
ಬೆಳವಕ್ಕಿಯ ಕೂಗು ದೇಶದಲ್ಲಿ ಕೇಳಿಸುತ್ತದೆ;
ಅಂಜೂರದ ಮರವು ಕಾಯಿಗಳನ್ನು ಪಕ್ವಕ್ಕೆ ತರುತ್ತದೆ, 13
ದ್ರಾಕ್ಷೆಯ ಬಳ್ಳಿಗಳು ಹೂಬಿಟ್ಟು ಪರಿಮಳವನ್ನು ಬೀರುತ್ತವೆ.

1) ಪಾಠಾಂತರ: ಅಲೆಯುವವಳಂತಿರ. 2) ಮೂಲ: ಎಚ್ಚರಿಸಿ ಎಬ್ಬಿಸ. 3) ಅಥವಾ: ಗೀತದ; ಅಥವಾ: [ಪಕ್ಷಿಗಳು] ...ಾಡುವ.

ನನ್ನ ಪ್ರಿಯಳೇ, ಎನ್ನ ಸುಂದರಿಯೇ, ಎದ್ದು ಬಾ!
14 ಬಂಡೆಯ ಬಿರುಕುಗಳಲ್ಲಿಯೂ ಜರಿಯ ಮರೆಯಲ್ಲಿ
ಯೂ ಇರುವ ನನ್ನ ಪಾರಿವಾಳವೇ!
ನಿನ್ನ ರೂಪು ನನಗೆ ಕಾಣಿಸು, ನಿನ್ನ ದನಿ ಕೇಳಿಸು;
ನಿನ್ನ ದನಿ ಎಷ್ಟೋ ಇಂಪು, ನಿನ್ನ ರೂಪು ಎಷ್ಟೋ
ಅಂದ.

15 ತೋಟಗಳನ್ನು ಹಾಳುಮಾಡುವ ನರಿಗಳನ್ನು,
ನರಿಮರಿಗಳನ್ನು, ಹಿಡಿಯಿರಿ.
ನಮ್ಮ ತೋಟಗಳು ಹೂವಾಗಿವೆ.

16 ಎನ್ನಿನಿಯನು ನನ್ನವನೇ, ನಾನು ಅವನವಳೇ,
ನೆಲದಾವರೆಗಳ ಮಧ್ಯದಲ್ಲಿ [ಮಂದೆಯನ್ನು] ಮೇಯಿ
ಸುವವನಾಗಿದ್ದಾನೆ.
17 ನನ್ನ ಕಾಂತನೇ, ಹೊರಡು, ಹಗಲು ತಂಪಾಗಿ ನೆರಳು
ಇಳಿದು ಹೋಗುವ ತನಕ
ವಿಯೋಗವೆಂಬ ಪರ್ವತಗಳಲ್ಲಿ ಜಿಂಕೆಯಂತೆಯೂ
ಪ್ರಾಯದ ಎರಳೆಯಂತೆಯೂ ಇರು.

3 ರಾತ್ರಿ ರಾತ್ರಿಯಲ್ಲಿಯೂ ಹಾಸಿಗೆಯ ಮೇಲೆ
ನನ್ನ ಪ್ರಾಣಪ್ರಿಯನನ್ನು ಹುಡುಕಿದೆನು;
ಎಷ್ಟು ಹುಡುಕಿದರೂ ಸಿಕ್ಕಲಿಲ್ಲ.
2 ನಾನು ಎದ್ದು ಊರಲ್ಲಿ ತಿರುಗುವೆನು,
ಬೀದಿಗಳಲ್ಲಿಯೂ ಚೌಕಗಳಲ್ಲಿಯೂ ನನ್ನ ಪ್ರಾಣ
ಪ್ರಿಯನನ್ನು ಹುಡುಕುವೆನು ಎಂದುಕೊಂಡೆನು;
ಎಷ್ಟು ಹುಡುಕಿದರೂ ಸಿಕ್ಕಲಿಲ್ಲ.
3 ಊರಲ್ಲಿ ತಿರುಗುವ ಕಾವಲುಗಾರರ ಕೈಗೆ ಸಿಕ್ಕಿದೆನು;
ನನ್ನ ಪ್ರಾಣಪ್ರಿಯನನ್ನು ಕಂಡಿರಾ ಎಂದು ಅವರನ್ನು
ವಿಚಾರಿಸಿದೆನು.
4 ಅವರನ್ನು ಬಿಟ್ಟ ತುಸ ಹೊತ್ತಿನೊಳಗೆ
ನನ್ನ ಪ್ರಾಣಪ್ರಿಯನನ್ನು ಕಂಡುಕೊಂಡು
ತಾಯಿಯ ಮನೆಗೆ, ನನ್ನನ್ನು ಹೆತ್ತವಳ ಕೋಣೆಗೆ,
ಸೇರುವ ತನಕ
ಬಿಡದೆ ಹಿಡಿದುಕೊಂಡೇ ಹೋದೆನು.

5 ಯೆರೂಸಲೇಮಿನ ಸ್ತ್ರೀಯರೇ, ಉಚಿತಕಾಲಕ್ಕೆ
ಮುಂಚೆ
ಪ್ರೀತಿಯನ್ನು ಹುಟ್ಟಿಸಿ ಬೆಳೆಯಿಸಬಾರದೆಂದು
ಅಡವಿಯ ಹುಲ್ಲೆಗಳ ಮೇಲೆಯೂ ಹರಿಣಿಗಳ ಮೇಲೆ
ಯೂ ನಿಮ್ಮಿಂದ ಪ್ರಮಾಣಮಾಡಿಸುತ್ತೇನೆ.

6 ರಕ್ತಬೋಳ, ಧೂಪ, ವರ್ತಕರ ಸಕಲಸುಗಂಧ
ದ್ರವ್ಯಗಳನ್ನು ಧೂಪಿಸಿದ
ಧೂಮಸ್ತಂಭಗಳಂತೆ ಅರಣ್ಯದಿಂದ ಬರುವ ಈ ಮೆರ
ವಣಿಗೆ ಯಾರದು?
7 ನೋಡು, ಅದು ಸೊಲೊಮೋನನ ಪಾಲಕಿ;
ಇಸ್ರಾಯೇಲಿನ ಶೂರರಲ್ಲಿ ಅರುವತ್ತು ಮಂದಿ ಅದರ
ಸುತ್ತಲಿದ್ದಾರೆ.
8 ಯುದ್ಧಪ್ರವೀಣರಾದ ಇವರೆಲ್ಲರೂ ಕೈಯಲ್ಲಿ ಕತ್ತಿ
ಹಿಡಿದಿದ್ದಾರೆ.

ರಾತ್ರಿಯ ಅಪಾಯದ ನಿಮಿತ್ತ ಪ್ರತಿಯೊಬ್ಬನ
ಸೊಂಟಕ್ಕೆ ಕತ್ತಿಕಟ್ಟಿದ್ದಾನೆ.
ಆ ಪಾಲಕಿಯನ್ನು ರಾಜನಾದ ಸೊಲೊಮೋನನು
ಲೆಬನೋನಿನ ಮರದಿಂದ ಮಾಡಿಸಿಕೊಂಡನು.
ಅದರ ಕಂಬಗಳನ್ನು ಬೆಳ್ಳಿಯಿಂದ, ಒರಗನ್ನು ಚಿ
ದಿಂದ,
ಆಸನವನ್ನು ಸಕಲಾತಿಯಿಂದ ಮಾಡಿಸಿದನು;
ಮಧ್ಯಭಾಗವನ್ನು ಯೆರೂಸಲೇಮಿನ ಸ್ತ್ರೀಯರು ತವ
ಪ್ರೀತಿಗೆ ಗುರುತಾಗಿ ನಕಾಸಿಯಿಂದ ಅಲಂಕರಿ
ದರು.
ಚೀಯೋನಿನ ನಾರಿಯರೇ, ಹೊರಟು ಹೋಗಿ ರಾ
ನಾದ ಸೊಲೊಮೋನನನ್ನು ನೋಡಿರಿ.
ಅವನು ವಿವಾಹವಾಗಿ ಉಲ್ಲಾಸಪಟ್ಟ ದಿನದಲ್ಲಿ
ತಾಯಿಯು ಅವನ ತಲೆಗಿಟ್ಟ ಕಿರೀಟವನ್ನು ಧರಿ
ಕೊಂಡಿದ್ದಾನೆ.

ಆಹಾ, ನನ್ನ ಪ್ರಿಯಳೇ, ನೀನು ಎಷ್ಟು ಚೆಲುವೆ!
ಆಹಾ, ನೀನು ಎಷ್ಟು ಸುಂದರಿ!
ಮುಸುಕಿನೊಳಗಿನ ನಿನ್ನ ನೇತ್ರಗಳು ಪಾರಿವಾಳಗಳ
ನಿನ್ನ ಕೂದಲು ಗಿಲ್ಯಾದ್ ಬೆಟ್ಟದ ಪಾರ್ಶ್ವದಲ್ಲಿ ಮ
ಗಿರುವ ಆಡುಮಂದೆ.
ನಿನ್ನ ಹಲ್ಲುಗಳೋ ತೊಳೆಯಲ್ಪಟ್ಟು ಉಣ್ಣೆಕತ್ತರಿ
ಕೊಂಡ ಕೂಡಲೇ
ಯಾವದೂ ತನ್ನ ಜೊತೆಯನ್ನು ಕಳೆದುಕೊಳ್ಳ
ಜೋಡಿಯಾಗಿ ಮೇಲಕ್ಕೆ ಬರುವ ಕುರಿಂ
ಮಂದೆಯ ಹಾಗಿವೆ.
ನಿನ್ನ ತುಟಿಗಳು ಕೆಂಪು ದಾರದಂತಿವೆ.
ನಿನ್ನ ಬಾಯಿ ರಮ್ಯ,
ಮುಸುಕಿನೊಳಗಿನ ನಿನ್ನ ಕೆನ್ನೆಯು ದಾಳಿಂಬರ
ತಿರುಳೇ.
ನಿನ್ನ ಕಂಠವು ಆಯುಧಶಾಲೆಯಾಗಿ ಕಟ್ಟಿ
ಸಾವಿರ ಶೂರರ ಗುರಾಣಿಗಳನ್ನು ನೇತುಹಾಕಿರು
ದಾವೀದನ ಬುರುಜಿನ ಹಾಗಿದೆ.
ನಿನ್ನ ಎರಡು ಸ್ತನಗಳು ನೆಲದಾವರೆಗಳ ಮಧ್ಯದ
ಮೇಯುವ
ಎರಳೆಯ ಅವಳಿಮರಿಗಳಂತಿವೆ.
ನಾನು ರಕ್ತಬೋಳದ ಬೆಟ್ಟಕ್ಕೂ ಧೂಪದ ಗುಡ್ಡಕ
ತೆರಳಿ
ಹಗಲು ತಂಪಾಗಿ ನೆರಳು ಇಳಿಯುವ ತನಕ ಚರಿಸ
ತ್ತಿರುವೆನು.
ನನ್ನ ಪ್ರಿಯಳೇ, ನೀನು ಸರ್ವಾಂಗಸುಂದರಿ, ನಿನ್ನ
ಯಾವ ದೋಷವೂ ಇಲ್ಲ.

ಎನ್ನೊಂದಿಗೆ ಲೆಬನೋನಿನಿಂದ ಬಾ!
ವಧುವೇ, ಲೆಬನೋನಿನಿಂದ ನನ್ನೊಂದಿಗೆ ಬಾ!
ಅಮಾನದ ತುದಿ, ಶೆನೀರ್ ಮತ್ತು ಹೆರ್ಮೋನ್ ಶಿಖ
ಗಳು,
ಸಿಂಹಗಳ ಗವಿಗಳು, ಚಿರತೆಗಳ ಗುಡ್ಡಗಳು, ಇ
ಗಳಿಂದ ಹೊರಟು ಬಾ!

9 1)ಪ್ರಿಯಳೇ, ವಧುವೇ, ನನ್ನ ಹೃದಯವನ್ನು ಅಪಹರಿಸಿದ್ದೀ,
ನಿನ್ನ ಒಂದು ಕಡೆಗಣ್ಣಿನಿಂದ, ನಿನ್ನ ಕಂಠಹಾರದ ಒಂದು ಸರದಿಂದ, ನನ್ನ ಹೃದಯವನ್ನು ವಶಮಾಡಿಕೊಂಡಿದ್ದೀ.
10 ಪ್ರಿಯಳೇ, ವಧುವೇ, ನಿನ್ನ ಪ್ರೀತಿಯು ಎಷ್ಟೋ ರಮ್ಯ!
ನಿನ್ನ ಪ್ರೇಮವು ದ್ರಾಕ್ಷಾರಸಕ್ಕಿಂತ ಎಷ್ಟೋ ಮೇಲು!
ನಿನ್ನ ತೈಲದ ಪರಿಮಳವು ಸಕಲಸುಗಂಧದ್ರವ್ಯಗಳಿಗಿಂತ ಎಷ್ಟೋ ಮನೋಹರ!
11 ವಧುವೇ, ನಿನ್ನ ತುಟಿಗಳು ಜೇನುಗರೆಯುತ್ತವೆ;
ಜೇನೂ ಹಾಲೂ ನಿನ್ನ ನಾಲಿಗೆಯೊಳಗಿವೆ;
ನಿನ್ನ ವಸ್ತ್ರಗಳ ಸುವಾಸನೆಯೋ ಲೆಬನೋನಿನ ಪರಿಮಳವೇ.
12 2)ನನ್ನ ಪ್ರಿಯಳು, ನನ್ನ ಮದಲಗಿತ್ತಿಯು, ಅಗುಳಿ ಹಾಕಿದ ಉದ್ಯಾನ,
ಬೇಲಿಯೊಳಗಿನ ಬುಗ್ಗೆ, ಮುಚ್ಚಿ ಮುದ್ರಿಸಿದ ಬಾವಿ ಆಗಿದ್ದಾಳೆ.
13 ನಿನ್ನ ಉದ್ಯಾನದಲ್ಲಿ ದಾಳಿಂಬರದ ವನ, ಉತ್ತಮ ಫಲ,
ಜಟಾಮಾಂಸಿ, ಗೋರಂಟಿ,
14 ಜಟಾಮಾಂಸಿ, ಕುಂಕುಮ,
ಬಜೆ, ಲವಂಗಚಕ್ಕೆ, ಸಮಸ್ತವಿಧಧೂಪ,
ರಕ್ತಬೋಳ, ಅಗುರು, ಸಕಲ ಮುಖ್ಯ ಮುಖ್ಯ ಸುಗಂಧದ್ರವ್ಯ ಇವುಗಳೇ ಚಿಗುರುತ್ತವೆ.
15 ಉದ್ಯಾನಗಳಿಗೆ ಹಾಯುವ ಬುಗ್ಗೆ, ಉಕ್ಕುತ್ತಿರುವ ಬಾವಿ,
ಲೆಬನೋನಿನಿಂದ ಹರಿಯುವ ಪ್ರವಾಹ, ಇವೆಲ್ಲವೂ ನಿನ್ನಲ್ಲಿವೆ.

16 ಬಡಗಣ ಗಾಳಿಯೇ ಬೀಸು, ತೆಂಕಣ ಗಾಳಿಯೇ ಬಾ!
ನನ್ನ ತೋಟದ ಸುಗಂಧಗಳು ಹರಡುವ ಹಾಗೆ ಅದರ ಮೇಲೆ ಸುಳಿದಾಡು.
ಎನ್ನಿನಿಯನು ತನ್ನ ತೋಟದೊಳಗೆ ಸೇರಿ ತನ್ನ ಉತ್ತಮ ಫಲಗಳನ್ನು ತಾನೇ ಭುಜಿಸಲಿ.

5 ಪ್ರಿಯಳೇ, ವಧುವೇ, ಇಗೋ ನನ್ನ ತೋಟದೊಳಗೆ ಬಂದೆನು,
ನನ್ನ ರಕ್ತಬೋಳ ಸುಗಂಧದ್ರವ್ಯಗಳನ್ನು ತೆಗೆದೆನು,
ನನ್ನ ಜೇನುಕೊಡವನ್ನೂ ಜೇನುತುಪ್ಪವನ್ನೂ ತಿಂದೆನು,
ನನ್ನ ದ್ರಾಕ್ಷಾರಸವನ್ನೂ ಕ್ಷೀರವನ್ನೂ ಕುಡಿದೆನು.
ಮಿತ್ರರೇ, ಊಟಮಾಡಿರಿ; ಪ್ರಿಯರೇ, ಕುಡಿಯಿರಿ, ಬೇಕಾದಷ್ಟು ಪಾನಮಾಡಿರಿ.

2 ನಾನು ನಿದ್ರೆಗೊಂಡಿದ್ದರೂ ನನ್ನ ಹೃದಯವು ಎಚ್ಚರಗೊಂಡಿತ್ತು;
ಇಗೋ, ಎನ್ನಿನಿಯನು ಕದ ತಟ್ಟಿ
ಪ್ರಿಯಳೇ, ಕಾಂತಳೇ, ಪಾರಿವಾಳವೇ, ನಿರ್ಮಲೆಯೇ, ಬಾಗಿಲು ತೆಗೆ!
ನನ್ನ ತಲೆಯ ಮೇಲೆಲ್ಲಾ ಇಬ್ಬನಿಯು ಬಿದ್ದದೆ,
ನನ್ನ ಕೂದಲು ರಾತ್ರಿ ಬೀಳುವ ಹನಿಗಳಿಂದ ತುಂಬಿದೆ ಅಂದನು.
3 ನನ್ನ ಒಳಂಗಿಯನ್ನು ತೆಗೆದೆನಲ್ಲಾ, ಅದನ್ನು ಹೇಗೆ ಹಾಕಿಕೊಂಡೇನು?
ಪಾದಗಳನ್ನು ತೊಳೆದುಕೊಂಡೆನಲ್ಲಾ, ಅವುಗಳನ್ನು ಹೇಗೆ ಕೊಳೆಮಾಡಿಕೊಳ್ಳಲಿ?
[ಎಂದು ನಾನು ಅಂದುಕೊಂಡಾಗ]
4 ನನ್ನ ಕಾಂತನು ಬಾಗಿಲ ರಂಧ್ರದಲ್ಲಿ ಕೈ ನೀಡಿದನು;
ಅವನಲ್ಲಿ ನನ್ನ ಕರುಳು ಮರುಗಿತು.
5 ನನ್ನ ನಲ್ಲನಿಗೆ ಕದತೆಗೆಯಬೇಕೆಂದು ಏಳಲು
ಅಗುಳಿಯ ಹಿಡಿಗಳಲ್ಲಿ ನನ್ನ ಕೈಗಳಿಂದ ರಕ್ತಬೋಳವು,
ನನ್ನ ಬೆರಳುಗಳಿಂದ ಅಚ್ಚರಕ್ತಬೋಳವು ಸುರಿಯಿತು.
6 ನನ್ನ ಇನಿಯನಿಗೆ ಕದತೆಗೆದೆನು;
ಅಷ್ಟರಲ್ಲಿ ಅವನು ಹಿಂದಿರುಗಿ ಹೋಗಿದ್ದನು.
ಆಹಾ, ಅವನು ಮಾತಾಡಿದಾಗ ನಾನು ಮೂರ್ಛೆಹೋಗಿದ್ದೆನಲ್ಲಾ.
ಎಷ್ಟು ಹುಡುಕಿದರೂ ಸಿಕ್ಕಲಿಲ್ಲ,
ಎಷ್ಟು ಕೂಗಿದರೂ ಉತ್ತರವಿಲ್ಲ.
7 ಊರಲ್ಲಿ ಸುತ್ತುತ್ತಿರುವ ಕಾವಲುಗಾರರು
ನನ್ನನ್ನು ಕಂಡುಹಿಡಿದು ಹೊಡೆದು ಘಾಯಪಡಿಸಿದರು;
ಪವುಳಿಯ ಕಾವಲುಗಾರರು ಮೇಲುಹೊದಿಕೆಯನ್ನು ನನ್ನಿಂದ ಕಿತ್ತುಕೊಂಡರು.
8 ಯೆರೂಸಲೇಮಿನ ಮಹಿಳೆಯರೇ, ನೀವು ನನ್ನ ಕಾಂತನನ್ನು ಕಂಡರೆ
ನಾನು ಅನುರಾಗದಿಂದ ಅಸ್ವಸ್ಥಳಾಗಿದ್ದೇನೆಂಬದನ್ನು
ಅವನಿಗೆ ತಿಳಿಸಬೇಕೆಂದು ನಿಮ್ಮಿಂದ ಪ್ರಮಾಣಮಾಡಿಸುತ್ತೇನೆ.

9 ಸ್ತ್ರೀರತ್ನವೇ. [ಇತರರ] ಕಾಂತರಿಗಿಂತ ನಿನ್ನ ಕಾಂತನ ಅತಿಶಯವೇನು?
ನಮ್ಮಿಂದ ನೀನು ಹೀಗೆ ಪ್ರಮಾಣಮಾಡಿಸುವದಕ್ಕೆ
[ಇತರರ] ಕಾಂತರಿಗಿಂತ ನಿನ್ನ ಕಾಂತನಲ್ಲಿ ಅತಿಶಯವೇನು?

10 ನನ್ನ ನಲ್ಲನು ಬಿಳುಪು ಕೆಂಪು ಬಣ್ಣವುಳ್ಳವನು;
ಅವನು ಹತ್ತುಸಾವಿರ ಜನರಲ್ಲಿ ಧ್ವಜಪ್ರಾಯನು.
11 ಅವನ ತಲೆಯು ಚೊಕ್ಕ ಬಂಗಾರದಂತಿದೆ,
ಗುಂಗುರುಗುಂಗುರಾಗಿರುವ ಅವನ ಕೂದಲು ಕಾಗೆಯಂತೆ ಕಪ್ಪಾಗಿದೆ.
12 ಅವನ ಕಣ್ಣುಗಳೋ ತುಂಬಿತುಳುಕುವ ತೊರೆಗಳ ಹತ್ತಿರ ತಂಗುತ್ತಲೂ
ಕ್ಷೀರದಲ್ಲಿ ಸ್ನಾನಮಾಡುತ್ತಲೂ ಇರುವ ಪಾರಿವಾಳಗಳಂತಿವೆ.

1) ಮೂಲ: ತಂಗೀ. 2) ಮೂಲ: ತಂಗಿಯು.

13 ಅವನ ಕೆನ್ನೆಗಳು ಕರ್ಣಕುಂಡಲ ಗಿಡಗಳ ಪಾತಿಗಳಂತೆಯೂ
ಸುಗಂಧಸಸ್ಯಗಳು ಬೆಳೆಯುವ ದಿಬ್ಬಗಳಂತೆಯೂ ಇವೆ;
ಅಚ್ಚರಕ್ತಬೋಳವನ್ನು ಸುರಿಸುವ ಅವನ ತುಟಿಗಳು ಕೆಂದಾವರೆಗಳೇ.
14 ಅವನ ಕೈಗಳು ಪೀತರತ್ನ ಖಚಿತವಾದ ಬಂಗಾರದ ಸಲಾಕಿಗಳೋ ಪಾದಿಯಲ್ಲಿವೆ,
ಅವನ ಮೈ ಇಂದ್ರನೀಲಮಯವಾದ ದಂತಫಲಕದ ಹಾಗಿದೆ.
15 ಅವನ ಕಾಲುಗಳು ಅಪರಂಜಿಯ ಸುಣ್ಣಪಾದಗಳ ಮೇಲಿಟ್ಟ ಚಂದ್ರಕಾಂತಸ್ತಂಭಗಳು;
ದೇವದಾರುಗಳಷ್ಟು ರಮಣೀಯವಾದ ಅವನ ಗಾಂಭೀರ್ಯವು ಲೆಬನೋನಿಗೆ ಸಮಾನ.
16 ಅವನ ನುಡಿ ಬಹು ಇಂಪು; ಹೌದು, ಅವನು ಸರ್ವಾಂಗದಲ್ಲಿಯೂ ಮನೋಹರನು;
ಯೆರೂಸಲೇಮಿನ ಸ್ತ್ರೀಯರುಗಳಿರಾ, ಇವನೇ ಎನ್ನಿನಿಯನು; ಇವನೇ ನನ್ನ ಪ್ರಿಯನು.

6 ಮಹಿಳಾಮಣಿಯೇ, ನಿನ್ನಿನಿಯನು ಎಲ್ಲಿ ಹೋದನು?
ನಾವು ನಿನ್ನೊಂದಿಗೆ ಅವನನ್ನು ಹುಡುಕುವಂತೆ ತಿಳಿಸು.
ನಿನ್ನ ನಲ್ಲನು ಎಲ್ಲಿಗೆ ತೆರಳಿರುವನು?

2 ನನ್ನ ಕಾಂತನು ಉದ್ಯಾನಗಳಲ್ಲಿ [ಮಂದೆಯನ್ನು] ಮೇಯಿಸುತ್ತಾ ನೆಲದಾವರೆಗಳನ್ನು ಕೊಯ್ಯಬೇಕೆಂದು
ಸುಗಂಧಸಸ್ಯದ ಪಾತಿಗಳಿರುವ ತನ್ನ ತೋಟಕ್ಕೆ ಹೋಗಿದ್ದಾನೆ.
3 ಎನ್ನಿನಿಯನು ನನ್ನವನೇ, ನಾನು ಅವನವಳೇ,
ನೆಲದಾವರೆಗಳ ಮಧ್ಯದಲ್ಲಿ [ಮಂದೆಯನ್ನು] ಮೇಯಿಸುವವನಾಗಿದ್ದಾನೆ.

4 ನನ್ನ ಪ್ರಿಯಳೇ, ನೀನು ತಿರ್ಚದಂತೆ ಸುಂದರಿ,
ಯೆರೂಸಲೇಮಿನ ಹಾಗೆ ಮನೋಹರಿ,
ಪತಾಕಿನಿಯಂತೆ ಭಯಂಕರಿ!
5 ನಿನ್ನ ಕಣ್ಣುಗಳನ್ನು ನನ್ನ ಕಡೆಯಿಂದ ತಿರುಗಿಸು,
ಅವು ನನ್ನನ್ನು ಹೆದರಿಸುತ್ತವೆ.
ನಿನ್ನ ಕೂದಲು ಗಿಲ್ಯಾದ್ [ಬೆಟ್ಟದ] ಪಾರ್ಶ್ವದಲ್ಲಿ ಮಲಗಿರುವ ಆಡುಮಂದೆಯಂತಿದೆ.
6 ನಿನ್ನ ಹಲ್ಲುಗಳೋ ತೊಳೆಯಲ್ಪಟ್ಟ ಬಳಿಕ ಯಾವದೂ ತನ್ನ ಜೊತೆಯನ್ನು ಕಳೆದುಕೊಳ್ಳದೆ
ಜೋಡಿಯಲ್ಲಿ ಮೇಲಕ್ಕೆ ಬರುವ ಕುರಿಯ ಮಂದೆಯ ಹಾಗಿವೆ.
7 ಮುಸುಕಿನೊಳಗಿನ ನಿನ್ನ ಕೆನ್ನೆಯು ದಾಳಿಂಬರದ ತಿರುಳೇ.
8 ಅರುವತ್ತು ಮಂದಿ ರಾಣಿಯರೂ ಎಂಭತ್ತು ಜನ ಉಪಪತ್ನಿಯರೂ
ಲೆಕ್ಕವಿಲ್ಲದ ಯುವತಿಯರೂ ನನಗುಂಟು.

ನನ್ನ ಪಾರಿವಾಳವು, ನನ್ನ ನಿರ್ಮಲೆಯು, ಒಬ್ಬಳೆ
ಇವಳು ತಾಯಿಗೆ ಏಕಪುತ್ರಿಯು,
ಹೆತ್ತವಳಿಗೆ ಆಪ್ತಳು.
ಯುವತಿಯರು ನೋಡಿದಾಗ ಧನ್ಯಳೆಂದು ಹೇಳಿದರು
ರಾಣಿಯರೂ ಉಪಸ್ತ್ರೀಯರೂ ಕಂಡಾಗ 1)ಹೀ
ಪ್ರಶಂಸಿಸಿದರು—
ಅರುಣೋದಯವು ದೃಷ್ಟಿಸುವಂತಿರುವ ಇವಳಾರು?
ಚಂದ್ರನಂತೆ ಸೌಮ್ಯಳು,
ಸೂರ್ಯನಂತೆ ಶುಭ್ರಳು,
ಪತಾಕಿನಿಯಂತೆ ಭಯಂಕರಳು ಆಗಿರುವ ಇವಳಾರು

ದ್ರಾಕ್ಷೆಯು ಚಿಗುರಿದೆಯೋ, ದಾಳಿಂಬರಗಳ
ಹೂಬಿಟ್ಟಿವೆಯೋ ಎಂದು ತಗ್ಗಿನ ಸಸ್ಯಗಳನ
ನೋಡಲು 2)ಬಾದಾಮಿಯ ತೋಟಕ್ಕೆ ನಾನ
ಹೋಗಿದ್ದಾಗ
ನನ್ನ ತವಕವು ನನ್ನ ದೇಶದ ಪ್ರಧಾನರ ರಥಗ
ನಡುವೆ ಅಕಸ್ಮಾತ್ತಾಗಿ ನನ್ನನ್ನು ಸಿಕ್ಕಿಸಿತು.

ಶೂಲಮ್ ಊರಿನವಳೇ, ತಿರುಗು, ತಿರುಗು;
ನಾವು ನಿನ್ನನ್ನು ನೋಡಬೇಕು; ತಿರುಗು, ಇತ್ತ
ತಿರುಗು;

3)ಎದುರುಬದುರಿನ ನಾಟ್ಯವನ್ನು ನೋಡುವಷ್ಟು
ಆಶೆಯಿಂದ
ಶೂಲಮ್ ಊರಿನವಳಾದ ನನ್ನನ್ನು ಏಕೆ ನೋಡ
ಬೇಕು!

ರಾಜಪುತ್ರಿಯೇ, ಪಾದರಕ್ಷೆಗಳಲ್ಲಿನ ನಿನ್ನ ಚರಣ
ಗಳು ಎಷ್ಟೋ ಚಂದ!
ದುಂಡಾದ ನಿನ್ನ ತೊಡೆಗಳು ಕುಶಲ ಶಿಲ್ಪಿಯು ಮಾಡಿ
ದ ಆಭರಣಗಳಂತಿವೆ.
ನಿನ್ನ ಹೊಕ್ಕಳು ಮಿಶ್ರಪಾನಕದಿಂದ ತುಂಬಿರುವ
ಗುಂಡು ಬಟ್ಟಲು;
ನಿನ್ನ ಉದರವು ನೆಲದಾವರೆಗಳಿಂದ ಅಲಂಕರಿಸಿದ
ಗೋದಿಯ ರಾಶಿ;
ನಿನ್ನ ಎರಡು ಸ್ತನಗಳು ಎರಳೆಯ ಅವಳಿಮರಿಗಳೇ
ನಿನ್ನ ಕಂಠವು ದಂತದ ಗೋಪುರ;
ನಿನ್ನ ನೇತ್ರಗಳು ಹೆಷ್ಬೋನಿನಲ್ಲಿನ ಬತ್‌ರಬ್ಬೀಮು
ಬಾಗಿಲ ಬಳಿಯ ಕೊಳಗಳಂತಿವೆ.
ನಿನ್ನ ನಾಸಿಕವು ದಮಸ್ಕದ ಕಡೆಗಿರುವ ಲೆಬನೋನಿ
ನ ಬುರುಜಿನ ಹಾಗಿದೆ.

ನಿನ್ನ ಶಿರಸ್ಸು ಕರ್ಮೆಲ್ ಬೆಟ್ಟದಂತೆ ಗಂಭೀರ;
ನಿನ್ನ ತಲೆಯ ಕೂದಲು ಧೂಮ್ರವರ್ಣವು;
ರಾಜನು ಅದರ ತೆಕ್ಕೆತೆಕ್ಕೆಗಳಲ್ಲಿ ಕಟ್ಟುಬಿದ್ದಿದ್ದಾನೆ.
ಪ್ರೇಮವೇ, ಸಕಲ ಸಂತೋಷಗಳಿಗಿಂತ ನೀನು ಎಷ್ಟೋ
ಮನೋಹರ, ಎಷ್ಟೋ ರಮ್ಯ!

1) ಅಥವಾ: ಕಂಡಾಗ ಪ್ರಶಂಸಿಸಿದರು. 2) ಅಥವಾ: ಅಕ್ರೋಟದ. 3) ಅಥವಾ: ಮಹನಯಿಮ್ ಊರಿನ.

7 ಈ ನಿನ್ನ ನೀಳವಾದ ಆಕಾರವು ಖರ್ಜೂರವೃಕ್ಷ,
ನಿನ್ನ ಸ್ತನಗಳೇ ಅದರ ಗೊಂಚಲುಗಳು.
8 ನಾನು ಆ ವೃಕ್ಷವನ್ನು ಹತ್ತಿ
ಹಣ್ಣಿನ ತುಂಬುಗಳನ್ನು ಹಿಡಿಯುವೆನು ಅಂದು ಕೊಂಡೆನು.
ನಿನ್ನ ಸ್ತನಗಳು ನನಗೆ ದ್ರಾಕ್ಷೆಯ ಗೊಂಚಲುಗಳಂತಿರಲಿ,
ನಿನ್ನ ಶ್ವಾಸವು ಸೇಬುಹಣ್ಣುಗಳೋಪಾದಿಯಲ್ಲಿ ಪರಿಮಳಿಸಲಿ;
9 ನಿನ್ನ 1)ಮುದ್ದುಗಳು ಉತ್ತಮದ್ರಾಕ್ಷಾರಸದ ಹಾಗಿರಲಿ;
ನಿದ್ರಿಸುವವರ ತುಟಿಗಳಲ್ಲಿ ಸರಾಗವಾಗಿ ಹರಿಯುವ ಈ ರಸವು
ನನ್ನ ನಲ್ಲೆಯಾದ ನಿನ್ನಲ್ಲಿಯೂ ಮೆಲ್ಲನೆ ಇಳಿದು ಬರುವದು.

10 ನಾನು ನನ್ನ ನಲ್ಲನವಳೇ,
ಅವನ ಆಶೆಯು ನನ್ನ ಮೇಲೇ ಇದೆ.
11 ಎನ್ನಿನಿಯನೇ, ವನಕ್ಕೆ ಹೋಗೋಣ ಬಾ,
2)ಕುಂಕುಮ ಹೂವುಗಳ ಮಧ್ಯದಲ್ಲಿ ವಾಸಿಸುವ!
12 ತೋಟಗಳಿಗೆ ಹೊತ್ತಾರೆ ಹೊರಟು
ದ್ರಾಕ್ಷೆಯು ಚಿಗುರಿದೆಯೋ, ಅದರ ಹೂವು ಅರಳಿದೆಯೋ,
ದಾಳಿಂಬರಗಳು ಪುಷ್ಪಿಸಿವೆಯೋ ನೋಡೋಣ!
ಅಲ್ಲಿ ನನ್ನ ಪ್ರೀತಿಯನ್ನು ನಿನಗೆ ಸಲ್ಲಿಸುವೆನು.
13 ಕಾಮಜನಕ ವೃಕ್ಷಗಳು ಪರಿಮಳಬೀರುತ್ತವೆ,
ನನ್ನ ಕಾಂತನೇ, ನಾನು ನಿನಗಾಗಿ ಇಟ್ಟುಕೊಂಡ
ಒಳ್ಳೊಳ್ಳೆಯ ಬಗೆಬಗೆಯ ಹಳೆ ಹೊಸ ಹಣ್ಣುಗಳು
ನಮ್ಮ ಬಾಗಿಲುಗಳ 3)ಬಳಿ ಸಿದ್ಧವಾಗಿವೆ.

8 ನೀನು ನನ್ನ ತಾಯಿಯ ಸ್ತನ್ಯವನ್ನು ಕುಡಿದ
ನನ್ನ ಅಣ್ಣನ ಹಾಗಿದ್ದರೆ ಎಷ್ಟೋ ಚೆನ್ನಾಗಿತ್ತು!
ನಾನು ನಿನ್ನನ್ನು ಹೊರಗೆ ಕಂಡು ಮುದ್ದಿಟ್ಟರೂ
ಯಾರೂ ಹೀನೈಸುತ್ತಿರಲಿಲ್ಲ.
2 4)ನಿನ್ನನ್ನು ನನ್ನ ತಾಯಿಯ ಮನೆಗೆ ಕರೆದುಕೊಂಡು ಹೋಗುತ್ತಿದ್ದೆನು,
ಅಲ್ಲಿ 5)ನೀನು ನನಗೆ ಉಪದೇಶಮಾಡಬಹುದಾಗಿತ್ತು;
ದ್ರಾಕ್ಷೆಯ ಮಿಶ್ರಪಾನಕವನ್ನು, ನನ್ನ ದಾಳಿಂಬರದ ಸವಿರಸವನ್ನು, ನಿನಗೆ ಕುಡಿಸುತ್ತಿದ್ದೆನು.
3 ಆಗ 6) ನಿನ್ನ ಎಡಗೈ ನನಗೆ ತಲೆದಿಂಬಾಗಿ ಬಲಗೈ ನನ್ನನ್ನು ತಬ್ಬುತ್ತಿತ್ತು.

4 ಯೆರೂಸಲೇಮಿನ ಸ್ತ್ರೀಯರೇ, ಉಚಿತಕಾಲಕ್ಕೆಮುಂಚೆ
ಪ್ರೀತಿಯನ್ನು ಹುಟ್ಟಿಸಿ ಬೆಳೆಯಿಸಬಾರದೆಂದು ನಿಮ್ಮಿಂದ ಪ್ರಮಾಣಮಾಡಿಸುತ್ತೇನೆ.

ನಲ್ಲನನ್ನು ಒರಗಿಕೊಂಡು ಅಡವಿಯಿಂದ ಬರುವ ಇವಳು ಯಾರು? 5

ಆ ಸೇಬುಮರದ ಕೆಳಗೆ ನಿನ್ನನ್ನು ಎಬ್ಬಿಸಿದೆನಲ್ಲಾ!
ಇಗೋ, ಅಲ್ಲಿ ನಿನ್ನ ತಾಯಿಯು ನಿನ್ನನ್ನು ಹೆತ್ತಳು,
ಅಲ್ಲೇ ಪ್ರಸವವೇದನೆ ಪಟ್ಟು ನಿನ್ನನ್ನು ಹಡೆದಳು!

ನಿನ್ನ ಹೃದಯದ ಮೇಲೆ, ನಿನ್ನ ಕೈಯಲ್ಲಿ, ನನ್ನನ್ನು ಮುದ್ರೆಯನ್ನಾಗಿ ಧರಿಸಿಕೋ. 6
ಪ್ರೀತಿಯು ಮರಣದಷ್ಟು ಬಲವಾಗಿದೆ,
[ಪ್ರೀತಿದ್ರೋಹದಿಂದ ಹುಟ್ಟುವ] ಮತ್ಸರವು ಪಾತಾಳದಷ್ಟು ಕ್ರೂರ,
ಅದರ ಜ್ವಾಲೆಯು ಬೆಂಕಿಯ ಉರಿ, 7)ಆದು ಯೆಹೋವನ ರೋಷಾಗ್ನಿಯು.
ಜಲದ ರಾಶಿಗಳೂ ಪ್ರೀತಿಯನ್ನು ನಂದಿಸಲಾರವು, 7
ಪ್ರವಾಹಗಳಿಗೂ ಅದನ್ನು ಮುಣುಗಿಸಲು ಶಕ್ತಿಯಿಲ್ಲ.
ಒಬ್ಬನು ತನ್ನ ಮನೆಮಾರನ್ನೆಲ್ಲಾ ಕೊಟ್ಟು ಪ್ರೀತಿಯನ್ನು ಪಡೆಯಲು ಯತ್ನಿಸಿದರೆ
ಕೇವಲ ತಿರಸ್ಕಾರಕ್ಕೆ ಗುರಿಯಾಗುವನು.

ಸ್ತನಬಾರದ ತಂಗಿಯು ನಮಗುಂಟು; 8
ಆವಳನ್ನು ಕೇಳತಕ್ಕ ಸಮಯದಲ್ಲಿ
ಅವಳ ಹಿತಕ್ಕೆ ಏನು ಮಾಡೋಣ?
ಅವಳು ಕೋಟೆಯಾದರೆ ಅದರ ಮೇಲೆ ಬೆಳ್ಳಿಯ ಬುರುಜನ್ನು ಕಟ್ಟುವೆವು, 9
ಬಾಗಿಲಾದರೆ ದೇವದಾರು ಹಲಿಗೆಗಳಿಂದ ಭದ್ರಪಡಿಸುವೆವು.

ನಾನು ಕೋಟೆ; ನನ್ನ ಸ್ತನಗಳು ಅದರ ಬುರುಜುಗಳು, 10
8)ಹೀಗಿದ್ದು 9)ಸೊಲೊಮೋನನ ದೃಷ್ಟಿಯಲ್ಲಿ [ಜಯಶಾಲಿನಿಯಾಗಿ] ಸಮಾಧಾನಹೊಂದಿದೆನು.
ಸೊಲೊಮೋನನು ನೋಡಿಕೊಳ್ಳುವವರಿಗೆ 11
ಬಾಲ್ಹಾಮೋನಿನಲ್ಲಿ ಇದ್ದ ತನ್ನ ತೋಟವನ್ನು ಕೊಟ್ಟನು,
ಅದರ ಫಲದಿಂದ ಯಾರಾದರೂ ಸಾವಿರ ರೂಪಾಯಿಯನ್ನು ಪಡೆಯಬಹುದು.
ಸೊಲೊಮೋನನೇ, ಆ ಸಾವಿರ ರೂಪಾಯಿ ನಿನಗಿರಲಿ, 12
ಫಲವನ್ನು ನೋಡಿಕೊಳ್ಳುವವರಿಗೆ ಇನ್ನೂರು ರೂಪಾಯಿ ಸೇರಲಿ;
10)ನನ್ನದೇ ಆಗಿರುವ ನನ್ನ ತೋಟವು ನನ್ನ ವಶದಲ್ಲಿಯೇ ಇದೆ.

1) ಮೂಲ: ಬಾಯಿ. 2) ಅಥವಾ: ಹಳ್ಳಗಳಲ್ಲಿ ಇಳಿದುಕೊಳ್ಳುವ. 3) ಅಥವಾ: ಮೇಲೆ. 4) ಪಾಠಾಂತರ: ...ನ್ನನ್ನು ನನ್ನ ತಾಯಿಯ ಮನೆಗೆ, ನನ್ನನ್ನು ಹೆತ್ತವಳ ಕೋಣೆಗೆ, ಕರೆದುಕೊಂಡು ಹೋಗುತ್ತಿದ್ದೆನು. 5) ಅಥವಾ: ಆಕೆಯು. ...) ಮೂಲ: ಅವನ. 7) ಅಥವಾ: ಅದು ಅತಿ ತೀಕ್ಷ್ಣವಾದ ಅಗ್ನಿಯೇ. 8) ಅಥವಾ: ಹೀಗಿದ್ದು ಅವನ ಕಟಾಕ್ಷಕ್ಕೆ ...ಾತ್ರಳಾದೆನು. 9) ಮೂಲ: ಅವನ. 10) ಅಥವಾ: ನನ್ನದೇ ಆಗಿರುವ ನನ್ನ ತೋಟವು ನನ್ನ ವಶದಲ್ಲಿಯೇ ಇದೆ; ...ಲೊಮೋನನೇ ಇತ್ಯಾದಿ.

13 ಉದ್ಯಾನವಾಸಿನಿಯೇ,
ಗೆಳೆಯರು ನಿನ್ನ ದನಿ ಕೇಳಬೇಕೆಂದಿದ್ದಾರೆ;
ನನಗೆ ಕೇಳಿಸಲಿ.

ಎನ್ನಿನಿಯನೇ, ತ್ವರೆಪಡು,
ಸುಗಂಧಸಸ್ಯಪರ್ವತಗಳಲ್ಲಿ ಜಿಂಕೆಯಂತೆಯೂ ಪ್ರ
ಯದ ಎರಳೆಯಂತೆಯೂ ಇರು.

---

## THE BOOK OF THE

# PROPHET ISAIAH

## ಯೆಶಾಯನ ಪ್ರವಚನಗ್ರಂಥ

### ಯೆಹೂದದ ವಿಷಯವಾದ ದೈವೋಕ್ತಿಗಳು.

1—12.

ಯೆಹೋವನು ತನ್ನ ಜನರನ್ನು ದೋಷಿಗಳೆಂದು ಸ್ಥಾಪಿಸಿ
ಅವರಲ್ಲಿ ಪಶ್ಚಾತ್ತಾಪ ಹುಟ್ಟಿಸಲು ಯತ್ನಿಸುವದು.

1 ಯೆಹೂದ ದೇಶದ ಅರಸರಾದ ಉಜ್ಜೀಯ, ಯೋ
ಥಾಮ, ಆಹಾಜ, ಹಿಜ್ಕೀಯ, ಇವರ ಕಾಲದಲ್ಲಿ
ಯೆಹೂದದ ಮತ್ತು ಯೆರೂಸಲೇಮಿನ ವಿಷಯ
ವಾಗಿ ಆಮೋಚನ ಮಗನಾದ ಯೆಶಾಯನಿಗೆ ಆದ
2 ದೈವದರ್ಶನ. ಆಕಾಶಮಂಡಲವೇ, ಆಲಿಸು! ಭೂ
ಮಂಡಲವೇ, ಕೇಳು! ಯೆಹೋವನು ಮಾತಾಡು
ತ್ತಿದ್ದಾನೆ; ನಾನು ಸಾಕಿ ಸಲಹಿದ ಮಕ್ಕಳೇ ನನಗೆ
3 ದ್ರೋಹಮಾಡಿದ್ದಾರೆ. ಎತ್ತು ಯಜಮಾನನನ್ನು,
ಕತ್ತೆ ಒಡೆಯನ [ಕೊಟ್ಟಿಗೆಯ] ಗೋದಲಿಯನ್ನು
ತಿಳಿದಿರುವವು; ಇಸ್ರಾಯೇಲ್ ಜನರಿಗೋ ತಿಳುವಳಿಕೆ
ಯಿಲ್ಲ, ನನ್ನ ಪ್ರಜೆಯು ಆಲೋಚಿಸುವದಿಲ್ಲ.
4 ಪಾಪಿಷ್ಠಜನವೇ, ಅಧರ್ಮಭಾರಹೊತ್ತಿರುವ ಪ್ರಜೆ
ಯೇ, ದುಷ್ಟಜಾತಿಯೇ, ದ್ರೋಹಿಗಳಾದ ಮಕ್ಕಳೇ,
ನಿಮ್ಮ ಗತಿಯನ್ನು ಏನು ಹೇಳಲಿ! ಯೆಹೋವನನ್ನು
ತೊರೆದಿದ್ದಾರೆ, ಇಸ್ರಾಯೇಲ್ಯರ ಸದಮಲಸ್ವಾಮಿ
ಯನ್ನು ಧಿಕ್ಕರಿಸಿದ್ದಾರೆ, ಆತನಿಗೆ ಬೆನ್ನುಮಾಡಿ
5 ಬೇರೆಯಾಗಿದ್ದಾರೆ. ಏಕೆ ದ್ರೋಹವನ್ನು ಹೆಚ್ಚಿಸಿ
ಹೆಚ್ಚಿಸಿ ಪೆಟ್ಟಿಗೆ ಗುರಿಯಾಗುತ್ತೀರಿ? ತಲೆಯೆಲ್ಲಾ
6 ರೋಗ, ಹೃದಯವೆಲ್ಲಾ ದುರ್ಬಲ. ಅಂಗಾಲಿನಿಂದ
ನಡುನೆತ್ತಿಯ ತನಕ ಪೆಟ್ಟು ಬಾಸುಂಡೆ ಮಾಗದ
ಗಾಯಗಳೇ ಹೊರತು ಏನೂ ಸೌಖ್ಯವಿಲ್ಲ; ಅವನ್ನು
ಹಿಸಕಿ ಮುಚ್ಚಿಲ್ಲ, ಕಟ್ಟಿಲ್ಲ, ಎಣ್ಣೆಸವರಿ ಮೃದು
7 ಮಾಡಿಲ್ಲ. ನಿಮ್ಮ ದೇಶವು ಹಾಳಾಗಿದೆ; ನಿಮ್ಮ ಪಟ್ಟ
ಣಗಳು ಸುಟ್ಟುಹೋಗಿವೆ; ನಿಮ್ಮ ಭೂಮಿಯನ್ನು
ಅನ್ಯರು ನಿಮ್ಮೆದುರಿಗೆ ನುಂಗಿಬಿಡುತ್ತಿದ್ದಾರೆ; ಅನ್ಯ
ದೇಶಗಳು ನಾಶನವಾದಂತೆಯೇ ನಿಮ್ಮ ಭೂಮಿಯೂ
8 ಹಾಳಾಯಿತು. ಚೀಯೋನ್ ನಗರಿಯೊಂದೇ ಉಳಿದು

ದ್ರಾಕ್ಷೇತೋಟದ ಮಂಚಿಕೆಯಂತೆಯೂ ಸವುತೆಯ
ಹೊಲದ ಗುಡಸಲಿನ ಹಾಗೂ ಮುತ್ತಿದ ಪಟ್ಟಣದೋ
ಪಾದಿಯಲ್ಲಿಯೂ ಇದೆ. ಸೇನಾಧೀಶ್ವರನಾದ ಯೆ
ಹೋವನು ನಮಗೆ ಕೊಂಚ ಜನವನ್ನೂ ಉಳಿಸದೆ ಹೋ
ಗಿದ್ದರೆ ಸೊದೋಮಿನ ಗತಿಯೇ ನಮಗಾಗುತ್ತಿತ್ತು
ಗೊಮೋರದ ದುರ್ದಶೆಯೇ ಸಂಭವಿಸುತ್ತಿತ್ತು.

ಸೊದೋಮಿನ ಅಧಿಪತಿಗಳೇ, ಯೆಹೋವ
ಮಾತನ್ನು ಆಲಿಸಿರಿ; ಗೊಮೋರದ ಪ್ರಜೆಗಳೇ, ನಮ
ದೇವರ ಧರ್ಮೋಪದೇಶವನ್ನು ಕೇಳಿರಿ! ಯೆಹೋ
ವನು ಹೀಗೆನ್ನುತ್ತಾನೆ—ಲೆಕ್ಕವಿಲ್ಲದ ನಿಮ್ಮ ಯಜ್ಞ
ಗಳು ನನಗೇಕೆ? ಟಗರುಗಳ ಸರ್ವಾಂಗಹೋಮ
ಪುಷ್ಟಪಶುಗಳ ಕೊಬ್ಬು, ಇದೆಲ್ಲಾ ನನಗೆ ಸಾಕ
ಯಿತು; ಹೋರಿಕುರಿಹೋತಗಳ ರಕ್ತಕ್ಕೆ ನಾನ
ಒಲಿಯೆನು. ನನ್ನ ಸನ್ನಿಧಿಯಲ್ಲಿ ಕಾಣಿಸಿಕೊಳ
ಬೇಕೆಂದು ನೀವು ಬರುತ್ತೀರಲ್ಲಾ; ನನ್ನ ಪ್ರಾಕಾ
ಗಳನ್ನು ತುಳಿಯಲು ಯಾರು ನಿಮ್ಮನ್ನು ಕೇ
ಕೊಂಡರು? ವ್ಯರ್ಥನೈವೇದ್ಯವನ್ನು ಇನ್ನು ತಾರದಿರಿ
1)ಧೂಪವು ನನಗೆ ಅಸಹ್ಯ; ಅಮಾವಾಸ್ಯೆ, ಸಬ್ಬತ
ದಿನ, ಕೂಟಪ್ರಕಟನೆ, ಇವು ಬೇಡ; ಅಧರ್ಮದಿಂ
ಕೂಡಿದ ಸಂಘವನ್ನು ನಾನು ಸಹಿಸಲಾರೆನು. ನಿಮ
ಅಮಾವಾಸ್ಯೆಗಳನ್ನೂ ಉತ್ಸವದಿನಗಳನ್ನೂ ಹ
ಮಾಡುತ್ತೇನೆ; ಇವು ನನಗೆ ಭಾರ; ಸಹಿಸಲು ಬೇಸ
ನೀವು [ನನ್ನ ಕಡೆಗೆ] ಕೈಯೆತ್ತುವಾಗ ನಿಮ್ಮನ
ನೋಡದಂತೆ ನನ್ನ ಕಣ್ಣುಗಳನ್ನು ಮರೆಮಾಡಿಕೊಳ
ವೆನು; ಹೌದು, ನೀವು ಬಹು ಪ್ರಾರ್ಥನೆಗಳನ
ಮಾಡಿದರೂ ನಾನು ಕೇಳೆನು, ನಿಮ್ಮ ಕೈಗಳ
ರಕ್ತವು ತುಂಬಿದೆ. ನಿಮ್ಮನ್ನು ತೊಳೆದುಕೊಳ್ಳಿರಿ, ಶುದ್ಧ
ಮಾಡಿಕೊಳ್ಳಿರಿ, ನನ್ನ ಕಣ್ಣೆದುರಿನ ನಿಮ್ಮ ದುಷ್ಕೃತ
ಗಳನ್ನು ತೊಲಗಿಸಿರಿ, ದುರಾಚಾರವನ್ನು ಬಿಡಿರಿ
ಸದಾಚಾರವನ್ನು ಅಭ್ಯಾಸಮಾಡಿರಿ; ನ್ಯಾಯನಿರತರ
ಗಿರಿ, 2)ಹಿಂಸಕನನ್ನು ತಿದ್ದಿ ಸರಿಪಡಿಸಿರಿ, ಅನಾಥನಿ
ನ್ಯಾಯತೀರಿಸಿರಿ, ವಿಧವೆಯ ಪಕ್ಷವಾಗಿ ವಾದಿಸಿರಿ.

1) ಅಥವಾ: ಅದು ನನಗೆ ದುರ್ವಾಸನೆ. 2) ಪಾಠಾಂತರ ▸ ಹಿಂಸೆಪಡುವವರನ್ನು ಉಪಚರಿಸಿರಿ.

ಬನ್ನಿರಿ, ವಾದಿಸುವ ಎಂದು ಯೆಹೋವನು ಅನ್ನು
ತ್ತಾನೆ; ನಿಮ್ಮ ಪಾಪಗಳು ಕಡು ಕೆಂಪಾಗಿದ್ದರೂ
ಹಿಮದ ಹಾಗೆ ಬಿಳುಪಾಗುವವು; ಕಿರಮಂಜಿಬಣ್ಣವಾ
ಗಿದ್ದರೂ ಉಣ್ಣೆಯಂತೆ ಬೆಳ್ಳಗಾಗುವವು. ನೀವು ಒಪ್ಪಿ
ವಿಧೇಯರಾದರೆ ದೇಶದ ಮೇಲನ್ನು ಅನುಭವಿಸುವಿರಿ;
ಒಪ್ಪದೆ ತಿರುಗಿ ಬಿದ್ದರೆ ಕತ್ತಿಯ ಬಾಯಿಗೆ ತುತ್ತಾ
ಗುವಿರಿ; ಈ ಮಾತು ಯೆಹೋವನೇ ನುಡಿದದ್ದು.

ಅಯ್ಯೋ, ಸುವ್ರತೆಯಾಗಿದ್ದ ನಗರಿಯು ಸೂಳೆ
ಯಾದಳಲ್ಲಾ! ನ್ಯಾಯದಿಂದ ತುಂಬಿ ಧರ್ಮಕ್ಕೆ
ನೆಲೆಯಾಗಿದ್ದವಳು ಈಗ ಕೊಲೆಪಾತಕರಿಗೆ ನೆಲೆ
ಯಾಗಿದ್ದಾಳೆ. ನಿನ್ನ ಬೆಳ್ಳಿಯು ಕಂದಾಯಿತು,
ನಿನ್ನ ದ್ರಾಕ್ಷಾರಸವು ನೀರಾಯಿತು. ನಿನ್ನ ಅಧಿಕಾರಿ
ಗಳು ದ್ರೋಹಿಗಳೂ ಕಳ್ಳರ ಗೆಳೆಯರೂ ಆಗಿದ್ದಾರೆ;
ಪ್ರತಿಯೊಬ್ಬನೂ ಕಾಣಿಕೆಗಳನ್ನು ಆಶಿಸಿ ಲಂಚಗಳನ್ನು
ಹುಡುಕುವನು; ಅನಾಥರಿಗೆ ನ್ಯಾಯತೀರಿಸರು; ವಿಧವೆ
ಯರ ವ್ಯಾಜ್ಯವು ಅವರ ಮನಸ್ಸಿಗೆ ಬಾರದು.

ಇಂತಿರಲು ಕರ್ತನೂ ಸೇನಾಧೀಶ್ವರನೂ ಇಸ್ರಾ
ಯೇಲ್ಯರ ಶೂರನೂ ಆಗಿರುವ ಯೆಹೋವನು ಹೀಗೆ
ನುಡಿಯುತ್ತಾನೆ—ಆಹಾ, ನನ್ನ ವಿರೋಧಿಗಳನ್ನು
ಅಡಗಿಸಿ ಶಾಂತನಾಗುವೆನು, ನನ್ನ ಶತ್ರುಗಳಿಗೆ
5 ಮುಯ್ಯಿತೀರಿಸುವೆನು; ನಿನ್ನ ಮೇಲೆ ಕೈಮಾಡಿ
ಪುಟಹಾಕಿ ನಿನ್ನ ಕಲ್ಮಷವನ್ನು ಸಂಪೂರ್ಣವಾಗಿ
ಹೋಗಲಾಡಿಸಿ ನಿನ್ನ ಕಂದುಕಸರನ್ನೆಲ್ಲಾ ತೆಗೆದು
6 ಬಿಡುವೆನು. ಪೂರ್ವದಲ್ಲಿ ನಿನಗಿದ್ದಂಥ ನ್ಯಾಯಾಧಿ
ಪತಿಗಳನ್ನೂ ಮಂತ್ರಾಲೋಚಕರನ್ನೂ ಪುನಃ ಒದ
ಗಿಸಿಕೊಡುವೆನು; ಆ ಮೇಲೆ ನೀನು ಧರ್ಮಪುರಿ
ಎಂತಲೂ ಸುವ್ರತನಗರಿ ಎಂತಲೂ ಅನ್ನಿಸಿಕೊಳ್ಳುವಿ.
7 1)ಚೀಯೋನ್ ಪಟ್ಟಣಕ್ಕೆ [ನನ್ನ] ನ್ಯಾಯದ ಮೂಲ
ಕವೂ ದೇಶಾಂತರದಿಂದ ಬಿಡುಗಡೆಯಾಗಿ ಬರುವ
ಅದರ ಪ್ರಜೆಗಳಿಗೆ [ನನ್ನ] ಧರ್ಮದ ಮೂಲಕವೂ
8 ವಿಮೋಚನೆಯಾಗುವದು. ಆದರೆ ದ್ರೋಹಿಗಳೂ
ಪಾಪಿಗಳೂ ಒಟ್ಟಾಗಿ ನಾಶನವಾಗುವರು; ಹೌದು,
ಯೆಹೋವನನ್ನು ತೊರೆದವರು ನಿರ್ಮೂಲರಾಗುವರು.
9 ನೀವು ಇಷ್ಟಪಟ್ಟ ಏಲಾಮರಗಳ ನಿಮಿತ್ತ ನಾಚಿಕೆ
ಗೊಳ್ಳುವಿರಿ, ಗೊತ್ತುಮಾಡಿಕೊಂಡ ವನಗಳ ವಿಷಯ
0 ವಾಗಿ ಲಜ್ಜೆಪಡುವಿರಿ. ಎಲೆ ಒಣಗಿದ ಏಲಾ ಮರ
ದಂತೆಯೂ ಜಲವಿಲ್ಲದ ವನದ ಹಾಗೂ ಇರುವಿರಿ.
1 ನಿಮ್ಮಲ್ಲಿನ ಬಲಿಷ್ಠನೇ ಸಣಬಿನ ಗುಂಜು, ಅವನ
ಕಾರ್ಯವೇ ಕಿಡಿ, ಎರಡು ಸೇರಿ ಯಾರೂ ನಂದಿಸ
ಲಾಗದಂತೆ ಸುಟ್ಟುಹೋಗುವವು.

ಚೀಯೋನಿನ ಮುಂದಣ ಪ್ರಖ್ಯಾತಿ.

2 ಯೆಹೂದದ ಮತ್ತು ಯೆರೂಸಲೇಮಿನ ವಿಷಯ
ವಾಗಿ ಆಮೋಚನ ಮಗನಾದ ಯೆಶಾಯನಿಗೆ ಕಂಡು
ಬಂದ ದೈವೋಕ್ತಿ—
2 ಅಂತ್ಯಕಾಲದಲ್ಲಿ ಯೆಹೋವನ ಮಂದಿರದ ಬೆಟ್ಟವು
ಗುಡ್ಡಬೆಟ್ಟಗಳಿಗಿಂತ ಉನ್ನತೋನ್ನತವಾಗಿ ಬೆಳೆದು
ನೆಲೆಗೊಳ್ಳುವದು; ಆಗ ಸಕಲದೇಶಗಳವರು ಅದರ
ಕಡೆಗೆ ಪ್ರವಾಹಗಳಂತೆ ಬರುವರು. ಹೊರಟುಬಂದ 3
ಬಹು ಜನಾಂಗದವರು—ಬನ್ನಿರಿ, ಯೆಹೋವನ ಪರ್ವ
ತಕ್ಕೆ, ಯಾಕೋಬ್ಯರ ದೇವರ ಮಂದಿರಕ್ಕೆ, ಹೋ
ಗೋಣ! ಆತನು ತನ್ನ ಮಾರ್ಗಗಳ ವಿಷಯವಾಗಿ
ನಮಗೆ ಬೋಧನೆ 2)ಮಾಡುವನು, ನಾವು ಆತನ ದಾರಿ
ಗಳಲ್ಲಿ ನಡೆಯುವೆವು ಎಂದು ಹೇಳುವರು. ಏಕಂದರೆ
ಚೀಯೋನಿನಿಂದ ಧರ್ಮೋಪದೇಶವೂ ಯೆರೂಸಲೇಮಿ
ನಿಂದ ಯೆಹೋವನ ವಾಕ್ಯವೂ ಹೊರಡುವವು.
ಆತನು ದೇಶದೇಶಗಳ ವ್ಯಾಜ್ಯಗಳನ್ನು ವಿಚಾರಿಸು 4
ವನು, ಬಹು ರಾಷ್ಟ್ರದವರಿಗೆ ನ್ಯಾಯತೀರಿಸುವನು;
ಅವರೋ ತಮ್ಮ [ಆಯುಧಗಳನ್ನು] ಕುಲುಮೆಗೆ
ಹಾಕಿ ಕತ್ತಿಗಳನ್ನು ಗುಳಗಳನ್ನಾಗಿಯೂ ಬರ್ಜಿಗಳನ್ನು
ಕುಡುಗೋಲುಗಳನ್ನಾಗಿಯೂ ಮಾಡುವರು; ಜನಾಂ
ಗವು ಜನಾಂಗಕ್ಕೆ ವಿರುದ್ಧವಾಗಿ ಕತ್ತಿಯನ್ನೆತ್ತದು,
ಇನ್ನು ಯುದ್ಧಾಭ್ಯಾಸವು ನಡೆಯುವದೇ ಇಲ್ಲ.

ಯೆಹೋವನ ನ್ಯಾಯನಿರ್ಣಯದಿನದಲ್ಲಿ ನಡೆಯತಕ್ಕದ್ದು.

ಯಾಕೋಬನ ಮನೆತನದವರೇ, ಬನ್ನಿರಿ, ಯೆಹೋ 5
ವನ ಜ್ಞಾನಪ್ರಕಾಶದಲ್ಲಿ ನಡೆಯುವ! ಯಾಕೋಬನ 6
ಮನೆತನದವರು ಮೂಡಣ ದೇಶಗಳ [ಮಂತ್ರತಂತ್ರ
ಗಳಲ್ಲಿ] ಮಗ್ನರೂ ಫಿಲಿಷ್ಟಿಯರ ಹಾಗೆ ಕಣಿಹೇಳು
ವವರೂ ಅನ್ಯದೇಶಗಳವರ ಸಂಗಡ ಒಪ್ಪಂದಮಾಡು
ವವರೂ ಆಗಿರುವದರಿಂದ ಈ ನಿನ್ನ ಜನರನ್ನು ಕೈಬಿಟ್ಟಿ
ದ್ದೀಯಷ್ಟೆ. ಇವರ ದೇಶವು ಬೆಳ್ಳಿಬಂಗಾರಗಳಿಂದ 7
ತುಂಬಿದೆ, ಇವರ ನಿಧಿನಿಕ್ಷೇಪಗಳಿಗೆ ಮಿತಿಯಿಲ್ಲ; ಇವ
ರ ದೇಶವು ಅಶ್ವಬಲಭರಿತವಾಗಿದೆ, ಇವರ ರಥಗಳಿಗೆ
ಪಾರವಿಲ್ಲ; ಇವರ ದೇಶವು ವಿಗ್ರಹಗಳಿಂದಲೂ ತುಂಬಿ 8
ದೆ, ತಮ್ಮ ಕೈಯಿಂದಲೇ, ತಮ್ಮ ಬೆರಳುಗಳಿಂದಲೇ
ಮಾಡಿದ ಕೆಲಸಕ್ಕೆ ನಮಸ್ಕರಿಸುತ್ತಾರೆ. ಹೀಗಿರಲು 9
ಅಧಮರಾಗಲಿ ಉತ್ತಮರಾಗಲಿ ತಗ್ಗಿಸಲ್ಪಡುವರು;
(ಅವರನ್ನು ಕ್ಷಮಿಸಬೇಡ). 3)ಗವಿಯೊಳಗೆ ನುಗ್ಗು, 10
ಯೆಹೋವನ ಭಯಂಕರತನಕ್ಕೂ ಅತ್ಯುನ್ನತಮಹಿ
ಮೆಗೂ ಹೆದರಿ ದೂಳಿನಲ್ಲಿ ಅವುತುಕೋ! ಸಾಮಾ 11
ನ್ಯರ ಗರ್ವದೃಷ್ಟಿಯು ತಗ್ಗಿಹೋಗುವದು. ಮು
ಖಂಡರ ಅಹಂಕಾರವು ಕುಗ್ಗಿಹೋಗುವದು, ಯೆಹೋ
ವನೊಬ್ಬನೇ ಆ ದಿನದಲ್ಲಿ ಉನ್ನತೋನ್ನತನಾಗಿರು
ವನು. ಸೇನಾಧೀಶ್ವರನಾದ ಯೆಹೋವನ [ನ್ಯಾಯ 12
ನಿರ್ಣಯ] ದಿವಸವು ಗರ್ವದಿಂದ ಹೆಚ್ಚಿಕೊಂಡಿರುವ
ಸಮಸ್ತಕ್ಕೂ ಸಂಭವಿಸುವದು; ಆಗ ಅದೆಲ್ಲಾ ತಗ್ಗು
ವದು. ಎತ್ತರವಾಗಿ ಬೆಳೆದಿರುವ ಲೆಬನೋನಿನ ಸರ್ವ 13
ದೇವದಾರು ವೃಕ್ಷಗಳು, ಬಾಷಾನಿನ ಎಲ್ಲಾ ಅಲ್ಲೋನ್
ಮರಗಳು, ಶಿಖರಗಳನ್ನು ಉನ್ನತವಾಗಿ ಎತ್ತಿಕೊಂಡಿ 14
ರುವ ಸಮಸ್ತ ಬೆಟ್ಟಗುಡ್ಡಗಳು, ಉದ್ಬುದ್ಧವಾದ 15
ಸಕಲ ಗೋಪುರಗಳು, ದುರ್ಗಮವಾದ ಸಮಸ್ತ

1) ಅಥವಾ: ಚೀಯೋನ್ ಪಟ್ಟಣವು ವಿಮೋಚನೆ ಹೊಂದಿ ನ್ಯಾಯವನ್ನು ಕೈಕೊಳ್ಳುವದು, ದೇಶಾಂತರದಿಂದ ಬಿಡುಗಡೆಯಾಗಿ ಬರುವ ಅದರ ಪ್ರಜೆಗಳು ಧರ್ಮವನ್ನು ಅನುಸರಿಸುವರು. 2) ಅಥವಾ: ಮಾಡಲಿ . . . . . ನಡೆಯುವ. 3) ಮೂಲ: ಬಂಡೆಯೊಳಗೆ.

16 ಕೋಟೆಗಳು, ಎಲ್ಲಾ 1)ದೊಡ್ಡ ದೊಡ್ಡ ಹಡಗುಗಳು,
ಅಂತೂ ನೋಡತಕ್ಕ ಮನೋಹರವಾದ ಪ್ರತಿಯೊಂದು
17 ವಸ್ತುವಿಗೂ ಆ ದಿನವು ತಪ್ಪದೆ ಬರುವದು. ಸಾಮಾ
ನ್ಯರ ಗರ್ವವು ಕುಗ್ಗುವದು, ಮುಖಂಡರ ಅಹಂಕಾ
ರವೂ ತಗ್ಗುವದು, ಯೆಹೋವನೊಬ್ಬನೇ ಆ ದಿನ
18 ದಲ್ಲಿ ಉನ್ನತೋನ್ನತನಾಗಿರುವನು. ವಿಗ್ರಹಗಳು
19 ಸಂಪೂರ್ಣವಾಗಿ ಹೋಗಿಬಿಡುವವು. ಯೆಹೋವನು
ಭೂಮಂಡಲವನ್ನು ಕಂಪನವಮಾಡುವದಕ್ಕೆ ಏಳುವಾಗ
ಮನುಷ್ಯರು ಆತನ ಭಯಂಕರತನಕ್ಕೂ ಅತ್ಯುನ್ನತ
ಮಹಿಮೆಗೂ ಹೆದರಿ ಬಂಡೆಗಳ ಗವಿಗಳಲ್ಲಿಯೂ
ನೆಲದ ಹಳ್ಳಕೊಳ್ಳಗಳಲ್ಲಿಯೂ ಸೇರಿಕೊಳ್ಳುವರು.
20 ಆ ದಿನದಲ್ಲಿ ಮನುಷ್ಯರು ತಮ್ಮ ಪೂಜೆಗೋಸ್ಕರ
ಮಾಡಿಸಿಕೊಂಡ ಬೆಳ್ಳಿಯ ಬೊಂಬೆಗಳನ್ನೂ ಬಂಗಾರದ
ವಿಗ್ರಹಗಳನ್ನೂ ಇಲಿಕಣ್ಣುಕಪಟಗಳಿಗಾಗಿ ಬಿಸಾಟು
21 ಬಿಟ್ಟು ಯೆಹೋವನು ಭೂಮಂಡಲವನ್ನು ಕಂಪನ
ಮಾಡುವದಕ್ಕೆ ಏಳುವಾಗ ಆತನ ಭಯಂಕರತನಕ್ಕೂ
ಅತ್ಯುನ್ನತಮಹಿಮೆಗೂ ಹೆದರಿ ಬಂಡೆಗಳ ಸಂದು
ಗೊಂದುಗಳಲ್ಲಿಯೂ ಚೂಪಾದ ಶಿಲೆಗಳ ಸೀಳು
22 ಗಳಲ್ಲಿಯೂ ನುಗ್ಗುವರು. ಉಸಿರು ಮೂಗಿನಲ್ಲಿ
ರುವ ತನಕ ಬದುಕುವ ನರಮನುಷ್ಯನನ್ನು ಬಿಟ್ಟು
ಬಿಡಿರಿ; ಅವನು ಯಾವ ಗಣನೆಗೆ ಬಂದಾನು?

### ಯೆಹೂದದ ಅಧಿಕಾರಿಗಳ ಅನ್ಯಾಯವೂ ಅದರ ನಷ್ಟವೂ.

3 ಇಗೋ, ಕರ್ತನೂ ಸೇನಾಧೀಶ್ವರನೂ ಆಗಿರುವ
ಯೆಹೋವನೆಂಬ ನಾನು ಜೀವನಕ್ಕೆ ಆಧಾರಕೋ
ದ್ಧಾರಕವಾದ ಅನ್ನಪಾನಗಳನ್ನೆಲ್ಲಾ ಯೆರೂಸಲೇಮಿ
ನಿಂದಲೂ ಯೆಹೂದದಿಂದಲೂ ತೆಗೆದುಬಿಡುವೆನು.
2 ಇದಲ್ಲದೆ, ಶೂರ, ಭಟ, ನ್ಯಾಯಾಧಿಪತಿ, ಪ್ರವಾದಿ,
3 ಶಕುನದವ, ಹಿರಿಯ, ಪಂಚಾಶದಧಿಪತಿ, ಘನವಂತ,
ಮಂತ್ರಾಲೋಚಕ, 2)ತಾಂತ್ರಿಕ, ಮಾಂತ್ರಿಕ, ಇವ
4 ರೆಲ್ಲರನ್ನೂ ತೊಲಗಿಸಿಬಿಡುವೆನು. ಬಾಲಕರನ್ನು
ಪ್ರಭುಗಳನ್ನಾಗಿ ಆ ದೇಶಕ್ಕೆ ನೇಮಿಸುವೆನು, ಬಾಲ
5 ಚೇಷ್ಟೆಯು ಅದನ್ನಾಳುವದು. ಪ್ರಜೆಗಳು ಪರಸ್ಪರ
ವಿರೋಧಿಗಳಾಗಿ ಒಬ್ಬರನ್ನೊಬ್ಬರು ಹಿಂಸಿಸುವರು;
ಹುಡುಗನು ಮುದುಕನ ಮೇಲೆಯೂ ನೀಚನು ಘನ
6 ವಂತನ ಮೇಲೆಯೂ ಸೊಕ್ಕೇರಿ ನಡೆಯುವರು. ಆ
ದಿನದಲ್ಲಿ ಒಬ್ಬನು—ಎಲಾ, ಅಣ್ಣಾ, ನಿನಗೆ ನಿಲುವಂಗಿ
ಇದೆ, ನೀನು ನಮಗೆ ಒಡೆಯನಾಗಬೇಕು, ಹಾಳಾದ
ಈ ಪಟ್ಟಣವು ನಿನ್ನ ಕೈಕೆಳಗಿರಲಿ ಎಂದು ತಂದೆಯ
7 ಮನೆಯೊಳಗೆ ಅಣ್ಣನನ್ನು ಬಲವಂತಮಾಡಲು ಅಣ್ಣ
ನು ಹೂಂಕರಿಸಿ ದೇಶದ ವ್ರಣವೈದ್ಯನಾಗಿರುವದಕ್ಕೆ
ನನಗಿಷ್ಟವಿಲ್ಲ, ನನ್ನ ಮನೆಯಲ್ಲಿ ಅನ್ನವೆಲ್ಲಿ, ಅಂಗಿ
ಯೆಲ್ಲಿ? ನನ್ನನ್ನು ಜನದೊಡೆಯನನ್ನಾಗಿ ಮಾಡ
8 ಬೇಡಿರಿ ಎಂದು ಹೇಳುವನು. ಯೆರೂಸಲೇಮು
ಹಾಳಾಯಿತು, ಯೆಹೂದದವರು ಬಿದ್ದುಹೋದರು!
ಅವರ ನಡೆನುಡಿಗಳು ಯೆಹೋವನಿಗೆ ವಿರುದ್ಧವಾಗಿ
ಆತನ ಪ್ರಭಾವದ ದೃಷ್ಟಿಯನ್ನು ಪ್ರತಿಭಟಿಸುತ್ತ

ವಲ್ಲವೆ. ಅವರ ಮುಖಭಾವವೇ ಅವರಿಗೆ ವಿರು
ಸಾಕ್ಷಿಯಾಗಿದೆ; ತಮ್ಮ ಪಾಪವನ್ನು ಮರೆಮಾಜ
ಸೊದೋಮಿನವರಂತೆ ಮೆರೆಯಿಸುತ್ತಾರೆ. ಅಯ್ಯೋ
ಅವರ ಆತ್ಮದ ಗತಿಯೇ! ತಮಗೆ ತಾವೇ ಕೇಡುಮಾ
ಕೊಂಡಿದ್ದಾರೆ. ಶಿಷ್ಟರಿಗೆ ಶುಭವೇ ಎಂದು ಹೇಳಿ
ಅವರು ತಮ್ಮ ಸುಕೃತಫಲವನ್ನು ಅನುಭವಿಸುವರಷ್ಟೆ
ದುಷ್ಟರ ಗತಿಯನ್ನು ಏನು ಹೇಳಲಿ! ಅವರ ಕಾಯ
ಗಳಿಗೆ ತಕ್ಕ ಪ್ರತಿಫಲವು ಅವರಿಗೆ ಲಭಿಸುವದಲ್ಲ
ನನ್ನ ಜನರನ್ನೋ ಬಾಧಿಸುವವರು ಹುಡುಗರು, ಆ
ವವರು ಹೆಂಗಸರು. ನನ್ನ ಜನರೇ! ನಿಮ್ಮನ್ನು ನ
ಸುವವರು ದಾರಿತಪ್ಪಿಸುವವರಾಗಿದ್ದಾರೆ, ನೀವು ನಡೆ
ತಕ್ಕ ದಾರಿಯನ್ನು ಅಳಿಸಿಬಿಟ್ಟಿದ್ದಾರೆ.
ಯೆಹೋವನು ವಾದಿಸುವದಕ್ಕೂ ಜನಗಳ ನ
ಯಾನ್ಯಾಯಗಳನ್ನು ನಿರ್ಣಯಿಸುವದಕ್ಕೂ ಎದ
ನಿಂತಿದ್ದಾನೆ. ಯೆಹೋವನು ತನ್ನ ಜನರ ಹಿರಿ
ರನ್ನೂ ಅಧಿಕಾರಿಗಳನ್ನೂ ನ್ಯಾಯವಿಚಾರಣೆಗೆ ತ
ವನು; ನೀವು ದ್ರಾಕ್ಷೆಯ ತೋಟವನ್ನು ನುಂಗಿಬಿ
ದ್ದೀರಿ; ಬಡವರಿಂದ ಕೊಳ್ಳೆಹೊಡೆದದ್ದು ನಿವ
ಮನೆಗಳಲ್ಲಿಯೇ ಇದೆ; ನೀವು ನನ್ನ ಜನರನ
ಜಜ್ಜಿ ಬಡವರ ಮುಖವನ್ನು ಹಿಂಡುವದೇಕೆ ಎಂದ
ಕರ್ತನಾದ ಸೇನಾಧೀಶ್ವರ ಯೆಹೋವನು ವಾದಿಸ
ವನು.

### ಯೆರೂಸಲೇಮಿನ ಸ್ತ್ರೀಯರ ವಯ್ಯಾರವೂ ಅವರಿಗಾಗುವ ದಂಡನೆಯೂ.

ಇದಲ್ಲದೆ ಯೆಹೋವನು ಹೀಗನ್ನುತ್ತಾನೆ—ಚ
ಯೋನಿನ ಹೆಂಗಸರು ವಯ್ಯಾರವುಳ್ಳವರಾಗಿ ಕತ
ತೂಗುತ್ತಾ ಕಡೆಗಣ್ಣುಹಾಕುತ್ತಾ ಕುಲುಕಿ ಹೆ
ಯಿಡುತ್ತಾ ಕಾಲುಗೆಜ್ಜೆಜಣಜಣಿಸುತ್ತಾ ನಡೆಯ
ವವರಾಗಿರುವದರಿಂದ ಕರ್ತನಾದ ಯೆಹೋವನ
ಅವರ ನಡುನೆತ್ತಿಯನ್ನು ಹುಣ್ಣಿನಿಂದ ಬಾಧಿಸಿ ಅವ
ಮಾನವನ್ನು ಬೈಲುಮಾಡುವನು. ಆ ದಿನದ
ಕರ್ತನು ಅವರ ಅಂದುಗೆ, 3)ತುರುಬು ಬಲೆ, ಅರ್ಧ
ಚಂದ್ರ, ಜುಮುಕಿ, ಬಳೆ, ಮುಸುಕು, ಮುಂಡಾಸ, 1
ಕಾಲಸರಪಣಿ, ನಡುಕಟ್ಟು, ಗಂಧದ ಡಬ್ಬಿ, ತಾಯಿ
ಮುದ್ರಿಕೆ, ಮೂಗುತಿ, ಹಬ್ಬದ ಬಟ್ಟೆ, ಮೇಲಂಗಿ, 2
ಶಾಲು, ಚೀಲ, ಕೈಗನ್ನಡಿ, ನಾರುಮಡಿ, ಶಿರೋ
ವೇಷ್ಟನ, ಮೇಲ್ಹೊದಿಕೆ, ಈ ಭೂಷಣಗಳನ್ನೆಲಾ
ತೆಗೆದುಹಾಕುವನು. ಮತ್ತು ಸುಗಂಧಕ್ಕೆ ಬದಲಾ
ಕೊಳೆ, ನಡುಪಟ್ಟಿಯಿದ್ದಲ್ಲಿ ಹಗ್ಗ, ಅಂದವಾ
ಸೆಕ್ಕಿದ ಜಡೆಯ ಸ್ಥಾನದಲ್ಲಿ ಬೋಡು, ನಡುವಿ
ಶಲ್ಯಕ್ಕೆ ಪ್ರತಿಯಾಗಿ ಗೋಣೀಪಟ್ಟೆ, ಬೆಡಗಿಗೆ ಬ
ಲಾಗಿ ಬರೆ, ಇವು ಆಗುವವು. [ಚೀಯೋನ್ ನ
ರಿಯೇ,] ನಿನ್ನ ವೀರರು ಖಡ್ಗದಿಂದ ಬಿದ್ದುಹೋಗ
ವರು, ನಿನ್ನ ಶೌರ್ಯವು ಯುದ್ಧದಲ್ಲಿ ಅಡಗುವದು
ಅವಳ ಪುರದ್ವಾರಗಳಲ್ಲಿ ಪ್ರಲಾಪವೂ ದುಃಖನ
ತುಂಬಿರುವವು; ಅವಳು ಹಾಳಾಗಿ ನೆಲದ ಮೇ

1) ಮೂಲ: ತಾರ್ಷೀಷ್. 2) ಅಥವಾ: ಶಿಲ್ಪನಿಪುಣ. 3) ಅಥವಾ: ಹಣೆಯ ಪಟ್ಟಿ.

4 1 ಕೂತುಬಿಡುವಳು. ಆ ದಿನದಲ್ಲಿ ಏಳು ಮಂದಿ
ಹೆಂಗಸರು ಒಬ್ಬ ಗಂಡಸನ್ನು ಹಿಡಿದು ಸ್ವಂತವಾಗಿ
ದುಡಿದ ಅನ್ನವನ್ನು ಉಣ್ಣುವೆವು, ನಾವೇ ಸಂಪಾದಿಸಿದ
ಬಟ್ಟೆಯನ್ನು ಉಟ್ಟುಕೊಳ್ಳುವೆವು; ನಿನ್ನ ಹೆಸರು
ಮಾತ್ರ ನಮಗಿದ್ದರೆ ಸಾಕು; ನಮ್ಮ ಅವಮಾನವನ್ನು
ನೀಗಿಸಿಬಿಡು ಎಂದು ಕೇಳಿಕೊಳ್ಳುವರು.

ಚೀಯೋನಿನ ಮುಂದಣ ಸ್ಥಿತಿ.

2 ಆ ದಿನದಲ್ಲಿ 1)ಯೆಹೋವನು ಪಯಪಾಲಿಸುವ ಬೆಳೆ
ಯಿಂದ ಇಸ್ರಾಯೇಲ್ಯರಲ್ಲಿ ಉಳಿದವರಿಗೆ ಸೌಂದ
ರ್ಯವೂ ಮಹಿಮೆಯೂ ಉಂಟಾಗುವವು, ದೇಶದ
ಫಲದಿಂದ ಉನ್ನತಿಯೂ ಭೂಷಣವೂ ಲಭಿಸುವವು.
3 2)ಮತ್ತು ಚೀಯೋನಿನಲ್ಲಿ ಉಳಿದವರು, ಯೆರೂಸಲೇ
ಮಿನಲ್ಲಿ ನಿಂತವರು, ಅಂತು ಜೀವಬಾಧ್ಯರ ಪಟ್ಟಿ
ಯಲ್ಲಿ ಹೆಸರುಬಿದ್ದ ಯೆರೂಸಲೇಮಿನವರೆಲ್ಲರೂ
4 ದೇವರ ಜನರೆನಿಸಿಕೊಳ್ಳುವರು. ಆಗ ಕರ್ತನಾದ
ಯೆಹೋವನು ನ್ಯಾಯತೀರ್ಪಿನ ಆತ್ಮದಿಂದಲೂ
ದಹಿಸುವ ಆತ್ಮದಿಂದಲೂ ಚೀಯೋನಿನ ಸ್ತ್ರೀಯರ
ಕಲ್ಮಷವನ್ನೂ ಯೆರೂಸಲೇಮಿನ ಮಧ್ಯದಲ್ಲಿನ ರಕ್ತವ
5 ನ್ನೂ ತೊಳೆದುಬಿಟ್ಟ ಮೇಲೆ ಚೀಯೋನ್ ಪರ್ವತದ
ಸಂಪೂರ್ಣ ಮಂದಿರದ ಮೇಲೆಯೂ ಅಲ್ಲಿನ ಕೂಟಗಳ
ಮೇಲೆಯೂ ಹಗಲಲ್ಲಿ ಧೂಮಮೇಘವನ್ನು, ಇರುಳಲ್ಲಿ
ಪ್ರಜ್ವಲಿಸುವ ಅಗ್ನಿಯ ಪ್ರಕಾಶವನ್ನು, ಉಂಟು
ಮಾಡುವನು. [ಈ] ಪ್ರಭಾವದ ಮೇಲೆಲ್ಲಾ ಆವರಣ
6 ವಿರುವದು. ಹಗಲಿನ ಬಿಸಿಲಲ್ಲಿ ನೆರಳನ್ನೂ ಸಣ್ಣ
ದೊಡ್ಡ ಮಳೆಗಳಲ್ಲಿ ಆಶ್ರಯವನ್ನೂ ಕೊಡುವ
ಮಂಟಪವಿರುವದು.

ಯೆಹೋವನ ದ್ರಾಕ್ಷೆಯ ತೋಟ.

5 ನನ್ನ ಪ್ರಿಯನನ್ನೂ ಅವನ ತೋಟವನ್ನೂ ಕುರಿತ
ನನ್ನ ಪ್ರಿಯನ ಒಂದು ಗೀತವನ್ನು ನಾನು ಹಾಡುವೆ,
ಕೇಳಿರಿ. ಸಾರವತ್ತಾದ ಗುಡ್ಡದ ಮೇಲೆ ನನ್ನ ಪ್ರಿಯ
2 ನಿಗೆ ದ್ರಾಕ್ಷೆಯ ತೋಟವಿತ್ತು. ಅವನು ಅದನ್ನು
ಅಗತೆಮಾಡಿ ಕಲ್ಲುಗಳನ್ನು ತೆಗೆದುಹಾಕಿ ಒಳ್ಳೊಳ್ಳೇ
ದ್ರಾಕ್ಷೆಯ ಸಸಿಗಳನ್ನು ನೆಟ್ಟು ಮಧ್ಯದಲ್ಲಿ ಬುರು
ಜನ್ನು ಕಟ್ಟಿ ದ್ರಾಕ್ಷೆಯ ತೊಟ್ಟಿಯನ್ನು ಕೊರೆಯಿಸಿ
ಮಾಡಿಕೊಂಡು ತೋಟವು [ಒಳ್ಳೇ] ದ್ರಾಕ್ಷೆಯ
ಹಣ್ಣನ್ನು ಕೊಡುವದೆಂದು ಎದುರುನೋಡುತ್ತಿರಲು
3 ಅದು ಹೊಲಸುಹಣ್ಣನ್ನು ಬಿಟ್ಟಿತು. ಯೆರೂಸಲೇಮಿನ
ನಿವಾಸಿಗಳೇ, ಯೆಹೂದದ ಜನರೇ, ಈಗ ನನಗೂ
4 ನನ್ನ ತೋಟಕ್ಕೂ ನ್ಯಾಯತೀರಿಸಿರಿ, ನನ್ನ ತೋಟ
ದಲ್ಲಿ ಹಿಂದೆ ನಾನು ಮಾಡಿದ್ದಕ್ಕಿಂತಲೂ ಇನ್ನೇನು
ಮಾಡಬೇಕಾಗಿತ್ತು? ಅದು [ಒಳ್ಳೇ] ದ್ರಾಕ್ಷೆಯನ್ನು
ಕೊಡುವದೆಂದು ನಾನು ನಿರೀಕ್ಷಿಸುತ್ತಿರಲು ಏಕೆ
ಹೊಲಸುಹಣ್ಣನ್ನು ಬಿಟ್ಟಿತು? ನನ್ನ ತೋಟವನ್ನು 5
ಏನು ಮಾಡುವೆನೋ ಈಗ ನಿಮಗೆ ತಿಳಿಸುವೆನು,
ಕೇಳಿರಿ; ಅದರ ಬೇಲಿಯನ್ನು ಕೀಳುವೆನು, ದನವು
ಅದನ್ನು ಮೇಯ್ದುಬಿಡುವದು; ಅದರ ಗೋಡೆಯನ್ನು
ಕೆಡವಿಹಾಕುವೆನು, ಅದು ತುಳಿದಾಟಕ್ಕೆ ಈಡಾಗು
ವದು. ಅದನ್ನು ಹಾಳುಮಾಡುವೆನು, ಯಾರೂ ಕುಡಿ 6
ಕತ್ತರಿಸಿ ಅಗತೆಮಾಡುವದಿಲ್ಲ; ಅದರಲ್ಲಿ ಮುಳ್ಳು
ಗಿಳ್ಳು ಬೆಳೆದುಹೋಗುವದು; ಮತ್ತು ಅದರ ಮೇಲೆ
ಮಳೆಸುರಿಸಬಾರದೆಂದು ಮೇಘಗಳಿಗೆ ಅಪ್ಪಣೆಮಾ
ಡುವೆನು. ಸೇನಾಧೀಶ್ವರನಾದ ಯೆಹೋವನ ದ್ರಾಕ್ಷೆ 7
ಯ ತೋಟವು ಇಸ್ರಾಯೇಲ್ಯರ ಮನೆತನ, ಯೆಹೂ
ದದ ಜನವೋ ಆತನ ಇಷ್ಟದ 3)ಗಿಡವೇ; ಆತನು
ನ್ಯಾಯವನ್ನು ನಿರೀಕ್ಷಿಸಿದಾಗ ಆಹಾ, ಸಿಕ್ಕಿದ್ದು ನರ
ಹತ್ಯವೇ; ಧರ್ಮವನ್ನು ಎದುರುನೋಡಿದಾಗ ಆಹಾ,
ದೊರಕಿದ್ದು ಅರಚಾಟವೇ.

ಆರು ಬಗೆಯ ಪಾಪಿಗಳಿಗೆ ಆಗುವ ದುರವಸ್ಥೆ.

ಅಯ್ಯೋ, ಮನೆಗೆ ಮನೆಯನ್ನೂ ಹೊಲಕ್ಕೆ ಹೊಲ 8
ವನ್ನೂ ಸೇರಿಸಿಕೊಳ್ಳುತ್ತಾ ಬಂದು ಇತರರಿಗೆ ಸ್ವಲ್ಪ
ಸ್ಥಳವನ್ನೂ ಬಿಡದೆ ದೇಶದ ಮಧ್ಯದಲ್ಲಿ ತಾವೇ
ತಾವಾಗಿ ವಾಸಿಸುವವರ ಗತಿಯನ್ನು ಏನು ಹೇಳಲಿ!
ನನ್ನ ಕಿವಿಯಲ್ಲಿ ಸೇನಾಧೀಶ್ವರನಾದ ಯೆಹೋವನ 9
ಒಂದು ಮಾತು ಬಿದ್ದಿತು, ನೋಡಿರಿ—ಸೊಗಸಾದ
ಅನೇಕ ದೊಡ್ಡ ಮನೆಗಳು ವಾಸಿಸುವವರೇ ಇಲ್ಲದೆ
ಖಂಡಿತವಾಗಿ ಹಾಳಾಗುವವು. ಏಕಂದರೆ ಹತ್ತು 10
ಎಕರೆ ಬಾಗಾಯಿತು ಭೂಮಿಯು ನಾಲ್ಕು ಕೊಳಗ
ದಷ್ಟೇ ದ್ರಾಕ್ಷಾರಸವನ್ನೀಯುವದು, ಬಿತ್ತಿದ ಒಂದು
ಕಂಡುಗ ಬೀಜದಿಂದ ಇಕ್ಕಳ ದವಸವು ಬರುವದು.
ಅಯ್ಯೋ, ಮದ್ಯದ ಗೀಳಿನಿಂದಲೇ ಮುಂಜಾನೆ 11
ಎದ್ದು ಸಂಜೆಯಾದ ಮೇಲೆಯೂ ದ್ರಾಕ್ಷಾರಸದಿಂದ
ಅಮಲೇರಿದವರಾಗಿ ಕಾಲಕಳೆಯುವವರ ಪಾಡು
ಏನು ಹೇಳಲಿ! ಕಿನ್ನರಿ, ವೀಣೆ, ದಮ್ಮಡಿ, ಕೊಳಲು, 12
ದ್ರಾಕ್ಷಾರಸ ಇವುಗಳೇ ಅವರ ಔತಣಗಳ ಸೊಬಗು;
ಯೆಹೋವನ ಕೆಲಸವನ್ನೋ ಅವರು ಲಕ್ಷಿಸರು,
ಆತನ ಹಸ್ತಕಾರ್ಯವನ್ನು ಆಲೋಚಿಸರು. ಆದ 13
ಕಾರಣ ನನ್ನ ಜನರು ಜ್ಞಾನಹೀನರಾಗಿ ಸೆರೆಗೆ
ಹೋಗುವದು ಖಂಡಿತ; ಘನವಂತರು ಹಸಿಯುವರು,
ಸಾಮಾನ್ಯರು ಬಾಯಾರುವರು. ಮತ್ತು ಪಾತಾಳವು 14
ಹೆಚ್ಚು ಆತುರದಿಂದ ಅಪಾರವಾಗಿ ಬಾಯಿತೆರೆಯಲು
ಅವರ ಮಹಿಮೆ, ಕೋಲಾಹಲ, ಗದ್ದಲ, ಉಲ್ಲಾಸ
ಇವೆಲ್ಲಾ [ಅದರೊಳಗೆ] ಬಿದ್ದುಹೋಗುವವು. ಕುಲ 15
ಹೀನರು ಬೊಗ್ಗುವರು, ಕುಲೀನರು ಕುಗ್ಗುವರು,
ಉನ್ನತರ ದೃಷ್ಟಿಯು ತಗ್ಗುವದು. ಸೇನಾಧೀಶ್ವರ 16
ನಾದ ಯೆಹೋವನೋ ನ್ಯಾಯತೀರಿಸುವದರಲ್ಲಿ ಉನ್ನ
ತೋನ್ನತನಾಗಿ ಕಾಣಿಸಿಕೊಳ್ಳುವನು; ಪರಿಶುದ್ಧನಾದ

---

1) ಅಥವಾ: ಯೆಹೋವನ ಚಿಗುರಿನಿಂದ. 2) ವ. ೩—೫.) ಅಥವಾ: ಮತ್ತು ಯೆಹೋವನು ನ್ಯಾಯತೀರ್ಪಿನ . . . . ತೊಳೆದು ಬಿಟ್ಟಮೇಲೆ ಚೀಯೋನಿನಲ್ಲಿ ಉಳಿದವರು . . . . ದೇವರ ಜನರೆನಿಸಿಕೊಳ್ಳುವರು. ಆಗ ಚೀಯೋನ್ ಪರ್ವತದ . . . . . .
3) ಅಥವಾ: ವನವೇ.

ದೇವರು ಧರ್ಮವನ್ನು ನಡಿಸುವದರಲ್ಲಿ ಪರಿಶುದ್ಧನೆನಿ
ಸಿಕೊಳ್ಳುವನು.
17 ಪುಷ್ಟರ ಪ್ರದೇಶಗಳು ಹಾಳಾಗಿ 1)ಪಶುಪಾಲಕರಿಗೆ
ಜೀವನಕ್ಕಾಗುವವು, ಹುಲ್ಲುಗಾವಲಂತೆ ಕುರಿಗಳು
ಅಲ್ಲಿ ಮೇಯುವವು.
18 ಅಯ್ಯೋ, ಅಕಾರ್ಯಗಳೆಂಬ ಹಗ್ಗಗಳಿಂದ 2)ಅಪ
ರಾಧ ದಂಡನೆಯನ್ನು, ತೇರನ್ನು ಹೊರಜಿಯಿಂದಲೋ
ಎಂಬಂತೆ 3)ಪಾಪದ ಫಲವನ್ನು ತಮ್ಮ ಕಡೆಗೆ
19 ಎಳೆದುಕೊಳ್ಳುತ್ತಾ ಆತನು ತ್ವರೆಪಡಲಿ, ನಾವು
ಆತನ ಕೆಲಸವನ್ನು ನೋಡಬೇಕು, ಅದನ್ನು ಬೇಗನೆ
ನಡಿಸಲಿ, ಇಸ್ರಾಯೇಲ್ಯರ ಸದಮಲಸ್ವಾಮಿಯ ಉದ್ದೇ
ಶವನ್ನು ನಾವು ತಿಳಿಯಬೇಕು, ಅದು ಸಮೀಪಿಸಿ
ಬರಲಿ ಎಂದು ನುಡಿಯುವವರ ದುರವಸ್ಥೆಯನ್ನು ಏನು
ಹೇಳಲಿ!
20 ಅಯ್ಯೋ, ಕೆಟ್ಟದ್ದನ್ನು ಒಳ್ಳೇದೆಂದೂ ಒಳ್ಳೇದನ್ನು
ಕೆಟ್ಟದ್ದೆಂದೂ ಬೋಧಿಸಿ ಕತ್ತಲನ್ನು ಬೆಳಕೆಂದೂ
ಬೆಳಕನ್ನು ಕತ್ತಲೆಂದೂ ಸಾಧಿಸಿ ಕಹಿಯು ಸಿಹಿ,
ಸಿಹಿಯು ಕಹಿ ಎಂದು ಸ್ಥಾಪಿಸುವವರ ಗತಿಯನ್ನು
ಏನೆಂದು ಹೇಳಲಿ!
21 ಅಯ್ಯೋ, ತಮ್ಮಲ್ಲಿ ತಾವೇ ಜ್ಞಾನಿಗಳೆಂದೂ
ಸ್ವಂತ ಗಣನೆಯಲ್ಲಿ ವಿವೇಕಿಗಳೆಂದೂ ಭಾವಿಸಿಕೊಳ್ಳು
ವವರ ಪಾಡು ಏನು ಹೇಳಲಿ!
22 ಅಯ್ಯೋ, ಸುರಾಪಾನದಲ್ಲಿ ಶೂರರೂ ಮದ್ಯ
23 ಮಿಶ್ರಣದಲ್ಲಿ ಸಾಹಸಿಗಳೂ ಆಗಿ ಲಂಚಕ್ಕೋಸ್ಕರ
ದೋಷಿಗಳನ್ನು ನಿರ್ದೋಷಿಗಳೆಂದು ತೀರ್ಪುಮಾಡಿ
ನ್ಯಾಯವಂತರ ನ್ಯಾಯವನ್ನು ಹಾಳುಮಾಡುವವರ
24 ಗತಿಯನ್ನು ಏನೆಂದು ಹೇಳಲಿ! ಅವರು ಸೇನಾ
ಧೀಶ್ವರನಾದ ಯೆಹೋವನ ಉಪದೇಶವನ್ನು ನಿರಾ
ಕರಿಸಿ ಇಸ್ರಾಯೇಲ್ಯರ ಸದಮಲಸ್ವಾಮಿಯ ವಾಕ್ಯ
ವನ್ನು ಅಸಡ್ಡೆಮಾಡಿದ್ದರಿಂದ ಅಗ್ನಿಯ ನಾಲಿಗೆಗಳು
ಒಣಕೂಳೆಯನ್ನು ನುಂಗಿಬಿಡುವ ಹಾಗೂ ಒಣ
ಹುಲ್ಲು ಬೆಂಕಿಯಲ್ಲಿ ಕುಗ್ಗುವಂತೆಯೂ ಅವರ ಬೇರು
ಕೊಳೆತು ಅವರ ಹೂವು ದೂಳಾಗಿ ತೂರಿಹೋಗು
ವದು.

ಯೆಹೋವನು ತನ್ನ ಜನರನ್ನು ದಂಡಿಸಲು ಶತ್ರುಗಳನ್ನು
ಬರಮಾಡುವದು.

25 ಹೀಗಿರಲು ಯೆಹೋವನು ತನ್ನ ಜನರಲ್ಲಿ ಉರಿ
ಗೊಂಡು ಅವರ ಮೇಲೆ ಕೈಯೆತ್ತಿ ಅವರನ್ನು ಹೊಡೆದು
4)ಬಿಡುವನು; ಆಗ ಬೆಟ್ಟಗಳು ನಡಗುವವು, ಹೆಣ
ಗಳು ಬೀದಿಗಳಲ್ಲಿ ಕಸವಾಗಿ ಬಿದ್ದಿರುವವು. ಇಷ್ಟೆಲ್ಲಾ
ನಡೆದರೂ ಆತನ ಕೋಪವು ತೀರದೆ ಕೈಯೆತ್ತಿಯೇ ಇರು
26 ವದು. ಆತನು ದೂರದ ಜನಾಂಗದವರಿಗೆ ಗುರುತಾಗಿ
ಧ್ವಜವೆತ್ತಿ ಅವರನ್ನು ಭೂಲೋಕದ ಅಂಚಿನಲ್ಲಿಂದ ಸಿಳ್ಳು
ಹಾಕಿ ಕರೆಯುವನು; ಇಗೋ, ತ್ವರೆಪಟ್ಟು ವೇಗವಾಗಿ
ಬರುತ್ತಾರೆ! ಅವರಲ್ಲಿ ಯಾರೂ ಬಳಲಿ ಮುಗ್ಗರಿ 2
ಸರು, ಯಾರೂ ತೂಕಡಿಸಿ ನಿದ್ರಿಸರು; ಅವರ ನಡು
ಕಟ್ಟು ಬಿಚ್ಚಿಲ್ಲ, ಅವರ ಕೆರದ ಬಾರ ಕಿತ್ತಿಲ್ಲ; ಅವರ 2
ಅಂಬುಗಳು ಮೊನೆಯಾಗಿವೆ, ಬಿಲ್ಲುಗಳು ಬಿಗಿದಿವೆ;
ಕುದುರೆಗಳ ಗೊರಸೆಗಳು ಕಲ್ಲಿನಂತಿವೆ; ಚಕ್ರಗಳು
ಬಿರುಗಾಳಿಯಂತೆ ರಭಸವಾಗಿವೆ; ಸಿಂಹದಂತೆ ಗರ್ಜಿ 2
ಸುತ್ತಾರೆ, ಪ್ರಾಯದ ಸಿಂಹಗಳ ಹಾಗೆ ಆರ್ಭಟಿಸು
ತ್ತಾರೆ, ಗುರುಗುಟ್ಟುತ್ತಾ ಬೇಟೆಹಿಡಿದು ಹೊತ್ತು
ಕೊಂಡು ಹೋಗುತ್ತಾರೆ, ರಕ್ಷಿಸುವವರು ಯಾರೂ
ಇಲ್ಲ. ಸಮುದ್ರವು ಘೋರ್ಗರೆಯುವಂತೆ ಆ ದಿನದಲ್ಲಿ
ಇವರು ಯೆಹೂದ್ಯರ ಮೇಲೆ ಗುರುಗುಟ್ಟುವರು; ದೇಶ
ದಲ್ಲಿಯೋ, ಆಹಾ, ಅಂಧಕಾರವೂ ವ್ಯಾಕುಲವೂ ತುಂಬಿ
ರುವವು, ಮೋಡ ಕವಿದು ಬೆಳಕು ಕತ್ತಲಾಗುವದು.

ಯೆಹೋವನು ಯೆಶಾಯನನ್ನು ಪ್ರವಾದಿಯನ್ನಾಗಿ
ನೇಮಿಸಿದ್ದು.

ಅರಸನಾದ ಉಜ್ಜೀಯನು ಕಾಲವಾದ ವರುಷ
ದಲ್ಲಿ ಕರ್ತನು 5)ಉನ್ನತೋನ್ನತ ಸಿಂಹಾಸನಾರೂಢನಾ
ಗಿರುವದನ್ನು ಕಂಡೆನು. ಆತನ ವಸ್ತ್ರದ ನೆರಿಗೆಯು
ಮಂದಿರದಲ್ಲೆಲ್ಲಾ ಹರಡಿತ್ತು. ಆತನ ಸುತ್ತ 6)ಸೆರಾಫಿ
ಯರು ಇದ್ದರು; ಪ್ರತಿಯೊಬ್ಬನು ಆರಾರು ರೆಕ್ಕೆ
ಯುಳ್ಳವನಾಗಿ ಎರಡರಿಂದ ತನ್ನ ಮುಖವನ್ನು, ಎರಡ
ರಿಂದ ತನ್ನ ಕಾಲುಗಳನ್ನು ಮುಚ್ಚಿಕೊಂಡು ಎರಡನ್ನು
ಬಡಿಯುತ್ತಾ ನೆಲಸೋಕದೆ ನಿಂತಿದ್ದನು. ಆಗ
ಒಬ್ಬನು ಮತ್ತೊಬ್ಬನಿಗೆ—ಸೇನಾಧೀಶ್ವರನಾದ ಯೆ
ಹೋವನು ಪರಿಶುದ್ಧನು, ಪರಿಶುದ್ಧನು, ಪರಿಶುದ್ಧನು;
ಭೂಮಂಡಲವೆಲ್ಲಾ ಆತನ ಪ್ರಭಾವದಿಂದ ತುಂಬಿದೆ
ಎಂದು ಕೂಗಿ ಹೇಳಿದನು. ಕೂಗುವವನ ಶಬ್ದಕ್ಕೆ
ದ್ವಾರದ ಅಸ್ತಿವಾರವು ಕದಲಿತು; ಧೂಮವು ಮಂದಿರ
ದಲ್ಲೆಲ್ಲಾ ತುಂಬಿತು.
ಆಗ ನಾನು—ಅಯ್ಯೋ, ನನ್ನ ಗತಿಯನ್ನು ಏನು
ಹೇಳಲಿ! ನಾಶವಾದೆನಲ್ಲಾ; ನಾನು ಹೊಲಸು
ತುಟಿಯವನು, ಹೊಲಸುತುಟಿಯವರ ಮಧ್ಯದಲ್ಲಿ
ವಾಸಿಸುವವನು; ಇಂಥ ನನ್ನ ಕಣ್ಣುಗಳು ರಾಜಾ
ಧಿರಾಜನನ್ನು, ಸೇನಾಧೀಶ್ವರನಾದ ಯೆಹೋವನನ್ನು
ಕಂಡವು ಎಂದು ಕೂಗಿಕೊಳ್ಳಲು ಸೆರಾಫಿಯರಲ್ಲಿ
ಒಬ್ಬನು ಯಜ್ಞವೇದಿಯಿಂದ ತಾನು ತಂಡಸದಲ್ಲಿ
ತೆಗೆದ ಕೆಂಡವನ್ನು ಕೈಯಲ್ಲಿ ಹಿಡಿದುಕೊಂಡು ನನ್ನ
ಬಳಿಗೆ ಹಾರಿ ಬಂದು ನನ್ನ ಬಾಯಿಗೆ ಮುಟ್ಟಿಸಿ—
ಇಗೋ, ಇದು ನಿನ್ನ ತುಟಿಗಳಿಗೆ ತಗಲಿತು; ನಿನ್ನ
ದೋಷವು ನೀಗಿತು, ನಿನ್ನ ಪಾಪಕ್ಕೆ ಪ್ರಾಯಶ್ಚಿತ್ತ
ವಾಯಿತು ಅಂದನು. ಆಗ, ಯಾವನನ್ನು ಕಳು
ಹಿಸಲಿ, ಯಾವನು ನಮಗೋಸ್ಕರ ಹೋಗುವನು
ಎಂಬ ಕರ್ತನ ನುಡಿಯನ್ನು ಕೇಳಿ, ಇಗೋ,
ನಾನಿದ್ದೇನೆ, ನನ್ನನ್ನು ಕಳುಹಿಸು ಅಂದೆನು. ಅದಕ್ಕೆ

1) ಮೂಲ: ಪ್ರವಾಸಿಗಳಿಗೆ. ಪಾಠಾಂತರ: ಮೇಕೆಮರಿಗಳಿಗೆ. 2) ಅಥವಾ: ಅಪರಾಧವನ್ನು, 3) ಅಥವಾ: ಪಾಪವನ್ನು. 4) ಅಥವಾ: . . . ಬಿಟ್ಟನು. . . . . ನಡುಗಿದವು . . . . ಬಿದ್ದಿದ್ದವು. 5) ಅಥವಾ: ಸಿಂಹಾಸನಾರೂಢನಾಗಿ ಉನ್ನತೋನ್ನತನಾಗಿರು
ವದನ್ನು. 6) ಅಥವಾ: ಅಗ್ನಿರೂಪದೂತರು.

ಆತನು—ನೀನು ಈ ಜನರ ಬಳಿಗೆ ಹೋಗಿ—ನೀವು
ಕಿವಿಯಾರೆ ಕೇಳಿದರೂ ತಿಳಿಯಬಾರದು, ಕಣ್ಣಾರೆ
10 ಕಂಡರೂ ಗ್ರಹಿಸಬಾರದು ಎಂದು ತಿಳಿಸಿ, ಕಣ್ಣಿ
ನಿಂದ ಕಂಡು ಕಿವಿಯಿಂದ ಕೇಳಿ ಹೃದಯದಿಂದ
ಗ್ರಹಿಸಿ ನನ್ನ ಕಡೆಗೆ ತಿರುಗಿಕೊಂಡು ನನ್ನಿಂದ ಸ್ವಸ್ಥತೆ
ಯನ್ನು ಹೇಗೂ ಹೊಂದದ ಹಾಗೆ ಈ ಜನರ
ಹೃದಯಕ್ಕೆ ಕೊಬ್ಬೇರಿಸಿ ಕಿವಿಯನ್ನು ಮಂದಮಾಡಿ
ಕಣ್ಣಿಗೆ ಅಂಟುಬಳಿ ಎಂದು ನನಗೆ ಹೇಳಿದನು.
11 ಅದಕ್ಕೆ ನಾನು—ಕರ್ತನೇ, ಇದು ಎಂದಿನ ತನಕ?
ಎಂದು ಕೇಳಲು ಆತನು—ಯೆಹೋವನು ಜನರನ್ನು
12 ದೂರ ತೊಲಗಿಸಿ ದೇಶದಲ್ಲಿ ಹಾಳು ಹೆಚ್ಚಿ ಪಟ್ಟಣ
ಗಳು ಜನರಿಲ್ಲದೆ ಮನೆಗಳು ನಿವಾಸಿಗಳಿಲ್ಲದೆ ಧ್ವಂಸ
ವಾಗಿ ಭೂಮಿಯು ತೀರಾ ಹಾಳಾಗುವ ತನಕ ಹೀಗಿ
13 ರುವದು. ಆಗ ದೇಶದಲ್ಲಿ ಹತ್ತನೆಯ ಒಂದು ಭಾಗ
ಉಳಿದಿದ್ದರೂ ಅದೂ ಕೂಡಾ ನಾಶವಾಗುವದು; ಏಲಾ
ಅಲ್ಲೋನ್ ಮರಗಳನ್ನೂ ಕಡಿದ ಮೇಲೆ ಅವುಗಳ
ಬುಡವು ನಿಲ್ಲುವ ಹಾಗೆ ದೇವಕುಲವು ಮೋಟು
ಬುಡವಾಗಿ ನಿಲ್ಲುವದು ಅಂದನು.

ಒಪ್ಪಂದದಿಂದ ಕೂಡಿದ ಶತ್ರುಗಳಿಗೆ ಭಯಪಡದೆ
ಯೆಹೋವನನ್ನೇ ಆಶ್ರಯಿಸಬೇಕೆಂದು ಯೆಶಾಯನು
ಆಹಾಜನಿಗೆ ಬೋಧಿಸಿ ವರಪುತ್ರಜನನದ ಗುರುತನ್ನು
ಮುಂತಿಳಿಸಿದ್ದು.

7 ಯೋಥಾಮನ ಮಗನೂ ಉಜ್ಜೀಯನ ಮೊಮ್ಮ
ಗನೂ ಯೆಹೂದದ ಅರಸನೂ ಆದ ಆಹಾಜನ ಕಾಲ
ದಲ್ಲಿ ಅರಾಮ್ಯರ ಅರಸನಾದ ರೆಚೀನ, ರೆಮಲ್ಯನ
ಮಗನೂ ಇಸ್ರಾಯೇಲ್ಯರ ಅರಸನೂ ಆದ ಪೆಕಹ
ಎಂಬವರು ಯೆರೂಸಲೇಮಿನ ಮೇಲೆ ದಂಡೆತ್ತಿ
ಬಂದರು. (ಅದನ್ನು ಜಯಿಸುವದಕ್ಕೆ ಆಗಲಿಲ್ಲ.)
2 ಅರಾಮ್ಯರು ಎಫ್ರಾಯಿಮ್ಯರನ್ನು ಹೊಂದಿಕೊಂಡಿದ್ದಾ
ರೆಂಬ ಸುದ್ದಿಯು ಅರಮನೆಗೆ ಮುಟ್ಟಿದಾಗ ಅರ
ಸನ ಮನವೂ ಪ್ರಜೆಯ ಮನವೂ ಗಾಳಿಯಿಂದ ವನ
3 ವೃಕ್ಷಗಳು ಅಲ್ಲಾಡುವಂತೆ ನಡುಗಿದವು. ಆಗ
ಯೆಹೋವನು ಯೆಶಾಯನಿಗೆ ಹೀಗೆ ಹೇಳಿದನು—
[1]ಶೆಯಾರ್ ಯಾಶೂಬನೆಂಬ ನಿನ್ನ ಮಗನನ್ನು
ಕರೆದುಕೊಂಡುಹೋಗಿ ಮಡಿವಾಳರ ಹೊಲದ ಮೇಲೆ
ಹೋಗುವ ರಾಜಮಾರ್ಗದಲ್ಲಿ ಮೇಲಿನ ಕೆರೆಯ ಕಾಲಿ
ವೆಯ ಕೊನೆಯ ಹತ್ತಿರ ಆಹಾಜನನ್ನು ಎದುರು
4 ಗೊಂಡು ಅವನಿಗೆ ಈ ಪ್ರಕಾರ ಹೇಳಬೇಕು—
ಜಾಗರೂಕನಾಗಿ ಸುಮ್ಮನಿರು, ಭಯಪಡಬೇಡ! ರೆಚೀನ
ಅರಾಮ್ಯರು ರೆಮಲ್ಯನ ಮಗ ಇವರ ಕೋಪವು
ಎಷ್ಟು ಹೆಚ್ಚಿದರೂ ಹೊಗೆಯಾಡುವ ಈ ಎರಡು
ಮೋಟುಗೊಳ್ಳಿಗಳಿಗೆ ನಿನ್ನ ಹೃದಯವು ಕುಂದದಿರಲಿ.
5 ಅರಾಮ್ಯರೂ ಎಫ್ರಾಯಿಮ್ಯರೂ ರೆಮಲ್ಯನ ಮಗನೂ
6 ನಿನ್ನ ವಿಷಯವಾಗಿ ದುರಾಲೋಚನೆಮಾಡಿ ಯೆಹೂ
ದದ ಮೇಲೆ ದಂಡೆತ್ತಿ ಹೆದರಿಸಿ ಒಳಗೆ ನುಗ್ಗಿಕೊಂಡು
ಹೋಗಿ ಅದರಲ್ಲಿ ಟಾಬೇಲನ ಮಗನಿಗೆ ಪಟ್ಟಕಟ್ಟೋ
ಣವೆಂದುಕೊಂಡದ್ದರಿಂದ ಕರ್ತನಾದ ಯೆಹೋವನು 7
ಹೇಳುವದೇನಂದರೆ—ಇದು ನೆರವೇರದು, ಆಗುವದೇ
ಇಲ್ಲ. ಅರಾಮಿಗೆ ಶಿರಸ್ಸು ದಮಸ್ಕ, ದಮಸ್ಕಕ್ಕೆ 8
ಶಿರಸ್ಸು ರೆಚೀನನಷ್ಟೆ; ಎಫ್ರಾಯಿಮಿಗೆ ಶಿರಸ್ಸು
ಸಮಾರ್ಯ, ಸಮಾರ್ಯಕ್ಕೆ ಶಿರಸ್ಸು ರೆಮಲ್ಯನ ಮಗ
ನೇ ತಾನೆ. ಅರುವತ್ತೈದು ವರುಷಗಳೊಳಗೆ ಎಫ್ರಾ 9
ಯಿಮ್ಯರು ಭಂಗಪಟ್ಟು ಜನಾಂಗವೆನಿಸಿಕೊಳ್ಳರು.
ನಿಮಗೆ ನಂಬಿಕೆಯು ಸ್ಥಿರವಿಲ್ಲದಿದ್ದರೆ ನಿಮಗೆ ಸ್ಥಿರ
ತೆಯೇ ಇಲ್ಲ ಎಂಬದೇ.
ಮತ್ತೆ ಯೆಹೋವನು ಆಹಾಜನಿಗೆ—ನಿನ್ನ 10, 11
ದೇವರಾದ ಯೆಹೋವನಿಂದ ಒಂದು ಗುರುತನ್ನು
ಕೇಳಿಕೋ; ಅದು ಪಾತಾಳದಷ್ಟು ಆಳದಲ್ಲಿದ್ದರೂ
ಮೇಲಣ ಲೋಕದಷ್ಟು ಎತ್ತರದಲ್ಲಿದ್ದರೂ ಕೇಳಿಕೋ
ಎಂದು ಹೇಳಿದನು. ಆಗ ಆಹಾಜನು, ನಾನು 12
ಕೇಳಿಕೊಳ್ಳುವದೇ ಇಲ್ಲ, ಯೆಹೋವನನ್ನು ಪರೀಕ್ಷಿ
ಸುವದಿಲ್ಲ ಅಂದನು. ಅದಕ್ಕೆ [ಯೆಶಾಯನು] 13
ಹೀಗೆ ಹೇಳಿದನು—ದಾವೀದನ ಮನೆತನದವರೇ,
ಕೇಳಿರಿ! ಮನುಷ್ಯರನ್ನು ಬೇಸರಗೊಳಿಸುವದು ಅಷ್ಟು
ದೊಡ್ಡದಲ್ಲವೆಂದೆಣಿಸಿ ನನ್ನ ದೇವರನ್ನೂ ಬೇಸರ
ಗೊಳಿಸುವಿರಾ? ಇದರಿಂದ ಕರ್ತನು ತಾನೇ ನಿಮಗೆ 14
ಒಂದು ಗುರುತನ್ನು ಕೊಡುವನು. ಇಗೋ, ಒಬ್ಬ
ತರುಣಿಯು ಗರ್ಭಿಣಿಯಾಗಿ ಮಗನನ್ನು ಹಡೆದು
ಅವನಿಗೆ [2]ಇಮ್ಮಾನುವೇಲ್ ಎಂದು ಹೆಸರಿಡುವಳು.
ಅವನು ಕೆಟ್ಟದ್ದು ಬೇಡ, ಒಳ್ಳೇದು ಬೇಕು ಅನ್ನು 15
ವಷ್ಟು ಬಲ್ಲವನಾಗುವಾಗ ಮೊಸರನ್ನೂ ಜೇನುತುಪ್ಪ
ವನ್ನೂ ತಿನ್ನುವನು. ಆ ಮಗುವು ಕೆಟ್ಟದ್ದು ಬೇಡ, 16
ಒಳ್ಳೇದು ಬೇಕು ಅನ್ನುವಷ್ಟು ಬಲ್ಲವನಾಗುವದರೊ
ಳಗೆ, ಯಾವ ಇಬ್ಬರು ರಾಜರಿಗೆ ನೀನು ಹೆದರಿ ನಡು
ಗುತ್ತೀಯೋ ಅವರ ದೇಶವು ನಿರ್ಜನವಾಗುವದು.
ಮತ್ತು ಯೆಹೂದದಿಂದ ಎಫ್ರಾಯಿಮು ಅಗಲಿದಂದಿ 17
ನಿಂದ ಈಚೆಗೆ ಸಂಭವಿಸದ ದುಷ್ಕಾಲವನ್ನು ಯೆಹೋ
ವನು ನಿನ್ನ ಮೇಲೂ ನಿನ್ನ ಪ್ರಜೆಯ ಮೇಲೂ ನಿನ್ನ
ತಂದೆಯ ಮನೆತನದ ಮೇಲೂ ಬರಮಾಡುವನು;
ಆ ದುಷ್ಕಾಲವು ಅಶ್ಶೂರದ ಅರಸೇ.
ಆ ಕಾಲದಲ್ಲಿ ಐಗುಪ್ತದ ನದಿಗಳ ಕಟ್ಟಕಡೆಯ 18
ಲ್ಲಿನ ನೊಣಗಳೂ ಅಶ್ಶೂರ್ ದೇಶದ ತುಂಬಿಗಳೂ
ಬರಲೆಂದು ಯೆಹೋವನು ಸಿಳ್ಳುಹಾಕುವನು. ಅವೆ 19
ಲ್ಲಾ ಬಂದು ಕಡಿದಾದ ದೊಂಗರಗಳಲ್ಲಿಯೂ ಬಂಡೆ
ಗಳ ಸಂದುಗೊಂದುಗಳಲ್ಲಿಯೂ ಎಲ್ಲಾ ಮುಳ್ಳು
ಪೊದೆಗಳಲ್ಲಿಯೂ ಗೋಮಾಳಗಳಲ್ಲಿಯೂ ಮುತ್ತಿ
ಕೊಳ್ಳುವವು.
ಆಗ ಕರ್ತನು ಯೂಫ್ರೇಟೀಸ್ ನದಿಯ ಆಚೆಗಿ 20
ರುವ ಅಶ್ಶೂರದ ರಾಜನೆಂಬ ಬಾಡಿಗೆಯ ಕ್ಷೌರದ
ಕತ್ತಿಯಿಂದ [ಯೆಹೂದದ] ತಲೆಯನ್ನೂ ಕಾಲಕೂದ
ಲನ್ನೂ ಬೋಳಿಸುವನು; ಅದು ಗಡ್ಡವನ್ನು ಸಹ
ತೆಗೆದುಬಿಡುವದು.

1) ಶೆಯಾರ್ ಯಾಶೂಬ್ ಅಂದರೆ ಜನಶೇಷವು ತಿರುಗಿಕೊಳ್ಳುವದು. 2) ಇಮ್ಮಾನುವೇಲ್ ಅಂದರೆ ದೇವರು ನಮ್ಮ ಕೂಡ ಇದ್ದಾನೆ.

21 ಆ ಕಾಲದಲ್ಲಿ ಯಾವನೇ ಆಗಲಿ ಹಸುವಿನ ಕಡ
22 ಸನ್ನೂ ಎರಡು ಕುರಿಗಳನ್ನೂ ಸಾಕಿ ಅವು ಕರೆಯುವ
ಹೆಚ್ಚು ಹಾಲಿನಿಂದ ಮೊಸರನ್ನು ತಿನ್ನುವನು; ದೇಶ
ದಲ್ಲಿ ಉಳಿದ ಪ್ರತಿಯೊಬ್ಬನೂ ಮೊಸರುಜೇನುಗಳ
23 ನ್ನೇ ಉಂಡು ಜೀವಿಸುವನು. ಆಗ ಸಾವಿರ ರೂಪಾಯಿ
ಬೆಲೆಯ ಸಹಸ್ರ ದ್ರಾಕ್ಷೆಯ ಬಳ್ಳಿಗಳು ಬೆಳೆಯುವ
ಪ್ರತಿಯೊಂದು ಪ್ರದೇಶದಲ್ಲಿಯೂ ಮುಳ್ಳುಗಿಳ್ಳು
24 ಮುಚ್ಚಿಕೊಂಡು ಹೋಗುವದು. ದೇಶವೆಲ್ಲಾ ಮುಳ್ಳು
ಪೊದೆಯಾಗಿರುವದರಿಂದ ಜನರು ಬಿಲ್ಲುಬಾಣಗಳೊ
25 ಡನೆ ಸಂಚರಿಸುವರು. ಗುದ್ದಲಿಯಿಂದ ಅಗತೆಮಾ
ಡುತ್ತಿದ್ದ ಯಾವ ಗುಡ್ಡಕ್ಕೂ ನೀನು ಮುಳ್ಳುಕಂಪೆ
ಗಳಿಗೆ ಅಂಜಿ ಬರಲಾರದೆ ಇರುವಿ; ಅದು ದನಗಳನ್ನು
ಬಿಡುವದಕ್ಕೂ ಕುರಿಗಳು ತುಳಿದಾಡುವದಕ್ಕೂ ಎಡೆ
ಯಾಗುವದು.

8 ಆ ಮೇಲೆ ಯೆಹೋವನು ನನಗೆ—ದೊಡ್ಡ ಹಲಿಗೆ
ಯನ್ನು ತೆಗೆದುಕೊಂಡು 1)ಸಾಧಾರಣ ಲಿಪಿಯಿಂದ
ಲೇ ವಿಷಯಸೂಚಕವಾದ ಈ ಪದವನ್ನು ಬರೆ—
ಮಹೇರ್ ಶಾಲಾಲ್ ಹಾಷ್ ಬಜ್ [ಅಂದರೆ ಸೂರೆಗೆ
2 ಆತುರ, ಕೊಳ್ಳೆಗೆ ಅವಸರ]; [ನೀನು ಹೀಗೆ ಬರೆದ
ದ್ದಕ್ಕೆ] ಯಾಜಕನಾದ ಊರೀಯ, ಯೆಬೆರೆಕ್ಯನ
ಮಗನಾದ ಜೆಕರ್ಯ ಈ ನಂಬಿಗಸ್ತರಾದ ಸಾಕ್ಷಿಗ
3 ಳನ್ನು ಕರೆಯುವೆನು ಎಂದು ಹೇಳಿದನು. ಅನಂತರ
ನಾನು 2)ನನ್ನ ಹೆಂಡತಿಯನ್ನು ಕೂಡಲು ಆಕೆಯು
ಬಸುರಾಗಿ ಗಂಡು ಮಗುವನ್ನು ಹೆತ್ತಳು. ಆಗ
ಯೆಹೋವನು ನನಗೆ—ಅದಕ್ಕೆ ಮಹೇರ್ ಶಾಲಾಲ್
4 ಹಾಷ್ ಬಜ್ ಎಂದು ಹೆಸರಿಡು. ಆ ಮಗುವು
ಅಪ್ಪಾ, ಅಮ್ಮಾ, ಎಂದು ಕೂಗಬಲ್ಲದಾಗುವದರೊಳಗೆ
ಅಶ್ಶೂರದ ಅರಸನು ದಮಸ್ಕದ ಆಸ್ತಿಯನ್ನೂ ಸಮಾ
ರ್ಯದ ಸೂರೆಯನ್ನೂ ಹೊರಿಸಿಕೊಂಡು ಹೋಗುವನು
ಎಂದು ಹೇಳಿದನು.
5 ಯೆಹೋವನು ಮತ್ತೊಂದಾವರ್ತಿ ನನಗೆ ಹೀಗೆ
6 ನುಡಿದನು—ಈ ಜನರು ಮೆಲ್ಲಗೆ ಹರಿಯುವ ಸಿಲೋ
ವದ ನೀರನ್ನು ಉಪೇಕ್ಷಿಸಿ ರೆಚೀನನನ್ನೂ ರೆಮಲ್ಯನ
7 ಮಗನನ್ನೂ ನಂಬಿ ಮೆರೆದದ್ದರಿಂದ ಇಗೋ, ಕರ್ತನು
ಪೂರ್ಣಪ್ರತಾಪದಿಂದ ಕೂಡಿದ ಅಶ್ಶೂರದ ಅರಸನೆಂಬ
ಮಹಾನದಿಯ ರಭಸವಾದ ದೊಡ್ಡ ಪ್ರವಾಹವನ್ನು
ಇವರ ಮೇಲೆ ಬರಮಾಡುವನು; ಅದು ತನ್ನ ಪಾತ್ರವ
8 ನ್ನೆಲ್ಲಾ ಒಳಗೊಂಡು ದಡಗಳನ್ನೆಲ್ಲಾ ಮೀರಿ ಯೆಹೂ
ದದಲ್ಲಿಯೂ ನುಗ್ಗಿ ತುಂಬಿತುಳುಕಿ ಹಬ್ಬಿಕೊಂಡು
ಕತ್ತಿನ ವರೆಗೂ ಏರುವದು; 3)ಇಮ್ಮಾನುವೇಲನೇ!
ಆ ಅರಸನ ರೆಕ್ಕೆಗಳು ಹರಡಿ ನಿನ್ನ ದೇಶದ ಅಗಲದ
ಲ್ಲೆಲ್ಲಾ ಮುತ್ತಿಬಿಡುವವು.
9 ಜನಾಂಗಗಳೇ, 4)ಭಂಗಪಡಿಸಿರಿ, ನೀವೂ ಭಂಗ
ಪಡುವಿರಿ; ದೂರದೇಶೀಯರೇ, ಕಿವಿಗೊಡಿರಿ; ನಡು
ಕಟ್ಟಿರಿ, ಭಂಗಪಡುವಿರಿ; ಹೌದು ನಡುಕಟ್ಟಿರಿ, ಭಂಗ
10 ಪಡುವಿರಿ. ಆಲೋಚನೆಮಾಡಿಕೊಳ್ಳಿರಿ, ಅದು ಮುರಿದು
ಹೋಗುವದು; ಅಪ್ಪಣೆಮಾಡಿರಿ, ಅದು ನಿಲ್ಲದು;
5)ದೇವರು ನಮ್ಮ ಕೂಡ ಇದ್ದಾನಷ್ಟೆ. ಯೆಹೋ 1
ವನು ನನ್ನ ಮೇಲೆ ಬಲವಾಗಿ ಕೈಯನ್ನಿಟ್ಟು ಈ
ಜನರ ಮಾರ್ಗದಲ್ಲಿ ನಡೆಯಬಾರದೆಂದು ನನಗೆ
ಉಪದೇಶಿಸುತ್ತಾ ಹೀಗಂದನು—ಇವರು ಯಾವ 1
ದನ್ನು ಒಪ್ಪಂದವೆನ್ನುತ್ತಾರೋ ನೀವು ಅದನ್ನು
ಒಪ್ಪಂದವೆನ್ನಬೇಡಿರಿ; ಇವರು ಯಾವದಕ್ಕೆ ಹೆದರು
ತ್ತಾರೋ ನೀವು ಅದಕ್ಕೆ ಹೆದರಬೇಡಿರಿ, ನಡುಗಬೇಡಿರಿ.
ಸೇನಾಧೀಶ್ವರನಾದ ಯೆಹೋವನನ್ನೇ ಪ್ರತಿಷ್ಠೆಪಡಿಸಿರಿ; 1
ಆತನಿಗೇ ಹೆದರಿಕೊಳ್ಳಿರಿ, ನಡುಗಿರಿ. ಆತನು ಆಶ್ರಯ 1
ವಾಗುವನು; ಆದರೆ ಇಸ್ರಾಯೇಲಿನ ಎರಡು ಮನೆ
ತನಕ್ಕೆ ಎಡವುವ ಕಲ್ಲೂ ಮುಗ್ಗರಿಸುವ ಬಂಡೆಯೂ
ಯೆರೂಸಲೇಮಿನ ನಿವಾಸಿಗಳಿಗೆ ಬಲೆಯೂ ಬೋನೂ
ಆಗುವನು. ಅವರಲ್ಲಿ ಅನೇಕರು ಎಡವಿಬಿದ್ದು ಭಂಗ 1
ವಾಗುವರು, ಬೋನಿಗೆ ಸಿಕ್ಕಿ ವಶವಾಗುವರು.
ಬೋಧನೆಯನ್ನು 6)ಕಟ್ಟಿಡು, ನನ್ನ ಶಿಷ್ಯರೊಳಗೆ 1
ಉಪದೇಶವನ್ನು ಮುಚ್ಚಿ ಮುದ್ರಿಸು.
ಯಾಕೋಬನ ಮನೆತನದವರಿಗೆ ಮುಖವನ್ನು 1
ಮರೆಮಾಡಿಕೊಂಡಿರುವ ಯೆಹೋವನಿಗಾಗಿ ನಾನು
ಕಾದುಕೊಂಡು ಎದುರುನೋಡುತ್ತಿರುವೆನು. ಆಹಾ, 1
ನಾನೂ ನನಗೆ ಯೆಹೋವನು ದಯಪಾಲಿಸಿರುವ
ಮಕ್ಕಳೂ ಚೀಯೋನ್ ಪರ್ವತದಲ್ಲಿ ವಾಸವಾಗಿ
ರುವ ಸೇನಾಧೀಶ್ವರನಾದ ಯೆಹೋವನಿಂದುಂಟಾದ
ಗುರುತುಗಳಾಗಿಯೂ ಅದ್ಭುತಗಳಾಗಿಯೂ ಇಸ್ರಾ
ಯೇಲ್ಯರ ಮಧ್ಯದಲ್ಲಿದ್ದೇವೆ.
ಲೊಚಗುಟ್ಟುವ ಪಿಟಿಪಿಟಿಗುಟ್ಟುವ ಪ್ರೇತವಿಚಾ 1
ರಕರನ್ನೂ ಬೇತಾಳಿಕರನ್ನೂ ಆಶ್ರಯಿಸಿರಿ ಎಂದು
ಒಂದು ವೇಳೆ ನಿಮಗೆ ಹೇಳಾರು. ಜನರು ತಮ್ಮ
ದೇವರನ್ನೇ ಆಶ್ರಯಿಸಬಾರದೋ? ಜೀವಿತರಿಗಾಗಿ
ಸತ್ತವರಲ್ಲಿ ವಿಚಾರಿಸುವದು ಯುಕ್ತವೋ? ದೇವರ 2
ಉಪದೇಶವನ್ನೂ ದೇವರ ಬೋಧನೆಯನ್ನೂ ವಿಚಾ
ರಿಸುವ ಎಂದು ಅವರು ಹೇಳದಿದ್ದರೆ ಅವರಿಗೆ ಎಂದಿ
ಗೂ ಬೆಳಗಾಗುವದಿಲ್ಲ. ಅವರು ಘೋರಕಷ್ಟಕ್ಕೊಳ 2
ಗಾಗಿ ಹಸಿದುಕೊಂಡು ದೇಶದಲ್ಲಿ ಅಲೆಯುವರು;
ಹಸಿದಾಗ ರೇಗಿಕೊಂಡು ತಮ್ಮ ರಾಜನನ್ನೂ ತಮ್ಮ
ದೇವರನ್ನೂ ಶಪಿಸುವರು; ಮೇಲಕ್ಕೆ ಕಣ್ಣೆತ್ತಿದರೂ 2
ಭೂಮಿಯನ್ನು ದೃಷ್ಟಿಸಿದರೂ ಇಗೋ, ಇಕ್ಕಟ್ಟೆಂಬ
ಕತ್ತಲೂ ಸಂಕಟವೆಂಬ ಅಂಧಕಾರವೂ ಕವಿದು
ಕೊಂಡಿರುವವು; ಕಾರ್ಗತ್ತಲೆಗೆ ತಳ್ಳಲ್ಪಡುವರು.
ಆದರೆ ಸಂಕಟಪಟ್ಟ ದೇಶಕ್ಕೆ ಅಂಧಕಾರವಿನ್ನಿಲ್ಲ. 9
ಪೂರ್ವಕಾಲದಲ್ಲಿ ಜೆಬುಲೋನ್ ಮತ್ತು ನಫ್ತಾಲಿ
ಸೀಮೆಗಳನ್ನು ಆತನು ಅವಮಾನಕ್ಕೆ ಗುರಿಮಾಡಿ
ದನು; ಅನಂತರದಲ್ಲಿ ಯೊರ್ದನಿನ ಆಚೆಯ ಸೀಮೆ,
ಸಮುದ್ರದ ಕಡೆಗಿರುವ ಸೀಮೆ, ಅನ್ಯಜನಗಳಿರುವ
ಗಲಿಲಾಯ ಸೀಮೆ ಈ ಪ್ರಾಂತವನ್ನೆಲ್ಲಾ ಘನಪಡಿಸಿ
ದ್ದಾನೆ. ಕತ್ತಲಲ್ಲಿ ಸಂಚರಿಸಿದ ಜನರಿಗೆ ದೊಡ್ಡ
ಬೆಳಕು ಕಾಣಿಸಿತು; ಕಾರ್ಗತ್ತಲಾದ ದೇಶದಲ್ಲಿದ್ದ
ವರಿಗೆ ಪ್ರಕಾಶವು ಹೊಳೆಯಿತು.

1) ಮೂಲ: ಮನುಷ್ಯನ ಲೇಖನಿಯಿಂದ. 2) ಮೂಲ: ಪ್ರವಾದಿನಿಯನ್ನು. 3) ಇಮ್ಮಾನುವೇಲ್ ಅಂದರೆ ದೇವರು ನಮ್ಮ ಕೂಡ ಇದ್ದಾನೆ. 4) ಪಾಠಾಂತರ: ಗ್ರಹಿಸಿಕೊಳ್ಳಿರಿ. 5) ಮೂಲ: ಇಮ್ಮಾನುವೇಲ್. 6) ಅಥವಾ: ನೆಲೆಗೊಳಿಸು.

3 ನೀನು ಪ್ರಜೆಗಳನ್ನು ವೃದ್ಧಿಗೊಳಿಸಿದ್ದೀ, ಅವರಿಗೆ
ಸಂತೋಷವನ್ನು ಹೆಚ್ಚಿಸಿದ್ದೀ; ಸುಗ್ಗಿಕಾಲದಲ್ಲಿ
ಜನರು ಹರ್ಷಿಸುವ ಹಾಗೂ ಕೊಳ್ಳೆಯನ್ನು ಹಂಚಿ
ಕೊಳ್ಳುವವರು ಹೆಚ್ಚಳಪಡುವ ಹಾಗೂ ನಿನ್ನ ಮುಂದೆ
4 ಆನಂದಿಸುತ್ತಾರೆ. ಅವರಿಗೆ ಭಾರವಾದ ನೊಗವನ್ನೂ
ಬೆನ್ನನ್ನು ಹೊಡೆದ ಕೋಲನ್ನೂ ಬಿಟ್ಟೆಹಿಡಿದವನ
ದೊಣ್ಣೆಯನ್ನೂ ಮಿದ್ಯಾನಿನ ನಾಶದಿನದಲ್ಲಿ ಮುರಿದು
5 ಬಿಟ್ಟಂತೆ ಮುರಿದುಬಿಟ್ಟದ್ದೀ. [ಯುದ್ಧದ] ಗದ್ದಲ
ದಲ್ಲಿ ತುಳಿದಾಡಿದವರೆಲ್ಲರ ಮೆಟ್ಟುಗಳೂ ರಕ್ತದಲ್ಲಿ
ಹೊರಳಾಡಿಸಿದ ಉಡುಪುಗಳೂ ಅಗ್ನಿಗೆ ಆಹಾರವಾಗಿ
6 ಸುಟ್ಟುಹೋಗುವವು. ಒಂದು ಮಗು ನಮಗಾಗಿ
ಹುಟ್ಟಿದೆಯಷ್ಟೆ, ವರದ ಮಗನು ನಮಗೆ ದೊರೆತನು;
ಆಡಳಿತವು ಅವನ ಬಾಹುವಿನ ಮೇಲಿರುವದು;
1)ಅದ್ಭುತಸ್ವರೂಪನು, ಆಲೋಚನಾಕರ್ತನು, ಪರಾ
ಕ್ರಮಿಯಾದ ದೇವರು, ನಿತ್ಯನಾದ ತಂದೆ, ಸಮಾ
7 ಧಾನದ ಪ್ರಭು ಎಂಬವು ಅವನ ಹೆಸರು. ಅವನ
ಮುಖಾಂತರ ದಾವೀದನ ಸಿಂಹಾಸನದ ಆಡಳಿತವು
ಅಭಿವೃದ್ಧಿಯಾಗುವದು, ದಾವೀದನ ರಾಜ್ಯದಲ್ಲಿ
ನಿತ್ಯ ಸಮಾಧಾನವಿರುವದು, ಆ ರಾಜ್ಯವು ಇಂದಿ
ನಿಂದ ಯಾವಾಗಲೂ ನೀತಿನ್ಯಾಯಗಳ ಮೂಲಕ
ಸ್ಥಾಪಿತವಾಗಿ ಸ್ಥಿರಗೊಳ್ಳುವದು; ಸೇನಾಧೀಶ್ವರನಾದ
ಯೆಹೋವನ ಆಗ್ರಹವು ಇದನ್ನು ನೆರವೇರಿಸುವದು.

ಯೆಹೋವನು ಇಸ್ರಾಯೇಲ್ಯರ ಮೇಲೆ ಕೋಪಗೊಂಡು
ಉಂಟುಮಾಡುವ ಈತಿಬಾಧೆಗಳು.

8 ಕರ್ತನು ಯಾಕೋಬ್ಯರಿಗೆ ವಿರುದ್ಧವಾಗಿ ಒಂದು
ಮಾತನ್ನು ಹೇಳಿ ಕಳುಹಿಸಿದನು; ಅದು ಇಸ್ರಾ
9 ಯೇಲ್ಯರಿಗೆ ತಗಲಿತು. ಇಟ್ಟಿಗೆಗಳು ಬಿದ್ದುಹೋ
ದವು, ಹೋಗಲಿ, ಕೆತ್ತಿದ ಕಲ್ಲಿನಿಂದ ಕಟ್ಟುವೆವು;
ಅತ್ತಿಮರಗಳು ಕಡಿಯಲ್ಪಟ್ಟವು, ಇರಲಿ, ದೇವದಾರು
10 ಗಳನ್ನು ಹಾಕುವೆವು ಎಂದು ಗರ್ವದಿಂದಲೂ ಉಬ್ಬಟೆ
ಯಿಂದಲೂ ಹೇಳಿಕೊಳ್ಳುವ ಎಫ್ರಾಯಿಮ್ಯರು ಸಮಾ
ರ್ಯದ ನಿವಾಸಿಗಳು ಇವರೆಲ್ಲರಿಗೂ ಆ ಮಾತು
11 ಗೊತ್ತಾಗುವದು. ಯೆಹೋವನು ರೆಚೀನನ ವೈರಿ
ಗಳನ್ನು ಅವರಿಗೆ ವಿರುದ್ಧವಾಗಿ ಹೆಚ್ಚಿಸಿದ್ದಾನೆ; ಅವರ
ಮುಂದೆ ಅರಾಮ್ಯರನ್ನು ಅವರ ಹಿಂದೆ ಫಿಲಿಷ್ಟಿಯ
ರನ್ನು ಅಂತು ಅವನ ಶತ್ರುಗಳನ್ನೆಲ್ಲಾ ಎಬ್ಬಿಸಿದ್ದಾನೆ.
12 ಇವರು ಇಸ್ರಾಯೇಲ್ಯರನ್ನು ಬಾಯಿತೆರೆದು ನುಂಗಿ
ದ್ದಾರೆ. ಇಷ್ಟೆಲ್ಲಾ ನಡೆದರೂ ಆತನ ಕೋಪವು
ತೀರದೆ ಕೈ ಎತ್ತಿಯೇ ಇದೆ.
13 ಹೀಗಿದ್ದರೂ ಆ ಜನರು ತಮ್ಮನ್ನು ಹೊಡೆದಾ
ತನ ಕಡೆಗೆ ತಿರುಗಿಕೊಳ್ಳಲೂ ಇಲ್ಲ, ಸೇನಾಧೀಶ್ವರ
14 ನಾದ ಯೆಹೋವನನ್ನು ಸೇವಿಸಲೂ ಇಲ್ಲ. ಆದ
ಕಾರಣ ಯೆಹೋವನು ಇಸ್ರಾಯೇಲಿನಿಂದ ತಲೆ
ಬಾಲಗಳನ್ನೂ 2)ತಾಲತೃಣಗಳನ್ನೂ ಒಂದೇ ದಿನ
15 ದಲ್ಲಿ ಕಡಿದುಬಿಟ್ಟಿದ್ದಾನೆ. (ಘನಹೊಂದಿದ ಹಿರಿಯ
ನೇ ತಲೆ; ಸುಳ್ಳುಬೋಧನೆ ಮಾಡುವ ಪ್ರವಾದಿಯೇ
ಬಾಲ). ಈ ಜನರನ್ನು ನಡಿಸುವವರು ದಾರಿತಪ್ಪಿಸು 16
ವವರಾಗಿದ್ದಾರಷ್ಟೆ; ನಡಿಸಲ್ಪಟ್ಟವರೂ ನಾಶವಾಗು
ತ್ತಾರೆ. ಹೀಗಿರಲು ಕರ್ತನು ಅವರ ಯೌವನಸ್ಥರಲ್ಲಿ 17
ಉಲ್ಲಾಸಿಸನು, ಅವರಲ್ಲಿನ ಅನಾಥರನ್ನೂ ವಿಧವೆ
ಯರನ್ನೂ ಕರುಣಿಸನು; ಪ್ರತಿಯೊಬ್ಬನೂ ಭ್ರಷ್ಟನೂ
ದುಷ್ಟನೂ ಆಗಿದ್ದಾನೆ; ಎಲ್ಲರ ಬಾಯೂ ನೀಚ
ವಾಗಿ ಮಾತಾಡುತ್ತದೆ. ಎಷ್ಟು ದಂಡಿಸಿದರೂ ಆತನ
ಕೋಪವು ತೀರದೆ ಕೈ ಎತ್ತಿಯೇ ಇದೆ.
ದುಷ್ಟತನವು ಬೆಂಕಿಯಂತೆ ಉರಿದು ಮುಳ್ಳು 18
ಗಿಳ್ಳನ್ನು ನುಂಗಿ ಆರಣ್ಯದ ಪೊದೆಗಳನ್ನು ಹತ್ತಿ
ಕೊಳ್ಳಲು ಅವು ಹೊಗೆಹೊಗೆಯಾಗಿ ಸುತ್ತಿಸುತ್ತಿ
ಕೊಂಡು ಮೇಲಕ್ಕೆ ಏರುತ್ತವೆ. ಸೇನಾಧೀಶ್ವರನಾದ 19
ಯೆಹೋವನ ಕೋಪೋದ್ರೇಕದಿಂದ ದೇಶವು ಸುಟ್ಟು
ಹೋಗಿದೆ; ಪ್ರಜೆಯು ಅಗ್ನಿಗೆ ಆಹುತಿಯಾಗಿದೆ;
ಅಣ್ಣನು ತಮ್ಮನನ್ನು ಕರುಣಿಸನು. ಬಲಗಡೆಯಲ್ಲಿ 20
ರುವದನ್ನು ಕಿತ್ತುಕೊಂಡು [ತಿಂದರೂ] ಹಸಿದೇ
ಇರುತ್ತಾರೆ; ಎಡಗಡೆಯಲ್ಲಿರುವದನ್ನು ಉಂಡರೂ
ತೃಪ್ತಿಗೊಳ್ಳರು; ಒಬ್ಬೊಬ್ಬನೂ ತನ್ನ ತನ್ನ ತೋಳಿನ
ಮಾಂಸವನ್ನು ತಿನ್ನುತ್ತಾನೆ. ಮನಸ್ಸೆಯು ಎಫ್ರಾ 21
ಯಿಮನ್ನು, ಎಫ್ರಾಯಿಮು ಮನಸ್ಸೆಯನ್ನು ತಿಂದು
ಬಿಡುತ್ತದೆ, ಈ ಎರಡೂ ಯೆಹೂದಕ್ಕೆ ವಿರುದ್ಧವಾಗಿ
ವೆ. ಇಷ್ಟೆಲ್ಲಾ ನಡೆದರೂ ಆತನ ಕೋಪವು ತೀರದೆ
ಕೈ ಎತ್ತಿಯೇ ಇದೆ.

10 ಅಯ್ಯೋ, ಬಡವರನ್ನು ನ್ಯಾಯಸ್ಥಾನದಿಂದ
ತಳ್ಳಿ ನನ್ನ ಜನರಲ್ಲಿನ ದರಿದ್ರರಿಗೆ ನ್ಯಾಯವನ್ನು
ತಪ್ಪಿಸಬೇಕೆಂತಲೂ ವಿಧವೆಯರನ್ನು ಸೂರೆಮಾಡಿ
ಅನಾಥರನ್ನು ಕೊಳ್ಳೆಹೊಡೆಯಬೇಕೆಂತಲೂ ಅನ್ಯಾ 2
ಯವಾದ ತೀರ್ಪುಗಳನ್ನು ತೀರಿಸಿ ಕೇಡಿನ ಪತ್ರಗ
ಳನ್ನು ಬರೆಯಿಸುವವರ ಗತಿಯನ್ನು ಏನೆಂದು ಹೇಳಲಿ!
ದಂಡನೆಯ ದಿನದಲ್ಲಿಯೂ ದೂರದಿಂದ ಬರುವ 3
ನಾಶನದಲ್ಲಿಯೂ ಏನು ಮಾಡುವಿರಿ? ಸಹಾಯಕ್ಕಾಗಿ
ಯಾರ ಬಳಿಗೆ ಓಡುವಿರಿ? ನಿಮ್ಮ ಐಶ್ವರ್ಯವನ್ನು
ಯಾರ ವಶಮಾಡುವಿರಿ? ಕೈದಿಗಳ [ಕಾಲ] ಕೆಳಗೆ 4
ಮುದುರಿಕೊಂಡು ಹತರಾದವರ ಕೆಳಗೆ ಬಿದ್ದಿರುವದೇ
ಇವರ ಗತಿ! ಇಷ್ಟೆಲ್ಲಾ ನಡೆದರೂ ಆತನ ಕೋಪವು
ತೀರದೆ ಕೈ ಎತ್ತಿಯೇ ಇದೆ.

ಯೆಹೋವನು ಅಶ್ಶೂರದಿಂದ ತನ್ನ ಜನರನ್ನು ದಂಡಿಸುವದು.
ಅದರ ಗರ್ವವೂ ಭಂಗವೂ.

ಆಹಾ, ಅಶ್ಶೂರವೇ, ನೀನು ನನ್ನ ಕೋಪವೆಂಬ 5
ಕೋಲು, ನಿನ್ನ ಕೈಯಲ್ಲಿರುವ ದೊಣ್ಣೆಯು ನನ್ನ
ರೋಷವೇ! ನಾನು ಅದನ್ನು ಭ್ರಷ್ಟ ಜನರಿಗೆ ವಿರುದ್ಧ 6
ವಾಗಿ ಕಳುಹಿಸಿ ನನ್ನ ಕೋಪಕ್ಕೆ ಗುರಿಯಾದ
[ನನ್ನ] ಪ್ರಜೆಯನ್ನು ಸೂರೆಮಾಡಿ ಕೊಳ್ಳೆಹೊಡೆದು
ಬೀದಿಯ ಕೆಸರನ್ನೋ ಎಂಬಂತೆ ತುಳಿದುಹಾಕ
ಬೇಕೆಂದು ಅದಕ್ಕೆ ಅಪ್ಪಣೆ ಕೊಡುವೆನು. ಅದರ ಅಭಿ 7
ಪ್ರಾಯವೋ ಹಾಗಲ್ಲ; ಅನೇಕಾನೇಕ ಜನಾಂಗ

1) ಅಥವಾ: ಅದ್ಭುತಸ್ವರೂಪನಾದ ಆಲೋಚನಾಕರ್ತನು.

2) ಮೂಲ: ತಾಳೇಗರಿ ಜೊಂಡು ಹುಲ್ಲುಗಳನ್ನು.

ಗಳನ್ನು ತಾನೇ ಸಂಹರಿಸಿ ನಿರ್ಮೂಲಮಾಡುವೆ
ನೆಂಬದೇ ಹೊರತು ಈ ಯೋಚನೆಯು ಅದರ ಮನ
8 ಸ್ಸಿನಲ್ಲಿ ಇಲ್ಲವೇ ಇಲ್ಲ. ಅದು ಅಂದುಕೊಳ್ಳುವ
ದೇನಂದರೆ—ನನ್ನ ಅಧಿಪತಿಗಳೆಲ್ಲಾ ರಾಜರಲ್ಲವೆ.
9 ಕರ್ಕೆಮೀಷಿನ ಗತಿಯು ಕಲ್ನೋವಿಗೂ ಆಯಿತಲ್ಲವೆ,
ಅರ್ಪದಿಗೆ ಆದ ಪಾಡು ಹಮಾತಿಗೂ ಬಂತಷ್ಟೆ, ದಮ
ಸ್ಕದ ಅವಸ್ಥೆಯು ಸಮಾರ್ಯಕ್ಕೂ ಸಂಭವಿಸಿತಲ್ಲಾ.
10 ಯೆರೂಸಲೇಮಿನ ಮತ್ತು ಸಮಾರ್ಯದ ವಿಗ್ರಹ
ಗಳಿಗಿಂತ ವಿಶೇಷ ವಿಗ್ರಹಗಳುಳ್ಳ ದೇವತೆಗಳ ವಶವಾ
ಗಿರುವ ರಾಜ್ಯಗಳ ಮೇಲೆ ನಾನು ಕೈಮಾಡಿದಂತೆಯೂ
11 ಸಮಾರ್ಯವನ್ನೂ ಅದರ ವಿಗ್ರಹಗಳನ್ನೂ ನಾನು
ಕೆಡವಿಬಿಟ್ಟಹಾಗೂ ಯೆರೂಸಲೇಮನ್ನೂ ಅದರ
ಬೊಂಬೆಗಳನ್ನೂ ಕೆಡವಲಾರೆನೋ? ಎಂಬದೇ.
12 ಆದಕಾರಣ ಕರ್ತನಾದ ನಾನು ಚೀಯೋನ್
ಪರ್ವತದಲ್ಲಿಯೂ ಯೆರೂಸಲೇಮಿನಲ್ಲಿಯೂ ನನ್ನ
ಉದ್ದೇಶವನ್ನೆಲ್ಲಾ ನೆರವೇರಿಸಿದ ಮೇಲೆ ಅಶ್ಶೂರದ
ರಾಜನ ಉಬ್ಬಟೆಯ ಕೊಚ್ಚಾಟಕ್ಕೂ ಗರ್ವದೃಷ್ಟಿಯ
ಮೆರೆದಾಟಕ್ಕೂ ತಕ್ಕ ದಂಡನೆಯನ್ನು ಮಾಡುವೆನು.
13 ಏಕಂದರೆ ಅವನು ತನ್ನೊಳಗೆ—ನನ್ನ ಜ್ಞಾನಭುಜ
ಬಲಗಳಿಂದಲೇ ಇದನ್ನು ಮಾಡಿದ್ದೇನೆ, ನಾನೇ
ವಿವೇಕಿ; ಜನಾಂಗಗಳ ಎಲ್ಲೆಗಳನ್ನು ಕಿತ್ತು ಅವರ
ನಿಧಿನಿಕ್ಷೇಪಗಳನ್ನು ಸೂರೆಮಾಡಿ ಸಿಂಹಾಸನಾರೂಢ
14 ರನ್ನು ಮಹಾವೀರನಂತೆ ಕೆಡವಿಬಿಟ್ಟಿದ್ದೇನೆ; ಜನಗಳ
ಆಸ್ತಿಪಾಸ್ತಿಯು ಗೂಡಿನಂತೆ ನನ್ನ ಕೈಗೆ ಸಿಕ್ಕಿದೆ;
ಪಕ್ಷಿಯು ಇಟ್ಟುಹೋದ ಮೊಟ್ಟೆಗಳನ್ನು ಸಂಗ್ರಹಿಸಿ
ಕೊಳ್ಳುವವನಂತೆ ಭೂಮಿಯನ್ನೆಲ್ಲಾ ಸಂಗ್ರಹಿಸಿ
ಕೊಂಡಿದ್ದೇನೆ; ರೆಕ್ಕೆಯಾಡಿಸಿ ಬಾಯಿದೆರೆದು ಕೀಚು
ಗುಟ್ಟುವ ಯಾರೂ ಇರಲಿಲ್ಲ ಎಂದು ಅಂದುಕೊಂಡ
15 ನು. ಕೊಡಲಿಯು ಕಡಿಯುವವನಿಗೆ ವಿರುದ್ಧವಾಗಿ
ಕೊಚ್ಚಿಕೊಂಡೀತೇ? ಗರಗಸವು ಆಡಿಸುವವನಿಗೆ ಪ್ರತಿ
ಯಾಗಿ ತನ್ನನ್ನು ಹೆಚ್ಚಿಸಿಕೊಂಡೀತೇ? ಎತ್ತಿಕೊಂಡವ
ನನ್ನು ಕೋಲು ಬೀಸಿದಂತಾಯಿತು, ಮರಕ್ಕಿಂತ ಶ್ರೇಷ್ಠ
ನಾಗಿರುವ ಮನುಷ್ಯನನ್ನು ದೊಣ್ಣೆಯು ಎತ್ತಿಕೊಂಡ
ಹಾಗಾಯಿತು.
16 ಆದಕಾರಣ ಸೇನಾಧೀಶ್ವರನಾದ ಯೆಹೋವನೆಂಬ
ಕರ್ತನು ಅವನ ಕೊಬ್ಬಿದ ಪ್ರಜೆಗಳಿಗೆ ಕ್ಷಯ
ವನ್ನುಂಟುಮಾಡುವನು; ದಹಿಸುವ ಅಗ್ನಿಯಂತಿರುವ
ಉರಿಯೊಂದು ಅವನ ವೈಭವದ ಕೆಳಗೆ ಹತ್ತಿಕೊಳ್ಳು
17 ವದು. ಇಸ್ರಾಯೇಲ್ಯರ ಪರಂಜ್ಯೋತಿಯು ದಹಿ
ಸುವ ಅಗ್ನಿಯಾಗುವದು, ಅವರ ಸದಮಲಸ್ವಾಮಿ
ಯು ಜ್ವಾಲೆಯಂತಿರುವನು; ಅದು ಒಂದೇ ದಿವಸ
ದಲ್ಲಿ ಅಶ್ಶೂರದ ಮುಳ್ಳುಗಿಳ್ಳನ್ನು ಸುಟ್ಟು ನುಂಗಿ
18 ಬಿಡುವದು. ಅದು ದೇಹಾತ್ಮಗಳನ್ನುಳಿಸದೆ ಅಲ್ಲಿನ
ವನದ ಮತ್ತು ತೋಟದ ವೈಭವವನ್ನು ನಿರ್ಮೂಲ
ಮಾಡುವದು; ದೇಶವೋ ಉಡುಗುತ್ತಿರುವ ರೋಗಿ
19 ಯಂತಿರುವದು. ಅದರ ವನವೃಕ್ಷಗಳ ಸಂಖ್ಯೆಯು
ಮಗು ಬರೆದು ಎಣಿಸುವಷ್ಟು ಕಡಿಮೆಯಾಗುವದು.

ಆ ದಿನದಲ್ಲಿ ಇಸ್ರಾಯೇಲ್ಯರೊಳಗೆ ಉಳಿದವರು,
ಯಾಕೋಬನ ಮನೆತನದವರಲ್ಲಿ ತಪ್ಪಿಸಿಕೊಂಡವರು
ತಮ್ಮನ್ನು ಹೊಡೆದವನ ಆಧಾರವನ್ನು ಬಿಟ್ಟು ಯೆ
ಹೋವನೆಂಬ ಇಸ್ರಾಯೇಲ್ಯರ ಸದಮಲಸ್ವಾಮಿ
ಯನ್ನು ಯಥಾರ್ಥವಾಗಿ ಆಧಾರಮಾಡಿಕೊಳ್ಳುವರು.
ಜನಶೇಷವು, ಅಂದರೆ ಯಾಕೋಬ್ಯರಲ್ಲಿ ಉಳಿದದ್ದು,
ಪರಾಕ್ರಮಿಯಾದ ದೇವರ ಕಡೆಗೆ ತಿರುಗಿಕೊಳ್ಳು
ವದು. ಇಸ್ರಾಯೇಲೇ, ನಿನ್ನ ಜನರು ಸಮುದ್ರದ
ಉಸುಬಿನಂತೆ ಅಸಂಖ್ಯವಾಗಿದ್ದರೂ ಅವರಲ್ಲಿ ಉಳಿದ
ಒಂದು ಶೇಷ ಮಾತ್ರ ತಿರುಗಿಕೊಳ್ಳುವದು; ತುಂಬಿ
ತುಳುಕುವ ನ್ಯಾಯಪ್ರವಾಹದ ಪ್ರಲಯ ನಿಶ್ಚಿತ
ವಾಗಿದೆ. ಸೇನಾಧೀಶ್ವರನಾದ ಯೆಹೋವನೆಂಬ
ಕರ್ತನು ಭೂಮಂಡಲದಲ್ಲೆಲ್ಲಾ ನಿಶ್ಚಿತಪ್ರಲಯವನ್ನು
ಉಂಟುಮಾಡುವನಷ್ಟೆ. ಇಂತಿರಲು ಸೇನಾಧೀಶ್ವರ
ನಾದ ಯೆಹೋವನೆಂಬ ಕರ್ತನು ಹೀಗೆ ಹೇಳು
ತ್ತಾನೆ—ಚೀಯೋನಿನಲ್ಲಿ ವಾಸಿಸುವ ನನ್ನ ಜನರೇ,
ಐಗುಪ್ತ್ಯರು ನಿಮಗೆ ಮಾಡಿದಂತೆ ನಿಮ್ಮನ್ನು ಕೋಲಿ
ನಿಂದ ಹೊಡೆದು ನಿಮಗೆ ವಿರುದ್ಧವಾಗಿ ದೊಣ್ಣೆಯನ್ನೆ
ತ್ತುವ ಅಶ್ಶೂರ್ಯರಿಗೆ ಭಯಪಡಬೇಡಿರಿ. ಬಹು
ಸ್ವಲ್ಪ ಕಾಲದೊಳಗೆ [ನಿಮ್ಮ ಮೇಲಿನ] ಉಗ್ರವು
ತೀರಿ ನನ್ನ ಕೋಪವು ಅವರ ನಾಶನಕ್ಕಾಗುವದು.
ಸೇನಾಧೀಶ್ವರನಾದ ಯೆಹೋವನು ಓರೇಬನ ಬಂಡೆ
ಯ ಹತ್ತಿರ ಮಿದ್ಯಾನ್ಯರನ್ನು ಹತಮಾಡಿದಂತೆ ಅವರ
ಮೇಲೆಯೂ ಕೊರಡೆಯನ್ನು ಬೀಸುವನು; ಆತನು
ದಂಡವನ್ನು ಸಮುದ್ರದ ಮೇಲೆ ಚಾಚಿ ಐಗುಪ್ತ್ಯರ
ಮೇಲೆ ಎತ್ತಿದಂತೆ ಎತ್ತುವನು. ಆ ದಿನದಲ್ಲಿ
ಅವರು ಹೊರಿಸಿದ ಹೊರೆಯು ನಿಮ್ಮ ಬೆನ್ನಿನಿಂದಲೂ
ಹೂಡಿದ ನೊಗವು ಕತ್ತಿನಿಂದಲೂ ತೊಲಗುವವು;
1)ನೀವು ಪುಷ್ಟರಾದ ಕಾರಣ ನೊಗವು ಮುರಿದುಹೋ
ಗುವದು.

ಇಗೋ, ಬಂದರು, ಅಯ್ಯಾಥಿನ ಮೇಲೆ ಬಂದಿ
ದ್ದಾರೆ, ಮಿಗ್ರೋನನ್ನು ಹಾದುಹೋಗಿದ್ದಾರೆ, ಮಿಕ್ಮಾ
ಷಿನಲ್ಲಿ ತಮ್ಮ ಸಾಮಗ್ರಿಯನ್ನು ಇಟ್ಟುಬಿಟ್ಟಿದ್ದಾರೆ,
ಕಣಿವೆಯನ್ನು ದಾಟಿದ್ದಾರೆ, ಗೆಬದಲ್ಲಿ ದಂಡಿಳಿಸುವ
[ಅನ್ನುತ್ತಾರೆ], ರಾಮಾ ನಡುಗುತ್ತದೆ, ಸೌಲನ ಗಿಬೆಯ
ಓಡಿಹೋಯಿತು; ಗಲ್ಲೀಮ್ ಗ್ರಾಮವೇ, ಕೂಗಿ
ಕಿರಚಿಕೋ! ಲಯೆಷವೇ, ಕಿವಿಗೊಡು! 2)ಅನಾತೋತೇ,
ಪ್ರತಿಧ್ವನಿ ಕೊಡು! ಮದ್ಮೇನ ದಿಕ್ಕಾಪಾಲಾಯಿತು;
ಗೇಬೀಮಿನ ನಿವಾಸಿಗಳು ವಲಸೆಹೋದರು; ಇದೇ
ದಿವಸ [ಶತ್ರುಗಳು] ನೋಬಿನಲ್ಲಿ ಬೀಡುಗೊಳ್ಳುವರು;
ಚೀಯೋನ್ ನಗರಿಯ ಪರ್ವತದ ಕಡೆಗೆ, ಯೆರೂಸ
ಲೇಮಿನ ಬೆಟ್ಟದ ಕಡೆಗೆ, ಕೈಬೀಸುತ್ತಾರೆ.

ಆಹಾ, ಸೇನಾಧೀಶ್ವರನಾದ ಯೆಹೋವನೆಂಬ ಕರ್ತ
ನು ಕೊಂಬೆಗಳನ್ನು ಕತ್ತರಿಸಿ ಧಮ್ಮನೆ ಬೀಳಿಸುವನು;
ಉನ್ನತ ವೃಕ್ಷಗಳು ಕಡಿದುಹೋಗುವವು, ಎತ್ತರ
ಮರಗಳು ನೆಲದ ಪಾಲಾಗುವವು; ಆತನು ಅಡವಿಯ
ಪೊದೆಗಳನ್ನು ಕಬ್ಬಿಣದ ಮುಟ್ಟಿನಿಂದ ಕಡಿದುಬಿಡು

1) ಅಥವಾ: ನೀವು ಅಭಿಷಿಕ್ತರಾದಕಾರಣ. ಮೂಲ: ಕೊಬ್ಬಿನ (ಅಥವಾ ಎಣ್ಣೆಯ) ನಿಮಿತ್ತ. 2) ಪಾಠಾಂತರ: ಅಯ್ಯೋ
ಅನಾತೋತೇ.

ವನು; ಲೆಬನೋನಿನ ವನವು ಆ ಬಲಿಷ್ಠನಿಂದ ಬಿದ್ದು
ಹೋಗುವದು.

ಅಭಿಷಿಕ್ತನ ವಿಷಯವಾದ ಎರಡು ದೈವೋಕ್ತಿಗಳು.

೧. ಆತನ ರಾಜ್ಯದ ಲಕ್ಷಣಗಳು (1—9).

೨. ಸೆರೆಬಿದ್ದವರು ಹಿಂದಿರುಗುವದು (10—16).

11 ಇಷಯನ ಬುಡದಿಂದ ಒಂದು ಚಿಗುರು ಒಡೆ
ಯುವದು, ಅದರ ಬೇರಿನಿಂದ ಹೊರಟ ತಳಿರು ಫಲಿ
2 ಸುವದು; ಆ ಅಂಕುರದ ಮೇಲೆ ಜ್ಞಾನವಿವೇಕದಾ
ಯಕ ಆತ್ಮ, ಆಲೋಚನಪರಾಕ್ರಮಗಳನ್ನು ಹುಟ್ಟಿಸು
ವ ಆತ್ಮ, ತಿಳುವಳಿಕೆಯನ್ನೂ ಯೆಹೋವನ ಭಯವ
ನ್ನೂ ಉಂಟುಮಾಡುವ ಆತ್ಮ, ಅಂತು ಯೆಹೋವನ
3 ಆತ್ಮವೇ ನೆಲೆಗೊಂಡಿರುವದು; ಯೆಹೋವನ ಭಯವು
ಅವನಿಗೆ ಪರಿಮಳಿಸುವದು; ಅವನು ಕಣ್ಣಿಗೆ ಕಂಡಂತೆ
ತೀರ್ಪುಮಾಡುವದಿಲ್ಲ, ಕಿವಿಗೆ ಬಿದ್ದಂತೆ ನಿರ್ಣಯಿಸು
4 ವದಿಲ್ಲ; ಬಡವರಿಗೋಸ್ಕರ ನ್ಯಾಯವಾಗಿ ತೀರ್ಪು
ಮಾಡುವನು, ಲೋಕದ ದೀನರಿಗೋಸ್ಕರ ಧರ್ಮ
ವಾಗಿ ನಿರ್ಣಯಿಸುವನು; ಲೋಕವನ್ನು ತನ್ನ ಬಾಯ
ದಂಡದಿಂದ ದಂಡಿಸುವನು, ದುಷ್ಟರನ್ನು ತನ್ನ ಬಾಯು
5 ಸುರಿನಿಂದ ಕೊಲ್ಲುವನು. ಧರ್ಮವೇ ಅವನಿಗೆ
6 ನಡುಕಟ್ಟು, ಪ್ರಾಮಾಣಿಕತೆಯೇ ಸೊಂಟಪಟ್ಟಿ. ತೋ
ಳವು ಕುರಿಯ ಸಂಗಡ ವಾಸಿಸುವದು, ಚಿರತೆಯು
ಮೇಕೆಮರಿಯೊಂದಿಗೆ ಮಲಗುವದು; ಕರುವೂ ಪ್ರಾ
ಯದ ಸಿಂಹವೂ ಪುಷ್ಟಪಶುವೂ ಒಟ್ಟಿಗಿರುವವು; ಇವು
7 ಗಳನ್ನು ಚಿಕ್ಕ ಮಗುವು ನಡಿಸುವದು. ಹಸುವು ಕರ
ಡಿಯು ಸಂಗಡ ಮೇಯುವವು; ಅವುಗಳ ಮರಿಗಳು
ಜೊತೆಯಾಗಿ ಮಲಗುವವು; ಸಿಂಹವು ಎತ್ತಿನಂತೆ
8 ಹುಲ್ಲು ತಿನ್ನುವದು. ಮೊಲೆಕೂಸು ನಾಗರಹುತ್ತದ
ಮೇಲೆ ಆಡುವದು; ಮೊಲೆಬಿಟ್ಟ ಮಗು ಹಾವಿನ ಬಿಲದ
9 ಮೇಲೆ ಕೈಹಾಕುವದು. ನನ್ನ ಪರಿಶುದ್ಧ ಪರ್ವತ
ದಲ್ಲೆಲ್ಲಾ ಯಾರೂ ಕೇಡು ಮಾಡುವದಿಲ್ಲ, ಯಾರೂ
ಹಾಳುಮಾಡುವದಿಲ್ಲ; ಸಮುದ್ರದಲ್ಲಿ ನೀರು ಹೇಗೋ
ಹಾಗೆಯೇ ಭೂಮಿಯಲ್ಲಿ ಯೆಹೋವನ ಜ್ಞಾನವು
ತುಂಬಿಕೊಂಡಿರುವದು.

10 ಆ ದಿನದಲ್ಲಿ ಜನಾಂಗಗಳು ತಮಗೆ ಧ್ವಜಪ್ರಾಯ
ನಾಗಿ ನಿಂತಿರುವ ಇಷಯನ ಅಂಕುರದವನನ್ನು ಆಶ್ರ
ಯಿಸುವರು; ಅವನ ವಿಶ್ರಮಸ್ಥಾನವು ವೈಭವವುಳ್ಳ
ದ್ದಾಗಿರುವದು.

11 ಆ ದಿನದಲ್ಲಿ ಕರ್ತನು ತನ್ನ ಜನಶೇಷವನ್ನು ಬಿಡಿಸಿ
ಕೊಳ್ಳುವದಕ್ಕೆ ಎರಡನೆಯ ಸಾರಿ ಕೈಹಾಕಿ ಅಶ್ಶೂರ,
ಐಗುಪ್ತ, ಪತ್ರೋಸ್, ಕೂಷ್, ಏಲಾಮ್, ಶಿನಾರ್,
ಹಮಾಥ್, ಸಮುದ್ರದ ಕರಾವಳಿ, ಈ ಸ್ಥಳಗಳಲ್ಲಿ
12 ಉಳಿದವರನ್ನು ಬರಮಾಡಿಕೊಳ್ಳುವನು. ಅವನು
ಜನಾಂಗಗಳಿಗೆ ಧ್ವಜವನ್ನೆತ್ತಿ ಇಸ್ರಾಯೇಲ್ಯರಲ್ಲಿ ಸೆರೆಗೆ
ಒಯ್ಯಲ್ಪಟ್ಟವರನ್ನೂ ಯೆಹೂದದಿಂದ ಚದರಿದವ
ರನ್ನೂ ಭೂಮಿಯ ಚತುರ್ದಿಕ್ಕುಗಳಿಂದಲೂ ಕೂಡಿಸಿ
13 ಕೊಳ್ಳುವನು. ಎಫ್ರಾಯಿಮನ ಹೊಟ್ಟೇಕಿಚ್ಚು
ತೊಲಗುವದು, ಯೆಹೂದವನ್ನು ವಿರೋಧಿಸುವವರು
ನಿರ್ಮೂಲವಾಗುವರು; ಎಫ್ರಾಯಿಮು ಯೆಹೂದ
ವನ್ನು ಮತ್ಸರಿಸದು, ಯೆಹೂದವು ಎಫ್ರಾಯಿ
ಮನ್ನು ವಿರೋಧಿಸದು. ಇವು ಪಡುವಲಲ್ಲಿ ಫಿಲಿಷ್ಟಿ 14
ಯರ ಭುಜದ ಮೇಲೆ ಎರಗುವವು, ಜೊತೆಯಾಗಿ
ಮೂಡಣದವರನ್ನು ಸೂರೆಗೊಳ್ಳುವವು; ಎದೋಮಿನ
ಮತ್ತು ಮೋವಾಬಿನ ಮೇಲೆ ಕೈಮಾಡುವವು; ಅಮ್ಮೋ
ನ್ಯರು ಇವುಗಳಿಗೆ ಅಧೀನರಾಗುವರು. ಆಗ ಯೆಹೋ 15
ವನು ಐಗುಪ್ತ ಸಮುದ್ರದ [1]ಕೊಲ್ಲಿಯನ್ನು ಸಂಪೂ
ರ್ಣವಾಗಿ ನಾಶಮಾಡುವನು; ಯೂಫ್ರೇಟೀಸ್
ನದಿಯ ಮೇಲೆ ಕೈ ಝಾಡಿಸಿ ತನ್ನ ಬಿಸಿಗಾಳಿಯಿಂದ
ಅದನ್ನು ಏಳು ತೊರೆಗಳನ್ನಾಗಿ ಒಡೆದು ಜನರು ಕೆರ
ಮೆಟ್ಟಿ ದಾಟುವಂತೆ ಮಾಡುವನು. ಇದಲ್ಲದೆ ಇಸ್ರಾ 16
ಯೇಲ್ಯರು ಐಗುಪ್ತ ದೇಶದಿಂದ ಹೊರಟುಬಂದ ಕಾಲ
ದಲ್ಲಿ ಅವರಿಗೆ ಮಾರ್ಗವು ಹೇಗೆ ಸಿದ್ಧವಾಯಿತೋ
ಹಾಗೆಯೇ ಅಶ್ಶೂರದಿಂದ ತಪ್ಪಿಸಿಕೊಂಡು ಬರುವ
ಆತನ ಜನಶೇಷಕ್ಕೆ ರಾಜಮಾರ್ಗವು ಸಿದ್ಧವಾಗುವದು.

ಯೆಹೋವನ ಸ್ತೋತ್ರಗೀತಗಳು.

12 ಆ ದಿನದಲ್ಲಿ ನೀನು ಹೇಳುವದೇನಂದರೆ—
ಯೆಹೋವನೇ, ನಾನು ನಿನಗೆ ಕೃತಜ್ಞತೆಯನ್ನು
ಸಲ್ಲಿಸುವೆನು;
ನೀನು ನನ್ನ ಮೇಲೆ ಕೋಪಗೊಂಡಿದ್ದರೂ
ಆ ನಿನ್ನ ಕೋಪವು ಪರಿಹಾರವಾಗಿ
ನನ್ನನ್ನು ಸಂತೈಸುತ್ತೀಯಲ್ಲವೆ.
ಇಗೋ ದೇವರೇ ನನಗೆ ರಕ್ಷಣೆ, 2
ನಾನು ಹೆದರದೆ ಭರವಸಪಡುವೆನು;
ನನ್ನ ಬಲವೂ ಕೀರ್ತನೆಯೂ ಯಾಹುಯೆಹೋ
ವನಷ್ಟೆ.
ಆತನೇ ನನಗೆ ರಕ್ಷಕನಾದನು ಎಂಬದೇ.
ಮತ್ತು ರಕ್ಷಣೆಯೆಂಬ ಬಾವಿಗಳಿಂದ ನೀರ 3
ನ್ನು ಉಲ್ಲಾಸದೊಡನೆ ಸೇದುವಿರಿ.
ಆ ದಿನದಲ್ಲಿ ನೀವು ಹೇಳುವದೇನಂದರೆ— 4
ಯೆಹೋವನಿಗೆ ಕೃತಜ್ಞತಾಸ್ತುತಿಮಾಡಿರಿ;
[2]ಆತನ ನಾಮದ ಮಹತ್ವವನ್ನು ವರ್ಣಿಸಿರಿ,
ಜನಾಂಗಗಳಲ್ಲಿ ಆತನ ಕೃತ್ಯಗಳನ್ನು ಪ್ರಸಿದ್ಧಪಡಿ
ಸಿರಿ,
ಆತನ ನಾಮವು ಉನ್ನತೋನ್ನತವೆಂದು ಜ್ಞಾಪಕ
ಪಡಿಸಿರಿ.
ಯೆಹೋವನನ್ನು ಗಾನದಿಂದ ಸ್ತುತಿಸಿರಿ; 5
ಆತನು ಮಹಿಮೆಯ ಕಾರ್ಯಗಳನ್ನು ಮಾಡಿ
ದ್ದಾನೆ;
ಇದು ಭೂಮಂಡಲದಲ್ಲೆಲ್ಲಾ ತಿಳಿದಿರಲಿ.
ಚೀಯೋನಿನ ನಿವಾಸಿಗಳೇ, ಕೂಗಿರಿ, ಉತ್ಸಾಹ 6
ಧ್ವನಿಮಾಡಿರಿ;
ಇಸ್ರಾಯೇಲ್ಯರ ಸದಮಲಸ್ವಾಮಿಯು ನಿಮ್ಮ
ಮಧ್ಯದಲ್ಲಿ ಮಹತ್ತಾಗಿದ್ದಾನಷ್ಟೆ ಎಂಬದೇ.

1) ಮೂಲ: ನಾಲಿಗೆಯನ್ನು. 2) ಅಥವಾ: ಆತನ ಹೆಸರನ್ನೆತ್ತಿ ಪ್ರಾರ್ಥಿಸಿರಿ.

### ಜನಾಂಗಗಳ ವಿಷಯವಾದ ದೈವೋಕ್ತಿಗಳು.

13—22.

#### ಬಾಬೆಲಿನ ವಿಷಯವಾದ ದೈವೋಕ್ತಿ.

13 ಆಮೋಚನ ಮಗನಾದ ಯೆಶಾಯನಿಗೆ ಬಾಬೆ
2 ಲಿನ ವಿಷಯವಾಗಿ ಕಂಡುಬಂದ ದೈವೋಕ್ತಿ. [ಶತ್ರು
ಗಳು] ಬಂದು ಪ್ರಭುಗಳ ಪುರದ್ವಾರಗಳಲ್ಲಿ ನುಗ್ಗು
ವಂತೆ ಬೋಳುಬೆಟ್ಟದ ಮೇಲೆ ಧ್ವಜವೆತ್ತಿರಿ, ಕೂಗಿ
3 ಅವರನ್ನು ಕರೆಯಿರಿ, ಕೈಸನ್ನೆಮಾಡಿರಿ. ನಾನು
ಆರಿಸಿಕೊಂಡವರಿಗೆ ಅಪ್ಪಣೆಮಾಡಿದ್ದೇನೆ, ಹೌದು,
1)ಉತ್ಸಾಹದಿಂದ ಮೆರೆಯುವ ಆ ನನ್ನ ಶೂರರು
ನನ್ನ ಕೋಪವನ್ನು ತೀರಿಸಲಿ ಎಂದು ಅವರನ್ನು ಕರೆ
ದಿದ್ದೇನೆ.
4 ಆಹಾ, ಬಹು ಜನಸಮೂಹವಿದ್ದಂತೆ ಗದ್ದಲವು
ಬೆಟ್ಟಗಳಲ್ಲಿ ಕೇಳಿಬರುತ್ತದೆ! ಇಗೋ, ಒಟ್ಟಿಗೆ ಕೂಡಿ
ಕೊಂಡ ರಾಜ್ಯಜನಾಂಗಗಳ ಆರ್ಬಟ! ಸೇನಾಧೀಶ್ವರ
ನಾದ ಯೆಹೋವನು ಸೈನ್ಯವನ್ನು ಯುದ್ಧಕ್ಕಾಗಿ
5 ಅಣಿಮಾಡುತ್ತಿದ್ದಾನೆ. ಯೆಹೋವನೂ ಆತನ ರೋ
ಷಕ್ಕೆ ಆಯುಧಗಳಾದವರೂ ದೂರದೇಶದಿಂದ, ಅಂದರೆ
ಆಕಾಶಮಂಡಲದ ಕಟ್ಟಕಡೆಯಿಂದ, ಭೂಮಿಯ
6 ನ್ನೆಲ್ಲಾ ಹಾಳುಮಾಡುವದಕ್ಕಾಗಿ ಬಂದಿದ್ದಾರೆ. ಅರಚಿ
ಕೊಳ್ಳಿರಿ, ಯೆಹೋವನ ದಿನವು ಸಮೀಪವಾಯಿತು;
ಅದು ಸರ್ವಶಕ್ತನಿಂದ ನಾಶರೂಪವಾಗಿ ಬರುವದು.
7 ಆದರಿಂದ ಎಲ್ಲರ ಕೈ ಜೋಲುಬೀಳುವದು. ಎಲ್ಲರ
8 ಹೃದಯ ಕರಗಿ ನೀರಾಗುವದು; ಅವರು ಬೆಚ್ಚಿಬೀಳು
ವರು, ಯಾತನೆವೇದನೆಗಳು ಅವರನ್ನಾಕ್ರಮಿಸುವವು,
ಹೆರುವ ಹೆಂಗಸಿನಂತೆ ಸಂಕಟಪಡುವರು; ಒಬ್ಬರನ್ನೊ
ಬ್ಬರು ನೋಡಿ ವಿಸ್ಮಯಪಡುವರು, ಅವರ ಮುಖಗಳು
9 [ತಲ್ಲಣದಿಂದ] ಬೆಂಕಿಬೆಂಕಿಯಾಗುವವು. ಇಗೋ,
ಯೆಹೋವನ ದಿನವು ಬರುತ್ತಿದೆ; ಅದು ಭೂಮಿಯನ್ನು
ಹಾಳುಮಾಡಿ ಪಾಪಿಗಳನ್ನು ನಿರ್ಮೂಲಪಡಿಸುವ
ದಕ್ಕೆ [ಆತನ] ಕೋಪೋದ್ರೇಕದಿಂದಲೂ ತೀಕ್ಷ್ಣರೋಷ
10 ದಿಂದಲೂ ಕ್ರೂರವಾಗಿರುವದು. ಆಕಾಶದ ತಾರೆಗಳೂ
ನಕ್ಷತ್ರರಾಶಿಗಳೂ ಬೆಳಗವು, ಸೂರ್ಯನು ಮೂಡು
ತ್ತಲೇ ಕತ್ತಲಾಗುವನು, ಚಂದ್ರನು ಪ್ರಕಾಶಿಸನು.
11 ನಾನು ಲೋಕದವರಿಗೆ ಅವರ ಪಾಪದ ಫಲವನ್ನೂ
ದುಷ್ಟರಿಗೆ ಅವರ ದುಷ್ಕೃತ್ಯಗಳ ಫಲವನ್ನೂ ತಿನ್ನಿಸಿ
ಸೊಕ್ಕಿದವರ ಸೊಕ್ಕನ್ನು ಅಡಗಿಸಿ ಭಯಂಕರರ ಹೆಮ್ಮೆ
12 ಯನ್ನು ತಗ್ಗಿಸಿ ಮನುಷ್ಯರನ್ನು ಅಪರಂಜಿಗಿಂತಲೂ
ಮಾನವರನ್ನು ಓಫೀರಿನ ಬಂಗಾರಕ್ಕಿಂತಲೂ ಅಪ
13 ರೂಪವಾಗುವಂತೆ ಮಾಡುವೆನು. ಇದಕ್ಕಾಗಿ ಸೇನಾ
ಧೀಶ್ವರನಾದ ಯೆಹೋವನ ಕೋಪೋದ್ರೇಕವೂ ತೀಕ್ಷ್ಣ
ರೋಷವೂ ಮಸಗುತ್ತಿರುವ ದಿನದಲ್ಲಿ [ಯೆಹೋವನೆಂಬ]
ನಾನು ಆಕಾಶಮಂಡಲವನ್ನು ನಡುಗಿಸಿ ಭೂಲೋಕ
14 ವನ್ನು ಸ್ಥಳದಿಂದ ಕದಲಿಸುವೆನು. ಅಟ್ಟಿದ ಜಿಂಕೆಯಂ
ತೆಯೂ ಯಾರೂ ಕೂಡದ ಕುರಿಗಳ ಹಾಗೂ ಪ್ರತಿ
ಯೊಬ್ಬನು ಸ್ವಜನದ ಕಡೆಗೆ ತಿರುಗಿಕೊಂಡು ಸ್ವದೇ
ಶಕ್ಕೆ ಓಡಿಹೋಗುವನು. ಸಿಕ್ಕಿಸಿಕ್ಕಿದವರೆಲ್ಲಾ ಇರಿ
ಯಲ್ಪಡುವರು, ಅಟ್ಟಿ ಹಿಡಿಯಲ್ಪಟ್ಟ ಸಕಲರೂ ಕತ್ತಿಗೆ
ತುತ್ತಾಗುವರು. ಅವರ ಮಕ್ಕಳನ್ನು ಬಂಡೆಗೆ ಅಪ್ಪ
ಳಿಸಿಬಿಡುವರು, ಅವರ ಮನೆಗಳನ್ನು ಸೂರೆಮಾಡು
ವರು, ಅವರ ಹೆಂಡರನ್ನು ಕೆಡಿಸುವರು.
ಇಗೋ, ಅವರಿಗೆ ವಿರುದ್ಧವಾಗಿ ಮೇದ್ಯರನ್ನು
ಎಬ್ಬಿಸುವೆನು; ಇವರು ಬೆಳ್ಳಿಯನ್ನು ಲಕ್ಷಿಸರು,
ಬಂಗಾರವನ್ನು ಪ್ರೀತಿಸರು. ಇವರ ಬಿಲ್ಲುಗಳು
ಯುವಕರನ್ನು ಚೂರುಚೂರು ಮಾಡುವವು; ಇವರು
ಗರ್ಭಫಲವನ್ನು ಕನಿಕರಿಸರು, ಇವರ ಕಣ್ಣು ಮಕ್ಕ
ಳನ್ನೂ ಕರುಣಿಸದು. ರಾಜ್ಯಗಳಿಗೆ ಶಿರೋರತ್ನವೂ
ಕಸ್ದೀಯರ ಮಹಿಮೆಗೆ ಭೂಷಣವೂ ಆದ ಬಾಬೆಲಿಗೆ
ದೇವರು ಕೆಡವಿದ ಸೊದೋಮ್ ಗೊಮೋರಗಳ
ಗತಿಯು ಸಂಭವಿಸುವದು. ಅದು ಎಂದಿಗೂ ನಿವಾಸ
ಸ್ಥಳವಾಗದು, ತಲತಲಾಂತರಕ್ಕೂ ಅಲ್ಲಿ ಜನರು ಒಕ್ಕ
ಲಿರರು; ಯಾವ ಅರಬಿಯನೂ ಗುಡಾರಹಾಕನು;
ಕುರುಬರು ಮಂದೆಗಳನ್ನು ತಂಗಿಸರು. ಅದು ಕಾಡು
ಮೃಗಗಳಿಗೆ ಹಕ್ಕೆಯಾಗುವದು, ಅಲ್ಲಿನ ಮನೆಗಳಲ್ಲಿ
ಗೂಬೆಗಳು ತುಂಬಿಕೊಳ್ಳುವವು, ಅಲ್ಲಿ ಉಷ್ಟ್ರಪಕ್ಷಿ
ಗಳು ವಾಸಿಸುವವು, ದೆವ್ವಗಳು ಕುಣಿದಾಡುವವು.
ಅರಮನೆಗಳಲ್ಲಿ ತೋಳಗಳೂ, ವಿಲಾಸಮಂದಿರಗಳಲ್ಲಿ
ನರಿಗಳೂ ಎದುರುಬದುರಾಗಿ ಕೂಗುವವು; ಅದಕ್ಕೆ
ಹೊತ್ತು ಸಮೀಪಿಸಿದೆ, ಇನ್ನು ದಿನ ಹೆಚ್ಚದು.
ಯೆಹೋವನು ಯಾಕೋಬ್ಯರನ್ನು ಕನಿಕರಿಸಿ 14
ಮತ್ತೆ ಇಸ್ರಾಯೇಲ್ಯರನ್ನು ಆರಿಸಿಕೊಂಡು ಸ್ವದೇ
ಶದಲ್ಲಿ ತಂಗಿಸಬೇಕೆಂದಿದ್ದಾನಷ್ಟೆ; ಪರದೇಶಿಗಳು
ಅವರೊಂದಿಗೆ ಕೂಡಿ ಬಂದು ಯಾಕೋಬನ ಮನೆತನ
ಕ್ಕೆ ಸೇರಿಕೊಳ್ಳುವರು. ಜನಾಂಗದವರು ಅವರನ್ನು
ಕರತಂದು ಸ್ವಸ್ಥಳಕ್ಕೆ ಸೇರಿಸುವರು; ಆಗ ಇಸ್ರಾಯೇ
ಲಿನ ಮನೆತನದವರು ಯೆಹೋವನ ದೇಶದಲ್ಲಿ ಆ
ಜನಾಂಗದವರನ್ನು ಗಂಡುಹೆಣ್ಣಾಳುಗಳನ್ನಾಗಿ ಇಟ್ಟು
ಕೊಳ್ಳುವರು; ಯಾರಿಗೆ ಸೆರೆಯಾಗಿದ್ದರೋ ಅವರನ್ನು
ಸೆರೆಹಿಡಿಯುವರು; ತಮ್ಮನ್ನು ಹಿಂಸಿಸಿದವರ ಮೇಲೆ
ಅಧಿಕಾರನಡಿಸುವರು.
ಮತ್ತು ಯೆಹೋವನು ನಿಮ್ಮ ಸಂಕಟದಿಂದಲೂ
ಕಳವಳದಿಂದಲೂ ಕಠಿನವಾದ ಬಿಟ್ಟಿಯ ಸೇವೆಯಿಂದ
ಲೂ ನಿಮ್ಮನ್ನು ವಿಶ್ರಾಂತಿಗೊಳಿಸುವ ದಿನದಲ್ಲಿ ಬಾಬೆ
ಲಿನ ರಾಜನಿಗೆ ವಿರುದ್ಧವಾದ ಈ ಪದ್ಯವನ್ನು ನೀವು
ಹೀಗೆ ಎತ್ತಿ ಹೇಳಬೇಕು—

ಆಹಾ, ಹಿಂಸಕನು ಕೊನೆಗಂಡನು, ರೇಗಾಟವು
ನಿಂತಿತು!
ಜನಗಳನ್ನು ಕೋಪೋದ್ರೇಕದಿಂದ ಎಡೆಬಿಡದೆ
ಹೊಡೆದು
ಜನಾಂಗಗಳನ್ನು ಸಿಟ್ಟಿನಿಂದ ತಡೆಯಿಲ್ಲದೆ ಹಿಂಸಿಸಿ
ಆಳುತ್ತಿದ್ದ ದುಷ್ಟರ ಕೋಲನ್ನೂ ರಾಜರ ದಂಡ
ವನ್ನೂ ಯೆಹೋವನು ಮುರಿದುಬಿಟ್ಟನು.
ಭೂಲೋಕವೆಲ್ಲಾ ಶಾಂತವಾಗಿ ವಿಶ್ರಾಂತಿಗೊಂಡಿದೆ,
ಹರ್ಷಧ್ವನಿಗೈಯುತ್ತಾರೆ.

1) ಅಥವಾ: ನನ್ನ ಮಹಿಮೆಯಲ್ಲಿ ಉಲ್ಲಾಸಿಸುವ.

ಹೌದು, ತುರಾಯಿಮರಗಳೂ ಲೆಬನೋನಿನ ದೇವ
ದಾರು ವೃಕ್ಷಗಳೂ
ನೀನು ಬಿದ್ದುಕೊಂಡ ಮೇಲೆ ಕಡಿಯುವವನು
ಯಾವನೂ ನಮ್ಮ ತಂಟೆಗೆ ಬಂದಿಲ್ಲವೆಂದು
ನಿನ್ನ ವಿಷಯವಾಗಿ ಉಲ್ಲಾಸಗೊಳ್ಳುತ್ತವೆ.
ಬರುತ್ತಿರುವ ನಿನ್ನನ್ನು ಎದುರುಗೊಳ್ಳುವದಕ್ಕೆ ಕೆಳ
ಗಡೆ ಪಾತಾಳವು ತಳಮಳಪಡುತ್ತದೆ;
ನಿನಗೋಸ್ಕರ ಪ್ರೇತಗಳನ್ನು, ಅಂದರೆ ಭೂಲೋಕ
ದಲ್ಲಿ [1]ಮುಖಂಡರಾಗಿದ್ದವರೆಲ್ಲರನ್ನು ಎಚ್ಚರ
ಗೊಳಿಸಿ
ಜನಾಂಗಗಳ ಸಕಲ ರಾಜರನ್ನು ಅವರವರ ಆಸನ
ಗಳಿಂದ ಎಬ್ಬಿಸುತ್ತದೆ.
ಇವರೆಲ್ಲಾ ನಿನ್ನನ್ನು ಕುರಿತು—ನೀನು ಸಹ ನಮ್ಮ
ಹಾಗೆ ಬಲಹೀನನಾದೆಯಾ?
ನಮ್ಮ ಸರಿಸಮಾನನಾದೆಯೋ? ಎಂದು ಹೇಳು
ತ್ತಾರೆ.
ನಿನ್ನ ವೈಭವವೂ ವೀಣಾನಾದವೂ ಪಾತಾಳಕ್ಕೆ ತಳ್ಳ
ಲ್ಪಟ್ಟಿವೆ;
ನಿನಗೆ ಹುಳಗಳೇ ಹಾಸಿಗೆ, ಕ್ರಿಮಿಗಳೇ ಹೊದಿಕೆ.
ಆಹಾ, ಉದಯನಕ್ಷತ್ರವೇ, ಬೆಳ್ಳಿಯೇ, ಆಕಾಶ
ದಿಂದ ಹೇಗೆ ಬಿದ್ದೆ!
ಜನಾಂಗಗಳನ್ನು ಕೆಡವಿದ ನೀನು ಕಡಿಯಲ್ಪಟ್ಟು
ನೆಲಕ್ಕೆ ಉರುಳಿದೆಯಲ್ಲಾ!
ನೀನು ನಿನ್ನ ಮನಸ್ಸಿನಲ್ಲಿ—ನಾನು ಆಕಾಶಕ್ಕೆ
ಹತ್ತಿ
ಉತ್ತರದಿಕ್ಕಿನ ಕಟ್ಟಕಡೆಯಿರುವ [2]ಸುರಗಣ
ಪರ್ವತದಲ್ಲಿ
ನನ್ನ ಸಿಂಹಾಸನವನ್ನು ದೇವರ ನಕ್ಷತ್ರಗಳಿಗಿಂತ
ಮೇಲೆ ಏರಿಸಿ ಆಸೀನನಾಗುವೆನು;
ಉನ್ನತ ಮೇಘಮಂಡಲದ ಮೇಲೆ ಏರಿ
ಉನ್ನತೋನ್ನತನಿಗೆ ಸರಿಸಮಾನನಾಗುವೆನು ಅಂದು
ಕೊಂಡಿದ್ದೆಯಲ್ಲಾ!
ಆದರೆ ನೀನು ಪಾತಾಳಕ್ಕೆ, ಅಧೋಲೋಕದ
ಅಗಾಧಸ್ಥಳಗಳಿಗೆ, ತಳ್ಳಲ್ಪಡುತ್ತಿದ್ದೀ.
ನಿನ್ನನ್ನು ಕಂಡವರು ದಿಟ್ಟಿಸಿ ನೋಡಿ ಯೋಚಿಸು
ತ್ತಾ—
ಭೂಮಿಯನ್ನು ನಡುಗಿಸಿ ರಾಜ್ಯಗಳನ್ನು ಕದಲಿಸಿ
ಪಟ್ಟಣಗಳನ್ನು ಕೆಡವಿ ಲೋಕವನ್ನು ಕಾಡನ್ನಾಗಿ
ಮಾಡಿ
ಸೆರೆಹಿಡಿದವರನ್ನು ಮನೆಗೆ ಬಿಡದೆ ಇದ್ದವನು ಇವ
ನೋ? ಅಂದುಕೊಳ್ಳುವರು.
ಜನಾಂಗಗಳ ಎಲ್ಲಾ ಅರಸರೂ, ಹೌದು, ಸಕಲ
ರಾಜರೂ
ತಮ್ಮ ತಮ್ಮ ಮನೆಗಳಲ್ಲಿ ವೈಭವದೊಡನೆ ದೀರ್ಘ
ನಿದ್ರೆಮಾಡುತ್ತಾರೆ.
ನೀನಾದರೋ ನಿನ್ನ ಗೋರಿಗೆ ದೂರವಾಗಿ ಕೆಟ್ಟ
ಮೊಳಿಕೆಯಂತೆ ಬಿಸಾಡಲ್ಪಟ್ಟಿದ್ದೀ;
ನಿನ್ನ ಶವವು ತುಳಿತಕ್ಕೆ ಈಡಾಗಿದೆ,
ಕತ್ತಿ ತಿವಿದು ಗುಂಡಿಯ ಕಲ್ಲುಗಳ ಪಾಲಾದ ಹತ
ರೇ ಅದಕ್ಕೆ ಹೊದಿಕೆ.
ನೀನು ಆ ರಾಜರಂತೆ ಗೋರಿಗೆ ಸೇರುವದಿಲ್ಲ; 20
ನಿನ್ನ ಪ್ರಜೆಯನ್ನು ಕೊಂದು ನಿನ್ನ ದೇಶವನ್ನು
ಹಾಳುಮಾಡಿದ್ದೀ,
ದುಷ್ಟರ ಸಂತಾನವು ನಿರಂತರವೂ ನಿನ್ನಾಮವಾಗಿ
ರುವದಲ್ಲವೆ.
ಪಿತೃಗಳ ಅಧರ್ಮದ ನಿಮಿತ್ತ ಇವನ ಮಕ್ಕಳಿಗೂ 21
ವಧ್ಯಸ್ಥಾನವನ್ನು ಸಿದ್ಧಮಾಡಿರಿ!
ಅವರು ತಲೆಯೆತ್ತಿ ಲೋಕವನ್ನು ವಶಪಡಿಸಿಕೊಂಡು
ಭೂಮಂಡಲದ ಮೇಲೆಲ್ಲಾ ಪಟ್ಟಣಗಳನ್ನು ಕಟ್ಟಿ
ಕೊಳ್ಳದಿರಲಿ!

ಸೇನಾಧೀಶ್ವರನಾದ ಯೆಹೋವನಿಂದ ಒಂದು 22
ಮಾತು ಹೊರಟಿತು—
ನಾನು ಅವರಿಗೆ ವಿರುದ್ಧವಾಗಿ ಎದ್ದು
ಬಾಬೆಲಿನಿಂದ ಹೆಸರನ್ನೂ ಜನಶೇಷವನ್ನೂ ಪುತ್ರ
ಪೌತ್ರರನ್ನೂ ಕತ್ತರಿಸಿಬಿಡುವೆನು;
ಮತ್ತು ಆ ಪ್ರದೇಶವನ್ನು ಜವುಗುನೆಲವನ್ನಾ 23
ಗಿಯೂ ಮುಳ್ಳುಹಂದಿಗೆ ಸೊತ್ತನ್ನಾಗಿಯೂ
ಮಾಡಿ
ನಾಶನವೆಂಬ ಬರಲಿನಿಂದ ಗುಡಿಸಿಬಿಡುವೆನು ಎಂದು
ಸೇನಾಧೀಶ್ವರನಾದ ಯೆಹೋವನು ಹೇಳಿದ್ದಾನೆ.

ಅಶ್ಶೂರದ ವಿಷಯವಾದ ದೈವೋಕ್ತಿ.

ಸೇನಾಧೀಶ್ವರನಾದ ಯೆಹೋವನು ಆಣೆಯಿಟ್ಟು 24
ಹೇಳುವದೇನಂದರೆ—ನಾನು ಸಂಕಲ್ಪಿಸಿದ್ದೇ ನೆರವೇ
ರುವದು, ಉದ್ದೇಶಿಸಿದ್ದೇ ನಿಲ್ಲುವದು, ಖಂಡಿತ.
ಅಶ್ಶೂರ್ಯರನ್ನು ನನ್ನ ದೇಶದಲ್ಲಿ ಮುರಿದು ನನ್ನ 25
ಬೆಟ್ಟಗಳ ಮೇಲೆ ತುಳಿದುಬಿಡುವೆನು; ಆಗ ಅವರು
ಹೂಡಿದ ನೊಗವು ನನ್ನ ಜನರಿಂದ ತೊಲಗಿ ಹೊರಿ
ಸಿದ ಹೊರೆಯು ನನ್ನ ಜನರ ಹೆಗಲಿಗೆ ದೂರವಾಗು
ವದು. ಇದೇ ಲೋಕದಲ್ಲೆಲ್ಲಾ ನೆರವೇರಬೇಕಾದ 26
ನನ್ನ ಉದ್ದೇಶ, ಇದೇ ಜನಾಂಗಗಳ ಮೇಲೆಲ್ಲಾ
ಚಾಚಿದ ನನ್ನ ಕೈ. ಸೇನಾಧೀಶ್ವರನಾದ ಯೆಹೋ 27
ವನು ಉದ್ದೇಶಮಾಡಿದ್ದಾನೆ, ಅದನ್ನು ಯಾರು
ವ್ಯರ್ಥಪಡಿಸುವರು? ಆತನ ಕೈ ಚಾಚಿದೆ, ಹಿಂದಕ್ಕೆ
ತಳ್ಳುವವರು ಯಾರು? ಎಂಬದೇ.

ಫಿಲಿಷ್ಟಿಯದ ವಿಷಯವಾದ ದೈವೋಕ್ತಿ.

ಅರಸನಾದ ಆಹಾಜನು ಕಾಲವಾದ ವರುಷದಲ್ಲಿ 28
ಈ ದೈವೋಕ್ತಿಯು ಕೇಳ ಬಂತು—ಎಲೈ, ಎಲ್ಲಾ 29
ಫಿಲಿಷ್ಟಿಯರೇ, ನಿಮ್ಮನ್ನು ಹೊಡೆದ ಕೋಲು ಮುರಿ
ದುಹೋಯಿತೆಂದು ಉಲ್ಲಾಸಗೊಳ್ಳದಿರಿ; ಹಾವಿನ
ಬೀಜದಿಂದ ಮಹಾ ನಾಗವುಂಟಾಗುವದು, ಆ
ಬೀಜದ ಸಂತತಿಯು ಹಾರುವ ಅಗ್ನಿಮಯಸರ್ಪವೇ.

1) ಮೂಲ: ಕೋತಗಳಾಗಿದ್ದವರೆಲ್ಲರನ್ನು. 2) ಮೂಲ: ಸಮೂಹ ಪರ್ವತ.

30 [ನನ್ನ ಜನರಲ್ಲಿ] ಬಡತನದ ಹಿರಿಯ ಮಕ್ಕಳಿಗೂ
ಪೋಷಣೆಯಾಗುವದು, ದಿಕ್ಕಿಲ್ಲದವರೂ ನಿರ್ಭಯ
ವಾಗಿ ಮಲಗಿಕೊಳ್ಳುವರು; ನಿಮ್ಮ ಸಂತಾನವನ್ನೋ
ಕ್ಷಾಮದಿಂದ ಸಾಯಿಸುವೆನು, ನಿಮ್ಮಲ್ಲಿ ಉಳಿದವ
31 ರನ್ನು [ಆ ಸರ್ಪವೇ] ಕೊಲ್ಲುವದು. ಪುರದ್ವಾರವೇ,
ಗೋಳಾಡು! ಪಟ್ಟಣವೇ, ಕೂಗು! ಎಲ್ಲಾ ಫಿಲಿಷ್ಟಿ
ಯರೇ, ಕುಂದಿಹೋಗಿರಿ! ಬಡಗಲಿಂದ ಹೊಗೆಯು
ಬರುತ್ತಿದೆ. ಆ ವ್ಯೂಹದಲ್ಲಿ ಹಿಂದು ಬೀಳುವವರಿಲ್ಲ.
32 ಹೀಗಿರಲು ಪರಜನಾಂಗದ ರಾಯಭಾರಿಗಳಿಗೆ ಏನು
ತ್ತರ ಕೊಡಬೇಕಂದರೆ ಯೆಹೋವನು ಚೀಯೋ
ನನ್ನು ಸ್ಥಾಪಿಸಿದ್ದಾನೆ, ಆತನ ಜನರಲ್ಲಿನ ದೀನದರಿದ್ರರು
ಅದನ್ನೇ ಆಶ್ರಯಿಸಿಕೊಳ್ಳುವರು ಎಂಬದೇ.

### ಮೋವಾಬಿನ ವಿಷಯವಾದ ದೈವೋಕ್ತಿ.

15 ಮೋವಾಬಿನ ವಿಷಯವಾದ ದೈವೋಕ್ತಿ.
ಒಂದು ರಾತ್ರಿಯಲ್ಲಿ ಮೋವಾಬಿನ ಆರ್‌ಪಟ್ಟಣವು
ಹಾಳಾಗಿ ನಿರ್ಮೂಲವಾಯಿತಲ್ಲಾ! ಹೌದು, ಒಂದು
ರಾತ್ರಿಯಲ್ಲಿ ಮೋವಾಬಿನ ಕೀರ್ ಪಟ್ಟಣವೂ ಹಾಳಾಗಿ
2 ನಿರ್ಮೂಲವಾಯಿತು. ಬಯಿತ್ ಮತ್ತು ದೀಬೋನ್
ಊರುಗಳವರು ಅಳುವದಕ್ಕಾಗಿ ಪೂಜಾಸ್ಥಾನಗಳಿಗೆ
ಹತ್ತಿದ್ದಾರೆ; ನೆಬೋವಿನಲ್ಲಿಯೂ ಮೇದೆಬದಲ್ಲಿಯೂ
ಮೋವಾಬ್ಯರು ಗೋಳಾಡುತ್ತಾರೆ; ಎಲ್ಲರ ತಲೆಯು
ಬೋಳು, ಎಲ್ಲರ ಗಡ್ಡವು ವಿಕಾರವಾಗಿ ಕತ್ತರಿಸಿದೆ.
3 ಬೀದಿಗಳಲ್ಲಿ ತಿರುಗುವವರು ನಡುವಿಗೆ ಗೋಣಿತಟ್ಟು
ಸುತ್ತಿಕೊಂಡಿದ್ದಾರೆ; ತಮ್ಮ ತಮ್ಮ ಮಾಳಿಗೆಗಳ
ಮೇಲೆಯೂ ಚೌಕಗಳಲ್ಲಿಯೂ ಎಲ್ಲರು ಅರಚುತ್ತಾ
ಕಣ್ಣೀರನ್ನು ಸುರಿಸಿ ಸುರಿಸಿ ಇಳಿದು ಹೋಗಿದ್ದಾರೆ.
4 ಹೆಷ್ಬೋನ್ ಮತ್ತು ಎಲೆಯಾಲೆ ಕೂಗುತ್ತವೆ; ಇವು
ಗಳ ರೋದನವು ಯಹಜಿನ ವರೆಗೂ ಕೇಳಬರುತ್ತದೆ;
ಇದರಿಂದ ಮೋವಾಬಿನ ಭಟರು ಕಿರಚಿಕೊಳ್ಳುತ್ತಾರೆ;
ಅದರ ಆತ್ಮವು ತನ್ನೊಳಗೆ ತತ್ತರಿಸುತ್ತದೆ.
5 ನನ್ನ ಹೃದಯವು ಮೋವಾಬಿನ ನಿಮಿತ್ತವಾಗಿ
ಮೊರೆಯಿಡುತ್ತದೆ; 1)ಅಲ್ಲಿಂದ ಪಲಾಯನವಾದವರು
ಚೋಯರಿಗೂ ಎಗ್ಲತ್ ಶೆಲಿಶೀಯಕ್ಕೂ ಓಡಿಹೋಗು
ತ್ತಾರೆ, ಅಳುತ್ತಾ ಲೂಹೀಥ್ ದಿಣ್ಣೆಯನ್ನು ಹತ್ತು
ತ್ತಾರೆ, ಹೊರೊನಯಿಮಿನ ದಾರಿಯಲ್ಲಿ ನಡೆಯು
ತ್ತಾ ನಾಶನವಾದೆವಲ್ಲಾ ಎಂದು ದನಿಗೈಯುತ್ತಾರೆ.
6 ನಿಮ್ರೀಮ್ ಹೊಳೆಯು ಹಾಳಾಯಿತು, ಹಸಿಹುಲ್ಲು
ಬಾಡಿತು, ಮೇವು ತೀರಿತು, ಯಾವ ಹಸುರೂ ಇಲ್ಲ.
7 ಆದಕಾರಣ ತಾವು ಸಂಪಾದಿಸಿದ ಆಸ್ತಿಯನ್ನೂ
ಕೂಡಿಸಿಟ್ಟ ಸೊತ್ತನ್ನೂ ನೀರವಂಜಿಯ ಹೊಳೆಯ
8 ಆಚೆಗೆ ಹೊತ್ತುಕೊಂಡು ಹೋಗುತ್ತಾರೆ. ಪ್ರಲಾಪವು
ಮೋವಾಬಿನ ಎಲ್ಲೆಗಳ ತನಕ ಹಬ್ಬಿದೆ, ಅದರ ಅರ
ಚಾಟವು ಎಗ್ಲಯಿಮಿನ ವರೆಗೂ ಬೆಯೇರ್ ಏಲೀ
9 ಮಿನ ಪರ್ಯಂತವೂ ವ್ಯಾಪಿಸಿದೆ. ದೀಮೋನಿನ

ನೀರೆಲ್ಲಾ ರಕ್ತಮಯವಾಯಿತು; ಮತ್ತು ದೀಮೋ
ನಿನ ಮೇಲೆ ಹೆಚ್ಚು ಬಾಧೆಯನ್ನು, ಅಂದರೆ ಮೋವಾ
ಬ್ಯರಲ್ಲಿ ತಪ್ಪಿಸಿಕೊಂಡವರ ಮೇಲೆಯೂ ದೇಶದ
ಉಳಿದವರ ಮೇಲೆಯೂ ಸಿಂಹವನ್ನು, ಬರಮಾಡು
ವೆನು.
ದೇಶವನ್ನಾಳುವವನಿಗೆ ಕಪ್ಪವಾಗಿ ಕೊಡತಕ್ಕ
ಕುರಿಗಳನ್ನು ಅರಣ್ಯದ ಕಡೆಯಿಂದ ಸೆಲದಿಂದ
ಚೀಯೋನ್ ನಗರಿಯ ಪರ್ವತಕ್ಕೆ ಕಳುಹಿಸಿ
ಅರ್ನೋನ್ ನದಿಯ ಹಾಯ್ಗಡಗಳಲ್ಲಿ ಮೋವಾಬಿ
2)ಊರುಗಳವರು ಅಲೆಯುವ ಪಕ್ಷಿಗಳಂತೆಯ
ಗೂಡಿನಿಂದ ಚದರಿದ ಮರಿಗಳ ಹಾಗೂ ಆಗುವರ
ಆಲೋಚನೆಹೇಳಿರಿ, ತೀರ್ಮಾನಿಸಿರಿ; ಮ
ಮಧ್ಯಾಹ್ನದಲ್ಲಿ ನಿಮ್ಮ ನೆರಳು ರಾತ್ರಿಯ ಕತ್ತ
ನಂತೆ ದಟ್ಟವಾಗಿರಲಿ; ದೇಶಭ್ರಷ್ಟರನ್ನು ಮರೆಮಾಜಿ
ಅಲೆಯುವವರನ್ನು ಬೈಲಿಗೆ ತರಬೇಡಿರಿ. ನಮ್ಮ ದೇ
ದಿಂದ ವಲಸೆಹೋದವರು ನಿಮ್ಮಲ್ಲಿ ವಾಸಿಸ
ಮೋವಾಬ್ಯರು ಬಲಾತ್ಕಾರಿಗಳಿಗೆ ವಶವಾಗದ ಹಾ
ಆಶ್ರಯವಾಗಿರಿ. ಹಿಂಡಿ ಹಿಂಸಿಸುವವರು [ನಿಮ್ಮ
ದೇಶದಿಂದ ನಿರ್ಮೂಲರಾದರು, ಬಲಾತ್ಕಾರವು
ರಿತು, ತುಳಿದುಬಿಡುವವರು ಮುಗಿದುಹೋದರಷ್ಟೆ
ಇದಲ್ಲದೆ ಸಿಂಹಾಸನವು ಕೃಪಾಧಾರದ ಮೇ
ಸ್ಥಾಪಿತವಾಗಿದೆ; ರಾಜ್ಯಭಾರಪ್ರವೀಣನೂ ಧರ್ಮಾ
ಸಕ್ತನೂ ನ್ಯಾಯನಿಪುಣನೂ ಆದವನು ದಾವೀದ
ಗುಡಾರದಲ್ಲಿನ ಆ ಸಿಂಹಾಸನದ ಮೇಲೆ ಸತ್ಯಪ
ನಾಗಿ ಕುಳಿತಿದ್ದಾನೆ.
ಮೋವಾಬ್ಯರಿಗೆ ಬಹು ಸೊಕ್ಕೇರಿದೆ ಎಂ
ಅವರ ಹೆಮ್ಮೆಯ ಸುದ್ದಿಯೂ ಅವರ ಅಹಂಕಾ
ದಂಭ ಗರ್ವೋದ್ರೇಕ ಇವುಗಳ ಸಮಾಚಾರವೂ ನಮ
ಕಿವಿಗೆ ಬಿದ್ದಿವೆ. ಅವರು ಕೊಚ್ಚಿಕೊಳ್ಳುವದೆಲ
ಬರೀ ಬುರುಡೆಯೇ. ಆದಕಾರಣ ಮೋವಾಬಿ
ನಿಮಿತ್ತ ಮೋವಾಬೇ ಗೋಳಾಡುವದು; ಪ್ರತಿಯೊಬ
ನೂ ಪ್ರಲಾಪಿಸುವನು; ಮುರಿದುಹೋದವರಾ
ನೀವು ಕೀರ್ ಹರೆಷೆಥಿನ ದೀಪದ್ರಾಕ್ಷೆಯು ಹಾಳಾಯಿ
ತಲ್ಲಾ ಎಂದು ನರಳುವಿರಿ. ಹೆಷ್ಬೋನಿನ ಭೂಮಿ
ಯೂ ಸಿಬ್ಮದ ದ್ರಾಕ್ಷಾಲತೆಯೂ ನಿಸ್ಸಾರವಾಗಿವ
3)ಯಜ್ಜೇರಿನ ವರೆಗೆ ವ್ಯಾಪಿಸಿ ಅರಣ್ಯದಲ್ಲಿ ಹಬ
ಸಮುದ್ರದಾಚೆಗೆ ಸೇರುವಷ್ಟು ವಿಶಾಲವಾಗಿ ತನ
ಶಾಖೆಗಳನ್ನು ಹರಡಿಕೊಂಡಿದ್ದ ಮೋವಾಬಿನ ರಾ
ದ್ರಾಕ್ಷೆಗಳನ್ನು ಜನಾಂಗಗಳ ಒಡೆಯರು ಮುರಿದ
ಬಿಟ್ಟಿದ್ದಾರೆ. ಹೀಗಿರಲು ಸಿಬ್ಮದ ದ್ರಾಕ್ಷಾಲತೆಯ
ನಿಮಿತ್ತ ಯಜ್ಜೇರಿನವರೊಂದಿಗೆ ನಾನು ಅಳುವೆನು
ಹೆಷ್ಬೋನೇ, ಎಲ್ಲಾಲೇ, ನನ್ನ ಕಣ್ಣೀರಿನಿಂದ ನಿಮ
ನ್ನು ತೋಯಿಸುವೆನು; ನಿಮ್ಮ ಹಣ್ಣಿನ ಮೇಲೆಯ
ಬೆಳೆಯ ಮೇಲೆಯೂ ಬಿದ್ದು ಆರ್ಬಟಿಸುತ್ತಾರ
ಹರ್ಷಾನಂದಗಳು ತೋಟಗಳಿಂದ ತೊಲಗಿವೆ, ದ್ರಾಕ್ಷೆ
ಯ ತೋಟಗಳಲ್ಲಿ ಉತ್ಸಾಹಧ್ವನಿಯೂ ಉಲ್ಲಾಸ

1) ಪಾಠಾಂತರ: ಅದರ ಅಗುಳಿಗಳು (ಅಂದರೆ ಪ್ರಧಾನರು). 2) ಮೂಲ: ಕುಮಾರ್ತೆಯರು. 3) ಅಥವಾ: ಅಲ್ಲಿನ
ದ್ರಾಕ್ಷೆಗಳು ಜನಾಂಗಗಳ ಒಡೆಯರನ್ನು ಸೋಲಿಸಿದ್ದವು; ಯಜ್ಜೇರಿನ ವರೆಗೆ ವ್ಯಾಪಿಸಿ ಅರಣ್ಯದಲ್ಲಿ ಹಬ್ಬಿದ್ದವು; ಅವುಗಳ ಶಾಖೆಗಳು
ಕೊಂಡು ಸಮುದ್ರದಾಚೆಗೆ ಸೇರಿದ್ದವು.

ಆರ್ಬಟವೂ ಇರುವದಿಲ್ಲ, ತುಳಿಯುವವರು ತೊಟ್ಟಿ
ಗಳಲ್ಲಿ ದ್ರಾಕ್ಷಾರಸವನ್ನು ತುಳಿದು ತೆಗೆಯುವದಿಲ್ಲ,
1 ಅವರ ಕೂಗನ್ನು ನಿಲ್ಲಿಸಿಬಿಟ್ಟಿದ್ದೇನೆ. ಆದದರಿಂದ
ಮೋವಾಬಿನ ನಿಮಿತ್ತ ನನ್ನ ಹೃದಯವು, ಕೀರ್ಹೆರೆ
ಸಿನ ನಿಮಿತ್ತ ನನ್ನ ಅಂತರಂಗವು, ಕಿನ್ನರಿಯಂತೆ
2 ಅಲುಗಿ ನುಡಿಯುತ್ತದೆ. ಮೋವಾಬ್ಯರು ಸನ್ನಿಧಿಗೆ
ಸೇರಿ ದಿಣ್ಣೆಯಲ್ಲಿನ ಪೂಜೆಯಿಂದ ಬಹು ಆಯಾಸ
ಗೊಂಡು ಪ್ರಾರ್ಥನೆಗಾಗಿ ತಮ್ಮ ದೇವಾಲಯಕ್ಕೆ
ಬಂದರೂ ಪ್ರಾರ್ಥನೆಯು ಸಫಲವಾಗದು.
3 ಯೆಹೋವನು ಮೋವಾಬಿನ ವಿಷಯವಾಗಿ ಹಿಂದೆ
ನುಡಿದ ಉಕ್ತಿಯು ಇದೇ.
4 ಈಗ ಯೆಹೋವನು ಹೇಳುವದೇನಂದರೆ—ಆಳಿನ
ಒಂದೊಂದು ವರುಷವಾಯಿದೆಗೆ ಸರಿಯಾದ ಮೂರು
ವರುಷಕ್ಕೇ ಮೋವಾಬಿನ ಮಹಿಮೆಯೂ ಅಲ್ಲಿನವರ
ದೊಡ್ಡ ಗುಂಪೂ ಹೀನಾಯಕ್ಕೆ ಈಡಾಗುವವು; ಉಳಿದ
ಜನವು ಹೆಚ್ಚದೆ ಕೇವಲ ಸ್ವಲ್ಪವಾಗಿಯೇ ಇರುವದು
ಎಂಬದೇ.

ದಮಸ್ಕದ ವಿಷಯವಾದ ದೈವೋಕ್ತಿ.

**17** ದಮಸ್ಕದ ವಿಷಯವಾದ ದೈವೋಕ್ತಿ.
ಆಹಾ, ದಮಸ್ಕವು ಇನ್ನು ಊರಾಗಿರದೆ ಹಾಳು
2 ದಿಬ್ಬವಾಗುವದು. ಅರೋಯೇರಿನ ಪಟ್ಟಣಗಳು
ನಿರ್ಜನವಾಗಿ ಮಂದೆಗಳಿಗೆ ಆಸರೆಯಾಗುವವು;
ಅವು ಯಾರ ಹೆದರಿಕೆಯೂ ಇಲ್ಲದೆ ಅಲ್ಲಿ ತಂಗು
ವವು. ಎಫ್ರಾಯಿಮಿಗೆ ರಕ್ಷಣೆಯಾಗಿರುವ ಕೋಟೆ
ಯೂ ದಮಸ್ಕವು ನಡಿಸುವ ರಾಜ್ಯಾಧಿಕಾರವೂ ಇಲ್ಲ
ವಾಗುವವು; ಅರಾಮ್ಯರಲ್ಲಿ ಉಳಿದವರಿಗೆ ಇಸ್ರಾ
ಯೇಲ್ಯರ ಮಹಿಮೆಯ ಗತಿಯಾಗುವದು ಎಂಬದು
ಸೇನಾಧೀಶ್ವರನಾದ ಯೆಹೋವನ ನುಡಿ.
ಆ ದಿನದಲ್ಲಿ ಯಾಕೋಬಿನ ಮಾಂಸದ ಕೊಬ್ಬು
ಕರಗಿ ಅದರ ಮಹಿಮೆಯು ಕ್ಷೀಣವಾಗುವದು.
ಹೊಲಕೊಯ್ಯುವವನು ದಂಟುಗಳನ್ನು ಒಟ್ಟುಗೂ
ಡಿಸಿ ಕೈಯಿಂದ ತೆನೆಗಳನ್ನು ಕತ್ತರಿಸುವ ಹಾಗಿರು
ವದು; ಹೌದು, ರೆಫಾಯಿಮ್ ತಗ್ಗಿನಲ್ಲಿ ಹಕ್ಕಲನ್ನು
ಆರಿಸುವಂತಿರುವದು. ಆದರೂ ಎಣ್ಣೆಯ ಮರವನ್ನು
ಬಡಿದ ಬಳಿಕ ಮೇಲಿನ ಕೊಂಬೆಯ ಕೊಟ್ಟಕೊನೆ
ಯಲ್ಲಿ ಎರಡು ಮೂರು ಕಾಯಿಗಳು, ಫಲವತ್ತಾದ
ಆ ಮರದ ರೆಂಬೆಗಳಲ್ಲೆಲ್ಲಾ ನಾಲ್ಕೈದು ಕಾಯಿಗಳು,
ನಿಂತಿರುವಂತೆ ಹಕ್ಕಲು ಅದರಲ್ಲಿ ಉಳಿದಿರುವದು
ಎಂದು ಇಸ್ರಾಯೇಲ್ಯರ ದೇವರಾದ ಯೆಹೋವನು
ನುಡಿಯುತ್ತಾನೆ. ಆ ದಿನದಲ್ಲಿ ಜನರು ತಮ್ಮ ಕೈ
ಯಿಂದ ಮಾಡಿದ ಬಲಿಪೀಠಗಳನ್ನು ಲಕ್ಷಿಸದೆಯೂ
ತಮ್ಮ ಬೆರಳುಗಳಿಂದ ನಿರ್ಮಿಸಿದ ಅಶೇರವೆಂಬ
ವಿಗ್ರಹಸ್ತಂಭಗಳನ್ನಾಗಲಿ ಸೂರ್ಯಸ್ತಂಭಗಳನ್ನಾಗಲಿ
ದೃಷ್ಟಿಸದೆಯೂ ತಮ್ಮ ಸೃಷ್ಟಿಕರ್ತನನ್ನೇ ಲಕ್ಷಿಸಿ
ಇಸ್ರಾಯೇಲ್ಯರ ಸದಮಲಸ್ವಾಮಿಯ ಕಡೆಗೇ ಕಣ್ಣಿಡು
ವರು. ಆ ದಿನದಲ್ಲಿ ದೇಶದ ಬಲವಾದ ಕೋಟೆ 9
ಗಳು 1)[ಪೂರ್ವದಲ್ಲಿ] ಇಸ್ರಾಯೇಲ್ಯರ ಭಯದಿಂದ
ನಿರ್ಜನವಾಗಿದ್ದ ಈಗ ಅಡವಿಯಲ್ಲಿಯೂ ಬೆಟ್ಟಗಳ
ತುದಿಯ ಮೇಲೂ ಕಾಣುವ ಪಾಳುನಿವೇಶನಗಳಂತಿ
ರುವವು; ಅಂತು ದೇಶವೆಲ್ಲಾ ಹಾಳಾಗಿರುವದು;
ಏಕಂದರೆ ನೀನು ನಿನ್ನ ರಕ್ಷಕನಾದ ದೇವರನ್ನು 10
ಮರೆತುಬಿಟ್ಟು ನಿನ್ನ ಆಶ್ರಯಗಿರಿಯನ್ನು ಸ್ಮರಿಸ
ಲಿಲ್ಲ; ಹೀಗಿರಲು ನೀನು 2)ಇಷ್ಟವಾದ ಗಿಡಗಳನ್ನು
ನೆಟ್ಟು ನಿನ್ನ ದೇಶದಲ್ಲಿ 3)ದೇಶಾಂತರದ ಸಸಿಗಳನ್ನು
ಹಾಕಿದ್ದೀ; ಬೀಜವನ್ನು ನೆಟ್ಟ ದಿವಸದಲ್ಲಿಯೇ ಬೇಲಿ 11
ಕಟ್ಟಿ ಮಾರಣೆಯ ಬೆಳಿಗ್ಗೆ ಮೊಳೆಯುವಂತೆ ಮಾಡಿದ್ದೀ;
4)ಆದರೆ ಬೆಳೆಯನ್ನು ಕುಪ್ಪೆಯಾಗಿ ಕೂಡಿಸುವ ದಿನವು
ವ್ಯಾಧಿಯ ಮತ್ತು ವಿಪರೀತವ್ಯಥೆಯ ದಿವಸವೇ.

ಅಶ್ಶೂರದ ವಿಷಯವಾದ ದೈವೋಕ್ತಿ.

ಆಹಾ, ಸಮುದ್ರವು ಘೋರ್ಗರೆಯುವಂತೆ ಘೋರ್ಗರೆ 12
ಯುವ ಬಹು ಜನಾಂಗಗಳ ಗದ್ದಲ! ಮಹಾ ಜಲ
ಪ್ರವಾಹಗಳು ಘೋಷಿಸುವಂತೆ ಘೋಷಿಸುವ ಜನ
ಗಳ ಘೋಷ! ಹೌದು, ಮಹಾ ಜಲಪ್ರವಾಹಗಳು 13
ಘೋಷಿಸುವಂತೆ ಜನಾಂಗಗಳು ಘೋಷಿಸುತ್ತಿವೆ!
ಆದರೆ ಆತನು ಅವರನ್ನು ಗದರಿಸುವಾಗ ಅವರು
ದೂರ ಓಡಿಹೋಗಿ ಬೆಟ್ಟಗಳಲ್ಲಿ ಗಾಳಿಗೆ ಸಿಕ್ಕಿದ
ಹೊಟ್ಟಿನಂತೆಯೂ ಸುಂಟರಗಾಳಿಯಿಂದ ಸುತ್ತಿಯಾ
ಡುವ ದೂಳಿನಂತೆಯೂ ಅಟ್ಟಲ್ಪಡುವರು. ಇಗೋ, 14
ಸಂಜೆಯಲ್ಲಿ ದಿಗಿಲುಬಿದ್ದು ಉದಯದೊಳಗಾಗಿ ಇಲ್ಲ
ವಾಗುವರು! ನಮ್ಮನ್ನು ಸೂರೆಮಾಡುವವರಿಗೆ ಇದೇ
ಗತಿ, ನಮ್ಮನ್ನು ಕೊಳ್ಳೆಹೊಡೆಯುವವರ ಪಾಡು ಇದೇ.

ಕೂಷಿನ ವಿಷಯವಾದ ದೈವೋಕ್ತಿ.

**18** ಓಹೋ, ಕೂಷಿನ ನದಿಗಳ ಆಚೆಯಲ್ಲಿರುವ
5)ಸೀಮೆ, ರೆಕ್ಕೆಗಳು ಪಟಪಟನೆ ಆಡುವ ನಾಡು,
ರಾಯಭಾರಿಗಳನ್ನು ನೀರಿನ ಮೇಲೆ ಬೆಂಡಿನ ದೋಣಿ
ಗಳಲ್ಲಿ ನದೀ ಮಾರ್ಗವಾಗಿ ಕಳುಹಿಸುವ ದೇಶ,
ಹೌದು.
ವೇಗವುಳ್ಳ ದೂತರೇ, ಉನ್ನತವಾದ ನುಣುಪಿನ 2
ಮೈಯವರೂ ಸರ್ವದಾ ಭಯಂಕರರೂ ಮಹಾ
ಬಲದಿಂದ [ಶತ್ರುಗಳನ್ನು] ತುಳಿಯುವವರೂ ನದಿಗ
ಳಿಂದ ವಿಂಗಡವಾಗಿರುವ ದೇಶದ ನಿವಾಸಿಗಳೂ ಆದ
ಜನಾಂಗದವರ ಬಳಿಗೆ ಹೋಗಿರಿ. ಸಮಸ್ತ ಭೂನಿವಾಸಿ 3
ಗಳೇ, ಲೋಕದ ಸಕಲ ಜನರೇ, ಬೆಟ್ಟಗಳಲ್ಲಿ ಧ್ವಜ
ವನ್ನೆತ್ತುವಾಗ ನೋಡಿರಿ, ತುತೂರಿಯನ್ನೂದುವಾಗ
ಕೇಳಿರಿ! ಯೆಹೋವನು ನನಗೆ ಹೇಳಿರುವದೇನಂದರೆ, 4
ಬಿಸಿಲಿನಲ್ಲಿ ಜಳಜಳಿಸುವ ದಗೆಯಂತೆಯೂ ಸುಗ್ಗಿ

1) ಪಾಠಾಂತರ: ಇಸ್ರಾಯೇಲ್ಯರ ಭಯದಿಂದ ಅಮೋರಿಯರೂ ಹಿವ್ವಿಯರೂ ಬಿಟ್ಟುಹೋದ. 2) ಅಥವಾ: ಕಾಮದೇವನ.
ಅಥವಾ: ಅನ್ಯದೇವತೆಯ. 4) ಅಥವಾ: ಆದರೆ ವ್ಯಾಧಿಯ ಮತ್ತು ವಿಪರೀತವ್ಯಥೆಯ ದಿನದಲ್ಲಿ ಬೆಳೆ ಮಾಯವಾಗುವದು.
ಅಥವಾ: . . . . ಸೀಮೆಯೇ, . . . ನಾಡೇ, . . . ದೇಶವೇ!

ಯಲ್ಲಿನ ಮಂಜಿನ ಮೋಡದ ಹಾಗೂ ನಾನು ನನ್ನ
ವಾಸಸ್ಥಾನದಲ್ಲಿ ಸುಮ್ಮನಿದ್ದು ದೃಷ್ಟಿಸುತ್ತಿರುವೆನು
5 ಎಂಬದೇ. ಕೊಯ್ಲಿನ ಕಾಲಕ್ಕೆ ಮುಂಚೆ ಮೊಗ್ಗು
ಬಿಟ್ಟಾದ ಮೇಲೆ ಹೂವಿನಿಂದಾದ ಹೀಚು ದೋರೆ
ಗಾಯಿಯಾಗುತ್ತಿರುವಾಗ ಆತನು ಕುಡುಗೋಲು
ಗಳಿಂದ ಕುಡಿಗಳನ್ನು ಕತ್ತರಿಸಿ ಚಿಗುರುಗಳನ್ನು
6 ಕಡಿದುಹಾಕುವನು. 1)ಕಡಿಯಲ್ಪಟ್ಟವರ ಶವಗಳೆ
ಲ್ಲಾ ಬೆಟ್ಟದ ಹದ್ದುಗಳಿಗೂ ಕಾಡುಮೃಗಗಳಿಗೂ
ಪಾಲಾಗಿ ಬಿದ್ದಿರುವವು, ಬೇಸಿಗೆಯಲ್ಲಿ ಹದ್ದುಗಳಿಗೂ
ಹಿಮಗಾಲದಲ್ಲಿ ಕಾಡುಮೃಗಗಳಿಗೂ ಜೀವನವಾಗು
7 ವವು. ಆ ಕಾಲದಲ್ಲಿ ಉನ್ನತರಾದ ನುಣುಪಿನ ಮೈ
ಯವರೂ ಸರ್ವದಾ ಭಯಂಕರರೂ ಮಹಾ ಬಲ
ದಿಂದ [ಶತ್ರುಗಳನ್ನು] ತುಳಿಯುವವರೂ ನದಿಗಳಿಂದ
ವಿಂಗಡವಾಗಿರುವ ದೇಶದ ನಿವಾಸಿಗಳೂ ಆದ
ಜನಾಂಗದವರು ಸೇನಾಧೀಶ್ವರನಾದ ಯೆಹೋವನ
ನಾಮವುಹತ್ತಿರುವ ಚೀಯೋನ್ ಪರ್ವತಕ್ಕೆ ಆತನಿ
ಗೋಸ್ಕರ 2)ಕಾಣಿಕೆಯನ್ನು ತರುವರು.

ಐಗುಪ್ತದ ವಿಷಯವಾದ ದೈವೋಕ್ತಿ.

**19** ಐಗುಪ್ತದ ವಿಷಯವಾದ ದೈವೋಕ್ತಿ.
ಇಗೋ, ಯೆಹೋವನು ವೇಗಮೇಘವಾಹನನಾಗಿ
ಐಗುಪ್ತಕ್ಕೆ ಬರುವನು; ಆತನು ಸಮ್ಮುಖನಾದಾಗ
ಐಗುಪ್ತದ ವಿಗ್ರಹಗಳು ನಡುಗುವವು, ಐಗುಪ್ತ್ಯರ
2 ಹೃದಯವು ತಮ್ಮೊಳಗೆ ಕರಗಿ ನೀರಾಗುವದು. ಐಗು
ಪ್ತ್ಯರನ್ನು ಐಗುಪ್ತ್ಯರ ಮೇಲೆಯೇ ಎಬ್ಬಿಸುವೆನು;
ಅಣ್ಣತಮ್ಮಂದಿರು, ನೆರೆಹೊರೆಯವರು, ಪಟ್ಟಣ ಪಟ್ಟಣ
ಗಳು, ರಾಷ್ಟ್ರರಾಷ್ಟ್ರಗಳು ಪರಸ್ಪರವಾಗಿ ಹೋರಾಡು
3 ವವು. ಐಗುಪ್ತದ ಅಂತರಾತ್ಮವು ಬರಿದಾಗುವದು;
ಅದರ ಆಲೋಚನೆಯನ್ನು ಭಂಗಪಡಿಸುವೆನು; ಅಲ್ಲಿ
ಯವರು ವಿಗ್ರಹಗಳನ್ನೂ ಮಂತ್ರಗಾರರನ್ನೂ ಪ್ರೇತ
ವಿಚಾರಕರನ್ನೂ ಬೇತಾಳಿಕರನ್ನೂ ಆಶ್ರಯಿಸುವರು.
4 ಇದಲ್ಲದೆ ಐಗುಪ್ತ್ಯರನ್ನು ಕ್ರೂರನಾದ ಒಡೆಯನ
ಕೈಗೆ ಒಪ್ಪಿಸುವೆನು; ಭಯಂಕರನಾದ ರಾಜನು ಅವ
ರನ್ನಾಳುವನು ಎಂದು ಸೇನಾಧೀಶ್ವರನಾದ ಯೆಹೋ
ವನು ನುಡಿಯುತ್ತಾನೆ.
5 3)ಮಹಾನದಿಯ ನೀರು ಬತ್ತಿಹೋಗುವದು,
6 ಪ್ರವಾಹವು ಇಂಗಿ ಒಣಗುವದು, ಕಾಲಿವೆಗಳು ನಾರು
ವವು, ಐಗುಪ್ತದ ಹೊಳೆಗಳು ಇಳಿದು ನೀರಿಲ್ಲದೆ
ಹೋಗುವವು, ಆಪೂ ಜಂಬುಹುಲ್ಲೂ ಬಾಡುವವು.
7 ನದಿಯ ಪಕ್ಕದ ತೀರಭೂಮಿಯು ಬೀಡುಬೀಳು
ವದು; ನದಿಯಲ್ಲಿ ಬಿತ್ತಿದ್ದ ಎಲ್ಲಾ ಬೀಜವು ಒಣಗಿ
8 ಗಾಳಿಗೆ ಸಿಕ್ಕಿ ಮಾಯವಾಗುವದು. ಬೆಸ್ತರು ಪ್ರಲಾ
ಪಿಸುವರು, ನದಿಯಲ್ಲಿ ಗಾಳಹಾಕುವವರು ಶೋಕ
ಪಡುವರು, ನೀರಿನ ಮೇಲೆ ಬಲೆಬೀಸುವವರು ಕುಗ್ಗು
9 ವರು. ನಯವಾದ ನಾರಿನ ಕೆಲಸದವರೂ ಬಿಳೀ ಬಟ್ಟೆ
10 ಯನ್ನು ನೇಯುವವರೂ ನಾಚಿಕೊಳ್ಳುವರು. ದೇಶದ
ಆಧಾರಭೂತರು ಮುರಿದುಹೋಗುವರು, ಕೂಲಿಯ
ವರು ಮನಮರುಗುವರು. ಚೋಯನಿನ ಪ್ರಭುಗಳ
ಕೇವಲ ಬುದ್ಧಿಹೀನರು; ಫರೋಹನ ಮಂತ್ರಿಗಳ
ಜ್ಞಾನವೃದ್ಧರ ಆಲೋಚನೆಯೂ ಹುಚ್ಚಾಟ; ನೀ
ಫರೋಹನಿಗೆ—ನಾನು ಜ್ಞಾನಿಗಳ ಸಂತಾನದವನು
ಪುರಾತನ ರಾಜವಂಶೀಯನು ಎಂದು ಹೇಗೆ ತಾ
ಹೇಳಿಕೊಳ್ಳುವಿರಿ? ನಿನ್ನ ಜ್ಞಾನಿಗಳು ಎಲ್ಲಿ? ಅವರ
ನಿನಗೆ ತಿಳಿಯ ಹೇಳಲಿ, ಸೇನಾಧೀಶ್ವರನಾದ ಯೆಹೋ
ವನು ಐಗುಪ್ತದ ವಿಷಯವಾಗಿ ಉದ್ದೇಶಿಸಿದ್ದನ್ನು
ಅರಿತುಕೊಳ್ಳಲಿ. ಚೋಯನಿನ ಪ್ರಭುಗಳು ಬುದ್ಧಿ
ಗೆಟ್ಟಿದ್ದಾರೆ, ನೋಫಿನ ಪ್ರಧಾನರು ಮೋಸಹೋ
ದ್ದಾರೆ, ಐಗುಪ್ತದ ಕುಲಗಳ 4)ಪ್ರಮುಖರು ಅದನ್ನು
ಭ್ರಮೆಗೊಳಿಸಿದ್ದಾರೆ. ಯೆಹೋವನು ಅದರ ಅಂ
ರಾತ್ಮದಲ್ಲಿ ವಕ್ರಬುದ್ಧಿಯನ್ನು ಕಲ್ಪಿಸಿದ್ದಾನೆ; ಅವ
ಲೇರಿದವನು ಕಕ್ಕುತ್ತಾ ಓಲಾಡುವ ಪ್ರಕಾರ ಐಗ
ಪ್ತವು ತನ್ನ ಒಂದೊಂದು ಕೆಲಸದಲ್ಲಿಯೂ ಓಲಾಡ
ವಂತೆ ಮಾಡಿದ್ದಾರೆ. ಮತ್ತು ಐಗುಪ್ತದಲ್ಲಿ ತಲೆಯಾ
ಗಲಿ ಬಾಲವಾಗಲಿ, ತಾಳೆಯಾಗಲಿ ತೃಣವಾಗಲಿ, ಸಾ
ಸಲು ಸಾಧ್ಯವಾದ ಯಾವ ಕೆಲಸವೂ ಇರುವದಿಲ್ಲ
ಆ ದಿನದಲ್ಲಿ ಐಗುಪ್ತವು ಹೆಣ್ಣಾಗಿ ಸೇನಾಧೀಶ್ವ
ನಾದ ಯೆಹೋವನು ತನ್ನ ಮೇಲೆ ಕೈಬೀಸುವ
ರಿಂದ ಭಯಪಟ್ಟು ನಡುಗುವದು. ಮತ್ತು ಐಗ
ಪ್ತವು ಬೆಚ್ಚಿಬೀಳುವದಕ್ಕೆ ಯೆಹೂದ ದೇಶವು ಕಾರಣ
ವಾಗುವದು; ಈ ದೇಶದ ಹೆಸರನ್ನು ಕೇಳುವ ಪ್ರ
ಯೊಬ್ಬನೂ ಸೇನಾಧೀಶ್ವರನಾದ ಯೆಹೋವನು ಐಗ
ಪ್ತಕ್ಕೆ ಪ್ರತಿಕೂಲವಾಗಿ ಮಾಡಿಕೊಂಡಿರುವ ಸಂಕಲ್ಪ
ವನ್ನು ತಿಳಿದು ಬೆರಗಾಗುವನು.
ಆ ದಿನದಲ್ಲಿ ಸೇನಾಧೀಶ್ವರನಾದ ಯೆಹೋವನ
ಭಕ್ತರೆಂದು ಪ್ರಮಾಣಮಾಡಿ ಕಾನಾನಿನ ಭಾಷೆಯ
ನ್ನಾಡುವವರಿಂದ ತುಂಬಿದ ಐದು ಪಟ್ಟಣಗಳು ಐಗುಪ್ತ
ದೇಶದಲ್ಲಿರುವವು; ಇವುಗಳಲ್ಲಿ ಒಂದರ ಹೆಸರು
5)ನಾಶಪುರ.
ಆ ದಿನದಲ್ಲಿ ಐಗುಪ್ತದೇಶದ ಮಧ್ಯೆ ಯೆಹೋವ
ನಿಗೆ ಒಂದು ಯಜ್ಞಪೀಠವೂ ದೇಶದ ಎಲ್ಲೆಯಲ್ಲಿ
ಯೆಹೋವನಿಗೆ ಒಂದು ಸ್ತಂಭವೂ ಇರುವವು. ಅವ
ಐಗುಪ್ತದೇಶದಲ್ಲಿ ಸೇನಾಧೀಶ್ವರನಾದ ಯೆಹೋವನ
ಗುರುತಾಗಿಯೂ ಸಾಕ್ಷಿಯಾಗಿಯೂ ಇರುವವು
ಹಿಂಸಕರ ದೆಸೆಯಿಂದ ಯೆಹೋವನನ್ನು ಕೂಗಿ
ಕೊಳ್ಳಲು ಆತನು ಅವರಿಗಾಗಿ ಹೋರಾಡುವ ಶೂ
ನಾದ ರಕ್ಷಕನನ್ನು ಕಳುಹಿಸಿ ಅವರನ್ನುದ್ಧರಿಸುವನು
ಮತ್ತು ಯೆಹೋವನು ತನ್ನನ್ನು ಐಗುಪ್ತ್ಯರಿಗೆ ತಿ
ಯಪಡಿಸಲು ಅವರು ಆ ದಿನದಲ್ಲಿ ಯೆಹೋವನನ್ನು
ತಿಳಿದುಕೊಳ್ಳುವರು; ಹೌದು ಯಜ್ಞನೈವೇದ್ಯಗಳ
ಸೇವೆಯನ್ನಾಚರಿಸಿ ಯೆಹೋವನಿಗೆ ಹರಕೆಮಾ
ಕೊಂಡು ಅದನ್ನು ನೆರವೇರಿಸುವರು. ಇದಲ್ಲದ
ಯೆಹೋವನು ಐಗುಪ್ತ್ಯರನ್ನು ಹೊಡೆಯುವನು
ಗಾಯಮಾಡಿ ವಾಸಿಮಾಡುವವನಾಗಿಯೇ ಹೊ

1) ಮೂಲ: ಅವೆಲ್ಲಾ. 2) ಅಥವಾ: ತಂದ ಕಾಣಿಕೆಯಾಗುವರು. 3) ಮೂಲ: ಸಮುದ್ರದ. 4) ಮೂಲ: ...
ಗಲ್ಲಾದವರು. 5) ಪಾಠಾಂತರಗಳು: ಸೂರ್ಯಪುರ, ಧರ್ಮಪುರ.

ಯುವನು; ಅವರು ಯೆಹೋವನ ಕಡೆಗೆ ತಿರುಗಿಕೊಳ್ಳುವರು; ಆತನು ಅವರ ವಿಜ್ಞಾಪನೆಯನ್ನು ಲಾಲಿಸಿ ಅವರನ್ನು ಗುಣಪಡಿಸುವನು.

ಆ ದಿನದಲ್ಲಿ ಐಗುಪ್ತದಿಂದ ಅಶ್ಶೂರಕ್ಕೆ ಹೋಗುವ ರಾಜಮಾರ್ಗವಿರುವದು; ಅಶ್ಶೂರ್ಯರು ಐಗುಪ್ತಕ್ಕೂ ಐಗುಪ್ತ್ಯರು ಅಶ್ಶೂರಕ್ಕೂ ಹೋಗಿಬರುತ್ತಿರುವರು; ಐಗುಪ್ತ್ಯರು ಅಶ್ಶೂರ್ಯರೊಂದಿಗೆ [ಯೆಹೋವನನ್ನು] ಸೇವಿಸುವರು.

ಆ ದಿನದಲ್ಲಿ ಇಸ್ರಾಯೇಲು ಐಗುಪ್ತ ಅಶ್ಶೂರಗಳೊಂದಿಗೆ ಕಲೆತು ಈ ಮೂರೂ ಲೋಕದ ಮಧ್ಯದಲ್ಲಿ ಆಶೀರ್ವಾದದ ನಿಧಿಯಾಗುವವು. ನನ್ನ ಪ್ರಜೆಯಾದ ಐಗುಪ್ತಕ್ಕೂ ನನ್ನ ಸೃಷ್ಟಿಯಾದ ಅಶ್ಶೂರಕ್ಕೂ ನನ್ನ ಸ್ವಾಸ್ತ್ಯವಾದ ಇಸ್ರಾಯೇಲಿಗೂ ಶುಭವಾಗಲಿ ಎಂದು ಸೇನಾಧೀಶ್ವರನಾದ ಯೆಹೋವನು ಅವುಗಳನ್ನು ಆಶೀರ್ವದಿಸಿದ್ದಾನಷ್ಟೆ.

ಐಗುಪ್ತದ ವಿಷಯವಾದ ದೈವೋಕ್ತಿ.

0 ಅಶ್ಶೂರದ ರಾಜನಾದ ಸರ್ಗೋನನು ಕಳುಹಿಸಿದ [1])ದಳವಾಯಿಯು ಅಸ್ದೋದಿಗೆ ಬಂದು ಅದನ್ನು ಮುತ್ತಿಹಿಡಿದ ವರುಷದಲ್ಲಿ ಯೆಹೋವನು ಆಮೋಚನ ಮಗನಾದ ಯೆಶಾಯನಿಗೆ—ಏಳು, ಸೊಂಟದಿಂದ ಗೋಣಿತಟ್ಟನ್ನು ಬಿಚ್ಚು, ಕಾಲಿನಿಂದ ಕೆರವನ್ನು ಕಳಚು ಎಂದು ಇತರರಿಗೆ ಸೂಚನೆಯಾಗಿ ಅಪ್ಪಣೆಕೊಟ್ಟನು. ಅವನು ಹಾಗೆಯೇ ಮಾಡಿ ಬೆತ್ತಲೆಯಾಗಿ ಕೆರವಿಲ್ಲದೆ ತಿರುಗುತ್ತಿದ್ದನು. ಆಗ ಯೆಹೋವನು ಹೀಗೆ ಹೇಳಿದನು--ನನ್ನ ಸೇವಕನಾದ ಯೆಶಾಯನು ಐಗುಪ್ತದ ಮತ್ತು ಕೂಷಿನ ನಾಶನಕ್ಕೆ ಸೋಜಿಗದ ಗುರುತಾಗಿ ಮೂರು ವರುಷ ಬಟ್ಟೆಕೆರಗಳಿಲ್ಲದೆ ನಡೆದ ಪ್ರಕಾರ ಅಶ್ಶೂರದ ಅರಸನು ಐಗುಪ್ತದ ಸೆರೆಯುವರನ್ನೂ ಕೂಷಿನ ಕೈದಿಗಳನ್ನೂ ಅವರು ದೊಡ್ಡವರಾಗಲಿ ಚಿಕ್ಕವರಾಗಲಿ ಬಟ್ಟೆಕೆರಗಳಿಲ್ಲದೆ ಬರಿಕುಂಡಿಯವರಾಗಿ ಐಗುಪ್ತದ ಮಾನಭಂಗಕ್ಕೋಸ್ಕರ ಸೆರೆಗೆ ನಡೆಯುವಂತೆ ಮಾಡುವನು. ಆಗ [ನನ್ನ ಜನರು] ತಾವು ನಿರೀಕ್ಷಿಸಿಕೊಂಡಿದ್ದ ಕೂಷಿನ ನಿಮಿತ್ತವಾಗಿಯೂ ಕೊಚ್ಚಿಕೊಂಡಿದ್ದ ಐಗುಪ್ತದ ವಿಷಯವಾಗಿಯೂ ಬೆಚ್ಚಿಬೆರಗಾಗಿ ನಾಚಿಕೆಪಡುವರು. ಆ ದಿನದಲ್ಲಿ ಈ ಕರಾವಳಿಯಲ್ಲಿ ವಾಸಿಸುವವರು—ಹಾ, ಅಶ್ಶೂರದ ಅರಸನಿಂದ ಬಿಡುಗಡೆಯಾಗಬೇಕೆಂದು ನಾವು ಯಾರನ್ನು ಶರಣಾಗತರಾಗಿ ಆಶ್ರಯಿಸಿ ನಿರೀಕ್ಷಿಸಿದ್ದೆವೋ ಅವರಿಗೇ ಈ ಗತಿ ಬಂತಲ್ಲಾ; ನಮ್ಮಂಥವರಿಗೆ ಹೇಗೆ ರಕ್ಷಣೆಯಾದೀತು ಎಂದು ಅಂದುಕೊಳ್ಳುವರು.

ಬಾಬೆಲಿನ ವಿಷಯವಾದ ದೈವೋಕ್ತಿ.

1 ಕಡಲಡವಿಯ ವಿಷಯವಾದ ದೈವೋಕ್ತಿ.
ದಕ್ಷಿಣಸೀಮೆಯಲ್ಲಿ ಬೀಸುವ ಬಿರುಗಾಳಿಯಂತೆ
ಅರಣ್ಯದ ಕಡೆಯ ಭಯಂಕರ ದೇಶದಿಂದ [ದೊಡ್ಡ
ಅವಾಂತರ] ಬರುತ್ತದೆ. ಘೋರದರ್ಶನವು ನನಗೆ 2
ತಿಳಿಯ ಬಂದಿದೆ; ಬಾಧಕನು ಬಾಧಿಸುತ್ತಿದ್ದಾನೆ,
ಸೂರೆಗಾರನು ಸೂರೆಮಾಡುತ್ತಿದ್ದಾನೆ. ಏಲಾಮೇ,
ಏಳು! ಮೇದ್ಯವೇ, ಮುತ್ತು! ನಿಮ್ಮ ನಿಟ್ಟುಸುರನ್ನು
ನಿಲ್ಲಿಸಿಬಿಟ್ಟಿದ್ದೇನೆ. ಈ ದರ್ಶನದಿಂದ ನನ್ನ ಸೊಂಟ 3
ದಲ್ಲಿ ನೋವು ತುಂಬಿದೆ, ಪ್ರಸವವೇದನೆಯಂತಿರುವ
ವೇದನೆಯು ನನ್ನನ್ನು ಹಿಡಿದಿದೆ, ಕಿವಿ ಕಿವುಡಾಗು
ವಷ್ಟು ಯಾತನೆಪಡುತ್ತೇನೆ, ಕಣ್ಣು ಕುರುಡಾಗುವಷ್ಟು
ತತ್ತರಗೊಂಡಿದ್ದೇನೆ. ನನ್ನ ಹೃದಯವು ಭ್ರಮೆಗೊಂಡಿ 4
ದೆ, ನಡುಕವು ನನ್ನನ್ನು ಆಕ್ರಮಿಸಿದೆ, ನಾನು ಅಪೇ
ಕ್ಷಿಸುತ್ತಿದ್ದ ಸಂಜೆಹೊತ್ತೇ ನನಗೆ ಭಯಂಕರವಾಗಿ
ಪರಿಣಮಿಸಿದೆ.
ಔತಣಕ್ಕೆ ಸಿದ್ಧಪಡಿಸಿಕೊಂಡು ಚಾಪೆಗಳನ್ನು ಹಾಸಿ 5
ಕೊಂಡು ಉಂಡು ಕುಡಿಯುತ್ತಿದ್ದಾರಲ್ಲಾ; ಪ್ರಭು
ಗಳೇ, ಏಳಿರಿ, ಗುರಾಣಿಗೆ ಎಣ್ಣೆಯನ್ನು ಬಳಿಯಿರಿ!
ಕರ್ತನು ನನಗೆ ಹೇಳಿರುವದೇನಂದರೆ—ಕಾವಲುಗಾರ 6
ನನ್ನು ಇಡು, ನಡೆ; ಕಂಡದ್ದನ್ನು ತಿಳಿಸಲಿ; ಅವನು 7
ಜೋಡಿ ಜೋಡಿಯಾಗಿ ಬರುವ ಸವಾರರ ಸಾಲನ್ನೂ
ಕತ್ತೆಗಳ ಮತ್ತು ಒಂಟೆಗಳ ಸಾಲುಗಳನ್ನೂ ನೋಡಿ
ದರೆ ಬಹು ಗಮನದಿಂದ ಕಿವಿಗೊಟ್ಟು ಗಮನಿಸಲಿ
ಎಂಬದೇ. ಬಳಿಕ ಅವನು ಸಿಂಹಧ್ವನಿಯಿಂದ—ಕರ್ತ 8
ನೇ, ಹಗಲೆಲ್ಲಾ ಕೋವರದಲ್ಲಿ ನಿಂತಿದ್ದೇನೆ, ರಾತ್ರಿಯೆ
ಲ್ಲಾ ಕಾವಲಿನ ಕೆಲಸ ನನಗೆ ಬಿದ್ದಿದೆ; ಇಗೋ, 9
ಸವಾರರು, ಜೋಡಿ ಜೋಡಿಯಾಗಿ ಬರುತ್ತಾರೆ ಎಂದು
ಕೂಗಿ ಇನ್ನೂ ಹೇಳಿದ್ದೇನಂದರೆ—ಬಾಬೆಲ್ ಬಿತ್ತು,
ಬಿತ್ತು! ಅದರ ದೇವತಾವಿಗ್ರಹಗಳನ್ನು ಒಡೆದು ನೆಲ
ಸಮಮಾಡಿಬಿಟ್ಟರು ಎಂಬದೇ.
ನನ್ನ ಕಣದ ದವಸವೇ, ನನ್ನ ಒಡಿತಕ್ಕೆ ಈಡಾ 10
ದವರೇ, ಇಸ್ರಾಯೇಲ್ಯರ ದೇವರಾಗಿರುವ ಸೇನಾ
ಧೀಶ್ವರನಾದ ಯೆಹೋವನಿಂದ ನಾನು ಕೇಳಿದ್ದನ್ನೇ
ನಿಮಗೆ ತಿಳಿಸಿದ್ದೇನೆ.

ಎದೋಮಿನ ವಿಷಯವಾದ ದೈವೋಕ್ತಿ.

ದೂಮದ ವಿಷಯವಾದ ದೈವೋಕ್ತಿ. 11
ಕಾವಲುಗಾರನೇ, ಈಗ ರಾತ್ರಿ ಎಷ್ಟು ಕಳೆಯಿತು,
ಕಾವಲುಗಾರನೇ, ರಾತ್ರಿ ಎಷ್ಟು ಕಳೆಯಿತು ಎಂಬ
ಕೂಗು ಸೇಯೀರಿನಿಂದ ನನಗೆ ಕೇಳಿಸುತ್ತಿತ್ತು.
ಉದಯವು ಬರುತ್ತದೆ, ರಾತ್ರಿಯೂ ಬರುತ್ತದೆ; ವಿಚಾ 12
ರಿಸಬೇಕಾದರೆ ವಿಚಾರಿಸಿರಿ, ತಿರಿಗಿ ಬನ್ನಿರಿ ಎಂದು ಕಾವ
ಲುಗಾರನು ಹೇಳಿದನು.

ಅರಬಿಯ ವಿಷಯವಾದ ದೈವೋಕ್ತಿ.

ಅರಬಿಯ ವಿಷಯವಾದ ದೈವೋಕ್ತಿ. 13
ಸಾರ್ಥವಾಹರಾದ ದೇದಾನ್ಯರೇ, [2])ಮರುಭೂಮಿಯ
ಪೊದೆಗಳಲ್ಲಿ ಇಳಿದುಕೊಳ್ಳಿರಿ. ಬಾಯಾರಿದವರಿಗೆ 14

1) ಮೂಲ: ತರ್ತಾನ್. 2) ಪಾಠಾಂತರ: ಸಂಜೆವೇಳೆ.

ನೀರನ್ನು ತಂದುಕೊಡಿರಿ, ತೇಮಾದೇಶದವರೇ, ಓಡಿ
15 ಹೋದವರನ್ನು ಅನ್ನದೊಡನೆ ಎದುರುಗೊಳ್ಳಿರಿ. ಕತ್ತಿ,
ಹಿರಿದ ಕತ್ತಿ, ಬಾಗಿದ ಬಿಲ್ಲು, ಯುದ್ಧದ ಬಾಧೆ,
16 ಇವುಗಳ ಕಡೆಯಿಂದ ಓಡಿಹೋಗುತ್ತಿದ್ದಾರಷ್ಟೆ. ಕರ್ತ
ನು ನನಗೆ ಹೇಳಿರುವದೇನಂದರೆ—ಆಳಿನ ವರುಷ
ವಾಯಿದೆಗೆ ಸರಿಯಾದ ಒಂದು ವರುಷಕ್ಕೇ ಕೇದಾ
17 ರಿನ ಸಕಲ ವೈಭವವು ಇಲ್ಲವಾಗುವದು; ಬಿಲ್ಲುಗಾರ
ರಲ್ಲಿ ಉಳಿದವರೂ ಕೇದಾರಿನವರ ಶೂರರೂ ವಿರಳ
ರಾಗುವರು; ಇಸ್ರಾಯೇಲ್ಯರ ದೇವರಾದ ಯೆಹೋ
ವನು ಇದನ್ನು ನುಡಿದಿದ್ದಾನೆ ಎಂಬದೇ.

ಯೆರೂಸಲೇಮಿನ ವಿಷಯವಾದ ದೈವೋಕ್ತಿ.

22 ದಿವ್ಯದರ್ಶನದ ತಗ್ಗಿನ ವಿಷಯವಾದ ದೈವೋಕ್ತಿ.
ನಿನಗೆ ಏನಾಯಿತು? ನಿನ್ನ ಜನರೆಲ್ಲರೂ ಮಾಳಿಗೆ
2 ಗಳನ್ನು ಹತ್ತಿದ್ದೇಕೆ? ಕೋಲಾಹಲದಿಂದ ತುಂಬಿ ಆರ್ಭ
ಟಿಸುವ ಪಟ್ಟಣವೇ, ಸಂಭ್ರಮದ ಊರೇ! ನಿನ್ನಲ್ಲಿ
ಹತರಾದವರು ಖಡ್ಗಹತರಲ್ಲ, ಯುದ್ಧದಲ್ಲಿ ಮೃತ
3 ರಲ್ಲ. ನಿನ್ನ ಅಧಿಕಾರಿಗಳು ಒಟ್ಟಿಗೆ ಓಡಿ ಬಿಲ್ಲಿಲ್ಲದೆ
ಸೆರೆಯಾಗಿದ್ದಾರೆ; ದೂರ ಓಡುತ್ತಾ [ಶತ್ರುವಿಗೆ]
ಸಿಕ್ಕಿದ ನಿನ್ನ ಜನರೆಲ್ಲರೂ ಒಂದಿಗೆ ಕಟ್ಟುಬಿದ್ದಿದ್ದಾರೆ.
4 ಹೀಗಿರಲು ನನ್ನ ಕಡೆಯಿಂದ ದೃಷ್ಟಿ ತಿರುಗಿಸಿರಿ,
ಬಹು ಸಂಕಟದಿಂದ ಅಳುವೆನು, ನನ್ನ ಜನವೆಂಬ
ಯುವತಿಯು ಹಾಳಾದ ವಿಷಯದಲ್ಲಿ ನನ್ನನ್ನು ಸಂತೈ
5 ಸುವದಕ್ಕೆ ತವಕಗೊಳ್ಳದಿರಿ ಅಂದೆನು. ಸೇನಾಧೀಶ್ವರ
ನಾದ ಯೆಹೋವನೆಂಬ ಕರ್ತನಿಂದ ದಿವ್ಯದರ್ಶನದ
ತಗ್ಗಿಗೆ ಗಲಿಬಿಲಿಯ ದಿನ, ತುಳಿದಾಟದ ದಿನ, ಭ್ರಾಂತಿ
ಯ ದಿನ, ಕೋಟೆಯು ಒಡೆದುಹೋಗಲು, ಕೂಗು
6 ಬೆಟ್ಟವನ್ನು ಮುಟ್ಟುವ ದಿನ ಬಂದಿದೆ. ಏಲಾಮು
ರಥಾಶ್ವಪದಾತಿಗಳಿಂದ ಬತ್ತಳಿಕೆಯನ್ನು ಧರಿಸಿತು;
ಕೀರಿನವರು ಗುರಾಣಿಯ ಗೌಸಣಿಗೆಯನ್ನು ತೆರೆದರು.
7 ನಿಮ್ಮ ಪ್ರಿಯವಾದ ತಗ್ಗುಗಳಲ್ಲಿ ರಥಗಳು ತುಂಬಿ
ದವು, ರಾಹುತರು ಬಾಗಿಲೆದುರಿಗೆ ವ್ಯೂಹಕಟ್ಟಿದರು.
8 ಯೆಹೂದದ ತೆರೆಯು ತೆರೆದುಹೋಯಿತು; ಆ ದಿನ
ದಲ್ಲಿ [ಲೆಬನೋನಿನ] ತೋಪು ಎನಿಸಿಕೊಳ್ಳುವ
ಮಂದಿರದಲ್ಲಿನ ಆಯುಧಗಳ ಕಡೆಗೆ ದೃಷ್ಟಿಹಾಕಿದಿರಿ.
9 ದಾವೀದನ ಕೋಟೆಯ ಒಡಕುಗಳು ಬಹಳವೆಂದು
ನೋಡಿದಿರಿ; ಕೆಳಗಿನ ಕೊಳಕ್ಕೆ ನೀರನ್ನು ಹಾಯಿಸಿದಿರಿ.
10 ಯೆರೂಸಲೇಮಿನ ಮನೆಗಳನ್ನು ಲೆಕ್ಕಿಸಿ ಪೌಳಿಗೋಡೆ
ಯನ್ನು ಭದ್ರಪಡಿಸುವದಕ್ಕೆ ಮನೆಗಳನ್ನು ಕೆಡವಿಬಿಟ್ಟಿ
11 ರಿ. ಎರಡು ಗೋಡೆಗಳ ನಡುವೆ ಹಳೆಯ ಕೊಳದ
ನೀರಿಗಾಗಿ ತೊಟ್ಟಿಯನ್ನು ಮಾಡಿದಿರಿ; ಆದರೆ ಇದ
ನ್ನೆಲ್ಲಾ ನಡಿಸಿದಾತನ ಕಡೆಗೆ ನೀವು ದೃಷ್ಟಿಯಿಡಲಿಲ್ಲ,
ಪುರಾತನ ಕಾಲದಲ್ಲಿ ಸಂಕಲ್ಪಿಸಿದಾತನನ್ನು ನೀವು ಲಕ್ಷಿ
12 ಸಲಿಲ್ಲ. ಕಣ್ಣೀರುಸುರಿಸಿ ಅಂಗಲಾಚಿ ತಲೆಬೋಳಿಸಿ
ಕೊಂಡು ಗೋಣಿತಟ್ಟನ್ನು ಸುತ್ತಿಕೊಳ್ಳಿರಿ ಎಂದು
ಸೇನಾಧೀಶ್ವರನಾದ ಯೆಹೋವನೆಂಬ ಕರ್ತನು ಆ
13 ದಿನದಲ್ಲಿ ನಿಮಗೆ ಆಜ್ಞಾಪಿಸಿದನು; ಆದರೆ ಇಗೋ,

ಉಲ್ಲಾಸ, ಹರ್ಷ, ದನಕೊಯ್ಯುವದು, ಕುರಿಕ
ಯುವದು, ಮಾಂಸತಿನ್ನುವದು, ದ್ರಾಕ್ಷಾರಸ ಕು
ಯುವದು, ನಾಳೆ ಸಾಯುತ್ತೇವೆಂದು ತಿಂದು ಕು
ಯುವದು [ಇವೇ ನಿಮ್ಮ ಕಾರ್ಯ]. ಹೀಗಿರಲ
ಸೇನಾಧೀಶ್ವರನಾದ ಯೆಹೋವನು ನನ್ನ ಕಿವಿ
ಗೋಚರಪಡಿಸಿದ್ದೇನಂದರೆ—ನೀವು ಸಾಯುವ ತನ
ಈ ಅಧರ್ಮಕ್ಕೆ ಪ್ರಾಯಶ್ಚಿತ್ತವು ಇಲ್ಲವೇ ಇಲ್ಲ ಎಂದ
ಸೇನಾಧೀಶ್ವರನಾಗಿರುವ ಯೆಹೋವನೆಂಬ ಕರ್ತನಾ
ನಾನು ನುಡಿದಿದ್ದೇನೆ ಎಂಬದೇ.

ಶೆಬ್ನನ ವಿಷಯವಾದ ದೈವೋಕ್ತಿ.

ಸೇನಾಧೀಶ್ವರನಾದ ಯೆಹೋವನೆಂಬ ಕರ್ತನು ಹೀ
ನುಡಿದಿದ್ದಾನೆ—ನಡೆ, ಅರಮನೆಯ ಮೇಲ್ವಿಚಾರ
ನಾದ ಶೆಬ್ನನೆಂಬ ಈ ಅಧ್ಯಕ್ಷನ ಬಳಿಗೆ ಹೋ
ಅವನಿಗೆ ಹೇಳತಕ್ಕದ್ದೇನಂದರೆ—ಇಲ್ಲಿ ನಿನಗೇನು
ಇಲ್ಲಿ ನಿನಗೆ ಯಾರಿದ್ದಾರೆ? ಇಲ್ಲಿ ನಿನಗಾಗಿ ಗೋ
ಯನ್ನು ತೋಡಿಸಿಕೊಂಡಿದ್ದೀಯಾ? ಎತ್ತರದಲ
ನಿನಗೆ ಸಮಾಧಿಯನ್ನು ಕೊರೆಸುತ್ತಾ ಬಂಡೆಯನ
ಕಡೆಯಿಸಿ ನಿನಗೆ ನಿವಾಸವನ್ನು ಮಾಡಿಸುತ್ತಾ ಇದ್ದಿ
ಯೋ? ಇಗೋ, 1)ಬಲಿತವನೇ, ಯೆಹೋವನ
ನಿನ್ನನ್ನು ಎಸೆದೇ ಎಸೆಯುವನು, ಹಿಡಿದೇ ಹಿಡಿಯು
ವನು; ನಿನ್ನನ್ನು ಚಂಡಿನಂತೆ ಸುತ್ತಿ ಸುತ್ತಿ ವಿಸ್ತಾ
ವಾದ ದೇಶಕ್ಕೆ ಬಿಸಾಡುವನು; ದಣಿಯ ಮನೆ
ಅವಮಾನ ತಂದವನೇ, ಅಲ್ಲೇ ಸಾಯುವಿ, ನಿನ
ವೈಭವದ ರಥಗಳು ಅಲ್ಲೇ ಇರುವವು. [ಯೆಹೋ
ನಾದ] ನಾನು ನಿನ್ನ ಉದ್ಯೋಗದಿಂದ ನಿನ್ನನ್ನು ತಳ
ಬಿಡುವೆನು, ನಿನ್ನ ಪದವಿಯಿಂದ ನಿನ್ನನ್ನು 2)ಎಳೆದ
ಹಾಕುವೆನು. ಆ ದಿನದಲ್ಲಿ ನನ್ನ ಸೇವಕನು
ಹಿಲ್ಕೀಯನ ಮಗನೂ ಆದ ಎಲ್ಯಾಕೀಮನನ್ನು
ಕರೆದು ನಿನ್ನ ನಿಲುವಂಗಿಯನ್ನು ಅವನಿಗೆ ತೊಡಿ
ನಿನ್ನ ನಡುಕಟ್ಟನ್ನು ಅವನಿಗೆ ಕಟ್ಟಿ ನಿನ್ನ ಅಧಿಕಾ
ವನ್ನು ಅವನ ಕೈಗೆ ಕೊಡುವೆನು; ಅವನು ಯೆರೂ
ಲೇಮಿನ ನಿವಾಸಿಗಳಿಗೂ ಯೆಹೂದದ ಮನೆತನದ
ರಿಗೂ ತಂದೆಯಾಗುವನು. ಅವನು ದಾವೀದ
ಮನೆಯ ಬೀಗದ ಕೈಯನ್ನು ತನ್ನ ಹೆಗಲ ಮೇ
ವಹಿಸಿಕೊಳ್ಳುವಂತೆ ಮಾಡುವೆನು; ಅವನು ತೆರೆದ
ಯಾರೂ ಮುಚ್ಚರು, ಮುಚ್ಚಿದರೆ ಯಾರೂ ತೆ
ಯರು. ಗಟ್ಟಿಯಾದ ಸ್ಥಳದಲ್ಲಿ ಮೊಳೆಯನ್ನು
ಹೊಡೆದ ಹಾಗೆ ಅವನನ್ನು ಭದ್ರಪಡಿಸುವೆನು
ಅವನು ತನ್ನ ವಂಶದವರಿಗೆ ಗೌರವಪೀಠವಾಗಿರುವನು
ಬಟ್ಟಲು ಮೊದಲುಗೊಂಡು ಕೊಡದ ತನಕ ಸಕಲ
ಸಾಧಾರಣಪಾತ್ರೆಗಳನ್ನು ಅಂದರೆ ತಂದೆಯ ಸಂತಾ
ಸಂತತಿಯಾದ ಅವನ ವಂಶದ ಭಾರವನ್ನೆಲ್ಲಾ ಅ
ನಿಗೆ ತಗಲುಹಾಕುವರು. ಸೇನಾಧೀಶ್ವರನಾದ ಯೆಹೋ
ವನು ಹೇಳುವದೇನಂದರೆ—ಗಟ್ಟಿಯಾದ ಸ್ಥಳದಲ್ಲಿ
ಹೊಡೆದ ಮೊಳೆಯು ಆ ದಿನದಲ್ಲಿ ಕುಸಿದು ಹೋಗ
ವದು; ಅದು ಬಡಿಯಲ್ಪಟ್ಟು ಬೀಳಲಾಗಿ ಅದಕ್ಕೆ

1) ಅಥವಾ: ಬಲಿಷ್ಠನಂತೆ. 2) ಮೂಲ: ಎಳೆದುಹಾಕುವನು.

ತಗಲುಹಾಕಿದ ಭಾರವೂ ನಾಶವಾಗುವದು. ಇದೇ
ಯೆಹೋವನಾದ ನನ್ನ ನುಡಿ ಎಂಬದೇ.

ತೂರಿನ ವಿಷಯುವಾದ ದೈವೋಕ್ತಿ.

23 ತೂರಿನ ವಿಷಯುವಾದ ದೈವೋಕ್ತಿ.
ತಾರ್ಷೀಷಿನ ಹಡಗುಗಳೇ, ಅಂಗಲಾಚಿರಿ! [ನಿಮ್ಮ
ಆಶ್ರಯವು] ಹಾಳಾಯಿತು, ನಿಮಗೆ ನೆಲೆಯಿಲ್ಲ,
ರೇವಿಲ್ಲ. (ಕಿತ್ತೀಮ್ ದೇಶೀಯರಿಂದ ಅವುಗಳಿಗೆ
ತಿಳಿಯಿತು). ಕರಾವಳಿಯ ನಿವಾಸಿಗಳೇ, ಸಮುದ್ರ
ವನ್ನು ಹಾದುಹೋಗುವ ಚೀದೋನಿನ ವರ್ತಕರಿಂದ
ಸಮೃದ್ಧಿಹೊಂದಿದವರೇ, ಮೌನವಾಗಿರಿ! ವಿಶಾಲ
ವಾದ ಸಾಗರದ ಮೇಲೆ ತಂದ ಶೀಹೋರಿನ ಧಾನ್ಯ
ದಿಂದಲೂ ನೈಲಿನ ಬೆಳೆಯಿಂದಲೂ ಆದಾಯಹೊಂದಿ
ದ [ನಿಮ್ಮ ನಗರಿಯು] ಅನೇಕ ಜನಾಂಗಗಳಿಗೆ
ಲಾಭಕರವಾಗಿತ್ತು. ಚೀದೋನೇ, ನಾಚಿಕೆಪಡು;
ಸಮುದ್ರವು, ಸಮುದ್ರದುರ್ಗವು—ನಾವು ವೇದನೆ
ಪಡಲಿಲ್ಲ, ಪ್ರಸವಿಸಲಿಲ್ಲ, ಯುವತಿಯುವಕರನ್ನು
ಸಾಕಿ ಸಲಹಲಿಲ್ಲ ಎಂದು ನುಡಿದಿದೆಯಷ್ಟೆ. ತೂರಿನ
ಸಮಾಚಾರವು ಐಗುಪ್ತ್ಯರಿಗೆ ಮುಟ್ಟಲು ಅದಕ್ಕಾಗಿ
ಸಂಕಟಪಡುವರು. ತಾರ್ಷೀಷಿಗೆ ಸಮುದ್ರದ ಮೇಲೆ
ಹಾದುಹೋಗಿರಿ, ಕರಾವಳಿಯ ನಿವಾಸಿಗಳೇ, ಅಂಗ
ಲಾಚಿರಿ! ನಿಮ್ಮ ಉಲ್ಲಾಸದ ಪಟ್ಟಣವು ಇದೇನೋ?
ಅದರ ಉತ್ಪತ್ತಿಯು ಪುರಾತನವಾದದ್ದೇ ಸರಿ; ಅದರ
ಜನರು ಮುಂದೆ ನಡೆದು ಅತಿದೂರದಲ್ಲಿಯೂ
ನಿವಾಸಮಾಡಿಕೊಂಡಿದ್ದರಲ್ಲಾ. ಅದು ಕಿರೀಟದಾಯ
ಕವು; ಅದರ ವರ್ತಕರು ಪ್ರಭುಗಳು, ಅದರ ವ್ಯಾಪಾರಿ
ಗಳು ಲೋಕಮಾನ್ಯರು; ಇಂಥ ತೂರಿಗೆ ವಿರುದ್ಧ
ವಾಗಿ ಈ ಸಂಕಲ್ಪವನ್ನು ಮಾಡಿದವನು ಯಾರು?
ಗರ್ವದ ಸಕಲ ವೈಭವವನ್ನು ಹೊಲಸುಮಾಡ
ಬೇಕೆಂತಲೂ ಲೋಕಮಾನ್ಯರೆಲ್ಲರನ್ನು ಅವಮಾನ
ಪಡಿಸಬೇಕೆಂತಲೂ ಸೇನಾಧೀಶ್ವರನಾದ ಯೆಹೋವ
ನೇ, ಹೀಗೆ ಸಂಕಲ್ಪಿಸಿದ್ದಾನೆ. ತಾರ್ಷೀಷ್ ನಗರಿಯೇ,
ನೈಲ್‌ನದಿಯಂತೆ ನಿನ್ನ ದೇಶವನ್ನು ಆವರಿಸು; ನಡು
ಕಟ್ಟು [ಸಡಲಿತು], ಇನ್ನಿಲ್ಲ. ಯೆಹೋವನು ಸಮು
ದ್ರದ ಮೇಲೆ ಕೈಚಾಚಿ ರಾಜ್ಯಗಳನ್ನು ನಡುಗಿಸಿ
ದ್ದಾನೆ; ಕಾನಾನಿನ ದುರ್ಗಗಳನ್ನು ನಾಶಮಾಡಲು
ಅದರ ವಿಷಯವಾಗಿ ಅಪ್ಪಣೆಕೊಟ್ಟಿದ್ದಾನೆ; ಹಿಂಸೆಗೆ
ಈಡಾದ ಕನ್ಯೆಯಂತಿರುವ ಚೀದೋನ್ ನಗರಿಯೇ,
ಇನ್ನು ಮೇಲೆ ನಿನಗೆ ಹರ್ಷವೇ ಇಲ್ಲ; ಎದ್ದು ಕಿತ್ತೀ
ಮಿಗೆ ಸಮುದ್ರದ ಮೇಲೆ ಹಾದುಹೋಗು, ಅಲ್ಲಿ
ಯೂ ನಿನಗೆ ವಿಶ್ರಾಂತಿಯಿರದು ಎಂದು ಹೇಳಿದ್ದಾನೆ.
ಇಗೋ, ಕಸ್ದೀಯರ ದೇಶವು! ಈ ಜನಾಂಗವು
ನಿರ್ನಾಮವಾಯಿತು; ಅಶ್ಶೂರ್ಯರು ಈ ದೇಶವನ್ನು
ಕಾಡುಮೃಗಗಳಿಗೆ ಈಡುಮಾಡಿದರು; ಬುರುಜುಗ
ಳನ್ನು ಕಟ್ಟಿಕೊಂಡು ಇದರ ಕೋಟೆಗಳನ್ನು ಕೆಡವಿ
ಇದನ್ನು ನಾಶಪಡಿಸಿದರು. ತಾರ್ಷೀಷಿನ ಹಡಗುಗಳೇ,
ಅಂಗಲಾಚಿರಿ! ನಿಮ್ಮ ಆಶ್ರಯವು ಹಾಳಾಯಿತು.

ಆ ಕಾಲದಲ್ಲಿ ತೂರ್‌ಪಟ್ಟಣವು ಒಬ್ಬ ರಾಜನ 15
1)ಆಡಳಿತದ ಎಪ್ಪತ್ತು ವರುಷಗಳ ತನಕ ಜ್ಞಾಪಕಕ್ಕೆ
ಬಾರದೇ ಇರುವದು; ಎಪ್ಪತ್ತು ವರುಷದ ಮೇಲೆ
ಸೂಳೆಯ ವಿಷಯುವಾದ ಗೀತದಂತಾಗುವದು. ಅದೇ 16
ನಂದರೆ ಎಲ್ಲರೂ ಮರೆತ ಸೂಳೆಯೇ, ಕಿನ್ನರಿಯನ್ನು
ತೆಗೆದುಕೊಂಡು ಊರಲ್ಲಿ ಅಲೆಯುತ್ತಾ ಜನರು
ನಿನ್ನನ್ನು ಜ್ಞಾಪಿಸಿಕೊಳ್ಳುವಂತೆ ಚೆನ್ನಾಗಿ ನುಡಿಸಿ
ಬಹು ಗೀತಗಳನ್ನು ಹಾಡು ಎಂಬದೇ. ಎಪ್ಪತ್ತು 17
ವರುಷಗಳ ಮೇಲೆ ಯೆಹೋವನು ತೂರ್ ಎಂಬವಳಿಗೆ
ನೇಮಿಸಲು ಅವಳು ತನ್ನ ಆದಾಯಕ್ಕಾಗಿ ಹಿಂದಿ
ರುಗಿ ಭೂಮಂಡಲದಲ್ಲಿ ಲೋಕದ ಸಕಲ ರಾಜ್ಯ
ಗಳೊಂದಿಗೆ ಕಲೆಯುವಳು. ಅವಳ ವ್ಯಾಪಾರವೂ 18
ಆದಾಯವೂ ಅವಳಿಗೆ ನಿಧಿನಿಕ್ಷೇಪವಾಗದೆ ಯೆಹೋ
ವನಿಗೇ ಮೀಸಲಾಗುವದು; ಆ ವ್ಯಾಪಾರವು ಯೆಹೋ
ವನ ಸನ್ನಿಧಾನದಲ್ಲಿ ವಾಸಿಸುವವರಿಗೆ ಬೇಕಾದಷ್ಟು
ಅನ್ನವನ್ನೂ ಶ್ರೇಷ್ಠವಾದ ಉಡುಪನ್ನೂ ಒದಗಿಸಲು
ಅನುಕೂಲಿಸುವದು.

ಯೆಹೋವನು ಸರ್ವಲೋಕವನ್ನು ದಂಡಿಸುವದೂ
ಇಸ್ರಾಯೇಲನ್ನು ರಕ್ಷಿಸುವದೂ. 24—27.

ಲೋಕದಂಡನೆ.

24 ಇಗೋ, ಯೆಹೋವನು ಲೋಕವನ್ನು ಬರಿದು
ಮಾಡಿ ಹಾಳಿಗೆ ತಂದು ವಿರೂಪಪಡಿಸಿ ಅದರ
ನಿವಾಸಿಗಳನ್ನು ಚದರಿಸಿಬಿಡುವವನಾಗಿದ್ದಾನೆ. ಪ್ರಜೆ 2
ಯಾಜಕ, ದಾಸ ದಣಿ, ತೊತ್ತು ಯಜಮಾನಿ,
ಕೊಳ್ಳುವವನು ಮಾರುವವನು, ಸಾಲ ಕೊಡುವವನು
ತರುವವನು, ಬಡ್ಡಿ ತೆಗೆಯುವವನು ತೆರುವವನು,
ಇವರೆಲ್ಲರಿಗೂ ಒಂದೇ ಗತಿಯಾಗುವದು. ಭೂಮಿ 3
ಯು ಬಟ್ಟಬರಿದಾಗುವದು, ಲೋಕಕ್ಕೆ ಸಂಪೂರ್ಣ
ಸುಲಿಗೆಯಾಗುವದು; ಯೆಹೋವನೇ ಇದನ್ನು ನುಡಿ
ದಿದ್ದಾನೆ. ಭೂಮಿಯು ಪ್ರಲಾಪಿಸುತ್ತಾ ಬಳಲಿದೆ, 4
ಲೋಕವು ಕುಗ್ಗಿಹೋಗಿದೆ, ಲೋಕೋನ್ನತರು ಕಂಗೆ
ಟ್ಟಿದ್ದಾರೆ. ಭೂನಿವಾಸಿಗಳು ದೈವಾಜ್ಞೆಗಳನ್ನು ಮೀರಿ 5
ನಿಯಮವನ್ನು ಅತಿಕ್ರಮಿಸಿ ಶಾಶ್ವತವಾದ ಒಡಂಬಡಿಕೆ
ಯನ್ನು ಭಂಗಪಡಿಸಿದ್ದರಿಂದ ಭೂಮಿಯು ಅವರ
ಹೆಜ್ಜೆಯಿಂದ ಅಪವಿತ್ರವಾಯಿತು. ಆದಕಾರಣ ಶಾಪ 6
ವು ಲೋಕವನ್ನು ನುಂಗಿಬಿಟ್ಟಿದೆ, ಅಲ್ಲಿನವರು ದಂಡನೆಗೆ
ಒಳಗಾಗಿದ್ದಾರೆ; ಭೂನಿವಾಸಿಗಳು ಸುಟ್ಟುಹೋಗಿ
ಕೆಲವರು ಮಾತ್ರ ಉಳಿದಿದ್ದಾರೆ. ದ್ರಾಕ್ಷಾರಸವು 7
ವ್ಯಸನಭರಿತವಾಗಿದೆ, ದ್ರಾಕ್ಷೆಯ ಬಳ್ಳಿಯು ಬಾಡಿದೆ,
ಹರ್ಷಹೃದಯರೆಲ್ಲಾ ನರಳುತ್ತಾರೆ. ದಮ್ಮಡಿಗಳ 8
ಉತ್ಸಾಸವು ಮುಗಿದಿದೆ, ಉಲ್ಲಾಸಿಗಳ ಕೋಲಾ
ಹಲವು ಕೊನೆಗೊಂಡಿದೆ, ಕಿನ್ನರಿಯ ಆನಂದವು ಅಡ
ಗಿದೆ. ಇನ್ನು ಗಾನದೊಡನೆ ದ್ರಾಕ್ಷಾರಸವನ್ನು ಕುಡಿ 9
ಯರು, ಮದ್ಯವು ಕುಡಿಯುವವರಿಗೆ ಕಹಿಯಾಗು
ವದು. ಹಾಳುಪಟ್ಟಣವು ಬಿದ್ದುಹೋಗಿದೆ, ಯಾರೂ 10
ಹೊಗದಂತೆ ಪ್ರತಿಯೊಂದು ಮನೆಯೂ ಮುಚ್ಚಿದೆ.

1) ಮೂಲ: ದಿನಗಳ . . . .

11 ದ್ರಾಕ್ಷಾರಸದ ಕೊರತೆಯಿಂದ ಬೀದಿಗಳಲ್ಲಿ ಅರಚು
ತ್ತಾರೆ; ಉಲ್ಲಾಸವೆಲ್ಲಾ ಅಸ್ತಮಿಸಿದೆ; ಲೋಕದ ಸಡ
12 ಗರವು ಸೆರೆಯಾಗಿ ತೊಲಗಿದೆ. ಪಟ್ಟಣದಲ್ಲಿ ಹಾಳೇ
13 ಉಳಿದಿದೆ; ನಾಶನವು ಹೆಬ್ಬಾಗಿಲಿಗೆ ತಟ್ಟಿದೆ. ಎಣ್ಣೆಯ
ಮರವನ್ನು ಬಡಿದ ಮೇಲೆಯೂ ದ್ರಾಕ್ಷೆಯ ಸುಗ್ಗಿ
ಯು ತೀರಿದನಂತರವೂ ನಿಲ್ಲುವ ಉಳಿಗಾಯ ಹಾಗೆ
ಭೂಮಂಡಲದಲ್ಲಿ ಜನಾಂಗಗಳೊಳಗೆ ಶೇಷವಿರುವದು.
14 ಇವರು ಉಚ್ಚಧ್ವನಿಗೈಯುವರು; ಯೆಹೋವನ ಮಹಿ
ಮೆಯನ್ನು ತಿಳಿದುಕೊಂಡವರಾಗಿ ಸಮುದ್ರದ ಕಡೆ
15 ಯಿಂದ ಆರ್ಭಟಿಸುವರು—ಮೂಡಣವರೇ, ಯೆಹೋ
ವನನ್ನು ಸನ್ಮಾನಿಸಿರಿ; ಕರಾವಳಿಯವರೇ, ಇಸ್ರಾಯೇ
ಲ್ಯರ ದೇವರಾದ ಯೆಹೋವನ ನಾಮವನ್ನು ಘನಪಡಿ
ಸಿರಿ ಎಂದು ಕೂಗುವರು.
16 ಸದ್ಧರ್ಮಿಗಳಿಗೆ ಮಾನವಾಗಲೆಂಬ ಗೀತಗಳು
ಭೂಮಂಡಲದ ಕಟ್ಟಕಡೆಯಿಂದ ನಮಗೆ ಕೇಳ
ಬಂದಿದೆ. ನಾನಾದರೋ—ಕ್ಷಯಿಸೇ ಕ್ಷಯಿಸುತ್ತೇನೆ,
ನನ್ನ ಗತಿಯನ್ನು ಏನು ಹೇಳಲಿ! ಬಾಧಕರು
ಬಾಧಿಸುತ್ತಾರೆ, ಹೌದು, ಬಾಧಕರು ಬಾಧಿಸೇ ಬಾಧಿ
17 ಸುತ್ತಾರೆ ಎಂದುಕೊಂಡೆನು. ಭೂನಿವಾಸಿಯೇ,
ಭಯವೂ ಗುಂಡಿಯೂ ಬಲೆಯೂ ನಿನಗೆ ಕಾದಿವೆ.
18 ಭಯದ ಸಪ್ಪಳದಿಂದ ಓಡಿಹೋಗುವವನು ಗುಂಡಿ
ಯಲ್ಲಿ ಬೀಳುವನು, ಗುಂಡಿಯನ್ನು ಹತ್ತಿಬರುವವನು
ಬಲೆಗೆ ಸಿಕ್ಕುವನು. ನೋಡು, ಆಕಾಶದ ದ್ವಾರಗಳು
ತೆರೆದಿವೆ, ಭೂಮಿಯ ಅಸ್ತಿವಾರಗಳು ಕಂಪಿಸುತ್ತಿವೆ.
19 ಭೂಮಿಯು ಒಡೆದೇ ಇದೆ, ಬಿರಿದೇ ಬಿರಿದಿದೆ, ಕದ
20 ಲಿಯೇ ಹೋಗಿದೆ. ಭೂಮಿಯು ಅಮಲೇರಿದವನ
ಹಾಗೆ ಓಲಾಡುತ್ತದೆ, ಮಂಚಿಕೆಯಂತೆ ತೂಗಾಡು
ತ್ತದೆ; ಅದರ ದ್ರೋಹವು ಅದಕ್ಕೆ ಭಾರವಾಗಿದೆ, ಅದು
ಬಿದ್ದುಹೋಗುತ್ತಿದೆ, ತಿರಿಗಿ ಏಳುವದೇ ಇಲ್ಲ.
21 ಆ ದಿನದಲ್ಲಿ ಯೆಹೋವನು [1]ಆಕಾಶಮಂಡಲದ
ದೂತಸೈನ್ಯವನ್ನೂ ಭೂಮಂಡಲದ ನೆಲದೊಡೆಯ
22 ರನ್ನೂ ದಂಡಿಸುವನು. ಇವರು ಬಂದಿಗಳ ಗುಂಪಿ
ನಂತೆ ನೆಲಮಾಳಿಗೆಯೊಳಕ್ಕೆ ಒಟ್ಟಿಗೆ ತಳ್ಳಿಸಿಕೊಂಡು
ಅದರಲ್ಲಿ ಮುಚ್ಚಲ್ಪಟ್ಟಿದ್ದು ಬಹು ದಿನಗಳ ಮೇಲೆ
23 ದಂಡನೆಗೆ ಗುರಿಯಾಗುವರು. ಮತ್ತು ಚಂದ್ರನು
ನಾಚಿಕೆಪಡುವನು, ಸೂರ್ಯನು ಲಜ್ಜೆಗೊಳ್ಳುವನು;
ಸೇನಾಧೀಶ್ವರನಾದ ಯೆಹೋವನು ಚೀಯೋನ್ ಪರ್ವ
ತದಲ್ಲಿ ಯೆರೂಸಲೇಮಿನೊಳಗೆ ಆಳುವನಷ್ಟೆ. ಆತನ
[ಪರಿವಾರದ] ಹಿರಿಯರ ಮುಂದೆ ಪ್ರಭಾವವು ಪ್ರತ್ಯಕ್ಷ
ವಾಗುವದು.

ಯೆಹೋವನು ಇಸ್ರಾಯೇಲನ್ನು ಶತ್ರುಬಾಧೆಯಿಂದ ಬಿಡಿಸಿ
ಅದರ ಮೂಲಕ ಸಕಲ ಜನಾಂಗಗಳಿಗೂ ಮೇಲನ್ನುಂಟು
ಮಾಡುವದು.

25 ಯೆಹೋವನೇ, ನೀನೇ ನನ್ನ ದೇವರು;
ನೀನು ಸತ್ಯಪ್ರಾಮಾಣಿಕತೆಗಳನ್ನು ಅನುಸರಿಸಿ
ಆದಿಸಂಕಲ್ಪಗಳನ್ನು ನೆರವೇರಿಸುತ್ತಾ ಅದ್ಭುತಗ
ನ್ನು ನಡಿಸಿದ ಕಾರಣ
ನಿನ್ನನ್ನು ಕೊಂಡಾಡುವೆನು, ನಿನ್ನ ನಾಮವನ
ಮಹಿಮೆಗೊಳಿಸುವೆನು.
ನೀನು ದುರ್ಗವನ್ನು ನಾಶಪಡಿಸಿ ಪಟ್ಟಣವನ
ಹಾಳು ದಿಬ್ಬವನ್ನಾಗಿಯೂ
ಅನ್ಯರ ಕೋಟೆಯನ್ನು ಯಾರೂ ಎಂದಿಗೂ ಕಟ್
ಬಾರದ ಹಾಳೂರನ್ನಾಗಿಯೂ ಮಾಡಿದ್ದೀ.
ಆದಕಾರಣ ಬಲಿಷ್ಠವಾದ ಜನಾಂಗವು ನಿನ್ನನ್
ಘನಪಡಿಸುವದು,
ಭಯಂಕರ ಜನರ ಪಟ್ಟಣವು ನಿನಗೆ ಅಂಜುವದು.
ನೀನು ದೀನರಿಗೆ ಕೋಟೆ, ಇಕ್ಕಟ್ಟಿನಲ್ಲಿ ದರಿದ್
ರಿಗೆ ರಕ್ಷಣದುರ್ಗ, ಬಿಸಿಲಿಗೆ ನೆರಳು,
ಭೀಕರರ ಶ್ವಾಸವು ಗೋಡೆಗೆ ಬಡಿದುಬಿಡುವ ಬಿರ
ಗಾಳಿಯಂತಿರುವಾಗ ಆಶ್ರಯವೂ ಆಗಿದ್ದೀ.
[ಮೇಘವು] ಒಣನೆಲದ ಕಾವನ್ನು ಆರಿಸುವಂ
ನೀನು ಅನ್ಯರ ಗದ್ದಲವನ್ನು ಅಣಗಿಸುವಿ;
ಮೋಡದ ನೆರಳಿನಿಂದ ಬಿಸಿಲು ಹೇಗೋ
ಹಾಗೆಯೇ ನಿನ್ನಿಂದ ಭೀಕರರ ಉತ್ಸಾಹಗಾನ
ನಿಂತುಹೋಗುವದು.
ಇದಲ್ಲದೆ ಸೇನಾಧೀಶ್ವರನಾದ ಯೆಹೋವನು
ಪರ್ವತದಲ್ಲಿ ಸಕಲಜನಾಂಗಗಳಿಗೂ ಸಾರವತ್ತಾ
ಮೃಷ್ಟಾನ್ನದಿಂದಲೂ ಮಡ್ಡಿಗಟ್ಟಿದ ಮೇಲೆ ಶೋಧಿಸಿ
ದ್ರಾಕ್ಷಾರಸದಿಂದಲೂ ಕೂಡಿದ ಔತಣವನ್ನು ಅಣಿವ
ಡುವನು. ಮತ್ತು ಸಮಸ್ತ ಜನಾಂಗಗಳನ್ನು ಮುಚ್
ರುವ ಮುಸುಕನ್ನೂ ಸಕಲ ದೇಶೀಯರ ಮೇ
ಹಾಕಿರುವ ತೆರೆಯನ್ನೂ ಇದೇ ಪರ್ವತದಲ್ಲಿ ನಾಶಮ
ಡುವನು. ಮರಣವನ್ನು ಶಾಶ್ವತವಾಗಿ ನಿರ್ನಾಮ
ಮಾಡುವನು; ಕರ್ತನಾದ ಯೆಹೋವನು ಎಲ್ಲ
ಮುಖದಲ್ಲಿನ ಕಣ್ಣೀರನ್ನು ಒರಸಿಬಿಡುವನು; ತನ್ನ ಪ್
ಜೆಯ ಅವಮಾನವನ್ನು ಭೂಮಂಡಲದಿಂದಲೇ ತೊ
ಗಿಸುವನು; ಯೆಹೋವನೇ ಇದನ್ನು ನುಡಿದಿದ್ದಾನೆ.
ಆ ದಿನದಲ್ಲಿ ಜನರು—
ಆಹಾ, ಈತನೇ ನಮ್ಮ ದೇವರು,
ನಮ್ಮನ್ನು ರಕ್ಷಿಸಲಿ ಎಂದು ಈತನನ್ನು ನಿರೀಕ್ಷಿ
ಕೊಂಡಿದ್ದೇವೆ;
ಈತನೇ ಯೆಹೋವನು,
ಈತನನ್ನು ನಿರೀಕ್ಷಿಸಿಕೊಂಡಿದ್ದೇವೆ,
ಈತನ ರಕ್ಷಣೆಯಲ್ಲಿ ಆನಂದಿಸಿ ಉಲ್ಲಾಸಪಡುವೆ
ಎಂದು ಹೇಳಿಕೊಳ್ಳುವರು. ಏಕೆಂದರೆ ಯೆಹೋವ
ಹಸ್ತವು ಈ ಪರ್ವತದಲ್ಲಿ ನೆಲೆಯಾಗಿರುವದು; ಮೋ
ವಾಬಾದರೋ ತಿಪ್ಪೆಗುಂಡಿಯ ರೊಚ್ಚಿನಲ್ಲಿ ಒಣಹುಲ್ಲು
ತುಳಿಯಲ್ಪಡುವ ಹಾಗೆ ತಾನಿದ್ದಲ್ಲೇ ತುಳಿಯಲ್ಪಡು
ದು. ಈಜುವವನು ಕೈಯಾಡಿಸುವಂತೆ ಅದರಲ್ಲಿಯೆ
ಕೈಯಾಡಿಸುವದು; [2][ಯೆಹೋವನು] ಆದರ ಗವ
ವನ್ನೂ ಕೈಯ ಚಮತ್ಕಾರವನ್ನೂ ತಗ್ಗಿಸಿಬಿಡುವನ
ದುರ್ಗಮವಾಗಿಯೂ ಎತ್ತರವಾಗಿಯೂ ಇರುವ ನಿನ್

---

1) ಮೂಲ: ಉನ್ನತಲೋಕದಲ್ಲಿನ ಉನ್ನತ ಲೋಕದವರ ಸೈನ್ಯ.
2) ಅಥವಾ: ಅದರ ಕೈಯ ಚಮತ್ಕಾರವೆಷ್ಟಾದ
[ಯೆಹೋವನು] ಅದರ ಗರ್ವವನ್ನು ತಗ್ಗಿಸಿಬಿಡುವನು.

ಕೋಟೆಗಳನ್ನು ಆತನು ಕೆಡವಿ ತಗ್ಗಿಸಿ ನೆಲಸಮಮಾಡಿ ದೂಳಿಗೇ ತರುವನು.

ಇಸ್ರಾಯೇಲು ಹಾಡುವ ಸ್ತೋತ್ರಗೀತ.

26 ಆ ದಿವಸದಲ್ಲಿ ಯೆಹೂದ ದೇಶದೊಳಗೆ ಈ ಗೀತ
ವನ್ನು ಹಾಡುವರು—
ನಮಗೆ ಬಲವಾದ ಪಟ್ಟಣವಿದೆ.
[ಯೆಹೋವನು ತನ್ನ] ರಕ್ಷಣೆಯನ್ನು ಕೋಟೆಯ
ನ್ನಾಗಿಯೂ ಹೊರಪೌಳಿಯನ್ನಾಗಿಯೂ ಮಾ
ಡಿದ್ದಾನೆ.
2 ಬಾಗಿಲುಗಳನ್ನು ತೆರೆಯಿರಿ!
ಧರ್ಮಸತ್ಯಗಳನ್ನು ಕೈಕೊಳ್ಳುವ ಜನಾಂಗವು ಪ್ರವೇ
ಶಿಸಲಿ!
3 ಸ್ಥಿರಚಿತ್ತನನ್ನು ಶಾಂತಿಯಲ್ಲಿ ನೆಲೆಗೊಳಿಸಿ ಕಾ
ಯುವಿ;
ಅವನಿಗೆ ನಿನ್ನಲ್ಲಿ ಭರವಸವಿದೆ.
4 ಯೆಹೋವನಲ್ಲಿ ಸದಾ ಭರವಸವಿಡಿರಿ;
ಯಾಹುಯೆಹೋವನು ಶಾಶ್ವತವಾಗಿ ಆಶ್ರಯಗಿರಿ
ಯಾಗಿದ್ದಾನೆ.
5 ಆತನು ಎತ್ತರದಲ್ಲಿ ವಾಸಿಸುವವರನ್ನೂ [ಅವರ]
ಉನ್ನತ ಪಟ್ಟಣವನ್ನೂ ತಗ್ಗಿಸಿದ್ದಾನೆ.
ಅದನ್ನು ಕೆಡವಿ ನೆಲಸಮಮಾಡಿ ದೂಳಿಗೆ ತಂದಿ
ದ್ದಾನೆ.
6 ಅದು ಕಾಲತುಳಿತಕ್ಕೆ ಈಡಾಗಿದೆ.
ದಿಕ್ಕಿಲ್ಲದ ಬಡವರೂ ಅದನ್ನು ಕಾಲಿನಿಂದ ತುಳಿದು
ಬಿಡುತ್ತಾರೆ.
7 ಶಿಷ್ಟನ ಮಾರ್ಗವು ನೇರವಾಗಿದೆ;
ನೀನು ಅವನ ದಾರಿಯನ್ನು ಸರಿಪಡಿಸಿ ಸಮ
ಮಾಡುತ್ತೀ.
8 ಹೌದು, ಯೆಹೋವನೇ, ನಿನ್ನ ನ್ಯಾಯಕಾರ್ಯ
ಗಳು ತೋರತಕ್ಕ ಮಾರ್ಗದಲ್ಲಿ ನಿನ್ನನ್ನು ಕಾದು
ಕೊಂಡಿದ್ದೇವೆ;
ನಿನ್ನ ನಾಮಸ್ಮರಣೆಯು ನಮ್ಮ ಆತ್ಮಕ್ಕೆ ಕೇವಲ
ಇಷ್ಟವಾಗಿದೆ.
9 ರಾತ್ರಿಯಲ್ಲಿ ನಿನ್ನನ್ನು ಮನಃಪೂರ್ವಕವಾಗಿ
1) ಹಾರೈಸಿದ್ದೇವೆ,
ಹೌದು, ನಮ್ಮ ಆತ್ಮದಲ್ಲಿ ನಿನ್ನನ್ನು ತವಕದಿಂದ
ಹುಡುಕಿದ್ದೇವೆ.
ನೀನು ಲೋಕದಲ್ಲಿ ನ್ಯಾಯಕಾರ್ಯಗಳನ್ನು ನಡಿ
ಸುವಾಗ
ಭೂನಿವಾಸಿಗಳು ಧರ್ಮಜ್ಞಾನವನ್ನು ಪಡೆದುಕೊ
ಳ್ಳುವರು.
10 ದುಷ್ಟರನ್ನು ಕರುಣಿಸಿದರೂ ಅವರು ಧರ್ಮ
ಜ್ಞಾನವನ್ನು ಪಡೆಯರು;
ಯೆಹೋವನ ಮಹಿಮೆಯನ್ನು ಲಕ್ಷಿಸದೆ ಯಥಾ
ರ್ಥವಂತರ ದೇಶದಲ್ಲಿಯೂ ಅನ್ಯಾಯವನ್ನಾ
ಚರಿಸುವರು.

ಯೆಹೋವನೇ, ನೀನು ಕೈಯೆತ್ತಿದ್ದರೂ ಅವರು 11
ಲಕ್ಷಿಸರು.
ಆದರೆ ನಿನ್ನ ಸ್ವಜನಾಭಿಮಾನವನ್ನು ನೋಡಿ ನಾಚಿಕೆ
ಪಡುವರು;
ಹೌದು, ಆ ನಿನ್ನ ವಿರೋಧಿಗಳನ್ನು ಅಗ್ನಿಯು
ದಹಿಸಿಬಿಡುವದು.
ಯೆಹೋವನೇ, ನೀನು ನಮಗೆ ಸಮಾಧಾನವನ್ನು 12
ವಿಧಿಸುವಿ,
ನಾವು ನಡಿಸಿದ್ದೆಲ್ಲವೂ ನೀನು ನಮಗೋಸ್ಕರ ನಡಿ
ಸಿದ್ದೇ ಸರಿ.
ನಮ್ಮ ದೇವರಾದ ಯೆಹೋವನೇ, ನಿನ್ನ ಸ್ಥಾನ 13
ದಲ್ಲಿ ಬೇರೆ ಒಡೆಯರು ನಮ್ಮ ಮೇಲೆ ದೊರೆ
ತನಮಾಡುತ್ತಿದ್ದರು;
ಈಗ ನಿನ್ನ ನಾಮವನ್ನು ಹೊಗಳುವದಕ್ಕೆ ನಿನ್ನಿಂದ
ಲೇ ನಮಗೆ ಅವಕಾಶವಾಯಿತು.
ನೀನು ಆ ಒಡೆಯರ ಮೇಲೆ ಕೈಮಾಡಿ ನಿರ್ಮೂಲ 14
ಪಡಿಸಿ
ಅವರ ಜ್ಞಾಪಕವನ್ನು ಅಳಿಸಿಬಿಟ್ಟಿದ್ದೀ;
ಸತ್ತವರು ಪುನಃ ಬದುಕುವದಿಲ್ಲ, ಪ್ರೇತಗಳು
ಎದ್ದು ಬರುವದಿಲ್ಲವಲ್ಲಾ.
ಯೆಹೋವನೇ, ನಿನ್ನ ಜನವನ್ನು ಹೆಚ್ಚಿಸಿದ್ದೀ, 15
ಹೌದು, ನಿನ್ನ ಪ್ರಜೆಯನ್ನು ವೃದ್ಧಿಗೊಳಿಸಿದ್ದೀ;
ನೀನು ದೇಶದ ಮೇರೆಗಳನ್ನೆಲ್ಲಾ ವಿಸ್ತರಿಸಿ ಮಹಿಮೆ
ಗೊಂಡಿದ್ದೀ.
ಯೆಹೋವನೇ, [ನಿನ್ನ ಜನರು] ಇಕ್ಕಟ್ಟಿಗೆ ಸಿಕ್ಕಿ 16
ನಿನ್ನನ್ನು ಆಶ್ರಯಿಸಿದರು,
ನಿನ್ನ ಶಿಕ್ಷೆಗೆ ಗುರಿಯಾಗಿ ಜಪಮಾಡಿದರು.
ಹೆರಿಗೆ ಹತ್ತಿರವಾದ ಗರ್ಭಿಣಿಯು 17
ಯಾತನೆಪಡುತ್ತಾ ಬೇನೆಯಿಂದ ಅರಚುವಂತೆ
ಯೆಹೋವನೇ, ನಾವು ನಿನ್ನ ಮುಂದೆ ಅರಚಿದ್ದೇವೆ;

ನಾವು ಗರ್ಭಧರಿಸಿ ವೇದನೆಪಟ್ಟು ಗಾಳಿಯನ್ನು 18
ಹಡೆದಂತಾಯಿತು,
ದೇಶಕ್ಕೆ ನಮ್ಮಿಂದ ಯಾವ ಉದ್ಧಾರವೂ ಆಗಲಿಲ್ಲ,
ನಮ್ಮೊಳಗೆ ಯಾವ ಭೂನಿವಾಸಿಗಳೂ ಹುಟ್ಟಲಿಲ್ಲ.

ಮೃತರಾದ ನಿನ್ನ ಜನರು ಬದುಕುವರು, 19
ನನ್ನವರ ಹೆಣಗಳು ಜೀವದಿಂದೇಳುವವು,
ಮಣ್ಣಿನಲ್ಲಿ ಮಲಗಿರುವವರೇ, ಎಚ್ಚತ್ತು ಹರ್ಷ
ಧ್ವನಿ ಗೈಯಿರಿ!
[ಯೆಹೋವನೇ,] ನೀನು ಸುರಿಯುವ ಇಬ್ಬನಿಯು
ಜ್ಯೋತಿರ್ಮಯವಾದದ್ದು,
ಭೂಮಿಯು ಸತ್ತವರನ್ನು ಹೊರಪಡಿಸುವದು.

ಯೆಹೋವನು ಇಸ್ರಾಯೇಲನ್ನು ರಕ್ಷಿಸಿ ಇತರ ಜನಾಂಗಗಳನ್ನು ದಂಡಿಸುವದು.

ನನ್ನ ಜನರೇ, ಬನ್ನಿರಿ, ನಿಮ್ಮ ನಿಮ್ಮ ಕೋಣೆಗಳಲ್ಲಿ 20
ಸೇರಿ ಬಾಗಿಲು ಮುಚ್ಚಿಕೊಳ್ಳಿರಿ; ದೈವರೋಷವು

1) ಮೂಲ: ಹಾರೈಸಿದ್ದೇನೆ . . ನನ್ನ . . ಹುಡುಕಿದ್ದೇನೆ.

ತೀರುವ ತನಕ ಒಂದು ಕ್ಷಣ ಅವಿತುಕೊಳ್ಳಿರಿ.
21 ಇಗೋ, ಯೆಹೋವನು ಭೂನಿವಾಸಿಗಳಿಗೆ ಅವರ
ಪಾಪಫಲವನ್ನು ತಿನ್ನಿಸಬೇಕೆಂದು ತನ್ನ ಸ್ಥಳದಿಂದ
ಹೊರಡುತ್ತಾನೆ; ಭೂಮಿಯು ತನ್ನಲ್ಲಿ ಇಂಗಿದ್ದ ರಕ್ತ
ವನ್ನು ವ್ಯಕ್ತಗೊಳಿಸುವದು, ತನ್ನ ನಿವಾಸಿಗಳಲ್ಲಿ ಹತ
27 1 ರಾಗಿದ್ದವರನ್ನು ಇನ್ನು ಮರೆಮಾಜದು. ಆ ದಿನ
ದಲ್ಲಿ ಯೆಹೋವನು ಕಠಿನವೂ ಮಹತ್ತೂ ಬಲವೂ
ಆಗಿರುವ ತನ್ನ ಖಡ್ಗದಿಂದ ವೇಗವಾಗಿ ಓಡುವ ಸರ್ಪ,
ಡೊಂಕಾಗಿ ಹರಿಯುವ ಸರ್ಪ, ಈ ಎರಡು ಘಟಸರ್ಪ
ಗಳನ್ನು ಹೊಡೆದು 1)ಮಹಾನದಿಯಲ್ಲಿನ ಘಟಸರ್ಪ
ವನ್ನೂ ಕೊಂದುಹಾಕುವನು.

ಯೆಹೋವನ ದ್ರಾಕ್ಷೆಯ ತೋಟದ ಗೀತ.

2 ಆ ದಿನದಲ್ಲಿ [ಹೀಗೆ ಗಾನ ಮಾಡುವರು]—
ಇಗೋ, 2)ವಿಹಾರದ ತೋಟ, ಇದನ್ನು ಕುರಿತು
ಹಾಡಿರಿ;
3 ಯೆಹೋವನಾದ ನಾನು ತೋಟಗಾರನು,
ಕ್ಷಣಕ್ಷಣವೂ ನೀರು ಹೊಯ್ಯುತ್ತಿದ್ದೇನೆ;
ಯಾರೂ ಮುಟ್ಟದ ಹಾಗೆ ಹಗಲಿರುಳೂ ಕಾಯು
ತ್ತೇನೆ.
4 ರೌದ್ರವು ನನ್ನಲ್ಲಿಲ್ಲ;
ಮುಳ್ಳುಗಿಳ್ಳು ನನಗೆ ಎದುರುಬಿದ್ದರೆ ಎಷ್ಟೋ
ಒಳ್ಳೇದು!
ಅವುಗಳಿಗೆ ವಿರುದ್ಧವಾಗಿ ಯುದ್ಧಕ್ಕೆ ನಡೆದು
ಹೋಗಿ
ಒಟ್ಟಿಗೆ ಸುಟ್ಟುಬಿಡುವೆನು.
5 ಬೇಡವಾದರೆ ಆ ಶತ್ರುಗಳು ನನ್ನ ಬಲವನ್ನು
ಶರಣುಹೊಂದಲಿ,
ನನ್ನ ಸಂಗಡ ಸಮಾಧಾನಕ್ಕೆ ಬರಲಿ, ನನ್ನೊಡನೆ
ಸಂಧಿಮಾಡಿಕೊಳ್ಳಲಿ.
6 ಮುಂದಿನ ಕಾಲದಲ್ಲಿ ಯಾಕೋಬು ಬೇರೂರು
ವದು, ಇಸ್ರಾಯೇಲು ಹೂಬಿಟ್ಟು ಚಿಗುರುವದು, 3)ಆ
ವೃಕ್ಷವು ಭೂಮಂಡಲವನ್ನೆಲ್ಲಾ ಫಲದಿಂದ ತುಂಬಿಸು
ವದು.

ಯೆಹೋವನು ಇಸ್ರಾಯೇಲನ್ನು ಶಿಕ್ಷಿಸುವದು.

7 ಯೆಹೋವನು ತನ್ನ ಪ್ರಜೆಯ ಘಾತಕರನ್ನು ಹೊಡೆ
ದಂತೆ ಆ ತನ್ನ ಪ್ರಜೆಯನ್ನು ಹೊಡೆದನೋ? ಅವರಿಗಾ
8 ದಂಥ ಸಂಹಾರವು ಆ ಪ್ರಜೆಗೆ ಆಯಿತೋ? ನಿನ್ನ
ಪ್ರಜೆಯನ್ನು 4)ಕಳುಹಿಸಿಬಿಡುವದರ ಮೂಲಕ ಅದ
ರೊಡನೆ ಮಿತಿಮೀರದೆ ಹೋರಾಡುತ್ತಿದ್ದೀ; ಮೂಡಣ
ಗಾಳಿಯು ಬೀಸಿದ ದಿನದಲ್ಲಿ ಅದರ ಕ್ರೂರವಾದ
ಬಡಿತದಿಂದ ನಿನ್ನ ಜನವನ್ನು 5)ತೊಲಗಿಸಿದಿ.
9 ಹೀಗಿರಲು ಯಾಕೋಬ್ಯರು ಯಜ್ಞವೇದಿಯ ಕಲ್ಲು
ಗಳನ್ನೆಲ್ಲಾ ಸುಣ್ಣದಂತೆ ಪುಡಿ ಪುಡಿ ಮಾಡಿ ಅಶೇರ

ವೆಂಬ ವಿಗ್ರಹಸ್ತಂಭಗಳನ್ನೂ ಸೂರ್ಯಸ್ತಂಭಗಳನ್ನೂ
ಇನ್ನು ಪ್ರತಿಷ್ಠಿಸದೆ ಹೋದರೆ ಅದೇ ಅವರ ಅ
ರ್ಮಕ್ಕೆ ಪ್ರಾಯಶ್ಚಿತ್ತವಾಗುವದು, ಮತ್ತು ಅವ
ಪಾಪಪರಿಹಾರಕ್ಕೆ ಗುರುತಾದ ಪೂರ್ಣ ಫಲವೂ ಇದೇ
ಕೋಟೆಕೊತ್ತಲದ ಪಟ್ಟಣವು ಹಾಳಾಗಿ ಕಾಡಿನಂ
ಜನರಿಲ್ಲದೆ ಶೂನ್ಯನಿವಾಸಸ್ಥಾನವಾಗಿದೆ; ಅಲ್ಲಿ ಕರ
ಮೇದು ಮಲಗುವದು, ಅಲ್ಲಿನ ಚಿಗುರುಗಳನ್ನು
ತಿಂದುಬಿಡುವದು. ಅಲ್ಲಿನ ರೆಂಬೆಗಳು ಒಣಗಿ ಮು
ದುಹೋಗುವವು, ಹೆಂಗಸರು ಬಂದು ಬೆಂಕಿಹ
ಉರಿಸುವರು; ಆ ಪ್ರಜೆಯು ಬುದ್ಧಿಹೀನವಾದದ್ದ
ಸರಿ; ಆದಕಾರಣ ಸೃಷ್ಟಿಸಿದಾತನು ಅದನ್ನು ಕರು
ಸನು, ನಿರ್ಮಿಸಿದಾತನು ಅದಕ್ಕೆ ದಯೆತೋರಿಸನು

ಇಸ್ರಾಯೇಲ್ಯರ ಪುನರಾಗಮನ.

ಇಸ್ರಾಯೇಲ್ಯರೇ, ತುಂಬಿತುಳುಕುವ [ಯೂಫ್ರೆ
ಟೀಸ್] ನದಿಯಿಂದ ಐಗುಪ್ತ ದೇಶದ ನದಿಯ ವರೆ
ಯೆಹೋವನು 6)ತೆನೆಗಳನ್ನು ಒಕ್ಕುವ ದಿನವು ಬರು
ತ್ತದೆ; ಆಗ ನಿಮ್ಮನ್ನು ಒಬ್ಬೊಬ್ಬರನ್ನಾಗಿ ಆರಿಸುವನು
ಆ ದಿನದಲ್ಲಿ ದೊಡ್ಡ ಕೊಂಬನ್ನೂದಲು ಅಶ್ಶೂ
ದೇಶದಲ್ಲಿ ಹಾಳಾದವರೂ ಐಗುಪ್ತ ಸೀಮೆಯಲ್ಲಿ
ದೇಶಭ್ರಷ್ಟರಾದವರೂ ಬಂದು ಪರಿಶುದ್ಧಪರ್ವತ
ಯೆರೂಸಲೇಮಿನಲ್ಲಿ ಯೆಹೋವನ ಮುಂದೆ ಅಡ್ಡ
ಬೀಳುವರು.

ಯೆರೂಸಲೇಮನ್ನು ಗದರಿಸಿ ಎಚ್ಚರಿಸಿದ್ದು.
28—29. 14.

ಸಮಾರ್ಯದ ದುರ್ಗತಿ.

ಅಯ್ಯೋ, ಕುಡುಕರಾದ ಎಫ್ರಾಯಿಮ್ಯರ ಮಹಿ
ಮೆಯ ಕಿರೀಟದ ಗತಿಯೇ! ದ್ರಾಕ್ಷಾರಸಕ್ಕೆ
ಸೋತುಹೋದವರ ಫಲವತ್ತಾದ ತಗ್ಗಿಗೆ ಶ್ರೇಷ್ಠ
ಶಿರೋಭೂಷಣವಾಗಿದ್ದು ಬಾಡುತ್ತಿರುವ ಹೂವಿ
ಪಾಡೇ! ಆಹಾ, ಕರ್ತನು ಒಬ್ಬ ಮಹಾಬಲಿಷ್ಠನನ್ನು
ನೇಮಿಸಿದ್ದಾನೆ; ಅವನು ರಭಸವಾಗಿ ಸುರಿಯು
ಕಲ್ಮಳೆಯಂತೆಯೂ ನಾಶಕವಾದ ಬಿರುಗಾಳಿಯೋ
ಪಾದಿಯಲ್ಲಿಯೂ ಮುಣುಗಿಸುವ ಅತಿಧಾರಾವೃ
ಯ ಹಾಗೂ ಬಲಾತ್ಕಾರದಿಂದ [ಆ ಪಟ್ಟಣವನ್ನು
ನೆಲಕ್ಕೆ ಬೀಳಿಸುವನು. ಕುಡುಕರಾದ ಎಫ್ರಾಯಿ
ಮ್ಯರ ಮಹಿಮೆಯ ಕಿರೀಟವು ಕಾಲಿನಿಂದ ತುಳಿಯ
ಲ್ಪಡುವದು. ಫಲವತ್ತಾದ ತಗ್ಗಿಗೆ ಶ್ರೇಷ್ಠ ಶಿರೋ
ಭೂಷಣವಾಗಿದ್ದು ಬಾಡುತ್ತಿರುವ ಹೂವು ಫ
ಕಾಲಕ್ಕೆ ಮುಂಚೆ ಮಾಗಿದ ಅಂಜೂರಕ್ಕೆ ಸಮಾ
ವಾಗುವದು; ಆ ಹಣ್ಣನ್ನು ಕಂಡವನು ಕಿತ್ತ ಕೂಡ
ನುಂಗಿಬಿಡುವನಲ್ಲವೆ. ಆ ದಿನದಲ್ಲಿ ಸೇನಾಧೀಶ್ವ
ನಾದ ಯೆಹೋವನೇ ತನ್ನ ಜನರಲ್ಲಿ ಉಳಿದವರಿ
ಅಂದದ ಕಿರೀಟವೂ ಸುಂದರ ಮುಕುಟವೂ ಆಗಿರ

1) ಅಥವಾ: ಸಮುದ್ರದಲ್ಲಿನ. 2) ಪಾಠಾಂತರ: ದ್ರಾಕ್ಷೆಯ. 3) ಮೂಲ: ಅವು. 4) ಅಥವಾ: ಹೊರಡಿಸಿ
ಹಿಸಿಬಿಡುವದರ ಮೂಲಕ ಅದರೊಡನೆ. 5) ಮೂಲ: ತೊಲಗಿಸಿದನು. 6) ಅಥವಾ: ಹಣ್ಣುಗಳನ್ನು ಉದುರಿಸುವ.

6 ವನು; ಆತನೇ ನ್ಯಾಯಾಸನದಲ್ಲಿ ಕುಳಿತವನಿಗೆ
1)ನ್ಯಾಯವಿವೇಚನೆಯಾಗಿಯೂ ಊರಬಾಗಿಲಲ್ಲಿ ಶತ್ರು
ಗಳನ್ನು ತಳ್ಳಿಬಿಡುವವರಿಗೆ ಶೌರ್ಯವಾಗಿಯೂ ಪರಿ
ಣಮಿಸುವನು.

ಯೆಶಾಯನು ಯೆರೂಸಲೇಮಿನ ಅಧಿಪತಿಗಳನ್ನು ಖಂಡಿಸಿದ್ದು.

7 ಈ [ನನ್ನ] ಜನರು ಸಹ ದ್ರಾಕ್ಷಾರಸದಿಂದ ಓಲಾಡು
ತ್ತಾರೆ, ಮದ್ಯದಿಂದ ತೂಗಾಡುತ್ತಾರೆ; ಯಾಜಕ
ಪ್ರವಾದಿಗಳೂ ಮದ್ಯದಿಂದ ಓಲಾಡುತ್ತಾರೆ, ದ್ರಾಕ್ಷಾರ
ಸವೇ ಅವರನ್ನು ನುಂಗಿಬಿಟ್ಟಿದೆ, ಮದ್ಯದಿಂದ ತೂಗಾಡು
ತ್ತಾರೆ; ದೈವದರ್ಶನವಾಗುತ್ತಿರುವಾಗಲೂ ಓಲಾಡು
ತ್ತಾರೆ, ನ್ಯಾಯತೀರಿಸುತ್ತಿರುವಾಗಲೂ ಅತ್ತಿತ್ತ ತೂಗಾ
8 ಡುತ್ತಾರೆ. [ಅವರ] ಮೇಜುಗಳ ಮೇಲೆಲ್ಲಾ ವಾಂತಿ
ಯೂ ಎಂಜಲೂ ತುಂಬಿವೆ, ಶುದ್ಧಸ್ಥಳವೇ ಇಲ್ಲ.
9 [ಇವರು ಹರಟೆಕೊಳ್ಳುವದೇನಂದರೆ]—ಇವನು
ಯಾರಿಗೆ ಜ್ಞಾನವನ್ನು ಬೋಧಿಸುತ್ತಾನೆ? ಇವನು
ಯಾರಿಗೆ ಯೆಹೋವನ ಮಾತನ್ನು ತಿಳಿಯಪಡಿಸು
ತ್ತಾನೆ? ಮೊಲೆಬಿಟ್ಟ ಕೂಸುಗಳಿಗೋ? ಎದೆಬಿಟ್ಟ
10 ಮಕ್ಕಳಿಗೋ? ಆಜ್ಞೆಯ ಮೇಲೆ ಆಜ್ಞೆ. ಆಜ್ಞೆಯ
ಮೇಲೆ ಆಜ್ಞೆ, ಸೂತ್ರದ ಮೇಲೆ ಸೂತ್ರ, ಸೂತ್ರದ
ಮೇಲೆ ಸೂತ್ರ, ಇಲ್ಲಿ ಸ್ವಲ್ಪ, ಅಲ್ಲಿ ಸ್ವಲ್ಪ [ಪ್ರಕಟಿ
ಸುತ್ತಾನಲ್ಲಾ ಇತ್ಯಾದಿ].
11 ಹೌದು, ತೊದಲು ಮಾತಿನವರು, ಅನ್ಯಭಾಷಿಗಳು,
ಇವರ ಮೂಲಕವಾಗಿಯೇ ಯೆಹೋವನು ಈ ಜನರ
12 ಮಧ್ಯದಲ್ಲಿ ಮಾತಾಡುವನು. ಆತನು ಮೊದಲು—
ಇದೇ ನಿಮಗೆ ಆವಶ್ಯಕವಾದ ವಿಶ್ರಾಂತಿ, ಬಳಲಿದವ
ರನ್ನು ವಿಶ್ರಮಗೊಳಿಸಿರಿ, ನಿಮಗೆ ಅನುಕೂಲವಾದ ಉಪ
ಶಮನವು ಇದೇ ಎಂದು ಹೇಳಿದಾಗ ಇವರು ಕೇಳ
13 ಲೊಲ್ಲದೆ ಹೋದರು. ಹೀಗಿರಲು ಯೆಹೋವನ
ಮಾತು ಆಜ್ಞೆಯ ಮೇಲೆ ಆಜ್ಞೆ, ಆಜ್ಞೆಯ ಮೇಲೆ
ಆಜ್ಞೆ, ಸೂತ್ರದ ಮೇಲೆ ಸೂತ್ರ, ಸೂತ್ರದ ಮೇಲೆ
ಸೂತ್ರ, ಇಲ್ಲಿ ಸ್ವಲ್ಪ, ಅಲ್ಲಿ ಸ್ವಲ್ಪ ಎಂಬದಾಗಿ ಇವ
ರಿಗೆ ಪರಿಣಮಿಸುವದು; ಇವರು ನಡೆದು ಹಿಂದೆ ಬಿದ್ದು
ಭಂಗಪಡುವರು, ಬೋನಿಗೆ ಸಿಕ್ಕಿ ವಶವಾಗುವರು.
14 ಆದಕಾರಣ ಯೆರೂಸಲೇಮಿನ ಈ ಜನರನ್ನಾಳುವ
ಧರ್ಮನಿಂದಕರೇ, ಯೆಹೋವನ ಮಾತನ್ನು ಕೇಳಿರಿ.
15 ನೀವು ನಿಮ್ಮೊಳಗೆ—ಮೃತ್ಯುವಿನಿಂದ ಒಡಂಬಡಿಕೆ
ಯನ್ನು ಪಡೆದುಕೊಂಡು ಪಾತಾಳದೊಡನೆ ಒಪ್ಪಂದ
ಮಾಡಿಕೊಂಡಿದ್ದೇವೆ; ವಿಪರೀತ ಬಾಧೆಯು ದೇಶದೊ
ಳಗೆ ಹಾದುಹೋಗುವಾಗ ಅದು ನಮ್ಮನ್ನು ಮುಟ್ಟದು;
ನಾವು ಅಸತ್ಯವನ್ನು ಆಶ್ರಯಿಸಿಕೊಂಡು ಮೋಸವನ್ನು
16 ಮರೆಹೊಕ್ಕಿದ್ದೇವಲ್ಲಾ ಅಂದುಕೊಂಡದರಿಂದ ಕರ್ತ
ನಾದ ಯೆಹೋವನು ಹೀಗೆ ಹೇಳುತ್ತಾನೆ—ಇಗೋ,
ಪರೀಕ್ಷಿತವಾಗಿಯೂ ಮಾನ್ಯವಾಗಿಯೂ ಇರುವ
ಮೂಲೆಗಲ್ಲನ್ನು ಚೀಯೋನಿನಲ್ಲಿ ಸ್ಥಿರವಾದ ಅಸ್ತಿ
ವಾರವನ್ನಾಗಿ ಇಡುತ್ತೇನೆ; ಭರವಸಪಡುವವನು 2)ಆ
ತುರಪಡನು. ನಾನು ನ್ಯಾಯವನ್ನು ನೂಲನ್ನಾಗಿಯೂ 17
ಧರ್ಮವನ್ನು ಮಟ್ಟಗೋಲನ್ನಾಗಿಯೂ ಮಾಡು
ವೆನು, ಕಲ್ಮಳೆಯು ಅಸತ್ಯದ ಆಶ್ರಯವನ್ನು ಬಡಿದು
ಕೊಂಡು ಹೋಗುವದು, ಜಲಪ್ರವಾಹವು [ಮೋಸದ]
ಮರೆಯನ್ನು ಮುಣುಗಿಸುವದು. ಮೃತ್ಯುವಿನಿಂದ 18
ನೀವು ಪಡೆದುಕೊಂಡ ಒಡಂಬಡಿಕೆಯು ಸಾಗದು, ಪಾ
ತಾಳದೊಡನೆ ನೀವು ಮಾಡಿಕೊಂಡ ಒಪ್ಪಂದವು ನಿಲ್ಲದು;
ವಿಪರೀತ ಬಾಧೆಯು ದೇಶದೊಳಗೆ ಹಾದುಹೋಗುವಾಗ
ನಿಮ್ಮನ್ನು ತುಳಿದುಬಿಡುವದು. ಅದು ಹಾದುಹೋ 19
ಗುವಾಗೆಲ್ಲಾ ನಿಮ್ಮನ್ನು ಹಿಡಿಯುವದು; ಬೆಳಬೆಳಗೂ
ಹಗಲುರಾತ್ರಿಯೂ ಅದು ಹಾದುಹೋಗುವದು; ಆಗ
ಯೆಹೋವನ ಮಾತನ್ನು ಗ್ರಹಿಸಿಕೊಳ್ಳುವದು ಬರೀ
ಭಯವೇ. ಒಬ್ಬನು ಚಾಚಿಕೊಂಡು ಮಲಗೇನಂದರೆ 20
ಹಾಸಿಗೆಯ ಉದ್ದ ಸಾಲದು; ಮುದುರಿಕೊಂಡು ಮಲ
ಗೇನಂದರೆ ಹೊದಿಕೆಯ ಅಗಲ ಸಾಲದು. ಯೆಹೋ 21
ವನು ಈಗ ಅಪರೂಪವಾದ ತನ್ನ ಕೆಲಸವನ್ನು ನಡಿಸ
ಬೇಕೆಂತಲೂ ಅಪೂರ್ವವಾದ ತನ್ನ ಕಾರ್ಯವನ್ನು
ನೆರವೇರಿಸಬೇಕೆಂತಲೂ ಪೆರಾಚೀಮ್ ಬೆಟ್ಟದಲ್ಲಿ
ಎದ್ದಂತೆ ಏಳುವನು, ಗಿಬ್ಯೋನ್ ತಗ್ಗಿನಲ್ಲಿ ರೋಷ
ಗೊಂಡಂತೆ ರೋಷಗೊಳ್ಳುವನು. ಆದಕಾರಣ ನಿಮ್ಮ 22
ಬಂಧನಗಳು ಇನ್ನೂ ಬಿಗಿಯಾಗದಂತೆ ಧರ್ಮನಿಂದೆ
ಯನ್ನು ಬಿಡಿರಿ; ಭೂಮಂಡಲದಲ್ಲೆಲ್ಲಾ ನಿಶ್ಚಿತಪ್ರಲ
ಯವಾಗಲಿ ಎಂದು ಸೇನಾಧೀಶ್ವರನಾದ ಯೆಹೋವ
ನೆಂಬ ಕರ್ತನು ನುಡಿಯುವದನ್ನು ಕೇಳಿದ್ದೇನೆ.

ಯೆಹೋವನ ಕಾರ್ಯಗಳಲ್ಲಿನ ವಿವೇಕವು.

ನನ್ನ ಧ್ವನಿಗೆ ಕಿವಿಗೊಟ್ಟು ಕೇಳಿರಿ, ನನ್ನ ಮಾತಿಗೆ 23
ಗಮನಕೊಟ್ಟು ಆಲಿಸಿರಿ; ಬಿತ್ತನೆಗಾಗಿ ಉಳುವವನು 24
ಸದಾ ಉಳುತ್ತಿರುವನೋ? [ಪ್ರತಿನಿತ್ಯವೂ] ಮಣ್ಣ
ನ್ನು ಕೆಳಮೇಲು ಮಾಡುತ್ತಾ ಕುಂಟೆಹೊಡೆಯು
ವನೋ? ಅಂತು ಭೂಮಿಯನ್ನು ಹಸನುಮಾಡಿದ 25
ಮೇಲೆ ಕರಿಯ ಜೀರಿಗೆಯನ್ನು ಚೆಲ್ಲಿ ಜೀರಿಗೆಯನ್ನು
ಬಿತ್ತಿ ಗೋದಿಯನ್ನು ಸಾಲು ಸಾಲಾಗಿಯೂ ಜವೆ
ಗೋದಿಯನ್ನು ತಕ್ಕ ಸ್ಥಳದಲ್ಲಿಯೂ ಕಡಲೆಯನ್ನು
ಅಂಚಿನಲ್ಲಿಯೂ ಹಾಕುವನಲ್ಲವೆ. 3)ಅವನ ದೇವರು 26
ಇದನ್ನೆಲ್ಲಾ ಅವನಿಗೆ ಸರಿಯಾಗಿ ಕಲಿಸಿ ತಿದ್ದು
ತ್ತಾನೆ. ಆದಕಾರಣ ಅವನು ಕರಿಯ ಜೀರಿಗೆಯ 27
ನ್ನು ಒಕ್ಕುವದು ಹಲಿಪೆಯಿಂದಲ್ಲ, ಕೋಲಿನಿಂದಲೇ;
ಜೀರಿಗೆಯನ್ನು ಒಕ್ಕುವದು ಕಣದ ಗುಂಡಿನಿಂದಲ್ಲ,
ದೊಣ್ಣೆಯಿಂದಲೇ. ಗೋದಿಯು ಕಾಳನ್ನು ನುಚ್ಚು 28
ನುಚ್ಚು ಮಾಡುವನೋ? ತನ್ನ ಕುದುರೆಗಳನ್ನು
ಹೊಡೆಯುತ್ತಾ ಗುಂಡನ್ನು ಗಿರ್ರನೆ ಉರುಳಿಸುತ್ತಾ
ಯಾವಾಗಲೂ ಒಕ್ಕುತ್ತಿರುವದಿಲ್ಲ; ನುಚ್ಚು ನುಚ್ಚು
ಮಾಡನು. ಈ ವಿವೇಕವು ಸಹ ಅತಿಶಯಾಲೋಚ 29
ನಾಪರನೂ 4)ಸುಜ್ಞಾನಶ್ರೇಷ್ಠನೂ ಆಗಿರುವ ಸೇನಾಧೀ
ಶ್ವರನಾದ ಯೆಹೋವನಿಂದಲೇ ಉಂಟಾಗುತ್ತದೆ.

1) ಮೂಲ: ನ್ಯಾಯದ ಆತ್ಮವಾಗಿಯೂ. 2) ಪಾಠಾಂತರ: ಆಶಾಭಂಗಪಡುವದಿಲ್ಲ. 3) ಅಥವಾ: ಅವನು ಒಂದೊಂದನ್ನು [illegible]ಗಿ ಬಿತ್ತುತ್ತಾನೆ; ಅವನಿಗೆ ಕಲಿಸಿದಾತನು ಅವನ ದೇವರೇ. 4) ಅಥವಾ: ಕಾರ್ಯಸಾಧಕಜ್ಞಾನಶ್ರೇಷ್ಠನೂ.

ಯೆರೂಸಲೇಮಿನ ಮುಂದಿನ ಕಷ್ಟವೂ ಅದರ ನಿವಾರಣೆಯೂ.

29 ಅಯ್ಯೋ, 1)ಅರೀಯೇಲೇ, ಅರೀಯೇಲೇ, ದಾ
ವೀದನು ಸೈನ್ಯಸಮೇತನಾಗಿ ವಾಸಿಸಿದ ಪಟ್ಟಣ
ವೇ, ನಿನ್ನ ಗತಿಯನ್ನು ಏನು ಹೇಳಲಿ! ಈ ವರುಷಕ್ಕೆ
ಮುಂದಿನ ವರುಷವನ್ನು ಸೇರಿಸಿರಿ; ಹಬ್ಬಗಳು ಸುತ್ತಿ
2 ಬರಲಿ; ಆ ಮೇಲೆ ನಾನು ಅರೀಯೇಲನ್ನು ಬಾಧಿ
ಸುವೆನು; ಅರಿಚಾಟಕಿರಿಚಾಟವಾಗುವದು; ಆ ಪಟ್ಟ
ಣವು ನನಗೆ ಅರೀಯೇಲಾಗಿಯೇ ಪರಿಣಮಿಸುವದು.
3 ನಾನು ನಿನ್ನ ಸುತ್ತಲು ದಂಡಿಳಿಸಿ ನಿನಗೆ ವಿರುದ್ಧವಾಗಿ
2)ಕೊತ್ತಲಕಟ್ಟಿ ದಿಬ್ಬಹಾಕಿ ನಿನ್ನನ್ನು ಮುತ್ತು
4 ವೆನು. ನೀನು ಕುಗ್ಗಿ ಭೂಮಿಯೊಳಗಿಂದ ಮಾತಾ
ಡುವಿ, ನಿನ್ನ ನುಡಿಯು ಮಣ್ಣಿನೊಳಗಿಂದ ಸಣ್ಣ
ಸ್ವರವಾಗಿ ಹೊರಡುವದು, ನಿನ್ನ ಧ್ವನಿಯು ಪ್ರೇತದ
ಧ್ವನಿಯಂತೆ ನೆಲದೊಳಗಿಂದ ಬರುವದು, ನಿನ್ನ ನುಡಿ
5 ಯು ದೂಳಿನೊಳಗಿಂದ ಲೊಚಗುಟ್ಟುವದು. ಗುಂಪು
ಗುಂಪಾಗಿ ಕೂಡಿರುವ ನಿನ್ನ ಶತ್ರುಗಳು ಸೂಕ್ಷ್ಮ
ದೂಳಿಯಂತೆಯೂ ತಂಡೋಪತಂಡವಾಗಿ ಬಂದಿರುವ
ಭಯಂಕರರು ಹಾರಿಹೋಗುವ ಹೊಟ್ಟಿನ ಹಾಗೂ
ಆಗುವರು; ತಟ್ಟನೆ ಕ್ಷಣದಲ್ಲಿ ಲಯಹೊಂದುವರು.
6 ಸೇನಾಧೀಶ್ವರನಾದ ಯೆಹೋವನು ಗುಡುಗು,
ಭೂಕಂಪ, ಮಹಾಶಬ್ದ, ಬಿರುಗಾಳಿ, ಚಂಡಮಾರುತ,
ದಹಿಸುವ ಅಗ್ನಿಯ ಜ್ವಾಲೆ ಇವುಗಳ ಮೂಲಕ ಆ ನಗರಿ
7 ಯನ್ನು ರಕ್ಷಿಸುವನು. ಅರೀಯೇಲಿನ ಮೇಲೆ ಹೋ
ರಾಡಿ ಅದಕ್ಕೂ ಅದರ ಕೋಟೆಗೂ ವಿರುದ್ಧವಾಗಿ
ಯುದ್ಧಮಾಡಿ ಬಾಧಿಸುವ ಸಕಲ ಜನಾಂಗಗಳ ಗುಂಪು
ಕನಸಿನಂತೆ, ರಾತ್ರಿಯ ಸ್ವಪ್ನದ ಹಾಗೆ, ಮಾಯ
8 ವಾಗುವದು. ಹಸಿದವನು ಕನಸು ಕಂಡು ಆಹಾ,
ಉಣ್ಣುತ್ತೇನೆ ಎಂದುಕೊಂಡಂತಾಗುವದು; ಎಚ್ಚ
ತ್ತಾಗ ಅವನ ಹೊಟ್ಟೆ ಬರಿದೇ. ಬಾಯಾರಿದವನು
ಸ್ವಪ್ನದಲ್ಲಿ ಇಗೋ ಕುಡಿಯುತ್ತೇನೆ ಎಂದುಕೊಂಡ
ಹಾಗೂ ಆಗುವದು; ನಿದ್ರೆತಿಳಿದಾಗ ಬಳಲಿ ನೀರನ್ನು
ಬಯಸುವನು. ಚೀಯೋನ್ ಪರ್ವತಕ್ಕೆ ವಿರುದ್ಧ
ವಾಗಿ ಹೋರಾಡುವ ಸಕಲಜನಾಂಗಗಳ ಗುಂಪಿಗೆ
ಈ ಗತಿಯಾಗುವದು.

ಯೆರೂಸಲೇಮಿನ ಮೂಢಭಕ್ತಿ.

9 ನಿಮ್ಮನ್ನು ನೀವೇ ಬೆರಗುಮಾಡಿಕೊಂಡು ಬೆರಗಾ
ಗಿರಿ, ಕುರುಡುಮಾಡಿಕೊಂಡು ಕುರುಡರಾಗಿರಿ;
3)ಇವರು ಅಮಲೇರಿದ್ದಾರೆ, ದ್ರಾಕ್ಷಾರಸದಿಂದಲ್ಲ;
10 ಓಲಾಡುತ್ತಾರೆ, ಮದ್ಯದಿಂದಲ್ಲ. ಯೆಹೋವನು
ನಿಮ್ಮ ಮೇಲೆ ಗಾಢನಿದ್ರೆಯನ್ನು ಬರಮಾಡಿ ಪ್ರವಾದಿ
ಗಳೆಂಬ ಕಣ್ಣುಗಳನ್ನು ಮುಚ್ಚಿ ದಿವ್ಯದರ್ಶಿಗಳೆಂಬ
11 ತಲೆಗಳಿಗೆ ಮುಸುಕು ಹಾಕಿದ್ದಾನಷ್ಟೆ. ದೈವದರ್ಶನ
ವೆಲ್ಲಾ ಮುದ್ರೆಹಾಕಿದ ಶಾಸ್ತ್ರದ ಮಾತಿನ ಹಾಗಿದೆ;

ಅದನ್ನು ಅಕ್ಷರಬಲ್ಲವನಿಗೆ—ದಯಮಾಡಿ ಓದೆಂದ
ಒಪ್ಪಿಸಿದರೆ ಅವನು—ಮುದ್ರೆಹಾಕಿದೆಯಲ್ಲಾ, ಆಗ
ವದಿಲ್ಲ ಅನ್ನುವನು; ಅಕ್ಷರವಿಲ್ಲದವನಿಗೆ—ದಯ
ವಿಟ್ಟು ಓದೆಂದು ಒಪ್ಪಿಸಿದರೆ ಅವನು—ನನಗೆ ವಿದ
ಯಿಲ್ಲ ಅನ್ನುವನು.
ಮತ್ತು ಯೆಹೋವನು—ಈ ಜನರು ಮಾ
ನಿಂದ ನನ್ನನ್ನು ಸಮೀಪಿಸಿ ತುಟಿಯಿಂದ ನನ್ನನ
ಸನ್ಮಾನಿಸುತ್ತಾರೆ, ಮನಸ್ಸನ್ನೋ ದೂರಮಾಡಿಕೊಂಡ
ಬಾಯಿಪಾಠವಾಗಿ ಕಲಿತಿರುವ ಮನುಷ್ಯರ ಆಜ್ಞೆ
ಸರಿಯಾದ ಭಯಭಕ್ತಿಯನ್ನು ಮಾತ್ರ ನನ್ನಲ್ಲಿ
ದ್ದಾರೆ; ಹೀಗಿರುವದರಿಂದ ನಾನು ಈ ಜನರ ಮಧ
ದಲ್ಲಿ ಅಧಿಕಾಶ್ಚರ್ಯವೂ ಅದ್ಭುತವೂ ಆದ ಕಾಯ
ವನ್ನು ಇನ್ನು ಮಾಡುವೆನು; ಇವರ ಜ್ಞಾನಿಗ
ಜ್ಞಾನವು ಅಳಿಯುವದು, ವಿವೇಕಿಗಳ ವಿವೇಕವು ಅ
ಗುವದು ಎಂದು ಹೇಳಿದನು.

ಯೆಹೂದ ಐಗುಪ್ತಗಳ ಒಪ್ಪಂದ.

29. 15—31. 9.

ಮಂತ್ರಾಲೋಚಕರ ಉಪಾಯವೂ ಯೆಹೋವನ
ಕೃಪೆಯ ಉದ್ದೇಶವೂ.

ತಮ್ಮ ಆಲೋಚನೆಯನ್ನು ಯೆಹೋವನಿಗೆ ಮ
ಮಾಜುವದಕ್ಕೆ ಅಗಾಧೋಪಾಯ ಮಾಡಿ ನಮ್ಮನ
ಯಾರು ನೋಡಿಯಾರು, ಯಾರು ತಿಳಿದಾರು ಅಂದ
ಕೊಂಡು ಕತ್ತಲಲ್ಲೇ ತಮ್ಮ ಕೆಲಸಗಳನ್ನು ನಡಿಸುವವ
ಗತಿಯನ್ನು ಏನು ಹೇಳಲಿ! ಅಯ್ಯೋ, ನೀವು ಎಂಥ
ಮೂರ್ಖರು! ಕುಂಬಾರನು ಮಣ್ಣೆನಿಸಿಕೊಂಡಾನೇ
ಕಾರ್ಯವು ಕರ್ತೃವನ್ನು ಕುರಿತು ಅವನು ನನ್ನನ
ಮಾಡಲಿಲ್ಲ ಎಂದುಕೊಂಡೀತೇ? ನಿರ್ಮಿತವಾದದ
ನಿರ್ಮಿಸಿದವನ ವಿಷಯವಾಗಿ ಅವನಿಗೆ ವಿವೇಕವಿ
ಎಂದೀತೇ? ಅತ್ಯಲ್ಪಕಾಲದೊಳಗೆ ಲೆಬನೋನ್ ಅರಣ್ಯ
ತೋಟವಾಗುವದು, [ಈಗಿನ] ತೋಟವು [ಆಗಿನವರಿಗ
ಅರಣ್ಯವಾಗಿ ಕಾಣಿಸುವದು. ಆ ದಿನದಲ್ಲಿ ಕಿವುಡರ
ಶಾಸ್ತ್ರದ ಮಾತುಗಳನ್ನು ಕೇಳುವರು, ಮೊಬ್ಬುಕತ್ತಲ
ಗಳಲ್ಲಿಯೂ ಕುರುಡರ ಕಣ್ಣು ಕಾಣುವದು. ದ
ನರು ಯೆಹೋವನಲ್ಲಿ ಹೆಚ್ಚುಹೆಚ್ಚಾಗಿ ಆನಂದಿಸುವರ
ಬಡವರು ಇಸ್ರಾಯೇಲ್ಯರ ಸದಮಲಸ್ವಾಮಿಯ
ಉಲ್ಲಾಸಿಸುವರು. ಏಕಂದರೆ ಭಯಂಕರರು ನಿಶ್ಶೇ
ವಾಗುವರು, ಧರ್ಮನಿಂದಕರು ನಿರ್ನಾಮವಾಗುವರ
ಅಪಸಾಕ್ಷಿಯಿಂದ ತಪ್ಪು ಹೊರಿಸುವವರೂ ಚಾವ
ಯಲ್ಲಿ ದೋಷವನ್ನು ಖಂಡಿಸುವವನಿಗೆ ಉರುಲೊಡ
ವವರೂ ನ್ಯಾಯವಂತನ ನ್ಯಾಯವನ್ನು ಸುಮ್ಮ
ಮ್ಮನೆ ತಪ್ಪಿಸುವವರೂ ಆಗಿರುವ ಅಧರ್ಮನಿರತರೆಲ್ಲಾ
ನಿರ್ಮೂಲವಾಗುವರು.
ಹೀಗಿರಲು ಅಬ್ರಹಾಮನನ್ನು ಉದ್ಧರಿಸಿದ ಯೆ
ಹೋವನು ಯಾಕೋಬನ ಮನೆತನದ ವಿಷಯ
ವಾಗಿ—ಯಾಕೋಬ್ಯರು ಇನ್ನು ನಾಚಿಕೆಗೆ ಈಡಾಗರ

1) ಅರೀಯೇಲ್ ಅಂದರೆ ದೇವರ ಅಗ್ನಿವೇದಿ ಅಥವಾ ದೇವರ ಸಿಂಹ. 2) ಅಥವಾ: ಅಲ್ಲಲ್ಲಿ ಭಟರನ್ನು
3) ಪಾಠಾಂತರ: ಅಮಲೇರಿರಿ, ದ್ರಾಕ್ಷಾರಸದಿಂದಲ್ಲ, ಓಲಾಡಿರಿ, ಮದ್ಯದಿಂದಲ್ಲ.

ಅವರ ಮುಖವು ಇನ್ನು ಬಾಡದು, ಯಾಕೋಬ
ವಂಶದವರು ತಮ್ಮ ಮಧ್ಯದಲ್ಲಿ ನಾನು ನಡಿಸುವ
ಕೆಲಸವನ್ನು ನೋಡಿ ನನ್ನ ನಾಮವೇ ಆರಾಧನೆಗೆ
ಅರ್ಹವೆಂದು ಪ್ರತಿಷ್ಠಿಸುವರು; ಹೌದು, ಯಾಕೋ
ಬ್ಯರ ಸದಮಲಸ್ವಾಮಿಯನ್ನು ಪ್ರತಿಷ್ಠೆಪಡಿಸಿ ಇಸ್ರಾ
ಯೇಲ್ಯರ ದೇವರಿಗೆ ನಡುಗುವರು. ತಪ್ಪಿದ ಹೃದಯ
ವುಳ್ಳವರೆಲ್ಲರೂ ವಿವೇಕಿಗಳಾಗುವರು, ಗುಣುಗುಟ್ಟು
ವವರು ಉಪದೇಶವನ್ನು ಗಮನಿಸುವರು ಎಂದು
ಹೇಳುತ್ತಾನೆ.

ಐಗುಪ್ತದ ಸಹಾಯ ವ್ಯರ್ಥವೆಂಬದು.

30 ಯೆಹೋವನು ಹೀಗೆ ನುಡಿಯುತ್ತಾನೆ:—ದ್ರೋ
ಹಿಗಳಾದ [ನನ್ನ] ಮಕ್ಕಳ ಗತಿಯನ್ನು ಏನು
ಹೇಳಲಿ! ಇವರು ನನ್ನನ್ನು ಕೇಳದೆ ಒಂದು ಆಲೋ
ಚನೆಯನ್ನು ಸಾಗಿಸಿ ನನ್ನ ಆತ್ಮಪ್ರೇರಿತರಾಗದೆ 1)ಉ
ಪಾಯವನ್ನು ನೆಯ್ದು ಪಾಪದ ಮೇಲೆ ಪಾಪವನ್ನು
2 ಸೇರಿಸಿಕೊಂಡಿದ್ದಾರೆ; ಫರೋಹನ ಆಶ್ರಯವನ್ನು
ಪಡೆದು ಐಗುಪ್ತವನ್ನು ಮರೆಹೊಗಬೇಕೆಂದು ನನ್ನ
ಮಾತನ್ನು ಕೇಳದೆ ಐಗುಪ್ತಕ್ಕೆ ಪ್ರಯಾಣವಾಗಿ ಹೊರ
3 ಟಿದ್ದಾರೆ. ಆದಕಾರಣ ಫರೋಹನ ಆಶ್ರಯದಿಂದ
ನಿಮಗೆ ನಾಚಿಕೆ, ಐಗುಪ್ತವನ್ನು ಮರೆಹೊಗುವದ
4 ರಿಂದ ಅವಮಾನ. 2)ಆ ಫರೋಹನ ಸಾಮಂತರಾಜ
ರು ಚೋವನಿನಲ್ಲಿದ್ದರೂ ಅವನ ದೂತರು ಹಾನೇಸಿನ
5 ತನಕ ಸೇರಿದರೂ ಸಹಾಯವನ್ನೂ ಪ್ರಯೋಜನ
ವನ್ನೂ ಮಾಡಲಾರದೆ ನಾಚಿಕೆಯನ್ನೂ ಅವಮಾನ
ವನ್ನೂ ಉಂಟುಮಾಡುವ ವ್ಯರ್ಥವಾದ ಈ ಜನಾಂಗದ
ವಿಷಯವಾಗಿ ಎಲ್ಲರೂ ಲಜ್ಜೆಪಡುವರು.
6 ದಕ್ಷಿಣ ಸೀಮೆಯ 3)ಸೀರಾನೆಯ ವಿಷಯವಾದ
ದೈವೋಕ್ತಿ.
[ರಾಯಭಾರಿಗಳು] ಕತ್ತೆಗಳ ಬೆನ್ನುಗಳ ಮೇಲೆ ತಮ್ಮ
ಧನವನ್ನೂ ಒಂಟೆಗಳ ಡುಬ್ಬಗಳ ಮೇಲೆ ತಮ್ಮ ದ್ರವ್ಯ
ವನ್ನೂ ಹೊರಿಸಿಕೊಂಡು ಮೃಗೇಂದ್ರ, ಸಿಂಹ, ಕೃಷ್ಣ
ಸರ್ಪ, ಹಾರುವ ಉರಿಮಂಡಲ ಇವುಗಳಿಂದ ಭಯಂ
ಕರವಾಗಿಯೂ ಶ್ರಮಸಂಕಟಗಳನ್ನುಂಟುಮಾಡುವದಾ
ಗಿಯೂ ಇರುವ ದೇಶದ ಮಾರ್ಗವಾಗಿ ನಿಷ್ಪ್ರಯೋ
7 ಜನವಾದ ಜನಾಂಗದ ಒಳಗೆ ಹೋಗುತ್ತಾರೆ. ಐಗು
ಪ್ತದ ಸಹಾಯವು ವ್ಯರ್ಥವೇ ವ್ಯರ್ಥ; ಆದದರಿಂದ
ನಾನು ಅದಕ್ಕೆ ಸುಮ್ಮನೆ ಬಿದ್ದಿರುವ 4)ಜಂಬದ ಮೃಗ
ವೆಂದು ಹೆಸರಿಟ್ಟಿದ್ದೇನೆ.

ಐಗುಪ್ತದ ಆಶ್ರಯದಿಂದಾಗುವ ದುರ್ಗತಿ.

8 [ಯೆಹೋವನು ನನಗೆ ಹೀಗೆ ಹೇಳಿದನು]—ನೀನೀಗ
ಮನೆಗೆ ಹೋಗಿ, ಈ ಮಾತು ಮುಂದಿನ ಕಾಲದಲ್ಲಿ
5)ಶಾಶ್ವತ ಸಾಕ್ಷಿಯಾಗಿರುವಂತೆ ಇವರೆದುರಿಗೆ ಹಲಿ
ಗೆಯ ಮೇಲೆ ಕೆತ್ತು, ಪುಸ್ತಕದಲ್ಲಿ ಬರೆ. ಇವರು 9
ದ್ರೋಹದ ಜನಾಂಗದವರು, ಮೋಸದ ಸಂತಾನದ
ವರು, ಯೆಹೋವನ ಉಪದೇಶವನ್ನು ಕೇಳಲೊಲ್ಲದ
ಸಂತತಿಯವರಷ್ಟೆ; ಇವರು ದಿವ್ಯ ದರ್ಶಿಗಳನ್ನು 10
ಕುರಿತು—ನಿಮಗೆ ದರ್ಶನವಾಗದಿರಲಿ ಅನ್ನುತ್ತಾರೆ;
ಮತ್ತು ಸಾಕ್ಷಾತ್ಕಾರಿಗಳಿಗೆ—ನಮಗಾಗಿ ನ್ಯಾಯ
ವಾದವುಗಳನ್ನು ಸಾಕ್ಷಾತ್ಕರಿಸಬೇಡಿರಿ, ನಯವಾದವು
ಗಳನ್ನು ನಮಗೆ ನುಡಿಯಿರಿ, ಮಾಯವಾದವುಗಳ
ನ್ನೇ ಸಾಕ್ಷಾತ್ಕರಿಸಿರಿ; [ನೀವು ಹಿಡಿದಿರುವ] ಮಾರ್ಗ 11
ದಿಂದ ತೊಲಗಿರಿ; ನಿಮ್ಮ ದಾರಿಗೆ ಓರೆಯಾಗಿರಿ;
ಇಸ್ರಾಯೇಲ್ಯರ ಸದಮಲಸ್ವಾಮಿಯನ್ನು ನಮ್ಮ
ಮುಂದೆ ನಿಲ್ಲದ ಹಾಗೆ ಮಾಡಿರಿ ಎಂದು ಹೇಳು
ತ್ತಾರೆ. ಆದಕಾರಣ ಇಸ್ರಾಯೇಲ್ಯರ ಸದಮಲಸ್ವಾ 12
ಮಿಯು ಹೀಗನ್ನುತ್ತಾನೆ—ನೀವು ಈ ಮಾತನ್ನು
ಅಸಡ್ಡೆಮಾಡಿ ಬಲಾತ್ಕಾರಕುಯುಕ್ತಿಗಳನ್ನು ನಂಬಿ
ಅವುಗಳನ್ನೇ ಆಧಾರಮಾಡಿಕೊಂಡದರಿಂದ ಎತ್ತರ 13
ವಾದ ಗೋಡೆಯ ಒಂದು ಭಾಗವು ಬೊಗ್ಗುತ್ತಾ
ತಟ್ಟನೆ ಕ್ಷಣಮಾತ್ರದಲ್ಲಿ ಕವಚಿಕೊಳ್ಳುವ ಹಾಗೆ
ನಿಮ್ಮ ಅಪರಾಧವೂ ನಿಮಗೆ ಅಪಾಯಕರವಾಗು
ವದು. ಉರಿಯಿಂದ ಕೆಂಡವನ್ನು ತೆಗೆಯುವದಕ್ಕಾ 14
ಗಲಿ, ಬಾವಿಯಿಂದ ನೀರನ್ನು ಗೋಚುವದಕ್ಕಾಗಲಿ
ಬೋಕಿಯ ತುಂಡುಗಳಲ್ಲಿ ಒಂದೂ ಉಳಿಯದಂತೆ
ಒಬ್ಬನು ಕುಂಬಾರನ ಗಡಿಗೆಯನ್ನು ಚೂರುಚೂರಾಗಿ
ಒಡದುಬಿಡುವ ರೀತಿಯಲ್ಲಿ ಆತನು ಆ ಗೋಡೆ
ಯನ್ನು ಒಡೆದುಬಿಡುವನು. ಇಸ್ರಾಯೇಲ್ಯರ ಸದ 15
ಮಲಸ್ವಾಮಿಯಾಗಿರುವ ಕರ್ತನಾದ ಯೆಹೋವ
ನು—ನೀವು ತಿರುಗಿಕೊಂಡು ಸುಮ್ಮನಿದ್ದರೆ ನಿಮಗೆ
ರಕ್ಷಣೆಯಾಗುವದು; ಶಾಂತರಾಗಿ ಭರವಸದಿಂದಿರು
ವದೇ ನಿಮಗೆ ಬಲ ಎಂದು ಹೇಳಿದ್ದರೂ ನೀವು ಒಪ್ಪಿ
ಕೊಂಡಿಲ್ಲ. ನೀವು—ಬೇಡವೇ ಬೇಡ, ಕುದುರೆಗಳ 16
ಮೇಲೆ ಓಡುವೆವು ಎಂದುಕೊಂಡದರಿಂದ ಓಡೇ ಹೋ
ಗುವಿರಿ; ನೀವು—ವೇಗವಾಗಿ ಸವಾರಿಮಾಡುವೆವು
ಎಂದುಕೊಂಡದರಿಂದ ವೇಗಿಗಳೇ ನಿಮ್ಮನ್ನು ಅಟ್ಟಿ
ಬಿಡುವರು. ಒಬ್ಬನ ಬೆದರಿಕೆಗೆ ಸಾವಿರ ಜನರು ಓಡು 17
ವರು; ಐವರು ಬೆದರಿಸುವದರಿಂದ ನೀವು ಓಡಿಹೋಗು
ವಿರಿ; ಕಟ್ಟಕಡೆಗೆ ಬೆಟ್ಟದ ಶಿಖರದಲ್ಲಿನ ಸ್ತಂಭದ
ಹಾಗೂ ಗುಡ್ಡದ ಮೇಲಣ ಕಂಬದಂತೆಯೂ [ಒಂಟಿ
ಯಾಗಿ] ಉಳಿಯುವಿರಿ.

ಯೆಹೂದ್ಯರ ಮುಂದಿನ ವಿಧೇಯತೆಯೂ ಸುಸ್ಥಿತಿಯೂ.

ಹೀಗಿರಲು ಯೆಹೋವನು ನಿಮಗೆ ಕೃಪೆತೋರಿಸ 18
ಬೇಕೆಂದು ಕಾದಿರುವನು; ನಿಮ್ಮನ್ನು ಕರುಣಿಸಬೇ
ಕೆಂದು ಉನ್ನತೋನ್ನತವಾಗಿ ಕಾಣಿಸಿಕೊಳ್ಳುವನು:
ಯೆಹೋವನು ನ್ಯಾಯಸ್ವರೂಪನಾದ ದೇವರು; ಆತ
ನಿಗಾಗಿ ಕಾದಿರುವವರೆಲ್ಲರೂ ಧನ್ಯರು. 6)ಯೆರೂಸ 19

1) ಅಥವಾ: ಪಾನಕ ನೈವೇದ್ಯದಿಂದ ಒಪ್ಪಂದ ಮಾಡಿಕೊಂಡು. 2) ಅಥವಾ: ಯೆಹೂದದ ಪ್ರಭುಗಳು ಚೋವನಿಗೆ ಬಂದಿದ್ದರೂ ...ದರ ರಾಯಭಾರಿಗಳು ಹಾನೇಸಿಗೆ ಮುಟ್ಟಿದ್ದರೂ. 3) ಅಥವಾ: ಮೃಗಗಳ. 4) ಮೂಲ: ರಹಬೆಂದು. 5) ಪಾಠಾಂತರ: ...ಕ್ಷಶಾಶ್ವತವಾಗುವಂತೆ. 6) ಅಥವಾ: ಚೀಯೋನಿನ ಯೆರೂಸಲೇಮಿನಲ್ಲಿ ಒಂದು ಜನಾಂಗವು ವಾಸಿಸುವದು.

ಲೇಮಿನಲ್ಲಿ ವಾಸಿಸುವ ಚೀಯೋನಿನ ಜನರೇ, ನೀವು
ಇನ್ನು ಅಳುವದೇ ಇಲ್ಲ; ನೀವು ಕೂಗಿಕೊಂಡ ಶಬ್ದ
ವನ್ನು ಆತನು ಕೇಳಿ ನಿಮಗೆ ಕೃಪೆ ತೋರಿಸೇ ತೋರಿ
ಸುವನು; ಕೇಳಿದ ಕೂಡಲೆ ನಿಮಗೆ ಸದುತ್ತರವನ್ನು
20 ದಯಪಾಲಿಸುವನು. ಕರ್ತನು ಕಷ್ಟವನ್ನೂ ಶ್ರಮ
ವನ್ನೂ ನಿಮಗೆ ಅನ್ನಪಾನಗಳನ್ನಾಗಿ ಕೊಟ್ಟರೂ
ನಿಮ್ಮ ಬೋಧಕನು ಇನ್ನು ಮರೆಯಾಗಿರನು, ನಿಮ್ಮ
21 ಬೋಧಕನನ್ನು ಕಣ್ಣಾರೆ ಕಾಣುವಿರಿ; ನೀವು ಬಲ
ಕ್ಕಾಗಲಿ ಎಡಕ್ಕಾಗಲಿ ತಿರುಗಿಕೊಳ್ಳುವಾಗ ಇದೇ
ಮಾರ್ಗ, ಇದರಲ್ಲೇ ನಡೆಯಿರಿ ಎಂದು ನಿಮ್ಮ ಹಿಂದೆ
22 ಆಡುವ ಮಾತು ನಿಮ್ಮ ಕಿವಿಗೆ ಬೀಳುವದು. ಕೆತ್ತಿದ
ನಿಮ್ಮ ವಿಗ್ರಹಗಳ ಬೆಳ್ಳಿಯ ಕವಚಗಳನ್ನೂ ಎರಕದ
ನಿಮ್ಮ ಬೊಂಬೆಗಳ ಬಂಗಾರದ ಮುಲಾಮುನ್ನೂ
ನೀವು ಹೊಲಸುಮಾಡಿ ಆ ವಿಗ್ರಹಗಳನ್ನು—ತೊಲಗಿ
23 ಎಂದು ಹೊಲೆಯಂತೆ ಬಿಸಾಟುಬಿಡುವಿರಿ. ಆಗ
ನೀವು ಹೊಲದಲ್ಲಿ ಬೀಜಬಿತ್ತುವದಕ್ಕೆ ಆತನು ಬಿತ್ತ
ನೆಯ ಮಳೆಯನ್ನು ದಯಪಾಲಿಸುವನು; ನೆಲದ
ಬೆಳೆಯಿಂದ ಸಾರವಾದ ಆಹಾರವನ್ನು ಸಮೃದ್ಧಿ
ಯಾಗಿ ಒದಗಿಸುವನು; ಆ ದಿನದಲ್ಲಿ ನಿಮ್ಮ ಮಂದ
ಗಳು ದೊಡ್ಡದೊಡ್ಡ ಕಾವಲುಗಳಲ್ಲಿ ಮೇಯುವವು.
24 ಹೊಲಗೇಯುವ ಎತ್ತುಕತ್ತೆಗಳು ಮೊರದಿಂದಲೂ
ಕವೇಕೋಲಿನಿಂದಲೂ ತೂರಿದ ಉಪ್ಪುಪ್ಪಾದ ಮೇ
25 ವನ್ನು ತಿನ್ನುವವು. ಬುರುಜುಗಳು ಬಿದ್ದುಹೋಗುವ
ಮಹಾಸಂಹಾರದ ದಿನದಲ್ಲಿ ಪ್ರತಿಯೊಂದು ಉನ್ನತ
ಪರ್ವತದಲ್ಲಿಯೂ ಎತ್ತರವಾದ ಗುಡ್ಡದಲ್ಲಿಯೂ
ತೊರೆಗಳೂ ನೀರಿನ ಕಾಲಿವೆಗಳೂ ಹರಿಯುತ್ತಿರು
26 ವವು. ಇದಲ್ಲದೆ ಯೆಹೋವನು ತನ್ನ ಜನರ ವ್ರಣ
ವನ್ನು ಕಟ್ಟಿ ಅವರ ಪೆಟ್ಟಿನ ಗಾಯವನ್ನು ಗುಣ
ಮಾಡುವ ದಿವಸದಲ್ಲಿ ಚಂದ್ರನ ಬೆಳಕು ಸೂರ್ಯನ
ಬೆಳಕಿನಂತಿರುವದು, ಮತ್ತು ಸೂರ್ಯನ ಬೆಳಕು
ಏಳರಷ್ಟು ಹೆಚ್ಚಿ ಏಳು ದಿನಗಳ ಬೆಳಕಿನಂತಾಗುವದು.

### ಯೆಹೋವನಿಂದ ಅಶ್ಶೂರ್ಯರಿಗಾದ ವಿನಾಶ.

27 ಇಗೋ, ಯೆಹೋವನಾಮಧೇಯನು ದೂರದಿಂದ
ಬರುತ್ತಾನೆ; ಆತನ ಕೋಪವು ಉರಿಯುತ್ತಿದೆ, ಅದ
ರಿಂದೇಳುವ ಹೊಗೆಯು ದಟ್ಟವಾಗಿದೆ; ಆತನ ತುಟಿ
ಗಳು ರೋಷದಿಂದ ತುಂಬಿವೆ, ಆತನ ನಾಲಿಗೆಯು
28 ನುಂಗುವ ಅಗ್ನಿ; ಆತನ ಶ್ವಾಸವು ತುಂಬಿತುಳುಕಿ
ಕಂಠದ ಮಟ್ಟಿಗೂ ಏರುವ ತೊರೆ; ಜನಾಂಗಗಳನ್ನು
ಏನೂ ಉಳಿಸದ ಜರಡಿಯಿಂದ ಜಾಲಿಸುವದಕ್ಕೆ ಬರು
ತ್ತಾನೆ; ದಾರಿತಪ್ಪಿಸುವ ಕಡಿವಾಣವು ಜನಗಳ ಕಟ
29 ಬಾಯಲ್ಲಿರುವದು. ನೀವೋ [1]ಹಬ್ಬದ ಸೌರಣೆಯ
ರಾತ್ರಿಯಲ್ಲೋ ಎಂಬಂತೆ ಹಾಡುವಿರಿ; ಇಸ್ರಾಯೇ
ಲ್ಯರ ಶರಣನ ಸಾನ್ನಿಧ್ಯವನ್ನು ಬಯಸಿ ಯೆಹೋವನ
ಪರ್ವತಕ್ಕೆ ಪಿಳ್ಳಂಗೋವಿಯ ನಾದದೊಡನೆ ಹೋಗು
30 ವವನಂತೆ ಹೃದಯಾನಂದಪಡುವಿರಿ. ಆಗ ಯೆಹೋ
ವನು ತನ್ನ ಗಂಭೀರವಾದ ಧ್ವನಿಯನ್ನು ಕೇಳಮಾಡಿ

ತೀವ್ರಕೋಪ, ಕಬಳಿಸುವ ಅಗ್ನಿಜ್ವಾಲೆ, ಬಿರಿ
ಮೋಡ, ಅತಿವೃಷ್ಟಿ, ಕಲ್ಮಳೆ ಇವುಗಳಿಂದ ತನ್ನ ಶಿಕ್ಷಾ
ಹಸ್ತವನ್ನು ತೋರ್ಪಡಿಸುವನು. ಹೀಗೆ ಯೆಹೋ
ವನು ದಂಡದಿಂದ ದಂಡಿಸುವಾಗ ಅಶ್ಶೂರ್ಯರು
ಆತನ ಧ್ವನಿಯಿಂದಲೇ ಭಂಗಪಡುವರು. ಮತ್ತು
ಯೆಹೋವನು ಸಂಕಲ್ಪಿಸಿದ ದಂಡದ ಪ್ರತಿಯೊಂದು
ಪೆಟ್ಟೂ ದಮ್ಮಡಿ ಕಿನ್ನರಿಗಳ ನಾದದೊಡನೆ ಅವರ
ಮೇಲೆ ಬೀಳುವದು. ಆತನು ಅವರೊಂದಿಗೆ ಹೋರಾ
ಡುತ್ತಾ ಕೈಬೀಸಿ ಯುದ್ಧಮಾಡುವನು. ಪುರಾತನ
ಕಾಲದಿಂದಲೂ [2]ಅಗ್ನಿಕುಂಡವು ಸಿದ್ಧವಾಗಿದೆ
ಹೌದು, [3]ರಾಜನಿಗೆ ಅಣಿಯಾಗಿದೆ; ಅದನ್ನು
ಆಳವಾಗಿಯೂ ಅಗಲವಾಗಿಯೂ ಮಾಡಿದ್ದಾನೆ; ಅದ
ರಲ್ಲಿನ ಚಿತೆಯೊಳಗೆ ಬೆಂಕಿಯೂ ಬೇಕಾದಷ್ಟು
ಕೊರಡುಗಳೂ ಇವೆ; ಯೆಹೋವನ ಶ್ವಾಸವು ಗಂಧ
ಕದ ಪ್ರವಾಹದೋಪಾದಿಯಲ್ಲಿ ಅದನ್ನು ಉರಿಸುವದು

### ಯೆಹೋವನೇ ಯೆಹೂದ್ಯರಿಗೆ ನಿಜರಕ್ಷಕ.

ಅಯ್ಯೋ, ಸಹಾಯಕ್ಕಾಗಿ ಐಗುಪ್ತವನ್ನೂ ಸೇರಿ
ಅಶ್ವಬಲವನ್ನು ಆಶ್ರಯಿಸುವವರ ಗತಿಯನ್ನು ಏನು
ಹೇಳಲಿ! ರಥಗಳು ಬಹಳವೆಂದು ಅವುಗಳಲ್ಲಿ ನಂಬಿಕೆ
ಯಿಟ್ಟು ಸವಾರರು ಬಹು ಬಲಿಷ್ಠರೆಂದು ಅವರ ಮೇಲೆ
ಭರವಸಪಡುತ್ತಾರೆ; ಆದರೆ ಇಸ್ರಾಯೇಲ್ಯರ ಸದ
ಮಲಸ್ವಾಮಿಯ ಕಡೆಗೆ ದೃಷ್ಟಿಯಿಡುವದಿಲ್ಲ, ಯೆ
ಹೋವನನ್ನು ಆಶ್ರಯಿಸುವದಿಲ್ಲ; ಇಗೋ, ಆತನೂ
ವಿವೇಕಿ, ತನ್ನ ಮಾತುಗಳನ್ನು ಹಿಂದಕ್ಕೆ ತೆಗೆಯದ
ಕೇಡನ್ನು ಬರಮಾಡುವನು; ಕೆಡುಕರ ಮನೆತನಕ್ಕೂ
ಅನ್ಯಾಯಗಾರರ ಸಹಾಯಕರಿಗೂ ವಿರುದ್ಧವಾಗಿ
ಏಳುವನು. ಐಗುಪ್ತ್ಯರು ಮನುಷ್ಯಮಾತ್ರದವರೇ
ದೇವರಲ್ಲ; ಅವರ ಅಶ್ವಗಳು ಮಾಂಸಮಯವೇ, ಆತ
ವಲ್ಲ; ಯೆಹೋವನು ಕೈ ಚಾಚುವಾಗ ಸಹಾಯ
ಮಾಡಿದವನು ಮುಗ್ಗರಿಸುವನು, ಸಹಾಯಪಡೆದ
ವನು ಬಿದ್ದುಹೋಗುವನು, ಅಂತು ಎಲ್ಲರೂ ಒಟ್ಟಿಗೆ
ಲಯವಾಗುವರು. ಯೆಹೋವನು ನನಗೆ ಹೀಗೆ
ಹೇಳಿದ್ದಾನೆ—ಸಿಂಹವು, ಪ್ರಾಯದ ಸಿಂಹವು, ಬೇಟೆಯ
ಮೇಲೆ ಬಿದ್ದು ಗುರುಗುಟ್ಟುತ್ತಿರುವಾಗ ಕಾವಲ
ಗಾರನ ಕೂಗನ್ನು ಕೇಳಿ ಬಹು ಮಂದಿ ಕುರುಬರು
ಅದಕ್ಕೆ ವಿರುದ್ಧವಾಗಿ ಕೂಡಿಬಂದರೂ ಅದು ಅವ
ಕೂಗಾಟಕ್ಕೆ ಹೆದರದೆ ಅವರ ಗದ್ದಲದಿಂದ ಹೇಗೆ
ಧೈರ್ಯಗುಂದುವದಿಲ್ಲವೋ ಹಾಗೆಯೇ ಸೇನಾಧಿ
ಶ್ವರನಾದ ಯೆಹೋವನು ಯುದ್ಧಮಾಡಲು ಚಿ
ಯೋನ್ ಪರ್ವತದ ಶಿಖರದ ಮೇಲೆ ಇಳಿಯುವನು
ಹೆಣ್ಣುಹಕ್ಕಿಗಳು ಹಾರಿಯಾಡುತ್ತಾ [ಮರಿಗಳನ್ನು
ಕಾಪಾಡುವಂತೆ ಸೇನಾಧೀಶ್ವರನಾದ ಯೆಹೋವನು
ಯೆರೂಸಲೇಮನ್ನು ಕಾಪಾಡುವನು; ಅದನ್ನು ರಕ್ಷಿಸಿ
ಕಾಯುವನು, ಹಾದುಹೋಗುತ್ತಾ ಅಪಾಯದಿಂದ
ತಪ್ಪಿಸುವನು. ಇಸ್ರಾಯೇಲ್ಯರೇ, [4]ನೀವು ಯಾರಿಗೆ
ಅಗಾಧದ್ರೋಹವನ್ನು ಮಾಡಿದಿರೋ ಆತನ ಕಡೆಗೆ

1) ಅಥವಾ: ಹಬ್ಬವನ್ನು ಆಚರಿಸುವ. 2) ಮೂಲ: ತೋಫೆತ್. 3) ಅಥವಾ: ಮೋಲೆಕನಿಗೆ. 4) ಮೂಲ: ಅ

ತಿರಿಗಿಕೊಳ್ಳಿರಿ. ನೀವು ನಿಮ್ಮ ಕೈಯಿಂದ ರೂಪಿಸಿ
ಕೊಂಡಿರುವ ಬೆಳ್ಳಿಯ ಮತ್ತು ಬಂಗಾರದ ವಿಗ್ರಹಗ
ಳನ್ನು ಆ ದಿನದಲ್ಲಿ ಪ್ರತಿಯೊಬ್ಬನೂ ಬಿಸಾಟುಬಿಡು
ವನು; ಅವುಗಳನ್ನು ರೂಪಿಸಿದ್ದು ಪಾಪವಷ್ಟೆ. ಆಗ
ಅಶ್ಶೂರ್ಯರು ಕತ್ತಿಯಿಂದ ಬೀಳುವರು, ಅದು
ಮನುಷ್ಯರ ಕತ್ತಿಯಲ್ಲ; ಖಡ್ಗವು ಅವರನ್ನು ನುಂಗು
ವದು, ಅದು ಮಾನವಖಡ್ಗವಲ್ಲ; ಅವರು ಕತ್ತಿಯ
ಕಡೆಯಿಂದ ಓಡುವರು, ಅವರ ಯೌವನಸ್ಥರು ಜಿಟ್ಟಿ
ಹಿಡಿಯಲ್ಪಡುವರು. ಅವರ ಶರಣನು ಭಯದಿಂದ
ಹೋಗಿಬಿಡುವನು; ಅವರ ಪ್ರಧಾನರು 1)ಹೆದರಿ ಧ್ವಜ
ಸ್ಥಾನದಿಂದ ದಿಕ್ಕಾಪಾಲಾಗುವರು. ಚೀಯೋನಿನಲ್ಲಿ
ಅಗ್ನಿಯನ್ನೂ ಯೆರೂಸಲೇಮಿನಲ್ಲಿ ಒಲೆಯನ್ನೂ ಮಾಡಿ
ಕೊಂಡಿರುವ ಯೆಹೋವನ ನುಡಿ ಇದೇ.

ಮುಂದಿನ ಧರ್ಮರಾಜ್ಯದ ಸುಲಕ್ಷಣ.
(32. 1—8; 15—20.)

32 ಇಗೋ, ಒಬ್ಬ ರಾಜನು ನೀತಿಗನುಸಾರವಾಗಿ
ಆಳುವನು, ಅಧಿಪತಿಗಳು ನ್ಯಾಯದಿಂದ ದೊರೆತನ
ಮಾಡುವರು. 2)ಮತ್ತು ಒಬ್ಬ ಪುರುಷನು ಗಾಳಿಯಲ್ಲಿ
ಮರೆಯಂತೆಯೂ ಅತಿವೃಷ್ಟಿಯಲ್ಲಿ ಆವರಣದ
ಹಾಗೂ ಮರುಭೂಮಿಯಲ್ಲಿ ನೀರಿನ ಕಾಲಿವೆಗಳ
ಪ್ರಕಾರವೂ ಬೆಂಗಾಡಿನಲ್ಲಿ ದೊಡ್ಡ ಬಂಡೆಯ ನೆರಳಿ
ನೋಪಾದಿಯಲ್ಲಿಯೂ ಇರುವನು. ಆಗ ನೋಡು
ವವರ ಕಣ್ಣು ಮೊಬ್ಬಾಗದು, ಕೇಳುವವರ ಕಿವಿ
ಮಂದವಾಗದು. ಅತುರಗಾರರ ಮನವು ಅರುಹ
ನ್ನರಿಯುವದು, ತೊದಲುಮಾತಿನವರ ನಾಲಿಗೆಯು
ಸ್ಪಷ್ಟವಾಗಿಯೂ ಶೀಘ್ರವಾಗಿಯೂ ನುಡಿಯುವದು.
ಇನ್ನು ಮೇಲೆ ನೀಚನು ಘನವಂತನೆನಿಸಿಕೊಳ್ಳನು.
ಕಳ್ಳನು ಮಹನೀಯನೆನಿಸನು. ನೀಚನು ನೀಚವಾಗಿ
ಮಾತಾಡುವನು; ಅವನ ಹೃದಯವು ಕೇಡನ್ನು
ಕಲ್ಪಿಸಿ ಅಲ್ಲದ್ದನ್ನು ನಡೆಯಿಸಿ ಯೆಹೋವನಿಗೆ
ವಿರುದ್ಧವಾಗಿ ಅಸತ್ಯವನ್ನಾಡಿ ಹಸಿವೆಗೊಂಡವನ ಆಶೆ
ಯನ್ನು ಬರಿದುಮಾಡಿ ಬಾಯಾರಿದವನ ಪಾನವನ್ನು
ತಪ್ಪಿಸುವದಷ್ಟೆ. ಕಳ್ಳನ ಸಲಕರಣೆಗಳು ಕೆಟ್ಟವು
ಗಳೇ; ದೀನದರಿದ್ರರು ನ್ಯಾಯವಾದಿಗಳಾಗಿದ್ದರೂ
ಅವರನ್ನು ಸುಳ್ಳುಮಾತುಗಳಿಂದ ಕೆಡಿಸುವದಕ್ಕೆ ಕು
ಯುಕ್ತಿಗಳನ್ನು ಕಲ್ಪಿಸುವನು. ಘನವಂತನಾದರೋ
ಘನಕಾರ್ಯಗಳನ್ನು ಕಲ್ಪಿಸುವನು; ಘನವಾದವುಗಳ
ಲ್ಲಿಯೇ ನಿರತನಾಗಿರುವನು.

ಯೆರೂಸಲೇಮಿನ ನಿಶ್ಚಿಂತೆಯ ಹೆಂಗಸರನ್ನು ಎಚ್ಚರಿಸಿದ್ದು.

ನಿಶ್ಚಿಂತೆಯ ಹೆಂಗಸರೇ, ಏಳಿರಿ, ನನ್ನ ಧ್ವನಿಯನ್ನು
ಕೇಳಿರಿ; ಭಯವಿಲ್ಲದ ಹೆಣ್ಣುಗಳಿರಾ, ನನ್ನ ಮಾತಿಗೆ
ಕಿವಿಗೊಡಿರಿ! ನಿರ್ಭೀತರೇ, ಒಂದು ವರುಷದ ಮೇಲೆ
ಕೆಲವು ದಿನಗಳಲ್ಲಿ ಕಳವಳಗೊಳ್ಳುವಿರಿ; ದ್ರಾಕ್ಷಿಯ
ಕೊಯ್ಲು ಇಲ್ಲದೆ ಹೋಗುವದು, ಯಾವ ಬೆಳೆಯೂ
ದೊರೆಯದು. ನಿಶ್ಚಿಂತೆಯವರೇ, ನಡುಗಿರಿ! ನಿರ್ಭೀತ 11
ರೇ, ಕಳವಳಗೊಳ್ಳಿರಿ! ನಿಮ್ಮ ಬಟ್ಟೆಯನ್ನು ಕಿತ್ತುಹಾಕಿ
ಬೆತ್ತಲೆಯಾಗಿ ಸೊಂಟಕ್ಕೆ [ಗೋಣಿತಟ್ಟನ್ನು] ಸುತ್ತಿ
ಕೊಳ್ಳಿರಿ. ಇಷ್ಟವಾದ ಹೊಲಗಳ ಮತ್ತು ಫಲವ 12
ತ್ತಾದ ದ್ರಾಕ್ಷಾಲತೆಗಳ ವಿಷಯದಲ್ಲಿ ಎದೆಬಡಿದು
ಕೊಳ್ಳುವರು. ನನ್ನ ಜನರ ಭೂಮಿಯ ಮೇಲೂ 13
ಉತ್ಸಾಹಪಟ್ಟಣದಲ್ಲಿ ಉಲ್ಲಾಸಗೊಳ್ಳುವ ಎಲ್ಲಾ ಮನೆ
ಗಳ ಮೇಲೂ ಮುಳ್ಳುಗಿಳ್ಳು ಹತ್ತಿಕೊಳ್ಳುವದು;
ಅರಮನೆಯು ಬಿಕೋ ಎನ್ನುವದು, ಗಿಜಗುಟ್ಟುವ 14
ಪಟ್ಟಣವು ನಿರ್ಜನವಾಗುವದು, ಓಫೆಲ್ ಗುಡ್ಡವೂ
ಕೋವರವೂ ಯಾವಾಗಲೂ ಗುಹೆಗಳಾಗಿಯೂ ಕಾಡು
ಕತ್ತೆಗಳಿಗೆ ಉಲ್ಲಾಸಕರವಾಗಿಯೂ ದನಕುರಿಗಳಿಗೆ
ಕಾವಲಾಗಿಯೂ ಇರುವವು.

ಬಳಿಕ ಉನ್ನತಲೋಕದಿಂದ ದಿವ್ಯಾತ್ಮಧಾರೆಯು 15
ನಮ್ಮ ಮೇಲೆ ಸುರಿಸಲ್ಪಡುವದು; ಆಗ ಅರಣ್ಯವು
ತೋಟವಾಗುವದು, [ಈಗಿನ] ತೋಟವು [ಆಗಿನವ
ರಿಗೆ] ಅರಣ್ಯವಾಗಿ ಕಾಣಿಸುವದು. ನ್ಯಾಯವು ಅಡವಿ 16
ಯಲ್ಲಿಯೂ ನೆಲೆಗೊಳ್ಳುವದು, ಧರ್ಮವು ತೋಟ
ದಲ್ಲಿ ಇದ್ದೇ ಇರುವದು. ಧರ್ಮದಿಂದ ಸಮಾಧಾ 17
ನವು ಫಲಿಸುವದು, ಶಾಂತಿ ನಿರ್ಭಯಗಳು ಧರ್ಮದ
ನಿತ್ಯಪರಿಣಾಮವಾಗಿರುವವು. ನನ್ನ ಜನರು ಸಮಾ 18
ಧಾನನಿವಾಸದಲ್ಲಿಯೂ ನಿರ್ಭಯನಿಲಯಗಳಲ್ಲಿಯೂ
ನೆಮ್ಮದಿಯ ಆಶ್ರಯಗಳಲ್ಲಿಯೂ ನೆಲೆಗೊಳ್ಳುವರು.
ಆದರೆ ಕಲ್ಮಳೆಸುರಿಯಲು ವನವು ಹಾಳಾಗುವದು; 19
ಪಟ್ಟಣವು ನೆಲಸಮವಾಗುವದು. ನೀರಾವರಿಗಳ 20
ಲ್ಲೆಲ್ಲಾ ಬೀಜಬಿತ್ತುತ್ತಲೂ ದನ ಕತ್ತೆಗಳನ್ನು [ಕಾವ
ಲಿಗೆ] ಮೇಯಬಿಡುತ್ತಲೂ ಇರುವ ನೀವು ಧನ್ಯರೇ ಸರಿ!

ಯೆರೂಸಲೇಮಿನ ಅಪಾಯವೂ ಮುಂದಿನ
ಸುರಕ್ಷಣೆಯೂ. 33.

ಶತ್ರುಬಾಧೆಗೆ ಒಳಗಾದ ಯೆರೂಸಲೇಮಿನವರ ದೇವಪ್ರಾರ್ಥ
ನೆಯೂ ಯೆಹೋವನ ಉತ್ತರವೂ.

33 ಸೂರೆಯಾಗದಿದ್ದರೂ ಸೂರೆಮಾಡಿದಿ, ಬಾಧೆ
ಪಡದಿದ್ದರೂ ಬಾಧಿಸಿದಿ; ನಿನ್ನ ಗತಿಯನ್ನು ಏನು
ಹೇಳಲಿ; ನೀನು ಸೂರೆಮಾಡಿ ಬಿಟ್ಟ ಮೇಲೆ ನೀನೂ
ಸೂರೆಯಾಗುವಿ! ಬಾಧಿಸಿ ಬಿಟ್ಟ ಮೇಲೆ ನಿನ್ನನ್ನೂ
ಬಾಧಿಸುವರು. ಯೆಹೋವನೇ, ನಮ್ಮನ್ನು ಕರು 2
ಣಿಸು! ನಿನ್ನನ್ನು ಕಾದುಕೊಂಡಿದ್ದೇವೆ; ಪ್ರತಿ
ಮುಂಜಾನೆಯೂ 3)ನಮಗೆ ಭುಜಬಲವಾಗಿಯೂ
ಇಕ್ಕಟ್ಟಿನಲ್ಲಿ ನಮಗೆ ರಕ್ಷಣೆಯಾಗಿಯೂ ಇರು.
ಭೋರ್ಗರೆಯುವ ಶಬ್ದಕ್ಕೆ ಜನಾಂಗಗಳು ಓಡುವವು; 3
ನೀನು ಏಳುವಾಗ ರಾಜ್ಯಗಳು ದಿಕ್ಕಾಪಾಲಾಗುವವು.
ನೀವು ಕೊಳ್ಳೆಹೊಡೆದದ್ದನ್ನು ಇತರರು ಮಿಡತೆ 4
ಗಳಂತೆ ಕೊಳ್ಳೆಮಾಡುವರು; ಶಲಭಗಳಂತೆ ಅವರ

1) ಅಥವಾ: ಧ್ವಜಕ್ಕೆ ಹೆದರಿ ಓಡುವರು. 2) ಅಥವಾ: ಅವರೊಳಗೆ ಪ್ರತಿಯೊಬ್ಬನೂ. ಅಥವಾ: ಮತ್ತು ಒಬ್ಬ ಪುರುಷನು. 3) ಪಾಠಾಂತರ: ಅವರಿಗೆ.

5 ಮೇಲೆ ಹಾರಿಬೀಳುವರು; ಯೆಹೋವನು ಉನ್ನ
ತೋನ್ನತನಾಗಿದ್ದಾನೆ; ಮೇಲಿನ ಲೋಕದಲ್ಲಿ ವಾಸಿ
ಸುತ್ತಾನಷ್ಟೆ; ಚೀಯೋನನ್ನು ನೀತಿನ್ಯಾಯಗಳಿಂದ
6 ತುಂಬಿಸಿದ್ದಾನೆ. 1)ಜ್ಞಾನವೂ ತಿಳುವಳಿಕೆಯೂ ರಕ್ಷಣ
ಕಾರ್ಯಸಮೃದ್ಧಿಯೂ ಇರುವದರಿಂದ ನಿನ್ನ ಕಾಲ
ದಲ್ಲಿ ಸ್ಥೈರ್ಯವಿರುವದು; ಯೆಹೋವನ ಮೇಲಣ
ಭಯಭಕ್ತಿಯು 2)ನಿನಗೆ ನಿಧಿಯಾಗುವದು.
7 ಇಗೋ, ಸಿಂಹವೀರರು ಹೊರಗೆ ಹಾಹಾಕಾರ
ಮಾಡುತ್ತಿದ್ದಾರೆ; ಸಮಾಧಾಯಕ ರಾಯಭಾರಿಗಳು
8 ಘೋರವಾಗಿ ಅಳುತ್ತಿದ್ದಾರೆ. ರಾಜಮಾರ್ಗಗಳು
ಹಾಳಾಗಿವೆ, ದಾರಿಗಳು ಇಲ್ಲವೇ ಇಲ್ಲ; [ಶತ್ರುವು]
ಒಪ್ಪಂದವನ್ನು ಮೀರಿದ್ದಾನೆ, ಊರಿನವರನ್ನು ತಿರ
ಸ್ಕರಿಸಿದ್ದಾನೆ, ಮನುಷ್ಯರನ್ನು ಗಣನೆಗೆ ತಾರನು.
9 ದೇಶವು ಪ್ರಲಾಪಿಸಿ ಕುಗ್ಗುತ್ತದೆ, ಲೆಬನೋನ್ ನಾಚಿ
ಗೊಂಡು ಒಣಗುತ್ತದೆ, ಶಾರೋನ್ ಬೆಂಗಾಡಾಗಿದೆ,
ಬಾಷಾನ್ ಮತ್ತು ಕರ್ಮೆಲ್ [ತಳಿರುಗಳನ್ನು]
10 ಉದುರಿಸಿಬಿಟ್ಟಿವೆ. ಯೆಹೋವನು ಹೀಗನ್ನುತ್ತಾನೆ—
ಈಗ ಏಳುವೆನು, ಈಗಲೇ ನನ್ನನ್ನು ಉನ್ನತಪಡಿಸಿ
ಕೊಳ್ಳುವೆನು, ಕೂಡಲೆ ಉನ್ನತೋನ್ನತನಾಗುವೆನು.
11 ನೀವು ಹೊಟ್ಟನ್ನು ಗರ್ಭಧರಿಸಿ ಕೂಳೆಯನ್ನು ಹೆರು
ವಿರಿ; ನಿಮ್ಮ ಬುಸುಗುಟ್ಟುವಿಕೆಯು ನಿಮ್ಮನ್ನೇ
12 ನುಂಗುವ ಜ್ವಾಲೆಯಾಗುವದು. ಜನಾಂಗಗಳು
ಸುಟ್ಟ ಸುಣ್ಣದ ಹಾಗಿರುವವು; ಕತ್ತರಿಸಿದ ಮುಳ್ಳು
13 ಕಂಪೆಗೆ ಬೆಂಕಿಹಚ್ಚಿದಂತಾಗುವವು. ದೂರಸ್ಥರೇ, ನಾನು
ನಡಿಸಿದ್ದನ್ನು ಕೇಳಿರಿ; ಸಮೀಪಸ್ಥರೇ, ನನ್ನ ಪರಾಕ್ರಮ
ವನ್ನು ತಿಳಿದುಕೊಳ್ಳಿರಿ.

ಯೆಹೋವನ ರಕ್ಷಣೆಯನ್ನು ಹೊಂದತಕ್ಕವರು ಯಾರು?

14 ಚೀಯೋನಿನ ಪಾಪಿಗಳು ಹೆದರುತ್ತಾರೆ, ಆ
ಭ್ರಷ್ಟರು ನಡುಕಕ್ಕೆ ಒಳಗಾಗಿ—ನಮ್ಮಲ್ಲಿ ಯಾರು
ನುಂಗುವ ಕಿಚ್ಚಿನ ಸಂಗಡ ವಾಸಿಸಬಲ್ಲರು? ನಮ್ಮಲ್ಲಿ
ಯಾರು ಸದಾ ಉರಿಯುವ ಜ್ವಾಲೆಗಳೊಡನೆ ತಂಗಿ
15 ಯಾರು ಅಂದುಕೊಳ್ಳುತ್ತಾರೆ. [ಕೇಳಿರಿ], ಸನ್ಮಾರ್ಗ
ದಲ್ಲಿ ನಡೆದು ಯಥಾರ್ಥವಾಗಿ ನುಡಿದು ದೋಚಿ
ಕೊಂಡ ಲಾಭ ಬೇಡವೆಂದು ಲಂಚಮುಟ್ಟದಂತೆ ಕೈ
ಒದರಿ ಕೊಲೆಯ ಮಾತಿಗೆ ಕಿವಿಗೊಡದೆ ಕೆಟ್ಟದ್ದನ್ನು
ನೋಡದಂತೆ ಕಣ್ಣುಮುಚ್ಚಿಕೊಳ್ಳುವವನೇ ಉನ್ನತ
16 ಸನ್ನಿಧಾನದಲ್ಲಿ ವಾಸಿಸುವನು; ಇವನಿಗೆ ಆಶ್ರಯವು
ಗಿರಿದುರ್ಗ, ಅನ್ನವು ಉಚಿತವಾಗಿ ಒದಗುವದು,
ನೀರೂ ನಿಸ್ಸಂದೇಹ.

ಯೆರೂಸಲೇಮಿನ ಮುಂದಿನ ಸುಸ್ಥಿತಿ.

17 ನೀವು ಭೂಷಿತರಾಜನನ್ನು ಕಣ್ಣಾರೆ ದರ್ಶನ
ಮಾಡುವಿರಿ, ಅತಿವಿಸ್ತಾರವಾದ ಸ್ವದೇಶವನ್ನು ಕಣ್ಣು
18 ತುಂಬಾ ನೋಡುವಿರಿ. ಆಗ ನೀವು [ಹಿಂದಿನ] ಭಯ

ವನ್ನು ಮನಸ್ಸಿಗೆ ತಂದುಕೊಳ್ಳುತ್ತಾ—[ಕಪ್ಪವನ್ನು
ಲೆಕ್ಕಿಸಿದವನು ಎಲ್ಲಿ, ತೂಕಮಾಡಿದವನು ಎಲ್ಲಿ
ಬುರುಜುಗಳನ್ನು ಗಣಿಸಿದವನು ಎಲ್ಲಿ ಅಂದುಕೊಳ್ಳು
ವಿರಿ. ನಿಮಗೆ ತಿಳಿಯಲಾಗದ 3)ಅನ್ಯಭಾಷೆಯನ್ನೂ
ನೀವು ಗ್ರಹಿಸಲಾರದ ತೊದಲುಮಾತುಗಳನ್ನೂ
ಆಡುವ ಆ ಕ್ರೂರಜನರನ್ನು ಕಾಣದೆ ಇರುವಿರಿ
ನಮ್ಮ ಉತ್ಸವಗಳು ನಡೆಯುವ ಚೀಯೋನ್ ಪಟ್ಟಣ
ವನ್ನು ದೃಷ್ಟಿಸಿರಿ; ಯೆರೂಸಲೇಮು ನೆಮ್ಮದಿಯ
ನಿವಾಸವಾಗಿಯೂ ಗೂಟಕೀಳದ, ಹಗ್ಗಹರಿಯದ
ಒಂದೇ ಕಡೆ ಇರುವ ಗುಡಾರವಾಗಿಯೂ ಇರುವ
ದನ್ನು ನೀವು ಕಣ್ಣಾರೆ ಕಾಣುವಿರಿ. ಅಲ್ಲಿ ಯೆಹೋ
ವನು ಘನಹೊಂದಿದವನಾಗಿ ಹುಟ್ಟುಗೋಲಿನ
ದೋಣಿ ಹೋಗದ, ಘನನಾವೆಯೂ ಸಂಚರಿಸದ
ವಿಸ್ತೀರ್ಣನದೀನದಗಳಂತೆ ನಮ್ಮೊಂದಿಗಿರುವನು. ಯೆ
ಹೋವನು ನಮ್ಮ ನ್ಯಾಯಾಧಿಪತಿ, ಯೆಹೋ
ವನು ನಮಗೆ ಧರ್ಮವಿಧಾಯಕ, ಯೆಹೋವನು
ನಮ್ಮ ರಾಜ; ಆತನೇ ನಮ್ಮನ್ನು ರಕ್ಷಿಸುವನು
ನಿನ್ನ ಹಗ್ಗಗಳು ಸಡಲಿ ಸ್ತಂಭದ ಪಾದವನ್ನು ಸ್ಥಿ
ಪಡಿಸಿಕೊಳ್ಳಲಾರದೆ ಹೋದವು, ಪಠವನ್ನು ಮುದು
ದಂತೆ ಹಿಡಿದಿರಲಿಕ್ಕೂ ಆಗಲಿಲ್ಲ; ಆಗ ದೊಡ್ಡ
ಸೂರೆಯು ಕೊಳ್ಳೆಯಾಗಿ ಹಂಚುವದಕ್ಕೆ ಅಸ್ಪದ
ವಾಯಿತು. ಕುಂಟರೂ ಸುಲಿಗೆಮಾಡಿದರು. ಚೀಯೋ
ನಿನ ಯಾವ ನಿವಾಸಿಯೂ ತಾನು ಅಸ್ವಸ್ಥನು
ಎಂದು ಹೇಳನು; ಅಲ್ಲಿಯ ಜನರ ಪಾಪವು ಪ
ಹಾರವಾಗುವದು.

ಯೆಹೋವನು ಜನಾಂಗಗಳನ್ನು
ದಂಡಿಸುವದು.

ಜನಾಂಗಗಳೇ, ಸಮೀಪಿಸಿ ಕೇಳಿರಿ; ಜನಗಳೇ,
ಕಿವಿಗೊಡಿರಿ! ಭೂಮಿಯೂ ಅದರಲ್ಲಿನ ಸಮಸ್ತವೂ,
ಲೋಕವೂ ಅದರಿಂದ ಉದ್ಭವಿಸುವದೆಲ್ಲವೂ ಆಲಿಸಲಿ
ಯೆಹೋವನು ಸಕಲಜನಾಂಗಗಳಲ್ಲಿ ಕೋಪಮಾ
ಅವುಗಳ ಸೈನ್ಯದ ಮೇಲೆ ರೋಷಗೊಂಡು ಅವರನ್ನು
ಕೊಲೆಗೆ ಈಡುಮಾಡಿ ನಿಶ್ಶೇಷವಾಗಿ ಸಂಹರಿಸಿದ್ದಾ
ನಷ್ಟೆ. ಅವರಲ್ಲಿ ಹತರಾದವರು ಬಿಸಾಡಲ್ಪಡುವರು
ಅವರ ಶವಗಳ ದುರ್ವಾಸನೆಯು ಮೇಲಕ್ಕೆ ಬಡಿಯು
ವದು; ಅವರ ರಕ್ತಪ್ರವಾಹದಿಂದ ಗುಡ್ಡಗಳು ಕರಗು
ವವು. ನಕ್ಷತ್ರಸೈನ್ಯವೆಲ್ಲಾ ಕ್ಷಯಿಸುವದು, ಆಕಾ
ಮಂಡಲವು ಸುರಳಿಯಂತೆ ಸುತ್ತಿಕೊಳ್ಳುವದು
ದ್ರಾಕ್ಷೆಯ ಎಲೆ ಒಣಗಿ ಗಿಡದಿಂದ ಬೀಳುವಂತೆಯು
ಅಂಜೂರ ಮರದಿಂದ ತರಗು ಉದುರುವ ಹಾಗು
ತಾರಾಮಂಡಲವೆಲ್ಲಾ ಬಾಡಿ ಬೀಳುವದು. ನನ್ನ
ಖಡ್ಗವು ಮೇಲಿನ ಲೋಕದಲ್ಲಿ ರೋಷಪಾನಮಾ
ನಾನು ಶಪಿಸಿದ ಎದೋಮೆಂಬ ಜನಾಂಗದ ಮೇ
ನ್ಯಾಯತೀರಿಸುವದಕ್ಕೆ ದುಮುಕುವದು. ಯೆಹೋ
ವನ ಖಡ್ಗವು ರಕ್ತಮಯವಾಗಿದೆ; ಅದು ವಪೆಯಿಂ

1) ಅಥವಾ: ನಿನ್ನ ಕಾಲದಲ್ಲಿ ಸ್ಥೈರ್ಯವೂ ರಕ್ಷಣಾಕಾರ್ಯಸಮೃದ್ಧಿಯೂ ಜ್ಞಾನವೂ ತಿಳುವಳಿಕೆಯೂ ಇರುವವು. 2) ಮ
ಅವನಿಗೆ. 3) ಮೂಲ: ಅಗಾಧವಾದ ಭಾಷೆಯನ್ನೂ.

ಲೂ ಕುರಿ ಹೋತಗಳ ರಕ್ತದಿಂದಲೂ ಟಗರುಗಳ
ಹುರುಳಿಕಾಯಿಗಳ ಕೊಬ್ಬಿನಿಂದಲೂ ಭರಿತವಾಗಿದೆ;
ಯೆಹೋವನು ಬೊಚ್ರದಲ್ಲಿ ಬಲಿಯನ್ನೂ ಎದೋಮ್
ಸೀಮೆಯಲ್ಲಿ ದೊಡ್ಡ ಕೊಲೆಯನ್ನೂ ಮಾಡಬೇಕೆಂದಿ
ದ್ದಾನಷ್ಟೆ. ಈ ಯಜ್ಞಪಶುಗಳೊಂದಿಗೆ ಕಾಡುಕೋಣ
ಗಳೂ ಹೋರಿಗೂಳಿಗಳೂ 1)ಬರುವವು; ಆ ದೇಶವು
ರಕ್ತದಿಂದ ನೆನೆಯುವದು, ಅಲ್ಲಿನ ದೂಳು ಕೊಬ್ಬಿ
ನಿಂದ ಜಿಡ್ಡಾಗುವದು. ಏಕಂದರೆ ಯೆಹೋವನು
ಮುಯ್ಯಿತೀರಿಸುವ ದಿನವು ಬಂದಿದೆ; ಚೀಯೋನಿನ
ವ್ಯಾಜ್ಯದಲ್ಲಿ [ಎದೋಮಿಗೆ] ದಂಡನೆವಿಧಿಸತಕ್ಕ
ವರುಷವು ಒದಗಿದೆ. ಅಲ್ಲಿ ತೊರೆಗಳು ಶಿಲಾಜತು
ವಾಗಿ ಹರಿಯುವವು, ದೂಳು ಗಂಧಕವಾಗುವದು,
ದೇಶವೆಲ್ಲಾ ಉರಿಯುವ ಶಿಲಾಜತುವಾಗುವದು,
ಅದು ಹಗಲಿರುಳೂ ಆರದು, ಅದರ ಹೊಗೆ ನಿರಂತರ
ಏರುತ್ತಿರುವದು. ದೇಶವು ತಲತಲಾಂತರಕ್ಕೂ ಹಾಳು
ಬಿದ್ದಿರುವದು, ಯುಗಯುಗಾಂತರಕ್ಕೂ ಅಲ್ಲಿ
ಯಾರೂ ಹಾದು ಹೋಗರು. ಅದು ಕೊಕ್ಕರೆ
ಮುಳ್ಳುಹಂದಿಗಳ ಹಕ್ಕು ಆಗುವದು; ಕಾಗೆಗೂಗೆ
ಗಳು ಅಲ್ಲಿ ವಾಸಿಸುವವು; ಯೆಹೋವನು ಅದರ
ಮೇಲೆ 2)ಹಾಳೆಂಬ ನೂಲನ್ನೂ 2)ಪಾಳೆಂಬ ಮಟ್ಟ
ಗೋಲನ್ನೂ ಎಳೆಯುವನು. ಅಲ್ಲಿ ಪಟ್ಟಕ್ಕೆ ಕರೆ
ಯಲು ಪ್ರಮುಖರಲ್ಲಿ ಯಾರೂ ಸಿಕ್ಕರು; ದೇಶದಲ್ಲಿ
ಪ್ರಧಾನರೇ ಇಲ್ಲ. ಅಲ್ಲಿನ ಅರಮನೆಗಳಲ್ಲಿ ದಬ್ಬೆ
ಗಳ್ಳಿಗಳೂ ಕೋಟೆಗಳಲ್ಲಿ ಮುಳ್ಳುಗಿಳ್ಳುಗಳೂ ಹಬ್ಬಿ
ಕೊಳ್ಳುವವು; ಅದು ನರಿಗಳಿಗೆ ಹಕ್ಕೆಯಾಗಿಯೂ
ಉಷ್ಟ್ರಪಕ್ಷಿಗಳಿಗೆ ಎಡೆಯಾಗಿಯೂ ಇರುವದು.
ಕಾಡುನಾಯಿ ತೋಳಗಳು ಅಲ್ಲಿ ಸಂಧಿಸುವವು,
ದೆವ್ವವು ತನ್ನ ಜೊತೆಯನ್ನು ಕೂಗುವದು, ಬೇತಾ
ಳವು ಅಲ್ಲಿ ಹಾಯಾಗಿ ಆಸರೆಗೊಳ್ಳುವದು. ಹಾರುವ
ಹಾವು ಅಲ್ಲಿ ಗೂಡುಮಾಡಿಕೊಂಡು ಮೊಟ್ಟೆಯಿಕ್ಕಿ
ಮರಿಮಾಡಿ ತನ್ನ ಮರೆಯಲ್ಲಿ ಕೂಡಿಸಿಕೊಳ್ಳುವದು;
ಹೌದು, ಹದ್ದುಗಳು ಅಲ್ಲಿ ಜೋಡಿಜೋಡಿಯಾಗಿ
ಸೇರಿಕೊಳ್ಳುವವು. ಯೆಹೋವನ ಶಾಸ್ತ್ರದಲ್ಲಿ ಹುಡುಕಿ
ಓದಿರಿ, ಇವುಗಳಲ್ಲಿ ಯಾವದೂ ಇಲ್ಲದಿರದು, ಎಲ್ಲವೂ
ಜೊತೆಜೊತೆಯಾಗಿರುವವು; 3)ಆತನ ಬಾಯಿಂದ
ಅಪ್ಪಣೆಯಾಯಿತಲ್ಲವೆ, ಆತನ ಆತ್ಮವು ಇವುಗಳನ್ನು
ಒಟ್ಟಿಗೆ ಬರಮಾಡಿತಷ್ಟೆ. ಆತನೇ ಇವುಗಳಿಗೆ ಪಾಲು
ಮಾಡಿಕೊಟ್ಟಿದ್ದಾನೆ, ಆತನ ಕೈಯೇ ನೂಲುಹಾಕಿ
ದೇಶವನ್ನು ಹಂಚಿದೆ; ಅದು ಇವುಗಳಿಗೆ ನಿತ್ಯಸ್ವಾಸ್ತ್ಯ
ವಾಗುವದು, ಅವು ತಲತಲಾಂತರಕ್ಕೂ ಅಲ್ಲಿ ವಾಸಿ
ಸುವವು.

ಇಸ್ರಾಯೇಲಿನ ಮುಂದಿನ ಸೌಭಾಗ್ಯವು.

5 ಅರಣ್ಯವೂ ಮರುಭೂಮಿಯೂ ಆನಂದಿಸುವವು;
ಬಣನೆಲವು ಹರ್ಷಿಸಿ ತಾವರೆಯಂತೆ ಕಳಕಳಿಸು
ವದು. ಅದು ಸಮೃದ್ಧಿಯಾಗಿ ಹೂಬಿಟ್ಟು ಉತ್ಸಾಹ
ಧ್ವನಿಮಾಡುವಷ್ಟು ಉಲ್ಲಾಸಿಸುವದು; ಲೆಬನೋನಿನ
ಮಹಿಮೆಯೂ ಕರ್ಮೆಲಿನ ಮತ್ತು ಶಾರೋನಿನ
ವೈಭವವೂ ಅದಕ್ಕೆ ದೊರೆಯುವವು; ಇವೆಲ್ಲಾ
ಯೆಹೋವನ ಮಹಿಮೆಯನ್ನೂ ನಮ್ಮ ದೇವರ
ವೈಭವವನ್ನೂ ಕಾಣುವವು.
ಜೋಲುಬಿದ್ದ ಕೈಗಳನ್ನೂ ನಡುಗುವ ಮೊಣ 3
ಕಾಲುಗಳನ್ನೂ ಬಲಗೊಳಿಸಿರಿ. ಭಯಭ್ರಾಂತಹೃದ 4
ಯರಿಗೆ— ಬಲಗೊಳ್ಳಿರಿ, ಹೆದರಬೇಡಿರಿ; ಇಗೋ, ನಿಮ್ಮ
ದೇವರು ಮುಯ್ಯಿತೀರಿಸುವದಕ್ಕೂ ದೈವಿಕ ಪ್ರತಿ
ಫಲವನ್ನು ಕೊಡುವದಕ್ಕೂ ಬರುವನು; ತಾನೇ ಬಂದು
ನಿಮ್ಮನ್ನು ರಕ್ಷಿಸುವನು ಎಂದು ಹೇಳಿರಿ. ಆಗ ಕುರು 5
ಡರ ಕಣ್ಣು ಕಾಣುವದು, ಕಿವುಡರ ಕಿವಿ ಕೇಳು
ವದು, ಕುಂಟನು ಜಿಂಕೆಯಂತೆ ಹಾರುವನು, ಮೂಕನ 6
ನಾಲಿಗೆಯು ಹರ್ಷಧ್ವನಿಗೈಯುವದು; ಅರಣ್ಯದಲ್ಲಿ
ಒರತೆಗಳು ಒಡೆಯುವವು, ಬಣನೆಲದಲ್ಲಿ ನದಿಗಳು
ಹುಟ್ಟಿ ಹರಿಯುವವು. 4)ಬೆಂಗಾಡು ಸರೋವರ 7
ವಾಗುವದು; ಬಣನೆಲದಲ್ಲಿ ಬುಗ್ಗೆಗಳುಕ್ಕುವವು;
ನರಿಗಳು ಮಲಗುತ್ತಿದ್ದ ಹಕ್ಕೆಯು ಆಪುಜಂಬುಗಳ
ಪ್ರದೇಶವಾಗುವದು. ಅಲ್ಲಿ ರಾಜಮಾರ್ಗವಿರುವದು, 8
ಹೌದು [ಹೋಗಿಬರುವ] ದಾರಿ; ಅದು ಪರಿಶುದ್ಧ
ಮಾರ್ಗ ಎನಿಸಿಕೊಳ್ಳುವದು; ಯಾವ ಅಶುದ್ಧನೂ
ಅಲ್ಲಿ ನಡೆಯನು, 5)ಅದು ದೇವಜನರಿಗಾಗಿಯೇ ಇರು
ವದು, ಅಲ್ಲಿ ಹೋಗುವ ಮೂಢನೂ ದಾರಿತಪ್ಪನು.
ಸಿಂಹವು ಅಲ್ಲಿರದು, ಕ್ರೂರಜಂತು ಅಲ್ಲಿ ಸೇರದು, 9
ಕಾಣುವದೇ ಇಲ್ಲ; ಬಿಡುಗಡೆಯಾದವರೇ ಅಲ್ಲಿ ನಡೆ
ಯುವರು; ಯೆಹೋವನು ವಿಮೋಚಿಸಿದವರು 10
ಹಿಂದಿರುಗಿ ಶಾಶ್ವತಸಂತೋಷವೆಂಬ ಕಿರೀಟವನ್ನು
ಧರಿಸಿಕೊಂಡು ಉತ್ಸಾಹಧ್ವನಿಯೊಡನೆ ಚೀಯೋನಿಗೆ
ಸೇರುವರು; ಹರ್ಷಾನಂದಗಳನ್ನು ಅನುಭವಿಸುವರು,
ಮೊರೆಯೂ ಕರಕರೆಯೂ ತೊಲಗಿಹೋಗುವವು.

ಹಿಜ್ಕೀಯನ ಆಳಿಕೆಯಲ್ಲಿ ಯೆಶಾಯನಿಗೆ
ಸಂಬಂಧಪಟ್ಟ ಕೆಲವು ಕಾರ್ಯಗಳು. 36—39.

ಸನ್ಹೇರೀಬನು ಯೆರೂಸಲೇಮನ್ನು ಮುತ್ತಿದ್ದು.

36 ಅರಸನಾದ ಹಿಜ್ಕೀಯನ ಆಳಿಕೆಯ ಹದಿನಾಲ್ಕ
ನೆಯ ವರುಷದಲ್ಲಿ ಅಶ್ಶೂರದ ಅರಸನಾದ ಸನ್ಹೇರೀ
ಬನು ಬಂದು ಯೆಹೂದ ಪ್ರಾಂತದೊಳಗೆ ಕೋಟೆ
ಕೊತ್ತಲಗಳುಳ್ಳ ಎಲ್ಲಾ ಪಟ್ಟಣಗಳನ್ನು ಸ್ವಾಧೀನಮಾಡಿ
ಕೊಂಡನು. ಆಗ ಅಶ್ಶೂರದ ಅರಸನು ಲಾಕೀಷಿ 2
ನಿಂದ ಮಹಾಸೈನ್ಯಸಹಿತನಾದ ರಬ್ಷಾಕೆ ಎಂಬವನನ್ನು
ಯೆರೂಸಲೇಮಿನಲ್ಲಿದ್ದ ಹಿಜ್ಕೀಯನ ಬಳಿಗೆ ಕಳು
ಹಿಸಿದನು. ಇವನು ಮಡಿವಾಳರ ಹೊಲದ ಮೇಲೆ
ಹೋಗುವ ರಾಜಮಾರ್ಗದ ಹತ್ತಿರ ಅಲ್ಲಿನ ಕೆರೆಯ
ಕಾಲಿವೆಯ ಬಳಿಯಲ್ಲಿ ಪಾಳೆಯಮಾಡಿಕೊಂಡನು.
ಆ ಮೇಲೆ ಹಿಲ್ಕೀಯನ ಮಗನೂ ರಾಜಗೃಹಾಧಿಪ 3
ತಿಯೂ ಆದ ಎಲ್ಯಾಕೀಮ್, ಲೇಖಕನಾದ ಶೆಬ್ನ,

1) ಅಥವಾ: ಹತವಾಗುವವು. 2) ಮೂಲ: ಅಕ್ರಮ, ಶೂನ್ಯ. 3) ಪಾಠಾಂತರ: ನನ್ನ. 4) ಅಥವಾ: ಮರೀಚಿಕೆಯು.
5) ಅಥವಾ: ಯೆಹೋವನೇ ಅವರಲ್ಲಿ ತನ್ನ ಜನರ ಸಂಗಡ ನಡೆಯುವದರಿಂದ ಅವರಲ್ಲಿನ ಮೂಢರೂ ದಾರಿತಪ್ಪರು.

ಆಸಾಫನ ಮಗನೂ ಮಂತ್ರಿಯೂ ಆಗಿದ್ದ ಯೋವ
೪ ಎಂಬವರು ಬಂದರು. ರಬ್ಷಾಕೆಯು ಅವರಿಗೆ—ನೀವು
ಹೋಗಿ ಮಹಾರಾಜನಾದ ಅಶ್ಶೂರದ ಅರಸನ ಈ
ಮಾತುಗಳನ್ನು ಹಿಜ್ಕೀಯನಿಗೆ ತಿಳಿಸಿರಿ—ಈ ನಿನ್ನ ಭರ
೫ ವಸಕ್ಕೆ ಯಾವ ಆಧಾರವುಂಟು? ಯುದ್ಧಕ್ಕೆ ಬೇಕಾದ
ವಿವೇಕವೂ ಬಲವೂ ಉಂಟು ಎಂಬ ನಿನ್ನ ಮಾತು
ಬರೀ ಬಾಯಿಮಾತೇ ಎಂದು ನಾನು ಹೇಳಬಲ್ಲೆ,
ನೀನು ಯಾರನ್ನು ನಂಬಿಕೊಂಡು ನನಗೆ ವಿರೋಧ
೬ ವಾಗಿ ತಿರುಗಿಬಿದ್ದಿದ್ದೀ? ಜಜ್ಜಿದ ದಂಟಿಗೆ ಸಮಾನವಾದ
ಐಗುಪ್ತವೆಂಬ ಕೋಲಿನ ಮೇಲೆ ಭರವಸವಿಟ್ಟಿರುತ್ತೀ
ಯಷ್ಟೆ. ಒಬ್ಬನು ಅಂಥ ಕೋಲನ್ನು ಊರಿಕೊಳ್ಳುವ
ವಾದರೆ ಅದು ಅವನ ಕೈಯನ್ನು ತಿವಿದು ಒಳಕ್ಕೆ
ಹೋಗುತ್ತದೆ! ಐಗುಪ್ತದ ಅರಸನಾದ ಫರೋಹನಲ್ಲಿ
೭ ಭರವಸವಿಟ್ಟವರಿಗೆ ಅದೇ ಗತಿಯಾಗುವದು. ಒಂದು
ವೇಳೆ ನೀನು—ನಮ್ಮ ದೇವರಾದ ಯೆಹೋವನನ್ನು
ನಂಬಿಕೊಂಡಿದ್ದೇವೆಂದು ಹೇಳಬಹುದು. ಹಿಜ್ಕೀಯನು
ಇದೇ ಯಜ್ಞವೇದಿಯ ಮುಂದೆ ಆರಾಧನೆಮಾಡ
ಬೇಕೆಂಬದಾಗಿ ಯೆಹೂದ್ಯರಿಗೂ ಯೆರೂಸಲೇಮಿನವ
ರಿಗೂ ಆಜ್ಞಾಪಿಸಿ ಆ ಯೆಹೋವನ ಪೂಜಾಸ್ಥಳಗಳನ್ನೂ
ಬೇರೆ ಎಲ್ಲಾ ಯಜ್ಞವೇದಿಗಳನ್ನೂ ಹಾಳುಮಾಡಿದನ
೮ ಲ್ಲಾ! ನನ್ನ ಒಡೆಯನಾದ ಅಶ್ಶೂರದ ಅರಸನೊಂದಿಗೆ
ಪಂಥಹಾಕುವದಕ್ಕೆ ನಿನಗೆ ಮನಸ್ಸುಂಟೋ? ಹಾಗಾ
ದರೆ ಅವನು ನಿನಗೆ ಎರಡು ಸಾವಿರ ಕುದುರೆಗಳನ್ನು
ಕೊಡುತ್ತಾನೆ; ನೀನು ಅಷ್ಟು ಮಂದಿ ಸವಾರರನ್ನು
೯ ಅವುಗಳ ಮೇಲೆ ಕುಳ್ಳಿರಿಸುವಿಯೋ? ಇದೂ ನಿನಗೆ
ಅಸಾಧ್ಯವಾಗುವದಾದರೆ ನನ್ನ ಒಡೆಯನ ಸೇನಾಪತಿ
ಗಳಲ್ಲಿ ಅತ್ಯಲ್ಪನನ್ನಾದರೂ ಸೋಲಿಸುವದು ಹೇಗೆ?
ರಥಾಶ್ವಬಲಗಳಿಗಾಗಿ ಐಗುಪ್ತ್ಯರನ್ನು ನಂಬಿರುತ್ತೀ
10 ಯೆಂದು ಕಾಣುತ್ತದೆ. ಈ ದೇಶವನ್ನು ಹಾಳುಮಾ
ಡುವದಕ್ಕೆ ಯೆಹೋವನ ಚಿತ್ತವಿಲ್ಲದೆ ಬಂದೆನೆಂದು
ನೆನಸುತ್ತೀಯೋ? ಇಲ್ಲಿಗೆ ಬಂದು ಇದನ್ನು ಹಾಳು
ಮಾಡಿಬಿಡು ಎಂದು ಯೆಹೋವನೇ ನನಗೆ ಆಜ್ಞಾಪಿ
ಸಿದನು ಎನ್ನುವ ಅರಸನ ಮಾತುಗಳನ್ನು ತಿಳಿಸಿರಿ
ಎಂದು ಹೇಳಿದನು.
11 ಆಗ ಎಲ್ಯಾಕೀಮ್, ಶೆಬ್ನ, ಯೋವ ಎಂಬವರು
ರಬ್ಷಾಕೆಗೆ—ನೀನು ಮಾತಾಡುವದು ಪೌಳಿಗೋ
ಡೆಯ ಮೇಲಿರುವವರಿಗೆ ಕೇಳಿಸುತ್ತದೆ. ಆದದರಿಂದ
ದಯವಿಟ್ಟು ನಿನ್ನ ಸೇವಕರಾದ ನಮ್ಮೊಡನೆ
ಅರಾಮ್ಯ ಭಾಷೆಯಲ್ಲಿ ಮಾತಾಡು; ಅದು ನಮಗೆ
ತಿಳಿಯುತ್ತದೆ. ಆದರೆ ಯೂದಾಯ ಭಾಷೆಯಲ್ಲಿ
12 ಮಾತಾಡಬೇಡ ಎಂದು ಹೇಳಿದರು. ಅದಕ್ಕೆ ರಬ್ಷಾ
ಕೆಯು—ನನ್ನ ಯಜಮಾನನು ನಿಮ್ಮ ಸಂಗಡವಾಗಲಿ
ನಿಮ್ಮ ಒಡೆಯನ ಸಂಗಡವಾಗಲಿ ಮಾತಾಡಬೇಕೆಂದು
ನನ್ನನ್ನು ಕಳುಹಿಸಲಿಲ್ಲ. ಈ ಗೋಡೆಯ ಮೇಲೆ
ಕೂತಿರುವ ಜನರ ಸಂಗಡ ಮಾತಾಡುವದಕ್ಕೋಸ್ಕರ
ಕಳುಹಿಸಿದ್ದಾನೆ. ಅವರು ನನಗೆ ವಿರುದ್ಧವಾಗಿ ನಿಂತರೆ
ನಿಮ್ಮೊಡನೆ ಸ್ವಂತ ಮಲವನ್ನು ತಿಂದು ಸ್ವಂತ
ಮೂತ್ರವನ್ನು ಕುಡಿಯಬೇಕಾಗುವದು ಎಂದು ಉತ್ತರ
13 ಕೊಟ್ಟು ಎದ್ದು ಗೋಡೆಯ ಮೇಲೆ ನಿಂತವರಿಗೆ
ಯೂದಾಯ ಭಾಷೆಯಲ್ಲಿ—ಅಶ್ಶೂರದ ಮಹಾರಾಜನ

ಮಾತನ್ನು ಕೇಳಿರಿ; ಇವನು ನಿಮಗೆ—ಹಿಜ್ಕೀಯ
ನಿಂದ ಮೋಸಹೋಗಬೇಡಿರಿ. ಅವನು ನಿಮ್ಮನ್ನು
ಬಿಡಿಸಲಾರನು. ಹಿಜ್ಕೀಯನು ನಿಮಗೆ—ಯೆಹೋವ
ನನ್ನು ನಂಬಿರಿ; ಆತನು ನಮ್ಮನ್ನು ಹೇಗೂ ರಕ್ಷಿಸು
ವನು; ಈ ಪಟ್ಟಣವು ಅಶ್ಶೂರದ ಅರಸನ ವಶವಾಗು
ವದಿಲ್ಲ ಎಂಬದಾಗಿ ಹೇಳಿದರೆ ಅವನಿಗೆ ಕಿವಿಗೊಡ
ಬೇಡಿರಿ, ಒಪ್ಪಬೇಡಿರಿ. ಅಶ್ಶೂರದ ಅರಸನಾದ ನನ್ನ
ಮಾತನ್ನು ಕೇಳಿರಿ; ನನ್ನೊಡನೆ ಒಡಂಬಡಿಕೆಮಾಡಿ
ಕೊಂಡು ನನ್ನ ಆಶ್ರಯದಲ್ಲಿ ಸೇರಿರಿ. ನಿಮ್ಮಲ್ಲಿ ಪ್ರತಿ
ಯೊಬ್ಬನೂ ತನ್ನ ತನ್ನ ಅಂಜೂರದ ಮರ, ದ್ರಾಕ್ಷಾಲತೆ
ಇವುಗಳ ಹಣ್ಣುಗಳನ್ನು ತಿಂದು ತನ್ನ ತನ್ನ ಬಾವಿಯ
ನೀರನ್ನು ಕುಡಿಯುವನು. ಸ್ವಲ್ಪ ಕಾಲವಾದನಂತರ
ನಾನು ಬಂದು ನಿಮ್ಮನ್ನು ಧಾನ್ಯ, ದ್ರಾಕ್ಷಾರಸ,
ಆಹಾರ, ದ್ರಾಕ್ಷೇತೋಟ ಇವು ಸಮೃದ್ಧಿಯಾಗಿರುವ
ನಿಮ್ಮ ದೇಶಕ್ಕೆ ಸಮಾನವಾದ ಇನ್ನೊಂದು ದೇಶಕ್ಕೆ
ಕರಕೊಂಡು ಹೋಗುವೆನು; ಯೆಹೋವನು ನಮ್ಮನ್ನು
ರಕ್ಷಿಸುವನು ಎಂಬ ನಂಬಿಕೆಯನ್ನು ಹಿಜ್ಕೀಯನು
ನಿಮ್ಮಲ್ಲಿ ಹುಟ್ಟಿಸಾನು ನೋಡಿಕೊಳ್ಳಿರಿ. ಯಾವ
ಜನಾಂಗದ ದೇವತೆಯು ತನ್ನ ದೇಶವನ್ನು ಅಶ್ಶೂರದ
ಅರಸನ ಕೈಗೆ ಸಿಕ್ಕದಂತೆ ಕಾಪಾಡಿತು? ಹಮಾತ್,
ಅರ್ಪಾದ್, ಸೆಫರ್ವಯಿಮ್ ಎಂಬ ಪಟ್ಟಣಗಳ ದೇವ
ತೆಗಳೇನಾದವು? ಅವು ಸಮಾರ್ಯವನ್ನು ನನ್ನ ಕೈ
ತಪ್ಪಿಸಿದವೋ? ಯಾವ ಜನಾಂಗದ ದೇವತೆಯಾದರೂ
ತನ್ನ ದೇಶವನ್ನು ನನ್ನ ಕೈಯಿಂದ ಬಿಡಿಸಲಾರದೆ
ಹೋದ ಮೇಲೆ ಯೆಹೋವನು ಯೆರೂಸಲೇಮನ್ನು
ನನ್ನ ಕೈಗೆ ತಪ್ಪಿಸಿ ಕಾಪಾಡುವನೋ ಅನ್ನುತ್ತಾನೆ
ಎಂದು ಹೇಳಿದನು. ಆ ಸೇನಾಪತಿಗಳಿಗೆ ಯಾವ
ಉತ್ತರವನ್ನೂ ಕೊಡಬಾರದೆಂದು ಅರಸನು ತನ್ನ
ಪ್ರಜೆಗಳಿಗೆ ಆಜ್ಞಾಪಿಸಿದ್ದರಿಂದ ಅವರು ಸುಮ್ಮನಿದ್ದ
ರು; ಏನೂ ಅನ್ನಲಿಲ್ಲ. ಹಿಲ್ಕೀಯನ ಮಗನೂ ರಾಜ
ಗೃಹಾಧಿಪತಿಯೂ ಆಗಿದ್ದ ಎಲ್ಯಾಕೀಮ್, ಲೇಖಕ
ನಾದ ಶೆಬ್ನ, ಆಸಾಫನ ಮಗನೂ ಮಂತ್ರಿಯೂ ಆಗಿದ್ದ
ಯೋವ ಎಂಬವರು ತಮ್ಮ ಬಟ್ಟೆಗಳನ್ನು ಹರಿದು
ಕೊಂಡು ಅರಸನಾದ ಹಿಜ್ಕೀಯನ ಬಳಿಗೆ ಬಂದು ಅವ
ನಿಗೆ ರಬ್ಷಾಕೆಯ ಮಾತುಗಳನ್ನು ತಿಳಿಸಿದರು.

ಆಗ ಹಿಜ್ಕೀಯನು ಬಟ್ಟೆಗಳನ್ನು ಹರಿದು 3
ಕೊಂಡು ಗೋಣೀತಟ್ಟನ್ನು ಕಟ್ಟಿಕೊಂಡು ಯೆಹೋ
ವನ ಆಲಯಕ್ಕೆ ಹೋದನು. ಇದಲ್ಲದೆ ಅವನು
ರಾಜಗೃಹಾಧಿಪತಿಯಾದ ಎಲ್ಯಾಕೀಮ್, ಲೇಖಕನಾದ
ಶೆಬ್ನ, ವೃದ್ಧಯಾಜಕರು ಇವರನ್ನು ಕರಿಸಿ—ನೀವು
ಗೋಣೀತಟ್ಟನ್ನು ಕಟ್ಟಿಕೊಂಡು ಆಮೋಚನ ಮಗನೂ
ಪ್ರವಾದಿಯೂ ಆಗಿರುವ ಯೆಶಾಯನ ಬಳಿಗೆ ಹೋಗಿ
ಹೀಗೆ ಹೇಳಿರಿ ಎಂದು ಆಜ್ಞಾಪಿಸಿದನು. ಅವರು ಅದ
ರಂತೆ ಯೆಶಾಯನ ಬಳಿಯಲ್ಲಿ—ಈ ದಿವಸದಲ್ಲಿ
ನಮಗೆ ಮಹಾಕಷ್ಟವೂ ಶಿಕ್ಷೆಯೂ ನಿಂದೆಯೂ ಸಂಭ
ವಿಸಿರುತ್ತವೆ. ಹೆರಿಗೆಯ ಕಾಲ ಬಂದದೆ; ಆದರೆ
ಹೆರುವದಕ್ಕೆ ಬಲ ಸಾಲದು. ನಿನ್ನ ದೇವರಾದ ಯೆಹೋ
ವನು ಅಶ್ಶೂರದ ಅರಸನಿಂದ ಕಳುಹಿಸಲ್ಪಟ್ಟ ರಬ್ಷಾ
ಕೆಯ ನಿಂದಾವಾಕ್ಯಗಳನ್ನು ಕೇಳಿರುವನು; ಅವನು
ತನ್ನ ಯಜಮಾನನ ಹೆಸರಿನಲ್ಲಿ ಜೀವಸ್ವರೂಪನಾದ

ದೇವರನ್ನು ದೂಷಿಸಿದ್ದರಿಂದ ಆತನು ಆವನಿಗೆ ಮು
ಯ್ಯಿತೀರಿಸಾನು. ಆದದರಿಂದ ಉಳಿದಿರುವ ಸ್ವಲ್ಪ
ಜನರಿಗೋಸ್ಕರ ಆತನನ್ನು ಪ್ರಾರ್ಥಿಸು ಎಂಬದಾಗಿ
ಹಿಜ್ಕೀಯನು ಅನ್ನುತ್ತಾನೆ ಎಂದು ಹೇಳಿದರು.
6 ಯೆಶಾಯನು ಅರಸನಾದ ಹಿಜ್ಕೀಯನ ಕಡೆಯಿಂದ
ತನ್ನ ಬಳಿಗೆ ಬಂದ ಸೇವಕರಿಗೆ—ಅಶ್ಶೂರದ ಅರಸನ
ಸೇವಕರು ನನ್ನನ್ನು ದೂಷಿಸಿದ ಮಾತುಗಳನ್ನು ಕೇಳಿ
ದ್ದೀ; ಅವುಗಳಿಗೆ ನೀನು ಹೆದರಬೇಡ. ಇಗೋ,
ನಾನು ಅವನ ಮೇಲೆ [ಭಯದ] ಆತ್ಮವನ್ನು ಬರ
ಮಾಡುವೆನು. ಅವನು ಒಂದು ಸುದ್ದಿಯನ್ನು ಕೇಳಿ
ತಿರುಗಿಕೊಂಡು ಸ್ವದೇಶಕ್ಕೆ ಹೋಗಿ ಅಲ್ಲಿ ಕತ್ತಿಯಿಂದ
ಬೀಳುವಂತೆ ಮಾಡುವೆನು ಎಂಬೀ ಯೆಹೋವನ
ಮಾತನ್ನು ನಿಮ್ಮ ಯಜಮಾನನಿಗೆ ಹೇಳಿರಿ ಎಂಬದಾಗಿ
ಉತ್ತರಕೊಟ್ಟನು.

ರಬ್ಷಾಕೆಯು ಹಿಂದಿರುಗಿ ಹೋಗುವಾಗ ದಾರಿ
ಯಲ್ಲಿ ಅಶ್ಶೂರದ ಅರಸನು ಲಾಕೀಷನ್ನು ಬಿಟ್ಟು
ಹೋದನೆಂಬ ವರ್ತಮಾನ ಕೇಳಿ ಲಿಬ್ನಕ್ಕೆ ಹೋಗಿ
ಅಲ್ಲಿ ಅವನನ್ನು ಕಂಡನು. ಆಗ ಅವನು ಆ ಪಟ್ಟ
ಣಕ್ಕೆ ವಿರೋಧವಾಗಿ ಯುದ್ಧಮಾಡುತ್ತಾ ಇದ್ದನು.
ಅಷ್ಟರಲ್ಲಿ ಕೂಷಿನ ಅರಸನಾದ ತಿರ್ಹಾಕನು ತನಗೆ
ವಿರೋಧವಾಗಿ ಹೊರಟಿದ್ದಾನೆಂಬ ಸುದ್ದಿಯನ್ನು ಅಶ್ಶೂ
ರದ ಅರಸನು ಕೇಳಿ—[ಹಿಜ್ಕೀಯನೇ,] ನೀನು ನಂಬುವ
ದೇವರು—ಯೆರೂಸಲೇಮು ಅಶ್ಶೂರದ ಅರಸನಿಗೆ
ವಶವಾಗುವದಿಲ್ಲವೆಂದು ಹೇಳಿ ನಿನ್ನನ್ನು ಮೋಸಗೊಳಿ
ಸಾನು. ಅಶ್ಶೂರದ ಅರಸರು ಎಲ್ಲಾ ರಾಜ್ಯಗಳನ್ನು
ಪೂರ್ಣವಾಗಿ ನಾಶಮಾಡಿದರೆಂದು ಕೇಳಿದಿಯಲ್ಲಾ;
ಹೀಗಿದ್ದ ಮೇಲೆ ನೀನು ಉಳಿಯುವಿಯೋ? ನನ್ನ
ತಂದೆತಾತಂದಿರು ಗೋಜಾನ್, ಖಾರಾನ್, ರೆಚೆಫ್,
ಎಂಬ ಪಟ್ಟಣಗಳ ಜನರನ್ನೂ ತೆಲಸ್ಸಾರ್ ಪ್ರಾಂತ
ದಲ್ಲಿರುವ ಏದೆನಿನ ಜನರನ್ನೂ ನಾಶಮಾಡುವದಕ್ಕೆ
ಹೋದಾಗ ಅವರ ದೇವತೆಗಳು ಅವರನ್ನು ಕಾಪಾಡಿ
ದವೋ? ಹಮಾತ್, ಅರ್ಪಾದ್, ಸೆಫರ್ವಯಿಮ್,
ಹೇನ, ಇವ್ವಾ ಎಂಬ ಪಟ್ಟಣಗಳ ಅರಸರು ಏನಾದರು
ಎಂಬೀ ನನ್ನ ಮಾತನ್ನು ಯೆಹೂದದ ಅರಸನಾದ
ಹಿಜ್ಕೀಯನಿಗೆ ಹೇಳಿರಿ ಎಂಬದಾಗಿ ದೂತರನ್ನು ಹಿಜ್ಕೀ
ಯನ ಬಳಿಗೆ ಕಳುಹಿಸಿದನು. ಹಿಜ್ಕೀಯನು ಆ
ದೂತರು ತಂದ ಪತ್ರವನ್ನು ತೆಗೆದುಕೊಂಡು ಓದಿದ
ನಂತರ ಯೆಹೋವನ ಆಲಯಕ್ಕೆ ಹೋಗಿ ಅದನ್ನು
16 ಯೆಹೋವನ ಮುಂದೆ ತೆರೆದಿಟ್ಟು ಆತನಿಗೆ—
ಕೆರೂಬಿಗಳ ಮೇಲೆ ಆಸೀನನಾಗಿರುವಾತನೇ, ಇಸ್ರಾ
ಯೇಲ್ ದೇವರೇ, ಸೇನಾಧೀಶ್ವರನಾದ ಯೆಹೋವನೇ,
ಎಲ್ಲಾ ಭೂರಾಜ್ಯಗಳನ್ನು ಆಳುವ ದೇವರು ನೀನೊ
ಬ್ಬನೇ; ಪರಲೋಕ ಭೂಲೋಕಗಳನ್ನುಂಟುಮಾಡಿದ
ವನು ನೀನೇ. ಯೆಹೋವನೇ, ಕಿವಿಗೊಟ್ಟು ಕೇಳು;
ಯೆಹೋವನೇ, ಕಣ್ಣಿಟ್ಟು ನೋಡು. ಸನ್ಹೇರೀಬನು
ಜೀವಸ್ವರೂಪದೇವರಾದ ನಿನ್ನನ್ನು ನಿಂದಿಸುವದಕ್ಕೋ
ಸ್ಕರ ಹೇಳಿಕಳುಹಿಸಿದ ಮಾತುಗಳನ್ನೆಲ್ಲಾ ಮನಸ್ಸಿಗೆ
ತಂದುಕೋ. ಯೆಹೋವನೇ, ಅಶ್ಶೂರದ ಅರಸರು
ಸಕಲಜನಾಂಗಗಳನ್ನೂ ಅವರ ದೇಶಗಳನ್ನೂ ಹಾಳು
ಮಾಡಿ ಅವರ ದೇವತೆಗಳನ್ನು ಬೆಂಕಿಯಲ್ಲಿ ಹಾಕಿದ್ದು
ನಿಜ, ಅವು ದೇವತೆಗಳಲ್ಲ, ಮನುಷ್ಯರು ಕೆತ್ತಿದ ಕಲ್ಲು
ಮರಗಳ ಬೊಂಬೆಗಳಷ್ಟೆ; ಆದದರಿಂದಲೇ ಅವು ಅವ
ರಿಂದ ಹಾಳಾದವು. ಯೆಹೋವನೇ, ನಮ್ಮ ದೇವರೇ, 20
ನೀನೇ ಅದ್ವಿತೀಯನಾದ ಯೆಹೋವನೆಂಬದನ್ನು ಭೂ
ರಾಜ್ಯಗಳೆಲ್ಲವೂ ತಿಳಿದುಕೊಳ್ಳುವಂತೆ ನಮ್ಮನ್ನು ಇವನ
ಕೈಯಿಂದ ಬಿಡಿಸು ಎಂದು ಪ್ರಾರ್ಥಿಸಿದನು.

ಯೆಶಾಯನ ಮೂಲಕ ಬಂದ ದೈವೋಕ್ತಿ.

ಆಗ ಆಮೋಚನ ಮಗನಾದ ಯೆಶಾಯನು ಹಿಜ್ಕೀ 21
ಯನಿಗೆ ಹೇಳಿ ಕಳುಹಿಸಿದ್ದೇನಂದರೆ—ಇಸ್ರಾಯೇಲ್
ದೇವರಾದ ಯೆಹೋವನ ಈ ಮಾತುಗಳನ್ನು ಕೇಳು;
ನೀನು ಅಶ್ಶೂರದ ಅರಸನಾದ ಸನ್ಹೇರೀಬನ ವಿಷಯ
ವಾಗಿ ಮಾಡಿದ ಬಿನ್ನಹಗಳನ್ನು ಯೆಹೋವನು ಕೇಳಿ
ಅವನನ್ನು ಕುರಿತು—

ಕನ್ನಿಕೆಯಾಗಿರುವ ಚೀಯೋನ್ ಕುಮಾರ್ತೆಯು 22
ನಿನ್ನನ್ನು ತಿರಸ್ಕರಿಸಿ ಪರಿಹಾಸ್ಯಮಾಡುತ್ತಾಳೆ;
ಯೆರೂಸಲೇಮ್ ಕುಮಾರ್ತೆಯು ನಿನ್ನ ಹಿಂದೆ
ತಲೆಯಾಡಿಸುತ್ತಾಳೆ.
ನೀನು ಯಾರನ್ನು ನಿಂದಿಸಿ ಯಾರನ್ನು ದೂಷಿ 23
ಸಿದಿ?
ಯಾರಿಗೆ ವಿರೋಧವಾಗಿ ಬಾಯ್ದೆರೆದು ಒದರಿದಿ?
ನೀನು ಸೊಕ್ಕಿನಿಂದ ನೋಡಿದ್ದು ಯಾರನ್ನು?
ಇಸ್ರಾಯೇಲ್ಯರ ಸದಮಲಸ್ವಾಮಿಯನ್ನಲ್ಲವೇ!
ನೀನು ನಿನ್ನ ಸೇವಕರ ಮುಖಾಂತರವಾಗಿ ಕರ್ತ 24
ನನ್ನು ನಿಂದಿಸಿ—
ನನ್ನ ರಥಸಮೂಹದೊಡನೆ ಪರ್ವತಶಿಖರಗಳನ್ನು
ಹತ್ತಿದ್ದೇನೆ;
ಲೆಬನೋನಿನ ದುರ್ಗಮಸ್ಥಳಗಳಿಗೆ ಹೋಗಿದ್ದೇನೆ;
ಅದರ ಎತ್ತರವಾದ ದೇವದಾರುವೃಕ್ಷಗಳನ್ನೂ
ಶ್ರೇಷ್ಠವಾದ ತುರಾಯಿ ಮರಗಳನ್ನೂ ಕಡಿದು
ಬಿಟ್ಟಿದ್ದೇನೆ;
ಅಲ್ಲಿನ ಬಹುದೂರದ ಶಿಖರವನ್ನೂ ಉದ್ಯಾನವನ
ಗಳನ್ನೂ ಪ್ರವೇಶಿಸಿದ್ದೇನೆ;
[ಪರದೇಶಗಳಲ್ಲಿ] ಅಗೆದು ನೀರು ತೆಗೆದು ಕುಡಿ 25
ದಿದ್ದೇನೆ;
ನನ್ನ ಪಾದಗಳಿಂದ ಐಗುಪ್ತದ ಎಲ್ಲಾ ಹೊಳೆಗಳನ್ನು
ಬತ್ತಿಸಿದ್ದೇನೆ ಎಂಬದಾಗಿ ನೀನು ಕೊಚ್ಚಿಕೊಂಡಿ
ದ್ದೀ;
ಇದನ್ನು ನೀನು ಕೇಳಿಲ್ಲವೋ? ಹೀಗಾಗಬೇಕೆಂದು 26
ಬಹುಕಾಲದ ಹಿಂದೆಯೇ ಗೊತ್ತುಮಾಡಿದೆನು;
ಪೂರ್ವಕಾಲದಲ್ಲಿ ನಿರ್ಣಯಿಸಿದ್ದನ್ನು ಈಗ ನೆರ
ವೇರಿಸಿದ್ದೇನೆ.
ಆದದರಿಂದ ಕೋಟೆಕೊತ್ತಲುಗಳ ಪಟ್ಟಣಗಳನ್ನು
ಹಾಳುದಿಬ್ಬಗಳನ್ನಾಗಿ ಮಾಡುವದು ನಿನಗೆ
ಸಾಧ್ಯವಾಯಿತು;
ಅವುಗಳ ನಿವಾಸಿಗಳು ಬಲವಿಲ್ಲದವರಾಗಿ ಆಶಾ 27
ಭಂಗಪಟ್ಟು ಕಳವಳಗೊಂಡರು;
ಅವರು ಹೊಲದ ಕಾಯಿಪಲ್ಯಕ್ಕೂ ಎಳೆಗರಿಕೆಗೂ
ಮಾಳಿಗೆಯ ಮೇಲಣ ಹುಲ್ಲಿಗೂ

ಹೊಡೆಹಾಯುವದಕ್ಕಿಂತ ಮೊದಲೇ [ಒಣಗಿಹೋದ]
ಪೈರಿಗೂ ಸಮಾನರಾದರು.
28 ನೀನು ಕೂತುಕೊಳ್ಳುವದೂ ಹೋಗುವದೂ ಬರು
ವದೂ ನನಗೆ ಗೊತ್ತುಂಟು;
ನೀನು ನನ್ನ ಮೇಲೆ ರೌದ್ರಾವೇಶನಾಗಿರುವದನ್ನೂ
ಬಲ್ಲೆನು.
29 ನೀನು ನನಗೆ ವಿರೋಧವಾಗಿ ಕುಪಿತನಾಗಿರುವದೂ
ಉಬ್ಬಿಕೊಂಡಿರುವದೂ ನನಗೆ ತಿಳಿದುಬಂತು.
ಆದದರಿಂದ ನಿನಗೆ ಮೂಗುದಾರವನ್ನೂ ಕಡಿ
ವಾಣವನ್ನೂ ಹಾಕಿ
ಬಂದ ದಾರಿಯಿಂದಲೇ ನಿನ್ನನ್ನು ಹಿಂದಕ್ಕೆ ಎಳೆದು
ಕೊಂಡು ಹೋಗುವೆನು
30 ಎಂಬದಾಗಿ ಹೇಳಿದ್ದಾನೆ. ಈ ಮಾತುಗಳು ನೆರವೇರು
ವವೆಂಬದಕ್ಕೆ ನೀವು ಈ ವರುಷದಲ್ಲಿ ಕೂಳೆಬೆಳೆಯನ್ನೂ
ಮುಂದಿನ ವರುಷದಲ್ಲಿ ತನ್ನಷ್ಟಕ್ಕೆ ತಾನೇ ಬೆಳೆದದ್ದನ್ನೂ
ಮೂರನೆಯ ವರುಷ ಹೊಲಗಳಲ್ಲಿ ಬಿತ್ತಿ ಕೊಯ್ದ
ದ್ದನ್ನೂ ದ್ರಾಕ್ಷೇತೋಟಗಳಲ್ಲಿ ವ್ಯವಸಾಯಮಾಡಿ
ಕೂಡಿಸಿದ್ದನ್ನೂ ಅನುಭವಿಸುವದೇ ಗುರುತಾಗಿರುವದು.
31 ತಪ್ಪಿಸಿಕೊಂಡುಳಿದ ಯೆಹೂದ್ಯರು ದೇಶದಲ್ಲಿ ನೆಲೆ
32 ಗೊಂಡು ಅಭಿವೃದ್ಧಿಯಾಗುವರು. ಯೆರೂಸಲೇಮಿ
ನಲ್ಲಿ ಉಳಿದವರು ಹರಡಿಕೊಳ್ಳುವರು; ಚೀಯೋನ್
ಪರ್ವತದಲ್ಲಿ ತಪ್ಪಿಸಿಕೊಂಡವರು ಅಭಿವೃದ್ಧಿಹೊಂದು
ವರು; ಸೇನಾಧೀಶ್ವರನಾದ ಯೆಹೋವನ ಆಗ್ರಹವು
33 ಇದನ್ನು ನೆರವೇರಿಸುವದು. ಆತನು ಅಶ್ಶೂರದ ಅರ
ಸನನ್ನು ಕುರಿತು—ಅವನು ಪಟ್ಟಣವನ್ನು ಸಮೀಪಿ
ಸುವದಿಲ್ಲ, ಅದಕ್ಕೆ ಬಾಣವನ್ನೆಸೆಯುವದಿಲ್ಲ, ಗುರಾಣಿ
ಹಿಡಿದಿರುವವರನ್ನು ಕಳುಹಿಸುವದಿಲ್ಲ, ಅದನ್ನು ಕೆಡವಿ
ಬಿಡುವದಕ್ಕೋಸ್ಕರ ಅದರ ಎದುರಾಗಿ ಮಣ್ಣಿನ
34 ದಿಬ್ಬವನ್ನು ಮಾಡುವದಿಲ್ಲ. ಅವನು ಬಂದ ದಾರಿ
ಯಿಂದಲೇ ಹಿಂದಿರುಗಿ ಹೋಗುವನು; ಈ ಪಟ್ಟಣಕ್ಕೆ
35 ಬರುವದೇ ಇಲ್ಲ. ನನಗೋಸ್ಕರವಾಗಿಯೂ ನನ್ನ
ಸೇವಕನಾದ ದಾವೀದನಿಗೋಸ್ಕರವಾಗಿಯೂ ಇದನ್ನು
ಉಳಿಸಿ ಕಾಪಾಡುವೆನು ಎಂದು ಹೇಳುತ್ತಾನೆ ಎಂಬದೇ.

ಸನ್ಹೇರೀಬನ ಅಪಜಯವೂ ಮರಣವೂ.

36 ಆಗ ಯೆಹೋವನ ದೂತನು ಹೊರಟುಬಂದು
ಅಶ್ಶೂರ್ಯರ ಪಾಳೆಯದಲ್ಲಿ ಲಕ್ಷದ ಎಂಭತ್ತೈದು
ಸಾವಿರ ಮಂದಿ ಸೈನಿಕರನ್ನು ಸಂಹರಿಸಿದನು. ಬೆಳಿಗ್ಗೆ
ಎದ್ದು ನೋಡುವಲ್ಲಿ ಅವರೆಲ್ಲಾ ಹೆಣಗಳಾಗಿದ್ದರು.
37 ಆಗ ಅಶ್ಶೂರ್ಯರ ಅರಸನಾದ ಸನ್ಹೇರೀಬನು ಹಿಂದಿ
ರುಗಿ ನಿನೆವೆ ಪಟ್ಟಣಕ್ಕೆ ಹೋಗಿ ಅಲ್ಲಿ ವಾಸಿಸಿದನು.
38 ಅವನು ಒಂದು ದಿವಸ ಗುಡಿಗೆ ಹೋಗಿ ತನ್ನ ದೇವ
ರಾದ ನಿಸ್ರೋಕನನ್ನು ಆರಾಧಿಸುತ್ತಿರುವಾಗ ಅದ್ರ
ಮ್ಮೆಲೆಕ್, ಸರೆಚೆರ್ ಎಂಬ ಅವನ ಮಕ್ಕಳು ಅವ
ನನ್ನು ಕತ್ತಿಯಿಂದ ಕೊಂದು ಅರರಾಟ್ ದೇಶಕ್ಕೆ
ಓಡಿಹೋದರು. ಅವನಿಗೆ ಬದಲಾಗಿ ಅವನ ಮಗ
ನಾದ ಏಸರ್‍ಹದ್ದೋನನು ಅರಸನಾದನು.

ಹಿಜ್ಕೀಯನು ರೋಗಿಯಾಗಿ ಆರೋಗ್ಯಹೊಂದಿದ್ದು.

3

ಆ ಕಾಲದಲ್ಲಿ ಹಿಜ್ಕೀಯನು ಮರಣಕರರೋಗ
ದಲ್ಲಿ ಬಿದ್ದನು. ಆಗ ಆಮೋಚನ ಮಗನೂ ಪ್ರ
ವಾದಿಯೂ ಆದ ಯೆಶಾಯನು ಅವನ ಬಳಿಗೆ ಬಂದು
ಅವನಿಗೆ—ನಿನ್ನ ಮನೆಯ ವಿಷಯವಾಗಿ ವ್ಯವಸ್ಥೆ
ಮಾಡು; ಏಕಂದರೆ ನೀನು ಉಳಿಯುವ ಹಾಗಿಲ್ಲ,
ಸಾಯಬೇಕಾಗಿದೆ ಎಂಬದಾಗಿ ಯೆಹೋವನು ಅನ್ನು
ತ್ತಾನೆ ಎಂದು ಹೇಳಿದನು. ಇದನ್ನು ಕೇಳಿದೊಡನೆ
ಹಿಜ್ಕೀಯನು ಮೋರೆಯನ್ನು ಗೋಡೆಯ ಕಡೆಗೆ
ತಿರುಗಿಸಿ—ಯೆಹೋವನೇ, ನಾನು ನಂಬಿಗಸ್ತನಾ
ಗಿಯೂ ಯಥಾರ್ಥಚಿತ್ತನಾಗಿಯೂ ನಿನಗೆ ನಡೆದು
ಕೊಂಡು ನಿನ್ನ ದೃಷ್ಟಿಯಲ್ಲಿ ಒಳ್ಳೆಯವನಾಗಿದ್ದದ್ದನ್ನು
ನೆನಪುಮಾಡಿಕೋ ಎಂದು ಪ್ರಾರ್ಥಿಸಿ ಬಹಳವಾಗಿ
ಅತ್ತನು. ಆಗ ಯೆಹೋವನು ಯೆಶಾಯನಿಗೆ—
ನೀನು ಹೋಗಿ ನನ್ನ ಪ್ರಜೆಗಳ ಪ್ರಭುವಾಗಿರುವ
ಹಿಜ್ಕೀಯನಿಗೆ—ನಾನು ನಿನ್ನ ಪ್ರಾರ್ಥನೆಯನ್ನು ಕೇಳಿ
ದ್ದೇನೆ, ನಿನ್ನ ಕಣ್ಣೀರನ್ನು ನೋಡಿದ್ದೇನೆ; ನಿನ್ನ
ಆಯುಷ್ಯಕ್ಕೆ ಹದಿನೈದು ವರುಷಗಳನ್ನು ಕೂಡಿಸು
ತ್ತೇನೆ. ನಿನ್ನನ್ನೂ ಈ ಪಟ್ಟಣವನ್ನೂ ಅಶ್ಶೂರದ
ಅರಸನ ಕೈಗೆ ಸಿಕ್ಕದಂತೆ ತಪ್ಪಿಸುವೆನು; ಈ ಪಟ್ಟಣ
ವನ್ನು ಉಳಿಸಿ ಕಾಪಾಡುವೆನು, ಯೆಹೋವನು ನುಡಿದ
ದ್ದನ್ನು ನೆರವೇರಿಸುವನು ಎಂಬದಕ್ಕೆ ಒಂದು ಗುರು
ತನ್ನು ಕಾಣುವಿ. ಇಗೋ, ಸೂರ್ಯನ ಇಳಿತರದಿಂದ
ಆಹಾಜನ ಸೋಪಾನಪಂಕ್ತಿಯಲ್ಲಿ ಮುಂದೆ ಹೋಗಿದ್ದ
ನೆರಳನ್ನು ಹತ್ತು ಮೆಟ್ಟು ಹಿಂದಕ್ಕೆ ಬರಮಾಡುವೆನು
ಎಂದು ನಿನ್ನ ಪೂರ್ವಿಕನಾದ ದಾವೀದನ ದೇವರಾಗಿ
ರುವ ಯೆಹೋವನು ಹೇಳುತ್ತಾನೆಂಬದಾಗಿ ತಿಳಿಸು
ಎಂದು ಆಜ್ಞಾಪಿಸಿದನು. ಆದರಂತೆ ಸೋಪಾನಪಂಕ್ತಿ
ಯಲ್ಲಿ ಮುಂದೆ ಹೋಗಿದ್ದ ನೆರಳು ಹತ್ತು ಮೆಟ್ಟು
ಹಿಂದಕ್ಕೆ ಬಂತು.

ಯೆಹೂದದ ಅರಸನಾದ ಹಿಜ್ಕೀಯನು ರೋಗ
ದಿಂದ ಆರೋಗ್ಯವನ್ನು ಹೊಂದಿ ಬರೆದದ್ದು—
[ನನ್ನ ರೋಗದಲ್ಲಿ] ಹೀಗೆಲ್ಲಾ ಅಂದುಕೊಂಡೆ
ನು—ನನ್ನ ಮಧ್ಯಪ್ರಾಯದಲ್ಲಿ ಪಾತಾಳ
ದ್ವಾರಗಳೊಳಗೆ ಸೇರಿದ್ದೇನೆ,
ನನ್ನ ಆಯುಷ್ಯದಲ್ಲಿ ಉಳಿದು ಮಿಕ್ಕ ವರುಷಗಳು
ನನಗೆ ನಷ್ಟವಾದವು,
ನಾನು ಇನ್ನು ಜೀವಲೋಕದವನಾಗಿ 1)ಯಾಹು
ಯೆಹೋವನ ದರ್ಶನವನ್ನು ಹೊಂದೆನಲ್ಲಾ,
ಇನ್ನು ಭೂಲೋಕನಿವಾಸಿಗಳಲ್ಲೊಬ್ಬನಾಗಿ ಮನು
ಷ್ಯರನ್ನು ದೃಷ್ಟಿಸಲಾರೆನಲ್ಲಾ.
ನನ್ನ ಆಶ್ರಯವು ಕುರುಬನ ಗುಡಾರದಂತೆ ಕಿತ್ತು
ನನ್ನ ಕಡೆಯಿಂದ ಒಯ್ಯಲ್ಪಟ್ಟಿದೆ;
ಆತನು ನನ್ನ ಆಯುಷ್ಯದ ಹಾಸನ್ನು ಕತ್ತರಿಸಿದ್ದ
ರಿಂದ ನೆಯಿಗೆಯವನಂತೆ ನನ್ನ ಜೀವಮಾನ
ವನ್ನು ಸುತ್ತಿಬಿಟ್ಟಿದ್ದೇನೆ;

1) ಮೂಲ: ಯಾಹುವಿನ ಯಾಹುವಿನ; ಪಾಠಾಂತರ: ಯೆಹೋವನ.

1)ಉದಯದಿಂದ ಅಸ್ತಮಾನದೊಳಗೇ ನನ್ನನ್ನು
ತೀರಿಸುತ್ತೀ.
ಆತನು ಸಿಂಹದಂತೆ ನನ್ನ ಎಲುಬುಗಳನ್ನೆಲ್ಲಾ
ಮುರಿಯುತ್ತಿದ್ದರೂ
ಬೆಳಗಿನ ತನಕ ತಡಕೊಂಡೇ ಇದ್ದೆನು.
ಉದಯದಿಂದ ಅಸ್ತಮಾನದೊಳಗೇ ನನ್ನನ್ನು
ತೀರಿಸುತ್ತೀಯಲ್ಲಾ ಎಂದು ಪ್ರಲಾಪಿಸಿದೆನು.
ನಾನು ಬಾನಕ್ಕಿಯಂತೆಯೂ ಬಕದ ಹಾಗೂ
ಕೀಚುಗುಟ್ಟಿದೆನು,
ಪಾರಿವಾಳದಂತೆ ಮೊರೆಯಿಟ್ಟೆನು,
ಯೆಹೋವನೇ, ನಾನು ಬಾಧೆಪಡುತ್ತಿದ್ದೇನೆ, ನನ
ಗೆ ಹೊಣೆಯಾಗು ಎಂದು
ಮೇಲೆ ಮೇಲೆ ದೃಷ್ಟಿಸುತ್ತಾ ಕಂಗೆಟ್ಟೆನು.

ನಾನು ಏನು ಹೇಳಲಿ! ಆತನು ನನಗೆ ಮಾತು
ಕೊಟ್ಟು ತಾನೇ ನೆರವೇರಿಸಿದ್ದಾನೆ!
ನನ್ನ ಆತ್ಮಕ್ಕೆ ಸಂಭವಿಸಿದ ದುಃಖವನ್ನು ಸ್ಮರಿ
ಸುತ್ತಾ ನನ್ನ ಜೀವಮಾನದಲ್ಲೆಲ್ಲಾ ಮೆಲ್ಲಗೆ
ನಡೆಯುವೆನು.
ಯೆಹೋವನೇ, ಇಂಥಾ ಸಂಭವಗಳಿಂದ ಮನು
ಷ್ಯರು ಬದುಕುತ್ತಾರೆ,
ಅವುಗಳಿಂದಲೇ ನನ್ನ ಆತ್ಮವು ಜೀವಿಸುತ್ತದೆ.
2)ಈಗ ನನ್ನನ್ನು ಸ್ವಸ್ಥಮಾಡಿ ಬದುಕಿಸು.
ಆಹಾ, ನಾನು ಪಟ್ಟ ದುಃಖವು ನನ್ನ ಸುಖಕ್ಕಾಗಿ
ಯೇ ಆಯಿತು,
ನನ್ನ ಆತ್ಮವನ್ನು ನಾಶಕೂಪದಿಂದ ರಕ್ಷಿಸಿದ್ದು
ನಿನ್ನ ಪ್ರೀತಿಯೇ.
ನನ್ನ ಪಾಪಗಳನ್ನೆಲ್ಲಾ ನಿನ್ನ ಬೆನ್ನ ಹಿಂದೆ ಹಾಕಿ
ಬಿಟ್ಟಿದ್ದೀ.
ಪಾತಾಳದವರು ನಿನ್ನನ್ನು ಸ್ತುತಿಸರು, ಸತ್ತವರು
ನಿನ್ನನ್ನು ಕೀರ್ತಿಸರು,
ಅಧೋಲೋಕಕ್ಕೆ ಇಳಿದುಹೋದವರು ನಿನ್ನ ಸತ್ಯ
ಸಂಧತೆಯನ್ನು ಆಶ್ರಯಿಸಲಾರರು.
ಜೀವಂತನು, ಜೀವಂತನೇ ನಿನ್ನನ್ನು ಸ್ತುತಿಸುವನು.
ಹೌದು, ಜೀವಂತನಾದ ನಾನೇ ಈ ಹೊತ್ತು ನಿನ್ನನ್ನು
ಹೊಗಳುವೆನು.
ತಂದೆಯು ಮಕ್ಕಳಿಗೆ ನಿನ್ನ ಸತ್ಯಸಂಧತೆಯನ್ನು
ಬೋಧಿಸುವನು.
ಯೆಹೋವನು ನನಗೆ ರಕ್ಷಣಪರನಾಗಿದ್ದಾನಷ್ಟೆ;
ನಮ್ಮ ಜೀವಮಾನದಲ್ಲೆಲ್ಲಾ ಯೆಹೋವನ ಆಲ
ಯದಲ್ಲಿ
ನಮ್ಮ ಕಿನ್ನರಿ ವೀಣೆಗಳನ್ನು ನುಡಿಸುವೆವು.
(ಯೆಶಾಯನು—ಅಂಜೂರದ ಹಣ್ಣುಗಳ ಅಡೆ
ಯನ್ನು ತರಿಸಿ ಕುರುವಿನ ಮೇಲೆ ಇಟ್ಟರೆ ಅರಸನು
ಗುಣಹೊಂದುವನು ಎಂದು ಅಪ್ಪಣೆಕೊಡಲಾಗಿ
ಹಿಜ್ಕೀಯನು—ನಾನು [ಗುಣಹೊಂದಿ] ಯೆಹೋ
ವನ ಆಲಯವನ್ನು ಸೇರುವೆನೆಂಬದಕ್ಕೆ ಗುರುತೇನು
ಎಂದು ಕೇಳಿದ್ದನು).

ಬಾಬೆಲಿನ ಅರಸನು ಹಿಜ್ಕೀಯನ ಬಳಿಗೆ ದೂತರನ್ನು
ಕಳುಹಿಸಿದ್ದು.

ಅದೇ ಕಾಲದಲ್ಲಿ ಬಲದಾನನ ಮಗನೂ ಬಾಬೆ 39
ಲಿನ ಅರಸನೂ ಆದ ಮೆರೋದಕಬಲದಾನನೆಂಬ
ವನು ಹಿಜ್ಕೀಯನು ಅಸ್ವಸ್ಥನಾಗಿದ್ದು ಗುಣಹೊಂದಿ
ದನು ಎಂದು ಕೇಳಿ ಅವನಿಗೆ ಪತ್ರವನ್ನೂ ಬಹುಮಾನ
ವನ್ನೂ ಕಳುಹಿಸಿದನು. ಹಿಜ್ಕೀಯನು ಬಂದ ದೂತ 2
ರನ್ನು ಸಂತೋಷದಿಂದ ನೋಡಿ ಅವರಿಗೆ ಬೆಳ್ಳಿ,
ಬಂಗಾರ, ಸುಗಂಧದ್ರವ್ಯ, ಪರಿಮಳತೈಲ ಮೊದಲಾದ
ಪದಾರ್ಥಗಳಿರುವ ಮನೆಯನ್ನೂ ಆಯುಧಶಾಲೆ
ಯನ್ನೂ ತನ್ನ ಭಂಡಾರದಲ್ಲಿದ್ದದ್ದೆಲ್ಲವನ್ನೂ ತೋರಿ
ಸಿದನು. ಅವನ ಅರಮನೆಯಲ್ಲಿಯೂ ರಾಜ್ಯದ
ಲ್ಲಿಯೂ ಅವರಿಗೆ ತೋರಿಸದಿದ್ದ ವಸ್ತುವು ಒಂದೂ
ಇರಲಿಲ್ಲ. ಆಗ ಪ್ರವಾದಿಯಾದ ಯೆಶಾಯನು ಹಿಜ್ಕೀ 3
ಯನ ಬಳಿಗೆ ಬಂದು ಅವನನ್ನು—ಆ ಮನುಷ್ಯರು
ಎಲ್ಲಿಯವರು, ಏನು ಹೇಳಿದರು ಎಂದು ಕೇಳಲು
ಅವನು—ಅವರು ಬಹುದೂರದೇಶದಿಂದ ಬಾಬೆಲಿನಿಂದ
ನನ್ನ ಬಳಿಗೆ ಬಂದವರು ಎಂದು ಉತ್ತರಕೊಟ್ಟನು.
ಯೆಶಾಯನು ತಿರಿಗಿ ಅವನನ್ನು—ಅವರು ನಿನ್ನ ಅರ 4
ಮನೆಯಲ್ಲಿ ಏನು ನೋಡಿದರು ಎಂದು ಕೇಳಲು ಅವ
ನು—ಅರಮನೆಯಲ್ಲಿರುವದೆಲ್ಲವನ್ನೂ ನೋಡಿದರು.
ನನ್ನ ಭಂಡಾರದಲ್ಲಿ ನಾನು ಅವರಿಗೆ ತೋರಿಸದಿದ್ದ
ವಸ್ತುವು ಒಂದೂ ಇರುವದಿಲ್ಲ ಅಂದನು. ಆಗ ಅವನು 5
ಹಿಜ್ಕೀಯನಿಗೆ—ಸೇನಾಧೀಶ್ವರನಾದ ಯೆಹೋವನ
ಮಾತನ್ನು ಕೇಳು; ಆತನು—ನಿನ್ನ ಪೂರ್ವಿಕರ ಕಾಲ 6
ದಿಂದ ಇಂದಿನ ವರೆಗೆ ಅರಮನೆಯಲ್ಲಿ ಸಂಗ್ರಹವಾದ
ದ್ದೆಲ್ಲವೂ ಬಾಬೆಲಿಗೆ ಒಯ್ಯಲ್ಪಡುವ ದಿನ ಬರುವದು;
ಇಲ್ಲೇನೂ ಉಳಿಯುವದಿಲ್ಲ. ಬಾಬೆಲಿನ ಅರಸರು 7
ಬಂದು ನೀನು ಪಡೆದ ಮಕ್ಕಳನ್ನು ತೆಗೆದುಕೊಂಡು
ಹೋಗಿ ಅವರನ್ನು ತಮ್ಮ ಅರಮನೆಯಲ್ಲಿ ಕಂಚುಕಿ
ಗಳನ್ನಾಗಿ ನೇಮಿಸಿಕೊಳ್ಳುವರು ಅನ್ನುತ್ತಾನೆ ಎಂದು
ಹೇಳಿದನು. ಹೇಗೂ ನನ್ನ ಜೀವಮಾನದಲ್ಲಿ ತಪ್ಪದೆ 8
ಸೌಭಾಗ್ಯವಿರುವದು ಅಂದುಕೊಂಡು ಹಿಜ್ಕೀಯನು
ಯೆಶಾಯನಿಗೆ—ನೀನು ತಿಳಿಸಿದ ಯೆಹೋವನ
ಮಾತು ಒಳ್ಳೇದಾಗಿದೆ ಎಂದು ಉತ್ತರಕೊಟ್ಟನು.

ಬಾಬೆಲಿನಲ್ಲಿ ಸೆರೆಯಾದ ಯೆಹೂದ್ಯರಿಗೆ
ಉಂಟಾಗುವ ಬಿಡುಗಡೆ 40—66.

ಯೆಹೋವನು ತನ್ನ ಜನರನ್ನು ರಕ್ಷಿಸಬೇಕೆಂದು
ಮಾಡಿರುವ ಸಂಕಲ್ಪ 40—48.

ಯೆಹೋವನೇ ಸರ್ವಶಕ್ತನಾದ ರಕ್ಷಕನು.

ಯೆಹೋವನು ತನ್ನ ಜನರಿಗೆ ಹೇಳಿಕಳುಹಿಸುವ
ಶುಭಸಮಾಚಾರ.

ನನ್ನ ಜನರನ್ನು ಸಂತೈಸಿರಿ, ಸಂತೈಸಿರಿ; ಯೆರೂ 2 40
ಸಲೇಮಿನ ಸಂಗಡ ಹೃದಯಂಗಮವಾಗಿ ಮಾತಾ

1) ಅಥವಾ: ಹಗಲಿರುಳೂ ನನ್ನನ್ನು ಲಯಮಾಡುತ್ತಿದ್ದೀ.

2) ಅಥವಾ: ಹೀಗೆ ನನ್ನನ್ನು ಸ್ವಸ್ಥಮಾಡಿ ಬದುಕಿಸುವಿ.

ಡಿರಿ; ಅದಕ್ಕೆ ಗಡು ತೀರಿತು, ವಿಧಿಸಿದ ದೋಷಫಲ
ವೆಲ್ಲಾ ನೆರವೇರಿತು, ಅದರ ಎಲ್ಲಾ ಪಾಪಗಳಿಗೂ
ಯೆಹೋವನ ಕೈಯಿಂದ ಎರಡರಷ್ಟು ಶಿಕ್ಷೆಯಾಯಿತು
ಎಂದು ಆ ನಗರಿಗೆ ಕೂಗಿ ಹೇಳಿರಿ; ಇದೇ ನಿಮ್ಮ
ದೇವರ ಆಜ್ಞೆ.

3 ಇಗೋ ಒಂದು ವಾಣಿ!—
ಅರಣ್ಯದಲ್ಲಿ ಯೆಹೋವನ ದಾರಿಯನ್ನು ಸರಿ
ಪಡಿಸಿರಿ,
ಅಡವಿಯಲ್ಲಿ ನಮ್ಮ ದೇವರಿಗೆ ರಾಜಮಾರ್ಗವನ್ನು
ನೆಟ್ಟಗೆ ಮಾಡಿರಿ;
4 ಎಲ್ಲಾ ಹಳ್ಳಕೊಳ್ಳಗಳು ಮುಚ್ಚಲ್ಪಡುವವು,
ಎಲ್ಲಾ ಬೆಟ್ಟಗುಡ್ಡಗಳು ತಗ್ಗಿಸಲ್ಪಡುವವು,
ಮಲೆನಾಡು ಬೈಲುಸೀಮೆಯಾಗುವದು,
ಕೊರಕಲ ನೆಲವು ಸಮವಾಗುವದು.
5 ಯೆಹೋವನ ಮಹಿಮೆಯು ಗೋಚರವಾಗುವದು,
ಎಲ್ಲಾ ಮನುಷ್ಯರೂ ಒಟ್ಟಿಗೆ ಅದನ್ನು ಕಾಣು
ವರು,
ಯೆಹೋವನ ಬಾಯೇ ಇದನ್ನು ನುಡಿದಿದೆ
ಎಂದು ಒಬ್ಬನು ಕೂಗುತ್ತಾನೆ.
6 ಆಹಾ, ವಾಣಿಯು ಮತ್ತೆ ಕೇಳಿಸಿ—ಕೂಗು
ಎನ್ನುತ್ತದೆ. ಅದಕ್ಕೆ 1)ನಾನು—
ಏನು ಕೂಗಲಿ ಎಂದು ಕೇಳಲು
ನರಜಾತಿಯೆಲ್ಲಾ ಹುಲ್ಲಿನ ಹಾಗಿದೆ,
ಅದರ ಲಾವಣ್ಯವೆಲ್ಲಾ ಅಡವಿಯ ಹೂವಿನಂತಿದೆ.
7 ಯೆಹೋವನ ಶ್ವಾಸವು ಅದರ ಮೇಲೆ ಬೀಸು
ವದರಿಂದ
ಹುಲ್ಲು ಒಣಗಿಹೋಗುವದು, ಹೂವು ಬಾಡಿ
ಹೋಗುವದು.
ಜನವು ಹುಲ್ಲೇ ಹುಲ್ಲು!
8 ಹುಲ್ಲು ಒಣಗಿಹೋಗುವದು, ಹೂವು ಬಾಡಿ
ಹೋಗುವದು,
ನಮ್ಮ ದೇವರ ಮಾತೋ ಸದಾಕಾಲವೂ ಇರು
ವದು
ಎಂದು ಉತ್ತರವಾಯಿತು.
9 2)ಶುಭಸಮಾಚಾರವನ್ನು ತಿಳಿಸಬಲ್ಲ ಚೀಯೋನೇ,
ಉನ್ನತಪರ್ವತವನ್ನು ಹತ್ತಿಕೋ; ಸುವರ್ತಮಾನ
ವನ್ನು ಪ್ರಕಟಿಸಬಲ್ಲ ಯೆರೂಸಲೇಮೇ, ನಿನ್ನ ಧ್ವನಿ
ಯನ್ನು ಗಟ್ಟಿಯಾಗಿ ಎತ್ತು, ನಿರ್ಭಯವಾಗಿ ಎತ್ತು,
ಯೆಹೂದದ ಪಟ್ಟಣಗಳಿಗೆ—3)ಇಗೋ, ನಿಮ್ಮ
10 ದೇವರು! ಆಹಾ, ಕರ್ತನಾದ ಯೆಹೋವನು ಶೂರ
ನಾಗಿ ಬರುವನು, ತನ್ನ ಭುಜಬಲದಿಂದಲೇ ಆಳು
ವನು; ಇಗೋ, 4)ಆತನ ಕ್ರಿಯಾಲಾಭವು ಆತ
ನೊಂದಿಗಿದೆ, ಆತನ ಶ್ರಮದ ಫಲವು ಆತನ ಮುಂದಿದೆ.
11 ಆತನು ಕುರುಬನಂತೆ ತನ್ನ ಮಂದೆಯನ್ನು ಮೇಯಿ
ಸುವನು, ಮರಿಗಳನ್ನು ಕೈಯಿಂದ ಕೂಡಿಸಿ ಎದೆಗೆತ್ತಿ
ಕೊಳ್ಳುವನು. ಹಾಲು ಕುಡಿಸುವ ಕುರಿಗಳನ್ನು
ಮೆಲ್ಲಗೆ ನಡಿಸುವನು ಎಂದು ಸಾರು.

### ಯೆಹೋವನ ಅಸಮಾನವಾದ ಮಹಿಮೆ.

ಯಾವನು ಸಾಗರಸಮುದ್ರಗಳನ್ನು ಸೇರೆಯಿಂದ 1
ಅಳತೆಮಾಡಿದನು? ಯಾವನು ಆಕಾಶಮಂಡಲದ
ಪರಿಮಾಣವನ್ನು ಗೇಣಿನಿಂದ ನಿರ್ಣಯಿಸಿದನು?
ಭೂಲೋಕದ ಮಣ್ಣನ್ನೆಲ್ಲಾ ಕೊಳಗಕ್ಕೆ ತುಂಬಿದ
ವನು ಯಾರು? ಬೆಟ್ಟಗಳನ್ನು ತ್ರಾಸಿನಿಂದಲೂ ಗುಡ್ಡ
ಗಳನ್ನು ತಕ್ಕಡಿಯಿಂದಲೂ ತೂಗಿದವನು ಯಾರು?
ಯೆಹೋವನ ಆತ್ಮಕ್ಕೆ ಯಾವನು ವಿಧಿಯನ್ನು ನೇಮಿ 1
ಸಿದನು? ಯಾವನು ಆಲೋಚನಾಕರ್ತನಾಗಿ ಆತ
ನಿಗೆ ಉಪದೇಶಿಸಿದನು? ಆತನು ಯಾವನ ಆಲೋಚನೆ 1
ಯನ್ನು ಕೇಳಿದನು? ಯಾವನು ಆತನಿಗೆ ಬುದ್ಧಿಕಲಿಸಿ
ಆತನನ್ನು ನ್ಯಾಯಮಾರ್ಗದಲ್ಲಿ ನಡೆಯಿಸಿದನು?
ಯಾವನು ಆತನಿಗೆ ಜ್ಞಾನವನ್ನು ಬೋಧಿಸಿ ವಿವೇಕ
ಮಾರ್ಗವನ್ನು ತೋರಿಸಿದನು? ಆಹಾ, ಆತನ ಗಣನೆ 1
ಯಲ್ಲಿ ಜನಾಂಗಗಳು ಕಪಿಲೆಯಿಂದುದುರುವ ತುಂತು
ರಿನಂತೆಯೂ ತ್ರಾಸಿನ ತಟ್ಟೆಯ ದೂಳಿನ ಹಾಗೂ
ಇರುತ್ತವೆ; ಇಗೋ, ದ್ವೀಪಗಳನ್ನು ಅಣುರೇಣುವಿ
ನಂತೆ ಎತ್ತುತ್ತಾನೆ. [ಆತನಿಗರ್ಪಿಸತಕ್ಕ] ಹೋಮಕ್ಕೆ 1
ಲೆಬನೋನಿನ ಪಶುಗಳು ಸಾಲವು, ಅಲ್ಲಿನ ವನವು
ಸಮಿತ್ತಿಗೆ ಸಾಲದು. ಸಕಲ ಜನಾಂಗಗಳು ಆತನ 1
ದೃಷ್ಟಿಯಲ್ಲಿ ಏನೂ ಇಲ್ಲದಂತಿವೆ, ಅವು ಆತನ ಎಣಿಕೆ
ಯಲ್ಲಿ ಶುದ್ಧಶೂನ್ಯವೇ.
ಹೀಗಿರಲು ದೇವರನ್ನು ಯಾರಿಗೆ ಹೋಲಿಸೀರಿ? 1
ಯಾವ ರೂಪವನ್ನು ಆತನಿಗೆ ಸಮಮಾಡೀರಿ? ವಿಗ್ರ 1
ಹವಾದರೋ ಶಿಲ್ಪಿಯು ಅದನ್ನು ಎರಕಹೊಯ್ಯು
ವನು, ಅಕ್ಕಸಾಲಿಗನು ಅದಕ್ಕೆ ಚಿನ್ನದ ಕವಚವನ್ನು
ಬಡಿದು ಬೆಳ್ಳಿಯ ಸರಪಣಿಗಳನ್ನು ಮಾಡುವನು.
[ಇಂಥದನ್ನು ದೇವರಿಗೆ] ಕಾಣಿಕೆಯನ್ನಾಗಿ ಪ್ರತಿಷ್ಠಿಸಿ 2
ಕೊಳ್ಳಲಾರದ ಬಡವನು ಹುಳಿತುಹೋಗದ ಮರವನ್ನು
ಹುಡುಕಿ ಅಲುಗದ ವಿಗ್ರಹವನ್ನು ಮಾಡಿಸಲು
ಕುಶಲನನ್ನು ವಿಚಾರಿಸಿಕೊಳ್ಳುವನು.
ನಿಮಗೆ ತಿಳಿದಿಲ್ಲವೋ? ನೀವು ಕೇಳಲಿಲ್ಲವೋ? 2
ಆದಿಯಿಂದ ನಿಮಗೆ ಉಪದೇಶವಾಗಿ ಬಂದಿಲ್ಲವೋ?
5)ಭೂಮಿಯು ಸ್ಥಾಪಿತವಾದಂದಿನಿಂದ ನೀವು ಗ್ರಹಿಸು
ತ್ತಿಲ್ಲವೋ? ಭೂಮಂಡಲನಿವಾಸಿಗಳು ಮಿಡತೆಗಳಂತೆ 2
ಸಣ್ಣಗೆ ಕಾಣಿಸುವಷ್ಟು ಉನ್ನತವಾದ ಆಕಾಶದಲ್ಲಿ
ಆತನು ಆಸೀನನಾಗಿದ್ದಾನೆ; ಆಕಾಶಮಂಡಲವನ್ನು
ನವರುಬಟ್ಟೆಯಂತೆ ಹರಡಿ ನಿವಾಸದ ಗುಡಾರ
ದಂತೆ ಎತ್ತಿ ಕಟ್ಟಿದ್ದಾನೆ. ಪ್ರಭುಗಳನ್ನು ನಿರ್ನಾಮ 2

---

1) ಪಾಠಾಂತರ: ಒಬ್ಬನು. 2) ಅಥವಾ: ಶುಭಸಮಾಚಾರವನ್ನು ಚೀಯೋನಿಗೆ ತಿಳಿಸಬಲ್ಲವರೇ .... ಹತ್ತಿಕೊಳ್ಳಿರಿ; ಸುವ
ರ್ತಮಾನವನ್ನು ಯೆರೂಸಲೇಮಿಗೆ ಪ್ರಕಟಿಸಬಲ್ಲವರೇ, ನಿಮ್ಮ .... ಎತ್ತಿರಿ, ... ಎತ್ತಿರಿ ... ನಿಮ್ಮ ದೇವರು ಎಂದು ಸಾರಿ
3) ಅಥವಾ: ಇಗೋ, ನಿಮ್ಮ ದೇವರು [ಬರುತ್ತಾನೆ] ಎಂದು ಸಾರು! ವ. 10 ಆಹಾ, ಕರ್ತನಾದ ಯೆಹೋವನು ... ನಡಿಸುವ
4) ಅಥವಾ: ಆತನು ದಯಪಾಲಿಸುವ ಬಹುಮಾನವು ..... ಆತನು ಅನುಗ್ರಹಿಸುವ ಪ್ರತಿಫಲವು. 5) ಅಥವಾ: ಭೂಮಿಯ
ಹೇಗೆ ಸ್ಥಾಪಿತವಾಯಿತೆಂದು ನೀವು ಗ್ರಹಿಸಲಿಲ್ಲವೋ?

ಮಾಡುತ್ತಾನೆ, ಭೂಪತಿಗಳನ್ನು ಶೂನ್ಯಗೊಳಿಸುತ್ತಾನೆ.
ಇವರು ನೆಡಲ್ಪಟ್ಟ ಕೂಡಲೆ, ಬಿತ್ತಲ್ಪಟ್ಟ ಕ್ಷಣವೇ,
ಇವರ ಸಂತಾನವು ಭೂಮಿಯಲ್ಲಿ ಬೇರೂರಿದಾಗಲೇ,
ಆತನ ಶ್ವಾಸದಿಂದ ಬಾಡುವರು, ಬಿರುಗಾಳಿಯು
ಇವರನ್ನು ಒಣಹುಲ್ಲಿನಂತೆ ಬಡಿದುಕೊಂಡು ಹೋಗು
ವದು.
ಹೀಗಿರಲು ನನ್ನನ್ನು ಯಾರಿಗೆ ಹೋಲಿಸಿ ಸರಿಸ
ಮಾನಮಾಡುತ್ತೀರಿ ಎಂದು ಸದಮಲಸ್ವಾಮಿಯು
ಕೇಳುತ್ತಾನೆ. ನಿಮ್ಮ ಕಣ್ಣುಗಳನ್ನು ಮೇಲಕ್ಕೆತ್ತಿ
ಕೊಂಡು ನೋಡಿರಿ! ಈ ನಕ್ಷತ್ರಗಳನ್ನು ಸೃಷ್ಟಿಸಿ
ದಾತನು ಯಾರು? ಈ ಸೈನ್ಯವನ್ನು ಲೆಕ್ಕಕ್ಕೆ ಸರಿ
ಯಾಗಿ ಮುಂದರಿಸುತ್ತಾನಲ್ಲಾ; ಎಲ್ಲವನ್ನೂ ಹೆಸರೆತ್ತಿ
ಕರೆಯುತ್ತಾನೆ; ಆತನು ಅತಿ ಬಲಾಢ್ಯನೂ ಮಹಾಶಕ್ತ
ನೂ ಆಗಿರುವದರಿಂದ ಅವುಗಳೊಳಗೆ ಒಂದೂ ಕಡಿಮೆ
ಯಾಗದು.

ಯೆಹೋವನು ಬಳಲಿದವರನ್ನು ಬಲಪಡಿಸುವದು.

ಯಾಕೋಬೇ, ಇಸ್ರಾಯೇಲೇ, ನನ್ನ ಮಾರ್ಗವು
ಯೆಹೋವನಿಗೆ ಮರೆಯಾಗಿದೆ, ನನಗೆ ಸಿಕ್ಕಬೇಕಾದ
ನ್ಯಾಯವು ನನ್ನ ದೇವರ ಲಕ್ಷ್ಯಕ್ಕೆ ಬಿದ್ದಿಲ್ಲವಲ್ಲಾ
ಎಂದು ಏಕೆ ಅಂದುಕೊಳ್ಳುತ್ತೀ? ನೀನು ಗ್ರಹಿಸಲಿಲ್ಲ
ವೋ? ಕೇಳಲಿಲ್ಲವೋ? ಯೆಹೋವನು ನಿರಂತರದೇವ
ರೂ ಭೂಮಿಯ ಕಟ್ಟಕಡೆಗಳನ್ನು ನಿರ್ಮಿಸಿದವನೂ
ಆಗಿದ್ದಾನೆ; ಆತನು ದಣಿದು ಬಳಲುವದಿಲ್ಲ; ಆತನ
ವಿವೇಕವು ಪರಿಶೋಧನೆಗೆ ಅಗಮ್ಯ. ಸೋತವನಿಗೆ
ತ್ರಾಣವನ್ನು ಅನುಗ್ರಹಿಸಿ ನಿರ್ಬಲನಿಗೆ ಬಹು ಬಲ
ವನ್ನು ದಯಪಾಲಿಸುತ್ತಾನೆ. ಯುವಕರೂ ದಣಿದು
ಬಳಲುವರು, ತರುಣರೂ ಸೋರಗಿ ಮುಗ್ಗರಿಸುವರು.
ಯೆಹೋವನನ್ನು ನಿರೀಕ್ಷಿಸುವವರೋ ಹೊಸ ಬಲ
ವನ್ನು ಹೊಂದುವರು; ಹದ್ದುಗಳಂತೆ 1)ರೆಕ್ಕೆಗಳನ್ನು
ಚಾಚಿಕೊಂಡು [ಏರುವರು]; ಓಡಿ ದಣಿಯರು, ನಡೆದು
ಬಳಲರು.

ಯೆಹೋವನು ಜನಾಂಗಗಳನ್ನೂ ಅವುಗಳ
ದೇವರುಗಳನ್ನೂ ನ್ಯಾಯವಿಚಾರಣೆಗೆ
ಕರೆಯುವದು.

ಕೋರೆಷನ ದಿಗ್ವಿಜಯಕ್ಕೆ ಯೆಹೋವನೇ ಕಾರಣ.

41 ದ್ವೀಪನಿವಾಸಿಗಳೇ, ನನ್ನ ಕಡೆಗೆ ತಿರುಗಿ ಮೌನ
ದಿಂದಿರಿ; ಜನಾಂಗಗಳು [ಎಷ್ಟಾದರೂ] ತಮ್ಮನ್ನು
ಬಲಪಡಿಸಿಕೊಳ್ಳಲಿ; ಸಮೀಪಕ್ಕೆ ಬಂದು ಮಾತಾಡಲಿ;
ನ್ಯಾಯಸ್ಥಾನಕ್ಕೆ ಒಟ್ಟಿಗೆ ಹೋಗುವ. 2)ಮೂಡಲಲ್ಲಿ
ಒಬ್ಬನನ್ನು ಎಬ್ಬಿಸಿ ನ್ಯಾಯದ ಸಂಕಲ್ಪಾನುಸಾರ
ವಾಗಿ ತನ್ನ ಪಾದಸನ್ನಿಧಿಗೆ ಕರೆದು ಜನಾಂಗಗಳನ್ನು
ಅವನ ವಶಕ್ಕೆ ಕೊಟ್ಟು ಅವನನ್ನು ರಾಜರ ಮೇಲೆ
ಆಳಗೊಡಿಸಿ 3)ಅವರ ಕತ್ತಿಯನ್ನು ಧೂಳನ್ನಾಗಿಯೂ
ಬಿಲ್ಲನ್ನು ಗಾಳಿ ಬಡಿದುಕೊಂಡು ಹೋಗುವ ಒಣ
ಹುಲ್ಲನ್ನಾಗಿಯೂ ಮಾಡಿ ಅವನು ಅವರನ್ನು ಹಿಂದ 3
ಟ್ಟುತ್ತಾ ತಾನು ಎಂದೂ ಹೆಜ್ಜೆಯಿಡದ ಮಾರ್ಗದಲ್ಲಿ
ಸುರಕ್ಷಿತವಾಗಿ ಮುಂದೆ ಹಾದು ಹೋಗುವಂತೆ ಗೈದ
ವನು ಯಾರು? ಇದನ್ನೆಲ್ಲಾ ನಡೆಯಿಸಿ ನೆರವೇರಿಸಿದ 4
ವನು ಯಾರು? ಆದಿಯಿಂದ ಈಗಿನ ವರೆಗೂ ತಲ
ತಲಾಂತರಗಳನ್ನು ಬರಮಾಡುವವನಾದ ಯೆಹೋವ
ನೆಂಬ ನಾನೇ; ಹೌದು, ಆದಿಪುರುಷನೂ ಅಂತ್ಯಕಾಲ
ದವರ ಸಂಗಡಿಗನೂ ಆಗಿರುವ ನಾನೊಬ್ಬನೇ. ದ್ವೀಪ 5
ನಿವಾಸಿಗಳು ಕಂಡು ಬೆರಗಾದರು, ಭೂಮಿಯ ಕಟ್ಟ
ಕಡೆಯವರು ನಡುಗಿದರು, ಎಲ್ಲರೂ ನೆರೆದುಬಂದರು.
ಒಬ್ಬರಿಗೊಬ್ಬರು ಸಹಾಯಮಾಡಿದರು, ಒಬ್ಬನಿಗೊ 6
ಬ್ಬನು ಧೈರ್ಯವಾಗಿರು ಎಂದು ಹೇಳಿದನು. ಬೆಸಿಗೆ 7
ಚೆನ್ನಾಗಿದೆ ಎಂದು ಹೇಳಿ ಶಿಲ್ಪಿಯು ಎರಕದವನನ್ನೂ
ಸುತ್ತಿಗೆಯಿಂದ ಸಮತಟ್ಟುವವನು ಅಡಿಗಲ್ಲಿನ ಮೇಲೆ
ಕುಟ್ಟುವವನನ್ನೂ ಪ್ರೋತ್ಸಾಹಗೊಳಿಸಿದರು; ವಿಗ್ರಹ
ವನ್ನು ಅಲುಗದಂತೆ ಮೊಳೆಗಳಿಂದ ಬಿಗಿದರು.

ಇಸ್ರಾಯೇಲನ್ನು ಧೈರ್ಯಗೊಳಿಸುವ ವಾಗ್ದಾನಗಳು.

ನನ್ನ ಸೇವಕನಾದ ಇಸ್ರಾಯೇಲೇ, ನಾನು ಆದು 8
ಕೊಂಡ ಯಾಕೋಬೇ, ನನ್ನ ಸ್ನೇಹಿತನಾದ ಅಬ್ರ
ಹಾಮನ ಸಂತತಿಯೇ, ನಾನು ಭೂಮಿಯ ಕಟ್ಟಕಡೆ 9
ಯಲ್ಲಿ ಹಿಡಿದು ದಿಗಂತಗಳಿಂದ ಕರೆದ ಜನವೇ, ನೀನು
ನನ್ನ ಸೇವಕನು, ನಾನು ನಿನ್ನನ್ನು ಆರಿಸಿಕೊಂಡೆನು,
ತಳ್ಳಲಿಲ್ಲ ಎಂದು ನಾನು ಹೇಳಿ ಸಂಬೋಧಿಸಿದ ಪ್ರಜೆ
ಯೇ, ನೀನಂತು ಹೆದರಬೇಡ, ನಾನೇ ನಿನ್ನೊಂದಿ 10
ಗಿದ್ದೇನೆ; ದಿಗ್ಭ್ರಮೆಗೊಳ್ಳದಿರು, ನಾನೇ ನಿನ್ನ ದೇವರು;
ನಾನು ನಿನ್ನನ್ನು ಬಲಪಡಿಸುತ್ತೇನೆ; ಹೌದು, ನಿನಗೆ
ಸಹಾಯಕೊಡುತ್ತೇನೆ; ನನ್ನ ಧರ್ಮದ ಬಲಗೈ
ಯನ್ನು ನಿನಗೆ ಆಧಾರಮಾಡುತ್ತೇನೆ. ಆಹಾ, ನಿನ್ನ 11
ಮೇಲೆ ಕಿಡಿಕಿಡಿಯಾದವರು ಆಶಾಭಂಗಪಟ್ಟು ಅವ
ಮಾನಹೊಂದುವರು; ನಿನ್ನ ಸಂಗಡ ವ್ಯಾಜ್ಯವಾಡಿ
ದವರು ನಾಶವಾಗಿ ಇಲ್ಲದೆ ಹೋಗುವರು; ನಿನ್ನೊ 12
ಡನೆ ಹೋರಾಡಿದವರನ್ನು ಹುಡುಕಿದರೂ ಅವರು
ನಿನಗೆ ಕಾಣಿಸರು; ನಿನಗೆ ವಿರುದ್ಧವಾಗಿ ಯುದ್ಧ
ಮಾಡಿದವರು ಇಲ್ಲದೆ ಹೋಗಿ ನಿರ್ನಾಮವಾಗುವರು.
ಭಯಪಡಬೇಡ, ನಿನಗೆ ಸಹಾಯಮಾಡುತ್ತೇನೆ 13
ಎಂದು ನಿನಗೆ ಹೇಳುವ ನಿನ್ನ ದೇವರಾದ ಯೆಹೋವ
ನೆಂಬ ನಾನೇ ನಿನ್ನ ಕೈಹಿಡಿಯುತ್ತೇನಲ್ಲಾ. ಕ್ರಿಮಿ 14
ಪ್ರಾಯವಾದ ಯಾಕೋಬೇ, ಇಸ್ರಾಯೇಲ್ ಜನವೇ,
ಭಯಪಡಬೇಡ; ನಾನೇ ನಿನಗೆ ಸಹಾಯಕನು, ಇಸ್ರಾ
ಯೇಲಿನ ಸದಮಲಸ್ವಾಮಿಯು ನಿನಗೆ ವಿಮೋಚ
ಕನು ಎಂದು ಯೆಹೋವನು ಅನ್ನುತ್ತಾನೆ. ಇಗೋ, 15
ನಾನು ನಿನ್ನನ್ನು ಮಸೆದ ಮೊನೆಹಲ್ಲಿನ ಹೊಸ ಹಂತಿ

1) ಅಥವಾ: ಅವರಿಗೆ ರೆಕ್ಕೆಗಳು ಮೊಳೆಯುವವು. 2) ಅಥವಾ: ನ್ಯಾಯಸ್ವರೂಪನನ್ನು ತನ್ನ ಪಾದಸೇವಕನನ್ನಾಗಿ ಮೂಡಲಿಂದ [illegible]ಸಿ ತಂದು. ಅಥವಾ: ನ್ಯಾಯದ ಪಾದಸೇವಕನನ್ನು ಮೂಡಲಿಂದ ಎಬ್ಬಿಸಿ ತಂದು. 3) ಪಾಠಾಂತರ: ಅವರನ್ನು ಅವನ ಕತ್ತಿಗೆ [illegible]ನಂತೆಯೂ ಅವನ ಬಿಲ್ಲಿಗೆ ಗಾಳಿ ಬಡಿದುಕೊಂಡು ಹೋಗುವ ಒಣಹುಲ್ಲಿನಂತೆಯೂ ಗುರಿಮಾಡಿ.

ಕುಂಟೆಯನ್ನಾಗಿ ಮಾಡಿದ್ದೇನೆ, ನೀನು ಬೆಟ್ಟಗಳನ್ನು
ಒಕ್ಕುತ್ತಾ ಪುಡಿಪುಡಿಗೈದು ಗುಡ್ಡಗಳನ್ನು ಹೊಟ್ಟು
16 ಮಾಡುವಿ. ನೀನು ತೂರಲು ಅವುಗಳನ್ನು ಗಾಳಿಯು
ಬಡಿದುಕೊಂಡು ಹೋಗುವದು; ಬಿರುಗಾಳಿಯು
ಚೆಲ್ಲಾಪಿಲ್ಲಿಮಾಡುವದು; ನೀನಂತು ಯೆಹೋವ
ನಲ್ಲಿ ಆನಂದಿಸುವಿ, ಇಸ್ರಾಯೇಲಿನ ಸದಮಲಸ್ವಾಮಿ
17 ಯಲ್ಲಿ ಹೆಚ್ಚಳಪಡುವಿ. ಬಾಯಾರಿ ನಾಲಿಗೆ ಒಣಗಿ
ನೀರನ್ನು ಹುಡುಕಿ ಹೋದದ ದೀನದರಿದ್ರರಿಗೆ ಯೆ
ಹೋವನೆಂಬ ನಾನು ಪ್ರಸನ್ನನಾಗುವೆನು, ಇಸ್ರಾ
ಯೇಲಿನ ದೇವರಾದ ನಾನು ಅವರನ್ನು ಕೈಬಿಡೆನು.
18 ಬೋಳುಗುಡ್ಡಗಳಲ್ಲಿ ನದಿಗಳನ್ನು, ತಗ್ಗುಗಳಲ್ಲಿ
ಒರತೆಗಳನ್ನು ಹೊರಡಿಸಿ ಅರಣ್ಯವನ್ನು ಕೆರೆಯಾ
ಗಿಯೂ ಮರುಭೂಮಿಯನ್ನು ಬುಗ್ಗೆಗಳಾಗಿಯೂ
19 ಮಾಡುವೆನು. ದೇವದಾರು ಕಸ್ತೂರಿಜಾಲಿ ಸು
ಗಂಧ ಒಲೀವ ಮರಗಳನ್ನು ಅಡವಿಯಲ್ಲಿ ನೆಡುವೆನು,
ತುರಾಯಿ ತವಸಿ ತಿಲಕ ವೃಕ್ಷಗಳನ್ನು ಅರಣ್ಯ
20 ದಲ್ಲಿ ತೋಪಾಗಿ ಬೆಳೆಯಿಸುವೆನು; ಆಗ ಯೆಹೋವ
ನ ಹಸ್ತವು ಇದನ್ನು ಮಾಡಿದೆ, ಹೌದು, ಇಸ್ರಾಯೇಲಿನ
ಸದಮಲಸ್ವಾಮಿಯೇ ಸೃಷ್ಟಿಸಿದ್ದಾನೆ ಎಂದು ಎಲ್ಲರೂ
ಕಂಡು ತಿಳಿದು ಮನಮುಟ್ಟಿ ಗ್ರಹಿಸಿಕೊಳ್ಳುವರು.

ದೇವತೆಗಳಿಗೆ ಕಾಲಜ್ಞಾನವಿಲ್ಲದಿರುವದು.

21 ಯಾಕೋಬ್ಯರ ಅರಸನಾದ ಯೆಹೋವನು ಹೀಗ
ನ್ನುತ್ತಾನೆ—ನಿಮ್ಮ ವ್ಯಾಜ್ಯವು ಈಚೆಗೆ ಬರಲಿ, ನಿಮ್ಮ
22 ಬಲವಾದ ನ್ಯಾಯಗಳನ್ನು ತೋರ್ಪಡಿಸಿರಿ. ತಮ್ಮ
ನ್ಯಾಯಗಳನ್ನು ಮುಂದಕ್ಕೆ ತರಲಿ, ಭವಿಷ್ಯತ್ತನ್ನು
ನಮಗೆ ತಿಳಿಸಲಿ; 1)ನಡೆದ ಸಂಗತಿಗಳ ವಿಶೇಷವನ್ನು
ಸೂಚಿಸಿರಿ, ನಾವು ಅವುಗಳನ್ನು ಮನಸ್ಸಿಗೆ ತಂದು
ಅವುಗಳ ಪರಿಣಾಮವನ್ನು ಗ್ರಹಿಸುವೆವು; ಅಥವಾ
23 ಭವಿಷ್ಯತ್ತುಗಳನ್ನು ಅರುಹಿರಿ. ನೀವು ದೇವರು
ಗಳೆಂದು ನಮಗೆ ಅರಿವು ಹುಟ್ಟುವಂತೆ ಮುಂದಾಗ
ತಕ್ಕವುಗಳನ್ನು ತಿಳಿಸಿರಿ; ನಾವು ಒಟ್ಟಿಗೆ ಕಕ್ಕಾಬಿಕ್ಕಿ
ಯಾಗಿ ನೋಡುವಂತೆ ಮೇಲಾಗಲಿ ಕೇಡಾಗಲಿ
24 ಏನಾದರೂ ಮಾಡಿರಿ. ಆಹಾ, ನೀವು ಶೂನ್ಯವೇ!
ನಿಮ್ಮ ಕಾರ್ಯವು ಮಟ್ಟಮಾಯವೇ! ನಿಮ್ಮನ್ನು
25 ಮರೆಹೊಗುವವರು ತುಚ್ಛರೇ ಸರಿ! ನಾನು ಬಡಗ
ಲಿಂದ ಒಬ್ಬನನ್ನು ಎಬ್ಬಿಸಿ ಕರತಂದಿದ್ದೇನೆ, 2)ನನ್ನ
ನಾಮವನ್ನು ಪ್ರಚುರಪಡಿಸತಕ್ಕವನು ಮೂಡಲಿಂದ
ಬಂದಿದ್ದಾನೆ; ಅವನು ಉಪರಾಜರನ್ನು ಮಣ್ಣೋ ಎಂದು
ಭಾವಿಸಿ ಮೇಲೆ ಬಿದ್ದು ಕುಂಬಾರನು ಜೇಡಿಯನ್ನು
26 ತುಳಿಯುವ ಹಾಗೆ ತುಳಿಯುವನು. ಕಾರ್ಯವು
ನಡೆಯುವದಕ್ಕೆ ಮುಂಚೆ [ಇವರಲ್ಲಿ] ಯಾವನು
ಅದನ್ನು ಅರುಹಿದ್ದಾನೆ? ಅರುಹಿದ್ದರೆ [ಅವನು ನಿಜ
ದೇವರೆಂದು] ನಮಗೆ ಗೊತ್ತಾಗುವದು; ಯಾವನು
ಮುಂತಿಳಿಸಿದ್ದಾನೆ? ತಿಳಿಸಿದ್ದರೆ ಅವನನ್ನು ಸತ್ಯವಂತ
ನೆನ್ನುವೆವು. ಯಾರೂ ಏನನ್ನೂ ತಿಳಿಸಬಲ್ಲವರಲ್ಲ,
ಏನನ್ನೂ ಹೇಳತಕ್ಕವರಲ್ಲ. ನಿಮ್ಮ ಮಾತುಗಳು
ಯಾರ ಕಿವಿಗೂ ಬೀಳುವದಿಲ್ಲ. 3)ಇಗೋ ನೋಡು
ಎನ್ನುವ ಮುಂದೂತನನ್ನು ಚೀಯೋನಿಗೆ, ಶುಭ
ಸಮಾಚಾರತರತಕ್ಕವನನ್ನು ಯೆರೂಸಲೇಮಿಗೆ, ಅನು
ಗ್ರಹಿಸುವೆನು. ನಾನು ನೋಡಲು ಇವರಲ್ಲಿ ಸಮ
ರ್ಥರು ಯಾರೂ ಇಲ್ಲ; ನಾನು ಪ್ರಶ್ನೆಮಾಡಿದರೆ
ಒಂದು ಮಾತನ್ನಾದರೂ ಹೇಳಬಲ್ಲ ಆಲೋಚಕನು
ಇಲ್ಲವೇ ಇಲ್ಲ. ಆಹಾ, ಇವರೆಲ್ಲಾ ಮಾಯೆ, ಇವರ
ಕಾರ್ಯಗಳು ಶೂನ್ಯ, ಇವರ ಎರಕದ ಬೊಂಬೆಗಳು
ಗಾಳಿಯೇ, ಹಾಳೇ!

ಇಸ್ರಾಯೇಲು ಯೆಹೋವನ ಸೇವಕನೂ
ಸಾಕ್ಷಿಯೂ.
ವಿವಿಧವಾದ ಎಚ್ಚರಿಕೆಯೂ ಪ್ರೋತ್ಸಾಹವೂ.
42—44. 23.

ಯೆಹೋವನ ಸೇವಕನ ಗುಣಲಕ್ಷಣಗಳೂ ಕರ್ತವ್ಯವೂ.

ಇಗೋ, ನನ್ನ ಸೇವಕನು! ಇವನಿಗೆ ನಾನೇ 4
ಆಧಾರ; ಇವನು ನನಗೆ ಇಷ್ಟನು, ನನ್ನ ಪ್ರಾಣ
ಪ್ರಿಯನು. ಇವನಲ್ಲಿ ನನ್ನ ಆತ್ಮವನ್ನು ಇರಿಸಿ
ದ್ದೇನೆ; ಇವನು ಅನ್ಯಜನಗಳಲ್ಲಿಯೂ ಸದ್ಧರ್ಮವನ್ನು
ಪ್ರಚುರಪಡಿಸುವನು. ಇವನು ಕೂಗಾಡುವದಿಲ್ಲ,
ಆರ್ಭಟಿಸುವದಿಲ್ಲ, ಬೀದಿಗಳಲ್ಲಿ ಇವನ ಧ್ವನಿಯೇ
ಕೇಳಿಸುವದಿಲ್ಲ. ಜಜ್ಜಿದ ದಂಟನ್ನು ಮುರಿದು
ಹಾಕದೆ ಕಳೆಗುಂದಿದ ದೀಪವನ್ನು ನಂದಿಸದೆ ಸದ್ಧ
ರ್ಮವನ್ನು ಪ್ರಚುರಪಡಿಸಿ ಸಿದ್ಧಿಗೆತರುವನು. ಲೋಕ
ದಲ್ಲಿ ಸದ್ಧರ್ಮವನ್ನು ಸ್ಥಾಪಿಸುವ ತನಕ ಇವನು
ಕಳೆಗುಂದದೆಯೂ ಜಜ್ಜಿಹೋಗದೆಯೂ [ತನ್ನ ಕಾ
ರ್ಯದಲ್ಲಿ ನಿರತನಾಗಿರುವನು]; ದ್ವೀಪದ್ವೀಪಾಂತ
ರಗಳು ಇವನ ಧರ್ಮಪ್ರಮಾಣಕ್ಕೆ ಕಾದಿರುವವು.
ಆಕಾಶಮಂಡಲವನ್ನು ಉಂಟುಮಾಡಿ ಹರವಿ ಭೂಮಂಡ
ಲವನ್ನೂ ಅದರಲ್ಲಿನ ಉತ್ಪತ್ತಿಯನ್ನೂ ವಿಸ್ತರಿಸಿ
ಲೋಕದ ಜನರಿಗೆ ಪ್ರಾಣವನ್ನು, ಹೌದು, ಭೂಚರ
ರಿಗೆ ಜೀವಾತ್ಮವನ್ನೂ ದಯಪಾಲಿಸುವ ಯೆಹೋವ
ನೆಂಬ ದೇವರು ಹೀಗನ್ನುತ್ತಾನೆ—ನೀನು ಕುರುಡ
ರಿಗೆ ಕಣ್ಣುಕೊಟ್ಟು ಬಂದಿಗಳನ್ನು ಸೆರೆಯಿಂದಲೂ
ಕತ್ತಲಲ್ಲಿ ಬಿದ್ದವರನ್ನು ಕಾರಾಗೃಹದಿಂದಲೂ ಹೊ
ರಗೆ ಕರತರಬೇಕು ಎಂದು ಯೆಹೋವನೆಂಬ ನಾನು
ನನ್ನ ಧರ್ಮದ ಸಂಕಲ್ಪಾನುಸಾರವಾಗಿ ನಿನ್ನನ್ನು
ಕರೆದು ಕೈಹಿಡಿದು ಕಾಪಾಡಿ ನನ್ನ ಜನರಿಗೆ ಒಡಂಬ
ಡಿಕೆಯ ಆಧಾರವನ್ನಾಗಿಯೂ ಅನ್ಯಜನಗಳಿಗೆ
ಬೆಳಕನ್ನಾಗಿಯೂ ನೇಮಿಸಿದ್ದೇನೆ. ನಾನೇ ಯೆಹೋ
ವನು; ಇದೇ ನನ್ನ ನಾಮವು; ನನ್ನ ಮಹಿಮೆಯನ್ನು

1) ಅಥವಾ: ಮುಂದಿನವುಗಳನ್ನು ಇಂಥವುಗಳೆಂದು ಸೂಚಿಸಿರಿ; ಅವುಗಳನ್ನು ಮನಸ್ಸಿಗೆ ತಂದು ಅವುಗಳ ಪರಿಣಾಮವನ್ನು ಗ್ರ
ವೆವು. ಇಲ್ಲವೆ ನೀವೇ ಆ ಕಾರ್ಯಗಳ ಫಲವನ್ನು ಅರುಹಿರಿ. 2) ಅಥವಾ: ನನ್ನ ಹೆಸರನ್ನೆತ್ತಿ ಪ್ರಾರ್ಥಿಸುವವನು. 3) ಅಥ
ನಾನು ಮೊದಲನೆಯವನಾಗಿ ಚೀಯೋನಿಗೆ ಇಗೋ, ನೋಡು ಎಂದು ಹೇಳಿ ಶುಭಸಮಾಚಾರತರತಕ್ಕವನನ್ನು ಯೆರೂಸಲೇಮಿಗೆ ಅನುಗ್ರ
ವೆನು.

ಮತ್ತೊಬ್ಬನಿಗೆ ಸಲ್ಲಗೊಡಿಸೆನು, ನನ್ನ ಸ್ತೋತ್ರ
9 ವನ್ನು ವಿಗ್ರಹಗಳ ಪಾಲು ಮಾಡೆನು. ಇಗೋ,
ಮೊದಲನೆಯ ಸಂಗತಿಗಳು ನೆರವೇರಿವೆ, ಹೊಸ
ಸಂಗತಿಗಳನ್ನು ಪ್ರಕಟಿಸುತ್ತೇನೆ; ಅವು ತಲೆದೋರು
ವದಕ್ಕೆ ಮುಂಚೆ ಅವುಗಳನ್ನು ನಿಮಗೆ ತಿಳಿಸುತ್ತೇನೆ.

ಯೆಹೋವನ ರಕ್ಷಣಾಸಂಕಲ್ಪ.

10 ಸಮುದ್ರಪ್ರಯಾಣಿಕರೇ, ಸಕಲಜಲಚರಗಳೇ, ದ್ವೀ
ಪಾಂತರಗಳೇ, ದ್ವೀಪಾಂತರವಾಸಿಗಳೇ, ಯೆಹೋವನ
ಘನತೆಗಾಗಿ ನೂತನಗೀತವನ್ನು ಹಾಡಿ ದಿಗಂತಗಳ
11 ಲ್ಲಿಯೂ ಆತನನ್ನು ಕೀರ್ತಿಸಿರಿ. ಅರಣ್ಯವೂ ಅಲ್ಲಿನ
ಊರುಗಳೂ ಕೇದಾರಿನವರ ಗ್ರಾಮಗಳೂ ಆರ್ಭಟಿ
ಸಲಿ, ಸೆಲಪಟ್ಟಣದವರು ಹರ್ಷಧ್ವನಿಗೈದು ಪರ್ವ
12 ತಾಗ್ರಗಳಲ್ಲಿ ಕೇಕೆಹಾಕಲಿ. ಯೆಹೋವನನ್ನು ಘನ
ಪಡಿಸಿ ದ್ವೀಪಾಂತರಗಳಲ್ಲಿ ಆತನ ಸ್ತೋತ್ರವನ್ನು
13 ಹಬ್ಬಿಸಲಿ. ಯೆಹೋವನು ಶೂರನಂತೆ ಹೊರಟು
ಯುದ್ಧವೀರನ ಹಾಗೆ ತನ್ನ ರೌದ್ರವನ್ನು ಎಬ್ಬಿಸುವನು;
ಆರ್ಭಟಿಸಿ ಗರ್ಜಿಸಿ ಶತ್ರುಗಳ ಮೇಲೆ ಬಿದ್ದು ತನ್ನ
ಪರಾಕ್ರಮವನ್ನು ತೋರ್ಪಡಿಸುವನು.
14 ನಾನು ಬಹುಕಾಲದಿಂದ ಸುಮ್ಮನೆ ಮೌನವಾಗಿ
ನನ್ನನ್ನು ಬಿಗಿಹಿಡಿದಿದ್ದೆನು. [ಈಗ] ಹೆರುವವಳಂತೆ
ಮೂಲುಗುತ್ತಾ ಅಸುರುಸಿರಿನೊಡನೆ ಏದುವೆನು.
15 ಬೆಟ್ಟಗುಡ್ಡಗಳನ್ನು ನಾಶಪಡಿಸಿ ಅಲ್ಲಿಯ ಮೇವ
ನ್ನೆಲ್ಲಾ ತಾರಿಸಿ ನದಿಗಳನ್ನು 1)ಒಣದಿಣ್ಣೆಮಾಡಿ ಕೆರೆ
16 ಗಳನ್ನು ಬತ್ತಿಸುವೆನು. ಮತ್ತು ಕುರುಡರನ್ನು ನೆಪ್ಪಿ
ಲ್ಲದ ಮಾರ್ಗದಲ್ಲಿ ಬರಮಾಡುವೆನು, ಅವರಿಗೆ
ಗೊತ್ತಿಲ್ಲದ ದಾರಿಗಳಲ್ಲಿ ಅವರನ್ನು ನಡೆಯಿಸುವೆನು;
ಅವರೆದುರಿನ ಕತ್ತಲನ್ನು ಬೆಳಕುಮಾಡಿ ಡೊಂಕನ್ನು
ಸರಿಪಡಿಸುವೆನು. ಈ ಕಾರ್ಯಗಳನ್ನು ಬಿಡದೆ
17 ಮಾಡುವೆನು. ಕೆತ್ತಿದ ವಿಗ್ರಹಗಳಲ್ಲಿ ಭರವಸವಿಟ್ಟು
ನೀವೇ ನಮ್ಮ ದೇವರುಗಳು ಎಂದು ಎರಕದ ಬೊಂಬೆ
ಗಳಿಗೆ ಅರಿಕೆಮಾಡುವವರು ಹಿಂದೆ ಬಿದ್ದು ಕೇವಲ
ಅವಮಾನಕ್ಕೆ ಈಡಾಗುವರು.

ಯೆಹೋವನ ಸೇವಕನ ಈಗಿನ ದುಸ್ಥಿತಿಯೂ ಮುಂದಿನ
ಉದ್ಧಾರವೂ.

18 ಕಿವುಡರೇ, ಕೇಳಿರಿ! ಕುರುಡರೇ, ನಿಮ್ಮ ಕಣ್ಣಿಟ್ಟು
19 ನೋಡಿರಿ! ನನ್ನ ಸೇವಕನ ಹೊರತು ಯಾರು ಕುರು
ಡರು? ನಾನು ಕಳುಹಿಸುವ ದೂತನಂತೆ ಯಾರು
ಕಿವುಡರು? ನನ್ನ ಭಕ್ತನ ಹಾಗೆ ಯಾರು ಕುರುಡರು?
ಯೆಹೋವನ ಸೇವಕನ ಪ್ರಕಾರ ಅಂಧಕರು ಯಾರು?
20 ನೀನು ಬಹು ವಿಷಯಗಳನ್ನು ಕಂಡಿದ್ದರೂ ನಿನಗೆ
ಗಮನವಿಲ್ಲ; ಇವನ ಕಿವಿ ತೆರೆದಿದ್ದರೂ ಕೇಳನು.
21 ಯೆಹೋವನು ಧರ್ಮಸ್ವರೂಪನಾಗಿರುವದರಿಂದ ಧ
ರ್ಮೋಪದೇಶವನ್ನು ಘನಪಡಿಸಿ ಮಹತ್ತಿಗೆ ತರಬೇ
22 ಕೆಂದು ಇಷ್ಟಪಟ್ಟನು. ಈ ಜನರೇ ಕೊಳ್ಳೆಗೆ ಈಡಾಗಿ
ಸೂರೆಹೋಗಿದ್ದಾರೆ; ಎಲ್ಲರೂ ಹಳ್ಳಕೊಳ್ಳಗಳಿಗೆ ಸಿಕ್ಕಿ
ಬಿದ್ದಿದ್ದಾರೆ, ಸೆರೆಮನೆಗಳಲ್ಲಿ ಮುಚ್ಚಲ್ಪಟ್ಟಿದ್ದಾರೆ;
ಅವರು ಸುಲಿಗೆಯಾಗಿದ್ದರೂ ಯಾರೂ ಬಿಡಿಸರು,
ಸೂರೆಯಾಗಿದ್ದರೂ ಯಾರೂ ಹಿಂದಕ್ಕೆ ಬಿಡು ಅನ್ನರು.
ನಿಮ್ಮಲ್ಲಿ ಯಾರು ಈ ಮಾತಿಗೆ ಕಿವಿಗೊಡುವರು? 23
ಯಾರು ಇನ್ನು ಮುಂದೆ ಆಲಿಸಿ ಕೇಳುವರು?
ಯಾಕೋಬನ್ನು ಸುಲಿಗೆಗೂ ಇಸ್ರಾಯೇಲನ್ನು ಕೊ 24
ಳ್ಳೆಗೂ ಕೊಟ್ಟವನು ಯಾರು? ಯಾವನಿಗೆ ವಿರುದ್ಧ
ವಾಗಿ ನಾವು ದ್ರೋಹಮಾಡಿದೆವೋ ಆ ಯೆಹೋವ
ನಲ್ಲವೆ. ಆತನ ಜನರು ಆತನ ಮಾರ್ಗಗಳಲ್ಲಿ ನಡೆ
ಯಲೊಲ್ಲದೆ ಆತನ ಉಪದೇಶವನ್ನು ಕೇಳದೆ ಹೋದ
ರಷ್ಟೆ. ಆಗ ಆತನು ಅವರ ಮೇಲೆ ತನ್ನ ರೋಷಾಗ್ನಿ 25
ಯನ್ನೂ ಯುದ್ಧದ ರೌದ್ರವನ್ನೂ ಸುರಿಸಿದನು. ಎಲ್ಲಾ
ಕಡೆಯಿಂದಲೂ ಅವರಿಗೆ ಉರಿಹತ್ತಿತು, ಆದರೆ ಅವರು
ತಿಳಿಯಲಿಲ್ಲ; ದಹಿಸಿತು, ಲಕ್ಷ್ಯಕ್ಕೆ ತರಲಿಲ್ಲ.

43

ಈಗಲಾದರೋ, ಯಾಕೋಬವಂಶವೇ, ಇಸ್ರಾ
ಯೇಲ್ ಸಂತಾನವೇ, ನಿನ್ನನ್ನು ಸೃಷ್ಟಿಸಿ ರೂಪಿಸಿ
ದವನಾದ ಯೆಹೋವನು ಹೀಗನ್ನುತ್ತಾನೆ—ಭಯ
ಪಡಬೇಡ, ನಾನು ನಿನ್ನನ್ನು ವಿಮೋಚಿಸಿದೆನಲ್ಲಾ,
ನಿನ್ನ ಹೆಸರುಹಿಡಿದು ಕರೆದೆನಲ್ಲಾ; ನೀನು ನನ್ನವನೇ.
ನೀನು ಜಲರಾಶಿಯನ್ನು ಹಾದು ಹೋಗುವಾಗ 2
ನಾನು ನಿನ್ನ ಸಂಗಡ ಇರುವೆನು; ನದಿಗಳನ್ನು ದಾಟು
ವಾಗ ಅವು ನಿನ್ನನ್ನು ಮುಣುಗಿಸವು; ಉರಿಯಲ್ಲಿ
ನಡೆಯುವಾಗ ನೀನು ಕಂದದಿರುವಿ, ಜ್ವಾಲೆಯು
ನಿನ್ನನ್ನು ದಹಿಸದು. ಯೆಹೋವನೆಂಬ ನಾನು ನಿನ್ನ 3
ದೇವರಾಗಿದ್ದೇನಷ್ಟೆ, ಇಸ್ರಾಯೇಲ್ಯರ ಸದಮಲ
ಸ್ವಾಮಿಯಾದ ನಾನು ನಿನ್ನ ರಕ್ಷಕನು. ಐಗುಪ್ತವನ್ನು
ನಿನ್ನ ವಿಮೋಚನೆಗೆ ಈಡುಮಾಡಿದ್ದೇನೆ; ನಿನಗೆ ಬದ
ಲಾಗಿ ಕೂಷ್ ಮತ್ತು ಸೆಬಾ ಸೀಮೆಗಳನ್ನು ಕೊಟ್ಟಿ
ದ್ದೇನೆ. ನೀನು ನನ್ನ ದೃಷ್ಟಿಯಲ್ಲಿ ಅಮೂಲ್ಯನೂ 4
ಮಾನ್ಯನೂ ಪ್ರಿಯನೂ ಆಗಿರುವದರಿಂದ ನಾನು
ನಿನಗೆ ಬದಲಾಗಿ ಮನುಷ್ಯರನ್ನೂ ನಿನ್ನ ಪ್ರಾಣಕ್ಕೆ
ಪ್ರತಿಯಾಗಿ ಜನಾಂಗಗಳನ್ನೂ ಕೊಡುವೆನು. ಭಯ 5
ಪಡಬೇಡ, ನಾನು ನಿನ್ನ ಸಂಗಡ ಇದ್ದೇನೆ; ನಿನ್ನ
ಸಂತತಿಯವರನ್ನು ಮೂಡಲಿಂದ ತರುವೆನು; ನಿನ್ನವ
ರನ್ನು ಪಡುವಲಿಂದ ಕೂಡಿಸುವೆನು; ನಾನು ಒಪ್ಪಿಸಿ 6
ಬಿಡು ಎಂದು ಬಡಗಲಿಗೂ ತಡೆಯಬೇಡ ಎಂದು
ತೆಂಕಲಿಗೂ ಹೇಳಿ ದೂರದಲ್ಲಿರುವ ನನ್ನ ಕುಮಾರ
ರನ್ನೂ ದಿಗಂತಗಳಲ್ಲಿರುವ ನನ್ನ ಕುಮಾರಿಯರನ್ನೂ
ನನ್ನ ಮಹಿಮೆಗಾಗಿ ನಾನು ಸೃಷ್ಟಿಸಿ ರೂಪಿಸಿ ಉಂಟು 7
ಮಾಡಿದ ನನ್ನ ಹೆಸರಿನವರೆಲ್ಲರನ್ನೂ ಬರಮಾಡ
ಬೇಕೆಂದು ಅಪ್ಪಣೆಕೊಡುವೆನು.

ಇಸ್ರಾಯೇಲು ಯೆಹೋವನ ಸಾಕ್ಷಿ.

ಕಣ್ಣಿದ್ದರೂ ಕುರುಡಾದ ಕಿವಿಯಿದ್ದರೂ ಕಿವುಡಾದ 8
ಜನವನ್ನು ಕರೆ. ಎಲ್ಲಾ ಜನಾಂಗಗಳು ಒಟ್ಟಿಗೆ 9
ಬರಲಿ, ಸಕಲದೇಶೀಯರು ನೆರೆಯಲಿ, 2)ಇವರ ದೇವ

1) ಮೂಲ: ದ್ವೀಪಗಳನ್ನಾಗಿ. 2) ಮೂಲ: ಇವರಲ್ಲಿ.

ರುಗಳಲ್ಲಿ ಯಾರು ಈ ಸಂಗತಿಯನ್ನು ಮುಂತಿಳಿಸ
ಬಲ್ಲರು? 1)ನಡೆದ ಸಂಗತಿಗಳನ್ನು ಯಾರು ವಿವರಿ
ಸಾರು? ತಾವು ಸತ್ಯವಂತರೆಂದು ಸ್ಥಾಪಿಸಿಕೊಳ್ಳು
ವದಕ್ಕೆ ಸಾಕ್ಷಿಗಳನ್ನು ಕರತರಲಿ; ಆ ಸಾಕ್ಷಿಗಳು
[ಇವರ ಮಾತನ್ನು] ಕೇಳಿ ನಿಜವೆಂದು ಹೇಳಲಿ.
10 ಯೆಹೋವನ ಮಾತೇನಂದರೆ—ನೀವು ನನ್ನ ಸಾಕ್ಷಿ,
ನಾನು ಆರಿಸಿಕೊಂಡಿರುವ ಸೇವಕನು; ನೀವು
ನನ್ನನ್ನು ತಿಳಿದು ನಂಬಿ ನನ್ನನ್ನೇ ಪರಮಾತ್ಮನು ಎಂದು
ಗ್ರಹಿಸುವ ಹಾಗೆ [ಇದನ್ನು ನಡಿಸಿದೆನು]; ನನಗಿಂತ
ಮುಂಚೆ ಯಾವ ದೇವರೂ ಇರಲಿಲ್ಲ, ನನ್ನ ಅನಂತರ
11 ದಲ್ಲಿಯೂ ಇರುವದಿಲ್ಲ. ನಾನೇ, ನಾನೇ ಯೆಹೋ
ವನು; ನಾನು ಹೊರತು ಯಾವ ರಕ್ಷಕನೂ ಇಲ್ಲ.
12 ನಾನೇ ರಕ್ಷಣೆಯನ್ನು ಮುಂತಿಳಿಸಿ ನೆರವೇರಿಸಿ ಪ್ರಕ
ಟಿಸಿದ್ದೇನೆ, ನಿಮ್ಮಲ್ಲಿ ಅನ್ಯದೇವರು ಯಾರೂ ಇರಲಿಲ್ಲ
ವಲ್ಲ; ನೀವೇ ನನ್ನ ಸಾಕ್ಷಿಗಳು, ನಾನೊಬ್ಬನೇ
13 ದೇವರು; ಹೌದು, ಇಂದಿನಿಂದ ನಾನೇ ಪರಮಾತ್ಮನು;
ನನ್ನ ಕೈಯಿಂದ ಬಿಡಿಸಬಲ್ಲವರು ಯಾರೂ ಇಲ್ಲ; ನನ್ನ
ಕೆಲಸಕ್ಕೆ ಯಾರು ಅಡ್ಡ ಬಂದಾರು? ಎಂಬದೇ ಯೆಹೋ
ವನ ಮಾತು.

ಬಾಬೆಲಿಗೆ ಸಮೀಪಿಸಿರುವ ನಾಶನ.

14 ನಿಮ್ಮ ವಿಮೋಚಕನೂ ಇಸ್ರಾಯೇಲ್ಯರ ಸದಮಲ
ಸ್ವಾಮಿಯೂ ಆದ ಯೆಹೋವನು ಹೀಗೆನ್ನುತ್ತಾನೆ—
ನಾನು ನಿಮಗೋಸ್ಕರ [ದೂತನನ್ನು] ಬಾಬೆಲಿಗೆ
ಕಳುಹಿಸಿ ಕಸ್ದೀಯರನ್ನೆಲ್ಲಾ ತಮ್ಮ ವಿನೋದದ ಹಡ
ಗುಗಳ ಮೇಲೆ ಪಲಾಯಿತರನ್ನಾಗಿ ಅಟ್ಟಿಬಿಡುವೆನು.
15 ನಾನು ಯೆಹೋವನು, ನಿಮ್ಮ ಸದಮಲಸ್ವಾಮಿಯು,
ಇಸ್ರಾಯೇಲನ್ನು ಸೃಷ್ಟಿಸಿದವನು, ನಿಮ್ಮ ಅರಸನೂ
16 ಆಗಿದ್ದೇನೆ. ಯಾವನು ಸಮುದ್ರದಲ್ಲಿ ದಾರಿಮಾಡಿ
ಜಲಪ್ರವಾಹಗಳಲ್ಲಿ ಮಾರ್ಗವನ್ನು ಏರ್ಪಡಿಸಿದನೋ,
17 ಯಾವನು ಅಶ್ವರಥಭಟಸೈನ್ಯಗಳನ್ನು ಹೊರಡಿಸಿ ಅವು
ಬಿದ್ದು ಏಳಲಾರದಂತೆಯೂ ದೀಪದೋಪಾದಿಯಲ್ಲಿ
ನಂದಿ ಆರಿಹೋಗುವಂತೆಯೂ ಮಾಡಿದನೋ, ಆ
18 ಯೆಹೋವನು ಹೀಗೆನ್ನುತ್ತಾನೆ—ಹಳೇ ಸಂಗತಿಗಳನ್ನು
ಜ್ಞಾಪಕಕ್ಕೆ ತಂದುಕೊಳ್ಳಬೇಡಿರಿ, ಪುರಾತನಕಾರ್ಯ
19 ಗಳನ್ನು ಮರೆತುಬಿಡಿ. ಇಗೋ ಹೊಸ ಕಾರ್ಯ
ವನ್ನು ಮಾಡುವೆನು, ಈಗ ತಲೆದೋರುತ್ತಲಿದೆ, ನಿಮಗೆ
ಕಾಣುವದಿಲ್ಲವೋ? ನಾನು ಅರಣ್ಯದಲ್ಲಿ ಮಾರ್ಗ
ವನ್ನು ಏರ್ಪಡಿಸಿ ಅಡವಿಯಲ್ಲಿ ನದಿಗಳನ್ನು ಹರಿಸು
20 ವೆನು. ನನ್ನ ಸ್ತೋತ್ರವನ್ನು ಪ್ರಚಾರಪಡಿಸಲಿ ಎಂದು
ನಾನು ಸೃಷ್ಟಿಸಿಕೊಂಡ ಆಪ್ತಜನರ ಜಲಪಾನಕ್ಕಾಗಿ
21 ನಾನು ಅರಣ್ಯದಲ್ಲಿ ನೀರನ್ನು ಒದಗಿಸಿ ಅಡವಿಯಲ್ಲಿ
ನದಿಗಳನ್ನು ಹರಿಸುವವನಾದ ಕಾರಣ ನರಿ ಉಷ್ಟ್ರ
ಪಕ್ಷಿ ಮೊದಲಾದ ಕಾಡುಮೃಗಗಳು ನನ್ನನ್ನು ಘನ
ಪಡಿಸುವವು.

ಇಸ್ರಾಯೇಲಿನ ಉದಾಸೀನತೆ.

ಯಾಕೋಬೇ, ನೀನಾದರೋ. ನನ್ನನ್ನು ಪ್ರಾರ್ಥಿಸ
ಲಿಲ್ಲ, ಇಸ್ರಾಯೇಲೇ, ನೀನು ನನ್ನ ವಿಷಯದಲ್ಲಿ
ಬೇಸರಗೊಂಡಿದ್ದೀ. ನೀನು ನನಗೆ ಹೋಮಕ್ಕಾಗಿ
ಕುರಿಮೇಕೆಗಳನ್ನು ತಂದು ಯಜ್ಞಗಳಿಂದ ನನ್ನನ್ನು
ಘನಪಡಿಸಲಿಲ್ಲ; ನೈವೇದ್ಯಕ್ಕಾಗಿ ನಿನ್ನನ್ನು ನಾನು
ತೊಂದರೆಪಡಿಸಲಿಲ್ಲ, ಧೂಪಕ್ಕಾಗಿ ನಿನ್ನನ್ನು ಬೇಸರ
ಗೊಳಿಸಲಿಲ್ಲ. ನೀನು ನನಗೋಸ್ಕರ ಹಣಕೊಟ್ಟು
ಬಜೆಯನ್ನು ತರಲಿಲ್ಲ, ಯಜ್ಞಪಶುಗಳ ವಪೆಯಿಂದ
ನನ್ನನ್ನು ತೃಪ್ತಿಪಡಿಸಲಿಲ್ಲ; ಆದರೆ ನಿನ್ನ ಪಾಪಗಳಿಂದ
ನನ್ನನ್ನು ನೀನು ತೊಂದರೆಪಡಿಸಿದ್ದೀ, ನಿನ್ನ ದೋಷ
ಗಳಿಂದ ನನ್ನನ್ನು ಬೇಸರಗೊಳಿಸಿದ್ದೀ. ನಾನಾಗಿ
ನಾನೇ ನನಗೋಸ್ಕರ ನಿನ್ನ ದ್ರೋಹಗಳನ್ನು ಅಳಿಸಿ
ಬಿಡುತ್ತೇನೆ, ನಿನ್ನ ಪಾಪಗಳನ್ನು ನನ್ನ ನೆನಪಿನಲ್ಲಿಡೆನು
ನನಗೆ ಜ್ಞಾಪಕಪಡಿಸು, ನಾವಿಬ್ಬರೂ ವಾದಿಸುವ; ನಿನ್ನ
ಸದ್ಧರ್ಮವು ಗೊತ್ತಾಗುವಂತೆ ನಿನ್ನ ನ್ಯಾಯವನ್ನು
ತೋರ್ಪಡಿಸು. ನಿನ್ನ ಮೂಲಪಿತೃವು ಪಾಪಿಷ್ಠನು, ನಿನ್ನ
ಮಧ್ಯಸ್ಥರು ನನಗೆ ದ್ರೋಹಮಾಡಿದವರು. ಆದಕಾರಣ
ನಾನು ಪವಿತ್ರಾಲಯದ ಅಧಿಪತಿಗಳನ್ನು ಹೊಲಸಿಗೆ
ತಂದು ಯಾಕೋಬನ್ನು ಶಾಪಕ್ಕೂ ಇಸ್ರಾಯೇಲನ್ನು
ದೂಷಣೆಗೂ ಗುರಿಮಾಡಿದೆನು.

ಇಸ್ರಾಯೇಲಿನ ಮುಂದಿನ ವೃದ್ಧಿ.

4
ನನ್ನ ಸೇವಕನಾದ ಯಾಕೋಬೇ, ನಾನು ಆದು
ಕೊಂಡ ಇಸ್ರಾಯೇಲೇ, ಈಗ ಕೇಳು. ನಿನ್ನನ್ನು 2
ನಿರ್ಮಾಣಮಾಡಿ ಗರ್ಭದಿಂದಲೂ ರೂಪಿಸುತ್ತಾ
ಬಂದು ನಿನಗೆ ಸಹಾಯಮಾಡುವವನಾದ ಯೆಹೋವ
ನು ಹೀಗೆನ್ನುತ್ತಾನೆ—ನನ್ನ ಸೇವಕನಾದ ಯಾಕೋ
ಬೇ, ನಾನು ಆದುಕೊಂಡ ಯೆಶುರೂನೇ, ಭಯಪಡ
ಬೇಡ! ಬತ್ತಿದ ಭೂಮಿಯಲ್ಲಿ ಮಳೆಗರೆದು ಒಣ
ನೆಲದಲ್ಲಿ ಕಾಲಿವೆಗಳನ್ನು ಹರಿಸುವೆನು; ನಿನ್ನ ಸಂತಾ
ನದವರಲ್ಲಿ ನನ್ನ ಆತ್ಮವನ್ನು, ನಿನ್ನ ಸಂತತಿಯವರ
ಮೇಲೆ ನನ್ನ ಆಶೀರ್ವಾದವನ್ನು, ಸುರಿಸುವೆನು
ನೀರಿನ ಕಾಲಿವೆಗಳ ಬಳಿಯಲ್ಲಿ ಹಸುರು ಹುಲ್ಲಿನ
ನಡುವೆ ಬೆಳೆಯುವ ನೀರವಂಜಿಗಳಂತೆ ವೃದ್ಧಿಯಾಗು
ವರು. [ಅನ್ಯಜನರಲ್ಲಿ] ಒಬ್ಬನು—ನಾನು ಯೆಹೋ
ವನ ಭಕ್ತನು ಎಂದು ಹೇಳಿಕೊಳ್ಳುವನು; ಇನ್ನೊ
ಬ್ಬನು ಯಾಕೋಬ್ಯನು ಎನಿಸಿಕೊಳ್ಳುವನು; ಮತ್ತೊ
ಬ್ಬನು ತನ್ನ ಕೈಯ ಮೇಲೆ ಯೆಹೋವದಾಸನು
ಎಂದು ಬರೆದುಕೊಂಡು ಇಸ್ರಾಯೇಲ್ಯನೆಂಬ ಬಿರು
ದನ್ನು ಧರಿಸಿಕೊಳ್ಳುವನು.

ಯೆಹೋವನು ಇಸ್ರಾಯೇಲಿನ ರಕ್ಷಕನು.

ಇಸ್ರಾಯೇಲ್ಯರ ಅರಸನೂ ವಿಮೋಚಕನೂ ಆಗಿ
ರುವ ಸೇನಾಧೀಶ್ವರನಾದ ಯೆಹೋವನು ಹೀಗೆನ್ನು

1) ಅಥವಾ: ಯಾರು ಭವಿಷ್ಯತ್ತುಗಳನ್ನು ಹೇಳಿಯಾರು?

ತ್ತಾನೆ—ನಾನೇ ಆದಿ, ಅಂತವೂ ನಾನೇ; ನಾನು
ಹೊರತು ಯಾವ ದೇವರೂ ಇಲ್ಲ. ನಾನು ಪುರಾ
ತನದವರನ್ನು ಸೃಷ್ಟಿಸಿದಂದಿನಿಂದ ನನ್ನ ಹಾಗೆ ಯಾರು
ಪ್ರಕಟಿಸಿಕೊಂಡಿದ್ದಾರೆ? ಅಂಥವರಿದ್ದರೆ ನನ್ನೆದುರಿಗೆ
ಹೇಳಿ ಸ್ಥಾಪಿಸಲಿ; ಇಲ್ಲವೆ ಮುಂದಿನವುಗಳನ್ನು ಈಗ
ತಿಳಿಸಲಿ, ಭವಿಷ್ಯತ್ತುಗಳನ್ನು ಹೇಳಲಿ. ಹೆದರಬೇಡಿರಿ,
ಅಂಜದಿರಿ! ನಾನು ಪೂರ್ವದಿಂದಲೂ ನಿಮಗೆ ಹೇಳಿ
ಪ್ರಕಟಿಸಿಕೊಂಡೆನಷ್ಟೆ. ನೀವೇ ನನ್ನ ಸಾಕ್ಷಿಗಳು.
ನಾನಲ್ಲದೆ ಇನ್ನೊಬ್ಬ ದೇವರಿದ್ದಾನೋ? ಇನ್ನು
ಯಾವ ಶರಣನೂ ಇಲ್ಲ, ಯಾರೂ ನನಗೆ ಗೊತ್ತಿಲ್ಲ.

ವಿಗ್ರಹಾರಾಧನೆಯ ಮೂಢತನ.

ವಿಗ್ರಹ ಕೆತ್ತುವವರೆಲ್ಲಾ ಮಟ್ಟಮಾಯವೇ; ಅವರ
ಇಷ್ಟದ ಬೊಂಬೆಗಳು ಯಾತಕ್ಕೂ ಬಾರವು; ಬೊಂಬೆ
ಗಳ ಪಕ್ಷದ ಸಾಕ್ಷಿಗಾರರು ನೋಡುವವರಲ್ಲ, ಗ್ರಹಿ
ಸುವವರಲ್ಲ; ನಾಚಿಕೆಗೆ ಗುರಿಯಾಗುವರು. ದೇವತೆ
ಯನ್ನು ರೂಪಿಸುವವರೂ ವ್ಯರ್ಥವಿಗ್ರಹವನ್ನು ಎರಕ
ಹೊಯ್ಯುವವರೂ ಎಂಥವರು? ವಿಗ್ರಹಶರಣರೆಲ್ಲಾ
ಆಶಾಭಂಗಪಡುವರು; ಅದನ್ನು ಕೆತ್ತಿದವರು ಮನು
ಷ್ಯಮಾತ್ರದವರೇ; ಅವರೆಲ್ಲರು ಕೂಡಿ ನಿಲ್ಲಲಿ, ಒಟ್ಟಿಗೆ
ಹೆದರಿಕೊಂಡು ಲಜ್ಜೆಪಡುವರು. ಕಮ್ಮಾರನು ಮುಟ್ಟ
ನ್ನು ತೆಗೆದುಕೊಂಡು ಕೆಂಡದಲ್ಲಿ ಕೆಲಸಮಾಡುತ್ತಾ
ಚಮಟಿಕೆಗಳಿಂದ ಬಡಿದು ತೋಳಿನ ಬಲದಿಂದ ವಿಗ್ರ
ಹವನ್ನು ರೂಪಿಸುವನು; ಅವನೂ ಹಸಿದು ಬಳಲು
ವನು, ನೀರಿಲ್ಲದೆ ಕಂಗೆಡುವನು. ಬಡಗಿಯು [ಮರ
ಕ್ಕೆ] ನೂಲುಹಾಕಿ ಮೊಳೆಯಿಂದ ಗೆರೆಯೆಳೆದು ಉಳಿ
ಬಾಚಿಗಳಿಂದ ಕೆತ್ತಿ ಕೈವಾರದಿಂದ ಗುರುತಿಸಿ ಅದು
ಮನೆಯಲ್ಲಿ ವಾಸಿಸತಕ್ಕದ್ದಾಗಲೆಂದು ಮನುಷ್ಯನ
ಆಕಾರಕ್ಕೆ ತಂದು ನರನ ಅಂದದಂತೆ ರೂಪಿಸುವನು.
ಅವನು ತನ್ನ ಕೆಲಸಕ್ಕಾಗಿ ದೇವದಾರುಗಳನ್ನು ಕಡಿ
ಯುವನು, ತುರಾಯಿ ಅಲ್ಲೋನ್ ಮರಗಳನ್ನು ತೆಗೆ
ದುಕೊಳ್ಳುವನು, ವನವೃಕ್ಷಗಳಲ್ಲಿ ಒಂದನ್ನು ತನ
ಗೋಸ್ಕರ ಸಲಹುವನು; ಅವನು ಪೀತದಾರವನ್ನು
ನೆಡಲು ಮಳೆಯು ಅದನ್ನು ಬೆಳೆಯಿಸುವದು. ಅದು
ಸೌದೆಗಾಗುವದು; ಅವನು ಸ್ವಲ್ಪ ತೆಗೆದು ಕಾಯಿಸಿ
ಕೊಳ್ಳುವನು, ಉರಿಸಿ ರೊಟ್ಟಿಸುಡುವನು; ಅದರಲ್ಲೇ
ಒಂದು ದೇವರನ್ನು ಮಾಡಿಕೊಂಡು ಪೂಜಿಸುವನು,
ಬೊಂಬೆ ಕೆತ್ತಿ ಅಡ್ಡಬೀಳುವನು. ಒಂದು ಭಾಗವನ್ನು
ಬೆಂಕಿಯಲ್ಲಿ ಉರಿಸುವನು; ಅದು ಮಾಂಸಭೋಜ
ನಕ್ಕೆ ಅನುಕೂಲಿಸುವದು; ಬಾಡುಸುಟ್ಟು ಹಸಿವೆ
ತೀರಿಸಿಕೊಳ್ಳುವನು; ಮತ್ತು ಕಾಯಿಸಿಕೊಳ್ಳುತ್ತಾ—
ಆಹಾ, ಬೆಂಕಿ ಕಂಡೆ; ಬೆಚ್ಚಗಾಯಿತು ಎಂದುಕೊಳ್ಳು
ವನು. ಉಳಿದ ಭಾಗವನ್ನು ತನ್ನ ದೇವರನ್ನಾಗಿ ಬೊಂಬೆ
ಕೆತ್ತಿ ಅದಕ್ಕೆ ಎರಗಿ ಅಡ್ಡಬಿದ್ದು—ನೀನೇ ನನ್ನ ದೇವರು,
ನನ್ನನ್ನು ರಕ್ಷಿಸು ಎಂದು ಪ್ರಾರ್ಥಿಸುವನು. ಇಂಥ
ವರು ಏನೂ ತಿಳಿಯದವರು, ಏನೂ ಗ್ರಹಿಸಲಾರದ
ವರು; ಅವರ ಕಣ್ಣು ಕಾಣದಂತೆಯೂ ಹೃದಯ
ಗ್ರಹಿಸದಂತೆಯೂ ಯೆಹೋವನು ಅಂಟುಬಳಿದಿದ್ದಾ
ನಲ್ಲಾ. ನಾನು ಒಂದು ಭಾಗವನ್ನು ಬೆಂಕಿಯಲ್ಲಿ 19
ಉರಿಸಿದೆನು, ಹೌದು, ಅದರ ಕೆಂಡದಲ್ಲಿ ರೊಟ್ಟಿ
ಮಾಡಿ ಮಾಂಸಸುಟ್ಟು ತಿಂದೆನಲ್ಲಾ; ಮಿಕ್ಕದ್ದನ್ನು
ನಾನು 1)ಬೊಂಬೆ ಮಾಡಲೋ, ಮರದ ತುಂಡಿಗೆ
ಅಡ್ಡಬೀಳಬಹುದೋ, ಅಂದುಕೊಳ್ಳುವಷ್ಟು ಜ್ಞಾನ
ವಿವೇಕಗಳು ಯಾರಿಗೂ ಇಲ್ಲ, ಯಾರೂ ಇದನ್ನು
ಮನಸ್ಸಿಗೆ ತಾರರು. ಅವನು ತಿನ್ನುವದು ಬೂದಿಯೇ; 20
ಮೋಸಕ್ಕೊಳಗಾದ ಹೃದಯವು ಅವನಿಗೆ ದಾರಿತಪ್ಪಿ
ಸಿದ ಕಾರಣ ನನ್ನ ಕೈ ಸುಳ್ಳನ್ನು ಹಿಡಿದಿದೆಯಲ್ಲಾ
ಎಂದುಕೊಳ್ಳಲೂ ಆಗದು, ತನ್ನನ್ನು ರಕ್ಷಿಸಿಕೊಳ್ಳಲೂ
ಆಗದು.

ಯಾಕೋಬೇ, ಇಸ್ರಾಯೇಲೇ, ಈ ವಿಷಯಗಳನ್ನು 21
ಜ್ಞಾಪಕದಲ್ಲಿಟ್ಟುಕೋ, ನನ್ನ ಸೇವಕನಾಗಿದ್ದೀಯಲ್ಲ
ವೇ; ಇಸ್ರಾಯೇಲೇ, ನಾನು ನಿನ್ನನ್ನು ನಿರ್ಮಿಸಿದೆನು,
ನೀನು ನನ್ನ ಸೇವಕನು, ನಿನ್ನನ್ನು ಮರೆತುಬಿಡೆನು.
ನಿನ್ನ ದ್ರೋಹಗಳನ್ನು ಮಂಜಿನಂತೆ ಪರಿಹರಿಸಿದ್ದೇನೆ, 22
ನಿನ್ನ ಪಾಪಗಳನ್ನು ಮೋಡದಂತೆ ಹಾರಿಸಿದ್ದೇನೆ; ನಿನ್ನ
ನ್ನು ವಿಮೋಚಿಸಿದ್ದೇನೆ, ನನ್ನ ಕಡೆಗೆ ತಿರುಗಿಕೋ.

ಆಕಾಶವೇ, ಹರ್ಷಧ್ವನಿಗೈ, 23
ಯೆಹೋವನು ತನ್ನ ಕಾರ್ಯವನ್ನು ನೆರವೇರಿಸಿ
ದ್ದಾನೆ;
ಭೂಮಿಯ ಅಧೋಭಾಗವೇ, ಆರ್ಬಟಿಸು;
ಪರ್ವತಗಳೇ, ವನವೇ, ಸಕಲವನವೃಕ್ಷಗಳೇ,
ಕೋಲಾಹಲಮಾಡಿರಿ;
ಯೆಹೋವನು ಯಾಕೋಬನ್ನು ವಿಮೋಚಿಸಿದ್ದಾನೆ.
ಇಸ್ರಾಯೇಲಿನ ರಕ್ಷಣೆಯಿಂದ ತನ್ನ ಮಹಿಮೆ
ಯನ್ನು ಪ್ರಚುರಗೊಳಿಸುವನು.

ಯೆಹೋವನು ಕೋರೆಷನಿಗೆ ನೇಮಿಸಿದ
ಕಾರ್ಯ. 44. 24—45. 25.

ಯೆಹೋವನ ಸರ್ವಾಧಿಕಾರ.

ನಿನ್ನನ್ನು ಗರ್ಭದಿಂದಲೂ ರೂಪಿಸುತ್ತಾ ಬಂದಿರುವ 24
ನಿನ್ನ ವಿಮೋಚಕನಾದ ಯೆಹೋವನು ಹೀಗೆನ್ನು
ತ್ತಾನೆ—ನಾನೇ ಸರ್ವಕಾರ್ಯಕರ್ತನಾದ ಯೆಹೋ
ವನು, ನಾನೊಬ್ಬನೇ ಗಗನಮಂಡಲವನ್ನು ಹರವಿ
ಭೂಮಂಡಲವನ್ನು ವಿಸ್ತರಿಸುವವನಾಗಿದ್ದೇನೆ; ನನಗೆ
ಸಹಾಯಕನುಂಟೋ? ನಾನು ಕೊಚ್ಚಿಕೊಳ್ಳುವವರ 25
ಶಕುನಗಳನ್ನು ನಿರರ್ಥಕಪಡಿಸಿ ಕಣಿಹೇಳುವವರನ್ನು
ಮರುಳುಗೊಳಿಸಿ ಜ್ಞಾನಿಗಳನ್ನು ಹಿಂದಕ್ಕೆ ತಳ್ಳಿ ಅವರ
ತಿಳುವಳಿಕೆಯನ್ನು ಹುಚ್ಚುತನವಾಗ ಮಾಡಿ ನನ್ನ 26
ಸೇವಕನ ಮಾತನ್ನು ಸ್ಥಾಪಿಸಿ ನನ್ನ ದೂತರ ಮಂತ್ರಾ
ಲೋಚನೆಯನ್ನು ನೆರವೇರಿಸುವವನಾಗಿದ್ದೇನೆ; ಯೆ
ರೂಸಲೇಮು ಜನನಿವಾಸವಾಗುವದು. ಯೆಹೂದದ
ಪಟ್ಟಣಗಳು ತಿರಿಗಿ ಕಟ್ಟಲ್ಪಡುವವು, ಅಲ್ಲಿನ ಹಾಳ
ನ್ನು ಹಸನುಮಾಡುವೆನು ಎಂದು ನಾನು ಮುಂತಿಳಿಸಿ
ಜಲರಾಶಿಗೆ—ಬತ್ತಿಹೋಗು, ನಿನ್ನಲ್ಲಿ ಸೇರುವ ನದಿ 27

1) ಮೂಲ: ಅಸಹ್ಯ ವಸ್ತು.

ಗಳನ್ನು ಒಣಗಿಸುವೆನು ಎಂದು ನಾನು ಅಪ್ಪಣೆ
28 ಕೊಡುವವನಾಗಿದ್ದೇನೆ; ಮತ್ತು ಕೋರೆಷನ ವಿಷಯ
ವಾಗಿ—ಅವನು ನನ್ನ ಮುಂದೆ ಕಾಯುವವನು,
ಯೆರೂಸಲೇಮು ಕಟ್ಟಲ್ಪಡಲಿ, ದೇವಸ್ಥಾನದ ಅಸ್ತಿ
ವಾರವು ಹಾಕಲ್ಪಡಲಿ ಎಂದು ಹೇಳಿ ನನ್ನ ಇಷ್ಟಾರ್ಥ
ವನ್ನೆಲ್ಲಾ ನೆರವೇರಿಸತಕ್ಕವನು ಎಂಬದಾಗಿ ಮಾತಾಡು
ವವನಾಗಿದ್ದೇನೆ.

### ಯೆಹೋವನು ಕೋರೆಷನನ್ನು ಕರೆದ ಉದ್ದೇಶ.

45 ಯೆಹೋವನು ಯಾವನ ಕೈಹಿಡಿದು ಯಾವನೆದು
ರಿಗೆ ಜನಾಂಗಗಳನ್ನು ತುಳಿದು ರಾಜರ ನಡು
ಕಟ್ಟನ್ನು ಬಿಚ್ಚಿ ಯಾವನ ಮುಂದೆ ಬಾಗಿಲುಹೆಬ್ಬಾಗಿ
ಲುಗಳನ್ನು ತೆರೆದು ಮುಚ್ಚಲೀಸನೋ ತಾನು ಅಭಿ
2 ಷೇಕಿಸಿದ ಆ ಕೋರೆಷನಿಗೆ ಹೀಗೆನ್ನುತ್ತಾನೆ—ನಾನು
ನಿನ್ನ ಮುಂದೆ ಹೋಗಿ ದಿಣ್ಣೆಗಳನ್ನು ಸಮಮಾಡು
ವೆನು, ತಾಮ್ರದ ಕದಗಳನ್ನು ಒಡೆದು ಕಬ್ಬಿಣದ
3 ಅಗುಳಿಗಳನ್ನು ಮುರಿದುಬಿಡುವೆನು. ನಿನ್ನ ಹೆಸರು
ಹಿಡಿದು ಕರೆಯುವ ನಾನು ಯೆಹೋವನು, ಇಸ್ರಾ
ಯೇಲ್ಯರ ದೇವರು ಎಂದು ನೀನು ತಿಳಿದುಕೊಳ್ಳುವ
ಹಾಗೆ ಕತ್ತಲಲ್ಲಿ ಬಚ್ಚಿಟ್ಟಿರುವ ಆಸ್ತಿಪಾಸ್ತಿಯನ್ನೂ
ಗುಪ್ತಸ್ಥಳಗಳಲ್ಲಿ ಮರೆಮಾಡಿದ ನಿಧಿನಿಕ್ಷೇಪವನ್ನೂ
4 ನಿನಗೆ ಕೊಡುವೆನು. ನನ್ನ ಸೇವಕನಾದ ಯಾಕೋ
ಬಿಗಾಗಿ, ನಾನು ಆದುಕೊಂಡ ಇಸ್ರಾಯೇಲಿಗಾಗಿ
ಹೆಸರುಹಿಡಿದು ನಿನ್ನನ್ನು ಕರೆದಿದ್ದೇನೆ; ನೀನು
ನನ್ನನ್ನು ಅರಿಯದವನಾಗಿದ್ದರೂ ನಿನಗೆ ಬಿರುದನ್ನು
5 ದಯಪಾಲಿಸಿದ್ದೇನೆ. ನಾನೇ ಯೆಹೋವ, ಇನ್ನು
ಯಾವನೂ ಅಲ್ಲ, ನಾನು ಹೊರತು ಯಾವ ದೇವರೂ
ಇಲ್ಲ; ನೀನು ನನ್ನನ್ನು ಅರಿಯದವನಾಗಿದ್ದರೂ ನಿನಗೆ
6 ನಡುಕಟ್ಟುವೆನು. ಮೂಡಲಿಂದ ಪಡುವಲ ತನಕ
ಇರುವವರೆಲ್ಲರೂ ಇದನ್ನು ನೋಡಿ ನನ್ನ ವಿನಹ
ಯಾರೂ ಇಲ್ಲ, ನಾನೇ ಯೆಹೋವನು, ಇನ್ನು
7 ಯಾವನೂ ಅಲ್ಲ, ನಾನು ಬೆಳಕಿಗೂ ಕತ್ತಲಿಗೂ
ಸೃಷ್ಟಿಕರ್ತನು, ಮೇಲನ್ನೂ ಕೇಡನ್ನೂ ಬರಮಾಡು
ವವನು, ಈ ಸಮಸ್ತ ಕಾರ್ಯಗಳನ್ನು ನಡೆಯಿಸುವ
ಯೆಹೋವನು ನಾನೇ ಎಂದು ತಿಳಿದುಕೊಳ್ಳುವರು.

8 ಆಕಾಶಮಂಡಲವೇ, ಮೇಲಿನಿಂದ ಧರ್ಮರಸವನ್ನು
    ವರ್ಷಿಸು,
  ಗಗನವು ಸುರಿಸಲಿ;
  ಭೂಮಿಯು ಒಡೆದು ರಕ್ಷಣೆಯನ್ನು ಮೊಳೆಯಿಸಿ
  ಅದರೊಡನೆ ನೀತಿಫಲವನ್ನು ಬೆಳೆಯಿಸಲಿ,
  ಯೆಹೋವನೆಂಬ ನಾನೇ ಇದಕ್ಕೆಲ್ಲಾ ಕರ್ತನು.

### ದೇವರ ಮೇಲೆ ಗುಣುಗುಟ್ಟುವವರನ್ನು ಖಂಡಿಸುವದು.

9 ಅಯ್ಯೋ, ತನ್ನನ್ನು ರೂಪಿಸಿದಾತನ ಸಂಗಡ ವ್ಯಾಜ್ಯ
ವಾಡುವವನ ಗತಿ ಏನು! ಮಣ್ಣುಮಡಿಕೆಗಳಲ್ಲಿ ಅವ
ನೂ ಒಂದು ಮಡಿಕೆಯಲ್ಲವೆ. ಮಣ್ಣು—ಏನು
ಮಾಡುತ್ತೀ ಎಂದು ರೂಪಿಸುವವನನ್ನು ಕೇಳುವ
ದುಂಟೇ? ನಿನ್ನ ಕಾರ್ಯವು [ನಿನ್ನ ವಿಷಯವಾಗಿ]
ಅವನಿಗೆ ಕೈಯಿಲ್ಲ ಅಂದೀತೇ? ನೀನು ಹುಟ್ಟಿಸು
ದೇನು ಎಂದು ತಂದೆಯನ್ನು ಕೇಳುವವನ ಪಾಡು
ಪಾಡೇ! ನೀನು ಹೆರುವದೇನು ಎಂದು ಹೆಂಗಸನ್ನು
ಕೇಳುವವನ ಗತಿ ಗತಿಯೇ! [ಆದರೂ] ಇಸ್ರಾಯೇ
ಲ್ಯರ ಸದಮಲಸ್ವಾಮಿಯೂ ಸೃಷ್ಟಿಕರ್ತನೂ ಆ
ಯೆಹೋವನ ಮಾತನ್ನು ಕೇಳಿರಿ—ಭವಿಷ್ಯತ್ತುಗ
ವಿಷಯವಾಗಿ ನನ್ನನ್ನು ವಿಚಾರಿಸಿರಿ, ನಾನೇ ನಿರ್ಮಿ
ಸಿದ ನನ್ನ ಮಕ್ಕಳ ವಿಷಯದಲ್ಲಿ ನನಗೆ ಏನನ್ನು ವಿ
ಸಿದರೂ ವಿಧಿಸಿರಿ. ಭೂಲೋಕವನ್ನುಂಟುಮಾ
ಅದರಲ್ಲಿನ ಮನುಷ್ಯರನ್ನು ಸೃಷ್ಟಿಸಿದವನು ನಾನೇ
ನನ್ನ ಕೈಗಳೇ ಆಕಾಶಮಂಡಲವನ್ನು ಹರಡಿದವು
ನಕ್ಷತ್ರಸೈನ್ಯಕ್ಕೆ ಅಪ್ಪಣೆಕೊಟ್ಟವನೂ ನಾನೇ. ನಾನ
ಕೋರೆಷನನ್ನು ಧರ್ಮೋದ್ದೇಶದಿಂದ ಉನ್ನತಿಗೆ ತಂದ
ನೇಮಿಸಿದ್ದೇನೆ, ಅವನ ಮಾರ್ಗಗಳನ್ನೆಲ್ಲಾ ಸರಾ
ಮಾಡುವೆನು; ಅವನು ನನ್ನ ಪಟ್ಟಣವನ್ನು ತಿರಿ
ಕಟ್ಟಿ ಕ್ರಯವನ್ನಾಗಲೀ ಬಹುಮಾನವನ್ನಾಗಲೀ ಕೇ
ಕೊಳ್ಳದೆ ಸೆರೆಯಾದ ನನ್ನ ಜನರನ್ನು ಬಿಡುಗ
ಮಾಡುವನು ಎಂದು ಸೇನಾಧೀಶ್ವರನಾದ ಯೆಹೋ
ವನು ಅನ್ನುತ್ತಾನೆ.

### ಆಫ್ರಿಕ ಖಂಡದ ಕೆಲವು ಜನಾಂಗಗಳು ಇಸ್ರಾಯೇಲಿಗೆ ಅಧೀನವಾಗುವದು.

ಯೆಹೋವನ ಈ ಮಾತನ್ನು ಕೇಳಿರಿ—ಐಗುಪ್ತ
ಆದಾಯವೂ ಕೂಷಿನ ವ್ಯಾಪಾರವೂ ಎತ್ತರದ ಮನ
ಷ್ಯರಾದ ಸೆಬಾಯರೂ ನಿಮ್ಮಲ್ಲಿಗೆ ಸೇರಿ ನಿಮ್ಮ
ರಾಗಿ ನಿಮ್ಮನ್ನು ಅನುಸರಿಸುವರು; ಸಂಕೋ
ಗಳನ್ನು ಕಟ್ಟಿಕೊಂಡು ಬಂದು ನಿಮ್ಮ ಮುಂದೆ ಅಡ್ಡ
ಬಿದ್ದು ಹೀಗೆ ಅರಿಕೆಮಾಡುವರು—ದೇವರು ನಿಜವಾಗಿ
ನಿಮ್ಮಲ್ಲಿದ್ದಾನೆ. ಇನ್ನು ಯಾವ ದೇವರೂ ಇಲ್ಲವೆ
ಇಲ್ಲ. ಇಸ್ರಾಯೇಲ್ಯರ ದೇವರೇ, ರಕ್ಷಕನೇ, ನಿಶ್ಚಯ
ವಾಗಿಯೂ ನೀನು ಮರೆಮಾಡಿಕೊಳ್ಳುವ ದೇವರಾಗಿ
ದ್ದೀ. ಮೂರ್ತಿಗಳನ್ನುಂಟುಮಾಡುವವರೆಲ್ಲರೂ ನಾ
ಕೆಗೀಡಾಗಿ ಮಾನಭಂಗಪಡುವರು, ಹೌದು, ಒಟ್ಟಿಗೆ
ಅವಮಾನದಲ್ಲಿ ಮುಣುಗುವರು. ಇಸ್ರಾಯೇಲಿಗೋ
ಯೆಹೋವನಿಂದ ಶಾಶ್ವತರಕ್ಷಣೆ ದೊರೆಯುವದು
ಯುಗಯುಗಾಂತರಕ್ಕೂ ನೀವು ನಾಚಿಕೆಗೀಡಾಗು
ವದಿಲ್ಲ, ಮಾನಭಂಗಪಡುವದಿಲ್ಲ.

### ಯೆಹೋವನು ದಿಗಂತಗಳವರನ್ನು ತನ್ನ ಕಡೆಗೆ ಕರೆಯುವದು.

ಆಕಾಶಮಂಡಲವನ್ನು ಸೃಷ್ಟಿಸಿದ ಯೆಹೋವನ
ಮಾತನ್ನು ಕೇಳಿರಿ; ಆತನೇ ದೇವರು, ಭೂಲೋಕ
ವನ್ನು ನಿರ್ಮಿಸಿ ರೂಪಿಸಿ ಸ್ಥಾಪಿಸಿದನು; ಅದನ್ನು
ಶೂನ್ಯಸ್ಥಾನವಾಗಿರಲೆಂದು ಸೃಷ್ಟಿಸದೆ ಜನನಿವಾಸ
ಕ್ಕಾಗಿಯೇ ರೂಪಿಸಿದನು. ಈತನು ಹೀಗನ್ನುತ್ತಾ
ನೆ—ನಾನೇ ಯೆಹೋವನು, ಇನ್ನು ಯಾವನೂ ಅಲ್ಲ
ನಾನು ರಹಸ್ಯದಲ್ಲಿ ನುಡಿದವನಲ್ಲ, ತಮೋಲೋಕ
ದೊಳಗಿಂದ ಮಾತಾಡಿದವನಲ್ಲ, ಶೂನ್ಯವನ್ನೋ
ಎಂಬಂತೆ ನನ್ನನ್ನು ಹುಡುಕಿರಿ ಎಂದು ಯಾಕೋ

ವಂಶದವರಿಗೆ ನಾನು ಅಪ್ಪಣೆಕೊಡಲಿಲ್ಲ. ಯೆಹೋ
ವನೆಂಬ ನಾನು ಸತ್ಯಾನುಸಾರ ನುಡಿಯುವವನು,
ನೆಟ್ಟನೆಯ ಮಾತುಗಳನ್ನೇ ಆಡುತ್ತೇನೆ. ತಪ್ಪಿಸಿ
ಕೊಂಡ ಅನ್ಯಜನರೇ, ನೆರೆದು ಬನ್ನಿರಿ; ಒಟ್ಟಿಗೆ ಸಮೀ
ಪಿಸಿರಿ! ತಮ್ಮ ಮರದ ಬೊಂಬೆಯನ್ನು ಹೊತ್ತು
ಕೊಂಡು ರಕ್ಷಿಸಲಾರದ ಆ ದೇವರಿಗೆ ಬಿನ್ನಯಿಸು
ವವರು ಏನೂ ತಿಳಿಯದವರಾಗಿದ್ದಾರೆ. ಹೇಳಿರಿ,
ನಿಮ್ಮ ನ್ಯಾಯಗಳನ್ನು ಮುಂದಕ್ಕೆ ತನ್ನಿರಿ, 1)ನಿಮ್ಮ
ದೇವರುಗಳು ತಮ್ಮತಮ್ಮೊಳಗೆ ಆಲೋಚಿಸಿಕೊ
ಳ್ಳಲಿ. ಪೂರ್ವದಿಂದಲೂ ಈ ಸಂಗತಿಯನ್ನು ಪ್ರಕಟಿ
ಸಿದವರು ಯಾರು? ಅದು ನಡೆಯುವದಕ್ಕೆ ಮುಂಚೆ
ಯಾರು ತಿಳಿಸಿದರು? ಯೆಹೋವನೆಂಬ ನಾನಲ್ಲವೆ.
ನಾನು ಹೊರತು ಇನ್ನು ಯಾವ ದೇವರೂ ಇಲ್ಲ,
ನನ್ನ ವಿನಹ ಸತ್ಯಸ್ವರೂಪನೂ ರಕ್ಷಕನೂ ಆದ
ದೇವರು ಇಲ್ಲವೇ ಇಲ್ಲ. ಎಲ್ಲಾ ದಿಗಂತಗಳವರೇ,
ನನ್ನ ಕಡೆಗೆ ತಿರುಗಿಕೊಳ್ಳಿರಿ, ರಕ್ಷಣೆಯನ್ನು ಹೊಂದಿ
ಕೊಳ್ಳಿರಿ; ನಾನೇ ದೇವರು, ಇನ್ನು ಯಾರೂ ಇಲ್ಲ.
ಎಲ್ಲರೂ ನನಗೆ ಅಡ್ಡಬೀಳುವರು, ಎಲ್ಲರೂ ನನ್ನನ್ನು
ದೇವರೆಂದು ಪ್ರತಿಜ್ಞೆಮಾಡುವರು ಎಂಬ ನುಡಿ ನನ್ನ
ಸತ್ಯದ ಬಾಯಿಂದ ಹೊರಟಿದೆ, ಅದನ್ನು ಹಿಂತೆಗೆ
ಯೆನು, ನನ್ನ ಮೇಲೆ ಆಣೆಯಿಟ್ಟಿದ್ದೇನೆ. ಯೆಹೋ
ವನಲ್ಲಿ ಮಾತ್ರ ಸತ್ಯಕಾರ್ಯಗಳೂ ಶಕ್ತಿಯೂ
ಉಂಟು; ಆತನ ಮೇಲೆ ಉರಿಗೊಂಡವರೆಲ್ಲರೂ ನಾಚಿ
ಕೆಪಟ್ಟು ಆತನನ್ನು ಮರೆಹೊಗುವರು; ಇಸ್ರಾಯೇ
ಲಿನ ಸಮಸ್ತಸಂತತಿಯವರೂ ಯೆಹೋವನ ಮೂಲಕ
2)ಸತ್ಯವಂತರಾಗಿ ಆತನಲ್ಲಿ ಆನಂದಿಸುವರು ಎಂದು
ನನ್ನ ವಿಷಯವಾಗಿ ಜನರು ಅಂದುಕೊಳ್ಳುತ್ತಾರೆ.

ಬಾಬೆಲಿನ ನಾಶನ. 46—48.

ಬಾಬೆಲಿನ ದೇವತೆಗಳ ಅಶಕ್ತಿ. ಯೆಹೋವನ ಸರ್ವಶಕ್ತಿ.

**6** ಬೇಲ್ ದೇವತೆಯು ಬೊಗ್ಗಿದೆ, ನೆಬೋ ದೇವ
ತೆಯು ಕುಗ್ಗಿದೆ, ಅವುಗಳ ಬೊಂಬೆಗಳು ದನ
ಮೊದಲಾದವುಗಳ ಮೇಲೆ ಹೊರಿಸಲ್ಪಟ್ಟಿವೆ, ನೀವು
ಮೆರವಣಿಗೆಯಾಗಿ ಹೊರುತ್ತಿದ್ದವುಗಳು ಪಶುಗಳಿಗೆ
ಭಾರವಾದ ಹೊರೆಯಾಗಿ ಅವುಗಳನ್ನು ಬಳಲಿಸಿವೆ.
ಒಟ್ಟಿಗೆ ಕುಗ್ಗಿ ಬೊಗ್ಗಿವೆ, ತಮ್ಮ ಮೇಲೆ ಬಿದ್ದ ಭಾರ
ವನ್ನು ಹೊತ್ತು ನಿರ್ವಹಿಸಲಾರದೆ ತಾವೇ ಸೆರೆಗೆ
ಹೋಗಿವೆ.
ಯಾಕೋಬವಂಶವೇ, ಇಸ್ರಾಯೇಲ್‌ಸಂತಾನಶೇಷ
ವೇ, ನನ್ನ ಮಾತಿಗೆ ಕಿವಿಗೊಡಿರಿ; ನಿಮ್ಮನ್ನು ಗರ್ಭ
ದಿಂದ ಹೊರುತ್ತಿದ್ದೇನೆ, ಹುಟ್ಟಿದಂದಿನಿಂದ ವಹಿಸು
ತ್ತಿದ್ದೇನೆ; ನಿಮ್ಮ ಮುಪ್ಪಿನ ತನಕ ನಾನೇ ಆಧಾರ,
ನರೆಬಂದಾಗಲೂ ನಿಮ್ಮನ್ನು ಹೊತ್ತು ಸಹಿಸುವೆನು;
ನಾನೇ ಉಂಟುಮಾಡಿದೆನು, ನಾನೇ ಹೊರುವೆನು,
ಹೌದು, ನಿಮ್ಮನ್ನು ಹೊತ್ತು ಸಹಿಸಿ ನಿರ್ವಹಿಸುವೆನು.
ನನ್ನನ್ನು ಯಾರಿಗೆ ಸರಿಕಟ್ಟಿ ಹೋಲಿಸೀರಿ, ಇಬ್ಬರೂ
ಸಮಾನರೆಂದು ನನ್ನನ್ನು ಯಾರೊಡನೆ ಸಮಮಾ
ಡೀರಿ? ಚೀಲದಿಂದ ಚಿನ್ನವನ್ನು ಸುರಿದು ತ್ರಾಸಿನಲ್ಲಿ 6
ಬೆಳ್ಳಿಯನ್ನು ತೂಗಿ ಅಕ್ಕಸಾಲಿಗನಿಗೆ ಕೊಟ್ಟು ಕೂಲಿ
ಗೊತ್ತುಮಾಡಿ ದೇವರನ್ನು ಮಾಡಿಸಿ ಅದಕ್ಕೆ ಎರಗಿ
ಪೂಜೆಮಾಡುವರು. ಅದನ್ನು ಹೆಗಲ ಮೇಲೆ ಹೊತ್ತು 7
ಕೊಂಡು ಮೆರವಣಿಗೆ ಮಾಡಿ ಪೀಠದ ಮೇಲೆ ಇಳಿಸಿ
ನಿಲ್ಲಿಸುವರು. ಅದು ಅಲ್ಲಿಂದ ಜರಗದು, ಒಬ್ಬನು
ಕೂಗಿಕೊಂಡರೂ ಉತ್ತರಕೊಟ್ಟು ಕಷ್ಟದಿಂದ ಅವ
ನನ್ನು ಬಿಡಿಸಲಾರದು.
ದ್ರೋಹಿಗಳೇ, ಇದನ್ನು ಜ್ಞಾಪಕದಲ್ಲಿಟ್ಟುಕೊಂಡು 8
ಗಮನಿಸಿ 3)ಮನುಷ್ಯರಿಗೆ ತಕ್ಕಂತೆ ನಡೆಯಿರಿ! ಪುರಾ 9
ತನದ ಹಳೇ ಸಂಗತಿಗಳನ್ನು ಜ್ಞಾಪಿಸಿಕೊಳ್ಳಿರಿ; ನಾನೇ
ದೇವರು, ಇನ್ನು ಯಾರೂ ಅಲ್ಲ; ನಾನೇ ಪರಮ
ದೇವರು, ನನಗೆ ಸರಿಸಮಾನರಿಲ್ಲ. ಆರಂಭದಲ್ಲಿಯೇ 10
ಅಂತ್ಯವನ್ನು ತಿಳಿಸಿದ್ದೇನೆ; ನನ್ನ ಸಂಕಲ್ಪವು ನಿಲ್ಲು
ವದು, ನನ್ನ ಇಷ್ಟಾರ್ಥವನ್ನೆಲ್ಲಾ ನೆರವೇರಿಸುವೆನು
ಎಂದು ಹೇಳಿ ಇನ್ನೂ ನಡೆಯದಿರುವ ಕಾರ್ಯ
ಗಳನ್ನು ಪುರಾತನಕಾಲದಲ್ಲಿಯೇ ಅರುಹಿದ್ದೇನೆ;
ಮೂಡಲಿಂದ ಹದ್ದು ಎರಗಲಿ ಎಂದು, ಅಂದರೆ ನನ್ನ 11
ಸಂಕಲ್ಪವನ್ನು ನೆರವೇರಿಸತಕ್ಕವನು ದೂರದೇಶದಿಂದ
ಬರಲಿ ಎಂದು ಕೂಗಿದ್ದೇನೆ; ನಾನು ನುಡಿದಿದ್ದೇನೆ,
ಈಡೇರಿಸುವೆನು; ಆಲೋಚಿಸಿದ್ದೇನೆ, ಸಾಧಿಸುವೆನು.
ಧರ್ಮಕ್ಕೆ ದೂರರಾದ ಹಟಗಾರರೇ, ನನ್ನ ಮಾತಿಗೆ 12
ಕಿವಿಗೊಡಿರಿ; ನನ್ನ ಧರ್ಮವನ್ನು ಹತ್ತಿರಕ್ಕೆ ಬರ 13
ಮಾಡುವೆನು, ಅದು ಇನ್ನು ದೂರವಾಗಿರದು, ನನ್ನ
ರಕ್ಷಣೆಯು ತಡವಾಗದು; 4)ಚೀಯೋನಿನಲ್ಲಿ ರಕ್ಷಣಾ
ಕಾರ್ಯವನ್ನು ನಡಿಸಿ ಇಸ್ರಾಯೇಲಿಗೆ ನನ್ನ ಮಹಿ
ಮೆಯನ್ನು ದಯಪಾಲಿಸುವೆನು.

ಬಾಬೆಲನ್ನು ಹೀನೈಸುವ ಗೀತೆ.

**47** ಯುವತಿಯೇ, ಬಾಬೆಲ್‌ಪುರಿಯೇ, ಕೆಳಕ್ಕಿಳಿದು ದೂಳಲ್ಲಿ ಕೂತುಕೋ,
ಕಸ್ದೀಯರ ನಗರಿಯೇ, ಸಿಂಹಾಸನರಹಿತಳಾಗಿ ನೆಲದ ಮೇಲೆ ಕುಕ್ಕರಿಸು!
ನೀನು ಇನ್ನು ಕೋಮಲೆ, ಸುಕುಮಾರಿ, ಎಂದು ಎನಿಸಿಕೊಳ್ಳೆ.
ಬೀಸುವ ಕಲ್ಲನ್ನು ಹಿಡಿದು ಹಿಟ್ಟು ಬೀಸು, 2
ಮುಸುಕನ್ನು ತೆಗೆದುಹಾಕಿ ಈಜಾಡುವ ನೆರಿಗೆಯನ್ನು ಹರಿದುಬಿಟ್ಟು
ಬೆತ್ತಲೆಕಾಲಾಗಿ ಹೊಳೆಗಳನ್ನು ದಾದುಹೋಗು.
ನಿನ್ನ ಮಾನವು ಬೈಲಿಗೆ ಬಿದ್ದು ನೀನು ನಾಚಿಕೆಗೀಡಾಗುವಿ, 3
ನಾನು ಯಾರನ್ನೂ ಕರುಣಿಸದೆ ಮುಯ್ಯಿತೀರಿಸುವೆನು.
ನಮ್ಮ ವಿಮೋಚಕನಿಗೆ ಸೇನಾಧೀಶ್ವರನಾದ ಯೆಹೋವನೆಂಬ ನಾಮಧೇಯ, 4

1) ಮೂಲ: ಅವರು. 2) ಅಥವಾ: ಸತ್ಯವಂತರೆಂದು ನಿರ್ಣಯಿಸಲ್ಪಟ್ಟು. 3) ಮೂಲವು ಅಸ್ಪಷ್ಟ; ಪಾಠಾಂತರ: ...ಾಡಿರಿ. 4) ಅಥವಾ: ನನ್ನ ಮಹಿಮೆಯಾಗಿರುವ ಇಸ್ರಾಯೇಲಿಗೋಸ್ಕರ ಚೀಯೋನಿನಲ್ಲಿ ರಕ್ಷಣೆಯನ್ನು ಉಂಟುಮಾಡುವೆನು.

ಆತನೇ ಇಸ್ರಾಯೇಲ್ಯರ ಸದಮಲಸ್ವಾಮಿ!
5 ಕಸ್ದೀಯರ ನಗರಿಯೇ, ಮೌನವಾಗಿ ಕೂತುಕೋ,
ಕತ್ತಲೊಳಗೆ ಹೋಗು,
ನೀನು ಇನ್ನು ರಾಜ್ಯಗಳ ರಾಣಿ ಎನಿಸಿಕೊಳ್ಳೆ.
6 ನಾನು ನನ್ನ ಜನರ ಮೇಲೆ ರೋಷಗೊಂಡು
ಅವರನ್ನು ನಿನ್ನ ಕೈವಶ ಮಾಡಿ
ನನ್ನ ಸ್ವಾಸ್ತ್ಯವನ್ನು ಹೊಲೆಗೆಡಿಸಿದೆನು;
ನೀನು ಅವರನ್ನು ಹೇಗೂ ಕರುಣಿಸದೆ
ಮುದುಕರ ಮೇಲೆಯೂ ಬಹುಭಾರವಾದ ನೊಗ
ವನ್ನು ಹೊರಿಸಿದಿ.
7 ನಾನು ಶಾಶ್ವತವಾದ ರಾಣಿ ಎಂದು ನೀನು
ಅಂದುಕೊಂಡು
ಅವರ ಹಿಂಸೆಗಳನ್ನು ಮನಸ್ಸಿಗೆ ತಾರದೆ
ಅವುಗಳಿಂದ ನಿನಗಾಗುವ ಪರಿಣಾಮವನ್ನು ನೆನಸಿ
ಕೊಳ್ಳಲಿಲ್ಲ.
8 ನಾನೇ ಇರುವವಳು, ನನ್ನ ಹೊರತು ಇನ್ನು
ಯಾರೂ ಇಲ್ಲ,
ನಾನು ವಿಧವೆಯಾಗಿ ಕೂತುಕೊಳ್ಳುವದಿಲ್ಲ,
ಪುತ್ರಶೋಕವನ್ನು ಅನುಭವಿಸುವದಿಲ್ಲ ಅಂದು
ಕೊಳ್ಳುವವಳೇ,
ಭೋಗಾಸಕ್ತಳೇ, ನೆಮ್ಮದಿಯಾಗಿ ನೆಲೆಗೊಂಡಿರು
ವವಳೇ, ಈಗ ಇದನ್ನು ಕೇಳು—
9 ಒಂದೇ ದಿನದೊಳಗೆ, ಒಂದು ಕ್ಷಣದಲ್ಲಿ, ಪುತ್ರ
ಶೋಕ, ವೈಧವ್ಯ, ಇವೆರಡೂ ನಿನಗುಂಟಾಗು
ವವು;
ನೀನು ಎಷ್ಟು ಮಾಟಮಾಡಿದರೂ
ಎಷ್ಟೇ ಮಂತ್ರತಂತ್ರಗಳನ್ನು ನಡಿಸಿದರೂ
ಇವುಗಳನ್ನು ಸಂಪೂರ್ಣವಾಗಿ ಅನುಭವಿಸುವಿ.
10 ನೀನು ಮಾಡಿದ 1)ಕೇಡಿಗೆ ಭಯಪಡದೆ
ನನ್ನನ್ನು ಯಾರೂ ನೋಡರು ಎಂದುಕೊಂಡಿದ್ದೀ;
ನಿನ್ನ ಜ್ಞಾನವಿವೇಕಗಳು ನಿನ್ನನ್ನು ಸೊಟ್ಟಗೆ ತಿರು
ಗಿಸಿದ್ದರಿಂದ
ನಾನೇ ಇರುವವಳು, ನನ್ನ ಹೊರತು ಇನ್ನು
ಯಾರೂ ಇಲ್ಲವೆಂದು ಯೋಚಿಸಿಕೊಂಡಿದ್ದೀ.
11 ಹೀಗಿರಲು ನೀನು ಮಂತ್ರಿಸಿ ನಿವಾರಿಸಲಾರದ
ಕೇಡು ನಿನಗೆ ಸಂಭವಿಸುವದು,
ನೀನು ಪರಿಹರಿಸಲಾಗದ ವಿಪತ್ತು ನಿನ್ನ ಮೇಲೆ
ಬೀಳುವದು;
ನೀನು ತಪ್ಪಿಸಲರಿಯದ ನಾಶನವು ನಿನಗೇ
ತಟ್ಟನೆ ಉಂಟಾಗುವದು.
12 ಎದ್ದು ನಿಲ್ಲು, ನೀನು ಬಾಲ್ಯಾರಭ್ಯ ಪ್ರಯಾಸ
ಪಟ್ಟು ಅಭ್ಯಾಸಿಸಿರುವ
ನಿನ್ನ ಮಂತ್ರತಂತ್ರಗಳನ್ನೂ ಲೆಕ್ಕವಿಲ್ಲದ ನಿನ್ನ
ಮಾಟಗಳನ್ನೂ ಪ್ರಯೋಗಿಸು;
ಇದರಿಂದ ಒಂದು ವೇಳೆ ನಿನಗೆ ಪ್ರಯೋಜನವಾ
ದೀತು,
ಒಂದು ವೇಳೆ [ನಿನ್ನ ಶತ್ರುವಿನಲ್ಲಿ] ಭಯ
ಹುಟ್ಟೀತು.
13 ಮಂತ್ರಾಲೋಚನೆಗಳನ್ನು ಕೇಳಿ ಕೇಳಿ ನಿನಗೆ
ಸಾಕಾಯಿತಲ್ಲವೇ;
ಖಗೋಲಜ್ಞರು, ಜೋಯಿಸರು, 2)ಪಂಚಾಂಗದ
ವರು,
ಇವರೆಲ್ಲರೂ ನಿಂತು ನಿನಗೆ ಬರುವ ವಿಪತ್ತು
ಗಳಿಂದ ನಿನ್ನನ್ನು ಉದ್ಧರಿಸಲಿ.
14 ಆಹಾ, ಇವರೆಲ್ಲಾ ಕೂಳೆಯಂತಿರುವರು,
ಬೆಂಕಿಯು ಅವರನ್ನು ಸುಟ್ಟುಬಿಡುವದು,
ಜ್ವಾಲೆಯ ರಭಸದಿಂದ ತಮ್ಮನ್ನು ರಕ್ಷಿಸಿಕೊಳ್ಳ
ಲಾರರು;
ಅದು ಕಾಯಿಸಿಕೊಳ್ಳುವ ಕೆಂಡವಲ್ಲ,
ಮುಂದೆ ಕುಳಿತರೆ ಹಾಯಾಗಿರುವ ಉರಿಯಲ್ಲ.
15 ನೀನು ಪ್ರಯಾಸಪಟ್ಟವುಗಳೆಲ್ಲಾ ನಿನಗೆ ಹೀಗಾ
ಗುವವು;
ನಿನ್ನ ಬಾಲ್ಯದಿಂದ ನಿನ್ನಲ್ಲಿ ವ್ಯಾಪಾರಮಾಡಿದವ
ರೆಲ್ಲರೂ ಚದರಿ
ತಮ್ಮ ತಮ್ಮ ಪ್ರಾಂತಕ್ಕೆ ಹೋಗಿಬಿಡುವರು;
ನಿನ್ನನ್ನು ರಕ್ಷಿಸಲು ಒಬ್ಬನೂ ಇರನು.

ಹಿಂದಿನ ಎಂಟು ಅಧ್ಯಾಯಗಳ ಸಾರಾಂಶ.

48 ಇಸ್ರಾಯೇಲೆಂಬ ಹೆಸರಿನವರೂ 3)ಯೆಹೂದ
ವಂಶೋತ್ಪನ್ನರೂ ಆದ ಯಾಕೋಬನ ಮನೆತನ
ದವರೇ, ನೀವು ಯೆಹೋವನ ನಾಮದ ಮೇಲೆ ಆಣೆ
ಯಿಟ್ಟು ಇಸ್ರಾಯೇಲಿನ ದೇವರನ್ನು ಸ್ಮರಿಸುತ್ತೀರಿ.
ನಿಜ, ಆದರೆ ಈ ನಿಮ್ಮ ಕಾರ್ಯಗಳು ಸತ್ಯಕ್ಕೂ
ಧರ್ಮಕ್ಕೂ ಅನುಸಾರವಾಗಿಲ್ಲ. ಇವರು ತಮ್ಮನ್ನು
ಪರಿಶುದ್ಧ ಪಟ್ಟಣದವರು ಎಂದುಕೊಂಡು ದೇವರು
ಇಸ್ರಾಯೇಲಿನವನೇ ಎಂದು ಆತನ ಮೇಲೆ ಭರವಸ
ವಿಟ್ಟುಕೊಂಡಿರುತ್ತಾರೆ. ಆತನ ಹೆಸರೋ ಸಕಲ
ಸೈನ್ಯಗಳ ಅಧೀಶ್ವರನಾದ ಯೆಹೋವನೆಂಬದು.
ಯಾಕೋಬನ ಮನೆತನವೇ, ಕೇಳು, ಈ ವರೆಗೂ
ನಡೆದ ಸಂಗತಿಗಳನ್ನು ಪುರಾತನಕಾಲದಲ್ಲಿಯೇ
ತಿಳಿಸಿದೆನು; ಹೌದು, ನನ್ನ ಬಾಯಿಂದ ಹೊರಟವು,
ಪ್ರಕಟಿಸಿದೆನು; ನಾನು ತಟ್ಟನೆ ನಡಿಸಲು ನೆರವೇರಿ
ದವು. ನೀನು ಹಟಗಾರ, ನಿನ್ನ ಕತ್ತಿನ ನರವು ಕಬ್ಬಿಣ,
ನಿನ್ನ ಹಣೆ ತಾಮ್ರ ಎಂದು ನಾನು ತಿಳಿದುಕೊಂಡೆನು;
ಆದರಿಂದಲೇ ಈ ಕಾರ್ಯಗಳನ್ನು ನನ್ನ ವಿಗ್ರಹವು
ನಡಿಸಿದೆ, ನನ್ನ ಕೆತ್ತಿದ ಬೊಂಬೆ, ಎರಕದ ಪುತ್ತಳಿ
ಇವುಗಳನ್ನು ವಿಧಿಸಿದೆ ಎಂದು ನೀನು ಹೇಳಿಕೊಳ್ಳ
ದಂತೆ ನಾನು ಪುರಾತನಕಾಲದಲ್ಲಿಯೇ ತಿಳಿಸಿದೆನು,
ನಡೆಯುವದಕ್ಕೆ ಮುಂಚೆಯೇ ಪ್ರಕಟಿಸಿದೆನು. [ಆಗ
ಲೇ] ಕೇಳಿದಿಯಲ್ಲಾ, [ಈಗ] ನಡೆದದ್ದನ್ನೆಲ್ಲಾ ನೋ
ಡು, ನಿನ್ನವರೇ ಪ್ರಸಿದ್ಧಿಪಡಿಸಲಿ, ಇಂದಿನಿಂದ ಹೊಸ

1) ಅಥವಾ: ಕೇಡಿನಲ್ಲಿ ನಂಬಿಕೆಯಿಟ್ಟು. 2) ಮೂಲ: ಮಾಸಫಲಸೂಚಕರು. 3) ಮೂಲ: ಯೆಹೂದವೆಂಬ ಒರತೆಯಿ
ಉಕ್ಕಿಬಂದವರೂ.

ಸಂಗತಿಗಳನ್ನು, ನೀನು ತಿಳಿಯದಿದ್ದ ಗುಪ್ತವಿಷಯ
ಗಳನ್ನು, ನಿನಗೆ ಅರುಹುತ್ತೇನೆ. ಈಗಲೇ ಉಂಟಾ
ಗುತ್ತಿವೆ, ಪುರಾತನಕಾಲದಲ್ಲಿ ಆಗಿಲ್ಲ; ಆಹಾ, ಮೊ
ದಲೇ ನಾನು ತಿಳಿದುಕೊಂಡಿದ್ದೆನು ಎಂದು ನೀನು
ಅಂದುಕೊಳ್ಳದ ಹಾಗೆ ಈ ದಿನಕ್ಕೆ ಮುಂಚೆ ನಾನು
ನಿನಗೆ ಕೇಳಗೊಡಿಸಲಿಲ್ಲ. ನೀನು ಕೇಳಿಲ್ಲ, ತಿಳಿದೂ
ಇಲ್ಲ, ಪುರಾತನಕಾಲದಿಂದ ನಿನ್ನ ಕಿವಿಯು ತೆರೆದೇ
ಇಲ್ಲ; ನೀನು ದೊಡ್ಡ ವಂಚಕನು, ಆಗರ್ಭದ್ರೋಹಿ
ಎನಿಸಿಕೊಂಡವನು ಎಂದು ನಾನು ತಿಳಿದುಕೊಂಡಿದ್ದೆ
ನಷ್ಟೆ. ನನ್ನ ಹೆಸರು ಕೆಡದಂತೆ ನಿನ್ನ ಮೇಲಣ
ಕೋಪವನ್ನು ತಡೆದು ನನ್ನ ಕೀರ್ತಿಗೆ ಕಳಂಕಬಾರ
ದಂತೆ ನಿನ್ನನ್ನು ನಿರ್ಮೂಲಮಾಡದೆ ತಾಳಿಕೊಳ್ಳು
ವೆನು. ನೋಡು, ನಿನ್ನನ್ನು ಶೋಧಿಸಿದ್ದೇನೆ, ಆದರೆ
ಬೆಳ್ಳಿಯಷ್ಟು ಶೋಧಿಸಲಿಲ್ಲ; ಸಂಕಟವೆಂಬ ಪುಟಕ್ಕೆ
ಹಾಕಿ ನಿನ್ನನ್ನು ಪರೀಕ್ಷಿಸಿದ್ದೇನೆ. ನನಗಾಗಿ, ನನ
ಗೋಸ್ಕರವೇ, ಇದನ್ನು ಮಾಡುವೆನು; ನನ್ನ ಹೆಸರು
ಕೆಡಬಾರದಷ್ಟೆ; ನನ್ನ ಮಹಿಮೆಯನ್ನು ಮತ್ತೊಬ್ಬ
ನಿಗೆ ಸಲ್ಲಗೊಡಿಸೆನು.

ಯಾಕೋಬೇ, ನಾನು ಕರೆದ ಇಸ್ರಾಯೇಲೇ,
ನನ್ನ ಕಡೆಗೆ ಕಿವಿಗೊಡು; ನಾನೇ ಪರಮಾತ್ಮನು;
ನಾನೇ ಆದಿ, ಅಂತವೂ ನಾನೇ. ನನ್ನ ಕೈ ಭೂಮಿಗೆ
ಅಸ್ತಿವಾರವನ್ನು ಹಾಕಿತು, ನನ್ನ ಬಲಗೈ ಆಕಾಶವನ್ನು
ಹರಡಿತು, ನಾನು ಕರೆದ ಕೂಡಲೆ ಅವೆರಡೂ ಸಿದ್ಧ
ವಾಗಿ ನಿಲ್ಲುವವು. ನೀವೆಲ್ಲರು ಕೂಡಿಕೊಂಡು
ಕೇಳಿರಿ! ಇವರಲ್ಲಿನ ಯಾವ ದೇವರು ಈ ಸಂಗತಿಗ
ಳನ್ನು ಅರುಹಿದ್ದಾನೆ? ಯೆಹೋವನ ಪ್ರೀತಿಪಾತ್ರನು
ಬಾಬೆಲಿನಲ್ಲಿ ಆತನ ಇಷ್ಟವನ್ನು ನೆರವೇರಿಸುವನು,
ಕಸ್ದೀಯರ ಮೇಲೆ ಕೈಮಾಡುವನು. ನಾನೇ, ನಾನೇ
ಬಾಯಿಬಿಟ್ಟು ಅವನನ್ನು ಕರೆದು ಬರಮಾಡಿದ್ದೇನೆ;
ಅವನ ಮಾರ್ಗವು ಸಾರ್ಥಕವಾಗುವದು. ನನ್ನ
ಬಳಿಗೆ ಬಂದು ಇದನ್ನು ಕೇಳಿರಿ; ಆದಿಯಿಂದಲೂ
ನಾನು ಗುಟ್ಟಾಗಿ ಮಾತಾಡಲಿಲ್ಲ, [ಭೂಮಿಯು]
ಉಂಟಾದಂದಿನಿಂದ ಅಲ್ಲಿ ಇದ್ದೇನೆ. (ಈಗ ಯೆಹೋ
ವನೆಂಬ ದೇವರು ತನ್ನ ಆತ್ಮದೊಡನೆ ನನ್ನನ್ನು ಕಳು
ಹಿಸಿದ್ದಾನೆ.) ನಿನ್ನ ವಿಮೋಚಕನೂ ಇಸ್ರಾಯೇಲ್ಯರ
ಸದಮಲಸ್ವಾಮಿಯೂ ಆದ ಯೆಹೋವನು ಹೀಗನ್ನು
ತ್ತಾನೆ—ನಾನೇ ನಿನ್ನ ದೇವರಾದ ಯೆಹೋವನು,
ನಿನಗೆ ವೃದ್ಧಿಮಾರ್ಗವನ್ನು ಬೋಧಿಸಿ ನೀನು ನಡೆಯ
ಬೇಕಾದ ದಾರಿಯಲ್ಲಿ ನಿನ್ನನ್ನು ನಡೆಯಿಸುವವನಾಗಿ
ದ್ದೇನೆ. ನೀನು ನನ್ನ ಆಜ್ಞೆಗಳನ್ನು ಕೇಳಿದ್ದರೆ ಎಷ್ಟೋ
ಚೆನ್ನಾಗಿತ್ತು! ನಿನ್ನ ಸುಖವು ದೊಡ್ಡ ನದಿಯಂತೆಯೂ
ನಿನ್ನ 1)ಕ್ಷೇಮವು ಸಮುದ್ರದ ಅಲೆಗಳ ಹಾಗೂ ಇರು
ತ್ತಿದ್ದವು; ನಿನ್ನ ಸಂತತಿಯವರು ಮರಳಿನೋಪಾದಿ
ಯಲ್ಲಿಯೂ ನಿನ್ನ ಹೊಟ್ಟೆಯಲ್ಲಿ ಹುಟ್ಟಿದವರು ಉಸು
ಬಿನ ಅಣುರೇಣುಗಳ ಪ್ರಕಾರವೂ ಅಸಂಖ್ಯಾತರಾಗುತ್ತಿ
ದ್ದರು; ಅವರ ಹೆಸರು ನನ್ನ ಮುಂದೆ ನಿರ್ಮೂಲ
ವಾಗಿ ಹಾಳಾಗುತ್ತಿರಲಿಲ್ಲ.

ಬಾಬೆಲಿನಿಂದ ಹೊರಡಿರಿ, ಕಸ್ದೀಯರ ಕಡೆಯಿಂದ 20
ಹಾರಿಹೋಗಿರಿ; ಹರ್ಷಧ್ವನಿಯಿಂದ ಇದನ್ನು ತಿಳಿಸಿರಿ,
ಪ್ರಕಟಿಸಿರಿ, ಭೂಮಿಯ ಕಟ್ಟಕಡೆಯ ವರೆಗೂ ಪ್ರಚಾ
ರಪಡಿಸಿರಿ; ಯೆಹೋವನು ತನ್ನ ಸೇವಕನಾದ ಯಾ
ಕೋಬನ್ನು ವಿಮೋಚಿಸಿದ್ದಾನೆಂದು ಹೇಳಿರಿ. ಆತನು 21
ಅವರನ್ನು ಮರುಭೂಮಿಯಲ್ಲಿ ನಡಿಸಿದಾಗ ಅವರು
ದಾಹಗೊಳ್ಳಲಿಲ್ಲ; ಅವರಿಗಾಗಿ ನೀರನ್ನು ಕಲ್ಲಿನೊಳ
ಗಿಂದ ಹರಿಸಿದನು. ಆತನು ಬಂಡೆಯನ್ನು ಸೀಳಲು
ಜಲಪಾತವಾಯಿತು. ದುಷ್ಟರಿಗೆ ಸಮಾಧಾನವೇ 22
ಇಲ್ಲ ಎಂದು ಯೆಹೋವನು ನುಡಿಯುತ್ತಾನೆ.

### ಯೆಹೋವನ ಸೇವಕನ ಶ್ರೇಷ್ಠಕರ್ತವ್ಯ.

ದ್ವೀಪನಿವಾಸಿಗಳೇ, ನನ್ನ ಕಡೆಗೆ ಕಿವಿಗೊಡಿರಿ, 49
ದೂರದ ಜನಾಂಗಗಳೇ, ಆಲಿಸಿರಿ! ನಾನು ಗರ್ಭದ
ಲ್ಲಿದ್ದಾಗಲೇ ಯೆಹೋವನು ನನ್ನನ್ನು ಕರೆದನು,
ತಾಯಿಯ ಉದರದಲ್ಲಿದ್ದಂದಿನಿಂದಲೂ ನನ್ನ ಹೆಸ
ರನ್ನು 2)ಹೇಳುತ್ತಿದ್ದಾನೆ. ನನ್ನ ಬಾಯನ್ನು ಹದ 2
ವಾದ ಖಡ್ಗವನ್ನಾಗಿ ಮಾಡಿ ತನ್ನ ಕೈಯ ನೆರಳಿನಲ್ಲಿ
ನನ್ನನ್ನು ಹುದುಗಿಸಿದ್ದಾನೆ; ನನ್ನನ್ನು 3)ಚೂಪಾದ
ಬಾಣವನ್ನಾಗಿ ರೂಪಿಸಿ ತನ್ನ ಬತ್ತಳಿಕೆಯಲ್ಲಿ ಮುಚ್ಚಿ
ಟ್ಟಿದ್ದಾನೆ. ಆತನು ನನಗೆ—ನೀನು ನನ್ನ ಸೇವಕನೂ 3
ನಾನು ಪ್ರಭಾವಹೊಂದಬೇಕಾದ ಇಸ್ರಾಯೇಲೂ
ಆಗಿದ್ದೀ ಎಂದು ಹೇಳಿದನು. ಅದಕ್ಕೆ ನಾನು—ನನ್ನ 4
ಪ್ರಯಾಸವು ವ್ಯರ್ಥ, ನನ್ನ ಶಕ್ತಿಯನ್ನೆಲ್ಲಾ ವ್ಯಯ
ಮಾಡಿದ್ದು ಹಾಳೇ, ಬರಿ ಗಾಳಿಯೇ; ಆದರೂ ನನ್ನ
ನ್ಯಾಯವು ಯೆಹೋವನಲ್ಲಿದೆ, ನನಗೆ ಲಾಭವು ನನ್ನ
ದೇವರಿಂದಲೇ ಆಗುವದು ಅಂದುಕೊಂಡೆನು. ಆಹಾ, 5
ನಾನು ಯೆಹೋವನ ದೃಷ್ಟಿಯಲ್ಲಿ ಮಾನ್ಯನು, ನನ್ನ
ದೇವರೇ ನನಗೆ ಬಲವು. ಯಾಕೋಬನ್ನು ತನಗೆ
ಸೇರಿಸಿಕೊಳ್ಳಬೇಕೆಂತಲೂ ಇಸ್ರಾಯೇಲು ತನ್ನ ಕಡೆಗೆ
ಕೂಡಿಬರಬೇಕೆಂತಲೂ ಆತನು ಗರ್ಭದಲ್ಲಿಯೇ
ನನ್ನನ್ನು ತನ್ನ ಸೇವಕನನ್ನಾಗಿ ರೂಪಿಸಿದ್ದಾನಲ್ಲವೆ.
ಆತನೇ ಈಗ ಹೀಗನ್ನುತ್ತಾನೆ—ನೀನು ನನ್ನ ಸೇವಕ 6
ನಾಗಿ ಮಾಡಬೇಕಾದವುಗಳಲ್ಲಿ ಯಾಕೋಬಿನ ಕುಲ
ಗಳನ್ನು ಉನ್ನತಪಡಿಸುವದೂ ಇಸ್ರಾಯೇಲಿನಲ್ಲಿ
ರಕ್ಷಿತರಾದವರನ್ನು ತಿರಿಗಿ ಬರಮಾಡುವದೂ ಅಲ್ಪ
ಕಾರ್ಯವೇ ಸರಿ; ನನ್ನ ರಕ್ಷಣೆಯು ಲೋಕದ ಕಟ್ಟ
ಕಡೆಯ ವರೆಗೆ ವ್ಯಾಪಿಸುವಂತೆ ನಿನ್ನನ್ನು ಅನ್ಯಜನಾಂಗ
ಗಳಿಗೂ ಬೆಳಕನ್ನಾಗಿ ದಯಪಾಲಿಸುವೆನು. ಮನಃ 7
ಪೂರ್ವಕವಾಗಿ ತಿರಸ್ಕರಿಸಲ್ಪಟ್ಟವನೂ ಅನ್ಯಜನಾಂಗಕ್ಕೆ
ಅಸಹ್ಯನೂ ಜನದೊಡೆಯರ ಸೇವಕನೂ ಆದವನಿಗೆ
ಇಸ್ರಾಯೇಲಿನ ವಿಮೋಚಕನೂ ಸದಮಲಸ್ವಾಮಿ
ಯೂ ಆದ ಯೆಹೋವನು ಹೀಗೆ ಹೇಳುತ್ತಾನೆ—
ಯೆಹೋವನ ಪ್ರಾಮಾಣಿಕತೆಯನ್ನೂ ಇಸ್ರಾಯೇಲಿನ
ಸದಮಲಸ್ವಾಮಿಯು ನಿನ್ನನ್ನು ಪರಿಗ್ರಹಿಸಿರುವ
ದನ್ನೂ ಅರಸರು ನೋಡಿ ಎದ್ದು ನಿಲ್ಲುವರು, ಅಧಿಪತಿ

1) ಅಥವಾ: ಧರ್ಮವು; ಅಥವಾ: ನೀತಿಫಲವು. 2) ಅಥವಾ: ನೆನಪಿನಲ್ಲಿಟ್ಟಿದ್ದಾನೆ. 3) ಅಥವಾ: ನುಣುಪಾದ.
ಲ: ಬೆಳಗಿಸಿದ.

8 ಗಳು ಅಡ್ಡಬೀಳುವರು. ಇದೇ ಯೆಹೋವನ ನುಡಿ—
ಈ ಪ್ರಸನ್ನತೆಯ ಕಾಲದಲ್ಲಿ ನಿನಗೆ ಸದುತ್ತರವನ್ನು
ದಯಪಾಲಿಸಿದ್ದೇನೆ, ಈ ರಕ್ಷಣೆಯ ದಿನದಲ್ಲಿ ನಿನಗೆ
ಸಹಾಯಮಾಡಿದ್ದೇನೆ; ನಾನು ನಿನ್ನನ್ನು ಕಾಪಾ
ಡುತ್ತಾ [ನನ್ನ] ಜನರಿಗೆ ಒಡಂಬಡಿಕೆಯ ಆಧಾರವ
9 ನ್ನಾಗಿ ನೇಮಿಸಿ ಬಂದಿಗಳಿಗೆ—ಹೊರಟುಹೋಗಿರಿ,
ಕತ್ತಲಲ್ಲಿರುವವರಿಗೆ—ಬೆಳಕಿಗೆ ಹೊರಡಿರಿ ಎಂದು
ಅಪ್ಪಣೆಕೊಟ್ಟು ಹಾಳಾಗಿದ್ದ ಸ್ವಾಸ್ತ್ಯಗಳನ್ನು ಅವ
ರಿಗೆ ಹಂಚಿ ದೇಶವನ್ನು ಜೀರ್ಣೋದ್ಧಾರಮಾಡುವೆನು.
ನನ್ನ ಜನವೆಂಬ ಹಿಂಡು ದಾರಿಗಳಲ್ಲಿ ಮೇಯುವದು.
ಎಲ್ಲಾ ಬೋಳುಬೆಟ್ಟಗಳೂ ಕೂಡ ಅದಕ್ಕೆ ಹುಲ್ಲು
10 ಗಾವಲಾಗುವವು. ಅವರಿಗೆ ಹಸಿವೆ ಬಾಯಾರಿಕೆಗಳು
ಆಗವು. ಝಳವೂ ಬಿಸಿಲೂ ಬಡಿಯವು; ಅವರನ್ನು
ಕರುಣಿಸುವಾತನು ದಾರಿತೋರಿಸುತ್ತಾ ನೀರುಕ್ಕುವ
11 ಒರತೆಗಳ ಬಳಿಯಲ್ಲಿ ನಡಿಸುವನು. ನನ್ನ ಸೃಷ್ಟಿಯ
ಬೆಟ್ಟಗಳನ್ನೆಲ್ಲಾ ಸಮದಾರಿಯನ್ನಾಗಿ ಮಾಡಿ ನನ್ನ
12 ರಾಜಮಾರ್ಗಗಳನ್ನು ಎತ್ತರಿಸುವೆನು. ಇಗೋ,
ಇವರು ದೂರದಿಂದ ಬರುತ್ತಾರೆ, ಇಗೋ, ಇವರು
ಬಡಗಲಿಂದ ಮತ್ತು ಪಡವಲಿಂದ, ಇವರು ಸೀನೀಮ್
ದೇಶದಿಂದ ಬರುತ್ತಿದ್ದಾರೆ.

13 ಆಕಾಶವೇ, ಹರ್ಷಧ್ವನಿಗೈ!
ಭೂಮಿಯೇ, ಉಲ್ಲಾಸಗೊಳ್ಳು!
ಪರ್ವತಗಳೇ, ಕೋಲಾಹಲಮಾಡಿರಿ!
ಯೆಹೋವನು ತನ್ನ ಪ್ರಜೆಯನ್ನು ಸಂತೈಸಿ
ದಿಕ್ಕಿಲ್ಲದ ತನ್ನ ಜನರನ್ನು ಕರುಣಿಸುತ್ತಿದ್ದಾನೆ.

ಚೀಯೋನೆಂಬ ತಾಯಿ ಕಳೆದುಕೊಂಡ ಮಕ್ಕಳ ಪುನರಾಗಮನ.

14 ಚೀಯೋನ್ ನಗರಿಯಾದರೋ—ಯೆಹೋವನು
ನನ್ನನ್ನು ಕೈಬಿಟ್ಟಿದ್ದಾನೆ, ಕರ್ತನು ನನ್ನನ್ನು ಮರೆತಿ
15 ದ್ದಾನಲ್ಲಾ ಅಂದುಕೊಂಡಳು. ಒಬ್ಬ ಹೆಂಗಸು
ತಾನು ಹೆತ್ತ ಮಗುವಿನ ಮೇಲೆ ಕರುಣೆಯಿಡದೆ ತನ್ನ
ಮೊಲೆಕೂಸನ್ನು ಮರೆತಾಳೇ? ಒಂದು ವೇಳೆ ಮರೆ
16 ತಾಳು; ನಾನಾದರೆ ನಿನ್ನನ್ನು ಮರೆಯೆ. ಇಗೋ, ನನ್ನ
ಅಂಗೈಗಳಲ್ಲಿ ನಿನ್ನನ್ನು ಚಿತ್ರಿಸಿದ್ದೇನೆ; ನಿನ್ನ ಪೌಳಿ
17 ಗೋಡೆಗಳು ಸದಾ ನನ್ನ ಕಣ್ಣೆದುರಿನಲ್ಲಿವೆ. 1)ನಿನ್ನ
ಮಕ್ಕಳು ತ್ವರೆಪಟ್ಟು ಬರುತ್ತಿದ್ದಾರೆ; ನಿನ್ನನ್ನು
ಕೆಡವಿ ಹಾಳುಮಾಡಿದವರು ನಿನ್ನೊಳಗಿಂದ ಹೊರಟು
18 ಹೋಗುತ್ತಾರೆ. ಕಣ್ಣೆತ್ತಿ ಸುತ್ತಲು ನೋಡು! ಇವ
ರೆಲ್ಲರೂ ಕೂಡಿಕೊಂಡು ನಿನ್ನ ಬಳಿಗೆ ಬರುತ್ತಿದ್ದಾರೆ.
ಯೆಹೋವನು ಹೀಗನ್ನುತ್ತಾನೆ—ನನ್ನ ಜೀವದಾಣೆ,
ನೀನು ಇವರನ್ನೆಲ್ಲಾ ಆಭರಣವನ್ನಾಗಿ ಧರಿಸಿಕೊಳ್ಳುವಿ,
ವಧುವು ಒಡ್ಯಾಣವನ್ನು ಕಟ್ಟಿಕೊಳ್ಳುವಂತೆ ನೀನು
19 ಇವರನ್ನು ಕಟ್ಟಿಕೊಳ್ಳುವಿ. ನಿನ್ನ ಹಾಳು ಪ್ರದೇಶ
ಗಳು, ನಿನ್ನ ಬೀಳು ಭೂಮಿಯು, ಕೆಟ್ಟುಹೋದ ನಿನ್ನ
ಸೀಮೆಯು ಇವುಗಳಿಗೆ ಏನಾಗುವದಂದರೆ—ನೋಡು,

ನಿನ್ನನ್ನು ನುಂಗಿದವರು ದೂರವಾಗುವರು, ನಿನ್ನ ನಿವಾ
ಸಿಗಳಿಗೆ ನೀನು ಸಂಕೋಚಸ್ಥಳವಾಗುವಿ. ಸಂತಾ
ನವನ್ನು ಕಳೆದುಕೊಂಡವಳಾದ ನಿನ್ನ ಮಕ್ಕಳು—
ಸ್ಥಳವು ನನಗೆ ಸಂಕೋಚ, ನಾನು ವಾಸಿಸುವದಕ್ಕೆ
ಸ್ಥಳವಾಗುವಂತೆ ಸರಿದುಕೋ ಎಂದು ಕೂಡಿಕೊಳ್ಳುವ
ಮಾತು ಇನ್ನು ಮೇಲೆ ನಿನ್ನ ಕಿವಿಗೆ ಬೀಳುವದು.
ಆಗ ನೀನು ನಿನ್ನ ಮನದೊಳಗೆ—2)ನನಗೋಸ್ಕರ
ಇವರನ್ನು ಯಾರು ಹೆತ್ತರು? ನಾನೋ ಮಕ್ಕಳನ್ನು
ಕಳೆದುಕೊಂಡವಳು, ಪುತ್ರಹೀನಳು, ದೇಶಭ್ರಷ್ಟಳು,
ತಿರುಕಳು; ಇವರನ್ನು ಸಾಕಿದವರು ಯಾರು? ಆಹಾ,
ನಾನು ಒಂಟಿಯಾಗಿ ಉಳಿದಿದ್ದೆನಲ್ಲಾ; ಇವರೆಲ್ಲಿದ್ದರು?
ಅಂದುಕೊಳ್ಳುವಿ.

ಕರ್ತನಾದ ಯೆಹೋವನು ಹೀಗನ್ನುತ್ತಾನೆ—
ಇಗೋ, ನಾನು ಜನಾಂಗಗಳಿಗೆ ಕೈಸನ್ನೆಮಾಡಿ
ದೇಶಾಂತರಗಳವರಿಗೆ ನನ್ನ ಧ್ವಜವನ್ನು ಎತ್ತುವೆನು;
ಅವರು ನಿನ್ನ ಕುಮಾರರನ್ನು ಎದೆಗಪ್ಪಿಕೊಂಡು ಬರು
ವರು, ನಿನ್ನ ಕುಮಾರ್ತೆಯರನ್ನು ಹೆಗಲ ಮೇಲೆ ಕರ
ತರುವರು. ರಾಜರು ನಿನಗೆ ಸಾಕುತಂದೆಗಳು, ಅವರ
ರಾಣಿಗಳು ನಿನಗೆ ಸಾಕುತಾಯಿಯರು ಆಗುವರು;
ನಿನಗೆ ಸಾಷ್ಟಾಂಗವಾಗಿ ಅಡ್ಡಬಿದ್ದು ನಿನ್ನ ಪಾದಧೂಳಿ
ಯನ್ನು ನೆಕ್ಕುವರು; ನಾನೇ ಯೆಹೋವನು. ನನ್ನ
ನ್ನು ನಿರೀಕ್ಷಿಸಿಕೊಂಡವರು ಆಶಾಭಂಗಪಡರು ಎಂದು
ನಿನಗೆ ಗೊತ್ತಾಗುವದು.

3)ಶೂರನಿಂದ ಕೊಳ್ಳೆಯನ್ನು ಕಸುಕೊಳ್ಳಬಹುದೇ?
4)ಭೀಕರನಿಗೆ ಸೆರೆಯಾದವರನ್ನು ಬಿಡಿಸಲಾದೀತೇ
[ಎಂದುಕೊಳ್ಳುತ್ತೀಯಾ]? ಯೆಹೋವನು ಹೀಗನ್ನು
ತ್ತಾನೆ—ಶೂರನ ಸೆರೆಯವರೂ ಅಪಹರಿಸಲ್ಪಡುವರು,
ಭೀಕರನ ಕೊಳ್ಳೆಯೂ ತೆಗೆಯಲ್ಪಡುವದು; ನಿನ್ನೊ
ಡನೆ ಹೋರಾಡುವವನ ಸಂಗಡ ನಾನೇ ಹೋರಾಡಿ
ನಿನ್ನ ಮಕ್ಕಳನ್ನು ಉದ್ಧರಿಸುವೆನು. ನಿನ್ನ ಹಿಂಸಕರು
ಸ್ವಮಾಂಸವನ್ನು ತಿನ್ನುವಂತೆ ಮಾಡುವೆನು; ದ್ರಾಕ್ಷಾ
ರಸವನ್ನು ಕುಡಿಯುವ ಹಾಗೆ ಅವರು ಸ್ವಂತ ರಕ್ತ
ವನ್ನು ಕುಡಿದು ಅಮಲೇರುವರು; ಆಗ ಯೆಹೋವ
ನಾದ ನಾನೇ ನಿನ್ನ ರಕ್ಷಕನು, ನಿನ್ನ ವಿಮೋಚಕನು,
ಯಾಕೋಬ್ಯರ ಶೂರನು ಎಂದು ನರಜನ್ಮದವರೆಲ್ಲ
ರಿಗೂ ಗೊತ್ತಾಗುವದು.

ಯೆಹೋವನು ಹೀಗನ್ನುತ್ತಾನೆ—ನಾನು ನಿಮ್ಮ 50
ತಾಯಿಯನ್ನು ತ್ಯಜಿಸಿದ ತ್ಯಾಗಪತ್ರವು ಎಲ್ಲಿ?
ನನ್ನ ಸಾಲಗಾರರಲ್ಲಿ ಯಾರಿಗೆ ನಿಮ್ಮನ್ನು ಮಾರಿ
ಬಿಟ್ಟಿದ್ದೇನೆ? ನೋಡಿರಿ, ನಿಮ್ಮ ದೋಷಗಳ ನಿಮಿತ್ತ
ನಿಮ್ಮನ್ನು ಮಾರಿದೆನು, ನಿಮ್ಮ ದ್ರೋಹಗಳಿಗಾಗಿ
ನಿಮ್ಮ ತಾಯಿಯನ್ನು ಬಿಟ್ಟೆನು. ನಾನು ಬಂದಾಗ
ಏಕೆ ಯಾರೂ ಕಾದಿರಲಿಲ್ಲ, ನಾನು ಕರೆದಾಗ ಏಕೆ
ಯಾರೂ ಉತ್ತರಕೊಡಲಿಲ್ಲ? ನನ್ನ ಹಸ್ತವು ರಕ್ಷಿಸ
ಲಾರದ ಮೋಟುಗೈಯೋ? ಉದ್ಧರಿಸುವ ಶಕ್ತಿಯು
ನನ್ನಲ್ಲಿಲ್ಲವೋ? ಇಗೋ, ನನ್ನ ತರ್ಜನದಿಂದಲೇ

---

1) ಪಾಠಾಂತರ: ನಿನ್ನನ್ನು [ಮತ್ತೆ] ಕಟ್ಟತಕ್ಕವರು. 2) ಅಥವಾ: ಯಾರು ನನ್ನಲ್ಲಿ ಇವರನ್ನು ಪಡೆದರು? 3) ಪಾಠಾಂತ
ಸರ್ವಶಕ್ತನಿಂದ ಕೊಳ್ಳೆಯನ್ನು ಕಸುಕೊಳ್ಳಬಹುದೇ? ಧರ್ಮಸ್ವರೂಪನಿಗೆ ಸೆರೆಯಾದವರನ್ನು ಬಿಡಿಸಲಾದೀತೇ? 4) ಪಾಠಾಂತರ:
ಯಾದ ಸಜ್ಜನರನ್ನು.

ಸಮುದ್ರವನ್ನು ಬತ್ತಿಸಿ ನದಿಗಳನ್ನು ಬಣಕಾಡನ್ನಾಗಿ
ಮಾಡುತ್ತೇನೆ; ನೀರಿಲ್ಲದೆ ಅಲ್ಲಿನ ಮೀನುಗಳು ಬಾ
3 ಯಾರಿ ಸತ್ತು ನಾರುವವು. ಆಕಾಶಕ್ಕೆ ಅಂಧಕಾರವನ್ನು
ಹೊದಿಸಿ ಗೋಣಿತಟ್ಟಿನ ಮುಸುಕನ್ನು ಹಾಕುತ್ತೇನೆ.

ಯೆಹೋವನ ಸೇವಕನ ಭರವಸ.

4 ಬಳಲಿಹೋದವರನ್ನು ಮಾತುಗಳಿಂದ ಸುಧಾರಿಸು
ವದಕ್ಕೆ ನಾನು ಬಲ್ಲವನಾಗುವಂತೆ ಕರ್ತನಾದ ಯೆ
ಹೋವನು ಶಿಕ್ಷಿತರ ನಾಲಿಗೆಯನ್ನು ನನಗೆ ದಯ
ಪಾಲಿಸಿದ್ದಾನೆ; ಬೆಳಬೆಳಗೂ ನನ್ನನ್ನು ಎಚ್ಚರಿಸಿ ಶಿಕ್ಷಿತ
ರಂತೆ ನಾನು ಕೇಳುವ ಹಾಗೆ ನನ್ನ ಕಿವಿಯನ್ನು
5 ಜಾಗರಗೊಳಿಸುತ್ತಾನೆ. ಕರ್ತನಾದ ಯೆಹೋವನು
ನನ್ನ ಕಿವಿಯನ್ನು ತೆರೆದಿದ್ದಾನೆ; ನಾನು ಎದುರು
6 ಬೀಳಲಿಲ್ಲ, ವಿಮುಖನಾಗಲೂ ಇಲ್ಲ. ಹೊಡೆಯು
ವವರಿಗೆ ಬೆನ್ನು ಕೊಟ್ಟು, ಕೂದಲುಕೀಳುವವರಿಗೆ 1)ಗಡ್ಡ
ವನ್ನು ಒಡ್ಡಿದೆನು; ಉಗುಳಿಸಿಕೊಳ್ಳುವ ಅವಮಾನಕ್ಕೆ
7 ನನ್ನ ಮುಖವನ್ನು ಮರೆಮಾಡಲಿಲ್ಲ. ಕರ್ತನಾದ
ಯೆಹೋವನು ನನಗೆ ಸಹಾಯಮಾಡುವನು; ಆದ
ಕಾರಣ ನಾನು ನಾಚಿಕೆಯಿಂದ ಕೊರಗಲಿಲ್ಲ; ನನ್ನ
ಮುಖವನ್ನು ಕಗ್ಗಲ್ಲಿನಂತೆ ಗಟ್ಟಿಮಾಡಿಕೊಂಡಿದ್ದೇನೆ;
8 ಆಶಾಭಂಗಪಡಲಾರೆನೆಂದು ನನಗೆ ಗೊತ್ತು. ನನ್ನ
ನ್ಯಾಯಸ್ಥಾಪಕನು ಸಮೀಪದಲ್ಲಿದ್ದಾನೆ; ನನ್ನೊಡನೆ
ಯಾರು ವ್ಯಾಜ್ಯವಾಡುವರು? ನಾವಿಬ್ಬರು [ನ್ಯಾಯಾ
ಸನದ ಮುಂದೆ] ನಿಂತುಕೊಳ್ಳುವ; ನನಗೆ ಪ್ರತಿ
9 ಕಕ್ಷಿಯು ಯಾರು? ನನ್ನ ಬಳಿಗೆ ಬರಲಿ. ಆಹಾ,
ಕರ್ತನಾದ ಯೆಹೋವನು ನನಗೆ ಸಹಾಯಮಾಡು
ವನು; ನನ್ನನ್ನು ಅಪರಾಧಿ ಎಂದು ನಿರ್ಣಯಿಸುವವನು
ಯಾರು? ಇಗೋ, ಅವರೆಲ್ಲರೂ ವಸ್ತ್ರದಂತೆ ಜೀರ್ಣ
ವಾಗುವರು; ಅವರನ್ನು ನುಸಿಯು ತಿಂದುಬಿಡುವದು.
10 ನಿಮ್ಮೊಳಗೆ ಯಾವನು ಯೆಹೋವನಲ್ಲಿ ಭಯ
ಭಕ್ತಿಯಿಟ್ಟು ಆತನ ಸೇವಕನ ಮಾತನ್ನು ಕೇಳು
ವನು? ಕತ್ತಲಲ್ಲಿ ನಡೆಯುತ್ತಾ ಬೆಳಕಿಲ್ಲದವನು
ಯೆಹೋವನ ನಾಮದಲ್ಲಿ ಭರವಸವಿಟ್ಟು ತನ್ನ ದೇವ
11 ರನ್ನು ಆಧಾರಮಾಡಿಕೊಳ್ಳಲಿ. ಓಹೋ, 2)ಬೆಂಕಿ
ಯಿಕ್ಕಿ ಸುತ್ತುಮುತ್ತಲು ಕೊಳ್ಳಿಗಳನ್ನು ಹತ್ತಿಸಿಕೊಂಡಿ
ರುವವರೇ, ನಿಮ್ಮ ಬೆಂಕಿಯ ಬೆಳಕಿನಲ್ಲಿಯೂ ನೀವು
ಹತ್ತಿಸಿದ ಕೊಳ್ಳಿಗಳ ನಡುವೆಯೂ ನಡೆದರೂ ನಡೆ
ಯಿರಿ. ಇಗೋ, ನನ್ನ ಹಸ್ತದಿಂದ ನಿಮಗಾಗುವ
ಗತಿಯು ಇದೇ, ದುಃಖಕ್ಕೆ ಒಳಗಾಗಿ ಸಾಯುವಿರಿ.

ಯೆಹೋವನು ತನ್ನ ಭಕ್ತರನ್ನು ಧೈರ್ಯಗೊಳಿಸುವದು.

51 ಸದ್ಧರ್ಮನಿರತರಾದ ಯೆಹೋವನ ಭಕ್ತರೇ,
ನನ್ನ ಮಾತನ್ನು ಕೇಳಿರಿ, ನೀವು ಯಾವ ಬಂಡೆಯೊ
ಳಗಿಂದ ಒಡೆದು ತೆಗೆಯಲ್ಪಟ್ಟಿರಿ, ಯಾವ ಗುಂಡಿಯಿಂದ
2 ತೋಡಲ್ಪಟ್ಟಿರಿ ಎಂಬದನ್ನು ನೋಡಿರಿ. ನಿಮ್ಮ ಪಿತೃ
ವಾದ ಅಬ್ರಹಾಮನನ್ನೂ ನಿಮ್ಮನ್ನು ಹೆತ್ತ ಸಾರ
ಳನ್ನೂ ದೃಷ್ಟಿಸಿರಿ; ಅಬ್ರಹಾಮನು ಒಬ್ಬನೇ ಇದ್ದಾಗ
ನಾನು ಅವನನ್ನು ಕರೆದು ಆಶೀರ್ವದಿಸಿ ಸಂತಾನ
ದಿಂದ ಹೆಚ್ಚಿಸಿದೆನಲ್ಲವೆ. ಯೆಹೋವನು ಚೀಯೋ 3
ನನ್ನು ಸಂತೈಸೇ ಸಂತೈಸುವನು; ಅಲ್ಲಿನ ಹಾಳು
ಪ್ರದೇಶಗಳನ್ನೆಲ್ಲಾ ಸುಧಾರಿಸಿ ಕಾಡುನೆಲವನ್ನು
ಏದೆನ್ ಉದ್ಯಾನದಂತೆಯೂ ಬೀಳುಭೂಮಿಯನ್ನು
ಯೆಹೋವನ ವನದ ಹಾಗೂ ಕಳಕಳಿಸುವಂತೆ
ಮಾಡುವನು; ಹರ್ಷ, ಉಲ್ಲಾಸ, ಸ್ತೋತ್ರ, ಗಾನ
ಧ್ವನಿ, ಇವುಗಳು ಅಲ್ಲಿ ನೆಲೆಯಾಗಿರುವವು.
ನನ್ನ ಜನರೇ, ಆಲಿಸಿರಿ! ನನ್ನ ಪ್ರಜೆಗಳೇ, ಕಿವಿ 4
ಗೊಡಿರಿ! ಧರ್ಮೋಪದೇಶವು ನನ್ನಿಂದ ಹೊರಡುವದು,
ನನ್ನ ನ್ಯಾಯಬೋಧನೆಯನ್ನು ಜನಾಂಗಗಳಿಗೆ ಬೆಳಕ
ನ್ನಾಗಿ ಸ್ಥಾಪಿಸುವೆನು. ನನ್ನ ರಕ್ಷಣಧರ್ಮದ 5
ಕಾರ್ಯವು ಸಮೀಪಿಸಿದೆ: ನನ್ನ ವಿಮೋಚನಕ್ರಿಯೆ
ಯು ತಲೆದೋರಿದೆ, ನನ್ನ ಹಸ್ತವು ಜನಾಂಗಗಳಿಗೆ
ನ್ಯಾಯತೀರಿಸುವದು; ದ್ವೀಪನಿವಾಸಿಗಳು ನನ್ನನ್ನು
ನಿರೀಕ್ಷಿಸಿಕೊಂಡು ನನ್ನ ಹಸ್ತಕಾರ್ಯಕ್ಕೆ ಕಾದಿರು
ವರು. ನಿಮ್ಮ ಕಣ್ಣುಗಳನ್ನು ಮೇಲಕ್ಕೆತ್ತಿ ಆಕಾಶ 6
ಮಂಡಲವನ್ನು ನೋಡಿರಿ, ಕೆಳಗೆ ಭೂಮಂಡಲ
ವನ್ನು ದೃಷ್ಟಿಸಿರಿ; ಆಕಾಶವು ಹೊಗೆಯಂತೆ ಚದರಿ
ಹೋಗುವದು, ಭೂಮಿಯು ವಸ್ತ್ರದ ಹಾಗೆ ಜೀರ್ಣ
ವಾಗುವದು, ಭೂನಿವಾಸಿಗಳು 3)ಸೊಳ್ಳೆಗಳೋಪಾದಿ
ಯಲ್ಲಿ ಸಾಯುವರು; ನನ್ನ ವಿಮೋಚನಕ್ರಿಯೆ
ಯೋ ಶಾಶ್ವತವಾಗಿ ನಿಲ್ಲುವದು, ನನ್ನ ರಕ್ಷಣಧರ್ಮದ
ಕಾರ್ಯಕ್ಕೆ ಭಂಗವೇ ಇಲ್ಲ. ಧರ್ಮವನ್ನರಿತು ನನ್ನ 7
ಉಪದೇಶವನ್ನು ಹೃದಯದಲ್ಲಿಟ್ಟುಕೊಂಡಿರುವ ಜನರೇ
ಕಿವಿಗೊಡಿರಿ, ಮನುಷ್ಯರ ದೂರಿಗೆ ಹೆದರಬೇಡಿರಿ, ಅವರ
ದೂಷಣೆಗೆ ಅಂಜದಿರಿ. ನುಸಿಯು ಅವರನ್ನು ಬಟ್ಟೆ 8
ಯಂತೆ ತಿಂದುಹಾಕುವದು, ಹುಳವು ಅವರನ್ನು ಉಣ್ಣೆ
ಯಂತೆ ಮೆದ್ದುಬಿಡುವದು; ನನ್ನ ರಕ್ಷಣಧರ್ಮದ ಕಾ
ರ್ಯವೋ ಶಾಶ್ವತವಾಗಿ ನಿಲ್ಲುವದು, ನನ್ನ ವಿಮೋಚನ
ಕ್ರಿಯೆಯು ತಲತಲಾಂತರಕ್ಕೂ ನೆಲೆಯಾಗಿರುವದು.
ಯೆಹೋವನ ಭುಜವೇ, ಎಚ್ಚರಗೊಳ್ಳು, ಎಚ್ಚರ 9
ಗೊಳ್ಳು, ಬಲವನ್ನು ತಂದುಕೋ! ಪೂರ್ವಕಾಲದಲ್ಲಿ,
ಪುರಾತನದ ತಲಾಂತರಗಳಲ್ಲಿ, ಎಚ್ಚರವಟ್ಟಂತೆ ಈಗ
ಲೂ ಎಚ್ಚತ್ತುಕೋ, ರಹಬನ್ನು ಛೇದಿಸಿ ಘಟಸರ್ಪ
ವನ್ನು ತಿವಿದುಬಿಟ್ಟ ತೋಳು ನೀನಲ್ಲವೆ; ಸಮುದ್ರ 10
ವನ್ನೂ ಮಹಾಸಾಗರದ ಜಲರಾಶಿಯನ್ನೂ ಬತ್ತಿಸಿ
ವಿಮುಕ್ತಜನರು ಹಾದುಹೋಗುವದಕ್ಕೆ ಸಮುದ್ರದ
ತಳವನ್ನು ಮಾರ್ಗವನ್ನಾಗಿ ಮಾಡಿದ ಬಾಹು ನೀನೇ
ಹೌದು. ಯೆಹೋವನು ವಿಮೋಚಿಸಿದವರು ಹಿಂದಿ 11
ರುಗಿ ಶಾಶ್ವತಸಂತೋಷವೆಂಬ ಕಿರೀಟವನ್ನು ಧರಿಸಿ
ಕೊಂಡು ಉತ್ಸಾಹಧ್ವನಿಯೊಡನೆ ಚೀಯೋನಿಗೆ ಸೇರು
ವರು; ಹರ್ಷಾನಂದಗಳನ್ನು ಅನುಭವಿಸುವರು, ಮೊರೆ
ಯೂ ಕರಕರೆಯೂ ತೊಲಗಿಹೋಗುವವು.
ನಾನೇ, ನಾನೇ ನಿನ್ನನ್ನು ಸಂತೈಸುವವನಾಗಿರು 12

1) ಮೂಲ: ದವಡೆಯನ್ನು. 2) ಅಥವಾ: ಸೊಂಟಕ್ಕೆ ಅಗ್ನಿಬಾಣಗಳನ್ನು ಕಟ್ಟಿಕೊಂಡಿರುವವರೇ, ನೀವು ಹತ್ತಿಸಿದ ಬೆಂಕಿಯ ಮತ್ತು ಕೊಳ್ಳಿಗಳ ಉರಿಯೊಳಗೆ ಹೋಗಿಬಿಡಿರಿ. 3) ಅಥವಾ: ಹಾಗೆಯೇ.

ವಲ್ಲಿ ಮರ್ತ್ಯಮನುಷ್ಯನಿಗೆ, ಹುಲ್ಲಿನ ಗತಿಗೆ ಬರುವ
ನರಜನ್ಮದವನಿಗೆ ಭಯಪಡುವ ನೀನು ಎಂಥವನು?
13 ಆಕಾಶಮಂಡಲವನ್ನು ಹರಡಿ ಭೂಲೋಕವನ್ನು ಸ್ಥಾಪಿ
ಸಿದ ನಿನ್ನ ಸೃಷ್ಟಿಕರ್ತನಾದ ಯೆಹೋವನನ್ನು ಮರೆತು
ಬಿಟ್ಟೆಯಾ? ನಾಶಮಾಡಬೇಕೆಂದು [ಬಾಣವನ್ನು]
ಹೂಡುವ ಹಿಂಸಕನ ಕ್ರೋಧಕ್ಕೆ ದಿನವೆಲ್ಲಾ ಎಡೆಬಿಡದೆ
ಅಂಜುತ್ತೀಯಾ? ಆ ಹಿಂಸಕನ ಕ್ರೋಧವು ಎಲ್ಲಿ ತಾನೇ
14 ಇದೆ? [ಸೆರೆಯಲ್ಲಿ] ಕುಗ್ಗಿರುವವನು ಸಾಯನು,
ಪಾತಾಳಕ್ಕೆ ಇಳಿಯನು, ಬೇಗನೆ ಬಿಡುಗಡೆಯಾಗು
ವನು; ಅವನಿಗೆ ಅನ್ನದ ಕೊರತೆಯೇ ಇರದು.
15 1)ಅಲೆಗಳು ಭೋರ್ಗ್ಗರೆಯುವಷ್ಟು ಸಮುದ್ರವನ್ನು
ರೇಗಿಸುವ ನಿನ್ನ ದೇವರಾದ ಯೆಹೋವನು ನಾನೇ;
ಸೇನಾಧೀಶ್ವರನಾದ ಯೆಹೋವನೆಂಬದೇ 2)ನನ್ನ
16 ನಾಮಧೇಯ. ಆಕಾಶವನ್ನು ನಿಲ್ಲಿಸಬೇಕೆಂತಲೂ
ಭೂಲೋಕವನ್ನು ಸ್ಥಾಪಿಸಬೇಕೆಂತಲೂ ಚೀಯೋನಿಗೆ
ನೀನು ನನ್ನ ಜನವೆಂದು ಹೇಳಬೇಕೆಂತಲೂ ನಿನ್ನ
ಬಾಯಲ್ಲಿ ನನ್ನ ಮಾತುಗಳನ್ನು ಇಟ್ಟು ನನ್ನ ಕೈಯ
ನೆರಳಿನಲ್ಲಿ ನಿನ್ನನ್ನು ಹುದುಗಿಸಿದ್ದೇನೆ.

ಚೀಯೋನಿಗೆ ಅವಮಾನವು ತೀರಿ ಮಾನಬರುವದು.

17 ಯೆಹೋವನು ತನ್ನ ರೋಷವನ್ನು ತುಂಬಿಕೊಟ್ಟ
ಪಾತ್ರೆಯಿಂದ ಕುಡಿದ ಯೆರೂಸಲೇಮೇ, ಎಚ್ಚತ್ತು
ಕೋ, ಎಚ್ಚತ್ತುಕೋ, ಎದ್ದುನಿಲ್ಲು! 3)ಭ್ರಮಣಗೊಳಿ
ಸುವ ಆ 3)ಪಾನದ ಪಾತ್ರೆಯಲ್ಲಿ ಒಂದು ತೊಟ್ಟನ್ನೂ
18 ಉಳಿಸದೆ ಕುಡಿದುಬಿಟ್ಟಿದ್ದೀ. ಹೆತ್ತ ಮಕ್ಕಳಲ್ಲೆಲ್ಲಾ
ಅವಳನ್ನು ಕರೆದುಕೊಂಡು ಹೋಗುವವನು ಯಾರೂ
ಇಲ್ಲ; ಸಾಕಿದ ಆ ಸಕಲ ಕುಮಾರರಲ್ಲಿ ಅವಳ ಕೈ
19 ಹಿಡಿಯುವವನು ಒಬ್ಬನೂ ಇಲ್ಲ. ಸಹತಾಪದಿಂದ
ನಿನಗಾಗಿ ಬಡುಕೊಳ್ಳುವವರು ಯಾರಿದ್ದಾರೆ? ನಿನಗೆ
ಈ ಎರಡು ಬಾಧೆಗಳು ಬಂದಿವೆ, [ನಿನ್ನ ದೇಶವು]
ಹಾಳುಪಾಳಾಗಿದೆ, [ನಿನ್ನ ಪ್ರಜೆಗೆ] ಕ್ಷಾಮವೂ ಖಡ್ಗ
ವೂ ಪ್ರಾಪ್ತವಾಗಿವೆ; ನಾನು ನಿನ್ನನ್ನು ಹೇಗೆ ಸಂತೈ
20 ಸಲಿ? ನಿನ್ನ ಮಕ್ಕಳು ಪ್ರಜ್ಞೆತಪ್ಪಿದವರಾಗಿ ಬಲೆಗೆ
ಸಿಕ್ಕಿದ ಜಂಕೆಯಂತೆ ಬೀದಿಗಳೆಲ್ಲಾ ಕೂಡುವ ಚೌಕ
ದಲ್ಲಿ ಬಿದ್ದಿದ್ದಾರೆ; ಯೆಹೋವನ ರೋಷವನ್ನೂ ನಿನ್ನ
ದೇವರ ತರ್ಜನವನ್ನೂ ಹೊಟ್ಟೆತುಂಬಾ ಕುಡಿದಿದ್ದಾರೆ.
21 ಹೀಗಿರಲು, ಗತಿಹೀನಳೇ, ದ್ರಾಕ್ಷಾರಸವಿಲ್ಲದೆ ಅಮ
22 ಲೇರಿದವಳೇ, ಇದನ್ನು ಕೇಳು; ನಿನ್ನ ಕರ್ತನೂ ತನ್ನ
ಜನರ ಪಕ್ಷವಾಗಿ ವ್ಯಾಜ್ಯವಾಡುವ ನಿನ್ನ ದೇವರೂ
ಆದ ಯೆಹೋವನು ಹೀಗನ್ನುತ್ತಾನೆ—ಇಗೋ, ಭ್ರಮ
ಣಗೊಳಿಸುವ 3)ಪಾನದ ಪಾತ್ರೆಯನ್ನು ಅಂದರೆ ನನ್ನ
ರೋಷವು ತುಂಬಿರುವ ಬಟ್ಟಲನ್ನು ನಿನ್ನ ಕೈಯೊಳ
ಗಿಂದ ತೆಗೆದುಹಾಕುವೆನು; ಅದನ್ನು ನೀನು ಇನ್ನು
23 ಕುಡಿಯೆ; ನಿನ್ನನ್ನು ಬಾಧಿಸುವವರ ಕೈಗೆ ಅದನ್ನು
ಕೊಡುವೆನು; ಅವರು ನಿನಗೆ—ನೀನು ಬಿದ್ದುಕೋ,
ನಿನ್ನನ್ನು ತುಳಿಯುತ್ತಾ ಹೋಗುವೆವು ಎಂದು ಹೇಳಲು

ನೀನು ಹಾದುಹೋಗುವ ಅವರಿಗೆ ನಿನ್ನ ಬೆನ್ನನ್ನು
ನೆಲವನ್ನಾಗಿಯೂ ಬೀದಿಯ ಮಣ್ಣನ್ನಾಗಿಯೂ ಮಾಡಿ
ಕೊಂಡಿಯಲ್ಲಾ.

ಚೀಯೋನೇ, ಎಚ್ಚರಗೊಳ್ಳು, ಎಚ್ಚರಗೊಳ್ಳು, 52
ನಿನ್ನ ಪ್ರತಾಪವನ್ನು ಧರಿಸಿಕೋ! ಯೆರೂಸಲೇಮೇ,
ಪರಿಶುದ್ಧಪಟ್ಟಣವೇ, ನಿನ್ನ ಚಂದದ ಉಡುಪನ್ನು
ಹಾಕಿಕೋ! ಇಂದಿನಿಂದ ಅಶುದ್ಧರೂ ಸುನ್ನತಿಯಿಲ್ಲ
ದವರೂ ನಿನ್ನೊಳಗೆ ಪ್ರವೇಶಮಾಡರು. ಯೆರೂ
ಸಲೇಮೇ, ದೂಳನ್ನು ಝಾಡಿಸಿಕೋ! ಎದ್ದು ಆಸನದ
ಮೇಲೆ ಕೂಡ್ರು! ಸೆರೆಬಿದ್ದ ಚೀಯೋನ್ ಕನ್ಯೆಯೇ,
ನಿನ್ನ ಕತ್ತಿನ ಪಾಶವನ್ನು ಬಿಚ್ಚಿಬಿಡು!

ಯೆಹೋವನ ಈ ಮಾತನ್ನು ಕೇಳಿರಿ, ಲಾಭಪಡೆ
ಯದೆ ನಿಮ್ಮನ್ನು ಮಾರಿದೆನು, ಹಣತಕ್ಕೊಳ್ಳದೆ
ನಿಮ್ಮನ್ನು ಬಿಡುಗಡೆಮಾಡುವೆನು. ಕರ್ತನಾದ
ಯೆಹೋವನು ಹೀಗೆಂದುಕೊಳ್ಳುತ್ತಾನೆ—ನನ್ನ ಜ
ನರು ಮೊಟ್ಟಮೊದಲು ಐಗುಪ್ತದಲ್ಲಿ ಇಳಿದುಕೊಳ್ಳ
ಬೇಕೆಂದು ಹೋಗಿ [ಅಲ್ಲಿ ಸೆರೆಯಾದರು]; ಅಶ್ಶೂ
ರ್ಯರೂ ಹಕ್ಕಿಲ್ಲದೆ ಅವರನ್ನು ಬಾಧೆಪಡಿಸಿದರು.
ಈಗಲೂ ಅನ್ಯರು ನನ್ನ ಜನರನ್ನು ಹಕ್ಕಿಲ್ಲದೆ
ಒಯ್ದಿರಲು ನಾನು ಇಲ್ಲಿ ಸುಮ್ಮನಿರುವದು ಹೇಗೆ?
ನನ್ನ ಪ್ರಜೆಯನ್ನು ಆಳುವವರು [ರೌದ್ರದಿಂದ]
ಕಿರಚುತ್ತಾರೆ; ನನ್ನ ನಾಮವು ದಿನವೆಲ್ಲಾ ಎಡೆಬಿಡದೆ
ದೂಷಣೆಗೆ ಗುರಿಯಾಗಿದೆ. ಹೀಗಿರಲು ನನ್ನ ಜನರು
ನನ್ನ ನಾಮದ ಮಹತ್ತನ್ನು ತಿಳಿದು [ತಮ್ಮ ಸಂಗಡ]
ಮಾತಾಡುವವನು ನಾನೇ, ಹೌದು ನಾನೇ, ಎಂದು
[ರಕ್ಷಣೆಯ] ಆ ದಿನದಲ್ಲಿ ಗ್ರಹಿಸಿಕೊಳ್ಳುವ ಹಾಗೆ
ಮಾಡುವೆನು. ಇದೇ ಯೆಹೋವನ ನುಡಿ.

ಪರ್ವತಗಳ ಮೇಲೆ ತ್ವರೆಪಡುತ್ತಾ ಶುಭಸಮಾ
ಚಾರವನ್ನು ತಂದು ಸಮಾಧಾನವನ್ನು ಸಾರುವ
ದೂತನ ಪಾದಗಳು ಎಷ್ಟೋ ಅಂದವಾಗಿವೆ!
ಒಳ್ಳೆಯ ಶುಭವರ್ತಮಾನವನ್ನು, ಶುಭದ ಸುವಾ
ರ್ತೆಯನ್ನು ತಂದು ರಕ್ಷಣೆಯನ್ನು ಪ್ರಕಟಿಸುತ್ತಾ—
ನಿನ್ನ ದೇವರು ರಾಜ್ಯಭಾರವನ್ನು ವಹಿಸಿದ್ದಾನೆ
ಎಂದು ಚೀಯೋನಿಗೆ ತಿಳಿಸುವವನಾಗಿದ್ದಾನೆ. ಇಗೋ,
ನಿನ್ನ ಕಾವಲುಗಾರರ ಕೂಗು! ಸ್ವರವೆತ್ತಿ ಒಟ್ಟಿಗೆ
ಹರ್ಷಧ್ವನಿಗೈಯುತ್ತಾರೆ; ಯೆಹೋವನು ಚೀಯೋ
ನಿಗೆ ತಿರುಗಿ ಬರುವದನ್ನು ಪ್ರತ್ಯಕ್ಷವಾಗಿ ನೋಡು
ತ್ತಿದ್ದಾರೆ. ಯೆರೂಸಲೇಮಿನ ಹಾಳುಪ್ರದೇಶಗಳೇ,
ತಟ್ಟನೆ ಜಯಘೋಷಮಾಡಿ ಒಟ್ಟಿಗೆ ಹರ್ಷಧ್ವನಿ
ಗೈಯಿರಿ! ಯೆಹೋವನು ಯೆರೂಸಲೇಮನ್ನು
ವಿಮೋಚಿಸಿ ತನ್ನ ಜನರನ್ನು ಸಂತೈಸಿದ್ದಾನೆ. ಯೆಹೋ
ವನು ಸಕಲ ಜನಾಂಗಗಳ ಕಣ್ಣೆದುರಿನಲ್ಲಿ ತನ್ನ
ದಿವ್ಯಬಾಹುವನ್ನು ತೆರೆದು ತೋರಿಸಿದ್ದಾನೆ; ಭೂಮಿ
ಯ ಎಲ್ಲಾ ದಿಕ್ಕಿನವರೂ ನಮ್ಮ ದೇವರ ರಕ್ಷಣಕಾರ್ಯ
ವನ್ನು ನೋಡುವರು. ತೊಲಗಿರಿ, ತೊಲಗಿರಿ, 4)ಬಾ
ಬೆಲಿನಿಂದ ಹೊರಡಿರಿ, ಅಶುದ್ಧವಾದ ಯಾವದನ್ನೂ
ಮುಟ್ಟದಿರಿ, ಅದರ ಮಧ್ಯದೊಳಗಿಂದ ತೆರಳಿರಿ,

1) ಅಥವಾ: ಅಲೆಗಳು ಭೋರ್ಗರೆಯುವ ಸಮುದ್ರವನ್ನು ಶಾಂತಪಡಿಸುವ. 2) ಮೂಲ: ಅವನ. 3) ಮೂಲ: ಪಾತ್ರೆ
ಬಟ್ಟಲಿನಲ್ಲಿ. 4) ಮೂಲ: ಅಲ್ಲಿಂದ.

ಯೆಹೋವನ ಆರಾಧನೆಯ ಉಪಕರಣಗಳನ್ನು
12 ಹೊರುವವರೇ, ಶುದ್ಧರಾಗಿರಿ! ನೀವು ಅವಸರದಿಂದ
ಹೊರಡಬೇಕಾಗಿಲ್ಲ, ಓಡಿಹೋಗಬೇಕಾಗಿಲ್ಲ; ಯೆ
ಹೋವನು ನಿಮಗೆ ಮುಂಬಲವಾಗಿ ಮುಂದರಿಯು
ವನು, ಇಸ್ರಾಯೇಲಿನ ದೇವರು ನಿಮಗೆ ಹಿಂಬಲ
ವಾಗಿಯೂ ಇರುವನು.

ಯೆಹೋವನ ಸೇವಕನ ಶ್ರಮೆ, ಪ್ರಾಣತ್ಯಾಗ,
ಅದರ ಪ್ರತಿಫಲ.

13 ಇಗೋ ನನ್ನ ಸೇವಕನು 1)ಕೃತಾರ್ಥನಾ
ಗುವನು;
ಅವನು ಉನ್ನತನಾಗಿ ಮೇಲಕ್ಕೇರಿ ಮಹೋನ್ನತ
ಪದವಿಗೆ ಬರುವನು.
14 ಅವನ ಮುಖವು ಸಕಲ ಮನುಷ್ಯರ ಮುಖ
ಕ್ಕಿಂತಲೂ
ಅವನ ರೂಪವು ಎಲ್ಲಾ ನರಜನ್ಮದವರ ರೂಪ
ಕ್ಕಿಂತಲೂ
ವಿಕಾರವಾಗಿರುವದನ್ನು ನೋಡಿ
ಅನೇಕರು ಹೇಗೆ 2)ಅವನಿಂದ ಬೆದರಿ ಬಿದ್ದರೋ
15 ಹಾಗೆಯೇ ಅನೇಕಜನಾಂಗಗಳವರು ಅವನನ್ನು
ಕಂಡು ವಿಸ್ಮಯದಿಂದ ಚಮಕಿತರಾಗುವರು;
ಅರಸರೂ ಅವನ ಮುಂದೆ ಬಾಯಿಮುಚ್ಚಿಕೊಳ್ಳು
ವರು;
ಏಕಂದರೆ ಸುದ್ದಿಯೇ ಇಲ್ಲದ ಸಂಗತಿಯನ್ನು
ನೋಡುವರು,
ಎಂದೂ ಕೇಳದ ವಿಷಯವನ್ನು ಗ್ರಹಿಸಿಕೊಳ್ಳು
ವರು.

53 3)ನಾವು ಕೇಳಿದ ಸಂಗತಿಯನ್ನು [ನಮ್ಮಲ್ಲಿ]
ಯಾರು ನಂಬಿದ್ದರು?
ಯೆಹೋವನ ಬಾಹುವು ಯಾರಿಗೆ ಗೋಚರ
ವಾಗಿತ್ತು?
2 ಒಣನೆಲದೊಳಗೆ ಬೇರಿನಿಂದ ಹೊರಡುವ ಅಂಕುರ
ದಂತೆಯೂ
ಬುಡದಿಂದ ಒಡೆಯುವ ಚಿಗುರಿನ ಹಾಗೂ
ಅವನು ಯೆಹೋವನ ದೃಷ್ಟಿಯಲ್ಲಿ ಬೆಳೆದನು.
ಅವನಲ್ಲಿ ಯಾವ ಅಂದಚಂದಗಳೂ ಇರಲಿಲ್ಲ;
ನಾವು ಅವನನ್ನು ನೋಡಿದಾಗ
ನೋಡತಕ್ಕ ಯಾವ ಲಕ್ಷಣವೂ ಕಾಣಲಿಲ್ಲ.
3 ಅವನು ಧಿಕ್ಕರಿಸಲ್ಪಟ್ಟವನು, ಮನುಷ್ಯರು ಸೇರಿಸಿ
ಕೊಳ್ಳದವನು,
ಸಂಕಟಪಡುವವನು, ವ್ಯಾಧಿಪೀಡಿತನು,
ಜನರು ಮುಖವನ್ನು ಓರೆಮಾಡಿಕೊಳ್ಳುವ ಧಿಕ್ಕಾ
ರಕ್ಕೆ ಒಳಗಾದವನೂ ಆಗಿದ್ದನು.
ನಾವು ಅವನನ್ನು ಲಕ್ಷ್ಯಕ್ಕೇ ತರಲಿಲ್ಲ.
4 ನಿಜವಾಗಿಯೂ ನಮ್ಮ ವ್ಯಾಧಿಗಳನ್ನು ಅನು
ಭವಿಸಿದನು;
ಅವನು ಹೊತ್ತ ಹೊರೆಯು ನಮ್ಮ ಸಂಕಟವೇ,
ಹೌದು;
ನಾವಾದರೋ ಅವನು ದೇವರಿಂದ ಬಾಧಿತನು,
ಪೆಟ್ಟು ತಿಂದವನು, ಕುಗ್ಗಿಸಲ್ಪಟ್ಟವನು ಎಂದು
ಭಾವಿಸಿಕೊಂಡೆವು.
ನಮ್ಮ ದ್ರೋಹಗಳ ದೆಸೆಯಿಂದ ಅವನಿಗೆ ಗಾಯ 5
ವಾಯಿತು,
ನಮ್ಮ ಅಪರಾಧಗಳ ನಿಮಿತ್ತ ಅವನು ಜಜ್ಜಲ್ಪಟ್ಟನು;
ನಮಗೆ ಸುಕ್ಷೇಮವನ್ನುಂಟುಮಾಡುವ ದಂಡನೆ
ಯನ್ನು ಅವನು ಅನುಭವಿಸಿದನು;
ಅವನ ಬಾಸುಂಡೆಗಳಿಂದ ನಮಗೆ ಗುಣವಾಯಿ
ತು.
ನಾವೆಲ್ಲರೂ ಕುರಿಗಳಂತೆ ದಾರಿತಪ್ಪಿ ತೊಳಲುತ್ತಿ 6
ದ್ದೆವು,
ಪ್ರತಿಯೊಬ್ಬನೂ ತನ್ನ ತನ್ನ ದಾರಿಯನ್ನು ಹಿಡಿ
ಯುತ್ತಿದ್ದನು;
ನಮ್ಮೆಲ್ಲರ ದೋಷಫಲವನ್ನೂ ಯೆಹೋವನು
ಅವನ ಮೇಲೆ ಹಾಕಿದನು.
ಅವನು ಬಾಧೆಗೆ ಒಳಗಾಗಿ ತನ್ನನ್ನು ತಗ್ಗಿಸಿ 7
ಕೊಂಡನು,
ಬಾಯಿ ತೆರೆಯಲಿಲ್ಲ;
ವಧ್ಯಸ್ಥಾನಕ್ಕೆ ಒಯ್ಯಲ್ಪಡುವ ಕುರಿಯಂತೆಯೂ
ಉಣ್ಣೆ ಕತ್ತರಿಸುವವರ ಮುಂದೆ ಮೌನವಾಗಿರುವ
ಕುರಿಯ ಹಾಗೂ ಇದ್ದನು,
ಬಾಯಿ ತೆರೆಯಲೇ ಇಲ್ಲ.
4)ಹಿಂಸೆಯ ನ್ಯಾಯದಿಂದ ಕೊಲ್ಲಲ್ಪಟ್ಟನು, 8
ಆಹಾ, ಇವನು ಜೀವಲೋಕದಿಂದ ಕೀಳಲ್ಪಟ್ಟಿ
ದ್ದಾನೆ,
ನಮ್ಮ ಜನಗಳ ದ್ರೋಹಗಳ ದೆಸೆಯಿಂದ ಈ
ಪೆಟ್ಟು ಅವನ ಮೇಲೆ ಬಿತ್ತಲ್ಲಾ ಎಂದು
ಅವನ ಕಾಲದವರಲ್ಲಿ ಯಾರು ಮನಮುಟ್ಟಿ
ಮರುಗಿದರು?
ಅವನು ಯಾವ ಅನ್ಯಾಯವನ್ನು ಮಾಡದಿದ್ದರೂ 9
ಅವನ ಬಾಯಲ್ಲಿ ಯಾವ ವಂಚನೆಯು ಇಲ್ಲ
ದಿದ್ದರೂ
ಅವನು ಸತ್ತಾಗ ದುಷ್ಟರ ಮಧ್ಯೆ
5)ಪುಷ್ಟರ ನಡುವೆ ಅವನನ್ನು ಹೂಣಿಟ್ಟರು.
ಅವನನ್ನು ಜಜ್ಜುವದು ಯೆಹೋವನ ಸಂಕಲ್ಪವಾ 10
ಗಿತ್ತು.
ಆತನು ಅವನನ್ನು ವ್ಯಾಧಿಯಿಂದ ಬಾಧಿಸಿ
ಹೀಗೆಂದುಕೊಂಡನು—
ಇವನು ತನ್ನ ಆತ್ಮವನ್ನು ಪ್ರಾಯಶ್ಚಿತ್ತಯಜ್ಞ
ಕ್ಕಾಗಿ ಒಪ್ಪಿಸಿದ ಮೇಲೆ
ತನ್ನ ಸಂತಾನವನ್ನು ನೋಡುವನು, ಚಿರಂಜೀವಿ
ಯಾಗುವನು,
ನನ್ನ ಸಂಕಲ್ಪವು ಇವನ ಕೈಯಿಂದ ನೆರವೇರು
ವದು;

1) ಅಥವಾ: ವಿವೇಕಿಯಾಗಿ ಕಾರ್ಯವನ್ನು ಸಾಧಿಸುವನು. 2) ಮೂಲ: ನಿನ್ನಿಂದ. 3) ಅಥವಾ: ನಾವು ಸಾರಿದ ಸುವಾರ್ತೆಯನ್ನು. 4) ಅಥವಾ: ಯಾವ ತಡೆಯೂ ಇಲ್ಲದೆ ಅನ್ಯಾಯವಾಗಿ ಕೊಲ್ಲಲ್ಪಟ್ಟನು. 5) ಮೂಲ: ಧನಿಕನ ಪಕ್ಕದಲ್ಲಿ.

11 ತನ್ನ ಆತ್ಮವು ಅನುಭವಿಸಿದ ಶ್ರಮೆಯ ಫಲವನ್ನು
ಕಂಡು ತೃಪ್ತನಾಗುವನು;
ಧರ್ಮಾತ್ಮನಾದ ನನ್ನ ಸೇವಕನು ತನ್ನ ಜ್ಞಾನದ
ಮೂಲಕ
ಬಹು ಜನರನ್ನು ಧರ್ಮಮಾರ್ಗಕ್ಕೆ ತರುವನು;
ಅವರ ಅಪರಾಧಗಳನ್ನು ಹೊತ್ತುಕೊಂಡು ಹೋ
ಗುವನು.

12 ಇವನು ಇಂಥವನಾಗಿರುವದರಿಂದ ನಾನು ಇವನಿಗೆ
ದೊಡ್ಡವರ ಸಂಗಡ ಪಾಲು ಕೊಡುವೆನು,
ಇವನು ಬಲಿಷ್ಠರೊಡನೆ ಸೂರೆಯನ್ನು ಹಂಚಿ
ಕೊಳ್ಳುವನು;
ತನ್ನ ಪ್ರಾಣವನ್ನು ಧಾರೆಯೆರೆದು ಮರಣಹೊಂದಿ
ದ್ರೋಹಿಗಳೊಂದಿಗೆ ತನ್ನನ್ನೂ ಎಣಿಸಿಕೊಂಡು
ಬಹು ಜನ ದ್ರೋಹಿಗಳ ಪಾಪವನ್ನು ಹೊರುತ್ತಾ
ಅವರಿಗಾಗಿ ವಿಜ್ಞಾಪನೆಮಾಡಿದನಲ್ಲಾ.

ಚೀಯೋನಿನ ಮುಂದಿನ ವೃದ್ಧಿಯೂ ವೈಭವವೂ.

54 ಹೆರದವಳೇ, ಬಂಜೆಯೇ, ಹರ್ಷಧ್ವನಿಗೈ! ಪ್ರಸವ
ವೇದನೆಯನ್ನನುಭವಿಸದವಳೇ, ಆನಂದಸ್ವರವೆತ್ತಿ
ಕೂಗು! ಗಂಡನುಳ್ಳವಳಿಗಿಂತ ಗಂಡಬಿಟ್ಟವಳಿಗೆ
ಮಕ್ಕಳು ಹೆಚ್ಚು ಎಂದು ಯೆಹೋವನು ಹೇಳುತ್ತಾನೆ.
2 ನಿನ್ನ ಗುಡಾರದ ಸ್ಥಳವನ್ನು ವಿಸ್ತರಿಸು, ನಿನ್ನ ನಿವಾಸದ
ಪರದೆಗಳು ಹರಡಲಿ, ಸಂಕೋಚಪಡಬೇಡ; ನಿನ್ನ ಹಗ್ಗ
ಗಳನ್ನು ಉದ್ದಮಾಡಿ ಗೂಟಗಳನ್ನು ಬಲಪಡಿಸು.
3 ನೀನು 1)ಎಲ್ಲಾ ಕಡೆಗಳಲ್ಲಿಯೂ ಹಬ್ಬಿಕೊಳ್ಳುವಿ;
ನಿನ್ನ ಸಂತಾನದವರು ಜನಾಂಗಗಳನ್ನು ವಶಮಾಡಿ
ಕೊಂಡು ಹಾಳುಪಟ್ಟಣಗಳನ್ನು ಜನಭರಿತವಾಗುವಂತೆ
4 ಮಾಡುವರು. ಹೆದರಬೇಡ, ನಿನಗೆ ಅವಮಾನವಾಗುವ
ದಿಲ್ಲ, ನಾಚಿಕೆಪಡದಿರು, ನಿನಗೆ ಆಶಾಭಂಗವಾಗದು;
ಯೌವನದಲ್ಲಿ ನಿನಗಾದ ಅವಮಾನವನ್ನು ಮರೆತು
ಬಿಡುವಿ, ವೈಧವ್ಯದಲ್ಲಿ ನಿನಗೆ ಸಂಭವಿಸಿದ ನಿಂದೆಯು
5 ಇನ್ನು ನಿನ್ನ ನೆನಪಿಗೆ ಬಾರದು. ನಿನ್ನ ಸೃಷ್ಟಿಕರ್ತನೇ
ನಿನ್ನ ಪತಿ, ಆತನ ಹೆಸರು ಸೇನಾಧೀಶ್ವರನಾದ ಯೆ
ಹೋವ; ಇಸ್ರಾಯೇಲಿನ ಸದಮಲಸ್ವಾಮಿಯು
ನಿನ್ನ ನ್ಯಾಯಸ್ಥಾಪಕನಾಗಿದ್ದಾನೆ; ಸರ್ವಲೋಕದ
ದೇವರೆಂಬ ನಾಮಧೇಯವನ್ನು ಹೊಂದಿರುವನು.
6 ನೀನು ಬಿಡಲ್ಪಟ್ಟು ಮನನೊಂದ ಹೆಂಡತಿ, ಹೌದು, ತ್ಯಜಿ
ಸಲ್ಪಟ್ಟವಳಾದ ನನ್ನ ಯೌವನಕಾಲದ ಪತ್ನಿ ಎಂದು
ಯೆಹೋವನು ನಿನ್ನನ್ನು ಕನಿಕರಿಸಿ ಕರೆದಿದ್ದಾನೆ ಎಂಬ
7 ದು ನಿನ್ನ ದೇವರ ನುಡಿ. ಕ್ಷಣಮಾತ್ರ ನಿನ್ನನ್ನು ಬಿಟ್ಟಿ
ದ್ದೆನು, ಮಹಾ ಕೃಪೆಯಿಂದ ಸೇರಿಸಿಕೊಳ್ಳುವೆನು.
8 ತಟ್ಟನೆ ಉಬ್ಬಿ ಹರಿಯುವ ಕೋಪದಿಂದ ಒಂದು ಕ್ಷಣ
ಮಾತ್ರ ನನ್ನ ಮುಖವನ್ನು ನಿನಗೆ ಮರೆಮಾಡಿಕೊಂಡಿ
ದ್ದೆನು, ಶಾಶ್ವತಕೃಪೆಯಿಂದ ನಿನ್ನನ್ನು ಕರುಣಿಸುವೆನು
ಎಂದು ನಿನ್ನ 2)ವಿಮೋಚಕನಾದ ಯೆಹೋವನು ಅನ್ನು
9 ತ್ತಾನೆ. 3)ನಿನ್ನನ್ನು ತ್ಯಜಿಸಿದ್ದು ನನಗೆ ನೋಹನ
ಕಾಲದ ಜಲಪ್ರಲಯದಂತಿದೆ; ಇಂಥಾ ಜಲಪ್ರಲಯವು
ಭೂಮಿಯನ್ನು ತಿರಿಗಿ ಆವರಿಸುವದಿಲ್ಲವೆಂದು ನಾನು
ಹೇಗೆ ಪ್ರಮಾಣಮಾಡಿದೆನೋ ಹಾಗೆಯೇ ನಾನು
ನಿನ್ನ ಮೇಲೆ ಇನ್ನು ಕೋಪಮಾಡುವದಿಲ್ಲ, ಗದರಿಸು
ವದಿಲ್ಲ ಎಂದು ಈಗ ಪ್ರಮಾಣಮಾಡಿದ್ದೇನೆ. ಬೆಟ್ಟ 1
ಗಳು ಸ್ಥಳವನ್ನು ಬಿಟ್ಟುಹೋದಾವು, ಗುಡ್ಡಗಳು
ಕದಲಿಯಾವು; ಆದರೆ ನನ್ನ ಕೃಪೆಯು ನಿನ್ನನ್ನು
ಬಿಟ್ಟುಹೋಗದು, ಸಮಾಧಾನದ ನನ್ನ ಒಪ್ಪಂದವು
ಕದಲದು ಎಂದು ನಿನ್ನನ್ನು ಕರುಣಿಸುವ ಯೆಹೋ
ವನು ಅನ್ನುತ್ತಾನೆ.
ಕುಗ್ಗಿದವಳೇ, ಗಾಳಿಯ ಬಡಿತಕ್ಕೆ ಗುರಿಯಾದ 1
ವಳೇ, ಯಾರೂ ಸಂತೈಸದವಳೇ, ಇಗೋ, ಇಂದ್ರ
ನೀಲಮಣಿಗಳಿಂದ ನಿನಗೆ ಅಸ್ತಿವಾರವನ್ನು ಹಾಕಿ ನಿನ್ನ
ಕಲ್ಲುಗಳನ್ನು ನೀಲಾಂಜನದ ಗಾರೆಯಿಂದ ಕಟ್ಟು
ವೆನು. ನಿನ್ನ ಶಿಖರಗಳನ್ನು ಮಾಣಿಕ್ಯಗಳಿಂದ, ನಿನ್ನ 1
ಬಾಗಿಲುಗಳನ್ನು ಪದ್ಮರಾಗಗಳಿಂದ, ನಿನ್ನ ಪೌಳಿಗೋ
ಡೆಯನ್ನು ಮನೋಹರರತ್ನಗಳಿಂದ ನಿರ್ಮಿಸುವೆನು.
ನಿನ್ನ ಮಕ್ಕಳೆಲ್ಲರೂ ಯೆಹೋವನಿಂದ ಶಿಕ್ಷಿತರಾ 1
ಗಿರುವರು, ಅವರಿಗೆ ಅಧಿಕ ಸುಕ್ಷೇಮವಾಗುವದು.
ಧರ್ಮವೇ ನಿನಗೆ ಆಧಾರ; ನೀನು ಹಿಂಸೆಗೆ ದೂರವಾಗಿ 1
ರುವಿ, ನಿನಗೆ ಹೆದರಿಕೆ ಇರುವದಿಲ್ಲ, ನಾಶನವು ದೂರ
ವಾಗಿರುವದು, ನಿನ್ನ ಹತ್ತಿರಕ್ಕೆ ಬಾರದು. ನೋಡು, 1
ಯಾರಾದರೂ ನಿನ್ನ ಸಂಗಡ ವ್ಯಾಜ್ಯವಾಡಿದರೆ ಅದು
ನನ್ನ ಅಪ್ಪಣೆಯಿಂದ ಅಲ್ಲ; ಯಾರು ನಿನ್ನ ಮೇಲೆ
ವ್ಯಾಜ್ಯವಾಡುತ್ತಾರೋ ಅವರು ನಿನ್ನ ನಿಮಿತ್ತ ಕೆಡವ
ಲ್ಪಡುವರು. ಕೇಳು, ಕೆಂಡವನ್ನು ಊದುತ್ತಾ ಉಪ 1
ಯುಕ್ತವಾದ ಆಯುಧವನ್ನುಂಟುಮಾಡುವ ಕಮ್ಮಾ
ರನನ್ನು ಸೃಷ್ಟಿಸಿದವನು ನಾನೇ, ಹಾಳುಮಾಡುವ
ಕೆಡುಕನನ್ನು ನಿರ್ಮಿಸಿದವನೂ ನಾನೇ. ನಿನ್ನನ್ನು 1
ಎದುರಿಸಲು ಕಲ್ಪಿಸಿದ ಯಾವ ಆಯುಧವೂ ಜಯಿ
ಸದು; ನ್ಯಾಯವಿಚಾರಣೆಯಲ್ಲಿ ನಿನಗೆ ವಿರುದ್ಧವಾಗಿ
ಏಳುವ ಪ್ರತಿಯೊಂದು ನಾಲಿಗೆಯನ್ನು ದೋಷಿಯೆಂದು
ನೀನು ಖಂಡಿಸುವಿ. ಈ ಸ್ಥಿತಿಯೇ ಯೆಹೋವನ
ಸೇವಕರ ಸ್ವಾಸ್ತ್ಯವೂ ನಾನು ದಯಪಾಲಿಸುವ ಸದ್ಧ
ರ್ಮಫಲವೂ ಆಗಿದೆ ಎಂದು ಯೆಹೋವನು ಅನ್ನು
ತ್ತಾನೆ.

ಯೆಹೋವನು ತನ್ನ ವರಗಳನ್ನು ಪಡೆಯಲು
ಕರೆಯುವದು.

ಎಲೈ, ಬಾಯಾರಿದ ಸಕಲಜನರೇ, ನೀರಿನ 55
ಬಳಿಗೆ ಬನ್ನಿರಿ, ಹಣವಿಲ್ಲದವನು ಸಹ ಬರಲಿ!
ಬನ್ನಿರಿ, ಕೊಂಡುಕೊಳ್ಳಿರಿ, ಉಣ್ಣಿರಿ! ಬಂದು ದ್ರಾಕ್ಷಾ
ರಸವನ್ನೂ ಹಾಲನ್ನೂ ಹಣಕೊಡದೆ ಕ್ರಯವಿಲ್ಲದೆ
ತೆಗೆದುಕೊಳ್ಳಿರಿ. ಆಹಾರವಲ್ಲದ್ದಕ್ಕೆ ಹಣವನ್ನು ಏಕೆ
ವ್ಯಯಮಾಡುತ್ತೀರಿ? ತೃಪ್ತಿಗೊಳಿಸದ ಪದಾರ್ಥಕ್ಕೆ
ನಿಮ್ಮ ದುಡಿತವನ್ನು ವೆಚ್ಚಮಾಡುವದೇಕೆ? ಕಿವಿ
ಗೊಟ್ಟು ನನ್ನ ಮಾತನ್ನು ಕೇಳಿರಿ, ಒಳ್ಳೇದನ್ನೇ

1) ಮೂಲ: ಬಲಗಡೆಯಲ್ಲಿಯೂ ಎಡಗಡೆಯಲ್ಲಿಯೂ. 2) ಅಥವಾ: ನ್ಯಾಯಸ್ಥಾಪಕನಾದ. 3) ಮೂಲ: ಇದು.

3 ಉಂಡು ಮೃಷ್ಟಾನ್ನದಲ್ಲಿ ಆನಂದಪಡಿರಿ. ಕಿವಿಯನ್ನು
ಇತ್ತ ತಿರುಗಿಸಿರಿ, ನನ್ನ ಬಳಿಗೆ ಬನ್ನಿರಿ: ಆಲಿಸಿ
ದರೆ ಬದುಕಿ ಬಾಳುವಿರಿ. ದಾವೀದನಿಗೆ ಖಂಡಿತ
ವಾಗಿ ವಾಗ್ದಾನಮಾಡಿದ ಕೃಪಾವರಗಳನ್ನು ನಿಮಗೆ
ಕೊಡುತ್ತೇನೆಂಬ ಶಾಶ್ವತವಾದ ಒಡಂಬಡಿಕೆಯನ್ನು
4 ನಿಮ್ಮೊಂದಿಗೆ ಮಾಡಿಕೊಳ್ಳುವೆನು. ಇಗೋ, ನಾನು ಅವ
ನನ್ನು ಜನಾಂಗಗಳಿಗೆ ಸಾಕ್ಷಿಯನ್ನಾಗಿಯೂ ನಾಯಕ
ನನ್ನಾಗಿಯೂ ಅಧಿಪತಿಯನ್ನಾಗಿಯೂ ನೇಮಿಸಿದೆನು.
5 ಎಲೈ, [ಇಸ್ರಾಯೇಲೇ], [ಅವನಂತೆ ನೀನೂ] ನಿನಗೆ
ಗೊತ್ತಿಲ್ಲದ ಜನಾಂಗವನ್ನು ನಿನ್ನ ಅಧೀನಕ್ಕೆ ಕರೆ
ಯುವಿ, ಇಸ್ರಾಯೇಲಿನ ಸದಮಲಸ್ವಾಮಿ ಎನಿಸಿಕೊ
ಳ್ಳುವ ನಿನ್ನ ದೇವರಾದ ಯೆಹೋವನು ನಿನಗೆ ವೈಭವ
ಕೊಟ್ಟಿರುವದನ್ನು ನೋಡಿ ನಿನ್ನನ್ನು ತಿಳಿಯದ
ಜನಾಂಗವು ನಿನ್ನ ಆಶ್ರಯಕ್ಕೆ ಓಡಿಬರುವದು.
6 ಯೆಹೋವನು ಸಿಕ್ಕುವ ಕಾಲದಲ್ಲಿ ಆತನನ್ನು
ಆಶ್ರಯಿಸಿರಿ, ಆತನು ಸಮೀಪದಲ್ಲಿರುವಾಗ ಆತನಿಗೆ
7 ಬಿನ್ನಹಮಾಡಿರಿ. ದುಷ್ಟನು ತನ್ನ ದುರ್ಮಾರ್ಗವನ್ನು
ಬಿಡಲಿ, ಕೆಡುಕನು ತನ್ನ ದುರಾಲೋಚನೆಗಳನ್ನು
ತ್ಯಜಿಸಲಿ; ಯೆಹೋವನ ಕಡೆಗೆ ತಿರುಗಿಕೊಂಡು ಬರಲಿ,
ಆತನು ಅವನನ್ನು ಕರುಣಿಸುವನು; ನಮ್ಮ ದೇವರನ್ನು
ಆಶ್ರಯಿಸಲಿ, ಆತನು ಮಹಾಕೃಪೆಯಿಂದ ಕ್ಷಮಿ
8 ಸುವನು. ಯೆಹೋವನು ಹೀಗನ್ನುತ್ತಾನೆ—ನನ್ನ
ಆಲೋಚನೆಗಳು ನಿಮ್ಮ ಆಲೋಚನೆಗಳಲ್ಲ, ನಿಮ್ಮ
9 ಮಾರ್ಗಗಳು ನನ್ನ ಮಾರ್ಗಗಳಲ್ಲ. ಭೂಮಿಯ
ಮೇಲೆ ಆಕಾಶವು ಎಷ್ಟು ಉನ್ನತವೋ ನಿಮ್ಮ ಮಾರ್ಗ
ಗಳಿಗಿಂತ ನನ್ನ ಮಾರ್ಗಗಳೂ ನಿಮ್ಮ ಆಲೋಚನೆಗಳಿ
ಗಿಂತ ನನ್ನ ಆಲೋಚನೆಗಳೂ ಅಷ್ಟು ಉನ್ನತವಾಗಿವೆ.
10 ಮಳೆಯೂ ಹಿಮವೂ ಆಕಾಶದಿಂದ ಬಿದ್ದು ಭೂಮಿ
ಯನ್ನು ತೋಯಿಸಿ ಹಸರುಗೊಳಿಸಿ ಫಲಿಸುವಂತೆ
ಮಾಡಿ ಬಿತ್ತುವವನಿಗೆ ಬೀಜವನ್ನು, ಉಣ್ಣುವವನಿಗೆ
ಆಹಾರವನ್ನು ಒದಗಿಸಿದ ಹೊರತು ಹೇಗೆ ಆಕಾಶಕ್ಕೆ
11 ಸುಮ್ಮನೆ ಹಿಂದಿರುಗುವದಿಲ್ಲವೋ ಹಾಗೆಯೇ ನನ್ನ
ಬಾಯಿಂದ ಹೊರಟ ಮಾತು ನನ್ನ ಇಷ್ಟಾರ್ಥವನ್ನು
ನೆರವೇರಿಸಿ ನಾನು ಉದ್ದೇಶಿಸಿದ್ದನ್ನು ಕೈಗೂಡಿಸಿದ
ಹೊರತು ನನ್ನ ಕಡೆಗೆ ವ್ಯರ್ಥವಾಗಿ ಹಿಂದಿರುಗುವ
12 ದಿಲ್ಲ. ನೀವು ಆನಂದಭರಿತರಾಗಿ ಹೊರಡುವಿರಿ,
ಸಮಾಧಾನದಿಂದ ಮೆರವಣಿಗೆಯಾಗಿ ಬರುವಿರಿ; ಬೆಟ್ಟ
ಗುಡ್ಡಗಳು ನಿಮ್ಮ ಮುಂದೆ ಜಯಘೋಷಮಾಡುವವು,
ಅಡವಿಯ ಮರಗಳೆಲ್ಲಾ ಚಪ್ಪಾಳೆಹೊಡೆಯುವವು.
13 ಮುಳ್ಳಿಗೆ ಬದಲಾಗಿ ತುರಾಯಿಯೂ ದತ್ತೂರಿಗೆ
ಪ್ರತಿಯಾಗಿ ಸುಗಂಧವೂ ಬೆಳೆಯುವವು; ಆ ವನವು
ಯೆಹೋವನಾಮಸ್ಮರಣೆಗೆ ಶಾಶ್ವತವಾದ ಗುರುತಾಗಿ
ಎಂದಿಗೂ ಅಳಿಯದಿರುವದು.

ಯೆಹೋವನ ನಿಯಮಗಳನ್ನು ಅನುಸರಿಸುವ ನಪುಂಸಕರೂ
ವಿದೇಶೀಯರೂ ದೇವಾಲಯದಲ್ಲಿ ಹಕ್ಕುದಾರರಾಗುವದು.

56 ಯೆಹೋವನು ಹೀಗನ್ನುತ್ತಾನೆ—ನ್ಯಾಯವನ್ನು
ಅನುಸರಿಸಿರಿ, ಧರ್ಮವನ್ನು ಆಚರಿಸಿರಿ; ಏಕಂದರೆ
ನನ್ನ ವಿಮೋಚನಕ್ರಿಯೆಯು ಬೇಗನೆ ಬರುವದು,
ನನ್ನ ರಕ್ಷಣಧರ್ಮದ ಕಾರ್ಯವು ಶೀಘ್ರವಾಗಿ ವ್ಯಕ್ತ
ವಾಗುವದು. ಈ ವಿಧಿಯನ್ನು ಕೈಕೊಳ್ಳುವ ಮನು 2
ಷ್ಯನು ಧನ್ಯನು; ಇದನ್ನೇ ಭದ್ರವಾಗಿ ಹಿಡಿದು
ಸಬ್ಬತ್ ದಿನವನ್ನು ಹೊಲೆಮಾಡದೆ ದೇವರ ದಿನ
ವೆಂದು ಆಚರಿಸುತ್ತಾ ಯಾವ ಕೇಡಿಗೂ ಕೈಹಾಕದ
ಮಾನವನು ಭಾಗ್ಯವಂತನು. ಯೆಹೋವನನ್ನು ಅವ 3
ಲಂಬಿಸಿದ ವಿದೇಶೀಯನು—ಯೆಹೋವನು ತನ್ನ ಜನ
ರಿಂದ ನನ್ನನ್ನು ಖಂಡಿತವಾಗಿ ಅಗಲಿಸುವನು ಎಂದು
ಮಾತಾಡದಿರಲಿ; ಮತ್ತು ನಪುಂಸಕನು—ಅಯ್ಯೋ,
ನಾನು ಗೊಡ್ಡುಮರ ಎಂದು ಅಂದುಕೊಳ್ಳದಿರಲಿ.
ಯೆಹೋವನು ಹೀಗನ್ನುತ್ತಾನೆ—ಸಬ್ಬತ್ ದಿನಗಳನ್ನು 4
ನನ್ನ ದಿನಗಳೆಂದು ಆಚರಿಸಿ ನನಗೆ ಮೆಚ್ಚಿಕೆಯಾದ
ದ್ದನ್ನು ಕೈಕೊಂಡು ನನ್ನ ಒಡಂಬಡಿಕೆಯನ್ನು ಭದ್ರವಾಗಿ
ಹಿಡಿದುಕೊಂಡಿರುವ ನಪುಂಸಕರಿಗೆ ನನ್ನ ಪ್ರಾಕಾರ 5
ಗಳೊಳಗೆ ನನ್ನ ಆಲಯದಲ್ಲಿ ಅವರ ಜ್ಞಾಪಕಾರ್ಥವಾಗಿ
ಶಿಲೆಯನ್ನಿಟ್ಟು, ಹೆಣ್ಣುಗಂಡು ಮಕ್ಕಳಿಗಿಂತ ಮೇಲಾದ
ಹೆಸರುವಾಸಿಯನ್ನು ದಯಪಾಲಿಸುವೆನು; ಹೌದು,
ಎಂದಿಗೂ ಅಳಿಯದ ಶಾಶ್ವತನಾಮವನ್ನು ಅನುಗ್ರಹಿ
ಸುವೆನು. ಅನ್ಯದೇಶೀಯರಲ್ಲಿ ಯಾರು ಯೆಹೋವ 6
ನೆಂಬ ನನ್ನನ್ನು ಅವಲಂಬಿಸಿ ಸೇವಿಸಿ ನನ್ನ ನಾಮ
ವನ್ನು ಪ್ರೀತಿಸಿ ನನಗೆ ದಾಸರಾಗಿ ಸಬ್ಬತ್ ದಿನವನ್ನು
ಹೊಲೆಮಾಡದೆ ನನ್ನ ದಿನವೆಂದು ಆಚರಿಸಿ ನನ್ನ
ಒಡಂಬಡಿಕೆಯನ್ನು ಭದ್ರವಾಗಿ ಹಿಡಿಯುತ್ತಾರೋ
ಅವರೆಲ್ಲರನ್ನೂ ನಾನು ನನ್ನ ಪವಿತ್ರಪರ್ವತಕ್ಕೆ ಬರ 7
ಮಾಡಿ ನನ್ನ ಪ್ರಾರ್ಥನಾಲಯದಲ್ಲಿ ಉಲ್ಲಾಸಗೊ
ಳಿಸುವೆನು; ನನ್ನ ಯಜ್ಞವೇದಿಯಲ್ಲಿ ಅವರು
ಅರ್ಪಿಸುವ ಸರ್ವಾಂಗಹೋಮಗಳೂ ಯಜ್ಞಗಳೂ
ನನಗೆ ಮೆಚ್ಚಿಕೆಯಾಗುವವು; ನನ್ನ ಆಲಯವು ಎಲ್ಲಾ
ಜನಾಂಗಗಳಿಗೂ ಪ್ರಾರ್ಥನಾಲಯವೆನಿಸಿಕೊಳ್ಳುವದು.
ಇಸ್ರಾಯೇಲಿನ ದೇಶಭ್ರಷ್ಟರನ್ನು ಕೂಡಿಸಿಕೊಳ್ಳುವ 8
ಕರ್ತನಾದ ಯೆಹೋವನ ನುಡಿಯೇನಂದರೆ—ನಾನು
ಕೂಡಿಸಿದ ಇಸ್ರಾಯೇಲ್ಯರೊಂದಿಗೆ ಇನ್ನೂ ಹಲವರನ್ನು
ಕೂಡಿಸುವೆನು ಎಂಬದೇ.

ಅಧಿಪತಿಗಳ ಅತ್ಯಾಶೆ, ಜನರ ದೇವದ್ರೋಹ,
ಇವುಗಳ ಖಂಡನೆ.

ಅರಣ್ಯದ ಸಕಲ ಮೃಗಗಳೇ, ಕಾಡಿನ ಎಲ್ಲಾ ಜಂತು 9
ಗಳೇ, ನುಂಗಿಬಿಡುವದಕ್ಕೆ ಬನ್ನಿರಿ! ಇವರ ಕಾವಲು 10
ಗಾರರು ಕುರುಡರು, ಇವರಲ್ಲಿ ಯಾರಿಗೂ ತಿಳುವಳಿ
ಕೆಯಿಲ್ಲ; ಇವರೆಲ್ಲರೂ ಬೊಗಳಲಾರದ ಮೂಗನಾ
ಯಿಗಳು, ನಿದ್ರೆಯನ್ನಾಶಿಸಿ ಮಲಗಿಕೊಂಡು ಕನವರಿ
ಸುವ ನಾಯಿಗಳು. ಮತ್ತು ಇವು ಹೊಟ್ಟೆಬಾಕ 11
ನಾಯಿಗಳು, ಇವುಗಳಿಗೆ ಎಂದಿಗೂ ಸಾಕು ಎನಿಸದು.
ಇಂಥವರು ಕುರಿಗಳನ್ನು ಕಾಯತಕ್ಕವರೋ! ಬುದ್ಧಿ
ಹೀನರಾಗಿದ್ದಾರೆ, ಇವರಲ್ಲಿ ಯಾವನೂ ತಪ್ಪದೆ ಪ್ರತಿ
ಯೊಬ್ಬನೂ ಕೊಳ್ಳೆಹೊಡೆಯಬೇಕೆಂದು ತನ್ನ ತನ್ನ
ಮಾರ್ಗಕ್ಕೆ ತಿರುಗಿಕೊಂಡಿದ್ದಾನೆ. ಬನ್ನಿರಿ, ನಾನು 12
ದ್ರಾಕ್ಷಾರಸವನ್ನು ತರಿಸುವೆನು, ಬೇಕಾದಷ್ಟು ಮದ್ಯ
ವನ್ನು ಕುಡಿಯುವ; ನಾಳೆಯೂ ಈ ದಿನದಂತೆ ಕೇವಲ

ಅತ್ಯಂತವಿಶೇಷದಿನವಾಗಿರುವದು [ಎಂದು ಹರಟೆಕೊಳ್ಳು
ವರು].

57 ಸಜ್ಜನರು ನಾಶವಾಗುತ್ತಾರೆ, ಯಾರೂ ಮನ
ಸ್ಸಿಗೆ ತಾರರು; ಸದ್ಭಕ್ತರು ಗತಿಸುತ್ತಾರೆ, ಆಹಾ,
ಶಿಷ್ಟರು ಕೇಡಿನಿಂದ ಪಾರಾಗಿದ್ದಾರೆ ಎಂದು ಯಾರೂ
2 ಯೋಚಿಸರು. ಇವರು ಸಮಾಧಾನದಲ್ಲಿ ಸೇರಿದ್ದಾ
ರಲ್ಲಾ; ನೆಟ್ಟಗೆ ನಡೆಯುವ ಪ್ರತಿಯೊಬ್ಬನು ತನ್ನ ತನ್ನ
ದೀರ್ಘನಿದ್ರಾಸ್ಥಾನದಲ್ಲಿ ವಿಶ್ರಮಿಸಿಕೊಳ್ಳುತ್ತಿದ್ದಾನೆ.
3 ಮಾಟಗಾತಿಯ ಮಕ್ಕಳೇ, ಸೂಳೆಗಾರನ ಮತ್ತು
ಸೂಳೆಯ ಸಂತಾನದವರೇ, ನೀವು ಇಲ್ಲಿಗೆ ಬನ್ನಿರಿ!
4 ಯಾರನ್ನು ಅಣಕಿಸಿ ವಿನೋದಪಡುತ್ತೀರಿ? ಯಾರ
ನ್ನು ನೋಡಿ ಬಾಯಿಕಿಸಿದು ನಾಲಿಗೆಯನ್ನು ಚಾಚು
5 ತ್ತೀರಿ? ಏಲಾ ಮರಗಳ ತೋಪುಗಳಲ್ಲಿಯೂ ಸೊಂಪಾಗಿ
ಬೆಳೆದಿರುವ ಪ್ರತಿಯೊಂದು ಮರದ ನೆರಳಿನಲ್ಲಿಯೂ
ಮದವೇರಿಸಿಕೊಂಡು ಹೊಳೆ ಕೊರೆದ ಡೊಂಗರಗಳ
ಲ್ಲಿಯೂ ಬೆಟ್ಟದ ಗವಿಗಳಲ್ಲಿಯೂ ಮಕ್ಕಳನ್ನು ಕೊಂದು
ಹಾಕುವ ನೀವು ದ್ರೋಹದ ಸಂತಾನವೂ ಸುಳ್ಳಿನ ಸಂತ
6 ತಿಯೂ ಆಗಿದ್ದೀರಿ. [ಕೆಟ್ಟ ಸಂತಾನವೇ] ಹೊಳೆಯ
ಗುಂಡುಗಳು ನಿನಗೆ ಗತಿ, ಅವುಗಳೇ ನಿನ್ನ ಪಾಲು;
ಅವುಗಳಿಗೇ ನೀನು ಪಾನದ್ರವ್ಯವನ್ನು ನೈವೇದ್ಯವಾಗಿ
ಸುರಿದು ಧಾನ್ಯದ್ರವ್ಯವನ್ನು ಅರ್ಪಿಸಿದ್ದೀ. ನಾನು
ಇದನ್ನೆಲ್ಲಾ ನೋಡಿ ಕೋಪವನ್ನು ಅಣಗಿಸಿಕೊಳ್ಳ
7 ಲಾದೀತೇ? ಮಹೋನ್ನತಪರ್ವತದಲ್ಲಿ ನೀನು ಮಂಚ
ವನ್ನು ಹಾಕಿಕೊಂಡಿದ್ದೀ, ಯಜ್ಞಮಾಡಲು ಆ ಬೆಟ್ಟ
8 ವನ್ನೇರಿದ್ದೀ. ಕದದ ಮತ್ತು ನಿಲುವಿನ ಹಿಂಭಾಗದಲ್ಲಿ
ನೀನು 1)ವಿಗ್ರಹವನ್ನು ಇಟ್ಟುಕೊಂಡಿದ್ದೀ; ನನ್ನನ್ನು
ಬಿಟ್ಟುಬಿಟ್ಟು ನಿನ್ನ ಮಂಚದ ಗವಸಣಿಗೆಯನ್ನು
ತೆಗೆದು ಅದನ್ನು ಹತ್ತಿ ಅದರಲ್ಲಿ ಅನ್ಯರಿಗೆ ಸ್ಥಳಕೊಟ್ಟು
ಅವರೊಂದಿಗೆ ಒಪ್ಪಂದಮಾಡಿಕೊಂಡಿದ್ದೀ. 2)ಅವರ
ಸಂಗಮವನ್ನು ಆಶಿಸಿ ಸ್ಥಳವನ್ನು ಸಂಕೇತಮಾಡಿ
9 ಕೊಂಡಿದ್ದೀ. ಬಹು ಸುಗಂಧದ್ರವ್ಯಗಳನ್ನು ಕೂಡಿಸಿ
ತೈಲವನ್ನೂ ತೆಗೆದುಕೊಂಡು 3)ಪರರಾಜನ ಬಳಿಗೆ
ಪ್ರಯಾಣಮಾಡಿದ್ದೀ; ನಿನ್ನ ರಾಯಭಾರಿಗಳನ್ನು
ದೂರ ದೂರ ಕಳುಹಿಸಿದ್ದೀ; ನಿನ್ನನ್ನು ಪಾತಾಳದ
10 ವರೆಗೂ ತಗ್ಗಿಸಿಕೊಂಡಿದ್ದೀ. ನೀನು ನಡೆದು ನಡೆದು
ಆಯಾಸಗೊಂಡರೂ ದಿಕ್ಕಿಲ್ಲವಲ್ಲಾ ಅಂದುಕೊಳ್ಳ
ಲಿಲ್ಲ; ಹೊಸ ಬಲವನ್ನು ತಂದುಕೊಂಡಿ; ಆದದ
11 ರಿಂದ ನೀನು ಸೋತುಹೋಗಲಿಲ್ಲ. ನೀನು ಯಾರಿಗೆ
ಬೆದರಿ ಹೆದರಿದ್ದರಿಂದ ನಿನ್ನನ್ನು ಮರೆತು ನನಗೆ
ಮೋಸಮಾಡಿದಿ? ಈ ದ್ರೋಹಕ್ಕೂ ಹಿಂದೆಗೆಯಲಿಲ್ಲ
ವಲ್ಲಾ! ನೀನು ನನಗೆ ಅಂಜದೆ ಇರುವದಕ್ಕೆ ನಾನು
ಬಹುಕಾಲದಿಂದ ಸುಮ್ಮನೆ ಇದ್ದದ್ದೇ ಕಾರಣವಲ್ಲವೆ.
12 ನಾನು ನಿನ್ನ ಧರ್ಮವನ್ನು ಬೈಲಿಗೆ ತರುವೆನು, ನಿನ್ನ
13 ಕಾರ್ಯಗಳೇನೋ ನಿನಗೆ ನಿಷ್ಪ್ರಯೋಜನ. ನೀನು
ಕೂಗಿಕೊಳ್ಳುವಾಗ ನೀನು ಕೂಡಿ ಹಾಕಿಕೊಂಡಿರುವ
ಇವುಗಳೇ ನಿನ್ನನ್ನುದ್ಧರಿಸಲಿ. ಆದರೆ ಇವುಗಳನ್ನೆಲ್ಲಾ
ಗಾಳಿಯು ಬಡಿದುಕೊಂಡು ಹೋಗುವದು, ಬರೀ
ಉಸಿರಾದರೂ ಒಯ್ಯುವದು. ನನ್ನನ್ನು ಆಶ್ರಯಿಸು
ವವನೋ ದೇಶವನ್ನನುಭವಿಸಿ ನನ್ನ ಪರಿಶುದ್ಧಪರ್ವತ
ವನ್ನು ಬಾಧ್ಯವಾಗಿ ಹೊಂದುವನು.

ಯೆಹೋವನು ದೀನಮನಸರನ್ನು ಕರುಣಿಸುವದು.

ಮಣ್ಣು ಹಾಕಿರಿ, ಹಾಕಿರಿ,
ಮಾರ್ಗವನ್ನು ಸರಿಮಾಡಿರಿ;
ನನ್ನ ಜನರ ದಾರಿಯೊಳಗಿಂದ ಆಟಂಕವನ್ನು ಎತ್ತಿ
ಹಾಕಿರಿ
ಎಂದು ಒಂದು ವಾಣಿಯು ನುಡಿಯುತ್ತದೆ.

ಸದಮಲನೆನಿಸಿಕೊಂಡು ಶಾಶ್ವತಲೋಕದಲ್ಲಿ 4)ನಿ
ತ್ಯನಿವಾಸಿಯಾದ ಮಹೋನ್ನತನು ಹೀಗನ್ನುತ್ತಾನೆ—
ಉನ್ನತಲೋಕವೆಂಬ ಪವಿತ್ರಾಲಯದಲ್ಲಿ ವಾಸಿಸುವ
ನಾನು ಜಜ್ಜಿಹೋದ ದೀನಮನದೊಂದಿಗೆ ಇದ್ದು
ಕೊಂಡು ದೀನನ ಆತ್ಮವನ್ನೂ ಜಜ್ಜಿಹೋದವನ ಮನ
ಸ್ಸನ್ನೂ ಉಜ್ಜೀವಿಸುವವನಾಗಿದ್ದೇನೆ. ನಾನು ಸರ್ವದಾ
ವ್ಯಾಜ್ಯವಾಡೆನು, ಕಡೆಯ ತನಕ ಕೋಪಿಸಿಕೊಳ್ಳೆನು,
ಹೀಗೆ ಮಾಡಿದರೆ ಮನುಷ್ಯಾತ್ಮವೂ ನಾನು ಸೃಷ್ಟಿಸಿದ
ಜೀವವೂ ನನ್ನಿಂದ ಕುಂದಿಹೋದಾವು. ನನ್ನ ಜನರು
ಲಾಭವನ್ನು ದೋಚಿಕೊಂಡ ಅನ್ಯಾಯವನ್ನು ನಾನು
ನೋಡಿ ಕೋಪಗೊಂಡು ಅವರನ್ನು ಹೊಡೆದೆನು,
[ನನ್ನ ಮುಖವನ್ನು] ಮುಚ್ಚಿಕೊಂಡು ರೋಷಭರಿತ
ನಾಗಿದ್ದೆನು; ಅವರೋ ತಿರುಗಿಕೊಂಡು ಮನಸ್ಸಿಗೆ
ತೋರಿದ ಹಾಗೆಯೇ ನಡೆಯುತ್ತಾ ಬಂದಿದ್ದಾರೆ.
ಅವರ ಮಾರ್ಗಗಳನ್ನು ನೋಡಿದ್ದೇನೆ, ಅವರನ್ನು
ಸ್ವಸ್ಥಮಾಡಿ ನಡಿಸುತ್ತಾ ಅವರಿಗೆ, ಅವರಲ್ಲಿಯೂ
ದುಃಖಿತರಿಗೆ, ಆದರಣೆಯನ್ನು ಪ್ರತಿಫಲವಾಗಿ ಕೊಡು
ವೆನು. ಯೆಹೋವನು 5)ಮನುಷ್ಯರ ಬಾಯ ಯೋಗ್ಯ
ಫಲವಾಗಿರುವ ಸ್ತೋತ್ರವನ್ನು ಉಂಟುಮಾಡುವವ
ನಾಗಿ—ದೂರದವನಿಗೂ ಸಮೀಪದವನಿಗೂ ಕ್ಷೇಮ
ವಿರಲಿ, ಸುಕ್ಷೇಮವಿರಲಿ, ನಾನು ಅವರನ್ನು ಸ್ವಸ್ಥ
ಮಾಡುವೆನು ಎಂದು ಹೇಳುತ್ತಾನೆ. ದುಷ್ಟರಾದರೋ
ಅಲ್ಲೋಲಕಲ್ಲೋಲವಾದ ಸಮುದ್ರದಂತಿದ್ದಾರೆ; ಅದು
ಸುಮ್ಮನಿರದು, ಅದರ ತೆರೆಗಳು ಕೆಸರನ್ನೂ ಬುರುದೆ
ಯನ್ನೂ ಕಾರುತ್ತಲಿರುತ್ತವೆ. ದುಷ್ಟರಿಗೆ ಸಮಾ
ಧಾನವೇ ಇಲ್ಲವೆಂದು ನನ್ನ ದೇವರು ನುಡಿಯುತ್ತಾನೆ.

ಕಪಟಭಕ್ತಿ, ಯಥಾರ್ಥಭಕ್ತಿ ಇವುಗಳ ಲಕ್ಷಣಗಳು.

ಗಂಟಲೆತ್ತಿ ಕೂಗು, ಸಂಕೋಚಪಡಬೇಡ, ಕೊಂಬಿ 5
ನಂತೆ ದನಿಗೈದು ನನ್ನ ಜನರಿಗೆ ಅವರ ದ್ರೋಹ
ವನ್ನು ತಿಳಿಸು, ಯಾಕೋಬವಂಶದವರಿಗೆ ಅವರ ಪಾಪ
ಗಳನ್ನು ಅರುಹು. ಅವರಂತು ದಿನದಿನವೂ ನನ್ನ
ದರ್ಶನಕ್ಕಾಗಿ ಬಂದು ನನ್ನ ಮಾರ್ಗವನ್ನು ತಿಳಿದು

1) ಮೂಲ: ಜ್ಞಾಪಕಚಿಹ್ನೆಯನ್ನು. 2) ಅಥವಾ: ಕಂಡ ಕಂಡ ಸ್ಥಳದಲ್ಲಿ ಅವರ ಸಂಗಮವನ್ನು ಆಶಿಸಿದ್ದೀ. 3) ಅಥ
ಮೋಲೆಕನ ಬಳಿಗೆ . . . . . . . . . ಪಾತಾಳದಷ್ಟು ನೀಚಸ್ಥಿತಿಗೆ ಇಳಿದಿದ್ದೀ. 4) ಅಥವಾ: ನಿತ್ಯವಾಗಿ ಬದುಕ
5) ಮೂಲ: ತುಟಿಗಳಿಗೆ ಫಲವನ್ನು ಉಂಟುಮಾಡುವವನಾಗಿ.

ಕೊಳ್ಳುವದರಲ್ಲಿ ಹೆಚ್ಚಳಪಡುತ್ತಾರೆ; ತನ್ನ ದೇವರ
ನಿಯಮಗಳನ್ನು ಬಿಡದೆ ಧರ್ಮವನ್ನಾಚರಿಸುವ
ಜನಾಂಗವೋ ಎಂಬಂತೆ ಧೈರ್ಯವಾಗಿ ನನ್ನಿಂದ
ನ್ಯಾಯವಿಧಿಗಳನ್ನು ಕೇಳಿಕೊಂಡು ದೇವದರ್ಶನದಲ್ಲಿ
3 ಆನಂದಿಸುತ್ತಾರೆ. ನಾವು ಉಪವಾಸಮಾಡಿದ್ದೇವೆ,
ನೀನು ಏಕೆ ಕಟಾಕ್ಷಿಸುವದಿಲ್ಲ; ನಮ್ಮ ಆತ್ಮವನ್ನು
ಕುಂದಿಸಿಕೊಂಡಿದ್ದೇವೆ, ನೀನು ಗಮನಿಸದಿರುವದೇಕೆ
ಅಂದುಕೊಳ್ಳುತ್ತಾರೆ. ಇಗೋ, ನಿಮ್ಮ ಉಪವಾಸದ
ದಿನದಲ್ಲಿಯೂ ನಿಮ್ಮ ನಿತ್ಯದ ಕೆಲಸವನ್ನು ನಡಿಸಿ
4 ನಿಮ್ಮ ಆಳುಗಳನ್ನು ದುಡಿತಕ್ಕೆಳೆಯುತ್ತೀರಿ. ನೋಡಿರಿ,
ನಿಮ್ಮ ಉಪವಾಸದ ಫಲವೇನಂದರೆ—ವ್ಯಾಜ್ಯ, ಕಲಹ,
ಕೇಡಿನ ಗುದ್ದು, ಇವುಗಳೇ. ನೀವು ಈಗ ಮಾಡುವ
ಉಪವಾಸವು ನಿಮ್ಮ ಪ್ರಾರ್ಥನೆಯನ್ನು ಉನ್ನತ
5 ಲೋಕಕ್ಕೆ ಮುಟ್ಟಿಸತಕ್ಕದ್ದಲ್ಲ. ಮನುಷ್ಯನು ತನ್ನ
ಆತ್ಮವನ್ನು ಕುಂದಿಸಿಕೊಳ್ಳುವದಕ್ಕಾಗಿ ನಾನು ನೇಮಿ
ಸಿದ ಉಪವಾಸದಿನವು ಇಂಥದೋ? ಒಬ್ಬನು ಜೊಂಡಿ
ನಂತೆ ತಲೆಯನ್ನು ಬೊಗ್ಗಿಸಿಕೊಂಡು ಗೋಣೀತಟ್ಟ
ನ್ನೂ ಬೂದಿಯನ್ನೂ ಆಸನಮಾಡಿಕೊಳ್ಳುವದು ಯೆ
ಹೋವನಿಗೆ ಸಮರ್ಪಕವಾದ ಉಪವಾಸ ಎನ್ನು
6 ತ್ತೀರೋ? ನೋಡಿರಿ, ಕೇಡಿನ ಬಂಧಗಳನ್ನು ಬಿಚ್ಚು
ವದು, ನೊಗದ ಕಣ್ಣಿಗಳನ್ನು ಕಳಚುವದು, ಜಜ್ಜಿ
ಹೋದವರನ್ನು ಬಿಡುಗಡೆಮಾಡುವದು, ನೊಗಗಳ
7 ನ್ನೆಲ್ಲಾ ಮುರಿಯುವದು, ಹಸಿದವರಿಗೆ ಅನ್ನವನ್ನು
ಹಂಚುವದು, ಅಲೆಯುತ್ತಿರುವ ಬಡವರನ್ನು ಮನೆಗೆ
ಬರಮಾಡಿಕೊಳ್ಳುವದು, ಬೆತ್ತಲೆಯವರನ್ನು ಕಂಡಾ
ಗೆಲ್ಲಾ ಅವರಿಗೆ ಹೊದಿಸುವದು, ನಿನ್ನಂತೆ ನರನಾಗಿ
ರುವ ಯಾವನಿಗೇ ಆಗಲಿ ಮುಖತಪ್ಪಿಸಿಕೊಳ್ಳದಿರು
ವದು, ಇವುಗಳೇ ನನಗೆ ಇಷ್ಟವಾದ ಉಪವಾಸವ್ರತ
8 ವಲ್ಲವೇ. ಇದನ್ನು ಆಚರಿಸುವಾಗ ನಿಮಗೆ ಬೆಳಕು
ಉದಯದಂತೆ ಭೇದಿಸಿಕೊಂಡು ಬರುವದು, ನಿಮ್ಮ
ಕ್ಷೇಮವು ಬೇಗನೆ ವಿಕಸಿಸುವದು; ನಿಮ್ಮ ಧರ್ಮವು
ನಿಮಗೆ ಮುಂಬಲವಾಗಿ ಮುಂದರಿಯುವದು, ಯೆ
ಹೋವನ ಮಹಿಮೆಯು ನಿಮಗೆ ಹಿಂಬಲವಾಗಿರು
9 ವದು. ಆಗ ನೀವು ಕೂಗಿದರೆ ಯೆಹೋವನು
ಉತ್ತರಕೊಡುವನು, ಮೊರೆಯಿಟ್ಟು ಕರೆದರೆ ಇಗೋ,
ಇದ್ದೇನೆ, ಅನ್ನುವನು. ನೀವು ನಿಮ್ಮ ಮಧ್ಯದೊಳ
ಗಿಂದ ನೊಗವನ್ನೂ ಬೆರಳಸನ್ನೆಯನ್ನೂ ಕೇಡುಕಿನ
10 ನುಡಿಯನ್ನೂ ಹೋಗಲಾಡಿಸಿ 1)ನಿಮಗೆ ಪ್ರಿಯವಾದ
ದ್ದನ್ನು ಹಸಿದವರಿಗೆ ಒದಗಿಸಿ ಕುಗ್ಗಿದವರ ಆಶೆ
ಯನ್ನು ನೆರವೇರಿಸಿದರೆ ಆಗ ನಿಮಗೆ ಕತ್ತಲಲ್ಲಿ
ಬೆಳಕು ಉದಯಿಸುವದು, ನಿಮ್ಮ ಅಂಧಕಾರವು ಪರಿ
11 ಹಾರವಾಗಿ ಮಧ್ಯಾಹ್ನವಾಗುವದು. ಮತ್ತು ಯೆ
ಹೋವನು ನಿಮ್ಮನ್ನು ನಿತ್ಯವೂ ನಡಿಸುತ್ತಾ ಮರು
ಭೂಮಿಯಲ್ಲಿಯೂ ನಿಮ್ಮ ಆತ್ಮವನ್ನು ತೃಪ್ತಿಗೊಳಿಸಿ
ನಿಮ್ಮ ಎಲುಬುಗಳನ್ನು ಸಸಾರಮಾಡುವನು; ನೀವು
ತಂಪಾದ ತೋಟಕ್ಕೂ ನೀರಿಗೆ ಮೋಸವಿಲ್ಲದ
12 ಬುಗ್ಗೆಗೂ ಸಮಾನವಾಗುವಿರಿ. ನಿಮ್ಮ ಸಂತಾನದ
ವರು ಪುರಾತನಕಾಲದಲ್ಲಿ ಹಾಳಾದ ನಿವೇಶನಗಳನ್ನು
ತಿರಿಗಿ ಕಟ್ಟುವರು. ನೀವು ತಲತಲಾಂತರಗಳಿಂದ
ಪಾಳುಬಿದ್ದಿರುವ ಅಸ್ತಿವಾರಗಳ ಮೇಲೆ ಕಟ್ಟಡಗಳನ್ನು
ಎಬ್ಬಿಸುವಿರಿ; ಬಿದ್ದ ಗೋಡೆಯನ್ನು ಹಾಕುವ
ಜನಾಂಗ, ಹಾದಿಗಳನ್ನು ತಿರುಗಾಡುವ ಸ್ಥಿತಿಗೆ ತರುವ
ಜನಾಂಗ, ಎಂಬೀ ಬಿರುದುಗಳು ನಿಮಗುಂಟಾಗು
ವವು. ನೀವು ಸಬ್ಬತ್ ದಿನವನ್ನು ಅಗಮ್ಯವಾದ 13
ದ್ದೆಂದು ತಿಳಿದು ಆ ನನ್ನ ಪರಿಶುದ್ಧದಿವಸದಲ್ಲಿ ನಿಮ್ಮ
ನಿತ್ಯದ ಕೆಲಸವನ್ನು ಮಾಡದೆ ಸ್ವೇಚ್ಛೆಯಾಗಿ ನಡೆ
ಯದೆ ಸ್ವಕಾರ್ಯದಲ್ಲಿ ನಿರತರಾಗದೆ ಹರಟೆಹರ
ಟದೆ ಯೆಹೋವನ ಸಬ್ಬತ್ತೆಂಬ ಪರಿಶುದ್ಧದಿನವು
ಉಲ್ಲಾಸಕರವೂ ಮಾನ್ಯವೂ ಆದದ್ದೆಂದು ಘನಪಡಿಸಿ
ದರೆ ಆಗ ನೀವು ಯೆಹೋವನಲ್ಲಿ ಉಲ್ಲಾಸಪಡುವಿರಿ, 14
ಮತ್ತು ನಾನು ನಿಮ್ಮನ್ನು ಭೂಮಿಯ ಎತ್ತರವಾದ
ಪ್ರದೇಶಗಳ ಮೇಲೆ ಹತ್ತಿಸಿ ನಿಮ್ಮ ಪಿತೃವಾದ
ಯಾಕೋಬನ ಸ್ವಾಸ್ತ್ಯವನ್ನು ನೀವು ಅನುಭವಿಸುವಂತೆ
ಮಾಡುವೆನು. ಯೆಹೋವನೇ ಇದನ್ನು ನುಡಿದಿದ್ದಾನೆ.

ಇಸ್ರಾಯೇಲ್ಯರ ರಕ್ಷಣೆಗೆ ಅವರ ಪಾಪವೇ ಅಡ್ಡಿ.

ಇಗೋ, ಯೆಹೋವನ ಹಸ್ತವು ರಕ್ಷಿಸಲಾರ **59**
ದಂತೆ ಮೋಟುಗೈಯಲ್ಲ; ಆತನ ಕಿವಿಯು ಕೇಳಲಾ
ರದ ಹಾಗೆ ಕಿವುಡಲ್ಲ. ಆದರೆ ನಿಮ್ಮ ಅಪರಾಧಗಳೇ 2
ನಿಮ್ಮ ದೇವರಿಂದ ನಿಮ್ಮನ್ನು ಅಗಲಿಸುತ್ತಾ ಬಂದಿವೆ;
ನಿಮ್ಮ ಪಾಪಗಳೇ ಆತನು ಕೇಳಲಾರದಂತೆ ಆತನ
ಮುಖಕ್ಕೆ ಅಡ್ಡವಾಗಿವೆ.
ನಿಮ್ಮ ಕೈಗಳು ರಕ್ತದಿಂದ ಹೊಲಸಾಗಿವೆ, ನಿಮ್ಮ 3
ಬೆರಳುಗಳು ಅಪರಾಧದಿಂದ ಅಶುದ್ಧವಾಗಿವೆ; ನಿಮ್ಮ
ತುಟಿಗಳು ಸುಳ್ಳಾಡುತ್ತವೆ, ನಿಮ್ಮ ನಾಲಿಗೆಯು ಕೆಡು
ಕನ್ನು ನುಡಿಯುತ್ತದೆ. [ಇವರಲ್ಲಿ] ಯಾರೂ ನ್ಯಾಯ 4
ವಾಗಿ ನ್ಯಾಯಸ್ಥಾನಕ್ಕೆ ಹೋಗುವದಿಲ್ಲ, ಯಾರೂ
ಸತ್ಯವಾಗಿ ವಾದಿಸುವದಿಲ್ಲ; ಇವರು ಶೂನ್ಯವಾಗಿರುವ
ದನ್ನು ನಂಬಿಕೊಂಡು ಅಬದ್ಧವನ್ನಾಡುತ್ತಾರೆ; ಹಿಂಸೆ
ಯನ್ನು ಗರ್ಭಧರಿಸಿ ಶ್ರಮೆಯನ್ನು ಹೆರುತ್ತಾರೆ.
ಹಾವಿನಂತೆ [ಕೇಡಿನ] ಮೊಟ್ಟೆಗಳನ್ನು ಮರಿಮಾಡು 5
ತ್ತಾರೆ, ಜೇಡರ ಹುಳದಂತೆ ಬಲೆಯನ್ನು ನೇಯು
ತ್ತಾರೆ; ಆ ಮೊಟ್ಟೆಗಳನ್ನು ತಿನ್ನುವವನಿಗೆ ಮರಣ
ವಾಗುವದು, ಒಡೆದುಬಿಡುವವನಿಗೆ ವಿಷದ ಮರಿ
ಹೊರಡುವದು. ಇವರ ಬಲೆಯ ದಾರವು ಬಟ್ಟೆಯಾ 6
ಗದು, 2)ಇವರು ನೇಯ್ದದ್ದು ಹೊದಿಕೆಯಾಗದು;
ಇವರ ಕಾರ್ಯಗಳು ಅಧರ್ಮಕಾರ್ಯಗಳು, ಇವರ
ಕೈಯಲ್ಲಿ ಬಲಾತ್ಕಾರವೇ. ಇವರ ಕಾಲುಗಳು ಕೇಡ 7
ನ್ನು ಹಿಂಬಾಲಿಸಿ ಓಡುತ್ತವೆ, ಇವರು ನಿರಪರಾಧಿಯ
ರಕ್ತವನ್ನು ಸುರಿಸಲು ಆತುರಪಡುತ್ತಾರೆ, ಇವರ
ಯೋಚನೆಗಳು ಅಧರ್ಮದ ಯೋಚನೆಗಳೇ, ಇವರು
ಹೋದ ದಾರಿಗಳಲ್ಲಿ ಭಂಗವೂ ನಾಶನವೂ ಉಂಟಾ
ಗುತ್ತವೆ; ಇವರು ಸಮಾಧಾನದ ಮಾರ್ಗವನ್ನೇ ಅರಿ 8
ಯರು, ಇವರ ಹಾದಿಗಳಲ್ಲಿ ಯಾವ ನ್ಯಾಯವೂ
ಇಲ್ಲ, ತಮ್ಮ ಮಾರ್ಗಗಳನ್ನು ವಕ್ರಮಾಡಿಕೊಂಡಿ

1) ಪಾಠಾಂತರ: ನಿಮ್ಮ ಅನ್ನವನ್ನು. 2) ಮೂಲ: ಇವರ ಕಾರ್ಯಗಳು.

ದ್ದಾರೆ, ಅವುಗಳಲ್ಲಿ ನಡೆಯುವ ಯಾವನೂ ಸಮಾ
9 ಧಾನವನ್ನರಿಯನು. ಆದಕಾರಣ [ಯೆಹೋವನ]
ನ್ಯಾಯನಿರ್ಣಯವು ನಮಗೆ ದೂರವಾಗಿದೆ. [ಆತನ]
ರಕ್ಷಣಧರ್ಮದ ಕಾರ್ಯವು ನಮಗೆ ಸಂಧಿಸುವದಿಲ್ಲ;
ಬೆಳಕನ್ನು ಎದುರುನೋಡುತ್ತಿರುವ ನಮ್ಮನ್ನು ಕತ್ತ
ಲೆಯೇ ಆವರಿಸಿದೆ, ಜ್ಯೋತಿಯನ್ನು ನಿರೀಕ್ಷಿಸುತ್ತಿ
10 ರುವ ನಾವು ಅಂಧಕಾರದಲ್ಲೇ ನಡೆಯುತ್ತೇವೆ. ಕುರು
ಡರಂತೆ ಗೋಡೆಯನ್ನು ತಡವರಿಸುತ್ತೇವೆ, ಹೌದು,
ಕಣ್ಣಿಲ್ಲದವರ ಹಾಗೆ ತಡವಾಡುತ್ತೇವೆ. ಮಧ್ಯಾಹ್ನ
ದಲ್ಲಿ ಸಂಜೆಯಂತೆ ಎಡವುತ್ತೇವೆ, ಪುಷ್ಟರ ನಡುವೆ
11 ಸತ್ತವರ ಹಾಗಿದ್ದೇವೆ. ನಾವೆಲ್ಲರೂ ಕರಡಿಗಳಂತೆ
ಗುರುಗುಟ್ಟುತ್ತೇವೆ, ಪಾರಿವಾಳಗಳಂತೆ ಮೂಲುಗು
ತ್ತಲೇ ಇದ್ದೇವೆ; ನಾವು [ಯೆಹೋವನ] ನ್ಯಾಯನಿರ್ಣ
ಯವನ್ನು ಎದುರುನೋಡಿದರೂ ಅದು ಸಿಕ್ಕದು,
[ಆತನ] ರಕ್ಷಣಕಾರ್ಯವನ್ನು ನಿರೀಕ್ಷಿಸಿದರೂ ಅದು
12 ನಮಗೆ ದೂರ. ಏಕೆಂದರೆ ನಮ್ಮ ತಪ್ಪುಗಳು ನಿನ್ನ
ದೃಷ್ಟಿಗೆ ಹೆಚ್ಚಾಗಿ ಬಿದ್ದಿವೆ, ನಮ್ಮ ಪಾಪಗಳು ನಮಗೆ
ವಿರುದ್ಧವಾಗಿ ಸಾಕ್ಷಿಕೊಡುತ್ತವೆ; ನಮ್ಮ ತಪ್ಪುಗಳು
ನಮ್ಮ ಸಂಗಡಲೇ ಇವೆ, ನಮ್ಮ ಅಪರಾಧಗಳನ್ನು
13 ನಾವೇ ಬಲ್ಲೆವು. ಹೌದು, ಯೆಹೋವನಿಗೆ 1)ತಪ್ಪಿ
ನಡೆದು ಆತನನ್ನು ಅಲ್ಲಗಳೆದಿದ್ದೇವೆ, ನಮ್ಮ ದೇವರ
ಅನುಸರಣೆಯನ್ನು ಬಿಟ್ಟು ತಿರುಗಿಕೊಂಡಿದ್ದೇವೆ, ಅನ್ಯಾ
ಯವನ್ನೂ ದ್ರೋಹವನ್ನೂ ನುಡಿದಿದ್ದೇವೆ, ಹೃದಯಪೂ
ರ್ವಕವಾಗಿ ಸುಳ್ಳುಮಾತುಗಳನ್ನು ಕಲ್ಪಿಸಿ ಆಡಿದ್ದೇವೆ.
14 ನ್ಯಾಯವು ಹಿಂದಕ್ಕೆ ತಳ್ಳಲ್ಪಟ್ಟಿದೆ, ಧರ್ಮವು ದೂರ
ದಲ್ಲಿ ನಿಂತಿದೆ, ಸತ್ಯವು ಚಾವಡಿಯಲ್ಲಿ ಬಿದ್ದುಹೋಗಿದೆ,
15 ಯಥಾರ್ಥವು ಪ್ರವೇಶಿಸಲಾರದು. ಸತ್ಯವು ಇಲ್ಲವೇ
ಇಲ್ಲ, ಕೇಡನ್ನು ಬಿಟ್ಟವನು ಸೂರೆಯಾಗುತ್ತಾನೆ.

ತನ್ನ ಜನರನ್ನು ರಕ್ಷಿಸಲು ಯೆಹೋವನು ಮುಂಗೊಂಡದ್ದು.

16 ಯೆಹೋವನು ಇದನ್ನು ನೋಡಿ ನ್ಯಾಯವಿಲ್ಲವಲ್ಲಾ
ಎಂದು ವ್ಯಸನಗೊಂಡನು; ಉದ್ಧಾರಕನಾದ ಯಾವ
ಪುರುಷನೂ ಇಲ್ಲವೆಂದು ಕಂಡು ಸ್ತಬ್ಧನಾದನು; ಆಗ
ಆತನ ಸ್ವಹಸ್ತವೇ ಆತನಿಗೆ ರಕ್ಷಣಸಾಧನವಾಯಿತು,
17 ಆತನ ಧರ್ಮವೇ ಆತನಿಗೆ ಆಧಾರವಾಯಿತು. ಧರ್ಮ
ವನ್ನು ವಜ್ರಕವಚವನ್ನಾಗಿ ತೊಟ್ಟು ರಕ್ಷಣೆಯೆಂಬ
ಶಿರಸ್ತ್ರಾಣವನ್ನು ಧರಿಸಿಕೊಂಡನು; ರೋಷವೆಂಬ ವಸ್ತ್ರ
ವನ್ನು ಉಡುಪುಮಾಡಿಕೊಂಡು ಆಗ್ರಹವನ್ನು ನಿಲು
18 ವಂಗಿಯನ್ನಾಗಿ ಹಾಕಿಕೊಂಡನು. ತನ್ನ ವಿರೋಧಿ
ಗಳಲ್ಲಿಟ್ಟ ಕ್ರೋಧವನ್ನು ಈಡೇರಿಸಿ ತನ್ನ ಶತ್ರುಗಳಿಗೆ
ದಂಡನೆಯನ್ನು ವಿಧಿಸಿ ಅವರವರ ಕೃತ್ಯಗಳಿಗೆ ತಕ್ಕಂತೆ
ಮುಯ್ಯಿತೀರಿಸುವನು; ಕರಾವಳಿಯವರಿಗೂ ಪ್ರತಿ
19 ಕ್ರಿಯೆಮಾಡುವನು. ಹೀಗಿರಲು ಪಡುವಣವರು
ಯೆಹೋವನ ನಾಮಕ್ಕೆ ಹೆದರುವರು, ಮೂಡಣವರು
ಆತನ ಮಹಿಮೆಗೆ ಅಂಜುವರು; 2)ಬಿರುಗಾಳಿಯಿಂದ
ಹೊಡೆಯಲ್ಪಟ್ಟು ಇಕ್ಕಟ್ಟಿನಲ್ಲಿ ಹರಿಯುವ ತೊರೆಯ
ಹಾಗೆ ಆತನು ರಭಸದಿಂದ ಬರುವನಷ್ಟೆ; ಆದರ
ಚೀಯೋನಿಗೂ ದ್ರೋಹವನ್ನು ಬಿಟ್ಟುಬಿಟ್ಟ ಯಾಕೋ
ಬ್ಯರ ಬಳಿಗೂ ವಿಮೋಚಕನಾಗಿ ಬರುವನು. ಯೆ
ಹೋವನೇ ಇದನ್ನು ನುಡಿದಿದ್ದಾನೆ. ನಾನಂತೂ ಅವ
ರೊಂದಿಗೆ ಈ ಒಡಂಬಡಿಕೆಯನ್ನು ಮಾಡಿಕೊಳ್ಳು
ವೆನು, ನೋಡಿರಿ; ನಿಮ್ಮಲ್ಲಿ ಆವೇಶಿಸಿರುವ ನನ್ನ
ಆತ್ಮವೂ ನಿಮ್ಮ ಬಾಯಿಗೆ ನಾನು ಕೊಟ್ಟಿರುವ
ಮಾತುಗಳೂ ನಿಮ್ಮ ಬಾಯಿಂದಾಗಲಿ ನಿಮ್ಮ ಸಂತ
ತಿಯ ಬಾಯಿಂದಾಗಲಿ ನಿಮ್ಮ ಸಂತತಿಯ ಸಂತಾ
ನದ ಬಾಯಿಂದಾಗಲಿ ಇಂದಿನಿಂದ ಎಂದಿಗೂ ತೊಲ
ಗುವದಿಲ್ಲ ಎಂದು ಯೆಹೋವನು ಅನ್ನುತ್ತಾನೆ.

ಯೆರೂಸಲೇಮಿನ ಮುಂದಿನ ಮಹಾವೈಭವವು.

ಏಳು, ಪ್ರಕಾಶಿಸು, ನಿನಗೆ ಬೆಳಕು ಬಂತು, 6
ಯೆಹೋವನ ತೇಜಸ್ಸು ನಿನ್ನ ಮೇಲೆ ಉದಯಿಸಿದೆ.
ಇಗೋ, ಕತ್ತಲು ಭೂಮಿಯನ್ನು ಆವರಿಸಿದೆ, ಕಾಗ
ತ್ತಲು ಜನಾಂಗಗಳನ್ನು ಮುಚ್ಚಿದೆ, ನಿನ್ನ ಮೇಲ
ದರೋ ಯೆಹೋವನು ಉದಯಿಸುವನು, ಆತನ
ತೇಜಸ್ಸು ನಿನ್ನಲ್ಲಿ ಕಾಣಿಸುವದು. ಜನಾಂಗಗಳ
ನಿನ್ನ ಬೆಳಕಿಗೆ ನೆರೆಯುವವು, ಅರಸರು ನಿನ್ನಲ್ಲಿನ
ಉದಯಪ್ರಕಾಶಕ್ಕೆ ಬರುವರು. ಕಣ್ಣೆತ್ತಿ ಸುತ್ತಲು
ನೋಡು, ನಿನ್ನ ಮಕ್ಕಳೆಲ್ಲರೂ ಗುಂಪುಕೂಡಿ ನಿನ್ನ
ಬಳಿಗೆ ಸೇರುತ್ತಿದ್ದಾರೆ, ಗಂಡುಮಕ್ಕಳು ದೂರದಿಂದ
ಸಮೀಪಿಸುತ್ತಾರೆ, ಹೆಣ್ಣುಮಕ್ಕಳು ಕಂಕುಳಿನಲ್ಲಿ
ಕುಳಿತು ಬರುತ್ತಾರೆ. ನೀನು ನೋಡಿ ಕಳೆಗೊಳ್ಳುವಿ
ನಿನ್ನ ಹೃದಯವು ಅದರುತ್ತಾ ಉಬ್ಬುವದು; ಏಕಂದ
ಸಮುದ್ರವ್ಯಾಪಾರಸಮೃದ್ಧಿಯು ನಿನ್ನ ಕಡೆಗೆ ತಿರು
ಗುವದು, ಜನಾಂಗಗಳ ಐಶ್ವರ್ಯವು ನಿನಗೆ ದೊರ
ಯುವದು. ಉಷ್ಟ್ರಸಮೂಹವೂ ಮಿದ್ಯಾನಿನ ಮತ್ತು
ಏಫದ ಪ್ರಾಯದ ಒಂಟೆಗಳೂ ನಿನ್ನಲ್ಲಿ ತುಂಬಿರು
ವವು, ಆ ಸಾರ್ಥವಾಹರೆಲ್ಲಾ ಕನಕವನ್ನೂ ಧೂಪ
ವನ್ನೂ ತೆಗೆದುಕೊಂಡು ಶೆಬದಿಂದ ಬಂದು ಯೆಹೋ
ವನ ಸ್ತುತ್ಯಕೃತ್ಯಗಳನ್ನು ಸಾರುವರು. ಕೇದಾರಿನ
ಹಿಂಡುಗಳೆಲ್ಲಾ ನಿನ್ನಲ್ಲಿ ಕೂಡುವವು; ನೆಬಾಯೋತಿನ
ಟಗರುಗಳು ನೀನು ಮಾಡುವ ಯಜ್ಞಕ್ಕೆ ಅನುಕೂ
ಲಿಸಿ ನನ್ನ ಯಜ್ಞವೇದಿಯ ಮೇಲೆ ಸಮರ್ಪಕವಾಗಿ
ಒಯ್ಯಲ್ಪಡುವವು; ನನ್ನ ಸುಂದರಾಲಯವನ್ನು ಚಂದ
ಗೊಳಿಸುವೆನು.
ಆಹಾ, ದ್ವೀಪನಿವಾಸಿಗಳೂ ನನ್ನನ್ನು ನಿರೀಕ್ಷಿಸು
ವವರಾಗಿದ್ದಾರೆ! ಮೇಘದೋಪಾದಿಯಲ್ಲಿಯೂ ಗೂ
ಡುಗಳಿಗೆ ತ್ವರೆಪಡುವ ಪಾರಿವಾಳಗಳಂತೆಯೂ ಹಾ
ಬರುತ್ತಿರುವ ಇವರು ಯಾರು? ಯೆಹೋವನ
ನಿನ್ನನ್ನು ವೈಭವಪಡಿಸಿರುವದನ್ನು ಕೇಳಿ ತಾರ್ಷೀಷಿನ
ಹಡಗುಗಳು ನಿನ್ನ ದೇವರಾದ ಯೆಹೋವನ ನಾಮ
ಮಹತ್ತಿನ ನಿಧಿಯೂ ಇಸ್ರಾಯೇಲಿನ ಸದಮ
ಸ್ವಾಮಿಯ ಸನ್ನಿಧಿಯೂ ಆದ ಸ್ಥಾನಕ್ಕೆ ನಿನ್ನ ಮಕ್ಕ

1) ಅಥವಾ: ತಪ್ಪಿ ನಡೆದಿದ್ದೇವೆ, ಆತನಿಗೆ ನಮ್ಮಿಂದ ಮೋಸವಾಯಿತು. 2) ಮೂಲ: ಯೆಹೋವನ ಶ್ವಾಸದಿಂದ. ಅಥ
ಶತ್ರುಗಳು ಪ್ರವಾಹದಂತೆ ನುಗ್ಗುವಾಗ ಯೆಹೋವನ ಆತ್ಮವು ಅವರಿಗೆ ವಿರುದ್ಧವಾಗಿ ಧ್ವಜವನ್ನೆತ್ತುವದು.

ಳನ್ನು ಅವರ ಬೆಳ್ಳಿಬಂಗಾರಗಳ ಸಮೇತ ದೂರದಿಂದ
10 ತರುವದರಲ್ಲಿ ಮುಂದಾಗುತ್ತವೆ. ವಿದೇಶೀಯರು
ನಿನ್ನ ಪೌಳಿಗೋಡೆಗಳನ್ನು ಕಟ್ಟುವರು, ಅವರ ಅರ
ಸರು ನಿನ್ನನ್ನು ಸೇವಿಸುವರು; ನನ್ನ ಕೋಪದಿಂದ
ನಿನ್ನನ್ನು ಹೊಡೆದುಬಿಟ್ಟು ನನ್ನ ಕೃಪೆಯಿಂದ ನಿನ್ನನ್ನು
11 ಕರುಣಿಸಿದ್ದೇನಷ್ಟೆ. ಜನಾಂಗಗಳ ಐಶ್ವರ್ಯವನ್ನು
ನಿನ್ನಲ್ಲಿಗೆ ತರುತ್ತಿರುವರು, ಅವುಗಳ ಅರಸರು ಮೆರ
ಮೆರವಣಿಗೆಯಾಗಿ ಬರುತ್ತಿರುವರು; ಇದರಿಂದ ನಿನ್ನ
ಬಾಗಿಲುಗಳು ಹಗಲಿರುಳೂ ಮುಚ್ಚದೆ ಸದಾ ತೆರೆ
12 ದಿರುವವು. ನಿನ್ನನ್ನು ಸೇವಿಸಲೊಲ್ಲದ ಜನಾಂಗ
ರಾಜ್ಯಗಳು ನಾಶವಾಗುವವು; ಹೌದು, ಆ ಜನಾಂಗ
13 ಗಳು ಹಾಳೇ ಹಾಳಾಗಿ ಹೋಗುವವು. ನನ್ನ ಪವಿತ್ರಾ
ಲಯವನ್ನು ಭೂಷಿಸುವದಕ್ಕಾಗಿ ತುರಾಯಿ, ತಪಸಿ,
ತಿಲಕ ಈ ವೃಕ್ಷರೂಪವಾದ ಲೆಬನೋನಿನ ಮಹಿ
ಮೆಯು ನಿನಗಾಗುವದು; ನನ್ನ ಪಾದಸನ್ನಿಧಿಯ
14 ಮಂದಿರವನ್ನು ವೈಭವಪಡಿಸುವೆನು. ನಿನ್ನನ್ನು ಕುಗ್ಗಿ
ಸಿದವರ ಸಂತಾನದವರು ನಿನ್ನ ಬಳಿಗೆ ತಗ್ಗಿಬಗ್ಗಿ ಬರು
ವರು; ನಿನ್ನನ್ನು ಅಸಡ್ಡೆಮಾಡಿದವರೆಲ್ಲರೂ ನಿನ್ನ
ಕಾಲಕೆಳಗೆ ಅಡ್ಡಬಿದ್ದು ನೀನು ಯೆಹೋವನ ಪಟ್ಟಣ,
ಇಸ್ರಾಯೇಲಿನ ಸದಮಲಸ್ವಾಮಿಯ ಚೀಯೋನ್
15 ಎಂದು ಕೊಂಡಾಡುವರು. ನಿವಾಸಿಗಳು ಬಿಟ್ಟುಬಿಟ್ಟ,
ದ್ವೇಷಕ್ಕೀಡಾದ, ಯಾರೂ ಹಾದುಹೋಗದ ನಿನಗೆ
ನಾನು ನಿತ್ಯಶ್ರೇಷ್ಠತೆಯನ್ನು ದಯಪಾಲಿಸಿ ನಿನ್ನನ್ನು
ತಲತಲಾಂತರಗಳವರಿಗೆ ಉಲ್ಲಾಸಕರವಾಗುವಂತೆ ಮಾ
16 ಡುವೆನು. ನೀನು ಜನಾಂಗಗಳ ಮೊಲೆಕೂಸಾಗುವಿ,
ರಾಜರು ನಿನಗೆ ಮೊಲೆಯೂಡಿಸುವರು; ಆಗ
ಯೆಹೋವನಾದ ನಾನೇ ನಿನ್ನ ರಕ್ಷಕನು, ನಿನ್ನ
ವಿಮೋಚಕನು, ಯಾಕೋಬ್ಯರ ಶೂರನು ಎಂದು
17 ನೀನು ತಿಳಿದುಕೊಳ್ಳುವಿ. ತಾಮ್ರಕ್ಕೆ ಬದಲಾಗಿ ಚಿನ್ನ
ವನ್ನು, ಕಬ್ಬಿಣಕ್ಕೆ ಪ್ರತಿಯಾಗಿ ಬೆಳ್ಳಿಯನ್ನು, ಮರ
ವಿದ್ದಲ್ಲಿ ತಾಮ್ರವನ್ನು, ಕಲ್ಲುಗಳ ಸ್ಥಾನದಲ್ಲಿ ಕಬ್ಬಿ
ಣವನ್ನು ಒದಗಿಸುವೆನು; ಸಮಾಧಾನವನ್ನು ನಿನಗೆ
ಅಧಿಪತಿಯನ್ನಾಗಿ ಧರ್ಮವನ್ನು ನಿನಗೆ 1)ಅಧಿಕಾರಿ
18 ಯನ್ನಾಗಿ ನೇಮಿಸುವೆನು. ನಿನ್ನ ದೇಶದಲ್ಲಿ ಬಲಾ
ತ್ಕಾರದ ಸುದ್ದಿಯೇ ಕಿವಿಗೆ ಬೀಳದು, ನಿನ್ನ ಪ್ರಾಂತ
ಗಳೊಳಗೆ ಭಂಗನಾಶನಗಳ ವಾರ್ತೆಯೇ ಕೇಳಬರುವ
ದಿಲ್ಲ; ಆಗ ದೇವರಕ್ಷಣೆಯು ನಿನ್ನ ಪೌಳಿಗೋಡೆ
ಗಳು, ದೇವಸ್ತೋತ್ರವು ನಿನ್ನ ಬಾಗಿಲುಗಳು ಎಂದು
19 ಅಂದುಕೊಳ್ಳುವಿ. ಇನ್ನು ಮೇಲೆ ಹಗಲಿನಲ್ಲಿ ನಿನ
ಗಿರುವ ಪ್ರಕಾಶವು ಸೂರ್ಯನದಲ್ಲ; ಚಂದ್ರನು ನಿನ್ನ
ಬೆಳಕಿಗಾಗಿ ಎಂದಿಗೂ ಕಳೆಗೊಳ್ಳನು; ಯೆಹೋವನೇ
ನಿನಗೆ ನಿತ್ಯಪ್ರಕಾಶವು, ನಿನ್ನ ದೇವರೇ ನಿನಗೆ ತೇಜಸ್ಸು.
20 ನಿನ್ನ ಸೂರ್ಯನು ಇನ್ನು ಮುಣುಗನು, ನಿನ್ನ ಚಂದ್ರ
ನು ತೊಲಗನು; ಯೆಹೋವನೇ ನಿನಗೆ ನಿತ್ಯಪ್ರಕಾಶ
ವಾಗಿರುವನು, ನೀನು ದುಃಖಿಸುವ ದಿನಗಳು ಕೊನೆ
21 ಗಾಣುವವು. ನಿನ್ನ ಜನರೆಲ್ಲಾ ಸದ್ಧರ್ಮಿಗಳಾಗಿರು
ವರು; ನನ್ನ ಪ್ರಭಾವಕ್ಕೋಸ್ಕರ ನಾನು ನೆಟ್ಟ ಸಸಿಯಾ
ಗಿಯೂ ನನ್ನ ಕೈ ಸೃಷ್ಟಿಸಿದ ಪ್ರಜೆಯಾಗಿಯೂ ದೇಶ
ವನ್ನು ಸದಾ ಅನುಭವಿಸುವರು. ಚಿಕ್ಕವನಿಂದ ಒಂದು 22
ಕುಲವಾಗುವದು, ಅಲ್ಪನಿಂದ ಬಲವಾದ ಜನಾಂಗವಾ
ಗುವದು; ಯೆಹೋವನೆಂಬ ನಾನು ಕ್ಲುಪ್ತಕಾಲದಲ್ಲಿ
ಇದನ್ನು ಬಲುಬೇಗನೆ ಉಂಟುಮಾಡುವೆನು.

ಚೀಯೋನಿಗೆ ರಕ್ಷಣೆಯ ವಾಗ್ದಾನಗಳು.
61. 62.

61 ಕರ್ತನಾದ ಯೆಹೋವನ ಆತ್ಮವು ನನ್ನ ಮೇಲೆ
ಅದೆ, ಆತನು ನನ್ನನ್ನು ಬಡವರಿಗೆ ಶುಭವರ್ತಮಾ
ನವನ್ನು ಸಾರುವದಕ್ಕೆ ಅಭಿಷೇಕಿಸಿದನು; ಮನಮುರಿ
ದವರನ್ನು ಕಟ್ಟಿ ವಾಸಿಮಾಡುವದಕ್ಕೂ ಸೆರೆಯವರಿಗೆ
ಬಿಡುಗಡೆಯಾಗುವದನ್ನು, ಬಂದಿಗಳಿಗೆ [ಕದ] ತೆರೆ
ಯುವದನ್ನು ಪ್ರಸಿದ್ಧಿಪಡಿಸುವದಕ್ಕೂ ಯೆಹೋ 2
ವನು ನೇಮಿಸಿರುವ ಶುಭವರುಷ, ನಮ್ಮ ದೇವರು
ಮುಯ್ಯಿತೀರಿಸುವ ದಿನ, ಇವುಗಳನ್ನು ಪ್ರಚುರಗೊ
ಳಿಸುವದಕ್ಕೂ ದುಃಖಿತರೆಲ್ಲರನ್ನು ಸಂತೈಸುವದಕ್ಕೂ 3
ಚೀಯೋನಿನಲ್ಲಿ ಶೋಕಿಸುವವರಿಗೆ ಬೂದಿಗೆ ಬದ
ಲಾಗಿ ಶಿರೋಭೂಷಣ, ದುಃಖವಿದ್ದಲ್ಲಿ ಆನಂದತೈಲ,
ಕುಂದಿದ ಮನಕ್ಕೆ ಪ್ರತಿಯಾಗಿ ಉತ್ಸಾಹಸ್ತೋತ್ರದ
ವಸ್ತ್ರ ಇವುಗಳನ್ನು ಒದಗಿಸಿಕೊಡುವದಕ್ಕೂ ಆತನು
ನನ್ನನ್ನು ಕಳುಹಿಸಿದ್ದಾನೆ. ಯೆಹೋವನು ತನ್ನ ಪ್ರಭಾ
ವಕ್ಕೋಸ್ಕರ ಹಾಕಿದ ನೀತಿವೃಕ್ಷಗಳು ಎಂಬ ಬಿರುದು
ಇವರಿಗಾಗುವದು. ಪುರಾತನಕಾಲದಲ್ಲಿ ಹಾಳಾದ 4
ನಿವೇಶನಗಳನ್ನು ತಿರಿಗಿ ಕಟ್ಟುವರು, ಪೂರ್ವದಲ್ಲಿ ಪಾ
ಳುಬಿದ್ದದ್ದನ್ನು ಪುನಃ ಎಬ್ಬಿಸುವರು, ತಲತಲಾಂತರ
ಗಳಿಂದ ಹಾಳುಬೀಳಾದ ಪಟ್ಟಣಗಳನ್ನು ಜೀರ್ಣೋ
ದ್ಧಾರಮಾಡುವರು. ಆಗ ವಿದೇಶೀಯರು ನಿಂತು 5
ಕೊಂಡು ನಿಮ್ಮ ಮಂದೆಗಳನ್ನು ಮೇಯಿಸುವರು,
ಅನ್ಯರು ನಿಮಗೆ ಉಳುವವರೂ ತೋಟಗಾರರೂ
ಆಗುವರು. ನೀವೋ ಯೆಹೋವನ ಯಾಜಕರೆಂಬ 6
ಬಿರುದನ್ನು ಹೊಂದುವಿರಿ, ಜನರು ನಿಮ್ಮನ್ನು ನಮ್ಮ
ದೇವರ ಸೇವಕರು ಎಂದು ಕರೆಯುವರು; ಜನಾಂಗ
ಗಳ ಆಸ್ತಿಯನ್ನನುಭವಿಸುವಿರಿ, ಅವುಗಳ ವೈಭವ
ವನ್ನು ಪಡೆದು ಹೊಗಳಿಕೊಳ್ಳುವಿರಿ. ನಿಮಗಾದ 7
ಅವಮಾನಕ್ಕೆ ಬದಲಾಗಿ ಎರಡರಷ್ಟು ಮಾನವನ್ನು
ಹೊಂದುವಿರಿ; ನಾಚಿಕೆಪಟ್ಟದ್ದಕ್ಕೆ ಪ್ರತಿಯಾಗಿ ಇವರು
ತಮ್ಮ ಸ್ವಾಸ್ತ್ಯದಲ್ಲಿ ಹಿಗ್ಗುವರು; ಹೀಗೆ ತಮ್ಮ ದೇಶ
ದಲ್ಲಿ ಎರಡರಷ್ಟನ್ನು ಅನುಭವಿಸುವರು; ಇವರಿಗೆ
ಶಾಶ್ವತಸಂತೋಷವಾಗುವದು.

ಯೆಹೋವನೆಂಬ ನಾನು ನ್ಯಾಯವನ್ನು ಪ್ರೀತಿಸು 8
ತ್ತೇನೆ, ಕೊಳ್ಳೆಯನ್ನೂ ಅನ್ಯಾಯವನ್ನೂ ದ್ವೇಷಿಸು
ತ್ತೇನೆ; ಸತ್ಯಸಂಧತೆಯನ್ನು ಅನುಸರಿಸಿ ಇವರ ನಷ್ಟಕ್ಕೆ
ಪ್ರತಿಫಲವನ್ನು ಕೊಟ್ಟು ಇವರೊಂದಿಗೆ ನಿತ್ಯವಾದ
ಒಡಂಬಡಿಕೆಯನ್ನು ಮಾಡಿಕೊಳ್ಳುವೆನು. ಇವರ ಸಂತಾ 9
ನವು ಜನಾಂಗಗಳಲ್ಲಿ ಪ್ರಖ್ಯಾತವಾಗುವದು, ಇವರ
ಸಂತತಿಯು ಅನ್ಯದೇಶೀಯರಲ್ಲಿ ಹೆಸರುಗೊಳ್ಳುವದು;
ಇವರನ್ನು ನೋಡುವವರೆಲ್ಲರು ಯೆಹೋವನು ಆಶೀ

1) ಮೂಲ: ಬಾಧಕರನ್ನಾಗಿ.

ರ್ವದಿಸಿದ ವಂಶವು ಇದೇ ಎಂದು ಒಪ್ಪಿಕೊಳ್ಳು
ವರು.
10 ನಾನು ಯೆಹೋವನಲ್ಲಿ ಪರಮಾನಂದಪಡುವೆನು,
ನನ್ನ ಆತ್ಮವು ನನ್ನ ದೇವರಲ್ಲಿ ಹಿಗ್ಗುವದು; ವರನು
ಬಾಸಿಂಗವನ್ನು ಧರಿಸಿಕೊಳ್ಳುವಂತೆಯೂ ವಧುವು
ತನ್ನನ್ನು ಆಭರಣಗಳಿಂದ ಅಲಂಕರಿಸಿಕೊಳ್ಳುವ
ಹಾಗೂ ಆತನು ನನಗೆ ರಕ್ಷಣೆಯೆಂಬ ವಸ್ತ್ರವನ್ನು
ಹೊದಿಸಿ ಧರ್ಮವೆಂಬ ನಿಲುವಂಗಿಯನ್ನು ತೊಡಿಸಿ
11 ದ್ದಾನಲ್ಲಾ. ಭೂಮಿಯು ತನ್ನೊಳಗಿಂದ ಮೊಳಿಕೆ
ಯನ್ನು ಹೊರಡಿಸುವಂತೆಯೂ ತೋಟವು ತನ್ನಲ್ಲಿ ಬಿತ್ತಿ
ದ್ದನ್ನು ಮೊಳೆಯಿಸುವ ಹಾಗೂ ಕರ್ತನಾದ ಯೆಹೋ
ವನು ಎಲ್ಲಾ ಜನಾಂಗಗಳ ಎದುರಿನಲ್ಲಿ ಧರ್ಮವನ್ನೂ
ಸ್ತೋತ್ರವನ್ನೂ ಮೊಳೆಯಿಸುವನು.

**62** ಚೀಯೋನಿನ ಧರ್ಮವು ಪ್ರಕಾಶಗೊಳ್ಳುವ
ತನಕ, ಯೆರೂಸಲೇಮಿನ ರಕ್ಷಣೆಯು ದೀವಟಿಗೆ
ಯಂತೆ ಪ್ರಜ್ವಲಿಸುವ ವರೆಗೆ ನಾನು ಮೌನವಾಗಿರದೆ
ಚೀಯೋನಿನ ಹಿತವನ್ನು ಲಕ್ಷಿಸುತ್ತಿರುವೆನು; ಸುಮ್ಮ
ನಿರದೆ ಯೆರೂಸಲೇಮಿನ ಕ್ಷೇಮವನ್ನು ಚಿಂತಿಸುತ್ತಿರು
2 ವೆನು. ಜನಾಂಗಗಳು ನಿನ್ನ ಧರ್ಮವನ್ನು, ಸಕಲ
ರಾಜರು ನಿನ್ನ ವೈಭವವನ್ನು ನೋಡುವರು; ಯೆಹೋ
ವನ ಬಾಯಿ ನೇಮಿಸಿದ ಹೊಸ ಹೆಸರು ನಿನಗೆ
3 ದೊರೆಯುವದು. ನೀನು ಯೆಹೋವನ ಕೈಯಲ್ಲಿ
ಸುಂದರಕಿರೀಟವಾಗಿಯೂ ನಿನ್ನ ದೇವರ ಹಸ್ತದಲ್ಲಿ
4 ರಾಜಶಿರೋವೇಷ್ಟನವಾಗಿಯೂ ಇರುವಿ. ನೀನು
ಇನ್ನು ಮೇಲೆ ಗಂಡಬಿಟ್ಟವಳು ಎನಿಸಿಕೊಳ್ಳೆ, ನಿನ್ನ
ಸೀಮೆಗೆ ಬಂಜೆ ಎಂಬ ಹೆಸರು ಇನ್ನಿರದು; ನೀನು
1)ಎನ್ನುಲ್ಲಾಸಿನಿ ಎನಿಸಿಕೊಳ್ಳುವಿ, ನಿನ್ನ ಸೀಮೆಗೆ
2)ವಿವಾಹಿತೆ ಎಂಬ ಹೆಸರಾಗುವದು; ಏಕಂದರೆ
ಯೆಹೋವನು ನಿನ್ನಲ್ಲಿ ಉಲ್ಲಾಸಗೊಳ್ಳುತ್ತಾನೆ, ನಿನ್ನ
5 ಸೀಮೆಗೆ ವಿವಾಹವಾಗುವದು. ಯುವಕನು ಯುವ
ತಿಯನ್ನು ವರಿಸುವಂತೆ ನಿನ್ನ ಮಕ್ಕಳು ನಿನ್ನನ್ನು
ವರಿಸುವರು; ವರನು ವಧುವಿನಲ್ಲಿ ಆನಂದಿಸುವ ಹಾಗೆ
ನಿನ್ನ ದೇವರು ನಿನ್ನಲ್ಲಿ ಆನಂದಿಸುವನು.
6 ಯೆರೂಸಲೇಮೇ, ನಾನು ನಿನ್ನ ಪೌಳಿಗೋಡೆ
ಗಳಲ್ಲಿ ಕಾವಲುಗಾರರನ್ನು ನೇಮಿಸಿದ್ದೇನೆ; ಅವರು
7 ಹಗಲೂ ಇರುಳೂ ಮೌನವಾಗಿರರು. ಯೆಹೋವ
ನಿಗೆ ಜ್ಞಾಪಿಸುವವರೇ, ಆತನು ಯೆರೂಸಲೇಮನ್ನು
ಭದ್ರಪಡಿಸಿ ಲೋಕಪ್ರಸಿದ್ಧಿಗೆ ತರುವ ತನಕ ನಿಮಗೆ
ವಿರಾಮವಿಲ್ಲದಿರಲಿ, ಆತನಿಗೂ ವಿರಾಮಕೊಡದಿರಿ.
8 ಯೆಹೋವನು ತನ್ನ ಬಲಗೈ ಮೇಲೆ, ತನ್ನ ಭುಜ
ಬಲದ ಮೇಲೆ, ಆಣೆಯಿಟ್ಟು—ನಿನ್ನ ದವಸವನ್ನು
ನಿನ್ನ ಶತ್ರುಗಳ ಆಹಾರಕ್ಕೆ ಇನ್ನು ಕೊಡಲೇ ಕೊಡೆನು.
ನೀನು ದುಡಿದ ದ್ರಾಕ್ಷಾರಸವನ್ನು ಅನ್ಯರು ಕುಡಿಯು
9 ವದೇ ಇಲ್ಲ; ನಿನ್ನ ಬೆಳೆಯನ್ನು ಕೊಯ್ದು ಕುಪ್ಪೆ
ಹಾಕಿದವರೇ ಅದನ್ನು ಉಂಡು ಯೆಹೋವನನ್ನು
ಸ್ತುತಿಸುವರು. ನಿನ್ನ ದ್ರಾಕ್ಷೆಯನ್ನು ಕಿತ್ತು ತಂದವರೇ
ಅದರ ರಸವನ್ನು ನನ್ನ ಪವಿತ್ರಾಲಯದ ಪ್ರಾಕಾರಗಳಲ್ಲಿ
ಕುಡಿಯುವರು. ಎಂದು ಹೇಳಿದ್ದಾನೆ.

ಊರ ಬಾಗಿಲುಗಳಲ್ಲಿ ಹಾದು ಬನ್ನಿರಿ, ಹಾದ
ಬನ್ನಿರಿ, ಜನರಿಗೆ ದಾರಿಯನ್ನು ಸರಿಮಾಡಿರಿ
ರಾಜಮಾರ್ಗವನ್ನು ಎತ್ತರಿಸಿರಿ, ಎತ್ತರಿಸಿರಿ, ಕಲ್ಲುಗ
ಳನ್ನು ತೆಗೆದುಹಾಕಿರಿ, ಜನಾಂಗಗಳಿಗೆ ಧ್ವಜವನ್ನ
ತ್ತಿರಿ! ಇಗೋ, ನಿನ್ನ ರಕ್ಷಣೆಯು ಸಮೀಪವಾಯಿತು
ಯೆಹೋವನು ದಯಪಾಲಿಸುವ ಬಹುಮಾನವ
ಆತನೊಂದಿಗಿದೆ, ಆತನು ಅನುಗ್ರಹಿಸುವ ಪ್ರತಿಫಲವ
ಆತನ ಮುಂದಿದೆ ಎಂದು ಚೀಯೋನೆಂಬಾಕೆಗ
ಹೇಳಿರಿ ಎಂಬದಾಗಿ ಯೆಹೋವನು ಭೂಮಿಯ ಕಟ್ಟ
ಕಡೆಯ ವರೆಗೂ ಅಪ್ಪಣೆಮಾಡಿದ್ದಾನೆ. ನಿನ್ನ ಜನರ
ಪರಿಶುದ್ಧಜನರು, ಯೆಹೋವನು ವಿಮೋಚಿಸಿದವರ
ಎಂದು ಅನ್ನಿಸಿಕೊಳ್ಳುವರು, ನಿನಗೋ ಪತಿಯು
ವರಿಸಿ ತ್ಯಜಿಸದ ಪುರಿ ಎಂದು ಹೆಸರು ಬರುವದು.

ಯೆಹೋವನು ಶತ್ರುಗಳನ್ನು ಧ್ವಂಸಮಾಡುವದು.

ಆಹಾ, ರಕ್ತವರ್ಣದ ಉಡುಪನ್ನುಟ್ಟು ಘನವಸ್ತ್ರ
ಗಳನ್ನು ಧರಿಸಿಕೊಂಡು ಮಹಾಶೌರ್ಯಯುಕ್ತ
ನಾಗಿ ಮೆರೆಯುತ್ತಾ ಎದೋಮಿನ ಬೊಚ್ರದಿಂದ
ಬರುವ ಈತನು ಯಾರು? ಸತ್ಯಾನುಸಾರವಾಗ
ಮಾತಾಡುವ, ರಕ್ಷಿಸಲು ಸಮರ್ಥನಾದ ನಾನೇ. ನಿನ್ನ
ಉಡುಪು ಏಕೆ ಕೆಂಪಾಗಿದೆ, ನಿನ್ನ ವಸ್ತ್ರಗಳ
ದ್ರಾಕ್ಷೆಯನ್ನು ತುಳಿಯುವವನ ಬಟ್ಟೆಯ ಹಾಗಿರು
ವದು ಏಕೆ? ನಾನೊಬ್ಬನಾಗಿಯೇ ದ್ರಾಕ್ಷೆಯನ್ನು
ತೊಟ್ಟಿಯಲ್ಲಿ ತುಳಿದಿದ್ದೇನೆ, ಜನಾಂಗದವರಲ್ಲಿ ಯಾರು
ನನ್ನೊಂದಿಗಿರಲಿಲ್ಲ. ನನ್ನ ಕೋಪದಿಂದ ಶತ್ರುಗಳನ್ನು
ತುಳಿದೆನು, ರೋಷವೇರಿದವನಾಗಿ ಅವರನ್ನು ಕಾಲ
ನಿಂದ ಹೊಸಗಿದೆನು; ಅವರ ಸಾರವು ನನ್ನ ವಸ್ತ್ರಗಳ
ಮೇಲೆ ಸಿಡಿದಿದೆ, ನನ್ನ ಉಡುಪನ್ನೆಲ್ಲಾ ಮಾಸಿ
ಕೊಂಡೆನು. ಏಕಂದರೆ ಮುಯ್ಯಿ ತೀರಿಸುವ ದಿನವ
ನನ್ನ ಹೃದಯದಲ್ಲಿ ಸಿದ್ಧವಾಗಿತ್ತು, ನನ್ನ ಜನರನ್ನು
ವಿಮೋಚಿಸುವ ವರುಷವು ಒದಗಿತ್ತು. ನಾನು
ನೋಡಲು ಸಹಾಯಕರು ಯಾರೂ ಇರಲಿಲ್ಲ, ಯಾವ
ಬೆಂಬಲವೂ ಇಲ್ಲದ್ದನ್ನು ಕಂಡು ಸ್ತಬ್ಧನಾದೆನು; ಆಗ
ನನ್ನ ಸ್ವಹಸ್ತವೇ ನನಗೆ ರಕ್ಷಣಸಾಧನವಾಯಿತು, ನನ್ನ
ರೌದ್ರವೇ ನನಗೆ ಆಧಾರವಾಯಿತು. ನನ್ನ ಕೋಪ
ದಿಂದ ಜನಾಂಗಗಳನ್ನು ತುಳಿದು ರೋಷವೇರಿದವನಾಗಿ
3)ಅವುಗಳನ್ನು ಚೂರುಚೂರು ಮಾಡಿ ನೆಲದ ಮೇಲ
ಅವುಗಳ ಸಾರವನ್ನು ಸುರಿಸಿದೆನು.

ಹಿಂದಿನ ಕೃಪಾಕಾರ್ಯಗಳನ್ನು ಮುಂದೆಯೂ
ನಡಿಸಬೇಕೆಂಬ ಪ್ರಾರ್ಥನೆ.

ಯೆಹೋವನು ನಮಗೆ ಅನುಗ್ರಹಿಸಿದ್ದನ್ನೆಲ್ಲಾ ಸ್ಮರಿಸಿ
ಆತನ ಕೃಪಾಕಾರ್ಯಗಳನ್ನೂ ಸ್ತುತ್ಯಕೃತ್ಯಗಳನ್ನೂ
ಆತನು ಕನಿಕರದಿಂದಲೂ ಕೃಪಾತಿಶಯದಿಂದಲೂ
ಇಸ್ರಾಯೇಲ್ ವಂಶದವರಿಗೆ ದಯಪಾಲಿಸಿರುವ
ಮಹೋಪಕಾರವನ್ನೂ ಪ್ರಸಿದ್ಧಿಪಡಿಸುವೆನು. ನಿಜ

1) ಮೂಲ: ಹೆಫ್ಸೀಬಾ. 2) ಮೂಲ: ಬೆಯೂಲಾ. 3) ಪಾಠಾಂತರ: ಅವುಗಳಿಗೆ ತಲೆಗೇರ ಕುಡಿಸಿ.

ವಾಗಿ ಇವರು ನನ್ನ ಜನರು, ನನ್ನ ಮಕ್ಕಳು, ಮೋಸ
ಮಾಡಲಾರರು ಎಂದು ಅತನು ಅಂದುಕೊಂಡು ಅವ
9 ರಿಗೆ ರಕ್ಷಕನಾದನು. ಅವರು ಶ್ರಮೆಪಡುತ್ತಿರುವಾ
ಗೆಲ್ಲಾ ಆತನೂ ಶ್ರಮೆಪಟ್ಟನು; 1)ಆತನ ಶ್ರೀಮುಖ
ಸ್ವರೂಪದೂತನು ಅವರನ್ನು ರಕ್ಷಿಸಿದನು; ತನ್ನ
ಲ್ಲಿನ ಮಮತೆಯಿಂದಲೂ ತಾಳ್ಮೆಯಿಂದಲೂ ಅವ
ರನ್ನು ವಿಮೋಚಿಸಿ ಪುರಾತನಕಾಲದಲ್ಲೆಲ್ಲಾ ಎತ್ತಿ
10 ಕೊಂಡು ಹೊರುತ್ತಾ ಬಂದನು. ಅವರಾದರೋ
ಎದುರುಬಿದ್ದು ಆತನ ಪವಿತ್ರಾತ್ಮನನ್ನು ದುಃಖಪಡಿಸಿ
ದರು; ಆದದರಿಂದ ಆತನು ಮಾರ್ಪಟ್ಟು ಅವರಿಗೆ
ಶತ್ರುವಾಗಿ ತಾನೇ ಅವರೊಡನೆ ಹೋರಾಡಿದನು.
11 ಆಗ ಆತನ ಜನರು ಪುರಾತನವಾದ ಮೋಶೆಯ ಕಾಲ
ವನ್ನು ಜ್ಞಾಪಕಮಾಡಿಕೊಂಡು ಹೀಗಂದರು—ತನ್ನ
ಜನವೆಂಬ ಮಂದೆಯನ್ನು ಕುರುಬರ ಸಹಿತ ಸಮುದ್ರ
ದೊಳಗಿಂದ ಮೇಲಕ್ಕೆ ಬರಮಾಡಿದಾತನು ಎಲ್ಲಿ?
12 ಅವರ ಮಧ್ಯದಲ್ಲಿ ತನ್ನ ಪವಿತ್ರಾತ್ಮವನ್ನಿರಿಸಿ ಮೋಶೆಯ
ಬಲಗೈಯೊಂದಿಗೆ ತನ್ನ ಘನಹಸ್ತವನ್ನೂ ಮುಂದರಿ
ಸುತ್ತಾ ತನ್ನ ಹೆಸರು ಶಾಶ್ವತವಾಗಿರಬೇಕೆಂದು ಅವ
13 ರೆದುರಿಗೆ ಜಲರಾಶಿಯನ್ನು ಭೇದಿಸಿ ಸಾಗರದ ಅಡಿ
ಯಲ್ಲಿ ಅವರನ್ನು ಕುದುರೆಯು ಮೈದಾನದಲ್ಲಿ ನಡೆ
ಯುವ ಪ್ರಕಾರ ಮುಗ್ಗರಿಸದಂತೆ ನಡೆಯಿಸಿದಾತನು
14 ಎಲ್ಲಿ? ಯೆಹೋವನ ಆತ್ಮವು ತಗ್ಗಿಗೆ ಇಳಿಯುವ
ದನಗಳೋಪಾದಿಯಲ್ಲಿ ಅವರನ್ನು ವಿಶ್ರಮಸ್ಥಾನಕ್ಕೆ
ಕರತಂದಿತು; ನಿನ್ನ ನಾಮವನ್ನು ಘನಪಡಿಸಿಕೊಳ್ಳು
15 ವದಕ್ಕಾಗಿ ನಿನ್ನ ಜನರನ್ನು ಹೀಗೆ ನಡೆಸಿದಿ. ಆಕಾಶ
ದಿಂದ ನೋಡು, ಪರಿಶುದ್ಧವೂ ಘನವೂ ಆದ ನಿನ್ನ
ಉನ್ನತಸ್ಥಾನದಿಂದ ಲಕ್ಷಿಸು; ನಿನ್ನ ಆಗ್ರಹವೆಲ್ಲಿ,
ನಿನ್ನ ಸಾಹಸಕಾರ್ಯಗಳೆಲ್ಲಿ? ನಿನ್ನ ಕರುಳ ಮರುಗಾ
ಟವನ್ನೂ ನಿನ್ನ ಕನಿಕರವನ್ನೂ 2)ನಮ್ಮ ಕಡೆಗೆ ಬಿಗಿ
16 ಹಿಡಿದಿದ್ದೀ. ನೀನೇ ನಮ್ಮ ಪಿತೃವಾಗಿದ್ದೀಯಲ್ಲಾ;
ಅಬ್ರಹಾಮನು ನಮ್ಮನ್ನರಿಯನು, ಇಸ್ರಾಯೇಲನು
ನಮ್ಮನ್ನು ಗುರುತಿಸನು; ಯೆಹೋವಾ, ನೀನೇ ನಮ್ಮ
ಪಿತೃ; ಆದಿಯಿಂದಲೂ ನಮ್ಮ ವಿಮೋಚಕನು ಅನ್ನಿಸಿ
17 ಕೊಂಡಿದ್ದೀ. ಯೆಹೋವನೇ, ನಾವು ನಿನ್ನ ಮಾರ್ಗ
ದಿಂದ ತಪ್ಪಿ ಅಲೆಯುವಂತೆ ಏಕೆ ಮಾಡುತ್ತೀ? ನಾವು
ನಿನಗೆ ಭಯಪಡದ ಹಾಗೆ ನಮ್ಮ ಹೃದಯವನ್ನು
ಕಠಿನಪಡಿಸುವದೇಕೆ? ನಿನ್ನ ಸೇವಕರ ನಿಮಿತ್ತ ನಿನ್ನ
18 ಬಾಧ್ಯವಾದ ಕುಲಗಳಿಗಾಗಿ ತಿರುಗಿ ಪ್ರಸನ್ನನಾಗು, ನಿನ್ನ
ಸ್ವಕೀಯಜನರು ಸ್ವಲ್ಪಕಾಲ ಮಾತ್ರ [ನಿನ್ನ ಸ್ವಾಸ್ತ್ಯ
ವನ್ನು] ಅನುಭವಿಸುತ್ತಿದ್ದರು; ಈಗ ನಮ್ಮ ವೈರಿ
ಗಳು ನಿನ್ನ ಪವಿತ್ರಾಲಯವನ್ನು ತುಳಿದುಬಿಟ್ಟಿದ್ದಾರೆ.
19 ನಿನ್ನ ದೊರೆತನಕ್ಕೆ ಎಂದಿಗೂ ಒಳಪಡದೆ ನಿನ್ನ ನಾಮ
ವನ್ನು ಧರಿಸದೆ ಇರುವ ಜನರ ಹಾಗಿದ್ದೇವೆ.
64 ಆಹಾ, ನೀನು ಆಕಾಶವನ್ನು ಸೀಳಿ ಇಳಿದು ಬರ
ಬಾರದೇ! ನಿನ್ನ ದರ್ಶನವು ಉಂಟಾಗಿ ಪರ್ವತಗಳು
2 ಅಲುಗಿದರೆ ಎಷ್ಟೋ ಒಳ್ಳೇದು! ಒಣಗಿಡಕ್ಕೆ ಹತ್ತುವ
ಕಿಚ್ಚಿನ ಪ್ರಕಾರವೂ ನೀರನ್ನು ಕುದಿಸುವ ಉರಿಯೋ
ಪಾದಿಯಲ್ಲಿಯೂ [ನೀನು ಪ್ರತ್ಯಕ್ಷನಾಗಿ] ನಮ್ಮ ನಿರೀ 3
ಕ್ಷೆಗೆ ಮೀರಿದ ಭಯಂಕರ ಕೃತ್ಯಗಳನ್ನು ನಡಿಸಿ ನಿನ್ನ
ನಾಮಮಹತ್ತನ್ನು ನಿನ್ನ ಶತ್ರುಗಳಿಗೆ ತಿಳಿಯಪಡಿಸಿ
ಜನಾಂಗಗಳನ್ನು ನಿನ್ನ ದರ್ಶನದಿಂದ ನಡುಗಿಸಬಾರದೇ!
ಹೌದು, ನೀನು ಇಳಿದು ಬಂದು ಪರ್ವತಗಳು ನಿನ್ನ
ದರ್ಶನದಿಂದ ಅಲುಗಿದರೆ ಎಷ್ಟೋ ಲೇಸು! ನಿನ್ನನ್ನು 4
ಬಿಟ್ಟರೆ ನಿರೀಕ್ಷಿಸುವವನಿಗೆ ಕಾರ್ಯಕರ್ತನಾದ ಯಾವ
ದೇವರನ್ನೂ ಆದಿಯಿಂದ ಯಾರೂ ಕೇಳಲಿಲ್ಲ, ಯಾರ
ಕಿವಿಗೂ ಬೀಳಲಿಲ್ಲ, ಯಾರ ಕಣ್ಣೂ ಕಾಣಲಿಲ್ಲ.
ಧರ್ಮವನ್ನು ಅನುಸರಿಸಲು ಸಂತೋಷಪಟ್ಟು ನಿನ್ನ 5
ಮಾರ್ಗದಲ್ಲಿ ನಡೆಯುತ್ತಾ ನಿನ್ನನ್ನು ಸ್ಮರಿಸುವವರಿಗೆ
ಪ್ರಸನ್ನನಾಗಿದ್ದೀ; ನಮ್ಮ ಮೇಲಾದರೋ ರೋಷ
ಗೊಂಡಿದ್ದೀ; ಆದರೂ ನಾವು ಪಾಪವನ್ನು ನಡಿಸುತ್ತಾ
ಬಂದೆವು; ಬಹುಕಾಲದಿಂದ ಪಾಪದಲ್ಲಿ ಮುಣುಗಿರುವ
ನಮಗೆ ರಕ್ಷಣೆಯಾದೀತೇ? ನಾವೆಲ್ಲರು ಅಶುದ್ಧನ 6
ಹಾಗಿದ್ದೇವೆ, ನಮ್ಮ ಧರ್ಮಕಾರ್ಯಗಳೆಲ್ಲಾ ಹೊ
ಲೆಯ ಬಟ್ಟೆಯಂತಿವೆ; ನಾವೆಲ್ಲರೂ ತರಗೆಲೆಯೋಪಾದಿ
ಯಲ್ಲಿ ಒಣಗಿಹೋಗಿದ್ದೇವೆ; ನಮ್ಮ ಅಪರಾಧಗಳು
ಬಿರುಗಾಳಿಯ ಪ್ರಕಾರ ನಮ್ಮನ್ನು ಬಡಿದುಕೊಂಡು
ಹೋಗಿವೆ. ಈಗ ನಿನ್ನ ಹೆಸರೆತ್ತಿ ಪ್ರಾರ್ಥಿಸಿ ನಿನ್ನನ್ನು 7
ಆಶ್ರಯಿಸಲು ತ್ರಾಣ ತಂದುಕೊಳ್ಳುವವನು ಎಲ್ಲಿಯೂ
ಇಲ್ಲ; ನೀನು ನಮಗೆ ವಿಮುಖನಾಗಿ ನಮ್ಮನ್ನು
3)ನಮ್ಮ ಅಪರಾಧಗಳಿಗೆ ವಶಮಾಡಿದ್ದೀಯಲ್ಲಾ.
ಈಗಲಾದರೋ ಯೆಹೋವನೇ, ನೀನು ನಮ್ಮ ತಂದೆ 8
ಯಾಗಿದ್ದೀ; ನಾವು ಜೇಡಿಮಣ್ಣು, ನೀನು ಕುಂಬಾರ,
ನಾವೆಲ್ಲರೂ ನಿನ್ನ ಕೈಕೆಲಸವೇ. ಯೆಹೋವನೇ, 9
ಅತಿರೋಷಗೊಳ್ಳದಿರು, ನಮ್ಮ ಅಧರ್ಮವನ್ನು ಕಡೆಯ
ವರೆಗೂ ಜ್ಞಾಪಕದಲ್ಲಿಡಬೇಡ; ಎಲೈ, ಸ್ವಾಮಿ,
ಕಟಾಕ್ಷಿಸು, ನಾವೆಲ್ಲರೂ ನಿನ್ನ ಜನರಾಗಿದ್ದೇವೆ. ನಿನ್ನ 10
ಪರಿಶುದ್ಧ ಪಟ್ಟಣಗಳು ಕಾಡಾಗಿವೆ, ಚೀಯೋನು
ಬೀಡಾಗಿದೆ, ಯೆರೂಸಲೇಮು ಹಾಳಾಗಿಹೋಗಿದೆ.
ನಮ್ಮ ಪಿತೃಗಳು ನಿನ್ನನ್ನು ಕೀರ್ತಿಸುತ್ತಿದ್ದ ನಮ್ಮ 11
ಸುಂದರಪವಿತ್ರಾಲಯವನ್ನು ಬೆಂಕಿಯು ಸುಟ್ಟುಬಿಟ್ಟಿದೆ,
ನಮ್ಮ ಅಮೂಲ್ಯವಸ್ತುಗಳೆಲ್ಲಾ ನಾಶವಾಗಿವೆ. ಯೆ 12
ಹೋವನೇ, ಇವುಗಳನ್ನು ನೋಡಿಯೂ ನಿನ್ನನ್ನು ಬಿಗಿ
ಹಿಡಿಯುವಿಯೋ? ಸುಮ್ಮನಿರುವಿಯೋ? ನಮ್ಮನ್ನು
ಹೆಚ್ಚಾಗಿ ಕುಗ್ಗಿಸುವಿಯೋ?

ದೇವದ್ರೋಹಿಗಳನ್ನು ಖಂಡಿಸುವದು, ದೇವಭಕ್ತ
ರನ್ನು ಧೈರ್ಯಗೊಳಿಸುವದು. 65. 66.

65 ವಿಜ್ಞಾಪಿಸಿಕೊಳ್ಳದವರಿಗೂ ಪ್ರಸನ್ನನಾಗಿದ್ದೆನು,
ನನ್ನನ್ನು ಹುಡುಕದವರಿಗೂ ಸಿಕ್ಕಿದೆನು, ನನ್ನ
ನಾಮವನ್ನೆತ್ತಿ ಪ್ರಾರ್ಥಿಸದ ಜನಾಂಗಕ್ಕೂ—ಇಗೋ,
ನಾನಿದ್ದೇನೆ ನಾನಿದ್ದೇನೆ ಎನ್ನುತ್ತಿದ್ದೆನು. ನನ್ನನ್ನು 2
ತೊರೆದು ಮನಸ್ಸುಬಂದ ಹಾಗೆ ದುರ್ಮಾರ್ಗದಲ್ಲಿ
ನಡೆಯುವ ಜನರನ್ನು ನಾನು ದಿನವೆಲ್ಲಾ ಕೈ ಚಾಚಿ

1) ಪಾಠಾಂತರ: ಅವರನ್ನು ರಕ್ಷಿಸಿದ್ದು ರಾಯಭಾರಿಯಲ್ಲ, ದೂತನಲ್ಲ, ಆತನ ಶ್ರೀಮುಖಸ್ವರೂಪವೇ. 2) ಮೂಲ: ವನ್ನ.
3) ಪಾಠಾಂತರ: ನಮ್ಮ ಅಪರಾಧಗಳಿಂದಲೇ ಕ್ಷಯಪಡಿಸಿದ್ದೀಯಲ್ಲಾ.

3 ಕರೆದೆನು. ಈ ಜನರು ವನಗಳಲ್ಲಿ ಯಜ್ಞ ಮಾ
ಡುತ್ತಾ ಇಟ್ಟಿಗೆಯ ವೇದಿಯ ಮೇಲೆ ಧೂಪಹಾ
4 ಕುತ್ತಾ ಗೋರಿಗಳಲ್ಲಿ ಕೂತುಕೊಳ್ಳುತ್ತಾ ಗುಪ್ತಸ್ಥಳ
ಗಳಲ್ಲಿ ರಾತ್ರಿಕಳೆಯುತ್ತಾ ಹಂದಿಯ ಬಾಡು ತಿನ್ನುತ್ತಾ
ಅಸಹ್ಯಪದಾರ್ಥಗಳ ಸಾರನ್ನು ತಮ್ಮ ಗಂಗಳಗಳಲ್ಲಿ
5 ಬಡಿಸಿಕೊಳ್ಳುತ್ತಾ ಅಲ್ಲಿ ನಿಂತಿರು, ಹತ್ತಿರ ಬರಬೇಡ,
ನಾನು ಮಡಿವಂತನು, ನೀನು ಸೇರತಕ್ಕವನಲ್ಲ ಎನ್ನು
ತ್ತಾ ಅಂತು ಪ್ರತಿನಿತ್ಯವೂ ಮುಖದೆದುರಿಗೆ ನನ್ನನ್ನು
ಕೆಣಕುತ್ತಾ ನನ್ನ ಮೂಗಿಗೆ ದಿನವೆಲ್ಲಾ ಉರಿಯುವ
6 ಬೆಂಕಿಯ ಹೊಗೆಯಾಗಿದ್ದಾರೆ. ಇಗೋ, ಇದೆಲ್ಲಾ
ಶಾಸನವಾಗಿ ನನ್ನ ಕಣ್ಣೆದುರಿಗಿದೆ, ನಾನು ಮುಯ್ಯಿ
7 ತೀರಿಸುವ ತನಕ ಸುಮ್ಮನಿರಲಾರೆನು; ಇವರೂ ಇವರ
ಪಿತೃಗಳೂ ಬೆಟ್ಟಗುಡ್ಡಗಳಲ್ಲಿ ಧೂಪಹಾಕಿ ನನ್ನನ್ನು
ಹೀನೈಸಿ ನಡಿಸಿದ ಅಪರಾಧಗಳ ಪ್ರತಿಫಲವನ್ನು
ಇವರ ಮಡಲಿಗೆ ಹಾಕುವೆನು; ಹೌದು, ಇವರ
ಕಾರ್ಯದ ಫಲವನ್ನು ಅಳತೆಗೆ ಸರಿಯಾಗಿ ಮೊಟ್ಟ
ಮೊದಲೇ ಇವರ ಮಡಲಿಗೆ ಸುರಿಯುವೆನು ಎಂದು
ಯೆಹೋವನು ಹೇಳುತ್ತಾನೆ.
8 ಯೆಹೋವನು ಹೀಗನ್ನುತ್ತಾನೆ--ರಸದೊರೆಯ
ಬಹುದಾದ ದ್ರಾಕ್ಷಿಯ ಗೊಂಚಲನ್ನು ಒಬ್ಬನು
ನೋಡಿ--ಹಾಳುಮಾಡಬೇಡ, ಅದರಲ್ಲಿ ಪ್ರಯೋಜನ
ವಿದೆ ಎನ್ನುವಂತೆ ನಾನು ನನ್ನ ಸೇವಕರನ್ನು ಲಕ್ಷ್ಯಕ್ಕೆ
ತಂದು ಇವರನ್ನೆಲ್ಲಾ ಹಾಳುಮಾಡಬಾರದು ಎಂದು
9 ಅಂದುಕೊಳ್ಳುವೆನು, ಯಾಕೋಬಿನಿಂದ ಸಂತಾನ
ವನ್ನು ಹೊರಪಡಿಸುವೆನು, ಯೆಹೂದವಂಶದಿಂದ ನನ್ನ
ಪರ್ವತಗಳ ಸ್ವಾಸ್ತ್ಯದ ಬಾಧ್ಯಸಂತತಿಯನ್ನು ಬರ
ಮಾಡುವೆನು, ನನ್ನ ಆಪ್ತರು ಆ ಸ್ವಾಸ್ತ್ಯವನ್ನು ಅನು
ಭವಿಸುವರು, ನನ್ನ ಸೇವಕರು ಅಲ್ಲಿ ವಾಸಿಸುವರು.
10 ಆಗ ನನ್ನ ಭಕ್ತಜನರ ಹಿತಕ್ಕಾಗಿ ಶಾರೋನು ಹಿಂಡು
ಗಳಿಗೆ ಹುಲ್ಲುಗಾವಲಾಗಿಯೂ ಆಕೋರಿನ ತಗ್ಗು
ದನದ ಹಕ್ಕೆಯಾಗಿಯೂ ಇರುವವು.
11 ಆದರೆ ಯೆಹೋವನಾದ ನನ್ನನ್ನು ತೊರೆದು ನನ್ನ
ಪವಿತ್ರಪರ್ವತವನ್ನು ಮರೆತು 1)ಶುಭದಾಯಕದೇವ
ತೆಗೆ ಔತಣವನ್ನು ಅಣಿಮಾಡಿ 1)ಗತಿದಾಯಕದೇವ
ತೆಗೆ ಮದ್ಯವನ್ನು ತುಂಬಾ ಬೆರಸಿದ ನಿಮಗೆ ಕತ್ತಿ
12 ಯನ್ನೇ ಗತಿಯಾಗಮಾಡುವೆನು. ನೀವೆಲ್ಲರೂ ಕೊಲೆ
ಗೊಳಗಾಗಿ ಬೀಳುವಿರಿ; ಏಕಂದರೆ ನಾನು ಕೂಗಲು
ನೀವು ಉತ್ತರಕೊಡಲಿಲ್ಲ. ನಾನು ಹೇಳಲು ನೀವು
ಕೇಳಲಿಲ್ಲ; ನನ್ನ ಚಿತ್ತಕ್ಕೆ ವಿರುದ್ಧವಾದದ್ದನ್ನು ನಡಿಸಿ
ನನಗೆ ಇಷ್ಟವಲ್ಲದ್ದನ್ನು ಆರಿಸಿಕೊಂಡಿರಿ.
13 ಹೀಗಿರಲು ಕರ್ತನಾದ ಯೆಹೋವನು ಹೀಗನ್ನು
ತ್ತಾನೆ--ಇಗೋ, ನನ್ನ ಸೇವಕರು ಊಟಮಾಡು
ವರು, ನೀವು ಹಸಿದಿರುವಿರಿ; ಇಗೋ, ನನ್ನ ಸೇವಕರು
ಕುಡಿಯುವರು, ನೀವು ದಾಹಗೊಳ್ಳುವಿರಿ; ಇಗೋ,
ನನ್ನ ಸೇವಕರು ಉಲ್ಲಾಸಗೊಳ್ಳುವರು, ನೀವು ಆಶಾ
14 ಭಂಗಪಡುವಿರಿ. ಇಗೋ, ನನ್ನ ಸೇವಕರು ಹೃದ
ಯಾನಂದದಿಂದ ಹರ್ಷಧ್ವನಿಗೈಯುವರು, ನೀವೋ
ಮನೋವ್ಯಥೆಯಿಂದ ಮೊರೆಯಿಟ್ಟು ಆತ್ಮಕ್ಲೇಶದಿಂದ

ಗೋಳಾಡುವಿರಿ. ಕರ್ತನಾದ ಯೆಹೋವನು ನಿಮ
ನ್ನು ಕೊಂದುಹಾಕುವನು, ನಿಮ್ಮ ಹೆಸರು ನನ
ಆಪ್ತಜನರು ಶಪಿಸುವ ಶಾಪದ ಮಾತಾಗಿಯೆ
ಉಳಿಯುವದು; 2)ನಾನು ನನ್ನ ಸೇವಕರಿಗೆ ಹೊ
ಹೆಸರನ್ನು ಕೊಡುವೆನು. ನಿಮ್ಮ ಪೂರ್ವದ ಕಷ್ಟ
ಗಳು ಇನ್ನು ನನ್ನ ಕಣ್ಣಿಗೆ ಬೀಳದೆ ಮರೆತುಹೋ
ರುವವಾದದರಿಂದ ಲೋಕದಲ್ಲಿ ತನ್ನನ್ನು ಆಶೀವ
ದಿಸಿಕೊಳ್ಳುವ ಪ್ರತಿಯೊಬ್ಬನೂ ಸತ್ಯಸಂಧನಾ
ದೇವರ ಹೆಸರಿನಿಂದ ಆಶೀರ್ವದಿಸಿಕೊಳ್ಳುವನು; ಲೋ
ಕದಲ್ಲಿ ಆಣೆಯಿಡುವ ಪ್ರತಿಯೊಬ್ಬನೂ ಸತ್ಯಸಂ
ನಾದ ದೇವರ ಮೇಲೆ ಆಣೆಯಿಡುವನು.
ಇಗೋ, ನೂತನಾಕಾಶಮಂಡಲವನ್ನೂ ನೂತ
ಭೂಮಂಡಲವನ್ನೂ ಸೃಷ್ಟಿಸುವೆನು; ಮೊದಲಿದ್ದದ್ದನ್ನು
ಯಾರೂ ಜ್ಞಾಪಿಸಿಕೊಳ್ಳರು, ಅದು ನೆನಪಿಗೆ ಬಾರದು
ನಾನು ಮಾಡುವ ಸೃಷ್ಟಿಕಾರ್ಯದಲ್ಲಿಯೇ ಹರ್ಷ
ಗೊಂಡು ಸದಾ ಉಲ್ಲಾಸಿಸಿರಿ; ಆಹಾ, ನಾನು ಯೆರೂ
ಸಲೇಮನ್ನು ಉಲ್ಲಾಸದ ನಿವಾಸವನ್ನಾಗಿಯೂ ಅದ
ಜನರನ್ನು ಹರ್ಷಭರಿತರನ್ನಾಗಿಯೂ ಮಾಡುವೆನು
ನಾನೂ ಯೆರೂಸಲೇಮನ್ನು ದೃಷ್ಟಿಸುತ್ತಾ ಉಲ್ಲಾ
ಸಿಸುವೆನು, ಅದರ ಜನರನ್ನು ಈಕ್ಷಿಸುತ್ತಾ ಹರ್ಷ
ಗೊಳ್ಳುವೆನು. ರೋದನಶಬ್ದವೂ ಪ್ರಲಾಪಧ್ವನಿಯು
ಅಲ್ಲಿ ಇನ್ನು ಕೇಳಿಸವು. ಕೆಲವು ದಿವಸ ಮಾತ್ರ
ಬದುಕತಕ್ಕ ಕೂಸಾಗಲಿ ವಯಸ್ಸಾಗದೆ ಮುದುಕ
ನಾದವನಾಗಲಿ ಅಲ್ಲಿ ಇರುವದಿಲ್ಲ; ಯುವಕನ
ನೂರು ವರುಷದೊಳಗೆ ಸಾಯನು, ಪಾಪಿಷ್ಠನಿಗು
ನೂರು ವರುಷದೊಳಗೆ ಶಾಪತಗಲದು. ಅಲ್ಲಿ
ಜನರು ತಾವು ಕಟ್ಟಿದ ಮನೆಗಳಲ್ಲಿ ತಾವೇ ವಾಸಿಸು
ವರು, ತಾವು ಮಾಡಿದ ತೋಟಗಳ ಫಲವನ್ನು ತಾವೆ
ಅನುಭವಿಸುವರು. ಒಬ್ಬನು ಕಟ್ಟಿದ ಮನೆಯಲ್ಲಿ
ಬೇರೊಬ್ಬನು ವಾಸಿಸನು; ಒಬ್ಬನು ಮಾಡಿದ ತೋಟ
ದ ಫಲವು ಇನ್ನೊಬ್ಬನಿಗೆ ವಶವಾಗದು; ನನ್ನ ಜನ
ಆಯುಸ್ಸು ವೃಕ್ಷದ ಆಯುಸ್ಸಿನಂತಿರುವದು; ನನ್ನ
ಆಪ್ತರು ತಮ್ಮ ಕೈಕೆಲಸದ ಆದಾಯವನ್ನು ಪೂರ
ಅನುಭವಿಸುವರು. ಅವರು ವ್ಯರ್ಥವಾಗಿ ದುಡಿ
ಯರು, ಅವರಿಗೆ ಹುಟ್ಟುವ ಮಕ್ಕಳು ಘೋ
ವ್ಯಾಥಿಗೆ ಗುರಿಯಾಗರು. ಅವರು ಯೆಹೋವನ
ಆಶೀರ್ವಾದವನ್ನು ಹೊಂದಿದವರ ಸಂತಾನವಷ್ಟೆ
ಅವರ ಸಂತತಿಯವರು ಅವರೊಂದಿಗೆ ಬಹುದಿನವಿರು
ವರು. ಆಗ ಅವರು ಬೇಡುವದರೊಳಗೆ ಸದುತ್ತರ
ವನ್ನು ದಯಪಾಲಿಸುವೆನು; ಅವರು ಹೇಳುತ್ತಿರು
ವಾಗಲೇ ಕೇಳುವೆನು. ತೋಳವು ಕುರಿಯ ಸಂಗಡ
ಮೇಯುವದು, ಸಿಂಹವು ಎತ್ತಿನಂತೆ ಹುಲ್ಲು ತಿನ್ನು
ದು, ಹಾವಿಗೆ ದೂಳೇ ಆಹಾರವಾಗುವದು. ನನ್ನ
ಪರಿಶುದ್ಧಪರ್ವತದಲ್ಲೆಲ್ಲಾ ಯಾರೂ ಕೇಡುಮಾಡ
ವದಿಲ್ಲ, ಯಾರೂ ಹಾಳುಮಾಡುವದಿಲ್ಲ ಎಂದು
ಯೆಹೋವನು ಅನ್ನುತ್ತಾನೆ.
ಯೆಹೋವನು ಹೀಗನ್ನುತ್ತಾನೆ--ಆಕಾಶವು 6
ನನಗೆ ಸಿಂಹಾಸನ, ಭೂಮಿಯು ನನಗೆ ಪಾದ

1) ಮೂಲ: ಗಾದ್, ಮೆನೀ. 2) ಮೂಲ: ಆತನು ತನ್ನ . . . . . ಕೊಡುವನು.

ಪೀಠ. ನೀವು ನನಗೆ ಇನ್ನೆಂಥಾ ಮನೆಯನ್ನು ಕಟ್ಟಿ
ಕೊಡುವಿರಿ? ನನ್ನ ವಿಶ್ರಾಂತಿಗೆ ತಕ್ಕ ಸ್ಥಳವು ಎಂಥ
2 ದು? ಇವುಗಳನ್ನೆಲ್ಲಾ ನನ್ನ ಕೈಯೇ ನಿರ್ಮಿಸಿತು,
ಹೌದು, [ನನ್ನ ಕೈಯಿಂದಲೇ] ಇವುಗಳೆಲ್ಲಾ ಉಂಟಾ
ದವು. ನಾನು ಕಟಾಕ್ಷಿಸುವವನು ಎಂಥವನೆಂದರೆ
ದೀನನೂ ಮನಮುರಿದವನೂ ನನ್ನ ಮಾತಿಗೆ ಭಯ
3 ಪಡುವವನೂ ಆಗಿರುವವನೇ. ಹೋರಿಯನ್ನು ವಧಿಸು
ವವನು ನರಬಲಿಯನ್ನು ಕೊಡುತ್ತಾನೆ; ಕುರಿಯನ್ನು
ಕಡಿಯುವವನು ನಾಯಿಯ ಕತ್ತನ್ನು ಮುರಿಯು
ತ್ತಾನೆ; ನೈವೇದ್ಯಮಾಡುವವನು ಹಂದಿಯ ರಕ್ತವನ್ನು
ಅರ್ಪಿಸುತ್ತಾನೆ; ಧೂಪಹಾಕುವವನು ವಿಗ್ರಹಾರಾಧನೆ
ಮಾಡುತ್ತಾನೆ; ಇವರು ಮನಸ್ಸಿಗೆ ಬಂದ ಮಾರ್ಗ
ಗಳನ್ನು ಆರಿಸಿಕೊಂಡು ತಮ್ಮ ಅಸಹ್ಯಕಾರ್ಯ
4 ಗಳಲ್ಲಿ ಮನಃಪೂರ್ವಕವಾಗಿ ಆನಂದಿಸುತ್ತಾರೆ; ಅದಕ್ಕೆ
ತಕ್ಕಂತೆ ನಾನು ಇವರಿಗೋಸ್ಕರ ಕುತಂತ್ರಗಳನ್ನು
ಆರಿಸಿಕೊಂಡು ಇವರು ಅಂಜುತ್ತಿದ್ದ ವಿಪತ್ತುಗಳನ್ನು
ಬರಮಾಡುವೆನು; ಏಕೆಂದರೆ ನಾನು ಕೂಗಿದಾಗ
ಯಾರೂ ಉತ್ತರಕೊಡಲಿಲ್ಲ, ನಾನು ಹೇಳಿದಾಗ
ಇವರು ಕೇಳಲಿಲ್ಲ; ನನ್ನ ಚಿತ್ತಕ್ಕೆ ವಿರುದ್ಧವಾದದ್ದನ್ನು
ನಡಿಸಿ ನನಗೆ ಇಷ್ಟವಲ್ಲದ್ದನ್ನು ಆರಿಸಿಕೊಂಡರು.
5 ಯೆಹೋವನ ಮಾತಿಗೆ ಭಯಪಡುವವರೇ, ಆತನ
ಮಾತನ್ನು ಕೇಳಿರಿ! ನನ್ನ ಹೆಸರಿನ ನಿಮಿತ್ತ ನಿಮ್ಮನ್ನು
ದ್ವೇಷಿಸಿ ಬಹಿಷ್ಕರಿಸಿದ ನಿಮ್ಮ ಸಂಬಂಧಿಗಳು—
ಯೆಹೋವನು ಮಹಿಮೆಪಡಲಿ, ನಿಮಗಾಗುವ ಉತ್ಸಾ
ಹವನ್ನು ನೋಡೋಣ ಎಂದು ಹೇಳಿದ್ದಾರಲ್ಲಾ; ಅವರಿ
6 ಗಂತು ಅವಮಾನವಾಗುವದು. ಇಗೋ, ಪಟ್ಟಣದ
ಕಡೆಯಿಂದ ಗದ್ದಲದ ಶಬ್ದ! ದೇವಾಲಯದಲ್ಲಿ ಶಬ್ದ!
ಯೆಹೋವನು ತನ್ನ ಶತ್ರುಗಳಿಗೆ ಮುಯ್ಯಿತೀರಿಸುವ
ಶಬ್ದ!
7 ಆಹಾ, ಬೇನೆ ತಿನ್ನುವದರೊಳಗೆ ಹೆರಿಗೆಯಾಯಿತು,
ಪ್ರಸವವೇದನೆ ಇನ್ನು ಕಾಣದಿರುವಲ್ಲಿ ಗಂಡನ್ನು ಹಡೆ
8 ದಳು. ಇಂಥಾ ಸುದ್ದಿಯನ್ನು ಯಾರು ಕೇಳಿದ್ದಾರೆ?
ಇಂಥಾ ಸಂಗತಿಯನ್ನು ಕಂಡವರಾರು? ಒಂದು ದಿನ
ದಲ್ಲಿ ರಾಷ್ಟ್ರವು ಹುಟ್ಟೀತೇ? ಕ್ಷಣಮಾತ್ರದಲ್ಲಿ ಜನಾಂಗ
ವನ್ನು ಹೆರಲಿಕ್ಕಾದೀತೇ? ಹೌದು, ಚೀಯೋನೆಂಬಾಕೆ
ಯು ಬೇನೆತಿಂದು ತನಗಾಗಿ ಮಕ್ಕಳನ್ನು ಹಡೆದಿದ್ದಾಳೆ.
9 ನಾನು ಗರ್ಭದ್ವಾರವನ್ನು ತೆರೆದ ಮೇಲೆ ಪ್ರಸವಿಸಗೊ
ಡದೆ ಹೋದೇನೋ ಎಂದು ಯೆಹೋವನು ಹೇಳು
ತ್ತಾನೆ. ಪ್ರಸವಮಾಡಿಸುವವನಾದ ನಾನು ಗರ್ಭವನ್ನು
ಮುಚ್ಚೇನೋ ಎಂದು ನಿನ್ನ ದೇವರು ನುಡಿಯುತ್ತಾನೆ.
10 ಯೆರೂಸಲೇಮ್ ಪುರಿಯನ್ನು ಪ್ರೀತಿಸುವವರೇ,
ನೀವೆಲ್ಲರೂ ಆಕೆಯೊಂದಿಗೆ ಆನಂದಿಸಿರಿ, ಆಕೆಯ
11 ವಿಷಯದಲ್ಲಿ ಹರ್ಷಗೊಳ್ಳಿರಿ! ಆಕೆಯ ನಿಮಿತ್ತ
ದುಃಖಿಸುವವರೇ, ನೀವೆಲ್ಲರೂ—ಆಕೆಯ ಸಮಾ
ಧಾಯಕಸ್ತನ್ಯವನ್ನು ಕುಡಿದು ತೃಪ್ತಿಗೊಳ್ಳುವೆವು,
ಹೌದು, ಆಕೆಯ ವೈಭವದ ಸಮೃದ್ಧಿಯನ್ನು ಹೀರು
ತ್ತಾ ಹಿಗ್ಗುವೆವು ಎಂದು ಆಕೆಯೊಂದಿಗೆ ಉತ್ಸಾಹ
ದಿಂದ ಉಲ್ಲಾಸಿಸಿರಿ. ಯೆಹೋವನು ಹೀಗನ್ನುತ್ತಾನೆ— 12
ಇಗೋ, ನಾನು ಆಕೆಗೆ ಸುಖವನ್ನು ನದಿಯಂತೆ
ದಯಪಾಲಿಸಿ ತುಂಬಿ ತುಳುಕುವ ತೊರೆಯನ್ನೋ
ಎಂಬಂತೆ ಜನಾಂಗಗಳ ವೈಭವವನ್ನು ನೀಡುವೆನು;
ನೀವು 1)ಪಾನಮಾಡುವಿರಿ; ನಿಮ್ಮನ್ನು ಕಂಕುಳಲ್ಲಿ
ಎತ್ತಿಕೊಂಡು ಹೋಗುವರು, ತೊಡೆಯ ಮೇಲೆ ನಲಿ
ದಾಡಿಸುವರು. ತಾಯಿ ಮಗನನ್ನು ಸಂತೈಸುವ 13
ಪ್ರಕಾರ ನಾನು ನಿಮ್ಮನ್ನು ಸಂತೈಸುವೆನು; ಯೆರೂ
ಸಲೇಮಿನಲ್ಲೇ ನಿಮಗೆ ದುಃಖಶಮನವಾಗುವದು.
ನೀವು ಇದನ್ನು ಕಣ್ಣಾರೆ ಕಾಣುವಿರಿ, ನಿಮ್ಮ ಹೃದ 14
ಯವು ಉಲ್ಲಾಸಿಸುವದು, ನಿಮ್ಮ ಎಲುಬುಗಳು ಹಸಿ
ಹುಲ್ಲಿನಂತೆ ರಸವತ್ತಾಗುವವು; ಆಗ ಯೆಹೋವನು
ತನ್ನ ಸೇವಕರ ಮೇಲೆ ಕೃಪಾಹಸ್ತವನ್ನು ವ್ಯಕ್ತಪಡಿಸಿ
ತನ್ನ ಶತ್ರುಗಳ ಮೇಲೆ ರೋಷಗೊಳ್ಳುವನು. ಆಹಾ, 15
ಯೆಹೋವನು ಬೆಂಕಿಯನ್ನು ಕಟ್ಟಿಕೊಂಡು ಬರು
ವನು; ಆತನ ರಥಗಳು ಬಿರುಗಾಳಿಯಂತಿರುವವು;
ರೌದ್ರಾವೇಶದಿಂದ ತನ್ನ ಸಿಟ್ಟನ್ನು ತೀರಿಸುವನು, ಅಗ್ನಿ
ಜ್ವಾಲೆಯಿಂದ ಖಂಡಿಸುವನು. ಯೆಹೋವನು ಅಗ್ನಿ 16
ಯಿಂದಲೂ ತನ್ನ ಖಡ್ಗದಿಂದಲೂ ಎಲ್ಲಾ ನರಜನ್ಮ
ದವರಿಗೂ ನ್ಯಾಯತೀರಿಸುವನು; ಆಗ ಆತನಿಂದ ಹತ
ರಾಗುವವರು ಬಹುಜನ. ತೋಟಗಳೊಳಗೆ ಪ್ರವೇ 17
ಶಿಸುವದಕ್ಕೆ ತಮ್ಮ ಮಧ್ಯದಲ್ಲಿನ 2)ಒಬ್ಬನ ಅಂಗಾಭಿ
ನಯವನ್ನು ಅನುಸರಿಸಿ ತಮ್ಮನ್ನು ಶುದ್ಧೀಕರಿಸಿ
ಪವಿತ್ರಮಾಡಿಕೊಂಡು ಹಂದಿಯ ಮಾಂಸವನ್ನೂ ಅಶು
ದ್ಧಪದಾರ್ಥವನ್ನೂ ಇಲಿಯನ್ನೂ ತಿನ್ನುವವರು ಒಟ್ಟಿಗೆ
ಕೊನೆಗಾಣುವರು ಎಂದು ಯೆಹೋವನು ನುಡಿಯು
ತ್ತಾನೆ. 3)ಅವರ ಕೃತ್ಯಗಳಿಗೂ ಆಲೋಚನೆಗಳಿಗೂ 18
[ತಕ್ಕದ್ದನ್ನು ಮಾಡುವೆನು]; ನಾನು ಇನ್ನು ಮುಂದೆ
ಸಮಸ್ತಜನಾಂಗಗಳನ್ನೂ ಸಕಲಭಾಷೆಯವರನ್ನೂ
ಒಟ್ಟಿಗೆ ಬರಮಾಡುವೆನು; ಅವರು ಬಂದು ನನ್ನ
ಮಹಿಮೆಯನ್ನು ನೋಡುವರು. ಅವರ ಮಧ್ಯದಲ್ಲಿ 19
ಒಂದು ಸೂಚಕಕಾರ್ಯವನ್ನು ಮಾಡುವೆನು; ನನ್ನ
ಸುದ್ದಿಯನ್ನು ಕೇಳದೆಯೂ ನನ್ನ ಮಹಿಮೆಯನ್ನು
ನೋಡದೆಯೂ ಇರುವ ತಾರ್ಷೀಷ್, 4)ಪೂಲ್,
ಬಿಲ್ಲುಗಾರರಿಗೆ ಪ್ರಸಿದ್ಧಸ್ಥಳವಾದ ಲೂದ್, ತೂಬಲ್,
ಯಾವಾನ್ ಎಂಬ ಜನಾಂಗಗಳು ಮತ್ತು ದೂರವಾದ
ದ್ವೀಪನಿವಾಸಿಗಳು ಇವರೆಲ್ಲರ ಬಳಿಗೆ ಹತಶೇಷರನ್ನು
ಕಳುಹಿಸುವೆನು; ಇವರು ಜನಾಂಗಗಳಲ್ಲಿ ನನ್ನ ಮಹಿ
ಮೆಯನ್ನು ಪ್ರಕಟಿಸುವರು. ಯೆಹೋವನು ಹೀಗನ್ನು 20
ತ್ತಾನೆ— ಇಸ್ರಾಯೇಲ್ಯರು ಯೆಹೋವನ ಆಲಯಕ್ಕೆ
ಶುದ್ಧಪಾತ್ರೆಯಲ್ಲಿ ನೈವೇದ್ಯವನ್ನು ತೆಗೆದುಕೊಂಡು
ಬರುವ ಪ್ರಕಾರ ಸಮಸ್ತಜನಾಂಗಗಳಲ್ಲಿ ಚದರಿಹೋಗಿ
ರುವ ನಮ್ಮ ಸಹೋದರರನ್ನು ಕುದುರೆ, ತೇರು,
ಪಾಲಕಿ, ಹೇಸರಗತ್ತೆ, ಒಂಟೆ ಇವುಗಳ ಮೇಲೆ ಯೆಹೋ
ವನ ನೈವೇದ್ಯಕ್ಕಾಗಿ ಯೆರೂಸಲೇಮೆಂಬ ನನ್ನ ಪರಿ
ಶುದ್ಧಪರ್ವತಕ್ಕೆ ಕರತರುವರು. ಇದಲ್ಲದೆ ಇವರಲ್ಲಿ 21
ಯಾಜಕರೂ ಲೇವಿಯರೂ ಆಗತಕ್ಕವರನ್ನು ಆರಿಸಿ

1) ಮೂಲ: ಚೀಪುವಿರಿ. 2) ಮೂಲ: ಒಬ್ಬನನ್ನು. 3) ಅಥವಾ: ಅವರ ಕೃತ್ಯಗಳೂ ಆಲೋಚನೆಗಳೂ ನನಗೆ [ಗೊತ್ತು].
4) ಪಾಠಾಂತರ: ಪೂಟ್.

ಕೊಳ್ಳುವೆನು ಎಂದು ಯೆಹೋವನು ಹೇಳುತ್ತಾನೆ.
22 ನಾನು ಸೃಷ್ಟಿಸುವ ನೂತನಾಕಾಶಮಂಡಲವೂ ನೂತನ
ಭೂಮಂಡಲವೂ ನನ್ನ ಮುಂದೆ ಸ್ಥಿರವಾಗಿ ನಿಲ್ಲುವ
ಪ್ರಕಾರ ನಿಮ್ಮ ಸಂತತಿಯೂ ನಿಮ್ಮ ಹೆಸರೂ ಸ್ಥಿರ
23 ವಾಗಿ ನಿಲ್ಲುವವು. ಪ್ರತಿಯೊಂದು ಅಮಾವಾಸ್ಯೆಯ
ಲ್ಲಿಯೂ ಒಂದೊಂದು ಸಬ್ಬತ್ ದಿನದಲ್ಲಿಯೂ ಸಕಲ
ನರಜನ್ಮದವರೂ ನನ್ನ ಸನ್ನಿಧಿಯಲ್ಲಿ ಎರಗುವದಕ್ಕೆ
ಬರುವರು; ಇದು ಯೆಹೋವನ ನುಡಿ. ಅವರ
ಆಚೆ ಹೋಗಿ ನನಗೆ ದ್ರೋಹಮಾಡಿದವರ ಹೆಣಗಳನ್ನು
ನೋಡುವರು; ಅವುಗಳನ್ನು ಕಡಿಯುವ ಹುಳ
ಸಾಯುವದಿಲ್ಲ, ಸುಡುವ ಬೆಂಕಿಯು ಆರುವದಿಲ್ಲ
ಅವು ಲೋಕದವರಿಗೆಲ್ಲಾ ಅಸಹ್ಯವಾಗಿರುವವು.

# THE BOOK OF THE
# PROPHET JEREMIAH

## ಯೆರೆಮೀಯನ ಪ್ರವಾದನೆಯ ಗ್ರಂಥ

### ಪೀಠಿಕೆ.

1 ಬೆನ್ಯಾಮೀನ್ ಸೀಮೆಗೆ ಸೇರಿದ ಅನಾತೋತ್ ಊ
ರಿನ ಯಾಜಕವರ್ಗದವನೂ ಹಿಲ್ಕೀಯನ ಮಗನೂ
2 ಆದ ಯೆರೆಮೀಯನ ಪ್ರವಾದನೆಗಳು. ಯೆಹೂದದ
ಅರಸನೂ ಆಮೋನನ ಮಗನೂ ಆದ ಯೋಷೀ
ಯನ ಆಳಿಕೆಯ ಹದಿಮೂರನೆಯ ವರುಷದಲ್ಲಿ
3 ಯೆಹೋವನ ವಾಕ್ಯವು ಇವನಿಗೆ ಒದಗಿತು. ಅಲ್ಲದೆ
ಯೆಹೂದದ ಅರಸನೂ ಯೋಷೀಯನ ಮಗನೂ ಆದ
ಯೆಹೋಯಾಕೀಮನ ಕಾಲದಿಂದ ಯೆಹೂದದ ಅರ
ಸನೂ ಯೋಷೀಯನ ಮಗನೂ ಆದ ಚಿದ್ಕೀಯನ
ಆಳಿಕೆಯ ಹನ್ನೊಂದನೆಯ ವರುಷದ ಐದನೆಯ
ತಿಂಗಳಿನಲ್ಲಿ ಯೆರೂಸಲೇಮಿನವರು ಸೆರೆಹೋಗುವ
ತನಕ ಯೆಹೋವನ ವಾಕ್ಯವು ಒದಗುತ್ತಿತ್ತು.

### ಯೆಹೋವನು ಯೆರೆಮೀಯನನ್ನು ಪ್ರವಾದಿಯನ್ನಾಗಿ ನೇಮಿಸಿದ್ದು.

4 ಯೆಹೋವನು ಈ ವಾಕ್ಯವನ್ನು ನನಗೆ ದಯ
5 ಪಾಲಿಸಿದನು—ನಾನು ನಿನ್ನನ್ನು ಗರ್ಭದಲ್ಲಿ ರೂಪಿ
ಸುವದಕ್ಕೆ ಮುಂಚೆ ನಿನ್ನನ್ನು ತಿಳಿದಿದ್ದೆನು; ನೀನು
ಉದರದಿಂದ ಬರುವದಕ್ಕೆ ಮೊದಲೇ ನಿನ್ನನ್ನು ಪ್ರತಿಷ್ಠಿ
ಸಿದ್ದೆನು; ಜನಾಂಗಗಳಿಗೆ ಪ್ರವಾದಿಯನ್ನಾಗಿ ನಿನ್ನನ್ನು
6 ನೇಮಿಸಿದ್ದೇನೆ. ಅದಕ್ಕೆ ನಾನು—ಅಯ್ಯೋ, ಕರ್ತ
ನಾದ ಯೆಹೋವನೇ, ನಾನು ಮಾತು ಬಲ್ಲವನಲ್ಲ,
7 ಬಾಲಕನು ಎಂದು ಬಿನ್ನವಿಸಿದೆನು. ಆಗ ಯೆಹೋ
ವನು ನನಗೆ—ಬಾಲಕನೆನ್ನಬೇಡ; ಯಾರ ಬಳಿಗೆ
ನಿನ್ನನ್ನು ಕಳುಹಿಸುತ್ತೇನೋ ಅವರೆಲ್ಲರ ಬಳಿಗೆ
ನೀನು ಹೋಗೇ ಹೋಗುವಿ; ನಾನು ಆಜ್ಞಾಪಿಸುವ
ದನ್ನೆಲ್ಲಾ ನುಡಿಯಲೇ ನುಡಿಯುವಿ. ಅವರಿಗೆ ಅಂ
ಬೇಡ; ನಿನ್ನನ್ನುದ್ಧರಿಸಲು ನಾನೇ ನಿನ್ನೊಂದಿಗಿರ
ವೆನು, ಇದು ಯೆಹೋವನಾದ ನನ್ನ ಮಾತು ಎಂದ
ಹೇಳಿದನು. ಆಗ ಯೆಹೋವನು ಕೈಚಾಚಿ ನನ್ನ
ಬಾಯನ್ನು ಮುಟ್ಟಿ—ಇಗೋ, ನಿನ್ನ ಬಾಯಲ್ಲಿ
ನನ್ನ ಮಾತುಗಳನ್ನು ಇಟ್ಟಿದ್ದೇನೆ; ಕಿತ್ತುಹಾಕು
ವದು, ಕೆಡವುವದು, ನಾಶಪಡಿಸುವದು, ಹಾಳು
ಮಾಡುವದು, ಕಟ್ಟುವದು, ನೆಡುವದು, ಈ ಕಾಯ
ಗಳನ್ನು ಮಾಡುವದಕ್ಕೋಸ್ಕರ ಜನಾಂಗಗಳ ಮೇಲು
ರಾಜ್ಯಗಳ ಮೇಲೂ ನಿನ್ನನ್ನು ಈ ದಿನ ನೇಮಿಸಿದ್ದೇನ
ಅಂದನು.
ಇದಲ್ಲದೆ ಯೆಹೋವನು—ಯೆರೆಮೀಯನೇ, ಏನ
ನೋಡುತ್ತೀ ಎಂದು ನನ್ನನ್ನು ಕೇಳಿದನು. ಅದಕ್ಕೆ
ನಾನು—[1])ಚಚ್ಚರ ಮರದ ರೆಂಬೆಯನ್ನು ನೋಡ
ತ್ತೇನೆ ಅಂದೆನು. ಆಗ ಯೆಹೋವನು ನನಗೆ—
ಸರಿಯಾಗಿ ನೋಡಿದ್ದೀ, ನನ್ನ ಮಾತನ್ನು ನೆರವೇರಿಸ
ವದಕ್ಕೆ ಎಚ್ಚರಗೊಂಡಿದ್ದೇನೆ ಎಂದು ತಿಳಿದುಕೊ
ಎಂಬದಾಗಿ ಹೇಳಿದನು.
ಇನ್ನೊಂದು ಸಲ ಯೆಹೋವನು ಏನು ನೋಡುತ್ತೀ
ಎಂದು ನನ್ನನ್ನು ಕೇಳಿದನು. ಅದಕ್ಕೆ ನಾನು—
ಉರಿಸುತ್ತಿರುವ ಬೆಂಕಿಯಿಂದುಕ್ಕುವ ಹಂಡೆಯನ್ನು
ನೋಡುತ್ತೇನೆ. ಅದರ ಬಾಯಿ ಬಡಗಲಿಂದ ಇತ್ತ ಬಾಗಿ
ಕೊಂಡಿದೆ ಅಂದೆನು. ಆಗ ಯೆಹೋವನು ನನಗೆ
ಹೀಗೆ ಹೇಳಿದನು—ಈ ದೇಶನಿವಾಸಿಗಳೆಲ್ಲರ ಮೇಲೆ
ಬಡಗಲಿಂದ ಕೇಡು ಉಕ್ಕಿ ಬರುವದು. ಇಗೋ
ನಾನು ಬಡಗಣ ರಾಜ್ಯಗಳ ಜನಾಂಗಗಳನ್ನೆಲ್ಲಾ
ಕರೆಯುವೆನು; ಅವರು ಬಂದು ಯೆರೂಸಲೇಮಿನ
ಊರುಬಾಗಲುಗಳ ಎದುರಿನಲ್ಲಿಯೂ ಅದರ ಎಲ್ಲಾ
ಪೌಳಿಗೋಡೆಗಳ ಸುತ್ತಲೂ ಯೆಹೂದದ ಸಕಲ

1) ಬಾದಾಮಿಯ ಗಿಡಕ್ಕೆ ಇಬ್ರಿಯ ಭಾಷೆಯಲ್ಲಿ ಚಚ್ಚರಮರವೆಂದು ಹೆಸರು.

ಪಟ್ಟಣಗಳ ಮುಂದೆಯೂ ತಮ್ಮ ತಮ್ಮ ನ್ಯಾಯಾಸನ
6 ಗಳನ್ನು ಹಾಕಿಕೊಳ್ಳುವರು. 1)ನನ್ನ ಜನರು ನನ್ನ
ನ್ನು ಬಿಟ್ಟದ್ದು, ಅನ್ಯದೇವತೆಗಳಿಗೆ 2)ಹೋಮಮಾ
ಡಿದ್ದು, ತಮ್ಮ ಕೈಯಿಂದ ನಿರ್ಮಿಸಿದ್ದಕ್ಕೆ ಅಡ್ಡ
ಬಿದ್ದದ್ದು, ಈ ಅಧರ್ಮಕ್ಕೆಲ್ಲಾ ನಾನು ಅವರಿಗೆ ವಿಧಿ
7 ಸಿರುವ ನ್ಯಾಯದಂಡನೆಗಳನ್ನು ತಿಳಿಸುವೆನು. ಹೀಗಿ
ರಲು ನೀನು ಎದ್ದು ನಡುಕಟ್ಟಿಕೊಂಡು ನಾನು
ಆಜ್ಞಾಪಿಸುವದನ್ನೆಲ್ಲಾ ಅವರಿಗೆ ಹೇಳು. ನೀನು ಅವ
ರಿಗೆ ಕಂಗೆಡಬೇಡ; ಕಂಗೆಟ್ಟರೆ ನಾನೂ ನಿನ್ನನ್ನು
8 ಅವರ ಮುಂದೆ ಕಂಗೆಡಿಸುವೆನು. ಇಗೋ, ನಾನು ಈ
ಹೊತ್ತು ನಿನ್ನನ್ನು ಯೆಹೂದದ ಅರಸರು, ಅಧಿಪತಿ
ಗಳು, ಯಾಜಕರು, ಸಾಧಾರಣ ಜನರು, ಅಂತು ದೇಶ
ದವರೆಲ್ಲರನ್ನೂ ಎದುರಿಸತಕ್ಕ ಕೋಟೆಕೊತ್ತಲದ
ಪಟ್ಟಣವನ್ನಾಗಿಯೂ ಕಬ್ಬಿಣದ ಕಂಬವನ್ನಾಗಿಯೂ
ತಾಮ್ರದ ಪೌಳಿಗೋಡೆಯನ್ನಾಗಿಯೂ ಸ್ಥಾಪಿಸಿದ್ದೇನೆ.
9 ಅವರು ನಿನಗೆ ವಿರುದ್ಧವಾಗಿ ಯುದ್ಧಮಾಡುವರು,
ಆದರೆ ನಿನ್ನನ್ನು ಸೋಲಿಸಲಾಗುವದಿಲ್ಲ; ನಿನ್ನನ್ನುದ್ಧ
ರಿಸಲು ನಾನೇ ನಿನ್ನೊಂದಿಗಿರುವೆನು, ಇದು ಯೆಹೋ
ವನಾದ ನನ್ನ ಮಾತು.

### ದೇವಜನರ ದೇವದ್ರೋಹವು.

2 ಯೆಹೋವನು ಈ ವಾಕ್ಯವನ್ನು ನನಗೆ ದಯ
2 ಪಾಲಿಸಿದನು—ನೀನು ಹೋಗಿ ಯೆರೂಸಲೇ
ಮಿನ ಕಿವಿಗೆ ಮುಟ್ಟುವಂತೆ ಈ ಮಾತುಗಳನ್ನು
ಸಾರು—ಯೆಹೋವನು ಹೀಗನ್ನುತ್ತಾನೆ, ನೀನು
ಯೌವನದಲ್ಲಿ [ನನ್ನ ಮೇಲೆ] ಇಟ್ಟಿದ್ದ ಪ್ರೀತಿಯನ್ನೂ
ವಿವಾಹಕಾಲದ ನಿನ್ನ ಪ್ರೇಮವನ್ನೂ ಬೀಜ ಬಿತ್ತಿಯೇ
ಇಲ್ಲದ ಅರಣ್ಯದಲ್ಲಿ ನೀನು ನನ್ನನ್ನು ಹಿಂಬಾಲಿಸಿದ
ನಿನ್ನ ಪಾತಿವ್ರತ್ಯವನ್ನೂ ನಿನ್ನ ಹಿತಕ್ಕಾಗಿ ಜ್ಞಾಪಕ
3 ದಲ್ಲಿಟ್ಟಿದ್ದೇನೆ. ಇಸ್ರಾಯೇಲು ಯೆಹೋವನ ಬೆಳೆ
ಯ ಪ್ರಥಮಫಲವಾಗಿ ಆತನಿಗೆ ಮೀಸಲಾಗಿತ್ತು;
ಅದನ್ನು ತಿಂದುಬಿಟ್ಟವರೆಲ್ಲರೂ ದೋಷಿಗಳಾಗಿ ಕೇಡಿಗೆ
ಗುರಿಯಾದರು ಎಂದು ಯೆಹೋವನು ಅನ್ನುತ್ತಾನೆ.
4 ಯಾಕೋಬನ ಮನೆತನವೇ, ಇಸ್ರಾಯೇಲ್ ವಂಶದ
ಸಕಲ ಗೋತ್ರಗಳೇ, ಯೆಹೋವನ ವಾಕ್ಯವನ್ನು
5 ಕೇಳಿರಿ; ಯೆಹೋವನು ಹೀಗನ್ನುತ್ತಾನೆ, ನಿಮ್ಮ
ಪಿತೃಗಳು ನನ್ನಲ್ಲಿ ಯಾವ ಅನ್ಯಾಯವನ್ನು ಕಂಡದ
ರಿಂದ ವ್ಯರ್ಥಾಚಾರವನ್ನು ಅನುಸರಿಸಿ ತಾವೇ ವ್ಯರ್ಥ
6 ರಾಗಿ ನನ್ನನ್ನು ಬಿಟ್ಟು ದೂರವಾದರು? ನಮ್ಮನ್ನು
ಐಗುಪ್ತದೇಶದೊಳಗಿಂದ ಬರಮಾಡಿ ಕಾಡಾಗಿಯೂ
ಹಳ್ಳಕೊಳ್ಳವಾಗಿಯೂ ನಿರ್ಜಲವಾಗಿಯೂ ಘೋ
ರಾಂಧಕಾರವಾಗಿಯೂ ಯಾರೂ ಹಾದುಹೋಗ
ದೆಯೂ ಯಾರೂ ವಾಸಿಸದೆಯೂ ಇರುವ ಅರಣ್ಯ
ದಲ್ಲಿ ನಡಿಸಿದ ಯೆಹೋವನು ಎಲ್ಲಿ ಎಂದು ಅವರು
7 ಅಂದುಕೊಳ್ಳಲಿಲ್ಲವಲ್ಲ. ನಾನು ನಿಮ್ಮನ್ನು ಫಲ
ವತ್ತಾದ ಸೀಮೆಗೆ ಕರತಂದು ಅದರ ಫಲವನ್ನೂ
ಸಾರವನ್ನೂ ಅನುಭವಿಸುವ ಹಾಗೆ ಮಾಡಿದೆನು;
ಆದರೆ ನೀವು ಪ್ರವೇಶಿಸಿ ಆ ನನ್ನ ದೇಶವನ್ನು ಹೊಲೆ
ಮಾಡಿ ನನ್ನ ಸ್ವಾಸ್ತ್ಯವನ್ನು ಅಸಹ್ಯಪಡಿಸಿದಿರಿ.
ಯಾಜಕರಿಗೆ ಯೆಹೋವನು ಎಲ್ಲಿ ಎಂಬ ವಿಚಾರವೇ 8
ಇರಲಿಲ್ಲ, ಧರ್ಮೋಪದೇಶಕರು ನನ್ನನ್ನು ತಿಳಿಯ
ಲಿಲ್ಲ, ಪಾಲಕರು ನನಗೆ ದ್ರೋಹಮಾಡಿದರು, ಪ್ರವಾದಿ
ಗಳು ಬಾಳ್ ದೇವತೆಯ ಆವೇಶದಿಂದ ಪ್ರವಾದಿಸಿ
ಕೆಲಸಕ್ಕೆ ಬಾರದವುಗಳನ್ನು ಸೇವಿಸಿದರು. ಆದ 9
ಕಾರಣ ನಾನು ನಿಮ್ಮೊಂದಿಗೆ ಇನ್ನೂ ವ್ಯಾಜ್ಯವಾಡು
ವೆನು; ನಿಮ್ಮ ಸಂತಾನದವರೊಂದಿಗೂ ವ್ಯಾಜ್ಯವಾಡು
ವೆನು ಎಂದು ಯೆಹೋವನು ಅನ್ನುತ್ತಾನೆ. ಕಿತ್ತೀ 10
ಮ್ ದ್ವೀಪಗಳಿಗೆ ಹೋಗಿ ನೋಡಿರಿ, ಕೇದಾರಿಗೆ
ಕಳುಹಿಸಿ ವಿಚಾರಮಾಡಿರಿ; ಇಂಥಾ ಕಾರ್ಯವು ಎಲ್ಲಿ
ಯಾದರೂ ನಡೆಯಿತೇ ಎಂದು ಚೆನ್ನಾಗಿ ಆಲೋಚಿಸಿರಿ.
ತನ್ನ ದೇವತೆಗಳು ದೇವರಲ್ಲದೆ ಇದ್ದರೂ ಅವು 11
ಗಳನ್ನು ಯಾವ ಜನಾಂಗವಾದರೂ ಬದಲಾಯಿಸಿ
ಕೊಂಡಿತೋ? ಆದರೆ ನನ್ನ ಜನರು ತಮ್ಮ ಮಹಿಮೆ
ಯಾದ ನನಗೆ ಬದಲಾಗಿ ಕೆಲಸಕ್ಕೆ ಬಾರದ್ದನ್ನು
ಆರಿಸಿಕೊಂಡಿದ್ದಾರೆ. ಆಕಾಶಮಂಡಲವೇ, ಇದಕ್ಕೆ 12
ಬೆಚ್ಚಿಬೆರಗಾಗು, ತತ್ತರಿಸು, ಹಾಳಾಗು ಎಂದು
ಯೆಹೋವನು ನುಡಿಯುತ್ತಾನೆ. ನನ್ನ ಜನರು ಎರಡು 13
ಅಪರಾಧಗಳನ್ನು ಮಾಡಿದ್ದಾರೆ; ಜೀವಜಲದ ಬುಗ್ಗೆ
ಯಾದ ನನ್ನನ್ನು ಬಿಟ್ಟಿದ್ದಾರೆ, ತಮಗೋಸ್ಕರ
ತೊಟ್ಟಿಗಳನ್ನು, ನೀರು ನಿಲ್ಲದ ಬಿರಿದ ತೊಟ್ಟಿ
ಗಳನ್ನು ಕೊರೆದುಕೊಂಡಿದ್ದಾರೆ. ಇಸ್ರಾಯೇಲು ಒಬ್ಬ 14
ದಾಸನೋ? ಮನೆಯ ಗುಲಾಮನಾಗಿ ಹುಟ್ಟಿ
ದವನೋ? ಏಕೆ ಸೂರೆಯಾದನು? ಪ್ರಾಯದ ಸಿಂಹ 15
ಗಳು ಅವನ ಮೇಲೆ ಗರ್ಜಿಸಿ ಆರ್ಭಟಿಸುತ್ತಿವೆ,
ಅವನ ದೇಶವನ್ನು ಹಾಳುಮಾಡಿವೆ, ಅವನ ಊರು
ಗಳು ಸುಟ್ಟು ನಿರ್ನಿವಾಸಿಗಳಾಗಿವೆ. ನೋಫ್ 16
ಮತ್ತು ತಹಪನೇಸ್ ಪಟ್ಟಣಗಳವರು ನಿನ್ನ ನೆತ್ತಿ
ಯನ್ನೂ ನುಣ್ಣಗೆ ಮೇದುಬಿಟ್ಟಿದ್ದಾರೆ. ನಿನ್ನನ್ನು 17
ದಾರಿಯಲ್ಲಿ ನಡಿಸುತ್ತಿದ್ದ ನಿನ್ನ ದೇವರಾದ ಯೆಹೋವ
ನನ್ನು ತೊರೆದುಬಿಟ್ಟು ಇದನ್ನೆಲ್ಲಾ ನೀನೇ ನಿನ್ನ
ಮೇಲೆ ಬರಮಾಡಿಕೊಂಡಿಯಲ್ಲಾ. ನೀನು ಐಗುಪ್ತದ 18
ದಾರಿಯಲ್ಲಿ ನಡೆದದ್ದೇಕೆ? 3)ನೈಲ್ ನದಿಯ ನೀರನ್ನು
ಕುಡಿಯಬೇಕಾದದ್ದೇನು? ಅಶ್ಶೂರದ ಮಾರ್ಗದಲ್ಲಿ
ಹೆಜ್ಜೆಯಿಟ್ಟದ್ದೇಕೆ? [ಯೂಫ್ರೇಟೀಸ್] ನದಿಯ ಜಲ
ವನ್ನು ಪಾನಮಾಡಬೇಕಾದದ್ದೇನು? ನಿನ್ನ ಕೆಟ್ಟತನವೇ 19
ನಿನ್ನನ್ನು ಶಿಕ್ಷಿಸುವದು, ನಿನ್ನ ದ್ರೋಹಗಳೇ ನಿನ್ನನ್ನು
ಖಂಡಿಸುವವು; ನೀನು ನನ್ನ ಭಯವಿಲ್ಲದೆ ನಿನ್ನ ದೇವ
ರಾದ ಯೆಹೋವನೆಂಬ ನನ್ನನ್ನು ತೊರೆದುಬಿಟ್ಟದ್ದು
ಕೆಟ್ಟದ್ದಾಗಿಯೂ ವಿಷವಾಗಿಯೂ ಇರುತ್ತದೆಂದು
ಗ್ರಹಿಸಿಕೋ, ಕಣ್ಣಾರೆ ನೋಡು ಎಂಬದು ಸೇನಾ
ಧೀಶ್ವರನಾದ ಯೆಹೋವನೆಂಬ ಕರ್ತನ ನುಡಿ. ಬಹು 20
ಕಾಲದಿಂದ ನೀನು ನಿನ್ನ ನೊಗವನ್ನು ಮುರಿದು
ಕಣ್ಣಿಗಳನ್ನು ಕಿತ್ತು ನಾನು ಸೇವೆ ಮಾಡುವದಿಲ್ಲ
ವೆಂದು ಅಂದುಕೊಳ್ಳುತ್ತಿದ್ದೀ; ಎತ್ತರವಾದ ಎಲ್ಲಾ
ಗುಡ್ಡಗಳ ಮೇಲೂ ಸೊಂಪಾಗಿ ಬೆಳೆದಿರುವ ಎಲ್ಲಾ

1) ಮೂಲ: ಅವರು. 2) ಅಥವಾ: ಧೂಪಹಾಕಿದ್ದು. 3) ಮೂಲ: ಶೀಹೋರಿನ.

ಮರಗಳ ಕೆಳಗೂ ನೀನು ಅಡ್ಡಬಿದ್ದು ಸೂಳೆಯಾಗಿ
21 ನಡೆದಿದ್ದೀ. ನಾನು ನಿನ್ನನ್ನು ಅತ್ಯುತ್ತಮ ಬೀಜ
ದಿಂದ ಬೆಳೆದ ಒಳ್ಳೆಯ ದ್ರಾಕ್ಷಾಲತೆಯನ್ನಾಗಿ ನೆಟ್ಟಿ
ರಲು ನೀನು ನನಗೆ ಕಾಡುದ್ರಾಕ್ಷೇಬಳ್ಳಿಯ ಕೆಟ್ಟ
22 ರೆಂಬೆಗಳಾದದ್ದೇನು? ನೀನು ಬಹಳ ಚೌಳನ್ನು ಹಾಕಿ
ಕೊಂಡು ಸಬ್ಬಿನಿಂದ ತೊಳಕೊಂಡರೂ ನಿನ್ನ
ಅಧರ್ಮವು ನನ್ನ ಕಣ್ಣೆದುರಿಗೆ ಕರೆಯಾಗಿ ನಿಂತಿದೆ
ಎಂದು ಕರ್ತನಾದ ಯೆಹೋವನು ಅನ್ನುತ್ತಾನೆ.
23 ನನಗೆ ಮುಡಚಟ್ಟಾಗಲಿಲ್ಲ, ಅನ್ಯದೇವತೆಗಳನ್ನು ನಾನು
ಹಿಂಬಾಲಿಸಲಿಲ್ಲವೆಂದು ಹೇಗೆ ಹೇಳುತ್ತೀ? ಆ
ತಗ್ಗಿನಲ್ಲಿನ ನಿನ್ನ ನಡತೆಯನ್ನು ನೋಡು, ನೀನು
ಮಾಡಿದ ಕೆಲಸವನ್ನು ಮನಸ್ಸಿಗೆ ತಂದುಕೊ. ತನ್ನ
ಜಾಡೆಗಳನ್ನು ತಾರುಮಾರು ಮಾಡುವ ವೇಗವಾದ
24 ಹೆಣ್ಣು ಒಂಟೆಯಂತಿದ್ದೀ. ಅಡವಿಯಲ್ಲಿ ಪಳಗಿದ್ದು
ಮದದಿಂದ ಗಾಳಿಯನ್ನು ಬುಸುಬುಸನೆ ಮೂಸಿ
ನೋಡುವ ಹೆಣ್ಣು ಕಾಡುಕತ್ತೆಯ ಹಾಗಿದ್ದೀ; ಅದಕ್ಕೆ
ಬೆದೆ ಏರಿದಾಗ ಯಾವ ಗಂಡು ಕತ್ತೆಯು ನೂಕಿ
ಬಿಟ್ಟೀತು? ಆಯಾ ತಿಂಗಳಿನಲ್ಲಿ ಅದನ್ನು ಹುಡು
ಕುವವುಗಳೆಲ್ಲಾ ಆಯಾಸಗೊಳ್ಳದೆ ಅದನ್ನು ದೊರ
25 ಕಿಸಿಕೊಳ್ಳುವವು. ನಿನ್ನ ಕಾಲು ಸವೆಯದಂತೆಯೂ
ನಿನ್ನ ಗಂಟಲು ಆರದಂತೆಯೂ ತಡೆದುಕೋ; ಆದರೆ
ನೀನು—ನಿರೀಕ್ಷೆಯಿಲ್ಲ, ಆಗಲಾರದು, ಅನ್ಯರಮೇಲೆ
ಮೋಹಗೊಂಡಿದ್ದೇನೆ. ಅವರ ಹಿಂದೆಯೇ ಹೋಗು
26 ವೆನು ಅಂದುಕೊಂಡಿದ್ದೀ. ಕಳ್ಳನು ಸಿಕ್ಕಿಬಿದ್ದು
ಹೇಗೆ ನಾಚಿಕೆಪಡುವನೋ ಹಾಗೆಯೇ ಇಸ್ರಾಯೇಲ್
ವಂಶವು ನಾಚಿಕೆಪಡುವದು; ಮರಕ್ಕೆ, ನೀನು ನನ್ನ
ತಂದೆ ಎಂತಲೂ ಕಲ್ಲಿಗೆ, ಹೆತ್ತ ತಾಯಿ ನೀನು
ಎಂತಲೂ ಹೇಳುವ ಪ್ರಜೆಗಳು, ಅವರ ಅರಸರು,
ಅಧಿಪತಿಗಳು, ಯಾಜಕರು, ಪ್ರವಾದಿಗಳು, ಇವರೆಲ್ಲ
27 ರೂ ನಾಚಿಕೆಗೆ ಈಡಾಗುವರು; ನನ್ನ ಕಡೆಗೆ ಮುಖ
ತಿರುಗಿಸದೆ ಬೆನ್ನುಮಾಡಿದ್ದಾರೆ, ಆದರೆ ಅವರಿಗೆ
ಕೇಡು ಸಂಭವಿಸಿದಾಗ—ಎದ್ದು ನಮ್ಮನ್ನುದ್ಧರಿಸು
28 ಎಂದು ಮೊರೆಯಿಡುವರು. ಯೆಹೂದವೇ, ನೀನು
ನಿರ್ಮಿಸಿಕೊಂಡ ದೇವರುಗಳು ಎಲ್ಲಿ? ನಿನಗೆ ಕೇಡು
ಸಂಭವಿಸಿದಾಗ ನಿನ್ನನ್ನುದ್ಧರಿಸಲು ಶಕ್ತರಾದರೆ ಏಳಲಿ!
ನಿನ್ನ ಪಟ್ಟಣಗಳೆಷ್ಟೋ, ನಿನ್ನ ದೇವರುಗಳೂ ಅಷ್ಟು.
29 ಯೆಹೋವನು ಹೀಗನ್ನುತ್ತಾನೆ—ಏಕೆ ನನ್ನೊ
ಡನೆ ವ್ಯಾಜ್ಯವಾಡುತ್ತೀರಿ? ನೀವೆಲ್ಲರೂ ನನಗೆ ದ್ರೋಹಿ
30 ಗಳು. ನಾನು ನಿಮ್ಮ ವಂಶದವರನ್ನು ಹೊಡೆದದ್ದು
ವ್ಯರ್ಥ, ತಿದ್ದುಪಾಟಾಗಲಿಲ್ಲ; ಸಂಹರಿಸುವ ಸಿಂಹ
ದಂತೆ ನಿಮ್ಮ ಕೈಯ ಕತ್ತಿಯೇ ನಿಮ್ಮ ಪ್ರವಾದಿಗ
31 ಳನ್ನು ನುಂಗಿಬಿಟ್ಟಿದೆ. ನೀವು ಎಂಥಾ ದುರ್ವಂಶ! ಯೆ
ಹೋವನ ಮಾತನ್ನು ನೋಡಿರಿ, ನಾನು ಇಸ್ರಾಯೇಲಿಗೆ
ಅರಣ್ಯವಾಗಿಯೂ ಗಾಢಾಂಧಕಾರದ ಪ್ರದೇಶವಾಗಿ
ಯೂ ಪರಿಣಮಿಸಿದ್ದೆನೋ? ನಾವು ಮನಬಂದಂತೆ
ತಿರುಗುತ್ತಿದ್ದೇವೆ, ನಿನ್ನ ಹತೋಟಿಗೆ ಇನ್ನು ಬಾರೆವು

ಎಂದು ನನ್ನ ಜನರು ಹೇಳುವದು ಹೇಗೆ. ಯುವ
ತಿಯು ತನ್ನ ಆಭರಣಗಳನ್ನು, ವಧುವು ತನ್ನ ಒಡ್ಯಾಣ
ವನ್ನು, ಮರೆಯುವದುಂಟೇ? ನನ್ನ ಜನರೋ ಲೆಕ್ಕ
ವಿಲ್ಲದಷ್ಟು ದಿನ ನನ್ನನ್ನು ಮರೆತಿದ್ದಾರೆ. ಕಾಮವನ್ನು
ತೀರಿಸಿಕೊಳ್ಳಬೇಕೆಂದು ಎಷ್ಟೋ ಮುಂದರಿದಿದ್ದೀ!
ಆದಕಾರಣ ನಿನ್ನ ದುರಭ್ಯಾಸಗಳಿಗೆ ನಿನ್ನ ನಡತೆ
ಯನ್ನು ಬಗ್ಗಿಸಿಕೊಂಡಿದ್ದೀ. ಇದಲ್ಲದೆ ನಿರ್ದೋಷಿ
ಗಳಾದ ದರಿದ್ರರ ಪ್ರಾಣರಕ್ತವು ನಿನ್ನ ನೆರಿಗೆಯಲ್ಲಿ
ಅಂಟಿಕೊಂಡಿದೆ; ಇವರು ಕನ್ನ ಕೊರೆಯುವದನ್ನು
ಕಂಡೆನೆಂಬ ನೆವ ನಿನಗಿಲ್ಲ, ನಿನ್ನ ಈ ಎಲ್ಲಾ ದುರ
ಭ್ಯಾಸಗಳ ದೆಸೆಯಿಂದ 1)[ನಿನ್ನನ್ನು ದಂಡಿಸುವೆನು].
ನೀನಾದರೆ—ನಾನು ನಿರ್ದೋಷಿ, ಆತನ ಕೋಪವು
ನನ್ನ ಮೇಲಿಂದ ತೊಲಗಿಹೋಗಿದೆ ನಿಶ್ಚಯ ಎಂದು
ಕೊಂಡಿದ್ದೀ; ನಾನು ಪಾಪಮಾಡಲಿಲ್ಲವೆಂದು ನೀನು
ಹೇಳಿದ ಕಾರಣ, ಇಗೋ, ನಾನು ನಿನಗೆ ನ್ಯಾಯ
ತೀರಿಸುವೆನು. ಹೊಸ ಹೊಸ ಮಾರ್ಗಗಳನ್ನು ಅನು
ಸರಿಸಲು ಏಕೆ ಅಷ್ಟು ಅತ್ತಿತ್ತ ಹೋಗುತ್ತೀ? ಅಶ್ಶೂ
ರದ ವಿಷಯವಾಗಿ ಹೇಗೆ ಆಶಾಭಂಗಪಟ್ಟಿಯೋ
ಹಾಗೆಯೇ ಐಗುಪ್ತದ ವಿಷಯವಾಗಿಯೂ ಆಶಾ
ಭಂಗಪಡುವಿ. ಅಲ್ಲಿಂದಲೂ ತಲೆಯ ಮೇಲೆ ಕೈ
ಯಿಟ್ಟುಕೊಂಡು ಹೊರಡುವಿ; ಏಕಂದರೆ ನಿನ್ನ ಭರ
ವಸಗಳನ್ನು ಯೆಹೋವನು ನಿರಾಕರಿಸಿದ್ದಾನೆ; ಅವು
ಗಳ ಮುಖಾಂತರ ನಿನ್ನ ಕಾರ್ಯವು ಸಾಗದು.

ಯೆಹೋವನು ಹೀಗನ್ನುತ್ತಾನೆ—ಗಂಡನು ತ್ಯಜಿ
ಸಿದವಳು ಅವನಿಂದ ಹೊರಟು ಮತ್ತೊಬ್ಬನವಳಾದ
ಮೇಲೆ ಅವಳನ್ನು ಆ ಗಂಡನು ತಿರಿಗಿ ಸೇರಿಸಿಕೊಂಡಾ
ನೇ? ಸೇರಿಸಿಕೊಂಡರೆ 2)ಆ ದೇಶವು ಕೇವಲ ಅಪವಿತ್ರ
ವಾಗಿ ಹೋಗುವದಲ್ಲವೆ! ಹೀಗಿರಲು ಬಹುಮಂದಿ
ಮಿಂಡರೊಡನೆ ಸೂಳೆತನ ಮಾಡಿದ ನೀನು ನನ್ನ
ಬಳಿಗೆ ತಿರಿಗಿ ಬರುತ್ತೀಯಾ? ಕಣ್ಣೆತ್ತಿ ಬೋಳುಗುಡ್ಡ
ಗಳನ್ನು ನೋಡು, ಯಾವದರಲ್ಲಿ ನಿನ್ನನ್ನು ಕೆಡಿಸ
ಲಿಲ್ಲ? ಅರಬಿಯನು ಅಡವಿಯಲ್ಲಿ ಹೊಂಚುಹಾಕುವ
ಹಾಗೆ ನೀನು ದಾರಿಯ ಮಗ್ಗುಲಲ್ಲಿ ಅವರಿಗಾಗಿ
ಹೊಂಚುತ್ತಾ ಕೂತಿದ್ದೀ; ನಿನ್ನ ಸೂಳೆತನದಿಂದಲೂ
ನಿನ್ನ ಕೆಟ್ಟತನದಿಂದಲೂ ದೇಶವನ್ನು ಅಪವಿತ್ರಮಾಡಿ
ದ್ದೀ. ಆದಕಾರಣ ಹದಮಳೆಗೆ ಅಡ್ಡಿಯಾಯಿತು,
ಹಿಂಗಾರೂ ಆಗಲಿಲ್ಲ; ಆದರೂ ನೀನು ಸೂಳೆಯ
ಮುಖವುಳ್ಳವಳಾಗಿ ನಾಚಿಕೆಗೆಟ್ಟಿದ್ದೀ. ಈಗತಾನೆ
ನನ್ನನ್ನು—ನನ್ನ ತಂದೆ, ನನ್ನ ಯೌವನದ ಆಪ್ತನು
ಎಂದು ಕರೆಯುತ್ತೀಯಲ್ಲಾ. ಆತನು ನಿತ್ಯವಾಗಿ
ಕೋಪಮಾಡುವನೋ? ಕೊನೆಯ ತನಕ ಇಟ್ಟು
ಕೊಳ್ಳುವನೋ? ಅಂದುಕೊಳ್ಳುತ್ತಿದ್ದೀ. ಇಗೋ,
ನೀನು ಹೀಗೆ ಮಾತಾಡಿದರೇನು? ದುಷ್ಕೃತ್ಯಗಳನ್ನು
ನಡಿಸಿ ಕೃತಾರ್ಥಳಾಗಿದ್ದೀ.

---

1) ಅಥವಾ: [ಅವರನ್ನು ಕೊಂದುಬಿಟ್ಟೆ.] ಮೂಲವು ಕೇವಲ ಅಸ್ಪಷ್ಟ.

2) ಪಾಠಾಂತರ: ಅವಳು ಕೇವಲ ಅಪವಿತ್ರಳ
ಹೋಗುವಳಲ್ಲವೆ!

ಭ್ರಷ್ಟಳಾದ ಇಸ್ರಾಯೇಲಿನ ಪಾಪಕ್ಕಿಂತ ದ್ರೋಹಿಯಾದ
ಯೆಹೂದದ ಪಾಪವು ಹೆಚ್ಚು.

6 ಮತ್ತೆ ಅರಸನಾದ ಯೋಷೀಯನ ಕಾಲದಲ್ಲಿ
ಯೆಹೋವನು ನನಗೆ ಹೀಗೆ ಹೇಳಿದನು—ಭ್ರಷ್ಟ
ಳಾದ ಇಸ್ರಾಯೇಲು ಮಾಡಿದ್ದನ್ನು ನೋಡಿದಿಯಾ?
ಅವಳು ಎತ್ತರವಾದ ಎಲ್ಲಾ ಗುಡ್ಡಗಳನ್ನು ಹತ್ತಿ
ಸೊಂಪಾಗಿ ಬೆಳೆದಿರುವ ಎಲ್ಲಾ ಮರಗಳ ಕೆಳಗೆ
7 ಹೋಗಿ ಸೂಳೆಯಾಗಿ ನಡೆದಳಷ್ಟೆ. ಅವಳು ಇವು
ಗಳನ್ನೆಲ್ಲಾ ನಡಿಸಿದ ಮೇಲೆ ನನ್ನ ಬಳಿಗೆ ಪುನಃ
ಬಂದಾಳು ಅಂದುಕೊಂಡೆನು. ಆದರೆ ಬರಲಿಲ್ಲ.
ಆಗ ಯೆಹೂದವೆಂಬ ದ್ರೋಹಿಯಾದ ಅವಳ ತಂಗಿ
8 ಯು ಇದನ್ನು ನೋಡಿದಳು. ಭ್ರಷ್ಟಳಾದ ಇಸ್ರಾ
ಯೇಲು ಹಾದರಮಾಡಿದ ಕಾರಣದಿಂದಲೇ ನಾನು
ಅವಳನ್ನು ನಿರಾಕರಿಸಿ ತ್ಯಾಗಪತ್ರ ಕೊಟ್ಟದ್ದನ್ನು
ಯೆಹೂದವೆಂಬ ದ್ರೋಹಿಯಾದ ಅವಳ ತಂಗಿಯು
ನೋಡಿಯೂ ಅಂಜದೆ ತಾನೂ ಹೋಗಿ ಸೂಳೆತನವನ್ನು
9 ನಡಿಸಿದಳು. ಕಲ್ಲುಮರಗಳೊಡನೆ ಹಾದರಮಾಡಿ
ಲಘುವೆಂದು ಭಾವಿಸಿಕೊಂಡ ತನ್ನ ಸೂಳೆತನದಿಂದ
10 ದೇಶವನ್ನು ಅಪವಿತ್ರಪಡಿಸಿದಳು. ಇಸ್ರಾಯೇಲಿಗೆ
ಇಷ್ಟು ದಂಡನೆ ಆದರೂ ಯೆಹೂದವೆಂಬ ದ್ರೋಹಿ
ಯಾದ ಅವಳ ತಂಗಿಯು ನನ್ನ ಕಡೆಗೆ ಪೂರ್ಣ
ಮನದಿಂದಲ್ಲ, ಕಪಟದಿಂದಲೇ ತಿರುಗಿಕೊಂಡಿದ್ದಾಳೆ
11 ಎಂಬದು ಯೆಹೋವನಾದ ನನ್ನ ನುಡಿ. ಮತ್ತು
ಯೆಹೋವನು ನನಗೆ ಹೀಗೆ ಹೇಳಿದನು—ಭ್ರಷ್ಟ
ಳಾದ ಇಸ್ರಾಯೇಲು ದ್ರೋಹಿಯಾದ ಯೆಹೂದಕ್ಕಿಂತ
12 ಲೂ ಶಿಷ್ಟಳಾಗಿ ಕಂಡುಬಂದಿದ್ದಾಳೆ. ನೀನು ಹೋಗಿ
ಉತ್ತರದಿಕ್ಕಿಗೆ ಈ ಮಾತುಗಳನ್ನು ಸಾರು—ಯೆಹೋ
ವನು ಹೀಗನ್ನುತ್ತಾನೆ, ಭ್ರಷ್ಟಳಾದ ಇಸ್ರಾಯೇಲೇ,
ಹಿಂದಿರುಗು; ನಾನು ಕೋಪಮುಖದಿಂದ ನಿನ್ನನ್ನು
ನೋಡೆನು, ನಾನು ಕರುಣಾಶಾಲಿ, ನಿತ್ಯಕೋಪಿಯಲ್ಲ.
13 ಇದೊಂದನ್ನು ಮಾಡು, ನೀನು ಕಂಡಕಡೆಯೆಲ್ಲ
ತಿರುಗುತ್ತಾ ಸೊಂಪಾಗಿ ಬೆಳೆದಿರುವ ಪ್ರತಿಯೊಂದು
ಮರದ ಕೆಳಗೆ ಅನ್ಯರನ್ನು ಸೇರಿ ನನ್ನ ಮಾತನ್ನು ಕೇಳದೆ
ನಿನ್ನ ದೇವರಾದ ಯೆಹೋವನೆಂಬ ನನಗೆ ದ್ರೋಹ
14 ಮಾಡಿದ್ದೀ ಎಂಬದಕ್ಕೆ ಒಪ್ಪಿಕೋ. ಇದೇ ಯೆಹೋ
ವನ ನುಡಿ—ಭ್ರಷ್ಟರಾದ ಮಕ್ಕಳೇ, ತಿರುಗಿಕೊಳ್ಳಿರಿ,
ನಾನು ನಿಮಗೆ ಪತಿ; ಒಂದು ಪಟ್ಟಣಕ್ಕೆ ಒಬ್ಬನಂತೆ
ಯೂ ಗೋತ್ರಕ್ಕೆ ಇಬ್ಬರಂತೆಯೂ ಆರಿಸಿ ಚೀಯೋ
15 ನಿಗೆ ಕರತರುವೆನು. ಇದಲ್ಲದೆ ನನ್ನ ಮನಸ್ಸು
ಒಪ್ಪುವ ಪಾಲಕರನ್ನು ನಿಮಗೆ ದಯಪಾಲಿಸುವೆನು;
ಅವರು ನಿಮ್ಮನ್ನು ಜ್ಞಾನವಿವೇಕಗಳಿಂದ ಪೋಷಿಸು
16 ವರು. ನೀವು ದೇಶದಲ್ಲಿ ಹೆಚ್ಚಿ ವೃದ್ಧಿಗೆ ಬಂದಿರುವಾಗ
ಇನ್ನು ಯೆಹೋವನ ನಿಬಂಧನಮಂಜೂಷದ ಪ್ರಸ್ತಾಪ
ವಿರದು, ಅದು ಜ್ಞಾಪಕಕ್ಕೆ ಬಾರದು, ಯಾರೂ ಸ್ಮರಿ
ಸರು, ಅದು ಇಲ್ಲವಲ್ಲಾ ಎಂದು ದುಃಖಿಸರು, ಹೊಸ
ದಾಗಿ ಕಲ್ಪಿಸಿಕೊಳ್ಳರು, ಇದು ಯೆಹೋವನ ನುಡಿ.

ಆ ಕಾಲದಲ್ಲಿ ಯೆರೂಸಲೇಮನ್ನು ಯೆಹೋವನ 17
ಸಿಂಹಾಸನವೆಂದು ಕರೆಯುವರು; ಯೆಹೋವನ
ನಾಮಮಹತ್ವದ ಸ್ಥಾನವಾದ ಯೆರೂಸಲೇಮಿಗೆ
ಸಕಲ ಜನಾಂಗಗಳವರು ನೆರೆದುಬರುವರು; ಇನ್ನು
ಮೇಲೆ ತಮ್ಮ ದುಷ್ಟಹೃದಯದ ಹಟದಂತೆ ನಡೆಯರು.
ಆ ಕಾಲದಲ್ಲಿ ಯೆಹೂದವಂಶವು ಇಸ್ರಾಯೇಲ್ 18
ವಂಶದೊಡನೆ ಜೊತೆಯಾಗಿ ನಡೆಯುವದು, ಎರಡೂ
ಕಲೆತು ನಾನು ನಿಮ್ಮ ಪಿತೃಗಳಿಗೆ ಬಾಧ್ಯವಾಗಿ ದಯ
ಪಾಲಿಸಿದ ದೇಶಕ್ಕೆ ಬಡಗಣ ಸೀಮೆಯೊಳಗಿಂದ
ಬರುವವು.

ಪಶ್ಚಾತ್ತಾಪ ಪಡುವ ತನ್ನ ಜನರನ್ನು ಯೆಹೋವನು
ಸ್ವೀಕರಿಸುವನು.

ನಾನು ಎಷ್ಟೋ ಸಂತೋಷದಿಂದ ಗಂಡುಮಕ್ಕಳೊ 19
ಳಗೆ ನಿನ್ನನ್ನೂ ಎಣಿಸಿ ನಿನಗೆ ಮನೋಹರವಾದ ದೇಶ
ವನ್ನು ಅಂದರೆ ಸಮಸ್ತಜನಾಂಗಗಳ ಬಾಧ್ಯಗಳಲ್ಲಿ
ರಮಣೀಯವಾದದ್ದನ್ನು ಕೊಡುವೆನು; ನೀನು ನನ್ನ
ಅನುಸರಣೆಯನ್ನು ಬಿಟ್ಟು ಓರೆಯಾಗದೆ ನನ್ನನ್ನು
ತಂದೆಯೆನ್ನುವಿ ಅಂದುಕೊಂಡೆನು. ಇಸ್ರಾಯೇಲ್ 20
ವಂಶದವರೇ, ಒಬ್ಬ ಹೆಂಗಸು ಪತಿದ್ರೋಹ ಮಾಡಿದಂತೆ
ನೀವು ನನಗೆ ದ್ರೋಹವನ್ನು ಮಾಡಿಯೇ ಇದ್ದೀರಿ
ಎಂದು ಯೆಹೋವನು ಅನ್ನುತ್ತಾನೆ.
ಆಹಾ, ಬೋಳುಗುಡ್ಡಗಳಲ್ಲಿ ಒಂದು ಶಬ್ದ! ತಾವು 21
ಡೊಂಕುದಾರಿಯನ್ನು ಹಿಡಿದು ತಮ್ಮ ದೇವರಾದ
ಯೆಹೋವನನ್ನು ಮರೆತುಬಿಟ್ಟಿದ್ದೇವೆಂದು ಇಸ್ರಾ
ಯೇಲ್ಯರು ಕಣ್ಣೀರುಸುರಿಸಿ ದೇವರ ಕೃಪೆಯನ್ನು
ಬೇಡುತ್ತಿದ್ದಾರಲ್ಲಾ. ಭ್ರಷ್ಟರಾದ ಮಕ್ಕಳೇ, ಹಿಂದಿ 22
ರುಗಿರಿ, ನಿಮ್ಮ ಭ್ರಷ್ಟತ್ವವನ್ನು ಪರಿಹರಿಸುವೆನು
[ಎಂದು ಯೆಹೋವನು ಅನ್ನುತ್ತಾನೆ. ಅದಕ್ಕೆ ಜನ
ರು]—ಇಗೋ, ನಿನ್ನ ಬಳಿಗೆ ಬಂದೆವು, ನೀನು
ಯೆಹೋವನು, ನಮ್ಮ ದೇವರು. ನಿಶ್ಚಯವಾಗಿ 23
ಗುಡ್ಡಗಳಿಂದಲೂ ಬೆಟ್ಟಗಳ ಜಾತ್ರೆಯ ಗದ್ದಲದಿಂದ
ಲೂ ಮೋಸವಾಯಿತು; ನಿಜನಿಜವಾಗಿ ಇಸ್ರಾಯೇಲಿನ
ರಕ್ಷಣೆಯು ನಮ್ಮ ದೇವರಾದ ಯೆಹೋವನಲ್ಲಿ
ನೆಲೆಗೊಂಡಿದೆ. ನಮ್ಮ ಪಿತೃಗಳು ದುಡಿದದ್ದನ್ನೂ 24
ಅವರ ದನಕುರಿಗಳನ್ನೂ ಅವರ ಗಂಡು ಹೆಣ್ಣು ಮಕ್ಕ
ಳನ್ನೂ 1)ಬಾಳ್ ದೇವತೆಯು ನಮ್ಮ ಬಾಲ್ಯಾರಭ್ಯ
ನುಂಗುತ್ತಾ ಬಂದಿದೆ. ನಾವು ತಂದುಕೊಂಡ ಅವ 25
ಮಾನದಲ್ಲಿ ಬಿದ್ದಿರೋಣ, ನಮ್ಮ ನಾಚಿಕೆಯು
ನಮ್ಮನ್ನು ಮುಚ್ಚಿಬಿಡಲಿ; ನಮ್ಮ ದೇವರಾದ
ಯೆಹೋವನಿಗೆ ನಾವೂ ನಮ್ಮ ಪಿತೃಗಳೂ ನಮ್ಮ
ಚಿಕ್ಕತನದಿಂದ ಈಗಿನ ವರೆಗೆ ಪಾಪಮಾಡುತ್ತಾ ಬಂದಿ
ದ್ದೇವಷ್ಟೆ; ನಮ್ಮ ದೇವರಾದ ಯೆಹೋವನ ಮಾತನ್ನು
ನಾವು ಕೇಳಲೇ ಇಲ್ಲ ಎಂದು ಮೊರೆಯಿಡುತ್ತಾರೆ.

ಯೆಹೋವನು ಹೀಗನ್ನುತ್ತಾನೆ—ಇಸ್ರಾಯೇಲೇ,
ನೀನು ಹಿಂದಿರುಗುವಿಯಾದರೆ ನನ್ನ ಬಳಿಗೇ ಬರುವಿ; 4

1) ಮೂಲ: ಅವಮಾನ.

ನನ್ನ ಕಣ್ಣೆದುರಿನಿಂದ ನಿನ್ನ ಅಸಹ್ಯವಸ್ತುಗಳನ್ನು ತೆಗೆ
ದುಬಿಟ್ಟರೆ ನೀನು ಇನ್ನು ದಿಕ್ಕಾಪಾಲಾಗುವದಿಲ್ಲ;
2 ಯೆಹೋವನ ಜೀವದಾಣೆ ಎಂದು ಸತ್ಯನ್ಯಾಯ
ಧರ್ಮಾನುಸಾರವಾಗಿ ನೀನು ಪ್ರಮಾಣಮಾಡಿದರೆ
ಜನಾಂಗಗಳು ಆತನಿಂದ ತಮ್ಮನ್ನು ಆಶೀರ್ವದಿಸಿ
ಕೊಂಡು ಆತನಲ್ಲಿ ಹೆಚ್ಚಳಪಡುವರು.

ತೀರಾ ಕೆಟ್ಟ ಯೆಹೂದಕ್ಕೆ ಬಡಗಲಿಂದ ಬರುವ ಶತ್ರುವಿನ
ಮೂಲಕ ಉಂಟಾಗುವ ಕ್ರೂರ ದಂಡನೆ.

3 ಯೆಹೋವನು ಯೆಹೂದದವರಿಗೂ ಯೆರೂಸಲೇ
ಮಿನವರಿಗೂ ಹೀಗೆ ಹೇಳುತ್ತಾನೆ—ಗೆಯ್ಯದ ನಿಮ್ಮ
ಭೂಮಿಯನ್ನು ಗೆಯ್ಯಿರಿ, ಮುಳ್ಳುಗಳಲ್ಲಿ ಬಿತ್ತ
4 ಬೇಡಿರಿ. ಯೆಹೂದದವರೇ, ಯೆರೂಸಲೇಮಿನ ನಿವಾ
ಸಿಗಳೇ, ನಿಮ್ಮ ಹೃದಯದ ಮುಂದೊಗಲನ್ನು
ತೆಗೆದುಹಾಕಿ ಯೆಹೋವನಿಗಾಗಿ ಸುನ್ನತಿಯಾಗಿರಿ;
ಇಲ್ಲವಾದರೆ ನಿಮ್ಮ ದುಷ್ಕೃತ್ಯಗಳ ನಿಮಿತ್ತ ನನ್ನ
ರೋಷವು ಜ್ವಾಲೆಯಂತೆ ಹೊರಟು ಯಾರೂ ಆರಿಸ
ಲಾಗದಷ್ಟು ರಭಸವಾಗಿ ಧಗಧಗಿಸುವದು.
5 ಯೆಹೂದದಲ್ಲಿ ಸಾರಿರಿ, ಯೆರೂಸಲೇಮಿನೊಳಗೆ
ಪ್ರಕಟಿಸಿರಿ; ದೇಶದಲ್ಲೆಲ್ಲಾ ಕೊಂಬೂದುವಂತೆ ಅಪ್ಪಣೆ
ಕೊಡಿರಿ; ಕೂಡಿಕೊಂಡು ಕೋಟೆಕೊತ್ತಲಗಳ ಊರು
6 ಗಳನ್ನು ಸೇರೋಣ ಎಂದು ಕೂಗಿರಿ; ಚೀಯೋನಿನ
ಕಡೆಗೆ ಧ್ವಜವನ್ನೆತ್ತಿರಿ, ತಡಮಾಡದೆ ವಲಸೆಹೋಗಿರಿ;
ನಾನು ಬಡಗಲಿಂದ ವಿಪತ್ತನ್ನೂ ಘೋರನಾಶನವನ್ನೂ
7 ಬರಮಾಡುವೆನು. ಜನಾಂಗಘಾತುಕವಾದ ಒಂದು
ಸಿಂಹವು ತನ್ನ ಪೊದೆಯೊಳಗಿಂದ ಎದ್ದಿದೆ; ಹೊರಟಿದೆ,
ಸ್ಥಳದಿಂದ ತೆರಳಿದೆ; ನಿನ್ನ ದೇಶವನ್ನು ಹಾಳುಮಾಡು
ವದು, ನಿನ್ನ ಪಟ್ಟಣಗಳು ಪಾಳುಬಿದ್ದು ನಿರ್ನಿವಾಸಿ
8 ಗಳಾಗುವವು. ಇದರ ನಿಮಿತ್ತ ಗೋಣಿತಟ್ಟನ್ನು
ಸುತ್ತಿಕೊಳ್ಳಿರಿ, ಹಲುಬಿ ಗೋಳಾಡಿರಿ; ಯೆಹೋವನ
9 ರೋಷಾಗ್ನಿಯು ನಮ್ಮನ್ನು ಬಿಟ್ಟಿಲ್ಲವಲ್ಲಾ. ಆ ಕಾಲ
ದಲ್ಲಿ ಅರಸನ ಎದೆಯು ಕುಂದುವದು, ಅಧಿಪತಿಗಳ
ಹೃದಯವು ಕುಗ್ಗುವದು, ಯಾಜಕರು ಸ್ತಬ್ಧರಾಗು
ವರು, ಪ್ರವಾದಿಗಳು ಬೆರಗಾಗುವರು ಎಂದು ಯೆಹೋ
10 ವನು ಅನ್ನುತ್ತಾನೆ. ಆಗ 1)ನಾನು—ಅಯ್ಯೋ,
ಕರ್ತನಾದ ಯೆಹೋವನೇ, ನೀನು ಈ ಜನರಿಗೂ
ಯೆರೂಸಲೇಮಿಗೂ ನಿಮಗೆ ಸಮಾಧಾನವಾಗುವ
ದೆಂದು ಹೇಳಿ ನಿಶ್ಚಯವಾಗಿ ಇವರನ್ನು ಬಹಳ
ಮೋಸಗೊಳಿಸಿದ್ದೀ; ಖಡ್ಗವು ಪ್ರಾಣದ ಮಟ್ಟಿಗೂ
11 ಇಳಿಯುತ್ತದಲ್ಲಾ ಅಂದೆನು. ಆ ಕಾಲದಲ್ಲಿ ಈ ಜನ
ರಿಗೂ ಯೆರೂಸಲೇಮಿಗೂ ಈ ಮಾತಾಗುವದು—
ಬಿಸಿಗಾಳಿಯು ಅರಣ್ಯದ ಬೋಳುಗುಡ್ಡಗಳಿಂದ ನನ್ನ
ಪ್ರಜೆಯೆಂಬ ಯುವತಿಯ ಮೇಲೆ ಬೀಸುತ್ತದೆ;
ಅದು ತೂರುವದಕ್ಕೂ ಶೋಧಿಸುವದಕ್ಕೂ ಆಗದು.
12 ಇಂಥಾ ಕೆಲಸಗಳಿಗೆ ಅನುಕೂಲಿಸದಂತೆ ನನ್ನ ಅಪ್ಪ
ಣೆಯ ಮೇರೆಗೆ ಬಿರುಸಾಗಿ ಹೊಡೆಯುತ್ತದೆ; ಈಗ
ನನ್ನ ಜನರಿಗೆ ನ್ಯಾಯದಂಡನೆಗಳನ್ನು ವಿಧಿಸುವೆನು;
ಇಗೋ, [ಆ ಶತ್ರುವು] ಮೇಘಗಳೋಪಾದಿಯಲ್ಲಿ ಬರು
ತ್ತಾನೆ, ಅವನ ರಥಗಳು ಬಿರುಗಾಳಿಯಂತಿವೆ. ಅವನ
ಅಶ್ವಗಳು ಹದ್ದುಗಳಿಗಿಂತ ವೇಗವಾಗಿವೆ! ನಮ್ಮ ಗತಿ
ಯನ್ನು ಏನು ಹೇಳೋಣ, ಹಾಳಾದೆವಲ್ಲಾ! ಯೆರೂಸ
ಲೇಮೇ, ನಿನಗೆ ರಕ್ಷಣೆಯಾಗುವಂತೆ ನಿನ್ನ ಹೃದಯದ
ಕೆಟ್ಟತನವನ್ನು ತೊಳೆದುಕೋ. ದುರಾಲೋಚನೆಗಳು
ನಿನ್ನಲ್ಲಿ ಇನ್ನೆಷ್ಟರ ವರೆಗೆ ತಂಗಿರುವವು? ಆಹಾ, ದಾನಿ
ನಿಂದ ಪ್ರಕಟನೆಯ ಧ್ವನಿಯು ಕೇಳಬರುತ್ತದೆ, ಎಫ್ರಾ
ಯೀಮಿನ ಬೆಟ್ಟದಲ್ಲಿಯೂ ಕೇಡನ್ನು ಸಾರುತ್ತದೆ.
ಇಗೋ, ಜನಾಂಗಗಳಿಗೆ ಅರುಹಿರಿ, 2)ಮುತ್ತುವವರು
ದೂರದೇಶದಿಂದ ಯೆರೂಸಲೇಮಿಗೆ ಬರುತ್ತಾರೆ,
ಯೆಹೂದದ ಪಟ್ಟಣಗಳಿಗೆ ವಿರುದ್ಧವಾಗಿ ದನಿಗೈಯು
ತ್ತಾರೆ, ಎಂದು ಪ್ರಚುರಪಡಿಸಿರಿ. ಆ ನಗರಿಯು ನನಗೆ
ತಿರುಗಿಬಿದ್ದ ಕಾರಣ ಅದನ್ನು ಹೊಲಕಾಯುವವರಂತೆ
ಸುತ್ತಿಕೊಂಡಿದ್ದಾರೆ ಎಂದು ಯೆಹೋವನು ಅನ್ನು
ತ್ತಾನೆ. ನಿನ್ನ ನಡತೆಯೂ ನಿನ್ನ ಕೃತ್ಯಗಳೂ ಈ ಕಷ್ಟ
ವನ್ನು ನಿನಗೆ ಒದಗಿಸಿವೆ; ಇದು ನಿನ್ನ ದುರ್ನೀತಿಯ
ಫಲ, ಇದು ವಿಷವೇ; ಹೃದಯದ ವರೆಗೂ ಏರುತ್ತದೆ.
ಹಾ, ನನ್ನ ಕರುಳು! ಕರುಳು! ಯಾತನೆಪಡು
ತ್ತೇನೆ; ಆಹಾ, ನನ್ನ ಗುಂಡಿಗೆಯ ಪಕ್ಕಗಳು! ನನ್ನ
ಹೃದಯವು ನನ್ನೊಳಗೆ ತಳಮಳಗೊಂಡಿದೆ! ನಾನು
ಬಾಯಿಮುಚ್ಚಿಕೊಂಡಿರಲಾರೆ; ನನ್ನ ಆತ್ಮವೇ, ನೀನು
ತುತೂರಿಯ ಶಬ್ದವನ್ನೂ ಯುದ್ಧಘೋಷವನ್ನೂ
ಕೇಳುತ್ತೀಯಲ್ಲಾ. ನಾಶನದ ಮೇಲೆ ನಾಶನವು,
ಒಂದರ ಮೇಲೊಂದು ನಾಶನದ ಸುದ್ದಿ ಬರುತ್ತಿದೆ;
ದೇಶವೆಲ್ಲಾ ಹಾಳಾಯಿತು; ತಟ್ಟನೆ 3)ನಮ್ಮ ಗುಡಾರ
ಗಳು, ಕ್ಷಣಮಾತ್ರದಲ್ಲಿ 3)ನಮ್ಮ ಡೇರೆಗಳು ಭಗ್ನ
ವಾದವು; ನಾನು ಎಷ್ಟರವರೆಗೆ ಧ್ವಜವನ್ನು ನೋಡಲಿ,
ಎಂದಿನ ತನಕ ತುತೂರಿಯ ಶಬ್ದವನ್ನು ಕೇಳಲಿ!
ನನ್ನ ಜನರು ಮೂರ್ಖರು, ನನ್ನನ್ನು ತಿಳಿಯರು;
ಮೂಢಸಂತತಿಯವರು, ಅವಿವೇಕಿಗಳು; ದುಷ್ಕಾರ್ಯ
ದಲ್ಲಿ ನಿಪುಣರು, ಸತ್ಕಾರ್ಯವನ್ನು ಮಾಡಲರಿಯರು.
ನಾನು [ದಿವ್ಯಜ್ಞಾನದಿಂದ] ನೋಡಿದೆನು, ಹಾ,
4)ಭೂಲೋಕವು ಹಾಳುಪಾಳಾಗಿತ್ತು; ಆಕಾಶವನ್ನು
ನೋಡಿದೆನು, ಅದರಲ್ಲಿ ಬೆಳಕೇ ಇರಲಿಲ್ಲ. ಪರ್ವತ
ಗಳನ್ನು ನೋಡಿದೆನು, ಆಹಾ, ನಡುಗುತ್ತಿದ್ದವು,
ಎಲ್ಲಾ ಗುಡ್ಡಗಳೂ ಅಲ್ಲಕಲ್ಲೋಲವಾಗಿದ್ದವು. ನಾನು
ನೋಡಲಾಗಿ ಅಯ್ಯೋ, ಜನವೇ ಇರಲಿಲ್ಲ, ಆಕಾಶದ
ಸಕಲ ಪಕ್ಷಿಗಳು ಹಾರಿಹೋಗಿದ್ದವು. ನಾನು ನೋಡ
ಲಾಗಿ ಫಲವತ್ತಾದ ಭೂಮಿಯು ಕಾಡಾಗಿತ್ತು,
ಅಕಟಾ! ಅಲ್ಲಿನ ಊರುಗಳೆಲ್ಲಾ ರೋಷಾಗ್ನಿಯುಕ್ತ
ನಾದ ಯೆಹೋವನ ಪ್ರತ್ಯಕ್ಷತೆಯಿಂದ ಬಿದ್ದುಹೋಗಿ
ದ್ದವು. ಯೆಹೋವನು ಹೀಗನ್ನುತ್ತಾನೆ—ದೇಶವೆಲ್ಲಾ
ಬಟ್ಟಬರಿದಾಗುವದು, ಆದರೆ ನಾನು ಸಂಪೂರ್ಣವಾಗಿ
ಲಯಮಾಡೆನು. ಇದಕ್ಕಾಗಿ ಭೂಲೋಕವು ಪ್ರಲಾ
ಪಿಸುವದು, ಮೇಲೆ ಆಕಾಶವು ಕಪ್ಪಾಗುವದು; ನಾನು

1) ಪಾಠಾಂತರ: ಅವರು . . . ಅನ್ನುವರು. 2) ಮೂಲ : ಕಾವಲುಗಾರರು. 3) ಮೂಲ: ನನ್ನ. 4) ಮೂ
ತೋಹು ವಾ ಬೋಹು.

ನುಡಿದಿದ್ದೇನೆ, ಪಶ್ಚಾತ್ತಾಪಪಡೆನು; ಉದ್ದೇಶಿಸಿದ್ದೇನೆ,
29 ಹಿಂದೆಗೆಯೆನು. ಪಟ್ಟಣದವರೆಲ್ಲರೂ ಸವಾರರ ಮತ್ತು
ಬಿಲ್ಲುಗಾರರ ಆರ್ಭಟಕ್ಕೆ ಹೆದರಿ ಓಡುತ್ತಾರೆ; ಇತ್ತ
ಪೊದೆಗಳಲ್ಲಿ ಅವಿತುಕೊಳ್ಳುತ್ತಾರೆ, ಅತ್ತ ಬಂಡೆಗಳನ್ನು
ಹತ್ತುತ್ತಾರೆ; ಪ್ರತಿಯೊಂದು ಪಟ್ಟಣವು ಯಾವ ನಿವಾ
30 ಸಿಯೂ ಇಲ್ಲದೆ ನಿರ್ಜನವಾಗುತ್ತದೆ. ಎಲೈ, [ನಗ
ರಿಯೇ,] ನೀನು ಸೂರೆಯಾಗುವಾಗ ಏನು ಮಾ
ಡುವಿ? ನೀನು ರಕ್ತಾಂಬರವನ್ನು ಹೊದ್ದು ಸುವರ್ಣಾ
ಭರಣಗಳಿಂದ ನಿನ್ನನ್ನು ಅಲಂಕರಿಸಿಕೊಂಡು ನೀಲಾಂ
ಜನದಿಂದ ವಿಶಾಲಾಕ್ಷಿಯಾದರೇನು, ನಿನ್ನನ್ನು ಸೊಗ
ಸುಮಾಡಿಕೊಳ್ಳುವದು ವ್ಯರ್ಥ; ನಿನ್ನ ಮಿಂಡರು
ನಿನ್ನನ್ನು ಧಿಕ್ಕರಿಸಿ ನಿನ್ನ ಪ್ರಾಣವನ್ನೇ ಹುಡುಕು
31 ತ್ತಾರೆ. ಚೀಯೋನ್ ನಗರಿಯು ಬೇನೆತಿನ್ನುವವಳಂತೆ,
ಚೊಚ್ಚಲಹೆರಿಗೆಯ ವೇದನೆಯನ್ನು ಅನುಭವಿಸುವವಳ
ಹಾಗೆ ಕೂಗಿಕೊಳ್ಳುವದನ್ನು ನಾನು ಕೇಳಿದ್ದೇನೆ;
ಏದುತ್ತಾ ಕೈಚಾಚಿ—ಅಯ್ಯೋ, ನನ್ನ ಗತಿಯನ್ನು
ಏನು ಹೇಳಲಿ! ಕೊಲೆಗಾರರಿಂದ ನನ್ನ ಆತ್ಮವು
ಉಡುಗುತ್ತದೆ ಎಂದು ಬಡುಕೊಳ್ಳುತ್ತಾಳೆ.

5 ಯೆರೂಸಲೇಮಿನ ಬೀದಿಗಳಲ್ಲಿ ಅತ್ತಿತ್ತ ಓಡಾ
ಡುತ್ತಾ ಅಲ್ಲಿನ ಚೌಕಗಳಲ್ಲಿ ಹುಡುಕಿರಿ; ನ್ಯಾಯ
ವನ್ನು ಕೈಕೊಂಡು ಸತ್ಯವನ್ನನುಸರಿಸುವ ಒಬ್ಬ
ನಾದರೂ ಇದ್ದಾನೋ, ಇಂಥ ಸತ್ಪುರುಷನನ್ನು
ಕಂಡುಕೊಳ್ಳಬಹುದೇ ಎಂಬದನ್ನು ನೋಡಿ ನಿಶ್ಚಯಿ
ಸಿರಿ; ಸಿಕ್ಕಿದರೆ ನಾನು ಪಟ್ಟಣವನ್ನು ಕ್ಷಮಿಸುವೆನು.
2 ಜನರು ಯೆಹೋವನ ಜೀವದಾಣೆ ಎಂದರೂ ಆ
ಆಣೆಯು ಸುಳ್ಳೇ ಸುಳ್ಳು [ಎಂದು ಯೆಹೋವನು
3 ಅನ್ನುತ್ತಾನೆ]. ಯೆಹೋವನೇ, ನಿನ್ನ ಕಣ್ಣುಗಳು
ಸತ್ಯದ ಮೇಲೆ ಇರುತ್ತವಲ್ಲಾ; ನೀನು ಹೊಡೆದರೂ
ಅವರು ಪಶ್ಚಾತ್ತಾಪಪಡಲಿಲ್ಲ, ಸಂಹರಿಸಿದರೂ ಶಿಕ್ಷ
ಣಕ್ಕೆ ಒಪ್ಪಲಿಲ್ಲ; ತಮ್ಮ ಮುಖವನ್ನು ಕಲ್ಲಿಗಿಂತ
ಕಠಿನಮಾಡಿಕೊಂಡು ತಿರುಗಿಕೊಳ್ಳಲೊಲ್ಲದೆ ಹೋಗಿ
4 ದ್ದಾರೆ. ಹೀಗಿರುವಲ್ಲಿ ನಾನು—ಇವರು ಬಡವರು,
ಮೂಢರು, ಯೆಹೋವನ ಮಾರ್ಗವನ್ನೂ ತಮ್ಮ
5 ದೇವರ ನ್ಯಾಯವಿಧಿಗಳನ್ನೂ ತಿಳಿಯದವರು; ನಾನು
ದೊಡ್ಡ ಮನುಷ್ಯರ ಬಳಿಗೆ ಹೋಗಿ ಅವರ ಸಂಗಡ
ಮಾತಾಡುವೆನು; ಯೆಹೋವನ ಮಾರ್ಗವೂ ಅವರ
ದೇವರ ನ್ಯಾಯವಿಧಿಗಳೂ ಅವರಿಗೆ ಗೊತ್ತು ಅಂದು
ಕೊಂಡೆನು. ಆದರೆ ಈ ದೊಡ್ಡ ಮನುಷ್ಯರು ಒಮ್ಮನ
ವಾಗಿ [ತಮ್ಮ ಹೆಗಲ] ನೊಗವನ್ನು ಮುರಿದು ಕಣ್ಣಿ
6 ಗಳನ್ನು ಕಿತ್ತುಬಿಟ್ಟಿದ್ದಾರೆ. ಆದಕಾರಣ ಅಡವಿಯ
ಸಿಂಹವು ಅವರನ್ನು ಕೊಲ್ಲುವದು, ಕಾಡಿನ ತೋಳವು
ಕೊಳ್ಳೆಮಾಡುವದು, ಚಿರತೆಯು ಅವರ ಪಟ್ಟಣಗಳಿಗೆ
ಹೊಂಚುಹಾಕಿ ಅಲ್ಲಿಂದ ಹೊರಡುವ ಪ್ರತಿಯೊಬ್ಬ
ನನ್ನೂ ಸೀಳುವದು; ಅವರ ಅಪರಾಧಗಳು ಬಹಳ,
7 ಅವರ ದ್ರೋಹಗಳು ಅಪಾರ. ಯೆಹೋವನು
ಹೀಗನ್ನುತ್ತಾನೆ—ನಾನು ನಿನ್ನನ್ನು ಹೇಗೆ ಕ್ಷಮಿಸಲಿ?
ನಿನ್ನ ಜನರು ನನ್ನನ್ನು ವಿಸರ್ಜಿಸಿ ದೇವರಲ್ಲದವುಗಳ
ಮೇಲೆ ಆಣೆಯಿಟ್ಟಿದ್ದಾರೆ; ನಾನು ಅವರಿಗೆ ಹೊಟ್ಟೆ
ತುಂಬಾ ಆಹಾರಕೊಟ್ಟ ಮೇಲೆ ಅವರು ಹಾದರ
ಮಾಡಿದರು, ಸೂಳೆಯರ ಮನೆಗಳಲ್ಲಿ ಗುಂಪುಕೂಡಿ
ದರು. ಕೊಬ್ಬಿ ಅತ್ತಿತ್ತ ಓಡಾಡುವ ಕುದುರೆಗಳಂತೆ 8
ಅವರಲ್ಲಿ ಪ್ರತಿಯೊಬ್ಬನು ತನ್ನ ನೆರೆಯವನ ಹೆಂಡತಿ
ಯನ್ನು ನೋಡಿ ಹೇಕರಿಸುತ್ತಿದ್ದನು. ನಾನು ಇವು 9
ಗಳಿಗಾಗಿ ದಂಡಿಸಬಾರದೋ? ಇಂಥಾ ಜನಾಂಗದ
ಮೇಲೆ ನನ್ನ ರೋಷವನ್ನು ತೀರಿಸದಿರುವೆನೋ?

ಚೀಯೋನೆಂಬ ತೋಟದ ಸಾಲುಗಿಡಗಳ ಮೇಲೆ 10
ಬಿದ್ದು ಹಾಳುಮಾಡಿರಿ, ಆದರೆ ನಿರ್ಮೂಲಮಾಡ
ಬೇಡಿರಿ; ಅದರ ರೆಂಬೆಗಳನ್ನು ತೆಗೆದುಹಾಕಿರಿ, ಅವು
ಯೆಹೋವನವುಗಳಲ್ಲ. ಇಸ್ರಾಯೇಲ್ ವಂಶದವರೂ 11
ಯೆಹೂದ ವಂಶದವರೂ ನನಗೆ ಕೇವಲ ದ್ರೋಹ
ವನ್ನು ಮಾಡಿರುತ್ತಾರೆ ಎಂದು ಯೆಹೋವನು ಅನ್ನು
ತ್ತಾನೆ. ಅವರು ಯೆಹೋವನನ್ನು ಅಲ್ಲಗಳೆದು— 12
ಆತನು ಏನು ಮಾಡಿಯಾನು? ನಮಗೆ ಕೇಡು
ಬಾರದು, ಖಡ್ಗವೂ ಕ್ಷಾಮವೂ ನಮ್ಮ ಕಣ್ಣಿಗೆ
ಬೀಳವು; ಪ್ರವಾದಿಗಳು ಬರೀ ಗಾಳಿಯೇ, ದೈವೋ 13
ಕ್ತಿಯು ಅವರಲ್ಲಿಲ್ಲ; ಅವರಿಗೇ ಹೀಗಾಗಲಿ ಅಂದು
ಕೊಂಡಿದ್ದಾರೆ. ಹೀಗಿರಲು ಸೇನಾಧೀಶ್ವರನಾದ ಯೆ 14
ಹೋವನೆಂಬ ದೇವರು ಇಂತೆನ್ನುತ್ತಾನೆ—ನೀವು ಹೀಗೆ
ಅಂದುಕೊಂಡದ್ದರಿಂದ ಆಹಾ, ನಾನು 1)ಪ್ರವಾದಿಯ
ಬಾಯಲ್ಲಿನ ನನ್ನ ಮಾತುಗಳನ್ನು ಬೆಂಕಿಯನ್ನಾಗಿ
ಯೂ ಈ ಜನರನ್ನು ಸೌದೆಯನ್ನಾಗಿಯೂ ಮಾಡು
ವೆನು, ಅದು ಅವರನ್ನು ತಿಂದುಬಿಡುವದು. ಇಗೋ, 15
ಇಸ್ರಾಯೇಲ್ ವಂಶವೇ, ಯೆಹೋವನ ಮಾತನ್ನು
ಕೇಳು, ನಾನು ಒಂದು ಜನಾಂಗವನ್ನು ದೂರದಿಂದ
ನಿಮ್ಮ ಮೇಲೆ ಬರಮಾಡುವೆನು; ಅದು ತಲತಲಾಂತರ
ಗಳಿಂದ ಸ್ಥಿರವಾದ ಜನಾಂಗ, ಅದರ ಭಾಷೆಯು ನಿನಗೆ
ತಿಳಿಯದು, ಅದು ಆಡುವ ಮಾತುಗಳನ್ನು ನೀನು
ಗ್ರಹಿಸಲಾರೆ. ಅದರ ಬತ್ತಳಿಕೆಯು ಬಾಯ್ದೆರೆದ 16
ಗೋರಿಯೇ, ಅದರ ಭಟರೆಲ್ಲರೂ ಶೂರರೇ. ಇವರು 17
ನಿನ್ನ ಬೆಳೆಯನ್ನೂ ನಿನ್ನ ಆಹಾರವನ್ನೂ ನಿನ್ನ ಗಂಡು
ಹೆಣ್ಣುಮಕ್ಕಳನ್ನೂ ನಿನ್ನ ದನಕುರಿಗಳನ್ನೂ ನಿನ್ನ
ದ್ರಾಕ್ಷಾಲತೆಗಳನ್ನೂ ಅಂಜೂರದ ಗಿಡಗಳನ್ನೂ ತಿಂದು
ಬಿಡುವರು; ನಿನ್ನ ಭರವಸದ ಕೋಟೆಕೊತ್ತಲುಗಳ
ಪಟ್ಟಣಗಳನ್ನು ಖಡ್ಗದಿಂದ ಹಾಳುಮಾಡುವರು.
ಆದರೆ ಆ ದಿನಗಳಲ್ಲಿಯೂ ನಾನು ನಿಮ್ಮನ್ನು ಸಂ 18
ಪೂರ್ಣವಾಗಿ ನಿರ್ಮೂಲಮಾಡೆನು; ಇದು ಯೆಹೋ
ವನೆಂಬ ನನ್ನ ನುಡಿ. ನಮ್ಮ ದೇವರಾದ ಯೆಹೋ 19
ವನು ಇವುಗಳನ್ನೆಲ್ಲಾ ನಮಗೆ ಏಕೆ ಮಾಡಿದ್ದಾನೆ
ಎಂದು ನನ್ನ ಜನರು ಅನ್ನುವಾಗ ನೀನು ಅವರಿಗೆ—
ನೀವು ಯೆಹೋವನನ್ನು ತೊರೆದು ಸ್ವದೇಶದಲ್ಲಿ
ಅನ್ಯದೇವತೆಗಳನ್ನು ಸೇವಿಸಿದ ಹಾಗೆ ಪರದೇಶದಲ್ಲಿ
ಅನ್ಯರನ್ನು ಸೇವಿಸುವಿರಿ ಎಂದು ಹೇಳು.

ಯಾಕೋಬ ಮನೆತನದೊಳಗೆ ಇದನ್ನು ಸಾರಿರಿ, 20
ಯೆಹೂದದಲ್ಲಿ ಹೀಗೆ ಪ್ರಕಟಿಸಿರಿ—ಕಣ್ಣಿದ್ದರೂ ಕಾ 21
ಣದ, ಕಿವಿ ಇದ್ದರೂ ಕೇಳದ, ಬುದ್ಧಿಯಿಲ್ಲದ ಮೂಢ

1) ಮೂಲ: ನಿನ್ನ.

22 ಜನರೇ, ಯೆಹೋವನ ಈ ಮಾತನ್ನು ಕೇಳಿರಿ—ನೀವು
ನನಗೆ ಅಂಜುವದಿಲ್ಲವೋ, ನನ್ನೆದುರಿಗೆ ನಡುಗುವ
ದಿಲ್ಲವೋ? ಸಮುದ್ರವು ದಾಟದ ಹಾಗೆ ಅದಕ್ಕೆ ಮರ
ಳನ್ನು ನಿತ್ಯನಿಬಂಧನೆಯಿಂದ ಮೇರೆಯನ್ನಾಗಿ ನೇಮಿ
ಸಿದ್ದೇನಷ್ಟೆ. ತೆರೆಗಳು ಅಲ್ಲಕಲ್ಲೋಲವಾದರೂ ಮೀರ
23 ಲಾರವು, ಘೋರ್ಗರೆದರೂ ಹಾಯಲಾರವು. ಈ ಜನರ
ಹೃದಯವೋ [ನನ್ನ] ಅಧೀನ ತಪ್ಪಿ ತಿರುಗಿಬಿದ್ದಿದೆ;
ಇವರು ನನ್ನ ಅಧೀನವನ್ನು ಮೀರಿ ಬಿಟ್ಟುಹೋಗಿದ್ದಾರೆ.
24 ಮುಂಗಾರು, ಹಿಂಗಾರು ಅಂತು ಸಕಾಲದ ಮಳೆ
ಯನ್ನು ದಯಪಾಲಿಸಿ ಸುಗ್ಗಿಯ ಕ್ಲುಪ್ತವಾರಗಳನ್ನು
ನಮಗಾಗಿ ಪ್ರತ್ಯೇಕಪಡಿಸುವ ನಮ್ಮ ದೇವರಾದ ಯೆ
ಹೋವನಲ್ಲಿ ಭಯಭಕ್ತಿಯಿಡೋಣ ಎಂದು ಮನದಲ್ಲಿ
25 ಅಂದುಕೊಳ್ಳುವದಿಲ್ಲ. ನಿಮ್ಮ ಅಪರಾಧಗಳು ಇವುಗ
ಳನ್ನು ತಪ್ಪಿಸಿಬಿಟ್ಟಿವೆ, ನಿಮ್ಮ ಪಾಪಗಳು ನಿಮಗೆ
26 ಮೇಲನ್ನು ತಡೆದಿವೆ. ನನ್ನ ಜನರಲ್ಲಿ ದುಷ್ಟರು ಕಂಡು
ಬಂದಿದ್ದಾರೆ; ಬೇಡರು ಹೊಂಚುವ ಹಾಗೆ ಹೊಂಚು
ಹಾಕುತ್ತಾರೆ; ಬೋನೊಡ್ಡಿ ಮನುಷ್ಯರನ್ನು ಹಿಡಿಯು
27 ತ್ತಾರೆ. ಪಂಜರದಲ್ಲಿ ಪಕ್ಷಿಗಳು ತುಂಬಿರುವಂತೆ ಅವರ
ಮನೆಗಳಲ್ಲಿ 1)ಮೋಸದ ಫಲವು ತುಂಬಿದೆ; ಇದರಿಂದ
28 ಹೆಚ್ಚಿ ಧನವಂತರಾಗಿದ್ದಾರೆ. ಕೊಬ್ಬಿ ಮೆರಮೆರುಗಾಗಿ
ದ್ದಾರೆ; 2)ಇದಲ್ಲದೆ ದುಷ್ಕೃತ್ಯಗಳಲ್ಲಿ ನಿಸ್ಸೀಮರಾಗಿ
ದ್ದಾರೆ. ಅನಾಥರ ವೃದ್ಧಿಗಾಗಿ ಅವರ ಪಕ್ಷ ಹಿಡಿದು
ವ್ಯಾಜ್ಯನಡಿಸರು, ದಿಕ್ಕಿಲ್ಲದವರಿಗೆ ನ್ಯಾಯದೊರಕಿ
29 ಸರು. ನಾನು ಇವುಗಳಿಗಾಗಿ ದಂಡಿಸಬಾರದೋ?
ಇಂಥಾ ಜನಾಂಗದ ಮೇಲೆ ನನ್ನ ರೋಷವನ್ನು ತೀರಿಸ
ದಿರುವೆನೋ? ಇದು ಯೆಹೋವನಾದ ನನ್ನ ಮಾತು.
30 ಭೀಕರವೂ ಅಸಹ್ಯವೂ ಆದ ಸಂಗತಿಯು ದೇಶದಲ್ಲಿ
31 ನಡೆದುಬಂದಿದೆ; ಪ್ರವಾದಿಗಳು ಸುಳ್ಳಾಗಿ ಪ್ರವಾದಿ
ಸುತ್ತಾರೆ, ಯಾಜಕರು ಅವರಿಂದ ಅಧಿಕಾರ ಹೊಂದಿ
ದೊರೆತನ ಮಾಡುತ್ತಾರೆ, ನನ್ನ ಜನರು ಇದನ್ನೇ
ಪ್ರೀತಿಸುತ್ತಾರೆ; ಕಟ್ಟಕಡೆಗೆ ನೀವು ಏನು ಮಾಡು
ವಿರಿ?

6 ಬೆನ್ಯಾಮೀನ್ ಕುಲದವರೇ, ಯೆರೂಸಲೇಮಿ
ನೊಳಗಿಂದ ವಲಸೆ ಹೋಗಿರಿ, ತೆಕೋವದಲ್ಲಿ ಕೊಂಬ
ನ್ನೂದಿರಿ, ಬೇತ್‍ಹಕ್ಕೆರೆಮಿನಲ್ಲಿ ಧ್ವಜವನ್ನೆತ್ತಿರಿ;
ಏಕಂದರೆ ಅತಿನಾಶಕವಾದ ವಿಪತ್ತು ಬಡಗಲಿಂದ
2 ತಲೆದೋರುತ್ತಿದೆ. 3)ಚೀಯೋನ್ ನಗರಿಯು ಸೊಂ
ಪಾದ ಹಸುರುಗಾವಲಿಗೆ ಸಮಾನವಾಗಿ ನನಗೆ ಕಾಣು
3 ತ್ತದೆ. ಕುರುಬರು ತಮ್ಮ ಹಿಂಡುಗಳೊಡನೆ ಅಲ್ಲಿಗೆ
ಬಂದು ಅದರೆದುರಿಗೆ ಸುತ್ತಲೂ ತಮ್ಮ ಗುಡಾರ
ಗಳನ್ನು ಹಾಕುವರು; ಪ್ರತಿಯೊಬ್ಬನು ತನ್ನ ತನ್ನ
4 ಸ್ಥಳದಲ್ಲಿ ಮೇಯಿಸಿಬಿಡುವನು. [ಇವರು]—
ಚೀಯೋನಿಗೆ ವಿರುದ್ಧವಾಗಿ ಸನ್ನದ್ಧರಾಗಿರಿ; ಏಳಿರಿ,
ಮಧ್ಯಾಹ್ನಕ್ಕೆ ಅದರ ಮೇಲೆ ನುಗ್ಗುವ! ಅಯ್ಯೋ,
ಇದೇನು! ನಮಗೆ ಹೊತ್ತು ತಿರುಗಿತಲ್ಲಾ, ಸಂಜೆಯ
5 ನೆರಳುಗಳು ಉದ್ದವಾದವು. ಎದ್ದು ರಾತ್ರಿಯಲ್ಲಿ
ಅದರ ಮೇಲೆ ಬಿದ್ದು ಅಲ್ಲಿನ ಅರಮನೆಗಳನ್ನು
ಹಾಳುಮಾಡೋಣ [ಅಂದುಕೊಳ್ಳುವರು]. ಸೇನಾ
ಧೀಶ್ವರನಾದ ಯೆಹೋವನು ಹೀಗೆ ಹೇಳಿದ್ದಾನೆ—
ಸುತ್ತಣಮರಗಳನ್ನು ಕಡಿದುಬಿಡಿರಿ, ಯೆರೂಸಲೇಮಿ
ನೆದುರಿಗೆ ದಿಬ್ಬಹಾಕಿರಿ; ಇದೇ ನೀವು ದಂಡಿಸತಕ್ಕ
ಪಟ್ಟಣ; ಅದರೊಳಗೆ ಬರೀ ದೋಚಾಟವೇ ತುಂಬಿದೆ.
4)ತೊಟ್ಟಿಯು ತನ್ನಲ್ಲಿನ ನೀರನ್ನು ತಿಳಿಯಾಗಿ ಇಟ್ಟು
ಕೊಳ್ಳುವಂತೆ ಈ ಪಟ್ಟಣವು ತನ್ನಲ್ಲಿನ ದುಷ್ಟತನ
ವನ್ನು ನಿಚ್ಚಳವಾಗಿ ಇಟ್ಟುಕೊಂಡಿದೆ; ಅಲ್ಲಿ ಬಲಾ
ತ್ಕಾರದ ಮತ್ತು ಕೊಳ್ಳೆಯ ಸುದ್ದಿಯೇ ಕೇಳಬರು
ತ್ತದೆ; ರೋಗಗಳೂ ವ್ರಣಗಳೂ ಸದಾ ನನ್ನ ಕಣ್ಣಿಗೆ
ಬೀಳುತ್ತವೆ. ಯೆರೂಸಲೇಮೇ, ನಾನು ನಿನ್ನನ್ನು
ಅಗಲಿ ನಾಶಪಡಿಸಿ ನಿವಾಸಿಗಳಿಲ್ಲದ ದೇಶವನ್ನಾಗಿ
ಮಾಡದಂತೆ ಶಿಕ್ಷಣವನ್ನು ಹೊಂದು.

ಸೇನಾಧೀಶ್ವರನಾದ ಯೆಹೋವನು ಹೀಗನ್ನು
ತ್ತಾನೆ—ಇಸ್ರಾಯೇಲಿನ ಶೇಷವನ್ನು ದ್ರಾಕ್ಷೆಯ
ಹಕ್ಕಲನ್ನೋ ಎಂಬಂತೆ ಆಯಬೇಕು; ದ್ರಾಕ್ಷೆಯ
ಹಣ್ಣನ್ನು ಕೀಳುವವನಂತೆ ನೀನು ನಿನ್ನ ಕೈಯನ್ನು
ತಿರಿಗಿ ರೆಂಬೆಗಳಲ್ಲಿ ಹಾಕು. [ಅದಕ್ಕೆ ನಾನು]—
ಯಾರ ಸಂಗಡ ಮಾತಾಡಿ ಅವರು ಗಮನಿಸುವಂತೆ
ಸಾಕ್ಷಿಕೊಡಲಿ? ಇಗೋ, ಅವರು ಕರ್ಣಶುದ್ಧಿಯಿಲ್ಲ
ದವರು, ಕೇಳಲಾರರು; ಅಯ್ಯೋ, ಯೆಹೋವನ
ಮಾತು ಅವರಿಗೆ ತಿರಸ್ಕಾರ, ಅದರಲ್ಲಿ ಅವರಿಗೆ ಆನಂದ
ವೇ ಇಲ್ಲ. ಆದಕಾರಣ ಯೆಹೋವನ ರೋಷವು
ನನ್ನಲ್ಲಿ ತುಂಬಿತುಳುಕುತ್ತದೆ; ತಡೆದು ತಡೆದು ನನಗೆ
ಸಾಕಾಯಿತು; ಬೀದಿಯಲ್ಲಿನ ಮಕ್ಕಳ ಮೇಲೂ
ಯುವಕರ ಸಂಘದ ಮೇಲೂ ಅದನ್ನು ಹೊಯ್ದು
ಬಿಡಬೇಕು; ಗಂಡನೂ ಹೆಂಡತಿಯೂ ಮುದುಕನೂ
ಮುಪ್ಪಿನ ಮುದುಕನೂ [ಅಂತು ಎಲ್ಲರೂ] ಅಪ
ಹರಿಸಲ್ಪಡುವರು. ಅವರ ಹೆಂಡತಿ, ಮನೆ, ಹೊಲ
ಗದ್ದೆ ಇವೆಲ್ಲಾ ಅನ್ಯರ ಪಾಲಾಗುವವು; ದೇಶದ ನಿವಾ
ಸಿಗಳ ಮೇಲೆ ಕೈಮಾಡುವೆನಷ್ಟೆ ಎಂದು ಯೆಹೋ
ವನು ಹೇಳಿದ್ದಾನೆ. ಚಿಕ್ಕವರು ಮೊದಲುಗೊಂಡು
ದೊಡ್ಡವರ ತನಕ ಎಲ್ಲರು ಬಾಚಿಕೊಳ್ಳುತ್ತಲೇ
ಇದ್ದಾರೆ; ಪ್ರವಾದಿಗಳು ಮೊದಲಾಗಿ ಯಾಜಕರ
ವರೆಗೆ ಸಕಲರು ಮೋಸಮಾಡುತ್ತಾರೆ. ಮೇಲಾಗದಿ
ದ್ದರೂ ಮೇಲು ಮೇಲು ಎಂದು ಹೇಳಿ ನನ್ನ ಜನರ
ಗಾಯವನ್ನು ಮೇಲೆ ಮೇಲೆ ವಾಸಿಮಾಡಿದ್ದಾರೆ.
ಅಸಹ್ಯಕಾರ್ಯಗಳನ್ನು ಮಾಡಿ ಅವಮಾನಕ್ಕೆ ಗುರಿ
ಯಾದರೂ ಎಳ್ಳಷ್ಟೂ ನಾಚಿಕೆಪಡಲಿಲ್ಲ, ಲಜ್ಜೆಯ ಗಂಧ
ವನ್ನೂ ತಿಳಿಯಲಿಲ್ಲ; ಆದಕಾರಣ ನಾನು ದಂಡಿಸುವ
ಸಮಯದಲ್ಲಿ ಅವರು ಮುಗ್ಗರಿಸುವರು, ಬೀಳುವವರ
ಸಂಗಡ ಬಿದ್ದೇಹೋಗುವರು ಎಂದು ಯೆಹೋವನು
ಅನ್ನುತ್ತಾನೆ.

ಯೆಹೋವನು ಹೀಗೆ ನುಡಿಯುತ್ತಾನೆ—ದಾರಿ
ಗಳು ಕೂಡುವ ಸ್ಥಳದಲ್ಲಿ ನಿಂತುಕೊಂಡು ನೋಡಿ

1) ಮೂಲ: ಮೋಸ. 2) ಅಥವಾ: ಅಪರಾಧದ ವಿಷಯವಾದ ದಾವೆಗಳನ್ನು ಅಲಕ್ಷ್ಯಮಾಡಿಬಿಡುತ್ತಾರೆ. 3) ಅಥವಾ
ಸುಂದರಿಯೂ ಸುಕುಮಾರಿಯೂ ಆದ ಚೀಯೋನೆಂಬಾಕೆಯನ್ನು ನಾನು ಸಂಹರಿಸುವೆನು. 4) ಅಥವಾ: ಬುಗ್ಗೆಯು ನೀರನ್ನು ಉಕ್ಕಿ
ವಂತೆ ಈ ಪಟ್ಟಣವು ದುಷ್ಟತನವನ್ನು ಉಕ್ಕಿಸುತ್ತದೆ.

ಪುರಾತನ ಮಾರ್ಗಗಳು ಯಾವವು, ಆ ಸನ್ಮಾರ್ಗವು
ಎಲ್ಲಿ ಎಂದು ವಿಚಾರಿಸಿ ಅದರಲ್ಲೇ ನಡೆಯಿರಿ; ಇದ
ರಿಂದ ನಿಮ್ಮ ಆತ್ಮಗಳಿಗೆ ವಿಶ್ರಾಂತಿ ಸಿಕ್ಕುವದು
[ಎಂದು ನಾನು ಅಪ್ಪಣೆಕೊಟ್ಟಾಗ] ಅದರಲ್ಲಿ ನಾವು
7 ನಡೆಯುವದೇ ಇಲ್ಲವೆಂದರು. ತುತೂರಿಯ ಶಬ್ದ
ವನ್ನು ಕೇಳಿರಿ ಎಂದು ನಾನು 1)ಅವರ ಮೇಲೆ
ಕಾವಲುಗಾರರನ್ನು ನೇಮಿಸಲು ನಾವು ಕೇಳಲೊಲ್ಲೆವು
8 ಎಂದು ಹೇಳಿದರು. ಆದಕಾರಣ, ಜನಾಂಗಗಳೇ,
ಕೇಳಿರಿ! ಜನಸಮೂಹವೇ, ಅವರಲ್ಲಿ ನಡೆದದ್ದನ್ನು
9 ಮನಸ್ಸಿಗೆ ತಂದುಕೋ! ಭೂಲೋಕವೇ, ಕೇಳು!
ಆಹಾ, ಈ ಜನರು ನನ್ನ ಮಾತುಗಳನ್ನು ಕೇಳದೆ
ನನ್ನ ಧರ್ಮಬೋಧನೆಯನ್ನು ಅಸಡ್ಡೆಮಾಡಿದ್ದರಿಂದ
ಇವರ ಆಲೋಚನೆಗಳ ಫಲವಾದ ಕೇಡನ್ನು ಇವರ
0 ಮೇಲೆ ಬರಮಾಡುವೆನು. ನೀವು ಶೆಬದ ಧೂಪವನ್ನೂ
ದೂರ ದೇಶದ ಒಳ್ಳೆಯ ಬಜೆಯನ್ನೂ ನನಗೆ ಅರ್ಪಿ
ಸುವದರಿಂದ ಏನು ಪ್ರಯೋಜನ? ನಿಮ್ಮ ಹೋಮ
ಗಳು ನನಗೆ ಮೆಚ್ಚಿಕೆಯಲ್ಲ, ನಿಮ್ಮ ಯಜ್ಞಗಳು
1 ನನಗೆ ಇಷ್ಟವಲ್ಲ. ಆದಕಾರಣ ಇಗೋ, ನಾನು
ಈ ಜನರ ಮುಂದೆ ಆಟಂಕಗಳನ್ನು ಒಡ್ಡುವೆನು; ತಂದೆ
ಗಳೂ ಮಕ್ಕಳೂ ಅವುಗಳನ್ನು ಎಡವುವರು, ನೆರೆಹೊರೆ
ಯವರೂ ನಾಶವಾಗುವರು. ಇದೇ ಯೆಹೋವನಾದ
ನನ್ನ ನುಡಿ.
2 ಆಹಾ, ಬಡಗಲಿಂದ ಒಂದು ಜನಾಂಗವು ಬರುತ್ತದೆ,
ಮಹಾ ಜನವು ಎಬ್ಬಿಸಲ್ಪಟ್ಟು ಲೋಕದ ಕಟ್ಟಕಡೆ
3 ಯಿಂದ ಹೊರಡುತ್ತದೆ. ಬಿಲ್ಲನ್ನೂ ಈಟಿಯನ್ನೂ
ಹಿಡಿದುಕೊಂಡಿದ್ದಾರೆ, ಅವರು ಕ್ರೂರರು, ನಿಷ್ಕರುಣಿ
ಗಳು; ಅವರ ಧ್ವನಿಯು ಸಮುದ್ರದಂತೆ ಮೊರೆಯು
ತ್ತದೆ, ಕುದುರೆ ಹತ್ತಿದ್ದಾರೆ; ಚೀಯೋನ್ ನಗರಿಯೇ,
ಆ ಸೈನ್ಯವು ಶೂರನಂತೆ ನಿನ್ನ ಮೇಲೆ ಯುದ್ಧಸನ್ನದ್ಧ
4 ವಾಗಿದೆ ಎಂದು ಯೆಹೋವನು ಅನ್ನುತ್ತಾನೆ. ನಾವು
ಅದರ ಸುದ್ದಿಯನ್ನು ಕೇಳಿದೆವು, ನಮ್ಮ ಕೈಗಳು
ಜೋಲುಬಿದ್ದವು, ಪ್ರಸವವೇದನೆಯಂತಿರುವ ಯಾತ
5 ನೆಯು ನಮ್ಮನ್ನು ಹಿಡಿದಿದೆ. ಊರ ಹೊರಗೆ ಹೋಗ
ಬೇಡಿರಿ, ದಾರಿಯಲ್ಲಿ ನಡೆಯಬೇಡಿರಿ; ಶತ್ರುವಿನ ಕತ್ತಿ
6 ಯಿದೆ, ಸುತ್ತುಮುತ್ತಲು ದಿಗಿಲು. ನನ್ನ ಪ್ರಜೆಯೆಂಬ
ಯುವತಿಯೇ, ಗೋಣಿತಟ್ಟನ್ನು ಸುತ್ತಿಕೊಂಡು
ಬೂದಿಯಲ್ಲಿ ಬಿದ್ದು ಹೊರಳಾಡು; ಇದ್ದೊಬ್ಬ ಮಗ
ನನ್ನು ಕಳೆದುಕೊಂಡಂತೆ ದುಃಖಪಟ್ಟು ಘೋರಪ್ರಲಾಪ
ಮಾಡು; ಕೊಳ್ಳೆಗಾರನು ತಟ್ಟನೆ ನಮ್ಮ ಮೇಲೆ ಬೀಳು
ವನಷ್ಟೆ.
7 ಯೆಹೋವನು ನನಗೆ—2)ನಾನು ನಿನ್ನನ್ನು ನನ್ನ
ಜನವೆಂಬ ಅದುರಿಗೆ ಶೋಧಕನನ್ನಾಗಿ ನೇಮಿಸಿದ್ದೇನೆ;
ನೀನು ಅವರ ನಡತೆಯನ್ನು ಪರೀಕ್ಷಿಸಿ ತಿಳಿದುಕೊಳ್ಳ
8 ಬೇಕು. ಅವರೆಲ್ಲರೂ ಕೇವಲ ದ್ರೋಹಿಗಳು, ಚಾಡಿ
ಹೇಳುತ್ತಾ ತಿರುಗಾಡುವವರು; ಅವರು [ಬೆಳ್ಳಿಯಲ್ಲ,]
9 ತಾಮ್ರ, ಕಬ್ಬಿಣ; ಎಲ್ಲರೂ ಕೇಡಿಗರು. ತಿದಿ
ಯು ಬುಸುಬುಸುಗುಟ್ಟುತ್ತದೆ, ಸೀಸವು ಉರಿಯಿಂದ
ಸುಟ್ಟುಹೋಗುತ್ತದೆ, ಅಕ್ಕಸಾಲಿಗನು ಎಷ್ಟು ಶೋಧಿ
ಸಿದರೂ ನಿಷ್ಪ್ರಯೋಜನ, ಕಲ್ಮಷವು ತೆಗೆಯಲ್ಪಡುವ
ದಿಲ್ಲ. ಯೆಹೋವನಾದ ನಾನು ಇವರನ್ನು ನೂಕಿ 30
ಬಿಟ್ಟದ್ದರಿಂದ ಕಂದುಬೆಳ್ಳಿಯೆನಿಸಿಕೊಳ್ಳುವರು ಎಂದು
ಹೇಳಿದ್ದಾನೆ.

ಅನಾಚಾರದ ಜನರಿಗೆ ಯೆಹೋವನ ಆಲಯವು
ಆಶ್ರಯವಲ್ಲ.

ಯೆಹೋವನು ಯೆರೆಮೀಯನಿಗೆ ಈ ಮಾತನ್ನು 7
ದಯಪಾಲಿಸಿದನು—ನೀನು ಯೆಹೋವನ ಆಲ 2
ಯದ ಬಾಗಿಲಿನಲ್ಲಿ ನಿಂತು ಈ ವಾಕ್ಯವನ್ನು ಅಲ್ಲಿ
ಸಾರು—ಯೆಹೋವನಿಗೆ ಅಡ್ಡಬೀಳುವದಕ್ಕೆ ಈ ದ್ವಾರ
ಗಳನ್ನು ಪ್ರವೇಶಿಸುವ ಸಕಲ ಯೆಹೂದ್ಯರೇ,
ಯೆಹೋವನ ನುಡಿಯನ್ನು ಕೇಳಿರಿ. ಇಸ್ರಾಯೇಲಿನ 3
ದೇವರೂ ಸೇನಾಧೀಶ್ವರನೂ ಆದ ಯೆಹೋವನು
ಹೀಗನ್ನುತ್ತಾನೆ—ನೀವು ನಿಮ್ಮ ನಡತೆಯನ್ನೂ ಕೃತ್ಯ
ಗಳನ್ನೂ ತಿದ್ದಿಕೊಳ್ಳಿರಿ; ಹೀಗೆ ಮಾಡಿದರೆ ನಾನು
ನಿಮ್ಮನ್ನು ಈ ಸ್ಥಳದಲ್ಲಿ ನೆಲೆಗೊಳಿಸುವೆನು. 3)ಈ 4
ಕಟ್ಟಡಗಳೇ ಯೆಹೋವನ ಆಲಯ, ಯೆಹೋವನ
ಆಲಯ, ಯೆಹೋವನ ಆಲಯ ಎಂಬುವ ಸುಳ್ಳು
ಮಾತುಗಳ ಮೇಲೆ ಭರವಸವಿಡಬೇಡಿರಿ. ನೀವು 5
ನಿಮ್ಮ ನಡತೆಯನ್ನೂ ಕೃತ್ಯಗಳನ್ನೂ ಸಂಪೂರ್ಣ
ವಾಗಿ ತಿದ್ದಿಕೊಂಡು ಕಕ್ಷಿಪ್ರತಿಕಕ್ಷಿಗಳಿಗೆ ಕೇವಲ
ನ್ಯಾಯವನ್ನೇ ತೀರಿಸಿ ಪರದೇಶಿಯನ್ನಾಗಲಿ ಅನಾಥ 6
ನನ್ನಾಗಲಿ ವಿಧವೆಯನ್ನಾಗಲಿ ಹಿಂಸಿಸದೆ ಈ ಸ್ಥಳ
ದಲ್ಲಿ ನಿರ್ದೋಷಿಗಳ ರಕ್ತವನ್ನು ಸುರಿಸದೆ ನಿಮಗೆ
ಹಾನಿಕರವಾದ ಅನ್ಯದೇವತಾಭಕ್ತಿಯನ್ನು ಮಾಡದೆ
ಇದ್ದರೆ ನಾನು ನಿಮ್ಮನ್ನು ಈ ಸ್ಥಳದಲ್ಲಿ, ನಾನೇ 7
ನಿಮ್ಮ ಪಿತೃಗಳಿಗೆ ಶಾಶ್ವತವಾಗಿ ದಯಪಾಲಿಸಿದ ಈ
ದೇಶದಲ್ಲಿ ನೆಲೆಗೊಳಿಸುವೆನು. ಆಹಾ, ನೀವು ನಿಷ್ಪ್ರ 8
ಯೋಜನವಾದ ಸುಳ್ಳುಮಾತುಗಳಲ್ಲಿ ಭರವಸವಿಟ್ಟಿ
ದ್ದೀರಿ. ನೀವು ಕಳುವು ಕೊಲೆ ಹಾದರಗಳನ್ನು ಮಾಡಿ 9
ಸುಳ್ಳುಸಾಕ್ಷಿ ಹೇಳಿ ಬಾಳನಿಗೆ ಹೋಮವನ್ನರ್ಪಿಸಿ
ಕಂಡುಕೇಳದ ಅನ್ಯದೇವತೆಗಳನ್ನು ಹಿಂಬಾಲಿಸಿದ
ಮೇಲೆ ನನ್ನ ಹೆಸರುಗೊಂಡಿರುವ ಈ ಆಲಯಕ್ಕೆ 10
ಬಂದು ನನ್ನ ಸನ್ನಿಧಿಯಲ್ಲಿ ನಿಂತು—ನಮಗೆ ಪರಿ
ಹಾರವಾಯಿತು ಎಂದು ಹೇಳಿ ಈ ಎಲ್ಲಾ ಅಸಹ್ಯ
ಕಾರ್ಯಗಳನ್ನು ಇನ್ನೂ ನಡಿಸುವದಕ್ಕೆ ಅವಕಾಶ
ಮಾಡಿಕೊಳ್ಳುವಿರೋ? ನನ್ನ ಹೆಸರುಗೊಂಡಿರುವ ಈ 11
ಆಲಯವು ನಿಮ್ಮ ದೃಷ್ಟಿಯಲ್ಲಿ ಕಳ್ಳರ ಗವಿಯಾಯಿ
ತೋ? ಆಹಾ, ನಾನೇ, ನಾನೇ ಇದನ್ನೆಲ್ಲಾ ನೋಡಿ
ದ್ದೇನೆ ಎಂಬದು ಯೆಹೋವನಾದ ನನ್ನ ನುಡಿ.
ನಾನು ಮೊದಲು ನನ್ನ ನಾಮವನ್ನು ಸ್ಥಾಪಿಸಿದ 12
ಶೀಲೋವಿನಲ್ಲಿನ ನನ್ನ ಸ್ಥಾನಕ್ಕೆ ನೀವು ಹೋಗಿ
ನನ್ನ ಜನರಾದ ಇಸ್ರಾಯೇಲ್ಯರ ಅಧರ್ಮದ ನಿಮಿತ್ತ
ನಾನು ಅದಕ್ಕೆ ತಂದ ಗತಿಯನ್ನು ನೋಡಿರಿ. ನಾನು 13

1) ಮೂಲ: ನಿಮ್ಮ. 2) ಅಥವಾ: ನಾನು ನಿನ್ನನ್ನು ನನ್ನ ಜನರಿಗೆ ಬುರುಜನ್ನಾಗಿಯೂ ಕೋಟೆಯನ್ನಾಗಿಯೂ ನೇಮಿಸಿದ್ದೇನೆ.
3) ಮೂಲ: ಇವೇ.

ಸಾವಕಾಶಮಾಡದೆ ನಿಮಗೆ ನುಡಿದ ಮಾತುಗಳನ್ನು
ನೀವು ಕೇಳದೆ ನಿಮ್ಮನ್ನು ಕರೆದ ನನಗೆ ಉತ್ತರ
ಕೊಡದೆ ಈ ಕೃತ್ಯಗಳನ್ನೆಲ್ಲಾ ನಡಿಸಿದ ಕಾರಣ
14 ನನ್ನ ನಾಮಕ್ಕೆ ನೆಲೆಯಾಗಿ ನಿಮ್ಮ ಭರವಸಕ್ಕೆ ಆಧಾರ
ವಾದ ಆಲಯಕ್ಕೂ ನಾನು ನಿಮಗೆ ಮತ್ತು ನಿಮ್ಮ
ಪಿತೃಗಳಿಗೆ ದಯಪಾಲಿಸಿದ ಸ್ಥಳಕ್ಕೂ ಶೀಲೋವಿಗೆ
15 ತಂದ ಗತಿಯನ್ನೇ ಈಗ ತರುವೆನು. ಮತ್ತು ನಾನು
ನಿಮ್ಮ ಎಲ್ಲಾ ಸಹೋದರರನ್ನು ಅಂದರೆ ಸಮಸ್ತ
ಎಫ್ರಾಯಿಮ್ ವಂಶದವರನ್ನು ಎಸೆದುಬಿಟ್ಟ ಹಾಗೆ
ನಿಮ್ಮನ್ನೂ ನನ್ನ ಕಣ್ಣೆದುರಿನಿಂದ ಎಸೆದುಬಿಡುವೆನು.
16 ನೀನಂತು ಈ ಜನರಿಗೋಸ್ಕರ ಬೇಡಿಕೊಳ್ಳಬೇಡ,
ಇವರಿಗಾಗಿ ಮೊರೆಯಿಡಬೇಡ, ಪ್ರಾರ್ಥಿಸಬೇಡ, ನನಗೆ
17 ವಿಜ್ಞಾಪಿಸಲೂ ಬೇಡ, ನಾನು ಕೇಳಲೊಲ್ಲೆ. ಇವರು
ಯೆಹೂದದ ಪಟ್ಟಣಗಳಲ್ಲಿಯೂ ಯೆರೂಸಲೇಮಿನ
ಬೀದಿಗಳಲ್ಲಿಯೂ ಮಾಡುವದನ್ನು ನೀನು ನೋಡ
18 ಲಿಲ್ಲವೋ? ಗಗನದ ಒಡತಿಗೆ ಹೋಳಿಗೆಗಳನ್ನು
ಮಾಡುವದಕ್ಕಾಗಿ ಮಕ್ಕಳು ಸೌದೆಯನ್ನು ಆರಿಸು
ತ್ತಾರೆ, ತಂದೆಗಳು ಬೆಂಕಿಯನ್ನು ಹೊತ್ತಿಸುತ್ತಾರೆ,
ಹೆಂಗಸರು ಕಣಕವನ್ನು ನಾದುತ್ತಾರೆ; ಅನ್ಯದೇವತೆ
ಗಳಿಗೆ ಪಾನನೈವೇದ್ಯವನ್ನು ಅರ್ಪಿಸುತ್ತಾರೆ; ನನ್ನನ್ನು
19 ಕೆಣಕಬೇಕೆಂದೇ ಇದನ್ನೆಲ್ಲಾ ಮಾಡುತ್ತಾರೆ. ಅವರು
ನನಗೆ ಕೇಡುಮಾಡುತ್ತಾರೋ, ಅವಮಾನವು ತಮ್ಮ
ಮುಖವನ್ನು ಮುಚ್ಚುವಷ್ಟರ ಮಟ್ಟಿಗೆ ತಮಗೇ
ಕೇಡುಮಾಡಿಕೊಳ್ಳುತ್ತಾರಲ್ಲಾ ಎಂದು ಯೆಹೋವನು
20 ಅನ್ನುತ್ತಾನೆ. ಹೀಗಿರಲು ಕರ್ತನಾದ ಯೆಹೋವನ
ಈ ಮಾತನ್ನು ಕೇಳಿರಿ—ಆಹಾ, ನನ್ನ ಕೋಪವೆಂಬ
ರೋಷಾಗ್ನಿಯು ಈ ಸ್ಥಳದಲ್ಲಿ ಸುರಿಯಲ್ಪಡುವದು;
ಮನುಷ್ಯರ ಮೇಲೆಯೂ ಪಶುಗಳ ಮೇಲೆಯೂ
ಕಾಡುಮರಗಳ ಮೇಲೆಯೂ ಭೂಮಿಯ ಬೆಳೆಯ
ಮೇಲೆಯೂ ಅದನ್ನು ಸುರಿಯುವೆನು; ಆರದೆ ದಹಿಸು
ವದು.
21 ಇಸ್ರಾಯೇಲಿನ ದೇವರೂ ಸೇನಾಧೀಶ್ವರನೂ ಆದ
ಯೆಹೋವನು ಹೀಗನ್ನುತ್ತಾನೆ—ನೀವು ಅರ್ಪಿಸುವ
ಸರ್ವಾಂಗಹೋಮಗಳನ್ನು [ಸಾಧಾರಣ] ಯಜ್ಞಗ
ಳೆಂದು ಭಾವಿಸಿ ಅವುಗಳ ಮಾಂಸವನ್ನೂ ತಿನ್ನಿರಿ.
22 ನಿಮ್ಮ ಪಿತೃಗಳನ್ನು ಐಗುಪ್ತದೇಶದೊಳಗಿಂದ ಬರ
ಮಾಡಿದಾಗ ಸರ್ವಾಂಗಹೋಮದ ಮತ್ತು ಯಜ್ಞದ
ವಿಷಯವಾಗಿ ನಾನು ಅವರಿಗೆ ಏನೂ ಹೇಳಲಿಲ್ಲ,
23 ಯಾವ ಅಪ್ಪಣೆಯನ್ನೂ ಕೊಡಲಿಲ್ಲ; ಆದರೆ ಈ ಒಂದ
ಪ್ಪಣೆಯನ್ನು ಮಾತ್ರ ಕೊಟ್ಟೆನು—ನನ್ನ ಧ್ವನಿಗೆ ಕಿವಿ
ಗೊಡಿರಿ, ನಾನು ನಿಮ್ಮ ದೇವರಾಗಿರುವೆನು, ನೀವು
ನನ್ನ ಪ್ರಜೆಯಾಗಿರುವಿರಿ; ನಿಮಗೆ ಹಿತವಾಗುವಂತೆ
24 ನಾನು ವಿಧಿಸುವ ಮಾರ್ಗದಲ್ಲೇ ನಡೆಯಿರಿ. ಅವ
ರಾದರೋ ಕೇಳಲಿಲ್ಲ, ಕಿವಿಗೊಡಲಿಲ್ಲ, ಸ್ವಂತ ಆಲೋ
ಚನೆಗಳನ್ನು ಅನುಸರಿಸಿ ತಮ್ಮ ದುಷ್ಟಹೃದಯದ
ಹಟದಂತೆ ನಡೆದು ಹಿಂದಿರುಗಿಯೇ ಹೋದರು,
25 ಮುಂದರಿಯಲಿಲ್ಲ. ನಿಮ್ಮ ಪಿತೃಗಳು ಐಗುಪ್ತದೇಶ
ದೊಳಗಿಂದ ಹೊರಟ ದಿನ ಮೊದಲುಗೊಂಡು ಈ
ದಿನದ ವರೆಗೂ ನನ್ನ ಸೇವಕರಾದ ಪ್ರವಾದಿಗಳನ್ನೆಲ್ಲಾ
ನಿಮ್ಮವರ ಬಳಿಗೆ ಕಳುಹಿಸುತ್ತಾ ಬಂದಿದ್ದೇನೆ, ದಿನ
ದಿನವೂ 1)ಸಾವಕಾಶ ಮಾಡದೆ ಕಳುಹಿಸಿದ್ದೇನೆ.
ನಿಮ್ಮವರಾದರೋ ನನ್ನ ಮಾತನ್ನು ಕೇಳಲಿಲ್ಲ, ಕಿವಿ
ಗೊಡಲಿಲ್ಲ, ನನ್ನ ಆಜ್ಞೆಗೆ ಮಣಿಯಲಿಲ್ಲ; ತಮ್ಮ ಪಿತೃ
ಗಳಿಗಿಂತಲೂ ಕೆಟ್ಟವರಾಗಿ ನಡೆದರು.
ನೀನು ಈ ಮಾತುಗಳನ್ನೆಲ್ಲಾ ಹೇಳುವಾಗ ಅವರು
ಕಿವಿಗೊಡುವದಿಲ್ಲ, ಕರೆಯುವಾಗ ಉತ್ತರಕೊಡುವ
ದಿಲ್ಲ. ಆದಕಾರಣ ನೀನು ಅವರಿಗೆ—ತಮ್ಮ ದೇವ
ರಾದ ಯೆಹೋವನ ಧ್ವನಿಗೆ ಕಿವಿಗೊಡದೆ ಶಿಕ್ಷಿತ
ರಾಗದೆ ಇರುವ ಜನವು ಇದೇ, ಸತ್ಯವು ಅವರ
ಬಾಯಿಂದ ನಿರ್ಮೂಲವಾಗಿ ಅಳಿದುಹೋಗಿದೆ ಎಂದು
ಹೇಳು.
[ಯೆರೂಸಲೇಮೇ,] ತಲೆಯನ್ನು ಬೋಳಿಸಿಕೊಂ
ಡು ಕೂದಲನ್ನು ಬಿಸಾಟುಬಿಟ್ಟು ಬೋಳುಗುಡ್ಡಗ
ಳಲ್ಲಿ ಶೋಕಗೀತವನ್ನು ಹಾಡು; ಯೆಹೋವನು ತನ್ನ
ಕೋಪಕ್ಕೆ ಗುರಿಯಾದ ಈ ವಂಶವನ್ನು ನಿರಾಕರಿಸಿ
ತ್ಯಜಿಸಿದ್ದಾನೆ. ಯೆಹೋವನು ಹೀಗನ್ನುತ್ತಾನೆ—
ಯೆಹೂದ್ಯರು ನನ್ನ ಚಿತ್ತಕ್ಕೆ ವಿರುದ್ಧವಾದದ್ದನ್ನೇ
ನಡಿಸಿದ್ದಾರೆ, ನನ್ನ ಹೆಸರಿನಿಂದ ಖ್ಯಾತಿಗೊಂಡ ಆಲ
ಯದಲ್ಲಿ ತಮ್ಮ ಅಸಹ್ಯವಸ್ತುಗಳನ್ನು ಇಟ್ಟು ಅದನ್ನು
ಹೊಲೆಮಾಡಿದ್ದಾರೆ. ತಮ್ಮ ಗಂಡು ಹೆಣ್ಣು ಮಕ್ಕಳನ್ನು
ಆಹುತಿಕೊಡುವದಕ್ಕೆ ಬೆನ್‌ಹಿನ್ನೋಮ್ ತಗ್ಗಿನಲ್ಲಿನ
ತೋಫೆತೆಂಬ ಪೂಜಾಸ್ಥಳವನ್ನು ಕಟ್ಟಿದ್ದಾರೆ; ನಾನು
ಆ ಸಂಸ್ಕಾರವನ್ನು ವಿಧಿಸಲಿಲ್ಲ, ನನ್ನ ಮನಸ್ಸಿನಲ್ಲಿ
ಹುಟ್ಟಲೂ ಇಲ್ಲ. ಹಾ, ಈ ಕಾರಣದಿಂದ ಆ ಸ್ಥಳಕ್ಕೆ
ತೋಫೆತ್ ಮತ್ತು ಬೆನ್‌ಹಿನ್ನೋಮಿನ ತಗ್ಗು ಎಂಬ
ಹೆಸರುಗಳು ಹೋಗಿ ಸಂಹಾರದ ತಗ್ಗು ಎಂಬ ಹೆಸ
ರಾಗುವ ದಿನಗಳು ಬರುವವು; 2)ಇನ್ನೆಲ್ಲಿಯೂ
ಸ್ಥಳವಿಲ್ಲವಾಗಿ ಶವಗಳನ್ನು ತೋಫೆತಿನಲ್ಲಿ ಹೂಣು
ವರು. ಈ ಜನರ ಹೆಣಗಳು ಆಕಾಶಪಕ್ಷಿಗಳಿಗೂ
ಭೂಜಂತುಗಳಿಗೂ ಆಹಾರವಾಗುವವು; ಅವುಗಳನ್ನು
ಬೆದರಿಸುವವರು ಯಾರೂ ಇರುವದಿಲ್ಲ. ಯೆಹೂ
ದದ ಪಟ್ಟಣಗಳಲ್ಲಿಯೂ ಯೆರೂಸಲೇಮಿನ ಬೀದಿಗಳ
ಲ್ಲಿಯೂ ಹರ್ಷಸಂಭ್ರಮಗಳ ಧ್ವನಿಯನ್ನೂ ವಧೂವರರ
ಸ್ವರವನ್ನೂ ನಿಲ್ಲಿಸಿಬಿಡುವೆನು, ದೇಶವು ಹಾಳೇ ಹಾಳಾ
ಗುವದು. ಇದು ಯೆಹೋವನ ನುಡಿ.

ಯೆಹೋವನು ಹೀಗನ್ನುತ್ತಾನೆ—ಆ ಕಾಲದಲ್ಲಿ
ಯೆಹೂದದ ಅರಸರು, ಅಧಿಪತಿಗಳು, ಯಾಜಕರು,
ಪ್ರವಾದಿಗಳು, ಯೆರೂಸಲೇಮಿನ ನಿವಾಸಿಗಳು, ಇವರೆ
ಲ್ಲರ ಎಲುಬುಗಳನ್ನು ಗೋರಿಗಳೊಳಗಿಂದ ತೆಗೆದು
ಇವರು ಪ್ರೀತಿಸಿ ಸೇವಿಸಿ ಹಿಂಬಾಲಿಸಿ ಆಶ್ರಯಿಸಿ
ಪೂಜಿಸಿದ ಸೂರ್ಯಚಂದ್ರತಾರಾಗಣಗಳ ಎದುರಿಗೆ
ಹರಡಿಬಿಡುವರು; ಅವುಗಳನ್ನು ಯಾರೂ ಕೂಡಿಸಿ
ಹೂಣಿಡುವದಿಲ್ಲ; ಅವು ಭೂಮಿಯ ಮೇಲೆ ಗೊಬ್ಬರ
ವಾಗುವವು. ನಾನು ಯಾವಾವ ಸ್ಥಳಗಳಿಗೆ ಈ
ದುರ್ವಂಶದವರನ್ನು ಅಟ್ಟಿಬಿಟ್ಟಿದ್ದೇನೋ ಅಲ್ಲೆಲ್ಲಾ

1) ಮೂಲ: ಮುಂಜಾನೆ ಎದ್ದು. 2) ಅಥವಾ: ತೋಫೆತಿನಲ್ಲಿ ಯಾವ ಸ್ಥಳವೂ ಉಳಿಯದ ಹಾಗೆ ಹೂಣುವರು.

ಉಳಿದವರೆಲ್ಲರೂ ಜೀವಿಸುವದಕ್ಕಿಂತ ಮರಣವು ಲೇಸೆಂದು ಅದನ್ನು ಬಯಸುವರು. ಇದು ಯೆಹೋವನ ನುಡಿ.

ಮೂರ್ಖರಾದ ಯೆಹೂದ್ಯರ ದುಷ್ಟತನವೂ ಅದರಿಂದಾಗುವ ಬಲುಭಂಗವೂ.

ಮತ್ತು ನೀನು ಅವರಿಗೆ ಹೀಗೆ ಹೇಳಬೇಕು—ಯೆಹೋವನು ಇಂತೆನ್ನುತ್ತಾನೆ—ಬಿದ್ದವರು ಏಳದಿರುವರೋ? ಬಿಟ್ಟುಹೋದವನು ತಿರಿಗಿ ಬರುವದಿಲ್ಲವೋ? ಈ ಯೆರೂಸಲೇಮಿನವರು ಎಂದಿಗೂ ಹಿಂದಿರುಗದಂತೆ ಬಿಟ್ಟುಹೋದದ್ದೇಕೆ? ಮೋಸವನ್ನೇ ಪಟ್ಟಾಗಿ ಹಿಡಿದಿದ್ದಾರೆ, ತಿರಿಗಿ ಬರಲೊಲ್ಲರು. ನಾನು ಕಿವಿಗೊಟ್ಟು ಕೇಳುವಾಗ ಅವರು ಯಥಾರ್ಥವಾಗಿ ಮಾತಾಡಿಕೊಳ್ಳುತ್ತಿರಲಿಲ್ಲ; ಯಾವನೂ ತನ್ನ ಅಧರ್ಮದ ವಿಷಯವಾಗಿ ಪಶ್ಚಾತ್ತಾಪಪಟ್ಟು—ಆಹಾ, ನಾನು ಎಂಥಾ ಕೆಲಸ ಮಾಡಿದೆ ಎಂದುಕೊಳ್ಳುತ್ತಿರಲಿಲ್ಲ; ಯುದ್ಧದಲ್ಲಿ ರಭಸವಾಗಿ ಓಡುವ ಕುದುರೆಯಂತೆ ಪ್ರತಿಯೊಬ್ಬನೂ ತನ್ನ ತನ್ನ ಮಾರ್ಗಕ್ಕೇ ತ್ವರೆಪಡುತ್ತಾನೆ. ಆಕಾಶದಲ್ಲಿ ಹಾರುವ ಬಕವೂ ತನ್ನ ನಿಯಮಿತ ಕಾಲಗಳನ್ನು ತಿಳಿದುಕೊಂಡಿದೆ, ಬೆಳವಕ್ಕಿಯೂ ಬಾನಕ್ಕಿಯೂ ಕೊಕ್ಕರೆಯೂ ತಮ್ಮ ಗಮನಾಗಮನಸಮಯಗಳನ್ನು ಗಮನಿಸುತ್ತವೆ; ನನ್ನ ಜನರಾದರೋ ಯೆಹೋವನ ನಿಯಮವನ್ನು ತಿಳಿಯರು. ಹೀಗಿರಲು ನಾವು ಜ್ಞಾನಿಗಳು, ಯೆಹೋವನ ಧರ್ಮಶಾಸ್ತ್ರವು ನಮ್ಮಲ್ಲಿಯೇ ಇದೆ ಎಂದು ನೀವು ಅಂದುಕೊಳ್ಳುವದು ಹೇಗೆ? ಆಹಾ, ಶಾಸ್ತ್ರಿಗಳ ಸುಳ್ಳು ಲೇಕಣಿಯು ಅದನ್ನು ಸುಳ್ಳನ್ನಾಗಿ ಮಾಡಿದೆ. ಜ್ಞಾನಿಗಳು ಆಶಾಭಂಗಪಟ್ಟು ಬೆಬ್ಬರಬಿದ್ದು ಸಿಕ್ಕಿಕೊಂಡಿದ್ದಾರೆ; ಇಗೋ, ಯೆಹೋವನ ಮಾತನ್ನು ನಿರಾಕರಿಸಿದರು; ಅವರ ಜ್ಞಾನವು ಎಷ್ಟರದು? ಆದದರಿಂದ ನಾನು ಇವರ ಹೆಂಡರನ್ನು ಅನ್ಯರಿಗೂ ಇವರ ಹೊಲಗದ್ದೆಗಳನ್ನು ಆಕ್ರಮಿಸುವವರಿಗೂ ಕೊಟ್ಟುಬಿಡುವೆನು; ಚಿಕ್ಕವರು ಮೊದಲುಗೊಂಡು ದೊಡ್ಡವರತನಕ ಎಲ್ಲರೂ ಬಾಚಿಕೊಳ್ಳುತ್ತಲೇ ಇದ್ದಾರೆ; ಪ್ರವಾದಿಗಳು ಮೊದಲಾಗಿ ಯಾಜಕರ ವರೆಗೆ ಸಕಲರೂ ಮೋಸಮಾಡುತ್ತಾರೆ. ಮೇಲಾಗದಿದ್ದರೂ ಮೇಲು ಮೇಲು ಎಂದು ಹೇಳಿ ನನ್ನ ಪ್ರಜೆಯೆಂಬಾಕೆಯ ಗಾಯವನ್ನು ಮೇಲೆ ಮೇಲೆ ವಾಸಿಮಾಡಿದ್ದಾರೆ. ಅಸಹ್ಯಕಾರ್ಯಗಳನ್ನು ಮಾಡಿ ಅವಮಾನಕ್ಕೆ ಗುರಿಯಾದರೂ ಎಳ್ಳಷ್ಟು ನಾಚಿಕೆಪಡಲಿಲ್ಲ, ಲಜ್ಜೆಯ ಗಂಧವನ್ನೂ ತಿಳಿಯಲಿಲ್ಲ; ಆದಕಾರಣ ನಾನು ದಂಡಿಸುವ ಸಮಯದಲ್ಲಿ ಅವರು ಮುಗ್ಗರಿಸುವರು, ಬೀಳುವವರ ಸಂಗಡ ಬಿದ್ದೇಹೋಗುವರು ಎಂದು ಯೆಹೋವನು ಅನ್ನುತ್ತಾನೆ. ನಾನು ಇವರನ್ನು ನಿರ್ಮೂಲಮಾಡಿ ಕೊಚ್ಚಿಬಿಡುವೆನು; ದ್ರಾಕ್ಷೆಯ ಬಳ್ಳಿಯಲ್ಲಿಯೂ ಅಂಜೂರದ ಮರದಲ್ಲಿಯೂ ಹಣ್ಣಿ
ರುವದಿಲ್ಲ, ಎಲೆಯು ಬಾಡುವದು; 1)ನಾನು ಹಾಳು
ಮಾಡುವವರನ್ನು ಅವರಿಗೆ ನೇಮಿಸುವೆನು. ಇದು
ಯೆಹೋವನ ನುಡಿ. [ಆ ಕಾಲದಲ್ಲಿ ಜನರು ಹೀಗನ್ನು 14
ವರು—] ಸುಮ್ಮನೆ ಕೂತಿರುವದೇಕೆ? ಕೂಡಿಕೊಳ್ಳಿರಿ,
ಕೋಟೆಕೊತ್ತಲಗಳ ಪಟ್ಟಣಗಳಲ್ಲಿ ಸೇರಿ ಅಲ್ಲೇ
2)ನಾಶವಾಗೋಣ; ನಾವು ನಮ್ಮ ದೇವರಾದ
ಯೆಹೋವನಿಗೆ ಪಾಪಮಾಡಿದ್ದರಿಂದ ಆತನು ನಮ್ಮ
ನ್ನು 2)ನಾಶನಕ್ಕೆ ಗುರಿಮಾಡಿ ಕಹಿಯಾದ ನೀರನ್ನು
ಕುಡಿಸಿದ್ದಾನಷ್ಟೆ. ನಾವು ಸುಖವನ್ನು ನಿರೀಕ್ಷಿಸಿದೆವು, 15
ಯಾವ ಮೇಲೂ ಆಗಲಿಲ್ಲ; ಕ್ಷೇಮಕಾಲವನ್ನು
ಎದುರುನೋಡಿದೆವು, ಹಾ, ಅಂಜಿಕೆಯೇ! ವೈರಿಯ 16
ಕುದುರೆಗಳ ಬುಸುಗಾಟವು ದಾನಿನಿಂದ ಕೇಳಬರು
ತ್ತದೆ; ತುರಂಗಗಳ ಕೆನೆತದ ಶಬ್ದಕ್ಕೆ ದೇಶವೆಲ್ಲಾ
ಕಂಪಿಸುತ್ತದೆ; ಶತ್ರುಗಳು ಬಂದರು, ಸೀಮೆಯನ್ನೂ
ಅದರಲ್ಲಿರುವ ಸಮಸ್ತವನ್ನೂ ಪಟ್ಟಣವನ್ನೂ ಪಟ್ಟ
ಣದ ನಿವಾಸಿಗಳನ್ನೂ ನುಂಗಿಬಿಟ್ಟರು. ಯೆಹೋ 17
ವನು—ಇಗೋ, ನಾನು ನಿಮ್ಮ ಮೇಲೆ ಹಾವುಗಳನ್ನು,
ಮಂತ್ರಕ್ಕೆ ಅಧೀನವಾಗದ ನಾಗಗಳನ್ನು ಬಿಡುವೆನು;
ಅವು ನಿಮ್ಮನ್ನು ಕಚ್ಚುವವು ಎಂದು ನುಡಿದಿದ್ದಾನೆ.
ಅಯ್ಯೋ, ನನ್ನ ದುಃಖಕ್ಕೆ ಬೆಳಗೆಂದಿಗಾದೀತು? 18
ನನ್ನ ಹೃದಯವು ನನ್ನೊಳಗೆ ಕುಂದಿಹೋಗಿದೆ. ಆಹಾ, 19
ನನ್ನ ಪ್ರಜೆಯೆಂಬಾಕೆಯು—ಯೆಹೋವನು ಚೀಯೋ
ನಿನಲ್ಲಿಲ್ಲವೋ, ಅದರ ರಾಜನು ಅಲ್ಲಿ ವಾಸವಾಗಿ
ಲ್ಲವೋ ಎಂದು ಮೊರೆಯಿಡುವ ಶಬ್ದವು ದೂರದೇಶ
ದಿಂದ ಕೇಳಿಸುತ್ತದೆ. [ಅದಕ್ಕೆ ಯೆಹೋವನು—]
ಇವರು ತಮ್ಮ ವಿಗ್ರಹಗಳಿಂದಲೂ ಅನ್ಯದೇವತೆಗಳ
ಶೂನ್ಯರೂಪಗಳಿಂದಲೂ ಏಕೆ ನನ್ನನ್ನು ಕೆಣಕಿದ್ದಾರೆ
[ಅನ್ನುತ್ತಾನೆ]. ಸುಗ್ಗಿ ತೀರಿತು, ಹಣ್ಣಿನ ಕಾಲ 20
ಮುಗಿಯಿತು, ನಮಗೆ ಉದ್ಧಾರವೇ ಆಗಲಿಲ್ಲ. ನನ್ನ 21
ಪ್ರಜೆಯೆಂಬಾಕೆಯ ಭಂಗದಿಂದ ನನಗೆ ಭಂಗವಾ
ಯಿತು, ನಾನು ಕಪ್ಪಗಾದೆನು, ಭಯವು ನನ್ನನ್ನು
ಹಿಡಿದಿದೆ. ಗಿಲ್ಯಾದಿನಲ್ಲಿ ಔಷಧವಿಲ್ಲವೋ? ಅಲ್ಲಿ 22
ವೈದ್ಯನು ಸಿಕ್ಕನೋ? ನನ್ನ ಪ್ರಜೆಯೆಂಬಾಕೆಗೆ ಏಕೆ
ಗುಣವಾಗಲಿಲ್ಲ?

9 ಅಯ್ಯೋ, ನನ್ನ ಶಿರಸ್ಸು ಜಲಮಯವಾಗಿಯೂ
ನನ್ನ ನೇತ್ರಗಳು ಕಣ್ಣೀರಿನ ಬುಗ್ಗೆಯಾಗಿಯೂ
ಇದ್ದರೆ ಎಷ್ಟೋ ಲೇಸು! ನನ್ನ 3)ಜನರಲ್ಲಿ ಹತ
ರಾದವರ ನಿಮಿತ್ತ ಹಗಲಿರುಳೂ ಅಳಬೇಕಲ್ಲಾ!
ಅಕಟಾ, ದಾರಿಗರು ತಂಗುವ ಗುಡಿಸಲು ಕಾಡಿ 2
ನಲ್ಲಿ ನನಗೆ ಸಿಕ್ಕಿದರೆ ಎಷ್ಟೋ ಒಳ್ಳೇದು! ಆಗ ನನ್ನ
ಜನರನ್ನು ತ್ಯಜಿಸಿ ಹೋಗುತ್ತಿದ್ದೆನು. ಅವರೆಲ್ಲರೂ
ಸೂಳೆಗಾರರು, ದ್ರೋಹಿಗಳ ಗುಂಪೇ. ಸುಳ್ಳಾಡು 3
ವದಕ್ಕೆ ತಮ್ಮ ನಾಲಿಗೆಯನ್ನು ಬಿಲ್ಲಿನಂತೆ ಬೊಗ್ಗಿಸು
ತ್ತಾರೆ; ಸತ್ಯಕ್ಕೆ ಪ್ರತಿಕೂಲವಾಗಿ ದೇಶದಲ್ಲಿ ಪ್ರಬಲಿಸಿ
ದ್ದಾರೆ; ಕೇಡಿನಿಂದ ಕೇಡಿಗೆ ಹಾರುತ್ತಾರೆ; ನನ್ನನ್ನು
ಅರಿಯರು ಎಂದು ಯೆಹೋವನು ಅನ್ನುತ್ತಾನೆ.

1) ಮೂಲವು ಕೇವಲ ಅಸ್ಪಷ್ಟ. 2) ಪಾಠಾಂತರ: ಸ್ತಬ್ಧರಾಗಿರೋಣ . . . . ಸ್ತಬ್ಧಪಡಿಸಿ. 3) ಮೂಲ: ಪ್ರಜೆಯೆಂಬಾ
ಬಲ್ಲಿ.

4 ನೀವೆಲ್ಲರೂ ನಿಮ್ಮ ನಿಮ್ಮ ನೆರೆಯವರ ವಿಷಯದಲ್ಲಿ
ಎಚ್ಚರಿಕೆಯಾಗಿರಿ, ಯಾರೇ ಆಗಲಿ ತನ್ನ ತಮ್ಮನನ್ನೂ
ನಂಬದಿರಲಿ; ಪ್ರತಿಯೊಬ್ಬ ತಮ್ಮನೂ ವಂಚಿಸೇ ವಂಚಿ
ಸುವನು, ಒಬ್ಬೊಬ್ಬ ನೆರೆಯವನೂ ಚಾಡಿಹೇಳುತ್ತಾ
5 ತಿರುಗಾಡುವನು. ಎಲ್ಲರೂ ತಮ್ಮ ತಮ್ಮ ನೆರೆಯವ
ರಿಗೆ ಮೋಸಮಾಡುತ್ತಾರೆ, ಸತ್ಯವನ್ನು ಆಡುವದೇ
ಇಲ್ಲ; ತಮ್ಮ ನಾಲಿಗೆಗೆ ಸುಳ್ಳನ್ನು ಕಲಿಸಿದ್ದಾರೆ;
ತಮಗೆ ಆಯಾಸವಾಗುವ ಮಟ್ಟಿಗೂ ಕೆಡುಕನ್ನು
6 ಮಾಡುತ್ತಿದ್ದಾರೆ. ನಿಮ್ಮ ನಿವಾಸವು ಮೋಸದೊಳಗೇ
ಇದೆ; ಅಯ್ಯೋ, ಮೋಸಗಾರರಾಗಿರುವದರಿಂದ ನನ್ನ
ನ್ನು ಅರಿಯಲೊಲ್ಲರು ಎಂದು ಯೆಹೋವನು ಅನ್ನು
ತ್ತಾನೆ.
7 ಹೀಗಿರಲು ಸೇನಾಧೀಶ್ವರನಾದ ಯೆಹೋವನು
ಇಂತೆನ್ನುತ್ತಾನೆ—ಆಹಾ, ನಾನು ನನ್ನ 1)ಜನರ
ದ್ರೋಹಕ್ಕೆ ಏನು ಮಾಡಲಿ? ಅವರನ್ನು ಪುಟಕ್ಕೆ
8 ಹಾಕಿ ಶೋಧಿಸುವೆನು. ಅವರ ನಾಲಿಗೆಯು ಕೊ
ಲ್ಲುವ ಬಾಣವಾಗಿದೆ, ಅದು ಸುಳ್ಳನ್ನೇ ಆಡುತ್ತದೆ;
ಒಬ್ಬನು ತನ್ನ ನೆರೆಯವನಿಗೆ ಬಾಯಿಂದ ಶುಭವಾಗಲಿ
ಎಂದು ಹೇಳಿದರೂ ತನ್ನ ಹೃದಯದಲ್ಲಿ ಅವನಿಗಾಗಿ
9 ಹೊಂಚುಹಾಕುತ್ತಾನೆ. ನಾನು ಅವರನ್ನು ಇವುಗಳಿ
ಗಾಗಿ ದಂಡಿಸಬಾರದೋ? ಇಂಥಾ ಜನಾಂಗದ ಮೇಲೆ
ನನ್ನ ರೋಷವನ್ನು ತೀರಿಸದಿರುವೆನೋ?
10 ನಾನು ಪರ್ವತಗಳಿಗಾಗಿ ಅತ್ತು ಗೋಳಾಡುವೆನು,
ಅಡವಿಯ ಕಾವಲುಗಳಿಗಾಗಿ ಶೋಕಗೀತವನ್ನು ಹಾ
ಡುವೆನು; ಅವು ಸುಟ್ಟುಹೋಗಿವೆ, ಯಾರೂ ಹಾದು
ಹೋಗರು, ದನದ ಸದ್ದು ಕಿವಿಗೆ ಬೀಳದು, ಮೃಗ
11 ಪಕ್ಷಿಗಳು ತೊಲಗಿಹೋಗಿವೆ. ನಾನು ಯೆರೂಸ
ಲೇಮನ್ನು ಹಾಳುದಿಬ್ಬಗಳನ್ನಾಗಿಯೂ ನರಿಗಳ ಹಕ್ಕೆ
ಯನ್ನಾಗಿಯೂ ಗೈದು ಯೆಹೂದದ ಪಟ್ಟಣಗಳನ್ನು
ಜನವಿಲ್ಲದ ಬೀಳುಭೂಮಿಯನ್ನಾಗಿ ಮಾಡುವೆನು
12 [ಎಂದು ಯೆಹೋವನು ಹೇಳಿದ್ದಾನಲ್ಲಾ]. ಯಾರೂ
ದಾಟದ ಹಾಗೆ ದೇಶವು ಹಾಳಾಗಿ ಕಾಡಿನಂತೆ ಸುಟ್ಟು
ಹೋದದ್ದು ಏಕೆ? ಈ ವಿಚಾರವನ್ನು ಗ್ರಹಿಸತಕ್ಕ
ಜ್ಞಾನಿಯು ಯಾರು? ಅದನ್ನು ಯೆಹೋವನ ಬಾ
ಯಿಂದಲೇ ಕೇಳಿ ತಿಳಿಸಬಲ್ಲವನು ಯಾರು?
13 ಇಸ್ರಾಯೇಲಿನ ದೇವರೂ ಸೇನಾಧೀಶ್ವರನೂ ಆದ
ಯೆಹೋವನು ಹೀಗನ್ನುತ್ತಾನೆ—ನಾನು ಇವರ
ಕಣ್ಣೆದುರಿಗೇ ಇಟ್ಟಿರುವ ಧರ್ಮೋಪದೇಶವನ್ನು
ಇವರು ಲಕ್ಷ್ಯಕ್ಕೆ ತಾರದೆ ನನ್ನ ಮಾತನ್ನು ಕೇಳದೆ
14 ಆ ಧರ್ಮಮಾರ್ಗದಲ್ಲಿ ನಡೆಯದೆ ಸ್ವಂತ ಹೃದಯದ
ಹಟದಂತೆ ನಡೆದು ತಮ್ಮ ಪಿತೃಗಳು ಕಲಿಸಿಕೊಟ್ಟ
ಹಾಗೆ ಬಾಳ್ ದೇವತೆಗಳನ್ನು ಹಿಂಬಾಲಿಸಿದ್ದರಿಂದ
15 ಆಹಾ, ನಾನು ಈ ಜನರಿಗೆ ಕಹಿಯಾದ ಆಹಾರಪಾನ
16 ಗಳನ್ನು ಕೊಡುವೆನು. ಇವರಿಗಾಗಲಿ ಇವರ ಪಿತೃ
ಗಳಿಗಾಗಲಿ ಗೊತ್ತಿಲ್ಲದ ಜನಾಂಗಗಳೊಳಗೆ ಇವ
ರನ್ನು ಚದರಿಸಿಬಿಟ್ಟು ಇವರು ನಿರ್ಮೂಲವಾಗುವ
ತನಕ ಖಡ್ಗವನ್ನು ಇವರ ಹಿಂದೆ ಕಳುಹಿಸುವೆನು.
17 ಸೇನಾಧೀಶ್ವರನಾದ ಯೆಹೋವನ ಮಾತನ್ನು
ಕೇಳಿರಿ—[ನಿಮ್ಮ ಸಂಗತಿಯನ್ನು] ಯೋಚಿಸಿರಿ;
ರೋದನಗಾಯಕಿಯರನ್ನು ಕರೆಯಿಸಿರಿ, ಅವರು
ಬರಲಿ; ಜಾಣೆಯರನ್ನು ಕರೆಯ ಕಳುಹಿಸಿರಿ, ಅವರು
ಸೇರಲಿ; ಅವರು ತ್ವರೆಪಟ್ಟು ನಮ್ಮ ನೇತ್ರಗಳಿಂದ
ಧಾರೆಹೊರಡುವಂತೆಯೂ ನಮ್ಮ ರೆಪ್ಪೆಗಳೊಳಗಿಂದ
ನೀರುಕ್ಕುವಂತೆಯೂ ನಮಗೋಸ್ಕರ ಗೋಳೆತ್ತಲಿ.
ಅಯ್ಯೋ, ಹಾಳಾದೆವು, ಭಂಗಪಟ್ಟೆವು; ನಾವು ನಮ್ಮ
ದೇಶವನ್ನು ಬಿಟ್ಟೆವಲ್ಲಾ, [ಶತ್ರುಗಳು] ನಮ್ಮ ಮನೆ
ಗಳನ್ನು ಕೆಡವಿದ್ದಾರಲ್ಲಾ ಎಂಬ ಪ್ರಲಾಪಧ್ವನಿಯು
ಚೀಯೋನಿನೊಳಗಿಂದ ಕೇಳಿಸುತ್ತದೆ. ಸ್ತ್ರೀಯರೇ,
ಯೆಹೋವನ ನುಡಿಯನ್ನು ಕೇಳಿ ಆತನ ಬಾಯಿಂದ
ಹೊರಟ ಮಾತಿಗೆ ಕಿವಿದೆರೆಯಿರಿ; ನಿಮ್ಮ ಹೆಣ್ಣುಮಕ್ಕ
ಳಿಗೂ ಗೋಳಾಟವನ್ನು ಕಲಿಸಿರಿ, ಪ್ರತಿಯೊಬ್ಬಳು
ತನ್ನ ನೆರೆಯವಳಿಗೂ ಶೋಕಗೀತವನ್ನು ಅಭ್ಯಾಸ
ಮಾಡಿಸಲಿ; ಏಕಂದರೆ ಬೀದಿಗಳಲ್ಲಿ ಮಕ್ಕಳೂ ಚೌಕ
ಗಳಲ್ಲಿ ಯುವಕರೂ ಇಲ್ಲದ ಹಾಗೆ ಮೃತ್ಯುವು ನಮ್ಮ
ಕಿಟಕಿಗಳ ಮೇಲೆ ಹತ್ತಿ ನಮ್ಮ ಉಪ್ಪರಿಗೆಗಳೊಳಗೆ
ನುಗ್ಗಿದೆ. ಯೆಹೋವನ ಈ ಮಾತನ್ನು ಸಾರು ಎಂದು 2
ನನಗೆ ಅಪ್ಪಣೆಯಾಯಿತು—ಜನರ ಹೆಣಗಳು ನೆಲದ
ಮೇಲೆ ಬಿದ್ದು ಗೊಬ್ಬರವಾಗುವವು; ಅವು ಹೊಲ
ಕೊಯ್ಯುವವನ ಹಿಂದೆ ಯಾರೂ ಕೂಡಿಸದೆ ಬಿದ್ದಿ
ರುವ ಅರಿಗಳಂತಿರುವವು.

ಯೆಹೋವನು ಹೀಗನ್ನುತ್ತಾನೆ—ಜ್ಞಾನಿಯು ತನ್ನ 2
ಜ್ಞಾನಕ್ಕೆ, ಪರಾಕ್ರಮಿಯು ತನ್ನ ಪರಾಕ್ರಮಕ್ಕೆ, ಐಶ್ವ
ರ್ಯವಂತನು ತನ್ನ ಐಶ್ವರ್ಯಕ್ಕೆ ಹೆಚ್ಚಳಪಡದಿರಲಿ;
ಹೆಚ್ಚಳಪಡುವವನು ತಾನು ನನ್ನನ್ನು ತಿಳಿದು ನಾನು 2
ಲೋಕದಲ್ಲಿ ಪ್ರೀತಿನೀತಿನ್ಯಾಯಗಳನ್ನು ತೋರ್ಪಡಿ
ಸುವ ಯೆಹೋವನಾಗಿರುವೆನು ಎಂದು ಗ್ರಹಿಸಿಕೊಂಡಿ
ದ್ದೇನೆ ಎಂಬದಕ್ಕೇ ಹೆಚ್ಚಳಪಡಲಿ; ಪ್ರೀತಿನೀತಿನ್ಯಾಯ
ಗಳೇ ನನಗೆ ಆನಂದವೆಂದು ಯೆಹೋವನು ಅನ್ನು
ತ್ತಾನೆ. ಆಹಾ, ಐಗುಪ್ತ್ಯರು ಯೆಹೂದ್ಯರು ಎದೋ 2
ಮ್ಯರು ಅಮ್ಮೋನ್ಯರು ಮೋವಾಬ್ಯರು ಚಂಡಿಕೆಬಿಟ್ಟು
ಕೊಂಡಿರುವ ಅರಣ್ಯನಿವಾಸಿಗಳು, ಅಂತು ಸುನ್ನತಿ
ಯುಳ್ಳವರಾದರೂ ಸುನ್ನತಿಯಿಲ್ಲದ ಇವರೆಲ್ಲರನ್ನೂ
ನಾನು ದಂಡಿಸುವ ದಿನಗಳು ಬರುತ್ತವೆ; ಏಕಂದರೆ 2
ಸಕಲಜನಾಂಗಗಳವರೂ ಸುನ್ನತಿಹೀನರು, ಎಲ್ಲಾ
ಇಸ್ರಾಯೇಲ್ ವಂಶದವರೂ ಹೃದಯ ಸುನ್ನತಿಯಿಲ್ಲ
ದವರು ಎಂದು ಯೆಹೋವನು ಅನ್ನುತ್ತಾನೆ.

ಅನ್ಯಜನಾಂಗಗಳ ನಿರ್ಜೀವದೇವರುಗಳಿಗೆ ಅಂಜಬಾರದು.

10
ಇಸ್ರಾಯೇಲ್ ವಂಶದವರೇ, ಯೆಹೋವನು
ನಿಮಗೆ ನುಡಿಯುವ ಮಾತನ್ನು ಕೇಳಿರಿ; ಯೆ 2
ಹೋವನು ಹೀಗೆ ಹೇಳುತ್ತಾನೆ—ಜನಾಂಗಗಳ ಆಚ
ರಣೆಯನ್ನು ಅಭ್ಯಾಸಿಸದಿರಿ, ಜನಾಂಗಗಳು ಹೆದರುವ
ಆಕಾಶದ ಉತ್ಪಾತಗಳಿಗೆ ನೀವು ಹೆದರಬೇಡಿರಿ.
ಜನಾಂಗಗಳ ಕಟ್ಟಳೆಗಳು ಬರಿದೇ; ಅರಣ್ಯದ ಮರ

1) ಮೂಲ: ಪ್ರಜೆಯೆಂಬಾಕೆಯ. ಪಾಠಾಂತರ: ಜನರನ್ನು.

ವನ್ನು ಕತ್ತರಿಸುವರು, ಬಡಗಿಯು ಅದನ್ನು ಕೈಯಿಂದ,
ಬಾಚಿಯಿಂದ ರೂಪಿಸುವನು. ಆದನ್ನು ಬೆಳ್ಳಿಬಂಗಾರ
ಗಳಿಂದ ಭೂಷಿಸುತ್ತಾರೆ, ಅಲುಗದಹಾಗೆ ಮೊಳೆ
ಗಳಿಂದ ಸುತ್ತಿಗೆಯಿಂದ ಭದ್ರಪಡಿಸುತ್ತಾರೆ. ಇಂಥಾ
ಬೊಂಬೆಗಳು ಸೌತೆಯ ತೋಟದ ಬೆದರುಗಂಬ
ದಂತಿವೆ, ಮಾತಾಡಲಾರವು; ಹೊತ್ತುಕೊಂಡುಹೋಗ
ಬೇಕು, ನಡೆಯಲಾರವು. ಅವುಗಳಿಗೆ ಅಂಜಬೇಡಿರಿ,
ಕೇಡುಮಾಡಲಾರವು, ಮೇಲುಮಾಡಲಿಕ್ಕೂ ಅವು
ಗಳಿಗೆ ಸಾಮರ್ಥ್ಯವಿಲ್ಲ. ಯೆಹೋವನೇ, ನಿನ್ನ
ಸಮಾನನು ಯಾವನೂ ಇಲ್ಲ; ನೀನು ಮಹತ್ತ
ಮನು, ನಿನ್ನ ನಾಮವೂ ಸಾಮರ್ಥ್ಯದಿಂದ ಕೂಡಿ
ಮಹತ್ತಮವಾಗಿದೆ. ಜನಾಂಗಗಳ ಅರಸನೇ, ಯಾರು
ನಿನಗೆ ಅಂಜದೆ ಇದ್ದಾರು? ಇದು ನಿನಗೆ ತಕ್ಕದ್ದು;
ಜನಾಂಗಗಳ ಜ್ಞಾನಿಗಳಲ್ಲಿಯೂ ರಾಜಪರಂಪರೆಯ
ಲ್ಲಿಯೂ ನಿನ್ನ ಸಮಾನನು ಯಾವನೂ ಇಲ್ಲವಷ್ಟೆ.
ಅವರೆಲ್ಲರೂ ಪಶುಪ್ರಾಯರು, ಮಂದರು; ಬೊಂಬೆ
ಗಳಿಂದಾಗುವ ಶಿಕ್ಷಣವು ಮರದಂತೆ ಮೊದ್ದು.
ಬೆಳ್ಳಿಯ ತಗಡುಗಳು ತಾರ್ಷೀಷಿನಿಂದಲೂ ಕೆತ್ತನೆ
ಗಾರನ ಮತ್ತು ಎರಕದವನ ಕೈಕೆಲಸವಾದ ಚಿನ್ನವು
ಊಫಜಿನಿಂದಲೂ ಸಾಗಿಬರುತ್ತವೆ; ನೀಲಧೂಮ್ರ
ವಸ್ತ್ರಗಳು ಅವುಗಳ ಉಡುಪಾಗಿವೆ; ಇವೆಲ್ಲಾ ಕುಶ
ಲರ ಕೌಶಲ್ಯ. ಯೆಹೋವನಾದರೋ ಸತ್ಯದೇವರು;
ಆತನು ಚೈತನ್ಯಸ್ವರೂಪನಾದ ದೇವನೂ ಶಾಶ್ವತ
ರಾಜನೂ ಆಗಿದ್ದಾನೆ; ಆತನ ಕೋಪಕ್ಕೆ ಭೂಲೋಕವು
ನಡುಗುತ್ತದೆ, ಜನಾಂಗಗಳು ಆತನ ರೋಷವನ್ನು
ತಾಳಲಾರವು.

ನೀವು ಅವುಗಳಿಗೆ—ಭೂಮ್ಯಾಕಾಶಗಳನ್ನು ಸೃಷ್ಟಿ
ಸದಿರುವ ದೇವರುಗಳು ಭೂಮಿಯ ಮೇಲಿನಿಂದ,
ಆಕಾಶದ ಕೆಳಗಿನಿಂದ, ಅಳಿದುಹೋಗುವವು ಎಂದು
ಹೇಳಿರಿ.

ಆತನು ತನ್ನ ಶಕ್ತಿಯಿಂದ ಭೂಮಿಯನ್ನು
ನಿರ್ಮಿಸಿ ತನ್ನ ಜ್ಞಾನದಿಂದ ಲೋಕವನ್ನು ಸ್ಥಾಪಿಸಿ ತನ್ನ
ವಿವೇಕದಿಂದ ಆಕಾಶಮಂಡಲವನ್ನು ಹರಡಿದ್ದಾನೆ;
ಆತನ ಗರ್ಜನೆಗೆ ಆಕಾಶದಲ್ಲಿ ನೀರು ಮೊರೋ ಎನ್ನು
ತ್ತದೆ; ಆತನು ಭೂಮಿಯ ಕಟ್ಟಕಡೆಯಿಂದ ಮೋಡ
ಗಳನ್ನು ಏರಮಾಡುತ್ತಾನೆ; ಮಳೆಗೋಸ್ಕರ ಮಿಂಚನ್ನು
ಹೊಳೆಯಮಾಡುತ್ತಾನೆ; ತನ್ನ ಭಂಡಾರದಿಂದ ಗಾಳಿ
ಯನ್ನು ಬೀಸಮಾಡುತ್ತಾನೆ. ಎಲ್ಲರೂ ತಿಳುವಳಿಕೆಯಿ
ಲ್ಲದೆ ಪಶುಪ್ರಾಯರಾಗಿದ್ದಾರೆ; ತಾನು ಕೆತ್ತಿದ ವಿಗ್ರ
ಹದ ನಿಮಿತ್ತ ಪ್ರತಿಯೊಬ್ಬ ಅಕ್ಕಸಾಲಿಗನೂ ಅವಮಾ
ನಕ್ಕೆ ಗುರಿಯಾಗುವನು; ಅವನು ಎರಕ ಹೊಯ್ದ
ಪುತ್ಥಳಿಯು ಸುಳ್ಳು, ಅವುಗಳಲ್ಲಿ ಶ್ವಾಸವೇ ಇಲ್ಲ. ಅವು
ವ್ಯರ್ಥ, ಹಾಸ್ಯಾಸ್ಪದವಾದ ಕೆಲಸ; ದಂಡನೆಯಾಗು
ವಾಗ ಅಳಿದುಹೋಗುವವು. ಯಾಕೋಬ್ಯರ ಸ್ವಾಸ್ತ್ಯ
ವಾದಾತನು ಅವುಗಳ ಹಾಗಲ್ಲ; ಆತನು ಸಮ
ಸ್ತವನ್ನೂ ನಿರ್ಮಿಸಿದವನು; ಇಸ್ರಾಯೇಲು ಆತನ
ಸ್ವಾಸ್ತ್ಯವಾದ ವಂಶ; ಸೇನಾಧೀಶ್ವರನಾದ ಯೆಹೋವ
ನೆಂಬದು ಆತನ ನಾಮಧೇಯ.

ಸಮೀಪಿಸುವ ಶತ್ರುಬಾಧೆ. ಪ್ರವಾದಿಯ ವಿಜ್ಞಾಪನೆ.

ಮುತ್ತಿಗೆಗೆ ಈಡಾದ ಜನವೇ, [1]ಗಂಟುಕಟ್ಟಿಕೊಂ 17
ಡು ದೇಶದೊಳಗಿಂದ ನಡೆ. ಇಗೋ, ನಾನು ಈ ಸಾರಿ 18
ದೇಶನಿವಾಸಿಗಳನ್ನು ಎಸೆದೇಬಿಡುವೆನು, [2]ಅವರಿಗೆ
ಬುದ್ಧಿ ಬರಲೆಂದು ಅವರನ್ನು ಬಾಧಿಸುವೆನು ಎಂದು
ಯೆಹೋವನು ಅನ್ನುತ್ತಾನೆ.

ಅಯ್ಯೋ, ನನ್ನ ಗಾಯ! ನನಗೆ ಬಿದ್ದ ಪೆಟ್ಟು 19
ಗಡುಸು! ಆದರೂ ನಾನು—ಇದು ನನಗೆ ವ್ಯಾಧಿ
ಯೇ ಸರಿ, ಸಹಿಸಬೇಕು ಅಂದುಕೊಂಡಿದ್ದೇನೆ. ನನ್ನ 20
ಗುಡಾರವು ಹಾಳಾಗಿದೆ, ಹಗ್ಗಗಳು ಹರಿದುಹೋಗಿವೆ,
ಮಕ್ಕಳು ನನ್ನೊಳಗಿಂದ ತೊಲಗಿ ಇಲ್ಲವಾಗಿದ್ದಾರೆ;
ನನ್ನ ಗುಡಾರವನ್ನು ಹಾಕುವದಕ್ಕೂ ನನ್ನ ಪರದೆ
ಗಳನ್ನು ಬಿಗಿಯುವದಕ್ಕೂ ಇನ್ನು ಯಾರೂ ಇರುವ
ದಿಲ್ಲ. ಏಕಂದರೆ ಪಾಲಕರು ಪಶುಪ್ರಾಯರಾಗಿ 21
ಯೆಹೋವನ ಕಡೆಗೆ ನೋಡದೆ ಇದ್ದಾರೆ; ಆದಕಾರಣ
ಅವರ ಕಾರ್ಯವು ಸಾರ್ಥಕವಾಗಲಿಲ್ಲ, ಅವರ ಹಿಂಡು
ಗಳು ಚದರಿಹೋದವು. ಇಗೋ, ಒಂದು ಸದ್ದು! 22
ಆಹಾ, ಬರುತ್ತಿದೆ! ಯೆಹೂದದ ಪಟ್ಟಣಗಳನ್ನು
ನಾಶಪಡಿಸಿ ನರಿಗಳ ಹಕ್ಕೆಯನ್ನಾಗಿ ಮಾಡುವದಕ್ಕೆ
ಉತ್ತರದೇಶದಿಂದ ಮಹಾಕಂಪನವು ಸಂಭವಿಸುತ್ತದೆ.
ಯೆಹೋವನೇ, ಮಾನವನ ಮಾರ್ಗವು ಅವನ 23
ಸ್ವಾಧೀನದಲ್ಲಿಲ್ಲವೆಂದು ನನಗೆ ಗೊತ್ತು; ಮನುಷ್ಯನು
ನಡೆದಾಡುತ್ತಾ ಸರಿಯಾದ ಕಡೆಗೆ ತನ್ನ ಹೆಜ್ಜೆಯನ್ನಿಡ
ಲಾರನು. ಯೆಹೋವನೇ, ನನ್ನನ್ನು ಶಿಕ್ಷಿಸು, ಆದರೆ 24
ಮಿತಿಮೀರಿ ಬೇಡ; ರೋಷದಿಂದ ದಂಡಿಸದಿರು, ನಾನು
ಕೇವಲ ಕ್ಷೀಣನಾದೇನು. ನಿನ್ನನ್ನು ಅರಿಯದ ಅನ್ಯ 25
ಜನಾಂಗಗಳ ಮೇಲೆಯೂ ನಿನ್ನ ನಾಮವನ್ನು ಉಚ್ಛ
ರಿಸದ ವಂಶಗಳ ಮೇಲೆಯೂ ನಿನ್ನ ರೌದ್ರವನ್ನು ಸುರಿ
ದುಬಿಡು. ಅವರು ಯಾಕೋಬ್ಯರನ್ನು ನುಂಗಿ ಹೌದು,
ಪೂರಾ ನುಂಗಿಬಿಟ್ಟು ಅವರ ವಾಸಸ್ಥಳವನ್ನು ಹಾಳು
ಮಾಡಿದ್ದಾರಲ್ಲಾ.

ಯೆರೆಮೀಯನು ನಿಬಂಧನಗ್ರಂಥದ ವಿಧಿಗಳನ್ನು
ಪ್ರಕಟಿಸಿದ್ದು.

11
ಯೆಹೋವನು ಯೆರೆಮೀಯನಿಗೆ ದಯಪಾಲಿಸಿದ
ವಾಕ್ಯ—ಈ ನಿಬಂಧನವಚನಗಳನ್ನು ಕೇಳಿ ಯೆ 2
ಹೂದ್ಯರಿಗೂ ಯೆರೂಸಲೇಮಿನ ನಿವಾಸಿಗಳಿಗೂ ಹೀಗೆ
ಸಾರಿರಿ—ಕಬ್ಬಿಣ ಕರಗಿಸುವ ಕುಲಿಮೆಯೋಪಾದಿ 3-4
ಯಲ್ಲಿದ್ದ ಐಗುಪ್ತದೇಶದಿಂದ ನಿಮ್ಮ ಪಿತೃಗಳನ್ನು
ಬರಮಾಡಿದಾಗ—ನೀವು ನನ್ನ ಮಾತನ್ನು ಕೇಳಿ
ನಾನು ನಿಮಗೆ ಆಜ್ಞಾಪಿಸಿರುವ ಈ ವಿಧಿಗಳನ್ನೆಲ್ಲಾ
ಕೈಕೊಂಡರೆ ನೀವು ನನ್ನ ಪ್ರಜೆಯಾಗಿರುವಿರಿ, ನಾನು
ನಿಮ್ಮ ದೇವರಾಗಿದ್ದು ಹಾಲೂ ಜೇನೂ ಹರಿಯುವ 5
ದೇಶವನ್ನು ಕೊಡುವದಾಗಿ ನಿಮ್ಮ ಮೂಲಪಿತೃಗಳಿಗೆ

[1] ಅಥವಾ: ನೆಲದಿಂದ ನಿನ್ನ ಗಂಟೆತ್ತಿಕೋ. [2] ಅಥವಾ: [ಮುತ್ತುವವರ] ಕೈವಶವಾಗಲೆಂದು ಅವರನ್ನು ಬಾಧಿಸುವೆನು

ಮಾಡಿದ ವಾಗ್ದಾನವನ್ನು ನೆರವೇರಿಸುವೆನು ಎಂದು
ಹೇಳಿದೆನಷ್ಟೆ; ಆ ನನ್ನ ಮಾತು ಈಗ ಕೈಗೂಡಿದೆ.
ನಾನು ಅವರಿಗೆ ವಿಧಿಸಿದ ನಿಬಂಧನವಾಕ್ಯಗಳಿಗೆ ಕಿವಿ
ಗೊಡದವನು ಶಾಪಗ್ರಸ್ತನಾಗಲಿ ಎಂಬದಾಗಿ ಇಸ್ರಾ
ಯೇಲ್ಯರ ದೇವರಾದ ಯೆಹೋವನು ನುಡಿಯುತ್ತಾ
ನೆಂದೇ ಸಾರಬೇಕು. ಆಗ ನಾನು—ಅಪ್ಪಣೆಯಂತಾ
ಗಲಿ, ಯೆಹೋವನೇ, ಎಂದು ಉತ್ತರಕೊಟ್ಟೆನು.
6 ಯೆಹೋವನು ನನಗೆ ಹೀಗೆ ಹೇಳಿದನು—
ಯೆಹೂದದ ಪಟ್ಟಣಗಳಲ್ಲಿಯೂ ಯೆರೂಸಲೇಮಿನ
ಬೀದಿಗಳಲ್ಲಿಯೂ ಈ ಮಾತುಗಳನ್ನೆಲ್ಲಾ ಸಾರು—
ಈ ನಿಬಂಧನವಾಕ್ಯಗಳನ್ನೆಲ್ಲಾ ಕೇಳಿ ಕೈಕೊಳ್ಳಿರಿ.
7 ನಿಮ್ಮ ಪಿತೃಗಳನ್ನು ಐಗುಪ್ತದೇಶದೊಳಗಿಂದ ಬರ
ಮಾಡಿದಾರಭ್ಯ ಇಂದಿನ ವರೆಗೂ ನಾನು ಅವರಿಗೆ—
ನನ್ನ ಮಾತನ್ನು ಕೇಳಿರಿ ಎಂದು ಸಾವಕಾಶಮಾಡದೆ
8 ಖಂಡಿತವಾಗಿ ಆಜ್ಞಾಪಿಸುತ್ತಾ ಬಂದೆನಷ್ಟೆ. ಅವರಾ
ದರೋ ಕೇಳಲಿಲ್ಲ, ಕಿವಿಗೊಡಲಿಲ್ಲ, ಪ್ರತಿಯೊ
ಬ್ಬನೂ ತನ್ನ ತನ್ನ ದುಷ್ಟಹೃದಯದ ಹಟಕ್ಕೆ ತಕ್ಕ
ಹಾಗೆ ನಡೆದನು; ಆದಕಾರಣ ಕೈಕೊಳ್ಳಬೇಕೆಂದು
ನಾನು ಆಜ್ಞಾಪಿಸಿದರೂ ಅವರು ಕೈಕೊಳ್ಳದ ಈ
ನಿಬಂಧನೆಯ ಶಾಪಗಳನ್ನೆಲ್ಲಾ ಅವರ ಮೇಲೆ ಬರ
ಮಾಡಿದೆನು.

### ಯೆಹೂದದ ದ್ರೋಹದ ನಿಮಿತ್ತ ಅನಿವಾರ್ಯವಾದ ಕೇಡು ಸಂಭವಿಸುವದು.

9 ಯೆಹೋವನು ನನಗೆ ಹೀಗೆ ಹೇಳಿದನು—
ಯೆಹೂದ್ಯರಲ್ಲಿಯೂ ಯೆರೂಸಲೇಮಿನ ನಿವಾಸಿ
10 ಗಳಲ್ಲಿಯೂ ಒಳಸಂಚು ಕಂಡುಬಂದಿದೆ. ನನ್ನ
ಮಾತುಗಳನ್ನು ಕೇಳಲೊಲ್ಲದಿದ್ದ ತಮ್ಮ ಮೂಲ
ಪಿತೃಗಳ ದುಷ್ಕೃತ್ಯಗಳ ಕಡೆಗೆ ತಿರುಗಿಕೊಂಡು ಅನ್ಯ
ದೇವತೆಗಳನ್ನು ಹಿಂಬಾಲಿಸಿ ಸೇವಿಸಿದ್ದಾರೆ; ಇಸ್ರಾ
ಯೇಲ್ ವಂಶದವರೂ ಯೆಹೂದ ವಂಶದವರೂ
ನಾನು ಅವರ ಪಿತೃಗಳ ಸಂಗಡ ಮಾಡಿಕೊಂಡ ಒಡಂಬ
11 ಡಿಕೆಯನ್ನು ಮೀರಿದ್ದಾರೆ. ಆದಕಾರಣ ಯೆಹೋವ
ನೆಂಬ ನಾನು ಹೀಗನ್ನುತ್ತೇನೆ—ಇಗೋ, ಅವರು ತಪ್ಪಿಸಿ
ಕೊಳ್ಳಲಾರದ ಕೇಡನ್ನು ಅವರ ಮೇಲೆ ಬರಮಾಡು
12 ವೆನು; ನನಗೆ ಮೊರೆಯಿಟ್ಟರೂ ಕೇಳೆನು. ಆಗ
ಯೆಹೂದದ ಪಟ್ಟಣಗಳವರೂ ಯೆರೂಸಲೇಮಿನ
ನಿವಾಸಿಗಳೂ ಯಾವ ದೇವತೆಗಳಿಗೆ ಹೋಮಮಾಡಿ
ದರೋ ಅವುಗಳನ್ನು ಮರೆಹೊಕ್ಕು ಕೂಗಿಕೊಳ್ಳು
ವರು, ಆದರೆ ಅಂಥ ಕೇಡಿನ ಕಾಲದಲ್ಲಿ ಅವುಗಳಿಂದ
ಅವರಿಗೆ ಎಷ್ಟು ಮಾತ್ರವೂ ರಕ್ಷಣೆಯಾಗುವದಿಲ್ಲ.
13 ಯೆಹೂದದವರೇ, ನಿಮ್ಮ ಪಟ್ಟಣಗಳೆಷ್ಟೋ ನಿಮ್ಮ
ದೇವರುಗಳೂ ಅಷ್ಟು; ಯೆರೂಸಲೇಮಿನ ಬೀದಿ
ಗಳೆಷ್ಟೋ ತುಚ್ಛದೇವತೆಯಾದ ಬಾಳನಿಗೆ ಹೋಮ
ಮಾಡುವದಕ್ಕಾಗಿ ನೀವು ಮಾಡಿಕೊಂಡಿರುವ ಬಲಿ
ಪೀಠಗಳೂ ಅಷ್ಟು. ಆದಕಾರಣ ಈ ಜನರಿಗೋಸ್ಕ
ಬೇಡಿಕೊಳ್ಳಬೇಡ, ಇವರಿಗಾಗಿ ಮೊರೆಯಿಡಬೇ
ಪ್ರಾರ್ಥಿಸಲೂ ಬೇಡ; ಅವರು ತಮ್ಮ ಕೇಡಿನ ನಿಮಿ
ನನಗೆ ಮೊರೆಯಿಡುವಾಗ ನಾನು ಕೇಳೆನು.
1)ನನ್ನ ಆಪ್ತಜನವು ನನ್ನ ಮನೆಯಲ್ಲಿ ಅಸಹ್ಯಕ
ರ್ಯವನ್ನು ಮಾಡಿದ್ದೇಕೆ? ವ್ರತಗಳೂ ಮೀಸಲಿನ ಮಾ
ಸವೂ ನಿನ್ನ ದುಷ್ಟತನವನ್ನು ಪರಿಹರಿಸಿಯಾವೇ? ಇಂ
ವುಗಳ ಮೂಲಕ ತಪ್ಪಿಸಿಕೊಂಡೀಯಾ? ಯೆಹೋವನ
ನಿನಗೆ ಸುಂದರಫಲದಿಂದ ಅಂದವಾದ ಹಚ್ಚನೆ
ಒಲೀವಮರವೆಂದು ಹೆಸರಿಟ್ಟಿದ್ದನು; ಆ ಮರಕ್ಕೆ ಬೆಂ
ಯಿಕ್ಕಿ ಬಲು ಧಗಧಗಿಸುವಂತೆ ಮಾಡಿದ್ದಾನೆ; ಅದ
ರೆಂಬೆಗಳು ಮುರಿದುಹೋಗಿವೆ. ಇಸ್ರಾಯೇಲ್ ವಂ
ವೂ ಯೆಹೂದ ವಂಶವೂ ಬಾಳನಿಗೆ ಹೋಮವನ್ನರ್ಪಿ
ನನ್ನನ್ನು ಕೆಣಕಿ ತಮಗೆ ಕೆಡುಕನ್ನು ಮಾಡಿಕೊಂ
ದ್ದರಿಂದ ನಿನ್ನನ್ನು ನಾಟಿದ ಸೇನಾಧೀಶ್ವರನಾದ ಯ
ಹೋವನು ನಿನಗೆ ಕೆಡುಕಾಗಲಿ ಎಂದು ಶಪಿಸಿದ್ದಾನ

### ಯೆರೆಮೀಯನಿಗೆ ವಿರುದ್ಧವಾದ ಒಳಸಂಚು.

ಯೆಹೋವನು ತಿಳಿಸಿದ್ದರಿಂದ [ಅವರ ಕುತಂತ್ರವ
ನನಗೆ ಗೊತ್ತಾಯಿತು; ಆಗಲೇ ಅವರ ಕೃತ್ಯಗಳನ್ನ
ನನಗೆ ತೋರಿಸಿದಿ. ನಾನಾದರೋ ವಧೆಗೆ ಒಯ್ಯು
ಸಾಧು ಕುರಿಗೆ ಸಮಾನನಾಗಿದ್ದೆನು; ಮರವನ್ನ
ಫಲಸಹಿತವಾಗಿ ನಾಶಪಡಿಸೋಣ, ಇವನು ನಿರ್ನಾಮ
ವಾಗುವಂತೆ ಜೀವಲೋಕದಿಂದ ಇವನನ್ನು ನಿರ್ಮೂ
ಲಮಾಡೋಣ ಎಂದು ಅವರು ನನಗೆ ವಿರುದ್ಧವಾಗಿ
ಕುಯುಕ್ತಿಗಳನ್ನು ಕಲ್ಪಿಸಿದ್ದು ನನಗೆ ತಿಳಿದಿರಲಿಲ್ಲ
ಹೃದಯವನ್ನೂ ಅಂತರಿಂದ್ರಿಯವನ್ನೂ ಪರೀಕ್ಷಿ
ನ್ಯಾಯವಾಗಿ ತೀರ್ಪುಮಾಡುವ ಸೇನಾಧೀಶ್ವರನಾ
ಯೆಹೋವನೇ, ನೀನು ಅವರಿಗೆ ಕೊಡುವ ಪ್ರತಿಫ
ವನ್ನು ನಾನು ಕಾಣುವೆನು; ನನ್ನ ವ್ಯಾಜ್ಯವನ
ನಿನಗೇ ಅರಿಕೆಮಾಡಿದ್ದೇನಷ್ಟೆ. ಹೀಗಿರಲು ಸೇನಾ
ಧೀಶ್ವರನಾದ ಯೆಹೋವನು ನನಗೆ—ನಮ್ಮ ಕ
ಯಿಂದ ನೀನು ಸಾಯಬಾರದಾಗಿದ್ದರೆ ಯೆಹೋವ
ಹೆಸರೆತ್ತಿ ಪ್ರವಾದಿಸಬೇಡ ಎಂದು ನಿನ್ನ ಪ್ರಾಣಕ
ಹೊಂಚುಹಾಕುತ್ತಿರುವ ಅನಾತೋತಿನವರ ವಿಷಯ
ದಲ್ಲಿ ನನ್ನ ತೀರ್ಮಾನವು ಇದೇ—ಇಗೋ, ಅ
ರನ್ನು ದಂಡಿಸುವೆನು, ಯೌವನಸ್ಥರು ಖಡ್ಗದಿಂ
ನಾಶವಾಗುವರು, ಅವರ ಗಂಡುಹೆಣ್ಣುಮಕ್ಕಳು ಕ್ಷಾಮ
ದಿಂದ ಸಾಯುವರು; ದಂಡನೆಯ ವರುಷದಲ್ಲಿ ಅನಾ
ತೋತಿನವರಿಗೆ ಕೇಡನ್ನು ಬರಮಾಡುವೆನು, ಅವರಲ್
ಯಾರೂ ಉಳಿಯರು ಎಂದು ಹೇಳಿದ್ದಾನೆ.

ಯೆಹೋವನೇ, ನೀನು ಧರ್ಮಸ್ವರೂಪನಾಗಿರು
ವದರಿಂದ ನಾನು ನಿನ್ನೊಡನೆ ವ್ಯಾಜ್ಯವಾಡಲಾರೆನು,
ಆದರೂ ನಿನ್ನ ಸಂಗಡ ನ್ಯಾಯವನ್ನು ಚರ್ಚಿಸುವೆನು

---

1) ಈ ವಚನದ ಭಾಷಾಂತರವು ಗ್ರೀಕ್ ಭಾಷಾಂತರಕ್ಕೆ ಅನುಸಾರವಾಗಿದೆ. ಅದರಿಂದೀಚೆಗೆ ಇಬ್ರಿಯ ಮೂಲವು ಕೆಟ್ಟಿದೆ. ಹೋದ ಇಬ್ರಿಯ ಮೂಲದ ಅಭಿಪ್ರಾಯವು ಸುಮಾರು ಹೀಗಿದೆ:—ನನ್ನ ಮನೆಯಲ್ಲಿ ನನ್ನ ಆಪ್ತಜನಕ್ಕೆ ಏನು ಕೆಲಸ? ಕುಯುಕ್ತಿಗ ಹೆಚ್ಚಾಗಿ ನಡಿಸಿದೆ. ಮೀಸಲಿನ ಮಾಂಸವು ನಿನ್ನಿಂದ ತೊಲಗಿದೆ. ದುಷ್ಕೃತ್ಯಮಾಡುವಾಗಲೇ ಹಿಗ್ಗುತ್ತಿ.

ದುಷ್ಟರ ನಡತೆಗೆ ಏಕೆ ಸುಫಲವಾಗುತ್ತದೆ? ದ್ರೋಹಿ
2 ಗಳೆಲ್ಲರೂ ನೆಮ್ಮದಿಯಾಗಿರುವದೇಕೆ? ನೀನು ಅವ
ರನ್ನು ನಾಟಿದ್ದೀ, ಅವರು ಬೇರೂರಿ ಬೆಳೆದು ಹಣ್ಣು
ಬಿಟ್ಟಿದ್ದಾರೆ; ನೀನು ಅವರ ಬಾಯಿಗೆ ಸಮೀಪ,
3 ಅಂತರಿಂದ್ರಿಯಕ್ಕೆ ದೂರ. ಯೆಹೋವನೇ, ನೀನು
ನನ್ನನ್ನು ತಿಳಿದಿದ್ದೀ, ನನ್ನನ್ನು ನೋಡುತ್ತಾ ನಿನ್ನೊಂ
ದಿಗೆ ಅನ್ಯೋನ್ಯವಾಗಿರುವ ನನ್ನ ಹೃದಯವನ್ನು ಪರೀ
ಕ್ಷಿಸುತ್ತೀ, ಅವರನ್ನು ಕುರಿಗಳನ್ನೋ ಎಂಬಂತೆ
ಕೊಲೆಗೆ ಎಳೆದು ವಧೆಯ ದಿನಕ್ಕೆ ಗೊತ್ತುಮಾಡು.
4 ಇನ್ನೆಷ್ಟರವರೆಗೆ ಎಲ್ಲಾ ಸೀಮೆಯ ಹುಲ್ಲು ಸೊಪ್ಪು
ಒಣಗಿ ದೇಶವು ದುಃಖಿಸುತ್ತಿರುವದು? ಅಲ್ಲಿನ ನಿವಾ
ಸಿಗಳು ದುಷ್ಟರಾಗಿರುವದರಿಂದ ಮೃಗಪಕ್ಷಿಗಳು ಬಡಿ
ದುಕೊಂಡು ಹೋಗಿವೆ; ಆಹಾ, ಅವನು ನಮ್ಮ ಅಂತ್ಯ
ಗತಿಯನ್ನು ನೋಡುವದೇ ಇಲ್ಲ ಎಂದು ಹೇಳಿದ್ದಾ
5 ರಷ್ಟೆ. [ಇಂತೆನ್ನುವ ನನಗೆ ಯೆಹೋವನು ಹೀಗೆ
ಹೇಳಿದ್ದಾನೆ—] ನೀನು ಕಾಲಾಳುಗಳ ಸಂಗಡ ಓಡಿ
ಆಯಾಸಗೊಂಡಿದ್ದರೆ ಕುದುರೆಗಳೊಂದಿಗೆ ಓಡಿ ಹೇಗೆ
ಮುಂಪಾಗುವಿ? ನಿರಪಾಯದೇಶದಲ್ಲಿ ನೀನು ನಿರ್ಭ
ಯವಾಗಿದ್ದರೂ [1]ಯೊರ್ದನಿನ ದಟ್ಟಡವಿಯಲ್ಲಿ ಏನು
6 ಮಾಡುವಿ? ನಿನ್ನ ಸಹೋದರರೂ ನಿನ್ನ ತಂದೆಯ ಮನೆ
ಯವರೂ ನಿನಗೆ ದ್ರೋಹಮಾಡಿರುತ್ತಾರೆ; ಇವರೇ
ನಿನ್ನ ಬೆನ್ನಟ್ಟುತ್ತಾ ಕೂಗಿರುತ್ತಾರೆ; ಒಳ್ಳೇ ಮಾತಾ
ಡಿದರೂ ಇವರನ್ನು ನಂಬಬೇಡ.

### ಯೆಹೂದದ ಕೆಟ್ಟ ನೆರೆಯುವರ ಗತಿ.

7 ನಾನು ನನ್ನ ಮನೆಯನ್ನು ತೊರೆದು ನನ್ನ ಸ್ವಾಸ್ತ್ಯ
ವನ್ನು ನಿರಾಕರಿಸಿದ್ದೇನೆ; ನನ್ನ ಪ್ರಾಣಪ್ರಿಯಳನ್ನು
8 ಅವಳ ಶತ್ರುಗಳ ಕೈಗೆ ಒಪ್ಪಿಸಿದ್ದೇನೆ. ನನ್ನ ಸ್ವಾಸ್ತ್ಯ
ವಾದ ಜನವು ನನ್ನ ಪಾಲಿಗೆ ಅರಣ್ಯದಲ್ಲಿರುವ ಸಿಂಹ
ದಂತಿದೆ; ಅದು ನನ್ನ ಮೇಲೆ ಗರ್ಜಿಸಿದೆ; ಆದಕಾರಣ
9 ಅದನ್ನು ಹಗೆಮಾಡಿದ್ದೇನೆ. ನನ್ನ ಸ್ವಾಸ್ತ್ಯವಾದ
ಜನವು ನನ್ನ ದೃಷ್ಟಿಗೆ ಚಿತ್ರವರ್ಣದ ಹದ್ದಿನಂತಿದೆಯೋ?
ಹದ್ದುಗಳು ಅದರ ಸುತ್ತಲು ವಿರುದ್ಧವಾಗಿ ಕೂತಿ
ವೆಯೋ? ಹೋಗಿರಿ, ಅದನ್ನು ತಿಂದುಬಿಡುವದಕ್ಕೆ
10 ಎಲ್ಲಾ ಕಾಡುಮೃಗಗಳನ್ನು ಕರತನ್ನಿರಿ. ಬಹು
ಮಂದಿ ಮಂದೆಗಾರರು ನನ್ನ ತೋಟವನ್ನು ಕೆಡಿಸಿ
ದ್ದಾರೆ; ನನ್ನ ಸ್ವಾಸ್ತ್ಯವನ್ನು ತುಳಿದು ನನಗೆ ಇಷ್ಟ
ವಾದ ಆ ಸೊತ್ತನ್ನು ಹಾಳು ಕಾಡನ್ನಾಗಿ ಮಾಡಿ
11 ದ್ದಾರೆ. ಹೌದು, ಹಾಳುಮಾಡಿದ್ದಾರೆ, ಅದು ಹಾಳಾಗಿ
ನನಗೆ ಗೋಳಿಡುತ್ತದೆ; ಯಾವನೂ ಮನಸ್ಸಿಗೆ ತಾರ
12 ದ್ದರಿಂದ ದೇಶವೆಲ್ಲಾ ಹಾಳುಬಿದ್ದಿದೆ. ಕೊಳ್ಳೆಗಾರರು
ಅರಣ್ಯದ ಎಲ್ಲಾ ಬೋಳುಗುಡ್ಡಗಳಲ್ಲಿಯೂ ಕಂಡು
ಬಂದಿದ್ದಾರೆ; ಯೆಹೋವನ ಖಡ್ಗವು ದೇಶದ ಒಂದು
ಕಡೆಯಿಂದ ಇನ್ನೊಂದು ಕಡೆಯ ವರೆಗೆ ನುಂಗಿಬಿಡು
13 ತ್ತಿದೆ; ಯಾರಿಗೂ ನೆಮ್ಮದಿಯಿಲ್ಲ. ಗೋಧಿಯನ್ನು
ಬಿತ್ತಿ ಮುಳ್ಳನ್ನು ಕೊಯ್ದಿದ್ದಾರೆ; ಕ್ಷೇಮಕೆಡುವಷ್ಟು
ಪ್ರಯಾಸಪಟ್ಟರೂ ಯಾವ ಲಾಭವನ್ನೂ ಹೊಂದ
ಲಿಲ್ಲ; ಯೆಹೋವನ ರೋಷಾಗ್ನಿಯ ನಿಮಿತ್ತ ನಿಮ್ಮ
ಬೆಳೆಯ ವಿಷಯವಾಗಿ ನಿಮಗೆ ನಾಚಿಕೆಯಾಗುವದು.
ಯೆಹೋವನು ತನ್ನ ಜನರಾದ ಇಸ್ರಾಯೇಲ್ಯರಿಗೆ 14
ದಯಪಾಲಿಸಿದ ಸ್ವಾಸ್ತ್ಯಕ್ಕೆ ಕೈಹಾಕುವ ತನ್ನ ಕೆಟ್ಟ
ನೆರೆಯವರ ವಿಷಯದಲ್ಲಿ ಹೀಗೆ ಹೇಳುತ್ತಾನೆ—
ಆಹಾ, ಅವರನ್ನು ಅವರವರ ಸೀಮೆಗಳೊಳಗಿಂದ
ಕಿತ್ತುಹಾಕಿ ಅವರ ಮಧ್ಯದಲ್ಲಿನ ಯೆಹೂದ ವಂಶ
ವನ್ನೂ ಕಿತ್ತುಹಾಕುವೆನು. ನೋಡಿರಿ, ನಾನು ಅವ 15
ರನ್ನು ಕಿತ್ತುಹಾಕಿದಮೇಲೆ ತಿರಿಗಿ ಅವರ ಮೇಲೆ ಕನಿ
ಕರಪಟ್ಟು ಪ್ರತಿಯೊಬ್ಬನನ್ನೂ ಅವನವನ ಸ್ವಾಸ್ತ್ಯಕ್ಕೂ
ಅವನವನ ದೇಶಕ್ಕೂ ಪುನಃ ಬರಮಾಡುವೆನು. ಇವರು 16
ಮೊದಲು ಬಾಳನ ಹೆಸರೆತ್ತಿ ಪ್ರಮಾಣಮಾಡುವ
ಅಭ್ಯಾಸವನ್ನು ನನ್ನ ಜನರಿಗೆ ಕಲಿಸಿಕೊಟ್ಟ ಪ್ರಕಾರ
ಈಗ ನನ್ನ ಹೆಸರನ್ನೆತ್ತಿ ಯೆಹೋವನ ಜೀವದಾಣೆ
ಎಂದು ಪ್ರಮಾಣಮಾಡುವ ನನ್ನ ಜನರ ಅಭ್ಯಾಸ
ವನ್ನು ಚೆನ್ನಾಗಿ ಮಾಡಿಕೊಂಡರೆ ನನ್ನ ಜನರ ಮಧ್ಯ
ದಲ್ಲಿ ನೆಲೆಗೊಂಡು ವೃದ್ಧಿಯಾಗುವರು. ಆದರೆ 17
ಯಾವ ಜನಾಂಗವು ಕೇಳುವದಿಲ್ಲವೋ ಅದನ್ನು
ನಾನು ಕಿತ್ತುಹಾಕುವೆನು, ಹೌದು, ಕಿತ್ತುಹಾಕಿ ನಾಶ
ಮಾಡುವೆನು ಎಂಬದು ಯೆಹೋವನ ನುಡಿ.

### ನಡುಕಟ್ಟಿನ ಸಾಮ್ಯ.

13 ಯೆಹೋವನು ನನಗೆ— ನೀನು ಹೋಗಿ ನಾರಿನ
ನಡುಕಟ್ಟನ್ನು ಕೊಂಡುಕೊಂಡು ಸೊಂಟಕ್ಕೆ ಬಿಗಿದು
ಕೋ, ನೀರಿನಲ್ಲಿ ನೆನಸಬೇಡ ಎಂದು ಅಪ್ಪಣೆಕೊ
ಟ್ಟನು. ಆಗ ನಾನು ಯೆಹೋವನ ಮಾತಿನಂತೆ ನಡು 2
ಕಟ್ಟನ್ನು ಕೊಂಡುಕೊಂಡು ಸೊಂಟಕ್ಕೆ ಬಿಗಿದುಕೊಂಡೆ
ನು. ಆ ಮೇಲೆ— ನೀನು ಕೊಂಡು ಸೊಂಟಕ್ಕೆ ಬಿ 3, 4
ಗಿದ ನಡುಕಟ್ಟನ್ನು ತೆಗೆದುಕೊಂಡು ಹೊರಟು ಯೂ
ಫ್ರೇಟೀಸ್ ನದಿಗೆ ಹೋಗಿ ಅದನ್ನು ಅಲ್ಲಿ ಬಂಡೆಯ
ಸಂದಿನೊಳಗೆ ಬಚ್ಚಿಡು ಎಂಬದಾಗಿ ಯೆಹೋವನ ಎರ
ಡನೆಯ ಮಾತು ನನಗೆ ಬಂತು. ಆಗ ಯೆಹೋವನ 5
ಅಪ್ಪಣೆಯ ಮೇರೆಗೆ ನಾನು ಹೋಗಿ ಯೂಫ್ರೇಟೀಸ್
ನದಿಯ ಬಳಿಯಲ್ಲಿ ಅದನ್ನು ಬಚ್ಚಿಟ್ಟೆನು. ಬಹು 6
ದಿನಗಳ ಮೇಲೆ ಯೆಹೋವನು ನನಗೆ— ಹೊರಡು,
ಯೂಫ್ರೇಟೀಸ್ ನದಿಗೆ ಹೋಗಿ ಅಲ್ಲಿ ಬಚ್ಚಿಡ ಬೇ
ಕೆಂದು ನಾನು ಅಪ್ಪಣೆಕೊಟ್ಟ ನಡುಕಟ್ಟನ್ನು ಅಲ್ಲಿಂದ
ತೆಗೆ ಎಂದು ಹೇಳಿದನು. ಆಗ ನಾನು ಯೂಫ್ರೇ 7
ಟೀಸ್ ನದಿಗೆ ಹೋಗಿ ಅಗಿದು ನಾನು ಬಚ್ಚಿಟ್ಟ ಸ್ಥಳ
ದೊಳಗಿಂದ ನಡುಕಟ್ಟನ್ನು ತೆಗೆದೆನು; ಆಹಾ, ಅದು
ಕೆಟ್ಟು ಯಾವ ಕೆಲಸಕ್ಕೂ ಬಾರದ್ದಾಗಿತ್ತು. ಆಗ 8
ಯೆಹೋವನು ಈ ವಾಕ್ಯವನ್ನು ನನಗೆ ದಯಪಾಲಿಸಿ
ದನು— ಇದು ಯೆಹೋವನಾದ ನನ್ನ ನುಡಿ— 9
ಇದೇ ಪ್ರಕಾರವಾಗಿ ನಾನು ಯೆಹೂದದ ದೊಡ್ಡ
ಸ್ತಿಕೆಯನ್ನೂ ಯೆರೂಸಲೇಮಿನ ಬಲು ದೊಡ್ಡಸ್ತಿಕೆ
ಯನ್ನೂ ಕೆಡಿಸಿಬಿಡುವೆನು. ನನ್ನ ಮಾತುಗಳನ್ನು 10
ಕೇಳಲೊಲ್ಲದೆ ತಮ್ಮ ಹೃದಯದ ಹಟದಂತೆ ನಡೆದು

1) ಅಥವಾ: ಯೊರ್ದನ್ ಹೊಳೆಯು ಉಕ್ಕೇರುವಾಗ.

ಅನ್ಯದೇವತೆಗಳನ್ನು ಹಿಂಬಾಲಿಸಿ ಸೇವಿಸಿ ಪೂಜಿಸು
ತ್ತಿರುವ ಈ ದುಷ್ಟ ಜನರು ಯಾವ ಕೆಲಸಕ್ಕೂ ಬಾರದ
11 ಈ ನಡುಕಟ್ಟಿಗೆ ಸಾಟಿಯಾಗುವರು. ಸಮಸ್ತ
ಇಸ್ರಾಯೇಲ್ ವಂಶವೂ ಸಕಲ ಯೆಹೂದ ವಂಶವೂ
ನನ್ನ ಪ್ರಜೆಯಾಗಿದ್ದು ನನಗೆ ಹೆಸರುವಾಸಿಯೂ
ಸ್ತೋತ್ರವೂ ಮಹಿಮೆಯೂ ಆಗಿರಲೆಂದು ನಡುಕಟ್ಟು
ಸೊಂಟಕ್ಕೆ ಬಿಗಿದಿರುವಂತೆ ಇವರನ್ನು ಬಿಗಿದುಕೊಂಡಿ
ದ್ದೇನೆ; ಆದರೂ ಇವರು ಕೇಳಲೊಲ್ಲದೆ ಹೋದರು
ಎಂದು ಯೆಹೋವನು ಅನ್ನುತ್ತಾನೆ.

ಗಡಿಗೆಗಳ ಸಾಮ್ಯ.

12 ಹೀಗಿರಲು ಪ್ರತಿಯೊಂದು ಗಡಿಗೆಯು ದ್ರಾಕ್ಷಾರಸ
ದಿಂದ ತುಂಬಿರುವದು ಎಂಬದಾಗಿ ಇಸ್ರಾಯೇಲ್ಯರ
ದೇವರಾದ ಯೆಹೋವನು ಹೇಳುವ ಮಾತನ್ನು ಕೇಳಿರಿ
ಎಂದು ನೀನು ಅವರಿಗೆ ಸಾರು; ಆಗ ಅವರು ನಿನಗೆ—
ಪ್ರತಿಯೊಂದು ಗಡಿಗೆಯು ದ್ರಾಕ್ಷಾರಸದಿಂದ ತುಂಬಿರು
ವದು ನಮಗೆ ಗೊತ್ತಿಲ್ಲವೋ ಎಂದು ಹೇಳುವರು.
13 ಆಗ ನೀನು ಅವರಿಗೆ—ಯೆಹೋವನ ಈ ಮಾತನ್ನು
ಕೇಳಿರಿ, ದಾವೀದನ ಸಿಂಹಾಸನವನ್ನೇರಿದ ಅರಸ
ರನ್ನೂ ಯಾಜಕರನ್ನೂ ಪ್ರವಾದಿಗಳನ್ನೂ ಯೆರೂಸಲೇ
ಮಿನ ಸಕಲ ನಿವಾಸಿಗಳನ್ನೂ ಅಂತು ದೇಶದ ಜನ
14 ರೆಲ್ಲರನ್ನೂ ನಾನು ಅಮಲಿನಿಂದ ತುಂಬಿಸಿ ಹಿರಿಕಿರಿಯ
ರಾದ ಸಮಸ್ತರನ್ನು ಒಬ್ಬರಿಗೊಬ್ಬರು ಬಡಿದಾಡುವಂತೆ
ಮಾಡುವೆನು; ನಾನು ಅವರನ್ನು ಉಳಿಸೆನು, ಕನಿಕರಿ
ಸೆನು, ಕರುಣಿಸೆನು, ನಾಶಮಾಡದೆ ಬಿಡೆನು; ಇದು
ಯೆಹೋವನ ನುಡಿ.

ಯೆಹೂದವನ್ನು ಎಚ್ಚರಿಸಿದ್ದು.

15 ಕಿವಿಗೊಟ್ಟು ಕೇಳಿರಿ, ಹೆಮ್ಮೆಪಡಬೇಡಿರಿ; ಯೆಹೋ
16 ವನೇ ಮಾತಾಡಿದ್ದಾನೆ. ನಿಮ್ಮ ದೇವರಾದ ಯೆಹೋ
ವನನ್ನು ಘನಪಡಿಸಿರಿ; ಇಲ್ಲದಿದ್ದರೆ ಸ್ವಲ್ಪ ಕಾಲ
ದೊಳಗೆ ಆತನು ಕತ್ತಲನ್ನು ಉಂಟುಮಾಡುವನು,
ನಿಮ್ಮ ಕಾಲುಗಳು ಮೊಬ್ಬಿನ ಬೆಟ್ಟಗಳಲ್ಲಿ ಮುಗ್ಗರಿ
ಸುವವು; ನೀವು ಬೆಳಕನ್ನು ನಿರೀಕ್ಷಿಸುತ್ತಿರುವಾಗ
ಆತನು ಅದನ್ನು ಮರಣಾಂಧಕಾರದ ಕಾರ್ಗತ್ತಲನ್ನಾ
17 ಗಿಮಾಡುವನು. ನೀವು ಕೇಳದಿದ್ದರೆ ನನ್ನ ಆತ್ಮವು
ಗುಟ್ಟಾದ ಸ್ಥಳದಲ್ಲಿ ನಿಮ್ಮ ಗರ್ವದ ನಿಮಿತ್ತ ಗೋ
ಳಾಡುವದು; ಯೆಹೋವನ ಮಂದೆಯು ಸೆರೆಯಾಗಿ
ಹೋದದರಿಂದ ಬಹಳವಾಗಿ ಅಳುವೆನು, ನನ್ನ ನೇತ್ರವು
ಅಶ್ರುಧಾರೆಯನ್ನು ಸುರಿಸುವದು.

ರಾಜನನ್ನೂ ರಾಜಮಾತೆಯನ್ನೂ ಎಚ್ಚರಿಸಿದ್ದು.

18 ರಾಜನಿಗೂ ರಾಜಮಾತೆಗೂ—ನೆಲದಲ್ಲಿ ಕೂತು
ಕೊಳ್ಳಿರಿ, 1)ನಿಮ್ಮ ಅಂದದ ಕಿರೀಟವು ನಿಮ್ಮ ತಲೆ
ಯಿಂದ ಕೆಳಗೆ ಬಿದ್ದಿದೆ ಎಂದು 2)ಹೇಳಿರಿ. ದಕ್ಷಿ
ದೇಶದ ಪಟ್ಟಣಗಳು ಮುತ್ತಿಗೆಯಾಗಿವೆ, ಅವುಗಳನ್
ಬಿಡಿಸಲು ಯಾರೂ ಇಲ್ಲ; ಯೆಹೂದವೆಲ್ಲಾ ಸೆರೆಹೊ
ಗಿದೆ, ಸಂಪೂರ್ಣವಾಗಿ ಸೆರೆಯಾಗಿದೆ.

ಬಾಬೆಲಿನಿಂದ ಯೆಹೂದಕ್ಕೆ ಬರುವ ದುರ್ಗತಿ.

[ಚೀಯೋನೇ,] ಕಣ್ಣೆತ್ತು, ಬಡಗಲಿಂದ ಬರುವ
ರನ್ನು ನೋಡು; ನಿನಗೆ ಒಪ್ಪಿಸಿದ ಹಿಂಡು, ನಿನ್
ಅಂದವಾದ ಹಿಂಡು ಎಲ್ಲಿ? ನಿನ್ನಲ್ಲಿ ಬಳಿಕೆಗೊಳ್ಳು
ವಂತೆ ನೀನು ಅಭ್ಯಾಸಮಾಡಿಸಿದವರನ್ನು [ಯೆಹೋ
ವನು] ನಿನಗೆ ತಲೆಯಾಗಿ ನೇಮಿಸುವಾಗ ಏನು ಹೇ
ಳುವಿ? ವೇದನೆಯು ನಿನ್ನನ್ನು ಹೆರುವವಳನ್ನೋ
ಎಂಬಂತೆ ಹಿಡಿಯುವದಲ್ಲವೆ. ಇವು ನನಗೆ ಏಕೆ
ಸಂಭವಿಸಿದವು ಎಂದು ನೀನು ಮನದೊಳಗೆ ಅಂದು
ಕೊಂಡರೆ ನಿನ್ನ ನೆರಿಗೆಯು ಕೀಳಲ್ಪಟ್ಟು ನಿನ್ನ ಹಿಮ್ಮ
ಡಿಯು ನಾಚಿಕೆಗೆ ಈಡಾದದ್ದಕ್ಕೆ ನಿನ್ನ ಮಹಾಪಾಪವೇ
ಕಾರಣ ಎಂದು ನಿನಗೆ ಗೊತ್ತಾಗುವದು. ಕೂಷ್ಯನು
ತನ್ನ ಚರ್ಮವನ್ನು ಮಾರ್ಪಡಿಸಬಲ್ಲನೇ? ಚಿರತೆಯು
ತನ್ನ ಚುಕ್ಕೆಗಳನ್ನು ಬದಲಾಯಿಸೀತೇ? ಹೀಗಾದರೆ
ದುಷ್ಟತನದಲ್ಲಿ ಶಿಕ್ಷಿತರಾದ ನೀವು ಶಿಷ್ಟತನದಲ್ಲಿ ನಡೆ
ಯಬಹುದು. ಆದಕಾರಣ ಬೈಲುಗಾಳಿಯು ಬಡಿದು
ಕೊಂಡು ಹೋಗುವ ಒಣಹುಲ್ಲನ್ನೋ ಎಂಬಂತೆ
ನಾನು ಅವರನ್ನು ಚದರಿಸಿಬಿಡುವೆನು. ನೀನು
ನನ್ನನ್ನು ಮರೆತು ಸುಳ್ಳನ್ನು ನಂಬಿದ್ದರಿಂದ ಇದೇ
ನಿನ್ನ ಪಾಲು, ಇದೇ ನಾನು ನಿನಗೆ ಅಳೆದುಕೊಟ್ಟ
ಭಾಗ ಎಂದು ಯೆಹೋವನು ಅನ್ನುತ್ತಾನೆ. ನಿನ್ನ
ನೆರಿಗೆಯನ್ನು ನಿನ್ನ ಕಣ್ಣಮುಂದೆಯೇ ಕೀಳಿಸುವೆನು,
ನಿನಗೆ ಅವಮಾನವಾಗುವದು. ನಾನು ನಿನ್ನ ವ್ಯಭಿ
ಚಾರಗಳನ್ನು, ನಿನ್ನ ಹೇಕಾರಗಳನ್ನು, ನಿನ್ನ ಕೆಟ್ಟ
ಸೂಳೆಗಾರಿಕೆಯನ್ನು, ಅಂತು ಗುಡ್ಡಗಳಲ್ಲಿಯೂ ಬೈಲಿ
ನಲ್ಲಿಯೂ ನೀನು ನಡಿಸಿದ ಅಸಹ್ಯಕಾರ್ಯಗಳನ್ನು
ನೋಡಿದ್ದೇನೆ. ಯೆರೂಸಲೇಮೇ, ನಿನ್ನ ಗತಿಯನ್ನು
ಏನೆಂದು ಹೇಳಲಿ! ನೀನು ಶುದ್ಧಳಾಗಲು ಇನ್ನೆಷ್ಟು
ಕಾಲ ಬೇಕು?

ಯೆಹೂದಕ್ಕೆ ಸಂಭವಿಸುವ ಕ್ಷಾಮ.

ಬರದ ವಿಷಯವಾಗಿ ಯೆಹೋವನು ಯೆರೆಮೀ 1
ಯನಿಗೆ ದಯಪಾಲಿಸಿದ ನುಡಿ.
ಯೆಹೂದವು ದುಃಖಿಸುತ್ತದೆ, ಅದರ 3)ಊರುಗಳ
ವರು ಕಂಗೆಟ್ಟು ಕರ್ರಗಾಗಿ ನೆಲದ ಮೇಲೆ ಬಿದ್ದಿ
ದ್ದಾರೆ, ಯೆರೂಸಲೇಮಿನವರ ಗೋಳಾಟವು ಕೇಳಿಸು
ತ್ತದೆ. ಅವರಲ್ಲಿನ ಶ್ರೀಮಂತರು ತಮ್ಮ ಕೈಕೆಳಗಿನವ
ರನ್ನು ನೀರಿಗೆ ಕಳುಹಿಸುತ್ತಾರೆ; ಅವರು ಕೊಳಗಳಿಗೆ
ಹೋದಾಗ ನೀರು ಕಾಣುವದಿಲ್ಲ, ಬರೀ ಪಾತ್ರೆಗಳನ್ನು
ತೆಗೆದುಕೊಂಡು ಹಿಂದಕ್ಕೆ ಬರುತ್ತಾರೆ; ಆಶೆಗೆಟ್ಟು

1) ಪಾಠಾಂತರ: ನಿಮ್ಮ ಶಿರೋವೇಷ್ಟನಗಳಾದ ಅಂದದ ಕಿರೀಟಗಳು ಕೆಳಗೆ ಬಿದ್ದಿವೆ. 2) ಪಾಠಾಂತರ: ಹೇ
3) ಮೂಲ: ಬಾಗಿಲುಗಳು.

4 ನಾಚಿಕೆಪಟ್ಟು ಮೋರೆಮುಚ್ಚಿಕೊಳ್ಳುತ್ತಾರೆ. ದೇಶ
ದಲ್ಲಿ ಮಳೆಯಿಲ್ಲದೆ ಭೂಮಿಯು ಬಿರುಕುಬಿಟ್ಟಿರು
ವದರಿಂದ ರೈತರು ನಾಚಿಕೆಪಟ್ಟು ಮೋರೆಮುಚ್ಚಿ
5 ಕೊಳ್ಳುತ್ತಾರೆ. ಇದಲ್ಲದೆ ಹುಲ್ಲೆಯು ಕಾಡಿನಲ್ಲಿ
ಈದು ಹುಲ್ಲಿಲ್ಲದ ಕಾರಣ ತನ್ನ ಮರಿಯನ್ನು ಬಿಟ್ಟು
6 ಬಿಡುತ್ತದೆ. ಕಾಡುಕತ್ತೆಗಳು ಬೋಳುಗುಡ್ಡಗಳಲ್ಲಿ
ನಿಂತುಕೊಂಡು ನರಿಗಳಂತೆ ಅಸುರುಸುರಾಗುತ್ತಾ
ಗಾಳಿಯನ್ನು ಹಾರೈಸುತ್ತವೆ, ಸೊಪ್ಪುಸದೆಯಿಲ್ಲದೆ
ಕಂಗೆಡುತ್ತವೆ.

ಪ್ರವಾದಿಯು ಸ್ವಜನರಿಗಾಗಿ ಮಾಡಿದ ಪ್ರಾರ್ಥನೆ.

7 ಯೆಹೋವನೇ, ನಮ್ಮ ಅಪರಾಧಗಳು ನಮಗೆ
ವಿರುದ್ಧವಾಗಿ ಸಾಕ್ಷಿಕೊಟ್ಟರೂ ನಿನ್ನ ಹೆಸರಿನ ನಿಮಿತ್ತ
ಕಾರ್ಯವನ್ನು ಸಾಧಿಸು; ನಮ್ಮ ದ್ರೋಹಗಳು
8 ಬಹಳ, ನಿನಗೆ ಪಾಪವನ್ನು ಮಾಡಿದ್ದೇವೆ. ಇಸ್ರಾ
ಯೇಲ್ಯರ ನಿರೀಕ್ಷೆಯೇ, ಇಕ್ಕಟ್ಟಿನಲ್ಲಿ ಅವರಿಗೆ ರಕ್ಷ
ಕನೇ, ಏಕೆ ದೇಶದಲ್ಲಿ ಪರದೇಶಿಯಂತೆಯೂ 1)ಇಳಿದು
ಕೊಳ್ಳುವದಕ್ಕೆ ಗುಡಾರಹಾಕಿಕೊಳ್ಳುವ ಪ್ರಯಾಣಿ
9 ಕನ ಹಾಗೆಯೂ ಇದ್ದೀ? ಏಕೆ ಸ್ತಬ್ಧನಂತೆಯೂ
ರಕ್ಷಿಸಲಾರದ ಶೂರನ ಹಾಗೆಯೂ ಇದ್ದೀ? ಆದರೂ
ಯೆಹೋವನೇ, ನೀನು ನಮ್ಮ ಮಧ್ಯದಲ್ಲಿರುತ್ತೀ,
ನಾವು ನಿನ್ನ ಹೆಸರಿನವರು, ನಮ್ಮನ್ನು ಕೈಬಿಡಬೇಡ.

ಯೆಹೋವನು ತನ್ನ ಜನರನ್ನೂ ಅವರನ್ನು
ವಂಚಿಸಿದ ಪ್ರವಾದಿಗಳನ್ನೂ ಗದರಿಸಿದ್ದು.

10 ಯೆಹೋವನು ಈ ಜನರನ್ನು ಕುರಿತು—ಇವರು
[ನನ್ನನ್ನು ಪ್ರಯಾಣಿಕನು ಎಂದ] ಹಾಗೆಯೇ ಅಲೆ
ಯುವದಕ್ಕೆ ಇಷ್ಟಪಟ್ಟಿದ್ದಾರೆ, ಕಾಲನ್ನು ಹಿಂದೆಗಿಯ
ಲಿಲ್ಲ; ಆದಕಾರಣ ಯೆಹೋವನಾದ ನಾನು ಇವ
ರನ್ನು ಕಟಾಕ್ಷಿಸೆನು; ಈಗಲೇ ಇವರ ಅಪರಾಧವನ್ನು
ಮನಸ್ಸಿಗೆ ತಂದುಕೊಂಡು ಇವರ ಪಾಪಗಳಿಗೆ ದಂಡನೆ
11 ಯನ್ನು ವಿಧಿಸುವೆನು ಎಂದು ಹೇಳಿದ್ದಾನೆ. ಮತ್ತು
ಯೆಹೋವನು ನನಗೆ—ಈ ಜನರ ಹಿತವನ್ನು
ಬಯಸಿ ಇವರಿಗೋಸ್ಕರ ಪ್ರಾರ್ಥನೆ ಮಾಡಬೇಡ.
12 ಇವರು ಉಪವಾಸಮಾಡುವಾಗ ಇವರ ಮೊರೆಯನ್ನು
ಕೇಳೆನು; ಹೋಮನೈವೇದ್ಯಗಳನ್ನು ಅರ್ಪಿಸಲು
ಸ್ವೀಕರಿಸೆನು; ಖಡ್ಗಕ್ಷಾಮವ್ಯಾಧಿಗಳಿಂದ ಇವರನ್ನು
13 ನಿರ್ಮೂಲಮಾಡುವೆನು ಎಂದು ಹೇಳಿದನು. ಅದಕ್ಕೆ
ನಾನು—ಅಯ್ಯೋ, ಕರ್ತನಾದ ಯೆಹೋವನೇ,
ಇಗೋ ಪ್ರವಾದಿಗಳು ಈ ಜನರಿಗೆ—ಖಡ್ಗವು ನಿಮ್ಮ
ಕಣ್ಣಿಗೆ ಕಾಣದು, ಕ್ಷಾಮವು ನಿಮಗೆ ಸಂಭವಿಸದು;
2)ಯೆಹೋವನು ಈ ಸ್ಥಳದಲ್ಲಿ ಸ್ಥಿರಸಮಾಧಾನವನ್ನು
ನಿಮಗೆ ಕೊಡುವನು ಎಂದು ನುಡಿಯುತ್ತಾರೆ
14 ಎಂಬದಾಗಿ ಹೇಳಿದೆನು. ಆಗ ಯೆಹೋವನು ನನಗೆ
ಹೀಗೆ ನುಡಿದನು—ಪ್ರವಾದಿಗಳು ನನ್ನ ಹೆಸರಿನಿಂದ
ಸುಳ್ಳಾಗಿ ಪ್ರವಾದಿಸುತ್ತಾರೆ. ನಾನು ಅವರನ್ನು
ಕಳುಹಿಸಲಿಲ್ಲ; ಅವರಿಗೆ ಅಪ್ಪಣೆಕೊಡಲಿಲ್ಲ, ಏನೂ
ಹೇಳಲಿಲ್ಲ; ಅವರು ಸುಳ್ಳಾದ ದಿವ್ಯದರ್ಶನವನ್ನೂ
ಕಣಿಯನ್ನೂ ಮಾಯಾತಂತ್ರವನ್ನೂ ಸ್ವಕಲ್ಪಿತಮೋಸ
ವನ್ನೂ ನಿಮಗೆ ಪ್ರಕಟಿಸುತ್ತಾರೆ. ಆದಕಾರಣ ನನ್ನ 15
ಅಪ್ಪಣೆಯಿಲ್ಲದೆ ನನ್ನ ಹೆಸರಿನಿಂದ ಪ್ರವಾದಿಸುತ್ತಾ
ಖಡ್ಗವೂ ಕ್ಷಾಮವೂ ಈ ದೇಶಕ್ಕೆ ಬಾರವು ಎಂದು
ಬೋಧಿಸುವ ಪ್ರವಾದಿಗಳ ವಿಷಯದಲ್ಲಿ ಯೆಹೋವ
ನಾದ ನಾನು—ಖಡ್ಗದಿಂದಲೂ ಕ್ಷಾಮದಿಂದಲೂ ಈ
ಪ್ರವಾದಿಗಳು ನಿರ್ಮೂಲರಾಗುವರು ಎಂದು ಹೇಳು
ತ್ತೇನೆ. ಮತ್ತು ಇವರ ಪ್ರವಾದನೆಯನ್ನು ಕೇಳುವ 16
ಜನರು ಕ್ಷಾಮಖಡ್ಗಗಳ ದೆಸೆಯಿಂದ ಯೆರೂಸಲೇ
ಮಿನ ಬೀದಿಗಳಲ್ಲಿ ಬಿಸಾಡಲ್ಪಡುವರು; ಅವರನ್ನೂ
ಅವರ ಹೆಂಡರುಮಕ್ಕಳನ್ನೂ ಹೂಣಿಡುವದಕ್ಕೆ ಯಾರೂ
ಇರುವದಿಲ್ಲ; ನಾನು ಅವರ ದುಷ್ಟತನವನ್ನೇ ಅವರ
ಮೇಲೆ ಹೊಯ್ದುಬಿಡುವೆನು. ನೀನು ಈ ಮಾತನ್ನು 17
ಅವರಿಗೆ ಹೇಳು—ನನ್ನ ಕಣ್ಣೀರು ರಾತ್ರೀಹಗಲು
ನಿರಂತರ ಸುರಿಯಲಿ; ಏಕಂದರೆ ನನ್ನ ಜನವೆಂಬ
ಯುವತಿಗೆ ದೊಡ್ಡ ಗಾಯವಾಯಿತು, ಹೌದು ಗಡು
ಸಾದ ಪೆಟ್ಟು ಬಿತ್ತು. ನಾನು ಊರಹೊರಗೆ ಹೋದರೆ 18
ಇಗೋ ಖಡ್ಗದಿಂದ ಹತರಾದವರು; ಊರೊಳಗೆ
ಬಂದರೆ ಇಗೋ, ಕ್ಷಾಮದಿಂದ ಕೊರಗುವವರು!
3)ಪ್ರವಾದಿಗಳೂ ಯಾಜಕರೂ ತಮಗೆ ಗೊತ್ತಿಲ್ಲದ
ದೇಶಕ್ಕೆ ಗಡೀಪಾರಾಗಿದ್ದಾರೆ.

ಪ್ರವಾದಿಯು ಸ್ವಜನರಿಗಾಗಿ ಮಾಡಿದ ಇನ್ನೊಂದು ಪ್ರಾರ್ಥನೆ.

ನೀನು ಯೆಹೂದವನ್ನು ಸಂಪೂರ್ಣವಾಗಿ ತ್ಯಜಿಸಿ 19
ಬಿಟ್ಟಿದ್ದೀಯೋ? ಚೀಯೋನಿನ ಮೇಲೆ ಮನಃಪೂರ್ವ
ಕವಾಗಿ ಅಸಹ್ಯಪಟ್ಟಿದ್ದೀಯೋ? ನಮಗೆ ಗುಣವಾಗ
ದಂತೆ ಏಕೆ ಪೆಟ್ಟುಹೊಡೆದಿ? ಸುಖವನ್ನು ನಿರೀಕ್ಷಿಸಿ
ದೆವು, ಯಾವ ಮೇಲೂ ಆಗಲಿಲ್ಲ; ಕ್ಷೇಮಕಾಲವನ್ನು
ಎದುರುನೋಡಿದೆವು, ಹಾ, ಅಂಜಿಕೆಯೇ! ಯೆಹೋ 20
ವನೇ, ನಮ್ಮ ದುಷ್ಟತನವನ್ನೂ ನಮ್ಮ ಪಿತೃಗಳ
ದುರಾಚಾರವನ್ನೂ ತಿಳಿದುಕೊಂಡಿದ್ದೇವೆ; ನಿನಗೇ
ಪಾಪಮಾಡಿದ್ದೇವಲ್ಲ. ನಿನ್ನ ನಾಮದ ಮೇಲೆ ದೃಷ್ಟಿ 21
ಯಿಡು, ನಿನ್ನ ಮಹಿಮೆಯ ಸಿಂಹಾಸನವನ್ನು ಅಸಡ್ಡೆ
ಮಾಡಬೇಡ, ಅವಮಾನಪಡಿಸಬೇಡ; ನೀನು ನಮ್ಮೊಂ
ದಿಗೆ ಮಾಡಿಕೊಂಡ ಒಡಂಬಡಿಕೆಯನ್ನು ಜ್ಞಾಪಕಕ್ಕೆ
ತಂದುಕೋ, ಅದನ್ನು ಭಂಗಪಡಿಸದಿರು. ಜನಾಂಗ 22
ಗಳ ವ್ಯರ್ಥವಿಗ್ರಹಗಳೊಳಗೆ ಮಳೆಯನ್ನು ಸುರಿಸ
ಬಲ್ಲವುಗಳುಂಟೇ? ಆಕಾಶವು ತಾನಾಗಿ ಹದಮಳೆ
ಗಳನ್ನು ಕೊಟ್ಟೀತೇ? ನಮ್ಮ ದೇವರಾದ ಯೆ
ಹೋವಾ, ನೀನೇ ವೃಷ್ಟಿಪ್ರದನು; ನಾವು ನಿನ್ನನ್ನೇ ನಿರೀ
ಕ್ಷಿಸುವೆವು; ನೀನು ಇವುಗಳನ್ನೆಲ್ಲಾ ನಡಿಸುವವನಾಗಿ
ದ್ದೀಯಷ್ಟೆ.

---

1) ಅಥವಾ: ದಾರಿ ಬಿಟ್ಟು ರಾತ್ರಿ ತಂಗುವ. 2) ಮೂಲ: ನಾನು. . . . ಕೊಡುವೆನು. 3) ಅಥವಾ: ಪ್ರವಾದಿಗಳೂ ಯಾಜ
ಕರೂ ಜ್ಞಾನಶೂನ್ಯರಾಗಿ ದೇಶದಲ್ಲಿ ತಿರುಗುತ್ತಾ ತಮ್ಮ ಉದ್ಯೋಗವನ್ನು ವ್ಯಾಪಾರಮಾಡುತ್ತಾರಷ್ಟೆ.

ಯೆಹೋವನು ಪ್ರವಾದಿಯ ವಿಜ್ಞಾಪನೆಯನ್ನು ಚಿತ್ತೈಸದೆ
ಯೆಹೂದಕ್ಕೆ ಕಠಿಣದಂಡನೆಯನ್ನು ವಿಧಿಸಿದ್ದು.

15 ಯೆಹೋವನು ನನಗೆ ಹೀಗೆ ಹೇಳಿದನು—ಮೋ
ಶೆಯೂ ಸಮುವೇಲನೂ ನನಗೆ ವಿಜ್ಞಾಪಿಸಿದರೂ
ನನ್ನ ಮನಸ್ಸು ಈ ಜನರ ಕಡೆಗೆ ತಿರುಗದು; ನನ್ನ
ಕಣ್ಣೆದುರಿನಿಂದ ಇವರನ್ನು ನೂಕಿಬಿಡು, ತೊಲಗಿಹೋ
2 ಗಲಿ! ಅವರು—ನಾವು ಎಲ್ಲಿಗೆ ಹೋಗೋಣ ಎಂದು
ನಿನ್ನನ್ನು ಕೇಳಲು ನೀನು ಅವರಿಗೆ—ಮರಣವ್ಯಾಧಿಗೆ
ಗೊತ್ತಾದವರು ಮರಣವ್ಯಾಧಿಗೆ, ಖಡ್ಗಕ್ಕೆ ಗೊತ್ತಾ
ದವರು ಖಡ್ಗಕ್ಕೆ, ಕ್ಷಾಮಕ್ಕೆ ಗೊತ್ತಾದವರು ಕ್ಷಾ
ಮಕ್ಕೆ, ಸೆರೆಗೆ ಗೊತ್ತಾದವರು ಸೆರೆಗೆ ಗುರಿಯಾಗಿ
ಹೋಗಲಿ; ಇದೇ ಯೆಹೋವನ ನುಡಿ ಎಂದು ಹೇಳು.
3 ನಾನು ಅವರಿಗೆ ನಾಲ್ಕು ವಿಧವಾದ ಬಾಧೆಗಳನ್ನು,
ಅಂದರೆ ಕಡಿಯುವದಕ್ಕೆ ಖಡ್ಗವನ್ನು, ಸೀಳುವದಕ್ಕೆ
ನಾಯಿಗಳನ್ನು, ನುಂಗಿ ಹಾಳುಮಾಡುವದಕ್ಕೆ ಆಕಾಶ
ಪಕ್ಷಿಗಳನ್ನೂ ಭೂಜಂತುಗಳನ್ನೂ ನೇಮಿಸುವೆನು
4 ಎಂಬದು ಯೆಹೋವನಾದ ನನ್ನ ಮಾತು. ಹಿಜ್ಕೀಯನ
ಮಗನೂ ಯೆಹೂದದ ಅರಸನೂ ಆದ ಮನಸ್ಸೆಯು
ಯೆರೂಸಲೇಮಿನಲ್ಲಿ ನಡಿಸಿದ್ದಕ್ಕೆ ಪ್ರತಿಫಲವಾಗಿ ನಾನು
ಅವರನ್ನು ಲೋಕದ ಸಮಸ್ತರಾಜ್ಯಗಳಿಗೆ ಭಯಾಸ್ಪದ
5 ವಾಗುವಂತೆ ಮಾಡುವೆನು. ಯೆರೂಸಲೇಮೇ,
ಯಾರು ನಿನ್ನನ್ನು ಕರುಣಿಸುವರು? ನಿನಗಾಗಿ ಯಾರು
ಬಡುಕೊಳ್ಳುವರು? ನಿನ್ನ ಕ್ಷೇಮವನ್ನು ವಿಚಾರಿಸಲು
6 ಯಾರು ನಿನ್ನ ಕಡೆಗೆ ತಿರುಗುವರು? ಯೆಹೋವನ
ಈ ಮಾತನ್ನು ಕೇಳು—ನೀನು ನನ್ನನ್ನು ಅಲ್ಲಗಳೆದು
ಹಿಂದಿರುಗಿದ್ದೀ; ಆದಕಾರಣ ನಾನು ನಿನ್ನ ಮೇಲೆ ಕೈ
ಯೆತ್ತಿ ನಿನ್ನನ್ನು ನಾಶಮಾಡುವೆನು; ಕ್ಷಮಿಸಿ ಕ್ಷಮಿಸಿ
7 ಸಾಕಾಯಿತು. ನನ್ನ ಜನರನ್ನು ದೇಶದ ಉಕ್ಕಡ
ಗಳಲ್ಲಿ ಕವೆಗೋಲಿನಿಂದ ಹಾರಿಸಿ ತೂರುವೆನು;
ಅವರನ್ನು ಪುತ್ರಶೋಕಕ್ಕೆ ಈಡುಮಾಡಿ ನಾಶಪಡಿಸು
ವೆನು; 1)ಅವರು ಹೋದ ದಾರಿಯಿಂದ ಹಿಂದಿರುಗರು.
8 ಅವರ ವಿಧವೆಯರು ನನ್ನ ಭಾಗಕ್ಕೆ ಸಮುದ್ರದ ಉಸು
ಬಿಗಿಂತ ಹೆಚ್ಚಾಗಿರುವರು; ಯುವಕರ ತಾಯಿಗಳ
ಮೇಲೆ ಕೊಳ್ಳೆಹೊಡೆಯುವವನನ್ನು ಮಧ್ಯಾಹ್ನದಲ್ಲೇ
ಬರಮಾಡುವೆನು; ಅವರ ಮೇಲೆ ಕಳವಳವನ್ನೂ ದಿಗಿ
9 ಲನ್ನೂ ತಟ್ಟನೆ ಬೀಳಿಸುವೆನು. ಏಳು ಮಂದಿ ಮಕ್ಕ
ಳನ್ನು ಹೆತ್ತ ಭಾಗ್ಯವಂತಳೂ ಬಳಲಿ ಪ್ರಾಣಬಿಟ್ಟಂತಿ
ದ್ದಾಳೆ, ಹಗಲಿನಲ್ಲಿಯೇ ಆಕೆಯ ಪಾಲಿಗೆ ಸೂರ್ಯನು
ಮುಣುಗಿದ್ದಾನೆ, ಆಶಾಭಂಗಪಟ್ಟು ಅವಮಾನಕ್ಕೆ
ಈಡಾಗಿದ್ದಾಳೆ; ಆಕೆಯ ಉಳಿದ ಸಂತಾನವನ್ನು ಶತ್ರು
ಗಳ ಕಣ್ಣೆದುರಿನಲ್ಲಿ ನಾನು ಖಡ್ಗಕ್ಕೆ ಗುರಿಮಾಡು
ವೆನು, ಇದು ಯೆಹೋವನ ನುಡಿ.

ಪ್ರವಾದಿಯ ಪ್ರಲಾಪ.

10 ನನ್ನ ತಾಯೀ, ನನ್ನ ಗತಿಯನ್ನು ಏನು ಹೇಳಲಿ!
ನಿನ್ನ ಗರ್ಭದಿಂದ ಬಂದ ನಾನು ಲೋಕದವರೆಲ್ಲರಿಗೆ
ಜಗಳಗಂಟಿಗನೂ ವ್ಯಾಜ್ಯಗಾರನೂ ಆಗಿದ್ದೇನಲ್ಲಾ!
ನಾನು ಹಣವನ್ನು ಬಡ್ಡಿಗೆ ಕೊಟ್ಟವನಲ್ಲ, ತೆಗೆದು
ಕೊಂಡವನಲ್ಲ, ಆದರೂ ನನ್ನನ್ನು ಎಲ್ಲರೂ ಬಯ್ಯು
ತ್ತಾರೆ. ಇದಕ್ಕೆ ಯೆಹೋವನು—ನಿನಗೆ ಮೇಲಾಗು
ವಂತೆ ನಿಶ್ಚಯವಾಗಿ ನಿನ್ನನ್ನು ಬಿಡುಗಡೆಮಾಡುವೆನು
ನಿಜನಿಜವಾಗಿ ನಿನ್ನ ಶತ್ರುವನ್ನು ಕೇಡಿನಲ್ಲಿಯೂ
ಇಕ್ಕಟ್ಟಿನಲ್ಲಿಯೂ ನಿನಗೆ ಶರಣಾಗತನನ್ನಾಗಿ ಮಾಡು
ವೆನು. ಕಬ್ಬಿಣವನ್ನು, ಬಡಗಣ ಕಬ್ಬಿಣವನ್ನು ಯಾರು
ಮುರಿದಾರು? ತಾಮ್ರವನ್ನು ಮುರಿಯುವದು ಯಾ
ರಿಂದಾದೀತು ಎಂದು ಹೇಳಿದನು.

ನಿನ್ನ ಸಕಲ ಪ್ರಾಂತ್ಯಗಳಲ್ಲಿ ನೀನು ಮಾಡಿದ
ಎಲ್ಲಾ ಪಾಪಗಳ ನಿಮಿತ್ತ ನಾನು ನಿನ್ನ ಸೊತ್ತುಸಂಪತ್ತು
ಗಳನ್ನು ಲಾಭವಿಲ್ಲದೆ ಸೂರೆಗೆ ಈಡುಮಾಡಿ ನಿನ್ನ
ಶತ್ರುಗಳ ಕೈಗೆ ಕೊಟ್ಟು ನೀನು ನೋಡದ ದೇಶಕ್ಕೆ
ಸಾಗಿಸಿಬಿಡುವೆನು. ನನ್ನ ರೋಷದಿಂದ ಉರಿಯು
ಹತ್ತಿಕೊಂಡಿದೆ, ಅದು ನಿಮ್ಮನ್ನು ಸುಟ್ಟುಬಿಡುವದು.

[ಆದಕ್ಕೆ ನಾನು]—ಯೆಹೋವನೇ, ನೀನೇ ಬಲ್ಲೆ,
ನನ್ನನ್ನು ಜ್ಞಾಪಕಕ್ಕೆ ತಂದು ಕಟಾಕ್ಷಿಸು; ನನಗಾಗಿ
ನನ್ನ ಹಿಂಸಕರಿಗೆ ಮುಯ್ಯಿತೀರಿಸು; ಅವರಿಗೆ ಹೆಚ್ಚು
ತಾಳ್ಮೆಯನ್ನು ತೋರಿಸಬೇಡ, ನನ್ನನ್ನು ನಿರ್ಮೂಲ
ಮಾಡಬೇಡ; ನಿನ್ನ ನಿಮಿತ್ತವೇ ನಾನು ನಿಂದೆಗೆ ಗುರಿ
ಯಾದೆನೆಂದು ಚಿತ್ತಕ್ಕೆ ತಂದುಕೋ. ನನಗೆ ದೊರೆತ
ನಿನ್ನ ಮಾತುಗಳನ್ನು ಆಹಾರಮಾಡಿಕೊಂಡೆನು, ನಿನ್ನ
ನುಡಿಗಳು ನನಗೆ ಹರ್ಷವೂ ಹೃದಯಾನಂದವೂ ಆದವು;
ಸೇನಾಧೀಶ್ವರನಾದ ದೇವರೇ, ಯೆಹೋವನೇ, ನಾನು
ನಿನ್ನ ಹೆಸರಿನವನಲ್ಲವೆ! ನಾನು ವಿನೋದಗಾರರ ಕೂಟ
ದಲ್ಲಿ ಕೂತುಕೊಳ್ಳಲಿಲ್ಲ, ಉಲ್ಲಾಸಪಡಲೂ ಇಲ್ಲ;
ನೀನು ನನ್ನ ಮೇಲೆ ಕೈಯಿಟ್ಟಿದ್ದರಿಂದ ಒಂಟಿಗನಾಗಿ
ಕೂತೆನು; ನನ್ನನ್ನು ರೋಷದಿಂದ ತುಂಬಿಸಿದ್ದೀಯಷ್ಟೆ.
ಏಕೆ ನನ್ನ ವ್ಯಥೆಯು ನಿರಂತರವಾಗಿದೆ? ನನ್ನ ಗಾಯವು
ಗಡುಸಾಗಿ ಗುಣಹೊಂದಲೊಲ್ಲದೇಕೆ? ನೀನು ನನಗೆ
ನೀರು ಬತ್ತುವ ಕಳ್ಳತೊರೆಯಂತಿರಬೇಕೋ [ಎಂದು
ಅರಿಕೆಮಾಡಿಕೊಂಡೆನು.]

ಯೆಹೋವನು ಪ್ರವಾದಿಯನ್ನು ಧೈರ್ಯಗೊಳಿಸಿದ್ದು.

ಇದರಿಂದ ಯೆಹೋವನು ಹೀಗಂದಿದ್ದಾನೆ—ನೀನು
[ನನ್ನ ಕಡೆಗೆ] ಹಿಂದಿರುಗಿದರೆ ನನ್ನ ಸಮುಖದಲ್ಲಿ
ನಿಲ್ಲುವಂತೆ ನಾನು ನಿನ್ನನ್ನು ತಿರುಗಿ ಸೇರಿಸಿಕೊಳ್ಳು
ವೆನು; ನೀನು ತುಚ್ಛವಾದದ್ದನ್ನು ನಿರಾಕರಿಸಿ ಅಮೂ
ಲ್ಯವಾದದ್ದನ್ನು ಪ್ರಕಾಶಪಡಿಸಿದರೆ ನೀನು ನನ್ನ
ಬಾಯಂತಿರುವಿ. ಜನರು ನಿನ್ನ ಕಡೆಗೆ ತಿರುಗಿಕೊಳ್ಳು
ವರು, ನೀನು ಅವರ ಕಡೆಗೆ ತಿರುಗದಿರುವಿ. ನಾನು
ನಿನ್ನನ್ನು ಈ ಜನರಿಗೆ ದುರ್ಗಮವಾದ ತಾಮ್ರದ ಪೌಳಿ
ಗೋಡೆಯನ್ನಾಗಿ ಮಾಡುವೆನು; ಅವರು ನಿನಗೆ ವಿರುದ್ಧ
ವಾಗಿ ಯುದ್ಧಮಾಡುವರು. ಆದರೆ ನಿನ್ನನ್ನು ಸೋಲಿ
ಸಲಾಗುವದಿಲ್ಲ. ನಿನ್ನನ್ನು ಉದ್ಧರಿಸಿ ರಕ್ಷಿಸಲು ನಾನೇ
ನಿನ್ನೊಂದಿಗಿರುವೆನು. ಇದು ಯೆಹೋವನಾದ ನನ್ನ

1) ಅಥವಾ: ತಮ್ಮ ದುರ್ಮಾರ್ಗಗಳಿಂದ ಹಿಂದಿರುಗಲಿಲ್ಲವಷ್ಟೆ.

ಮಾತು. ನಾನು ನಿನ್ನನ್ನು ದುಷ್ಟರ ಕೈಯಿಂದ ಉದ್ಧ
ರಿಸುವೆನು; ಹೌದು, ಕ್ರೂರರ ಕೈಯಿಂದ ರಕ್ಷಿಸುವೆನು.

### ಪ್ರವಾದಿಯು ಶಾಪಗ್ರಸ್ತರಾದ ಯೆಹೂದ್ಯರೊಡನೆ ಬಳಕೆಮಾಡಬಾರದೆಂಬ ಅಪ್ಪಣೆ.

16 ಯೆಹೋವನು ಈ ಮಾತನ್ನು ನನಗೆ ದಯಪಾಲಿ
2 ಸಿದನು—ನೀನು ಮದುವೆಯಾಗಬೇಡ, ಗಂಡು
ಹೆಣ್ಣುಮಕ್ಕಳು ಈ ಸ್ಥಳದಲ್ಲಿ ನಿನಗೆ ಹುಟ್ಟದಿರಲಿ.
3 ಏಕಂದರೆ ಈ ಸ್ಥಳದಲ್ಲಿ ಹುಟ್ಟುವ ಗಂಡು ಹೆಣ್ಣು
ಮಕ್ಕಳು, ಅವರನ್ನು ಹೆತ್ತ ತಾಯಿಯರು, ಅವರನ್ನು
ಈ ದೇಶದಲ್ಲಿ ಪಡೆದ ತಂದೆಗಳು, ಇವರೆಲ್ಲರ ವಿಷಯ
4 ವಾಗಿ ಯೆಹೋವನು ಹೀಗೆ ನುಡಿದಿದ್ದಾನೆ—ಅವರು
ಘೋರಮರಣಕ್ಕೆ ಗುರಿಯಾಗುವರು, ಅವರಿಗಾಗಿ
ಯಾರೂ ಗೋಳಾಡರು, ಅವರನ್ನು ಯಾರೂ ಹೂಣಿ
ಡರು; ಅವರು ಭೂಮಿಯ ಮೇಲೆ ಗೊಬ್ಬರವಾಗು
ವರು; ಖಡ್ಗವೂ ಕ್ಷಾಮವೂ ಅವರನ್ನು ನಿರ್ಮೂಲ
ಮಾಡುವವು; ಅವರ ಹೆಣಗಳು ಆಕಾಶದ ಪಕ್ಷಿಗಳಿಗೂ
ಭೂಮಿಯ ಜಂತುಗಳಿಗೂ ಆಹಾರವಾಗುವವು.
5 ಯೆಹೋವನು [ನನಗೆ] ಹೀಗೆ ಹೇಳಿದ್ದಾನೆ—
ಗೋಳಾಟದ ಮನೆಯಲ್ಲಿ ಸೇರಬೇಡ, ಪ್ರಲಾಪಿಸ
ಲಿಕ್ಕೆ ಹೋಗಬೇಡ; ಅವರಿಗಾಗಿ ಎದೆ ಬಡುಕೊಳ್ಳಲು
ಬೇಡ; ನಾನು ದಯಪಾಲಿಸಿದ ಸಮಾಧಾನವನ್ನು,
ಅಂದರೆ ನನ್ನ ಪ್ರೀತಿಯನ್ನೂ ಕೃಪೆಯನ್ನೂ ಈ ಜನ
6 ರಿಂದ ತೆಗೆದುಬಿಟ್ಟಿದ್ದೇನಷ್ಟೆ. ಈ ದೇಶದಲ್ಲಿನ ದೊಡ್ಡ
ವರೂ ಅಲ್ಪರೂ ಸಾಯುವರು; ಅವರನ್ನು ಯಾರೂ
ಹೂಣಿಡರು, ಅವರಿಗಾಗಿ ಯಾರೂ ಗೋಳಾಡರು,
7 ಗಾಯಮಾಡಿಕೊಳ್ಳರು, ತಲೆಬೋಳಿಸಿಕೊಳ್ಳರು; ಸತ್ತ
ವನಿಗೋಸ್ಕರ ದುಃಖಪಡುವವರನ್ನು ಸಂತೈಸುವದ
ಕ್ಕಾಗಿ ಯಾರೂ ಕಜ್ಜಾಯವನ್ನು ಮುರಿದುಕೊಡರು;
ತಂದೆಯನ್ನಾಗಲಿ ತಾಯಿಯನ್ನಾಗಲಿ ಕಳಕೊಂಡವ
ರಿಗೆ ಯಾರೂ ಸಮಾಧಾಯಕ ಪಾನಪಾತ್ರೆಯನ್ನು
8 ನೀಡರು. ಔತಣದ ಮನೆಯಲ್ಲಿಯೂ ಸೇರಬೇಡ,
ಅಲ್ಲಿನವರೊಂದಿಗೆ ಕೂತು ತಿಂದು ಕುಡಿಯಬೇಡ.
9 ಇಸ್ರಾಯೇಲಿನ ದೇವರೂ ಸೇನಾಧೀಶ್ವರನಾದ ಯೆಹೋ
ವನೂ ಆಗಿರುವಾತನು ಹೀಗಂದಿದ್ದಾನೆ—ಇಗೋ,
ನಿಮ್ಮ ಕಾಲದಲ್ಲಿ ನಿಮ್ಮ ಕಣ್ಣೆದುರಿಗೆ ಹರ್ಷಸಂಭ್ರಮ
ಗಳ ಧ್ವನಿಯನ್ನೂ ವಧೂವರರ ಸ್ವರವನ್ನೂ ಈ
10 ಸ್ಥಳದೊಳಗೆ ನಿಲ್ಲಿಸಿಬಿಡುವೆನು. ಈ ಮಾತುಗಳ
ನ್ನೆಲ್ಲಾ ಈ ಜನರಿಗೆ ತಿಳಿಸುತ್ತಿರುವ ನಿನಗೆ ಪ್ರತ್ಯುತ್ತರ
ವಾಗಿ ಅವರು—ಈ ಮಹಾವಿಪತ್ತು ನಮಗೆ ಸಂಭ
ವಿಸಬೇಕೆಂದು ಯೆಹೋವನು ಏಕೆ ವಿಧಿಸಿದ್ದಾನೆ?
ನಮ್ಮ ಅಪರಾಧವೇನು? ನಮ್ಮ ದೇವರಾದ ಯೆಹೋ
ವನಿಗೆ ವಿರುದ್ಧವಾಗಿ ನಾವು ಮಾಡಿದ ಪಾಪವೇನು
11 ಎಂದು ಕೇಳುವಾಗ ನೀನು ಅವರಿಗೆ ಹೀಗೆ ಹೇಳ
ಬೇಕು—ಯೆಹೋವನ ಮಾತನ್ನು ಕೇಳಿರಿ, ನಿಮ್ಮ
ಪಿತೃಗಳು ನನ್ನನ್ನು ತೊರೆದು ಅನ್ಯದೇವತೆಗಳನ್ನು
ಹಿಂಬಾಲಿಸಿ ಸೇವಿಸಿ ಪೂಜಿಸಿ ನನ್ನನ್ನು ಬಿಟ್ಟು ನನ್ನ
12 ಧರ್ಮವಿಧಿಗಳನ್ನು ಮೀರಿದ್ದರಿಂದಲೂ ಇಗೋ, ನೀವೆ
ಲ್ಲರೂ ನಿಮ್ಮ ದುಷ್ಟಹೃದಯದ ಹಟದಂತೆ ನಡೆ
ಯುತ್ತಾ ನನ್ನನ್ನು ಕೇಳದೆ ನಿಮ್ಮ ಪಿತೃಗಳಿಗಿಂತ
ಹೆಚ್ಚು ಕೇಡನ್ನು ಮಾಡಿದ್ದರಿಂದಲೂ ನೀವಾಗಲಿ 13
ನಿಮ್ಮ ಪಿತೃಗಳಾಗಲಿ ನೋಡದ ದೇಶಕ್ಕೆ ನಿಮ್ಮನ್ನು
ಈ ದೇಶದೊಳಗಿಂದ ಎಸೆದುಬಿಡುವೆನು; ಅಲ್ಲಿ ಹಗ
ಲಿರುಳೂ ಅನ್ಯದೇವತೆಗಳನ್ನು ಸೇವಿಸುವಿರಿ; ನಾನು
ನಿಮಗೆ ದಯೆತೋರಿಸೆನು.

### ಮುಂದಿನ ಅತಿಶಯವಾದ ಉದ್ಧಾರ.

ಯೆಹೋವನು ಹೀಗನ್ನುತ್ತಾನೆ—ಇಗೋ, ಮುಂದಿನ 14
ಕಾಲದಲ್ಲಿ ಜನರು—ಇಸ್ರಾಯೇಲ್ಯರನ್ನು ಐಗುಪ್ತ
ದೇಶದೊಳಗಿಂದ ಉದ್ಧರಿಸಿದ ಯೆಹೋವನ ಜೀವ
ದಾಣೆ ಎಂಬದಾಗಿ ಪ್ರಮಾಣಮಾಡುವದನ್ನು ಬಿಟ್ಟು
ಇಸ್ರಾಯೇಲ್ಯರನ್ನು ಬಡಗಣ ದೇಶದಿಂದಲೂ ತಾನು 15
ಅವರನ್ನು ತಳ್ಳಿಬಿಟ್ಟಿದ್ದ ಸಕಲ ಸೀಮೆಗಳಿಂದಲೂ
ಉದ್ಧರಿಸಿದ ಯೆಹೋವನ ಜೀವದಾಣೆ ಎಂದು ಪ್ರಮಾ
ಣಮಾಡುವರು; ನಾನು ಅವರ ಪಿತೃಗಳಿಗೆ ದಯಪಾ
ಲಿಸಿದ ದೇಶಕ್ಕೆ ಅವರನ್ನು ಹಿಂದಿರುಗಿಸುವೆನಷ್ಟೆ.

### ಯೆಹೂದ್ಯರಲ್ಲಿ ನೆಲೆಗೊಂಡ ಪಾಪ, ತಪ್ಪಿಸಿಕೊಳ್ಳಲಾಗದ ದಂಡನೆ.

ಯೆಹೋವನು ಹೀಗನ್ನುತ್ತಾನೆ—ಇಗೋ, ನನ್ನ 16
ಜನರನ್ನು ಹಿಡಿಯುವದಕ್ಕೆ ಬಹು ಮಂದಿ ಬೆಸ್ತರನ್ನು
ಕರೆಯಿಸುವೆನು; ಆ ಮೇಲೆ ಎಲ್ಲಾ ಬೆಟ್ಟಗುಡ್ಡಗ
ಳಿಂದಲೂ ಬಂಡೆಗಳ ಸಂದುಗೊಂದುಗಳಿಂದಲೂ ಅವ
ರನ್ನು ಹೊರಡಿಸಿ ಬೇಟೆಯಾಡುವದಕ್ಕೆ ಬಹುಜನ
ಬೇಡರನ್ನು ಕರೆಯಿಸುವೆನು. ಅವರ ನಡತೆಯ 17
ನ್ನೆಲ್ಲಾ ದೃಷ್ಟಿಸುತ್ತೇನೆ, ಅದು ನನ್ನ ಮುಖಕ್ಕೆ ಮರೆ
ಯಾಗಿಲ್ಲ; ಅವರ ಅಧರ್ಮವು ನನಗೆ ಗುಟ್ಟಲ್ಲ,
ಪ್ರತ್ಯಕ್ಷದಲ್ಲೇ ಇದೆ. ಅವರ ಅಧರ್ಮಕ್ಕೂ ಪಾಪಕ್ಕೂ 18
ಎರಡರಷ್ಟು ಶಿಕ್ಷೆಯನ್ನು ಮೊದಲು ಕೊಡುವೆನು;
ಹೆಣಗಳಂತಿರುವ ತಮ್ಮ ಹೇಯವಿಗ್ರಹಗಳಿಂದ ನನ್ನ
ದೇಶವನ್ನು ಹೊಲಸುಮಾಡಿ ನನ್ನ ಸ್ವಾಸ್ತ್ಯವನ್ನು
ತಮ್ಮ ಅಸಹ್ಯವಸ್ತುಗಳಿಂದ ತುಂಬಿಸಿದ್ದಾರಷ್ಟೆ.
(ಯೆಹೋವನೇ, ನನ್ನ ಬಲವೇ, ಬಲವಾದ 19
ನನ್ನ ದುರ್ಗವೇ, ಇಕ್ಕಟ್ಟಿನ ದಿನದಲ್ಲಿ ನನ್ನ ಆಶ್ರ
ಯವೇ, ಲೋಕದ ಕಟ್ಟಕಡೆಯಿಂದ ಜನಾಂಗಗಳು
ನಿನ್ನ ಬಳಿಗೆ ಸೇರಿ—ನಮ್ಮ ಪಿತೃಗಳು ಶುದ್ಧ ಸು
ಳ್ಳನ್ನು, ಮಾಯವನ್ನು, ಪ್ರಯೋಜನವಿಲ್ಲದವುಗಳನ್ನು
ಪಾರಂಪರ್ಯವಾಗಿ ಹೊಂದಿದ್ದಾರೆ ಎಂದು ಅರಿಕೆ
ಮಾಡುವರು. ಮನುಷ್ಯಮಾತ್ರದವನು ದೇವರು 20
ಗಳನ್ನು ಕಲ್ಪಿಸಿಕೊಳ್ಳಬಲ್ಲನೇ? ಇವು ದೇವರುಗಳೇ
ಅಲ್ಲ.)
ಈ ನಿಮಿತ್ತವಾಗಿ, ಇಗೋ, ಇದೊಂದೇ ಸಲ ನನ್ನ 21
ಭುಜಬಲವನ್ನೂ ಪರಾಕ್ರಮವನ್ನೂ ಅವರಿಗೆ ತಿಳಿಯ
ಪಡಿಸುವೆನು, ಹೌದು, ಗ್ರಹಿಸಮಾಡುವೆನು; ನನ್ನ
ನಾಮಧೇಯವು ಯೆಹೋವನೆಂದೇ ಅವರಿಗೆ ಗೊತ್ತಾ
ಗುವದು. ಯೆಹೂದದ ಪಾಪವು ಉಕ್ಕಿನ ಕಂಠ 17
ದಿಂದಲೂ ವಜ್ರದ ಮೊನೆಯಿಂದಲೂ ಲಿಖಿತವಾಗಿದೆ;

1)ಅವರ ಹೃದಯದ ಹಲಗೆಯಲ್ಲಿಯೂ 2)ಅವರ
ಯಜ್ಞವೇದಿಗಳ ಕೊಂಬುಗಳಲ್ಲಿಯೂ ಕೆತ್ತಿದೆ.
2 3)ಅವರ ಮಕ್ಕಳು ಸೊಂಪಾಗಿ ಬೆಳೆದಿರುವ ಮರಗ
ಳನ್ನೂ ಎತ್ತರವಾದ ಗುಡ್ಡಗಳನ್ನೂ ಕಂಡಾಗೆಲ್ಲಾ ಅವರ
ಯಜ್ಞವೇದಿಗಳನ್ನೂ ಅಶೇರ ವಿಗ್ರಹಸ್ತಂಭಗಳನ್ನೂ
3 ಜ್ಞಾಪಿಸಿಕೊಳ್ಳುವರು. ಬೈಲಿನ ನನ್ನ ಪರ್ವತದ
ಜನರೇ, ನಿಮ್ಮ ಸಕಲ ಪ್ರಾಂತಗಳಲ್ಲಿ ನೀವು ಮಾಡಿದ
ಪಾಪದ ನಿಮಿತ್ತ ನಾನು ನಿಮ್ಮ ಎಲ್ಲಾ ಸೊತ್ತು
ಸಂಪತ್ತುಗಳನ್ನೂ ಪೂಜಾಸ್ಥಳಗಳನ್ನೂ ಸೂರೆಗೆ ಈಡು
4 ಮಾಡುವೆನು. ನಾನು ನಿಮಗೆ ದಯಪಾಲಿಸಿದ
ಸ್ವಾಸ್ತ್ಯವನ್ನು ಸ್ವದೋಷದಿಂದಲೇ ಕಳೆದುಕೊಳ್ಳು
ವಿರಿ; ನೀವು ನೋಡದ ದೇಶದಲ್ಲಿ ನಿಮ್ಮನ್ನು ನಿಮ್ಮ
ಶತ್ರುಗಳಿಗೆ ದಾಸರನ್ನಾಗಿ ಮಾಡುವೆನು; ನೀವು ನನ್ನ
ರೋಷಾಗ್ನಿಯನ್ನು ಹತ್ತಿಸಿದ್ದೀರಿ, ಅದು ನಿತ್ಯವೂ
ಜ್ವಲಿಸುತ್ತಿರುವದು.

ದೇವರನ್ನು ನಂಬುವವರಿಗೂ ಮನುಷ್ಯರನ್ನು ನಂಬುವವರಿಗೂ
ಇರುವ ತಾರತಮ್ಯ.

5 ಯೆಹೋವನು ಹೀಗನ್ನುತ್ತಾನೆ—ಮಾನವಮಾತ್ರ
ದವರಲ್ಲಿ ಭರವಸವಿಟ್ಟು ನರಜನ್ಮದವರನ್ನು ತನ್ನ
ಭುಜಬಲವೆಂದು ತಿಳಿದು ಯೆಹೋವನನ್ನು ತೊರೆ
6 ಯುವ ಮನಸ್ಸುಳ್ಳವನು ಶಾಪಗ್ರಸ್ತನು. ಇವನು
4)ಅಡವಿಯಲ್ಲಿನ ಜಾಲಿಗೆ ಸಮಾನನು; ಶುಭಸಂಭ
ವಿಸಿದರೂ ಅದನ್ನು ಕಾಣನು; ಯಾರೂ ವಾಸಿಸದ
ಚೌಳು ನೆಲವಾಗಿರುವ ಅರಣ್ಯದ ಬೆಗ್ಗಾಡಿನಲ್ಲಿ ವಾಸಿ
7 ಸುವ ಸ್ಥಿತಿಯೇ ಅವನದು. ಯಾವನು ಯೆಹೋವ
ನಲ್ಲಿ ನಂಬಿಕೆಯಿಟ್ಟಿದ್ದಾನೋ ಯಾವನಿಗೆ ಯೆ
ಹೋವನು ಭರವಸವಾಗಿದ್ದಾನೋ ಅವನು ಧನ್ಯನು.
8 ನೀರಾವರಿಯಲ್ಲಿ ನೆಡಲ್ಪಟ್ಟು ಹೊಳೆಯ ದಡದಲ್ಲಿ
ತನ್ನ ಬೇರುಗಳನ್ನು ಹರಡಿ ಧಗೆಗೆ ಭಯಪಡದೆ ಹಸು
ರೆಲೆಯನ್ನು ಬಿಡುತ್ತಾ ಕ್ಷಾಮವರ್ಷದಲ್ಲಿಯೂ ನಿಶ್ಚಿಂತೆ
ಯಾಗಿ ಸದಾ ಫಲಕೊಡುತ್ತಾ ಇರುವ ಮರಕ್ಕೆ ಸಮಾನ
ನಾಗಿರುವನು.
9 ಹೃದಯವು ಎಲ್ಲಕ್ಕಿಂತಲೂ ವಂಚಕ; ಗುಣವಾಗದ
ರೋಗಕ್ಕೆ ಒಳಗಾಗಿದೆ; ಅದನ್ನು ಯಾರು ತಿಳಿದಾರು?
10 ಯೆಹೋವನಾದ ನಾನು ಪ್ರತಿಯೊಬ್ಬನಿಗೂ ಕರ್ಮ
ಫಲವನ್ನು ಅವನವನ ನಡತೆಗೆ ತಕ್ಕ ಹಾಗೆ ಕೊಡ
ಬೇಕೆಂದು ಹೃದಯವನ್ನು ಪರೀಕ್ಷಿಸುವವನೂ ಅಂತ
ರಿಂದ್ರಿಯವನ್ನು ಶೋಧಿಸುವವನೂ ಆಗಿದ್ದೇನೆ.
11 ಆಸ್ತಿಪಾಸ್ತಿಗಳನ್ನು ಅನ್ಯಾಯವಾಗಿ ಸಂಪಾದಿಸಿ
ಕೊಂಡವನು ತನ್ನದಲ್ಲದ ಮರಿಗಳನ್ನು ಕೂಡಿಸಿ
ಕೊಳ್ಳುವ ಕೌಜುಗ ಹಕ್ಕಿಗೆ ಸಮಾನನು; ಅವನ
ಮಧ್ಯಪ್ರಾಯದಲ್ಲಿ ಅವು ಅವನಿಂದ ತೊಲಗಿಹೋಗು

ವವು; ಅವನು ತನ್ನ ಅಂತ್ಯಕಾಲದಲ್ಲಿ ಹುಚ್ಚನಾ
ಕಂಡುಬರುವನು.
ನಮ್ಮ ಪವಿತ್ರಾಲಯಸ್ಥಾನವು ಆದಿಯಿಂದಲ
ಉನ್ನತವಾದ ಮಹಿಮೆಯ ಸಿಂಹಾಸನವಾಗಿ
ಯೆಹೋವನೇ, ಇಸ್ರಾಯೇಲ್ಯರ ನಿರೀಕ್ಷೆಯೇ, ನಿ
ನ್ನು ಬಿಟ್ಟುಹೋಗುವವರು ಆಶಾಭಂಗಪಡುವರು
ಯೆಹೋವನಾದ 5)ನಿನ್ನನ್ನು ತೊರೆದವರು ಜೀವಜಲ
ಬುಗ್ಗೆಯನ್ನು ತೊರೆದವರಾಗಿದ್ದಾರೆ; ಅವರ ಹೆಸ
ದೂಳಿನಲ್ಲಿ ಬರೆಯಲ್ಪಡುವದು.

ಪ್ರವಾದಿಯ ವಿಜ್ಞಾಪನೆ.

ಯೆಹೋವನೇ, ನನ್ನನ್ನು ಸ್ವಸ್ಥಪಡಿಸು, ಆ
ಸ್ವಸ್ಥನೇ ಆಗುವೆನು; ನನ್ನನ್ನು ರಕ್ಷಿಸು, ಆಗ ರಕ್ಷಿ
ತನೇ ಆಗುವೆನು; ನೀನೇ ನನಗೆ ಸ್ತುತ್ಯನು. ಆಹಾ
ಜನರು ನನಗೆ—ಯೆಹೋವನ ಮಾತೆಲ್ಲಿ? ಅದು
ಈಗಲೇ ನೆರವೇರಲಿ ಎಂದು ಹೇಳುತ್ತಾರೆ. ನಾನ
ದರೋ ಸಭಾಪಾಲನೆಯಲ್ಲಿ ನಿನ್ನನ್ನು ಹಿಂಬಾಲಿಸು
ವದನ್ನು ಬಿಡುವದಕ್ಕೆ ಆತುರಪಡಲಿಲ್ಲ; ಅನಿವಾರ್ಯ
ವಿಪತ್ತಿನ ದಿನವನ್ನು ಅಪೇಕ್ಷಿಸಲಿಲ್ಲ; ನೀನೇ ಬಲ್ಲೆ
ನಿನ್ನ ಸಮಕ್ಷಮದಲ್ಲೇ ನನ್ನ ಬಾಯ ಮಾತೇ ಹೊ
ಟಿತು. ನನಗೆ ಭಯಾಸ್ಪದವಾಗಬೇಡ; ಕೇಡಿನ ಕಾಲ
ದಲ್ಲಿ ನನಗೆ ಆಶ್ರಯವಾಗಿದ್ದೀ. ನನ್ನ ಹಿಂಸಕರಿಗೆ
ಅವಮಾನವಾಗಲಿ, ನನಗಾಗದಿರಲಿ; ಭಯಭ್ರಾಂತಿ
ಯು ಅವರನ್ನು ಹಿಡಿಯಲಿ, ನನ್ನನ್ನು ಬೇಡ; ಅವರಿಗೆ
ಕೇಡುಗಾಲವನ್ನು ಬರಮಾಡಿ ವಿಪರೀತಭಂಗದಿಂದ
ಅವರನ್ನು ನಾಶಪಡಿಸು.

ಸಬ್ಬತ್ ದಿನವನ್ನು ಆಚರಿಸಬೇಕೆಂಬ ಬೋಧನೆ.

ಯೆಹೋವನು ನನಗೆ ಇಂತೆಂದನು—ನೀನು
ಹೊರಟು ಯೆಹೂದದ ಅರಸರು ಹೋಗಿ ಬರುವ
ಸಾಮಾನ್ಯಜನರ ಬಾಗಲಿನಲ್ಲಿಯೂ ಯೆರೂಸಲೇ
ಮಿನ ಎಲ್ಲಾ ಬಾಗಿಲುಗಳಲ್ಲಿಯೂ ನಿಂತುಕೊಂಡು
ಅವರಿಗೆ ಹೀಗೆ ಸಾರು—ಈ ಬಾಗಿಲುಗಳಲ್ಲಿ ಸೇರುವ
ಯೆಹೂದದ ಅರಸರೇ, ಎಲ್ಲಾ ಯೆಹೂದ್ಯರೇ,
ಯೆರೂಸಲೇಮಿನ ಸಕಲ ನಿವಾಸಿಗಳೇ, ಯೆಹೋವನ
ಈ ಮಾತನ್ನು ಕೇಳಿರಿ—ಮನಮುಟ್ಟಿ ಗಮನಿಸಿರಿ,
ಸಬ್ಬತ್ ದಿನದಲ್ಲಿ ಯಾವ ಹೊರೆಯನ್ನೂ ಹೊರ
ಬೇಡಿರಿ, ಯೆರೂಸಲೇಮಿನ ಬಾಗಿಲುಗಳಲ್ಲಿ ತರಲೇ
ಬೇಡಿರಿ; ಆ ದಿನದಲ್ಲಿ ನಿಮ್ಮ ಮನೆಗಳಿಂದ ಯಾವ
ಹೊರೆಯನ್ನೂ ಈಚೆಗೆ ತೆಗೆದುಕೊಂಡು ಬರಬೇಡಿರಿ,
ಯಾವ ಕೆಲಸವನ್ನೂ ಮಾಡದಿರಿ; ಸಬ್ಬತ್ ದಿನ
ವನ್ನು ನನ್ನ ದಿನವೆಂದು ಆಚರಿಸಿರಿ; ನಿಮ್ಮ ಪಿತೃಗಳಿಗೆ

1) ಪಾಠಾಂತರ: ಅವರ ಹೃದಯದ ಹಲಗೆಯಲ್ಲಿಯೂ ಅವರ ಯಜ್ಞವೇದಿಗಳ ಕೊಂಬುಗಳಲ್ಲಿಯೂ ಸೊಂಪಾಗಿ ಬೆಳೆದಿರುವ ಗಳಲ್ಲಿಯೂ ಎತ್ತರವಾದ ಗುಡ್ಡಗಳಲ್ಲಿಯೂ ಕೆತ್ತಿದೆ. 2) ಪಾಠಾಂತರ: ನಿಮ್ಮ. 3) ಅಥವಾ: ಸೊಂಪಾಗಿ ಬೆಳೆದಿರುವ ಮರ ಬಳಿಯಲ್ಲಿಯೂ ಎತ್ತರವಾದ ಗುಡ್ಡಗಳಲ್ಲಿಯೂ ತಾವು ಕಟ್ಟಿದ ಯಜ್ಞವೇದಿಗಳನ್ನೂ ಅಶೇರ ವಿಗ್ರಹಸ್ತಂಭಗಳನ್ನೂ [ತಾವು ಬಲಿಕೊ ತಮ್ಮ ಮಕ್ಕಳನ್ನೂ ನಿರಂತರ ಜ್ಞಾಪಿಸಿಕೊಳ್ಳುವರು. 4) ಅಥವಾ: ಅಡವಿಯಲ್ಲಿ ಅಲೆಯುವ ದಿಕ್ಕಿಲ್ಲದವನಿಗೆ. 5) ಮ
ವನ್ನನ್ನು.

23 ನಾನು ಹೀಗೆ ಆಜ್ಞೆಮಾಡಿದೆನಲ್ಲಾ; ಅವರಾದರೋ
ಕಿವಿಗೊಟ್ಟು ಕೇಳಲಿಲ್ಲ, ಕೇಳಲಿಕ್ಕೂ ಉಪದೇಶ
24 ಹೊಂದಲಿಕ್ಕೂ ಒಪ್ಪಲಿಲ್ಲ. ಯೆಹೋವನಾದ ನನ್ನ
ನುಡಿ ಇದೇ—ನೀವು ನನ್ನ ಕಡೆಗೆ ಚೆನ್ನಾಗಿ ಕಿವಿ
ಗೊಟ್ಟು ಸಬ್ಬತ್ ದಿನದಲ್ಲಿ ಈ ಊರಿನ ಬಾಗಿಲು
ಗಳೊಳಗೆ ಯಾವ ಹೊರೆಯನ್ನೂ ತಾರದೆ ಯಾವ
ಕೆಲಸವನ್ನೂ ಮಾಡದೆ ಆ ದಿನವನ್ನು ನನ್ನ ದಿನವೆಂದು
25 ಆಚರಿಸಿದರೆ ಆಗ ದಾವೀದನ ಸಿಂಹಾಸನಾರೂಢರಾದ
ಅರಸರೂ ಪ್ರಭುಗಳೂ ರಥಾಶ್ವಗಳನ್ನೇರಿದವರಾಗಿ
ಈ ಪಟ್ಟಣದ ಬಾಗಿಲುಗಳನ್ನು ಪ್ರವೇಶಿಸುವರು;
ಇವರು, ಇವರ ಪ್ರಧಾನರು, ಯೆಹೂದದ ಜನರು,
ಯೆರೂಸಲೇಮಿನ ನಿವಾಸಿಗಳು, ಎಲ್ಲರೂ ಇಲ್ಲಿ
ಸೇರುವರು; ಈ ಪಟ್ಟಣವು ನಿತ್ಯವೂ ನೆಲೆಯಾಗಿರು
26 ವದು. ಮತ್ತು ಯೆಹೂದದ ಪಟ್ಟಣಗಳು, ಯೆರೂ
ಸಲೇಮಿನ ಸುತ್ತಣ ಪ್ರದೇಶಗಳು, ಬೆನ್ಯಾಮೀನ್
ಸೀಮೆ, ಇಳಕಲಿನ ಪ್ರದೇಶ, ಬೆಟ್ಟದ ಮೇಲಣ ಪ್ರದೇಶ,
ದಕ್ಷಿಣಪ್ರಾಂತ, ಈ ಎಲ್ಲಾ ಸ್ಥಳಗಳಿಂದಲೂ ಸರ್ವಾಂಗ
ಹೋಮಪಶು, ಯಜ್ಞಪಶು, ನೈವೇದ್ಯ, ಧೂಪ ಎಂಬೀ
ಕೃತಜ್ಞತಾರ್ಪಣಗಳನ್ನು ಯೆಹೋವನ ಆಲಯಕ್ಕೆ
27 ಜನರು ತೆಗೆದುಕೊಂಡು ಬರುವರು. ಆದರೆ ನೀವು
ನನ್ನ ಕಡೆಗೆ ಕಿವಿಗೊಡದೆ ಸಬ್ಬತ್ ದಿನದಲ್ಲಿ ಹೊರೆ
ಯನ್ನು ಹೊತ್ತು ಯೆರೂಸಲೇಮಿನ ಬಾಗಿಲುಗಳೊ
ಳಗೆ ಪ್ರವೇಶಿಸಬಾರದೆಂಬ ನಿಯಮವನ್ನು ಕೈಕೊಳ್ಳದೆ
ಆ ದಿನವನ್ನು ನನ್ನ ದಿನವೆಂದು ಆಚರಿಸದೆ ಇದ್ದರೆ
ಆಗ ನಾನು ಊರಬಾಗಿಲುಗಳಲ್ಲಿ ಬೆಂಕಿಯನ್ನು
ಹೊತ್ತಿಸುವೆನು, ಅದು ಯೆರೂಸಲೇಮಿನ ಉಪ್ಪರಿಗೆ
ಗಳನ್ನು ದಹಿಸಿಬಿಡುವದು, ಆರುವದೇ ಇಲ್ಲ.

### ಕುಂಬಾರನ ಸಾಮ್ಯ.

18 2 ಯೆಹೋವನು ಯೆರೆಮೀಯನಿಗೆ—ನೀನೆದ್ದು
ಕುಂಬಾರನ ಮನೆಗೆ ಇಳಿದುಹೋಗು; ಅಲ್ಲೇ ನನ್ನ
ನುಡಿಯನ್ನು ನಿನಗೆ ಕೇಳಮಾಡುವೆನು ಎಂಬ ಮಾತ
3 ನ್ನು ದಯಪಾಲಿಸಿದನು. ಆಗ ನಾನು ಕುಂಬಾರನ
ಮನೆಗೆ ಇಳಿದು ಹೋದೆನು; ಇಗೋ, ಅವನು ಚಕ್ರದ
4 ಮೇಲೆ ತನ್ನ ಕೆಲಸವನ್ನು ನಡಿಸುತ್ತಿದ್ದನು. ಆ
ಕುಂಬಾರನು ಜೇಡಿಮಣ್ಣಿನಿಂದ ಮಾಡುತ್ತಿದ್ದ ಪಾತ್ರೆ
ಯು ಅವನ ಕೈಯಲ್ಲಿ ಕೆಟ್ಟುಹೋಗಲು ಪುನಃ
ತನಗೆ ಸರಿತೋಚಿದ ಹಾಗೆ ಅದನ್ನು ಹೊಸಪಾತ್ರೆಯ
ನ್ನಾಗಿ ಮಾಡಿದನು.
5 ಆಗ ಯೆಹೋವನು ನನಗೆ ಈ ಮಾತನ್ನು ಅನು
6 ಗ್ರಹಿಸಿದನು—ಯೆಹೋವನು ಹೀಗನ್ನುತ್ತಾನೆ—
ಇಸ್ರಾಯೇಲ್ ವಂಶದವರೇ, ಈ ಕುಂಬಾರನು
ಮಾಡಿದಂತೆ ನಾನು ನಿಮ್ಮನ್ನು ಮಾಡಕೂಡದೋ?
ಇಸ್ರಾಯೇಲ್ ಮನೆತನದವರೇ, ಜೇಡಿಮಣ್ಣು ಕುಂಬಾ
ರನ ಕೈಯಲ್ಲಿ ಹೇಗೋ, ಹಾಗೆಯೇ ನೀವು ನನ್ನ ಕೈ
7 ಯಲ್ಲಿದ್ದೀರಿ. ನಾನು ಒಂದು ವೇಳೆ ಒಂದು ಜನಾಂಗ
ವನ್ನಾಗಲಿ ರಾಜ್ಯವನ್ನಾಗಲಿ ಕಿತ್ತುಕೆಡವಿ ನಾಶಪಡಿಸ
ಬೇಕೆಂದು ಅಪ್ಪಣೆಕೊಟ್ಟಾಗ ನಾನು ದಂಡನೆನಿರ್ಣ 8
ಯಿಸಿದ ಆ ಜನಾಂಗದವರು ತಮ್ಮ ಕೆಟ್ಟತನದಿಂದ
ತಿರುಗಿಕೊಂಡರೆ ನಾನು ಮಾಡಬೇಕೆಂದಿದ್ದ ಕೇಡನ್ನು
ಮನಮರುಗಿ ಮಾಡದಿರುವೆನು. ನಾನು ಒಂದು ವೇಳೆ 9
ಒಂದು ಜನಾಂಗವನ್ನಾಗಲಿ ರಾಜ್ಯವನ್ನಾಗಲಿ ನೆಟ್ಟು
ಕಟ್ಟಬೇಕೆಂದು ಅಪ್ಪಣೆಕೊಟ್ಟಾಗ ಅದು ನನ್ನ ಮಾ 10
ತನ್ನು ಕೇಳದೆ ನನ್ನ ದೃಷ್ಟಿಯಲ್ಲಿ ಕೆಟ್ಟತನವನ್ನು
ಮಾಡಿದರೆ ನಾನು ಮನಸ್ಸನ್ನು ಬದಲಾಯಿಸಿಕೊಂಡು
ಅದಕ್ಕೆ ಮಾಡಬೇಕೆಂದಿದ್ದ ಮೇಲನ್ನು ಮಾಡದೆ
ಇರುವೆನು. ಈಗ ನೀನು ಯೆಹೂದ್ಯರಿಗೂ ಯೆರೂ 11
ಸಲೇಮಿನವರಿಗೂ ಈ ಮಾತನ್ನು ಹೇಳು—ಯೆಹೋ
ವನು ಹೀಗನ್ನುತ್ತಾನೆ—ಆಹಾ, ನಾನು ನಿಮಗೆ
ವಿರುದ್ಧವಾಗಿ ಯೋಚಿಸಿ ಕೇಡನ್ನು ಕಲ್ಪಿಸುತ್ತಿದ್ದೇನೆ;
ನಿಮ್ಮಲ್ಲಿ ಪ್ರತಿಯೊಬ್ಬನೂ ತನ್ನ ತನ್ನ ದುರ್ಮಾರ್ಗ
ದಿಂದ ಹಿಂದಿರುಗಲಿ, ನಡತೆಯನ್ನೂ ಕೃತ್ಯಗಳನ್ನೂ
ಸರಿಪಡಿಸಿಕೊಳ್ಳಲಿ. ಅವರೋ—ಏನೂ ನಿರೀಕ್ಷೆಯಿಲ್ಲ; 12
ನಮ್ಮ ಆಲೋಚನೆಗಳಿಗೆ ತಕ್ಕಂತೆ ನಡೆಯುವೆವು, ನಮ್ಮ
ಲ್ಲಿ ಪ್ರತಿಯೊಬ್ಬರೂ ನಮ್ಮ ನಮ್ಮ ದುಷ್ಟ ಹೃದಯದ
ಹಾಗೆ ಮಾಡುವೆವು ಎಂದು ಹೇಳುತ್ತಾರೆ.
ಹೀಗಿರಲು ಯೆಹೋವನು ಹೀಗನ್ನುತ್ತಾನೆ— 13
ಜನಾಂಗಗಳಲ್ಲಿ ವಿಚಾರಿಸಿರಿ, ಇಂಥಾ ಸುದ್ದಿಯನ್ನು
ಯಾರು ಕೇಳಿದ್ದಾರೆ? ಇಸ್ರಾಯೇಲೆಂಬ ಯುವತಿಯು
ಕೇವಲ ಅಸಹ್ಯಕಾರ್ಯವನ್ನು ಮಾಡಿದ್ದಾಳೆ. ಲೆಬ 14
ನೋನಿನ ಹಿಮವು ಅರಣ್ಯದ ಶಿಖರದಿಂದ ತಪ್ಪುವದೇ?
1)ದೂರದಿಂದ ಇಳಿದು ಹರಿಯುವ ತೊರೆತದ ನೀರು
ಬತ್ತುವದೇ? ನನ್ನ ಜನರೋ ನನ್ನನ್ನು ಮರೆತು ವ್ಯರ್ಥ 15
ವಿಗ್ರಹಗಳಿಗೆ ಧೂಪಹಾಕಿದ್ದಾರಲ್ಲಾ; ಅವು ಪುರಾತನ
ಪದ್ಧತಿಯಾದ ಅವರ ಮಾರ್ಗಗಳಲ್ಲಿ ಅವರು ಮುಗ್ಗ
ರಿಸುವಂತೆಯೂ ಸರಿಯಲ್ಲದ ಸೀಳುದಾರಿಗಳಲ್ಲಿ ಅಲೆ
ಯುವಂತೆಯೂ ಮಾಡಿವೆ. ಆದಕಾರಣ ಬೆರಗಿನ 16
ಸಿಳ್ಳಿಗೆ ಅವರ ದೇಶವು ನಿತ್ಯವಾಗಿ ಗುರಿಯಾಗುವದು;
ಹಾದುಹೋಗುವವರೆಲ್ಲರೂ ಬೆರಗಾಗಿ ತಲೆದೂಗು
ವರು. ಶತ್ರುಗಳು ಮೇಲೆ ಬಿದ್ದಾಗ ನನ್ನ ಜನರನ್ನು 17
ಮೂಡಣ ಗಾಳಿಯಿಂದಲೋ ಎಂಬಂತೆ ದಿಕ್ಕಾಪಾಲು
ಮಾಡುವೆನು. ಅವರ ವಿಪತ್ತಿನ ದಿನದಲ್ಲಿ ಅವರ
ಕಡೆಗೆ ಮುಖತಿರುಗಿಸದೆ ಬೆನ್ನುಮಾಡುವೆನು.

### ಜನರ ಒಳಸಂಚು, ಪ್ರವಾದಿಯ ಪ್ರಾರ್ಥನೆ.

ಆಗ ಅವರು—ಯೆರೆಮೀಯನಿಗೆ ವಿರುದ್ಧವಾಗಿ 18
ಒಳಸಂಚು ಮಾಡೋಣ ಬನ್ನಿರಿ; ಧರ್ಮೋಪದೇಶವು
ಯಾಜಕನಿಂದ, ಮಂತ್ರಾಲೋಚನೆಯು ಜ್ಞಾನಿಯಿಂದ,
ದೈವೋಕ್ತಿಯು ಪ್ರವಾದಿಯಿಂದ ಎಂದಿಗೂ ತಪ್ಪದಷ್ಟೆ.
ಬನ್ನಿರಿ, ಅವನನ್ನು ಬಾಯಿಂದ ಬಡಿಯೋಣ, 2)ಅವನ
ಯಾವ ಮಾತಿಗೂ ಕಿವಿಗೊಡದಿರುವ ಎಂದುಕೊಂಡ
ರು.

1) ಮೂಲ: ಹರಿಯುವ ಅನ್ಯವಾದ ತೊರೆತದ ನೀರು ಕೀಳಲ್ಪಡುವದೋ? ಈ ವಚನದ ಮೂಲವು ಕೇವಲ ಅಸ್ಪಷ್ಟ. 2) ಪಾಠಾಂತರ: ಅವನ ಎಲ್ಲಾ ಮಾತುಗಳಿಗೂ ಕಾದಿರುವ.

19 ಯೆಹೋವನೇ, ನನ್ನ ಕಡೆಗೆ ಕಿವಿಗೊಡು, ನನ್ನೊ
ಡನೆ ವ್ಯಾಜ್ಯವಾಡುವವರ ಮಾತನ್ನು ಕೇಳು.
20 ಮೇಲಿಗೆ ಮುಯ್ಯಾಗಿ ಕೇಡು ಆಗತಕ್ಕದ್ದೋ?
ನನ್ನ ಪ್ರಾಣವನ್ನು ಹಿಡಿಯಬೇಕೆಂದು ಗುಂಡಿಯನ್ನು
ತೋಡಿದ್ದಾರಲ್ಲಾ. ಅವರ ಮೇಲಣ ನಿನ್ನ ರೋಷವನ್ನು
ತಪ್ಪಿಸಲು ನಾನು ನಿನ್ನ ಮುಂದೆ ನಿಂತುಕೊಂಡು
ಅವರ ಹಿತಕ್ಕಾಗಿ ವಿಜ್ಞಾಪಿಸಿಕೊಂಡದ್ದನ್ನು ಚಿತ್ತ
21 ವಿಸು. ಆದಕಾರಣ ಅವರ ಮಕ್ಕಳನ್ನು ಕ್ಷಾಮಕ್ಕೆ
ಗುರಿಮಾಡಿ ಕತ್ತಿಯ ಬಾಯಿಗೆ ಒಪ್ಪಿಸು; ಅವರ ಹೆಂಡಿ
ರು ಮಕ್ಕಳನ್ನು ನೀಗಿಕೊಂಡು ವಿಧವೆಯರಾಗಲಿ;
ಮೃತ್ಯುವು ಅವರ ಗಂಡಂದಿರನ್ನು ಸಂಹರಿಸಲಿ; ಯುದ್ಧ
22 ದಲ್ಲಿ ಖಡ್ಗವು ಅವರ ಯುವಕರನ್ನು ವಧಿಸಲಿ. ಸುಲಿ
ಗೆಯವರ ಗುಂಪನ್ನು ಫಕ್ಕನೆ ಅವರ ಮೇಲೆ ಬೀಳ
ಮಾಡು, ಅವರ ಮನೆಗಳೊಳಗಿಂದ ಅರಚಾಟವು ಕೇಳಿ
ಸಲಿ; ಅವರು ನನ್ನನ್ನು ಹಿಡಿಯಲಿಕ್ಕೆ ಗುಂಡಿಯನ್ನು
ತೋಡಿ ನನ್ನ ಕಾಲುಗಳಿಗೆ ಪಾಶಗಳನ್ನು ಗುಪ್ತವಾಗಿ
23 ಒಡ್ಡಿದ್ದಾರೆ. ಯೆಹೋವನೇ, ನನ್ನನ್ನು ಕೊಲ್ಲಬೇ
ಕೆಂದು ಅವರು ಮಾಡಿಕೊಂಡಿರುವ ಆಲೋಚನೆಯ
ನ್ನೆಲ್ಲಾ ನೀನೇ ಬಲ್ಲೆ; ಅವರ ಅಪರಾಧವನ್ನು ಕ್ಷಮಿಸ
ಬೇಡ, ಅವರ ಪಾಪವನ್ನು ಅಳಿಸದಿರು, ಅದು ನಿನ್ನ
ಕಣ್ಣೆದುರಿಗಿರಲಿ; ಅವರು ನಿನ್ನ ಮುಂದೆ ಕೆಡವಲ್ಪಡಲಿ;
ನಿನ್ನ ಕೋಪವನ್ನು ವ್ಯಕ್ತಪಡಿಸುವಾಗ ಅವರಿಗೆ ತಕ್ಕ
ದ್ದನ್ನು ಮಾಡು.

ಕೂಜದ ಸಾಮ್ಯ.

19 ಯೆಹೋವನು ನನಗೆ ಹೀಗೆ ಹೇಳಿದನು—ಹೊ
ರಡು, ಕುಂಬಾರನು ಮಾಡಿದ ಮಣ್ಣಿನ ಕೂಜವನ್ನು
ಕೊಂಡುಕೊಂಡು ಜನರ ಹಿರಿಯರಲ್ಲಿಯೂ ಯಾಜ
ಕರ ಹಿರಿಯರಲ್ಲಿಯೂ ಕೆಲವರನ್ನು ಕರೆದುಕೊಂಡು
2 ಬೋಕಿಯ ಬಾಗಿಲಿನ ಸಮೀಪದಲ್ಲಿರುವ ಬೆನ್
ಹಿನ್ನೋಮ್ ತಗ್ಗಿಗೆ ಹೋಗಿ ನಾನು ನಿನಗೆ ತಿಳಿಸುವ
3 ಮಾತುಗಳನ್ನು ಸಾರು—ಯೆಹೂದದ ಅರಸರೇ,
ಯೆರೂಸಲೇಮಿನ ನಿವಾಸಿಗಳೇ, ಯೆಹೋವನ ಮಾ
ತನ್ನು ಕೇಳಿರಿ! ಇಸ್ರಾಯೇಲ್ಯರ ದೇವರೂ ಸೇನಾ
ಧೀಶ್ವರನೂ ಆದ ಯೆಹೋವನು ಇಂತೆನ್ನುತ್ತಾನೆ—
ಆಹಾ, ನಾನು ಈ ಸ್ಥಳದ ಮೇಲೆ ಕೇಡನ್ನು ಬರಮಾ
ಡುವೆನು; ಅದರ ಸುದ್ದಿಯನ್ನು ಕೇಳುವವರ ಎರಡು
ಕಿವಿಗಳೂ ಮೊರ್ರೆನ್ನುವವು.
4 ಈ ಜನರು ನನ್ನನ್ನು ತೊರೆದು ತಮಗಾಗಲಿ
ತಮ್ಮ ಪಿತೃಗಳಿಗಾಗಲಿ ಯೆಹೂದದ ಅರಸರಿಗಾಗಲಿ
ತಿಳಿಯದ ಅನ್ಯದೇವತೆಗಳಿಗೆ ಧೂಪಹಾಕುತ್ತಾ ಈ
ಸ್ಥಳವನ್ನು ಅನ್ಯಸ್ಥಾನವಾಗಿ ಮಾಡಿ ಅದನ್ನು ನಿ
5 ರ್ದೋಷಿಗಳ ರಕ್ತದಿಂದ ತುಂಬಿಸಿ ತಮ್ಮ ಮಕ್ಕ
ಳನ್ನು ಬಾಳ್ ದೇವತೆಗೆ ಆಹುತಿಕೊಡುವದಕ್ಕೆ
ಬಾಳನ ಪೂಜಾಸ್ಥಳಗಳನ್ನು ಏರ್ಪಡಿಸಿಕೊಂಡಿದ್ದಾ
ರಲ್ಲಾ; ನಾನು ಇಂಥಾ ಆಚಾರವನ್ನು ವಿಧಿಸಲಿಲ್ಲ,
ಅದರ ಮಾತನ್ನೇ ಆಡಲಿಲ್ಲ, ಅದು ನನ್ನ ಮನಸ್ಸಿ
6 ನಲ್ಲಿ ಹುಟ್ಟಲೂ ಇಲ್ಲ; ಆಹಾ, ಈ ಕಾರಣದಿಂದ ಈ
ಸ್ಥಳಕ್ಕೆ ತೋಫೆತ್ ಮತ್ತು ಬೆನ್‌ಹಿನ್ನೋಮಿನ ತಗ್ಗು
ಎಂಬ ಹೆಸರುಗಳು ಹೋಗಿ ಕೊಲೆಯ ತಗ್ಗು ಎಂಬ
ಹೆಸರಾಗುವ ಕಾಲ ಬರುವದು; ನಾನು ಈ ಸ್ಥಳದಲ್ಲಿ
ಯೆಹೂದ್ಯರ ಮತ್ತು ಯೆರೂಸಲೇಮಿನವರ ಆಲೋಚ
ನೆಯನ್ನು ಚೆಲ್ಲಿ ಮಣ್ಣುಪಾಲುಮಾಡಿ ಅವರ ಪ್ರಾಣ
ವನ್ನು ಹುಡುಕುವ ಶತ್ರುಗಳ ಖಡ್ಗದಿಂದ ಅವರನ್ನು
ಬೀಳಿಸಿ ಆ ಹೆಣಗಳನ್ನು ಆಕಾಶಪಕ್ಷಿಗಳಿಗೂ ಭೂ
ಜಂತುಗಳಿಗೂ ಆಹಾರವನ್ನಾಗಿ ಮಾಡುವೆನು. ಈ
ಪಟ್ಟಣವನ್ನು ಬೆರಗಿನ ಸಿಳ್ಳಿಗೆ ಗುರಿಮಾಡುವೆನು;
ಹಾದುಹೋಗುವವರೆಲ್ಲರೂ ಅದಕ್ಕೆ ಸಂಭವಿಸಿದ ವಿಪ
ತ್ತುಗಳನ್ನು ಕಂಡು ಬೆರಗಾಗಿ ಸಿಳ್ಳುಹಾಕುವರು.
ಅವರ ಪ್ರಾಣವನ್ನು ಹುಡುಕುವ ಶತ್ರುಗಳು ಅವ
ರನ್ನು ಮುತ್ತಿ ಬಹಳವಾಗಿ ಇರಕಿಸುವಾಗ ಅವರು
ತಮ್ಮ ಗಂಡು ಹೆಣ್ಣು ಮಕ್ಕಳ ಮಾಂಸವನ್ನೂ ಇಷ್ಟ
ಮಿತ್ರರ ಮಾಂಸವನ್ನೂ ತಿನ್ನುವಂತೆ ಮಾಡುವೆನು.
ಇದು ಯೆಹೋವನಾದ ನನ್ನ ನುಡಿ. ಆಗ ನೀನು
ನಿನ್ನ ಸಂಗಡ ಬಂದವರ ಕಣ್ಣೆದುರಿಗೆ ಆ ಕೂಜವನ್ನು
ಒಡೆದುಬಿಟ್ಟು, ಅವರಿಗೆ ಹೀಗೆ ಹೇಳು—ಸೇನಾಧೀಶ್ವರ
ನಾದ ಯೆಹೋವನು ಇಂತೆನ್ನುತ್ತಾನೆ—ಒಡೆದು ಸರಿ
ಪಡಿಸಲಾಗದ ಮಣ್ಣಿನ ಪಾತ್ರೆಯಂತೆ ನಾನು ಈ ಜನ
ವನ್ನೂ ಪಟ್ಟಣವನ್ನೂ ಒಡೆದುಬಿಡುವೆನು; ಇನ್ನೆಲ್ಲಿ
ಯೂ ಸ್ಥಳವಿಲ್ಲವಾಗಿ ಶವಗಳನ್ನು ತೋಫೆತಿನಲ್ಲಿ
ಹೂಣುವರು. ನಾನು ಈ ಸ್ಥಳವನ್ನೂ ಇದರ
ನಿವಾಸಿಗಳನ್ನೂ ಹೀಗೆ ನಾಶಪಡಿಸಿ ಈ ಪಟ್ಟಣವನ್ನು
ತೋಫೆತಿನ ಸ್ಥಿತಿಗೆ ತರುವೆನು; ಯೆರೂಸಲೇಮಿನ
ಮನೆಗಳೂ ಯೆಹೂದದ ಅರಸರ ಮನೆಗಳೂ ಅಂದರೆ
ಯಾವ ಯಾವ ಮನೆಗಳ ಮಾಳಿಗೆಗಳ ಮೇಲೆ ಆಕಾ
ಶದ ನಕ್ಷತ್ರಗಣಕ್ಕೆಲ್ಲ ಧೂಪಹಾಕಿ ಅನ್ಯದೇವತೆಗಳಿಗೆ
ಪಾನನೈವೇದ್ಯಗಳನ್ನು ಸುರಿದಿದ್ದಾರೋ ಆ ಮನೆ
ಗಳೆಲ್ಲಾ ಹೊಲಸಾಗಿ ತೋಫೆತೆಂಬ ಸ್ಥಳಕ್ಕೆ ಸಮಾನ
ವಾಗುವವು.

ಪಷ್ಹೂರನು ಯೆರೆಮೀಯನನ್ನು ಕೋಳಕ್ಕೆ ಹಾಕಿಸಿದ್ದು.

ಯೆರೆಮೀಯನು ಯೆಹೋವನ ಅಪ್ಪಣೆಯಂತೆ
ತೋಫೆತಿನಲ್ಲಿ ಪ್ರವಾದಿಸಿದ ಮೇಲೆ ಅಲ್ಲಿಂದ ಬಂದು
ಯೆಹೋವನ ಆಲಯದ ಪ್ರಾಕಾರದಲ್ಲಿ ನಿಂತು
ಕೊಂಡು—ಇಸ್ರಾಯೇಲ್ಯರ ದೇವರೂ ಸೇನಾಧೀಶ್ವ
ರನೂ ಆದ ಯೆಹೋವನು ಇಂತೆನ್ನುತ್ತಾನೆ—ಆಹಾ,
ಈ ಪಟ್ಟಣದವರೂ ಇದರ ಸುತ್ತಣ ಎಲ್ಲಾ ಊರು
ಗಳವರೂ ನನ್ನ ಮಾತುಗಳನ್ನು ಕೇಳಲೊಲ್ಲದೆ ತಮ್ಮ
ಮನಸ್ಸನ್ನು ಕಠಿಣಮಾಡಿಕೊಂಡಕಾರಣ ನಾನು ಈ
ಪಟ್ಟಣಕ್ಕೆ ಕೊಟ್ಟ ಶಾಪದ ಕೇಡನ್ನೆಲ್ಲಾ ಇವರಿಗೆ
ಬರಮಾಡುವೆನು ಎಂದು ಸಮಸ್ತಜನರಿಗೆ ಸಾರಿದನು.

ಯೆರೆಮೀಯನು ಈ ಪ್ರವಾದನೆ ಮಾಡುವದನ್ನು 2
ಯಾಜಕ ಇಮ್ಮೇರನ ಮಗನೂ ಯೆಹೋವನ
ಆಲಯದ ಮುಖ್ಯಾಧಿಕಾರಿಯೂ ಆದ ಪಷ್ಹೂರನು
ಕೇಳಿ ಪ್ರವಾದಿಯಾದ ಯೆರೆಮೀಯನನ್ನು ಹೊಡೆಯಿಸಿ
ಯೆಹೋವನ ಆಲಯಕ್ಕೆ ಸೇರಿದ ಮೇಲಣ ಬೆನ್ಯಾ
ಮೀನ್ ಬಾಗಿಲಲ್ಲಿದ್ದ ಕೋಳಕ್ಕೆ ಹಾಕಿಸಿದನು.

3 ಮರುದಿನ ಪಷ್ಹೂರನು ಯೆರೆಮೀಯನನ್ನು ಕೋಳ
ದಿಂದ ಬಿಡಿಸಿದನು. ಆಗ ಯೆರೆಮೀಯನು ಅವನಿಗೆ
ಹೀಗೆ ಹೇಳಿದನು—ಯೆಹೋವನು ನಿನ್ನ ಹೆಸರನ್ನು
ಪಷ್ಹೂರ್ ಎಂದು ಹೇಳದೆ 1)ಮಾಗೋರ್ ಮಿಸ್ಸಾ
4 ಬೀಬ್ ಎಂದು ಹೇಳಿದ್ದಾನೆ. ಏಕಂದರೆ ಯೆಹೋ
ವನು—ಇಗೋ, ನಾನು ನಿನ್ನನ್ನು ನಿನಗೂ ನಿನ್ನ
ಎಲ್ಲಾ ಸ್ನೇಹಿತರಿಗೂ ದಿಗಿಲಿಗೆ ಆಸ್ಪದನನ್ನಾಗಿ ಮಾಡು
ವೆನು; ಅವರು ತಮ್ಮ ಶತ್ರುಗಳ ಖಡ್ಗದಿಂದ ಬೀಳು
ವರು, ಅದನ್ನು ಕಣ್ಣಾರೆ ಕಾಣುವಿ; ನಾನು ಯೆಹೂ
ದ್ಯರನ್ನೆಲ್ಲಾ ಬಾಬೆಲಿನ ಅರಸನ ಕೈಗೆ ಒಪ್ಪಿಸುವೆನು;
ಅವನು ಅವರನ್ನು ಬಾಬೆಲಿಗೆ ಸೆರೆಯಾಗಿ ಒಯ್ದು
5 ಕತ್ತಿಯಿಂದ ಕಡಿಯುವನು. ಮತ್ತು ಈ ಪಟ್ಟಣದ
ಎಲ್ಲಾ ಆಸ್ತಿಯನ್ನೂ ಆದಾಯವನ್ನೂ ಸಂಪತ್ತನ್ನೂ
ಯೆಹೂದದ ಅರಸರ ಸಕಲ ನಿಧಿನಿಕ್ಷೇಪಗಳನ್ನೂ
ಅವರ ಶತ್ರುಗಳ ಕೈವಶಮಾಡುವೆನು; ಅವರು ಅವು
ಗಳನ್ನು ಕೊಳ್ಳೆಹೊಡೆದು ಬಾಬೆಲಿಗೆ ತೆಗೆದುಕೊಂಡು
6 ಹೋಗುವರು. ಪಷ್ಹೂರನೇ, ನೀನೋ ನಿನ್ನ ಮನೆ
ಯವರೆಲ್ಲರೊಡನೆ ಸೆರೆಗೆ ಹೋಗುವಿ; ನೀನೂ ನಿನ್ನ
ಮಿಥ್ಯಾಪ್ರವಾದನೆಯನ್ನು ಕೇಳಿದ ನಿನ್ನ ಸಕಲ ಸ್ನೇಹಿ
ತರೂ ಬಾಬೆಲಿಗೆ ಸೇರಿ ಅಲ್ಲೇ ಸತ್ತು ಮಣ್ಣಾಗುವಿರಿ
ಎಂದು ನುಡಿದಿದ್ದಾನೆ.

### ಪ್ರವಾದಿಯ ಪ್ರಲಾಪ.

7 ಯೆಹೋವನೇ, ನೀನು ನನ್ನನ್ನು ಮರುಳುಗೊಳಿ
ಸಿದಿ, ನಾನು ಮರುಳಾದೆನು; ನೀನು ನನಗಿಂತ ಬಲಿಷ್ಠ
ನಾಗಿ ಗೆದ್ದುಕೊಂಡಿ; ನಾನು ಹಗಲೆಲ್ಲಾ ಗೇಲಿಗೆ
ಗುರಿಯಾಗಿದ್ದೇನೆ, ಎಲ್ಲರೂ ನನ್ನನ್ನು ಅಣಕಿಸುತ್ತಾರೆ.
8 ನಾನು ಮಾತಾಡುವದೆಲ್ಲಾ ಅರಚಾಟವೇ; ಬಲಾ
ತ್ಕಾರ, ಕೊಳ್ಳೆ ಎಂದೇ ಕೂಗಿಕೊಳ್ಳುತ್ತೇನೆ; [ನಾನು
ಸಾರುವ] ಯೆಹೋವನ ವಾಕ್ಯವು ನನ್ನನ್ನು ಜನರ
9 ದೂಷಣೆಗೂ ಪರಿಹಾಸಕ್ಕೂ ಗುರಿಮಾಡಿದೆ. 2)ನಾನು
ಯೆಹೋವನ ವಿಷಯವನ್ನು ಪ್ರಕಟಿಸೆನು, ಆತನ
ಹೆಸರಿನಲ್ಲಿ ಇನ್ನು ಮಾತಾಡೆನು ಎಂದುಕೊಂಡರೆ
ಉರಿಯುವ ಬೆಂಕಿಯು ನನ್ನ ಎಲುಬುಗಳಲ್ಲಿ ಅಡಕ
ವಾಗಿದೆಯೋ ಎಂಬಂತೆ ನನ್ನ ಹೃದಯದಲ್ಲಿ ಸಂಕಟ
ವಾಗುತ್ತದೆ; ತಡೆದು ತಡೆದು ಆಯಾಸಗೊಂಡಿ
10 ದ್ದೇನೆ, ಸಹಿಸಲಾರೆ. ಇವನ ಮೇಲೆ ದೂರು ಹೇಳಿರಿ,
ನಾವೂ ಹೇಳುವೆವು ಎಂದು ಬಹು ಜನರು ಗುಸು
ಗುಟ್ಟುವದನ್ನು ಕೇಳಿದ್ದೇನೆ, ಸುತ್ತುಮುತ್ತಲೂ ದಿಗಿ
ಲು; ನನ್ನ ಆಪ್ತಸ್ನೇಹಿತರೆಲ್ಲರೂ ಇವನು ಎಡವಿ
ಬೀಳಲಿ ಎಂದು ನನ್ನನ್ನು ಹೊಂಚಿನೋಡುತ್ತಾ—
ಒಂದು ವೇಳೆ ಸಿಕ್ಕಿಬಿದ್ದಾನು, ಇವನನ್ನು ಗೆದ್ದು
ಮುಯ್ಯಿತೀರಿಸಿಕೊಳ್ಳುವೆವು ಎಂದು ತಮ್ಮತಮ್ಮೊ
11 ಳಗೆ ಅಂದುಕೊಳ್ಳುತ್ತಿದ್ದಾರೆ. ಯೆಹೋವನಾದರೋ
ಭಯಂಕರಶೂರನಾಗಿ ನನ್ನ ಸಂಗಡ ಇದ್ದಾನೆ. ಆದ
ದರಿಂದ ನನ್ನ ಹಿಂಸಕರು ಗೆಲ್ಲದೆ ಮುಗ್ಗರಿಸುವರು;
3)ತಮ್ಮ ಇಷ್ಟಾರ್ಥವು ನೆರವೇರದ ಕಾರಣ ದೊಡ್ಡ
ನಾಚಿಕೆಗೆ ಈಡಾಗುವರು, ಎಂದಿಗೂ ಮರೆಯದ
ಶಾಶ್ವತಾವಮಾನಕ್ಕೆ ಒಳಗಾಗುವರು. ಹೃದಯ 12
ವನ್ನೂ ಅಂತರಿಂದ್ರಿಯವನ್ನೂ ಪರೀಕ್ಷಿಸಿ ಶಿಷ್ಟರನ್ನು
ಶೋಧಿಸುವ ಸೇನಾಧೀಶ್ವರನಾದ ಯೆಹೋವನೇ,
ನೀನು ನನ್ನ ಹಿಂಸಕರಿಗೆ ಕೊಡುವ ಪ್ರತಿಫಲವನ್ನು
ನನ್ನ ಕಣ್ಣು ನೋಡಲಿ; ನಿನಗೇ ನನ್ನ ವ್ಯಾಜ್ಯವನ್ನು
ಅರಿಕೆಮಾಡಿದ್ದೇನಷ್ಟೆ. ಯೆಹೋವನನ್ನು ಕೀರ್ತಿಸಿರಿ, 13
ಯೆಹೋವನನ್ನು ಸ್ತುತಿಸಿರಿ; ಆತನು ಕೆಡುಕರ ಕೈ
ಯಿಂದ ದೀನನ ಪ್ರಾಣವನ್ನು ರಕ್ಷಿಸಿದ್ದಾನೆ.
ನಾನು ಹುಟ್ಟಿದ ದಿವಸವು ಶಾಪಗ್ರಸ್ತವಾಗಲಿ, 14
ತಾಯಿಯು ನನ್ನನ್ನು ಹೆತ್ತ ದಿನವು ಶುಭವೆನಿಸಿಕೊಳ್ಳ
ದಿರಲಿ! ನಿನಗೆ ಗಂಡುಮಗು ಹುಟ್ಟಿದೆ ಎಂಬ ಸಮಾ 15
ಚಾರವನ್ನು ನನ್ನ ತಂದೆಗೆ ತಿಳಿಸಿ ಅವನಿಗೆ ಕೇವಲ
ಆನಂದವನ್ನುಂಟುಮಾಡಿದವನು ಶಪಿಸಲ್ಪಡಲಿ! ಯೆ 16
ಹೋವನು ಕನಿಕರಪಡದೆ ಕೆಡವಿಬಿಟ್ಟ ಪಟ್ಟಣಗಳ
ಗತಿಯು ಅವನಿಗೆ ಬರಲಿ; ಪ್ರಾತಃಕಾಲದಲ್ಲಿ ಅರ
ಚಾಟವು, ಮಧ್ಯಾಹ್ನದಲ್ಲಿ ಕೂಗಾಟವು ಅವನ ಕಿವಿಗೆ
ಬೀಳಲಿ! ಅವನು ನನ್ನನ್ನು ಗರ್ಭದಲ್ಲೇ ಕೊಲ್ಲಲಿಲ್ಲ 17
ವಲ್ಲಾ; ಹೀಗೆ ಮಾಡಿದ್ದರೆ ನನ್ನ ತಾಯಿಯೇ ನನಗೆ
ಗೋರಿಯಾಗುತ್ತಿದ್ದಳು, ಆಕೆಯ ಗರ್ಭವು ಯಾವಾ
ಗಲೂ ಬಸುರಾಗಿಯೇ ಇರುತ್ತಿತ್ತು. ನಾನು ಶ್ರಮ 18
ದುಃಖಗಳನ್ನು ನೋಡುವದಕ್ಕೂ ನನ್ನ ಆಯುಸ್ಸು
ಅವಮಾನದಿಂದ ಕ್ಷಯಿಸುವದಕ್ಕೂ ಗರ್ಭದಿಂದ ಏಕೆ
ಹೊರಟು ಬಂದೆನು?

### ಬಾಬೆಲಿನ ಅರಸನು ಯೆರೂಸಲೇಮನ್ನು ಆಕ್ರಮಿಸುವನೆಂದು ಯೆರೆಮೀಯನು ಮುಂತಿಳಿಸಿದ್ದು.

21 ಅರಸನಾದ ಚಿದ್ಕೀಯನು ಮಲ್ಕೀಯನ ಮಗನಾದ
ಪಷ್ಹೂರನನ್ನೂ ಯಾಜಕ ಮಾಸೇಯನ ಮಗನಾದ
ಚೆಫನ್ಯನನ್ನೂ ಯೆರೆಮೀಯನ ಬಳಿಗೆ ಕಳುಹಿಸಿ—
ದಯಮಾಡಿ ಯೆಹೋವನ ಚಿತ್ತವೇನೆಂದು ಆತನನ್ನು 2
ನಮಗೋಸ್ಕರ ವಿಚಾರಿಸು; ಬಾಬೆಲಿನ ಅರಸನಾದ
4)ನೆಬೂಕದ್ನೆಚ್ಚರನು ನಮಗೆ ವಿರುದ್ಧವಾಗಿ ಯುದ್ಧ
ಮಾಡುತ್ತಿದ್ದಾನಲ್ಲಾ; ಒಂದುವೇಳೆ ಯೆಹೋವನು
ತನ್ನ ಸಮಸ್ತ ಅದ್ಭುತಕಾರ್ಯಗಳಿಗೆ ಅನುಗುಣ
ವಾಗಿ ನಮ್ಮ ಪಕ್ಷವನ್ನು ವಹಿಸಿ ಈ ಶತ್ರುವು ನಮ್ಮ
ಕಡೆಯಿಂದ ತೊಲಗುವಂತೆ ಮಾಡಿಯಾನು ಎಂದು
ಅವರ ಮೂಲಕ ವಿಜ್ಞಾಪಿಸಿದಾಗ ಯೆಹೋವನಿಂದ
ಯೆರೆಮೀಯನಿಗೆ ದೈವೋಕ್ತಿಯು ದೊರೆಯಿತು.
ಆಗ ಯೆರೆಮೀಯನು ಈ ಉತ್ತರವನ್ನು ಚಿದ್ಕೀ 3
ಯನಿಗೆ ತಿಳಿಸಿರಿ ಎಂದು ಅವರಿಗೆ ಹೇಳಿದನು—
ಇಸ್ರಾಯೇಲ್ಯರ ದೇವರಾದ ಯೆಹೋವನು ಇಂತೆನ್ನು 4
ತ್ತಾನೆ—ಇಗೋ, ನಿಮ್ಮನ್ನು ಮುತ್ತುವ ಕಸ್ದೀಯ
ರಿಗೂ ಬಾಬೆಲಿನ ಅರಸನಿಗೂ ವಿರುದ್ಧವಾಗಿ ಪೌಳಿ
ಗೋಡೆಯ ಹೊರಗೆ ಯುದ್ಧಮಾಡುವದಕ್ಕೆ ನೀವು

1) ಮಾಗೋರ್ ಮಿಸ್ಸಾಬೀಬ್ ಅಂದರೆ—ಸುತ್ತುಮುತ್ತಲು ದಿಗಿಲು. 2) ಅಥವಾ: ನಾನು ಆ ವಾಕ್ಯವನ್ನು ಮನಸ್ಸಿಗೆ ತಾರೆನು, ಯೆಹೋವನ. 3) ಅಥವಾ: ತಾವು ಬುದ್ಧಿಯಿಲ್ಲದೆ ನಡೆದ ಕಾರಣ. 4) ಮೂಲ: ನೆಬೂಕದ್ರೆಚ್ಚರನು.

ಹಿಡಿದಿರುವ ಆಯುಧಗಳನ್ನು ನಾನು ಹಿಂದಕ್ಕೆ ತಳ್ಳಿ
5 ಈ ಪಟ್ಟಣದೊಳಗೆ ಕೂಡಿಹಾಕುವೆನು. ನಾನೇ
ಕೋಪರೋಷಮಹಾಕ್ರೋಧಭರಿತನಾಗಿ ಶಿಕ್ಷಾಹಸ್ತ
ದಿಂದಲೂ ಭುಜಪರಾಕ್ರಮದಿಂದಲೂ ನಿಮಗೆ ವಿರುದ್ಧ
6 ವಾಗಿ ಯುದ್ಧಮಾಡುವೆನು. ಈ ಪಟ್ಟಣದಲ್ಲಿ ವಾಸಿ
ಸುವ ಮನುಷ್ಯರನ್ನೂ ಪಶುಗಳನ್ನೂ ಬಾಧಿಸುವೆನು;
7 ಘೋರವ್ಯಾಧಿಯು ಸಾಯಿಸುವದು. ತರುವಾಯ
ನಾನು ಯೆಹೂದದ ಅರಸನಾದ ಚಿದ್ಕೀಯನನ್ನೂ
ಅವನ ಸೇವಕರನ್ನೂ ವ್ಯಾಧಿಖಡ್ಗಕ್ಷಾಮಗಳಿಂದ
ಹತಶೇಷರಾದ ಪ್ರಜೆಗಳನ್ನೂ ಬಾಬೆಲಿನ ಅರಸನಾದ
ನೆಬೂಕದ್ನೆಚ್ಚರನ ಕೈಗೂ ಅವರ ಪ್ರಾಣವನ್ನು ಹುಡು
ಕುತ್ತಿರುವ ಅವರ ಶತ್ರುಗಳ ಕೈಗೂ ಕೊಟ್ಟುಬಿಡು
ವೆನು; ಅವನು ಅವರನ್ನು ಕರುಣಿಸದೆ ಕನಿಕರಪಡದೆ
ಉಳಿಸದೆ ಕತ್ತಿಯಿಂದ ಸಂಹರಿಸುವನು.
8 ಮತ್ತು ಈ ಜನರಿಗೆ ಹೀಗೆ ಹೇಳು ಎಂದು ಯೆ
ಹೋವನು ನನಗೆ ಅಪ್ಪಣೆಕೊಟ್ಟಿದ್ದಾನೆ. ಯೆಹೋ
ವನು ಇಂತೆನ್ನುತ್ತಾನೆ—ಇಗೋ, ನಾನು ಜೀವಿಸುವ
ಮಾರ್ಗವನ್ನೂ ಸಾಯುವ ಮಾರ್ಗವನ್ನೂ ನಿಮ್ಮ
9 ಮುಂದೆ ಇಟ್ಟಿದ್ದೇನೆ. ಪಟ್ಟಣದಲ್ಲಿ ನಿಲ್ಲುವವನು
ಖಡ್ಗಕ್ಷಾಮವ್ಯಾಧಿಗಳಿಂದ ಸಾಯುವನು; ನಿಮ್ಮನ್ನು
ಮುತ್ತುವ ಕಸ್ದೀಯರನ್ನು ಮರೆಹೊಗಲು ಪಟ್ಟಣ
ವನ್ನು ಬಿಡುವವನು ಬದುಕುವನು, ತನ್ನ ಪ್ರಾಣವೊಂ
10 ದನ್ನೇ ಬಾಚಿಕೊಂಡು ಹೋಗುವನು. ಮೇಲಿಗಲ್ಲ
ಕೇಡಿಗಾಗಿಯೇ ಈ ಪಟ್ಟಣದ ಮೇಲೆ ದೃಷ್ಟಿಯಿಟ್ಟಿ
ದ್ದೇನೆ; ಇದು ಬಾಬೆಲಿನ ಅರಸನ ಕೈವಶವಾಗುವದು,
ಅವನು ಸುಟ್ಟುಬಿಡುವನು; ಇದು ಯೆಹೋವನ ನುಡಿ.
11 ಯೆಹೂದದ ಅರಸನ ಮನೆತನದ ವಿಷಯವಾಗಿ
ಯೆಹೋವನು ಹೇಳಿರುವ ಈ ಮಾತನ್ನು ಕೇಳಿರಿ—
12 ದಾವೀದನ ಮನೆತನದವರೇ, ಯೆಹೋವನು ಇಂತೆ
ನ್ನುತ್ತಾನೆ—ನಿಮ್ಮ ದುಷ್ಕೃತ್ಯಗಳ ನಿಮಿತ್ತ ನನ್ನ
ರೋಷವು ಜ್ವಾಲೆಯಂತೆ ಹೊರಟು ಯಾರೂ ಆರಿಸ
ಲಾಗದಷ್ಟು ರಭಸವಾಗಿ ದಹಿಸಬಾರದಾಗಿದ್ದರೆ ಮುಂ
ಚಾನೆ ನ್ಯಾಯತೀರಿಸಿರಿ, ಸುಲಿಗೆಯಾದವನನ್ನು ದೋಚಿ
13 ಕೊಂಡವನ ಕೈಯಿಂದ ಬಿಡಿಸಿರಿ. ಆಹಾ, ತಗ್ಗಿನ
ನಗರಿಯೇ, ಪ್ರಸ್ಥಭೂಮಿಯ ಶಿಖರದ ಮೇಲಣ
ಪುರಿಯೇ, ನಾನು ನಿನಗೆ ವಿರುದ್ಧವಾಗಿದ್ದೇನೆ; ಯಾರು
ಇಳಿದು ನಮ್ಮ ಮೇಲೆ ಬಂದಾರು, ನಮ್ಮ ನಿವಾಸ
14 ಗಳಲ್ಲಿ ಯಾರು ನುಗ್ಗಿಯಾರು ಎನ್ನುವವರೇ, ನಿಮ್ಮ
ದುಷ್ಕೃತ್ಯಗಳಿಗೆ ಪ್ರತಿಫಲವಾಗಿ ನಿಮ್ಮನ್ನು ದಂಡಿಸು
ವೆನು; ನಿಮ್ಮ ಪುರಿಯೆಂಬ ವನಕ್ಕೆ ಬೆಂಕಿಹಚ್ಚುವೆನು,
ಅದು ಸುತ್ತುಮುತ್ತಣವನ್ನೆಲ್ಲಾ ನುಂಗಿಬಿಡುವದು.

### ಯೆಹೂದದ ಅರಸರ ವಿಷಯವಾದ ದೈವೋಕ್ತಿಗಳು.

22 ಯೆಹೋವನು [ನನಗೆ] ಹೀಗೆ ಅಪ್ಪಣೆಕೊಟ್ಟ
ನು—ನೀನು ಯೆಹೂದದ ಅರಸನ ಮನೆಗೆ ಇಳಿದು
2 ಹೋಗಿ ಈ ಮಾತನ್ನು ಅಲ್ಲಿ ಹೇಳು—ದಾವೀದನ
ಸಿಂಹಾಸನಾರೂಢನಾದ ಯೆಹೂದದ ಅರಸನೇ, ಯೆ
ಹೋವನ ಮಾತನ್ನು ಕೇಳು; ನಿನ್ನ ಸೇವಕರೂ ಈ
ಬಾಗಿಲುಗಳಲ್ಲಿ ಸೇರುವ ನಿನ್ನ ಪ್ರಜೆಗಳೂ ಕೇಳಲಿ.
ಯೆಹೋವನು ಹೀಗನ್ನುತ್ತಾನೆ—ನೀತಿನ್ಯಾಯಗಳನ್ನು
ಆಚರಿಸಿರಿ, ಸುಲಿಗೆಯಾದವನನ್ನು ದೋಚಿಕೊಂಡವನ
ಕೈಯಿಂದ ಬಿಡಿಸಿರಿ; ವಿದೇಶಿ, ಅನಾಥ, ವಿಧವೆ, ಇವ
ರಿಗೆ ಯಾವ ಅನ್ಯಾಯವನ್ನೂ ಹಿಂಸೆಯನ್ನೂ ಮಾಡ
ಬೇಡಿರಿ; ನಿರ್ದೋಷಿಯ ರಕ್ತವನ್ನು ಈ ಸ್ಥಳದಲ್ಲಿ
ಸುರಿಸದಿರಿ.
ನೀವು ಈ ಆಜ್ಞೆಗಳನ್ನು ಮನಃಪೂರ್ವಕವಾಗಿ ಕೈ
ಕೊಂಡರೆ ದಾವೀದನ ಸಿಂಹಾಸನಾರೂಢರಾದ ಅರ
ಸರು ರಥಾಶ್ವಗಳನ್ನೇರಿದವರಾಗಿ ತಮ್ಮ ಸೇವಕರೊಡ
ನೆಯೂ ಪ್ರಜೆಗಳೊಡನೆಯೂ ಈ ಅರಮನೆಯ ಬಾಗಿ
ಲುಗಳಲ್ಲಿ ಪ್ರವೇಶಿಸುವರು. ನೀವು ಈ ಮಾತು
ಗಳನ್ನು ಕೇಳದಿದ್ದರೆ ಈ ಅರಮನೆಯು ಹಾಳುಬೀಳು
ವದು ಎಂದು ನನ್ನ ಮೇಲೆ ಆಣೆಯಿಡುತ್ತೇನೆ. ಇದು
ಯೆಹೋವನ ನುಡಿ. ಯೆಹೋವನು ಯೆಹೂದದ
ಅರಸನ ಮನೆತನವನ್ನು ಕುರಿತು ಹೀಗನ್ನುತ್ತಾನೆ—
ನೀನು ನನ್ನ ದೃಷ್ಟಿಯಲ್ಲಿ ಗಿಲ್ಯಾದಿನಂತೆಯೂ ಲೆಬ
ನೋನಿನ ಶಿಖರದ ಹಾಗೂ ಇದ್ದೀ, ಆದರೂ ನಾನು
ನಿನ್ನನ್ನು ಮರುಭೂಮಿಯನ್ನಾಗಿಯೂ ನಿರ್ಜನ ಪಟ್ಟ
ಣವನ್ನಾಗಿಯೂ ಮಾಡುವದು ಖಂಡಿತ. ಆಯುಧ
ಸನ್ನದ್ಧರಾದ ಸಂಹಾರಕರನ್ನು ನಿನಗೆ ವಿರುದ್ಧವಾಗಿ
ಏರ್ಪಡಿಸುವೆನು; ಅವರು ನಿನ್ನ ಶ್ರೇಷ್ಠ ದೇವದಾರು
ಗಳನ್ನು ಕಡಿದು ಬೆಂಕಿಯಲ್ಲಿ ಹಾಕುವರು. ಅನೇಕ
ಜನಾಂಗಗಳವರು ಈ ಪಟ್ಟಣದ ಮಾರ್ಗವಾಗಿ ಹೋ
ಗುತ್ತಾ—ಯೆಹೋವನು ಈ ಮಹಾ ಪಟ್ಟಣಕ್ಕೆ
ಹೀಗೆ ಏಕೆ ಮಾಡಿದ ಎಂದು ಒಬ್ಬರಿಗೊಬ್ಬರು
ಮಾತಾಡಿಕೊಳ್ಳುತ್ತಾ—ಈ ಪಟ್ಟಣದವರು ತಮ್ಮ
ದೇವರಾದ ಯೆಹೋವನ ಒಡಂಬಡಿಕೆಯನ್ನು ನಿರಾ
ಕರಿಸಿ ಅನ್ಯದೇವತೆಗಳನ್ನು ಪೂಜಿಸಿ ಸೇವಿಸಿದ್ದ
ರಿಂದಲೇ ಇದಕ್ಕೆ ಈ ಗತಿಯಾಯಿತು ಅಂದುಕೊಳ್ಳು
ವರು.
ಸತ್ತವನಿಗಾಗಿ ಅಳಬೇಡಿರಿ, ಬಡುಕೊಳ್ಳಬೇಡಿರಿ;
ಸೆರೆಯಾದವನಿಗೇ ಬಿಕ್ಕಿಬಿಕ್ಕಿ ಅಳಿರಿ; ಅವನು ಇನ್ನು
ಹಿಂದಿರುಗನು, ಜನ್ಮಭೂಮಿಯನ್ನು ನೋಡನು.
ಯೆಹೂದದ ಅರಸನಾದ ಯೋಷೀಯನ ಮಗನೂ
ತನ್ನ ತಂದೆಯಾದ ಯೋಷೀಯನ ತರುವಾಯ
ಪಟ್ಟಕ್ಕೆ ಬಂದವನೂ ಇಲ್ಲಿಂದ ಸೆರೆಯಾಗಿ ಹೋದ
ವನೂ ಆದ ಶಲ್ಲೂಮನ ವಿಷಯವಾಗಿ ಯೆಹೋ
ವನು ಹೇಳುವದೇನಂದರೆ—ಅವನು ಇಲ್ಲಿಗೆ ಇನ್ನು
ಹಿಂದಿರುಗಿ ಬಾರನು; ಅವನನ್ನು ಎಲ್ಲಿಗೆ ಸೆರೆ
ಯೊಯ್ದರೋ ಅಲ್ಲೇ ಸಾಯುವನು, ಈ ದೇಶವನ್ನು
ಇನ್ನು ಕಾಣನು ಎಂಬದೇ.
ತನ್ನ ಅರಮನೆಯನ್ನು ದುರ್ನೀತಿಯಿಂದಲೂ
ಮಹಡಿಗಳನ್ನು ಅನ್ಯಾಯದಿಂದಲೂ ಕಟ್ಟಿಸಿಕೊಳ್ಳುವ
ವನ ಗತಿಯನ್ನು ಏನು ಹೇಳಲಿ! ಕೂಲಿಕೊಡದೆ
ನೆರೆಯವನಿಂದ ಬಿಟ್ಟಿಕೆಲಸವನ್ನು ಮಾಡಿಸಿ—ಆಹಾ,
ನಾನು ವಿಸ್ತಾರವಾದ ಅರಮನೆಯನ್ನೂ ವಿಶಾಲವಾದ
ಮಹಡಿಗಳನ್ನೂ ಕಟ್ಟಿಸಿಕೊಳ್ಳುವೆನು ಎಂದು ಹೇಳಿ
ಅಗಲಗಲವಾದ ಕಿಟಕಿಗಳನ್ನಿಡಿಸಿ [ಒಳಗೆ ಗೋಡೆ
ಗೆಲ್ಲಾ] ದೇವದಾರಿನ ಹಲಿಗೆಗಳನ್ನು ಹೊದಿಸಿ ಕಿರಿ
ಮಂಜಿಯ ಬಣ್ಣವನ್ನು ಬಳಿಸಿಕೊಳ್ಳುವವನ ಪಾಡನ್ನು

15 ಏನು ಹೇಳಲಿ! ನೀನು ದೇವದಾರುಪಿನ ಕೆಲಸದಲ್ಲಿ
ಸ್ಪರ್ಧೆಯುಳ್ಳವನಾಗಿರುವದರಿಂದಲೇ ಆಳತಕ್ಕವನಾಗಿ
ದ್ದೀಯೋ? ನಿನ್ನ ತಂದೆಯು ಎಷ್ಟೇ ಉಂಡು ಕುಡಿ
ದರೂ ನೀತಿನ್ಯಾಯಗಳನ್ನಂತು ಕೈಕೊಳ್ಳುತ್ತಿದ್ದನು;
16 ಆಗ ಅವನಿಗೆ ನೆಮ್ಮದಿಯಾಗಿತ್ತು. ದೀನದರಿದ್ರರ
ವ್ಯಾಜ್ಯವನ್ನು ತೀರಿಸುತ್ತಿದ್ದನು; ಆಗ ಸುಖವಾಗಿತ್ತು.
ನನ್ನನ್ನು ಅರಿಯುವದೆಂದರೆ ಇದೇ ಎಂಬದು ಯೆ
17 ಹೋವನ ನುಡಿ. ಆದರೆ ನಿರ್ದೋಷಿಗಳ ರಕ್ತವನ್ನು
ಸುರಿಸುವದು, ದೋಚಿಕೊಳ್ಳುವದು, ಹಿಂಸಿಸುವದು,
ಜಜ್ಜುವದು, ಇವುಗಳನ್ನು ಮಾಡುವದರಲ್ಲಿಯೇ
ನಿನ್ನ ದೃಷ್ಟಿಯೂ ನಿನ್ನ ಮನಸ್ಸೂ ನೆಲೆಗೊಂಡಿವೆ.
18 ಆದಕಾರಣ ಯೋಷೀಯನ ಮಗನೂ ಯೆಹೂದದ
ಅರಸನೂ ಆದ ಯೆಹೋಯಾಕೀಮನ ವಿಷಯ
ವಾಗಿ ಯೆಹೋವನು ಹೀಗನ್ನುತ್ತಾನೆ—ಅಯ್ಯೋ,
ಅಣ್ಣಾ, ಅಯ್ಯೋ, ಅಕ್ಕಾ ಎಂದು ಗೋಳಾಡುವಂತೆ ಇವ
ನಿಗಾಗಿ ಯಾರೂ ಗೋಳಾಡುವದಿಲ್ಲ; ಅಯ್ಯೋ,
ನಮ್ಮೊಡೆಯಾ, ಅಕಟಾ, ದೊರೆಯ ಮಹಿಮೆಯೇ
19 ಎಂದು ಇವನಿಗಾಗಿ ಯಾರೂ ಪ್ರಲಾಪಿಸರು. ಇವ
ನನ್ನು ಯೆರೂಸಲೇಮಿನ ಬಾಗಿಲುಗಳ ಹೊರಗೆ ಕತ್ತೆ
ಯಂತೆ ಎಳೆದು ಬಿಸಾಟು ಮಣ್ಣುಪಾಲುಮಾಡುವರು.
20 [ಚೀಯೋನ್ ಯುವತಿಯೇ,] ಲೆಬನೋನ್ ಪರ್ವ
ತವನ್ನು ಹತ್ತಿ ಕೂಗಿಕೋ! ಬಾಷಾನಿನಲ್ಲಿ மೊರೆ
ಯಿಡು, ಅಬಾರೀಮಿನಲ್ಲಿ ಅರಚಿಕೋ! ನಿನ್ನ ಮಿಂಡ
21 ರೆಲ್ಲಾ ಹಾಳಾಗಿಹೋದರಲ್ಲಾ. ನಾನು ನಿನ್ನ ನೆಮ್ಮ
ದಿಯಲ್ಲಿ ನಿನ್ನೊಡನೆ ಮಾತಾಡಿದಾಗ ಕೇಳಲೊಲ್ಲೆನು
ಎಂದು ನೀನು ಹೇಳಿದಿ. ನನ್ನ ಮಾತನ್ನು ಕೇಳದಿರು
22 ವದು ನಿನಗೆ ಬಾಲ್ಯದಿಂದಲೇ ಅಭ್ಯಾಸ. ನಿನ್ನನ್ನು
ಅಟ್ಟಿಕೊಂಡು ಹೋಗುವ ಕುರುಬರನ್ನು ಗಾಳಿಯು
ಅಟ್ಟಿಬಿಡುವದು; ನಿನ್ನ ಮಿಂಡರು ಸೆರೆಹೋಗುವರು;
ಆಗ ನಿನ್ನ ಸಕಲ ದುಷ್ಕೃತ್ಯಗಳ ನಿಮಿತ್ತ ನೀನು
ಆಶಾಭಂಗಪಟ್ಟು ಅವಮಾನಕ್ಕೀಡಾಗುವದು ಖಂಡಿತ.
23 ಲೆಬನೋನಿನಲ್ಲಿ ವಾಸಿಸುವವಳೇ, ದೇವದಾರುಗಳಲ್ಲಿ
ಗೂಡುಮಾಡಿಕೊಂಡಿರುವವಳೇ, ಪ್ರಸವವೇದನೆಯಂತಿ
ರುವ ಸಂಕಟವು ನಿನಗೆ ಸಂಭವಿಸುವಾಗ 1)ನಿನ್ನ ಸ್ಥಿತಿ
ಯು ಎಷ್ಟೋ ದುಃಖಕರವಾಗಿರುವದು!
24 ಯೆಹೋವನು ಹೀಗನ್ನುತ್ತಾನೆ—ನನ್ನ ಜೀವ
ದಾಣೆ, ಯೆಹೋಯಾಕೀಮನ ಮಗನೂ ಯೆಹೂ
ದದ ಅರಸನೂ ಆದ ಕೊನ್ಯನೆಂಬ ನೀನು ನನ್ನ ಬಲ
ಗೈಯ ಮುದ್ರೆಯುಂಗರವಾಗಿದ್ದರೂ ನಾನು ನಿನ್ನನ್ನು
25 ಅಲ್ಲಿಂದ ಕಿತ್ತುಹಾಕುತ್ತಿದ್ದೆನು! ನಿನ್ನ ಪ್ರಾಣವನ್ನು
ಹುಡುಕಿ ನಿನ್ನಲ್ಲಿ ಭಯವನ್ನು ಹುಟ್ಟಿಸುವವರ ಕೈಗೆ
ಅಂದರೆ ಬಾಬೆಲಿನ ಅರಸನಾದ ನೆಬೂಕದ್ನೆಚ್ಚರನ
26 ಮತ್ತು ಕಸ್ದೀಯರ ಕೈಗೆ ಕೊಟ್ಟುಬಿಡುವೆನು. ನಿನ್ನ
ನ್ನೂ ನಿನ್ನ ಹೆತ್ತ ತಾಯಿಯನ್ನೂ ಜನ್ಮಭೂಮಿ
ಯಲ್ಲದ ಅನ್ಯದೇಶಕ್ಕೆ ಎಸೆದುಬಿಡುವೆನು; ಅಲ್ಲೇ
27 ಸಾಯುವಿರಿ. ಹಿಂದಿರುಗಬೇಕೆಂದು ಹಂಬಲಿಸುವ
ದೇಶಕ್ಕೆ ಅವರು ಹಿಂದಿರುಗುವುದೇ ಇಲ್ಲ.
28 ಕೊನ್ಯನೆಂಬ ಈ ಮನುಷ್ಯನು ಅಸಡ್ಡೆಗೀಡಾದ
ಒಡಕು ಗಡಿಗೆಯೋ? ಯಾರಿಗೂ ಇಷ್ಟವಲ್ಲದ ಮಡಿ
ಕೆಯೋ? ಅವನೂ ಅವನ ಸಂತತಿಯವರೂ ಏಕೆ ಬಿಸಾ
ಡಲ್ಪಟ್ಟಿದ್ದಾರೆ? ನೋಡದ ದೇಶಕ್ಕೆ ಏಕೆ ಎಸೆಯಲ್ಪಟ್ಟಿ
ದ್ದಾರೆ? ದೇಶವೇ, ದೇಶವೇ, ದೇಶವೇ, ಯೆಹೋವನ 29
ಮಾತನ್ನು ಕೇಳು! ಯೆಹೋವನು ಇಂತೆನ್ನುತ್ತಾನೆ— 30
ಇವನನ್ನು ಮಕ್ಕಳಿಲ್ಲದವನು, ವ್ಯರ್ಥಜನ್ಮದವನು
ಎಂದು ಪಟ್ಟಿಯಲ್ಲಿ ಬರೆಯಿರಿ; ಇವನ ಸಂತಾನದಲ್ಲಿ
ಇನ್ನು ಮೇಲೆ ಯಾವನೂ ದಾವೀದನ ಸಿಂಹಾಸನ
ದಲ್ಲಿ ಕೂತು ಯೆಹೂದವನ್ನು ಆಳಿ ಬಾಳನು.

ಧರ್ಮರಾಜನು ಪಟ್ಟಕ್ಕೆ ಬರುವ ವಾಗ್ದಾನ.

ನನ್ನ ಕಾವಲಿನ ಕುರಿಗಳನ್ನು ಚದರಿಸಿ ಹಾಳು 23
ಮಾಡುವ ಕುರುಬರ ಗತಿಯನ್ನು ಏನೆಂದು ಹೇಳಲಿ
ಎಂಬದು ಯೆಹೋವನ ನುಡಿ.
ಇಸ್ರಾಯೇಲ್ಯರ ದೇವರಾದ ಯೆಹೋವನು ತನ್ನ 2
ಜನರೆಂಬ ಕುರಿಗಳನ್ನು ಮೇಯಿಸುವ ಕುರುಬರ
ದ್ರೋಹವನ್ನು ಕಂಡು ಅವರನ್ನು ಕುರಿತು ಇಂತೆನ್ನು
ತ್ತಾನೆ—ನೀವು ನನ್ನ ಮಂದೆಯನ್ನು ಚದರಿಸಿ ಅಟ್ಟಿ
ಬಿಟ್ಟಿದ್ದೀರಿ, ವಿಚಾರಿಸಲೇ ಇಲ್ಲ; ಆಹಾ, ನಿಮ್ಮ
ದುಷ್ಕೃತ್ಯಗಳ ನಿಮಿತ್ತ ನಾನು ನಿಮ್ಮನ್ನು ವಿಚಾರಿಸು
ವೆನು. ನಾನು ನನ್ನ ಮಂದೆಯನ್ನು ಯಾವ ದೇಶ 3
ಗಳಿಗೆ ಅಟ್ಟಿಬಿಟ್ಟೆನೋ ಆ ಸಕಲ ದೇಶಗಳಿಂದ ಉಳಿದ
ಕುರಿಗಳನ್ನು ಕೂಡಿಸಿ ತಮ್ಮ ತಮ್ಮ ಹಟ್ಟಿಗಳಿಗೆ ತಿರಿಗಿ
ಬರಮಾಡುವೆನು; ಅವು ದೊಡ್ಡ ಪೀಳಿಗೆಯಾಗಿ ಹೆಚ್ಚು
ವವು. ನಾನು ಅವುಗಳ ಮೇಲೆ ಕುರುಬರನ್ನು ನೇಮಿ 4
ಸುವೆನು, ಅವರು ಅವುಗಳನ್ನು ಮೇಯಿಸುವರು; ಅವು
ಇನ್ನು ಭಯಪಡವು, ಬೆದರವು, ಅವುಗಳಲ್ಲಿ ಒಂದೂ
ಕಡಿಮೆಯಾಗದು; ಇದು ಯೆಹೋವನ ನುಡಿ.
ಯೆಹೋವನು ಹೀಗನ್ನುತ್ತಾನೆ—ಇಗೋ, ನಾನು 5
ಮುಂದಿನ ಕಾಲದಲ್ಲಿ ದಾವೀದನೆಂಬ ಮೂಲದಿಂದ
ಸದ್ಧರ್ಮಿಯಾದ ಮೊಳಕೆಯನ್ನು ಚಿಗುರಿಸುವೆನು;
ಅವನು ರಾಜನಾಗಿ ಆಳುತ್ತಾ ವಿವೇಕದಿಂದ ಕಾರ್ಯ
ವನ್ನು ಸಾಧಿಸುತ್ತಾ ದೇಶದಲ್ಲಿ ನೀತಿನ್ಯಾಯಗಳನ್ನು
ನಿರ್ವಹಿಸುವನು. ಅವನ ಕಾಲದಲ್ಲಿ ಯೆಹೂದ್ಯರು 6
ಸುರಕ್ಷಿತರಾಗಿರುವರು, ಇಸ್ರಾಯೇಲ್ಯರು ನೆಮ್ಮದಿ
ಯಾಗಿ ವಾಸಿಸುವರು; ಯೆಹೋವ ಚಿದ್ಕೇನು [ಅಂದರೆ
ಯೆಹೋವನೇ ನಮ್ಮ ಸದ್ಧರ್ಮ] ಎಂಬ ಹೆಸರು
ಅವನಿಗಾಗುವದು. ಆಹಾ, ಮುಂದಿನ ಕಾಲದಲ್ಲಿ 7
ಜನರು—ಇಸ್ರಾಯೇಲ್ಯರನ್ನು ಐಗುಪ್ತ ದೇಶದೊಳ
ಗಿಂದ ಉದ್ಧರಿಸಿದ ಯೆಹೋವನ ಜೀವದಾಣೆ ಎಂಬ
ದಾಗಿ ಪ್ರಮಾಣಮಾಡುವದನ್ನು ಬಿಟ್ಟು ಇಸ್ರಾಯೇ 8
ಲ್ ಮನೆತನವೆಂಬ ಸಂತಾನವನ್ನು ಬಡಗಣ ದೇಶ
ದಿಂದಲೂ ತಾನು ಅವರನ್ನು ತಳ್ಳಿಬಿಟ್ಟಿದ್ದ ಸಕಲ
ಸೀಮೆಗಳಿಂದಲೂ ಬರಮಾಡಿ ಉದ್ಧರಿಸಿದ ಯೆಹೋ
ವನ ಜೀವದಾಣೆ ಎಂದು ಪ್ರಮಾಣಮಾಡುವರು;
ಅವರು ಸ್ವದೇಶದಲ್ಲಿ ಸುಖವಾಸಿಗಳಾಗುವರು. ಇದು
ಯೆಹೋವನ ನುಡಿ.

1) ಪಾಠಾಂತರ: ನಿನ್ನ ಮೂಲುಗಾಟವು ಎಷ್ಟೋ!

### ಸುಳ್ಳುಪ್ರವಾದಿಗಳನ್ನು ಖಂಡಿಸಿದ್ದು.

9 ಪ್ರವಾದಿಗಳ ವಿಷಯ. ನನ್ನ ಹೃದಯವು ನನ್ನೊ
ಳಗೆ ಒಡೆದುಹೋಗಿದೆ; ನನ್ನ ಎಲುಬುಗಳೆಲ್ಲಾ
ಕರಗಿಹೋಗಿವೆ. ನಾನು ಯೆಹೋವನಿಗೂ ಆತನ
ಪರಿಶುದ್ಧವಾಕ್ಯಗಳಿಗೂ ವಶನಾಗಿ ಅಮಲೇರಿದವ
ನಂತಿದ್ದೇನೆ. ಹೌದು, ದ್ರಾಕ್ಷಾರಸಕ್ಕೆ ಸೋತವನ
10 ಹಾಗಿದ್ದೇನೆ. ಸೀಮೆಯು ಸೂಳೆಗಾರರಿಂದ ತುಂಬಿದೆ,
ದೈವಶಾಪದ ನಿಮಿತ್ತ ದೇಶವು ದುಃಖಿಸುತ್ತದೆ; ಅಡ
ವಿಯ ಹುಲ್ಗಾವಲು ಬಾಡಿದೆ; ದೇಶದವರು ತ್ವರೆ
ಪಡುವ ಮಾರ್ಗವು ದುರ್ಮಾರ್ಗ, ಅವರ ಶೌರ್ಯವು
11 ಅನ್ಯಾಯಸಾಧಕ. ಪ್ರವಾದಿಗಳು ಭ್ರಷ್ಟರು, ಯಾಜ
ಕರೂ ಭ್ರಷ್ಟರು; ಹೌದು ನನ್ನ ಆಲಯದಲ್ಲಿಯೇ
ಅವರ ಕೆಟ್ಟತನವನ್ನು ಕಂಡಿದ್ದೇನೆ ಎಂದು ಯೆಹೋ
12 ವನು ಅನ್ನುತ್ತಾನೆ. ಆದಕಾರಣ ಅವರ ಮಾರ್ಗವು
ಕತ್ತಲಲ್ಲಿ ಜಾರಿಬೀಳುವ ಇಳುಮೇಡುಗಳಿಗೆ ಸಮಾನ
ವಾಗುವದು; ಅವರು ಅಟ್ಟಲ್ಪಟ್ಟು ಅಂಧಕಾರದಲ್ಲಿ
ಬಿದ್ದುಹೋಗುವರು; ನಾನು ಅವರ ಮೇಲೆ ಕೇಡನ್ನು,
ದಂಡನೆಯ ವರುಷದ ಕೇಡನ್ನು ಬರಮಾಡುವೆನು.
13 ಇದು ಯೆಹೋವನ ನುಡಿ. ನಾನು ಸಮಾರ್ಯದ
ಪ್ರವಾದಿಗಳಲ್ಲಿ ಅಯುಕ್ತವನ್ನು ನೋಡಿದ್ದೇನೆ; ಅವರು
ಬಾಳ್ ದೇವತೆಯ ಆವೇಶದಿಂದ ಪ್ರವಾದಿಸಿ ಇಸ್ರಾ
ಯೇಲೆಂಬ ನನ್ನ ಜನರನ್ನು ಮಾರ್ಗತಪ್ಪಿಸಿದ್ದಾರೆ.
14 ಯೆರೂಸಲೇಮಿನ ಪ್ರವಾದಿಗಳಲ್ಲಿಯೂ ನಾನು ಅಸಹ್ಯ
ವನ್ನು ನೋಡಿದ್ದೇನೆ; ಅವರು ವ್ಯಭಿಚಾರಮಾಡಿ
ಮೋಸದಲ್ಲಿ ನಡೆದು ದುಷ್ಟರಲ್ಲಿ ಯಾವನೂ ತನ್ನ
ದುಷ್ಟತನವನ್ನು ಬಿಡದಂತೆ ಅವರ ಕೈಗಳನ್ನು ಬಲ
ಪಡಿಸುತ್ತಿದ್ದಾರೆ; ಅವರೆಲ್ಲರು ಸೊದೋಮಿನಂತೆ
ಆ ಪುರನಿವಾಸಿಗಳು ಗೊಮೋರದ ಹಾಗೆ ನನಗೆ ಕಾಣು
ತ್ತಾರೆ.
15 ಆದಕಾರಣ ಸೇನಾಧೀಶ್ವರನಾದ ಯೆಹೋವನು
ಪ್ರವಾದಿಗಳ ವಿಷಯದಲ್ಲಿ ಹೀಗನ್ನುತ್ತಾನೆ—ಆಹಾ,
ನಾನು ಇವರಿಗೆ ಕಹಿಯಾದ ಆಹಾರಪಾನಗಳನ್ನು
ಕೊಡುವೆನು; ಯೆರೂಸಲೇಮಿನ ಪ್ರವಾದಿಗಳಿಂದ
16 ಭ್ರಷ್ಟತನವು ದೇಶದಲ್ಲೆಲ್ಲಾ ಹರಡಿದೆಯಷ್ಟೆ. ಸೇನಾ
ಧೀಶ್ವರನಾದ ಯೆಹೋವನು ಇಂತೆನ್ನುತ್ತಾನೆ—ನಿಮಗೆ
ಪ್ರವಾದಿಸುವ ಪ್ರವಾದಿಗಳ ಮಾತುಗಳನ್ನು ಕೇಳ
ಬೇಡಿರಿ; ನಿಮ್ಮಲ್ಲಿ ವ್ಯರ್ಥನಿರೀಕ್ಷೆಯನ್ನು ಹುಟ್ಟಿಸು
ತ್ತಾರೆ; ಯೆಹೋವನ ಬಾಯಿಂದ ಹೊರಟದ್ದನ್ನು
ನುಡಿಯದೆ ಸ್ವಂತ ಹೃದಯಕ್ಕೆ ಹೊಳೆದದ್ದನ್ನೇ ಹೇಳು
17 ತ್ತಾರೆ. ನನ್ನನ್ನು ಅಸಡ್ಡೆಮಾಡುವವರಿಗೆ—ನಿಮಗೆ
ಶುಭವಾಗುವದು ಎಂಬದಾಗಿ ಯೆಹೋವನು ಅಂದಿ
ದ್ದಾನೆ ಎಂದು ಹೇಳುತ್ತಲೇ ಇದ್ದಾರೆ; ಸ್ವಂತ ಹೃದ
ಯದ ಹಟದಂತೆ ನಡೆಯುವವರೆಲ್ಲರಿಗೂ—ನಿಮಗೆ
ಯಾವ ಕೇಡೂ ಸಂಭವಿಸದು ಎಂದು ನುಡಿಯು
18 ತ್ತಾರೆ. [ಅವರಲ್ಲಿ] ಯಾರು ಯೆಹೋವನ ಆಲೋ
ಚನಾಸಭೆಯಲ್ಲಿ ನಿಂತು ಆತನ ಮಾತನ್ನು ಕೇಳಿ ಕಂಡಿ
ದ್ದಾರೆ? ಯಾರು ಆತನ ನುಡಿಗೆ ಕಿವಿಗೊಟ್ಟು ಗಮ

ನಿಸಿದ್ದಾರೆ? ಆಹಾ, ಯೆಹೋವನ ರೋಷವೆಂಬ ಬಿರು
ಗಾಳಿಯು, ಸುಂಟರಗಾಳಿಯು, ಹೊರಟಿದೆ; ಅದ
ದುಷ್ಟರ ತಲೆಯ ಮೇಲೆ ಹೊಡೆಯುವದು. ಯೆಹೋ
ವನು ತನ್ನ ಹೃದಯಾಲೋಚನೆಗಳನ್ನು ನಡಿಸಿ ನೆ
ವೇರಿಸುವ ತನಕ ಆತನ ರೋಷವು ಹಿಂದಿರುಗದು
ಕಟ್ಟಕಡೆಯ ದಿನಗಳಲ್ಲಿ ನೀವು ಇದನ್ನು ಸ್ಪಷ್ಟವಾ
ಗ್ರಹಿಸುವಿರಿ. ನಾನು ಈ ಪ್ರವಾದಿಗಳನ್ನು ಕಳುಹಿಸ
ಲಿಲ್ಲ, ತಾವೇ ಆತುರಗೊಂಡರು; ನಾನು ಇವರಿ
ಏನೂ ಹೇಳಲಿಲ್ಲ, ತಾವೇ ಪ್ರವಾದಿಸಿದರು. ಇವರ
ನನ್ನ ಆಲೋಚನಾಸಭೆಯಲ್ಲಿ ನಿಂತಿದ್ದರೆ ನನ್ನ ಮಾತ
ಗಳನ್ನು ನನ್ನ ಜನರ ಕಿವಿಗೆ ಮುಟ್ಟಿಸಿ ಅವರನ್ನು
ಅವರ ದುರ್ಮಾರ್ಗದಿಂದಲೂ ದುಷ್ಕೃತ್ಯಗಳಿಂದಲ
ತಪ್ಪಿಸುತ್ತಿದ್ದರು. ಯೆಹೋವನು ಇಂತೆನ್ನುತ್ತಾನೆ—
ನಾನು ಸಮೀಪದಲ್ಲಿ ಮಾತ್ರ ಇರುವ ದೇವರೋ
ದೂರದಲ್ಲಿಯೂ ಇರುವವನಲ್ಲವೋ? ನನ್ನ ಕಣ್ಣಿ
ಬೀಳದಂತೆ ಯಾವನಾದರೂ ಗುಪ್ತಸ್ಥಳಗಳಲ್ಲಿ ತನ್ನನ್ನು
ಮರೆಮಾಡಿಕೊಂಡಾನೇ? ನಾನು ಭೂಮ್ಯಾಕಾ
ಗಳಲ್ಲಿಯೂ ವ್ಯಾಪಿಸಿರುವವನಲ್ಲವೆ. ನನಗೆ ಕನಸು
ಬಿತ್ತು, ಕನಸು ಬಿತ್ತು ಎಂದು ನನ್ನ ಹೆಸರಿನಿಂದ
ಸುಳ್ಳಾಗಿ ಪ್ರವಾದಿಸುವ ಪ್ರವಾದಿಗಳ ನುಡಿಯನ್ನು
ಕೇಳಿದ್ದೇನೆ. ಇವರ ಪಿತೃಗಳು ಬಾಳನನ್ನು ಸೇರಿ ನನ್ನ
ಹೆಸರನ್ನು ಮರೆತ ಪ್ರಕಾರ ಈ ಪ್ರವಾದಿಗಳು ಸ್ವಹೃದ
ಯಕಲ್ಪಿತಮೋಸವನ್ನು ಪ್ರಕಟಿಸುತ್ತಾ ತಾವು ತಮ
ನೆರೆಹೊರೆಯವರಿಗೆ ತಿಳಿಸುವ ತಮ್ಮ ಕನಸುಗಳ
ಮೂಲಕ ನನ್ನ ಜನರು ನನ್ನ ಹೆಸರನ್ನು ಮರೆಯು
ವಂತೆ ಮಾಡಬೇಕೆಂದು ಆಲೋಚಿಸಿಕೊಂಡಿದ್ದಾರಲ್ಲಾ
ಇಂಥಾ ಯೋಚನೆಯು ಸುಳ್ಳಾಗಿ ಪ್ರವಾದಿಸುವ
ಈ ಪ್ರವಾದಿಗಳ ಹೃದಯದಲ್ಲಿ ಎಂದಿನ ವರೆಗೆ ಇರು
ವದು? ಕನಸುಕಂಡ ಪ್ರವಾದಿಯು ಕನಸನ್ನು ತಿಳಿಸಿ
ದರೆ ತಿಳಿಸಲಿ; ನನ್ನ ಮಾತನ್ನು ಕೇಳಿದವನೋ ನನ್ನ
ಮಾತನ್ನು ಯಥಾರ್ಥವಾಗಿ ನುಡಿಯಲಿ. ಹೊಟ್ಟೆ
ಲ್ಲಿ? ಕಾಳೆಲ್ಲಿ? ನನ್ನ ವಾಕ್ಯವು ಬೆಂಕಿಗೂ ಬಂಡೆಯನ್ನು
ಒಡೆದುಬಿಡುವ ಚಮಟಿಗೆಗೂ ಸಮಾನವಾಗಿದೆಯಲ್ಲಾ
ಯೆಹೋವನೇ ಇದನ್ನು ನುಡಿದಿದ್ದಾನೆ.
ಆಹಾ, ನನ್ನ ಮಾತುಗಳನ್ನು ತಮ್ಮ ತಮ್ಮ ನೆರೆ
ಯವರಿಂದ ಕದ್ದುಕೊಳ್ಳುವ ಪ್ರವಾದಿಗಳಿಗೆ ನಾನು
ವಿರುದ್ಧನಾಗಿದ್ದೇನೆ. ಇದು ಯೆಹೋವನ ನುಡಿ
ಆಹಾ, ತಮ್ಮ ನಾಲಿಗೆಗಳನ್ನು ಚಾಚಿ ಯೆಹೋವನು
ನುಡಿಯುತ್ತಾನೆ ಎಂದು ಹೇಳುವ ಪ್ರವಾದಿಗಳಿಗೆ ನಾನು
ಪ್ರತಿಭಟಿಸುವವನಾಗಿದ್ದೇನೆ. ಇದು ಯೆಹೋವನ
ನುಡಿ. ಆಹಾ, ಸುಳ್ಳು ಕನಸುಗಳನ್ನು ಪ್ರಕಟಿಸಿ
ವಿವರಿಸಿ ತಮ್ಮ ಸುಳ್ಳುಮಾತುಗಳಿಂದಲೂ ಕೊಚ್ಚಾಟ
ದಿಂದಲೂ ನನ್ನ ಜನರಿಗೆ ದಾರಿತಪ್ಪಿಸುವ ಪ್ರವಾದಿಗ
ಳನ್ನು ಎದುರಿಸುವವನಾಗಿದ್ದೇನೆ; ನಾನು ಅವರನ್ನು
ಕಳುಹಿಸಲಿಲ್ಲ, ಆಜ್ಞಾಪಿಸಲಿಲ್ಲ; ಅವರಿಂದ ಈ ಜನರಿಗೆ
ಯಾವ ಪ್ರಯೋಜನವೂ ಆಗುವದಿಲ್ಲ. ಇದು ಯೆಹೋ
ವನ ನುಡಿ.
ಪ್ರವಾದಿಯಾಗಲಿ ಯಾಜಕನಾಗಲಿ ಈ ಜನರಲ್ಲಿ
ಯಾರಾಗಲಿ ಯೆಹೋವನು ದಯಪಾಲಿಸಿರುವ

1)ವಾಕ್ಯಭಾರವೇನು ಎಂದು ನಿನ್ನನ್ನು ಕೇಳಿದರೆ
ನೀನು ಅವರಿಗೆ ಹೀಗೆ ಹೇಳು—ಯೆಹೋವನು ಇಂತೆ
ನ್ನುತ್ತಾನೆ—2)ನೀವೇ ನನ್ನ ಭಾರ, ನಾನು ನಿಮ್ಮ
34 ನ್ನು ಎಸೆದುಬಿಡುವೆನು. ಪ್ರವಾದಿ, ಯಾಜಕ, ಸಾಧಾ
ರಣ ಜನ, ಇವರಲ್ಲಿ ಯಾವನು—ಯೆಹೋವನ ಭಾರ
ಎಂದು ಉಚ್ಚರಿಸುವನೋ ಅವನನ್ನೂ ಅವನ ಮನೆ
35 ಯವರನ್ನೂ ದಂಡಿಸುವೆನು. ನೀವು ನಿಮ್ಮ ನಿಮ್ಮ ನೆರೆ
ಹೊರೆಯವರನ್ನೂ ಅಣ್ಣತಮ್ಮಂದಿರನ್ನೂ—ಯೆಹೋ
ವನ ಉತ್ತರವೇನು, ಯೆಹೋವನು ಏನು ನುಡಿದಿ
36 ದ್ದಾನೆ ಎಂದು ಕೇಳಬೇಕೇ ಹೊರತು ಯೆಹೋವನ
ಭಾರ ಎಂಬ ಮಾತನ್ನು ಇನ್ನು ಎತ್ತಲೇ ಕೂಡದು.
ಪ್ರತಿಯೊಬ್ಬನ ನುಡಿಯೇ ಅವನವನಿಗೆ ಭಾರವಾಗಿ
ರುವದು; ಜೀವಸ್ವರೂಪನಾದ ದೇವರ ನುಡಿಗಳನ್ನು,
ಹೌದು, ನಮ್ಮ ದೇವರೂ ಸೇನಾಧೀಶ್ವರನೂ ಆದ
ಯೆಹೋವನ ನುಡಿಗಳನ್ನು ತಲೆ ಕೆಳಗು ಮಾಡಿದ್ದೀ
37 ರಷ್ಟೆ. ಯೆಹೋವನಿಂದ ನಿನಗೆ ಯಾವ ಉತ್ತರ
ವಾಯಿತು, ಯೆಹೋವನು ಏನು ನುಡಿದಿದ್ದಾನೆ
38 ಎಂದು ಪ್ರವಾದಿಯನ್ನು ಕೇಳಿರಿ. ನೀವು ಯೆಹೋವನ
ಭಾರ ಎಂದು ಉಚ್ಚರಿಸಿದರೆ ಯೆಹೋವನು ಇಂತೆನ್ನು
ತ್ತಾನೆ—ನಾನು ನಿಮಗೆ—ಯೆಹೋವನ ಭಾರ ಎಂಬ
ಮಾತನ್ನು ಎತ್ತಲೇ ಕೂಡದು ಎಂದು ಹೇಳಿಕಳುಹಿಸಿ
ರುವಲ್ಲಿ ನೀವು ಯೆಹೋವನ ಭಾರ ಎಂದು ಅಂದ
39 ಕಾರಣ ಇಗೋ, ಖಂಡಿತವಾಗಿ ನಿಮ್ಮನ್ನೂ ನಾನು
ನಿಮಗೆ ಮತ್ತು ನಿಮ್ಮ ಪಿತೃಗಳಿಗೆ ದಯಪಾಲಿಸಿದ
ಪಟ್ಟಣವನ್ನೂ ಭಾರವೆಂದು 3)ಎತ್ತಿ ನನ್ನೆದುರಿನಿಂದ ಎಸೆ
40 ದುಬಿಟ್ಟು ನಿತ್ಯನಿಂದೆಯನ್ನೂ ಎಂದಿಗೂ ಮರೆಯದ
ಶಾಶ್ವತಾವಮಾನವನ್ನೂ ನಿಮಗೆ ಬರಮಾಡುವೆನು.

ಒಳ್ಳೆಯ ಮತ್ತು ಕೆಟ್ಟ ಹಣ್ಣುಗಳ ಸಾಮ್ಯ.

24 ಬಾಬೆಲಿನ ಅರಸನಾದ ನೆಬೂಕದ್ನೆಚ್ಚರನು
ಯೆಹೋಯಾಕೀಮನ ಮಗನೂ ಯೆಹೂದದ
ಅರಸನೂ ಆದ ಯೆಕೊನ್ಯನನ್ನೂ ಯೆಹೂದದ
ಪ್ರಧಾನರನ್ನೂ ಶಿಲ್ಪಿಗಳನ್ನೂ ಕಮ್ಮಾರರನ್ನೂ ಯೆರೂ
ಸಲೇಮಿನಿಂದ ಬಾಬೆಲಿಗೆ ಸೆರೆ ಒಯ್ದ ಮೇಲೆ ಯೆಹೋ
ವನ ಆಲಯದ ಮುಂದೆ ಇಟ್ಟಿರುವ ಅಂಜೂರದ
ಹಣ್ಣು ತುಂಬಿದ ಎರಡು ಪುಟ್ಟಿಗಳನ್ನು ಯೆಹೋವನು
2 ನನಗೆ ಕಾಣಮಾಡಿದನು. ಒಂದು ಪುಟ್ಟಿಯಲ್ಲಿ ಫಲ
ಕಾಲಕ್ಕೆ ಮುಂಚೆ ಮಾಗಿದ ಹಣ್ಣುಗಳ ಹಾಗೆ ಕಾಣು
ತ್ತಿದ್ದ ಅತ್ಯುತ್ತಮವಾದ ಅಂಜೂರದ ಫಲಗಳು ತುಂಬಿ
ದ್ದವು; ಇನ್ನೊಂದು ಪುಟ್ಟಿಯಲ್ಲಿ ಯಾರೂ ತಿನ್ನದ
ಹಾಗೆ ಬಹಳ ಕೆಟ್ಟು ಕೇವಲ ಅಸಹ್ಯವಾದ ಅಂಜೂರದ
3 ಹಣ್ಣುಗಳು ತುಂಬಿದ್ದವು. ಆಗ ಯೆಹೋವನು
ನನ್ನನ್ನು—ಯೆರೆಮೀಯನೇ, ಏನು ನೋಡುತ್ತೀ
ಎಂದು ಕೇಳಲು ನಾನು—ಅಂಜೂರದ ಫಲಗಳನ್ನು
ನೋಡುತ್ತೇನೆ; ಉತ್ತಮ ಫಲಗಳು ಅತ್ಯುತ್ತಮ
ವಾಗಿವೆ; ಕೆಟ್ಟ ಫಲಗಳು ಬಹಳ ಕೆಟ್ಟಿವೆ, ಯಾರೂ
ತಿನ್ನದ ಹಾಗೆ ಕೇವಲ ಅಸಹ್ಯವಾಗಿವೆ ಎಂದು ಉತ್ತರ
ಕೊಟ್ಟೆನು. ಆಗ ಯೆಹೋವನು ಈ ನುಡಿಯನ್ನು 4
ನನಗೆ ದಯಪಾಲಿಸಿದನು—ಇಸ್ರಾಯೇಲ್ಯರ ದೇವ 5
ರಾದ ಯೆಹೋವನು ಇಂತೆನ್ನುತ್ತಾನೆ—ನಾನು ಈ
ಸ್ಥಳದೊಳಗಿಂದ ಕಸ್ದೀಯರ ದೇಶಕ್ಕೆ ಕಳುಹಿಸಿಬಿಟ್ಟ
ಸೆರೆಯವರಾದ ಯೆಹೂದ್ಯರನ್ನು ಈ ಉತ್ತಮವಾದ
ಅಂಜೂರದ ಫಲಗಳಂತೆ ಲಕ್ಷಿಸಿ ಅವರಿಗೆ ಮೇಲ
ನ್ನುಂಟುಮಾಡುವೆನು. ಅವರನ್ನು ಕಟಾಕ್ಷಿಸಿ ಈ 6
ದೇಶಕ್ಕೆ ತಿರಿಗಿ ಬರಮಾಡುವೆನು; ಅವರನ್ನು ಕಟ್ಟು
ವೆನು, ಕೆಡವುವದಿಲ್ಲ? ನೆಡುವೆನು, ಕೀಳುವದಿಲ್ಲ.
ಅವರು ನನ್ನನ್ನು ಯೆಹೋವನೆಂದು ಗ್ರಹಿಸತಕ್ಕ 7
ಹೃದಯವನ್ನು ಅವರಿಗೆ ಅನುಗ್ರಹಿಸುವೆನು; ಅವರು
ನನ್ನ ಜನರಾಗಿರುವರು, ನಾನು ಅವರ ದೇವರಾಗಿರು
ವೆನು; ಅವರು ನನ್ನ ಕಡೆಗೆ ಮನಃಪೂರ್ವಕವಾಗಿ
ಹಿಂದಿರುಗಿ ಬರುವರು. ಇದಲ್ಲದೆ ಯೆಹೋವನು 8
ಇಂತೆನ್ನುತ್ತಾನೆ—ಯೆಹೂದದ ಅರಸನಾದ ಚಿದ್ಕೀ
ಯ, ಅವನ ಪ್ರಧಾನರು, ಈ ದೇಶದಲ್ಲಿ ನಿಂತಿರುವ
ಯೆರೂಸಲೇಮಿನವರ ಶೇಷ ಐಗುಪ್ತದೇಶಕ್ಕೆ ವಲಸೆ
ಯಾದವರು, ಇವರೆಲ್ಲರನ್ನು ಕೆಟ್ಟು ಯಾರೂ ತಿನ್ನದ
ಹಾಗೆ ಕೇವಲ ಅಸಹ್ಯವಾದ ಅಂಜೂರದ ಹಣ್ಣುಗಳ
ಗತಿಗೆ ತರುವೆನು. ಅವರ ಕೇಡಿಗಾಗಿ ನಾನು ಅವರನ್ನು 9
ಲೋಕದ ಸಮಸ್ತ ರಾಜ್ಯಗಳಿಗೆ ಭಯಾಸ್ಪದವಾಗು
ವಂತೆ ಮಾಡುವೆನು; ನಾನು ಅವರನ್ನು ಅಟ್ಟಿಬಿಡುವ
ಸ್ಥಳಗಳಲ್ಲೆಲ್ಲಾ ಅವರು ನಿಂದೆ, ಕಟ್ಟುಗಾದೆ, ಪರಿ
ಹಾಸ್ಯ, ಶಾಪ, ಇವುಗಳಿಗೆ ಗುರಿಯಾಗುವರು. ನಾನು 10
ಅವರಿಗೂ ಅವರ ಪಿತೃಗಳಿಗೂ ಅನುಗ್ರಹಿಸಿದ ದೇಶದೊ
ಳಗಿಂದ ಅವರು ನಿರ್ಮೂಲರಾಗುವ ತನಕ ಖಡ್ಗ
ಕ್ಷಾಮವ್ಯಾಧಿಗಳನ್ನು ಅವರ ಮೇಲೆ ಕಳುಹಿಸುವೆನು.

ಯೆಹೂದ್ಯರ ಹಟಪೂರ್ವಕವಾದ ದ್ರೋಹ.

ಯೋಷೀಯನ ಮಗನೂ ಯೆಹೂದದ ಅರ 25
ಸನೂ ಆದ ಯೆಹೋಯಾಕೀಮನ ಆಳಿಕೆಯ
ನಾಲ್ಕನೆಯ ವರುಷದಲ್ಲಿ, ಅಂದರೆ ಬಾಬೆಲಿನ ಅರಸ
ನಾದ ನೆಬೂಕದ್ನೆಚ್ಚರನ ಆಳಿಕೆಯ ಮೊದಲನೆಯ
ವರುಷದಲ್ಲಿ ಪ್ರವಾದಿಯಾದ ಯೆರೆಮೀಯನು ಯೆ
ಹೂದ್ಯರೆಲ್ಲರ ವಿಷಯವಾಗಿ ತನಗೆ ಉಂಟಾದ ಈ
ದೈವೋಕ್ತಿಯನ್ನು ಸಕಲ ಯೆಹೂದ್ಯರಿಗೂ ಸಮಸ್ತ 2
ಯೆರೂಸಲೇಮಿನವರಿಗೂ ಸಾರಿದನು—ಆಮೋನನ ಮ 3
ಗನೂ ಯೆಹೂದದ ಅರಸನೂ ಆದ ಯೋಷೀಯನ ಆಳಿ
ಕೆಯ ಹದಿಮೂರನೆಯ ವರುಷದಿಂದ ಈ ದಿನದ ವರೆಗೆ,
ಇಪ್ಪತ್ತುಮೂರು ವರುಷಗಳಿಂದಲೂ ಯೆಹೋವನು
ತನ್ನ ವಾಕ್ಯವನ್ನು ನನಗೆ ದಯಪಾಲಿಸುತ್ತಿದ್ದಾನೆ;
ಅದನ್ನು ನಿಮಗೆ ಸಾವಕಾಶಮಾಡದೆ ಪ್ರಕಟಿಸುತ್ತಾ
ಬಂದಿದ್ದೇನೆ; ಆದರೆ ನೀವು ಅದಕ್ಕೆ ಕಿವಿಗೊಡಲಿಲ್ಲ.
ಯೆಹೋವನು ತನ್ನ ಸೇವಕರಾದ ಪ್ರವಾದಿಗಳ 4
ನ್ನೆಲ್ಲಾ ನಿಮ್ಮ ಬಳಿಗೆ ಸಾವಕಾಶಮಾಡದೆ ಕಳು

1) ಮಸ್ಸಾ ಎಂಬ ಮೂಲ ಪದಕ್ಕೆ ದೈವೋಕ್ತಿ, ಭಾರ ಎಂದೆರಡರ್ಥ. 2) ಪಾಠಾಂತರ: ಏನು ಭಾರ? 3) ಪಾಠಾಂತರ: ಮರೆತು.

ಹಿಸುತ್ತಿದ್ದರೂ ನೀವು ಕೇಳಲಿಲ್ಲ, ಕಿವಿಗೊಡಲೂ ಇಲ್ಲ.
5 ಆತನು ನಿಮಗೆ ಹೇಳಿಕಳುಹಿಸಿದ ಮಾತೇನಂದರೆ—
ನೀವೆಲ್ಲರು ನಿಮ್ಮ ನಿಮ್ಮ ದುರ್ಮಾರ್ಗದಿಂದಲೂ
ದುಷ್ಕೃತ್ಯದಿಂದಲೂ ಹಿಂದಿರುಗಿರಿ, ನಿಮಗೆ ಶಾಶ್ವತ
ಸ್ವಾಸ್ತ್ಯವಾಗಿರಲಿ ಎಂದು ಯೆಹೋವನು ಪುರಾತನ
ಕಾಲದಲ್ಲಿ ನಿಮಗೂ ನಿಮ್ಮ ಪಿತೃಗಳಿಗೂ ಅನುಗ್ರಹಿ
6 ಸಿದ ದೇಶದೊಳಗೆ ನೆಲೆಗೊಳ್ಳಿರಿ; ಅನ್ಯದೇವತೆಗಳನ್ನು
ಹಿಂಬಾಲಿಸಿ ಸೇವಿಸಿ ಪೂಜಿಸಬೇಡಿರಿ; ನಿಮ್ಮ ಕೈಕೆಲಸದ
ಬೊಂಬೆಗಳಿಂದ ನನ್ನನ್ನು ರೇಗಿಸದಿರಿ; ಹೀಗಾದರೆ ನಾನು
ನಿಮಗೆ ಯಾವ ಕೇಡನ್ನೂ ಮಾಡೆನು ಎಂಬದೇ.
7 ಯೆಹೋವನು ಇಂತೆನ್ನುತ್ತಾನೆ—ನೀವು ನನ್ನ ಕಡೆಗೆ
ಕಿವಿಗೊಡದೆ ನಿಮ್ಮ ಕೈಕೆಲಸದ ಬೊಂಬೆಗಳಿಂದ ನನ್ನ
ನ್ನು ಕೆಣಕಿ ನಿಮಗೆ ಕೇಡನ್ನು ತಂದುಕೊಂಡಿದ್ದೀರಿ.

ಬಾಬೆಲಿನ ಮುಂದಿನ ದಿಗ್ವಿಜಯವೂ ಅಪಜಯವೂ.

8 ಹೀಗಿರಲು ಸೇನಾಧೀಶ್ವರನಾದ ಯೆಹೋವನ ಈ
ನುಡಿಯನ್ನು ಕೇಳಿರಿ—ನೀವು ನನ್ನ ಮಾತುಗಳನ್ನು
9 ಕೇಳದ ಕಾರಣ ಇಗೋ, ನಾನು ಬಡಗಣ ಜನಾಂಗ
ಗಳನ್ನೆಲ್ಲಾ ಕರೆಯಿಸಿ ಬಾಬೆಲಿನ ಅರಸನೂ ನನ್ನ
ಸೇವಕನೂ ಆದ ನೆಬೂಕದ್ನೆಚ್ಚರನನ್ನು ಬರಮಾಡಿ
ಇವರೆಲ್ಲರನ್ನು ಈ ದೇಶದ ಮೇಲೂ ಇದರ ನಿವಾಸಿ
ಗಳ ಮೇಲೂ ಸುತ್ತಲಿನ ಸಕಲ ಜನಾಂಗಗಳ ಮೇಲೂ
ಬೀಳಿಸಿ ಅವುಗಳನ್ನು ತುಂಬಾ ಹಾಳುಗೈದು ಬೆರಗಿನ
ಸಿಳ್ಳಿಗೆ ಗುರಿಪಡಿಸಿ ನಿತ್ಯನಾಶನಕ್ಕೆ ಈಡುಮಾಡುವೆನು.
10 ಇದಲ್ಲದೆ ನಾನು ಅವುಗಳಲ್ಲಿ ಹರ್ಷಸಂಭ್ರಮಗಳ
ಧ್ವನಿಯನ್ನೂ ವಧೂವರರ ಸ್ವರವನ್ನೂ ಬೀಸುವ
ಕಲ್ಲಿನ ಸದ್ದನ್ನೂ ದೀಪದ ಬೆಳಕನ್ನೂ ನಿಲ್ಲಿಸಿಬಿಡು
11 ವೆನು. ಈ ದೇಶವೆಲ್ಲಾ ಹಾಳಾಗಿ ಬೆರಗಿಗೆ ಈಡಾಗು
ವದು; ಮತ್ತು ಈ ಜನಾಂಗಗಳು ಎಪ್ಪತ್ತು ವರುಷ
ಬಾಬೆಲಿನ ಅರಸನ ಅಡಿಯಾಳಾಗಿ ಬಿದ್ದಿರುವವು.
12 ಎಪ್ಪತ್ತು ವರುಷಗಳ ತರುವಾಯ ನಾನು ಬಾಬೆಲಿನ
ಅರಸನನ್ನೂ ಕಸ್ದೀಯರ ದೇಶವನ್ನೂ ಆ ಜನಾಂಗ
ದವರನ್ನೂ ಅವರ ದ್ರೋಹಕ್ಕಾಗಿ ದಂಡಿಸಿ ಆ ದೇಶ
ವನ್ನು ನಿತ್ಯನಾಶನಕ್ಕೆ ಗುರಿಮಾಡುವೆನು. ಇದು
13 ಯೆಹೋವನ ನುಡಿ. ನಾನು ಆ ದೇಶದ ವಿಷಯ
ದಲ್ಲಿ ನುಡಿದದ್ದನ್ನೆಲ್ಲಾ (ಅಂದರೆ ಯೆರೆಮೀಯನು
ಸಕಲ ಜನಾಂಗಗಳ ವಿಷಯವಾಗಿ ಮಾಡಿರುವ ಈ
ಪ್ರವಾದನೆಗಳ ಗ್ರಂಥದಲ್ಲಿ ಬರೆದದ್ದನ್ನೆಲ್ಲಾ) ಅದರ
14 ಮೇಲೆ ಬರಮಾಡುವೆನು. ಅನೇಕಜನಾಂಗಗಳೂ
ಮಹಾರಾಜರೂ ಅವರನ್ನೇ ಅಡಿಯಾಳಾಗಿ ಮಾಡಿ
ಕೊಳ್ಳುವರು; ಅವರ ಕೃತ್ಯಗಳಿಗೂ ಕೈಕೆಲಸಗಳಿಗೂ
ತಕ್ಕಂತೆ ಅವರಿಗೆ ಮುಯ್ಯಿತೀರಿಸುವೆನು.

ಯೆಹೋವನು ಸಕಲಜನಾಂಗಗಳಿಗೂ ವಿಧಿಸುವ ದುರ್ಗತಿ.

15 ಇಸ್ರಾಯೇಲ್ಯರ ದೇವರಾದ ಯೆಹೋವನು ನನ
ಗೆ—ರೋಷರೂಪಮದ್ಯದ ಈ ಪಾತ್ರೆಯನ್ನು ನೀನು
ನನ್ನ ಕೈಯಿಂದ ತೆಗೆದುಕೊಂಡು ಯಾವ ಜನಾಂಗ
ಗಳ ಬಳಿಗೆ ನಿನ್ನನ್ನು ಕಳುಹಿಸುತ್ತೇನೋ ಆ ಸಕಲ
ಜನಾಂಗಗಳು ಇದರಲ್ಲಿ ಕುಡಿಯುವಂತೆ ಮಾಡು.
ನಾನು ಅವರಲ್ಲಿಗೆ ಖಡ್ಗವನ್ನು ಕಳುಹಿಸುವೆನು;
[ಆ ನನ್ನ ರೋಷವನ್ನು] ಅವರು ಕುಡಿದು ಓಲಾಡು
ವರು, ಹುಚ್ಚುಹುಚ್ಚಾಗುವರು, ಎಂದು ಅಪ್ಪಣೆಕೊಟ್ಟ
ನು. ಆಗ ನಾನು ಯೆಹೋವನ ಕೈಯಿಂದ ಆ ಪಾತ್ರೆ
ಯನ್ನು ತೆಗೆದುಕೊಂಡು ಯೆಹೋವನು ಯಾವ
ಜನಾಂಗಗಳ ಬಳಿಗೆ ನನ್ನನ್ನು ಕಳುಹಿಸಿದನೋ ಆ
ಸಕಲ ಜನಾಂಗಗಳು ಅದರಲ್ಲಿ ಕುಡಿಯುವಂತೆ
ಮಾಡಿದೆನು. ಯೆರೂಸಲೇಮಿಗೂ ಯೆಹೂದದ
ಪಟ್ಟಣಗಳಿಗೂ ಅರಸರಿಗೂ ಪ್ರಧಾನರಿಗೂ ಕುಡಿಸಿ
ದೆನು; ಇದರಿಂದ ಅವರು ಹಾಳಾಗಿ ಬೆರಗಿನ ಸಿಳ್ಳಿಗೂ
ಶಾಪಕ್ಕೂ ಗುರಿಯಾಗುವದಕ್ಕೆ ಆಸ್ಪದವಾಯಿತು.
ಅದು ಈ ದಿನ ನೆರವೇರಿದೆ. ಮತ್ತು ಐಗುಪ್ತದ
ಅರಸನಾದ ಫರೋಹನು, ಅವನ ಸೇವಕರು, ಪ್ರಧಾ
ನರು, ಅವನ ಎಲ್ಲಾ ಜನರು, ಬಗೆಬಗೆಯ ಎಲ್ಲಾ
ವಿದೇಶೀಯರು, ಊಚ್ ದೇಶದ ಎಲ್ಲಾ ಅರಸರು,
ಫಿಲಿಷ್ಟಿಯ ದೇಶದ ಎಲ್ಲಾ ಅರಸರು, ಅಷ್ಕೆಲೋನ್,
ಗಾಜಾ, ಎಕ್ರೋನ್, ಅಷ್ಡೋದಿನ ಶೇಷ, ಎದೋ
ಮ್ಯರು, ಮೋವಾಬ್ಯರು, ಅಮ್ಮೋನ್ಯರು, ತೂರಿನ
ಎಲ್ಲಾ ಅರಸರು, ಚೀದೋನಿನ ಎಲ್ಲಾ ಅರಸರು,
ಸಮುದ್ರದ ಆಚಿನ ಕರಾವಳಿಯ ಅರಸರು, ದೆದಾ
ನ್ಯರು, ತೇಮಾದೇಶದವರು, ಬೂಜ್‌ದೇಶದವರು, ಚಂಡಿ
ಕೆ ಬಿಟ್ಟುಕೊಂಡಿರುವವರೆಲ್ಲರು, ಅರಬಿಯ ಎಲ್ಲಾ ಅರ
ಸರು, ಅರಣ್ಯವಾಸಿಗಳಾದ ಮಿಶ್ರಜಾತಿಯವರ ಎಲ್ಲಾ
ಅರಸರು, ಜಿಮ್ರಿಯ ಎಲ್ಲಾ ಅರಸರು, ಏಲಾಮಿನ
ಎಲ್ಲಾ ಅರಸರು, ಮೇದ್ಯರ ಎಲ್ಲಾ ಅರಸರು, ದೂರ
ವೇನು ಸಮೀಪವೇನು ಅಂತು ಉತ್ತರದೇಶದ ಎಲ್ಲಾ
ಅರಸರು, ಭೂಲೋಕದಲ್ಲಿರುವ ಸಕಲರಾಜ್ಯಗಳ
ವರು, ಇವರೆಲ್ಲರಿಗೂ ಕುಡಿಸು; ಇವರು ಕುಡಿದ
ಮೇಲೆ 1)ಶೇಷಕಿನ ಅರಸನೂ ಕುಡಿಯಲಿ [ಎಂಬದೇ
ನನಗಾದ ಅಪ್ಪಣೆ]. [ಇದಲ್ಲದೆ ಈ ಅಪ್ಪಣೆಯಾ
ಯಿತು]—ನೀನು ಅವರಿಗೆ ನುಡಿಯತಕ್ಕದ್ದೇನಂದರೆ—
ಇಸ್ರಾಯೇಲ್ಯರ ದೇವರೂ ಸೇನಾಧೀಶ್ವರನೂ ಆದ
ಯೆಹೋವನು ಇಂತೆನ್ನುತ್ತಾನೆ— ನಾನು ನಿಮ್ಮಲ್ಲಿಗೆ
ಖಡ್ಗವನ್ನು ಕಳುಹಿಸುವೆನು; [ಆ ನನ್ನ ರೋಷವನ್ನು]
ಕುಡಿದು ಅಮಲೇರಿದವರಾಗಿ ಕಕ್ಕಿ ಬಿದ್ದು ಏಳದಿರಿ.
ಅವರು ಒಂದು ವೇಳೆ ಪಾತ್ರೆಯನ್ನು ನಿನ್ನ ಕೈಯಿಂದ
ತೆಗೆದುಕೊಳ್ಳಲಿಕ್ಕೂ ಕುಡಿಯಲಿಕ್ಕೂ ಒಲ್ಲದಿದ್ದರೆ
ನೀನು ಅವರಿಗೆ ಹೀಗೆ ಹೇಳು—ಸೇನಾಧೀಶ್ವರನಾದ
ಯೆಹೋವನು ಇಂತೆನ್ನುತ್ತಾನೆ—ನೀವು ಕುಡಿಯಲೇ
ಬೇಕು. ಇಗೋ, ನನ್ನ ಹೆಸರುಗೊಂಡಿರುವ ಪಟ್ಟಣ
ದಲ್ಲಿ ಬಾಧಿಸಲು ಪ್ರಾರಂಭಿಸುತ್ತೇನೆ. ನೀವು ಆ
ದಂಡನೆಗೆ ತಪ್ಪಿಸಿಕೊಂಡೀರೋ? ಆಗುವದೇ ಇಲ್ಲ.
ಖಡ್ಗವೇ, ಭೂನಿವಾಸಿಗಳನ್ನೆಲ್ಲ ಸಂಹರಿಸಲಿಕ್ಕೆ ಬಾ
ಎಂದು ಕೂಗುವೆನು. ಇದು ಸೇನಾಧೀಶ್ವರನಾದ
ಯೆಹೋವನೆಂಬ ನನ್ನ ನುಡಿ. ಇಂತಿರಲು ನೀನು

1) ಅಂದರೆ ಬಾಬೆಲಿನ.

ಪ್ರವಾದಿಸುತ್ತಾ ಈ ಮಾತುಗಳನ್ನೆಲ್ಲಾ ಅವರಿಗೆ ಹೇ
ಳು—ಯೆಹೋವನು ಉನ್ನತಲೋಕದಿಂದ ಗರ್ಜಿಸು
ವನು, ತನ್ನ ಘನನಿವಾಸದಿಂದ ದನಿಗೈಯುವನು; ಆತ
ನು ಗಟ್ಟಿಯಾಗಿ ಗರ್ಜಿಸಿ ತನ್ನ ಹುಲ್ಗಾವಲಿನ ಮಂದೆ
ಯನ್ನು ಬೆದರಿಸುವನು; ದ್ರಾಕ್ಷೆಯ ಹಣ್ಣನ್ನು ತುಳಿ
ಯುವವರು ಕೂಗಾಡುವಂತೆ ಭೂನಿವಾಸಿಗಳೆಲ್ಲರಿಗೂ
1 ಭಯಂಕರನಾಗಿ ಕೂಗುವನು. ಶಬ್ದವು ಭೂಮಿಯ
ಕಟ್ಟಕಡೆಯ ವರೆಗೆ ವ್ಯಾಪಿಸುವದು; ಯೆಹೋವನಿಗೂ
ಜನಾಂಗಗಳಿಗೂ ವ್ಯಾಜ್ಯವುಂಟಷ್ಟೆ; ನರಜನ್ಮದವರೆಲ್ಲರ
ಸಂಗಡ ನ್ಯಾಯಕ್ಕೆ ನಿಲ್ಲುವನು; ದುಷ್ಟರನ್ನು ಖಡ್ಗಕ್ಕೆ
ಗುರಿಮಾಡುವನು. ಇದು ಯೆಹೋವನ ನುಡಿ.
2 ಸೇನಾಧೀಶ್ವರನಾದ ಯೆಹೋವನು ಇಂತೆನ್ನು
ತ್ತಾನೆ—ಆಹಾ, ಕೇಡು ಜನಾಂಗದಿಂದ ಜನಾಂಗಕ್ಕೆ
ಹರಡುವದು; ದೊಡ್ಡ ಬಿರುಗಾಳಿಯು ಲೋಕದ
3 ಕಟ್ಟಕಡೆಯಿಂದ ಎದ್ದುಬರುವದು. ಆ ದಿನದಲ್ಲಿ
ಯೆಹೋವನಿಂದ ಹತರಾದವರು ಲೋಕದ ಒಂದು
ಕಡೆಯಿಂದ ಇನ್ನೊಂದು ಕಡೆಯ ವರೆಗೂ ಬಿದ್ದಿರು
ವರು; ಅವರಿಗಾಗಿ ಯಾರೂ ಗೋಳಾಡರು, ಅವರನ್ನು
ಯಾರೂ ಒಟ್ಟುಗೂಡಿಸರು, ಯಾರೂ ಹೂಣಿಡರು,
4 ಭೂಮಿಯ ಮೇಲೆ ಗೊಬ್ಬರವಾಗುವರು. ಕುರು
ಬರೇ, ಅರಚಿ ಗೋಳಾಡಿರಿ! ಮಂದೆಯಲ್ಲಿನ ಹಿರಿಯ
ಮಣಿಗಳೇ, [ಬೂದಿಯಲ್ಲಿ] ಬಿದ್ದು ಹೊರಳಾಡಿರಿ!
ನಿಮ್ಮನ್ನು ವಧಿಸುವ ಕಾಲವು ತುಂಬಿದೆ; ನಾನು
ನಿಮ್ಮನ್ನು ಭಂಗಪಡಿಸುವೆನು; ನೀವು ಬಿದ್ದುಹೋದ
ಅಂದವಾದ ಪಾತ್ರೆಯಂತೆ ಚೂರುಚೂರಾಗುವಿರಿ.
ಕುರುಬರು ಓಡಿಹೋಗುವದಕ್ಕೆ ಮಾರ್ಗವು ಸಿಕ್ಕದು,
ಮಂದೆಯ ಹಿರಿಯ ಮಣಿಗಳು ತಪ್ಪಿಸಿಕೊಳ್ಳುವದಕ್ಕೆ
ಆಸ್ಪದ ದೊರೆಯದು. ಆಹಾ, ಕುರುಬರ ಕೂಗಾಟ!
ಮಂದೆಯ ಹಿರಿಯ ಮಣಿಗಳ ಅರಚಾಟ! ಯೆಹೋ
ವನು ಆ ಹುಲ್ಗಾವಲನ್ನು ಹಾಳುಮಾಡುತ್ತಿದ್ದಾನಲ್ಲಾ.
ನೆಮ್ಮದಿಯ ಗೋಮಾಳಗಳು ಯೆಹೋವನ ರೋಷಾ
ಗ್ನಿಯಿಂದ ನಿಶ್ಶಬ್ದವಾಗಿವೆ. ಆತನು ಸಿಂಹದಂತೆ ತನ್ನ
ಹಕ್ಕೆಯನ್ನು ಬಿಟ್ಟುಬಂದಿದ್ದಾನೆ; ಹಿಂಸಿಸುವ ಖಡ್ಗದಿಂ
ದಲೂ ಆತನ ರೋಷಾಗ್ನಿಯಿಂದಲೂ ಅವರ ದೇಶವು
ಬೆರಗಿಗೆ ಈಡಾಗಿದೆ.

ಯೆರೆಮೀಯನು ಯೆರೂಸಲೇಮಿಗೆ ನಾಶನವನ್ನು ನುಡಿದು
ಯಾಜಕರ ಮತ್ತು ಪ್ರವಾದಿಗಳ ಕೋಪಕ್ಕೆ
ಗುರಿಯಾದದ್ದು.

6 ಯೋಷೀಯನ ಮಗನೂ ಯೆಹೂದದ ಅರಸ
ನೂ ಆದ ಯೆಹೋಯಾಕೀಮನ ಆಳಿಕೆಯ
ಆರಂಭದಲ್ಲಿ ಯೆಹೋವನಿಂದ [ಯೆರೆಮೀಯನಿಗೆ]
ಈ ಅಪ್ಪಣೆಯಾಯಿತು—ಯೆಹೋವನು ಇಂತೆನ್ನು
ತ್ತಾನೆ—ನೀನು ಯೆಹೋವನ ಆಲಯದ ಪ್ರಾಕಾರ
ದಲ್ಲಿ ನಿಂತು ಆ ಮಂದಿರದಲ್ಲಿ ಆರಾಧಿಸುವದಕ್ಕೆ
ಬರುವ ಯೆಹೂದದ ಎಲ್ಲಾ ಊರಿನವರಿಗೆ ನಾನು
ನಿನಗೆ ಅಜ್ಞಾಪಿಸುವ ಮಾತುಗಳನ್ನೆಲ್ಲಾ ಹೇಳು;
ಒಂದು ಮಾತನ್ನೂ ಬಿಡಬೇಡ. ಅವರು ಒಂದು
ವೇಳೆ ಕಿವಿಗೊಟ್ಟು ತಮ್ಮ ತಮ್ಮ ದುರ್ಮಾರ್ಗಗಳಿಂದ
ಹಿಂದಿರುಗಿಯಾರು; ಹಾಗಾದರೆ ಅವರ ದುಷ್ಕೃತ್ಯ
ಗಳ ನಿಮಿತ್ತ ನಾನು ಅವರಿಗೆ ಮಾಡಬೇಕೆಂದಿದ್ದ
ಕೇಡನ್ನು ಮನಮರುಗಿ ಮಾಡದಿರುವೆನು. ನೀನು 4
ಅವರಿಗೆ ಹೀಗೆ ಹೇಳು—ಯೆಹೋವನು ಇಂತೆನ್ನು
ತ್ತಾನೆ—ನೀವು ನನ್ನ ಕಡೆಗೆ ಕಿವಿಗೊಡದೆ ನಾನು
ನಿಮ್ಮ ಮುಂದೆ ಇಟ್ಟಿರುವ ಧರ್ಮಶಾಸ್ತ್ರಕ್ಕೆ ಅನುಸಾರ
ವಾಗಿ ನಡೆಯದೆ ಕೇಳಲೊಲ್ಲದ ನಿಮ್ಮ ಬಳಿಗೆ 5
ನಾನು ಸಾವಕಾಶವಿಲ್ಲದೆ ಕಳುಹಿಸುತ್ತಾ ಬಂದಿರುವ
ನನ್ನ ಸೇವಕರಾದ ಪ್ರವಾದಿಗಳ ಮಾತುಗಳನ್ನು ಕೇಳ
ದೆಯೂ ಇದ್ದರೆ—ಆಗ ನಾನು ಈ ಆಲಯವನ್ನು 6
ಶಿಲೋವಿನ ಗತಿಗೆ ತಂದು ಈ ಪಟ್ಟಣವು ಲೋಕದ
ಸಮಸ್ತಜನಾಂಗಗಳಲ್ಲಿ ಶಾಪದ ಮಾತಾಗುವಂತೆ
ಮಾಡುವೆನು. ಯೆರೆಮೀಯನು ಯೆಹೋವನ ಆಲ 7
ಯದಲ್ಲಿ ಹೀಗೆ ಮಾತಾಡುವದನ್ನು ಯಾಜಕರೂ
ಪ್ರವಾದಿಗಳೂ ಸಕಲಜನರೂ ಕೇಳಿದರು. ಸಮಸ್ತಜನ 8
ರಿಗೆ ಹೇಳಬೇಕೆಂದು ಯೆಹೋವನು ಆಜ್ಞಾಪಿಸಿದ್ದ
ನ್ನೆಲ್ಲಾ ಯೆರೆಮೀಯನು ನುಡಿದು ಮುಗಿಸಿದ ಮೇಲೆ
ಯಾಜಕರೂ ಪ್ರವಾದಿಗಳೂ ಎಲ್ಲಾ ಜನರೂ ಅವನನ್ನು
ಹಿಡಿದು ನಿನಗೆ ಮರಣವೇ ಆಗಬೇಕು; ನೀನು ಯೆ 9
ಹೋವನ ಹೆಸರೆತ್ತಿ ಪ್ರವಾದಿಸುತ್ತಾ—ಈ ಆಲಯವು
ಶಿಲೋವಿನ ಗತಿಗೆ ಬರುವದು, ಈ ಪಟ್ಟಣವು ಒಕ್ಕಲಿ
ಲ್ಲದೆ ಹಾಳುಬೀಳುವದು ಎಂದು ಏಕೆ ನುಡಿದೆ ಅಂದರು.
ಆಗ ಯೆಹೋವನ ಆಲಯದಲ್ಲಿ ಎಲ್ಲಾ ಜನರು
ಯೆರೆಮೀಯನ ಸುತ್ತಲು ಸುತ್ತಿಕೊಂಡಿದ್ದರು.
ಯೆಹೂದದ ಸರದಾರರು ಈ ವರ್ತಮಾನವನ್ನು 10
ಕೇಳಿ ಅರಮನೆಯಿಂದ ಯೆಹೋವನ ಆಲಯಕ್ಕೆ
ಹತ್ತಿಬಂದು ಆ ಮಂದಿರದ ಹೊಸ ಬಾಗಿಲಿನಲ್ಲಿ
ಕೂತುಕೊಂಡಿರಲಾಗಿ ಯಾಜಕರೂ ಪ್ರವಾದಿಗಳೂ 11
ಇವನು ಮರಣದಂಡನೆಗೆ ತಕ್ಕವನು; ಇವನು ಈ
ಪಟ್ಟಣಕ್ಕೆ ಅಹಿತನುಡಿದದ್ದನ್ನು ನೀವು ಕಿವಿಯಾರ
ಕೇಳಿದಿರಷ್ಟೆ ಎಂದು ಸರದಾರರಿಗೂ ಎಲ್ಲಾ ಜನರಿಗೂ
ಹೇಳಿದರು. ಆಗ ಯೆರೆಮೀಯನು ಸಕಲ ಸರದಾರ 12
ರಿಗೂ ಸಮಸ್ತ ಜನರಿಗೂ ಹೀಗೆ ಹೇಳಿದನು—
ನೀವು ಕೇಳಿದ ಮಾತುಗಳನ್ನೆಲ್ಲಾ ಈ ಆಲಯಕ್ಕೂ
ಈ ಪಟ್ಟಣಕ್ಕೂ ಪ್ರತಿಕೂಲವಾಗಿ ನುಡಿಯಬೇಕೆಂದು
ಯೆಹೋವನು ನನ್ನನ್ನು ಕಳುಹಿಸಿದನು. ಈಗಲೇ 13
ನಿಮ್ಮ ಮಾರ್ಗಗಳನ್ನೂ ಕೃತ್ಯಗಳನ್ನೂ ತಿದ್ದಿಕೊಂಡು
ನಿಮ್ಮ ದೇವರಾದ ಯೆಹೋವನ ನುಡಿಗೆ ಕಿವಿಗೊಡಿರಿ;
ಹಾಗಾದರೆ ಯೆಹೋವನು ನಿಮ್ಮ ವಿಷಯವಾಗಿ ನುಡಿ
ದಿರುವ ಕೇಡನ್ನು ಮನಮರುಗಿ ಮಾಡದಿರುವನು.
ನಾನೋ ನಿಮ್ಮ ಕೈಯಲ್ಲಿದ್ದೇನಲ್ಲಾ; ನಿಮಗೆ ಒಳ್ಳೇ 14
ದಾಗಿಯೂ ನ್ಯಾಯವಾಗಿಯೂ ತೋರುವದನ್ನು
ನನಗೆ ಮಾಡಿರಿ. ಆದರೆ ನೀವು ನನ್ನನ್ನು ಕೊಂದು 15
ಹಾಕಿದ ಪಕ್ಷಕ್ಕೆ ನೀವೂ ಈ ಪಟ್ಟಣವೂ ಇದರ ನಿವಾ
ಸಿಗಳೂ ನಿರ್ದೋಷಿಯ ರಕ್ತವನ್ನು ಸುರಿಸಿದ ಅಪ
ರಾಧಕ್ಕೆ ಪಾತ್ರರಾಗುವಿರಿ ಎಂದು ನಿಶ್ಚಯವಾಗಿ ತಿಳಿ
ದುಕೊಳ್ಳಿರಿ. ಈ ಮಾತುಗಳನ್ನೆಲ್ಲಾ ನಿಮ್ಮ ಕಿವಿಗೆ
ಮುಟ್ಟಿಸುವಂತೆ ಯೆಹೋವನು ನನ್ನನ್ನು ಕಳುಹಿಸಿರು
ವದು ಖಂಡಿತ. ಇದನು ಕೇಳಿ ಸರದಾರರೂ ಸಕಲ 16
ಜನರೂ ಯಾಜಕಪ್ರ ,ಗಳಿಗೆ—ಇವನು ಮರಣ

ದಂಡನೆಗೆ ತಕ್ಕವನಲ್ಲ; ನಮ್ಮ ದೇವರಾದ ಯೆಹೋ
ವನ ಹೆಸರಿನಲ್ಲಿ ಇದನ್ನು ನಮಗೆ ನುಡಿದಿದ್ದಾನಷ್ಟೆ
17 ಎಂದು ಹೇಳಿದ ತರುವಾಯ ದೇಶದ ಹಿರಿಯರಲ್ಲಿ ಕೆಲ
18 ವರು ಎದ್ದು—ಯೆಹೂದದ ಅರಸನಾದ ಹಿಜ್ಕೀಯನ
ಕಾಲದಲ್ಲಿ ಮೋರೆಷೆತ್ ಊರಿನವನಾದ [1]ಮೀಕಾ
ಯನು ಯೆಹೂದ್ಯರೆಲ್ಲರಿಗೆ—ಸೇನಾಧೀಶ್ವರನಾದ ಯೆ
ಹೋವನ ಮಾತನ್ನು ಕೇಳಿರಿ, ಚೀಯೋನ್ ಪಟ್ಟಣವು
ಹೊಲದಂತೆ ಗೇಯಲ್ಪಡುವದು, ಯೆರೂಸಲೇಮು ಹಾ
ಳುದಿಬ್ಬಗಳಾಗಿ ಬೀಳುವದು, ಯೆಹೋವನ ಆಲಯದ
ಪರ್ವತವು ಕಾಡುಗುಡ್ಡಗಳಂತಾಗುವದು ಎಂದು ಹೇಳ
19 ಲಾಗಿ ಯೆಹೂದದ ಅರಸನಾದ ಹಿಜ್ಕೀಯನೂ ಎಲ್ಲಾ
ಯೆಹೂದ್ಯರೂ ಅವನನ್ನು ಕೊಂದುಹಾಕಿದರೋ? ಇಲ್ಲ
ವೇ ಇಲ್ಲ. ಆ ಅರಸನು ಯೆಹೋವನಲ್ಲಿ ಭಯಭಕ್ತಿ
ಯುಳ್ಳವನಾಗಿ ಆತನ ದಯೆಯನ್ನು ಬೇಡಿಕೊಳ್ಳಲು
ಯೆಹೋವನು ಅವರ ವಿಷಯವಾಗಿ ನುಡಿದಿದ್ದ ಕೇಡ
ನ್ನು ಮನಮರುಗಿ ಮಾಡದೆ ಬಿಟ್ಟನಲ್ಲಾ. ನಾವಾ
ದರೋ [ಇವನನ್ನು ಕೊಂದು ಹಾಕಿ] ನಮಗೆ ದೊಡ್ಡ
ಕೇಡನ್ನು ಉಂಟುಮಾಡಿಕೊಳ್ಳುವವರಾಗಿದ್ದೇವೆ ಎಂಬ
ದಾಗಿ ಸಕಲಜನಸಮೂಹಕ್ಕೆ ಹೇಳಿದರು.
20 ಮತ್ತು ಶಮಾಯನ ಮಗನೂ ಕಿರ್ಯತ್ಯಾ
ರೀಮ್ ಊರಿನವನೂ ಆದ ಊರೀಯನೆಂಬವನೊ
ಬ್ಬನು ಯೆಹೋವನ ಹೆಸರಿನಲ್ಲಿ ಪ್ರವಾದಿಸುವವ
ನಾಗಿದ್ದು ಯೆರೆಮೀಯನು ನುಡಿದಂತೆಯೇ ಈ
ಪಟ್ಟಣಕ್ಕೂ ಈ ದೇಶಕ್ಕೂ ಅಹಿತವನ್ನು ನುಡಿಯು
21 ತ್ತಿದ್ದನು. ಅರಸನಾದ ಯೆಹೋಯಾಕೀಮನೂ
ಅವನ ಎಲ್ಲಾ ಪ್ರಸಿದ್ಧ ಶೂರರೂ ಸರದಾರರೂ
ಇವನ ಮಾತುಗಳನ್ನು ಕೇಳಿದಾಗ ಅರಸನು ಇವ
ನನ್ನು ಕೊಂದುಹಾಕಲು ಮನಮಾಡಿದನು; ಆದರೆ
ಊರೀಯನು ಆ ಸುದ್ದಿಯನ್ನು ಕೇಳಿ ಭಯಪಟ್ಟು
22 ಓಡಿಹೋಗಿ ಐಗುಪ್ತವನ್ನು ಸೇರಿಕೊಂಡನು. ಆಗ
ಅರಸನಾದ ಯೆಹೋಯಾಕೀಮನು ಅಕ್ಬೋರನ
ಮಗನಾದ ಎಲ್ನಾಥಾನನನ್ನೂ ಅವನ ಸಂಗಡ ಇನ್ನು
23 ಕೆಲವರನ್ನೂ ಐಗುಪ್ತಕ್ಕೆ ಕಳುಹಿಸಿದನು; ಅವರು
ಊರೀಯನನ್ನು ಐಗುಪ್ತದಿಂದ ಎಳೆದು ಅರಸನಾದ
ಯೆಹೋಯಾಕೀಮನ ಬಳಿಗೆ ತರಲು ಅವನು ಇವ
ನನ್ನು ಕತ್ತಿಯಿಂದ ಕಡಿಸಿ ಶವವನ್ನು ಸಾಧಾರಣ
ಜನರ ಗೋರಿಗಳ ನಡುವೆ ಹಾಕಿಸಿದನು.
24 ಇತ್ತ ಯಾಜಕರೂ ಪ್ರವಾದಿಗಳೂ ಯೆರೆಮೀಯ
ನನ್ನು ಜನರ ಕೈಗೆ ಸಿಕ್ಕಿಸಿ ಕೊಲ್ಲಿಸದ ಹಾಗೆ ಶಾಫಾ
ನನ ಮಗನಾದ ಅಹೀಕಾಮನ ಸಹಾಯವು ಅವನಿಗೆ
ಒದಗಿತು.

ಬಾಬೆಲಿಗೆ ಅಧೀನವಾಗಬೇಕೆಂದು ಯೆರೆಮೀಯನು
ಅನ್ಯಜನಾಂಗಗಳನ್ನೂ ಯೆಹೂದ್ಯರನ್ನೂ ಎಚ್ಚರಿಸಿದ್ದು.

27 ಯೋಷೀಯನ ಮಗನೂ ಯೆಹೂದದ ಅರ
ಸನೂ ಆದ ಯೆಹೋಯಾಕೀಮನ ಆಳಿಕೆಯ
ಆರಂಭದಲ್ಲಿ ಯೆಹೋವನಿಂದ ಯೆರೆಮೀಯನಿಗೆ ಈ
ಅಪ್ಪಣೆಯಾಯಿತು—[2]ಇದೇ ಯೆಹೋವನ ನುಡಿ—
ನೀನು ಕಣ್ಣಿನೊಗಗಳನ್ನು ಮಾಡಿ ನಿನ್ನ ಹೆಗಲಿ
ಹಾಕಿಕೊಂಡು ಯೆಹೂದದ ಅರಸನಾದ ಚಿದ್ಕೀಯ
ಬಳಿಗೆ ಯೆರೂಸಲೇಮಿನಲ್ಲಿ ಬಂದಿರುವ ರಾಯಭಾ
ಗಳ ಮೂಲಕ ಅವುಗಳನ್ನು ಎದೋಮಿನ ರಾಜ, ಮೋ
ವಾಬಿನ ರಾಜ, ಅಮ್ಮೋನ್ಯರ ರಾಜ, ತೂರಿನ ರಾಜ, ಚ
ದೋನಿನ ರಾಜ, ಇವರಿಗೆ ಕಳುಹಿಸು; ಆಗ ಆ ರಾಯ
ಭಾರಿಗಳಿಗೆ—ಇಸ್ರಾಯೇಲ್ಯರ ದೇವರೂ ಸೇನಾಧೀ
ರನೂ ಆದ ಯೆಹೋವನು ನಿಮ್ಮ ಒಡೆಯರಿಗೆ ನೀ
ಹೀಗೆ ಅರಿಕೆಮಾಡುವಂತೆ ಅಪ್ಪಣೆಕೊಟ್ಟಿದ್ದಾನೆ ಎಂ
ದಾಗಿ ಹೇಳಿ ಅವರು ತಮ್ಮ ತಮ್ಮ ಒಡೆಯರಿಗೆ ತಿಳಿ
ಬೇಕಾದ ಈ ಮಾತುಗಳನ್ನು ಅವರಿಗೆ ಆಜ್ಞಾಪಿಸು—
ನಾನೇ ಕೈ ನೀಡಿ ನನ್ನ ಮಹಾ ಶಕ್ತಿಯಿಂದ ಲೋ
ವನ್ನೂ ಭೂಮಿಯ ಮೇಲಣ ಮಾನವರನ್ನೂ ಪ
ಗಳನ್ನೂ ಸೃಷ್ಟಿಸಿದ್ದೇನೆ; ಈ ನನ್ನ ಸೃಷ್ಟಿಯನ
ನನಗೆ ಸರಿತೋಚಿದವನಿಗೇ ಕೊಡಬಲ್ಲೆನು; ಈಗ
ದೇಶಗಳನ್ನೆಲ್ಲಾ ಬಾಬೆಲಿನ ಅರಸನೂ ನನ್ನ ಸೇ
ಕನೂ ಆದ ನೆಬೂಕದ್ನೆಚ್ಚರನ ಕೈವಶಮಾಡಿದ್ದೇನ
ಅವನ ಸೇವೆಗಾಗಿ ಭೂಜಂತುಗಳನ್ನೂ ಕೊಟ್ಟಿದ್ದೇ
ಅವನ ದೇಶಕ್ಕೆ ಕಾಲವು ಹತ್ತರಿಸುವ ತನಕ ಸಕ
ಜನಾಂಗಗಳು ಅವನಿಗೂ ಅವನ ಮಗನಿಗೂ ಮೊಮ
ಗನಿಗೂ ಅಡಿಯಾಳಾಗಿ ಬಿದ್ದಿರುವವು; ಆ ಮೇ
ಅನೇಕ ಜನಾಂಗಗಳೂ ಮಹಾರಾಜರೂ ಅವನನ್ನೆ
ಅಡಿಯಾಳನ್ನಾಗಿ ಮಾಡಿಕೊಳ್ಳುವರು. ಯಾವ ಜನಾ
ಗ, ಯಾವ ರಾಜ್ಯ ಬಾಬೆಲಿನ ಅರಸನಾದ ನೆಬೂಕದ್ನೆ
ರನ ಅಡಿಯಾಳಾಗಲಿಕ್ಕೂ ಬಾಬೆಲಿನ ಅರಸನ ನೊಗಕ
ಹೆಗಲು ಕೊಡಲಿಕ್ಕೂ ಒಪ್ಪದೋ ಆ ಜನಾಂಗವನ
ನಾನು ಖಡ್ಗಕ್ಷಾಮವ್ಯಾಧಿಗಳಿಂದ ದಂಡಿಸುತ್ತ
ಬಂದು ಕಡೆಯಲ್ಲಿ ಅವನ ಕೈಯಿಂದಲೇ ನಿರ್ಮೂ
ಮಾಡಿಸುವೆನು. ಇದು ಯೆಹೋವನ ನುಡಿ. ನೀ
ಬಾಬೆಲಿನ ಅರಸನ ಅಡಿಯಾಳಾಗುವದಿಲ್ಲ ಎಂ
ನಿಮಗೆ ನುಡಿಯುವ ನಿಮ್ಮ ಪ್ರವಾದಿಗಳು, ಶಕು
ದವರು, ಕನಸಿನವರು, ಕಣಿಯವರು, ಮಾಟದವರ
ಇವರಿಗೆ ಕಿವಿಗೊಡಲೇಬಾರದು; ಅವರು ನಿಮ
ಸುಳ್ಳನ್ನು ಸಾರುತ್ತಾರೆ; ನೀವು ನನ್ನಿಂದ ಅಟ್ಟಲ್ಪಟ
ದೇಶಭ್ರಷ್ಟರಾಗಿ ಅಳಿದುಹೋಗುವದಕ್ಕೆ ಅವ
ದುಬೋರ್ಧನೆಯು ಆಸ್ಪದವಾಗುವದು. ಯಾ
ಜನಾಂಗವು ಬಾಬೆಲಿನ ಅರಸನ ನೊಗಕ್ಕೆ ಹೆಗ
ಕೊಟ್ಟು ಅವನ ಅಡಿಯಾಳಾಗುವದೋ ಆ ಜನಾಂ
ದವರನ್ನು ನಾನು ಅವರ ದೇಶದಲ್ಲಿ ನೆಲೆಗೊಳಿಸ
ವೆನು; ಅವರು ಅಲ್ಲಿ ಗೆಯ್ದು ವಾಸಿಸುವರು. ಯೆಹೋ
ವನೇ ಇದನ್ನು ನುಡಿದಿದ್ದಾನೆ.
ಇದಲ್ಲದೆ ನಾನು ಆ ಎಲ್ಲಾ ಮಾತುಗಳನ್ನು ಅನ
ಸರಿಸಿ ಯೆಹೂದದ ಅರಸನಾದ ಚಿದ್ಕೀಯನಿಗೂ ಹೀ
ನುಡಿದೆನು—ಬಾಬೆಲಿನ ಅರಸನ ನೊಗಕ್ಕೆ ಹೆಗಲ
ಕೊಟ್ಟು ಅವನಿಗೂ ಅವನ ಜನರಿಗೂ ಅಡಿಯಾಳಾಗಿ
ಆಗ ಬದುಕುವಿರಿ. ನೀನೂ ನಿನ್ನ ಜನರೂ ಖಡ್ಗಕ್ಷಾವ
ವ್ಯಾಧಿಗಳಿಂದ ಏಕೆ ಸಾಯಬೇಕು? ಬಾಬೆಲಿನ ಅರಸ

1) ಪಾಠಾಂತರ: ಮೀಕನು. 2) ಇಬ್ರಿಯ ಮೂಲ: ಇದೇ ನನಗಾದ ಯೆಹೋವನ ನುಡಿ.

ಅಡಿಯಾಳಾಗಲು ಒಪ್ಪದ ಜನಾಂಗಕ್ಕೆ ಈ ಗತಿಯಾಗು
14 ವದೆಂದು ಯೆಹೋವನು ನುಡಿದಿದ್ದಾನಷ್ಟೆ. ನೀವು
ಬಾಬೆಲಿನ ಅರಸನ ಅಡಿಯಾಳಾಗುವದಿಲ್ಲ ಎಂದು
ನಿಮಗೆ ನುಡಿಯುವ ಪ್ರವಾದಿಗಳ ಮಾತುಗಳಿಗೆ ಕಿವಿ
ಗೊಡಬೇಡಿರಿ; ಅವರು ನಿಮಗೆ ಸುಳ್ಳನ್ನು ಸಾರುತ್ತಾರೆ.
15 ಯೆಹೋವನು ಇಂತೆನ್ನುತ್ತಾನೆ—ನಾನು ಅವರನ್ನು
ಕಳುಹಿಸಲಿಲ್ಲ; ನನ್ನ ಹೆಸರೆತ್ತಿ ಸುಳ್ಳನ್ನು ಸಾರು
ತ್ತಾರೆ; ನೀವೂ ನಿಮಗೆ ಪ್ರವಾದಿಸುವ ಪ್ರವಾದಿ
ಗಳೂ ನನ್ನಿಂದ ಅಟ್ಟಲ್ಪಟ್ಟು ಅಳಿದುಹೋಗುವದಕ್ಕೆ
ಅವರ ದುರ್ಬೋಧನೆಯು ಆಸ್ಪದವಾಗುವದು.
16 ಇದಲ್ಲದೆ ನಾನು ಯಾಜಕರಿಗೂ ಈ ಸಕಲಜನ
ರಿಗೂ ಹೀಗೆ ನುಡಿದೆನು—ಯೆಹೋವನು ಇಂತೆನ್ನು
ತ್ತಾನೆ—ಇಗೋ, ಯೆಹೋವನ ಆಲಯದ ಉಪ
ಕರಣಗಳು ಬೇಗನೆ ಬಾಬೆಲಿನಿಂದ ಹಿಂದಕ್ಕೆ ತರ
ಲ್ಪಡುವವು ಎಂಬದಾಗಿ ನಿಮಗೆ ಪ್ರವಾದಿಸುವ ಪ್ರವಾ
ದಿಗಳ ಮಾತುಗಳನ್ನು ಕೇಳಬೇಡಿರಿ; ನಿಮಗೆ ಸುಳ್ಳನ್ನು
17 ಸಾರುತ್ತಾರೆ. ಅವರ ಕಡೆಗೆ ಕಿವಿಗೊಡಲೇ ಬಾರದು;
ಬಾಬೆಲಿನ ಅರಸನ ಅಡಿಯಾಳಾಗಿರಿ, ಬದುಕುವಿರಿ;
18 ಈ ಪಟ್ಟಣವು ಏಕೆ ಹಾಳಾಗಬೇಕು? ಅವರು ಪ್ರವಾದಿ
ಗಳಾಗಿದ್ದು ಯೆಹೋವನ ವಾಕ್ಯಕ್ಕೆ ನೆಲೆಯಾಗಿದ್ದರೆ
ಈಗ ಸೇನಾಧೀಶ್ವರನಾದ ಯೆಹೋವನಿಗೆ ವಿಜ್ಞಾಪನೆ
ಮಾಡಿ ಯೆಹೋವನ ಆಲಯದಲ್ಲಿಯೂ ಯೆಹೂ
ದದ ಅರಸನ ಮನೆಯಲ್ಲಿಯೂ ಯೆರೂಸಲೇಮಿನ
ಲ್ಲಿಯೂ ಉಳಿದಿರುವ ಉಪಕರಣಗಳು ಬಾಬೆಲಿಗೆ
19 ಹೋಗದಂತೆ ಬೇಡಿಕೊಳ್ಳಲಿ. ಬಾಬೆಲಿನ ಅರಸನಾದ
ನೆಬೂಕದ್ನೆಚ್ಚರನು ಯೆಹೋಯಾಕೀಮನ ಮಗನೂ
ಯೆಹೂದದ ಅರಸನೂ ಆದ ಯೆಕೊನ್ಯನನ್ನೂ
ಯೆಹೂದದ ಮತ್ತು ಯೆರೂಸಲೇಮಿನ ಸಮಸ್ತ
ಪ್ರಧಾನರನ್ನೂ ಯೆರೂಸಲೇಮಿನಿಂದ ಬಾಬೆಲಿಗೆ ಸೆರೆ
ಒಯ್ದಾಗ ಕೆಲವು ಸಾಮಾನುಗಳನ್ನು ತೆಗೆದುಕೊಳ್ಳ
20 ಲಿಲ್ಲವಲ್ಲಾ; ಆ ಕಂಬಗಳು, ಸಮುದ್ರವೆನಿಸಿಕೊಂಡ
ಪಾತ್ರೆಯು, ಪೀಠಗಳು, ಈ ಪಟ್ಟಣದಲ್ಲಿ ನಿಂತಿರುವ
21 ಉಪಕರಣಗಳು. ಇವುಗಳ ವಿಷಯವಾಗಿ, ಅಂದರೆ
ಯೆಹೋವನ ಆಲಯದಲ್ಲಿಯೂ ಯೆಹೂದದ ಅರ
ಸನ ಮನೆಯಲ್ಲಿಯೂ ಯೆರೂಸಲೇಮಿನಲ್ಲಿಯೂ
ಉಳಿದಿರುವ ಉಪಕರಣಗಳ ವಿಷಯವಾಗಿ ಇಸ್ರಾಯೇ
ಲ್ಯರ ದೇವರೂ ಸೇನಾಧೀಶ್ವರನೂ ಆದ ಯೆಹೋವನು
22 ಇಂತೆನ್ನುತ್ತಾನೆ—ಅವು ಬಾಬೆಲಿಗೆ ಒಯ್ಯಲ್ಪಟ್ಟು ನಾನು
ಅವುಗಳನ್ನು ಉದ್ಧರಿಸುವ ದಿನದ ತನಕ ಅಲ್ಲೇ ಇರು
ವವು; ಆಗ ನಾನು ಅವುಗಳನ್ನು ಪುನಃ ತಂದು ಈ
ಸ್ಥಳಕ್ಕೆ ಸೇರಿಸುವೆನು. ಇದು ಯೆಹೋವನ ನುಡಿ.

ಯೆರೆಮೀಯನಿಗೂ ಹನನ್ಯನಿಗೂ ಆದ ವ್ಯಾಜ್ಯ.

28 ಅದೇ ವರುಷದಲ್ಲಿ, ಯೆಹೂದದ ಅರಸನಾದ
ಚಿದ್ಕೀಯನ ಆಳಿಕೆಯ ಆರಂಭದಲ್ಲಿ, ಅಂದರೆ
ನಾಲ್ಕನೆಯ ವರುಷದ ಐದನೆಯ ತಿಂಗಳಲ್ಲಿ ಪ್ರವಾದಿ
ಯಾದ ಅಜ್ಜೂರನ ಮಗನೂ ಗಿಬ್ಯೋನ್ ಊರಿನವ
ನೂ ಆದ ಹನನ್ಯನು ಯೆಹೋವನ ಆಲಯದೊಳಗೆ
ಯಾಜಕರ ಮತ್ತು ಸಕಲಜನರ ಎದುರಿನಲ್ಲಿ ನನಗೆ
ಹೀಗೆ ಹೇಳಿದನು—ಇಸ್ರಾಯೇಲ್ಯರ ದೇವರೂ ಸೇನಾ 2
ಧೀಶ್ವರನೂ ಆದ ಯೆಹೋವನು ಇಂತೆನ್ನುತ್ತಾನೆ—
ಬಾಬೆಲಿನ ಅರಸನು [ನಿಮಗೆ] ಹೇರಿರುವ ನೊಗ
ವನ್ನು ಮುರಿದುಬಿಟ್ಟಿದ್ದೇನೆ. ಬಾಬೆಲಿನ ಅರಸ 3
ನಾದ ನೆಬೂಕದ್ನೆಚ್ಚರನು ಈ ಸ್ಥಳದಿಂದ ತೆಗೆದು
ಬಾಬೆಲಿಗೆ ಒಯ್ದು ಯೆಹೋವನ ಆಲಯದ ಸಕಲ
ಉಪಕರಣಗಳನ್ನು ಎರಡು ವರುಷಗಳೊಳಗಾಗಿ ನಾನು
ಪುನಃ ಈ ಸ್ಥಳಕ್ಕೆ ಸೇರಿಸುವೆನು.
ಮತ್ತು ಯೆಹೋಯಾಕೀಮನ ಮಗನೂ ಯೆಹೂ 4
ದದ ಅರಸನೂ ಆದ ಯೆಕೊನ್ಯನನ್ನೂ ಬಾಬೆಲಿಗೆ
ಸೆರೆಹೋದ ಎಲ್ಲಾ ಯೆಹೂದ್ಯರನ್ನೂ ಈ ಸ್ಥಳಕ್ಕೆ
ತಿರಿಗಿ ಬರಮಾಡುವೆನು. ಬಾಬೆಲಿನ ಅರಸನು
[ನಿಮಗೆ] ಹೇರಿರುವ ನೊಗವನ್ನು ನಾನು ಮುರಿದು
ಬಿಡುವೆನು. ಇದು ಯೆಹೋವನ ನುಡಿ.
ಆಗ ಪ್ರವಾದಿಯಾದ ಯೆರೆಮೀಯನು ಯೆಹೋ 5
ವನ ಆಲಯದೊಳಗೆ ನಿಂತಿದ್ದ ಯಾಜಕರ ಮತ್ತು
ಸಕಲಜನರ ಎದುರಿನಲ್ಲಿ ಪ್ರವಾದಿಯಾದ ಹನನ್ಯ
ನಿಗೆ—ಹಾಗಾಗಲಿ, ಯೆಹೋವನು ಹಾಗೇ ಮಾಡಲಿ! 6
ಯೆಹೋವನು ತನ್ನ ಆಲಯದ ಉಪಕರಣಗಳನ್ನೂ
ಸೆರೆಹೋದವರೆಲ್ಲರನ್ನೂ ಬಾಬೆಲಿನಿಂದ ಈ ಸ್ಥಳಕ್ಕೆ
ಪುನಃ ಬರಮಾಡಿ ನೀನು ನುಡಿದ ಮಾತುಗಳನ್ನು
ನೆರವೇರಿಸಲಿ! ಆದರೆ ನಾನು ನಿನ್ನ ಮತ್ತು ಸಕಲ 7
ಜನರ ಕಿವಿಗೆ ಬೀಳುವಂತೆ ನುಡಿಯುವ ಈ ಮಾತನ್ನು
ಕೇಳು—ನನಗೂ ನಿನಗೂ ಮುಂಚೆ ಪುರಾತನ ಕಾಲ 8
ದಿಂದಿದ್ದ ಪ್ರವಾದಿಗಳು ಅನೇಕದೇಶಗಳಿಗೂ ದೊಡ್ಡ
ದೊಡ್ಡ ರಾಜ್ಯಗಳಿಗೂ ಯುದ್ಧ, ವಿಪತ್ತು, ವ್ಯಾಧಿ,
ಇವುಗಳ ವಿಷಯವಾಗಿ ಸಾರುತ್ತಿದ್ದರಷ್ಟೆ. ಹಿತಸಮಾ 9
ಚಾರವನ್ನು ಸಾರುವ ಪ್ರವಾದಿಯೋ ಯೆಹೋವನಿಂದ
ನಿಜವಾಗಿ ಕಳುಹಿಸಲ್ಪಟ್ಟವನೆಂದು ಅವನ ಮಾತು
ಕೈಗೂಡಿದ ಮೇಲೇ ತಿಳಿಯತಕ್ಕದ್ದು ಎಂದು ಹೇಳಿ
ದನು. ಆಗ ಪ್ರವಾದಿಯಾದ ಹನನ್ಯನು ಪ್ರವಾದಿ 10
ಯಾದ ಯೆರೆಮೀಯನ ಹೆಗಲಿನಿಂದ ನೊಗವನ್ನು
ತೆಗೆದು ಮುರಿದುಹಾಕಿ ಎಲ್ಲಾ ಜನರ ಎದುರಿಗೆ—
ಯೆಹೋವನು ಹೇಳಿರುವದೇನಂದರೆ—ನಾನು ಹೀಗೆ 11
ಯೇ ಬಾಬೆಲಿನ ಅರಸನಾದ ನೆಬೂಕದ್ನೆಚ್ಚರನ ನೊಗ
ವನ್ನು ಎರಡು ವರುಷದೊಳಗಾಗಿ ಸಮಸ್ತ ಜನಾಂಗಗಳ
ಹೆಗಲಿನಿಂದ ತೆಗೆದು ಮುರಿದುಹಾಕುವೆನು ಎಂದು
ಹೇಳಿದನು. ಇದನ್ನು ಕೇಳಿ ಪ್ರವಾದಿಯಾದ ಯೆರೆಮೀ
ಯನು ಅಲ್ಲಿಂದ ಹೊರಟುಹೋದನು.
ಪ್ರವಾದಿಯಾದ ಹನನ್ಯನು ಪ್ರವಾದಿಯಾದ ಯೆರೆ 12
ಮೀಯನ ಹೆಗಲಿನಿಂದ ನೊಗವನ್ನು ತೆಗೆದು ಮುರಿದ
ಮೇಲೆ ಯೆಹೋವನು ಯೆರೆಮೀಯನಿಗೆ ಈ ಮಾತ
ನ್ನು ದಯಪಾಲಿಸಿದನು—ನೀನು ಹೋಗಿ ಹನನ್ಯ 13
ನಿಗೆ—ಯೆಹೋವನು ಇಂತೆನ್ನುತ್ತಾನೆ—ನೀನು ಮರದ
ನೊಗಗಳನ್ನು ಮುರಿದುಬಿಟ್ಟು, ಅವುಗಳಿಗೆ ಬದಲಾಗಿ
1)ಕಬ್ಬಿಣದ ನೊಗಗಳನ್ನು ಮಾಡು, ಏಕಂದರೆ ಇಸ್ರಾ 14

1) ಪಾಠಾಂತರ: ನಾನು ಕಬ್ಬಿಣದ ನೊಗಗಳನ್ನು ಮಾಡುವೆನು.

ಯೇಲ್ಯರ ದೇವರೂ ಸೇನಾಧೀಶ್ವರನೂ ಆದ ಯೆಹೋ
ವನು ಇಂತೆನ್ನುತ್ತಾನೆ—ಈ ಎಲ್ಲಾ ಜನಾಂಗಗಳು
ಬಾಬೆಲಿನ ಅರಸನಾದ ನೆಬೂಕದ್ನೆಚ್ಚರನನ್ನು ಸೇವಿಸ
ಲೆಂದು ನಾನು ಅವುಗಳ ಹೆಗಲಿಗೆ ಕಬ್ಬಿಣದ ನೊಗ
ವನ್ನು ಹೇರಿದ್ದೇನೆ, ಅವು ಅವನನ್ನು ಸೇವಿಸೇ ಸೇವಿಸು
ವವು; ಇದಲ್ಲದೆ ಭೂಜಂತುಗಳನ್ನೂ ಅವನಿಗೆ ಕೊಟ್ಟಿ
15 ದ್ದೇನೆ ಎಂದು ಹೇಳು. ಆಗ ಪ್ರವಾದಿಯಾದ ಯೆರೆ
ಮೀಯನು ಪ್ರವಾದಿಯಾದ ಹನನ್ಯನಿಗೆ—ಹನನ್ಯನೇ,
ಕೇಳು, ಯೆಹೋವನು ನಿನ್ನನ್ನು ಕಳುಹಿಸಲಿಲ್ಲ;
ಈ ಜನರು ಸುಳ್ಳನ್ನು ನಂಬುವಂತೆ ಮಾಡುತ್ತೀ.
16 ಆದಕಾರಣ ಯೆಹೋವನು ಇಂತೆನ್ನುತ್ತಾನೆ—ಇಗೋ,
ನಾನು ನಿನ್ನನ್ನು ಭೂಮಿಯ ಮೇಲಿಂದ ತೊಲಗಿಸು
ವೆನು; ನೀನು ಯೆಹೋವನಾದ ನನಗೆ ವಿರುದ್ಧವಾಗಿ
ದ್ರೋಹದ ಮಾತನ್ನು ಆಡಿದ್ದರಿಂದ ಇದೇ ವರುಷ
17 ಸಾಯುವಿ ಎಂದು ಹೇಳಿದನು. ಅದರಂತೆ ಪ್ರವಾದಿ
ಯಾದ ಹನನ್ಯನು ಅದೇ ವರುಷ ಏಳನೆಯ ತಿಂಗಳಲ್ಲಿ
ಸತ್ತನು.

ಯೆರೆಮೀಯನು ಬಾಬೆಲಿನಲ್ಲಿ ಸೆರೆಯಾಗಿದ್ದವರಿಗೆ
ಕಳುಹಿಸಿದ ಕಾಗದ.

29 ಅರಸನಾದ ಯೆಕೊನ್ಯನು, ರಾಜಮಾತೆಯು,
ಕಂಚುಕಿಗಳು, ಯೆಹೂದದ ಮತ್ತು ಯೆರೂಸಲೇ
ಮಿನ ಸರದಾರರು, ಶಿಲ್ಪಿಗಳು, ಕಮ್ಮಾರರು, ಇವರು
2 ಯೆರೂಸಲೇಮಿನಿಂದ ತೊಲಗಿದ ಮೇಲೆ ಪ್ರವಾದಿ
ಯಾದ ಯೆರೆಮೀಯನು ಸೆರೆಹೋಗಿದ್ದ ಹಿರಿಯ
ರಲ್ಲಿ ಉಳಿದವರಿಗೂ ಯಾಜಕರಿಗೂ ಪ್ರವಾದಿಗಳಿಗೂ
ಅಂತು ನೆಬೂಕದ್ನೆಚ್ಚರನು ಯೆರೂಸಲೇಮಿನಿಂದ ಬಾಬೆ
3 ಲಿಗೆ ಸೆರೆಒಯ್ದಿದ್ದ ಸಕಲಜನರಿಗೂ ಯೆಹೂದದ ಅರಸ
ನಾದ ಚಿದ್ಕೀಯನಿಂದ ಬಾಬೆಲಿನ ಅರಸನಾದ ನೆಬೂ
ಕದ್ನೆಚ್ಚರನ ಬಳಿಗೆ ರಾಯಭಾರಿಗಳಾಗಿ ಬಾಬೆಲಿಗೆ
ಕಳುಹಿಸಲ್ಪಟ್ಟ ಶಾಫಾನನ ಮಗನಾದ ಎಲ್ಲಾಸ,
ಹಿಲ್ಕೀಯನ ಮಗನಾದ ಗೆಮರ್ಯ, ಇವರ ಕೈಯಲ್ಲಿ
ಯೆರೂಸಲೇಮಿನಿಂದ ಬರೆದು ರವಾನಿಸಿದ ಕಾಗದದ
4 ಮಾತೇನಂದರೆ—ಇಸ್ರಾಯೇಲ್ಯರ ದೇವರೂ ಸೇನಾ
ಧೀಶ್ವರನೂ ಆದ ಯೆಹೋವನು ತಾನು ಯೆರೂಸ
ಲೇಮಿನಿಂದ ಬಾಬೆಲಿಗೆ ಸಾಗಿಸಿದ ಸೆರೆಯವರೆಲ್ಲ
5 ರಿಗೂ ಹೀಗೆ ಹೇಳುತ್ತಾನೆ—ನೀವು ಮನೆಗಳನ್ನು
ಕಟ್ಟಿಕೊಂಡು ಅವುಗಳಲ್ಲಿ ವಾಸಿಸಿರಿ, ತೋಟಗ
ಳನ್ನು ಮಾಡಿಕೊಂಡು ಅವುಗಳ ಫಲವನ್ನು ಅನು
6 ಭವಿಸಿರಿ; ಸಂಸಾರಿಗಳಾಗಿ ಗಂಡುಹೆಣ್ಣು ಮಕ್ಕಳನ್ನು
ಪಡೆಯಿರಿ; ನಿಮ್ಮ ಗಂಡುಗಳಿಗೆ ಹೆಣ್ಣುಗಳನ್ನು ತೆಗೆದು
ಕೊಳ್ಳಿರಿ, ನಿಮ್ಮ ಹೆಣ್ಣುಗಳನ್ನು ಗಂಡುಗಳಿಗೆ ಕೊ
ಡಿರಿ; ಅವರೂ ಗಂಡುಹೆಣ್ಣು ಮಕ್ಕಳನ್ನು ಪಡೆಯಲಿ;
ನೀವು ಇರುವಲ್ಲಿಯೇ ವೃದ್ಧಿಯಾಗಿರಿ, ಕಡಿಮೆಯಾಗ
7 ದಿರಿ. ನಾನು ಯಾವ ಪಟ್ಟಣಕ್ಕೆ ನಿಮ್ಮನ್ನು ಸಾಗಿಸಿ
ದೆನೋ ಅದರ ಕ್ಷೇಮವನ್ನು ಹಾರೈಸಿ ಅದಕ್ಕಾಗಿ
ಯೆಹೋವನನ್ನು ಪ್ರಾರ್ಥಿಸಿರಿ; ಅದರ ಕ್ಷೇಮವೇ
ನಿಮ್ಮ ಕ್ಷೇಮ. ಇಸ್ರಾಯೇಲ್ಯರ ದೇವರೂ ಸೇನಾ
ಧೀಶ್ವರನೂ ಆದ ಯೆಹೋವನು ಇಂತೆನ್ನುತ್ತಾನೆ—
ನಿಮ್ಮ ಮಧ್ಯದಲ್ಲಿರುವ ನಿಮ್ಮ ಪ್ರವಾದಿಗಳಿಂದಲೂ
ಶಕುನದವರಿಂದಲೂ ಮೋಸಹೋಗಬೇಡಿರಿ; ನಿಮಗಾಗಿ
ಕನಸುಕಂಡು ಹೇಳುವವರಿಗೆ ಕಿವಿಗೊಡದಿರಿ; ಅವರು
ನನ್ನ ಹೆಸರಿನಲ್ಲಿ ನಿಮಗೆ ಸುಳ್ಳನ್ನು ಸಾರುತ್ತಾರೆ;
ನಾನು ಅವರನ್ನು ಕಳುಹಿಸಲಿಲ್ಲ. ಇದು ಯೆಹೋ
ವನ ನುಡಿ.
ಯೆಹೋವನು ಇಂತೆನ್ನುತ್ತಾನೆ—ಬಾಬೆಲ್ ರಾಜ್ಯ
ವು ಎಪ್ಪತ್ತು ವರುಷ ಪ್ರಬಲಿಸಿದ ಮೇಲೆ ನಾನು
ನಿಮ್ಮನ್ನು ಕಟಾಕ್ಷಿಸಿ ಈ ಸ್ಥಳಕ್ಕೆ ತಿರಿಗಿ ಬರಮಾಡುವೆ
ನೆಂಬ ನನ್ನ ಶುಭವಾಕ್ಯವನ್ನು ನಿಮಗಾಗಿ ನೆರವೇರಿ
ಸುವೆನು. ಇವರಿಗೆ ಗತಿಯಾಗಲಿ, ನಿರೀಕ್ಷೆಯಿರಲಿ
ಎಂದು ನಾನು ನಿಮ್ಮ ವಿಷಯದಲ್ಲಿ ಮಾಡಿಕೊಳ್ಳು
ತ್ತಿರುವ ಆಲೋಚನೆಗಳನ್ನು ನಾನೇ ಬಲ್ಲೆನು; ಅವು
ಅಹಿತದ ಯೋಚನೆಗಳಲ್ಲ, ಹಿತದ ಯೋಚನೆಗಳೇ.
ನೀವು ನನಗೆ ಮೊರೆಯಿಡುವಿರಿ, ನನ್ನನ್ನು ಪ್ರಾರ್ಥಿ
ಸಲು ಹೋಗುವಿರಿ; ನಾನು ಕಿವಿಗೊಡುವೆನು. ನೀವು
ನನ್ನನ್ನು ಹುಡುಕುವಿರಿ, ಮನಃಪೂರ್ವಕವಾಗಿ ಹು
ಡುಕಿದಾಗ ನನ್ನನ್ನು ಕಂಡುಕೊಳ್ಳುವಿರಿ. ನಾನು ನಿಮಗೆ
ದೊರೆಯುವೆನು, ನಿಮ್ಮನ್ನು ನಿಮ್ಮ ದುರವಸ್ಥೆಯಿಂದ
ತಪ್ಪಿಸಿ ನಾನು ನಿಮ್ಮನ್ನು ಅಟ್ಟಿಬಿಟ್ಟಿದ್ದ ಸಮಸ್ತ
ದೇಶಗಳಿಂದಲೂ ಸಕಲಜನಾಂಗಗಳ ಮಧ್ಯದಿಂದಲೂ
ಒಟ್ಟುಗೂಡಿಸಿ ನಿಮ್ಮನ್ನು ಯಾವ ಸ್ಥಳದಿಂದ ಸೆರೆಗೆ
ಸಾಗಿಸಿದೆನೋ ಅಲ್ಲಿಗೆ ತಿರಿಗಿ ಬರಮಾಡುವೆನು. ಇದು
ಯೆಹೋವನ ನುಡಿ. (ನೀವೋ—ಯೆಹೋವನು ನಮ
ಗಾಗಿ ಬಾಬೆಲಿನಲ್ಲೇ ಪ್ರವಾದಿಗಳನ್ನು ಏರ್ಪಡಿಸಿದ್ದಾ
ನಲ್ಲಾ ಅಂದುಕೊಂಡಿದ್ದೀರಿ.)
ಸೇನಾಧೀಶ್ವರನಾದ ಯೆಹೋವನು ದಾವೀದನ
ಸಿಂಹಾಸನಾರೂಢನಾದ ಅರಸನ ವಿಷಯವಾಗಿಯೂ
ನಿಮ್ಮೊಂದಿಗೆ ಸೆರೆಹೋಗದ ನಿಮ್ಮ ಸಹೋದರರಾದ
ಈ ಪಟ್ಟಣದ ಸಕಲ ನಿವಾಸಿಗಳ ವಿಷಯವಾಗಿಯೂ
ಇಂತೆನ್ನುತ್ತಾನೆ—ಆಹಾ, ನಾನು ಅವರ ಮೇಲೆ
ಖಡ್ಗಕ್ಷಾಮವ್ಯಾಧಿಗಳನ್ನು ಬರಮಾಡಿ ಯಾರೂ
ತಿನ್ನದ ಹಾಗೆ ಕೆಟ್ಟು ಕೇವಲ ಅಸಹ್ಯವಾದ ಅಂಜೂ
ರದ ಹಣ್ಣುಗಳ ಗತಿಗೆ ಅವರನ್ನು ತರುವೆನು. ನಾನು
ಖಡ್ಗಕ್ಷಾಮವ್ಯಾಧಿಗಳಿಂದ ಅವರನ್ನು ಹಿಂದಟ್ಟುತ್ತಾ
ಲೋಕದ ಸಮಸ್ತರಾಜ್ಯಗಳಿಗೆ ಭಯಾಸ್ಪದವಾಗು
ವಂತೆಯೂ ನಾನು ಅವರನ್ನು ಅಟ್ಟಿಬಿಟ್ಟಿರುವ ಸಕಲ
ಜನಾಂಗಗಳಲ್ಲಿ ಶಾಪ, ಬೆರಗಿನ ಸಿಳ್ಳು, ದೂಷಣೆ,
ಇವುಗಳಿಗೆ ಗುರಿಯಾಗುವಂತೆಯೂ ಮಾಡುವೆನು.
ಅವರು ನನ್ನ ಮಾತುಗಳನ್ನು ಕೇಳಲಿಲ್ಲವಲ್ಲಾ; ನಾನು
ನನ್ನ ಸೇವಕರಾದ ಪ್ರವಾದಿಗಳನ್ನು ಅವರ ಬಳಿಗೆ ಸಾವ
ಕಾಶಮಾಡದೆ ಕಳುಹಿಸಿ ಹೇಳಿಸುತ್ತಾ ಬಂದರೂ
[1]ಅವರು ಕೇಳಲೊಲ್ಲದೆ ಹೋದರು. ಇದು ಯೆಹೋ
ವನ ನುಡಿ.
ನಾನು ಯೆರೂಸಲೇಮಿನಿಂದ ಬಾಬೆಲಿಗೆ ಸಾಗಿ
ಸಿದ ಸೆರೆಯವರೇ, ನೀವೆಲ್ಲರೂ ಯೆಹೋವನ ವಾಕ್ಯ

1) ಮೂಲ: ನೀವು ಕೇಳಲೊಲ್ಲದೆ ಹೋದಿರಿ.

ವನ್ನು ಕೇಳಿರಿ—ಇಸ್ರಾಯೇಲ್ಯರ ದೇವರೂ ಸೇನಾಧೀಶ್ವರನೂ ಆದ ಯೆಹೋವನು ತನ್ನ ಹೆಸರೆತ್ತಿ ಸುಳ್ಳನ್ನು ಸಾರುವ ಕೊಲಾಯನ ಮಗನಾದ ಅಹಾಬ, ಮಾಸೇಯನ ಮಗನಾದ ಚಿದ್ಕೀಯ ಇವರ ವಿಷಯವಾಗಿ ಇಂತೆನ್ನುತ್ತಾನೆ—ಇಗೋ, ನಾನು ಇವರನ್ನು ಬಾಬೆಲಿನ ಅರಸನಾದ ನೆಬೂಕದ್ನೆಚ್ಚರನ ಕೈಗೆ ಕೊಡುವೆನು; ಅವನು ನಿಮ್ಮ ಕಣ್ಣೆದುರಿಗೆ ಇವರನ್ನು ಕೊಲ್ಲಿಸುವನು; ಇವರ ಚರಿತ್ರೆಯನ್ನು ಬಾಬೆಲಿನಲ್ಲಿ ಸೆರೆಯಾಗಿರುವ ಯೆಹೂದ್ಯರೆಲ್ಲರು ಶಪಿಸುವ ಮಾತಾಗಿ ತೆಗೆದುಕೊಂಡು ಬಾಬೆಲಿನ ಅರಸನು ಬೆಂಕಿಯಲ್ಲಿ ಸುಟ್ಟುಬಿಟ್ಟ ಚಿದ್ಕೀಯನ ಮತ್ತು ಅಹಾಬನ ಗತಿಯನ್ನು ಯೆಹೋವನು ನಿನಗೆ ತರಲಿ ಎಂದು ಶಪಿಸುವರು; ಇವರು ಇಸ್ರಾಯೇಲಿನಲ್ಲಿ ದುರಾಚಾರವನ್ನು ನಡಿಸಿ ನೆರೆಯವರ ಹೆಂಡಿರಲ್ಲಿ ವ್ಯಭಿಚಾರಮಾಡಿ ನಾನು ಆಜ್ಞಾಪಿಸದ ಮಾತುಗಳನ್ನು ನನ್ನ ಹೆಸರಿನ ಮೇಲೆ ಸುಳ್ಳಾಗಿ ಸಾರಿದರಲ್ಲಾ; ನಾನೇ ಬಲ್ಲೆ, ನಾನೇ ಸಾಕ್ಷಿ ಎಂದು ಯೆಹೋವನು ಅನ್ನುತ್ತಾನೆ ಎಂಬದೇ.

ಶೆಮಾಯನ ಆಕ್ಷೇಪಣೆ, ಯೆರೆಮೀಯನ ಉತ್ತರ.

[ಆ ಮೇಲೆ ಯೆಹೋವನು ಯೆರೆಮೀಯನಿಗೆ ಈ ಅಪ್ಪಣೆಯನ್ನು ಕೊಟ್ಟನು]—ನೀನು ನೆಹೆಲಾಮ್ಯನಾದ ಶೆಮಾಯನಿಗೆ ಹೀಗೆ ತಿಳಿಸಬೇಕು—ಇಸ್ರಾಯೇಲ್ಯರ ದೇವರೂ ಸೇನಾಧೀಶ್ವರನೂ ಆದ ಯೆಹೋವನು ಇಂತೆನ್ನುತ್ತಾನೆ—ನೀನು ಯೆರೂಸಲೇಮಿನಲ್ಲಿರುವ ಎಲ್ಲಾ ಜನರಿಗೂ ಯಾಜಕನಾದ ಮಾಸೇಯನ ಮಗನಾಗಿರುವ ಚೆಫನ್ಯನಿಗೂ ಸಮಸ್ತ ಯಾಜಕರಿಗೂ ನಿನ್ನ ಹೆಸರಿನ ಮೇಲೆ ಕಳುಹಿಸಿದ ಕಾಗದದಲ್ಲಿ—ಯೆಹೋವನು ನಿನ್ನನ್ನು ಯೆಹೋಯಾದನ ಸ್ಥಾನದಲ್ಲಿ ಯಾಜಕನನ್ನಾಗಿ ನೇಮಿಸಿ ಯಾವಯಾವನು ಮೈದುಂಬಿ ಪ್ರವಾದಿಯಾಗಿ ನಟಿಸುತ್ತಾನೋ ಅವನನ್ನು ಕೋಳಕ್ಕೆ ಹಾಕಿ ಕೊರಳಿಗೆ ಕವೆಯೊಡ್ಡುವ ಅಧಿಕಾರವನ್ನು ತನ್ನ ಆಲಯದಲ್ಲಿ 1)ನಿನಗೆ ವಹಿಸಿದ್ದಾನಲ್ಲಾ. ಹೀಗಿರಲು ನಿಮ್ಮ ಮಧ್ಯದಲ್ಲಿ ಪ್ರವಾದಿಯಾಗಿ ನಟಿಸುವ ಅನಾತೋತಿನವನಾದ ಯೆರೆಮೀಯನನ್ನು ನೀನು ಏಕೆ ಖಂಡಿಸಲಿಲ್ಲ? ಇವನು—ಪರದೇಶವಾಸವು ನಿಮಗೆ ದೀರ್ಘವಾಗುವದು, ನೀವು ಮನೆಗಳನ್ನು ಕಟ್ಟಿಕೊಂಡು ಅವುಗಳಲ್ಲಿ ವಾಸಿಸಿರಿ, ತೋಟಗಳನ್ನು ಮಾಡಿಕೊಂಡು ಫಲವನ್ನು ಅನುಭವಿಸಿರಿ ಎಂದು ಬಾಬೆಲಿನಲ್ಲಿರುವ ನಮಗೆ ಹೇಳಿ ಕಳುಹಿಸಿದ್ದಾನೆ ನೋಡು ಎಂಬದಾಗಿ ಬರೆದ ಕಾರಣ [ನಾನು ನಿನ್ನನ್ನು ದಂಡಿಸುವದು ಖಂಡಿತ]. ಯಾಜಕನಾದ ಚೆಫನ್ಯನು ಈ ಕಾಗದವನ್ನು ಪ್ರವಾದಿಯಾದ ಯೆರೆಮೀಯನ ಮುಂದೆ ಓದಿದನಂತರ ಯೆಹೋವನು ಯೆರೆಮೀಯನಿಗೆ ಈ ಅಪ್ಪಣೆ ಮಾಡಿದನು—ಸೆರೆಯವರೆಲ್ಲರಿಗೆ ಹೀಗೆ ಹೇಳಿ ಕಳುಹಿಸು—ನೆಹೆಲಾಮ್ಯನಾದ ಶೆಮಾಯನ ವಿಷಯದಲ್ಲಿ ಯೆಹೋವನು
ಇಂತೆನ್ನುತ್ತಾನೆ—ನಾನು ಕಳುಹಿಸದೆ ಹೋದರೂ
ಶೆಮಾಯನು ನಿಮಗೆ ಪ್ರವಾದನೆಮಾಡಿ ಸುಳ್ಳಿನಲ್ಲಿ
ನಂಬಿಕೆಯನ್ನು ಹುಟ್ಟಿಸಿದ ಕಾರಣ ಇಗೋ, ನಾನು 32
ಆ ನೆಹೆಲಾಮ್ಯನಾದ ಶೆಮಾಯನನ್ನೂ ಅವನ ಸಂತತಿ
ಯವರನ್ನೂ ದಂಡಿಸುವೆನು; ಅವನು ಯೆಹೋವನಾದ
ನನಗೆ ವಿರುದ್ಧವಾಗಿ ದ್ರೋಹದ ಮಾತನ್ನು ಆಡಿದ್ದ
ರಿಂದ ಈ ಜನರ ಮಧ್ಯದಲ್ಲಿ ವಾಸಿಸಲು ಅವನಿಗೆ
ಯಾವ ಸಂತಾನವೂ ಇರದು; ನಾನು ನನ್ನ ಜನ
ರಿಗೆ ಉಂಟುಮಾಡಬೇಕೆಂದಿರುವ ಮೇಲನ್ನು ಅವನು
ನೋಡದೆ ಹೋಗುವನು; ಇದು ಯೆಹೋವನ ನುಡಿ.

ಇಸ್ರಾಯೇಲನ್ನೂ ಯೆಹೂದವನ್ನೂ ಸುಸ್ಥಿತಿಗೆ
ತರುವೆನೆಂಬ ಯೆಹೋವನ ವಾಗ್ದಾನ.

30; 31.

ಪೀಠಿಕೆ.

30
ಯೆಹೋವನು ಯೆರೆಮೀಯನಿಗೆ ಈ ಮಾತನ್ನು
ದಯಪಾಲಿಸಿದನು—ಇಸ್ರಾಯೇಲ್ಯರ ದೇವ 2
ರಾದ ಯೆಹೋವನು ಇಂತೆನ್ನುತ್ತಾನೆ—ನಾನು ನಿನಗೆ
ಹೇಳಿರುವ ಮಾತುಗಳನ್ನೆಲ್ಲಾ ಗ್ರಂಥವಾಗಿ ಬರೆ.
ಇಗೋ ನಾನು ನನ್ನ ಜನರಾದ ಇಸ್ರಾಯೇಲ್ಯರನ್ನೂ 3
ಯೆಹೂದ್ಯರನ್ನೂ ಅವರ ದುರವಸ್ಥೆಯಿಂದ ತಪ್ಪಿಸುವ
ದಿನಗಳು ಬರುವವು. ಆಗ ನಾನು ಅವರನ್ನು ಅವರ
ಪಿತೃಗಳಿಗೆ ಅನುಗ್ರಹಿಸಿದ ದೇಶಕ್ಕೆ ಪುನಃ ಬರಮಾಡು
ವೆನು. ಅವರು ಅದನ್ನು ಅನುಭವಿಸುವರು. ಇದು
ಯೆಹೋವನ ನುಡಿ.

ಇಸ್ರಾಯೇಲಿಗೆ ಸಂಭವಿಸುವ ಬಾಧೆಯೂ ಉದ್ಧಾರವೂ.

ಯೆಹೋವನು ಇಸ್ರಾಯೇಲಿನ ಮತ್ತು ಯೆಹೂ 4
ದದ ವಿಷಯವಾಗಿ ಈ ಮಾತುಗಳನ್ನು ಹೇಳಿ
ದನು—ಯೆಹೋವನು ಇಂತೆನ್ನುತ್ತಾನೆ, ಭೀತಿಯಿಂ 5
ದಾಗುವ 2)ಶಬ್ದವು ಕೇಳಿಸಿದೆ; ಭಯವೇ ಹೊರತು
ಸಮಾಧಾನವಿಲ್ಲ; ವಿಚಾರಿಸಿ ನೋಡಿರಿ, ಗಂಡಸು 6
ಪ್ರಸವವೇದನೆಪಡುವದುಂಟೇ? ಪ್ರತಿಯೊಬ್ಬನು ಹೆರು
ವವಳಂತೆ ಸೊಂಟವನ್ನು ಹಿಸಕಿಕೊಳ್ಳುವದು, ಎಲ್ಲಾ
ಮುಖಗಳು ಬಿಳಿಚಿಕೊಂಡಿರುವದು, ಇವು ಏಕೆ ನನ್ನ
ಕಣ್ಣಿಗೆ ಬೀಳುತ್ತವೆ? ಅಯ್ಯೋ, ಆ ದಿನವು ಘೋರ 7
ವಾದದ್ದು, ಅದಕ್ಕೆ ಎಣೆಯಿಲ್ಲ; ಅದು ಯಾಕೋಬ್ಯ
ರಿಗೆ ಇಕ್ಕಟ್ಟಿನ ದಿನ; ಆದರೂ ಅದರಿಂದ ಪಾರಾಗು
ವರು. ಸೇನಾಧೀಶ್ವರನಾದ ಯೆಹೋವನು ಇಂತೆ 8
ನ್ನುತ್ತಾನೆ—ನಾನು ಆ ದಿನದಲ್ಲಿ ಅವನು ಹೇರಿದ
ನೊಗವನ್ನು 3)ಅವರ ಹೆಗಲಿನಿಂದ ಮುರಿದುಬಿಟ್ಟು
ಕಣ್ಣಿಗಳನ್ನು ಕಿತ್ತುಹಾಕುವೆನು; ಇನ್ನು ಅನ್ಯರು
ಅವರನ್ನು ಅಡಿಯಾಳಾಗಿ ಮಾಡಿಕೊಳ್ಳರು; ಅವರು 9
ತಮ್ಮ ದೇವರಾದ ಯೆಹೋವನೆಂಬ ನನ್ನನ್ನೂ ನಾನು
ಅವರಿಗಾಗಿ ಏರ್ಪಡಿಸುವ ರಾಜನಾದ ದಾವೀದನನ್ನೂ
ಸೇವಿಸುವರು. ಯೆಹೋವನು ಇಂತೆನ್ನುತ್ತಾನೆ— 10

1) ಮೂಲ: ನಿಮಗೆ. 2) ಮೂಲ: ಶಬ್ದವನ್ನು ಕೇಳಿದ್ದೇವೆ. 3) ಮೂಲ: ನಿನ್ನ.

ನನ್ನ ಸೇವಕ ಯಾಕೋಬೇ, ಭಯಪಡಬೇಡ!
ಇಸ್ರಾಯೇಲೇ, ಅಂಜಬೇಡ! ಇಗೋ ನಾನು ನಿನ್ನ
ನ್ನು ದೂರದೇಶದಿಂದ ಉದ್ಧರಿಸುವೆನು, ನಿನ್ನ ಸಂತಾನ
ವನ್ನು ಸೆರೆಹೋದ ಸೀಮೆಯಿಂದ ರಕ್ಷಿಸುವೆನು;
ಯಾಕೋಬು ಹಿಂದಿರುಗಿ ಸಮೃದ್ಧಿಯಾಗಿಯೂ ಹಾ
ಯಾಗಿಯೂ ಇರುವದು; ಯಾರೂ ಅದನ್ನು ಹೆದರಿ
11 ಸರು. ಯೆಹೋವನು ಇಂತೆನ್ನುತ್ತಾನೆ—ನಾನು
ನಿನ್ನನ್ನು ರಕ್ಷಿಸಲು ನಿನ್ನೊಂದಿಗಿದ್ದೇನೆ; ನಾನು
ಯಾವ ಜನಾಂಗಗಳಲ್ಲಿಗೆ ನಿನ್ನನ್ನು ಅಟ್ಟಿ ಚದರಿಸಿ
ದೆನೋ ಆ ಜನಾಂಗಗಳನ್ನೆಲ್ಲಾ ನಿರ್ಮೂಲಮಾಡು
ವೆನು, ನಿನ್ನನ್ನೋ ನಿರ್ಮೂಲಮಾಡೆನು; ನಿನ್ನನ್ನು
ಮಿತಿಮೀರಿ ಶಿಕ್ಷಿಸೆನು. ಆದರೆ ಶಿಕ್ಷಿಸದೆ ಬಿಡುವದಿಲ್ಲ.

ಹಾಳಾಗಿಹೋದ ಚೀಯೋನನ್ನು ಯೆಹೋವನು
ಮೇಲ್ಮೆಗೆ ತರುವದು.

12 ಯೆಹೋವನು ಇಂತೆನ್ನುತ್ತಾನೆ—ನಿನ್ನ ಗಾಯವು
ಗುಣಹೊಂದದು, ನಿನ್ನ ಬಾಸುಂಡೆಯು ಘೋರವಾ
13 ಗಿದೆ. ನಿನ್ನ ಭಾಗಕ್ಕೆ ಯಾರೂ ಇಲ್ಲ, ನಿನ್ನ ವ್ರಣಕ್ಕೆ
14 ಔಷಧವಿಲ್ಲ, ನಿನಗೆ ವಾಸಿಯಾಗದು. ನಿನ್ನ ಮಿಂಡ
ರಾರೂ ನಿನ್ನನ್ನು ಹುಡುಕುವದಿಲ್ಲ, ಮರೆತುಬಿಟ್ಟರು;
ನಿನ್ನ ಅಪರಾಧವು ಹೆಚ್ಚಿ ಪಾಪಗಳು ಬಹಳವಾದದ
ರಿಂದ ನಾನು ಶತ್ರುವಾಗಿ ನಿನ್ನನ್ನು ಹೊಡೆದೆನು,
15 ಕ್ರೂರನಾಗಿ ದಂಡಿಸಿದೆನು. ಅಯ್ಯೋ, ನೋವು
ನಿಲ್ಲದು ಎಂದು ನಿನ್ನ ವ್ರಣಕ್ಕಾಗಿ ಏಕೆ ಅರಚಿ
ಕೊಳ್ಳುತ್ತೀ? ನಿನ್ನ ಅಪರಾಧವು ಹೆಚ್ಚಿ ಪಾಪಗಳು
ಬಹಳವಾದದರಿಂದ ನಿನಗೆ ಇದನ್ನೆಲ್ಲಾ ಮಾಡಿದೆನು.
16 ಹೀಗಿರಲು ನಿನ್ನನ್ನು ನುಂಗುವವರೆಲ್ಲರು ನುಂಗಲ್ಪ
ಡುವರು; ನಿನ್ನ ಶತ್ರುಗಳೆಲ್ಲಾ ಒಬ್ಬನೂ ತಪ್ಪದೆ
ಸೆರೆಗೆ ಹೋಗುವರು, ನಿನ್ನನ್ನು ಸೂರೆಮಾಡುವವರು
ಸೂರೆಯಾಗುವರು, ನಿನ್ನನ್ನು ಕೊಳ್ಳೆ ಹೊಡೆಯುವವ
17 ರನ್ನು ಕೊಳ್ಳೆಗೆ ಈಡುಮಾಡುವೆನು. ಯೆಹೋವನು
ಇಂತೆನ್ನುತ್ತಾನೆ—ಇಗೋ, ಇದು ಚೀಯೋನ್,
ಯಾರಿಗೂ ಬೇಡವಾಗಿರುವ ನಗರಿ ಎಂದು ಜನರು
ಹೇಳಿ ನಿನ್ನನ್ನು ಭ್ರಷ್ಟಳೆಂದದ್ದನ್ನು ನಾನು ಸಹಿಸಲಾ
ರದೆ ನಿನಗೆ ಗುಣಪಡಿಸಿ ನಿನ್ನ ಬಾಸುಂಡೆಗಳನ್ನು
18 ವಾಸಿಮಾಡುವೆನು. ಯೆಹೋವನು ಹೀಗನ್ನು
ತ್ತಾನೆ—ಆಹಾ, ನಾನು ಯಾಕೋಬಿನ ಮನೆಗಳ
ದುರವಸ್ಥೆಯನ್ನು ತಪ್ಪಿಸಿ ಅದರ ನಿವಾಸಗಳನ್ನು
ಕರುಣಿಸುವೆನು; ಪಟ್ಟಣವು ತನ್ನ ಹಾಳುದಿಬ್ಬದ
ಮೇಲೆ ಪುನಃ ಕಟ್ಟಲ್ಪಡುವದು, ಅರಮನೆಯು ತಾನಿ
19 ದ್ದ ಸ್ಥಳದಲ್ಲೇ ನೆಲೆಯಾಗಿರುವದು. ಅವುಗಳೊಳ
ಗಿಂದ ಸ್ತೋತ್ರವೂ ವಿನೋದಪಡುವವರ ಧ್ವನಿಯೂ
ಕೇಳಿಸುವವು; ನಾನು ಆ ಜನರನ್ನು ಹೆಚ್ಚಿಸುವೆನು,
ಇನ್ನು ಕೊಂಚವಾಗಿರರು, ಅವರನ್ನು ಘನಪಡಿಸು
ವೆನು, ಇನ್ನು ಹೀನರಾಗಿರರು. ಅವರ ಸಂತಾನವ
ಪೂರ್ವದ ಸ್ಥಿತಿಯನ್ನು ಹೊಂದುವದು, ಅವರ ಸಮಾ
ಜವು ನನ್ನ ಮುಂದೆ ನೆಲೆಯಾಗಿರುವದು, ಅವರನ್ನು
ಬಾಧಿಸುವವರನ್ನೆಲ್ಲಾ ದಂಡಿಸುವೆನು. ಅವರಲ್ಲೇ
ಒಬ್ಬನು ಅವರಿಗೆ ಪ್ರಭುವಾಗಿರುವನು, ಅವರ ಪಂ
ದವನೇ ಅವರನ್ನಾಳುವನು; ನಾನು ಅವನನ್ನು ನನ್ನ
ಹತ್ತಿರಕ್ಕೆ ಬರಗೊಡಿಸಲಾಗಿ ಅವನು ನನ್ನ ಸನ್ನಿಧಾ
ನಕ್ಕೆ ಸೇರುವನು; ನನ್ನನ್ನು ಸಮೀಪಿಸುವದಕ್ಕೆ
ಯಾರು ಧೈರ್ಯಗೊಂಡಾರು? ಇದು ಯೆಹೋವನ
ನುಡಿ. ನೀವು ನನಗೆ ಜನರಾಗಿರುವಿರಿ, ನಾನು
ನಿಮಗೆ ದೇವರಾಗಿರುವೆನು.

ಯೆಹೋವನ ರೋಷವೆಂಬ ಬಿರುಗಾಳಿ.

ಆಹಾ, ಯೆಹೋವನ ರೋಷವೆಂಬ ಬಿರುಗಾಳಿಯು
ಬಡಿದುಕೊಂಡು ಹೋಗುವ ಗಾಳಿಯು, ಹೊರಟಿದೆ
ಅದು ದುಷ್ಟರ ತಲೆಯ ಮೇಲೆ ಹೊಡೆಯುವದು
ಯೆಹೋವನು ತನ್ನ ಹೃದಯಾಲೋಚನೆಯನ್ನು
ನಡಿಸಿ ನೆರವೇರಿಸುವ ತನಕ ಆತನ ರೋಷವು ಹಿಂದಿ
ರುಗದು; ಕಟ್ಟಕಡೆಯ ದಿನಗಳಲ್ಲಿ ನೀವು ಇದನ್ನು
ಗ್ರಹಿಸುವಿರಿ.

ಇಸ್ರಾಯೇಲು ಸೆರೆಯಿಂದ ಹಾಯಾಗಿ ಹಿಂದಿರುಗುವದು.

ಯೆಹೋವನು ಇಂತೆನ್ನುತ್ತಾನೆ—ಆ ಕಾಲದಲ್ಲಿ
ನಾನು ಇಸ್ರಾಯೇಲಿನ ಸಕಲ ಗೋತ್ರಗಳವರಿಗೆ
ದೇವರಾಗಿರುವೆನು, ಅವರು ನನಗೆ ಪ್ರಜೆಯಾಗಿರು
ವರು. ಇದು ಯೆಹೋವನ ನುಡಿ—ಹತಶೇಷವಾದ
ಜನಕ್ಕೆ ಅರಣ್ಯದಲ್ಲಿ 1)ದಯೆದೊರೆಯುವದು; ಇಸ್ರಾ
ಯೇಲು ವಿಶ್ರಾಂತಿಯನ್ನು ಹುಡುಕುವದಕ್ಕೆ ಹೋಗು
ವಾಗ ಯೆಹೋವನು ದೂರದಿಂದ ಬಂದು 2)ಅದಕ್ಕೆ
ದರ್ಶನಕೊಟ್ಟು ಹೀಗನ್ನುವನು—ನಾನು ನಿನ್ನನ್ನು
ಪ್ರೀತಿಸಿರುವದು ಶಾಶ್ವತ ಪ್ರೇಮದಿಂದಲೇ; ಆದ
ಕಾರಣ 3)ನಿನ್ನನ್ನು ಮಮತೆಯಿಂದ ಸೆಳೆದುಕೊಂಡಿ
ದ್ದೇನೆ. ಇಸ್ರಾಯೇಲೆಂಬ ಯುವತಿಯೇ, ನಾನು
4)ನಿನ್ನ ಹಾಳುಪ್ರದೇಶಗಳನ್ನು ಪುನಃ ಕಟ್ಟುವೆನು;
ಅವು ಕಟ್ಟಡಗಳಾಗುವವು. ನೀನು ಮತ್ತೆ ದಮ್ಮ
ಡಿಗಳಿಂದ ವೈಭವಗೊಂಡು ವಿನೋದಪಡುವವರ
ನಾಟ್ಯಗಳಲ್ಲಿ ಸೇರಿಕೊಳ್ಳುವಿ. ನೀನು ತಿರಿಗಿ ಸಮಾ
ರ್ಯದ ಗುಡ್ಡಗಳಲ್ಲಿ ತೋಟಗಳನ್ನು ಮಾಡಿಕೊ
ಳ್ಳುವಿ; ನೆಡುವವರು ನೆಟ್ಟು ಫಲವನ್ನನುಭವಿಸುವರು.
ಒಂದು ದಿನವು ಬರುವದು, ಆಗ ಎಫ್ರಾಯಿಮಿನ
ಗುಡ್ಡಗಳ ಮೇಲಿರುವ ಕಾವಲುಗಾರರು—ಏಳಿರಿ
ಚೀಯೋನಿಗೆ, ನಮ್ಮ ದೇವರಾದ ಯೆಹೋವನ ಸನ್ನಿ
ಧಾನಕ್ಕೆ ಹೋಗೋಣ ಬನ್ನಿ ಎಂದು ಕೂಗುವರು

1) ಅಥವಾ: ದಯೆದೊರೆಯಿತಲ್ಲಾ; ಹೌದು, ನಾನು ಇಸ್ರಾಯೇಲನ್ನು ವಿಶ್ರಾಂತಿಗೊಳಿಸುವದಕ್ಕೆ ಹೋದಾಗ ಅದು ಕೃಪೆಯನ್ನು ಪಡೆಯಿತು. ಯೆಹೋವನು ದೂರದಿಂದ ಬಂದು [ಇಸ್ರಾಯೇಲಾದ] ನನಗೆ ದರ್ಶನಕೊಟ್ಟು ಹೀಗನ್ನುತ್ತಾನೆ. 2) ಅದಕ್ಕೆ ಎಂಬದು ಗ್ರೀಕ್ ಮೂಲ. ಇಬ್ರಿಯ ಮೂಲ: ನನಗೆ. 3) ಅಥವಾ: ನಿನ್ನಲ್ಲಿ ಮಮತೆಯನ್ನು ಎಡೆಬಿಡದೆ ತೋರಿಸುತ್ತಾ ಬಂದಿದ್ದೇನೆ. 4) ಮೂ...
ನಿನ್ನನ್ನು ಪುನಃ ಕಟ್ಟುವೆನು, ನೀನು ಕಟ್ಟಲ್ಪಡುವಿ.

7 ಯೆಹೋವನು ಇಂತೆನ್ನುತ್ತಾನೆ—ಯಾಕೋಬಿನ ನಿಮಿ
ತ್ತ ಹರ್ಷಧ್ವನಿಗೈಯಿರಿ, 1)ಜನಾಂಗಗಳ ಶಿರೋಮ
ಣಿಯ ವಿಷಯದಲ್ಲಿ ಕೇಕೆಹಾಕಿರಿ; 2)ಯೆಹೋ
ವನೇ, ಇಸ್ರಾಯೇಲಿನ ಶೇಷವಾದ ನಿನ್ನ ಜನವನ್ನು
8 ರಕ್ಷಿಸು ಎಂದು ಘೋಷಿಸಿ ಸ್ತುತಿಸಿರಿ. ಇಗೋ,
ನಾನು ಅವರನ್ನು ಉತ್ತರ ದೇಶದಿಂದ ಬರಮಾಡು
ವೆನು, ದಿಗಂತಗಳಿಂದ ಅವರನ್ನು ಕೂಡಿಸುವೆನು,
ಅವರೊಂದಿಗೆ ಕುರುಡರನ್ನೂ ಕುಂಟರನ್ನೂ ಗರ್ಭಿಣಿ
ಯರನ್ನೂ ದಿನತುಂಬಿದ ಬಸುರಿಯರನ್ನೂ ಒಟ್ಟಿಗೆ
ಕರತರುವೆನು; ದೊಡ್ಡಗುಂಪಾಗಿ ಇಲ್ಲಿಗೆ ಹಿಂದಿರುಗು
9 ವರು. ಅವರು ಅಳುತ್ತಾ ನಡೆದು ಬರುವರು,
ಅವರ ವಿಜ್ಞಾಪನೆಗಳಿಂದಲೇ ಅವರನ್ನು ಮುಂದರಿಸು
ವೆನು; ಎಡವದ ಸಮಮಾರ್ಗದಲ್ಲಿ ನಡಿಸುತ್ತಾ
ತುಂಬಿದ ತೊರೆಗಳ ಬಳಿಗೆ ಬರಮಾಡುವೆನು; ನಾನು
ಇಸ್ರಾಯೇಲಿಗೆ ತಂದೆ, ಎಫ್ರಾಯೀಮು ನನ್ನ ಹಿರಿಯ
ಮಗನಲ್ಲವೆ.
10 ಜನಾಂಗಗಳೇ, ಯೆಹೋವನ ವಾಕ್ಯವನ್ನು ಕೇ
ಳಿರಿ, ದೂರದ್ವೀಪಗಳಲ್ಲಿ ಸಾರಿರಿ! ಇಸ್ರಾಯೇಲ್ಯರನ್ನು
ಚದರಿಸಿದಾತನು ಕುರುಬನು ಮಂದೆಯನ್ನು ಕಾ
ಯುವ ಕುರುಬನಂತೆ ಅವರನ್ನು ಕೂಡಿಸಿ ಕಾಪಾಡು
ವನು ಎಂದು ಪ್ರಕಟಿಸಿರಿ. ಯೆಹೋವನು ಯಾಕೋ
11 ಬ್ಯರನ್ನು ವಿಮೋಚಿಸಿದ್ದಾನಲ್ಲಾ, ಅವರಿಗಿಂತ ಬಲಿಷ್ಠರ
12 ಕೈಯಿಂದ ಅವರನ್ನು ಬಿಡಿಸಿದ್ದಾನಷ್ಟೆ. ಅವರು
ಬಂದು ಚೀಯೋನ್ ಶಿಖರದಲ್ಲಿ ಹಾಡುವರು; ಧಾನ್ಯ,
ದ್ರಾಕ್ಷಾರಸ, ಎಣ್ಣೆ, ಕರು, ಕುರಿಮರಿ, ಅಂತು
ಯೆಹೋವನು ಅನುಗ್ರಹಿಸುವ ಎಲ್ಲಾ ಮೇಲುಗಳನ್ನು
ಅನುಭವಿಸಲು ಪ್ರವಾಹ ಪ್ರವಾಹವಾಗಿ ಬರುವರು;
ಅವರ ಆತ್ಮವು ಹದವಾಗಿ ನೀರು ಹಾಯಿಸಿದ ತೋ
ಟದಂತಿರುವದು; ಅವರು ಇನ್ನು ಕಳೆಗುಂದರು.
13 ಆಗ ಯುವತಿಯು ನಾಟ್ಯವಾಡುತ್ತಾ ಉಲ್ಲಾಸಿಸು
ವಳು; ಯುವಕರೂ ವೃದ್ಧರೂ ಜೊತೆಯಾಗಿ ಹರ್ಷಿ
ಸುವರು; ನಾನು ಅವರ ದುಃಖವನ್ನು ನೀಗಿಸಿ ಸಂತೋ
ಷವನ್ನುಂಟುಮಾಡಿ ಅವರು ತಮ್ಮ ವ್ಯಸನವನ್ನು
ಬಿಟ್ಟು ಆನಂದಿಸುವಂತೆ ಅವರನ್ನು ಸಂತೈಸುವೆನು.
ಯಾಜಕರನ್ನು ಪುಷ್ಟಭೋಜನದಿಂದ ತಂಪುಗೊಳಿಸು
ವೆನು; ನಾನು ಅನುಗ್ರಹಿಸುವ ಮೇಲುಗಳನ್ನು ನನ್ನ
ಜನರು ಸಮೃದ್ಧಿಯಾಗಿ ಅನುಭವಿಸುವರು. ಇದು
ಯೆಹೋವನ ನುಡಿ.

ಪುತ್ರವಿಹೀನಳಾದ ರಾಹೇಲಳ ಪ್ರಲಾಪ; ಯೆಹೋವನು
ಮಾಡುವ ಸಮಾಧಾನ.

ಯೆಹೋವನು ಇಂತೆನ್ನುತ್ತಾನೆ— ರಾಮದಲ್ಲಿ ಬೊ
ಬ್ಬೆಯು ಕೇಳಿಸುತ್ತದೆ, ಗೋಳಾಟವೂ ಘೋರರೋದ
ನವೂ ಉಂಟಾಗಿವೆ; ರಾಹೇಲಳು ತನ್ನ ಮಕ್ಕಳಿ
ಗೋಸ್ಕರ ಅತ್ತತ್ತು ಅವರು ಇಲ್ಲದೆಹೋದದ್ದಕ್ಕಾಗಿ
ಸಮಾಧಾನಹೊಂದಲೊಲ್ಲದೆ ಇದ್ದಾಳೆ. ಯೆಹೋ
ವನು ಇಂತೆನ್ನುತ್ತಾನೆ—ನಿನ್ನ ಧ್ವನಿಯು ಗೋಳಾಗ
ದಿರಲಿ, ನಿನ್ನ ಕಣ್ಣು ನೀರು ಸುರಿಸದಿರಲಿ; ನಿನ್ನ
ಪ್ರಯಾಸವು ಸಾರ್ಥಕವಾಗುವದು; ಇದು ಯೆಹೋ
ವನ ನುಡಿ; ನಿನ್ನ ಮಕ್ಕಳು ಶತ್ರುವಿನ ದೇಶದಿಂದ
ಹಿಂದಿರುಗುವರು. ಯೆಹೋವನು ಇಂತೆನ್ನುತ್ತಾನೆ— 17
ನಿನಗೆ ಮುಂದೆ ಒಳ್ಳೆಯ ಗತಿಯಾಗುವದೆಂದು ನಿರೀ
ಕ್ಷೆಯಿದೆ. ನಿನ್ನ ಮಕ್ಕಳು ಹಿಂದಿರುಗಿ ಸ್ವಂತ ಸೀಮೆ
ಯನ್ನು ಸೇರುವರು. ಎಫ್ರಾಯೀಮು ಹೀಗೆ ಪ್ರಲಾ 18
ಪಿಸಿಕೊಳ್ಳುವದನ್ನು ಕೇಳೇ ಕೇಳಿದ್ದೇನೆ— ನೀನು
ನನ್ನನ್ನು ಶಿಕ್ಷಿಸಿದ್ದೀ, ಪಳಗದ ಹೋರಿಯಂತೆ ಶಿಕ್ಷೆ
ಯನ್ನು ಅನುಭವಿಸಿದೆನು; ನನ್ನನ್ನು ತಿರುಗಿಸು,
ನೀನು ತಿರುಗಿಸಿದ ಹಾಗೆ ತಿರುಗುವೆನು; ನೀನು ನನ್ನ
ದೇವರಾದ ಯೆಹೋವನಲ್ಲವೆ. ತಿರುಗಿಸಲ್ಪಟ್ಟ ಮೇ 19
ಲೆಯೇ ಪಶ್ಚಾತ್ತಾಪಪಟ್ಟೆನು; ತಿಳುವಳಿಕೆಯನ್ನು
ಹೊಂದಿದ ಮೇಲೆಯೇ ತೊಡೆಯನ್ನು ಬಡಿದು
ಕೊಂಡೆನು; ನನ್ನ ಯೌವನದ ಅವಮಾನವು ನನ್ನ
ಮೇಲೆ ಹೊತ್ತ ಕಾರಣ ಲಜ್ಜೆಗೊಂಡೆನು, ಹೌದು,
ತುಂಬಾ ನಾಚಿಕೆಪಟ್ಟೆನು. ಯೆಹೋವನು ಇಂತೆನ್ನು 20
ತ್ತಾನೆ—ಎಫ್ರಾಯೀಮು ನನಗೆ ಪ್ರಿಯಪುತ್ರನೋ,
ಮುದ್ದುಮಗುವೋ, ಏನೋ? ಅವನ ಹೆಸರೆತ್ತಿದಾ
ಗೆಲ್ಲಾ ಅವನನ್ನು ಜ್ಞಾಪಿಸಿಕೊಳ್ಳುತ್ತಲೇ ಬರುತ್ತೇನೆ;
ಇದರಿಂದ ನನ್ನ ಕರುಳು ಅವನಿಗಾಗಿ ಮರುಗುತ್ತ
ದಲ್ಲಾ; ಅವನನ್ನು ಕರುಣಿಸೇ ಕರುಣಿಸುವೆನು.
ದಾರಿದೋರುವ ಕಂಬಗಳನ್ನೂ ಕೈಮರಗಳನ್ನೂ 21
ನಿಲ್ಲಿಸಿಕೋ; ನೀನು ಯಾವ ಮಾರ್ಗದಲ್ಲಿ ಹೋಗಿ
ಬಿಟ್ಟಿಯೋ ಅದಕ್ಕೆ ನಿನ್ನ ಮನಸ್ಸನ್ನು ತಿರುಗಿಸಿಕೋ;
ಇಸ್ರಾಯೇಲೆಂಬ ಯುವತಿಯೇ, ತಿರುಗಿಕೋ, ಈ
ನಿನ್ನ ಪಟ್ಟಣಗಳಿಗೆ ಹಿಂದಿರುಗು. ದ್ರೋಹಿಯಾದ 22
ಮಗಳೇ, ಎಂದಿನ ವರೆಗೆ ಅತ್ತಿತ್ತ ಅಲೆದಾಡುವಿ?
ಯೆಹೋವನು ಲೋಕದಲ್ಲಿ ಅಪೂರ್ವವಾದದ್ದನ್ನು
ಉಂಟುಮಾಡಿದ್ದಾನೆ ನೋಡು, ಹೆಂಗಸು ಗಂಡಸನ್ನು
3)ಕಾಪಾಡುವಳು.

ಯೆಹೂದದ ಮತ್ತು ಇಸ್ರಾಯೇಲಿನ ಮುಂದಿನ ಸುಗತಿ.

ಇಸ್ರಾಯೇಲಿನ ದೇವರೂ ಸೇನಾಧೀಶ್ವರನೂ ಆದ 23
ಯೆಹೋವನು ಇಂತೆನ್ನುತ್ತಾನೆ—ನಾನು ನನ್ನ ಜನರ
ದುರವಸ್ಥೆಯನ್ನು ತಪ್ಪಿಸುವಾಗ ಯೆಹೂದ ದೇಶ
ದಲ್ಲಿಯೂ ಅದರ ಪಟ್ಟಣಗಳಲ್ಲಿಯೂ—ನ್ಯಾಯದ
ನಿವಾಸವೇ, ಪರಿಶುದ್ಧ ಪರ್ವತವೇ, ಯೆಹೋವನು
ನಿನ್ನನ್ನು ಆಶೀರ್ವದಿಸಲಿ ಎಂದು ಮತ್ತೆ ಮಾತಾ
ಡುವರು. ಆ ಸಕಲ ಪಟ್ಟಣಗಳವರು, ವ್ಯವಸಾಯ 24
ಗಾರರು, ಮಂದೆ ಮೇಯಿಸುತ್ತಾ ದೇಶದಲ್ಲಿ ಸಂಚ
ರಿಸುವವರು, ಅಂತು ಯೆಹೂದ್ಯರೆಲ್ಲರೂ ಅಲ್ಲಿ ಒಟ್ಟಿಗೆ
ವಾಸಿಸುವರು. ನಾನು ಬಳಲಿದವರನ್ನು ತಂಪುಗೊಳಿಸಿ 25
ಕುಂದಿದವರೆಲ್ಲರನ್ನೂ ತೃಪ್ತಿಪಡಿಸುವೆನಷ್ಟೆ. (ಇದಾದ 26
ಮೇಲೆ ನಾನು ಎಚ್ಚತ್ತು ನಿಜಸ್ಥಿತಿಯನ್ನು ನೋಡಿದೆನು;

1) ಅಥವಾ: ಜನಾಂಗಗಳ ಮುಂಗಡೆಯಲ್ಲಿ ನಿಂತು. 2) ಪಾಠಾಂತರ: ಯೆಹೋವನು ಇಸ್ರಾಯೇಲಿನ ಶೇಷವಾದ ತನ್ನ ಜನವನ್ನು
...ಸಿದ್ದಾನೆ. 3) ಮೂಲ: ಆವರಿಸಿಕೊಳ್ಳುವಳು.

ಆಗ ನನ್ನ ಕನಸು ನನಗೆ ಮನೋಹರವಾಗಿ ಕಾಣಿಸಿತು.)
27 ಯೆಹೋವನು ಇಂತೆನ್ನುತ್ತಾನೆ—ಇಗೋ, ನಾನು
ಇಸ್ರಾಯೇಲ್ ಯೆಹೂದ ಕ್ಷೇತ್ರಗಳಲ್ಲಿ ಮನುಷ್ಯ
ರನ್ನೂ ಪಶುಗಳನ್ನೂ ಬಿತ್ತುವ ದಿನಗಳು ಬರುವವು.
28 ನಾನು ಮೊದಲು ಇವರನ್ನು ಕಿತ್ತುಹಾಕಲು, ಕೆಡವಲು,
ಹಾಳುಮಾಡಲು, ನಾಶಪಡಿಸಲು, ಬಾಧಿಸಲು ಹೇಗೆ
ಎಚ್ಚರಗೊಂಡಿದ್ದೆನೋ ಹಾಗೆಯೇ ಇನ್ನು ಮೇಲೆ ಇವ
ರನ್ನು ಕಟ್ಟಲು, ನೆಡಲು ಎಚ್ಚರಗೊಳ್ಳುವೆನು. ಇದು
29 ಯೆಹೋವನ ನುಡಿ. ತಂದೆಗಳು ಹುಳಿದ್ರಾಕ್ಷೆಯನ್ನು
ತಿಂದರು, ಮಕ್ಕಳ ಹಲ್ಲುಗಳು ಜಳಿತುಹೋಗಿವೆ
ಎಂದು ಆ ಕಾಲದಲ್ಲಿ ಜನರು ಮತ್ತೆ ಅನ್ನರು.
30 ಸಾಯುತಕ್ಕವನು ತನ್ನ ತನ್ನ ದೋಷದಿಂದ ಸಾಯು
ವನು. ಹುಳಿದ್ರಾಕ್ಷೆಯನ್ನು ತಿನ್ನುವವನ ಹಲ್ಲುಗಳೇ
ಜಳಿತುಹೋಗುವವು.

### ಯೆಹೋವನು ತನ್ನ ಜನರೊಂದಿಗೆ ಮಾಡಿಕೊಳ್ಳುವ ಹೊಸ ಒಡಂಬಡಿಕೆ.

31 ಯೆಹೋವನು ಇಂತೆನ್ನುತ್ತಾನೆ—ಇಗೋ, ನಾನು
ಇಸ್ರಾಯೇಲ್ ವಂಶದವರೊಂದಿಗೂ ಯೆಹೂದ ವಂಶ
ದವರೊಂದಿಗೂ ಹೊಸದಾಗಿರುವ ಒಂದು ಒಡಂಬಡಿಕೆ
32 ಯನ್ನು ಮಾಡಿಕೊಳ್ಳುವ ದಿನಗಳು ಬರುವವು; ಈ
ಒಡಂಬಡಿಕೆಯು ನಾನು ಇವರ ಪಿತೃಗಳನ್ನು ಕೈ
ಹಿಡಿದು ಐಗುಪ್ತದೇಶದೊಳಗಿಂದ ಕರತಂದಾಗ ಅವರ
ಸಂಗಡ ಮಾಡಿಕೊಂಡ ಒಡಂಬಡಿಕೆಯಂಥದಲ್ಲ; ನಾನು
ಅವರಿಗೆ ಪತಿಯಾಗಿದ್ದರೂ ಆ ನನ್ನ ಒಡಂಬಡಿಕೆಯನ್ನು
33 ಅವರು ಮೀರಿದರಷ್ಟೆ. ಯೆಹೋವನು ಇಂತೆನ್ನು
ತ್ತಾನೆ—ಆ ದಿನಗಳು ಬಂದಮೇಲೆ ನಾನು ಇಸ್ರಾ
ಯೇಲ್ ವಂಶದವರೊಂದಿಗೆ ಮಾಡಿಕೊಳ್ಳುವ ಒಡಂಬ
ಡಿಕೆಯು ಹೀಗಿರುವದು—ನನ್ನ ಧರ್ಮೋಪದೇಶವನ್ನು
ಅವರ ಅಂತರಂಗದಲ್ಲಿ ಇಡುವೆನು, ಅವರ ಹೃದಯ
ದೊಳಗೆ ಅದನ್ನು ಬರೆಯುವೆನು; ನಾನು ಅವರಿಗೆ
ದೇವರಾಗಿರುವೆನು, ಅವರು ನನಗೆ ಪ್ರಜೆಯಾಗಿರು
34 ವರು; ನೆರೆಹೊರೆಯವರೂ ಅಣ್ಣತಮ್ಮಂದಿರೂ ಒಬ್ಬರಿ
ಗೊಬ್ಬರು—ಯೆಹೋವನ ಜ್ಞಾನವನ್ನು ಪಡೆಯಿರಿ
ಎಂದು ಇನ್ನು ಮೇಲೆ ಬೋಧಿಸಬೇಕಾಗಿರುವದಿಲ್ಲ;
ಚಿಕ್ಕವರು ಮೊದಲುಗೊಂಡು ದೊಡ್ಡವರ ತನಕ
ಎಲ್ಲರೂ ನನ್ನ ಜ್ಞಾನವನ್ನು ಪಡೆದಿರುವರು; ನಾನು
ಅವರ ಅಪರಾಧವನ್ನು ಕ್ಷಮಿಸಿ ಅವರ ಪಾಪವನ್ನು
ನನ್ನ ನೆನಪಿಗೆ ಎಂದಿಗೂ ತರುವದಿಲ್ಲ. ಇದು ಯೆಹೋ
ವನ ನುಡಿ.

### ಯೆಹೋವನು ಇಸ್ರಾಯೇಲನ್ನು ಎಂದಿಗೂ ತ್ಯಜಿಸನು.

35 ಹಗಲಿನಲ್ಲಿ ಸೂರ್ಯನನ್ನು, ರಾತ್ರಿಯಲ್ಲಿ ಚಂದ್ರ
ನಕ್ಷತ್ರಗಳ ಕಟ್ಟಳೆಗಳನ್ನು ಪ್ರಕಾಶಕ್ಕಾಗಿ ನೇಮಿಸು
ವಾತನೂ ಅಲೆಗಳು ಭೋರ್ಗರೆಯುವಷ್ಟು ಸಮುದ್ರ
ವನ್ನು 1)ರೇಗಿಸುವಾತನೂ ಸೇನಾಧೀಶ್ವರನಾದ ಯೆ
ಹೋವನೆಂಬ ನಾಮಧೇಯದಿಂದ ಪ್ರಸಿದ್ಧನೂ ಆ
ರುವ ಯೆಹೋವನು ಇಂತೆನ್ನುತ್ತಾನೆ—ಈ ಕಟ್ಟ
ಗಳು ನನ್ನ ಪರಾಂಬರಿಕೆಗೆ ಬಾರದೆ ತೊಲಗಿಹೋ
ದರೆ ಆಗ ಇಸ್ರಾಯೇಲ್ ಸಂತಾನವು ನನ್ನ ಪರಾಂ
ರಿಕೆಗೆ ಬಾರದೆ ಎಂದಿಗೂ ಜನಾಂಗವಾಗದೆ ಹೋಗ
ವದು. ಯೆಹೋವನು ಹೀಗೆನ್ನುತ್ತಾನೆ—ಮೇ
ಆಕಾಶಮಂಡಲವನ್ನು ಅಳೆಯಬಹುದಾದರೆ ಕೆಳ
ಭೂಮಂಡಲದ ಅಸ್ತಿವಾರವನ್ನು ಪರೀಕ್ಷಿಸಬಹ
ದಾದರೆ ಆಗ ಇಸ್ರಾಯೇಲ್ ವಂಶವು ಮಾಡಿರು
ಸಕಲ ದುಷ್ಕೃತ್ಯಗಳ ನಿಮಿತ್ತ ನಾನು ಆ ವಂಶವನ್ನು
ನಿರಾಕರಿಸಿಬಿಟ್ಟೇನು.

### ಯೆರೂಸಲೇಮಿಗೆ ಆಗುವ ಅಭಿವೃದ್ಧಿ.

ಯೆಹೋವನು ಇಂತೆನ್ನುತ್ತಾನೆ—ಇಗೋ, ಮುಂದಿನ
ಕಾಲದಲ್ಲಿ ಈ ಪಟ್ಟಣವು ಹನನೇಲನ ಬುರುಜಿನಿಂದ
ಮೂಲೆಯ ಬಾಗಿಲಿನ ವರೆಗೆ ಯೆಹೋವನ ಘನ
ಗಾಗಿ ವಿಸ್ತರಿಸುವದು. ಅಳತೆಯ ನೂಲು ಇನ್ನು
ಮೇಲೆ ಗಾರೇಬ್ ಗುಡ್ಡದ ತನಕ ನೆಟ್ಟಗೆ ಎಳೆಯ
ಲ್ಪಟ್ಟು ಗೋಯದ ಕಡೆಗೆ ತಿರುಗುವದು. ಆಗ
ಬೂದಿ ಹೆಣ ಇವುಗಳಿಂದ ಹೊಲಸಾದ ತಗ್ಗು
ಅಲ್ಲಿಂದ ಕಿದ್ರೋನ್ ಹಳ್ಳ, ಪೂರ್ವದಿಕ್ಕಿನ ಕುದುರೆ
ಬಾಗಿಲಮೂಲೆ ಇವುಗಳ ವರೆಗಿರುವ ಪ್ರದೇಶವೆಲ್ಲವು
ಯೆಹೋವನಿಗೆ ಪರಿಶುದ್ಧಸ್ಥಾನವಾಗುವವು; ಪಟ್ಟ
ಣವು ಇನ್ನು ಮೇಲೆ ಎಂದಿಗೂ ಕೀಳಲ್ಪಡದು, ಕೆಡ
ವಲ್ಪಡದು.

### ಸೂಚನೆಗಾಗಿ ಯೆರೆಮೀಯನು ಹೊಲವನ್ನು ಕೊಂಡದ್ದು.

ಯೆಹೂದದ ಅರಸನಾದ ಚಿದ್ಕೀಯನ ಆಳಿಕೆಯ 3
ಹತ್ತನೆಯ ವರುಷದಲ್ಲಿ, ಅಂದರೆ ನೆಬೂಕದ್ನೆಚ್ಚರನ
ಆಳಿಕೆಯ ಹದಿನೆಂಟನೆಯ ವರುಷದಲ್ಲಿ, ಯೆಹೋ
ವನು ಯೆರೆಮೀಯನಿಗೆ ತನ್ನ ವಾಕ್ಯವನ್ನು ದಯ
ಪಾಲಿಸಿದನು. ಆ ಕಾಲದಲ್ಲಿ ಬಾಬೆಲಿನ ಅರಸನ
ಸೈನ್ಯವು ಯೆರೂಸಲೇಮನ್ನು ಮುತ್ತಿತ್ತು, ಮತ್ತು
ಪ್ರವಾದಿಯಾದ ಯೆರೆಮೀಯನು ಯೆಹೂದದ ರಾಜನ
ಮನೆಗೆ ಸೇರಿದ ಕಾರಾಗೃಹದ ಅಂಗಳದಲ್ಲಿ ಸೆರೆ
ಯಾಗಿದ್ದನು. ಯೆಹೂದದ ಅರಸನಾದ ಚಿದ್ಕೀಯನು
ಯೆರೆಮೀಯನಿಗೆ— ನೀನು ಪ್ರವಾದನೆ ಮಾಡುತ್ತಾ—
ಯೆಹೋವನು ಇಂತೆನ್ನುತ್ತಾನೆ—ನಾನು ಈ ಪಟ್ಟ
ಣವನ್ನು ಬಾಬೆಲಿನ ಅರಸನ ಕೈಗೆ ಸಿಕ್ಕಿಸುವೆನು,
ಅವನು ಇದನ್ನು ಆಕ್ರಮಿಸುವನು; ಮತ್ತು ಯೆಹೂ
ದದ ಅರಸನಾದ ಚಿದ್ಕೀಯನು ಕಸ್ದೀಯರ ಕೈಯಿಂದ
ತಪ್ಪಿಸಿಕೊಳ್ಳಲಾರದೆ ಬಾಬೆಲಿನ ಅರಸನ ವಶವಾಗು
ವದು ಖಂಡಿತ, ಅವನಿಗೆ ಸಾಕ್ಷಾತ್ತಾಗಿ ನಿಂತು ಎದು
ರೆದುರಾಗಿ ಮಾತಾಡುವನು; ಆ ಅರಸನು ಚಿದ್ಕೀಯ
ನನ್ನು ಬಾಬೆಲಿಗೆ ಒಯ್ದುಕೊಂಡುಹೋಗುವನು,
ನಾನು ಅವನಿಗೆ ದಯೆತೋರಿಸುವ ತನಕ ಅಲ್ಲೇ

1) ಅಥವಾ: ಅಲೆಗಳು ಭೋರ್ಗರೆಯುವ ಸಮುದ್ರವನ್ನು ಶಾಂತಪಡಿಸುವಾತನೂ.

ಇರುವನು; ನೀವು ಕಸ್ದೀಯರೊಡನೆ ಯುದ್ಧಮಾಡಿ
ದರೂ ನಿಮಗೆ ಜಯವಾಗದು; ಇದು ಯೆಹೋವನ
ನುಡಿ ಎಂಬದಾಗಿ ಏಕೆ ನುಡಿಯುತ್ತೀ ಎಂದು ಹೇಳಿ
ಅವನನ್ನು ಸೆರೆಯಲ್ಲಿ ಹಾಕಿಸಿದ್ದನು.
6 ಯೆರೆಮೀಯನು ತಿಳಿಸಿದ್ದು. ಯೆಹೋವನು ಈ
7 ವಾಕ್ಯವನ್ನು ನನಗೆ ದಯಪಾಲಿಸಿದನು—ಇಗೋ,
ನಿನ್ನ ಚಿಕ್ಕಪ್ಪನಾದ ಶಲ್ಲೂಮನ ಮಗನಾಗಿರುವ ಹನ
ಮೇಲನು ನಿನ್ನ ಬಳಿಗೆ ಬಂದು—ಅನಾತೋತಿನಲ್ಲಿ
ರುವ ನನ್ನ ಹೊಲವನ್ನು ಕೊಂಡುಕೋ; ಪರಾಧೀನ
ವಾಗದಂತೆ ಅದನ್ನು ಕೊಂಡುಕೊಳ್ಳುವ ಹಕ್ಕು
8 ನಿನ್ನದೇ ಎಂದು ಹೇಳುವನು. ಬಳಿಕ ಯೆಹೋವನ
ವಾಕ್ಯಾನುಸಾರ ನನ್ನ ಚಿಕ್ಕಪ್ಪನ ಮಗನಾದ ಹನ
ಮೇಲನು ಕಾರಾಗೃಹದ ಅಂಗಳದಲ್ಲಿ ನನ್ನ ಬಳಿಗೆ
ಬಂದು—ಬೆನ್ಯಾಮೀನ್ ಸೀಮೆಯ ಅನಾತೋತಿನಲ್ಲಿ
ರುವ ನನ್ನ ಹೊಲವನ್ನು ದಯಮಾಡಿ ಕೊಂಡುಕೋ,
ಅದಕ್ಕೆ ನೀನೇ ಬಾಧ್ಯನು, ಪರಾಧೀನವಾಗದಂತೆ
ಕೊಂಡುಕೊಳ್ಳುವ ಹಕ್ಕೂ ನಿನ್ನದೇ; ನಿನಗಾಗಿಯೇ
ಕೊಂಡುಕೋ ಎಂದು ಹೇಳಿದನು. ಕೂಡಲೆ ಇದು
ಯೆಹೋವನ ನುಡಿ ಎಂದು ನನಗೆ ಗೊತ್ತಾಯಿತು.
9 ಆಗ ನನ್ನ ಚಿಕ್ಕಪ್ಪನ ಮಗನಾದ ಹನಮೇಲನಿಂದ
ಅನಾತೋತಿನಲ್ಲಿರುವ ಹೊಲವನ್ನು ನಾನು ಕೊಂಡು
ಕೊಂಡು ಅದರ ಕ್ರಯವಾಗಿ ಹದಿನೇಳು ತೊಲ ಬೆಳ್ಳಿ
10 ಯನ್ನು ತೂಕಮಾಡಿ ಅವನಿಗೆ ಕೊಟ್ಟೆನು. ಪತ್ರಕ್ಕೆ
ರುಜುಹಾಕಿ ಮುಚ್ಚಿ [ಮುಚ್ಚಳಕ್ಕೆ] ಸಾಕ್ಷಿಗಳನ್ನು
ಹಾಕಿಸಿ ತ್ರಾಸಿನಲ್ಲಿ ಆ ಬೆಳ್ಳಿಯನ್ನು ತೂಗಿ ಅವನಿಗೆ
11 ಕೊಟ್ಟೆನು. ಆ ಮೇಲೆ ನಾನು ಕ್ರಯಪತ್ರವನ್ನು,
ಅಂದರೆ ಚಕ್ಕುಬಂದಿಷರತ್ತುಗಳಿಂದೊಡಗೂಡಿ ಮುಚ್ಚಿ
ದ್ದ ಪತ್ರವನ್ನೂ ಮುಚ್ಚಳದ ಪತ್ರವನ್ನೂ ತೆಗೆದು
12 ಕೊಂಡು ನನ್ನ [1]ಚಿಕ್ಕಪ್ಪನ ಮಗನಾದ ಹನಮೇಲನ
ಮುಂದೆ ಕ್ರಯಪತ್ರಕ್ಕೆ ರುಜುಮಾಡಿದ ಸಾಕ್ಷಿಗಳ
ಸಮಕ್ಷಮ ಕಾರಾಗೃಹದ ಅಂಗಳದಲ್ಲಿ ಕೂತಿದ್ದ
ಎಲ್ಲಾ ಯೆಹೂದ್ಯರ ಎದುರಿನಲ್ಲಿ ಆ ಕ್ರಯಪತ್ರವನ್ನು
ಮಹ್ಸೇಮನ ಮೊಮ್ಮಗನೂ ನೇರೀಯನ ಮಗನೂ
13 ಆದ ಬಾರೂಕನ ಕೈಗೆ ಕೊಟ್ಟೆನು. ಅವರೆಲ್ಲರ
14 ಮುಂದೆ ಅವನಿಗೆ—ಇಸ್ರಾಯೇಲ್ಯರ ದೇವರೂ ಸೇನಾ
ಧೀಶ್ವರನೂ ಆದ ಯೆಹೋವನು ಇಂತೆನ್ನುತ್ತಾನೆ—
ನೀನು ಈ ಕ್ರಯಪತ್ರಗಳನ್ನು, ಅಂದರೆ ಮುಚ್ಚಿದ
ಪತ್ರವನ್ನೂ ಮುಚ್ಚಳದ ಪತ್ರವನ್ನೂ ತೆಗೆದು
ಕೊಂಡು ಬಹು ದಿವಸ ಇರುವ ಹಾಗೆ ಮಡಿಕೆ
15 ಯಲ್ಲಿ ಇಟ್ಟಿಡು. ಈ ದೇಶದಲ್ಲಿ ಜನರು ಮನೆಹೊಲ
ತೋಟಗಳನ್ನು ಮತ್ತೆ ಕೊಳ್ಳುವರು, ಕೊಡುವರು.
ಇದು ಇಸ್ರಾಯೇಲ್ಯರ ದೇವರೂ ಸೇನಾಧೀಶ್ವರನೂ
ಆದ ಯೆಹೋವನ ನುಡಿ ಎಂದು ಖಂಡಿತವಾಗಿ ಹೇಳಿ
ದೆನು.
16 ಕ್ರಯಪತ್ರವನ್ನು ನೇರೀಯನ ಮಗನಾದ ಬಾರೂ
ಕನ ಕೈಗೆ ಕೊಟ್ಟ ಮೇಲೆ ನಾನು ಯೆಹೋವನಿಗೆ
17 ಹೀಗೆ ವಿಜ್ಞಾಪನೆಮಾಡಿದೆನು—ಎಲೈ, ಕರ್ತನಾದ
ಯೆಹೋವನೇ! ಆಹಾ, ನೀನು ಭುಜವನ್ನೆತ್ತಿ ನಿನ್ನ
ಮಹಾ ಶಕ್ತಿಯಿಂದ ಭೂಮ್ಯಾಕಾಶಗಳನ್ನು ಸೃಷ್ಟಿ
ಸಿದ್ದೀ; ಯಾವ ಕಾರ್ಯವೂ ನಿನಗೆ ಅಸಾಧ್ಯವಲ್ಲ.
ನೀನು ಸಾವಿರಾರು ತಲೆಗಳ ವರೆಗೆ ದಯೆತೋರಿಸು 18
ವವನೂ ತಂದೆಗಳ ದೋಷಫಲವನ್ನು ಅವರ ತರು
ವಾಯ ಮಕ್ಕಳ ಮಡಲಿಗೆ ಹಾಕುವವನೂ ಆಗಿದ್ದೀ;
ನೀನು ಮಹಾ ಪರಾಕ್ರಮಿಯಾದ ದೇವರು; ಸೇನಾ
ಧೀಶ್ವರನಾದ ಯೆಹೋವನೆಂಬದು ನಿನ್ನ ನಾಮಧೇ
ಯ; ನೀನು ಆಲೋಚನೆಯಲ್ಲಿ ಶ್ರೇಷ್ಠನು, ಕಾರ್ಯ 19
ದಲ್ಲಿ ಸಮರ್ಥನು; ನೀನು ಪ್ರತಿಯೊಬ್ಬನಿಗೂ ಅವ
ನವನ ಕರ್ಮಕ್ಕೂ ನಡತೆಗೂ ತಕ್ಕ ಫಲವನ್ನು ಕೊಡ
ಬೇಕೆಂದು ನರಜನ್ಮದವರ ಮಾರ್ಗಗಳನ್ನೆಲ್ಲಾ ಕಣ್ಣಾರೆ
ನೋಡುತ್ತೀ; ನೀನು ಐಗುಪ್ತದೇಶದಲ್ಲಿ ಮಹತ್ಕಾ 20
ರ್ಯಗಳನ್ನೂ ಉತ್ಪಾತಗಳನ್ನೂ ನಡಿಸಿ ಈ ದಿನದ
ವರೆಗೆ ಇಸ್ರಾಯೇಲ್ಯರಲ್ಲಿಯೂ ಇತರ ಜನರಲ್ಲಿಯೂ
ಅವುಗಳನ್ನು ಮಾಡುತ್ತಾ ಬಂದು ಹೆಸರನ್ನು ಪಡೆದು
ಕೊಂಡಿ; ಅದು ಈಗಲೂ ಸ್ಥಿರವಾಗಿದೆ; ನೀನು ಮಹ 21
ತ್ಕಾರ್ಯಗಳನ್ನೂ ಉತ್ಪಾತಗಳನ್ನೂ ನಡಿಸಿ ಭುಜ
ಪರಾಕ್ರಮವನ್ನು ತೋರಿಸಿ ಶಿಕ್ಷಾಹಸ್ತವನ್ನು ಎತ್ತಿ
ಮಹಾ ಭೀತಿಯನ್ನುಂಟುಮಾಡಿ ನಿನ್ನ ಜನರಾದ
ಇಸ್ರಾಯೇಲ್ಯರನ್ನು ಐಗುಪ್ತದೇಶದೊಳಗಿಂದ ಬರ
ಮಾಡಿ ಅವರ ಪಿತೃಗಳಿಗೆ ವಾಗ್ದಾನಮಾಡಿದ ಪ್ರಕಾರ 22
ಹಾಲೂ ಜೇನೂ ಹರಿಯುವ ಈ ದೇಶವನ್ನು ಅವರಿಗೆ
ಅನುಗ್ರಹಿಸಿದಿ; ಅವರು ಅದನ್ನು ಸೇರಿ ಅನುಭವಿಸಿ 23
ದರೂ ನಿನ್ನ ಮಾತಿಗೆ ಕಿವಿಗೊಡಲಿಲ್ಲ, ನಿನ್ನ ಧರ್ಮಾ
ನುಸಾರ ನಡೆಯಲಿಲ್ಲ; ನೀನು ಆಜ್ಞಾಪಿಸಿದವುಗಳ
ಲ್ಲೆಲ್ಲಾ ಒಂದನ್ನೂ ಮಾಡಲಿಲ್ಲ. ಆದಕಾರಣ ನೀನು
ಈ ಕೇಡನ್ನೆಲ್ಲಾ ಅವರ ಮೇಲೆ ಬರಮಾಡಿದ್ದೀ.
ಇಗೋ, ಮುತ್ತಿಗೆಯ ದಿಬ್ಬಗಳು. ಪಟ್ಟಣವನ್ನು 24
ಆಕ್ರಮಿಸುವದಕ್ಕೆ ಬಂದಿದ್ದಾರೆ; ಪಟ್ಟಣವು ಖಡ್ಗ
ಕ್ಷಾಮವ್ಯಾಧಿಗಳಿಂದ ಕ್ಷೀಣವಾಗಿ ವಿರೋಧಿಗಳಾದ
ಕಸ್ದೀಯರ ಕೈಗೆ ಸಿಕ್ಕಿದೆ; ನೀನು ನುಡಿದದ್ದು ನೆರ
ವೇರಿದೆ, ಇಗೋ, ನೋಡುತ್ತಿದ್ದೀ. ಕರ್ತನಾದ ಯೆ 25
ಹೋವನೇ, ನೀನು ನನಗೆ—ಸಾಕ್ಷಿಗಳನ್ನು ಕರೆಯಿಸಿ
ಕ್ರಯಕೊಟ್ಟು ಹೊಲವನ್ನು ಕೊಂಡುಕೋ ಎಂದು
ಅಪ್ಪಣೆಕೊಟ್ಟೆ; ನೋಡು, ಪಟ್ಟಣವು ಕಸ್ದೀಯರ
ಕೈಸೇರಿದೆಯಲ್ಲಾ.
ಆಗ ಯೆಹೋವನು ಯೆರೆಮೀಯನಿಗೆ ಈ ಮಾತ 26
ನ್ನು ದಯಪಾಲಿಸಿದನು—ಇಗೋ, ನಾನು ಯೆಹೋ 27
ವನು, ನರಪ್ರಾಣಿಗೆಲ್ಲಾ ದೇವರು; ನನಗೆ ಅಸಾ
ಧ್ಯವಾದದ್ದುಂಟೋ? ಆದಕಾರಣ ಯೆಹೋವನು 28
ಇಂತೆನ್ನುತ್ತಾನೆ—ಇಗೋ, ನಾನು ಈ ಪಟ್ಟಣವನ್ನು
ಕಸ್ದೀಯರ ವಶಕ್ಕೆ, ಅಂದರೆ ಬಾಬೆಲಿನ ಅರಸನಾದ
ನೆಬೂಕದ್ನೆಚ್ಚರನ ಕೈಗೆ ಸಿಕ್ಕಿಸುವೆನು, ಅವನು ಇದ
ನ್ನು ಆಕ್ರಮಿಸುವನು; ಮತ್ತು ಈ ಪಟ್ಟಣಕ್ಕೆ ಪ್ರತಿ 29
ಭಟಿಸುವ ಕಸ್ದೀಯರು ಇದರೊಳಗೆ ನುಗ್ಗಿ ಬೆಂಕಿ
ಯಿಕ್ಕಿ ಯಾವ ಮನೆಗಳ ಮಾಳಿಗೆಗಳಲ್ಲಿ ನನ್ನ ಜನರು
ಬಾಳನಿಗೆ ಧೂಪಹಾಕಿ ಅನ್ಯದೇವತೆಗಳಿಗೆ ಪಾನವನ್ನು
ನೈವೇದ್ಯವಾಗಿ ಅರ್ಪಿಸಿ ನನ್ನನ್ನು ಕೆಣಕಿದ್ದಾರೋ ಆ

1) ಇಬ್ರಿಯ ಮೂಲ: ಚಿಕ್ಕಪ್ಪನಾದ.

ಮನೆಗಳಿರುವ ಈ ಪಟ್ಟಣವನ್ನು ಸುಟ್ಟುಬಿಡುವರು.
30 ಇಸ್ರಾಯೇಲ್ ವಂಶವೂ ಯೆಹೂದ ವಂಶವೂ ತಮ್ಮ
ಚಿಕ್ಕಂದಿನಿಂದ ನನ್ನ ಚಿತ್ತಕ್ಕೆ ವಿರುದ್ಧವಾಗಿಯೇ ನಡೆ
ಯುತ್ತಾ ಬಂದಿವೆ; ಹೌದು, ಇಸ್ರಾಯೇಲ್ ವಂಶದ
ವರು ತಮ್ಮ [1])ಕೈಕೆಲಸದ ಬೊಂಬೆಗಳಿಂದ ನನ್ನನ್ನು
ರೇಗಿಸುತ್ತಲೇ ಬಂದಿದ್ದಾರೆ. ಇದು ಯೆಹೋವನ
31 ನುಡಿ, ಈ ಪಟ್ಟಣವು ಕಟ್ಟಿದಂದಿನಿಂದ ಇಂದಿನ ವರೆ
32 ಗೂ ನನ್ನ ಕೋಪರೋಷಗಳಿಗೆ ಆಸ್ಪದವಾಗಿದೆ. ಅರ
ಸರು, ಪ್ರಧಾನರು, ಯಾಜಕರು, ಪ್ರವಾದಿಗಳು,
ಯೆಹೂದದ ಪ್ರಜೆಗಳು, ಯೆರೂಸಲೇಮಿನ ನಿವಾಸಿ
ಗಳು, ಅಂತು ಎಲ್ಲಾ ಇಸ್ರಾಯೇಲ್ಯರೂ ಯೆಹೂ
ದ್ಯರೂ ನನ್ನನ್ನು ರೇಗಿಸತಕ್ಕ ಅಧರ್ಮವನ್ನು ತುಂಬಾ
ಮಾಡಿದ್ದರಿಂದ ನಾನು ಈ ಪಟ್ಟಣವನ್ನು ನನ್ನ ಸನ್ನಿ
33 ಧಿಯಿಂದ ತೊಲಗಿಸಬೇಕಾಗಿ ಬಂತು. ಅವರು ನನಗೆ
ಮುಖಕೊಡದೆ ಬೆನ್ನುಮಾಡಿದ್ದಾರೆ; ನಾನು ಎಡೆಬಿಡದೆ
ಅವರಿಗೆ ಬೋಧಿಸುತ್ತಾ ಬಂದರೂ ಅವರು ಉಪ
ದೇಶವನ್ನು ಹೊಂದಲೊಲ್ಲದೆ ನನಗೆ ಕಿವಿಗೊಡಲೇ
34 ಇಲ್ಲ. ನನ್ನ ಹೆಸರಿನಿಂದ ಖ್ಯಾತಿಗೊಂಡ ಆಲಯ
ದಲ್ಲಿ ತಮ್ಮ ಅಸಹ್ಯವಸ್ತುಗಳನ್ನು ಇಟ್ಟು ಹೊಲೆ
35 ಮಾಡಿದ್ದಾರೆ. ತಮ್ಮ ಗಂಡು ಹೆಣ್ಣು ಮಕ್ಕಳನ್ನು
ಮೋಲೆಕ್ ದೇವತೆಗಾಗಿ ಆಹುತಿಕೊಡುವದಕ್ಕೆ
ಬೆನ್‌ಹಿನ್ನೋಮ್ ತಗ್ಗಿನಲ್ಲಿನ ಬಾಳನ ಪೂಜಾಸ್ಥಳ
ಗಳನ್ನು ಕಟ್ಟಿ ಯೆಹೂದವನ್ನು ಪಾಪಕ್ಕೆ ಸಿಕ್ಕಿಸಿ
ದ್ದಾರೆ; ನಾನು ಇಂಥ ಅಸಹ್ಯಕಾರ್ಯವನ್ನು ವಿಧಿಸ
ಲಿಲ್ಲ, ಅದರ ಸಂಕಲ್ಪವೂ ನನ್ನ ಮನಸ್ಸಿನಲ್ಲಿ ಹುಟ್ಟ
ಲಿಲ್ಲ.
36 ಹೀಗಿರಲು ಖಡ್ಗಕ್ಷಾಮವ್ಯಾಧಿಗಳಿಂದ ಕ್ಷೀಣವಾಗಿ
ಬಾಬೆಲಿನ ಅರಸನ ಕೈವಶವಾಗಿದೆ ಎಂದು ನೀವು
ಹೇಳುವ ಈ ಪಟ್ಟಣದ ವಿಷಯವಾಗಿ ಇಸ್ರಾಯೇಲ್ಯರ
ದೇವರಾದ ಯೆಹೋವನು ಈಗ ಇಂತೆನ್ನುತ್ತಾನೆ—
37 ಇಗೋ, ನಾನು ಕೋಪರೋಷಮಹಾಕ್ರೋಧಭರಿತ
ನಾಗಿ ಈ ಜನರನ್ನು ಯಾವ ದೇಶಗಳಿಗೆ ಅಟ್ಟಿದೆನೋ
ಆ ಸಕಲ ದೇಶಗಳಿಂದ ಈ ಸ್ಥಳಕ್ಕೆ ಪುನಃ ಕರತಂದು
38 ನಿರ್ಭಯವಾಗಿ ವಾಸಿಸುವಂತೆ ಮಾಡುವೆನು. ಅವರು
ನನಗೆ ಜನರಾಗಿರುವರು, ನಾನು ಅವರಿಗೆ ದೇವರಾಗಿ
39 ರುವೆನು. ನಾನು ಅವರ ಹಿತವನ್ನೂ ಅವರ ತರು
ವಾಯ ಅವರ ಮಕ್ಕಳ ಹಿತವನ್ನೂ ಬಯಸುತ್ತಾ
ಅವರು ಸದಾ ನನ್ನಲ್ಲಿ ಭಯಭಕ್ತಿಯುಳ್ಳವರಾಗಿರು
ವಂತೆ ಎಲ್ಲರಿಗೂ ಒಂದೇ ಮನಸ್ಸನ್ನೂ ಒಂದೇ
40 ಮಾರ್ಗವನ್ನೂ ಅನುಗ್ರಹಿಸುವೆನು. ನಾನು ನಿಮಗೆ
ಹಿತಮಾಡುವದನ್ನು ಬಿಟ್ಟು ವಿಮುಖನಾಗೆನು ಎಂಬುವ
ಶಾಶ್ವತವಾದ ಒಡಂಬಡಿಕೆಯನ್ನು ಅವರೊಂದಿಗೆ
ಮಾಡಿಕೊಳ್ಳುವೆನು; ಅವರು ನನ್ನಿಂದಗಲದಂತೆ
ಅವರ ಹೃದಯದೊಳಗೆ ನನ್ನ ಮೇಲಣ ಭಯಭಕ್ತಿ
41 ಯನ್ನು ನೆಲೆಗೊಳಿಸುವೆನು. ನಾನು ಅವರ ಹಿತ
ವನ್ನು ಬಯಸುತ್ತಾ ಅವರಲ್ಲಿ ಆನಂದಿಸುವೆನು, ನಿಶ್ಚ
ಯವಾಗಿ ಅವರನ್ನು ಈ ದೇಶದಲ್ಲಿ ನನ್ನ ಪೂರ್ಣವಾದ
ಹೃದಯದಿಂದಲೂ ಮನಸ್ಸಿನಿಂದಲೂ ಸ್ಥಾಪಿಸುವೆನು.

ಯೆಹೋವನು ಇಂತೆನ್ನುತ್ತಾನೆ--ನಾನು ಈ ಜನರಿಗ
ಇಷ್ಟು ದೊಡ್ಡ ಕೇಡನ್ನು ಬರಮಾಡಿದಂತೆ ವಾಗ್ದಾನ
ಮಾಡಿದ ಎಲ್ಲಾ ಮೇಲನ್ನೂ ಬರಮಾಡುವೆನು
ಜನಪಶುಗಳಿಲ್ಲದೆ ಹಾಳಾಗಿ ಕಸ್ದೀಯರ ಕೈವಶ
ವಾಗಿದೆ ಎಂದು ನೀವು ಹೇಳುವ ಈ ದೇಶದಲ್ಲಿ ಹೊಲ
ಗದ್ದೆಗಳನ್ನು ಕೊಳ್ಳುವರು, ಕೊಡುವರು. ಬೆನ್ಯಾ
ಮೀನ್ ಸೀಮೆ, ಯೆರೂಸಲೇಮಿನ ಸುತ್ತಣ ಪ್ರದೇಶ
ಗಳು, ಯೆಹೂದದ ಊರುಗಳು, ಬೆಟ್ಟದ ಊರು
ಗಳು, ಇಳಕಲಿನ ಊರುಗಳು, ದಕ್ಷಿಣಪ್ರಾಂತದ
ಊರುಗಳು, ಈ ಎಲ್ಲಾ ಸ್ಥಳಗಳಲ್ಲಿ ಜನರು ಹೊಲ
ಗದ್ದೆಗಳಿಗೆ ಕ್ರಯಕೊಟ್ಟು ಪತ್ರಕ್ಕೆ ರುಜುಹಾಕಿ
ಮುಚ್ಚಿ ಸಾಕ್ಷಿಗಳನ್ನು ಹಾಕಿಸಿ ಕೊಂಡುಕೊಳ್ಳುವರು;
ನಾನು ನನ್ನ ಜನರ ದುರವಸ್ಥೆಯನ್ನು ತಪ್ಪಿಸುವೆನಷ್ಟೆ.
ಇದು ಯೆಹೋವನ ನುಡಿ.

ಯೆರೂಸಲೇಮನ್ನೂ ಯೆಹೂದವನ್ನೂ ಊರ್ಜಿತಪಡಿಸುವೆನೆಂಬ ಯೆಹೋವನ ವಾಗ್ದಾನ.

3 ಯೆರೆಮೀಯನು ಕಾರಾಗೃಹದ ಅಂಗಳದಲ್ಲಿ ಸೆರೆ
ಯಾಗಿದ್ದಾಗ ಅವನಿಗೆ ಯೆಹೋವನು ಈ ಎರಡ
ನೆಯ ವಾಕ್ಯವನ್ನು ಅನುಗ್ರಹಿಸಿದನು— ಕಾರ್ಯ
ವನ್ನು ಸಾಧಿಸಿಕೊಳ್ಳುವ, ಉದ್ದೇಶಿಸಿ ನೆರವೇರಿಸುವ
ಯೆಹೋವನಾಮಾಂಕಿತನು ಇಂತೆನ್ನುತ್ತಾನೆ—ನನ್ನ
ನ್ನು ಕೇಳಿಕೋ, ನಾನು ನಿನಗೆ ಸದುತ್ತರವನ್ನು
ದಯಪಾಲಿಸಿ ನಿನಗೆ ತಿಳಿಯದ ಮಹತ್ತಾದ ಗೂಢಾ
ರ್ಥಗಳನ್ನು ಗೋಚರಪಡಿಸುವೆನು. ದಿಬ್ಬಗಳಿಗೂ
ಕತ್ತಿಗಳಿಗೂ [ಅಡ್ಡವಾಗಿ ಗೋಡೆಯನ್ನು ಕಟ್ಟಲು]
ಕೆಡವಿರುವ ಈ ಊರಿನವರ ಮನೆಗಳ ವಿಷಯ
ವಾಗಿಯೂ ಯೆಹೂದದ ಅರಸರ ಉಪ್ಪರಿಗೆಗಳ
ವಿಷಯವಾಗಿಯೂ ಇಸ್ರಾಯೇಲ್ಯರ ದೇವರಾದ
ಯೆಹೋವನು ಇಂತೆನ್ನುತ್ತಾನೆ—ಈ ಊರಿನವರು
ಕಸ್ದೀಯರನ್ನು ಪ್ರತಿಭಟಿಸುವದಕ್ಕೆ ಹೊರಟರೆ ಏನು?
ತಮ್ಮ ಹೆಣಗಳಿಂದ ಅವರನ್ನು ತೃಪ್ತಿಪಡಿಸುವರು;
ಇವರ ಅಧರ್ಮವನ್ನು ಕಂಡು ಈ ಪಟ್ಟಣಕ್ಕೆ ವಿಮುಖ
ನಾಗಿ ಕೋಪರೋಷಭರಿತನಾದ ನಾನೇ ಇವರನ್ನು
ಹತಿಸುವೆನು. ಇಗೋ, ನಾನು ಈ ಪಟ್ಟಣವನ್ನು
ಜೀರ್ಣೋದ್ಧಾರಮಾಡಿ ಅದಕ್ಕೆ ಸೌಖ್ಯವನ್ನು ಕೊಟ್ಟು
ನಿವಾಸಿಗಳನ್ನು ಗುಣಪಡಿಸುವೆನು; [2])ಸ್ಥೈರ್ಯಸಮಾ
ಧಾನಗಳನ್ನು ಸಮೃದ್ಧಿಯಾಗಿ ಅವರ ಅನುಭವಕ್ಕೆ
ತರುವೆನು; ಯೆಹೂದದ ಮತ್ತು ಇಸ್ರಾಯೇಲಿನ
ದುರವಸ್ಥೆಯನ್ನು ತಪ್ಪಿಸಿ ಮೊದಲಿನಂತೆಯೇ ಅವು
ಗಳನ್ನು ಊರ್ಜಿತಪಡಿಸುವೆನು. ಅವರು ನನಗೆ
ವಿರುದ್ಧವಾಗಿ ಮಾಡಿರುವ ಅಧರ್ಮವನ್ನೆಲ್ಲಾ ತೊಲ
ಗಿಸಿ ಅವರನ್ನು ಶುದ್ಧೀಕರಿಸುವೆನು; ಅವರು ನನಗೆ
ಪಾಪದ್ರೋಹಗಳನ್ನು ಮಾಡಿ ನಡಿಸಿರುವ ಅಪರಾಧ
ಗಳನ್ನೆಲ್ಲಾ ಕ್ಷಮಿಸುವೆನು. ನಾನು ಈ ಜನರಿಗೆ
ಅನುಗ್ರಹಿಸುವ ಎಲ್ಲಾ ಮೇಲುಗಳ ಸುದ್ದಿಯನ್ನು
ಕೇಳಿ ನಾನು ಈ ಪಟ್ಟಣಕ್ಕೆ ಉಂಟುಮಾಡುವ ಸುಖ

1) ಮೂಲ: ಕೈಕೆಲಸದಿಂದ. 2) ಅಥವಾ: ಸತ್ಯಸಮಾಧಾನಗಳನ್ನು ಅವರಿಗೆ ಧಾರಾಳವಾಗಿ ವ್ಯಕ್ತಗೊಳಿಸುವೆನು.

ಸಮಾಧಾನಗಳನ್ನು ನೋಡಿ ಹೆದರಿ ನಡುಗುವ ಸಕಲ
ಭೂರಾಜ್ಯಗಳ ಮುಂದೆ ಈ ಪಟ್ಟಣವು ನನ್ನ ಕೀರ್ತಿ
ಯೂ ಮಹಿಮೆಯೂ ಆನಂದದ ಬಿರುದೂ ಆಗು
10 ವದು. ಯೆಹೋವನು ಇಂತೆನ್ನುತ್ತಾನೆ—ಜನಪಶು
ಗಳಿಲ್ಲದೆ ಹಾಳಾಗಿದೆ ಎಂದು ನೀವೆನ್ನುವ ಈ ಸ್ಥಳ
ದಲ್ಲಿ, ಅಂದರೆ ಜನಪಶುರಹಿತವಾಗಿ ನಿವಾಸಿಗಳಿಲ್ಲದೆ
ಹಾಳುಬಿದ್ದಿರುವ ಯೆಹೂದದ ಊರುಗಳಲ್ಲಿ, ಯೆರೂ
11 ಸಲೇಮಿನ ಬೀದಿಗಳಲ್ಲಿ ಹರ್ಷಧ್ವನಿ, ಉಲ್ಲಾಸ
ಕೋಲಾಹಲ, ವಧೂವರರ ಸ್ವರ, ಇವುಗಳು ಕೇಳ
ಬರುವವು. ಸೇನಾಧೀಶ್ವರನಾದ ಯೆಹೋವನಿಗೆ
ಕೃತಜ್ಞತಾಸ್ತುತಿಮಾಡಿರಿ, ಯೆಹೋವನು ಒಳ್ಳೆಯ
ವನು, ಆತನ ಕೃಪೆಯು ಶಾಶ್ವತ ಎಂದು ಕೀರ್ತಿ
ಸುತ್ತಾ ಕೃತಜ್ಞತಾಬಲಿಯನ್ನು ಯೆಹೋವನ ಆಲ
ಯಕ್ಕೆ ತರುವವರ ಗಾನವೂ ಕಿವಿಗೆ ಬೀಳುವದು.
ನಾನು ದೇಶವನ್ನು ದುರವಸ್ಥೆಯಿಂದ ತಪ್ಪಿಸಿ ಪೂರ್ವ
12 ಸ್ಥಿತಿಗೆ ತರುವೆನು. ಸೇನಾಧೀಶ್ವರನಾದ ಯೆಹೋ
ವನು ಇಂತೆನ್ನುತ್ತಾನೆ—ಜನಪಶುಗಳಿಲ್ಲದೆ ಹಾಳಾ
ಗಿರುವ ಈ ಪ್ರಾಂತವೂ ಇಲ್ಲಿನ ಎಲ್ಲಾ ಊರುಗಳೂ
ಕುರುಬರು ತಮ್ಮ ಹಿಂಡುಗಳನ್ನು ತಂಗಿಸುವದಕ್ಕೆ
13 ಮತ್ತೆ ಆಸರೆಯಾಗುವವು. ಬೆಟ್ಟದ ಊರುಗಳು,
ಇಳಕಲಿನ ಊರುಗಳು, ದಕ್ಷಿಣ ಪ್ರಾಂತದ ಊರು
ಗಳು, ಬೆನ್ಯಾಮೀನ್ ಸೀಮೆ, ಯೆರೂಸಲೇಮಿನ
ಸುತ್ತಣ ಪ್ರದೇಶಗಳು, ಯೆಹೂದದ ಊರುಗಳು,
ಈ ಎಲ್ಲಾ ಸ್ಥಳಗಳಲ್ಲಿ ಹಿಂಡುಗಳು ಎಣಿಸುವವನ
ಕೈಗೆ ಲೆಕ್ಕವಾಗುವಂತೆ ಮತ್ತೆ ಹಾದುಹೋಗುವವು.
ಇದು ಯೆಹೋವನ ನುಡಿ.

ದಾವೀದನ ಸಂತತಿಯ ಧರ್ಮದ ಆಳಿಕೆ.

14 ಯೆಹೋವನು ಇಂತೆನ್ನುತ್ತಾನೆ—ಆಹಾ, ನಾನು
ಇಸ್ರಾಯೇಲ್ ಯೆಹೂದ ವಂಶಗಳ ವಿಷಯವಾಗಿ
ನುಡಿದಿರುವ ಶುಭವಾಕ್ಯವನ್ನು ನೆರವೇರಿಸುವ ದಿನ
15 ಗಳು ಬರುವವು. ಆ ದಿನಗಳಲ್ಲಿ, ಆ ಕಾಲದಲ್ಲಿ,
ದಾವೀದನೆಂಬ ಮೂಲದಿಂದ ಸದ್ಧರ್ಮಿಯಾದ ಮೊಳಿ
ಕೆಯನ್ನು ಚಿಗುರಿಸುವೆನು; ಅವನು ದೇಶದಲ್ಲಿ ನೀತಿ
16 ನ್ಯಾಯಗಳನ್ನು ನಿರ್ವಹಿಸುವನು. ಆಗ ಯೆಹೂ
ದ್ಯರು ಸುರಕ್ಷಿತವಾಗಿರುವರು, ಯೆರೂಸಲೇಮಿನ
ವರು ನೆಮ್ಮದಿಯಾಗಿ ವಾಸಿಸುವರು; ಯೆಹೋವ
ಚಿದ್ಕೇನು [ಅಂದರೆ ಯೆಹೋವನೇ ನಮ್ಮ ಸದ್ಧರ್ಮ]
17 ಎಂಬ ಹೆಸರು ಈ ಪಟ್ಟಣಕ್ಕೆ ಸಲ್ಲುವದು. ಯೆಹೋ
ವನು ಇಂತೆನ್ನುತ್ತಾನೆ—ದಾವೀದನ ವಂಶವು ನಿಂತು
ಹೋಗದೆ ಆ ಸಂತಾನದವರು ಇಸ್ರಾಯೇಲ್ಯರ
ಸಿಂಹಾಸನದಲ್ಲಿ ತಪ್ಪದೆ ಆಸೀನರಾಗುತ್ತಾ ಬರು
18 ವರು; ನನ್ನ ಸನ್ನಿಧಿಯಲ್ಲಿ ನಿರಂತರವಾಗಿ ಸರ್ವಾಂಗ
ಹೋಮ, ನೈವೇದ್ಯ, ಯಜ್ಞ ಇವುಗಳನ್ನು ಮಾಡಲು
ಲೇವಿಯರಾದ ಯಾಜಕರು ಇದ್ದೇ ಇರುವರು.
19 ಮತ್ತು ಯೆಹೋವನು ಯೆರೆಮೀಯನಿಗೆ ಈ
20 ಮಾತನ್ನು ದಯಪಾಲಿಸಿದನು—ಯೆಹೋವನು ಇಂತೆ
ನ್ನುತ್ತಾನೆ—ನೀವು ಹಗಲಿರುಳೆಂಬ ನನ್ನ ನಿಬಂಧ
ನೆಗಳನ್ನು ನಿಲ್ಲಿಸಿ ಹಗಲನ್ನು, ಇರುಳನ್ನು ಅದರದರ
ಸಮಯದಲ್ಲಿ ಉಂಟಾಗದಂತೆ ಮಾಡಬಹುದಾದರೆ
ಆಗ ನನ್ನ ದಾಸನಾದ ದಾವೀದನಿಗೂ ನನ್ನ ಸೇವಕ 21
ರಾಗಿರುವ ಲೇವಿಯರಾದ ಯಾಜಕರಿಗೂ ನಾನು
ಮಾಡಿದ ನಿಬಂಧನೆಯು ನಿಂತು ಹೋಗಿ ದಾವೀದನ
ಸಿಂಹಾಸನಾಸೀನನಾಗಿ ಆಳತಕ್ಕ ಅವನ ಸಂತಾನದವ
ನೊಬ್ಬನೂ ಉಳಿಯದೆ ಹೋದಾನು. ನಾನು ನನ್ನ 22
ದಾಸನಾದ ದಾವೀದನ ಸಂತಾನವನ್ನು ಅಸಂಖ್ಯಾತ
ವಾದ ನಕ್ಷತ್ರಗಣದಷ್ಟು ಹೆಚ್ಚಿಸುವೆನು; ನನ್ನ ಸೇವೆ
ನಡಿಸುವ ಲೇವಿಯರ ಸಂಖ್ಯೆಯನ್ನು ಅಳೆಯಲಾಗದ
ಸಮುದ್ರತೀರದ ಉಸುಬಿನಷ್ಟು ವೃದ್ಧಿಪಡಿಸುವೆನು.
ಇದಲ್ಲದೆ ಯೆಹೋವನು ಯೆರೆಮೀಯನಿಗೆ ಈ 23
ವಾಕ್ಯವನ್ನು ದಯಪಾಲಿಸಿದನು—ಯೆಹೋವನು 24
ತಾನು ಆರಿಸಿಕೊಂಡ ಎರಡು ವಂಶಗಳನ್ನು ನಿರಾ
ಕರಿಸಿಬಿಟ್ಟಿದ್ದಾನೆ ಎಂದು ಈ ಜನರು ಆಡಿಕೊಳ್ಳುವ
ಮಾತು ನಿನ್ನ ಲಕ್ಷ್ಯಕ್ಕೆ ಬರಲಿಲ್ಲವೋ? ಇವರು
ಜನಾಂಗವೇ ಅಲ್ಲ ಎನ್ನುವಷ್ಟು ನನ್ನ ಜನರನ್ನು
ಅಸಡ್ಡೆಮಾಡುತ್ತಾರಲ್ಲಾ. ಯೆಹೋವನು ಇಂತೆನ್ನು 25
ತ್ತಾನೆ—ಹಗಲಿರುಳೆಂಬ ನನ್ನ ನಿಬಂಧನೆಯು ಸ್ಥಿರ
ವಾಗಿ ನಿಲ್ಲದಿದ್ದರೆ, ಭೂಮ್ಯಾಕಾಶಗಳ ಕಟ್ಟಳೆಗಳನ್ನು
ನಾನು ವಿಧಿಸಿದವನಲ್ಲದಿದ್ದರೆ ಆಗ ನಾನು ಯಾಕೋ 26
ಬನ ಸಂತಾನದವರನ್ನು ತ್ಯಜಿಸಿ ಅಬ್ರಹಾಮ, ಇಸಾಕ,
ಯಾಕೋಬ, ಇವರ ಸಂತತಿಯನ್ನು ಆಳತಕ್ಕ ಒಡೆ
ಯರನ್ನು ನನ್ನ ದಾಸನಾದ ದಾವೀದನ ವಂಶದಿಂದ
ಆರಿಸದೆ ಆ ವಂಶದವರನ್ನು ನಿರಾಕರಿಸಿಬಿಟ್ಟೇನು.
ಅವರನ್ನು ದುರವಸ್ಥೆಯಿಂದ ತಪ್ಪಿಸಿ ಕರುಣಿಸೇ ಕರು
ಣಿಸುವೆನು.

ಶತ್ರುವು ಯೆರೂಸಲೇಮನ್ನು ಮುತ್ತುತ್ತಿರುವಾಗ
ಯೆರೆಮೀಯನು ಅನುಭವಿಸಿದ ಹಿಂಸೆಗಳೂ
ಮಾಡಿದ ಪ್ರವಾದನೆಗಳೂ. 34; 35; 37—39.

ಯೆರೂಸಲೇಮು ಬಾಬೆಲಿನ ಅರಸನ ವಶವಾಗುವದೆಂದು
ಯೆರೆಮೀಯನು ಚಿದ್ಕೀಯನನ್ನು ಎಚ್ಚರಿಸಿದ್ದು.

34 ಬಾಬೆಲಿನ ಅರಸನಾದ ನೆಬೂಕದ್ನೆಚ್ಚರನು,
ಅವನ ಪೂರ್ಣ ಸೈನ್ಯವು, ಅವನ ಕೈಕೆಳಗಣ
ಸಮಸ್ತ ಭೂರಾಜ್ಯಗಳು, ಸಕಲ ಜನಗಳು, ಇವೆಲ್ಲಾ
ಯೆರೂಸಲೇಮಿಗೂ ಅದಕ್ಕೆ ಸೇರಿದ ಎಲ್ಲಾ ಊರು
ಗಳಿಗೂ ವಿರುದ್ಧವಾಗಿ ಯುದ್ಧಮಾಡುತ್ತಿದ್ದಾಗ
ಯೆಹೋವನು ಯೆರೆಮೀಯನಿಗೆ ಈ ಮಾತನ್ನು
ದಯಪಾಲಿಸಿದನು — ಇಸ್ರಾಯೇಲ್ಯರ ದೇವರಾದ 2
ಯೆಹೋವನು ಇಂತೆನ್ನುತ್ತಾನೆ—ನೀನು ಯೆಹೂ
ದದ ಅರಸನಾದ ಚಿದ್ಕೀಯನ ಬಳಿಗೆ ಹೋಗಿ ಅವ
ನಿಗೆ ಹೀಗೆ ಹೇಳು—ಯೆಹೋವನ ಮಾತನ್ನು
ಆಲಿಸು—ಇಗೋ, ನಾನು ಈ ಪಟ್ಟಣವನ್ನು ಬಾಬೆ
ಲಿನ ಅರಸನ ಕೈವಶಮಾಡುವೆನು, ಅವನು ಅದನ್ನು
ಬೆಂಕಿಯಿಂದ ಸುಟ್ಟುಬಿಡುವನು; ನೀನು ಅವನ 3
ಕೈಯಿಂದ ತಪ್ಪಿಸಿಕೊಳ್ಳಲಾರದೆ ಹಿಡಿಯಲ್ಪಟ್ಟು
ಅವನ ವಶವಾಗುವಿ; ಬಾಬೆಲಿನ ಅರಸನ ಸಮಕ್ಷಮ
ದಲ್ಲಿ ನಿಲ್ಲುವಿ; ಅವನು ನಿನ್ನ ಸಂಗಡ ಎದುರೆದು
ರಾಗಿ ಮಾತಾಡುವನು; ನೀನು ಬಾಬೆಲಿಗೆ ಗಡೀ

4 ಪಾರಾಗುವಿ. ಆದರೂ ಯೆಹೂದದ ಅರಸನಾದ
ಚಿದ್ಕೀಯನೇ, ಯೆಹೋವನ ಮಾತನ್ನು ಕೈಕೊಳ್ಳು;
ಯೆಹೋವನು ನಿನ್ನ ವಿಷಯವಾಗಿ ಇಂತೆನ್ನು
ತ್ತಾನೆ—[ನೀನು ಕೇಳಿ ಕೈಕೊಂಡರೆ] ಖಡ್ಗದಿಂದ
5 ಹತನಾಗುವದಿಲ್ಲ; ಸುಖವಾಗಿ ಸಾಯುವಿ; ನಿನಗಿಂತ
ಮುಂಚಿನ ನಿನ್ನ ಪಿತೃಗಳಾದ ಅರಸರಿಗೆ ಧೂಪ
ಹಾಕಿದ ಪ್ರಕಾರ ನಿನಗೂ ಹಾಕುವರು; ಅಯ್ಯೋ,
ಪ್ರಭುವೇ ಎಂದು ನಿನಗಾಗಿ ಗೋಳಾಡುವರು; ನಾನೇ
ನುಡಿದಿದ್ದೇನೆ ಎಂದು ಯೆಹೋವನು ಅನ್ನುತ್ತಾನೆ.
6 ಆಗ ಪ್ರವಾದಿಯಾದ ಯೆರೆವಿಾಯನು ಈ ಮಾತುಗಳ
ನ್ನೆಲ್ಲಾ ಯೆರೂಸಲೇಮಿನಲ್ಲಿ ಯೆಹೂದದ ಅರಸ
7 ನಾದ ಚಿದ್ಕೀಯನಿಗೆ ಹೇಳಿದನು. ಬಾಬೆಲಿನ ಅರಸನ
ಸೈನ್ಯವು ಯೆರೂಸಲೇಮಿಗೂ ಯೆಹೂದದೊಳಗೆ
ಕೋಟೆಕೊತ್ತಲದ ಪಟ್ಟಣಗಳಾಗಿ ಉಳಿದಿದ್ದ ಲಾಕೀ
ಷಿಗೂ ಅಜೇಕಕ್ಕೂ ವಿರುದ್ಧವಾಗಿ ಯುದ್ಧಮಾಡುತ್ತಿ
ದ್ದಾಗ ಹೇಳಿದನು.

ಯೆರೂಸಲೇಮಿನವರು ತಮ್ಮ ಗುಲಾಮರಿಗೆ ಕೊಟ್ಟ ಮಾತಿಗೆ ಹಿಂದೆಗೆಯಲು ಯೆರೆವಿಾಯನು ಅವರನ್ನು ಖಂಡಿಸಿದ್ದು.

8 ಆಮೇಲೆ ಯೆಹೋವನು ಯೆರೆವಿಾಯನಿಗೆ ಒಂದು
ಮಾತನ್ನು ದಯಪಾಲಿಸಿದನು. ಇಷ್ಟರೊಳಗೆ ಅರಸ
ನಾದ ಚಿದ್ಕೀಯನು ಯೆರೂಸಲೇಮಿನವರೆಲ್ಲರೊಂದಿಗೆ
9 ಸೇರಿ-- ನಮ್ಮಲ್ಲಿ ಪ್ರತಿಯೊಬ್ಬನು ತನ್ನ ದಾಸದಾಸಿ
ಯರೊಳಗೆ ಇಬ್ರಿಯರನ್ನು ಬಿಡುಗಡೆಮಾಡುವನು;
ಯಾರೂ ತನ್ನ ಸಹೋದರನಾದ ಯೆಹೂದ್ಯನಿಂದ
ಇನ್ನು ಗುಲಾಮತನ ಮಾಡಿಸಿಕೊಳ್ಳುವದಿಲ್ಲ ಎಂದು
ಅವರಿಗೆ ವಿಮೋಚನೆಯನ್ನು ಪ್ರಕಟಿಸುವ ಒಡಂಬ
10 ಡಿಕೆಯನ್ನು ಮಾಡಿಕೊಂಡಿದ್ದನು. ಆಗ ತಾವು ತಮ್ಮ
ತಮ್ಮ ದಾಸದಾಸಿಯರನ್ನು ಬಿಡುಗಡೆಮಾಡಿ ಅವರಿಂದ
ಇನ್ನು ಗುಲಾಮತನ ಮಾಡಿಸಿಕೊಳ್ಳುವದಿಲ್ಲ ಎಂದು
ಒಡಂಬಡಿಕೆಗೆ ಒಪ್ಪಿಕೊಂಡ ಸಕಲ ಪ್ರಧಾನರೂ ಸಮಸ್ತ
ಪ್ರಜೆಗಳೂ ಅದರಂತೆ ನಡೆದು ಅವರನ್ನು ವಿಮೋಚಿಸಿ
11 ದರು. ಆದರೆ ಕೆಲವು ಕಾಲದ ಮೇಲೆ ಮನಸ್ಸನ್ನು
ಬೇರೆ ಮಾಡಿಕೊಂಡು ತಾವು ಬಿಟ್ಟಿದ್ದವರನ್ನು ಪುನಃ
ದಾಸದಾಸಿಯರನ್ನಾಗಿ ಸೇರಿಸಿಕೊಂಡು ಅಧೀನಮಾಡಿ
12 ಕೊಂಡರು. ಹೀಗಿರಲು ಯೆಹೋವನು ಯೆರೆವಿಾಯ
13 ನಿಗೆ 1)ಈ ವಾಕ್ಯವನ್ನು ದಯಪಾಲಿಸಿದನು—ಇಸ್ರಾ
ಯೇಲ್ಯರ ದೇವರಾದ ಯೆಹೋವನು ಇಂತೆನ್ನುತ್ತಾ
ನೆ—ಐಗುಪ್ತದೇಶದಲ್ಲಿ ದಾಸರಾಗಿದ್ದ ನಿಮ್ಮ ಪಿತೃ
14 ಗಳನ್ನು ನಾನು ಅಲ್ಲಿಂದ ಕರತಂದಾಗ—ತನ್ನನ್ನು
ನಿಮಗೆ ಮಾರಿಕೊಂಡು ಆರು ವರುಷ ನಿಮ್ಮ ದಾಸ
ನಾಗಿದ್ದ ಇಬ್ರಿಯನಾದ ಪ್ರತಿಯೊಬ್ಬ ಸಹೋದರ
ನನ್ನು ಏಳನೆಯ ವರುಷದಲ್ಲಿ ಸ್ವತಂತ್ರನನ್ನಾಗಿ ಬಿಟ್ಟು
ಬಿಡಿರಿ ಎಂದು ವಿಧಿಸಿ ಅವರೊಂದಿಗೆ ಒಡಂಬಡಿಕೆ
ಮಾಡಿಕೊಂಡೆನಷ್ಟೆ; ಆದರೆ ನಿಮ್ಮ ಪಿತೃಗಳು ನನ್ನ
15 ಮಾತಿಗೆ ಕಿವಿಗೊಡಲಿಲ್ಲ, ಕೇಳಲಿಲ್ಲ. ನೀವೋ ಈಗ
ಲೇ ಮನಮರುಗಿ ನಿಮ್ಮ ನಿಮ್ಮ ನೆರೆಹೊರೆಯವರಿಗೆ

ವಿಮೋಚನೆಯನ್ನು ಪ್ರಕಟಿಸಿ ನನ್ನ ಚಿತ್ತಾನುಸ
ವಾಗಿ ನಡೆದಿರಿ; ನನ್ನ ಹೆಸರಿನಿಂದ ಖ್ಯಾತಿಗೊಂಡಿರು
ಆಲಯದಲ್ಲಿ ನನ್ನ ಮುಂದೆ ಒಡಂಬಡಿಕೆಮಾ
ಕೊಂಡಿರಿ; ಆ ಮೇಲೆ ನೀವು ಮನಸ್ಸನ್ನು ಬೇರೆ ಮಾ
ಕೊಂಡಿರಿ; ಸ್ವತಂತ್ರರನ್ನಾಗಿ ಬಿಟ್ಟಿದ್ದವರನ್ನು ಪುನಃ ದಾ
ದಾಸಿಯರನ್ನಾಗಿ ಸೇರಿಸಿಕೊಂಡು ಅಧೀನಮಾಡಿಕೊ
ಡು ನನ್ನ ನಾಮವನ್ನು ಅಪಕೀರ್ತಿಗೆ ಗುರಿಮಾಡಿದಿ
ಆದಕಾರಣ ಯೆಹೋವನು ಇಂತೆನ್ನುತ್ತಾನೆ—ನೀ
ನನ್ನನ್ನು ಕೇಳಲಿಲ್ಲ, ನಿಮ್ಮ ನಿಮ್ಮ ಸಹೋದರರಿಗ
ನೆರೆಹೊರೆಯವರಿಗೂ ಬಿಡುಗಡೆಯನ್ನು ಪ್ರಕಟಿಸಲಿಲ್ಲ
ಇದೇ ಯೆಹೋವನ ನುಡಿ—ಇಗೋ, ನಾನು ನಿಮ
ಬಿಡುಗಡೆಯನ್ನು ಪ್ರಕಟಿಸುತ್ತೇನೆ; ನಿಮ್ಮನ್ನು ಖ
ವ್ಯಾಧಿಕ್ಷಾಮಗಳಿಗೆ ಗುರಿಯಾಗುವಂತೆ ಬಿಡುತ್ತೇನ
ನಿಮ್ಮನ್ನು ಲೋಕದ ಸಮಸ್ತ ರಾಜ್ಯಗಳಿಗೆ ಭಯ
ಸ್ಪದವಾಗುವಂತೆ ಮಾಡುವೆನು. ಕರುವನ್ನು ಸೀ
ಅದರ ಹೋಳುಗಳ ನಡುವೆ ಹಾದುಹೋಗಿ ನನ
ಮುಂದೆ ಮಾಡಿದ ಒಪ್ಪಂದದ ನಿಬಂಧನೆಗಳನ್ನು
ಕೊಳ್ಳದೆ ನನ್ನ ಒಡಂಬಡಿಕೆಯನ್ನು ಮಿಾರಿದ ಯೆಹ
ದದ ಪ್ರಧಾನರು, ಯೆರೂಸಲೇಮಿನ ಪ್ರಧಾನರು
ಕಂಚುಕಿಗಳು, ಯಾಜಕರು, ಕರುವಿನ ಹೋಳುಗ
ನಡುವೆ ಹಾದುಹೋದ ದೇಶದ ಸಕಲ ಜನರು, ಇ
ರೆಲ್ಲರನ್ನೂ ಇವರ ಪ್ರಾಣವನ್ನು ಹುಡುಕುವ ಶತ್ರ
ಗಳ ಕೈಗೆ ಕೊಡುವೆನು; ಇವರ ಹೆಣಗಳು ಆಕಾ
ಪಕ್ಷಿಗಳಿಗೂ ಭೂಜಂತುಗಳಿಗೂ ಆಹಾರವಾಗುವವ
ಯೆಹೂದದ ಅರಸನಾದ ಚಿದ್ಕೀಯನನ್ನೂ ಅವ
ಪ್ರಧಾನರನ್ನೂ ಅವರ ಪ್ರಾಣ ಹುಡುಕುವ ಶತ್ರುಗ
ಕೈಗೆ, ಅಂದರೆ ನಿಮ್ಮನ್ನು ಬಿಟ್ಟುಹೋಗಿರುವ ಬಾ
ಲಿನ ಅರಸನ ಕೈಗೆ ಕೊಡುವೆನು. ಯೆಹೋವನು
ಇಂತೆನ್ನುತ್ತಾನೆ—ಇಗೋ, ನಾನು ಅಪ್ಪಣೆಕೊಟ್ಟು
ಆ ಶತ್ರುಗಳು ಈ ಪಟ್ಟಣಕ್ಕೆ ಹಿಂದಿರುಗುವಂ
ಮಾಡುವೆನು; ಅವರು ಅದಕ್ಕೆ ವಿರುದ್ಧವಾಗಿ ಯುದ್ಧ
ಮಾಡಿ ಅದನ್ನು ಆಕ್ರಮಿಸಿ ಬೆಂಕಿಯಿಂದ ಸುಟ್ಟು
ಬಿಡುವರು; ಮತ್ತು ನಾನು ಯೆಹೂದದ ಪಟ್ಟಣ
ಗಳನ್ನು ಜನವಿಲ್ಲದ ಬೀಳುಭೂಮಿಯನ್ನಾಗಿ ಮಾಡು
ವೆನು.

ರೇಕಾಬ್ಯರ ವಿಧೇಯತೆಯ ದೃಷ್ಟಾಂತದಿಂದ ಯೆಹೂದ್ಯರ ಅವಿಧೇಯತೆಯನ್ನು ಖಂಡಿಸಿದ್ದು.

ಯೋಷೀಯನ ಮಗನೂ ಯೆಹೂದದ ಅರಸನೂ 3
ಆದ ಯೆಹೋಯಾಕೀಮನ ಕಾಲದಲ್ಲಿ ಯೆಹೋ
ವನು ಯೆರೆವಿಾಯನಿಗೆ ದಯಪಾಲಿಸಿದ ವಾಕ್ಯ—
ನೀನು ರೇಕಾಬನ ಮನೆತನದವರ ಬಳಿಗೆ ಹೋಗಿ
ಅವರ ಸಂಗಡ ಮಾತಾಡಿ ಅವರನ್ನು ಯೆಹೋವನ ಆ
ಯದ ಒಂದು ಕೋಣೆಯೊಳಕ್ಕೆ ಕರೆದು ದ್ರಾಕ್ಷಾರಸ
ವನ್ನು ಕುಡಿಯುವದಕ್ಕೆ ಕೊಡು. ಆಗ 2)ಪ್ರವಾದಿ
ಯು ಯೆರೆವಿಾಯನ ಮಗನೂ ಹಬಚ್ಚಿನ್ಯನ ಮೊಮ್ಮ
ಗನೂ ಆದ ಯಾಜನ್ಯನನ್ನು, ಅವನ ಅಣ್ಣತಮ್ಮಂದಿ

1) ಮೂಲ: ಯೆಹೋವನ ವಾಕ್ಯವನ್ನು. 2) ಮೂಲ: ನಾನು . . . ಅಂದೆನು.

ರನ್ನು, ಅವನ ಎಲ್ಲಾ ಮಕ್ಕಳನ್ನು, ಅಂತು ರೇಕಾಬನ
4 ಮನೆತನದವರೆಲ್ಲರನ್ನೂ ಯೆಹೋವನ ಆಲಯಕ್ಕೆ
ಕರೆದು ಇಗ್ದಲ್ಯನ ಮಗನೂ ದೇವರ ಮನುಷ್ಯನೂ
ಆದ ಹಾನಾನನ ಮಕ್ಕಳ ಕೋಣೆಯೊಳಕ್ಕೆ, ಅಂದರೆ
ಸರದಾರರ ಕೋಣೆಯ ಪಕ್ಕದಲ್ಲಿ, ಶಲ್ಲೂಮನ ಮಗ
ನೂ ದ್ವಾರಪಾಲಕನೂ ಆದ ಮಾಸೇಯನ ಕೋಣೆಯ
5 ಮೇಲ್ಗಡೆ ಇರುವ ಕೋಣೆಯೊಳಕ್ಕೆ ಬರಮಾಡಿ ಆ
ರೇಕಾಬನ ಮನೆತನದವರ ಮುಂದೆ ದ್ರಾಕ್ಷಾರಸ ತುಂ
ಬಿದ ಬಟ್ಟಲುಗಳನ್ನೂ ಪಂಚಪಾತ್ರೆಗಳನ್ನೂ ಇಟ್ಟು
6 ದ್ರಾಕ್ಷಾರಸವನ್ನು ಕುಡಿಯಿರಿ ಅಂದನು. ಅದಕ್ಕ
ವರು—ನಾವು ದ್ರಾಕ್ಷಾರಸವನ್ನು ಕುಡಿಯುವದೇ
ಇಲ್ಲ; ನಮ್ಮ ಪಿತೃವಾದ ರೇಕಾಬನ ಮಗನಾದ
ಯೋನಾದಾಬನು ನಮಗೆ—ನೀವಾಗಲಿ ನಿಮ್ಮ ಸಂತಾ
ನದವರಾಗಲಿ ಯುಗಯುಗಾಂತರಕ್ಕೂ ದ್ರಾಕ್ಷಾರಸ
7 ಕುಡಿಯಬಾರದು; ಮನೆಕಟ್ಟಬಾರದು, ಬೀಜ ಬಿತ್ತ
ಬಾರದು, ತೋಟಮಾಡಬಾರದು, ಅನುಭವಿಸಲೂ
ಬಾರದು; ನಿಮ್ಮ ಜೀವಮಾನವೆಲ್ಲಾ ಗುಡಾರಗಳಲ್ಲೇ
ವಾಸಿಸಬೇಕು; ಇದರಿಂದ ನೀವು ತಂಗುವ ದೇಶದಲ್ಲಿ
ನಿಮಗೆ ದೀರ್ಘಾಯುಷ್ಯವಾಗುವದು ಎಂದು ಅಪ್ಪಣೆ
8 ಕೊಟ್ಟಿದ್ದಾನೆ. ನಮ್ಮ ಪಿತೃವಾದ ರೇಕಾಬನ ಮಗ
ನಾಗಿರುವ ಯೋನಾದಾಬನು ನಮಗೆ ಕೊಟ್ಟ ಈ
ಅಪ್ಪಣೆಯನ್ನು ಎಲ್ಲಾ ವಿಷಯದಲ್ಲಿಯೂ ಕೈಕೊಳ್ಳು
ತ್ತಿದ್ದೇವೆ; ನಾವಾಗಲಿ ನಮ್ಮ ಹೆಂಡರಾಗಲಿ ಗಂಡು
ಹೆಣ್ಣುಮಕ್ಕಳಾಗಲಿ ಜೀವಮಾನದಲ್ಲೆಲ್ಲಾ ದ್ರಾಕ್ಷಾರಸ
9 ವನ್ನು ಕುಡಿಯುವದಿಲ್ಲ; ನಮ್ಮ ವಾಸಕ್ಕೆ ಮನೆಯನ್ನು
ಕಟ್ಟುವದಿಲ್ಲ; ನಮಗೆ ತೋಟಹೊಲಬೀಜಗಳೂ
10 ಇಲ್ಲ; ನಾವು ಗುಡಾರಗಳಲ್ಲಿ ವಾಸಿಸುತ್ತಾ ನಮ್ಮ
ಪಿತೃವಾದ ಯೋನಾದಾಬನು ನಮಗೆ ವಿಧಿಸಿದ್ದನ್ನೆಲ್ಲಾ
11 ಶಿರಸಾವಹಿಸಿ ನಡಿಸುತ್ತಿದ್ದೇವೆ. ಆದರೆ ಬಾಬೆಲಿನ
ಅರಸನಾದ ನೆಬೂಕದ್ನೆಚ್ಚರನು ದೇಶದೊಳಗೆ ನುಗ್ಗಿ
ದಾಗ—ಕಸ್ದೀಯರ ಮತ್ತು ಅರಾಮ್ಯರ ಸೈನ್ಯಗಳ
ಮುಂದೆ ನಿಲ್ಲದೆ ಯೆರೂಸಲೇಮಿಗೆ ಹೋಗೋಣ ಬನ್ನಿ
ಅಂದುಕೊಂಡು ಯೆರೂಸಲೇಮಿನಲ್ಲಿ ವಾಸಿಸುತ್ತಿ
ದ್ದೇವೆ ಎಂದು ಹೇಳಿದರು.
12 ಆಗ ಯೆಹೋವನು ಯೆರೆಮೀಯನಿಗೆ ಈ ಮಾ
13 ತನ್ನು ದಯಪಾಲಿಸಿದನು—ಇಸ್ರಾಯೇಲ್ಯರ ದೇವ
ರೂ ಸೇನಾಧೀಶ್ವರನೂ ಆದ ಯೆಹೋವನು ಇಂತೆನ್ನು
ತ್ತಾನೆ—ನೀನು ಹೋಗಿ ಯೆಹೂದ್ಯರಿಗೂ ಯೆರೂಸ
ಲೇಮಿನ ನಿವಾಸಿಗಳಿಗೂ ಹೀಗೆ ಹೇಳು—[ಇದರಿಂದ]
ನೀವು ಬುದ್ಧಿತಂದುಕೊಂಡು ನನ್ನ ಮಾತುಗಳನ್ನು
ಕೇಳುವದಿಲ್ಲವೋ ಎಂದು ಯೆಹೋವನು ಅನ್ನುತ್ತಾನೆ.
14 ರೇಕಾಬನ ಮಗನಾದ ಯೋನಾದಾಬನು ತನ್ನ ಸಂತಾ
ನದವರಿಗೆ ದ್ರಾಕ್ಷಾರಸವನ್ನು ಕುಡಿಯಬಾರದೆಂದು
ಕೊಟ್ಟ ಅಪ್ಪಣೆ ನೆರವೇರಿದೆ; ಅವರು ಇಂದಿನ ವರೆಗೂ
ಕುಡಿಯಲಿಲ್ಲ, ತಮ್ಮ ಪಿತೃವಿನ ಆಜ್ಞೆಯನ್ನು ಕೈ
ಕೊಂಡಿದ್ದಾರೆ; ನೀವೋ ನಾನು ನಿಮಗೆ ಎಡೆಬಿಡದೆ
ಹೇಳುತ್ತಾ ಬಂದರೂ ನನ್ನ ಮಾತಿಗೆ ಕಿವಿಗೊಡಲಿಲ್ಲ.
15 ಇದಲ್ಲದೆ ನಾನು ನನ್ನ ಸೇವಕರಾದ ಪ್ರವಾದಿಗಳನ್ನೆಲ್ಲಾ
ನಿಮ್ಮ ಬಳಿಗೆ ನಿತ್ಯವೂ ಕಳುಹಿಸುತ್ತಾ—ನೀವೆಲ್ಲರೂ
ನಿಮ್ಮ ನಿಮ್ಮ ದುರ್ಮಾರ್ಗಗಳಿಂದ ಹಿಂದಿರುಗಿ ನಿಮ್ಮ
ನಡತೆಗಳನ್ನು ಸರಿಪಡಿಸಿಕೊಳ್ಳಿರಿ, ಅನ್ಯದೇವತೆಗಳನ್ನು
ಹಿಂಬಾಲಿಸಿ ಸೇವಿಸದಿರಿ; ಹೀಗೆ ಮಾಡಿದರೆ ನಾನು
ನಿಮಗೂ ನಿಮ್ಮ ಪಿತೃಗಳಿಗೂ ದಯಪಾಲಿಸಿದ ದೇಶ
ದಲ್ಲಿ ನೀವು ಸುಖವಾಸಿಗಳಾಗಿರುವಿರಿ ಎಂದು ಹೇಳಿಸಿ
ದರೂ ನೀವು ನನ್ನ ಮಾತನ್ನು ಕೇಳಲಿಲ್ಲ, ಕಿವಿಗೊಡ
ಲೂ ಇಲ್ಲ. ರೇಕಾಬನ ಮಗನಾದ ಯೋನಾದಾಬನ 16
ಸಂತಾನದವರು ತಮ್ಮ ಪಿತೃವು ತಮಗೆ ವಿಧಿಸಿದ್ದನ್ನು
ಕೇಳಿ ಅನುಸರಿಸುತ್ತಿರುವಲ್ಲಿ ಈ ಜನರು ನನ್ನ ಮಾತ
ನ್ನು ಕೇಳದೆ ಹೋದದರಿಂದ ಇಗೋ, ನಾನು ಯೆಹೂ 17
ದ್ಯರಿಗೂ ಯೆರೂಸಲೇಮಿನವರೆಲ್ಲರಿಗೂ ಕೊಟ್ಟ ಶಾ
ಪದ ಕೇಡನ್ನೆಲ್ಲಾ ಅವರ ಮೇಲೆ ಬರಮಾಡುವೆನು;
ನಾನು ಹೇಳಿದರೂ ಅವರು ಕೇಳಲಿಲ್ಲ, ಕೂಗಿದರೂ
ಉತ್ತರಕೊಡಲಿಲ್ಲ ಎಂದು ಸೇನಾಧೀಶ್ವರ ಸ್ವಾಮಿ
ಯೂ ಇಸ್ರಾಯೇಲ್ಯರ ದೇವರೂ ಆದ ಯೆಹೋವನು
ಅನ್ನುತ್ತಾನೆ. ಮತ್ತು ಯೆರೆಮೀಯನು ರೇಕಾಬ್ಯ 18
ರಿಗೆ—ಇಸ್ರಾಯೇಲ್ಯರ ದೇವರೂ ಸೇನಾಧೀಶ್ವರನೂ
ಆದ ಯೆಹೋವನು ಇಂತೆನ್ನುತ್ತಾನೆ—ನೀವು ನಿಮ್ಮ
ಪಿತೃವಾದ ಯೋನಾದಾಬನ ಅಪ್ಪಣೆಯನ್ನು ಕೇಳಿ
ಅವನ ಸಕಲ ವಿಧಿಗಳನ್ನು ಅನುಸರಿಸಿ ಅವನು ಆಜ್ಞಾ
ಪಿಸಿದ್ದನ್ನೆಲ್ಲಾ ನೆರವೇರಿಸಿದ ಕಾರಣ ರೇಕಾಬನ 19
ಮಗನಾದ ಯೋನಾದಾಬನ ಸಂತಾನದವರೊಳಗೆ
ನನ್ನ ಸಮ್ಮುಖಸೇವೆಮಾಡತಕ್ಕವರು ತಲತಲಾಂತರ
ಕ್ಕೂ ಇದ್ದೇ ಇರುವರು. ಇಸ್ರಾಯೇಲ್ಯರ ದೇವರೂ
ಸೇನಾಧೀಶ್ವರನೂ ಆದ ಯೆಹೋವನು ಇದನ್ನು
ನುಡಿದಿದ್ದಾನೆ.

ಯೆಹೋಯಾಕೀಮನು ಯೆರೆಮೀಯನ ಪ್ರವಾದನೆಯ
ಗ್ರಂಥವನ್ನು ಸುಟ್ಟದ್ದು.

36 ಯೋಷೀಯನ ಮಗನೂ ಯೆಹೂದದ ಅರ
ಸನೂ ಆದ ಯೆಹೋಯಾಕೀಮನ ಆಳಿಕೆಯ
ನಾಲ್ಕನೆಯ ವರುಷದಲ್ಲಿ ಯೆಹೋವನು ಯೆರೆಮೀ
ಯನಿಗೆ ಈ ಮಾತನ್ನು ದಯಪಾಲಿಸಿದನು—ನೀನು 2
ಗ್ರಂಥ ಬರೆಯತಕ್ಕ ಸುರಳಿಯನ್ನು ತೆಗೆದುಕೊಂಡು
ನಾನು ಯೋಷೀಯನ ಕಾಲದಲ್ಲಿ ನಿನ್ನ ಸಂಗಡ
ಮಾತಾಡಿದಂದಿನಿಂದ ಇಂದಿನ ವರೆಗೆ [1]ಇಸ್ರಾಯೇಲು,
ಯೆಹೂದ, ಸಕಲ ಜನಾಂಗಗಳು, ಇವುಗಳ ವಿಷಯ
ವಾಗಿ ನಿನಗೆ ನುಡಿಯುತ್ತಾ ಬಂದಿರುವ ಮಾತುಗಳ
ನ್ನೆಲ್ಲಾ ಬರೆ. ಒಂದು ವೇಳೆ ಯೆಹೂದ ವಂಶ 3
ದವರು ನಾನು ಅವರಿಗೆ ಮಾಡಬೇಕೆಂದಿರುವ ಕೇಡನ್ನು
ಕೇಳಿ ತಮ್ಮ ತಮ್ಮ ದುರ್ಮಾರ್ಗಗಳಿಂದ ಹಿಂದಿರು
ಗಿಯಾರು; ಹಿಂದಿರುಗಿದರೆ ಅವರ ಪಾಪಾಪರಾಧ
ಗಳನ್ನು ಕ್ಷಮಿಸಿಬಿಡುವೆನು. ಆಗ ಯೆರೆಮೀಯನು 4
ನೇರೀಯನ ಮಗನಾದ ಬಾರೂಕನನ್ನು ಕರೆಯಿಸಿ
ಯೆಹೋವನ ಮಾತುಗಳನ್ನೆಲ್ಲಾ ನುಡಿಯಲು ಅವನು
ಯೆರೆಮೀಯನ ಬಾಯಿಂದ ಬಂದ ಹಾಗೆಯೇ ಅವು

1) ಪಾಠಾಂತರ: ಯೆರೂಸಲೇಮು.

5 ಗಳನ್ನು ಗ್ರಂಥದ ಸುರಳಿಯಲ್ಲಿ ಬರೆದನು. ಮತ್ತು
ಯೆರೆಮೀಯನು ಬಾರೂಕನಿಗೆ—ಯೆಹೋವನ ಆಲ
6 ಯದೊಳಗೆ ಪ್ರವೇಶಿಸಲು ನನಗೆ ತಡೆಯಾಗಿದೆ; ನೀನೇ
ಹೋಗಿ ನನ್ನ ಬಾಯಿಂದ ಬಂದ ಹಾಗೆ ನೀನು ಬರೆದ
ಈ ಸುರಳಿಯಲ್ಲಿನ ಯೆಹೋವನ ಮಾತುಗಳನ್ನು
ಉಪವಾಸದ ದಿನದಲ್ಲಿ ಯೆಹೋವನ ಆಲಯದೊಳಗೆ
[ಯೆರೂಸಲೇಮಿನ] ಜನರಿಗೂ ತಮ್ಮ ತಮ್ಮ ಊರು
ಗಳಿಂದ ಬಂದಿರುವ ಎಲ್ಲಾ ಯೆಹೂದ್ಯರಿಗೂ ಕೇಳಿಸು
7 ವಂತೆ ಓದು. ಅವರು ಒಂದು ವೇಳೆ ಯೆಹೋವನಿಗೆ
ಶರಣಾಗತರಾಗಿ ತಮ್ಮ ದುರ್ಮಾರ್ಗಗಳಿಂದ ಹಿಂದಿರು
ಗಿಯಾರು; ಯೆಹೋವನು ಈ ಜನರ ಮೇಲೆ ತೀರಿಸ
ಬೇಕೆಂದು ಪ್ರಕಟಿಸಿರುವ ಕೋಪರೋಷಗಳು ಅಪಾರ
8 ವಾಗಿವೆ ಎಂದು ಅಪ್ಪಣೆಕೊಟ್ಟನು. ನೇರೀಯನ ಮಗ
ನಾದ ಬಾರೂಕನು ಸುರಳಿಯಲ್ಲಿನ ಯೆಹೋವನ
ಮಾತುಗಳನ್ನು ಯೆಹೋವನ ಆಲಯದೊಳಗೆ ಓದಿ
ಪ್ರವಾದಿಯಾದ ಯೆರೆಮೀಯನು ವಿಧಿಸಿದಂತೆಯೇ
9 ಮಾಡಿದನು. ಯೋಷೀಯನ ಮಗನೂ ಯೆಹೂದದ
ಅರಸನೂ ಆದ ಯೆಹೋಯಾಕೀಮನ ಆಳಿಕೆಯ ಐದ
ನೆಯ ವರುಷದ ಒಂಭತ್ತನೆಯ ತಿಂಗಳಿನಲ್ಲಿ ಯೆರೂ
ಸಲೇಮಿನವರೆಲ್ಲರೂ ಯೆಹೂದದ ಊರುಗಳಿಂದ
ಯೆರೂಸಲೇಮಿಗೆ ಬಂದವರೆಲ್ಲರೂ ಯೆಹೋವನ
ಆರಾಧನೆಯ ಉಪವಾಸವನ್ನು ಗೊತ್ತುಮಾಡಿ ಪ್ರಕ
10 ಟಿಸಿದರು. ಆಗ ಬಾರೂಕನು ಯೆಹೋವನ ಆಲಯ
ದೊಳಗೆ ಮೇಲಣ ಪ್ರಾಕಾರದಲ್ಲಿ ಹೊಸ ಬಾಗಿಲ
ಹತ್ತಿರ ಲೇಖಕನಾದ ಶಾಫಾನನ ಮಗನಾಗಿರುವ
ಗೆಮರ್ಯನ ಕೋಣೆಯಲ್ಲಿ ಸುರಳಿಯಲ್ಲಿನ ಯೆರೆ
ಮೀಯನ ಮಾತುಗಳನ್ನು ಎಲ್ಲಾ ಜನರಿಗೂ ಕೇಳಿ
11 ಸುವಂತೆ ಓದಿದನು. ಶಾಫಾನನ ಮೊಮ್ಮಗನೂ ಗೆಮ
ರ್ಯನ ಮಗನೂ ಆದ ಮೀಕಾಯನು ಸುರಳಿಯ
12 ಲ್ಲಿನ ಯೆಹೋವನ ಮಾತುಗಳನ್ನೆಲ್ಲಾ ಕೇಳಿ ಅರ
ಮನೆಯಲ್ಲಿ ಲೇಖಕನ ಕೋಣೆಗೆ ಇಳಿದುಹೋದನು.
ಅಲ್ಲಿ ಲೇಖಕನಾದ ಎಲೀಷಾಮನು, ಶೆಮಾಯನ
ಮಗನಾದ ದೆಲಾಯನು, ಅಕ್ಬೋರನ ಮಗನಾದ
ಎಲ್ನಾಥಾನನು, ಶಾಫಾನನ ಮಗನಾದ ಗೆಮರ್ಯ
ನು, ಹನನೀಯನ ಮಗನಾದ ಚಿದ್ಕೀಯನು, ಅಂತು
13 ಪ್ರಧಾನರೆಲ್ಲರೂ ಕೂತುಕೊಂಡಿದ್ದರು. ಮೀಕಾಯ
ನು ಜನರ ಮುಂದೆ ಗ್ರಂಥವನ್ನು ಓದುತ್ತಿರುವ
ಬಾರೂಕನ ಬಾಯಿಂದ ತಾನು ಕೇಳಿದ್ದ ಮಾತುಗಳ
14 ನ್ನೆಲ್ಲಾ ಅವರಿಗೆ ತಿಳಿಸಲು ಸಕಲ ಪ್ರಧಾನರು
ಬಾರೂಕನಿಗೆ—ನೀನು ಜನರ ಮುಂದೆ ಓದಿದ
ಸುರಳಿಯನ್ನು ಕೈಯಲ್ಲಿ ತೆಗೆದುಕೊಂಡು ಬಾ
ಎಂದು ನೆಥನ್ಯನ ಮಗನೂ ಶೆಲೆಮ್ಯನ ಮೊಮ್ಮಗನೂ
ಕೂಷಿಯ ಮರಿಮಗನೂ ಆದ ಯೆಹೂದಿಯ
ಮೂಲಕ ಹೇಳಿಕಳುಹಿಸಿದರು. ಕೂಡಲೆ ನೇರೀಯನ
ಮಗನಾದ ಬಾರೂಕನು ಸುರಳಿಯನ್ನು ಕೈಯಲ್ಲಿ
15 ತೆಗೆದುಕೊಂಡು ಅವರ ಬಳಿಗೆ ಬಂದನು. ಅವರು
ಅವನಿಗೆ—ದಯಮಾಡಿ ಕೂತುಕೊಂಡು ನಮ್ಮ
ಮುಂದೆ ಓದು ಎಂದು ಹೇಳಲು ಬಾರೂಕನು

ಅದನ್ನು ಅವರ ಮುಂದೆ ಓದಿದನು. ಅವರು
ಮಾತುಗಳನ್ನೆಲ್ಲಾ ಕೇಳಿ ಬೆಬ್ಬರಬಿದ್ದು ಒಬ್ಬರನೊ
ಬ್ಬರು ನೋಡುತ್ತಾ, ನಾವು ಈ ಮಾತುಗಳನ್ನೆಲ್ಲಾ
ಅರಸನಿಗೆ ತಿಳಿಸಲೇ ಬೇಕು ಎಂದು ಬಾರೂಕನಿ
ಹೇಳಿದರು. ಮತ್ತು, ನೀನು ಈ ಮಾತುಗಳನ್ನೆಲ್ಲಾ
ಹೇಗೆ ಬರೆದಿ? ಅವನ ಬಾಯಿಂದ ಬಂದ ಹಾಗೆಯೋ
ದಯಮಾಡಿ ನಮಗೆ ತಿಳಿಸು ಎಂದು ಅವನನ್ನು
ಕೇಳಲು ಬಾರೂಕನು ಅವರಿಗೆ—ಅವನು ಈ ಮಾತ
ಗಳನ್ನೆಲ್ಲಾ ತನ್ನ ಬಾಯಿಂದಲೇ ನನಗೆ ನುಡಿದನು
ನಾನು ಅವುಗಳನ್ನು ಮಶಿಯಿಂದ ಈ ಪುಸ್ತಕದಲ್ಲಿ
ಬರೆದೆನು ಎಂದು ಉತ್ತರಕೊಟ್ಟನು. ಆಗ ಪ್ರಧಾ
ನರು ಬಾರೂಕನಿಗೆ—ಹೊರಡು, ನೀನೂ ಯೆ
ಮೀಯನೂ ಅಡಗಿಕೊಳ್ಳಿರಿ, ನೀವೆಲ್ಲಿದ್ದೀರೆಂಬದ
ಯಾರಿಗೂ ಗೊತ್ತಾಗಬಾರದು ಎಂದು ಹೇ
ಸುರಳಿಯನ್ನು ಲೇಖಕನಾದ ಎಲೀಷಾಮನ ಕೋಣ
ಯಲ್ಲಿ ಇಟ್ಟುಬಿಟ್ಟು ಪ್ರಾಕಾರದಲ್ಲಿನ ಅರಸನ ಬಳಿಗ
ಹೋಗಿ ಆ ಮಾತುಗಳನ್ನೆಲ್ಲಾ ಅವನಿಗೆ ಅರಿ
ಮಾಡಿದರು. ಕೂಡಲೆ ಅರಸನು ಸುರಳಿಯನ್ನು
ತರುವದಕ್ಕೆ ಯೆಹೂದಿಯನ್ನು ಕಳುಹಿಸಿದನು
ಅವನು ಲೇಖಕನಾದ ಎಲೀಷಾಮನ ಕೋಣೆಯೊ
ಗಿಂದ ಅದನ್ನು ತೆಗೆದುಕೊಂಡು ಬಂದು ಅರಸನ
ಮತ್ತು ಅವನ ಪಕ್ಕದಲ್ಲಿ ನಿಂತಿದ್ದ ಸಕಲ ಪ್ರಧಾನರ
ಮುಂದೆ ಓದಿದನು. ಆಗ ಪುಷ್ಯಮಾಸ; ಅರಸನು
ಚಳಿಗಾಲದ ಮನೆಯಲ್ಲಿ ಕೂತಿದ್ದನು; ಅವನ ಮುಂದ
ಅಗ್ಗಿಷ್ಟಿಕೆಯು ಉರಿಯುತ್ತಿತ್ತು. ಯೆಹೂದಿಯು
ಬರವಣಿಗೆಯ ಮೂರು ನಾಲ್ಕು ಪುಟಗಳನ್ನು ಓದಿದ
ಹಾಗೆಲ್ಲಾ ಅರಸನು ಆಯಾ ಭಾಗಗಳನ್ನು ಚೂರಿ
ಯಿಂದ ಕತ್ತರಿಸಿ ಸುರಳಿಯು ಸಂಪೂರ್ಣವಾಗಿ
ಸುಟ್ಟುಹೋಗುವ ತನಕ ಅಗ್ಗಿಷ್ಟಿಕೆಯ ಬೆಂಕಿಯಲ್ಲಿ
ಹಾಕುತ್ತಾ ಬಂದನು. ಅರಸನಾಗಲಿ ಸುರಳಿಯ
ಮಾತುಗಳನ್ನೆಲ್ಲಾ ಕೇಳಿದ ಅವನ ಸೇವಕರಲ್ಲಿ
ಯಾರೇ ಆಗಲಿ ಭಯಪಡಲಿಲ್ಲ, ಬಟ್ಟೆಗಳನ್ನು
ಹರಿದುಕೊಳ್ಳಲಿಲ್ಲ. ಎಲ್ನಾಥಾನನೂ ದೆಲಾಯನೂ
ಗೆಮರ್ಯನೂ—ದಯಮಾಡಿ ಸುರಳಿಯನ್ನು ಸುಡ
ಬಾರದೆಂದು ಅರಸನಿಗೆ ವಿಜ್ಞಾಪನೆಮಾಡಿದರೂ
ಅವನು ಅವರ ಮಾತನ್ನು ಕೇಳಲಿಲ್ಲ. ಮತ್ತು
ಅರಸನು 1)ರಾಜವಂಶೀಯನಾದ ಎರಹ್ಮೆಯೇಲ
ಅಜ್ರಿಯೇಲನ ಮಗನಾದ ಸೆರಾಯ, ಅಬ್ದೆಯೇಲನ
ಮಗನಾದ ಶಲೆಮ್ಯ, ಇವರಿಗೆ ಲೇಖಕನಾದ ಬಾರೂ
ಕನನ್ನೂ ಪ್ರವಾದಿಯಾದ ಯೆರೆಮೀಯನನ್ನೂ ಹಿಡಿ
ಯಬೇಕೆಂದು ಅಪ್ಪಣೆಕೊಟ್ಟನು; ಆದರೆ ಯೆಹೋ
ವನು ಅವರನ್ನು ಮರೆಯಲ್ಲಿಟ್ಟನು.

ಯೆರೆಮೀಯನ ಬಾಯಿಂದ ಬಂದ ಹಾಗೆ ಬಾರೂ
ಕನು ಬರೆದಿದ್ದ ಮಾತುಗಳ ಸುರಳಿಯನ್ನು ಅರಸನು
ಸುಟ್ಟುಬಿಟ್ಟ ಮೇಲೆ ಯೆಹೋವನು ಯೆರೆಮೀಯ
ನಿಗೆ ಈ ವಾಕ್ಯವನ್ನು ದಯಪಾಲಿಸಿದನು—ನೀನು
ಇನ್ನೊಂದು ಸುರಳಿಯನ್ನು ತೆಗೆದುಕೊಂಡು ಯೆಹೂ
ದದ ಅರಸನಾದ ಯೆಹೋಯಾಕೀಮನು ಸುಟ್ಟ

1) ಅಥವಾ: ಹಮ್ಮೆಲೆಕನ ಮಗನಾದ.

ಮೊದಲನೆಯ ಸುರಳಿಯಲ್ಲಿದ್ದ ಪೂರ್ವದ ಆ ಮಾತು
29 ಗಳನ್ನೆಲ್ಲಾ ಪುನಃ ಬರೆಯಿಸು. ಅಲ್ಲದೆ ಯೆಹೂ
ದದ ಅರಸನಾದ ಯೆಹೋಯಾಕೀಮನ ವಿಷಯದಲ್ಲಿ
ಹೀಗೆ [1]ಬರೆಯಿಸು—ಯೆಹೋವನು ಇಂತೆನ್ನು
ತ್ತಾನೆ—ಬಾಬೆಲಿನ ಅರಸನು ಬಂದು ಈ ದೇಶವನ್ನು
ಜನಪಶುಗಳಿಲ್ಲದಂತೆ ಹಾಳುಮಾಡುವದು ಖಂಡಿತ
ಎಂದು ಈ ಸುರಳಿಯನ್ನು ಬರೆಯಿಸಿದ್ದೇಕೆ ಎಂಬ
ದಾಗಿ ನೀನು ಆಕ್ಷೇಪಿಸಿ ಅದನ್ನು ಸುಟ್ಟುಬಿಟ್ಟೆಯಲ್ಲ;
30 ಆದಕಾರಣ ಯೆಹೂದದ ಅರಸನಾದ ಯೆಹೋಯಾ
ಕೀಮನ ವಿಷಯದಲ್ಲಿ ಯೆಹೋವನು ಇಂತೆನ್ನು
ತ್ತಾನೆ—ಇವನ ಸಂತಾನದಲ್ಲಿ ಯಾವನೂ ದಾವೀದನ
ಸಿಂಹಾಸನಾರೂಢನಾಗನು; ಇವನ ಹೆಣವು ಬಿಸಾಡ
ಲ್ಪಟ್ಟು ಹಗಲಿನ ತಾಪಕ್ಕೂ ರಾತ್ರಿಯ ಚಳಿಗೂ
31 ಈಡಾಗುವದು. ಇವನೂ ಇವನ ಸಂತತಿಯವರೂ
ಸೇವಕರೂ ನಡಿಸಿದ ಅಧರ್ಮಕ್ಕಾಗಿ ಇವರನ್ನು ದಂಡಿ
ಸುವೆನು. ನಾನು ಇವರನ್ನೂ ಯೆರೂಸಲೇಮಿನವ
ರನ್ನೂ ಯೆಹೂದ್ಯರನ್ನೂ ನಿಮಗೆ ಬಹು ಕೇಡಾಗುವ
ದೆಂದು ಎಚ್ಚರಿಸಿದರೂ ಇವರುಗಳು ಕೇಳಲಿಲ್ಲವಾದ್ದ
ರಿಂದ ಆ ಕೇಡನ್ನೆಲ್ಲಾ ಇವರೆಲ್ಲರ ಮೇಲೆ ಬರಮಾಡು
32 ವೆನು. ಆಗ ಯೆರೆಮೀಯನು ಇನ್ನೊಂದು ಸುರ
ಳಿಯನ್ನು ತೆಗೆದುಕೊಂಡು ನೇರೀಯನ ಮಗನಾಗಿ
ರುವ ಲೇಖಕನಾದ ಬಾರೂಕನಿಗೆ ಕೊಡಲು ಅವನು
ಅದರಲ್ಲಿ ಯೆಹೂದದ ಅರಸನಾದ ಯೆಹೋಯಾ
ಕೀಮನು ಬೆಂಕಿಯಲ್ಲಿ ಸುಟ್ಟ ಗ್ರಂಥದ ಎಲ್ಲಾ
ಮಾತುಗಳನ್ನಲ್ಲದೆ ಇನ್ನು ಇಂಥಾ ಅನೇಕ ಮಾತು
ಗಳನ್ನು ಯೆರೆಮೀಯನ ಬಾಯಿಂದ ಬಂದ ಹಾಗೆ ಬರೆ
ದನು.

ಬಿಟ್ಟುಹೋದ ಕಸ್ದೀಯರು ಹಿಂದಿರುಗುವರೆಂದು ಯೆರೆಮೀ
ಯನು ಚಿದ್ಕೀಯನನ್ನು ಎಚ್ಚರಿಸಿದ್ದು.

37 ಯೋಷೀಯನ ಮಗನಾದ ಚಿದ್ಕೀಯನು ಬಾಬೆ
ಲಿನ ಅರಸನಾದ ನೆಬೂಕದ್ನೆಚ್ಚರನಿಂದ ಯೆಹೂ
ದದೇಶದ ಪಟ್ಟಕ್ಕೆ ತರಲ್ಪಟ್ಟು ಯೆಹೋಯಾಕೀಮನ
ಮಗನಾದ ಕೊನ್ಯನಿಗೆ ಬದಲಾಗಿ ರಾಜ್ಯವಾಳುತ್ತಿ
2 ದ್ದಾಗ ಅವನಾಗಲಿ ಅವನ ಸೇವಕರಾಗಲಿ ದೇಶದ
ಜನರಾಗಲಿ ಯೆಹೋವನು ಪ್ರವಾದಿಯಾದ ಯೆರೆ
ಮೀಯನಿಂದ ನುಡಿಸಿದ ಮಾತುಗಳನ್ನು ಕೇಳದೆ
ಹೋದರು.
3 ಹೀಗಿರುವಲ್ಲಿ ಅರಸನಾದ ಚಿದ್ಕೀಯನು ಶೆಲೆಮ್ಯನ
ಮಗನಾದ ಯೆಹೂಕಲ, ಯಾಜಕ ಮಾಸೇಯನ
ಮಗನಾದ ಚೆಫನ್ಯ, ಇವರ ಮೂಲಕ—ದಯಮಾಡಿ
ನಮಗಾಗಿ ನಮ್ಮ ದೇವರಾದ ಯೆಹೋವನನ್ನು
ಪ್ರಾರ್ಥಿಸು ಎಂದು ಪ್ರವಾದಿಯಾದ ಯೆರೆಮೀಯನಿಗೆ
4 ಹೇಳಿಕಳುಹಿಸಿದನು. ಆ ಕಾಲದಲ್ಲಿ ಯೆರೆಮೀ
ಯನು ಇನ್ನೂ ಸೆರೆಯಾಗಿರಲಿಲ್ಲ; ಜನರಲ್ಲಿ ಹೋ
5 ಗುತ್ತಾ ಬರುತ್ತಾ ಇದ್ದನು. ಆಗ ಫರೋಹನ
ಸೈನ್ಯವು ಐಗುಪ್ತದಿಂದ ಹೊರಟಿತ್ತು; ಇದನ್ನು ಕೇಳಿ
ಯೆರೂಸಲೇಮನ್ನು ಮುತ್ತಿದ್ದ ಕಸ್ದೀಯರು ಬಿಟ್ಟು
ಹೋಗಿದ್ದರು. ಹೀಗಿರಲು ಯೆಹೋವನು ಪ್ರವಾದಿ 6
ಯಾದ ಯೆರೆಮೀಯನಿಗೆ ಈ ವಾಕ್ಯವನ್ನು ದಯಪಾಲಿ
ಸಿದನು—ಇಸ್ರಾಯೇಲ್ಯರ ದೇವರಾದ ಯೆಹೋವನು 7
ಇಂತೆನ್ನುತ್ತಾನೆ—ನನ್ನನ್ನು ವಿಚಾರಿಸುವದಕ್ಕೆ ನಿಮ್ಮ
ನ್ನು ನನ್ನ ಬಳಿಗೆ ಕಳುಹಿಸಿದ ಯೆಹೂದದ ಅರಸನಿಗೆ
ಹೀಗೆ ಹೇಳಿರಿ—ಇಗೋ, ನಿಮ್ಮ ಸಹಾಯಕ್ಕೆ ಹೊರ
ಟಿರುವ ಫರೋಹನ ಸೈನ್ಯವು ಸ್ವದೇಶವಾದ ಐಗು
ಪ್ತಕ್ಕೆ ಹಿಂದಿರುಗುವದು. ಕಸ್ದೀಯರು ಪುನಃ ಮತ್ತೆ 8
ಬಂದು ಈ ಪಟ್ಟಣವನ್ನು ಪ್ರತಿಭಟಿಸಿ ಆಕ್ರಮಿಸಿ
ಬೆಂಕಿಯಿಂದ ಸುಟ್ಟುಬಿಡುವರು. ಯೆಹೋವನು 9
ಇಂತೆನ್ನುತ್ತಾನೆ—ಕಸ್ದೀಯರು ನಮ್ಮಿಂದ ತೊಲಗಿ
ಹೋಗುವದು ಖಂಡಿತ ಎಂದು ನಿಮ್ಮನ್ನು ನೀವೇ
ಮೋಸಪಡಿಸಿಕೊಳ್ಳಬೇಡಿರಿ; ಅವರು ತೊಲಗುವದೇ
ಇಲ್ಲ. ನಿಮ್ಮನ್ನು ಪ್ರತಿಭಟಿಸುವ ಕಸ್ದೀಯರಲ್ಲಿ 10
ಗಾಯಪಟ್ಟವರು ಮಾತ್ರ ಉಳಿಯುವಂತೆ ನೀವು ಆ
ಸೈನ್ಯವನ್ನೆಲ್ಲಾ ಒಂದು ವೇಳೆ ಹೊಡೆದಿದ್ದರೂ ಆ
ಗಾಯಪಟ್ಟವರೇ ತಮ್ಮ ತಮ್ಮ ಗುಡಾರಗಳಿಂದ
ಎದ್ದು ಬಂದು ಈ ಪಟ್ಟಣವನ್ನು ಬೆಂಕಿಯಿಂದ ಸುಟ್ಟು
ಬಿಡುತ್ತಿದ್ದರು.

ಪ್ರಧಾನರು ಯೆರೆಮೀಯನನ್ನು ಸೆರೆಹಾಕಿಸಿದ್ದು;
ಚಿದ್ಕೀಯನು ದಯೆತೋರಿಸಿದ್ದು.

ಕಸ್ದೀಯರ ಸೈನ್ಯವು ಫರೋಹನ ಸೈನ್ಯಕ್ಕೆ ಭಯ 11
ಪಟ್ಟು ಯೆರೂಸಲೇಮನ್ನು ಬಿಟ್ಟುಹೋದ ಮೇಲೆ
ಯೆರೆಮೀಯನು ಬೆನ್ಯಾಮೀನ್ ಸೀಮೆಯಲ್ಲಿ ತನಗೆ 12
ಬರಬೇಕಾದ ಸ್ವಾಸ್ತ್ಯವನ್ನು ಜನರ ಸಮಕ್ಷಮ ತೆಗೆ
ದುಕೊಳ್ಳಲು ಯೆರೂಸಲೇಮಿನಿಂದ ಅಲ್ಲಿಗೆ ಹೊರಟು
ಬೆನ್ಯಾಮೀನಿನ ಬಾಗಿಲನ್ನು ಹಾದುಹೋಗುತ್ತಿರು 13
ವಾಗ ಶೆಲೆಮ್ಯನ ಮಗನೂ ಹನನ್ಯನ ಮೊಮ್ಮಗನೂ
ಆದ ಇರೀಯನು ಅಲ್ಲಿ ಪಹರೆಕೊಡುತ್ತಿದ್ದ ಪ್ರವಾದಿ
ಯಾದ ಆ ಯೆರೆಮೀಯನನ್ನು ಹಿಡಿದು ನೀನು
ಕಸ್ದೀಯರನ್ನು ಮರೆಹೊಗಲು ಹೋಗುತ್ತಿದ್ದೀ ಎಂದು
ಹೇಳಿದನು. ಅದಕ್ಕೆ ಯೆರೆಮೀಯನು—ಅದು ಸುಳ್ಳು, 14
ನಾನು ಕಸ್ದೀಯರನ್ನು ಮರೆಹೊಗುವವನಲ್ಲ ಎನ್ನ
ಲು ಇರೀಯನು ಅವನ ಮಾತನ್ನು ಕೇಳದೆ ಅವನನ್ನು
ಹಿಡಿದು ಪ್ರಧಾನರ ಬಳಿಗೆ ಕರತಂದನು. ಆ ಪ್ರಧಾ 15
ನರು ಯೆರೆಮೀಯನ ಮೇಲೆ ಕೋಪಗೊಂಡು
ಅವನನ್ನು ಹೊಡೆಯಿಸಿ ತಾವು ಬಂದಿಖಾನೆಯ
ನ್ನಾಗಿ ಮಾಡಿದ್ದ ಲೇಖಕನಾದ ಯೆಹೋನಾಥಾ
ನನ ಮನೆಯಲ್ಲಿ ಸೆರೆಹಾಕಿಸಿದರು. ಯೆರೆಮೀ 16
ಯನು ಆ ಬಂದಿಖಾನೆಯ ನೆಲಮನೆಗಳಲ್ಲಿ ಕೆಲವು
ದಿವಸ ಇದ್ದ ಮೇಲೆ ಅರಸನಾದ ಚಿದ್ಕೀಯನು ಅವ 17
ನನ್ನು ಕರತರಿಸಿ ಯೆಹೋವನಿಂದ ದೈವೋಕ್ತಿಯು
ದೊರೆಯಿತೋ ಎಂದು ತನ್ನ ಮನೆಯಲ್ಲಿ ರಹಸ್ಯ
ವಾಗಿ ವಿಚಾರಿಸಲು ಯೆರೆಮೀಯನು—ಹೌದು,
ದೊರೆಯಿತು. ನೀನು ಬಾಬೆಲಿನ ಅರಸನ ಕೈಯಲ್ಲಿ

1) ಮೂಲ: ಹೇಳು.

18 ಸಿಕ್ಕಿ ಬೀಳುವಿ ಅಂದನು. ಅಲ್ಲದೆ ಯೆರೆಮೀಯನು
ಅರಸನಾದ ಚಿದ್ಕೀಯನಿಗೆ— ನೀವು ನನ್ನನ್ನು ಸೆರೆ
ಯಲ್ಲಿ ಹಾಕಿಸಿದ್ದಕ್ಕೆ ನಾನು ನಿನಗಾಗಲಿ ನಿನ್ನ ಸೇವ
ಕರಿಗಾಗಲಿ ಈ ಜನರಿಗಾಗಲಿ ಯಾವ ಅಪರಾಧವನ್ನು
19 ಮಾಡಿದೆನು? ಬಾಬೆಲಿನ ಅರಸನು ನಿಮಗೂ ಈ
ದೇಶಕ್ಕೂ ವಿರುದ್ಧವಾಗಿ ಬಾರನು ಎಂದು ನಿಮಗೆ
20 ಸಾರಿದ ನಿಮ್ಮ ಪ್ರವಾದಿಗಳು ಈಗ ಎಲ್ಲಿ? ಎನ್ನೊಡೆ
ಯನೇ, ಅರಸನೇ, ಈಗ ದಯಮಾಡಿ ಲಾಲಿಸು;
ಲೇಖಕನಾದ ಯೆಹೋನಾಥಾನನ ಮನೆಗೆ ನನ್ನನ್ನು
ತಿರಿಗಿ ಸೇರಿಸಬೇಡ, ಅಲ್ಲೇ ಸತ್ತೇನು, ನನ್ನ ಬಿನ್ನ
ಹವು ನಿನಗೆ ಮುಟ್ಟಲಿ ಎಂದು ಅರಿಕೆಮಾಡಿದನು.
21 ಅರಸನಾದ ಚಿದ್ಕೀಯನು ಇದನ್ನು ಕೇಳಿ ಅಪ್ಪಣೆ
ಕೊಡಲು ಯೆರೆಮೀಯನನ್ನು ಕಾರಾಗೃಹದ ಅಂಗಳ
ದಲ್ಲಿಟ್ಟು ಪಟ್ಟಣದ ರೊಟ್ಟಿಯೆಲ್ಲಾ ತೀರುವ ತನಕ
ರೊಟ್ಟಿಯ ಪೇಟೆಯಿಂದ ದಿನವಹಿ ಒಂದೊಂದು ರೊಟ್ಟಿ
ಯನ್ನು ಅವನಿಗೆ ತಂದು ಕೊಡುತ್ತಿದ್ದರು. ಹೀಗೆ
ಯೆರೆಮೀಯನು ಕಾರಾಗೃಹದ ಅಂಗಳದಲ್ಲೇ ವಾಸಿಸು
ತ್ತಿದ್ದನು.

ಎಬೆದ್ಮೆಲೆಕನು ಯೆರೆಮೀಯನನ್ನು ಬಾವಿಯಿಂದ ಎತ್ತಿದ್ದು.

38 ಯೆರೆಮೀಯನು ಸಮಸ್ತ ಜನರಿಗೆ—ಯೆಹೋ
ವನು ಇಂತೆನ್ನುತ್ತಾನೆ—ಪಟ್ಟಣದಲ್ಲಿ ನಿಲ್ಲುವವನು
ಖಡ್ಗಕ್ಷಾಮವ್ಯಾಧಿಗಳಿಂದ ಸಾಯುವನು; ಪಟ್ಟಣ
ವನ್ನು ಬಿಟ್ಟುಹೋಗಿ ಕಸ್ದೀಯರನ್ನು ಮರೆಹೊಗು
ವವನು ಬದುಕುವನು, ತನ್ನ ಪ್ರಾಣವೊಂದನ್ನೇ ಬಾಚಿ
2 ಕೊಂಡು ಹೋಗಿ ಬದುಕುವನು; ಬಾಬೆಲಿನ ಅರಸನು
ಈ ಪಟ್ಟಣವನ್ನು ಆಕ್ರಮಿಸುವನು; ಅದು ಅವನ
ಸೈನ್ಯದ ವಶವಾಗುವದು ಖಂಡಿತ ಎಂದು ಸಾರುತ್ತಿರು
3 ವಾಗ ಮತ್ತಾನನ ಮಗನಾದ ಶೆಫತ್ಯ, ಪಷ್ಹೂರನ
ಮಗನಾದ ಗೆದಲ್ಯ, ಸೆಲೆಮ್ಯನ ಮಗನಾದ ಯೂಕಲ,
ಮಲ್ಕೀಯನ ಮಗನಾದ ಪಷ್ಹೂರ, ಇವರು ಅವನ
4 ಮಾತುಗಳನ್ನು ಕೇಳಿದರು. ಆ ಮೇಲೆ ಆ ಪ್ರಧಾ
ನರು ಅರಸನಿಗೆ—ಒಡೆಯಾ, ಇವನಿಗೆ ಮರಣ
ದಂಡನೆಯಾಗಬೇಕು. ಇವನು ಪಟ್ಟಣದಲ್ಲಿ ಉಳಿ
ದಿರುವ ಯೋಧರಿಗೂ ಸಕಲ ಜನರಿಗೂ ಇಂಥಾ
ಮಾತುಗಳನ್ನು ನುಡಿಯುತ್ತಾ ಅವರನ್ನು ಜೋಲು
ಗೈಯವರನ್ನಾಗಿ ಮಾಡುತ್ತಾನೆ; ಈ ಜನರ ಕ್ಷೇಮ
ವನ್ನಲ್ಲ, ಹಾನಿಯನ್ನೇ ಹಾರೈಸುತ್ತಾನೆ ಎಂದು
5 ಹೇಳಿದರು. ಅದಕ್ಕೆ ಅರಸನಾದ ಚಿದ್ಕೀಯನು—
ಇಗೋ, ಯೆರೆಮೀಯನು ನಿಮ್ಮ ಕೈಯಲ್ಲಿದ್ದಾನೆ;
ಅರಸನು ನಿಮಗೆ ಅಡ್ಡ ಬಂದು ಏನೂ ಮಾಡಬಲ್ಲ
6 ವನಲ್ಲ ಎಂದು ಹೇಳಲು ಅವರು ಯೆರೆಮೀಯನನ್ನು
ಹಿಡಿದು ಕಾರಾಗೃಹದ ಅಂಗಳದಲ್ಲಿ ರಾಜವಂಶೀಯ
ನಾದ ಮಲ್ಕೀಯನ ಬಾವಿಯೊಳಗೆ ಹಗ್ಗಗಳಿಂದಿ
ಳಿಸಿ ಹಾಕಿಬಿಟ್ಟರು. ಆ ಬಾವಿಯಲ್ಲಿ ನೀರಿರಲಿಲ್ಲ,
ಕೆಸರಿತ್ತು; ಅದರೊಳಗೆ ಯೆರೆಮೀಯನು ದೊಸ
7 ಕೊಂಡನು. ಅರಮನೆಯ ಕಂಚುಕಿಯಾದ ಎಬೆದ್ಮೆ
ಲೆಕನೆಂಬ ಕೂಷ್ಯನು ಯೆರೆಮೀಯನನ್ನು ಬಾವಿ
8 ಯಲ್ಲಿ ಹಾಕಿದ್ದಾರೆಂದು ಕೇಳಿದಾಗ ಅವನು ಅರಮನೆ
ಯಿಂದ ಹೊರಟು ಬೆನ್ಯಾಮೀನಿನ ಬಾಗಿಲಿನಲ್ಲಿ ಕೂತು
ಕೊಂಡಿದ್ದ ಅರಸನ ಬಳಿಗೆ ಹೋಗಿ— ಎನ್ನೊಡೆಯನೇ, 9
ಅರಸನೇ, ಇವರು ಪ್ರವಾದಿಯಾದ ಯೆರೆಮೀಯನಿಗೆ
ಮಾಡಿದ್ದೆಲ್ಲಾ ದುಷ್ಟಕಾರ್ಯವೇ ಸರಿ, ಅವನನ್ನು
ಬಾವಿಯಲ್ಲಿ ಹಾಕಿದ್ದಾರೆ; ಅವನು ಆಹಾರವಿಲ್ಲದೆ
ಬಿದ್ದಲ್ಲೇ ಸಾಯುವದು ಖಂಡಿತ, ಪಟ್ಟಣದಲ್ಲಿ ಇನ್ನು
ರೊಟ್ಟಿಯಿಲ್ಲವಲ್ಲಾ ಎಂದು ಅರಿಕೆಮಾಡಿದನು. ಅರ 10
ಸನು ಇದನ್ನು ಕೇಳಿ ಕೂಷ್ಯನಾದ ಎಬೆದ್ಮೆಲೆಕನಿಗೆ—
ನೀನು ಇಲ್ಲಿಂದ ಮೂವತ್ತು ಮಂದಿಯನ್ನು ಕರೆದು
ಕೊಂಡುಹೋಗಿ ಪ್ರವಾದಿಯಾದ ಯೆರೆಮೀಯನು
ಸಾಯುವದರೊಳಗಾಗಿ ಅವನನ್ನು ಬಾವಿಯಿಂದ
ಎತ್ತಿಸು ಎಂದು ಅಪ್ಪಣೆಕೊಟ್ಟನು. ಕೂಡಲೇ ಕೂಷ್ಯ 11
ನಾದ ಎಬೆದ್ಮೆಲೆಕನು ಅವರನ್ನು ಕರೆದುಕೊಂಡು
ಹೋಗಿ ಅರಮನೆಯನ್ನು ಹೊಕ್ಕು ಖಜಾನೆಯ ಕೆಳ
ಗಣ ಕೋಣೆಯಿಂದ ಜೀರ್ಣವಾದ ಹರಕು ಚಿಂದಿಪಂದಿ
ಗಳನ್ನು ತೆಗೆದುಕೊಂಡು ಬಾವಿಯೊಳಗೆ ಹಗ್ಗಗಳಿಂದ
ಯೆರೆಮೀಯನಿಗೆ ಮುಟ್ಟಿಸಿ ಜೀರ್ಣವಾದ ಈ ಹರಕು 12
ಚಿಂದಿಗಳನ್ನು ಹಗ್ಗಕ್ಕೆ ಸುತ್ತಿ ಕಂಕಳಲ್ಲಿ ಇಟ್ಟು
ಕೋ ಎನ್ನಲು ಯೆರೆಮೀಯನು ಅದರಂತೆಯೇ ಮಾ
ಡಿದನು. ಈ ಪ್ರಕಾರ ಅವರು ಯೆರೆಮೀಯನನ್ನು 13
ಹಗ್ಗಗಳ ಮೂಲಕ ಸೇದಿಕೊಂಡು ಬಾವಿಯಿಂದ
ಮೇಲಕ್ಕೆ ಎತ್ತಿದರು; ಆ ಮೇಲೆ ಯೆರೆಮೀಯನು
[ಹಿಂದಿನಂತೆ] ಕಾರಾಗೃಹದ ಅಂಗಳದಲ್ಲಿ ವಾಸಿಸು
ತ್ತಿದ್ದನು.

ಕಸ್ದೀಯರನ್ನು ಮರೆಹೊಗುವಂತೆ ಯೆರೆಮೀಯನು
ಚಿದ್ಕೀಯನನ್ನು ಪ್ರೇರಿಸಿದ್ದು.

ಹೀಗಿರುವಲ್ಲಿ ಅರಸನಾದ ಚಿದ್ಕೀಯನು ಪ್ರವಾದಿ 14
ಯಾದ ಯೆರೆಮೀಯನನ್ನು ಯೆಹೋವನ ಆಲಯದ
ಮೂರನೆಯ ಬಾಗಿಲಿಗೆ ಕರತರಿಸಿ—ನಾನು ನಿನ್ನನ್ನು
ಒಂದು ಕೇಳುವೆನು, ನನಗೆ ಸ್ವಲ್ಪವೂ ಮರೆಮಾಡ
ಬೇಡ ಎನ್ನಲು ಯೆರೆಮೀಯನು ಚಿದ್ಕೀಯನಿಗೆ— 15
ನಾನು ನಿನಗೆ ತಿಳಿಸಿದರೆ ನನ್ನನ್ನು ಸಾಯಿಸಿಯೇ
ಸಾಯಿಸುವಿ ಅಲ್ಲವೇ? ಆಲೋಚನೆಹೇಳಿದರೂ
ನೀನು ಕೇಳುವದಿಲ್ಲ ಎಂದು ಉತ್ತರಕೊಟ್ಟನು.
ಆಗ ಅರಸನಾದ ಚಿದ್ಕೀಯನು ಯೆರೆಮೀಯನಿಗೆ— 16
ಈ ಪ್ರಾಣವನ್ನು ನಮಗೆ ದಯಪಾಲಿಸಿದ ಯೆಹೋ
ವನ ಜೀವದಾಣೆ, ನಾನು ನಿನ್ನನ್ನು ಸಾಯಿಸೆನು,
ನಿನ್ನ ಪ್ರಾಣವನ್ನು ಹುಡುಕುವ ಇವರ ಕೈಗೂ
ನಿನ್ನನ್ನು ಸಿಕ್ಕಿಸೆನು ಎಂದು ರಹಸ್ಯವಾಗಿ ಪ್ರಮಾಣ
ಮಾಡಲು ಯೆರೆಮೀಯನು ಚಿದ್ಕೀಯನಿಗೆ—ಸೇನಾ 17
ಧೀಶ್ವರ ಸ್ವಾಮಿಯೂ ಇಸ್ರಾಯೇಲ್ಯರ ದೇವರೂ
ಆದ ಯೆಹೋವನು ಇಂತೆನ್ನುತ್ತಾನೆ—ನೀನು ಬಾಬೆ
ಲಿನ ಅರಸನ ಸರದಾರರನ್ನು ಮರೆಹೊಕ್ಕರೆ ನಿನ್ನ
ಪ್ರಾಣವುಳಿಯುವದು, ಈ ಪಟ್ಟಣವೂ ಬೆಂಕಿಯಿಂದ
ಸುಡದು, ನೀನೂ ನಿನ್ನ ಮನೆತನದವರೂ ಬದುಕು
ವಿರಿ; ನೀನು ಬಾಬೆಲಿನ ಅರಸನ ಸರದಾರರನ್ನು 18
ಮರೆಹೊಗದಿದ್ದರೆ ಈ ಪಟ್ಟಣವು ಕಸ್ದೀಯರ ಕೈವಶ
ವಾಗುವದು. ಅವರು ಅದನ್ನು ಬೆಂಕಿಯಿಂದ ಸುಟ್ಟು

ಬಿಡುವರು, ನೀನು ಅವರ ಕೈಯಿಂದ ತಪ್ಪಿಸಿಕೊಳ್ಳ
19 ಲಾರೆ ಎಂದು ಹೇಳಿದನು. ಇದನ್ನು ಕೇಳಿ ಅರಸ
ನಾದ ಚಿದ್ಕೀಯನು ಯೆರೆಮೀಯನಿಗೆ—ಕಸ್ದೀ
ಯರು ತಮ್ಮನ್ನು ಮರೆಹೊಕ್ಕಿರುವ ಯೆಹೂದ್ಯರಿಗೆ
ನನ್ನನ್ನು ಒಪ್ಪಿಸುವರೋ ಏನೋ; ಅವರು ನನ್ನನ್ನು
1)ಹಿಂಸಿಸಿಯಾರು ಎಂದು ಶಂಕೆಪಡುತ್ತೇನೆ ಎಂದುತ್ತರ
20 ಕೊಡಲು ಯೆರೆಮೀಯನು—ನಿನ್ನನ್ನು ಒಪ್ಪಿಸರು;
ಜೀಯಾ, ನಾನು ನಿನಗೆ ಹೇಳಿರುವ ಯೆಹೋವನ
ಮಾತನ್ನು ಕೈಕೋ; ಕೈಕೊಂಡರೆ ಪ್ರಾಣವುಳಿಯು
21 ವದು, ಸುಖವೂ ಆಗುವದು. ಆದರೆ ನೀನು—ಶತ್ರು
ವನ್ನು ಮರೆಹೊಗೆನು ಎನ್ನುವ ಪಕ್ಷದಲ್ಲಿ ಯೆಹೋ
ವನು ನಿನ್ನ ಮುಂದಿನ ಗತಿಯನ್ನು ನನಗೆ ಹೀಗೆ
22 ತೋರ್ಪಡಿಸಿದ್ದಾನೆ—ಯೆಹೂದದ ಅರಸನ ಮನೆಯ
ಲ್ಲಿ ಉಳಿದಿರುವ ಸಕಲ ಸ್ತ್ರೀಯರು ಬಾಬೆಲಿನ ಅರಸನ
ಸರದಾರರ ಬಳಿಗೆ ತರಲ್ಪಟ್ಟವರಾಗಿ ನಿನ್ನನ್ನು ಪ್ರೇರಿಸಿ
ಒಳಪಡಿಸಿಕೊಂಡಿದ್ದ ನಿನ್ನ ಆಪ್ತಮಿತ್ರರು ನಿನ್ನ ಕಾಲು
ಗಳು ಬದಿಯಲ್ಲಿ ಹೂತದ್ದನ್ನು ನೋಡಿ ಹಿಂದಿರುಗಿದ್ದಾರೆ
23 ಎಂದು ನಿಂದಿಸುವರು. ನಿನ್ನ ಸಮಸ್ತ ಪತ್ನಿಯರೂ
ಕುಮಾರಕುಮಾರ್ತೆಯರೂ ಕಸ್ದೀಯರ ಬಳಿಗೆ ತರಲ್ಪ
ಡುವರು; ನೀನೂ ಅವರಿಂದ ತಪ್ಪಿಸಿಕೊಳ್ಳಲಾರದೆ ಬಾಬೆ
ಲಿನ ಅರಸನ ಕೈಗೆ ಸಿಕ್ಕಿಕೊಳ್ಳುವಿ; ಈ ಪಟ್ಟಣವು ನಿನ್ನ
ನಿಮಿತ್ತ ಬೆಂಕಿಯಿಂದ ಸುಟ್ಟುಹೋಗುವದು ಎಂದು
24 ಹೇಳಿದನು. ಆಗ ಚಿದ್ಕೀಯನು ಯೆರೆಮೀಯನಿಗೆ—ಈ
ಮಾತುಗಳು ಯಾರಿಗೂ ತಿಳಿಯದಿರಲಿ, ಜೋಕೆ;
25 ತಿಳಿಯದಿದ್ದರೆ ನೀನು ಸಾಯೆ. ನಾನು ನಿನ್ನ ಸಂಗಡ
ಮಾತಾಡಿದ ಸುದ್ದಿಯನ್ನು ಪ್ರಧಾನರು ಕೇಳಿ ನಿನ್ನ
ಬಳಿಗೆ ಬಂದು—ನೀನು ಅರಸನಿಗೆ ಹೇಳಿದ್ದನ್ನು
ನಮಗೆ ತಿಳಿಸು; ನಮಗೆ ಮರೆಮಾಡದಿದ್ದರೆ ನಿನ್ನನ್ನು
ಕೊಲ್ಲೆವು; ಅರಸನು ನಿನಗೆ ಹೇಳಿದ್ದನ್ನೂ ತಿಳಿಸು
26 ಎಂದು ಪ್ರಶ್ನೆಮಾಡಿದ ಪಕ್ಷದಲ್ಲಿ ನೀನು ಅವರಿಗೆ—
ಯೆಹೋನಾಥಾನನ ಮನೆಗೆ ನನ್ನನ್ನು ತಿರಿಗಿ ಸೇರಿಸ
ಬೇಡ, ಅಲ್ಲೇ ಸತ್ತೇನು ಎಂದು ಅರಸನಿಗೆ ಬಿನ್ನಹ
ಮಾಡಿಕೊಂಡೆನು ಎಂಬದಾಗಿ ಹೇಳು ಎಂದು ಅಪ್ಪಣೆ
27 ಕೊಟ್ಟನು. ಕೆಲವು ಕಾಲದ ಮೇಲೆ ಸಕಲ ಪ್ರಧಾ
ನರು ಯೆರೆಮೀಯನ ಬಳಿಗೆ ಬಂದು ಹಾಗೆಯೇ
ಪ್ರಶ್ನೆಮಾಡಿದರು. ಅವನು ಅರಸನ ಅಪ್ಪಣೆಯಂತೆ
ಯೇ ಉತ್ತರಕೊಡಲು ಅವರು ಮಾತನ್ನು ಮುಗಿ
28 ಸಿದರು; ಏನೂ ತಿಳಿದುಕೊಳ್ಳಲಿಲ್ಲ. ಯೆರೂಸ
ಲೇಮು ಶತ್ರುವಶವಾಗುವ ತನಕ ಯೆರೆಮೀಯನು
ಕಾರಾಗೃಹದ ಅಂಗಳದಲ್ಲೇ ವಾಸಿಸುತ್ತಿದ್ದನು.

ಕಸ್ದೀಯರು ಯೆರೂಸಲೇಮನ್ನು ಆಕ್ರಮಿಸಿದ್ದು.

39 ಯೆಹೂದದ ಅರಸನಾದ ಚಿದ್ಕೀಯನ ಆಳಿಕೆಯ
ಒಂಭತ್ತನೆಯ ವರುಷದ ಹತ್ತನೆಯ ತಿಂಗಳಿನಲ್ಲಿ
ಬಾಬೆಲಿನ ಅರಸನಾದ ನೆಬೂಕದ್ನೆಚ್ಚರನು ಸಕಲ
ಸೈನ್ಯಸಹಿತ ಬಂದು ಯೆರೂಸಲೇಮನ್ನು ಮುತ್ತಿ
2 ದನು. ಚಿದ್ಕೀಯನ ಹನ್ನೊಂದನೆಯ ವರುಷದ
ನಾಲ್ಕನೆಯ ತಿಂಗಳಿನ ಒಂಭತ್ತನೆಯ ದಿನದಲ್ಲಿ ಪೌಳಿ
ಗೋಡೆ ಒಡಕುಬಿದ್ದು ಯೆರೂಸಲೇಮು ಶತ್ರುವಶ
ವಾಗಲು ನೇರ್ಗಲ್‌ಸರೆಚರ್, ಸಮ್ಗರ್‌ನೆಬೋ, ಕಂಚು 3
ಕಿಯರ ಮುಖ್ಯಸ್ಥನಾದ ಸರ್ಸೆಕೀಮ್, ಜೋಯಿಸರ
ಮುಖ್ಯಸ್ಥನಾದ ನೇರ್ಗಲ್‌ಸರೆಚರ್, ಅಂತು ಬಾಬೆಲಿನ
ಅರಸನ ಸಕಲ ಸರದಾರರೂ ಪುರಪ್ರವೇಶಮಾಡಿ
ಮಧ್ಯಮದ್ವಾರದೊಳಗೆ ಆಸೀನರಾದರು. ಯೆಹೂ 4
ದದ ಅರಸನಾದ ಚಿದ್ಕೀಯನೂ ಸಮಸ್ತ ಸೈನಿಕರೂ
ಇವರನ್ನು ನೋಡಿ ಅದೇ ರಾತ್ರಿಯಲ್ಲಿ ಹೊರಟು
ಅರಸನ ಉದ್ಯಾನಮಾರ್ಗವಾಗಿ ಎರಡು ಗೋಡೆಗಳ
ನಡುವಣ ಬಾಗಲಿಂದ ಪಟ್ಟಣವನ್ನು ಬಿಟ್ಟು ಅರಾಬಾ
ಎಂಬ ತಗ್ಗಾದ ಪ್ರದೇಶದ ಕಡೆಗೆ ಪಲಾಯನಮಾಡಿ
ದರು. ಕಸ್ದೀಯರ ಸೈನಿಕರು ಅವರನ್ನು ಹಿಂದ 5
ಟ್ಟಿತ್ತಾ ಯೆರಿಕೋವಿನ ಬೈಲಿನಲ್ಲಿ ಚಿದ್ಕೀಯನನ್ನು
ತಗಲಿ ಹಿಡಿದು ಹಮಾತ್ ಸೀಮೆಯ ರಿಬ್ಲದಲ್ಲಿದ್ದ
ನೆಬೂಕದ್ನೆಚ್ಚರನೆಂಬ ಬಾಬೆಲಿನ ಅರಸನ ಬಳಿಗೆ ತೆಗೆ
ದುಕೊಂಡು ಬಂದರು; ಆ ಬಾಬೆಲಿನ ಅರಸನು ಅಲ್ಲಿ
ಚಿದ್ಕೀಯನಿಗೆ ಶಿಕ್ಷೆಯನ್ನು ವಿಧಿಸಿ ಅವನ ಮಕ್ಕಳನ್ನು 6
ಅಲ್ಲೇ ಅವನ ಕಣ್ಣೆದುರಿಗೆ ವಧಿಸಿ ಯೆಹೂದದ
ಸಮಸ್ತ ಶ್ರೀಮಂತರನ್ನೂ ಕೊಲ್ಲಿಸಿದನು; ಇದಲ್ಲದೆ 7
ಚಿದ್ಕೀಯನ ಕಣ್ಣುಗಳನ್ನು ಕೀಳಿಸಿ ಅವನನ್ನು ಬಾಬೆ
ಲಿಗೆ ಸಾಗಿಸಬೇಕೆಂದು ಬೇಡಿಹಾಕಿಸಿದನು. ಮತ್ತು 8
ಕಸ್ದೀಯರು ಅರಮನೆಯನ್ನೂ ಪ್ರಜೆಗಳ ಮನೆಗ
ಳನ್ನೂ ಬೆಂಕಿಯಿಂದ ಸುಟ್ಟು ಯೆರೂಸಲೇಮಿನ
ಸುತ್ತಣ ಗೋಡೆಗಳನ್ನು ಕೆಡವಿದರು. ಆಗ ಕಾವಲು 9
ದಂಡಿನ ಅಧಿಪತಿಯಾದ ನೆಬೂಜರದಾನನು ಪಟ್ಟಣ
ದಲ್ಲಿ ಉಳಿದವರನ್ನೂ ಮೊದಲೇ ತನ್ನನ್ನು ಮರೆ
ಹೊಕ್ಕವರನ್ನೂ ಇತರ ಸಮಸ್ತ ಜನರನ್ನೂ ಬಾಬೆಲಿಗೆ
ಸೆರೆಯೊಯ್ದನು. ಆದರೆ ಏನೂ ಇಲ್ಲದ ಕೆಲವು ಬಡ 10
ಜನರನ್ನು ಯೆಹೂದ ದೇಶದಲ್ಲಿ ಬಿಟ್ಟು ಆಗಲೇ ಅವ
ರಿಗೆ ಹೊಲತೋಟಗಳನ್ನು ಕೊಟ್ಟನು.

ಕಸ್ದೀಯರ ಮುಖ್ಯಾಧಿಕಾರಿಗಳು ಯೆರೆಮೀಯನನ್ನು
ಕಾಪಾಡಿದ್ದು.

ಬಾಬೆಲಿನ ಅರಸನಾದ ನೆಬೂಕದ್ನೆಚ್ಚರನು ಯೆರೆ 11
ಮೀಯನ ವಿಷಯವಾಗಿ ಕಾವಲುದಂಡಿನ ಅಧಿಪತಿ
ಯಾದ ನೆಬೂಜರದಾನನಿಗೆ—ಅವನನ್ನು ಕರೆಸಿ 12
ಕೊಂಡು ಏನೂ ಕೇಡುಮಾಡದೆ ಅವನು ಬೇಡುವದ
ನ್ನೆಲ್ಲಾ ನೆರವೇರಿಸಿ ಕಟಾಕ್ಷಿಸು ಎಂದು ಅಪ್ಪಣೆ
ಕೊಡಲು ಕಾವಲುದಂಡಿನ ಅಧಿಪತಿಯಾದ ನೆಬೂಜರ 13
ದಾನ್, ಕಂಚುಕಿಯರ ಮುಖ್ಯಸ್ಥನಾದ ನೆಬೂಷ
ಜ್ಬಾನ್, ಜೋಯಿಸರ ಮುಖ್ಯಸ್ಥನಾದ ನೇರ್ಗಲ್‌ಸರೆ
ಚರ್ ಅಂತು ಬಾಬೆಲಿನ ಅರಸನ ಸಮಸ್ತ ಮುಖ್ಯಾ
ಧಿಕಾರಿಗಳು ಯೆರೆಮೀಯನನ್ನು ಕಾರಾಗೃಹದ ಅಂಗ 14
ಳದಿಂದ ಕರತರಿಸಿ ಅಹೀಕಾಮನ ಮಗನೂ ಶಾಫಾ
ನನ ಮೊಮ್ಮಗನೂ ಆದ ಗೆದಲ್ಯನ ವಶಕ್ಕೆ ಒಪ್ಪಿಸಿ
ಮನೆಗೆ ಕರೆದುಕೊಂಡು ಹೋಗುವಂತೆ ಹೇಳಿದರು.

1) ಅಥವಾ: ಅಣಕಿಸಿಯಾರೆಂದು.

ಅಂದಿನಿಂದ ಯೆರೆಮೀಯನು [ಎಂದಿನಂತೆ] ಜನರ
ಮಧ್ಯೆ ವಾಸಿಸಿದನು.

### ಎಬೆದ್ಮೆಲೆಕನಿಗೆ ಆದ ವಾಗ್ದಾನ.

15 ಯೆರೆಮೀಯನು ಕಾರಾಗೃಹದ ಅಂಗಳದಲ್ಲಿ ಸೆರೆ
ಯಾಗಿದ್ದಾಗ ಯೆಹೋವನು ಅವನಿಗೆ ಈ ಮಾತನ್ನು
16 ದಯಪಾಲಿಸಿದನು—ನೀನು ಹೋಗಿ ಕೂಷ್ಯನಾದ
ಎಬೆದ್ಮೆಲೆಕನಿಗೆ ಹೀಗೆ ಹೇಳು—ಇಸ್ರಾಯೇಲ್ಯರ
ದೇವರೂ ಸೇನಾಧೀಶ್ವರನೂ ಆದ ಯೆಹೋವನು
ಇಂತೆನ್ನುತ್ತಾನೆ.—ಆಹಾ, ನಾನು ನುಡಿದ ಮೇಲನ್ನಲ್ಲ,
ನುಡಿದ ಕೇಡನ್ನೇ ಈ ಪಟ್ಟಣದ ಮೇಲೆ ಬರಮಾಡು
ವೆನು; ಅದು ಆ ದಿನದಲ್ಲಿ ನಿನ್ನ ಕಣ್ಣೆದುರಿಗೆ ಆಗು
17 ವದು. ಯೆಹೋವನು ಇಂತೆನ್ನುತ್ತಾನೆ—ಆ ದಿನ
ದಲ್ಲಿ ನಾನು ನಿನ್ನನ್ನು ಉದ್ಧರಿಸುವೆನು; ನೀನು ಹೆದ
18 ರುವ ಮನುಷ್ಯರ ಕೈಗೆ ಸಿಕ್ಕುವದಿಲ್ಲ. ನೀನು ನನ್ನಲ್ಲಿ
ಭರವಸವಿಟ್ಟಕಾರಣ ನಿನ್ನನ್ನು ರಕ್ಷಿಸೇ ರಕ್ಷಿಸುವೆನು;
ನೀನು ಖಡ್ಗಕ್ಕೆ ತುತ್ತಾಗದೆ ಅದರ ಬಾಯೊಳಗಿಂದ
ನಿನ್ನ ಪ್ರಾಣವನ್ನು ಸೆಳಕೊಂಡು ಹೋಗುವಿ; ಇದು
ಯೆಹೋವನ ನುಡಿ.

### ಯೆರೆಮೀಯನ ಬಿಡುಗಡೆ.

40 ಯೆಹೋವನು ಮತ್ತೊಮ್ಮೆ ತನ್ನ ವಾಕ್ಯವನ್ನು
ಯೆರೆಮೀಯನಿಗೆ ದಯಪಾಲಿಸಿದನು. ಇಷ್ಟರೊ
ಳಗೆ ಕಾವಲುದಂಡಿನ ಅಧಿಪತಿಯಾದ ನೆಬೂಜರದಾ
ನನು ಯೆರೂಸಲೇಮಿನವರ ಮತ್ತು ಯೆಹೂದ್ಯರ
ಗುಂಪನ್ನು ಬಾಬೆಲಿಗೆ ಸೆರೆಯೊಯ್ಯುತ್ತಿದ್ದಾಗ ಅವರಲ್ಲಿ
ಸಂಕೋಲೆಗಳಿಂದ ಕಟ್ಟಲ್ಪಟ್ಟಿದ್ದ ಯೆರೆಮೀಯನನ್ನು
2 ರಾಮದ ಬಳಿಯಲ್ಲಿ ಬಿಡಿಸಿಬಿಟ್ಟಿದ್ದನು. ಆಗ ಕಾವಲು
ದಂಡಿನ ಅಧಿಪತಿಯು ಯೆರೆಮೀಯನನ್ನು ಕರೆ
ಯಿಸಿ ಅವನಿಗೆ—ನಿನ್ನ ದೇವರಾದ ಯೆಹೋವನು
ಈ ಸ್ಥಳಕ್ಕೆ ಇಂಥ ಕೇಡುಕಾಗಲಿ ಎಂದು ಶಾಪಕೊಟ್ಟ
3 ನು; ಆತನು ಅದನ್ನೇ ಬರಮಾಡಿ ತನ್ನ ಮಾತನ್ನು
ನೆರವೇರಿಸಿದ್ದಾನೆ; ನೀವು ಯೆಹೋವನ ಧ್ವನಿಗೆ ಕಿವಿ
ಗೊಡದೆ ಆತನಿಗೆ ಪಾಪಮಾಡಿದ್ದರಿಂದಲೇ ಇದು
4 ನಿಮಗೆ ಸಂಭವಿಸಿದೆ. ಇಗೋ, ನಿನ್ನ ಕೈಗೆ ಹಾಕಿದ
ಬೇಡಿಗಳನ್ನು ಈ ದಿವಸ ತೆಗೆಸಿದ್ದೇನೆ. ನನ್ನ ಸಂಗಡ
ಬಾಬೆಲಿಗೆ ಬರಬೇಕೆಂದು ನಿನಗೆ ಮನಸ್ಸಿದ್ದರೆ ಬಾ;
ನಿನ್ನನ್ನು ಕಟಾಕ್ಷಿಸುವೆನು; ನನ್ನ ಸಂಗಡ ಬಾಬೆಲಿಗೆ
ಬರುವದಕ್ಕೆ ಮನಸ್ಸಿಲ್ಲದೆ ಹೋದರೆ ನಿಂತುಬಿಡು;
ಇಗೋ, ದೇಶವೆಲ್ಲಾ ನಿನ್ನ ಕಣ್ಣೆದುರಿಗಿದೆ; ನಿನಗೆ
ಯಾವ ಕಡೆ ಹೋಗುವದು ಸರಿಯೋ ಒಳ್ಳೆದೋ
5 ಆ ಕಡೆಗೇ ಹೋಗು ಎಂದು ಹೇಳಿದನು. ಯೆರೆ
ಮೀಯನು ಇನ್ನೂ ಹಿಂದಿರುಗದಿರುವಲ್ಲಿ ನೆಬೂಜರ
ದಾನನು ಅವನಿಗೆ—ಬಾಬೆಲಿನ ಅರಸನು ಅಹೀಕಾ
ಮನ ಮಗನೂ ಶಾಫಾನನ ಮೊಮ್ಮಗನೂ ಆದ ಗೆದ
ಲ್ಯನನ್ನು ಯೆಹೂದದ ಪಟ್ಟಣಗಳಿಗೆ ಅಧಿಪತಿಯ
ನ್ನಾಗಿ ನೇಮಿಸಿದ್ದಾನಲ್ಲಾ; ಅವನ ಕಡೆಗೆ ನೀನು
ಹಿಂದಿರುಗಿ ಅವನ ಹತ್ತಿರ ಜನರ ಮಧ್ಯೆ ವಾಸಿಸು;
ಇಲ್ಲವೆ ಎಲ್ಲಿ ಬೇಕಾದರೂ ಹೋಗು ಎಂದು ಹೇಳಿ ಬುತ್ತಿಯನ್ನೂ ಬಹುಮಾನವನ್ನೂ ಕೊಡಿಸಿ ಅವನನ್ನು ಕಳುಹಿಸಿಬಿಟ್ಟನು. ಆಗ ಯೆರೆಮೀಯನು ಅಹೀಕಾಮನ ಮಗನಾದ ಗೆದಲ್ಯನು ಇದ್ದ ಮಿಚ್ಪಕ್ಕೆ ಹೋಗಿ ದೇಶದಲ್ಲಿ ಉಳಿದ ಜನರ ಮಧ್ಯೆ ಅವನ ಸಂಗಡ ವಾಸಿಸಿದನು.

### ಇಷ್ಮಾಯೇಲನು ದೇಶಾಧಿಪತಿಯನ್ನು ಕೊಂದುಹಾಕಿ ಯೋಹಾನಾನನಿಗೆ ಸೋತುಹೋದದ್ದು.

ಬಾಬೆಲಿನ ಅರಸನು ಅಹೀಕಾಮನ ಮಗನಾದ ಗೆದಲ್ಯನನ್ನು ದೇಶಾಧಿಪತಿಯನ್ನಾಗಿ ನೇಮಿಸಿ ಬಾಬೆಲಿಗೆ ಸೆರೆಯೊಯ್ಯಲ್ಪಡದ ದೇಶೀಯರಲ್ಲಿ ದರಿದ್ರರಾದ ಗಂಡಸರನ್ನೂ ಹೆಂಗಸರನ್ನೂ ಮಕ್ಕಳನ್ನೂ ಅವನ ಅಧಿಕಾರಕ್ಕೆ ಒಪ್ಪಿಸಿದನೆಂಬ ಸುದ್ದಿಯನ್ನು ಕಾಡುಮೇಡುಗಳಲ್ಲಿದ್ದ ಸಕಲ ಯೆಹೂದ ಸೈನಿಕರೂ ಸೇನಾಪತಿಗಳೂ ಕೇಳಿ ಮಿಚ್ಪದಲ್ಲಿ ವಾಸವಾಗಿದ್ದ ಅವನ ಬಳಿಗೆ ಹೋದರು. ಆ ಸೇನಾಪತಿಗಳು ಯಾರಂದರೆ—ನೆತನ್ಯನ ಮಗನಾದ ಇಷ್ಮಾಯೇಲ, ಕಾರೇಹನ ಮಕ್ಕಳಾದ ಯೋಹಾನಾನ ಯೋನಾಥಾನ, ತನ್ಹುಮೆತನ ಮಗನಾದ ಸೆರಾಯ, ಮಾಕಾ ಊರಿನವನ ಮಗನಾದ ಯೆಜನ್ಯ, ನೆಟೋಫದವನಾದ ಏಫಯನ ಮಕ್ಕಳು, ಇವರೇ. ಅಹೀಕಾಮನ ಮಗನೂ ಶಾಫಾನನ ಮೊಮ್ಮಗನೂ ಆದ ಗೆದಲ್ಯನು ಇವರಿಗೂ ಇವರ ಸೈನಿಕರಿಗೂ—ಕಸ್ದೀಯರಿಗೆ ಅಧೀನರಾಗಿರಲಿಕ್ಕೆ ಹೆದರಬೇಡಿರಿ; ಬಾಬೆಲಿನ ಅರಸನಿಗೆ ಅಧೀನರಾಗಿ ಇಲ್ಲಿಯೇ ವಾಸಿಸಿರಿ; ಆಗ ನಿಮಗೆ ಸುಖವಾಗುವದು. ನಾನಂತು ಮಿಚ್ಪದಲ್ಲಿ ವಾಸವಾಗಿದ್ದು ನಮ್ಮ ಬಳಿಗೆ ಬರುವ ಕಸ್ದೀಯರ ಮುಂದೆ ನಿಮ್ಮ ಪಕ್ಷವನ್ನು ವಹಿಸುವೆನು; ನೀವು ದ್ರಾಕ್ಷಾರಸ, ಹಣ್ಣು, ಎಣ್ಣೆ, ಇವುಗಳನ್ನು ಸಂಗ್ರಹಿಸಿ ನಿಮ್ಮ ಪಾತ್ರೆಗಳಲ್ಲಿ ತುಂಬಿಸಿಟ್ಟು ನೀವು ಹಿಡಿದ ಪಟ್ಟಣಗಳಲ್ಲಿ ವಾಸಿಸಿರಿ ಎಂದು ಖಂಡಿತವಾಗಿ ಹೇಳಿದನು. ಇದಲ್ಲದೆ ಅಮ್ಮೋನ್ಯರ ಮಧ್ಯದೊಳಗೂ ಮೋವಾಬ್ ಎದೋಮ್ ಮೊದಲಾದ ದೇಶಗಳಲ್ಲಿಯೂ ಚದರಿಹೋಗಿದ್ದ ಯೆಹೂದ್ಯರೆಲ್ಲರೂ ಬಾಬೆಲಿನ ಅರಸನು ಯೆಹೂದದಲ್ಲಿ ಕೆಲವರನ್ನು ಉಳಿಸಿ ಅಹೀಕಾಮನ ಮಗನೂ ಶಾಫಾನನ ಮೊಮ್ಮಗನೂ ಆದ ಗೆದಲ್ಯನನ್ನು ಅವರಿಗೆ ಅಧಿಪತಿಯನ್ನಾಗಿ ನೇಮಿಸಿದ್ದಾನೆಂಬ ವರ್ತಮಾನವನ್ನು ಕೇಳಿ ತಾವು ಅಟ್ಟಲ್ಪಟ್ಟು ಸೇರಿದ್ದ ಎಲ್ಲಾ ಸ್ಥಳಗಳಿಂದಲೂ ಯೆಹೂದಕ್ಕೆ ಹಿಂದಿರುಗಿ ಮಿಚ್ಪದಲ್ಲಿ ವಾಸವಾಗಿದ್ದ ಗೆದಲ್ಯನ ಬಳಿಗೆ ಬಂದು ದ್ರಾಕ್ಷಾರಸವನ್ನೂ ಹಣ್ಣುಗಳನ್ನೂ ಸಮೃದ್ಧಿಯಾಗಿ ಸಂಗ್ರಹಿಸಿದರು.

ಆ ಮೇಲೆ ಕಾರೇಹನ ಮಗನಾದ ಯೋಹಾನಾನನೂ ಕಾಡುಮೇಡುಗಳಲ್ಲಿದ್ದ ಸಕಲ ಸೇನಾಪತಿಗಳೂ ಮಿಚ್ಪದಲ್ಲಿ ವಾಸವಾಗಿದ್ದ ಗೆದಲ್ಯನ ಬಳಿಗೆ ಹೋಗಿ—ಅಮ್ಮೋನ್ಯರ ಅರಸನಾದ ಬಾಲೀಸನು ನಿನ್ನನ್ನು ಕೊಲ್ಲುವದಕ್ಕಾಗಿ ನೆತನ್ಯನ ಮಗನಾದ ಇಷ್ಮಾಯೇಲನನ್ನು ಕಳುಹಿಸಿದ್ದಾನೆಂಬದು ನಿನಗೆ ಗೊತ್ತಿದೆಯೋ

ಎಂದು ಕೇಳಿದರು. ಆದರೆ ಅಹೀಕಾಮನ ಮಗನಾದ
15 ಗೆದಲ್ಯನು ಅವರನ್ನು ನಂಬಲಿಲ್ಲ. ಆಗ ಕಾರೇಹನ
ಮಗನಾದ ಯೋಹಾನಾನನು ಮಿಚ್ಪದಲ್ಲಿ ಗೆದಲ್ಯ
ನಿಗೆ—ನಾನು ಹೋಗಿ ನೆತನ್ಯನ ಮಗನಾದ ಇಷ್ಮಾ
ಯೇಲನನ್ನು ಕೊಲ್ಲಲಿಕ್ಕೆ ಅಪ್ಪಣೆಯಾಗಲಿ; ಇದು
ನಿನ್ನ ಅಪ್ಪಣೆ ಎಂದು ಯಾರಿಗೂ ತಿಳಿದು ಬರುವ
ದಿಲ್ಲ; ಅವನು ನಿನ್ನನ್ನು ಕೊಂದರೆ ನಿನ್ನ ಆಶ್ರಯದ
ಯೆಹೂದ್ಯರೆಲ್ಲರೂ ದಿಕ್ಕಾಪಾಲಾಗಿ ಯೆಹೂದದ ಶೇಷ
ವು ನಿಶ್ಶೇಷವಾಗುವದಲ್ಲಾ; ಏಕೆ ಹೀಗಾಗಬೇಕು
16 ಎಂದು ರಹಸ್ಯವಾಗಿ ವಿಜ್ಞಾಪಿಸಲು ಅಹೀಕಾಮನ
ಮಗನಾದ ಗೆದಲ್ಯನು ಅವನಿಗೆ—ನೀನು ಹಾಗೆ
ಮಾಡಲೇ ಕೂಡದು; ನೀನು ಇಷ್ಮಾಯೇಲನ ವಿಷಯ
ವಾಗಿ ಹೇಳಿದ್ದು ಸುಳ್ಳು ಎಂದು ಉತ್ತರಕೊಟ್ಟನು.

41 ಏಳನೆಯ ತಿಂಗಳಿನಲ್ಲಿ ರಾಜವಂಶದವನೂ ಎಲೀ
ಷಾಮನ ಮೊಮ್ಮಗನೂ ನೆತನ್ಯನ ಮಗನೂ ಅರಸನ
ಪ್ರಧಾನರಲ್ಲಿ ಒಬ್ಬನೂ ಆದ ಇಷ್ಮಾಯೇಲನು ಹತ್ತು
ಮಂದಿಯೊಂದಿಗೆ ಅಹೀಕಾಮನ ಮಗನಾದ ಗೆದ
ಲ್ಯನು ವಾಸವಾಗಿದ್ದ ಮಿಚ್ಪಕ್ಕೆ ಬಂದನು; ಅಲ್ಲಿ
2 ಅವನೊಂದಿಗೆ ಊಟಮಾಡಿದರು. ಆಗ ನೆತನ್ಯನ
ಮಗನಾದ ಇಷ್ಮಾಯೇಲನೂ ಅವನೊಂದಿಗಿದ್ದ ಹತ್ತು
ಜನರೂ ಎದ್ದು ಅಹೀಕಾಮನ ಮಗ ಶಾಫಾನನ
ಮೊಮ್ಮಗ ಬಾಬೆಲಿನ ಅರಸನಿಂದ ದೇಶಾಧಿಪತಿಯಾಗಿ
ನೇಮಿಸಲ್ಪಟ್ಟವನೂ ಆದ ಗೆದಲ್ಯನನ್ನು ಕತ್ತಿಯಿಂದ
3 ಹೊಡೆದು ಕೊಂದರು. ಇದಲ್ಲದೆ ಇಷ್ಮಾಯೇಲನು
ಗೆದಲ್ಯನ ಸಂಗಡ ಮಿಚ್ಪದಲ್ಲಿದ್ದ ಯೆಹೂದ್ಯರೆಲ್ಲ
ರನ್ನೂ ಅಲ್ಲಿ ಸಿಕ್ಕಿದ ಕಸ್ದೀಯರಾದ ಸೈನಿಕರನ್ನೂ
4 ಹತಿಸಿದನು. ಅವನು ಗೆದಲ್ಯನನ್ನು ಕೊಂದ ಎರಡ
ನೆಯ ದಿನದಲ್ಲಿ ಆ ಸಂಗತಿಯು ಇನ್ನೂ ಯಾರಿಗೂ
5 ತಿಳಿಯದಿರಲು ಗಡ್ಡಬೋಳಿಸಿ ಬಟ್ಟೆಹರಿದು ಗಾಯ
ಮಾಡಿಕೊಂಡಿದ್ದ ಎಂಭತ್ತು ಜನರು ಶೆಕೆಮ್,
ಶಿಲೋ, ಸಮಾರ್ಯ ಎಂಬ ಊರುಗಳಿಂದ ಬಂದು
ಕೈಯಲ್ಲಿ ಧೂಪನೈವೇದ್ಯದ್ರವ್ಯಗಳನ್ನು ತೆಗೆದು
ಕೊಂಡು ಯೆಹೋವನ ಆಲಯಕ್ಕೆ ಹೋಗುತ್ತಿದ್ದರು.
6 1)ಆಗ ನೆತನ್ಯನ ಮಗನಾದ ಇಷ್ಮಾಯೇಲನು ಮಿಚ್ಪ
ದಿಂದ ಅವರ ಕಡೆಗೆ ಹೊರಟು ದಾರಿಯುದ್ದಕ್ಕೂ
ಅಳುತ್ತಾ ನಡೆದು ಅವರನ್ನು ಎದುರುಗೊಂಡು ಅಹೀ
ಕಾಮನ ಮಗನಾದ ಗೆದಲ್ಯನ ಬಳಿಗೆ ಬನ್ನಿರಿ ಎಂದು
7 ಹೇಳಿದನು. ಅವರು ಊರೊಳಕ್ಕೆ ಬಂದ ಮೇಲೆ
ನೆತನ್ಯನ ಮಗನಾದ ಇಷ್ಮಾಯೇಲನೂ ಅವನ ಸಂಗಡಿ
ಗರೂ ಅವರನ್ನು ಹತಿಸಿ ಬಾವಿಯಲ್ಲಿ ಹಾಕಿದರು.
8 ಆದರೆ ಆ ಎಂಭತ್ತು ಮಂದಿಯಲ್ಲಿ ಹತ್ತು ಜನರು
ಇಷ್ಮಾಯೇಲನಿಗೆ—ನಮ್ಮನ್ನು ಕೊಲ್ಲಬೇಡ; ಗೋದಿ,
ಜವೆಗೋದಿ, ಎಣ್ಣೆ, ಜೇನುತುಪ್ಪ, ಇವುಗಳನ್ನು
ಕಾಡಿನಲ್ಲಿ ಬಹಳವಾಗಿ ಬಚ್ಚಿಟ್ಟಿದ್ದೇವೆ ಎಂದು ಬಿನ್ನೈ
ಸಲು ಅವನು ಅವರನ್ನು ಅವರ ಜೊತೆಯವರಂತೆ
9 ಕೊಲ್ಲದೆ ಬಿಟ್ಟನು. ಇಷ್ಮಾಯೇಲನು ತಾನು ಕೊಂದ
ವರ ಶವಗಳನ್ನು ಗೆದಲ್ಯನ ಶವದ ಮೇಲೆ ಹಾಕಿದ
ಬಾವಿಯು, ಇಸ್ರಾಯೇಲಿನ ಅರಸನಾದ ಬಾಷನ
ಭಯದಿಂದ ಅರಸನಾದ ಆಸನು ತೋಡಿಸಿದ್ದ ಬಾವಿ
ಯೇ. ಆ ಬಾವಿಯನ್ನು ನೆತನ್ಯನ ಮಗನಾದ ಇಷ್ಮಾ
ಯೇಲನು ಹತರಾದವರ ಶವಗಳಿಂದ ತುಂಬಿಸಿಬಿಟ್ಟನು.
ಆ ಮೇಲೆ ನೆತನ್ಯನ ಮಗನಾದ ಇಷ್ಮಾಯೇಲನು 10
ರಾಜಕುಮಾರ್ತೆಯರನ್ನು, ಕಾವಲುದಂಡಿನ ಅಧಿಪತಿ
ಯಾದ ನೆಬೂಜರದಾನನು ಅಹೀಕಾಮನ ಮಗನಾದ
ಗೆದಲ್ಯನಿಗೆ ಒಪ್ಪಿಸಿದ ಮಿಚ್ಪದ ಜನಶೇಷವನ್ನು, ಅಂತು
ಮಿಚ್ಪದಲ್ಲಿ ಉಳಿದವರೆಲ್ಲರನ್ನೂ ಸೆರೆಹಿಡಿದು ಅಮ್ಮೋ
ನ್ಯರ ಸೀಮೆಗೆ ಹೊರಟನು.

ಕಾರೇಹನ ಮಗನಾದ ಯೋಹಾನಾನನೂ ಅವ 11
ನೊಂದಿಗಿದ್ದ ಸಕಲ ಸೇನಾಪತಿಗಳೂ ನೆತನ್ಯನ ಮಗ
ನಾದ ಇಷ್ಮಾಯೇಲನು ಮಾಡಿದ ಎಲ್ಲಾ ಕೆಡುಕನ್ನು
ಕೇಳಿ ತಮ್ಮ ಸೈನಿಕರನ್ನೆಲ್ಲಾ ಕರಕೊಂಡು ನೆತನ್ಯನ 12
ಮಗನಾದ ಇಷ್ಮಾಯೇಲನ ಮೇಲೆ ಯುದ್ಧಕ್ಕೆ ಹೊರ
ಟು ಗಿಬ್ಯೋನಿನ ದೊಡ್ಡ ಕೆರೆಯ ಹತ್ತಿರ ಅವನನ್ನು
ಕಂಡರು. ಆಗ ಇಷ್ಮಾಯೇಲನ ಸಂಗಡ ಇದ್ದ ಎಲ್ಲಾ 13
ಜನರು ಕಾರೇಹನ ಮಗನಾದ ಯೋಹಾನಾನನನ್ನೂ
ಅವನೊಂದಿಗಿದ್ದ ಸಮಸ್ತ ಸೇನಾಪತಿಗಳನ್ನೂ ನೋಡಿ
ಸಂತೋಷಪಟ್ಟರು. ಇಷ್ಮಾಯೇಲನು ಮಿಚ್ಪದಿಂದ 14
ಸೆರೆಯಾಗಿ ಒಯ್ದಿದ್ದ ಸಕಲಜನರು ಹಿಂದಿರುಗಿ ಹೋಗಿ
ಕಾರೇಹನ ಮಗನಾದ ಯೋಹಾನಾನನ ಬಳಿಗೆ ಸೇರಿ
ದರು. ನೆತನ್ಯನ ಮಗನಾದ ಇಷ್ಮಾಯೇಲನೋ 15
ಎಂಟು ಮಂದಿಯ ಸಂಗಡ ಯೋಹಾನಾನನಿಂದ ತಪ್ಪಿ
ಸಿಕೊಂಡು ಅಮ್ಮೋನ್ಯರನ್ನು ಮರೆಹೊಕ್ಕನು. ಆಗ 16
ಕಾರೇಹನ ಮಗನಾದ ಯೋಹಾನಾನನೂ ಅವನೊಂದಿ
ಗಿದ್ದ ಸಮಸ್ತ ಸೇನಾಪತಿಗಳೂ ತಾವು ನೆತನ್ಯನ ಮಗ
ನಾದ ಇಷ್ಮಾಯೇಲನ ಕೈಯಿಂದ ತಪ್ಪಿಸಿ ಗಿಬ್ಯೋನಿ
ನಿಂದ ತಂದಿದ್ದ ಭಟರು, ಹೆಂಗಸರು, ಮಕ್ಕಳು,
ಕಂಚುಕಿಗಳು, ಅಂತು ಇಷ್ಮಾಯೇಲನು ಅಹೀಕಾಮನ
ಮಗನಾದ ಗೆದಲ್ಯನನ್ನು ಕೊಂದ ಮೇಲೆ ಮಿಚ್ಪದಿಂದ
ಒಯ್ದ ಜನಶೇಷವನ್ನೆಲ್ಲಾ ಕರೆದುಕೊಂಡು ಹೋಗಿ
ಕಸ್ದೀಯರ ಭಯದಿಂದ ಐಗುಪ್ತಕ್ಕೆ ವಲಸೆಹೋಗಬೇ 17
ಕೆಂದು ಬೇತ್ಲೆಹೇಮಿನ ಸಮೀಪವಾಗಿರುವ ಗೇರುಥ್
ಕಿಮ್ಹಾಮಿನಲ್ಲಿ ಇಳಿದುಕೊಂಡರು. ಬಾಬೆಲಿನ ಅರ 18
ಸನಿಂದ ದೇಶಕ್ಕೆ ಅಧಿಪತಿಯಾಗಿ ನೇಮಿಸಲ್ಪಟ್ಟವನೂ
ಅಹೀಕಾಮನ ಮಗನೂ ಆದ ಗೆದಲ್ಯನನ್ನು ನೆತನ್ಯನ
ಮಗನಾದ ಇಷ್ಮಾಯೇಲನು ಕೊಂದುಹಾಕಿದ್ದರಿಂದ
ಕಸ್ದೀಯರಿಗೆ ಅಂಜಿದ್ದರು.

ಸ್ವದೇಶದಲ್ಲಿ ಉಳಿದ ಯೆಹೂದ್ಯರು ಐಗುಪ್ತಕ್ಕೆ ವಲಸೆಹೋದದ್ದು.

ಆಗ ಸಕಲ ಸೇನಾಪತಿಗಳೂ ಕಾರೇಹನ ಮಗ 42
ನಾದ ಯೋಹಾನಾನನೂ 2)ಹೋಷಾಯನ ಮಗ
ನಾದ ಯೆಜನ್ಯನೂ ಚಿಕ್ಕವರು ಮೊದಲುಗೊಂಡು

1) ಪಾಠಾಂತರ: ಅವರು ಅಳುತ್ತಾ ಬರುತ್ತಿರುವಾಗ ನೆತನ್ಯನ . . . . ಹೊರಟು ಅವರನ್ನು ಎದುರುಗೊಂಡು. 2) ಪಾಠಾಂತರ: ಮಾಸ್ಸೇಯನ ಮಗನಾದ ಅಜರ್ಯನೂ.

2 ದೊಡ್ಡವರ ತನಕ ಎಲ್ಲಾ ಜನರೂ ಪ್ರವಾದಿಯಾದ
ಯೆರೆಮೀಯನ ಬಳಿಗೆ ಬಂದು ಅವನಿಗೆ—ದಯ
3 ಮಾಡು, ನಮ್ಮ ಬಿನ್ನಹವನ್ನು ಲಾಲಿಸು; ನಿನ್ನ ದೇವ
ರಾದ ಯೆಹೋವನು ನಾವು ನಡೆಯಬೇಕಾದ ಮಾರ್ಗ
ವನ್ನೂ ಮಾಡತಕ್ಕ ಕಾರ್ಯವನ್ನೂ ತೋರಿಸುವ
ಹಾಗೆ ನಮಗಾಗಿ, ಅಂದರೆ ಉಳಿದಿರುವ ಈ ಜನ
ರೆಲ್ಲರಿಗಾಗಿ ನಿನ್ನ ದೇವರಾದ ಯೆಹೋವನನ್ನು
ಪ್ರಾರ್ಥಿಸು; ನಿನ್ನ ಕಣ್ಣಿಗೆ ಕಾಣುವ ಪ್ರಕಾರ ಅಪಾರ
ಜನರಲ್ಲಿ ನಾವು ಕೆಲವರು ಮಾತ್ರ ಉಳಿದಿದ್ದೇವೆ
4 ಎಂದು ವಿಜ್ಞಾಪಿಸಿದರು. ಇದನ್ನು ಕೇಳಿ ಪ್ರವಾದಿ
ಯಾದ ಯೆರೆಮೀಯನು ಅವರಿಗೆ—ನಿಮ್ಮ ಬಿನ್ನಹ
ವನ್ನು ಕೇಳಿದೆನು; ಇಗೋ, ನಿಮ್ಮ ಮಾತಿನಂತೆ ನಿಮ್ಮ
ದೇವರಾದ ಯೆಹೋವನನ್ನು ಪ್ರಾರ್ಥಿಸುವೆನು;
ಯೆಹೋವನು ಯಾವ ಉತ್ತರವನ್ನು ದಯಪಾಲಿಸು
ವನೋ ಒಂದನ್ನೂ ಮುಚ್ಚದೆ ನಿಮಗೆ ತಿಳಿಸುವೆನು
5 ಎಂದು ಹೇಳಲು ಅವರು ಯೆರೆಮೀಯನಿಗೆ—ನಿನ್ನ
ದೇವರಾದ ಯೆಹೋವನು ನಿನ್ನ ಮೂಲಕ ನಮಗೆ
ಕಳುಹಿಸುವ ಮಾತಿನಂತೆ ನಾವು ನಡೆಯದಿದ್ದರೆ ಯೆ
ಹೋವನು ಸ್ಥಿರವಾದ ಸತ್ಯಸಾಕ್ಷಿಯಾಗಿ ನಿಂತು
6 ನಮ್ಮನ್ನು ಖಂಡಿಸಲಿ! ನಮ್ಮ ದೇವರಾದ ಯೆಹೋ
ವನ ಮಾತು ಹಿತವಾಗಲಿ ಅಹಿತವಾಗಲಿ ಆತನ
ಸನ್ನಿಧಿಯಲ್ಲಿ ವಿಚಾರಿಸುವದಕ್ಕೆ ನಿನ್ನನ್ನು ಕಳುಹಿಸುವ
ನಾವು ಅದನ್ನು ಕೈಕೊಳ್ಳುವೆವು; ನಮ್ಮ ದೇವರಾದ
ಯೆಹೋವನ ಮಾತನ್ನು ನಾವು ಕೇಳಿದರೆ ನಮಗೆ
ಶುಭವಾಗುವದಷ್ಟೆ ಎಂಬದಾಗಿ ಹೇಳಿದರು.
7 ಹತ್ತು ದಿನಗಳಾದ ಮೇಲೆ ಯೆಹೋವನು ತನ್ನ
ವಾಕ್ಯವನ್ನು ಯೆರೆಮೀಯನಿಗೆ ದಯಪಾಲಿಸಿದನು.
8 ಆಗ ಅವನು ಕಾರೇಹನ ಮಗನಾದ ಯೋಹಾನಾ
ನನನ್ನೂ ಅವನೊಂದಿಗಿದ್ದ ಸಕಲಸೇನಾಪತಿಗಳನ್ನೂ
ಚಿಕ್ಕವರು ಮೊದಲುಗೊಂಡು ದೊಡ್ಡವರ ತನಕ
9 ಎಲ್ಲಾ ಜನರನ್ನೂ ಕರೆದು—ನಿಮ್ಮ ವಿಜ್ಞಾಪನೆಯನ್ನು
ಯೆಹೋವನಿಗೆ ಅರಿಕೆಮಾಡುವದಕ್ಕಾಗಿ ನನ್ನನ್ನು
ಕಳುಹಿಸಿದ್ದಿರಲ್ಲಾ; ಅದಕ್ಕೆ ಇಸ್ರಾಯೇಲಿನ ದೇವ
10 ರಾದ ಯೆಹೋವನು ಹೀಗನ್ನುತ್ತಾನೆ—ನೀವು ಈ
ದೇಶದಲ್ಲಿ ನೆಲೆಗೊಂಡಿದ್ದರೆ ನಾನು ನಿಮ್ಮನ್ನು ಕಟ್ಟು
ವೆನು, ಕೆಡವುವದಿಲ್ಲ; ನೆಡುವೆನು, ಕೀಳುವದಿಲ್ಲ;
ನಾನು ನಿಮಗೆ ಮಾಡಿದ ಕೇಡಿಗೆ ಪಶ್ಚಾತ್ತಾಪಪಡು
11 ತ್ತೇನೆ. ನೀವು ಹೆದರಿರುವ ಬಾಬೆಲಿನ ಅರಸನಿಗೆ
ಹೆದರಬೇಡಿರಿ; ಅವನಿಗೆ ಅಂಜದಿರಿ; ನಾನು ನಿಮ್ಮನ್ನು
ಅವನ ಕೈಯಿಂದ ತಪ್ಪಿಸಿ ರಕ್ಷಿಸಲಿಕ್ಕೆ ನಿಮ್ಮೊಂದಿ
ಗಿದ್ದೇನಲ್ಲಾ. ಇದು ಯೆಹೋವನಾದ ನನ್ನ ನುಡಿ.
12 ಅವನು ನಿಮ್ಮನ್ನು ಕರುಣಿಸಿ 1)ಸ್ವದೇಶಕ್ಕೆ ಹೋಗ
ಗೊಡಿಸುವಂತೆ ನಾನು ನಿಮಗೆ ಕರುಣೆಯನ್ನು ಅನು
13 ಗ್ರಹಿಸುವೆನು. ಆದರೆ ನೀವು ನಿಮ್ಮ ದೇವರಾದ
ಯೆಹೋವನ ನುಡಿಗೆ ಕಿವಿಗೊಡದೆ—ಈ ದೇಶದಲ್ಲಿ
14 ನಾವು ನೆಲೆಸುವದೇ ಇಲ್ಲ; ಬೇಡವೇ ಬೇಡ; ನಾವು
ಯುದ್ಧಕಾಣದೆ ತುತೂರಿಯ ಶಬ್ದಕೇಳದೆ ಅನ್ನದ
ಕೊರತೆಯಿಂದ ಹಸಿವೆಗೊಳ್ಳದೆ ಇರುವ ಐಗುಪ್ತ

ದೇಶಕ್ಕೆ ಹೋಗಿ ಅಲ್ಲೇ ವಾಸಿಸುವೆವು ಎಂದ
ಕೊಂಡರೆ ಯೆಹೂದ್ಯರಲ್ಲಿ ಉಳಿದವರೇ, ಯೆಹೋ
ವನ ವಾಕ್ಯವನ್ನು ಈಗ ಕೇಳಿರಿ; ಇಸ್ರಾಯೇಲಿನ
ದೇವರೂ ಸೇನಾಧೀಶ್ವರನೂ ಆದ ಯೆಹೋವನು
ಇಂತೆನ್ನುತ್ತಾನೆ—ನೀವು ಐಗುಪ್ತಕ್ಕೆ ಹೋಗಬೇ
ಕೆಂದು ಹಟಹಿಡಿದು ಅಲ್ಲಿಗೆ ಸೇರಿ ವಾಸಮಾಡು
ದಾದರೆ ಆಗ ನೀವು ಹೆದರುತ್ತಿರುವ ಖಡ್ಗವು ಐಗುಪ್ತ
ದಲ್ಲಿಯೂ ನಿಮ್ಮನ್ನು ಹಿಂದಟ್ಟಿ ಹಿಡಿಯುವದು
ನೀವು ಅಂಜುತ್ತಿರುವ ಕ್ಷಾಮವು ಅಲ್ಲಿಯೂ ನಿಮ
ಬೆನ್ನ ಹತ್ತುವದು; ಅಲ್ಲೇ ಸಾಯುವಿರಿ. ಐಗುಪ್ತಕ್ಕೆ
ಹೋಗಿ ಅಲ್ಲಿ ವಾಸಿಸಲು ಹಟಹಿಡಿಯುವ ಎಲ್ಲಾ
ಜನರಿಗೂ ಇದೇ ಗತಿಯಾಗುವದು; ಖಡ್ಗಕ್ಷಾವ
ವ್ಯಾಧಿಗಳಿಂದ ಸಾಯುವರು; ನಾನು ಅವರಿಗೆ ಬ
ಮಾಡುವ ವಿಪತ್ತಿನಿಂದ ಯಾರೂ ತಪ್ಪಿಸಿಕೊಳ್ಳರು
ಯಾರೂ ಉಳಿಯರು. ಇಸ್ರಾಯೇಲಿನ ದೇವರೂ
ಸೇನಾಧೀಶ್ವರನೂ ಆದ ಯೆಹೋವನು ಇಂತೆನ್ನು
ತ್ತಾನೆ—ನನ್ನ ಉಗ್ರರೋಷಾಗ್ನಿಯು ಯೆರೂಸಲೇವಿ
ನವರ ಮೇಲೆ ಹೇಗೆ ಸುರಿಯಿತೋ ಹಾಗೆಯೇ ನೀವು
ಐಗುಪ್ತದಲ್ಲಿ ಕಾಲಿಟ್ಟ ಕೂಡಲೆ ನನ್ನ ರೋಷಾ
ಗ್ನಿಯು ನಿಮ್ಮ ಮೇಲೆಯೂ ಸುರಿಯುವದು; ನೀವು
ಅಪವಾದ ವಿಸ್ಮಯ ಶಾಪ ದೂಷಣೆಗಳಿಗೆ ಗುರಿ
ಯಾಗುವಿರಿ; ಈ ಸ್ಥಳವು ಮತ್ತೆ ನಿಮ್ಮ ಕಣ್ಣಿಗೆ
ಬೀಳದು. ಯೆಹೂದ್ಯರಲ್ಲಿ ಉಳಿದವರೇ, ಯೆಹೋ
ವನು ನಿಮ್ಮನ್ನು ಕುರಿತು—ಐಗುಪ್ತಕ್ಕೆ ಹೋಗಬೇಡಿರಿ
ಎಂದು ಅಪ್ಪಣೆಮಾಡಿದ್ದಾನೆ; ನಾನು ಈ ದಿವಸ
[ಆ ಮಾತನ್ನು] ನಿಮಗೆ ಪ್ರಕಟಿಸಿದ್ದೇನೆ, ಚೆನ್ನಾಗಿ
ತಿಳಿದಿರಲಿ. ನಿಮ್ಮನ್ನು ನೀವೇ ಮೋಸಪಡಿಸಿಕೊಂಡಿ
ದ್ದೀರಿ; ನೀವು ನನ್ನ ಬಳಿಗೆ ಬಂದು—ನಿಮ್ಮ ದೇವ
ರಾದ ಯೆಹೋವನನ್ನು ನಮಗಾಗಿ ಪ್ರಾರ್ಥಿಸು
ನಮ್ಮ ದೇವರಾದ ಯೆಹೋವನು ಯಾವ ಅಪ್ಪಣೆ
ಕೊಡುತ್ತಾನೋ ಅದನ್ನು ನಮಗೆ ತಿಳಿಸು, ಅದ
ರಂತೆಯೇ ನಡೆಯುವೆವು ಎಂಬದಾಗಿ ನಿಮ್ಮ ದೇವ
ರಾದ ಯೆಹೋವನ ಸನ್ನಿಧಿಯಲ್ಲಿ ವಿಚಾರಿಸುವದಕ್ಕೆ
ನನ್ನನ್ನು ಕಳುಹಿಸಿದಿರಲ್ಲಾ. ನಾನು ಯೆಹೋವನ
ಅಪ್ಪಣೆಯನ್ನು ಈ ದಿವಸ ನಿಮಗೆ ತಿಳಿಸಿದ್ದೇನೆ
ನೀವಾದರೆ ನಿಮ್ಮ ದೇವರಾದ ಯೆಹೋವನು ನನ್ನ
ಮೂಲಕ ನಿಮಗೆ ಹೇಳಿ ಕಳುಹಿಸಿದ ಯಾವ
ಮಾತನ್ನೂ ಕೇಳಲಿಲ್ಲ. ನೀವು ಯಾವ ಸ್ಥಳದಲ್ಲಿ
ವಾಸಮಾಡಲಪೇಕ್ಷಿಸಿ ಹೋಗುತ್ತೀರೋ ಆ ಸ್ಥಳ
ದಲ್ಲೇ ಖಡ್ಗಕ್ಷಾಮವ್ಯಾಧಿಗಳಿಂದ ಸಾಯುವಿರಿ ಎಂದು
ಖಂಡಿತ ತಿಳಿಯಿರಿ.

4
ಯೆರೆಮೀಯನು ಸಮಸ್ತ ಜನರನ್ನು ಸಂಬೋ
ಧಿಸಿ ಅವರ ದೇವರಾದ ಯೆಹೋವನು ತನ್ನ
ಮೂಲಕ ಅವರಿಗೆ ಹೇಳಿಕಳುಹಿಸಿದ ಈ ಮಾತುಗಳ
ನ್ನೆಲ್ಲಾ ತಿಳಿಸಿಬಿಟ್ಟ ಮೇಲೆ ಹೋಷಾಯನ ಮಗ
ನಾದ ಅಜರ್ಯನೂ ಕಾರೇಹನ ಮಗನಾದ ಯೋ
ಹಾನಾನನೂ ಸೊಕ್ಕೇರಿದವರೆಲ್ಲರೂ ಅವನಿಗೆ—ನಿನ್ನ

1) ಪಾಠಾಂತರ: ಸ್ವದೇಶದಲ್ಲಿ ವಾಸಿಸಮಾಡುವಂತೆ.

ಮಾತು ಸುಳ್ಳು; ಐಗುಪ್ತಕ್ಕೆ ಹೋಗಿ ವಾಸಮಾಡ
ಬಾರದು ಎಂದು ತಿಳಿಸುವಂತೆ ನಮ್ಮ ದೇವರಾದ
3 ಯೆಹೋವನು ನಿನ್ನನ್ನು ಕಳುಹಿಸಲಿಲ್ಲ; ಕಸ್ದೀ
ಯರು ನಮ್ಮನ್ನು ಕೊಲ್ಲುವದಕ್ಕೋ ಬಾಬೆಲಿಗೆ ಸೆರೆ
ಒಯ್ಯುವದಕ್ಕೋ ನಮ್ಮನ್ನು ಅವರ ಕೈಗೆ ಸಿಕ್ಕಿಸ
ಬೇಕೆಂದು ನೇರೀಯನ ಮಗನಾದ ಬಾರೂಕನೇ
ನಿನ್ನನ್ನು ನಮ್ಮ ಮೇಲೆ ನೂಕಿದ್ದಾನೆ ಎಂದು ಹೇಳಿ
4 ದರು. ಹೀಗೆ ಯೆಹೂದ ದೇಶದಲ್ಲಿಯೇ ವಾಸ
ಮಾಡಿರಿ ಎನ್ನುವ ಯೆಹೋವನ ಮಾತನ್ನು ಕಾರೇಹನ
ಮಗನಾದ ಯೋಹಾನಾನನೂ ಸಮಸ್ತ ಸೇನಾಪತಿ
5 ಗಳೂ ಸಕಲಜನರೂ ಕೇಳದೆಹೋದರು. ಆಗ
ಕಾವಲುದಂಡಿನ ಅಧಿಪತಿಯಾದ ನೆಬೂಜರದಾನನು
ಅಹೀಕಾಮನ ಮಗನೂ ಶಾಫಾನನ ಮೊಮ್ಮಗನೂ
ಆದ ಗೆದಲ್ಯನ ವಶಕ್ಕೆ ಒಪ್ಪಿಸಿದ ಜನರು, ಅನ್ಯದೇಶ
ಗಳಿಗೆ ಅಟ್ಟಲ್ಪಟ್ಟು ಯೆಹೂದದಲ್ಲಿ ವಾಸಿಸುವದಕ್ಕೆ
ಹಿಂದಿರುಗಿ ಬಂದಿದ್ದ ಯೆಹೂದಜನಶೇಷದವರು, ಪ್ರವಾ
6 ದಿಯಾದ ಯೆರೆಮೀಯನು, ನೇರೀಯನ ಮಗನಾದ
ಬಾರೂಕನು, ರಾಜಕುಮಾರ್ತೆಯರು, ಅಂತು ಗಂಡ
7 ಸರು, ಹೆಂಗಸರು, ಮಕ್ಕಳು, ಇವರೆಲ್ಲರನ್ನೂ ಕಾರೇಹನ
ಮಗನಾದ ಯೋಹಾನಾನನೂ ಸಕಲ ಸೇನಾಪತಿಗಳೂ
ಕರೆದುಕೊಂಡು ಐಗುಪ್ತಕ್ಕೆ ಹೋಗಿ ತಹಪನೇಸ್
ಊರಿಗೆ ಸೇರಿದರು. ಯೆಹೋವನ ಮಾತನ್ನು ಕೇಳಲೇ
ಇಲ್ಲ.

ನೆಬೂಕದ್ನೆಚ್ಚರನು ಐಗುಪ್ತವನ್ನು ಸ್ವಾಧೀನಮಾಡಿಕೊಳ್ಳುವನು
ಎಂದು ಯೆರೆಮೀಯನು ಮುಂತಿಳಿಸಿದ್ದು.

8 ಯೆರೆಮೀಯನು ತಹಪನೇಸಿನಲ್ಲಿರುವಾಗ ಯೆ
ಹೋವನು ಈ ವಾಕ್ಯವನ್ನು ಅವನಿಗೆ ದಯಪಾಲಿಸಿ
9 ದನು — ನೀನು ನಿನ್ನ ಕೈಯಲ್ಲಿ ದೊಡ್ಡ ಕಲ್ಲುಗಳನ್ನು
ತೆಗೆದುಕೊಂಡು ಹೋಗಿ ತಹಪನೇಸಿನಲ್ಲಿರುವ ಫರೋ
ಹನ ಮನೆಯ ಬಾಗಿಲ ಮುಂದೆ ಯೆಹೂದ್ಯರ ಕಣ್ಣೆದು
ರಿಗೆ ನೆಲಗಟ್ಟಿನ ಕೆಳಗೆ ಇಟ್ಟು ಗಾರೆಯಿಂದ ಮುಚ್ಚಿ
10 ಬಿಟ್ಟು ಅವರಿಗೆ ಹೀಗೆ ಹೇಳು — ಇಸ್ರಾಯೇಲ್ಯರ
ದೇವರೂ ಸೇನಾಧೀಶ್ವರನೂ ಆದ ಯೆಹೋವನು
ಇಂತೆನ್ನುತ್ತಾನೆ — ಇಗೋ, ನಾನು ಬಾಬೆಲಿನ ಅರಸನೂ
ನನ್ನ ಸೇವಕನೂ ಆದ ನೆಬೂಕದ್ನೆಚ್ಚರನನ್ನು ಕರೆ
ಯಿಸಿ ನಾನು ಮರೆಮಾಡಿಸಿರುವ ಈ ಕಲ್ಲುಗಳ ಮೇಲೆ
ಅವನ ಸಿಂಹಾಸನವನ್ನು ಹಾಕಿಸುವೆನು; ಅವನು
ಈ ಕಲ್ಲುಗಳ ಮೇಲೆಯೇ ತನ್ನ ರತ್ನಗಂಬಳಿಯನ್ನು
11 ಹಾಕಿಸುವನು. ಅವನು ಬಂದು ಐಗುಪ್ತದೇಶವನ್ನು
ಹೊಡೆಯುವನು; ಮರಣಕ್ಕೆ ಗೊತ್ತಾದವರು ಮರ
ಣಕ್ಕೆ, ಸೆರೆಗೆ ಗೊತ್ತಾದವರು ಸೆರೆಗೆ, ಖಡ್ಗಕ್ಕೆ ಗೊ
12 ತ್ತಾದವರು ಖಡ್ಗಕ್ಕೆ ಗುರಿಯಾಗುವರು. ನಾನು
ಐಗುಪ್ತದ ದೇವಾಲಯಗಳಲ್ಲಿ ಬೆಂಕಿಹೊತ್ತಿಸುವೆನು,
ಅವನು ಅವುಗಳನ್ನು ಸುಟ್ಟು ದೇವತೆಗಳನ್ನು ಸೆರೆ
ಒಯ್ಯುವನು; ಕುರುಬನು ತನ್ನ ಕಂಬಳಿಯನ್ನು
ಸುತ್ತಿಕೊಳ್ಳುವಂತೆ ಅವನು ಐಗುಪ್ತದೇಶವನ್ನು ಸುತ್ತಿ
ಕೊಳ್ಳುವನು; ಸಮಾಧಾನವಾಗಿ ಅಲ್ಲಿಂದ ಹೊರಟು
13 ಹೋಗುವನು. ಐಗುಪ್ತದೇಶದಲ್ಲಿರುವ ಸೂರ್ಯ
ಪುರಿಯ ಸ್ತಂಭಗಳನ್ನು ಒಡೆದುಹಾಕಿ ಐಗುಪ್ತದ
ದೇವಾಲಯಗಳನ್ನು ಬೆಂಕಿಯಿಂದ ಸುಟ್ಟುಬಿಡುವನು.

ಯೆರೆಮೀಯನು ಗಗನದ ಒಡತಿಯ ಪೂಜೆಯನ್ನು ಖಂಡಿಸಿದ್ದು.

44
ಐಗುಪ್ತದೇಶದ ಮಿಗ್ದೋಲ್, ತಹಪನೇಸ್,
ನೋಫ್ ಎಂಬ ಪಟ್ಟಣಗಳಲ್ಲಿಯೂ ಪತ್ರೋಸ್
ಪ್ರಾಂತದಲ್ಲಿಯೂ ವಾಸಮಾಡುತ್ತಿದ್ದ ಯೆಹೂದ್ಯರೆ
ಲ್ಲರ ವಿಷಯವಾಗಿ ಯೆಹೋವನು ಯೆರೆಮೀಯನಿಗೆ
ದಯಪಾಲಿಸಿದ ವಾಕ್ಯ — ಇಸ್ರಾಯೇಲಿನ ದೇವರೂ 2
ಸೇನಾಧೀಶ್ವರನೂ ಆದ ಯೆಹೋವನು ಇಂತೆನ್ನು
ತ್ತಾನೆ — ನಾನು ಯೆರೂಸಲೇಮಿಗೂ ಯೆಹೂದದ
ಎಲ್ಲಾ ಊರುಗಳಿಗೂ ಬರಮಾಡಿದ ಕೇಡನ್ನು
ನೀವು ನೋಡಿದ್ದೀರಷ್ಟೆ; ಅಹಾ, ಅಲ್ಲಿನವರು 3
ತಮಗೂ ನಿಮಗೂ ನಿಮ್ಮ ಪಿತೃಗಳಿಗೂ ತಿಳಿಯದ
ಅನ್ಯದೇವತೆಗಳಿಗೆ ಧೂಪಹಾಕಿ ಸೇವೆಮಾಡುವದಕ್ಕೆ
ಆತುರಪಟ್ಟು ನನ್ನನ್ನು ಕೆಣಕಬೇಕೆಂದೇ ಈ ದುರಾ
ಚಾರವನ್ನು ನಡಿಸಿದ್ದರಿಂದ ಆ ಸ್ಥಳಗಳು ಹಾಳಾ
ದವು. ಅಲ್ಲಿ ಯಾರೂ ವಾಸಿಸರು. ನಾನು ನನ್ನ 4
ಸೇವಕರಾದ ಪ್ರವಾದಿಗಳನ್ನೆಲ್ಲಾ ಅವರ ಬಳಿಗೆ ಸಾವ
ಕಾಶಮಾಡದೆ ಕಳುಹಿಸುತ್ತಾ — ಅಹಹ, ನಾನು
ಹೇಸುವ ಈ ಅಸಹ್ಯಕಾರ್ಯವನ್ನು ಮಾಡಬೇಡಿರಿ
ಎಂದು ಪ್ರಕಟಿಸುತ್ತಾ ಬಂದರೂ ಅವರು ಕಿವಿಗೊಟ್ಟು 5
ಕೇಳಲಿಲ್ಲ, ಅನ್ಯದೇವತೆಗಳಿಗೆ ಧೂಪಹಾಕುವದನ್ನು
ನಿಲ್ಲಿಸಲಿಲ್ಲ, ತಮ್ಮ ದುರಾಚಾರವನ್ನು ಬಿಡಲಿಲ್ಲ.
ಆದಕಾರಣ ನನ್ನ ಉಗ್ರರೋಷಾಗ್ನಿಯು ಸುರಿದು 6
ಯೆಹೂದದ ಊರುಗಳಲ್ಲಿಯೂ ಯೆರೂಸಲೇಮಿನ
ಬೀದಿಗಳಲ್ಲಿಯೂ ಧಗಧಗಿಸಿತು; ಅವು ಈಗಲೂ
ಹಾಳುಹಾಳಾಗಿವೆ. ಹೀಗಿರಲು ಸೇನಾಧೀಶ್ವರಸ್ವಾ 7
ಮಿಯೂ ಇಸ್ರಾಯೇಲಿನ ದೇವರೂ ಆದ ಯೆಹೋ
ವನು ಈಗ ಇಂತೆನ್ನುತ್ತಾನೆ — ಈ ದೊಡ್ಡ ಕೇಡನ್ನು
ನಿಮಗೆ ನೀವೇ ಉಂಟುಮಾಡಿಕೊಳ್ಳುವದೇಕೆ? ಈ
ದುರಾಚಾರದ ನಿಮಿತ್ತ ಯೆಹೂದದಲ್ಲಿರುವ ಗಂಡ
ಸರು, ಹೆಂಗಸರು, ಮಕ್ಕಳು, ಮೊಲೆಕೂಸುಗಳು
ನಿರ್ಮೂಲವಾಗುವರು, ನಿಮ್ಮಲ್ಲಿ ಯಾರೂ ಉಳಿ
ಯರು, ಪ್ರವಾಸಿಗಳಾಗಿ ನೀವು ಬಂದಿರುವ ಐಗುಪ್ತ 8
ದಲ್ಲಿ ಅನ್ಯದೇವತೆಗಳಿಗೆ ಧೂಪಹಾಕುವ ದುಷ್ಕೃತ್ಯ
ವನ್ನು ನಡಿಸುತ್ತಾ ನನ್ನನ್ನು ಕೆಣಕುವದರಿಂದ
ನೀವು ನಿರ್ಮೂಲರಾಗಿ ಸಕಲ ಭೂರಾಜ್ಯಗಳ ಶಾಪ
ದೂಷಣೆಗಳಿಗೆ ಗುರಿಯಾಗುವಿರಿ. ನಿಮ್ಮ ಪಿತೃಗಳು, 9
ಯೆಹೂದದ ಅರಸರು, ಅವರ ಹೆಂಡಿರು, ನೀವು, ನಿಮ್ಮ
ಹೆಂಡಿರು, ಇವರೆಲ್ಲರೂ ಯೆಹೂದದೇಶದಲ್ಲಿಯೂ
ಯೆರೂಸಲೇಮಿನ ಬೀದಿಗಳಲ್ಲಿಯೂ ನಡಿಸಿದ ದುರಾ
ಚಾರಗಳನ್ನು ಮರೆತುಬಿಟ್ಟಿರೋ? ಅವರು ಇಂದಿನ 10
ವರೆಗೂ ತಗ್ಗಲಿಲ್ಲ, ನನಗೆ ಭಯಪಡಲಿಲ್ಲ; ನಾನು
ನಿಮಗೂ ನಿಮ್ಮ ಪಿತೃಗಳಿಗೂ ನೇಮಿಸಿದ ನಿಯಮ
ನಿಷ್ಠೆಗಳನ್ನು ಅನುಸರಿಸಿ ನಡೆಯಲೂ ಇಲ್ಲ. ಆದ 11
ಕಾರಣ ಇಸ್ರಾಯೇಲಿನ ದೇವರೂ ಸೇನಾಧೀಶ್ವರನೂ
ಆದ ಯೆಹೋವನು ಹೀಗನ್ನುತ್ತಾನೆ. — ಆಹಾ, ಯೆ
ಹೂದವನ್ನೆಲ್ಲಾ ನಿರ್ಮೂಲಮಾಡುವೆನು, ಕೇಡಿಗಾ

12 ಗಿಯೇ ನಿಮ್ಮ ಮೇಲೆ ದೃಷ್ಟಿಯಿಡುವೆನು. ಐಗು
ಪ್ತಕ್ಕೆ ಹೋಗಿ ಅಲ್ಲಿ ಪ್ರವಾಸಿಸಲು ಹಟಹಿಡಿದ ಯೆ
ಹೂದಜನಶೇಷವನ್ನು ನಾನು ಹಿಡಿದು ನಾಶನಮಾಡು
ವೆನು; ಐಗುಪ್ತದಲ್ಲೇ ಒರಗಿ ಹೋಗುವರು; ಖಡ್ಗ
ಕ್ಷಾಮಗಳಿಂದ ನಾಶವಾಗುವರು; ಚಿಕ್ಕವರು ಮೊದಲು
ಗೊಂಡು ದೊಡ್ಡವರ ತನಕ ಖಡ್ಗಕ್ಷಾಮಗಳಿಂದ ಸತ್ತು
ಅಪವಾದ ವಿಸ್ಮಯ ಶಾಪ ದೂಷಣೆಗಳಿಗೆ ಗುರಿಯಾ
13 ಗುವರು. ನಾನು ಯೆರೂಸಲೇಮಿನವರನ್ನು ಖಡ್ಗ
ಕ್ಷಾಮವ್ಯಾಧಿಗಳಿಂದ ದಂಡಿಸಿದಂತೆ ಐಗುಪ್ತದಲ್ಲಿ
14 ವಾಸಿಸುವವರನ್ನೂ ದಂಡಿಸುವೆನು; ಐಗುಪ್ತಕ್ಕೆ ಹೋಗಿ
ಪ್ರವಾಸಿಸುತ್ತಿರುವ ಯೆಹೂದಜನಶೇಷದವರು ಸ್ವದೇ
ಶಕ್ಕೆ ಹಿಂದಿರುಗಬೇಕೆಂದು ಎಷ್ಟು ಆಶಿಸಿದರೂ ಅವರಲ್ಲಿ
ಯಾರೂ ಉಳಿದು ಅಲ್ಲಿಂದ ತಪ್ಪಿಸಿಕೊಂಡು ಯೆಹೂ
ದಕ್ಕೆ ಹಿಂದಿರುಗುವದಿಲ್ಲ; ಓಡಿಬರುವ ಕೊಂಚ
ಜನವೇ ಹೊರತು ಯಾವನೂ ಹಿಂದಿರುಗನು.
15 ಆಗ ತಮ್ಮ ಹೆಂಡತಿಯರು ಅನ್ಯದೇವತೆಗಳಿಗೆ
ಧೂಪಹಾಕುತ್ತಿದ್ದರೆಂದು ತಿಳಿದುಕೊಂಡ ಗಂಡಸರು,
ಅಲ್ಲಿ ದೊಡ್ಡ ಗುಂಪಾಗಿ ನಿಂತುಕೊಂಡಿದ್ದ ಹೆಂಗಸರು,
ಅಂತು ಐಗುಪ್ತದಲ್ಲಿಯೂ ಪತ್ರೋಸಿನಲ್ಲಿಯೂ ವಾಸ
ವಾಗಿದ್ದವರೆಲ್ಲರೂ ಯೆರೆಮೀಯನಿಗೆ ಹೀಗೆ ಹೇಳಿ
16 ದರು—ಯೆಹೋವನ ಹೆಸರಿನಿಂದ ನೀನು ನಮಗೆ
17 ನುಡಿದ ಮಾತನ್ನು ಕೇಳಲೊಲ್ಲೆವು. ಗಗನದ ಒಡ
ತಿಗೆ ಧೂಪಹಾಕಿ ಪಾನನೈವೇದ್ಯವನ್ನು ಸುರಿಯು
ವೆವು ಎಂದು ನಾವು ಬಾಯಿಬಿಟ್ಟು ಹೇಳಿದ ಮಾತು
ಗಳನ್ನೆಲ್ಲಾ ಖಂಡಿತವಾಗಿ ನೆರವೇರಿಸುವೆವು. ಮೊದಲು
ಯೆಹೂದದ ಊರುಗಳಲ್ಲಿ ಮತ್ತು ಯೆರೂಸಲೇ
ಮಿನ ಬೀದಿಗಳಲ್ಲಿ ನಾವೂ ನಮ್ಮ ಪಿತೃಗಳೂ ನಮ್ಮ
ಅರಸರೂ ನಮ್ಮ ಪ್ರಧಾನರೂ ಹೀಗೆ ಮಾಡುತ್ತಿದ್ದಾಗ
ನಾವು ಯಾವ ಕೇಡನ್ನೂ ಕಾಣದೆ ಹೊಟ್ಟೆತುಂಬಾ
18 ಉಂಡು ಸುಖಪಡುತ್ತಿದ್ದೆವು. ಆದರೆ ನಾವು ಗಗನದ
ಒಡತಿಗೆ ಧೂಪಹಾಕುವದನ್ನೂ ಪಾನವನ್ನು ನೈವೇದ್ಯ
ವಾಗಿ ಸುರಿಯುವದನ್ನೂ ನಿಲ್ಲಿಸಿಬಿಟ್ಟಂದಿನಿಂದ ಎಲ್ಲಾ
ಕೊರತೆಗೂ ಗುರಿಯಾಗಿ ಖಡ್ಗಕ್ಷಾಮಗಳಿಂದ ನಾಶ
19 ವಾಗುತ್ತಿದ್ದೇವೆ. ಗಗನದ ಒಡತಿಗೆ ಧೂಪಹಾಕಿ
ಪಾನನೈವೇದ್ಯವನ್ನು ಸುರಿಯುತ್ತಿದ್ದಾಗ ನಾವು ಆಕೆ
ಯ ಪೂಜೆಗಾಗಿ ಆಕೆಯ ಆಕಾರವಾದ ಹೋಳಿಗೆಗ
ಳನ್ನು ಮಾಡಿ ಪಾನದ್ರವ್ಯವನ್ನು ಅರ್ಪಿಸಿದ್ದು ನಮ್ಮ
20 ಗಂಡಂದಿರಿಗೆ ಒಪ್ಪಿಗೆಯಾಗಿರಲಿಲ್ಲವೋ? ಆಗ ಯೆರೆ
ಮೀಯನು ಗಂಡಸರಿಗೂ ಹೆಂಗಸರಿಗೂ ಅಂತು
ತನಗೆ ಆ ಉತ್ತರಕೊಟ್ಟ ಎಲ್ಲಾ ಜನರಿಗೂ ಹೀಗೆ
21 ಹೇಳಿದನು—ನೀವು, ನಿಮ್ಮ ಪಿತೃಗಳು, ನಿಮ್ಮ ಅರ
ಸರು, ನಿಮ್ಮ ಪ್ರಧಾನರು, ಸಾಮಾನ್ಯ ಜನರು,
ನೀವೆಲ್ಲರೂ ಯೆಹೂದದ ಊರುಗಳಲ್ಲಿ ಮತ್ತು
ಯೆರೂಸಲೇಮಿನ ಬೀದಿಗಳಲ್ಲಿ ಹಾಕಿದ ಧೂಪವು
ಯೆಹೋವನ ನೆನಪಿನಲ್ಲಿ ಇಲ್ಲವೋ, ಅದು ಆತನ
22 ಜ್ಞಾಪಕಕ್ಕೆ ಬರಲಿಲ್ಲವೋ? ನೀವು ನಡಿಸಿದ ದುರಾ
ಚಾರಗಳನ್ನೂ ಅಸಹ್ಯಕಾರ್ಯಗಳನ್ನೂ ಯೆಹೋವನು
ಇನ್ನು ಸಹಿಸಲಾರದೆಹೋದದರಿಂದ ನಿಮ್ಮ ದೇಶವು
ಹಾಳುಬಿದ್ದು ಜನವಿಲ್ಲದೆ ಬೆರಗಿಗೂ ಶಾಪಕ್ಕೂ ಆಸ್ಪ
23 ದವಾಯಿತು; ಈಗಲೂ ಹಾಗೆಯೇ ಇದೆ. ನೀವು
ಯೆಹೋವನ ಮಾತನ್ನು ಕೇಳದೆ ಆತನ ಧರ್ಮ
ಶಾಸ್ತ್ರವನ್ನೂ ನಿಬಂಧನೆಗಳನ್ನೂ ಕಟ್ಟಳೆಗಳನ್ನೂ ಅನು
ಸರಿಸದೆ ಆತನಿಗೆ ಪಾಪ ಮಾಡಿ [ಅನ್ಯದೇವತೆಗಳಿಗೆ
ಧೂಪಹಾಕಿದ್ದರಿಂದಲೇ ಇಂಥಾ ಕೇಡು ನಿಮಗೆ ಸಂಭ
ವಿಸಿದೆ.
24 ಇದಲ್ಲದೆ ಯೆರೆಮೀಯನು ಹೆಂಗಸರಿಗೂ ಎಲ್ಲಾ
ಜನರಿಗೂ ಹೀಗೆ ಹೇಳಿದನು—ಐಗುಪ್ತದಲ್ಲಿರುವ
ಯೆಹೂದ್ಯರೇ, ನೀವೆಲ್ಲರೂ ಯೆಹೋವನ ಮಾತನ್ನು
25 ಕೇಳಿರಿ—ಇಸ್ರಾಯೇಲಿನ ದೇವರೂ ಸೇನಾಧೀಶ್ವರನೂ
ಆದ ಯೆಹೋವನು ಇಂತೆನ್ನುತ್ತಾನೆ—ಗಗನದ ಒಡ
ತಿಗೆ ಧೂಪಹಾಕಿ ಪಾನನೈವೇದ್ಯವನ್ನು ಸುರಿಯುವೆವು
ಎಂದು ನಾವು ಮಾಡಿಕೊಂಡ ಹರಕೆಗಳನ್ನು ಖಂಡಿತ
ವಾಗಿ ತೀರಿಸುವೆವು ಎಂಬದಾಗಿ ನೀವೂ ನಿಮ್ಮ ಹೆಂಡ
ರೂ ಬಾಯಿಂದ ಪ್ರತಿಜ್ಞೆಮಾಡಿ ಕೈಯಿಂದ ನೆರವೇರಿ
ಸಿದ್ದೀರಲ್ಲಾ; ನಿಮ್ಮ ಹರಕೆಗಳನ್ನು ತೀರಿಸೇ ತೀರಿಸಿರಿ,
26 ನೆರವೇರಿಸೇ ನೆರವೇರಿಸಿರಿ! ಐಗುಪ್ತದಲ್ಲಿ ವಾಸವಾಗಿ
ರುವ ಯೆಹೂದ್ಯರೇ, ನೀವೆಲ್ಲರೂ ಯೆಹೋವನ
ಮಾತನ್ನು ಕೇಳಿರಿ; ಯೆಹೋವನು ಇಂತೆನ್ನುತ್ತಾನೆ—
ಆಹಾ, ಕರ್ತನಾದ ಯೆಹೋವನ ಜೀವದಾಣೆ ಎಂದು
ನನ್ನ ಹೆಸರನ್ನು ಬಾಯಿಂದ ಎತ್ತಲಿಕ್ಕೆ ಐಗುಪ್ತದಲ್ಲಿ
ಯಾವ ಯೆಹೂದ್ಯನೂ ಇನ್ನಿರನು ಎಂಬದಾಗಿ ನನ್ನ
27 ಮಹಾನಾಮದ ಮೇಲೆ ಆಣೆಯಿಟ್ಟಿದ್ದೇನೆ. ಇಗೋ,
ಇವರಿಗೆ ಮೇಲನ್ನಲ್ಲ, ಕೇಡನ್ನೇ ಮಾಡಬೇಕೆಂದು
ಎಚ್ಚರಗೊಂಡಿದ್ದೇನೆ; ಐಗುಪ್ತದಲ್ಲಿನ ಎಲ್ಲಾ ಯೆ
ಹೂದ್ಯರು ಖಡ್ಗಕ್ಷಾಮಗಳಿಂದ ನಾಶಹೊಂದುತ್ತಾ
28 ನಿರ್ನಾಮವಾಗುವರು. ಖಡ್ಗಕ್ಕೆ ತಪ್ಪಿಸಿಕೊಂಡವರು
ಕೊಂಚ ಜನ ಮಾತ್ರವೇ ಆಗಿ ಐಗುಪ್ತದಿಂದ ಯೆಹೂ
ದಕ್ಕೆ ಹಿಂದಿರುಗುವರು; ಆಗ ಐಗುಪ್ತಕ್ಕೆ ಹೋಗಿ
ಪ್ರವಾಸಿಸುತ್ತಿರುವ ಯೆಹೂದಜನಶೇಷದವರೆಲ್ಲರೂ
ನನ್ನ ಮಾತು ಸಾಗತಕ್ಕದ್ದೋ ತಮ್ಮ ಮಾತು ಸಾಗ
29 ತಕ್ಕದ್ದೋ ಎಂದು ತಿಳಿದುಕೊಳ್ಳುವರು. ನಾನು
ನಿಮ್ಮನ್ನು ಈ ಸ್ಥಳದಲ್ಲಿ ದಂಡಿಸುವೆನೆಂಬದಕ್ಕೆ
ಒಂದು ಗುರುತು ಕಾಣುವದು; ನನ್ನ ಮಾತುಗಳು
ಈಡೇರಿ ನಿಮಗೆ ಕೇಡನ್ನುಂಟುಮಾಡುವವು ಎಂಬ
30 ದಾಗಿ ಅದರಿಂದಲೇ ನಿಮಗೆ ತಿಳಿದುಬರುವದು; ಅದೇ
ನಂದರೆ—ಇಗೋ ನಾನು ಯೆಹೂದದ ಅರಸನಾದ
ಚಿದ್ಕೀಯನನ್ನು ಅವನ ಪ್ರಾಣ ಹುಡುಕುತ್ತಿದ್ದ ಶತ್ರು
ವಾದ ನೆಬೂಕದ್ನೆಚ್ಚರನೆಂಬ ಬಾಬೆಲಿನ ಅರಸನ ಕೈಗೆ
ಕೊಟ್ಟಂತೆ ಐಗುಪ್ತದ ಅರಸನಾದ ಫರೋಹ ಹೊಫ್ರ
ನನ್ನು ಅವನ ಪ್ರಾಣ ಹುಡುಕುವ ಶತ್ರುಗಳ ಕೈಗೆ
ಕೊಡುವೆನು ಎಂಬದೇ; ಇದು ಯೆಹೋವನಾದ ನನ್ನ
ನುಡಿ.

ಯೆಹೋವನು ಬಾರೂಕನನ್ನು ಗದರಿಸಿದ್ದು,
ಧೈರ್ಯಗೊಳಿಸಿದ್ದು.

4[5] ಯೋಷೀಯನ ಮಗನೂ ಯೆಹೂದದ ಅರಸ
ನೂ ಆದ ಯೆಹೋಯಾಕೀಮನ ಆಳಿಕೆಯ ನಾಲ್ಕ
ನೆಯ ವರುಷದಲ್ಲಿ ನೇರೀಯನ ಮಗನಾದ ಬಾರೂಕ
ನು ಯೆರೆಮೀಯನ ಮಾತುಗಳನ್ನು ಅವನ ಬಾಯಿಂದ

ಬಂದ ಹಾಗೆಯೇ ಪುಸ್ತಕದಲ್ಲಿ ಬರೆದಾಗ ಪ್ರವಾದಿ
ಯಾದ ಯೆರೆಮೀಯನು ಯೆಹೋವನ ಅಪ್ಪಣೆಯ
2 ಪ್ರಕಾರ ಈ ವಾಕ್ಯವನ್ನು ಅವನಿಗೆ ನುಡಿದನು — ಬಾರೂ
ಕನೇ, ಇಸ್ರಾಯೇಲಿನ ದೇವರಾದ ಯೆಹೋವನು ನಿನಗೆ
ಹೀಗೆ ಹೇಳುತ್ತಾನೆ— ನೀನು, ನನ್ನ ಗತಿಯನ್ನು ಏನು
3 ಹೇಳಲಿ! ವ್ಯಥೆಪಡುತ್ತಿದ್ದ ನನ್ನನ್ನು ಯೆಹೋವನು
ಹೆಚ್ಚೆಚ್ಚಾಗಿ ದುಃಖಪಡಿಸಿದ್ದಾನೆ; ನಾನು ನರಳಿ ನರಳಿ
ದಣಿದಿದ್ದೇನೆ, ನನಗೆ ಯಾವ ವಿಶ್ರಾಂತಿಯೂ ದೊರ
4 ಕದು ಎಂದು ಹೇಳಿದಿಯಲ್ಲಾ, ಯೆಹೋವನ ಈ ವಾಕ್ಯ
ವನ್ನು ಕೇಳು—ಇಗೋ, ನಾನು ಕಟ್ಟಿದ್ದನ್ನು ನಾನೇ
ಕೆಡವುವೆನು, ನಾನು ನೆಟ್ಟದ್ದನ್ನು ನಾನೇ ಕಿತ್ತುಹಾಕು
ವೆನು; ಹೌದು, ಭೂಮಂಡಲದಲ್ಲೆಲ್ಲಾ ಹಾಗೆ ಮಾಡು
5 ವೆನು. ಮಹಾಪದವಿಯನ್ನು ನಿರೀಕ್ಷಿಸಿಕೊಳ್ಳು
ತ್ತೀಯೋ? ನಿರೀಕ್ಷಿಸ ಬೇಡ; ಆಹಾ, ನಾನು ನರಜನ್ಮ
ದವರೆಲ್ಲರಿಗೂ ಕೇಡನ್ನುಂಟುಮಾಡುವೆನು; ಆದರೆ
ನೀನು ಎಲ್ಲಿಗೆ ಹೋದರೂ ಪ್ರಾಣವೊಂದನ್ನೇ ಬಾಚಿ
ಕೊಂಡುಹೋಗುವದಕ್ಕೆ ನಿನಗೆ ಅವಕಾಶ ಕೊಡುವೆನು.
ಇದು ಯೆಹೋವನಾದ ನನ್ನ ನುಡಿ.

ಜನಾಂಗಗಳ ವಿಷಯವಾದ ದೈವೋಕ್ತಿಗಳು.

46 — 51.

ಐಗುಪ್ತದ ವಿಷಯವಾದ ದೈವೋಕ್ತಿ.

46 ಯೆಹೋವನು ಜನಾಂಗಗಳ ವಿಷಯವಾಗಿ ಪ್ರ
ವಾದಿಯಾದ ಯೆರೆಮೀಯನಿಗೆ ದಯಪಾಲಿಸಿದ
ವಾಕ್ಯವು.
2 ಐಗುಪ್ತವನ್ನು ಕುರಿತದ್ದು. ಐಗುಪ್ತದ ಅರಸನಾದ
ಫರೋಹನೆಕೋವಿನ ಸೈನ್ಯವು ಯೂಫ್ರೇಟೀಸ್ ನದಿ
ಯ ಬಳಿ ಕರ್ಕೆಮೀಷಿನಲ್ಲಿರುವಾಗ ಯೋಷೀಯನ
ಮಗನೂ ಯೆಹೂದದ ಅರಸನೂ ಆದ ಯೆಹೋಯಾ
ಕೀಮನ ಆಳಿಕೆಯ ನಾಲ್ಕನೆಯ ವರುಷದಲ್ಲಿ ಬಾಬೆಲಿನ
ಅರಸನಾದ ನೆಬೂಕದ್ನೆಚ್ಚರನು ಆ ಸೈನ್ಯವನ್ನು ಹೊಡೆದ
ವಿಷಯ.
3 ಗುರಾಣಿಖೇಡ್ಯಗಳನ್ನು ಸನ್ನಾಹಮಾಡಿಕೊಂಡು
4 ಯುದ್ಧಕ್ಕೆ ಹೊರಡಿರಿ! ರಥಾಶ್ವಗಳನ್ನು ಕಟ್ಟಿರಿ, ವಾಹ
ನಾಶ್ವಗಳನ್ನು ಹತ್ತಿರಿ, ಶಿರಸ್ತ್ರಾಣಗಳನ್ನು ಹಾಕಿಕೊಂಡು
ಯುದ್ಧಕ್ಕೆ ನಿಲ್ಲಿರಿ, ಭರ್ಜಿಗಳನ್ನು ಬೆಳಗಿರಿ, ಕವಚ
5 ತೊಟ್ಟುಕೊಳ್ಳಿರಿ. ಆಹಾ, ನನ್ನ ಕಣ್ಣಿಗೆ ಬಿದ್ದದ್ದೇನು?
ಅವರು ಧೈರ್ಯಗೆಟ್ಟು ಬೆನ್ನುಕೊಟ್ಟಿದ್ದಾರೆ. ಅವರ
ಶೂರರು ಪೆಟ್ಟುತಿಂದು ಹಿಂದಿರುಗದೆ ಓಡಹೋಗುತ್ತಾ
ರೆ; ಸುತ್ತುಮುತ್ತಲು ದಿಗಿಲು ಎಂದು ಯೆಹೋವನು
6 ಅನ್ನುತ್ತಾನೆ. ವೇಗಶಾಲಿಗಳೂ ಓಡಿಹೋಗಲಾರರು,
ಬಲಿಷ್ಠರೂ ತಪ್ಪಿಸಿಕೊಳ್ಳಲಾರರು; ಬಡಗಲಲ್ಲಿ ಯೂ
7 ಫ್ರೇಟೀಸ್ ನದಿಯ ಹತ್ತಿರ ಎಡವಿಬಿದ್ದಿದ್ದಾರೆ. ನೈಲ್
ನದಿಯಂತೆ ಉಬ್ಬಿರುವದು ಇದೇನು? ನೈಲಿನ ಶಾಖೆ
ಗಳ ಹಾಗೆ ತುಂಬಿತುಳುಕುವ ಈ ಪ್ರವಾಹವು
8 ಯಾವದು? ಐಗುಪ್ತವೇ ನೈಲಿನಂತೆ ಉಬ್ಬಿದೆ; ಐಗು
ಪ್ತವೆಂಬ ಪ್ರವಾಹವೇ ನೈಲಿನ ಶಾಖೆಗಳ ಹಾಗೆ ತುಂಬಿ
ತುಳುಕುತ್ತದೆ; ನಾನು ಉಬ್ಬಿಕೊಂಡು ಲೋಕದ
ಲ್ಲೆಲ್ಲಾ ಹಬ್ಬುವೆನು, ಪಟ್ಟಣವನ್ನು ಪಟ್ಟಣನಿವಾಸಿ
ಗಳನ್ನು ನಾಶಮಾಡುವೆನು ಅಂದುಕೊಳ್ಳುತ್ತದೆ. ಅಶ್ವ 9
ಗಳೇ, ಕುಣಿದಾಡಿರಿ! ರಥಗಳೇ, ರಭಸವಾಗಿರಿ! ಶೂರರು
ಹೊರಡಲಿ! ಖೇಡ್ಯಸನ್ನದ್ಧರಾದ ಕೂಷ್ಯರು, ಪೂಟ್ಯರು,
ಧನುರ್ಧಾರಿಗಳಾದ ಲೂದ್ಯರು ಮುಂದರಿಯಲಿ!
ಆದರೆ ಆ ಯುದ್ಧದಿನವು ಸೇನಾಧೀಶ್ವರನಾದ ಯೆ 10
ಹೋವನೆಂಬ ಕರ್ತನು ತನ್ನ ಶತ್ರುಗಳಿಗೆ ಮುಯ್ಯಿತೀರಿ
ಸುವ ದಿನವಾಗಿದೆ; ಅದು ದಂಡನೆಯ ದಿವಸ; ಆಗ
ಖಡ್ಗವು ನುಂಗಿ ನುಂಗಿ ತಣಿಯುವದು, ಅವರ ರಕ್ತ
ವನ್ನು ತುಂಬಾ ಹೀರುವದು; ಸೇನಾಧೀಶ್ವರನಾದ ಯೆ
ಹೋವನೆಂಬ ಕರ್ತನು ಬಡಗಲಲ್ಲಿ ಯೂಫ್ರೇಟೀಸ್
ನದಿಯ ಹತ್ತಿರ ಬಲಿಮಾಡಬೇಕೆಂದಿದ್ದಾನಲ್ಲಾ.
ಐಗುಪ್ತಕುಮಾರಿಯೇ, ಯುವತಿಯೇ, ಗಿಲ್ಯಾದಿಗೆ 11
ಹೋಗಿ ಔಷಧವನ್ನು ಸಂಪಾದಿಸು; ನೀನು ಬಗೆಬಗೆ
ಯ ಮದ್ದನ್ನು ಉಪಯೋಗಿಸುವದು ಪ್ರಯೋಜನ
ವಿಲ್ಲ; ನಿನಗೆ ಗುಣವಾಗದು. ನಿನ್ನ ಅವಮಾನದ ಸುದ್ದಿ 12
ಯು ಜನಾಂಗಗಳಿಗೆ ಕೇಳಬಂದಿದೆ, ನಿನ್ನ ಕೂಗಾಟವು
ಲೋಕದಲ್ಲೆಲ್ಲಾ ತುಂಬಿದೆ; ವೀರನು ವೀರನನ್ನು ಎಡವಿ
ಇಬ್ಬರೂ ಬಿದ್ದಿದ್ದಾರೆ.
ಬಾಬೆಲಿನ ಅರಸನಾದ ನೆಬೂಕದ್ನೆಚ್ಚರನು ಬಂದು 13
ಐಗುಪ್ತದೇಶವನ್ನು ಹೊಡೆಯುವನು ಎಂಬದಾಗಿ ಯೆ
ಹೋವನು ಪ್ರವಾದಿಯಾದ ಯೆರೆಮೀಯನಿಗೆ ನುಡಿದ
ವಾಕ್ಯವು.
ಐಗುಪ್ತದಲ್ಲಿ ಪ್ರಕಟಿಸಿರಿ, ಮಿಗ್ದೋಲ್, ತಹಪ 14
ನೇಸ್, ನೋಫ್ ಎಂಬೀ ಪಟ್ಟಣಗಳಲ್ಲಿ ಪ್ರಚುರಪಡಿ
ಸಿರಿ—[ಐಗುಪ್ತವೇ,] ಸ್ಥಿರವಾಗಿ ನಿಂತುಕೊಂಡು ಸನ್ನ
ದ್ಧವಾಗು! ಖಡ್ಗವು ನಿನ್ನ ಸುತ್ತಲು ನುಂಗಿಬಿಟ್ಟಿದೆ
ಎಂದು ಸಾರಿರಿ. ನಿನ್ನ 1)ಬಸವ ಬಿದ್ದುಹೋದದ್ದೇನು? 15
ಯೆಹೋವನು ಅದನ್ನು ಕೆಡವಿದನು, ನಿಲ್ಲಲಾರದೆ
ಹೋಯಿತು. ಬಹು ಜನರು ಮುಗ್ಗರಿಸುವಂತೆ 16
ಮಾಡಿದನು; ಹೌದು, ಒಬ್ಬರಿಗೊಬ್ಬರು ತಗಲಿ ಬಿದ್ದ
ರು; ನಾವು ಎದ್ದು ಜನ್ಮಭೂಮಿಗೆ ಹೊರಟು ಸ್ವಜನ
ರನ್ನು ಸೇರಿ ಹಿಂಸೆಯ ಖಡ್ಗದಿಂದ ತಪ್ಪಿಸಿಕೊಳ್ಳೋಣ
ಎಂದುಕೊಂಡರು. ಐಗುಪ್ತದ ಅರಸನಾದ 2)ಫರೋ 17
ಹನು ಧಡಮ್ಮನೆ ಬಿದ್ದವನು, ಯುಕ್ತಸಮಯವನ್ನು
ಉಪೇಕ್ಷಿಸಿದವನು ಎಂದು ಅಲ್ಲಿ ಕೂಗಿದರು. ಸೇನಾ 18
ಧೀಶ್ವರನಾದ ಯೆಹೋವನೆಂಬ ನಾಮವುಳ್ಳ ರಾಜಾಧಿ
ರಾಜನು ಇಂತೆನ್ನುತ್ತಾನೆ—ನನ್ನ ಜೀವದಾಣೆ, ಇಗೋ,
ಪರ್ವತಗಳನ್ನು ಮೀರುವ ತಾಬೋರ್ ಬೆಟ್ಟದಂತೆ
ಯೂ ಸಮುದ್ರದಿಂದೆದ್ದಿರುವ ಕರ್ಮೆಲ್ ಗುಡ್ಡದ
ಹಾಗೂ ಉನ್ನತನಾದವನೊಬ್ಬನು ಬರುವನು. ಐಗು 19
ಪ್ತದಲ್ಲಿ ವಾಸಿಸುವ ಯುವತಿಯೇ, ಸೆರೆಗೆ ಬೇಕಾದ
ಸಾಮಗ್ರಿಗಳನ್ನು ಒದಗಿಸಿಕೋ; ನೋಫ್ ಪಟ್ಟಣವು
ಹಾಳಾಗಿ ಸುಟ್ಟು ನಿರ್ಜನವಾಗುವದು. ಐಗುಪ್ತವು 20
ಅಂದವಾದ ಕಡಸಾಗಿದೆ; ತೊಣಚೆಯು ಬಡಗಲಿಂದ

1) ಪಾಠಾಂತರ: ಬಲಿಷ್ಠರು. 2) ಪಾಠಾಂತರ: . . . . ಫರೋಹನಿಗೆ ಧ್ವಂಸದ ಧಡಮ್ ಎಂಬ ಹೆಸರಿಡಿರಿ, ಅವನು ಯುಕ್ತ
ಸಮಯವನ್ನು ಉಪೇಕ್ಷಿಸಿದನು.

21 ಅದರ ಮೇಲೆ [1]ಬಂದಿದೆ. ಸಂಬಳಕ್ಕಾಗಿ ಐಗುಪ್ತ
ವನ್ನು ಸೇರಿರುವ ದಂಡಾಳುಗಳು ಕೊಬ್ಬಿದ ಕರುಗ
ಳಂತಿದ್ದಾರೆ; ಅವರೂ ಬೆನ್ನುಕೊಟ್ಟು ಓಡಿಹೋಗಿ
ದ್ದಾರೆ; ನಿಲ್ಲಲೇ ಇಲ್ಲ; ಅವರಿಗೆ ವಿಪತ್ಕಾಲವು ಒದ
22 ಗಿದೆ, ದಂಡನೆಯ ದಿನವು ಸಂಭವಿಸಿದೆ. ಐಗುಪ್ತವು
ಓಡಿಹೋಗುವ ಶಬ್ದವು ಸರಿಯುವ ಸರ್ಪದ ಸಪ್ಪಳಕ್ಕೆ
ಸಮನಾಗಿರುವದು; [ಶತ್ರುಗಳು] ದಂಡೆತ್ತಿಬಂದು
ಕಟ್ಟಿಗೆ ಕಡಿಯುವವರಂತೆ ಕೊಡಲಿಗಳಿಂದ ಅದರ
23 ಮೇಲೆ ಬೀಳುವರು. ಅವರು ಮಿಡಿತೆಗಳಿಗಿಂತಲೂ
ಅಸಂಖ್ಯಾತರಾಗಿ ದಾಟಲಾಗದ ಐಗುಪ್ತದ ದಟ್ಟವಾದ
ಕಾಡನ್ನು ಕಡಿದುಹಾಕುವರು. ಇದು ಯೆಹೋವನ
24 ನುಡಿ. ಐಗುಪ್ತವೆಂಬ ಯುವತಿಯು ಅವಮಾನಕ್ಕೆ
ಗುರಿಯಾಗುವಳು; ಬಡಗಲವರ ಕೈವಶವಾಗುವಳು.
25 ಇಸ್ರಾಯೇಲಿನ ದೇವರೂ ಸೇನಾಧೀಶ್ವರನೂ ಆದ
ಯೆಹೋವನು ಇಂತೆನ್ನುತ್ತಾನೆ—ಇಗೋ, ನಾನು
ನೋ ಪಟ್ಟಣದಲ್ಲಿನ ಆಮೋನ್ ದೇವತೆ, ಫರೋಹ,
ಐಗುಪ್ತ, ಐಗುಪ್ತದ ದೇವತೆಗಳು, ಅಲ್ಲಿನ ಅರಸರು,
ಅಂತು ಫರೋಹನನ್ನೂ, ಅವನಲ್ಲಿ ನಂಬಿಕೆಯಿಟ್ಟವ
26 ರನ್ನೂ ದಂಡಿಸಿ ಅವರ ಪ್ರಾಣವನ್ನು ಹುಡುಕುವ ಬಾಬೆ
ಲಿನ ಅರಸನಾದ ನೆಬೂಕದ್ನೆಚ್ಚರನ ಮತ್ತು ಅವನ
ಸೇವಕರ ಕೈಗೆ ಕೊಟ್ಟುಬಿಡುವೆನು; ಅನಂತರ ಅಲ್ಲಿ
ಪೂರ್ವಕಾಲದ ಹಾಗೆ ಜನರು ವಾಸಿಸುವರು. ಇದು
27 ಯೆಹೋವನ ನುಡಿ. ನನ್ನ ಸೇವಕ ಯಾಕೋಬೇ,
ಭಯಪಡಬೇಡ! ಇಸ್ರಾಯೇಲೇ, ಅಂಜಬೇಡ!
ಇಗೋ, ನಾನು ನಿನ್ನನ್ನು ದೂರದೇಶದಿಂದ ಉದ್ಧರಿಸು
ವೆನು, ನಿನ್ನ ಸಂತಾನವನ್ನು ಸೆರೆಹೋದ ಸೀಮೆಯಿಂದ
ರಕ್ಷಿಸುವೆನು; ಯಾಕೋಬು ಹಿಂದಿರುಗಿ ನೆಮ್ಮದಿ
ಯಾಗಿಯೂ ಹಾಯಾಗಿಯೂ ಇರುವದು; ಯಾರೂ
28 ಅದನ್ನು ಹೆದರಿಸರು. ನನ್ನ ಸೇವಕ ಯಾಕೋಬೇ,
ಭಯಪಡಬೇಡ, ನಾನು ನಿನ್ನೊಂದಿಗಿದ್ದೇನೆ; ನಾನು
ಯಾವ ಜನಾಂಗಗಳಲ್ಲಿಗೆ ನಿನ್ನನ್ನು ಅಟ್ಟಿದೆನೋ ಆ
ಜನಾಂಗಗಳನ್ನೆಲ್ಲಾ ನಿರ್ಮೂಲಮಾಡುವೆನು; ನಿನ್ನ
ನ್ನೋ ನಿರ್ಮೂಲಮಾಡೆನು; ಮಿತಿಮೀರಿ ಶಿಕ್ಷಿಸೆನು,
ಆದರೆ ಶಿಕ್ಷಿಸದೆ ಬಿಡುವದಿಲ್ಲ. ಇದು ಯೆಹೋವನ
ನುಡಿ.

ಫಿಲಿಷ್ಟಿಯದ ವಿಷಯವಾದ ದೈವೋಕ್ತಿ.

47 ಫರೋಹನು ಗಾಜಾ ಊರನ್ನು ಹೊಡೆದದ್ದಕ್ಕೆ
ಮುಂಚಿತವಾಗಿ ಯೆಹೋವನು ಫಿಲಿಷ್ಟಿಯರ ವಿಷ
ಯವಾಗಿ ಪ್ರವಾದಿಯಾದ ಯೆರೆಮೀಯನಿಗೆ ದಯ
ಪಾಲಿಸಿದ ವಾಕ್ಯ.
2 ಯೆಹೋವನು ಇಂತೆನ್ನುತ್ತಾನೆ—ಇಗೋ, ಪ್ರವಾ
ಹವು ಬಡಗಲಿಂದ ಹೊರಟು ತುಂಬಿತುಳುಕುವ
ತೊರೆಯಾಗಿ ದೇಶವನ್ನೂ ಅದರಲ್ಲಿರುವ ಸಮಸ್ತ
ವನ್ನೂ ಪಟ್ಟಣವನ್ನೂ ಪಟ್ಟಣದ ನಿವಾಸಿಗಳನ್ನೂ
ಆಕ್ರಮಿಸುವದು; ಆಗ ಅಲ್ಲಿನವರು ಮೊರೆಯಿಡು
3 ವರು, ದೇಶದವರೆಲ್ಲಾ ಗೋಳಾಡುವರು. ಶತ್ರುವಿನ
ತುರಗಗಳ ಗೊರಸುಗಳು ನೆಲವನ್ನು ಅಪ್ಪಳಿಸುವ
ಶಬ್ದಕ್ಕೂ, ರಥಗಳ ರಭಸಕ್ಕೂ, ಚಕ್ರಗಳ ಬಿರುಗುಟ್ಟು
ವಿಕೆಗೂ ತಂದೆಗಳು ಹೆದರುತ್ತಾ ಜೋಲುಗೈಯವ
ರಾಗಿ ತಮ್ಮ ಮಕ್ಕಳನ್ನು ಹಿಂದಿರುಗಿ ನೋಡರು;
ಏಕಂದರೆ ಆ ದಿನದಲ್ಲಿ ಫಿಲಿಷ್ಟಿಯರೆಲ್ಲರೂ ಸೂರೆ
ಯಾಗುವರು, ತೂರಿನ ಮತ್ತು ಚೀದೋನಿನ ಸಹಾ
ಯಕರಲ್ಲಿ ಕಳೆದುಳಿದವರೆಲ್ಲಾ ನಿರ್ಮೂಲವಾಗು
ವರು; ಕಫ್ತೋರ್ ದ್ವೀಪದವರಿಂದ ಉತ್ಪನ್ನರಾದ
ಫಿಲಿಷ್ಟಿಯರನ್ನು ಯೆಹೋವನೇ ಸೂರೆಮಾಡುವನು.
ಗಾಜಾ ಊರು ಬೋಳಿಸಿಕೊಂಡಿದೆ, ಅಷ್ಕೆಲೋನ್
ನಾಶನಹೊಂದಿದೆ; ಫಿಲಿಷ್ಟಿಯದ ಬೈಲುಸೀಮೆಯಲ್ಲಿ
ಉಳಿದ ಪಟ್ಟಣವೇ, ನಿನ್ನನ್ನು ಎಂದಿನ ವರೆಗೆ ಕತ್ತರಿಸಿ
ಕೊಳ್ಳುತ್ತಿರುವಿ?
ಅಯ್ಯೋ, ಯೆಹೋವನ ಖಡ್ಗವೇ, ಇನ್ನೆಷ್ಟರ
ವರೆಗೆ ವಿಶ್ರಾಂತಿಗೊಳ್ಳದೆ ಇರುವಿ? ನಿನ್ನನ್ನು ಒರೆಯಲ್ಲಿ
ಅಣಗಿಕೋ! ಶಾಂತಿಗೊಳ್ಳು, ಸುಮ್ಮನಿರು!
ಖಡ್ಗವು ವಿಶ್ರಾಂತಿಗೊಳ್ಳುವದು ಹೇಗೆ? ಅಷ್ಕೆ
ಲೋನಿನ ಮತ್ತು ಕರಾವಳಿಯ ವಿಷಯವಾಗಿ
ಯೆಹೋವನು ಅದಕ್ಕೆ ಅಪ್ಪಣೆಕೊಟ್ಟನಲ್ಲಾ; ಅಲ್ಲಿಗೇ
ಅದನ್ನು ನೇಮಿಸಿದ್ದಾನೆ.

ಮೋವಾಬಿನ ವಿಷಯವಾದ ದೈವೋಕ್ತಿ.

ಮೋವಾಬನ್ನು ಕುರಿತದ್ದು. 4
ಇಸ್ರಾಯೇಲಿನ ದೇವರೂ ಸೇನಾಧೀಶ್ವರನೂ
ಆದ ಯೆಹೋವನು ಇಂತೆನ್ನುತ್ತಾನೆ—ಅಯ್ಯೋ,
ನೆಬೋಊರಿನ ಗತಿಯನ್ನು ಏನು ಹೇಳಲಿ! ಅದು
ಹಾಳಾಯಿತು; ಕಿರ್ಯಾತಯಿಮು ಶತ್ರುವಿನ ಕೈಗೆ
ಸಿಕ್ಕಿ ಮಾನಭಂಗಹೊಂದಿದೆ, ಮಿಸ್ಗಾಬ್ ಕೆಡವ
ಲ್ಪಟ್ಟು ಅವಮಾನಕ್ಕೆ ಗುರಿಯಾಗಿದೆ. ಮೋವಾಬಿನ
ಕೀರ್ತಿಯು ಮಾಯವಾಯಿತು; ಶತ್ರುಗಳು ಹೆಷ್ಬೋ
ನಿನಲ್ಲಿ ದೇಶಕ್ಕೆ ಕೇಡನ್ನು ಕಲ್ಪಿಸಿ—ಮೋವಾಬು
ಇನ್ನು ಜನಾಂಗವೆನಿಸಿಕೊಳ್ಳದಂತೆ ಅದನ್ನು ನಿರ್ಮೂ
ಲಮಾಡೋಣ ಬನ್ನಿರಿ ಎಂದು ಆಲೋಚಿಸಿಕೊಂಡಿ
ದ್ದಾರೆ. ಮದ್ಮೇನೇ, ನೀನು ಸಹ ಸುಮ್ಮನಾಗುವಿ;
ಖಡ್ಗವು ನಿನ್ನನ್ನು ಹಿಂದಟ್ಟುವದು. ಅಯ್ಯೋ, ಸೂರೆ
ಹೋದೆವು. ಬಹು ನಾಶವಾದೆವು ಎಂಬ ಕೂಗಾಟವು
ಹೊರೊನಯಿಮಿನಿಂದ ಕೇಳಬರುತ್ತದೆ! ಮೋವಾಬಿಗೆ
ಭಂಗವಾಯಿತು; [2]ಅಲ್ಲಿ ದಿಕ್ಕೆಟ್ಟವರು ಮೊರೆಯಿಟ್ಟಿ
ದ್ದಾರೆ. ಅಳುತ್ತಳುತ್ತಾ ಲೂಹೀತ್ ದಿಣ್ಣೆಯನ್ನು
ಹತ್ತುತ್ತಾರೆ; ನಾಶವಾದೆವಲ್ಲಾ ಎಂಬ ಪ್ರಾಣಸಂಕಟ
ಪ್ರಲಾಪವು ಹೊರೊನಯಿಮ್ ಇಳಿಜಾರಿನಲ್ಲಿ ಕೇಳಿಸು
ತ್ತದೆ. ಓಡಿಹೋಗಿರಿ, ನಿಮ್ಮ ಪ್ರಾಣಗಳನ್ನು ಉಳಿಸಿ
ಕೊಳ್ಳಿರಿ, ಅಡವಿಯಲ್ಲಿನ ಜಾಲಿಯಂತಿರಿ. ನೀನು
ನಿನ್ನ ಕೆಲಸಗಳಲ್ಲಿಯೂ ಧನರಾಶಿಗಳಲ್ಲಿಯೂ ಭರ
ವಸವಿಟ್ಟದ್ದರಿಂದ ನೀನೂ ಶತ್ರುವಿನ ಕೈವಶವಾಗುವಿ;
ಕೆಮೋಷ್ ದೇವತೆಯೂ ಅದರ ಭಕ್ತರಾದ ಯಾಜ
ಕರೂ ಪ್ರಧಾನರೂ ಒಟ್ಟಾಗಿ ಸೆರೆಗೆ ಹೋಗುವರು.

1) ಪಾಠಾಂತರ: ಬಂದಿದೆ, ಬಂದಿದೆ. 2) ಪಾಠಾಂತರ: ಅದರ ಮೊರೆಯು ಚೋಯರಿನ ವರೆಗೂ ಕೇಳಿಸುತ್ತದೆ.

8 ಸೂರೆಗಾರನು ಪ್ರತಿಯೊಂದು ಪಟ್ಟಣದ ಮೇಲೆ
ಬೀಳುವನು, ಯಾವ ಪಟ್ಟಣವೂ ಉಳಿಯದು;
ಯೆಹೋವನು ನುಡಿದಂತೆಯೇ ತಗ್ಗಿನ ಭೂಮಿಯು
ಹಾಳಾಗುವದು. ಮೇಲ್ನಾಡೂ ನಾಶವಾಗುವದು.
9 ಮೋವಾಬಿಗೆ ರೆಕ್ಕೆಕಟ್ಟಿರಿ, ಅದು ಹಾರಿಹೋಗ
ಬೇಕಲ್ಲಾ; ಅದರ ಪಟ್ಟಣಗಳು ಹಾಳುಬಿದ್ದು ನಿರ್ಜ
10 ನವಾಗುವವು. ಯೆಹೋವನು ನೇಮಿಸಿದ ಕೆಲಸ
ದಲ್ಲಿ ಆಲಸ್ಯಗಾರನು ಶಾಪಗ್ರಸ್ತನಾಗಲಿ; ತನ್ನ ಕತ್ತಿ
ಯನ್ನು ರಕ್ತಸುರಿಸದಂತೆ ತಡೆಯುವವನಿಗೆ ಶಾಪ
ತಗಲಲಿ.
11 ಮೋವಾಬು ಚಿಕ್ಕತನದಿಂದಲೂ ನೆಮ್ಮದಿಯಾಗಿದೆ;
ಅದು ಮಡ್ಡಿಯ ಮೇಲೆ ನಿಂತಿರುವ ದ್ರಾಕ್ಷಾರಸ
ದಂತಿದೆ; ಅದನ್ನು ಪಾತ್ರೆಯಿಂದ ಪಾತ್ರೆಗೆ ಯಾರೂ
ಹೊಯ್ಯಲಿಲ್ಲ, ಅದು ಸೆರೆಹೋಗಲಿಲ್ಲ; ಆದಕಾರಣ
ಅದರ ರುಚಿಯು ಅದರಲ್ಲಿದೆ, ಅದರ ವಾಸನೆಯು
12 ಬೇರ್ಪಡಲಿಲ್ಲ. ಹೀಗಿರಲು ಯೆಹೋವನು ಇಂತೆನ್ನು
ತ್ತಾನೆ—ಇಗೋ, ಮುಂದಿನ ಕಾಲದಲ್ಲಿ ನಾನು ಅವರ
ಬಳಿಗೆ ಹೊಯ್ಯತಕ್ಕವರನ್ನು ಕಳುಹಿಸುವೆನು, ಅವರು
ಅದನ್ನು ಹೊಯ್ದುಬಿಡುವರು, ಪಾತ್ರೆಗಳನ್ನು ಬರಿದು
ಮಾಡುವರು, ಗಡಿಗೆಗಳನ್ನು ಒಡೆದುಬಿಡುವರು.
13 ಆಗ ಇಸ್ರಾಯೇಲ್ ವಂಶದವರು ತಮಗೆ ಭರವಸ
ವಾದ ಬೇತೇಲಿನಿಂದ ಆಶಾಭಂಗಪಟ್ಟಂತೆ ಮೋವಾ
14 ಬ್ಯರು ಕೆಮೋಷಿನಿಂದ ಆಶಾಭಂಗಪಡುವರು. ನಾವು
ಶೂರರು, ಯುದ್ಧಪ್ರವೀಣರಾದ ಪರಾಕ್ರಮಶಾಲಿ
ಗಳು ಎಂದು ನೀವು ಅಂದುಕೊಳ್ಳುವದು ಹೇಗೆ?
15 ಮೋವಾಬು ಹಾಳಾಗಿದೆ; 1)ಸುಟ್ಟುಹೋದ ಅದರ
ಪಟ್ಟಣಗಳಿಂದ ಹೊಗೆ ಎದ್ದಿದೆ; ಅದರ ಯುವಕ
ಶ್ರೇಷ್ಠರು ಹತರಾಗುವದಕ್ಕೆ ಇಳಿದುಹೋಗಿದ್ದಾರೆ.
ಇದು ಸೇನಾಧೀಶ್ವರನಾದ ಯೆಹೋವನೆಂಬ ನಾಮ
16 ವುಳ್ಳ ರಾಜಾಧಿರಾಜನ ನುಡಿ. ಮೋವಾಬಿಗೆ ದುರ್ಗತಿ
17 ಸಮೀಪಿಸಿದೆ, ವಿಪತ್ತು ಬೇಗ ಬರುವದು. ಮೋವಾ
ಬಿನ ನೆರೆಹೊರೆಯವರೇ, ಅದರ ಹೆಸರುವಾಸಿಯನ್ನು
ಬಲ್ಲವರೇ, ನೀವೆಲ್ಲರೂ ಅದಕ್ಕಾಗಿ ಎದೆಬಡು
ಕೊಳ್ಳಿರಿ; ಅಯ್ಯೋ, ಬಲವಾದ ಕೋಲು, ಮಹಿ
ಮೆಯ ದಂಡವು ಮುರಿದುಹೋಯಿತಲ್ಲಾ ಎಂದು
18 ಪ್ರಲಾಪಿಸಿರಿ. ಯುವತಿಯೇ, ದೀಬೋನ್‌ಪುರಿಯೇ,
ನಿನ್ನ ಮಹಿಮೆಯ ಪದವಿಯಿಂದ ಕೆಳಕ್ಕಿಳಿದು
ಬಾಯಾರಿದವಳಾಗಿ ಕೂತುಕೋ! ಮೋವಾಬನ್ನು
ಹಾಳುಮಾಡುವವನು ನಿನಗೆ ವಿರುದ್ಧವಾಗಿ ಬಂದು
ನಿನ್ನ ಕೋಟೆಕೊತ್ತಲಗಳನ್ನು ಕೆಡವಿದ್ದಾನಲ್ಲಾ.
19 ಅರೋಯೇರಿನವರೇ, ದಾರಿಯ ಮಗ್ಗುಲಲ್ಲಿ ನಿಂತು
ಕೊಂಡು ನೋಡಿರಿ; ಓಡಿಹೋಗುವವನನ್ನೂ ತಪ್ಪಿಸಿ
ಕೊಳ್ಳುವವಳನ್ನೂ ಏನಾಯಿತು ಎಂದು ವಿಚಾರಿಸಿರಿ.
20 ಮೋವಾಬು ಭಂಗಪಟ್ಟು ಅವಮಾನಕ್ಕೆ ಈಡಾಗಿದೆ;
ಗೋಳಾಡಿರಿ, ಅರಚಿರಿ; ಮೋವಾಬು ಹಾಳಾಯಿತೆಂದು
21 ಅರ್ನೋನಿನ ತೀರದಲ್ಲಿ ತಿಳಿಸಿರಿ. ಮೇಲ್ನಾಡಿಗೆ ದಂಡ
ನೆಯಾಗಿದೆ; ಹೋಲೋನ್, ಯಾಚಾ, ಮೇಫಾತ್,
22 ದೀಬೋನ್, ನೆಬೋ, ಬೇತ್‌ದಿಬ್ಲಾತಯಿಮ್,
ಕಿರ್ಯಾತಯಿಮ್, ಬೇತ್‌ಗಾಮೂಲ್, ಬೇತ್‌ಮೆ 23
ಯೋನ್, ಕೆರೀಯೋತ್, ಬೊಚ್ರ, ಅಂತು ದೂರದ 24
ಹತ್ತಿರದ ಮೋವಾಬಿನ ಎಲ್ಲಾ ಪಟ್ಟಣಗಳಿಗೂ ದಂಡ
ನೆಯಾಗದೆ ಇಲ್ಲ. ಮೋವಾಬಿನ ಕೊಂಬು ಕಡಿದು 25
ಬಿದ್ದಿದೆ, ಅದರ ತೋಳು ಮುರಿದುಹೋಗಿದೆ. ಇದು
ಯೆಹೋವನ ನುಡಿ. ಮೋವಾಬಿಗೆ ತಲೆಗೇರಕುಡಿ 26
ಸಿರಿ, ಅದು ಯೆಹೋವನನ್ನು ತಿರಸ್ಕರಿಸಿ ಉಬ್ಬಿ
ಕೊಂಡಿತಲ್ಲಾ; ಅದು ತನ್ನ ವಾಂತಿಯಲ್ಲಿ ದೊಪ್ಪನೆ
ಬಿದ್ದು ಗೇಲಿಗೆ ಗುರಿಯಾಗುವದು. ಇಸ್ರಾಯೇಲು 27
ನಿನಗೆ ಗೇಲಿಯಾಯಿತಷ್ಟೆ. ಅದು ಕಳ್ಳರ ಗುಂಪಿ
ನಲ್ಲಿ ಸೇರಿದ್ದಾಗಿ ಹಿಡಿಯಲ್ಪಟ್ಟಿತೇನು? ನೀನು ಇಸ್ರಾ
ಯೇಲಿನ ಪ್ರಸ್ತಾಪ ಎತ್ತುವಾಗೆಲ್ಲಾ ತಲೆಯಾಡಿಸು
ತ್ತೀಯಲ್ಲವೆ. ಮೋವಾಬ್ಯರೇ, ಪಟ್ಟಣಗಳನ್ನು ಬಿಟ್ಟು 28
ಬಂಡೆಯ ಗುಹೆಗಳಲ್ಲಿ ವಾಸಿಸಿರಿ; ಹಳ್ಳಕೊಳ್ಳದ
ಆಚೆಯ ಪಕ್ಕೆಯಲ್ಲಿ ಗೂಡನ್ನು ಕಟ್ಟಿಕೊಳ್ಳುವ ಪಾರಿ
ವಾಳದಂತಿರಿ; ಮೋವಾಬ್ಯರಿಗೆ ಬಹು ಸೊಕ್ಕೇರಿದೆ 29
ಎಂಬ ಅವರ ಹೆಮ್ಮೆಯ ಸುದ್ದಿಯೂ ಅವರ ಡಂಭ,
ಅಹಂಕಾರ, ಸ್ವಾಭಿಮಾನ ಸ್ವಪ್ರತಿಷ್ಠೆ ಇವುಗಳ ಸಮಾ
ಚಾರವೂ ನಮ್ಮ ಕಿವಿಗೆ ಬಿದ್ದಿವೆ. ಯೆಹೋವನು 30
ಹೇಳುವದೇನಂದರೆ— ಅವರ ಗರ್ವೋದ್ರೇಕವು ನನಗೆ
ಗೊತ್ತು, ಅದು ಬರೀ ಬುರುಡೆಯೇ; ಅವರು ಕೊಚ್ಚಿ
ಕೊಳ್ಳುವದೆಲ್ಲಾ ನಿರರ್ಥಕ ಎಂಬದೇ. ಆದಕಾರಣ 31
ನಾನು ಮೋವಾಬಿನ ನಿಮಿತ್ತ ಗೋಳಾಡುವೆನು;
ಹೌದು, ಇಡೀ ದೇಶದ ದುರ್ಗತಿಯನ್ನು ನೋಡಿ
ಪ್ರಲಾಪಿಸುವೆನು; ಕೀರ್ ಹೆರೆಸಿನವರ ವಿಷಯವಾಗಿ
ನರಳಾಟವಾಗುವದು. ಸಿಬ್ಮದ ದ್ರಾಕ್ಷಾಲತೆಯೇ, 32
ಯಜ್ಜೇರಿನ ನಿಮಿತ್ತ ಅಳುವುದಕ್ಕಿಂತಲೂ ನಿನ್ನನ್ನು
ಕಂಡು ಹೆಚ್ಚಾಗಿ ಅಳುವೆನು; ನಿನ್ನ ಶಾಖೆಗಳು
ಸಮುದ್ರದಾಚೆಗೂ ಯಜ್ಜೇರಿನ ಸರೋವರದ ವರೆಗೂ
ವ್ಯಾಪಿಸಿದ್ದವಲ್ಲಾ; ಈಗ ನಿನ್ನ ಹಣ್ಣುಹಂಪಲ
ಮೇಲೆಯೂ ದ್ರಾಕ್ಷೆಯ ಸುಗ್ಗಿಯ ಮೇಲೆಯೂ
ಸೂರೆಗಾರನು ಬಿದ್ದಿದ್ದಾನೆ. ಹರ್ಷಾನಂದಗಳು ತೋಟ 33
ಗಳಿಂದಲೂ ಮೋವಾಬಿನ ಇಡೀ ದೇಶದಿಂದಲೂ
ತೊಲಗಿವೆ; ತೊಟ್ಟಿಗಳಲ್ಲಿ ದ್ರಾಕ್ಷಾರಸವು ಇಲ್ಲದಂತೆ
ಮಾಡಿದ್ದೇನೆ; ಯಾರೂ ತೊಟ್ಟಿಯಲ್ಲಿ ತುಳಿಯುತ್ತಾ
ಹರ್ಷಧ್ವನಿ ಗೈಯರು; ಕೇಳಿಸುವ ಧ್ವನಿ ಹರ್ಷಧ್ವನಿ
ಯಲ್ಲ. ಹೆಷ್ಬೋನಿನಿಂದ ಎಲೆಯಾಲೆಯ ಮತ್ತು 34
ಯಹಚಿನ ವರೆಗೆ ಅರಚಿಕೊಳ್ಳುತ್ತಾರೆ, ಚೋಯರಿ
ನಿಂದ ಹೋರೊನಯಿಮಿನ ಮತ್ತು ಎಗ್ಲತ್ ಶೆಲಿ
ಶೀಯದ ವರೆಗೆ ಕಿರಿಚಿಕೊಳ್ಳುತ್ತಾರೆ; ನಿಮ್ರೀಮ್
ಹಳ್ಳವೂ ಹಾಳಾಗಿದೆ. ಮೋವಾಬಿನೊಳಗೆ ಪೂಜಾ 35
ಸ್ಥಾನದಲ್ಲಿ ಬಲಿಯರ್ಪಿಸುವವರನ್ನೂ ತಮ್ಮ ದೇವರು
ಗಳಿಗೆ ಧೂಪಹಾಕುವವರನ್ನೂ ನಿರ್ಮೂಲಮಾಡು
ವೆನು. ಇದು ಯೆಹೋವನ ನುಡಿ. ಆದುದರಿಂದ 36
ಮೋವಾಬಿನ ಮತ್ತು ಕೀರ್ ಹೆರೆಸಿನವರ ನಿಮಿತ್ತ
ನನ್ನ ಹೃದಯವು ಕೊಳಲುಗಳಂತೆ ಮೊರೆಯಿಡು
ತ್ತದೆ; ಮೋವಾಬ್ಯರು ಕೂಡಿಸಿಟ್ಟ ಹೇರಳವಾದ
ಆಸ್ತಿಯು ಮಾಯವಾಯಿತಲ್ಲಾ. ಎಲ್ಲರ ತಲೆಯು 37

---

1) ಅಥವಾ: ಶತ್ರುಗಳು ಪಟ್ಟಣಗಳೊಳಗೆ ನುಗ್ಗಿದ್ದಾರೆ; ಮೂಲವು ಅಸ್ಪಷ್ಟ.

ಬೋಳು, ಎಲ್ಲರ ಗಡ್ಡವು ವಿಕಾರ, ಎಲ್ಲರ ಕೈಯಲ್ಲಿ
ಗಾಯ, ಎಲ್ಲರ ನಡುವಿನ ಮೇಲೆ ಗೋಣಿತಟ್ಟು.
38 ಮೋವಾಬಿನ ಎಲ್ಲಾ ಮಾಳಿಗೆಗಳ ಮೇಲೆಯೂ ಚೌಕ
ಗಳಲ್ಲಿಯೂ ರೋದನವು ತುಂಬಿದೆ; ಮೋವಾಬನ್ನು
ಯಾರಿಗೂ ಇಷ್ಟವಲ್ಲದ ಮಡಿಕೆಯಂತೆ ಒಡೆದುಬಿಟ್ಟಿ
39 ದ್ದೇನೆ ಎಂದು ಯೆಹೋವನು ಅನ್ನುತ್ತಾನೆ. ಆಹಾ,
ಭಂಗವಾಯಿತು! ಕಿರಿಚಿಕೊಳ್ಳುತ್ತಾರಲ್ಲಾ! ಓಹೋ,
ಮೋವಾಬು ನಾಚಿಕೆಯಿಂದ ಬೆನ್ನು ತೋರಿಸಿದೆ! ಅದರ
ನೆರೆಹೊರೆಯವರು ಅಣಕಿಸುವದಕ್ಕೂ ಬೆಚ್ಚಿಬೀಳು
40 ವದಕ್ಕೂ ಆಸ್ಪದವಾಗಿದೆ. ಯೆಹೋವನು ಇಂತೆನ್ನು
ತ್ತಾನೆ—ಇಗೋ, ಮೋವಾಬಿನ ಮೇಲೆ ಎರಗಬೇ
ಕೆಂದು ಶತ್ರುವು ರಣಹದ್ದಿನಂತೆ ರೆಕ್ಕೆಗಳನ್ನು ಹರಡಿ
41 ಹಾರುವನು. ಪಟ್ಟಣಗಳನ್ನು ಹಿಡಿದಿದ್ದಾನೆ, ಕೋಟೆ
ಗಳನ್ನು ಆಕ್ರಮಿಸಿದ್ದಾನೆ; ಆ ದಿನದಲ್ಲಿ ಮೋವಾಬಿನ
ಶೂರರ ಎದೆಯು ಹೆರುವ ಹೆಂಗಸಿನ ಎದೆಯಂತೆ ಅದ
42 ರುವದು. ಮೋವಾಬು ಯೆಹೋವನನ್ನು ತಿರಸ್ಕರಿಸಿ
ಉಬ್ಬಿಕೊಂಡದರಿಂದ ಅದು ಹಾಳಾಗಿ ಇನ್ನು ಜನಾಂಗ
43 ವೆನಿಸಿಕೊಳ್ಳದು. ಯೆಹೋವನು ಇಂತೆನ್ನುತ್ತಾನೆ—
ಮೋವಾಬಿನ ನಿವಾಸಿಯೇ, ಭಯವೂ, ಗುಂಡಿಯೂ,
44 ಬಲೆಯೂ ನಿನಗೆ ಕಾದಿವೆ; ಭಯಕ್ಕೆ ಓಡುವವನು
ಗುಂಡಿಯಲ್ಲಿ ಬೀಳುವನು, ಗುಂಡಿಯಿಂದ ಹತ್ತಿ
ಬರುವವನು ಬಲೆಗೆ ಸಿಕ್ಕುವನು; ನಾನು ದಂಡನೆಯ
ವರುಷವನ್ನು ಮೋವಾಬಿಗೆ ಬರಮಾಡುವೆನಷ್ಟೆ. ಇದು
45 ಯೆಹೋವನ ನುಡಿ. ಪಲಾಯನವಾದವರು ಬಲ
ಗುಂದಿದವರಾಗಿ ಹೆಷ್ಬೋನಿನ ನೆರಳಿನಲ್ಲಿ ನಿಂತಿದ್ದಾರೆ;
ಆದರೆ ಸೀಹೋನನ ರಾಜ್ಯಕ್ಕೆ ಸೇರಿದ ಹೆಷ್ಬೋನಿ
ನಿಂದಲೂ ಅಗ್ನಿಜ್ವಾಲೆ ಹೊರಟು ಮೋವಾಬಿನ ಕೆನ್ನೆ
ಯನ್ನೂ ಯುದ್ಧವೀರರ ನೆತ್ತಿಯನ್ನೂ ನುಂಗಿ
46 ಬಿಟ್ಟಿದೆ. ಮೋವಾಬ್ಯರೇ, ನಿಮ್ಮ ಗತಿಯೇನೆಂದು
ಹೇಳಲಿ! ಕೆಮೋಷಿನ ಭಕ್ತರು ನಾಶವಾದರು; ನಿನ್ನ
ಗಂಡುಹೆಣ್ಣುಮಕ್ಕಳು ಗಡೀಪಾರಾಗಿ ಸೆರೆಯಾದರು.
47 ಆದರೂ ಅಂತ್ಯದಲ್ಲಿ ನಾನು ಮೋವಾಬಿನ ದುರವಸ್ಥೆ
ಯನ್ನು ತಪ್ಪಿಸುವೆನು ಎಂದು ಯೆಹೋವನು ಅನ್ನು
ತ್ತಾನೆ.

ಮೋವಾಬಿನ ವಿಷಯವಾದ ನ್ಯಾಯತೀರ್ಪು ಇದೇ.

### ಅಮ್ಮೋನಿನ ವಿಷಯವಾದ ದೈವೋಕ್ತಿ.

49 ಅಮ್ಮೋನ್ಯರನ್ನು ಕುರಿತದ್ದು.
ಯೆಹೋವನು ಇಂತೆನ್ನುತ್ತಾನೆ—ಇಸ್ರಾಯೇ
ಲಿಗೆ ಮಕ್ಕಳಿಲ್ಲವೋ? ಬಾಧ್ಯನು ಇಲ್ಲವೋ? 1)ಮಲ್ಕಾ
ಮ್ ದೇವತೆಯು ಗಾದಿನ ಸೀಮೆಯನ್ನು ಸ್ವಾಧೀನ
ಮಾಡಿಕೊಂಡಿರುವದೇಕೆ, ಮಲ್ಕಾಮನ ಪ್ರಜೆಗಳು
2 ಗಾದಿನ ಪಟ್ಟಣಗಳಲ್ಲಿ ಏಕೆ ವಾಸಿಸುತ್ತಾರೆ? ಆದದ
ರಿಂದ ಇಗೋ, ಶತ್ರುಗಳು ನನ್ನ ಅಪ್ಪಣೆಯ ಮೇರೆಗೆ
ರಬ್ಬಾ ಎಂಬ ಅಮ್ಮೋನ್ಯರ ಪಟ್ಟಣದ ಮೇಲೆ ಬಿದ್ದು
ಯುದ್ಧಘೋಷಮಾಡುವ ದಿನಗಳು ಬರುವವು; ಆ
ಪಟ್ಟಣವು ಹಾಳುದಿಬ್ಬವಾಗುವದು; ಅದಕ್ಕೆ ಸೇರಿದ
ಗ್ರಾಮಗಳು ಬೆಂಕಿಯಿಂದ ಸುಟ್ಟುಹೋಗುವವು
ಆಗ ಇಸ್ರಾಯೇಲು ತನ್ನನ್ನು ವಶಮಾಡಿಕೊಂಡ
ರನ್ನು ತಾನು ವಶಮಾಡಿಕೊಳ್ಳುವದು. ಇದು ಯೆ
ಹೋವನ ನುಡಿ. ಹೆಷ್ಬೋನಿನವರೇ, ಗೋಳಾಡಿರಿ
ಆಯಿ ಎಂಬ ಊರು ಹಾಳಾಯಿತು! ರಬ್ಬಾ ಪಟ್ಟ
ಣಕ್ಕೆ ಸೇರಿದ ಗ್ರಾಮಗಳವರೇ, ಕಿರಿಚಿರಿ, ಗೋಣಿತಟ್ಟ
ನ್ನು ಸುತ್ತಿಕೊಳ್ಳಿರಿ, ಪ್ರಲಾಪಿಸಿರಿ, ಹಟ್ಟಿಗಳಲ್ಲಿ ಅತ್ತಿತ್ತ
ಓಡಾಡಿರಿ; ಏಕೆಂದರೆ ಮಲ್ಕಾಮ್ ದೇವತೆಯೂ ಅದ
ಯಾಜಕರೂ ಪ್ರಧಾನರೂ ಒಟ್ಟಾಗಿ ಸೆರೆಗೆ ಹೋಗು
ವರು. ನನ್ನ ಮೇಲೆ ಯಾರುತಾನೆ ಬಿದ್ದಾರು ಎಂದು
ಸ್ವಂತ ಆಸ್ತಿಪಾಸ್ತಿಯಲ್ಲಿ ಭರವಸವಿಟ್ಟಿರುವ ಭ್ರಷ್ಟ
ದೇಶವೇ, ನನ್ನ ತಗ್ಗುಗಳಲ್ಲಿ ತುಂಬಾ ನೀರು ಹ
ಯುತ್ತದೆಂದು ಏಕೆ ಕೊಚ್ಚಿಕೊಳ್ಳುತ್ತೀ? ಸೇನಾಧೀ
ಶ್ವರನಾದ ಯೆಹೋವನೆಂಬ ಕರ್ತನು ಇಂತೆನ್ನುತ್ತಾ
ನೆ—ಇಗೋ, ನಿನ್ನ ನೆರೆಹೊರೆಯವರೆಲ್ಲರೂ ನಿನಗ
ಭಯಾಸ್ಪದರಾಗುವಂತೆ ಮಾಡುವೆನು, ನಿನ್ನವರಲ್ಲಿ
ಪ್ರತಿಯೊಬ್ಬನು ನಿಂತಮುಖವಾಗಿಯೇ ಅಟ್ಟಲ್ಪಡು
ವನು; ಚದರಿದವರನ್ನು ಕೂಡಿಸುವದಕ್ಕೆ ಯಾರೂ
ಇಲ್ಲವಾಗುವದು. ಆದರೂ ಕಾಲಾಂತರದಲ್ಲಿ ಅ
ಮ್ಮೋನ್ಯರ ದುರವಸ್ಥೆಯನ್ನು ತಪ್ಪಿಸುವೆನು. ಇದು
ಯೆಹೋವನ ನುಡಿ.

### ಎದೋಮಿನ ವಿಷಯವಾದ ದೈವೋಕ್ತಿ.

ಎದೋಮನ್ನು ಕುರಿತದ್ದು.
ಸೇನಾಧೀಶ್ವರನಾದ ಯೆಹೋವನು ಇಂತೆನ್ನುತ್ತಾ
ನೆ—ತೇಮಾನ್ ಸೀಮೆಗಿದ್ದ ಬುದ್ಧಿಯು ಇನ್ನಿಲ್ಲ
ವೋ? ವಿವೇಕಿಗಳ ಆಲೋಚನಾಶಕ್ತಿಯು ಅಳಿಯಿತೋ?
ಅವರ ಜ್ಞಾನವು ಮಾಯವಾಯಿತೋ? ದೆದಾನಿನವರೇ,
ಹಿಂದಿರುಗಿರಿ, ಓಡಿಹೋಗಿರಿ, ಒಳಪ್ರಾಂತ್ಯದಲ್ಲಿ ವಾಸಿ
ಸಿರಿ; ಏಕೆಂದರೆ ನಾನು ಎದೋಮನ್ನು ದಂಡಿಸುವ
ಕಾಲದಲ್ಲಿ ಏಸಾವನಿಗೆ ವಿಧಿಸಿದ ಆಪತ್ತನ್ನು ಅದರ
ಮೇಲೆ ಬರಮಾಡುವೆನು. ದ್ರಾಕ್ಷೆಯ ಹಣ್ಣನ್ನು
ಕೀಳುವವರು ನಿನ್ನ ಕಡೆಗೆ ಬಂದರೆ ಹಕ್ಕಲನ್ನೂ ಉಳಿ
ಸುವದಿಲ್ಲ; ಕಳ್ಳರು ರಾತ್ರಿವೇಳೆಯಲ್ಲಿ ನುಗ್ಗಿದರೆ
ತಮಗೆ ಸಾಕಾಗುವ ವರೆಗೂ ಹಾಳುಮಾಡುವರು.
ನಾನೇ ಏಸಾವನ ಆಸರೆಯನ್ನು ಕಿತ್ತಿದ್ದೇನೆ, ಅವನ
ಗುಪ್ತಸ್ಥಳಗಳನ್ನು ಬಟ್ಟಬೈಲುಮಾಡಿದ್ದೇನೆ, ಅವಿತು
ಕೊಳ್ಳಲಾರನು; ಅವನ ಸಂತಾನದವರೂ ಸಹೋ
ದರರೂ ನೆರೆಹೊರೆಯವರೂ ಹಾಳಾದರು, ಅವನೂ
ಇಲ್ಲವಾದನು. ನೀನು ನಿನ್ನ ಅನಾಥರನ್ನು ಬಿಡು,
ನಾನೇ ಅವರನ್ನು ಉಳಿಸುವೆನು; ನಿನ್ನ ವಿಧವೆಯರು
ನನ್ನಲ್ಲಿ ಭರವಸವಿಡಲಿ. ಯೆಹೋವನು ಇಂತೆನ್ನು
ತ್ತಾನೆ—ಪಾತ್ರೆಯಲ್ಲಿ ಕುಡಿಯುವದು ಯಾರ ಪಾಲಿ
ಗೆ ಬರಲಿಲ್ಲವೋ ಅವರೇ ಖಂಡಿತ ಕುಡಿಯಬೇಕಾ
ಗಿರುವಲ್ಲಿ ನೀನು ಅದಕ್ಕೆ ತಪ್ಪಿಸಿಕೊಂಡೀಯಾ? ಆಗು
ವುದೇ ಇಲ್ಲ, ನೀನು ಕುಡಿಯಲೇ ಕುಡಿಯುವಿ.
ಬೊಚ್ರವು ಹಾಳುಬಿದ್ದು ಬೆರಗಿಗೂ ನಿಂದೆಗೂ ಶಾಪ

1) ಅಥವಾ: ಅಮ್ಮೋನ್ಯರ ಅರಸನು. ಪಾಠಾಂತರ: ಮಿಲ್ಕೋಮ್ ದೇವತೆಯು.

ಕ್ಕೂ ಗುರಿಯಾಗಿ ಅದಕ್ಕೆ ಸೇರಿದ ಊರುಗಳೆಲ್ಲಾ
ನಿತ್ಯನಾಶನವನ್ನು ಹೊಂದುವವು ಎಂದು ನನ್ನ ಮೇಲೆ
ಆಣೆಯಿಟ್ಟಿದ್ದೇನೆ. ಇದು ಯೆಹೋವನ ನುಡಿ.
14 ಯೆಹೋವನಿಂದ ಬಂದ ಸಮಾಚಾರವನ್ನು ಕೇಳಿ
ದ್ದೇನೆ; ದೂತನ ಮೂಲಕ ಜನಾಂಗಗಳಿಗೆ ಹೀಗೆ ಹೇಳಿ
ಕಳುಹಿಸಿದ್ದಾನೆ—ನೀವು ಕೂಡಿಕೊಂಡು ಯುದ್ಧಕ್ಕೆ
15 ಹೊರಟು ಎದೋಮಿನ ಮೇಲೆ ಬೀಳಿರಿ. ಇಗೋ [ಎ
ದೋಮೇ,] ನೀನು ಜನಾಂಗಗಳಲ್ಲಿ ಹೀನವಾಗಿ ಜನರ
16 ತಾತ್ಸಾರಕ್ಕೆ ಈಡಾಗುವಂತೆ ಮಾಡಿದ್ದೇನೆ. ಆಹಾ,
ನಿನ್ನ ಭೀಕರತ್ವವೆಲ್ಲಿ! ಪರ್ವತಾಗ್ರದಲ್ಲಿ ನೆಲೆಗೊಂಡು
ಬಂಡೆಯ ಬಿರುಕುಗಳಲ್ಲಿ ವಾಸಿಸುವ ಜನವೇ, ನಿನ್ನೆ
ದೆಯ ಹೆಮ್ಮೆಯು ನಿನ್ನನ್ನು ಮೋಸಗೊಳಿಸಿದೆ; ನೀನು
ಹದ್ದಿನಂತೆ ನಿನ್ನ ಗೂಡನ್ನು ಉನ್ನತಸ್ಥಾನದಲ್ಲಿ ಕಟ್ಟಿ
ಕೊಂಡರೂ ನಿನ್ನನ್ನು ಅಲ್ಲಿಂದ ಇಳಿಸಿಬಿಡುವೆನು.
17 ಇದು ಯೆಹೋವನ ನುಡಿ. ಎದೋಮು ಬೆರಗಿಗೆ
ಆಸ್ಪದವಾಗುವದು; ಹಾದುಹೋಗುವವರೆಲ್ಲರೂ ಅದ
ಕ್ಕೆ ಸಂಭವಿಸಿದ ವಿಪತ್ತುಗಳಿಗೆ ಬೆರಗಾಗಿ ಸಿಳ್ಳುಹಾಕು
18 ವರು. ನಾನು ಕೆಡವಿದ ಸೊದೋಮ್ ಗೊಮೋರ
ಪಟ್ಟಣಗಳಲ್ಲಿಯೂ ಸುತ್ತಣ ಊರುಗಳಲ್ಲಿಯೂ
ಹೇಗೋ ಹಾಗೆಯೇ ಎದೋಮಿನಲ್ಲಿಯೂ ಯಾರೂ
ವಾಸಿಸರು, ಯಾವ ನರಪ್ರಾಣಿಯೂ ಇಳುಕೊಳ್ಳನು.
19 ಆಹಾ, ಒಬ್ಬನು ಸಿಂಹದೋಪಾದಿಯಲ್ಲಿ ಯೊರ್ದ
ನಿನ ದಟ್ಟಡವಿಯಿಂದ [ಎದೋಮ್ಯರಿಗೆ] ನಿತ್ಯನೆಲೆ
ಯಾದ ಗೋಮಾಳಕ್ಕೆ ಏರಿಬರುವನು; ಕ್ಷಣಮಾತ್ರ
ದಲ್ಲಿ ನಾನು ಅವರನ್ನು ಅಲ್ಲಿಂದ ಓಡಿಸಿಬಿಡುವೆನು;
ನಾನು ಆರಿಸಿಕೊಂಡವನನ್ನೇ ಅದನ್ನು ಕಾಯುವು
ದಕ್ಕೆ ನೇಮಿಸುವೆನು; ನನ್ನ ಸಮಾನನು ಯಾವನು?
ನನ್ನನ್ನು ನ್ಯಾಯವಿಚಾರಣೆಗೆ ಯಾವನು ಕರೆದಾನು?
ಮಂದೆಯನ್ನು ಕಾಯುವ ಯಾವನು ನನ್ನೆದುರಿಗೆ
20 ನಿಲ್ಲಬಲ್ಲನು? ಹೀಗಿರಲು ಯೆಹೋವನು ಎದೋ
ಮಿನ ವಿಷಯವಾಗಿ ಮಾಡಿಕೊಂಡಿರುವ ಆಲೋಚನೆ
ಯನ್ನೂ ಆತನು ತೇಮಾನ್ಯರನ್ನು ಕುರಿತು ಸಂಕಲ್ಪಿಸಿ
ರುವ ಉದ್ದೇಶವನ್ನೂ ಆಲಿಸಿರಿ; [ಮೃಗಗಳು] ಖಂಡಿತ
ವಾಗಿ ಹಿಂಡಿನ ಮರಿಗಳನ್ನು ಎಳೆದುಕೊಂಡು ಹೋಗು
ವವು; ನಿಶ್ಚಯವಾಗಿ ಅವುಗಳ ಹುಲ್ಗಾವಲು ಅವು
21 ಗಳ ನಾಶನಕ್ಕಾಗಿ ಬೆದರುವದು. ಎದೋಮ್ಯರು ಥಡ
ಮ್ಮನೆ ಬೀಳಲು ಭೂಮಿಯು ಕಂಪಿಸುವದು; ಗೋಳು
22 ಕೆಂಪು ಸಮುದ್ರದ ವರೆಗೂ ಕೇಳಿಸುವದು! ಇಗೋ,
ಬೊಚ್ರದ ಮೇಲೆ ಎರಗಬೇಕೆಂದು ಶತ್ರುವು ರಣಹದ್ದಿ
ನಂತೆ ತನ್ನ ರೆಕ್ಕೆಗಳನ್ನು ಹರಡಿ ಹಾರಿ ಏರುವನು;
ಆ ದಿನದಲ್ಲಿ ಎದೋಮಿನ ಶೂರರ ಎದೆಯು ಹೆರುವ
ಹೆಂಗಸಿನ ಎದೆಯಂತೆ ಅದರುವದು.

### ದಮಸ್ಕದ ವಿಷಯವಾದ ದೈವೋಕ್ತಿ.

23 ದಮಸ್ಕವನ್ನು ಕುರಿತದ್ದು.
ಹಮಾತಿಗೂ ಅರ್ಪಾದಿಗೂ ಆಶಾಭಂಗವಾ
ಯಿತು; ಅವು ಅಶುಭಸಮಾಚಾರವನ್ನು ಕೇಳಿ ಕರಗಿ
ಹೋಗಿವೆ; ಸಮುದ್ರಕ್ಕೆ ತಲ್ಲಣ ಹತ್ತಿದೆ, ಸುಮ್ಮನಿರ
24 ಲಾರದು. ದಮಸ್ಕವು ಕುಂದಿದೆ, ಓಡಿಹೋಗಲು ಹಿಂದಿ
ರುಗಿದೆ; ಅದಕ್ಕೆ ನಡುಕ ಹಿಡಿದಿದೆ, ಪ್ರಸವವೇದನೆ
ಯಂತಿರುವ ಯಾತನಾವ್ಯಥೆಗಳಿಗೆ ಒಳಗಾಗಿದೆ.
ಅಯ್ಯೋ, ಹೆಸರುವಾಸಿಯ ಪಟ್ಟಣವು, ನನ್ನ ಇಷ್ಟದ 25
ಪುರವು, ಏಕೆ ವಲಸೆಹೋಗಲಿಲ್ಲ! ಅದರ ದುರ್ಗತಿ 26
ಯಿಂದ ಆ ದಿನದಲ್ಲಿ ಅಲ್ಲಿನ ಯೌವನಸ್ಥರು ಚೌಕಗ
ಳಲ್ಲಿ ಬಿದ್ದುಬಿಡುವರು, ಯುದ್ಧವೀರರೆಲ್ಲಾ ಸುಮ್ಮ
ನಾಗುವರು. ಆಗ ನಾನು ದಮಸ್ಕದ ಕೋಟೆಯಲ್ಲಿ 27
ಬೆಂಕಿಯನ್ನು ಹೊತ್ತಿಸುವೆನು, ಅದು ಬೆನ್‌ಹದದನ
ಅರಮನೆಗಳನ್ನು ದಹಿಸಿಬಿಡುವದು ಎಂದು ಸೇನಾಧೀ
ಶ್ವರನಾದ ಯೆಹೋವನು ಅನ್ನುತ್ತಾನೆ.

### ಕೇದಾರಿನ ವಿಷಯವಾದ ದೈವೋಕ್ತಿ.

ಬಾಬೆಲಿನ ಅರಸನಾದ ನೆಬೂಕದ್ನೆಚ್ಚರನು ಹೊಡೆದ 28
ಕೇದಾರನ್ನೂ ಹಾಚೋರಿನ ರಾಷ್ಟ್ರಗಳನ್ನೂ ಕುರಿ
ತದ್ದು.
ಏಳಿರಿ, ಕೇದಾರಿಗೆ ಹೋಗಿ ಮೂಡಣ ದೇಶದವ
ರನ್ನು ಹಾಳುಮಾಡಿರಿ ಎಂದು ಯೆಹೋವನು ಶತ್ರುಗ
ಳಿಗೆ ಅಪ್ಪಣೆಮಾಡಿದ್ದಾನೆ. ಶತ್ರುಗಳು ಅವರ ಗುಡಾ 29
ರಗಳನ್ನೂ ಹಿಂಡುಗಳನ್ನೂ ಅಪಹರಿಸಿಕೊಳ್ಳುವರು,
ಅವರ ಪರದೆಗಳನ್ನೂ, ಸಮಸ್ತ ಸಾಮಗ್ರಿಗಳನ್ನೂ,
ಒಂಟೆಗಳನ್ನೂ ತೆಗೆದುಕೊಂಡು ಹೋಗುವರು, ಸುತ್ತು
ಮುತ್ತಲು ದಿಗಿಲು ಎಂಬದಾಗಿ ಅವರ ಕಡೆಗೆ
ಕೂಗುವರು. ಯೆಹೋವನು ಇಂತೆನ್ನುತ್ತಾನೆ— 30
ಹಾಚೋರಿನವರೇ, ಓಡಿಹೋಗಿರಿ, ದೂರ ಅಲೆದಾಡಿರಿ,
ಒಳಪ್ರಾಂತ್ಯದಲ್ಲಿ ವಾಸಿಸಿರಿ, ಏಕಂದರೆ ಬಾಬೆಲಿನ
ಅರಸನಾದ ನೆಬೂಕದ್ನೆಚ್ಚರನು ನಿಮಗೆ ಕೇಡನ್ನು
ಬಗೆದು ನಿಮ್ಮ ನಾಶನಕ್ಕೆ ಉಪಾಯವನ್ನು ಕಲ್ಪಿಸಿ
ಕೊಂಡಿದ್ದಾನೆ. [ಬಾಬೆಲಿನವರೇ,] ಏಳಿರಿ. ಅಗು 31
ಳಿಯೂ ಬಾಗಿಲೂ ಬೇಕೆನ್ನದೆ ನೆಮ್ಮದಿಯಿಂದ ನಿರ್ಭ
ಯವಾಗಿ ಪ್ರತ್ಯೇಕ ವಾಸಿಸುವ ಜನಾಂಗದ ಮೇಲೆ
ಬೀಳಿರಿ! ಅವರ ಒಂಟೆಗಳು ಕೊಳ್ಳೆಯಾಗುವವು, 32
ಅವರ ಲೆಕ್ಕವಿಲ್ಲದ ದನಕುರಿಗಳು ಸೂರೆಹೋಗುವವು;
ಚಂಡಿಕೆಬಿಟ್ಟುಕೊಂಡಿರುವ ಜನರನ್ನು ಎಲ್ಲಾ ಕಡೆಯ
ಗಾಳಿಗೂ ತೂರುವೆನು; ಎಲ್ಲಾ ಕಡೆಯಿಂದಲೂ
ವಿಪತ್ತನ್ನು ಅವರ ಮೇಲೆ ಬರಮಾಡುವೆನು. ಆಗ 33
ಹಾಚೋರು ಸದಾ ಹಾಳುಬಿದ್ದು ನರಿಗಳಿಗೆ ಹಕ್ಕೆಯಾ
ಗುವದು; ಅಲ್ಲಿ ಯಾರೂ ವಾಸಿಸರು, ಯಾವ ನರ
ಮನುಷ್ಯನೂ ಇಳುಕೊಳ್ಳನು, ಇದು ಯೆಹೋವನ
ನುಡಿ.

### ಏಲಾಮಿನ ವಿಷಯವಾದ ದೈವೋಕ್ತಿ.

ಯೆಹೂದದ ಅರಸನಾದ ಚಿದ್ಕೀಯನ ಆಳಿಕೆಯ 34
ಪ್ರಾರಂಭದಲ್ಲಿ ಯೆಹೋವನು ಏಲಾಮಿನ ವಿಷಯ
ವಾದ ಈ ವಾಕ್ಯವನ್ನು ಪ್ರವಾದಿಯಾದ ಯೆರೆಮೀಯ
ನಿಗೆ ದಯಪಾಲಿಸಿದನು—ಸೇನಾಧೀಶ್ವರನಾದ ಯೆ 35
ಹೋವನು ಇಂತೆನ್ನುತ್ತಾನೆ—ಇಗೋ, ನಾನು ಏಲಾ
ಮಿನ ಮುಖ್ಯ ಬಲವಾದ ಬಿಲ್ಲನ್ನು ಮುರಿದುಬಿಡು

36 ವೆನು. ನಾನು ನಾಲ್ಕು ದಿಕ್ಕುಗಳಿಂದಲೂ ನಾಲ್ಕು
ಗಾಳಿಗಳನ್ನು ಏಲಾಮ್ಯರ ಮೇಲೆ ಬರಮಾಡಿ ಅವ
ರನ್ನು ಆಯಾ ಗಾಳಿಗಳಿಗೆ ತೂರಿಬಿಡುವೆನು; ಏಲಾ
ಮುದೇಶಭ್ರಷ್ಟರು ಸೇರದೆ ಇರುವ ರಾಜ್ಯವೇ ಇರದು.
37 ಏಲಾಮ್ಯರು ತಮ್ಮ ಪ್ರಾಣಹುಡುಕುವ ಶತ್ರುಗಳಿಂದ
ಕಂಗೆಡುವಂತೆ ಮಾಡುವೆನು; ನನ್ನ ರೋಷಾಗ್ನಿಯ
ವಿಪತ್ತನ್ನು ಅವರ ಮೇಲೆ ಬರಮಾಡುವೆನು; ಇದು
ಯೆಹೋವನ ನುಡಿ; ಅವರು ನಿರ್ಮೂಲವಾಗುವ ತನಕ
38 ಅವರ ಹಿಂದೆ ಖಡ್ಗವನ್ನು ಅಟ್ಟುವೆನು; ನನ್ನ ಸಿಂಹಾಸ
ನವನ್ನು ಏಲಾಮಿನಲ್ಲಿ ಸ್ಥಾಪಿಸಿ ಆ ದೇಶದ ಅರಸ
39 ನನ್ನೂ ಪ್ರಧಾನರನ್ನೂ ಅಳಿಸಿಬಿಡುವೆನು. ಇದು
ಯೆಹೋವನ ನುಡಿ. ಆದರೂ ಕಟ್ಟಕಡೆಯಲ್ಲಿ ಏಲಾ
ಮಿನ ದುರವಸ್ಥೆಯನ್ನು ತಪ್ಪಿಸುವೆನು. ಇದು ಯೆ
ಹೋವನ ನುಡಿ.

### ಬಾಬೆಲಿನ ವಿಷಯವಾದ ದೈವೋಕ್ತಿ.

50 ಯೆಹೋವನು ಪ್ರವಾದಿಯಾದ ಯೆರೆಮೀಯ
ನಿಂದ ಕಸ್ದೀಯರ ದೇಶವಾದ ಬಾಬೆಲಿನ ವಿಷಯ
ವಾಗಿ ನುಡಿಸಿದ ವಾಕ್ಯ.
2 ಜನಾಂಗಗಳಲ್ಲಿ ಪ್ರಚುರಪಡಿಸಿರಿ, ಧ್ವಜವೆತ್ತಿ ಪ್ರಕ
ಟಿಸಿರಿ, ಮರೆಮಾಜದೆ ಹೀಗೆ ಸಾರಿರಿ—ಬಾಬೆಲ್
ಶತ್ರುವಶವಾಯಿತು, ಬೇಲ್‍ದೇವತೆಯು ನಾಚಿಕೆ
ಗೊಂಡಿದೆ, ಮೆರೋದಾಕ್ ದೇವತೆಯು ಬೆಚ್ಚಿ
ಬಿದ್ದಿದೆ, ಅದರ ಮೂರ್ತಿಗಳು ಅವಮಾನಕ್ಕೆ ಗುರಿ
ಯಾಗಿವೆ, ಅದರ ಬೊಂಬೆಗಳು ಚೂರುಚೂರಾಗಿವೆ.
3 ಒಂದು ಜನಾಂಗವು ಬಡಗಲಿಂದ ಬಾಬೆಲಿನ ಮೇಲೆ
ಬರುತ್ತಿದೆ, ಅದು ಬಾಬೆಲ್ ದೇಶವನ್ನು ಹಾಳು
ಮಾಡುವದು, ಅಲ್ಲಿ ಯಾರೂ ವಾಸಿಸರು, ಪಶು
ಗಳೂ ಜನರೂ ಓಡಿಹೋಗಿದ್ದಾರೆ, ತೊಲಗಿಬಿಟ್ಟಿದ್ದಾರೆ.
4 ಯೆಹೋವನು ಇಂತೆನ್ನುತ್ತಾನೆ—ಆ ದಿನಗಳಲ್ಲಿ,
ಆ ಕಾಲದಲ್ಲಿ ಇಸ್ರಾಯೇಲ್ಯರೂ ಯೆಹೂದ್ಯರೂ
ಒಟ್ಟಿಗೆ ಹಿಂದಿರುಗಿ ದಾರಿಯುದ್ದಕ್ಕೂ ಅಳುತ್ತಾ
ಬಂದು ತಮ್ಮ ದೇವರಾದ ಯೆಹೋವನನ್ನು ಮರೆಹೊ
5 ಗುವರು. ಚೀಯೋನಿಗೆ ಅಭಿಮುಖರಾಗಿ ಮಾರ್ಗ
ವನ್ನು ವಿಚಾರಿಸಿ—ಬನ್ನಿರಿ, ಯೆಹೋವನನ್ನು ಆಶ್ರ
ಯಿಸಿ ಎಂದಿಗೂ ಮರೆಯದ ಶಾಶ್ವತವಾದ ಒಡಂಬ
ಡಿಕೆಯನ್ನು ಆತನೊಂದಿಗೆ ಮಾಡಿಕೊಳ್ಳೋಣ ಎಂದು
ಹೇಳುವರು.
6 ನನ್ನ ಜನರು ತಪ್ಪಿಸಿಕೊಂಡ ಕುರಿಗಳು; ಪಾಲ
ಕರು ಅವರನ್ನು ದಾರಿತಪ್ಪಿಸಿ ಪರ್ವತಗಳಲ್ಲಿ ಅಲೆದಾಡಿಸಿ
ದ್ದಾರೆ; ನನ್ನ ಜನರು ತಮ್ಮ ಹಕ್ಕೆಯನ್ನು ಮರೆತು
7 ಬೆಟ್ಟಗುಡ್ಡಗಳಲ್ಲಿ ತಿರುಗಾಡುತ್ತಲಿದ್ದಾರೆ. ಕಂಡಕಂಡ
ವರೆಲ್ಲರೂ ಅವರನ್ನು ನುಂಗಿಬಿಟ್ಟಿದ್ದಾರೆ; ಅವರ
ವಿರೋಧಿಗಳು—ನಾವು ಅವರನ್ನು ನುಂಗಿದ್ದು ದೋಷವ
ಲ್ಲ, ಅವರು ನ್ಯಾಯನಿವಾಸವೆನಿಸಿಕೊಂಡ ಯೆಹೋ
ವನಿಗೆ, ಹೌದು, ತಮ್ಮ ಪಿತೃಗಳ ನಿರೀಕ್ಷೆಯಾದ
ಯೆಹೋವನಿಗೆ ಪಾಪ ಮಾಡಿದರಲ್ಲಾ ಅಂದು
8 ಕೊಂಡರು. ಬಾಬೆಲ್ ದೇಶದೊಳಗಿಂದ ಓಡಿಹೋಗಿರಿ,
ಕಸ್ದೀಯರ ಸೀಮೆಯಿಂದ ಹೊರಡಿರಿ; ಹಿಂಡುಗಳ

ಮುಂದಣ ಹಿರಿಮಣಿ ಹೋತಗಳಂತಿರಿ. ಇಗೋ, ನಾನ
ಮಹಾ ಜನಾಂಗಗಳ ಸಮೂಹವನ್ನು ಎಬ್ಬಿಸಿ ಬಡಗ
ಲಿಂದ ಬಾಬೆಲಿನ ಮೇಲೆ ಬೀಳಮಾಡುವೆನು; ಅವ
ಬಾಬೆಲಿಗೆ ವಿರುದ್ಧವಾಗಿ ವ್ಯೂಹಕಟ್ಟಿ ಅದನ್ನು ಸ್ಥ
ದೊಳಗಿಂದ ಕಿತ್ತುಬಿಡುವವು; ಅವುಗಳ ಬಾಣಗಳ
ಸುಮ್ಮನೆ ಹಿಂದಿರುಗದ ಯುದ್ಧಪ್ರವೀಣಶೂರನಂತಿರ
ವವು. ಕಸ್ದೀಯ ರಾಜ್ಯವು ಸೂರೆಯಾಗುವದು
ಸೂರೆಗಾರರೆಲ್ಲರೂ ತೃಪ್ತಿಗೊಳ್ಳುವರು. ಇದು ಯೆ
ಹೋವನ ನುಡಿ. ನನ್ನ ಸ್ವಾಸ್ತ್ಯವನ್ನು ಕೊಳ್ಳೆಹೊ
ಯುವವರೇ, ನೀವು ಹರ್ಷಿಸಿ ಉಲ್ಲಾಸಿಸುವವರು
ಕಣತುಳಿಯುವ ಕಡಸಿನ ಹಾಗೆ ಕುಣಿದಾಡುವವರು
ಕೊಬ್ಬಿದ ಕುದುರೆಗಳಂತೆ ಹೇಕರಿಸುವವರೂ ಆಗಿರ
ವದರಿಂದ ನಿಮ್ಮ ಮಾತೃಭೂಮಿಯು ಮಾನಭಂಗಕ್ಕೆ
ಈಡಾಗುವದು, ನಿಮ್ಮನ್ನು ಹೆತ್ತ ರಾಜ್ಯವು ನಾಚ
ಕೊಳ್ಳುವದು; ಆಹಾ, ಅದು ಕಾಡು, ಕಗ್ಗಾಡು
ಬೆಗ್ಗಾಡು, ಜನಾಂಗಗಳಲ್ಲಿ ಕನಿಷ್ಠವೂ ಆಗುವದು
ಯೆಹೋವನ ರೋಷದ ದೆಸೆಯಿಂದ ಅದು ನಿರ್ಜನ
ವಾಗಿ ತೀರಾ ಹಾಳುಬೀಳುವದು; ಬಾಬೆಲನ್ನು ಹಾದ
ಹೋಗುವವರೆಲ್ಲರೂ ಅದಕ್ಕೆ ಸಂಭವಿಸಿದ ವಿಪತ್ತು
ಗಳನ್ನು ಕಂಡು ಬೆರಗಾಗಿ ಸಿಳ್ಳುಹಾಕುವರು. ಬಿಲ್ಲ
ಗಾರರೇ, ನೀವೆಲ್ಲರೂ ವ್ಯೂಹಕಟ್ಟಿ ಬಾಬೆಲಿಗೆ ಮುತ್ತಿಗ
ಹಾಕಿರಿ, ಬಾಣಗಳನ್ನು ಮಿಗಿಸದೆ ಎಸೆಯಿರಿ; ಅದ
ಯೆಹೋವನಿಗೆ ಪಾಪಮಾಡಿತಲ್ಲಾ. ಅದರ ಸುತ್ತಲ
ಜಯಘೋಷಮಾಡಿರಿ, ಅಧೀನವಾಯಿತು, ಅದ
ಕೊತ್ತಲಗಳು ಬಿದ್ದವು, ಅದರ ಪೌಳಿಗೋಡೆಯು ಕೆಡ
ಲ್ಪಟ್ಟಿತು; ಯೆಹೋವನು ಅದಕ್ಕೆ ಮುಯ್ಯಿತೀರಿಸ
ದ್ದಾನೆ; ಮುಯ್ಯಿತೀರಿಸಿರಿ; ಅದು ಮಾಡಿದಂ
ಯೇ ಅದಕ್ಕೆ ಮಾಡಿರಿ. ಬೀಜಬಿತ್ತುವವನನ್ನೂ ಸುಗ್ಗ
ಯಲ್ಲಿ ಕುಡುಗೋಲುಹಿಡಿಯುವವನನ್ನೂ ಬಾಬೆ
ನಿಂದ ನಿರ್ಮೂಲಮಾಡಿರಿ; ಪ್ರತಿಯೊಬ್ಬ ವಿದೇಶಿ
ಯನು ಹಿಂಸೆಯ ಖಡ್ಗದ ದೆಸೆಯಿಂದ ಸ್ವಜನರ
ಕಡೆಗೆ ತಿರುಗಿಕೊಂಡು ಸ್ವದೇಶಕ್ಕೆ ಓಡಿಹೋಗುವನು
ಇಸ್ರಾಯೇಲು ಚದರಿಹೋದ ಹಿಂಡು; ಸಿಂಹ
ಗಳು ಅದನ್ನು ಓಡಿಸಿಬಿಟ್ಟಿವೆ; ಮೊಟ್ಟಮೊದಲ
ಅಶ್ಶೂರದ ಅರಸನು ಅದನ್ನು ತಿಂದನು, ಕಟ್ಟಕಡೆಗ
ಈಗ ಬಾಬೆಲಿನ ಅರಸನಾದ ನೆಬೂಕದ್ನೆಚ್ಚರನು ಅದರ
ಎಲುಬುಗಳನ್ನು ಕಡಿದುಬಿಟ್ಟನು. ಹೀಗಿರಲು ಇಸ್ರಾ
ಯೇಲಿನ ದೇವರೂ ಸೇನಾಧೀಶ್ವರನೂ ಆದ ಯೆಹೋ
ವನು ಇಂತೆನ್ನುತ್ತಾನೆ—ಆಹಾ, ನಾನು ಅಶ್ಶೂರದ
ಅರಸನನ್ನು ದಂಡಿಸಿದಂತೆ ಬಾಬೆಲಿನ ಅರಸನನ್ನೂ
ಅವನ ದೇಶವನ್ನೂ ದಂಡಿಸುವೆನು. ಇಸ್ರಾಯೇ
ಲನ್ನು ಪುನಃ ಅದರ ಹುಲ್ಗಾವಲಿಗೆ ಸೇರಿಸುವೆನು
ಅದು ಕರ್ಮೆಲಿನಲ್ಲಿಯೂ ಬಾಷಾನಿನಲ್ಲಿಯೂ ಮೇ
ಯುವದು; ಎಫ್ರಾಯೀಮಿನ ಮತ್ತು ಗಿಲ್ಯಾದಿನ
ಬೆಟ್ಟಗಳಲ್ಲಿ ತೃಪ್ತಿಗೊಳ್ಳುವದು. ಆ ದಿನಗಳಲ್ಲಿ, ಆ
ಕಾಲದಲ್ಲಿ ಇಸ್ರಾಯೇಲಿನ ಅಧರ್ಮವನ್ನು ಎಲ್ಲಿ
ಹುಡುಕಿದರೂ ಇರುವದೇ ಇಲ್ಲ; ಯೆಹೂದದ ಪಾಪ
ವನ್ನು ಎಲ್ಲಿ ತಡಕಿದರೂ ಸಿಕ್ಕುವದೇ ಇಲ್ಲ; ನಾನು
ಉಳಿಸುವ ಜನಶೇಷವನ್ನು ಕ್ಷಮಿಸುವೆನಲ್ಲವೆ. ಇದು
ಯೆಹೋವನ ನುಡಿ.

21 ಯೆಹೋವನು ಇಂತೆನ್ನುತ್ತಾನೆ—1)ಮೆರಾಥಯಿ
ಮ್‌ದೇಶಕ್ಕೂ ಪೆಕೋಧಿನ ನಿವಾಸಿಗಳಿಗೂ ವಿರುದ್ಧ
ವಾಗಿ ದಂಡೆತ್ತಿ ಹೋಗಿ ಅವರನ್ನು ಸಂಹರಿಸಿ ಅನಂತರ
ದೇಶವನ್ನು ತೀರಾ ಹಾಳುಮಾಡಿ ನಾನು ನಿನಗೆ
22 ಅಜ್ಞಾಪಿಸಿದ್ದನ್ನೆಲ್ಲಾ ನೆರವೇರಿಸು. ಯುದ್ಧದ ಆರ್ಭ
ಟವೂ ಮಹಾನಾಶನದ ಶಬ್ದವೂ ದೇಶದೊಳಗೆ ಕೇಳಿ
23 ಸುತ್ತವೆ. ಆಹಾ, ಲೋಕವನ್ನೆಲ್ಲಾ ಹೊಡೆದ ಚಮ
ಟಿಗೆಯು ಮುರಿದು ತುಂಡುತುಂಡಾಯಿತು! ಬಾಬೆ
ಲ್‌ರಾಜ್ಯವು ಜನಾಂಗಗಳ ನಡುವೆ ಹಾಳಾಯಿತಲ್ಲಾ!
24 ಬಾಬೆಲೇ, ನಾನು ನಿನಗೆ ಉರುಲೊಡ್ಡಿದೆನು; ನೀನು
ತಿಳಿಯದೆ ಸಿಕ್ಕಿಕೊಂಡಿ; ನೀನು ಯೆಹೋವನೊಂದಿಗೆ
ಹೋರಾಡಿದ್ದರಿಂದ ಬೋನಿಗೆ ಬಿದ್ದು ವಶವಾದಿ.
25 ಸೇನಾಧೀಶ್ವರನಾದ ಯೆಹೋವನೆಂಬ ಕರ್ತನು ಕಸ್ದೀ
ಯರ ದೇಶದಲ್ಲಿ ನಿರ್ವಹಿಸಬೇಕಾದ ಕಾರ್ಯವೊಂ
ದುಂಟು; ಅದಕ್ಕಾಗಿ ಯೆಹೋವನು ತನ್ನ ಆಯುಧ
ಶಾಲೆಯನ್ನು ತೆರೆದು ತನ್ನ ರೋಷದ ಅಸ್ತ್ರಶಸ್ತ್ರಗಳನ್ನು
26 ಹೊರಗೆ ತೆಗೆದಿದ್ದಾನೆ. ಲೋಕದ ಕಟ್ಟಕಡೆಯಿಂದ
ಬಾಬೆಲಿಗೆ ಬನ್ನಿರಿ, ಅದರ ಕಣಜಗಳನ್ನು ತೆರೆಯಿರಿ;
ಪಟ್ಟಣವನ್ನು ಹಾಳುದಿಬ್ಬಗಳಾಗಿ ಮಾಡಿ ಪೂರ್ಣವಾಗಿ
ನಾಶಪಡಿಸಿರಿ; ಏನೂ ಉಳಿಯದಿರಲಿ.
27 ಅದರ ಹೋರಿಗಳನ್ನೆಲ್ಲಾ ಕೊಲ್ಲಿರಿ, ಅವು ವಧ್ಯ
ಸ್ಥಾನಕ್ಕೆ ಹೋಗಲಿ; ಅವುಗಳ ಗತಿಯನ್ನು ಏನೆಂದು
ಹೇಳಲಿ! ಅವುಗಳಿಗೆ ವಿಪತ್ಕಾಲವು ಒದಗಿದೆ, ದಂಡ
28 ನೆಯ ದಿನವು ಸಂಭವಿಸಿದೆ. ಓಹೋ, ಬಾಬೆಲಿನಿಂದ
ತಪ್ಪಿಸಿಕೊಂಡು ಓಡಿಹೋಗುವವರ ಶಬ್ದ! ನಮ್ಮ
ದೇವರಾದ ಯೆಹೋವನು ತನ್ನ ಆಲಯವನ್ನು ನಾಶ
ಮಾಡಿದವರಿಗೆ ಮುಯ್ಯಿತೀರಿಸಿದ್ದಾನೆ ಎಂಬ ಸಮಾ
ಚಾರವನ್ನು ಚೀಯೋನಿನಲ್ಲಿ ಪ್ರಕಟಿಸುವದಕ್ಕೆ ಹೋಗು
29 ತ್ತಾರಲ್ಲಾ. ಬಿಲ್ಲನ್ನು ಬೊಗ್ಗಿಸಿ ಬಾಣಬಿಡುವವರ
ನ್ನೆಲ್ಲಾ ಬಾಬೆಲಿಗೆ ಕರೆಯಿರಿ; ಅದರ ಸುತ್ತಲು ದಂಡಿಳಿ
ಸಿರಿ; ಅದರ ನಿವಾಸಿಗಳಲ್ಲಿ ಯಾರೂ ತಪ್ಪಿಸಿಕೊಳ್ಳದ
ಹಾಗಿರಲಿ; ಅದರ ಕೃತ್ಯಕ್ಕೆ ತಕ್ಕಂತೆ ಮುಯ್ಯಿತೀರಿಸಿರಿ;
ಅದು ಮಾಡಿದಂತೆಯೇ ಅದಕ್ಕೆ ಮಾಡಿರಿ; ಅದು
ಸೊಕ್ಕೇರಿ ಇಸ್ರಾಯೇಲ್ಯರ ಸದಮಲಸ್ವಾಮಿಯಾದ
30 ಯೆಹೋವನನ್ನು ಅಸಡ್ಡೆಮಾಡಿತಲ್ಲಾ. ಆದಕಾರಣ
ಆ ದಿನದಲ್ಲಿ ಅಲ್ಲಿನ ಯೌವನಸ್ಥರು ಚೌಕಗಳಲ್ಲಿ
ಬಿದ್ದುಬಿಡುವರು, ಯುದ್ಧವೀರರೆಲ್ಲಾ ಸುಮ್ಮನಾಗು
31 ವರು. ಇದು ಯೆಹೋವನ ನುಡಿ. ಸೇನಾಧೀಶ್ವರ
ನಾದ ಯೆಹೋವನೆಂಬ ಕರ್ತನು ಇಂತೆನ್ನುತ್ತಾನೆ—
ಆಹಾ, ಸೊಕ್ಕಿನ ರಾಜ್ಯವೇ! ನಾನು ನಿನಗೆ ವಿರು
ದ್ಧನು; ನಿನಗೆ ಹೊತ್ತು ಬಂದಿದೆ, ನಿನ್ನನ್ನು ದಂಡಿಸ
32 ತಕ್ಕ ಕಾಲ ಸಂಭವಿಸಿದೆ. ಸೊಕ್ಕಿನ ರಾಜ್ಯವು ಎಡವಿ
ಬೀಳುವದು, ಅದನ್ನು ಯಾರೂ ಎತ್ತರು; ಅದರ ಪಟ್ಟಣ
ಗಳಿಗೆ ಬೆಂಕಿಹೊತ್ತಿಸುವೆನು, ಅದು ಸುತ್ತುಮುತ್ತಣವ
ನ್ನೆಲ್ಲಾ ನುಂಗಿಬಿಡುವದು.
33 ಸೇನಾಧೀಶ್ವರನಾದ ಯೆಹೋವನು ಇಂತೆನ್ನು
ತ್ತಾನೆ—ಇಸ್ರಾಯೇಲ್ಯರು ಯೆಹೂದ್ಯರು ಉಭಯ
ರೂ ಹಿಂಸೆಗೆ ಗುರಿಯಾಗಿದ್ದಾರೆ; ಅವರನ್ನು ಸೆರೆ ಒಯ್ದ
ವರೆಲ್ಲರೂ ಅವರನ್ನು ಬಿಡಿಸಲೊಲ್ಲದೆ ಬಿಗಿಹಿಡಿದಿ
ದ್ದಾರೆ. ಅವರ ರಕ್ಷಕನು ಬಲಿಷ್ಠ; ಸೇನಾಧೀಶ್ವ 34
ರನಾದ ಯೆಹೋವನೆಂಬದೇ ಆತನ ನಾಮಧೇಯ;
ಆತನು ಅವರ ವ್ಯಾಜ್ಯವನ್ನು ಜಯಿಸಿ ಲೋಕವನ್ನು
ವಿಶ್ರಾಂತಿಗೊಳಿಸಿ ಬಾಬೆಲಿನವರನ್ನು ಕಳವಳಪಡಿಸು
ವನು. ಯೆಹೋವನು ಇಂತೆನ್ನುತ್ತಾನೆ—ಖಡ್ಗವು 35
ಕಸ್ದೀಯರ ಮೇಲೆ ಬೀಳಲಿ! ಬಾಬೆಲಿನ ಸಾಮಾನ್ಯ
ಜನರು, ಪ್ರಧಾನರು, ಪಂಡಿತರು, ಇವರನ್ನೆಲ್ಲಾ ಹತಿ
ಸಲಿ! ಖಡ್ಗವು ಕೊಚ್ಚಿಕೊಳ್ಳುವವರನ್ನು ಇರಿಯಲಿ! 36
2)ಅವರ ಬುದ್ಧಿಹೀನತೆಯು ಬೈಲಿಗೆ ಬರುವದು. ಖಡ್ಗ
ವು ಬಾಬೆಲಿನ ಶೂರರನ್ನು ಸಂಹರಿಸಲಿ! ಅವರು ಬೆಬ್ಬರ
ಬೀಳುವರು. ಖಡ್ಗವು ಅವರ ಅಶ್ವಗಳನ್ನೂ ರಥಗ 37
ಳನ್ನೂ ಬಾಬೆಲಿನಲ್ಲಿರುವ ಬಗೆಬಗೆಯ ವಿದೇಶೀಯರ
ನ್ನೆಲ್ಲ ಹೊಡೆಯಲಿ! ಅವರು ಹೆಂಗಸರಂತೆ ಬೆದರುವರು,
ಖಡ್ಗವು ಅವರ ಸಂಪತ್ತನ್ನು ನುಂಗಲಿ! ಅವರು ಸೂರೆಗೆ
ಈಡಾಗುವರು. ಬೇಗೆಯು ಅವರ ನೀರನ್ನೆಲ್ಲಾ 38
ಹೀರಲಿ! ಅದು ಬತ್ತಿಹೋಗುವದು. ಅದು ಬೊಂಬೆ
ಗಳಿಂದ ತುಂಬಿದ ದೇಶ, ಅದರ ಜನರು ಅಕಟವಿಕಟ
ವಿಗ್ರಹಗಳ ಪೂಜೆಯಿಂದ ಮದವೇರಿಸಿಕೊಳ್ಳುತ್ತಾ
ರಷ್ಟೆ; ಆದಕಾರಣ ತೋಳ ಮುಂತಾದ ಕಾಡು 39
ಮೃಗಗಳು ಅಲ್ಲಿ ಹಕ್ಕೆಮಾಡಿಕೊಳ್ಳುವವು, ಉಷ್ಟ್ರ
ಪಕ್ಷಿಗಳು ತಂಗುವವು; ಅದು ಎಂದಿಗೂ ನಿವಾಸ
ಸ್ಥಳವಾಗದು, ತಲತಲಾಂತರಕ್ಕೂ ಅಲ್ಲಿ ಜನರು
ಒಕ್ಕಲಿರರು. ದೇವರು ಕೆಡವಿದ ಸೊದೋಮ್ 40
ಗೊಮೋರ ಪಟ್ಟಣಗಳಲ್ಲಿಯೂ ಸುತ್ತಣ ಊರುಗಳ
ಲ್ಲಿಯೂ ಹೇಗೋ ಹಾಗೆಯೇ ಬಾಬೆಲಿನಲ್ಲಿಯೂ
ಯಾರೂ ವಾಸಿಸರು, ಯಾವ ನರಪ್ರಾಣಿಯೂ ಇಳ
ಕೊಳ್ಳನು. ಆಹಾ, ಬಡಗಲಿಂದ ಒಂದು ಜನಾಂಗವು 41
ಬರುತ್ತದೆ, ಮಹಾ ಜನವೂ ಬಹು ಮಂದಿ ಅರಸರೂ
ಎಬ್ಬಿಸಲ್ಪಟ್ಟು ಲೋಕದ ಕಟ್ಟಕಡೆಯಿಂದ ಬರು
ತ್ತಾರೆ. ಬಿಲ್ಲನ್ನೂ ಈಟಿಯನ್ನೂ ಹಿಡಿದುಕೊಂಡಿ 42
ದ್ದಾರೆ, ಅವರು ಕ್ರೂರರು, ನಿಷ್ಕರುಣಿಗಳು; ಅವರ
ಧ್ವನಿಯು ಸಮುದ್ರದಂತೆ ಮೊರೆಯುತ್ತದೆ, ಕುದುರೆ
ಹತ್ತಿದ್ದಾರೆ; ಬಾಬೆಲ್ ನಗರಿಯೇ, ಆ ಸೈನ್ಯವು ಶೂರ
ನಂತೆ ನಿನ್ನ ಮೇಲೆ ಯುದ್ಧಸನ್ನದ್ಧವಾಗಿದೆ ಎಂದು
ಯೆಹೋವನು ಅನ್ನುತ್ತಾನೆ. ಬಾಬೆಲಿನ ಅರಸನು 43
ಅದರ ಸುದ್ದಿಯನ್ನು ಕೇಳಿದನು, ಅವನ ಕೈಗಳು
ಜೋಲುಬಿದ್ದವು, ಪ್ರಸವವೇದನೆಯಂತಿರುವ ಯಾತ
ನೆಯು ಅವನನ್ನು ಹಿಡಿದಿದೆ. ಆಹಾ, ಒಬ್ಬನು 44
ಸಿಂಹದೋಪಾದಿಯಲ್ಲಿ ಯೊರ್ದನಿನ ದಟ್ಟಡವಿ
ಯಿಂದ [ಕಸ್ದೀಯರಿಗೆ] ನಿತ್ಯನೆಲೆಯಾದ ಗೋಮಾ
ಳಕ್ಕೆ ಏರಿ ಬರುವನು; ಕ್ಷಣಮಾತ್ರದಲ್ಲಿ ನಾನು
ಅವರನ್ನು ಅಲ್ಲಿಂದ ಓಡಿಸಿಬಿಡುವೆನು; ನಾನು
ಆರಿಸಿಕೊಂಡವನನ್ನೇ ಅದನ್ನು ಕಾಯುವದಕ್ಕೆ
ನೇಮಿಸುವೆನು; ನನ್ನ ಸಮಾನನು ಯಾವನು?
ನನ್ನನ್ನು ನ್ಯಾಯವಿಚಾರಣೆಗೆ ಯಾವನು ಕರೆದಾನು?
ಮಂದೆಯನ್ನು ಕಾಯುವ ಯಾವನು ನನ್ನೆದುರಿಗೆ
ನಿಲ್ಲಬಲ್ಲನು? ಹೀಗಿರಲು ಯೆಹೋವನು ಬಾಬೆಲಿನ 45

1) ಈ ಅಂಕಿತನಾಮಗಳಿಗೆ ಅತಿದ್ರೋಹದ ದೇಶ, ದಂಡನೆಗೆ ಗುರಿಯಾದ ಸ್ಥಳ ಎಂಬರ್ಥ. 2) ಅಥವಾ: ಬುದ್ಧಿಗೆಡುವರು.

ವಿಷಯವಾಗಿ ಮಾಡಿಕೊಂಡಿರುವ ಆಲೋಚನೆ
ಯನ್ನೂ ಆತನು ಕಸ್ದೀಯರ ದೇಶವನ್ನು ಕುರಿತು
ಸಂಕಲ್ಪಿಸಿರುವ ಉದ್ದೇಶವನ್ನೂ ಆಲಿಸಿರಿ; [ಮೃಗ
ಗಳು] ಹಿಂಡಿನ ಮರಿಗಳನ್ನು ಖಂಡಿತವಾಗಿ ಎಳೆದು
ಕೊಂಡು ಹೋಗುವವು; ನಿಶ್ಚಯವಾಗಿ ಅವುಗಳ
ಹುಲ್ಗಾವಲು ಅವುಗಳ ನಾಶನಕ್ಕೆ ಬೆದರುವದು.
46 ಬಾಬೆಲು ಶತ್ರುವಶವಾಯಿತೆಂಬ ಕೋಲಾಹಲಕ್ಕೆ
ಭೂಮಿಯು ಕಂಪಿಸುತ್ತದೆ, ಅದರ ಮೊರೆಯು
ಜನಾಂಗಗಳಲ್ಲಿ ಕೇಳಿಸುತ್ತದೆ.

51 ಯೆಹೋವನು ಇಂತೆನ್ನುತ್ತಾನೆ— ಇಗೋ, ನಾನು
ಬಾಬೆಲಿನ ಮೇಲೂ 1)ಲೇಬ್‌ಕಾಮೈ ದೇಶದವರ
ಮೇಲೂ ನಾಶನದ ಗಾಳಿಯನ್ನು ಬೀಸಮಾಡುವೆನು.
2 2)ಅನ್ಯಜನರನ್ನು ಬಾಬೆಲಿಗೆ ಕಳುಹಿಸುವೆನು, ಅವರು
ಅದನ್ನು ತೂರುವರು, ಆ ದೇಶವನ್ನು ಬಟ್ಟಬರಿದು
ಮಾಡುವರು; ನಿಯಮಿತವಿಪತ್ಕಾಲದಲ್ಲಿ ಅದನ್ನು
3 ಮುತ್ತುವರಷ್ಟೆ. ಧನುರ್ಧಾರಿಗಳಿಗೂ ಕವಚಸನ್ನದ್ಧ
ರಿಗೂ ಬಿಲ್ಲುಗಾರರು ಬಾಣವನ್ನೆಸೆಯಲಿ. ಬಾಬೆಲಿನ
ಯುವಕರನ್ನು ಉಳಿಸದಿರಿ; ಅದರ ಸೈನ್ಯವನ್ನೆಲ್ಲಾ
4 ನಿಶ್ಶೇಷಮಾಡಿರಿ. ಕಸ್ದೀಯರು ತಮ್ಮ ದೇಶದಲ್ಲಿ
ಹತರಾಗಿ ಬೀಳುವರು, ಬಾಬೆಲಿನ ಬೀದಿಗಳಲ್ಲಿ ಇರಿ
5 ಯಲ್ಪಟ್ಟು ಮಣ್ಣುಪಾಲಾಗುವರು. ಇಸ್ರಾಯೇಲ್ಯರ
ಸದಮಲಸ್ವಾಮಿಗೆ ಆತನ ಜನರು ಮಾಡಿದ ಅಪ
ರಾಧವು ತಮ್ಮ ದೇಶದಲ್ಲಿ ತುಂಬಿದ್ದರೂ ಸೇನಾಧೀಶ್ವ
ರನಾದ ಯೆಹೋವನೆಂಬ ದೇವರು ಇಸ್ರಾಯೇಲನ್ನಾ
6 ಗಲಿ ಯೆಹೂದವನ್ನಾಗಲಿ ತ್ಯಜಿಸಲಿಲ್ಲ. ನೀವು ಬಾಬೆ
ಲಿನೊಳಗಿಂದ ಓಡಿಹೋಗಿ ನಿಮ್ಮ ನಿಮ್ಮ ಪ್ರಾಣ
ಗಳನ್ನು ಉಳಿಸಿಕೊಳ್ಳಿರಿ; ಅದಕ್ಕೆ ಉಂಟಾಗುವ ದಂಡ
ನೆಗೆ ಒಳಗಾಗಬೇಡಿರಿ; ಯೆಹೋವನು ಮುಯ್ಯಿ
ತೀರಿಸುವ ಕಾಲ ಬಂದಿದೆ; ಆತನು ಬಾಬೆಲಿಗೆ ಪ್ರತೀ
7 ಕಾರಮಾಡುವನು. ಬಾಬೆಲು ಯೆಹೋವನ ಕೈ
ಯಲ್ಲಿನ ಹೊನ್ನಿನ ಪಾತ್ರೆ; ಲೋಕದವರೆಲ್ಲರೂ
ಅದರಲ್ಲಿ ಕುಡಿದು ಮತ್ತರಾದರು; ಜನಾಂಗಗಳು
ಅದರಲ್ಲಿನ ದ್ರಾಕ್ಷಾರಸವನ್ನು ಕುಡಿದು ಹುಚ್ಚಾ
8 ದವು. ಬಾಬೇಲ್ ತಟ್ಟನೆ ಬಿದ್ದು ಹಾಳಾಯಿತು!
ಅದಕ್ಕಾಗಿ ಅರಚಿರಿ; ಅದರ ನೋವನ್ನು ನೀಗಿಸು
ವದಕ್ಕೆ ಔಷಧವನ್ನು ಸಂಪಾದಿಸಿರಿ, ಗುಣವಾದೀತು.
9 ಬಾಬೆಲನ್ನು ಸ್ವಸ್ಥಮಾಡುವದಕ್ಕೆ ನಾವು ಪ್ರಯತ್ನ
ಪಟ್ಟರೂ ಅದು ಸ್ವಸ್ಥವಾಗಲಿಲ್ಲ; ಬಾಬೆಲನ್ನು ಬಿಟ್ಟು
ನಾವೆಲ್ಲರೂ ನಮ್ಮ ನಮ್ಮ ದೇಶಗಳಿಗೆ ಹೋಗೋಣ;
ಅದು ಹೊಂದಬೇಕಾದ ದಂಡನೆಯು ಆಕಾಶವನ್ನು
ಮುಟ್ಟುವಷ್ಟು ದೊಡ್ಡದಾಗಿದೆ, ಹೌದು, ಗಗನದ
ವರೆಗೂ ಬೆಳೆದಿದೆ.
10 ಯೆಹೋವನು ನಮ್ಮ ನ್ಯಾಯವನ್ನು ವ್ಯಕ್ತ
ಪಡಿಸಿದ್ದಾನೆ; ನಮ್ಮ ದೇವರಾದ ಯೆಹೋವನು ನಡಿ
ಸಿದ ಕಾರ್ಯವನ್ನು ಚೀಯೋನಿನಲ್ಲಿ ಪ್ರಕಟಿಸೋಣ
11 ಬನ್ನಿರಿ! ಯೆಹೋವನು ಬಾಬೆಲನ್ನು ಹಾಳುಮಾಡ
ಬೇಕೆಂದು ಉದ್ದೇಶಿಸಿ ಮೇದ್ಯರ ಅರಸರು ಅದನ್ನು
ನಾಶಮಾಡುವಂತೆ ಅವರ ಮನಸ್ಸನ್ನು ಪ್ರೇರಿಸಿದ್ದಾನೆ
ಆ ನಾಶನವು ಯೆಹೋವನು ತನ್ನ ಆಲಯವನ್ನು
ಕೆಡವಿದವರಿಗೆ ಮಾಡಬೇಕೆಂದಿದ್ದ ಪ್ರತೀಕಾರವೇ
[ಮೇದ್ಯರೇ,] ಬಾಣಗಳನ್ನು ಮಸೆಯಿರಿ, ಸನ್ನದ್ಧ
ರಾಗಿರಿ! ಬಾಬೆಲ್ ಕೋಟೆಗೆ ಎದುರಾಗಿ ಧ್ವಜವೆತ್ತಿರಿ,
ಠಾಣ್ಯವನ್ನು ಬಲಪಡಿಸಿರಿ, ಕಾವಲುಗಾರರನ್ನು ನಿಲ್ಲಿ
ಸಿರಿ, ಹೊಂಚುಗಾರರನ್ನು ಗೊತ್ತುಮಾಡಿರಿ; ಯೆಹೋ
ವನು ಬಾಬೆಲಿನವರ ವಿಷಯದಲ್ಲಿ ನುಡಿದದ್ದನ್ನು
ಚಿತ್ತಕ್ಕೆ ತಂದು ನೆರವೇರಿಸಿದ್ದಾನೆ. ಆಹಾ, ಬಹುಜಲ
ಮಧ್ಯನಿವಾಸಿನಿಯಾದ ನಗರಿಯೇ, ಧನಭರಿತಪುರಿ
ಯೇ, ನಿನ್ನ ಅಂತ್ಯವು ಬಂದಿದೆ, 3)ನೀನು ಸೂರೆಮಾ
ಡಿದ್ದು ಸಾಕು. ಸೇನಾಧೀಶ್ವರನಾದ ಯೆಹೋವನು
ತನ್ನ ಮೇಲೆ ಆಣೆಯಿಟ್ಟು— ಖಂಡಿತವಾಗಿ ನಾನು
ನಿನ್ನನ್ನು ಮಿಡಿತೆಗಳಷ್ಟು ಅಸಂಖ್ಯಜನರಿಂದ ತುಂಬಿ
ಸುವೆನು, ಅವರು ನಿನ್ನ ಮೇಲೆ ಆರ್ಭಟಿಸುವರು.
ಆತನು ತನ್ನ ಶಕ್ತಿಯಿಂದ ಭೂಮಿಯನ್ನು ನಿರ್ಮಿಸಿ
ತನ್ನ ಜ್ಞಾನದಿಂದ ಲೋಕವನ್ನು ಸ್ಥಾಪಿಸಿ ತನ್ನ ವಿವೇ
ಕದಿಂದ ಆಕಾಶಮಂಡಲವನ್ನು ಹರಡಿದ್ದಾನೆ; ಆತನ
ಗರ್ಜನೆಗೆ ಆಕಾಶದಲ್ಲಿ ನೀರು ಮೊರೋ ಎನ್ನುತ್ತದೆ;
ಆತನು ಭೂಮಿಯ ಕಟ್ಟಕಡೆಯಿಂದ ಮೋಡಗಳನ್ನು
ಏರಮಾಡುತ್ತಾನೆ; ಮಳೆಗೋಸ್ಕರ ಮಿಂಚನ್ನು ಹೊಳೆ
ಯಮಾಡುತ್ತಾನೆ; ತನ್ನ ಭಂಡಾರದಿಂದ ಗಾಳಿಯನ್ನು
ಬೀಸಮಾಡುತ್ತಾನೆ. ಎಲ್ಲರೂ ತಿಳುವಳಿಕೆಯಿಲ್ಲದೆ
ಪಶುಪ್ರಾಯರಾಗಿದ್ದಾರೆ; ತಾನು ಕೆತ್ತಿದ ವಿಗ್ರಹದ
ನಿಮಿತ್ತ ಪ್ರತಿಯೊಬ್ಬ ಅಕ್ಕಸಾಲಿಗನೂ ಅವಮಾನಕ್ಕೆ
ಗುರಿಯಾಗುವನು; ಅವನು ಎರಕಹೊಯ್ದ ಪುತ್ತ
ಳಿಯು ಸುಳ್ಳು, ಅವುಗಳಲ್ಲಿ ಶ್ವಾಸವೇ ಇಲ್ಲ. ಅವು
ವ್ಯರ್ಥ, ಹಾಸ್ಯಾಸ್ಪದವಾದ ಕೆಲಸ; ದಂಡನೆಯಾಗು
ವಾಗ ಅಳಿದುಹೋಗುವವು. ಯಾಕೋಬ್ಯರ ಸ್ವಾಸ್ತ್ಯ
ವಾದಾತನು ಅವುಗಳ ಹಾಗಲ್ಲ; ಆತನು ಸಮಸ್ತ
ವನ್ನೂ ನಿರ್ಮಿಸಿದವನು; ಇಸ್ರಾಯೇಲು ಆತನ
ಸ್ವಾಸ್ತ್ಯವಾದ ವಂಶ; ಸೇನಾಧೀಶ್ವರನಾದ ಯೆಹೋ
ವನೆಂಬದು ಆತನ ನಾಮಧೇಯ.
[ಬಾಬೆಲೇ,] ನೀನು ನನಗೆ ಗದೆಯು, ಶಸ್ತ್ರವು,
ನಾನು ನಿನ್ನಿಂದ ಜನಾಂಗಗಳನ್ನು ಒಡೆದುಬಿಡುತ್ತೇನೆ;
ನಿನ್ನಿಂದ ರಾಜ್ಯಗಳನ್ನು ಅಳಿಸುತ್ತೇನೆ; ನಿನ್ನಿಂದ ಕುದು
ರೆಯನ್ನೂ ಸವಾರನನ್ನೂ ಒಡೆದುಬಿಡುತ್ತೇನೆ; ನಿನ್ನಿಂದ
ರಥವನ್ನೂ ಸಾರಥಿಯನ್ನೂ ಒಡೆದುಬಿಡುತ್ತೇನೆ;
ನಿನ್ನಿಂದ ಸ್ತ್ರೀಪುರುಷರನ್ನು ಒಡೆದುಬಿಡುತ್ತೇನೆ; ನಿನ್ನಿಂದ
ಬಾಲವೃದ್ಧರನ್ನು ಒಡೆದುಬಿಡುತ್ತೇನೆ; ನಿನ್ನಿಂದ ಯುವ
ತೀ ಯುವಕರನ್ನು ಒಡೆದುಬಿಡುತ್ತೇನೆ; ನಿನ್ನಿಂದ ಕುರು
ಬನನ್ನೂ ಹಿಂಡನ್ನೂ ಒಡೆದುಬಿಡುತ್ತೇನೆ; ನಿನ್ನಿಂದ ರೈತ
ನನ್ನೂ ನೊಗದ ಎತ್ತುಗಳನ್ನೂ ಒಡೆದುಬಿಡುತ್ತೇನೆ;
ನಿನ್ನಿಂದ ದೇಶಾಧಿಪತಿಗಳನ್ನೂ ನಾಡೊಡೆಯರನ್ನೂ ಒಡೆ
ದುಬಿಡುತ್ತೇನೆ; ಆದರೆ ಬಾಬೆಲಿನವರೂ ಕಸ್ದೀಯರೂ
ಚೀಯೋನಿನಲ್ಲಿ ಮಾಡಿದ ಎಲ್ಲಾ ಹಾನಿಗೆ ಪ್ರತಿಯಾಗಿ

1) ಅಂದರೆ ಕಸ್ದೀಯ. 2) ಪಾಠಾಂತರ: ತೂರಬಲ್ಲವರನ್ನು. 3) ಅಥವಾ: ನಿನ್ನ ಆಯುಷ್ಯವೆಂಬ ಹಾಸಿನ ಉ
ಸಾಕು, ಕತ್ತರಿಸಬೇಕು.

ನಾನು ಅವರೆಲ್ಲರಿಗೂ ಚೀಯೋನಿನವರ ಕಣ್ಣೆದುರಿಗೆ
ಮುಯ್ಯಿತೀರಿಸುವೆನು ಎಂದು ಯೆಹೋವನು ಅನ್ನು
ತ್ತಾನೆ.
25 ಯೆಹೋವನು ಇಂತೆನ್ನುತ್ತಾನೆ—ಆಹಾ, ಲೋಕ
ವನ್ನೆಲ್ಲಾ ಹಾಳುಮಾಡುವ ನಾಶಕಪರ್ವತವೇ, ನಾನು
ನಿನಗೆ ವಿರುದ್ಧನಾಗಿದ್ದೇನೆ; ನಾನು ನಿನ್ನ ಮೇಲೆ
ಕೈಮಾಡಿ ನಿನ್ನನ್ನು ಜರಿಯ ಮೇಲಿಂದ ಕೆಳಕ್ಕೆ ಉರು
ಳಿಸುವೆನು, ಸುಟ್ಟ ಬೆಟ್ಟವನ್ನಾಗಿ ಮಾಡುವೆನು.
26 ಮೂಲೆಗಲ್ಲಿಗಾಗಲಿ ಅಸ್ತಿವಾರಕ್ಕಾಗಲಿ ಯಾರೂ
ನಿನ್ನಿಂದ ಕಲ್ಲನ್ನು ತೆಗೆಯರು, ನೀನು ನಿತ್ಯನಾಶನಕ್ಕೆ
27 ಗುರಿಯಾಗುವಿ. ಇದು ಯೆಹೋವನ ನುಡಿ. ದೇಶ
ದಲ್ಲಿ ಧ್ವಜವೆತ್ತಿರಿ, ರಾಜ್ಯಗಳಲ್ಲೆಲ್ಲಾ ಕೊಂಬೂದಿರಿ,
ಜನಾಂಗಗಳನ್ನು ಸನ್ನಾಹಮಾಡಿರಿ, ಬಾಬೆಲಿನ ಮೇಲೆ
ಬೀಳಲಿಕ್ಕೆ ಅರರಾಟ್, ಮಿನ್ನಿ, ಅಷ್ಕೆನಜ್ ಎಂಬ ರಾಷ್ಟ್ರ
ಗಳನ್ನು ಕರೆದುಕೊಳ್ಳಿರಿ, ಸೋಲಿಸಲು 1)ಸೇನಾಪತಿ
ಯನ್ನು ನೇಮಿಸಿರಿ, ಅಶ್ವಬಲವನ್ನು ಬಿರಸಾದ ಮಿಡಿತೆ
28 ದಂಡಿನೋಪಾದಿಯಲ್ಲಿ ಬರಮಾಡಿರಿ. ಜನಾಂಗ
ಗಳು, ಮೇದ್ಯರ ಅರಸರು, ಅಧಿಪತಿಗಳು, ಅಧಿಕಾರಿ
ಗಳು, ಅವರ ಅಧೀನದಲ್ಲಿರುವ ಸಂಪೂರ್ಣ ದೇಶ
ದವರು, ಇವರೆಲ್ಲರನ್ನೂ ಅದಕ್ಕೆ ವಿರುದ್ಧವಾಗಿ ಸನ್ನಾಹ
29 ಮಾಡಿರಿ. ದೇಶವೆಲ್ಲಾ ನೊಂದು ನಡುಗುತ್ತದೆ;
ಏಕಂದರೆ ಬಾಬೆಲ್ ದೇಶವು ಹಾಳುಬಿದ್ದು ನಿರ್ಜನ
ವಾಗಲಿ ಎಂದು ಯೆಹೋವನು ಅದರ ವಿಷಯವಾಗಿ
30 ಮಾಡಿಕೊಂಡಿರುವ ಸಂಕಲ್ಪಗಳು ಸ್ಥಿರವಾಗಿವೆ. ಬಾಬೆ
ಲಿನ ಶೂರರು ಯುದ್ಧಕ್ಕೆ ಹಿಂದೆಗೆದು ಹೆಂಗಸರಂತೆ
ಅಬಲರಾಗಿ ತಮ್ಮ ಕೋಟೆಗಳಲ್ಲಿ ನಿಂತಿದ್ದಾರೆ; ಅದರ
ಮನೆಗಳಿಗೆ ಬೆಂಕಿಯಿಕ್ಕಿದೆ, ಅದರ ಅಗುಳಿಗಳು
31 ಮುರಿದುಹೋಗಿವೆ. ಓಡಾಳುಗಳೂ ದೂತರೂ ಓಡಿ
ಓಡಿ ಒಬ್ಬರಿಗೊಬ್ಬರು ಎದುರುಬದುರಾಗಿ ಅರಸನನ್ನು
ಸೇರಿ ಅವನಿಗೆ—ರಾಜಧಾನಿಯನ್ನು ಎಲ್ಲಾ ಕಡೆಯ
32 ಲ್ಲಿಯೂ ಆಕ್ರಮಿಸಿದ್ದಾರೆ, ಹಾಯ್ಗಡಗಳನ್ನು ಹಿಡಿ
ದಿದ್ದಾರೆ, 2)ಜೊಂಡು ಹುಲ್ಲನ್ನು ಸುಟ್ಟುಬಿಟ್ಟಿದ್ದಾರೆ,
ರಣವೀರರು ಬೆಚ್ಚಿಬಿದ್ದಿದ್ದಾರೆ ಎಂದು ತಿಳಿಸುವರು.
33 ಇಸ್ರಾಯೇಲ್ಯರ ದೇವರೂ ಸೇನಾಧೀಶ್ವರನೂ ಆದ
ಯೆಹೋವನು ಇಂತೆನ್ನುತ್ತಾನೆ—ಬಾಬೆಲ್ ಪುರಿಯು
ತುಳಿದು ತುಳಿದು ಸರಿಮಾಡುತ್ತಿರುವ ಕಣದಂತಿದೆ;
ಸ್ವಲ್ಪ ಕಾಲವಾದಮೇಲೆ 3)ಒಕ್ಕುವ ಸಮಯವು ಅದಕ್ಕೆ
ಸಂಭವಿಸುವದು.
34 [ಯೆಹೂದವು ಹೀಗೆ ಪ್ರಲಾಪಿಸುತ್ತದೆ]—ಬಾಬೆಲಿನ
ಅರಸನಾದ ನೆಬೂಕದ್ನೆಚ್ಚರನು ನನ್ನನ್ನು ತಿಂದುಹಾಕಿ
ದ್ದಾನೆ, ಒಡೆದುಬಿಟ್ಟಿದ್ದಾನೆ, ಬರೀಪಾತ್ರೆಯನ್ನಾಗಿ ಕುಕ್ಕಿ
ದ್ದಾನೆ, ಘಟಸರ್ಪದ ಹಾಗೆ ನನ್ನನ್ನು ನುಂಗಿದ್ದಾನೆ,
ನನ್ನ ರುಚಿಪದಾರ್ಥಗಳಿಂದ ಹೊಟ್ಟೆತುಂಬಿಸಿಕೊಂಡಿ
ದ್ದಾನೆ, ನನ್ನನ್ನು [ಗಂಗಾಳದಂತೆ] ತೊಳೆದುಬಿಟ್ಟಿದ್ದಾನೆ.
35 ನಮ್ಮ ಪ್ರಾಣವನ್ನು ಹಿಂಸಿಸಿದ ದೋಷ ಬಾಬೆಲಿಗೆ
ತಟ್ಟಲಿ ಎಂದು ಚೀಯೋನಿನವರು ಅನ್ನುತ್ತಾರೆ, ನಮ್ಮ
ರಕ್ತವನ್ನು ಸುರಿಸಿದ ಅಪರಾಧವು ಕಸ್ದೀಯರಿಗೆ ಬಡಿ
ಯಲಿ ಎಂದು ಯೆರೂಸಲೇಮಿನವರು ಹೇಳುತ್ತಾರೆ.
ಆದದರಿಂದ ಯೆಹೋವನು ಇಂತೆನ್ನುತ್ತಾನೆ—ಆಹಾ, 36
ನಾನು ನಿನ್ನ ಪಕ್ಷವಾಗಿ ವ್ಯಾಜ್ಯವಾಡಿ ನಿನ್ನನ್ನು ಹಿಂಸಿ
ಸಿದ ರಾಜ್ಯಕ್ಕೆ ಮುಯ್ಯಿತೀರಿಸುವೆನು; ಅದರ
4)ಸರೋವರವು ಬತ್ತುವಂತೆಯೂ ಅದರ ಪ್ರವಾಹವು
ಒಣಗುವಂತೆಯೂ ಮಾಡುವೆನು. ಆಗ ಬಾಬೆಲು 37
ಹಾಳುದಿಬ್ಬಗಳೂ ನರಿಗಳ ಹಕ್ಕೆಯೂ ಆಗಿರುವದು;
ಅದು ನಿರ್ಜನವಾಗಿ ಬೆರಗಿನ ಸಿಳ್ಳಿಗೆ ಗುರಿಯಾಗು
ವದು. ಆ ದೇಶದವರು ಪ್ರಾಯದ ಸಿಂಹಗಳಂತೆ 38
ಒಟ್ಟಿಗೆ ಗರ್ಜಿಸುತ್ತಿದ್ದಾರೆ, ಸಿಂಹದ ಮರಿಗಳ ಹಾಗೆ
ಗುರುಗುಟ್ಟುತ್ತಿದ್ದಾರೆ. ಅವರು ಉರಿಗೊಂಡಿರುವಾಗ 39
ನಾನು ಅವರಿಗೆ ಔತಣವನ್ನು ಸಿದ್ಧಪಡಿಸಿ ಅವರು
ಅದರಿಂದ 5)ಸಂಭ್ರಮಪಟ್ಟು ಎಂದಿಗೂ ಎಚ್ಚರಗೊ
ಳ್ಳದೆ ದೀರ್ಘನಿದ್ರೆಮಾಡುವಂತೆ ತಲೆಗೇರ ಕುಡಿಸು
ವೆನು. ಇದು ಯೆಹೋವನ ನುಡಿ. ನಾನು ಅವರನ್ನು 40
ಕುರಿಟಗರುಹೋತಗಳ ಹಾಗೆ ವಧ್ಯಸ್ಥಾನಕ್ಕೆ ಬರಮಾ
ಡುವೆನು. ಆಹಾ, 6)ಶೇಷಕ್ ಶತ್ರುವಶವಾಯಿತು, 41
ಲೋಕಪ್ರಸಿದ್ಧವಾದ ಪಟ್ಟಣವು ಹಿಡಿಯಲ್ಪಟ್ಟಿದೆ,
ಬಾಬೆಲು ಜನಾಂಗಗಳ ಬೆರಗಿಗೆ ಈಡಾಗಿದೆ! ಸಮುದ್ರವು 42
ಬಾಬೆಲಿನ ಮೇಲೆ ನುಗ್ಗಿದೆ, ಲೆಕ್ಕವಿಲ್ಲದ ತೆರೆಗಳು ಆ
ರಾಜ್ಯವನ್ನು ಮುಚ್ಚಿಬಿಟ್ಟಿವೆ. ಅದರ ಪಟ್ಟಣಗಳು 43
ಕಾಡು, ಕಗ್ಗಾಡು, ಬೆಗ್ಗಾಡೂ ಆಗಿವೆ, ಆ ದೇಶದಲ್ಲಿ
ಯಾರೂ ವಾಸಿಸರು, ಯಾವ ಮನುಷ್ಯನೂ ಹಾದು
ಹೋಗನು. ನಾನು ಬಾಬೆಲಿನಲ್ಲಿ ಬೇಲ್ ದೇವತೆ 44
ಯನ್ನು ದಂಡಿಸಿ ಅದು ನುಂಗಿದ್ದನ್ನು ಅದರ ಬಾಯೊಳ
ಗಿಂದ ಕಕ್ಕಿಸುವೆನು; ಪ್ರವಾಹಪ್ರವಾಹವಾಗಿ ಬಾಬೆಲಿಗೆ
ಬರುತ್ತಿದ್ದ ಸಕಲದೇಶೀಯರು ಇನ್ನು ಮೇಲೆ ಬಾರರು;
ಇದಲ್ಲದೆ ಬಾಬೆಲಿನ ಪೌಳಿಗೋಡೆಯು ಬಿದ್ದುಹೋಗು
ವದು.

ನನ್ನ ಜನರೇ, ನೀವೆಲ್ಲರೂ ಬಾಬೆಲಿನೊಳಗಿಂದ 45
ಹೊರಟು ಯೆಹೋವನ ರೋಷಾಗ್ನಿಯಿಂದ ತಪ್ಪಿಸಿ
ಕೊಳ್ಳಿರಿ. ನಿಮ್ಮ ಎದೆಯು ಕುಂದದಿರಲಿ, ದೇಶದಲ್ಲಿ 46
ಕಿವಿಗೆ ಬೀಳುವ ಸುದ್ದಿಯು ನಿಮ್ಮನ್ನು ಹೆದರಿಸದಿರಲಿ;
ಒಂದು ವರುಷ ಒಂದು ಸುದ್ದಿಯು, ಮತ್ತೊಂದು
ವರುಷ ಮತ್ತೊಂದು ಸುದ್ದಿಯು ಹರಡುತ್ತಿರುವವು;
ಬಲಾತ್ಕಾರವು ದೇಶದಲ್ಲಿ ಪ್ರಬಲವಾಗುವದು, ಅಧಿ
ಕಾರಿಯು ಅಧಿಕಾರಿಗೆ ವಿರೋಧಿಯಾಗುವನು. ಇದ 47
ರಿಂದ ನಾನು ಬಾಬೆಲಿನ ಬೊಂಬೆಗಳನ್ನು ದಂಡಿಸುವ
ದಿನಗಳು ಬರುತ್ತಿವೆ ಎಂದು ತಿಳಿದುಕೊಳ್ಳಿರಿ. ಆ ದೇಶ
ವೆಲ್ಲಾ ನಾಚಿಕೆಪಡುವದು; ಅದರ ಪ್ರಜೆಗಳು ಅದರೊ
ಳಗೆ ಹತರಾಗಿ ಬೀಳುವರು. ಆಗ ಭೂಮ್ಯಾಕಾಶಗಳೂ 48
ಅಲ್ಲಿನ ಸಮಸ್ತವೂ ಬಾಬೆಲಿನ ನಾಶನವನ್ನು ನೋಡಿ
ಹರ್ಷಧ್ವನಿಗೈಯುವವು; ಏಕಂದರೆ ಹಾಳುಮಾಡುವ
ವರು ಬಡಗಲಿಂದ ಬಂದು ಅದರ ಮೇಲೆ ಬೀಳುವರು;
ಇದು ಯೆಹೋವನ ನುಡಿ. ಹತರಾದ ಇಸ್ರಾಯೇ 49

1) ಅಥವಾ: ಸೈನ್ಯವನ್ನು; ಪದದ ಅರ್ಥವು ಅಸ್ಪಷ್ಟ. 2) ಅಥವಾ: ಕೊಳಗಳನ್ನು; ಮೂಲವು ಅಸ್ಪಷ್ಟ. 3) ಮೂಲ: ಸುಗ್ಗಿಯ ಸಮಯವು. 4) ಅಥವಾ: ಮಹಾನದಿ; ಮೂಲ: ಸಮುದ್ರ. 5) ಪಾಠಾಂತರ: ಮಂಕುಮಂಕಾಗಿ. 6) ಅಂದರೆ: ಬಾಬೆಲ್.

ಲ್ಯರೇ, ಬಾಬೆಲಿನ ಹಿತಕ್ಕಾಗಿ ಲೋಕದಲ್ಲೆಲ್ಲಾ ಬಹು
ಜನರು ಹೇಗೆ ಹತರಾದರೋ ಹಾಗೆಯೇ ಬಾಬೆಲೂ
50 ಹತವಾಗುವದು. ಖಡ್ಗಕ್ಕೆ ತಪ್ಪಿಸಿಕೊಂಡವರೇ, ಸುಮ್ಮ
ನೆ ನಿಂತುಕೊಳ್ಳದೆ ನಡೆಯಿರಿ; ದೂರದಲ್ಲಿಯೂ
ಯೆಹೋವನನ್ನು ಸ್ಮರಿಸಿರಿ; ಯೆರೂಸಲೇಮಿನ ಹಂಬ
ಲು ನಿಮ್ಮ ಮನಸ್ಸಿನಲ್ಲಿ ಹುಟ್ಟಲಿ.
51 ನಾವು ನಿಂದೆಯನ್ನು ಕೇಳಿ ನಾಚಿಕೆಗೊಂಡೆವು,
ಯೆಹೋವನ ಆಲಯದ ಪವಿತ್ರಸ್ಥಾನಗಳನ್ನು ಮ್ಲೇ
ಚ್ಛರು ಪ್ರವೇಶಿಸಿದ್ದರಿಂದ ಅವಮಾನವು ನಮ್ಮ ಮುಖ
ವನ್ನು ಮುಚ್ಚಿಕೊಂಡಿದೆ [ಎಂಬದಾಗಿ ಅಂದುಕೊಳ್ಳು
52 ತ್ತಿರೋ?] ಹೀಗಿರಲು ಯೆಹೋವನು ಇಂತೆನ್ನು
ತ್ತಾನೆ— ಇಗೋ, ನಾನು ಬಾಬೆಲಿನ ಬೊಂಬೆಗಳನ್ನು
ದಂಡಿಸುವ ದಿನಗಳು ಬರುತ್ತವೆ; ಆಗ ಆ ದೇಶದ
53 ಲ್ಲೆಲ್ಲಾ ಗಾಯಪಟ್ಟವರು ನರಳಾಡುವರು. ಬಾಬೆಲು
ಆಕಾಶದ ತನಕ ಬೆಳೆದು ಎತ್ತರವಾಗಿಯೂ ಬಲ
ವಾಗಿಯೂ ಇರುವ ತನ್ನ ಕೋಟೆಕೊತ್ತಲಗಳನ್ನು
ಭದ್ರಪಡಿಸಿದರೂ ಹಾಳುಮಾಡುವವರು ನನ್ನ ಅಪ್ಪ
ಣೆಯಿಂದ ಅವರ ಮೇಲೆ ಬೀಳುವರು. ಇದು
54 ಯೆಹೋವನ ನುಡಿ. ಆಹಾ, ಬಾಬೆಲಿನಿಂದ ಮೊರೆ
ಯೂ ಕಸ್ದೀಯರ ದೇಶದಿಂದ ಮಹಾನಾಶನದ
55 ಶಬ್ದವೂ ಕೇಳಬರುತ್ತವೆ! ಯೆಹೋವನು ಬಾಬೆಲನ್ನು
ಹಾಳುಮಾಡುತ್ತಿದ್ದಾನಲ್ಲಾ, ಅದರ ಬಲುಗದ್ದಲ
ವನ್ನು ಅಣಗಿಸಿಬಿಡುತ್ತಾನೆ; ಮಹಾಜಲಪ್ರವಾಹಗಳು
ಭೋರ್ಗರೆಯುವಂತೆ ತರಂಗತರಂಗವಾಗಿ ಬಂದ ಶತ್ರು
ಗಳು ಘೋಷಿಸುತ್ತಾರೆ. ಕೂಗಿ ಆರ್ಬಟಿಸುತ್ತಾರೆ;
56 ಹಾಳುಮಾಡುವವನು ಬಾಬೆಲಿನ ಮೇಲೆ ಬಿದ್ದಿದ್ದಾನೆ,
ಅದರ ಶೂರರು ಸೆರೆಯಾಗಿದ್ದಾರೆ, ಅವರ ಬಿಲ್ಲುಗಳು
ಮುರಿದುಹೋಗಿವೆ; ಏಕಂದರೆ ಯೆಹೋವನು ಮು
ಯ್ಯಿತೀರಿಸುವ ದೇವರು, ಆತನು ಪ್ರತಿಕ್ರಿಯೆಮಾಡದೆ
57 ಬಿಡನು. ನಾನು ಅದರ ಪ್ರಧಾನರು, ಮಂತ್ರಿಗಳು,
ಅಧಿಪತಿಗಳು, ಅಧಿಕಾರಿಗಳು, ಬಲಿಷ್ಠರು, ಇವರೆಲ್ಲ
ರಿಗೂ ತಲೆಗೇರ ಕುಡಿಸುವೆನು; ಅವರು ಎಂದಿಗೂ
ಎಚ್ಚರಗೊಳ್ಳದೆ ದೀರ್ಘನಿದ್ರೆಮಾಡುವರು ಎಂದು
ಸೇನಾಧೀಶ್ವರನಾದ ಯೆಹೋವನಾಮಧೇಯದ ರಾ
58 ಜಾಧಿರಾಜನು ಅನ್ನುತ್ತಾನೆ. ಸೇನಾಧೀಶ್ವರನಾದ ಯೆ
ಹೋವನು ಹೀಗೆ ನುಡಿಯುತ್ತಾನೆ— ಬಾಬೆಲಿನ
ಗಾತ್ರವಾದ ಪೌಳಿಗೋಡೆಯು ಸಂಪೂರ್ಣವಾಗಿ ನೆಲ
ಸಮವಾಗುವದು, ಅದರ ಉನ್ನತದ್ವಾರಗಳು ಬೆಂಕಿ
ಯಿಂದ ಸುಟ್ಟುಹೋಗುವವು; ಜನಾಂಗಗಳು ಪಟ್ಟ
ಪರಿಶ್ರಮ ವ್ಯರ್ಥ, ಜನಗಳು ಆಯಾಸಗೊಂಡು
ದುಡಿದದ್ದು ಬೆಂಕಿಗೆ ತುತ್ತಾಗುವದು.

ಬಾಬೆಲಿನ ನಾಶನವನ್ನು ಮುಂತಿಳಿಸುವ ಸೂಚಕಕಾರ್ಯ.

59 ಮಹ್ಸೇಯನ ಮೊಮ್ಮಗನೂ ನೇರೀಯನ ಮಗನೂ
ಆದ ಸೆರಾಯನು ಯೆಹೂದದ ಅರಸನಾದ ಚಿದ್ಕೀ
ಯನ ಆಳಿಕೆಯ ನಾಲ್ಕನೆಯ ವರುಷ ಚಿದ್ಕೀಯ
ನೊಡನೆ ಬಾಬೆಲಿಗೆ ಪ್ರಯಾಣಮಾಡಿದಾಗ ಪ್ರವಾದಿ
ಯಾದ ಯೆರೆಮೀಯನು ಅವನಿಗೆ ಕೊಟ್ಟ ಅಪ್ಪಣೆ
(ಸೆರಾಯನು ಯಾರಂದರೆ ಸರಬರಾಯಿ ಕಾರುಬಾರಿ.)
ಯೆರೆಮೀಯನು ಬಾಬೆಲಿಗೆ ಸಂಭವಿಸತಕ್ಕ ಎಲ್ಲ
ಕೇಡಿನ ವಿಷಯವನ್ನು (ಅಂದರೆ ಬಾಬೆಲಿನ ಸಂಬಂಧ
ವಾಗಿ ಹಿಂದೆ ಲಿಖಿತವಾದ ಎಲ್ಲಾ ಸಂಗತಿಗಳನ್ನು
ಒಂದು ಗ್ರಂಥವನ್ನಾಗಿ ಬರೆದು ಸೆರಾಯನಿಗೆ ಹೀ
ಹೇಳಿದನು — ನೋಡು, ನೀನು ಬಾಬೆಲಿಗೆ ಸೇರಿ
ಮೇಲೆ ಈ ಮಾತುಗಳನ್ನೆಲ್ಲಾ [ತಕ್ಕವರಿಗೆ] ಓ
ಹೇಳಿ—ಯೆಹೋವನೇ, ನೀನು ಈ ಸ್ಥಳವನ್ನು
ನಿರ್ಮೂಲಮಾಡಬೇಕೆಂದು ಉದ್ದೇಶಿಸಿ ಇದು ಜ
ರಿಗೂ ಪಶುಗಳಿಗೂ ನೆಲೆಯಾಗದೆ ಸದಾ ಹಾಳ
ಗಿಯೇ ಇರಲಿ ಎಂದು ನುಡಿದಿದ್ದೀಯಲ್ಲಾ ಎಂಬದಾ
ಅರಿಕೆಮಾಡಬೇಕು. ನೀನು ಈ ಪುಸ್ತಕವನ್ನು ಓ
ಮುಗಿಸಿದ ಮೇಲೆ ಇದಕ್ಕೆ ಕಲ್ಲುಕಟ್ಟಿ ಯೂಫ್ರ
ಟೀಸ್ ನದಿಯ ಮಧ್ಯದೊಳಗೆ ಹಾಕಿ 1)ಯೆಹೋ
ವನು ಬಾಬೆಲಿಗೆ ಬರಮಾಡುವ ವಿಪತ್ತಿನಿಂದ
ಪಟ್ಟಣವೂ ಹೀಗೆಯೇ ಮುಣುಗುವದು, ಮತ್ತೆ ಏಳದ
ಎಂದು ಹೇಳು.

ಜನಗಳು ಆಯಾಸಗೊಂಡು ದುಡಿದದ್ದು [ಬೆಂಕಿ
ತುತ್ತಾಗುವದು] ಎಂಬ ಮಾತಿನ ವರೆಗೇ ಯೆ
ಮೀಯನ ಪ್ರವಾದನೆ.

ಕಸ್ದೀಯರು ಯೆರೂಸಲೇಮನ್ನು ಆಕ್ರಮಿಸಿ ಸೂರೆಮಾಡಿದ್ದು

ಚಿದ್ಕೀಯನು ಅರಸನಾದಾಗ ಇಪ್ಪತ್ತೊಂದು
ವರುಷದವನಾಗಿದ್ದನು; ಇವನು ಯೆರೂಸಲೇಮಿ
ನಲ್ಲಿ ಹನ್ನೊಂದು ವರುಷ ಆಳಿದನು. ಲಿಬ್ನದ ಯೆ
ಮೀಯನ ಮಗಳು ಆದ ಹಮೂಟಲ್ ಎಂಬ
ಕೆಯು ಅವನ ತಾಯಿ. ಇವನು ಯೆಹೋಯಾಕಿ
ಮನಂತೆ ಯೆಹೋವನ ಚಿತ್ತಕ್ಕೆ ವಿರುದ್ಧವಾಗಿ ನ
ದನು. ಯೆಹೋವನು ಯೆರೂಸಲೇಮಿನವರ ಮೇ
ಯೂ ಬೇರೆ ಎಲ್ಲಾ ಯೆಹೂದ್ಯರ ಮೇಲೆಯೂ ಇ
ನ್ನೆಲ್ಲಾ ಬರಮಾಡಿ ಕಡೆಯಲ್ಲಿ ಅವರನ್ನು ತನ್ನ ಸನ್ನಿ
ಯಿಂದ ತಳ್ಳಿಬಿಡುವಷ್ಟು ರೋಷವುಳ್ಳವನಾದನು
ಚಿದ್ಕೀಯನು ಬಾಬೆಲಿನ ಅರಸನಾದ ನೆಬೂಕದ್ನೆಚ್ಚ
ನಿಗೆ ವಿರುದ್ಧವಾಗಿ ತಿರುಗಿಬಿದ್ದದರಿಂದ ಅವನ
ಚಿದ್ಕೀಯನ ಆಳಿಕೆಯ ಒಂಭತ್ತನೆಯ ವರುಷ ಹತ್ತ
ನೆಯ ತಿಂಗಳಿನ ಹತ್ತನೆಯ ದಿನದಲ್ಲಿ ಸರ್ವಸೈನ್ಯ
ಸಹಿತನಾಗಿ ಯೆರೂಸಲೇಮಿಗೆ ಬಂದು ಅಲ್ಲಿ ಪಾಳೆಯ
ಮಾಡಿಕೊಂಡು ಅದರ ಸುತ್ತಲು ಮಣ್ಣಿನ ದಿಬ್ಬವನ್ನು
ಮಾಡಿ ಚಿದ್ಕೀಯನ ಆಳಿಕೆಯ ಹನ್ನೊಂದನೆಯ
ವರುಷದ ವರೆಗೆ ಅದಕ್ಕೆ ಮುತ್ತಿಗೆಹಾಕಿದನು
ಘೋರಕ್ಷಾಮದ ದೆಸೆಯಿಂದ ಪಟ್ಟಣದಲ್ಲಿರುವ
ರಿಗೆ ಆಹಾರ ಸಿಕ್ಕದೆಹೋಯಿತು. ಪಟ್ಟಣಕ್ಕೆ ಮುತ್ತಿ
ಗೆಹಾಕಿದ್ದ ಕಸ್ದೀಯರು ಹನ್ನೊಂದನೆಯ ವರ
ಷದ ನಾಲ್ಕನೆಯ ತಿಂಗಳಿನ ಒಂಭತ್ತನೆಯ ದಿವಸ
ಪೌಳಿಗೋಡೆಯಲ್ಲಿ ಒಂದು ದ್ವಾರವನ್ನು ಮಾಡಿದ್ದ
ರಿಂದ ಒಳಗಿದ್ದ ಎಲ್ಲಾ ಸೈನಿಕರು ಅದೇ ರಾತ್ರಿ

1) ಮೂಲ: ನಾನು.

ಅರಸನ ತೋಟದ ಬಳಿಯಲ್ಲಿರುವ ಬಾಗಿಲಿನ
ಮೂಲಕ ಪಟ್ಟಣದೊಳಗಿಂದ ಹೊರಟು ಓಡಿ
ಹೋದರು; (ಆ ಬಾಗಿಲು ಎರಡು ಗೋಡೆಗಳ ಮಧ್ಯ
ದಲ್ಲಿತ್ತು); ಅವರು ಅರಾಬಾ ಎಂಬ ತಗ್ಗಾದ ಪ್ರದೇಶದ
8 ಮಾರ್ಗವಾಗಿ ಪಲಾಯನಮಾಡಿದರು. ಕಸ್ದೀಯರ
ಸೈನ್ಯದವರು ಅರಸನಾದ ಚಿದ್ಕೀಯನನ್ನು ಹಿಂದಟ್ಟಿ
ಯೆರಿಕೋವಿನ ಬೈಲಿನಲ್ಲಿ ಹಿಡಿದರು. ಅಷ್ಟರಲ್ಲಿ
ಅವನ ಎಲ್ಲಾ ಸೈನಿಕರು ಅವನನ್ನು ಬಿಟ್ಟು ಚದರಿ
9 ಹೋಗಿದ್ದರು. ಅನಂತರ ಕಸ್ದೀಯರು ಅವನನ್ನು
ಹವಾತ್ ಪ್ರದೇಶದ ರಿಬ್ಲದಲ್ಲಿದ್ದ ತಮ್ಮ ಅರಸನ
ಬಳಿಗೆ ತೆಗೆದುಕೊಂಡು ಬರಲು ಆ ಅರಸನು ಅವ
10 ನಿಗೆ ಶಿಕ್ಷೆಯನ್ನು ವಿಧಿಸಿ ಅವನ ಮಕ್ಕಳನ್ನು ಅವನ
ಎದುರಿನಲ್ಲಿಯೇ ವಧಿಸಿ ಯೆಹೂದದ ಸಕಲ ಸರ
11 ದಾರರನ್ನು ರಿಬ್ಲದಲ್ಲಿ ಕೊಲ್ಲಿಸಿದನು. ಇದಲ್ಲದೆ
ಬಾಬೆಲಿನ ಅರಸನು ಚಿದ್ಕೀಯನ ಎರಡು ಕಣ್ಣು
ಗಳನ್ನೂ ಕಿತ್ತು ಅವನಿಗೆ ಬೇಡಿ ಹಾಕಿ ಬಾಬೆಲಿಗೆ
ತೆಗೆದುಕೊಂಡು ಹೋಗಿ ಅವನು ಜೀವದಿಂದಿರುವ
ವರೆಗೆ ಸೆರೆಯಲ್ಲಿ ಇಟ್ಟನು.
12 ಐದನೆಯ ತಿಂಗಳಿನ ಹತ್ತನೆಯ ದಿನದಲ್ಲಿ ಅಂದರೆ
ಬಾಬೆಲಿನ ಅರಸನಾದ ನೆಬೂಕದ್ನೆಚ್ಚರನ ಆಳಿಕೆಯ
ಹತ್ತೊಂಭತ್ತನೆಯ ವರುಷದಲ್ಲಿ ಬಾಬೆಲಿನ ಅರಸನ
ಸೇವಕನೂ ಕಾವಲುದಂಡಿನ ಅಧಿಪತಿಯೂ ಆಗಿದ್ದ
ನೆಬೂಜರದಾನನೆಂಬವನು ಯೆರೂಸಲೇಮಿಗೆ ಬಂದು
13 ಯೆಹೋವನ ಆಲಯವನ್ನೂ ಅರಮನೆಯನ್ನೂ
ಯೆರೂಸಲೇಮಿನ ಎಲ್ಲಾ ದೊಡ್ಡ ಮನೆಗಳನ್ನೂ
14 ಸುಟ್ಟುಬಿಟ್ಟನು. ಅವನ ಜೊತೆಯಲ್ಲಿ ಬಂದಿದ್ದ
ಕಸ್ದೀಯ ಸೈನ್ಯದವರು ಯೆರೂಸಲೇಮಿನ ಸುತ್ತು
15 ಗೋಡೆಗಳನ್ನೆಲ್ಲಾ ಕೆಡವಿದರು. ಕಾವಲುದಂಡಿನ
ಅಧಿಪತಿಯಾದ ನೆಬೂಜರದಾನನು ಕೇವಲ ದರಿದ್ರ
ರಲ್ಲಿ ಅನೇಕರನ್ನೂ ಪಟ್ಟಣದಲ್ಲಿ ಉಳಿದವರನ್ನೂ
ಮೊದಲೇ ಬಾಬೆಲಿನ ಅರಸನ ಮರೆಹೊಕ್ಕವರನ್ನೂ
16 ಬೇರೆ ಎಲ್ಲಾ ಜನರನ್ನೂ ಸೆರೆಯೊಯ್ದನು. ಹೊಲ
ಗಳನ್ನೂ ದ್ರಾಕ್ಷೆಯ ತೋಟಗಳನ್ನೂ ವ್ಯವಸಾಯ
ಮಾಡುವದಕ್ಕಾಗಿ ದೇಶದ ಜನರಲ್ಲಿ ಕೇವಲ ದರಿದ್ರ
17 ರನ್ನು ಮಾತ್ರ ಬಿಟ್ಟುಹೋದನು. ಕಸ್ದೀಯರು
ಯೆಹೋವನ ಆಲಯದ ಬಳಿಯಲ್ಲಿದ್ದ ತಾಮ್ರದ
ಕಂಬಗಳನ್ನೂ ಪೀಠಗಳನ್ನೂ ಸಮುದ್ರವೆನಿಸಿಕೊಂಡ
ಪಾತ್ರೆಯನ್ನೂ ಒಡೆದು ಅವುಗಳ ಎಲ್ಲಾ ತಾಮ್ರ
18 ವನ್ನೂ ಯೆಹೋವನ ಆಲಯದ ಸೇವೆಗಾಗಿ ಉಪ
ಯೋಗಿಸುತ್ತಿದ್ದ ಬೋಗುಣಿ, ಸಲಿಕೆ, ಕತ್ತರಿ, ಬಟ್ಟ
ಲು, ಧೂಪಾರತಿ ಮೊದಲಾದ ತಾಮ್ರದ ಸಾಮಾನುಗ
19 ಳನ್ನು ಬಾಬೆಲಿಗೆ ತೆಗೆದುಕೊಂಡು ಹೋದರು. ಕಾವ
ಲುದಂಡಿನ ಅಧಿಪತಿಯು ಬೆಳ್ಳಿಬಂಗಾರದ ಪಂಚ
ಪಾತ್ರೆ, ಅಗ್ಗಿಷ್ಟಿಗೆ, ಬಟ್ಟಲು, ಬೋಗುಣಿ, ದೀಪಸ್ತಂಭ,
ಧೂಪಾರತಿ, ತಾಂಬಾಣ ಮೊದಲಾದವುಗಳನ್ನು
20 ತೆಗೆದುಕೊಂಡನು. ಅರಸನಾದ ಸೊಲೊಮೋನನು
ಯೆಹೋವನ ಆಲಯಕ್ಕೋಸ್ಕರ ಮಾಡಿಸಿದ ಎರಡು
ಕಂಬಗಳು, ಸಮುದ್ರವೆನಿಸಿಕೊಂಡ ಪಾತ್ರೆಯು,
ಪೀಠಗಳನ್ನು ಹೊರುವ ಹನ್ನೆರಡು ತಾಮ್ರದ

ಹೋರಿಗಳು, ಇವುಗಳಿಗೆ ಲೆಕ್ಕವಿಲ್ಲದಷ್ಟು ತಾಮ್ರ
ಹಿಡಿದಿತ್ತು. ಕಂಬಗಳು ಎಂಥವುಗಳೆಂದರೆ ಮೊದಲ 21
ನೆಯ ಕಂಬವು ಹದಿನೆಂಟು ಮೊಳ ಎತ್ತರವಿತ್ತು;
ಅದರ ಸುತ್ತಳತೆಯು ಹನ್ನೆರಡು ಮೊಳ; ಅದು
ಹೊಳ್ಳು, ನಾಲ್ಕು ಬೆರಳು ದಪ್ಪವಾಗಿತ್ತು. ಕಂಬದ 22
ಮೇಲೆ ಐದು ಮೊಳ ಎತ್ತರವಾದ ಒಂದು ತಾಮ್ರದ
ಕುಂಭವಿತ್ತು; ಕುಂಭದ ಮೇಲೆ ಸುತ್ತಲೂ ತಾಮ್ರದ
ಜಾಲರಿಯೂ ದಾಳಿಂಬಹಣ್ಣುಗಳೂ ಇದ್ದವು. ಎರಡ
ನೆಯ ಕಂಬವು ದಾಳಿಂಬಹಣ್ಣುಗಳಿಂದ ಅಲಂಕಾರ
ವಾಗಿ ಹಾಗೆಯೇ ಇತ್ತು. ನಾಲ್ಕು ಪಕ್ಕಗಳಲ್ಲಿ 23
ತೊಂಭತ್ತಾರು ದಾಳಿಂಬಹಣ್ಣುಗಳಿದ್ದವು; ಜಾಲರಿಯ
ಮೇಲೆ ಸುತ್ತಲೂ ಒಟ್ಟಾಗಿ ನೂರು ದಾಳಿಂಬ
ಹಣ್ಣುಗಳಿದ್ದವು. ಕಾವಲುದಂಡಿನ ಅಧಿಪತಿಯಾದ 24
ನೆಬೂಜರದಾನನು ಹಿಡಿದುಕೊಂಡುಹೋದ ಜನ
ರಲ್ಲಿ ಮಹಾಯಾಜಕನಾದ ಸೆರಾಯನು, ಎರಡನೆಯ
ತರಗತಿಯ ಯಾಜಕನಾದ ಚೆಫನ್ಯನು, ಮೂರು
ಮಂದಿ ದ್ವಾರಪಾಲಕರು, ಸೈನ್ಯಸಂಬಂಧವಾದ ಎಲ್ಲಾ 25
ವ್ಯವಸ್ಥೆಯನ್ನು ಮಾಡುವ ಕಂಚುಕಿ, ಪಟ್ಟಣದಲ್ಲಿ
ಉಳಿದು ಅರಸನಿಗೆ ಆಪ್ತರಾಗಿದ್ದ ಏಳು ಮಂದಿ
ಮಂತ್ರಿಗಳು, ಯುದ್ಧಕ್ಕೆ ಹೋಗತಕ್ಕವರ ಪಟ್ಟಿ
ಯನ್ನು ಮಾಡುವ ಸೇನಾಪತಿಯ ಲೇಖಕನು,
ಪಟ್ಟಣದಲ್ಲಿದ್ದ ಅರುವತ್ತು ಮಂದಿ ರೈತರು ಇದ್ದ
ರು. ಅವನು ಇವರನ್ನೆಲ್ಲಾ ತೆಗೆದುಕೊಂಡುಹೋಗಿ 26
ಹವಾತ್ ಪ್ರದೇಶದ ರಿಬ್ಲದಲ್ಲಿದ್ದ ಬಾಬೆಲಿನ ಅರಸ
ನಿಗೆ ಒಪ್ಪಿಸಲು ಅವನು ಇವರನ್ನು ಅಲ್ಲಿಯೇ ಕೊಲ್ಲಿ 27
ಸಿದನು. ಹೀಗೆ ಯೆಹೂದ್ಯರು ಸೆರೆಯವರಾಗಿ ತಮ್ಮ
ದೇಶವನ್ನು ಬಿಟ್ಟುಹೋಗಬೇಕಾಯಿತು. ನೆಬೂಕದ್ನೆಚ್ಚ 28
ರನು ಸೆರೆಯೊಯ್ದವರ ಲೆಕ್ಕವು ಹೀಗಿದೆ— ಅವನು
ತನ್ನ ಆಳಿಕೆಯ ಏಳನೆಯ ವರುಷದಲ್ಲಿ ಮೂರು
ಸಾವಿರದ ಇಪ್ಪತ್ತು ಮೂರು ಮಂದಿ ಯೆಹೂದ್ಯ
ರನ್ನು ಸೆರೆಯೊಯ್ದನು; ಹದಿನೆಂಟನೆಯ ವರುಷದಲ್ಲಿ 29
ಎಂಟುನೂರು ಮೂವತ್ತೆರಡು ಜನರನ್ನು ಯೆರೂಸ
ಲೇಮಿನಿಂದ ಸೆರೆಯೊಯ್ದನು; ನೆಬೂಕದ್ನೆಚ್ಚರನ ಆಳಿ 30
ಕೆಯ ಇಪ್ಪತ್ತು ಮೂರನೆಯ ವರುಷದಲ್ಲಿ ಕಾವಲು
ದಂಡಿನ ಅಧಿಪತಿಯಾದ ನೆಬೂಜರದಾನನು ಏಳು
ನೂರು ನಾಲ್ವತ್ತೈದು ಮಂದಿ ಯೆಹೂದ್ಯರನ್ನು ಸೆರೆ
ಯೊಯ್ದನು; ಸೆರೆಯಾದವರು ಒಟ್ಟಾಗಿ ನಾಲ್ಕು ಸಾವಿ
ರದ ಆರುನೂರು ಜನ.

### ಯೆಹೋಯಾಖೀನನ ಬಿಡುಗಡೆ.

ಎವೀಲ್ಮೆರೋದಕನು ತಾನು ಪಟ್ಟಕ್ಕೆ ಬಂದ 31
ಮೊದಲನೆಯ ವರುಷದಲ್ಲಿ ಅಂದರೆ ಯೆಹೂದದ ಅರಸ
ನಾದ ಯೆಹೋಯಾಖೀನನ ಸೆರೆಯ ಮೂವತ್ತೇಳ
ನೆಯ ವರುಷದ ಹನ್ನೆರಡನೆಯ ತಿಂಗಳಿನ ಇಪ್ಪತ್ತೈದ
ನೆಯ ದಿನದಲ್ಲಿ ಯೆಹೋಯಾಖೀನನನ್ನು ಸೆರೆ
ಮನೆಯಿಂದ ಬಿಡಿಸಿ ಅವನನ್ನು ಮೇಲಕ್ಕೆ ಎತ್ತಿದನು.
ಅವನೊಡನೆ ಪ್ರೀತಿಯಿಂದ ಮಾತಾಡಿ ತನ್ನ ಸಂಗಡ 32
ಬಾಬೆಲಿನಲ್ಲಿದ್ದ ಎಲ್ಲಾ ಅರಸುಗಳಲ್ಲಿ ಅವನಿಗೆ ಉನ್ನತ

33 ಸ್ಥಾನವನ್ನು ಕೊಟ್ಟನು. ಯೆಹೋಯಾಖೀನನು ಸೆರೆಯ ಬಟ್ಟೆಗಳನ್ನು ತೆಗೆದುಹಾಕಿ ಜೀವದಿಂದಿರುವವರೆಗೂ ಅರಸನ ಪಂಙ್ತಿಯಲ್ಲಿ ಊಟಮಾಡುತ್ತಿದ್ದನು. ಅವನ ಜೀವಿತಕಾಲವೆಲ್ಲ, ಸಾಯುವತನಕ ಅವನಿಗೆ ಬೇಕಾಗುವ ಎಲ್ಲಾ ಪದಾರ್ಥಗಳು ಪ್ರತಿನಿತ್ಯವೂ ಬಾಬೆಲಿನ ಅರಸನಿಂದಲೇ ದೊರಕುತ್ತಿದ್ದವು.

---

# THE LAMENTATIONS OF JEREMIAH

## ಯೆರೆಮೀಯನ ಪ್ರಲಾಪಗಳು

1 א ಅಯ್ಯೋ, ಜನಭರಿತವಾಗಿದ್ದ ನಗರಿಯು ಒಂಟಿಯಾಗಿ ಕೂತುಬಿಟ್ಟಳಲ್ಲಾ!
ಜನಾಂಗಗಳಲ್ಲಿ ರತ್ನವಾಗಿದ್ದವಳು ವಿಧವೆಯಾದಳು,
ಸಂಸ್ಥಾನಗಳಲ್ಲಿ ಶಿರೋಮಣಿಯಾಗಿದ್ದವಳು ಬಿಟ್ಟಿಯಾಳಾದಳು.
2 ב ರಾತ್ರಿಯಲ್ಲಿ ಬಿಕ್ಕಿ ಬಿಕ್ಕಿ ಅಳುವದರಿಂದ ಕಣ್ಣೀರು ಕೆನ್ನೆಗಳ ಮೇಲೆ ನಿಂತೇ ಇದೆ;
ಆಕೆಯ ಬಹುಮಂದಿ ಪ್ರಿಯರಲ್ಲಿ ಯಾರೂ ಸಂತೈಸರು;
ಆಕೆಗೆ ಮಿತ್ರರೆಲ್ಲಾ ಶತ್ರುಗಳಾಗಿ ದ್ರೋಹಮಾಡಿದ್ದಾರೆ,
3 ג ಯೆಹೂದವೆಂಬಾಕೆಯು ಘೋರಸೇವೆಶ್ರಮೆಗಳಿಂದ ತಪ್ಪಿಸಿಕೊಳ್ಳಬೇಕೆಂದು ವಲಸೆಹೋಗಿದ್ದಾಳೆ;
ಮ್ಲೇಚ್ಛರ ಮಧ್ಯದಲ್ಲಿ ನೆಮ್ಮದಿಯಿಲ್ಲದೆ ವಾಸಮಾಡುತ್ತಾಳೆ;
ಆಕೆಯು ಇಕ್ಕಟ್ಟಿಗೆ ಸಿಕ್ಕಿಕೊಂಡಿರುವಾಗಲೇ ಆಕೆಯ ಹಿಂಸಕರೆಲ್ಲಾ ಹಿಂದಟ್ಟಿ ಹಿಡಿದರು.
4 ד ಯಾರೂ ಮಹೋತ್ಸವಗಳಿಗೆ ಬಾರದೆ ಇರುವದರಿಂದ ಚೀಯೋನಿಗೆ ಹೋಗುವ ದಾರಿಗಳು ಬಣಬಣ ಎನ್ನುತ್ತವೆ;
ಅದರ ಬಾಗಿಲುಗಳೆಲ್ಲಾ ಹಾಳುಬಿದ್ದಿವೆ, ಅಲ್ಲಿನ ಯಾಜಕರು ನರಳಾಡುತ್ತಾರೆ;
ಅಲ್ಲಿನ ಯುವತಿಯರು ವ್ಯಥೆಪಡುತ್ತಾರೆ, ನಗರಿಗೆ ನಗರಿಯೇ ಶೋಕಿಸುತ್ತದೆ.
5 ה ಅದರ ಲೆಕ್ಕವಿಲ್ಲದ ದ್ರೋಹಗಳಿಗಾಗಿ ಯೆಹೋವನು ಅದನ್ನು ವ್ಯಥೆಗೊಳಿಸಿದ್ದಾನೆ;
ಅದರ ವಿರೋಧಿಗಳು ಅದಕ್ಕೆ ಶಿರಸ್ಸಾದರು, ಅದರ ಶತ್ರುಗಳು ನೆಮ್ಮದಿಯಲ್ಲಿದ್ದಾರೆ;
ಅದರ ಹಸುಮಕ್ಕಳು ವಿರೋಧಿಗಳ ವಶದಲ್ಲಿ ಸೆರೆಹೋಗಿವೆ.
6 ו ಚೀಯೋನ್ ನಗರಿಯ ವೈಭವವೆಲ್ಲಾ ಕಳೆದುಹೋಗಿದೆ;
ಅಲ್ಲಿನ ಪ್ರಧಾನರು ಮೇವಿಲ್ಲದ ಜಿಂಕೆಗಳಂತೆ ಬಲಗುಂದಿ ಅಟ್ಟುವವರಿಗೆ ಬೆಂಗೊಟ್ಟು ಓಡಿಹೋಗಿದ್ದಾರೆ.
ז ಯೆರೂಸಲೇಮ್ ಪುರಿಯು ದಿಕ್ಕಾಪಾಲಾಗಿ ಅಲೆದು ಕಷ್ಟಪಡುವಾಗ
ಪುರಾತನಕಾಲದಿಂದ ತನಗಿದ್ದ ಭೋಗ್ಯವಸ್ತುಗಳನ್ನು ಜ್ಞಾಪಿಸಿಕೊಳ್ಳುತ್ತಾಳೆ;
ಆಕೆಗೆ ಯಾರ ಸಹಾಯವೂ ಇಲ್ಲದೆ ಆಕೆಯ ಜನರು ವಿರೋಧಿಯ ಕೈಗೆ ಸಿಕ್ಕಿದಾಗ
ಹಾಳುಬಿದ್ದಿರುವ ಆಕೆಯನ್ನು ವೈರಿಗಳು ನೋಡಿ ಹಾಸ್ಯಮಾಡಿದರು.
ח ಆಕೆಯು ಪಾಪಮಾಡಿ ಮಾಡಿ ಅಶುದ್ಧಳಾಗಿದ್ದಾಳೆ;
ಮೊದಲು ಆಕೆಯನ್ನು ಸನ್ಮಾನಿಸುತ್ತಿದ್ದವರು ಈಗ ಆಕೆಯ ಮಾನಭಂಗವನ್ನು ಕಂಡು ಹೀನೈಸುತ್ತಾರೆ;
ಆಕೆಯು ಬೆನ್ನಮರೆಯಲ್ಲಿ ನರಳಾಡುತ್ತಾಳೆ.
ט ಆಕೆಯ ನೆರಿಗೆಯು ಹೊಲಸಾಗಿತ್ತು, ಮುಂದಿನ ಗತಿಯೇನೆಂದು ಮನಸ್ಸಿಗೆ ತರಲಿಲ್ಲ;
ಆದಕಾರಣ ವಿಪರೀತಹೀನಸ್ಥಿತಿಯಲ್ಲಿ ಬಿದ್ದುಬಿಟ್ಟಳು; ಸಂತೈಸುವವರೇ ಇಲ್ಲ.
ಯೆಹೋವನೇ, ನನ್ನ ಕಷ್ಟವನ್ನು ಲಕ್ಷಿಸು; ನನ್ನ ಶತ್ರು ಹೆಚ್ಚಳಪಡುತ್ತಾನಲ್ಲಾ [ಎಂದು ಮೊರೆಯಿಡುತ್ತಾಳೆ].
י ವಿರೋಧಿಯು ಕೈಚಾಚಿ ಅವಳ ಭೋಗ್ಯವಸ್ತುಗಳನ್ನೆಲ್ಲಾ ಬಾಚಿಬಿಟ್ಟನು;
ಮ್ಲೇಚ್ಛರು ನಿನ್ನ ಸಭೆಗೆ ಸೇರಬಾರದು ಎಂದು ನೀನು ಆಜ್ಞಾಪಿಸಿದರೂ
ಅಂಥವರೇ ತನ್ನಲ್ಲಿನ ಪವಿತ್ರಾಲಯದೊಳಗೆ ಸೇರುವದನ್ನು ಆಕೆಯು ಕಾಣಬೇಕಾಯಿತು.
כ ಆಕೆಯ ಜನರೆಲ್ಲಾ ನರಳುತ್ತಾರೆ, ಅವರು ಅನ್ನವನ್ನು ಹುಡುಕಿಕೊಳ್ಳುವ ಗತಿ ಬಂತು,
ಪ್ರಾಣಾಧಾರವಾದ ಆಹಾರಕ್ಕಾಗಿ ತಮ್ಮ ಅಮೂಲ್ಯವಸ್ತುಗಳನ್ನೂ ಕೊಟ್ಟುಬಿಟ್ಟಿದ್ದಾರೆ.
ಯೆಹೋವನೇ, ನೋಡು, ಕಟಾಕ್ಷಿಸು, ನಾನು ತುಚ್ಛಳಾದೆನಲ್ಲಾ [ಎಂದು ಪ್ರಲಾಪಿಸುತ್ತಾಳೆ].

2 ל ಹಾದುಹೋಗುವವರೇ, ನಿಮ್ಮಲ್ಲಿ ಯಾರಿಗೂ ನನ್ನ ಚಿಂತೆ ಇಲ್ಲವೋ?
ಯೆಹೋವನು ಅತಿರೋಷಗೊಂಡು ನನ್ನನ್ನು ಬಾಧಿಸಿ
ನನಗೆ ಉಂಟುಮಾಡಿದ ವ್ಯಥೆಯನ್ನು ನೀವು ನೋಡಿ
ಇಂಥಾ ವ್ಯಥೆಯು ಇನ್ನೆಲ್ಲಾದರೂ ಉಂಟೋ ಯೋಚಿಸಿರಿ.
3 מ ಆತನು ಮೇಲಣ ಲೋಕದಿಂದ ಬೆಂಕಿಯನ್ನು ಕಳುಹಿಸಿದ್ದಾನೆ, ಅದು ನನ್ನ ಎಲುಬುಗಳಲ್ಲಿ ವ್ಯಾಪಿಸಿದೆ;
ನನ್ನ ಕಾಲುಗಳಿಗೆ ಬಲೆಯೊಡ್ಡಿದ್ದಾನೆ, ನನ್ನನ್ನು ಹಿಂದಕ್ಕೆ ತಿರುಗಿಸಿದ್ದಾನೆ.
ನಾನು ಹಾಳುಬಿದ್ದು ಸದಾ ಬಳಲುವಂತೆ ಮಾಡಿದ್ದಾನೆ.
4 נ ಆತನ ಕೈ ನನ್ನ ದ್ರೋಹಗಳನ್ನು ನೊಗದ ಕಣ್ಣಿಗಳನ್ನೋ ಎಂಬಂತೆ ನನಗೆ ಬಿಗಿದಿದೆ.
ಅವು ಹುರಿಗೊಂಡು ನನ್ನ ಕುತ್ತಿಗೆಯನ್ನು ಸುತ್ತಿಕೊಂಡಿವೆ; ನನ್ನ ಬಲವನ್ನು ಕುಂದಿಸಿದ್ದಾನೆ;
ನಾನು ಎದುರಿಸಲಾರದವರ ಕೈಗೆ ಕರ್ತನು ನನ್ನನ್ನು ಸಿಕ್ಕಿಸಿದ್ದಾನೆ.
5 ס ಕರ್ತನು ನನ್ನ ಶೂರರನ್ನೆಲ್ಲಾ ನನ್ನ ಕಣ್ಣೆದುರಿಗೆ ತೃಣೀಕರಿಸಿದ್ದಾನೆ;
ನನ್ನ ಯುವಕರನ್ನು ಭಂಗಪಡಿಸಬೇಕೆಂದು ನನ್ನ ಕೇಡಿಗಾಗಿಯೇ ಮಹೋತ್ಸವವನ್ನು ಏರ್ಪಡಿಸಿದ್ದಾನೆ:
ಕರ್ತನು ಯೆಹೂದವೆಂಬ ಯುವತಿಯನ್ನು ತೊಟ್ಟಿಯಲ್ಲಿನ ದ್ರಾಕ್ಷೆಯ ಹಾಗೆ ತುಳಿದಿದ್ದಾನೆ.
6 ע ಈ ವಿಪತ್ತುಗಳಿಂದ ಅಳುವೆನು, ನನ್ನನ್ನು ಸಂತೈಸಿ ದಣುವಾರಿಸತಕ್ಕವನು ದೂರವಾಗಿರುವದರಿಂದ
ನನ್ನ ಕಣ್ಣೀರು ಧಾರೆಧಾರೆಯಾಗಿ ಸುರಿಯುವದು,
ಶತ್ರುವು ಗೆದ್ದು ನನ್ನ ಮಕ್ಕಳು ಹಾಳಾದರು.
7 פ ಚೀಯೋನ್ ನಗರಿಯು ಕೈಚಾಚಿ ಅಂಗಲಾಚಿದರೂ ಯಾರೂ ಸಂತೈಸರು;
ಯಾಕೋಬಿನ ನೆರೆಹೊರೆಯವರು ಅದಕ್ಕೆ ವಿರೋಧಿಗಳಾಗಿರಲಿ ಎಂದು ಯೆಹೋವನು ತೀರ್ಮಾನಿಸಿದ್ದಾನೆ.
ಯೆರೂಸಲೇಮು ಅವರ ನಡುವೆ ಹೊಲೆಯಾಗಿ ಬಿದ್ದಿದೆ.
8 צ ಯೆಹೋವನು ನ್ಯಾಯಸ್ವರೂಪನು, ನಾನಾದರೋ ಆತನ ಆಜ್ಞೆಯನ್ನು ಮೀರಿದವಳು.
ಜನಾಂಗಗಳೇ, ನೀವೆಲ್ಲರೂ ಕಿವಿಗೊಡಿರಿ, ನನ್ನ ವ್ಯಥೆಯನ್ನು ನೋಡಿರಿ;
ನನ್ನ ಯುವತೀ ಯುವಕರು ಸೆರೆಹೋಗಿದ್ದಾರಲ್ಲಾ!
9 ק ನಾನು ಕೂಗಿಕೊಂಡರೂ ನನ್ನ ನಲ್ಲರಿಂದ ನನಗೆ ಮೋಸವಾಯಿತು,
ನನ್ನ ಯಾಜಕರೂ ಹಿರಿಯರೂ ಪ್ರಾಣವನ್ನು ಉಳಿಸಿಕೊಳ್ಳಬೇಕೆಂದು
ಆಹಾರವನ್ನು ಹುಡುಕುವದರಲ್ಲಿಯೇ ಪಟ್ಟಣದೊಳಗೆ ಪ್ರಾಣಬಿಟ್ಟರು.
ר ಯೆಹೋವನೇ, ಕಟಾಕ್ಷಿಸು; ನಾನು ಇಕ್ಕಟ್ಟಿಗೆ ಸಿಕ್ಕಿಕೊಂಡಿದ್ದೇನೆ, ನನ್ನ ಕರುಳು ಕುದಿಯುತ್ತದೆ.
ನಾನು ಕೇವಲ ದ್ರೋಹಮಾಡಿದ್ದರಿಂದ ನನ್ನ ಹೃದಯವು ಮಗಚಿಕೊಂಡಿದೆ;
ಮನೆಯ ಹೊರಗೆ ಸಂಹಾರ, ಒಳಗೆ ಪ್ರಾಣಸಂಕಟ.
ש ಯಾರೂ ನನ್ನನ್ನು ಸಂತೈಸರು; ನನ್ನ ನರಳಾಟದ 21
ಸುದ್ದಿಯು ನನ್ನ ವೈರಿಗಳ ಕಿವಿಗೆ ಬಿದ್ದಿದೆ;
ನನ್ನ ಶತ್ರುಗಳೆಲ್ಲಾ ನನಗಾದ ಕೇಡಿನ ಸಮಾಚಾರವನ್ನು ಕೇಳಿ ಅದನ್ನು ಮಾಡಿದವನು ನೀನೇ ಎಂದು ಉಲ್ಲಾಸಪಡುತ್ತಾರೆ.
ನೀನು ಮುಂತಿಳಿಸಿದ ದಿನವನ್ನು ಬರಮಾಡುವಾಗ ನನಗಾದ ಗತಿಯು ಅವರಿಗೂ ಆಗಲಿ!
ת ಅವರು ಮಾಡಿದ ಕೇಡುಕೆಲ್ಲಾ ನಿನ್ನ ಚಿತ್ತಕ್ಕೆ 22
ಮುಟ್ಟಲಿ;
ನೀನು ನನ್ನ ಎಲ್ಲಾ ದ್ರೋಹಗಳಿಗೆ ಪ್ರತಿಯಾಗಿ ನನಗೆ ಮಾಡಿದಂತೆ ಅವರಿಗೂ ಮಾಡು;
ನನ್ನ ನರಳಾಟವು ಬಹಳವಾಗಿದೆ, ನನ್ನ ಎದೆಯು ಕುಂದಿದೆ.

א ಅಯ್ಯೋ, ಕರ್ತನು ಕೋಪಗೊಂಡು ಚೀಯೋನ್ 2
ಪುರಿಗೆ ಮೋಡವು ಕವಿಯುವಂತೆ ಮಾಡಿದ್ದಾನಲ್ಲಾ!
ಆತನು ತನ್ನ ಸಿಟ್ಟನ್ನು ತೀರಿಸಿಕೊಂಡ ದಿನದಲ್ಲಿ ತನ್ನ ಪಾದಪೀಠವನ್ನು ನೆನಪಿಗೆ ತಾರದೆ
ಇಸ್ರಾಯೇಲಿನ ಶಿರೋಮಣಿಯನ್ನು ಆಕಾಶದಿಂದ ಭೂಮಿಗೆ ತಳ್ಳಿಬಿಟ್ಟನು.
ב ಕರ್ತನು ಕನಿಕರಪಡದೆ ಯಾಕೋಬಿನ ಗೋಮಾ 2
ಳಗಳನ್ನು ನಾಶಪಡಿಸಿ
[1]ಯೆಹೂದದ ಕೋಟೆಗಳನ್ನು ರೌದ್ರದಿಂದ ಕೆಡವಿ ನೆಲಸಮಮಾಡಿ
ರಾಜ್ಯವನ್ನೂ ಅಲ್ಲಿನ ಸರದಾರರನ್ನೂ ನೀಚಸ್ಥಿತಿಗೆ ತಂದಿದ್ದಾನೆ.
ג ಆತನು ಶತ್ರುವಿನ ಮೇಲೆತ್ತಿದ ಬಲಗೈಯನ್ನು 3
ಹಿಂದೆಗೆದು
ಇಸ್ರಾಯೇಲಿನ ಕೊಂಬನ್ನು ರೋಷಾಗ್ನಿಯಿಂದ ತೀರಾ ಕಡಿದುಹಾಕಿ
ಸುತ್ತುಮುತ್ತಲೂ ನುಂಗುವ ಅಗ್ನಿಜ್ವಾಲೆಯಂತೆ ಯಾಕೋಬನ್ನು ದಹಿಸಿಬಿಟ್ಟಿದ್ದಾನೆ.
ד ವೈರಿಯ ಹಾಗೆ ಬಿಲ್ಲನ್ನು ಬೊಗ್ಗಿಸಿ ವಿರೋಧಿ 4
ಯಂತೆ ಬಲಗೈಯೆತ್ತಿ ನಿಂತು
ಸುಂದರ ಪ್ರಜೆಯನ್ನೆಲ್ಲಾ ಸಂಹರಿಸಿದ್ದಾನೆ;
ಚೀಯೋನ್ ಗುಡಾರದ ಮೇಲೆ ತನ್ನ ರೋಷಾಗ್ನಿಯನ್ನು ಸುರಿಸಿದ್ದಾನೆ.
ה ಕರ್ತನು ವೈರಿಯಾಗಿ ಇಸ್ರಾಯೇಲನ್ನು ನುಂಗಿ 5
ದ್ದಾನೆ;
ಅದರ ಅರಮನೆಗಳನ್ನೆಲ್ಲಾ ತಿಂದುಬಿಟ್ಟು ಅದರ ಕೋಟೆಕೊತ್ತಲುಗಳನ್ನು ನಾಶಮಾಡಿದ್ದಾನೆ;
ಯೆಹೂದ ಸೀಮೆಯಲ್ಲಿ ಅರಚಾಟಕಿರಿಚಾಟವನ್ನು ಹೆಚ್ಚಿಸಿದ್ದಾನೆ.

1) ಮೂಲ: ಯೆಹೂದವೆಂಬ ಯುವತಿಯು.

6 ו ತನ್ನ ಸಾನ್ನಿಧ್ಯದ ಗುಡಾರವನ್ನು ತೋಟದ ಗುಡಸಲನ್ನೋ ಎಂಬಂತೆ ಹಾಳುಮಾಡಿ
ತನ್ನ ಉತ್ಸವಸ್ಥಾನವನ್ನು ನಾಶಪಡಿಸಿದ್ದಾನೆ;
ಮಹೋತ್ಸವಗಳು ಮತ್ತು ಸಬ್ಬತ್ ದಿನಗಳು ಚೀಯೋನಿನಲ್ಲಿ ಯಾರ ನೆನಪಿಗೂ ಬಾರದಂತೆ ಮಾಡಿ
ಯೆಹೋವನು ಅತಿರೋಷಗೊಂಡು ರಾಜನನ್ನೂ ಯಾಜಕನನ್ನೂ ಧಿಕ್ಕರಿಸಿದ್ದಾನೆ.
7 ז ಕರ್ತನು ತನ್ನ ಯಜ್ಞವೇದಿಯನ್ನು ತಿರಸ್ಕರಿಸಿ ತನ್ನ ಪವಿತ್ರಾಲಯಕ್ಕೆ ಅಸಹ್ಯಪಟ್ಟು
ಚೀಯೋನಿನ ಅರಮನೆಗಳ ಗೋಡೆಗಳನ್ನು ಶತ್ರುವಶಮಾಡಿದ್ದಾನೆ;
ಉತ್ಸವದಿನದಲ್ಲಿ ಘೋಷಿಸುವಂತೆ ಶತ್ರುಗಳು ಯೆಹೋವನ ಮಂದಿರದಲ್ಲಿ ಜಯಘೋಷವೆತ್ತಿದ್ದಾರೆ.
8 ח ಯೆಹೋವನು ಚೀಯೋನ್ ನಗರಿಯ ಕೋಟೆಯನ್ನು ನಾಶಪಡಿಸಬೇಕೆಂದು ನೂಲನ್ನು ಎಳೆದಿದ್ದಾನೆ;
ಹಾಳುಮಾಡುತ್ತಿರುವ ತನ್ನ ಕೈಯನ್ನು ಹಿಂದೆಗೆಯದೆ ಪೌಳಿಗೋಡೆಯೂ ಕೋಟೆಯೂ ಮೊರೆಯುವಂತೆ ಮಾಡಿದ್ದಾನೆ;
ಅವೆರಡೂ ಕುಸಿದುಹೋಗಿವೆ.
9 ט ಚೀಯೋನಿನ ಹೆಬ್ಬಾಗಿಲುಗಳು ನೆಲದಲ್ಲಿ ಹೂತುಕೊಂಡಿವೆ;
ಅದರ ಅಗುಳಿಗಳನ್ನು ಮುರಿದು ಚೂರು ಚೂರು ಮಾಡಿದ್ದಾನೆ;
ಅದರ ಅರಸನೂ ಸರದಾರರೂ ಅನ್ಯಜನಾಂಗಗಳೊಳಗೆ ಸೇರಿಕೊಂಡಿದ್ದಾರೆ;
ಧರ್ಮೋಪದೇಶವೇ ಕಾಣೆ;
ಅದರ ಪ್ರವಾದಿಗಳಿಗೆ ಕೂಡಾ ಯೆಹೋವನಿಂದ ಯಾವ ದರ್ಶನವೂ ಇಲ್ಲ.
10 י ಚೀಯೋನ್ ನಗರಿಯ ಹಿರಿಯರು ನೆಲದಲ್ಲಿ ಮೌನವಾಗಿ ಕುಕ್ಕರಿಸಿದ್ದಾರೆ;
ತಲೆಯ ಮೇಲೆ ಧೂಳನ್ನು ತೂರಿಕೊಂಡು ಗೋಣಿತಟ್ಟನ್ನು ಸುತ್ತಿಕೊಂಡಿದ್ದಾರೆ;
ಯೆರೂಸಲೇಮಿನ ಯುವತಿಯರು ತಲೆಗಳನ್ನು ನೆಲಕ್ಕೆ ಬೊಗ್ಗಿಸಿದ್ದಾರೆ.
11 כ ನೀರು ಸುರಿದು ಸುರಿದು ನನ್ನ ಕಣ್ಣು ಇಂಗಿಹೋಗಿದೆ, ನನ್ನ ಕರುಳು ಕುದಿಯುತ್ತದೆ,
ನನ್ನ ಜನವೆಂಬ ಯುವತಿಯು ಹಾಳಾಗಿ
ಮಕ್ಕಳುಮರಿಗಳು ಪಟ್ಟಣದ ಚೌಕಗಳಲ್ಲಿ ಮೂರ್ಛೆಹೋದದರಿಂದ ನನ್ನ ಕರುಳು ಕರಗಿದೆ.
12 ל ಮಕ್ಕಳು ಗಾಯಪಟ್ಟವರಂತೆ ಪಟ್ಟಣದ ಚೌಕಗಳಲ್ಲಿ ಮೂರ್ಛೆಹೋಗಿ
ತಾಯಿಯ ಎದೆಯ ಮೇಲೆ ಬಿದ್ದು ಅಸುರುಸುರಾಗಿ
1)ಅಮ್ಮಾ ತಿನ್ನಲಿಕ್ಕೆ ಇಲ್ಲವೋ, ಕುಡಿಯಲಿಕ್ಕೆ ಇಲ್ಲವೋ ಎಂದು ಗೋಳಿಡುತ್ತವೆ.
13 מ ಯೆರೂಸಲೇಮ್ ಯುವತಿಯೇ, ನಾನು ನಿನಗೆ ಏನು ಹೇಳಲಿ,
ನಿನ್ನನ್ನು ಯಾವದಕ್ಕೆ ಹೋಲಿಸಲಿ?
ಚೀಯೋನ್ ಕನ್ಯೆಯೇ, ನಿನ್ನನ್ನು ಸಂತೈಸಲು ಉಪಹರಣೆಯನ್ನು ಎಲ್ಲಿ ತರಲಿ?
ನಿನ್ನ ನಾಶನವು ಸಾಗರದಷ್ಟು ಅಪಾರ, ನಿನ್ನನ್ನು ಯಾರು ಸ್ವಸ್ಥಮಾಡಬಲ್ಲರು?
14 נ ನಿನ್ನ ಪ್ರವಾದಿಗಳು ಕಂಡು ಹೇಳಿದ ಕಣಿಗಳು ವ್ಯರ್ಥ, ನಿಸ್ಸಾರ;
ಅವರು ನಿನ್ನ ದೋಷವನ್ನು ಬೈಲಿಗೆ ತಾರದಕಾರಣ ನಿನ್ನ ದುರವಸ್ಥೆಯು ನೀಗಲಿಲ್ಲ;
ನಿನ್ನ ವಿಷಯವಾಗಿ ಅವರಿಗೆ ಕಂಡುಬಂದ ವ್ಯರ್ಥದೈವೋಕ್ತಿಗಳು
ನೀನು ಗಡೀಪಾರಾಗಿ ಒಯ್ಯಲ್ಪಡುವದಕ್ಕೆ ಆಸ್ಪದವಾದವು.
15 ס ಹಾದುಹೋಗುವವರೆಲ್ಲರೂ ನಿನ್ನನ್ನು ನೋಡಿ ಚಪ್ಪಾಳೆಹೊಡೆಯುತ್ತಾರೆ,
ಯೆರೂಸಲೇಮ್ ನಗರಿಯನ್ನು ಕಂಡು—ಆಹಾ, ಪರಿಪೂರ್ಣಸುಂದರಿ, ಸಮಸ್ತಲೋಕಸಂತೋಷಿ ಎನಿಸಿಕೊಳ್ಳುತ್ತಿದ್ದ ಪುರಿಯು ಇದೇಯೋ?
ಛೀ ಛೀ ಎಂದು ತಲೆಯಾಡಿಸುತ್ತಾರೆ.
16 ע ನಿನ್ನ ಶತ್ರುಗಳೆಲ್ಲಾ ನಿನ್ನನ್ನು ನೋಡಿ ಬಾಯಿಕಿಸಿದು
ಛೀಗುಟ್ಟಿ ಹಲ್ಲುಕಡಿಯುತ್ತಾರೆ;
ಆಹಾ, ಆಕೆಯನ್ನು ನುಂಗಿಬಿಟ್ಟಿದ್ದೇವೆ, ನಾವು ಸಿರೀಕ್ಷಿಸುತ್ತಿದ್ದ ದಿನವು ಇದೇ ಇದು,
ಬಂದೊದಗಿತು, ಕಣ್ಣಾರೆ ಕಂಡೆವು ಅಂದುಕೊಳ್ಳುತ್ತಾರೆ.
17 פ ಯೆಹೋವನು ತನ್ನ ಸಂಕಲ್ಪವನ್ನು ಸಿದ್ಧಿಗೆ ತಂದ
ತಾನು ಪುರಾತನಕಾಲದಲ್ಲಿ ನುಡಿದ ಮಾತನ್ನು ಈಡೇರಿಸಿದ್ದಾನೆ;
ಆತನು ಕರುಣಿಸದೆ [ನಿನ್ನನ್ನು] ಕೆಡವಿ
ನಿನ್ನ ವೈರಿಗಳಿಗೆ ಆನಂದವಾಗುವಂತೆ ಮಾಡಿ
ನಿನ್ನ ವಿರೋಧಿಗಳ ಕೊಂಬನ್ನು ಎತ್ತಿದ್ದಾನೆ.
18 צ ನಿನ್ನ ಜನರು ಕರ್ತನಿಗೆ ಮನಃಪೂರ್ವಕವಾಗಿ ಮೊರೆಯಿಟ್ಟಿದ್ದಾರೆ;
ಚೀಯೋನ್‌ನಗರಿಯ ಕೋಟೆಯವರೇ, ನಿಮ್ಮ ಕಣ್ಣೀರು ಹಗಲಿರುಳೂ ತೊರೆಯಂತೆ ಹರಿಯಲಿ
ನಿಮಗೆ ವಿರಾಮವೇ ಬೇಡ, ಅದು ನಿಮ್ಮ ನೇತ್ರದಿಂದ ನಿಲ್ಲದೆ ಸುರಿಯಲಿ;
19 ק ರಾತ್ರಿಯ ಒಂದೊಂದು ಜಾಮದ ಆರಂಭದಲ್ಲಿ ಎದ್ದೆದ್ದು ಗೋಳಾಡಿರಿ,
ನಿಮ್ಮ ಹೃದಯಸಾರವನ್ನು ನೀರನ್ನೋ ಎಂಬಂತೆ ಕರ್ತನ ಸಮ್ಮುಖದಲ್ಲಿ ಹೊಯ್ದುಬಿಡಿರಿ;
ಪ್ರತಿಯೊಂದು ಬೀದಿಯ ಕೊನೆಕೊನೆಯಲ್ಲಿ ಹಸಿವೆಯಿಂದ ಮೂರ್ಛೆಹೋಗಿರುವ
ನಿಮ್ಮ ಮಕ್ಕಳ ಪ್ರಾಣವನ್ನು ಉಳಿಸಬೇಕೆಂದು ಕೈಯೆತ್ತಿ ಪ್ರಾರ್ಥಿಸಿರಿ.
20 ר ಯೆಹೋವನೇ, ಕಟಾಕ್ಷಿಸು; ನೀನು ಇಷ್ಟೆಲ್ಲಾ ಮಾಡಿದ್ದು ಯಾರಿಗೆಂಬದನ್ನು ನೋಡು,
ಹೆಂಗಸರು ತಮ್ಮ ಗರ್ಭಫಲವನ್ನು, ತಾವು ನಲಿದಾಡಿಸಿದ ಮಕ್ಕಳನ್ನು ತಿಂದುಕೊಳ್ಳಲೋ?

1) ಮೂಲ: ಗೋಧಿ ಇಲ್ಲವೋ, ದ್ರಾಕ್ಷಾರಸ ಇಲ್ಲವೋ.

ಯಾಜಕರೂ ಪ್ರವಾದಿಗಳೂ ಕರ್ತನ ಪವಿತ್ರಾಲಯ
ದಲ್ಲಿ ಹತರಾಗಬೇಕೋ?
21 ש ಯುವಕವೃದ್ಧರು ಬೀದಿಗಳಲ್ಲಿ ನೆಲದ ಮೇಲೆ
ಬಿದ್ದಿರುತ್ತಾರೆ,
ನನ್ನ ತರುಣೀ ತರುಣರು ಖಡ್ಗದಿಂದ ಹತರಾಗಿದ್ದಾರೆ;
ನೀನು ಕೋಪತೀರಿಸಿಕೊಳ್ಳುವ ದಿನದಲ್ಲಿ ಅವರನ್ನು
ಕೊಂದುಹಾಕಿದಿ, ಕನಿಕರಿಸದೆ ಹತಿಸಿದಿ.
22 ת ಮಹೋತ್ಸವಕ್ಕೆ ಕರೆಯಿಸಿದಂತೆ ನನ್ನನ್ನು ಹೆದರಿ
ಸುವ ದಿಗಿಲುಗಳನ್ನು
ನನ್ನ ಸುತ್ತುಮುತ್ತಲು ಕರೆಯಿಸಿದ್ದೀ;
ಯೆಹೋವನು ಕೋಪತೀರಿಸಿಕೊಳ್ಳುವ ದಿನದಲ್ಲಿ
ಯಾರೂ ತಪ್ಪಿಸಿಕೊಳ್ಳಲಿಲ್ಲ, ಯಾರೂ ಉಳಿಯ
ಲಿಲ್ಲ;
ನಾನು ನಲಿದಾಡಿಸಿ ಸಾಕಿದವರನ್ನು ನನ್ನ ಶತ್ರುವು
ಸಂಹರಿಸಿದ್ದಾನೆ.

3 א ಯೆಹೋವನ ರೌದ್ರದಂಡದ ಪೆಟ್ಟನ್ನು ತಿಂದ
ವನು ನಾನೇ,
2 ಆತನು ನನ್ನನ್ನು ಕರೆದುಕೊಂಡು ಹೋಗಿ ಬೆಳಕಿ
ನಲ್ಲಲ್ಲ, ಕತ್ತಲಲ್ಲೇ ನಡೆಯಮಾಡಿದ್ದಾನೆ,
3 ನಿಶ್ಚಯವಾಗಿ ಪದೇ ಪದೇ ದಿನವೆಲ್ಲಾ ನನ್ನ ಮೇಲೆ
ಕೈಮಾಡುತ್ತಾ ಬಂದಿದ್ದಾನೆ.

4 ב ನನ್ನ ಚರ್ಮಮಾಂಸಗಳನ್ನು ಕಂದಿಸಿ ನನ್ನ ಎಲುಬು
ಗಳನ್ನು ಮುರಿದಿದ್ದಾನೆ;
5 ನನ್ನ ಸುತ್ತಲು 1)ಶ್ರಮಸಂಕಟಗಳ ದಿಬ್ಬಗಳನ್ನು
ಹಾಕಿದ್ದಾನೆ.
6 ಕಾರ್ಗತ್ತಲಲ್ಲಿ ನನ್ನನ್ನು ಇರಿಸಿದ್ದಾನೆ; ಬಹುಕಾಲದ
ಹಿಂದೆ ಸತ್ತವರಂತಿದ್ದೇನೆ.

7 ג ನಾನು ಆಚೆಹೋಗದಂತೆ ನನ್ನ ಸುತ್ತಲು ಗೋಡೆ
ಕಟ್ಟಿ ನನಗೆ ಭಾರಿ ಬೇಡಿಹಾಕಿದ್ದಾನೆ.
8 ಇದಲ್ಲದೆ ನಾನು ಮೊರೆಯಿಟ್ಟು ಕೂಗಿಕೊಂಡರೂ
ನನ್ನ ಬಿನ್ನಹಕ್ಕೆ ಕಿವಿಗೊಡನು.
9 ನನ್ನ ದಾರಿಗಳಿಗೆ ಅಡ್ಡವಾಗಿ ಕೆತ್ತನೆಯ ಕಲ್ಲಿನ ಗೋಡೆ
ಗಳನ್ನು ಹಾಕಿ ಹಾದಿಗಳನ್ನು ಸುತ್ತು ಮಾಡಿದ್ದಾನೆ.

10 ד ನನಗೆ ಹೊಂಚುಹಾಕುತ್ತಿರುವ ಕರಡಿಯಂತಿದ್ದಾನೆ,
ಗುಪ್ತಸ್ಥಳಗಳಲ್ಲಿ ಅಡಗಿಕೊಂಡಿರುವ ಸಿಂಹದ
ಹಾಗಿದ್ದಾನೆ.
11 ನಾನು ನಡೆದ ದಾರಿಗಳಿಂದ ನನ್ನನ್ನು ತಪ್ಪಿಸಿ ಸೀಳಿ
ಬಿಟ್ಟು ಹಾಳುಮಾಡಿದ್ದಾನೆ.
12 ತನ್ನ ಬಿಲ್ಲನ್ನು ಬೊಗ್ಗಿಸಿ ಬಾಣಕ್ಕೆ ನನ್ನನ್ನು ಗುರಿ
ಮಾಡಿಕೊಂಡಿದ್ದಾನೆ.

13 ה ತನ್ನ ಬತ್ತಳಿಕೆಯ ಅಂಬುಗಳಿಂದ ನನ್ನ ಅಂತ
ರಂಗಗಳನ್ನು ಇರಿದಿದ್ದಾನೆ.

ನಾನು ಸ್ವಜನರೆಲ್ಲರಿಗೂ ಹಾಸ್ಯಾಸ್ಪದನಾಗಿ ಹಗ 14
ಲೆಲ್ಲಾ ಅವರ ಗೇಲಿಯ ಹಾಡುಗಳಿಗೆ ಗುರಿಯಾ
ಗಿದ್ದೇನೆ.
ಆತನು ನನಗೆ ಕಹಿಯಾದ ಆಹಾರವನ್ನು ಅಡಚಿ ವಿಷ 15
ಪದಾರ್ಥದಿಂದ ನನ್ನನ್ನು ತಣಿಸಿದ್ದಾನೆ.

ו ನನ್ನ ಹಲ್ಲುಗಳನ್ನು ನುರುಜುಗಲ್ಲಿನಿಂದ ಮುರಿದು 16
ಬಿಟ್ಟು ನನ್ನನ್ನು ಬೂದಿಯಲ್ಲಿ ಕುಕ್ಕರಿಸ ಮಾಡಿ
ದ್ದಾನೆ.
ನನ್ನನ್ನು ತಳ್ಳಿಹಾಕಿ ಸಮಾಧಾನಕ್ಕೆ ದೂರಮಾಡಿದ್ದೀ; 17
ನಾನು ಸುಖವನ್ನು ಮರೆತುಬಿಟ್ಟು
ಅಯ್ಯೋ, ನನ್ನ ಶಕ್ತಿಯು ಹಾಳಾಯಿತು, ಯೆಹೋ 18
ವನು ನನಗೆ ದಯಪಾಲಿಸಿದ ನಿರೀಕ್ಷೆಯು ವ್ಯರ್ಥ
ಅಂದುಕೊಂಡೆನು.

ז ನಾನು ಅಲೆದು ಕಷ್ಟಪಟ್ಟದ್ದನ್ನು ಚಿತ್ತಕ್ಕೆ ತಂದು 19
ಕೋ, ಕಹಿಯಾದ ನನ್ನ ಆಹಾರಪಾನಗಳನ್ನು
ಜ್ಞಾಪಕಮಾಡಿಕೋ.
ನನ್ನ ಆತ್ಮವು ಇವುಗಳನ್ನು ನಿತ್ಯವೂ ಜ್ಞಾಪಿಸಿಕೊ 20
ಳ್ಳುತ್ತಾ ನನ್ನೊಳಗೆ ಕುಗ್ಗಿದೆ.
ಹೀಗಿರಲು ನಾನು ನಿನ್ನ ಕರುಣೆಯನ್ನು ನೆನಪಿಗೆ 21
ತಂದುಕೊಳ್ಳುತ್ತೇನೆ, ಅದರಿಂದ ನನಗೆ ನಿರೀಕ್ಷೆ
ಯುಂಟಾಗುತ್ತದೆ.

ח ನಾವು ಉಳಿದಿರುವದು ಯೆಹೋವನ ಕರುಣೆಯೇ; 22
ಆತನ ಕೃಪಾವರಗಳು ನಿಂತುಹೋಗವು.
ದಿನದಿನವು ಹೊಸಹೊಸದಾಗಿ ಒದಗುತ್ತವೆ; ನಿನ್ನ 23
ಸತ್ಯಸಂಧತೆಯು ದೊಡ್ಡದು.
ಯೆಹೋವನೇ ನನ್ನ ಪಾಲು, ಆದಕಾರಣ ಆತನನ್ನು 24
ನಿರೀಕ್ಷಿಸುವೆನು ಎಂದು ನನ್ನ ಅಂತರಾತ್ಮವು ಅಂದು
ಕೊಳ್ಳುತ್ತದೆ.

ט ಯೆಹೋವನು ತನ್ನನ್ನು ನಿರೀಕ್ಷಿಸುವವರಿಗೂ 25
ಹುಡುಕುವವರಿಗೂ ಮಹೋಪಕಾರಿಯಾಗಿದ್ದಾನೆ.
ಯೆಹೋವನ ರಕ್ಷಣಕಾರ್ಯವನ್ನು ಎದುರುನೋ 26
ಡುತ್ತಾ ಶಾಂತವಾಗಿ ಕಾದುಕೊಂಡಿರುವದು
ಒಳ್ಳೇದು.
ಯೌವನದಲ್ಲಿ ನೊಗಹೊರುವದು ಮನುಷ್ಯನಿಗೆ ಲೇಸು. 27

י ನನ್ನ ಮೇಲೆ ಇದನ್ನು ಹೇರಿದವನು ಯೆಹೋವನೇ 28
ಎಂದು ಅವನು ಏಕಾಕಿಯಾಗಿ ಕೂತು ಬಾಯಿ
ಬಿಡದಿರಲಿ.
ಒಂದು ವೇಳೆ ಸುಗತಿಯಾದೀತೆಂದು ತನ್ನ ಬಾಯಿ 29
ಯನ್ನು ದೂಳಿಗೆ ಮುಟ್ಟಿಸಲಿ.
ಹೊಡೆಯುವವನಿಗೆ ತನ್ನ ಕೆನ್ನೆಯನ್ನು ಕೊಟ್ಟು ಅವ 30
ಮಾನವನ್ನು ಹೊಟ್ಟೆತುಂಬಾ ತಿನ್ನಲಿ.

1) ಮೂಲ: ವಿಷ, ಆಯಾಸ.

31 כ ಕರ್ತನು ಸದಾಕಾಲಕ್ಕೂ ಬಿಟ್ಟುಬಿಡುವವನಲ್ಲ;
32 ಆತನು ವ್ಯಥೆಗೊಳಿಸಿದರೇನು, ತನ್ನ ಕೃಪಾತಿಶಯ
ದಿಂದ ಕನಿಕರಿಸುವನು;
33 ನರಜನ್ಮದವರನ್ನು ಬಾಧಿಸಿ ವ್ಯಥೆಗೊಳಿಸುವದು ಆತ
ನಿಗೆ ಇಷ್ಟವಿಲ್ಲ.

34 ל ಲೋಕದ ಸೆರೆಯವರನ್ನೆಲ್ಲಾ ತುಳಿದುಬಿಡುವದು,
35 ಪರಾತ್ಪರನ ಸಾಕ್ಷಾತ್ತಾಗಿ ನ್ಯಾಯವನ್ನು ತಪ್ಪಿಸುವದು,
36 ವ್ಯಾಜ್ಯವನ್ನು ಅನ್ಯಾಯವಾಗಿ ತೀರಿಸುವದು, [1]ಇವು
ಗಳನ್ನು ಕರ್ತನು ಲಕ್ಷ್ಯಕ್ಕೆ ತಾರನೇ?

37 מ ಕರ್ತನ ಅಪ್ಪಣೆಯಿಲ್ಲದೆ ಯಾರ ಮಾತು ಸಾರ್ಥ
ಕವಾದೀತು?
38 ಪರಾತ್ಪರನ ಬಾಯಿಮಾತಿನಿಂದಲೇ ಮೇಲುಕೇಡುಗ
ಳೆರಡೂ ಸಂಭವಿಸುತ್ತವಲ್ಲಾ.
39 ಮನುಷ್ಯನಿಗೆ ಜೀವವರವಿರಲು ತನ್ನ ಪಾಪದ ಶಿಕ್ಷೆ
ಗಾಗಿ ಗುಣುಗುಟ್ಟುವದೇಕೆ?

40 נ ನಮ್ಮ ನಡತೆಯನ್ನು ಶೋಧಿಸಿ ಪರೀಕ್ಷಿಸಿ ಯೆ
ಹೋವನ ಕಡೆಗೆ ತಿರುಗಿಕೊಳ್ಳೋಣ.
41 ಪರಲೋಕದಲ್ಲಿರುವ ದೇವರ ಕಡೆಗೆ ನಮ್ಮ ಕೈಗಳೊ
ಡನೆ ಮನಸ್ಸನ್ನೂ ಎತ್ತಿಕೊಳ್ಳುವ.
42 ನಾವು ಅವಿಧೇಯರಾಗಿ ದ್ರೋಹಮಾಡಿದ್ದೇವೆ; ನೀನು
ಕ್ಷಮಿಸಲಿಲ್ಲ.

43 ס ನೀನು ರೋಷವನ್ನು ಹೊದ್ದುಕೊಂಡು ನಮ್ಮನ್ನು
ಹಿಂದಟ್ಟಿದ್ದೀ; ಕನಿಕರಿಸದೆ ಹತಿಸಿದ್ದೀ.
44 ನಮ್ಮ ಪ್ರಾರ್ಥನೆಯು ನಿನಗೆ ಮುಟ್ಟಬಾರದೆಂದು
ಮೋಡವನ್ನು ಮರೆಮಾಡಿಕೊಂಡಿದ್ದೀ.
45 ನಮ್ಮನ್ನು ಜನಾಂಗಗಳ ಮಧ್ಯದಲ್ಲಿ ಕಸವನ್ನಾಗಿ
ಯೂ ಹೊಲಸನ್ನಾಗಿಯೂ ಹಾಕಿಬಿಟ್ಟಿದ್ದೀ.

46 ע ನಮ್ಮ ಶತ್ರುಗಳೆಲ್ಲಾ ನಮ್ಮನ್ನು ನೋಡಿ ಬಾಯಿ
ಕಿಸಿದಿದ್ದಾರೆ.
47 ಭಯವೂ ಗುಂಡಿಯೂ ಸಂಹಾರವೂ ಭಂಗವೂ ನಮಗೆ
ಕಾದಿವೆ.
48 [2]ಸ್ವಜನರು ನಾಶವಾದಕಾರಣ ನನ್ನ ಕಣ್ಣೀರು ಹೊಳೆ
ಹೊಳೆಯಾಗಿ ಹರಿಯುವದು.

49 פ ಯೆಹೋವನು ಆಕಾಶದಿಂದ ಕಟಾಕ್ಷಿಸಿ ನೋಡುವ
ತನಕ
50 ನನ್ನ ನೇತ್ರವು ನಿರಂತರವಾಗಿ ಅಶ್ರುಧಾರೆಯನ್ನು
ಸುರಿಸುವದು, ಎಂದಿಗೂ ಬಿಡದು.
51 ನನ್ನ ಪಟ್ಟಣದ ಯುವತಿಯರಿಗಾಗಿ ಅತ್ತತ್ತು ಕಣ್ಣುರಿ
ಯಿಂದ ಪೀಡಿತನಾಗಿದ್ದೇನೆ.

צ ನಿಷ್ಕಾರಣವೈರಿಗಳು ಪಕ್ಷಿಯನ್ನೋ ಎಂಬಂತೆ ನನ
ನ್ನು ಆತುರದಿಂದ ಹಿಂದಟ್ಟಿದರು.
ನನ್ನನ್ನು ನೆಲಮಾಳಿಗೆಯಲ್ಲಿ ಇಳಿಸಿ ಕಲ್ಲುಮುಚ
ನನ್ನ ಪ್ರಾಣವನ್ನು ಕಳೆದುಬಿಟ್ಟರು.
ಪ್ರವಾಹವು ನನ್ನನ್ನು ಮುಣುಗಿಸಿತು; ಆಗ ಸ
ಅಂದುಕೊಂಡೆನು.

ק ಯೆಹೋವನೇ, ಅಗಾಧವಾದ ನೆಲಮಾಳಿಗೆಯಲ
ನಿನ್ನ ಹೆಸರೆತ್ತಿ ಪ್ರಾರ್ಥಿಸಿದೆನು.
ನೀನು ನನ್ನ ಧ್ವನಿಯನ್ನು ಕೇಳಿದಿ; (ನನ್ನ ನಿಟ್ಟುಸುರಿಗ
ಮೊರೆಗೂ ಕಿವಿಯನ್ನು ಮರೆಮಾಡಿಕೊಳ್ಳ ಬೇಡ
ನಾನು ನಿನ್ನನ್ನು ಕೂಗಿಕೊಂಡಾಗ ನನ್ನ ಸಮೀಪಕ
ಬಂದು ಭಯಪಡಬೇಡ ಎಂದು ಹೇಳಿದಿ.

ר ಕರ್ತನೇ, ನೀನು ನನ್ನ ವ್ಯಾಜ್ಯಗಳನ್ನು ನಡಿ
ನನ್ನ ಪ್ರಾಣವನ್ನು ಉಳಿಸಿದ್ದೀ.
ಯೆಹೋವನೇ, ನನಗಾದ ಅನ್ಯಾಯವನ್ನು ನೋ
ದ್ದೀ, ನನಗೆ ನ್ಯಾಯತೀರಿಸು.
ನನ್ನ ವೈರಿಗಳು ನನ್ನ ಮೇಲೆ ತೀರಿಸಿದ ಹ
ಯನ್ನೂ ಕಲ್ಪಿಸಿಕೊಂಡ ಯುಕ್ತಿಗಳನ್ನೂ ನೋ
ದ್ದೀಯಲ್ಲಾ.

ש ಯೆಹೋವನೇ, ಅವರ ದೂಷಣೆಯೂ ನನ
ವಿರುದ್ಧವಾಗಿ ಅವರು ಕಲ್ಪಿಸಿದ ಕುಯುಕ್ತಿಗಳ
ನನ್ನ ಹಾನಿಗಾಗಿ ನಿತ್ಯ ನಡಿಸುತ್ತಿರುವ ತಂತ್ರೋಪ
ಯವೂ ನನ್ನ ಎದುರಾಳಿಗಳ [3]ನಿಂದೆಯೂ ನಿ
ಕಿವಿಗೆ ಬಿದ್ದಿವೆಯಷ್ಟೆ.
ಅವರು ಕೂತುಕೊಳ್ಳಲಿ, ಏಳಲಿ, ನೋಡುತ್ತಲೇ ಇರು
ಅವರ ಗೇಲಿಯ ಹಾಡಿಗೆ ಗುರಿಯಾಗಿದ್ದೇನೆ.

ת ಯೆಹೋವನೇ, ಅವರ ದುಷ್ಕೃತ್ಯಗಳಿಗೆ ಸರಿಯ
ದ ಪ್ರತಿಫಲವನ್ನು ನೀನು ಅವರಿಗೆ ಕೊಡುವಿ;
ಅವರ ಮನಸ್ಸನ್ನು ಮಂಕುಮಾಡುವಿ, ಅವರಿಗೆ ನಿನ್
ಶಾಪವು ತಗಲಲಿ!
ನೀನು ಕೋಪಗೊಂಡು ಅವರನ್ನು ಹಿಂದಟ್ಟಿ ಅವರ
[4]ನಿನ್ನ ಕೈಕೆಲಸವಾಗಿರುವ ಆಕಾಶದ ಕೆಳ
ಉಳಿಯದಂತೆ ಅಳಿಸಿಬಿಡುವಿ.

א ಅಕಟಾ, ಬಂಗಾರವು ಎಷ್ಟೋ ಮಸಕಾಯಿತು
ಚೊಕ್ಕಚಿನ್ನವು ಕಂದಾಗಿದೆಯಲ್ಲಾ!
ಪವಿತ್ರಾಲಯದ ಕಲ್ಲುಗಳು ಪ್ರತಿ ಬೀದಿಯ ಕೊ
ಯಲ್ಲಿ ರಾಶಿರಾಶಿಯಾಗಿ ಬಿದ್ದುಬಿಟ್ಟಿವೆ.
ב ಅಯ್ಯೋ, ಅಪರಂಜಿಯಷ್ಟು ಅಮೂಲ್ಯರಾ
ಚೀಯೋನಿನ ಪ್ರಜೆಗಳು
ಕುಂಬಾರನ ಕೈಕೆಲಸದ ಮಣ್ಣುಮಡಿಕೆಗಳೊ
ಎಂಬಂತೆ ತಿರಸ್ಕರಿಸಲ್ಪಟ್ಟಿದ್ದಾರೆ.

1) ಅಥವಾ: ಇವು ಕರ್ತನಿಗೆ ಮೆಚ್ಚಿಕೆಯಾಗಿಲ್ಲ. 2) ಮೂಲ: ಸ್ವಜನವೆಂಬ ಯುವತಿಯು. 3) ಮೂಲ: ತುಟಿಗಳ
4) ಮೂಲ: ಯೆಹೋವನ.

3 ג ನರಿಗಳು ಕೂಡಾ ಮರಿಗಳಿಗೆ ಮೊಲೆಗೊಟ್ಟು
ಊಡಿಸುವವಷ್ಟೆ;
ನನ್ನ ಜನವೆಂಬಾಕೆಯೋ ಕಾಡಿನ ಉಷ್ಟ್ರಪಕ್ಷಿಯಷ್ಟು
ಕ್ರೂರಳಾಗಿದ್ದಾಳೆ.
4 ד ಮೊಲೆಕೂಸಿನ ನಾಲಿಗೆಯು ದಾಹದಿಂದ ಸೇದಿ
ಹೋಗಿದೆ.
ಅನ್ನ ಬೇಕೆನ್ನುವ ಎಳೆಯ ಮಕ್ಕಳಿಗೆ ಯಾರೂ ಅನ್ನ
ವಿಕ್ಕರು.
5 ה ಮೃಷ್ಟಾನ್ನವನ್ನು ಉಣ್ಣುತ್ತಿದ್ದವರು ಬೀದಿಗಳಲ್ಲಿ
ದಿಕ್ಕೆಟ್ಟು ಅಲೆಯುತ್ತಾರೆ;
ಚಿಕ್ಕತನದಿಂದಲೂ ಸಕಲಾತಿಯನ್ನು ಹೊದೆಯುತ್ತಿದ್ದ
ವರಿಗೆ ತಿಪ್ಪೆಗಳನ್ನು ಅಪ್ಪಿಕೊಳ್ಳುವ ಗತಿ ಬಂತು.
6 ו ಯಾರ ಕೈಯೂ ಸೋಕದೆ ಕ್ಷಣಮಾತ್ರದಲ್ಲಿ
ಹಾಳಾದ ಸೊದೋಮಿನ ಪಾಪಕ್ಕಿಂತಲೂ
ನನ್ನ 1)ಪ್ರಜೆಯ ಅಧರ್ಮವು ಹೆಚ್ಚಾಯಿತಲ್ಲಾ.
7 ז ಆ ಪ್ರಜೆಯಲ್ಲಿನ ಮಹನೀಯರು ಹಿಮಕ್ಕಿಂತ ಶುಭ್ರ
ವಾಗಿಯೂ ಹಾಲಿಗಿಂತ ಬಿಳುಪಾಗಿಯೂ ಇದ್ದರು.
ಅವರ ದೇಹದ ಬಣ್ಣವು ಹವಳವನ್ನು ಮೀರಿತ್ತು, ಅವರ
ರೂಪವು ಇಂದ್ರನೀಲಮಣಿಯಷ್ಟು ಅಂದವಾಗಿತ್ತು.
8 ח [ಈಗ] ಅವರ ಮುಖವು ಕಟ್ಟಕರಿದಾಗಿದೆ, ಬೀದಿ
ಗಳಲ್ಲಿ ಅವರ ಗುರುತು ಯಾರಿಗೂ ಸಿಕ್ಕದು.
ಅವರ ಚರ್ಮವು ಎಲುಬುಗಳ ಮೇಲೆ ಸುಕ್ಕಿ
ಕೊಂಡಿದೆ, ಒಣಗಿ ಕಟ್ಟಿಗೆಯಾಗಿದೆ.
9 ט ಹಸಿವೆಯಿಂದ ಹತರಾದವರ ಗತಿಗಿಂತಲೂ ಖಡ್ಗ
ದಿಂದ ಹತರಾದವರ ಗತಿಯೇ ಲೇಸು;
ಭೂಫಲಗಳಿಲ್ಲದೆ ಕ್ಷಾಮದ ಪೆಟ್ಟನ್ನು ತಿಂದವರು
ಕ್ಷಯಿಸುತ್ತಾ ಬರುತ್ತಾರಲ್ಲಾ.
10 י ಕರುಣೆಗಳಾದ ಹೆಂಗಸರು ತಮ್ಮ ಕೂಸುಗಳನ್ನು
ಸ್ವಂತ ಕೈಯಿಂದ ಬೇಯಿಸಿಕೊಂಡಿದ್ದಾರೆ;
ನನ್ನ ಜನರ ನಾಶನಕಾಲದಲ್ಲಿ ಮಕ್ಕಳು ತಾಯಿ
ಗಳಿಗೆ ತಿಂಡಿಯಾದವು.
11 כ ಯೆಹೋವನು ತನ್ನ ರೋಷಾಗ್ನಿಯನ್ನು ಸುರಿಸಿ
ತನ್ನ ಸಿಟ್ಟನ್ನು ತೀರಿಸಿದ್ದಾನೆ;
ಚೀಯೋನಿನ ಅಸ್ತಿವಾರಗಳನ್ನು ನುಂಗಿಬಿಟ್ಟ ಬೆಂಕಿ
ಯನ್ನು ಅಲ್ಲಿ ಹೊತ್ತಿಸಿದ್ದಾನೆ.
12 ל ವೈರಿಗಳೂ ವಿರೋಧಿಗಳೂ ಯೆರೂಸಲೇಮಿನ
ಬಾಗಿಲುಗಳಲ್ಲಿ ಹೆಜ್ಜೆಯಿಡುವರೆಂದು
ಭೂಪತಿಭೂನಿವಾಸಿಗಳಲ್ಲಿ ಯಾರೂ ನಂಬಿರಲಿಲ್ಲ.
13 מ ಚೀಯೋನಿನ ಮಧ್ಯದಲ್ಲಿ ಶಿಷ್ಟರ ರಕ್ತವನ್ನು
ಸುರಿಸಿದ ಯಾಜಕಪ್ರವಾದಿಗಳ ಪಾಪದೋಷಗ
ಳಿಂದಲೇ ಈ ಗತಿ ಬಂತು.
14 נ ಆಹಾ, ಆ ಯಾಜಕಪ್ರವಾದಿಗಳು ಕುರುಡರಂತೆ
ಬೀದಿಗಳಲ್ಲಿ ಅಲೆಯುತ್ತಾರೆ;
ರಕ್ತದಿಂದ ಹೊಲಸಾಗಿಹೋಗಿದ್ದಾರೆ, ಅವರ ಬಟ್ಟೆ
ಯನ್ನು ಯಾರೂ ಮುಟ್ಟರು.
15 ס ಅವರನ್ನು ನೋಡುವವರು—ತೊಲಗಿರಿ, ಅಶು
ದ್ಧರು ನೀವು, ನಡೆಯಿರಿ, ನಡೆಯಿರಿ, ಮುಟ್ಟಬೇಡಿರಿ
ಎಂದು ಕೂಗುತ್ತಾರೆ.
ಅವರು ಓಡಿಹೋಗಿ ಅನ್ಯದೇಶಗಳಲ್ಲಿ ಅಲೆಯುತ್ತಿ
ರಲು—ಇವರು ಇನ್ನು ಇಲ್ಲಿ ತಂಗಬಾರದು ಎಂದು
ಆಯಾ ದೇಶಗಳವರು ಅಂದುಕೊಳ್ಳುತ್ತಾರೆ.
ע ಯೆಹೋವನ ಉಗ್ರದೃಷ್ಟಿಯು ಅವರನ್ನು ಚದರಿ 16
ಸಿದೆ; ಆತನು ಇನ್ನು ಕಟಾಕ್ಷಿಸನು.
ಅವರು ಯಾಜಕರಾದರೇನು, ಅವರಿಗೆ ಮರ್ಯಾದೆ
ತಪ್ಪಿದೆ; ವೃದ್ಧರಾದರೇನು, ಯಾರೂ ಅವರನ್ನು
ಕರುಣಿಸರು.
פ ನಮಗೆ ಬರತಕ್ಕ ಸಹಾಯವನ್ನು ವ್ಯರ್ಥವಾಗಿ 17
ಎದುರುನೋಡ ನೋಡಿ ಕಣ್ಣು ಮೊಬ್ಬಾಯಿತು.
ನಮ್ಮನ್ನು ಉದ್ಧರಿಸಲಾರದ ಜನಾಂಗದ ಆಗಮನ
ವನ್ನು ನಮ್ಮ ಕೋವರದಲ್ಲಿ ಕಾದುಕೊಂಡಿದ್ದೇ
ವಲ್ಲಾ.
צ ಶತ್ರುಗಳು ನಮ್ಮ ಹೆಜ್ಜೆಯನ್ನು ಗುರಿಮಾಡಿಕೊಂಡಿ 18
ರುವದರಿಂದ ನಮ್ಮ ಬೀದಿಗಳಲ್ಲೇ ನಾವು ಸಂಚಾರ
ಮಾಡದ ಹಾಗಾಯಿತು;
ನಮಗೆ ಅಂತ್ಯವು ಸಮೀಪಿಸಿತು, ನಮ್ಮ ಕಾಲವು
ತೀರಿತು, ಹೌದು, ನಮಗೆ ಅಂತ್ಯವು ಬಂದೇ
ಬಂತು.
ק ನಮ್ಮನ್ನು ಹಿಂದಟ್ಟಿದವರು ಆಕಾಶದ ಹದ್ದುಗಳಿ 19
ಗಿಂತ ವೇಗಿಗಳಾಗಿದ್ದರು;
ಬೆಟ್ಟಗಳ ಮೇಲೆ ನಮ್ಮನ್ನು ಬೆನ್ನಹತ್ತಿ ಅರಣ್ಯದಲ್ಲಿ
ಹೊಂಚುಹಾಕಿದರು.
ר ಯಾವನು ನಮಗೆ ಜೀವಶ್ವಾಸವೋ, ಯಾವನು 20
ಯೆಹೋವನ ಅಭಿಷಿಕ್ತನೋ
ಯಾವನನ್ನು ಆಶ್ರಯಿಸಿ
ಜನಾಂಗಗಳ ಮಧ್ಯದಲ್ಲಿ ಉಳಿಯುವೆವು ಎಂದು ನಾವು
ನಂಬಿಕೊಂಡಿದ್ದೆವೋ
ಅವನು ಅವರ ಗುಂಡಿಗಳಲ್ಲಿ ಸಿಕ್ಕಿಬಿದ್ದನು.
ש ಊಚ್ ದೇಶದಲ್ಲಿ ವಾಸಿಸುವ ಎದೋಮೆಂಬ 21
ಯುವತಿಯೇ, ಹರ್ಷಿಸು, ಉಲ್ಲಾಸಗೊಳ್ಳು;
ಆದರೆ [ರೋಷಪಾನದ] ಪಾತ್ರೆಯು ನಿನ್ನ ಪಾಲಿಗೂ
ಬರುವದು; ಅಮಲೇರಿದವಳಾಗಿ ನಿನ್ನನ್ನು ನೀನೇ
ಬೆತ್ತಲೆಮಾಡಿಕೊಳ್ಳುವಿ.
ת ಚೀಯೋನೆಂಬ ಯುವತಿಯೇ, ನಿನ್ನ ದೋಷಫಲ 22
ವೆಲ್ಲಾ ಅನುಭವಿಸಿ ತೀರಿತು,
ಯೆಹೋವನು ನಿನ್ನನ್ನು ಇನ್ನು ಸೆರೆಗೆ ಒಯ್ಯನು;
ಎದೋಮೆಂಬ ಯುವತಿಯೇ, ನಿನ್ನ ದೋಷದ
ನಿಮಿತ್ತ ಯೆಹೋವನು ನಿನ್ನನ್ನು ದಂಡಿಸಿ
ನಿನ್ನ ಪಾಪಗಳನ್ನು ಬೈಲಿಗೆ ತರುವನು.

ಯೆಹೋವನೇ, ನಮಗಾದ ದುರ್ಗತಿಯನ್ನು ಚಿತ್ತ 5
ಕ್ಕೆ ತಂದುಕೋ;
ನಾವು ಗುರಿಯಾಗಿರುವ ದೂಷಣೆಯನ್ನು ದೃಷ್ಟಿಸಿ
ನೋಡು.
ನಮ್ಮ ಸ್ವಾಸ್ತ್ಯವು ಪರರ ಪಾಲಾಗಿದೆ, 2
ನಮ್ಮ ಮನೆಗಳು ಹೆರರ ಕೈಗೆ ಸಿಕ್ಕಿವೆ.
ನಾವು ತಂದೆಯಿಲ್ಲದ ಅನಾಥರು, 3

1) ಮೂಲ: ಜನವೆಂಬ ಯುವತಿಯ.

ನಮ್ಮ ತಾಯಿಗಳು ವಿಧವೆಯ ಗತಿಗೆ ಬಂದಿದ್ದಾರೆ.
4 ನೀರು ನಮ್ಮದಾದರೂ ಕೊಂಡುಕೊಂಡು ಕುಡಿಯುತ್ತೇವೆ;
ಸೌದೆ ಸ್ವಂತವಾದರೂ ಕ್ರಯಕ್ಕೆ ತೆಗೆದುಕೊಳ್ಳುತ್ತೇವೆ.
5 ನಮ್ಮನ್ನು ಹಿಂದಟ್ಟುವವರು ನಮ್ಮ ಹೆಗ್ಗತ್ತನ್ನು ಹಿಡಿದಿದ್ದಾರೆ,
ಬಳಲಿಹೋಗಿದ್ದೇವೆ, ಯಾವ ವಿಶ್ರಾಂತಿಯೂ ಇಲ್ಲ.
6 ಹೇಗಾದರೂ ಹೊಟ್ಟೆ ತುಂಬಾ ಅನ್ನ ತಿಂಬೋಣ ಎಂದು
ಐಗುಪ್ತ್ಯರಿಗೂ ಅಶ್ಶೂರ್ಯರಿಗೂ ಅಧೀನರಾದೆವು.
7 ನಮ್ಮ ಪಿತೃಗಳು ಪಾಪಮಾಡಿ ಇಲ್ಲದೆಹೋದರು;
ಅವರ ದೋಷಫಲವನ್ನು ನಾವು ಅನುಭವಿಸಬೇಕಾಯಿತು.
8 ದಾಸರು ನಮಗೆ ದಣಿಗಳಾದರು,
ಅವರ ಕೈಯಿಂದ ನಮ್ಮನ್ನು ಬಿಡಿಸುವವರೇ ಇಲ್ಲ.
9 ಬೆಳೆಯನ್ನು ಕೊಯ್ಯುತ್ತಿರುವಾಗ ಅರಣ್ಯದವರ ಕತ್ತಿಯಿಂದ
ಪ್ರಾಣಾಪಾಯಕ್ಕೆ ಗುರಿಯಾಗಿದ್ದೇವೆ.
10 ಕ್ಷಾಮಕಾಲದ ಜ್ವರದಿಂದ
ನಮ್ಮ ಚರ್ಮವು ಒಲೆಯಂತೆ ಸುಡುತ್ತದೆ.
11 ಚೀಯೋನಿನ ಸತಿಯರನ್ನೂ
ಯೆಹೂದದ ಊರುಗಳ ಯುವತಿಯರನ್ನೂ ಕೆಡಿಸಿದರು.
12 ಸರದಾರರ ಕೈಗಳನ್ನು [ಗಲ್ಲಿಗೆ] ನೇತಕಟ್ಟಿದರು;
ವೃದ್ಧರು ಮಾನಭಂಗಪಟ್ಟರು.
13 ಯುವಕಭಟರಿಗೆ ಬೀಸುವ ಕಲ್ಲನ್ನು ಹೊರುವ ಗತಿ ಬಂತು;
ಮಕ್ಕಳು ಸೌದೆಹೊರೆ ಹೊತ್ತು ಮುಗ್ಗರಿಸಬೇಕಾಯಿತು.
14 ವೃದ್ಧರು ಇನ್ನು ಚಾವಡಿಯಲ್ಲಿ ಸೇರರು,
ಯುವಕರು ಇನ್ನು ವಾದ್ಯಬಾರಿಸರು.
15 ನಮ್ಮ ಹೃದಯಾನಂದವು ತೀರಿತು,
ನಮ್ಮ ನಾಟ್ಯವೇ ದುಃಖವಾಯಿತು.
16 ಕಿರೀಟವು ನಮ್ಮ ತಲೆಯ ಮೇಲಿಂದ ಬಿದ್ದುಹೋಗಿದೆ,
ಅಯ್ಯೋ, ನಮ್ಮ ಗತಿಯನ್ನು ಏನು ಹೇಳೋಣ!
ನಾವು ಪಾಪಮಾಡಿದವರೇ ಸರಿ.
17 ಚೀಯೋನ್ ಪರ್ವತವು ಹಾಳಾಯಿತಲ್ಲಾ!
18 ನರಿಗಳು ಅಲ್ಲಿ ಸಂಚರಿಸುತ್ತವೆ.
ಇದರಿಂದ ನಮ್ಮ ಹೃದಯವು ಕುಂದಿದೆ,
ಇದರಿಂದ ನಮ್ಮ ಕಣ್ಣು ಮೊಬ್ಬಾಗಿದೆ.
19 ಯೆಹೋವನೇ, ನೀನು ಶಾಶ್ವತವಾಗಿ ನೆಲೆಗೊಂಡಿದ್ದೀ,
ತಲತಲಾಂತರಕ್ಕೂ ನಿನ್ನ ಸಿಂಹಾಸನವು ಸ್ಥಿರವಾಗಿರುವದು.
20 ನೀನು ನಮ್ಮನ್ನು ಸಂಪೂರ್ಣವಾಗಿ ಮರೆತಿರುವದೇಕೆ?
ಏಕೆ ನಮ್ಮನ್ನು ಇಷ್ಟುಕಾಲ ಕೈಬಿಟ್ಟಿದ್ದೀ.
22 ಯೆಹೋವನೇ, ನೀನು ನಮ್ಮ ಮೇಲೆ ಬಲು ಸಿಟ್ಟುಗೊಂಡು
ನಮ್ಮನ್ನು ಸಂಪೂರ್ಣವಾಗಿ ತ್ಯಜಿಸಿಬಿಟ್ಟೆಯೋ, ಏನೋ?
21 ನಮ್ಮನ್ನು ನಿನ್ನ ಕಡೆಗೆ ತಿರುಗಿಸು; ನೀನು ತಿರುಗಿಸಿದ ಹಾಗೆ ತಿರುಗುವೆವು;
ಪೂರ್ವಕಾಲದ ಸುಸ್ಥಿತಿಯನ್ನು ನಮಗೆ ಮತ್ತೆ ದಯಪಾಲಿಸು.

---

# THE BOOK OF THE
# PROPHET EZEKIEL

## ಯೆಹೆಜ್ಕೇಲನ ಪ್ರವಾದನೆಯ ಗ್ರಂಥ

ಯೆಹೋವನು ಯೆಹೆಜ್ಕೇಲನನ್ನು ಪ್ರವಾದಿಯನ್ನಾಗಿ ನೇಮಿಸಿದ್ದು. 1–3.

ವಾಹನಾರೂಢನಾದ ಯೆಹೋವನ ದರ್ಶನ.

1 ಕೆಬಾರ್ ನದಿಯ ಹತ್ತಿರ ಸೆರೆಯಾಗಿ ವಾಸಿಸುತ್ತಿದ್ದ ಯೆಹೂದ್ಯರ ಮಧ್ಯದಲ್ಲಿ ನಾನು ಸೇರಿಕೊಂಡಿರುವಾಗ ಮೂವತ್ತನೆಯ ವರುಷದ ನಾಲ್ಕನೆಯ ತಿಂಗಳಿನ ಐದನೆಯ ದಿನದಲ್ಲಿ ಆಕಾಶವು ಒಡೆದು ನನಗೆ ದೇವದರ್ಶನಗಳು ಉಂಟಾದವು.
2 (ಯೆಹೋಯಾಖೀನನು ಸೆರೆಯಾದ ಐದನೆಯ
3 ವರುಷದ [ನಾಲ್ಕನೆಯ] ತಿಂಗಳಿನ ಐದನೆಯ ದಿನದಲ್ಲಿ ಯೆಹೋವನ ವಾಕ್ಯವು ಕಸ್ದೀಯರ ದೇಶದೊಳಗೆ ಕೆಬಾರ್ ನದಿಯ ಹತ್ತಿರ ಬೂಜಿಯ ಮಗನೂ ಯಾಜಕನೂ ಆದ ಯೆಹೆಜ್ಕೇಲನಿಗೆ ಸಾಕ್ಷಾತ್ತಾಗಿ ಒದಗಿತು; ಅಲ್ಲಿ ಯೆಹೋವನ ಹಸ್ತಸ್ಪರ್ಶದಿಂದ ಅವನು
4 ಪರವಶನಾದನು.) ಇಗೋ, ನಾನು ನೋಡಿದೆನು; ಬಡಗಲಿಂದ ಬಿರುಗಾಳಿಯು ಬೀಸಿತು, ಎಡೆಬಿಡದೆ ಝಗಝಗಿಸುವ ಜ್ವಾಲೆಯುಳ್ಳ ಮಹಾಮೇಘವು ಕಾಣಿಸಿತು. ಅದರ ಸುತ್ತಲು ಮಿಂಚು ಹೊಳೆಯಿತು, ಅದರ ನಡುವೆ, ಆ ಜ್ವಾಲೆಯ ಮಧ್ಯೆ, ಸುವರ್ಣಕಾಂತಿಯಂಥ
5 ಕಾಂತಿಯು ಉಂಟಾಯಿತು. ಅದರ ಮಧ್ಯದೊಳಗಿಂದ ನಾಲ್ಕು ಜೀವಿಗಳ ಆಕಾರಗಳು ಕಂಡುಬಂದವು; ಅವುಗಳ ರೂಪವು ಮನುಷ್ಯರೂಪದಂತಿತ್ತು.
6 ಒಂದೊಂದಕ್ಕೆ ನಾಲ್ಕು ನಾಲ್ಕು ಮುಖಗಳೂ ನಾಲ್ಕು

7 ನಾಲ್ಕು ರೆಕ್ಕೆಗಳೂ ಇದ್ದವು. ಅವುಗಳ ಕಾಲುಗಳು
ನೆಟ್ಟಗಿದ್ದು ಬೆಳಗಿದ ತಾಮ್ರದ ಹಾಗೆ ಸಿಗಿಸಿಗಿಸುತ್ತಿ
ದ್ದವು; ಹೆಜ್ಜೆಗಳು ಕರುವಿನ ಗೊರಸಿನಂತಿದ್ದವು.
8 ಒಂದೊಂದು ಜೀವಿಯ ನಾಲ್ಕು ಪಾರ್ಶ್ವಗಳಲ್ಲಿನ ರೆಕ್ಕೆ
ಗಳ ಕೆಳಗೆ ಮನುಷ್ಯಹಸ್ತದಂಥ ಹಸ್ತಗಳಿದ್ದವು;
ಆ ನಾಲ್ಕು ಜೀವಿಗಳ ಮುಖಗಳೂ ರೆಕ್ಕೆಗಳೂ ಹೇಗಿದ್ದ
9 ವಂದರೆ—ರೆಕ್ಕೆಗಳು ಒಂದಕ್ಕೊಂದು ತಗಲುತ್ತಿದ್ದವು;
ಆ ಜೀವಿಗಳು ಮುಂದರಿದಾಗೆಲ್ಲ ತಿರುಗಿಕೊಳ್ಳದೆ
10 ಹೊರಟ ಮುಖವಾಗಿಯೇ ಹೋಗುತ್ತಿದ್ದವು. ಮುಖ
ಗಳು ಎಂಥವುಗಳಂದರೆ ಒಂದೊಂದರ [ಮುಂದಿನ]
ಮುಖವು ಮನುಷ್ಯನದು, ಬಲಗಡೆಯ ಮುಖವು
ಸಿಂಹನದು, ಎಡಗಡೆಯ ಮುಖವು ಹೋರಿಯದು,
11 [ಹಿಂದಿನ] ಮುಖವು ಗರುಡಪಕ್ಷಿಯದು. ಅವುಗಳ
ಮುಖಗಳೂ ರೆಕ್ಕೆಗಳೂ ಮೇಲ್ಗಡೆ ಪ್ರತ್ಯೇಕಪ್ರತ್ಯೇಕ
ವಾಗಿದ್ದವು; ಒಂದೊಂದು ಜೀವಿಯ ಎರಡು ರೆಕ್ಕೆಗಳು
ಪಕ್ಕದ ಜೀವಿಗಳ ರೆಕ್ಕೆಗಳಿಗೆ ತಗಲುತ್ತಿದ್ದವು, ಇನ್ನೆ
12 ರಡು ರೆಕ್ಕೆಗಳು ದೇಹಕ್ಕೆ ಮರೆಯಾಗಿದ್ದವು. ಆ ಜೀವಿ
ಗಳೆಲ್ಲಾ ಹೊರಟ ಮುಖವಾಗಿಯೇ ಹೋಗುತ್ತಿದ್ದವು,
ದೇವರಾತ್ಮವು ಸಾಗಿಸಿದ ಕಡೆಗೇ ಸಾಗಿದವು; ತಿರುಗಿ
13 ಕೊಳ್ಳದೆ ಮುಂದರಿದವು; 1)ಆ ಜೀವಿಗಳ ಮಧ್ಯದಲ್ಲಿ
ಅದ್ಭುತಕಾಂತಿಯು ಉರಿಯುವ ಕೆಂಡಗಳೋ ಪಂಜು
ಗಳೋ ಎಂಬಂತೆ ಕಾಣಿಸಿತು; ಅದು ಜೀವಿಗಳ ನಡುವೆ
ಓಲಾಡುತ್ತಿತ್ತು; ಆ ಉರಿಯು ತೇಜೋಮಯವಾಗಿತ್ತು,
ಅದರೊಳಗಿಂದ ಮಿಂಚುಗಳು ಹೊರಡುತ್ತಿದ್ದವು.
14 ಆ ಜೀವಿಗಳು ಮಿಂಚಿನಂತೆ ಮುಂದಕ್ಕೂ ಹಿಂದಕ್ಕೂ ಸರಿ
15 ದಾಡುತ್ತಿದ್ದವು. ಇಗೋ, ನಾನು ಆ ಜೀವಿಗಳನ್ನು
ನೋಡಲಾಗಿ ಒಂದೊಂದು ಕಡೆಯಲ್ಲಿಯೂ ಜೀವಿಗಳ
ಪಕ್ಕಗಳಲ್ಲಿ ನೆಲಸೋಕುವ ಚಕ್ರಗಳು ಕಾಣಿಸಿದವು.
16 ಆ ಚಕ್ರಗಳ ವರ್ಣವೂ ರಚನೆಯೂ ಹೇಗಿದ್ದ
ವಂದರೆ—ಅವುಗಳ ವರ್ಣವು ಪೀತರತ್ನದ ಹಾಗೆ ಥಳ
ಥಳಿಸುತ್ತಿತ್ತು. ಒಂದು ಚಕ್ರದೊಳಗೆ ಇನ್ನೊಂದು
ಚಕ್ರವು [ಅಡ್ಡವಾಗಿ] ರಚಿಸಿದಂತಿತ್ತು; ಆ ನಾಲ್ಕು
17 ಚಕ್ರಗಳು ಒಂದೇ ಮಾದರಿಯಾಗಿದ್ದವು. ಅವು
ಹೊರಳುವಾಗ ನಾಲ್ಕು ಕಡೆಗಳಲ್ಲಿ ಯಾವ ಕಡೆಗಾ
ದರೂ ಹೊರಳುತ್ತಿದ್ದವು; ಓರೆಯಾಗಿ ಹೊರಳುತ್ತಿರ
18 ಲಿಲ್ಲ. ಗಾಲಿಗಳ ಸುತ್ತಣ ಭಾಗಗಳು ಎತ್ತರವಾಗಿಯೂ
ಭಯಂಕರವಾಗಿಯೂ ಇದ್ದವು; ಈ ಭಾಗಗಳ ಎಲ್ಲಾ
19 ಕಡೆಗಳಲ್ಲಿಯೂ ತುಂಬಾ ಕಣ್ಣುಗಳಿದ್ದವು; ಜೀವಿ
ಗಳು ಮುಂದರಿಯುವಾಗ ಚಕ್ರಗಳೂ ಅವುಗಳ ಪಕ್ಕ
ದಲ್ಲಿ ಮುಂದರಿಯುತ್ತಿದ್ದವು; ಜೀವಿಗಳು ನೆಲದಿಂದ ಮೇ
20 ಲಕ್ಕೇಳುವಾಗ ಚಕ್ರಗಳೂ ಏಳುತ್ತಿದ್ದವು; ದೇವರಾತ್ಮವು
ಸಾಗಿಸಿದ ಕಡೆಗೇ ಸಾಗಿದವು; ಜೀವಿಗಳೊಳಗಣ
ಆತ್ಮವು ಚಕ್ರಗಳಲ್ಲಿಯೂ ಇದ್ದ ಕಾರಣ ಚಕ್ರಗಳು
21 ಅವುಗಳ ಪಕ್ಕದಲ್ಲಿ ಏಳುತ್ತಿದ್ದವು. ಅವು ಮುಂದರಿ
ಯುವಾಗ ಇವೂ ಮುಂದರಿಯುತ್ತಿದ್ದವು, ಅವು ನಿಂತು
ಹೋಗುವಾಗ ಇವೂ ನಿಂತುಹೋಗುತ್ತಿದ್ದವು. ಅವು
ನೆಲದಿಂದ ಮೇಲಕ್ಕೆ ಏಳುವಾಗ ಚಕ್ರಗಳೂ ಅವುಗಳ

ಪಕ್ಕದಲ್ಲಿ ಏಳುತ್ತಿದ್ದವು; ಏಕಂದರೆ ಜೀವಿಗಳ ಆತ್ಮವು
ಚಕ್ರಗಳಲ್ಲಿಯೂ ಇತ್ತು. ಭೀಕರವಾದ ಮಂಜುಗಡ್ಡೆ 22
ಯಂತೆ ಥಳಥಳಿಸುವ ಒಂದು ತರದ ನೆಲಗಟ್ಟು ಆ ಜೀವಿ
ಗಳ ತಲೆಯ ಮೇಲ್ಗಡೆ ಹಾಕಿತ್ತು. ಅದರ ಕೆಳಗೆ 23
ಜೀವಿಗಳ ರೆಕ್ಕೆಗಳು ಮಟ್ಟಸವಾಗಿ ಚಾಚಲ್ಪಟ್ಟು ಒಂದ
ಕ್ಕೊಂದು ತಗಲುತ್ತಿದ್ದವು; ಇದಲ್ಲದೆ ಒಂದೊಂದು
ಜೀವಿಗೆ ದೇಹವನ್ನು ಮುಚ್ಚಿಕೊಳ್ಳುವ ಎರಡೆರಡು
ರೆಕ್ಕೆಗಳಿದ್ದವು. ಅವು ಮುಂದರಿಯುವಾಗ ಅವುಗಳ 24
ರೆಕ್ಕೆಗಳ ಶಬ್ದವು ಜಲಪ್ರವಾಹದ ಘೋಷದಂತೆ,
ಸರ್ವಶಕ್ತನ ಧ್ವನಿಯ ಹಾಗೆ, ಆರ್ಭಟಿಸುವ ಸೈನ್ಯದ
ಕೋಲಾಹಲದೋಪಾದಿಯಲ್ಲಿ ನನಗೆ ಕೇಳಿಸಿತು; ಅವು
ನಿಂತಾಗ ರೆಕ್ಕೆಗಳನ್ನು ಮುದುರಿಕೊಂಡವು. ಅವುಗಳ 25
ತಲೆಗಳ ಮೇಲ್ಗಡೆಯ ನೆಲಗಟ್ಟಿನ ಮೇಲಿಂದ ಒಂದು
ಧ್ವನಿಯು ಕಿವಿಗೆ ಬಿತ್ತು. ಜೀವಿಗಳು ನಿಂತಾಗ ರೆಕ್ಕೆಗ
ಳನ್ನು ಮುದುರಿಕೊಂಡವು. ಅವುಗಳ ತಲೆಗಳ 26
ಮೇಲ್ಗಡೆಯ ನೆಲಗಟ್ಟಿನ ಮೇಲೆ ಇಂದ್ರನೀಲಮಣಿ
ಯಂತೆ ಹೊಳೆಯುವ ಸಿಂಹಾಸನಾಕಾರವು ಕಾಣಿಸಿತು;
ಅದರ ಮೇಲೆ ನರರೂಪದಂಥ ರೂಪವುಳ್ಳ ಒಬ್ಬಾತನು
ಆಸೀನನಾಗಿದ್ದನು. ಸೊಂಟದ ಹಾಗೆ ತೋರುವ ಆತನ 27
ಮಧ್ಯಭಾಗದಿಂದ ಮೇಲ್ಗಡೆ ಸುವರ್ಣವು ಥಳಥಳಿ
ಸುತ್ತದೋ, ಬೆಂಕಿಯು ಆ ರೂಪದೊಳಗೆಲ್ಲಾ ಪ್ರಜ್ವಲಿ
ಸುತ್ತದೋ ಎಂಬಂತಿರುವ ಅದ್ಭುತಕಾಂತಿಯನ್ನು
ಕಂಡೆನು; ಸೊಂಟದ ಹಾಗೆ ತೋರುವ ಆತನ ಮಧ್ಯ
ಭಾಗದಿಂದ ಕೆಳಗಡೆ ಬೆಂಕಿಯು ಉರಿಯುತ್ತದೋ
ಎಂಬಂತಿರುವ ಮಹಾ ತೇಜಸ್ಸನ್ನು ನೋಡಿದೆನು;
ಮತ್ತು ಪ್ರಕಾಶವು ಆತನನ್ನು ಸುತ್ತಿಕೊಂಡಿತ್ತು.
ಮಳೆಗಾಲದಲ್ಲಿ ಮೇಘಮಂಡಲದೊಳಗೆ ಬಿಲ್ಲು ಹೊ 28
ಳೆಯುವಂತೆ ಆತನ ಸುತ್ತಣ ಪ್ರಕಾಶವು ಹೊಳೆಯು
ತ್ತಿತ್ತು. ಹೀಗೆ ಯೆಹೋವನ ಮಹಿಮಾದ್ಭುತದರ್ಶ
ನವು ಆಯಿತು. ಇದು ಕಣ್ಣಿಗೆ ಬೀಳಲು ನಾನು
ಅಡ್ಡಬಿದ್ದು ಮಾತಾಡುವಾತನ ವಾಣಿಯನ್ನು ಕೇಳಿ
ದೆನು.

ಪ್ರವಾದಿಯು ಪ್ರಬೋಧಿಸತಕ್ಕ ಜನರ ಮೂರ್ಖತನ.

ಆತನು ನನಗೆ—ನರಪುತ್ರನೇ, ಎದ್ದು ನಿಂತುಕೋ, 2
ನಿನ್ನ ಸಂಗಡ ಮಾತಾಡುವೆನು ಎಂದು ಹೇಳಿದನು.
ಆತನು ಈ ಮಾತನ್ನು ಹೇಳಿದ ಕೂಡಲೆ ದೇವ 2
ರಾತ್ಮವು ನನ್ನೊಳಗೆ ಸೇರಿ ನಾನು ಎದ್ದು ನಿಂತುಕೊಳ್ಳು
ವಂತೆ ಮಾಡಿತು; ಆಗ ನನ್ನೊಡನೆ ಮಾತಾಡಿದಾತನ
ನುಡಿಯನ್ನು ಚೆನ್ನಾಗಿ ಕೇಳಿದೆನು. ಆತನು ನನಗೆ 3
ಹೀಗೆ ಹೇಳಿದನು—ನರಪುತ್ರನೇ, ನನಗೆ ವಿರುದ್ಧವಾಗಿ
ತಿರುಗಿಬಿದ್ದು ದ್ರೋಹಮಾಡಿದ ಜನಾಂಗದವರಾದ
ಇಸ್ರಾಯೇಲ್ಯರ ಬಳಿಗೆ ನಿನ್ನನ್ನು ಕಳುಹಿಸುವೆನು;
ಈ ದಿನದ ವರೆಗೆ ಅವರೂ ಅವರ ಪಿತೃಗಳೂ ನನಗೆ
ಅಪರಾಧಮಾಡುತ್ತಲೇ ಇದ್ದಾರೆ. ನಾನು ಯಾವ 4
ಸಂತಾನದವರ ಬಳಿಗೆ ನಿನ್ನನ್ನು ಕಳುಹಿಸುತ್ತೇನೋ

1) ಮೇಲಿನದು ಗ್ರೀಕ್ ಮೂಲವನ್ನು ಅನುಸರಿಸಿದೆ. ಇಬ್ರಿಯ ಮೂಲ: ಆ ಜೀವಿಗಳು ಎಂಥವುಗಳೆಂದರೆ ಅವು ಉರಿಯುವ ಕೆಂಡಗ ಳಿಯೂ ಪಂಜುಗಳ ಹಾಗೂ ಕಾಣಿಸಿದವು.

ಆ ಸಂತಾನದವರು ನಾಚಿಕೆಗೆಟ್ಟವರೂ ಹಟಗಾರರೂ
ಆಗಿರುತ್ತಾರೆ; ನೀನು ಅವರಿಗೆ—ಕರ್ತನಾದ ಯೆಹೋ
5 ವನು ಇಂತೆನ್ನುತ್ತಾನೆ ಎಂದು ನುಡಿ. ಅವರು ದ್ರೋಹಿ
ವಂಶದವರು, ಒಂದುವೇಳೆ ಕೇಳದೆ ಹೋದಾರು; ಕೇಳಿ
ದರೂ ಕೇಳದೆ ಹೋದರೂ ಒಬ್ಬ ಪ್ರವಾದಿಯು
ತಮ್ಮ ಮಧ್ಯದಲ್ಲಿ ಕಾಣಿಸಿಕೊಂಡಿದ್ದಾನೆಂದು ತಿಳಿದೇ
6 ಇರುವರು. ನರಪುತ್ರನೇ, ನೀನು ಮುಳ್ಳುಕಂಪೆಗಳಿಗೆ
ಸಿಕ್ಕಿಕೊಂಡು ಚೇಳುಗಳ ನಡುವೆ ವಾಸಿಸುವಂತೆ ಅವರ
ಮಧ್ಯದಲ್ಲಿದ್ದರೂ ಅವರಿಗೆ ಭಯಪಡಬೇಡ, ಅವರ
ಗದರಿಕೆಗೆ ಹೆದರದಿರು; ಅವರು ದ್ರೋಹಿವಂಶದವರು;
ಅವರ ಬಿರುನುಡಿಗೆ ದಿಗಿಲುಪಡಬೇಡ, ಅವರ ಬಿರು
7 ನೋಟಕ್ಕೆ ಬೆಚ್ಚದಿರು. ಅವರು ಕೇಳಿದರೂ ಕೇಳದೆ
ಹೋದರೂ ನೀನು ನನ್ನ ಮಾತುಗಳನ್ನು ಅವರಿಗೆ ನುಡಿ
ಯಲೇಬೇಕು; ಅವರು ದ್ರೋಹಿಗಳೇ ಹೌದು.

ಪ್ರವಾದಿಗೆ ಲಭಿಸಿದ ವರ.

8 ಇದಲ್ಲದೆ ಆತನು—ನರಪುತ್ರನೇ, ನಾನು ನಿನಗೆ
ನುಡಿಯುವ ಮಾತನ್ನು ಕೇಳು; ಅವಿಧೇಯರಾದ
ಆ ವಂಶದವರಂತೆ ನೀನು ಅವಿಧೇಯನಾಗಿರಬೇಡ;
ನಾನು ಕೊಡುವದನ್ನು ಬಾಯಿತೆರೆದು ತಿಂದುಬಿಡು
9 ಅಂದನು. ಆಹಾ, ನಾನು ನೋಡಲಾಗಿ ಒಂದು ಕೈ
ನನ್ನ ಕಡೆಗೆ ಚಾಚಿತ್ತು, ಇಗೋ ಅದರಲ್ಲಿ ಗ್ರಂಥದ
10 ಸುರಳಿಯು ಕಾಣಿಸಿತು; ಆತನು ಆ ಸುರಳಿಯನ್ನು
ನನ್ನೆದುರಿನಲ್ಲಿ ಬಿಚ್ಚಿದನು; ಅದರ ಎರಡು ಪಕ್ಕೆಗಳ
ಲ್ಲಿಯೂ ಬರೆದಿತ್ತು; ಅದರಲ್ಲಿ ಬರೆದದ್ದು ಗೋಳು,
ಮೂಲುಗು, ಮೊರೆ ಇವುಗಳೇ.

3 ಆತನು ನನಗೆ—ನರಪುತ್ರನೇ, ನಿನಗೆ ಸಿಕ್ಕಿದ ಈ
ಸುರಳಿಯನ್ನು ತಿನ್ನು; [ಇದರಲ್ಲಿನ ಸಂಗತಿಗಳನ್ನು]
ಇಸ್ರಾಯೇಲ್ ವಂಶದವರಿಗೆ ಸಾರು, ನಡೆ ಎಂದು
2 ಅಪ್ಪಣೆಕೊಟ್ಟನು. ನಾನು ಬಾಯಿತೆರೆಯಲು ಆತನು
3 ಆ ಸುರಳಿಯನ್ನು ನನಗೆ ತಿನ್ನಿಸಿದನು. ಆಗ ಆತನು
ನನಗೆ--ನರಪುತ್ರನೇ, ನಾನು ಕೊಡುವ ಈ ಸುರಳಿ
ಯನ್ನು ತಿಂದು ಹೊಟ್ಟೆ ತುಂಬಿಸಿಕೋ ಎಂದು ಹೇಳಲು
ಅದನ್ನು ತಿಂದುಬಿಟ್ಟೆನು; ಅದು ನನ್ನ ಬಾಯಲ್ಲಿ
ಜೇನಿನಂತೆ ಸಿಹಿಯಾಗಿತ್ತು.

ಪ್ರವಾದಿಗೆ ಅವಶ್ಯಕವಾದ ಸ್ಥೈರ್ಯ.

4 ಆ ಮೇಲೆ ಆತನು ನನಗೆ ಹೀಗೆ ಹೇಳಿದನು—ನರ
ಪುತ್ರನೇ, ನೀನು ಇಸ್ರಾಯೇಲ್ ವಂಶದವರ ಬಳಿಗೆ
ಹೋಗಿ ನಾನು ತಿಳಿಸುವ ಮಾತುಗಳನ್ನು ಅವರಿಗೆ
5 ನುಡಿ. ನಾನು ನಿನ್ನನ್ನು ಇಸ್ರಾಯೇಲ್ ವಂಶದವರ
ಬಳಿಗೆ ಕಳುಹಿಸುತ್ತೇನೆಯೇ ಹೊರತು ಕಷ್ಟತರವಾದ
ಅನ್ಯಭಾಷೆಯ ಜನರ ಬಳಿಗೆ ಕಳುಹಿಸುವದಿಲ್ಲ;
6 ಹೌದು, ನಿನಗೆ ತಿಳಿಯಲಾಗದ ಕಷ್ಟತರವಾದ ಅನ್ಯ
ಭಾಷೆಯನ್ನಾಡುವ ನಾನಾ ಜನಾಂಗಗಳ ಕಡೆಗೆ ನೀನು
ಕಳುಹಿಸಲ್ಪಟ್ಟವನಲ್ಲ. ಇಂಥವರ ಕಡೆಗೆ ನಾನು
ನಿನ್ನನ್ನು ಕಳುಹಿಸಿದ ಪಕ್ಷದಲ್ಲಿ ಅವರಾದರೂ ನಿಶ್ಚಯ
ವಾಗಿ ನಿನ್ನ ಮಾತಿಗೆ ಕಿವಿಗೊಡುತ್ತಿದ್ದರು. ಇಸ್ರಾ
ಯೇಲ್ ವಂಶದವರೋ ನಿನಗೆ ಕಿವಿಗೊಡಲೊ
ಲ್ಲರು; ನನಗೂ ಕಿವಿಗೊಡಲೊಲ್ಲರು; ಅವರೆಲ್ಲ
ರೂ ನಾಚಿಕೆಗೆಟ್ಟವರೂ ಹಟಗಾರರೂ ಆಗಿದ್ದಾ
ರಲ್ಲಾ. ಇಗೋ, ಅವರ ಕಠಿನ ಮುಖಕ್ಕೆ ವಿರು
ದ್ಧವಾಗಿ ನಿನ್ನ ಮುಖವನ್ನು ಕಠಿನಪಡಿಸಿದ್ದೇನೆ; ಅವ
ಹಣೆಗೆ ಪ್ರತಿಯಾಗಿ ನಿನ್ನ ಹಣೆಯನ್ನು ಗಟ್ಟಿಮಾಡಿ
ದ್ದೇನೆ. ನಿನ್ನ ಹಣೆಯನ್ನು ಕಗ್ಗಲ್ಲಿಗಿಂತ ಕಠಿನವಾದ
ವಜ್ರದಷ್ಟು ಕಠಿನಪಡಿಸಿದ್ದೇನೆ; ಅವರು ದ್ರೋಹಿವಂಶ
ದವರು, ಅವರಿಗೆ ಭಯಪಡಬೇಡ; ಅವರ ಬಿರುನೋ
ಟಕ್ಕೆ ಬೆಚ್ಚದಿರು. ಇದಲ್ಲದೆ ಆತನು ನನಗೆ
ಹೀಗೆ ಹೇಳಿದನು—ನರಪುತ್ರನೇ, ನಾನು ನಿನಗೆ ನುಡಿ
ಯುವ ಮಾತುಗಳನ್ನೆಲ್ಲಾ ಕಿವಿಯಿಂದ ಕೇಳಿ ಹೃದಯ
ದಲ್ಲಿಟ್ಟುಕೋ. ಸೆರೆಯಾಗಿರುವ ನಿನ್ನ ಸ್ವಜನರ
ಬಳಿಗೆ ಹೋಗಿ ಅವರು ಕೇಳಿದರೂ ಕೇಳದೆ ಹೋದರೂ
ಅವರನ್ನು ಪ್ರಬೋಧಿಸಿ—ಕರ್ತನಾದ ಯೆಹೋವನು
ಇಂತೆನ್ನುತ್ತಾನೆ ಎಂದು ಅವರಿಗೆ ಸಾರು.

ಪ್ರವಾದಿಯು ತನ್ನ ಉದ್ಯೋಗಸ್ಥಳಕ್ಕೆ ಸೇರಿದ್ದು.

ಆ ಮೇಲೆ ದೇವರಾತ್ಮವು ನನ್ನನ್ನು ಎತ್ತಿಕೊಂಡು
ಹೋಗಲಾಗಿ 1)ಮಹಿಮೆಯಿಂದ ಕೂಡಿದ ಯೆಹೋವ
ನಿಗೆ ಆತನ ವಾಸಸ್ಥಾನದಲ್ಲಿ ಸ್ತೋತ್ರವಾಗಲಿ ಎಂಬ
ಮಹಾ ಶಬ್ದವು ನನ್ನ ಹಿಂದೆ ಭರಭರನೆ ಕೇಳಿಸಿತು
ಜೀವಿಗಳ ರೆಕ್ಕೆಗಳು ಒಂದಕ್ಕೊಂದು ಬಡಿದಾಡುವ
ಸಪ್ಪಳ, ಅವುಗಳ ಪಕ್ಕದಲ್ಲಿ ಗರಗರನೆ ತಿರುಗುವ ಚಕ್ರ
ಗಳ ಸದ್ದು, ಹೀಗೆ ಬಿರ್ರನ್ನುವ ಮಹಾಶಬ್ದವು [ನನ್ನ
ಕಿವಿಗೆ ಬಿತ್ತು]. ದೇವರಾತ್ಮವು ನನ್ನನ್ನು ಎತ್ತಿ
ಕೊಂಡು ಹೋಯಿತು. ನಾನು ಯೆಹೋವನ ಹಸ್ತ
ಸ್ಪರ್ಶದಿಂದ ತುಂಬಾ ಪರವಶನಾಗಿದ್ದು ವ್ಯಥೆಗೊಳ್ಳು
ತ್ತಾ ಮನಸ್ತಾಪಪಡುತ್ತಾ ನಡೆದೆನು. ಆಗ ಸೆರೆ
ಯಾಗಿ ಒಯ್ಯಲ್ಪಟ್ಟು ಕೆಬಾರ್ ನದಿಯ ಹತ್ತಿರ ತೇಲ್
ಆಬೀಬಿನಲ್ಲಿ ವಾಸವಾಗಿದ್ದವರ ಬಳಿಗೆ ಬಂದು ಅವರು
ಕೂತಿದ್ದ ಸ್ಥಳದಲ್ಲಿಯೇ ಕೂತುಕೊಂಡೆನು; ಏಳುದಿವಸ
ಅಲ್ಲೇ ಅವರ ಮಧ್ಯದಲ್ಲಿ ಸ್ತಬ್ಧನಾಗಿ ಇದ್ದುಬಿಟ್ಟೆನು

ಪ್ರವಾದಿಯ ಮೇಲೆ ಬಿದ್ದ ಭಾರ.

ಏಳು ದಿವಸಗಳಾದ ಮೇಲೆ ಯೆಹೋವನು ಈ ಮಾ
ತನ್ನು ನನಗೆ ದಯಪಾಲಿಸಿದನು—ನರಪುತ್ರನೇ, ನಾನು
ನಿನ್ನನ್ನು ಇಸ್ರಾಯೇಲ್ ವಂಶದವರ ಮೇಲೆ ಕಾವ
ಲುಗಾರನನ್ನಾಗಿ ನೇಮಿಸಿದ್ದೇನೆ. ಹೀಗಿರಲು ನನ್ನ
ಬಾಯಿಂದ ಹೊರಡುವ ಮಾತನ್ನು ಕೇಳಿ ನನ್ನ ಪ
ವಾಗಿ ಅವರನ್ನು ಎಚ್ಚರಿಸು. ನಾನು ದುಷ್ಟನಿಗೆ—
ಸತ್ತೇ ಸಾಯುವಿ ಎಂದು ನುಡಿಯುವಾಗ ನೀನು
ಅವನನ್ನು ಎಚ್ಚರಿಸದೆಯೂ ಅವನು ತನ್ನ ದುರ್ಮಾರ್ಗ
ವನ್ನು ಬಿಟ್ಟು ತನ್ನ ಪ್ರಾಣವನ್ನು ಉಳಿಸಿಕೊಳ್ಳುವಂತೆ
ಅವನಿಗೆ ಬುದ್ಧಿಹೇಳದೆಯೂ ಇದ್ದರೆ ಆ ದುಷ್ಟ

1) ಮೂಲ: ಯೆಹೋವನ ಮಹಿಮೆಗೆ ಆತನ ವಾಸಸ್ಥಾನದಲ್ಲಿ ಸ್ತೋತ್ರವಾಗಲಿ.

ನು ತನ್ನ ಅಪರಾಧದಿಂದ ಸಾಯಬೇಕಾಗುವದು;
ಅವನ ಮರಣಕ್ಕಾಗಿ ನಿನಗೇ ಮುಯ್ಯಿತೀರಿಸುವೆನು.
19 ನೀನು ದುಷ್ಟನನ್ನು ಎಚ್ಚರಿಸಿದರೂ ಅವನು ತನ್ನ
ದುಷ್ಟತನವನ್ನೂ ದುರ್ಮಾರ್ಗವನ್ನೂ ಬಿಡದೆಹೋ
ದರೆ ತನ್ನ ಅಪರಾಧದಿಂದ ಸಾಯುವನು; ನೀನೋ
20 ನಿನ್ನ ಪ್ರಾಣವನ್ನು ಉಳಿಸಿಕೊಂಡಿರುವಿ. ಇದಲ್ಲದೆ
ಶಿಷ್ಟನು ತನ್ನ ಶಿಷ್ಟತನವನ್ನು ಬಿಟ್ಟು ಅಧರ್ಮಮಾಡಿ
ನಾನು ಅವನ ಮುಂದೆ ಒಡ್ಡಿದ ಆಟಂಕವನ್ನು ಎಡವಿ
ದರೆ ಆವನು ಸತ್ತೇಸಾಯುವನು; ನೀನು ಅವನನ್ನು
ಎಚ್ಚರಿಸದೆಹೋದಕಾರಣ ಅವನು ತನ್ನ ಪಾಪದಿಂದ
ಸಾಯಬೇಕಾಯಿತು. ಅವನು ಮಾಡಿದ ಸುಕೃತ್ಯ
ಗಳು ಲೆಕ್ಕಕ್ಕೆ ಬಾರವು; ಅವನ ಮರಣಕ್ಕಾಗಿ ನಿನಗೇ
21 ಮುಯ್ಯಿತೀರಿಸುವೆನು. ನೀನು ಶಿಷ್ಟನನ್ನು ಪಾಪ
ಮಾಡದಂತೆ ಎಚ್ಚರಿಸಿದ ಮೇಲೆ ಅವನು ಪಾಪಮಾಡದೆ
ಹೋದರೆ ಎಚ್ಚರಗೊಂಡಕಾರಣ ಜೀವದಿಂದ ಉಳಿಯು
ವನು; ನೀನೂ ನಿನ್ನ ಪ್ರಾಣವನ್ನು ಉಳಿಸಿಕೊಂಡಿರುವಿ.

ಪ್ರವಾದಿಯ ವಾಗ್ಬಂಧನ.

22 ಅದೇ ಸ್ಥಳದಲ್ಲಿ ನಾನು ಯೆಹೋವನ ಹಸ್ತಸ್ಪರ್ಶ
ದಿಂದ ಪರವಶನಾಗಿರಲು ಆತನು ನನಗೆ—ನೀನೆದ್ದು
ಬೈಲುಸೀಮೆಗೆ ಹೊರಡು, ಅಲ್ಲಿ ನಾನು ನಿನ್ನೊಂದಿಗೆ
23 ಮಾತಾಡುವೆನು ಎಂದು ಹೇಳಿದನು. ನಾನೆದ್ದು
ಬೈಲುಸೀಮೆಗೆ ಹೊರಟುಹೋದಾಗ ಕೆಬಾರ್ ನದಿ
ಯ ಹತ್ತಿರ ನನಗೆ ಮಹಿಮಾದ್ಭುತದರ್ಶನವು ಆದಂತೆ
ಆಹಾ, ಅಲ್ಲಿಯೂ ಯೆಹೋವನ ಮಹಿಮೆಯು
ಪ್ರತ್ಯಕ್ಷವಾಯಿತು. ಆದನ್ನು ನೋಡಿ ಅಡ್ಡಬಿದ್ದೆನು.
24 ದೇವರಾತ್ಮವು ನನ್ನೊಳಗೆ ಹೊಕ್ಕು ನಾನು ಎದ್ದು
ನಿಂತುಕೊಳ್ಳುವಂತೆ ಮಾಡಿದ ಮೇಲೆ ಆತನು ನನಗೆ
ಹೀಗೆ ಹೇಳಿದನು—ನೀನು ಹೋಗಿ ನಿನ್ನ ಮನೆಯೊಳಗೆ
25 ಅಡಗಿಕೋ. ನರಪುತ್ರನೇ, ಇಗೋ, [ನಿನ್ನ ಸ್ವಜನರು]
ನಿನ್ನನ್ನು ಬಂಧಿಸಿ ಕಟ್ಟುವರು, ನೀನು ಅವರಲ್ಲಿ ಆಚೀಚೆ
26 ಸಂಚರಿಸದಿರುವಿ. ಇದಲ್ಲದೆ ನಿನ್ನ ನಾಲಿಗೆಯು ಸೇದಿ
ಹೋಗಿ ನೀನು ಮೂಕನಾಗಿರುವಂತೆ ಮಾಡುವೆನು;
ನೀನು ಅವರನ್ನು ಖಂಡಿಸದಿರುವಿ; ಅವರು ದ್ರೋಹಿ
27 ವಂಶದವರು. ನಾನು ನಿನ್ನೊಡನೆ ಮತ್ತೆ ಮಾತಾಡುವ
ಕಾಲದಲ್ಲಿ ನಿನ್ನ ಬಾಯನ್ನು ಬಿಚ್ಚುವೆನು; ಆಗ ನೀನು
ಅವರಿಗೆ—ಕರ್ತನಾದ ಯೆಹೋವನು ಇಂತೆನ್ನುತ್ತಾನೆ
ಎಂದು ನುಡಿಯಬೇಕು; ಕೇಳುವವನು ಕೇಳಲಿ,
ಕೇಳದವನು ಬಿಡಲಿ; ಅವರು ದ್ರೋಹದ ಜನವೇ.

ಯೆಹೂದರಾಜ್ಯನಾಶನದ ಪ್ರವಾದನೆಗಳು.
4—24.

ಯೆರೂಸಲೇಮಿನ ನಾಶನದ ಸೂಚನೆಗಳು. 4: 5.

ಯೆರೂಸಲೇಮಿನ ಮುತ್ತಿಗೆಯ ಸೂಚನೆ.

4 ನರಪುತ್ರನೇ, ನೀನು ಒಂದು ಚದರಬಿಲ್ಲೆಯನ್ನು ತೆಗೆದು
ಕೊಂಡು ನಿನ್ನ ಮುಂದೆ ಇಟ್ಟು ಅದರಲ್ಲಿ ಪಟ್ಟಣದ
ನಕ್ಷೆಯನ್ನು ಅಂದರೆ ಯೆರೂಸಲೇಮಿನ ನಕ್ಷೆಯನ್ನು
ಬರೆದು ಆ ನಕ್ಷೆಯ ಸುತ್ತುಮುತ್ತಲು ದಿಬ್ಬಹಾಕಿ 2
ಒಡ್ಡುಕಟ್ಟಿ ಪಾಳೆಯಗಳನ್ನು ಮಾಡಿ ಭಿತ್ತಿಭೇದಕ
ಯಂತ್ರಗಳನ್ನು ನಿಲ್ಲಿಸಿ ಅದನ್ನು ಮುತ್ತು. ಆ 3
ಮೇಲೆ ಕಬ್ಬಿಣದ ಹಂಚನ್ನು ತೆಗೆದುಕೊಂಡು ಅದನ್ನು
ನಿನಗೂ ಆ ಪಟ್ಟಣಕ್ಕೂ ಮಧ್ಯೆ ಕಬ್ಬಿಣದ ಗೋಡೆಯ
ನ್ನಾಗಿ ನಿಲ್ಲಿಸಿ ಆ ಪಟ್ಟಣದ ಮೇಲೆ ದೃಷ್ಟಿಯಿಡು;
ಅದು ಮುತ್ತಲ್ಪಡುವದು, ನೀನು ಅದನ್ನು ಮುತ್ತಿ
ದಂತಾಗುವದು. ಇದು ಇಸ್ರಾಯೇಲ್ ವಂಶದವರಿಗೆ
ಗುರುತು.

ಮುತ್ತಿಗೆಯನ್ನೂ ಸೆರೆಯನ್ನೂ ಅನುಭವಿಸಬೇಕಾದ
ಕಾಲಸೂಚನೆ.

ಇದಲ್ಲದೆ ನೀನು ನಿನ್ನ ಎಡಮಗ್ಗುಲಲ್ಲಿ ಮಲಗಿಕೋ, 4
ಇಸ್ರಾಯೇಲ್ ವಂಶದವರ ಅಧರ್ಮದ ಭಾರವು ಅದರ
ಮೇಲೆ ಬಿದ್ದಿದೆ ಎಂದು ಗೊತ್ತಾಗಲಿ; ನೀನು ಎಷ್ಟು
ದಿವಸ ಹೀಗೆ ಮಲಗಿಕೊಂಡಿರುವಿಯೋ ಅಷ್ಟು ದಿವಸ
ಅವರ ಅಧರ್ಮವನ್ನು ಹೊತ್ತುಕೊಂಡಿರುವಿ. ಅವರು 5
ಎಷ್ಟು ವರುಷ ತಮ್ಮ [1]ಅಧರ್ಮದ ಫಲವನ್ನು
ಅನುಭವಿಸಬೇಕೋ ಅಷ್ಟು ದಿವಸ ಅಂದರೆ [2]ಮುನ್ನೂ
ರತೊಂಭತ್ತು ದಿವಸ ನೀನು ಮಲಗಿಕೊಂಡಿರಬೇಕೆಂದು
ನಿನಗೆ ನೇಮಿಸಿದ್ದೇನೆ; ಅಷ್ಟು ದಿವಸ ಇಸ್ರಾಯೇಲ್
ವಂಶದವರ ಅಧರ್ಮವನ್ನು ನೀನು ಹೊತ್ತುಕೊಂಡಿರ
ಬೇಕು. ಅಷ್ಟು ದಿವಸಗಳನ್ನು ತೀರಿಸಿದ ಮೇಲೆ ಬಲ 6
ಮಗ್ಗುಲಲ್ಲಿ ಮಲಗಿಕೊಂಡು ಯೆಹೂದವಂಶದವರ
ಅಧರ್ಮವನ್ನು ಹೊತ್ತುಕೊಳ್ಳಬೇಕು; ವರುಷ ಒಂದ
ಕ್ಕೆ ಒಂದು ದಿನದ ಮೇರೆಗೆ ನಾಲ್ವತ್ತು ದಿನ ಅವರ
ಅಧರ್ಮವನ್ನು ಹೊತ್ತುಕೊಳ್ಳಬೇಕೆಂದು ನಿನಗೆ ಗೊ
ತ್ತುಮಾಡಿದ್ದೇನೆ. ನಿನ್ನ ತೋಳಿಗೆ ಹೊದಿಕೆಯಿಲ್ಲದೆ 7
ಮುತ್ತಿಗೆಯಾದ ಯೆರೂಸಲೇಮಿನ ಕಡೆಗೆ ಮೋರೆ
ತಿರುಗಿಸಿ ಅದರ ವಿಷಯವಾಗಿ ಅಶುಭವನ್ನು ಪ್ರಕಟಿಸು.
ಇಗೋ, ನಿನ್ನ ಮುತ್ತಿಗೆಯ ದಿನಗಳು ತೀರುವ ತನಕ 8
ನೀನು ಬಲಮಗ್ಗುಲಿಂದ ಎಡಮಗ್ಗುಲಿಗೆ ಹೊರಳದಂತೆ
ನಿನ್ನನ್ನು ಬಂಧಿಸುವೆನು.

ಮುತ್ತಿಗೆಯಲ್ಲಿನ ಕೊರತೆ, ಸೆರೆಯಲ್ಲಿನ ಹೊಲೆ, ಇವುಗಳ
ಸೂಚನೆ.

ಇದಲ್ಲದೆ ನೀನು ಗೋದಿ, ಜವೆಗೋದಿ, ಅವರೆ, ಅಲ 9
ಸಂದೆ, ಸಾವೆ, ಕಡಲೆ, ಇವುಗಳನ್ನು ತೆಗೆದು
ಕೊಂಡು ಒಂದೇ ಪಾತ್ರೆಯಲ್ಲಿ ಹಾಕಿ ಅವುಗಳಿಂದ
ರೊಟ್ಟಿಯನ್ನು ಮಾಡಿಕೋ; ಮಗ್ಗುಲಲ್ಲಿ ಮಲಗಿ
ಕೊಳ್ಳುವಷ್ಟು ದಿನ, ಅಂದರೆ ಮುನ್ನೂರತೊಂಭತ್ತು
ದಿನ ಅದನ್ನು ತಿನ್ನು. ನಿನ್ನ ಆಹಾರವನ್ನು ತೂಕದ 10
ಪ್ರಕಾರ ದಿನವೊಂದಕ್ಕೆ ಇಪ್ಪತ್ತು ತೊಲೆಯಂತೆ ತಿನ್ನು;
ಆಗಾಗ್ಗೆ ಸ್ವಲ್ಪ ಸ್ವಲ್ಪ ತಿನ್ನಬೇಕು. ಮತ್ತು ನೀರನ್ನು 11
ಅಳತೆಯ ಪ್ರಕಾರ ದಿನವೊಂದಕ್ಕೆ ಒಂದು ಸೇರಿನಂತೆ

1) ಅಥವಾ: ಅಧರ್ಮವನ್ನು ನಡಿಸುತ್ತಿಪ್ಪರೋ. 2) ಪಾಠಾಂತರಗಳು: ನೂರತೊಂಭತ್ತು, ನೂರಐವತ್ತು.

12 ಕುಡಿ; ಆಗಾಗ್ಗೆ ಸ್ವಲ್ಪ ಸ್ವಲ್ಪ ಕುಡಿಯಬೇಕು. ನೀನು
ಸೌದೆಗೆ ಬದಲಾಗಿ ಮನುಷ್ಯರ ಮಲವನ್ನು ಉಪ
ಯೋಗಿಸಿ ನಿನ್ನ ಜನರ ಕಣ್ಣೆದುರಿಗೆ ಆ ಹಿಟ್ಟನ್ನು
ರೊಟ್ಟಿಮಾಡಿ ಜವೆಗೋದಿಯ ರೊಟ್ಟಿಗಳಂತೆ ತಿನ್ನು.
13 ಹಾಗೆಯೇ ಇಸ್ರಾಯೇಲ್ ವಂಶದವರು ನನ್ನಿಂದ ಅನ್ಯ
ದೇಶಗಳಿಗೆ ಅಟ್ಟಲ್ಪಟ್ಟು ಆ ದೇಶೀಯರ ನಡುವೆ ವಾಸಿ
ಸುತ್ತಾ ತಮ್ಮ ಆಹಾರವನ್ನು ಹೊಲಸಾಗಿ ತಿನ್ನು
14 ವರು; ಇದು ಯೆಹೋವನ ನುಡಿ. ಅದಕ್ಕೆ ನಾನು—
ಅಯ್ಯೋ, ಕರ್ತನಾದ ಯೆಹೋವನೇ, ನಾನು ಹೊಲ
ಸನ್ನು ಮುಟ್ಟಿದವನಲ್ಲ, ನಾನು ಹುಟ್ಟಿದಂದಿನಿಂದ
ಇಂದಿನ ವರೆಗೂ ಸತ್ತ ಪಶುವಿನ ಮಾಂಸವನ್ನಾಗಲಿ
ಕಾಡುಮೃಗವು ಕೊಂದ ಪಶುವಿನ ಮಾಂಸವನ್ನಾಗಲಿ
ತಿಂದವನೇ ಅಲ್ಲ; ಯಾವ ಅಸಹ್ಯಪದಾರ್ಥವೂ ನನ್ನ
15 ಬಾಯೊಳಗೆ ಸೇರಲಿಲ್ಲ ಎಂದು ಅರಿಕೆಮಾಡಲು ಆತನು
ನನಗೆ—ನೋಡು, ಮನುಷ್ಯರ ಮಲಕ್ಕೆ ಬದಲಾಗಿ
ದನಗಳ ಸಗಣಿಯನ್ನು ನಿನಗೆ ಗೊತ್ತುಮಾಡಿದ್ದೇನೆ,
ಇದನ್ನು ಉಪಯೋಗಿಸಿ ನಿನ್ನ ರೊಟ್ಟಿಯನ್ನು ಸುಟ್ಟು
16 ಕೋ ಎಂದು ಉತ್ತರಕೊಟ್ಟನು. ಇದಲ್ಲದೆ ಆತನು
ನನಗೆ ಹೀಗೆ ಹೇಳಿದನು—ನರಪುತ್ರನೇ, ನಾನು
ಯೆರೂಸಲೇಮಿನಲ್ಲಿ ಜೀವನಾಧಾರವನ್ನು ಮುರಿದು
ಬಿಡುವೆನು, ನಿವಾಸಿಗಳು ಅನ್ನವನ್ನು ತೂಕದ ಪ್ರಕಾರ
ಬೆದರಿನಿಂದ ತಿನ್ನುವರು, ನೀರನ್ನು ಅಳತೆಯ ಪ್ರಕಾರ
17 ಬೆರಗಾಗಿ ಕುಡಿಯುವರು; ಅವರಲ್ಲಿ ಪ್ರತಿಯೊಬ್ಬರೂ
ಅನ್ನನೀರಿನ ಕೊರತೆಗೊಳಪಟ್ಟು ಸ್ತಬ್ಧರಾಗಿ ತಮ್ಮ
ಅಧರ್ಮದಿಂದ ಕ್ಷಯಿಸಿಹೋಗುವರು.

ಯೆರೂಸಲೇಮಿನವರ ದುರ್ಗತಿಯ ಸೂಚನೆ.

5 ನರಪುತ್ರನೇ, ಹದವಾದ ಖಡ್ಗವನ್ನು ತೆಗೆದುಕೊಂಡು
ಕ್ಷೌರಕನ ಕತ್ತಿಯನ್ನಾಗಿ ಉಪಯೋಗಿಸಿ ನಿನ್ನ
ತಲೆಯನ್ನೂ ಗಡ್ಡವನ್ನೂ ಬೋಳಿಸಿಬಿಟ್ಟು ತ್ರಾಸನ್ನು
ತಂದು ಅದರಿಂದ ಆ ಕೂದಲನ್ನು ಸರಿಯಾಗಿ ಮೂರು
2 ಭಾಗ ಮಾಡು. ಮುತ್ತಿಗೆಯ ದಿನಗಳು ತೀರಿದ
ಕೂಡಲೆ ಕೂದಲಿನ ಒಂದು ಭಾಗವನ್ನು ಪಟ್ಟಣದ
ಮಧ್ಯದೊಳಗೆ ಬೆಂಕಿಯಲ್ಲಿ ಸುಡು; ಇನ್ನೊಂದು
ಭಾಗವನ್ನು ತೆಗೆದುಕೊಂಡು ಪಟ್ಟಣದ ಸುತ್ತಲು
ಖಡ್ಗದಿಂದ ಕಡಿ; ಮತ್ತೊಂದು ಭಾಗವನ್ನು ಗಾಳಿಗೆ
ತೂರು (ಹಾಗೆಯೇ ನಾನು ನನ್ನ ಜನರ ಹಿಂದೆ ಕತ್ತಿ
3 ಯನ್ನು ಬೀಸುವೆನು). ಆಗ ಕಡೆಯ ಭಾಗದಲ್ಲಿ
ಉಳಿಸಿಕೊಂಡ ಕೆಲವು ಕೂದಲನ್ನು ನಿನ್ನ ಮೇಲಂಗಿಯ
4 ಅಂಚಿನಲ್ಲಿ ಕಟ್ಟು; ಆ ಮೇಲೆ ಇವುಗಳಲ್ಲಿ ಕೆಲವನ್ನು
ಆರಿಸಿ ಬೆಂಕಿಯೊಳಗೆ ಹಾಕಿ ಸುಡು; ಅವುಗಳಿಂದ
ಬೆಂಕಿಯು ಹೊರಟು ಇಸ್ರಾಯೇಲ್ ವಂಶವನ್ನೆಲ್ಲಾ
ವ್ಯಾಪಿಸುವದು.

ನಾಶನಸೂಚನೆಗಳ ವಿವರಣೆ.

5 ಕರ್ತನಾದ ಯೆಹೋವನು ಇಂತೆನ್ನುತ್ತಾನೆ—ಇದು
ಯೆರೂಸಲೇಮು; ಆ ಪಟ್ಟಣವನ್ನು ನಾನು ಜನಾಂಗ
ಗಳ ಮಧ್ಯದಲ್ಲಿ ಸ್ಥಾಪಿಸಿದ್ದೇನೆ, ಅದರ ಸುತ್ತಲು
ನಾನಾ ದೇಶಗಳಿವೆ. ಅದು ನನ್ನ ನಿಯಮನಿಷ್ಠೆಗಳಿಗೆ
ಒಳಪಡದೆ ಜನಾಂಗಗಳಿಗಿಂತಲೂ ಸುತ್ತಲಿನ ದೇಶಗ
ಳವರಿಗಿಂತಲೂ ಹೆಚ್ಚು ಅಧರ್ಮವನ್ನು ನಡಿಸಿದೆ; ಅದರ
ನಿವಾಸಿಗಳು ನನ್ನ ನಿಯಮಗಳನ್ನು ಅನುಸರಿಸದೆ
ನನ್ನ ವಿಧಿಗಳನ್ನು ನಿರಾಕರಿಸಿದ್ದಾರೆ. ಹೀಗಿರಲು ಕರ್ತ
ನಾದ ಯೆಹೋವನು ಇಂತೆನ್ನುತ್ತಾನೆ—ನೀವು ನನ್ನ
ನಿಯಮಗಳನ್ನು ಅನುಸರಿಸದೆ ನನ್ನ ವಿಧಿಗಳನ್ನು
ಕೈಕೊಳ್ಳದೆ ನಿಮ್ಮ ಸುತ್ತಲಿನ ಜನಾಂಗಗಳ ಧರ್ಮವಿ
ಧಿಗಳನ್ನು ಆಚರಿಸದೆ ಆ ಜನಾಂಗಗಳಿಗಿಂತ ಹೆಚ್ಚು
ದೊಂಬಿಮಾಡುವವರಾಗಿರುವದರಿಂದ [ಯೆರೂಸಲೇ
ಮೇ,] ಇಗೋ, ನಾನೇ ನಿನಗೆ ವಿರುದ್ಧನಾಗಿದ್ದೇನೆ,
ಜನಾಂಗಗಳ ಕಣ್ಣೆದುರಿಗೆ ನಿನ್ನ ಜನರನ್ನು ದಂಡಿಸು
ವೆನು; ಇದು ಕರ್ತನಾದ ಯೆಹೋವನ ನುಡಿ.
ನೀನು ಬಹಳ ಅಸಹ್ಯಕಾರ್ಯಗಳನ್ನು ನಡಿಸಿದ್ದರಿಂದ
ನಾನು ಈ ವರೆಗೂ ಇನ್ನು ಮುಂದೆಯೂ ಮಾಡದಂಥ
ದಂಡನೆಯನ್ನು ಈಗ ನಿನಗೆ ಮಾಡುವೆನು. ಹೀಗಿರಲು
ನಿನ್ನಲ್ಲಿ ತಂದೆಗಳು ಮಕ್ಕಳನ್ನು, ಮಕ್ಕಳು ತಂದೆ
ಗಳನ್ನು, ತಿನ್ನುವರು; ನಾನು ನಿನ್ನನ್ನು ದಂಡಿಸಿ ನಿನ್ನಲ್ಲಿ
ಉಳಿದ ಸಮಸ್ತರನ್ನು ಎಲ್ಲಾ ಕಡೆಯ ಗಾಳಿಗೂ ತೂರು
ವೆನು. ಕರ್ತನಾದ ಯೆಹೋವನು ಇಂತೆನ್ನುತ್ತಾನೆ—
ನನ್ನ ಜೀವದಾಣೆ, ನೀನು ನಿನ್ನ ಹೇರಳವಾದ ಹೇಯ
ವಿಗ್ರಹಗಳಿಂದಲೂ ಅಸಹ್ಯವಸ್ತುಗಳಿಂದಲೂ ನನ್ನ
ಪವಿತ್ರಾಲಯವನ್ನು ಹೊಲಸುಮಾಡಿದ್ದರಿಂದ ಖಂಡಿತ
ವಾಗಿ ನಾನು ಸಹಿಸೆನು, ಕಟಾಕ್ಷಿಸೆನು, ಕ್ಷಮಿಸೆನು.
ನಿನ್ನಲ್ಲಿನ ಮೂರನೆಯ ಒಂದು ಭಾಗದವರು ವ್ಯಾಧಿ
ಯಿಂದ ಸಾಯುವರು, ನಿನ್ನ ಮಧ್ಯದಲ್ಲಿ ಕ್ಷಾಮದಿಂದ
ನಾಶವಾಗುವರು; ಇನ್ನೊಂದು ಭಾಗದವರು ನಿನ್ನ
ಸುತ್ತಲು ಖಡ್ಗದಿಂದ ಹತರಾಗುವರು; ಮತ್ತೊಂದು
ಭಾಗದವರನ್ನು ನಾನು ಎಲ್ಲಾ ಕಡೆಯ ಗಾಳಿಗೂ
ತೂರಿ ಅವರ ಹಿಂದೆ ಕತ್ತಿಯನ್ನು ಬೀಸುವೆನು. ಹೀಗೆ
ನನ್ನ ಸಿಟ್ಟನ್ನು ತೀರಿಸಿಕೊಳ್ಳುವೆನು, ನನ್ನ ರೋಷ
ವನ್ನು ಅವರ ಮೇಲೆ ಸುರಿದು ಶಾಂತನಾಗುವೆನು;
ಆಗ್ರಹದಿಂದ ಮಾತಾಡಿದವನು ಯೆಹೋವನಾದ
ನಾನೇ ಎಂಬದು ನನ್ನ ಕೋಪವನ್ನು ಅವರ ಮೇಲೆ
ಹೊಯ್ದುಬಿಟ್ಟ ಬಳಿಕ ಅವರಿಗೆ ಗೊತ್ತಾಗುವದು.
ಹಾದುಹೋಗುವವರೆಲ್ಲರ ಕಣ್ಣೆದುರಿಗೆ ನಾನು ನಿನ್ನನ್ನು
ಹಾಳುಮಾಡಿ ಸುತ್ತಲಿನ ಜನಾಂಗಗಳ ನಿಂದೆಗೆ ಗುರಿ
ಮಾಡುವೆನು. ನಾನು ಕೋಪದಿಂದಲೂ ರೋಷ
ದಿಂದಲೂ ಕಠಿನವಾದ ಖಂಡನೆಯಿಂದಲೂ ನಿನಗೆ ಮಾ
ಡುವ ದಂಡನೆಗಳು ಸುತ್ತಲಿನ ಜನಾಂಗಗಳ ದೂಷಣ
ಪರಿಹಾಸಗಳಿಗೂ ಬುದ್ಧಿವಾದಾಶ್ಚರ್ಯಗಳಿಗೂ ಆಸ್ಪ
ದವಾಗುವವು; ಇದು ಯೆಹೋವನಾದ ನನ್ನ ನುಡಿ.
ಆಗ ನಾನು ನಿನ್ನನ್ನು ಹಾಳುಮಾಡಲಿಕ್ಕೆ ಕ್ಷಾಮವೆಂಬ
ನಾಶಕರವಾದ ತೀಕ್ಷ್ಣಬಾಣಗಳನ್ನು 1)ನಿನ್ನ ಮೇಲೆ
ಬಿಡುವೆನು; ನಿನ್ನನ್ನು ಬರದಿಂದ ಬಹಳವಾಗಿ ಬಾಧಿಸಿ
ನಿನ್ನ ಜೀವನಾಧಾರವನ್ನು ಮುರಿದುಹಾಕುವೆನು; ನಾನು
ಕಳುಹಿಸುವ ಕ್ಷಾಮವೂ ದುಷ್ಟಮೃಗಗಳೂ ನಿನಗೆ

1) ಮೂಲ: ಅವರ.

ಪುತ್ರಶೋಕವನ್ನುಂಟುಮಾಡುವವು; ವ್ಯಾಧಿಯೂ ರಕ್ತ
ಪ್ರವಾಹವೂ ನಿನ್ನಲ್ಲಿ ವ್ಯಾಪಿಸುವವು; ನಿನ್ನನ್ನು ಖಡ್ಗಕ್ಕೆ
ತುತ್ತು ಮಾಡುವೆನು. ಇದು ಯೆಹೋವನಾದ ನನ್ನ
ನುಡಿ.

ಯೆಹೂದದ ನಾಶನಕ್ಕೆ ಕಾರಣವಾದ ಅಪರಾಧಗಳು.
6—11.

ಯೆಹೂದದ ಗುಡ್ಡಗಳಲ್ಲಿನ ಪೂಜ್ಯಗಳ ಮತ್ತು
ಪೂಜಕರ ಧ್ವಂಸ.

6 ಯೆಹೋವನು ಈ ಮಾತನ್ನು ನನಗೆ ದಯಪಾಲಿಸಿ
2 ದನು—ನರಪುತ್ರನೇ, ಇಸ್ರಾಯೇಲಿನ ಬೆಟ್ಟಗಳಿಗೆ
ಅಭಿಮುಖನಾಗಿ ನಿಂತು ಅವುಗಳನ್ನು ಕುರಿತು ಈ
3 ದೈವೋಕ್ತಿಯನ್ನು ನುಡಿ—ಇಸ್ರಾಯೇಲಿನ ಬೆಟ್ಟಗಳೇ,
ಕರ್ತನಾದ ಯೆಹೋವನ ಈ ಮಾತನ್ನು ಕೇಳಿರಿ—ಕರ್ತ
ನಾದ ಯೆಹೋವನು ಬೆಟ್ಟಗುಡ್ಡಗಳಿಗೂ ತೊರೆತಗ್ಗು
ಗಳಿಗೂ ಹೀಗೆ ಹೇಳುತ್ತಾನೆ—ಇಗೋ, ನಾನೇ ನಿಮ್ಮ
ಮೇಲೆ ಖಡ್ಗವನ್ನು ಬರಮಾಡಿ ನಿಮ್ಮ ಪೂಜಾಸ್ಥಳ
4 ಗಳನ್ನು ನಾಶಪಡಿಸುವೆನು. ನಿಮ್ಮ ಯಜ್ಞವೇದಿಗಳು
ಹಾಳಾಗುವವು, ನಿಮ್ಮ ಸೂರ್ಯಸ್ತಂಭಗಳು ಒಡೆ
ಯಲ್ಪಡುವವು, ನಿಮ್ಮವರು ನಿಮ್ಮ ಬೊಂಬೆಗಳ ಮುಂದೆ
5 ಹತರಾಗಿ ಬೀಳುವಂತೆ ಮಾಡುವೆನು. ನಾನು ಇಸ್ರಾಯೇ
ಲ್ಯರ ಶವಗಳನ್ನು ಅವರ ಬೊಂಬೆಗಳ ಮುಂದೆ ಹಾಕಿ
ನಿಮ್ಮ ಯಜ್ಞವೇದಿಗಳ ಸುತ್ತಲು ನಿಮ್ಮ ಎಲುಬು
6 ಗಳನ್ನು ಎರಚಿಬಿಡುವೆನು. ನೀವು ವಾಸಿಸುವ ದೇಶ
ದಲ್ಲೆಲ್ಲಾ ಊರುಗಳು ಹಾಳಾಗುವದರಿಂದಲೂ ಪೂಜಾ
ಸ್ಥಳಗಳು ಪಾಳುಬೀಳುವದರಿಂದಲೂ ನಿಮ್ಮ ಯಜ್ಞ
ವೇದಿಗಳು [1])ಹಾಳುಪಾಳಾಗುವವು, ನಿಮ್ಮ ಬೊಂಬೆ
ಗಳು ಒಡೆಯಲ್ಪಟ್ಟು ಇಲ್ಲವಾಗುವವು, ನಿಮ್ಮ
ಸೂರ್ಯಸ್ತಂಭಗಳು ಕಡಿಯಲ್ಪಡುವವು, ನೀವು ರೂಪಿ
7 ಸಿದ ವಿಗ್ರಹಗಳು ಅಳಿದುಹೋಗುವವು, ಹತರಾದವರು
ನಿಮ್ಮ ಮಧ್ಯದಲ್ಲಿ ಬೀಳುವರು; ಆಗ ನಾನೇ ಯೆಹೋ
8 ವನು ಎಂದು ನಿಮಗೆ ಗೊತ್ತಾಗುವದು. ಆದರೂ
ನಾನು ಜನಶೇಷವನ್ನು ಉಳಿಸುವೆನು; ಹೇಗಂದರೆ
ನೀವು ಅನ್ಯದೇಶಗಳಿಗೆ ಚದರಿಹೋಗುವಾಗ ನಿಮ್ಮಲ್ಲಿ
ಕೆಲವರು ಆ ಜನಾಂಗಗಳ ಮಧ್ಯೆ ಕತ್ತಿಗೆ ತಪ್ಪಿಸಿಕೊ
9 ಳ್ಳುವರು. ಆಗ ತಪ್ಪಿಸಿಕೊಂಡು ಸೆರೆಗೆ ಒಯ್ಯಲ್ಪಟ್ಟು
ಜನಾಂಗಗಳ ಮಧ್ಯೆ ವಾಸಿಸುವ ನಿಮ್ಮವರು ಅನ್ಯದೇವ
ತೆಗಳಲ್ಲಿನ ಮೋಹದಿಂದ ನನ್ನನ್ನು ತೊರೆದ ತಮ್ಮ
ಹೃದಯವನ್ನೂ ತಮ್ಮ ಬೊಂಬೆಗಳ ಮೇಲಣ ಕಾಮ
ದಿಂದ ದೇವದ್ರೋಹಮಾಡಿದ ತಮ್ಮ [2])ಕಣ್ಣುಗಳನ್ನೂ
ಭಂಗಪಡಿಸಿದವನು ನಾನೇ ಎಂಬದಾಗಿ ನನ್ನನ್ನು ಜ್ಞಾಪ
ಕಮಾಡಿಕೊಂಡು ತಾವು ಬಹಳ ಅಸಹ್ಯಕಾರ್ಯಗಳನ್ನು
ನಡಿಸಿ ಕೆಟ್ಟತನವನ್ನು ಮಾಡಿದ್ದೇವೆಂದು ತಮ್ಮನ್ನು
10 ತಾವೇ ಹೇಸಿಕೊಳ್ಳುವರು. ನಾನೇ ಯೆಹೋವನು
ಎಂದು ಅವರಿಗೆ ಗೊತ್ತಾಗುವದು; ಈ ಕೇಡನ್ನು ಅವ
ರಿಗೆ ಮಾಡುವೆನು ಎಂದು ನಾನು ಹೇಳಿದ್ದು ಬರೀ
ಮಾತಲ್ಲ.
ಕರ್ತನಾದ ಯೆಹೋವನು ಇಂತೆನ್ನುತ್ತಾನೆ— 11
ನೀನು ಚಪ್ಪಾಳೆಹೊಡೆದು ನೆಲವನ್ನೊದ್ದು ಹೀಗೆ
ಹೇಳು—ಹಾ, ಇಸ್ರಾಯೇಲ್ ವಂಶದವರ ಅಸಹ್ಯ
ವಾದ ಕೆಟ್ಟಕೆಲಸಗಳೆಷ್ಟು! ಅವರು ಖಡ್ಗಕ್ಷಾಮ
ವ್ಯಾಧಿಗಳಿಂದ ಸತ್ತೇಸಾಯುವರು. ದೂರದಲ್ಲಿರುವ 12
ವನು ವ್ಯಾಧಿಯಿಂದ ಸಾಯುವನು, ಹತ್ತಿರದಲ್ಲಿರು
ವವನು ಖಡ್ಗದಿಂದ ಸಾಯುವನು, ತಪ್ಪಿಸಿಕೊಂಡು
ಉಳಿದವನು ಕ್ಷಾಮದಿಂದ ಸಾಯುವನು; ಅಂತು
ನಾನು ಅವರ ಮೇಲೆ ಇಟ್ಟಿರುವ ರೋಷವನ್ನು ತೀರಿಸಿ
ಬಿಡುವೆನು. ಆ ವಂಶದವರು ಎತ್ತರವಾದ ಎಲ್ಲಾ 13
ಗುಡ್ಡಗಳ ಮೇಲೂ ಎಲ್ಲಾ ಬೆಟ್ಟಗಳ ತುದಿಗಳಲ್ಲಿಯೂ
ಸೊಂಪಾದ ಎಲ್ಲಾ ಮರಗಳ ಕೆಳಗೂ ತಮ್ಮ ಸಮಸ್ತ
ವಿಗ್ರಹಗಳಿಗೆ ಸುಗಂಧಹೋಮಮಾಡುತ್ತಿದ್ದ ದಟ್ಟ
ವಾದ ಎಲ್ಲಾ ಏಲಾ ಮರಗಳ ಕೆಳಗೂ ಹತರಾಗಿ ತಮ್ಮ
ಯಜ್ಞವೇದಿಗಳ ಸುತ್ತಲು ತಮ್ಮ ಬೊಂಬೆಗಳ ನಡುವೆ
ಬಿದ್ದಿರುವಾಗ ನಾನೇ ಯೆಹೋವನು ಎಂದು ಗೊತ್ತಾ
ಗುವದು. ನಾನು ಅವರ ಮೇಲೆ ಕೈಯೆತ್ತಿ ಅವರು 14
ವಾಸವಾಗಿರುವ ದೇಶವನ್ನೆಲ್ಲಾ ಅರಣ್ಯದಿಂದ ದಿಬ್ಲದ
ವರೆಗೂ ಹಾಳುಪಾಳುಮಾಡುವೆನು; ನಾನೇ ಯೆಹೋ
ವನು ಎಂದು ಅವರಿಗೆ ಗೊತ್ತಾಗುವದು.

ಯೆಹೂದದ ವಿಷಯವಾದ ಪ್ರಲಾಪ.

ಇದಲ್ಲದೆ ಯೆಹೋವನು ಈ ಮಾತನ್ನು ನನಗೆ 7
ದಯಪಾಲಿಸಿದನು—ನರಪುತ್ರನೇ, ಕರ್ತನಾದ ಯೆ 2
ಹೋವನು ಇಸ್ರಾಯೇಲ್ ದೇಶಕ್ಕೆ ಹೀಗೆ ನುಡಿಯು
ತ್ತಾನೆ—ಪ್ರಳಯವು, ಪೂರ್ಣ ಪ್ರಳಯವು ದೇಶದ
ಚತುರ್ದಿಕ್ಕಿನಲ್ಲಿಯೂ ಸಂಭವಿಸಿದೆ. ಈಗಲೇ ನಿನಗೆ 3
ಪ್ರಳಯವು ಬಂದುಬಿಟ್ಟಿತು; ನಾನು ನನ್ನ ಕೋಪ
ವನ್ನು ನಿನ್ನ ಮೇಲೆ ಬರಮಾಡಿ ನಿನ್ನ ನಡತೆಗೆ ತಕ್ಕಂತೆ
ನ್ಯಾಯತೀರಿಸಿ ನಿನ್ನ ಸಮಸ್ತ ಅಸಹ್ಯಕಾರ್ಯಗಳ
ಫಲವನ್ನು ನಿನಗೆ ಉಣ್ಣಿಸುವೆನು. ನಿನ್ನನ್ನು ಕಟಾಕ್ಷಿ 4
ಸೆನು, ಉಳಿಸೆನು; ನಿನ್ನ ದುರ್ಮಾರ್ಗಗಳ ಫಲವನ್ನು
ನಿನಗೆ ತಿನ್ನಿಸುವೆನು; ನಿನ್ನ ಅಸಹ್ಯಕಾರ್ಯಗಳು ನಿನ್ನ
ಅನುಭವಕ್ಕೆ ಬರುವವು; ಆಗ ನಾನೇ ಯೆಹೋವನು
ಎಂದು [3]) ನಿನಗೆ ಗೊತ್ತಾಗುವದು.
ಕರ್ತನಾದ ಯೆಹೋವನು ಇಂತೆನ್ನುತ್ತಾನೆ— 5
ಆಹಾ, ಕೇಡು, ಎಂದೂ ಕಾಣದ ಕೇಡು, ಇಗೋ
ಬಂತು! ಪ್ರಳಯವು ಬಂತು, ಪೂರ್ಣ ಪ್ರಳಯವು 6
ಬಂತು, ನಿನ್ನನ್ನು ಚುಚ್ಚುವದಕ್ಕೆ ಎಚ್ಚರಗೊಂಡಿದೆ,
ಇಗೋ ಬಂದೇ ಬಂತು! ದೇಶನಿವಾಸಿಯೇ, ನಿನ್ನ ಗತಿ 7
ಆಯಿತು. ಸಮಯ ಬಂತು, ದಿನ ಹತ್ತಿರಿಸಿತು;
ಬೆಟ್ಟಗಳ ಮೇಲೆ ಕೇಳಿಸುವ ಧ್ವನಿಯು ಉತ್ಸಾಹ
ಧ್ವನಿಯಲ್ಲ, ಕಳಕಳವೇ. ಇನ್ನು ಸ್ವಲ್ಪ ಕಾಲದೊಳಗೆ 8
ನಾನು ನಿನ್ನ ಮೇಲೆ ನನ್ನ ರೋಷಾಗ್ನಿಯನ್ನು ಸುರಿದು

1) ಅಥವಾ: ಹಾಳಾಗಿ ತಮ್ಮ ದೋಷಫಲವನ್ನು ಅನುಭವಿಸುವವು. 2) ಇಬ್ರಿಯ ಮೂಲ: ಕಣ್ಣುಗಳನ್ನೂ ನೋಡಿ ನಾನು ಭಂಗಪಟ್ಟಿದ್ದೇನೆ. 3) ಮೂಲ: ನಿಮಗೆ.

ನನ್ನ ಕೋಪವನ್ನು ತೀರಿಸಿಕೊಂಡು ನಿನ್ನ ನಡತೆಗೆ
ತಕ್ಕ ದಂಡನೆಯನ್ನು ವಿಧಿಸಿ ನಿನ್ನ ಅಸಹ್ಯಕಾರ್ಯ
9 ಗಳ ಫಲವನ್ನೆಲ್ಲಾ ನಿನಗೆ ಉಣ್ಣಿಸುವೆನು. ನಿನ್ನನ್ನು
ಕಟಾಕ್ಷಿಸೆನು, ಉಳಿಸೆನು, ನಿನ್ನ ದುರ್ಮಾರ್ಗ
ಗಳಿಗೆ ತಕ್ಕ ಗತಿಯನ್ನು ಕೊಡುವೆನು, ನಿನ್ನ ಅಸಹ್ಯ
ಕಾರ್ಯಗಳು ನಿನ್ನ ಅನುಭವಕ್ಕೆ ಬರುವವು;
ಯೆಹೋವನಾದ ನಾನು ದಂಡಿಸುವವನು ಎಂಬದು
10 ನಿನಗೆ ಗೊತ್ತೇ ಆಗುವದು. ಆಹಾ, [ದಂಡನೆಯ]
ದಿನವು, ಇಗೋ ಬಂತು! ನಿನಗೆ ದುರ್ಗತಿಯು ಅಂಕು
ರಿಸಿದೆ, ಕೋಲು ಹೂಬಿಟ್ಟಿದೆ, ಹೆಮ್ಮೆಯು ಚಿಗುರಿದೆ.
11 1)ಹಿಂಸೆಯು ಬೆಳೆದು ಬೆಳೆದು ಕೆಡುಕಿನ ಕೋಲಾಗಿದೆ;
ನಿನ್ನವರಲ್ಲಿ ಯಾರೂ [ಉಳಿಯರು], ಆ ಜನಸಮೂಹ
ದಲ್ಲಿಯೂ ಅವರ ಆಸ್ತಿಯಲ್ಲಿಯೂ [ಶೇಷವೇನೂ
ಇರದು]. 2)ಅವರಲ್ಲಿ ಯಾವ ಶ್ರೇಷ್ಠತೆಯೂ ನಿಲ್ಲದು.
12 ಸಮಯ ಬಂತು, ದಿನ ಹತ್ತರಿಸಿತು; ಕೊಂಡುಕೊ
ಳ್ಳುವವನು ಹರ್ಷಿಸದಿರಲಿ, ಮಾರುವವನು ದುಃಖಿಸದಿ
ರಲಿ; ರೋಷಾಗ್ನಿಯು ಆ ಸಮೂಹದವರೆಲ್ಲರ ಮೇಲೆ
13 ಹತ್ತಿದೆ. ಮಾರಿದವನು 3)ಎಷ್ಟು ವರುಷ ಬದುಕಿ
ದರೂ ಮಾರಿದ ಸೊತ್ತು ಅವನ ವಶಕ್ಕೆ ತಿರುಗಿಬಾರದು;
ಉಂಟಾದ ದಿವ್ಯದರ್ಶನವು ಸಮೂಹದವರಿಗೆಲ್ಲಾ
ಸಂಬಂಧಿಸಿದೆ, 4)ಯಾರೂ ಹಿಂದಿರುಗರು, 5)ಯಾರೂ
ತಮ್ಮ ಅಧರ್ಮದಿಂದ ತಮ್ಮ ಜೀವವನ್ನು ಉಳಿಸಿಕೊ
14 ಳ್ಳರು; ಅವರು ಕೊಂಬನ್ನೂದಿ ಸರ್ವಸನ್ನಾಹಮಾಡಿದ
ರೂ ಯಾರೂ ಯುದ್ಧಕ್ಕೆ ಹೊರಡರು; ನನ್ನ ರೋ
ಷಾಗ್ನಿಯು ಆ ಸಮೂಹದವರೆಲ್ಲರ ಮೇಲೆ ಹತ್ತಿದೆ.
15 ಊರ ಹೊರಗೆ ಖಡ್ಗ, ಊರೊಳಗೆ ವ್ಯಾಧಿಕ್ಷಾಮಗಳು;
ಹೊರಗಿರುವವರು ಖಡ್ಗದಿಂದ ಸಾಯುವರು, ಒಳಗಿರು
16 ವವರು ವ್ಯಾಧಿಕ್ಷಾಮಗಳಿಗೆ ತುತ್ತಾಗುವರು. ಅವರಲ್ಲಿ
ಪಲಾಯನಮಾಡಿದವರು ತಪ್ಪಿಸಿಕೊಂಡು ತಮ್ಮ ಅಧ
ರ್ಮದಲ್ಲಿಯೇ ಇದ್ದು ಡೊಂಗರಗಳಲ್ಲಿನ ಪಾರಿವಾಳ
ಗಳಂತೆ ಬೆಟ್ಟಗಳ ಮೇಲೆ ಮೊರೆಯಿಡುತ್ತಿರುವರು.
17 ಎಲ್ಲರ ಕೈಗಳು ಜೋಲುಬಿದ್ದಿರುವವು, ಎಲ್ಲರ ಮೊಣ
18 ಕಾಲುಗಳು ನೀರಿನಂತೆ ಚಂಚಲವಾಗಿರುವವು. ಅವರು
ಗೋಣಿತಟ್ಟನ್ನು ಸುತ್ತಿಕೊಳ್ಳುವರು, ದಿಗಿಲು ಅವರನ್ನು
ಮುಚ್ಚಿಬಿಡುವದು; ಎಲ್ಲರ ಮುಖದಲ್ಲಿಯೂ ನಾಚಿಕೆ
ತೋರುವದು, ಎಲ್ಲರೂ ತಲೆ ಬೋಳಿಸಿಕೊಂಡಿರುವರು.
19 ಅವರು ತಮ್ಮ ಬೆಳ್ಳಿಯನ್ನು ಬೀದಿಗಳಲ್ಲಿ ಬಿಸಾಡು
ವರು, ಅವರ ಬಂಗಾರವು ಅಶುದ್ಧಪದಾರ್ಥದಂತಿರು
ವದು; ಯೆಹೋವನು ತನ್ನ ರೋಷವನ್ನು ತೀರಿಸುವ
ದಿನದಲ್ಲಿ ಅವರ ಬೆಳ್ಳಿಬಂಗಾರವು ಅವರನ್ನು ರಕ್ಷಿಸ
ಲಾರದು; ಅವರ ಇಷ್ಟಾರ್ಥ ನೆರವೇರದು, ಅವರ
ಹೊಟ್ಟೆ ತುಂಬದು; ಏಕಂದರೆ ಅವರ ಆಸ್ತಿಯು
20 ಅವರಿಗೆ ಪಾಪಕಾರಿವಿಘ್ನವಾಗಿತ್ತು. ಅವರ ಆಭರಣ
ಗಳ ಚಂದವು ಅವರಿಗೆ ಗರ್ವಾಸ್ಪದವಾಯಿತು; ಇದ
ಲ್ಲದೆ ಹೇಯವೂ ಅಸಹ್ಯವೂ ಆದ ತಮ್ಮ ದೇವತೆಗಳ
ಪ್ರತಿಮೆಗಳನ್ನು ಬೆಳ್ಳಿಬಂಗಾರದಿಂದ ರೂಪಿಸುತ್ತಿದ್ದರು;
ಆದಕಾರಣ ಅದನ್ನು ಅವರಿಗೆ ಅಶುದ್ಧಪದಾರ್ಥವ
21 ನ್ನಾಗಿ ಮಾಡಿ ಅನ್ಯರ ಕೈಯಿಂದ ಕೊಳ್ಳೆಹೊಡೆಯಿಸಿ
ಲೋಕದ ಅತಿ ದುಷ್ಟರಿಂದ ಸೂರೆಮಾಡಿಸುವೆನು;
22 ಅವರು ಅದನ್ನು ಹೊಲೆಗೊಳಿಸುವರು. ನಾನು ಅವರ
ಕಡೆಯಿಂದ ನನ್ನ ಮುಖವನ್ನು ಓರೆಮಾಡಲು
ನನ್ನ ಇಷ್ಟಮಂದಿರವನ್ನು ಹೊಲೆಗೆಡಿಸುವರು; ಕಳ್ಳರು
23 ಅದರಲ್ಲಿ ನುಗ್ಗಿ ಅದನ್ನು ಹೊಲಸುಮಾಡುವರು.
ಒಂದು ಸರಪಣಿಯನ್ನು ಮಾಡು; ಏಕಂದರೆ ದೇಶವು
ನರಹತ್ಯಭರಿತವಾಗಿದೆ, ಪಟ್ಟಣವು ಬಲಾತ್ಕಾರಪೂರ್ಣ
24 ವಾಗಿದೆ. ಹೀಗಿರಲು ನಾನು ಅತಿದುಷ್ಟಜನಾಂಗಗಳನ್ನು
ಬರಮಾಡುವೆನು, ಅವು ನನ್ನ ಜನರ ಮನೆಗಳನ್ನು ವಶ
ಮಾಡಿಕೊಳ್ಳುವವು; ನಾನು ಬಲಿಷ್ಠರ ಸೊಕ್ಕನ್ನು ಅಡ
ಗಿಸುವೆನು, ಅವರ ಪವಿತ್ರಸ್ಥಾನಗಳು ಹೊಲೆಗೆಡುವವು.
25 ಸಂಕಟ ಸಂಭವಿಸುವದು; ಅವರು ಸಮಾಧಾನವನ್ನು
26 ಹುಡುಕಿದರೂ ಸ್ವಲ್ಪವೂ ಸಿಕ್ಕದು. ಉಪದ್ರವದ
ಮೇಲೆ ಉಪದ್ರವ, ಸುದ್ದಿಯ ಮೇಲೆ ಸುದ್ದಿ, ಬರು
ವವು; ದಿವ್ಯದರ್ಶನವಾಯಿತೇ ಎಂದು ಪ್ರವಾದಿಯನ್ನು
ಕೇಳುತ್ತಲೇ ಇರುವರು; ಯಾಜಕರಲ್ಲಿ ಧರ್ಮೋಪ
ದೇಶವು ಅಡಗಿಹೋಗುವದು, ಹಿರಿಯರಲ್ಲಿ ಮಂತ್ರಾ
27 ಲೋಚನೆಯು ಇಲ್ಲವಾಗುವದು. ಅರಸನು ದುಃಖಿ
ಸುವನು. ದಿಗಿಲು ಪ್ರಭುವನ್ನು ಮುಸುಕುವದು,
ಸಾಧಾರಣಜನರ ಕೈಗಳು ತತ್ತರಿಸುವವು; ನಾನು
ಅವರ ದುರ್ನಡತೆಗೆ ತಕ್ಕ ಪ್ರತೀಕಾರವನ್ನು ಮಾಡಿ
ಅವರ ದುಷ್ಕರ್ಮಗಳಿಗೆ ಸರಿಯಾಗಿ ದಂಡನೆಯನ್ನು
ವಿಧಿಸುವೆನು; ನಾನೇ ಯೆಹೋವನು ಎಂದು ಅವರಿಗೆ
ಗೊತ್ತಾಗುವದು.

ದೇವಾಲಯದಲ್ಲಿನ ಅಸಹ್ಯಕಾರ್ಯಗಳು.

8 [ಯೆಹೋಯಾಖೀನನು ಸೆರೆಯಾದ] ಆರನೆಯ
ವರುಷದ ಆರನೆಯ ತಿಂಗಳಿನ ಐದನೆಯ ದಿನದಲ್ಲಿ
ನಾನೂ ಯೆಹೂದದ ಹಿರಿಯರೂ ನನ್ನ ಮನೆಯೊ
ಳಗೆ ಎದುರುಬದುರಾಗಿ ಕೂತಿರಲು ಕರ್ತನಾದ
ಯೆಹೋವನ ಹಸ್ತಸ್ಪರ್ಶದಿಂದ ನಾನು ಪರವಶನಾ
2 ದೆನು. ಇಗೋ, ನಾನು ನೋಡಲಾಗಿ 6)ಬೆಂಕಿಯು
ಉರಿಯುತ್ತದೋ ಎಂಬಂತೆ ನನಗೆ ತೇಜೋರೂಪವು
ಕಾಣಿಸಿತು; ಸೊಂಟದ ಹಾಗೆ ತೋರುವ ಅದರ
ಮಧ್ಯಭಾಗದಿಂದ ಕೆಳಗಡೆ ಬೆಂಕಿಯು ಉರಿಯು
ತ್ತಿತ್ತು; ಅದರ ಮಧ್ಯಭಾಗದಿಂದ ಮೇಲ್ಗಡೆ ಸುವರ್ಣವು
ಥಳಥಳಿಸುತ್ತದೋ ಎಂಬಂತೆ ಅದ್ಭುತಕಾಂತಿಯು ಹೊಳೆ
3 ಯಿತು. ಆಗ ಆ ತೇಜೋರೂಪಿಯು ಮನುಷ್ಯ
ಹಸ್ತದಂಥ ಹಸ್ತವನ್ನು ಚಾಚಿ ನನ್ನ ಜಂಡಿಕೆಯನ್ನು
ಹಿಡಿಯಲು ದೇವರಾತ್ಮವು ನನ್ನನ್ನು ಎತ್ತಿಕೊಂಡು
ಭೂಮ್ಯಾಕಾಶಗಳ ನಡುವೆ ಯೆರೂಸಲೇಮಿನ ವರೆಗೆ
ಒಯ್ದು ಒಳಗಣ ಪ್ರಾಕಾರದ ಬಡಗಣ ಬಾಗಿಲ
ಮುಂದೆ ದೇವರನ್ನು ರೋಷಗೊಳಿಸುವ ವಿಗ್ರಹವು

1) ಮೂಲವು ಕೇವಲ ಅಸ್ಪಷ್ಟ. 2) ಅಥವಾ: ಅವರ ವಿಷಯವಾಗಿ ಯಾರೂ ಗೋಳಾಡರು. 3) ಅಥವಾ: [ಬಿಡುಗಡೆ ವರುಷದ ವರೆಗೆ] ಬದುಕಿದರೂ. 4) ಅಥವಾ: ನಿರರ್ಥಕವಾಗದು. 5) ಅಥವಾ: ಅಧರ್ಮದಲ್ಲಿಯೇ ಜೀವಿಸುವ ಯಾವನೂ ಬ[...] ಗೊಳ್ಳನು. 6) ಪಾಠಾಂತರ: ಮಾನುಷರೂಪವೋ ಎಂಬಂತೆ ಒಂದು ಆಕಾರವು.

ಮೊದಲಿದ್ದ ಸ್ಥಳದಲ್ಲಿ ಸಿಲ್ಲಿಸಿದ ಹಾಗೆ ದೇವರ ದರ್ಶ
4 ನದಲ್ಲಿ ಕಂಡುಬಂತು; ಆಹಾ, ಇಸ್ರಾಯೇಲಿನ
ದೇವರ ಮಹಿಮಾದ್ಭುತದರ್ಶನವು ಬೈಲುಸೀಮೆಯಲ್ಲಿ
5 ಆದಂತೆ ಇಲ್ಲಿಯೂ ನನಗಾಯಿತು. ಆಗ ಆತನು
ನನಗೆ—ನರಪುತ್ರನೇ, ಬಡಗಲಿಗೆ ಕಣ್ಣೆತ್ತಿ ನೋಡು
ಎಂದು ಹೇಳಿದನು; ಹಾಗೆ ನಾನು ಬಡಗಲಿಗೆ ಕಣ್ಣೆತ್ತಿ
ನೋಡಲು ಇಗೋ, ದೇವರನ್ನು ರೋಷಗೊಳಿಸುವ ಆ
ವಿಗ್ರಹವೇ ಯಜ್ಞವೇದಿಯ ಬಾಗಿಲ ಬಡಗಲಲ್ಲಿ ಬಾಗಿಲ
6 ಮುಂದೆ ನಿಂತಿತು. ಆಗ ಆತನು ನನಗೆ—ನರಪುತ್ರನೇ,
ಇವರು ಮಾಡುವದನ್ನು ನೋಡಿದಿಯಾ? ಇಸ್ರಾ
ಯೇಲ್ ವಂಶದವರು ಇಲ್ಲಿ ನಡಿಸುವ ಅಧಿಕದುರಾ
ಚಾರಗಳನ್ನು ಕಂಡಿಯಾ? ಇದರಿಂದ ನಾನು ನನ್ನ
ಪವಿತ್ರಾಲಯವನ್ನು ಬಿಟ್ಟು ದೂರ ಹೋಗಬೇಕಾ
ಯಿತು. ಬಾ, ಇವುಗಳಿಗಿಂತ ಇನ್ನು ಹೆಚ್ಚಾದ ದುರಾ
7 ಚಾರಗಳನ್ನು ನೋಡುವಿ ಎಂದು ಹೇಳಿದನು. ಆ
ಮೇಲೆ ಆತನು ನನ್ನನ್ನು ಪ್ರಾಕಾರದ ಬಾಗಿಲಿಗೆ ಬರ
ಮಾಡಿದನು; ಇಗೋ, ಆ ಗೋಡೆಯಲ್ಲಿ ಒಂದು
8 ರಂಧ್ರವು ನನಗೆ ಕಾಣಿಸಿತು. ಆಗ ಆತನು ನನಗೆ—
ನರಪುತ್ರನೇ, ಗೋಡೆಯನ್ನು ತೋಡು ಎಂದು ಹೇಳಿ
ದನು. ನಾನು ಗೋಡೆಯನ್ನು ತೋಡಲಾಗಿ ಇಗೋ,
9 ಒಂದು ಬಾಗಿಲು ಕಾಣಿಸಿತು. ಆತನು ನನಗೆ—ನೀನು
ಒಳಹೊಕ್ಕು ಜನರು ಇಲ್ಲಿ ನಡಿಸುವ ಅಸಹ್ಯವಾದ
ದುಷ್ಕಾರ್ಯಗಳನ್ನು ನೋಡು ಎಂದು ಹೇಳಿದಾಗ
10 ನಾನು ಹೊಕ್ಕು ನೋಡಿದೆನು; ಅಕಟಾ, ಎಲ್ಲಾ
ಜಾತಿಯ ಕ್ರಿಮಿಕೀಟಗಳೂ ಅಸಹ್ಯಮೃಗಗಳೂ ಇಸ್ರಾ
ಯೇಲ್ ವಂಶದವರು ಪೂಜಿಸುವ ಸಕಲ ಮೂರ್ತಿ
ಗಳೂ ಸುತ್ತಲೂ ಗೋಡೆಯಲ್ಲಿ ಚಿತ್ರಿಸಲ್ಪಟ್ಟಿದ್ದವು.
11 ಇಸ್ರಾಯೇಲ್ ವಂಶದ ಎಪ್ಪತ್ತು ಮಂದಿ ಹಿರಿಯರೂ
ಅವರ ಮಧ್ಯದಲ್ಲಿ ಶಾಫಾನನ ಮಗನಾದ ಯಾಜ
ನ್ಯನೂ ತಮ್ಮ ತಮ್ಮ ಕೈಗಳಲ್ಲಿ ಧೂಪಾರತಿಗಳನ್ನು
ಹಿಡಿದುಕೊಂಡು ಆ ಚಿತ್ರಗಳ ಮುಂದೆ ನಿಂತಿದ್ದರು;
ಧೂಪದ ಸುವಾಸನೆಯ ಧೂಮವು ಮೇಘವಾಗಿ ಏರು
12 ತ್ತಿತ್ತು. ಆಗ ಆತನು ನನಗೆ—ನರಪುತ್ರನೇ, ಇಸ್ರಾ
ಯೇಲ್ ವಂಶದ ಹಿರಿಯರೆಲ್ಲರೂ ನಾನಾ ರೂಪಗ
ಳಿಂದ ಚಿತ್ರಿಸಲ್ಪಟ್ಟ ತಮ್ಮ ತಮ್ಮ ಕೋಣೆಗಳೊಳಗೆ
ಕತ್ತಲೆಯಲ್ಲಿ ನಡಿಸುವ ಕೆಲಸವನ್ನು ನೋಡಿದಿಯಾ?
ಯೆಹೋವನು ನಮ್ಮನ್ನು ನೋಡನು, ಯೆಹೋವನು
ದೇಶವನ್ನು ತೊರೆದುಬಿಟ್ಟಿದ್ದಾನೆ ಎಂದು ಮಾತಾಡಿ
13 ಕೊಳ್ಳುತ್ತಾರಷ್ಟೆ ಎಂಬದಾಗಿ ಹೇಳಿದನು. ಆ ಮೇಲೆ
ಆತನು ನನಗೆ—ಇವುಗಳಿಗಿಂತ ಇನ್ನೂ ಹೆಚ್ಚಾದ ದು
14 ರಾಚಾರಗಳನ್ನು ನೋಡುವಿ ಎಂದು ಹೇಳಿ ನನ್ನನ್ನು
ಯೆಹೋವನ ಆಲಯದ ಬಡಗಣ ಬಾಗಿಲ ಮುಂದಕ್ಕೆ
ಕರತಂದನು; ಇಗೋ, ಅಲ್ಲಿ ಸ್ತ್ರೀಯರು ತಮ್ಮೂಜ್
15 ದೇವತೆಗೋಸ್ಕರ ಅಳುತ್ತಾ ಕೂತಿದ್ದರು. ಆ ಮೇಲೆ
ಆತನು ನನಗೆ—ನರಪುತ್ರನೇ, ಇದನ್ನು ನೋಡಿದಿಯಾ?
ಇವುಗಳಿಗಿಂತ ಮತ್ತೂ ಹೆಚ್ಚಾದ ದುರಾಚಾರಗಳನ್ನು
16 ನೋಡುವಿ ಎಂದು ಹೇಳಿ ಯೆಹೋವನ ಆಲಯದ
ಒಳಗಣ ಪ್ರಾಕಾರದೊಳಕ್ಕೆ ನನ್ನನ್ನು ಕರತಂದನು;
ಆಹಾ, ಯೆಹೋವನ ಗುಡಿಯ ಬಾಗಿಲ ಮುಂದೆ
ಮಂಟಪಕ್ಕೂ ಯಜ್ಞವೇದಿಗೂ ನಡುವೆ ಸುಮಾರು
ಇಪ್ಪತ್ತೈದು ಜನರು ಯೆಹೋವನ ಗುಡಿಗೆ ಬೆನ್ನು
ಮಾಡಿ ಮೂಡಲಮುಖವಾಗಿ ಉದಯಕಾಲದ ಸೂ
ರ್ಯನನ್ನು ಪೂಜಿಸುತ್ತಿದ್ದರು. ಆಗ ಆತನು ನನಗೆ— 17
ನರಪುತ್ರನೇ, ನೋಡಿದಿಯಾ? ಯೆಹೂದವಂಶದವರು
ತಾವು ಇಲ್ಲಿ ನಡಿಸುವ ಅಸಹ್ಯಕಾರ್ಯಗಳು ಅಲ್ಪ
ವೆಂದು ಭಾವಿಸಿಕೊಂಡರೇನೋ? ದೇಶವನ್ನು ಹಿಂಸೆ
ಯಿಂದ ತುಂಬಿಸಿಬಿಟ್ಟದ್ದಲ್ಲದೆ ನನ್ನನ್ನು ಕೆಣಕಬೇ
ಕೆಂದೇ ಮತ್ತೆ ಯತ್ನಿಸುತ್ತಿದ್ದಾರೆ; ನೋಡು, ಪತ್ರೆ
ಯನ್ನು ಮೂಗಿಗೆ ಒತ್ತಿಕೊಳ್ಳುತ್ತಾರೆ. ಆದಕಾರಣ 18
ನಾನೂ ಕೋಪೋದ್ರೇಕದಿಂದ ವರ್ತಿಸುವೆನು, ಕಟಾಕ್ಷಿ
ಸೆನು, ಉಳಿಸೆನು; ಅವರು ಕೂಗಿಕೊಳ್ಳುವ ಮಹಾ
ಶಬ್ದವು ನನ್ನ ಕಿವಿಗೆ ಬಿದ್ದರೂ ಲಾಲಿಸೆನು.

ಯೆಹೋವನ ದೂತರು ಯೆರೂಸಲೇಮಿನ ನಿವಾಸಿಗಳನ್ನು
ಹತಿಸಿದ್ದು.

9 ಆ ಮೇಲೆ ಆತನು—ಪಟ್ಟಣವನ್ನು ದಂಡಿಸತಕ್ಕವರೇ,
ನೀವೆಲ್ಲರೂ ನಿಮ್ಮ ಹತ್ಯದ ಆಯುಧಗಳನ್ನು ಹಿಡಿದವ
ರಾಗಿ ಸಮೀಪಿಸಿರಿ ಎಂದು ಗಟ್ಟಿಯಾಗಿ ಕೂಗಿ ಹೇಳಿದ
ಮಾತು ನನ್ನ ಕಿವಿಗೆ ಬಿತ್ತು. ಕೂಡಲೆ ಗದೆಗಳನ್ನು 2
ಹಿಡಿದುಕೊಂಡ ಆರುಮಂದಿ ಪುರುಷರು ಉತ್ತರಮುಖ
ವಾಗಿರುವ ಮೇಲಣ ಹೆಬ್ಬಾಗಿಲಿನ ಮಾರ್ಗವಾಗಿ
ಬಂದರು; ನಾರಿನ ಬಟ್ಟೆಯನ್ನು ಹೊದ್ದುಕೊಂಡು
ಲೇಖಕನ ದೌತಿಯನ್ನು ನಡುವಿಗೆ ಕಟ್ಟಿಕೊಂಡಿರುವ
ಮತ್ತೊಬ್ಬ ಪುರುಷನು ಅವರ ಮಧ್ಯದಲ್ಲಿದ್ದನು. ಇವ
ರೆಲ್ಲರೂ ಒಳಕ್ಕೆ ಸೇರಿ ತಾಮ್ರದ ಯಜ್ಞವೇದಿಯ ಪಕ್ಕ
ದಲ್ಲಿ ನಿಂತುಕೊಂಡರು. ಇಷ್ಟರಲ್ಲಿ ಇಸ್ರಾಯೇಲಿನ 3
ದೇವರ ತೇಜಸ್ಸು ತನ್ನ ವಾಹನವಾದ ಕೆರೂಬಿಯನ್ನು
ಬಿಟ್ಟು ಮೇಲಕ್ಕೇರಿ ಆಲಯದ ಹೊಸ್ತಿಲಿನ ಮೇಲ್ಗಡೆ
ನಿಂತಿತ್ತು; ಆಗ ನಾರಿನ ಬಟ್ಟೆಯನ್ನು ಹೊದ್ದು
ಕೊಂಡು ಲೇಖಕನ ದೌತಿಯನ್ನು ನಡುವಿಗೆ ಕಟ್ಟಿ
ಕೊಂಡಿರುವ ಪುರುಷನನ್ನು ಯೆಹೋವನು ಕೂಗಿ ಅವನಿ
ಗೆ—ನೀನು ಯೆರೂಸಲೇಮ್ ಪಟ್ಟಣದಲ್ಲೆಲ್ಲಾ ತಿರುಗಿ 4
ಅದರೊಳಗೆ ನಡೆಯುವ ಸಮಸ್ತ ಅಸಹ್ಯಕಾರ್ಯ
ಗಳಿಗಾಗಿ ನರಳಿ ಗೋಳಾಡುತ್ತಿರುವ ಜನರ ಹಣೆಯ
ಮೇಲೆ ಗುರುತುಮಾಡು ಎಂದು ಅಪ್ಪಣೆಕೊಟ್ಟನು.
ಮಿಕ್ಕವರಿಗೆ—ನೀವು ಪಟ್ಟಣದಲ್ಲೆಲ್ಲಾ ಇವನ ಹಿಂದೆ 5
ತಿರುಗುತ್ತಾ ಹತಿಸಿರಿ; ಯಾರನ್ನೂ ಕಟಾಕ್ಷಿಸದಿರಿ, ಉಳಿ
ಸದಿರಿ; ವೃದ್ಧ, ಯುವಕ, ಯುವತಿ, ಸ್ತ್ರೀ, ಬಾಲಕ 6
ಎನ್ನದೆ ಸಕಲರನ್ನೂ ಸಂಹಾರಮಾಡಿಬಿಡಿರಿ; ಆದರೆ ಆ
ಗುರುತುಳ್ಳವರಲ್ಲಿ ಯಾರನ್ನೂ ಮುಟ್ಟಬೇಡಿರಿ; ನನ್ನ
ಆಲಯದಲ್ಲಿಯೇ ಪ್ರಾರಂಭಮಾಡಿರಿ ಎಂಬದಾಗಿ
ಆತನು ನನಗೆ ಕೇಳಿಸುವಂತೆ ಅಪ್ಪಣೆಮಾಡಿದನು.
ಆಗ ದೇವಾಲಯದ ಮುಂದೆ ಇದ್ದ ಹಿರಿಯರನ್ನು
ಮೊದಲುಗೊಂಡು ಹತಿಸತೊಡಗಿದರು. ಆತನು ಅವ 7
ರಿಗೆ—ಹೊರಡಿರಿ, ಪ್ರಾಕಾರಗಳನ್ನು ಶವಗಳಿಂದ ತುಂಬಿ
ಸಿ ದೇವಾಲಯವನ್ನು ಹೊಲೆಗೆಡಿಸಿರಿ ಎಂದು ಅಪ್ಪಣೆ
ಕೊಡಲು ಅವರು ಹೊರಟು ಪಟ್ಟಣದಲ್ಲಿದ್ದವರನ್ನು
ಹತಿಸಿದರು. ಅವರು ಹೊಡೆಯುತ್ತಿರುವಾಗ ಅಲ್ಲಿ 8
ಒಂಟಿಗನಾಗಿ ಉಳಿದ ನಾನು ಅಡ್ಡಬಿದ್ದು—ಅಯ್ಯೋ,

ಕರ್ತನಾದ ಯೆಹೋವನೇ, ನೀನು ಯೆರೂಸಲೇಮಿನ
ಮೇಲೆ ನಿನ್ನ ಕೋಪಾಗ್ನಿಯನ್ನು ಹೊಯ್ದು ಇಸ್ರಾ
ಯೇಲಿನ ಶೇಷವನ್ನೆಲ್ಲಾ ನಾಶಮಾಡುವಿಯಾ ಎಂದು
9 ಮೊರೆಯಿಡಲು ಆತನು ನನಗೆ—ಇಸ್ರಾಯೇಲ್
ಮತ್ತು ಯೆಹೂದ ವಂಶದವರ ಅಧರ್ಮವು ಅತ್ಯಂತ
ವಾಗಿದೆ; ದೇಶವು ರಕ್ತಪೂರ್ಣವಾಗಿದೆ, ಪಟ್ಟಣವು
ಅನ್ಯಾಯಭರಿತವಾಗಿದೆ; ಆ ವಂಶದವರು—ನಮ್ಮ
ದೇಶವನ್ನು ಯೆಹೋವನು ಬಿಟ್ಟುಬಿಟ್ಟಿದ್ದಾನೆ, ಯೆ
ಹೋವನು ನೋಡನು ಎಂಬದಾಗಿ ಮಾತಾಡಿಕೊಳ್ಳು
10 ತ್ತಿದ್ದಾರಲ್ಲಾ; ನಾನಂತು ಅವರನ್ನು ಕಟಾಕ್ಷಿಸೆನು,
ಉಳಿಸೆನು, ಅವರ ದುರ್ನಡತೆಯನ್ನು ಅವರ ತಲೆಗೆ
11 ಕಟ್ಟುವೆನು ಎಂದು ಹೇಳಿದನು. ಕೂಡಲೆ ನಾರಿನ
ಬಟ್ಟೆಯನ್ನು ಹೊದ್ದುಕೊಂಡು ದೌತಿಯನ್ನು ನಡುವಿಗೆ
ಕಟ್ಟಿಕೊಂಡಿರುವ ಪುರುಷನು ನಿನ್ನ ಅಪ್ಪಣೆಯಂತೆಯೇ
ಮಾಡಿದ್ದೇನೆ ಎಂದು ಅರಿಕೆಮಾಡಿದನು.

ಯೆಹೋವನ ವಾಹನದರ್ಶನ, ಪಟ್ಟಣದ ಅಗ್ನಿಪ್ರಲಯ.

10 ಇಗೋ, ನಾನು ನೋಡಲಾಗಿ ಕೆರೂಬಿಗಳ ತಲೆಗಳ
ಮೇಲಣ ನೆಲಗಟ್ಟಿನ ಮೇಲ್ಗಡೆ ಇಂದ್ರನೀಲಮಣಿ
ಯಂತೆ ಹೊಳೆಯುವ ಸಿಂಹಾಸನಾಕಾರವು ಕಾಣಿಸಿತು.
2 ಆತನು ನಾರಿನ ಬಟ್ಟೆಯನ್ನು ಹೊದ್ದುಕೊಂಡ ಆ
ಪುರುಷನಿಗೆ—ನೀನು ಗರಗರನೆ ತಿರುಗುವ ಗಾಲಿಗಳ
ನಡುವೆ ಕೆರೂಬಿಯ ಕೆಳಗೆ ಪ್ರವೇಶಿಸಿ ಕೆರೂಬಿಗಳ
ಮಧ್ಯದೊಳಗಿಂದ ಬೊಗಸೆಯಲ್ಲಿ ಕೆಂಡಗಳನ್ನು ತುಂಬಿ
ತಂದು ಪಟ್ಟಣದ ಮೇಲೆ ಎರಚು ಎಂದು ಅಪ್ಪಣೆಕೊಡ
ಲು ಅವನು ನನ್ನ ಕಣ್ಣೆದುರಿಗೆ ಹೋಗಿ ಅಲ್ಲಿ ಪ್ರವೇಶಿ
3 ಸಿದನು. ಅವನು ಸೇರಿದಾಗ ಕೆರೂಬಿಗಳು ದೇವಾಲ
ಯದ ತೆಂಕಲಲ್ಲಿ ನಿಂತಿದ್ದವು, ಮೇಘವು ಒಳಗಣ
4 ಪ್ರಾಕಾರವನ್ನು ತುಂಬಿತ್ತು. ಇದಲ್ಲದೆ ಯೆಹೋವನ
ತೇಜಸ್ಸು ಕೆರೂಬಿಗಳನ್ನು ಬಿಟ್ಟು ಮೇಲಕ್ಕೇರಿ ದೇವಾ
ಲಯದ ಹೊಸ್ತಲಿನ ಮೇಲ್ಗಡೆ ನಿಂತಿತು; ದೇವಾಲಯ
ದಲ್ಲಿಯೂ ಮೇಘವು ತುಂಬಿತ್ತು; ಯೆಹೋವನ ತೇಜ
ಸ್ಸಿನ ಅದ್ಭುತಕಾಂತಿಯು ಪ್ರಾಕಾರದಲ್ಲೆಲ್ಲಾ ವ್ಯಾಪಿ
5 ಸಿತ್ತು. ಆಗ ಕೆರೂಬಿಗಳ ರೆಕ್ಕೆಗಳ ಶಬ್ದವು ಸರ್ವ
ಶಕ್ತನಾದ ದೇವರು ಮಾತಾಡುವ ಧ್ವನಿಯಷ್ಟು ಗಂಭೀ
ರವಾಗಿ ಹೊರಗಣ ಪ್ರಾಕಾರದ ಪರ್ಯಂತವೂ ಕೇಳಿ
6 ಸಿತು. ಆತನು ನಾರಿನ ಬಟ್ಟೆಯನ್ನು ಹೊದ್ದು
ಕೊಂಡಿದ್ದ ಪುರುಷನಿಗೆ—ನೀನು ಗರಗರನೆ ತಿರುಗುವ
ಗಾಲಿಗಳ ನಡುವೆ ಪ್ರವೇಶಿಸಿ ಕೆರೂಬಿಗಳ ಮಧ್ಯದೊಳ
ಗಿಂದ ಬೆಂಕಿಯನ್ನು ತೆಗೆದುಕೋ ಎಂದು ಅಪ್ಪಣೆ
ಕೊಡಲು ಅವನು ಒಳಕ್ಕೆ ಹೋಗಿ ಒಂದು ಚಕ್ರದ ಪಕ್ಕ
7 ದಲ್ಲಿ ನಿಂತುಕೊಂಡನು. ಆಗ ಒಂದು ಕೆರೂಬಿಯು
ಕೆರೂಬಿಗಳ ನಡುವೆ ಕೈ ಚಾಚಿ ಅವುಗಳ ಮಧ್ಯದಲ್ಲಿದ್ದ
ಬೆಂಕಿಯನ್ನು ತೆಗೆದು ನಾರಿನ ಬಟ್ಟೆಯನ್ನು ಹೊದ್ದವನ
ಬೊಗಸೆಯಲ್ಲಿ ಹಾಕಿತು; ಅವನು ಅದನ್ನು ತೆಗೆದು

ಕೊಂಡು ಆಚೆಗೆ ಹೊರಟನು. (ಕೆರೂಬಿಗಳ ಒಂದೊಂದ
ರೆಕ್ಕೆಯ ಕೆಳಗೂ ಮನುಷ್ಯಹಸ್ತದಂಥ ಒಂದೊಂದ
ಹಸ್ತವು ಕಾಣಿಸಿತು.)
ಇಗೋ, ನಾನು ನೋಡಲಾಗಿ ಆ ಕೆರೂಬಿಗ
ಪಕ್ಕಗಳಲ್ಲಿ, ಒಂದೊಂದು ಕೆರೂಬಿಯ ಪಕ್ಕದಲ
ಒಂದೊಂದು ಚಕ್ರದಂತೆ ನಾಲ್ಕು ಚಕ್ರಗಳಿದ್ದವು;
ಚಕ್ರಗಳ ಬಣ್ಣವು ಪೀತರತ್ನದ ಹಾಗೆ ಹೊಳೆಯಿತ
ಅವುಗಳ ರೂಪವು ಹೇಗಂದರೆ ಒಂದು ಚಕ್ರದೊಳ
ಇನ್ನೊಂದು ಚಕ್ರವು [ಅಡ್ಡವಾಗಿ] ರಚಿಸಿದಂತಿತ್ತು,
ನಾಲ್ಕು ಒಂದೇ ಮಾದರಿಯಾಗಿದ್ದವು. ಅವು ಹೊರಳ
ವಾಗ ನಾಲ್ಕು ಕಡೆಗಳಲ್ಲಿ ಯಾವ ಕಡೆಗಾದರ
ಹೊರಳುತ್ತಿದ್ದವು, ಓರೆಯಾಗಿ ಹೊರಳುತ್ತಿರಲಿಲ್ಲ
ಎದುರುಮುಖವಾಗಿ ಹೋಗುತ್ತಿದ್ದವೇ ಹೊರತು ಓ
ಯಾಗಿ ಹೋಗುತ್ತಿರಲಿಲ್ಲ. ಕೆರೂಬಿಗಳ ಬೆನ್ನು, ಕೆ
ರೆಕ್ಕೆ, ಅಂತು ಸರ್ವಾಂಗಗಳಲ್ಲಿಯೂ ಚಕ್ರಗಳಲ್ಲಿಯ
ಕಣ್ಣುಗಳು ಸರ್ವತ್ರ ತುಂಬಿದ್ದವು; ನಾಲ್ಕು ಕೆರೂ
ಗಳಲ್ಲಿ ಒಂದೊಂದಕ್ಕೂ ಒಂದೊಂದು ಚಕ್ರವಿತ್ತು
(ನಾನು ಕೇಳಿದಂತೆ ಆ ಚಕ್ರಗಳ ಹೆಸರು ಗರಗರಗಾ
ಎಂಬದೇ.) ಒಂದೊಂದು ಕೆರೂಬಿಗೆ ನಾಲ್ಕು ನಾಲ
ಮುಖಗಳಿದ್ದವು; ಮೊದಲನೇದು ಕೆರೂಬಿಯದು, ಎ
ಡನೇದು ಮನುಷ್ಯನದು, ಮೂರನೇದು ಸಿಂಹನದ
ನಾಲ್ಕನೇದು ಗರುಡಪಕ್ಷಿಯದು. ಆ ಕೆರೂಬಿಗಳ
ಮೇಲಕ್ಕೆ ಏರಿದವು; ನಾನು ಕೆಬಾರ್ ನದಿಯ ಹತ್ತಿ
ನೋಡಿದ [1]ಜೀವಿಗಳು ಇವೇ. ಕೆರೂಬಿಗಳು ಮು
ದರಿಯುವಾಗ ಚಕ್ರಗಳೂ ಅವುಗಳ ಪಕ್ಕದಲ್ಲಿ ಮು
ದರಿಯುತ್ತಿದ್ದವು; ಕೆರೂಬಿಗಳು ನೆಲದಿಂದ ಮೇಲ
ಏರಬೇಕೆಂದು ರೆಕ್ಕೆಗಳನ್ನು ಹರಡಿಕೊಂಡಾಗ ಚ
ಗಳೂ ಓರೆಯಾಗದೆ ಅವುಗಳ ಸಂಗಡಲೇ ಏರಿದವ
[2]ಜೀವಿಗಳ ಆತ್ಮವು ಚಕ್ರಗಳಲ್ಲಿಯೂ ಇದ್ದ ಕಾರ
ಅವು ನಿಂತುಹೋದಾಗ ಇವೂ ನಿಂತುಹೋದವು, ಅ
ಏರಿದಾಗ ಇವೂ ಅವುಗಳ ಜೊತೆಯಲ್ಲೇ ಏರಿದವ
ಬಳಿಕ ಯೆಹೋವನ ತೇಜಸ್ಸು ದೇವಾಲಯದ ಹೊಸ
ಲನ್ನು ಬಿಟ್ಟು ಕೆರೂಬಿಗಳ ಮೇಲೆ ನಿಂತಿತು. ಆ
ನನ್ನ ಕಣ್ಣೆದುರಿಗೆ ಕೆರೂಬಿಗಳು ರೆಕ್ಕೆಗಳನ್ನು ಹರ
ಕೊಂಡು ಚಕ್ರಸಮೇತವಾಗಿ ನೆಲದಿಂದ ಏರಿ ಹೊರಟ
ಯೆಹೋವನ ಆಲಯದ ಮೂಡಣ ಬಾಗಿಲ ಮುಂ
ನಿಂತವು, ಅವುಗಳ ಮೇಲ್ಗಡೆ ಇಸ್ರಾಯೇಲಿನ ದೇವ
ತೇಜಸ್ಸು ನೆಲಸಿತ್ತು. ಇಸ್ರಾಯೇಲಿನ ದೇವ
ವಾಹನವಾಗಿ ಕೆಬಾರ್ ನದಿಯ ಹತ್ತಿರ ನನಗೆ ಕಾ
ಸಿದ ಆ ಜೀವಿಗಳು ಇವೇ; ಅವು ಕೆರೂಬಿಗಳೆಂದು ಈ
ನನಗೆ ತಿಳಿಯಬಂತು. ಒಂದೊಂದಕ್ಕೆ ನಾಲ್ಕು ನಾಲ
ಮುಖಗಳೂ ನಾಲ್ಕು ನಾಲ್ಕು ರೆಕ್ಕೆಗಳೂ ಇದ್ದವ
ಅವುಗಳ ರೆಕ್ಕೆಗಳ ಕೆಳಗೆ ಮನುಷ್ಯ ಹಸ್ತದಂಥ ಹ
ಗಳಿದ್ದವು; ಅವುಗಳ ಮುಖಗಳು ಕೆಬಾರ್ ನದಿಯ
ಹತ್ತಿರ ನಾನು ಕಂಡ ಮುಖಗಳಂತೆ ನನಗೆ ಕಂ
ಬಂದವು, ಅವು ಆ ಮುಖಗಳೇ; ಪ್ರತಿಯೊಂದು ಜ
ವಿಯು ಹೊರಟ ಮುಖವಾಗಿಯೇ ಹೋಗುತ್ತಿತ್ತು

1) ಮೂಲ: ಜೀವಿಯು ಇದೇ. 2) ಮೂಲ: ಜೀವಿಯು.

### ಯೆರೂಸಲೇಮಿನ ಮಂತ್ರಾಲೋಚಕರ ದುರ್ಬುದ್ಧಿಯನ್ನು ಖಂಡಿಸಿದ್ದು.

11 ಆ ಮೇಲೆ ದೇವರಾತ್ಮವು ನನ್ನನ್ನು ಎತ್ತಿ ಪೂರ್ವ
ದಿಕ್ಕಿಗೆ ಅಭಿಮುಖವಾಗಿರುವ ಯೆಹೋವನ ಆಲ
ಯದ ಮೂಡಣ ಬಾಗಿಲಿಗೆ ತಂದುಬಿಟ್ಟಿತು; ಇಗೋ,
ಬಾಗಿಲ ಮುಂದೆ ಇಪ್ಪತ್ತೈದು ಜನರು ನಿಂತಿದ್ದರು;
ನಾನು ಅವರ ಮಧ್ಯದಲ್ಲಿ ಅಜ್ಜೂರನ ಮಗನಾದ
ಯಾಜನ್ಯ, ಬೆನಾಯನ ಮಗನಾದ ಪೆಲತ್ಯ ಎಂಬ
2 ಜನದೊಡೆಯರನ್ನು ನೋಡಿದೆನು. ಅಲ್ಲಿ ಆತನು
ನನಗೆ—ನರಪುತ್ರನೇ, ಪಟ್ಟಣದಲ್ಲಿ ಕುತಂತ್ರಗಳನ್ನು
ಕಲ್ಪಿಸಿ ದುರಾಲೋಚನೆಯನ್ನು ಹೇಳಿಕೊಡುವವರು
3 ಈ ಜನರೇ; ಇವರು—ಮನೆಗಳನ್ನು ಕಟ್ಟಿಕೊಳ್ಳುವ
ಕಾಲವು [1]ಬಂದಿಲ್ಲ; ಈ ಪಟ್ಟಣವು ಹಂಡೆ, ನಾವು
4 ಮಾಂಸ ಎಂದು ಹೇಳುತ್ತಾರೆ. ಆದಕಾರಣ, ನರ
ಪುತ್ರನೇ, ನೀನು ಇವರ ವಿಷಯವಾಗಿ ಅಹಿತವನ್ನು
5 ನುಡಿ, ತಪ್ಪದೆ ನುಡಿ ಎಂದು ಆಜ್ಞಾಪಿಸಿದನು. ಆಗ
ಯೆಹೋವನ ಆತ್ಮವು ನನ್ನಲ್ಲಿ ಆವೇಶಿಸಲು ಹೀಗೆ
ಸಾರಬೇಕೆಂದು ಅಪ್ಪಣೆಯಾಯಿತು. ಯೆಹೋವನು
ಇಂತೆನ್ನುತ್ತಾನೆ—ಇಸ್ರಾಯೇಲ್ ವಂಶದವರೇ, ನೀವು
ಹೀಗೆ ಮಾತಾಡುತ್ತಿದ್ದೀರಿ, ಸರಿ; ನಿಮ್ಮ ಮನಸ್ಸಿನಲ್ಲಿ
ಹುಟ್ಟಿರುವ ಆಲೋಚನೆಗಳು ನನಗೆ ಗೊತ್ತೇ ಇವೆ.
6 ನೀವು ಈ ಪಟ್ಟಣದಲ್ಲಿ ನರಹತ್ಯವನ್ನು ಹೆಚ್ಚೆಚ್ಚಾಗಿ
ಮಾಡಿ ಹತರಾದವರಿಂದ ಬೀದಿಗಳನ್ನು ತುಂಬಿಸಿದ್ದೀರಿ.
7 ಆದಕಾರಣ ಕರ್ತನಾದ ಯೆಹೋವನು ಇಂತೆನ್ನು
ತ್ತಾನೆ—ನಿಮ್ಮ ದೋಷದಿಂದ ಹತರಾಗಿ ಪಟ್ಟಣದಲ್ಲಿ
ಬಿದ್ದಿರುವ ನಿಮ್ಮವರ ಶವಗಳೇ ಹಂಡೆಯಲ್ಲಿನ
ಮಾಂಸ, ಈ ಪಟ್ಟಣವು ಹಂಡೆ, ನಿಮ್ಮನ್ನಾದರೋ
8 ನಾನು ಪಟ್ಟಣದೊಳಗಿಂದ ಕಿತ್ತುಹಾಕುವೆನು. ಖಡ್ಗಕ್ಕೆ
ಹೆದರಿದ ನಿಮ್ಮನ್ನೇ ಖಡ್ಗಕ್ಕೆ ಗುರಿಮಾಡುವೆನು; ಇದು
9 ಕರ್ತನಾದ ಯೆಹೋವನ ನುಡಿ. ನಾನು ಪಟ್ಟಣ
ದೊಳಗಿಂದ ನಿಮ್ಮನ್ನು ಕಿತ್ತು ಅನ್ಯರ ಕೈಗೆ ಕೊಟ್ಟು
10 ದಂಡಿಸುವೆನು. ನೀವು ಖಡ್ಗಕ್ಕೆ ತುತ್ತಾಗುವಿರಿ. ಇಸ್ರಾ
ಯೇಲಿನ ಮೇರೆಯಲ್ಲಿ ನಿಮಗೆ ದಂಡನೆಯನ್ನು ವಿಧಿ
ಸುವೆನು, ನಾನೇ ಯೆಹೋವನು ಎಂದು ನಿಮಗೆ
11 ಗೊತ್ತಾಗುವದು. ಈ ಪಟ್ಟಣವು ನಿಮಗೆ ಹಂಡೆಯಾ
ಗುವದಿಲ್ಲ; ನೀವು ಅದರಲ್ಲಿನ ಮಾಂಸವಾಗುವ
ದಿಲ್ಲ. ಇಸ್ರಾಯೇಲಿನ ಮೇರೆಯಲ್ಲಿ ನಿಮಗೆ ದಂಡನೆ
12 ಯನ್ನು ವಿಧಿಸುವೆನು. ನಾನೇ ಯೆಹೋವನು ಎಂದು
ನಿಮಗೆ ಗೊತ್ತಾಗುವದು; ನೀವು ನನ್ನ ವಿಧಿಗಳನ್ನು
ಕೈಕೊಳ್ಳದೆ ನನ್ನ ನಿಯಮಗಳನ್ನು ಅನುಸರಿಸದೆ ನಿಮ್ಮ
ಸುತ್ತಲಿನ ಜನಾಂಗಗಳ ಆಚಾರಗಳನ್ನೇ ಅನುಸರಿಸಿದ್ದ
ರಿಂದ ಇದೆಲ್ಲಾ ಆಗುವದು.
13 ನಾನು ಈ ಮಾತನ್ನು ನುಡಿಯುತ್ತಿರುವಾಗಲೇ
ಬೆನಾಯನ ಮಗನಾದ ಪೆಲತ್ಯನು ಸತ್ತುಹೋದನು.
ಆಗ ನಾನು ಅಡ್ಡಬಿದ್ದು ಗಟ್ಟಿಯಾಗಿ ಕೂಗಿಕೊಂಡು—
ಅಯ್ಯೋ, ಕರ್ತನಾದ ಯೆಹೋವನೇ, ಇಸ್ರಾಯೇಲಿ
ನಲ್ಲಿ ಉಳಿದವರನ್ನು ಸಂಪೂರ್ಣವಾಗಿ ನಿರ್ಮೂಲ
ಮಾಡುವಿಯೋ ಎಂದು ಮೊರೆಯಿಟ್ಟೆನು.

### ಸೆರೆಯವರಿಗೆ ಕೊಟ್ಟ ವಾಗ್ದಾನ.

ಆಗ ಯೆಹೋವನು ಈ ಮಾತನ್ನು ನನಗೆ ದಯಪಾ 14
ಲಿಸಿದನು—ನರಪುತ್ರನೇ, ನಿನ್ನ ಸಹೋದರರು, ನಿನ್ನ 15
ಅಣ್ಣತಮ್ಮಂದಿರು, ನಿನ್ನ ನೆಂಟರು ಅಂತು ಯೆರೂಸಲೇ
ಮಿನವರು ಇಸ್ರಾಯೇಲ್ ವಂಶದವರಲ್ಲಿ ಯಾರ
ಯಾರನ್ನು—ಯೆಹೋವನ ಬಳಿಯಿಂದ ದೂರವಾಗಿ
ತೊಲಗಿರಿ, ಈ ದೇಶವು ನಮಗೇ ಸ್ವಾಸ್ತ್ಯವಾಗಿ ಸಿಕ್ಕಿದೆ
ಎಂದು ಹೀನೈಸಿದರೋ ಅವರೆಲ್ಲರೂ ಉಳಿದಿದ್ದಾರಲ್ಲಾ.
ಆದಕಾರಣ ನೀನು ಹೀಗೆ ಸಾರು—ಕರ್ತನಾದ ಯೆ 16
ಹೋವನು ಇಂತೆನ್ನುತ್ತಾನೆ—ನಾನು ಅವರನ್ನು ದೂರ
ವಾಗಿ ತೊಲಗಿಸಿ ಜನಾಂಗಗಳಲ್ಲಿ ಅನ್ಯದೇಶಗಳೊಳಗೆ
ಚದರಿಸಿದರೂ ಅವರು ಸೇರಿರುವ ದೇಶಗಳಲ್ಲಿಯೇ
ನಾನು ಕೊಂಚ ಕಾಲದ ಮಟ್ಟಿಗೆ ಅವರಿಗೆ ಪವಿತ್ರಾಲ
ಯವಾಗಿರುವೆನು. ಆ ಮೇಲೆ [2]ಅವರನ್ನು ಜನಾಂಗ 17
ಗಳೊಳಗಿಂದ ಕೂಡಿಸುವೆನು, ಚದರಿರುವ ದೇಶಗಳಿಂದ
[2]ಅವರನ್ನು ಒಟ್ಟಿಗೆ ಬರಮಾಡಿ ಇಸ್ರಾಯೇಲ್ ದೇಶವ
ನ್ನು [2]ಅವರಿಗೆ ದಯಪಾಲಿಸುವೆನು. ಅವರು ಅಲ್ಲಿಗೆ 18
ಸೇರಿ ಎಲ್ಲಾ ಅಸಹ್ಯವಸ್ತುಗಳನ್ನೂ ಸಮಸ್ತ ಹೇಯವಿ
ಗ್ರಹಗಳನ್ನೂ ಅಲ್ಲಿಂದ ತೆಗೆದುಹಾಕುವರು. ಅವರು 19
ನನ್ನ ನಿಯಮಗಳನ್ನು ಅನುಸರಿಸಿ ನನ್ನ ವಿಧಿಗಳನ್ನು
ಕೈಕೊಂಡು ನೆರವೇರಿಸಲಿ ಎಂದು ನಾನು ಅವರಿಗೆ
ಒಂದೇ ಮನಸ್ಸನ್ನು ದಯಪಾಲಿಸಿ ನೂತನಸ್ವಭಾವ
ವನ್ನು [3]ಅವರಲ್ಲಿ ಹುಟ್ಟಿಸುವೆನು; ಕಲ್ಲಾದ ಹೃದ 20
ಯವನ್ನು ಅವರೊಳಗಿಂದ ತೆಗೆದು ಮೃದುವಾದ ಹೃದ
ಯವನ್ನು ಅವರಿಗೆ ಅನುಗ್ರಹಿಸುವೆನು; ಅವರು ನನಗೆ
ಪ್ರಜೆಯಾಗಿರುವರು, ನಾನು ಅವರಿಗೆ ದೇವರಾಗಿರು
ವೆನು. ಆದರೆ ಯಾರ ಚಿತ್ತವು ತಮ್ಮ ಅಸಹ್ಯವಸ್ತು 21
ಗಳನ್ನೂ ಹೇಯವಿಗ್ರಹಗಳನ್ನೂ ಅನುಸರಿಸುತ್ತದೋ
ಅವರ ದುರ್ನಡತೆಯನ್ನು ಅವರ ತಲೆಗೆ ಕಟ್ಟುವೆನು.
ಇದು ಕರ್ತನಾದ ಯೆಹೋವನ ನುಡಿ.

### ಯೆಹೋವನ ಸಾನ್ನಿಧ್ಯವು ಪಟ್ಟಣಕ್ಕೆ ತಪ್ಪಿದ್ದು.

ಬಳಿಕ ಚಕ್ರಗಳ ಪಕ್ಕದಲ್ಲಿದ್ದ ಕೆರೂಬಿಗಳು ರೆಕ್ಕೆಗ 22
ಳನ್ನು ಹರಡಿಕೊಂಡವು, ಇಸ್ರಾಯೇಲಿನ ದೇವರ ತೇಜ
ಸ್ಸು ಅವುಗಳ ಮೇಲ್ಗಡೆ ನೆಲಸಿತ್ತು. ಆಗ ಯೆಹೋವನ 23
ತೇಜಸ್ಸು ಪಟ್ಟಣದ ಮಧ್ಯದೊಳಗಿಂದ ಏರಿ ಪಟ್ಟಣಕ್ಕೆ
ಮೂಡಲಲ್ಲಿರುವ ಗುಡ್ಡದ ಮೇಲೆ ನಿಂತಿತು. ಆ ಮೇಲೆ 24
ದೇವರಾತ್ಮವು ಪರವಶನಾದ ನನ್ನನ್ನು ಎತ್ತಿ ದಿವ್ಯ
ದರ್ಶನದ ಮುಖಾಂತರ ಕಸ್ದೀಯ ದೇಶದಲ್ಲಿ ಸೆರೆ
ಯಾದವರ ಬಳಿಗೆ ಒಯ್ದುಕೊಂಡು ಬಂತು. ನನಗಾದ
ದಿವ್ಯದರ್ಶನವು ಆಗ ಮಾಯವಾಯಿತು. ಯೆಹೋ 25
ವನು ತೋರಿಸಿದ ಎಲ್ಲವುಗಳನ್ನು ಕೂಡಲೆ ಸೆರೆಯವ
ರಿಗೆ ತಿಳಿಸಿದೆನು.

---

1) ಅಥವಾ: ಬಂದಿಲ್ಲವೋ? 2) ಮೂಲ: ನಿಮ್ಮನ್ನು . . . . ನಿಮ್ಮನ್ನು . . . ನಿಮಗೆ. 3) ಮೂಲ: ನಿಮ್ಮಲ್ಲಿ.

### ಯೆಹೂದದ ನಾಶನವು ಖಂಡಿತ. 12—19.

ಯೆಹೂದದ ರಾಜಪ್ರಜೆಗಳ ಸೆರೆಯ ಸೂಚನೆ.

**12** ಯೆಹೋವನು ಈ ವಾಕ್ಯವನ್ನು ನನಗೆ ದಯ
2 ಪಾಲಿಸಿದನು—ನರಪುತ್ರನೇ, ನೀನು ದ್ರೋಹಿ
ವಂಶದ ಮಧ್ಯದಲ್ಲಿ ವಾಸಿಸುತ್ತೀ, ಆ ವಂಶದವರು
ದ್ರೋಹಿಗಳಾಗಿರುವದರಿಂದ ಕಣ್ಣಿದ್ದರೂ ಕಾಣರು,
3 ಕಿವಿಯಿದ್ದರೂ ಕೇಳರು. ನರಪುತ್ರನೇ, ವಲಸೆಹೋಗುವ
ದಕ್ಕೆ ಬೇಕಾದ ಸಾಮಗ್ರಿಗಳನ್ನು ನೀನು ಕೂಡಿಸಿ
ಕೊಂಡು ಹಗಲಿನಲ್ಲಿ ಅವರ ಕಣ್ಣೆದುರಿಗೆ ಹೊರಡು,
ಅಂದರೆ ನಿನ್ನ ವಾಸಸ್ಥಳವನ್ನು ಬಿಟ್ಟು ಅವರು ನೋಡುವ
ಹಾಗೆ ಬೇರೊಂದು ಸ್ಥಳಕ್ಕೆ ಹೋಗು; ಅವರು ದ್ರೋಹಿ
ವಂಶದವರಾಗಿದ್ದರೂ ಒಂದು ವೇಳೆ ಮನಸ್ಸಿಗೆ ತಂದಾ
4 ರು. ನೀನು ನಿನ್ನ ಸಾಮಾನನ್ನು ವಲಸೆಯ ಸಾಮಗ್ರಿ
ಯನ್ನೋ ಎಂಬಂತೆ ಹಗಲಿನಲ್ಲಿ ಅವರ ಕಣ್ಣೆದುರಿಗೆ
ಮನೆಯೊಳಗಿಂದ ಈಚೆಗೆ ಹಾಕಿ ವಲಸೆಹೋಗುವವ
ನಂತೆ ಸಾಯಂಕಾಲ ಅವರ ಸಮಕ್ಷಮ ಹೊರಟು
5 ಹೋಗು. ಅವರು ನೋಡುತ್ತಿರುವಾಗ ನೀನು ಗೋಡೆ
ಯನ್ನು ತೋಡಿ ಕಂಡಿಯ ಮೂಲಕ ನಿನ್ನ ಸಾಮಾ
6 ನನ್ನು ಸಾಗಿಸಿಕೊಂಡು ಹೋಗು. ಅವರ ಕಣ್ಣ ಮುಂದೆ
ಅದನ್ನು ಹೆಗಲ ಮೇಲೆ ಹಾಕಿ ಕತ್ತಲಲ್ಲಿ ಹೊತ್ತು
ಕೊಂಡು ಹೋಗು; ನೆಲವನ್ನು ನೋಡದಂತೆ ಮೋರೆ
ಯನ್ನು ಮುಚ್ಚಿಕೋ; ನಾನು ನಿನ್ನನ್ನು ಇಸ್ರಾಯೇಲ್
ವಂಶದವರಿಗೆ ಮುಂಗುರುತನ್ನಾಗಿ ಮಾಡಿದ್ದೇನೆ.
7 ಆಗ ನಾನು ನನಗಾದ ಅಪ್ಪಣೆಯನ್ನು ನೆರವೇರಿಸಿದೆನು;
ಹಗಲಿನಲ್ಲಿ ನನ್ನ ಸಾಮಾನನ್ನು ವಲಸೆಯ ಸಾಮಗ್ರಿ
ಯನ್ನೋ ಎಂಬಂತೆ ಮನೆಯೊಳಗಿಂದ ಈಚೆಗೆ ಹಾಕಿ
ಸಾಯಂಕಾಲ ನನ್ನ ಕೈಯಿಂದಲೇ ಗೋಡೆಯನ್ನು
ಕಂಡಿಮಾಡಿ ಕತ್ತಲಲ್ಲಿ ಆ ಸಾಮಾನನ್ನು ಆಚೆಗೆ ಸಾಗಿಸಿ
ಅವರ ಕಣ್ಣ ಮುಂದೆ ಹೆಗಲ ಮೇಲೆ ಹೊತ್ತುಕೊಂಡು
8 ಹೋದೆನು. ಬೆಳಿಗ್ಗೆ ಯೆಹೋವನು ಈ ಮಾತನ್ನು
9 ನನಗೆ ದಯಪಾಲಿಸಿದನು — ನರಪುತ್ರನೇ, ದ್ರೋಹಿವಂಶ
ದವರಾದ ಇಸ್ರಾಯೇಲ್ಯರು— ನೀನು ಏನು ಮಾಡುತ್ತೀ
10 ಎಂದು ನಿನ್ನನ್ನು ಕೇಳಿದ್ದಾರಲ್ಲವೆ. ನೀನು ಅವರಿಗೆ
ಹೀಗೆ ನುಡಿ—ಕರ್ತನಾದ ಯೆಹೋವನು ಇಂತೆನ್ನು
ತ್ತಾನೆ—[1]ಈ ಹೊರೆಯು ಯೆರೂಸಲೇಮಿನಲ್ಲಿರುವ
ಪ್ರಭುವಿಗೂ ಅಲ್ಲಿನ ಇಸ್ರಾಯೇಲ್ ವಂಶದವರೆಲ್ಲರಿ
11 ಗೂ ಸಂಬಂಧಪಟ್ಟಿದೆ. ಇದನ್ನೂ ನುಡಿ — ನಾನು
ನಿಮಗೆ ಮುಂಗುರುತಾಗಿದ್ದೇನೆ; ನಾನು ಮಾಡಿದಂತೆ
ಯೇ ಅವರಿಗಾಗುವದು; ಅವರು ವಲಸೆಯಾಗಿ ಸೆರೆ
12 ಹೋಗುವರು. ಅವರಲ್ಲಿನ ಪ್ರಭುವು ಹೆಗಲ ಮೇಲೆ
ಹೊರೆಯನ್ನು ಹೊತ್ತುಕೊಂಡು ಕತ್ತಲಲ್ಲಿ ಹೊರಟು
ಹೋಗುವನು; ಅವರು ಗೋಡೆಯನ್ನು ತೋಡಿ ಕಂಡಿ
ಯ ಮೂಲಕ ತಮ್ಮ ಸಾಮಾನನ್ನು ಆಚೆಗೆ ಸಾಗಿಸು
ವರು; ಅವನು ಮೋರೆಯನ್ನು ಮುಚ್ಚಿಕೊಳ್ಳುವನು,
13 ಭೂಮಿಯು ಅವನ ಕಣ್ಣಿಗೆ ಕಾಣಿಸದು. ನಾನು ಅವ
ನಿಗೆ ನನ್ನ ಬಲೆಯೊಡ್ಡುವೆನು, ನಾನು ಹಾಕಿದ ಉರ್ಲಿ
ನಲ್ಲಿ ಸಿಕ್ಕಿಬೀಳುವನು; ಕಸ್ದೀಯ ದೇಶದ ಬಾಬೆ
ಲಿಗೆ ಅವನನ್ನು ಒಯ್ಯುವೆನು, ಅಲ್ಲೇ ಇದ್ದು ಸಾಯು
ವನು, ಆದರೂ ಆ ದೇಶವನ್ನು ನೋಡನು. ಅವನ
ಸುತ್ತಲಿನ ಸಕಲ ಸಹಾಯಕರನ್ನೂ ಅವನ ಸಮಸ್ತ
ವ್ಯೂಹಗಳವರನ್ನೂ ನಾನು ಎಲ್ಲಾ ಕಡೆಯ ಗಾಳಿಗೂ
ತೂರಿ ಅವರ ಹಿಂದೆ ಕತ್ತಿಯನ್ನು ಬೀಸುವೆನು. ನಾನು
ಅವರನ್ನು ಜನಾಂಗಗಳೊಳಗೆ ಚದರಿಸಿಬಿಟ್ಟು ಅನ್ಯದೇಶ
ಗಳಲ್ಲಿ ಚಲ್ಲಾಪಿಲ್ಲಿಮಾಡುವಾಗ ನಾನೇ ಯೆಹೋವನು
ಎಂದು ಅವರಿಗೆ ಗೊತ್ತಾಗುವದು. ನಾನು ಕೆಲವರನ್ನು
ಖಡ್ಗಕ್ಷಾಮವ್ಯಾಧಿಗಳಿಂದ ಉಳಿಸಿ ಅವರು ತಮ್ಮ ಅಸ
ಹ್ಯಕಾರ್ಯಗಳ ವಿಷಯವನ್ನು ತಾವು ಸೇರಿದ ಜನಾಂಗ
ಗಳಲ್ಲಿ ತಿಳಿಸುವದಕ್ಕೆ ಅವಕಾಶಮಾಡುವೆನು; ನಾನೇ
ಯೆಹೋವನು ಎಂದು ಆ ಜನಾಂಗಗಳಿಗೂ ಗೊತ್ತಾ
ಗುವದು.

ಇದಲ್ಲದೆ ಯೆಹೋವನು ಈ ವಾಕ್ಯವನ್ನು ನನಗೆ
ದಯಪಾಲಿಸಿದನು — ನರಪುತ್ರನೇ, ನೀನು ಅನ್ನವನ್ನು
ನಡುಕದಿಂದ ತಿಂದು ನೀರನ್ನು ಅದರುಬೆದರಿನಿಂದ
ಕುಡಿದು ಈ ದೇಶದಲ್ಲಿರುವ ಜನರಿಗೆ ಹೀಗೆ ಹೇಳು—
ಕರ್ತನಾದ ಯೆಹೋವನು ಇಸ್ರಾಯೇಲ್ ದೇಶದ
ಯೆರೂಸಲೇಮಿನ ನಿವಾಸಿಗಳ ವಿಷಯವಾಗಿ ಇಂತೆನ್ನು
ತ್ತಾನೆ—ಅವರು ಅನ್ನವನ್ನು ಬೆದರಿನಿಂದ ತಿಂದು
ನೀರನ್ನು ಬೆರಗಿನಿಂದ ಕುಡಿಯುವರು; ಏಕೆಂದರೆ ಆ
ದೇಶದವರೆಲ್ಲರು ಬಲಾತ್ಕಾರಿಗಳಾಗಿರುವದರಿಂದ ಅಲ್ಲಿನ
ಸೊತ್ತೆಲ್ಲಾ ಸೂರೆಯಾಗಿ ದೇಶವು ಬರಿದಾಗುವದು.
ಆಗ ಜನ ತುಂಬಿದ ಊರುಗಳು ಹಾಳಾಗಿ ದೇಶವು
ಬೀಡುಬೀಳುವದು; ನಾನೇ ಯೆಹೋವನು ಎಂದು
ನಿಮಗೆ ಗೊತ್ತಾಗುವದು.

ಯೆಹೂದ್ಯರ ಭರವಸದ ಖಂಡನೆ.

ಆ ಮೇಲೆ ಯೆಹೋವನು ಈ ವಾಕ್ಯವನ್ನು ನನಗೆ
ದಯಪಾಲಿಸಿದನು — ನರಪುತ್ರನೇ, ಕ್ಲುಪ್ತಕಾಲವು
ದೂರ ದೂರ ಹೋಗುತ್ತಲಿದೆ, ದಿವ್ಯದರ್ಶನಗಳೆಲ್ಲಾ
ನಿರರ್ಥಕ ಎಂಬದಾಗಿ ಇಸ್ರಾಯೇಲ್ ದೇಶದವರು
ಆಡಿಕೊಳ್ಳುವ ಈ ಗಾದೆ ಏನು? ಅವರಿಗೆ ಹೀಗೆ
ಹೇಳು — ಕರ್ತನಾದ ಯೆಹೋವನು ಇಂತೆನ್ನುತ್ತಾನೆ—
ನಾನು ಈ ಗಾದೆಯನ್ನು ನಿಲ್ಲಿಸಿಬಿಡುವೆನು, ಅದು
ಇಸ್ರಾಯೇಲಿನಲ್ಲಿ ಇನ್ನು ಸಲ್ಲದು; ನಾನು ನುಡಿ
ಯುವ ಈ ಮಾತನ್ನು ಕೇಳಿರಿ— ಕ್ಲುಪ್ತಕಾಲವು
ಹತ್ತಿರಿಸಿದೆ, ದಿವ್ಯದರ್ಶನಗಳೆಲ್ಲಾ ಸಾರ್ಥಕವಾಗುವದು
ಸಮೀಪ. ಇನ್ನು ಮೇಲೆ ಇಸ್ರಾಯೇಲ್ ವಂಶದವ
ರಲ್ಲಿ ಯಾರಿಗೂ ಮಿಥ್ಯಾದರ್ಶನವಾಗದು, ಮೋಸದ
ಕಣಿಯೂ ಇರದು. ನಾನೇ ಯೆಹೋವನು; ನಾನು
ನುಡಿದೇ ನುಡಿಯುವೆನು; ನಾನು ನುಡಿದ ಮಾತು
ನೆರವೇರುವದು, ಇನ್ನು ನಿಧಾನವಾಗದು; ದ್ರೋಹಿ
ವಂಶದವರೇ, ನಾನು ನಿಮ್ಮ ಕಾಲದಲ್ಲಿ ನುಡಿಯುವದು
ಮಾತ್ರವಲ್ಲದೆ ನುಡಿದದ್ದನ್ನು ನೆರವೇರಿಸುವೆನು; ಇದು
ಕರ್ತನಾದ ಯೆಹೋವನ ವಾಕ್ಯ.

---

1) ಅಥವಾ: ಈ ದೈವೋಕ್ತಿಯು; ಮೂಲವು ದ್ವಂದ್ವಾರ್ಥವಾಗಿದೆ.

26 ಮತ್ತು ಯೆಹೋವನು ಈ ವಾಕ್ಯವನ್ನು ನನಗೆ
27 ದಯಪಾಲಿಸಿದನು—ನರಪುತ್ರನೇ, ಇಗೋ, ಇಸ್ರಾ
ಯೇಲ್ ವಂಶದವರು—ಇವನಿಗಾದ ದಿವ್ಯದರ್ಶನವು
ಮುಂದೆ ಬಹುದೂರ ಕಾಲಕ್ಕೆ ಸಂಬಂಧಪಟ್ಟದ್ದು;
ಬಹಳ ದಿನಗಳ ಮೇಲೆ ಆಗತಕ್ಕದ್ದನ್ನು ಮುಂತಿಳಿಸು
28 ತ್ತಾನೆ ಎಂದು ಹೇಳುತ್ತಾರೆ. ಆದಕಾರಣ ನೀನು
ಅವರಿಗೆ ಹೀಗೆ ಹೇಳು—ಕರ್ತನಾದ ಯೆಹೋವನು
ಇಂತೆನ್ನುತ್ತಾನೆ—ಇನ್ನು ಮೇಲೆ ನನ್ನ ಮಾತುಗಳಲ್ಲಿ
ಯಾವದೂ ಸಾವಕಾಶವಾಗದು; ನಾನಾಡುವ
ಮಾತು ನೆರವೇರುವದು ಖಂಡಿತ; ಇದು ಕರ್ತನಾದ
ಯೆಹೋವನ ನುಡಿ.

ಕಣಿಯುವರನ್ನು ಖಂಡಿಸಿದ್ದು.

13 ಯೆಹೋವನು ಈ ವಾಕ್ಯವನ್ನು ನನಗೆ ದಯಪಾಲಿ
2 ಸಿದನು—ನರಪುತ್ರನೇ, ಪ್ರವಾದನೆಮಾಡಿ ಮಾಡಿ
ಸ್ವಕಲ್ಪಿತವಾದದ್ದನ್ನೇ ಸಾರುತ್ತಲಿರುವ ಇಸ್ರಾಯೇ
ಲಿನ ಪ್ರವಾದಿಗಳಿಗೆ ಖಂಡನೆಯಾಗಿ ನೀನು ಪ್ರವಾದಿ
ಸುತ್ತಾ ಹೀಗೆ ಹೇಳು—ಯೆಹೋವನ ವಾಕ್ಯವನ್ನು
3 ಕೇಳಿರಿ, ಕರ್ತನಾದ ಯೆಹೋವನು ಇಂತೆನ್ನುತ್ತಾನೆ—
ಯಾವ ಸಾಕ್ಷಾತ್ಕಾರವೂ ಇಲ್ಲದೆ ಸ್ವಬುದ್ಧಿಯನ್ನೇ
ಅನುಸರಿಸುವ ಮೂರ್ಖ ಪ್ರವಾದಿಗಳ ಗತಿಯು
4 ಏನೆಂದು ಹೇಳಲಿ! ಇಸ್ರಾಯೇಲೇ, ನಿನ್ನ ಪ್ರವಾದಿ
ಗಳು ಹಾಳು ಪ್ರದೇಶಗಳಲ್ಲಿನ ನರಿಗಳಂತಿದ್ದಾರೆ.
5 ಯೆಹೋವನ ದಿನದಲ್ಲಿ ಯುದ್ಧಕ್ಕೆ ನಿಲ್ಲಬೇಕೆಂದು
ನೀವು ಪೌಳಿಯ ಒಡಕುಗಳನ್ನೇರಲಿಲ್ಲ, ಇಸ್ರಾ
ಯೇಲ್ ವಂಶದ ರಕ್ಷಣೆಗಾಗಿ ಗೋಡೆಯನ್ನು ಗಟ್ಟಿ
6 ಮಾಡಲೂ ಇಲ್ಲ. ಯೆಹೋವನು ಇಂತೆನ್ನುತ್ತಾನೆ
ಎಂದು ನುಡಿಯುವವರಿಗೆ ಆದ ದರ್ಶನ ಮಿಥ್ಯ, ಕೇಳಿ
ಸಿದ ಕಣಿ ಸುಳ್ಳು; ಯೆಹೋವನು ಅವರನ್ನು ಕಳು
ಹಿಸಲಿಲ್ಲ, 1)ತಾವು ನುಡಿದ ಮಾತು ನೆರವೇರುವದೆಂದು
7 ಸುಮ್ಮಸುಮ್ಮನೆ ನಿರೀಕ್ಷಿಸಿಕೊಂಡಿದ್ದಾರೆ. ನಾನು
ಮಾತಾಡದೆ ಹೋದರೂ ಯೆಹೋವನು ಇಂತೆನ್ನು
ತ್ತಾನೆ ಎಂದು ನುಡಿಯುತ್ತಿರುವ ನಿಮಗೆ ಆದ ದರ್ಶ
ನವು ಮಿಥ್ಯ, ನೀವು ಹೇಳಿದ ಕಣಿಯು ಸುಳ್ಳು.
8 ಹೀಗಿರಲು ಕರ್ತನಾದ ಯೆಹೋವನು ಇಂತೆನ್ನು
ತ್ತಾನೆ—ನೀವು ವ್ಯರ್ಥವಾದದ್ದನ್ನು ನುಡಿದು ಸುಳ್ಳಾದ
ದ್ದನ್ನು ಕಂಡದರಿಂದ ಇಗೋ, ನಿಮಗೆ ವಿರುದ್ಧವಾಗಿ
ದ್ದೇನೆ, ಇದು ಕರ್ತನಾದ ಯೆಹೋವನೆಂಬ ನನ್ನ
9 ನುಡಿ. ಮಿಥ್ಯಾದರ್ಶನಹೊಂದಿ ಸುಳ್ಳು ಕಣಿಹೇಳುವ
ಪ್ರವಾದಿಗಳ ಮೇಲೆ ನಾನು ಕೈಮಾಡುವೆನು; ಅವರು
ನನ್ನ ಜನರ ಹಿರೀಸಭೆಯಲ್ಲಿ ಸೇರಕೂಡದು, ಇಸ್ರಾ
ಯೇಲ್ ವಂಶದವರ ಪಟ್ಟಿಯಲ್ಲಿ ಅವರ ಹೆಸರುಗಳು
ಲಿಖಿತವಾಗವು, ಅವರು ಇಸ್ರಾಯೇಲ್ ದೇಶದಲ್ಲಿ
ಪ್ರವೇಶಿಸಲೂ ಬಾರದು; ನಾನೇ ಕರ್ತನಾದ ಯೆಹೋ
10 ವನು ಎಂದು ನಿಮಗೆ ಗೊತ್ತಾಗುವದು. ಕ್ಷೇಮ
ವಿಲ್ಲದಿದ್ದರೂ ಅವರು ಕ್ಷೇಮ ಎಂದು ಹೇಳಿ ನನ್ನ
ಜನರನ್ನು ವಂಚಿಸಿದ್ದಾರಲ್ಲಾ. ಒಬ್ಬನು ತೆಳುವಾದ
ಗೋಡೆಯನ್ನು ಕಟ್ಟಿದ್ದರೆ, ಇಗೋ, ಅದಕ್ಕೆ ಸುಣ್ಣಬಳಿ
ಯುತ್ತಾರೆ; ಆದಕಾರಣ ನೀನು ಸುಣ್ಣಬಳಿಯುವವ 11
ರಿಗೆ ಹೀಗೆ ನುಡಿ—ವಿಪರೀತ ಮಳೆಯಾಗಿ ಗೋಡೆಯು
ಬಿದ್ದುಹೋಗುವದು, 2)ಆನೆಕಲ್ಲುಗಳು ಸುರಿಯು
ವವು; ಬಿರುಗಾಳಿಯು ಗೋಡೆಯನ್ನು ಒಡೆದುಹಾಕು
ವದು! ಇಗೋ, ಗೋಡೆಯು ಬಿದ್ದ ಮೇಲೆ ನೀವು 12
ಬಳಿದ ಸುಣ್ಣ ಎಲ್ಲಿ ಎಂದು ನಿಮ್ಮನ್ನು ಕೇಳುವರಲ್ಲವೆ.
ಹೀಗಿರಲು ಕರ್ತನಾದ ಯೆಹೋವನು ಇಂತೆನ್ನು 13
ತ್ತಾನೆ—ನಾನು ಸಿಟ್ಟುಗೊಂಡು ಗೋಡೆಯನ್ನು ಬಿರು
ಗಾಳಿಯಿಂದ ಒಡೆದುಹಾಕುವೆನು; ಅದನ್ನು ನಾಶ
ಮಾಡಲಿಕ್ಕೆ ನನ್ನ ಕೋಪದಿಂದ ವಿಪರೀತ ಮಳೆಯುಂ
ಟಾಗುವದು, [ನನ್ನ] ರೋಷದಿಂದ ಆನೆಕಲ್ಲುಗಳು
ಸುರಿಯುವವು; ನೀವು ಸುಣ್ಣಬಳಿದ ಗೋಡೆಯನ್ನು 14
ನಾನು ಹೀಗೆ ಕೆಡವಿ ನೆಲಸಮಮಾಡಿ ಅದರ ಅಸ್ತಿವಾರ
ವನ್ನು ಬೈಲುಪಡಿಸುವೆನು; ಅದು ಬಿದ್ದುಹೋಗುವದು,
ಮತ್ತು ನೀವು ಅದರೊಳಗೆ ಸಿಕ್ಕಿಕೊಂಡು ನಾಶವಾಗು
ವಿರಿ; ನಾನೇ ಯೆಹೋವನು ಎಂದು ನಿಮಗೆ ಗೊತ್ತಾ
ಗುವದು. ಹೀಗೆ ನಾನು ಗೋಡೆಯಲ್ಲಿಯೂ ಅದಕ್ಕೆ 15
ಸುಣ್ಣಬಳಿದ ನಿಮ್ಮಲ್ಲಿಯೂ ರೋಷವನ್ನು ತೀರಿಸಿ
ಕೊಂಡು ಇಂತೆನ್ನುವೆನು—ಇಸ್ರಾಯೇಲಿನ ಪ್ರವಾದಿ 16
ಗಳೇ, ಕ್ಷೇಮವಿಲ್ಲದಿದ್ದರೂ ಕ್ಷೇಮವಾಗುವದೆಂಬ
ದರ್ಶನಗಳನ್ನು ನೀವು ಕಂಡು ಯೆರೂಸಲೇಮಿನ
ವಿಷಯವಾಗಿ ಪ್ರವಾದಿಸಿದ್ದೀರಲ್ಲಾ; ಗೋಡೆಯು ಇಲ್ಲ
ವಾಯಿತು, ಅದಕ್ಕೆ ಸುಣ್ಣಬಳಿದವರೂ ಇಲ್ಲವಾದರು.
ಇದು ಕರ್ತನಾದ ಯೆಹೋವನ ನುಡಿ.
ನರಪುತ್ರನೇ, ಸ್ವಕಲ್ಪಿತವಾದದ್ದನ್ನು ಕಣಿಹೇಳುವ 17
ನಿನ್ನ ಸ್ವಕುಲಸ್ತ್ರೀಯರ ಕಡೆಗೆ ಮುಖಮಾಡಿಕೊಂಡು
ಅವರಿಗೆ ಖಂಡನೆಯಾಗಿ ಹೀಗೆ ಪ್ರವಾದಿಸು. ಕರ್ತ 18
ನಾದ ಯೆಹೋವನು ಇಂತೆನ್ನುತ್ತಾನೆ—ಜನರ ಪ್ರಾಣ
ಗಳನ್ನು ಬೇಟೆಯಾಡಬೇಕೆಂದು ಎಲ್ಲರ ಮೊಣಕೈಗಳಿಗೆ
ತಾಯಿತಿಗಳನ್ನು ಕಟ್ಟಿ ಉದ್ದವಾದವರಿಗೂ ಗಿಡ್ಡಾದವ
ರಿಗೂ ತಕ್ಕ ತಕ್ಕ ಮುಸುಕುಗಳನ್ನು ಸಿದ್ಧಮಾಡಿಕೊಂ
ಡಿರುವ ಸ್ತ್ರೀಯರ ಗತಿಯನ್ನು ಏನೆಂದು ಹೇಳಲಿ!
ಸ್ತ್ರೀಯರೇ, ನೀವು ನನ್ನ ಜನರ ಪ್ರಾಣಗಳನ್ನು ಬೇಟೆ
ಯಾಡಿ 3)ಸ್ವಂತ ಪ್ರಾಣಗಳನ್ನು ಉಳಿಸಿಕೊಳ್ಳು
ವಿರೋ? ನೀವು ಜವೆಗೋದಿಯ ಹಿಡಿಗಳನ್ನೂ ರೊಟ್ಟಿ 19
ಯ ಚೂರುಗಳನ್ನೂ ಆಶಿಸಿ ಸುಳ್ಳುಮಾತಿಗೆ ಕಿವಿಗೊ
ಡುವ ನನ್ನ ಜನರಿಗೆ ಸುಳ್ಳು ಹೇಳುವದರಿಂದ ಸಾಯ
ದಿರತಕ್ಕವರನ್ನು ಸಾಯಿಸಿ ಸಾಯತಕ್ಕವರನ್ನು ಉಳಿಸಿ
ನನ್ನ ಜನರ ನಡುವೆ ನನ್ನ ಘನತೆಗೆ ಕುಂದು ತಂದಿದ್ದೀರಿ.
ಹೀಗಿರಲು ಕರ್ತನಾದ ಯೆಹೋವನು ಇಂತೆನ್ನು 20
ತ್ತಾನೆ—ಆಹಾ, ನೀವು ಜನರ ಪ್ರಾಣಗಳನ್ನು ಪಕ್ಷಿಗಳ
ನ್ನೋ ಎಂಬಂತೆ ಬೇಟೆಯಾಡುವದಕ್ಕೆ ಸಾಧನವಾದ
ನಿಮ್ಮ ತಾಯಿತಿಗಳಿಗೆ ನಾನು ಹೇಸಿ ಅವುಗಳನ್ನು
ನಿಮ್ಮ ಕೈಗಳಿಂದ ಕಿತ್ತುಹಾಕುವೆನು; ನೀವು ಪಕ್ಷಿಗಳ
ನ್ನೋ ಎಂಬಂತೆ ಬೇಟೆಯಾಡುವ ಪ್ರಾಣಗಳನ್ನು ನಾನು

1) ಅಥವಾ: ನೆರವೇರುವದೆಂಬ ನಿರೀಕ್ಷೆಯನ್ನು ಜನರ ಮನಸ್ಸಿನಲ್ಲಿ ಸುಮ್ಮಸುಮ್ಮನೆ ಹುಟ್ಟಿಸಿದ್ದಾರೆ. 2) ಮೂಲ: ಆನೆಕಲ್ಲುಗಳೇ, ಸುರಿಯಿರಿ. 3) ಅಥವಾ: ನಿಮಗೆ ಬೇಕಾದವರ ಪ್ರಾಣಗಳನ್ನು ಉಳಿಸಿಕೊಳ್ಳುವಿರೋ?

21 ಬಿಡಿಸಿಬಿಡುವೆನು. ನಾನು ನಿಮ್ಮ ಮುಸುಕುಗಳನ್ನೂ
ಹರಿದು ನನ್ನ ಜನರನ್ನು ನಿಮ್ಮ ಕೈಯೊಳಗಿಂದ ತಪ್ಪಿ
ಸುವೆನು; ಅವರು ಇನ್ನು ಮೇಲೆ ನಿಮ್ಮ ಕೈಗೆ ಬೇಟೆ
ಯಾಗಿ ಸಿಕ್ಕುವದಿಲ್ಲ; ನಾನೇ ಯೆಹೋವನು ಎಂದು
22 ನಿಮಗೆ ಗೊತ್ತಾಗುವದು. ನಾನು ವ್ಯಥೆಗೊಳಿಸದ
ಶಿಷ್ಟನ ಮನಸ್ಸನ್ನು ನೀವು ಸುಳ್ಳಾಡಿ ಕುಂದಿಸಿದ್ದರಿಂದ
ಲೂ ದುಷ್ಟನು ತನ್ನ ದುರ್ಮಾರ್ಗವನ್ನು ಬಿಟ್ಟು
ತನ್ನ ಪ್ರಾಣವನ್ನು ಉಳಿಸಿಕೊಳ್ಳದಂತೆ ನೀವು ಅವನ
23 ಕೈಗಳನ್ನು ಬಲಪಡಿಸಿದ್ದರಿಂದಲೂ ನೀವು ಮಿಥ್ಯಾದರ್ಶ
ನವನ್ನು ಹೊಂದಿ ಕಣಿಹೇಳುವ ಕೆಲಸವು ಇನ್ನು ನಡಿ
ಯುವದೇ ಇಲ್ಲ; ನನ್ನ ಜನರನ್ನು ನಿಮ್ಮ ಕೈಯೊಳ
ಗಿಂದ ತಪ್ಪಿಸುವೆನು; ನಾನೇ ಯೆಹೋವನು ಎಂದು
ನಿಮಗೆ ಗೊತ್ತಾಗುವದು.

ಕಪಟಿಗಳಾಗಿ ಯೆಹೋವನ ಹತ್ತಿರ ಪ್ರಶ್ನೆಮಾಡುವವರನ್ನು ಎಚ್ಚರಿಸಿದ್ದು.

14 ಇಸ್ರಾಯೇಲಿನ ಹಿರಿಯರಲ್ಲಿ ಕೆಲವರು ಬಂದು
2 ನನ್ನ ಮುಂದೆ ಕೂತುಕೊಂಡಿರುವಾಗ ಯೆಹೋ
ವನು ಈ ವಾಕ್ಯವನ್ನು ನನಗೆ ಅನುಗ್ರಹಿಸಿದನು—
3 ನರಪುತ್ರನೇ, ಇವರು ತಮ್ಮ ಬೊಂಬೆಗಳನ್ನು ಮನಸ್ಸಿ
ನಲ್ಲಿ ನೆಲೆಗೊಳಿಸಿ ತಮಗೆ ಪಾಪಕಾರಿಯಾದ ವಿಘ್ನ
ವನ್ನು ತಮ್ಮ ಮುಂದೆ ಇಟ್ಟುಕೊಂಡಿದ್ದಾರೆ; ಇಂಥ
ವರಿಗೆ ನಾನು ದೈವೋತ್ತರವನ್ನು ದಯಪಾಲಿಸುವದು
4 ಯುಕ್ತವೋ? ಎಂದಿಗೂ ಅಲ್ಲ. ಆದಕಾರಣ ನೀನು
ಅವರನ್ನು ಸಂಬೋಧಿಸಿ ಹೀಗೆ ಹೇಳು—ಕರ್ತನಾದ
ಯೆಹೋವನು ಇಂತೆನ್ನುತ್ತಾನೆ—ಇಸ್ರಾಯೇಲ್ ವಂಶ
ದವರಲ್ಲಿ ಯಾವ ಯಾವನು ತನ್ನ ಬೊಂಬೆಗಳನ್ನು
ಮನಸ್ಸಿನಲ್ಲಿ ನೆಲೆಗೊಳಿಸಿ ತನಗೆ ಪಾಪಕಾರಿಯಾದ
ವಿಘ್ನವನ್ನು ತನ್ನ ಮುಂದೆ ಇಟ್ಟುಕೊಂಡು ಪ್ರವಾದಿ
ಯನ್ನು ಪ್ರಶ್ನೆಕೇಳುವದಕ್ಕೆ ಬರುವನೋ ಅವನ
ಪಾತಕಕ್ಕೆ ಅಂದರೆ ಅವನ ಲೆಕ್ಕವಿಲ್ಲದ ಬೊಂಬೆಗಳಿಗೆ
ತಕ್ಕ ಹಾಗೆ ಯೆಹೋವನಾದ ನಾನು ಅವನಿಗೆ ಉತ್ತರ
5 ವನ್ನು ಕೊಡುವೆನು; ಇಸ್ರಾಯೇಲ್ ವಂಶದವರೆ
ಲ್ಲರೂ ತಮ್ಮ ಬೊಂಬೆಗಳ ನಿಮಿತ್ತ ನನ್ನನ್ನು ತೊರೆದದ
ರಿಂದ ನಾನು ಅವರನ್ನೆಲ್ಲಾ ಅವರ [1]ಆಶಾಪಾಶದಲ್ಲಿ
6 ಸಿಕ್ಕಿಸಿ ಹಿಡಿಯುವೆನು. ಆದಕಾರಣ ನೀನು ಇಸ್ರಾ
ಯೇಲ್ ವಂಶದವರಿಗೆ ಹೀಗೆ ನುಡಿ—ಕರ್ತನಾದ ಯೆ
ಹೋವನು ಇಂತೆನ್ನುತ್ತಾನೆ—ನೀವು ನಿಮ್ಮ ಬೊಂಬೆ
ಗಳನ್ನು ತೊರೆದುಬಿಟ್ಟು ಹಿಂದಿರುಗಿರಿ, ನಿಮ್ಮ ಎಲ್ಲಾ
7 ಅಸಹ್ಯವಸ್ತುಗಳ ಕಡೆಗೆ ಬೆನ್ನುಮಾಡಿರಿ. ಏಕಂದರೆ
ಇಸ್ರಾಯೇಲ್ ವಂಶದವರಲ್ಲಾಗಲಿ ಇಸ್ರಾಯೇಲಿನೊ
ಳಗೆ ವಾಸವಾಗಿರುವ ವಿದೇಶಿಗಳಲ್ಲಾಗಲಿ ಯಾವನು
ನನ್ನಿಂದ ಅಗಲಿ ತನ್ನ ಬೊಂಬೆಗಳನ್ನು ಮನಸ್ಸಿನಲ್ಲಿ
ನೆಲೆಗೊಳಿಸಿ ತನಗೆ ಪಾಪಕಾರಿಯಾದ ವಿಘ್ನವನ್ನು ತನ್ನ
ಮುಂದೆ ಇಟ್ಟುಕೊಂಡು ಪ್ರವಾದಿಯ ಬಳಿಗೆ ಬಂದು
ಅವನ ಮೂಲಕ ದೈವೋತ್ತರವನ್ನು ಕೇಳಿಕೊಳ್ಳು
ವನೋ ಅವನಿಗೆ ಯೆಹೋವನಾದ ನಾನೇ ಉತ್ತರ
ಕೊಟ್ಟು ಅವನ ಮೇಲೆ ಉಗ್ರಕೋಪಗೊಂಡು ಅವನ
ಗತಿಯನ್ನು ಬೆರಗಿಗೂ ಎಚ್ಚರಿಕೆಯ ಮಾತುಗಳಿಗೂ
ಕಟ್ಟುಗಾದೆಗಳಿಗೂ ಈಡುಮಾಡಿ ಅವನನ್ನು ನನ್ನ ಜನ
ರೊಳಗಿಂದ ಕಿತ್ತುಹಾಕುವೆನು; ಹೀಗೆ ನಾನೇ ಯೆಹೋ
ವನು ಎಂದು ನಿಮಗೆ ಗೊತ್ತಾಗುವದು. ಒಬ್ಬ ಪ್ರವಾ
ದಿಯು ಮರುಳುಗೊಂಡು ದೈವೋಕ್ತಿಯನ್ನು ನುಡಿ
ದರೆ ಆ ಪ್ರವಾದಿಯನ್ನು ಮರುಳುಗೊಳಿಸಿದವನು
ಯೆಹೋವನಾದ ನಾನೇ; ನಾನು ಅವನ ಮೇಲೆ ಕೈ
ಯೆತ್ತಿ ಇಸ್ರಾಯೇಲ್ಯರಾದ ನನ್ನ ಜನರೊಳಗಿಂದ ಅವ
ನನ್ನು ಕಿತ್ತು ನಿರ್ನಾಮಮಾಡುವೆನು. ಪ್ರವಾದಿಯ
ದೋಷವು ಎಷ್ಟೋ, ಅವನನ್ನು ಪ್ರಶ್ನೆಕೇಳುವವನ
ದೋಷವೂ ಅಷ್ಟೇ; ಉಭಯರೂ ತಮ್ಮ ತಮ್ಮ ದೋಷ
ಫಲವನ್ನು ಅನುಭವಿಸುವರು. ಹೀಗಾದರೆ ಇಸ್ರಾ
ಯೇಲ್ ವಂಶದವರು ಇನ್ನು ನನ್ನನ್ನು ತೊರೆಯರು,
ತಮ್ಮ ಲೆಕ್ಕವಿಲ್ಲದ ದ್ರೋಹಗಳಿಂದ ತಮ್ಮನ್ನು ಹೊಲೆ
ಮಾಡಿಕೊಳ್ಳರು; ಅವರು ನನಗೆ ಪ್ರಜೆಯಾಗಿರು
ವರು, ನಾನು ಅವರಿಗೆ ದೇವರಾಗಿರುವೆನು, ಇದು
ಕರ್ತನಾದ ಯೆಹೋವನ ನುಡಿ.

ಶಿಷ್ಟನ ಸಂಬಂಧವಿದ್ದರೂ ದುಷ್ಟನಿಗೆ ದಂಡನೆ ತಪ್ಪದು.

ಮತ್ತು ಯೆಹೋವನು ಈ ವಾಕ್ಯವನ್ನು ನನಗೆ
ದಯಪಾಲಿಸಿದನು—ನರಪುತ್ರನೇ, ಅಪರಾಧವನ್ನು
ನಡಿಸಿ ನನಗೆ ವಿರುದ್ಧವಾಗಿ ಪಾಪಮಾಡಿದ ದೇಶದ
ಮೇಲೆ ನಾನು ಕೈಯೆತ್ತಿ ಅದರ ಜೀವನಾಧಾರವನ್ನು
ತೆಗೆದುಬಿಟ್ಟು ಕ್ಷಾಮವನ್ನು ಬರಮಾಡಿ ಜನಪಶುಗ
ಳನ್ನು ಅದರೊಳಗಿಂದ ನಿರ್ಮೂಲಮಾಡುವ ಪಕ್ಷದಲ್ಲಿ
ನೋಹ ದಾನಿಯೇಲ ಯೋಬ ಎಂಬೀ ಮೂ
ವರು ಪುರುಷರು ಅದರಲ್ಲಿದ್ದರೂ ತಮ್ಮ ಸದಾಚಾರ
ದಿಂದ ಸ್ವಂತಪ್ರಾಣಗಳನ್ನು ಮಾತ್ರ ಉಳಿಸಿಕೊಳ್ಳುತ್ತಿ
ದ್ದರು; ಇದು ಕರ್ತನಾದ ಯೆಹೋವನ ನುಡಿ. ನನ್ನ
ಅಪ್ಪಣೆಯ ಮೇರೆಗೆ ದುಷ್ಟಮೃಗಗಳು ದೇಶದಲ್ಲಿ ತಿರು
ಗುತ್ತಾ ಅದನ್ನು ನಿರ್ಜನಪಡಿಸಿ ಹಾಳುಮಾಡಿ ಯಾರೂ
ಹಾದುಹೋಗದಂತೆ ಹೆದರಿಸುವ ಪಕ್ಷದಲ್ಲಿ ಈ ಮೂ
ವರು ಪುರುಷರು ಅದರಲ್ಲಿದ್ದರೂ ನನ್ನ ಜೀವದಾಣೆ
ತಾವು ಉಳಿದುಕೊಳ್ಳುತ್ತಿದ್ದರೇ ಹೊರತು ತಮ್ಮ ಗಂಡು
ಮಕ್ಕಳನ್ನಾಗಲಿ ಹೆಣ್ಣು ಮಕ್ಕಳನ್ನಾಗಲಿ ಉಳಿಸಿಕೊ
ಳ್ಳುತ್ತಿರಲಿಲ್ಲ; ದೇಶವು ಹಾಳಾಗಿಹೋಗುವದು; ಇದು
ಕರ್ತನಾದ ಯೆಹೋವನ ನುಡಿ. ಖಡ್ಗವೇ, ದೇ
ಶವನ್ನು ಹೊಕ್ಕು ಹೋಗು ಎಂದು ಅಜ್ಞಾಪಿಸಿ
ನಾನು ಅದನ್ನು ಆ ದೇಶಕ್ಕೆ ತಂದು ಜನಪಶು
ಗಳನ್ನು ಅದರೊಳಗಿಂದ ನಿರ್ಮೂಲಮಾಡುವ ಪಕ್ಷ
ದಲ್ಲಿ ಈ ಮೂವರು ಪುರುಷರು ಅದರಲ್ಲಿದ್ದರೂ
ನನ್ನ ಜೀವದಾಣೆ, ತಾವು ಉಳಿದುಕೊಳ್ಳುತ್ತಿದ್ದರೇ
ಹೊರತು ತಮ್ಮ ಗಂಡು ಮಕ್ಕಳನ್ನಾಗಲಿ ಹೆಣ್ಣು
ಮಕ್ಕಳನ್ನಾಗಲಿ ಉಳಿಸಿಕೊಳ್ಳುತ್ತಿರಲಿಲ್ಲ; ಇದು ಕರ್ತ
ನಾದ ಯೆಹೋವನ ನುಡಿ. ನಾನು ಆ ದೇಶದ
ಮೇಲೆ [2]ನನ್ನ ಕೋಪವನ್ನು ಹೊಯ್ದು ರಕ್ತವನ್ನು

---

1) ಮೂಲ: ಹೃದಯದಲ್ಲಿ. 2) ಮೂಲ: ರಕ್ತಸುರಿಸುವ ನನ್ನ ಕೋಪವನ್ನು ಅದರ ಮೇಲೆ ಹೊಯ್ದು.

ಸುರಿಸಿ ವ್ಯಾಧಿಯನ್ನು ಕಳುಹಿಸಿ ಜನಪಶುಗಳನ್ನು
20 ನಿರ್ಮೂಲಮಾಡುವ ಪಕ್ಷದಲ್ಲಿ ನೋಹ ದಾನಿಯೇಲ
ಯೋಬ ಎಂಬಿವರು ಅದರಲ್ಲಿದ್ದರೂ ನನ್ನ ಜೀವದಾಣೆ,
ತಮ್ಮ ಸದಾಚಾರದಿಂದ ಸ್ವಂತಪ್ರಾಣಗಳನ್ನು ಉಳಿಸಿ
ಕೊಳ್ಳುತ್ತಿದ್ದರೇ ಹೊರತು ತಮ್ಮ ಗಂಡು ಮಗನನ್ನಾ
ಗಲಿ ಹೆಣ್ಣು ಮಗಳನ್ನಾಗಲಿ ಉಳಿಸಿಕೊಳ್ಳುತ್ತಿರಲಿಲ್ಲ;
21 ಇದು ಕರ್ತನಾದ ಯೆಹೋವನ ನುಡಿ. ಕರ್ತನಾದ
ಯೆಹೋವನು ಇಂತೆನ್ನುತ್ತಾನೆ—ನಾನು ಖಡ್ಗ
ಕ್ಷಾಮ ದುಷ್ಟಮೃಗ ವ್ಯಾಧಿ ಎಂಬೀ ನಾಲ್ಕು
ಬಾಧೆಗಳನ್ನು ಯೆರೂಸಲೇಮಿನ ಮೇಲೆ ಬಿಟ್ಟಿಗೆ
ತಂದು ಜನಪಶುಗಳನ್ನು ನಿರ್ಮೂಲಮಾಡುವಾಗ
22 ಹೇಳತಕ್ಕದ್ದೇನು! ಆದರೂ ಸ್ತ್ರೀಪುರುಷರಲ್ಲಿ ಕೆಲ
ವರು ಹೇಗೋ ತಪ್ಪಿಸಿಕೊಂಡು ಉಳಿದು ಅಲ್ಲಿಂದ
ಒಯ್ಯಲ್ಪಡುವರು; ಆಹಾ, ಅವರು ನಿಮ್ಮ ಬಳಿಗೆ ಸೇರಿ
ದಾಗ ನೀವು ಅವರ ದುರ್ಮಾರ್ಗ ದುಷ್ಕೃತ್ಯಗಳನ್ನು
ಕಂಡು ನಾನು ಯೆರೂಸಲೇಮಿನ ಮೇಲೆ ಬರಮಾಡಿದ
ಕೇಡಿನ ವಿಷಯವಾಗಿ, ಅದಕ್ಕೆ ಉಂಟುಮಾಡಿದ ಎಲ್ಲಾ
ಕೇಡುಗಳ ವಿಷಯವಾಗಿಯೂ ಸಮಾಧಾನಹೊಂದು
23 ವಿರಿ. ನೀವು ಅವರ ದುರ್ಮಾರ್ಗದುಷ್ಕೃತ್ಯಗಳನ್ನು
ನೋಡುವಾಗ ಅವರಿಂದಲೇ ನಿಮಗೆ ಸಮಾಧಾನವಾ
ಗುವದು; ನಾನು ಯೆರೂಸಲೇಮಿಗೆ ಮಾಡಿದ್ದೆಲ್ಲಾ
ಸುಮ್ಮನೆ ಮಾಡಿದ್ದಲ್ಲವೆಂದು ನಿಮಗೆ ತಿಳಿದುಬರು
ವದು; ಇದು ಕರ್ತನಾದ ಯೆಹೋವನ ನುಡಿ.

ಪ್ರಯೋಜನಕ್ಕೆ ಬಾರದ ದ್ರಾಕ್ಷಾಲತೆಯ ಸಾಮ್ಯ.

15 ಯೆಹೋವನು ಈ ವಾಕ್ಯವನ್ನು ನನಗೆ ದಯ
2 ಪಾಲಿಸಿದನು. ನರಪುತ್ರನೇ, ದ್ರಾಕ್ಷೆಯ ಗಿಡವು
ಮಿಕ್ಕ ಗಿಡಗಳಿಗಿಂತ ಏನು ಹೆಚ್ಚು? ವನವೃಕ್ಷಗಳಲ್ಲಿ
3 ದ್ರಾಕ್ಷಾಲತೆಯ ವಿಶೇಷವೇನು? ದ್ರಾಕ್ಷೆಯ ಕಟ್ಟಿಗೆ
ಯನ್ನು ತೆಗೆದುಕೊಂಡು ಅದರಿಂದ ಯಾವದನ್ನಾದರೂ
ಮಾಡುವರೋ? ಯಾವ ಸಾಮಾನನ್ನಾದರೂ ತಗಲಿ
ಹಾಕುವದಕ್ಕೆ ಅದರಿಂದ ಗೂಟವನ್ನು ಮಾಡಿಕೊಳ್ಳು
4 ವರೋ? ಆಹಾ, ಅದನ್ನು ಸೌದೆಯಾಗಿ ಬೆಂಕಿಯಲ್ಲಿ
ಹಾಕುವರು; ಬೆಂಕಿಯು ಅದರ ಎರಡು ಕೊನೆಗಳನ್ನು
ಸುಟ್ಟುಬಿಡುವದು, ಮಧ್ಯಭಾಗವು ಇದ್ದಲಾಗುವದು;
5 ಆಗ ಯಾವ ಮುಟ್ಟಿಗಾದರೂ ಬರುವದೋ? ಇಗೋ,
ಅದು ಇದ್ದ ಹಾಗೆಯೇ ಇದ್ದಾಗ ಯಾವ ಕೆಲಸಕ್ಕೂ
ಬರಲಿಲ್ಲ; ಬೆಂಕಿಯಲ್ಲಿ ಸುಟ್ಟು ಇದ್ದಲಾದ ಮೇಲೆ
6 ಯಾವ ಕೆಲಸಕ್ಕೆ ಬಂದೀತು? ಹೀಗಿರಲು ಕರ್ತನಾದ
ಯೆಹೋವನು ಇಂತೆನ್ನುತ್ತಾನೆ—ವನವೃಕ್ಷಗಳಲ್ಲಿ
ದ್ರಾಕ್ಷೆಯ ಗಿಡವನ್ನು ನಾನು ಹೇಗೆ ಬೆಂಕಿಗೆ ಸೌದೆ
ಯಾಗಿ ಕೊಟ್ಟಿದ್ದೇನೋ ಹಾಗೆಯೇ ನಾನು ಯೆರೂಸ
7 ಲೇಮಿನವರನ್ನು [ನಾಶನಕ್ಕೆ] ಕೊಟ್ಟಿದ್ದೇನೆ. ಅವರ
ಮೇಲೆ ಕೋಪದೃಷ್ಟಿಯನ್ನಿಡುವೆನು; ಅವರು
ಬೆಂಕಿಯೊಳಗಿಂದ ತಪ್ಪಿಸಿಕೊಂಡರೂ ಬೆಂಕಿಯು ಅವ
ರನ್ನು ನುಂಗಿಬಿಡುವದು; ನಾನು ಅವರ ಮೇಲೆ ಕೋಪ
ದೃಷ್ಟಿಯನ್ನಿಡುವಾಗ ನಾನೇ ಯೆಹೋವನು ಎಂದು
ನಿಮಗೆ ಗೊತ್ತಾಗುವದು. ಅವರು ದ್ರೋಹಮಾಡಿ 8
ದ್ದರಿಂದ ನಾನು ದೇಶವನ್ನು ಹಾಳುಮಾಡುವೆನು;
ಇದು ಕರ್ತನಾದ ಯೆಹೋವನ ನುಡಿ.

ಯೆಹೂದವೆಂಬಾಕೆಯ ಪತಿದ್ರೋಹ.

ಆ ಮೇಲೆ ಯೆಹೋವನು ಈ ವಾಕ್ಯವನ್ನು ನನಗೆ 16
ದಯಪಾಲಿಸಿದನು—ನರಪುತ್ರನೇ, ನೀನು ಯೆರೂ 2
ಸಲೇಮಿಗೆ ಅದರ ಅಸಹ್ಯಕಾರ್ಯಗಳನ್ನು ತಿಳಿಯ
ಪಡಿಸಿ ಹೀಗೆ ನುಡಿ—ಕರ್ತನಾದ ಯೆಹೋವನು ಯೆ 3
ರೂಸಲೇಮೆಂಬಾಕೆಗೆ ಈ ಮಾತನ್ನು ಹೇಳಿಕಳುಹಿಸಿ
ದ್ದಾನೆ—ನೀನು ಹುಟ್ಟಿದ್ದು ಕಾನಾನ್ ದೇಶ, ಅದೇ
ನಿನ್ನ ಜನ್ಮಭೂಮಿ, ನಿನ್ನ ತಂದೆ ಅಮೋರಿಯನು,
ನಿನ್ನ ತಾಯಿ ಹಿತ್ತಿಯಳು. ನಿನ್ನ ಜನನವನ್ನು 4
ಕುರಿತು ಏನು ಹೇಳಲಿ! ನೀನು ಹುಟ್ಟಿದ ದಿವಸದಲ್ಲಿ
ಯಾರೂ ನಿನ್ನ ಹೊಕ್ಕಳು ಕೊಯ್ದು ಕಟ್ಟಲಿಲ್ಲ,
ನಿನ್ನನ್ನು ನೀರಿನಿಂದ ತೊಳೆದು ಶುಚಿಮಾಡಲಿಲ್ಲ, ನಿನಗೆ
ಉಪ್ಪನ್ನು ಸ್ವಲ್ಪವೂ ಸವರಲಿಲ್ಲ, ನಿನ್ನನ್ನು ಬಟ್ಟೆಯಲ್ಲಿ
ಎಷ್ಟು ಮಾತ್ರವೂ ಸುತ್ತಲಿಲ್ಲ. ನಿನ್ನನ್ನು ಕಟಾಕ್ಷಿಸಿ 5
ಕರುಣಿಸಿ ಯಾರೂ ನಿನಗೆ ಇಂಥಾ ಸಹಾಯ ಮಾಡ
ಲಿಲ್ಲ; ನಿನ್ನ ಜನನ ದಿವಸದಲ್ಲಿ ನೀನು ಹೇಸಿಗೆಯಾ
ಗಿದ್ದಿ, ನಿನ್ನನ್ನು ಬೈಲಿನಲ್ಲಿ ಬಿಸಾಟುಬಿಟ್ಟರು. ನಾನು 6
ಹಾದುಹೋಗುತ್ತಾ ನಿನ್ನ ರಕ್ತದಲ್ಲೇ ಹೊರಳಾಡು
ತ್ತಿದ್ದ ನಿನ್ನನ್ನು ನೋಡಿ ನೀನು ರಕ್ತದಿಂದ ಹೊಲೆಯಾ
ಗಿದ್ದರೂ ಬದುಕು ಎಂದು ಹೇಳಿದೆನು, ಹೌದು, ನೀನು
ರಕ್ತದಿಂದ ಹೊಲೆಯಾಗಿದ್ದರೂ ಬದುಕು ಎಂದು 1) ಹೇ
ಳಿ ಬದುಕಿಸಿದೆನು. ಭೂಮಿಯಲ್ಲಿ ಮೊಳಕೆಯನ್ನೋ 7
ಎಂಬಂತೆ ನಾನು ನಿನ್ನನ್ನು ಬೆಳೆಯಿಸಲು ನೀನು ಬಲಿತು
ಪ್ರಾಯತುಂಬಿ ಅತಿಸುಂದರಿಯಾದಿ; ನಿನಗೆ ಸ್ತನಬಂತು,
ನಿನ್ನ ಕೂದಲು ಉದ್ದವಾಯಿತು; ಆದರೆ ನೀನು ಬಟ್ಟೆ
ಯಿಲ್ಲದೆ ಬೆತ್ತಲೆಯಾಗಿದ್ದಿ. ನಾನು ಹಾದುಹೋ 8
ಗುತ್ತಾ ನಿನ್ನನ್ನು ನೋಡಲು ಇಗೋ, ನೀನು ಮದು
ವೆಗೆ ಸಿದ್ಧಳಾಗಿದ್ದಿ; ಆಗ ನಾನು ನನ್ನ ಹೊದಿಕೆಯ
ನೆರಿಗೆಯನ್ನು ನಿನ್ನ ಮೇಲೆ ಹಾಕಿ ನಿನ್ನ ಮಾನವನ್ನು
ಕಾಪಾಡಿದೆನು; ಇದಲ್ಲದೆ ನಾನು ನಿನಗೆ ಮಾತು
ಕೊಟ್ಟು ಒಡಂಬಡಿಕೆಮಾಡಿಕೊಂಡದರಿಂದ ನೀನು
ನನ್ನವಳಾದಿ; ಇದು ಕರ್ತನಾದ ಯೆಹೋವನ ನುಡಿ.
ಆಗ ನಾನು ನೀರಿನಲ್ಲಿ ನಿನ್ನನ್ನು ಸ್ನಾನಮಾಡಿಸಿ ನಿನ್ನ 9
ಮೇಲಣ ರಕ್ತವನ್ನು ತೊಳೆದುಬಿಟ್ಟು ನಿನಗೆ ತೈಲವನ್ನು
ಹಚ್ಚಿದೆನು. ಇದಲ್ಲದೆ ನಾನು ಕಸೂತಿಯ ಬಟ್ಟೆ 10
ಯನ್ನು ನಿನಗೆ ತೊಡಿಸಿ ಕಡಲುಹಂದಿಯ ತೊಗಲಿನ
ಕೆರಗಳನ್ನು ನಿನ್ನ ಕಾಲಿಗೆ ಮೆಟ್ಟಿಸಿ ನಯವಾದ ನಾರು
ಮಡಿಯನ್ನು ನಿನಗೆ ಉಡಿಸಿ ರೇಶ್ಮೆಯ ಹೊದಿಕೆಯನ್ನು
ನಿನಗೆ ಹೊದಿಸಿದೆನು. ಮತ್ತು ನಾನು ನಿನ್ನ ಕೈಗಳಿಗೆ 11
ಬಳೆಗಳನ್ನು, ಕಂಠಕ್ಕೆ ಮಾಲೆಯನ್ನು, ಮೂಗಿಗೆ 12
ಮೂಗುತಿಯನ್ನು, ಶಿರಸ್ಸಿಗೆ ಸುಂದರಕಿರೀಟವನ್ನು

1) ಮೂಲ: ಹೇಳಿದೆನು.

ಇಟ್ಟು ನಿನ್ನನ್ನು ಆಭರಣಗಳಿಂದ ಸಿಂಗರಿಸಿದೆನು.
13 ನಿನ್ನ ಒಡವೆಗಳು ಬೆಳ್ಳಿಬಂಗಾರದವು; ನಿನ್ನ ಉಡುಪು
ನಯವಾದ ನಾರುಮಡಿ, ರೇಶ್ಮೆಯ ಹೊದಿಕೆ, ಕಸೂ
ತಿಯ ಬಟ್ಟೆ; ನಿನ್ನ ಆಹಾರವು ಗೋದಿಹಿಟ್ಟು, ಜೇನು,
ಎಣ್ಣೆ; ನಿನ್ನ ಲಾವಣ್ಯವು ಅತಿಮನೋಹರ; ನೀನು
14 ವೃದ್ಧಿಗೊಂಡು ರಾಣಿಯಾದಿ. ನಾನು ನಿನಗೆ ಅನು
ಗ್ರಹಿಸಿದ ನನ್ನ ವೈಭವದಿಂದ ನಿನ್ನ ಸೌಂದರ್ಯವು
ಪರಿಪೂರ್ಣವಾಯಿತು; ನಿನ್ನ ಚೆಲುವಿಕೆಯ ಹೆಸರುವಾ
ಸಿಯು ಜನಾಂಗಗಳಲ್ಲಿ ಹಬ್ಬಿತು; ಇದು ಕರ್ತನಾದ
ಯೆಹೋವನ ನುಡಿ.
15 ಆದರೆ ನೀನು ನಿನ್ನ ಸೌಂದರ್ಯದಲ್ಲಿಯೇ ನಂಬಿಕೆ
ಯಿಟ್ಟು ನಾನು ಪ್ರಸಿದ್ಧಳಾಗಿದ್ದೇನಲ್ಲಾ ಎಂದು ಉಬ್ಬಿ
ಕೊಂಡು ಸೂಳೆತನಮಾಡಿದಿ; ಹಾದುಹೋಗುವ
ಪ್ರತಿಯೊಬ್ಬನ ಸಂಗಡ ಮಿತಿಮೀರಿ ಹಾದರಮಾಡಿದಿ,
16 ಒಬ್ಬೊಬ್ಬನಿಗೂ ಒಳಗಾದಿ. ನೀನು ಪೂಜಾಸ್ಥಾನ
ಗಳನ್ನು ಕಟ್ಟಿಕೊಂಡು ನಿನ್ನ ಚಿತ್ರವಿಚಿತ್ರ ವಸ್ತ್ರಗಳಿಂದ
ಅವುಗಳನ್ನು ಅಲಂಕರಿಸಿ ಅಲ್ಲಿ ವ್ಯಭಿಚಾರನಡಿಸಿದಿ.
(ಇದು ನಡೆಯತಕ್ಕದ್ದಲ್ಲ. ಆಗಬಾರದಾಗಿತ್ತು.)
17 ಮತ್ತು ನಾನು ನನ್ನ ಬೆಳ್ಳಿಬಂಗಾರದಿಂದ ಮಾಡಿಸಿ
ನಿನಗೆ ಕೊಟ್ಟಿದ್ದ ನಿನ್ನ ಚಂದವಾದ ಆಭರಣಗಳನ್ನು
ನೀನು ತೆಗೆದು ಅವುಗಳಿಂದ ಪುರುಷಮೂರ್ತಿಗಳನ್ನು
18 ರೂಪಿಸಿಕೊಂಡು ಅವುಗಳೊಡನೆ ಹಾದರಮಾಡಿದಿ; ನಿನ್ನ
ಕಸೂತಿಯ ಬಟ್ಟೆಗಳನ್ನು ತೆಗೆದು ಮೂರ್ತಿಗಳಿಗೆ
ಹೊದಿಸಿ ಅವುಗಳ ಮುಂದೆ ನನ್ನ ತೈಲವನ್ನೂ ನನ್ನ
19 ಧೂಪವನ್ನೂ ಅರ್ಪಿಸಿದಿ. ನಾನು ನಿನಗೆ ಕೊಟ್ಟ
ರೊಟ್ಟಿಯನ್ನೂ ನಿನ್ನ ಆಹಾರಕ್ಕೆ ನಾನು ಒದಗಿಸಿದ
ಗೋದಿಹಿಟ್ಟು, ಎಣ್ಣೆ, ಜೇನು, ಇವುಗಳನ್ನೂ ನೀನು
ಆ ಮೂರ್ತಿಗಳ ಮುಂದೆ ಸುಗಂಧಹೋಮಮಾಡಿದಿ;
ಅಯ್ಯೋ, ಹೀಗಾಯಿತಲ್ಲ! ಇದು ಕರ್ತನಾದ ಯೆ
20 ಹೋವನ ನುಡಿ. ಇದಲ್ಲದೆ ನೀನು ನನಗೆ ಹೆತ್ತ
ಗಂಡು ಹೆಣ್ಣು ಮಕ್ಕಳನ್ನು ಹಿಡಿದು ಮೂರ್ತಿಗಳಿಗೆ
21 ಆಹಾರವಾಗಲೆಂದು ಯಜ್ಞಮಾಡಿದಿ. ನಿನ್ನ ಸೂಳೆ
ತನವು ಅಲ್ಪಕಾರ್ಯವೆಂದು ಭಾವಿಸಿದಿಯೋ? ಅದನ್ನೂ
ಮೀರಿಸಬೇಕೆಂದು ನೀನು ನನ್ನ ಮಕ್ಕಳನ್ನು ಹತಿಸಿ
ಆಹುತಿಕೊಟ್ಟು ಮೂರ್ತಿಗಳಿಗೆ ಅರ್ಪಿಸಿದಿಯೋ?
22 ಈ ನಿನ್ನ ಅಸಹ್ಯಕಾರ್ಯಗಳನ್ನೂ ಸೂಳೆತನವನ್ನೂ
ನೀನು ಪದೇ ಪದೇ ನಡಿಸುತ್ತಿದ್ದಾಗ ನೀನು ಬಟ್ಟೆ
ಯಿಲ್ಲದೆ ಬೆತ್ತಲೆಯಾಗಿ ನಿನ್ನ ರಕ್ತದಲ್ಲಿ ಹೊರಳಾಡು
ತ್ತಿದ್ದ ನಿನ್ನ ಎಳೆತನವನ್ನು ನೀನು ಜ್ಞಾಪಕಕ್ಕೆ ತಂದು
23 ಕೊಳ್ಳಲಿಲ್ಲ. ಅಯ್ಯಯ್ಯೋ, ನಿನ್ನ ಗತಿಯನ್ನು
ಏನು ಹೇಳಲಿ ಎಂಬದು ಕರ್ತನಾದ ಯೆಹೋವನ
24 ನುಡಿ. ನೀನು ಈ ದುಷ್ಕೃತ್ಯಗಳನ್ನೆಲ್ಲಾ ನಡಿಸಿದ್ದ
ಲ್ಲದೆ ಪ್ರತಿಯೊಂದು ಚೌಕದಲ್ಲಿ ದಿಬ್ಬವನ್ನು ಮಾಡಿ
25 ಜಗಲಿಯನ್ನು ಕಟ್ಟಿಕೊಂಡಿದ್ದೀ. ಒಂದೊಂದು
ಬೀದಿಯ ಕೊನೆಯಲ್ಲಿಯೂ ನೀನು ಜಗಲಿಯನ್ನು
ಕಟ್ಟಿಕೊಂಡು ನಿನ್ನ ಸೌಂದರ್ಯವನ್ನು ನೀಚಕೆಲಸಕ್ಕೆ
ಒಪ್ಪಿಸಿ ಹಾದುಹೋಗುವವರೆಲ್ಲರನ್ನು ಸೇರಿ ಸೂಳೆತನ
26 ವನ್ನು ಹೆಚ್ಚಾಗಿ ನಡಿಸಿದ್ದೀ. ನಿನ್ನ ನೆರೆಯವರೂ ಅತಿ
ಕಾಮಿಗಳೂ ಆದ ಐಗುಪ್ತ್ಯರೊಂದಿಗೆ ಸಹ ನೀನು
ಕಲೆತು ಹೆಚ್ಚಾಗಿ ಹಾದರಮಾಡಿ ನನ್ನನ್ನು ರೇಗಿ
ಸಿದ್ದೀ. ಆದಕಾರಣ ನಾನು ನಿನ್ನ ಮೇಲೆ ಕೈಯೆತ್ತಿ
ನಿನ್ನ ಆಹಾರವನ್ನು ಕಡಿಮೆಮಾಡಿದೆನು; ನಿನ್ನನ್ನು
ದ್ವೇಷಿಸಿ ನಿನ್ನ ಕೆಟ್ಟ ನಡತೆಗೆ ಅಸಹ್ಯಪಡುವವರಾದ
ಫಿಲಿಷ್ಟಿಯದ ಕುಮಾರ್ತೆಯರ ಕೈಗೆ ನಿನ್ನನ್ನು ಸಿಕ್ಕಿ
ಸಿದೆನು. ಮತ್ತು ಇಷ್ಟೂ ಸಾಲದೆಂದು ಅಶ್ಶೂರ್ಯ
ರೊಂದಿಗೂ ಹಾದರಮಾಡಿದಿ; ಹೌದು, ಅವರೊಡನೆ
ಹಾದರಮಾಡಿದರೂ ನಿನಗೆ ತೃಪ್ತಿಯಾಗಲಿಲ್ಲ. ಇದ
ಲ್ಲದೆ ನೀನು ತುಂಬಾ ವ್ಯಾಪಾರವುಳ್ಳ ಕಸ್ದೀಯ
ದೇಶಕ್ಕೆ ಸೇರಿ ಅಲ್ಲಿಯೂ ಬಹಳ ಸೂಳೆತನಮಾಡಿದಿ,
ಆದರೂ ನಿನಗೆ ತೃಪ್ತಿಯಾಗಲಿಲ್ಲ. ಕರ್ತನಾದ
ಯೆಹೋವನು ಇಂತೆನ್ನುತ್ತಾನೆ—ನಿನ್ನ ಮನಸ್ಸು
ಮೋಹಕ್ಕೆ ಎಷ್ಟೋ ಸೋತಿದೆ! ಇಷ್ಟೆಲ್ಲಾ ದುಷ್ಕೃತ್ಯಗ
ಳನ್ನು ನಡಿಸಿ ಕಟ್ಟಿಲ್ಲದ ಜಾರಸ್ತ್ರೀಯಾಗಿದ್ದೀಯಲ್ಲಾ;
ಒಂದೊಂದು ಬೀದಿಯ ಕೊನೆಯಲ್ಲಿಯೂ ನೀನು
ಗದ್ದುಗೆಯನ್ನು ಕಟ್ಟಿ ಎಲ್ಲಾ ಚೌಕಗಳಲ್ಲಿ ಜಗಲಿ
ಯನ್ನು ಸ್ಥಾಪಿಸಿಕೊಂಡಿದ್ದೀ; ದೊರೆತದನ್ನು ಕಡಿಮೆ
ಯೆಂದು ತಿರಸ್ಕರಿಸುವ ಸೂಳೆಯಂತೆ ನೀನು ನಡೆಯು
ವವಳಲ್ಲ. ನೀನು ಸೂಳೆತನಮಾಡುವ ಪತಿವತಿ! ಗಂಡ
ನಿಗೆ ಬದಲಾಗಿ ಅನ್ಯರನ್ನು ಸೇರುವ ಜಾರಿಣಿ! ಎಲ್ಲಾ
ಕಡೆ ಸೂಳೆಯರಿಗೆ ಹಣಕೊಡುವದುಂಟು; ನೀನಾ
ದರೋ ನಿನ್ನ ಎಲ್ಲಾ ಮಿಂಡರಿಗೆ ನೀನೇ ಕೊಡುತ್ತೀ;
ಅವರು ಎಲ್ಲಾ ಕಡೆಯಿಂದಲೂ ಬಂದು ನಿನ್ನಲ್ಲಿ ವ್ಯಭಿ
ಚಾರಮಾಡುವಂತೆ ಅವರಿಗೆ ಇನಾಮು ಕೊಡುತ್ತೀ.
ನಿನ್ನ ಸೂಳೆತನಕ್ಕೂ ಇತರ ವೇಶಿಗಳ ಸೂಳೆತನಕ್ಕೂ
ವ್ಯತ್ಯಾಸವುಂಟು; ನಿನ್ನಲ್ಲಿ ವ್ಯಭಿಚಾರಮಾಡಲಿಕ್ಕೆ
ಯಾರೂ ನಿನ್ನ ಹಿಂದೆ ಬಾರರು; ನೀನೇ ಕೊಡುತ್ತೀಯೇ
ಹೊರತು ನಿನಗೇನೂ ಸಿಕ್ಕದು; ನಿನ್ನ ದುರಾಚಾರವು
ವಿಪರೀತವೇ ಸರಿ.

ಹೀಗಿರಲು, ಸೂಳೆಯೇ, ಯೆಹೋವನ ಈ ವಾಕ್ಯ
ವನ್ನು ಕೇಳು! ಕರ್ತನಾದ ಯೆಹೋವನು ಇಂತೆನ್ನು
ತ್ತಾನೆ—ಆಹಾ, ಮಿತಿಮೀರಿದ ನಿನ್ನ [1]ಕಾಮಾತುರ,
ನಿನ್ನಲ್ಲಿ ವ್ಯಭಿಚಾರಮಾಡಿದ ನಿನ್ನ ಮಿಂಡರ ಮೂಲಕ
ನಿನಗಾದ ಮಾನಭಂಗ, ನಿನ್ನ ಎಲ್ಲಾ ಅಸಹ್ಯವಿಗ್ರಹ
ಗಳು, ನೀನು ಅವುಗಳಿಗೆ ಅರ್ಪಿಸಿದ ನಿನ್ನ ಮಕ್ಕಳ
ರಕ್ತ, ಇವುಗಳನ್ನು ನಾನು ನೋಡಿ ನೀನು ರಮಿಸಿದ
ನಿನ್ನ ಎಲ್ಲಾ ಮಿಂಡರನ್ನೂ ನೀನು ಮೋಹಿಸಿದ ಸಮಸ್ತ
ರನ್ನೂ ನೀನು ಹಗೆಮಾಡಿದ ಎಲ್ಲರೊಂದಿಗೆ ಸುತ್ತು
ಮುತ್ತಲು ನಿನಗೆ ವಿರುದ್ಧವಾಗಿ ಕೂಡಿಸಿ ಅವರ ಕಣ್ಣೆ
ದುರಿಗೆ ನಿನ್ನನ್ನು ಬೆತ್ತಲೆಗೈದು ನಿನ್ನ ಮಾನವನ್ನು
ಬಟ್ಟಬೈಲುಮಾಡುವೆನು. ವ್ಯಭಿಚಾರಮಾಡುವಂಥ,
ರಕ್ತಸುರಿಸುವಂಥ ಹೆಂಗಸರಿಗೆ ತಕ್ಕ ದಂಡನೆಗಳನ್ನು
ನಾನು ನಿನಗೆ ವಿಧಿಸಿ ಕೋಪೋದ್ರೇಕದಿಂದಲೂ ರೋಷಾ
ವೇಶದಿಂದಲೂ ನಿನ್ನ ರಕ್ತವನ್ನು ಸುರಿಸುವೆನು. ನಾನು
ನಿನ್ನನ್ನು ಸುತ್ತಲಿನವರ ಕೈವಶಮಾಡುವೆನು; ಅವರು
ನಿನ್ನ ದಿಬ್ಬವನ್ನು ಕೆಡವಿ ನಿನ್ನ ಜಗಲಿಗಳನ್ನು ಒಡೆದು
ನಿನ್ನ ಬಟ್ಟೆಗಳನ್ನು ಕಿತ್ತು ನಿನ್ನ ಒಡವೆಗಳನ್ನು ಸುಲಿದು

---

1) ಅಥವಾ: ತಾಮ್ರ.

ಕೊಂಡು ನಿನ್ನನ್ನು ಬಟ್ಟಬರಿದಾಗಿ ಬಿಟ್ಟುಹೋಗು
40 ವರು. ಅವರು ನಿನ್ನ ವಿಚಾರವಾಗಿ ನ್ಯಾಯಸಭೆಯನ್ನು
ಕೂಡಿಸಿ ನಿನ್ನನ್ನು ಕಲ್ಲೆಸೆದು ಕೊಲ್ಲುವರು, ಕತ್ತಿ
41 ಗಳಿಂದ ಹತಿಸುವರು. ನಿನ್ನ ಮನೆಗಳನ್ನು ಬೆಂಕಿ
ಯಿಂದ ಸುಡುವರು; ಬಹುಮಂದಿ ಹೆಂಗಸರ ಕಣ್ಣೆದು
ರಿನಲ್ಲಿ ನಿನ್ನನ್ನು ದಂಡಿಸುವರು; ನೀನು ನಿನ್ನ ಸೂಳೆ
ತನವನ್ನು ನಿಲ್ಲಿಸಿಬಿಡುವಂತೆ ನಾನು ಮಾಡುವೆನು;
ನೀನು [ನಿನ್ನ ಮಿಂಡರಿಗೆ] ಇನ್ನು ಹಣಕೊಡದಿರುವಿ.
42 ಹೀಗೆ ನಾನು ನಿನ್ನ ಮೇಲಣ ಸಿಟ್ಟನ್ನು ತೀರಿಸಲು ನನ್ನ
ರೋಷವು ನಿನ್ನ ಕಡೆಯಿಂದ ತೊಲಗಿಬಿಡುವದು;
ನಾನು ಶಾಂತನಾಗಿ ಇನ್ನು ಮೇಲೆ ಕೋಪಗೊಳ್ಳೆನು.
43 ನೀನು ನಿನ್ನ ಯೌವನಕಾಲವನ್ನು ಜ್ಞಾಪಕಮಾಡಿ
ಕೊಳ್ಳದೆ 1)ಈ ದುಷ್ಕೃತ್ಯಗಳನ್ನೆಲ್ಲಾ ನಡಿಸಿ ನನ್ನನ್ನು
ರೇಗಿಸಿದ್ದರಿಂದ ಇಗೋ, ನಾನು ನಿನ್ನ ದುರ್ಮಾರ್ಗದ
ಫಲವನ್ನು ನಿನ್ನ ತಲೆಗೆ ಕಟ್ಟುವೆನು; ನೀನು ಲೆಕ್ಕ
ವಿಲ್ಲದ ದುರಾಚಾರಗಳನ್ನು ನಡಿಸಿದ್ದಲ್ಲದೆ ಈ ಅಸಹ್ಯ
ಕಾರ್ಯವನ್ನೂ ಮಾಡಿದ್ದೀಯಲ್ಲಾ. ಇದು ಕರ್ತ
ನಾದ ಯೆಹೋವನ ನುಡಿ.
44 ಅಹಾ, ಗಾದೆಗಳಲ್ಲಿ ಜಾಣರು ತಾಯಿಯಂತೆ
ಮಗಳು ಎಂಬ ಗಾದೆಯನ್ನು ನಿನ್ನ ವಿಷಯವಾಗಿ ನುಡಿ
45 ಯುವರು. ಗಂಡನಿಗೂ ಮಕ್ಕಳಿಗೂ ಬೇಸರಪಡುವ
ವಳಾದ ನಿನ್ನ ತಾಯಿಗೆ ನೀನು ತಕ್ಕ ಮಗಳು; ಗಂಡ
ನಿಗೂ ಮಕ್ಕಳಿಗೂ ಬೇಸರಪಡುವವರಾದ ನಿನ್ನ ಅಕ್ಕಂದಿ
ರಿಗೆ ನೀನು ತಕ್ಕ ತಂಗಿ; ನಿನ್ನ ತಾಯಿ ಹಿತ್ತಿಯಳು,
46 ನಿನ್ನ ತಂದೆ ಅಮೋರಿಯನು; ನಿನ್ನೆಡಗಡೆಯಲ್ಲಿ
ಕುಮಾರ್ತೆಯರೊಂದಿಗೆ ವಾಸಿಸುವ ಸಮಾರ್ಯ
ನಿನ್ನ ಅಕ್ಕ, ಬಲಗಡೆಯಲ್ಲಿ ಕುಮಾರ್ತೆಯರೊಂದಿಗೆ
47 ವಾಸಿಸುವ ಸೊದೋಮ್ ನಿನ್ನ ತಂಗಿ. ಆದರೆ ನೀನು
ನಡೆದ ದುರ್ಮಾರ್ಗವು ಅವರು ನಡೆದಂಥದಲ್ಲ, ನಿನ್ನ
ಅಸಹ್ಯಕಾರ್ಯಗಳು ಅವರು ನಡಿಸಿದಂಥವುಗಳಲ್ಲ,
ಅವರ ದುರ್ನಡತೆಯು ಅತ್ಯಲ್ಪವೆಂದು ಸರ್ವದಾ ಅವರಿ
48 ಗಿಂತ ಬಹುಕೆಟ್ಟವಳಾಗಿ ನಡೆದುಕೊಂಡಿ. ಕರ್ತನಾದ
ಯೆಹೋವನು ಇಂತೆನ್ನುತ್ತಾನೆ—ನನ್ನ ಜೀವದಾಣೆ,
ನೀನೂ ನಿನ್ನ ಕುಮಾರ್ತೆಯರೂ ನಡೆದಂತೆ ಸೊದೋ
ಮೆಂಬ ನಿನ್ನ ತಂಗಿಯಾಗಲಿ ಆಕೆಯ ಕುಮಾರ್ತೆಯ
49 ರಾಗಲಿ ನಡೆಯಲಿಲ್ಲ. ಸೊದೋಮೆಂಬ ನಿನ್ನ ತಂಗಿಯ
ದೋಷವನ್ನು ನೋಡು; ಹೆಮ್ಮೆಪಡುವದು, ಹೊಟ್ಟೆ
ತುಂಬಿಸಿಕೊಳ್ಳುವದು, ಸ್ವಸುಖದಲ್ಲಿ ಮುಳುಗಿರು
ವದು, ಇವು ಆಕೆಯಲ್ಲಿಯೂ ಆಕೆಯ ಕುಮಾರ್ತೆಯ
ರಲ್ಲಿಯೂ ಇದ್ದವು. ಅಲ್ಲದೆ ಆಕೆಯು ದೀನದರಿದ್ರ
50 ರಿಗೆ ಬೆಂಬಲವಾಗಿರಲಿಲ್ಲ. ಅವರು ಸೊಕ್ಕೇರಿ ನನ್ನ
ಕಣ್ಣೆದುರಿಗೆ ಅಸಹ್ಯಾಚಾರಗಳನ್ನು ನಡಿಸಿದರು;
ನಾನು ಅದನ್ನು ನೋಡಿ ಅವರನ್ನು ನಿರ್ಮೂಲ
51 ಮಾಡಿದೆನು. ಸಮಾರ್ಯವೆಂಬಾಕೆಯು ಕೂಡ
ನೀನು ಮಾಡಿದ ಪಾಪಗಳಲ್ಲಿ ಅರ್ಧವನ್ನೂ ಮಾಡ
ಲಿಲ್ಲ. ನೀನು ನಿನ್ನ ಅಕ್ಕತಂಗಿಯರಿಗಿಂತಲೂ ಅತ್ಯಧಿಕ
ವಾದ ಅಸಹ್ಯಕಾರ್ಯಗಳನ್ನು ನಡಿಸಿದ್ದೀ; ನೀನು
ಮಾಡಿದ ಲೆಕ್ಕವಿಲ್ಲದ ದುರಾಚಾರಗಳಿಂದ ಅವರನ್ನು
ನಿರ್ದೋಷಿಗಳೆಂದು ತೋರ್ಪಡಿಸಿದಿ. ನಿನ್ನ ದೋಷ 52
ಗಳೇ ನಿನ್ನ ಅಕ್ಕತಂಗಿಯರ ಪಕ್ಷವಾಗಿ ನಿಂತದರಿಂದ
ನೀನು ನಾಚಿಕೆಪಡು; ಅವರಿಗಿಂತ ಅಧಿಕವಾಗಿ ನೀನು
ಮಾಡಿದ ಅಸಹ್ಯಪಾಪಗಳ ಮೂಲಕ ಅವರು ನಿನಗಿಂತ
ಉತ್ತಮರೆಂದು ಕಂಡುಬಂದಿದ್ದಾರೆ; ಹೌದು, ನೀನು
ಲಜ್ಜೆಪಡು, ನಾಚಿಕೆಗೊಳ್ಳು; ನಿನ್ನ ಅಕ್ಕತಂಗಿಯರನ್ನು
ನಿರ್ದೋಷಿಗಳೆಂದು ತೋರ್ಪಡಿಸಿದ್ದೀಯಷ್ಟೆ.
ಸೊದೋಮ್, ಆಕೆಯ ಕುಮಾರ್ತೆಯರು, 53
ಸಮಾರ್ಯ, ಆಕೆಯ ಕುಮಾರ್ತೆಯರು, ಇವರ
ದುರವಸ್ಥೆಯನ್ನು ನಾನು ತಪ್ಪಿಸುವೆನು, ಅದರೊಂದಿಗೆ
ನಿನ್ನ ದುರವಸ್ಥೆಯನ್ನೂ ತಪ್ಪಿಸುವೆನು. ಹೀಗಿರಲು 54
ನೀನು ನಿನ್ನ ಲೆಕ್ಕವಿಲ್ಲದ ದುಷ್ಕೃತ್ಯಗಳ ಮೂಲಕ
ಅವರನ್ನು ಸಂತೈಸಿದ್ದರಿಂದ ಲಜ್ಜೆಪಡುವಿ, ನಾಚಿಕೆ
ಗೊಳ್ಳುವಿ. ಆಗ ಸಮಾರ್ಯ, ಸೊದೋಮ್ ಎಂಬ 55
ನಿನ್ನ ಅಕ್ಕತಂಗಿಯರೂ ಅವರ ಕುಮಾರ್ತೆಯರೂ
ತಮ್ಮ ಪೂರ್ವಸ್ಥಿತಿಗೆ ಸೇರುವರು, ನೀನು ನಿನ್ನ
ಕುಮಾರ್ತೆಯರೂ ನಿಮ್ಮ ಪೂರ್ವಸ್ಥಿತಿಗೆ ಸೇರುವಿರಿ.
ಅರಾಮಿನ ಕುಮಾರ್ತೆಯರು, ಆಕೆಯ ಸುತ್ತಮುತ್ತ 56
ಲಿನ ಸಮಸ್ತರು, ನಿನ್ನನ್ನು ಎಲ್ಲಿಯೂ ಹೀನೈಸುತ್ತಿ
ರುವ ಫಿಲಿಷ್ಟಿಯರ ಕುಮಾರ್ತೆಯರು, ಇವರೆಲ್ಲರ
ದೂಷಣೆಗೆ ನೀನು ಗುರಿಯಾಗುವದಕ್ಕೆ ಮುಂಚೆ, ನಿನ್ನ
ಕೆಟ್ಟತನವು ಬೈಲಿಗೆ ಬರುವದಕ್ಕೆ ಮೊದಲು ಆ ನಿನ್ನ 57
ಗರ್ವಕಾಲದಲ್ಲಿ ಸೊದೋಮೆಂಬ ನಿನ್ನ ತಂಗಿಯ
ಹೆಸರು ನಿನ್ನ ಬಾಯಲ್ಲಿ ಬರಲೇ ಇಲ್ಲ; ಈಗ ನಿನ್ನ 58
ದುರ್ನಡತೆಯ ಮತ್ತು ದುರಾಚಾರಗಳ ಫಲವನ್ನು
ನೀನು ಅನುಭವಿಸಬೇಕಾಗಿ ಬಂತು. ಇದು ಯೆಹೋ
ವನ ನುಡಿ. ಕರ್ತನಾದ ಯೆಹೋವನು ಇಂತೆನ್ನು 59
ತ್ತಾನೆ—ನೀನು ಒಡಂಬಡಿಕೆಯನ್ನು ಮೀರಿ ನಿನ್ನ ಆಣೆ
ಯನ್ನು ತಿರಸ್ಕರಿಸಿದಿ, ನೀನು ಮಾಡಿದ್ದಕ್ಕೆ ತಕ್ಕದ್ದನ್ನು
ನಾನು ನಿನಗೆ ಮಾಡುವೆನು.
ಹೀಗಾದರೂ ನಾನು ನಿನ್ನ ಯೌವನಕಾಲದಲ್ಲಿ 60
ನಿನ್ನೊಂದಿಗೆ ಮಾಡಿಕೊಂಡ ಒಡಂಬಡಿಕೆಯನ್ನು
ಜ್ಞಾಪಕಕ್ಕೆ ತಂದುಕೊಂಡು ನಿನ್ನ ಸಂಗಡ ಎಂದಿಗೂ
ತಪ್ಪದ ಒಡಂಬಡಿಕೆಯನ್ನು ಮಾಡಿಕೊಂಡು ದೃಢೀಕರಿ
ಸುವೆನು. ಇದಕ್ಕನುಸಾರ ನಾನು ಕುಮಾರ್ತೆಯ 61
ರನ್ನೋ ಎಂಬಂತೆ ನಿನಗೆ ದಯಪಾಲಿಸುವ ನಿನ್ನ
ಅಕ್ಕಂದಿರೂ ತಂಗಿಯರೂ ನಿನ್ನಲ್ಲಿ ಸೇರಿಕೊಳ್ಳುವಾಗ
ನೀನು ನಿನ್ನ ದುರ್ಮಾರ್ಗಗಳನ್ನು ನೆನಸಿಕೊಂಡು
ನಾಚಿಕೆಪಡುವಿ; ಈ ನಿನ್ನ ದಯೆ ನಿನ್ನ [ಹಿಂದಿನ
ಒಡಂಬಡಿಕೆಯ ಫಲವಲ್ಲ. ನಾನು ಈ ಒಡಂಬಡಿ
ಯನ್ನು ನಿನ್ನೊಂದಿಗೆ ಮಾಡಿಕೊಳ್ಳಲು ನಾನೇ ಯೆಹೋ
ವನು ಎಂದು ನಿನಗೆ ಗೊತ್ತಾಗುವದು; ನಾನು ನಿನ್ನ 63
ದುಷ್ಕೃತ್ಯಗಳನ್ನೆಲ್ಲಾ ಕ್ಷಮಿಸಿಬಿಟ್ಟ ಮೇಲೆ ನೀನು
ಅವುಗಳನ್ನು ಜ್ಞಾಪಕಕ್ಕೆ ತಂದು ನಾಚಿಕೆಪಟ್ಟು ನಿನ್ನ
ಅವಮಾನದ ನಿಮಿತ್ತ ಇನ್ನು ಬಾಯಿತೆರೆಯದಿರುವಿ.
ಇದು ಕರ್ತನಾದ ಯೆಹೋವನ ನುಡಿ.

---

1) ಪಾಠಾಂತರ: ನನ್ನ ಮೇಲೆ ಸಿಡುಗುಟ್ಟುತ್ತಾ ಈ ದುಷ್ಕೃತ್ಯಗಳನ್ನೆಲ್ಲಾ ನಡಿಸಿದ್ದರಿಂದ.

ಹದ್ದುಗಳ ಮತ್ತು ಗಿಡಗಳ ಸಾಮ್ಯಗಳು.

17 ಯೆಹೋವನು ಈ ವಾಕ್ಯವನ್ನು ನನಗೆ ದಯಪಾ
2 ಲಿಸಿದನು— ನರಪುತ್ರನೇ, ನೀನು ಇಸ್ರಾಯೇಲ್
ವಂಶದವರಿಗೆ ಈ ಸಾಮ್ಯವನ್ನು ಒಗಟಾಗಿ ಹೇಳು—
3 ಕರ್ತನಾದ ಯೆಹೋವನು ಇಂತೆನ್ನುತ್ತಾನೆ—ಅಗಲ
ವಾದ ಮತ್ತು ಉದ್ದವಾದ ರೆಕ್ಕೆಗಳುಳ್ಳ ತುಪ್ಪಳ
ತುಂಬಿದ ನಾನಾ ಬಣ್ಣದ ದೊಡ್ಡ ಹದ್ದು ಲೆಬನೋನಿಗೆ
ಬಂದು ದೇವದಾರು ಮರದ ಮೇಲ್ಗಡೆಯ ರೆಂಬೆ
4 ಯನ್ನು ಕಿತ್ತಿತು; ತುಟ್ಟತುದಿಯ ಚಿಗುರುಗಳನ್ನು
ಕಚ್ಚಿ ವ್ಯಾಪಾರದ ದೇಶಕ್ಕೆ ತೆಗೆದುಕೊಂಡು ಹೋಗಿ
ಬಹು ವರ್ತಕರಿರುವ ಪಟ್ಟಣದಲ್ಲಿ ಇಟ್ಟುಬಿಟ್ಟಿತು.
5 ಆ ಮೇಲೆ ಅದು ಆ [ದೇವದಾರು ಇದ್ದ] ದೇಶದ
ಒಂದು ಬೀಜವನ್ನು ತೆಗೆದುಕೊಂಡು ಫಲವತ್ತಾದ
ನೀರಾವರಿಯ ಭೂಮಿಯಲ್ಲಿ ನೆಟ್ಟು ನೀರವಂಜಿಯ
6 ಹಾಗೆ ಬೆಳೆಯಿಸಿತು. ಅದು ಗುಜ್ಜಾಗಿ ಬೆಳೆದು
ದ್ರಾಕ್ಷಾಲತೆಯಾಗಿ ತುಂಬಾ ಹರಡಿಕೊಂಡು ತನ್ನ
ರೆಂಬೆಗಳನ್ನು ಆ ಹದ್ದಿನ ಕಡೆಗೆ ಚಾಚಿ ಅದರ ಕೆಳಗೆ
ತನ್ನ ಬೇರುಗಳನ್ನು ಬಿಟ್ಟಿತು; ಅದು ಲತೆಯಾಗಿ
ರೆಂಬೆಗಳನ್ನು ಹರಡಿಸಿ ಚಿಗುರುಗಳನ್ನು ಹೊರಡಿಸಿತು.
7 ಅಗಲವಾದ ರೆಕ್ಕೆಗಳುಳ್ಳ ತುಪ್ಪಳತುಂಬಿದ ಮ
ತ್ತೊಂದು ದೊಡ್ಡ ಹದ್ದು ಇತ್ತು; ಇಗೋ, ಆ
ದ್ರಾಕ್ಷಾಲತೆಯು ತಾನು ನಾಟಿಕೊಂಡಿದ್ದ ಪಾತಿಯೊಳ
ಗಿಂದ ಅದರ ಕಡೆಗೆ ತನ್ನ ಬೇರುಗಳನ್ನು ತಿರಿಗಿಸಿ ತನ್ನ
ರೆಂಬೆಗಳನ್ನು ಚಾಚಿ ಅದರಿಂದ ನೀರನ್ನು ಹಾರೈಸು
8 ತ್ತಿತ್ತು. ಅದು ಸೊಂಪಾದ ಲತೆಯಾಗಿ ರೆಂಬೆಗಳನ್ನು
ಹರಡಿಸಿ ಫಲಕೊಡುವದಕ್ಕೆ ಅನುಕೂಲವಾದ ಒಳ್ಳೆ
ಯ ನೀರಾವರಿಯ ನೆಲದಲ್ಲಿ ನಾಟಿಕೊಂಡಿತ್ತು.
9 ಈ ಮಾತನ್ನು ನುಡಿ—ಕರ್ತನಾದ ಯೆಹೋವನು
ಇಂತೆನ್ನುತ್ತಾನೆ— ಅದು ಸಮೃದ್ಧವಾಗಿಯೇ ಇರು
ವದೋ? ಅದನ್ನು ನಾಟಿದ ಹದ್ದು ಅದರ ಬೇರುಗ
ಳನ್ನು ಕಿತ್ತು ಅದರ ಫಲವನ್ನು ಕಡಿದುಬಿಡಲು ಅದು
ಒಣಗಿ ಅದರ ಹಸುರೆಲೆಗಳೆಲ್ಲಾ ಬಾಡುವವಲ್ಲವೆ;
ಅದು ಬೇರುಸಹಿತ ಕೀಳಲ್ಪಡುವದು; ಬಹು ಬಲ
10 ದಿಂದಲ್ಲ, ಬಹು ಜನರಿಂದಲ್ಲ. ಅಹಾ, ನಾಟಿಕೊಂಡಿದ್ದ
ಆ ಲತೆಯು ಸಮೃದ್ಧವಾಗಿಯೇ ಇರುವದೋ? ಮೂಡ
ಣ ಗಾಳಿಯು ಬಡಿಯುವಾಗ ಬಾಡೇ ಬಾಡುವದಲ್ಲವೆ;
ಬೆಳೆದ ಪಾತಿಯಲ್ಲಿಯೇ ಒಣಗಿಹೋಗುವದು.
11 ಯೆಹೋವನು ಇನ್ನೊಂದು ವಾಕ್ಯವನ್ನು ನನಗೆ
12 ದಯಪಾಲಿಸಿದನು—ದ್ರೋಹಿವಂಶದವರಾದ ಈ ಜನ
ರಿಗೆ ಹೀಗೆ ಹೇಳು—ಇದರ ಅಭಿಪ್ರಾಯವು ನಿಮಗೆ
ಗೊತ್ತಿಲ್ಲವೋ? ಇಗೋ, ಬಾಬೆಲಿನ ಅರಸನು ಯೆರೂ
ಸಲೇಮಿಗೆ ಬಂದು ಅಲ್ಲಿನ ಅರಸನನ್ನೂ ಪ್ರಧಾನ
ರನ್ನೂ ಹಿಡಿದು ಬಾಬೆಲಿಗೆ ಒಯ್ದುಕೊಂಡು ಹೋದನು;
13 ಮತ್ತು ರಾಜವಂಶದವನೊಬ್ಬನನ್ನು ಆರಿಸಿ ಅವ
ನೊಂದಿಗೆ ಒಡಂಬಡಿಕೆಮಾಡಿಕೊಂಡು ಅವನಿಂದ ಆಣೆ
14 ಯಿಡಿಸಿ ಇವನ ರಾಜ್ಯವು ಮೇಲಕ್ಕೆ ಏಳಲಾರದೆ
ಗುಜ್ಜಾಗಿದ್ದು ಒಡಂಬಡಿಕೆಯನ್ನು ಕೈಕೊಳ್ಳುವದ

ರಿಂದಲೇ ನಿಲ್ಲಲೆಂದು ಆ ದೇಶದ ಬಲಿಷ್ಠರನ್ನು ಗಡಿ
ಪಾರು ಮಾಡಿದನು. ಆದರೆ ಅವನು ಬಾಬೆಲಿನ ಅರ
ಸನ ಮೇಲೆ ತಿರುಗಿಬಿದ್ದು ಕುದುರೆಗಳನ್ನೂ ಬಹು
ಮಂದಿ ಸೈನಿಕರನ್ನೂ ನಮಗೆ ಒದಗಿಸೆಂದು ಐಗುಪ್ತಕ್ಕೆ
ರಾಯಭಾರಿಗಳನ್ನು ಕಳುಹಿಸಿದನು. ಇವನು ಸಮೃ
ದ್ಧನಾಗಿಯೇ ಇರುವನೋ? ಇಂಥಾ ಕೃತ್ಯಗಳನ್ನು
ನಡಿಸಿದವನು ಪಾರಾಗುವನೋ? ಒಡಂಬಡಿಕೆಯನ್ನು
ಮೀರಿದವನು ತಪ್ಪಿಸಿಕೊಂಡಾನೇ? ಕರ್ತನಾದ ಯೆ
ಹೋವನು ಇಂತೆನ್ನುತ್ತಾನೆ— ನನ್ನ ಜೀವದಾಣೆ, ಇವನು
ಯಾವನಿಂದ ಅರಸನಾಗಿ ನೇಮಿಸಲ್ಪಟ್ಟನೋ, ಯಾವ
ನಿಗೆ ಮಾಡಿದ ಪ್ರಮಾಣವನ್ನು ತಿರಸ್ಕರಿಸಿದನೋ,
ಯಾವನ ಒಡಂಬಡಿಕೆಯನ್ನು ಮೀರಿದನೋ, ಆ ಅರ
ಸನ ಬಳಿಯಲ್ಲಿ, ಅಂದರೆ ಬಾಬೆಲೆಂಬ ಅವನ ವಾಸ
ಸ್ಥಾನದಲ್ಲಿ ಇವನು ಸಾಯುವದು ಖಂಡಿತ
ಫರೋಹನೂ ಅವನ ಮಹಾಸೈನ್ಯವೂ ದೊಡ್ಡ ಪರಿವಾ
ರವೂ ಬಂದು ಬಹುಜನರನ್ನು ಕೊಲ್ಲುವದಕ್ಕೆ ದಿಬ್ಬಗ
ಳನ್ನು ಹಾಕಿ ಬುರುಜುಗಳನ್ನು ಕಟ್ಟಿದರೂ ಯುದ್ಧ
ದಲ್ಲಿ ಇವನಿಗೆ ಏನೂ ಸಹಾಯವಾಗದು. ಇವನು
ಇಟ್ಟ ಆಣೆಯನ್ನು ತಿರಸ್ಕರಿಸಿ ಒಡಂಬಡಿಕೆಯನ್ನು
ಮೀರಿದನಲ್ಲವೆ; [ಕೈಯ ಮೇಲೆ] ಕೈ ಇಟ್ಟರೇನು
ಇದನ್ನೆಲ್ಲಾ ಮಾಡಿಬಿಟ್ಟನಲ್ಲವೇ? ಇವನು ಪಾರಾಗನು
ಹೀಗಿರಲು ಕರ್ತನಾದ ಯೆಹೋವನು ಇಂತೆನ್ನು
ತ್ತಾನೆ—ನನ್ನ ಜೀವದಾಣೆ, ನನಗೆ ಮಾಡಿದ ಪ್ರಮಾಣ
ವನ್ನು ಅವನು ತಿರಸ್ಕರಿಸಿ ನನ್ನ ಒಡಂಬಡಿಕೆಯನ್ನು
ಮೀರಿದ ದೋಷವನ್ನು ಅವನ ತಲೆಗೆ ಕಟ್ಟುವೆನು
ನಾನು ಅವನಿಗೆ ನನ್ನ ಬಲೆಯೊಡ್ಡುವೆನು, ನಾನು
ಹಾಕಿದ ಉರುಲಿನಲ್ಲಿ ಸಿಕ್ಕಿಬೀಳುವನು, ಅವನನ್ನು
ಬಾಬೆಲಿಗೆ ತಂದು ಅಲ್ಲೇ ಅವನೊಂದಿಗೆ ವಾದಿಸಿ ಅವನು
ನನಗೆ ಮಾಡಿದ ಅಪರಾಧವನ್ನು ಅವನ ಮೇಲೆ ಹೊರಿ
ಸುವೆನು. ಅವನ ಸೇನೆಗಳೆಲ್ಲಾ ಚದರಿ ಓಡಿಹೋಗಿ
ಕತ್ತಿಯ ಬಾಯಿಗೆ ತುತ್ತಾಗುವವು; ಉಳಿದವರನ್ನು
ಎಲ್ಲಾ ಕಡೆಯ ಗಾಳಿಗೂ ತೂರಿಬಿಡುವೆನು; ಈ
ಮಾತನ್ನು ಆಡಿದವನು ಯೆಹೋವನಾದ ನಾನೇ ಎಂದು
ನಿಮಗೆ ಗೊತ್ತಾಗುವದು.

ಕರ್ತನಾದ ಯೆಹೋವನು ಇಂತೆನ್ನುತ್ತಾನೆ—
ನಾನೇ ಎತ್ತರವಾದ ದೇವದಾರು ಮರದ ಮೇಲ್ಗ
ಡೆಯ ರೆಂಬೆಯನ್ನು ತೆಗೆದು ಅದನ್ನು ನೆಡುವೆನು;
ತುಟ್ಟತುದಿಯ ಚಿಗುರುಗಳಲ್ಲಿ ಅತಿಕೋಮಲವಾ
ದದ್ದನ್ನು ಚಿವುಟಿ ಉನ್ನತೋನ್ನತವಾದ ಪರ್ವತದ
ಮೇಲೆ ನಾಟುವೆನು; ನಾನು ಅದನ್ನು ಇಸ್ರಾಯೇ
ಲಿನ ಪರ್ವತಾಗ್ರದಲ್ಲಿ ನೆಡಲು ಅದು ಸೊಂಪಾದ ದೇವ
ದಾರುಮರವಾಗಿ ರೆಂಬೆಗಳನ್ನು ಹರಡಿಸಿ ಫಲಕೊಡು
ವದು; ಅದರಲ್ಲಿ ಸಕಲವಿಧಪಕ್ಷಿಗಳು ವಾಸಿಸುತ್ತಾ
ಅದರ ರೆಂಬೆಗಳ ನೆರಳನ್ನು ಆಶ್ರಯಿಸುವವು. ಆಗ
ಯೆಹೋವನಾದ ನಾನು ಎತ್ತರವಾದ ಮರವನ್ನು
ತಗ್ಗಿಸಿ ತಗ್ಗಾದದ್ದನ್ನು ಎತ್ತರಪಡಿಸಿ ಹಸುರಾದದ್ದನ್ನು
ಒಣಗಿಸಿ ಒಣಗಿದ್ದನ್ನು ಚಿಗುರಿಸಿದ್ದೇನೆ ಎಂದು ಅರ
ಣ್ಯದ ಸಕಲವೃಕ್ಷಗಳು ತಿಳಿಯುವವು; ಇದನ್ನು ಯೆ
ಹೋವನಾದ ನಾನೇ ನುಡಿದು ನಡಿಸಿದ್ದೇನೆ.

### ಕರ್ಮಫಲಾನುಭವದ ನ್ಯಾಯ.

18 ಯೆಹೋವನು ಮತ್ತೊಂದು ವಾಕ್ಯವನ್ನು ನನಗೆ
2 ದಯಪಾಲಿಸಿದನು—ತಂದೆಗಳು ಹುಳಿದ್ರಾಕ್ಷೆ
ಯನ್ನು ತಿಂದರು, ಮಕ್ಕಳ ಹಲ್ಲುಗಳು ಜಳಿತುಹೋ
ಗಿವೆ ಎಂಬ ಗಾದೆಯನ್ನು ನೀವು ಇಸ್ರಾಯೇಲ್
3 ದೇಶದ ವಿಷಯವಾಗಿ ಹೇಳುವದೇಕೆ? ಕರ್ತನಾದ
ಯೆಹೋವನು ಇಂತೆನ್ನುತ್ತಾನೆ—ನನ್ನ ಜೀವದಾಣೆ,
ನೀವು ಈ ಗಾದೆಯನ್ನು ಇಸ್ರಾಯೇಲಿನಲ್ಲಿ ಇನ್ನು
4 ಎತ್ತಬೇಕಾಗುವದಿಲ್ಲ. ಇಗೋ, ಸಕಲ ನರಪ್ರಾಣಿ
ಗಳು ನನ್ನವೇ; ತಂದೆಯೇನು, ಮಗನೇನು, ನರಪ್ರಾಣಿ
ಗಳೆಲ್ಲವೂ ನನ್ನಧೀನದಲ್ಲಿವೆ; ಪಾಪಮಾಡುವ ಪ್ರಾಣಿ
5 ಯೇ ಸಾಯುವನು. ಒಬ್ಬನು ಸದ್ಧರ್ಮಿಯಾಗಿ
6 ನೀತಿನ್ಯಾಯಗಳನ್ನು ನಡಿಸಿ ಗುಡ್ಡಗಳ ಮೇಲೆ
[ಯಜ್ಞಶೇಷವನ್ನು] ತಿನ್ನದೆ ಇಸ್ರಾಯೇಲ್ ವಂಶದ
ವರ ವಿಗ್ರಹಗಳ ಕಡೆಗೆ ಕಣ್ಣೆತ್ತದೆ ನೆರೆಯವನ ಹೆಂಡತಿ
7 ಯನ್ನು ಕೆಡಿಸದೆ ಮುಟ್ಟಿನ ಹೆಂಗಸನ್ನು ಸೇರದೆ ಯಾ
ರನ್ನೂ ಹಿಂಸಿಸದೆ ಸಾಲಮಾಡಿದವನ ಒತ್ತೆಯನ್ನು
ಬಿಗಿಹಿಡಿಯದೆ ಯಾರ ಸೊತ್ತನ್ನೂ ಅಪಹರಿಸದೆ ಹಸಿದ
ವನಿಗೆ ಅನ್ನವಿಕ್ಕಿ ಬೆತ್ತಲೆಯಿರುವವನಿಗೆ ಹೊದಿಕೆ
8 ಯನ್ನು ಹೊದಿಸಿ ಸಾಲಕ್ಕೆ ಬಡ್ಡಿತೆಗೆಯದೆ ಲಾ
ಭಕ್ಕೆ ಹಣಕೊಡದೆ ಅನ್ಯಾಯಕ್ಕೆ ಕೈಹಾಕದೆ ವಾದಿ
9 ಪ್ರತಿವಾದಿಗಳಿಗೆ ಸರಿಯಾಗಿ ನ್ಯಾಯತೀರಿಸಿ ನನ್ನ
ನಿಯಮಗಳನ್ನು ಅನುಸರಿಸಿ ನನ್ನ ವಿಧಿಗಳನ್ನು ಕೈ
ಕೊಂಡು ಸತ್ಯಪರನಾಗಿಯೇ ನಡೆದರೆ ಇಂಥವನು ಸದ್ಧ
ರ್ಮಿಯಾಗಿರುವದರಿಂದ ಬಾಳೇ ಬಾಳುವನು; ಇದು
ಕರ್ತನಾದ ಯೆಹೋವನ ನುಡಿ.
10 ಇಂಥವನು ಪಡೆದ ಮಗನು ಈಗ ಹೇಳಿದ ದುಷ್ಕೃ
11 ತ್ಯಗಳಲ್ಲಿ ಯಾವದನ್ನಾದರೂ ನಡಿಸಿ ಸುಕೃತ್ಯಗಳಲ್ಲಿ
ಯಾವದನ್ನೂ ನಡಿಸದೆ ಗುಡ್ಡಗಳ ಮೇಲೆ [ಯಜ್ಞ
ಶೇಷವನ್ನು] ತಿಂದು ನೆರೆಯವನ ಹೆಂಡತಿಯನ್ನು ಕೆಡಿಸಿ
12 ದೀನದರಿದ್ರರನ್ನು ಹಿಂಸಿಸಿ ಜನರ ಸೊತ್ತನ್ನು ಅಪಹರಿಸಿ
ಸಾಲಗಾರನ ಒತ್ತೆಯನ್ನು ಬಿಗಿಹಿಡಿದು ವಿಗ್ರಹಗಳ
13 ಕಡೆಗೆ ಕಣ್ಣೆತ್ತಿ ಅಸಹ್ಯಕಾರ್ಯವನ್ನು ಮಾಡಿ ಸಾ
ಲಕ್ಕೆ ಬಡ್ಡಿತೆಗೆದು ಲಾಭಕ್ಕೆ ಹಣಕೊಟ್ಟು ಬಲಾತ್ಕಾ
ರಿಯೂ ರಕ್ತಸುರಿಸುವವನೂ ಆಗಿದ್ದರೆ ಬಾಳುವನೇ?
ಬಾಳಲೇ ಬಾಳನು; ಈ ದುರಾಚಾರಗಳನ್ನೆಲ್ಲಾ ನಡಿಸಿದ
ನಲ್ಲಾ; ಸತ್ತೇ ಸಾಯುವನು; ತನ್ನ ಮರಣದಂಡನೆಗೆ
ತಾನೇ ಕಾರಣ.
14 ಇಗೋ, ಇವನು ಪಡೆದ ಮಗನು ತನ್ನ ತಂದೆಯು
ಮಾಡಿದ ಪಾಪಗಳನ್ನೆಲ್ಲಾ ಕಂಡು ಭಯಪಟ್ಟು ಇಂಥಾ
15 ಕಾರ್ಯಗಳನ್ನು ನಡಿಸದೆ ಗುಡ್ಡಗಳ ಮೇಲೆ [ಯಜ್ಞ
ಶೇಷವನ್ನು] ತಿನ್ನದೆ ಇಸ್ರಾಯೇಲ್ ವಂಶದವರ
ವಿಗ್ರಹಗಳ ಕಡೆಗೆ ಕಣ್ಣೆತ್ತದೆ ನೆರೆಯವನ ಹೆಂಡತಿ
16 ಯನ್ನು ಕೆಡಿಸದೆ ಯಾರನ್ನೂ ಹಿಂಸಿಸದೆ ಒತ್ತೆ
ಯನ್ನು ಕೇಳದೆ ಯಾರ ಸೊತ್ತನ್ನೂ ಅಪಹರಿಸದೆ
ಹಸಿದವನಿಗೆ ಅನ್ನವಿಕ್ಕಿ ಬೆತ್ತಲೆಯಿರುವವನಿಗೆ ಹೊ
17 ದಿಕೆಯನ್ನು ಹೊದಿಸಿ ಬಡವನ ಮೇಲೆ ಕೈಮಾಡದೆ
ಬಡ್ಡಿಯನ್ನು ಕೇಳದೆ ಲಾಭಕ್ಕೆ ಹಣಕೊಡದೆ ನನ್ನ ವಿಧಿ
ಗಳನ್ನು ಆಚರಿಸಿ ನನ್ನ ನಿಯಮಗಳನ್ನು ಅನುಸರಿಸಿ
ದರೆ ತನ್ನ ತಂದೆಯ ಅಧರ್ಮದ ನಿಮಿತ್ತ ಸಾಯನು,
ಬಾಳೇ ಬಾಳುವನು. ಇವನ ತಂದೆಯೋ ಸ್ವಕುಲದ 18
ವರನ್ನು ಬಹಳವಾಗಿ ಅರೆದು ಸುಲಿದು ಸ್ವಜನರ
ನಡುವೆ ಕೆಟ್ಟದ್ದನ್ನು ನಡಿಸಿದ ಕಾರಣ ಇಗೋ, ತನ್ನ
ಅಧರ್ಮದಿಂದಲೇ ಸಾಯುವನು. ಆದರೆ ನೀವು— 19
ತಂದೆಯ ದೋಷಫಲವನ್ನು ಮಗನು ಹೇಗೆ ಅನು
ಭವಿಸುವದಿಲ್ಲ ಎಂದು ಆಕ್ಷೇಪಿಸುವಿರೋ? ಮಗನು
ನೀತಿನ್ಯಾಯಗಳನ್ನು ನಡಿಸಿ ನನ್ನ ವಿಧಿಗಳನ್ನೆಲ್ಲಾ ಕೈ
ಕೊಂಡು ಆಚರಿಸಿದರೆ ಬಾಳೇ ಬಾಳುವನು. ಪಾಪ 20
ಮಾಡುವವನೇ ಸಾಯುವನು; ಮಗನು ತಂದೆಯ
ದೋಷಫಲವನ್ನು ಅನುಭವಿಸನು, ತಂದೆಯು ಮಗನ
ದೋಷಫಲವನ್ನು ಅನುಭವಿಸನು; ಶಿಷ್ಟನ ಶಿಷ್ಟತನದ
ಫಲವು ಶಿಷ್ಟನದೇ, ದುಷ್ಟನ ದುಷ್ಟತನದ ಫಲವು ದುಷ್ಟ
ನದೇ. ಆದರೆ ದುಷ್ಟನು ತಾನು ಮಾಡುತ್ತಿದ್ದ ಪಾಪಗಳ 21
ನ್ನೆಲ್ಲಾ ಬಿಟ್ಟುಬಿಟ್ಟು ನನ್ನ ಸಕಲ ವಿಧಿಗಳನ್ನು ಕೈ
ಕೊಂಡು ನೀತಿನ್ಯಾಯಗಳನ್ನು ನಡಿಸಿದರೆ ಸಾಯನು,
ಬಾಳೇ ಬಾಳುವನು. ಅವನು ಮಾಡಿದ ಯಾವ ಅಪರಾ 22
ಧವೂ ಅವನ ಲೆಕ್ಕಕ್ಕೆ ಸೇರಿಸಲ್ಪಡದು, ಅವನು ಮಾಡು
ತ್ತಿರುವ ಸದ್ಧರ್ಮದಿಂದಲೇ ಅವನು ಬಾಳುವನು.
ಕರ್ತನಾದ ಯೆಹೋವನು ಇಂತೆನ್ನುತ್ತಾನೆ—ದುಷ್ಟ 23
ನ ಸಾವಿನಲ್ಲಿ ನನಗೆ ಲೇಶವಾದರೂ ಸಂತೋಷ
ವುಂಟೋ? ಅವನು ತನ್ನ ದುರ್ಮಾರ್ಗವನ್ನು ಬಿಟ್ಟು
ಬಾಳುವದೇ ನನಗೆ ಸಂತೋಷ. ಆದರೆ ಶಿಷ್ಟನು 24
ತನ್ನ ಶಿಷ್ಟತನವನ್ನು ಬಿಟ್ಟು ಅಧರ್ಮಮಾಡಿ ದುಷ್ಟನು
ನಡಿಸುವ ದುರಾಚಾರಗಳನ್ನೆಲ್ಲಾ ನಡಿಸಿದರೆ ಅವನು
ಬಾಳುವನೋ? ಅವನು ಮಾಡಿದ ಯಾವ ಸುಕೃ
ತ್ಯವೂ ಅವನ ಲೆಕ್ಕಕ್ಕೆ ಸೇರಿಸಲ್ಪಡದು, ಅವನು ಮಾ
ಡುತ್ತಿರುವ ಪಾಪಾಪರಾಧಗಳಿಂದಲೇ ಸಾಯುವನು.
ಆದರೆ ನೀವು—ಕರ್ತನ ಕ್ರಮವು ಸಮವಲ್ಲ ಎಂದು 25
ಹೇಳುತ್ತಿದ್ದೀರಿ; ಇಸ್ರಾಯೇಲ್ ವಂಶದವರೇ, ನನ್ನ
ಕ್ರಮವು ಸಮವಲ್ಲವೋ? ನಿಮ್ಮ ಕ್ರಮವೇ ಸಮವಲ್ಲ
ವಷ್ಟೆ. ಶಿಷ್ಟನು ತನ್ನ ಶಿಷ್ಟತನವನ್ನು ಬಿಟ್ಟು ಅಧರ್ಮ 26
ಮಾಡಿ ಅದರಲ್ಲಿ ಸತ್ತರೆ ತಾನು ಮಾಡಿದ ಅಧರ್ಮ
ದಿಂದಲೇ ಸಾಯಬೇಕಾಯಿತು. ದುಷ್ಟನು ತಾನು 27
ಮಾಡುತ್ತಿದ್ದ ದುಷ್ಟತನವನ್ನು ಬಿಟ್ಟು ನೀತಿನ್ಯಾಯ
ಗಳನ್ನು ನಡಿಸಿದರೆ ತನ್ನ ಪ್ರಾಣವನ್ನು ಉಳಿಸಿಕೊಳ್ಳು
ವನು. ಅವನು ಯೋಚಿಸಿ ತಾನು ಮಾಡುತ್ತಿದ್ದ 28
ಅಪರಾಧಗಳನ್ನೆಲ್ಲಾ ಬಿಟ್ಟದರಿಂದ ಸಾಯನು, ಬಾಳೇ
ಬಾಳುವನು. ಆದರೆ ಇಸ್ರಾಯೇಲ್ ವಂಶದವರು 29
ಕರ್ತನ ಕ್ರಮವು ಸಮವಲ್ಲ ಎಂದು ಹೇಳುತ್ತಿದ್ದಾರೆ;
ಇಸ್ರಾಯೇಲ್ ವಂಶದವರೇ, ನನ್ನ ಕ್ರಮವು ಸಮವಲ್ಲ
ವೋ? ನಿಮ್ಮ ಕ್ರಮವೇ ಸಮವಲ್ಲವಷ್ಟೆ. ಹೀಗಿರಲು 30
ಕರ್ತನಾದ ಯೆಹೋವನು ಇಂತೆನ್ನುತ್ತಾನೆ—ಇಸ್ರಾ
ಯೇಲ್ ವಂಶದವರೇ, ನಿಮ್ಮ ನಿಮ್ಮ ನಡತೆಗೆ ತಕ್ಕ
ಹಾಗೆ ನಾನು ನಿಮಗೆ ತೀರ್ಪುಮಾಡುವೆನು; ಅಧ
ರ್ಮವು ನಿಮ್ಮನ್ನು ನಾಶಮಾಡದಂತೆ ತಿರುಗಿಕೊಂಡು
ನಿಮ್ಮ ಅಪರಾಧಗಳನ್ನೆಲ್ಲಾ ಬಿಟ್ಟುಬಿಡಿರಿ. ನೀವು 31
ಮಾಡುತ್ತಾ ಬಂದಿರುವ ಅಪರಾಧಗಳನ್ನೆಲ್ಲಾ ನಿಮ್ಮಿಂದ
ತೊಲಗಿಸಿಬಿಟ್ಟು ನಿಮ್ಮ ಹೃದಯವನ್ನೂ ಸ್ವಭಾವ

ವನ್ನೂ ನೂತನಮಾಡಿಕೊಳ್ಳಿರಿ; ಇಸ್ರಾಯೇಲ್ ವಂಶ
32 ದವರೇ, ನೀವು ಸಾಯಲೇಕೆ? ಸಾಯುವವರ ಸಾವಿ
ನಲ್ಲಿ ನನಗೆ ಸಂತೋಷವಿಲ್ಲ; ತಿರುಗಿಕೊಂಡು ಬಾಳಿರಿ;
ಇದು ಕರ್ತನಾದ ಯೆಹೋವನ ನುಡಿ.

ಯೆಹೂದದ ಪ್ರಭುಗಳ ವಿಷಯವಾದ ಶೋಕಗೀತ.

19 ಇಸ್ರಾಯೇಲಿನ ಪ್ರಭುಗಳ ವಿಷಯವಾಗಿ ಈ ಶೋಕಗೀತವನ್ನು ಎತ್ತು —
2 ಆಹಾ, ನಿನ್ನ ತಾಯಿಯು ಸಿಂಹಗಳೊಳಗಿನ ಸಿಂಹಿ,
ಪ್ರಾಯದ ಸಿಂಹಗಳ ನಡುವೆ ಮಲಗಿತು, ಮರಿಗಳನ್ನು ಸಾಕಿತು.
3 ಅದು ಬೆಳೆಯಿಸಿದ ಒಂದು ಮರಿಯು ಪ್ರಾಯದ ಸಿಂಹವಾಗಿ
ಬೇಟೆಯನ್ನು ಕಲಿತು ಮನುಷ್ಯರನ್ನು ನುಂಗಲಾರಂಭಿಸಿತು.
4 ಜನಾಂಗಗಳು ಈ ವಾರ್ತೆಯನ್ನು ಕೇಳಿ ಅದಕ್ಕೆ ಗುಂಡಿತೋಡಲು ಅಲ್ಲಿ ಸಿಕ್ಕಿಬಿದ್ದಿತು;
ಅದನ್ನು ಸರಪಣಿಗಳಿಂದ ಬಿಗಿದು ಐಗುಪ್ತದೇಶಕ್ಕೆ ಒಯ್ದುವು.
5 ಆ ಸಿಂಹಿಯು ತಾನು ಕಾದುಕೊಂಡಿದ್ದರೂ ತನ್ನ ನಿರೀಕ್ಷೆಯು ಹಾಳಾಯಿತೆಂದು
ತನ್ನ ಮರಿಗಳಲ್ಲಿ ಇನ್ನೊಂದನ್ನು ತೆಗೆದು ಸಾಕಿ ಪ್ರಾಯಕ್ಕೆ ತಂದಿತು.
6 ಅದೂ ಪ್ರಾಯದ ಸಿಂಹವಾಗಿ ಸಿಂಹಗಳ ನಡುವೆ ತಿರುಗುತ್ತಾ
ಬೇಟೆಯನ್ನು ಕಲಿತು ಮನುಷ್ಯರನ್ನು ನುಂಗಲಾರಂಭಿಸಿತು.
7 ಅದು ಪಟ್ಟಣಗಳನ್ನು ಹಾಳುಮಾಡಿ [1][ಬಹುಮಂದಿ] ವಿಧವೆಯರಾದವರನ್ನು ಕಂಡಿತು,
ಅದರ ಗರ್ಜನೆಯ ಶಬ್ದಕ್ಕೆ ದೇಶವೂ ಅದರಲ್ಲಿದ್ದದ್ದೆಲ್ಲವೂ ಕ್ಷೀಣವಾದವು.
8 ಆಗ ಜನಾಂಗಗಳು ಸುತ್ತಲಿನ ರಾಷ್ಟ್ರಗಳಿಂದ ಕೂಡಿ ಬಂದು ಅದಕ್ಕೆ ವಿರುದ್ಧವಾಗಿ ನಿಂತು
ಬಲೆಯೊಡ್ಡಿ ಗುಂಡಿತೋಡಲು ಅಲ್ಲಿ ಸಿಕ್ಕಿಬಿದ್ದಿತು.
9 ಅವು ಅದನ್ನು ಸರಪಣಿಗಳಿಂದ ಬಿಗಿದು ಪಂಜರದಲ್ಲಿ ಹಾಕಿ ಬಾಬೆಲಿನ ಅರಸನ ಬಳಿಗೆ ತಂದವು.
ಅದರ ಧ್ವನಿಯು ಇಸ್ರಾಯೇಲಿನ ಪರ್ವತಗಳಲ್ಲಿ ಇನ್ನು ಕೇಳಿಸದಂತೆ ಅದನ್ನು ಕೋಟೆಯೊಳಗೆ ಸೇರಿಸಿಬಿಟ್ಟವು.

1 [2]ನಿನ್ನ ಹೆತ್ತ ತಾಯಿ ನೀರಾವರಿಯಲ್ಲಿ ನಾಟಿಕೊಂಡಿದ್ದ ದ್ರಾಕ್ಷಾಲತೆಯಾಗಿದ್ದಳು,
ಆ ಲತೆಯು ತುಂಬಾ ತಂಪಿನಿಂದ ಫಲವತ್ತಾಗಿಯೂ ಪೊದೆಯಾಗಿಯೂ ಬೆಳೆದಿತ್ತು.
11 ಅದರಲ್ಲಿ ರಾಜದಂಡಯೋಗ್ಯವಾದ ಗಟ್ಟಿಕೊಂಬೆಗಳಿದ್ದವು,
ಅವುಗಳ ಎತ್ತರವು ಮಿಕ್ಕ ರೆಂಬೆಗಳಿಗಿಂತ ಹೆಚ್ಚಾಗಿತ್ತು,
ಬಹು ರೆಂಬೆಗಳ ಮಧ್ಯದಲ್ಲಿ ಉದ್ದುದ್ದವಾಗಿ ಕಾಣಿಸಿದವು.
ಆ ಲತೆಯನ್ನು ಕ್ರೋಧಿಗಳು ಕಿತ್ತು ನೆಲದ ಮೇಲೆ ಬಿಸಾಟುಬಿಟ್ಟರು,
ಮೂಡಣಗಾಳಿಯು ಅದರ ಫಲವನ್ನು ಬಾಡಿಸಿತು,
ಅದರ ಗಟ್ಟಿಕೊಂಬೆಗಳು ಮುರಿದು ಒಣಗಿಹೋದವು,
ಬೆಂಕಿಯು ಅವುಗಳನ್ನು ನುಂಗಿತು.
ಈಗ ಅದು ನೀರಿಲ್ಲದ ಬೆಂಗಾಡಿನಲ್ಲಿ ನಾಟಿಕೊಂಡಿದೆ.
ಬೆಂಕಿಯು ದಂಡರೂಪವಾದ ಅದರ ಶಾಖೆಗಳಿಂದ ಹೊರಟು
ಅದರ ಫಲವನ್ನು ನುಂಗಿಬಿಟ್ಟದ್ದರಿಂದ
ರಾಜದಂಡಕ್ಕೆ ಯೋಗ್ಯವಾದ ಯಾವ ಗಟ್ಟಿಕೊಂಬೆಯೂ ಅದರಲ್ಲಿ ಉಳಿದಿಲ್ಲ.

ಇದು ಶೋಕಗೀತ, ಶೋಕಗೀತವಾಗಿ ವಾಡಿಕೆಯಲ್ಲಿದೆ.

ಯೆರೂಸಲೇಮಿನ ಅಂತ್ಯಕಾಲದಲ್ಲಿನ ಪ್ರವಾದನೆಗಳು. 20 — 24.

ಯೆಹೋವನು ತನ್ನ ಜನರ ದ್ರೋಹವನ್ನು ಅನೇಕ ಸಲ ತಾಳಿದ್ದು.

[20 ಯೆಹೋಯಾಖೀನನು ಸೆರೆಯಾದ] ಏಳನೆ
ಯ ವರುಷದ ಐದನೆಯ ತಿಂಗಳಿನ ಹತ್ತನೆಯ
ದಿನದಲ್ಲಿ ಇಸ್ರಾಯೇಲಿನ ಹಿರಿಯರಲ್ಲಿ ಕೆಲವ
ಯೆಹೋವನನ್ನು ಪ್ರಶ್ನೆಕೇಳುವದಕ್ಕೆ ಬಂದು ನ
ಮುಂದೆ ಕೂತುಕೊಂಡರು. ಆಗ ಯೆಹೋವನ
ಈ ವಾಕ್ಯವನ್ನು ನನಗೆ ದಯಪಾಲಿಸಿದನು—ನರ
ತ್ರನೇ, ಇಸ್ರಾಯೇಲಿನ ಹಿರಿಯರನ್ನು ಸಂಬೋಧಿ
ಹೀಗೆ ಹೇಳು — ಕರ್ತನಾದ ಯೆಹೋವನು ಇಂತೆನ
ತ್ತಾನೆ—ನನ್ನನ್ನು ಪ್ರಶ್ನೆಕೇಳುವದಕ್ಕೆ ಬಂದಿರೋ
ನನ್ನ ಜೀವಪಾಣೆ, ನಾನು ನಿಮಗೆ ಉತ್ತರಕೊಡುವ
ಇಲ್ಲ; ಇದು ಕರ್ತನಾದ ಯೆಹೋವನ ನುಡಿ. ನ
ಪುತ್ರನೇ, ಇವರಿಗೆ ನ್ಯಾಯತೀರಿಸಲು ನಿನ್ನ ಮನಸ
ಸ್ಥಿರವೋ, ಸ್ಥಿರವಾಗಿದೆಯೋ? ಇವರ ಪಿತೃಗಳ ದು
ಚಾರಗಳನ್ನು ಇವರಿಗೆ ಹೀಗೆ ತಿಳಿಸು—ಕರ್ತನಾ
ಯೆಹೋವನು ಇಂತೆನ್ನುತ್ತಾನೆ—ಯಾವ ದಿವ
ದಲ್ಲಿ ನಾನು ಇಸ್ರಾಯೇಲನ್ನು ಆರಿಸಿಕೊಂಡು ಯ
ಕೋಬ ಸಂತಾನದವರಿಗೆ ಮಾತುಕೊಟ್ಟು ನಾ
ನಿಮ್ಮ ದೇವರಾದ ಯೆಹೋವನು ಎಂದು ಐಗು
ದೇಶದಲ್ಲಿ ಪ್ರಮಾಣಪೂರ್ವಕವಾಗಿ ತಿಳಿಯಪಡಿ
ದೆನೋ ಆ ದಿವಸದಲ್ಲಿ ನಾನು ಅವರಿಗೆ—ಸಕಲದೇ
ಶಿರೋಮಣಿಯಾದ ದೇಶವನ್ನು ನಿಮಗಾಗಿ ನೋ
ದ್ದೇನೆ; ನಾನು ನಿಮ್ಮನ್ನು ಐಗುಪ್ತದೇಶದೊಳಗಿ

1) ಅಥವಾ: ಅರಮನೆಗಳನ್ನು; ಮೂಲವು ಕೇವಲ ಅಸ್ಪಷ್ಟ.

2) ಮೂಲ: ನಿನ್ನ ರಕ್ತದಲ್ಲಿನ ನಿನ್ನ ತಾಯಿ.

ಉದ್ಧರಿಸಿ ಹಾಲೂ ಜೇನೂ ಹರಿಯುವ ಆ ದೇಶಕ್ಕೆ
7 ಸೇರಿಸುವೆನು ಎಂದು ಪ್ರಮಾಣಮಾಡಿ ನೀವೆಲ್ಲರೂ
ನಿಮ್ಮ ಕಣ್ಣಿಗೆ ಇಷ್ಟವಾದ ಅಸಹ್ಯವಸ್ತುಗಳನ್ನು ಬಿಸಾ
ಟುಬಿಡಿರಿ, ಐಗುಪ್ತದ ವಿಗ್ರಹಗಳಿಂದ ನಿಮ್ಮನ್ನು
ಹೊಲಸುಮಾಡಿಕೊಳ್ಳಬೇಡಿರಿ; ನಾನು ನಿಮ್ಮ ದೇವ
ರಾದ ಯೆಹೋವನು ಎಂಬದಾಗಿ ಅವರನ್ನು ಎಚ್ಚರಿಸಿ
8 ದೆನು. ಅವರಾದರೋ ನನ್ನ ಮಾತನ್ನು ಕೇಳಲೊಲ್ಲದೆ
ನನ್ನ ಮೇಲೆ ತಿರುಗಿಬಿದ್ದರು; ತಮ್ಮ ಕಣ್ಣಿಗೆ ಇಷ್ಟ
ವಾದ ಅಸಹ್ಯವಸ್ತುಗಳನ್ನು ಯಾರೂ ಬಿಸಾಟುಬಿಡ
ಲಿಲ್ಲ, ಐಗುಪ್ತದ ವಿಗ್ರಹಗಳನ್ನು ತ್ಯಜಿಸಲಿಲ್ಲ; ಆಗ
ನಾನು ಇವರ ಮೇಲೆ ಐಗುಪ್ತದೇಶದೊಳಗೆ ನನ್ನ ರೋ
ಷಾಗ್ನಿಯನ್ನು ಸುರಿಸಿ ನನ್ನ ಕೋಪವನ್ನು ತೀರಿಸಿ
9 ಕೊಳ್ಳುವೆನು ಅಂದುಕೊಂಡೆನು. ಆದರೂ ನಿಮ್ಮನ್ನು
ಐಗುಪ್ತದೇಶದೊಳಗಿಂದ ಪಾರುಮಾಡುವೆನು ಎಂಬ
ದಾಗಿ ಜನಾಂಗಗಳ ಮುಂದೆಯೇ ನನ್ನನ್ನು ಇವರಿಗೆ
ಪ್ರಕಟಿಸಿಕೊಂಡೆನಲ್ಲಾ ಎಂದು ಯೋಚಿಸಿ ಅವರ
ಸುತ್ತಣ ಆ ಜನಾಂಗಗಳ ಮುಂದೆ ನನ್ನ ಹೆಸರು
ಅಪಕೀರ್ತಿಗೆ ಗುರಿಯಾಗದಂತೆ ನನ್ನ ಹೆಸರಿನ ನಿಮಿ
10 ತ್ತವೇ ಸಹಿಸಿಕೊಂಡೆನು. ಆಗ ನಾನು ಅವರನ್ನು
ಐಗುಪ್ತದೇಶದೊಳಗಿಂದ ಬಿಡಿಸಿ ಅರಣ್ಯಕ್ಕೆ ಕರತ
11 ರಲು ಕೈಕೊಳ್ಳುವವರಿಗೆ ಜೀವಾಧಾರವಾದ ನನ್ನ
12 ಆಜ್ಞಾವಿಧಿಗಳನ್ನು ಅವರಿಗೆ ತಿಳಿಸಿಕೊಟ್ಟೆನು. ಇದ
ಲ್ಲದೆ ತಮ್ಮನ್ನು ದೇವಜನರನ್ನಾಗಿ ಮಾಡಿರುವ
ಯೆಹೋವನು ನಾನೇ ಎಂದು ಅವರು ತಿಳುಕೊಳ್ಳು
ವಂತೆ ನನಗೂ ಅವರಿಗೂ ಗುರುತಾದ ಸಬ್ಬತ್ ದಿನ
13 ಗಳನ್ನು ಅವರಿಗೆ ನೇಮಿಸಿದೆನು. ಆದರೆ ಇಸ್ರಾ
ಯೇಲ್ ವಂಶದವರು ಅರಣ್ಯದಲ್ಲಿ ನನ್ನ ಮೇಲೆ
ತಿರುಗಿಬಿದ್ದರು. ಕೈಕೊಳ್ಳುವವರಿಗೆ ಜೀವಾಧಾರವಾದ
ನನ್ನ ಆಜ್ಞಾವಿಧಿಗಳನ್ನು ಅನುಸರಿಸದೆ ನಿರಾಕರಿಸಿದರು,
ನಾನು ನೇಮಿಸಿದ ಸಬ್ಬತ್ ದಿನಗಳನ್ನು ವಿಶೇಷವಾಗಿ
ಹೊಲೆಮಾಡಿದರು; ಆಗ ನಾನು ಇವರ ಮೇಲೆ ಅರಣ್ಯ
ದೊಳಗೆ ನನ್ನ ರೋಷಾಗ್ನಿಯನ್ನು ಸುರಿಸಿ ಇವ
14 ರನ್ನು ಧ್ವಂಸಮಾಡುವೆನು ಅಂದುಕೊಂಡೆನು. ಆ
ದರೂ ಯಾವ ಜನಾಂಗಗಳ ಮುಂದೆ ಅವರನ್ನು
ಪಾರುಮಾಡಿದೆನೋ ಆ ಜನಾಂಗಗಳ ಮುಂದೆ
ನನ್ನ ಹೆಸರು ಅಪಕೀರ್ತಿಗೆ ಗುರಿಯಾಗಬಾರದೆಂದು
15 ನನ್ನ ಹೆಸರಿನ ನಿಮಿತ್ತವೇ ಸಹಿಸಿಕೊಂಡೆನು. ಆ
ಮೇಲೆ ಸಕಲದೇಶಶಿರೋಮಣಿಯಾದ ಯಾವ ದೇಶವ
ನ್ನು ಅವರಿಗೆ ವಾಗ್ದಾನಮಾಡಿದೆನೋ ಹಾಲೂ ಜೇನೂ
ಹರಿಯುವ ಆ ದೇಶಕ್ಕೆ ನಿಮ್ಮನ್ನು ಸೇರಿಸೆನೆಂದು ಅರ
16 ಣ್ಯದಲ್ಲಿ ಅವರಿಗೆ ಪ್ರಮಾಣಮಾಡಿದೆನು; ಏಕಂದರೆ
ಅವರ ಹೃದಯವು ತಮ್ಮ ವಿಗ್ರಹಗಳಲ್ಲಿ ಆಸಕ್ತವಾಗಿ
ಅವರು ನನ್ನ ಆಜ್ಞಾವಿಧಿಗಳನ್ನು ಅನುಸರಿಸದೆ ನಿರಾಕ
ರಿಸಿ ನಾನು ನೇಮಿಸಿದ ಸಬ್ಬತ್ ದಿನಗಳನ್ನು ಹೊಲೆ
17 ಮಾಡಿದವರಾಗಿದ್ದರು. ಆದರೂ ನಾನು ಅವರನ್ನು
ನಾಶಮಾಡದ ಹಾಗೆ ನನ್ನ ಕಟಾಕ್ಷವು ಅವರನ್ನು ಉಳಿ
ಸಿತು; ನಾನು ಅವರನ್ನು ಅರಣ್ಯದಲ್ಲಿ ನಿರ್ಮೂಲಮಾ
18 ಡಲಿಲ್ಲ. ಆ ಮೇಲೆ ನಾನು ಅರಣ್ಯದಲ್ಲಿ ಅವರ ಸಂತಾ
ನದವರಿಗೆ—ನೀವು ನಿಮ್ಮ ತಂದೆಗಳ ಆಜ್ಞೆಗಳನ್ನು
ಅನುಸರಿಸದೆ ಅವರ ವಿಧಿಗಳನ್ನು ಕೈಕೊಳ್ಳದೆ ಅವರ
ಬೊಂಬೆಗಳಿಂದ ನಿಮ್ಮನ್ನು ಹೊಲಸುಮಾಡಿಕೊಳ್ಳದೆ
ಇರಬೇಕು; ನಾನು ನಿಮ್ಮ ದೇವರಾದ ಯೆಹೋ 19
ವನು; ನೀವು ನನ್ನ ಆಜ್ಞೆಗಳನ್ನು ಅನುಸರಿಸಿ ನನ್ನ
ವಿಧಿಗಳನ್ನು ಕೈಕೊಂಡು ನಡಿಸಿರಿ; ನಾನು ನೇಮಿಸಿದ 20
ಸಬ್ಬತ್ ದಿನಗಳನ್ನು ನನ್ನ ದಿನಗಳೆಂದು ಆಚರಿಸಿರಿ;
ನಾನು ನಿಮ್ಮ ದೇವರಾದ ಯೆಹೋವನು ಎಂದು ನೀವು
ತಿಳುಕೊಳ್ಳುವಂತೆ ಅವು ನಿಮಗೂ ನನಗೂ ಗುರುತಾಗಿ
ರುವವು ಎಂದು ಹೇಳಿದೆನು. ಆ ಸಂತಾನದವರಾ 21
ದರೋ ನನ್ನ ಮೇಲೆ ತಿರುಗಿಬಿದ್ದರು; ನನ್ನ ಆಜ್ಞೆಗ
ಳನ್ನು ಅನುಸರಿಸಲಿಲ್ಲ; ಕೈಕೊಂಡವರಿಗೆ ಜೀವಾಧಾರ
ವಾದ ನನ್ನ ವಿಧಿಗಳನ್ನು ಕೈಕೊಂಡು ನಡಿಸಲಿಲ್ಲ;
ನಾನು ನೇಮಿಸಿದ ಸಬ್ಬತ್ ದಿನಗಳನ್ನು ಹೊಲೆಮಾಡಿ
ದರು; ಆದದರಿಂದ ನಾನು ಅರಣ್ಯದಲ್ಲಿ ಇವರ ಮೇಲೆ
ನನ್ನ ರೋಷಾಗ್ನಿಯನ್ನು ಸುರಿಸಿ ನನ್ನ ಕೋಪವನ್ನು
ತೀರಿಸಿಕೊಳ್ಳುವೆನು ಅಂದುಕೊಂಡೆನು. ಆದರೂ 22
ನಾನು ಯಾವ ಜನಾಂಗಗಳ ಮುಂದೆ ಅವರನ್ನು ಪಾರು
ಮಾಡಿದೆನೋ ಆ ಜನಾಂಗಗಳ ಮುಂದೆ ನನ್ನ ಹೆಸರು
ಅಪಕೀರ್ತಿಗೆ ಗುರಿಯಾಗಬಾರದೆಂದು ನನ್ನ ಹೆಸರಿನ
ನಿಮಿತ್ತವೇ ಸಹಿಸಿಕೊಂಡು ಕೈಯನ್ನು ಹಿಂದಕ್ಕೆ
ತೆಗೆದುಕೊಂಡೆನು. ಆ ಮೇಲೆ ಅವರು ನನ್ನ 23
ಆಜ್ಞೆಗಳನ್ನು ಕೈಕೊಳ್ಳದೆ ನನ್ನ ವಿಧಿಗಳನ್ನು ನಿರಾ
ಕರಿಸಿ ನಾನು ನೇಮಿಸಿದ ಸಬ್ಬತ್ ದಿನಗಳನ್ನು
ಹೊಲೆಮಾಡಿ ತಮ್ಮ ಪಿತೃಗಳ ಬೊಂಬೆಗಳ ಮೇಲೆ
ಕಣ್ಣುಹಾಕಿದ್ದರಿಂದ ನಾನು ನಿಮ್ಮನ್ನು ಜನಾಂಗ 24
ಗಳಲ್ಲಿ ಚದರಿಸಿ ದೇಶದೇಶಗಳಿಗೆ ತೂರಿಬಿಡುವೆನು
ಎಂದು ಅರಣ್ಯದಲ್ಲಿ ಅವರಿಗೆ ಪ್ರಮಾಣಮಾಡಿ
ದೆನು. ಇದಲ್ಲದೆ ನಾನೇ ಯೆಹೋವನು ಎಂದು 25
ಅವರು ತಿಳುಕೊಳ್ಳುವಂತೆ ನಾನು ಅವರಿಗೆ ಅಹಿತವಾದ
ಆಜ್ಞೆಗಳನ್ನೂ ಜೀವಾಧಾರವಲ್ಲದ ವಿಧಿಗಳನ್ನೂ ನೇ
ಮಿಸಿ ಅವರು ತಮ್ಮ ಚೊಚ್ಚಲುಮಕ್ಕಳನ್ನು ಆಹುತಿ 26
ಕೊಟ್ಟು ಅರ್ಪಿಸುತ್ತಿದ್ದ ಬಲಿಗಳಿಂದಲೇ ಅವರನ್ನು
ಹೊಲೆಗೆಡಿಸಿ ಕೇವಲ ದುರವಸ್ಥೆಗೆ ತಂದೆನು.

ಹೀಗಿರಲು, ನರಪುತ್ರನೇ, ಇಸ್ರಾಯೇಲ್ ವಂಶದವ 27
ರಿಗೆ ಈ ಮಾತನ್ನು ಹೇಳು—ಕರ್ತನಾದ ಯೆಹೋ
ವನು ಇಂತೆನ್ನುತ್ತಾನೆ—ನಿಮ್ಮ ಪಿತೃಗಳು ಇನ್ನೂ
ಒಂದು ದ್ರೋಹವನ್ನು ಮಾಡಿ ನನ್ನನ್ನು ದೂಷಿಸಿದ್ದಾರೆ.
ನಾನು ಪ್ರಮಾಣಪೂರ್ವಕವಾಗಿ ಅವರಿಗೆ ವಾಗ್ದಾನ 28
ಮಾಡಿದ ದೇಶಕ್ಕೆ ಅವರನ್ನು ಸೇರಿಸಿದ ಮೇಲೆ ಅವರು
ಎತ್ತರವಾದ ಎಲ್ಲಾ ಗುಡ್ಡಗಳನ್ನೂ ಸೊಂಪಾಗಿ ಬೆಳೆದಿ
ರುವ ಎಲ್ಲಾ ಮರಗಳನ್ನೂ ನೋಡಿ ಅಲ್ಲಿ ಯಜ್ಞಪಶು
ಗಳನ್ನು ವಧಿಸಿ ನನ್ನನ್ನು ರೇಗಿಸುವ ನೈವೇದ್ಯವನ್ನರ್ಪಿಸಿ
ಸುಗಂಧಹೋಮಮಾಡಿ ಪಾನದ್ರವ್ಯವನ್ನು ಸುರಿದು
ಒಪ್ಪಿಸುತ್ತಿದ್ದರು. ನೀವು ಹೋಗುವ ಬಾ—ಮಾ [ಎಂಬ 29
ಪೂಜಾಸ್ಥಾನ] ಏನು ಸ್ಥಾನ? (ಇಂದಿನ ವರೆಗೂ ಇಂಥಾ
ಪೂಜಾಸ್ಥಾನಗಳಿಗೆ 1)ಬಾಮಾ ಎಂಬದು ಹೆಸರು.)

1) ಇಬ್ರಿಯ ಭಾಷೆಯಲ್ಲಿ ಬಾ, ಮಾ ಎಂಬ ಪದಗಳಿಗೆ ಹೋಗು ಏನು ಎಂದರ್ಥ.

30 ಇಸ್ರಾಯೇಲ್ ವಂಶದವರಿಗೆ ಹೀಗೆ ಹೇಳು—
ಕರ್ತನಾದ ಯೆಹೋವನು ಇಂತೆನ್ನುತ್ತಾನೆ— ನಿಮ್ಮ
ಪಿತೃಗಳಂತೆ ನಿಮ್ಮನ್ನು ನೀವೇ ಹೊಲಸುಮಾಡಿಕೊಳ್ಳು
ತ್ತೀರೋ? ಅವರು ಪೂಜಿಸುತ್ತಿದ್ದ ಅಸಹ್ಯವಸ್ತುಗಳನ್ನು
ನೀವೂ ಪೂಜಿಸಿ ದೇವದ್ರೋಹಮಾಡುತ್ತೀರೋ?
31 ನೀವು ಬಲಿಯರ್ಪಿಸುತ್ತಾ ನಿಮ್ಮ ಮಕ್ಕಳನ್ನು ಆಹುತಿ
ಕೊಟ್ಟು ಇಂದಿನ ವರೆಗೂ ನಿಮ್ಮನ್ನು ಅಶುದ್ಧಮಾಡಿ
ಕೊಳ್ಳುತ್ತಿದ್ದೀರೋ? ಇಸ್ರಾಯೇಲ್ ವಂಶದವರೇ,
ನಾನು ನಿಮ್ಮಂಥವರಿಗೆ ದೈವೋತ್ತರವನ್ನು ದಯಪಾಲಿ
ಸಬಹುದೋ? ನನ್ನ ಜೀವದಾಣೆ, ನಿಮಗೆ ದೈವೋತ್ತರ
ವನ್ನು ದಯಪಾಲಿಸೆನು; ಇದು ಕರ್ತನಾದ ಯೆಹೋ
32 ವನ ನುಡಿ. ನಾವು ಜನಾಂಗಗಳಂತೆ, ಅನ್ಯದೇಶಗಳ
ವರಂತೆ ಮರಕಲ್ಲುಗಳ ಬೊಂಬೆಗಳನ್ನು ಭಜಿಸು
ವೆವು ಎಂದು ನಿಮ್ಮ ಮನಸ್ಸಿನಲ್ಲಿ ಹುಟ್ಟುವ ಯೋಚನೆ
ಯು ಎಷ್ಟುಮಾತ್ರವೂ ಸಾಗದು.

ಯೆಹೂದದ ವಿಷಯವಾದ ಯೆಹೋವನ ಸದುದ್ದೇಶ.

33 ಕರ್ತನಾದ ಯೆಹೋವನು ಇಂತೆನ್ನುತ್ತಾನೆ— ನನ್ನ
ಜೀವದಾಣೆ, ನಾನು ಶಿಕ್ಷಾಹಸ್ತವನ್ನೆತ್ತಿ ಭುಜಪರಾ
ಕ್ರಮವನ್ನು ತೋರಿಸಿ ರೋಷಾಗ್ನಿಯನ್ನು ಸುರಿಸುತ್ತಾ
34 ನಿಮ್ಮ ಮೇಲೆ ಧೊರೆತನಮಾಡುವೆನು; ಹೌದು, ನಾನು
ಶಿಕ್ಷಾಹಸ್ತವನ್ನೆತ್ತಿ ಭುಜಪರಾಕ್ರಮವನ್ನು ತೋರಿಸಿ
ರೋಷಾಗ್ನಿಯನ್ನು ಸುರಿಸುತ್ತಾ ನಿಮ್ಮನ್ನು ಜನಾಂಗ
ಗಳೊಳಗಿಂದ ಪಾರುಮಾಡಿ ನೀವು ಚದರಿಹೋಗಿರುವ
35 ದೇಶಗಳಿಂದ ನಿಮ್ಮನ್ನು ಕೂಡಿಸಿ ಜನಾಂಗಗಳ ಮಧ್ಯದ
ಅರಣ್ಯಕ್ಕೆ ಕರತಂದು ಅಲ್ಲೇ ಮುಖಾಮುಖಿಯಾಗಿ
33 ನಿಮ್ಮೊಂದಿಗೆ ವಾದಿಸುವೆನು. ನಾನು ಐಗುಪ್ತದ ಅರ
ಣ್ಯದಲ್ಲಿ ನಿಮ್ಮ ಪಿತೃಗಳ ಸಂಗಡ ವಾದಿಸಿದಂತೆ
ನಿಮ್ಮ ಸಂಗಡಲೂ ವಾದಿಸುವೆನು; ಇದು ಕರ್ತನಾದ
37 ಯೆಹೋವನ ನುಡಿ. ನಾನು ನಿಮ್ಮನ್ನು ಲೆಕ್ಕಿಸುವಂತೆ
ಕೋಲಿನ ಕೆಳಗೆ ಹೋಗಮಾಡಿ ಒಡಂಬಡಿಕೆಯ ಕಟ್ಟಿ
38 ನಿಂದ ಬಂಧಿಸಿ ನನಗೆ ತಿರುಗಿಬಿದ್ದು ದ್ರೋಹಿಗಳಾದ
ವರನ್ನು ನಿಮ್ಮೊಳಗಿಂದ ಗುಡಿಸಿಬಿಡುವೆನು; ಅವರು
ಪ್ರವಾಸಿಗಳಾಗಿದ್ದ ದೇಶದಿಂದ ನಾನು ಅವರನ್ನು ಪಾರು
ಮಾಡಿದರೂ ಅವರು ಇಸ್ರಾಯೇಲ್ ದೇಶಕ್ಕೆ ಸೇರು
ವದೇ ಇಲ್ಲ; ನಾನೇ ಯೆಹೋವನು ಎಂದು ನಿಮಗೆ
39 ಗೊತ್ತಾಗುವದು. ಇಸ್ರಾಯೇಲ್ ವಂಶದವರೇ, ಕರ್ತ
ನಾದ ಯೆಹೋವನು ಇಂತೆನ್ನುತ್ತಾನೆ—ಹೋಗಿರಿ,
ನಿಮ್ಮ ಬೊಂಬೆಗಳನ್ನು ಸೇವಿಸಿಕೊಳ್ಳಿರಿ; ಮುಂದಂತು
ನನ್ನ ಮಾತನ್ನು ಕೇಳೇ ಕೇಳುವಿರಿ, ಇನ್ನು ಮೇಲೆ
ನನ್ನ ಪರಿಶುದ್ಧನಾಮವನ್ನು ನಿಮ್ಮ ಬಲಿಗಳಿಂದಲೂ
ಬೊಂಬೆಗಳಿಂದಲೂ ನೀವು ಅಪಕೀರ್ತಿಗೆ ಗುರಿಮಾಡು
40 ವದೇ ಇಲ್ಲ. ಕರ್ತನಾದ ಯೆಹೋವನು ಇಂತೆನ್ನು
ತ್ತಾನೆ—ದೇಶದಲ್ಲಿ ಇಸ್ರಾಯೇಲ್ ವಂಶದವರೆಲ್ಲರೂ
ನನ್ನ ಪರಿಶುದ್ಧವಾದ ಬೆಟ್ಟದಲ್ಲಿ, ಇಸ್ರಾಯೇಲಿನ
ಪರ್ವತಾಗ್ರದಲ್ಲಿ ನನ್ನನ್ನು ಸೇವಿಸುವರು; ಅಲ್ಲೇ ಅವ
ರಿಗೆ ಪ್ರಸನ್ನನಾಗುವೆನು. ಅಲ್ಲೇ ನಿಮ್ಮ ಕಾಣಿಕೆ
ಗಳನ್ನೂ ಉತ್ತಮ ನೈವೇದ್ಯಗಳನ್ನೂ ಮೀಸಲಾದದೆಲ್ಲ
41 ವನ್ನೂ ಬರಮಾಡಿಕೊಳ್ಳುವೆನು. ನಾನು ನಿಮ್ಮನ್ನು
ಜನಾಂಗಗಳೊಳಗಿಂದ ಪಾರುಮಾಡಿ ನೀವು ಚದ
ಹೋಗಿರುವ ದೇಶಗಳಿಂದ ತಂದು ಕೂಡಿಸುವಾಗ ನಿಮ
ಸುಗಂಧಹೋಮವನ್ನು ಆಘ್ರಾಣಿಸಿ ನಿಮಗೆ ಪ್ರಸ
ನಾಗುವೆನು; ಸಕಲ ಜನಾಂಗಗಳೆದುರಿಗೆ ನಿಮ್ಮ ರ
ಣೆಯ ಮೂಲಕ ನನ್ನ ಗೌರವವನ್ನು ಕಾಪಾ
ಕೊಳ್ಳುವೆನು. ನಾನು ಪ್ರಮಾಣಮಾಡಿ ನಿಮ್ಮ ಪಿ
ಗಳಿಗೆ ಯಾವ ದೇಶವನ್ನು ಕೊಟ್ಟೆನೋ ಆ ಇಸ್
ಯೇಲ್ ದೇಶಕ್ಕೆ ನಿಮ್ಮನ್ನು ಬರಮಾಡುವಾಗ ನಾನ
ಯೆಹೋವನು ಎಂದು ನಿಮಗೆ ಗೊತ್ತಾಗುವದ
ನೀವು ನಿಮ್ಮನ್ನು ಹೊಲಸುಮಾಡಿಕೊಂಡಿರುವ ನಿಮ
ನಡತೆಯನ್ನೂ ನಿಮ್ಮ ಎಲ್ಲಾ ಕಾರ್ಯಗಳನ್ನೂ ಅಲ್ಲ
ಜ್ಞಾಪಕಕ್ಕೆ ತಂದುಕೊಂಡು ನೀವು ನಡಿಸಿರುವ ಸಕ
ದುಷ್ಕೃತ್ಯಗಳ ನಿಮಿತ್ತ ನಿಮ್ಮನ್ನು ನೋಡಿ ನೀವೇ ಅ
ಹ್ಯಪಡುವಿರಿ. ಇಸ್ರಾಯೇಲ್ ವಂಶದವರೇ, ನಿಮ
ದುರ್ನಡತೆಗೂ ದುಷ್ಕೃತ್ಯಗಳಿಗೂ ತಕ್ಕ ಹಾಗೆ ನಾನ
ನಿಮ್ಮನ್ನು ದಂಡಿಸದೆ ನನ್ನ ಹೆಸರಿನ ನಿಮಿತ್ತವೇ ನಾನ
ನಿಮ್ಮನ್ನು ಸಹಿಸಿಕೊಂಡಿರುವಾಗ ನಾನೇ ಯೆಹೋ
ವನು ಎಂದು ನಿಮಗೆ ಗೊತ್ತಾಗುವದು; ಇದು ಕರ
ನಾದ ಯೆಹೋವನ ನುಡಿ.

ಕಾಡುಗಿಚ್ಚಿನ ಸಾಮ್ಯ.

ಆ ಮೇಲೆ ಯೆಹೋವನು ಈ ವಾಕ್ಯವನ್ನು ನನ
ದಯಪಾಲಿಸಿದನು—ನರಪುತ್ರನೇ, ನೀನು ದಕ್ಷಿಣಾ
ಮುಖನಾಗಿ ಆ ಕಡೆಗೆ ಮಾತಾಡುತ್ತಾ ದಕ್ಷಿಣ ಸೀಮೆ
ಯ ವನದ ಪ್ರಸ್ತಾಪವನ್ನೆತ್ತಿ ಆ ವನಕ್ಕೆ ಹೀಗೆ ಸಾ
ಹೇಳು—ಯೆಹೋವನ ಮಾತನ್ನು ಕೇಳು, ಕರ್ತನಾ
ಯೆಹೋವನು ಇಂತೆನ್ನುತ್ತಾನೆ—ಆಹಾ, ನಾನು ನಿನ್ನೊ
ಳಗೆ ಬೆಂಕಿಯನ್ನು ಹೊತ್ತಿಸುವೆನು, ಅದು ನಿನ್ನಲ್ಲಿ
ಎಲ್ಲಾ ಹಸುರು ಮರಗಳನ್ನೂ ಒಣಮರಗಳನ್ನೂ ನುಂ
ಬಿಡುವದು; ಧಗಧಗಿಸುವ ಉರಿಯು ಆರದೆ ತೆಂ
ಲಿಂದ ಬಡಗಲ ವರೆಗೆ ಎಲ್ಲರ ಮುಖಗಳನ್ನು ಕಂದಿಸ
ವದು. ಅದನ್ನು ಹೊತ್ತಿಸಿದವನು ಯೆಹೋವನಾ
ನಾನೇ ಎಂಬದು ಸಕಲನರಪ್ರಾಣಿಗಳಿಗೂ ಗೋಚ
ವಾಗುವದು; ಅದು ಆರಿಹೋಗದು. ಆಗ ನಾನು—
ಅಯ್ಯೋ, ಕರ್ತನಾದ ಯೆಹೋವನೇ, ಇವನು ಒ
ಟುಗಾರನಲ್ಲವೆ ಎಂದು ಈ ಜನರು ನನ್ನ ವಿಷಯವಾ
ಅಂದುಕೊಳ್ಳುತ್ತಾರೆ ಎಂಬದಾಗಿ ಅರಿಕೆಮಾಡಿದೆನು.

ಯೆಹೋವನ ಖಡ್ಗ, ಪ್ರವಾದಿಯ ದುಃಖ.

ಯೆಹೋವನು ಈ ವಾಕ್ಯವನ್ನು ನನಗೆ ದಯ
ಪಾಲಿಸಿದನು—ನರಪುತ್ರನೇ, ನೀನು ಯೆರೂಸ 2
ಲೇಮಿಗೆ ಅಭಿಮುಖನಾಗಿ ಅಲ್ಲಿನ ಪವಿತ್ರಸ್ಥಾನಗ
ಕಡೆಗೆ ಮಾತಾಡುತ್ತಾ ಇಸ್ರಾಯೇಲ್ ದೇಶದ ಪ್ರಸ್
ಪವನ್ನೆತ್ತಿ ಆ ದೇಶಕ್ಕೆ ಹೀಗೆ ಸಾರಿಹೇಳು—ಯೆಹೋ
ವನು ಇಂತೆನ್ನುತ್ತಾನೆ—ಆಹಾ, ನಾನು ನಿನಗೆ ವಿರ
ದ್ಧನಾಗಿದ್ದೇನೆ, ನನ್ನ ಖಡ್ಗವನ್ನು ಒರೆಯಿಂ
ಹಿರಿದು ನಿನ್ನಲ್ಲಿನ ಶಿಷ್ಟರನ್ನೂ ದುಷ್ಟರನ್ನೂ ಸಂಹರಿ
ಬಿಡುವೆನು. ನಾನು ನಿನ್ನಲ್ಲಿನ ಶಿಷ್ಟರನ್ನೂ ದು

ರನ್ನೂ ಸಂಹರಿಸಬೇಕೆಂದಿರುವದರಿಂದ ನನ್ನ ಖಡ್ಗವು
ಒರೆಯಿಂದ ಹೊರಟು ತೆಂಕಲಿಂದ ಬಡಗಲ ವರೆಗೆ
ಸಕಲನರಪ್ರಾಣಿಗಳ ಮೇಲೆ ಬೀಳುವದು; ಆಗ
ಯೆಹೋವನಾದ ನಾನೇ ನನ್ನ ಖಡ್ಗವನ್ನು ಒರೆ
ಯಿಂದ ಹಿರಿದಿದ್ದೇನೆ ಎಂಬದು ಎಲ್ಲಾ ನರಮನುಷ್ಯ
ರಿಗೂ ಗೊತ್ತಾಗುವದು; ಅದು ಪುನಃ ಒರೆಗೆ ಸೇರದು.
ನರಪುತ್ರನೇ, ಮೊರೆಯಿಡು; ಸೊಂಟಮುರಿದಷ್ಟು
ದುಃಖದಿಂದ ಜನರ ಮುಂದೆ ನರಳಾಡು. ಏಕೆ ನರ
ಳಾಡುತ್ತೀ ಎಂದು ಅವರು ನಿನ್ನನ್ನು ಕೇಳಲು ನೀನು
ಅವರಿಗೆ—ದುರ್ವಾರ್ತೆಯ ನಿಮಿತ್ತ ನರಳುತ್ತೇನೆ;
ಇಗೋ, ವಿಪತ್ತು ಬಂತು; ಎಲ್ಲರ ಹೃದಯವು ಕರಗಿ
ನೀರಾಗುವದು; ಎಲ್ಲರ ಕೈ ಜೋಲು ಬೀಳುವದು,
ಎಲ್ಲರ ಮನಸ್ಸು ಕುಂದುವದು. ಎಲ್ಲರ ಮೊಣಕಾಲು
ನೀರಿನಂತೆ ಚಂಚಲವಾಗುವದು; ಇಗೋ, ಬಂತು,
ಆಯಿತು; ಇದು ಕರ್ತನಾದ ಯೆಹೋವನ ನುಡಿ
ಎಂದು ಉತ್ತರಕೊಡು.

ಖಡ್ಗಗೀತ.

ಆಮೇಲೆ ಯೆಹೋವನು ಈ ವಾಕ್ಯವನ್ನು ನನಗೆ
ದಯಪಾಲಿಸಿದನು—ನರಪುತ್ರನೇ,
ಕರ್ತನು ಇಂತೆನ್ನುತ್ತಾನೆ ಎಂಬದಾಗಿ ನುಡಿದು
ಹೀಗೆ ಸಾರು—
ಆಹಾ, ಖಡ್ಗ, ಖಡ್ಗ, ಸಾಣೆಹಿಡಿದಿದೆ, ತಿಕ್ಕಿದೆ.
ಸಂಹರಿಸುವಂತೆ ಸಾಣೆಹಿಡಿದಿದೆ, ಮಿಂಚುವಂತೆ
ತಿಕ್ಕಿದೆ;
1)ನಮ್ಮ ಕುಮಾರನ ರಾಜದಂಡವು
ಮಿಕ್ಕ ಎಲ್ಲಾ ದಂಡಗಳನ್ನು ತಿರಸ್ಕರಿಸುತ್ತದಲ್ಲಾ
ಎಂಬದಾಗಿ
ನಾವು ಸಂಭ್ರಮಪಡಬಹುದೇ?
ಖಡ್ಗವು ಕೈಗೆ ಸಿದ್ಧವಾಗುವಂತೆ ತಿಕ್ಕುವದಕ್ಕೆ
ಕೊಟ್ಟಿದೆ,
ಘಾತಕನ ಕೈಗೆ ಈಡಾಗುವ ಹಾಗೆ ಸಾಣೆಹಿಡಿದಿದೆ,
ತಿಕ್ಕಿದೆ.
ನರಪುತ್ರನೇ, ಕೂಗಿಕೋ, ಗೋಳಾಡು!
ಖಡ್ಗವು ನನ್ನ ಜನರ ಮೇಲೆಯೂ ಇಸ್ರಾಯೇಲಿನ
ಪ್ರಭುಗಳೆಲ್ಲರ ಮೇಲೆಯೂ ಬಿದ್ದಿದೆ;
ಆ ಪ್ರಭುಗಳು ನನ್ನ ಜನರೊಂದಿಗೆ ಖಡ್ಗಕ್ಕೆ ತುತ್ತಾ
ಗಿದ್ದಾರೆ;
ತೊಡೆಯನ್ನು ಬಡಿದುಕೋ.
ಕರ್ತನಾದ ಯೆಹೋವನು ಇಂತೆನ್ನುತ್ತಾನೆ—
ಶೋಧನೆಯು ಸಂಭವಿಸಿತು;
ತಿರಸ್ಕರಿಸುತ್ತಿದ್ದ ರಾಜದಂಡವೇ ನಾಶವಾದರೆ
ಗತಿಯೇನು?
ನರಪುತ್ರನೇ, ನೀನು ದೈವಸಂಕಲ್ಪವನ್ನು ಸಾರಿ
ಚಪ್ಪಾಳೆಬಡಿ;
ಖಡ್ಗವು ಎರಡರಷ್ಟು, ಮೂರರಷ್ಟು ಸಂಹರಿಸಲಿ!
ಪ್ರಜೆಯನ್ನು ಹತಿಸುವ ಖಡ್ಗ!
ಸುತ್ತಲು ಬೀಸಿ ಅಧಿಪತಿಯನ್ನು ಹತಿಸುವ ಖಡ್ಗ!
ಅವರ ಹೃದಯವು ನೀರಾಗಿ ಬಹುಜನ ಎಡವಿ 15
ಬೀಳುವಂತೆ
ಸಂಹರಿಸುವ ಖಡ್ಗವನ್ನು ಅವರ ಪುರದ್ವಾರಗಳಿ
ಗೆಲ್ಲಾ ತಂದಿದ್ದೇನೆ.
ಆಹಾ, ಮಿಂಚಿನಂತೆ ಮಿಂಚುತ್ತದೆ, ವಧೆಗಾಗಿ
ಉಜ್ಜಿದೆ!
[ಖಡ್ಗವೇ,] ಏಕಾಗ್ರವಾಗಿ ಬಲಕ್ಕೆ ಹೋಗು, ಸಿದ್ಧ 16
ವಾಗಿ ಎಡಕ್ಕೆ ಸಾಗು,
ನಿನ್ನ ಮುಖವಿದ್ದ ಕಡೆಗೇ ಹೊರಡು.
ನಾನು ಚಪ್ಪಾಳೆಬಡಿದು ನನ್ನ ರೋಷವನ್ನು ತೀರಿಸಿ 17
ಕೊಳ್ಳುವೆನು.
ಕರ್ತನಾದ ನಾನೇ ಇದನ್ನು ನುಡಿದಿದ್ದೇನೆ.

ಶತ್ರುರಾಜನ ಆಗಮನ.

ಯೆಹೋವನು ನನಗೆ ಮತ್ತೊಂದು ವಾಕ್ಯವನ್ನು 18
ದಯಪಾಲಿಸಿದನು—ನರಪುತ್ರನೇ, ಬಾಬೆಲಿನ ಅರ 19
ಸನ ಖಡ್ಗವು ಬರುವದಕ್ಕೆ ಎರಡು ದಾರಿಗಳ ನಕ್ಷೆ
ಯನ್ನು ಬರೆ; ಅವೆರಡು ಒಂದೇ ದೇಶದಿಂದ ಹೊರಟ
ಹಾಗಿರಲಿ; ಒಂದೊಂದು ಪಟ್ಟಣಕ್ಕೆ ಹೋಗುವ ದಾರಿಯ
ಮೊದಲಲ್ಲಿ ಕೈಮರವನ್ನು ಚಿತ್ರಿಸು. ಅಮ್ಮೋನ್ಯರ 20
ರಬ್ಬಾ ಎಂಬ ಪಟ್ಟಣಕ್ಕೂ ಯೆಹೂದದೊಳಗೆ ಕೋಟೆ
ಕೊತ್ತಲಗಳಿಂದ ಕೂಡಿದ ಯೆರೂಸಲೇಮಿಗೂ ಖಡ್ಗವು
ಬರುವದಕ್ಕೆ ದಾರಿಗಳನ್ನು ಮಾಡು. ಮಾರ್ಗವು ಒಡೆ 21
ಯುವ ಸ್ಥಳದಲ್ಲಿ, ಎರಡು ದಾರಿಗಳ ಮೊದಲಲ್ಲಿ
ಬಾಬೆಲಿನ ಅರಸನು ಶಕುನನೋಡುವದಕ್ಕೆ ನಿಂತಿದ್ದಾನೆ;
ಬಾಣಗಳನ್ನು ಕಲಕಿ ವಿಗ್ರಹಗಳನ್ನು ಪ್ರಶ್ನೆಕೇಳಿ ಕಾಳಿ
ಜವನ್ನು ಪರೀಕ್ಷಿಸಿದ್ದಾನೆ. ಯೆರೂಸಲೇಮ್ ಗುರು 22
ತಿನ ಬಾಣವು ಅವನ ಬಲಗೈಗೆ ಸಿಕ್ಕಿದೆ; ಭಿತ್ತಿಭೇದಕ
ಯಂತ್ರಗಳನ್ನು ನಿಲ್ಲಿಸಿ ಬಾಯಿಬಿಟ್ಟು ಸಂಹಾರಧ್ವನಿ
ಗೈದು ಕೂಗಿ ಹೌದು ಭಿತ್ತಿಭೇದಕಯಂತ್ರಗಳನ್ನು
ಪುರದ್ವಾರಗಳೆದುರಿಗೆ ನಿಲ್ಲಿಸಿ ದಿಬ್ಬಹಾಕಿ ಒಡ್ಡುಕಟ್ಟ
ಬೇಕೆಂದು ಅದರಿಂದ ಸೂಚನೆಯಾಯಿತು. 2)ಪುರ 23
ನಿವಾಸಿಗಳು ತಾವು ಆ ಅರಸನಿಂದ ಮಾಡಿಸಿಕೊಂಡ
ಪ್ರಮಾಣಗಳಲ್ಲಿ ಭರವಸವಿಟ್ಟು ಈ ಶಕುನವು ಸುಳ್ಳೆಂದು
ಭಾವಿಸುವರು; ಆದರೆ ಅವನು ಅವರ ಅಧರ್ಮವನ್ನು
ಬೈಲಿಗೆ ತರಲು [ಅವನ ಕೈಗೆ] ಸಿಕ್ಕಿಬೀಳುವರು.

ಚಿದ್ಕೀಯನ ದುರ್ಗತಿ.

ಹೀಗಿರಲು ಕರ್ತನಾದ ಯೆಹೋವನು ಇಂತೆನ್ನು 24
ತ್ತಾನೆ—ನಿಮ್ಮ ಅಪರಾಧಗಳು ಬೈಲಿಗೆ ಬಂದು ನಿಮ್ಮ
ಪಾಪಗಳು ನಿಮ್ಮ ಕಾರ್ಯಗಳಲ್ಲೆಲ್ಲಾ ತಲೆದೋರಿ
ನೀವು ನಿಮ್ಮ ಅಧರ್ಮವನ್ನು ನನ್ನ ಜ್ಞಾಪಕಕ್ಕೆ ತಂದು
[ಪಾಪಿಗಳಾಗಿ] ನನ್ನ ನೆನಪಿಗೆ ಬಂದಿರಾದ ಕಾರಣ
ಶತ್ರುವಿನ ಕೈಗೆ ಸಿಕ್ಕಿಬೀಳುವಿರಿ.
ಇಸ್ರಾಯೇಲಿನ ದೊರೆಯೇ, ದುಷ್ಟನೇ, ಭ್ರಷ್ಟನೇ! 25

1) ಮೂಲ: ನನ್ನ. 2) ಮೂಲ: ಅವರು.

ನಿನಗೆ ಸಮಯವು ಹತ್ತರಿಸಿದೆ; ಇದೇ ನಿನ್ನ ಅಪರಾಧದ ಕಡೆಗಾಲ.

26 ಕರ್ತನಾದ ಯೆಹೋವನು ಇಂತೆನ್ನುತ್ತಾನೆ—
ಮುಂಡಾಸವನ್ನು ಕಿತ್ತುಬಿಡು! ಕಿರೀಟವನ್ನು ಎತ್ತಿ ಹಾಕು!
ಎಲ್ಲವೂ ವ್ಯತ್ಯಸ್ತವಾಗಲಿ;
ಕೆಳಗಿನದನ್ನು ಮೇಲೆ ಮಾಡು, ಮೇಲಿನದನ್ನು ಕೆಳಗೆ ಮಾಡು;

27 ನಾನು ದೊಬ್ಬಿಬಿಡುವೆನು, ದೊಬ್ಬಿಬಿಡುವೆನು, ದೊಬ್ಬಿಬಿಡುವೆನು;
[ರಾಜ್ಯಕ್ಕೆ] ಬಾಧ್ಯನು ಬರುವದರೊಳಗೆ ಒಂದೂ ಇದ್ದಂತಿರದು;
ಅವನಿಗೇ ರಾಜ್ಯವನ್ನು ವಹಿಸುವೆನು.

ಅಮ್ಮೋನಿನ ಮೇಲೆ ಬೀಳುವ ಖಡ್ಗ.

28 ನರಪುತ್ರನೇ, ನೀನು ದೈವಸಂಕಲ್ಪವನ್ನು ಪ್ರಕಟಿಸುತ್ತಾ ಹೀಗೆ ನುಡಿ—ಅಮ್ಮೋನ್ಯರ ವಿಷಯದಲ್ಲಿಯೂ ಅವರು ಮಾಡುವ ದೂಷಣೆಯ ವಿಷಯದಲ್ಲಿಯೂ ಕರ್ತನಾದ ಯೆಹೋವನು ಇಂತೆನ್ನುತ್ತಾನೆ—
ಅಹಾ, ಖಡ್ಗ, ಖಡ್ಗ, ಸಂಹರಿಸುವದಕ್ಕೆ ಹಿರಿದಿದೆ, [1]ಮಿಂಚುವಂತೆ ತೀರಾ ತಿಕ್ಕಿದೆ;

29 [ಅಮ್ಮೋನೇ,] [2]ನಿನ್ನ ಜೋಯಿಸರು ಮಿಥ್ಯೆಯನ್ನು ಸಾಕ್ಷಾತ್ಕರಿಸಿ ಸುಳ್ಳು ಸುಳ್ಳಾಗಿ ಕಣಿಹೇಳುತ್ತಿದ್ದಾರೆ.
ಸಮಯವು ಹತ್ತರಿಸಿ ಅಪರಾಧದ ಕಡೆಗಾಲವು ಸಂಭವಿಸಿ ಹತರಾಗಿ ಬಿದ್ದಿರುವ ದುಷ್ಟರ ಗತಿಯನ್ನು ನೋಡು!
ಜೋಯಿಸರನ್ನು ನಂಬಿದ ನೀನೂ ಆ ದುಷ್ಟರ ಕತ್ತುಗಳ ಮೇಲೆ ಒರಗಿ ಹೋಗುವಿ.

30 ಕತ್ತಿಯನ್ನು ಒರೆಗೆ ಸೇರಿಸು. ನಿನ್ನ ಸೃಷ್ಟಿಸ್ಥಳದಲ್ಲಿ, ನಿನ್ನ ಜನ್ಮಭೂಮಿಯಲ್ಲಿ ನಿನಗೆ ನ್ಯಾಯತೀರಿಸುವೆನು.

31 ನಿನ್ನ ಮೇಲೆ ನನ್ನ ಕೋಪವನ್ನು ಸುರಿಸಿ ರೋಷಾಗ್ನಿಯನ್ನು ಊದಿ,
ನಿನ್ನನ್ನು ಮೃಗಪ್ರಾಯರೂ ಹಾಳುಮಾಡುವದರಲ್ಲಿ ಗಟ್ಟಿಗರೂ ಆದವರ ಕೈಗೆ ಸಿಕ್ಕಿಸುವೆನು.

32 ನೀನು ಅಗ್ನಿಗೆ ಆಹುತಿಯಾಗುವಿ; ನಿನ್ನ ರಕ್ತವು ದೇಶದಲ್ಲೆಲ್ಲಾ ಇಂಗಿರುವದು;
ನೀನು ಇನ್ನು ಜ್ಞಾಪಕಕ್ಕೆ ಬರುವದಿಲ್ಲ; ಯೆಹೋವನಾದ ನಾನೇ ಇದನ್ನು ನುಡಿದಿದ್ದೇನೆ.

ಯೆಹೂದದ ಘೋರಪಾಪ.

22 ಯೆಹೋವನು ಇನ್ನೊಂದು ವಾಕ್ಯವನ್ನು ನನಗೆ
2 ದಯಪಾಲಿಸಿದನು.—ನರಪುತ್ರನೇ, ರಕ್ತಮ
ಯವಾದ ಆ ಪಟ್ಟಣಕ್ಕೆ ನ್ಯಾಯತೀರಿಸಲು ನಿ
ಮನಸ್ಸು ಸ್ಥಿರವೋ, ಸ್ಥಿರವಾಗಿದೆಯೋ? ಅದರ ದು
ಚಾರಗಳನ್ನೆಲ್ಲಾ ಅದಕ್ಕೆ ಹೀಗೆ ತಿಳಿಸು—ಕರ್ತನಾ
ಯೆಹೋವನು ಇಂತೆನ್ನುತ್ತಾನೆ—ನಿನ್ನ ಮಧ್ಯದ
ರಕ್ತವನ್ನು ಸುರಿಸಿ ದಂಡನೆಯ ಕಾಲವನ್ನು ಹತ್ತಿರ
ತಂದುಕೊಂಡ ಪುರಿಯೇ! ನಿನ್ನ ಕೇಡಿಗಾಗಿ ಬೊಂಬ
ಳನ್ನು ಮಾಡಿಕೊಂಡು ನಿನ್ನನ್ನು ಹೊಲೆಗೆಡಿಸಿಕೊಂ
ನಗರಿಯೇ! ನೀನು ಸುರಿಸಿದ ರಕ್ತದಿಂದ ಅಪರಾ
ಯೂ ಮಾಡಿಕೊಂಡ ಬೊಂಬೆಗಳಿಂದ ಹೊಲಸೂ ಆ
ಶಿಕ್ಷೆಯ ಸಮಯವನ್ನು ಹತ್ತಿರಕ್ಕೆ ತಂದುಕೊಂ
ದಂಡನೆಯ ಕಾಲಕ್ಕೆ ಬಂದಿದ್ದೀ; ಆದಕಾರಣ ನಿನ್ನ
ಜನಾಂಗಗಳ ದೂಷಣೆಗೂ ಸಕಲ ದೇಶಗಳ ಹಾಸ್ಯಕ
ಗುರಿಮಾಡಿದ್ದೇನೆ. ಹೆಸರುಗೆಟ್ಟ ಪುರಿಯೇ, ಗ
ಲಕ್ಕೆ ಪ್ರಸಿದ್ಧವಾದ ನಗರಿಯೇ, ಹತ್ತಿರದವರೂ ದು
ದವರೂ ನಿನ್ನನ್ನು ಹಾಸ್ಯಮಾಡುವರು. ಇಗೋ
ಇಸ್ರಾಯೇಲಿನ ಪ್ರಭುಗಳು ತಮ್ಮ ತಮ್ಮ ಶಕ್ತ್ಯ
ಸಾರ ನಿನ್ನಲ್ಲಿ ರಕ್ತಸುರಿಸುತ್ತಲೇ ಇದ್ದಾರೆ. ನಿ
ವರು ತಾಯಿತಂದೆಗಳನ್ನು ತುಚ್ಛೀಕರಿಸಿದ್ದಾರೆ, ನಿ
ವರು ವಿದೇಶಿಗಳನ್ನು ಬಾಧಿಸಿದ್ದಾರೆ, ನಿನ್ನವ
ಅನಾಥರನ್ನೂ ವಿಧವೆಯರನ್ನೂ ಹಿಂಸಿಸಿದ್ದಾರೆ. ನೀ
ನನ್ನ ಪವಿತ್ರವಸ್ತುಗಳನ್ನು ಅಲಕ್ಷ್ಯಮಾಡಿ ನಾ
ನೇಮಿಸಿದ ಸಬ್ಬತ್ ದಿನಗಳನ್ನು ಹೊಲೆಮಾಡಿದ್ದ
ನಿನ್ನಲ್ಲಿ ಚಾಡಿಖೋರರು ರಕ್ತಹರಿಸಿದ್ದಾರೆ; ನಿ
ವರು ಗುಡ್ಡಗಳ ಮೇಲೆ [ಯಜ್ಞಶೇಷವನ್ನು] ತಿಂ
ದ್ದಾರೆ. ನಿನ್ನ ಮಧ್ಯದಲ್ಲಿ ದುರಾಚಾರಗಳನ್ನು ನಡಿ
ದ್ದಾರೆ; ನಿನ್ನಲ್ಲಿ ತಂದೆಗೆ ಮಾನಭಂಗಮಾಡಿದ್ದಾ
ನಿನ್ನಲ್ಲಿ ಮುಟ್ಟಿನಿಂದ ಅಶುದ್ಧಳಾದವಳನ್ನು ಕೂ
ದ್ದಾರೆ. ನಿನ್ನಲ್ಲಿ ಒಬ್ಬನು ನೆರೆಯವನ ಹೆಂಡತಿಯ
ದುರಾಚಾರನಡಿಸಿದ್ದಾನೆ; ಇನ್ನೊಬ್ಬನು ಅಕ್ರ
ಮಾಡಿ ಸೊಸೆಯನ್ನು ಕೆಡಿಸಿದ್ದಾನೆ; ಮತ್ತೊಬ್ಬ
ತನ್ನ ತಂದೆಯ ಮಗಳೇ ಆದ ತಂಗಿಯ ಮಾನವನ
ಭಂಗಪಡಿಸಿದ್ದಾನೆ. ನಿನ್ನವರು ರಕ್ತಸುರಿಸುವದ
ಲಂಚತೆಗೆದುಕೊಂಡಿದ್ದಾರೆ; ನಿನ್ನವರು ಸಾಲಕ್ಕೆ ಬ
ತೆಗೆದುಕೊಂಡು ಲಾಭಕ್ಕೆ ಹಣಕೊಟ್ಟು ತಮ್ಮ ನೆರೆ
ವರನ್ನು ಬಾಧಿಸಿ ದೋಚಿಕೊಂಡು ನನ್ನನ್ನು ಮರೆ
ಬಿಟ್ಟಿದ್ದಾರೆ; ಇದು ಕರ್ತನಾದ ಯೆಹೋವನ ನು
ಇಗೋ, ನೀನು ದೋಚಿಕೊಂಡ ಲಾಭವನ್ನೂ ನಿನ್ನ
ಸುರಿಸಿದ ರಕ್ತವನ್ನೂ ನಾನು ನೋಡಿ ಕೈಬಡಿದುಕೊಂ
ದ್ದೇನೆ. ನಾನು ನಿನ್ನನ್ನು ದಂಡಿಸುವ ಕಾಲದಲ್ಲಿ ಮ
ಸ್ಸನ್ನು ಗಟ್ಟಿಮಾಡಿಕೊಂಡೀಯೋ, ಕೈಗಳನ್ನು ಬ
ಪಡಿಸಿಕೊಂಡೀಯೋ? ಯೆಹೋವನಾದ ನಾನೇ ಇದನ
ನುಡಿದಿದ್ದೇನೆ, ನಡಿಸುತ್ತೇನೆ. ನಾನು ನಿನ್ನನ
ಜನಾಂಗಗಳಲ್ಲಿ ಚದರಿಸಿ ದೇಶದೇಶಗಳಿಗೆ ತೂರಿಬಿ
ನಿನ್ನ ಹೊಲಸನ್ನು ನಿನ್ನೊಳಗಿಂದ ತೆಗೆದು ನಾಶಮಾ
ವೆನು. ಜನಾಂಗಗಳ ಕಣ್ಣೆದುರಿಗೆ ನಿನ್ನಷ್ಟಕ್ಕೆ ನೀನ
ಅಪಕೀರ್ತಿಗೆ ಗುರಿಯಾಗುವಿ; ನಾನೇ ಯೆಹೋವನ
ಎಂದು ನಿನಗೆ ಗೊತ್ತಾಗುವದು.

1) ಅಥವಾ: ಮಿಂಚುತ್ತಾ ನುಂಗುವ ಹಾಗೆ ತಿಕ್ಕಿದೆ! 2) ಮೂಲ: ಅವರು.

### ಕಂದುಬೆಳ್ಳಿಯ ಸಾಮ್ಯ.

17 ಆ ಮೇಲೆ ಯೆಹೋವನು ಈ ವಾಕ್ಯವನ್ನು ನನಗೆ
18 ದಯಪಾಲಿಸಿದನು—ನರಪುತ್ರನೇ, ಇಸ್ರಾಯೇಲ್
ವಂಶವೆಂಬ ಲೋಹವು ನನ್ನ ದೃಷ್ಟಿಯಲ್ಲಿ ಕಲ್ಮಷ
ವಾಗಿದೆ; ಅದೆಲ್ಲಾ ಕುಲುಮೆಯಲ್ಲಿನ ತಾಮ್ರ, ತವರ,
19 ಕಬ್ಬಿಣ, ಸೀಸ; ಅದು ಕಂದುಬೆಳ್ಳಿ. ಹೀಗಿರಲು
ಕರ್ತನಾದ ಯೆಹೋವನು ಇಂತೆನ್ನುತ್ತಾನೆ—ನೀವೆ
ಲ್ಲರು ಕಸರಾಗಿರುವದರಿಂದ ಇಗೋ, ನಿಮ್ಮನ್ನು
20 ಯರೂಸಲೇಮಿನೊಳಕ್ಕೆ ಕೂಡಿಸುವೆನು. ಬೆಳ್ಳಿ,
ತಾಮ್ರ, ಕಬ್ಬಿಣ, ಸೀಸ, ತವರ ಇವುಗಳನ್ನು ಕುಲುಮೆ
ಯೊಳಗೆ ಕೂಡಿಸಿ ಊದಿ ಉರಿಹತ್ತಿಸಿ ಕರಗಿಸುವಂತೆ
ನಾನು ನಿಮ್ಮನ್ನು ನನ್ನ ಉಗ್ರಕೋಪದಲ್ಲಿ ಕೂಡಿಸಿ
21 ಇಟ್ಟುಬಿಟ್ಟು ಕರಗಿಸುವೆನು. ಹೌದು, ನಾನು ನಿಮ್ಮ
ನ್ನು ನನ್ನ ರೋಷಾಗ್ನಿಯಲ್ಲಿ ಕೂಡಿಸಿ ಊದಲು ನೀವು
22 ಅದರೊಳಗೆ ಕರಗಿಹೋಗುವಿರಿ. ಬೆಳ್ಳಿಯು ಕುಲುಮೆ
ಯೊಳಗೆ ಕರಗುವಂತೆ ನೀವು ನನ್ನ ರೋಷಾಗ್ನಿಯಲ್ಲಿ
ಕರಗುವಿರಿ; ನಿಮ್ಮ ಮೇಲೆ ರೋಷಾಗ್ನಿಯನ್ನು ಸುರಿಸಿ
ದಾತನು ಯೆಹೋವನಾದ ನಾನೇ ಎಂದು ನಿಮಗೆ
ಗೊತ್ತಾಗುವದು.

### ಪಾಪವು ಯೆಹೂದದ ಎಲ್ಲಾ ಅಂತಸ್ತಿನವರನ್ನು ವ್ಯಾಪಿಸಿದ್ದು.

23 ಯೆಹೋವನು ಈ ವಾಕ್ಯವನ್ನು ನನಗೆ ದಯಪಾಲಿಸಿ
24 ದನು—ನರಪುತ್ರನೇ, ಆ ನಾಡಿಗೆ ಹೀಗೆ ಹೇಳು—
ದೇವರ ಕೋಪದ ಈ ದಿನದಲ್ಲಿ ನೀನು ಶುದ್ಧಿಯಾಗದ
25 ದೇಶ, ಮಳೆಯಿಲ್ಲದ ದೇಶ. ಆ ನಾಡಿನೊಳಗೆ
ಪ್ರವಾದಿಗಳು ಒಳಸಂಚುಮಾಡಿಕೊಂಡಿದ್ದಾರೆ, ಬೇಟೆ
ಯನ್ನು ಸೀಳುತ್ತಾ ಗರ್ಜಿಸುವ ಸಿಂಹದಂತಿದ್ದಾರೆ,
ನರಪ್ರಾಣಿಗಳನ್ನು ನುಂಗಿದ್ದಾರೆ, ಆಸ್ತಿಯನ್ನೂ ಅಮೂ
ಲ್ಯವಸ್ತುಗಳನ್ನೂ ದೋಚಿಕೊಂಡಿದ್ದಾರೆ; ದೇಶದಲ್ಲಿ
ಬಹುಮಂದಿಯನ್ನು ವಿಧವೆಯರನ್ನಾಗಿ ಮಾಡಿದ್ದಾರೆ.
26 ಅಲ್ಲಿನ ಯಾಜಕರು ನನ್ನ ವಿಧಿಗಳನ್ನು ಭಂಗಮಾಡಿ
ದ್ದಾರೆ, ನನ್ನ ಪರಿಶುದ್ಧವಸ್ತುಗಳನ್ನು ಹೊಲೆಮಾಡಿ
ದ್ದಾರೆ; ಮೀಸಲಾದದಕ್ಕೂ ಮೀಸಲಲ್ಲದ್ದಕ್ಕೂ
ಭೇದವೆಣಿಸಲಿಲ್ಲ, ಶುದ್ಧಾಶುದ್ಧವಿವೇಚನೆಯನ್ನು ಬೋ
ಧಿಸಲಿಲ್ಲ; ನಾನು ನೇಮಿಸಿದ ಸಬ್ಬತ್ ದಿನಗಳಿಗೆ
ವಿಮುಖರಾಗಿದ್ದಾರೆ; ಇದರಿಂದ ನಾನು ಅವರ ಮಧ್ಯ
27 ದಲ್ಲಿ ಅಪಕೀರ್ತಿಗೆ ಗುರಿಯಾಗಿದ್ದೇನೆ. ಅಲ್ಲಿನ ಪ್ರಧಾ
ನರು ಸುಲಿಗೆಗಾಗಿ ರಕ್ತಸುರಿಸಿ ನರಪ್ರಾಣಿಗಳನ್ನು
ನುಂಗುವವರಾಗಿ ಬೇಟೆಯನ್ನು ಸೀಳುವ ತೋಳ
28 ಗಳಂತಿದ್ದಾರೆ. ಅಲ್ಲಿನ ಪ್ರವಾದಿಗಳು ಇವರಿಗಾಗಿ
ಮಿಥ್ಯಾದರ್ಶನವನ್ನೂ ಸುಳ್ಳು ಕಣಿಯನ್ನೂ ಕಂಡು
ಯೆಹೋವನು ಮಾತಾಡದಿದ್ದರೂ ಕರ್ತನಾದ ಯೆ
ಹೋವನು ಇಂತೆನ್ನುತ್ತಾನೆ ಎಂದು ನುಡಿಯುತ್ತಾ
29 ಮೇಲೆ ಮೇಲೆ ಸುಣ್ಣಬಳಿದಿದ್ದಾರೆ. ಸಾಧಾರಣರು
ಹಿಂಸಿಸಿ ಸೂರೆಮಾಡಿದ್ದಾರೆ, ದೀನದರಿದ್ರರನ್ನು ಬಾ
ಧಿಸಿ ವಿದೇಶಿಗಳನ್ನು ಅನ್ಯಾಯವಾಗಿ ಅರೆದುಬಿಟ್ಟಿ
30 ದ್ದಾರೆ. ನಾನು ದೇಶವನ್ನು ಹಾಳುಮಾಡದಂತೆ ನನ್ನೆ
ದುರಿಗೆ ದೇಶರಕ್ಷಣೆಗಾಗಿ ಪೌಳಿಯ ಒಡಕಿನಲ್ಲಿ ನಿಲ್ಲು
ವದಕ್ಕೂ ಗೋಡೆಯನ್ನು ಗಟ್ಟಿಮಾಡುವದಕ್ಕೂ
ತಕ್ಕವನನ್ನು ನಾನು ಹುಡುಕಲು ಯಾರೂ ಸಿಕ್ಕ
ಲಿಲ್ಲ. ಆದಕಾರಣ ನಾನು ನನ್ನ ಕೋಪವನ್ನು ಅವರ 31
ಮೇಲೆ ಸುರಿಸಿ ನನ್ನ ರೋಷಾಗ್ನಿಯಿಂದ ಅವರನ್ನು
ಧ್ವಂಸಮಾಡಿ ಅವರ ದುರ್ನಡತೆಯನ್ನು ಅವರ ತಲೆಗೇ
ಕಟ್ಟಿದ್ದೇನೆ; ಇದು ಕರ್ತನಾದ ಯೆಹೋವನ ನುಡಿ.

### ಇಬ್ಬರು ಸೂಳೆಯರ ಸಾಮ್ಯ.

23
ಯೆಹೋವನು ಮತ್ತೊಂದು ವಾಕ್ಯವನ್ನು ನನಗೆ
ದಯಪಾಲಿಸಿದನು. ನರಪುತ್ರನೇ, ಒಬ್ಬ 2
ತಾಯಿಯ ಮಕ್ಕಳಾದ ಇಬ್ಬರು ಹೆಂಗಸರಿದ್ದರು;
ಅವರು ಐಗುಪ್ತದಲ್ಲಿ ಸೂಳೆತನ ಮಾಡುತ್ತಿದ್ದರು, 3
ಬಾಲ್ಯದಲ್ಲೇ ಸೂಳೆಯರಾಗಿ ನಡೆಯುತ್ತಿದ್ದರು;
ಅಲ್ಲಿ ಅವರ ಸ್ತನಗಳು ಹಿಸಕಲ್ಪಟ್ಟವು, ಎಳೆಯ ತೊಟ್ಟು
ಗಳು ನಸುಕಲ್ಪಟ್ಟವು. ಅವರ ಹೆಸರುಗಳೇನಂದರೆ, 4
ಒಹೊಲ ಎಂಬದು ಅಕ್ಕನದು, ಒಹೊಲೀಬ ಎಂಬದು
ತಂಗಿಯದು; ಅವರು ನನ್ನ ಹೆಂಡರಾಗಿ ಗಂಡುಹೆಣ್ಣು
ಮಕ್ಕಳನ್ನು ಹೆತ್ತರು. (ಒಹೊಲ ಎಂಬದು ಸಮಾ
ರ್ಯವನ್ನೂ, ಒಹೊಲೀಬ ಎಂಬದು ಯೆರೂಸಲೇಮ
ನ್ನೂ ಸೂಚಿಸತಕ್ಕ ಹೆಸರುಗಳಾಗಿವೆ.) ಒಹೊಲಳು 5
ನನ್ನ ಹೆಂಡತಿಯಾಗಿದ್ದರೂ ಸೂಳೆಯಾಗಿ ನಡೆದು ತನ್ನ
ಮಿಂಡರನ್ನು ಅಂದರೆ ಯೋಧರೂ ನೀಲಾಂಬರರೂ 6
ಅಶ್ವಾರೂಢರೂ ನಾಯಕೋಪನಾಯಕರೂ ಯಾರೂ
ತಪ್ಪದೆ ಮನೋಹರಯುವಕರೂ ಆದ ಅಶ್ಶೂರ್ಯ
ರನ್ನು ಮೋಹಿಸಿ ಅವರಿಗೆ ತನ್ನನ್ನು ಸೂಳೆಯಾಗಿ ಒಪ್ಪಿ 7
ಸಿದಳು; ಅವರೆಲ್ಲರೂ ಅಶ್ಶೂರ್ಯರಲ್ಲಿ ಉತ್ತಮೋತ್ತ
ಮರು; ಅವಳು ಯಾರನ್ನು ಮೋಹಿಸಿದಳೋ ಅವರ
ವಿಗ್ರಹಗಳಿಂದ ತನ್ನನ್ನು ಹೊಲಸುಮಾಡಿಕೊಂಡಳು.
ಅವಳು ಐಗುಪ್ತದಲ್ಲಿದ್ದಂದಿನಿಂದಲೂ ತನ್ನ ಸೂಳೆತನ 8
ವನ್ನು ಬಿಡಲಿಲ್ಲ; ಅವಳ ಬಾಲ್ಯದಲ್ಲಿಯೇ ಅಲ್ಲಿನವರು
ಅವಳೊಂದಿಗೆ ಮಲಗಿ ಅವಳ ಎಳೆಯ ತೊಟ್ಟುಗಳನ್ನು
ನಸುಕಿ ಅವಳ ಸಂಗಡ ಸೂಳೆಗಾರಿಕೆಯನ್ನು ಹೆಚ್ಚಿ
ಚ್ಚಾಗಿ ಮಾಡಿದರು. ಆದಕಾರಣ ನಾನು ಅವಳನ್ನು 9
ಅವಳ ಮಿಂಡರ ಕೈಗೆ ಅಂದರೆ ಅವಳು ಮೋಹಿಸಿದ
ಅಶ್ಶೂರ್ಯರ ಕೈಗೆ ಒಪ್ಪಿಸಿದೆನು. ಇವರು ಅವ 10
ಳನ್ನು ಅವಮಾನಪಡಿಸಿ ಅವಳ ಗಂಡುಹೆಣ್ಣುಮಕ್ಕ
ಳನ್ನು ಎತ್ತಿಕೊಂಡುಹೋಗಿ ಅವಳನ್ನು ಖಡ್ಗದಿಂದ
ಸಂಹರಿಸಿದರು. ಇವರು ಅವಳಿಗೆ ದಂಡನೆಮಾಡಿದ್ದ
ರಿಂದ ಹೆಂಗಸರಲ್ಲಿ ಅವಳಿಗೆ ಕೆಟ್ಟ ಹೆಸರು ಬಂತು.
ಅವಳ ತಂಗಿಯಾದ ಒಹೊಲೀಬಳು ಇದನ್ನು ನೋಡಿ 11
ಯೂ ಅವಳಿಗಿಂತ ಅಧಿಕವಾಗಿ ಮೋಹಗೊಂಡು ಅಕ್ಕನ
ಸೂಳೆತನಕ್ಕಿಂತ ಹೆಚ್ಚಾದ ಸೂಳೆತನವನ್ನು ನಡಿಸಿ ಅವ
ಳನ್ನು ಮೀರಿ ಬಲುಕೆಟ್ಟವಳಾದಳು. ಇವಳು ನಾಯ 12
ಕೋಪನಾಯಕರೂ ಯೋಧರೂ ವಿಚಿತ್ರಾಂಬರರೂ
ಅಶ್ವಾರೂಢರೂ ಯಾರೂ ತಪ್ಪದೆ ಮನೋಹರಯುವ
ಕರೂ ಆದ ಅಶ್ಶೂರ್ಯರನ್ನು ಮೋಹಿಸಿದಳು.
ಇವಳೂ ಹೊಲಸಾಗಿಹೋದದ್ದನ್ನು ಕಂಡೆನು, ಇಬ್ಬರು 13
ಒಂದೇ ಮಾರ್ಗವನ್ನು ಹಿಡಿದರು. ಇವಳು ತನ್ನ 14

ಸೂಳೆತನವನ್ನು ಇನ್ನೂ ಹೆಚ್ಚಿಸಿದಳು; ಇಗೋ, ಕಸ್ದೀ
ಯರ ಚಿತ್ರಗಳು ಅಂದರೆ ಸೊಂಟಕ್ಕೆ ನಡುಕಟ್ಟನ್ನು
ಕಟ್ಟಿ ತಲೆಗೆ ಚುಂಗಿನ ರುಮಾಲನ್ನು ಧರಿಸಿ ಯಾರೂ
ತಪ್ಪದೆ ನೋಟಕ್ಕೆ ಸರದಾರರಂತಿದ್ದು ತಮ್ಮ ಜನ್ಮ
ಭೂಮಿಯಾದ ಬಾಬೆಲಿನ ಕಸ್ದೀಯರೇ ಆಗಿ ಕಂಡು
15 ಬರುವ ಮನುಷ್ಯರ ಆಕಾರಗಳು ಗೋಡೆಯಲ್ಲಿ ಕಿರ
ಮಂಜಿಯಿಂದ ಚಿತ್ರಿಸಿರುವದನ್ನು ನೋಡಿದ ಕೂಡಲೆ
16 ಇವಳು ಮೋಹಗೊಂಡು ಕಸ್ದೀಯದೇಶಕ್ಕೆ ಆ
17 ಮನುಷ್ಯರ ಬಳಿಗೆ ದೂತರನ್ನು ಕಳುಹಿಸಿದಳು. ಆಗ
ಬಾಬೆಲಿನವರು ಇವಳ ರತಿಮಂಚವನ್ನೇರಿ ತಮ್ಮ ಸೂಳೆ
ಗಾರಿಕೆಯಿಂದ ಇವಳನ್ನು ಕೆಡಿಸಿದರು; ಇವಳು ಅವ
ರಿಂದ ಹೊಲಸಾಗಲು ಇವಳ ಆಶೆಯು ಅವರಿಂದ ತೊಲ
18 ಗಿತು. ಇವಳು ಮುಚ್ಚುಮರೆಯಿಲ್ಲದೆ ಸೂಳೆತನ
ಮಾಡಿ ತನ್ನ ಮಾನವನ್ನು ಕೆಡಿಸಿಕೊಂಡಾಗ ನನ್ನ
ಅನುರಾಗವು ಮೊದಲು ಇವಳ ಅಕ್ಕನಿಂದ ಅಗಲಿದ
19 ಹಾಗೆ ಇವಳಿಂದಲೂ ಅಗಲಿತು. ಆದರೂ ಇವಳು
ತಾನು ಐಗುಪ್ತದೇಶದಲ್ಲಿ ಸೂಳೆಯಾಗಿದ್ದ ತನ್ನ
ಎಳೆಪ್ರಾಯವನ್ನು ಜ್ಞಾಪಕಮಾಡಿಕೊಂಡು ತನ್ನ ಸೂಳೆ
20 ತನವನ್ನು ಇನ್ನೂ ಹೆಚ್ಚಿಸಿ ಕತ್ತೆಗಳಂತೆ ಬಿದೆಯುಳ್ಳ
ವರೂ ಕುದುರೆಗಳಂತೆ ದಾಟುವವರೂ ಆದ ಕಸ್ದೀಯ
21 ಮಿಂಡರನ್ನು ಮೋಹಿಸಿದಳು. [ಒಹೊಲೀಬಳೇ,] ನಿನ್ನ
ಪುಟ್ಟಮೊಲೆಗಳಿಗೆ ಆಶೆಬಿದ್ದ ಐಗುಪ್ತ್ಯರಿಂದ ತೊಟ್ಟು
ಗಳನ್ನು ನಸುಕಿಸಿಕೊಂಡ ನಿನ್ನ ಎಳೆಪ್ರಾಯದ ಕಾಮ
ವನ್ನು ನೀನು ನೆನಪಿಗೆ ತಂದುಕೊಂಡು ಆ ಮಿಂಡರನ್ನು
ಮೋಹಿಸಿದಿಯಲ್ಲಾ.
22 ಹೀಗಿರಲು, ಒಹೊಲೀಬಳೇ, ಕರ್ತನಾದ ಯೆಹೋ
ವನು ಇಂತೆನ್ನುತ್ತಾನೆ—ಆಹಾ, ಯಾವ ಮಿಂಡರಿಂದ
ನಿನ್ನ ಆಶೆ ತೊಲಗಿತೋ ಆ ಮಿಂಡರನ್ನು ಅಂದರೆ
ಮನೋಹರಯುವಕರೂ ಯಾರೂ ತಪ್ಪದೆ ನಾಯ
ಕೋಪನಾಯಕರೂ ಪ್ರಭುಪ್ರಧಾನರೂ ಅಶ್ವಾರೂಢ
23 ರೂ ಆದ ಬಾಬೆಲಿನವರು, ಸಮಸ್ತ ಕಸ್ದೀಯರು,
ಪೆಕೋದಿನವರು, ಷೋಯದವರು, ಕೋಯದವರು,
ಇವರನ್ನೂ ಇವರೊಂದಿಗೆ ಅಶ್ಶೂರ್ಯರೆಲ್ಲರನ್ನೂ
ನಾನು ನಿನಗೆ ವಿರುದ್ಧವಾಗಿ ಎಬ್ಬಿಸಿ ಎಲ್ಲಾ ಕಡೆ
ಯಿಂದಲೂ ನಿನ್ನ ಮೇಲೆ ಬೀಳಮಾಡುವೆನು.
24 ಅವರು ಆಯುಧ, ರಥ, ಚಕ್ಕಡಿಗಾಡಿ, ಜನಾಂಗಗಳ
ಸಮೂಹ, ಇವುಗಳೊಂದಿಗೆ ನಿನ್ನ ಮೇಲೆ ಬೀಳುವರು;
ಗುರಾಣಿ, ಖೇಡ್ಯ, ಶಿರಸ್ತ್ರಾಣ, ಇವುಗಳನ್ನು ಧರಿಸಿ
ನಿನಗೆ ವಿರುದ್ಧವಾಗಿ ಸುತ್ತುಮುತ್ತಲು ವ್ಯೂಹಕಟ್ಟು
ವರು; ನ್ಯಾಯತೀರಿಸುವ ಅಧಿಕಾರವನ್ನು ನಾನು ಅವ
ರಿಗೆ ಒಪ್ಪಿಸಲು ಅವರು ತಮ್ಮ ನ್ಯಾಯಾನುಸಾರವಾಗಿ
25 ನ್ಯಾಯತೀರಿಸಿ ನಿನ್ನನ್ನು ದಂಡಿಸುವರು. ನಾನು ನನ್ನ
ರೋಷವನ್ನು ನಿನ್ನ ಮೇಲೆ ಸುರಿಯಲು ಅವರು ನಿನ್ನಲ್ಲಿ
ಕೋಪತೀರಿಸಿಕೊಳ್ಳುವರು; ನಿನ್ನ ಮೂಗುಕಿವಿಗಳನ್ನು
ಕಿತ್ತುಬಿಡುವರು; ನಿನ್ನಲ್ಲಿ ಉಳಿದವರು ಖಡ್ಗಕ್ಕೆ
ತುತ್ತಾಗುವರು; ನಿನ್ನ ಗಂಡುಹೆಣ್ಣುಮಕ್ಕಳನ್ನು ಅಪ
ಹರಿಸುವರು; ನಿನ್ನ ಜನಶೇಷವು ಅಗ್ನಿಗೆ ಆಹುತಿಯಾ
26 ಗುವದು. ನಿನ್ನ ವಸ್ತ್ರಗಳನ್ನು ಸೆಳೆದು ನಿನ್ನ ಚಂದದ
27 ಒಡವೆಗಳನ್ನು ಕಳಚಿಬಿಡುವರು. ಹೀಗೆ ನಾನು ನಿನ್ನ
ಪುಂಡಾಟವನ್ನೂ ನೀನು ಐಗುಪ್ತದಲ್ಲಿದ್ದಂದಿನಿಂದ ನಡೆ

ದು ಬಂದ ನಿನ್ನ ಸೂಳೆತನವನ್ನೂ ನಿನ್ನಿಂದ ತೊಲಗಿಸ
ವೆನು; ಆ ಮೇಲೆ ನೀನು ಅವರ ಕಡೆಗೆ ಇನ್ನು ಕಣ
ತ್ತದೆ ಐಗುಪ್ತವನ್ನು ಜ್ಞಾಪಕಕ್ಕೆ ತಾರದೆ ಇರು
ಕರ್ತನಾದ ಯೆಹೋವನು ಇಂತೆನ್ನುತ್ತಾನೆ— ಇಗೋ
ನೀನು ಯಾರನ್ನು ಹಗೆಮಾಡುತ್ತೀಯೋ ನಿನ್ನ ಆ
ಯು ಯಾರಿಂದ ಹಿಂದಿರುಗಿತೋ ಅವರ ಕೈ
ನಿನ್ನನ್ನು ನಾನು ಒಪ್ಪಿಸಲು ಅವರು ನಿನ್ನಲ್ಲಿ ಹಗೆತೀ
ಸಿಕೊಂಡು ನೀನು ದುಡಿದದ್ದನ್ನೆಲ್ಲಾ ಅಪಹರಿಸಿ ನಿ
ನ್ನು ಬಟ್ಟಬರಿದುಮಾಡಿ ಬಿಟ್ಟುಬಿಡುವರು; ಹೀ
ನಾಚಿಕೆಗೀಡಾದ ನಿನ್ನ ಸೂಳೆತನವು, ಹೌದು ನಿ
ಪುಂಡಾಟವೂ ಸೂಳೆತನವೂ ಬೈಲಿಗೆ ಬರುವವು. ಈ ವಿ
ತ್ತುಗಳು ನಿನಗೆ ಸಂಭವಿಸುವದಕ್ಕೆ ನೀನು ಜನಾಂಗ
ಳನ್ನು ಮೋಹಿಸಿ ಅವರ ಬೊಂಬೆಗಳಿಂದ ನಿನ್ನನ
ಹೊಲಸುಮಾಡಿಕೊಂಡದ್ದೇ ಕಾರಣ. ನೀನು ನಿ
ಅಕ್ಕನ ಮಾರ್ಗದಲ್ಲಿ ನಡೆದುಕೊಂಡದರಿಂದ ಅವ
ಕುಡಿದ ಪಾತ್ರೆಯನ್ನೇ ನಿನ್ನ ಕೈಗೆ ಕೊಡುವೆನು. ಕತ
ನಾದ ಯೆಹೋವನು ಇಂತೆನ್ನುತ್ತಾನೆ-- ಉದ್ದವೂ ಅ
ಲವೂ ಬಹಳ ಹಿಡಿಯುವದೂ ಆದ ನಿನ್ನ ಅಕ್ಕನ ಪಾ
ಯಲ್ಲಿ ನೀನು ಕುಡಿದು ಹಾಸ್ಯಕ್ಕೂ ಕುಚೋದ್ಯಕ
ಗುರಿಯಾಗುವಿ. ಸಮಾರ್ಯಳೆಂಬ ನಿನ್ನ ಅಕ್ಕ
ಕುಡಿದ ಬೆಚ್ಚುಬೆರಗಿನ ಪಾತ್ರೆಯಲ್ಲಿ ನೀನೂ ಕುಡಿ
ಕುಡಿದು ಪೂರಾ ಅಮಲೇರಿ ದುಃಖಭರಿತಳಾಗು
ಅದರಲ್ಲಿ ಒಂದು ಬೊಟ್ಟನ್ನೂ ಉಳಿಸದೆ ಕುಡಿ
ಅದರ ಬೋಕಿಗಳನ್ನು ಕಚ್ಚಿ ನೆಕ್ಕಿ ನಿನ್ನ ಮೊಲೆಗಳನ
ಬಗಿದುಕೊಳ್ಳುವಿ; ಇದು ನನ್ನ ಅಪ್ಪಣೆ ಎಂಬದೇ ಕತ
ನಾದ ಯೆಹೋವನ ನುಡಿ. ಹೀಗಿರಲು ಕರ್ತನಾ
ಯೆಹೋವನು ಇಂತೆನ್ನುತ್ತಾನೆ—ನೀನು ನನ್ನನ
ಬೆನ್ನ ಹಿಂದಕ್ಕೆ ಎಸೆದು ಮರೆತುಬಿಟ್ಟದರಿಂದ ನಿ
ಪುಂಡಾಟದ ಮತ್ತು ಸೂಳೆತನದ ಫಲವನ್ನು ನೀನ
ಅನುಭವಿಸಬೇಕು.
ಮತ್ತು ಯೆಹೋವನು ನನಗೆ ಹೀಗೆ ಹೇಳಿದನು-
ನರಪುತ್ರನೇ, ಒಹೊಲಳಿಗೂ ಒಹೊಲೀಬಳಿಗೂ ನ್ಯಾ
ತೀರಿಸಲು ನಿನ್ನ ಮನಸ್ಸು ಸ್ಥಿರವೋ? ಅವರ ದು
ಚಾರಗಳನ್ನು ಅವರಿಗೆ ತಿಳಿಸು. ಅವರು ವ್ಯಭಿಚಾರಿ
ಯರು, ಅವರ ಕೈ ರಕ್ತವಾಗಿದೆ, ತಮ್ಮ ಬೊಂಬೆ
ಳಿಂದ ವ್ಯಭಿಚಾರಮಾಡಿದ್ದಾರೆ, ನನಗೆ ಹೆತ್ತ ತಮ
ಗಂಡುಮಕ್ಕಳನ್ನು ಆ ಬೊಂಬೆಗಳಿಗೆ ಬಲಿಯಾ
ಆಹುತಿಕೊಟ್ಟಿದ್ದಾರೆ. ಇದಲ್ಲದೆ ನನಗೆ ಈ ಅಪರಾ
ವನ್ನು ನಡಿಸಿದ್ದಾರೆ; ಆಹುತಿಕೊಟ್ಟ ದಿನದಲ್ಲೇ ನ
ಪವಿತ್ರಾಲಯವನ್ನು ಅಪವಿತ್ರಪಡಿಸಿ ನಾನು ನೇ
ಸಿದ ಸಬ್ಬತ್ ದಿನವನ್ನು ಹೊಲಸುಮಾಡಿದರು. ತಮ
ಮಕ್ಕಳನ್ನು ಕೊಂದು ತಮ್ಮ ಬೊಂಬೆಗಳಿಗೆ ಅರ್ಪಿಸಿ
ದಿನದಲ್ಲೇ ನನ್ನ ಪವಿತ್ರಾಲಯವನ್ನು ಸೇರಿ ಹೊ
ಗೈದರು; ಇಗೋ, ನನ್ನ ಮಂದಿರದ ನಟ್ಟನಡು
ಇದನ್ನು ನಡಿಸಿದರು. ಇಷ್ಟಲ್ಲದೆ ದೂತನನ್ನು ಕಳ
ಹಿಸಿ ಪುರುಷರನ್ನು ದೂರದಿಂದ ಕರೆಯಿಸಿಕೊಂಡರ
ಇಗೋ, ಅವರು ಬಂದರು; [ಎಲೈ ಹೆಂಗಸೇ,] ಅವ
ಗಾಗಿ ನೀನು ಸ್ನಾನಮಾಡಿ ಕಣ್ಣಿಗೆ ಕಾಡಿಗೆಹ
ನಿನ್ನನ್ನು ಆಭರಣಗಳಿಂದ ಸಿಂಗರಿಸಿಕೊಂಡು ವೈಭವ
ಮಂಚದ ಮೇಲೆ ಕೂತಿದ್ದಿ; ಅದರ ಮುಂದೆ ಔತಣ

ಸಿದ್ಧವಾಗಿದ್ದ ಮೇಜಿನ ಮೇಲೆ ನನ್ನ ಧೂಪತೈಲಗಳನ್ನು
12 ಇಟ್ಟದ್ದಿ. ಅಲ್ಲಿ ವಿನೋದಪಡುತ್ತಿರುವ ದೊಡ್ಡ
ಗುಂಪಿನವರ ಕಳಕಳವಾಯಿತು; ಅರಣ್ಯದಿಂದ ಕರೆಯಿ
ಸಿಕೊಂಡ ಕುಡಿಕರು ನಾಡಾಡಿಗರೊಂದಿಗೆ 1)ಸೇರಿ
ಅವರಿಬ್ಬರ ಕೈಗೆ ಕಡಗವನ್ನು ತೊಡಿಸಿ ಅವರ ತಲೆಗೆ
13 ಸುಂದರಕಿರೀಟವನ್ನಿಟ್ಟರು. ಆಗ ನಾನು—ಆಹಾ ಕಳೆ
ಗುಂದಿದವಳಿಗೆ ಇನ್ನೂ ವ್ಯಭಿಚಾರವೇ! ಇವರು ಅವ
ಳೊಂದಿಗೆ ಅವಳು ಇವರೊಂದಿಗೆ ಜಾರತನ ಮಾಡುತ್ತಾ
14 ರಲ್ಲಾ ಅಂದುಕೊಂಡೆನು. ಸೂಳೆಯನ್ನು ಸೇರುವ
ಹಾಗೆ ಈ ಜನರು ಅವಳನ್ನು ಸೇರಿದರು; ಹೌದು, ಕೆಟ್ಟ
ಹೆಂಗಸರಾದ ಒಹೊಲಳನ್ನೂ ಒಹೊಲೀಬಳನ್ನೂ ಸೇರಿ
15 ದರು. ಸದ್ಧರ್ಮಿಗಳು ಅವರಿಗೆ ನ್ಯಾಯತೀರಿಸಿ ವ್ಯಭಿ
ಚಾರಿಣಿಯರಿಗೂ ರಕ್ತಸುರಿಸುವ ಹೆಂಗಸರಿಗೂ ತಕ್ಕ
ದಂಡನೆಯನ್ನು ಅವರಿಗೆ ವಿಧಿಸುವರು; ಅವರು ವ್ಯಭಿ
16 ಚಾರಿಣಿಯರು, ಅವರ ಕೈ ರಕ್ತವಾಗಿದೆ. ಕರ್ತನಾದ
ಯೆಹೋವನು ಇಂತೆನ್ನುತ್ತಾನೆ—ನಾನು ಈ ಹೆಂಗಸರ
ದಂಡನೆಗಾಗಿ ಸಭೆಯನ್ನು ಕೂಡಿಸಿ ಇವರನ್ನು ಸೂರೆಗೆ
ಸಿಕ್ಕಿಸಿ ಎಲ್ಲರಿಗೂ ಭಯಾಸ್ಪದವಾಗುವಂತೆ ಮಾಡು
17 ವೆನು. ಸಭೆಯವರು ಇವರ ಮೇಲೆ ಕಲ್ಲೆಸೆದು
ಕತ್ತಿಗಳಿಂದ ಇವರನ್ನು ಸಂಹರಿಸಿ ಇವರ ಗಂಡು
ಹೆಣ್ಣುಮಕ್ಕಳನ್ನು ಕೊಂದು ಇವರ ಮನೆಗಳನ್ನು
18 ಬೆಂಕಿಯಿಂದ ಸುಟ್ಟುಬಿಡುವರು. ಹೀಗೆ ನಾನು 2)ದೇಶ
ದೊಳಗಿಂದ ಪುಂಡಾಟವನ್ನು ತೊಲಗಿಸುವೆನು; ಇದ
ರಿಂದ ಸಮಸ್ತಸ್ತ್ರೀಯರಿಗೂ ನಿಮ್ಮ ಪುಂಡಾಟವನ್ನು
19 ಅನುಸರಿಸಬಾರದೆಂಬ ಬುದ್ಧಿ ಬರುವದು. ನಿಮ್ಮ
ಪುಂಡಾಟದ ಫಲವನ್ನು ನಿಮಗೆ ತಿನ್ನಿಸುವರು; ನಿಮ್ಮ
ಬೊಂಬೆಗಳಿಂದಾದ ನಿಮ್ಮ ಪಾಪವನ್ನು ನೀವು ಅನು
ಭವಿಸಿ ನಾನೇ ಕರ್ತನಾದ ಯೆಹೋವನು ಎಂದು ತಿಳಿ
ದುಕೊಳ್ಳುವಿರಿ.

ಕಿಲುಬಿನ ಹಂಡೆಯ ಸಾಮ್ಯ.

24 [ಯೆಹೋಯಾಖೀನನು ಸೆರೆಯಾದ] ಒಂಭತ್ತ
ನೆಯ ವರುಷದ ಹತ್ತನೆಯ ತಿಂಗಳಿನ ಹತ್ತನೆಯ
ದಿನದಲ್ಲಿ ಯೆಹೋವನು ಈ ವಾಕ್ಯವನ್ನು ನನಗೆ ದಯ
2 ಪಾಲಿಸಿದನು. ನರಪುತ್ರನೇ, ಈ ದಿನದ, ಇದೇ ದಿನದ
ಹೆಸರನ್ನು ಬರೆದುಕೋ; ಇದೇ ದಿನದಲ್ಲಿ ಬಾಬೆಲಿನ
ಅರಸನು ಯೆರೂಸಲೇಮಿಗೆ ಮುತ್ತಿಗೆಹಾಕಿದ್ದಾನೆ.
3 ಈ ದ್ರೋಹಿವಂಶಕ್ಕೆ ದೃಷ್ಟಾಂತವನ್ನೆತ್ತಿ ಹೀಗೆ
ಹೇಳು—ಕರ್ತನಾದ ಯೆಹೋವನು ಇಂತೆನ್ನುತ್ತಾನೆ—
ಹಂಡೆಯನ್ನು ಒಲೆಯ ಮೇಲಿಡು, ಮೇಲಿಡು, ಅದ
4 ರಲ್ಲಿ ನೀರನ್ನು ಹೊಯ್ಯಿ; ಮಾಂಸಖಂಡಗಳನ್ನು
ಅಂದರೆ ತೊಡೆ ಮುಂದೊಡೆ ಮೊದಲಾದ ಒಳ್ಳೆಯ
ಖಂಡಗಳನ್ನೆಲ್ಲಾ ಅದರಲ್ಲಿ ಒಟ್ಟಿಗೆ ಹಾಕು, ಉತ್ತಮ
5 ವಾದ ಎಲುಬುಗಳನ್ನು ಅದರಲ್ಲಿ ತುಂಬಿಸು. ಹಿಂಡಿ
ನಲ್ಲಿ ಶ್ರೇಷ್ಠವಾದದನ್ನು ತೆಗೆದುಕೋ; ಹಂಡೆಯ
ತಳದಲ್ಲಿ ಎಲುಬುಗಳನ್ನು ರಾಶಿಯಾಗಿ ಒಟ್ಟು;
ಚೆನ್ನಾಗಿ ಕುದಿಸು; ಹೌದು, ಎಲುಬುಗಳು ಅದರಲ್ಲಿ
ಬೇಯಲಿ.

ಕರ್ತನಾದ ಯೆಹೋವನು ಇಂತೆನ್ನುತ್ತಾನೆ—ಹಾ, 6
ರಕ್ತಮಯವಾದ ಪಟ್ಟಣದ ಗತಿಯನ್ನು ಏನು ಹೇಳ
ಲಿ! ಆ ಹಂಡೆಯ ಕಿಲುಬು ಬಿಟ್ಟುಹೋಗದೆ ಅದ
ರಲ್ಲೇ ಲಿಪ್ತವಾಗಿದೆಯಲ್ಲಾ! ಮಾಂಸದ ತುಂಡುಗಳನ್ನು
ಸಿಕ್ಕಿ ಸಿಕ್ಕಿದ ಹಾಗೆ ತೆಗೆದುಬಿಡು, ಇದಕ್ಕೆ ಕ್ರಮದ
ಚೀಟು ಇಲ್ಲ. ಯೆರೂಸಲೇಮು ಸುರಿಸಿದ ರಕ್ತವು 7
ಅದರಲ್ಲೇ ನಿಂತಿದೆ; ದೂಳು ಮುಚ್ಚೀತೆಂದು ಆ ಪಟ್ಟಣ
ದವರು ಅದನ್ನು ನೆಲದ ಮೇಲೆ ಹೊಯ್ಯದೆ ಬರೀ
ಬಂಡೆಯ ಮೇಲೆ ನಿಲ್ಲಿಸಿರುತ್ತಾರೆ; ಆ ರಕ್ತದಿಂದ 8
ರೋಷವೆದ್ದು ಮುಯ್ಯಿಗೆ ಮುಯ್ಯಿತೀರಿಸಲೆಂದು
ಅದನ್ನು ನಾನು ಇಂಗಗೊಡಿಸದೆ ಬರೀ ಬಂಡೆಯ
ಮೇಲೆ ನಿಲ್ಲಿಸಿದ್ದೇನೆ. ಹೀಗಿರಲು ಕರ್ತನಾದ ಯೆಹೋ 9
ವನು ಇಂತೆನ್ನುತ್ತಾನೆ—ಹಾ, ರಕ್ತಮಯವಾದ ಪಟ್ಟ
ಣದ ಗತಿಯನ್ನು ಏನು ಹೇಳಲಿ! ನಾನೇ ಬೆಂಕಿಯನ್ನು
ರಾಶಿಯಾಗಿ ಹೆಚ್ಚಿಸುವೆನು. ತುಂಬಾ ಸೌದೆ ಹಾಕು, 10
ಬೆಂಕಿಯನ್ನುರಿಸು, ಮಾಂಸವನ್ನು ತೀರಾ ಬೇಯಿಸು,
ಸಾರನ್ನು ಮಂದಮಾಡು, ಎಲುಬುಗಳು 3)ಹೊತ್ತಿ
ಹೋಗಲಿ. ಆ ಮೇಲೆ ಹಂಡೆಯು ಕಾದು ತಾಮ್ರವು 11
ಕೆಂಪಾಗಿ ಒಳಗಣ ಕಲ್ಮಷವು ಕರಗಿ ಕಿಲುಬು ಇಲ್ಲ
ವಾಗುವಂತೆ ಅದನ್ನು ಬರಿದುಮಾಡಿ ಕೆಂಡಗಳ ಮೇಲೆ
ಇಡು. ಅದು ನನಗೆ ಕೇವಲ ಪ್ರಯಾಸವನ್ನೂ ಆಯಾ 12
ಸವನ್ನೂ ಉಂಟುಮಾಡಿದೆ; ಆದರೂ ಅದಕ್ಕೆ ಹತ್ತಿದ್ದ
ಬಲು ಕಿಲುಬು ಹೋಗಲಿಲ್ಲ, ಬೆಂಕಿಯಿಂದಲೂ ನೀಗ
ಲಿಲ್ಲ. ನಿನ್ನ ಪುಂಡಾಟವು ಅಸಹ್ಯವಾಗಿರುವದರಿಂದಲೂ 13
ನಾನು ನಿನ್ನನ್ನು ಎಷ್ಟು ಶುದ್ಧಿಮಾಡಿದರೂ ನೀನು
ಶುದ್ಧಿಯಾಗದೆ ಹೋದದರಿಂದಲೂ ನಾನು ನನ್ನ ರೋ
ಷವನ್ನು ನಿನ್ನಲ್ಲಿ ತೀರಿಸಿ ಶಾಂತನಾಗುವ ವರೆಗೂ
ನೀನು ನಿನ್ನ ಕೊಳೆಯನ್ನು ಇನ್ನು ಕಳೆದುಕೊಳ್ಳದೆ
ಶುದ್ಧಿಯಾಗದೆ ಇರುವಿ. ಯೆಹೋವನಾದ ನಾನೇ 14
ಇದನ್ನು ನುಡಿದಿದ್ದೇನೆ; ಇದು ಸಾಗುವದು, ನಾನು
ನೆರವೇರಿಸುವೆನು; ಹಿಂದೆಗೆಯೆನು, ಕ್ಷಮಿಸೆನು,
ಕರುಣಿಸೆನು; ನಿನ್ನ ದುರ್ಮಾರ್ಗದುಷ್ಕೃತ್ಯಗಳಿಗೆ ಸರಿ
ಯಾಗಿ ನಿನಗೆ ನ್ಯಾಯತೀರ್ಪು ಆಗುವದು; ಇದು
ಕರ್ತನಾದ ಯೆಹೋವನ ನುಡಿ.

ಯೆಹೆಜ್ಕೇಲನ ಪತ್ನಿವಿಯೋಗದಿಂದಾಗುವ ಸೂಚನೆ.

ಯೆಹೋವನು ಇನ್ನೊಂದು ವಾಕ್ಯವನ್ನು ನನಗೆ 15
ದಯಪಾಲಿಸಿದನು.—ನರಪುತ್ರನೇ, ಇಗೋ, ಒಂದೇ 16
ಏಟಿನಿಂದ ನಾನು ನಿನಗೆ ನೇತ್ರಾನಂದವಾಗಿರುವವ
ಳನ್ನು ನಿನ್ನಿಂದ ತೆಗೆದುಬಿಡುವೆನು, ಆದರೂ ನೀನು
ಗೋಳಾಡಬೇಡ, ಅಳಬೇಡ, ನಿನ್ನ ಕಣ್ಣೀರು ಸುರಿಯ
ದಿರಲಿ. ಸದ್ದಿಲ್ಲದೆ ನೊರೆಯಿಡು, ವಿಯೋಗದುಃಖ 17
ವನ್ನು ತೋರಿಸಬೇಡ, ರುಮಾಲನ್ನು ಸುತ್ತಿಕೊಂಡಿರು,
ಕೆರಗಳನ್ನು ಮೆಟ್ಟಿಕೊಂಡಿರು, ಬಾಯನ್ನು ಬಟ್ಟೆಯಿಂದ

1) ಅಥವಾ: ಸೇರಿದರು; ಇವರು ಹೆಂಗಸರು ಕೈಗೆ ಕಡಗವನ್ನು ತೊಟ್ಟುಕೊಂಡು ತಲೆಗೆ ಸುಂದರಕಿರೀಟವನ್ನು ಇಟ್ಟುಕೊಂಡಿದ್ದರು.
2) ಅಥವಾ: ಲೋಕದೊಳಗಿಂದ. 3) ಅಂದರೆ ಸೀದುಹೋಗಲಿ.

ಮುಚ್ಚಿಕೊಳ್ಳಬೇಡ, 1)ಗಾರಿಗೆಯನ್ನು ತಿನ್ನಬೇಡ.
18 ಹೀಗೆ ಆಜ್ಞೆಯಾಗಲು ನಾನು ಪ್ರಾತಃಕಾಲದಲ್ಲಿ ಜನ
ರಿಗೆ ಪ್ರವಾದಿಸಿದೆನು; ಸಾಯಂಕಾಲಕ್ಕೆ ನನ್ನ ಪತ್ನಿಯು
ತೀರಿಹೋದಳು; ಮಾರಣೆ ಬೆಳಿಗ್ಗೆ ನನಗೆ ಅಪ್ಪಣೆಯಾ
19 ದಂತೆ ನಡೆದೆನು. ಜನರು ನೀನು ಹೀಗೆ ಮಾಡುವದ
ರಿಂದ ನಾವು ತಿಳಿಯತಕ್ಕದ್ದೇನು? ತಿಳಿಸುವದಿಲ್ಲವೋ
20 ಎಂದು ನನ್ನನ್ನು ಕೇಳಲು ನಾನು ಅವರಿಗೆ ಹೀಗೆ ಹೇಳಿ
ದೆನು—ಯೆಹೋವನು ಈ ವಾಕ್ಯವನ್ನು ನನಗೆ ದಯ
21 ಪಾಲಿಸಿದ್ದಾನೆ—ಇಸ್ರಾಯೇಲ್ ವಂಶದವರಿಗೆ ಹೀಗೆ
ಸಾರು—ಹಾ, ನಿಮಗೆ ಮುಖ್ಯಬಲವೂ ನೇತ್ರಾನಂದ
ವೂ ಪ್ರಾಣಪ್ರಿಯವೂ ಆದ ನನ್ನ ಪವಿತ್ರಾಲಯವನ್ನು
ನಾನು ಹೊಲೆಮಾಡಿಸುವೆನು, ನೀವು ಬಿಟ್ಟು ಬಂದಿರುವ
ನಿಮ್ಮ ಗಂಡುಹೆಣ್ಣುಮಕ್ಕಳು ಖಡ್ಗಕ್ಕೆ ತುತ್ತಾಗು
ವರು ಎಂಬದಾಗಿ ಕರ್ತನಾದ ಯೆಹೋವನು ನುಡಿದಿ
22 ದ್ದಾನೆ. ನಾನು ಮಾಡಿದಂತೆ ಆಗ ನೀವೂ ಮಾಡು
ವಿರಿ, ಅಂದರೆ ಬಟ್ಟೆಯಿಂದ ಬಾಯನ್ನು ಮುಚ್ಚಿಕೊಳ್ಳ
23 ದೆ ಗಾರಿಗೆಯನ್ನು ತಿನ್ನದೆ ರುಮಾಲನ್ನು ಸುತ್ತಿಕೊಂಡು
ಕೆರಗಳನ್ನು ಮೆಟ್ಟಿಕೊಂಡು ಇರುವಿರಿ; ನೀವು ಗೋಳಾ
ಡುವದಿಲ್ಲ, ಅಳುವದಿಲ್ಲ; ನಿಮ್ಮ ಅಧರ್ಮದಿಂದ ಕ್ಷೀಣ
ವಾಗಿ ಹೋಗುವಿರಿ, ಒಬ್ಬರೆದುರಿಗೊಬ್ಬರು ನರಳುವಿರಿ.
24 [ಯೆಹೋವನ ಈ ಮಾತನ್ನು ಕೇಳಿರಿ—] ಈ ವಿಷಯ
ದಲ್ಲಿ ಯೆಹೆಜ್ಕೇಲನು ನಿಮಗೆ ಮುಂಗುರುತಾಗಿರು
ವನು, ಅವನು ಮಾಡಿದಂತೆಯೇ ಎಲ್ಲವನ್ನು ಮಾಡು
ವಿರಿ; ಇದು ಸಂಭವಿಸುವಾಗ ನಾನೇ ಕರ್ತನಾದ
ಯೆಹೋವನು ಎಂದು ನಿಮಗೆ ಗೊತ್ತಾಗುವದು.
25 ನರಪುತ್ರನೇ, ಅವರಿಗೆ ಬಲಾಧಾರವೂ ನೇತ್ರಾ
ನಂದವೂ ಆದ ಅವರ ಇಷ್ಟಸುಂದರಾಲಯವನ್ನೂ
ಹೃದಯೋಲ್ಲಾಸವಾದ ಅವರ ಗಂಡುಹೆಣ್ಣುಮಕ್ಕ
26 ಳನ್ನೂ ನಾನು ನಿರ್ಮೂಲಮಾಡುವ ದಿನದಲ್ಲಿ ತಪ್ಪಿ
ಸಿಕೊಂಡವನು ನಿನ್ನ ಬಳಿಗೆ ಬಂದೇ ಬರುವನು,
ನಡೆದ ಸಂಗತಿಯನ್ನು ನೀನು ಕಿವಿಯಾರ ಕೇಳುವಂತೆ
27 ನಿನಗೆ ತಿಳಿಸುವನು. ಆ ದಿನದಲ್ಲಿ ತಪ್ಪಿಸಿಕೊಂಡವ
ನಿಗಾಗಿ ನೀನು ಬಾಯಿಬಿಡುವಿ, ನಿನ್ನ ಮೂಕತನವನ್ನು
ಕಳಕೊಂಡು ಮಾತಾಡುವಿ; ಹೀಗೆ ನೀನು ಅವರಿಗೆ
ಗುರುತಾಗಲು ನಾನೇ ಯೆಹೋವನು ಎಂದು ಅವ
ರಿಗೆ ಗೊತ್ತಾಗುವದು.

ಜನಾಂಗಗಳ ವಿಷಯವಾದ ದೈವೋಕ್ತಿಗಳು.

25—32.

ಅಮ್ಮೋನ್, ಮೋವಾಬ್, ಎದೋಮ್, ಫಿಲಿಷ್ಟಿಯ ಇವುಗಳ
ವಿಷಯವಾದ ದೈವೋಕ್ತಿಗಳು.

25 ಯೆಹೋವನು ಈ ವಾಕ್ಯವನ್ನು ನನಗೆ ದಯ
2 ಪಾಲಿಸಿದನು—ನರಪುತ್ರನೇ, ನೀನು ಅಮ್ಮೋ
ನಿಗೆ ಅಭಿಮುಖನಾಗಿ ಅದರ ವಿಷಯದಲ್ಲಿ ದೈವಸಂಕ
ಲ್ಪವನ್ನು ಪ್ರಕಟಿಸುತ್ತಾ ಅದಕ್ಕೆ ಹೀಗೆ ನುಡಿ—
3 ಕರ್ತನಾದ ಯೆಹೋವನ ಮಾತನ್ನು ಕೇಳು—ಕರ್ತ
ನಾದ ಯೆಹೋವನು ಇಂತೆನ್ನುತ್ತಾನೆ—[ಅಮ್ಮೋನೇ,]

ನನ್ನ ಪವಿತ್ರಾಲಯವು ಹೊಲಸಾದದ್ದನ್ನು, ಇಸ್ರಾ
ಯೇಲ್ ದೇಶವು ಹಾಳುಬಿದ್ದದನ್ನು, ಯೆಹೂದವಂ
ದವರು ಸೆರೆಹೋದದ್ದನ್ನು ನೀನು ನೋಡಿ ಅಹ
ಎಂದು ಹಿಗ್ಗಿಕೊಂಡದರಿಂದ ಇಗೋ, ನಾನು ನಿನ್ನನ್ನು
ಮೂಡಣದವರಿಗೆ ಬಾಧ್ಯವಾಗಿ ವಶಪಡಿಸುವೆನು
ಅವರು ನಿನ್ನಲ್ಲಿ ತಮ್ಮ ಗುಡಾರಗಳನ್ನು ಹಾಕಿ ಪಾ
ಯಮಾಡಿಕೊಳ್ಳುವರು; ನಿನ್ನ ಹಣ್ಣನ್ನು ತಿಂದು ನಿನ
ಹಾಲನ್ನು ಕುಡಿದುಬಿಡುವರು. ನಾನು ರಬ್ಬಾಪಟ್ಟ
ವನ್ನು ಒಂಟೆಗಳಿಗೆ ಲಾಯವನ್ನಾಗಿಯೂ ಅಮ್ಮೋನ
ಸೀಮೆಯನ್ನು ಹಿಂಡುಗಳಿಗೆ ರೊಪ್ಪವನ್ನಾಗಿಯು
ಮಾಡುವೆನು; ನಾನೇ ಯೆಹೋವನು ಎಂದು ನಿಮ
ಗೊತ್ತಾಗುವದು. ಕರ್ತನಾದ ಯೆಹೋವನು ಇಂ
ನ್ನುತ್ತಾನೆ—ನೀನು ಚಪ್ಪಾಳೆಹೊಡೆದು ಕಾಲಿನಿಂ
ನೆಲವನ್ನು ಬಡಿದು ಇಸ್ರಾಯೇಲ್ ದೇಶವನ್ನು ಮನ
ಪೂರ್ವಕವಾಗಿ ತಿರಸ್ಕರಿಸಿ ಅದರ ಗತಿಗೆ ಹಿಗ್ಗಿಕೊಂಡ
ರಿಂದ ಇಗೋ, ನಾನು ನಿನ್ನ ಮೇಲೆ ಕೈಯೆತ್ತಿ ನಿನ್ನನು
ಸೂರೆಗಾಗಿ ಮ್ಲೇಚ್ಛರಿಗೆ ವಶಪಡಿಸಿ ಜನಾಂಗಗಳೊ
ಗಿಂದ ಕಿತ್ತುಬಿಟ್ಟು ದೇಶಗಳೊಳಗಿಂದ ನಿನ್ನ ಹೆಸರನ
ಅಳಿಸಿ ನಿನ್ನನ್ನು ಹಾಳುಮಾಡುವೆನು; ಆಗ ನಾನೇ
ಯೆಹೋವನು ಎಂದು ನಿನಗೆ ಗೊತ್ತಾಗುವದು.

ಕರ್ತನಾದ ಯೆಹೋವನು ಇಂತೆನ್ನುತ್ತಾನೆ—ಆಹಾ
ಯೆಹೂದವಂಶವು ಎಲ್ಲಾ ಜನಾಂಗಗಳ ಹಾಗೆಯೆ
ಇದೆ, [ವಿಶೇಷವೇನು] ಎಂದು ಮೋವಾಬೂ ಸೇಯಿ
ರೂ ಅಂದುಕೊಂಡದರಿಂದ ಇಗೋ, ದೇಶಭೂಷ
ಗಳಾದ ಮೋವಾಬಿನ ಗಡಿಯ ಪಟ್ಟಣಗಳು ಅಂದ
ಬೇತ್‍ಯೆಷೀಮೋತ್, ಬಾಳ್‍ಮೆಯೋನ್, ಕಿರ್ಯಾ
ಯಿಮ್ ಎಂಬ ಪಟ್ಟಣಗಳು ಇರುವ ಕಡೆಯ
ನಾನು ಮೋವಾಬಿನ ಮೇರೆಯನ್ನು ಒಡೆದುಬಿಟ
ಆ ಸೀಮೆಯನ್ನಲ್ಲದೆ ಅಮ್ಮೋನನ್ನೂ ಮೂಡಣವರಿ
ಬಾಧ್ಯವಾಗಿ ಕೊಟ್ಟು, ಅಮ್ಮೋನ್ಯರು ಜನಾಂಗಗಳೊಳ
ನಿರ್ನಾಮವಾಗಬೇಕೆಂಬ ನನ್ನ ಸಂಕಲ್ಪವನ್ನು ನೆರವೇ
ಸುವೆನು; ಮೋವಾಬ್ಯರಿಗೂ ದಂಡನೆಗಳನ್ನು ವಿಧಿ
ತೀರಿಸುವೆನು; ಆಗ ನಾನೇ ಯೆಹೋವನು ಎಂದ
ಅವರಿಗೆ ಗೊತ್ತಾಗುವದು.

ಕರ್ತನಾದ ಯೆಹೋವನು ಇಂತೆನ್ನುತ್ತಾನೆ—ಎದೋ
ಮು ಯೆಹೂದವಂಶಕ್ಕೆ ಪ್ರತೀಕಾರಮಾಡಿದ
ಮುಯ್ಯಿಗೆಮುಯ್ಯಿತೀರಿಸಿ ಮಹಾಪರಾಧವನ್ನು ನ
ಸಿದೆ; ಹೀಗಿರಲು ಕರ್ತನಾದ ಯೆಹೋವನು ಇಂ
ನ್ನುತ್ತಾನೆ—ನಾನು ಎದೋಮಿನ ಮೇಲೆ ಕೈಯೆ
ಅದರೊಳಗಿಂದ ಜನರನ್ನೂ ಪಶುಗಳನ್ನೂ ನಿರ್ಮೂ
ಪಡಿಸಿ ತೇಮಾನಿನಿಂದ ದೆದಾನಿನ ವರೆಗೂ ಅದನ
ಹಾಳುಮಾಡಿ ಪ್ರಜೆಗಳನ್ನು ಖಡ್ಗಕ್ಕೆ ಸಿಕ್ಕಿಸುವೆನು
ನಾನು ಎದೋಮಿಗೆ ನನ್ನ ಜನರಾದ ಇಸ್ರಾಯೇಲ್ಯ
ಕೈಯಿಂದ ಮುಯ್ಯಿತೀರಿಸುವೆನು; ಅವರು ನನ
ಕೋಪರೋಷಗಳಿಗೆ ತಕ್ಕ ಹಾಗೆ ಅದಕ್ಕೆ ಮಾಡುವರು

1) ಮೂಲ: ಮನುಷ್ಯರ ರೊಟ್ಟಿಯನ್ನು.

ನನ್ನ ಪ್ರತೀಕಾರವು ಎದೋಮಿನ ಅನುಭವಕ್ಕೆ ಬರು
ವದು; ಇದು ಕರ್ತನಾದ ಯೆಹೋವನ ನುಡಿ.

15 ಕರ್ತನಾದ ಯೆಹೋವನು ಇಂತೆನ್ನುತ್ತಾನೆ—ಫಿಲಿಷ್ಟಿ
ಯರು ಯೆಹೂದಕ್ಕೆ ಪ್ರತೀಕಾರಮಾಡಿದ್ದಾರೆ; ಹೌದು,
ಮುಯ್ಯಿಗೆಮುಯ್ಯಿತೀರಿಸುತ್ತಾ ಅದನ್ನು ಮನಃಪೂ
ರ್ವಕವಾಗಿ ತಿರಸ್ಕರಿಸಿ ದೀರ್ಘದ್ವೇಷದಿಂದ ಹಾಳು
16 ಮಾಡಿದ್ದಾರೆ; ಹೀಗಿರಲು ಕರ್ತನಾದ ಯೆಹೋವನು
ಇಂತೆನ್ನುತ್ತಾನೆ—ಇಗೋ, ನಾನು ಫಿಲಿಷ್ಟಿಯರ ಮೇಲೆ
ಕೈಯೆತ್ತುವೆನು; ಕೆರೇತಿಯರನ್ನು ಕತ್ತರಿಸಿಬಿಟ್ಟು
ಸಮುದ್ರತೀರದಲ್ಲಿನ ಜನಶೇಷವನ್ನು ನಿಶ್ಶೇಷಮಾಡು
17 ವೆನು; ಅವರೆಲ್ಲರನ್ನು ಬಲವಾಗಿ ಖಂಡಿಸಿ ಮುಯ್ಯಿಗೆ
ಮುಯ್ಯಿತೀರಿಸುವೆನು; ಹೀಗೆ ಪ್ರತೀಕಾರಮಾಡಲು
ನಾನೇ ಯೆಹೋವನು ಎಂದು ಅವರಿಗೆ ಗೊತ್ತಾಗು
ವದು.

ತೂರಿನ ಮತ್ತು ಚೀದೋನಿನ ವಿಷಯವಾದ
ದೈವೋಕ್ತಿಗಳು. 26—28.

ತೂರು ನೆಬೂಕದ್ನೆಚ್ಚರನಿಂದ ಹಾಳಾಗುವದು.

26 [ಯೆಹೋಯಾಖೀನನು ಸೆರೆಯಾದ] ಹನ್ನೊಂ
ದನೆಯ ವರುಷದ [ಒಂದಾನೊಂದು] ತಿಂಗಳಿನ ಮೊದ
ಲನೆಯ ದಿನದಲ್ಲಿ ಯೆಹೋವನು ಈ ವಾಕ್ಯವನ್ನು
2 ನನಗೆ ದಯಪಾಲಿಸಿದನು—ನರಪುತ್ರನೇ, ತೂರು
ಯೆರೂಸಲೇಮಿನ ವಿಷಯವಾಗಿ—ಅಹಹ, ಜನಾಂಗ
ಗಳಿಗೆ ಅಡ್ಡಿಯಾಗಿದ್ದ ಬಾಗಿಲು ಮುರಿದುಹೋಗಿದೆ,
ನನ್ನ ಕಡೆಗೆ ತೆರೆದುಬಿಟ್ಟಿದೆ; ಯೆರೂಸಲೇಮು ಹಾಳಾ
ದಕಾರಣ ನಾನು ತುಂಬಿಕೊಳ್ಳುವೆನು ಅಂದುಕೊಂಡ
3 ದರಿಂದ ಕರ್ತನಾದ ಯೆಹೋವನು ಇಂತೆನ್ನುತ್ತಾನೆ—
ಇಗೋ, ತೂರೇ, ನಿನಗೆ ವಿರುದ್ಧನಾಗಿದ್ದೇನೆ; ಸಮು
ದ್ರವು ತೆರೆಗಳನ್ನು ಎಬ್ಬಿಸುವಂತೆ ನಾನು ಬಹುಜನಾಂಗ
4 ಗಳನ್ನು ನಿನ್ನ ಮೇಲೆ ಎಬ್ಬಿಸುವೆನು. ಅವು ತೂರಿನ
ಪೌಳಿಗೋಡೆಯನ್ನು ಉರುಳಿಸಿ ಅದರ ಕೊತ್ತಲಗಳನ್ನು
ಕೆಡವಿಹಾಕುವವು; ನಾನು ಅದರ ಮಣ್ಣನ್ನು ಕೆರೆದು
5 ಅದನ್ನು ಗುಡಿಸಿ ಗುಂಡಾಂತರಮಾಡುವೆನು; ಅದು
ಸಮುದ್ರದ ನಡುವೆ ಬಲೆಗಳಿಗೆ ಹಾಸಬಂಡೆಯಾಗು
ವದು; ನಾನೇ ಇದನ್ನು ನುಡಿದಿದ್ದೇನೆ ಎಂದು ಕರ್ತ
ನಾದ ಯೆಹೋವನು ಅನ್ನುತ್ತಾನೆ; ಅದು ಜನಾಂಗಗ
6 ಳಿಗೆ ಸೂರೆಯಾಗುವದು; ಬೈಲುಭೂಮಿಯಲ್ಲಿನ ಅದರ
ಕುಮಾರ್ತೆಯರು ಖಡ್ಗದಿಂದ ಹತರಾಗುವರು; ನಾನೇ
ಯೆಹೋವನು ಎಂದು ಎಲ್ಲರಿಗೂ ಗೊತ್ತಾಗುವದು.
7 ಕರ್ತನಾದ ಯೆಹೋವನು ಇಂತೆನ್ನುತ್ತಾನೆ—ಇಗೋ,
ರಾಜಾಧಿರಾಜನೂ ಬಾಬೆಲಿನ ಅರಸನೂ ಆದ ನೆಬೂ
ಕದ್ನೆಚ್ಚರನನ್ನು ಅಶ್ವ, ರಥ, ರಾಹುತ, ಬಹುಜನಪರಿವಾರ
ಇವುಗಳಿಂದ ಕೂಡಿದವನನ್ನಾಗಿ ನಾನು ಬಡಗಲಿಂದ
8 ತೂರಿನ ಮೇಲೆ ಬರಮಾಡುವೆನು. ಅವನು ಬೈಲು
ಭೂಮಿಯಲ್ಲಿನ ನಿನ್ನ ಕುಮಾರ್ತೆಯರನ್ನು ಖಡ್ಗ
ದಿಂದ ಹತಿಸಿ ನಿನಗೆ ವಿರುದ್ಧವಾಗಿ ಒಡ್ಡುಕಟ್ಟಿ ದಿಬ್ಬ
9 ಹಾಕಿ ಗುರಾಣಿಯೆತ್ತಿರುವವರನ್ನು ಕಳುಹಿಸಿ ತನ್ನ
ಭಿತ್ತಿಭೇದಕಯಂತ್ರಗಳಿಂದ ನಿನ್ನ ಪೌಳಿಗೋಡೆಯನ್ನು
ಹೊಡೆಯಿಸಿ ತನ್ನ ಆಯುಧಗಳಿಂದ ನಿನ್ನ ಕೊತ್ತಲ
ಗಳನ್ನು ಒಡೆದುಬಿಡುವನು. ಅವನ ಲೆಕ್ಕವಿಲ್ಲದ 10
ಕುದುರೆಗಳಿಂದೆದ್ದ ದೂಳು ನಿನ್ನನ್ನು ಮುಸುಕುವದು;
ಒಡಕುಬಿದ್ದ ಕೋಟೆಯೊಳಗೆ ಶತ್ರುವು ನುಗ್ಗುವ
ಪ್ರಕಾರ ಅವನು ನಿನ್ನ ಬಾಗಲುಗಳೊಳಗೆ ನುಗ್ಗುವಾಗ
ರಾಹುತ, ಚಕ್ಕಡಿಗಾಡಿ, ರಥ ಇವುಗಳ ಶಬ್ದಕ್ಕೆ ನಿನ್ನ
ಗೋಡೆಗಳು ಕದಲುವವು. ಅವನು ತನ್ನ ಕುದುರೆಗಳ 11
ಗೊರಸುಗಳಿಂದ ನಿನ್ನ ಬೀದಿಗಳನ್ನು ತುಳಿಸಿ ಖಡ್ಗ
ದಿಂದ ನಿನ್ನ ಜನರನ್ನು ಸಂಹರಿಸಿ ನಿನ್ನ ಬಲವಾದ ಕಲ್ಲು
ಕಂಬಗಳನ್ನು ಕೆಡವುವನು. ಅವನ ಸೈನಿಕರು ನಿನ್ನ 12
ಆಸ್ತಿಯನ್ನು ಸುಲಿದುಕೊಂಡು ನಿನ್ನ ಸರಕುಗಳನ್ನು
ಕೊಳ್ಳೆಹೊಡೆದು ನಿನ್ನ ಗೋಡೆಗಳನ್ನು ಉರುಳಿಸಿ ನಿನ್ನ
ವಿನೋದಭವನಗಳನ್ನು ಕಿತ್ತುಹಾಕಿ ನಿನ್ನ ಕಲ್ಲು
ಮರಮಣ್ಣುಗಳನ್ನು ಸಮುದ್ರದ ಪಾಲುಮಾಡುವರು.
ನಾನು ನಿನ್ನ ಸಂಗೀತಗಳ ಧ್ವನಿಯನ್ನು ನಿಲ್ಲಿಸಿಬಿಡು 13
ವೆನು; ನಿನ್ನ ಕಿನ್ನರಿಗಳ ನುಡಿಯು ಇನ್ನು ಕೇಳಿಸದು.
ನಾನು ನಿನ್ನನ್ನು ಬೋಳುಬಂಡೆ ಮಾಡುವೆನು; ನೀನು 14
ಬಲೆಗಳಿಗೆ ಹಾಸಬಂಡೆಯಾಗುವಿ; ನಿನ್ನ ಮೇಲೆ ಇನ್ನು
ಕಟ್ಟಡಕಟ್ಟರು; ಯೆಹೋವನಾದ ನಾನೇ ಅಪ್ಪಣೆ
ಕೊಟ್ಟಿದ್ದೇನೆ; ಇದು ಕರ್ತನಾದ ಯೆಹೋವನ ನುಡಿ.
ಕರ್ತನಾದ ಯೆಹೋವನು ತೂರಿಗೆ ಹೀಗೆ ಹೇಳು 15
ತ್ತಾನೆ—ನಿನ್ನ ಮಧ್ಯದಲ್ಲಿ ಕೊಲೆಯುಂಟಾಗಿ ಗಾಯ
ಪಟ್ಟವರು ನರಳುತ್ತಿರಲು ನೀನು ಧಡಮ್ಮನೆ ಬೀಳುವ
ಶಬ್ದಕ್ಕೆ ದ್ವೀಪಗಳು ಅದರುವವಲ್ಲವೆ. ಆಗ ಸಮು 16
ದ್ರದ ಸುತ್ತುಮುತ್ತಲಿನ ಸಕಲಪ್ರಭುಗಳು ತಮ್ಮ
ಸಿಂಹಾಸನಗಳಿಂದಿಳಿದು ನಿಲುವಂಗಿಗಳನ್ನು ತೆಗೆದು
ಹಾಕಿ ಬೂಟೇದಾರಿಯ ವಸ್ತ್ರಗಳನ್ನು ಕಿತ್ತೆಸೆದು ತತ್ತರ
ವನ್ನೇ ಹೊದ್ದುಕೊಂಡು ನೆಲದ ಮೇಲೆ ಕುಕ್ಕರಿಸಿ ಕ್ಷಣ
ಕ್ಷಣವೂ ನಡುಗುತ್ತಾ ನಿನಗೆ ಬೆಚ್ಚಿಬೆರಗಾಗುವರು.
ಇವರು ನಿನ್ನ ವಿಷಯದಲ್ಲಿ—ನಾವಿಕರ ನಿವಾಸವೇ, 17
ಹೆಸರುವಾಸಿಯ ಪುರಿಯೇ, ಸಮುದ್ರದಿಂದ ಬಲಗೊಂಡ
ನಗರಿಯೇ, ನೀನು ಎಷ್ಟೋ ಹಾಳಾದಿ! ಸಮುದ್ರಸಂಚಾ
ರಿಗಳಿಗೆಲ್ಲಾ ಭಯಾಸ್ಪದರಾಗಿದ್ದ ನಿನ್ನ ನಿವಾಸಿಗಳು
ಎಷ್ಟೋ ಹಾಳಾದರು! ಈ ನಿನ್ನ ಪತನದಿನದಲ್ಲಿ ಕರಾ 18
ವಳಿಯು ನಡುಗುತ್ತದೆ; ನೀನು ಇಲ್ಲವಾದದಕ್ಕೆ ಸಮು
ದ್ರದ್ವೀಪಗಳು ತತ್ತರಿಸುತ್ತವೆ ಎಂಬ ಶೋಕಗೀತವನ್ನೆತ್ತು
ವರು. ಕರ್ತನಾದ ಯೆಹೋವನು ಇಂತೆನ್ನುತ್ತಾನೆ— 19
ನಾನು ನಿನ್ನನ್ನು ಹಾಳೂರು ಮಾಡಿ ನಿರ್ಜನಪಟ್ಟಣಗಳ
ಗತಿಗೆ ತಂದು ನೀನು ಜಲರಾಶಿಯಲ್ಲಿ ಮುಣುಗಿ ಹೋ
ಗುವಂತೆ ನಿನ್ನ ಮೇಲೆ ಮಹಾಸಾಗರವನ್ನು ಉಕ್ಕಿಸು
ವಾಗ ಪುರಾತನಕಾಲದಲ್ಲಿ ಹಾಳಾದ ಪಟ್ಟಣಗಳಂತೆ 20
ನಿನ್ನನ್ನು ಅಧೋಲೋಕಕ್ಕೆ ತಳ್ಳಿ ಪಾತಾಳಕ್ಕೆ ಇಳಿದ
ಪೂರ್ವಕಾಲದವರೊಂದಿಗೆ ವಾಸಿಸಮಾಡುವೆನು; ಹೌ
ದು, ನೀನು ನಿನ್ನ ಮಹಿಮೆಯನ್ನು ಜೀವಲೋಕದಲ್ಲಿ
ನೆಲೆಗೊಳಿಸದೆ ನಿರ್ನಿವಾಸಿಯಾಗುವಂತೆ ನಿನ್ನನ್ನು
ಪಾತಾಳಕ್ಕೆ ಇಳಿದವರ ಸಹವಾಸದಲ್ಲಿ ಸೇರಿಸುವೆನು.
ನಿನ್ನನ್ನು ತೀರಾ ಧ್ವಂಸಮಾಡುವೆನು; ನೀನು ಇಲ್ಲ 21
ವಾಗುವಿ; ಎಷ್ಟು ಹುಡುಕಿದರೂ ನೀನು ಎಂದಿಗೂ
ಸಿಕ್ಕುವದಿಲ್ಲ; ಇದು ಕರ್ತನಾದ ಯೆಹೋವನ ನುಡಿ.

ವ್ಯಾಪಾರದ ಅದ್ಭುತನಾವೆಯಂತಿರುವ ತೂರಿನ ವೈಭವವೂ ನಾಶನವೂ.

27 ಯೆಹೋವನು ಇನ್ನೊಂದು ವಾಕ್ಯವನ್ನು ನನಗೆ ದಯಪಾಲಿಸಿದನು—
2 ನರಪುತ್ರನೇ, ನೀನು ತೂರಿನ ವಿಷಯದಲ್ಲಿ ಶೋಕಗೀತವನ್ನೆತ್ತು, ಅದಕ್ಕೆ ಹೀಗೆ ನುಡಿ—
3 ಸಮುದ್ರದ್ವಾರದಲ್ಲಿ ವಾಸಿಸುತ್ತಾ
ಜನಾಂಗಗಳಿಗಾಗಿ ಬಹು ದ್ವೀಪಗಳೊಂದಿಗೆ ವ್ಯಾಪಾರಮಾಡುವ ಪುರಿಯೇ!
ಕರ್ತನಾದ ಯೆಹೋವನು ಇಂತೆನ್ನುತ್ತಾನೆ—
ತೂರೇ, ಪರಿಪೂರ್ಣಸುಂದರಿಯಾಗಿದ್ದೇನೆ ಅಂದುಕೊಂಡಿಯಲ್ಲಾ!
4 ನಿನ್ನ ನೆಲೆಯು ಸಮುದ್ರಮಧ್ಯವೇ;
ನಿನ್ನನ್ನು ಕಟ್ಟಿದವರು ನಿನ್ನ ಸೌಂದರ್ಯವನ್ನು ಪರಿಪೂರ್ಣಗೊಳಿಸಿದರು.
5 ಸೆನೀರಿನ ತುರಾಯಿಮರದಿಂದ ನಿನ್ನ ಪಕ್ಕಗಳ ಹಲಿಗೆಗಳನ್ನು ಮಾಡಿ
ನಿನ್ನ ಸ್ತಂಭವನ್ನು ರಚಿಸುವದಕ್ಕೆ ಲೆಬನೋನಿನಿಂದ ದೇವದಾರುಮರವನ್ನು ತಂದರು.
6 ಬಾಷಾನಿನ ಅಲ್ಲೋನ್ ಮರದಿಂದ ನಿನ್ನ ಹುಟ್ಟುಗಳನ್ನು ರೂಪಿಸಿ
ಕಿತ್ತೀಮ್ ದ್ವೀಪದ ತಿಲಕದ ಹಲಿಗೆಯಿಂದ ನಿನ್ನ ಮೇಲ್ಮಾಳಿಗೆಯನ್ನು ಕಟ್ಟಿ ದಂತದಿಂದ ಕೆತ್ತಿದರು.
7 ನಿನ್ನ ಹಾಯಿಯು ನಿನಗೆ ಧ್ವಜವೂ ಆಗಲೆಂದು ಅದನ್ನು ಐಗುಪ್ತದ ಕಸೂತಿಯ ನಾರುಬಟ್ಟೆಯಿಂದ ಮಾಡಿದರು.
ನಿನ್ನ ಮೇಲ್ಕಟ್ಟು ಎಲೀಷಕರಾವಳಿಯ ಧೂಮ್ರರಕ್ತವರ್ಣಗಳಿಂದ ಚಿತ್ರಿತವಾಗಿತ್ತು.
8 ಚೀದೋನಿನವರೂ ಅರ್ವಾದಿನವರೂ ನಿನಗೆ ಹುಟ್ಟುಹಾಕುವರು;
ತೂರೇ, ನಿನ್ನಲ್ಲಿನ ವಿವೇಕಿಗಳು ನಿನ್ನ ನಾವಿಕರು;
9 ನಿನ್ನಲ್ಲಿ ಸೇರಿಕೊಂಡಿದ್ದ ಗೆಬಲಿನ ಹಿರಿಯರೂ ಜಾಣರೂ ನಿನ್ನ ಕಂಡಿಗಳನ್ನು ಭದ್ರಪಡಿಸುವರು.
ಸಮುದ್ರದ ಸಕಲ ನಾವೆಗಳು ನಾವಿಕರ ಸಮೇತ ನಿನ್ನ ಬಳಿಯಲ್ಲಿದ್ದು ನಿನಗೆ ಸರಕುಗಳನ್ನು ತಂದೊಪ್ಪಿಸುತ್ತಿದ್ದವು,
10 ಪಾರಸಿಯರೂ ಲೂದ್ಯರೂ ಪೂಟ್ಯರೂ ನಿನ್ನ ಸೈನ್ಯದ ಭಟರಾಗಿ
ಖೇಡ್ಯಶಿರಸ್ತ್ರಾಣಗಳನ್ನು ನಿನ್ನಲ್ಲಿ ನೇತುಹಾಕಿ ನಿನ್ನನ್ನು ಭೂಷಿಸುತ್ತಿದ್ದರು.
11 ಅರ್ವಾದಿನವರೂ ನಿನ್ನ ಸೈನಿಕರೂ ಸುತ್ತುಮುತ್ತಲು ನಿನ್ನ ತೆನೆಗೋಡೆಗಳಲ್ಲಿ ನಿಂತಿದ್ದರು,
ಗಮ್ಮಾದ್ಯರು ನಿನ್ನ ಕೊತ್ತಲಗಳಲ್ಲಿ ಕಾವಲಾಗಿದ್ದರು,
ಎಲ್ಲರೂ ತಮ್ಮ ಖೇಡ್ಯಗಳನ್ನು ಸುತ್ತಮುತ್ತಲು ನಿನ್ನ ಗೋಡೆಗಳಿಗೆ ನೇತುಹಾಕಿ

ನಿನ್ನ ಸೌಂದರ್ಯವನ್ನು ಪರಿಪೂರ್ಣಗೊಳಿಸಿದರು.
ಅಪಾರವಾದ ಬಗೆಬಗೆಯ ಆಸ್ತಿಯು ನಿನಗೆ ಬೇಕಾಗಿದ್ದದರಿಂದ
ತಾರ್ಷೀಷಿನವರು ನಿನ್ನ ಕಡೆಯ ವರ್ತಕರಾಗಿ
ಬೆಳ್ಳಿ ಕಬ್ಬಿಣ ತವರ ಸೀಸಗಳನ್ನು ನಿನಗೆ ಒದಗಿಸಿದರು.
ಯಾವಾನಿನವರೂ ತೂಬಲಿನವರೂ ಮೆಷೆಕಿನವರೂ ನಿನ್ನ ಪರವಾಗಿ ವ್ಯಾಪಾರಮಾಡಿ
ನರಪ್ರಾಣಿಗಳನ್ನೂ ತಾಮ್ರದ ಪಾತ್ರೆಗಳನ್ನೂ ನಿನಗೆ ಸರಬರಾಯಿಮಾಡಿದರು.
ತೋಗರ್ಮ ವಂಶದವರು ಕುದುರೆ, ಜಾತಿಯ ಕುದುರೆ, ಹೇಸರಕತ್ತೆ ಇವುಗಳನ್ನು ನಿನಗಾಗಿ ತಂದರು.
ದೆದಾನಿನವರು ನಿನ್ನ ವರ್ತಕರು; ಬಹುದ್ವೀಪಗಳ ಉತ್ಪತ್ತಿಯು ನಿನ್ನ ಕೈಗೆ ಸೇರಿತು;
ಗಜದಂತಗಳನ್ನೂ ಕರೀಮರವನ್ನೂ ನಿನಗೆ ಕಪ್ಪವಾಗಿ ಸಲ್ಲಿಸಿದರು.
ನಿನ್ನ ಕೈಕೆಲಸದ ವಸ್ತುಗಳು ಅಪಾರವಾಗಿದ್ದದರಿಂದ
ಅರಾಮಿನವರೂ ನಿನ್ನವರಾಗಿ ವ್ಯಾಪಾರಮಾಡಿ
ಕೆಂಪರಲು ರಕ್ತಾಂಬರ ಕಸೂತಿಯ ವಸ್ತ್ರ ನಾರುಬಟ್ಟೆ
ಹವಳ ಮಾಣಿಕ್ಯ ಮೊದಲಾದ ಸರಕುಗಳನ್ನು ನಿನಗೆ ತಂದು ಸುರಿದರು.
ಯೆಹೂದ್ಯರೂ ಇಸ್ರಾಯೇಲ್ ದೇಶದವರೂ ನಿನ್ನ ಕಡೆಯ ವರ್ತಕರಾಗಿ
ಮಿನ್ನೀಥಿನ ಗೋದಿ ಕಂಡಸಕ್ಕರೆ ಜೇನು ಎಣ್ಣೆ ಸುಗಂಧತೈಲ
ಈ ಸಾಮಗ್ರಿಗಳನ್ನು ನಿನಗೆ ಸೇರಿಸಿದರು.
ನಿನ್ನ ಕೈಕೆಲಸದ ವಸ್ತುಗಳು ನಿನ್ನಲ್ಲಿ ಅಪಾರವಾಗಿದ್ದದರಿಂದಲೂ ಅಪರಿಮಿತವಾದ ಬಗೆಬಗೆಯ ಆಸ್ತಿಯೂ ನಿನಗೆ ಬೇಕಾಗಿದ್ದದರಿಂದಲೂ
ದಮಸ್ಕದವರೂ ನಿನ್ನ ಪರವಾಗಿ ವ್ಯಾಪಾರಮಾಡಿ
ಹೆಲ್ಬೋನಿನ ದ್ರಾಕ್ಷಾರಸವನ್ನೂ ಚಾಹರಿನ ಉಣ್ಣೆಯನ್ನೂ ನಿನ್ನಲ್ಲಿ ತುಂಬಿಸಿದರು.
ದಾನಿನವರೂ ಯಾವಾನಿನವರೂ ಊಜಾಲಿನಿಂದ ನಾನಾ ಸನುಗುಗಳನ್ನು ತಂದು ನಿನಗೆ ಒಪ್ಪಿಸಿದರು.
ಉಕ್ಕುಬಜೆಲವಂಗಚಕ್ಕೆಗಳು ನಿನಗೆ ಆಮದಾದವು.
ದೆದಾನಿನವರು ಹಲ್ಲಣಕ್ಕೆ ಸರಿಯಾದ ಒಳ್ಳೆಯ ಜಮಖಾನೆಗಳನ್ನು
ನಿನಗೋಸ್ಕರ ತರುವ ವ್ಯಾಪಾರಿಗಳಾಗಿದ್ದರು.
ಅರಾಬ್ಯರೂ ಕೇದಾರಿನ ಪ್ರಧಾನರೂ ನಿನ್ನ ಕೈಕೆಳಗಣ ವರ್ತಕರು;
ಕುರಿ ಟಗರು ಹೋತಗಳನ್ನು ನಿನಗಾಗಿ ಸಾಗಿಸಿಕೊಂಡು ಬಂದರು.
ಶೆಬದವರೂ ರಗ್ಮದವರೂ ನಿನ್ನ ಕಡೆಯ ವರ್ತಕರಾಗಿ
ಕನಕ ಮುಖ್ಯಮುಖ್ಯಸುಗಂಧದ್ರವ್ಯ ಸಮಸ್ತ ಮೂಲ್ಯರತ್ನ
ಈ ಸರಕುಗಳನ್ನು ನಿನಗೋಸ್ಕರ ತಂದರು.

23 ಹಾರಾನ್ ಕನ್ನೆ ಎದೆನ್‌ಸ್ಥಳಗಳವರೂ ಶೆಬ ಅಶ್ಶೂರ್
ಕಿಲ್ಮದ್ ಪ್ರಾಂತಗಳ ವರ್ತಕರೂ
24 ನಿನ್ನ ವ್ಯಾಪಾರಿಗಳಾಗಿ
ಉತ್ತಮಾಂಬರ ಕಸೂತಿಯ ಧೂಮ್ರದ ನಿಲುವಂಗಿ
ಮೊದಲಾದ ಮಾಲುಗಳನ್ನೂ ಹಗ್ಗಗಳಿಂದ ಬಲ
ವಾಗಿ ಬಿಗಿದ ವಿಚಿತ್ರವಸ್ತ್ರಗಳ ಮೂಟೆಗಳನ್ನೂ
ನಿನಗಾಗಿ ಗಳಿಸಿದರು.
25 ತಾರ್ಷೀಷಿನ ಹಡಗುಗಳು ಸಾಲುಸಾಲಾಗಿ ನಿನಗೆ
ಬೇಕಾದ ದಿನಸುಗಳನ್ನು ಒಯ್ದುಕೊಂಡು
ಬಂದವು.
ನೀನು ಭರ್ತಿಯಾಗಿ ಸಮುದ್ರಮಧ್ಯದಲ್ಲಿ ಬಹು
ಭಾರವಾದಿ.
26 ಹುಟ್ಟುಹಾಕುವವರು ನಿನ್ನನ್ನು ಮಹಾತರಂಗಗ
ಳಿಗೆ ಸಿಕ್ಕಿಸಿದ್ದಾರೆ;
ಮೂಡಣ ಗಾಳಿಯು ನಿನ್ನನ್ನು ಸಾಗರಮಧ್ಯದಲ್ಲಿ
ಒಡೆದುಬಿಟ್ಟಿದೆ.
27 ನಿನ್ನ ಆಸ್ತಿಯು, ನಿನ್ನ ದಿನಸುಗಳು, ನಿನ್ನ ಸರಕು
ಗಳು,
ನಿನ್ನ ನಾವಿಕರು, ನಿನ್ನ ಅಂಬಿಗರು, ನಿನ್ನ ಕಂಡಿ
ಗಳನ್ನು ಭದ್ರಪಡಿಸುವವರು,
ನಿನ್ನ ವ್ಯಾಪಾರಿಗಳು, ನಿನ್ನಲ್ಲಿನ ಸಮಸ್ತಸೈನಿಕರು,
ಅಂತು ನಿನ್ನೊಳಗೆ ಸೇರಿಕೊಂಡಿರುವ ನಿನ್ನ ಸಿಬ್ಬಂದಿ
ಯೆಲ್ಲವೂ
ನಿನ್ನ ನಾಶನದ ದಿನದಲ್ಲಿ ಸಮುದ್ರದೊಳಗೆ
ಮುಣುಗಿಹೋಗುವದು.
28 ನಿನ್ನ ನಾವಿಕರ ಕೂಗಾಟಕ್ಕೆ ಸಮೀಪಪ್ರದೇಶಗಳು
ನಡುಗುವವು.
29 ಹುಟ್ಟುಹಾಕುವವರೆಲ್ಲರೂ ಅಂಬಿಗರೂ ಸಮು
ದ್ರದ ಸಕಲ ನಾವಿಕರೂ
ತಮ್ಮ ತಮ್ಮ ಹಡಗುಗಳಿಂದಿಳಿದು ನೆಲದ ಮೇಲೆ
ನಿಂತುಕೊಂಡು
30 ನಿನ್ನ ನಿಮಿತ್ತ ದನಿಗೈದು ದುಃಖದಿಂದರಚಿ
ತಲೆಗೆ ದೂಳೆರಚಿಕೊಂಡು ಬೂದಿಯಲ್ಲಿ ಬಿದ್ದು
ಹೊರಳಾಡಿ
31 ನಿನಗಾಗಿ ತಲೆಬೋಳಿಸಿಕೊಂಡು ಗೋಣೀತಟ್ಟು
ಸುತ್ತಿಕೊಂಡು
ಮನೋವ್ಯಥೆಯಿಂದ ಗೋಳಾಡಿ ನಿನಗೋಸ್ಕರ
ಬಿಕ್ಕಿಬಿಕ್ಕಿ ಅಳುವರು.
32 ಅವರು ರೋದನಮಾಡುತ್ತಾ ನಿನ್ನ ವಿಷಯವಾಗಿ
ಶೋಕಗೀತವನ್ನೆತ್ತಿ ಹೀಗೆ ಪ್ರಲಾಪಿಸುವರು—
ಸಮುದ್ರದ ನಡುವೆ ಬಿಕೋ ಎನ್ನುವ ತೂರಿಗೆ
ಯಾವದು ಸಮಾನ?
33 ನಿನ್ನ ಸರಕುಗಳು ಸಮುದ್ರಗಳನ್ನು ಹಾದು ಹರಡಿ
ಕೊಂಡವು,
ಅವುಗಳಿಂದ ಬಹುಜನಾಂಗಗಳನ್ನು ತುಂಬಿಸಿದಿ;
ನಿನ್ನ ಅಪಾರವಾದ ಐಶ್ವರ್ಯದಿಂದಲೂ ವ್ಯಾಪಾ
ರದ ದಿನಸುಗಳಿಂದಲೂ
ಭೂರಾಜರನ್ನು ಸಮೃದ್ಧಿಪಡಿಸಿದಿ.
34 ಈಗಲಾದರೋ ನೀನು ಸಮುದ್ರದಿಂದ ಹಾಳಾದಿ.
ನಿನ್ನ ಸರಕುಗಳೂ ನಿನ್ನಲ್ಲಿ ಸೇರಿಕೊಂಡಿದ್ದ ಸಕಲ
ಜನರೂ
ಅಗಾಧಜಲದಲ್ಲಿ ಮುಣುಗಿಹೋದರು.
ಕರಾವಳಿಯ ಸಮಸ್ತನಿವಾಸಿಗಳು ನಿನ್ನ ಗತಿಗೆ 35
ಬೆಚ್ಚಿಬಿದ್ದಿದ್ದಾರೆ;
ರಾಜರು ಮೊಗಗೆಟ್ಟು ರೋಮಾಂಚಿತರಾಗಿದ್ದಾರೆ.
ಜನಾಂಗಗಳ ವರ್ತಕರು ನಿನ್ನನ್ನು ನೋಡಿ ಸಿಳ್ಳು 36
ಹಾಕುತ್ತಾರೆ;
ನೀನು ತೀರಾ ಧ್ವಂಸವಾಗಿ ಇನ್ನೆಂದಿಗೂ ಇಲ್ಲ
ದಂತಾದಿ.

ತೂರಿನ ಪ್ರಭುವಿನ ಅಹಂಭಾವವನ್ನು ಖಂಡಿಸಿದ್ದು.

28 ಯೆಹೋವನು ಇನ್ನೊಂದು ವಾಕ್ಯವನ್ನು ನನಗೆ
ದಯಪಾಲಿಸಿದನು—ನರಪುತ್ರನೇ, ನೀನು ತೂ 2
ರಿನ ಪ್ರಭುವಿಗೆ ಹೀಗೆ ನುಡಿ—ಕರ್ತನಾದ ಯೆಹೋ
ವನು ಇಂತೆನ್ನುತ್ತಾನೆ—ನೀನು ಉಬ್ಬಿದ ಮನಸ್ಸು
ಳ್ಳವನಾಗಿ ಆಹಾ, ನಾನು ದೇವರು, ಸಮುದ್ರಮಧ್ಯ
ದಲ್ಲಿ ದೇವರ ಆಸನವನ್ನೇ ಹತ್ತಿದ್ದೇನೆ ಅಂದುಕೊಂಡಿ
ಯಷ್ಟೆ; ನೀನು ನಿನ್ನ ಮನಸ್ಸನ್ನು ದೇವರ ಮನಸ್ಸಿ
ನಷ್ಟು ಹೆಚ್ಚಿಸಿಕೊಂಡದೇನು? ನೀನು ಎಂದಿಗೂ ದೇವ
ರಲ್ಲ, ನೀನು ನರಪ್ರಾಣಿಯೇ. ಇಗೋ, ನೀನು ದಾನಿ 3
ಯೇಲನಿಗಿಂತಲೂ ಬುದ್ಧಿವಂತನು; ನಿನಗೆ ಮರೆ
ಯಾದ ಮರ್ಮವು ಯಾವದೂ ಇಲ್ಲ; ನಿನ್ನ 4
ಜ್ಞಾನವಿವೇಕಗಳಿಂದ ನೀನು ಐಶ್ವರ್ಯವನ್ನು ಗಳಿಸಿ
ನಿನ್ನ ಬೊಕ್ಕಸಗಳಲ್ಲಿ ಬೆಳ್ಳಿಬಂಗಾರವನ್ನು ತುಂಬಿಸಿ
ಕೊಂಡಿದ್ದೀ; ನೀನು ನಿನ್ನ ಅಧಿಕಜ್ಞಾನದಿಂದಲೂ ವ್ಯಾ 5
ಪಾರದಿಂದಲೂ ಸಂಪತ್ತನ್ನು ವೃದ್ಧಿಮಾಡಿಕೊಂಡಿರಲು
ನಿನ್ನ ಮನಸ್ಸು ನಿನ್ನ ಆಸ್ತಿಯ ನಿಮಿತ್ತ ಉಬ್ಬಿಕೊಂ
ಡಿದೆ; ಹೀಗಿರಲು ಕರ್ತನಾದ ಯೆಹೋವನು ಇಂತೆನ್ನು 6
ತ್ತಾನೆ—ನೀನು ನಿನ್ನ ಮನಸ್ಸನ್ನು ದೇವರ ಮನಸ್ಸಿ
ನಷ್ಟು ಹೆಚ್ಚಿಸಿಕೊಂಡದರಿಂದ ನಾನು ನಿನ್ನ ಮೇಲೆ ಅತಿ 7
ಭಯಂಕರ ಜನಾಂಗದವರಾದ ಮ್ಲೇಚ್ಛರನ್ನು ಬೀಳ
ಮಾಡುವೆನು; ಅವರು ನಿನ್ನ ಜ್ಞಾನದ ಸೊಬಗಿನ
ಮೇಲೆ ಕತ್ತಿಹಿರಿದು ನಿನ್ನ ಹೊಳಪನ್ನು ಹೊಲಸುಮಾ
ಡುವರು. ನಿನ್ನನ್ನು ಪಾತಾಳಕ್ಕೆ ತಳ್ಳಿಬಿಡುವರು; 8
ಸಮುದ್ರಮಧ್ಯದಲ್ಲಿ ನಿನಗೆ ಹತರಾದವರ ಗತಿ ಸಂಭವಿ
ಸುವದು. ನೀನು ನಿನ್ನನ್ನು ಸಂಹರಿಸುವವನೆದುರಿಗೆ 9
ನಾನು ದೇವರು ಎಂದು ಹೇಳುವಿಯಾ? ಹತಿಸುವವನ
ಕೈಗೆ ನೀನು ಎಂದಿಗೂ ದೇವರಲ್ಲ, ನರಪ್ರಾಣಿಯೇ.
ನೀನು ಅನ್ಯರ ಕೈಯಿಂದ ಸುನ್ನತಿಹೀನರ ಮರಣಕ್ಕೆ 10
ಗುರಿಯಾಗುವಿ; ನಾನೇ ನುಡಿದಿದ್ದೇನೆ, ಇದು ಕರ್ತ
ನಾದ ಯೆಹೋವನ ಸಂಕಲ್ಪ.
ಯೆಹೋವನು ಇನ್ನೊಂದು ವಾಕ್ಯವನ್ನು ನನಗೆ 11
ದಯಪಾಲಿಸಿದನು—ನರಪುತ್ರನೇ, ನೀನು ತೂರಿನ 12
ಅರಸನ ವಿಷಯದಲ್ಲಿ ಶೋಕಗೀತವನ್ನೆತ್ತು, ಅವನಿಗೆ
ಹೀಗೆ ನುಡಿ—ಕರ್ತನಾದ ಯೆಹೋವನು ಇಂತೆನ್ನುತ್ತಾ
ನೆ—ನೀನು ಸರ್ವಸುಲಕ್ಷಣಶಿರೋಮಣಿ, ಪೂರ್ಣ
ಜ್ಞಾನಿ, ಪರಿಪೂರ್ಣಸುಂದರ. ದೇವರ ಉದ್ಯಾನವನ 13
ವಾದ ಏದೆನಿನಲ್ಲಿ ನೀನಿದ್ದಿ; ಮಾಣಿಕ್ಯ ಪುಷ್ಯರಾಗ

ವಚ್ಚೆ ಪೀತರತ್ನ ಬೆರುಲ್ಲ ವೈಡೂರ್ಯ ನೀಲ ಕೆಂಪರಲು
ಸ್ಫಟಿಕ ಈ ನವರತ್ನಗಳಿಂದ ಭೂಷಿತವಾಗಿದ್ದಿ; ನಿನ್ನ
ಲ್ಲಿನ [ಈ ರತ್ನಗಳ] ಗೂಡುಗಳೂ ಮನೆಗಳೂ ಸುವ
ರ್ಣರಚಿತವಾಗಿದ್ದವು; ನಿನ್ನ ಸೃಷ್ಟಿಯ ದಿನದಲ್ಲಿ ಸಿದ್ಧ
14 ವಾದವು, ನೀನು ರೆಕ್ಕೆತೆರೆದು ನೆರಳು ಕೊಡುವ
ಕೆರೂಬಿಯಾಗಿದ್ದಿ; ನಾನು ನಿನ್ನನ್ನು ದೇವರ ಪರಿಶುದ್ಧ
ಪರ್ವತದಲ್ಲಿ ನೆಲೆಗೊಳಿಸಿದೆನು; ನೀನು ಕೆಂಡದ ಮಳೆ
15 ಯಲ್ಲಿ ವಿಹಾರಮಾಡುತ್ತಾ ಇದ್ದಿ. ನಿನ್ನ ಸೃಷ್ಟಿಯ
ದಿನದಿಂದ ನಿನ್ನಲ್ಲಿ ಅಪರಾಧವು ಸಿಕ್ಕುವತನಕ ನಿನ್ನ
16 ನಡತೆಯು ನಿರ್ದೋಷವಾಗಿ ಕಾಣುತ್ತಿತ್ತು. ನಿನ್ನ
ಮಿತಿಯಿಲ್ಲದ ವ್ಯಾಪಾರದಿಂದ ನಿನ್ನಲ್ಲಿ ಬಲಾತ್ಕಾರವು
ತುಂಬಿ ನೀನು ಪಾಪಿಯಾದಿ. ಆದಕಾರಣ ನಾನು
ನಿನ್ನನ್ನು ದೇವರ ಪರ್ವತದಿಂದ ಹೊಲಸನ್ನಾಗಿ ತಳ್ಳಿ
ಬಿಟ್ಟೆನು; ಹೌದು, ನೆರಳುಕೊಡುವ ಕೆರೂಬಿಯೇ,
ಕೆಂಡದ ಮಳೆಯ ಮಧ್ಯದಲ್ಲಿನ ನಿನ್ನ ನೆಲೆಯಿಂದ
17 ನಾನು ನಿನ್ನನ್ನು ಕಿತ್ತು ಧ್ವಂಸಮಾಡಿದೆನು. ನೀನು
ನಿನ್ನ ಸೊಬಗಿನ ನಿಮಿತ್ತ ಉಬ್ಬಿದ ಮನಸ್ಸುಳ್ಳವನಾಗಿ
ನಿನ್ನ ಮೆರೆತದಿಂದ ನಿನ್ನ ಬುದ್ಧಿಯನ್ನು ಹಾಳುಮಾಡಿ
ಕೊಂಡಿ; ಇದರಿಂದ ನಾನು ನಿನ್ನನ್ನು ನೆಲಕ್ಕೆ ದೊಬ್ಬಿ
ನೀನು ಅರಸರಿಗೆ ನೋಟವಾಗುವಂತೆ ಅವರ ಕಣ್ಣ
18 ಮುಂದೆ ಹಾಕಿದೆನು. ನಿನ್ನ ಅಪಾರವಾದ ಅಪರಾಧಗ
ಳಿಂದಲೂ ಅನ್ಯಾಯವಾದ ವ್ಯಾಪಾರದಿಂದಲೂ ನಿನ್ನ
ಲ್ಲಿನ ಪವಿತ್ರಾಲಯಗಳನ್ನು ಹೊಲಸುಮಾಡಿದಿ; ಆದ
ಕಾರಣ ನಾನು ನಿನ್ನೊಳಗಿಂದ ಬೆಂಕಿಯನ್ನು ಬರಮಾಡಿ
ದೆನು, ಅದು ನಿನ್ನನ್ನು ನುಂಗಿತು, ನೋಡುವವರೆಲ್ಲರ
19 ಕಣ್ಣೆದುರಿಗೆ ನಿನ್ನನ್ನು ಬೂದಿಮಾಡಿಬಿಟ್ಟೆನು; ಜನಾಂಗ
ಗಳಲ್ಲಿ ನಿನ್ನನ್ನು ಬಲ್ಲವರೆಲ್ಲರೂ ನಿನ್ನ ಗತಿಗೆ ಬೆಚ್ಚಿ
ಬೆರಗಾಗುವರು; ನೀನು ತೀರಾ ಧ್ವಂಸವಾಗಿ ಇನ್ನೆಂ
ದಿಗೂ ಇಲ್ಲದಂತಾದಿ.

ಚೀದೋನಿನ ವಿಷಯವಾಗಿ ದೈವೋಕ್ತಿ.

20 ಯೆಹೋವನು ಈ ವಾಕ್ಯವನ್ನು ನನಗೆ ದಯಪಾಲಿಸಿ
21 ದನು—ನರಪುತ್ರನೇ, ನೀನು ಚೀದೋನಿಗೆ ಅಭಿ
ಮುಖನಾಗಿ ಅದರ ವಿಷಯದಲ್ಲಿ ಹೀಗೆ ನುಡಿ—
22 ಕರ್ತನಾದ ಯೆಹೋವನು ಇಂತೆನ್ನುತ್ತಾನೆ—ಆಹಾ,
ಚೀದೋನೇ, ನಾನು ನಿನಗೆ ವಿರುದ್ಧನಾಗಿ ನಿನ್ನ
ಮಧ್ಯದಲ್ಲಿ ಪ್ರಖ್ಯಾತಿಗೊಳ್ಳುವೆನು; ನಾನು ಈ ಪಟ್ಟಣ
ವನ್ನು ದಂಡಿಸಿ ನನ್ನ ಗೌರವವನ್ನು ಕಾಪಾಡಿ
ಕೊಂಡ ಮೇಲೆ ನಾನೇ ಯೆಹೋವನು ಎಂದು ಎಲ್ಲ
23 ರಿಗೂ ಗೊತ್ತಾಗುವದು. ನಾನು ಅದರಲ್ಲಿ ವ್ಯಾಧಿ
ಯನ್ನೂ ಅದರ ಚೌಕಗಳಲ್ಲಿ ಸಂಹಾರವನ್ನೂ ಉಂಟು
ಮಾಡುವೆನು; ಖಡ್ಗವು ಸುತ್ತುಮುತ್ತಲು ಅದರ ಮೇಲೆ
ಬೀಸುತ್ತಿರಲು ಪ್ರಜೆಗಳು ಅದರ ನಡುವೆ ಹತರಾಗಿ
ಬೀಳುವರು; ಆಗ ನಾನೇ ಯೆಹೋವನು ಎಂದು ಅವ
24 ರಿಗೆ ತಿಳಿದುಬರುವದು. ಇಸ್ರಾಯೇಲ್ ವಂಶದವರಿಗೆ
ಚುಚ್ಚುವ ಮುಳ್ಳು ಇನ್ನಿರದು; ಹೀನೈಸುವ ನೆರೆ
ಹೊರೆಯವರೆಂಬ ಕಂಟಕದ ಬಾಧೆಯು ಇನ್ನಾಗದು;
ನಾನೇ ಕರ್ತನಾದ ಯೆಹೋವನು ಎಂದು ಅವರಿ
ವ್ಯಕ್ತವಾಗುವದು.

ಇಸ್ರಾಯೇಲಿನ ಮುಂದಿನ ಸುಸ್ಥಿತಿ.

ಕರ್ತನಾದ ಯೆಹೋವನು ಇಂತೆನ್ನುತ್ತಾನೆ—ಜನಾಂ
ಗಳಲ್ಲಿ ಚದರಿಹೋಗಿರುವ ಇಸ್ರಾಯೇಲ್ ವಂಶದ
ರನ್ನು ನಾನು ಒಟ್ಟುಗೂಡಿಸಿ ಎಲ್ಲಾ ಜನಾಂಗಗ
ಕಣ್ಣೆದುರಿಗೆ ನನ್ನ ಗೌರವವನ್ನು ಕಾಪಾಡಿಕೊಂ
ಮೇಲೆ ಆ ಇಸ್ರಾಯೇಲ್ ವಂಶದವರು ನನ್ನ ಸೇವ
ನಾದ ಯಾಕೋಬನಿಗೆ ನಾನು ಅನುಗ್ರಹಿಸಿದ ತಮ್ಮ
ಸ್ವದೇಶದಲ್ಲಿ ವಾಸಿಸುವರು. ಅಲ್ಲಿ ನಿರ್ಭಯವಾಗಿ
ರುವರು, ಮನೆಗಳನ್ನು ಕಟ್ಟಿಕೊಂಡು ತೋಟಗಳನ್ನು
ಮಾಡಿಕೊಂಡು ಸುಖವಾಗಿ ವಾಸಿಸುವರು; ಅವರನ್ನು
ಹೀನೈಸುವ ನೆರೆಹೊರೆಯವರಿಗೆ ನಾನು ದಂಡನೆಮಾ
ಡಿದ ಮೇಲೆ ನಾನೇ ತಮ್ಮ ದೇವರಾದ ಯೆಹೋವನು
ಎಂದು ಅವರಿಗೆ ನಿಶ್ಚಯವಾಗುವದು.

ಐಗುಪ್ತದ ವಿಷಯವಾದ ದೈವೋಕ್ತಿಗಳು. 29—32.

ಐಗುಪ್ತವು ನಾಶವಾಗಿ ಪುನಃ ಅಂಕುರಿಸುವದು.

[ಯೆಹೋಯಾಖೀನನು ಸೆರೆಯಾದ] ಹತ್ತನೆ 2
ಯ ವರುಷದ ಹತ್ತನೆಯ ತಿಂಗಳಿನ ಹನ್ನೆರಡನೆಯ
ದಿನದಲ್ಲಿ ಯೆಹೋವನು ಈ ವಾಕ್ಯವನ್ನು ನನಗೆ ದಯ
ಪಾಲಿಸಿದನು—ನರಪುತ್ರನೇ, ನೀನು ಐಗುಪ್ತದ ಅರ
ನಾದ ಫರೋಹನ ಕಡೆಗೆ ಮುಖಮಾಡಿ ಅವನ ವಿ
ಯದಲ್ಲಿಯೂ ಐಗುಪ್ತ್ಯರೆಲ್ಲರ ವಿಷಯದಲ್ಲಿಯೂ
ಹೀಗೆ ನುಡಿ—ಕರ್ತನಾದ ಯೆಹೋವನು ಇಂತೆನ್ನು
ತ್ತಾನೆ—ಐಗುಪ್ತದ ಅರಸನಾದ ಫರೋಹನೇ, ನಿನ್ನ
ನದೀ ಶಾಖೆಗಳ ನಡುವೆ ಒರಗಿಕೊಂಡು—ಈ ನದಿಯು
ನನ್ನದೇ, ನನಗಾಗಿಯೇ ಮಾಡಿಕೊಂಡದು ಅಂದು
ಕೊಳ್ಳುವ ಪೇರ್ಮೊಸಳೆಯೇ, ಇಗೋ, ನಾನು
ನಿನಗೆ ವಿರುದ್ಧನಾಗಿದ್ದೇನೆ. ನಾನು ನಿನ್ನ ದವಡೆಗಳಿಗೆ
ಗಾಳಹಾಕಿ ನಿನ್ನ ನದಿಯ ಮೀನುಗಳು ನಿನ್ನ ಬೆನ್ನು
ಚಿಪ್ಪುಗಳಿಗೆ ಅಂಟಿಕೊಳ್ಳುವಂತೆ ಮಾಡಿ ಅಂಟಿಕೊಂ
ರುವ ಆ ಮೀನುಗಳ ಸಹಿತ ನಿನ್ನನ್ನು ನಿನ್ನ ನದಿಯ
ಮಧ್ಯದೊಳಗಿಂದ ಈಚೆಗೆ ಎಳೆದು ನಿನ್ನನ್ನೂ ನಿನ್ನ
ನದಿಯ ಎಲ್ಲಾ ಮೀನುಗಳನ್ನೂ ಕಾಡಿನ ಪಾಲುಮಾ
ಡುವೆನು; ನೀನು ಬೈಲಿನಲ್ಲಿ ಬಿದ್ದಿರುವಿ; ನಿನ್ನನ್ನು
ಯಾರೂ ಹೊರರು, ಹೂಣಿಡರು; ನಾನು ನಿನ್ನನ್ನು
ಭೂಜಂತುಗಳಿಗೂ ಆಕಾಶಪಕ್ಷಿಗಳಿಗೂ ಆಹಾರಮಾಡಿ
ದ್ದೇನೆ. ಆಗ ಐಗುಪ್ತದ ಸಕಲ ನಿವಾಸಿಗಳು ಇಸ್ರಾ
ಯೇಲ್ ವಂಶದವರಿಗೆ ತಾವು ಬರೀ ದಂಟಿನ ಊರು
ಗೋಲಾದೆವು ಎಂದು ನಾಚಿಕೆಪಟ್ಟು ನಾನೇ ಯೆಹೋ
ವನು ಎಂಬದಾಗಿ ದೃಢಮಾಡಿಕೊಳ್ಳುವರು. [ಐಗು
ಪ್ತವೇ,] ಇಸ್ರಾಯೇಲ್ಯರು ನಿನ್ನ ಮೇಲೆ ಕೈಯಿಡಲು
ನೀನು ಮುರಿದು ಅವರೆಲ್ಲರ ಹೆಗಲನ್ನು ಚುಚ್ಚಿದಿ
ಊರಿಕೊಳ್ಳಲು ನೀನು ಒಡೆದು ಅವರೆಲ್ಲರ [1]ನಡುವಿ

1) ಪಾಠಾಂತರ: ನಡುವನ್ನು ನಿಲ್ಲಿಸಿಬಿಟ್ಟಿ.

8 ನಡುಕವನ್ನು ಉಂಟುಮಾಡಿದಿ. ಹೀಗಿರಲು ಕರ್ತ
ನಾದ ಯೆಹೋವನು ಇಂತೆನ್ನುತ್ತಾನೆ— ಆಹಾ, ನಾನು
ನಿನ್ನ ಮೇಲೆ ಖಡ್ಗವನ್ನು ಬರಮಾಡಿ ಜನರನ್ನೂ
ಪಶುಗಳನ್ನೂ ನಿನ್ನೊಳಗಿಂದ ನಿರ್ಮೂಲಮಾಡುವೆನು.
9 ಫರೋಹನು— ಈ ನದಿಯು ನನ್ನದೇ, ನಾನೇ ಮಾಡಿ
ಕೊಂಡದು ಅಂದುಕೊಂಡಕಾರಣ ಐಗುಪ್ತದೇಶವು
ಹಾಳುಪಾಳಾಗುವದು; ಆಗ ನಾನೇ ಯೆಹೋವನು
10 ಎಂದು ಅವರಿಗೆ ಗೊತ್ತಾಗುವದು. ಇಗೋ, ನಾನು
ನಿನಗೂ ನಿನ್ನ ನದಿಗೂ ವಿರುದ್ಧನಾಗಿ ಐಗುಪ್ತದೇಶ
ವನ್ನು ಮಿಗ್ದೋಲಿನಿಂದ ಸೆವೇನೆಯ ತನಕ, ಹೌದು
ಕೂಷಿನ ಎಲ್ಲೆಯ ವರೆಗೂ ತೀರಾ ಹಾಳುಪಾಳು
11 ಮಾಡುವೆನು. ಯಾವ ಮನುಷ್ಯನೂ ಅಲ್ಲಿ ಹೆಜ್ಜೆ
ಯಿಟ್ಟು ಹಾದುಹೋಗನು; ಯಾವ ಪಶುವೂ ತುಳಿದು
ದಾಟಿಹೋಗದು; ನಾಲ್ವತ್ತು ವರುಷ ನಿರ್ಜನವಾಗಿರು
12 ವದು. ಹಾಳುಬಿದ್ದಿರುವ ದೇಶಗಳೊಳಗೆ ಐಗುಪ್ತ
ದೇಶವನ್ನೂ ಹಾಳುಬೀಳಿಸುವೆನು; ಪಾಳುಬಿದ್ದಿರುವ
ಪಟ್ಟಣಗಳೊಳಗೆ ಅದರ ಪಟ್ಟಣಗಳನ್ನೂ ಪಾಳುಬೀಳಿ
ಸುವೆನು; ನಾಲ್ವತ್ತು ವರುಷ ಹಾಗೆಯೇ ಇರುವವು;
ನಾನು ಐಗುಪ್ತ್ಯರನ್ನು ಜನಾಂಗಗಳಲ್ಲಿ ಚದರಿಸಿ
13 ದೇಶದೇಶಗಳಿಗೆ ತೂರಿಬಿಡುವೆನು. ಕರ್ತನಾದ ಯೆ
ಹೋವನು ಇಂತೆನ್ನುತ್ತಾನೆ— ನಾಲ್ವತ್ತು ವರುಷಗಳ
ಮೇಲೆ ನಾನು ಐಗುಪ್ತ್ಯರನ್ನು ಅವರು ಚದರಿಹೋಗಿದ್ದ
ಜನಾಂಗಗಳೊಳಗಿಂದ ಅವರನ್ನು ಒಟ್ಟುಗೂಡಿಸಿ
14 ಐಗುಪ್ತದ ದುರವಸ್ಥೆಯನ್ನು ತಪ್ಪಿಸಿ ಅವರ ಜನ್ಮ
ಭೂಮಿಯಾದ ಪತ್ರೋಸ್ ದೇಶಕ್ಕೆ ಪುನಃ ಬರ
ಮಾಡುವೆನು; ಅಲ್ಲೇ ಅವರು ನಿಕೃಷ್ಟ ರಾಜ್ಯದವರಾಗಿ
15 ರುವರು. ಆ ರಾಜ್ಯವು ಸಮಸ್ತ ರಾಜ್ಯಗಳಲ್ಲಿ ಕನಿಷ್ಠ
ವೆನಿಸಿಕೊಳ್ಳುವದು; ಮಿಕ್ಕ ಜನಾಂಗಗಳಿಗಿಂತ ತಾನು
ದೊಡ್ಡದೆಂದು ಅದು ಇನ್ನು ತಲೆಯೆತ್ತದು; ಅದು
ಜನಾಂಗಗಳ ಮೇಲೆ ಇನ್ನು ದೊರೆತನಮಾಡಲಾರ
16 ದಂತೆ ನಾನು ಅದನ್ನು ಕ್ಷೀಣಗತಿಗೆ ತರುವೆನು. ಐಗು
ಪ್ತವು ಇನ್ನು ಇಸ್ರಾಯೇಲ್ ವಂಶದವರ ಭರವಸವಾ
ಗದು; ಮತ್ತು ಅದರ ಕಡೆಗೆ ಕಣ್ಣೆತ್ತುವ ದೇವದ್ರೋ
ಹದ ನೆನಪು ಇಸ್ರಾಯೇಲ್ಯರಲ್ಲಿ ಐಗುಪ್ತದಿಂದ ಇನ್ನು
ಹುಟ್ಟದು. ನಾನೇ ಯೆಹೋವನು ಎಂದು ಅವರಿಗೆ
ಮನದಟ್ಟಾಗುವದು.

ನೆಬೂಕದ್ನೆಚ್ಚರನು ತೂರನ್ನು ಮುತ್ತಿದ ಪ್ರಯಾಸಕ್ಕೆ ಐಗುಪ್ತವು ಜೀತವಾದದ್ದು.

17 [ಯೆಹೋಯಾಖೀನನು ಸೆರೆಯಾದ] ಇಪ್ಪತ್ತೇಳ
ನೆಯ ವರುಷದ ಮೊದಲನೆಯ ತಿಂಗಳಿನ ಮೊದಲ
ನೆಯ ದಿನದಲ್ಲಿ ಯೆಹೋವನು ಈ ವಾಕ್ಯವನ್ನು ನನಗೆ
18 ದಯಪಾಲಿಸಿದನು— ನರಪುತ್ರನೇ, ಬಾಬೆಲಿನ ಅರಸ
ನಾದ ನೆಬೂಕದ್ನೆಚ್ಚರನು ತೂರಿಗೆ ಮುತ್ತಿಗೆಹಾಕಿ
ತನ್ನ ಸೈನಿಕರಿಂದ ಬಹು ಶ್ರಮದ ಸೇವೆಯನ್ನು ಮಾಡಿ
ಸಿದ್ದಾನೆ; ಪ್ರತಿಯೊಬ್ಬನ ತಲೆ ಬೋಳಾಗಿದೆ, ಪ್ರತಿಯೊ
ಬ್ಬನ ಹೆಗಲು ಕಾಯಿಕಟ್ಟಿದೆ; ಆದರೂ ಆ ಮುತ್ತಿಗೆ
ಯಲ್ಲಿ ಅವನು ಪಟ್ಟ ಶ್ರಮಕ್ಕೆ ಅವನಿಗಾಗಲಿ
ಅವನ ಸೈನಿಕರಿಗಾಗಲಿ ತೂರಿನಿಂದ ಸಂಬಳವೇನೂ
ಸಿಕ್ಕಲಿಲ್ಲ. ಹೀಗಿರಲು ಕರ್ತನಾದ ಯೆಹೋವನು 19
ಇಂತೆನ್ನುತ್ತಾನೆ— ಇಗೋ, ನಾನು ಬಾಬೆಲಿನ ಅರಸ
ನಾದ ನೆಬೂಕದ್ನೆಚ್ಚರನಿಗೆ ಐಗುಪ್ತದೇಶವನ್ನು ಕೊಡು
ವೆನು; ಅವನು ಅದರ ಜನ ಯಾವತ್ತನ್ನು ಒಯ್ದು
ಆ ದೇಶವನ್ನು ಸೂರೆಮಾಡಿ ಕೊಳ್ಳೆಹೊಡೆಯು
ವನು; ಅದೇ ಅವನ ಸೈನ್ಯಕ್ಕೆ ಸಂಬಳ. ಅವನು ಸೈನ್ಯ 20
ಸಮೇತನಾಗಿ ನನಗೋಸ್ಕರ ಸೇವೆಮಾಡಿದ್ದರಿಂದ
ಅವನು ಪಟ್ಟ ಶ್ರಮಕ್ಕೆ ಪ್ರತಿಫಲವಾಗಿ ನಾನು ಐಗು
ಪ್ತದೇಶವನ್ನು ಅವನಿಗೆ ಕೊಟ್ಟಿದ್ದೇನೆ; ಇದು ಕರ್ತ
ನಾದ ಯೆಹೋವನ ನುಡಿ.
ಆ ದಿನದಲ್ಲಿ ನಾನು ಇಸ್ರಾಯೇಲ್‌ವಂಶಕ್ಕೆ 21
ಕೊಂಬನ್ನು ಮೊಳೆಯಿಸಿ ಆ ವಂಶದವರ ಮಧ್ಯದಲ್ಲಿ
ನಿನ್ನ ಬಾಯನ್ನು ಬಿಚ್ಚುವೆನು; ನಾನೇ ಯೆಹೋವನು
ಎಂದು ಅವರಿಗೆ ನಿಶ್ಚಯವಾಗುವದು.

ಐಗುಪ್ತವು ನೆಬೂಕದ್ನೆಚ್ಚರನಿಂದ ಹಾಳಾಗುವದು.

## 30

ಯೆಹೋವನು ಇನ್ನೊಂದು ವಾಕ್ಯವನ್ನು ನನಗೆ
ದಯಪಾಲಿಸಿದನು— ನರಪುತ್ರನೇ, ನೀನು ಈ 2
ದೈವೋಕ್ತಿಯನ್ನು ಪ್ರಕಟಿಸು— ಕರ್ತನಾದ ಯೆಹೋ
ವನು ಇಂತೆನ್ನುತ್ತಾನೆ— ಅರಚಿಕೊಳ್ಳಿರಿ! ಅಯ್ಯೋ
ದಿನವೇ! ದಿನವು ಹತ್ತಿರವಾಯಿತು; ಹೌದು, ಯೆ 3
ಹೋವನ ದಿನ, ಕಾರ್ಮುಗಿಲಿನ ದಿನ ಸಮೀಪಿಸಿತು;
ಅದು ಜನಾಂಗಗಳಿಗೆ ನ್ಯಾಯತೀರಿಸತಕ್ಕ ಕಾಲ.
ಖಡ್ಗವು ಐಗುಪ್ತದ ಮೇಲೆ ಬೀಳುವದು; ಅಲ್ಲಿನ 4
ಪ್ರಜೆಗಳು ಹತರಾಗಲು ಕೂಷಿನಲ್ಲಿಯೂ ಸಂಕಟವಾಗು
ವದು; ಐಗುಪ್ತದ ಲಕ್ಷೋಪಲಕ್ಷ ಪ್ರಜೆಯು
ಒಯ್ಯಲ್ಪಡುವದು, ಅದರ ಅಸ್ತಿವಾರವು ಹಾಳಾಗು
ವದು; ಕೂಷ್ಯರು, ಪೂಟ್ಯರು, ಲೂದ್ಯರು, ಬಗೆಬಗೆಯ 5
ಸಕಲವಿದೇಶೀಯರು, ಕೂಬ್ಯರು, ಮಿತ್ರರಾಜ್ಯದವರು,
ಇವರೆಲ್ಲಾ ಐಗುಪ್ತ್ಯರೊಂದಿಗೆ ಖಡ್ಗದಿಂದ ಹತರಾಗು
ವರು.
ಯೆಹೋವನು ಇಂತೆನ್ನುತ್ತಾನೆ— ಐಗುಪ್ತಕ್ಕೆ ಆಧಾ 6
ರವಾದವರು ಬೀಳುವರು, ಅದರ ಶಕ್ತಿಮದವು ಇಳಿದು
ಹೋಗುವದು; ಅಲ್ಲಿನ ಜನರು ಮಿಗ್ದೋಲಿನಿಂದ ಸೆವೇ
ನೆಯ ವರೆಗೆ ಖಡ್ಗದಿಂದ ಹತರಾಗುವರು; ಇದು
ಕರ್ತನಾದ ಯೆಹೋವನ ನುಡಿ. ಹಾಳಾಗಿರುವ ದೇಶ 7
ಗಳೊಳಗೆ ಆ ದೇಶವೂ ಹಾಳಾಗಿರುವದು, ಪಾಳುಬಿದ್ದಿ
ರುವ ಪಟ್ಟಣಗಳೊಳಗೆ ಅದರ ಪಟ್ಟಣಗಳೂ ಪಾಳು
ಬಿದ್ದಿರುವವು. ನಾನು ಐಗುಪ್ತಕ್ಕೆ ಬೆಂಕಿ ಹಚ್ಚಿ ಅದರ 8
ಸಹಾಯಕರನ್ನೆಲ್ಲಾ ನಾಶಮಾಡಿದ ಮೇಲೆ ನಾನೇ
ಯೆಹೋವನು ಎಂದು ಅವರಿಗೆ ಗೊತ್ತಾಗುವದು.
ಆ ದಿನದಲ್ಲಿ ದೂತರು ನನ್ನ ಸನ್ನಿಧಾನದಿಂದ ಹೊ 9
ರಟು ಹಡಗುಗಳಲ್ಲಿ ಪ್ರಯಾಣಮಾಡಿ ನಿಶ್ಚಿಂತರಾದ
ಕೂಷ್ಯರನ್ನು ಹೆದರಿಸುವರು; ಐಗುಪ್ತದ ನಾಶನ ದಿನ
ದಲ್ಲಿ ಕೂಷ್ಯರಿಗೂ ಸಂಕಟವಾಗುವದು; ಇಗೋ ಬಂತು.
ಕರ್ತನಾದ ಯೆಹೋವನು ಇಂತೆನ್ನುತ್ತಾನೆ— 10
ನಾನು ಬಾಬೆಲಿನ ಅರಸನಾದ ನೆಬೂಕದ್ನೆಚ್ಚರನ ಕೈ
ಯಿಂದ ಐಗುಪ್ತದ ಅಸಂಖ್ಯಾತಪ್ರಜೆಯನ್ನು ಕೊನೆ
ಗಾಣಿಸುವೆನು. ಆ ದೇಶವನ್ನು ನಾಶಪಡಿಸಲಿಕ್ಕೆ ಅವ 11

ನನ್ನು ಅತಿಭಯಂಕರ ಜನಾಂಗದವರಾದ ಅವನ ಸೈನಿ
ಕರೊಡನೆ ಬರಮಾಡುವೆನು; ಅವರು ಐಗುಪ್ತದ
ಮೇಲೆ ಕತ್ತಿಹಿರಿದು ದೇಶವನ್ನು ಹತರಾದವರಿಂದ
12 ತುಂಬಿಸುವರು. ನಾನು ನದೀಶಾಖೆಗಳನ್ನು ಬತ್ತಿಸಿ
ದೇಶವನ್ನು ದುಷ್ಟರ ಕೈಗೆ ಮಾರಿಬಿಡುವೆನು; ಹೌದು,
ದೇಶವನ್ನೂ ಅದರಲ್ಲಿನ ಸಮಸ್ತವನ್ನೂ ಅನ್ಯರ ಕೈ
ಯಿಂದ ಹಾಳುಮಾಡಿಸುವೆನು; ಯೆಹೋವನಾದ
ನಾನೇ ನುಡಿದಿದ್ದೇನೆ.
13 ಕರ್ತನಾದ ಯೆಹೋವನು ಇಂತೆನ್ನುತ್ತಾನೆ—
ನಾನು ನೋಫಿನ ಬೊಂಬೆಗಿಂಬೆಗಳನ್ನೆಲ್ಲ ಒಡೆದು
ಕೊನೆಗಾಣಿಸುವೆನು; ಐಗುಪ್ತದೇಶದಲ್ಲಿ ಇನ್ನು
ಯಾವ ಪ್ರಭುವೂ ಇರನು; ನಾನು ಆ ದೇಶಕ್ಕೆ
14 ಭಯವನ್ನೊಡ್ಡುವೆನು. ನಾನು ಪತ್ರೋಸನ್ನು
ಹಾಳುಮಾಡಿ ಚೋವನಿಗೆ ಬೆಂಕಿಯಿಕ್ಕಿ ನೋಪುರವನ್ನು
15 ದಂಡಿಸಿ ಐಗುಪ್ತಕ್ಕೆ ರಕ್ಷಣೆಯ ಕೋಟೆಯಾದ ಸೀನಿನ
ಮೇಲೆ ನನ್ನ ರೋಷಾಗ್ನಿಯನ್ನು ಸುರಿಸಿ, ನೋಪುರದ
16 ನಿವಾಸಿಗಳನ್ನೆಲ್ಲಾ ಕತ್ತರಿಸಿಬಿಡುವೆನು. ನಾನು ಐಗು
ಪ್ತಕ್ಕೆ ಕಿಚ್ಚನ್ನು ಹತ್ತಿಸಲು ಸೀನು ಪ್ರಾಣಸಂಕಟ
ಪಡುವದು; ನೋಪುರವು ಭಂಗಕ್ಕೆ ಈಡಾಗುವದು;
ನೋಫಿನ ಮೇಲೆ ವೈರಿಗಳು ಮಧ್ಯಾಹ್ನದಲ್ಲೇ ಬೀಳು
17 ವರು. ಓನಿನ ಮತ್ತು ಪೀಬೆಸೆತಿನ ಯುವಕರು
ಖಡ್ಗದಿಂದ ಹತರಾಗುವರು; ಅಲ್ಲಿನ ನಿವಾಸಿಗಳು ಸೆರೆ
18 ಯಾಗಿ ಹೋಗುವರು. ಐಗುಪ್ತವು ಹೊರಿಸಿದ ನೊಗ
ಗಳನ್ನು ನಾನು ತಹಪನೇಸಿನಲ್ಲಿ ಮುರಿಯುವಾಗ
ಅಲ್ಲಿ ಹೊತ್ತು ಮೂಡದು, ಅದರ ಶಕ್ತಿಮದವು ಅಡಗಿ
ಹೋಗುವದು, ಕಾರ್ಮುಗಿಲು ಅದನ್ನು ಆವರಿಸು
ವದು, ಅದರ ಯುವತಿಯರು ಸೆರೆಗೆ ಒಯ್ಯಲ್ಪಡು
19 ವರು. ಹೀಗೆ ನಾನು ಐಗುಪ್ತ್ಯರಿಗೆ ದಂಡನೆಗಳನ್ನು
ವಿಧಿಸಿ ತೀರಿಸುವಾಗ ನಾನೇ ಯೆಹೋವನು ಎಂದು
ಅವರಿಗೆ ಗೊತ್ತಾಗುವದು.
20 [ಯೆಹೋಯಾಖೀನನು ಸೆರೆಯಾದ] ಹನ್ನೊಂದ
ನೆಯ ವರುಷದ ಮೊದಲನೆಯ ತಿಂಗಳಿನ ಏಳನೆಯ
ದಿವಸದಲ್ಲಿ ಯೆಹೋವನು ಈ ವಾಕ್ಯವನ್ನು ನನಗೆ
21 ದಯಪಾಲಿಸಿದನು. ನರಪುತ್ರನೇ, ನಾನು ಐಗುಪ್ತದ
ಅರಸನಾದ ಫರೋಹನ ಕೈಯನ್ನು ಮುರಿದುಬಿಟ್ಟಿ
ದ್ದೇನೆ; ಇಗೋ, ಅದನ್ನು ಯಾರೂ ಕಟ್ಟಲಿಲ್ಲ,
ಔಷಧ ಹಚ್ಚಲಿಲ್ಲ, ಅದು ಖಡ್ಗಹಿಡಿಯುವಷ್ಟು ಬಲ
ಗೊಳ್ಳುವಂತೆ ಯಾರೂ ಬಟ್ಟೆ ಸುತ್ತಿ ಅದನ್ನು ಬಿಗಿಸ
22 ಲಿಲ್ಲ. ಹೀಗಿರಲು ಕರ್ತನಾದ ಯೆಹೋವನು ಇಂತೆ
ನ್ನುತ್ತಾನೆ—ನಾನು ಐಗುಪ್ತದ ಅರಸನಾದ ಫರೋಹ
ನಿಗೆ ವಿರುದ್ಧನಾಗಿ ಅವನ ಕೈಗಳನ್ನು, ಅಂದರೆ ಸರಿ
ಯಾಗಿರುವದನ್ನೂ, ಮುರಿದದನ್ನೂ ತೀರಾ ಮುರಿದು
ಬಿಟ್ಟು ಖಡ್ಗವು ಅವನ ಕೈಯೊಳಗಿಂದ ಬೀಳುವಂತೆ
23 ಮಾಡುವೆನು. ಐಗುಪ್ತ್ಯರನ್ನು ಜನಾಂಗಗಳಲ್ಲಿ
24 ಚದರಿಸಿ ದೇಶದೇಶಗಳಿಗೆ ತೂರಿಬಿಡುವೆನು. ನಾನು
ಬಾಬೆಲಿನ ಅರಸನ ಕೈಗಳನ್ನು ಬಲಪಡಿಸಿ ನನ್ನ ಖಡ್ಗ
ವನ್ನು ಅವನ ಕೈಗೆ ಕೊಟ್ಟು ಫರೋಹನ ಕೈಗಳನ್ನು
ಮುರಿಸಲು ಗಾಯದಿಂದ ಪ್ರಾಣಸಂಕಟಪಡುವವನಂತೆ

ಫರೋಹನು ಆ ಅರಸನ ಮುಂದೆ ನರಳಾಡುವನ
ನಾನು ಬಾಬೆಲಿನ ಅರಸನ ಕೈಗಳನ್ನು ಬಲಪಡಿಸ
ವೆನು; ಫರೋಹನ ಕೈಗಳಾದರೋ ಜೋಲುಬೀ
ವವು; ನಾನು ನನ್ನ ಖಡ್ಗವನ್ನು ಬಾಬೆಲಿನ ಅರಸನಿ
ಕೊಡಲು ಅವನು ಅದನ್ನು ಐಗುಪ್ತದೇಶದ ಮೇ
ಎತ್ತುವನು. ಆಗ ನಾನೇ ಯೆಹೋವನು ಎಂ
ಎಲ್ಲರಿಗೆ ಗೊತ್ತಾಗುವದು. ನಾನು ಐಗುಪ್ತ್ಯರನ
ಜನಾಂಗಗಳಲ್ಲಿ ಚದರಿಸಿ ದೇಶದೇಶಗಳಿಗೆ ತೂರಿಬಿ
ವಾಗ ನಾನೇ ಯೆಹೋವನು ಎಂದು ಅವರಿಗೆ ತಿಳಿ
ಬರುವದು.

ಐಗುಪ್ತದೊಡೆಯನೆಂಬ ದೊಡ್ಡ ಮರದ ಧ್ವಂಸವು.

[ಯೆಹೋಯಾಖೀನನು ಸೆರೆಯಾದ] ಹನ್ನೊಂ
ದನೆಯ ವರುಷದ ಮೂರನೆಯ ತಿಂಗಳಿನ ಮೊದಲ
ನೆಯ ದಿವಸದಲ್ಲಿ ಯೆಹೋವನು ಈ ವಾಕ್ಯವನ
ನನಗೆ ದಯಪಾಲಿಸಿದನು—ನರಪುತ್ರನೇ, ನೀನು ಐಗ
ಪ್ತದ ಅರಸನಾದ ಫರೋಹನಿಗೂ ಅವನ ಅಸಂಖ್ಯಾ
ವಾದ ಪ್ರಜೆಗೂ ಹೀಗೆ ನುಡಿ—ದೊಡ್ಡಸ್ತಿಕೆಯ
ನಿನಗೆ ಸರಿಸಮಾನರು ಯಾರು? ಆಹಾ, ತಿಲಕವೋ
ದೇವದಾರುವೋ ಒಂದು ವೃಕ್ಷವು ಲೆಬನೋನಿ
ಲ್ಲಿತ್ತು; ಅದರ ರೆಂಬೆಗಳು ಅಂದ, ಅದರ ನೆರಳು ದಟ್ಟ
ಅದರ ಎತ್ತರವು ಬಹಳ, ಅದರ ತುದಿಯು ಮೇ
ಚುಂಬಿತ. ಅದನ್ನು ಜಲಪ್ರವಾಹಗಳು ಬೆಳೆಯಿಸಿದವ
1)ಮಹಾನದಿಯು ವೃದ್ಧಿಗೊಳಿಸಿತು, ನದೀಶಾಖೆಗಳ
ಅಲ್ಲಿನ ಉದ್ಯಾನವನ್ನು ಸುತ್ತಿಕೊಂಡಿದ್ದವು, ಭೂಮಿ
ಯ ಎಲ್ಲಾ ಮರಗಳಿಗೂ ನದಿಯು ತನ್ನ ಕಾಲುವೆ
ಳನ್ನು ಕೊಟ್ಟಿತ್ತು. ಹೀಗಿರಲು ಆ ವೃಕ್ಷವು ಅಡವಿಯ
ಎಲ್ಲಾ ಮರಗಳಿಗಿಂತಲೂ ಅತ್ಯುನ್ನತವಾಗಿತ್ತು; ಅದ
ಕೊಂಬೆಗಳು ನಿಬಿಡವಾಗಿದ್ದವು; ಅಲ್ಲಿ ನೀರಾವರಿಯಿದ್ದ
ಕಾರಣ ಅದರ ರೆಂಬೆಗಳು ಉದ್ದವಾಗಿ ಚಾಚಿಕೊಂ
ದ್ದವು. ಎಲ್ಲಾ ಆಕಾಶಪಕ್ಷಿಗಳು ಅದರ ರೆಂಬೆಗಳಲ್ಲಿ
ಗೂಡುಮಾಡಿಕೊಂಡಿದ್ದವು; ಸಮಸ್ತಭೂಜಂತುಗಳ
ಅದರ ಕೊಂಬೆಗಳ ಕೆಳಗೆ ಇದ್ದುಕೊಂಡು ಮರಿಗಳನ್ನು
ಈಯುತ್ತಿದ್ದವು; ಮಹಾಜನಾಂಗಗಳೆಲ್ಲಾ ಅದರ ನೆ
ಳನ್ನು ಆಶ್ರಯಿಸಿದ್ದವು. ಅದರ ಬೇರಿಗೆ ಜಲಾಶ
ಯಿದ್ದದರಿಂದ ಆ ಮರವು ಎತ್ತರದಿಂದಲೂ ಕೊಂಬ
ಗಳ ನೀಳದಿಂದಲೂ ಕಂಗೊಳಿಸುತ್ತಿತ್ತು. ದೇವರ
ಉದ್ಯಾನವನದಲ್ಲಿನ ದೇವದಾರುಗಳು ಅದನ್ನು ಮುಚ್ಚ
ಲಾರದೆಹೋದವು; ತುರಾಯಿ ಮರಗಳು ಅದರ ರೆಂಬ
ಗಳಷ್ಟು ಉದ್ದವಾಗಿರಲಿಲ್ಲ; 2)ಅತ್ತಿ ಮರಗಳು ಅದರ
ಕೊಂಬೆಗಳಷ್ಟು ದಪ್ಪವಾಗಿರಲಿಲ್ಲ; ದೇವರ ವನದ
ಲ್ಲಿನ ಯಾವ ಮರವೂ ಅದರಷ್ಟು ರಮಣೀಯವಾಗಿ
ಲಿಲ್ಲ. ನಾನು ಅದನ್ನು ಬಹು ಶಾಖೋಪಶಾಖೆಗ
ಳಿಂದ ಅಂದಗೊಳಿಸಿದೆನು; ದೇವರ ಉದ್ಯಾನವಾದ
ಏದೆನಿನ ಸಕಲವೃಕ್ಷಗಳೂ ಅದಕ್ಕೆ ಅಸೂಯೆಪಡುತ್ತಿ
ದ್ದವು.
ಹೀಗಿರಲು ಕರ್ತನಾದ ಯೆಹೋವನು ಇಂತೆನ್ನು

1) ಮೂಲ: ಜಲಾಶಯವು. 2) ಮೂಲ: ಅರ್ಮೋನ್.

ತ್ತಾನೆ—1)ಆ ವೃಕ್ಷವು ಬಹಳ ಎತ್ತರವಾಗಿ ಬೆಳೆದು
ತನ್ನ ತುದಿಯನ್ನು ಮೋಡಕ್ಕೆ ತಗಲಿಸಿ ತನ್ನ ನೀಳದ
11 ವಿಷಯವಾಗಿ ಉಬ್ಬಿಕೊಂಡದರಿಂದ ನಾನು ಅದನ್ನು
ಜನಾಂಗಗಳಲ್ಲಿ ಮಹಾಬಲಿಷ್ಠನಾದವನ ಕೈಗೆ ಕೊಟ್ಟು
ಬಿಟ್ಟಿದ್ದೇನೆ. ಅವನು ಅದರ ಕೆಟ್ಟತನಕ್ಕೆ ತಕ್ಕಂತೆ
ಅದನ್ನು ದಂಡಿಸೇ ದಂಡಿಸುವನು; ನಾನು ಅದನ್ನು
12 ತಳ್ಳಿಹಾಕಿದೆನು. ಅತಿಭಯಂಕರ ಜನಾಂಗದವರಾದ
ಮ್ಲೇಚ್ಛರು ಅದನ್ನು ಕಡಿದುಹಾಕಿ ಹೋಗಿಬಿಟ್ಟಿದ್ದಾರೆ;
ಅದರ ರೆಂಬೆಗಳು ಗುಡ್ಡಗಳಲ್ಲಿಯೂ ಎಲ್ಲಾ ಹಳ್ಳ
ಕೊಳ್ಳಗಳಲ್ಲಿಯೂ ಬಿದ್ದಿವೆ; ಅದರ ಕೊಂಬೆಗಳು
ದೇಶದ ಎಲ್ಲಾ ತೊರೆಗಳ ಹತ್ತಿರ ಮುರಿದುಹಾಕಲ್ಪ
ಟ್ಟಿವೆ; ಲೋಕದ ಸಮಸ್ತಜನಾಂಗಗಳು ಅದರ ನೆರಳಿ
13 ನಿಂದ ತೊಲಗಿ ಅದನ್ನು ಬಿಟ್ಟುಹೋಗಿವೆ. ಬಿದ್ದ
ಬುಡದ ಮೇಲೆ ಎಲ್ಲಾ ಆಕಾಶಪಕ್ಷಿಗಳು ಎರಗುವವು;
ಅದರ ರೆಂಬೆಗಳನ್ನು ಸಮಸ್ತ ಭೂಜಂತುಗಳು ತುಳಿ
14 ದಾಡುವವು. ನೀರಾವರಿಯ ಯಾವ ಮರಗಳೂ
ತಮ್ಮ ನೀಳವನ್ನು ಹೆಚ್ಚಿಸಿಕೊಂಡು ತಮ್ಮ ತುದಿಯನ್ನು
ಮೋಡಗಳಿಗೆ ತಗಲಿಸದಿರಲೆಂದೂ ನೀರನ್ನು ಹೀರು
ತ್ತಲೇ ಇರುವ ದೊಡ್ಡದೊಡ್ಡ ಮರಗಳು ಎತ್ತರವಾಗಿ
ನಿಗುರಿಕೊಳ್ಳದಿರಲೆಂದೂ ಹೀಗಾಯಿತು; ಅವೆಲ್ಲಾ
ಮರಣದ ಪಾಲಾಗುವವು, ಅಧೋಲೋಕವೇ ಅವುಗಳ
ಗತಿ; ಪಾತಾಳಕ್ಕೆ ಇಳಿದುಹೋದವರ ಬಳಿಗೆ ನರ
ಜನ್ಮದವರೊಂದಿಗೆ ಒಂದೇ ಗುಂಪಾಗಿ ಸೇರುವವು.
15 ಕರ್ತನಾದ ಯೆಹೋವನು ಇಂತೆನ್ನುತ್ತಾನೆ—ಆ
ವೃಕ್ಷವು ಪಾತಾಳಕ್ಕೆ ಇಳಿದುಹೋದ ದಿನದಲ್ಲಿ ನಾನು
ದುಃಖದ ಚಿಹ್ನೆಗಳನ್ನು ಏರ್ಪಡಿಸಿದೆನು; ಅದರ
ವಿಯೋಗಕ್ಕಾಗಿ ನಾನು ಮಹಾನದಿಯನ್ನು ಮರೆ
ಮಾಡಿ ನದಿಯ ಶಾಖೆಗಳನ್ನು ತಡೆದುಬಿಟ್ಟೆನು, ಜಲ
ಪ್ರವಾಹವು ನಿಂತುಹೋಯಿತು; ಅದಕ್ಕಾಗಿ ಲೆಬ
ನೋನು ಗೋಳಿಡುವಂತೆ ಮಾಡಿದೆನು, ಭೂಮಿಯ
ಸಕಲ ವೃಕ್ಷಗಳು ಆ ದುಃಖಕ್ಕೆ ಮೂರ್ಛೆಹೋದವು.
16 ನಾನು ಅದನ್ನು ಪ್ರೇತಗಳ ಜೊತೆಗೆ ಸೇರಿಸಬೇಕೆಂದು
ಪಾತಾಳಕ್ಕೆ ತಳ್ಳಿಬಿಟ್ಟಾಗ ಅದು ಬಿದ್ದ ಶಬ್ದಕ್ಕೆ ಸಕಲ
ಜನಾಂಗಗಳು ನಡುಗಿದವು; ಮತ್ತು [ಪೂರ್ವಕಾಲ
ದಲ್ಲಿ] ಅಧೋಲೋಕದ ಪಾಲಾದ ಏದೆನಿನ ಎಲ್ಲಾ
ಮರಗಳು, ಲೆಬನೋನಿನ ಉತ್ತಮೋತ್ತಮ ವೃಕ್ಷಗಳು,
ಅಂತು ನೀರಾವರಿಯ ಸಕಲ ವನಸ್ಪತಿಗಳೂ ಅಲ್ಲಿ ಸಂತೈ
17 ಸಿಕೊಂಡವು. ಇದಲ್ಲದೆ ಅದಕ್ಕೆ ತೋಳಬಲವಾಗಿ
ಜನಾಂಗಗಳ ಮಧ್ಯದಲ್ಲಿ ಅದರ ನೆರಳನ್ನು ಆಶ್ರಯಿಸಿ
ದವರು ಅದರೊಂದಿಗೆ ಪಾತಾಳಕ್ಕೆ ಇಳಿದು ಖಡ್ಗಹತರ
ಜೊತೆಗೆ ಸೇರಿದರು.
18 ಇಂಥಾ ವೈಭವದಿಂದಲೂ ಮಹಿಮೆಯಿಂದಲೂ
ಕೂಡಿದ ನೀನು ಏದೆನಿನ ವೃಕ್ಷಗಳಲ್ಲಿ ಯಾವದಕ್ಕಿಂತ
ಕಡಿಮೆ? ಆದರೂ ನೀನು ಏದೆನಿನ ವೃಕ್ಷಗಳೊಂದಿಗೆ
ಅಧೋಲೋಕಕ್ಕೆ ತಳ್ಳಲ್ಪಟ್ಟು ಸುನ್ನತಿಹೀನರ ನಡುವೆ
ಖಡ್ಗಹತರ ಸಂಗಡ ಒರಗಿಹೋಗುವಿ. ಫರೋಹನೂ
ಅವನ ಎಲ್ಲಾ ಪ್ರಜೆಗಳೂ ಇದೇ ಗತಿಯನ್ನು ಹೊಂದು
ವರು ಎಂಬುದು ಕರ್ತನಾದ ಯೆಹೋವನ ನುಡಿ.

ಐಗುಪ್ತದ ರಾಜಪ್ರಜೆಗಳ ನಾಶನವು.

32 [ಯೆಹೋಯಾಖೀನನು ಸೆರೆಯಾದ] ಹನ್ನೆ
ರಡನೆಯ ವರುಷದ ಹನ್ನೆರಡನೆಯ ತಿಂಗಳಿನ ಮೊದ
ಲನೆಯ ದಿನದಲ್ಲಿ ಯೆಹೋವನು ಈ ವಾಕ್ಯವನ್ನು
ನನಗೆ ದಯಪಾಲಿಸಿದನು—ನರಪುತ್ರನೇ, ನೀನು ಐಗು
ಪ್ತದ ಅರಸನಾದ ಫರೋಹನ ವಿಷಯವಾಗಿ ಶೋಕ 2
ಗೀತವನ್ನೆತ್ತಿ ಅವನಿಗೆ ಹೀಗೆ ನುಡಿ—ನೀನು ಜನಾಂಗಗ
ಳಲ್ಲಿ ಮೃಗರಾಜನೆನಿಸಿಕೊಂಡಿದ್ದಿ; ಇಗೋ, 2)ಮಹಾ
ನದಿಯಲ್ಲಿನ ಪೇರ್ಮೊಸಳೆಯಾಗಿಬಿಟ್ಟೆ; ನೀನಿದ್ದ
ನದಿಗಳನ್ನು ಭೇದಿಸಿಕೊಂಡು ಬಂದು ನೀರನ್ನು ನಿನ್ನ
ಕಾಲುಗಳಿಂದ ಕಲಕಿ ಜನಾಂಗಗಳ ಹೊಳೆಗಳನ್ನೂ
ತುಳಿದು ಬದಿಮಾಡಿದಿ. ಕರ್ತನಾದ ಯೆಹೋವನು 3
ಇಂತೆನ್ನುತ್ತಾನೆ—ಗುಂಪಾಗಿ ಕೂಡಿದ ಬಹುಜನಾಂಗ
ಗಳವರ ಕೈಯಿಂದ ನಾನು ನನ್ನ ಬಲೆಯನ್ನು ನಿನ್ನ
ಮೇಲೆ ಬೀಸುವೆನು; ಅವರು ನಿನ್ನನ್ನು ಆ ಬಲೆಯಿಂದ
ಮೇಲಕ್ಕೆ ಎಳೆಯುವರು. ನಾನು ನಿನ್ನನ್ನು ನೆಲದ 4
ಮೇಲೆ ಹಾಕಿಬಿಡುವೆನು; ನಿನ್ನನ್ನು ಬೈಲಿನಲ್ಲಿ ಎಸೆದು
ಆಕಾಶಪಕ್ಷಿಗಳೆಲ್ಲಾ ನಿನ್ನ ಮೇಲೆ ಎರಗುವಂತೆ ಮಾಡಿ
ಸಮಸ್ತಭೂಜಂತುಗಳನ್ನು ನಿನ್ನಿಂದ ತೃಪ್ತಿಗೊಳಿಸು
ವೆನು. ನಿನ್ನ ಮಾಂಸವನ್ನು ಗುಡ್ಡಗಳ ಮೇಲೆ ಚೆಲ್ಲಿ 5
ತಗ್ಗುಗಳನ್ನು ನಿನ್ನ ದಪ್ಪವಾದ ಹೆಣದಿಂದ ತುಂಬಿಸಿ
ನಿನ್ನ ರಕ್ತಪ್ರವಾಹದಿಂದ ದೇಶವನ್ನು ಬೆಟ್ಟಗಳ ತನಕ 6
ತೋಯಿಸುವೆನು; ಹಳ್ಳಗಳು ನಿನ್ನಿಂದ ತುಂಬು
ವವು.
[ಫರೋಹನೇ,] ನಾನು ನಿನ್ನ ಬೆಳಕನ್ನು ನಂದಿಸು 7
ವಾಗ ಆಕಾಶಕ್ಕೆ ಮುಸುಕುಹಾಕಿ ಅಲ್ಲಿನ ನಕ್ಷತ್ರ
ಗಳನ್ನು ಮಂಕುಮಾಡಿ ಸೂರ್ಯನನ್ನು ಮೋಡದಿಂದ
ಮುಚ್ಚಿಬಿಡುವೆನು, ಚಂದ್ರನೂ ಪ್ರಕಾಶಿಸನು. ನಿನ್ನ 8
ಮೇಲೆ ಆಕಾಶದಲ್ಲಿ ಮಿನುಗುವ ಸಕಲಜ್ಯೋತಿಗ
ಳನ್ನೂ ನಾನು ಮಸಕುಮಾಡಿ ನಿನ್ನ ದೇಶದಲ್ಲಿ
ಕತ್ತಲನ್ನೊಡ್ಡುವೆನು; ಇದು ಕರ್ತನಾದ ಯೆಹೋವನ
ನುಡಿ. ನಾನು ನಿನ್ನ ನಾಶನದ ಸುದ್ದಿಯನ್ನು ಜನಾಂಗ 9
ಗಳಲ್ಲಿ ನಿನಗೆ ತಿಳಿಯದ ದೇಶಗಳಿಗೂ ಮುಟ್ಟಿಸುವಾಗ
ಆ ಬಹುಜನಾಂಗಗಳ ಮನಸ್ಸು ಕಳವಳಪಡುವದು.
ಹೌದು, ಬಹುಜನಾಂಗಗಳು ನಿನ್ನ ಗತಿಗೆ ಬೆಚ್ಚಿಬೆರ 10
ಗಾಗುವಂತೆ ಮಾಡುವೆನು; ನಾನು ನನ್ನ ಖಡ್ಗವನ್ನು
ಅವುಗಳ ಅರಸರ ಕಣ್ಣೆದುರಿಗೆ ಬೀಸುವಾಗ ಅವರು
ನಿನ್ನ ದುರ್ಗತಿಯನ್ನು ನೆನಸಿ ಭಯಭ್ರಾಂತರಾಗುವರು;
ನಿನ್ನ ಪತನದಿನದಲ್ಲಿ ಪ್ರತಿಯೊಬ್ಬನು ತನ್ನತನ್ನ ಪ್ರಾಣಾ
ಪಾಯಕ್ಕೆ ಕ್ಷಣಕ್ಷಣವೂ ನಡುಗುವನು. ಕರ್ತನಾದ 11
ಯೆಹೋವನು ಇಂತೆನ್ನುತ್ತಾನೆ—ಬಾಬೆಲಿನ ಅರಸನ
ಖಡ್ಗವು ನಿನ್ನ ಮೇಲೆ ಬೀಳುವದು. ನಾನು ನಿನ್ನ 12
ಬಹುಪ್ರಜೆಯನ್ನು ಅತಿಭಯಂಕರ ಜನಾಂಗದವರಾದ
ಬಲಿಷ್ಠರ ಕತ್ತಿಗಳಿಂದ ಸಂಹರಿಸುವೆನು; ಐಗುಪ್ತವು
ಹೆಚ್ಚಳಪಡುವ ವಸ್ತುಗಳನ್ನು ಅವರು ಸೂರೆಮಾಡು
ವರು; ಅದರ ಜನ ಯಾವತ್ತೂ ನಿರ್ನಾಮವಾಗುವದು.

1) ಮೂಲ: ನೀನು.

2) ಮೂಲ: ಸಮುದ್ರಗಳಲ್ಲಿನ.

13 ಬಹುಪ್ರವಾಹಗಳ ತೀರದಲ್ಲಿನ ಪಶುಗಳನ್ನೆಲ್ಲಾ ನಾಶ
ಪಡಿಸುವೆನು; ಆ ನೀರನ್ನು ಕಲಕಲಿಕ್ಕೆ ಇನ್ನು ಯಾವ
ಮನುಷ್ಯನೂ ಅಲ್ಲಿ ಹೆಜ್ಜೆಯಿಡನು, ಯಾವ ಪಶುವೂ
14 ಗೊರಸಿಕ್ಕದು. ಆಗ ಆ ನೀರು ತಿಳಿಯಾಗುವಂತೆ
ಯೂ ಆ ಪ್ರವಾಹಗಳು ಎಣ್ಣೆಯ ಹಾಗೆ ಹರಿಯು
ವಂತೆಯೂ ಮಾಡುವೆನು; ಇದು ಕರ್ತನಾದ ಯೆಹೋ
15 ವನ ನುಡಿ. ಐಗುಪ್ತದಲ್ಲಿ ತುಂಬಿದ್ದ ಸೊತ್ತನ್ನೆಲ್ಲಾ
ನಾನು ನೀಗಿಸಿ ಆ ದೇಶವನ್ನು ಹಾಳುಪಾಳುಮಾಡಿ
ಅಲ್ಲಿನ ಸಕಲನಿವಾಸಿಗಳನ್ನು ಸಂಹರಿಸಿದಾಗ ನಾನೇ
16 ಯೆಹೋವನು ಎಂದು ಗೊತ್ತಾಗುವದು. ಪ್ರಲಾಪಿಸು
ವವರು ಈ ಶೋಕಗೀತವನ್ನೆತ್ತಲಿ; ಜನಾಂಗಗಳ ಯುವ
ತಿಯರು ಹೀಗೆ ಗೋಳಿಡಲಿ; ಐಗುಪ್ತಕ್ಕಾಗಿಯೂ
ಅಲ್ಲಿನ ಬಹುಪ್ರಜೆಗಾಗಿಯೂ ದುಃಖಿಸಿ ಈ ಗೀತ
ವನ್ನು ಹಾಡಲಿ; ಇದು ಕರ್ತನಾದ ಯೆಹೋವನ ನುಡಿ.

ಐಗುಪ್ತದ ರಾಜಪ್ರಜೆಗಳ ಪಾತಾಳಪ್ರವೇಶ.

17 [ಯೆಹೋಯಾಖೀನನು ಸೆರೆಯಾದ] ಹನ್ನೆರಡ
ನೆಯ ವರುಷದ [ಹನ್ನೆರಡನೆಯ] ತಿಂಗಳಿನ ಹದಿನೈದ
ನೆಯ ದಿನದಲ್ಲಿ ಯೆಹೋವನು ಈ ವಾಕ್ಯವನ್ನು ನನಗೆ
18 ದಯಪಾಲಿಸಿದನು—ನರಪುತ್ರನೇ, ನೀನು ಐಗುಪ್ತದ
ಅಸಂಖ್ಯಾತ ಪ್ರಜೆಗಾಗಿ ಗೋಳಾಡಿ ಅವರನ್ನೂ ಘನ
ವಾದ 1)ಜನಾಂಗಗಳವರನ್ನೂ ಅಧೋಲೋಕಕ್ಕೆ, ಪ್ರೇ
19 ತಗಳ ಜೊತೆಗೆ ತಳ್ಳಿಬಿಡು. [ಐಗುಪ್ತವೇ,] ನೀನು
ಸೌಂದರ್ಯದಲ್ಲಿ ಯಾರಿಗೆ ಕಡಿಮೆ? ಇಳಿದುಹೋಗಿ
20 ಸುನ್ನತಿಹೀನರ ನಡುವೆ ಒರಗು. ಆಹಾ, ಖಡ್ಗಹತರ
ಮಧ್ಯದಲ್ಲಿ ಬೀಳುವರು; ಕತ್ತಿಯು ಎತ್ತಿಯಿದೆ;
[ಅಧೋಲೋಕದವರೇ,] ಐಗುಪ್ತವನ್ನೂ ಅದರ ಅನಂತ
21 ಪ್ರಜೆಗಳನ್ನೂ ಎಳೆದುಕೊಳ್ಳಿರಿ. ಪಾತಾಳದೊಳಗಿನ
ಬಲಿಷ್ಠಶೂರರು ಅದನ್ನೂ ಅದರ ಸಹಾಯಕರನ್ನೂ
ನೋಡಿ ಓಹೋ, ಇವರು ಸುನ್ನತಿಹೀನರು, ಖಡ್ಗ
ಹತರು, ಇಳಿದು ಬಂದು ಒರಗಿಬಿದ್ದರು ಅಂದುಕೊಳ್ಳು
22 ವರು. ಅಶ್ಶೂರವೂ ಅದರ ಜನ ಯಾವತ್ತೂ ಅಲ್ಲಿ
ರುತ್ತವೆ; ಆ ಜನರ ಗೋರಿಗಳು ಅದನ್ನು ಸುತ್ತಿ
ಕೊಂಡಿವೆ; ಅವರೆಲ್ಲರೂ ಸಂಹೃತರು, ಖಡ್ಗಹತರು;
23 ಅವರ ಗೋರಿಗಳು ಅಧೋಲೋಕದ ಅಗಾಧಸ್ಥಳ
ಗಳಲ್ಲಿ ಹರಡಿಕೊಂಡಿವೆ; ಅಶ್ಶೂರದವರು ಅಶ್ಶೂರದ
ಗೋರಿಯ ಸುತ್ತಲಿದ್ದಾರೆ; ಜೀವಲೋಕದಲ್ಲಿ ಭೀಕರ
ರಾಗಿದ್ದ ಇವರೆಲ್ಲರೂ ಸಂಹೃತರು, ಖಡ್ಗಹತರು.
24 ಏಲಾಮು ಅಲ್ಲಿದೆ; ಅದರ ಪ್ರಜೆಯೆಲ್ಲಾ ಅದರ
ಗೋರಿಯನ್ನು ಸುತ್ತಿಕೊಂಡಿದೆ; ಅವರೆಲ್ಲರೂ ಸಂಹೃ
ತರು, ಖಡ್ಗಹತರು; ಜೀವಲೋಕದಲ್ಲಿ ಭೀಕರರಾಗಿದ್ದ
ಆ ಸುನ್ನತಿಹೀನರು ಅಧೋಲೋಕಕ್ಕೆ ಇಳಿದು ಪ್ರೇತ
25 ಗಳ ನಡುವೆ ಅವಮಾನಪಟ್ಟಿದ್ದಾರೆ. ಏಲಾಮು ಮಲ
ಗುವದಕ್ಕೆ ಹತರಾದ ಅದರ ಪ್ರಜೆಗಳೆಲ್ಲರ ನಡುವೆ
ಸ್ಥಳವನ್ನು ಏರ್ಪಡಿಸಿದ್ದಾರೆ, ಅವರ ಗೋರಿಗಳು ಅದರ
ಸುತ್ತುಮುತ್ತಲಿವೆ; ಅವರೆಲ್ಲರೂ ಸುನ್ನತಿಹೀನರು,
ಖಡ್ಗಹತರು; ಅವರು ಜೀವಲೋಕದಲ್ಲಿ ಭೀಕರರಾ
ಗಿದ್ದು ಪ್ರೇತಗಳ ಜೊತೆಗೆ ಸೇರಿ ಅವಮಾನಪಟ್ಟ
ರಾಗಿದ್ದಾರೆ; ಸಂಹೃತರ ಮಧ್ಯದಲ್ಲೇ ಏಲಾಮಿಗೆ ಸ್ಥ
ವು ಏರ್ಪಾಡಾಗಿದೆ. ಮೆಷೆಕೂ ತೂಬಲೂ ಅವು
ಎಲ್ಲಾ ಪ್ರಜೆಯೂ ಅಲ್ಲಿರುತ್ತವೆ; ಆ ಪ್ರಜೆಗಳ ಗೊ
ಗಳು ಅವುಗಳನ್ನು ಸುತ್ತಿಕೊಂಡಿವೆ; ಅವರೆಲ್ಲ
ಸುನ್ನತಿಹೀನರು, ಖಡ್ಗಹತರು; ಜೀವಲೋಕದ
ಭೀಕರರಾಗಿದ್ದರಲ್ಲಾ; [ಪೂರ್ವದಲ್ಲಿ] ಯಾವ ಸುನ್ನ
ಹೀನ ಶೂರರು ಜೀವಲೋಕದೊಳಗೆ ಬಲಿಷ್ಠರಾ
ಭೀಕರರಾಗಿದ್ದು ಹತರಾಗಿ ಆಯುಧಸಹಿತ ಪಾತಾಳ
ಇಳಿದು ಕತ್ತಿಗಳನ್ನು ತಲೆದಿಂಬುಮಾಡಿಕೊಂಡು ತ
ಅಸ್ಥಿಗಳ ಮೇಲೆ ತಮ್ಮ ದುಷ್ಕೃತ್ಯಗಳ ಭಾರವ
ಹೊತ್ತುಕೊಂಡಿದ್ದಾರೋ ಅವರ ನಡುವೆ ಮೆಷೆ
ವರೂ ತೂಬಲಿನವರೂ ಒರಗದೆ ಹೋಗುವರ
[ಫರೋಹನೇ,] ನೀನು ಸುನ್ನತಿಹೀನರ ಮಧ್ಯದ
ನಾಶವಾಗಿ ಖಡ್ಗಹತರ ನಡುವೆ ಒರಗಿಹೋಗು
ಎದೋಮೂ ಅದರ ಅರಸರೂ ಎಲ್ಲಾ ಸರದಾರ
ಅಲ್ಲಿದ್ದಾರೆ; ಅವರು ಬಲಾತ್ಕಾರಿಗಳಾಗಿದ್ದು ಖ
ಹತರ ಸಂಗಡ ಬಿದ್ದಿರುತ್ತಾರೆ; ಸುನ್ನತಿಹೀನರೊ
ಪ್ರೇತಗಳ ನಡುವೆ ಒರಗಿಹೋಗಿದ್ದಾರೆ. ಉತ್ತ
ದೇಶದ ಸಕಲಪ್ರಭುಗಳೂ ಸಮಸ್ತ ಚೀದೋನ್ಯ
ಸಂಹೃತರೊಂದಿಗೆ ಇಳಿದು ಅಲ್ಲಿದ್ದಾರೆ; ಭಯಂ
ವಾಗಿದ್ದ ತಮ್ಮ ಶೌರ್ಯಕ್ಕೆ ನಾಚಿಕೆಗೊಂಡು ಖ
ಹತರ ಮಧ್ಯೆ ಸುನ್ನತಿಹೀನರಾಗಿ ಬಿದ್ದು ಪ್ರೇತ
ನಡುವೆ ಅವಮಾನಪಟ್ಟಿದ್ದಾರೆ. ಫರೋಹನು ಇವರ
ರನ್ನೂ ನೋಡಿ ತನ್ನ ಸಮಸ್ತ ಪ್ರಜೆಯ ವಿಷಯದ
ಸಮಾಧಾನಹೊಂದುವನು; ಹೌದು, ಫರೋಹನ
ಖಡ್ಗಹತರಾದ ಅವನ ಸಕಲಸೈನಿಕರೂ ಸಮಾಧಾ
ಹೊಂದುವರು. ಇದು ಕರ್ತನಾದ ಯೆಹೋವನ ನು
ಇಗೋ, ಜೀವಲೋಕದಲ್ಲಿ ನಾನು ನನ್ನ ಭಯವನ
ಹುಟ್ಟಿಸಿದ್ದೇನೆ; ಫರೋಹನೂ ಅವನ ಸಮಸ್ತ ಪ್ರ
ಯೂ ಸುನ್ನತಿಹೀನರ ಮಧ್ಯೆ, ಖಡ್ಗಹತರ ನಡು
ಒರಗಿಹೋಗುವರು ಎಂಬದು ಕರ್ತನಾದ ಯೆಹೋ
ವನ ನುಡಿ.

ಇಸ್ರಾಯೇಲಿನ ಜೀರ್ಣೋದ್ಧಾರದ ದೈವೋಕ್ತಿಗಳು
33—39.

ಕಾವಲುಗಾರನ ಮೇಲೆ ಬಿದ್ದ ಭಾರವು.

ಯೆಹೋವನು ಈ ವಾಕ್ಯವನ್ನು ನನಗೆ ದಯ
ಪಾಲಿಸಿದನು—ನರಪುತ್ರನೇ, ನಿನ್ನ ಜನರನ್ನು 2
ಸಂಬೋಧಿಸಿ ಅವರಿಗೆ ಹೀಗೆ ನುಡಿ—ನಾನು ದೇಶ
ಮೇಲೆ ಖಡ್ಗವನ್ನು ಬೀಳಮಾಡುವಾಗ ಆ ದೇಶ
ವರು ತಮ್ಮಲ್ಲಿ ಆರಿಸಿ ನೇಮಿಸಿಕೊಂಡ ಕಾವಲು
ರನು ದೇಶದ ಮೇಲೆ ಬೀಳುವ ಖಡ್ಗವನ್ನು ನೋಡಿ
ಕೂಡಲೆ ಕೊಂಬನ್ನೂದಿ ಸ್ವಜನರನ್ನು ಎಚ್ಚರಿಸಿದ
ಕೊಂಬಿನ ಕೂಗನ್ನು ಕೇಳಿದ ಯಾವನೇ ಆಗಲಿ ಎ
ಗೊಳ್ಳದೆ ಬೀಳುವ ಖಡ್ಗಕ್ಕೆ ಸಿಕ್ಕಿ ನಾಶವಾದರೆ ತ
ಮರಣಕ್ಕೆ ತಾನೇ ಕಾರಣ. ಅವನು ಕೊಂಬಿನ

1) ಮೂಲ: ಜನಾಂಗಗಳ ಕುಮಾರ್ತೆಯರನ್ನು.

ಗನ್ನು ಕೇಳಿಯೂ ಎಚ್ಚರಗೊಳ್ಳಲಿಲ್ಲವಷ್ಟೆ; ತನ್ನ ಮರ
ಣಕ್ಕೆ ತಾನೇ ಕಾರಣನು; ಎಚ್ಚರಗೊಂಡಿದ್ದರೆ ತನ್ನ
6 ಪ್ರಾಣವನ್ನು ಉಳಿಸಿಕೊಳ್ಳುತ್ತಿದ್ದನು. ಆದರೆ ಕಾವ
ಲುಗಾರನು ಬೀಳುವ ಖಡ್ಗವನ್ನು ನೋಡಿಯೂ
ಕೊಂಬನ್ನೂದದೆ ಸ್ವಜನರನ್ನು ಎಚ್ಚರಿಸದೆ ಇರುವಲ್ಲಿ
ಖಡ್ಗವು ಬಿದ್ದು ಆ ಜನರೊಳಗೆ ಯಾವನನ್ನೇ ಆಗಲಿ
ನಾಶಮಾಡಿದರೆ ತನ್ನ ಅಧರ್ಮದಲ್ಲೇ ನಾಶಗೊಂಡ
ಆ ಮನುಷ್ಯನ ಮರಣಕ್ಕೆ ಹೊಣೆಯಾದ ಕಾವಲು
7 ಗಾರನಿಗೆ ಮುಯ್ಯಿತೀರಿಸುವೆನು. ನರಪುತ್ರನೇ, ನಾನು
ನಿನ್ನನ್ನು ಇಸ್ರಾಯೇಲ್ ವಂಶದವರಿಗೆ ಕಾವಲುಗಾರ
ನನ್ನಾಗಿ ನೇಮಿಸಿದ್ದೇನೆ; ನೀನು ನನ್ನ ಬಾಯಿಂದ
ಹೊರಡುವ ಮಾತನ್ನು ಕೇಳಿ ನನ್ನ ದೂತನಾಗಿ ಅವ
8 ರನ್ನು ಎಚ್ಚರಪಡಿಸು. ನಾನು ದುಷ್ಟನಿಗೆ—ದುಷ್ಟನೇ,
ಸತ್ತೇಸಾಯುವಿ ಎಂದು ನುಡಿಯುವಾಗ ನೀನು ಆ
ದುಷ್ಟನನ್ನು ತನ್ನ ದುರ್ಮಾರ್ಗದಿಂದ ತಪ್ಪಿಸಲು ಅವ
ನನ್ನು ಎಚ್ಚರಪಡಿಸದೆ ಹೋದರೆ ಅವನು ತನ್ನ ಅಪ
ರಾಧದಿಂದಲೇ ಸಾಯಬೇಕಾಗುವದು; ಅವನ ಮರ
ಣಕ್ಕೆ ಹೊಣೆಯಾದ ನಿನಗೆ ನಾನು ಮುಯ್ಯಿತೀರಿಸು
9 ವೆನು. ಆದರೆ ನೀನು ದುಷ್ಟನನ್ನು ದುರ್ಮಾರ್ಗ
ದಿಂದ ತಪ್ಪಿಸಲು ಅವನನ್ನು ಎಚ್ಚರಿಸಿದರೂ ಅವನು
ಅದನ್ನು ಬಿಡದೆಹೋದರೆ ತನ್ನ ಅಪರಾಧದಲ್ಲೇ ಸಾಯು
ವನು; ನೀನೋ ನಿನ್ನ ಪ್ರಾಣವನ್ನು ಉಳಿಸಿಕೊಂಡಿರುವಿ.

ದೇವರು ತನ್ನ ಜನರನ್ನು ಸನ್ಮಾರ್ಗಹಿಡಿಯುವಂತೆ ಪ್ರೇರಿಸಿದ್ದು.

10 ನರಪುತ್ರನೇ, ಇಸ್ರಾಯೇಲ್ ವಂಶದವರಿಗೆ ಹೀಗೆ
ನುಡಿ—ಅಯ್ಯೋ, ನಮ್ಮ ದ್ರೋಹಗಳ ಮತ್ತು ಪಾಪ
ಗಳ ಭಾರವು ನಮ್ಮ ಮೇಲೆ ಬಿದ್ದಿದೆ; ಅವುಗಳಿಂದ
ಕ್ಷೀಣವಾಗಿ ಹೋಗುತ್ತಿದ್ದೇವೆ; ನಾವು ಹೇಗೆ ಉಳಿ
11 ದೇವು ಅಂದುಕೊಳ್ಳುತ್ತೀರಲ್ಲಾ. ನನ್ನ ಜೀವದಾಣೆ,
ದುಷ್ಟನ ಸಾವಿನಲ್ಲಿ ನನಗೆ ಲೇಶವಾದರೂ ಸಂತೋಷ
ವಿಲ್ಲ; ಅವನು ತನ್ನ ದುರ್ಮಾರ್ಗವನ್ನು ಬಿಟ್ಟು ಬಾಳು
ವದೇ ನನಗೆ ಸಂತೋಷ. ಇಸ್ರಾಯೇಲ್ ವಂಶದ
ವರೇ, ನಿಮ್ಮ ದುರ್ಮಾರ್ಗಗಳನ್ನು ಬಿಡಿರಿ, ಬಿಟ್ಟು
ಬಿಡಿರಿ; ನೀವು ಸಾಯಲೇಕೆ? ಇದು ಕರ್ತನಾದ
12 ಯೆಹೋವನ ನುಡಿ. ನರಪುತ್ರನೇ, ನನ್ನ ಜನರಿಗೆ
ಹೀಗೆ ಹೇಳು—ಶಿಷ್ಟನು ದ್ರೋಹಮಾಡಿದ್ದಲ್ಲಿ ಅವನ
ಪುಣ್ಯವು ಅವನನ್ನು ಉದ್ಧರಿಸದು; ದುಷ್ಟನು ತನ್ನ
ದುಷ್ಟತನವನ್ನು ಬಿಟ್ಟಲ್ಲಿ ಅವನ ಪಾಪವು ಅವನನ್ನು
ಬೀಳಿಸದು; ಶಿಷ್ಟನು ಪಾಪಮಾಡಿದಲ್ಲಿ ಅವನ
13 ಪುಣ್ಯವು ಅವನನ್ನು ಉಳಿಸಲಾರದು. ನಾನು ಶಿಷ್ಟ
ನಿಗೆ—ನೀನು ಬಾಳೇ ಬಾಳುವಿ ಎಂದು ಹೇಳಲು
ಅವನು ತನ್ನ ಪುಣ್ಯದ ಮೇಲೆ ಭರವಸವಿಟ್ಟು ಪಾಪ
ಮಾಡಿದರೆ ಅವನು ಮಾಡಿದ ಯಾವ ಸುಕೃತ್ಯವೂ
ಅವನ ಲೆಕ್ಕಕ್ಕೆ ಸೇರಿಸಲ್ಪಡದು; ಅವನು ಮಾಡುವ
14 ಪಾಪದಿಂದಲೇ ಅವನು ಸಾಯುವನು. ನಾನು ದುಷ್ಟ
ನಿಗೆ—ನೀನು ಸತ್ತೇ ಸಾಯುವಿ ಎಂದು ಹೇಳಲು
ಅವನು ತನ್ನ ಪಾಪವನ್ನು ಬಿಟ್ಟು ನೀತಿನ್ಯಾಯಗ
15 ಳನ್ನು ನಡಿಸುವ ಪಕ್ಷದಲ್ಲಿ, ಅಂದರೆ ಆ ದುಷ್ಟನು
ಒತ್ತೆಯನ್ನು ಬಿಗಿಹಿಡಿಯದೆ ದೋಚಿಕೊಂಡದನ್ನು
ಹಿಂದಕ್ಕೆ ಕೊಟ್ಟು ಜೀವಾಧಾರವಾದ ವಿಧಿಗಳನ್ನು
ಅನುಸರಿಸಿ ಸಕಲದುಷ್ಕರ್ಮಗಳಿಗೂ ದೂರನಾಗಿರುವ
ಪಕ್ಷದಲ್ಲಿ ಸಾಯನು, ಬಾಳೇ ಬಾಳುವನು. ಅವನು 16
ಮಾಡಿದ ಯಾವ ಪಾಪವೂ ಅವನ ಲೆಕ್ಕಕ್ಕೆ ಸೇರಿಸಲ್ಪ
ಡದು; ನೀತಿನ್ಯಾಯಗಳನ್ನು ನಡಿಸುತ್ತಿದ್ದಾನಲ್ಲಾ;
ಬಾಳೇ ಬಾಳುವನು. ಆದರೆ ನಿನ್ನ ಜನರು ಕರ್ತನ 17
ಕ್ರಮವು ಸಮವಲ್ಲವೆಂದು ಹೇಳುತ್ತಿದ್ದಾರೆ, ಅವರ
ಕ್ರಮವೇ ಸಮವಲ್ಲವಷ್ಟೆ. ಶಿಷ್ಟನು ತನ್ನ ಶಿಷ್ಟ 18
ತನವನ್ನು ಬಿಟ್ಟು ಅಧರ್ಮಮಾಡಿದರೆ ಆ ಅಧರ್ಮದಿಂ
ದಲೇ ಸಾಯುವನು. ದುಷ್ಟನು ತನ್ನ ದುಷ್ಟತನ 19
ವನ್ನು ಬಿಟ್ಟು ನೀತಿನ್ಯಾಯಗಳನ್ನು ನಡಿಸಿದರೆ ಅವುಗ
ಳಿಂದ ಉಳಿಯುವನು. ಆದರೆ ನೀವು ಯೆಹೋವನ 20
ಕ್ರಮವು ಸಮವಲ್ಲವೆಂದು ಹೇಳುತ್ತಿದ್ದೀರಿ; ಇಸ್ರಾ
ಯೇಲ್ ವಂಶದವರೇ, ನಿಮ್ಮ ನಿಮ್ಮ ನಡತೆಗೆ ತಕ್ಕ
ಹಾಗೆ ನಾನು ನಿಮಗೆ ತೀರ್ಪುಮಾಡುವೆನು.

ಯೆಹೂದ ದೇಶದಲ್ಲಿ ಉಳಿದವರ ದುರಾಚಾರವೂ ದುರ್ಗತಿಯೂ.

ನಾವು ಸೆರೆಯಾಗಿ ಹನ್ನೆರಡನೆಯ ವರುಷದ ಹತ್ತ 21
ನೆಯ ತಿಂಗಳಿನ ಐದನೆಯ ದಿನದಲ್ಲಿ ಯೆರೂಸಲೇಮಿ
ನಿಂದ ಪಲಾಯನಮಾಡಿದವನೊಬ್ಬನು ನನ್ನ ಬಳಿಗೆ
ಬಂದು—ಪಟ್ಟಣವು ಶತ್ರುವಶವಾಯಿತು ಎಂದು
ಹೇಳಿದನು. ಅವನು ಬರುವದಕ್ಕೆ ಹಿಂದಿನ ಸಾಯಂ 22
ಕಾಲ ನಾನು ಯೆಹೋವನ ಹಸ್ತಸ್ಪರ್ಶದಿಂದ ಪರವಶ
ನಾಗಿರಲು ಯೆಹೋವನು ಆ ಪಲಾಯಿತನು ಬೆಳಗ್ಗೆ
ಬರುವನೆಂದು ನನ್ನ ಬಾಯನ್ನು ಬಿಚ್ಚಿದ್ದನು; ಹೌದು,
ನನ್ನ ಬಾಯಿ ಬಿಚ್ಚಿತು, ನನ್ನ ಮೂಕತನವು ಹೋ
ಯಿತು. ಆಗ ಯೆಹೋವನು ಈ ವಾಕ್ಯವನ್ನು ನನಗೆ 23
ದಯಪಾಲಿಸಿದನು—ನರಪುತ್ರನೇ, ಇಸ್ರಾಯೇಲ್ 24
ಸೀಮೆಯ ಹಾಳುಪ್ರದೇಶಗಳಲ್ಲಿ ವಾಸಿಸುವವರು—
ಅಬ್ರಹಾಮನು ಒಂಟಿಗನಾಗಿದ್ದರೂ ಈ ದೇಶವು
ಅವನಿಗೆ ಸ್ವಾಸ್ತ್ಯವಾಗಿ ಸಿಕ್ಕಿತಲ್ಲಾ; ಅದು ಬಹು
ಜನರಾದ ನಮಗೆ ಸ್ವಾಸ್ತ್ಯವಾಗಿ ಸಿಕ್ಕಿದ್ದು ಏನು
ದೊಡ್ಡದು ಎಂದು ಅಂದುಕೊಳ್ಳುತ್ತಿದ್ದಾರೆ. ಆದದ 25
ರಿಂದ ನೀನು ಅವರಿಗೆ ಹೀಗೆ ನುಡಿ—ಕರ್ತನಾದ
ಯೆಹೋವನು ಇಂತೆನ್ನುತ್ತಾನೆ—ರಕ್ತದಿಂದ ಕೂಡಿದ
ಮಾಂಸವನ್ನು ತಿನ್ನುತ್ತೀರಿ, ಬೊಂಬೆಗಳ ಕಡೆಗೆ ಕಣ್ಣೆ
ತ್ತುತ್ತೀರಿ; ರಕ್ತವನ್ನು ಸುರಿಸುತ್ತೀರಿ; ನಿಮ್ಮಂಥವರು
ದೇಶವನ್ನು ಅನುಭವಿಸಬಹುದೇ? ನೀವು ಕತ್ತಿಯಲ್ಲೇ 26
ನಿರತರಾಗಿದ್ದೀರಿ. ದುರಾಚಾರನಡಿಸುತ್ತೀರಿ, ನಿಮ್ಮಲ್ಲಿ
ಪ್ರತಿಯೊಬ್ಬನು ತನ್ನ ತನ್ನ ನೆರೆಯವನ ಹೆಂಡತಿಯನ್ನು
ಕೆಡಿಸುತ್ತಾನೆ; ನಿಮ್ಮಂಥವರು ದೇಶವನ್ನು ಅನುಭವಿಸ
ಬಹುದೋ? ಮತ್ತು ಅವರಿಗೆ ಹೀಗೆ ನುಡಿ—ಕರ್ತ 27
ನಾದ ಯೆಹೋವನು ಇಂತೆನ್ನುತ್ತಾನೆ—ನನ್ನ ಜೀವ
ದಾಣೆ, ಹಾಳುಪ್ರದೇಶಗಳಲ್ಲಿರುವವರನ್ನು ಖಡ್ಗವು
ಹತಿಸುವದು; ಬೈಲಿನಲ್ಲಿರುವವರನ್ನು ನಾನು ಮೃಗ
ಗಳಿಗೆ ತುತ್ತುಮಾಡುವೆನು; ಗುಹೆದುರ್ಗಗಳಲ್ಲಿರುವ
ವರನ್ನು ವ್ಯಾಧಿಯು ಸಾಯಿಸುವದು. ನಾನು ದೇಶ 28
ವನ್ನು ಹಾಳುಪಾಳುಮಾಡುವೆನು, ಅದರ ಶಕ್ತಿಯ
ಮದವು ಇಳಿದುಹೋಗುವದು; ಇಸ್ರಾಯೇಲಿನ ಮಲೆ

ನಾಡು ಬೀಡುಬೀಳುವದು, ಯಾರೂ ಅಲ್ಲಿ ಹಾದು
29 ಹೋಗರು. ಅವರು ನಡಿಸಿದ ಬಹುದುರಾಚಾರಗಳ
ನಿಮಿತ್ತ ನಾನು ದೇಶವನ್ನು ಹಾಳುಪಾಳುಮಾಡಿದಾಗ
ನಾನೇ ಯೆಹೋವನು ಎಂದು ಅವರಿಗೆ ದೃಢವಾಗು
ವದು.

ಅಶ್ರದ್ಧೆಯ ಶ್ರವಣ.

30 ನರಪುತ್ರನೇ, ನಿನ್ನ ಜನರು ಗೋಡೆಗಳ ನೆರಳಿನಲ್ಲಿಯೂ
ಮನೆಯ ಬಾಗಿಲುಗಳಲ್ಲಿಯೂ ನಿನ್ನ ಪ್ರಸ್ತಾಪವನ್ನೆತ್ತಿ
ಪರಸ್ಪರವಾಗಿ ಒಬ್ಬರಿಗೊಬ್ಬರು—ಯೆಹೋವನ ಬಾ
ಯಿಂದ ಹೊರಟ ಮಾತೇನು ಕೇಳೋಣ ಬನ್ನಿರಿ ಎಂದು
31 ಹೇಳಿಕೊಳ್ಳುತ್ತಿದ್ದಾರೆ. [ಪ್ರಶ್ನೆಕೇಳುವದಕ್ಕೆ] ಬರುವ
ಜನರಂತೆ ಅವರು ನಿನ್ನ ಬಳಿಗೆ ಬಂದು ನಿನ್ನ ಭಕ್ತ
ರಾಗಿ ನಿನ್ನ ಮುಂದೆ ಕೂತುಕೊಂಡು ನಿನ್ನ ಮಾತು
ಗಳನ್ನು ಕೇಳುತ್ತಾರೆ, ಆದರೆ ಕೈಕೊಳ್ಳುವದಿಲ್ಲ;
ಬಾಯಿಂದ ಬಹುಪ್ರೀತಿಯನ್ನು ತೋರಿಸುತ್ತಾರೆ.
ಅವರ ಮನಸ್ಸೇನೋ ತಾವು ದೋಚಿಕೊಂಡದರ ಮೇಲೆ
32 ಹೋಗುತ್ತದೆ. ಇಗೋ, ನಿನ್ನ ಮಾತು ಅವರ ಎಣಿಕೆ
ಯಲ್ಲಿ ಒಬ್ಬ ಸಂಗೀತಗಾರನು ವಾದ್ಯವನ್ನು ಜಾಣತನ
ದಿಂದ ಬಾರಿಸಿ ಮಧುರಸ್ವರದಿಂದ ಹಾಡುವ ಪ್ರೇಮ
ಗೀತಕ್ಕೆ ಸಮಾನವಾಗಿದೆ; ನಿನ್ನ ಮಾತುಗಳನ್ನು
33 ಕೇಳುತ್ತಾರೆ, ಆದರೆ ಕೈಕೊಳ್ಳುವದಿಲ್ಲ. ನೀನು
ಮುಂತಿಳಿಸಿದ್ದು ಸಂಭವಿಸುವಾಗ (ಆಹಾ, ಸಂಭವಿಸಿತು)
ತಮ್ಮ ಮಧ್ಯದಲ್ಲಿದ್ದವನು ಪ್ರವಾದಿಯೇ ಎಂದು
ಅವರಿಗೆ ನಿಶ್ಚಿತವಾಗುವದು.

ಇಸ್ರಾಯೇಲೆಂಬ ಮಂದೆಯ ಕುರುಬರ ಸ್ವಾರ್ಥತೆ.

34 ಯೆಹೋವನು ಈ ಮಾತನ್ನು ನನಗೆ ದಯಪಾಲಿ
2 ಸಿದನು—ನರಪುತ್ರನೇ, ಇಸ್ರಾಯೇಲೆಂಬ ಮಂದೆ
ಯ ಕುರುಬರಿಗೆ ಈ ದೈವೋಕ್ತಿಯನ್ನು ನುಡಿ, ನುಡಿ
ದೇ ನುಡಿ—ಕರ್ತನಾದ ಯೆಹೋವನು ಇಂತೆನ್ನು
ತ್ತಾನೆ—ಅಯ್ಯೋ, ಸ್ವಂತ ಹೊಟ್ಟೆಯನ್ನು ಹೊರೆದು
ಕೊಳ್ಳುವ ಇಸ್ರಾಯೇಲಿನ ಕುರುಬರ ಗತಿಯನ್ನು
ಏನು ಹೇಳಲಿ! ಕುರಿಗಳ ಹೊಟ್ಟೆಯನ್ನು ನೋಡುವದು
3 ಕುರುಬರ ಧರ್ಮವಲ್ಲವೆ. ನೀವು ಕೊಬ್ಬಿನ ಮಾಂಸ
ವನ್ನು ತಿನ್ನುತ್ತೀರಿ, ಉಣ್ಣೆಯ ಹೊದಿಕೆಯನ್ನು ಹೊದಿ
ಯುತ್ತೀರಿ, ಕೊಬ್ಬಿದ ಕುರಿಗಳನ್ನು ಕಡಿಯುತ್ತೀರಿ;
4 ಆದರೆ ಕುರಿಗಳನ್ನು ಮೇಯಿಸುವದಿಲ್ಲ. ಹಾ, ನೀವು
ದುರ್ಬಲವಾದವುಗಳನ್ನು ಬಲಗೊಳಿಸಲಿಲ್ಲ, ರೋಗದ
ವುಗಳನ್ನು ಸ್ವಸ್ಥಮಾಡಲಿಲ್ಲ, ಮುರಿದ ಅಂಗಗಳನ್ನು
ಕಟ್ಟಲಿಲ್ಲ, ಓಡಿಸಿದವುಗಳನ್ನು ಮಂದೆಗೆ ಸೇರಿಸ
ಲಿಲ್ಲ, ತಪ್ಪಿಸಿಕೊಂಡವುಗಳನ್ನು ಹುಡುಕಲಿಲ್ಲ; ಅವು
ಗಳನ್ನು ಹಿಂಸೆಬಲಾತ್ಕಾರಗಳಿಂದ ಆಳುತ್ತಾ ಬಂದಿ
5 ದ್ದೀರಿ. ಕುರುಬರು ಇರಲಿಲ್ಲವಾದದರಿಂದ ಅವು
ಚದರಿಹೋದವು; ದಿಕ್ಕಾಪಾಲಾಗಿ ಕಾಡಿನ ಸಕಲಮೃಗ
6 ಗಳಿಗೆ ತುತ್ತಾದವು; ನನ್ನ ಕುರಿಗಳು ಮಲೆನಾಡಿನ
ಲ್ಲೆಲ್ಲಾ ಎತ್ತರವಾದ ಪ್ರತಿಯೊಂದು ಬೆಟ್ಟದ ಮೇಲೆ
ಅಲೆದಾಡಿದವು; ಹೌದು, ನನ್ನ ಕುರಿಗಳು ಭೂಮಂಡಲ

ದಲ್ಲೆಲ್ಲಾ ಚದರಿಹೋದವು; ಯಾರೂ ಅವುಗಳ ಹಿಂ
ಹೋಗಿ ಹುಡುಕಲಿಲ್ಲ. ಕುರುಬರೇ, ಯೆಹೋವ
ಮಾತನ್ನು ಕೇಳಿರಿ; ಕರ್ತನಾದ ಯೆಹೋವನು ಇಂ
ನ್ನುತ್ತಾನೆ—ಅಯ್ಯೋ, ನನ್ನ ಕುರಿಗಳು ಕೊಳ್ಳೆಯ
ದವು, ಕಾಡಿನ ಸಕಲಮೃಗಗಳಿಗೆ ತುತ್ತಾದವು, ಕುರ
ಬರು ಇರಲಿಲ್ಲವಲ್ಲಾ, ನನ್ನ ಕುರುಬರು ನನ್ನ ಕು
ಗಳನ್ನು ಹುಡುಕಲಿಲ್ಲವಲ್ಲಾ, ಅವರು ಸ್ವಂತ ಹೊ
ಯನ್ನು ನೋಡಿಕೊಂಡರೇ ಹೊರತು ನನ್ನ ಕುರಿಗ
ಹೊಟ್ಟೆಯನ್ನು ನೋಡಲೇ ಇಲ್ಲ. ಆದಕಾರಣ, ಕುರ
ಬರೇ, ಯೆಹೋವನ ವಾಕ್ಯವನ್ನು ಕೇಳಿರಿ—ಕರ್ತನಾ
ಯೆಹೋವನು ಇಂತೆನ್ನುತ್ತಾನೆ—ಆಹಾ, ನನ್ನ ಜೀ
ದಾಣೆ, ನಾನು ಕುರುಬರಿಗೆ ವಿರುದ್ಧನಾಗಿದ್ದೇನ
ಅವರು ನನ್ನ ಕುರಿಗಳ ಲೆಕ್ಕವನ್ನು ನನಗೆ ಒಪ್ಪಿ
ಬೇಕು; ನನ್ನ ಕುರಿಮೇಯಿಸುವ ಕೆಲಸದಿಂದ ಅ
ರನ್ನು ತೆಗೆದುಬಿಡುವೆನು; ಆ ಕುರುಬರು ಇನ್ನು ಸ್ವಂ
ಹೊಟ್ಟೆಯನ್ನು ತುಂಬಿಸಿಕೊಳ್ಳರು; ನನ್ನ ಕುರಿಗಳ
ಆಹಾರವಾಗಿ ಅವರ ಬಾಯಿಗೆ ಬೀಳದಂತೆ ಅವುಗಳನ
ರಕ್ಷಿಸುವೆನು.

ಯೆಹೋವನೇ ಒಳ್ಳೆಯ ಕುರುಬನು.

ಕರ್ತನಾದ ಯೆಹೋವನು ಇಂತೆನ್ನುತ್ತಾನೆ—ಆಹಾ
ನಾನೇ ನನ್ನ ಕುರಿಗಳನ್ನು ಹಿಂಬಾಲಿಸಿ ಹುಡುಕ
ವೆನು. ಮಂದೆಯ ಕುರುಬನು ಸುತ್ತುಮುತ್ತಲ
ಚದರಿಹೋದ ತನ್ನ ಕುರಿಗಳನ್ನು ಹುಡುಕುವ ಹಾ
ನಾನು ನನ್ನ ಕುರಿಗಳನ್ನು ಹುಡುಕುವೆನು; ಕಾಮು
ಗಿಲಿನ ದುರ್ದಿನದಲ್ಲಿ ಚೆಲ್ಲಾಪಿಲ್ಲಿಯಾದ ಎಲ್ಲಾ ಸ್ಥ
ಗಳಿಂದ ಅವುಗಳನ್ನು ಬಿಡಿಸಿ ಜನಾಂಗಗಳ ವಶದಿಂ
ತಪ್ಪಿಸಿ ದೇಶದೇಶಗಳಿಂದ ಒಟ್ಟುಗೂಡಿಸಿ ಸ್ವದೇಶಕ
ಬರಮಾಡಿ ಇಸ್ರಾಯೇಲಿನ ಬೆಟ್ಟಗಳಲ್ಲಿಯೂ ತೊ
ಗಳ ಬಳಿಯಲ್ಲಿಯೂ ಸೀಮೆಯ ಎಲ್ಲಾ ಹಕ್ಕೆಗ
ಲ್ಲಿಯೂ ಮೇಯಿಸುವೆನು. ಅವುಗಳಿಗೆ ಒಳ್ಳೆಯ
ಮೇವನ್ನು ಮೇಯಿಸುವೆನು; ಅವುಗಳ ಹುಲ್ಗಾವಲ
ಇಸ್ರಾಯೇಲಿನ ಎತ್ತರವಾದ ಬೆಟ್ಟಗಳಲ್ಲಿರುವದು
ಅಲ್ಲಿ ಒಳ್ಳೆಯ ತೆವರಿನಲ್ಲಿ ಮಲಗುವವು; ಇಸ್ರಾಯೆ
ಲಿನ ಬೆಟ್ಟಗಳಲ್ಲಿ ಹಸಿಹುಲ್ಲನ್ನು ಮೇಯುವವ
ನಾನೇ ನನ್ನ ಕುರಿಗಳನ್ನು ಮೇಯಿಸಿ ಹಾಯಾ
ಮಲಗುವಂತೆ ಮಾಡುವೆನು; ಇದು ಕರ್ತನಾದ ಯೆ
ಹೋವನ ನುಡಿ. ತಪ್ಪಿಸಿಕೊಂಡದನ್ನು ಹುಡುಕುವೆನು
ಓಡಿಸಿದ್ದನ್ನು ಮಂದೆಗೆ ಸೇರಿಸುವೆನು, ದುರ್ಬ
ವಾದದ್ದನ್ನು ಬಲಗೊಳಿಸುವೆನು, ಮುರಿದ ಅಂಗವನ
ಕಟ್ಟುವೆನು; ಬಲಿತ ಕೊಬ್ಬಿದ ಕುರಿಗಳನ್ನೋ ಧ್ವಂ
ಮಾಡುವೆನು; ಅವುಗಳಿಗೆ ನ್ಯಾಯದಂಡನೆ ಎಂ
ಮೇವನ್ನು ತಿನ್ನಿಸುವೆನು.

ದುರ್ಬಲರಿಗೆ ಪ್ರಬಲರ ಹಿಂಸೆ.

ಕರ್ತನಾದ ಯೆಹೋವನು ಇಂತೆನ್ನುತ್ತಾನೆ—ನನ
ಹಿಂಡೇ, ಇಗೋ, ನಾನು ನಿಮ್ಮಲ್ಲಿನ ಕುರಿಮೇಕೆಗಳಿಗ
ಟಗರುಹೋತಗಳಿಗೂ ಮಧ್ಯವರ್ತಿಯಾಗಿ ನ್ಯಾಯ

18 ತೀರಿಸುವೆನು. [ಟಗರುಹೋತಗಳೇ,] ಒಳ್ಳೆಯ ಮೇ
ವನ್ನು ನೀವು ಮೇದುಬಿಟ್ಟು ಮಿಕ್ಕ ಮೇವನ್ನು ತುಳಿದು
ಕಾಲಕಸಮಾಡಿದ್ದು ಅಲ್ಪಕಾರ್ಯವೋ? ತಿಳಿ ನೀರ
ನ್ನು ಕುಡಿದುಬಿಟ್ಟು ಮಿಕ್ಕದ್ದನ್ನು ಕಾಲಿನಿಂದ ಕಲಕಿ
19 ಬದಿಮಾಡಿದ್ದು ಸಣ್ಣ ಕೆಲಸವೋ? ನೀವು ತುಳಿದು
ಕಾಲಕಸಮಾಡಿದ್ದನ್ನು ನನ್ನ ಕುರಿಗಳು ಮೇಯ
ಬೇಕಾಯಿತು; ನೀವು ಕಾಲಿನಿಂದ ಕಲಕಿಬದಿಮಾಡಿ
ದ್ದನ್ನು ಅವು ಕುಡಿಯಬೇಕಾಯಿತು.
20 ಹೀಗಿರಲು ಕರ್ತನಾದ ಯೆಹೋವನು ಇಂತೆನ್ನು
ತ್ತಾನೆ—ಇಗೋ, ನಾನೇ ಕೊಬ್ಬಿದ ಟಗರುಹೋತಗ
ಳಿಗೂ ಬಡ ಕುರಿಮೇಕೆಗಳಿಗೂ ನ್ಯಾಯತೀರಿಸುವೆನು.
21 [ಟಗರುಹೋತಗಳೇ,] ನೀವು ಕುರಿಮೇಕೆಗಳನ್ನು ಪಕ್ಕ
ದಿಂದಲೂ ಹೆಗಲಿನಿಂದಲೂ ನೂಕುತ್ತಾ ದುರ್ಬಲವಾದ
ವುಗಳನ್ನು ಕೊಂಬುಗಳಿಂದ ಹಾಯುತ್ತಾ ನನ್ನ ಹಿಂಡ
22 ನ್ನು ಚದರಿಸಿಬಿಟ್ಟಿರಿ; ಆದಕಾರಣ ನನ್ನ ಹಿಂಡು ಇನ್ನೆಂ
ದಿಗೂ ಸೂರೆಯಾಗದಂತೆ ನಾನು ಅದನ್ನು ರಕ್ಷಿಸಿ
ಟಗರುಹೋತಗಳಿಗೂ ಕುರಿಮೇಕೆಗಳಿಗೂ ನ್ಯಾಯತೀರಿ
ಸುವೆನು.

ದೇವರ ಕೃಪಾಪೂರ್ಣಕವಾದ ಒಡಂಬಡಿಕೆ.

23 ನನ್ನ ಹಿಂಡನ್ನು ಕಾಯಲಿಕ್ಕೆ ಒಬ್ಬನೇ ಕುರುಬ
ನನ್ನು ಏರ್ಪಡಿಸುವೆನು; ನನ್ನ ಸೇವಕನಾದ ದಾವೀದ
ನೆಂಬ ಆ ಕುರುಬನು ಅದನ್ನು ಮೇಯಿಸುವನು;
ಹೌದು, ಅದರ ಕುರುಬನಾಗಿ ಅದನ್ನು ಮೇಯಿಸುತ್ತಾ
24 ಬರುವನು. ಯೆಹೋವನಾದ ನಾನು ನನ್ನ ಜನರ
ದೇವರಾಗಿರುವೆನು; ನನ್ನ ಸೇವಕನಾದ ದಾವೀದನು
ಅವರನ್ನಾಳುವ ಪ್ರಭುವಾಗಿರುವನು; ಯೆಹೋವನಾದ
25 ನಾನೇ ಇದನ್ನು ನುಡಿದಿದ್ದೇನೆ. ನಾನು ಅವರೊಂದಿಗೆ
ಸಮಾಧಾನದ ಒಡಂಬಡಿಕೆಯನ್ನು ಮಾಡಿಕೊಳ್ಳು
ವೆನು; ದುಷ್ಟಮೃಗಗಳು ದೇಶದಲ್ಲಿ ಇನ್ನಿರದಂತೆ
ಮಾಡುವೆನು; ನನ್ನ ಜನರು ಕಾಡಿನಲ್ಲಿ ನಿರ್ಭಯವಾಗಿ
ವಾಸಿಸುವರು, ಅರಣ್ಯದಲ್ಲಿ ಹಾಯಾಗಿ ನಿದ್ರಿಸುವರು.
26 ನಾನು ಅವರನ್ನೂ ನನ್ನ ಪರ್ವತದ ಸುತ್ತಣ ಪ್ರದೇಶಗ
ಳನ್ನೂ [1]ಆಶೀರ್ವದಿಸಿ ಸುಖಪಡಿಸುವೆನು; ಕಾಲಕ್ಕೆ
ಸರಿಯಾಗಿ ಮಳೆಯನ್ನು ಸುರಿಸುವೆನು; ಶುಭದಾ
27 ಯಕ ವೃಷ್ಟಿಯು ಆಗುವದು. ತೋಟದ ಮರಗಳು
ಹಣ್ಣುಬಿಡುವವು; ಹೊಲಗಳು ಒಳ್ಳೆಯ ಬೆಳೆಕೊಡು
ವವು; ಜನರು ಸ್ವದೇಶದಲ್ಲಿ ನೆಮ್ಮದಿಯಾಗಿರುವರು;
ಅವರ ಮೇಲೆ ಹೇರಿದ ನೊಗದ ಗೂಟಗಳನ್ನು ನಾನು
ಮುರಿದುಹಾಕಿ ಅವರನ್ನು ಅಡಿಯಾಳಾಗಿ ಮಾಡಿ
ಕೊಂಡವರ ಅಧೀನದಿಂದ ಬಿಡಿಸಿದಾಗ ನಾನೇ ಯೆಹೋ
28 ವನು ಎಂದು ಅವರಿಗೆ ದೃಢವಾಗುವದು. ಅಂದಿನಿಂದ
ಅವರನ್ನು ಅನ್ಯಜನರು ಸೂರೆಮಾಡರು, ಕಾಡು
ಮೃಗಗಳು ನುಂಗವು; ಅವರು ಯಾರಿಗೂ ಹೆದರದೆ
29 ನೆಮ್ಮದಿಯಾಗಿ ವಾಸಿಸುವರು. ನಾನು ಅವರಿಗಾಗಿ
ಪ್ರಸಿದ್ಧಫಲವೃಕ್ಷಗಳನ್ನು ಬೆಳೆಯಿಸುವೆನು, ಕ್ಷಾಮವು
ಅವರ ದೇಶವನ್ನು ಇನ್ನು ಹಾಳುಮಾಡದು, ಅವರು
ಅನ್ಯಜನರ ತಿರಸ್ಕಾರಕ್ಕೆ ಗುರಿಯಾಗರು. ಆಗ 30
ಅವರು ತಮ್ಮ ದೇವರಾದ ಯೆಹೋವನೆಂಬ ನಾನು
ತಮ್ಮೊಂದಿಗಿದ್ದೇನೆಂತಲೂ ಇಸ್ರಾಯೇಲ್ ವಂಶದವ
ರಾದ ತಾವು ನನ್ನ ಜನರಾಗಿದ್ದೇವೆಂತಲೂ ನಿಶ್ಚಯಿಸಿ
ಕೊಳ್ಳುವರು; ಇದು ಕರ್ತನಾದ ಯೆಹೋವನ ನುಡಿ.
ನೀವು ನನ್ನ ಕುರಿಗಳು, ನನ್ನ ಕಾವಲಿನ ಕುರಿಗಳು; 31
ನರಪ್ರಾಣಿಗಳಾದ ನಿಮಗೆ ನಾನು ದೇವರು ಎಂದು
ಕರ್ತನಾದ ಯೆಹೋವನು ಅನ್ನುತ್ತಾನೆ.

ಎದೋಮಿನ ವಿಷಯವಾದ ದೈವೋಕ್ತಿ.

35 ಯೆಹೋವನು ಈ ವಾಕ್ಯವನ್ನು ನನಗೆ ದಯಪಾ
ಲಿಸಿದನು—ನರಪುತ್ರನೇ, ನೀನು ಸೇಯೀರ್ 2
ಬೆಟ್ಟದ ಸೀಮೆಗೆ ಅಭಿಮುಖನಾಗಿ ಅದಕ್ಕೆ ಈ
ದೈವೋಕ್ತಿಯನ್ನು ನುಡಿ—ಕರ್ತನಾದ ಯೆಹೋವನು 3
ಇಂತೆನ್ನುತ್ತಾನೆ—ಸೇಯೀರ್‌ಬೆಟ್ಟವೇ, ಇಗೋ, ನಾನು
ನಿನಗೆ ವಿರುದ್ಧನಾಗಿದ್ದೇನೆ; ನಾನು ನಿನ್ನ ಸೀಮೆಯ
ಮೇಲೆ ಕೈಯೆತ್ತಿ ಅದನ್ನು ಹಾಳುಪಾಳುಮಾಡುವೆನು.
ನಾನು ನಿನ್ನ ಪಟ್ಟಣಗಳನ್ನು ನಾಶಪಡಿಸಲು ನೀನು 4
ಕಾಡಾಗುವಿ; ಆಗ ನಾನೇ ಯೆಹೋವನು ಎಂದು
ತಿಳಿದುಕೊಳ್ಳುವಿ. ನೀನು ಇಸ್ರಾಯೇಲ್ಯರ ಮೇಲೆ 5
ದೀರ್ಘದ್ವೇಷವಿಟ್ಟು ಅವರ ಅಪರಾಧದ ಕಡೆಗಾಲ
ದಲ್ಲಿ ಆಪತ್ತು ಸಂಭವಿಸಿದಾಗ ಅವರನ್ನು ಕತ್ತಿಯ
ಬಾಯಿಗೆ ಗುರಿಮಾಡಿದ್ದರಿಂದ ನನ್ನ ಜೀವದಾಣೆ, ನಾನು 6
ನಿನ್ನನ್ನು ರಕ್ತಮಯಮಾಡುವೆನು, ರಕ್ತದ ಕೋಡಿ
ಯು ನಿನ್ನನ್ನು ಹಿಂದಟ್ಟುವದು; ನೀನು ರಕ್ತ
ಸುರಿಸುವದಕ್ಕೆ ಹೇಸದೆ ಹೋದಕಾರಣ ರಕ್ತಪ್ರವಾ
ಹವೇ ನಿನ್ನ ಬೆನ್ನಹತ್ತುವದು; ಇದು ಕರ್ತನಾದ
ಯೆಹೋವನ ನುಡಿ. [2]ಸೇಯೀರ್ ಬೆಟ್ಟವೇ, ನಾನು 7
ನಿನ್ನ ಸೀಮೆಯನ್ನು ಹಾಳುಪಾಳುಮಾಡಿ ಅದರೊಳಗೆ
ಹೋಗುವವರನ್ನೂ ಬರುವವರನ್ನೂ ಕತ್ತರಿಸಿಬಿಟ್ಟು
ನಿನ್ನ ಪರ್ವತಗಳನ್ನು ನಿನ್ನವರ ಶವಗಳಿಂದ ತುಂಬಿ 8
ಸುವೆನು; ಖಡ್ಗಹತರು ನಿನ್ನ ಗುಡ್ಡತಗ್ಗುತೊರೆಗಳಲ್ಲಿ
ಬಿದ್ದುಹೋಗುವರು. ನಾನು ನಿನ್ನನ್ನು ನಿತ್ಯನಾಶನಕ್ಕೆ 9
ಈಡುಮಾಡುವೆನು; ನಿನ್ನ ಪಟ್ಟಣಗಳು ನಿರ್ಜನವಾಗು
ವವು; ಆಗ ನಾನೇ ಯೆಹೋವನು ಎಂದು ನಿನ್ನವರಿಗೆ
ನಿಶ್ಚಿತವಾಗುವದು. ನೀನು—ಇವೆರಡು ಜನಾಂಗ 10
ಗಳೂ ಇವೆರಡು ದೇಶಗಳೂ ನನ್ನ ವಶವಾಗುವವು,
ನಾವು ಅವುಗಳನ್ನು ಅನುಭವಿಸುವೆವು ಅಂದುಕೊಂಡು
ಅಲ್ಲಿನ ನನ್ನ ಸಾನ್ನಿಧ್ಯವನ್ನು ಅಲಕ್ಷ್ಯಮಾಡಿದ್ದರಿಂದ
ನನ್ನ ಜೀವದಾಣೆ, ನೀನು ನನ್ನ ಜನರನ್ನು ದ್ವೇಷಿಸಿ 11
ಅವರ ಮೇಲಿಟ್ಟ ಕೋಪಕ್ಕೂ ಮಾತ್ಸರ್ಯಕ್ಕೂ ನಾನು
ನಿನಗೆ ಪ್ರತಿಮಾಡುವೆನು; ನಿನ್ನನ್ನು ದಂಡಿಸಿದಾಗ
ನಾನು ಅವರಿಗೆ ಗೋಚರನಾಗುವೆನು, ಇದು ಕರ್ತ
ನಾದ ಯೆಹೋವನ ನುಡಿ. ಮತ್ತು ನೀನು 12
ಇಸ್ರಾಯೇಲಿನ ಪರ್ವತಗಳನ್ನು ನೋಡಿ—ಆಹಾ,

1) ಅಥವಾ: ಆಶೀರ್ವಾದನಿಧಿಯನ್ನಾಗಿ ಮಾಡುವೆನು; ಕಾಲಕ್ಕೆ ಸರಿಯಾಗಿ ಮಳೆಯನ್ನು ಸುರಿಸುವೆನು; ಕೃಪಾವೃಷ್ಟಿಯಾಗುವದು.
2) ಮೂಲ: ನಾನು ಸೇಯೀರ್ ಬೆಟ್ಟದ ಸೀಮೆಯನ್ನು . . . . . ಕತ್ತರಿಸಿಬಿಟ್ಟು ಅದರ ಪರ್ವತಗಳನ್ನು ಅದರ ಶವಗಳಿಂದ . . . . . .

ಹಾಳಾದವು, ನಮಗೆ ತುತ್ತಾಗಿವೆ ಎಂದು ಮಾಡಿದ
ದೂಷಣೆಗಳು ಯೆಹೋವನಾದ ನನ್ನ ಕಿವಿಗೆ ಬಿದ್ದಿವೆ
13 ಎಂಬದು ನಿನಗೆ ಗೊತ್ತಾಗುವದು. ನೀನ್ನವರು ದೊಡ್ಡ
ಬಾಯಿಮಾಡಿ ನನ್ನ ಮೇಲೆ ಆಡಿದ ಹೆಚ್ಚು ಹರಟೆಗ
14 ಳನ್ನು ಕೇಳಿದ್ದೇನೆ. ಕರ್ತನಾದ ಯೆಹೋವನು
ಇಂತೆನ್ನುತ್ತಾನೆ—ನಾನು ನಿನ್ನನ್ನು ಹಾಳುಮಾಡಿ
15 ಲೋಕವನ್ನೆಲ್ಲಾ ಸಂತೋಷಪಡಿಸುವೆನು. ಇಸ್ರಾ
ಯೇಲ್ಯರ ಸ್ವಾಸ್ತ್ಯದ ನಾಶನಕ್ಕೆ ನೀನು ಹೇಗೆ
ಸಂತೋಷಪಟ್ಟಿಯೋ ಹಾಗೆಯೇ ನಿನ್ನ ನಾಶನಕ್ಕೆ
ಲೋಕವೆಲ್ಲಾ ಸಂತೋಷಪಡುವಂತೆ ಮಾಡುವೆನು;
ಸೇಯಿರ್ ಬೆಟ್ಟವೇ, ನೀನು ಹಾಳಾಗುವಿ; ಹೌದು,
ಎದೋಮ್ ಸೀಮೆಯೆಲ್ಲಾ ತೀರಾ ಹಾಳಾಗುವದು;
ಆಗ ನಾನೇ ಯೆಹೋವನು ಎಂದು ವ್ಯಕ್ತವಾಗು
ವದು.

ಇಸ್ರಾಯೇಲ್ಯರ ಮುಂದಿನ ಸೌಭಾಗ್ಯವೂ ಮನಶ್ಶುದ್ಧಿಯೂ.

36 ನರಪುತ್ರನೇ, ನೀನು ಇಸ್ರಾಯೇಲಿನ ಪರ್ವತಗ
ಳಿಗೆ ಈ ದೈವೋಕ್ತಿಯನ್ನು ನುಡಿ—ಇಸ್ರಾಯೇ
ಲಿನ ಪರ್ವತಗಳೇ, ಯೆಹೋವನ ವಾಕ್ಯವನ್ನು ಕೇಳಿರಿ.
2 ಶತ್ರುವು ನಿಮ್ಮನ್ನು ನೋಡಿ ಆಹಾ, ಎನ್ನುತ್ತಾ ಈ
ಪುರಾತನದುರ್ಗಗಳು ನಮ್ಮ ವಶವಾಗಿವೆ ಎಂದು
ಹಿಗ್ಗಿಕೊಂಡದರಿಂದ ಈ ದೈವೋಕ್ತಿಯನ್ನು ನುಡಿಯ
ಬೇಕೆಂದು ಕರ್ತನಾದ ಯೆಹೋವನ ಅಪ್ಪಣೆಯಾ
3 ಯಿತು—ಕರ್ತನಾದ ಯೆಹೋವನು ಇಂತೆನ್ನುತ್ತಾನೆ—
ಅಯ್ಯೋ, ಎಲ್ಲಾ ಕಡೆಯೂ ತುಳಿಯಲ್ಪಟ್ಟು ಹಾಳಾದ
ನೀವು ಜನಾಂಗಗಳಲ್ಲಿ ಉಳಿದವರ ವಶವಾಗಿದ್ದೀರಲ್ಲಾ!
ಹರಟೆಗಾರರ ಬಾಯಿಗೆ ಬಿದ್ದು ಜನರ ದೂಷಣೆಗೆ
4 ಗುರಿಯಾಗಿದ್ದೀರಲ್ಲಾ! ಆದಕಾರಣ ಇಸ್ರಾಯೇಲಿನ
ಪರ್ವತಗಳೇ, ಕರ್ತನಾದ ಯೆಹೋವನ ವಾಕ್ಯವನ್ನು
ಕೇಳಿರಿ — ಬೆಟ್ಟಗುಡ್ಡತೊರೆತಗ್ಗುಗಳಿಗೂ ಕಾಡಾದ
ಹಾಳುಪ್ರದೇಶಗಳಿಗೂ ಸುತ್ತಣ ಜನಾಂಗಗಳಲ್ಲಿ ಉಳಿ
ದವರು ಕೊಳ್ಳೆಹೊಡೆದು ಅಣಕಿಸುವ ಹಾಳು ಪಟ್ಟಣಗ
ಳಿಗೂ ಯೆಹೋವಕರ್ತನು ಹೀಗೆ ನುಡಿಯುತ್ತಾನೆ—
5 ಆಹಾ, ನನ್ನ ದೇಶವನ್ನು ತಮ್ಮ ಸ್ವಾಸ್ತ್ಯಮಾಡಿ
ಕೊಂಡು ಪೂರ್ಣಹೃದಯದಿಂದ ಆನಂದಪಟ್ಟವರೂ
ಅದನ್ನು ಮನಃಪೂರ್ವಕವಾಗಿ ತಿರಸ್ಕರಿಸಿ ಸೂರೆಗೆ
ತಳ್ಳಿಬಿಟ್ಟವರೂ ಆದ ಎದೋಮಿನವರೆಲ್ಲರನ್ನೂ ಇತರ
ಜನಾಂಗಗಳಲ್ಲಿ ಉಳಿದವರನ್ನೂ ನಾನು ರೋಷದಿಂ
6 ದುರಿಯುತ್ತಾ ಶಪಿಸೇ ಶಪಿಸಿದ್ದೇನೆ; ಹೀಗಿರಲು ಇಸ್ರಾ
ಯೇಲ್ ದೇಶದ ವಿಷಯವಾದ ಈ ದೈವೋಕ್ತಿಯನ್ನು
ಅದರ ಬೆಟ್ಟಗುಡ್ಡತೊರೆತಗ್ಗುಗಳಿಗೆ ನುಡಿಯಬೇ
ಕೆಂದು ಅಪ್ಪಣೆಯಾಗಿದೆ—ಕರ್ತನಾದ ಯೆಹೋವನು
ಇಂತೆನ್ನುತ್ತಾನೆ—ಆಹಾ, ನಾನು ಕೋಪೋದ್ರೇಕದಿಂ
ದಲೂ ರೋಷಾವೇಶದಿಂದಲೂ ಮಾತಾಡಿದ್ದೇನೆ, ನೀವು
ಅನ್ಯಜನಾಂಗಗಳಿಂದ ಅವಮಾನವನ್ನು ಅನುಭವಿಸಿದ್ದೀ
7 ರಲ್ಲಾ! ಆದಕಾರಣ ಕರ್ತನಾದ ಯೆಹೋವನು ಇಂತೆ
ನ್ನುತ್ತಾನೆ—ನಿಮ್ಮ ಸುತ್ತಣ ಆ ಅನ್ಯಜನಾಂಗಗಳೇ
ತಮ್ಮ ಮೇಲೆ ಬಿದ್ದ ಅವಮಾನವನ್ನು ಅನುಭವಿಸು
ವದು ಖಂಡಿತ ಎಂದು ಕೈಯೆತ್ತಿ ಪ್ರಮಾಣಮಾಡಿ

ದ್ದೇನೆ. ಇಸ್ರಾಯೇಲಿನ ಪರ್ವತಗಳೇ, ನಿವ
ಗಿಡಗಳು ರೆಂಬೆಗಳನ್ನು ಹರಡಿಕೊಂಡು ನನ್ನ ಜನರಾ
ಇಸ್ರಾಯೇಲ್ಯರಿಗೆ ಫಲಕೊಡುವವು; ಅವರ ಬರುವಿ
ಯು ಸಮೀಪವಾಯಿತು. ಇಗೋ, ನಾನು ನಿವ
ಪಕ್ಷದವನು; ನಿಮ್ಮ ಕಡೆಗೆ ತಿರುಗಿಕೊಳ್ಳುವೆನ
ನಿಮ್ಮಲ್ಲಿ ಗೆಯ್ಯುವರು, ಬಿತ್ತುವರು; ನಿಮ್ಮಲ್ಲಿ ಬಹ
ಜನರು ಅಂದರೆ ಇಸ್ರಾಯೇಲ್ ವಂಶವೆಲ್ಲವೂ ವಾಸಿಸ
ವಂತೆ ಮಾಡುವೆನು; ಪಟ್ಟಣಗಳು ಜನಭರಿತವಾಗ
ವವು, ಹಾಳುನಿವೇಶನಗಳಲ್ಲಿ ಕಟ್ಟಡಗಳು ಏಳುವವ
ನಿಮ್ಮಲ್ಲಿ ಬಹು ಜನರನ್ನೂ ಪಶುಗಳನ್ನೂ ವೃದ್ಧಿಗೊ
ಸುವೆನು; ಅವು ಹೆಚ್ಚಿ ಅಭಿವೃದ್ಧಿಯಾಗುವವು, ಮೊದ
ನಂತೆ ನಿಮ್ಮಲ್ಲಿ ನಿವಾಸಿಗಳನ್ನು ತುಂಬಿಸಿ ಮೊದ
ಗಿಂತ ನಿಮ್ಮನ್ನು ಉತ್ತಮಸ್ಥಿತಿಗೆ ತರುವೆನು; ನಾನ
ಯೆಹೋವನು ಎಂದು ನಿಮಗೆ ದೃಢವಾಗುವದ
ಬೆಟ್ಟದ ಸೀಮೆಯೇ, ನಾನು ನಿನ್ನಲ್ಲಿ ಜನಸಂಚಾರ
ನ್ನುಂಟುಮಾಡುವೆನು; ನನ್ನ ಜನರಾದ ಇಸ್ರಾಯೆ
ಲ್ಯರೇ ನಿನ್ನಲ್ಲಿ ಸಂಚರಿಸುತ್ತಾ ನಿನ್ನನ್ನು ಸ್ವಾಸ
ವಾಗಿ ಅನುಭವಿಸುವರು; ನೀನು ಇನ್ನು ಅವರಿಗೆ ಪು
ಶೋಕವನ್ನು ಕೊಡದಿರುವಿ. ಕರ್ತನಾದ ಯೆಹೋ
ವನು ಇಂತೆನ್ನುತ್ತಾನೆ—ನೀನು ನರಭಕ್ಷಕನಾಗಿ ನಿ
ಪ್ರಜೆಗೆ ಪುತ್ರಶೋಕವನ್ನು ಕೊಟ್ಟಿದ್ದೀ ಎಂದು ನಿ
ನ್ನು ಬಯ್ಯುತ್ತಾರಲ್ಲಾ; ಇನ್ನು ಮುಂದೆ ನೀನು ನ
ಭಕ್ಷಕನಾಗುವದಿಲ್ಲ. ನಿನ್ನ ಪ್ರಜೆಗೆ ಇನ್ನು ಪು
ಶೋಕವನ್ನು ಕೊಡದಿರುವಿ; ಮ್ಲೇಚ್ಛರ ಧಿಕ್ಕಾರವನ
ಇನ್ನು ನಿನ್ನ ಕಿವಿಗೆ ಬೀಳಿಸೆನು; ನೀನು ಜನಾಂ
ಗಳಿಂದ ಇನ್ನು ಅವಮಾನವನ್ನು ಅನುಭವಿಸದಿರುವ
ನಿನ್ನ ಪ್ರಜೆಯು ಮುಗ್ಗರಿಸುವದಕ್ಕೆ ಇನ್ನು ನೀನ
ಕಾರಣನಾಗುವದಿಲ್ಲ; ಇದು ಕರ್ತನಾದ ಯೆಹೋವ
ನುಡಿ.

ಯೆಹೋವನು ಈ ವಾಕ್ಯವನ್ನು ನನಗೆ ದಯಪಾ
ಸಿದನು—ನರಪುತ್ರನೇ, ಇಸ್ರಾಯೇಲ್ ವಂಶದವರ
ಸ್ವದೇಶದಲ್ಲಿ ವಾಸಿಸುತ್ತಿದ್ದಾಗ ತಮ್ಮ ದುರ್ಮಾರ್ಗ
ದುರಾಚಾರಗಳಿಂದ ಅದನ್ನು ಹೊಲೆಗೈದರು; ಅವ
ನಡತೆಯು ಮುಟ್ಟಿನ ಹೊಲಸಿನಂತೆ ನನಗೆ ಅಸಹ್ಯವ
ಗಿತ್ತು. ಅವರು ದೇಶದ ಮೇಲೆ ರಕ್ತವನ್ನು ಸುರಿ
ತಮ್ಮ ಬೊಂಬೆಗಳಿಂದ ಅದನ್ನು ಹೊಲೆಗೈದ ಕಾರ
ನಾನು ಅವರ ಮೇಲೆ ನನ್ನ ರೋಷಾಗ್ನಿಯನ್ನು ಸುರಿ
ಜನಾಂಗಗಳೊಳಗೆ ಅವರನ್ನು ಚದರಿಸಿ ದೇಶದೇಶ
ಳಿಗೆ ತೂರಿಬಿಟ್ಟು ಅವರ ದುರ್ಮಾರ್ಗದುರಾಚಾರ
ಳಿಗೆ ಸರಿಯಾಗಿ ದಂಡಿಸಿದೆನು. ಅವರು ಆ ಜನಾಂ
ಗಳೊಳಗೆ ಸೇರಿಕೊಂಡ ಮೇಲೆ ಓಹೋ, ಇವರು ಯ
ಹೋವನ ಪ್ರಜೆಗಳು, ಆತನ ದೇಶದಿಂದ ಭ್ರಷ್ಟರಾ
ಬಂದಿದ್ದಾರೆ ಎಂದೆನ್ನಿಸಿಕೊಂಡು ನನ್ನ ಪರಿಶು
ನಾಮಕ್ಕೆ ಅಪಕೀರ್ತಿಯನ್ನು ತರಲು ಇಸ್ರಾಯೇ
ವಂಶದವರು ಜನಾಂಗಗಳೊಳಗೆ ಸೇರಿ ಅಲ್ಲಿ ಅಪಕ
ರ್ತಿಗೆ ಗುರಿಮಾಡಿದ ನನ್ನ ಪರಿಶುದ್ಧನಾಮವನ
ಕುರಿತು ನಾನು ಮರುಗಿದೆನು. ಆದಕಾರಣ ನೀನ
ಇಸ್ರಾಯೇಲ್ ವಂಶದವರಿಗೆ ಹೀಗೆ ನುಡಿ— ಕರ್ತನಾ
ಯೆಹೋವನು ಇಂತೆನ್ನುತ್ತಾನೆ—ಇಸ್ರಾಯೇಲ್ ವಂ
ದವರೇ, ನಿಮ್ಮ ನಿಮಿತ್ತವಲ್ಲ, ನೀವು ಜನಾಂಗಗಳ

ಳಗೆ ಸೇರಿ ಅಪಕೀರ್ತಿಗೆ ಗುರಿಮಾಡಿದ ನನ್ನ ಪರಿ
ಶುದ್ಧನಾಮದ ನಿಮಿತ್ತವೇ ಈ ರಕ್ಷಣಕಾರ್ಯವನ್ನು
23 ಮಾಡುತ್ತೇನೆ. ಜನಾಂಗಗಳಲ್ಲಿ ಅಪಕೀರ್ತಿಗೆ ಗುರಿ
ಯಾದ, ಅಂದರೆ ನೀವು ಜನಾಂಗಗಳ ನಡುವೆ ಅಪ
ಕೀರ್ತಿಗೆ ಗುರಿಮಾಡಿದ ನನ್ನ ಘನನಾಮದ ಗೌರ
ವವನ್ನು ನಾನು ಕಾಪಾಡಿಕೊಳ್ಳುವೆನು; ಹೀಗೆ ನಾನು
ಅವುಗಳ ಕಣ್ಣೆದುರಿಗೆ ನಿಮ್ಮ ರಕ್ಷಣೆಯ ಮೂಲಕ
ನನ್ನ ಗೌರವವನ್ನು ಕಾಪಾಡಿಕೊಳ್ಳುವಾಗ ನಾನೇ
ಯೆಹೋವನು ಎಂದು ಅವುಗಳಿಗೆ ನಿಶ್ಚಿತವಾಗುವದು;
24 ಇದು ಕರ್ತನಾದ ಯೆಹೋವನ ನುಡಿ. ನಾನು
ನಿಮ್ಮನ್ನು ಜನಾಂಗಗಳೊಳಗಿಂದ ಬಿಡಿಸಿ ಸಕಲ
ದೇಶಗಳಿಂದ ಒಟ್ಟುಗೂಡಿಸಿ ಸ್ವದೇಶಕ್ಕೆ ಬರಮಾಡು
25 ವೆನು. ನಾನು ನಿಮ್ಮ ಮೇಲೆ ನಿರ್ಮಲೋದಕ
ವನ್ನು ಪ್ರೋಕ್ಷಿಸಲು ನೀವು ನಿರ್ಮಲರಾಗುವಿರಿ;
ನಿಮ್ಮ ಸಮಸ್ತವಿಗ್ರಹಗಳಿಂದಲೂ ಸಕಲವಿಧವಾದ
ಹೊಲಸಿನಿಂದಲೂ ನಿಮ್ಮನ್ನು ಶುದ್ಧಿಮಾಡುವೆನು.
26 ನಾನು ನಿಮಗೆ ಹೊಸ ಮನಸ್ಸನ್ನು ಕೊಟ್ಟು ನಿಮ್ಮ
ಲ್ಲಿ ನೂತನಸ್ವಭಾವವನ್ನು ಹುಟ್ಟಿಸುವೆನು; ಕಲ್ಲಾದ
ಹೃದಯವನ್ನು ನಿಮ್ಮೊಳಗಿಂದ ತೆಗೆದು ಮೃದುವಾದ
27 ಹೃದಯವನ್ನು ನಿಮಗೆ ದಯಪಾಲಿಸುವೆನು. ನನ್ನ
ಆತ್ಮವನ್ನು ನಿಮ್ಮಲ್ಲಿ ನೆಲಸಿರುವಂತೆ ಅನುಗ್ರಹಿಸಿ
ನೀವು ನನ್ನ ನಿಯಮಗಳನ್ನು ಅನುಸರಿಸುವ ಹಾಗೆ
ಮಾಡುವೆನು. ನೀವು ನನ್ನ ವಿಧಿಗಳನ್ನು ಕೈಕೊಂಡು
28 ಆಚರಿಸುವಿರಿ. ನಾನು ನಿಮ್ಮ ಪಿತೃಗಳಿಗೆ ಅನುಗ್ರಹಿ
ಸಿದ ದೇಶದಲ್ಲಿ ನೀವು ವಾಸಿಸುವಿರಿ. ನೀವು ನನಗೆ
ಪ್ರಜೆಯಾಗಿರುವಿರಿ, ನಾನು ನಿಮಗೆ ದೇವರಾಗಿರು
29 ವೆನು. ನಾನು ನಿಮ್ಮನ್ನು ನಿಮ್ಮ ಎಲ್ಲಾ ಹೊಲಸಿ
ನಿಂದ ಉದ್ಧರಿಸಿ ಬೆಳೆ ಬೆಳೆಯಲೆಂದು ಅಪ್ಪಣೆಕೊಟ್ಟು
ಅದನ್ನು ವೃದ್ಧಿಗೊಳಿಸುವೆನು; ನಿಮಗೆ ಕ್ಷಾಮವನ್ನು
30 ಇನ್ನು ಬರಮಾಡೆನು. ನೀವು ಕ್ಷಾಮದೇಶದವರೆಂದು
ಜನಾಂಗಗಳು ಇನ್ನು ನಿಮ್ಮನ್ನು ನಿಂದಿಸದಂತೆ ನಾನು
ಮರದ ಹಣ್ಣನ್ನೂ ಹೊಲದ ಬೆಳೆಯನ್ನೂ ಹೆಚ್ಚಿಸು
31 ವೆನು. ಆಗ ನೀವು ನಿಮ್ಮ ದುರ್ಮಾರ್ಗದುರಾಚಾರ
ಗಳನ್ನು ಜ್ಞಾಪಕಕ್ಕೆ ತಂದುಕೊಂಡು ನಿಮ್ಮ ಅಪರಾಧ
ಗಳ ಮತ್ತು ಅಸಹ್ಯಕಾರ್ಯಗಳ ನಿಮಿತ್ತ ನಿಮಗೆ
32 ನೀವೇ ಹೇಸಿಕೊಳ್ಳುವಿರಿ. ಕರ್ತನಾದ ಯೆಹೋ
ವನು ಇಂತೆನ್ನುತ್ತಾನೆ—ನಾನು ಈ ರಕ್ಷಣಕಾರ್ಯ
ವನ್ನು ಮಾಡುವದು ನಿಮ್ಮ ನಿಮಿತ್ತವಲ್ಲವೆಂಬದು
ನಿಮಗೆ ತಿಳಿದಿರಲಿ; ಇಸ್ರಾಯೇಲ್ ವಂಶದವರೇ,
ನಿಮ್ಮ ದುರ್ಮಾರ್ಗಗಳಿಗೆ ಲಜ್ಜೆಗೊಳ್ಳಿರಿ, ನಾಚಿಕೆ
33 ಪಡಿರಿ. ಕರ್ತನಾದ ಯೆಹೋವನು ಇಂತೆನ್ನುತ್ತಾನೆ—
ನಾನು ನಿಮ್ಮನ್ನು ನಿಮ್ಮ ಅಪರಾಧಗಳಿಂದೆಲ್ಲಾ ಶುದ್ಧಿ
ಮಾಡುವ ದಿನದಲ್ಲಿ ಪಟ್ಟಣಗಳನ್ನು ನಿವಾಸಿಗಳಿಂದ
ತುಂಬಿಸುವೆನು, ಹಾಳು ನಿವೇಶನಗಳಲ್ಲಿ ಕಟ್ಟಡಗಳು
34 ಏಳುವವು. ಹಾದುಹೋಗುವವರೆಲ್ಲರ ಕಣ್ಣೆದುರಿಗೆ
ಬೀಡುಬಿದ್ದು ಕಾಡಾದ ಭೂಮಿಯನ್ನು ಗೆಯ್ಯುವರು.
35 ಆಗ ಜನರು—ಕಾಡಾಗಿದ್ದ ಈ ದೇಶವು ಏದೆನ್
ಉದ್ಯಾನದಂತೆ ಕಳಕಳಿಸುತ್ತದೆ; ಬಿದ್ದುಹೋಗಿ ಹಾಳು
ಪಾಳಾದ ಪಟ್ಟಣಗಳು ಕೋಟೆಕೊತ್ತಲಗಳಿಂದ ಕೂಡಿ
ಜನಭರಿತವಾಗಿವೆಯಲ್ಲಾ ಎಂದು ಹೇಳುವರು. ಯೆ 36
ಹೋವನಾದ ನಾನೇ ಬಿದ್ದುಹೋದದನ್ನು ಕಟ್ಟಿ ಹಾಳಾ
ದದನ್ನು ಬೆಳೆಯಿಸಿದ್ದೇನೆಂಬದು ನಿಮ್ಮ ಸುತ್ತಲು
ಉಳಿದ ಜನಾಂಗಗಳಿಗೆ ಗೊತ್ತಾಗುವದು; ಯೆಹೋವ
ನಾದ ನಾನೇ ನುಡಿದಿದ್ದೇನೆ, ನಡಿಸುತ್ತೇನೆ.
ಕರ್ತನಾದ ಯೆಹೋವನು ಇಂತೆನ್ನುತ್ತಾನೆ— 37
ನಾನು ಇನ್ನೊಂದು ವಿಷಯದಲ್ಲಿ ಇಸ್ರಾಯೇಲ್ ವಂಶ
ದವರ ವಿಜ್ಞಾಪನೆಯನ್ನು ಲಾಲಿಸಿ ನೆರವೇರಿಸುವೆನು;
ಅಂದರೆ ಅವರ ಜನಸಂಖ್ಯೆಯನ್ನು ಹಿಂಡಿನೋಪಾದಿ
ಯಲ್ಲಿ ಹೆಚ್ಚಿಸುವೆನು. ಮೀಸಲಾದ ಮಂದೆಯಂತೆ, 38
ಹಬ್ಬಗಳಲ್ಲಿ ಯೆರೂಸಲೇಮಿಗೆ ಬಂದು ಸೇರುವ
ಹಿಂಡಿನ ಹಾಗೆ ಮನುಷ್ಯರು ಹಾಳುಪಟ್ಟಣಗಳಲ್ಲಿ
ಹಿಂಡುಹಿಂಡಾಗಿ ತುಂಬಿಕೊಳ್ಳುವರು; ಆಗ ನಾನೇ
ಯೆಹೋವನು ಎಂದು ಅವರಿಗೆ ನಿಶ್ಚಯವಾಗುವದು.

ಒಣಗಿದ ಎಲುಬುಗಳ ಪುನರ್ಜೀವನ.

37

ನಾನು ಯೆಹೋವನ ಹಸ್ತಸ್ಪರ್ಶದಿಂದ ಪರ
ವಶನಾಗಿರಲು ಆತನು ತನ್ನ ಆತ್ಮದ ಮೂಲಕ
ನನ್ನನ್ನು ಒಯ್ದು ಎಲುಬುಗಳಿಂದ ತುಂಬಿದ್ದ ಒಂದು
ತಗ್ಗಿನಲ್ಲಿ ಇಳಿಸಿ ನಾನು ಆ ಎಲುಬುಗಳ ಮಧ್ಯೆ 2
ತಗ್ಗನ್ನು ಬಳಸಿಕೊಂಡು ಬರುವಂತೆ ಮಾಡಿದನು;
ಇಗೋ, ತಗ್ಗಿನ ಮೇಲೆಲ್ಲಾ ತೀರಾ ಒಣಗಿದ ಎಲುಬು
ಗಳು ಲೆಕ್ಕವಿಲ್ಲದಷ್ಟು ಬಿದ್ದಿದ್ದವು. ಆತನು ನನ್ನನ್ನು— 3
ನರಪುತ್ರನೇ, ಈ ಎಲುಬುಗಳಿಗೆ ಜೀವವು ಬರಬಹು
ದೋ ಎಂದು ಕೇಳಲು ನಾನು—ಕರ್ತನಾದ ಯೆಹೋ
ವನೇ, ನೀನೇ ಬಲ್ಲೆ ಎಂದುತ್ತರಕೊಟ್ಟೆನು. ಆಗ 4
ಆತನು ನನಗೆ ಹೀಗೆ ಅಪ್ಪಣೆಮಾಡಿದನು—ನೀನು
ಎಲುಬುಗಳ ಮೇಲೆ ಧ್ವನಿಯನ್ನು ಹರಡಿ ಅವಕ್ಕೆ ಈ
ದೈವೋಕ್ತಿಯನ್ನು ನುಡಿ—ಒಣಗಿದ ಎಲುಬುಗಳೇ,
ಯೆಹೋವನ ವಾಕ್ಯವನ್ನು ಕೇಳಿರಿ. ಕರ್ತನಾದ ಯೆ 5
ಹೋವನು 1)ನಿಮಗೆ ಹೀಗೆ ಹೇಳುತ್ತಾನೆ—ಇಗೋ,
ನಾನು ನಿಮ್ಮೊಳಗೆ ಶ್ವಾಸವನ್ನು ಹೊಗಿಸುವೆನು;
ನೀವು ಬದುಕುವಿರಿ. ನಾನು ನಿಮ್ಮ ಮೇಲೆ ನರಗಳ 6
ನ್ನು ಹಬ್ಬಿಸಿ ಮಾಂಸವನ್ನು ಹರಡಿ ಚರ್ಮವನ್ನು ಹೊ
ದಿಸಿ ನಿಮ್ಮಲ್ಲಿ ಶ್ವಾಸವನ್ನು ತುಂಬುವೆನು; ಆಗ ನೀವು
ಬದುಕಿ ನಾನೇ ಯೆಹೋವನು ಎಂದು ತಿಳಿದುಕೊಳ್ಳು
ವಿರಿ. ನನಗೆ ಅಪ್ಪಣೆಯಾದಂತೆ ನಾನು ಆ ದೈವೋಕ್ತಿ 7
ಯನ್ನೆತ್ತಿ ನುಡಿಯುತ್ತಿರಲು ಸದ್ದಾಯಿತು, ಇಗೋ,
ಟಕಟಕ ಎನ್ನುತ್ತಾ ಎಲುಬು ಎಲುಬಿಗೆ ಜೋಡನೆಯಾ
ದವು. ನಾನು ನೋಡಲಾಗಿ ಆಹಾ, ಅವುಗಳ ಮೇಲೆ 8
ನರಗಳು ಹಬ್ಬಿಕೊಂಡವು, ಮಾಂಸವು ಹರಡಿಕೊಂಡಿತು,
ಚರ್ಮವು ಮೇಲ್ಹೊದಿಕೆಯಾಯಿತು; ಶ್ವಾಸ ಮಾತ್ರ
ಇರಲಿಲ್ಲ. ಆಗ ಆತನು ನನಗೆ—ನರಪುತ್ರನೇ, ನೀನು 9
ಶ್ವಾಸಕ್ಕೆ ನುಡಿ, ನುಡಿ; ಶ್ವಾಸವೇ, ಕರ್ತನಾದ ಯೆ
ಹೋವನು ಇಂತೆನ್ನುತ್ತಾನೆ—ನೀನು ಚತುರ್ದಿಕ್ಕು
ಗಳಿಂದ ಬೀಸಿ ಹತಶರೀರಗಳು ಬದುಕುವಂತೆ ಅವುಗಳ

1) ಮೂಲ: ಈ ಎಲುಬುಗಳಿಗೆ.

ಮೇಲೆ ಸುಳಿ ಎಂಬದಾಗಿ ಶ್ವಾಸಕ್ಕೆ ನುಡಿ ಎಂದು
10 ಅಪ್ಪಣೆಕೊಡಲು ನಾನು ಅಪ್ಪಣೆಯಂತೆ ನುಡಿದೆನು.
ಇಗೋ, ಶ್ವಾಸವು ಅವುಗಳಲ್ಲಿ ಹೊಕ್ಕಿತು, ಬದುಕಿ
ದವು, ಕಾಲೂರಿ ನಿಂತವು, ಅತ್ಯಂತ ದೊಡ್ಡ ಸೈನ್ಯ
11 ವಾದವು. ಆ ಮೇಲೆ ಆತನು ನನಗೆ ಹೀಗೆ ಹೇಳಿ
ದನು—ನರಪುತ್ರನೇ, ಈ ಎಲುಬುಗಳು ಇಸ್ರಾಯೇ
ಲಿನ ಪೂರ್ಣವಂಶವು; ಇಗೋ, ಆ ವಂಶೀಯರು—
ಅಯ್ಯೋ, ನಮ್ಮ ಎಲುಬುಗಳು ಒಣಗಿಹೋದವು,
ನಮ್ಮ ನಿರೀಕ್ಷೆಯು ಹಾಳಾಯಿತು; ನಾವು ಬುಡನಾಶ
12 ವಾದೆವು ಅಂದುಕೊಳ್ಳುತ್ತಿದ್ದಾರೆ. ಆದಕಾರಣ ನೀನು
ಈ ದೈವೋಕ್ತಿಯನ್ನು ಅವರಿಗೆ ನುಡಿ—ಕರ್ತನಾದ
ಯೆಹೋವನು ಇಂತೆನ್ನುತ್ತಾನೆ—ನನ್ನ ಜನರೇ,
ನೋಡಿರಿ, ನಾನು ನಿಮ್ಮ ಗೋರಿಗಳನ್ನು ತೆರೆದು
ಅವುಗಳೊಳಗಿಂದ ನಿಮ್ಮನ್ನು ಎಬ್ಬಿಸಿ ಇಸ್ರಾಯೇಲ್
13 ದೇಶಕ್ಕೆ ಸೇರಮಾಡುವೆನು. ನನ್ನ ಜನರೇ, ನಾನು
ನಿಮ್ಮ ಗೋರಿಗಳನ್ನು ತೆರೆದು ಅವುಗಳೊಳಗಿಂದ
ನಿಮ್ಮನ್ನು ಎಬ್ಬಿಸಿದಾಗ ನಾನೇ ಯೆಹೋವನು ಎಂದು
14 ನಿಮಗೆ ದೃಢವಾಗುವದು. ನಾನು ನನ್ನ ಶ್ವಾಸ
ವನ್ನು ನಿಮ್ಮಲ್ಲಿ ಹೊಗಿಸಿ ನಿಮ್ಮನ್ನು ಬದುಕಿಸಿ ನಿಮ್ಮ
ದೇಶದಲ್ಲಿ ನೆಲೆಗೊಳಿಸುವೆನು; ಆಗ ಯೆಹೋವನಾದ
ನಾನೇ ಇದನ್ನು ನುಡಿದು ನಡಿಸಿದ್ದೇನೆ ಎಂದು ತಿಳಿದು
ಕೊಳ್ಳುವಿರಿ; ಇದು ಯೆಹೋವನ ಸಂಕಲ್ಪ.

ಇಸ್ರಾಯೇಲೂ ಯೆಹೂದವೂ ಒಂದಾಗುವದು.

15 ಯೆಹೋವನು ಇನ್ನೊಂದು ವಾಕ್ಯವನ್ನು ನನಗೆ
16 ದಯಪಾಲಿಸಿದನು—ನರಪುತ್ರನೇ, ನೀನು ಒಂದು
ದಂಡವನ್ನು ತೆಗೆದು ಅದರಲ್ಲಿ—ಯೆಹೂದದ್ದು, ಯೆ
ಹೂದಕ್ಕೆ ಸೇರಿದ ಇಸ್ರಾಯೇಲ್ಯರದು ಎಂದು ಬರೆದು
ಇನ್ನೊಂದು ದಂಡವನ್ನು ತೆಗೆದು ಅದರಲ್ಲಿ—ಯೋಸೇ
ಫಿನದು, ಎಫ್ರಾಯಿಮಿನದು, ಯೋಸೇಫಿಗೆ ಸೇರಿದ
17 ಎಲ್ಲಾ ಇಸ್ರಾಯೇಲ್ಯರದು ಎಂದು ಬರೆ; ಆ ಮೇಲೆ
ಅವು ನಿನ್ನ ಕೈಯಲ್ಲಿ ಒಂದಾಗುವಂತೆ ಅವೆರಡನ್ನೂ
18 ಒಂದಕ್ಕೊಂದು ಉದ್ದವಾಗಿ ಸೇರಿಸಿ ಹಿಡಿ. ನಿನ್ನ
ಜನರು—ಇದೇನು? ನಮಗೆ ತಿಳಿಸುವದಿಲ್ಲವೋ ಎಂದು
19 ನಿನ್ನನ್ನು ಕೇಳುವಲ್ಲಿ ನೀನು ಅವರಿಗೆ—ಕರ್ತನಾದ
ಯೆಹೋವನು ಇಂತೆನ್ನುತ್ತಾನೆ—ಇಗೋ, ಎಫ್ರಾ
ಯಿಮು ಹಿಡಿದಿರುವ ದಂಡವನ್ನು ಅಂದರೆ ಯೋಸೇ
ಫಿನ ಮತ್ತು ಯೋಸೇಫಿಗೆ ಸೇರಿದ ಇಸ್ರಾಯೇಲ್
ಕುಲಗಳ ದಂಡವನ್ನು ನಾನು ತೆಗೆದು ಯೆಹೂದದ
ದಂಡಕ್ಕೆ ಉದ್ದವಾಗಿ ಸೇರಿಸಿ ಅವೆರಡನ್ನು ನನ್ನ ಕೈಯಲ್ಲಿ
ಒಂದೇ ದಂಡವಾಗಿ ಹಿಡಿಯುವೆನು ಎಂಬದನ್ನು ಹೇಳು.
20 ಹೇಳುವಾಗ ನೀನು ಹೆಸರು ಬರೆದಿರುವ ದಂಡಗಳು
21 ಅವರ ಕಣ್ಣೆದುರಿಗೆ ನಿನ್ನ ಕೈಯಲ್ಲಿರಲಿ. ಇದನ್ನೂ
ಅವರಿಗೆ ನುಡಿ—ಕರ್ತನಾದ ಯೆಹೋವನು ಇಂತೆನ್ನು
ತ್ತಾನೆ—ಇಗೋ, ಇಸ್ರಾಯೇಲ್ಯರು ವಶವಾಗಿರುವ
ಜನಾಂಗಗಳೊಳಗಿಂದ ನಾನು ಅವರನ್ನು ಉದ್ಧರಿಸಿ

ಎಲ್ಲಾ ಕಡೆಯಿಂದಲೂ ಒಟ್ಟುಗೂಡಿಸಿ ಸ್ವದೇಶಕ್ಕೆ
ಕರತಂದು ಅಲ್ಲಿ ಇಸ್ರಾಯೇಲಿನ ಪರ್ವತಗಳ ಮೇ
ಒಂದೇ ಜನಾಂಗವನ್ನಾಗಿ ಮಾಡುವೆನು; ಒಬ್ಬನೆ
ಅವರೆಲ್ಲರಿಗೂ ರಾಜನಾಗಿರುವನು; ಅವರು ಇನ್ನೆಂ
ಗೂ ಎರಡು ಜನಾಂಗದವರಾಗಿಯೂ ಭಿನ್ನರಾಜ್ಯದ
ರಾಗಿಯೂ ಇರರು; ತಮ್ಮ ಬೊಂಬೆಗಳಿಂದಾಗಲಿ
ಅಸಹ್ಯವಸ್ತುಗಳಿಂದಾಗಲಿ ಯಾವ ದುರಾಚಾರದಿಂ
ಲೇ ಆಗಲಿ ತಮ್ಮನ್ನು ಇನ್ನುಮುಂದೆ ಹೊಲೆಗೆಯ್ದು
ಕೊಳ್ಳರು; ಅವರು [1]ಪಾಪಮಾಡಿಮಾಡಿ ಸಿಕ್ಕಿಬಿದ್ದ
ದೇವದ್ರೋಹದಿಂದೆಲ್ಲಾ ನಾನು ಅವರನ್ನು ಉದ್ಧರಿಸಿ
ಶುದ್ಧೀಕರಿಸುವೆನು; ಅವರು ನನಗೆ ಪ್ರಜೆಯಾಗಿರು
ವರು, ನಾನು ಅವರಿಗೆ ದೇವರಾಗಿರುವೆನು. ನನ್ನ
ಸೇವಕನಾದ ದಾವೀದನು ಅವರಿಗೆ ರಾಜನಾಗಿರುವನು
ಅವರೆಲ್ಲರಿಗೂ ಒಬ್ಬನೇ ಪಾಲಕನಿರುವನು; ಅವರು
ನನ್ನ ನಿಯಮಗಳನ್ನು ಅನುಸರಿಸಿ ನನ್ನ ವಿಧಿಗಳನ್ನು
ಕೈಕೊಂಡು ಆಚರಿಸುವರು. ನನ್ನ ಸೇವಕನಾದ ಯಾ
ಕೋಬನಿಗೆ ನಾನು ದಯಪಾಲಿಸಿದ ದೇಶದಲ್ಲಿ ಅವರು
ವಾಸಿಸುವರು; ಹೌದು, ನಿಮ್ಮ ಪಿತೃಗಳು ವಾಸಿಸಿದ
ದೇಶದಲ್ಲಿ ಅವರೂ ಅವರ ಸಂತಾನದವರೂ ತಲ
ತಲಾಂತರವಾಗಿ ವಾಸಿಸುವರು; ನನ್ನ ಸೇವಕನಾದ
ದಾವೀದನು ಅವರಿಗೆ ಸದಾ ಪ್ರಭುವಾಗಿರುವನು
ಮತ್ತು ನಾನು ಅವರೊಂದಿಗೆ ಸಮಾಧಾನದ ಒಡಂಬ
ಡಿಕೆಯನ್ನು ಮಾಡಿಕೊಳ್ಳುವೆನು; ಅದು ಶಾಶ್ವತ
ವಾಗಿರುವದು; ನಾನು ಅವರನ್ನು ನೆಲೆಗೊಳಿಸಿ ವೃದ್ಧಿ
ಮಾಡಿ ನನ್ನ ಪವಿತ್ರಾಲಯವನ್ನು ಅವರ ನಡುವೆ
ಯುಗಯುಗಾಂತರಕ್ಕೂ ನಿಲ್ಲಿಸುವೆನು. ಹೌದು
ನನ್ನ ವಾಸಸ್ಥಾನವು ಅವರ ಮಧ್ಯದಲ್ಲಿರುವದು
ನಾನು ಅವರಿಗೆ ದೇವರಾಗಿರುವೆನು, ಅವರು ನನಗೆ
ಪ್ರಜೆಯಾಗಿರುವರು. ನನ್ನ ಪವಿತ್ರಾಲಯವು ಅವರ
ಮಧ್ಯೆ ಶಾಶ್ವತವಾಗಿರಲು ಇಸ್ರಾಯೇಲನ್ನು ಮೀಸಲು
ಮಾಡಿಕೊಂಡಾತನು ಯೆಹೋವನಾದ ನಾನೇ ಎಂದು
ಜನಾಂಗಗಳಿಗೆ ತಿಳಿದುಬರುವದು.

ಗೋಗನು ಇಸ್ರಾಯೇಲಿನೊಳಗೆ ನುಗ್ಗಿ ನಾಶವಾಗುವದು.

ಯೆಹೋವನು ಈ ವಾಕ್ಯವನ್ನು ನನಗೆ ದಯ
ಪಾಲಿಸಿದನು—ನರಪುತ್ರನೇ, ರೋಷಿನವರನ್ನೂ 2
ಮೆಷೆಕಿನವರನ್ನೂ ತೂಬಲಿನವರನ್ನೂ ಆಳುವ ಮ
ಗೋಗ್ ದೇಶದ ದೊರೆಯಾದ ಗೋಗನ ಕಡೆ
ಮುಖಮಾಡಿ ಅವನಿಗೆ ಈ ದೈವೋಕ್ತಿಯನ್ನು ನುಡಿ—
ಕರ್ತನಾದ ಯೆಹೋವನು ಇಂತೆನ್ನುತ್ತಾನೆ—ರೋಷ
ಮೆಷೆಕ್ ತೂಬಲ್ ಜನಾಂಗಗಳ ಪ್ರಭುವಾದ ಗೋಗ
ನೇ, ಆಹಾ, ನಾನು ನಿನಗೆ ವಿರುದ್ಧನಾಗಿ ನಿನ್ನನ್ನು
ತಿರುಗಿಸಿ ನಿನ್ನ ದವಡೆಗೆ ಕೊಕ್ಕೆಹಾಕಿ ಈಚೆಗೆ ಎಳೆದು
ಅಶ್ವಾರೂಢರೂ [2]ಖೇಡ್ಯಪಾಣಿಗಳೂ ಯಾರೂ ತಪ್ಪ
ವಿಚಿತ್ರಾಂಬರರೂ ಖಡ್ಗಹಸ್ತರೂ ಆದ ರಾಹುತ
ದೊಡ್ಡ ತಂಡದಿಂದ ಕೂಡಿದ ನಿನ್ನ ಸೈನ್ಯವೆಲ್ಲವನ್ನು

1) ಮೇಲಿನದು ಗ್ರೀಕ್ ಮೂಲ. ಇಬ್ರಿಯ ಮೂಲ: ಪಾಪಮಾಡಿದ ವಾಸಸ್ಥಾನಗಳಿಂದೆಲ್ಲಾ. 2) ಮೂಲ: ಗುರಾಣಿ
ಪಾಣಿಗಳೂ.

5 ಯಾರೂ ತಪ್ಪದೆ ಖೇಡ್ಯಶಿರಸ್ತ್ರಾಣಧಾರಿಗಳಾದ ಪಾರ
6 ಸಿಯರು ಕೂಷ್ಯರು ಪೂಟ್ಯರು ಇವರನ್ನು ಗುಮ್ಮಿ
ಗುಮ್ಮಿಯಾದ ಗೋಮೆರ್ಯರನ್ನು, ಉತ್ತರದಿಕ್ಕಿನ
ಕಟ್ಟಕಡೆಯಿಂದ ಬಂದ ಗುಮ್ಮಿಗುಮ್ಮಿಯಾದ ತೋ
ಗರ್ಮದವರನ್ನು ಅಂತು ಅನೇಕಾನೇಕ ಜನಾಂಗಗ
7 ಳನ್ನು ನಿನ್ನೊಂದಿಗೆ ಬರಮಾಡುವೆನು. ಸಿದ್ಧವಾಗಿರು.
ನಿನ್ನಲ್ಲಿ ಕೂಡಿಬಂದಿರುವ ಎಲ್ಲಾ ತಂಡಗಳೊಡನೆ
ನಿನ್ನನ್ನು ಸಿದ್ಧಮಾಡಿಕೋ; ನೀನು 1)ಅವುಗಳಿಗೆ
8 ಪಾಲಕನಾಗಿರು. ಬಹು ದಿವಸಗಳ ಮೇಲೆ ನಿನಗೆ
ಅಪ್ಪಣೆಯಾಗುವದು; ಖಡ್ಗದಿಂದ ನಾಶವಾಗಿ ಪುನ
ರ್ಜೀವಿತವಾದ ದೇಶದೊಳಗೆ ನೀನು ಕಾಲಾನುಕಾಲಕ್ಕೆ
ನುಗ್ಗಿ ಅನೇಕ ಜನಾಂಗಗಳೊಳಗಿಂದ ಒಟ್ಟುಗೂಡಿದ
[ನನ್ನ] ಜನರ ಮೇಲೆ ಬೀಳುವಿ; ಹೌದು, ಜನಾಂಗಗ
ಳೊಳಗಿಂದ ಪಾರಾದ ಆ ಜನರೆಲ್ಲರು ಬಹುಕಾಲ
ಹಾಳಾಗಿದ್ದ ಇಸ್ರಾಯೇಲಿನ ಪರ್ವತಗಳಲ್ಲಿ ನೆಮ್ಮದಿ
ಯಾಗಿ ವಾಸಿಸುತ್ತಿರಲು ನೀನು ಅವರ ಮೇಲೆ ಬೀಳುವಿ.
9 ನೀನೂ ನಿನ್ನ ಎಲ್ಲಾ ಗುಮ್ಮಿಗಳೂ ನಿನ್ನೊಂದಿಗಿರುವ
ಬಹು ಜನಾಂಗಗಳೂ ಬಿರುಗಾಳಿಯಂತೆ ಹೊರಟುಬರು
ವಿರಿ; ಕಾರ್ಮುಗಿಲಿನೋಪಾದಿಯಲ್ಲಿ ದೇಶವನ್ನು
10 ಮುಚ್ಚಿಬಿಡುವಿರಿ. ಕರ್ತನಾದ ಯೆಹೋವನು ಇಂತೆ
ನ್ನುತ್ತಾನೆ—ಆಗ ನಿನ್ನ ಮನಸ್ಸಿನಲ್ಲಿ ಆಲೋಚನೆಗಳು
11 ಹುಟ್ಟುವವು; ನೀನು—ಆಹಾ, ನಾನು ಪೌಳಿಗೋಡೆ
ಯಿಲ್ಲದ ಹಳ್ಳಿಪಳ್ಳಿಗಳು ತುಂಬಿದ ದೇಶವನ್ನು ನುಗ್ಗಿ
ಅಗುಳಿ ಬಾಗಿಲು ಗೋಡೆಗಳಿಲ್ಲದೆ ನೆಮ್ಮದಿಯಿಂದ
ನಿರ್ಭಯವಾಗಿರುವವರ ಮೇಲೆ ಬೀಳುವೆನು ಅಂದು
12 ಕೊಂಡು ಸೂರೆಗೆಯ್ದು ಕೊಳ್ಳೆಹೊಡೆಯಬೇಕೆಂತಲೂ
ನಿರ್ಜನವಾಗಿದ್ದು ಜನಭರಿತವಾದ ಪ್ರದೇಶಗಳ ಮೇಲೆ
ಕೈಮಾಡಬೇಕೆಂತಲೂ ಜನಾಂಗಗಳೊಳಗಿಂದ ಒಟ್ಟು
ಗೂಡಿ ದನ ಮೊದಲಾದ ಸೊತ್ತನ್ನು ಸಂಗ್ರಹಿಸಿಕೊಂಡು
ಲೋಕದ ನಟ್ಟನಡುವೆ ವಾಸಿಸುವವರನ್ನು ಹತಿಸ
13 ಬೇಕೆಂತಲೂ ಕುತಂತ್ರವನ್ನು ಕಲ್ಪಿಸುವಿ. ಶೆಬದ
ವರೂ ದೆದಾನಿನವರೂ ತಾರ್ಷೀಷಿನ ವರ್ತಕರೂ
ಅದರ ಸಿಂಹಪ್ರಾಯರೆಲ್ಲರೂ ನಿನ್ನನ್ನು ನೋಡಿ—ನೀನು
ಸೂರೆಮಾಡಲಿಕ್ಕೆ ಬಂದಿಯೋ? ಕೊಳ್ಳೆಹೊಡೆದು ಬೆಳ್ಳಿ
ಬಂಗಾರವನ್ನು ದೋಚಿಕೊಂಡು ದನ ಮುಂತಾದ
ಸೊತ್ತನ್ನು ಅಪಹರಿಸಿ ಅಪಾರವಾದ ಆಸ್ತಿಯನ್ನು ಸುಲಿ
ದುಕೊಂಡು ಹೋಗಲು ನಿನ್ನ ತಂಡವನ್ನು ಕೂಡಿಸಿ
ಕೊಂಡು ಬಂದಿಯಾ ಎಂದು ಕೇಳುವರು.
14 ಹೀಗಿರಲು, ನರಪುತ್ರನೇ, ನೀನು ಗೋಗನಿಗೆ ಈ
ದೈವೋಕ್ತಿಯನ್ನು ನುಡಿ—ಕರ್ತನಾದ ಯೆಹೋವನು
ಇಂತೆನ್ನುತ್ತಾನೆ—ನನ್ನ ಜನರಾದ ಇಸ್ರಾಯೇಲ್ಯರು
ನೆಮ್ಮದಿಯಾಗಿ ವಾಸಿಸುವ ಕಾಲದಲ್ಲಿ ಆ ನೆಮ್ಮದಿ
15 ಯು ನಿನಗೆ ಗೊತ್ತಾಗುವದಲ್ಲವೆ. ನೀನು ನಿನ್ನ ಸ್ಥಳ
ವನ್ನು ಬಿಟ್ಟು ಅಶ್ವಬಲದ ಮಹಾಸೈನ್ಯವಾಗಿ ಗುಂಪು
ಕೂಡಿದ ಬಹುಜನಾಂಗಗಳೊಡನೆ ಉತ್ತರದಿಕ್ಕಿನ ಕಟ್ಟ
16 ಕಡೆಯಿಂದ ಬಂದು ನನ್ನ ಜನರಾದ ಇಸ್ರಾಯೇಲ್ಯರ
ಮೇಲೆ ಬಿದ್ದು ಕಾರ್ಮುಗಿಲಿನೋಪಾದಿಯಲ್ಲಿ ದೇಶ
ವನ್ನು ಮುಚ್ಚಿಬಿಡುವಿ; ಗೋಗನೇ, ಜನಾಂಗಗಳ
ಕಣ್ಣೆದುರಿಗೆ ನಿನ್ನ ನಾಶನದಿಂದ ನನ್ನ ಗೌರವ
ವನ್ನು ಕಾಪಾಡಿಕೊಂಡು ನಾನೇ ಯೆಹೋವನೆಂದು
ಜನಾಂಗಗಳಿಗೆ ಗೋಚರನಾಗುವಂತೆ ನಾನು ನಿನ್ನನ್ನು
ಕಾಲಾನುಕಾಲಕ್ಕೆ ನನ್ನ ದೇಶದ ಮೇಲೆ ಬೀಳಮಾಡು
ವೆನು. ಕರ್ತನಾದ ಯೆಹೋವನು ಇಂತೆನ್ನುತ್ತಾನೆ— 17
ನನ್ನ ಸೇವಕರಾದ ಇಸ್ರಾಯೇಲಿನ ಪ್ರವಾದಿಗಳು
ಪುರಾತನಕಾಲದಲ್ಲಿ ಬಹು ವರುಷ ಪ್ರವಾದಿಸುತ್ತಾ
ನಾನು ಒಬ್ಬನನ್ನು ಇಸ್ರಾಯೇಲ್ಯರ ಮೇಲೆ ಬೀಳ
ಮಾಡುವೆನು ಎಂದು ಮುಂತಿಳಿಸಿದ್ದರಷ್ಟೆ; ನಾನು
ಅವರ ಮೂಲಕ ಮುಂತಿಳಿಸಿದವನು ನೀನೇ ಅಲ್ಲವೇ.
ಕರ್ತನಾದ ಯೆಹೋವನು ಇಂತೆನ್ನುತ್ತಾನೆ—ಗೋ 18
ಗನು ಇಸ್ರಾಯೇಲ್ ದೇಶದ ಮೇಲೆ ಬೀಳುವ ದಿನ
ದಲ್ಲಿ ನಾನು ಸಿಟ್ಟಿನಿಂದ ಬುಸುಗುಟ್ಟುವೆನು. ನಾನು 19
ರೋಷಾವಿಷ್ಟನಾಗಿ ಕೋಪದಿಂದುರಿಯುತ್ತಾ ಹೀಗೆ
ನುಡಿದಿದ್ದೇನೆ—ಆಹಾ, ಆ ದಿನದಲ್ಲಿ ಇಸ್ರಾಯೇಲ್
ದೇಶದೊಳಗೆ ಅದ್ಭುತಕಂಪನವಾಗುವದು ಖಂಡಿತ;
ಸಮುದ್ರಮತ್ಸ್ಯಗಳು ಆಕಾಶಪಕ್ಷಿಗಳು ಭೂಜಂತು 20
ಗಳು ನೆಲದಲ್ಲಿ ಹರಿದಾಡುವ ಕ್ರಿಮಿಕೀಟಗಳು ಭೂ
ಮಂಡಲದ ಸಕಲಮನುಷ್ಯರೂ ನನ್ನೆದುರಿಗೆ ನಡುಗು
ವರು; ಪರ್ವತಗಳು ಉರುಳಿಹೋಗುವವು, ಜರಿಗಳು
ಕವಚಿಕೊಳ್ಳುವವು, ಎಲ್ಲಾ ಗೋಡೆಗಳು ನೆಲಸಮವಾ
ಗುವವು. ಕರ್ತನಾದ ಯೆಹೋವನು ಇಂತೆನ್ನು 21
ತ್ತಾನೆ—ಖಡ್ಗವು ನನ್ನ ಪರ್ವತಗಳಲ್ಲೆಲ್ಲಾ ಗೋಗನವ
ರನ್ನು ಸಂಹರಿಸಲಿ ಎಂದು ಅಪ್ಪಣೆಕೊಡುವೆನು; ಒಬ್ಬ
ರಿಂದೊಬ್ಬರು ಹತರಾಗುವರು. ನಾನು ಗೋಗನ 22
ಸಂಗಡ ವ್ಯಾಜ್ಯವಾಡುತ್ತಾ ಅವನನ್ನು ವ್ಯಾಧಿಗೂ ವಧೆ
ಗೂ ಗುರಿಮಾಡಿ ಅವನ ಮೇಲೂ ಅವನ ಗುಮ್ಮಿಗಳ
ಮೇಲೂ ಅವನೊಂದಿಗಿರುವ ಬಹು ಜನಾಂಗಗಳ
ಮೇಲೂ ವಿಪರೀತ ಮಳೆ, ದೊಡ್ಡ ದೊಡ್ಡ ಆನೆಕಲ್ಲು,
ಬೆಂಕಿ, ಗಂಧಕ, ಇವುಗಳನ್ನು ಸುರಿಸುವೆನು. ಹೀಗೆ 23
ನಾನು ನನ್ನ ಮಹಿಮೆಯನ್ನು ತೋರ್ಪಡಿಸಿ ನನ್ನ
ಗೌರವವನ್ನು ಕಾಪಾಡಿಕೊಂಡು ಬಹು ಜನಾಂಗಗಳು
ನಾನೇ ಯೆಹೋವನು ಎಂದು ತಿಳಿದುಕೊಳ್ಳುವಂತೆ
ಅವುಗಳ ಕಣ್ಣೆದುರಿಗೆ ವ್ಯಕ್ತನಾಗುವೆನು.

## 39

ನರಪುತ್ರನೇ, ನೀನು ಗೋಗನಿಗೆ ವಿರುದ್ಧವಾಗಿ
ಈ ದೈವೋಕ್ತಿಯನ್ನು ನುಡಿ—ಕರ್ತನಾದ ಯೆಹೋ
ವನು ಇಂತೆನ್ನುತ್ತಾನೆ—ರೋಷ್ ಮೆಷೆಕ್ ತೂಬಲ್
ಜನಾಂಗಗಳ ಪ್ರಭುವಾದ ಗೋಗನೇ, ಆಹಾ, ನಾನು 2
ನಿನಗೆ ವಿರುದ್ಧನಾಗಿ ನಿನ್ನನ್ನು ತಿರುಗಿಸಿ ಮುಂದರಿಸಿ
ಉತ್ತರದಿಕ್ಕಿನ ಕಟ್ಟಕಡೆಯಿಂದ ಬರಮಾಡಿ ಇಸ್ರಾ
ಯೇಲಿನ ಪರ್ವತಗಳ ಮೇಲೆ ನುಗ್ಗಿಸಿ ನಿನ್ನ ಎಡಗೈ 3
ಯೊಳಗಿಂದ ಬಿಲ್ಲನ್ನು ಹೊಡೆದು ಹಾಕಿ ನಿನ್ನ ಬಲಗೈ
ಯೊಳಗಿಂದ ಬಾಣಗಳನ್ನು ಉದುರಿಸಿಬಿಡುವೆನು.
ನೀನೂ ನಿನ್ನ ಎಲ್ಲಾ ಗುಮ್ಮಿಗಳೂ ನಿನ್ನೊಂದಿಗಿರುವ 4
ಜನಾಂಗಗಳೂ ಇಸ್ರಾಯೇಲಿನ ಪರ್ವತಗಳಲ್ಲಿ ಬಿದ್ದು
ಬಿಡುವಿರಿ; ನಾನು ನಿಮ್ಮನ್ನು ಮಾಂಸತಿನ್ನುವ ಬಗೆಬಗೆ
ಯ ಹಕ್ಕಿಗಳಿಗೂ ಭೂಜಂತುಗಳಿಗೂ ಆಹಾರಮಾಡು

1) ಪಾಠಾಂತರ: ನನಗೆ ಬೆಂಬಲದ ಸೈನ್ಯವಾಗಿರು.

5 ವೇನು; ನೀವು ಬೈಲಿನಲ್ಲಿ ಬೀಳುವಿರಿ; ನಾನೇ ಅಪ್ಪಣೆ
ಕೊಟ್ಟಿದ್ದೇನಲ್ಲಾ; ಇದು ಕರ್ತನಾದ ಯೆಹೋವನ
6 ನುಡಿ. ನಾನು ಮಾಗೋಗ್ ದೇಶದ ಮೇಲೂ ಕರಾ
ವಳಿಯ ಸೀಮೆಗಳಲ್ಲಿ ನಿರ್ಭಯವಾಗಿ ವಾಸಿಸುವವರ
ಮೇಲೂ ಬೆಂಕಿಯನ್ನು ಕಳುಹಿಸುವೆನು; ಆಗ ನಾನೇ
ಯೆಹೋವನು ಎಂದು ಅವರಿಗೆ ನಿಶ್ಚಿತವಾಗುವದು.
7 ನಾನು ನನ್ನ ಪವಿತ್ರನಾಮವನ್ನು ನನ್ನ ಜನರಾದ
ಇಸ್ರಾಯೇಲ್ಯರ ನಡುವೆ ವ್ಯಕ್ತಗೊಳಿಸುವೆನು, ಅದ
ನ್ನು ಇನ್ನು ಮುಂದೆ ಅಪಕೀರ್ತಿಗೆ ಗುರಿಯಾಗಲೀ
ಸೆನು; ನಾನೇ ಯೆಹೋವ, ಇಸ್ರಾಯೇಲಿನ ಸದ
ಮಲಸ್ವಾಮಿ ಎಂದು ಜನಾಂಗಗಳಿಗೆ ಗೊತ್ತಾಗುವದು.
8 ಕರ್ತನಾದ ಯೆಹೋವನು ಇಂತೆನ್ನುತ್ತಾನೆ—
ಇಗೋ ಬಂತು, ಸಂಭವಿಸಿತು; ನಾನು ಮುಂತಿ
9 ಳಿಸಿದ ದಿನವು ಇದೇ. ಇಸ್ರಾಯೇಲಿನ ಪಟ್ಟಣಗಳ
ನಿವಾಸಿಗಳು ಬೈಲಿಗೆ ಹೊರಟು ಶತ್ರುವಿನ ಆಯುಧ
ಗಳಿಗೆ ಬೆಂಕಿಯಿಕ್ಕಿ ಸುಟ್ಟುಬಿಡುವರು; ಹೌದು, ಖೇಡ್ಯ,
ಗುರಾಣಿ, ಬಿಲ್ಲು, ಬಾಣ, ದೊಣ್ಣೆ, ಈಟಿ ಇವುಗಳನ್ನು
ಏಳು ವರುಷಗಳ ತನಕ ಸುಡುತ್ತಲೇ ಬರುವರು;
10 ಕಾಡಿನಿಂದ ಸೌದೆಯನ್ನು ತರಬೇಕಾಗುವದಿಲ್ಲ, ವನ
ದಲ್ಲಿ ಮರವನ್ನು ಕಡಿಯಬೇಕಾಗುವದಿಲ್ಲ; ಆಯು
ಧಗಳನ್ನೇ ಉರಿಸುವರು; ತಮ್ಮನ್ನು ಸೂರೆಮಾಡಿದವ
ರನ್ನು ತಾವು ಸೂರೆಮಾಡುವರು, ತಮ್ಮನ್ನು ಕೊಳ್ಳೆ
ಹೊಡೆದವರನ್ನು ತಾವು ಕೊಳ್ಳೆಹೊಡೆಯುವರು; ಇದು
ಕರ್ತನಾದ ಯೆಹೋವನ ನುಡಿ.
11 ಆ ದಿನದಲ್ಲಿ ನಾನು ಇಸ್ರಾಯೇಲಿನೊಳಗೆ ಲವಣ
ಸಮುದ್ರದ ಮೂಡಲ ದಿಕ್ಕಿನಲ್ಲಿ ಪ್ರಯಾಣಿಕರ
ಮಾರ್ಗವಾದ ತಗ್ಗನ್ನು ಗೋಗನಿಗೆ ಹೂಳುವ ಸ್ಥಳ
ವನ್ನಾಗಿ ಏರ್ಪಡಿಸುವೆನು; ಅಲ್ಲಿ ಪ್ರಯಾಣಮಾಡಲು
ಆಗುವದಿಲ್ಲ; ಅಲ್ಲೇ ಗೋಗನನ್ನೂ ಅವನ ಸಮೂ
ಹವೆಲ್ಲವನ್ನೂ ಹೂಣಿಡುವರು; ಅದು [1]ಗೋಗನ
12 ಸಮೂಹದ ತಗ್ಗು ಅನ್ನಿಸಿಕೊಳ್ಳುವದು. ಇಸ್ರಾ
ಯೇಲ್ಯರು ದೇಶವನ್ನು ಶುದ್ಧಿಮಾಡುವದಕ್ಕಾಗಿ
ಏಳು ತಿಂಗಳು ಅವರನ್ನು ಹೂಣುತ್ತಲೇ ಇರುವರು.
13 ಹೌದು, ದೇಶದ ಸಕಲಪ್ರಜೆಗಳು ಅವರನ್ನು ಹೂಳಿ
ಬಿಡುವರು; ಹೀಗೆ ನಾನು ಪ್ರಖ್ಯಾತಿಗೊಳ್ಳುವಾಗ
ನನ್ನ ಜನರಿಗೆ ಹೆಸರುವಾಸಿಯಾಗುವದು; ಇದು ಕರ್ತ
14 ನಾದ ಯೆಹೋವನ ನುಡಿ. ತರುವಾಯ ಅವರು
ದೇಶವನ್ನು ಶುದ್ಧಿಮಾಡುವದಕ್ಕೆ ತಕ್ಕವರನ್ನು
ಆರಿಸಿ—ನೀವು ದೇಶದಲ್ಲಿ ತಿರುಗುತ್ತಾ ನೆಲದ ಮೇಲೆ
ಮಿಕ್ಕಿರುವ ಎಲುಬುಗಳನ್ನು ಹೂಣಿಡಿರೆಂದು ನಿಯತ
ವಾಗಿ ನೇಮಿಸುವರು; ಏಳು ತಿಂಗಳು ಕಳೆದ ಕೂಡ
ಲೆ ಇವರು ಈ ಹುಡುಕುವ ಕೆಲಸವನ್ನು ತೊಡಗು
15 ವರು. ದಾರಿಗರಲ್ಲಿ ಯಾವನೇ ಆಗಲಿ ಪ್ರಯಾಣಮಾ
ಡುತ್ತಿರುವಾಗ ಮನುಷ್ಯನ ಎಲುಬನ್ನು ಕಂಡರೆ ಅಲ್ಲಿ
ಒಂದು ಗುರುತನ್ನು ನಿಲ್ಲಿಸುವನು; ಹೂಣಿಡುವವರು
ಗೋಗನ ಸಮೂಹದ ತಗ್ಗಿನಲ್ಲಿ ಅದನ್ನು ಹೂಣುವ
16 ತನಕ ಆ ಗುರುತು ಹಾಗೇ ನಿಂತಿರುವದು. (ಇದ
ಲ್ಲದೆ ಒಂದು ಪಟ್ಟಣಕ್ಕೆ ಸಮೂಹಪುರವೆಂಬ ಹೆಸ
ರಾಗುವದು.) ಹೀಗೆ ದೇಶವನ್ನು ಶುದ್ಧಿಮಾಡುವರು
ಕರ್ತನಾದ ಯೆಹೋವನು ಇಂತೆನ್ನುತ್ತಾನೆ—ನ
ಪುತ್ರನೇ, ಎಲ್ಲಾ ಬಗೆಯ ಪಕ್ಷಿಗಳಿಗೂ ಸಮಸ್
ಭೂಜಂತುಗಳಿಗೂ ಹೀಗೆ ನುಡಿ—ನೀವು ಕೂಡಿಬನ್ನಿರಿ
ನಾನು ಇಸ್ರಾಯೇಲಿನ ಪರ್ವತಗಳ ಮೇಲೆ ನಿಮಗಾ
ಮಾಡುವ ಮಹಾಯಜ್ಞಕ್ಕೆ ಎಲ್ಲಾ ಕಡೆಯಿಂದಲ
ನೆರೆದು ಬಂದು ಮಾಂಸವನ್ನು ತಿಂದು ರಕ್ತವನ
ಕುಡಿಯಿರಿ. ಟಗರು ಕುರಿ ಹೋತ ಹೋರಿ ಅಂತು ಬಾಷ
ಸಿನ ಕೊಬ್ಬಿದ ಪಶುಗಳು ಅಂದರೆ ಬಲಿಷ್ಠರು, ಭೂಪ
ಗಳು ಇವರ ಮಾಂಸವೂ ರಕ್ತವೂ ನಿಮಗೆ ಸಿಕ್ಕುವವ
ನಾನು ನಿಮಗೋಸ್ಕರ ವಧಿಸಿರುವ ಯಜ್ಞಪಶುಗ
ಮಾಂಸವನ್ನು ಹೊಟ್ಟೆತುಂಬಾ ತಿನ್ನುವಿರಿ, ರಕ್ತವನ
ಅಮಲೇರ ಕುಡಿಯುವಿರಿ. ನಾನು ಸಿದ್ಧಪಡಿಸುವ
ಔತಣದಲ್ಲಿ ಕುದುರೆ ರಾಹುತ ಶೂರ ಸಕಲವಿಧವಾ
ಸೈನಿಕ ಇವರನ್ನು ಬೇಕಾದಷ್ಟು ಭಕ್ಷಿಸುವಿರಿ; ಇದ
ಕರ್ತನಾದ ಯೆಹೋವನ ನುಡಿ. ಹೀಗೆ ನಾನ
ಜನಾಂಗಗಳ ನಡುವೆ ನನ್ನ ಮಹಿಮೆಯನ್ನು ಸ್ಥಾ
ಸಲು ಆ ಸೈನಿಕರ ಮೇಲೆ ಕೈಮಾಡಿ ನ್ಯಾಯದಂಡ
ನಡಿಸಿದವನು ನಾನೇ ಎಂಬದು ಆ ಜನಾಂಗಗಳಿಗೆಲ್ಲ
ಗೋಚರವಾಗುವದು. ಮತ್ತು ಇಸ್ರಾಯೇಲ್ ವಂ
ದವರು ನಾನೇ ತಮ್ಮ ದೇವರಾದ ಯೆಹೋವನೆಂದ
ಅಂದಿನಿಂದ ಯಾವಾಗಲೂ ತಿಳಿದುಕೊಳ್ಳುವರು. ಇ
ಲ್ಲದೆ ಇಸ್ರಾಯೇಲ್ಯರು ತಮ್ಮ ಅಧರ್ಮದ ನಿಮಿತ್ತವ
ಸೆರೆಯಾಗಿಹೋದರೆಂತಲೂ ಅವರು ನನಗೆ ದ್ರೋ
ಮಾಡಿದ್ದರಿಂದ ನಾನು ಅವರಿಗೆ ವಿಮುಖನಾಗಿ ಅವ
ಲ್ಲರೂ ಖಡ್ಗಹತರಾಗುವಂತೆ ಅವರನ್ನು ಶತ್ರುವ
ಮಾಡಿದೆನೆಂತಲೂ ಜನಾಂಗಗಳಿಗೆ ಗೊತ್ತಾಗುವದು
ಅವರ ಹೊಲಸುತನಕ್ಕೂ ದುರಾಚಾರಗಳಿಗೂ ತಕ್ಕಂ
ನಾನು ಅವರನ್ನು ದಂಡಿಸಿ ಅವರಿಗೆ ವಿಮುಖನಾದೆನ
ಕರ್ತನಾದ ಯೆಹೋವನು ಇಂತೆನ್ನುತ್ತಾನೆ—
ನನ್ನ ಪವಿತ್ರನಾಮಕ್ಕೆ ಇನ್ನು ಅಪಕೀರ್ತಿ ಬಾರದಂ
ನಾನು ಈಗ ಆಗ್ರಹವುಳ್ಳವನಾಗಿ ಯಾಕೋಬ್ಯ
ದುರವಸ್ಥೆಯನ್ನು ತಪ್ಪಿಸಿ ಇಸ್ರಾಯೇಲ್ ವಂಶದವ
ಗೆಲ್ಲಾ ಕೃಪೆತೋರಿಸುವೆನು; ನಾನು ನನ್ನ ಜನರನ
ಅನ್ಯಜನಾಂಗಗಳ ವಶದಿಂದ ತಪ್ಪಿಸಿ ಆ ಶತ್ರುಗ
ದೇಶಗಳಿಂದ ಒಟ್ಟುಗೂಡಿಸಿ ಬಹು ಜನಾಂಗಗಳ ಕ
ದುರಿಗೆ ಅವರ ರಕ್ಷಣೆಯ ಮೂಲಕ ನನ್ನ ಗೌರ
ವನ್ನು ಕಾಪಾಡಿಕೊಂಡನಂತರ ಅವರು ಸ್ವದೇಶದ
ಯಾರ ಭಯವೂ ಇಲ್ಲದೆ ನೆಮ್ಮದಿಯಿಂದ ವಾಸಿಸ
ತ್ತಿರುವಾಗ ತಾವು ನನಗೆ ಮಾಡಿದ ಎಲ್ಲಾ ದ್ರೋಹಗ
ಹೊರೆಯನ್ನು ಹೊರುತ್ತಾ ನಾಚಿಕೆಪಡುವರು. ನಾನ
ಅವರನ್ನು ಜನಾಂಗಗಳೊಳಗೆ ಸೆರೆಹೋಗುವಂತೆ ಮಾ
ಆ ಮೇಲೆ ಒಟ್ಟುಗೂಡಿಸಿ ಸ್ವದೇಶಕ್ಕೆ ತಂದದರಿಂ
ನಾನೇ ತಮ್ಮ ದೇವರಾದ ಯೆಹೋವನು ಎಂದು ದೃ
ಮಾಡಿಕೊಳ್ಳುವರು. ಅವರಲ್ಲಿ ಯಾರನ್ನೂ ಸೆರೆಯ
ಬಿಟ್ಟುಬಿಡೆನು; ಇನ್ನೆಂದಿಗೂ ಅವರಿಗೆ ವಿಮುಖನಾಗೆನ
ಇಸ್ರಾಯೇಲ್ ವಂಶದ ಮೇಲೆ ನನ್ನ ಆತ್ಮವನ್ನು ಸು
ಸಿದ್ದೇನಷ್ಟೆ; ಇದು ಕರ್ತನಾದ ಯೆಹೋವನ ನುಡಿ

1) ಮೂಲ: ಹಮೋನ್‌ಗೋಗ್.

ಇಸ್ರಾಯೇಲ್ ಸಂಸ್ಥಾನದ ಭವಿಷ್ಯತ್ತಿನ ಸುಕ್ರಮ.
40—48

ನೂತನ ದೇವಾಲಯದ ವಿಧಾನ. 40—42.

ಮೂಡಣ ಹೆಬ್ಬಾಗಿಲು.

40 ನಾವು ಸೆರೆಯಾದ ಇಪ್ಪತ್ತೈದನೆಯ ವರುಷದ
ಅಂದರೆ ಪಟ್ಟಣವು ಹಾಳಾದ ಹದಿನಾಲ್ಕನೆಯ ವರು
ಷದ ಮೊದಲನೆಯ ತಿಂಗಳಿನ ಹತ್ತನೆಯ ದಿನದಲ್ಲಿ,
ಹೌದು, ಆ ದಿನದಲ್ಲೇ ನಾನು ಯೆಹೋವನ ಹಸ್ತ
ಸ್ಪರ್ಶದಿಂದ ಪರವಶನಾಗಿರಲು ಆತನು ನನ್ನನ್ನು
2 ಅಲ್ಲಿಗೆ ಒಯ್ದನು. ಆತನು ನನ್ನನ್ನು ಇಸ್ರಾಯೇಲ್
ದೇಶಕ್ಕೆ ತಂದು ಅತ್ಯುನ್ನತ ಪರ್ವತದ ಮೇಲೆ ಇಳಿ
ಸಿದನೆಂದು ದೇವರ ದರ್ಶನದಲ್ಲಿ ನನಗೆ ಕಂಡುಬಂತು.
ತೆಂಕಲಕಡೆಯಲ್ಲಿ ಆ ಪರ್ವತದ ಮೇಲೆ ಪಟ್ಟಣ
3 ದಂತಿರುವ ಒಂದು ಕಟ್ಟಡವು ಕಾಣಿಸಿತು. ಆತನು
ನನ್ನನ್ನು ಅಲ್ಲಿಗೆ ತರಲು ಇಗೋ, ತಾಮ್ರದಂತೆ ಹೊಳೆ
ಯುವ ಒಬ್ಬ ಪುರುಷನು ನಾರಿನ ಹುರಿಯನ್ನೂ
ಅಳತೇಕೋಲನ್ನೂ ಕೈಯಲ್ಲಿ ಹಿಡಿದುಕೊಂಡು ಬಾಗಿ
4 ಲಲ್ಲಿ ನಿಂತಿದ್ದನು. ಆ ಪುರುಷನು ನನಗೆ—ನರ
ಪುತ್ರನೇ, ನೀನು ಕಣ್ಣಿಟ್ಟು ನೋಡು, ಕಿವಿಗೊಟ್ಟು
ಕೇಳು; ನಾನು ನಿನಗೆ ತೋರಿಸುವದನ್ನೆಲ್ಲಾ ಮನ
ಸ್ಸಿಟ್ಟು ತಿಳಿದುಕೋ; ನಾನು ನಿನಗೆ ತೋರಿಸುವದನ್ನು
ನೀನು ನೋಡಬೇಕೆಂದೇ ಇಲ್ಲಿಗೆ ತರಲ್ಪಟ್ಟಿ; ನೀನು
ನೋಡುವದನ್ನೆಲ್ಲಾ ಇಸ್ರಾಯೇಲ್ ವಂಶದವರಿಗೆ ಪ್ರಕ
ಟಿಸು ಎಂದು ಹೇಳಿದನು.

5 ಇಗೋ, ಒಂದು ಗೋಡೆಯು ಆ ಕಟ್ಟಡವನ್ನು
ಸುತ್ತಿಕೊಂಡಿತ್ತು; ಆ ಪುರುಷನ ಕೈಯಲ್ಲಿ ಆರು
ಉದ್ದಮೊಳದ ಅಳತೇಕೋಲೊಂದಿತ್ತು (ಉದ್ದಮೊಳ
ಅಂದರೆ ಮೊಳದ ಮೇಲೆ ಒಂದು ಹಿಡಿಯುದ್ದ); ಅವನು
ಆ ಗೋಡೆಯ ದಪ್ಪವನ್ನು ಒಂದು ಕೋಲು, ಎತ್ತರ
6 ವನ್ನು ಒಂದು ಕೋಲು ಅಳೆದನು. ಆ ಮೇಲೆ ಅವನು
ಮೂಡಣ ಹೆಬ್ಬಾಗಿಲಿಗೆ ಬಂದು ಮೆಟ್ಲುಗಳನ್ನು
ಹತ್ತಿ ಹೊಸ್ತಲಿನ ಅಗಲವನ್ನು ಒಂದು ಕೋಲಳೆದನು.
ಒಂದೊಂದು ಹೊಸ್ತಲಿನ ಅಗಲವು ಒಂದೊಂದು ಕೋ
7 ಲಿತ್ತು. ಅಲ್ಲಿ [ಗೋಡೆಯಲ್ಲಿದ್ದ] ಒಂದೊಂದು ಕೋ
ಣೆಯ ಉದ್ದ ಒಂದು ಕೋಲು, ಅಗಲ ಒಂದು ಕೋಲು;
ಆ ಗೋಡೇಕೋಣೆಗಳು ಒಂದಕ್ಕೊಂದು ಐದೈದು
ಮೊಳ ದೂರವಾಗಿದ್ದವು; ದೇವಸ್ಥಾನಕ್ಕೆ ಎದುರಾಗಿ
ರುವ ಹೆಬ್ಬಾಗಿಲ ಕೈಸಾಲೆಯ ಹೊಸ್ತಲಿನ ಅಗಲವು
9 ಒಂದು ಕೋಲು1). ಆ ಮೇಲೆ ಅವನು ಹೆಬ್ಬಾಗಿಲ
ಕೈಸಾಲೆಯ ಅಗಲವನ್ನು ಅಳೆದನು; ಅದು ಎಂಟು
ಮೊಳ; ನಿಲವುಕಂಬಗಳ ಅಗಲವು ಎರಡೆರಡು ಮೊಳ;
ಹೆಬ್ಬಾಗಿಲ ಕೈಸಾಲೆಯು ದೇವಸ್ಥಾನಕ್ಕೆ ಎದುರಾ
10 ಗಿತ್ತು. ಮೂಡಣ ಹೆಬ್ಬಾಗಿಲಿನ ಎರಡು ಪಕ್ಕಗಳಲ್ಲಿ
ಮೂರು ಮೂರು ಗೋಡೇಕೋಣೆಗಳಿದ್ದವು; ಅವೆಲ್ಲಾ
ಒಂದೇ ಅಳತೆ; ಎರಡು ಪಕ್ಕಗಳಲ್ಲಿನ ನಿಲವುಕಂಬ
ಗಳೂ ಒಂದೇ ಅಳತೆಯಾಗಿದ್ದವು. ಅನಂತರ ಅವನು 11
ಹೆಬ್ಬಾಗಿಲ ದ್ವಾರವನ್ನು ಅಳೆದನು; ಅಗಲ ಹತ್ತು
ಮೊಳ; ಉದ್ದ ಹದಿಮೂರು ಮೊಳ; ಎರಡು ಪಕ್ಕಗಳ 12
ಲ್ಲಿನ 2)ಗೋಡೇಕೋಣೆಗಳ ಮುಂದೆ ಒಂದೊಂದು
ಮೊಳ ಅವಕಾಶ; ಎರಡು ಕಡೆಯ ಗೋಡೇಕೋಣೆಗಳ
ಅಗಲವು ಆರಾರು ಮೊಳ. ಅವನು ಒಂದು ಕಡೆಯ 13
ಗೋಡೇಕೋಣೆಗಳ ಮಾಳಿಗೆಯ ಹೊರಕೊನೆಯಿಂದ
ಇನ್ನೊಂದು ಕಡೆಯ ಗೋಡೇಕೋಣೆಗಳ ಮಾಳಿಗೆಯ
ಹೊರಕೊನೆಗೆ ಅಂದರೆ [ಒಂದು ಕೋಣೆಯ] ಬಾಗಿಲಿಂದ
[ಇನ್ನೊಂದು ಕೋಣೆಯ] ಬಾಗಿಲಿಗೆ ಹೆಬ್ಬಾಗಿಲಿನ ಅಗ
ಲವನ್ನು ಅಳೆಯಲು ಇಪ್ಪತ್ತೈದು ಮೊಳವಿತ್ತು. 3)ಪ್ರಾ 14
ಕಾರದಲ್ಲಿನ ನಿಲವುಕಂಬದ ವರೆಗೆ ನಿಲವುಕಂಬಗಳನ್ನು
[ಅಳತೆ] ಮಾಡಲು ಅರವತ್ತು ಮೊಳವಿದ್ದವು; ಹೆಬ್ಬಾಗಿ
ಲನ್ನು ಸುತ್ತುಮುತ್ತಲು [ಅಳೆದನು]. ಪ್ರವೇಶಸ್ಥಾನದ 15
ಹೊರಗಡೆಯಿಂದ ಒಳಕೈಸಾಲೆಯ ಕೊನೆಯ ತನಕ
ಹೆಬ್ಬಾಗಿಲು ಐವತ್ತು ಮೊಳ ಉದ್ದವಾಗಿತ್ತು. ಗೋಡೇ 16
ಕೋಣೆಗಳಲ್ಲಿಯೂ ಒಳಗಣ ಎರಡು ಕಡೆಯ ನಿಲವು
ಕಂಬಗಳಲ್ಲಿಯೂ ಕೈಸಾಲೆಗಳಲ್ಲಿಯೂ ತೆರೆಯಲಾಗದ
ಕಿಟಕಿಗಳು ಹೆಬ್ಬಾಗಿಲೊಳಗೆ ಸುತ್ತುಮುತ್ತಲಿದ್ದವು;
[ಹೊರಗಣ] ನಿಲವುಕಂಬಗಳಲ್ಲಿ ಖರ್ಜೂರ ವೃಕ್ಷಗಳು
ಚಿತ್ರಿತವಾಗಿದ್ದವು.

ಹೊರಗಣ ಪ್ರಾಕಾರ.

ಆ ಮೇಲೆ ಅವನು ನನ್ನನ್ನು ಹೊರಗಣ ಪ್ರಾಕಾ 17
ರಕ್ಕೆ ಕರತಂದನು; ಇಗೋ, ಕೋಣೆಗಳೂ ಪ್ರಾಕಾರದ
ಸುತ್ತಲು ಹಾಕಿದ ನೆಲಗಟ್ಟೂ ಕಾಣಿಸಿದವು; ಒಟ್ಟಾಗಿ
ನೆಲಗಟ್ಟಿನ ಮೇಲೆ ಮೂವತ್ತು ಕೋಣೆಗಳಿದ್ದವು.
ಆ ಕೆಳಗಣ ನೆಲಗಟ್ಟು ಹೆಬ್ಬಾಗಿಲುಗಳ ಎರಡು ಪಕ್ಕ 18
ಗಳಲ್ಲಿಯೂ ಹಾಸಲ್ಪಟ್ಟು ಅವುಗಳಷ್ಟು ಅಗಲವಾಗಿತ್ತು.
ಅವನು ಮೂಡಲಲ್ಲಿಯೂ ಬಡಗಲಲ್ಲಿಯೂ ಕೆಳಗಣ 19
ಹೆಬ್ಬಾಗಿಲಿನ ಒಳಗಡೆಯಿಂದ ಒಳಗಣ ಪ್ರಾಕಾರದ
ಹೊರಗಡೆಯ ತನಕ ಅಳೆಯಲು ನೂರು ಮೊಳವಿತ್ತು.
ಇದಲ್ಲದೆ ಹೊರಗಣ ಪ್ರಾಕಾರದ ಬಡಗಣ ಹೆಬ್ಬಾಗಿ 20
ಲಿನ ಅಗಲವನ್ನೂ ಉದ್ದವನ್ನೂ ಅಳೆದನು. ಅದರೊ 21
ಳಗೆ ಎರಡು ಕಡೆ ಗೋಡೇಕೋಣೆಗಳು ಮೂರು ಮೂರಿ
ದ್ದವು; ಅಲ್ಲಿನ ನಿಲವುಕಂಬಗಳೂ ಕೈಸಾಲೆಯೂ
ಮೊದಲನೆಯ ಹೆಬ್ಬಾಗಿಲಿನ ಅಳತೆಯಂತಿದ್ದವು; ಆ
ಹೆಬ್ಬಾಗಿಲಿನ ಉದ್ದ ಐವತ್ತು ಮೊಳ, ಅಗಲ ಇಪ್ಪ
ತ್ತೈದು ಮೊಳ. ಅಲ್ಲಿನ ಕಿಟಕಿಗಳೂ ಕೈಸಾಲೆಯೂ 22
[ಚಿತ್ರಿತವಾಗಿದ್ದ] ಖರ್ಜೂರ ವೃಕ್ಷಗಳೂ ಮೂಡಣ
ಹೆಬ್ಬಾಗಿಲಿನವುಗಳ ಅಳತೆಯಷ್ಟಿದ್ದವು; ಏಳು ಮೆಟ್ಲು
ಹತ್ತಿ ಅಲ್ಲಿಗೆ ಸೇರುತ್ತಿದ್ದರು; ಕೈಸಾಲೆಯು ಒಳಗಡೆ
ಯಿತ್ತು. [ಹೊರಗಣ ಪ್ರಾಕಾರದ] ಬಡಗಣ ಮೂಡಣ 23
ಹೆಬ್ಬಾಗಿಲುಗಳಿಗೆ ಎದುರಾಗಿ ಒಳಗಣ ಪ್ರಾಕಾರಕ್ಕೂ

1) ಇಬ್ರಿಯ ಮೂಲದ ಅನೇಕ ಪ್ರತಿಗಳಲ್ಲಿ—(8) ಅವನು ದೇವಸ್ಥಾನಕ್ಕೆ ಎದುರಾಗಿರುವ ಹೆಬ್ಬಾಗಿಲಿನ ಕೈಸಾಲೆಯನ್ನು ಒಂದು ಕೋಲು ಅಳೆದನು ಎಂಬ ವಾಕ್ಯವು ಇಲ್ಲಿ ದ್ವಿರುಕ್ತಿಯಾಗಿ ಸೇರಿದೆ. 2) ಅಥವಾ ಗೋಡೇಕೋಣೆಗಳಿಗೆ ಒಂದೊಂದು ಮೊಳ ಮುಂದಾಗಿ ಕಟಕಟೆಗಳಿದ್ದವು. 3) ಮೂಲವು ಕೇವಲ ಅಸ್ಪಷ್ಟ.

ಹೆಬ್ಬಾಗಿಲುಗಳು ಇದ್ದವು; ಒಂದು ಬಾಗಿಲಿಂದ ಎದು
24 ರುಬಾಗಿಲಿಗೆ ನೂರು ಮೊಳ ಅಳೆದನು. ಆ ಮೇಲೆ
ಅವನು ನನ್ನನ್ನು ತೆಂಕಲಿಗೆ ಕರತಂದನು. ಇಗೋ,
ಅಲ್ಲಿಯೂ ಒಂದು ಹೆಬ್ಬಾಗಿಲು; ಅವನು ಅಲ್ಲಿನ ನಿಲ
ವುಕಂಬಗಳನ್ನೂ ಕೈಸಾಲೆಯನ್ನೂ ಅಳೆಯಲು ಹಿಂದಣ
25 ಅಳತೆಗಳೇ ಕಂಡುಬಂದವು. ಅದರಲ್ಲಿಯೂ ಅದರ
ಕೈಸಾಲೆಯಲ್ಲಿಯೂ ಎಲ್ಲಾ ಕಡೆ ಅಂಥ ಕಿಟಕಿಗಳೇ
ಇದ್ದವು; ಹೆಬ್ಬಾಗಿಲಿನ ಉದ್ದ ಐವತ್ತು ಮೊಳ, ಅಗಲ
26 ಇಪ್ಪತ್ತೈದು ಮೊಳ. ಅಲ್ಲಿ ಹತ್ತುವದಕ್ಕೆ ಏಳು
ಮೆಟ್ಲುಗಳಿದ್ದವು; ಕೈಸಾಲೆಯು ಒಳಗಡೆಯಿತ್ತು; ಕೈ
ಸಾಲೆಯ ಎದುರುಬದುರಿನ ನಿಲವುಕಂಬಗಳಲ್ಲಿ ಖ
27 ಜೂರ್ರ ವೃಕ್ಷಗಳು ಚಿತ್ರಿತವಾಗಿದ್ದವು. ಒಳಗಣ
ಪ್ರಾಕಾರದಲ್ಲಿಯೂ ತೆಂಕಲಿಗೆ ಹೆಬ್ಬಾಗಿಲಿತ್ತು; ತೆಂಕ
ಲಲ್ಲಿ ಒಂದು ಬಾಗಿಲಿಂದ ಎದುರುಬಾಗಿಲಿಗೆ ನೂರು
ಮೊಳ ಅಳೆದನು.

ಒಳಗಣ ಪ್ರಾಕಾರ.

28 ಆ ಮೇಲೆ ಅವನು ನನ್ನನ್ನು ತೆಂಕಣ ಬಾಗಿಲ ಮಾರ್ಗ
ವಾಗಿ ಒಳಗಣ ಪ್ರಾಕಾರಕ್ಕೆ ಕರತಂದನು; ಅವನು
ಆ ತೆಂಕಣ ಹೆಬ್ಬಾಗಿಲನ್ನೂ ಅಲ್ಲಿನ ಗೋಡೇಕೋಣೆ,
ನಿಲವುಕಂಬ, ಕೈಸಾಲೆ ಇವುಗಳನ್ನೂ ಅಳೆಯಲು ಅಷ್ಟೇ
29 ಅಳತೆಗಳಿದ್ದವು; ಅದರಲ್ಲಿಯೂ ಅದರ ಕೈಸಾಲೆಯಲ್ಲಿ
ಯೂ ಕಿಟಕಿಗಳು ಎಲ್ಲಾ ಕಡೆಯಿದ್ದವು; ಹೆಬ್ಬಾಗಿ
ಲಿನ ಉದ್ದ ಐವತ್ತು ಮೊಳ, ಅಗಲ ಇಪ್ಪತ್ತೈದು
30 ಮೊಳ. 1)ಸುತ್ತುಮುತ್ತಲು ಕೈಸಾಲೆಗಳು ಇದ್ದವು;
ಒಂದೊಂದರ ಉದ್ದ ಇಪ್ಪತ್ತೈದು ಮೊಳ, ಅಗಲ ಐದು
31 ಮೊಳ. ಆ ಹೆಬ್ಬಾಗಿಲ ಕೈಸಾಲೆಯು ಹೊರಗಣ
ಪ್ರಾಕಾರಕ್ಕೆ ಅಭಿಮುಖವಾಗಿತ್ತು; ಅದರ ನಿಲವು
ಕಂಬಗಳಲ್ಲಿ ಖರ್ಜೂರ ವೃಕ್ಷಗಳು ಚಿತ್ರಿತವಾಗಿ
ದ್ದವು; ಅಲ್ಲಿ ಹತ್ತುವದಕ್ಕೆ ಎಂಟು ಮೆಟ್ಲುಗಳಿದ್ದವು.
32 ಅವನು ನನ್ನನ್ನು ಒಳಗಣ ಪ್ರಾಕಾರದ ಮೂಡಲಿಗೆ
ಕರತಂದು ಅಲ್ಲಿನ ಹೆಬ್ಬಾಗಿಲನ್ನೂ ಅದರ ಗೋಡೇ
ಕೋಣೆ, ನಿಲವುಕಂಬ, ಕೈಸಾಲೆ ಇವುಗಳನ್ನೂ ಅಳೆ
33 ಯಲು ಆ ಅಳತೆಗಳೇ ಕಂಡುಬಂದವು; ಅದರಲ್ಲಿಯೂ
ಅದರ ಕೈಸಾಲೆಯಲ್ಲಿಯೂ ಎಲ್ಲಾ ಕಡೆ ಕಿಟಕಿಗಳಿ
ದ್ದವು; ಆ ಹೆಬ್ಬಾಗಿಲಿನ ಉದ್ದ ಐವತ್ತು ಮೊಳ,
34 ಅಗಲ ಇಪ್ಪತ್ತೈದು ಮೊಳ. ಅದರ ಕೈಸಾಲೆಯು
ಹೊರಗಣ ಪ್ರಾಕಾರಕ್ಕೆ ಅಭಿಮುಖವಾಗಿತ್ತು; ಕೈಸಾ
ಲೆಯ ಎದುರುಬದುರಿನ ನಿಲವುಕಂಬಗಳಲ್ಲಿ ಖರ್ಜೂ
ರ ವೃಕ್ಷಗಳು ಚಿತ್ರಿತವಾಗಿದ್ದವು; ಅಲ್ಲಿ ಹತ್ತುವದಕ್ಕೆ
35 ಎಂಟು ಮೆಟ್ಲುಗಳಿದ್ದವು. ಆ ಮೇಲೆ ಅವನು ನನ್ನನ್ನು
ಬಡಗಣ ಬಾಗಿಲಿಗೆ ಕರತಂದು ಅದನ್ನೂ ಅದರ
ಗೋಡೇಕೋಣೆ, ನಿಲವುಕಂಬ, ಕೈಸಾಲೆ ಇವುಗಳನ್ನೂ

ಅಳೆಯಲು ಅಲ್ಲಿಯೂ ಆ ಅಳತೆಗಳೇ ಕಂಡುಬಂದವ
ಅದರಲ್ಲಿ ಎಲ್ಲಾ ಕಡೆ ಕಿಟಕಿಗಳಿದ್ದವು; ಅದರ ಉ
ಐವತ್ತು ಮೊಳ, ಅಗಲ ಇಪ್ಪತ್ತೈದು ಮೊಳ. ಅದ
2)ನಿಲವುಕಂಬಗಳು ಹೊರಗಣ ಪ್ರಾಕಾರಕ್ಕೆ ಅಭಿಮು
ವಾಗಿದ್ದವು; ಆ ಎದುರುಬದುರಿನ ನಿಲವುಕಂಬಗಳ
ಖರ್ಜೂರ ವೃಕ್ಷಗಳು ಚಿತ್ರಿತವಾಗಿದ್ದವು; ಅ
ಹತ್ತುವದಕ್ಕೆ ಎಂಟು ಮೆಟ್ಲುಗಳಿದ್ದವು.

ಮಧ್ಯಪೀಠಗಳೂ ಯಾಜಕರ ಕೋಣೆಗಳೂ.

3)ಹೆಬ್ಬಾಗಿಲ 4)ನಿಲವುಕಂಬಗಳ ಪಕ್ಕದಲ್ಲಿ ಒಂ
ಕೋಣೆಯೂ ಅದರ ದ್ವಾರವೂ ಕಾಣಿಸಿದವ
ಆ ಕೋಣೆಯೊಳಗೆ ಸರ್ವಾಂಗಹೋಮಪಶುಗ
ಮಾಂಸವನ್ನು ತೊಳೆಯುತ್ತಿದ್ದರು. ಹೆಬ್ಬಾಗಿಲ
ಸಾಲೆಯಲ್ಲಿ ಎರಡು ಕಡೆಯಲ್ಲಿಯೂ ಎರಡೆರಡ
ಪೀಠಗಳಿದ್ದವು; ಅವುಗಳ ಮೇಲೆ ಸರ್ವಾಂಗಹೋ
ಪಶು, ದೋಷಪರಿಹಾರಕಯಜ್ಞಪಶು, ಪ್ರಾಯಶ್ಚಿ
ಯಜ್ಞಪಶು ಇವುಗಳನ್ನು ವಧಿಸುತ್ತಿದ್ದರು. ಬಡಗ
ಹೆಬ್ಬಾಗಿಲ ಪ್ರವೇಶಸ್ಥಾನದ ಮೆಟ್ಲುಗಳ ಹತ್ತಿ
ಆ ಬಾಗಿಲ ಕೈಸಾಲೆಯ ಹೊರಗೆ ಒಂದು ಕೊನೆಯ
ಎರಡು ಪೀಠಗಳು, ಇನ್ನೊಂದು ಕೊನೆಯಲ್ಲಿ ಎರ
ಪೀಠಗಳು ಇದ್ದವು. ಹೆಬ್ಬಾಗಿಲಿನ ಎರಡು ಪಕ್ಕ
ಳಲ್ಲಿ ಇತ್ತ ನಾಲ್ಕು ಅತ್ತ ನಾಲ್ಕು ಪೀಠಗಳು, ಒಟ್ಟಿ
ಯಜ್ಞಪಶುಗಳನ್ನು ವಧಿಸುವ ಎಂಟು ಪೀಠಗಳಿದ್ದ
ಇದಲ್ಲದೆ ಸರ್ವಾಂಗಹೋಮಕ್ಕೆ ಉಪಯುಕ್ತವಾ
ಕೆತ್ತಿದ ಕಲ್ಲಿನ ನಾಲ್ಕು ಪೀಠಗಳಿದ್ದವು; ಅವುಗ
ಅಗಲ ಒಂದುವರೆ ಮೊಳ, ಉದ್ದ ಒಂದುವರೆ ಮೊ
ಎತ್ತರ ಒಂದು ಮೊಳ; ಅವುಗಳ ಮೇಲೆ ಸರ್ವಾಂ
ಹೋಮಪಶುಗಳ ವಧೆಯ ಉಪಕರಣಗಳನ್ನು ಇಡು
ದ್ದರು. 5)ಅಂಚಿನಲ್ಲಿ ಹಿಡಿಯೆತ್ತರ ದಿಂಡುಕಟ್ಟಿತ್ತು
ನೈವೇದ್ಯಮಾಂಸವು ಪೀಠಗಳ ಮೇಲಿತ್ತು. 6)
ಮೇಲೆ ಅವನು ನನ್ನನ್ನು ಒಳಗಣ ಪ್ರಾಕಾರಕ್ಕೆ ಕ
ತಂದನು; ಇಗೋ, ಅಲ್ಲಿ ಎರಡು ಕೋಣೆಗಳು ಕಾ
ಸಿದವು; ಬಡಗಣ ಹೆಬ್ಬಾಗಿಲ ಪಕ್ಕದಲ್ಲಿ ಒಂದು ಕೋ
ಣೆಯು ತೆಂಕಲಿಗೆ ಅಭಿಮುಖವಾಗಿತ್ತು; ತೆಂಕ
ಹೆಬ್ಬಾಗಿಲ ಪಕ್ಕದಲ್ಲಿ ಇನ್ನೊಂದು ಕೋಣೆಯು ಬ
ಗಲಿಗೆ ಅಭಿಮುಖವಾಗಿತ್ತು. ಆಗ ಅವನು ನನಗೆ-
ತೆಂಕಲಿಗೆ ಅಭಿಮುಖವಾಗಿರುವ ಈ ಕೋಣೆಯು ದೇ
ಲಯದ ಪಾರುಪತ್ಯವನ್ನು ನಡಿಸುವ ಯಾಜಕರಿ
ನೇಮಕವಾಗಿದೆ; ಬಡಗಲಿಗೆ ಅಭಿಮುಖವಾಗಿರು
ಆ ಕೋಣೆಯು ಯಜ್ಞವೇದಿಯ ಕಾರ್ಯದರ್ಶಿ
ಳಾದ ಯಾಜಕರಿಗೆ ನೇಮಕವಾಗಿದೆ; ಚಾದೋಕ
ಸಂತತಿಯವರಾದ ಇವರು ಲೇವಿಯ ಕುಲದವರ
ಯೆಹೋವನ ಸನ್ನಿಧಿಸೇವಕರಾಗಿದ್ದಾರೆ ಎಂದು ಹೇ

---

1) ಈ ವಚನವು ಗ್ರೀಕ್ ಮೂಲದಲ್ಲಿಲ್ಲ. 2) ಪಾಠಾಂತರ: ಕೈಸಾಲೆಯು . . . . . ಅಭಿಮುಖವಾಗಿತ್ತು; ಕೈಸಾ
3) ಇಬ್ರಿಯ ಮೂಲ: ಹೆಬ್ಬಾಗಿಲುಗಳ. 4) ಪಾಠಾಂತರ: ಕೈಸಾಲೆಯಲ್ಲಿ. 5) ಪಾಠಾಂತರ: ಹಿಡಿಯುದ್ದ ಕೊಂಡಿಗಳು
ಎಲ್ಲಾ ಕಡೆ ಹಾಕಿದ್ದವು. 6) ಮೇಲಿನದು ಗ್ರೀಕ್ ಮೂಲ; ಇಬ್ರಿಯ ಮೂಲ:—ಒಳಗಣ ಪ್ರಾಕಾರದಲ್ಲಿ ಒಳಗಣ ಹೆ
ಹೊರಗೆ ಅಂದರೆ ಬಡಗಣ ಹೆಬ್ಬಾಗಿಲ ಪಕ್ಕದಲ್ಲಿ ಗಾಯಕರ ಕೋಣೆಗಳು ತೆಂಕಲಿಗೆ ಅಭಿಮುಖವಾಗಿದ್ದವು; ಮೂಡಣ ಹೆಬ್ಬಾಗಿ
ದಲ್ಲಿ ಒಂದು ಕೋಣೆಯು ಬಡಗಲಿಗೆ ಅಭಿಮುಖವಾಗಿತ್ತು.

47 ದನು. ಆ ಮೇಲೆ ಅವನು ಪ್ರಾಕಾರವನ್ನು ಅಳೆ
ಯಲು ಅದು ನೂರು ಮೊಳ ಉದ್ದವಾಗಿಯೂ ನೂರು
ಮೊಳ ಅಗಲವಾಗಿಯೂ ಚಚ್ಚೌಕವಾಗಿತ್ತು; ಯಜ್ಞವೇ
ದಿಯು ದೇವಸ್ಥಾನದ ಮುಂದೆ ಇತ್ತು.

### ದ್ವಾರಮಂಟಪ.

48 ಕರೆಂಡಲೆ ಅವನು ನನ್ನನ್ನು ದೇವಸ್ಥಾನದ ದ್ವಾರ
ಮಂಟಪಕ್ಕೆ ಕರತಂದು ಆದನ್ನು ಅಳೆಯಲು ಅದರ
ಎದುರುಬದುರಿನ ನಿಲವುಕಂಬಗಳ ಅಗಲ ಐದೈದು
ಮೊಳ, ಬಾಗಿಲಿನ ಎರಡು ಪಕ್ಕದ [ಗೋಡೆಗಳ] ಅಗಲ
49 ಮೂರುಮೂರು ಮೊಳ, ದ್ವಾರಮಂಟಪದ ಉದ್ದ
ಇಪ್ಪತ್ತು ಮೊಳ, ಅಗಲ 1)ಹನ್ನೊಂದು ಮೊಳ
ಇದ್ದವು; 2)ಹತ್ತು ಮೆಟ್ಲುಗಳನ್ನು ಹತ್ತಿ ಅಲ್ಲಿಗೆ ಸೇರು
ತ್ತಿದ್ದರು; ಎರಡು ಕಡೆಯ ನಿಲವುಕಂಬಗಳ ಪಕ್ಕದಲ್ಲಿ
ಒಂದೊಂದು ಉಪಸ್ತಂಭವು ಇತ್ತು.

### ಪರಿಶುದ್ಧಸ್ಥಳ.

41 ಆ ಮೇಲೆ ಅವನು ನನ್ನನ್ನು ಪರಿಶುದ್ಧಸ್ಥಳಕ್ಕೆ
ತಂದು ಅದನ್ನು ಅಳೆಯಲು ಅದರ ಎದುರುಬದು
ರಿನ ನಿಲವುಕಂಬಗಳ ಅಗಲ ದೇವರ ಗುಡಾರದ ಅಗಲ
2 ದಂತೆ ಆರಾರು ಮೊಳ, ದ್ವಾರದ ಅಗಲ ಹತ್ತು ಮೊಳ,
ದ್ವಾರದ ಎರಡು ಪಕ್ಕದ ಗೋಡೆಗಳ ಅಗಲ ಐದೈದು
ಮೊಳ, ಪರಿಶುದ್ಧಸ್ಥಳದ ಉದ್ದ ನಾಲ್ವತ್ತು ಮೊಳ,
ಅಗಲ ಇಪ್ಪತ್ತು ಮೊಳ ಇದ್ದವು.

### ಮಹಾಪರಿಶುದ್ಧಸ್ಥಳ.

3 ಆ ಮೇಲೆ ಅವನು ಇನ್ನೂ ಮುಂದಕ್ಕೆ ಹೋಗಿ ಪರಿ
ಶುದ್ಧಸ್ಥಳದ ಕೊನೆಯಲ್ಲಿ [ಗರ್ಭಗೃಹವನ್ನು] ಅಳೆ
ಯಲು ದ್ವಾರದ ಒಂದೊಂದು ನಿಲವುಕಂಬದ ಅಗಲ
ಎರಡೆರಡು ಮೊಳ, ದ್ವಾರದ ಅಗಲ ಆರು ಮೊಳ, ದ್ವಾ
4 ರದ ಪಕ್ಕದ ಗೋಡೆಗಳ ಅಗಲ ಏಳೇಳು ಮೊಳ,
ಗರ್ಭಗೃಹದ ಉದ್ದ ಇಪ್ಪತ್ತು ಮೊಳ, ಅಗಲ ಇಪ್ಪತ್ತು
ಮೊಳ ಇದ್ದವು; ಆಗ ಅವನು ನನಗೆ—ಇದು ಮಹಾ
ಪರಿಶುದ್ಧಸ್ಥಳವೆಂದು ಹೇಳಿದನು.

### ದೇವಸ್ಥಾನದ ಸುತ್ತಣ ಕೊಠಡಿಗಳು.

5 ಆ ಮೇಲೆ ಅವನು ಅಳೆಯಲು ದೇವಸ್ಥಾನದ ಗೋಡೆ
ಯ ಅಗಲ ಆರು ಮೊಳ, ದೇವಸ್ಥಾನದ ಸುತ್ತುಮು
ತ್ತಲು ಎಲ್ಲಾ ಕಡೆ ಅದರ ಪಕ್ಕಗಳಿಗೆ ಅಂಟಿಕೊಂಡಿದ್ದ
ಕೊಠಡಿಗಳ ಅಗಲ ನಾಲ್ಕು ನಾಲ್ಕು ಮೊಳ ಇದ್ದವು.
6 ಆ ಕೊಠಡಿಗಳು ಒಂದರ ಮೇಲೊಂದು ಮೂರಂತ
ಸ್ತಾಗಿದ್ದವು; ಒಂದೊಂದು ಅಂತಸ್ತಿನಲ್ಲಿ ಮೂವತ್ತು
ಮೂವತ್ತಿದ್ದವು; ದೇವಸ್ಥಾನದ ಗೋಡೆಯು ಮೆಟ್ಲು
ಮೆಟ್ಲಾಗಿ ಕಟ್ಟಲ್ಪಟ್ಟಿತ್ತು. ಗೋಡೆಯಲ್ಲಿ ತೂತಿ
ಲ್ಲದೆ ಆ ಮೆಟ್ಲುಗಳೇ ಸುತ್ತಣ ಕೊಠಡಿಗಳ ತೊಲೆಗ
ಳಿಗೆ ಆಧಾರವಾಗಿದ್ದವು, 3)ಸುತ್ತಣ ಅಂತಸ್ತುಗಳು 7
ಮೇಲೆ ಮೇಲೆ ಹೋದ ಹಾಗೆಲ್ಲಾ ಆಯಾ ಕೊಠಡಿ
ಗಳ ಅಗಲವು ಹೆಚ್ಚುತ್ತಾ ಬಂತು; ಅವು ದೇವಸ್ಥಾನ
ವನ್ನು ಸುತ್ತಿಕೊಂಡು ಮೇಲೆ ಮೇಲೆ ಹೋದ ಹಾಗೆ
ಲ್ಲಾ ಅದನ್ನು ಬಿಗಿಬಿಗಿಯಾಗಿ ತಬ್ಬಿಕೊಂಡಂತೆ ಇದ್ದವು.
ಹೀಗೆ ಮೇಲುಮೇಲಿನ ಅಂತಸ್ತುಗಳು ದೇವಸ್ಥಾ
ನದ ಕಡೆಗೆ ಅಗಲವಾಗುತ್ತಾ ಬಂದವು; ಕೆಳಗಣ
ಅಂತಸ್ತಿನಿಂದ ನಡುವಣ ಅಂತಸ್ತಿನ ಮಾರ್ಗವಾಗಿ
ಮೇಲಣ ಅಂತಸ್ತಿಗೆ ಹತ್ತುತ್ತಿದ್ದರು. ದೇವಸ್ಥಾನದ 8
ಸುತ್ತುಮುತ್ತಲು ಒಂದು ಜಗಲಿಯು ಕಾಣಿಸಿತು;
ಅದು ಕೊಠಡಿಗಳಿಗೆ ತಳಹದಿಯಾಗಿ 4)ನೆಲಮಟ್ಟ
ದಿಂದ ತುಂಬಾ ಆರು ಮೊಳ ಅಳತೇಕೋಲಿನಷ್ಟು
ಎತ್ತರವಾಗಿತ್ತು. ಕೊಠಡಿಗಳ ಹೊರ ಗೋಡೆಯ 9
ದಪ್ಪವು ಐದು ಮೊಳವಿತ್ತು. 5)ದೇವಸ್ಥಾನಕ್ಕೆ ಅಂಟಿ 10
ಕೊಂಡ ಆ ಕೊಠಡಿಗಳಿಗೂ [ದೀಕ್ಷಿತ ಯಾಜಕರ]
ಕೋಣೆಗಳಿಗೂ ನಡುವೆ ದೇವಸ್ಥಾನದ ಸುತ್ತುಮುತ್ತ
ಲೂ ಇಪ್ಪತ್ತು ಮೊಳ ಅಂತರವಿತ್ತು. ಆ ಎಲ್ಲಾ ಕೊಠ 11
ಡಿಗಳ ಪ್ರವೇಶಕ್ಕೂ ಎರಡೇ ಬಾಗಿಲು, ಬಡಗಲಿ
ಗೊಂದು ತೆಂಕಲಿಗೊಂದು, ಆವೆರಡೂ ಜಗಲಿಯ ಕಡೆ
ಗಿದ್ದವು; ಆ ಜಗಲಿಯು ಎಲ್ಲಾ ಕಡೆ ಐದು ಮೊಳ
ಅಗಲವಾಗಿತ್ತು.

### ದೇವಸ್ಥಾನದ ಹಿಂದಿನ ಶಾಲೆಯ ಅಳತೆಗಳೂ ಇತರ ಅಳತೆಗಳೂ.

ಪಡುವಲಲ್ಲಿ ದೀಕ್ಷಿತರ ಪ್ರಾಕಾರದ ಹಿಂದಿನ ಶಾಲೆ 12
ಯ ಅಗಲ ಎಪ್ಪತ್ತು ಮೊಳ, ಉದ್ದ ತೊಂಭತ್ತು
ಮೊಳ, ಅದರ ಗೋಡೆಯ ದಪ್ಪ ಐದು ಮೊಳ. ಆ 13
ಪುರುಷನು ಅಳೆಯಲು ದೇವಸ್ಥಾನದ ಉದ್ದ
ನೂರು ಮೊಳವೂ ದೀಕ್ಷಿತರ ಪ್ರಾಕಾರ, ಶಾಲೆ, ಶಾಲೆ
ಯ ಗೋಡೆಗಳು, ಇವುಗಳ ಒಟ್ಟಗಲ ನೂರು
ಮೊಳವೂ, ಮೂಡಲಲ್ಲಿನ ದೇವಸ್ಥಾನ ಮುಖ, ದೀಕ್ಷಿ 14
ತರ ಪ್ರಾಕಾರ, ಇವುಗಳ ಒಟ್ಟಗಲ ನೂರು ಮೊಳ
ವೂ ಇದ್ದವು. ಅವನು ದೀಕ್ಷಿತರ ಪ್ರಾಕಾರದ ಹಿಂದಿನ 15
ಶಾಲೆಯನ್ನು ಆ ಪ್ರಾಕಾರದ ಕಡೆಯಲ್ಲಿ ಅಳೆಯಲು
ಅದರ ಉದ್ದ ಎರಡು ಪಕ್ಕದ 6)ಗೋಡೆಗಳ ಸಹಿತ
ನೂರು ಮೊಳವಿತ್ತು.

### ದೇವಸ್ಥಾನದ ಒಳಭಾಗದ ವರ್ಣನೆ.

7)ಗರ್ಭಗೃಹ, ಪ್ರಾಕಾರದಲ್ಲಿನ ದ್ವಾರಮಂಟಪ 16
ಗಳು, ಹೊಸ್ತಲುಗಳು, ತೆರೆಯಲಾಗದ ಕಿಟಕಿಗಳು,
ಹೊಸ್ತಲಿನ ಎದುರಿಗೆ ಮೂರಂತಸ್ತಾಗಿ ಸುತ್ತಲು ಕಟ್ಟ
ಲ್ಪಟ್ಟ ಗೋಡೆಯಟ್ಟಗಳು, ಇವುಗಳನ್ನೂ ಅಳೆದನು;

---

1) ಪಾಠಾಂತರ: ಹನ್ನೆರಡು. 2) ಪಾಠಾಂತರ: ಮೆಟ್ಲುಗಳನ್ನು. 3) ಮೂಲವು ಕೇವಲ ಅಸ್ಪಷ್ಟ. 4) ಮೂಲ: ಜೋಡನೆಯಿಂದ. 5) ಮೇಲಿನದು ಗ್ರೀಕ್ ಮೂಲ; ಇಬ್ರಿಯ ಮೂಲವು ಕೇವಲ ಅಸ್ಪಷ್ಟ. 6) ಈ ಪದದ ಅರ್ಥವು ನಿಶ್ಚಿತವಲ್ಲ.
7) 16, 17ನೇ ವಚನಗಳು ಕೇವಲ ಅಸ್ಪಷ್ಟ.

17 ನೆಲದಿಂದ ಕಿಟಕಿಗಳ ವರೆಗೂ ದ್ವಾರದ ಮೇಲೂ ಗರ್ಭ
ಗೃಹದ ಮತ್ತು ಈಚಿನ ಗೃಹದ ಗೋಡೆಗೆಲ್ಲಾ ಸುತ್ತು
ಮುತ್ತಲು ಹಲಿಗೆಗಳು ಚೌಕಚೌಕವಾಗಿ ಹೊದಿಸಲ್ಪ
ಟ್ಟಿದ್ದವು; ಕಿಟಕಿಗಳ [ಪಕ್ಕಗಳಿಗೂ ಹಲಿಗೆಯು] ಹೊದಿ
18 ಕೆಯಿತ್ತು. [ಆ ಚೌಕಗಳಲ್ಲಿ] ಕೆರೂಬಿಗಳೂ
ಖರ್ಜೂರ ವೃಕ್ಷಗಳೂ ಚಿತ್ರಿತವಾಗಿದ್ದವು; ಎರಡೆ
ರಡು ಕೆರೂಬಿಗಳ ನಡುವೆ ಒಂದೊಂದು ಖರ್ಜೂರ
ವೃಕ್ಷ; ಒಂದೊಂದು ಕೆರೂಬಿಗೆ ಎರಡೆರಡು ಮುಖ;
19 ಖರ್ಜೂರ ವೃಕ್ಷದ ಒಂದು ಪಕ್ಕವು ಮನುಷ್ಯಮು
ಖಕ್ಕೆ ಎದುರು, ಇನ್ನೊಂದು ಪಕ್ಕವು ಸಿಂಹಮುಖಕ್ಕೆ
ಎದುರು; ದೇವಸ್ಥಾನದ ಒಳಭಾಗವೆಲ್ಲಾ ಸುತ್ತು
20 ಮುತ್ತು ಹೀಗೆ ಚಿತ್ರಮಯವಾಗಿತ್ತು. ನೆಲದಿಂದ ದಾರ
ವಂದದ ಮೇಲ್ಮಟ್ಟದ ತನಕ ಕೆರೂಬಿಗಳೂ
21 ಖರ್ಜೂರ ವೃಕ್ಷಗಳೂ ಚಿತ್ರಿತವಾಗಿದ್ದವು. ಪರಿ
ಶುದ್ಧಸ್ಥಳದ [ಈಚಿನ] ಗೋಡೆಯ ಬಾಗಿಲ ಚೌಕಟ್ಟು
ಚಚ್ಚೌಕವಾಗಿತ್ತು; ಮಹಾ ಪರಿಶುದ್ಧಸ್ಥಳದ 1)ಈಚಿನ
22 ಗೋಡೆಯ ಚೌಕಟ್ಟೂ ಹಾಗೆಯೇ ಇತ್ತು. ಅಲ್ಲಿ
ಮರದ ವೇದಿಯೊಂದಿತ್ತು; ಅದರ ಎತ್ತರ ಮೂರು
ಮೊಳ, ಉದ್ದ ಎರಡು ಮೊಳ; ಅದರ ಮೂಲೆಗಳೂ
ಪೀಠವೂ ಪಕ್ಕಗಳೂ ಮರದ್ದೇ; ಆ ಪುರುಷನು ನನಗೆ—
ಇದು ಯೆಹೋವನ ಸಮ್ಮುಖದ ಮೇಜು ಎಂದು
23 ಹೇಳಿದನು. ಪರಿಶುದ್ಧಸ್ಥಳದ ಮತ್ತು ಮಹಾಪರಿ
ಶುದ್ಧಸ್ಥಳದ ಬಾಗಿಲುಗಳಿಗೆ ಎರಡೆರಡು ಕದಗಳು;
24 ಒಂದೊಂದು ಕದಕ್ಕೆ ಎರಡೆರಡು ಮಡಚುವ ಭಾಗ
ಗಳು; ಇತ್ತಕಡೆಯ ಕದಕ್ಕೆ ಎರಡು ಭಾಗ, ಅತ್ತ
25 ಕಡೆಯ ಕದಕ್ಕೆ ಎರಡು ಭಾಗ ಇದ್ದವು. ಆ ಕದಗಳಲ್ಲಿ,
ಅಂದರೆ ಪರಿಶುದ್ಧಸ್ಥಳದ ಕದಗಳಲ್ಲಿ ಕೆರೂಬಿಗಳೂ
ಖರ್ಜೂರ ವೃಕ್ಷಗಳೂ ಗೋಡೆಗಳಲ್ಲಿ ಚಿತ್ರಿಸಲ್ಪಟ್ಟ
ಹಾಗೆಯೇ ಚಿತ್ರಿತವಾಗಿದ್ದವು; ದ್ವಾರಮಂಟಪದ ಹೊರ
26 ಗಡೆ ಮರದ 2)ಸೂರು ಇತ್ತು. ದ್ವಾರಮಂಟಪದ
ಪಕ್ಕದ ಗೋಡೆಗಳಲ್ಲಿ ತೆರೆಯಲಾಗದ ಕಿಟಕಿಗಳೂ
[ಚಿತ್ರಿತ] ಖರ್ಜೂರ ವೃಕ್ಷಗಳೂ ಇದ್ದವು3).

ದೀಕ್ಷಿತ ಯಾಜಕರ ಕೋಣೆಗಳು.

42 ಆ ಮೇಲೆ ಅವನು ನನ್ನನ್ನು ಬಡಗಲ ಮಾರ್ಗ
ವಾಗಿ ಹೊರಗಣ ಪ್ರಾಕಾರಕ್ಕೆ ಬರಮಾಡಿ ದೀಕ್ಷಿ
ತರ ಪ್ರಾಕಾರಕ್ಕೂ ಉತ್ತರದ ಪೌಳಿಗೋಡೆಗೂ ನಡು
2 ವಣ ಕೋಣೆಗಳಿಗೆ ಕರತಂದು ಬಡಗಣ ಬಾಗಿಲುಳ್ಳ
ಕೋಣೆಗಳ ಸಾಲಿನ ಮುಂದೆ ನಿಲ್ಲಿಸಿದನು; ಆ ಸಾಲಿನ
3 ಉದ್ದವು ನೂರು ಮೊಳ; ಒಳಗಣ ಪ್ರಾಕಾರಕ್ಕೆ ಸೇರಿದ
4)ಇಪ್ಪತ್ತು ಮೊಳ ಅಗಲದ ದೀಕ್ಷಿತರ ಪ್ರಾಕಾರಕ್ಕೂ
ಹೊರಗಣ ಪ್ರಾಕಾರದ ನೆಲಗಟ್ಟಿಗೂ ನಡುವೆಯಿದ್ದ ಆ
ಪ್ರದೇಶವು ಐವತ್ತು ಮೊಳ ಅಗಲ; [ಅಲ್ಲಿನ ಎರಡು

ಸಾಲುಗಳ] ಮೂರನೆಯ ಅಂತಸ್ತಿನ ಅಂಚಿನ ದಾ
ಗಳು ಒಂದಕ್ಕೊಂದು ಎದುರಾಗಿದ್ದವು. ಆ ಸಾಲುಗ
ನಡುವೆ 5)ನೂರು ಮೊಳ ಉದ್ದದ ಹತ್ತು ಮೊ
ಅಗಲದ ಓಣಿಯೊಂದಿತ್ತು; ಕೋಣೆಗಳ ಬಾಗಿಲುಗ
ಬಡಗಲ ಕಡೆಗಿದ್ದವು. ಮೇಲಣ ಕೋಣೆಗಳು ನ
ವಣ ಮತ್ತು ಕೆಳಗಣ ಕೋಣೆಗಳಿಗಿಂತ ಇಕ್ಕಟ್ಟಾ
ದ್ದವು; ಅಂಚಿನ ದಾರಿಗಳು ಅವುಗಳ ಅಗಲವನ
ತಿಂದುಬಿಟ್ಟಿದ್ದವು. ಕೋಣೆಗಳು ಮೂರಂತಸ್ತಾ
ದ್ದವು; [ಹೊರಗಣ] ಪ್ರಾಕಾರದ ಕೋಣೆಗಳಿಗೆ ಇದ್ದ
ಈ ಕೋಣೆಗಳಿಗೆ 6)ಕೈಸಾಲೆಗಳಿರಲಿಲ್ಲ; ಆದದರಿಂ
ನೆಲಕ್ಕೆತ್ತರದಲ್ಲಿನ ಮೇಲಣ ಕೋಣೆಗಳು ಕೆಳಗ
ಮತ್ತು ನಡುವಣ ಕೋಣೆಗಳಿಗಿಂತ ಇಕ್ಕಟ್ಟಾಗಿದ್ದ
ಹೊರಗಣ ಪ್ರಾಕಾರದ ಕಡೆಗಿರುವ ಕೋಣೆಗಳ ಸಾಲಿ
ಸಮವಾಗಿ ಹೊರಗೋಡೆಯೊಂದಿತ್ತು; ಅದು ಐವತ
ಮೊಳ ಉದ್ದವಾಗಿ [ಎರಡನೆಯ] ಸಾಲಿಗೆ ಎದುರಾಗಿತ್ತ
ಹೊರಗಣ ಪ್ರಾಕಾರದ ಕಡೆಗಿರುವ ಕೋಣೆಗಳ ಸಾಲಿ
ಉದ್ದವು ಐವತ್ತು ಮೊಳ, ದೇವಸ್ಥಾನದ ಕಡೆಗಿರು
ಕೋಣೆಗಳ ಸಾಲಿನ ಉದ್ದವು ನೂರು ಮೊಳ. 7)ಕೋ
ಗಳ ಪ್ರಾಕಾರದ ಮೂಡಲಲ್ಲಿ ಕೆಳಗಿನ ಮಟ್ಟದಲ್ಲಿ
ಪ್ರಾಕಾರದ ಗೋಡೆಯ 8)ನಡುವೆ ಹೊರಗಣ ಪ್ರಾಕ
ರದಿಂದ ಅಲ್ಲಿಗೆ ಸೇರುವ ಮಾರ್ಗವಿತ್ತು. ಇದಲ್ಲ
9)ಮೂಡಲಲ್ಲಿ ದೀಕ್ಷಿತರ ಪ್ರಾಕಾರಕ್ಕೂ ಪೌಳಿಗೋ
ಗೂ ನಡುವೆ ಕೋಣೆಗಳಿದ್ದವು; ಇವುಗಳ ಮುಂ
ಓಣಿಯೊಂದಿತ್ತು; ಅವು ಬಡಗಲ ಕೋಣೆಗಳಂತೆ ಕಾ
ಸುತ್ತಿದ್ದವು, ಇವುಗಳ ಉದ್ದವೂ ಅಗಲವೂ ಅವುಗ
ಉದ್ದವೂ ಅಗಲವೂ ಒಂದೇ; ಇವುಗಳ ರಚನಾಕ್ರ
ದ್ವಾರ ನಿರ್ಗಮಸ್ಥಾನಗಳೆಲ್ಲವೂ ಅವುಗಳಂತಿದ್ದ
ತೆಂಕಲ ಕೋಣೆಗಳು ಹಾಗೆಯೇ ಇದ್ದವು. ಕೋ
ಗಳ ಪ್ರಾಕಾರವನ್ನು ಮೂಡಲಲ್ಲಿ ಸೇರುವ ಕಡೆ ಗೋ
ಡೆಯ ಪಕ್ಕದಲ್ಲೇ ಇರುವ ದಾರಿಯ ಕೊನೆಯ
ಒಂದು ಬಾಗಿಲಿತ್ತು. ಆಗ ಅವನು ನನಗೆ—ದೀಕ್ಷಿತ
ಪ್ರಾಕಾರದ ಬಡಗಣ ತೆಂಕಣ ಕಡೆಗಳಲ್ಲಿನ ಕೋ
ಗಳು ಪರಿಶುದ್ಧವಾಗಿವೆ; ಅಲ್ಲಿ ಯೆಹೋವನ ಸನ್ನಿ
ಸೇವಕರಾದ ಯಾಜಕರು ಮಹಾಪರಿಶುದ್ಧಪದ
ರ್ಥಗಳನ್ನು ಭುಜಿಸುವರು, ಮತ್ತು ಧಾನ್ಯನೈವ
ದ್ಯ, ದೋಷಪರಿಹಾರಕಯಜ್ಞದ್ರವ್ಯ, ಪ್ರಾಯಶ್ಚಿ
ಯಜ್ಞದ್ರವ್ಯ ಎಂಬೀ ಮಹಾಪರಿಶುದ್ಧಪದಾರ್ಥಗ
ನ್ನು ಅಲ್ಲಿಡುವರು; ಆ ಸ್ಥಳವು ಪರಿಶುದ್ಧವಷ್ಟೆ
ಯಾಜಕರು ಪರಿಶುದ್ಧಪ್ರಾಕಾರವನ್ನು ಪ್ರವೇಶಿಸಿ
ಮೇಲೆ ಅದನ್ನು ಬಿಟ್ಟು ಹೊರಗಣ ಪ್ರಾಕಾರಕ್ಕೆ ಹೊ
ಗಕೂಡದು; ತಮ್ಮ ದೀಕ್ಷಾವಸ್ತ್ರಗಳನ್ನು ಅಲ್ಲಿ
ತೆಗೆದಿಟ್ಟುಕೊಳ್ಳಬೇಕು, ಅವು ಪರಿಶುದ್ಧವೇ; ಆ ಮೇ
ಬೇರೆ ವಸ್ತ್ರಗಳನ್ನು ಹಾಕಿಕೊಂಡು ಸಾಮಾನ್ಯಜನ
ಪ್ರಾಕಾರಕ್ಕೆ ಬರುವರು.

1) ಮೂಲ: ಈಚಿನ ಗೋಡೆಯು ಹಾಗೆ ಇತ್ತು. ಈ ವಚನದ ಮೂಲವು ಅಸ್ಪಷ್ಟ. 2) ಮೂಲದ ಈ ಮಾತಿನ ಅ
ನಿಶ್ಚಿತವಲ್ಲ. 3) ಮೂಲದ ಈ ಸ್ಥಳದಲ್ಲಿ ದೇವಸ್ಥಾನದ ಪಕ್ಕದ ಕೊಠಡಿಗಳೂ ಸೂರುಗಳೂ ಎಂಬೀ ಹೆಚ್ಚಿನ ಪದಗಳು ಅನನ್ವಯ
ಸೇರಿವೆ. 4) ಮೂಲ: ಇಪ್ಪತ್ತಕ್ಕೂ ಹೊರಗಣ ಪ್ರಾಕಾರದ ನೆಲಗಟ್ಟಿಗೂ. 5) ಪಾಠಾಂತರ: ಒಂದು. 6) ಮೂಲ: ಕಂಬ
7) ವ. 9—12, ಈ ನಾಲ್ಕು ವಚನಗಳ ಮೂಲವು ಕೇವಲ ಅಸ್ಪಷ್ಟ. 8) ಮೂಲ: ಅಗಲದಲ್ಲಿ; ಪಾಠಾಂತರ: ಕೊನೆ
9) ಪಾಠಾಂತರ: ತೆಂಕಲಲ್ಲಿ.

ದೇವಾಲಯದ ಸುತ್ತುಮುತ್ತಣ ಅಳತೆ.

15 ಆ ಪುರುಷನು ಒಳಗಣ ಮಂದಿರವನ್ನು ಅಳೆದುಬಿಟ್ಟ
ನಂತರ ನನ್ನನ್ನು ಮೂಡಣ ಹೆಬ್ಬಾಗಿಲ ಮಾರ್ಗವಾಗಿ
ಈಚೆಗೆ ಕರತಂದು ಆಲಯವನ್ನೆಲ್ಲಾ ಸುತ್ತುಮುತ್ತಲು
16 ಅಳೆದನು. ಮೂಡಣ ದಿಕ್ಕನಲ್ಲಿ ಉದ್ದಕ್ಕೂ ಅಳತೇ
17 ಕೋಲಿನಿಂದ ಐನೂರು 1)ಕೋಲಳೆದನು. ಬಡಗಣ
ದಿಕ್ಕಿನಲ್ಲಿ ಉದ್ದಕ್ಕೂ ಅಳತೇಕೋಲಿನಿಂದ ಐನೂರು
18 1)ಕೋಲಳೆದನು. ತೆಂಕಣ ದಿಕ್ಕನಲ್ಲಿ ಅಳತೇಕೋಲಿ
19 ನಿಂದ ಐನೂರು 1)ಕೋಲಳೆದನು. ಪಡುವಣ ಗೋಡೆ
ಯ ಕಡೆಗೆ ತಿರುಗಿಕೊಂಡು ಅಳತೇಕೋಲಿನಿಂದ
20 ಐನೂರು 1)ಕೋಲಳೆದನು. ಆಲಯವನ್ನು ನಾಲ್ಕು
ಪಾರ್ಶ್ವಗಳಲ್ಲಿಯೂ ಅಳೆದನು; ಪರಿಶುದ್ಧವಾದ
ಮತ್ತು ಅಪರಿಶುದ್ಧವಾದ ಪ್ರದೇಶಗಳನ್ನು ವಿಂಗಡಿಸು
ವದಕ್ಕೆ 2)ಐನೂರಳತೇ ಕೋಲುದ್ದದ ಐನೂರಳತೇ
ಕೋಲಗಲದ ಗೋಡೆಯು ಸುತ್ತುಮುತ್ತಲಿತ್ತು.

ದೇವಾಲಯದಲ್ಲಿನ ಆರಾಧನೆ. 43—46.

ಯೆಹೋವನ ಪುನರಾಗಮನ.

43 ಆ ಮೇಲೆ ಆತನು ನನ್ನನ್ನು ಮೂಡಣ ಬಾಗಿಲಿಗೆ
2 ಬರಮಾಡಿದಾಗ ಇಗೋ, ಇಸ್ರಾಯೇಲಿನ
ದೇವರ ತೇಜಸ್ಸು ಮೂಡಣ ಮಾರ್ಗವಾಗಿ ಬಂತು;
ಆತನ ಧ್ವನಿಯು ಜಲಪ್ರವಾಹದ ಘೋಷದಂತಿತ್ತು;
ಆತನ ತೇಜಸ್ಸಿನಿಂದ ಭೂಮಿಯು ಬೆಳಗಿತು.
3 ಮೊದಲು ನನಗೆ ಕಂಡುಬಂದ ತೇಜಸ್ಸಿನಂತೆ ಅದು
ಕಾಣಿಸಿತು; ಪಟ್ಟಣವನ್ನು ಹಾಳುಮಾಡಲು ನಾನು
ಬಂದಾಗ ಎಂಥದನ್ನು ಕಂಡೆನೋ ಅಂಥದನ್ನು ಕಂಡೆನು;
ಕೆಬಾರ್ ನದಿಯ ಹತ್ತಿರ ನನಗಾದ ಅದ್ಭುತದರ್ಶನ
ದಂಥಾ ದರ್ಶನವು ಈಗಲೂ ನನಗಾಯಿತು; ಅದನ್ನು
4 ನೋಡಿ ಅಡ್ಡಬಿದ್ದೆನು. ಆಗ ಯೆಹೋವನ ತೇಜಸ್ಸು
ಮೂಡಣ ಬಾಗಿಲ ಮಾರ್ಗವಾಗಿ ದೇವಸ್ಥಾನವನ್ನು
5 ಪ್ರವೇಶಿಸಿತು. ದೇವರಾತ್ಮವು ನನ್ನನ್ನು ಎತ್ತಿ ಒಳ
ಗಣ ಪ್ರಾಕಾರಕ್ಕೆ ತರಲು ಆಹಾ, ಯೆಹೋವನ
6 ತೇಜಸ್ಸು ದೇವಸ್ಥಾನವನ್ನು ತುಂಬಿಕೊಂಡಿತ್ತು. ಆಗ
ದೇವಸ್ಥಾನದೊಳಗಿಂದ ನನ್ನನ್ನು ಸಂಬೋಧಿಸಿ ನುಡಿ
ಯುವವನ ಶಬ್ದವು ನನ್ನ ಕಿವಿಗೆ ಬಿತ್ತು; ಆ ಪುರುಷನು
7 ನನ್ನ ಪಕ್ಕದಲ್ಲಿ ನಿಂತಿದ್ದನು. ನುಡಿಯುವಾತನು
ನನಗೆ ಹೀಗೆ ಹೇಳಿದನು—ನರಪುತ್ರನೇ, ಇದು ನನ್ನ
ಸಿಂಹಾಸನಸ್ಥಾನ, ನನ್ನ ಪಾದಸನ್ನಿಧಿ; ಇಲ್ಲಿ ನಾನು
ಇಸ್ರಾಯೇಲ್ಯರ ಮಧ್ಯೆ ಸದಾ ವಾಸಿಸುವೆನು; ಇಸ್ರಾ
ಯೇಲ್ ವಂಶದವರಾಗಲಿ ಅವರ ಅರಸರಾಗಲಿ ತಮ್ಮ
ದೇವದ್ರೋಹದಿಂದಲೂ 3)ಗತಿಸಿದ ಅರಸರ ಶವಗಳಿಂದ
8 ಲೂ ನನ್ನ ಹೊಸ್ತಲುನಿಲವುಗಳ ಪಕ್ಕದಲ್ಲಿ ತಮ್ಮ
ಹೊಸ್ತಲುನಿಲವುಗಳನ್ನು ಹಾಕಿಕೊಂಡು ನನ್ನ ಮನೆ
ಗೂ ತಮ್ಮ ಮನೆಗೂ ಒಂದೇ ಗೋಡೆಯಾಗುವಂತೆ
ಮಾಡಿಕೊಳ್ಳುವದರಿಂದಲೂ ಇನ್ನು ನನ್ನ ಪವಿತ್ರನಾಮ
ವನ್ನು ಹೊಲೆಗೆಡಿಸರು; ಆಹಾ, ತಾವು ನಡಿಸಿದ ದುರಾ
ಚಾರಗಳಿಂದ ನನ್ನ ಪವಿತ್ರನಾಮವನ್ನು ಹೊಲೆಗೆಡಿಸಿ
ದರು; ಆದಕಾರಣ ನಾನು ಕೋಪಗೊಂಡು ಅವರನ್ನು
ನಾಶಮಾಡಿದೆನು. ಈಗಲಾದರೂ ತಮ್ಮ ದೇವದ್ರೋಹ 9
ವನ್ನು ಮತ್ತು ಅರಸರ ಶವಗಳನ್ನು ನನಗೆ ದೂರ
ಮಾಡಲಿ; ಆಗ ನಾನು ಅವರ ಮಧ್ಯೆ ಸದಾ ವಾಸಿ
ಸುವೆನು.

ಪ್ರವಾದಿಗೆ ಆದ ಆಜ್ಞೆ.

ನರಪುತ್ರನೇ, ಇಸ್ರಾಯೇಲ್ ವಂಶದವರು ತಮ್ಮ ಅಪ 10
ರಾಧಗಳ ನಿಮಿತ್ತ ನಾಚಿಕೆಪಡುವಂತೆ ದೇವಾಲಯ
ವನ್ನು ಅವರಿಗೆ ತೋರಿಸು; ಅವರು ಅದನ್ನು ಅಳತೆ
ಮಾಡಲಿ. ತಾವು ನಡಿಸಿದ ದುಷ್ಕೃತ್ಯಗಳಿಗೆಲ್ಲಾ ನಾಚಿಕೆ 11
ಪಟ್ಟರೆ ನೀನು ದೇವಸ್ಥಾನದ ರೂಪವನ್ನೂ ವ್ಯವ
ಸ್ಥೆಯನ್ನೂ ಗಮನಾಗಮನನಿಯಮಗಳನ್ನೂ ಸಕಲ
ರಚನಾವಿಧಾನಗಳನ್ನೂ ಸಮಸ್ತ ವಿಧಿಗಳನ್ನೂ ಸರ್ವ
ನಿರ್ಮಾಣರೀತಿಗಳನ್ನೂ ಎಲ್ಲಾ ಕಟ್ಟಳೆಗಳನ್ನೂ ಅವ
ರಿಗೆ ತಿಳಿಸಿ ಅವರು ಅದರ ಪೂರ್ಣಕ್ರಮವನ್ನೂ ಎಲ್ಲಾ
ವಿಧಿಗಳನ್ನೂ ಅನುಸರಿಸಿ ಕೈಕೊಳ್ಳುವಂತೆ ಅವರ ಕಣ್ಣೆ
ದುರಿಗೆ ಬರೆ. ಇದೇ ದೇವಸ್ಥಾನದ ನಿಯಮ; 12
ಪರ್ವತಾಗ್ರದಲ್ಲಿನ ಅದರ ಪ್ರದೇಶವೆಲ್ಲಾ ಸುತ್ತು
ಮುತ್ತಲು ಅತಿಪರಿಶುದ್ಧವಾಗಿರಬೇಕು. ಇಗೋ, ದೇವ
ಸ್ಥಾನದ ನಿಯಮವು ಇದೇ.

ಯಜ್ಞವೇದಿಯ ನಿರ್ಮಾಣಕ್ರಮ.

ಯಜ್ಞವೇದಿಯು ಉದ್ದಮೊಳದ ಅಳತೆಯ 13
ಪ್ರಕಾರ ಹೀಗಿರಬೇಕು (ಉದ್ದಮೊಳ ಅಂದರೆ ಮೊಳದ
ಮೇಲೆ ಒಂದು ಹಿಡಿಯುದ್ದ)—ಕೆಳಭಾಗದ ಎತ್ತರವು
ಒಂದು ಮೊಳ, ಮೇಲಿನ ಬಿಡುವಿನ ಅಗಲವು ಸುತ್ತ
ಲೂ ಒಂದು ಮೊಳ, ಬಿಡುವಿನ ತುದಿಯಲ್ಲಿ ಸುತ್ತಣ
ದಿಂಡಿನ ಅಗಲವು ಒಂದು ಗೇಣು; ಇದೇ ಯಜ್ಞವೇ
ದಿಯ ಪೀಠ. ನೆಲದ ಮೇಲೆ ಅಂದರೆ ಕೆಳಭಾಗದ 14
ಮೇಲೆ ಕೆಳಗಣ ಅಂತಸ್ತಿನ ಎತ್ತರವು ಎರಡು ಮೊಳ,
ಅದರ ಮೇಲಣ ಬಿಡುವಿನ ಅಗಲವು ಒಂದು ಮೊಳ;
ಆ ಚಿಕ್ಕ ಅಂತಸ್ತಿನ ಮೇಲೆ ದೊಡ್ಡ ಅಂತಸ್ತಿನ ಎತ್ತ
ರವು ನಾಲ್ಕು ಮೊಳ, ಮೇಲಣ ಬಿಡುವಿನ ಅಗಲವು
ಒಂದು ಮೊಳ. ಹೋಮಕುಂಡದ ಅಂತಸ್ತಿನ ಎತ್ತ 15
ರವು ನಾಲ್ಕು ಮೊಳ; ಆ ಹೋಮಕುಂಡದ ಮೇಲ್ಗಡೆ
ಯಲ್ಲಿ ನಾಲ್ಕು ಕೊಂಬುಗಳು ಇರಬೇಕು. ಹೋಮ 16
ಕುಂಡವು ಹನ್ನೆರಡು ಮೊಳ ಉದ್ದ ಹನ್ನೆರಡು ಮೊಳ
ಅಗಲ ಚಚ್ಚೌಕವಾಗಿರಬೇಕು. ದೊಡ್ಡ ಅಂತಸ್ತು ಹದಿ 17
ನಾಲ್ಕು ಮೊಳ ಉದ್ದವಾಗಿಯೂ ಹದಿನಾಲ್ಕು ಮೊಳ
ಅಗಲವಾಗಿಯೂ ನಾಲ್ಕು ಪಾರ್ಶ್ವಗಳಲ್ಲಿ ಸಮವಾಗಿರ
ಬೇಕು. ಸುತ್ತಣ ದಿಂಡಿನ ಅಗಲವು ಅರ್ಧ ಮೊಳ;

1) ಪಾಠಾಂತರ: ಮೊಳ ಅಳೆದನು. 2) ಅಥವಾ: ಐನೂರು ಮೊಳ ಉದ್ದದ ಐನೂರು ಮೊಳ ಅಗಲದ. 3) ಪಾಠಾಂತರ: ತಮ್ಮ ಪೂಜಾಸ್ಥಳಗಳಲ್ಲಿನ ಅರಸರ ಶವಗಳಿಂದಲೂ.

ಕೆಳಭಾಗದ ಸುತ್ತಣ ಅಂಚಿನ ಅಗಲವು ಒಂದು ಮೊಳ;
ಸೋಪಾನವು ಮೂಡಲಿಗೆ ಅಭಿಮುಖವಾಗಿರಬೇಕು.

### ಯಜ್ಞವೇದಿಯ ಪ್ರತಿಷ್ಠೆ.

18 ಆಗ ಆ ಪುರುಷನು ನನಗೆ ಹೀಗೆ ಹೇಳಿದನು—ನರ
ಪುತ್ರನೇ, ಕರ್ತನಾದ ಯೆಹೋವನು ಇಂತೆನ್ನುತ್ತಾನೆ—
ಸರ್ವಾಂಗಹೋಮಕ್ಕೂ ರಕ್ತವೆರಚುವ ಸಂಸ್ಕಾ
ರಕ್ಕೂ ಯಜ್ಞವೇದಿಯನ್ನು ನಿರ್ಮಿಸುವಾಗ ಈ ವಿಧಿಗ
19 ಳನ್ನು ಕೈಕೊಳ್ಳಬೇಕು—ಲೇವಿಯರೂ ಚಾದೋ
ಕನ ಸಂತಾನದವರೂ ನನ್ನ ಸನ್ನಿಧಿಸೇವಕರೂ ಆದ
ಯಾಜಕರಿಗೆ ನೀನು ಒಂದು ಹೋರಿಯನ್ನು ದೋಷ
ಪರಿಹಾರಕಯಜ್ಞಕ್ಕಾಗಿ ಕೊಡು. ಇದು ಕರ್ತನಾದ
20 ಯೆಹೋವನ ನುಡಿ. ಅದರ ರಕ್ತದಲ್ಲಿ ಸ್ವಲ್ಪ
ವನ್ನು ತೆಗೆದುಕೊಂಡು ಯಜ್ಞವೇದಿಯ ನಾಲ್ಕು
ಕೊಂಬುಗಳಿಗೂ ದೊಡ್ಡ ಅಂತಸ್ತಿನ ನಾಲ್ಕು ಮೂಲೆಗ
ಳಿಗೂ ಸುತ್ತಣ ದಿಂಡಿಗೂ ಹಚ್ಚಿ ಯಜ್ಞವೇದಿಯ
ದೋಷವನ್ನು ಪರಿಹರಿಸಿ ಅದನ್ನು ಶುದ್ಧಿಮಾಡು.
21 ಮತ್ತು ದೋಷಪರಿಹಾರಕಯಜ್ಞಕ್ಕಾಗಿ ವಧಿಸಲ್ಪಟ್ಟ
ಹೋರಿಯನ್ನು ನೀನು ಒಪ್ಪಿಸಲು ನೇಮಿಸಲ್ಪಟ್ಟ
ವನು ಪವಿತ್ರಾಲಯದ ಹೊರಗೆ ದೇವಸ್ಥಾನಕ್ಕೆ
ಸಂಬಂಧಪಟ್ಟ ಗೊತ್ತಾದ ಸ್ಥಳದಲ್ಲಿ ಅದನ್ನು ಸುಡ
22 ಬೇಕು. ಎರಡನೆಯ ದಿನದಲ್ಲಿ ನೀನು ಪೂರ್ಣಾಂಗ
ವಾದ ಹೋತವನ್ನು ದೋಷಪರಿಹಾರಕಯಜ್ಞಕ್ಕಾಗಿ
ಅರ್ಪಿಸು; ಹೋರಿಯಿಂದ ಯಜ್ಞವೇದಿಯನ್ನು
ಶುದ್ಧಿಮಾಡಿದಂತೆ ಹೋತದಿಂದಲೂ ಶುದ್ಧಿಮಾಡ
23 ತಕ್ಕದ್ದು. ನೀನು ಯಜ್ಞವೇದಿಯ ಶುದ್ಧೀಕಾರ್ಯ
ವನ್ನು ತೀರಿಸಿದ ಮೇಲೆ ಪೂರ್ಣಾಂಗವಾದ ಹೋರಿ
ಯನ್ನೂ ಹಿಂಡಿನಿಂದ ತಂದ ಪೂರ್ಣಾಂಗವಾದ ಟಗ
24 ರನ್ನೂ ಅರ್ಪಿಸು. ನೀನು ಅವುಗಳನ್ನು ಯೆಹೋವನಿಗೆ
ಸಮರ್ಪಿಸಲು ಯಾಜಕರು ಅವುಗಳ ಮೇಲೆ ಉಪ್ಪ
ನ್ನು ಚೆಲ್ಲಿ ಯೆಹೋವನಿಗಾಗಿ ಸರ್ವಾಂಗಹೋಮ
25 ಮಾಡಬೇಕು. ಏಳು ದಿವಸ ನೀನು ದಿನದಿನವೂ
ದೋಷಪರಿಹಾರಕ್ಕಾಗಿ ಒಂದೊಂದು ಹೋತವನ್ನು
ಅರ್ಪಿಸು; ಯಾಜಕರು ಸಹ ಪೂರ್ಣಾಂಗವಾದ ಹೋರಿ
ಯನ್ನೂ ಹಿಂಡಿನಿಂದ ತಂದ ಪೂರ್ಣಾಂಗವಾದ ಟಗ
26 ರನ್ನೂ ಅರ್ಪಿಸಲಿ. ಹೀಗೆ ಏಳು ದಿವಸ ಯಜ್ಞ
ವೇದಿಯ ದೋಷವನ್ನು ಪರಿಹರಿಸುತ್ತಾ ಅದನ್ನು ಶುದ್ಧಿ
27 ಮಾಡಿ ಪ್ರತಿಷ್ಠಿಸಬೇಕು. ಏಳು ದಿನಗಳ ಕಾರ್ಯ
ವನ್ನು ಮುಗಿಸಿದ ಬಳಿಕ ಎಂಟನೆಯ ದಿನದಲ್ಲಿಯೂ
ಮುಂದೆಯೂ ಯಾಜಕರು ಯಜ್ಞವೇದಿಯ ಮೇಲೆ
ನಿಮ್ಮ ಪಕ್ಷವಾಗಿ ಸರ್ವಾಂಗಹೋಮಗಳನ್ನೂ ಸಮಾ
ಧಾನಯಜ್ಞಗಳನ್ನೂ ಮಾಡಬೇಕು; ಆಗ ನಾನು
ನಿಮಗೆ ಪ್ರಸನ್ನನಾಗುವೆನು; ಇದು ಕರ್ತನಾದ ಯೆ
ಹೋವನ ನುಡಿ.

### ಪೂರ್ವದ್ವಾರಪ್ರವೇಶನಿಷೇಧ.

44 ತರುವಾಯ ಆ ಪುರುಷನು ನನ್ನನ್ನು ಪವಿತ್ರಾಲ
ಯದ ಮೂಡಣ ಹೊರಗಣ ಹೆಬ್ಬಾಗಿಲಿಗೆ ಪುನಃ
ಕರತಂದನು; ಅದು ಮುಚ್ಚಿತ್ತು. ಆಗ ಯೆಹೋ
ವನು ನನಗೆ—ಈ ಬಾಗಿಲು ಮುಚ್ಚಿರಬೇಕು, ಇದನ
ತೆರೆಯಕೂಡದು, ಇದರಿಂದ ಯಾರೂ ಪ್ರವೇಶಿಸದಿರಲಿ
ಇಸ್ರಾಯೇಲಿನ ದೇವರಾದ ಯೆಹೋವನು ಇ
ರಿಂದ ಪ್ರವೇಶಿಸಿದ್ದಾನಲ್ಲಾ; ಇದು ಮುಚ್ಚೇ ಇ
ಬೇಕು. ಪ್ರಭುವೋ ಯೆಹೋವನ ಸನ್ನಿಧಿಯ
ಹಬ್ಬಭೋಜನಮಾಡುವದಕ್ಕೆ ಇಲ್ಲಿ ಪ್ರಭುವಾ
ಕೂತುಕೊಳ್ಳಬಹುದು; ಅವನು ಹೆಬ್ಬಾಗಿಲ ಕೈಸ
ಲೆಯ ಮಾರ್ಗವಾಗಿ ಸೇರಿ ಅದೇ ಮಾರ್ಗವಾಗಿ ಹೊ
ಡಬೇಕು ಎಂದು ಹೇಳಿದನು.

### ಲೇವಿಯರ ಕರ್ತವ್ಯ.

ಬಳಿಕ ಆ ಪುರುಷನು ಬಡಗಣ ಹೆಬ್ಬಾಗಿಲ ಮ
ರ್ಗವಾಗಿ ನನ್ನನ್ನು ದೇವಸ್ಥಾನದ ಮುಂದುಗಡೆಗೆ ಕ
ತಂದನು; ಆಹಾ, ನಾನು ನೋಡಲಾಗಿ ಯೆಹೋ
ವನ ತೇಜಸ್ಸು ಯೆಹೋವನ ಆಲಯವನ್ನು ತುಂ
ಕೊಂಡಿತ್ತು; ಅದನ್ನು ನೋಡಿ ಅಡ್ಡಬಿದ್ದೆನು. ಆ
ಯೆಹೋವನು ನನಗೆ ಹೀಗೆ ಹೇಳಿದನು—ನರಪುತ್ರನೇ
ಯೆಹೋವನ ಆಲಯದ ಸಕಲ ನಿಯಮನಿಷ್ಠೆಗ
ವಿಷಯವಾಗಿ ನಾನು ನಿನಗೆ ಹೇಳುವದನ್ನೆಲ್ಲಾ ನೀನ
ಕಿವಿಯಾರೆ ಕೇಳಿ ಕಣ್ಣಾರೆ ಕಂಡು ಮಂದಟ್ಟು ಮ
ಡಿಕೋ; ಮತ್ತು ಪವಿತ್ರಾಲಯದ ಗಮನಾಗಮ
ವಿಧಿಗಳನ್ನು ಗಮನಿಸು. ಇದಲ್ಲದೆ ನೀನು
ದ್ರೋಹಿಗಳಿಗೆ ಅಂದರೆ ಇಸ್ರಾಯೇಲ್ ವಂಶದವರಿ
ಹೀಗೆ ನುಡಿ—ಕರ್ತನಾದ ಯೆಹೋವನು ಇಂತೆನ್ನು
ತ್ತಾನೆ—ಇಸ್ರಾಯೇಲ್ ವಂಶದವರೇ, ನೀವು ನನ
ಆಹಾರವಾದ ರಕ್ತಮೇದಸ್ಸುಗಳನ್ನು ಅರ್ಪಿಸುವಾ
ತನುಮನಗಳಲ್ಲಿ ಸುನ್ನತಿಹೀನರಾದ ಮ್ಲೇಚ್ಛರನ್ನು
ನನ್ನ ಪವಿತ್ರಾಲಯದೊಳಗೆ ಬರಮಾಡಿ ನನ್ನ ಮಂದಿ
ವನ್ನು ಹೊಲೆಗೆಡಿಸಿ ನನ್ನ ಒಡಂಬಡಿಕೆಯನ್ನು ಭಂ
ಪಡಿಸಿ ನಿಮ್ಮ ಅಮಿತದುರಾಚಾರಗಳ ಲೆಕ್ಕವನ್ನು ಹೆಚ್ಚ
ಸಿದ್ದೀರಿ; ನೀವು ನನ್ನ ಪರಿಶುದ್ಧವಸ್ತುಗಳ ಪಾರ
ಪತ್ಯ ಮಾಡಲಿಲ್ಲ; ಈ ಮ್ಲೇಚ್ಛರನ್ನು ನನ್ನ ಪವಿತ್ರಾ
ಲಯದಲ್ಲಿ ನನ್ನ ವಸ್ತುಗಳ ಮೇಲೆ ಪಾರುಪತ್ಯಗಾ
ರನ್ನಾಗಿ ನೇಮಿಸಿಕೊಂಡಿರಿ; ನಿಮ್ಮ ಅಪಾರದುರಾಚಾ
ಗಳು ಇನ್ನು ಸಾಕು. ಕರ್ತನಾದ ಯೆಹೋವನ
ಇಂತೆನ್ನುತ್ತಾನೆ—ಇಸ್ರಾಯೇಲ್ಯರಲ್ಲಿ ಸೇರಿಕೊಂ
ರುವ ಮ್ಲೇಚ್ಛರೊಳಗೆ ತನುಮನಗಳಲ್ಲಿ ಸುನ್ನತಿಹೀ
ನಾದ ಯಾವನೂ ನನ್ನ ಪವಿತ್ರಾಲಯವನ್ನು ಪ್ರವೇ
ಸಕೂಡದು. ಇಸ್ರಾಯೇಲ್ಯರು ನನ್ನನ್ನು ತೊರೆದಾ
ನನ್ನಿಂದಗಲಿ ತಮ್ಮ ಬೊಂಬೆಗಳ ಕಡೆಗೆ ತಿರುಗಿಕೊಂಡ
ನನಗೆ ದೂರವಾಗಿ ಹೋದ ಲೇವಿಯರು ತಮ್ಮ ದೋ
ಫಲವನ್ನು ಅನುಭವಿಸುವರು. ಅವರು ನನ್ನ ಪವಿತ್ರಾ
ಲಯದಲ್ಲಿ ಪರಿಚಾರಕರೂ ಮಂದಿರದ್ವಾರಪಾಲಕರು
ಆಗಿ ಮಂದಿರದಲ್ಲಿ ಸೇವೆಮಾಡಬೇಕು; ಜನರ ಪಕ್ಷ
ವಾಗಿ ಸರ್ವಾಂಗಹೋಮಪಶುವನ್ನೂ [ಸಮಾಧಾನ
ಯಜ್ಞಪಶುವನ್ನೂ ವಧಿಸಿ ಅವರಿಗೆ ಸೇವೆಮಾಡಲ
ಸಿದ್ಧರಾಗಿರಬೇಕು. ಅವರು ತಮ್ಮ ಬೊಂಬೆಗ
ಮುಂದೆ ಜನರಿಗಾಗಿ ಸೇವೆಮಾಡಿ ಇಸ್ರಾಯೇಲ್ ವಂ

ದವರಿಗೆ ಪಾಪಕಾರಿವಿಘ್ನವಾದದರಿಂದ ನಾನು ಅವರ
ಮೇಲೆ ಕೈಯೆತ್ತಿದ್ದೇನೆ, ಅವರು ತಮ್ಮ ದೋಷಫಲ
ವನ್ನು ಅನುಭವಿಸೇ ತೀರಬೇಕು; ಇದು ಕರ್ತನಾದ
13 ಯೆಹೋವನ ನುಡಿ. ಅವರು ನನಗೆ ಯಾಜಕಸೇವೆ
ಮಾಡುವದಕ್ಕೆ ನನ್ನ ಸನ್ನಿಧಿಗೆ ಸೇರಕೂಡದು; ನನ್ನ
ಅತಿಪವಿತ್ರವಾದ ಪರಿಶುದ್ಧವಸ್ತುಗಳಲ್ಲಿ ಯಾವದನ್ನೂ
ಸಮೀಪಿಸಬಾರದು; ತಮಗಾದ ಅವಮಾನವನ್ನೂ
ತಾವು ನಡಿಸಿದ ದುರಾಚಾರಗಳ ಫಲವನ್ನೂ ಅನುಭವಿ
14 ಸುವರು. ದೇವಾಲಯದ ಸಕಲ ಸೇವೆಯಲ್ಲಿಯೂ
ಅಲ್ಲಿ ನಡೆಯುವ ಸಮಸ್ತ ಕಾರ್ಯಗಳಲ್ಲಿಯೂ ಸೇವ
ಕವೃತ್ತಿಯನ್ನೇ ಅವರಿಗೆ ಕೊಡುವೆನು.

ಯಾಜಕರ ವಿಷಯವಾದ ವಿವಿಧ ನಿಯಮಗಳು.

15 ಆದರೆ ಇಸ್ರಾಯೇಲ್ಯರು ನನ್ನನ್ನು ತೊರೆದಾಗ ಲೇ
ವಿಯರೂ ಚಾದೋಕನ ಸಂತಾನದವರೂ ಆದ ಯಾ
ಜಕರು ನನ್ನ ಪವಿತ್ರಾಲಯದ ಪಾರುಪತ್ಯವನ್ನು
ನೆರವೇರಿಸಿದ್ದರಿಂದ ಅವರು ನನ್ನನ್ನು ಸೇವಿಸಲು ನನ್ನ
ಸನ್ನಿಧಿಗೆ ಸೇರುವರು, ನನಗೆ ರಕ್ತಮೇದಸ್ಸುಗಳನ್ನು
ಅರ್ಪಿಸಲು ನನ್ನ ಸಮ್ಮುಖದಲ್ಲಿ ನಿಂತುಕೊಳ್ಳುವರು;
16 ಇದು ಕರ್ತನಾದ ಯೆಹೋವನ ನುಡಿ. ಅವರು ನನ್ನ
ಪವಿತ್ರಾಲಯವನ್ನು ಪ್ರವೇಶಿಸಿ ನನ್ನ ಸೇವೆಮಾಡುವ
ದಕ್ಕೆ ನನ್ನ 1)ವೇದಿಯನ್ನು ಸಮೀಪಿಸಿ ನನ್ನ [ಆಲ
17 ಯದ] ಪಾರುಪತ್ಯವನ್ನು ವಹಿಸುವರು. ಅವರು ಒಳ
ಗಣ ಪ್ರಾಕಾರದ ಬಾಗಿಲುಗಳನ್ನು ಪ್ರವೇಶಿಸುವಾಗ
ನಾರುಬಟ್ಟೆಗಳನ್ನು ಧರಿಸಿರಬೇಕು; ಒಳಗಣ ಪ್ರಾಕಾ
ರದ ಬಾಗಿಲುಗಳಲ್ಲಿಯೂ ದೇವಸ್ಥಾನದಲ್ಲಿಯೂ ಸೇವೆ
ಮಾಡುತ್ತಿರುವಾಗ ಯಾವ ಉಣ್ಣೆಯ ಉಡುಪೂ ಅವರ
18 ಮೇಲೆ ಇರಕೂಡದು. ಅವರು ತಲೆಗೆ ನಾರಿನ ಮುಂ
ಡಾಸವನ್ನು, ಸೊಂಟಕ್ಕೆ ನಾರಿನ ಚಡ್ಡಿಯನ್ನು ಹಾಕಿ
ಕೊಂಡಿರಲಿ; ಬೆವರುವ ಯಾವ ಉಡುಪನ್ನೂ ಉಟ್ಟು
19 ಕೊಳ್ಳಬಾರದು. ಅವರು ಹೊರಗಣ ಪ್ರಾಕಾರಕ್ಕೆ
ಅಂದರೆ ಅಲ್ಲಿನ ಜನರ ಬಳಿಗೆ ಹೊರಡುವಾಗ ತಮ್ಮ
ದೀಕ್ಷಾವಸ್ತ್ರಗಳನ್ನು ಅವರಿಗೆ ತಗಲಿಸಿ ಅವರನ್ನು ಪರಿ
ಶುದ್ಧರಾಗಮಾಡದಂತೆ ಅವುಗಳನ್ನು ತೆಗೆದು ಪರಿಶು
ದ್ಧವಾದ ಕೋಣೆಗಳಲ್ಲಿ ಇಟ್ಟು ಬೇರೆ ವಸ್ತ್ರಗಳನ್ನು
20 ಹಾಕಿಕೊಳ್ಳಲಿ. ಅವರು ತಲೆಬೋಳಿಸಬಾರದು;
ಕೂದಲನ್ನು ಬೆಳಸಬಾರದು, ಕತ್ತರಿಸಿಕೊಂಡಿರಬೇಕು.
21 ಒಳಗಣ ಪ್ರಾಕಾರವನ್ನು ಪ್ರವೇಶಿಸುವಾಗ ಯಾವ
ಯಾಜಕನೂ ದ್ರಾಕ್ಷಾರಸವನ್ನು ಕುಡಿದಿರಬಾರದು.
22 ಯಾಜಕರು ವಿಧವೆಯನ್ನಾಗಲಿ ಗಂಡನಿಂದ ಬಿಡಲ್ಪ
ಟ್ಟವಳನ್ನಾಗಲಿ ಮದುವೆಯಾಗಬಾರದು; ಆದರೆ
ಇಸ್ರಾಯೇಲ್ ವಂಶದ ಕನ್ಯೆಯನ್ನಾಗಲಿ ಯಾಜಕನ
23 ವಿಧವೆಯನ್ನಾಗಲಿ ಮದುವೆಮಾಡಿಕೊಳ್ಳಲಿ. ಮೀಸ
ಲಾದದ್ದಕ್ಕೂ ಮೀಸಲಲ್ಲದ್ದಕ್ಕೂ ಭೇದವನ್ನು ನನ್ನ
ಜನರಿಗೆ ತೋರಿಸಿ ಶುದ್ಧಾಶುದ್ಧವಿವೇಚನೆಯನ್ನು
24 ಅವರಿಗೆ ಬೋಧಿಸಲಿ. ವ್ಯಾಜ್ಯವಾಗುವಲ್ಲಿ ಅದನ್ನು
ತೀರಿಸಲು ನಿಂತು ನನ್ನ ನ್ಯಾಯವಿಧಿಗಳಿಗೆ ಅನುಸಾರ
ವಾಗಿ ತೀರಿಸಲಿ; ನಾನು ಏರ್ಪಡಿಸಿದ ಹಬ್ಬಗಳಲ್ಲಿ
ನನ್ನ ನಿಯಮನಿಷ್ಠೆಗಳನ್ನು ಕೈಕೊಂಡು ನನ್ನ ಸಬ್ಬ
ತ್ತುಗಳು ಆಚರಿಸಲ್ಪಡುವಂತೆ ನೋಡಿಕೊಳ್ಳಲಿ.
ಸತ್ತವರ ಹೆಣವನ್ನು ಸಮೀಪಿಸಿ ತಮ್ಮನ್ನು ಅಪವಿತ್ರ 25
ಮಾಡಿಕೊಳ್ಳಬಾರದು; ಆದರೆ [ಸತ್ತ] ತಂದೆ, ತಾಯಿ,
ಮಗನು, ಮಗಳು, ತಮ್ಮ, ಮದುವೆಯಿಲ್ಲದ ತಂಗಿ,
ಇವರಿಗೋಸ್ಕರ ಒಬ್ಬನು ತನ್ನನ್ನು ಅಪವಿತ್ರಮಾಡಿ
ಕೊಳ್ಳಬಹುದು; ಅಂಥವನನ್ನು ಶುದ್ಧನಾದ ಮೇಲೂ 26
ಏಳು ದಿವಸ ಪ್ರತ್ಯೇಕಿಸಬೇಕು. ಅವನು ಸೇವೆ 27
ಮಾಡಲು ಪವಿತ್ರಾಲಯವನ್ನು ಪ್ರವೇಶಿಸಿ ಒಳಗಣ
ಪ್ರಾಕಾರಕ್ಕೆ ಸೇರುವ ದಿನದಲ್ಲಿ ತನ್ನ ದೋಷಪರಿ
ಹಾರಕ್ಕಾಗಿ ಬಲಿಯನ್ನು ಅರ್ಪಿಸಬೇಕು; ಇದು ಕರ್ತ
ನಾದ ಯೆಹೋವನ ನುಡಿ. ಯಾಜಕರಿಗೆ ಒಂದು 28
ಸ್ವಾಸ್ತ್ಯವಾಗುವದು, ನಾನೇ ಅವರ ಸ್ವಾಸ್ತ್ಯ;
ಇಸ್ರಾಯೇಲಿನಲ್ಲಿ ಅವರಿಗೆ ಯಾವ ಆಸ್ತಿಯನ್ನೂ
ಕೊಡಬಾರದು; ನಾನೇ ಅವರಿಗೆ ಆಸ್ತಿ. ಅವರು 29
ಧಾನ್ಯನೈವೇದ್ಯವನ್ನೂ ದೋಷಪರಿಹಾರಕಯಜ್ಞದ್ರವ್ಯ
ವನ್ನೂ ಪ್ರಾಯಶ್ಚಿತ್ತಯಜ್ಞದ್ರವ್ಯವನ್ನೂ ಅನುಭವಿ
ಸಲಿ; ಕೇವಲ ಯೆಹೋವನದಾಗಿಯೇ ಇರಲೆಂದು
ಇಸ್ರಾಯೇಲ್ಯರು ಹರಕೆಮಾಡಿಕೊಡುವದೆಲ್ಲವೂ ಅವ
ರಿಗೆ ಸಲ್ಲಬೇಕು. ಎಲ್ಲಾ ಪ್ರಥಮಫಲಗಳಲ್ಲಿ 30
ಉತ್ಕೃಷ್ಟವಾದದ್ದೂ ನೀವು ನನಗೆ ಪ್ರತ್ಯೇಕಿಸಿ
ಸಮರ್ಪಿಸುವ ಎಲ್ಲಾ ಪದಾರ್ಥಗಳೂ ಅವರಿಗಾಗ
ಬೇಕು; ನಿಮ್ಮ ಮನೆಯು ಆಶೀರ್ವಾದಕ್ಕೆ ನೆಲೆಯಾ
ಗುವಂತೆ ನೀವು ಮೊದಲನೆಯ ಹಿಟ್ಟನ್ನು ಯಾಜಕ
ರಿಗೆ ಕೊಡತಕ್ಕದ್ದು. ಯಾಜಕರು ತಾನಾಗಿ ಸತ್ತು 31
ಬಿದ್ದ ಅಥವಾ ಕಾಡುಮೃಗದಿಂದ ಕೊಲ್ಲಲ್ಪಟ್ಟ ಪಕ್ಷಿ
ಯನ್ನಾಗಲಿ ಪಶುವನ್ನಾಗಲಿ ತಿನ್ನಬಾರದು.

ಮೀಸಲಭೂಮಿ ಮತ್ತು ಪ್ರಭುವಿನ ಸ್ವಾಸ್ತ್ಯ.

45
ನೀವು ದೇಶವನ್ನು ಸ್ವಾಸ್ತ್ಯಸ್ವಾಸ್ತ್ಯವಾಗಿ ಹಂಚು
ವಾಗ ಒಂದು ಭಾಗವನ್ನು ಮೀಸಲಾಗಿ ಪ್ರತ್ಯೇಕಿಸಿ
ಯೆಹೋವನಿಗೆ ಸಮರ್ಪಿಸಬೇಕು; ಅದರ ಉದ್ದವು
ಇಪ್ಪತ್ತೈದು ಸಾವಿರ ಮೊಳ, ಅಗಲವು 2) ಇಪ್ಪತ್ತು
ಸಾವಿರ ಮೊಳ; ಆ ಪ್ರಾಂತವೆಲ್ಲಾ ಸುತ್ತುಮುತ್ತಲು
ಪರಿಶುದ್ಧವಾಗಿರಬೇಕು. ಇದರಲ್ಲಿ ಐನೂರು ಮೊಳ 2
ಉದ್ದದ ಐನೂರು ಮೊಳ ಅಗಲದ ಚಚ್ಚೌಕ
ವಾದ ಸ್ಥಳವು ಪವಿತ್ರಾಲಯಕ್ಕೆ ನಿವೇಶನವಾಗಿರುವದು;
ಅದರ ಸುತ್ತ ಐವತ್ತು ಮೊಳ ಅಗಲ ಉಳಿದ ಭೂಮಿ
ಇರುವದು. ಮೊದಲು ಅಳೆದ ಕ್ಷೇತ್ರದಲ್ಲಿ ಇಪ್ಪ 3
ತ್ತೈದು ಸಾವಿರ ಮೊಳ ಉದ್ದದ ಹತ್ತು ಸಾವಿರ ಮೊಳ
ಅಗಲದ ಒಂದು ಅಂಶವನ್ನು ಅಳೆ; ಇದರಲ್ಲಿ ಅತಿ
ಪರಿಶುದ್ಧವಾದ ಪವಿತ್ರಾಲಯವು ಇರಬೇಕು. ಇದು 4
ದೇಶದಲ್ಲಿ ಪರಿಶುದ್ಧ ಭಾಗ; ಇದು ಪವಿತ್ರಾಲ
ಯದ ಅರ್ಚಕರೂ ಯೆಹೋವನ ಸನ್ನಿಧಿಸೇವಕರೂ
ಆದ ಯಾಜಕರಿಗೆ ಸಲ್ಲತಕ್ಕದು; ಇದು ಯಾಜಕರ
ಮನೆಗಳಿಗೆ ಅಗ್ರಹಾರವಾಗಿಯೂ ಪವಿತ್ರಾಲಯಕ್ಕೆ

1) ಮೂಲ: ಮೇಜನ್ನು. 2) ಮೇಲಿನದು ಗ್ರೀಕ್ ಮೂಲ; ಇಬ್ರಿಯ ಮೂಲ: ಹತ್ತು.

5 ಪವಿತ್ರಸ್ಥಾನವಾಗಿಯೂ ಇರುವದು. ದೇವಾಲಯದ
ಸೇವಕರಾದ 1)ಲೇವಿಯರು ಊರುಗಳನ್ನು ಕಟ್ಟಿ
ಕೊಂಡು ವಾಸಿಸುವಂತೆ ಇಪ್ಪತ್ತೈದು ಸಾವಿರ ಮೊಳ
ಉದ್ದದ ಹತ್ತು ಸಾವಿರ ಮೊಳ ಅಗಲದ ಕ್ಷೇತ್ರವು
6 ಅವರಿಗೆ ಸ್ವಾಸ್ತ್ಯವಾಗುವದು. ನೀವು ನನಗೆ ಸಮ
ರ್ಪಿಸುವ ಪರಿಶುದ್ಧ ಭಾಗದ ಪಕ್ಕಪಕ್ಕದಲ್ಲಿ ಐದು
ಸಾವಿರ ಮೊಳ ಅಗಲದ ಇಪ್ಪತ್ತೈದು ಸಾವಿರ ಮೊಳ
ಉದ್ದದ ಕ್ಷೇತ್ರವನ್ನು ರಾಜಧಾನಿಗೆ ಒಳಪಟ್ಟ ಭೂಮಿ
ಯನ್ನಾಗಿ ನೇಮಿಸಬೇಕು; ಅದರಲ್ಲಿ ಇಸ್ರಾಯೇಲ್
7 ವಂಶದವರಿಗೆಲ್ಲಾ ಹಕ್ಕಿರುವದು. ಪ್ರಭುವಿನ ಸ್ವಾ
ಸ್ತ್ಯವು ನೀವು ಮೀಸಲಾಗಿ ಸಮರ್ಪಿಸುವ ಕ್ಷೇತ್ರಕ್ಕೂ
ರಾಜಧಾನಿಗೆ ಒಳಪಟ್ಟ ಭೂಮಿಗೂ ಉಭಯಪಾರ್ಶ್ವ
ಗಳಲ್ಲಿರುವದು; ನೀವು ಮೀಸಲಾಗಿ ಸಮರ್ಪಿಸುವ
ಕ್ಷೇತ್ರದ ಮತ್ತು ರಾಜಧಾನಿಗೆ ಒಳಪಟ್ಟ ಭೂಮಿಯ
ಪಡುವಲಲ್ಲಿ ಅದು ಪಡುವಲಿಗೆ ಹರಡುವದು, ಮೂಡ
ಲಲ್ಲಿ ಮೂಡಲಿಗೆ ಹರಡುವದು, ಅದರ ಉದ್ದವು ಪಡು
ವಲಿಂದ ಮೂಡಲಿಗೆ ಒಂದು ಕುಲದ ಸ್ವಾಸ್ತ್ಯದ
8 ಉದ್ದಕ್ಕೆ ಸರಿಸಮಾನವಾಗಿರುವದು. ಅದು ಅವನಿಗೆ
ಇಸ್ರಾಯೇಲಿನಲ್ಲಿ ಭೂಸ್ವಾಸ್ತ್ಯವಾಗುವದು; ಇನ್ನು
ಮೇಲೆ ನನ್ನ ಪ್ರಭುಗಳು ನನ್ನ ಪ್ರಜೆಗಳನ್ನು ಹಿಂಸಿಸರು;
ದೇಶದ ಭೂಮಿಯನ್ನು ಇಸ್ರಾಯೇಲ್ಯರಿಗೆ ಕುಲ
ಕುಲಕ್ಕೂ ಹಂಚುವರು.

### ಪ್ರಭುವಿನ ಕರ್ತವ್ಯ.

9 ಕರ್ತನಾದ ಯೆಹೋವನು ಇಂತೆನ್ನುತ್ತಾನೆ—ಇಸ್ರಾ
ಯೇಲಿನ ಪ್ರಭುಗಳೇ, ಇನ್ನು ಸಾಕು, ಸಾಕು; ಕೊಳ್ಳೆ
ಯನ್ನೂ ಬಲಾತ್ಕಾರವನ್ನೂ ತ್ಯಜಿಸಿ ನೀತಿನ್ಯಾಯ
ಗಳನ್ನು ನಡಿಸಿರಿ; ನನ್ನ ಜನರ ಬಾಧ್ಯತೆಗಳನ್ನು ತಪ್ಪಿ
ಸುವ ಅನ್ಯಾಯವನ್ನು ಬಿಟ್ಟುಬಿಡಿರಿ; ಇದು ಕರ್ತ
10 ನಾದ ಯೆಹೋವನ ನುಡಿ. ನಿಮ್ಮ ತಕ್ಕ
ಡಿಯೂ ಧಾನ್ಯದ ಅಳತೆಯೂ ರಸದ್ರವ್ಯದ ಅಳ
11 ತೆಯೂ ನ್ಯಾಯವಾಗಿಯೇ ಇರಬೇಕು. ಏಫಾ
[ಎಂಬ ಧಾನ್ಯದ ಅಳತೆಯು] ಮತ್ತು ಬತ್ [ಎಂಬ
ರಸದ್ರವ್ಯದ ಅಳತೆಯು] ಒಂದೇ ಪ್ರಮಾಣ
ವಾಗಿರತಕ್ಕದ್ದು; ಬತ್ ಎಂಬದು ಹೋಮೆರಿನ ಹತ್ತ
ನೆಯ ಒಂದು ಪಾಲು, ಏಫಾ ಎಂಬದು 2)ಹೋಮೆ
ರಿನ ಹತ್ತನೆಯ ಒಂದು ಪಾಲು; ಈ ಎರಡೂ ಹೋ
12 ಮೆರ್ ಅಳತೆಗೆ ಸಂಬಂಧವಾಗಿರಬೇಕು. ತೊಲೆಯು
ಇಪ್ಪತ್ತು ಗೇರಾ ತೂಕವಾಗಿರಬೇಕು; 3)ನಿಮ್ಮಲ್ಲಿ
ಸಲ್ಲುವ ಮಾನೆಯು ಇಪ್ಪತ್ತು, ಇಪ್ಪತ್ತೈದು [ಅಥವಾ]
13 ಹದಿನೈದು ತೊಲೆಯ ತೂಕದ್ದಾಗಿರಲಿ. ಕರ್ತನಾದ
ಯೆಹೋವನು ಇಂತೆನ್ನುತ್ತಾನೆ—ನೀವು ನಿಮ್ಮ ದೋಷ
ಪರಿಹಾರಕ್ಕಾಗಿ ಧಾನ್ಯನೈವೇದ್ಯವನ್ನೂ ಸರ್ವಾಂಗ
ಹೋಮವನ್ನೂ ಸಮಾಧಾನಯಜ್ಞವನ್ನೂ ಮಾಡು
ವದಕ್ಕೋಸ್ಕರ ಸಮರ್ಪಿಸತಕ್ಕದೇನಂದರೆ ಒಂದು

ಹೋಮೆರ್ ಅಳತೆಯ ಗೋದಿಯಲ್ಲಿ ಏಫಾ ಅಳತೆ
ಆರನೆಯ ಒಂದು ಪಾಲು; ಒಂದು ಹೋಮೆರ್
ತೆಯ ಜವೆಗೋದಿಯಲ್ಲಿ ಏಫಾ ಅಳತೆಯ ಆರನೆ
ಒಂದು ಪಾಲು; ಒಂದು ಬತ್ ಎಣ್ಣೆಯಲ್ಲಿ ಸಮರ್ಪಿ
ಬೇಕಾದ ಭಾಗವೆಷ್ಟಂದರೆ ಒಂದು ಕೋರ್ ಅಂ
ಹತ್ತು ಬತ್ ಅಥವಾ ಒಂದು ಹೋಮೆರ್ ಅಳತೆ
ಎಣ್ಣೆಯಲ್ಲಿ ಒಂದು ಬತ್ ಅಳತೆಯ ಹತ್ತನೆ
ಒಂದು ಪಾಲು; (ಹತ್ತು ಬತ್ ಅಂದರೆ ಒಂದು ಹ
ಮೆರ್); ಇನ್ನೂರು ಕುರಿಗಳಲ್ಲಿ ಇಸ್ರಾಯೇ
ನೀರಾವರಿಯ ಹುಲ್ಗಾವಲಿನ ಒಂದು ಕುರಿ; ಇ
ಳನ್ನು ದೇಶದ ಸಕಲ ಜನರು ಇಸ್ರಾಯೇಲಿನ ಪ್ರ
ವಿಗೆ ಒಪ್ಪಿಸತಕ್ಕದ್ದು. ಉತ್ಸವಗಳಲ್ಲಿಯೂ ಅ
ವಾಸ್ಯೆಗಳಲ್ಲಿಯೂ ಸಬ್ಬತ್ತುಗಳಲ್ಲಿಯೂ ಇಸ್ರಾ
ಲ್ ವಂಶದವರಿಗೆ ನೇಮಕವಾದ ಎಲ್ಲಾ ಹಬ್ಬಗ
ಯೂ ಸರ್ವಾಂಗಹೋಮಪಶು, ಧಾನ್ಯನೈವೇ
ಪಾನನೈವೇದ್ಯ, ಇವುಗಳನ್ನು ಒದಗಿಸುವದು ಪ್ರ
ವಿನ ಕರ್ತವ್ಯ; ಇಸ್ರಾಯೇಲ್ ವಂಶದ ದೋ
ನಿವಾರಣೆಗಾಗಿ ಅವನು ದೋಷಪರಿಹಾರಕಯಜ್ಞಪ
ಧಾನ್ಯನೈವೇದ್ಯ, ಸರ್ವಾಂಗಹೋಮಪಶು, ಸಮಾಧ
ಯಜ್ಞಪಶು, ಇವುಗಳನ್ನು ಒಪ್ಪಿಸತಕ್ಕದ್ದು.

### ಪಸ್ಕ ಮತ್ತು ಪರ್ಣಶಾಲೆ ಹಬ್ಬಗಳ ಬಲಿಗಳು.

ಕರ್ತನಾದ ಯೆಹೋವನು ಇಂತೆನ್ನುತ್ತಾನೆ— ಮೊ
ನೆಯ ತಿಂಗಳಿನ ಮೊದಲನೆಯ ದಿನದಲ್ಲಿ ನೀನು
ರ್ಣಾಂಗವಾದ ಹೋರಿಯನ್ನು ಆರಿಸಿ ಅದರಿಂದ
ತ್ರಾಲಯವನ್ನು ಶುದ್ಧೀಕರಿಸಬೇಕು. ಆಗ ಯ
ಕನು ಆ ದೋಷಪರಿಹಾರಕಯಜ್ಞಪಶುವಿನ ರಕ್ತ
ಸ್ವಲ್ಪವನ್ನು ತೆಗೆದುಕೊಂಡು ದೇವಸ್ಥಾನದ ಬಾ
ಚೌಕಟ್ಟಿಗೂ ಯಜ್ಞವೇದಿಯ ದೊಡ್ಡ ಅಂತ
ನಾಲ್ಕು ಮೂಲೆಗಳಿಗೂ ಒಳಗಣ ಪ್ರಾಕಾರದ ಹೆ
ಗಿಲ ನಿಲವುಕಂಬಗಳಿಗೂ ಹಚ್ಚಬೇಕು. ಅದೇ ಮೇ
4)ಏಳನೆಯ ತಿಂಗಳಿನ ಮೊದಲನೆಯ ದಿನದಲ್ಲಿ ನೀ
ಯಜ್ಞಮಾಡಿ ಯಾರಾದರೂ ಅಕಸ್ಮಾತ್ತಾಗಿ ಮಾ
ತಪ್ಪಿನಿಂದಾಗಲಿ ಬುದ್ಧಿಹೀನರ ಅವಿವೇಕದಿಂದಾ
ದೇವಾಲಯಕ್ಕೆ ಸಂಭವಿಸಿದ ದೋಷವನ್ನೆಲ್ಲಾ
ಹರಿಸಬೇಕು. ಮೊದಲನೆಯ ತಿಂಗಳಿನ ಹದಿನಾ
ನೆಯ ದಿನದಲ್ಲಿ ಏಳು ದಿವಸದ ಪಸ್ಕಹಬ್ಬವನ್ನು
ರಿಸ ತೊಡಗಬೇಕು; ಹುಳಿಯಿಲ್ಲದ ರೊಟ್ಟಿಯನ್ನೇ
ಬೇಕು. ಆ ದಿನದಲ್ಲಿ ಪ್ರಭುವು ತನ್ನ ನಿಮಿತ್ತ
ದೇಶದ ಜನರೆಲ್ಲರ ನಿಮಿತ್ತವೂ ದೋಷಪರಿಹಾ
ಯಜ್ಞಕ್ಕಾಗಿ ಒಂದು ಹೋರಿಯನ್ನು ಒಪ್ಪಿಸ
ಹಬ್ಬದ ಏಳು ದಿನಗಳಲ್ಲಿಯೂ ಯೆಹೋವ
ಸಮರ್ಪಿಸತಕ್ಕ ಸರ್ವಾಂಗಹೋಮಕ್ಕಾಗಿ ಅ
ಏಳು ದಿನಗಳ ವರೆಗೆ ದಿನವೊಂದಕ್ಕೆ ಪೂರ್ಣಾಂಗವ
ಏಳು ಹೋರಿಗಳನ್ನೂ ಏಳು ಟಗರುಗಳನ್ನೂ ಒ

1) ಮೇಲಿನದು ಗ್ರೀಕ್ ಮೂಲ; ಇಬ್ರಿಯ ಮೂಲ: ಲೇವಿಯರ ಇಪ್ಪತ್ತು ಕೋಣೆಗಳಿಗಾಗಿ. 2) ಅಂದರೆ ಎರಡು ಕ
3) ಪಾಠಾಂತರ: ಐದು ತೊಲೆ ಐದು ತೊಲೆಯೇ ಆಗಿಗಲಿ, ಹತ್ತು ತೊಲೆ ಹತ್ತು ತೊಲೆಯೇ ಆಗಿರಲಿ, ನಿಮಲ್ಲಿ ಸಲ್ಲುವ ಮಾನೆಯು
ಐವತ್ತು ತೊಲೆ ಇರಲಿ: 4) ಮೇಲಿನದು ಗ್ರೀಕ್ ಮೂಲ; ಇಬ್ರಿಯ ಮೂಲ: ತಿಂಗಳಿನ ಏಳನೆಯ ದಿನದಲ್ಲಿ.

ಸಲಿ, ಮತ್ತು ದೋಷಪರಿಹಾರಕಯಜ್ಞಕ್ಕಾಗಿ ದಿನ
24 ವಹಿ ಒಂದು ಹೋತವನ್ನು ಕೊಡಲಿ. ಇದಲ್ಲದೆ
ಒಂದೊಂದು ಹೋರಿಯ ಮತ್ತು ಟಗರಿನ ಸಂಗಡ
ಮೂವತ್ತುಮೂವತ್ತು ಸೇರು [ಗೋದಿಹಿಟ್ಟನ್ನೂ]
ಆರಾರು ಸೇರು ಎಣ್ಣೆಯನ್ನೂ ಧಾನ್ಯನೈವೇದ್ಯಕ್ಕಾಗಿ
25 ಒಪ್ಪಿಸಬೇಕು. ಏಳನೆಯ ತಿಂಗಳಿನ ಹದಿನೈದ
ನೆಯ ದಿವಸದಲ್ಲಿ ಪ್ರಾರಂಭವಾಗುವ ಹಬ್ಬದ ಏಳು
ದಿವಸಗಳಲ್ಲಿಯೂ ಅವನು ದೋಷಪರಿಹಾರಕಯಜ್ಞ
ಪಶು, ಸರ್ವಾಂಗಹೋಮಪಶು, ಧಾನ್ಯನೈವೇದ್ಯ, ಎಣ್ಣೆ,
ಇವುಗಳನ್ನು ಅದೇ ಕ್ರಮದಂತೆ ಕೊಡಬೇಕು.

ಸಬ್ಬತ್ತಿನ ಮತ್ತು ಅಮಾವಾಸ್ಯೆಯ ಪೂಜೆ.

46 ಕರ್ತನಾದ ಯೆಹೋವನು ಇಂತೆನ್ನುತ್ತಾನೆ—
ವಾರದೊಳಗೆ ಕೆಲಸನಡೆಯುವ ಆರು ದಿವಸಗಳಲ್ಲಿ
ಒಳಗಣ ಪ್ರಾಕಾರದ ಮೂಡಲ ಹೆಬ್ಬಾಗಿಲು ಮುಚ್ಚಿರ
ಬೇಕು; ಆದರೆ ಸಬ್ಬತ್ ದಿನದಲ್ಲಿಯೂ ಅಮಾವಾಸ್ಯೆ
2 ಯಲ್ಲಿಯೂ ತೆರೆದಿರಬೇಕು. ಪ್ರಭುವು ಹೊರಗಣ
ಕೈಸಾಲೆಯ ಮಾರ್ಗವಾಗಿ ಆ ಹೆಬ್ಬಾಗಿಲನ್ನು ಪ್ರವೇ
ಶಿಸಿ ಬಾಗಿಲ ನಿಲವುಕಂಬದ ಪಕ್ಕದಲ್ಲಿ ನಿಂತುಕೊಂಡು
ತಾನು ಒಪ್ಪಿಸಿದ ಸರ್ವಾಂಗಹೋಮಪಶುವನ್ನೂ ಸಮಾ
ಧಾನಯಜ್ಞಪಶುಗಳನ್ನೂ ಯಾಜಕರು ಅರ್ಪಿಸುತ್ತಿರು
ವಾಗ ಬಾಗಿಲ ಹೊಸ್ತಿಲಿನಲ್ಲಿ ಅಡ್ಡಬೀಳಲಿ; ಆ ಮೇಲೆ
ಹೊರಟುಹೋಗಲಿ; ಅಂದು ಸಂಜೆಯ ತನಕ ಬಾಗಿ
3 ಲನ್ನು ಮುಚ್ಚಬಾರದು. ಸಬ್ಬತ್ ದಿನಗಳಲ್ಲಿಯೂ
ಅಮಾವಾಸ್ಯೆಗಳಲ್ಲಿಯೂ ದೇಶದ ಜನರು ಆ ಹೆಬ್ಬಾ
ಗಿಲ ದ್ವಾರದ ಮುಂದೆ ಯೆಹೋವನ ಸಮ್ಮುಖವಾಗಿ
4 ಅಡ್ಡಬೀಳಲಿ. ಸಬ್ಬತ್ ದಿನದಲ್ಲಿ ಪ್ರಭುವು ಯೆ
ಹೋವನಿಗೆ ಪೂರ್ಣಾಂಗವಾದ ಆರು ಕುರಿಗಳನ್ನೂ
ಪೂರ್ಣಾಂಗವಾದ ಒಂದು ಟಗರನ್ನೂ ಸರ್ವಾಂಗ
5 ಹೋಮವಾಗಿ ಅರ್ಪಿಸತಕ್ಕದ್ದು; ಟಗರಿನೊಡನೆ
ಮೂವತ್ತು ಸೇರು [ಗೋದಿಹಿಟ್ಟನ್ನೂ] ಕುರಿಗಳೊಡನೆ
ಶಕ್ತಿಯಿದ್ದಷ್ಟು [ಗೋದಿಹಿಟ್ಟನ್ನೂ] ಮೂವತ್ತು ಮೂ
ವತ್ತು ಸೇರು [ಗೋದಿಹಿಟ್ಟಿಗೆ] ಆರಾರು ಸೇರಿನಂತೆ
ಎಣ್ಣೆಯನ್ನೂ ಧಾನ್ಯನೈವೇದ್ಯಕ್ಕಾಗಿ ಕೊಡಲಿ.
6 ಅಮಾವಾಸ್ಯೆಯಲ್ಲಿ ಅವನು ಪೂರ್ಣಾಂಗವಾದ ಒಂದು
ಹೋರಿಯನ್ನೂ ಆರು ಕುರಿಗಳನ್ನೂ ಒಂದು ಟಗರ
ನ್ನೂ ಒಪ್ಪಿಸತಕ್ಕದ್ದು; ಅವು ಪೂರ್ಣಾಂಗವಾಗಿಯೇ
7 ಇರಬೇಕು; ಮತ್ತು ಹೋರಿಯೊಡನೆ ಮೂವತ್ತು
ಸೇರು, ಟಗರಿನೊಡನೆ ಮೂವತ್ತು ಸೇರು, ಕುರಿಗಳೊ
ಡನೆ ಶಕ್ತಿಯಿದ್ದಷ್ಟು ಸೇರು [ಗೋದಿಹಿಟ್ಟನ್ನೂ] ಮೂ
ವತ್ತುಮೂವತ್ತು ಸೇರಿಗೆ ಆರಾರು ಸೇರಿನಂತೆ ಎಣ್ಣೆ
ಯನ್ನೂ ಧಾನ್ಯನೈವೇದ್ಯಕ್ಕಾಗಿ ಒದಗಿಸಬೇಕು.

ದೇವಾಲಯದ ಗಮನಾಗಮನಕ್ರಮ, ವಿವಿಧ ನಿಯಮಗಳು.

8 ಪ್ರಭುವು ಪ್ರವೇಶಮಾಡುವಾಗ ಹೆಬ್ಬಾಗಿಲ ಕೈಸಾ
ಲೆಯ ಮಾರ್ಗವಾಗಿ ಸೇರಿ ಅದೇ ಮಾರ್ಗವಾಗಿ ಹೊರ
ಡಲಿ. ದೇಶದ ಜನರಾದರೋ ಹಬ್ಬಗಳಲ್ಲಿ ಯೆಹೋ 9
ವನ ಸಮ್ಮುಖದಲ್ಲಿ ಕಾಣಿಸಿಕೊಳ್ಳುವಾಗ ಬಡಗಣ
ಬಾಗಿಲಿಂದ ಆರಾಧಿಸುವದಕ್ಕೆ ಪ್ರವೇಶಿಸಿದವನು ತೆಂಕಣ
ಬಾಗಿಲಿಂದ ಹೊರಡಲಿ; ತೆಂಕಣ ಬಾಗಿಲಿಂದ ಪ್ರವೇಶಿಸಿ
ದವನು ಬಡಗಣ ಬಾಗಿಲಿಂದ ಹೊರಡಲಿ; ತಾನು
ಪ್ರವೇಶಿಸಿದ ಬಾಗಿಲಿಂದ ಹಿಂದಿರುಗದೆ ಬಂದ ಮುಖ
ವಾಗಿಯೇ ಹೋಗಲಿ. ಜನರು ಪ್ರವೇಶಿಸುವಾಗ 10
ಪ್ರಭುವು ಅವರ ಮಧ್ಯದಲ್ಲಿ ಪ್ರವೇಶಿಸಲಿ; ಅವರು
ಹೊರಡುವಾಗ 1)ಅವನೂ ಹೊರಡಲಿ. [ಪ್ರಭುವು] 11
ಉತ್ಸವಗಳಲ್ಲಿಯೂ ಹಬ್ಬಗಳಲ್ಲಿಯೂ ಹೋರಿಯೊ
ಡನೆ ಮೂವತ್ತು ಸೇರು, ಟಗರಿನೊಡನೆ ಮೂವತ್ತು
ಸೇರು, ಕುರಿಗಳೊಡನೆ ಶಕ್ತಿಯಿದ್ದಷ್ಟು ಸೇರು [ಗೋದಿ
ಹಿಟ್ಟನ್ನೂ] ಮೂವತ್ತುಮೂವತ್ತು ಸೇರಿಗೆ ಆರಾರು
ಸೇರಿನಂತೆ ಎಣ್ಣೆಯನ್ನೂ ಧಾನ್ಯನೈವೇದ್ಯಕ್ಕಾಗಿ ಒದ
ಗಿಸಬೇಕು. ಪ್ರಭುವು ಸ್ವಂತ ಇಚ್ಛೆಯಿಂದ ಕಾಣಿಕೆ 12
ಯನ್ನಾಗಲಿ ಸರ್ವಾಂಗಹೋಮವನ್ನಾಗಲಿ ಸಮಾ
ಧಾನಯಜ್ಞಗಳನ್ನಾಗಲಿ ಯೆಹೋವನಿಗೆ ಸಮರ್ಪಿಸ
ಬೇಕೆಂದಿರುವಾಗ ಅವನಿಗಾಗಿ ಮೂಡಲ ಹೆಬ್ಬಾಗಿ
ಲನ್ನು ತೆರೆಯಬೇಕು; ಅವನು ಸಬ್ಬತ್ ದಿನದಲ್ಲಿ
ಸಮರ್ಪಿಸುವಂತೆ ಸರ್ವಾಂಗಹೋಮಪಶುವನ್ನೂ
ಸಮಾಧಾನಯಜ್ಞಪಶುಗಳನ್ನೂ ಸಮರ್ಪಿಸಿ ಹೊರ
ಡಲಿ; ಹೊರಟ ಮೇಲೆ ಬಾಗಿಲನ್ನು ಮುಚ್ಚಬೇಕು.

ನಿತ್ಯಸರ್ವಾಂಗಹೋಮ.

2)ನೀನು ಪೂರ್ಣಾಂಗವಾದ ವರುಷದ ಕುರಿಯ 13
ನ್ನು ಯೆಹೋವನಿಗೆ ಸರ್ವಾಂಗಹೋಮವಾಗಿ ದಿನ
ವಹಿ ಅರ್ಪಿಸಬೇಕು; ಪ್ರತಿದಿನ ಬೆಳಿಗ್ಗೆ ಅದನ್ನು ಅರ್ಪಿ
ಸತಕ್ಕದ್ದು. ಅದರೊಂದಿಗೆ ಪ್ರತಿದಿನ ಬೆಳಿಗ್ಗೆ ಧಾನ್ಯ 14
ನೈವೇದ್ಯವಾಗಿ ಐದು ಸೇರು ಗೋದಿಹಿಟ್ಟನ್ನೂ
ಅದನ್ನು ನೆನೆಯಿಸುವದಕ್ಕೆ ಎರಡು ಸೇರು ಎಣ್ಣೆಯ
ನ್ನೂ ನೀನು ಸಮರ್ಪಿಸಬೇಕು. ಇವುಗಳನ್ನು ಪ್ರತಿ
ನಿತ್ಯವೂ ಯೆಹೋವನಿಗೆ ಧಾನ್ಯನೈವೇದ್ಯವಾಗಿ ಅರ್ಪಿಸ
ತಕ್ಕದ್ದು; ಇದು ಶಾಶ್ವತನಿಯಮ. 3)ಯಾಜಕರು 15
ಕುರಿಯನ್ನೂ ಧಾನ್ಯನೈವೇದ್ಯವನ್ನೂ ಎಣ್ಣೆಯನ್ನೂ
ನಿತ್ಯಸರ್ವಾಂಗಹೋಮವಾಗಿ ಪ್ರತಿದಿನ ಬೆಳಿಗ್ಗೆ ಸಮ
ರ್ಪಿಸಬೇಕು.

ಪ್ರಭುವಿನ ಸ್ವಾಸ್ತ್ಯವು ಪರಾಧೀನವಾಗಕೂಡದು.

ಕರ್ತನಾದ ಯೆಹೋವನು ಇಂತೆನ್ನುತ್ತಾನೆ—ಪ್ರಭುವು 16
ತನ್ನ ಮಕ್ಕಳಲ್ಲಿ ಒಬ್ಬನಿಗೆ ಭೂದಾನಮಾಡಿದರೆ ಅದು
ತಂದೆಯ ಸ್ವಾಸ್ತ್ಯವಾದಕಾರಣ ಮಕ್ಕಳಿಗೆ ಹಕ್ಕು
ಬರುವದು, ಅದು ಬಾಧ್ಯವಾಗಿ ಸಿಕ್ಕಿದ ಸ್ವಾಸ್ತ್ಯವೇ.
ಆದರೆ ಪ್ರಭುವು ತನ್ನ ಭೂಮಿಯ ಒಂದು ಭಾಗ 17
ವನ್ನು ತನ್ನ ಸೇವಕರಲ್ಲಿ ಒಬ್ಬನಿಗೆ ದಾನಮಾಡಿದರೆ
ಬಿಡುಗಡೆಯ ವರುಷದ ವರೆಗೆ ಅದು ಅವನ ಅಧೀನ
ವಾಗಿರುವದು; ಆ ಮೇಲೆ ಅದು ಪುನಃ ಪ್ರಭುವಿನ ವಶ

1) ಪಾಠಾಂತರ: [ಜೊತೆಯಾಗಿ] ಹೊರಡಲಿ. 2) ಪಾಠಾಂತರ: ಅವನು. 3) ಮೂಲ: ಅವರು.

ವಾಗುವದು; ಆದರೆ ಪ್ರಭುವು ತನ್ನ ಮಕ್ಕಳಿಗೆ
18 ಕೊಟ್ಟ ಸ್ವಾಸ್ತ್ಯವು ಅವರಿಗೇ ಸೇರಿಬಿಡುವದು. ಇದ
ಲ್ಲದೆ ಪ್ರಭುವು ಪ್ರಜೆಗಳ ಪಿತ್ರಾರ್ಜಿತಭೂಮಿ
ಯನ್ನು ಸ್ವಾಧೀನಮಾಡಿಕೊಂಡು ಅವರ ಬಾಧ್ಯತೆ
ಯನ್ನು ತಪ್ಪಿಸಬಾರದು; ಸ್ವಂತ ಭೂಮಿಯನ್ನೇ
ಭಾಗಿಸಿ ತನ್ನ ಮಕ್ಕಳಿಗೆ ಪಾಲುಕೊಡಲಿ; ಇಲ್ಲವಾ
ದರೆ ನನ್ನ ಪ್ರಜೆಯಲ್ಲಿ ಪ್ರತಿಯೊಬ್ಬನೂ ತನ್ನ ತನ್ನ
ಭೂಸ್ಥಿತಿಯನ್ನು ಕಳಕೊಂಡು ದಿಕ್ಕಾಪಾಲಾಗಿ ಹೋ
ದಾನು.

ದೇವಾಲಯದ ಪಾಕಶಾಲೆಗಳು.

19 ಬಳಿಕ ಆ ಪುರುಷನು ನನ್ನನ್ನು ಹೆಬ್ಬಾಗಿಲ ಪಕ್ಕ
ದಲ್ಲಿನ ಪ್ರವೇಶದ ಮಾರ್ಗವಾಗಿ ಬಡಗಲಿಗೆ ಅಭಿಮು
ಖವಾಗಿಯೂ ಯಾಜಕರಿಗೆ ನೇಮಕವಾಗಿಯೂ
ಇರುವ ಪರಿಶುದ್ಧವಾದ ಕೋಣೆಗಳಿಗೆ ಬರಮಾಡಿ
ದನು; ಇಗೋ, ಅವುಗಳ ಹಿಂದೆ ಪಡುವಲಲ್ಲಿ ಒಂದು
20 ಸ್ಥಳವಿತ್ತು. ಆಗ ಅವನು ನನಗೆ—ಯಾಜಕರು ಹವಿ
ಸ್ಸನ್ನು ಹೊರಗಣ ಪ್ರಾಕಾರಕ್ಕೆ ಒಯ್ದು ಜನರನ್ನು
ಶುದ್ಧಿಮಾಡದ ಹಾಗೆ ಪ್ರಾಯಶ್ಚಿತ್ತಯಜ್ಞಪಶುವಿನ
ಮತ್ತು ದೋಷಪರಿಹಾರಕಯಜ್ಞಪಶುವಿನ ಮಾಂಸ
ವನ್ನು ಬೇಯಿಸುವದಕ್ಕೂ ಧಾನ್ಯನೈವೇದ್ಯವನ್ನು ಪಕ್ವ
ಮಾಡುವದಕ್ಕೂ ಈ ಸ್ಥಳವು ಏರ್ಪಟ್ಟಿದೆ ಎಂದು ಹೇಳಿ
21 ದನು. ತರುವಾಯ ಅವನು ನನ್ನನ್ನು ಹೊರಗಣ
ಪ್ರಾಕಾರಕ್ಕೆ ಬರಮಾಡಿ ಅಲ್ಲಿನ ನಾಲ್ಕು ಮೂಲೆಗಳ
ಮಾರ್ಗವಾಗಿ ಕರಕೊಂಡು ಹೋದನು; ಇಗೋ,
ಪ್ರಾಕಾರದ ಒಂದೊಂದು ಮೂಲೆಯಲ್ಲಿ ಒಂದೊಂದು
22 ಒಳ ಅಂಗಳವು ಕಾಣಿಸಿತು. ಹೌದು, ಪ್ರಾಕಾರದ
ನಾಲ್ಕು ಮೂಲೆಗಳಲ್ಲಿಯೂ ನಾಲ್ವತ್ತು ಮೊಳ ಉದ್ದದ
ಮೂವತ್ತು ಮೊಳ ಅಗಲದ 1)ಪ್ರತ್ಯೇಕವಾದ ಅಂಗಳ
ಗಳು ಇದ್ದವು; ಮೂಲೆಗಳಲ್ಲಿನ ಆ ನಾಲ್ಕು ಅಂಗಳ
23 ಗಳು ಒಂದೇ ಅಳತೆಯಾಗಿದ್ದವು. ಅವುಗಳೊಳಗೆ
ಸುತ್ತಲು, ಅಂದರೆ ಆ ನಾಲ್ಕು ಅಂಗಳಗಳ ಸುತ್ತು
ಮುತ್ತಲು 2)[ಕಲ್ಲಿನ] ವರಸೆಯು ಚಾಚಿಕೊಂಡಿತು;
ಆ ವರಸೆಗಳ ಕೆಳಗೆ ಒಲೆಗಳು ಸುತ್ತಲೂ ಕಟ್ಟಿದ್ದವು.
24 ಆಗ ಅವನು ನನಗೆ—ಇವು ದೇವಾಲಯದ ಸೇವಕರು
ಯಜ್ಞಪಶುಗಳನ್ನು ತಂದ ಜನರಿಗೋಸ್ಕರ ಅವುಗಳ
ಮಾಂಸವನ್ನು ಬೇಯಿಸುವ ಪಾಕಶಾಲೆಗಳು ಎಂದು
ಹೇಳಿದನು.

ದೇವಸ್ಥಾನದಿಂದ ಹೊರಡುವ ಪ್ರವಾಹ.

47 ಆ ಮೇಲೆ ಅವನು ನನ್ನನ್ನು ದೇವಸ್ಥಾನದ
ಬಾಗಿಲಿಗೆ ಪುನಃ ಕರತಂದನು; ಆಹಾ, ದೇವಸ್ಥಾ
ನದ ಹೊಸ್ತಲ ಕೆಳಗಿನಿಂದ ನೀರು ಹೊರಟು ಮೂಡ
ಲಿಗೆ ಹರಿಯುತ್ತಿತ್ತು (ದೇವಸ್ಥಾನವು ಪೂರ್ವಾಭಿಮುಖ
ವಷ್ಟೆ); ಆ ನೀರು ದೇವಸ್ಥಾನದ ಬಲಗಡೆ ಕೆಳಗಿನಿಂ
ಹೊರಟು ಯಜ್ಞವೇದಿಯ ದಕ್ಷಿಣದಲ್ಲಿ ಹರಿಯುತ್ತಿತ್ತು
ಆಗ ಅವನು ನನ್ನನ್ನು ಬಡಗಣ ಹೆಬ್ಬಾಗಿಲಿಂದ ದೇವ
ಲಯದ ಹೊರಗಣ ಮಾರ್ಗವಾಗಿ ಸುತ್ತಿಸಿಕೊಂ
ಮೂಡಲ ಹೆಬ್ಬಾಗಿಲಿಗೆ ಕರತಂದನು; ಅಲ್ಲಿ ನೋಡ
ಅದರ ಬಲಗಡೆ ಮೆಲ್ಲಮೆಲ್ಲನೆ ಹರಿಯುವ ನೀ
ಕಾಣಿಸಿತು. ಆ ಪುರುಷನು ಕೈಯಲ್ಲಿ ಹುರಿಯನ
ಹಿಡಿದುಕೊಂಡು ಮೂಡಲಿಗೆ ಮುಂದರಿದು ಸಾ
ಮೊಳ ಅಳೆದು ನನ್ನನ್ನು ನೀರಿನ ಆಚೆಗೆ ದಾಟಿಸಿದನ
ಅಲ್ಲಿ ನೀರು ಹೆಜ್ಜೆ ಮುಳುಗುವಷ್ಟಿತ್ತು. ಅವನು ಪು
ಸಾವಿರ ಮೊಳ ಅಳೆದು ನನ್ನನ್ನು ನೀರಿನ ಆಚೆಗೆ ದಾ
ಸುವಾಗ ಆ ನೀರು ಮೊಣಕಾಲಿನ ವರೆಗೆ ಇತ್ತು
ಅವನು ಪುನಃ ಸಾವಿರ ಮೊಳ ಅಳೆದು ನನ್ನನ್ನು ನೀರಿ
ಆಚೆಗೆ ದಾಟಿಸುವಾಗ ಆ ನೀರು ಸೊಂಟದ ವರೆ
ಇತ್ತು. ಅವನು ಮತ್ತೆ ಸಾವಿರ ಮೊಳ ಅಳೆದನು
ಅದು ನನ್ನಿಂದ ದಾಟಲಾಗದ ತೊರೆಯಾಗಿತ್ತು; ನೀರ
ಏರಿ ಈಜಾಡುವಷ್ಟು ಪ್ರವಾಹವಾಗಿತ್ತು, ದಾಟಲಾಗ
ತೊರೆಯಾಗಿತ್ತು. ಆಗ ಅವನು ನನಗೆ—ನರಪುತ್ರನೆ
ಇದನ್ನು ನೋಡಿದಿಯಾ ಎಂದು ಹೇಳಿ ನನ್ನನ್ನು 3)ತೊ
ರೆಯ ದಡಕ್ಕೆ ಹತ್ತಿಸಿ ಹಿಂದಿರುಗಿಸಿದನು. ನಾನ
ಹಿಂದಿರುಗಲು ಆಹಾ, ತೊರೆಯ ಎರಡು ದಡಗಳ
ಯೂ ಅನೇಕಾನೇಕ ವೃಕ್ಷಗಳು ಕಾಣಿಸಿದವ
ಆಗ ಅವನು ನನಗೆ ಹೀಗೆ ಹೇಳಿದನು—ಈ ಪ್ರವಾಹ
ಪೂರ್ವಪ್ರಾಂತ್ಯಕ್ಕೆ ಹೊರಟು ಅರಾಬಾ ಎಂಬ ತಗ್ಗಿ
[ಇಳಿದು ಲವಣಸಮುದ್ರದ ಕಡೆಗೆ ಹರಿಯುವದ
ದೇವಸ್ಥಾನದಿಂದ] ಹೊರಟ ಪ್ರವಾಹವು ಲವಣಸಮ
ದ್ರಕ್ಕೆ [ಸೇರಲು] ಅದರ ನೀರು ಸಿಹಿಯಾಗುವದು
4)ಈ ತೊರೆಯು ಎಲ್ಲೆಲ್ಲಿ ಹರಿಯುತ್ತದೋ ಅಲ್ಲ
ಗುಂಪುಗುಂಪಾಗಿ ಚಲಿಸುವ ಸಕಲವಿಧಜಲಜಂತುಗ
ಬದುಕಿ ಬಾಳುವವು; ಮೀನುಗಳು ತಂಡೋಪತಂ
ವಾಗಿರುವವು. ಈ ನೀರು ಸಮುದ್ರಕ್ಕೆ ಬೀಳಲು [
ನೀರೂ] ಸಿಹಿಯಾಗುವದು; ಈ ತೊರೆಯು ಎಲ್ಲೆ
ಹರಿದರೂ ಅಲ್ಲಲ್ಲಿ ಜೀವವುಂಟಾಗುವದು. ಆಗ
ಸಮುದ್ರದ ತೀರದಲ್ಲಿ ಬೆಸ್ತರು ನಿಂತಿರುವರು; ಏ
ಗೆದಿಯಿಂದ ಏನ್ಎಗ್ಲಯಿಮಿನ ವರೆಗೆ ದಡವೆಲ
ಬಲೆಹಾಸುವ ಸ್ಥಳವಾಗುವದು; ಬಗೆಬಗೆಯ ಮೀನ
ಗಳು ಮಹಾಸಾಗರದ ಮೀನುಗಳಂತೆ ಅವರಿಗೆ ರಾ
ರಾಶಿಯಾಗಿ ಸಿಕ್ಕುವವು. ಆದರೆ ಅದರ ಸುತ್ತಣ ಜ
ಗುನೆಲವೂ ಸವುಳುಹೊಂಡಗಳೂ ಸಿಹಿಯಾಗುವದಿಲ್ಲ
ಅವು ಉಪ್ಪಿನ ಗಣಿಯಾಗುವವು. ತೊರೆಯ ಎರಡ
ದಡಗಳಲ್ಲಿಯೂ ಸಕಲ ಫಲವೃಕ್ಷಗಳು ಬೆಳೆಯುವವ
ಅವುಗಳ ಎಲೆ ಬಾಡದು, ಹಣ್ಣು ತೀರದು; ತೊರೆಂ
ನೀರು ಪವಿತ್ರಾಲಯದೊಳಗಿಂದ ಹೊರಟುಬರು
ಕಾರಣ ಅವು ತಿಂಗಳುತಿಂಗಳಲ್ಲಿಯೂ ಹೊಸ ಹೊ
ಫಲವನ್ನು ಕೊಡುತ್ತಲಿರುವವು; ಅವುಗಳ ಹಣ್ಣು ಆಹ
ರಕ್ಕೂ ಸೊಪ್ಪು ಔಷಧಕ್ಕೂ ಅನುಕೂಲಿಸುವವು.

1) ಪಾಠಾಂತರ: ಸಣ್ಣ. 2) ಅಥವಾ: ಒಲೆಗಳಿಗೆ ಆವರಣವಾದ [ಕೈಸಾಲೆಯು] ಕಂಬಗಳು ಸಾಲಾಗಿದ್ದವು. 3) ಅ
ಕರೆದುಕೊಂಡು ತೊರೆಯ ದಡದಲ್ಲಿ ನಡಿಸುತ್ತಾ ಹಿಂದಕ್ಕೆ ಹೋದನು. 4) ಮೇಲಿನದು ಗ್ರೀಕ್ ಮೂಲ; ಇಬ್ರಿಯ ಮೂಲ:
ತೊರೆಗಳು.

ಇಸ್ರಾಯೇಲ್ ದೇಶದ ಎಲ್ಲೆಗಳೂ ಭಾಗಗಳೂ.

13 ಕರ್ತನಾದ ಯೆಹೋವನು ಇಂತೆನ್ನುತ್ತಾನೆ—ನೀವು
ಇಸ್ರಾಯೇಲಿನ ಹನ್ನೆರಡು ಕುಲಗಳಿಗೆ ದೇಶವನ್ನು
ಬಾಧ್ಯವಾಗಿ ಹಂಚಿಕೊಡುವಾಗ ಮುಂದಿನ ಮೇರೆಗ
ಳನ್ನು ಅನುಸರಿಸಬೇಕು. ಯೋಸೇಫಿಗೆ 1)ಎರಡು
14 ಪಾಲು ಸೇರಲಿ. ನಾನು ನಿಮ್ಮ ಪಿತೃಗಳಿಗೆ ಪ್ರಮಾಣ
ವಾಗಿ ವಾಗ್ದಾನಮಾಡಿದ ಈ ದೇಶವನ್ನು ನೀವೆಲ್ಲರೂ
ಸರಿಸಮಾನವಾಗಿ ಅನುಭವಿಸುವಿರಿ; ಇದು ನಿಮಗೆ
15 ಸ್ವಾಸ್ತ್ಯವಾಗಿಯೇ ಇರುವದು. ನಿಮ್ಮ ದೇಶದ ಮೇರೆ
ಗಳು ಹೀಗಿರಬೇಕು—ಬಡಗಣ ಮೇರೆಯು ದೊಡ್ಡ
ಸಮುದ್ರದಿಂದ ಆರಂಭವಾಗಿ ಚೆಪಾದಿನ ದಾರಿಯ
16 ಲ್ಲಿನ ಹೆತ್ಲೋನಿನ ಮಾರ್ಗವಾಗಿ ಬಂದು ಹ
ಮಾತ್, ಬೇರೋತ, ದಮಸ್ಕದ ಎಲ್ಲೆಗೂ ಹಮಾ
ತಿನ ಎಲ್ಲೆಗೂ ನಡುವಣ ಸಿಬ್ರಯಿಮ್ ಎಂಬ ಊರು
ಗಳ ಮೇಲೆ ಹವ್ರಾನಿನ ಸರಹದ್ದಿಗೆ ಹತ್ತಿರವಾದ
ಹಾಚೇರ್‌ಹತ್ತೀಕೋನಿನ ಬಳಿಯಲ್ಲಿ ಮುಗಿಯ
17 ಬೇಕು. ಹೀಗೆ ಬಡಗಣ ಮೇರೆಯು ಸಮುದ್ರದಿಂದ
ದಮಸ್ಕದ ಸರಹದ್ದಿನಲ್ಲಿರುವ ಹಚರ್ ಏನೋನಿನ
ವರೆಗೆ ಹಬ್ಬುವದು; ಅದರ ಉತ್ತರದಲ್ಲಿ ಹಮಾತಿನ
18 ಪ್ರಾಂತವಿರುವದು. ಇದು ಬಡಗಣ ಮೇರೆ. ಮೂಡ
ಲಲ್ಲಿ ಹವ್ರಾನ್, ದಮಸ್ಕ, ಗಿಲ್ಯಾದ್ ಇವುಗಳಿಗೂ
ಇಸ್ರಾಯೇಲ್ ದೇಶಕ್ಕೂ ಮಧ್ಯೆ ಯೊರ್ದನ್ ಹೊಳೆ
ಯು ಎಲ್ಲೆಯಾಗಿರುವದು; [ಬಡಗಣ] ಮೇರೆಯಿಂದ
ಮೂಡಣ ಸಮುದ್ರದ ವರೆಗೆ ನೀವು ಗುರುತು ಹಾಕಿ
19 ಕೊಳ್ಳಬೇಕು. ಇದು ಮೂಡಣ ಮೇರೆ. ತೆಂಕಣ
ಮೇರೆಯು ತಾಮಾರಿನಿಂದ ಹೊರಟು ಮೆರೀ
ಬೋತ್‌ಕಾದೇಶಿನ ಹಳ್ಳದ ಮೇಲೆ [ಐಗುಪ್ತದ
ಮುಂದಿರುವ] ತೊರೆಯ ಮಾರ್ಗವಾಗಿ ದೊಡ್ಡ ಸಮು
ದ್ರಕ್ಕೆ ಮುಟ್ಟಬೇಕು. ಇದು ತೆಂಕಣ ಮೇರೆಯು.
20 ಪಡುವಲಲ್ಲಿ [ತೆಂಕಣ] ಮೇರೆಯಿಂದ ಹಮಾತಿನ
ದಾರಿಗೆ ಎದುರಿನ [ಕರಾವಳಿಯ] ತನಕ ದೊಡ್ಡ
ಸಮುದ್ರವು ಎಲ್ಲೆಯಾಗಿರುವದು. ಇದು ಪಡುವಣ
21 ಮೇರೆ. ಈ ದೇಶವನ್ನು ನೀವು ಇಸ್ರಾಯೇಲಿನ ಕುಲ
22 ಕುಲಕ್ಕೂ ಹಂಚಿಕೊಳ್ಳಬೇಕು. ನಿಮಗೂ ನಿಮ್ಮ
ಮಧ್ಯದಲ್ಲಿ ಪ್ರವಾಸಮಾಡುತ್ತಾ ಮಕ್ಕಳನ್ನು ಪಡೆದಿ
ರುವ ವಿದೇಶಿಗಳಿಗೂ ದೇಶವನ್ನು ಬಾಧ್ಯವಾಗಿ ಹಂಚ
ಬೇಕು; ಅವರು ಇಸ್ರಾಯೇಲ್ಯರ ಮಧ್ಯೆ ನಿಮಗೆ
ಸ್ವದೇಶಿಗಳಂತೆಯೇ ಇರತಕ್ಕದ್ದು; ಇಸ್ರಾಯೇಲಿನ
ಕುಲಗಳೊಳಗೆ ನಿಮ್ಮೊಂದಿಗೆ ಅವರಿಗೆ ಸ್ವಾಸ್ತ್ಯವಾಗಲಿ.
23 ಯಾವ ಕುಲದಲ್ಲಿ ವಿದೇಶಿಯು ಪ್ರವಾಸವಾಗಿರು
ತ್ತಾನೋ ಅಲ್ಲಿ ಅವನಿಗೆ ಸ್ವಾಸ್ತ್ಯವನ್ನು ಕೊಡಬೇಕು;
ಇದು ಕರ್ತನಾದ ಯೆಹೋವನ ನುಡಿ.

48 [ಹಂಚುವಿಕೆಯನ್ನು ಅನುಸರಿಸಿ] ಕುಲಗಳ
ಹೆಸರುಗಳು ಇವೇ; [ದೇಶದ] ಕೇವಲ ಉತ್ತರದಲ್ಲಿ
ಹಮಾತ್ ಸೀಮೆಯ ಹತ್ತಿರ ದಾನಿಗೆ ಒಂದು ಪಾಲು;
ಅದರ ಬಡಗಣ ಮೇರೆಯು ಹೆತ್ಲೋನಿನ ದಾರಿಯ
ಪಕ್ಕದಲ್ಲಿ ಹೊರಟು ಹಮಾತಿನ ದಾರಿಯನ್ನು ದಾಟಿ
ದಮಸ್ಕದ ಸರಹದ್ದಿನಲ್ಲಿರುವ ಹಚರ್ ಏನಾನಿನ ವರೆಗೆ
ಹಬ್ಬುವದು; ಅದರ ಪಾರ್ಶ್ವಗಳು [ದೇಶದ] ಪೂರ್ವ
ಪಶ್ಚಿಮಗಳ [ಎಲ್ಲೆಗಳ] ತನಕ ಚಾಚಿಕೊಂಡಿರುವವು.
ದಾನಿನ ಸರಹದ್ದಿನ ಪಕ್ಕದಲ್ಲಿ ಪೂರ್ವದಿಂದ ಪಶ್ಚಿಮದ 2
ತನಕ ಆಶೇರಿಗೆ ಒಂದು ಪಾಲು. ಆಶೇರಿನ ಸರಹದ್ದಿ 3
ನ ಪಕ್ಕದಲ್ಲಿ ಪೂರ್ವದಿಂದ ಪಶ್ಚಿಮದ ತನಕ ನಫ್ತಾ
ಲಿಗೆ ಒಂದು ಪಾಲು. ನಫ್ತಾಲಿಯ ಸರಹದ್ದಿನ ಪಕ್ಕ 4
ದಲ್ಲಿ ಪೂರ್ವದಿಂದ ಪಶ್ಚಿಮದ ತನಕ ಮನಸ್ಸೆಗೆ
ಒಂದು ಪಾಲು. ಮನಸ್ಸೆಯ ಸರಹದ್ದಿನ ಪಕ್ಕದಲ್ಲಿ 5
ಪೂರ್ವದಿಂದ ಪಶ್ಚಿಮದ ತನಕ ಎಫ್ರಾಯಿಮಿಗೆ
ಒಂದು ಪಾಲು. ಎಫ್ರಾಯಿಮಿನ ಸರಹದ್ದಿನ ಪಕ್ಕ 6
ದಲ್ಲಿ ಪೂರ್ವದಿಂದ ಪಶ್ಚಿಮದ ತನಕ ರೂಬೇನಿಗೆ
ಒಂದು ಪಾಲು. ರೂಬೇನಿನ ಸರಹದ್ದಿನ ಪಕ್ಕದಲ್ಲಿ 7
ಪೂರ್ವದಿಂದ ಪಶ್ಚಿಮದ ತನಕ ಯೆಹೂದಕ್ಕೆ ಒಂದು
ಪಾಲು.

ಯೆಹೂದದ ಸರಹದ್ದಿನ ಪಕ್ಕದಲ್ಲಿ ಪೂರ್ವದಿಂದ 8
ಪಶ್ಚಿಮದ ತನಕ ನೀವು ಮೀಸಲಾಗಿ ಸಮರ್ಪಿಸುವ
ಪಾಲು ಇರುವದು; ಅದರ ಅಗಲವು ಇಪ್ಪತ್ತೈದು
ಸಾವಿರ ಮೊಳ, ಉದ್ದವು ಪಡುವಲಿಂದ ಮೂಡಲಿಗೆ
ಕುಲಗಳ ಪಾಲುಗಳ ಉದ್ದಕ್ಕೆ ಸರಿಸಮಾನ; ಅದರ
ಮಧ್ಯದಲ್ಲಿ ಪವಿತ್ರಾಲಯವಿರುವದು. ನೀವು [ಮೀ 9
ಸಲು ಭೂಮಿಯಲ್ಲಿ] ಯೆಹೋವನಿಗೆ ವಿಶೇಷವಾದ
ಮೀಸಲಾಗಿ ಸಮರ್ಪಿಸುವ ಪಾಲಿನ ಉದ್ದವು ಇಪ್ಪ
ತ್ತೈದು ಸಾವಿರ ಮೊಳ, ಅಗಲವು ಹತ್ತು ಸಾವಿರ
ಮೊಳ. ಮೀಸಲಾದ ಆ ಪವಿತ್ರಕ್ಷೇತ್ರವು ಯಾಜಕ 10
ರಿಗೆ ಸಲ್ಲತಕ್ಕದ್ದು; ಬಡಗಲಲ್ಲಿ ಅದರ ಉದ್ದವು ಇಪ್ಪ
ತ್ತೈದು ಸಾವಿರ ಮೊಳ, ಪಡುವಲಲ್ಲಿ ಅಗಲವು ಹತ್ತು
ಸಾವಿರ ಮೊಳ, ಮೂಡಲಲ್ಲಿ ಅಗಲವು ಹತ್ತು ಸಾವಿರ
ಮೊಳ, ತೆಂಕಲಲ್ಲಿ ಉದ್ದವು ಇಪ್ಪತ್ತೈದು ಸಾವಿರ
ಮೊಳ. ಅದರ ಮಧ್ಯದಲ್ಲಿ ಯೆಹೋವನ ಪವಿತ್ರಾ
ಲಯವಿರುವದು. ಆ ಕ್ಷೇತ್ರವು ಚಾದೋಕನ 11
ಸಂತಾನದವರಲ್ಲಿ ನನಗಾಗಿ ಪ್ರತಿಷ್ಠಿತರೂ ನನ್ನ ಆಲ
ಯದ ಪಾರುಪತ್ಯವನ್ನು ನೆರವೇರಿಸಿದವರೂ ಆದ
ಯಾಜಕರಿಗೇ ಸೇರತಕ್ಕದ್ದು; ಇಸ್ರಾಯೇಲ್ಯರು
ನನ್ನನ್ನು ತೊರೆದಾಗ ಲೇವಿಯರೂ ತೊರೆದಂತೆ ಇವರು
ತೊರೆಯಲಿಲ್ಲವಲ್ಲಾ. ಲೇವಿಯರ ಪಾಲಿನ ಸರಹದ್ದಿಗೆ 12
ಪಕ್ಕದಲ್ಲಿರುವ ಆ ಕ್ಷೇತ್ರವು ಅತಿಪವಿತ್ರವೂ ದೇಶದೊಳ
ಗಣ ಮೀಸಲಲ್ಲಿ ಮೀಸಲೂ ಆಗಿ ಯಾಜಕರದಾಗಿರು
ವದು. ಮತ್ತು ಇಪ್ಪತ್ತೈದು ಸಾವಿರ ಮೊಳ ಉದ್ದದ, 13
ಹತ್ತು ಸಾವಿರ ಮೊಳ ಅಗಲದ ಒಂದು ಪಾಲು ಯಾಜ
ಕರ ಪಾಲಿನ ಸರಹದ್ದಿಗೆ ಪಕ್ಕದಲ್ಲಿ ಲೇವಿಯರಿಗೆ ಸಲ್ಲ
ತಕ್ಕದ್ದು; [ಈ ಎರಡು ಪಾಲುಗಳ] ಒಟ್ಟಳತೆ ಎಷ್ಟಂದರೆ
ಉದ್ದವು ಇಪ್ಪತ್ತೈದು ಸಾವಿರ ಮೊಳ, ಅಗಲವು
2)ಇಪ್ಪತ್ತು ಸಾವಿರ ಮೊಳ. ಆ ಕ್ಷೇತ್ರವು ಯೆಹೋ 14
ವನಿಗೆ ಮೀಸಲಾದದರಿಂದ ಅದರಲ್ಲಿ ಯಾವ ಭಾಗ
ವನ್ನೂ ಮಾರಬಾರದು, ಬದಲಾಬದಲಿ ಮಾಡಕೂ

1) ಮೂಲ: ಪಾಲುಗಳು.

2) ಮೇಲಿನದು ಗ್ರೀಕ್ ಮೂಲ; ಇಬ್ರಿಯ ಮೂಲ: ಹತ್ತು.

ಡದು, [1]ದೇಶದ ಆ ಶ್ರೇಷ್ಠಾಂಶವು ಪರವಶವಾಗದಿ
15 ರಲಿ. ಇಪ್ಪತ್ತೈದು ಸಾವಿರ ಮೊಳ ಉದ್ದದ ಆ
ಕ್ಷೇತ್ರದ ಪಕ್ಕದಲ್ಲಿ [ಮೀಸಲುಪಾಲಿನ ಒಟ್ಟಳತೆ
ಯಲ್ಲಿ] ಮಿಕ್ಕ ಐದು ಸಾವಿರ ಮೊಳ ಅಗಲದ ಭೂ
ಮಿಯು ಮೀಸಲಲ್ಲವೆಂದೆಣಿಸಿ ರಾಜಧಾನಿಗೆ ಅಂದರೆ
ಜನರ ನಿವಾಸಕ್ಕೂ ಸುತ್ತಣ ಪ್ರದೇಶಕ್ಕೂ ಪ್ರತ್ಯೇಕಿ
ಸಲ್ಪಡಲಿ, ರಾಜಧಾನಿಯು ಅದರ ಮಧ್ಯದಲ್ಲಿರಲಿ.
16 ರಾಜಧಾನಿಯ ಅಳತೆಯು ಹೀಗಿರಬೇಕು; ಬಡಗಣ
ಪಕ್ಕವು ನಾಲ್ಕು ಸಾವಿರದ ಐನೂರು ಮೊಳ, ತೆಂಕಣ
ಪಕ್ಕವು ನಾಲ್ಕು ಸಾವಿರದ ಐನೂರು ಮೊಳ, ಮೂಡಣ
ಪಕ್ಕವು ನಾಲ್ಕು ಸಾವಿರದ ಐನೂರು ಮೊಳ, ಪಡುವಣ
17 ಪಕ್ಕವು ನಾಲ್ಕು ಸಾವಿರದ ಐನೂರು ಮೊಳ. ರಾಜ
ಧಾನಿಗೆ ಸುತ್ತಣ ಪ್ರದೇಶವಿರಬೇಕು; ಅದರ ಅಗಲವು
ಬಡಗಲಲ್ಲಿ ಇನ್ನೂರೈವತ್ತು ಮೊಳ, ತೆಂಕಲಲ್ಲಿ
ಇನ್ನೂರೈವತ್ತು ಮೊಳ, ಮೂಡಲಲ್ಲಿ ಇನ್ನೂರೈವತ್ತು
18 ಮೊಳ, ಪಡುವಲಲ್ಲಿ ಇನ್ನೂರೈವತ್ತು ಮೊಳ. ರಾಜ
ಧಾನಿ ಹೊರತು ಅದಕ್ಕೆ ಒಳಪಟ್ಟ ಮಿಕ್ಕ ಭೂಮಿಯ
ಉದ್ದವು ಮೀಸಲಾದ ಪವಿತ್ರಕ್ಷೇತ್ರದ ಪಕ್ಕದಲ್ಲಿ
ಮೂಡಲ ಕಡೆ ಹತ್ತು ಸಾವಿರ ಮೊಳ, ಪಡುವಲ ಕಡೆ
ಹತ್ತು ಸಾವಿರ ಮೊಳ; ಆ ಭೂಮಿಯು ಮೀಸಲಾದ
ಪವಿತ್ರಕ್ಷೇತ್ರದ ಎಲ್ಲೆಯನ್ನು ಅನುಸರಿಸಿರುವದು;
ಅದರ ಉತ್ಪತ್ತಿಯು ಅದನ್ನು ಗೆಯ್ಯುವ ಆ ಪುರನಿವಾ
19 ಸಿಗಳಿಗೆ ಆಹಾರವಾಗುವದು. ಅವರು ಇಸ್ರಾಯೇ
ಲಿನ ಯಾವ ಕುಲಕ್ಕೆ ಸೇರಿದ್ದರೂ ಪುರದಲ್ಲಿ [2]ವಾಸಿ
20 ಸುತ್ತಾ ಆ ಭೂಮಿಯನ್ನು ಗೆಯ್ಯುವರು. ಮೀಸ
ಲಾದ ಪೂರ್ಣಕ್ಷೇತ್ರದ ಉದ್ದವು ಇಪ್ಪತ್ತೈದು ಸಾವಿರ
ಮೊಳ, ಅಗಲವು ಇಪ್ಪತ್ತೈದು ಸಾವಿರ ಮೊಳ; ನೀವು
ಮೀಸಲಾಗಿ ಅರ್ಪಿಸುವ ಪವಿತ್ರಕ್ಷೇತ್ರವು ರಾಜಧಾನಿಗೆ
ಒಳಪಟ್ಟ ಭೂಮಿಸಹಿತವಾಗಿ ಚಚ್ಚೌಕವಾಗಿರಬೇಕು.
21 ಮೀಸಲಾದ ಪವಿತ್ರಕ್ಷೇತ್ರದ ಮತ್ತು ರಾಜಧಾನಿಗೆ
ಒಳಪಟ್ಟ ಭೂಮಿಯ ಎರಡು ಕಡೆಗಳಲ್ಲಿ ಮಿಕ್ಕ ಭೂ
ಮಿಯು ಪ್ರಭುವಿನ ಪಾಲಾಗಿರಲಿ; ಆ ಪಾಲು
ಮೀಸಲಾದ ಕ್ಷೇತ್ರದ ಮೂಡಲ ಕಡೆ ಇಪ್ಪತ್ತೈದು
ಸಾವಿರ ಮೊಳ ಉದ್ದದ ಎಲ್ಲೆಯ ಪಕ್ಕದಲ್ಲಿಯೂ
ಪಡುವಲ ಕಡೆ ಇಪ್ಪತ್ತೈದು ಸಾವಿರ ಮೊಳ ಉದ್ದದ
ಎಲ್ಲೆಯ ಪಕ್ಕದಲ್ಲಿಯೂ ಕುಲಗಳ ಪಾಲಿನಷ್ಟು ಉದ್ದ
ವಾಗಿ ಹಬ್ಬುವದು; ಅದು ಪ್ರಭುವಿನದು; ಮೀಸ
ಲಾದ ಪವಿತ್ರಕ್ಷೇತ್ರವೂ ಪವಿತ್ರಾಲಯವೂ ಅದರ
22 [ಎರಡು ಭಾಗಗಳ] ಮಧ್ಯದಲ್ಲಿರುವವು. ಪ್ರಭುವಿನ
ಪಾಲಿನ [ಎರಡು ಭಾಗಗಳ] ನಡುವಣ ಲೇವಿಯರ
ಪಾಲಿನ [ಬಡಗಣ] ಮೇರೆಯಿಂದ ರಾಜಧಾನಿಗೆ ಒಳ
ಪಟ್ಟ ಭೂಮಿಯ [ತೆಂಕಣ] ಮೇರೆಯ ತನಕ ಅಂದರೆ

ಯೆಹೂದದ [ತೆಂಕಣ] ಸರಹದ್ದಿನಿಂದ ಬೆನ್ಯಾಮೀನಿ
[ಬಡಗಣ] ಸರಹದ್ದಿನ ವರೆಗೆ ಪ್ರಭುವಿನ ಪಾಲು ಹ
ರುವದು.

ಮಿಕ್ಕ ಕುಲಗಳ ಪಾಲಿನ ಕ್ರಮವೇನಂದರೆ, ಪೂ
ದಿಂದ ಪಶ್ಚಿಮದ ತನಕ ಬೆನ್ಯಾಮೀನಿಗೆ ಒಂದು ಪಾ
ಬೆನ್ಯಾಮೀನಿನ ಸರಹದ್ದಿನ ಪಕ್ಕದಲ್ಲಿ ಪೂರ್ವದಿ
ಪಶ್ಚಿಮದ ತನಕ ಸಿಮೆಯೋನಿಗೆ ಒಂದು ಪಾ
ಸಿಮೆಯೋನಿನ ಸರಹದ್ದಿನ ಪಕ್ಕದಲ್ಲಿ ಪೂರ್ವದಿ
ಪಶ್ಚಿಮದ ತನಕ ಇಸ್ಸಾಕಾರಿಗೆ ಒಂದು ಪಾ
ಇಸ್ಸಾಕಾರಿನ ಸರಹದ್ದಿನ ಪಕ್ಕದಲ್ಲಿ ಪೂರ್ವದಿ
ಪಶ್ಚಿಮದ ತನಕ ಜೆಬುಲೂನಿಗೆ ಒಂದು ಪಾ
ಜೆಬುಲೂನಿನ ಸರಹದ್ದಿನ ಪಕ್ಕದಲ್ಲಿ ಪೂರ್ವದಿ
ಪಶ್ಚಿಮದ ತನಕ ಗಾದಿಗೆ ಒಂದು ಪಾಲು. ಗಾ
ತೆಂಕಣ ಸರಹದ್ದಿನಲ್ಲಿ ದೇಶದ ಮೇರೆಯು ತಾ
ರಿನಿಂದ ಹೊರಟು ಮೇರೀಬತ್ಕಾದೇಶಿನ ಹ
ವನ್ನು ದಾಟಿ [ಐಗುಪ್ತದ ಮುಂದಣ] ತೊರೆ
ಮಾರ್ಗವಾಗಿ ದೊಡ್ಡ ಸಮುದ್ರಕ್ಕೆ ಮುಟ್ಟುವ
ನೀವು ಇಸ್ರಾಯೇಲಿನ ಕುಲಗಳಿಗೆ ಸ್ವಾಸ್ತ್ಯವಾ
ಹಂಚಿ ಕೊಡಬೇಕಾದ ದೇಶವು ಇದೇ; ಕುಲ
ಪಾಲುಗಳು ಇವೇ; ಇದು ಕರ್ತನಾದ ಯೆಹೋ
ನುಡಿ.

ರಾಜಧಾನಿಯ ಗಡಿಗಳು ಹೀಗಿರಬೇಕು; ಬಡಗ
ಗಡಿಯ ಉದ್ದವು ನಾಲ್ಕು ಸಾವಿರದ ಐನೂ
ಮೊಳ; ಪಟ್ಟಣದ ಬಾಗಿಲುಗಳಿಗೆ ಇಸ್ರಾಯೇ
ಕುಲಗಳ ಆಯಾ ಹೆಸರುಗಳು ಇರಲಿ; ಬಡಗಲ
ಮೂರು ಬಾಗಿಲುಗಳು; ಒಂದು ರೂಬೇನ್ ಬಾಗಿ
ಇನ್ನೊಂದು ಯೆಹೂದ ಬಾಗಿಲು, ಮತ್ತೊಂದು ಲೇ
ಬಾಗಿಲು; ಮೂಡಣ ಗಡಿಯ ಉದ್ದವು ನಾಲ್ಕು ಸಾ
ರದ ಇನ್ನೂರು ಮೊಳ; ಅದರಲ್ಲಿ ಮೂರು ಬಾಗಿ
ಗಳು; ಒಂದು ಯೋಸೇಫ್ ಬಾಗಿಲು; ಇನ್ನೊಂ
ಬೆನ್ಯಾಮೀನ್ ಬಾಗಿಲು, ಮತ್ತೊಂದು ದಾನ್ ಬ
ಗಿಲು; ತೆಂಕಣ ಗಡಿಯ ಉದ್ದವು ನಾಲ್ಕು ಸಾವಿ
ಐನೂರು ಮೊಳ; ಅದರಲ್ಲಿ ಮೂರು ಬಾಗಿಲುಗಳ
ಒಂದು ಸಿಮೆಯೋನ್ ಬಾಗಿಲು, ಇನ್ನೊಂದು ಇಸ
ಕಾರ್ ಬಾಗಿಲು, ಮತ್ತೊಂದು ಜೆಬುಲೂನ್ ಬಾಗಿ
ಪಡುವಣ ಗಡಿಯ ಉದ್ದವು ನಾಲ್ಕು ಸಾವಿ
ಐನೂರು ಮೊಳ; ಅದರಲ್ಲಿ ಮೂರು ಬಾಗಿಲುಗ
ಒಂದು ಗಾದ್ ಬಾಗಿಲು, ಇನ್ನೊಂದು ಆಶೇ
ಬಾಗಿಲು, ಮತ್ತೊಂದು ನಫ್ತಾಲಿ ಬಾಗಿಲು; ಪಟ್ಟಣ
ಸುತ್ತಳತೆಯು ಹದಿನೆಂಟು ಸಾವಿರ ಮೊಳ; [3]ಅದನ
ನಿರ್ಮಿಸಿದಂದಿನಿಂದ ಆ ಪಟ್ಟಣಕ್ಕೆ [4]ಯೆಹೋವ
ನೆಲೆ ಎಂಬ ಹೆಸರಾಗುವದು.

---

1) ಅಥವಾ: ಆ ಭೂಮಿಯ ಪ್ರಥಮಫಲವು ಇತರರ ಅನುಭವಕ್ಕೆ ಬಾರದಿರಲಿ. 2) ಮೂಲ: ಕೆಲಸನಡಿ
3) ಮೂಲ: ಅಂದಿನಿಂದ. 4) ಮೂಲ: ಯೆಹೋವಶಾಮ್ಮಾ.

# THE BOOK OF THE

# PROPHET DANIEL

## ದಾನಿಯೇಲನ ಪ್ರವಾದನೆಯ ಗ್ರಂಥ

### ದಾನಿಯೇಲನ ವೃತ್ತಾಂತಸಂಗ್ರಹ.
### 1—6.

ಇಬ್ರಿಯ ಯುವಕರು ರಾಜನ ಆಹಾರವನ್ನು ತ್ಯಜಿಸಿದ್ದು.

ಯೆಹೂದದ ಅರಸನಾದ ಯೆಹೋಯಾಕೀಮನ ಆಳಿ
ಕೆಯ ಮೂರನೆಯ ವರುಷದಲ್ಲಿ ಬಾಬೆಲಿನ ರಾಜ
ನಾದ ನೆಬೂಕದ್ನೆಚ್ಚರನು ಯೆರೂಸಲೇಮಿಗೆ ಬಂದು
2 ಮುತ್ತಿಗೆ ಹಾಕಿದನು. ಆಗ ಕರ್ತನು ಯೆಹೂದದ
ಅರಸನಾದ ಯೆಹೋಯಾಕೀಮನನ್ನೂ ದೇವಾಲ
ಯದ ಅನೇಕ ಪಾತ್ರೆಗಳನ್ನೂ ಅವನ ವಶಕ್ಕೆ ಕೊಡಲು
ಅವನು ಅವುಗಳನ್ನು ಶಿನಾರ್ ದೇಶಕ್ಕೆ ಸಾಗಿಸಿ
ತನ್ನ ದೇವರ ಮಂದಿರಕ್ಕೆ ತಂದು ಆ ದೇವರ ಭಂಡಾ
3 ರದಲ್ಲಿ ಸೇರಿಸಿಬಿಟ್ಟನು. ಅನಂತರ ಆ ರಾಜನು ತನ್ನ
ಕಂಚುಕಿಯರಲ್ಲಿ ಮುಖ್ಯನಾದ ಅಶ್ಪೆನಜನಿಗೆ— ನೀನು
ಇಸ್ರಾಯೇಲ್ಯರಲ್ಲಿ ಅಂದರೆ ರಾಜವಂಶೀಯರಲ್ಲಿ
4 ಮತ್ತು ಪ್ರಧಾನರಲ್ಲಿ ಅಂಗದೋಷವಿಲ್ಲದವರೂ ಸುಂದ
ರರೂ ಸಮಸ್ತಶಾಸ್ತ್ರಜ್ಞರೂ ಪಂಡಿತರೂ ವಿದ್ಯಾನಿಪುಣ
ರೂ ರಾಜಾಲಯದಲ್ಲಿ ಸನ್ನಿಧಿಸೇವೆಮಾಡಲು ಸಮ
ರ್ಥರೂ ಆದ ಕೆಲವು ಯುವಕರನ್ನು ಇಲ್ಲಿಗೆ ಕರ
ತಂದು ಅವರಿಗೆ ಕಸ್ದೀಯ ಪಂಡಿತರ ಭಾಷೆಯನ್ನೂ
ಶಾಸ್ತ್ರಗಳನ್ನೂ ಕಲಿಸಬೇಕೆಂಬದಾಗಿ ಅಪ್ಪಣೆಕೊಟ್ಟನು.
5 ಇದಲ್ಲದೆ ಇನ್ನು ಮುಂದೆ ಅವರು ಸನ್ನಿಧಿಸೇವಕ
ರಾಗಲೆಂದು ತನ್ನ ಭೋಜನಪದಾರ್ಥಗಳನ್ನೂ ತಾನು
ಕುಡಿಯುವ ದ್ರಾಕ್ಷಾರಸವನ್ನೂ ಅವರಿಗೆ ದಿನವಹಿ
ಬಡಿಸುವ ಏರ್ಪಾಡುಮಾಡಿ ಅವರನ್ನು ಮೂರು
6 ವರುಷ ಪೋಷಿಸಬೇಕು ಎಂದು ಆಜ್ಞಾಪಿಸಿದನು. ಆರಿ
ಸಲ್ಪಟ್ಟ ಯುವಕರಲ್ಲಿ ದಾನಿಯೇಲ, ಹನನ್ಯ,
ಮೀಶಾಯೇಲ, ಅಜರ್ಯ ಎಂಬ ಯೆಹೂದ್ಯರು ಸೇರಿ
7 ದ್ದರು. ಕಂಚುಕಿಯರ ಅಧ್ಯಕ್ಷನು ಇವರಿಗೆ ನಾಮ
ಕರಣಮಾಡಿ ದಾನಿಯೇಲನಿಗೆ ಬೇಲ್ತೆಶಚ್ಚರ್, ಹನನ್ಯ
ನಿಗೆ ಶದ್ರಕ್, ಮೀಶಾಯೇಲನಿಗೆ ಮೇಶಕ್, ಅಜರ್ಯ
8 ನಿಗೆ ಅಬೇದ್‌ನೆಗೋ ಎಂಬ ಹೆಸರಿಟ್ಟನು. ದಾನಿಯೇ
ಲನು ತಾನು ರಾಜನ ಭೋಜನಪದಾರ್ಥಗಳನ್ನು
ತಿಂದು ರಾಜನು ಕುಡಿಯುವ ದ್ರಾಕ್ಷಾರಸವನ್ನು ಕು
ಡಿದು ತನ್ನನ್ನು ಅಶುದ್ಧಮಾಡಿಕೊಳ್ಳಬಾರದೆಂದು
ನಿಶ್ಚಯಿಸಿ ಕಂಚುಕಿಯರ ಅಧ್ಯಕ್ಷನಿಗೆ— ನಾನು
ಅಶುದ್ಧನಾಗಲಾರೆ, ಕ್ಷಮಿಸು ಎಂದು ವಿಜ್ಞಾಪಿಸಿದಾಗ
9 ದೇವರು ಕಂಚುಕಿಯರ ಅಧ್ಯಕ್ಷನ ಮನಸ್ಸಿನಲ್ಲಿ
ದಾನಿಯೇಲನ ಮೇಲೆ ಕನಿಕರವನ್ನೂ ದಯೆಯನ್ನೂ
ಹುಟ್ಟಿಸಿದನು. ಆ ವಿಜ್ಞಾಪನೆಯನ್ನು ಕೇಳಿ ಕಂಚುಕಿ 10
ಯರ ಅಧ್ಯಕ್ಷನು ದಾನಿಯೇಲನಿಗೆ— ನಿಮಗೆ ಆಹಾರ
ಪಾನಗಳನ್ನು ಏರ್ಪಡಿಸಿದ ನನ್ನ ಒಡೆಯನಾದ ರಾಜನು
ನಿಮ್ಮಂತೆ ಆರಿಸಲ್ಪಟ್ಟ ಯುವಕರ ಮುಖಕ್ಕಿಂತ ನಿಮ್ಮ
ಮುಖವು ಬಾಡಿರುವದನ್ನು ನೋಡುವನೆಂದು ಭಯ
ಪಡುತ್ತೇನೆ; ರಾಜನು ನನ್ನ ತಲೆಯನ್ನು ತೆಗಿಸಲು
ಕಾರಣರಾದೀರಿ ಎಂದು ಹೇಳಿದನು. ದಾನಿಯೇಲನು 11
ತನ್ನನ್ನೂ ಹನನ್ಯ, ಮೀಶಾಯೇಲ, ಅಜರ್ಯ, ಇವ
ರನ್ನೂ ನೋಡಿಕೊಳ್ಳುವದಕ್ಕೆ ಕಂಚುಕಿಯರ ಅಧ್ಯ
ಕ್ಷನು ನೇಮಿಸಿದ್ದ ವಿಚಾರಕನಿಗೆ— ಅಯ್ಯಾ, ಹತ್ತು 12
ದಿನಗಳ ಮಟ್ಟಿಗೆ ನಿನ್ನ ಸೇವಕರಾದ ನಮ್ಮನ್ನು ಪರೀ
ಕ್ಷಿಸು; ಆಹಾರಕ್ಕೆ ಕಾಯಿಪಲ್ಯ, ಪಾನಕ್ಕೆ ನೀರು
ನಮಗೆ ಒದಗಲಿ; ಆ ಮೇಲೆ ನಮ್ಮ ಮುಖಗಳನ್ನೂ 13
ರಾಜನ ಆಹಾರವನ್ನು ಉಣ್ಣುವ ಯುವಕರ ಮುಖಗ
ಳನ್ನೂ ಹೋಲಿಸಿನೋಡು; ನೋಡಿದ್ದಕ್ಕೆ ತಕ್ಕ ಹಾಗೆ
ನಿನ್ನ ಸೇವಕರಿಗೆ ನಡಿಸು ಎಂದು ಬಿನ್ನವಿಸಲು ಅವನು 14
ಅವರ ಬಿನ್ನಹಕ್ಕೆ ಒಪ್ಪಿ ಹತ್ತು ದಿನ ಪರೀಕ್ಷಿಸಿದನು.
ಅವರು ಹತ್ತು ದಿನಗಳ ಮೇಲೆ ರಾಜನ ಆಹಾರವನ್ನು 15
ಉಣ್ಣುತ್ತಿದ್ದ ಸಕಲ ಯುವಕರಿಗಿಂತ ಸುಂದರರಾಗಿ
ಯೂ ಪುಷ್ಟರಾಗಿಯೂ ಕಾಣಿಸಿದರು. ಅಂದಿನಿಂದ 16
ವಿಚಾರಕನು ಅವರಿಗೆ ನೇಮಕವಾದ ಭೋಜನಪದಾರ್ಥ
ಗಳನ್ನೂ ಅವರು ಕುಡಿಯಬೇಕಾದ ದ್ರಾಕ್ಷಾರಸವ
ನ್ನೂ ತೆಗೆದಿಟ್ಟು ಕಾಯಿಪಲ್ಯಗಳನ್ನು ಕೊಡುತ್ತಾ
ಬಂದನು. ಹೀಗಿರಲು ದೇವರು ಆ ನಾಲ್ಕು ಮಂದಿ 17
ಯುವಕರಿಗೆ ಸಕಲಶಾಸ್ತ್ರಗಳಲ್ಲಿಯೂ ವಿದ್ಯೆಗಳಲ್ಲಿ
ಯೂ ಜ್ಞಾನವಿವೇಕಗಳನ್ನು ದಯಪಾಲಿಸಿದನು;
ದಾನಿಯೇಲನು ಸಮಸ್ತ ಸ್ವಪ್ನಗಳನ್ನೂ ದಿವ್ಯದರ್ಶ
ನಗಳನ್ನೂ ಗ್ರಹಿಸುವದರಲ್ಲಿ ಪ್ರವೀಣನಾದನು. ರಾಜ 18
ನು ನೇಮಿಸಿದ ಕಾಲವು ಕಳೆದು ಯುವಕರನ್ನು ಸನ್ನಿ
ಧಿಗೆ ತರತಕ್ಕ ಸಮಯವು ಬಂದಾಗ ಕಂಚುಕಿಯರ
ಅಧ್ಯಕ್ಷನು ಅವರನ್ನು ನೆಬೂಕದ್ನೆಚ್ಚರನ ಸಮ್ಮುಖಕ್ಕೆ
ಕರತಂದನು. ರಾಜನು ಅವರ ಸಂಗಡ ಮಾತಾಡು 19
ವಾಗ ಆ ಸಮಸ್ತ ಯುವಕರಲ್ಲಿ ದಾನಿಯೇಲ,
ಹನನ್ಯ, ಮೀಶಾಯೇಲ, ಅಜರ್ಯ, ಇವರ ಹಾಗೆ
ಯಾರೂ ಕಂಡುಬರಲಿಲ್ಲ; ಆದಕಾರಣ ಅವರು
ರಾಜನ ಸನ್ನಿಧಿಸೇವಕರಾದರು. ಬಳಿಕ ರಾಜನು 20
ಶಾಸ್ತ್ರೀಯ ವಿದ್ಯೆಯ ಸರ್ವವಿಷಯಗಳಲ್ಲಿ ಅವರನ್ನು
ವಿಚಾರಮಾಡಲು ಅವನ ಪೂರ್ಣ ರಾಜ್ಯದಲ್ಲಿನ ಎಲ್ಲಾ
ಜೋಯಿಸರಿಗಿಂತಲೂ ಮಂತ್ರವಾದಿಗಳಿಗಿಂತಲೂ ಹತ್ತು

21 ರಷ್ಟು ನಿಪುಣರಾಗಿ ಕಂಡುಬಂದರು. ದಾನಿಯೇ
ಲನು ರಾಜನಾದ ಕೋರೆಷನ ಆಳಿಕೆಯ ಮೊದಲನೆಯ
ವರುಷದ ತನಕ ಸನ್ನಿಧಿಸೇವಕನಾಗಿಯೇ ಇದ್ದನು.

### ಅದ್ಭುತಪ್ರತಿಮೆಯ ಕನಸು.

2 ನೆಬೂಕದ್ನೆಚ್ಚರನು ತನ್ನ ಆಳಿಕೆಯ ಎರಡನೆಯ ವರು
ಷದಲ್ಲಿ ಕನಸುಕಂಡು ತತ್ತರಗೊಂಡನು, ಅವನಿಗೆ
2 ನಿದ್ರೆ ತಪ್ಪಿತು. ಆಗ ರಾಜನು ತನ್ನ ಕನಸುಗಳ
ಅಭಿಪ್ರಾಯವನ್ನು ತಿಳಿಸಲೆಂದು ಜೋಯಿಸರನ್ನೂ
ಮಂತ್ರವಾದಿಗಳನ್ನೂ ಮಾಟಗಾರರನ್ನೂ ಪಂಡಿತರನ್ನೂ
ಕರೆಯಿಸಲು ಅವರು ಸನ್ನಿಧಿಗೆ ಬಂದು ರಾಜನ
3 ಮುಂದೆ ನಿಂತುಕೊಂಡರು. ರಾಜನು ಅವರಿಗೆ—
ನಾನು ಕನಸುಕಂಡೆನು, ಅದರ ಅರ್ಥವೇನೋ ಎಂದು
ನನ್ನ ಮನಸ್ಸು ತತ್ತರಗೊಂಡಿದೆ ಎಂಬದಾಗಿ ಹೇಳ
4 ಲು ಆ ಪಂಡಿತರು ಅರಮಾಯ ಭಾಷೆಯಲ್ಲಿ ರಾಜ
ನಿಗೆ— ಅರಸನೇ, ಚಿರಂಜೀವಿಯಾಗಿರು; ಆ ಕನಸನ್ನು
ನಿನ್ನ ದಾಸರಿಗೆ ಹೇಳು; ಅದರ ತಾತ್ಪರ್ಯವನ್ನು ತಿಳಿ
5 ಸುವೆವು ಎಂದು ಅರಿಕೆಮಾಡಿದರು. ಆಗ ರಾಜನು
ಪಂಡಿತರಿಗೆ ಪ್ರತ್ಯುತ್ತರವಾಗಿ—ನನ್ನ ಮಾತು ಖಂಡಿತ;
ನೀವೇ ಆ ಕನಸನ್ನೂ ಅದರ ಅಭಿಪ್ರಾಯವನ್ನೂ ನನಗೆ
ತಿಳಿಸದಿದ್ದರೆ ನಿಮ್ಮನ್ನು ಚೂರುಚೂರಾಗಿ ಕಡಿಸುವೆನು,
ನಿಮ್ಮ ಮನೆಗಳನ್ನು ತಿಪ್ಪೆಯನ್ನಾಗಿ ಮಾಡಿಸಿಬಿಡು
6 ವೆನು; ನೀವು ಆ ಕನಸನ್ನೂ ಅದರ ಅಭಿಪ್ರಾಯವನ್ನೂ
ತಿಳಿಸಿದರೆ ನನ್ನಿಂದ ನಿಮಗೆ ದಾನಬಹುಮಾನಗಳೂ
ವಿಶೇಷಸನ್ಮಾನಗಳೂ ಲಭಿಸುವವು; ಆದಕಾರಣ ಆ
ಕನಸನ್ನೂ ಅದರ ಅಭಿಪ್ರಾಯವನ್ನೂ ನನಗೆ ತಿಳಿಸಿರಿ
7 ಎಂದು ಹೇಳಲು ಪಂಡಿತರು—ರಾಜನು ತನ್ನ ದಾಸರಿಗೆ
ಕನಸನ್ನು ತಿಳಿಸೋಣವಾಗಲಿ, ನಾವು ಅದರ ತಾತ್ಪ
ರ್ಯವನ್ನು ವಿವರಿಸುವೆವು ಎಂಬ ಉತ್ತರವನ್ನೇ ಪುನಃ
8 ಕೊಟ್ಟರು. ಅದಕ್ಕೆ ರಾಜನು—ನೀವು ಆ ಕನಸನ್ನು
ನನಗೆ ತಿಳಿಸದಿದ್ದರೆ [ಮರಣದಂಡನೆಯ] ನಿಯಮವೇ
ನಿಮಗೆ ಗತಿಯಾಗುವದು ಎಂಬ ನನ್ನ ಮಾತು ಖಂಡಿತ
ವೆಂದು ನೀವು ತಿಳಿದುಕೊಂಡು ಕಾಲಹರಣ ಮಾಡುತ್ತಿ
9 ದ್ದೀರಿ. ಇದು ನನಗೆ ಚೆನ್ನಾಗಿ ಗೊತ್ತು; ಕಾಲಾಂತರ
ವನ್ನು ನಿರೀಕ್ಷಿಸಿಕೊಂಡೇ ನನ್ನ ಮುಂದೆ ಕೆಟ್ಟ ಸುಳ್ಳು
ಗಳನ್ನು ಆಡುತ್ತಿರಬೇಕೆಂದು ಕಟ್ಟುಮಾಡಿಕೊಂಡಿ
ದ್ದೀರಿ; ಅಂತು ಆ ಕನಸನ್ನು ತಿಳಿಸಬೇಕು; ಅದರಿಂದ
ನೀವು ಅದರ ಅಭಿಪ್ರಾಯವನ್ನೂ ವಿವರಿಸಬಲ್ಲಿರೆಂದು
10 ತಿಳಿದುಕೊಳ್ಳುವೆನು ಎಂದು ಹೇಳಿದನು. ಆಗ ಆ ಪಂಡಿ
ತರು ಸನ್ನಿಧಿಯ ಮುಂದೆ—ರಾಜನು ಕೇಳಿದ ಸಂಗತಿ
ಯನ್ನು ತಿಳಿಸಬಲ್ಲವನು ಲೋಕದಲ್ಲಿ ಯಾವನೂ
ಇಲ್ಲ; ಎಷ್ಟೇ ಬಲಿಷ್ಠನು, ಎಷ್ಟೇ ಪ್ರಬಲನು ಆದ
ಯಾವ ಅರಸನೂ ಜೋಯಿಸನನ್ನಾಗಲಿ ಮಾಟಗಾರನ
ನ್ನಾಗಲಿ ಪಂಡಿತನನ್ನಾಗಲಿ ಇಂಥ ಸಂಗತಿಯನ್ನು
11 ಎಂದೂ ಕೇಳಿದ್ದಿಲ್ಲ; ರಾಜನು ಕೇಳುವ ಸಂಗತಿಯು
ಅತಿಕಷ್ಟವಾದದು; ನರಜನ್ಮದವರ ಮಧ್ಯೆ ವಾಸಿಸದ
ದೇವರುಗಳೇ ಹೊರತು ಇನ್ನಾರೂ ರಾಜನ ಸಮ್ಮುಖ

ದಲ್ಲಿ ತಿಳಿಸಲಾರರು ಎಂದು ಉತ್ತರಕೊಟ್ಟರು. ಇ
ನ್ನು ಕೇಳಿ ರಾಜನು ಉಗ್ರರೋಷವುಳ್ಳವನಾಗಿ ಬಾ
ಲಿನ ಸಕಲವಿದ್ವಾಂಸರನ್ನು ಕೊಲ್ಲಬೇಕೆಂದು ಆಜ್ಞಾ
ಸಿದನು. ಕೂಡಲೆ ಆ ಆಜ್ಞೆಯು ಹೊರಪಟ್ಟಿತು
ವಿದ್ವಾಂಸರು ಪ್ರಾಣಾಪಾಯಕ್ಕೆ ಗುರಿಯಾದರು; ದಾ
ಯೇಲನನ್ನೂ ಅವನ ಸ್ನೇಹಿತರನ್ನೂ ಕೊಲ್ಲಲಿ
ಹುಡುಕಿದರು. ರಾಜನ ಮೈಗಾವಲಿನವರ ದಳವಾಯಿ
ಯಾದ ಅರ್ಯೋಕನು ಬಾಬೆಲಿನ ವಿದ್ವಾಂಸರ ಸಂಹ
ರಕ್ಕೆ ಹೊರಟಾಗ ದಾನಿಯೇಲನು ಬುದ್ಧಿವಿವೇಕ
ಳಿಂದ ಅವನ ಸಂಗಡ ಮಾತಾಡಿ—ಈ ರಾಜಾಜ್ಞೆಯ
ಏಕೆ ಇಷ್ಟು ತೀಕ್ಷ್ಣ ಎಂದು ಕೇಳಲು ಅರ್ಯೋಕನ
ನಡೆದ ಸಂಗತಿಯನ್ನು ದಾನಿಯೇಲನಿಗೆ ತಿಳಿಸಿದನು.
ಮೇಲೆ ದಾನಿಯೇಲನು ಅರಮನೆಗೆ ಸೇರಿ—ನನಗೆ ಸವ
ಯವನ್ನು [1]ಕೊಟ್ಟರೆ ನಾನು ಆ ಕನಸಿನ ಅರ್ಥವನ
ರಾಜನಿಗೆ ವಿವರಿಸುವೆನು ಎಂದು ಅರಿಕೆಮಾಡಿದನು.
ಬಳಿಕ ದಾನಿಯೇಲನು ತನ್ನ ಮನೆಗೆ ಹೋಗಿ ಹ
ನ್ಯ, ಮೀಶಾಯೇಲ, ಅಜರ್ಯ ಎಂಬ ತನ್ನ ಸ್ನೇಹಿ
ರಿಗೆ ಆ ಸಮಾಚಾರವನ್ನು ತಿಳಿಸಿ ನಾವು ಬಾಬೆಲಿ
ಇತರ ವಿದ್ವಾಂಸರೊಂದಿಗೆ ನಾಶವಾಗದಂತೆ ಪರಲೋ
ಕದೇವರು ಈ ರಹಸ್ಯದ ವಿಷಯವಾಗಿ ಕೃಪೆತೋ
ಸಲು ಆತನನ್ನು ಬೇಡಿಕೊಳ್ಳೋಣ ಎಂದನು. ಆಗ
ರಹಸ್ಯವು ರಾತ್ರಿಯ ಸ್ವಪ್ನದಲ್ಲಿ ದಾನಿಯೇಲನಿಗೆ ವ್ಯಕ್ತ
ವಾಯಿತು. ಕೂಡಲೆ ದಾನಿಯೇಲನು ಪರಲೋ
ದೇವರನ್ನು ಹೀಗೆ ಸ್ತುತಿಸಿದನು—

ದೇವರ ನಾಮಕ್ಕೆ ಯುಗಯುಗಾಂತರಗಳಲ್ಲಿಯ
ಕೊಂಡಾಟವಾಗಲಿ!
ಜ್ಞಾನತ್ರಾಣಗಳು ಆತನವುಗಳೇ.
ಕಾಲಸಮಯಗಳನ್ನು ಮಾರ್ಪಡಿಸುತ್ತಾನೆ,
ರಾಜರನ್ನು ತಳ್ಳುತ್ತಾನೆ, ನಿಲ್ಲಿಸುತ್ತಾನೆ;
ಜ್ಞಾನಿಗಳ ಜ್ಞಾನವು, ವಿವೇಕಿಗಳ ವಿವೇಕವು ಆತ
ವರವೇ;
ಆತನು ಅಗಾಧವಿಷಯಗಳನ್ನೂ ಗೂಢಾರ್ಥಗ
ನ್ನೂ ಬೈಲಿಗೆ ತರುತ್ತಾನೆ;
ಕಗ್ಗತ್ತಲೆಯಲ್ಲಿ ಅಡಗಿರುವದೂ ಆತನಿ
ಗೋಚರ;
ತೇಜಸ್ಸು ಆತನಲ್ಲೇ ನೆಲೆಗೊಂಡಿದೆ.
ನನ್ನ ಪಿತೃಗಳ ದೇವರೇ, ನಿನ್ನನ್ನು ಸ್ತುತಿಸುತ್ತೇನ
ಕೊಂಡಾಡುತ್ತೇನೆ,
ನೀನು ನನಗೆ ಜ್ಞಾನತ್ರಾಣಗಳನ್ನು ದಯಪಾಲಿ
ನಾವು ಬೇಡಿದ್ದನ್ನು ನನಗೆ ತೋರ್ಪಡಿಸಿದಿಯಲ್ಲಾ
ಹೌದು, ರಾಜನ ರಹಸ್ಯವನ್ನು ನಮಗೆ ವ್ಯಕ್ತಗೊ
ಸಿದಿ.

ಆಗ ದಾನಿಯೇಲನು ಬಾಬೆಲಿನ ವಿದ್ವಾಂಸರನ್ನ
ಕೊಲ್ಲುವದಕ್ಕೆ ರಾಜನು ನೇಮಿಸಿದ ಅರ್ಯೋಕನ
ಬಳಿಗೆ ಹೋಗಿ ಅವನಿಗೆ—ಬಾಬೆಲಿನ ವಿದ್ವಾಂಸರನ್ನು
ಕೊಲ್ಲಬೇಡ; ನನ್ನನ್ನು ರಾಜನ ಸನ್ನಿಧಿಗೆ ಬಿಡು
ನಾನು ಕನಸಿನ ಅಭಿಪ್ರಾಯವನ್ನು ರಾಜನಿಗೆ ತಿಳಿಸ
ವೆನು ಎಂದು ಹೇಳಿದನು.

1) ಅಥವಾ: ಗೊತ್ತುಮಾಡಿದರೆ.

5 ಕೂಡಲೆ ಅರ್ಯೋಕನು ದಾನಿಯೇಲನನ್ನು ಸನ್ನಿ
ಧಿಗೆ ತ್ವರೆಯಾಗಿ ಕರೆದುಕೊಂಡು ಹೋಗಿ — ರಾಜನೇ,
ಕನಸಿನ ಅಭಿಪ್ರಾಯವನ್ನು ನಿನಗೆ ತಿಳಿಸಬಲ್ಲವನೊ
ಬ್ಬನು ಯೆಹೂದದಿಂದ ಸೆರೆಯಾಗಿ ತಂದವರಲ್ಲಿ ನನಗೆ
6 ಸಿಕ್ಕಿದ್ದಾನೆ ಎಂದು ಅರಿಕೆಮಾಡಲು ರಾಜನು ಬೇಲ್ತೆ
ಶಚ್ಚರನೆಂಬ ಅಡ್ಡಹೆಸರಿನ ದಾನಿಯೇಲನನ್ನು — ನಾನು
ಕಂಡ ಕನಸನ್ನೂ ಅದರ ಅರ್ಥವನ್ನೂ ನನಗೆ ತಿಳಿಸ
7 ಬಲ್ಲೆಯಾ ಎಂದು ಕೇಳಿದನು. ಅದಕ್ಕೆ ದಾನಿಯೇಲ
ನು ಸನ್ನಿಧಿಯಲ್ಲಿ — ರಾಜನು ಕೇಳುವ ರಹಸ್ಯವನ್ನು
ವಿದ್ವಾಂಸರಾಗಲಿ ಮಾಟಗಾರರಾಗಲಿ ಜೋಯಿಸರಾ
ಗಲಿ ಶಕುನದವರಾಗಲಿ ಯಾರೂ ರಾಜನಿಗೆ ತಿಳಿಸಲಾ
8 ರರು; ಆದರೆ ರಹಸ್ಯಗಳನ್ನು ವ್ಯಕ್ತಗೊಳಿಸುವ ಒಬ್ಬ
ನಿದ್ದಾನೆ, ಆತನು ದೇವರು, ಪರಲೋಕದಲ್ಲಿದ್ದಾನೆ;
ಉತ್ತರಕಾಲದಲ್ಲಿ ನಡೆಯತಕ್ಕದನ್ನು ಆತನೇ ರಾಜ
ನಾದ ನೆಬೂಕದ್ನೆಚ್ಚರನಿಗೆ ತಿಳಿಯಪಡಿಸಿದ್ದಾನೆ. ನಿನ್ನ
ಕನಸು, ಹಾಸಿಗೆಯ ಮೇಲೆ ನಿನ್ನ ಮನಸ್ಸಿನಲ್ಲಿ ಬಿದ್ದ
9 ಸ್ವಪ್ನಗಳು ಇವೇ — ರಾಜನೇ, ನೀನು ಹಾಸಿಗೆಯ
ಮೇಲೆ ಮಲಗಿರುವಾಗ ಮುಂದೆ ಏನಾಗುವದೋ
ಎಂಬ ಯೋಚನೆಯು ನಿನ್ನಲ್ಲಿ ಹುಟ್ಟಿತಲ್ಲಾ; ರಹಸ್ಯ
ಗಳನ್ನು ವ್ಯಕ್ತಗೊಳಿಸುವಾತನು ಮುಂದಾಗುವದನ್ನು
0 ನಿನಗೆ ಗೋಚರಮಾಡಿದ್ದಾನೆ. ನಾನೇ ಎಲ್ಲಾ ಜೀವಂತ
ರಿಗಿಂತ ಹೆಚ್ಚು ಬುದ್ಧಿಯುಳ್ಳವನೆಂತಲ್ಲ, ಕನಸಿನ ಅಭಿ
ಪ್ರಾಯವು ರಾಜನಿಗೆ ಗೋಚರವಾಗಿ ನಿನ್ನ ಮನಸ್ಸಿನ
ಯೋಚನೆಯ ವಿಷಯವು ನಿನಗೆ ತಿಳಿದು ಬರಲಿ ಎಂದು
1 ಈ ರಹಸ್ಯವು ನನಗೆ ವ್ಯಕ್ತವಾಗಿದೆ. ರಾಜನೇ, ನೀನು
ಕಂಡದು ಆಹಾ, ಅದ್ಭುತಪ್ರತಿಮೆ; ಥಳಥಳನೆ ಹೊಳೆ
ಯುವ ಆ ದೊಡ್ಡ ಪ್ರತಿಮೆಯು ನಿನ್ನೆದುರಿಗೆ ನಿಂತಿತ್ತು;
2 ಭಯಂಕರವಾಗಿ ಕಾಣಿಸಿತು. ಆ ಪ್ರತಿಮೆಯ ತಲೆಯು
ಅಪರಂಜಿ, ಎದೆತೋಳುಗಳು ಬೆಳ್ಳಿ, ಹೊಟ್ಟೆಸೊಂಟಗಳು
3 ತಾಮ್ರ, ಕಾಲುಗಳು ಕಬ್ಬಿಣ, ಹೆಜ್ಜೆಗಳು ಕಬ್ಬಿಣ
4 ಮತ್ತು ಮಣ್ಣು. ನೀನು ನೋಡುತ್ತಿರಲಾಗಿ [ಬೆಟ್ಟ
ದೊಳಗಿಂದ] ಒಂದು ಗುಂಡು ಬಂಡೆಯು ಕೈಯಿಲ್ಲದೆ
ಒಡೆಯಲ್ಪಟ್ಟು [ಸಿಡಿದು ಬಂದು] ಆ ಪ್ರತಿಮೆಯ
ಕಬ್ಬಿಣಮಣ್ಣಿನ ಹೆಜ್ಜೆಗಳಿಗೆ ಬಡಿದು ಚೂರುಚೂರು
5 ಮಾಡಿತು. ಆಗ ಕಬ್ಬಿಣಮಣ್ಣುತಾಮ್ರಬೆಳ್ಳಿಬಂಗಾರ
ಗಳೆಲ್ಲವೂ ಪುಡಿಪುಡಿಯಾಗಿ ಸುಗ್ಗಿಯ ಕಣಗಳ ಹೊಟ್ಟಿ
ನಂತಾದವು; ಗಾಳಿಯು ತೂರಿಕೊಂಡು ಹೋಗಲು
ಅವುಗಳಿಗೆ ನೆಲೆಯೇ ಇಲ್ಲವಾಯಿತು; ಪ್ರತಿಮೆಗೆ
ಬಡಿದ ಆ ಬಂಡೆಯು ಮಹಾ ಪರ್ವತವಾಗಿ ಲೋಕದ
6 ಲ್ಲೆಲ್ಲಾ ತುಂಬಿಕೊಂಡಿತು. ಕನಸು ಇದೇ; ಇದರ
7 ಅರ್ಥವನ್ನೂ ಸನ್ನಿಧಿಯಲ್ಲಿ ಅರಿಕೆಮಾಡುವೆವು. ಅರ
ಸೇ, ನೀನು ರಾಜಾಧಿರಾಜ, ಪರಲೋಕದೇವರು
ನಿನಗೆ ರಾಜ್ಯಬಲಪರಾಕ್ರಮವೈಭವಗಳನ್ನು ದಯಪಾ
8 ಲಿಸಿದ್ದಾನೆ; ನರಜಾತಿಯವರು ವಾಸಿಸುವ ಸಕಲ
ಪ್ರಾಂತಗಳಲ್ಲಿ ಆಕಾಶಪಕ್ಷಿಗಳನ್ನೂ ಭೂಜಂತುಗಳ
ನ್ನೂ ನಿನ್ನ ಕೈಗೆ ಒಪ್ಪಿಸಿ ನೀನು ಅವುಗಳನ್ನೆಲ್ಲಾ ಆಳು
ವಂತೆ ಮಾಡಿದ್ದಾನೆ; ನೀನೇ ಆ ಬಂಗಾರದ ತಲೆ.
9 ನಿನ್ನ ಕಾಲವಾದ ಮೇಲೆ ನಿನಗಿಂತ ಕನಿಷ್ಠವಾದ
ಮತ್ತೊಂದು ರಾಜ್ಯವುಂಟಾಗುವದು; ಅನಂತರ
ಬೇರೊಂದು ಮೂರನೆಯ ರಾಜ್ಯವು ತಾಮ್ರದ್ದಾಗಿ
ತಲೆದೋರಿ ಭೂಮಂಡಲವನ್ನೆಲ್ಲಾ ಆಳುವದು.
ನಾಲ್ಕನೆಯ ರಾಜ್ಯವು ಕಬ್ಬಿಣದಷ್ಟು ಗಟ್ಟಿ; ಕಬ್ಬಿಣ 40
ವು ಎಲ್ಲಾ ವಸ್ತುಗಳನ್ನು ಚೂರುಚೂರಾಗಿ ಒಡೆದು
ಹಾಕುತ್ತದಷ್ಟೆ; ಸಕಲವನ್ನೂ ಧ್ವಂಸಮಾಡುವ ಕಬ್ಬಿಣ
ದಂತೆಯೇ ಅದು ಚೂರುಚೂರಾಗಿ ಧ್ವಂಸಮಾಡು
ವದು. ಹೆಜ್ಜೆಗಳಲ್ಲಿ ಮತ್ತು ಬೆರಳುಗಳಲ್ಲಿ ಒಂದಂಶ 41
ವು ಕುಂಬಾರನ ಮಣ್ಣೂ ಒಂದಂಶವು ಕಬ್ಬಿಣವೂ ಆಗಿ
ದ್ದದ್ದನ್ನು ನೀನು ನೋಡಿದ ಪ್ರಕಾರ ಆ ರಾಜ್ಯವು ಭಿನ್ನ
ಭಿನ್ನವಾಗಿರುವದು; ಜೇಡಿಮಣ್ಣಿನೊಂದಿಗೆ ಕಬ್ಬಿಣವು
ಮಿಶ್ರವಾಗಿದ್ದದ್ದನ್ನು ನೀನು ನೋಡಿದಂತೆ ಆ ರಾಜ್ಯ
ದಲ್ಲಿ ಕಬ್ಬಿಣದ ಬಲವು ಸೇರಿರುವದು. ಕಾಲ್ಬೆರಳುಗಳ 42
ಒಂದಂಶವು ಕಬ್ಬಿಣ ಒಂದಂಶವು ಮಣ್ಣು ಆಗಿದ್ದ ಹಾಗೆ
ಆ ರಾಜ್ಯದ ಒಂದಂಶವು ಗಟ್ಟಿ ಒಂದಂಶವು ಬೆಂಡು.
ಕಬ್ಬಿಣವು ಜೇಡಿಮಣ್ಣಿನೊಂದಿಗೆ ಬೆರೆತಿರುವದನ್ನು 43
ನೀನು ನೋಡಿದ ಮೇರೆಗೆ ಆ ರಾಜ್ಯಾಂಶಗಳು ಸಂತತಿ
ಸಂಬಂಧದಿಂದ ಬೆರೆತುಕೊಳ್ಳುವವು; ಆದರೆ ಕಬ್ಬಿಣವು
ಮಣ್ಣಿನೊಂದಿಗೆ ಹೇಗೆ ಕಲೆಯುವದಿಲ್ಲವೋ ಹಾಗೆ
ಅವು ಒಂದಕ್ಕೊಂದು ಅಂಟಿಕೊಳ್ಳುವದಿಲ್ಲ. ಆ ರಾಜರ 44
ಕಾಲದಲ್ಲಿ ಪರಲೋಕದೇವರು ಒಂದು ರಾಜ್ಯವನ್ನು
ಸ್ಥಾಪಿಸುವನು; ಅದು ಎಂದಿಗೂ ಅಳಿಯದು, ಅದರ
ಪ್ರಾಬಲ್ಯವು ಬೇರೆ ಜನಾಂಗಕ್ಕೆ ಕದಲಿಹೋಗದು.
ಆ ರಾಜ್ಯಗಳನ್ನೆಲ್ಲಾ ಭಂಗಪಡಿಸಿ ನಿರ್ನಾಮಮಾಡಿ
ಶಾಶ್ವತವಾಗಿ ನಿಲ್ಲುವದು. [ಬೆಟ್ಟದೊಳಗಿಂದ] ಒಂದು 45
ಗುಂಡು ಬಂಡೆಯು ಕೈಯಿಲ್ಲದೆ ಒಡೆಯಲ್ಪಟ್ಟು
ಕಬ್ಬಿಣತಾಮ್ರಮಣ್ಣುಬೆಳ್ಳಿಬಂಗಾರಗಳನ್ನು ಚೂರು
ಚೂರು ಮಾಡಿದ್ದು ನಿನ್ನ ಕಣ್ಣಿಗೆ ಬಿತ್ತಲ್ಲಾ; ಇದ
ರಿಂದ ಪರಲೋಕದೇವರು ಮುಂದೆ ನಡೆಯುವ ವಿಷಯ
ಗಳನ್ನು ರಾಜನಿಗೆ ತಿಳಿಯಪಡಿಸಿದ್ದಾನೆ; ಕನಸು ನಿಜ,
ಅದರ ಅರ್ಥವು ನಂಬತಕ್ಕದು ಎಂದು ಹೇಳಿದನು.
ಆಗ ರಾಜನಾದ ನೆಬೂಕದ್ನೆಚ್ಚರನು ಅಡ್ಡಬಿದ್ದು ದಾನಿ 46
ಯೇಲನನ್ನು ಪೂಜಿಸಿ ಅವನಿಗೆ ನೈವೇದ್ಯಮಾಡಿ ಧೂಪ
ಹಾಕಬೇಕೆಂದು ಆಜ್ಞಾಪಿಸಿ ಅವನ ಮಾತಿಗೆ ಪ್ರತ್ಯುತ್ತ 47
ರವಾಗಿ — ನೀನು ಈ ರಹಸ್ಯವನ್ನು ಬೈಲಿಗೆ ತರಲು ಸಮ
ರ್ಥನಾದ ಕಾರಣ ನಿಮ್ಮ ದೇವರು ದೇವಾಧಿದೇವ
ನೂ ರಾಜರ ಒಡೆಯನೂ ರಹಸ್ಯಗಳನ್ನು ವ್ಯಕ್ತ
ಗೊಳಿಸುವವನೂ ಆಗಿದ್ದಾನೆಂಬದು ನಿಶ್ಚಯ ಎಂದು
ಹೇಳಿದನು. ಬಳಿಕ ರಾಜನು ದಾನಿಯೇಲನನ್ನು 48
ದೊಡ್ಡಸ್ತಿಕೆಗೆ ತಂದು ಅವನಿಗೆ ಅಮೂಲ್ಯವಾದ ಬಹು
ದಾನಗಳನ್ನು ಕೊಟ್ಟು ಬಾಬೆಲ್ ಸಂಸ್ಥಾನವನ್ನೆಲ್ಲಾ
ಅಧೀನಪಡಿಸಿ ಬಾಬೆಲಿನ ವಿದ್ವಾಂಸರ ಸಕಲ ಮುಖ್ಯ
ಸ್ಥರಿಗೂ ಅವನನ್ನು ಮುಖ್ಯಸ್ಥನನ್ನಾಗಿ ನೇಮಿಸಿದನು.
ದಾನಿಯೇಲನು ಬಿನ್ನಹ ಮಾಡಲು ರಾಜನು ಶದ್ರಕ್ 49
ಮೇಶಕ್ ಅಬೇದ್‌ನೆಗೋ ಎಂಬವರಿಗೆ ಬಾಬೆಲ್ ಸಂ
ಸ್ಥಾನದ ಕಾರ್ಯಭಾರವನ್ನು ವಹಿಸಿದನು; ದಾನಿಯೇ
ಲನೋ 1)ಅರಮನೆಯಲ್ಲಿ ನಿಂತನು.

1) ಮೂಲ: ಅರಸನ ಹೆಬ್ಬಾಗಿಲಲ್ಲಿ.

ದೇವಭಕ್ತರನ್ನು ಅಗ್ನಿಯು ಸುಡದೆ ಇದ್ದದು.

3 ರಾಜನಾದ ನೆಬೂಕದ್ನೆಚ್ಚರನು ಅರುವತ್ತು ಮೊಳ
ಎತ್ತರದ ಆರು ಮೊಳ ಅಗಲದ ಒಂದು ಬಂಗಾರದ
ಪ್ರತಿಮೆಯನ್ನು ಮಾಡಿಸಿ ಬಾಬೆಲ್ ಸಂಸ್ಥಾನದ
2 ದೂರಾ ಎಂಬ ಬೈಲಿನಲ್ಲಿ ನಿಲ್ಲಿಸಿದನು. ಆಗ ರಾಜ
ನಾದ ನೆಬೂಕದ್ನೆಚ್ಚರನು ತಾನು ನಿಲ್ಲಿಸಿದ ಪ್ರತಿಮೆಯ
ಪ್ರತಿಷ್ಠೋತ್ಸವಕ್ಕೆ ಉಪರಾಜ, ನಾಯಕ, ದೇಶಾಧಿ
ಪತಿ, ಮಂತ್ರಿ, ಕೋಶಾಧ್ಯಕ್ಷ, ನ್ಯಾಯಾಧಿಪತಿ, ವಿಚಾ
ರಕ ಇವರನ್ನೂ ಸಮಸ್ತ ಸಂಸ್ಥಾನಾಧಿಕಾರಿಗಳನ್ನೂ
3 ಒಟ್ಟುಗೂಡಿಸುವಂತೆ ದೂತರನ್ನು ಕಳುಹಿಸಲು ಆ
ಉಪರಾಜ, ನಾಯಕ, ದೇಶಾಧಿಪತಿ, ಮಂತ್ರಿ, ಕೋಶಾ
ಧ್ಯಕ್ಷ, ನ್ಯಾಯಾಧಿಪತಿ, ವಿಚಾರಕ ಇವರೂ ಸಮಸ್ತ
ಸಂಸ್ಥಾನಾಧಿಕಾರಿಗಳೂ ರಾಜನಾದ ನೆಬೂಕದ್ನೆಚ್ಚರನು
ನಿಲ್ಲಿಸಿದ ಪ್ರತಿಮೆಯ ಪ್ರತಿಷ್ಠೋತ್ಸವಕ್ಕೆ ನೆರೆದು
ನೆಬೂಕದ್ನೆಚ್ಚರನು ನಿಲ್ಲಿಸಿದ ಪ್ರತಿಮೆಯ ಮುಂದೆ
4 ನಿಂತುಕೊಂಡರು. ಆಗ ಸಾರುವವನು ಗಟ್ಟಿಯಾಗಿ
ಕೂಗಿ—ವಿವಿಧಜನಾಂಗಕುಲಭಾಷೆಗಳವರೇ, ನಿಮಗೆ
5 ರಾಜಾಜ್ಞೆಯಾಗಿದೆ—ನೀವು ತುತೂರಿ ಕೊಳಲು ಕಿನ್ನರಿ
ತಂಬೂರಿ ವೀಣೆ ವಾಲಗ ಮುಂತಾದ ಸಕಲ ವಾದ್ಯಗಳ
ಧ್ವನಿಯನ್ನು ಕೇಳಿದ ಕೂಡಲೆ ನೀವು ಅಡ್ಡಬಿದ್ದು
ರಾಜನಾದ ನೆಬೂಕದ್ನೆಚ್ಚರನು ನಿಲ್ಲಿಸಿರುವ ಬಂಗಾರದ
6 ಪ್ರತಿಮೆಯನ್ನು ಪೂಜಿಸಬೇಕು. ಯಾವನು ಅಡ್ಡ
ಬಿದ್ದು ಪೂಜಿಸುವದಿಲ್ಲವೋ ಅವನು ತಕ್ಷಣವೇ ಧಗ
ಧಗನೆ ಉರಿಯುವ ಆವಿಗೆಯೊಳಗೆ ಹಾಕಲ್ಪಡುವನು
7 ಎಂದು ಸಾರಿದನು. ಆದಕಾರಣ ಅದೇ ಕಾಲದಲ್ಲಿ
ಸಮಸ್ತ ಜನಾಂಗಕುಲಭಾಷೆಗಳವರು ತುತೂರಿ ಕೊ
ಳಲು ಕಿನ್ನರಿ ತಂಬೂರಿ ವೀಣೆ ಮುಂತಾದ ಸಕಲ
ವಾದ್ಯಗಳ ಧ್ವನಿಯನ್ನು ಕೇಳಿದ ಕೂಡಲೆ ಎಲ್ಲರೂ
ಅಡ್ಡಬಿದ್ದು ರಾಜನಾದ ನೆಬೂಕದ್ನೆಚ್ಚರನು ನಿಲ್ಲಿಸಿದ
8 ಬಂಗಾರದ ಪ್ರತಿಮೆಯನ್ನು ಪೂಜಿಸಿದರು. ಹೀಗಿರಲು
ಆ ಸಮಯದಲ್ಲಿ ಕೆಲವು ಮಂದಿ ಪಂಡಿತರು ಯೆಹೂ
ದ್ಯರ ಮೇಲೆ ದೂರುಹೊರಿಸುವದಕ್ಕೆ ಸನ್ನಿಧಿಗೆ
9 ಬಂದು ರಾಜನಾದ ನೆಬೂಕದ್ನೆಚ್ಚರನಿಗೆ—ಅರಸೇ,
10 ಚಿರಂಜೀವಿಯಾಗಿರು! ಪ್ರಭುವೇ, ತುತೂರಿ ಕೊಳಲು
ಕಿನ್ನರಿ ತಂಬೂರಿ ವೀಣೆ ವಾಲಗ ಮುಂತಾದ ಸಕಲ
ವಾದ್ಯಗಳ ಧ್ವನಿಯನ್ನು ಕೇಳಿದ ಪ್ರತಿಯೊಬ್ಬನೂ
ಅಡ್ಡಬಿದ್ದು ಬಂಗಾರದ ಪ್ರತಿಮೆಯನ್ನು ಪೂಜಿಸಲಿ;
11 ಯಾವನು ಅಡ್ಡಬಿದ್ದು ಪೂಜಿಸುವದಿಲ್ಲವೋ ಅವನು
ಧಗಧಗಿಸುವ ಆವಿಗೆಯೊಳಗೆ ಹಾಕಲ್ಪಡಲಿ ಎಂದು
12 ಆಜ್ಞೆಮಾಡಿದಿಯಲ್ಲಾ. ನೀನು ಬಾಬೆಲ್ ಸಂಸ್ಥಾನದ
ಕಾರ್ಯಭಾರವನ್ನು ವಹಿಸಿಕೊಟ್ಟ ಶದ್ರಕ್ ಮೇಶಕ್
ಅಬೇದ್‌ನೆಗೋ ಎಂಬ ಕೆಲವು ಮಂದಿ ಯೆಹೂದ್ಯರು
ಇದ್ದಾರೆ; ರಾಜನೇ, ಇವರು ನಿನ್ನನ್ನು ಲಕ್ಷಿಸುವದಿಲ್ಲ,
ನಿನ್ನ ದೇವರುಗಳನ್ನು ಸೇವಿಸುವದಿಲ್ಲ, ನೀನು ನಿಲ್ಲಿ
ಸಿದ ಬಂಗಾರದ ಪ್ರತಿಮೆಯನ್ನು ಪೂಜಿಸುವದಿಲ್ಲ
13 ಎಂದು ಅರಿಕೆಮಾಡಲು ನೆಬೂಕದ್ನೆಚ್ಚರನು ಉಗ್ರ

ರೋಷವುಳ್ಳವನಾಗಿ ಶದ್ರಕ್ ಮೇಶಕ್ ಅಬೇದ್‌ನೆಗೋ
ಎಂಬವರನ್ನು ಹಿಡತರಬೇಕೆಂದು ಆಜ್ಞಾಪಿಸಿದನು. ಹಾ
ಅವರನ್ನು ಹಿಡತರಲು ನೆಬೂಕದ್ನೆಚ್ಚರನು ಅವರಿಗೆ—
ಶದ್ರಕ್ ಮೇಶಕ್ ಅಬೇದ್‌ನೆಗೋ ಎಂಬವರೇ, ನೀ
ನನ್ನ ದೇವರನ್ನು ಸೇವಿಸದೆ ನಾನು ನಿಲ್ಲಿಸಿದ ಬಂಗ
ರದ ಪ್ರತಿಮೆಯನ್ನು ಪೂಜಿಸದೆ ಇರುವದು 1)ಬೇಕ
ದೇ ಮಾಡಿದ್ದೋ? ಈಗಲಾದರೂ ನೀವು ಸಿದ್ಧ
ಗಿದ್ದು ತುತೂರಿ ಕೊಳಲು ಕಿನ್ನರಿ ತಂಬೂರಿ ವೀ
ವಾಲಗ ಮುಂತಾದ ಸಕಲ ವಾದ್ಯಗಳ ಧ್ವನಿಯನ
ಕೇಳಿದ ಕೂಡಲೆ ಅಡ್ಡಬಿದ್ದು ನಾನು ನಿಲ್ಲಿಸಿದ ಪ್ರತಿ
ಯನ್ನು ಪೂಜಿಸಿದರೆ ಸರಿ; ಇಲ್ಲವಾದರೆ ತಕ್ಷಣ
ಧಗಧಗನೆ ಉರಿಯುವ ಆವಿಗೆಯೊಳಗೆ ಹಾಕಲ್ಪ
ವಿರಿ; ನಿಮ್ಮನ್ನು ನನ್ನ ಕೈಯೊಳಗಿಂದ ಬಿಡಿಸಬ
ದೇವರು ಯಾರು ಎಂದು ಹೇಳಿದನು. ಇದನ
ಕೇಳಿ ಶದ್ರಕ್ ಮೇಶಕ್ ಅಬೇದ್‌ನೆಗೋ ಎಂಬವ
ರಾಜನಿಗೆ—ನೆಬೂಕದ್ನೆಚ್ಚರನೇ, ಈ ವಿಷಯದಲ್ಲಿ ನಾ
ನಿನಗೆ ಏನೂ ಹೇಳಬೇಕಾಗಿಲ್ಲ. ಅರಸೇ, ನಾ
ಸೇವಿಸುವ ದೇವರಿಗೆ ಚಿತ್ತವಿದ್ದರೆ ಆತನು ಧಗಧಗ
ಉರಿಯುವ ಆವಿಗೆಯೊಳಗಿಂದ ನಮ್ಮನ್ನು ಬಿಡಿ
ಬಲ್ಲನು; ಹೇಗೂ ನಿನ್ನ ಕೈಯಿಂದ ನಮ್ಮನ್ನು ಬಿಡಿಸ
ವನು. ಚಿತ್ತವಿಲ್ಲದಿದ್ದರೂ ರಾಜನೇ, ಇದು ನಿನ
ತಿಳಿದಿರಲಿ, ನಾವು ನಿನ್ನ ದೇವರುಗಳನ್ನು ಸೇವಿಸು
ದಿಲ್ಲ, ನೀನು ನಿಲ್ಲಿಸಿದ ಬಂಗಾರದ ಪ್ರತಿಮೆಯನ
ಪೂಜಿಸುವದಿಲ್ಲ ಎಂದುತ್ತರಕೊಟ್ಟರು. ಆಗ ನೆಬೂ
ದ್ನೆಚ್ಚರನು ಕೋಪೋದ್ರೇಕದಿಂದ ಮುಖಭಾವವನ
ಶದ್ರಕ್ ಮೇಶಕ್ ಅಬೇದ್‌ನೆಗೋ ಎಂಬವರ ಕಡೆ
ಬೇರೆಮಾಡಿಕೊಂಡು ಆವಿಗೆಯನ್ನು ನಿತ್ಯಕ್ಕಿಂತ ಏ
ರಷ್ಟು ಹೆಚ್ಚಾಗಿ ಉರಿಸಬೇಕೆಂದು ಆಜ್ಞಾಪಿಸಿದನು
ಇದಲ್ಲದೆ ತನ್ನ ಸೈನ್ಯದ ಕೆಲವು ಮಂದಿ ಶೂರರಿ
ಶದ್ರಕ್ ಮೇಶಕ್ ಅಬೇದ್‌ನೆಗೋ ಎಂಬವರನ್ನು ಕಟ
ಧಗಧಗನೆ ಉರಿಯುವ ಆವಿಗೆಯೊಳಗೆ ಎತ್ತಿಹಾ
ಬೇಕೆಂದು ಅಪ್ಪಣೆಕೊಟ್ಟನು. ಅದರಂತೆ 2)ಶಲ
3)ಇಜಾರು ಮುಂಡಾಸ ಮೊದಲಾದ ಉಡುಪನ
ಧರಿಸಿಕೊಂಡಿದ್ದ ಹಾಗೆಯೇ ಅವರನ್ನು ಕಟ್ಟಿ ಧ
ಧಗನೆ ಉರಿಯುವ ಆವಿಗೆಯೊಳಗೆ ಹಾಕಿಬಿಟ್ಟರು
ಹೀಗಾಗಲು ರಾಜಾಜ್ಞೆಯು ಖಂಡಿತವಾಗಿದ್ದದರಿಂ
ಲೂ ಆವಿಗೆಯ ಕಾವು ಅತಿತೀಕ್ಷ್ಣವಾಗಿದ್ದದರಿಂದಲ
ಅಗ್ನಿಜ್ವಾಲೆಯು ಶದ್ರಕ್ ಮೇಶಕ್ ಅಬೇದ್‌ನೆಗೋ
ಎಂಬವರನ್ನು ಎತ್ತಿಹಾಕಿದವರನ್ನೇ ಸಂಹರಿಸಿತು
ಶದ್ರಕ್ ಮೇಶಕ್ ಅಬೇದ್‌ನೆಗೋ ಈ ಮೂವರ
ಕಟ್ಟಲ್ಪಟ್ಟವರಾಗಿ ಧಗಧಗನೆ ಉರಿಯುವ ಆವಿಗೆಯ
ಮಧ್ಯದಲ್ಲಿ ಬಿದ್ದುಬಿಟ್ಟರು. ಆಗ ರಾಜನಾದ ನೆಬೂ
ಕದ್ನೆಚ್ಚರನು ಬೆಚ್ಚಿಬಿದ್ದು ತಟ್ಟನೆದ್ದು ತನ್ನ ಮಂತ್ರಿ
ಳನ್ನು—ಕಟ್ಟಿದ ಮೂವರನ್ನು ನಾವು ಬೆಂಕಿಯೊಳ
ಹಾಕಿಸಲಿಲ್ಲವೋ ಎಂದು ಕೇಳಲು ಅವರು ರಾಜನಿಗೆ—
ಅರಸೇ, ಹೌದು, ಸತ್ಯ ಎಂದುತ್ತರಕೊಟ್ಟರು. ಅದಕ
ಅವನು—ಇಗೋ, ಕಟ್ಟಿಲ್ಲದ ನಾಲ್ವರನ್ನು ನೋಡ
ತ್ತೇನೆ, ಬೆಂಕಿಯಲ್ಲಿ ತಿರುಗಾಡುತ್ತಿದ್ದಾರೆ, ಅವರಿ

1) ಅಥವಾ: ನಿಜವೋ? 2) ಅಥವಾ: ಶಾಲು. 3) ಮೂಲಪದದ ಅರ್ಥವು ನಿಶ್ಚಯವಾಗಿಲ್ಲ.

ಯಾವ ಹಾನಿಯೂ ಇಲ್ಲ; ನಾಲ್ಕನೆಯವನ ರೂಪವು
ದೇವಕುಮಾರನ ರೂಪದಂತಿದೆ ಎಂದು ಹೇಳಿ ಧಗ
ಧಗನೆ ಉರಿಯುವ ಆವಿಗೆಯ ಬಾಯಿಯ ಬಳಿಗೆ
ಹೋಗಿ—ಪರಾತ್ಪರದೇವರ ಸೇವಕರಾದ ಶದ್ರಕ್
ಮೇಶಕ್ ಅಬೇದ್‌ನೆಗೋ ಎಂಬವರೇ ಬನ್ನಿ, ಹೊರಗೆ
ಬನ್ನಿ, ಎಂದು ಕೂಗಲು ಶದ್ರಕ್ ಮೇಶಕ್ ಅಬೇದ್
ನೆಗೋ ಎಂಬವರು ಬೆಂಕಿಯೊಳಗಿಂದ ಹೊರಟು
ಬಂದರು. ಅಲ್ಲಿ ಕೂಡಿದ್ದ ಉಪರಾಜನಾಯಕದೇಶಾ
ಧಿಪತಿಮಂತ್ರಿಗಳು ಅವರನ್ನು ನೋಡಿ ಅವರ ಮೇಲೆ
ಬೆಂಕಿಯ ಅಧಿಕಾರವು ನಡೆದಿಲ್ಲ, ಅವರ ತಲೆಕೂದಲೂ
ಸುಟ್ಟಿಲ್ಲ, ಅವರ 1)ಶಲ್ಯಗಳಿಗೆ ವಿಕಾರವಿಲ್ಲ, ಬೆಂಕಿ
ಯ ವಾಸನೆಯೇ ಮುಟ್ಟಿಲ್ಲ ಎಂದು ತಿಳಿದುಕೊಂಡರು.
ಆಗ ನೆಬೂಕದ್ನೆಚ್ಚರನು—ಶದ್ರಕ್ ಮೇಶಕ್ ಅಬೇದ್
ನೆಗೋ ಎಂಬವರ ದೇವರಿಗೆ ಸ್ತೋತ್ರವಾಗಲಿ! ಆತನು
ತನ್ನ ದೂತನನ್ನು ಕಳುಹಿಸಿ ತನ್ನಲ್ಲಿ ಭರವಸವಿಟ್ಟು
ರಾಜಾಜ್ಞೆಯನ್ನು ಜಯಿಸಿ ತನ್ನನ್ನೇ ಹೊರತು
ಇನ್ನಾವ ದೇವರನ್ನೂ ಸೇವಿಸಿ ಪೂಜಿಸಬಾರದೆಂದು
ಸ್ವದೇಹಗಳನ್ನು ಮರಣಕ್ಕೆ ಒಪ್ಪಿಸಿದ ತನ್ನ ಸೇವಕ
ರನ್ನು ಉದ್ಧರಿಸಿದ್ದಾನಲ್ಲಾ. ಸಕಲ ಜನಾಂಗಕುಲ
ಭಾಷೆಗಳವರಲ್ಲಿ ಯಾರಾದರೂ ಶದ್ರಕ್ ಮೇಶಕ್
ಅಬೇದ್‌ನೆಗೋ ಎಂಬವರ ದೇವರ ವಿಷಯದಲ್ಲಿ ಅಲ್ಲದ
ಮಾತನ್ನಾಡಿದರೆ ಅವರನ್ನು ಚೂರುಚೂರಾಗಿ ಕತ್ತರಿಸಿ
ಅವರ ಮನೆಗಳನ್ನು ತಿಪ್ಪೆಯನ್ನಾಗಿ ಮಾಡಬೇಕೆಂಬ
ಆಜ್ಞೆಯನ್ನು ವಿಧಿಸುತ್ತೇನೆ; ಹೀಗೆ ಉದ್ಧರಿಸಲು ಸಮ
ರ್ಥನಾದ ಇನ್ನಾವ ದೇವರೂ ಇಲ್ಲವಲ್ಲಾ ಎಂದು ಹೇಳಿ
ದನು. ಬಳಿಕ ರಾಜನು ಶದ್ರಕ್ ಮೇಶಕ್ ಅಬೇದ್
ನೆಗೋ ಎಂಬವರನ್ನು ಬಾಬೆಲ್ ಸಂಸ್ಥಾನದಲ್ಲಿ ಉನ್ನತ
ಪದವಿಗೆ ತಂದನು.

ಕಡಿದ ಮರದ ಕನಸು.

ಲೋಕದಲ್ಲೆಲ್ಲಾ ವಾಸಿಸುವ ಸಕಲ ಜನಾಂಗಕುಲ
ಭಾಷೆಗಳವರಿಗೆ ರಾಜನಾದ ನೆಬೂಕದ್ನೆಚ್ಚರನ ಪ್ರಕ
ಟನೆ—ನಿಮಗೆ ಸುಖವು ಹೆಚ್ಚೆಚ್ಚಾಗಲಿ! ಪರಾತ್ಪರ
ದೇವರು ನನ್ನ ವಿಷಯದಲ್ಲಿ ನಡಿಸಿರುವ ಮಹತ್ತು
ಗಳನ್ನೂ ಅದ್ಭುತಗಳನ್ನೂ ಪ್ರಚುರಪಡಿಸಬೇಕೆಂಬದು
ನನಗೆ ವಿಹಿತವಾಗಿ ತೋರಿಬಂದಿದೆ. ಆತನ ಮಹತ್ತು
ಗಳು ಎಷ್ಟೋ ಅತಿಶಯ! ಆತನ ಅದ್ಭುತಗಳು ಎಷ್ಟೋ
ವಿಶೇಷ! ಆತನ ರಾಜ್ಯವು ಶಾಶ್ವತರಾಜ್ಯ, ಆತನ
ಆಳಿಕೆಯು ತಲತಲಾಂತರಕ್ಕೂ ನಿಲ್ಲುವದು.
ನೆಬೂಕದ್ನೆಚ್ಚರನಾದ ನಾನು ನನ್ನ ಆಲಯದಲ್ಲಿ
ಹಾಯಾಗಿದ್ದೆನು, ಹೌದು ನನ್ನ ಅರಮನೆಯಲ್ಲಿ
ಸೊಂಪಾಗಿದ್ದೆನು. ಹೀಗಿರಲು ನನ್ನನ್ನು ಹೆದರಿಸುವ
ಒಂದು ಕನಸನ್ನು ಕಂಡೆನು; ಹಾಸಿಗೆಯಲ್ಲಿ ನನ
ಗುಂಟಾದ ಯೋಚನೆಗಳೂ ನನ್ನ ಮನಸ್ಸಿಗೆ ಬಿದ್ದ
ಸ್ವಪ್ನಗಳೂ ನನ್ನನ್ನು ಕಳವಳಗೊಳಿಸಿದವು. ಆದದ
ರಿಂದ ಕನಸಿನ ಅರ್ಥವನ್ನು ನನಗೆ ತಿಳಿಸಲಿಕ್ಕೆ ಬಾಬೆ
ಲಿನ ವಿದ್ವಾಂಸರೆಲ್ಲರನ್ನೂ ಕರತರುವ ಹಾಗೆ ಅಜ್ಞಾಪಿ
ಸಿದೆನು. ಜೋಯಿಸರು, ಮಂತ್ರವಾದಿಗಳು, ಪಂಡಿ 7
ತರು, ಶಾಕುನಿಕರು, ಇವರು ಸಮ್ಮುಖಕ್ಕೆ ಬಂದಾಗ
ನಾನು ಆ ಕನಸನ್ನು ತಿಳಿಸಲು ಅವರು ಅದರ ಅಭಿ
ಪ್ರಾಯವನ್ನು ವಿವರಿಸಲಾರದೆ ಹೋದರು. ನನ್ನ 8
ದೇವರ ಹೆಸರು ಸೇರಿರುವ ಬೇಲ್ತೆಶಚ್ಚರನೆಂಬ ಅಡ್ಡಹೆಸ
ರನ್ನು ಹೊಂದಿದವನೂ ಪರಿಶುದ್ಧದೇವರುಗಳ ಆತ್ಮ
ವುಳ್ಳವನೂ ಆದ ದಾನಿಯೇಲನು ಕಟ್ಟಕಡೆಯಲ್ಲಿ
ನನ್ನ ಸನ್ನಿಧಿಗೆ ಬರಲು ನಾನು ಆ ಕನಸನ್ನು ಅವನಿಗೆ
ಹೀಗೆ ತಿಳಿಸಿದೆನು—ಬೇಲ್ತೆಶಚ್ಚರನೇ, ಜೋಯಿಸರಲ್ಲಿ 9
ಪ್ರಧಾನನೇ, ಪರಿಶುದ್ಧದೇವರುಗಳ ಆತ್ಮವು ನಿನ್ನಲ್ಲಿ
ನೆಲೆಯಾಗಿದೆ ಎಂದು ತಿಳಿದಿದ್ದೇನೆ, ಯಾವ ರಹಸ್ಯವೂ
ನಿನಗೆ ಅಶೋಧ್ಯವಲ್ಲವೆಂಬದು ನನಗೆ ಗೊತ್ತು; ಆದದ
ರಿಂದ ನಾನು ಕಂಡ 2)ಕನಸನ್ನೂ ಅದರ ಅರ್ಥವನ್ನೂ
ನನಗೆ ತಿಳಿಸು. ನಾನು ಹಾಸಿಗೆಯ ಮೇಲೆ ಮಲ 10
ಗಿದ್ದಾಗ ನನ್ನ ಮನಸ್ಸಿಗೆ ಬಿದ್ದ ಕನಸುಗಳು ಇವೇ—
ಇಗೋ, ಲೋಕದ ನಡುವೆ ಬಹು ಎತ್ತರವಾದ ಒಂದು
ವೃಕ್ಷವನ್ನು ಕಂಡೆನು. ಆ ವೃಕ್ಷವು ಬೆಳೆದು ಬಲ 11
ಗೊಂಡಿತ್ತು, ಅದರ ತುದಿಯು ಆಕಾಶವನ್ನು ಮು
ಟ್ಟಿತ್ತು, ಅದು ಭೂಲೋಕದ ಕಟ್ಟಕಡೆಗೂ ಕಾಣಿಸು
ತ್ತಿತ್ತು. ಅದರ ಎಲೆಗಳು ಅಂದ, ಹಣ್ಣುಗಳು 12
ಬಹಳ, ಅದರಿಂದ ಎಲ್ಲಕ್ಕೂ ಆಹಾರ, ನೆರಳು ಭೂ
ಜಂತುಗಳಿಗೆ ಆಶ್ರಯ, ಕೊಂಬೆಗಳು ಆಕಾಶಪಕ್ಷಿ
ಗಳಿಗೆ ನೆಲೆ, ಅದು ಸಕಲ ಜೀವಿಗಳಿಗೂ ಜೀವನ.
ನಾನು ಹಾಸಿಗೆಯ ಮೇಲೆ ಮಲಗಿದ್ದಾಗ ನನ್ನ ಮನ 13
ಸ್ಸಿಗೆ ಬಿದ್ದ ಕನಸಿನಲ್ಲಿ ಅನಿಮಿಷನಾದ ದೇವದೂತನು
ಆಕಾಶದಿಂದಿಳಿದು ಗಟ್ಟಿಯಾಗಿ ಕೂಗಿ—ವೃಕ್ಷವನ್ನು 14
ಕಡಿಯಿರಿ, ಕೊಂಬೆಗಳನ್ನು ಕತ್ತರಿಸಿರಿ, ಎಲೆಗ
ಳನ್ನು ಉದುರಿಸಿರಿ, ಹಣ್ಣುಗಳನ್ನು ಚೆಲ್ಲಿರಿ; ಮೃಗ
ಗಳು ನೆರಳನ್ನು ಬಿಟ್ಟುಬಿಡಲಿ, ಪಕ್ಷಿಗಳು ರೆಂಬೆಗಳನ್ನು
ತೊರೆದು ಹೋಗಲಿ! ಆದರೆ ಬುಡದ ಮೋಟನ್ನು ನೆಲ 15
ದಲ್ಲಿ ಉಳಿಸಿ ಕಬ್ಬಿಣತಾಮ್ರಗಳ ಪಟ್ಟಿಯನ್ನು ಅದಕ್ಕೆ
ಬಿಗಿಯಿರಿ; ಅಡವಿಯ ಹುಲ್ಲು ಅದರ ಸುತ್ತ ಬೆಳೆದಿ
ರಲಿ, ಆಕಾಶದ ಇಬ್ಬನಿಯು ಅದನ್ನು ತೋಯಿಸಲಿ,
ಭೂಮಿಯ ಹುಲ್ಲು ಮೃಗಗಳಿಗೆ ಗತಿಯಾದಂತೆ
ಅದಕ್ಕೆ ಗತಿಯಾಗಲಿ; ಅದಕ್ಕೆ ಮಾನುಷಹೃದಯವು 16
ಹೋಗಿ ಮೃಗದ ಹೃದಯವು ಬರಲಿ; ಹೀಗೆ ಅದಕ್ಕೆ
ಏಳು 3)ವರುಷ ಕಳೆಯಲಿ. ಇದು ಅನಿಮಿಷರ 17
ತೀರ್ಮಾನ, ದೇವರ ತೀರ್ಪು; ಪರಾತ್ಪರನು ಮನು
ಷ್ಯರ ರಾಜ್ಯದಲ್ಲಿ ರಾಜನಾಗಿ ಅದರ ಆಳಿಕೆಯನ್ನು
ತನಗೆ ಬೇಕಾದವರಿಗೆ ಒಪ್ಪಿಸಿ ಕನಿಷ್ಠರನ್ನೂ ಅದರ
ಮೇಲೆ ನೇಮಿಸುತ್ತಾನೆಂಬದು ಜೀವಂತರಿಗೆ ತಿಳಿದು
ಬರಬೇಕೆಂದೇ ಈ ತೀರ್ಮಾನವಾಯಿತು ಎಂದು ಸಾರಿ
ದನು. ರಾಜನಾದ ನೆಬೂಕದ್ನೆಚ್ಚರನೆಂಬ ನಾನು ಈ 18
ಕನಸನ್ನು ಕಂಡೆನು; ಬೇಲ್ತೆಶಚ್ಚರನೇ, ನನ್ನ ರಾಜ್ಯದ
ಸಕಲ ವಿದ್ವಾಂಸರಲ್ಲಿ ಯಾರೂ ಅದರ ಅರ್ಥವನ್ನು
ತಿಳಿಸಲಾರರು; ನೀನು ಅದನ್ನು ತಿಳಿಸು; ಪರಿಶುದ್ಧ
ದೇವರುಗಳ ಆತ್ಮವು ನಿನ್ನಲ್ಲಿ ನೆಲಸಿರುವದರಿಂದ
ನೀನು ಶಕ್ತನೇ ಸರಿ.

1) ಅಥವಾ: ಕಾಲು. 2) ಮೂಲ: ಕನಸಿನ ಸ್ವಪ್ನಗಳನ್ನು. 3) ಮೂಲ: ಕಾಲಗಳು.

19 ಆಗ ಬೇಲ್ತೆಶಚ್ಚರನೆಂಬ ಅಡ್ಡಹೆಸರಿನ ದಾನಿಯೇ
ಲನು ತನ್ನ ಬುದ್ಧಿಗೆ ತೋರಿದ್ದಕ್ಕೆ, ದಿಗಿಲುಪಟ್ಟು ತುಸ
ಹೊತ್ತು ಸ್ತಬ್ಧನಾದನು. ರಾಜನು ಇದನ್ನು ನೋಡಿ—
ಬೇಲ್ತೆಶಚ್ಚರನೇ, ನನ್ನ ಕನಸಾಗಲಿ ಅದರ ಅರ್ಥ
ವಾಗಲಿ ನಿನ್ನನ್ನು ಹೆದರಿಸದಿರಲಿ ಎಂದು ಹೇಳಲು
ಬೇಲ್ತೆಶಚ್ಚರನು—ಎನ್ನೊಡೆಯನೇ, ಆ ಕನಸು ನಿನ್ನ
ಹಗೆಗಳಿಗ ಫಲಿಸಲಿ, ಅದರ ಅರ್ಥವು ನಿನ್ನ ವಿರೋಧಿ
20 ಗಳ ಅನುಭವಕ್ಕೆ ಬರಲಿ! ಯಾವ ವೃಕ್ಷವು ಬೆಳೆದು
ಬಲಗೊಂಡು ಆಕಾಶಕ್ಕೆ ತುದಿಯನ್ನು ಮುಟ್ಟಿಸುತ್ತಾ
21 ಲೋಕದವರೆಲ್ಲರಿಗೂ ಕಾಣಿಸುತ್ತಾ ಅಂದವಾದ ಎಲೆ
ಗಳನ್ನೂ ಬಹಳ ಹಣ್ಣುಗಳನ್ನೂ ಬಿಡುತ್ತಾ ಎಲ್ಲಕ್ಕೂ
ಆಹಾರವನ್ನು ಒದಗಿಸುತ್ತಾ ತನ್ನ ನೆರಳನ್ನು ಭೂಜಂತು
ಗಳಿಗೆ ಆಶ್ರಯವಾಗಿಯೂ ತನ್ನ ಕೊಂಬೆಗಳನ್ನು ಆಕಾಶ
ಪಕ್ಷಿಗಳಿಗೆ ನೆಲೆಯಾಗಿಯೂ ಮಾಡುತ್ತಾ ಕನಸಿನಲ್ಲಿ
22 ನಿನಗೆ ತೋರಿತೋ ಆ ವೃಕ್ಷವು ನೀನೇ; ರಾಜಾ,
ನೀನು ಬೆಳೆದು ಬಲಗೊಂಡಿದ್ದೀ, ನಿನ್ನ ಮಹಿಮೆಯು
ವೃದ್ಧಿಯಾಗಿ ಆಕಾಶಕ್ಕೆ ಮುಟ್ಟಿದೆ, ನಿನ್ನ ಆಳಿಕೆಯು
23 ಲೋಕದ ಕಟ್ಟಕಡೆಗೂ ವ್ಯಾಪಿಸಿದೆ. ಅನಿಮಿಷನಾದ
ದೇವದೂತನು ಆಕಾಶದಿಂದಿಳಿದು—ವೃಕ್ಷವನ್ನು ಕಡಿದು
ಹಾಳುಮಾಡಿರಿ; ಆದರೆ ಬುಡದ ಮೋಟನ್ನು ನೆಲದಲ್ಲಿ
ಉಳಿಸಿ ಕಬ್ಬಿಣತಾಮ್ರಗಳ ಪಟ್ಟಿಯನ್ನು ಅದಕ್ಕೆ ಬಿಗಿ
ಯಿರಿ, ಅಡವಿಯ ಹುಲ್ಲು ಅದರ ಸುತ್ತ ಬೆಳೆದಿರಲಿ,
ಆಕಾಶದ ಇಬ್ಬನಿಯು ಅದನ್ನು ತೋಯಿಸಲಿ, ಅದಕ್ಕೆ
ಏಳು 1)ವರುಷ ಕಳೆಯುವ ತನಕ ಕಾಡುಮೃಗಗಳ
ಸಹವಾಸದ ಗತಿಯು ಬರಲಿ ಎಂದು ಸಾರುವದನ್ನು
24 ರಾಜನಾದ ನೀನು ನೋಡಿದಿಯಲ್ಲಾ; ರಾಜನೇ, ಇದರ
ತಾತ್ಪರ್ಯವೇನಂದರೆ, ಎನ್ನೊಡೆಯನಾದ ಅರಸನಿಗೆ
25 ಉಂಟಾಗಿರುವ ಪರಾತ್ಪರನ ತೀರ್ಪು ಹೀಗಿದೆ— ನೀನು
ಮನುಷ್ಯರೊಳಗಿಂದ ತಳ್ಳಲ್ಪಟ್ಟು ಕಾಡುಮೃಗಗ
ಳೊಂದಿಗೆ ವಾಸಿಸುವಿ, ದನಗಳಂತೆ ಹುಲ್ಲು ಮೇಯು
ವದೇ ನಿನಗೆ ಗತಿಯಾಗುವದು, ಆಕಾಶದ ಇಬ್ಬ
ನಿಯು ನಿನ್ನನ್ನು ತೋಯಿಸುವದು; ಪರಾತ್ಪರನು
ಮನುಷ್ಯರ ರಾಜ್ಯದಲ್ಲಿ ರಾಜನಾಗಿ ಅದನ್ನು ತನಗೆ
ಬೇಕಾದವರಿಗೆ ಒಪ್ಪಿಸುತ್ತಾನೆ ಎಂಬದು ನಿನಗೆ ತಿಳಿದು
ಬರುವದರೊಳಗೆ ಏಳು 1)ವರುಷ ನಿನಗೆ ಹೀಗೆ ಕಳೆ
26 ಯುವದು. ವೃಕ್ಷದ ಬುಡದ ಮೋಟನ್ನು ಉಳಿಸಿರಿ
ಎಂದು ಅಪ್ಪಣೆಯಾಯಿತಲ್ಲಾ; ಇದರ ತಾತ್ಪರ್ಯ
ವೇನಂದರೆ ಪರಲೋಕಕ್ಕೆ ಸರ್ವಾಧಿಕಾರವುಂಟೆಂಬದನ್ನು
ನೀನು ತಿಳಿದುಕೊಂಡನಂತರ ನಿನ್ನ ರಾಜ್ಯವು ನಿನಗೆ
27 ಸ್ಥಿರವಾಗುವದು ಎಂಬದೇ. ಆದಕಾರಣ, ಅರಸೇ,
ಈ ನನ್ನ ಬುದ್ಧಿವಾದವು ನಿನಗೆ ಒಪ್ಪಿಗೆಯಾಗಲಿ—
ನೀನು ಧರ್ಮವನ್ನು ಆಚರಿಸಿ ನಿನ್ನ 2)ಪಾಪಗಳನ್ನು
ನಾಶಗೊಳಿಸು, ಬಡವರಿಗೆ ಕರುಣೆಯನ್ನು ತೋರಿಸಿ
ನಿನ್ನ ಅಪರಾಧಗಳನ್ನು ಧ್ವಂಸಮಾಡು; ಇದರಿಂದ
ನಿನ್ನ ನೆಮ್ಮದಿಯ ಕಾಲವು ಹೆಚ್ಚಾದೀತು ಎಂದರಿಕೆ
ಮಾಡಿದನು.
28 ಇದೆಲ್ಲಾ ರಾಜನಾದ ನೆಬೂಕದ್ನೆಚ್ಚರನ ಅನುಭ
29 ವಕ್ಕೆ ಬಂತು. ಹನ್ನೆರಡು ತಿಂಗಳು ಕಳೆದನಂತರ

ಅವನು ಬಾಬೆಲಿನ ಅರಮನೆಯ ಮೇಲೆ ತಿರುಗಾ
ತ್ತಾ—ನನ್ನ ಮಹಿಮೆಯು ಪ್ರಸಿದ್ಧಿಗೆ ಬರುವಂತೆ
ಸಾಮರ್ಥ್ಯಬಲದಿಂದ ರಾಜನಿವಾಸಕ್ಕಾಗಿ ನಾನು
ಸಿಕೊಂಡಿರುವದು ಇಗೋ, ಮಹಾಪಟ್ಟಣವಾದ
ಬಾಬೆಲ್ ಎಂದು ಕೊಚ್ಚಿಕೊಂಡನು. ಈ ಮಾ
ರಾಜನ ಬಾಯಿಂದ ಹೊರಡುತ್ತಿರುವಾಗ—ಅರಸನ
ನೆಬೂಕದ್ನೆಚ್ಚರನೇ, ನಿನಗಾದ ದೈವೋಕ್ತಿಯು
ಕೇಳು; ರಾಜ್ಯವು ನಿನ್ನಿಂದ ತೊಲಗಿದೆ, ನೀನು ಮ
ಷ್ಯರೊಳಗಿಂದ ತಳ್ಳಲ್ಪಟ್ಟು ಕಾಡುಮೃಗಗಳೊಂ
ವಾಸಿಸುವಿ, ದನಗಳಂತೆ ಹುಲ್ಲುಮೇಯುವ
ನಿನಗೆ ಗತಿಯಾಗುವದು; ಪರಾತ್ಪರನು ಮ
ಷ್ಯರ ರಾಜ್ಯದಲ್ಲಿ ರಾಜನಾಗಿ ಅದನ್ನು ತ
ಬೇಕಾದವರಿಗೆ ಒಪ್ಪಿಸುತ್ತಾನೆ ಎಂಬದು ನಿನ್ನ
ವಳಿಕೆಗೆ ಬರುವದರೊಳಗೆ ಏಳು ವರುಷ ನಿ
ಹೀಗೆ ಕಳೆಯುವದು ಎಂದು ಆಕಾಶವಾಣಿ
ಯಿತು. ಈ ನುಡಿಯು ನೆಬೂಕದ್ನೆಚ್ಚರನಲ್ಲಿ
ಣವೇ ನೆರವೇರಿತು; ಅವನು ಮನುಷ್ಯರೊಳಗಿಂದ
ಲ್ಪಟ್ಟು ದನಗಳಂತೆ ಹುಲ್ಲುಮೇಯುತ್ತಾ ಆಕಾ
ಇಬ್ಬನಿಯಿಂದ ನೆನೆಯುತ್ತಾ ಇದ್ದನು; ಅವನ
ದಲು ಹದ್ದುಗಳ ಗರಿಯಂತೆಯೂ ಅವನ ಉಗ
ಹಕ್ಕಿಗಳ ಉಗುರಿನ ಹಾಗೂ ಬೆಳೆದವು.
ಆ ಕಾಲವು ಕಳೆದ ಮೇಲೆ ನೆಬೂಕದ್ನೆಚ್ಚರನ
ನಾನು ಆಕಾಶದ ಕಡೆಗೆ ಕಣ್ಣೆತ್ತಲು ನನ್ನ ಬುದ್ಧಿ
ಪುನಃ ನನ್ನ ಸ್ವಾಧೀನವಾಯಿತು. ಆಗ ನಾನು
ತ್ಪರನನ್ನು ಕೊಂಡಾಡಿ ಸದಾ ಜೀವಿಸುವಾತ
ಸ್ತುತಿಸ್ತೋತ್ರಗಳನ್ನು ಸಲ್ಲಿಸಿದೆನು; ಆತನ ಆ
ಯು ಶಾಶ್ವತ, ಆತನ ರಾಜ್ಯವು ತಲತಲಾಂತರ
ನಿಲ್ಲುವದು; ಭೂನಿವಾಸಿಗಳೆಲ್ಲರೂ [ಆತನ ದ
ಯಲ್ಲಿ] ಏನೂ ಅಲ್ಲದಂತಿದ್ದಾರೆ, ಪರಲೋಕಸ
ದವರಲ್ಲಿಯೂ ಭೂಲೋಕದವರಲ್ಲಿಯೂ ತನ್ನ ಇ
ನುಸಾರ ನಡೆಯುತ್ತಾನೆ; ಯಾರೂ ಆತನ
ಯನ್ನು ಹಿಂದಕ್ಕೆ ತಳ್ಳಲಾರರು, ನೀನು
ಮಾಡುತ್ತೀ ಎಂದು ಯಾರೂ ಕೇಳಲಾರರು. ಅ
ಸಮಯದಲ್ಲಿ ನನ್ನ ಬುದ್ಧಿಯು ಪುನಃ ನನ್ನ ಸ್ವಾ
ನವಾಯಿತು; ನನ್ನ ಪ್ರಭಾವವೈಭವಗಳು ನನಗೆ ಮ
ಲಭಿಸಿ ನನ್ನ ರಾಜ್ಯದ ಕೀರ್ತಿಯು ಪ್ರಕಾಶಿಸಿತು;
ಮಂತ್ರಿಗಳೂ ಅಧಿಪತಿಗಳೂ ನನ್ನನ್ನು ಓಲೈಸಿದ
ನನ್ನ ರಾಜ್ಯದಲ್ಲಿ ರಾಜನಾಗಿ ನೆಲೆಗೊಂಡೆನು;
ಮಹಿಮೆಯು ಅತ್ಯಧಿಕವಾಯಿತು. ಈಗ ನೆಬ
ದ್ನೆಚ್ಚರನಾದ ನಾನು ಪರಲೋಕರಾಜನನ್ನು ಹೊ
ಕೊಂಡಾಡಿ ಕೀರ್ತಿಸುತ್ತೇನೆ; ಆತನ ಕಾಯ
ಳೆಲ್ಲಾ ಸತ್ಯ, ಆತನ ಮಾರ್ಗಗಳೆಲ್ಲಾ ನ್ಯಾಯ;
ಕ್ಕಿನಿಂದ ನಡೆಯುವವರನ್ನು ತಗ್ಗಿಸಬಲ್ಲನು.

ಗೋಡೆಯ ಮೇಲೆ ಅದ್ಭುತಲೇಖನ.

ರಾಜನಾದ ಬೇಲ್ಶಚ್ಚರನು ತನ್ನ ರಾಜ್ಯದ ಮುಖ
ರಲ್ಲಿ ಸಾವಿರ ಮಂದಿಗೆ ಔತಣವನ್ನು ಮಾಡಿಸಿ

1) ಮೂಲ: ಕಾಲಗಳು. 2) ಅಥವಾ: ಪಾಪಗಳಿಗೆ ಪ್ರಾಯಶ್ಚಿತ್ತಮಾಡು, ಬಡವರಿಗೆ . . . . ಅಪರಾಧಗಳನ್ನು ಪರಿಹ

ಸಾವಿರ ಜನರ ಕಣ್ಣೆದುರಿಗೆ ತಾನೂ ದ್ರಾಕ್ಷಾರಸವನ್ನು
2 ಕುಡಿದನು. ಅದನ್ನು ಸವಿಯುತ್ತಾ ಯೆರೂಸ
ಲೇಮಿನ ದೇವಾಲಯದೊಳಗಿಂದ ತನ್ನ ತಂದೆಯಾದ
ನೆಬೂಕದ್ನೆಚ್ಚರನು ಎತ್ತಿಕೊಂಡು ಬಂದಿದ್ದ ಬೆಳ್ಳಿಬಂಗಾ
ರಗಳ ಪಾತ್ರೆಗಳಲ್ಲಿ ತಾನೂ ತನ್ನ ಮುಖಂಡರೂ
ಪತ್ನ್ಯುಪಪತ್ನಿಯರೂ ಕುಡಿಯುವದಕ್ಕಾಗಿ ಅವುಗ
3 ಳನ್ನು ತರುವಂತೆ ಆಜ್ಞಾಪಿಸಿದನು. ಯೆರೂಸಲೇ
ಮಿನ ದೇವಾಲಯದ ನಡುಗುಡಿಯಿಂದ ಸೂರೆಯಾದ
ಬಂಗಾರದ ಪಾತ್ರೆಗಳನ್ನು ತರಲು ರಾಜನೂ ಅವನ
ಮುಖಂಡರೂ ಪತ್ನ್ಯುಪಪತ್ನಿಯರೂ ಅವುಗಳಲ್ಲಿ ಕುಡಿ
4 ದರು. ದ್ರಾಕ್ಷಾರಸವನ್ನು ಕುಡಿದು ಬಂಗಾರ
ಬೆಳ್ಳಿತಾಮ್ರಕಬ್ಬಿಣಮರಕಲ್ಲುಗಳ ದೇವರುಗಳನ್ನು
5 ಸ್ತುತಿಸಿದರು. ಆಗಲೇ ಒಬ್ಬನ ಕೈಯ ಬೆರಳು
ಗಳು ಬಂದು ದೀಪಸ್ತಂಭದ ಎದುರಿಗೆ ಅರಮನೆಯ
ಸುಣ್ಣದ ಗೋಡೆಯ ಮೇಲೆ ಬರಹ ಬರೆದವು; ಬರೆ
ಯುತ್ತಿದ್ದ 1)ಹಸ್ತವನ್ನು ರಾಜನು ನೋಡಿದನು.
6 ಆಗ ಅವನ ಮುಖ ಕಳೆಗುಂದಿತು, ಮನಸ್ಸು ಕಳ
ವಳಗೊಂಡಿತು, ಸೊಂಟದ ಕೀಲು ಸಡಲಿತು, ಮೊಣ
7 ಕಾಲುಗಳು ಒಂದಕ್ಕೊಂದು ಬಡಿದುಕೊಂಡವು. ಹೀಗಿ
ರಲು ರಾಜನು ಗಟ್ಟಿಯಾಗಿ ಕೂಗಿಕೊಂಡು ಮಂತ್ರ
ವಾದಿಪಂಡಿತಶಾಕುನಿಕರನ್ನು ಕರೆಯಿಸಿ ಬಾಬೆಲಿನ ಆ
ವಿದ್ವಾಂಸರಿಗೆ—ಯಾವನು ಈ ಬರಹವನ್ನು ಓದಿ
ಇದರ ಅರ್ಥವನ್ನು ನನಗೆ ತಿಳಿಸುತ್ತಾನೋ ಅವನಿಗೆ
ನಾನು ಧೂಮ್ರವಸ್ತ್ರವನ್ನು ಹೊದಿಸಿ ಅವನ ಕೊರಳಿಗೆ
ಚಿನ್ನದ ಹಾರವನ್ನು ಹಾಕಿಸಿ ಅವನನ್ನು ರಾಜ್ಯದ ಮೂ
ವರು ಮುಖ್ಯಾಧಿಕಾರಿಗಳಲ್ಲಿ ಒಬ್ಬನನ್ನಾಗಿ ನೇಮಿಸು
8 ವೆನು ಎಂದು ಹೇಳಿದನು. ಆಸ್ಥಾನ ವಿದ್ವಾಂಸರೆಲ್ಲರು
ಬಂದು ನೋಡಿದರು; ಆದರೆ ಆ ಬರಹವನ್ನು ಓದು
ವದಕ್ಕೂ ಅದರ ಅರ್ಥವನ್ನು ರಾಜನಿಗೆ ತಿಳಿಸುವದ
9 ಕ್ಕೂ ಅವರಲ್ಲಿ ಯಾರಿಂದಲೂ ಆಗಲಿಲ್ಲ. ಆಗ ರಾಜ
ನಾದ ಬೇಲ್ಶಚ್ಚರನು ಬಹಳ ಕಳವಳಗೊಂಡು ಕಳೆ
ಗುಂದಿದನು, ಅವನ ಮುಖಂಡರೂ ಬೆಪ್ಪಾದರು.
10 ರಾಜನು ಮತ್ತು ಮುಖಂಡರು ಆಡಿದ ಮಾತುಗಳು
2)ರಾಣಿಗೆ ಮುಟ್ಟಲು ಆಕೆಯು ಔತಣದ ಶಾಲೆಗೆ
ಬಂದು—ರಾಜನೇ, ಚಿರಂಜೀವಿಯಾಗಿರು, ನಿನ್ನ ಮನ
ಸ್ಸು ಕಳವಳಗೊಳ್ಳದಿರಲಿ, ನಿನ್ನ ಮುಖ ಕಳೆಗುಂದ
11 ದಿರಲಿ! ಪರಿಶುದ್ಧದೇವರುಗಳ ಆತ್ಮವು ನೆಲೆಸಿರುವ
ಒಬ್ಬನು ನಿನ್ನ ರಾಜ್ಯದಲ್ಲಿ ಇದ್ದಾನೆ; ದೇವರುಗಳ
ಜ್ಞಾನಕ್ಕೆ ಸಮಾನವಾದ ಜ್ಞಾನವೂ ವಿವೇಕವೂ ಬುದ್ಧಿ
ಪ್ರಕಾಶವೂ ನಿನ್ನ ತಂದೆಯ ಕಾಲದಲ್ಲಿ ಅವನೊಳಗೆ
ಕಂಡುಬಂದವು; ನಿನ್ನ ತಂದೆಯಾದ ನೆಬೂಕದ್ನೆಚ್ಚರ
ರಾಜನು ಅವನನ್ನು ಜೋಯಿಸರು ಮಂತ್ರವಾದಿಗಳು
ಪಂಡಿತರು ಶಾಕುನಿಕರು ಇವರಿಗೆ ಅಧ್ಯಕ್ಷನನ್ನಾಗಿ
12 ನೇಮಿಸಿದನು; ಹೌದು, ಬೇಲ್ತೆಶಚ್ಚರನೆಂಬ ಅಡ್ಡಹೆಸ
ರನ್ನು ರಾಜನಿಂದ ಹೊಂದಿದ ಈ ದಾನಿಯೇಲನಲ್ಲಿ
ಪರಮಬುದ್ಧಿಯೂ ಜ್ಞಾನವೂ ವಿವೇಕವೂ ಕನಸು
ಗಳ ಅರ್ಥವನ್ನು ತಿಳಿಸುವ ಜಾಣತನವೂ ಒಗಟುಬಿಡಿ
ಸುವ ಚಮತ್ಕಾರವೂ 3)ಗುಂಜುಗಂಟು ಬಿಚ್ಚುವ
ಚಾತುರ್ಯವೂ ತೋರಿಬಂದದರಿಂದಲೇ ಹಾಗೆ ನೇಮಿ
ಸಿದನು. ಈಗ ಈ ದಾನಿಯೇಲನನ್ನು ಕರೆಯಿಸಿ
ದರೆ ಅವನು ಬರಹದ ಅರ್ಥವನ್ನು ವಿವರಿಸುವನು
ಎಂದಳು.
ಆಗ ದಾನಿಯೇಲನನ್ನು ಸನ್ನಿಧಿಗೆ ಬರಮಾಡಲು 13
ರಾಜನು ಅವನಿಗೆ—ರಾಜನಾದ ನನ್ನ ತಂದೆಯು
ಯೆಹೂದದಿಂದ ಕೈದಿಗಳಾಗಿ ತಂದು ಸೆರೆಮಾಡಿದ
ಯೆಹೂದ್ಯರ ದಾನಿಯೇಲೆಂಬವನು ನೀನೋ? ದೇವ 14
ರುಗಳ ಆತ್ಮವು ನಿನ್ನಲ್ಲಿ ನೆಲಸಿ ಪರಮಜ್ಞಾನವೂ
ವಿವೇಕವೂ ಬುದ್ಧಿಪ್ರಕಾಶವೂ ನಿನಗುಂಟೆಂದು ಕೇಳಿ
ದ್ದೇನೆ. ಈಗ ಈ ಬರಹವನ್ನು ಓದಿ ಇದರ ಅರ್ಥ 15
ವನ್ನು ನನಗೆ ತಿಳಿಸುವದಕ್ಕಾಗಿ ವಿದ್ವಾಂಸರನ್ನೂ
ಮಂತ್ರವಾದಿಗಳನ್ನೂ ಸಮ್ಮುಖಕ್ಕೆ ಬರಮಾಡಲು
ಅವರು ಇದರ ಅರ್ಥವನ್ನು ವಿವರಿಸಲಾರದೆಹೋದರು.
ನೀನೋ ಗೂಢಾರ್ಥಗಳನ್ನು ವಿವರಿಸಿ 3)ಗುಂಜುಗಂಟು 16
ಗಳನ್ನು ಬಿಚ್ಚಬಲ್ಲವನಾಗಿದ್ದೀ ಎಂಬ ಸಮಾಚಾರವು
ನನಗೆ ಮುಟ್ಟಿದೆ; ಈ ಬರಹವನ್ನು ಓದಿ ಇದರ ಅಭಿ
ಪ್ರಾಯವನ್ನು ನನಗೆ ತಿಳಿಸಲು ನಿನ್ನಿಂದಾದರೆ ನಾನೀಗ
ನಿನಗೆ ಧೂಮ್ರವಸ್ತ್ರವನ್ನು ಹೊದಿಸಿ ನಿನ್ನ ಕೊರಳಿಗೆ
ಚಿನ್ನದ ಹಾರವನ್ನು ಹಾಕಿಸಿ ನಿನ್ನನ್ನು ರಾಜ್ಯದ ಮೂ
ವರು ಮುಖ್ಯಾಧಿಕಾರಿಗಳಲ್ಲಿ ಒಬ್ಬನನ್ನಾಗಿ ನೇಮಿಸು
ವೆನು ಎಂದು ಹೇಳಿದನು. ಆಗ ದಾನಿಯೇಲನು ಸನ್ನಿ 17
ಧಿಯಲ್ಲಿ—ನಿನ್ನ ದಾನಗಳು ನಿನಗೇ ಇರಲಿ, ನಿನ್ನ
ಬಹುಮಾನಗಳು ಮತ್ತೊಬ್ಬನಿಗಾಗಲಿ; ಆದರೆ ನಾನು
ಈ ಬರಹವನ್ನು ಓದಿ ಇದರ ಅರ್ಥವನ್ನು ರಾಜನಿಗೆ
ತಿಳಿಸುವೆನು. ಅರಸೇ, ಪರಾತ್ಪರನಾದ ದೇವರು ನಿನ್ನ 18
ತಂದೆಯಾದ ನೆಬೂಕದ್ನೆಚ್ಚರನಿಗೆ ರಾಜ್ಯಮಹತ್ವಮಾನ
ಸನ್ಮಾನಗಳನ್ನು ದಯಪಾಲಿಸಿದನು; ಈ ಮಹತ್ವ ವರದ 19
ನಿಮಿತ್ತ ಸಕಲ ಜನಾಂಗಕುಲಭಾಷೆಗಳವರು ಅವನ
ಮುಂದೆ ಬೆಚ್ಚಿಬೆದರಿದರು; ಬೇಕುಬೇಕಾದವರನ್ನು
ಕೊಲ್ಲಿಸಿದನು, ಬೇಕುಬೇಕಾದವರನ್ನು ಉಳಿಸಿದನು,
ಮನಸ್ಸುಬಂದವರನ್ನು ಏರಿಸಿದನು, ಮನಸ್ಸುಬಂದ
ವರನ್ನು ಇಳಿಸಿದನು. ಹೀಗೆ ಅವನ ಹೃದಯವು 20
ಉಬ್ಬಿ ಅವನ ಸ್ವಭಾವವು ಜಡವಾಗಿ ಅವನಿಗೆ ಸೊಕ್ಕೇ
ರಲು ಅವನನ್ನು ರಾಜಾಸನದಿಂದ ತಳ್ಳಿ ಮಾನವನ್ನು
ತೆಗೆದುಬಿಟ್ಟರು; ಅವನು ನರಜಾತಿಯವರೊಳಗಿಂದ 21
ನೂಕಲ್ಪಟ್ಟನು, ಅವನ ಬುದ್ಧಿಯು ಮೃಗಬುದ್ಧಿ
ಯಂತಾಯಿತು, ಕಾಡುಕತ್ತೆಗಳೊಂದಿಗೆ ವಾಸಿಸಿದನು;
ಪರಾತ್ಪರನಾದ ದೇವರು ಮನುಷ್ಯರ ರಾಜ್ಯದಲ್ಲಿ
ರಾಜನಾಗಿ ಅದರ ಮೇಲೆ ತನಗೆ ಬೇಕಾದವರನ್ನು
ನೇಮಿಸುತ್ತಾನೆ ಎಂಬದು ಅವನಿಗೆ ತಿಳಿದುಬರುವ
ತನಕ ದನಗಳಂತೆ ಹುಲ್ಲುಮೇಯುವದೇ ಅವನ
ಗತಿಯಾಯಿತು, ಆಕಾಶದ ಇಬ್ಬನಿಯು ಅವನ ಮೈ
ಯನ್ನು ತೋಯಿಸುತ್ತಿತ್ತು. ಬೇಲ್ಶಚ್ಚರನೇ, ಅವನ 22
ಮಗನಾದ ನೀನು ಇದನ್ನೆಲ್ಲಾ ತಿಳಿದುಕೊಂಡರೂ ನಿನ್ನ
ಮನಸ್ಸನ್ನು ತಗ್ಗಿಸಿಕೊಳ್ಳಲಿಲ್ಲ; ಪರಲೋಕದೊಡೆಯ 23
ನಿಗೆ ವಿರುದ್ಧವಾಗಿ ನಿನ್ನನ್ನು ಹೆಚ್ಚಿಸಿಕೊಂಡಿ; ಆತನ
ಆಲಯದ ಪಾತ್ರೆಗಳನ್ನು ಸನ್ನಿಧಿಗೆ ತಂದರಲ್ಲಾ; ನೀನು

1) ಮೂಲ: ಅಂಗೈಯನ್ನು. 2) ಅಥವಾ: ರಾಜಮಾತೆಗೆ. 3) ಅಥವಾ: ಸೂತ್ರಬಂಧನಬಿಚ್ಚುವ.

ನಿನ್ನ ರಾಜ್ಯದ ಮುಖಂಡರ ಮತ್ತು ಪತ್ನ್ಯುಪಪತ್ನಿ
ಯರ ಸಂಗಡ ಅವುಗಳಲ್ಲಿ ದ್ರಾಕ್ಷಾರಸವನ್ನು ಕುಡಿದು
ಬುದ್ಧಿ ಕಣ್ಣು ಕಿವಿ ಇಲ್ಲದ ಬೆಳ್ಳಿಬಂಗಾರತಾಮ್ರ
ಕಬ್ಬಿಣಮರಕಲ್ಲುಗಳ ದೇವರುಗಳನ್ನು ಸ್ತುತಿಸಿದ್ದೀ;
ಆದರೆ ನಿನ್ನ ಪ್ರಾಣವು ಯಾರ ಕೈಯಲ್ಲಿದೆಯೋ
ನಿನ್ನ ಸ್ಥಿತಿಗತಿಗಳು ಯಾರ ಅಧೀನವೋ ಆ ದೇವ
24 ರನ್ನು ಘನಪಡಿಸಲೇ ಇಲ್ಲ; ಹೀಗಿರಲು ಆ 1)ಹಸ್ತವು
ದೇವರ ಸನ್ನಿಧಿಯಿಂದ ಬಂದು ಈ ಬರಹವನ್ನು ಬರೆ
25 ಯಿತು. ಬರೆದ ಬರಹವು ಇದೇ—ಮೆನೇ, ಮೆನೇ,
26 ತೆಕೇಲ್, ಉಫರ್ಸಿನ್. ಇದರ ಅರ್ಥವು ಹೀಗಿದೆ—
ಮೆನೇ ಅಂದರೆ ದೇವರು ನಿನ್ನ ಆಳಿಕೆಯ ಕಾಲವನ್ನು
27 ಲೆಕ್ಕಿಸಿ ಕೊನೆಗಾಣಿಸಿದ್ದಾನೆ; ತೆಕೇಲ್ ಅಂದರೆ ನೀನು
ತಕ್ಕಡಿಯಲ್ಲಿ ತೂಗಲ್ಪಟ್ಟು ಕಡಿಮೆಯಾಗಿ ಕಂಡು
28 ಬಂದಿದ್ದೀ; ಪೆರೇಸ್ ಅಂದರೆ ನಿನ್ನ ರಾಜ್ಯವು ಭಿನ್ನ
ವಾಗಿ ಮೇದ್ಯಯರಿಗೂ ಪಾರಸಿಯರಿಗೂ ಕೊಡ
29 ಲ್ಪಟ್ಟಿದೆ ಎಂದು ಅರಿಕೆಮಾಡಿದನು. ಆಗ ಬೇಲ್ಶಚ್ಚ
ರನು ಆಜ್ಞಾಪಿಸಲು ದಾನಿಯೇಲನಿಗೆ ಧೂಮ್ರವಸ್ತ್ರ
ವನ್ನು ಹೊದಿಸಿ ಅವನ ಕೊರಳಿಗೆ ಚಿನ್ನದ ಹಾರವನ್ನು
ಹಾಕಿ ಈತನು ರಾಜ್ಯದ ಮೂವರು ಮುಖ್ಯಾಧಿಕಾರಿ
30 ಗಳಲ್ಲಿ ಒಬ್ಬನಾದನು ಎಂದು ಪ್ರಕಟಿಸಿದನು. ಅದೇ
ರಾತ್ರಿಯಲ್ಲಿ ಕಸ್ದೀಯ ರಾಜನಾದ ಬೇಲ್ಶಚ್ಚರನು
31 ಕೊಲ್ಲಲ್ಪಟ್ಟನು. ಮೇದ್ಯಯನಾದ ದಾರ್ಯಾವೆ
ಷನು ರಾಜ್ಯವನ್ನು ತೆಗೆದುಕೊಂಡನು. ಅವನ ವಯ
ಸ್ಸು ಹೆಚ್ಚುಕಡಿಮೆ ಅರುವತ್ತೆರಡು.

ದಾನಿಯೇಲನು ಸಿಂಹಗಳ ಗವಿಯಲ್ಲೂ ರಕ್ಷಿತನಾದದ್ದು.

6 ದಾರ್ಯಾವೆಷನು ತನ್ನ ರಾಜ್ಯಭಾರವನ್ನು ನಿರ್ವಹಿ
ಸುವದಕ್ಕೋಸ್ಕರ ರಾಜ್ಯದ ಆಯಾ ಭಾಗಗಳ ಮೇಲೆ
2 ನೂರಿಪ್ಪತ್ತು ಮಂದಿ ದೇಶಾಧಿಪತಿಗಳನ್ನೂ ರಾಜನಿಗೆ
ನಷ್ಟವಾಗದಂತೆ ಆ ದೇಶಾಧಿಪತಿಗಳ ಮೇಲೆ ಅವರಿಂದ
ಲೆಕ್ಕ ತೆಗೆದುಕೊಳ್ಳುವ ಮೂವರು ಮುಖ್ಯಾಧಿಕಾರಿ
ಗಳನ್ನೂ ನೇಮಿಸಬೇಕೆಂದು ನಿಶ್ಚಯಿಸಿಕೊಂಡನು;
ಆ ಮುಖ್ಯಾಧಿಕಾರಿಗಳಲ್ಲಿ ದಾನಿಯೇಲನು ಒಬ್ಬನು.
3 ಈ ದಾನಿಯೇಲನಲ್ಲಿ ಪರಮಬುದ್ಧಿ ಇದ್ದದರಿಂದ
ಅವನು ಮಿಕ್ಕ ಮುಖ್ಯಾಧಿಕಾರಿಗಳಿಗಿಂತಲೂ ದೇಶಾಧಿ
ಪತಿಗಳಿಗಿಂತಲೂ ಅಧಿಕ ಸಮರ್ಥನೆನಿಸಿಕೊಂಡಿದ್ದನು;
ಅವನನ್ನು ರಾಜನು ಪೂರ್ಣರಾಜ್ಯದ ಮೇಲೆ ನೇಮಿ
4 ಸಲು ಉದ್ದೇಶಿಸಿದನು. ಹೀಗಿರಲು ಮುಖ್ಯಾಧಿಕಾರಿ
ಗಳೂ ದೇಶಾಧಿಪತಿಗಳೂ ರಾಜ್ಯಭಾರದ ವಿಷಯವಾಗಿ
ದಾನಿಯೇಲನ ಮೇಲೆ ತಪ್ಪುಹೊರಿಸುವದಕ್ಕೆ ಸಂದ
ರ್ಭಹುಡುಕುತ್ತಿದ್ದರು; ಆದರೆ ತಪ್ಪುಹೊರಿಸುವ
ಯಾವ ಸಂದರ್ಭವನ್ನೂ ಯಾವ ತಪ್ಪನ್ನೂ ಕಾಣ
ಲಾರದೆ ಹೋದರು; ಅವನು ನಂಬಿಗಸ್ತನೇ ಆಗಿದ್ದನು,
ಅವನಲ್ಲಿ ಆಲಸ್ಯವಾಗಲಿ ಅಕ್ರಮವಾಗಲಿ ಸಿಕ್ಕಲಿಲ್ಲ.
5 ಆಗ ಆ ಮನುಷ್ಯರು—ಈ ದಾನಿಯೇಲನ ಮೇಲೆ
ತಪ್ಪುಹೊರಿಸಲು ಇವನ ದೇವಧರ್ಮದ ಮೂಲಕವೇ
ಹೊರತು ಇನ್ನಾವದರಲ್ಲಿಯೂ ನಮಗೆ ಅವಕಾಶ
ದೊರೆಯದು ಅಂದುಕೊಂಡರು. ಹೀಗೆ ಆ ಮುಖ
ಕಾರಿಗಳೂ ದೇಶಾಧಿಪತಿಗಳೂ ರಾಜನ ಸಮ್ಮುಖ
ನೆರೆದುಬಂದು ಅವನಿಗೆ—ಅರಸನಾದ ದಾರ್ಯಾ
ನೇ, ಚಿರಂಜೀವಿಯಾಗಿರು! ಯಾವನಾದರೂ ಮೂ
ದಿನಗಳ ತನಕ ರಾಜನಾದ ನಿನಗೆ ಹೊರತು
ಯಾವ ದೇವರಿಗಾಗಲಿ ಮನುಷ್ಯನಿಗಾಗಲಿ ವಿಜ್ಞಾ
ಮಾಡಿಕೊಂಡರೆ ಅವನು ಸಿಂಹಗಳ ಗವಿಯಲ್ಲಿ
ಲ್ಪಡಬೇಕು ಎಂಬ ಖಂಡಿತನಿಬಂಧನೆಯನ್ನು ರಾಜಾ
ರೂಪವಾಗಿ ವಿಧಿಸುವದು ಒಳ್ಳೇದೆಂದು ರಾಜ್ಯದ ಸ
ಮುಖ್ಯಾಧಿಕಾರಿ ನಾಯಕ ದೇಶಾಧಿಪತಿ ಮಂತ್ರಿ
ಸ್ಥಾನಾಧ್ಯಕ್ಷರೂ ಆಲೋಚನೆಮಾಡಿಕೊಂಡಿದ
ರಾಜನೇ, ಈಗ ನೀನು ಈ ನಿಬಂಧನೆಯನ್ನು ವಿ
ಇದು ನಿಂತುಹೋಗದೆ ಮೇದ್ಯಯರ ಮತ್ತು ಪಾ
ಯರ ಎಂದಿಗೂ ರದ್ದಾಗದ ಧರ್ಮವಿಧಿಗಳ ಪ್ರ
ಊರ್ಜಿತವಾಗುವಂತೆ ಶಾಸನಕ್ಕೆ ಹಸ್ತಾಕ್ಷರಮ
ಎಂದು ಬಿನ್ನವಿಸಲು ರಾಜನಾದ ದಾರ್ಯಾವೆಷನ
ನಿಬಂಧನಶಾಸನಕ್ಕೆ ರುಜುಹಾಕಿದನು. ಶಾಸ
ರುಜುವಾದದ್ದು ದಾನಿಯೇಲನಿಗೆ ತಿಳಿದಾಗ ಅ
ತನ್ನ ಮನೆಗೆ ಹೋಗಿ ಯೆರೂಸಲೇಮಿನ ಕಡೆಗೆ
ವಿಲ್ಲದ ಕಿಟಕಿಗಳುಳ್ಳ ತನ್ನ ಮಹಡಿಯ ಕೋಣೆಯ
ಯಥಾಪ್ರಕಾರ ದಿನಕ್ಕೆ ಮೂರಾವರ್ತಿ ಮೊ
ಲೂರಿ ತನ್ನ ದೇವರಿಗೆ ಪ್ರಾರ್ಥನೆಮಾಡಿ ಸ್ತೋತ್ರ
ಸಿದನು. ಆಗ ಆ ಜನರು ಗುಂಪಾಗಿ ಕೂಡಿ ದಾನಿ
ಲನು ತನ್ನ ದೇವರ ಸಮ್ಮುಖದಲ್ಲಿ ಪ್ರಾರ್ಥಿಸಿ ವಿಜ್ಞಾ
ಸುವದನ್ನು ಕಂಡು ಸನ್ನಿಧಿಗೆ ಬಂದು ರಾಜಾಜ್ಞೆ
ಪ್ರಸ್ತಾಪವನ್ನೆತ್ತಿ—ರಾಜನೇ, ಯಾವನಾದರೂ
ವತ್ತು ದಿನಗಳ ತನಕ ನಿನಗೆ ಹೊರತು ಬೇರೆ ಯ
ದೇವರಿಗಾಗಲಿ ಮನುಷ್ಯನಿಗಾಗಲಿ ವಿಜ್ಞಾಪನೆಮ
ದರೆ ಅವನು ಸಿಂಹಗಳ ಗವಿಯಲ್ಲಿ ಹಾಕಲ್ಪಡಬೇ
ಎಂಬ ನಿಬಂಧನೆಗೆ ರುಜುಹಾಕಿದಿಯಲ್ಲಾ ಎಂದು
ಳಲು ರಾಜನು—ಹೌದು, ಮೇದ್ಯಯರ ಮತ್ತು ಪಾ
ಯರ ರದ್ದಾಗದ ಧರ್ಮವಿಧಿಗಳಂತೆ ಇದು
ಎಂದು ಉತ್ತರಕೊಟ್ಟನು. ಇದಕ್ಕವರು ಸ
ಯಲ್ಲಿ — ರಾಜನೇ, ಯೆಹೂದದಿಂದ ಸೆರೆಯಾಗಿ
ವರಲ್ಲಿ ಒಬ್ಬನಾದ ಆ ದಾನಿಯೇಲನು ನಿನ್ನನ್ನಾ
ನಿನ್ನ ಹಸ್ತಾಕ್ಷರದ ನಿಬಂಧನೆಯನ್ನಾಗಲಿ ಲಕ್ಷ
ತಾರದೆ ದಿನಕ್ಕೆ ಮೂರಾವರ್ತಿ ಪ್ರಾರ್ಥಿಸಿಕೊ
ತ್ತಾನೆ ಎಂದು ಅರಿಕೆಮಾಡಿದರು. ರಾಜನು
ಮಾತುಗಳನ್ನು ಕೇಳಿ ಬಹಳ ವ್ಯಸನಗೊಂಡು
ಯೇಲನನ್ನು ತಪ್ಪಿಸಬೇಕೆಂದು ಮನಸ್ಸುಮಾಡಿ
ನನ್ನು ಹೇಗೆ ರಕ್ಷಿಸಲಿ ಎಂದು ಸೂರ್ಯಾಸ್ತಮಾ
ತನಕ ಪ್ರಯಾಸಪಟ್ಟನು. ಇದನ್ನು ತಿಳಿದು ಆ ಜ
ಸನ್ನಿಧಿಗೆ ಕೂಡಿಬಂದು—ಪ್ರಭುವೇ, ರಾಜನು ವಿ
ಯಾವ ನಿಬಂಧನೆಯಾಗಲಿ ನಿಯಮವಾಗಲಿ ರ
ಬಾರದು ಎಂಬ ಧರ್ಮಸೂತ್ರವು ಮೇದ್ಯಯರಲ್ಲಿ
ಪಾರಸಿಯರಲ್ಲಿಯೂ ಉಂಟೆಂಬದು ನಿನಗೆ ಗೊತ್ತ
ಎಂದು ಹೇಳಲು ರಾಜನ ಅಪ್ಪಣೆಯಾಯಿತು;
ಯೇಲನನ್ನು ತಂದು ಸಿಂಹಗಳ ಗವಿಯಲ್ಲಿ

1) ಮೂಲ: ಅಂಗೈಯು.

ಬಿಟ್ಟರು. ಆಗ ರಾಜನು ದಾನಿಯೇಲನಿಗೆ—ನೀನು
ನಿತ್ಯವೂ ಭಜಿಸುವ ದೇವರು ನಿನ್ನನ್ನುದ್ಧರಿಸಲಿ ಎಂದು
17 ಹರಸಿದನು. ಕೂಡಲೆ ಬಂಡೆಯನ್ನು ತಂದು ಗವಿಯ
ಬಾಯನ್ನು ಮುಚ್ಚಿದರು; ದಾನಿಯೇಲನ ಗತಿಯು
ಬೇರೆಯಾಗದಂತೆ ರಾಜನು ತನ್ನ ಮುದ್ರೆಯಿಂದ
ಲೂ ತನ್ನ ಮುಖಂಡರ ಮುದ್ರೆಯಿಂದಲೂ ಅದಕ್ಕೆ
18 ಮೊಹರುಮಾಡಿದನು. ಅನಂತರ ರಾಜನು ಅರಮನೆಗೆ
ಹೋಗಿ ವಿನೋದವಾದ್ಯಗಳನ್ನು ತನ್ನ ಮುಂದೆ ತರಿ
ಸದೆ ಉಪವಾಸವಾಗಿ ರಾತ್ರಿಯನ್ನು ಕಳೆದನು; ಅವನಿಗೆ
19 ನಿದ್ರೆ ತಪ್ಪಿತು. ಮಾರಣೆಯ ಬೆಳಿಗ್ಗೆ ರಾಜನು ಉದ
ಯದಲ್ಲೇ ಎದ್ದು ಸಿಂಹಗಳ ಗವಿಯ ಬಳಿಗೆ ತ್ವರೆ
20 ಯಾಗಿ ಹೋದನು. ದಾನಿಯೇಲನಿದ್ದ ಗವಿಯ
ಸಮೀಪಕ್ಕೆ ಬಂದು ಅವನು ದುಃಖಧ್ವನಿಯಿಂದ
ದಾನಿಯೇಲನನ್ನು ಕೂಗಿ—ದಾನಿಯೇಲನೇ, ಜೀವ
ಸ್ವರೂಪನಾದ ದೇವರ ಸೇವಕನೇ, ನೀನು ನಿತ್ಯವೂ
ಭಜಿಸುವ ನಿನ್ನ ದೇವರು ನಿನ್ನನ್ನು ಸಿಂಹಗಳಿಂದ ಉದ್ಧ
21 ರಿಸ ಶಕ್ತನಾದನೋ ಎಂದು ಕೇಳಲು ದಾನಿಯೇಲನು
22 ರಾಜನಿಗೆ—ಅರಸೇ, ಚಿರಂಜೀವಿಯಾಗಿರು! ನನ್ನ ದೇವ
ರು ತನ್ನ ದೂತನನ್ನು ಕಳುಹಿಸಿ ಸಿಂಹಗಳ ಬಾಯಿ
ಗಳನ್ನು ಬಂಧಿಸಿದನು; ಅವುಗಳಿಂದ ನನಗೆ ಯಾವ
ಹಾನಿಯೂ ಆಗಲಿಲ್ಲ; ಏಕೆಂದರೆ ಆತನ ದೃಷ್ಟಿಗೆ
ನಾನು ನಿರ್ಮಲನಾಗಿ ಕಂಡುಬಂದೆನು, ರಾಜನಾದ
ನಿನಗೂ ಯಾವ ದ್ರೋಹವನ್ನೂ ಮಾಡಲಿಲ್ಲ ಎಂದು
23 ಹೇಳಿದನು. ಅದನ್ನು ಕೇಳಿ ರಾಜನು ಬಹು ಸಂತೋಷ
ಪಟ್ಟು ದಾನಿಯೇಲನನ್ನು ಗವಿಯೊಳಗಿಂದ ಮೇಲಕ್ಕೆತ್ತ
ಬೇಕೆಂದು ಅಪ್ಪಣೆಮಾಡಲು ಅವನನ್ನು ಅಲ್ಲಿಂದ
ಮೇಲಕ್ಕೆತ್ತಿದರು. ಅವನು ತನ್ನ ದೇವರಲ್ಲಿ ಭರವಸ
ವಿಟ್ಟಕಾರಣ ಅವನಿಗೆ ಯಾವ ಹಾನಿಯೂ ಆಗಿರಲಿಲ್ಲ.
24 ಅನಂತರ ರಾಜನು ಆಜ್ಞಾಪಿಸಲು ದಾನಿಯೇಲನ
ಮೇಲೆ ದೂರುಹೊರಿಸಿದವರನ್ನು ತಂದು ಅವರನ್ನೂ
ಅವರ ಹೆಂಡತಿಮಕ್ಕಳನ್ನೂ ಸಿಂಹಗಳ ಗವಿಯಲ್ಲಿ
ಹಾಕಬಿಟ್ಟರು; ಅವರು ಗವಿಯ ಅಡಿಯನ್ನು ಮುಟ್ಟು
ವದರೊಳಗೆ ಸಿಂಹಗಳು ಅವರ ಮೇಲೆ ಹಾರಿ ಅವರ
ಎಲ್ಲಾ ಎಲುಬುಗಳನ್ನು ಚೂರುಚೂರು ಮಾಡಿದವು.
25 ಆಗ ರಾಜನಾದ ದಾರ್ಯಾವೆಷನು ಲೋಕದ
ಲ್ಲೆಲ್ಲಾ ವಾಸಿಸುವ ಸಕಲ ಜನಾಂಗಕುಲಭಾಷೆಗಳ
ವರಿಗೆ ಈ ಪ್ರಸಿದ್ಧಪತ್ರವನ್ನು ಬರೆಯಿಸಿದನು—ನಿಮಗೆ
26 ಸುಖವು ಹೆಚ್ಚಾಗಲಿ! ನಾನಾಳುವ ರಾಜ್ಯದವರೆ
ಲ್ಲರೂ ದಾನಿಯೇಲನ ದೇವರಿಗೆ ಭಯಭಕ್ತಿಯಿಂದ
ನಡೆದುಕೊಳ್ಳಬೇಕೆಂದು ಆಜ್ಞಾಪಿಸುತ್ತೇನೆ; ಆತನೇ
ಜೀವಸ್ವರೂಪನಾದ ಸನಾತನದೇವರು, ಆತನ ರಾಜ್ಯ
ವು ಎಂದಿಗೂ ಅಳಿಯದು, ಆತನ ಆಳಿಕೆಯು ಶಾಶ್ವತ
ವಾಗಿರುವದು; ಆತನು ಉದ್ಧರಿಸುವವನೂ ರಕ್ಷಿಸು
ವವನೂ ಭೂಮ್ಯಾಕಾಶಗಳಲ್ಲಿ ಅದ್ಭುತಮಹತ್ವ
ಗಳನ್ನು ನಡಿಸುವವನೂ ಆಗಿದ್ದಾನೆ; ಆತನೇ ದಾನಿ
ಯೇಲನನ್ನು ಸಿಂಹಗಳ ಕೈಯಿಂದ ತಪ್ಪಿಸಿದನು.
ಈ ದಾನಿಯೇಲನು ದಾರ್ಯಾವೆಷನ ಆಳಿಕೆಯಲ್ಲಿ
ಯೂ ಪಾರಸಿಯನಾದ ಕೋರೆಷನ ಆಳಿಕೆಯಲ್ಲಿ
ಯೂ ಘನವಂತನಾಗಿ ಬಾಳಿದನು.

ದಾನಿಯೇಲನ ಕನಸುಗಳು. 7—12.

ನಾಲ್ಕು ಮೃಗಗಳ ವಿಷಯವಾದ ಕನಸು.

ಬಾಬೆಲಿನ ಅರಸನಾದ ಬೇಲ್ಶಚ್ಚರನ ಆಳಿಕೆಯ 7
ಮೊದಲನೆಯ ವರುಷದಲ್ಲಿ ದಾನಿಯೇಲನಿಗೆ ಹಾಸಿ
ಗೆಯ ಮೇಲೆ ಸ್ವಪ್ನವಾಯಿತು, ಅವನ ಮನಸ್ಸಿನಲ್ಲಿ
ಕನಸುಬಿತ್ತು; ಕೂಡಲೆ ಅವನು ಆ ಕನಸನ್ನೂ ಅದರ
ಮುಖ್ಯಾಂಶಗಳನ್ನೂ ಬರೆದನು. ದಾನಿಯೇಲನು ಆ 2
ಪ್ರಸ್ತಾಪವನ್ನೆತ್ತಿ ಇಂತೆಂದನು—ನಾನು ರಾತ್ರಿ ಕಂಡ
ಕನಸಿನಲ್ಲಿ ಆಹಾ, ಚತುರ್ದಿಕ್ಕಿನ ಗಾಳಿಗಳೂ ಮಹಾ
ಸಾಗರದ ಮೇಲೆ ರಭಸವಾಗಿ ಬೀಸಿ ಬಡಿಯುತ್ತಿದ್ದವು.
ಒಂದಕ್ಕೊಂದು ವಿಲಕ್ಷಣವಾದ ನಾಲ್ಕು ದೊಡ್ಡ 3
ಮೃಗಗಳು ಸಾಗರದೊಳಗಿಂದ ಬಂದವು. ಮೊದಲು 4
ಕಾಣಿಸಿದ ಮೃಗವು ಸಿಂಹದ ಹಾಗಿತ್ತು, ಅದಕ್ಕೆ ಹದ್ದಿ
ನಂತೆ ರೆಕ್ಕೆಗಳಿದ್ದವು; ನಾನು ನೋಡುತ್ತಿರುವಾಗಲೇ
ಆ ರೆಕ್ಕೆಗಳು ಕೀಳಲ್ಪಟ್ಟವು; ಅದು ನೆಲದಿಂದ ಎತ್ತ
ಲ್ಪಟ್ಟು ಮನುಷ್ಯನ ಹಾಗೆ ಎರಡು ಕಾಲುಗಳ ಮೇಲೆ
ನಿಲ್ಲಿಸಲ್ಪಟ್ಟಿತು, ಅದಕ್ಕೆ ಮನುಷ್ಯನ ಹೃದಯವು ಕೊ
ಡೋಣವಾಯಿತು. ಆಹಾ, ಇನ್ನೊಂದು ಮೃಗ, 5
ಎರಡನೇದು; ಅದು ಕರಡಿಯ ಹಾಗಿತ್ತು, ಒಂದು
ಹೆಗಲನ್ನು ಮೇಲಕ್ಕೆ ಎತ್ತಿಕೊಂಡಿತ್ತು, ತನ್ನ ಬಾ
ಯಲ್ಲಿ ಹಲ್ಲುಗಳ ನಡುವೆ ಮೂರು ಪಕ್ಕೆಲುಬು
ಗಳನ್ನು ಕಚ್ಚಿಕೊಂಡಿತ್ತು; ನೀನೆದ್ದು ಬಹು ಮಾಂಸ
ವನ್ನು ತಿನ್ನು ಎಂದು ಅದಕ್ಕೆ ಹೇಳೋಣವಾಯಿತು.
ಅನಂತರ ನಾನು ನೋಡುತ್ತಿರುವಲ್ಲಿ ಇಗೋ, ಚಿರತೆ 6
ಯ ಹಾಗಿರುವ ಮತ್ತೊಂದು ಮೃಗವು ಕಾಣಿಸಿತು;
ಅದರ ಪಕ್ಕಗಳಲ್ಲಿ ಪಕ್ಷಿಯ ರೆಕ್ಕೆಯಂತಿರುವ ನಾಲ್ಕು
ರೆಕ್ಕೆಗಳಿದ್ದವು; ಆ ಮೃಗಕ್ಕೆ ನಾಲ್ಕು ತಲೆಗಳಿದ್ದವು,
ಅದಕ್ಕೆ ದೊರೆತನವು ಕೊಡೋಣವಾಯಿತು. ನಾನು 7
ರಾತ್ರಿ ಕಂಡ ಕನಸಿನಲ್ಲಿ ಸ್ವಲ್ಪ ಹೊತ್ತಿನ ಮೇಲೆ
ಆಹಾ, ನಾಲ್ಕನೆಯ ಮೃಗವು ಕಾಣಿಸಿತು; ಅದು
ಭಯಂಕರ, ಹೆದರಿಸುವಂಥದು, ಅಧಿಕಬಲವುಳ್ಳದ್ದು;
ಅದಕ್ಕೆ ಕಬ್ಬಿಣದ ದೊಡ್ಡ ಹಲ್ಲುಗಳಿದ್ದವು; ಅದು
ನುಂಗುತ್ತಾ ಚೂರುಚೂರು ಮಾಡುತ್ತಾ ಮಿಕ್ಕದ್ದನ್ನು
ಕಾಲುಗಳಿಂದ ತುಳಿಯುತ್ತಾ ಇತ್ತು; ಅದು ಮುಂಚಿನ
ಎಲ್ಲಾ ಮೃಗಗಳಿಗಿಂತ ವಿಲಕ್ಷಣವಾಗಿತ್ತು; ಅದಕ್ಕೆ
ಹತ್ತು ಕೊಂಬುಗಳಿದ್ದವು. ನಾನು ಆ ಕೊಂಬುಗಳನ್ನು 8
ಗಮನಿಸುತ್ತಿರುವಲ್ಲಿ ಇಗೋ, ಅವುಗಳ ನಡುವೆ
ಇನ್ನೊಂದು ಚಿಕ್ಕ ಕೊಂಬು ಮೊಳೆಯಿತು; ಅದರ
ದೆಸೆಯಿಂದ ಮುಂಚಿನ ಕೊಂಬುಗಳಲ್ಲಿ ಮೂರು ಬೇರು
ಸಹಿತ ಕೀಳಲ್ಪಟ್ಟವು; ಆಹಾ, ಈ ಕೊಂಬಿನಲ್ಲಿ ಮನು
ಷ್ಯನ ಕಣ್ಣುಗಳಂತಿರುವ ಕಣ್ಣುಗಳೂ ಬಡಾಯಿ
ಕೊಚ್ಚಿಕೊಳ್ಳುವ ಬಾಯೂ ಇದ್ದವು.
ನಾನು ನೋಡುತ್ತಿದ್ದ ಹಾಗೆ ನ್ಯಾಯಾಸನಗಳು 9
ಹಾಕಲ್ಪಟ್ಟವು, ಮಹಾವೃದ್ಧನೊಬ್ಬನು ಆಸೀನ
ನಾದನು; ಆತನ ಉಡುಪು ಹಿಮದಂತೆ ಶುಭ್ರವಾಗಿತ್ತು,
ಆತನ ತಲೆಯ ಕೂದಲು ನಿರ್ಮಲವಾದ ಬಿಳಿಯ
ಉಣ್ಣೆಯಂತಿತ್ತು; ಆತನ ನ್ಯಾಯಾಸನವು ಅಗ್ನಿಜ್ವಾಲೆ
ಗಳು, ಅದರ ಚಕ್ರಗಳು ಧಗಧಗಿಸುವ ಬೆಂಕಿಯೇ.

10 ನ್ಯಾಯಾಸನದ ಮುಂದೆ ಉರಿಯ ಪ್ರವಾಹವು ಉಕ್ಕಿ
ಹರಿದುಬಂತು; ಲಕ್ಷೋಪಲಕ್ಷ ದೂತರು ಆತನನ್ನು
ಸೇವಿಸುತ್ತಿದ್ದರು, ಕೋಟ್ಯನುಕೋಟಿ ಕಿಂಕರರು
ಆತನ ಮುಂದೆ ನಿಂತುಕೊಂಡಿದ್ದರು; ನ್ಯಾಯಸಭೆ
ಯವರು ಕೂತುಕೊಂಡರು, ಪುಸ್ತಕಗಳು ತೆರೆಯಲ್ಪ
11 ಟ್ಟವು. ಆಗ ನಾನು ನೋಡುತ್ತಿರಲು ಇಗೋ, ಕೊಂಬು
ಬಡಾಯಿಕೊಚ್ಚಿಕೊಂಡ ನಿಮಿತ್ತ ಆ ಕೊಂಬಿನ
ಮೃಗವನ್ನು ಕೊಂದು ಅದರ ಹೆಣವನ್ನು ಉರಿ
12 ಯುವ ಬೆಂಕಿಗೆ ಹಾಕಿ ನಾಶಮಾಡಿದರು. ಮಿಕ್ಕ
ಮೃಗಗಳ ದೊರೆತನವನ್ನು ತೆಗೆದುಬಿಟ್ಟರು, ಆದರೆ
ಕೆಲವು ಕಾಲದ ಮಟ್ಟಿಗೆ, ತಕ್ಕ ಸಮಯ ಬರುವ
13 ತನಕ ಅವುಗಳ ಜೀವವನ್ನು ಉಳಿಸಿದರು. ನಾನು
ಕಂಡ ರಾತ್ರಿಯ ಕನಸಿನಲ್ಲಿ ಇಗೋ, ಮನುಷ್ಯ
ಕುಮಾರನಂತಿರುವವನು ಆಕಾಶದ ಮೇಘಗಳೊಂದಿಗೆ
ಬಂದು ಆ ಮಹಾವೃದ್ಧನನ್ನು ಸಮೀಪಿಸಿದನು,
14 ಅವನನ್ನು ಆತನ ಸನ್ನಿಧಿಗೆ ತಂದರು. ಸಕಲಜನಾಂಗ
ಕುಲಭಾಷೆಗಳವರು ಅವನನ್ನು ಸೇವಿಸಲೆಂದು ಅವ
ನಿಗೆ ದೊರೆತನವೂ ಘನತೆಯೂ ರಾಜ್ಯವೂ ಕೊಡೋಣ
ವಾದವು; ಅವನ ಆಳಿಕೆಯು ಅಂತ್ಯವಿಲ್ಲದ್ದು, ಶಾಶ್ವ
ತವಾದದ್ದು; ಅವನ ರಾಜ್ಯವು ಎಂದಿಗೂ ಅಳಿಯದು.
15 ದಾನಿಯೇಲನಾದ ನನ್ನ ಆತ್ಮವು ನನ್ನ ಶರೀರದೊ
ಳಗೆ ವ್ಯಥೆಗೊಂಡಿತು, ನನ್ನ ಮನಸ್ಸಿನಲ್ಲಿ ಬಿದ್ದ ಕನಸು
16 ಗಳು ನನ್ನನ್ನು ಕಳವಳಪಡಿಸಿದವು. ನಾನು ಹತ್ತಿರ
ನಿಂತಿದ್ದವರಲ್ಲಿ ಒಬ್ಬನ ಬಳಿಗೆ ಹೋಗಿ ಇವುಗಳ ಸತ್ಯಾ
17 ರ್ಥವೇನೆಂದು ವಿಚಾರಿಸಲು ಅವನು ನನಗೆ—ಆ
ನಾಲ್ಕು ದೊಡ್ಡ ಮೃಗಗಳು 1)ಲೋಕಸಾಗರದೊಳ
18 ಗಿಂದ ಏರತಕ್ಕ ನಾಲ್ಕು 2)ರಾಜ್ಯಗಳು; ಆದರೆ ರಾಜ್ಯವು
ಪರಾತ್ಪರನ ಭಕ್ತರಿಗೆ ಲಭಿಸುವದು, ಅವರೇ ಅದನ್ನು
ತಲತಲಾಂತರಕ್ಕೂ ಶಾಶ್ವತವಾಗಿ ಅನುಭವಿಸುವರು
ಎಂದು ಆ ವಿಷಯಗಳ ತಾತ್ಪರ್ಯವನ್ನು ವಿವರಿಸಿ
19 ತಿಳಿಸಿದನು. ಆ ಮೇಲೆ ಕಬ್ಬಿಣದ ಹಲ್ಲು, ತಾಮ್ರದ
ಉಗುರು ಉಳ್ಳದ್ದಾಗಿ ಕೆಲವನ್ನು ನುಂಗಿ ಕೆಲವನ್ನು
ಚೂರುಚೂರುಮಾಡಿ ಮಿಕ್ಕದ್ದನ್ನು ಕಾಲುಗಳಿಂದ
ತುಳಿದು ಇತರ ಮೃಗಗಳಿಗಿಂತ ವಿಲಕ್ಷಣವಾಗಿ ಅತಿ
20 ಭಯಂಕರವಾದ ನಾಲ್ಕನೆಯ ಮೃಗದ ವಿಷಯ
ವಾಗಿಯೂ ಅದರ ತಲೆಯ ಮೇಲಣ ಹತ್ತು ಕೊಂಬು
21 ಗಳ ವಿಷಯವಾಗಿಯೂ ನಾನು ನೋಡುತ್ತಿದ್ದ ಹಾಗೆ
ಯಾವ ಕೊಂಬು ಮೊಳೆತು ಮೂರು ಕೊಂಬುಗಳನ್ನು
22 ಬೀಳಿಸಿ ದೇವಭಕ್ತರೊಂದಿಗೆ ಯುದ್ಧಮಾಡಿ ಮಹಾ
ವೃದ್ಧನು ಅಯ್ತಂದು ಪರಾತ್ಪರನ ಭಕ್ತರಿಗಾಗಿ
ನ್ಯಾಯತೀರಿಸಿ ಅವರಿಗೆ ರಾಜ್ಯವನ್ನು ದೊರಕಿಸುವ
ತನಕ ಅವರನ್ನು ಗೆಲ್ಲುತ್ತಾ ಬಂದು ಕಣ್ಣುಳ್ಳದ್ದಾಗಿ
ಬಾಯಿಂದ ಬಡಾಯಿಕೊಚ್ಚಿಕೊಳ್ಳುತ್ತಾ ಮಿಕ್ಕ
ಕೊಂಬುಗಳಿಗಿಂತ ಬಿರಸಾಗಿ ನೋಡುತ್ತಾ ಇತ್ತೋ ಆ
ಕೊಂಬಿನ ವಿಷಯವಾಗಿಯೂ ಸತ್ಯಾರ್ಥವನ್ನು ತಿಳಿದು
23 ಕೊಳ್ಳಬೇಕೆಂದು ಅಪೇಕ್ಷಿಸಿ ವಿಚಾರಿಸಿದೆನು. ಆಗ
ಅವನು ನನಗೆ—ಆ ನಾಲ್ಕನೆಯ ಮೃಗವು ಲೋಕ
ದಲ್ಲಿ ಉಂಟಾಗುವ ನಾಲ್ಕನೆಯ ರಾಜ್ಯ; ಅದು ಮಿಕ್ಕ
ರಾಜ್ಯಗಳಿಗಿಂತ ವಿಲಕ್ಷಣವಾಗಿ ಲೋಕವನ್ನೆಲ್ಲಾ ನುಂಗಿ
ತುಳಿದು ಚೂರುಚೂರು ಮಾಡುವದು. ಆ ಹತ್ತು 2
ಕೊಂಬುಗಳ ವಿಷಯವೇನಂದರೆ ಆ ರಾಜ್ಯದಲ್ಲಿ ಹತ್ತು
ಮಂದಿ ಅರಸರು ಉಂಟಾಗುವರು; ಅವರ ತರುವಾಯ
ಮತ್ತೊಬ್ಬನು ತಲೆದೋರುವನು; ಅವನು ಮುಂಚಿನ
ಅರಸರಿಗಿಂತ ವಿಲಕ್ಷಣನಾಗಿ ಮೂವರು ಅರಸರನ್ನು
ಅದಮಿಬಿಡುವನು. ಪರಾತ್ಪರನಿಗೆ ವಿರುದ್ಧವಾಗಿ 2
ಕೊಚ್ಚಿಕೊಂಡು ಪರಾತ್ಪರನ ಭಕ್ತರನ್ನು ಸವೆಯಿಸಿ
ಕಟ್ಟಳೆಯ ಕಾಲಗಳನ್ನೂ ಧರ್ಮವಿಧಿಗಳನ್ನೂ ಮಾ
ರ್ಪಡಿಸಲು ಮನಸ್ಸುಮಾಡುವನು; ಆ ಭಕ್ತರು
3)ಒಂದುಕಾಲ ಎರಡುಕಾಲ ಅರ್ಧಕಾಲ ಅವನ ಕೈವಶ
ವಾಗಿರುವರು. ಆ ಮೇಲೆ ನ್ಯಾಯಸಭೆಯು ಕೂತು 2
ಅವನ ದೊರೆತನವನ್ನು ಕಿತ್ತು ತೀರಾ ಧ್ವಂಸಮಾಡಿ
ಕೊನೆಗಾಣಿಸಿಬಿಡುವದು. ಆಗ ಅವನ ರಾಜ್ಯ 2
ಪ್ರಭುತ್ವಗಳೂ ಸಮಸ್ತ ಭೂಮಂಡಲದಲ್ಲಿನ ರಾಜ್ಯ
ಗಳ ಮಹಿಮೆಯೂ ಪರಾತ್ಪರನ ಭಕ್ತಜನರಿಗೆ
ಕೊಡೋಣವಾಗುವವು; ಆತನ ರಾಜ್ಯವು ಶಾಶ್ವತ
ರಾಜ್ಯ; ಸಕಲ ದೇಶಾಧಿಪತಿಗಳು ಆತನಿಗೆ ಅಧೀನರಾಗಿ
ಸೇವೆಮಾಡುವರು ಎಂದು ಹೇಳಿದನು. ಈ ಕನಸಿನ 2
ಪ್ರಸ್ತಾಪವು ಇಲ್ಲಿಗೆ ಮುಗಿಯಿತು. ದಾನಿಯೇಲ
ನಾದ ನಾನು ನನ್ನ ಯೋಚನೆಗಳಿಂದ ಬಹು ಕಳವಳ
ಗೊಂಡು ಮೊಗಗೆಟ್ಟೆನು; ಆದರೂ ನಡೆದ ಸಂಗತಿ
ಯನ್ನು ಮನಸ್ಸಿನಲ್ಲಿ ಇಟ್ಟುಕೊಂಡೆನು.

ಟಗರಿನ ಮತ್ತು ಹೋತದ ವಿಷಯವಾದ ಕನಸು.

8 ಮೊದಲು ನನಗೆ ಕಾಣಿಸಿದ ಕನಸಲ್ಲದೆ ಅರಸ
ನಾದ ಬೇಲ್ಶಚ್ಚರನ ಆಳಿಕೆಯ ಮೂರನೆಯ ವರುಷ
ದಲ್ಲಿಯೂ ಇನ್ನೊಂದು ಕನಸು ದಾನಿಯೇಲನಾದ
ನನಗೆ ಕಾಣಿಸಿತು. ನಾನು ಕಂಡ ಕನಸಿನಲ್ಲಿ
ಏಲಾಮ್ ಸಂಸ್ಥಾನದ ಶೂಷನ್ ಕೋಟೆಯಲ್ಲಿ
ದ್ದೆನು; ಕನಸಿನಲ್ಲಿ ಊಲಾ ಕಾಲುವೆಯ ದಡದ
ಮೇಲೆ ನಿಂತುಕೊಂಡಿದ್ದ ಹಾಗೆ ತೋರಿತು. ನಾನು
ಕಣ್ಣೆತ್ತಿನೋಡಲು ಇಗೋ, ಎರಡು ಕೊಂಬಿನ ಒಂದು
ಟಗರು ಕಾಲುವೆಯ ಹತ್ತಿರ ನಿಂತಿತ್ತು; ಅದರ ಎರಡು
ಕೊಂಬುಗಳು ಉದ್ದವಾಗಿದ್ದರೂ ಒಂದಕ್ಕಿಂತ ಒಂದು
ದೊಡ್ಡದು, ಆ ದೊಡ್ಡದು ಚಿಕ್ಕ ಕೊಂಬು ಮೊಳೆತ
ಮೇಲೆ ಮೊಳೆತದ್ದು. ನಾನು ನೋಡುತ್ತಿದ್ದ ಹಾಗೆ
ಆ ಟಗರು ಪಡುವಲಿಗೂ ಬಡಗಲಿಗೂ ತೆಂಕಲಿಗೂ
ಹಾದಾಡುತ್ತಿತ್ತು; ಯಾವ ಜಂತುವೂ ಅದರೆದುರಿಗೆ
ನಿಲ್ಲಲಾರದೆ ಹೋಯಿತು; ಅದರ ಕೈಯಿಂದ ಬಿಡಿಸಲು
ಯಾವ ಪ್ರಾಣಿಗೂ ಶಕ್ತಿಯಿರಲಿಲ್ಲ; ಅದು ಮನಸ್ಸು
ಬಂದಂತೆ ನಡೆದು ತನ್ನನ್ನು ಹೆಚ್ಚಿಸಿಕೊಂಡಿತು. ನಾನು
ಗಮನಿಸುತ್ತಿರುವಾಗ ಇಗೋ, ಒಂದು ಹೋತವು
ಪಡುವಲಿಂದ ಭೂಮಂಡಲವನ್ನೆಲ್ಲಾ ದಾಟಿಕೊಂಡು
ನೆಲವನ್ನು ಸೋಕದೆ ಓಡಿಬಂತು; ಅದರ ಕಣ್ಣುಗಳ

1) ಮೂಲ: ಲೋಕದೊಳಗಿಂದ. 2) ಮೂಲ: ರಾಜರು. 3) ಅಂದರೆ ಮೂರುವರೆ ವರುಷ
ಮೂಲ: ಕಾಲ ಮತ್ತು ಕಾಲಗಳು ಮತ್ತು ಅರ್ಧಕಾಲ.

6 ನಡುವೆ ವಿಶೇಷವಾದ ಒಂದು ಕೊಂಬಿತ್ತು. ನಾನು
ಕಾಲುವೆಯ ಹತ್ತಿರ ಕಂಡ ಎರಡು ಕೊಂಬಿನ ಟಗರಿನ
ಬಳಿಗೆ ಆ ಹೋತವು ಬಂದು ಪರಾಕ್ರಮದಿಂದ ಉಬ್ಬಿ
ರೋಷಗೊಂಡು ಅದರ ಮೇಲೆ ಬೀಳಬೇಕೆಂದು ಓಡಿತು.
7 ಅದು ನನ್ನ ಕನಸಿನಲ್ಲಿ ಟಗರನ್ನು ಸಮೀಪಿಸಿ ಅದರ
ಮೇಲಣ ಕ್ರೋಧದಿಂದುರಿಯುತ್ತಾ ಅದನ್ನು ಹಾದು
ಅದರ ಎರಡು ಕೊಂಬುಗಳನ್ನು ಮುರಿದುಬಿಟ್ಟಿತು;
ಅದಕ್ಕೆ ಎದುರುಬೀಳಲು ಟಗರಿಗೆ ಏನೂ ಶಕ್ತಿಯಿರ
ಲಿಲ್ಲ; ಅದು ಟಗರನ್ನು ನೆಲಕ್ಕೆ ಉರುಳಿಸಿ ತುಳಿದು
ಹಾಕಿತು; ಟಗರನ್ನು ಅದರ ಕೈಯಿಂದ ಬಿಡಿಸುವ
8 ಪ್ರಾಣಿ ಯಾವದೂ ಇರಲಿಲ್ಲ; ಆ ಹೋತವು ತನ್ನನ್ನು
ಬಹಳವಾಗಿ ಹೆಚ್ಚಿಸಿಕೊಂಡಿತು, ಆದರೆ ಅದು ಪ್ರಾಬ
ಲ್ಯಕ್ಕೆ ಬಂದಾಗಲೇ ಅದರ ದೊಡ್ಡ ಕೊಂಬು ಮುರಿದು
ಹೋಯಿತು; ಅದರ ಸ್ಥಾನದಲ್ಲಿ ನಾಲ್ಕು ಅದ್ಭುತ
ವಾದ ಕೊಂಬುಗಳು ಮೊಳೆತು ಚತುರ್ದಿಕ್ಕುಗಳಿಗೆ
9 ಚಾಚಿಕೊಂಡವು. ಅವುಗಳೊಳಗೆ ಒಂದರಲ್ಲಿ ಒಂದು
ಚಿಕ್ಕ ಕೊಂಬು ಮೊಳೆತು ಬಹು ದೊಡ್ಡದಾಗಿ ಬೆಳೆದು
ತೆಂಕಲಲ್ಲಿಯೂ ಮೂಡಲಲ್ಲಿಯೂ ಅಂದಚಂದದ
10 ದೇಶದಲ್ಲಿಯೂ ಪ್ರಬಲವಾಯಿತು. ಅದು ನಕ್ಷತ್ರ
ಗಣದ ಮೇಲೆ ಕೈಮಾಡುವಷ್ಟು ಹೆಚ್ಚಿ ಆ ಗಣದ ಕೆಲವು
11 ನಕ್ಷತ್ರಗಳನ್ನು ನೆಲಕ್ಕೆ ಕೆಡವಿ ತುಳಿದುಬಿಟ್ಟಿತು. ಇದ
ಲ್ಲದೆ ಆ ಗಣದ ಅಧಿಪತಿಯನ್ನೂ ಎದುರಿಸುವಷ್ಟು
ಉಬ್ಬಿಕೊಂಡು ನಿತ್ಯಹೋಮವನ್ನು ಆತನಿಗೆ ಸಲ್ಲ
12 ದಂತೆ ಮಾಡಿ ಆತನ ಪವಿತ್ರಸ್ಥಾನವನ್ನು ಕೆಡವಿ ನಿತ್ಯ
ಹೋಮವನ್ನು ಅಡಗಿಸುವದಕ್ಕೆ ನೀಚತನದಿಂದ ಒಂದು
ಸೈನ್ಯವನ್ನಿಳಿಸಿ ಸತ್ಯಧರ್ಮವನ್ನು ನೆಲಕ್ಕೆ ದೊಬ್ಬಿ
ತನ್ನ ಇಷ್ಟಾರ್ಥವನ್ನು ನೆರವೇರಿಸಿಕೊಂಡು ವೃದ್ಧಿಗೆ
13 ಬಂತು. ಆಗ ಒಬ್ಬ ದೇವದೂತನು ಮಾತಾಡುವ
ದನ್ನು ಕೇಳಿದೆನು; ಮಾತಾಡುವವನನ್ನು ಮತ್ತೊಬ್ಬ
ದೇವದೂತನು ಸಂಬೋಧಿಸಿ—ನಿತ್ಯಹೋಮವನ್ನು
ನಿಲ್ಲಿಸುವದು, ಭಯಂಕರವಾದ ದೇವದ್ರೋಹಮಾಡು
ವದು, ಪವಿತ್ರಾಲಯವನ್ನೂ ದೇವಭಕ್ತಗಣವನ್ನೂ
ತುಳಿಯುವದು ಎಂಬ ಕನಸಿನ ಕಾರ್ಯಗಳು ಎಷ್ಟು
14 ಕಾಲ ನಡೆಯುವವು ಎಂದು ಪ್ರಶ್ನೆಮಾಡಲು ಅವನು
1)ಇವನಿಗೆ—ಉದಯಾಸ್ತಮಾನಗಳ ಎರಡು ಸಾವಿರದ
ಮುನ್ನೂರರ ವರೆಗೆ ನಡೆಯುವವು; ಆನಂತರ ಪವಿತ್ರಾ
ಲಯಕ್ಕೆ ಪುನಃ ನ್ಯಾಯಸ್ಥಾಪನೆಯಾಗುವದು ಎಂದು
ಹೇಳಿದನು.
15 ದಾನಿಯೇಲನಾದ ನಾನು ಕನಸನ್ನು ಕಂಡು ಅದ
ನ್ನು ಗ್ರಹಿಸಲು ಪ್ರಯತ್ನಿಸುತ್ತಿರುವಾಗ ಇಗೋ,
ಮನುಷ್ಯಸದೃಶನೊಬ್ಬನು ನನ್ನೆದುರಿಗೆ ನಿಂತಿದ್ದನು.
16 ಆಗ—ಗಬ್ರಿಯೇಲನೇ, ಕನಸಿನ ಅರ್ಥವನ್ನು ಇವ
ನಿಗೆ ತಿಳಿಯಪಡಿಸು ಎಂದು ಮನುಷ್ಯಧ್ವನಿಯಂಥ
ಒಂದು ವಾಣಿಯು ಊಲಾಕಾಲುವೆಯ ದಡಗಳ
17 ನಡುವೆ ನನಗೆ ಕೇಳಿಸಿತು. ಅದರಂತೆ ಅವನು ನನ್ನ
ಬಳಿಗೆ ಬಂದನು; ಅವನು ಬರಲು ನಾನು ಭಯ
ಭ್ರಾಂತನಾಗಿ ಅಡ್ಡಬಿದ್ದೆನು; ನನಗೆ ಅವನು—ನರ
ಪುತ್ರನೇ, ಇದು ಮಂದಟ್ಟಾಗಿರಲಿ, ಇದು ಅಂತ್ಯ
ಕಾಲದಲ್ಲಿ ನೆರವೇರುವ ಕನಸು ಎಂದು ಹೇಳಿದನು.
ಅವನು ನನ್ನೊಡನೆ ಮಾತಾಡುತ್ತಿರುವಲ್ಲಿ ನಾನು ಮೈ 18
ಮರೆತು ಅಡಿಮೊಗವಾಗಿ ಬಿದ್ದಿದ್ದೆನು; ಆಗ ಅವನು
ನನ್ನನ್ನು ಮುಟ್ಟಿ ನಿಲ್ಲಿಸಿ ನನಗೆ—ಇಗೋ, ದೇವರು 19
ತನ್ನ ಕೋಪವನ್ನು ತೀರಿಸುವ ಮುಂದಿನ ಕಾಲದಲ್ಲಿ
ನಡೆಯತಕ್ಕದ್ದನ್ನು ನಿನಗೆ ತಿಳಿಸುವೆನು; ಅದು ಕ್ಲುಪ್ತ
ವಾದ ಅಂತ್ಯಕಾಲದ್ದೇ. ನೀನು ನೋಡಿದ ಎರಡು 20
ಕೊಂಬಿನ ಟಗರು ಮೇದ್ಯಯ ಮತ್ತು ಪಾರಸಿಯ
2)ರಾಜ್ಯ. ಆ ಹೋತವು 3)ಗ್ರೀಕ್ 4)ರಾಜ್ಯ, 21
ಅದರ ಕಣ್ಣುಗಳ ನಡುವಣ ದೊಡ್ಡ ಕೊಂಬು ಆ
ರಾಜ್ಯದ ಮೊದಲನೆಯ ರಾಜ. ಆ ಕೊಂಬು 22
ಮುರಿದ ಮೇಲೆ ಅದರ ಸ್ಥಾನದಲ್ಲಿ ನಾಲ್ಕು ಕೊಂಬು
ಗಳು ಎದ್ದ ವಿಷಯವೇನಂದರೆ ಆ ಜನಾಂಗದೊಳಗಿಂದ
ನಾಲ್ಕು ರಾಜ್ಯಗಳು ಏಳುವವು; ಆದರೆ ಮೊದಲನೆಯ
ರಾಜನಿಗೆ ಇದ್ದಷ್ಟು ಶಕ್ತಿಯು ಅವುಗಳಿಗೆ ಇರುವ
ದಿಲ್ಲ. ಆ ರಾಜ್ಯಗಳ ಕಡೆಯ ಕಾಲದಲ್ಲಿ, ಅಧರ್ಮಿ 23
ಗಳ ಅಧರ್ಮವು ಪೂರ್ತಿಯಾದಾಗ ಕಠಿಣಮುಖನೂ
ದ್ವಂದ್ವಾರ್ಥವಚನನಿಪುಣನೂ ಆದ ಒಬ್ಬ ರಾಜನು ತಲೆ
ದೋರುವನು. ಅವನು ಪ್ರಬಲನಾಗುವನು, ಆದರೆ 24
ಬಲದಿಂದಲ್ಲ; ಅತ್ಯಧಿಕವಾಗಿ ಹಾಳುಮಾಡಿ ವೃದ್ಧಿಗೆ
ಬಂದು ಇಷ್ಟಾರ್ಥವನ್ನು ತೀರಿಸಿಕೊಳ್ಳುವನು; ಬಲಿಷ್ಠ
ರನ್ನೂ ದೇವರ ಜನರನ್ನೂ ಧ್ವಂಸಮಾಡುವನು.
ಯುಕ್ತಿಯಿಂದಲೇ ತನ್ನ ಮೋಸವನ್ನು ಸಿದ್ಧಿಗೆ ತಂದು 25
ಮನದಲ್ಲಿ ಉಬ್ಬಿಕೊಂಡು ನೆಮ್ಮದಿಯಾಗಿರುವ ಬಹು
ಜನರನ್ನು ನಾಶಪಡಿಸಿ ಪ್ರಭುಗಳ ಪ್ರಭುವಿಗೂ ವಿರುದ್ಧ
ವಾಗಿ ಏಳುವನು. ಆಹಾ, ಯಾರ ಕೈಯೂ ಸೋ
ಕದೆ ಹಾಳಾಗುವನು. ಕನಸ್ಸಿನಲ್ಲಿ ತಿಳಿಸಲ್ಪಟ್ಟ ಉದ 26
ಯಾಸ್ತಮಾನಗಳ ವಿಷಯವು ನಿಜವೇ ಸರಿ; ಆದರೆ
ಆ ಕನಸು ಗುಟ್ಟಾಗಿರಲಿ; ಅದು ಬಹು ದೂರದ
ಕಾಲದ್ದು ಎಂದು ಹೇಳಿದನು. ಆಗ ದಾನಿಯೇಲ 27
ನಾದ ನಾನು ಬೆಂಡಾಗಿ ಕೆಲವು ದಿವಸ ಕಾಯಿಲೆ
ಬಿದ್ದೆನು; ಆ ಮೇಲೆ ಎದ್ದು ರಾಜಕಾರ್ಯವನ್ನು ನಡಿ
ಸಿದೆನು; ಆ ಕನಸಿಗೆ ಬೆಚ್ಚಿಬೆರಗಾದೆನು; ಅದು ಯಾರಿ
ಗೂ ತಿಳಿಯಲಿಲ್ಲ.

ದಾನಿಯೇಲನ ದೇವಪ್ರಾರ್ಥನೆ, ಅವನಿಗೆ ಬಂದ ಉತ್ತರ.

9 ಅಹಷ್ವೇರೋಷನ ಮಗನೂ ಮೇದ್ಯಯ ವಂಶದವ
ನೂ ಕಸ್ದೀಯ ರಾಜ್ಯದ ದೊರೆತನವನ್ನು ಹೊಂದಿದವ
ನೂ ಆದ ದಾರ್ಯಾವೆಷನ ಆಳಿಕೆಯ ಮೊದಲನೆಯ
ವರುಷದಲ್ಲಿ ದಾನಿಯೇಲನಾದ ನಾನು ಶಾಸ್ತ್ರಗಳನ್ನು 2
ಪರೀಕ್ಷಿಸಿ ಯೆಹೋವನು ಪ್ರವಾದಿಯಾದ ಯೆರೆ
ಮೀಯನಿಗೆ ದಯಪಾಲಿಸಿದ ವಾಕ್ಯಾನುಸಾರ ಯೆರೂ
ಸಲೇಮು ಹಾಳುಬಿದ್ದಿರಬೇಕಾದ ಪೂರ್ಣಕಾಲದ
ವರುಷಗಳ ಸಂಖ್ಯೆ ಎಪ್ಪತ್ತೆಂದು ತಿಳಿದು ಉಪವಾಸ 3
ವಿದ್ದು ಗೋಣಿತಟ್ಟು ಸುತ್ತಿಕೊಂಡು ಬೂದಿಬಳಿದು
ಕೊಂಡು ಕರ್ತನಾದ ದೇವರ ಕಡೆಗೆ ಮುಖವೆತ್ತಿ
ಪ್ರಾರ್ಥನೆವಿಜ್ಞಾಪನೆಗಳಲ್ಲಿ ನಿರತನಾದೆನು. ನನ್ನ 4

1) ಪಾಠಾಂತರ: ನನಗೆ. 2) ಮೂಲ: ರಾಜರು. 3) ಇಬ್ರಿಯ ಮೂಲ: ಯಾವಾನ್ 4) ಮೂಲ: ರಾಜ.

ದೇವರಾದ ಯೆಹೋವನಿಗೆ ಹೀಗೆ ಪಾಪವನ್ನರಿಕೆ
ಮಾಡಿ ಬಿನ್ನವಿಸಿದೆನು—ಓ ಕರ್ತನೇ, ಮಹೋನ್ನತ
ನೂ ಭಯಂಕರನೂ ಆದ ದೇವರೇ, ನಿನ್ನನ್ನು ಪ್ರೀ
ತಿಸಿ ನಿನ್ನ ಆಜ್ಞೆಗಳನ್ನು ಅನುಸರಿಸುವವರಿಗೆ ಮಾಡಿದ
೫ ಕೃಪಾವಾಗ್ದಾನಗಳನ್ನು ನೆರವೇರಿಸುವವನೇ, ನಾವು
ಪಾಪಾಪರಾಧಗಳನ್ನು ಮಾಡಿ ಕೆಟ್ಟವರಾಗಿ ನಡೆದು
ನಿನಗೆ ತಿರುಗಿಬಿದ್ದು ನಿನ್ನ ಆಜ್ಞಾವಿಧಿಗಳನ್ನು ತೊರೆದು
೬ ನಮ್ಮ ಅರಸರು, ಪ್ರಧಾನರು, ಹಿರಿಯರು, ಸಾಮಾನ್ಯ
ಜನರು, ಇವರಿಗೆಲ್ಲ ನಿನ್ನ ಹೆಸರಿನ ಮೇಲೆ ನುಡಿದ
ನಿನ್ನ ಸೇವಕರಾದ ಪ್ರವಾದಿಗಳ ಕಡೆಗೆ ಕಿವಿಗೊಡಲೇ
7 ಇಲ್ಲ. ಕರ್ತನೇ, ನೀನು ಧರ್ಮಸ್ವರೂಪ, ನಾವೋ
ನಾಚಿಕೆಗೀಡಾದವರು; ಹೌದು, ಈಗಲೇ ಯೆಹೂದ್ಯ
ರೂ ಯೆರೂಸಲೇಮಿನ ನಿವಾಸಿಗಳೂ ನಿನಗೆ ವಿರುದ್ಧ
ವಾಗಿ ಮಾಡಿದ ದ್ರೋಹದ ನಿಮಿತ್ತ ನಿನ್ನಿಂದ ದೇಶ
ದೇಶಗಳಿಗೆ ತಳ್ಳಲ್ಪಟ್ಟು ದೂರದಲ್ಲಿಯೂ ಸಮೀಪದಲ್ಲಿ
ಯೂ ಚದರಿರುವ ಎಲ್ಲಾ ಇಸ್ರಾಯೇಲ್ಯರೂ ನಾಚಿಕೆಗೆ
8 ಈಡಾಗಿದ್ದಾರೆ. ಸ್ವಾಮೀ, ನಿನಗೆ ವಿರುದ್ಧವಾಗಿ ಪಾಪ
ಮಾಡಿದ್ದರಿಂದ ನಾವೂ ನಮ್ಮ ಅರಸರೂ ಪ್ರಧಾನರೂ
9 ಹಿರಿಯರೂ ನಾಚಿಕೆಗೆ ಗುರಿಯಾಗಿದ್ದೇವೆ. 1)ಕರ್ತ
ನಾದ ನಮ್ಮ ದೇವರು ಕರುಣಿಸುವವನೂ ಕ್ಷಮಿಸುವ
ವನೂ ಆಗಿದ್ದಾನೆ; ನಾವು ಆತನಿಗೆ ತಿರುಗಿಬಿದ್ದೆವಲ್ಲಾ;
10 ಕರ್ತನಾದ ನಮ್ಮ ದೇವರ ಮಾತನ್ನು ಕೇಳಲಿಲ್ಲ,
ತನ್ನ ಸೇವಕರಾದ ಪ್ರವಾದಿಗಳ ಮೂಲಕ ನಮಗೆ ಗೊ
ತ್ತುಮಾಡಿದ ಧರ್ಮಮಾರ್ಗದಲ್ಲಿ ನಡೆಯಲಿಲ್ಲ.
11 ಇಸ್ರಾಯೇಲ್ಯರೆಲ್ಲರೂ ನಿನ್ನ ಧರ್ಮಪ್ರಮಾಣವನ್ನು
ಮೀರಿ ನಿನ್ನ ಮಾತನ್ನು ಕೇಳಲೊಲ್ಲದೆ ಓರೆಯಾಗಿ
ಹೋದರು; ಆದಕಾರಣ ನಿನ್ನ ಶಾಪದ ಕೇಡುಗಳೂ
ದೇವಸೇವಕನಾದ ಮೋಶೆಯ ಧರ್ಮಶಾಸ್ತ್ರದಲ್ಲಿ
ನೀನು ಆಣೆಯಿಟ್ಟು ಪ್ರಕಟಿಸಿದ ವಿಪತ್ತುಗಳೂ
ನಮ್ಮ ಮೇಲೆ ಸುರಿಯಲ್ಪಟ್ಟಿವೆ; ನಾವು ದೇವದ್ರೋಹಿ
12 ಗಳೇ ಸರಿ. [ಆಹಾ, ನಮ್ಮ ದೇವರು] ನಮ್ಮ ಮೇಲೆ
ದೊಡ್ಡ ಕೇಡನ್ನು ಬರಮಾಡಿ ನಮ್ಮನ್ನೂ ನಮ್ಮನ್ನಾ
ಳುವ ಅಧಿಪತಿಗಳನ್ನೂ ಕುರಿತು ಗದರಿಸಿ ಹೇಳಿದ ಮಾ
ತುಗಳನ್ನು ನೆರವೇರಿಸಿದ್ದಾನೆ; ಯೆರೂಸಲೇಮಿಗೆ
ಆದಂಥ ಕೇಡು ಭೂಮಂಡಲದಲ್ಲಿ ಎಲ್ಲಿಯೂ ಎಂದೂ
13 ಆಗಲಿಲ್ಲವಲ್ಲಾ. ಮೋಶೆಯ ಧರ್ಮಶಾಸ್ತ್ರದಲ್ಲಿ
ಬರೆದಂತೆಯೇ ಈ ವಿಪತ್ತೆಲ್ಲಾ ನಮ್ಮ ಮೇಲೆ ಬಂದಿದೆ;
ಆದರೂ ನಾವು ನಮ್ಮ ದುರ್ಮಾರ್ಗಗಳನ್ನು ತೊರೆದು
ಬಿಟ್ಟು ನಿನ್ನ ಸತ್ಯೋಪದೇಶವನ್ನು ಗ್ರಹಿಸಿ ನಡೆಯು
ವಂತೆ ನಮ್ಮ ದೇವರಾದ ಯೆಹೋವನೆಂಬ ನಿನ್ನ ದಯೆ
14 ಯನ್ನು ಬೇಡಿಕೊಳ್ಳಲಿಲ್ಲ. ಆದಕಾರಣ ಯೆಹೋ
ವನು ಆ ಕೇಡನ್ನು ನೋಡಿಕೊಂಡಿದ್ದು ನಮ್ಮ ಮೇಲೆ
ಬರಮಾಡಿದ್ದಾನೆ; ನಮ್ಮ ದೇವರಾದ ಯೆಹೋವನು
ತಾನು ಮಾಡುವ ಸಕಲಕಾರ್ಯಗಳಲ್ಲಿ ಧರ್ಮಸ್ವರೂ
15 ಪನೇ; ನಾವೋ ಆತನ ಮಾತನ್ನು ಕೇಳಲಿಲ್ಲ. ಕರ್ತ
ನೇ, ನಮ್ಮ ದೇವರೇ, ಭುಜಪರಾಕ್ರಮವನ್ನು ತೋರಿಸಿ
ನಿನ್ನ ಜನರನ್ನು ಐಗುಪ್ತದೇಶದೊಳಗಿಂದ ಪಾರು

ಮಾಡಿ ಇಂದಿನ ವರೆಗೂ ಪ್ರಸಿದ್ಧವಾಗಿರುವ ಹೆಸರನ್ನು
ಪಡೆದುಕೊಂಡವನೇ, ಈಗ ಚಿತ್ತೈಸು. ನಾವು ಪಾಪ
ಮಾಡಿ ಕೆಟ್ಟವರಾಗಿ ನಡೆದಿದ್ದೇವೆ. ಕರ್ತನೇ, ನಿನ್ನ 1
ಸಮಸ್ತ ಧರ್ಮಕಾರ್ಯಗಳಿಗೆ ಅನುಸಾರವಾಗಿ ನಿನ್ನ
ಪಟ್ಟಣವೂ ನಿನ್ನ ಪವಿತ್ರಪರ್ವತವೂ ಆದ ಯೆರೂಸ
ಲೇಮಿನ ಮೇಲಣ ನಿನ್ನ ಕೋಪವನ್ನು, ನಿನ್ನ ರೋಷಾ
ಗ್ನಿಯನ್ನು ದಯಮಾಡಿ ತೊಲಗಿಸಿಬಿಡು; ನಮ್ಮ
ಮತ್ತು ನಮ್ಮ ಪಿತೃಗಳ ಪಾಪಾಪರಾಧಗಳ ನಿಮಿತ್ತ
ಯೆರೂಸಲೇಮೂ ನಿನ್ನ ಜನವೂ ನೆರೆಹೊರೆಯವ
ರೆಲ್ಲರ ನಿಂದೆಗೆ ಗುರಿಯಾಗಿವೆಯಲ್ಲಾ. ನಮ್ಮ 1
ದೇವರೇ, ನಿನ್ನ ಸೇವಕನ ಪ್ರಾರ್ಥನೆವಿಜ್ಞಾಪನೆ
ಗಳನ್ನು ಈಗ ಲಾಲಿಸು; ಹಾಳಾಗಿರುವ ನಿನ್ನ ಪವಿ
ತ್ರಾಲಯವನ್ನು 2)ಕರ್ತನಾದ ನಿನ್ನ ಹೆಸರಿನ ನಿಮಿ
ತ್ತವೇ ಪ್ರಸನ್ನಮುಖದಿಂದ ನೋಡು. ನನ್ನ 1
ದೇವರೇ, ಕಿವಿಗೊಟ್ಟು ಕೇಳು, ಕಣ್ಣುತೆರೆದು ನಮ್ಮ
ಹಾಳುಪ್ರದೇಶಗಳನ್ನೂ ನಿನ್ನ ಹೆಸರುಗೊಂಡಿರುವ ಪಟ್ಟ
ಣವನ್ನೂ ನೋಡು; ನಾವು ಸದ್ಧರ್ಮಿಗಳೆಂತಲ್ಲ, ನಿನ್ನ
ಮಹಾ ಕೃಪೆಯನ್ನೇ ನಂಬಿಕೊಂಡು ಈ ಬಿನ್ನಹಗಳನ್ನು
ನಿನ್ನ ಮುಂದೆ ಅರಿಕೆಮಾಡುತ್ತಿದ್ದೇವೆ. ಸ್ವಾಮೀ, 1
ಕೇಳು! ಸ್ವಾಮೀ, ಕ್ಷಮಿಸು! ಸ್ವಾಮೀ, ಲಾಲಿಸು,
ಕಾರ್ಯವನ್ನು ಸಾಧಿಸು! ತಡಮಾಡಬೇಡ! ನನ್ನ
ದೇವರೇ, ನಿನ್ನ ಜನವೂ ಪಟ್ಟಣವೂ ನಿನ್ನ ಹೆಸರಿನವುಗ
ಳಾದ ಕಾರಣ ನಿನ್ನ ಹೆಸರನ್ನು ಕಾಪಾಡಿಕೋ!

ನಾನು ಬಾಯಿಬಿಟ್ಟು ಬೇಡಿಕೊಂಡು ನನ್ನ ಮತ್ತು 2
ನನ್ನ ಜನರಾದ ಇಸ್ರಾಯೇಲ್ಯರ ಪಾಪವನ್ನು ಅರಿಕೆ
ಮಾಡುತ್ತಾ ನನ್ನ ದೇವರ ಪವಿತ್ರಪರ್ವತದ ವಿಷಯ
ವಾಗಿ ನನ್ನ ದೇವರಾದ ಯೆಹೋವನಿಗೆ ಬಿನ್ನವಿಸಿ
ಪ್ರಾರ್ಥಿಸುತ್ತಿರುವಾಗಲೇ ಮೊದಲು ನನ್ನ ಕನಸಿ 2
ನಲ್ಲಿ ಕಂಡ ಗಬ್ರಿಯೇಲನೆಂಬ ಪುರುಷನು ಅಸುರು
ಸುರಾಗಿ ಹಾರಿಬಂದು ಸಂಧ್ಯಾನೈವೇದ್ಯಸಮಯದಲ್ಲಿ
ನನ್ನನ್ನು 3)ಸೇರಿ ನನ್ನೊಂದಿಗೆ ಹೀಗೆ ಮಾತಾಡಿ ಉಪ 2
ದೇಶಿಸಿದನು—ದಾನಿಯೇಲನೇ, ನಿನಗೆ ಜ್ಞಾನಬೋಧೆ
ಮಾಡುವದಕ್ಕೆ ಈಗ ಬಂದೆನು; ನಿನ್ನ ವಿಜ್ಞಾಪನೆಯ 2
ಆರಂಭದಲ್ಲಿಯೇ ದೇವರ ಅಪ್ಪಣೆಯಾಯಿತು; ಅದ
ನ್ನು ನಿನಗೆ ತಿಳಿಸಲು ಇಲ್ಲಿಗೆ ಬಂದಿದ್ದೇನೆ; ನೀನು
[ದೇವರಿಗೆ] ಅತಿಪ್ರಿಯ; ಈ ದೈವೋಕ್ತಿಯನ್ನು
ಯೋಚಿಸು, ಈ ದರ್ಶನವನ್ನು ಗ್ರಹಿಸಿಕೋ. ಅಧ 2
ರ್ಮವನ್ನು ಕೊನೆಗಾಣಿಸುವದು, ಪಾಪಗಳನ್ನು ತೀರಿ
ಸುವದು, ಅಪರಾಧವನ್ನು ನಿವಾರಿಸುವದು, ಸನಾ
ತನಧರ್ಮವನ್ನು ಸ್ಥಾಪಿಸುವದು, ಕನಸನ್ನೂ ಪ್ರವಾ
ದಿಯ ನುಡಿಯನ್ನೂ ಮುದ್ರೆಹಾಕಿ ಯಥಾರ್ಥಮಾಡು
ವದು, 4)ಅತಿಪರಿಶುದ್ಧವಾದದ್ದನ್ನು ಅಭಿಷೇಕಿಸುವದು,
ಇವೆಲ್ಲಾ ನೆರವೇರುವದಕ್ಕೆ ಮೊದಲು ನಿನ್ನ ಜನಕ್ಕೂ
ನಿನ್ನ ಪರಿಶುದ್ಧಪುರಕ್ಕೂ ಎಪ್ಪತ್ತು ವಾರಗಳು ಕಳೆಯ
ಬೇಕು ಎಂದು ನಿಷ್ಕರ್ಷೆಯಾಗಿದೆ. ಇದನ್ನು ತಿಳಿದು 2
ಮುಂದಟ್ಟುಮಾಡಿಕೋ; ಯೆರೂಸಲೇಮು ಜೀರ್ಣೋ
ದ್ಧಾರವಾಗಿ ಕಟ್ಟಲ್ಪಡಲಿ ಎಂಬ ದೈವೋಕ್ತಿಯು

1) ಅಥವಾ: ನಾವು ತಿರುಗಿಬಿದ್ದರೂ ಕರ್ತನಾದ . . . . . ಆಗಿದ್ದಾನೆ. 2) ಮೂಲ: ಕರ್ತನ ನಿಮಿತ್ತವೇ. 3) ಅಥವಾ: ಮುಟ್ಟಿ. 4) ಅಥವಾ: ಅತಿಪರಿಶುದ್ಧನನ್ನು.

ಹೊರಡುವಂದಿನಿಂದ ಅಭಿಷಿಕ್ತನಾದ ಪ್ರಭುವು ಬರು
ವದರೊಳಗೆ 1)ಏಳು ವಾರಗಳು ಕಳೆಯಬೇಕು! ಅದು
ಪುನಃ ಕಟ್ಟಲ್ಪಟ್ಟು ಅರುವತ್ತೆರಡು ವಾರ ಇರುವದು;
ಅದಕ್ಕೆ ಚೌಕವೂ ಕಂದಕವೂ ಇರುವವು; ಆ ಕಾಲ
26 ವು ಬಹು ಕಷ್ಟಕಾಲ. ಅರುವತ್ತೆರಡು ವಾರಗಳಾದ
ಮೇಲೆ ಅಭಿಷಿಕ್ತನೊಬ್ಬನು ಛೇದಿಸಲ್ಪಡುವನು;
ಅವನಿಗೆ ಏನೂ ಇರದು; ನುಗ್ಗುವ ಪ್ರಭುವಿನ
ಜನರು ಪಟ್ಟಣವನ್ನೂ ಪವಿತ್ರಾಲಯವನ್ನೂ ಹಾಳು
ಮಾಡುವರು; 2)ತುಂಬಿತುಳುಕುವ ಪ್ರಲಯವು ಪಟ್ಟ
ಣವನ್ನು ಕೊನೆಗಾಣಿಸುವದು; ಅಂತ್ಯದ ವರೆಗೂ
ಯುದ್ಧವಾಗುವದು, ನಿಶ್ಚಿತನಾಶನಗಳು ಸಂಭವಿಸು
27 ವವು. ಆ ಪ್ರಭುವು ಒಂದು ವಾರದ ಮಟ್ಟಿಗೆ ಬಹು
ಜನರೊಂದಿಗೆ ದೃಢವಾದ ಒಡಂಬಡಿಕೆಯನ್ನು ಮಾಡಿ
ಕೊಳ್ಳುವನು; ಅರ್ಧ ವಾರ ಯಜ್ಞನೈವೇದ್ಯಗಳನ್ನು
ನಿಲ್ಲಿಸುವನು; 3)ಅಸಹ್ಯಗಳನ್ನು ವಾಹನಮಾಡಿ
ಕೊಂಡು ಒಬ್ಬ ಘಾತಕನು ಹಾರಿಬಂದು ನಿಶ್ಚಿತ
ಪ್ರಲಯವು ಅವನನ್ನು ಮುಣುಗಿಸುವ ತನಕ ಹಾಳು
ಮಾಡುವನು.

ದೇವದೂತದರ್ಶನ.

10 ಪಾರಸಿಯ ರಾಜನಾದ ಕೋರೆಷನ ಆಳಿಕೆಯ
ಮೂರನೆಯ ವರುಷದಲ್ಲಿ ಬೇಲ್ತೆಶಚ್ಚರನೆಂಬ ದಾನಿ
ಯೇಲನಿಗೆ ಒಂದು ಸಂಗತಿಯು ಪ್ರಕಟವಾಯಿತು;
ಬಹು ಕಷ್ಟದ ಗಡುವಿನ ಆ ಸಂಗತಿಯು ಸತ್ಯ;
ಆವನು ಕಂಡ ಕನಸನ್ನು ಗಮನಿಸಿ ಆ ಸಂಗತಿಯನ್ನು
2 ಮುಂದಟ್ಟುಮಾಡಿಕೊಂಡನು. ಆ ಕಾಲದಲ್ಲಿ ದಾನಿ
ಯೇಲನಾದ ನಾನು ಮೂರು ವಾರ ಶೋಕಿಸುತ್ತಿ
3 ದ್ದೆನು. ಮೂರು ವಾರ ಮುಗಿಯುವ ತನಕ
ನಾನು ರುಚಿಪದಾರ್ಥವನ್ನು ತಿನ್ನಲಿಲ್ಲ, ಮಾಂಸವನ್ನೂ
ದ್ರಾಕ್ಷಾರಸವನ್ನೂ ನನ್ನ ಬಾಯಿಗೆ ಹಾಕಲಿಲ್ಲ,
4 ಎಣ್ಣೆಯನ್ನು ಹಚ್ಚಿಕೊಳ್ಳಲಿಲ್ಲ. ಮೊದಲನೆಯ ತಿಂಗ
ಳಿನ ಇಪ್ಪತ್ತು ನಾಲ್ಕನೆಯ ದಿನದಲ್ಲಿ ನಾನು ಹಿದ್ದೆಕೆ
5 ಲೆಂಬ ಮಹಾನದಿಯ ದಡದ ಮೇಲೆ ಇದ್ದು ಕಣ್ಣೆತ್ತಿ
ನೋಡಲು ಇಗೋ, ನಾರಿನ ಬಟ್ಟೆಯನ್ನು ಹೊದ್ದು
ಕೊಂಡು ಊಫಜಿನ ಅಪರಂಜಿಯ ಪಟ್ಟಿಯನ್ನು
ಸೊಂಟಕ್ಕೆ ಬಿಗಿದುಕೊಂಡ ಒಬ್ಬ ಪುರುಷನು ನನಗೆ
6 ಕಾಣಿಸಿದನು; ಅವನ ಶರೀರವು ಪೀತರತ್ನದ ಹಾಗೆ
ಕಂಗೊಳಿಸಿತು, ಅವನ ಮುಖವು ಮಿಂಚಿನಂತೆ ಹೊಳೆ
ಯಿತು, ಅವನ ಕಣ್ಣುಗಳು ಉರಿಯುವ ಪಂಜುಗ
ಳೋಪಾದಿಯಲ್ಲಿ ನಿಗಿನಿಗಿಸಿದವು, ಅವನ ಕೈಕಾಲು
ಗಳು ಬೆಳಗಿದ ತಾಮ್ರದ ಹಾಗೆ ಥಳಥಳಿಸಿದವು,
ಅವನ ಮಾತಿನ ಶಬ್ದವು ಸಂದಣಿಯ ಕೋಲಾಹಲ
7 ದಂತೆ ಕೇಳಿಸಿತು. ದಾನಿಯೇಲನಾದ ನಾನೊಬ್ಬನೇ
ಆ ದರ್ಶನವನ್ನು ಕಂಡೆನು; ನನ್ನೊಂದಿಗಿದ್ದವರು
ಅದನ್ನು ಕಾಣಲಿಲ್ಲ; ದೊಡ್ಡ ನಡುಕವು ಅವರನ್ನು
ಹಿಡಿಯಿತು, ಓಡಿ ಹೋಗಿ ಅವಿತುಕೊಂಡರು. ನಾನು 8
ಏಕಾಕಿಯಾಗಿ ಉಳಿದು ಆ ಅದ್ಭುತದರ್ಶನವನ್ನು
ಕಂಡು ಶಕ್ತಿಯನ್ನೆಲ್ಲಾ ಕಳಕೊಂಡೆನು, ನನ್ನ ಗಾಂಭೀ
ರ್ಯವು ಹಾಳಾಯಿತು, ನಿತ್ರಾಣನಾದೆನು. ಆದರೂ 9
ಅವನು ಮಾತಾಡುವ ಸದ್ದನ್ನು ಕೇಳಿದೆನು; ಅವನ
ಮಾತಿನ ಶಬ್ದವು ನನ್ನ ಕಿವಿಗೆ ಬಿದ್ದಾಗ ನಾನು ಮೈ
ಮರೆತು ಅಡಿಮೊಗವಾಗಿ ಅಡ್ಡಬಿದ್ದಿದ್ದೆನು. ಆಹಾ, 10
ನನಗೆ ಹಸ್ತಸ್ಪರ್ಶವಾಯಿತು; ನಾನು ಗಡಗಡನೆ ನಡು
ಗುತ್ತಾ ಮೊಣಕಾಲೂರಿ ಅಂಗೈಗಳ ಮೇಲೆ ನಿಲ್ಲುವಂತೆ
ಮಾಡಿತು. ಆಗ ಅವನು ನನಗೆ—ದಾನಿಯೇಲನೇ, 11
ಅತಿಪ್ರಿಯನೇ, ನಾನು ನುಡಿಯುವ ಮಾತುಗಳನ್ನು
ಗ್ರಹಿಸು; ನಿಂತುಕೋ, ಈಗ ನಿನ್ನ ಬಳಿಗೇ ಕಳುಹಿಸ
ಲ್ಪಟ್ಟಿದ್ದೇನೆ ಎಂದು ಹೇಳಿದನು; ಹೇಳಿದ ಕೂಡಲೆ
ನಾನು ನಡುಗುತ್ತಾ ನಿಂತುಕೊಂಡೆನು. ಆ ಮೇಲೆ 12
ಅವನು ನನಗೆ—ದಾನಿಯೇಲನೇ, ಭಯಪಡಬೇಡ,
ನೀನು [ದೈವಸಂಕಲ್ಪವನ್ನು] ವಿಮರ್ಶಿಸುವದಕ್ಕೂ
ನಿನ್ನನ್ನು ನಿನ್ನ ದೇವರ ಮುಂದೆ ತಗ್ಗಿಸಿಕೊಳ್ಳುವದಕ್ಕೂ
ಮನಸ್ಸಿಟ್ಟ ಮೊದಲನೆಯ ದಿನದಲ್ಲಿಯೇ ನಿನ್ನ ವಿಜ್ಞಾ
ಪನೆಯು ದೇವರಿಗೆ ಮುಟ್ಟಿತು; ಆ ವಿಜ್ಞಾಪನೆಯ
ನಿಮಿತ್ತವೇ ನಾನು ಬಂದೆನು. ಪಾರಸಿಯ ರಾಜ್ಯದ 13
ದಿವ್ಯಪಾಲಕನು ಇಪ್ಪತ್ತೊಂದು ದಿವಸ ನನ್ನನ್ನು
ತಡೆಯಲು ಇಗೋ, ಪ್ರಧಾನ ದಿವ್ಯಪಾಲಕರಲ್ಲೊಬ್ಬ
ನಾದ ಮೀಕಾಯೇಲನು ನನ್ನ ಸಹಾಯಕ್ಕೆ ಬಂದ
ನು; ಅಲ್ಲಿ ಪಾರಸಿಯ ರಾಜರ ಸಂಗಡ [ಹೋರಾಡಿ]
ಉಳಿದುಕೊಂಡು ಅಂತ್ಯಕಾಲದಲ್ಲಿ ನಿನ್ನ ಜನರಿಗಾಗುವ 14
ಗತಿಯನ್ನು ನಿನಗೆ ತಿಳಿಸುವದಕ್ಕೋಸ್ಕರ ಬಂದೆನು;
4)ಆ ಕಾಲದ ಸಂಗತಿಯನ್ನು ವ್ಯಕ್ತಪಡಿಸುವ
ಇನ್ನೊಂದು ದರ್ಶನವುಂಟು ಎಂದು ಹೇಳಿದನು.
ಅವನು ಈ ಮಾತುಗಳನ್ನು ನನಗೆ ಹೇಳಿದ ಕೂಡಲೆ 15
ನಾನು ಮುಖವನ್ನು ತಗ್ಗಿಸಿಕೊಂಡು ಬಾಯಿಬಿಡ
ಲಾರದೆ ಹೋದೆನು. ಇಗೋ, ನರರೂಪಸದೃಶ 16
ನೊಬ್ಬನು ನನ್ನ ತುಟಿಗಳನ್ನು ಮುಟ್ಟಲು ನಾನು
ಬಾಯಿಬಿಟ್ಟು ನನ್ನ ಮುಂದೆ ನಿಂತಿರುವವನಿಗೆ—
ಎನ್ನೊಡೆಯನೇ, ಈ ದರ್ಶನದಿಂದ ವೇದನೆಗಳು
ನನ್ನನ್ನು ಆಕ್ರಮಿಸಿವೆ, ನಿತ್ರಾಣನಾಗಿದ್ದೇನೆ. ಎನ್ನೊಡೆ 17
ಯನ ಸೇವಕನಾದ ನನ್ನಂಥವನು ಎನ್ನೊಡೆಯನಾದ
ನಿನ್ನಂಥವನ ಸಂಗಡ ಹೇಗೆ ಮಾತಾಡಬಹುದು? ಈಗಿ
ನಿಂದ ಶಕ್ತಿಯನ್ನೆಲ್ಲಾ ಕಳಕೊಂಡವನಾಗಿದ್ದೇನೆ, ನನ್ನ
ಲ್ಲಿ ಉಸುರೇ ಇಲ್ಲ ಎಂದು ಹೇಳಿದೆನು. ಮನುಷ್ಯ 18
ಸದೃಶನು ಪುನಃ ನನ್ನನ್ನು ಮುಟ್ಟಿ ಬಲಪಡಿಸಿದನು.
ಆ ಮೇಲೆ ಆ ಪುರುಷನು ನನಗೆ—ಅತಿಪ್ರಿಯನೇ, 19
ಭಯಪಡಬೇಡ; ನಿನಗೆ ಸಮಾಧಾನವಿರಲಿ, ಬಲ
ಗೊಳ್ಳು, ಬಲಗೊಳ್ಳು ಎಂದು ಹೇಳಿದನು. ಅವನು
ಈ ಮಾತನ್ನು ಹೇಳಿದ ಕೂಡಲೆ ನಾನು ಬಲಗೊಂಡು—
ಎನ್ನೊಡೆಯನೇ, ಮಾತಾಡು; ನನ್ನನ್ನು ಬಲಗೊಳಿ
ಸಿದ್ದೀ ಎಂದರಿಕೆಮಾಡಲು ಅವನು ನನಗೆ ಹೀಗೆ ಹೇಳಿ 20

1) ಅಥವಾ: ಏಳು ವಾರಗಳೂ ಅರುವತ್ತೆರಡು ವಾರಗಳೂ ಕಳೆಯಬೇಕು; ಅದು ಪುನಃ ಕಟ್ಟಲ್ಪಡುವದು. 2) ಅಥವಾ: ಕಟ್ಟಕಡೆಗೆ ಅವನು ತುಂಬಿತುಳುಕುವ ಪ್ರಲಯದ ಪಾಲಾಗುವನು. 3) ಮೂಲವು ಕೇವಲ ಅಸ್ಪಷ್ಟ. 4) ಪಾಠಾಂತರ: ಈ ದರ್ಶನವು ಬಹು ದೂರ ಕಾಲದ್ದು.

ದನು—ನಾನು ನಿನ್ನ ಬಳಿಗೆ ಏಕೆ ಬಂದೆನೆಂಬದು ನಿನಗೆ
ಗೊತ್ತಿಲ್ಲವೆ; ಈಗ ನಾನು ಪಾರಸಿಯ ರಾಜ್ಯದ ದಿವ್ಯ
ಪಾಲಕನೊಂದಿಗೆ ಹೋರಾಡಲು ಹಿಂದಿರುಗಬೇಕು;
ನಾನು ಆ ಹೋರಾಟವನ್ನು ತೀರಿಸಿದ ಕೂಡಲೆ ಆಹಾ,
ಗ್ರೀಕ್ ರಾಜ್ಯದ ದಿವ್ಯಪಾಲಕನು ಎದುರುಬೀಳು
21 ವನು. (ಆದರೂ ಸತ್ಯಶಾಸನದಲ್ಲಿ ಲಿಖಿತವಾದ
ದ್ದನ್ನು ಈಗ ನಿನಗೆ ತಿಳಿಸುವೆನು.) ಇವರಿಬ್ಬರೊಂದಿಗೆ
ಹೋರಾಡುವಲ್ಲಿ ನಿಮ್ಮ ಪಾಲಕನಾದ ಮೀಕಾಯೇ
ಲನು ಹೊರತು ನನಗೆ ಬೆಂಬಲರಾಗ ತಕ್ಕವರು ಇನ್ನಾ
11 ರೂ ಇಲ್ಲ. ಮೇದ್ಯಯನಾದ ದಾರ್ಯಾವೆಷನ
ಆಳಿಕೆಯ ಮೊದಲನೆಯ ವರುಷದಲ್ಲಿ ನಾನೇ
ಮೀಕಾಯೇಲನಿಗೆ ಬೆಂಬಲಕೊಟ್ಟು ಆಶ್ರಯನಾಗಿ
ನಿಂತೆನು.

ಯೆಹೂದದ ಸುತ್ತಣ ರಾಜ್ಯಗಳ ಭವಿಷ್ಯತ್ತು, ಯೆಹೂದ್ಯರಿಗಾಗುವ ಹಿಂಸೆ.

2 ಈಗ ಸತ್ಯಾಂಶವನ್ನು ನಿನಗೆ ತಿಳಿಸುವೆನು. ಇಗೋ,
ಪಾರಸಿಯ ದೇಶದಲ್ಲಿ ಇನ್ನು ಮೂವರು ರಾಜರು
ಏಳುವರು; ನಾಲ್ಕನೆಯ ರಾಜನು ಎಲ್ಲರಿಗಿಂತಲೂ
ಅಧಿಕಧನವಂತನಾಗಿರುವನು; ಅವನು ತನ್ನ ಧನ
ದಿಂದ ಪ್ರಬಲನಾಗಿ ಗ್ರೀಕ್ ರಾಜ್ಯಕ್ಕೆ ವಿರುದ್ಧವಾಗಿ
3 ತನ್ನ ಬಲವನ್ನೆಲ್ಲಾ ಎಬ್ಬಿಸುವನು. ಅನಂತರ ಪರಾ
ಕ್ರಮಶಾಲಿಯಾದ ಒಬ್ಬ ರಾಜನು ಎದ್ದು ಮಹಾ
ಪ್ರಭುತ್ವದಿಂದ ಆಳುತ್ತಾ ತನ್ನ ಇಷ್ಟಾರ್ಥಗಳನ್ನು
4 ಸಾಧಿಸಿಕೊಳ್ಳುವನು. ಅವನು ತಲೆಯೆತ್ತಿದ ಮೇಲೆ
ಅವನ ರಾಜ್ಯವು ಒಡೆದು ನಾಲ್ಕು ದಿಕ್ಕುಗಳಿಗೂ
[ನಾಲ್ಕು] ಪಾಲಾಗುವದು; ಅದು ಅವನ ಸಂತತಿಗೆ
ಭಾಗವಾಗದು, ಅವನ ಆಳಿಕೆಯಲ್ಲಿ ಪ್ರಬಲವಾಗಿದ್ದಂತೆ
ಇನ್ನು ಪ್ರಬಲವಾಗದು; ಆ ರಾಜ್ಯವು ಕೀಳಲ್ಪಟ್ಟು
1)ನಾಲ್ವರಿಗೆ ಮಾತ್ರವಲ್ಲದೆ ಇತರರಿಗೂ ಪಾಲಾಗು
5 ವದು. ದಕ್ಷಿಣದಿಕ್ಕಿನ ರಾಜನೂ ಅವನ ಸರದಾರ
ರಲ್ಲಿ ಒಬ್ಬನೂ ಬಲಗೊಳ್ಳುವರು; ಸರದಾರನು ರಾಜನಿ
ಗಿಂತ ಹೆಚ್ಚು ಬಲಗೊಂಡು ಪ್ರಭುತ್ವಕ್ಕೆ ಬರುವನು;
6 ಅವನ ರಾಜ್ಯವು ದೊಡ್ಡ ರಾಜ್ಯವಾಗಿರುವದು. ಕೆಲವು
ವರುಷಗಳ ಮೇಲೆ ಅವರು ಸೇರಿಕೊಳ್ಳುವರು; ದಕ್ಷಿಣ
ರಾಜನ ಕುಮಾರಿಯು ಉತ್ತರದಿಕ್ಕಿನ ರಾಜನೊಂದಿಗೆ
ಒಪ್ಪಂದಮಾಡಿಕೊಳ್ಳಲಿಕ್ಕೆ ಬರುವಳು; ಆದರೂ
ತನ್ನ ಭುಜಬಲವನ್ನು ಉಳಿಸಿಕೊಳ್ಳಳು; ಅವನೂ
ಅವನ ತೋಳೂ ನಿಲ್ಲವು; ಅವಳೂ ಅವಳನ್ನು ಕರ
ತಂದವರೂ ಪಡೆದವನೂ ತಕ್ಕೊಂಡವನೂ ಆ ಕಾಲ
7 ದಲ್ಲಿ ನಾಶನಕ್ಕೆ ಈಡಾಗುವರು. ಅನಂತರ ಅವಳು
ಹುಟ್ಟಿದ ಬುಡದಿಂದ ಒಡೆದ ಸಸಿಯು ಅದರ ಸ್ಥಾನ
ದಲ್ಲಿ ನಿಂತು ಉತ್ತರರಾಜನ ಸೈನ್ಯಕ್ಕೆ ವಿರುದ್ಧವಾಗಿ
ಹೊರಟು ಅವನ ದುರ್ಗದೊಳಗೆ ನುಗ್ಗಿ ಅಲ್ಲಿನವರಿಗೆ
8 ಮಾಡುವಷ್ಟು ಮಾಡಿ ಗೆದ್ದು ಅವರ ದೇವರುಗಳನ್ನೂ
ಎರಕದ ಬೊಂಬೆಗಳನ್ನೂ ಒಳ್ಳೊಳ್ಳೆ ಬೆಳ್ಳಿಬಂಗಾರದ
ಪಾತ್ರೆಗಳನ್ನೂ ಸೂರೆಮಾಡಿಕೊಂಡು ಐಗುಪ್ತಕ್ಕೆ
ಬಂದು ಕೆಲವು ವರುಷಗಳ ತನಕ ಉತ್ತರರಾಜನ
ತಂಟೆಗೆ ಹೋಗುವದಿಲ್ಲ. ಬಳಿಕ ಉತ್ತರರಾಜನು
ದಕ್ಷಿಣರಾಜನ ರಾಜ್ಯದೊಳಗೆ ನುಗ್ಗಿ ಸ್ವದೇಶಕ್ಕೆ ಹಿಂದಿ
ರುಗುವನು. ಆ ಮೇಲೆ ಅವನ ಮಕ್ಕಳು ಯುದ್ಧ 1
ಸನ್ನಾಹಮಾಡಿ ವ್ಯೂಹವ್ಯೂಹವಾದ ದೊಡ್ಡ ಸೈನ್ಯವನ್ನು
ಕೂಡಿಸುವರು; ಆ ಸೈನ್ಯವು ಮುಂದರಿದು ತುಂಬಿತು
ಳುಕಿ ಹಬ್ಬಿಕೊಳ್ಳುವದು; ಅವರು ಪುನಃ ಯುದ್ಧಕ್ಕೆ
ಹೊರಟು ದಕ್ಷಿಣರಾಜನ ದುರ್ಗದ ವರೆಗೆ ನುಗ್ಗು
ವರು. ಆಗ ದಕ್ಷಿಣರಾಜನು ಕ್ರೋಧದಿಂದುರಿಯು 1
ತ್ತಾ ಹೊರಟುಬಂದು ಉತ್ತರರಾಜನ ಸಂಗಡ ಯುದ್ಧ
ಮಾಡುವನು; ಉತ್ತರರಾಜನು ಮಹಾವ್ಯೂಹವನ್ನು
ಕಟ್ಟಿದರೂ ಅದೆಲ್ಲಾ ದಕ್ಷಿಣರಾಜನ ಕೈಗೆ ಸಿಕ್ಕಿ ಒಯ್ಯ
ಲ್ಪಡುವದು; ಅದರಿಂದ ಅವನ ಮನಸ್ಸು ಉಬ್ಬಿಕೊ 1
ಳ್ಳುವದು; ಅವನು ಲಕ್ಷಾಂತರ ಸೈನಿಕರನ್ನು ಬೀಳಿಸಿ
ದರೂ ಪ್ರಾಬಲ್ಯಕ್ಕೆ ಬಾರನು. ತರುವಾಯ ಉತ್ತರ 1
ರಾಜನು ಹಿಂದಿನ ದಂಡಿಗಿಂತ ದೊಡ್ಡ ದಂಡನ್ನು ಮತ್ತೆ
ಕೂಡಿಸಿ ಬಹು ವರುಷಗಳ ಕಾಲವಾದನಂತರ ಮಹಾ
ಸೈನ್ಯದಿಂದಲೂ ಅಧಿಕಸನ್ನಾಹದಿಂದಲೂ ಸಮೇತನಾಗಿ
ಬರುವನು. ಆ ಕಾಲದಲ್ಲಿ ಅನೇಕರು ದಕ್ಷಿಣರಾಜ 1
ನಿಗೆ ಎದುರುನಿಲ್ಲುವರು; ಇದಲ್ಲದೆ ನಿನ್ನ ಜನರಲ್ಲಿ
ದುರಾಗ್ರಹಿಗಳು ಕನಸನ್ನು ನಿಜಮಾಡಬೇಕೆಂದು ದಂಗೆ
ಏಳುವರು; ಆದರೆ ಬಿದ್ದುಹೋಗುವರು. ಉತ್ತರ 1
ರಾಜನು ಬಂದು ದಿಬ್ಬಹಾಕಿ ಕೋಟೆಕೊತ್ತಲದ ಪಟ್ಟಣ
ವನ್ನು ಹಿಡಿಯುವನು; ದಕ್ಷಿಣದ ಭುಜಬಲವು ನಿಲ್ಲ
ದು, ಅಲ್ಲಿನ ಮಹಾವೀರರು ತಡೆಯಲಾರರು, ಎದುರಿ
ಸುವ ಯಾವ ಶಕ್ತಿಯೂ ಇರದು. ದಕ್ಷಿಣರಾಜನಿಗೆ 1
ವಿರುದ್ಧವಾಗಿ ಬರುವವನು ಇಚ್ಛಾನುಸಾರ ನಡೆಯು
ವನು; ಅವನಿಗೆ ಎದುರೇ ಇಲ್ಲ; ನಾಶನವನ್ನು ಕೈಯ
ಲ್ಲಿಟ್ಟುಕೊಂಡು ಅಂದಚಂದದ ದೇಶದಲ್ಲಿ ನಿಂತಿರು
ವನು. ದಕ್ಷಿಣರಾಜನ ಮೇಲೆ ಬೀಳಬೇಕೆಂದು ನಿರ್ಧ 1
ರಿಸಿ ತನ್ನ ರಾಜ್ಯದ ಸಮಸ್ತ ಬಲ ಸಮೇತನಾಗಿ 2)ಹೊ
ರಟು ಅವನ ಸಂಗಡ ಒಪ್ಪಂದಮಾಡಿಕೊಳ್ಳುವನು;
3)ಅವನ ರಾಜ್ಯದ ಹಾನಿಗಾಗಿ ಅವನಿಗೆ ಹೆಣ್ಣುಮಗ
ಳನ್ನು ಕೊಡುವನು; ಆದರೆ 4)ಆ ಉಪಾಯವೂ
ನಿಲ್ಲದು, ತನಗೆ ಅನುಕೂಲಿಸದು. ಆ ಮೇಲೆ ಅವನು 1
ಕರಾವಳಿಯ ಕಡೆಗೆ ಕಣ್ಣಿಟ್ಟು ಅಲ್ಲಿ ಬಹು ದೇಶಗಳ
ನ್ನು ಆಕ್ರಮಿಸುವನು; ಆದರೆ ಅವನು ಮಾಡುವ ಅವ
ಮಾನವನ್ನು ಒಬ್ಬ ಸರದಾರನು ನಿಲ್ಲಿಸಿಬಿಡುವದಲ್ಲದೆ
ಅದು ಅವನಿಗೇ ತಗಲುವಂತೆ ಮಾಡುವನು. ಆ 1
ಮೇಲೆ ಸ್ವದೇಶದ ದುರ್ಗಗಳ ಕಡೆಗೆ ಹಿಂದಿರುಗಿ ಎಡವಿ
ಬಿದ್ದು ಇಲ್ಲವಾಗುವನು. ಅವನ ಸ್ಥಾನದಲ್ಲಿ ಮತ್ತೊ 2
ಬ್ಬನು ಎದ್ದು ರಾಜ್ಯದಲ್ಲಿ ಶಿರೋಮಣಿಯಾದ ದೇಶವ
ನ್ನೆಲ್ಲ ದೋಚಿಕೊಳ್ಳತಕ್ಕವನನ್ನು ನೇಮಿಸುವನು;
ಆಹಾ, ಕೆಲವು ದಿನಗಳೊಳಗೆ ನಾಶವಾಗುವನು; ಆದರೆ
ಕೋಪದ ಪೆಟ್ಟಿನಿಂದಲ್ಲ, ಯುದ್ಧದಿಂದಲೂ ಅಲ್ಲ.
ಅವನ ಸ್ಥಾನದಲ್ಲಿ ರಾಜ್ಯಪದವಿಗೆ ಹಕ್ಕುದಾರ 2

1) ಮೂಲ: ಇವರಿಗೆ. 2) ಮೇಲಿನದು ಗ್ರೀಕ್ ಮೂಲ; ಇಬ್ರಿಯ ಮೂಲವು ಹೀಗಿದೆ—ಹೊರಡುವನು; ತನ್ನ ಕೈಯಲ್ಲಿ
ನ್ಯಾಯನಿಬಂಧನೆಗಳನ್ನು ಇಟ್ಟುಕೊಂಡು ಮಾಡುವಷ್ಟು ಮಾಡುವನು. 3) ಮೂಲ: ಅದರ ಅಥವಾ ಅವಳ. 4) ಮೂಲ: ಅದ

ನಲ್ಲದ ಒಬ್ಬ ನೀಚನು ಎದ್ದು ನೆಮ್ಮದಿಯ ಕಾಲದಲ್ಲಿ
ಬಂದು ನಯನುಡಿಗಳಿಂದ ರಾಜ್ಯವನ್ನು ಪಡೆದುಕೊ
22 ಳ್ಳುವನು. ತುಂಬಿತುಳುಕುವ ವ್ಯೂಹಗಳೂ 1)ದೇವರ
ನಿಬಂಧನಾಧಿಪತಿಯೂ ಅವನ ರಭಸಕ್ಕೆ ಸಿಕ್ಕಿ ಹೊ
23 ಡೆದುಕೊಂಡುಹೋಗಿ ಭಂಗವಾಗುವರು. ಅವನ
ಸಂಗಡ ಒಪ್ಪಂದಮಾಡಿಕೊಂಡವನಿಗೆ ಕೂಡಲೆ ಮೋಸ
ಮಾಡುವನು; ಕೊಂಚ ಜನದ ಸಹಾಯದಿಂದ ಏಳಿಗೆ
24 ಯಾಗಿ ಬಲಗೊಳ್ಳುವನು. ನೆಮ್ಮದಿಯ ಕಾಲದಲ್ಲಿ
ಸಂಸ್ಥಾನದ ಫಲವತ್ತಾದ ಪ್ರದೇಶಗಳ ಮೇಲೆ ನುಗ್ಗು
ವನು; ತಂದೆತಾತಂದಿರು ಮಾಡದ ಕಾರ್ಯಗಳನ್ನು
ಮಾಡುವನು; ಸೂರೆಸುಲಿಗೆಕೊಳ್ಳೆಹೊಡೆದವುಗಳನ್ನು
ತನ್ನವರಿಗೆ ಚೆಲ್ಲಿಬಿಡುವನು; ಕೋಟೆಗಳನ್ನು ಹಿಡಿ
ಯುವ ಕುತಂತ್ರಗಳನ್ನು ಕ್ಲುಪ್ತಕಾಲದ ತನಕ ಕಲ್ಪಿ
25 ಸುತ್ತಿರುವನು. ಅವನು ದೊಡ್ಡ ದಂಡೆತ್ತಿ ದಕ್ಷಿಣ
ರಾಜನಿಗೆ ವಿರುದ್ಧವಾಗಿ ತನ್ನ ರಾಜ್ಯದ ಬಲವನ್ನೆಲ್ಲ
ಕೂಡಿಸಿ ಧೈರ್ಯತಂದುಕೊಳ್ಳಲು ದಕ್ಷಿಣರಾಜನು
ಅತ್ಯಧಿಕಬಲವುಳ್ಳ ಮಹಾ ಸೈನ್ಯಸಮೇತನಾಗಿ ಯುದ್ಧ
ಕ್ಕೆ ಹೊರಡುವನು; ಆದರೆ ನಿಲ್ಲಲಾರನು; ಅವನು
ಸೋಲುವ ಹಾಗೆ ಕುಯುಕ್ತಿಗಳನ್ನು ಕಲ್ಪಿಸುವರು.
26 ಅವನ ಮೃಷ್ಟಾನ್ನವನ್ನು ತಿನ್ನುವವರೇ ಅವನನ್ನು
ಭಂಗಪಡಿಸುವರು; ಉತ್ತರರಾಜನ ಸೈನ್ಯವು ತುಂಬಿ
ತುಳುಕುವದು; ಬಹು ಜನರು ಹತರಾಗಿ ಬೀಳುವರು.
27 ಆ ಇಬ್ಬರು ರಾಜರು [ಒಬ್ಬರಿಗೊಬ್ಬರು] ಕೇಡಿನ ಮನ
ಸ್ಸುಳ್ಳವರಾಗಿ ಸಹಪಂಕ್ತಿಯಲ್ಲಿ ಸುಳ್ಳುಸುಳ್ಳು ಮಾ
ತಾಡಿಕೊಳ್ಳುವರು; ಆದರೆ ಏನೂ ಸಾಗದು; ಪರಿ
28 ಣಾಮವು ಕ್ಲುಪ್ತಕಾಲದಲ್ಲೇ ತಲೆದೋರುವದು. ಅನಂ
ತರ ಉತ್ತರರಾಜನು ಬಹು ಆಸ್ತಿಯನ್ನು ಕೊಳ್ಳೆಹೊ
ಡೆದು ಸ್ವದೇಶಕ್ಕೆ ಹಿಂದಿರುಗುವನು; ಅವನ ಮನಸ್ಸು
ಪರಿಶುದ್ಧನಿಬಂಧನೆಗೆ ವಿರುದ್ಧವಾಗಿರುವದು; ಅವನು
ಮಾಡುವಷ್ಟು ಮಾಡಿ ಮತ್ತೆ ಸ್ವದೇಶವನ್ನು ಸೇರು
29 ವನು. ಕ್ಲುಪ್ತಕಾಲದಲ್ಲಿ ಪುನಃ ದಕ್ಷಿಣದೇಶದ ಮೇಲೆ
ನುಗ್ಗುವನು; ಆದರೆ ಮೊದಲು ಆದಂತೆ ಎರಡನೆಯ
30 ಸಲ ಆಗದು. ಅವನಿಗೆ ವಿರುದ್ಧವಾಗಿ ಕಿತ್ತೀಮಿನ
ಹಡಗುಗಳು ಬರಲು ಅವನು ಎದೆಗುಂದಿ ಹಿಂದಿರುಗಿ
ಪರಿಶುದ್ಧನಿಬಂಧನೆಯ ಮೇಲೆ ಮತ್ಸರಗೊಂಡು ಮಾ
ಡುವಷ್ಟು ಮಾಡುವನು; ಅವನು ಸ್ವದೇಶಕ್ಕೆ ಸೇರಿ
ಪರಿಶುದ್ಧನಿಬಂಧನೆ ತೊರೆದವರನ್ನು ಕಟಾಕ್ಷಿಸುವನು.
31 ಅವನು ಕೂಡಿಸುವ ಸೈನ್ಯವು ಆಶ್ರಯದುರ್ಗವಾದ
ಪವಿತ್ರಾಲಯವನ್ನು ಹೊಲೆಗೆಡಿಸಿ ನಿತ್ಯಹೋಮವನ್ನು
ನಿಂಗಿಸಿ 2)ಹಾಳುಮಾಡುವ ಅಸಹ್ಯವಸ್ತುವನ್ನು ಪ್ರತಿಷ್ಠಿ
32 ಸುವದು. ನಿಬಂಧನದ್ರೋಹಿಗಳು ಅವನ ನಯ
ನುಡಿಗಳಿಂದ ಕೆಟ್ಟುಹೋಗುವರು; ತಮ್ಮ ದೇವರನ್ನು
ಅರಿತವರೋ ದೃಢಚಿತ್ತರಾಗಿ ಕೃತಾರ್ಥರಾಗುವರು.
33 ಜನರಲ್ಲಿನ ಜ್ಞಾನಿಗಳು ಅನೇಕರಿಗೆ ವಿವೇಕ ಹೇಳ
ಲಾಗಿ ಅವರು ಬಹು ದಿನಸ ಕತ್ತಿಬೆಂಕಿಸೆರೆಸೂರೆಗಳಿಗೆ
34 ಸಿಕ್ಕಿಬೀಳುತ್ತಿರುವರು. ಬೀಳುವಾಗ ಅವರಿಗೆ ಸ್ವಲ್ಪ
ಸಹಾಯ ದೊರೆಯುವದು; ಆ ಮೇಲೆ ಬಹುಮಂದಿ
ನಯವಾದ ನುಡಿಗಳನ್ನಾಡುತ್ತಾ ಅವರನ್ನು ಸೇರಿಕೊ
ಳ್ಳುವರು. ಜ್ಞಾನಿಗಳಲ್ಲಿಯೂ ಕೆಲವರು ಅಂತ್ಯಕಾ 35
ಲದ ವರೆಗೆ ಬೀಳುತ್ತಿರುವರು; ಅದರಿಂದ ಜನರು
ಶೋಧಿಸಲ್ಪಟ್ಟು ಶುದ್ಧಿಹೊಂದಿ ಶುಭ್ರರಾಗುವರು;
ಅಂತ್ಯವು ಕ್ಲುಪ್ತಕಾಲದಲ್ಲೇ ಆಗುವದು. ರಾಜನು 36
ಮನಸ್ಸು ಬಂದ ಹಾಗೆ ನಡೆದು ತಾನು ಎಲ್ಲಾ ದೇವರು
ಗಳಿಗಿಂತ ದೊಡ್ಡವನೆಂದು ತನ್ನನ್ನು ಹೆಚ್ಚಿಸಿಕೊಂಡು
ಉಬ್ಬಿ ದೇವಾಧಿದೇವರನ್ನು ಮಿತಿಮೀರಿ ದೂಷಿಸಿ
[ನಿಮ್ಮ ಮೇಲಿನ] ದೇವೋಗ್ರವು ತೀರುವ ತನಕ ವೃದ್ಧಿ
ಯಾಗಿರುವನು; ದೈವಸಂಕಲ್ಪವು ನೆರವೇರಲೇ ಬೇಕು.
ಅವನು ತನ್ನ ಪಿತೃಗಳ ದೇವರುಗಳನ್ನಾಗಲಿ ಸ್ತ್ರೀ 37
ಯರು ಮೋಹಿಸುವ ದೇವರನ್ನಾಗಲಿ ಯಾವ ದೇವರ
ನ್ನಾಗಲಿ ಲಕ್ಷಿಸನು. ಎಲ್ಲಾ ದೇವರುಗಳಿಗಿಂತ
ತನ್ನನ್ನೇ ಹೆಚ್ಚಿಸಿಕೊಳ್ಳುವನು. ಕುಲದೇವರಿಗೆ ಬದ 38
ಲಾಗಿ ದುರ್ಗಾಭಿಮಾನಿದೇವರನ್ನು ಘನಪಡಿಸುವನು;
ಪಿತೃಗಳಿಗೆ ತಿಳಿಯದ ದೇವರನ್ನು ಬೆಳ್ಳಿಬಂಗಾರದಿಂದ
ಲೂ ರತ್ನಗಳಿಂದಲೂ ಅಮೂಲ್ಯವಸ್ತುಗಳಿಂದಲೂ ಸೇವಿ
ಸುವನು. ಅನ್ಯದೇವರ ಸಹಾಯದಿಂದ ಬಲವಾದ ಕೋ 39
ಟೆಗಳನ್ನು ಆಕ್ರಮಿಸುವನು; ಯಾರನ್ನು ಕಟಾಕ್ಷಿಸು
ವನೋ ಅವರಿಗೆ ಮಹಿಮೆ ಹೆಚ್ಚುವದು; ಬಹು ಜನರ
ಮೇಲೆ ಆಳಿಕೆಯನ್ನು ಕೊಡುವನು; ದೇಶವನ್ನು ಕ್ರಯ
ಕ್ಕೆ ಹಂಚುವನು.

ಅಂತ್ಯಕಾಲದಲ್ಲಿ ದಕ್ಷಿಣರಾಜನು ಉತ್ತರರಾಜನ 40
ಮೇಲೆ ಬೀಳಲು ಅವನು ರಥಾಶ್ವಬಲಗಳಿಂದಲೂ
ಬಹು ನಾವೆಗಳಿಂದಲೂ ಕೂಡಿ ದಕ್ಷಿಣರಾಜನ ಮೇಲೆ
ರಭಸವಾಗಿ ಬಿದ್ದು ನಾಡುನಾಡುಗಳಲ್ಲಿ ನುಗ್ಗಿ ತುಂಬಿ
ತುಳುಕಿ ಹರಡಿಕೊಳ್ಳುವನು. ಅಂದಚಂದದ ದೇಶ 41
ಕ್ಕೂ ನುಗ್ಗುವನು; ಅನೇಕ ಸೀಮೆಗಳು ಅವನಿಂದ
ಹಾಳಾಗುವವು; ಆದರೆ ಎದೋಮ್ಯರು, ಮೋವಾ
ಬ್ಯರು, ಅಮ್ಮೋನಿನ ಹೆಚ್ಚಿನ ಭಾಗದವರು, ಇವರು
ಗಳು ಅವನ ಕೈಯಿಂದ ತಪ್ಪಿಸಿಕೊಳ್ಳುವರು. ಅವನು 42
ದೇಶಗಳ ಮೇಲೆ ಕೈಮಾಡಲು ಐಗುಪ್ತದೇಶವೂ ತನ್ನ
ನ್ನು ರಕ್ಷಿಸಿಕೊಳ್ಳದು. ಅವನು ಬೆಳ್ಳಿಬಂಗಾರಗಳ 43
ನಿಧಿನಿಕ್ಷೇಪಗಳನ್ನೂ ಐಗುಪ್ತದ ಒಳ್ಳೊಳ್ಳೆಯ ಸಮಸ್ತ
ವಸ್ತುಗಳನ್ನೂ ವಶಮಾಡಿಕೊಳ್ಳುವನು; ಲೂಬ್ಯ
ರೂ ಕೂಷ್ಯರೂ ಅವನನ್ನು ಹಿಂಬಾಲಿಸಿ ಹೋಗು
ವರು. ಹೀಗಿರಲು ಮೂಡಲಿಂದಲೂ ಬಡಗಲಿಂದಲೂ 44
ಬರುವ ಸುದ್ದಿಯು ಅವನನ್ನು ಬಾಧಿಸುವದು; ಅವನು
ಅತಿರೋಷಗೊಂಡು ಬಹು ಜನರನ್ನು ಧ್ವಂಸಿಸಿ ನಿರ್ನಾ
ಮಮಾಡುವದಕ್ಕೆ ಹೊರಡುವನು. ಸಮುದ್ರಕ್ಕೂ 45
ಅಂದಚಂದದ ಪರಿಶುದ್ಧಪರ್ವತಕ್ಕೂ ನಡುವೆ ಅರಮನೆ
ಯಂಥ ತನ್ನ ಗುಡಾರಗಳನ್ನು ಹಾಕಿಸುವನು; ಆಹಾ,
ಅವನು ಕೊನೆಗಾಣುವನು, ಯಾರೂ ಅವನಿಗೆ ಸಹಾ
ಯಮಾಡರು.

ಯುಗಸಮಾಪ್ತಿ.

12 ನಿನ್ನ ಜನರ ಪಕ್ಷವನ್ನು ಹಿಡಿದಿರುವ ಮಹಾ
ಪಾಲಕನಾದ ಮೀಕಾಯೇಲನು ಆ ಕಾಲದಲ್ಲಿ

1) ಅಥವಾ : ತಾನು ಒಪ್ಪಂದಮಾಡಿಕೊಂಡ ಪ್ರಭುವೂ; ಮೂಲ : ಒಡಂಬಡಿಕೆಯ ಅಧಿಪತಿಯೂ. 2) ಅಥವಾ: ಬೆಬ್ಬರ ಬೀಳಿಸುವ.

ಏಳುವನು; ಮೊಟ್ಟಮೊದಲು ಜನಾಂಗವು ಉಂಟಾದಂದಿ
ನಿಂದ ಅಂದಿನ ವರೆಗೆ ಸಂಭವಿಸದಂಥ ಸಂಕಟವು
ಸಂಭವಿಸುವದು; ಆಗ ನಿನ್ನ ಜನರೊಳಗೆ ಯಾರ
ಹೆಸರುಗಳು [ಜೀವಬಾಧ್ಯರ] ಪಟ್ಟಿಯಲ್ಲಿ ಸಿಕ್ಕುವವೋ
2 ಅವರೆಲ್ಲರೂ ರಕ್ಷಿಸಲ್ಪಡುವರು. ದೂಳಿನ ನೆಲದೊ
ಳಗೆ ದೀರ್ಘನಿದ್ರೆಮಾಡುವವರಲ್ಲಿ ಅನೇಕರು ಎಚ್ಚೆ
ತ್ತು ಕೆಲವರು ನಿತ್ಯಜೀವವನ್ನು, ಕೆಲವರು ನಿಂದನ
3 ನಿತ್ಯತಿರಸ್ಕಾರಗಳನ್ನು ಅನುಭವಿಸುವರು. ಜ್ಞಾನಿ
ಗಳು ತೇಜೋಮಯವಾದ ಆಕಾಶಮಂಡಲದಂತೆ
ಪ್ರಕಾಶಿಸುವರು; ಬಹು ಜನರನ್ನು ಸದ್ಧರ್ಮಿಗಳ
ನ್ನಾಗಿ ಮಾಡುವವರು ಯುಗಯುಗಾಂತರಗಳಲ್ಲಿಯೂ
4 ನಕ್ಷತ್ರಗಳ ಹಾಗೆ ಹೊಳೆಯುವರು. ದಾನಿಯೇಲನೇ,
ನೀನು ಈ ಮಾತುಗಳನ್ನು ಮುಚ್ಚಿಡು, ಅವುಗ
ಳನ್ನು ಬರೆಯುವ ಗ್ರಂಥಕ್ಕೆ ಮುದ್ರೆಹಾಕು, ಅಂತ್ಯ
ಕಾಲದ ವರೆಗೆ ಮರೆಯಾಗಿರಲಿ; ಬಹು ಜನರು
ಅತ್ತಿತ್ತ ತಿರುಗುವರು, ತಿಳುವಳಿಕೆಯು ಹೆಚ್ಚುವದು.
5 ಕೂಡಲೆ ದಾನಿಯೇಲನಾದ ನಾನು ಮತ್ತಿಬ್ಬರನ್ನು
ಕಂಡೆನು; ಅವರೊಳಗೆ ಒಬ್ಬನು ನದಿಯ ಈ ದಡ
6 ದಲ್ಲಿ, ಇನ್ನೊಬ್ಬನು ಆ ದಡದಲ್ಲಿ ನಿಂತಿದ್ದರು. ಇವ
ರಲ್ಲಿ ಒಬ್ಬನು—ಈ ಅಪೂರ್ವಕಾರ್ಯಗಳು ಕೊನೆ
ಗಾಣುವದಕ್ಕೆ ಎಷ್ಟು ಕಾಲ ಹಿಡಿಯುವದು
ಎಂದು ನದಿಯ ನೀರಿನ ಮೇಲೆ ನಾರಿನ ಹೊದಿಕೆ
ಯನ್ನು ಹೊದ್ದು ನಿಂತಿದ್ದ ಪುರುಷನನ್ನು ಕೇಳಲು

1)ಆ ಪುರುಷನು ಎಡಬಲಕೈಗಳನ್ನು ಆಕಾಶದ ಕಡೆಗೆ 7
ಎತ್ತಿಕೊಂಡು—ಶಾಶ್ವತಜೀವಸ್ವರೂಪನಾಣೆ, ಒಂದು
ಕಾಲ ಎರಡುಕಾಲ ಅರ್ಧಕಾಲ ಕಳೆಯಬೇಕು;
ದೇವರ ಜನರ ಬಲವನ್ನು ಸಂಪೂರ್ಣವಾಗಿ ಮುರಿ
ದುಬಿಟ್ಟ ಮೇಲೆ ಈ ಕಾರ್ಯಗಳೆಲ್ಲಾ ಮುಕ್ತಾಯ
ವಾಗುವವು ಎಂಬದಾಗಿ ನನ್ನ ಕಿವಿಗೆ ಬೀಳುವಂತೆ
ಹೇಳಿದನು. ನನಗೆ ಕೇಳಿಸಿದರೂ ಅರ್ಥವಾಗಲಿಲ್ಲ; 8
ಆಗ ನಾನು—ಎನ್ನೊಡೆಯನೇ, ಈ ಕಾರ್ಯಗಳ ಪರಿ
ಣಾಮವೇನು ಎಂದು ಪ್ರಶ್ನೆಮಾಡಲು ಅವನು—ದಾನಿ 9
ಯೇಲನೇ, ಈ ಮಾತುಗಳು ಅಂತ್ಯಕಾಲದ
ವರೆಗೆ ಮುಚ್ಚಲ್ಪಟ್ಟು ಮುದ್ರಿತವಾಗಿವೆ, ಹೋಗು.
ಅನೇಕರು ತಮ್ಮನ್ನು ಶುದ್ಧೀಕರಿಸಿ ಶುಭ್ರಮಾಡಿ 10
ಕೊಂಡು ಶೋಧಿತರಾಗುವರು; ದುಷ್ಟರು ದುಷ್ಟ
ರಾಗಿಯೇ ನಡೆಯುವರು, ಅವರಲ್ಲಿ ಯಾರಿಗೂ ವಿವೇ
ಕವಿರದು; ಜ್ಞಾನಿಗಳಿಗೆ ವಿವೇಕವಿರುವದು. ನಿತ್ಯ 11
ಹೋಮವು ನೀಗಿಸಲ್ಪಟ್ಟು ಹಾಳುಮಾಡುವ ಅಸಹ್ಯ
ವಸ್ತುವು ಪ್ರತಿಷ್ಠಿತವಾದ ಮೇಲೆ ಸಾವಿರದ ಇನ್ನೂರ
ತೊಂಭತ್ತು ದಿನಗಳು ಕಳೆಯಬೇಕು. ಕಾದುಕೊಂಡು 12
ಸಾವಿರದ ಮುನ್ನೂರ ಮೂವತ್ತೈದು ದಿನಗಳ ಕೊನೆ
ಯ ಮಟ್ಟಿಗೆ ತಾಳಿರುವವನು ಧನ್ಯನು. ನೀನು 13
ಹೋಗಿ ಅಂತ್ಯದ ವರೆಗೆ ಇರು; ನೀನು ದೀರ್ಘನಿದ್ರೆ
ಯನ್ನು ಹೊಂದಿ ಯುಗಸಮಾಪ್ತಿಯಲ್ಲಿ ಎದ್ದು ನಿನ
ಗಾಗುವ ಸ್ವಾಸ್ತ್ಯದೊಳಗೆ ನಿಲ್ಲುವಿ ಎಂದು ಹೇಳಿದನು.

---

# THE BOOK OF THE
# PROPHET HOSEA

## ಹೋಶೇಯನ ಪ್ರವಾದನೆಯ ಗ್ರಂಥ

### ಹೋಶೇಯನ ಪತ್ನಿಯ ಪತಿದ್ರೋಹ.
1—3.

1 ಯೆಹೂದದ ಅರಸರಾದ ಉಜ್ಜೀಯ, ಯೋ
ಥಾಮ, ಆಹಾಜ, ಹಿಜ್ಕೀಯ, ಇವರ ಕಾಲದಲ್ಲಿ,
ಅಂದರೆ ಇಸ್ರಾಯೇಲಿನ ಅರಸನೂ ಯೋವಾಷನ ಮಗ
ನೂ ಆದ ಯಾರೊಬ್ಬಾಮನ ಕಾಲದಲ್ಲಿ ಬೆಯೇ
ರಿಯ ಮಗನಾದ ಹೋಶೇಯನಿಗೆ ಯೆಹೋವನು
ದಯಪಾಲಿಸಿದ ವಾಕ್ಯವು.

### ಹೋಶೇಯನ ಮದುವೆ, ಮೂವರು ಮಕ್ಕಳು ಹುಟ್ಟಿದ್ದು.

2 ಯೆಹೋವನು ಹೋಶೇಯನ ಸಂಗಡ ಮೊದಲು
ಮಾತಾಡಿದಾಗ ಆತನು ಅವನಿಗೆ—ನೀನು ಹೋಗಿ
ವ್ಯಭಿಚಾರಿಣಿಯನ್ನು ಮದುವೆಮಾಡಿಕೊಂಡು ವ್ಯಭಿ
ಚಾರದಿಂದಾಗುವ ಮಕ್ಕಳನ್ನು ಸೇರಿಸಿಕೋ; 2)ದೇ
ಶವು ನನ್ನನ್ನು ಬಿಟ್ಟು ಅಧಿಕವ್ಯಭಿಚಾರವನ್ನು ನಡಿ
ಸುತ್ತದೆಂಬದಕ್ಕೆ ಇದು ದೃಷ್ಟಾಂತವಾಗಿರಲಿ ಎಂದು
ಹೇಳಿದನು. ಆದರಂತೆ ಹೋಶೇಯನು ಹೋಗಿ ದಿಬ್ಲ 3
ಯಿಮನ ಮಗಳಾದ ಗೋಮೆರಳನ್ನು ಮದುವೆಯಾ
ದನು. ಅವಳು ಗರ್ಭಿಣಿಯಾಗಿ ಅವನಿಗೆ ಗಂಡು
ಮಗುವನ್ನು ಹೆತ್ತಾಗ ಯೆಹೋವನು ಅವನನ್ನು ಕು 4
ರಿತು—ಈ ಮಗುವಿಗೆ ಇಜ್ರೇಲ್ ಎಂಬ ಹೆಸರಿಡು;
ಇಜ್ರೇಲಿನಲ್ಲಿ ಸುರಿಸಿದ ರಕ್ತಕ್ಕೆ ಪ್ರತಿಯಾಗಿ ಸ್ವಲ್ಪ
ಕಾಲದೊಳಗೆ ನಾನು ಯೇಹುವಂಶದವರಿಗೆ ಮುಯ್ಯಿ
ತೀರಿಸಿ ಇಸ್ರಾಯೇಲ್‌ಜನಾಂಗವನ್ನು ನಿರ್ನಾಮ
ಮಾಡುವೆನು; ಆ ದಿನದಲ್ಲಿ ನಾನು ಇಜ್ರೇಲ್ ತಗ್ಗಿ 5

---

1) ಮೂಲ: ನಾರಿನ ಹೊದಿಕೆಯನ್ನು ಹೊದ್ದುಕೊಂಡು ನದಿಯ ನೀರಿನ ಮೇಲಿದ್ದ ಪುರುಷನು. 2) ಮೂಲ: ಏಕಂದರೆ ದೇಶವು ನನ್ನನ್ನು ಬಿಟ್ಟು ವ್ಯಭಿಚಾರವನ್ನು ನಡಿಸುತ್ತದೆ.

ನೊಳಗೆ ಇಸ್ರಾಯೇಲಿನ ಬಿಲ್ಲನ್ನು ಮುರಿದುಬಿಡು
6 ವೆನು ಅಂದನು. ಅವಳು ಪುನಃ ಗರ್ಭಿಣಿಯಾಗಿ
ಹೆಣ್ಣುಮಗುವನ್ನು ಹೆತ್ತಾಗ ಯೆಹೋವನು ಹೋ
ಶೇಯನನ್ನು ಕುರಿತು—ಈ ಮಗುವಿಗೆ 1)ಲೋರು
ಹಾಮ ಎಂಬ ಹೆಸರಿಡು; ಏಕಂದರೆ ನಾನು
ಇಸ್ರಾಯೇಲ್ ವಂಶದವರಲ್ಲಿ ಇನ್ನು ವಾತ್ಸಲ್ಯವಿಡುವ
ದಿಲ್ಲ, ಅವರನ್ನು ಎಷ್ಟು ಮಾತ್ರವೂ ಕ್ಷಮಿಸುವದಿಲ್ಲ.
7 ಆದರೆ ನಾನು ಯೆಹೂದವಂಶದವರಲ್ಲಿ ವಾತ್ಸಲ್ಯ
ವಿಟ್ಟು ಅವರನ್ನು ಉದ್ಧರಿಸುವೆನು; ಬಿಲ್ಲು, ಕತ್ತಿ,
ಕಾಳಗ, ಕುದುರೆ, ರಾಹುತ, ಈ ಮೂಲಕದಿಂ
ದಲ್ಲ, ಅವರ ದೇವರಾದ ಯೆಹೋವನ ಬಲದಿಂದಲೇ
8 ಅವರನ್ನು ರಕ್ಷಿಸುವೆನು ಅಂದನು. ಆ ಕೂಸು ಮೊಲೆ
ಬಿಟ್ಟ ಮೇಲೆ ಅವಳು ಗರ್ಭಿಣಿಯಾಗಿ ಗಂಡುಮಗು
9 ವನ್ನು ಹೆತ್ತಳು. ಆಗ ಯೆಹೋವನು—ಈ ಮಗು
ವಿಗೆ 2)ಲೋ ಅಮ್ಮಿ ಎಂಬ ಹೆಸರಿಡು; ಏಕಂದರೆ
ನೀವು ನನ್ನ ಪ್ರಜೆಯಲ್ಲ, ನಾನು ಇನ್ನು 3)ನಿಮ್ಮ
ದೇವರಲ್ಲ ಅಂದನು.

### ಇಸ್ರಾಯೇಲಿನ ಮುಂದಿನ ಸುಸ್ಥಿತಿ.

10 ಇಸ್ರಾಯೇಲ್ಯರ ಸಂಖ್ಯೆಯು ಅಳೆಯುವದಕ್ಕೂ ಲೆಕ್ಕಿ
ಸುವದಕ್ಕೂ ಅಸಾಧ್ಯವಾದ ಸಮುದ್ರತೀರದ ಉಸು
ಬಿನಂತಾಗುವದು; 4)ಆಗ ಅವರು ನನ್ನ ಪ್ರಜೆಯಲ್ಲದ
ವರು ಎನಿಸಿಕೊಳ್ಳುವದಕ್ಕೆ ಬದಲಾಗಿ ಜೀವಸ್ವರೂಪ
11 ನಾದ ದೇವರ ಮಕ್ಕಳು ಎನಿಸಿಕೊಳ್ಳುವರು. ಯೆ
ಹೂದ್ಯರೂ ಇಸ್ರಾಯೇಲ್ಯರೂ ಒಟ್ಟುಗೂಡಿ ಒಬ್ಬ
ನನ್ನೇ ಶಿರಸ್ಸನ್ನಾಗಿ ಮಾಡಿಕೊಂಡು 5)ದೇಶದೊಳಗಿಂದ
ಹೊರಡುವರು; 6)ಇಜ್ರೇಲಿನ ಸುದಿನವು ಅತಿವಿಶೇಷ
ವಾದದ್ದು.

2 ನಿಮ್ಮ ಸಹೋದರರನ್ನು 7)ಅಮ್ಮಿ, ನಿಮ್ಮ ಸಹೋ
ದರಿಯರನ್ನು 8)ರುಹಾಮ ಅನ್ನಿರಿ.

### ಇಸ್ರಾಯೇಲಿನ ಪತಿದ್ರೋಹ.

2 ನಿಮ್ಮ ತಾಯಿಯ ಸಂಗಡ ವಾದಿಸಿರಿ, ವಾದಿಸಿರಿ;
ಅವಳು ನನ್ನ ಹೆಂಡತಿಯಲ್ಲ. ನಾನು ಅವಳ ಗಂಡ
ನಲ್ಲ; ಅವಳು ಸೂಳೆತನವನ್ನು ತನ್ನ ಮುಖದಿಂದ,
ವ್ಯಭಿಚಾರದ ಚಿಹ್ನವನ್ನು ತನ್ನ ಸ್ತನಮಧ್ಯದಿಂದ ತೊಲಗಿ
3 ಸಲಿ; ಇಲ್ಲವಾದರೆ ನಾನು ಅವಳ ಬಟ್ಟೆಯನ್ನು ಕಿತ್ತು
ಅವಳನ್ನು ಹುಟ್ಟಿದಾಗ ಇದ್ದಂತೆ ಬೆತ್ತಲೆಯಾಗಿ ನಿಲ್ಲಿಸಿ
ಬಿಟ್ಟು ಕಾಡನ್ನಾಗಿ ಮಾಡಿ ಮರುಭೂಮಿಯ ಸ್ಥಿತಿಗೆ
4 ತಂದು ನೀರಡಿಕೆಯಿಂದ ಸಾಯಿಸುವೆನು; ಅವಳ
ಮಕ್ಕಳನ್ನೂ ಕರುಣಿಸೆನು, ಅವರು ವ್ಯಭಿಚಾರದಿಂದಾದ
5 ಮಕ್ಕಳಷ್ಟೆ. ಅವರ ತಾಯಿಯು ಸೂಳೆತನಮಾಡಿ
ದ್ದಾಳೆ, ಹೆತ್ತವಳು ನಾಚಿಕೆಗೇಡಿಯಾಗಿ ನಡೆದಿದ್ದಾಳೆ;
ನನಗೆ ಬೇಕಾದ ಅನ್ನಪಾನಗಳನ್ನೂ ಉಣ್ಣೆನಾರುಗಳ
ನ್ನೂ ತೈಲವನ್ನೂ ಪಾಯಸಪಾನಕಗಳನ್ನೂ ನನಗೆ ಕೊ
ಡುವ ನನ್ನ ಮಿಂಡರ ಹಿಂದೆ ಹೋಗುವೆನು ಅಂದು
ಕೊಂಡಿದ್ದಾಳೆ.

### ಇಸ್ರಾಯೇಲಿನ ದಂಡನೆ.

ಹೀಗಿರಲು, ಆಹಾ, ನಾನು 9)ಅವಳ ದಾರಿಗೆ ಮುಳ್ಳು 6
ಬೇಲಿ ಹಾಕುವೆನು, ಬೇಕುಬೇಕಾದ ಹಾದಿಗಳನ್ನು
ಹಿಡಿಯದಂತೆ ಅವಳಿಗೆ ಅಡ್ಡಗೋಡೆ ಕಟ್ಟುವೆನು.
ಅವಳು ತನ್ನ ಮಿಂಡರನ್ನು ಹಿಂದಟ್ಟಿದರೂ ಅವರನ್ನು 7
ಸಂಧಿಸಳು; ಅವರನ್ನು ಹುಡುಕಿದರೂ ಅವರು ಸಿಕ್ಕರು;
ಆಗ ಅವಳು—ನನ್ನ ಮದುವೆಯ ಗಂಡನ ಬಳಿಗೆ
ಹಿಂದಿರುಗಿ ಹೋಗುವೆನು, ಈಗಿನ ನನ್ನ ಸ್ಥಿತಿಗಿಂತ
ಆಗಿನ ಸ್ಥಿತಿಯು ಎಷ್ಟೋ ಲೇಸು ಅಂದುಕೊಳ್ಳುವಳು.
ತನ್ನ ಧಾನ್ಯದ್ರಾಕ್ಷಾರಸತೈಲಗಳು ನನ್ನಿಂದ ದೊರೆತವು 8
ಗಳೆಂದೂ ಬಾಳನ ಪೂಜೆಗೆ ಉಪಯೋಗಿಸಿದ ಬೆಳ್ಳಿ
ಬಂಗಾರಗಳು ನನ್ನ ಧಾರಾಳವಾದ ವರವೆಂದೂ ಅವ
ಳಿಗೆ ತಿಳಿಯದು. ಆದಕಾರಣ ನಾನು ನನ್ನ ಧಾನ್ಯ 9
ದ್ರಾಕ್ಷಾರಸಗಳನ್ನು ಆಯಾ ಕಾಲದಲ್ಲಿ ಹಿಂದಕ್ಕೆ ತೆಗೆ
ದುಕೊಳ್ಳುವೆನು, ಅವಳ ಮಾನವನ್ನು ಮರೆಮಾಡುವ
ದಕ್ಕೆ ನಾನು ಕೊಟ್ಟ ಉಣ್ಣೆನಾರುಗಳನ್ನು ಕಿತ್ತುಬಿಡು
ವೆನು. ಈಗ ಅವಳ ಮಿಂಡರ ಕಣ್ಣೆದುರಿಗೆ ಅವಳ 10
ನಾಚಿಕೆಗೇಡಿತನವನ್ನು ಬೈಲಿಗೆ ತರುವೆನು; ಅವಳನ್ನು
ನನ್ನ ಕೈಯಿಂದ ಯಾರೂ ಬಿಡಿಸರು. ನಾನು ಅವಳ 11
ಉಲ್ಲಾಸ, ಹಬ್ಬ, ಅಮಾವಾಸ್ಯೆ, ಸಬ್ಬತ್ತು, ಮಹೋ
ತ್ಸವ, ಇವುಗಳನ್ನೆಲ್ಲಾ ನಿಲ್ಲಿಸಿಬಿಡುವೆನು. ಅವಳು 12
ಯಾವ ಅಂಜೂರದ್ರಾಕ್ಷೆಗಳನ್ನು ಇವು ನನ್ನ ಮಿಂಡ
ರಿಂದಾದ ಪ್ರತಿಫಲ ಅಂದುಕೊಂಡಳೋ ಅವುಗಳನ್ನು
ನಾನು ಹಾಳುಮಾಡಿ ಕಾಡುಗಿಡಗಳ ಗತಿಗೆ ತರುವೆನು;
ಅವು ಭೂಜಂತುಗಳಿಗೆ ಆಹಾರವಾಗುವವು. ಅವಳು 13
ನನ್ನನ್ನು ಮರೆತು ಮೂಗುತಿ ಮೊದಲಾದ ಒಡವೆಗ
ಳಿಂದ ತನ್ನನ್ನು ಸಿಂಗರಿಸಿಕೊಂಡು ಮಿಂಡರ ಹಿಂದೆ
ಹೋಗಿ ಬಾಳ್‍ದೇವತೆಗಳ ಉತ್ಸವದಿನಗಳಲ್ಲಿ ಧೂಪ
ಹಾಕಿದ್ದಕ್ಕೆ ನಾನು ಅವಳನ್ನು ದಂಡಿಸುವೆನು; ಇದು
ಯೆಹೋವನ ನುಡಿ.

### ಇಸ್ರಾಯೇಲನ್ನು ಪುನಃ ಸ್ವೀಕರಿಸಿದ್ದು.

ಆಹಾ, ನಾನು ಅವಳನ್ನು ಒಲಿಸಿ ಅಡವಿಗೆ ಕರ 14
ಕೊಂಡು ಹೋಗಿ ಅವಳೊಂದಿಗೆ ಹೃದಯಂಗಮವಾಗಿ
ಮಾತಾಡುವೆನು. ಅವಳ ದ್ರಾಕ್ಷೆಯ ತೋಟಗಳನ್ನು 15
ಅಲ್ಲಿರುವಾಗಲೇ ಅವಳಿಗೆ ಹಿಂದಕ್ಕೆ ಕೊಡುವೆನು;

1) ಅಂದರೆ ಅಪ್ರಿಯಳು ಅಥವಾ ಪಿತೃವಾತ್ಸಲ್ಯವನ್ನರಿಯದವಳು. 2) ಅಂದರೆ ನನ್ನ ಪ್ರಜೆಯಲ್ಲ. 3) ಮೂಲ: ನಿಮ್ಮವನಲ್ಲ.
4) ಅಥವಾ: ಯಾವ ಸ್ಥಳದಲ್ಲಿ ನೀವು ನನ್ನ ಪ್ರಜೆಯಲ್ಲವೆಂದು ಅವರಿಗೆ ಹೇಳಲ್ಪಟ್ಟಿತೋ ಆ ಸ್ಥಳದಲ್ಲಿಯೇ ಜೀವವುಳ್ಳ ದೇವರ ಪುತ್ರರೆಂಬ ಹೆಸರು ಅವರಿಗೆ ಬರುವದು. 5) ಅಥವಾ: ದೇಶದ ಎಲ್ಲಾ ಕಡೆಯಿಂದಲೂ ಯುದ್ಧಕ್ಕೆ ಹೊರಡುವರು; ಇಜ್ರೇಲಿನ ದಿನವು ಸುಗ್ಗಿಯುಡ ದಿನ. 6) ಅಥವಾ: ದೇವರು ಬಿತ್ತುವ ದಿನವು ಮಹಿಮೆಯ ದಿನ. 7) ಅಂದರೆ ನನ್ನ ಪ್ರಜೆ. 8) ಅಂದರೆ ಪಿತೃವಾತ್ಸಲ್ಯವನ್ನರಿತವಳು. 9) ಮೂಲ: ನಿನ್ನ.

[1])ಆಕೋರಿನ ತಗ್ಗನ್ನೇ ಅವಳ ಸುಖಸಿರೀಕ್ಷೆಗೆ ದ್ವಾರ
ವನ್ನಾಗಿ ಮಾಡುವೆನು; ಯೌವನದಲ್ಲಿ, ಐಗುಪ್ತದೇಶ
ದೊಳಗಿಂದ ಹೊರಟುಬಂದ ದಿನದಲ್ಲಿ ಇದ್ದಂತೆ ಅಲ್ಲಿ
ಒಲುಮೆಯಿಂದಿರುವಳು.

16 ಯೆಹೋವನು ಇಂತೆನ್ನುತ್ತಾನೆ—ಆ ಕಾಲದಲ್ಲಿ
ನೀನು ನನ್ನನ್ನು ಇನ್ನು [2])ಬಾಳೀ ಅನ್ನದೆ [3])ಈಶೀ
17 ಅನ್ನುವಿ. ನಾನು ಬಾಳ್‌ದೇವತೆಗಳ ಹೆಸರುಗಳ
ನ್ನು [4])ನಿನ್ನ ಬಾಯೊಳಗಿಂದ ತೊಲಗಿಸುವೆನು; ಅವುಗ
18 ಳನ್ನು ಇನ್ನು ಎತ್ತದಿರುವಿ. ಆ ಕಾಲದಲ್ಲಿ ನಾನು
ನನ್ನ ಜನರಿಗಾಗಿ ಭೂಜಂತುಗಳಿಗೂ ಆಕಾಶಪಕ್ಷಿಗ
ಳಿಗೂ ನೆಲದ ಕ್ರಿಮಿಕೀಟಗಳಿಗೂ ನಿಬಂಧನೆಮಾಡಿ
ವಿಧಿಸಿ ಬಿಲ್ಲುಕತ್ತಿಕಾಳಗಗಳನ್ನು ದೇಶದಲ್ಲಿ ನಿಲ್ಲ
ದಂತೆ ಧ್ವಂಸಪಡಿಸಿ ನನ್ನ ಜನರು ನಿರ್ಭಯವಾಗಿ
19 ವಾಸಿಸುವಂತೆ ಮಾಡುವೆನು. ನಾನು ನಿನ್ನನ್ನು ಶಾ
ಶ್ವತವಾಗಿ ವರಿಸುವೆನು; ಹೌದು, ನೀತಿನ್ಯಾಯಪ್ರೀತಿ
20 ದಯೆಗಳಿಂದ ನಿನ್ನನ್ನು ವರಿಸುವೆನು. ನಾನು
ನಿನ್ನನ್ನು ನಂಬಿಕೆಯಿಂದ ವರಿಸಲು ನೀನು ಯೆಹೋ
ವನಾದ ನನ್ನನ್ನು ತಿಳಿದುಕೊಳ್ಳುವಿ.

21 ಯೆಹೋವನು ಇಂತೆನ್ನುತ್ತಾನೆ—ಆ ಕಾಲದಲ್ಲಿ
ನಾನು ಒಲುಮೆತೋರಿಸುವೆನು; ಬೇಡುವ ಆಕಾಶಕ್ಕೆ
ನಾನು ಒಲಿಯಲು ಬೇಡುವ ಭೂಮಿಗೆ ಅದು ಒಲಿಯು
22 ವದು, ಬೇಡುವ ಧಾನ್ಯದ್ರಾಕ್ಷಾರಸತೈಲಗಳಿಗೆ ಭೂಮಿ
ಯು ಒಲಿಯುವದು, ಬೇಡುವ [5])ಇಜ್ರೇಲಿಗೆ ಅವು
23 ಒಲಿಯುವವು. ನಾನು ದೇಶದಲ್ಲಿ ಇಜ್ರೇಲನ್ನು ನನ
ಗಾಗಿ ಬಿತ್ತಿಕೊಳ್ಳುವೆನು; ಲೋರುಹಾಮಳಿಗೆ ವಾತ್ಸ
ಲ್ಯವನ್ನು ತೋರಿಸುವೆನು; ಲೋ ಅಮ್ಮಿಗೆ ನೀನು
ನನ್ನ ಪ್ರಜೆಯೇ ಎಂದು ಹೇಳುವೆನು; ಅವರು ನನ್ನನ್ನು
ನನ್ನ ದೇವರೇ ಎಂದು ಭಜಿಸುವರು.

ಪತಿದ್ರೋಹಮಾಡಿದವಳಲ್ಲಿ ಪತಿಯು ತಪ್ಪದ ಪ್ರೀತಿ.

3 ಯೆಹೋವನು ನನಗೆ—ಅನ್ಯದೇವತೆಗಳ ಕಡೆಗೆ ತಿರು
ಗಿಕೊಂಡು ದೀಪದ್ರಾಕ್ಷೆಯ ಅಡೆಗಳನ್ನು ಪ್ರೀತಿಸುವ
ಇಸ್ರಾಯೇಲ್ಯರನ್ನು ಯೆಹೋವನು ಪ್ರೀತಿಸುವ ಪ್ರಕಾ
ರ ನೀನು ಮಿಂಡನಿಗೆ ಪ್ರಿಯಳೂ ವ್ಯಭಿಚಾರಾಸಕ್ತಳೂ
ಆದ ಹೆಂಗಸನ್ನು ಪ್ರೀತಿಸುತ್ತಾ ಬಾ ಎಂದು ಅಪ್ಪಣೆ
2 ಕೊಡಲು ನಾನು ಹದಿನೈದು ರೂಪಾಯಿಯನ್ನೂ
[6])ಒಂದುವರೆ ಹೋಮೆರ್ ಜವೆಗೋದಿಯನ್ನೂ ಕೊಟ್ಟು
3 ಅವಳನ್ನು ಕೊಂಡುಕೊಂಡು ಅವಳಿಗೆ—ನನಗಾಗಿ
ಬಹು ದಿವಸ ತಾಳಿಕೊಂಡಿರು; ಸೂಳೆತನಮಾಡಬೇಡ,
ಯಾವನನ್ನೂ ಸೇರಬೇಡ; ನಾನು ಸಹ ನಿನ್ನವನೇ
4 ಎಂದು ಹಾಗೆ ಇರುವೆನು ಎಂದು ಹೇಳಿದೆನು. ಇದ
ರಂತೆ ರಾಜಮುಖಂಡ, ಯಜ್ಞ, ಸ್ತಂಭ, ಏ
ಫೋದು, ವಿಗ್ರಹ, ಇವುಗಳಿಲ್ಲದೆ ಇಸ್ರಾಯೇಲ್ಯರು
5 ಬಹು ದಿವಸ ತಾಳಿಕೊಂಡಿರುವರು; ಆನಂತರ ಅವರು
ತಮ್ಮ ದೇವರಾದ ಯೆಹೋವನನ್ನೂ ತಮ್ಮ ರಾಜನಾದ
ದಾವೀದನನ್ನೂ ಪುನಃ ಆಶ್ರಯಿಸುವರು; ಹೌದು
ಅಂತ್ಯಕಾಲದಲ್ಲಿ ಯೆಹೋವನನ್ನೂ ಆತನ ದಯೆಯ
ನ್ನೂ ಭಯಭಕ್ತಿಯಿಂದ ಮರೆಹೊಗುವರು.

ಇಸ್ರಾಯೇಲಿನ ದ್ರೋಹ, ದೇವರ ಕರುಣೆ.

**4—14.**

ಯಾಜಕಪ್ರಭುಪ್ರಜೆಗಳ ದುರಾಚಾರ.

ಇಸ್ರಾಯೇಲ್ಯರೇ, ಯೆಹೋವನ ವಾಕ್ಯವನ್ನು ಕೇಳಿ
ರಿ; ಯೆಹೋವನು ದೇಶನಿವಾಸಿಗಳ ಮೇಲೆ ವಿವಾದ
ಹಾಕಿದ್ದಾನೆ. ಏಕಂದರೆ ಪ್ರೀತಿ ಸತ್ಯತೆ ದೇವಜ್ಞಾನ
ಗಳು ದೇಶದಲ್ಲಿಲ್ಲ; ಸುಳ್ಳುಸಾಕ್ಷಿ, ನರಹತ್ಯ, ಕಳ್ಳತನ,
ವ್ಯಭಿಚಾರ, ಇವುಗಳೇ ನಡೆಯುತ್ತವೆ; ದೊಂಬಿಗಳು
ಆಗುತ್ತಲಿವೆ, [7])ದೇಶವೆಲ್ಲಾ ರಕ್ತಮಯವಾಗಿದೆ.
ಹೀಗಿರಲು ದೇಶವು ನರಳುವದು, ಅದರಲ್ಲಿ ವಾಸಿಸುವ
ಸಕಲ ಭೂಜಂತುಗಳೂ ಆಕಾಶಪಕ್ಷಿಗಳೂ ಬಳಲಿ
ಹೋಗುವವು. ಸಮುದ್ರದ ಮೀನುಗಳು ಸಹ ನೀಗಿ
ಹೋಗುವವು. ಯಾವನೂ ಎದುರಿಸದಿರಲಿ, ಯಾವನೂ
ಖಂಡಿಸದಿರಲಿ; ನಿಮ್ಮ ಜನರು ಯಾಜಕನೊಂದಿಗೆ
ಹೋರಾಡುವವರಂತಿದ್ದಾರೆ. [ಆಹಾ, ಯಾಜಕರೇ,]
ನೀವು ಹಗಲಿನಲ್ಲಿ ಎಡವುವಿರಿ; ರಾತ್ರಿಯಲ್ಲಿ ನಿಮ್ಮೊಂದಿ
ಗೆ ಪ್ರವಾದಿಗಳೂ ಎಡವುವರು; ನಾನು ನಿಮ್ಮ [8])ವಂಶ
ಮೂಲವನ್ನು ನಾಶಮಾಡುವೆನು. ನನ್ನ ಜನರು
ಜ್ಞಾನಹೀನರಾಗಿ ಹಾಳಾಗಿದ್ದಾರೆ; ನೀವು ಜ್ಞಾನವನ್ನು
ತಳ್ಳಿಬಿಟ್ಟದರಿಂದ ಇನ್ನು ನನಗೆ ಯಾಜಕಸೇವೆ
ಮಾಡದಂತೆ ನಾನು ನಿಮ್ಮನ್ನು ತಳ್ಳಿಬಿಡುವೆನು;
ನೀವು ನಿಮ್ಮ ದೇವರ ಧರ್ಮೋಪದೇಶವನ್ನು ಮರೆತ
ಕಾರಣ ನಾನು ನಿಮ್ಮ ಸಂತತಿಯವರನ್ನು ಮರೆಯು
ವೆನು. ಅವರು ಹೆಚ್ಚಿದ ಹಾಗೆಲ್ಲಾ ನನಗೆ ಹೆಚ್ಚೆಚ್ಚಾಗಿ
ಪಾಪಮಾಡುತ್ತಾ ಬಂದರು; ನಾನು ಅವರ ಮಾನ
ವನ್ನು ಅವಮಾನಕ್ಕೆ ಮಾರ್ಪಡಿಸುವೆನು. ನನ್ನ ಜನರ
ಪಾಪವೇ ಅವರಿಗೆ ಜೀವನ; ಅವರ ಅಧರ್ಮವನ್ನು
ಆಶಿಸುತ್ತಾರೆ. ಜನರೂ ಯಾಜಕರೂ ಒಂದೇ;
ಅವರ ದುಷ್ಕಾರ್ಯಗಳಿಗೆ ಅವರನ್ನು ದಂಡಿಸುವೆನು,
ಅವರ ದುಷ್ಕೃತ್ಯಗಳನ್ನು ಅವರಿಗೆ ಕಟ್ಟುವೆನು.
ಅವರು ಉಣ್ಣುತ್ತಿದ್ದರೂ ತೃಪ್ತಿ ದೊರೆಯದು, ಹಾದರ
ಮಾಡುತ್ತಿದ್ದರೂ ಪ್ರಜಾಭಿವೃದ್ಧಿಯಾಗದು; ಯೆ
ಹೋವನ ಕಡೆಗೆ ಗಮನಿಸುವದನ್ನು ಬಿಟ್ಟುಬಿಟ್ಟಿದ್ದಾ
ರಷ್ಟೆ. ವ್ಯಭಿಚಾರದ್ರಾಕ್ಷಾರಸಮದ್ಯಗಳು ಬುದ್ಧಿ
ಯನ್ನು ಕೆಡಿಸುತ್ತವೆ. ನನ್ನ ಜನರು ತಮ್ಮ ಮರದ
ತುಂಡನ್ನು ಪ್ರಶ್ನೆಕೇಳುತ್ತಾರೆ, ಅವರ ಕೋಲು ಅವ
ರಿಗೆ ಅರುಹನ್ನು ಉಂಟುಮಾಡುತ್ತದೆ; ವ್ಯಭಿಚಾರ
ಗುಣವು ಅವರನ್ನು ಭ್ರಾಂತಿಗೊಳಿಸಿದೆ; ತಮ್ಮ ದೇವ
ರಿಗೆ ಪತಿಭಕ್ತಿಯನ್ನು ಸಲ್ಲಿಸದೆ ದ್ರೋಹಿಗಳಾಗಿದ್ದಾರೆ.
ಪರ್ವತಾಗ್ರಗಳಲ್ಲಿ ಯಜ್ಞಮಾಡುತ್ತಾರೆ, ಗುಡ್ಡಗಳ
ಮೇಲೆ ಧೂಪಹಾಕುತ್ತಾರೆ; ಅಲ್ಲೋನ್, ಲಿಬ್ನೆ, ಏಲಾ

---

1) ಆಕೋರ್ ಅಂದರೆ ಆಪತ್ತು. 2) ಅಂದರೆ ನನ್ನ ಯಜಮಾನನೇ. 3) ಅಂದರೆ ಎನ್ನಿನಿಯನೇ; ಮೂಲ: ನನ್ನ ಪುರುಷ
4) ಮೂಲ: ಅವಳ. 5) ಇಜ್ರೇಲ್ ಅಂದರೆ ದೇವರು ಬಿತ್ತುವ ಜನ. 6) ಮೂಲ: ಒಂದು ಹೋಮೆರ್ ಮತ್ತು ಒಂದು ಲೆ
ಜವೆಗೋದಿಯನ್ನು ಅಂದರೆ ಸುಮಾರು 3 ಖಂಡುಗ. 7) ಮೂಲ: ರಕ್ತವು ರಕ್ತವನ್ನು ಮುಟ್ಟುತ್ತದೆ. 8) ಮೂಲ: ತಾಯಿಯ

ಮರಗಳ ನೆರಳು ದಟ್ಟವಾಗಿರುವದರಿಂದ ಅವುಗಳ
ಕೆಳಗೆ ಇವುಗಳನ್ನು ನಡಿಸುತ್ತಾರೆ; ಹೀಗಿರಲು [ನನ್ನ
ಜನರೇ,] ನಿಮ್ಮ ಕುಮಾರಿಯರು ಸೂಳೆಯರಾಗಿ ನಡೆ
ಯುವದೂ, ನಿಮ್ಮ ವಧುಗಳು ವ್ಯಭಿಚಾರಮಾಡುವದೂ
4 ಏನಾಶ್ಚರ್ಯ? ಸೂಳೆಯರಾಗಿ ನಡೆಯುವ ನಿಮ್ಮ
ಕುಮಾರಿಯರನ್ನೂ ವ್ಯಭಿಚಾರಮಾಡುವ ನಿಮ್ಮ ವಧು
ಗಳನ್ನೂ ನಾನು ದಂಡಿಸುವದಿಲ್ಲ; 1)ನೀವೇ ಸೂಳೆಯ
ರನ್ನು ಕರಕೊಂಡು ಓರೆಯಾಗಿ ಹೋಗುತ್ತೀರಿ; ದೇವ
ದಾಸಿಯರೊಂದಿಗೆ ಯಜ್ಞಮಾಡುತ್ತೀರಿ; ಅಹಾ, ವಿ
5 ವೇಕವಿಲ್ಲದ ಜನರು ಕೆಡವಲ್ಪಡುವರು. ಇಸ್ರಾ
ಯೇಲೇ, ನೀನು ಸೂಳೆಯಾಗಿ ನಡೆದರೂ ಯೆಹೂ
ದವು ಆ ದೋಷಕ್ಕೆ ಒಳಗಾಗದಿರಲಿ; [ಯೆಹೂದ್ಯರೇ,]
ಗಿಲ್ಗಾಲಿಗೆ ನೆರೆಯದಿರಿ, ಬೇತಾವೆನಿಗೆ ಯಾತ್ರೆ
ಹೋಗಬೇಡಿರಿ, ಯೆಹೋವನ ಜೀವದಾಣೆ ಎಂದು
6 ಶಪಥಮಾಡಬಾರದು. ಇಸ್ರಾಯೇಲು ಅಗಡುಹಸುವಿ
ನಂತೆ ಮೊಂಡುತನದಿಂದ ನಡೆದಿದೆ; ಈಗ ಯೆಹೋವನು
ಅದನ್ನು ಕುರಿಯಂತೆ ವಿಶಾಲಸ್ಥಳದಲ್ಲಿ ಮೇಯಿಸು
7 ವನೋ? ಎಫ್ರಾಯಿಮು ವಿಗ್ರಹಗಳಲ್ಲಿ ಬೆರತುಹೋ
8 ಗಿದೆ; ಅದನ್ನು ಬಿಟ್ಟುಬಿಡಿರಿ. ಸುರಾಪಾನಮುಗಿದ
ಕೂಡಲೆ ಸೂಳೆತನದಲ್ಲಿ ಬೀಳುತ್ತಾರೆ; 2)ದೇಶಪಾಲ
9 ಕರು ಅವಮಾನದಲ್ಲಿ ಅತ್ಯಾಶೆಪಡುತ್ತಾರೆ. ಗಾಳಿಯು
ಅವರನ್ನು ತನ್ನ ರೆಕ್ಕೆಗಳಲ್ಲಿ ಸುತ್ತಿಕೊಂಡು ಹೋಗು
ವದು; ತಾವು ಮಾಡುತ್ತಿದ್ದ ಯಜ್ಞಗಳಿಗೆ ನಾಚಿಕೆ
ಪಡುವರು.

5 ಯಾಜಕರೇ, ಇದನ್ನು ಕೇಳಿರಿ, ಇಸ್ರಾಯೇಲ್
ಕುಲದವರೇ, ಆಲಿಸಿರಿ; ರಾಜವಂಶದವರೇ, ಕಿವಿಗೊ
ಡಿರಿ; ನೀವು ಮಿಚ್ಪದಲ್ಲಿ ಉರುಲಾಗಿಯೂ ತಾಬೋರಿ
ನಲ್ಲಿ ಬಲೆಯಾಗಿಯೂ ಇದ್ದ ಕಾರಣ ನಿಮಗೆ ನ್ಯಾಯ
2 ತೀರ್ಪು ಬಂದಿದೆ. ನನಗೆ ತಿರುಗಿಬಿದ್ದವರು ಅಗಾಧ
ವಾದ ಕೊಲೆಯಲ್ಲಿ ಮಗ್ನರಾಗಿದ್ದಾರೆ; ನಾನೇ 3)ಅವ
3 ರೆಲ್ಲರನ್ನೂ ಶಿಕ್ಷಿಸುವೆನು. ಎಫ್ರಾಯಿಮನ್ನು ಬಲ್ಲೆ,
ಇಸ್ರಾಯೇಲು ನನಗೆ ಮರೆಯಲ್ಲ; ಎಫ್ರಾಯಿಮೇ,
ನೀನೀಗ ಸೂಳೆತನಮಾಡಿದ್ದೀ, ಇಸ್ರಾಯೇಲು ಹೊಲೆ
4 ಯಾಗಿದೆ. ಅವು ತಮ್ಮ ದೇವರ ಕಡೆಗೆ ತಿರುಗಿಕೊ
ಳ್ಳಲು ಅವುಗಳ ದುಷ್ಕೃತ್ಯಗಳು ಬಿಡವು; ವ್ಯಭಿಚಾರ
ಸ್ವಭಾವವು ಅವುಗಳಲ್ಲಿ ನೆಲೆಗೊಂಡಿದೆ, ಯೆಹೋವ
5 ನನ್ನು ಅರಿಯವು. ಇಸ್ರಾಯೇಲಿಗೆ ಅದರ ಹೆಮ್ಮೆ
ಯೇ ವಿರುದ್ಧಸಾಕ್ಷಿಯಾಗಿದೆ; ಇಸ್ರಾಯೇಲೂ
ಎಫ್ರಾಯಿಮೂ ತಮ್ಮ ದುರ್ಮಾರ್ಗದಲ್ಲಿ ಎಡವಿ
ಬೀಳುವವು; ಯೆಹೂದವೂ ಅವುಗಳೊಂದಿಗೆ ಬೀಳು
6 ವದು. ಅವು ತಮ್ಮ ದನಕುರಿಗಳ ಸಂಗಡ ಯೆ
ಹೋವನನ್ನು ಶರಣುಹೊಗಲು ಹೊರಡುವವು;
ಆತನು ಸಿಕ್ಕನು, ಅವುಗಳ ಕಡೆಯಿಂದ ಮರೆಯಾ
7 ಗಿದ್ದಾನೆ. ಅವು ಯೆಹೋವನ ಮಕ್ಕಳಲ್ಲದ ಮಕ್ಕ
ಳನ್ನು ಪಡೆದು ಆತನಿಗೆ ದ್ರೋಹಮಾಡಿವೆ; ಅವುಗಳ
ನ್ನೂ ಅವುಗಳ ಭೂಸ್ವಾಸ್ತ್ಯಗಳನ್ನೂ ಈಗ ಈ ಮುಂ
ದಿನ ತಿಂಗಳು ನುಂಗಿಬಿಡುವದು.

ಗಿಬ್ಯದಲ್ಲಿ ತುತೂರಿಯನ್ನೂದಿರಿ, ರಾಮದಲ್ಲಿ 8
ಕೊಂಬು ಕೂಗಲಿ, ಬೇತಾವೆನಿನಲ್ಲಿ ಆರ್ಬಟಿಸಿರಿ,
ಬೆನ್ಯಾಮೀನೇ, ಹಿಂದೆ ನೋಡು! ಖಂಡನೆಯ ದಿನ 9
ದಲ್ಲಿ ಎಫ್ರಾಯಿಮು ಹಾಳಾಗುವದು; ಇಸ್ರಾ
ಯೇಲ್ ಕುಲಗಳ ಭವಿಷ್ಯತ್ತಿನ ನಿಶ್ಚಯವನ್ನು ತಿಳಿಯ
ಪಡಿಸಿದ್ದೇನೆ. ಯೆಹೂದದ ಮುಖಂಡರು ಮೇರೆ 10
ಯನ್ನು ಒತ್ತುವವರಂತಿದ್ದಾರೆ; ಅವರ ಮೇಲೆ ನನ್ನ
ರೌದ್ರವನ್ನು ನೀರಿನ ಹಾಗೆ ಹೊಯ್ದುಬಿಡುವೆನು.
4)ಎಫ್ರಾಯಿಮು ವ್ಯರ್ಥಾಚಾರಗಳನ್ನು ಅನುಸರಿ 11
ಸಲು ಮನಸ್ಸುಮಾಡಿದ ಕಾರಣ ಅದು [ದೇವರ]
ನ್ಯಾಯತೀರ್ಪಿಗೆ ಗುರಿಯಾಗಿ ಹಿಂಸಿಸಲ್ಪಟ್ಟಿದೆ, ಜಜ್ಜ
ಲ್ಪಟ್ಟಿದೆ. ನಾನು ಎಫ್ರಾಯಿಮಿಗೆ ನುಸಿ, ಯೆಹೂದ 12
ಕುಲಕ್ಕೆ ಕುಟ್ಟೆ. ಹೀಗಿರಲು ಎಫ್ರಾಯಿಮು ತಾನು 13
ರೋಗಿಯೆಂದು ತಿಳುಕೊಂಡಿತು, ಯೆಹೂದವು ತನ್ನ
ವ್ರಣವನ್ನು ನೋಡಿಕೊಂಡಿತು; ಆಗ ಎಫ್ರಾಯಿಮು
ಅಶ್ಶೂರದ ಕಡೆಗೆ ತಿರುಗಿಕೊಂಡು ಜಗಳಗಂಟ
ಮಹಾರಾಜನ ಬಳಿಗೆ ದೂತರನ್ನು ಕಳುಹಿಸಿತು;
ಆದರೆ ಅವನು ನಿಮ್ಮನ್ನು ಸ್ವಸ್ಥಮಾಡಲಾರನು,
ನಿಮ್ಮ ವ್ರಣವನ್ನು ಗುಣಪಡಿಸಲಾರನು. ನಾನು 14
ಎಫ್ರಾಯಿಮಿಗೆ ಸಿಂಹವೂ ಯೆಹೂದಕುಲಕ್ಕೆ ಪ್ರಾ
ಯದ ಸಿಂಹವೂ ಆಗುವೆನು; ನಾನೇ ಸೀಳಿಬಿಟ್ಟು
ಹೋಗುವೆನು, ಎತ್ತಿಕೊಂಡು ಒಯ್ಯಲು ಯಾರೂ ಬಿಡಿ
ಸರು.

### ಇಸ್ರಾಯೇಲಿನ ವ್ಯರ್ಥಪಶ್ಚಾತ್ತಾಪ.

ನನ್ನ ಜನರು ತಮ್ಮ ದೋಷಫಲವನ್ನು ಅನುಭವಿಸಿ 15
ನನ್ನ ಪ್ರಸನ್ನತೆಯನ್ನು ಬೇಡಿಕೊಳ್ಳುವ ತನಕ ನಾನು
ನನ್ನ ವಾಸಸ್ಥಾನಕ್ಕೆ ಹಿಂದಿರುಗಿ ಹೋಗಿರುವೆನು;
ಅವರು ಇಕ್ಕಟ್ಟಿಗೆ ಸಿಕ್ಕಿದ ಕೂಡಲೆ ನನ್ನನ್ನು ಆಶ್ರಯಿ
ಸುವರು. ಅವರು—ಯೆಹೋವನ ಕಡೆಗೆ ಹಿಂದಿ 6
ರುಗಿ ಹೋಗೋಣ ಬನ್ನಿರಿ; ನಮ್ಮನ್ನು ಸೀಳಿಬಿಟ್ಟವನು
ಆತನೇ, ಆತನೇ ಸ್ವಸ್ಥಮಾಡುವನು; ಹೊಡೆದವನು
ಆತನೇ, ಆತನೇ ನಮ್ಮ ಗಾಯಗಳನ್ನು ಕಟ್ಟು
ವನು. ಒಂದೆರಡು ದಿನದ ಮೇಲೆ ಆತನು ನಮ್ಮನ್ನು 2
ಬದುಕಿಸುವನು; ಮೂರನೆಯ ದಿನದಲ್ಲಿ ಆತನು
ನಮ್ಮನ್ನೆಬ್ಬಿಸಲು ಆತನ ಸಾನ್ನಿಧ್ಯದಲ್ಲಿ ಬಾಳುವೆವು.
ಯೆಹೋವನನ್ನು ತಿಳಿದುಕೊಳ್ಳೋಣ, ಹುಡುಕಿ 3
ಹುಡುಕಿ ತಿಳಿದುಕೊಳ್ಳೋಣ; ಆತನ ಆಗಮನವು
ಉದಯದಂತೆ ನಿಶ್ಚಯ; ಆತನು ಮುಂಗಾರಿನಂತೆಯೂ
ಭೂಮಿಯನ್ನು ತಂಪುಮಾಡುವ ಹಿಂಗಾರಿನಂತೆಯೂ
ನಮಗೆ ಸಿಕ್ಕುವನು [ಅಂದುಕೊಂಡು ನನ್ನನ್ನು ಮರೆ
ಹೊಗುವರು].

---

1) ಮೂಲ: ಅವರೇ . . . ಹೋಗುತ್ತಾರೆ . . ಮಾಡುತ್ತಾರೆ. 2) ಮೂಲ: ದೇಶದ ಗುರಾಣಿಗಳು. 3) ಮೂಲ: ಅವರೆಲ್ಲ
ರಿಗೂ ಶಿಕ್ಷೆ. 4) ಪಾಠಾಂತರ: ಎಫ್ರಾಯಿಮು [ಅಲ್ಲದ] ಕಟ್ಟಳೆಯನ್ನು ಅನುಸರಿಸಲು ಒಪ್ಪಿಕೊಂಡ ಕಾರಣ . . . ಪಾಠಾಂತರ:
ಎಫ್ರಾಯಿಮು ಹಿಂಸೆಯನ್ನು ನಡಿಸುತ್ತದೆ, ನ್ಯಾಯವನ್ನು ತುಳಿದುಬಿಡುತ್ತದೆ; ಅಯೋಗ್ಯಕಾರ್ಯಗಳನ್ನು ಅನುಸರಿಸಲು ಮನಸ್ಸುಮಾಡಿ
ತಲ್ಲಾ.

4 ಎಫ್ರಾಯಿಮೇ, ನಾನು ನಿನ್ನನ್ನು ಹೇಗೆ ತಿದ್ದಲಿ?
ಯೆಹೂದವೇ, ನಿನ್ನನ್ನು ಹೇಗೆ ಸರಿಮಾಡಲಿ? ನಿಮ್ಮ
ಭಕ್ತಿಯು ಪ್ರಾತಃಕಾಲದ ಮೋಡಕ್ಕೂ ಬೇಗನೆ ಮಾ
5 ಯವಾಗುವ ಇಬ್ಬನಿಗೂ ಸಮಾನವಾಗಿದೆ. ಆದಕಾ
ರಣ ನಾನು ನಿಮ್ಮ ಜನರನ್ನು ಪ್ರವಾದಿಗಳ ಮೂಲಕ
ಹತಿಸಿದ್ದೇನೆ, ನನ್ನ ಬಾಯಿಮಾತುಗಳಿಂದ ಸಂಹರಿಸಿ
ದ್ದೇನೆ; 1)ನನ್ನ ನ್ಯಾಯದಂಡನೆಯು ಮಿಂಚಿನಂತೆ
6 ಹೊರಡುವದು. ನನಗೆ ಯಜ್ಞವು ಬೇಡ, ಕರುಣೆ
ಯೇ ಬೇಕು; ಹೋಮಗಳಿಗಿಂತ ದೇವಜ್ಞಾನವೇ ಇಷ್ಟ.

### ಇಸ್ರಾಯೇಲ್ಯರ ದುರ್ನಡತೆಗಳು.

7 ಅವರು 2)ಪ್ರಾಪಂಚಿಕರಂತೆ ನನ್ನ ನಿಬಂಧನೆಯನ್ನು
ಮೀರಿದ್ದಾರೆ; ಅಲ್ಲಲ್ಲಿ ನನಗೆ ದ್ರೋಹಮಾಡಿದ್ದಾರೆ.
8 ಗಿಲ್ಯಾದು ಅಧರ್ಮಿಗಳು ತುಂಬಿದ ಪಟ್ಟಣ, ಅಲ್ಲಿ
9 ಹೆಜ್ಜೆಜಾಡುಗಳು ರಕ್ತಮಯವೇ. ಡಕಾಯಿತಿಯ
ವರು ಒಬ್ಬನಿಗೆ ಹೊಂಚುವಂತೆ ಯಾಜಕರು ಗುಂಪಾಗಿ
ದಾರಿಯಲ್ಲಿ ಹೊಂಚಿಕೊಂಡಿದ್ದು ಶೆಕೆಮಿಗೆ ಹೋಗುವ
ವರನ್ನು ಕೊಂದುಹಾಕುತ್ತಾರೆ; ಹೌದು, ಘೋರಕೃತ್ಯ
10 ವನ್ನು ನಡಿಸುತ್ತಾರೆ. ನಾನು ಇಸ್ರಾಯೇಲ್ ಮನೆ
ತನದಲ್ಲಿ ಅಸಹ್ಯವನ್ನು ನೋಡಿದ್ದೇನೆ; ಎಫ್ರಾಯಿ
ಮಿನೊಳಗೆ ಸೂಳೆತನವು ನಡೆಯುತ್ತದೆ, ಇಸ್ರಾ
11 ಯೇಲು ಹೊಲೆಯಾಗಿದೆ. 3)ಯೆಹೂದವೇ, ನಿನ
ಗೂ [ಅಧರ್ಮಫಲದ] ಸುಗ್ಗಿಯು ನೇಮಕವಾಗಿದೆ.
7 ನಾನು ನನ್ನ ಜನರ ದುರವಸ್ಥೆಯನ್ನು ತಪ್ಪಿಸಿ
ಇಸ್ರಾಯೇಲನ್ನು ಸ್ವಸ್ಥಮಾಡಬೇಕೆಂದಿರುವಾಗ ಎಫ್ರಾ
ಯಿಮಿನ ಅಧರ್ಮವೂ ಸಮಾರ್ಯದ ದುಷ್ಟತನವೂ
ವ್ಯಕ್ತವಾಗುತ್ತವೆ; ಎಲ್ಲರೂ ಮೋಸಮಾಡುತ್ತಾರೆ,
ಒಳಗೆ ಕಳ್ಳರು ನುಗ್ಗುತ್ತಾರೆ, ಹೊರಗೆ ಡಕಾಯಿತಿ
2 ಯವರು ಸುಲಿಯುತ್ತಾರೆ. ತಮ್ಮ ದುರ್ಮಾರ್ಗ
ವೆಲ್ಲಾ ಯೆಹೋವನ ಜ್ಞಾಪಕದಲ್ಲಿರುತ್ತದೆ ಎಂದು
ಅವರು ಮಂದಟ್ಟುಮಾಡಿಕೊಳ್ಳುವದಿಲ್ಲ; ಅವರ
ದುಷ್ಕೃತ್ಯಗಳು ಈಗ ಅವರನ್ನು ಮುತ್ತಿಕೊಂಡಿವೆ,
3 ನನ್ನ ಕಣ್ಣೆದುರಿಗಿವೆ. ತಮ್ಮ ಕೆಟ್ಟತನದಿಂದ ರಾಜನನ್ನು
ಆನಂದಗೊಳಿಸುತ್ತಾರೆ, ಸುಳ್ಳುಗಳಿಂದ ಮುಖಂಡರನ್ನು
4 ಸಂತೋಷಪಡಿಸುತ್ತಾರೆ, ಅವರೆಲ್ಲರೂ ವ್ಯಭಿಚಾರಿಗಳು;
ರೊಟ್ಟಿಗಾರನು ಬೆಂಕಿಹೊತ್ತಿಸಿ ಉರಿಸಿ ಕಣಕವನ್ನು
ನಾದಿದಾಗಿನಿಂದ ಹುಳಿಬರುವ ತನಕ ಮತ್ತಷ್ಟು ಉರಿ
ಸದೆ ಹಾಗೆಯೇ ಬಿಟ್ಟಿರುವ ಒಲೆಗೆ ಸಮಾನರಾಗಿದ್ದಾರೆ.
5 ನಮ್ಮ ರಾಜನ ವರ್ಧಂತಿಯ ದಿನದಲ್ಲಿ 4)ದ್ರಾಕ್ಷಾ
ರಸದ ಉಷ್ಣವು ದೇಶಾಧಿಪತಿಗಳ ತಲೆಗೇರಲು ಆರಂಭ
ವಾಯಿತು; ರಾಜನು ಆ ತುಂಟರ ಕೈಯ ಮೇಲೆ ಕೈ
6 ಹಾಕಿದನು. ಅವರು ಹೊಂಚಿಕೊಂಡಿರುವಾಗ ಆಹಾ,
ತಮ್ಮ ಹೃದಯವನ್ನು ಒಲೆಯಂತೆ ಸಿದ್ಧಮಾಡಿರು
ತ್ತಾರೆ; 5)ಅವರ ರೋಷಾಗ್ನಿಯು ರಾತ್ರಿಯೆಲ್ಲಾ
ಹೊತ್ತಿಕೊಂಡೇ ಇರುತ್ತದೆ; ಬೆಳಿಗ್ಗೆ ಧಗಧಗನೆ ಉ
ಯುತ್ತದೆ. ಎಲ್ಲರೂ ಒಲೆಯಂತೆ ಝಳವೇರಿ ತಮ್ಮ ನ್ಯಾ
ಯಾಧೀಶ್ವರರನ್ನು ನುಂಗಿಬಿಡುತ್ತಾರೆ; ಅವರ ಸಕ
ರಾಜರು ಬಿದ್ದಿರುತ್ತಾರೆ, ಅವರೊಳಗೆ ನನ್ನನ್ನು ಪ್ರಾ
ರ್ಥಿಸುವವರೇ ಇಲ್ಲ.

### ಇಸ್ರಾಯೇಲಿನ ಅವಿವೇಕದ ರಾಜ್ಯತಂತ್ರಗಳು.

ಎಫ್ರಾಯಿಮು ಜನಾಂಗಗಳಲ್ಲಿ ಕಲೆತುಕೊಳ್ಳು
ತ್ತದೆ; ಎಫ್ರಾಯಿಮು ತಿರುವಿಹಾಕದ ಚಪಾತಿ
ಅನ್ಯರು ಅದರ ಶಕ್ತಿಯನ್ನು ಹೀರಿಬಿಟ್ಟಿದ್ದರೂ ಅದಕ್ಕೆ
ತಿಳಿಯದು; ಆದರ ತಲೆಯ ಮೇಲೆ ಅಲ್ಲಲ್ಲಿ ನರೆಯು
ಕಾಣಿಸಿದರೂ ಅದಕ್ಕೆ ಗೊತ್ತಿಲ್ಲ. ಇಸ್ರಾಯೇ
ಲಿಗೆ ಅದರ ಹೆಮ್ಮೆಯೇ ವಿರುದ್ಧಸಾಕ್ಷಿಯಾಗಿದೆ
ಇದೆಲ್ಲಾ ಸಂಭವಿಸಿದರೂ ಅದು ತನ್ನ ದೇವರಾದ ಯೆ
ಹೋವನ ಕಡೆಗೆ ತಿರುಗಿಕೊಳ್ಳಲಿಲ್ಲ, ಆತನನ್ನು ಆಶ್ರ
ಯಿಸಲಿಲ್ಲ. ಎಫ್ರಾಯಿಮು ಬುದ್ಧಿವಿವೇಕಗಳಿಲ್ಲದ
ಪಾರಿವಾಳದಂತಿದೆ; ಅದರ ಜನರು ಐಗುಪ್ತವನ್ನು ಕೂಗ
ತ್ತಾರೆ, ಅಶ್ಶೂರಕ್ಕೆ ಹೊರಡುತ್ತಾರೆ; ಹೊರಟ ಕೂ
ಡಲೆ ಅವರ ಮೇಲೆ ನನ್ನ ಬಲೆಯನ್ನು ಬೀಸಿ ಆಕಾಶದ
ಪಕ್ಷಿಗಳ ಹಾಗೆ ಅವರನ್ನು ಕೆಳಕ್ಕೆ ಎಳೆಯುವೆನು
6)ಅವರೆಲ್ಲರ ಕಿವಿಗೆ ಬಿದ್ದಮಾತಿಗನುಸಾರವಾಗಿ ಅ
ರನ್ನು ಶಿಕ್ಷಿಸುವೆನು. ಅವರು ನನ್ನ ಕಡೆಯಿಂದ ಆಗಲಿ
ಹೋಗಿದ್ದಾರೆ, ಹಾಳಾಗಲಿ! ನನಗೆ ದ್ರೋಹಮಾ
ದ್ದಾರೆ, ನಾಶವಾಗಲಿ! ನಾನು ಅವರನ್ನು ಉದ್ಧರಿ
ಬೇಕೆಂದಿರುವಾಗಲೂ ನನ್ನ ವಿಷಯವಾಗಿ ಸುಳ್ಳಾ
ದ್ದಾರೆ, ಅವರನ್ನು ಹೇಗೆ ಉದ್ಧರಿಸಲಿ! ಅವರು ಹಾ
ಗೆಯ ಮೇಲೆ ಬಿದ್ದುಕೊಂಡು ಧಾನ್ಯದ್ರಾಕ್ಷಾರಸಗಳಿ
ಅರಚಿಕೊಳ್ಳುತ್ತಾರೆಯೇ ಹೊರತು ನನ್ನನ್ನು ಮನ
ಪೂರ್ವಕವಾಗಿ ಎಂದೂ ಪ್ರಾರ್ಥಿಸಲಿಲ್ಲ; ನನ್ನನ್ನು
ತೊರೆದುಬಿಟ್ಟು 7)ತಮ್ಮ ದೇಹಗಳನ್ನು ಗಾಯಮಾ
ಕೊಳ್ಳುತ್ತಾರೆ. ಅವರಿಗೆ ಯುದ್ಧವನ್ನು ಕಲಿ
ತೋಳುಗಳನ್ನು ಬಲಪಡಿಸಿದ ನನಗೂ ವಿರುದ್ಧವಾಗಿ
ಕೇಡನ್ನು ಕಲ್ಪಿಸುತ್ತಾರೆ. ಅತ್ತಿತ್ತ ತಿರುಗಿಕೊಳ್ಳುತ್ತಾರೆ
ಮೇಲಕ್ಕೆ ಮಾತ್ರ ತಿರುಗಿಕೊಳ್ಳುವದಿಲ್ಲ; ಮೋಸ
ಬಿಲ್ಲಿಗೆ ಸಮಾನರಾಗಿದ್ದಾರೆ; ಅವರ ಮುಖಂಡರು
ತಮ್ಮ ನಾಲಿಗೆಯ ಸೊಕ್ಕಿನ ನಿಮಿತ್ತ ಖಡ್ಗಹತರಾ
ಬೀಳುವರು; ಅವರ ಪತನವು ಐಗುಪ್ತದೇಶದ ಹಾಸ್ಯಕ್ಕೆ
ಆಸ್ಪದವಾಗುವದು.
ಬಾಯಿಗೆ ತುತೂರಿಯನ್ನು ಹಿಡಿ. ನನ್ನ ಜನರ
ನನ್ನ ಒಡಂಬಡಿಕೆಯನ್ನು ಮೀರಿ ನನ್ನ ಧರ್ಮವಿ
ಗಳಿಗೆ ದ್ರೋಹಮಾಡಿದ್ದರಿಂದ ಶತ್ರುವು ಹದ್ದಿನ ಹಾ
ಯೆಹೋವನಾದ ನನ್ನ ನಿವಾಸದ ಮೇಲೆ ಬರುತ್ತಾನೆ

---

1)ಮೇಲಿನದು ಗ್ರೀಕ್ ಮೂಲ; ಇಬ್ರಿಯ ಮೂಲ: ನಿನಗಾಗುವ ದಂಡನೆಗಳು ಹೊರಡುವ ಮಿಂಚಿನಂತಿರುವವು (ಅಥವಾ: ಹು
ಬೆಳಕಿನಂತೆ ಸ್ಪಷ್ಟವಾಗಿರುವವು). 2) ಅಥವಾ: ಆದಾಮನಂತೆ. 3) ಅಥವಾ: ಯೆಹೂದವೇ, ನಾನು ನನ್ನ ಜನರ ದುರವಸ್ಥೆ
ತಪ್ಪಿಸುವಾಗ ನಿನಗೆ ಸುಭಿಕ್ಷವು ನೇಮಕವಾಗಿದೆ. 4) ಮೇಲಿನದು ಗ್ರೀಕ್ ಮೂಲ; ಇಬ್ರಿಯ ಮೂಲ: ದೇಶಾಧಿಪತಿಗಳು ದ್ರಾಕ್ಷಾ
ಉಷ್ಣದಿಂದ ದುರ್ಬಲರಾದರು. 5) ಮೇಲಿನದು ಅರಾಮ್ಯ ಮೂಲ; ಇಬ್ರಿಯ ಮೂಲ: ಅವರ ರೊಟ್ಟಿಗಾರನು ರಾತ್ರಿಯೆಲ್ಲಾ ನಿ
ಡುತ್ತಾನೆ. 6) ಮೂಲ: ಅವರ ಸಮೂಹದ. 7) ಮೇಲಿನದು ಗ್ರೀಕ್ ಮೂಲ; ಇಬ್ರಿಯ ಮೂಲ: ಕೂಡಿಕೊಳ್ಳುತ್ತಾರೆ.

2 ಅವರು ನನ್ನನ್ನು—1)ನಮ್ಮ ದೇವರೇ, ಇಸ್ರಾಯೇಲ್ಯ
ರಾದ ನಾವು ನಿನ್ನನ್ನು ತಿಳಿದವರಾಗಿದ್ದೇವೆ ಎಂದು
3 ಕೂಗಿಕೊಳ್ಳುವರು. ಇಸ್ರಾಯೇಲ್ಯರು ಮೇಲನ್ನು
ತಳ್ಳಿಬಿಟ್ಟಿದ್ದಾರೆ; ಶತ್ರುವು ಅವರನ್ನು ಹಿಂದಟ್ಟುವನು.

ಇಸ್ರಾಯೇಲು ಕಲ್ಪಿಸಿದ ರಾಜರೂ ದೇವರುಗಳೂ.

4 ನನ್ನ ಅಪ್ಪಣೆಯಿಲ್ಲದೆ ರಾಜರನ್ನು ಕಲ್ಪಿಸಿಕೊಂಡಿ
ದ್ದಾರೆ; ನನಗೆ ತಿಳಿಯದೆ ಅಧಿಪತಿಗಳನ್ನು ಮಾಡಿಕೊಂಡಿ
ದ್ದಾರೆ; ತಮ್ಮ ಬೆಳ್ಳಿಬಂಗಾರಗಳಿಂದ ಬೊಂಬೆಗಳನ್ನು
ನಿರ್ಮಿಸಿಕೊಂಡಿದ್ದಾರೆ; ಅವರು ನಿರ್ಮಿಸಿದ್ದೆಲ್ಲಾ ನಾಶ
5 ವಾಗತಕ್ಕದ್ದೇ. ಸಮಾರ್ಯವೇ, 2)ನಾನು ನಿನ್ನ ಬಸ
ವನನ್ನು ತಳ್ಳಿಬಿಟ್ಟಿದ್ದೇನೆ; ನನ್ನ ರೋಷಾಗ್ನಿಯು ನಿನ್ನ
ವರ ಮೇಲೆ ಉರಿಯುತ್ತದೆ; ಅವರು ನಿರ್ಮಲರಾಗುವ
6 ದಕ್ಕೆ ಇನ್ನೆಷ್ಟು ಕಾಲ ಹಿಡಿಯುವದೋ? ಆ ಬಸ
ವನೂ ಇಸ್ರಾಯೇಲಿನ ಕೈಕೆಲಸ; ಶಿಲ್ಪಿಯು ಅದನ್ನು
ರೂಪಿಸಿದನು; ಅದು ದೇವರಲ್ಲ; ಸಮಾರ್ಯದ
7 ಬಸವನು ಚೂರುಚೂರಾಗುವನು. ಅವರು ಗಾಳಿಯ
ನ್ನು ಬಿತ್ತುತ್ತಾರೆ, ಬಿರುಗಾಳಿಯನ್ನು ಕೊಯ್ದುಕೊಳ್ಳು
ವರು. ಇಸ್ರಾಯೇಲಿಗಾಗಿ ಪೈರು ತೆನೆಗೆ ಬಾರದು;
ಬೀಜ ಮೊಳೆತರೂ ಹಿಟ್ಟು ಸಿಕ್ಕದು; ಒಂದು ವೇಳೆ
ಸಿಕ್ಕಿದರೂ ಅನ್ಯರು ಅದನ್ನು ನುಂಗಿಬಿಡುವರು.
8 ಇಸ್ರಾಯೇಲೇ ನುಂಗಲ್ಪಟ್ಟಿದೆ; ಅದು ಜನಾಂಗಗಳ
ಮಧ್ಯದಲ್ಲಿ ಯಾರಿಗೂ ಬೇಡದ ಪಾತ್ರೆಯಂತಿದೆ.
9 ಅದು ಒಂಟಿಯಾದ ಕಾಡುಕತ್ತೆಯಂತೆ ಮನಸ್ಸು
ಬಂದ ಹಾಗೆ ನಡೆದು ಅಶ್ಶೂರಕ್ಕೆ ಹೋಗಿದೆ; ಎಫ್ರಾ
ಯೀಮು ಹಣತೆತ್ತು ಮಿಂಡರನ್ನು ಸಂಪಾದಿಸಿಕೊಂಡಿ
10 ದೆ. ಅದು ಜನಾಂಗಗಳೊಳಗೆ ಮಿಂಡರನ್ನು ಸಂಪಾದಿಸಿ
ದರೂ ಅದನ್ನು ನಾನು ಈಗ ಸೇರಿಕೂಡುವೆನು; 3)ರಾ
ಜಾಧಿರಾಜನು ಹೊರಿಸುವ ಹೊರೆಯಿಂದ ಅದು ಕುಗ್ಗಿ
11 ಹೋಗಲಿಕ್ಕೆ ಆರಂಭವಾಗುವದು. ಎಫ್ರಾಯೀಮು
ಯಜ್ಞವೇದಿಗಳನ್ನು ಹೆಚ್ಚೆಚ್ಚಾಗಿ ಕಟ್ಟಿ ಪಾಪಮಾಡಿದೆ;
ಕಟ್ಟಿದ ಯಜ್ಞವೇದಿಗಳೇ ಅದಕ್ಕೆ ಪಾಪವಾಗಿ ಪರಿಣ
12 ಮಿಸಿವೆ. ನಾನು ನನ್ನ ಧರ್ಮವನ್ನು ಲಕ್ಷಾಂತರ ವಿಧಿ
ಗಳ ರೂಪವಾಗಿ ಅದಕ್ಕೆ ಬರೆಯಿಸಿಕೊಟ್ಟರೂ ಅವು
ಗಳು ತನಗೆ ಸಂಬಂಧಪಟ್ಟವುಗಳಲ್ಲವೆಂದು ಅದು
13 ಭಾವಿಸುತ್ತದೆ. ಎಫ್ರಾಯೀಮ್ಯರು ಯಜ್ಞಪಶುಗಳನ್ನು
ನನಗೆ ನೈವೇದ್ಯವಾಗಿ ವಧಿಸಿ ಮಾಂಸಭೋಜನಮಾಡು
ತ್ತಾರೆ; ಯೆಹೋವನು ಆ ಯಜ್ಞಗಳಿಗೆ ಮೆಚ್ಚನು;
ಅವರ ಅಧರ್ಮವನ್ನು ಜ್ಞಾಪಕಕ್ಕೆ ತಂದುಕೊಂಡು
ಅವರ ಪಾಪಕ್ಕೆ ದಂಡನೆಮಾಡುವನು; ಅವರು ಐಗು
14 ಪ್ತಕ್ಕೆ ಹಿಂದಿರುಗಬೇಕಾಗುವದು. ಇಸ್ರಾಯೇಲು
ತನ್ನ ಸೃಷ್ಟಿಕರ್ತನನ್ನು ಮರೆತು ಅರಮನೆಗಳನ್ನು ಕಟ್ಟಿ
ಕೊಂಡಿದೆ; ಯೆಹೂದವು ಕೋಟೆಕೊತ್ತಲಗಳ ಪಟ್ಟ
ಣಗಳನ್ನು ಮಾಡಿಕೊಂಡಿದೆ; ಆಹಾ, ನಾನು ಆ ಪಟ್ಟಣ
ಗಳ ಮೇಲೆ ಬೆಂಕಿಯನ್ನು ಕಳುಹಿಸುವೆನು, ಅದು ಆ
ಸೌಧಗಳನ್ನು ನುಂಗಿಬಿಡುವದು.

ಇಸ್ರಾಯೇಲು ಅನ್ಯದೇಶಕ್ಕೆ ಒಯ್ಯಲ್ಪಟ್ಟು ಅನುಭವಿಸಬೇಕಾದ ದುರವಸ್ಥೆ.

ಇಸ್ರಾಯೇಲೇ, ಜನಾಂಗಗಳಂತೆ ಮಿತಿಮೀರಿ ಉಲ್ಲಾ 9
ಸಿಸಬೇಡ; ನೀನು ನಿನ್ನ ದೇವರನ್ನು ಬಿಟ್ಟು ಸೂಳೆ
ತನನಡಿಸಿದ್ದೀ; ಎಲ್ಲಾ ಕಣಗಳಲ್ಲಿನ ಫಲವನ್ನು ಅದರ
ಪ್ರತಿಫಲವನ್ನಾಗಿ ಆಶಿಸಿದ್ದೀ. ಕಣವೂ ದ್ರಾಕ್ಷೆಯ 2
ತೋಟವೂ ನಿನ್ನ ಜನರಿಗೆ ಜೀವನವಾಗವು; ದ್ರಾಕ್ಷಾ
ರಸದ ನಿರೀಕ್ಷೆಯು ಅವರಿಗೆ ವ್ಯರ್ಥವಾಗಿ ಹೋಗು
ವದು. ಅವರು ಯೆಹೋವನ ದೇಶದಲ್ಲಿ ಇನ್ನು ವಾಸಿ 3
ಸರು. ಎಫ್ರಾಯೀಮ್ಯರು ಐಗುಪ್ತಕ್ಕೆ ಹಿಂದಿರುಗು
ವರು, ಅಶ್ಶೂರದಲ್ಲಿ ಅವರು ತಿನ್ನುವ ಆಹಾರವು
ಹೊಲಸಾಗುವದು. ಯೆಹೋವನಿಗೆ ದ್ರಾಕ್ಷಾರಸ 4
ವನ್ನು ನೈವೇದ್ಯವಾಗಿ ಸುರಿಯರು, ಅವರ ಯಜ್ಞಗಳು
ಆತನಿಗೆ ಮೆಚ್ಚಿಕೆಯಾಗವು; ಅವರ ಆಹಾರವು ಹೆಣ
ದ ಮನೆಯ ಆಹಾರದಂತಿರುವದು, ಅದನ್ನು ತಿನ್ನುವ
ವರೆಲ್ಲರೂ ಅಶುದ್ಧರಾಗುವರು, ಅದು ಹೊಟ್ಟೆತುಂಬು
ವದಕ್ಕೆ ಮಾತ್ರ ಅನುಕೂಲಿಸುವದು, ಅದು ಯೆಹೋ
ವನ ಆಲಯಕ್ಕೆ ಬಂದಿಲ್ಲವಷ್ಟೆ. ನೀವು ಹಬ್ಬದ ದಿನ 5
ದಲ್ಲಿ, ಯೆಹೋವನ ಮಹೋತ್ಸವದಿವಸದಲ್ಲಿ ಏನು
ಮಾಡುವಿರಿ? ಆಹಾ, ಅವರು ಹಾಳಾದ ದೇಶವನ್ನು 6
ಬಿಟ್ಟುಹೋಗುವರು; ಐಗುಪ್ತವು ಅವರಿಗೆ ಶ್ಮಶಾನ
ವಾಗುವದು, ಮೋಫ್ ಪಟ್ಟಣವು ಅವರನ್ನು ಹೂಣಿಡು
ವದು; ಅವರ ಇಷ್ಟದ ಬೆಳ್ಳಿಯ ಒಡವೆಗಳು ದಬ್ಬೆಗಳ್ಳಿ
ಗಳ ಪಾಲಾಗುವವು; ಮುಳ್ಳುಗಿಡಗಳು ಅವರ ಗುಡಾ
ರಗಳಲ್ಲಿ ಹುಟ್ಟಿಕೊಳ್ಳುವವು. ದಂಡನೆಯ ದಿನಗಳು 7
ಹತ್ತರಿಸಿವೆ, ಮುಯ್ಯಿತೀರಿಸುವ ದಿವಸಗಳು ಸಮೀಪಿ
ಸಿವೆ; ಇಸ್ರಾಯೇಲಿನ ಅನುಭವಕ್ಕೆ ಬಂದೇ ಬರುವವು;
[ಇಸ್ರಾಯೇಲೇ,] ನಿನ್ನ ಅಧರ್ಮವು ಬಹಳವಾಗಿರುವ
ದರಿಂದಲೂ ವಿರೋಧವು ಹೆಚ್ಚಾಗಿರುವದರಿಂದಲೂ
4)ಪ್ರವಾದಿಯು ಮೂರ್ಖನು, ದೇವರಾತ್ಮಾವಿಷ್ಟನು
ಹುಚ್ಚನು [ಅಂದುಕೊಳ್ಳುತ್ತೀ]. ಎಫ್ರಾಯೀಮು 8
ನನ್ನ ದೇವರ ವಿಷಯವಾಗಿ ಹೊಂಚುಹಾಕುತ್ತದೆ; ಪ್ರ
ವಾದಿಯ ಮಾರ್ಗಗಳಲ್ಲೆಲ್ಲಾ ಬೇಟೆಯ ಬಲೆಯು
ಒಡ್ಡಿದೆ, ಅವನ ದೇವರ ಆಲಯದಲ್ಲಿಯೂ ಶತ್ರು
ವಿರೋಧವು ಕಾದಿದೆ. ಪೂರ್ವದಲ್ಲಿ ಗಿಬ್ಯದವರು 9
ಕೆಡಿಸಿಕೊಂಡಂತೆ ಎಫ್ರಾಯೀಮ್ಯರು ತಮ್ಮನ್ನು ತೀರಾ
ಕೆಡಿಸಿಕೊಂಡಿದ್ದಾರೆ; ದೇವರು ಅವರ ಅಧರ್ಮವನ್ನು
ಜ್ಞಾಪಕಕ್ಕೆ ತಂದುಕೊಂಡು ಅವರ ಪಾಪಗಳಿಗೆ ಪ್ರತಿ
ದಂಡನೆಮಾಡುವನು.

ಇಸ್ರಾಯೇಲಿನ ಕ್ಷಯ.

ಕಾಡಿನಲ್ಲಿ ದ್ರಾಕ್ಷೆಯ ಹಣ್ಣು ಸಿಕ್ಕಿದಂತೆ ಇಸ್ರಾ 10
ಯೇಲು ನನಗೆ ಸಿಕ್ಕಿತು; ಹೊಸದಾಗಿ ಫಲಕ್ಕೆ ಬಂದ
ಅಂಜೂರದ ಗಿಡದಲ್ಲಿ ಮೊದಲು ಮಾಗಿದ ಹಣ್ಣನ್ನು

1) ಮೂಲ: ನನ್ನ. 2) ಮೂಲ: ಆತನು . . . ತಳ್ಳಿಬಿಟ್ಟಿದ್ದಾನೆ. 3) ಪಾಠಾಂತರ: ಅದು ಸ್ವಲ್ಪಕಾಲ ರಾಜರನ್ನೂ ಪ್ರಭು
ಗಳನ್ನೂ ಅಭಿಷೇಕಿಸದೆ ಇರಬೇಕಾಗುವದು. 4) ಅಥವಾ: ಪ್ರವಾದಿಗಳು ಮೂರ್ಖರಾಗಿದ್ದಾರೆ, ಮೈದುಂಬಿದವರು ಹುಚ್ಚರಾಗಿದ್ದಾರೆ.

ಕಂಡ ಹಾಗೆ ನಿಮ್ಮ ಪಿತೃಗಳನ್ನು ಕಂಡೆನು; ಆದರೆ
ಅವರು ಬಾಳ್‍ಪೆಗೋರಿಗೆ ಬಂದು 1)ಬಾಳ್‍ದೇವ
ತೆಯ ಭಕ್ತರಾಗಿ ದೀಕ್ಷೆಗೊಂಡು ತಾವು ಪ್ರೀತಿಸಿದ
11 ದೇವತೆಯ ಹಾಗೆ ಅಸಹ್ಯರಾದರು. ಎಫ್ರಾಯಿಮ್ಯರ
ಮಹಿಮೆಯು ಪಕ್ಷಿಯಂತೆ ಹಾರಿಹೋಗುವದು;
ಯಾರೂ ಹೆರರು, ಗರ್ಭಿಣಿಯಾಗಿರರು, ಗರ್ಭಧರಿ
12 ಸರು. ಒಂದು ವೇಳೆ ಮಕ್ಕಳನ್ನು ಹೆತ್ತು ಸಾಕಿದರೂ
ಯಾವನೂ ಉಳಿಯದೆ ಇರುವ ತನಕ ಅವರಿಗೆ ಪುತ್ರ
ಶೋಕವನ್ನು ಉಂಟುಮಾಡುತ್ತಲೇ ಬರುವೆನು;
ಹೌದು, ನಾನು ಅವರಿಗೆ ವಿಮುಖನಾಗಲು ಅವರ ಗತಿ
13 ಯನ್ನು ಏನೆಂದು ಹೇಳಲಿ! 2)ತೂರು ಹೇಗೆ ಕಾಣಿಸು
ತ್ತದೋ ಹಾಗೆಯೇ ಎಫ್ರಾಯಿಮು ಹುಲ್ಗಾವಲಿನಲ್ಲಿ
ನಾಟಿರುವದಾಗಿ ಕಾಣಿಸುತ್ತದೆ; ಆದರೆ ಎಫ್ರಾಯಿಮು
ತನ್ನ ಮಕ್ಕಳನ್ನು ಹತ್ಯಕ್ಕೆ ಈಡಾಗುವಂತೆ ಕಳುಹಿಸು
14 ವದು. (ಯೆಹೋವನೇ, ಅವರಿಗೆ ತಕ್ಕ ಗತಿಯನ್ನು
ವಿಧಿಸು; ಏನು ವಿಧಿಸುತ್ತೀಯೋ? ಅವರಿಗೆ ಗರ್ಭಸ್ರಾ
15 ವವನ್ನು ಮಾಡು, ಮೊಲೆಯನ್ನು ಬತ್ತಿಸು.) ಅವರ
ದುಷ್ಟತನವು ಗಿಲ್ಗಾಲಿನಲ್ಲಿ ತುಂಬಿದೆ; ಅಲ್ಲೇ ನನ್ನ
ದ್ವೇಷಕ್ಕೆ ಗುರಿಯಾಗಿದ್ದಾರೆ; ಅವರ ದುಷ್ಕೃತ್ಯಗಳ
ನಿಮಿತ್ತ ನಾನು ಅವರನ್ನು ನನ್ನ ನಿವಾಸದೊಳಗಿಂದ
ಓಡಿಸಿಬಿಡುವೆನು; ಅವರನ್ನು ಇನ್ನು ಪ್ರೀತಿಸೆನು;
16 ಅವರ ಅಧಿಕಾರಿಗಳೆಲ್ಲರೂ ದ್ರೋಹಿಗಳೇ ಸರಿ. ಎಫ್ರಾ
ಯಿಮ್ಯರಿಗೆ ಘಾತವಾಗಿದೆ; ಅವರ ವಂಶಮೂ
ಲವು ಒಣಗಿಹೋಗಿದೆ; ಅವರು ಫಲಹೀನರಾಗುವರು;
ಹೌದು, ಅವರು ಮಕ್ಕಳನ್ನು ಹೆತ್ತರೂ ಅವರ
ಗರ್ಭದ ಪ್ರಿಯಫಲವನ್ನು ಸಾಯಿಸುವೆನು.
17 ನನ್ನ ದೇವರು ಅವರನ್ನು ತಳ್ಳಿಬಿಡುವನು; ಅವರು
ಆತನ ಮಾತಿಗೆ ಕಿವಿಗೊಡಲಿಲ್ಲ; ಅವರಿಗೆ ಜನಾಂಗ
ಗಳಲ್ಲಿ ಅಲೆದಾಡುವ ಗತಿಯಾಗುವದು.

ಕೆಲಸಕ್ಕೆ ಬಾರದ ರಾಜರನ್ನೂ ದೇವರುಗಳನ್ನೂ
ನಂಬಿದವರ ದುರ್ಗತಿ.

10 ಇಸ್ರಾಯೇಲು ಸೊಂಪಾಗಿ ಬೆಳೆದ ದ್ರಾಕ್ಷಾಲತೆ
ಯಾಗಿದೆ; ಹಣ್ಣುಬಿಟ್ಟುಕೊಂಡಿದೆ; ಅದರ ಹಣ್ಣು
ಗಳು ಹೆಚ್ಚಿದಷ್ಟೂ ಯಜ್ಞವೇದಿಗಳನ್ನು ಹೆಚ್ಚಿಸಿಕೊಂ
ಡಿದೆ; ಅದರ ಭೂಮಿಯು ಎಷ್ಟು ಒಳ್ಳೆಯದೋ ಅಷ್ಟು
2 ಒಳ್ಳೆಯ ವಿಗ್ರಹಸ್ತಂಭಗಳನ್ನು ಮಾಡಿಕೊಂಡಿದೆ. ಇಸ್ರಾ
ಯೇಲ್ಯರ ಮನಸ್ಸು ನುಣುಚಿಕೊಳ್ಳುತ್ತದೆ; ಈಗ
ದಂಡನೆಗೆ ಈಡಾಗಿದ್ದಾರೆ; ಯೆಹೋವನೇ, ಅವರ ಯಜ್ಞ
ವೇದಿಗಳನ್ನು ಮುರಿದುಬಿಡುವನು. ಅವರ ವಿಗ್ರಹ
3 ಸ್ತಂಭಗಳನ್ನು ಹಾಳುಮಾಡುವನು. ನಮಗೆ ರಾಜ
ನೇ ಇಲ್ಲ; ನಾವು ಯೆಹೋವನಲ್ಲಿ ಭಯಭಕ್ತಿಯಿಟ್ಟ
ವರಲ್ಲ; ರಾಜನಾದರೋ ನಮಗಾಗಿ ಏನು ಮಾಡಿ
ಯಾನು ಎಂದು ಈಗ ಅವರು ಅಂದುಕೊಳ್ಳಬೇಕಾ

ಯಿತು. ಹರಟೆಹರಟುತ್ತಾರೆ, ಸುಳ್ಳಾಣೆಯಿಡುತ್ತಾ
ಸಂಧಾನಮಾಡಿಕೊಳ್ಳುತ್ತಾರೆ; 3)ಅಲ್ಲಿನ ನ್ಯಾಯ
ನೇಗಿಲಗೆರೆಗಳಲ್ಲಿ ಹುಟ್ಟುವ ವಿಷದ ಕಳೆಗಳಂತಿ
ಸಮಾರ್ಯದ 4)ನಿವಾಸಿಗಳು ಬೇತಾವೆನಿನ ಬ
ವನ ವಿಷಯದಲ್ಲಿ ದಿಗಿಲುಪಡುವರು; ಅದರ ಭ
ಜನರು ಅದಕ್ಕಾಗಿ ಎದೆಬಡಿದುಕೊಳ್ಳುವರು; ಅದ
ಮಹಿಮೆಯು ಅದರಿಂದ ತೊಲಗಿತಲ್ಲಾ ಎಂದು ಅದ
ಪೂಜಾರಿಗಳು ಅದಕ್ಕಾಗಿ ನಡುಗುವರು. ಅದ
ಜಗಳಗಂಟ ಮಹಾರಾಜನಿಗೆ ಕಾಣಿಕೆಯಾಗಿ ಅಶ
ರಕ್ಕೆ ಒಯ್ಯಲ್ಪಡುವದು; ಎಫ್ರಾಯಿಮಿಗೆ ಅವಮಾ
ವಾಗುವದು, ಇಸ್ರಾಯೇಲು ತಾನು ಸಂಕಲ್ಪಿಸಿಕೊಂ
ವಿಷಯವಾಗಿ ನಾಚಿಕೆಪಡುವದು. ಸಮಾರ್ಯ
ರಾಜನು ಹಾಳಾಗಿ ಪ್ರವಾಹದಲ್ಲಿ ಕೊಚ್ಚಿಕೊಂಡ
ಹೋಗುವ ಚಕ್ಕೆಗೆ ಸಮಾನನಾಗಿದ್ದಾನೆ. ಇಸ್ರಾಯೇ
ಗೆ ಪಾಪಾಸ್ಪದವಾದ ಆವೆನಿನ ಪೂಜಾಸ್ಥಾನಗಳ
ನಾಶವಾಗುವವು; ಮುಳ್ಳುಗಿಡಗಳೂ ಕಳೆಗಳೂ ಅಲ್ಲಿ
ಯಜ್ಞವೇದಿಗಳ ಮೇಲೆ ಹುಟ್ಟುವವು; ಅಲ್ಲಿನ ಜನರು—
ಬೆಟ್ಟಗಳೇ, ನಮ್ಮನ್ನು ಮುಚ್ಚಿಕೊಳ್ಳಿರಿ, ಗುಡ
ಗಳೇ, ನಮ್ಮ ಮೇಲೆ ಬೀಳಿರಿ ಎಂದು ಕೂಗಿಕೊಳ
ವರು. ಇಸ್ರಾಯೇಲೇ, ಗಿಬ್ಯದಲ್ಲಿ ದುರಾಚಾರ
ನಡೆದಂದಿನಿಂದ ನೀನು ಪಾಪಮಾಡುತ್ತಾ ಬಂದಿದ್ದೀ
ಆಹಾ, ನಿನ್ನ ಜನರು ಅಲ್ಲಿ ನಿಂತಿದ್ದಾರೆ, ದುರಾಚಾ
ಗಳಿಗೆ ವಿರುದ್ಧವಾದ ಯುದ್ಧವು ಗಿಬ್ಯದಲ್ಲಿ ಅವರಿ
ತಗಲುವದಿಲ್ಲ. ನನಗಿಷ್ಟವಾದಾಗ ನಾನು ಅವರನ್ನು
ದಂಡಿಸುವೆನು; 5)ಅವರ ಎರಡು ಅಪರಾಧಗ
ದಂಡನೆಗೋಸ್ಕರ ಜನಾಂಗಗಳು ಅವರಿಗೆ ವಿರುದ್ಧವಾ
ಒಟ್ಟುಗೂಡುವವು. ಎಫ್ರಾಯಿಮು ಹತೋಟಿ
ಬಂದು ತೆನೆಹುಲ್ಲನ್ನು ತುಳಿಯುತ್ತಿರುವದರಲ
ಯೇ ಇಷ್ಟಪಡುವ ಕಡಸಾಗಿದೆ; [ಈಗಲಾದರೋ
ಅದರ ಅಂದವಾದ ಹೆಗಲಿನ ಮೇಲೆ ಕೈಹಾಕಿದ್ದೇ
ಎಫ್ರಾಯಿಮನ್ನು ಹೂಡುವೆನು, ಯೆಹೂದ
ಉಳಬೇಕು, ಯಾಕೋಬು ಕುಂಟೆ ಎಳೆಯಬೇಕ
ನೀತಿಯ ಬೀಜವನ್ನು ಬಿತ್ತಿರಿ, ಪ್ರೀತಿಯ ಫಲವನ
ಕೊಯ್ಯಿರಿ, ಗೆಯ್ಯದ ನಿಮ್ಮ ಭೂಮಿಯನ
ಗೆಯ್ಯಿರಿ; ಯೆಹೋವನು ಬಂದು ನಮ್ಮ ಮೇ
ನೀತಿಯನ್ನು ವರ್ಷಿಸಲೆಂದು ಆತನನ್ನು ಶರಣುಹೆ
ಗುವ ಸಮಯವು ಒದಗಿದೆ. ನೀವು ಮಾಡಿದ ವ್ಯ
ಸಾಯವು ದುಷ್ಟತನ, ನಿಮಗಾದ ಬೆಳೆಯು ಅನ್ಯಾಯ
ನೀವು ನಿಮ್ಮ ಕಟ್ಟುಪಾಡಿನಲ್ಲಿಯೂ ನಿಮ್ಮ ಶೂರ
ಬಾಹುಳ್ಯದಲ್ಲಿಯೂ ಭರವಸವಿಟ್ಟದರಿಂದ ಮೋಸ
ಫಲವನ್ನು ಅನುಭವಿಸಿದ್ದೀರಿ. ಹೀಗಿರಲು ನಿಮ
ಕುಲಗಳವರಿಗೆ ವಿರುದ್ಧವಾಗಿ ಯುದ್ಧಘೋಷವು ಏಳ
ವದು; ಕಾಳಗದ ದಿನದಲ್ಲಿ ಶಲ್ಮಾನನು ತಾಯಿ
ಗಳನ್ನು ಮಕ್ಕಳ ಸಹಿತ ಬಂಡೆಗೆ ಅಪ್ಪಳಿಸಿ ಬೇತ
ಅರ್ಬೇಲ್ ಪಟ್ಟಣವನ್ನು ಸೂರೆಮಾಡಿದಂತೆ ನಿಮ

1) ಮೂಲ: ಅವಮಾನದ. 2) ಮೂಲವು ಕೇವಲ ಅಸ್ಪಷ್ಟ. ಗ್ರೀಕ್ ಮೂಲ: ಎಫ್ರಾಯಿಮು ತನ್ನ ಮಕ್ಕಳನ್ನು ಬೇಟೆ
ಯಾಗಿ ನಿಲ್ಲಿಸಿರುವದು ನನಗೆ ಸಾಕ್ಷಾತ್ಕಾರವಾಗಿದೆ; ಎಫ್ರಾಯಿಮು . . . 3) ಅಥವಾ: ನ್ಯಾಯಸ್ಥಾನಕ್ಕೆ ಬರುವ ವಿವಾ
ನೇಗಿಲಗೆರೆಗಳಲ್ಲಿನ ಕಳೆಗಳಷ್ಟು ಹೇರಳವಾಗಿ ಹುಟ್ಟುತ್ತವೆ. 4) ಮೇಲಿನದು ಗ್ರೀಕ್ ಮೂಲ. ಇಬ್ರಿಯ ಮೂಲ: ನಿವಾ
ಬೇತಾವೆನಿನ ಬಸವಗಳ. 5) ಅಥವಾ: ಅವರು ತಮ್ಮ ಎರಡು ಅಪರಾಧಗಳಿಗೆ ಬದ್ಧರಾಗಿರುವಲ್ಲಿ.

ಎಲ್ಲಾ ಕೋಟೆಗಳು ಸೂರೆಮಾಡಲ್ಪಡುವವು. 1)ನಿಮ್ಮ
ದುಷ್ಟತನವು ಬಹಳವಾಗಿರುವದರಿಂದ ಬೇತೇಲು
ಇಂಥ ದುರ್ಗತಿಯನ್ನು ನಿಮಗೆ ತರುವದು; ಬೆಳಗಾಗು
ವದರೊಳಗೆ ಇಸ್ರಾಯೇಲಿನ ರಾಜನು ತೀರಾ ಹಾಳಾ
ಗುವನು.

### ದೇವರ ಪುತ್ರವಾತ್ಸಲ್ಯ.

11 ಇಸ್ರಾಯೇಲು ಕೇವಲ ಬಾಲ್ಯದಲ್ಲಿದ್ದಾಗ ನಾನು
ಅದರ ಮೇಲೆ ಪ್ರೀತಿಯಿಟ್ಟು ಆ ನನ್ನ ಮಗನನ್ನು
ಐಗುಪ್ತದೇಶದಿಂದ ಕರೆದೆನು. [2)ಪ್ರವಾದಿಗಳು] ಕರೆ
ಕರೆದ ಹಾಗೆಲ್ಲಾ ನನ್ನ ಜನರು ದೂರದೂರ ಹೋಗು
ತ್ತಲೇ ಬಂದರು; ಬಾಳ್‌ದೇವತೆಗಳಿಗೆ ಯಜ್ಞಮಾಡಿ
ಬೊಂಬೆಗಳಿಗೆ ಧೂಪಹಾಕಿದರು. ನಾನೇ ಎಫ್ರಾ
ಯಿಮಿಗೆ ನಡೆದಾಟವನ್ನು ಕಲಿಸಿದೆನು; ಅದನ್ನು ಕೈ
ಯಲ್ಲಿ ಎತ್ತಿಕೊಂಡೆನು; ತನ್ನನ್ನು ಸ್ವಸ್ಥಮಾಡಿದ
ವನು ನಾನೇ ಎಂದು ಅದಕ್ಕೆ ತಿಳಿಯಲಿಲ್ಲ. ನಾನು
ನನ್ನ ಜನರನ್ನು ಮಾನವರಿಗೆ ತಕ್ಕ ಮೂಗುದಾರದಿಂದ,
ಅಂದರೆ ಮಮತೆಯ ಹಗ್ಗದಿಂದ ಸೆಳೆದುಕೊಂಡೆನು;
ನೊಗವನ್ನು ತಲೆಯ ಈಚೆಗೆ ತೆಗೆಯುವವರಂತೆ
ನಾನು ಅವರನ್ನು ಸುದಾರಿಸಿ ಅವರಿಗೆ ತೀನಿಯನ್ನು
ನಯದಿಂದ ಇಕ್ಕಿದೆನು. ಇಸ್ರಾಯೇಲು ಐಗುಪ್ತ
ದೇಶಕ್ಕೆ ಹಿಂದಿರುಗದು; ಅದು [ನನ್ನ ಕಡೆಗೆ]
ಹಿಂದಿರುಗಲು ಒಪ್ಪದ ಕಾರಣ ಅಶ್ಶೂರವೇ ಅದಕ್ಕೆ
ರಾಜನಾಗಬೇಕು. ಅದರ ದುರಾಲೋಚನೆಗಳ ನಿಮಿತ್ತ
ಖಡ್ಗವು ಅದರ ಪಟ್ಟಣಗಳ ಮೇಲೆ ಬೀಸಲ್ಪಟ್ಟು ಅಲ್ಲಿನ
ಅಗಳವಿಂಡಿಗೆಗಳನ್ನು ಧ್ವಂಸಮಾಡಿ ನುಂಗಿಬಿಡುವದು.
ನನ್ನ ಕಡೆಯಿಂದ ತಿರಿಗಿಕೊಳ್ಳುವದು ನನ್ನ ಜನರ
ಗುಣವೇ; ಅವರನ್ನು ಮೇಲಕ್ಕೆ ಕರೆಯುವವರು ಇದ್ದ
ರೂ ಮೇಲಕ್ಕೆತ್ತುವವರು ಯಾರೂ ಇಲ್ಲ.
ಎಫ್ರಾಯಿಮೇ, ನಾನು ನಿನ್ನನ್ನು ಹೇಗೆ ತ್ಯಜಿಸಲಿ!
ಇಸ್ರಾಯೇಲೇ, ಹೇಗೆ ನಿನ್ನನ್ನು ಕೈಬಿಡಲಿ! ಅಯ್ಯೋ,
ನಿನ್ನನ್ನು ಅದ್ಮಾದ ಗತಿಗೆ ಹೇಗೆ ತರಲಿ! ಚೆಬೋಯಿಮಿ
ನಂತೆ ಹೇಗೆ ನಾಶಮಾಡಲಿ! ನನ್ನೊಳಗೆ ಮನಸ್ಸು
ತಿರುಗಿತು, ಕರುಳು ತೀರಾ ಮರುಗಿತು. ನನ್ನ ಉಗ್ರ
ಕೋಪವನ್ನು ತೀರಿಸೆನು, ಎಫ್ರಾಯಿಮನ್ನು ನಾಶ
ಮಾಡಲು ತಿರಿಗಿಕೊಳ್ಳೆನು; ನಾನು ಮನುಷ್ಯನಲ್ಲ,
ದೇವರೇ; ನಾನು ನಿಮ್ಮಲ್ಲಿ ನೆಲೆಯಾಗಿರುವ ಸದಮಲ
ಸ್ವಾಮಿ, ನಾನು ರೋಷದಿಂದ ಬಾರೆನು.
ಸಿಂಹದಂತೆ ಗರ್ಜಿಸುತ್ತಿರುವ ಯೆಹೋವನನ್ನು
ಆತನ ಜನರು ಹಿಂಬಾಲಿಸುವರು; ಆತನು ಆರ್ಭಟಿ
ಸಲು ಆತನ ಮಕ್ಕಳು ಪಡುವಲಿಂದ ನಡುಗುತ್ತಾ ಬರು
ವರು; ಗುಬ್ಬಿಗಳಂತೆ ಐಗುಪ್ತದಿಂದಲೂ ಪಾರಿವಾಳ
ಗಳಂತೆ ಅಶ್ಶೂರದಿಂದಲೂ ಅದರುತ್ತಾ ತ್ವರೆಪಡು
ವರು; ಅವರು ತಮ್ಮ ತಮ್ಮ ನಿವಾಸಗಳಲ್ಲಿ ವಾಸಿಸು
ವಂತೆ ಮಾಡುವೆನು; ಇದು ಯೆಹೋವನ ನುಡಿ.

### ಮೂಲಪಿತೃವಿನ ದೃಷ್ಟಾಂತದಿಂದ ಇಸ್ರಾಯೇಲನ್ನು ಎಚ್ಚರಿಸಿದ್ದು.

ಎಫ್ರಾಯಿಮು ಸುಳ್ಳಿನಿಂದಲೂ ಇಸ್ರಾಯೇಲ್ 12
ವಂಶವು ಮೋಸದಿಂದಲೂ ನನ್ನನ್ನು ಮುತ್ತಿಕೊಂಡಿವೆ;
ಯೆಹೂದವು ಸತ್ಯಸಂಧನೂ ಸದಮಲಸ್ವಾಮಿಯೂ
ಆದ ದೇವರ ಕಡೆಯಿಂದ ಇನ್ನೂ ಅಲೆದಾಡುತ್ತಿದೆ.
12 3)ಎಫ್ರಾಯಿಮು ಮೇಯಿಸುವ ಮಂದೆಯು ಗಾಳಿ
ಯೇ, ಹಿಂದಟ್ಟುವ ಬೇಟೆಯು ಮೂಡಣಗಾಳಿಯೇ;
ಅದು ಮೋಸವನ್ನೂ ಹಿಂಸೆಯನ್ನೂ ನಿರಂತರ ಹೆಚ್ಚೆ
ಚ್ಚಾಗಿ ನಡಿಸುತ್ತದೆ; ಅಶ್ಶೂರದೊಂದಿಗೆ ಒಪ್ಪಂದ
ವನ್ನು ಮಾಡಿಕೊಳ್ಳುತ್ತದೆ; ಐಗುಪ್ತಕ್ಕೆ ಎಣ್ಣೆಯನ್ನು
[ಕಾಣಿಕೆಯಾಗಿ] ಕಳುಹಿಸುತ್ತದೆ. ಯೆಹೋವನು 2
ಯೆಹೂದದ ಮೇಲೆ ವ್ಯಾಜ್ಯಹಾಕಿದ್ದಾನೆ, ಯಾಕೋಬ
ನ್ನು ಅದರ ನಡತೆಗೆ ತಕ್ಕ ಹಾಗೆ ದಂಡಿಸುವನು, ಅದರ
ದುಷ್ಕೃತ್ಯಗಳಿಗೆ ಪ್ರತೀಕಾರಮಾಡುವನು. ಯಾಕೋ 3
ಬನು ಗರ್ಭದಲ್ಲಿ 4)ಅಣ್ಣನನ್ನು ವಂಚಿಸಿದನು;
ಪೂರ್ಣಪ್ರಾಯದಲ್ಲಿ ದೇವರೊಂದಿಗೆ ಹೋರಾಡಿದನು;
ಹೌದು, ದೇವದೂತನ ಸಂಗಡ ಹೋರಾಡಿ ಗೆದ್ದನು; 4
ಅಳುತ್ತಾ ಆತನ ಕೃಪೆಯನ್ನು ಬೇಡಿಕೊಂಡನು; ಯೆ
ಹೋವನೆಂಬ ಸೇನಾಧೀಶ್ವರನಾದ ದೇವರು ಅವನನ್ನು
ಬೇತೇಲಿನಲ್ಲಿಯೂ ಕಂಡು ಅಲ್ಲಿ ನಮ್ಮೊಡನೆ ಮಾತಾಡಿ
ದನು; ಯೆಹೋವನೆಂಬದೇ ಆತನನ್ನು ಸ್ಮರಿಸುವ 5
ನಾಮಧೇಯ). [ಇಸ್ರಾಯೇಲೇ,] ನೀನೂ ನಿನ್ನ 6
ದೇವರ ಸಹಾಯದಿಂದ ತಿರುಗಿಕೋ; ನೀತಿಪ್ರೀತಿಗಳನ್ನ
ನುಸರಿಸಿ ನಿನ್ನ ದೇವರನ್ನು ಎಡೆಬಿಡದೆ ನಿರೀಕ್ಷಿಸಿ
ಕೊಂಡಿರು.
5)ಕಾನಾನು! ಅದರ ಕೈಯಲ್ಲಿ ಮೋಸದ ತ್ರಾಸು 7
ಇದೆ; ಕಸಕೊಳ್ಳಬೇಕೆಂಬದೇ ಅದರ ಆಶೆ. ಎಫ್ರಾ 8
ಯಿಮು—ನಾನು ಐಶ್ವರ್ಯವಂತನೇ ಹೌದು, ಆಸ್ತಿ
ಯನ್ನು ಪಡೆದಿದ್ದೇನೆ; ನನ್ನ ದುಡಿತದಲ್ಲೆಲ್ಲಾ ಪಾಪ
ವೆನಿಸಿಕೊಳ್ಳುವ ದೋಷವೇನೂ ತೋರಲಿಲ್ಲ ಅಂದು
ಕೊಳ್ಳುತ್ತದೋ? ನೀನು ಐಗುಪ್ತದೇಶದಲ್ಲಿದ್ದಂದಿನಿಂದ 9
ನಾನೇ ಯೆಹೋವನೆಂಬ ನಿನ್ನ ದೇವರಾಗಿದ್ದೇನೆ;
ಜಾತ್ರೆಯ ಕಾಲದಲ್ಲಿ ವನವಾಸಮಾಡುವಂತೆ ಗುಡಾರ
ಗಳಲ್ಲಿ ವಾಸಿಸುವ ಗತಿಗೆ ನಿನ್ನನ್ನು ಪುನಃ ತರುವೆನು.
ನಾನು ಪ್ರವಾದಿಗಳಿಗೆ ನುಡಿದಿದ್ದೇನೆ, ಬಹಳ ದಿವ್ಯ 10
ದರ್ಶನಗಳನ್ನು ದಯಪಾಲಿಸಿದ್ದೇನೆ. ಪ್ರವಾದಿಗಳ
ಮೂಲಕ ಸೂಚಕಕಾರ್ಯಗಳನ್ನು ನಡಿಸಿದ್ದೇನೆ.
ಗಿಲ್ಯಾದು ಅಧರ್ಮಮಯವೋ? ಅದು ಶೂನ್ಯದ ಗತಿಗೆ 11
ಬರುವದು; ಗಿಲ್ಗಾಲಿನಲ್ಲಿ ಗೋಮೇಧವು ನಡೆಯು
ವದೋ? ಅಲ್ಲಿನ ಯಜ್ಞವೇದಿಗಳು ಹೊಲದ ನೇಗಿಲ
ಗೆರೆಗಳಲ್ಲಿ ಕಲ್ಲುಕುಪ್ಪೆಗಳಾಗಿ ಸಿಕ್ಕುವವು. ಯಾ 12
ಕೋಬನು ಪದ್ದನ್‌ಅರಾಮಿಗೆ ಓಡಿಹೋದನು;
ಇಸ್ರಾಯೇಲನು ಮದುವೆಗಾಗಿ ಜೀತಮಾಡಿದನು,
ಹೆಣ್ಣಿಗೋಸ್ಕರ [ಕುರಿಗಳನ್ನು] ಕಾದನು. ಯೆಹೋ 13

---

1) ಅಥವಾ: ಬೇತೇಲಿನವರೇ, ನಿಮ್ಮ ದುಷ್ಟತನವು ಬಹಳವಾಗಿರುವದರಿಂದ ಇಂಥ ದುರ್ಗತಿಯು ನಿಮಗೆ ಸಂಭವಿಸುವದು.
ಪಾಠಾಂತರ: ನಾನು. 3) ಅಥವಾ: ಎಫ್ರಾಯಿಮು ತಿನ್ನುವದು ಗಾಳಿಯೇ, ಹಿಂಬಟ್ಟುವದು ಮೂಡಣಗಾಳಿಯೇ. 4) ಅಥವಾ:
ನ ಹಿಮ್ಮಡಿ ಹಿಡಿದನು. 5) ಅಂದರೆ ವ್ಯಾಪಾರಿ.

ವನು ಇಸ್ರಾಯೇಲನ್ನು ಪ್ರವಾದಿಯ ಮುಖಾಂತರ
ಐಗುಪ್ತದೊಳಗಿಂದ ಪಾರುಮಾಡಿದನು; ಪ್ರವಾದಿಯ
14 ಮೂಲಕ ಅದು ರಕ್ಷಿತವಾಯಿತು. ಎಫ್ರಾಯಿಮು
ಯೆಹೋವನನ್ನು ಅತಿ ತೀಕ್ಷ್ಣವಾಗಿ ರೇಗಿಸಿದೆ, ಆದಕಾ
ರಣ ಅದರ ಒಡೆಯನು ಅದರ ರಕ್ತಾಪರಾಧವನ್ನು
ಅದಕ್ಕೆ ಕಟ್ಟಿ ಅದು ಮಾಡಿದ ಅವಮಾನವನ್ನು ಅದಕ್ಕೆ
ಹಿಂದಿರುಗಿಸುವನು.

ಇಸ್ರಾಯೇಲಿಗೆ ಸಂಭವಿಸಬೇಕಾದ ನಾಶನ.

13 ಪೂರ್ವದಲ್ಲಿ ಎಫ್ರಾಯಿಮು ನುಡಿದ ಮಾತಿಗೆ
ಎಲ್ಲರೂ ನಡುಗಿದರು, ಅದು ಇಸ್ರಾಯೇಲಿನಲ್ಲಿ
ಉನ್ನತಸ್ಥಿತಿಗೆ ಬಂದಿತ್ತು; ಆದರೆ ಬಾಳ್‌ದೇವತೆಯ
2 ವಿಷಯದಲ್ಲಿ ದೋಷಿಯಾದಾಗ ಸತ್ತಿತು. ಈಗ ಎಫ್ರಾ
ಯಿಮ್ಯರು ಹೆಚ್ಚೆಚ್ಚಾಗಿ ಪಾಪಮಾಡುತ್ತಾರೆ, ತಮ್ಮ
ಬೆಳ್ಳಿಯಿಂದ ಸ್ವಬುದ್ಧಿಗೆ ತಕ್ಕ ಎರಕದ ಬೊಂಬೆಗಳನ್ನು
ರೂಪಿಸಿಕೊಂಡಿದ್ದಾರೆ; ಅವೆಲ್ಲಾ ಶಿಲ್ಪಿಗಳ ಕೈಕೆಲ
ಸವೇ; ಇಂಥವುಗಳನ್ನು ಮಾತಾಡಿಸುತ್ತಾರೆ, 1)ಮನು
ಷ್ಯರಾದ ಪೂಜಾರಿಗಳು ಪಶುವಿನ ಮೂರ್ತಿಗಳನ್ನು
3 ಮುದ್ದಿಸುತ್ತಾರೆ. ಹೀಗಿರಲು ಅವರು ಪ್ರಾತಃಕಾಲದ
ಮೋಡದ ಪ್ರಕಾರವಾಗಿಯೂ ಬೇಗನೆ ಮಾಯವಾ
ಗುವ ಇಬ್ಬನಿಯಂತೆಯೂ ಬಿರುಗಾಳಿಯು ಕಣದಿಂದ
ಬಡಿದುಕೊಂಡುಹೋಗುವ ಹೊಟ್ಟಿನ ಹಾಗೂ ಗವಾ
ಕ್ಷದಿಂದ ಹೊರಡುವ ಹೊಗೆಯೋಪಾದಿಯಲ್ಲಿಯೂ
4 ಇರುವರು. ನಾನಾದರೋ ನೀನು ಐಗುಪ್ತದೇಶದ
ಲ್ಲಿದ್ದ ಕಾಲದಿಂದ ಯೆಹೋವನೆಂಬ ನಿನ್ನ ದೇವರಾಗಿ
ದ್ದೇನೆ; ನನ್ನ ಹೊರತು ಯಾವ ದೇವರೂ ನಿನಗೆ
ಗೊತ್ತಿಲ್ಲ, ನನ್ನ ವಿನಹ ಯಾವ ರಕ್ಷಕನೂ ಇಲ್ಲ.
5 ಅರಣ್ಯದಲ್ಲಿ, ಘೋರಮರುಭೂಮಿಯಲ್ಲಿ ನಿನ್ನನ್ನು
6 ಲಕ್ಷಿಸಿದವನು ನಾನೇ. ಆಹಾರವು ನಿನ್ನವರಿಗೆ ಸಿಕ್ಕಿ
ದಾಗ ಹೊಟ್ಟೆತುಂಬಿಸಿಕೊಂಡರು; ಹೊಟ್ಟೆ ತುಂಬಿ
ದಾಗ ಅವರ ಮನಸ್ಸು ಉಬ್ಬಿಕೊಂಡಿತು; ಇದರಿಂದ
7 ನನ್ನನ್ನು ಮರೆತುಬಿಟ್ಟರು. ಆದಕಾರಣ ನಾನು
ಅವರ ಪಾಲಿಗೆ ಸಿಂಹ; ಚಿರತೆಯ ಹಾಗೆ ದಾರಿಯ
8 ಮಗ್ಗುಲಲ್ಲಿ ಹೊಂಚುಹಾಕುವೆನು; ಮರಿಗಳನ್ನು ಕಳ
ಕೊಂಡ ಕರಡಿಯಂತೆ ಅವರಿಗೆ ಎದುರು ಬಿದ್ದು ಅವರ
ಎದೆಯನ್ನು ಬಗಿದುಹಾಕುವೆನು; ಅಲ್ಲೇ ಮೃಗರಾಜ
ನಂತೆ ಅವರನ್ನು ನುಂಗುವೆನು; ಭೂಜಂತುಗಳು ಅವ
9 ರನ್ನು ಸೀಳಿಬಿಡುವವು. ಇಸ್ರಾಯೇಲೇ, ನೀನು ನಿನ್ನ
ಬೆಂಬಲವಾದ ನನಗೆ ತಿರುಗಿಬಿದ್ದದರಿಂದ ನಾಶವಾಗಿದ್ದೀ.
10 ಈಗ ನಿನ್ನ ಅರಸನು ಎಲ್ಲಿ? ನಿನ್ನ ಪಟ್ಟಣಗಳ
ಲ್ಲೆಲ್ಲಾ ನಿನ್ನವರನ್ನು ಉದ್ಧರಿಸುವನೋ? ನನಗೆ
ರಾಜನನ್ನೂ ರಾಜ್ಯಾಧಿಕಾರಿಗಳನ್ನೂ ದಯಪಾಲಿಸು
ಎಂದು ನನ್ನನ್ನು ಕೇಳಿಕೊಂಡಿಯಷ್ಟೆ; ಆ ಪಾಲಕರು
11 ಎಲ್ಲಿ? ನಾನು ಕೋಪಗೊಂಡು 2)ರಾಜರನ್ನು ಕೊಟ್ಟಿ
ದ್ದೇನೆ; ಕೋಪೋದ್ರೇಕನಾಗಿ ತೆಗೆದುಬಿಟ್ಟಿದ್ದೇನೆ.
12 ಎಫ್ರಾಯಿಮಿನ ಅಧರ್ಮವು ಗಂಟುಕಟ್ಟಿದೆ, ಅದರ
ಪಾಪವು ಭದ್ರಪಡಿಸಿದೆ. ಅದಕ್ಕೆ ಪ್ರಸವವೇದನೆಯ
ಗುತ್ತಾ ಇದೆ; ಅದು ಮಂಕು ಮಗು; ಈ ಸಮಯ
ಗರ್ಭದ್ವಾರದಲ್ಲಿ ನಿಲ್ಲತಕ್ಕ ಸಮಯವಲ್ಲ. ನಾ
ಅದನ್ನು ಪಾತಾಳದ ಅಧಿಕಾರದಿಂದ 3)ಬಿಡಿಸಲೋ
ಮರಣದಿಂದ ಉದ್ಧರಿಸಲೋ? ಮರಣವೇ, ನಿನ್ನ ಉ
ದ್ರವಗಳೆಲ್ಲಿ? ಪಾತಾಳವೇ, ನೀನು ಮಾಡುವ ನಾಶ
ವೆಲ್ಲಿ? ಕನಿಕರವು ನನಗೆ ಕಾಣಿಸದು. ಎಫ್ರಾಯಿಮ
ತನ್ನ ಸಹೋದರರಲ್ಲಿ 4)ಫಲಸಮೃದ್ಧವಾಗಿದ್ದ
ಕಾಡಿನಿಂದ ಯೆಹೋವನು ಬೀಸಮಾಡುವ ಮೂಡ
ಗಾಳಿಯು ಬರಲು ಅದರ ಬುಗ್ಗೆಯು ಬತ್ತುವದ
ಅದರ ಒರತೆಯು ಒಣಗುವದು; [ಶತ್ರುವು] ಅ
ಪ್ರಿಯವಸ್ತುಗಳ ನಿಧಿಯನ್ನು ಸೂರೆಗೊಂಬುವನ
ಸಮಾರ್ಯವು ತನ್ನ ದೇವರಿಗೆ ತಿರುಗಿಬಿದ್ದದರಿಂ
ತನ್ನ ದೋಷಫಲವನ್ನು ಅನುಭವಿಸಲೇ ಬೇಕು; ಅದ
ಜನರು ಖಡ್ಗಹತರಾಗುವರು; ವೈರಿಗಳು ಅಲ್ಲಿ
ಮಕ್ಕಳನ್ನು ಬಂಡೆಗೆ ಅಪ್ಪಳಿಸುವರು. ಗರ್ಭಿಣಿಯ
ಹೊಟ್ಟೆಯನ್ನು ಸೀಳುವರು.

ಪ್ರೀತಿಪೂರ್ವಕವಾದ ವಾಗ್ದಾನಗಳು.

ಇಸ್ರಾಯೇಲೇ, ನೀನು ಹಿಂದಿರುಗಿ ನಿನ್ನ ದೇವ
ರಾದ ಯೆಹೋವನನ್ನು ಸೇರಿಕೋ; 4)ನಿನ್ನ ಅಪ
ರಾಧದಿಂದಲೇ, ನೀನು ಮುಗ್ಗರಿಸಿ ಬಿದ್ದಿ. [ಪಶ್ಚಾತ್ತಾ
ಪದ] ಮಾತುಗಳನ್ನು ತೆಗೆದುಕೊಂಡು ಯೆಹೋವ
ಬಳಿಗೆ ಹಿಂದಿರುಗಿ ಆತನಿಗೆ—ನಮ್ಮ ಅಪರಾಧವನ
ಸಂಪೂರ್ಣವಾಗಿ ನಿವಾರಣೆಮಾಡಿ [ನಮ್ಮಲ್ಲಿನ] ಒ
ಯದನ್ನು ಅಂಗೀಕರಿಸು; ನಮ್ಮ ಸ್ತೋತ್ರಗಳೆಂ
ಹೋರಿಗಳನ್ನು ಅರ್ಪಿಸುವೆವು. ಅಶ್ಶೂರವು ನಮ
ನ್ನು ರಕ್ಷಿಸುವದೆಂದು ನಂಬೆವು; [ಐಗುಪ್ತದ] ಕುದು
ಗಳನ್ನು ಹತ್ತೆವು; ನಮ್ಮ ಕೈಕೆಲಸದ ಬೊಂಬೆಗಳಿಗೆ—
ನೀವು ನಮ್ಮ ದೇವರುಗಳು ಎಂದು ಇನ್ನು ಹೇಳೆವು
ನೀನೇ ಅನಾಥರನ್ನು ಕರುಣಿಸುವಿ ಎಂಬದಾಗಿ ಅರಿ
ಮಾಡಿಕೊಳ್ಳಿರಿ. ನಾನು ನನ್ನ ಜನರ ಭ್ರಷ್ಟತ
ವನ್ನು ಪರಿಹರಿಸಿ ಅವರನ್ನು ಮನಃಪೂರ್ವಕವಾ
ಪ್ರೀತಿಸುವೆನು; ನನ್ನ ಕೋಪವು ಅವರ ಕಡೆಯಿಂ
ತೊಲಗಿಹೋಯಿತು. ನಾನು ಇಸ್ರಾಯೇಲಿಗೆ ಇಬ್ಬ
ಯಂತಾಗುವೆನು; ಅದು ತಾವರೆಯಂತೆ ಒಡೆಯ
ವದು; ಲೆಬನೋನಿನ [ದೇವದಾರುಗಳ] ಹಾಗೆ ಬೇರ
ಬಿಟ್ಟುಕೊಳ್ಳುವದು. ಅದರ ರೆಂಬೆಗಳು ಹರಡುವವು
ಅದರ ಅಂದವು ಒಲೀವ ಮರದಂತೆ ಕಂಗೊಳಿಸುವದು
ಅದರ ಪರಿಮಳವು ಲೆಬನೋನಿನ ಹಾಗೆ ಮನೋಹ
ವಾಗಿರುವದು. ಅದರ ನೆರಳನ್ನು ಆಶ್ರಯಿಸಿರು
ವರು ಹಿಂದಿರುಗಿ ಬೆಳೆಯನ್ನು ಬೆಳೆದು ದ್ರಾಕ್ಷಿಯಂ
ಪಲ್ಲವಿಸುವರು; ಅದರ ಕೀರ್ತಿಯು ಲೆಬನೋನಿನ ದ್ರಾ
ಕ್ಷಾರಸದ ಹಾಗೆ ಸ್ವಾರಸ್ಯವಾಗಿರುವದು. ಎಫ್ರಾ
ಯಿಮು—ವಿಗ್ರಹಗಳ ಗೊಡವೆ ನನಗೆ ಇನ್ನೇ

1) ಅಥವಾ: ಮನುಷ್ಯರನ್ನು ಕೊಲ್ಲುತ್ತಾರೆ, ಬಸವಗಳನ್ನು ಮುದ್ದಿಸುತ್ತಾರೆ. 2) ಮೂಲ: ರಾಜನನ್ನು. 3) ಅ
ಬಿಡಿಸುವೆನು; ಮರಣದಿಂದ ಉದ್ಧರಿಸುವೆನು. 4) ಎಫ್ರಾಯಿಮು ಅಂದರೆ ಅಭಿವೃದ್ಧಿ.

1)[ಅಂದುಕೊಳ್ಳುವದು]; ನಾನು ಅದಕ್ಕೆ ಒಲಿದು
ಕಟಾಕ್ಷಿಸುವೆನು; ನಾನು ಸೊಂಪಾದ ತುರಾಯಿ ಮರ
9 ದಂತಿದ್ದೇನೆ; ನನ್ನಿಂದಲೇ ನೀನು ಫಲಿಸುವಿ. ಜ್ಞಾ
ನಿಗಳು ಈ ಸಂಗತಿಗಳನ್ನು ಗ್ರಹಿಸುವರು; ವಿವೇಕ
ಗಳು ಅವುಗಳನ್ನು ತಿಳಿದುಕೊಳ್ಳುವರು; ಯೆಹೋವನ
ಮಾರ್ಗಗಳು ರುಜುವಾದವುಗಳು; ಅವುಗಳಲ್ಲಿ
ಸನ್ಮಾರ್ಗಿಗಳು ನಡೆಯುವರು, ದುರ್ಮಾರ್ಗಿಗಳು
ಎಡವಿಬೀಳುವರು.

---

THE BOOK OF THE

# PROPHET JOEL

## ಯೋವೇಲನ ಪ್ರವಾದನೆಯ ಗ್ರಂಥ

1 ಪೆತೂವೇಲನ ಮಗನಾದ ಯೋವೇಲನಿಗೆ ಯೆಹೋವನು ದಯಪಾಲಿಸಿದ ವಾಕ್ಯವು.

### ಯೆಹೂದಕ್ಕೆ ಸಂಭವಿಸಿದ ಘೋರವಾದ ಈತಿಬಾಧೆ.
1. 2—2. 17.

ಮಿಡತೆಗಳಿಂದಾದ ಹಾನಿ.

2 ವೃದ್ಧರೇ, ಕೇಳಿರಿ! ದೇಶನಿವಾಸಿಗಳೇ, ನೀವೆಲ್ಲರೂ ಕಿವಿಗೊಡಿರಿ!

ಇಂಥ ಬಾಧೆಯು ನಿಮ್ಮ ಕಾಲದಲ್ಲಿಯಾಗಲಿ ನಿಮ್ಮ ತಂದೆಗಳ ಕಾಲದಲ್ಲಿಯಾಗಲಿ ಸಂಭವಿಸಿತ್ತೋ?
3 ಇದನ್ನು ನಿಮ್ಮ ಮಕ್ಕಳಿಗೆ ವರ್ಣಿಸಿರಿ,
ಅವರು ತಮ್ಮ ಮಕ್ಕಳಿಗೆ ವಿವರಿಸಲಿ,
ಅವರು ಮುಂದಿನ ತಲೆಯವರಿಗೆ ತಿಳಿಸಲಿ.
4 2)ಜೂರಿಮಿಡತೆ ತಿಂದು ಮಿಕ್ಕದ್ದನ್ನು ಗುಂಪು ಮಿಡತೆ ತಿಂದುಬಿಟ್ಟಿತು;
ಗುಂಪುಮಿಡತೆ ತಿಂದು ಮಿಕ್ಕದ್ದನ್ನು ಸಣ್ಣ ಮಿಡತೆ ತಿಂದುಬಿಟ್ಟಿತು;
ಸಣ್ಣ ಮಿಡತೆ ತಿಂದು ಮಿಕ್ಕದ್ದನ್ನು ದೊಡ್ಡ ಮಿಡತೆ ತಿಂದುಬಿಟ್ಟಿತು.

5 ಅಮಲೇರಿದವರೇ, ಎಚ್ಚರಗೊಳ್ಳಿರಿ, ಅಳಿರಿ;
ಕುಡಿಕರೇ, ಅರಚಿಕೊಳ್ಳಿರಿ;
ದ್ರಾಕ್ಷಾರಸವು ನಿಮ್ಮ ಬಾಯಿಗೆ ಇನ್ನು ಬೀಳದು.
6 ಇಗೋ, ನನ್ನ ದೇಶದ ಮೇಲೆ
ಅಸಂಖ್ಯಾತಪ್ರಬಲಸೈನ್ಯವು ಬಂದಿದೆ;
ಅದರ ಹಲ್ಲುಗಳು ಸಿಂಹದ ಹಲ್ಲುಗಳೇ,
ಅದರ ಕೋರೆಗಳು ಮೃಗರಾಜನ ಕೋರೆಗಳೇ.
ಅದು ನನ್ನ ದ್ರಾಕ್ಷೆಯ ಬಳ್ಳಿಗಳನ್ನು ಹಾಳುಮಾಡಿದೆ. 7
ನನ್ನ ಅಂಜೂರದ ಗಿಡಗಳನ್ನು ಸಿಗಿದುಹಾಕಿದೆ,
ಅವುಗಳನ್ನು ಬೋಳುಮಾಡಿ ಬಿಟ್ಟುಬಿಟ್ಟಿದೆ;
ರೆಂಬೆಗಳು ಬಿಳುಪಾಗಿ ಹೋಗಿವೆ.
[ದೇಶವೇ,] ತನ್ನ ಯೌವನಕಾಲದ ಪತಿಯ ವಿಯೋಗದುಃಖದಿಂದ 8
ಗೋಣಿತಟ್ಟನ್ನುಟ್ಟುಕೊಂಡು ಗೋಳಾಡುವ ಯುವತಿಯಂತೆ ಗೋಳಾಡು.
ಧಾನ್ಯಪಾನನೈವೇದ್ಯಗಳು ಯೆಹೋವನ ಆಲಯದಲ್ಲಿ ನಿಂತುಹೋಗಿವೆ; 9
ಯೆಹೋವನ ಸೇವಕರಾದ ಯಾಜಕರು ದುಃಖಿಸುತ್ತಾರೆ.
ಹೊಲವು ಹಾಳಾಗಿದೆ, 10
ದೇಶವು ದುಃಖಿಸುತ್ತದೆ,
ಏಕಂದರೆ ಧಾನ್ಯವು ಸೂರೆಯಾಗಿದೆ,
ದ್ರಾಕ್ಷಾರಸವು ತಗ್ಗಿದೆ,
ಎಣ್ಣೆಯು ಕುಗ್ಗಿದೆ.

ರೈತರೇ, ಕಂಗೆಡಿರಿ! ತೋಟಗಾರರೇ, ಗೋಳಾಡಿರಿ! 11
ಗೋದಿಯೂ ಜವೆಗೋದಿಯೂ ಹಾಳಾಗಿವೆ;
ಹೊಲದ ಬೆಳೆಯು ನಾಶವಾಗಿದೆ.
ದ್ರಾಕ್ಷಾಲತೆಯು ಆಶಾಭಂಗಪಟ್ಟಿದೆ; 12
ಅಂಜೂರದ ಗಿಡವು ಕ್ಷೀಣವಾಗಿದೆ;
ದಾಳಿಂಬ, ಖರ್ಜೂರ, ಸೇಬು, ಅಂತು ಸಕಲ ವನವೃಕ್ಷಗಳು ಒಣಗಿವೆ,
ಆನಂದವು ತಗ್ಗಿ ನರಜನ್ಮದವರಿಗೆ ತಪ್ಪಿಹೋಗಿದೆ.

---

1) ಅಥವಾ: [ಅಂದುಕೊಳ್ಳಲು! ನಾನು ಒಲಿದು ಕಟಾಕ್ಷಿಸಿದ್ದೇನೆ [ಅನ್ನುವೆನು]; ನಾನು ಸೊಂಪಾದ ತುರಾಯಿ ಮರದಂತಿದ್ದೇನೆ ಅನ್ನಲು] ನನ್ನಿಂದಲೇ ನೀನು ಫಲಿಸುವಿ [ಅನ್ನುವೆನು]. 2) ಅಥವಾ: ಕಡಿಯುವ ಹುಳ . . . ಮುತ್ತುವ ಹುಳ . . . ನೆಕ್ಕುವ ಹುಳ . . ನುಂಗುವ ಹುಳ.

ಜನರನ್ನು ಎಚ್ಚರಿಸಿ ಪ್ರಾರ್ಥನೆಗೆ ಕರೆದದ್ದು.

13 ಯಾಜಕರೇ, ಗೋಣಿತಟ್ಟನ್ನು ಉಟ್ಟುಕೊಂಡು ಮೊರೆಯಿಡಿರಿ;
ಯಜ್ಞವೇದಿಯ ಸೇವಕರೇ, ಗೋಳಾಡಿರಿ;
ನನ್ನ ದೇವರ ದಾಸರೇ, ಬನ್ನಿರಿ,
ಗೋಣಿತಟ್ಟನ್ನು ಸುತ್ತಿಕೊಂಡು ರಾತ್ರಿಯೆಲ್ಲಾ ಬಿದ್ದಿರ್ರಿ;
ಧಾನ್ಯಪಾನನೈವೇದ್ಯಗಳು ನಿಮ್ಮ ದೇವರ ಆಲಯಕ್ಕೆ ಒದಗವು.
14 ಉಪವಾಸದಿನವನ್ನು ಏರ್ಪಡಿಸಿರಿ;
ಸಂಘವನ್ನು ಕೂಡಿಸಿರಿ;
ಹಿರಿಯರನ್ನೂ ಸಮಸ್ತ ದೇಶನಿವಾಸಿಗಳನ್ನೂ
ನಿಮ್ಮ ದೇವರಾದ ಯೆಹೋವನ ಆಲಯಕ್ಕೆ ಬರಮಾಡಿ
ಯೆಹೋವನಿಗೆ ಮೊರೆಯಿಡಿರಿ.
15 ಯೆಹೋವನ ದಿನವು ಸಮೀಪಿಸಿತು; ಅಯ್ಯೋ, ದಿನವೇ!
ಅದು ಸರ್ವಶಕ್ತನಿಂದ ನಾಶನದಿನವಾಗಿಯೇ ಬರುವದು.
16 ನಮ್ಮ ಆಹಾರವು ನಮ್ಮ ಕಣ್ಣೆದುರಿಗೆ ಹಾಳಾಯಿತಲ್ಲಾ;
ಹರ್ಷೋಲ್ಲಾಸಗಳು ನಮ್ಮ ದೇವರ ಆಲಯದೊಳಗಿಂದ ತೊಲಗಿದವಲ್ಲಾ!
17 ಬೀಜಗಳು ಹೆಂಟೆಗಳ ಕೆಳಗೆ ಒಣಗುತ್ತವೆ;
ಹಗೇವುಗಳು ಬರಿದಾಗಿವೆ,
ಕಣಜಗಳು ಬಿದ್ದುಹೋಗಿವೆ;
ಧಾನ್ಯಕ್ಕೆ ಸಂಕೋಚವಾಯಿತಷ್ಟೆ.
18 ಅಯ್ಯೋ, ಪಶುಗಳು ಎಷ್ಟೋ ನರಳುತ್ತವೆ!
ಮೇವಿಲ್ಲದ ಕಾರಣ ದನದ ಮಂದೆಗಳು ಭ್ರಮೆಗೊಂಡಿವೆ,
ಕುರಿಯ ಹಿಂಡುಗಳು ದಂಡನೆಗೆ ಗುರಿಯಾಗಿವೆ.
19 ಯೆಹೋವಾ, ನಿನಗೆ ಮೊರೆಯಿಡುತ್ತೇನೆ;
ಕಾಡಿನ ಹುಲ್ಗಾವಲನ್ನು ಕಿಚ್ಚು ನುಂಗಿಬಿಟ್ಟಿದೆಯಲ್ಲಾ;
ವನವೃಕ್ಷಗಳನ್ನೆಲ್ಲಾ ಬೇಗೆಯು ಸುಟ್ಟುಹಾಕಿದೆ.
20 ಭೂಜಂತುಗಳೂ ನಿನ್ನ ಕಡೆಗೆ ತಲೆಯೆತ್ತುತ್ತವೆ;
ತೊರೆಗಳು ಬತ್ತಿಹೋಗಿವೆ,
ಕಾಡಿನ ಹುಲ್ಗಾವಲನ್ನು ಕಿಚ್ಚು ನುಂಗಿಬಿಟ್ಟಿದೆ.

2 ಚೀಯೋನಿನಲ್ಲಿ ಕೊಂಬೂದಿರಿ,
ನನ್ನ ಪರಿಶುದ್ಧಪರ್ವತದಲ್ಲಿ ಧನಿಗೈಯಿರಿ;
ಸಮಸ್ತ ದೇಶನಿವಾಸಿಗಳು ನಡುಗಲಿ;
ಯೆಹೋವನ ದಿನವು ಬರುತ್ತಲಿದೆ; ಸಮೀಪಿಸಿತು;
2 ಅದು ಕತ್ತಲಿನ ಮೊಬ್ಬಿನ ದಿನ,
ಕಾರ್ಮುಗಿಲ ಕಗ್ಗತ್ತಲ ದಿನ.

ಮಿಡತೆದಂಡಿನ ವರ್ಣನೆ.

ಉದಯವು ಬೆಟ್ಟಗಳ ಮೇಲೆ ಹರಡಿಕೊಳ್ಳುವ ಹಾ
ಇಗೋ, ಪ್ರಬಲವಾದ ದೊಡ್ಡ ದಂಡು!
ಇಂಥದು ಹಿಂದೆಂದೂ ಬಂದಿಲ್ಲ,
ಇನ್ನು ಮುಂದೆ ತಲತಲಾಂತರಗಳ ಬಹು ವರುಷಗಳಲ್ಲಿಯೂ ಬರುವದಿಲ್ಲ.
ಅದರ ಮುಂಗಡೆ ಬೆಂಕಿಯು ನುಂಗಿಕೊಂಡು ಬರುತ್ತದೆ,
ಹಿಂಗಡೆ ಜ್ವಾಲೆಯು ಧಗಧಗಿಸುತ್ತದೆ;
ಅದು ಬರುವದಕ್ಕೆ ಮುಂಚೆ ದೇಶವು ಏದೆನ್ ಉದ್ಯಾನದಂತೆ ಕಂಗೊಳಿಸುತ್ತದೆ;
ದಾಟಿಹೋದಮೇಲೆ ಬೆಗ್ಗಾಡಾಗಿದೆ;
ಅದಕ್ಕೆ ಯಾವದೂ ತಪ್ಪಿಸಿಕೊಳ್ಳಲಾರದು.
ಆ ದಂಡಾಳುಗಳ ರೂಪವು ಕುದುರೆಗಳ ರೂಪದಂತೆ ಕಾಣಿಸುತ್ತದೆ;
ಅವು ಸವಾರರಂತೆ ಓಡಾಡುತ್ತವೆ.
ಪರ್ವತಾಗ್ರಗಳಲ್ಲಿ ಅವು ಹಾರಾಡುವ ಶಬ್ದವು ರಥಗಳ ಚೀತ್ಕಾರದಂತೆಯೂ
ಕೂಳೆಯನ್ನು ನುಂಗುವ ಬೆಂಕಿಯ ಚಟಪಟ ಧ್ವನಿಯ ಹಾಗೂ ಕೇಳಿಸುತ್ತದೆ;
ಅವು ವ್ಯೂಹಕಟ್ಟಿಕೊಂಡ ಪ್ರಬಲವಾದ ಸೈನ್ಯವೇ.
ಅವುಗಳ ದೆಸೆಯಿಂದ ಜನಾಂಗಗಳು ಸಂಕಟಪಡುತ್ತವೆ;
ಎಲ್ಲರ ಮುಖಗಳೂ ಬಾಡಿಹೋಗುತ್ತವೆ.
ಅವು ಶೂರರಂತೆ ಓಡಾಡುತ್ತವೆ;
ಯೋಧರ ಹಾಗೆ ಗೋಡೆಯೇರುತ್ತವೆ;
ತಮ್ಮ ತಮ್ಮ ಸಾಲುಗಳಲ್ಲಿಯೇ ನಡೆಯುತ್ತವೆ,
ಆ ಸಾಲುಗಳು ಕಲಸುವದಿಲ್ಲ.
ಒಂದಕ್ಕೊಂದು ನೂಕಾಡುವದಿಲ್ಲ,
ತಮ್ಮ ತಮ್ಮ ಸಾಲುಗಳಲ್ಲಿಯೇ ನಡೆಯುತ್ತವೆ;
ಆಯುಧಗಳ ನಡುವೆ ನುಗ್ಗುತ್ತವೆ,
ಸಾಲುಗಳು ಒಡೆದುಹೋಗುವದಿಲ್ಲ.
ಪಟ್ಟಣದಲ್ಲೆಲ್ಲಾ ತ್ವರೆಪಡುತ್ತವೆ,
ಗೋಡೆಯ ಮೇಲೆ ಓಡಾಡುತ್ತವೆ,
ಮನೆಗಳನ್ನು ಹತ್ತುತ್ತವೆ,
ಕಿಟಕಿಗಳಲ್ಲಿ ಕಳ್ಳರಂತೆ ನುಗ್ಗುತ್ತವೆ.
ಅವುಗಳ ಆಗಮನದಿಂದ ಭೂಮಿಯು ಕಂಪಿಸುತ್ತದೆ,
ಆಕಾಶಮಂಡಲವು ನಡುಗುತ್ತದೆ,
ಸೂರ್ಯಚಂದ್ರರು ಮಂಕಾಗುತ್ತಾರೆ,
ನಕ್ಷತ್ರಗಳು ಕಾಂತಿಯನ್ನು ಅಡಗಿಸಿಕೊಳ್ಳುತ್ತವೆ;
ಯೆಹೋವನು ತನ್ನ ಸೈನ್ಯದ ಮುಂದೆ ದನಿಗೈಯುತ್ತಾನೆ;
ಆತನ ದಂಡು ಬಹು ದೊಡ್ಡದು;
ತನ್ನ ಮಾತನ್ನು ನೆರವೇರಿಸಿಕೊಳ್ಳುವಾತನು ಬಲಿಷ್ಠನಾಗಿದ್ದಾನೆ;
ಯೆಹೋವನ ದಿನವು ಮಹತ್ತರವೂ ಅತಿಭಯಂಕರವೂ ಆಗಿದೆ;
ಅದನ್ನು ತಾಳಿಕೊಳ್ಳುವವರು ಯಾರು?

ಜನರನ್ನು ಪಶ್ಚಾತ್ತಾಪಪಡುವಂತೆ ಪ್ರೇರಿಸಿದ್ದು.

12 ಯೆಹೋವನು ಇಂತೆನ್ನುತ್ತಾನೆ—
ಈಗಲಾದರೋ ನೀವು ಮನಃಪೂರ್ವಕವಾಗಿ ನನ್ನ ಕಡೆಗೆ ತಿರುಗಿಕೊಂಡು
ಉಪವಾಸಮಾಡಿರಿ, ಅಳಿರಿ, ಗೋಳಾಡಿರಿ;
13 ನಿಮ್ಮ ಬಟ್ಟೆಗಳನ್ನಲ್ಲ, ನಿಮ್ಮ ಹೃದಯಗಳನ್ನು ಹರಿದುಕೊಂಡು
ನಿಮ್ಮ ದೇವರಾದ ಯೆಹೋವನ ಕಡೆಗೆ ತಿರುಗಿಕೊಳ್ಳಿರಿ;
ಆತನು ದಯೆಯೂ ಕನಿಕರವೂ ದೀರ್ಘಶಾಂತಿಯೂ ಮಹಾಕೃಪೆಯೂ ಉಳ್ಳವನಾಗಿ
ಮಾಡಬೇಕೆಂದಿದ್ದ ಕೇಡಿಗೆ ಮನಮರುಗುತ್ತಾನೆ.
14 ಆತನು ಒಂದು ವೇಳೆ ಪಶ್ಚಾತ್ತಾಪಪಟ್ಟು, ಹಿಂದಿರುಗಿ
ನಿಮ್ಮ ದೇವರಾದ ಯೆಹೋವನ ಧಾನ್ಯಪಾನನೈವೇದ್ಯಗಳಿಗೆ
ಅನುಕೂಲವಾದ ಸುವರವನ್ನು ದಯಪಾಲಿಸಿ ಹೋದಾನು.
15 ಚೀಯೋನಿನಲ್ಲಿ ಕೊಂಬೂದಿರಿ,
ಉಪವಾಸದಿನವನ್ನು ಗೊತ್ತುಮಾಡಿರಿ,
ಸಂಘವನ್ನು ನೆರೆಯಿಸಿರಿ;
16 ಜನರನ್ನು ಒಟ್ಟಿಗೆ ಬರಮಾಡಿರಿ,
ಕೂಟವನ್ನು ಏರ್ಪಡಿಸಿರಿ,
ವೃದ್ಧರನ್ನು ಕೂಡಿಸಿರಿ,
ಮಕ್ಕಳನ್ನೂ ಮೊಲೆಕೂಸುಗಳನ್ನೂ ಸೇರಿಸಿರಿ;
ವಧೂವರರೂ ತಮ್ಮ ಕಲ್ಯಾಣಗೃಹದಿಂದ ಹೊರಟುಬರಲಿ.
17 ಯೆಹೋವನ ಸೇವಕರಾದ ಯಾಜಕರು
ದ್ವಾರಮಂಟಪಕ್ಕೂ ಯಜ್ಞವೇದಿಗೂ ನಡುವೆ ಅಳುತ್ತಾ—
ಯೆಹೋವನೇ, ನಿನ್ನ ಜನರನ್ನು ಕರುಣಿಸು;
ಅನ್ಯಜನಾಂಗಗಳು ಅವರ ಹೆಸರನ್ನು ಕಟ್ಟುಗಾದೆಯಾಗಿ ಎತ್ತುವ ನಿಂದೆಗೆ
ನಿನ್ನ ಸ್ವಾಸ್ತ್ಯದವರನ್ನು ಗುರಿಮಾಡಬೇಡ;
ಅವರ ದೇವರು ಎಲ್ಲಿ ಎಂಬ ಮಾತು
ಮ್ಲೇಚ್ಛರಲ್ಲಿ ಏಕೆ ಸಲ್ಲಬೇಕು ಎಂದು ವಿಜ್ಞಾಪಿಸಲಿ.

ಯೆಹೋವನ ಕರುಣೆ. 2. 18—32.

ಸುಭಿಕ್ಷೆಯ ವಾಗ್ದಾನ.

18 ಆಗ ಯೆಹೋವನು ತನ್ನ ದೇಶಕ್ಕೆ ಅಪಕೀರ್ತಿ ಬರಬಾರದೆಂದು ತನ್ನ ಜನರನ್ನು ಕರುಣಿಸಿ
19 ಅವರ ಬಿನ್ನಹವನ್ನು ಲಾಲಿಸಿ ಅವರಿಗೆ ಹೀಗೆ ಹೇಳಿದನು—
ಇಗೋ, ನಾನು ಧಾನ್ಯದ್ರಾಕ್ಷಾರಸತೈಲಗಳನ್ನು ನಿಮಗೆ ಕಳುಹಿಸುತ್ತಿದ್ದೇನೆ;
ಅವುಗಳಿಂದ ನಿಮಗೆ ತೃಪ್ತಿಯಾಗುವದು;
ನಿಮ್ಮನ್ನು ಅನ್ಯಜನಾಂಗಗಳ ನಿಂದೆಗೆ ಇನ್ನು ಗುರಿಮಾಡೆನು;
ನಾನು ಬಡಗಣ ದಂಡನ್ನು ನಿಮ್ಮ ಕಡೆಯಿಂದ ದೂರ ತೊಲಗಿಸಿ 20
ಹಾಳು ಬೆಗ್ಗಾಡಿಗೆ ಓಡಿಸಿ
ಅದರ ಮುಂಭಾಗವನ್ನು ಮೂಡಣ ಸಮುದ್ರಕ್ಕೂ
ಹಿಂಭಾಗವನ್ನು ಪಡುವಣ ಸಮುದ್ರಕ್ಕೂ ತಳ್ಳಿಬಿಡುವೆನು;
ಆಹಾ, ಮಹತ್ಕಾರ್ಯಗಳನ್ನು ಮಾಡಿತು,
ಅದರ [ಹೆಣಗಳ] ದುರ್ವಾಸನೆಯು ಏರುವದು,
ಗಬ್ಬು ನಾರುವದು.
ಭೂಮಿಯೇ, ಹೆದರಬೇಡ, 21
ಹರ್ಷಿಸು, ಉಲ್ಲಾಸಿಸು;
ಯೆಹೋವನು ಮಹತ್ಕಾರ್ಯಗಳನ್ನು [1]ಮಾಡುವನು.
ಭೂಜಂತುಗಳೇ, ಅಂಜಬೇಡಿರಿ; 22
ಕಾಡಿನ ಕಾವಲಲ್ಲಿ ಹುಲ್ಲು ಮೊಳೆಯುವದು,
ಮರವು ಹಣ್ಣುಬಿಡುವದು,
ಅಂಜೂರದ ಗಿಡವೂ ದ್ರಾಕ್ಷಾಲತೆಯೂ ಸಾರವತ್ತಾಗಿ ಫಲಿಸುವವು.
ಚೀಯೋನಿನ ಸಂತತಿಯವರೇ, 23
ನಿಮ್ಮ ದೇವರಾದ ಯೆಹೋವನಲ್ಲಿ ಹರ್ಷಿಸಿರಿ, ಉಲ್ಲಾಸಿಸಿರಿ;
ಆತನು ಮುಂಗಾರನ್ನು [2]ತಕ್ಕ ಹಾಗೆ ನಿಮಗೆ ಕೊಡುವನು;
ಮುಂಗಾರು ಹಿಂಗಾರು ಮಳೆಗಳನ್ನು ಮೊದಲಿನಂತೆ ನಿಮಗಾಗಿ ಸುರಿಸುವನು.
ಕಣಗಳಲ್ಲಿ ಗೋದಿಯು ರಾಶಿರಾಶಿಯಾಗಿರುವದು, 24
ತೊಟ್ಟಿಗಳಲ್ಲಿ ದ್ರಾಕ್ಷಾರಸವೂ ಎಣ್ಣೆಯೂ ತುಂಬಿ ತುಳುಕುವವು.
ಗುಂಪುಮಿಡತೆ, ಸಣ್ಣಮಿಡತೆ, ದೊಡ್ಡಮಿಡತೆ, 25
ಚೂರಿಮಿಡತೆ,
ಅಂತು ನಾನು ನಿಮ್ಮ ಮೇಲೆ ಕಳುಹಿಸಿದ ನನ್ನ ದೊಡ್ಡ ದಂಡು
ತಿಂದುಬಿಟ್ಟ ವರುಷಗಳನ್ನು ನಾನು ನಿಮಗೆ ಕಟ್ಟಿಕೊಡುವೆನು.
ನೀವು ಹೊಟ್ಟೆತುಂಬಾ ಊಟಮಾಡಿ ತೃಪ್ತಿಗೊಂಡು 26
ನಿಮಗಾಗಿ ಅದ್ಭುತಕಾರ್ಯಗಳನ್ನು ಮಾಡಿದ
ನಿಮ್ಮ ದೇವರಾದ ಯೆಹೋವನ ನಾಮವನ್ನು ಕೊಂಡಾಡುವಿರಿ;
ನನ್ನ ಜನರು ಎಂದಿಗೂ ಆಶಾಭಂಗಪಡರು.
ನಾನು ಇಸ್ರಾಯೇಲಿನ ಮಧ್ಯದಲ್ಲಿ ನೆಲೆಯಾಗಿದ್ದೇನೆಂತಲೂ ಅದ್ವಿತೀಯನಾದ 27
ನಾನೇ ನಿಮ್ಮ ದೇವರಾದ ಯೆಹೋವನಾಗಿದ್ದೇನೆಂತಲೂ ನಿಮಗೆ ನಿಶ್ಚಯವಾಗುವದು;
ನನ್ನ ಜನರು ಎಂದಿಗೂ ಆಶಾಭಂಗಪಡರು.

1) ಅಥವಾ: ಮಾಡಿದ್ದಾನೆ.
2) ಅಥವಾ: ತನ್ನ ಧರ್ಮಾನುಸಾರವಾಗಿ.

### ದೇವರಾತ್ಮವರ, ಕಡೆಗಾಲದ ಉತ್ಪಾತಗಳು, ಭಕ್ತರ ರಕ್ಷಣೆ.

28 ತರುವಾಯ ನಾನು ಎಲ್ಲಾ ಮನುಷ್ಯರ ಮೇಲೆ ನನ್ನ ಆತ್ಮವನ್ನು ಸುರಿಸುವೆನು;
ನಿಮ್ಮಲ್ಲಿರುವ ಗಂಡಸರೂ ಹೆಂಗಸರೂ ಪ್ರವಾದಿಸುವರು;
ನಿಮ್ಮ ಹಿರಿಯರಿಗೆ ಕನಸುಗಳು ಬೀಳುವವು.
ನಿಮ್ಮ ಯೌವನಸ್ಥರಿಗೆ ದಿವ್ಯದರ್ಶನಗಳಾಗುವವು;
29 ಇದಲ್ಲದೆ ಆ ದಿನಗಳಲ್ಲಿ ದಾಸದಾಸಿಯರ ಮೇಲೆಯೂ ನನ್ನ ಆತ್ಮವನ್ನು ಸುರಿಸುವೆನು.
30 ಯೆಹೋವನ ಆಗಮನದ ಭಯಂಕರವಾದ ಮಹಾದಿನವು ಬರುವದಕ್ಕೆ ಮುಂಚೆ
ಭೂವ್ಯೋಮಾಕಾಶಗಳಲ್ಲಿ ರಕ್ತ ಬೆಂಕಿ ಧೂಮಸ್ತಂಭ ಈ ಉತ್ಪಾತಗಳನ್ನು ಉಂಟುಮಾಡುವೆನು;
31 ಸೂರ್ಯನು ಕತ್ತಲಾಗುವನು, ಚಂದ್ರನು ರಕ್ತವಾಗುವನು.
32 ಆದರೂ ಯೆಹೋವನ ನಾಮವನ್ನು ಹೇಳಿಕೊಳ್ಳುವವರೆಲ್ಲರಿಗೆ ರಕ್ಷಣೆಯಾಗುವದು;
ಯೆಹೋವನು ತಿಳಿಸಿದಂತೆ ಚೀಯೋನ್ ಪರ್ವತದಲ್ಲಿಯೂ ಯೆರೂಸಲೇಮಿನಲ್ಲಿಯೂ ಅನೇಕರು ಉಳಿದಿರುವರು;
ಯೆಹೋವನು ಕರೆಯುವ ಜನಶೇಷದಲ್ಲಿ ಅವರು ಸೇರಿದವರಾಗಿರುವರು.

## ಯೆಹೋವನು ಸಕಲ ಜನಾಂಗಗಳೊಂದಿಗೆ ಆಡುವ ವ್ಯಾಜ್ಯ. 3.

### ಜನಾಂಗಗಳ ಅನ್ಯಾಯಗಳು.

3 ಇಗೋ, ಆ ದಿನಗಳಲ್ಲಿ,
ನಾನು ಯೆಹೂದದ ಮತ್ತು ಯೆರೂಸಲೇಮಿನ ದುರವಸ್ಥೆಯನ್ನು ತಪ್ಪಿಸುವ ಕಾಲದಲ್ಲಿ
2 ನಾನು ಸಕಲ ಜನಾಂಗಗಳನ್ನು ಕೂಡಿಸಿ
1)ಯೆಹೋವನ ನ್ಯಾಯತೀರ್ಪಿನ ತಗ್ಗಿಗೆ ಬರಮಾಡಿ
ಅಲ್ಲಿ ನನ್ನ ಜನರಿಗಾಗಿ, ನನ್ನ ಸ್ವಾಸ್ತ್ಯವಾದ ಇಸ್ರಾಯೇಲ್ ಪ್ರಜೆಗೋಸ್ಕರ
ಅವುಗಳೊಂದಿಗೆ ವಿವಾದಮಾಡುವೆನು.
ಅವು ನನ್ನ ಜನರನ್ನು ದೇಶದೇಶಗಳಿಗೆ ಚದರಿಸಿ
ನನ್ನ ದೇಶವನ್ನು ಹಂಚಿಕೊಂಡಿವೆಯಷ್ಟೆ.
3 ಹೌದು, ನನ್ನ ಜನರಿಗಾಗಿ ಚೀಟುಹಾಕಿವೆ,
ಸೂಳೆಗಾಗಿ ಹುಡುಗನನ್ನು ಬದಲುಮಾಡಿವೆ,
ದ್ರಾಕ್ಷಾರಸಕ್ಕೆ ಹುಡುಗಿಯನ್ನು ಬದಲುಕೊಟ್ಟು ಪಾನಮಾಡಿವೆ.

4 ತೂರೇ, ಚೀದೋನೇ, ಫಿಲಿಷ್ಟಿಯ ರಾಷ್ಟ್ರಗಳೇ,
ನನ್ನ ಗೊಡವೆ ನಿಮಗೇಕೆ?
ನನಗೆ ಪ್ರತೀಕಾರಮಾಡುವಿರೋ?
ಸುಮ್ಮನೆ ತಂಟೆಮಾಡುವಿರೋ?
ನೀವು ಮಾಡುವ ಕೇಡನ್ನು ತ್ವರೆಯಾಗಿ, ಶೀಘ್ರವಾಗಿ ನಿಮ್ಮ ತಲೆಗೇ ತರುವೆನು.
ನನ್ನ ಬೆಳ್ಳಿಬಂಗಾರಗಳನ್ನು ಕಸುಕೊಂಡಿದ್ದೀರಿ,
ನನ್ನ ಒಳ್ಳೊಳ್ಳೆಯ ಪ್ರಿಯವಸ್ತುಗಳನ್ನು ನಿಮ್ಮ 2)ಸೌಧಗಳಿಗೆ ಸೂರೆಮಾಡಿಕೊಂಡು ಹೋಗಿದ್ದೀರಿ;
ಯೆಹೂದ್ಯರನ್ನೂ ಯೆರೂಸಲೇಮಿನವರನ್ನೂ ಅವರ ಗಡಿಯಿಂದ ದೂರಮಾಡಬೇಕೆಂದು
ಗ್ರೀಕರಿಗೆ ಮಾರಿಬಿಟ್ಟಿದ್ದೀರಿ;
ಹೀಗಿರಲು ಇಗೋ, ನೀವು ಅವರನ್ನು ಮಾರಿದ ಸ್ಥಳದೊಳಗಿಂದ
ಹೊರಟುಬರುವಂತೆ ನಾನು ಅವರನ್ನು ಹುರಿಗೊಳಿಸಿ
ನೀವು ಮಾಡಿದ ಕೇಡನ್ನು ನಿಮ್ಮ ತಲೆಗೇ ತರುವೆನು;
ನಿಮ್ಮ ಗಂಡುಹೆಣ್ಣುಮಕ್ಕಳನ್ನು ಯೆಹೂದ್ಯರಿಗೆ ಮಾರುವೆನು;
ಅವರು ಅವರನ್ನು ದೂರದ ಜನಾಂಗವಾದ ಶೆಬದವರಿಗೆ ಮಾರಿಬಿಡುವರು;
ಯೆಹೋವನೇ ಇದನ್ನು ನುಡಿದಿದ್ದಾನೆ.

### ಜನಾಂಗಗಳ ಅಪಜಯ.

ಜನಾಂಗಗಳಲ್ಲಿ ಹೀಗೆ ಪ್ರಕಟಿಸಿರಿ—
[ಜನಾಂಗಗಳೇ,] ಸನ್ನದ್ಧರಾಗಿರಿ.
ಶೂರರನ್ನು ಎಚ್ಚರಪಡಿಸಿರಿ,
ಯೋಧರೆಲ್ಲರೂ ಕೂಡಲಿ,
ಯುದ್ಧಕ್ಕೆ ಹೊರಡಲಿ.
ನಿಮ್ಮ ಗುಳಗಳನ್ನು ಕುಲುಮೆಗೆ ಹಾಕಿ ಕತ್ತಿಗಳನ್ನಾಗಿಯೂ
ಕುಡುಗೋಲುಗಳನ್ನು ಬರ್ಜಿಗಳನ್ನಾಗಿಯೂ ಮಾಡಿರಿ;
ದುರ್ಬಲನೂ ಶೂರನೆಂದುಕೊಳ್ಳಲಿ.
ಸುತ್ತಣ ಜನಾಂಗಗಳೇ, ತ್ವರೆಪಡಿರಿ,
ನೀವೆಲ್ಲರೂ ಬನ್ನಿರಿ, ಕೂಡಿಕೊಳ್ಳಿರಿ;
ಯೆಹೋವನೇ, ನಿನ್ನ ಶೂರರನ್ನು [ರಣರಂಗಕ್ಕೆ] ಇಳಿಸು.
ಜನಾಂಗಗಳು ಎಚ್ಚರಗೊಂಡು ಯೆಹೋವನ ನ್ಯಾಯತೀರ್ಪಿನ ತಗ್ಗಿಗೆ ಬರಲಿ;
ಅಲ್ಲೇ ಸುತ್ತಣ ಜನಾಂಗಗಳಿಗೆಲ್ಲಾ ನ್ಯಾಯತೀರಿಸಲು ಆಸೀನನಾಗುವೆನು.
[ಯೆಹೋವನ ಶೂರರೇ,] ಕುಡುಗೋಲನ್ನು ಹಾಕಿರಿ,
ಫಲವು ಪಕ್ವವಾಗಿದೆ; ಬನ್ನಿರಿ, ತುಳಿಯಿರಿ;
ದ್ರಾಕ್ಷೆಯ ಆಲೆಯು ಭರ್ತಿಯಾಗಿದೆ,
ತೊಟ್ಟಿಗಳು ತುಂಬಿತುಳುಕುತ್ತಿವೆ;
ಜನಾಂಗಗಳ ದುಷ್ಟತನವು ವಿಪರೀತವೇ ಸರಿ.

1) ಮೂಲ: ಯೆಹೋಷಾಫಾಟನ ತಗ್ಗು.
2) ಅಥವಾ: ಗುಡಿಗಳಿಗೆ.

14 ಆಹಾ, ತೀರ್ಪಿನ ತಗ್ಗಿನಲ್ಲಿ ಗುಂಪು ಗುಂಪು!
ತೀರ್ಪಿನ ತಗ್ಗಿನಲ್ಲಿ ಯೆಹೋವನ ದಿನವು
ಸಮೀಪಿಸಿದೆ.
15 ಸೂರ್ಯಚಂದ್ರರು ಮಂಕಾಗುತ್ತಾರೆ,
ನಕ್ಷತ್ರಗಳು ಕಾಂತಿಯನ್ನು ಅಡಗಿಸಿಕೊಳ್ಳುತ್ತವೆ.
16 ಯೆಹೋವನು ಚೀಯೋನಿನಿಂದ ಗರ್ಜಿಸುತ್ತಾನೆ,
ಯೆರೂಸಲೇಮಿನಿಂದ ದನಿಗೈಯುತ್ತಾನೆ;
ಭೂಮ್ಯಾಕಾಶಗಳು ನಡುಗುತ್ತವೆ.
ಆದರೆ ಯೆಹೋವನು ತನ್ನ ಜನರಿಗೆ ಆಶ್ರಯವೂ
ಇಸ್ರಾಯೇಲ್ಯರಿಗೆ ರಕ್ಷಣದುರ್ಗವೂ ಆಗುವನು.

ದೇವರ ಜನರ ಸೌಭಾಗ್ಯ.

17 ಹೀಗೆ ನಾನು ನನ್ನ ಪರಿಶುದ್ಧ ಪರ್ವತವಾದ
ಚೀಯೋನಿನಲ್ಲಿ ನೆಲೆಯಾಗಿ
ನಿಮ್ಮ ದೇವರಾದ ಯೆಹೋವನಾಗಿದ್ದೇನೆ ಎಂದು
ನಿಮಗೆ ದೃಢವಾಗುವದು;
ಆಗ ಯೆರೂಸಲೇಮು ಪವಿತ್ರವಾಗಿರುವದು;
ಮ್ಲೇಚ್ಛರು ಇನ್ನು ಅದನ್ನು ಹಾದುಹೋಗರು.
18 ಆ ಕಾಲದಲ್ಲಿ ಬೆಟ್ಟಗಳಿಂದ ದ್ರಾಕ್ಷಾರಸವು ಸುರಿ
ಯುವದು,
ಗುಡ್ಡಗಳಿಂದ ಹಾಲುಹರಿಯುವದು,
ಯೆಹೂದದ ತೊರೆಗಳಲ್ಲೆಲ್ಲಾ ನೀರುತುಂಬಿರುವದು;
ಯೆಹೋವನ ಆಲಯದೊಳಗಿಂದ ಬುಗ್ಗೆಯು
ಉಕ್ಕಿಬಂದು
1)ಜಾಲಿಯ ಹಳ್ಳವನ್ನು ತಂಪುಮಾಡುವದು.
ಐಗುಪ್ತ್ಯರೂ ಎದೋಮ್ಯರೂ ಯೆಹೂದ್ಯರನ್ನು 19
ಹಿಂಸಿಸಿ
ಅವರ ದೇಶದಲ್ಲಿ ನಿರ್ದೋಷಿಗಳ ರಕ್ತವನ್ನು ಸುರಿ
ಸಿದ್ದರಿಂದ
ಐಗುಪ್ತವು ಹಾಳುಬೀಳುವದು.
ಎದೋಮು ಬೆಗ್ಗಾಡಾಗುವದು.
ಆದರೆ ಯೆಹೂದವು ಸದಾ ಜನಭರಿತವಾಗಿರು 20
ವದು;
ಯೆರೂಸಲೇಮು ತಲತಲಾಂತರಕ್ಕೂ ನಿವಾಸಸ್ಥಾನ
ವಾಗಿರುವದು.
ಅವುಗಳಲ್ಲಿ ಹತರಾದವರನ್ನು ನಿರ್ದೋಷಿಗಳೆಂದು 21
ನಾನು ಬಹುಕಾಲ ನಿರ್ಣಯಿಸದೆ ಬಿಟ್ಟಿದ್ದೆನು,
ಇನ್ನು ನಿರ್ಣಯಿಸುವೆನು;
ಯೆಹೋವನು ಚೀಯೋನಿನಲ್ಲಿ ನೆಲೆಯಾಗಿಯೇ
ಇದ್ದಾನೆ.

# THE BOOK OF THE
# PROPHET AMOS

## ಆಮೋಸನ ಪ್ರವಾದನೆಯ ಗ್ರಂಥ

ಕೆಲವು ಎಂಟು ಜನಾಂಗಗಳ ಖಂಡನೆ. 1; 2.

1 ಯೆಹೂದದ ಅರಸನಾದ ಉಜ್ಜೀಯನ ಕಾಲ
ದಲ್ಲಿ ಅಂದರೆ ಇಸ್ರಾಯೇಲಿನ ಅರಸನೂ ಯೋವಾ
ಷನ ಮಗನೂ ಆದ ಯಾರೊಬ್ಬಾಮನ ಕಾಲ
ದಲ್ಲಿ ಭೂಕಂಪಕ್ಕೆ ಎರಡು ವರ್ಷಗಳ ಮುಂಚೆ
ತೆಕೋವದ ಕುರುಬರಲ್ಲಿ ಒಬ್ಬನಾದ ಆಮೋಸ
ನಿಗೆ ಇಸ್ರಾಯೇಲಿನ ವಿಷಯವಾಗಿ ಕಂಡುಬಂದ
ದೈವೋಕ್ತಿಗಳು.

ಯೆಹೋವನ ಗರ್ಜನೆ.

2 ಆಮೋಸನು ಹೀಗೆ ಪ್ರಕಟಿಸಿದನು—
ಯೆಹೋವನು ಚೀಯೋನಿನಿಂದ ಗರ್ಜಿಸಿ
ಯೆರೂಸಲೇಮಿನಿಂದ ದನಿಗೈಯುವನು;
ಆಗ ಕುರುಬರ ಕಾವಲುಗಳು ಗೋಳಿಡುವವು,
ಕರ್ಮೆಲ್ ಬೆಟ್ಟದ ತುದಿಯು ಒಣಗುವದು.

ದಮಸ್ಕದ ಪಾಪವೂ ದಂಡನೆಯೂ.

ಯೆಹೋವನು ಇಂತೆನ್ನುತ್ತಾನೆ— 3
ದಮಸ್ಕವು ಮೂರು ಹೌದು ನಾಲ್ಕು ದ್ರೋಹ
ಗಳನ್ನು ಮಾಡಿದ್ದರಿಂದ
ಅದಕ್ಕಾಗುವ ದಂಡನೆಯನ್ನು ನಾನು ತಪ್ಪಿಸು
ವದೇ ಇಲ್ಲ;
ಅದು ಗಿಲ್ಯಾದನ್ನು ಕಬ್ಬಿಣದ ಹಂತಿಕುಂಟೆಗಳಿಂದ
ಒಕ್ಕಿ ನುಗ್ಗುಮಾಡಿತಷ್ಟೆ.
ನಾನು ಹಜಾಯೇಲನ ವಂಶದ ಮೇಲೆ ಬೆಂಕಿಯನ್ನು 4
ಸುರಿಸುವೆನು,

1) ಅಥವಾ: ಶಿಟ್ಟೀಮ್ ಹಳ್ಳವನ್ನು.

ಅದು ಬೆನ್ಹದದನ ಅರಮನೆಗಳನ್ನು ನುಂಗಿಬಿಡು
ವದು.
5 ನಾನು ದಮಸ್ಕದ ಲಾಳವಂಡಿಗೆಯನ್ನು ಮುರಿದು
ಆವೆನ್ ತಗ್ಗಿನೊಳಗಿಂದ 1)ಸಿಂಹಾಸನಾಸೀನನನ್ನೂ
ಬೇತ್ ಎದೆನಿನಿಂದ ರಾಜದಂಡಧಾರಿಯನ್ನೂ
ನಿರ್ಮೂಲವಮಾಡುವೆನು;
ಅರಾಮ್ಯರು ಕೀರಿಗೆ ಸೆರೆಯಾಗಿ ಹೋಗುವರು;
ಇದು ಯೆಹೋವನ ನುಡಿ.

ಫಿಲಿಷ್ಟಿಯರ ಪಾಪವೂ ದಂಡನೆಯೂ.

6 ಯೆಹೋವನು ಇಂತೆನ್ನುತ್ತಾನೆ—
ಗಾಜವು ಮೂರು ಹೌದು ನಾಲ್ಕು ದ್ರೋಹಗಳ
ನ್ನು ಮಾಡಿದ್ದರಿಂದ
ಅದಕ್ಕಾಗುವ ದಂಡನೆಯನ್ನು ನಾನು ತಪ್ಪಿಸುವದೇ
ಇಲ್ಲ;
ಅದು ಜನರನ್ನು ಗುಂಪುಗುಂಪಾಗಿ ಸೆರೆಹಿಡಿದು
ಎದೋಮಿಗೆ ವಶಮಾಡಿಬಿಟ್ಟಿತಷ್ಟೆ.
7 ನಾನು ಗಾಜದ ಕೋಟೆಯ ಮೇಲೆ ಬೆಂಕಿಯನ್ನು
ಸುರಿಸುವೆನು.
ಅದು ಅದರ ಅರಮನೆಗಳನ್ನು ನುಂಗಿಬಿಡುವದು;
8 ನಾನು ಅಷ್ಡೋದಿನೊಳಗಿಂದ 1)ಸಿಂಹಾಸನಾ
ಸೀನನನ್ನೂ ಅಷ್ಕೆಲೋನಿನೊಳಗಿಂದ ರಾಜದಂಡ
ಧಾರಿಯನ್ನೂ ನಿರ್ಮೂಲಮಾಡಿ
ಎಕ್ರೋನಿನ ಮೇಲೆ ಕೈಯೆತ್ತುವೆನು;
ಉಳಿದ ಫಿಲಿಷ್ಟಿಯರೆಲ್ಲರೂ ನಾಶವಾಗಿಹೋಗು
ವರು.
ಇದು ಕರ್ತನಾದ ಯೆಹೋವನ ನುಡಿ.

ತೂರಿನ ಪಾಪವೂ ದಂಡನೆಯೂ.

9 ಯೆಹೋವನು ಇಂತೆನ್ನುತ್ತಾನೆ—
ತೂರ್ ಪಟ್ಟಣವು ಮೂರು ಹೌದು ನಾಲ್ಕು
ದ್ರೋಹಗಳನ್ನು ಮಾಡಿದ್ದರಿಂದ
ಅದಕ್ಕಾಗುವ ದಂಡನೆಯನ್ನು ನಾನು ತಪ್ಪಿಸುವದೇ
ಇಲ್ಲ;
ಅದು ಒಡಹುಟ್ಟಿದವರ ಒಡಂಬಡಿಕೆಯನ್ನು ಜ್ಞಾಪ
ಕಮಾಡಿಕೊಳ್ಳದೆ
ಜನರನ್ನು ಗುಂಪುಗುಂಪಾಗಿ ಎದೋಮಿಗೆ ವಶ
ಮಾಡಿಬಿಟ್ಟಿತಷ್ಟೆ;
10 ನಾನು ತೂರಿನ ಕೋಟೆಯ ಮೇಲೆ ಬೆಂಕಿಯನ್ನು
ಸುರಿಸುವೆನು;
ಅದು ಅದರ ಅರಮನೆಗಳನ್ನು ನುಂಗಿಬಿಡುವದು.

ಎದೋಮಿನ ಪಾಪವೂ ದಂಡನೆಯೂ.

11 ಯೆಹೋವನು ಇಂತೆನ್ನುತ್ತಾನೆ—
ಎದೋಮು ಮೂರು ಹೌದು ನಾಲ್ಕು ದ್ರೋಹ
ಗಳನ್ನು ಮಾಡಿದ್ದರಿಂದ
ಅದಕ್ಕಾಗುವ ದಂಡನೆಯನ್ನು ನಾನು ತಪ್ಪಿಸುವದೇ
ಇಲ್ಲ;
ಅದು ಕತ್ತಿಹಿಡಿದು ತನ್ನ ಸಹೋದರನನ್ನು ಹಿಂದಟ್ಟಿ
ಕರುಣೆಯನ್ನು ತೊರೆದು
ಸಿಟ್ಟಿನಿಂದ ಸದಾ ಸಿಗಿದುಬಿಡುತ್ತಾ
ತನ್ನ ಕೋಪವನ್ನು ಶಾಶ್ವತಮಾಡಿಕೊಂಡಿತಷ್ಟೆ.
ನಾನು ತೇಮಾನಿನ ಮೇಲೆ ಬೆಂಕಿಯನ್ನು ಸುರಿ
ಸುವೆನು,
ಅದು ಬೊಚ್ರದ ಅರಮನೆಗಳನ್ನು ನುಂಗಿಬಿಡು
ವದು.

ಅಮ್ಮೋನಿನ ಪಾಪವೂ ದಂಡನೆಯೂ.

ಯೆಹೋವನು ಇಂತೆನ್ನುತ್ತಾನೆ— 1
ಅಮ್ಮೋನ್ಯರು ಮೂರು ಹೌದು ನಾಲ್ಕು ದ್ರೋಹ
ಗಳನ್ನು ಮಾಡಿದ್ದರಿಂದ
ಅವರಿಗಾಗುವ ದಂಡನೆಯನ್ನು ನಾನು ತಪ್ಪಿಸು
ವದೇ ಇಲ್ಲ;
ಅವರು ತಮ್ಮ ದೇಶವನ್ನು ವಿಸ್ತರಿಸಬೇಕೆಂದು
ಗಿಲ್ಯಾದಿನ ಗರ್ಭಿಣಿಯರ ಹೊಟ್ಟೆಯನ್ನು ಸೀಳಿ
ಬಿಟ್ಟರಷ್ಟೆ.
ನಾನು ರಬ್ಬದ ಕೋಟೆಯಲ್ಲಿ ಬೆಂಕಿಯನ್ನು 1
ಉರಿಸುವೆನು,
ಅದು ಅದರ ಅರಮನೆಗಳನ್ನು ನುಂಗಿಬಿಡುವದು;
ಆ ಯುದ್ಧದಿನದಲ್ಲಿ ಆರ್ಭಟವಾಗುವದು,
ಆ ಸುಂಟರಗಾಳಿಯ ದಿವಸದಲ್ಲಿ ರೋಷಮಾರು
ತವು ಬೀಸುವದು;
ಅವರ ಅರಸನೂ ಅವನ ರಾಜ್ಯಾಧಿಕಾರಿಗಳೂ 1
ಒಟ್ಟಿಗೆ ಸೆರೆಯಾಗಿ ಹೋಗುವರು;
ಇದು ಯೆಹೋವನ ನುಡಿ.

ಮೋವಾಬಿನ ಪಾಪವೂ ದಂಡನೆಯೂ.

ಯೆಹೋವನು ಇಂತೆನ್ನುತ್ತಾನೆ— 2
ಮೋವಾಬು ಮೂರು ಹೌದು ನಾಲ್ಕು ದ್ರೋಹ
ಗಳನ್ನು ಮಾಡಿದ್ದರಿಂದ
ಅದಕ್ಕಾಗುವ ದಂಡನೆಯನ್ನು ನಾನು ತಪ್ಪಿಸುವದೇ
ಇಲ್ಲ;
ಅದು ಎದೋಮಿನ ಅರಸನ ಎಲುಬುಗಳನ್ನು
ಸುಟ್ಟು ಸುಣ್ಣಮಾಡಿತಷ್ಟೆ.
ನಾನು ಮೋವಾಬಿನ ಮೇಲೆ ಬೆಂಕಿಯನ್ನು ಸುರಿಸು
ವೆನು,
ಅದು ಕೆರೀಯೋತಿನ ಅರಮನೆಗಳನ್ನು ನುಂಗಿ
ಬಿಡುವದು;
ಭಟರು ಘೋಷಿಸಿ ಕೊಂಬೂದುವ ಯುದ್ಧಕೋ
ಲಾಹಲದಲ್ಲಿ ಮೋವಾಬು ಸಾಯುವದು.
ನಾನು ಅದರೊಳಗಿಂದ ಅಧಿಪತಿಯನ್ನು ಕಡಿದು
ಹಾಕಿ

1) ಅಥವಾ: ನಿವಾಸಿಗಳನ್ನು.

ಸಕಲರಾಜ್ಯಾಧಿಕಾರಿಗಳನ್ನೂ ಸಂಹರಿಸುವೆನು;
ಇದು ಯೆಹೋವನ ನುಡಿ.

ಯೆಹೂದದ ಪಾಪವೂ ದಂಡನೆಯೂ.

4 ಯೆಹೋವನು ಇಂತೆನ್ನುತ್ತಾನೆ.
ಯೆಹೂದವು ಮೂರು ಹೌದು ನಾಲ್ಕು ದ್ರೋಹಗಳನ್ನು ಮಾಡಿದ್ದರಿಂದ
ಅದಕ್ಕಾಗುವ ದಂಡನೆಯನ್ನು ನಾನು ತಪ್ಪಿಸುವದೇ ಇಲ್ಲ;
ಯೆಹೂದ್ಯರು ಯೆಹೋವನ ಧರ್ಮೋಪದೇಶವನ್ನು ನಿರಾಕರಿಸಿ
ಆತನ ವಿಧಿಗಳನ್ನು ಕೈಕೊಳ್ಳದೆ
ಅವರ ಪಿತೃಗಳು ಹಿಂಬಾಲಿಸಿದ ಸುಳ್ಳುದೇವತೆಗಳ ಮೂಲಕ ಸನ್ಮಾರ್ಗವನ್ನು ತಪ್ಪಿದರಷ್ಟೆ;
5 ಆದಕಾರಣ ನಾನು ಯೆಹೂದದ ಮೇಲೆ ಬೆಂಕಿಯನ್ನು ಸುರಿಸುವೆನು;
ಅದು ಯೆರೂಸಲೇಮಿನ ಅರಮನೆಗಳನ್ನು ನುಂಗಿಬಿಡುವದು.

ಇಸ್ರಾಯೇಲಿನ ಪಾಪವೂ ದಂಡನೆಯೂ.

6 ಯೆಹೋವನು ಇಂತೆನ್ನುತ್ತಾನೆ—
ಇಸ್ರಾಯೇಲು ಮೂರು ಹೌದು ನಾಲ್ಕು ದ್ರೋಹಗಳನ್ನು ಮಾಡಿದ್ದರಿಂದ
ಅದಕ್ಕಾಗುವ ದಂಡನೆಯನ್ನು ನಾನು ತಪ್ಪಿಸುವದೇ ಇಲ್ಲ;
ಇಸ್ರಾಯೇಲ್ಯರು 1)ನ್ಯಾಯವಂತನನ್ನು ಬೆಳ್ಳಿಗೆ ಮಾರುತ್ತಾರೆ,
2)ಒಂದು ಜೊತೆಕೆರದ ಸಾಲಕ್ಕಾಗಿ ದಿಕ್ಕಿಲ್ಲದವನನ್ನು ವಿಕ್ರಯಿಸುತ್ತಾರೆ;
7 3)ಬಡವನು ತಲೆಯ [ಮೇಲೆ ಎರಚಿಕೊಂಡ] ನೆಲದ ದೂಳನ್ನೂ ಆತುರವಾಗಿ ಆಶಿಸುತ್ತಾರೆ;
ದೀನರ ದಾರಿಗೆ ಅಡ್ಡಿಹಾಕುತ್ತಾರೆ;
ಮಗನೂ ತಂದೆಯೂ ಒಬ್ಬಳಲ್ಲೇ ಹೋಗಿ
ನನ್ನ ಪವಿತ್ರನಾಮವನ್ನು ಅಪಕೀರ್ತಿಗೆ ಗುರಿಮಾಡುತ್ತಾರೆ;
8 ಒಂದೊಂದು ಯಜ್ಞವೇದಿಯ ಹತ್ತಿರದಲ್ಲಿಯೂ ಅಡವಾಗಿ ಇಟ್ಟುಕೊಂಡ ಬಟ್ಟೆಗಳ ಮೇಲೆ ಮಲಗಿಕೊಳ್ಳುತ್ತಾರೆ;
ದಂಡಹಾಕಿಸಿಕೊಂಡವರ ದ್ರಾಕ್ಷಾರಸವನ್ನು ತಮ್ಮ ದೇವರ ಮಂದಿರದಲ್ಲಿಯೂ ಕುಡಿಯುತ್ತಾರೆ.
9 ಆಹಾ, ಅವರಿಗೆ ಎದುರಾಗಿ ನಿಂತ ಅಮೋರಿಯರನ್ನು ನಾನೇ ಧ್ವಂಸಮಾಡಿದೆನು;
ಆ ಶತ್ರುವು ದೇವದಾರು ಮರದಷ್ಟು ಎತ್ತರವಾಗಿ
ಅಲ್ಲೋನ್ ಮರದ ಹಾಗೆ ದೃಢವಾಗಿ ಇದ್ದರೂ
ಮೇಲೆ ಅದರ ಫಲವನ್ನು, ಕೆಳಗೆ ಅದರ ಬುಡವನ್ನು ನಾಶಪಡಿಸಿದೆನು.

[ಇಸ್ರಾಯೇಲ್ಯರೇ,] ಅಮೋರಿಯರ ದೇಶವನ್ನು 10
ನಿಮಗೆ ದೊರಕಿಸಬೇಕೆಂದು
ನಾನು ನಿಮ್ಮನ್ನು ಐಗುಪ್ತದೇಶದೊಳಗಿಂದ ಪಾರುಮಾಡಿ
ನಾಲ್ವತ್ತು ವರುಷ ಅರಣ್ಯದಲ್ಲಿ ನಡಿಸಿಕೊಂಡು ಬಂದೆನು,
ನಿಮ್ಮ ಪುತ್ರರಲ್ಲಿ ಪ್ರವಾದಿಗಳನ್ನೂ 11
ನಿಮ್ಮ ಯುವಕರಲ್ಲಿ 4)ಪ್ರತಿಷ್ಠಿತರನ್ನೂ ಸಿದ್ಧಪಡಿಸಿದೆನು.
ಇಸ್ರಾಯೇಲ್ಯರೇ, ಇದು ಸತ್ಯವಲ್ಲವೋ ಎಂದು ಯೆಹೋವನು ಅನ್ನುತ್ತಾನೆ.
ನೀವೋ ಆ 4)ಪ್ರತಿಷ್ಠಿತರಿಗೆ ದ್ರಾಕ್ಷಾರಸವನ್ನು ಕುಡಿಸಿದಿರಿ; 12
ಪ್ರವಾದಿಗಳಿಗೆ ಪ್ರವಾದನೆಮಾಡಬೇಡಿರೆಂದು ಕಟ್ಟುಮಾಡಿದಿರಿ.
ಇಗೋ, ನೀವು ನಿಂತಿರುವಲ್ಲಿಯೇ 13
ನಿಮ್ಮನ್ನು ಸಿವುಡು ತುಂಬಿದ ಗಾಡಿಯಷ್ಟು ಭಾರವಾಗಿ ಅಮುಕಿಬಿಡುವೆನು.
ವೇಗಿಗೂ ಓಡಿಹೋಗುವದಕ್ಕೆ ಶಕ್ತಿಯಿರದು, 14
ಬಲಿಷ್ಠನು ತನ್ನ ಬಲವನ್ನು ಸ್ಥಿರಪಡಿಸಿಕೊಳ್ಳನು,
ಪರಾಕ್ರಮಿಯು ತನ್ನ ಪ್ರಾಣವನ್ನು ಉಳಿಸಿಕೊಳ್ಳನು,
ಧನುರ್ಧಾರಿಯು ನಿಲ್ಲನು, ಪಾದತ್ವರಿತನು ತಪ್ಪಿಸಿಕೊಳ್ಳನು, 15
ಅಶ್ವಾರೂಢನು ತನ್ನನ್ನು ರಕ್ಷಿಸಿಕೊಳ್ಳನು;
ಆ ದಿನದಲ್ಲಿ ಶೂರರೊಳಗೆ ಧೀರನಾದವನೂ ಬೆತ್ತಲೆಯಾಗಿ ಓಡಿಹೋಗುವನು; 16
ಇದು ಯೆಹೋವನ ನುಡಿ.

ಇಸ್ರಾಯೇಲಿನ ವಿವಿಧಪಾಪವೂ ಘೋರ ದುರ್ಗತಿಯೂ. 3—6.

ಹೆಚ್ಚು ದಯೆಹೊಂದಿದವರಿಗೆ ದೋಷಫಲವೂ ಹೆಚ್ಚು.

ಇಸ್ರಾಯೇಲ್ಯರೇ, ಯೆಹೋವನು ನಿಮಗೆ ವಿರುದ್ಧವಾಗಿ, 3
ಅಂದರೆ ತಾನು ಐಗುಪ್ತದೇಶದೊಳಗಿಂದ ಪಾರುಮಾಡಿದ ಪೂರ್ಣಕುಲಕ್ಕೆ ವಿರುದ್ಧವಾಗಿ
ನುಡಿದಿರುವ ಈ ಮಾತನ್ನು ಕೇಳಿರಿ—
ಭೂಮಿಯ ಸಕಲಕುಲಗಳೊಳಗೆ ನಿಮ್ಮನ್ನು 2
ಮಾತ್ರ ನನ್ನವರೆಂದು ಅರಿತುಕೊಂಡಿದ್ದೇನೆ;
ಆದಕಾರಣ ನಿಮ್ಮ ಎಲ್ಲಾ ಪಾಪಗಳ ಫಲವನ್ನು ನಿಮಗೆ ತಿನ್ನಿಸುವೆನು.

ಪ್ರವಾದಿಯು ನಿಷ್ಕಾರಣವಾಗಿ ಖಂಡಿಸನು.

ಗೊತ್ತುಮಾಡಿಕೊಳ್ಳದೆ ಇಬ್ಬರು ಜೊತೆಯಾಗಿ 3
ನಡೆಯುವರೋ?

---

1) ಅಥವಾ: ನ್ಯಾಯವಂತನ ನ್ಯಾಯವನ್ನು. 2) ಅಥವಾ: ದಿಕ್ಕಿಲ್ಲದವನನ್ನು ಒಂದು ಜೊತೆಕೆರಕ್ಕೆ ಬದಲುಮಾಡುತ್ತಾರೆ. 3) ಪಾಠಾಂತರ: ಬಡವರ ತಲೆಯನ್ನು ನೆಲದ ಧೂಳಿಗೆ ತುಳಿದುಬಿಡುತ್ತಾರೆ. 4) ಮೂಲ: ನಾಜೀರರನ್ನೂ.

4 ಬೇಟೆಯಿಲ್ಲದೆ ಸಿಂಹವು ಅರಣ್ಯದಲ್ಲಿ ಗರ್ಜಿಸುವದೋ?
ಏನೂ ಹಿಡಿದುಕೊಂಡಿರದೆ ಪ್ರಾಯದ ಸಿಂಹವು ಗವಿಯಲ್ಲಿ ಗುರುಗುಟ್ಟುವದೋ?
5 ಕಾಳಿಲ್ಲದೆ ಪಕ್ಷಿಯು ನೆಲದಲ್ಲಿನ ಬಲೆಯೊಳಗೆ ಬೀಳುವದೋ?
ಏನೂ ಸಿಕ್ಕಿಕೊಳ್ಳದೆ ಬೋನು ಮೇಲಕ್ಕೆ ಹಾರುವದೋ?
6 ಊರಲ್ಲಿ ಕೊಂಬೂದಿದರೆ ಜನರು ಅಂಜರೋ?
ಯೆಹೋವನಿಂದಲ್ಲದೆ ಊರಿಗೆ ವಿಪತ್ತು ಸಂಭವಿಸುವದೋ?
7 ಕರ್ತನಾದ ಯೆಹೋವನು ತನ್ನ ಸೇವಕರಾದ ಪ್ರವಾದಿಗಳಿಗೆ ತನ್ನ ರಹಸ್ಯವನ್ನು ತಿಳಿಸದೆ ಏನೂ ಮಾಡನು.
8 ಸಿಂಹವು ಗರ್ಜಿಸಿದೆ, ಭಯಪಡದವರು ಯಾರು?
ಕರ್ತನಾದ ಯೆಹೋವನು ನುಡಿದಿದ್ದಾನೆ, ಆ ನುಡಿಯನ್ನು ಸಾರದಿರುವವರು ಯಾರು?

### ಸಮಾರ್ಯ ಪಟ್ಟಣದ ಧ್ವಂಸ.

9 ಅಷ್ಡೋದಿನ [1]ಅರಮನೆಗಳಲ್ಲಿಯೂ ಐಗುಪ್ತದೇಶದ ಸೌಧಗಳಲ್ಲಿಯೂ ಹೀಗೆ ಪ್ರಕಟಿಸಿರಿ—
ಸಮಾರ್ಯದ ಬೆಟ್ಟಗಳಲ್ಲಿ ಕೂಡಿಬನ್ನಿರಿ,
ಪಟ್ಟಣದೊಳಗೆ ಎಷ್ಟೆಷ್ಟೋ ಗದ್ದಲಗಳೂ ಹಿಂಸೆಗಳೂ ನಡೆಯುತ್ತವೆ ನೋಡಿರಿ.
10 ತಮ್ಮ ಉಪ್ಪರಿಗೆಗಳಲ್ಲಿ ಬಾಧೆಕೊಳ್ಳೆಗಳಿಂದ ಸಂಪಾದಿಸಿದ್ದನ್ನು
ಕೂಡಿಸಿಟ್ಟುಕೊಂಡಿರುವವರು ನ್ಯಾಯವಾಗಿ ನಡೆಯಲು ಅರಿಯರು;
ಇದು ಯೆಹೋವನ ನುಡಿ.
11 ಹೀಗಿರಲು ಕರ್ತನಾದ ಯೆಹೋವನು ಇಂತೆನ್ನುತ್ತಾನೆ—
ಶತ್ರುವು ನಿನ್ನ ದೇಶವನ್ನು ಮುತ್ತಿಕೊಳ್ಳುವನು,
ನಿನ್ನ ಶಕ್ತಿಯನ್ನು ಕುಂದಿಸಿಬಿಡುವನು,
ನಿನ್ನ ಅರಮನೆಗಳು ಸೂರೆಯಾಗುವವು.
12 ಯೆಹೋವನು ಇಂತೆನ್ನುತ್ತಾನೆ—
ಸಿಂಹದ ಬಾಯೊಳಗಿಂದ ಎರಡು ಕಾಲುಗಳಾಗಲಿ ಕಿವಿಯ ತುಂಡಾಗಲಿ
ಹೇಗೆ ಕುರುಬನಿಂದ ರಕ್ಷಿಸಲ್ಪಡುವದೋ
ಹಾಗೆಯೇ ಸಮಾರ್ಯದೊಳಗೆ ಗದ್ದುಗೆಯ ಮೂಲೆಯಲ್ಲಿಯೂ
ಮಂಚದ ಪಟ್ಟೇದಿಂಬುಗಳಲ್ಲಿಯೂ
ಒರಗಿಕೊಳ್ಳುವ ಇಸ್ರಾಯೇಲ್ಯರು [ಸ್ವಲ್ಪಭಾಗ ಮಾತ್ರ] ರಕ್ಷಿಸಲ್ಪಡುವದು.
13 ಸೇನಾಧೀಶ್ವರ ದೇವನಾದ ಯೆಹೋವನು ಇಂತೆನ್ನುತ್ತಾನೆ—
ಕೇಳಿರಿ, ಯಾಕೋಬ ವಂಶದವರಿಗೆ ಎಚ್ಚರ ಹೇಳಿರಿ;
ನಾನು ಇಸ್ರಾಯೇಲಿನ ದ್ರೋಹಗಳಿಗಾಗಿ ಅದಕ್ಕೆ ಮುಯ್ಯಿತೀರಿಸುವ ದಿನದಲ್ಲಿ
ಬೇತೇಲಿನ ಯಜ್ಞವೇದಿಗಳನ್ನು ಧ್ವಂಸಮಾಡುವೆನು;
ಯಜ್ಞವೇದಿಯ ಕೊಂಬುಗಳು ಕತ್ತರಿಸಲ್ಪಟ್ಟು ನೆಲದ ಪಾಲಾಗುವವು.
ನಾನು ಚಳಿಗಾಲದ ಅರಮನೆಯನ್ನೂ
ಬೇಸಿಗೆಯ ಅರಮನೆಯನ್ನೂ ಹೊಡೆದುಹಾಕುವೆನು;
ದಂತಮಂದಿರಗಳು ಹಾಳಾಗುವವು,
ಮಹಾಸೌಧಗಳು ಕೊನೆಗಾಣುವವು;
ಇದು ಯೆಹೋವನ ನುಡಿ.

### ಸಮಾರ್ಯದ ಸ್ತ್ರೀಯರ ಖಂಡನೆ.

ಸಮಾರ್ಯಬೆಟ್ಟದಲ್ಲಿನ ಬಾಷಾನಿನ ಆಕಳುಗಳೇ,
ಬಡವರನ್ನು ಹಿಂಸಿಸಿ ದಿಕ್ಕಿಲ್ಲದವರನ್ನು ಜಜ್ಜಿ
ನಿಮ್ಮ ಪತಿಗಳಿಗೆ—ಪಾನವನ್ನು ತರಿಸಿರಿ, ಕುಡಿಯೋಣ ಎಂದು ಹೇಳುವವರೇ, ಈ ಮಾತನ್ನು ಕೇಳಿರಿ.
ಕರ್ತನಾದ ಯೆಹೋವನು ತನ್ನ ಪರಿಶುದ್ಧತ್ವದ ಮೇಲೆ ಆಣೆಯಿಟ್ಟು—
ಇಗೋ, ನಿಮ್ಮನ್ನು ಕೊಂಡಿಗಳಿಂದಲೂ
ನಿಮ್ಮಲ್ಲಿ ಉಳಿದವರನ್ನು ಮೀನುಗಾಳಗಳಿಂದಲೂ
ಎಳೆದುಕೊಂಡು ಹೋಗುವ ದಿನಗಳು
ನಿಮಗೆ ಬರುತ್ತವೆ ಎಂದು ಪ್ರಮಾಣಮಾಡಿದ್ದಾನೆ.
ನೀವೆಲ್ಲರು ಇದ್ದ ಮುಖವಾಗಿಯೇ ಕೋಟೆಯೊಡೆದ ಸ್ಥಳಗಳಿಂದ ಹೊರಟು
[2]ಹರ್ಮೋನಿಗೆ ಹಾಕಿಸಿಕೊಳ್ಳುವಿರಿ;
ಇದು ಯೆಹೋವನ ನುಡಿ.

### ಕೇವಲ ಆಚಾರಗಳು ವ್ಯರ್ಥ.

ಬೇತೇಲಿಗೆ ಬಂದು ದ್ರೋಹಮಾಡಿರಿ,
ಗಿಲ್ಗಾಲಿನಲ್ಲಿ ನೆರೆದು ದ್ರೋಹವನ್ನು ಇನ್ನೂ ಹೆಚ್ಚಿಸಿರಿ;
ಪ್ರತಿದಿನ ಬೆಳಗ್ಗೆ ನಿಮ್ಮ ಯಜ್ಞಗಳನ್ನು ಅರ್ಪಿಸಿರಿ,
ಮೂರು ದಿನಕ್ಕೆ ಒಂದು ಸಲ ದಶಮಾಂಶವನ್ನು ಸಲ್ಲಿಸಿರಿ,
ಹುಳಿಹಿಟ್ಟನ್ನು ಕೃತಜ್ಞತಾರ್ಪಣವಾಗಿ ಹೋಮಮಾಡಿರಿ,
[ಕೊಟ್ಟ] ಕಾಣಿಕೆಗಳನ್ನು ಪ್ರಕಟಿಸಿರಿ, ಸಾರಿಕೊಳ್ಳಿರಿ;
ಇಸ್ರಾಯೇಲ್ಯರೇ, ಹೀಗೆ ಮಾಡುವದು ನಿಮಗಿಷ್ಟವಷ್ಟೆ;
ಇದು ಕರ್ತನಾದ ಯೆಹೋವನ ನುಡಿ.

---

1) ಅಥವಾ: ಅರಮನೆಗಳ ಮೇಲೂ . . . . ಸೌಧಗಳ ಮೇಲೂ ನಿಂತುಕೊಂಡು. 2) ಮೂಲಾರ್ಥವು ನಿಶ್ಚಿತವಿಲ್ಲ.

ದಂಡನೆಯಿಂದ ಮಾರ್ಗಕ್ಕೆ ಬಾರದವರಿಗೆ ಹೆಚ್ಚು ದಂಡನೆಯು ಅವಶ್ಯ.

6 ನಿಮ್ಮ ಊರುಗಳಲ್ಲೆಲ್ಲಾ ನಿಮ್ಮ ಹಲ್ಲಿಗೆ ಏನೂ ಸಿಕ್ಕದಂತೆಯೂ
ನಿಮ್ಮ ಸಕಲ ನಿವಾಸಗಳಲ್ಲಿ ಅನ್ನದ ಕೊರತೆಯಾಗುವ ಹಾಗೂ ಮಾಡಿದೆನು;
ಹೀಗೂ ನೀವು ನನ್ನ ಕಡೆಗೆ ಹಿಂದಿರುಗಲಿಲ್ಲ ಎಂದು ಯೆಹೋವನು ನುಡಿಯುತ್ತಾನೆ.
7 ಸುಗ್ಗಿಗೆ ಮೂರು ತಿಂಗಳು ಕಳೆಯಬೇಕಾದಾಗಲೂ ನಿಮಗೆ ಮಳೆಯನ್ನು ತಡೆದೆನು;
ಒಂದು ಊರಿನ ಮೇಲೆ ಮಳೆಯಾಗುವಂತೆಯೂ
ಇನ್ನೊಂದು ಊರಿನ ಮೇಲೆ ಮಳೆಯಾಗದಂತೆಯೂ ಮಾಡಿದೆನು;
ಒಬ್ಬನ ಹೊಲದಲ್ಲಿ ಮಳೆಯಾಯಿತು,
ಮಳೆಯಾಗದ ಹೊಲವು ಬಾಡಿಹೋಯಿತು.
8 ಎರಡು ಮೂರು ಊರಿನವರು ನೀರು ಕುಡಿಯುವದಕ್ಕೆ
ಮತ್ತೊಂದು ಊರಿಗೆ ಬಳಲುತ್ತಾ ಹೋಗುತ್ತಿದ್ದರು;
ಬಾಯಾರಿಕೆ ತೀರಲಿಲ್ಲ;
ಹೀಗೂ ನೀವು ನನ್ನ ಕಡೆಗೆ ಹಿಂದಿರುಗಲಿಲ್ಲ ಎಂದು ಯೆಹೋವನು ನುಡಿಯುತ್ತಾನೆ.
9 ನಿಮ್ಮನ್ನು ಬೂದಿಯಿಂದಲೂ ಬಿಸಿಗಾಳಿಯಿಂದಲೂ ಬಾಧಿಸಿದೆನು;
ನಿಮ್ಮ ಲೆಕ್ಕವಿಲ್ಲದ ವನ, ದ್ರಾಕ್ಷೆಯ ತೋಟ, ಅಂಜೂರದ ಗಿಡ, ಎಣ್ಣೆಯ ಮರ,
ಇವುಗಳನ್ನು ಮಿಡತೆಯು ತಿಂದುಬಿಟ್ಟಿತು;
ಹೀಗೂ ನೀವು ನನ್ನ ಕಡೆಗೆ ಹಿಂದಿರುಗಲಿಲ್ಲ ಎಂದು ಯೆಹೋವನು ನುಡಿಯುತ್ತಾನೆ.
10 ಐಗುಪ್ತದ ವ್ಯಾಧಿಗಳಂಥ ವ್ಯಾಧಿಯನ್ನು ನಿಮಗೆ ಕಳುಹಿಸಿದೆನು;
ನಿಮ್ಮ ಯುವಕರನ್ನು ಖಡ್ಗದಿಂದ ಹತಿಸಿದೆನು,
ನಿಮ್ಮ ಅಶ್ವಗಳನ್ನು ಸೂರೆಮಾಡಿಸಿದೆನು;
ನಿಮ್ಮ ದಂಡಿನ ಗಬ್ಬು ನಿಮ್ಮ ಮೂಗಿಗೆ ಬಡಿಯುವಂತೆ ಮಾಡಿದೆನು;
ಹೀಗೂ ನೀವು ನನ್ನ ಕಡೆಗೆ ಹಿಂದಿರುಗಲಿಲ್ಲ ಎಂದು ಯೆಹೋವನು ನುಡಿಯುತ್ತಾನೆ.
11 ಸೊದೋಮ್‌ಗೊಮೋರಗಳನ್ನು ಕೆಡವಿದಂತೆ
ನಾನು ನಿಮ್ಮ ಅನೇಕ ಪಟ್ಟಣಗಳನ್ನು ಕೆಡವಲು
ಉರಿಯಿಂದ ಎಳೆದ ಕೊಳ್ಳಿಯ ಹಾಗಿದ್ದಿರಿ;
ಹೀಗೂ ನೀವು ನನ್ನ ಕಡೆಗೆ ಹಿಂದಿರುಗಲಿಲ್ಲ ಎಂದು ಯೆಹೋವನು ನುಡಿಯುತ್ತಾನೆ.
12 ಆದಕಾರಣ, ಇಸ್ರಾಯೇಲೇ, ನಾನು ನಿನಗೆ ಮಾಡುತ್ತೇನೆ;
ನಾನು ಮಾಡಬೇಕೆಂದಿರುವದರಿಂದ,
ಇಸ್ರಾಯೇಲೇ, ನಿನ್ನ ದೇವರ ಬರುವಿಕೆಗೆ ನಿನ್ನನ್ನು ಸಿದ್ಧಮಾಡಿಕೋ,
ಇಗೋ, ಪರ್ವತಗಳನ್ನು ರೂಪಿಸಿ ವಾಯುವನ್ನು ಸೃಷ್ಟಿಸಿ 13
1)ತನ್ನ ಸಂಕಲ್ಪವನ್ನು ಮನುಷ್ಯರಿಗೆ ವ್ಯಕ್ತಗೊಳಿಸಿ
ಉದಯವನ್ನು ಅಂಧಕಾರವನ್ನಾಗಿ ಮಾಡಿ
ಭೂಮಿಯ ಉನ್ನತಪ್ರದೇಶಗಳಲ್ಲಿ ನಡೆಯುವಾತನಿಗೆ
ಸೇನಾಧೀಶ್ವರದೇವರಾದ ಯೆಹೋವನೆಂಬದೇ ನಾಮಧೇಯ.

ಪ್ರಲಾಪವೂ ಪ್ರಬೋಧನೆಯೂ.

ಇಸ್ರಾಯೇಲ್ ವಂಶದವರೇ, ನಾನು ನಿಮ್ಮ ವಿಷ 5
ಯದಲ್ಲಿ ಶೋಕಗೀತವಾಗಿ ಎತ್ತುವ ಈ ಮಾತನ್ನು ಕೇಳಿರಿ—
ಇಸ್ರಾಯೇಲೆಂಬ ಯುವತಿಯು ಬಿದ್ದಿದ್ದಾಳೆ, 2
ಮತ್ತೆ ಏಳಳು;
ದಿಕ್ಕಿಲ್ಲದೆ ತನ್ನ ನೆಲದ ಮೇಲೆ ಎರಗಿದ್ದಾಳೆ;
ಅವಳನ್ನೆತ್ತಲು ಯಾರೂ ಇಲ್ಲ.
ಕರ್ತನಾದ ಯೆಹೋವನು ಇಂತೆನ್ನುತ್ತಾನೆ— 3
ಒಂದು ಪಟ್ಟಣದಿಂದ ಯುದ್ಧಕ್ಕೆ ಹೊರಟ ಸಾವಿರ ಭಟರಲ್ಲಿ ನೂರು ಮಂದಿ ಉಳಿಯುವರು;
ಒಂದು ಊರಿಂದ ಹೊರಟ ನೂರು ದಂಡಾಳುಗಳಲ್ಲಿ ಇಸ್ರಾಯೇಲ್ ವಂಶಕ್ಕೆ ಹತ್ತು ಜನ ನಿಲ್ಲುವರು.
ಯೆಹೋವನು ಇಸ್ರಾಯೇಲ್ ವಂಶಕ್ಕೆ ಹೀಗೆ 4
ನುಡಿಯುತ್ತಾನೆ—
ನನ್ನನ್ನೇ ಆಶ್ರಯಿಸಿ ಬದುಕಿಕೊಳ್ಳಿರಿ;
ಬೇತೇಲನ್ನು ಆಶ್ರಯಿಸಬೇಡಿರಿ, 5
ಗಿಲ್ಗಾಲನ್ನು ಸೇರಬಾರದು, ಬೇರ್ಷೆಬಕ್ಕೆ ಯಾತ್ರೆ ಹೋಗದಿರಿ;
ಗಿಲ್ಗಾಲು ಗಡೀಪಾರಾಗುವದು,
ಬೇತೇಲು ಬೈಲಾಗುವದು.
ಯೆಹೋವನ ಕಡೆಗೆ ತಿರುಗಿಕೊಳ್ಳಿರಿ, ಬದುಕು 6
ವಿರಿ,
ತಿರುಗಿಕೊಳ್ಳದಿದ್ದರೆ ಆತನು ಬೆಂಕಿಯೋಪಾದಿಯಲ್ಲಿ ಯೋಸೇಫನ ವಂಶದೊಳಗೆ ನುಗ್ಗಿಯಾನು;
ನುಂಗುವ ಆತನ ರೋಷಾಗ್ನಿಯನ್ನು ಆರಿಸುವದಕ್ಕೆ ಬೇತೇಲಿನಲ್ಲಿ ಯಾರೂ ಇರರು.
ನ್ಯಾಯವನ್ನು ಕಹಿಮಾಡುವವರೇ, ಧರ್ಮವನ್ನು 7
ನೆಲಕ್ಕೆ ಕೆಡವಿಬಿಡುವವರೇ,
ಕೃತ್ತಿಕೆಯನ್ನೂ ಮೃಗಶಿರವನ್ನೂ ಸೃಷ್ಟಿಸಿ ಕಾರ್ಗ 8
ತ್ತಲನ್ನು ಬೆಳಕನ್ನಾಗಿ ಮಾಡಿ
ಹಗಲನ್ನು ಇರುಳಿಗೆ ಮಾರ್ಪಡಿಸಿ ಸಾಗರದ ಜಲವನ್ನು ಬರಮಾಡಿಕೊಂಡು
ಭೂಮಂಡಲದ ಮೇಲೆ ಸುರಿಯುವಾತನ ಕಡೆಗೆ ತಿರುಗಿಕೊಳ್ಳಿರಿ;
ಯೆಹೋವನೆಂಬದೇ ಆತನ ನಾಮಧೇಯ;

1) ಅಥವಾ: ಮನುಷ್ಯರ ಅಂತರಂಗಾಲೋಚನೆಗಳನ್ನು ಅವರಿಗೆ ಗೋಚರಪಡಿಸಿ.

9 ಬಲಿಷ್ಠರಿಗೆ ಧ್ವಂಸವನ್ನು ತಟ್ಟನೆ ಒಡ್ಡಿ
ಕೋಟೆಗೆ ನಾಶನವನ್ನು ತರುವವನು ಆತನೇ.
10 ಕಂಡ ದೋಷವನ್ನು ಚಾವಡಿಯಲ್ಲಿ ಖಂಡಿಸುವವರ
ಮೇಲೆ 1)ಹಗೆತೋರಿಸುತ್ತೀರಿ,
ಯಥಾರ್ಥವಾದಿಯನ್ನು ದ್ವೇಷಿಸುತ್ತೀರಿ.
11 ನೀವು ಬಡವರನ್ನು ತುಳಿದು
ಅವರಿಂದ ಗೋದಿಯನ್ನು ಬಿಟ್ಟಿತೆಗೆದುಕೊಂಡ
ಕಾರಣ
ಕೆತ್ತಿದ ಕಲ್ಲಿನಿಂದ ನೀವು ಕಟ್ಟಿಕೊಂಡ ಮನೆಗಳ
ಲ್ಲಿ ವಾಸಿಸದೆ ಇರುವಿರಿ,
ಮಾಡಿಕೊಂಡ ಒಳ್ಳೊಳ್ಳೆಯ ತೋಟಗಳ ದ್ರಾಕ್ಷಾ
ರಸವನ್ನು ಕುಡಿಯರಿ.
12 ಶಿಷ್ಟಹಿಂಸಕರೇ. ಲಂಚಕೋರರೇ,
ಚಾವಡಿಯಲ್ಲಿ ದರಿದ್ರರ ನ್ಯಾಯವನ್ನು ತಪ್ಪಿಸು
ವವರೇ,
ನಿಮ್ಮ ದ್ರೋಹಗಳು ಬಹಳ, ನಿಮ್ಮ ಪಾಪಗಳು
ಪ್ರಬಲ, ನನಗೆ ಗೊತ್ತಿದೆ.
13 ಇಂಥ ಕಾಲದಲ್ಲಿ ವಿವೇಕಿಯು ಸುಮ್ಮನಿರುವನು;
ಇದು ದುಷ್ಕಾಲವೇ ಸರಿ.
14 ಕೆಟ್ಟದ್ದನ್ನಲ್ಲ, ಒಳ್ಳೆಯದನ್ನು ಅನುಸರಿಸಿರಿ,
ಬಾಳುವಿರಿ;
ನೀವು ಅಂದುಕೊಂಡಂತೆ ಸೇನಾಧೀಶ್ವರದೇವರಾದ
ಯೆಹೋವನು ನಿಮ್ಮ ಸಂಗಡ ಇರುವನು.
15 ಕೆಟ್ಟದ್ದನ್ನು ದ್ವೇಷಿಸಿರಿ, ಒಳ್ಳೇದನ್ನು ಪ್ರೀತಿಸಿರಿ,
ಚಾವಡಿಯಲ್ಲಿ ನ್ಯಾಯವನ್ನು ಸ್ಥಾಪಿಸಿರಿ;
ಒಂದು ವೇಳೆ ಸೇನಾಧೀಶ್ವರದೇವರಾದ ಯೆಹೋ
ವನು ಯೋಸೇಫನ ವಂಶದಲ್ಲಿ ಉಳಿದವರಿಗೆ
ಪ್ರಸನ್ನನಾದಾನು.
16 ಸೇನಾಧೀಶ್ವರದೇವರಾದ ಯೆಹೋವಕರ್ತನು
ಇಂತೆನ್ನುತ್ತಾನೆ—
ಎಲ್ಲಾ ಚೌಕಗಳಲ್ಲಿ ಕಿರಿಚಾಟವಾಗುವದು.
ಸಕಲ ಬೀದಿಗಳಲ್ಲಿ ಅಯ್ಯಯ್ಯೋ ಎಂದು ಅರಚಿ
ಕೊಳ್ಳುವರು;
ರೈತರನ್ನು ಪ್ರಲಾಪಿಸುವದಕ್ಕೂ ಗೋಳಾಟದವ
ರನ್ನು ಗೋಳಿಡುವದಕ್ಕೂ ಕರೆಯುವರು.
17 ಎಲ್ಲಾ ದ್ರಾಕ್ಷೆಯ ತೋಟಗಳಲ್ಲಿ ರೋದನವಾಗು
ವದು;
ಏಕಂದರೆ ನಾನು ನಿಮ್ಮ ನಡುವೆ [ಸಂಹಾರಕನಾಗಿ]
ಹಾದುಹೋಗುವೆನು;
ಇದು ಯೆಹೋವನ ನುಡಿ,

ಯೆಹೋವನ ದಿನವು ದುಷ್ಟರಿಗೆ ದುರ್ದಿನ.

18 ಯೆಹೋವನ ದಿನವನ್ನು ನಿರೀಕ್ಷಿಸಿಕೊಂಡಿರುವ
ವರೇ, ನಿಮ್ಮ ಗತಿಯನ್ನು ಏನು ಹೇಳಲಿ!
ಯೆಹೋವನ ದಿನವು ನಿಮಗೇಕೆ?
ಅದು ಬೆಳಕಲ್ಲ, ಕತ್ತಲೆಯೇ.
ಸಿಂಹದ ಕಡೆಯಿಂದ ಓಡಿದವನಿಗೆ ಕರಡಿಯು
ಎದುರುಬಿದ್ದಂತಾಗುವದು;
ಅವನು ಮನೆಗೆ ಓಡಿಬಂದು ಕೈಯನ್ನು ಗೋಡೆಯ
ಮೇಲೆ ಊರಲು
ಹಾವು ಕಚ್ಚಿದ ಹಾಗಾಗುವದು.
ಯೆಹೋವನ ದಿನವು ಕತ್ತಲೆಯೇ ಸರಿ, ಬೆ
ಕಲ್ಲವಲ್ಲಾ;
ಹೌದು, ಯಾವ ಮಿಣುಕೂ ಇಲ್ಲದ ಗಾಢಾಂಧ
ಕಾರವೇ.
ನಿಮ್ಮ ಜಾತ್ರೆಗಳನ್ನು ಹಗೆಮಾಡುತ್ತೇನೆ, ತುಚ್ಛೀ
ಕರಿಸುತ್ತೇನೆ,
ನಿಮ್ಮ ಉತ್ಸವಗಳ ವಾಸನೆಯೇ ನನಗೆ ಬೇಡ.
ನೀವು ನನಗೆ ಸರ್ವಾಂಗಹೋಮಗಳನ್ನೂ ಧಾನ್ಯ
ನೈವೇದ್ಯಗಳನ್ನೂ ಅರ್ಪಿಸಿದರೂ ಸ್ವೀಕರಿಸೆನು
ಸಮಾಧಾನದ ಯಜ್ಞವಾಗಿ ನೀವು ಒಪ್ಪಿಸುವ
ಕೊಬ್ಬಿದ ಪಶುಗಳನ್ನು ನೋಡೆನು.
ನಿಮ್ಮ ಗೀತಧ್ವನಿಯನ್ನು ನನ್ನಿಂದ ತೊಲಗಿಸಿರಿ;
ನಿಮ್ಮ ವೀಣಾನಾದಕ್ಕೆ ಕಿವಿಗೊಡೆನು.
ನ್ಯಾಯವು ಹೊಳೆಯ ಹಾಗೆ ಹರಿಯಲಿ,
ಧರ್ಮವು ಮಹಾನದಿಯಂತೆ ಪ್ರವಹಿಸಲಿ.
ಇಸ್ರಾಯೇಲ್ ವಂಶದವರೇ, ನೀವು ಅರಣ್ಯದಲ್ಲಿ
ನಾಲ್ವತ್ತು ವರುಷ
ನನಗೆ ಯಜ್ಞಗಳನ್ನೂ ಧಾನ್ಯನೈವೇದ್ಯಗಳನ್ನೂ
ಅರ್ಪಿಸುತ್ತಿದ್ದಿರೋ?
2)3)ಸಿಕ್ಕೂತ್ ಎಂಬ ನಿಮ್ಮ ಒಡೆಯನನ್ನು,
ಕಿಯೂನ್ ಎಂಬ ನಿಮ್ಮ ನಕ್ಷತ್ರದೇವತೆಯನ್ನು
ಅಂದರೆ ನಿರ್ಮಿಸಿಕೊಂಡಿರುವ ನಿಮ್ಮ ಮೂರ್ತಿಗ
ಳನ್ನು
ನೀವು ಹೊತ್ತುಕೊಂಡು ಹೋಗಬೇಕಾಗುವದು
ನಾನು ನಿಮ್ಮನ್ನು ದಮಸ್ಕದ ಆಚೆ ಸೆರೆಗೆ ತಳ್ಳು
ವೆನು;
ಸೇನಾಧೀಶ್ವರದೇವರೆಂಬ ಯೆಹೋವನು ಇದನ್ನು
ನುಡಿದಿದ್ದಾನೆ.

ಇಸ್ರಾಯೇಲಿನ ಪ್ರಮುಖರ ಭೋಗ, ಮುಂದಿನ ದೌರ್ಭಾಗ್ಯ.

ಅಯ್ಯೋ, ಚೀಯೋನಿನಲ್ಲಿ ನೆಮ್ಮದಿಯಾಗಿರು
ವವರ ಗತಿಯನ್ನು ಏನೆಂದು ಹೇಳಲಿ!
ಪ್ರಮುಖಜನಾಂಗದಲ್ಲಿ ಹೆಸರುಗೊಂಡು ಇಸ್ರಾ
ಯೇಲ್ಯರ ನ್ಯಾಯವಿಚಾರಕರಾಗಿ
ಸಮಾರ್ಯದ ಬೆಟ್ಟದಲ್ಲಿ ನಿಶ್ಚಿಂತರಾಗಿರುವವರ
ಪಾಡನ್ನು ಎಂಥದೆನ್ನಲಿ!
ಕಲ್ನೆಗೆ ಹೋಗಿ ನೋಡಿರಿ,

1) ಮೂಲ: ಹಗೆತೋರಿಸುತ್ತಾರೆ . . . ದ್ವೇಷಿಸುತ್ತಾರೆ. 2) ಇಬ್ರಿಯ ಮೂಲವು ಕೇವಲ ಅಸ್ಪಷ್ಟ. ಮೇಲಿನ ಭಾಷಾಂ
ಗ್ರೀಕ್‌ಪಾಠದ ಪದಕ್ರಮವನ್ನು ಅನುಸರಿಸಿದೆ. ಅಥವಾ: ಸಿಕ್ಕೂತ್ ಎಂಬ ನಿಮ್ಮ ಒಡೆಯನನ್ನೂ ನಿರ್ಮಿಸಿಕೊಂಡಿರುವ ಕಿಯೂನ್
ನಿಮ್ಮ ದೇವತೆಯ ನಕ್ಷತ್ರರೂಪವಾದ ನಿಮ್ಮ ವಿಗ್ರಹಗಳನ್ನೂ ಹೊತ್ತುಕೊಂಡು ಹೋಗಬೇಕಾಗುವುದು. 3) ಪಾಠಾಂತರ: ಮೊಲೊ
ಗುಡಾರವನ್ನು.

ಅಲ್ಲಿಂದ ಮಹಾ ಪಟ್ಟಣವಾದ ಹಮಾತಿಗೆ
ತೆರಳಿರಿ,
ಆ ಮೇಲೆ ಫಿಲಿಷ್ಟಿಯರ ಗತ್ ಊರಿಗೆ ಇಳಿ
ಯಿರಿ;
ಅವು ಈ ರಾಜ್ಯಗಳಿಗಿಂತ ಶ್ರೇಷ್ಠವೋ?
ಅವುಗಳ ಪ್ರಾಂತವು ನಿಮ್ಮ ಪ್ರಾಂತಕ್ಕಿಂತ ದೊಡ್ಡ
ದ್ದೋ?
3 ಆಹಾ, ಆ ಮುಖಂಡರು ಆಪತ್ತಿನ ದಿನದ
ಯೋಚನೆಯನ್ನು ದೂರಕ್ಕೆ ತಳ್ಳುತ್ತಾರೆ,
ಅನ್ಯಾಯದ ಪೀಠವನ್ನು ಹತ್ತಿರಕ್ಕೆ ತಂದುಕೊಳ್ಳು
ತ್ತಾರೆ;
4 ದಂತದ ಮಂಚಗಳ ಮೇಲೆ ಮಲಗುತ್ತಾರೆ,
ತಮ್ಮ ಗದ್ದುಗೆಗಳಲ್ಲಿ ಹಾಯಾಗಿ ಒರಗಿಕೊಳ್ಳು
ತ್ತಾರೆ;
ಹಿಂಡಿನ ಮರಿಗಳನ್ನೂ ಕೊಟ್ಟಿಗೆಯ ಕರುಗಳನ್ನೂ
ತಿನ್ನುತ್ತಾರೆ;
5 ವೀಣೆಯ ಮೇಲೆ ಮನಸ್ಸುಬಂದಂತೆ ಹಾಡು
ತ್ತಾರೆ;
ದಾವೀದನ ಹಾಗೆ ವಾದ್ಯಗಳನ್ನು ಕಲ್ಪಿಸಿಕೊಳ್ಳು
ತ್ತಾರೆ,
6 ದ್ರಾಕ್ಷಾರಸವನ್ನು ಬೋಗುಣಿಗಳಲ್ಲಿ ಕುಡಿಯು
ತ್ತಾರೆ,
ಉತ್ತಮೋತ್ತಮ ತೈಲಗಳನ್ನು ಹಚ್ಚಿಕೊಳ್ಳುತ್ತಾರೆ,
ಆದರೆ ಯೋಸೇಫಿನ ಗಾಯಕ್ಕೆ ಮರುಗರು.
7 ಹೀಗಿರಲು ಸೆರೆಗೆ ಒಯ್ಯಲ್ಪಡುವವರ ಮುಂದು
ಗಡೆ ಅವರು ಸೆರೆಗೆ ಹೋಗುವರು;
ಒರಗಿಕೊಳ್ಳುವವರ ಹರ್ಷಧ್ವನಿಯು ನಿಂತುಹೋ
ಗುವದು.
8 ಸೇನಾಧೀಶ್ವರದೇವರಾದ ಯೆಹೋವನ ನುಡಿಯ
ನ್ನು ಕೇಳಿರಿ—
ಕರ್ತನಾದ ಯೆಹೋವನು ತನ್ನ ಮೇಲೆ ಆಣೆ
ಯಿಟ್ಟು ಹೀಗಂದಿದ್ದಾನೆ—
ನಾನು ಯಾಕೋಬಿನ ಅಟ್ಟಹಾಸಕ್ಕೆ ಅಸಹ್ಯಪಟ್ಟು
ಅದರ ಸೌಧಗಳನ್ನು ಹಗೆಮಾಡುತ್ತೇನೆ;
ಆದದರಿಂದ ನಾನು ರಾಜಧಾನಿಯನ್ನೂ ಅದರ
ಸಕಲಸಮೃದ್ಧಿಯನ್ನೂ ಆಪತ್ತಿಗೆ ಗುರಿಮಾಡು
ವೆನು.
9 ಒಂದು ಮನೆಯಲ್ಲಿ ಹತ್ತು ಜನರು ಉಳಿದರೂ ಅವ
ರೆಲ್ಲರು ಸಾಯುವರು.
10 ಸುಡಲು ಬಂದ ದಾಯಾದಿಯು ಒಂದು ಹೆಣ
ವನ್ನು
ಮನೆಯೊಳಗಿಂದ ತೆಗೆದುಕೊಂಡು ಹೋಗಬೇಕೆಂದು
ಅದನ್ನೆತ್ತಿ
—ನಿನ್ನ ಹತ್ತಿರ ಇನ್ನು ಯಾರಾದರೂ ಇದ್ದಾರೋ
ಎಂದು
ಒಳಮನೆಯಲ್ಲಿರುವವನನ್ನು ಕೇಳುವಾಗ ಅವನು
ಇಲ್ಲವೆನ್ನಲು
ಇವನು ಯೆಹೋವನ ಹೆಸರನ್ನು ಎತ್ತಾನೆಂದು
ದಾಯಾದಿಯು ಭಯಪಟ್ಟು
ಸುಮ್ಮನಿರು ಎಂದು ಅವನನ್ನು ತಡೆಯುವನು.

ಇಗೋ, ಯೆಹೋವನು ಆಜ್ಞಾಪಿಸಲು 11
ದೊಡ್ಡ ಮನೆಯು ಹೊಡೆಯಲ್ಪಟ್ಟು ಚೂರುಚೂರಾ
ಗುವದು,
ಚಿಕ್ಕ ಮನೆಯೂ ಮುರಿದುಹೋಗುವದು.
ಕುದುರೆಗಳು ಕೋಡುಗಲ್ಲಿನ ಮೇಲೆ ಓಡಾಡು 12
ವವೋ;
ಅದನ್ನು ಎತ್ತುಗಳಿಂದ ಉಳುವರೋ?
ಆದರೆ ನೀವು ನ್ಯಾಯವನ್ನು ವಿಷಮಾಡಿ
ಧರ್ಮದ ಸುಫಲವನ್ನು ಕಹಿಗೆ ತಂದಿರಲ್ಲಾ.
ನೀವು ಹೆಚ್ಚಳಪಡುವದು ಶೂನ್ಯವಾದದ್ದರಲ್ಲಿಯೇ 13
ಸ್ವಬಲದಿಂದ ಕೊಂಬುಗಳನ್ನು ಪಡೆದುಕೊಂಡಿ
ದ್ದೇವಲ್ಲಾ ಅಂದುಕೊಳ್ಳುತ್ತೀರಿ.
ಸೇನಾಧೀಶ್ವರದೇವರಾದ ಯೆಹೋವನು ಇಂತೆನ್ನು 14
ತ್ತಾನೆ—
ಇಸ್ರಾಯೇಲ್ ವಂಶದವರೇ,
ಇಗೋ, ನಾನು ನಿಮಗೆ ವಿರುದ್ಧವಾಗಿ ಒಂದು
ಜನಾಂಗವನ್ನು ಎಬ್ಬಿಸುವೆನು;
ಅದು ಹಮಾತಿನ ದಾರಿಯಿಂದ ಅರಾಬಾ ತಗ್ಗಿನ
ತೊರೆಯ ತನಕ
ನಿಮ್ಮನ್ನು ಜಜ್ಜಿಬಿಡುವದು.

ದುರ್ಗತಿಯ ಐದು ದರ್ಶನಗಳು. 7. 1—9. 10.

ಮಿಡತೆಗಳ ದರ್ಶನ.

ಕರ್ತನಾದ ಯೆಹೋವನು ಇದನ್ನು ನನಗೆ ತೋ 7
ರಿಸಿದನು—
ಹಿಂಗಾರು ಮಳೆಬಿದ್ದು ಪೈರು ಸೊಂಪಾಗುವದಕ್ಕೆ
ಆರಂಭವಾದಾಗ,
ಅಂದರೆ ರಾಜಾದಾಯದ ಹುಲ್ಲನ್ನು ಕೊಯ್ದ
ಮೇಲೆ ಬೆಳೆಯು ವೃದ್ಧಿಯಾಗುತ್ತಿದ್ದಾಗ
ಆಹಾ, ಯೆಹೋವನು ಮಿಡತೆಗಳನ್ನು ಉಂಟು
ಮಾಡಿದನು.
ಅವು ದೇಶದ ಪೈರುಪಚ್ಚೆಯನ್ನೆಲ್ಲಾ ತಿಂದುಬಿಟ್ಟ 2
ಮೇಲೆ
ನಾನು—ಕರ್ತನಾದ ಯೆಹೋವನೇ, ಲಾಲಿಸು,
ಕ್ಷಮಿಸು;
ಯಾಕೋಬು ಹೇಗೆ ನಿಂತೀತು,
ಅದು ಚಿಕ್ಕ ಜನಾಂಗ ಎಂದು ವಿಜ್ಞಾಪಿಸಲು
ಯೆಹೋವನು ಮನಮರುಗಿ 3
ಈ ದರ್ಶನವು ನೆರವೇರದು ಅಂದನು.

ಕ್ಷಾಮದ ದರ್ಶನ.

ಕರ್ತನಾದ ಯೆಹೋವನು ಇನ್ನೊಂದನ್ನು ನನಗೆ 4
ತೋರಿಸಿದನು—
ಆಹಾ, ಕರ್ತನಾದ ಯೆಹೋವನು ತನ್ನ ಪಕ್ಷ
ವಾಗಿ ವ್ಯಾಜ್ಯವಾಡುವದಕ್ಕೆ ಅಗ್ನಿಯನ್ನು ಕರೆ
ದನು.

ಅದು ಮಹಾಸಾಗರವನ್ನು ನುಂಗಿ [1]ದೇಶವನ್ನೂ
ತಿಂದುಬಿಡಬೇಕೆಂದಿತ್ತು.
5 ಆಗ ನಾನು—ಕರ್ತನಾದ ಯೆಹೋವನೇ,
ಲಾಲಿಸು, ಇದನ್ನು ತಪ್ಪಿಸು;
ಯಾಕೋಬು ಹೇಗೆ ನಿಂತೀತು,
ಅದು ಚಿಕ್ಕ ಜನಾಂಗ ಎಂದು ವಿಜ್ಞಾಪಿಸಲು
6 ಕರ್ತನಾದ ಯೆಹೋವನು ಮನಮರುಗಿ ಈ
ದರ್ಶನವೂ ನೆರವೇರದು ಅಂದನು.

ನೂಲುಗುಂಡಿನ ದರ್ಶನ.

7 ಕರ್ತನು ಮತ್ತೊಂದನ್ನು ನನಗೆ ತೋರಿಸಿದನು—
ಇಗೋ, ಆತನು ನೂಲುಮಟ್ಟದ ಗೋಡೆಯ
ಮೇಲೆ ನಿಂತಿದ್ದನು;
ಆತನ ಕೈಯಲ್ಲಿ ನೂಲುಗುಂಡಿತ್ತು.
8 ಯೆಹೋವನು ನನ್ನನ್ನು—ಆಮೋಸನೇ, ನಿನ್ನ
ಕಣ್ಣಿಗೆ ಕಾಣಿಸುವದೇನು ಎಂದು ಕೇಳಲು
ನಾನು—ಒಂದು ನೂಲುಗುಂಡು ಎಂದು ಉತ್ತರ
ಕೊಟ್ಟೆನು.
ಆಗ ಕರ್ತನು—ಇಗೋ, ನನ್ನ ಜನರಾದ ಇಸ್ರಾ
ಯೇಲಿನ ಮಧ್ಯದಲ್ಲಿ
ನೂಲುಗುಂಡನ್ನು ಹಿಡಿಯುವೆನು;
ಇನ್ನು ಅವರನ್ನು ಕಂಡುಕಾಣದ ಹಾಗಿರೆನು;
9 ಇಸಾಕನ ವಂಶದವರ ಪೂಜಾಸ್ಥಳಗಳು ಹಾಳಾಗು
ವವು,
ಇಸ್ರಾಯೇಲಿನ ಪವಿತ್ರಾಲಯಗಳು ಬೀಡುಬೀಳು
ವವು;
ನಾನು ಕತ್ತಿಹಿರಿದು ಯಾರೊಬ್ಬಾಮನ ಮನೆ
ತನಕ್ಕೆ ವಿರುದ್ಧವಾಗಿ ಏಳುವೆನು ಅಂದನು.

ಆಮೋಸನು ಯಾಜಕನನ್ನು ಮುಖಾಮುಖಿಯಾಗಿ
ಎದುರಿಸಿದ್ದು.

10 ಆಗ ಬೇತೇಲಿನ ಯಾಜಕನಾದ ಅಮಚ್ಯನು ಇ
ಸ್ರಾಯೇಲಿನ ಅರಸನಾದ ಯಾರೊಬ್ಬಾಮನಿಗೆ—
ಆಮೋಸನು ಇಸ್ರಾಯೇಲ್ಯರ ಮಧ್ಯದಲ್ಲಿ ನಿನ್ನ
ಮೇಲೆ ಒಳಸಂಚುಮಾಡಿದ್ದಾನೆ; ದೇಶವು ಅವನ
ವಿಪರೀತವಾದ ಮಾತುಗಳನ್ನು ತಾಳಲಾರದು;
11 ಅವನು—ಯಾರೊಬ್ಬಾಮನು ಖಡ್ಗದಿಂದ ಹತ
ನಾಗುವನು, ಇಸ್ರಾಯೇಲು ಸ್ವದೇಶದಿಂದ ಸೆರೆ
ಯಾಗಿ ಒಯ್ಯಲ್ಪಡುವದು ಖಂಡಿತ ಎಂದು ನುಡಿ
ದಿದ್ದಾನೆ ಎಂಬದಾಗಿ ಹೇಳಿ ಕಳುಹಿಸಿದನು.
12 ಅನಂತರ ಅಮಚ್ಯನು ಆಮೋಸನಿಗೆ—ಕಣಿಯುವ
ನೇ, ನಡೆ, ಯೆಹೂದದೇಶಕ್ಕೆ ಓಡಿಹೋಗು; ಅಲ್ಲೇ
13 ಪ್ರವಾದನೆಮಾಡುತ್ತಾ ಹೊಟ್ಟೆಹೊರಕೋ; ಆದರೆ
ಬೇತೇಲಿನಲ್ಲಿ ಇನ್ನು ಪ್ರವಾದನೆಮಾಡಬೇಡ;
ಇದು ರಾಜಕೀಯ ಪವಿತ್ರಾಲಯ, ಇದು ಅರ
14 ಮನೆ ಎಂದು ಹೇಳಲು ಆಮೋಸನು ಅಮಚ್ಯನಿಗೆ
ಪ್ರತ್ಯುತ್ತರವಾಗಿ—ನಾನು ಪ್ರವಾದಿಯಲ್ಲ. ಪ್ರ
ವಾದಿ ಮಂಡಲಿಗೆ ಸೇರಿದವನೂ ಅಲ್ಲ, ನಾನ
ಗೊಲ್ಲನು, ಅತ್ತಿಹಣ್ಣು ಕೀಳುವವನು; ಯೆಹೋ
ವನು ನನ್ನನ್ನು ಮಂದೆಕಾಯುವದರಿಂದ ತಪ್ಪಿ
ಸಿ—ನೀನು ಹೋಗಿ ನನ್ನ ಜನರಾದ ಇಸ್ರಾಯೇಲ್ಯ
ರಿಗೆ ಪ್ರವಾದನೆಮಾಡು ಎಂದು ನನಗೆ ಅಪ್ಪಣ
ಕೊಟ್ಟನು. ಈಗ ಯೆಹೋವನ ವಾಕ್ಯವನ್ನು
ಕೇಳು; ಇಸ್ರಾಯೇಲಿಗೆ ವಿರುದ್ಧವಾಗಿ ಪ್ರವಾ
ದನೆಮಾಡಬೇಡ, ಇಸಾಕನ ವಂಶಕ್ಕೆ ಖಂಡನೆ
ಯಾಗಿ ಬಾಯೆತ್ತಬೇಡ ಎಂದು ನೀನು ಹೇಳಿದ
ಕಾರಣ ಯೆಹೋವನು ಇಂತೆನ್ನುತ್ತಾನೆ—ನಿನ್ನ
ಹೆಂಡತಿಯು ಈ ಪಟ್ಟಣದಲ್ಲಿ ಸೂಳೆಯಾಗುವಳು
ನಿನ್ನ ಗಂಡುಹೆಣ್ಣುಮಕ್ಕಳು ಖಡ್ಗದಿಂದ ಹತರಾಗು
ವರು, ನಿನ್ನ ದೇಶವನ್ನು [ಶತ್ರುಗಳು] ನೂಲೆಳೆದು
ಭಾಗಿಸಿಕೊಳ್ಳುವರು, ನೀನಂತು ಅಪವಿತ್ರದೇಶದಲ್ಲಿ
ಸಾಯುವಿ, ಇಸ್ರಾಯೇಲು ಸ್ವದೇಶದಿಂದ ಸೆರೆ
ಯಾಗಿ ಒಯ್ಯಲ್ಪಡುವದು ಖಂಡಿತ ಎಂಬದಾಗಿ
ಹೇಳಿದನು.

ಮಾಗಿದ ಹಣ್ಣಿನ ದರ್ಶನ.

ಕರ್ತನಾದ ಯೆಹೋವನು ಇದನ್ನು ನನಗೆ ತೋ
ರಿಸಿದನು—
ಇಗೋ, ಮಾಗಿದ ಹಣ್ಣಿನ ಪುಟ್ಟಿ.
ಆತನು ನನ್ನನ್ನು—ಆಮೋಸನೇ, ನಿನ್ನ ಕಣ್ಣಿಗೆ
ಕಾಣಿಸುವದೇನು ಎಂದು ಕೇಳಲು
ಮಾಗಿದ ಹಣ್ಣಿನ ಪುಟ್ಟಿ ಅಂದೆನು.
ಆಗ ಯೆಹೋವನು ನನಗೆ ಹೀಗೆ ಹೇಳಿದನು—
ಇಸ್ರಾಯೇಲೆಂಬ ನನ್ನ ಜನರಿಗೆ ಕಡೆಗಾಲವು
ಮಾಗುತ್ತಾ ಬಂದಿದೆ;
ಇನ್ನು ಅವರನ್ನು ಕಂಡುಕಾಣದ ಹಾಗಿರೆನು.
ಆ ದಿನದಲ್ಲಿ ಸೌಧಗಳ ಕೀರ್ತನೆಗಳು ಕಿರಚಾಟವಾ
ಗುವವು;
ಇದು ಕರ್ತನಾದ ಯೆಹೋವನ ನುಡಿ;
ಆಗ ಹೆಣಗಳು ಹೆಚ್ಚುವವು; ಅವುಗಳನ್ನು ಎಲ್ಲೆಲ್ಲಿ
ಯೂ ಮೌನವಾಗಿ ಬಿಸಾಟುಬಿಡುವರು
ಉಸಿರಾಡದಿರ್ರಿ!

ಧನವಂತರ ಹಣದಾಶೆ, ಮುಂದಿನ ದೌರ್ಭಾಗ್ಯ.

ಬಿಷ್ಟು ಹೊತ್ತಿಗೆ ಅಮಾವಾಸ್ಯೆಯು ತೀರುವದು?
ಧಾನ್ಯವನ್ನು ಮಾರಬೇಕಲ್ಲಾ;
ಸಬ್ಬತ್ತು ಇನ್ನೆಷ್ಟು ಹೊತ್ತು ಇರುವದು?
ಗೋದಿಯನ್ನು ಅಂಗಡಿಯಿಡಬೇಕಲ್ಲಾ;
ಕೊಳಗವನ್ನು ಕಿರಿದುಮಾಡೋಣ,
ತೊಲವನ್ನು ಹೆಚ್ಚಿಸೋಣ,
ಸುಳ್ಳುತಕ್ಕಡಿಯಿಂದ ಮೋಸಮಾಡೋಣ;
ಬಡವನನ್ನು ಬೆಳ್ಳಿಗೆ, ದಿಕ್ಕಿಲ್ಲದವನನ್ನು ಜೊತೆ
ಕೆರಕ್ಕೆ ಕೊಂಡುಕೊಳ್ಳೋಣ;

1) ಮೂಲ: ಸ್ವಾಸ್ಥ್ಯವನ್ನೂ.

ಗೋಧಿಯ ನುಚ್ಚುನುಸಿಯನ್ನು ಮಾರೋಣ ಎಂದುಕೊಂಡು
6 ದಿಕ್ಕಿಲ್ಲದವರನ್ನು ತುಳಿದುಬಿಡುವವರೇ,
ದೇಶದ ದರಿದ್ರರನ್ನು ನಿರ್ಮೂಲಮಾಡುವವರೇ, ಕೇಳಿರಿ!
7 ಯೆಹೋವನು ಯಾಕೋಬಿನ ಮಹಿಮೆಯ ಮೇಲೆ ಹೀಗೆ ಆಣೆಯಿಟ್ಟಿದ್ದಾನೆ—
ಖಂಡಿತವಾಗಿ ಅವರ ಕೃತ್ಯಗಳಲ್ಲಿ ಯಾವದನ್ನೂ ಎಂದಿಗೂ ಮರೆತುಬಿಡೆನು.
8 ಆ ಕೃತ್ಯಗಳಿಗೆ ದೇಶವು ನಡುಗಬೇಕಾಗುವದಲ್ಲವೆ,
ಅದರ ನಿವಾಸಿಗಳೆಲ್ಲರೂ ದುಃಖಿಸುವರಲ್ಲವೆ;
ದೇಶವೆಲ್ಲಾ ನೈಲ್ ನದಿಯಂತೆ ಉಬ್ಬಿ ಅಲ್ಲಕಲ್ಲೋಲವಾಗುವದು,
ಐಗುಪ್ತದ ನದಿಯ ಹಾಗೆಯೇ ಇಳಿದು ಹೋಗುವದು.
9 ಕರ್ತನಾದ ಯೆಹೋವನು ಇಂತೆನ್ನುತ್ತಾನೆ—
ಆ ದಿನದಲ್ಲಿ ಸೂರ್ಯನನ್ನು ಮಧ್ಯಾಹ್ನಕ್ಕೆ ಮುಣುಗಿಸುವೆನು,
ಭೂಮಿಯನ್ನು ಹಗಲಿನಲ್ಲೇ ಮೊಬ್ಬುಮಾಡುವೆನು.
10 ನಿಮ್ಮ ಉತ್ಸವಗಳನ್ನು ದುಃಖಕ್ಕೆ ಮಾರ್ಪಡಿಸುವೆನು,
ನಿಮ್ಮ ಗಾಯನಗಳನ್ನೆಲ್ಲಾ ಶೋಕಗೀತಕ್ಕೆ ತಿರುಗಿಸುವೆನು;
ಎಲ್ಲರೂ ಸೊಂಟಕ್ಕೆ ಗೋಣಿತಟ್ಟನ್ನು ಸುತ್ತಿಕೊಂಡು
ತಲೆಬೋಳಿಸಿಕೊಳ್ಳುವಂತೆ ಮಾಡುವೆನು;
ನಿಮ್ಮ ಪ್ರಲಾಪವು ಏಕಪುತ್ರಶೋಕಕ್ಕೆ ಸಮಾನವಾಗುವದು,
ಅದು ಆದ ಮೇಲೂ ವ್ಯಾಕುಲವು ಇದ್ದೇ ಇರುವದು.
11 ಕರ್ತನಾದ ಯೆಹೋವನು ಇಂತೆನ್ನುತ್ತಾನೆ—
ಆಹಾ, ನಾನು ದೇಶಕ್ಕೆ ಕ್ಷಾಮವನ್ನು ಉಂಟುಮಾಡುವ ದಿನಗಳು ಬರುತ್ತಿವೆ;
ಅದು ಅನ್ನದ ಕ್ಷಾಮವಲ್ಲ, ನೀರಿನ ಕ್ಷಾಮವಲ್ಲ,
ಯೆಹೋವನ ವಾಕ್ಯಗಳ ಕ್ಷಾಮವೇ.
12 ಸಮುದ್ರದಿಂದ ಸಮುದ್ರಕ್ಕೆ, ಬಡಗಲಿಂದ ಮೂಡಲಿಗೆ
ಅಲೆಯುತ್ತಾ ಹೋಗುವರು,
ಯೆಹೋವನ ವಾಕ್ಯವನ್ನು ಹುಡುಕುತ್ತಾ ಓಡಾಡುವರು;
ಆದರೂ ಅದು ಸಿಕ್ಕದು.
13 ಆ ದಿನದಲ್ಲಿ ಯುವಕರೂ ಸುಂದರಯುವತಿಯರೂ
ಬಾಯಾರಿಕೆಯಿಂದ ಮೂರ್ಛೆಹೋಗುವರು.
ದಾನೇ, ನಿನ್ನ ದೇವರ ಜೀವದಾಣೆ ಎಂತಲೂ
ಬೇರ್ಷೆಬ ಮಾರ್ಗದ ಜೀವದಾಣೆ ಎಂತಲೂ
ಸಮಾರ್ಯದ ಪಾಪಮೂರ್ತಿಯ ಮೇಲೆ ಪ್ರಮಾಣಮಾಡುವವರು ಬಿದ್ದುಹೋಗುವರು,
ಮತ್ತೆ ಏಳರು.

ದೇವಾಲಯವನ್ನೂ ಅಲ್ಲಿನ ಮೂಢಭಕ್ತರನ್ನೂ ನಾಶಗೊಳಿಸುವ ದರ್ಶನ.

9 ಕರ್ತನು ಯಜ್ಞವೇದಿಯ ಪಕ್ಕದಲ್ಲಿ ನಿಂತಿರುವದನ್ನು ಕಂಡೆನು;
ಆತನು ಹೀಗೆ ಅಪ್ಪಣೆಕೊಟ್ಟನು—
ಹೊಸ್ತಿಲುಗಳು ಕದಲುವಂತೆ ಕಂಬಗಳ ಬೋದಿಗೆಗಳನ್ನು ಬಲವಾಗಿ ಹೊಡೆ;
ಅವುಗಳನ್ನು ಒಡೆದುಬಿಟ್ಟು ಎಲ್ಲರ ತಲೆಯ ಮೇಲೆ ಬೀಳಿಸು;
ಉಳಿದವರನ್ನು ಖಡ್ಗದಿಂದ ಸಂಹರಿಸುವೆನು;
ಅವರಲ್ಲಿ ಯಾರೂ ಓಡಿಹೋಗರು,
ಯಾರೂ ತಪ್ಪಿಸಿಕೊಳ್ಳರು.
ಪಾತಾಳದ ವರೆಗೆ ತೋಡಿಕೊಂಡು ಹೋದರೂ 2
ನನ್ನ ಕೈ ಅವರನ್ನು ಅಲ್ಲಿಂದ ಹಿಡಿದೆಳೆಯುವದು;
ಸ್ವರ್ಗದ ತನಕ ಹತ್ತಿದರೇನು,
ಅಲ್ಲಿಂದಲೂ ಅವರನ್ನಿಳಿಸುವೆನು;
ಕರ್ಮೆಲ್ ಬೆಟ್ಟದ ತುದಿಯಲ್ಲಿ ಅವುತುಕೊಳ್ಳಲಿ, 3
ನಾನು ಅವರನ್ನು ಹುಡುಕಿ ಅಲ್ಲಿಂದಲೂ ಹಿಡಿದು ತರುವೆನು;
ನನ್ನ ಕಣ್ಣಿಗೆ ಮರೆಯಾಗಿ ಸಮುದ್ರತಲದಲ್ಲಿ ಅಡಗಿಕೊಂಡರೇನು,
ಅಲ್ಲಿಯೂ ನನ್ನ ಅಪ್ಪಣೆಯ ಪ್ರಕಾರ ಘಟಸರ್ಪವು ಅವರನ್ನು ಕಚ್ಚುವದು;
ಶತ್ರುವಶವಾಗಿ ಸೆರೆಗೆ ಹೋದರೂ 4
ಖಡ್ಗವು ನನ್ನ ಆಜ್ಞಾನುಸಾರ ಅಲ್ಲಿಯೂ ಅವರನ್ನು ಹತಿಸುವದು;
ಮೇಲಿಗಲ್ಲ, ಕೇಡಿಗಾಗಿಯೇ ಅವರ ಮೇಲೆ ದೃಷ್ಟಿಯಿಡುವೆನು.
ಆಹಾ, ಸೇನಾಧೀಶ್ವರದೇವರಾದ ಕರ್ತನು ಭೂಮಿಯನ್ನು ಮುಟ್ಟಿದ ಮಾತ್ರಕ್ಕೆ 5
ಅದು ಕರಗಿಹೋಗುತ್ತದೆ, ಸಕಲ ನಿವಾಸಿಗಳು ಗೋಳಾಡುತ್ತಾರೆ;
ನೆಲವೆಲ್ಲಾ ನೈಲ್ ನದಿಯಂತೆ ಉಬ್ಬಿ
ಐಗುಪ್ತದ ನದಿಯ ಹಾಗೆಯೇ ಇಳಿದುಹೋಗುತ್ತದೆ.
ಉನ್ನತಲೋಕದಲ್ಲಿ ಉಪ್ಪರಿಗೆಯನ್ನು ಅನೇಕ ಅಂತಸ್ತಾಗಿ ಕಟ್ಟಿಕೊಂಡು 6
ಭೂಲೋಕದ ಮೇಲೆ ಗುಮಟವನ್ನು ಸ್ಥಾಪಿಸಿಕೊಂಡಿದ್ದಾನೆ;
ಸಮುದ್ರದ ನೀರನ್ನು ಕರೆದು ಭೂಮಂಡಲದ ಮೇಲೆ ಹೊಯ್ಯುತ್ತಾನೆ;
ಯೆಹೋವನೆಂಬದೇ ಆತನ ನಾಮಧೇಯ.

ಇಸ್ರಾಯೇಲು ಮಿಕ್ಕ ಜನಾಂಗಗಳಿಗಿಂತ ಹೆಚ್ಚೇನೂ ಅಲ್ಲ.

ಯೆಹೋವನು ಇಂತೆನ್ನುತ್ತಾನೆ— 7
ಇಸ್ರಾಯೇಲ್ಯರೇ, ನೀವು ನನ್ನ ಗಣನೆಯಲ್ಲಿ ಕೂಷ್ಯರ ಹಾಗಿದ್ದೀರಲ್ಲವೋ;

ನಾನು ಇಸ್ರಾಯೇಲ್ಯರನ್ನು ಐಗುಪ್ತದೇಶದಿಂದ,
ಫಿಲಿಷ್ಟಿಯರನ್ನು ಕಪ್ತೋರಿನಿಂದ,
ಅರಾಮ್ಯರನ್ನು ಕೀರಿನಿಂದ [ಏಕ ರೀತಿಯಾಗಿ]
ಬರಮಾಡಲಿಲ್ಲವೋ?
8 ಆಹಾ, ಕರ್ತನಾದ ಯೆಹೋವನೆಂಬ ನಾನು ಪಾಪ
ಮಯರಾಜ್ಯದ ಮೇಲೆ ದೃಷ್ಟಿಯಿಟ್ಟಿದ್ದೇನೆ;
ಆದನ್ನು ಭೂಮಂಡಲದೊಳಗಿಂದ ನಾಶಮಾಡು
ವೆನು;
ಆದರೆ ಯಾಕೋಬಿನ ಮನೆತನವನ್ನು ಸಂಪೂರ್ಣ
ವಾಗಿ ನಾಶಮಾಡೆನು.
ಇದು ಯೆಹೋವನ ನುಡಿ.
9 ಇಗೋ, ಧಾನ್ಯವನ್ನು ಜರಡಿಯಲ್ಲಿ ಜಾಲಿಸುವ
ಪ್ರಕಾರ
ಇಸ್ರಾಯೇಲ್ಯರನ್ನು ಸಕಲಜನಾಂಗಗಳಲ್ಲಿ ಹಾಕಿ
ಜಾಲಿಸಬೇಕೆಂದು ಅಪ್ಪಣೆಕೊಡುವೆನು;
ಹೀಗಾದರೂ ಒಂದು ಕಾಳೂ ನೆಲಕ್ಕೆ ಬೀಳದು.
10 ನಮ್ಮನ್ನು ಆಪತ್ತು ಹಿಂದಟ್ಟಿ ಹಿಡಿಯದು, ಎದು
ರುಬಿದ್ದು ಮುತ್ತದು ಅಂದುಕೊಂಡ
ನನ್ನ ಜನರಲ್ಲಿನ ಸಮಸ್ತ ಪಾಪಿಗಳು ಖಡ್ಗಹತರಾ
ಗುವರು.

ಇಸ್ರಾಯೇಲಿನ ಮುಂದಣ ಸೌಭಾಗ್ಯ. 9. 11—15.

11 ಆ ದಿನದಲ್ಲಿ ನಾನು ದಾವೀದನ ಬಿದ್ದುಹೋಗಿ
ರುವ ಗುಡಿಸಲನ್ನು ಎತ್ತಿ
ಅದರ ಕಂಡಿಗಳನ್ನು ಮುಚ್ಚುವೆನು;
12 ನನ್ನ ಜನರು ಎದೋಮಿನ ಮಿಕ್ಕಭಾಗವನ್ನೂ
ಯೆಹೋವನ ಪ್ರಜೆ ಎನಿಸಿಕೊಂಡಿದ್ದ ಸಕ
ಜನಾಂಗಗಳನ್ನೂ
ಸ್ವಾಧೀನಮಾಡಿಕೊಳ್ಳುವ ಹಾಗೆ
ಹಾಳಾದದ್ದನ್ನು ನಾನು ನಿಲ್ಲಿಸಿ
ಪೂರ್ವಕಾಲದಲ್ಲಿದ್ದಂತೆ ಅದನ್ನು ತಿರಿಗಿ ಕಟ್ಟಿಸು
ವೆನು
ಎಂಬದಾಗಿ ಈ ಕಾರ್ಯಗಳನ್ನು ನೆರವೇರಿಸು
ಯೆಹೋವನು ನುಡಿದಿದ್ದಾನೆ.
ಯೆಹೋವನು ಇಂತೆನ್ನುತ್ತಾನೆ—
ಆಹಾ, ಮುಂದಿನ ಕಾಲದಲ್ಲಿ ಉಳುವವನ
ಕೊಯ್ಯುವವನ ಹಿಂದೆ,
ದ್ರಾಕ್ಷೆತುಳಿಯುವವನು ಬಿತ್ತುವವನ ಹಿಂದೆ
ಒತ್ತಿಕೊಂಡುಹೋಗುವರು;
ಬೆಟ್ಟಗಳು ದ್ರಾಕ್ಷಾರಸವನ್ನು ಸುರಿಸುವವು,
ಎಲ್ಲಾ ಗುಡ್ಡಗಳು ಕರಗುತ್ತವೋ ಎಂಬಂತಿರುವವು
ನಾನು ನನ್ನ ಜನರಾದ ಇಸ್ರಾಯೇಲ್ಯರ ದುರ
ಸ್ಥೆಯನ್ನು ತಪ್ಪಿಸುವೆನು;
ಅವರು ಹಾಳುಬಿದ್ದ ಪಟ್ಟಣಗಳನ್ನು ಪುನಃ ಕಟ್ಟಿ
ಅವುಗಳಲ್ಲಿ ವಾಸಿಸುವರು;
ದ್ರಾಕ್ಷೆಯ ತೋಟಗಳನ್ನು ಮಾಡಿಕೊಂಡು ಅವು
ಗಳ ದ್ರಾಕ್ಷಾರಸವನ್ನು ಕುಡಿಯುವರು;
ಫಲವೃಕ್ಷಗಳನ್ನು ಬೆಳೆಯಿಸಿ ಅವುಗಳ ಹಣ್ಣುಗಳ
ನ್ನು ತಿನ್ನುವರು.
ನಾನು ಅವರನ್ನು ಸ್ವದೇಶದಲ್ಲಿ ನೆಲೆಗೊಳಿಸುವೆನು
ಅವರಿಗೆ ನಾನು ದಯಪಾಲಿಸಿದ ಸೀಮೆಯೊಳಗಿಂದ
ಇನ್ನು ಮುಂದೆ ಯಾರೂ ಅವರನ್ನೂ ಕಿತ್ತುಹಾ
ಕರು;
ಇದು ನಿನ್ನ ದೇವರಾದ ಯೆಹೋವನ ನುಡಿ.

# THE PROPHET OBADIAH

## ಓಬದ್ಯನ ಪ್ರವಾದನೆಯ ಗ್ರಂಥ

ಎದೋಮಿನ ನಾಶ.

1 ಓಬದ್ಯನಿಗಾದ ದೈವದರ್ಶನ.
ಕರ್ತನಾದ ಯೆಹೋವನು ಎದೋಮಿನ ವಿಷ
ಯವಾಗಿ ನುಡಿದ ವಾಕ್ಯ.
ಯೆಹೋವನಿಂದ ಬಂದ ಸಮಾಚಾರವನ್ನು ಕೇಳಿ
ದ್ದೇವೆ;
ಆತನು ದೂತನ ಮೂಲಕ ಜನಾಂಗಗಳಿಗೆ ಹೀಗೆ
ಹೇಳಿಕಳುಹಿಸಿದ್ದಾನೆ—
ಹೊರಡಿರಿ, ಯುದ್ಧಕ್ಕೆ ಹೊರಟು ಎದೋಮಿನ
ಮೇಲೆ ಬೀಳೋಣ.
2 [ಎದೋಮೇ,] ಇಗೋ, ನೀನು ಜನಾಂಗಗಳಲ್ಲಿ
ಹೀನವಾಗುವಂತೆ ಮಾಡಿದ್ದೇನೆ,
ಬಹು ತಾತ್ಸಾರಕ್ಕೆ ಈಡಾಗಿದ್ದೀ.
ಉನ್ನತಸ್ಥಾನದಲ್ಲಿ ಬಂಡೆಯ ಬಿರುಕುಗಳೊಳಗ
ವಾಸಿಸುತ್ತಾ—
ನನ್ನನ್ನು ನೆಲಕ್ಕೆ ಇಳಿಸಬಲ್ಲವರು ಯಾರು ಅಂದು
ಕೊಳ್ಳುವ ಜನವೇ,
ನಿನ್ನೆದೆಯ ಹೆಮ್ಮೆಯು ನಿನ್ನನ್ನು ಮೋಸಗೊಳಿಸಿದೆ
ನೀನು ಹದ್ದಿನಂತೆ ಮೇಲಕ್ಕೆ ಏರಿದರೂ
ನಿನ್ನ ಗೂಡು ನಕ್ಷತ್ರಮಂಡಲದಲ್ಲಿ ನೆಲೆಗೊಂ
ದ್ದರೂ
ಅಲ್ಲಿಂದ ನಿನ್ನನ್ನು ಇಳಿಸಿಬಿಡುವೆನು;
ಇದು ಯೆಹೋವನ ನುಡಿ.
ಕಳ್ಳರು ನಿನ್ನಲ್ಲಿ ನುಗ್ಗಿದರೆ,
ರಾತ್ರಿವೇಳೆಯಲ್ಲಿ ಪಂಜುಗಳ್ಳರು ನಿನ್ನ ಮೇ
ಬಿದ್ದರೆ

ಬೇಕಾದಷ್ಟು ಮಾತ್ರ ದೋಚಿಕೊಂಡು ಹೋಗುವ
ರಲ್ಲವೆ.
(ಆಹಾ, ನೀನು ಎಷ್ಟೋ ಭಂಗಪಟ್ಟಿದ್ದೀ!)
ದ್ರಾಕ್ಷೆಯ ಹಣ್ಣನ್ನು ಕೀಳುವವರು ನಿನ್ನ ಕಡೆಗೆ
ಬಂದರೆ
ಹಕ್ಕಲನ್ನು ಉಳಿಸುವದಿಲ್ಲವೋ?
6 ಓಹೋ, ಏಸಾವಿನ ಆಸ್ತಿಯು ಎಷ್ಟೋ ಹುಡು
ಕಲ್ಪಟ್ಟಿದೆ!
ಅದರ ನಿಧಿನಿಕ್ಷೇಪಗಳು ಎಷ್ಟೋ ತಡಕಲ್ಪಟ್ಟಿವೆ!
7 ನಿನ್ನ ಮಿತ್ರಮಂಡಲಿಯವರೆಲ್ಲರು ನಿನ್ನನ್ನು ನಿನ್ನ
ಎಲ್ಲೆಯ ಆಚೆಗೆ ನೂಕಿಬಿಟ್ಟಿದ್ದಾರೆ;
ನಿನ್ನ ಆಪ್ತರು ನಿನ್ನನ್ನು ವಂಚಿಸಿ ಸೋಲಿಸಿದ್ದಾರೆ,
ನಿನ್ನ ಅನ್ನ [ತಿಂದವರು] ಅವಿವೇಕಿಯಾದ ನಿನಗೆ
ಉರುಲೊಡ್ಡಿದ್ದಾರೆ;
8 ಯೆಹೋವನು ಇಂತೆನ್ನುತ್ತಾನೆ—
ಆ ದಿನದಲ್ಲಿ ನಾನು ಎದೋಮಿನೊಳಗಿಂದ ಜ್ಞಾನಿ
ಗಳನ್ನು ಅಳಿಸದೆ ಬಿಟ್ಟೇನೋ?
ಏಸಾವಿನ ಪರ್ವತದೊಳಗಿಂದ ವಿವೇಕವನ್ನು ಕಿತ್ತು
ಹಾಕದೆ ಇದ್ದೇನೋ?
9 ತೇಮಾನೇ, ನಿನ್ನ ಶೂರರು ಧೈರ್ಯಗೆಟ್ಟು ಎಲ್ಲ
ರೂ ಹತರಾಗಿ
ಏಸಾವಿನ ಪರ್ವತದೊಳಗಿಂದ ನಿರ್ಮೂಲರಾಗು
ವರು.

ಎದೋಮು ಯಾಕೋಬಿಗೆ ಮಾಡಿದ ದ್ರೋಹ.

10 ನೀನು ನಿನ್ನ ತಮ್ಮನಾದ ಯಾಕೋಬನಿಗೆ ಮಾ
ಡಿದ ಹಿಂಸೆಯ ನಿಮಿತ್ತ
ಅವಮಾನವು ನಿನ್ನನ್ನು ಕವಿಯುವದು;
ನಿತ್ಯನಾಶನಕ್ಕೆ ಈಡಾಗುವಿ.
11 ನೀನು ಸುಮ್ಮನೆ ಎದುರುನಿಂತ ದಿನದಲ್ಲಿ,
ಅಂದರೆ ಅನ್ಯರು ನಿನ್ನ ತಮ್ಮನ ಆಸ್ತಿಯನ್ನು
ಕೊಳ್ಳೆಹೊಡೆದ ದಿನದಲ್ಲಿ
ಮ್ಲೇಚ್ಛರು ಅವನ ಪುರದ್ವಾರಗಳಲ್ಲಿ ಪ್ರವೇಶಿಸಿ
[1]ಯೆರೂಸಲೇಮಿನ ಸೊತ್ತಿಗಾಗಿ ಚೀಟುಹಾಕಿದ
ದಿನದಲ್ಲಿ
ನೀನೂ ಅವರಂತೆ ಇದ್ದಿ.
12 ನಿನ್ನ ತಮ್ಮನ ದುರ್ದಿನದಲ್ಲಿ, ಅವನ ಅಪಾಯಕಾ
ಲದಲ್ಲಿ
ನೀನು ಸುಮ್ಮನೆ ನೋಡುತ್ತಿರಬಾರದಾಗಿತ್ತು;
ಯೆಹೂದ್ಯರ ನಾಶನದಿವಸದಲ್ಲಿ ಹಿಗ್ಗಬಾರದಾ
ಗಿತ್ತು;
ಅವರ ಇಕ್ಕಟ್ಟಿನ ವೇಳೆಯಲ್ಲಿ ಬಾಯಿಕಿಸಿಯಬಾರ
ದಾಗಿತ್ತು.
13 ನನ್ನ ಜನರ ವಿಪತ್ಕಾಲದಲ್ಲಿ ಅವರ ಪುರದ್ವಾರದೊ
ಳಗೆ ಪ್ರವೇಶಿಸಬಾರದಾಗಿತ್ತು;
ಅವರ ವಿಪತ್ಕಾಲದಲ್ಲಿ ಅವರ ಕೇಡಿಗೆ ನಿನ್ನಂಥವನ
ಕಣ್ಣು ಅರಳಬಾರದಾಗಿತ್ತು;
ಅವರ ವಿಪತ್ಕಾಲದಲ್ಲಿ ಅವರ ಸೊತ್ತಿಗೆ ನೀನು ಕೈ
ಹಾಕಬಾರದಾಗಿತ್ತು;
ಓಡಿಹೋಗುವವರನ್ನು ಕೊಲ್ಲುವದಕ್ಕೆ ದಾರಿಗಳು 14
ಕೂಡುವ ಸ್ಥಳದಲ್ಲಿ ನಿಲ್ಲಬಾರದಾಗಿತ್ತು;
ಇಕ್ಕಟ್ಟಿನ ವೇಳೆಯಲ್ಲಿ ತಪ್ಪಿಸಿಕೊಂಡವರನ್ನು
ಶತ್ರುವಿಗೆ ಒಪ್ಪಿಸಬಾರದಾಗಿತ್ತು.
ಯೆಹೋವನ ದಿನವು ಸಮಸ್ತ ಜನಾಂಗಗಳಿಗೆ 15
ಸಮೀಪಿಸಿದೆ;
ನೀನು ಮಾಡಿದ್ದೇ ನಿನಗಾಗುವದು;
ನಿನ್ನ ಕೃತ್ಯವೇ ನಿನ್ನ ತಲೆಗೆ ಬರುವದು.

ಯಾಕೋಬಿನ ಮುಂದಣ ಪ್ರಾಬಲ್ಯ.

[ನನ್ನ ಜನರೇ,] ನೀವು ನನ್ನ ಪವಿತ್ರಪರ್ವತದಲ್ಲಿ 16
[ವಿಪತ್ಪಾನಕವನ್ನು] ಪಾನಮಾಡಿದಂತೆಯೇ
ಸಕಲ ಜನಾಂಗಗಳೂ ನಿತ್ಯವಾಗಿ ಪಾನಮಾಡು
ವವು;
ಹೌದು, ಕುಡಿದು ನುಂಗಿಬಿಟ್ಟು ಇಲ್ಲದ ಹಾಗಾಗು
ವವು.
ಆದರೆ ಚೀಯೋನ್ ಪರ್ವತದಲ್ಲಿ ಅನೇಕರು 17
ಉಳಿದಿರುವರು;
ಆ ಪರ್ವತವು ಮೀಸಲಾಗಿರುವದು;
ಯಾಕೋಬನ ವಂಶದವರು ತಮ್ಮ ಸ್ವಾಸ್ತ್ಯಗಳ
ನ್ನು ಅನುಭವಿಸುವರು.
ಯಾಕೋಬನ ವಂಶವು ಅಗ್ನಿ, 18
ಯೋಸೇಫನ ವಂಶವು ಜ್ವಾಲೆ,
ಏಸಾವನ ವಂಶವು ಕೂಳೆ; ಆ ಅಗ್ನಿಜ್ವಾಲೆಗಳು
ಕೂಳೆಯಲ್ಲಿ ಧಗಧಗಿಸುತ್ತಾ
ಅದನ್ನು ನುಂಗಿಬಿಡುವವು;
ಏಸಾವನ ವಂಶದವರಲ್ಲಿ ಯಾರೂ ಉಳಿಯರು;
ಯೆಹೋವನೇ ಇದನ್ನು ನುಡಿದಿದ್ದಾನೆ.
ಆಗ ದಕ್ಷಿಣಪ್ರಾಂತದವರು ಏಸಾವಿನ ಪರ್ವತವ 19
ನ್ನು ಸ್ವಾಧೀನಮಾಡಿಕೊಳ್ಳುವರು;
ಇಳಕಲಿನ ಪ್ರದೇಶದವರು ಫಿಲಿಷ್ಟಿಯವನ್ನೂ ಎಫ್ರಾ
ಯೀಮಿನ ಭೂಮಿಯನ್ನೂ
ಸಮಾರ್ಯದ ನೆಲವನ್ನೂ ವಶಮಾಡಿಕೊಳ್ಳುವರು;
ಬೆನ್ಯಾಮೀನಿನವರು ಗಿಲ್ಯಾದನ್ನು ಸ್ವತಂತ್ರಿಸಿಕೊಳ್ಳು
ವರು;
ಸೆರೆಹೋಗಿರುವ ಆ ದಂಡಿನ ಇಸ್ರಾಯೇಲ್ಯರು 20
ಕಾನಾನ್ಯರ ದೇಶವನ್ನು ಚಾರೆಪತಿನ ವರೆಗೆ ತಮ್ಮ
ದಾಗಿ ಮಾಡಿಕೊಳ್ಳುವರು;
ಸೆಫಾರದಿನಲ್ಲಿ ಸೆರೆಯಾಗಿರುವ ಯೆರೂಸಲೇಮಿನ
ವರು
ದಕ್ಷಿಣಪ್ರಾಂತದ ಪಟ್ಟಣಗಳನ್ನು ವಶಪಡಿಸಿಕೊಳ್ಳು
ವರು.
ರಕ್ಷಕರು ಚೀಯೋನ್ ಪರ್ವತದಲ್ಲಿ ಎದ್ದು 21
ಏಸಾವಿನ ಪರ್ವತವನ್ನು ಆಳುವರು;
ಆಗ ರಾಜ್ಯವು ಯೆಹೋವನದಾಗಿರುವದು.

1) ಮೂಲ: ಯೆರೂಸಲೇಮಿಗಾಗಿ.

# JONAH

## ಯೋನನು

ದೇವರ ಅಪ್ಪಣೆಯನ್ನು ಮೀರಿದ ಪ್ರವಾದಿಗೆ ಸಂಭವಿಸಿದ ವಿಪತ್ತು.

1 ಯೆಹೋವನು ಅಮಿತ್ತೈಯ ಮಗನಾದ ಯೋನ
2 ನಿಗೆ—ನೀನೆದ್ದು ಆ ದೊಡ್ಡ ಪಟ್ಟಣವಾದ ನಿನೆವೆಗೆ
ಹೋಗಿ ಗಟ್ಟಿಯಾಗಿ ಕೂಗುತ್ತಾ ಅದನ್ನು ಖಂಡಿಸು;
ಅದರ ನಿವಾಸಿಗಳ ದುಷ್ಟತನವು ನನ್ನ ಸನ್ನಿಧಿಗೆ ಮು
3 ಟ್ಟಿದೆ ಎಂದು ಅಪ್ಪಣೆಮಾಡಿದನು. ಆದರೆ ಯೋನನು
ಯೆಹೋವನ ಸನ್ನಿಧಿಗೆ ತಪ್ಪಿಸಿಕೊಳ್ಳುವ ಹಾಗೆ
ತಾರ್ಷೀಷಿಗೆ ಓಡಿಹೋಗಬೇಕೆಂದು ಹೊರಟು ಯೊ
ಪ್ಪಕ್ಕೆ ಇಳಿದು ಅಲ್ಲಿ ತಾರ್ಷೀಷಿಗೆ ತೆರಳುವ ಹಡಗನ್ನು
ಕಂಡು ಬಾಡಿಗೆಕೊಟ್ಟು ಯೆಹೋವನ ಸನ್ನಿಧಿ
ಯಿಂದ ತಾರ್ಷೀಷಿಗೆ ಪ್ರಯಾಣಮಾಡಬೇಕೆಂದು
4 ಹಡಗಿನವರೊಡನೆ ಅದನ್ನು ಹತ್ತಿದನು. ಬಳಿಕ ಯೆ
ಹೋವನು ಬಿರುಗಾಳಿಯನ್ನು ಸಮುದ್ರದ ಮೇಲೆ
ಬಲವಾಗಿ ಬೀಸಲು ಸಮುದ್ರದಲ್ಲಿ ದೊಡ್ಡ ತುಫಾನು
ಎದ್ದು ಹಡಗು ಒಡೆದುಹೋಗುವ ಹಾಗಾಯಿತು.
5 ಆಗ ನಾವಿಕರು ಹೆದರಿ ತಮ್ಮ ತಮ್ಮ ದೇವರುಗಳಿಗೆ
ಮೊರೆಯಿಟ್ಟು ತಮ್ಮ ಕಷ್ಟವು ಕಡಿಮೆಯಾಗುವ ಹಾಗೆ
ಹಡಗಿನ ಸಾಮಾನುಗಳನ್ನು ಸಮುದ್ರಕ್ಕೆ ಬಿಸಾಟು
ಬಿಟ್ಟರು. ಇಷ್ಟರೊಳಗೆ ಯೋನನು ಹಡಗಿನ ಒಳ
ಭಾಗಕ್ಕೆ ಇಳಿದು ಮಲಗಿಕೊಂಡಿದ್ದನು; ಗಾಢನಿದ್ರೆ
6 ಹತ್ತಿತ್ತು. ಹೀಗಿರಲು ಹಡಗಿನ ಯಜಮಾನನು
ಅವನ ಬಳಿಗೆ ಬಂದು—ಇದೇನು, ನಿದ್ದೆಮಾಡುತ್ತೀ!
ಎದ್ದು ನಿನ್ನ ದೇವರಿಗೆ ಮೊರೆಯಿಡು; ಒಂದು ವೇಳೆ
ನಿನ್ನ ದೇವರು ನಮ್ಮನ್ನು ರಕ್ಷಿಸಾನು, ನಾಶವಾಗದೆ
7 ಉಳಿದೇವು ಎಂದು ಹೇಳಿದನು. ಅನಂತರ ನಾವಿಕರೆ
ಲ್ಲರು—ಈ ಕೇಡು ನಮಗೆ ಸಂಭವಿಸಿದ್ದಕ್ಕೆ ಯಾರು
ಕಾರಣವೆಂದು ನಮಗೆ ತಿಳಿಯುವ ಹಾಗೆ ಚೀಟು
ಹಾಕೋಣ ಬನ್ನಿರಿ ಎಂಬದಾಗಿ ಮಾತಾಡಿಕೊಂಡು
8 ಚೀಟುಹಾಕಲು ಚೀಟು ಯೋನನಿಗೆ ಬಂತು. ಅದನ್ನು
ನೋಡಿ ಅವರು—ಅಯ್ಯಾ, ಈ ಕೇಡು ನಮಗೆ ಸಂಭ
ವಿಸಿದ್ದಕ್ಕೆ ಯಾರು ಕಾರಣ ಎಂಬದನ್ನು ನೀನೇ
ನಮಗೆ ತಿಳಿಸು; ನೀನು ಎಲ್ಲಿಂದ ಯಾವ ಕೆಲಸದ
ಮೇಲೆ ಬಂದಿ, ನೀನು ಯಾವ ದೇಶದವನು, ಯಾವ
9 ಜನಾಂಗದವನು ಎಂದು ಅವನನ್ನು ಕೇಳಲು ಅವನು
ಅವರಿಗೆ—ನಾನು ಇಬ್ರಿಯನು; ಕಡಲನ್ನೂ ಒಣನೆಲ
ವನ್ನೂ ಸೃಷ್ಟಿಸಿದ ಪರಲೋಕದೇವರಾದ ಯೆಹೋವನ
10 ಭಕ್ತನು ಎಂದು ಹೇಳಿದನು. ಇವನು ಯೆಹೋ
ವನ ಸನ್ನಿಧಿಯಿಂದ ಓಡಿಬಂದವನು ಎಂಬದನ್ನು ಅವನು
ಮೊದಲು ಹೇಳಿದ ಒಂದು ಮಾತಿನಿಂದ ಆ ಜನರು
ತಿಳುಕೊಂಡಿದ್ದರು. ಈಗ ಇದನ್ನೂ ಕೇಳಿ ಬಹ
ವಾಗಿ ಹೆದರಿ—ಇದೇನು ನೀನು ಮಾಡಿದ್ದು ಅಂದರು
ಬಳಿಕ ಸಮುದ್ರವು ಹೆಚ್ಚೆಚ್ಚಾಗಿ ಅಲ್ಲಕಲ್ಲೋಲವಾ
ಕಾರಣ ಅವರು—ನಮ್ಮ ಮೇಲೆ ಎದ್ದಿರುವ ಸಮುದ್ರ
ವು ಶಾಂತವಾಗುವ ಹಾಗೆ ನಿನ್ನನ್ನು ಏನು ಮಾಡೋ
ಎಂದು ಪ್ರಶ್ನೆಮಾಡಲು ಅವನು ಅವರಿಗೆ—ನನ್ನನ್ನೆ
ಸಮುದ್ರದಲ್ಲಿ ಹಾಕಿರಿ; ನಿಮ್ಮ ಮೇಲೆ ಎದ್ದಿರು
ಸಮುದ್ರವು ಶಾಂತವಾಗುವದು; ಈ ದೊಡ್ಡ ತುಫಾನ
ನಿಮಗೆ ಸಂಭವಿಸಿದ್ದು ನನ್ನ ನಿಮಿತ್ತವೇ ಎಂಬದ
ನನಗೆ ಗೊತ್ತು ಎಂದುತ್ತರಕೊಟ್ಟನು. ನಾವಿಕರ
ಒಪ್ಪದೆ ದಡಕ್ಕೆ ಹಿಂದಿರುಗಬೇಕೆಂದು ಹುಟ್ಟುಹಾಕ
ತ್ತಾ ಬಂದರೂ ಸೇರಲು ಆಗಲಿಲ್ಲ; ಸಮುದ್ರವು ಇನ್ನೂ
ಅಲ್ಲಕಲ್ಲೋಲವಾಗಿ ಅವರನ್ನು ಎದುರಿಸಿತು. ಹೀ
ರಲು ಅವರು ಯೆಹೋವನಿಗೆ ಮೊರೆಯಿಟ್ಟು—ಯೆ
ಹೋವನೇ, ಲಾಲಿಸು, ಲಾಲಿಸು; ಈ ಮನುಷ್ಯ
ಪ್ರಾಣನಷ್ಟಕ್ಕಾಗಿ ನಾಶನವು ನಮಗೆ ಬಾರದಿರಲಿ
ನಿರಪರಾಧಿಯನ್ನು ಕೊಲ್ಲುವ ದೋಷಕ್ಕೆ ನಮ್ಮನ್ನ
ಗುರಿಮಾಡಬೇಡ; ಯೆಹೋವನೇ, ನಿನ್ನ ಚಿತ್ತಾನ
ಸಾರ ಮಾಡಿದಿಯಲ್ಲಾ ಎಂದು ಬಿನ್ನವಿಸಿ ಯೋನನನ್ನ
ಎತ್ತಿ ಸಮುದ್ರದಲ್ಲಿ ಹಾಕಿದರು; ಕೂಡಲೆ ಸಮುದ್ರವ
ತನ್ನ ರೌದ್ರವನ್ನು ನಿಲ್ಲಿಸಿಬಿಟ್ಟಿತು. ಇದನ್ನು ನೋಡಿ
ಆ ಜನರು ಯೆಹೋವನಿಗೆ ಬಹಳ ಭಯಪಟ್ಟು ಅ
ನಿಗೆ ಯಜ್ಞವನ್ನರ್ಪಿಸಿ ಹರಕೆಗಳನ್ನು ಮಾಡಿಕೊಂಡರು
ಇತ್ತ ಯೋನನನ್ನು ನುಂಗಲು ಯೆಹೋವನು ಒಂದ
ದೊಡ್ಡ ಮೀನಿಗೆ ಅಪ್ಪಣೆಮಾಡಿದನು; ಯೋನನು
ಮೂರು ದಿನ ಹಗಲಿರುಳು ಆ ಮೀನಿನ ಹೊಟ್ಟೆಯೊ
ಳಗೆ ಇದ್ದನು.

ವಿಪತ್ತಿನಿಂದ ರಕ್ಷಿತನಾದ ಪ್ರವಾದಿಯ ಸ್ತೋತ್ರಗೀತ.

ಯೋನನು ಆ ಮೀನಿನ ಹೊಟ್ಟೆಯೊಳಗೆ ಇದ್ದು
ಕೊಂಡು ತನ್ನ ದೇವರಾದ ಯೆಹೋವನಿಗೆ ಹೀಗೆ
ಪ್ರಾರ್ಥನೆಮಾಡಿದನು.

ಇಕ್ಕಟ್ಟಿನಲ್ಲಿ ನಾನು ಯೆಹೋವನಿಗೆ ಮೊರೆ
ಯಿಟ್ಟೆನು;
ಆತನು ನನಗೆ ಸದುತ್ತರವನ್ನು ದಯಪಾಲಿಸಿದನು
ಪಾತಾಳದ ಗರ್ಭದೊಳಗಿಂದ ಕೂಗಿಕೊಂಡೆನು,
ಆಹಾ, ನನ್ನ ಧ್ವನಿಯನ್ನು ಲಾಲಿಸಿದಿ.
ನನ್ನನ್ನು ಸಮುದ್ರದ ಉದರದಲ್ಲಿ, ಅಗಾಧಸ್ಥಳ
ದಲ್ಲಿ ಎಸೆದುಬಿಟ್ಟೆಯಲ್ಲಾ;

ಪ್ರವಾಹವು ನನ್ನನ್ನು ಸುತ್ತಿಕೊಂಡಿತು;
ಲೆಕ್ಕವಿಲ್ಲದ ನಿನ್ನ ಅಲೆಗಳೂ ತೆರೆಗಳೂ ನನ್ನ
ಮೇಲ್ಗಡೆ ಹಾದುಹೋಗುತ್ತಿದ್ದವು.
4 ನಿನ್ನ ಸಾನ್ನಿಧ್ಯದಿಂದ ಬಿಸಾಡಲ್ಪಟ್ಟಿದ್ದೇನೆ ಅಂದು
ಕೊಂಡೆನು;
ಆದರೂ ನಿನ್ನ ಪರಿಶುದ್ಧಾಲಯವನ್ನು ಪುನಃ ದರ್ಶ
ನಮಾಡುವೆನು.
5 ಜಲರಾಶಿಯು ನನ್ನನ್ನು ಮುತ್ತಿ ನನ್ನ ಪ್ರಾಣಕ್ಕೆ
ಬಂದಿತ್ತು,
ಮಹಾಸಾಗರವು ನನ್ನನ್ನು ಆವರಿಸಿತು,
ಪಾಚಿಯು ನನ್ನ ತಲೆಯನ್ನು ಸುತ್ತಿಕೊಂಡಿತು.
6 ಪರ್ವತಗಳ ಬುಡದ ತನಕ ಇಳಿದೆನು,
ಭೂಲೋಕದ ಅಗುಳಿಗಳು ಎಂದಿಗೂ ತೆಗೆಯದ
ಹಾಗೆ ನನ್ನ ಹಿಂದೆ ಹಾಕಲ್ಪಟ್ಟವು;
ನನ್ನ ದೇವರಾದ ಯೆಹೋವನೇ, ನೀನು ನನ್ನ
ಪ್ರಾಣವನ್ನು ಅಧೋಲೋಕದೊಳಗಿಂದ ಉದ್ಧ
ರಿಸಿದಿ.
7 ನನ್ನ ಆತ್ಮವು ನನ್ನಲ್ಲಿ ಕುಂದಿದಾಗ ಯೆಹೋವ
ನಾದ ನಿನ್ನನ್ನು ಸ್ಮರಿಸಿದೆನು;
ನನ್ನ ಬಿನ್ನಹವು ನಿನಗೆ ಮುಟ್ಟಿತು, ನಿನ್ನ ಪರಿಶು
ದ್ಧಾಲಯಕ್ಕೆ ಸೇರಿತು.
8 ಸುಳ್ಳು ವಿಗ್ರಹಗಳನ್ನು ಅವಲಂಬಿಸಿದವರು
ತಮ್ಮ ಕರುಣಾನಿಧಿಯನ್ನು ತೊರೆದುಬಿಡುವರು.
9 ನಾನಾದರೋ ಸ್ತೋತ್ರಧ್ವನಿಯಿಂದ ನಿನಗೆ ಯಜ್ಞ
ವನ್ನರ್ಪಿಸುವೆನು,
ಮಾಡಿಕೊಂಡ ಹರಕೆಯನ್ನು ಸಲ್ಲಿಸುವೆನು.
ರಕ್ಷಣೆಯು ಯೆಹೋವನಿಂದಲೇ ಉಂಟಾಗುವದು.
10 ಯೆಹೋವನು ಮೀನಿಗೆ ಅಪ್ಪಣೆಮಾಡಲು ಅದು
ಯೋನನನ್ನು ಒಣನೆಲದಲ್ಲಿ ಕಾರಿಬಿಟ್ಟಿತು.

ಪ್ರವಾದಿಯ ಪ್ರಕಟನೆಯನ್ನು ಕೇಳಿದ ನಿನೆವೆಯವರ
ಮಾನಸಾಂತರ.

3 2 ಅನಂತರ ಯೆಹೋವನು ಯೋನನಿಗೆ—ನೀನೆದ್ದು
ಆ ದೊಡ್ಡ ಪಟ್ಟಣವಾದ ನಿನೆವೆಗೆ ಹೋಗಿ ನಾನು
ನಿನಗೆ ಪ್ರಕಟಿಸುವದನ್ನು ಅಲ್ಲಿ ಸಾರು ಎಂದು ಎರಡ
3 ನೆಯ ಸಲ ಅಪ್ಪಣೆಮಾಡಿದನು. ಆಗ ಯೋನನು
ಎದ್ದು ಯೆಹೋವನ ಅಪ್ಪಣೆಯಂತೆ ನಿನೆವೆಗೆ ಹೋದ
ನು. ನಿನೆವೆಯು ಮೂರು ದಿನದ ಪ್ರಯಾಣದಷ್ಟು
4 ಅತಿವಿಸ್ತಾರವಾದ ಮಹಾ ಪಟ್ಟಣವಾಗಿತ್ತು. ಯೋನ
ನು ಪಟ್ಟಣದಲ್ಲಿ ಸೇರಿ ಮೊದಲು ಒಂದು ದಿವಸದ
ಪ್ರಯಾಣದಷ್ಟು ದೂರ ನಡೆದು—ನಾಲ್ವತ್ತು ದಿನಗ
ಳಾದ ಮೇಲೆ ನಿನೆವೆಯು ಕೆಡವಲ್ಪಡುವದು ಎಂದು
5 ಸಾರತೊಡಗಿದನು. ಇದನ್ನು ಕೇಳಿ ನಿನೆವೆಯವರು
ದೇವರಲ್ಲಿ ನಂಬಿಕೆಯಿಟ್ಟು ಉಪವಾಸವನ್ನು ಗೊತ್ತು
ಮಾಡಿ ಸಾರಿದರು; ದೊಡ್ಡವರು ಮೊದಲುಗೊಂಡು
ಚಿಕ್ಕವರ ತನಕ ಎಲ್ಲರೂ ಗೋಣಿತಟ್ಟನ್ನು ಸುತ್ತಿ
6 ಕೊಂಡರು. ಯೋನನ ಪ್ರಕಟನೆಯು ನಿನೆವೆಯ ಅರಸ
ನಿಗೆ ಮುಟ್ಟಲು ಅವನು ಸಿಂಹಾಸನದಿಂದ ಎದ್ದು ತನ್ನ
ನಿಲುವಂಗಿಯನ್ನು ತೆಗೆದುಬಿಟ್ಟು ಗೋಣಿತಟ್ಟನ್ನು
ಸುತ್ತಿಕೊಂಡು ಬೂದಿಯಲ್ಲಿ ಕೂತನು. ಇದಲ್ಲದೆ 7
ಅವನು ತನ್ನ ಮತ್ತು ರಾಜ್ಯಾಧಿಕಾರಿಗಳ ಆಜ್ಞೆಯ
ನ್ನಾಗಿ—ಜನ ಪಶು ಮಂದೆ ಹಿಂಡು ಇವುಗಳು ಏನೂ
ರುಚಿನೋಡದಿರಲಿ; ತಿನ್ನದಿರಲಿ, ಕುಡಿಯದಿರಲಿ;
ಜನರಿಗೂ ಪಶುಗಳಿಗೂ ಗೋಣಿತಟ್ಟು ಹೊದಿಕೆಯಾ 8
ಗಲಿ; ಎಲ್ಲರು ದೇವರಿಗೆ ಬಲವಾಗಿ ಮೊರೆಯಿಡಲಿ;
ಒಬ್ಬೊಬ್ಬನು ತನ್ನ ತನ್ನ ದುರ್ಮಾರ್ಗವನ್ನೂ ತಾನು
ನಡಿಸುತ್ತಿದ್ದ ಹಿಂಸೆಯನ್ನೂ ತೊರೆದುಬಿಡಲಿ. ದೇವ 9
ರು ಒಂದು ವೇಳೆ ಮನಮರುಗಿ ಹಿಂದಿರುಗಿ ತನ್ನ
ಉಗ್ರಕೋಪವನ್ನು ತೊಲಗಿಸಾನು, ನಾವು ನಾಶವಾಗದೆ
ಉಳಿದೇವು ಎಂಬದನ್ನು ನಿನೆವೆಯಲ್ಲೆಲ್ಲಾ ಸಾರಿಸಿದನು.
ದೇವರು ನಿನೆವೆಯವರ ಕಾರ್ಯಗಳನ್ನು ನೋಡಿ 10
ಅವರು ತಮ್ಮ ದುರ್ಮಾರ್ಗದಿಂದ ತಿರುಗಿಕೊಂಡ
ರೆಂದು ತಿಳಿದು ಮನಮರುಗಿ ತಾನು ಅವರಿಗೆ ಮಾಡು
ವೆನೆಂದು ಪ್ರಕಟಿಸಿದ್ದ ಕೇಡನ್ನು ಮಾಡದೆ ಬಿಟ್ಟನು.

ದೇವರು ಪ್ರವಾದಿಯ ಹಟವನ್ನು ತಿದ್ದಿದ್ದು.

4 ಇದರಿಂದ ಯೋನನಿಗೆ ಬಹು ಕರಕರೆಯಾಯಿತು;
ಅವನು ಸಿಟ್ಟುಗೊಂಡು—ಯೆಹೋವಾ, ಲಾಲಿಸು, 2
ನಾನು ಸ್ವದೇಶದಲ್ಲಿರುವಾಗಲೇ ಹೀಗಾಗುವದೆಂದು
ಹೇಳಿದೆನಷ್ಟೆ; ನೀನು ದಯೆಯೂ ಕನಿಕರವೂ
ದೀರ್ಘಶಾಂತಿಯೂ ಮಹಾಕೃಪೆಯೂ ಉಳ್ಳ ದೇವರು,
ಮಾಡಬೇಕೆಂದಿದ್ದ ಕೇಡಿಗೆ ಮನಮರುಗುವವನು
ಎಂದು ನಾನು ತಿಳಿದೇ ತಾರ್ಷೀಷಿಗೆ ಓಡಿಹೋಗಲು
ತ್ವರೆಪಟ್ಟೆನು. ಈಗ, ಯೆಹೋವನೇ, ನನ್ನ ಪ್ರಾಣ 3
ವನ್ನು ತೆಗೆ; ನಾನು ಬದುಕುವದಕ್ಕಿಂತ ಸಾಯು
ವದೇ ಲೇಸು ಎಂದು ವಿಜ್ಞಾಪಿಸಿಕೊಂಡನು. ಅದಕ್ಕೆ 4
ಯೆಹೋವನು—1)ನೀನು ಸಿಟ್ಟುಗೊಳ್ಳುವದು ಸರಿ
ಯೋ ಎಂದು ಕೇಳಿದನು. ಅನಂತರ ಯೋನನು 5
ಪಟ್ಟಣವನ್ನು ಬಿಟ್ಟು ಅದರ ಮೂಡಲಲ್ಲಿ ಒಂದು ಗುಡಿ
ಸಲನ್ನು ಮಾಡಿಕೊಂಡು ಪಟ್ಟಣವು ಏನಾಗುವದೋ
ಎಂದು ನೋಡುತ್ತಾ ಅದರ ನೆರಳಿನಲ್ಲಿ ಕೂತುಕೊಂಡಿ
ದ್ದನು. ಆಗ ದೇವರಾದ ಯೆಹೋವನು ಯೋನನ 6
ಮೇಲ್ಗಡೆ ಒಂದು ಸೋರೆಗಿಡವು ಹಬ್ಬಿ ಅವನ ತಲೆಗೆ
ನೆರಳಾಗಿ ಅವನ ಕರಕರೆಯನ್ನು ತಪ್ಪಿಸುವಂತೆ ಏರ್ಪಡಿ
ಸಿದನು. ಆ ಸೋರೆಗಿಡದಿಂದ ಯೋನನಿಗೆ ಬಹು
ಸಂತೋಷವಾಯಿತು. ಮಾರಣೆಯ ಅರುಣೋದಯ 7
ದಲ್ಲಿ ದೇವರು ಒಂದು ಹುಳಕ್ಕೆ ಅಪ್ಪಣೆಮಾಡಿದನು;
ಅದು ಸೋರೆಗಿಡವನ್ನು ಹೊಡೆಯಲು ಒಣಗಿಹೋ
ಯಿತು. ಸೂರ್ಯನು ಹುಟ್ಟಿದಾಗ ದೇವರು ಬಿಸಿಯಾ 8
ದ ಮೂಡಣ ಗಾಳಿಯನ್ನು ಏರ್ಪಡಿಸಿದನು; ಬಿಸಿಲು
ಯೋನನ ತಲೆಗೆ ಹೊಡೆಯಲು ಅವನು ಮೂರ್ಛೆ
ಹೋಗುವವನಾಗಿ ನಾನು ಬದುಕುವದಕ್ಕಿಂತ ಸಾಯು
ವದೇ ಲೇಸು ಎಂದು ಮರಣವನ್ನು ಕೇಳಿಕೊಂಡನು.
ಆಗ ದೇವರು ಯೋನನನ್ನು — ನೀನು ಸೋರೆಗಿಡ 9

1) ಅಥವಾ: ನೀನು ಇಷ್ಟು ಕೋಪಗೊಂಡಿದ್ದೀಯಾ.

ಕ್ಕಾಗಿ ಸಿಟ್ಟುಗೊಳ್ಳುವದು ಸರಿಯೋ ಎಂದು ಕೇಳಲು
ಯೋನನು—ಮರಣವಾಗುವಷ್ಟು ಸಿಟ್ಟುಗೊಳ್ಳುವದು
10 ಸರಿಯೇ ಎಂದು ಉತ್ತರಕೊಟ್ಟನು. ಅದಕ್ಕೆ ಯೆಹೋ
ವನು—ನೀನು ಆ ಸೋರೆಗಿಡಕ್ಕಾಗಿ ಕಷ್ಟಪಡಲಿಲ್ಲ,
ಬೆಳೆಯಿಸಲಿಲ್ಲ; ಅದು ಒಂದು ರಾತ್ರಿಯಲ್ಲಿ ಹುಟ್ಟಿ
ಒಂದು ರಾತ್ರಿಯಲ್ಲಿ ನಾಶವಾಯಿತು; ಇಂಥ ಗಿಡ
ಕ್ಕಾಗಿ ನೀನು ಕನಿಕರಪಟ್ಟಿರುವಲ್ಲಿ ಎಡಗೈ ಬಲಗೈ ತಿಳಿ
ಯದ ಒಂದು ಲಕ್ಷ ಇಪ್ಪತ್ತು ಸಾವಿರ ನರಪ್ರಾಣಿಗಳೂ
ಬಹು ಪಶುಗಳೂ ಉಳ್ಳ ಆ ದೊಡ್ಡ ಪಟ್ಟಣವಾದ ನಿನೆವೆ
ಗಾಗಿ ನಾನು ಕನಿಕರಪಡಬಾರದೋ ಅಂದನು.

---

# THE BOOK OF MICAH

## ಮೀಕನ ಪ್ರವಾದನೆಯ ಗ್ರಂಥ

### ಇಸ್ರಾಯೇಲಿನ ಪಾಪವೂ ದಂಡನೆಯೂ. 1—3.

#### ಸಮಾರ್ಯಕ್ಕೂ ಯೆರೂಸಲೇಮಿಗೂ ಸಂಭವಿಸುವ ನಾಶನ.

1 ಯೆಹೂದದ ಅರಸರಾದ ಯೋಥಾಮ, ಆಹಾಜ,
ಹಿಜ್ಕೀಯ, ಇವರ ಕಾಲದಲ್ಲಿ ಸಮಾರ್ಯದ ಮತ್ತು
ಯೆರೂಸಲೇಮಿನ ವಿಷಯವಾಗಿ ಮೋರೆಷೆತ್ ಊರಿ
ನವನಾದ ಮೀಕನಿಗೆ ಕಂಡುಬಂದ ಯೆಹೋವನ
ವಾಕ್ಯ.

2 ಜನಾಂಗಗಳೇ, ನೀವೆಲ್ಲರೂ ಕೇಳಿರಿ;
ಭೂಮಂಡಲವೇ, ಭೂಮಿಯಲ್ಲಿರುವ ಸಮಸ್ತವೇ,
ಕಿವಿಗೊಡಿರಿ!
ಕರ್ತನು, ಕರ್ತನಾದ ಯೆಹೋವನು ತನ್ನ ಪವಿ
ತ್ರಾಲಯದೊಳಗಿಂದ ನಿಮಗೆ ವಿರುದ್ಧವಾಗಿ
ಸಾಕ್ಷಿಕೊಡುತ್ತಾನೆ.
3 ಇಗೋ, ಯೆಹೋವನು ತನ್ನ ಸ್ಥಾನದಿಂದ ಹೊರ
ಟು ಇಳಿದುಬರುತ್ತಿದ್ದಾನೆ,
ಭೂಮಿಯ ಉನ್ನತಪ್ರದೇಶಗಳಲ್ಲಿ ನಡೆಯುತ್ತಾನೆ.
4 ಬೆಂಕಿಗೆ ಕರಗಿದ ಮೇಣದಂತೆಯೂ
ಜರಿಯಲ್ಲಿ ಹೊಯ್ದ ನೀರಿನ ಹಾಗೂ
ಪರ್ವತಗಳು ಆತನ ಹೆಜ್ಜೆಗೆ ಕರಗಿ ಹರಿಯುತ್ತವೆ,
ತಗ್ಗುಗಳು ಸೀಳಿಹೋಗುತ್ತವೆ.
5 ಇದಕ್ಕೆಲ್ಲಾ ಕಾರಣವು ಯಾಕೋಬಿನ ದ್ರೋಹವೇ,
ಇಸ್ರಾಯೇಲ್ ವಂಶದ ಪಾಪಗಳೇ.
ಯಾಕೋಬಿನ ದ್ರೋಹವೇನು? ಸಮಾರ್ಯ
ವಲ್ಲವೇ.
ಯೆಹೂದದ 1)[ಕೆಟ್ಟ] ಪೂಜಾಸ್ಥಾನಗಳು ಯಾವ
ವು? ಯೆರೂಸಲೇಮಲ್ಲವೋ.
6 ಆದಕಾರಣ ನಾನು ಸಮಾರ್ಯವನ್ನು ಹೊಲ
ದಲ್ಲಿನ ಹಾಳು ದಿಬ್ಬವನ್ನಾಗಿಯೂ
ದ್ರಾಕ್ಷೆಯ ತೋಟದ ಮಡಿಗಳನ್ನಾಗಿಯೂ ಮಾಡು
ವೆನು;
ಅದರ ಕಲ್ಲುಗಳನ್ನು ತಗ್ಗಿಗೆ ಸುರಿದುಬಿಡುವೆನು;
ಅದರ ಅಸ್ತಿವಾರಗಳನ್ನು ಬೈಲುಮಾಡುವೆನು.
ಅದರ ಎರಕದ ಬೊಂಬೆಗಳೆಲ್ಲಾ ಒಡೆಯಲ್ಪಡು
ವವು;
ಅದರ ಸಮಸ್ತ ಸಂಪಾದನೆಯು ಸುಟ್ಟುಹೋಗು
ವದು,
ಅದರ ಸಕಲ ವಿಗ್ರಹಗಳನ್ನು ಹಾಳುಮಾಡುವೆನು;
ಅದು ಸೂಳೆತನದ ಸಂಪಾದನೆಯಾಗಿ ಕೂಡಿಸಿಟ್ಟು
ಕೊಂಡವುಗಳು,
ಸೂಳೆತನದ ಸಂಪಾದನೆಯಾಗಿಯೇ ಪರರ ಪಾ
ಲಾಗುವವು.
ಇದಕ್ಕಾಗಿ ನಾನು ಅರಿಚಾಟ ಕಿರಿಚಾಟ ಮಾಡು
ವೆನು;
ಬರಿಗಾಲಾಗಿಯೂ ಬೆತ್ತಲೆಯಾಗಿಯೂ ನಡೆಯು
ವೆನು;
ನರಿಗಳಂತೆ ಅರಚಿಕೊಳ್ಳುವೆನು,
ಉಷ್ಟ್ರಪಕ್ಷಿಗಳ ಹಾಗೆ ಕಿರಚಿಕೊಳ್ಳುವೆನು.
ಸಮಾರ್ಯಕ್ಕೆ ಬಿದ್ದ ಪೆಟ್ಟು ಗಡಸು;
ಅದು ಯೆಹೂದಕ್ಕೂ ತಾಕಿದೆ;
ನನ್ನ ಜನರ 2)ಆಲೋಚನಾಸ್ಥಾನವಾದ ಯೆರೂಸ
ಲೇಮಿಗೆ ಮುಟ್ಟಿದೆ.
ಇದನ್ನು ಗತ್ ಊರಿನಲ್ಲಿ ತಿಳಿಸಬೇಡಿರಿ; ಅಳಲೇ
ಬೇಡಿರಿ;
ಬೇತ್ಲೆಯಪ್ರದಲ್ಲಿ ಧೂಳಿನೊಳಗೆ 3)ಹೊರಳಾಡಿರಿ.
ಶಾಫೀರಿನವರೇ, ಬೆತ್ತಲೆಯಾಗಿ ಅವಮಾನಪಟ್ಟು
ತೊಲಗಿರಿ;
ಚಾನಾನಿನವರು ಹೊರಡರು;
ಬೇತೇಚೆಲಿನ ಗೋಳಾಟವು ಅದರ ಬೆಂಬಲವನ್ನು
ನಿಮಗೆ ತಪ್ಪಿಸುವದು.

---

1) ಪಾಠಾಂತರ: ಪಾಪವು ಯಾವದು? 2) ಮೂಲ: ಪುರದ್ವಾರವಾದ. 3) ಮೂಲ: ಹೊರಳಾಡು.

2 ಕೇಡು ಯೆಹೋವನಿಂದಿಳಿದು ಯೆರೂಸಲೇಮಿನ
ಪುರದ್ವಾರಕ್ಕೆ ತಗಲಿದ ಕಾರಣ
ಮಾರೋತಿನವರು ಮೇಲುಂಟಾಗುವದಿಲ್ಲವೋ
ಎಂದು ವೇದನೆಪಡುತ್ತಾರೆ.
3 ಲಾಕೀಷಿನವರೇ, ಅಶ್ವಗಳನ್ನು ರಥಕ್ಕೆ ಕಟ್ಟಿರಿ;
ನಿಮ್ಮ ಊರೇ ಚೀಯೋನ್ ನಗರಿಯ ಪಾಪಕ್ಕೆ
ಮೂಲ;
ಹೌದು, ಇಸ್ರಾಯೇಲಿನ ದ್ರೋಹಗಳು ನಿಮ್ಮ
ಲ್ಲಿಯೇ ಹುಟ್ಟಿಬಂದವು.
4 ಆದಕಾರಣ ನೀವು ಮೋರೆಷೆತ್‌ಗತ್ ಊರಿಗೆ
ಬಳುವಳಿ ಕೊಡಬೇಕಾಗುವದು;
ಅಕ್ಜೀಬಿನ ಮನೆಗಳಿಂದ ಇಸ್ರಾಯೇಲಿನ ಅರಸ
ರಿಗೆ ಮೋಸವಾಗುವದು.
5 ಮಾರೇಷದವರೇ, ನಿಮ್ಮನ್ನು ವಶಮಾಡಿಕೊಳ್ಳ
ತಕ್ಕವನನ್ನು ಇನ್ನು ನಿಮ್ಮ ಬಳಿಗೆ ಬರಮಾಡು
ವೆನು;
ಇಸ್ರಾಯೇಲಿನ ಮಹಿಮೆಯವರು ಅದುಲ್ಲಾಮಿಗೆ
ಸೇರುವರು.
6 [ಯೆಹೂದವೇ,] ನಿನ್ನ ಮುದ್ದುಮಕ್ಕಳಿಗಾಗಿ
ಕ್ಷೌರಮಾಡಿಸಿಕೋ, ತಲೆಬೋಳಿಸಿಕೋ;
ನಿನ್ನ ಬೋಳುತನವನ್ನು ರಣಹದ್ದಿನ ಹಾಗೆ
ವಿಸ್ತರಿಸಿಕೋ;
ಅವರು ನಿನ್ನ ಕಡೆಯಿಂದ ಸೆರೆಹೋಗಿದ್ದಾರಲ್ಲಾ!

### ಬಡವರನ್ನು ದೋಚಿಕೊಳ್ಳುವ ಇಸ್ರಾಯೇಲಿನ ಪಾಪ.

2 ತಮ್ಮ ಹಾಸಿಗೆಗಳಲ್ಲೇ ಅನ್ಯಾಯವನ್ನು ಯೋ
ಚಿಸಿ
ಕೇಡನ್ನು ಕಲ್ಪಿಸುವವರ ಗತಿಯನ್ನು ಏನು ಹೇಳಲಿ!
ಉದಯದ ಬೆಳಕಿನಲ್ಲಿ
ಅದನ್ನು ನಡಿಸುವರು,
ಅದು ಅವರ ಕೈವಶವಷ್ಟೆ.
2 ಹೊಲಗದ್ದೆಗಳನ್ನು ದುರಾಶೆಯಿಂದ ಆಕ್ರಮಿಸಿ
ಕೊಳ್ಳುತ್ತಾರೆ,
ಮನೆಗಳನ್ನು ಲೋಭದಿಂದ ಅಪಹರಿಸುತ್ತಾರೆ;
ಮನೆಯನ್ನೂ ಮನೆಯವನನ್ನೂ ಸ್ವಾಸ್ತ್ಯವನ್ನೂ
ಸ್ವಾಸ್ತ್ಯದವನನ್ನೂ ತುಳಿದುಬಿಡುತ್ತಾರೆ.
3 ಆದಕಾರಣ ಯೆಹೋವನು ಇಂತೆನ್ನುತ್ತಾನೆ—
ಇಗೋ, ಈ ವಂಶಕ್ಕೆ ನಾನೇ ಕೇಡನ್ನು ಕಲ್ಪಿಸು
ತ್ತೇನೆ;
ಅದರ ಭಾರದಿಂದ ನಿಮ್ಮ ಕುತ್ತಿಗೆಗಳನ್ನು ತಪ್ಪಿಸಿ
ಕೊಳ್ಳಲಾರಿರಿ,
ನೀವು ತಲೆಯೆತ್ತಿ ನಡೆಯುವದಕ್ಕಾಗದು;
ಅದು ಕೆಟ್ಟಕಾಲವೇ ಸರಿ.
4 ಆ ದಿನದಲ್ಲಿ ಜನರು ನಿಮ್ಮ ವಿಷಯವಾಗಿ ಪದ್ಯವ
ನ್ನೆತ್ತಿ—
ಅಯ್ಯೋ, ನಾವು ತೀರಾ ಸೂರೆಹೋದೆವಲ್ಲಾ!
[ಯೆಹೋವನು] ನಮ್ಮವರ ಸ್ವಾಸ್ತ್ಯವನ್ನು ಪರಾ
ಧೀನಮಾಡಿದ್ದಾನೆ;
ಅಕಟಾ, ಅದನ್ನು ನಮ್ಮಿಂದ ತೊಲಗಿಸಿದ್ದಾನಲ್ಲಾ!
ನಮ್ಮ ಭೂಮಿಯನ್ನು ದೇವದ್ರೋಹಿಗಳಿಗೆ ಹಂಚಿ
ಕೊಟ್ಟಿದ್ದಾನೆ ಎಂದು
ಶೋಕಗೀತವಾಗಿ ಹಾಡುವರು.
ಹೀಗಿರಲು ಯೆಹೋವನ ಸಭೆಯವರ ಭೂಮಿ 5
ಯ ಮೇಲೆ ನೂಲೆಳೆಯಲಿಕ್ಕೆ
1)ನಿಮ್ಮಲ್ಲಿ ಯಾರೂ ಇರುವದಿಲ್ಲ.
[ಆಹಾ, ಆ ಕೆಡುಕರು] ಪ್ರವಾದನೆಮಾಡಬೇಡಿರಿ; 6
ಇಂಥ ವಿಷಯಗಳಲ್ಲಿ ಪ್ರವಾದನೆಯನ್ನೆತ್ತಕೂಡದು;
ದೂಷಣೆಗಳು ತೊಲಗುವದೇ ಇಲ್ಲ ಎಂದು ಪ್ರವಾ
ದನೆಮಾಡುತ್ತಾರೆ.
ಯಾಕೋಬ್ ವಂಶವೇ, ಯೆಹೋವನ ಸ್ವಭಾವವು 7
ಹಿಡಿತವಾದದ್ದೋ,
ಇಂಥ ಕೃತ್ಯಗಳು ಆತನವೋ ಎಂದು ಏಕೆ ಹೇಳು
ತ್ತೀ?
ನನ್ನ ನುಡಿಗಳು ಸನ್ಮಾರ್ಗಿಗಳಿಗೇ ಹಿತಕರವಷ್ಟೆ.
ನನ್ನ ಜನರೋ ಕೆಲವು ಕಾಲದಿಂದ ಶತ್ರುಗಳಾಗಿ 8
ಎದ್ದಿದ್ದಾರೆ:
ಜಗಳವನ್ನೊಲ್ಲದೆ ನಿರ್ಭಯವಾಗಿ ಹೋಗಿ ಬರುವ
ವರ ಅಂಗಿಯ ಮೇಲಿನಿಂದ
ಶಲ್ಯವನ್ನು ಕಸುಕೊಳ್ಳುತ್ತೀರಿ.
ನನ್ನ ಜನರ ಸ್ತ್ರೀಯರನ್ನು ಅವರ ಪ್ರಿಯವಾದ 9
ಮನೆಗಳಿಂದ ತಳ್ಳಿಹಾಕುತ್ತೀರಿ;
ಅವರ ಸಣ್ಣ ಮಕ್ಕಳಿಗೆ ನನ್ನ ಮಹಿಮೆಯ ಹಕ್ಕನ್ನು
ಇನ್ನೆಂದಿಗೂ ಸಿಕ್ಕದಂತೆ ತಪ್ಪಿಸುತ್ತೀರಿ.
ಏಳಿರಿ, ತೊಲಗಿರಿ! ಈ ದೇಶವು ನಿಮಗೆ ಸುಖವಸತಿ 10
ಯಾಗದು;
ನಾಶನವನ್ನು, ವಿಪರೀತನಾಶನವನ್ನು ಉಂಟುಮಾ
ಡುವ ಹೊಲಸು ಇದಕ್ಕೆ ಅಂಟಿಕೊಂಡಿದೆ.
ಗಾಳಿಯನ್ನೂ ಮೋಸವನ್ನೂ ಹಿಂಬಾಲಿಸುವ ಸು 11
ಳ್ಳುಗಾರನೊಬ್ಬನು—
ನಾನು ದ್ರಾಕ್ಷಾರಸಮದ್ಯಗಳ ವಿಷಯವಾಗಿ
ನಿನಗೆ ಪ್ರವಾದನೆಮಾಡುವೆನು ಎಂದು ಹೇಳಿದರೆ
ಈ ಜನರು ಅಂಥವನನ್ನು ಪ್ರವಾದಿಯನ್ನಾಗಿ ಸ್ವೀಕ
ರಿಸಿಕೊಳ್ಳುವರು.

### ಇಸ್ರಾಯೇಲಿಗೆ ರಕ್ಷಣೆಯ ವಾಗ್ದಾನ.

ಯಾಕೋಬೇ, ನಿನ್ನವರನ್ನೆಲ್ಲಾ ಕೂಡಿಸೇ ಕೂಡಿ 12
ಸುವೆನು;
ಇಸ್ರಾಯೇಲಿನ ಜನಶೇಷವನ್ನು ಸೇರಿಸೇ ಸೇರಿ
ಸುವೆನು,
ಅವರನ್ನು ಹಟ್ಟಿಯಲ್ಲಿನ ಕುರಿಗಳಂತೆ ಒಟ್ಟುಗಿಡು
ವೆನು,
ಕಾವಲ ಮಧ್ಯದಲ್ಲಿನ ಮಂದೆಯ ಹಾಗೆ ಗುಂಪು
ಹಾಕುವೆನು;

1) ಮೂಲ: ನಿನ್ನಲ್ಲಿ.

ಜನರು ಗಿಜಗುಟ್ಟುವರು.
13 ಒಡೆಯುವವನು ಅವರ ಮುಂದೆ ಹೊರಟಿದ್ದಾನೆ;
ಅವರೂ ಬಾಗಿಲನ್ನು ಒಡೆದು ನುಗ್ಗಿ ಹೊರಟಿದ್ದಾರೆ;
ಅವರ ಅರಸನು ಅವರ ಮುಂದೆ ತೆರಳಿದ್ದಾನೆ,
ಯೆಹೋವನು ಅವರ ಮುಂಭಾಗದಲ್ಲಿ ನಡೆಯುತ್ತಿದ್ದಾನೆ.

ಇಸ್ರಾಯೇಲಿನ ಮುಖಂಡರ ಖಂಡನೆ.

3 ನಾನು ಹೀಗೆ ಸಾರಿದೆನು—
ಯಾಕೋಬಿನ ಮುಖಂಡರೇ, ಇಸ್ರಾಯೇಲ್ ವಂಶದ ಅಧ್ಯಕ್ಷರೇ, ಕೇಳಿರಿ, ಕೇಳಿರಿ!
ನ್ಯಾಯವನ್ನು ಮುಂದಟ್ಟುಮಾಡಿಕೊಳ್ಳುವದು ನಿಮ್ಮ ಧರ್ಮವಲ್ಲವೆ.
2 ಆಹಾ, ಇವರು ಒಳ್ಳೆಯದನ್ನು ದ್ವೇಷಿಸಿ ಕೆಟ್ಟದನ್ನು ಪ್ರೀತಿಸುತ್ತಾರೆ,
ಜನರ ಮೈಮೇಲಿಂದ ಚರ್ಮವನ್ನು ಸುಲಿಯುತ್ತಾರೆ,
ಅವರ ಎಲುಬುಗಳಿಂದ ಮಾಂಸವನ್ನು ಕಿತ್ತುಬಿಡುತ್ತಾರೆ;
3 ನನ್ನ ಪ್ರಜೆಯ ಮಾಂಸವನ್ನು ತಿನ್ನುತ್ತಾರೆ,
ಅವರ ಚರ್ಮವನ್ನು ಸುಲಿದುಹಾಕಿ ಅವರ ಎಲುಬುಗಳನ್ನು ಮುರಿಯುತ್ತಾರೆ;
ಹಂಡೆಯಲ್ಲಿನ ತುಂಡುಗಳಂತೆ, ಕೊಪ್ಪರಿಗೆಯಲ್ಲಿನ ಮಾಂಸದ ಹಾಗೆ
ಅವರನ್ನು ಚೂರುಚೂರಾಗಿ ಕತ್ತರಿಸುತ್ತಾರೆ.
4 ಇಷ್ಟೆಲ್ಲಾ ನಡಿಸಿ ಇವರು ಯೆಹೋವನಿಗೆ ಮೊರೆಯಿಡಲು
ಆತನು ಇವರಿಗೆ ಉತ್ತರಕೊಡನು;
ಇವರ ನಡತೆಯ ದುಷ್ಕೃತ್ಯಗಳಿಗೆ ತಕ್ಕಹಾಗೆ
ಆ ಕಾಲದಲ್ಲಿ ಇವರಿಗೆ ವಿಮುಖನಾಗುವನು.
5 ನನ್ನ ಜನರನ್ನು ಸನ್ಮಾರ್ಗದಿಂದ ತಪ್ಪಿಸುವವರೂ
ಹಲ್ಲುಗಳಿಗೆ ಕುರುಕುವದೇನಾದರೂ ಸಿಕ್ಕಿರುವ ತನಕ ಶುಭವನ್ನು ಪ್ರಕಟಿಸುವವರೂ
ತಮ್ಮ ಬಾಯಿಗೆ ಕವಳಕೊಡದವನ ಮೇಲೆ ಯುದ್ಧನಿರ್ಧರಿಸುವವರೂ
ಆಗಿರುವ ಪ್ರವಾದಿಗಳ ವಿಷಯವಾಗಿ ಯೆಹೋವನು ಇಂತೆನ್ನುತ್ತಾನೆ—
6 ನೀವು ಇಂಥವರಾದಕಾರಣ ನಿಮಗೆ ರಾತ್ರಿಯಾಗುವದು, ದಿವ್ಯದರ್ಶನವಾಗದು;
ನಿಮಗೆ ಕತ್ತಲುಕವಿಯುವದು, ಕಣಿಹೇಳಲಾಗದು;
ಸೂರ್ಯನು ಪ್ರವಾದಿಗಳಿಗೆ ಮುಣುಗುವನು,
ಹಗಲು ಅವರಿಗೆ ಕಾರ್ಗತ್ತಲಾಗುವದು;
7 ದಿವ್ಯದರ್ಶಿಗಳು ಆಶಾಭಂಗಪಡುವರು,
ಕಣಿಯವರು ನಾಚಿಕೆಗೊಳ್ಳುವರು,
ಎಲ್ಲರೂ ಬಟ್ಟೆಯಿಂದ ಬಾಯಿಮುಚ್ಚಿಕೊಳ್ಳುವರು;
ಅವರಿಗೆ ದೈವೋತ್ತರವೇ ದೊರೆಯದು.

ನಾನಾದರೋ ಯೆಹೋವನ ಆತ್ಮಾವೇಶದಿಂದ
ಬಲಪರಾಕ್ರಮನ್ಯಾಯಭರಿತನಾಗಿ
ಯಾಕೋಬಿಗೆ ಅದರ ದ್ರೋಹವನ್ನು ಇಸ್ರಾಯೇಲಿಗೆ ಅದರ ಪಾಪವನ್ನು
ಸಾರಲು ಶಕ್ತನಾಗಿದ್ದೇನೆ.
ನ್ಯಾಯಕ್ಕೆ ಅಸಹ್ಯಪಟ್ಟು ನೆಟ್ಟಗಿರುವದನ್ನು ಸೊಟ್ಟಗೆ ಮಾಡುವ ಯಾಕೋಬ್‌ವಂಶದ ಮುಖಂಡರೇ,
ಇಸ್ರಾಯೇಲ್ ಮನೆತನದ ಅಧ್ಯಕ್ಷರೇ,
ಚೀಯೋನನ್ನು ನರಹತ್ಯದಿಂದಲೂ ಯೆರೂಸಲೇಮನ್ನು ಅನ್ಯಾಯದಿಂದಲೂ ಕಟ್ಟುವವರೇ,
ಇದನ್ನು ಕೇಳಿರಿ, ಕೇಳಿರಿ!
ಮುಖಂಡರು ಲಂಚಕ್ಕೆ ನ್ಯಾಯತೀರಿಸುತ್ತಾರೆ,
ಯಾಜಕರು ಸಂಬಳಕ್ಕಾಗಿ ಉಪದೇಶಿಸುತ್ತಾರೆ,
ಪ್ರವಾದಿಗಳು ಹಣಕ್ಕೋಸ್ಕರ ಕಣಿಹೇಳುತ್ತಾರೆ;
ಆದರೂ ಯೆಹೋವನ ಮೇಲೆ ಭಾರಹಾಕಿ—
ಯೆಹೋವನು ನಮ್ಮ ಮಧ್ಯದಲ್ಲಿ ಇದ್ದಾನಲ್ಲಾ
ನಮಗೆ ಯಾವ ಕೇಡೂ ಸಂಭವಿಸದು ಅಂದುಕೊಳ್ಳುತ್ತಾರೆ.
ಹೀಗಿರಲು ನಿಮ್ಮ ದೆಸೆಯಿಂದ ಚೀಯೋನ್ ಪಟ್ಟಣವು ಹೊಲದಂತೆ ಗೇಯಲ್ಪಡುವದು,
ಯೆರೂಸಲೇಮು ಹಾಳುದಿಬ್ಬಗಳಾಗುವದು,
ಯೆಹೋವನ ಆಲಯದ ಪರ್ವತವು ಕಾಡುಗುಡ್ಡಗಳಂತಾಗುವದು.

ಇಸ್ರಾಯೇಲಿಗೆ ವಿವಿಧವಾಗ್ದಾನಗಳು.
4; 5.
ಚೀಯೋನಿನ ಮುಂದಣ ಪ್ರಖ್ಯಾತಿ.

ಅಂತ್ಯಕಾಲದಲ್ಲಿ ಯೆಹೋವನ ಮಂದಿರದ ಬೆಟ್ಟವು
ಎಲ್ಲಾ ಗುಡ್ಡಬೆಟ್ಟಗಳಿಗಿಂತ ಉನ್ನತೋನ್ನತವಾಗಿ ಬೆಳೆದು ನೆಲೆಗೊಳ್ಳುವದು;
ಆಗ ಜನಾಂಗಗಳು ಅದರ ಕಡೆಗೆ ಪ್ರವಾಹಗಳಂತೆ ಬರುವವು.
ಹೊರಟುಬಂದ ಬಹು ದೇಶಗಳವರು—
ಬನ್ನಿರಿ, ಯೆಹೋವನ ಪರ್ವತಕ್ಕೆ,
ಯಾಕೋಬ್ಯರ ದೇವರ ಮಂದಿರಕ್ಕೆ ಹೋಗೋಣ;
ಆತನು ತನ್ನ ಮಾರ್ಗಗಳ ವಿಷಯವಾಗಿ ನಮಗೆ ಬೋಧನೆಮಾಡುವನು,
ನಾವು ಆತನ ದಾರಿಗಳಲ್ಲಿ ನಡೆಯುವೆವು ಎಂದು ಹೇಳುವರು.
ಏಕಂದರೆ ಚೀಯೋನಿನಿಂದ ಧರ್ಮೋಪದೇಶವು,
ಯೆರೂಸಲೇಮಿನಿಂದ ಯೆಹೋವನ ವಾಕ್ಯವು ಹೊರಡುವವು.
ಆತನು ಬಹು ರಾಷ್ಟ್ರದವರ ವ್ಯಾಜ್ಯಗಳನ್ನು ವಿಚಾರಿಸುವನು,
ಪ್ರಬಲ ಜನಾಂಗಗಳಿಗೆ ನ್ಯಾಯತೀರಿಸುವನು;
ಅವರೋ ತಮ್ಮ ಕತ್ತಿಗಳನ್ನು ಕುಲುಮೆಗೆ ಹಾಕಿ ಗುಳಗಳನ್ನಾಗಿಯೂ

ಬರ್ಜಿಗಳನ್ನು ಕುಡುಗೋಲುಗಳನ್ನಾಗಿಯೂ ಮಾಡುವರು;
ಜನಾಂಗವು ಜನಾಂಗಕ್ಕೆ ವಿರುದ್ಧವಾಗಿ ಕತ್ತಿಯನ್ನೆತ್ತದು,
ಇನ್ನು ಯುದ್ಧಾಭ್ಯಾಸವು ನಡೆಯುವದೇ ಇಲ್ಲ.
4 ಒಬ್ಬೊಬ್ಬನು ತನ್ನ ತನ್ನ ದ್ರಾಕ್ಷಾಲತೆ, ಅಂಜೂರಗಿಡ,
ಇವುಗಳ ನೆರಳಿನಲ್ಲಿ ಕೂತುಕೊಳ್ಳುವನು;
ಅವರನ್ನು ಯಾರೂ ಹೆದರಿಸರು;
ಸೇನಾಧೀಶ್ವರನಾದ ಯೆಹೋವನ ಬಾಯೇ ಇದನ್ನು ನುಡಿದಿದೆ.
5 ಅನ್ಯಜನಾಂಗಗಳು ತಮ್ಮ ತಮ್ಮ ದೇವರುಗಳ ಹೆಸರಿನಲ್ಲಿ ನಡೆಯುತ್ತವೆ;
ನಾವಾದರೋ ನಮ್ಮ ದೇವರಾದ ಯೆಹೋವನ ಹೆಸರಿನಲ್ಲಿ ಯುಗಯುಗಾಂತರಗಳಲ್ಲಿ ನಡೆಯುವೆವು.
6 ಯೆಹೋವನು ಇಂತೆನ್ನುತ್ತಾನೆ—
ಆ ದಿನದಲ್ಲಿ ಕುಂಟುಜನಾಂಗವನ್ನು ಒಟ್ಟುಗೂಡಿಸುವೆನು,
ನಾನು ಬಾಧಿಸಿ ತಳ್ಳಿದ ಪ್ರಜೆಯನ್ನು ಸೇರಿಸುವೆನು;
7 ಆ ಕುಂಟುಜನವನ್ನು ಉಳಿಸಿ ಕಾಪಾಡುವೆನು,
ದೂರತಳ್ಳಲ್ಪಟ್ಟ ಪ್ರಜೆಯನ್ನು ಪ್ರಬಲಜನಾಂಗವನ್ನಾಗಿ ಮಾಡುವೆನು;
ಯೆಹೋವನು ಚೀಯೋನ್ ಪರ್ವತದಲ್ಲಿ ಇಂದಿನಿಂದ ಎಂದೆಂದಿಗೂ
ಅವರ ರಾಜನಾಗಿರುವನು.
8 ಹಿಂಡಿಗೆ ರಕ್ಷಕವಾದ ಹೂಡೆಯೇ, ಚೀಯೋನ್ ಯುವತಿಯ ಗುಡ್ಡವೇ,
ನಿನ್ನ ಹಿಂದಿನ ಆಡಳಿತವು ನಿನಗೆ ದೊರೆಯುವದು,
ಯೆರೂಸಲೇಮ್ ಪುರಿಯ ರಾಜ್ಯಾಧಿಕಾರವು ನಿನಗೆ ಲಭಿಸುವದು.

ಚೀಯೋನಿನ ಇಂದಿನ ಇಕ್ಕಟ್ಟು, ಮುಂದಿನ ಜಯ.

9 ನೀನೀಗ ಅರಚಿಕೊಳ್ಳುವದೇಕೆ?
ಪ್ರಸವವೇದನೆಯಷ್ಟು ಕಠಿನವಾದ ಯಾತನೆಯು ನಿನ್ನನ್ನು ಹಿಡಿದದ್ದಕ್ಕೆ ಕಾರಣವೇನು?
ನಿನ್ನಲ್ಲಿ ರಾಜನಿಲ್ಲವೋ? ನಿನ್ನ ಆಲೋಚನಾಕರ್ತನು ನಾಶವಾದನೋ?
10 ಚೀಯೋನ್ ಯುವತಿಯೇ, ಹೆರುವವಳಂತೆ ವೇದನೆಗೆ ಒಳಗಾಗು, ಯಾತನೆಪಡು;
ನೀನೀಗ ಪಟ್ಟಣದೊಳಗಿಂದ ಹೊರಟು
ಕಾಡಿನಲ್ಲಿ ವಾಸಿಸುತ್ತಾ ಬಾಬೆಲಿಗೆ ಸೇರುವಿ;
ಅಲ್ಲೇ ನಿನಗೆ ಉದ್ಧಾರವಾಗುವದು,
ಅಲ್ಲೇ ಯೆಹೋವನು ಶತ್ರುಗಳ ಕೈಯಿಂದ ನಿನ್ನನ್ನು ಬಿಡಿಸುವನು.
[ಯೆರೂಸಲೇಮು] ಹೊಲಸಾಗಿ ಹೋಗಲಿ, 11
1)ಚೀಯೋನಿನ ನಾಶನವನ್ನು ಕಣ್ಣುತುಂಬಾ ನೋಡೋಣ ಅಂದುಕೊಳ್ಳುವ
ಬಹು ಜನಾಂಗಗಳು ನಿನಗೆ ವಿರುದ್ಧವಾಗಿ ಕೂಡಿಬಂದಿವೆ.
ಆಹಾ, ಅವು ಯೆಹೋವನ ಆಲೋಚನೆಗಳನ್ನು ತಿಳಿದಿಲ್ಲ, 12
ಆತನ ಸಂಕಲ್ಪವನ್ನು ಗ್ರಹಿಸಿಲ್ಲ;
ಕಣಕ್ಕೆ ಹಾಕಿದ ಸಿವುಡುಗಳ ಹಾಗೆ ಅವುಗಳನ್ನು ಕೂಡಿಸಿದ್ದಾನಲ್ಲಾ.
ಚೀಯೋನ್ ನಗರಿಯೇ, ಎದ್ದು ಒಕ್ಕು; 13
ನಾನು ನಿನ್ನ ಕೊಂಬನ್ನು ಕಬ್ಬಿಣವನ್ನಾಗಿಯೂ
ನಿನ್ನ ಗೊರಸನ್ನು ತಾಮ್ರವನ್ನಾಗಿಯೂ ಮಾಡುವೆನು;
ನೀನು ಬಹು ಜನಾಂಗಗಳನ್ನು ಚೂರುಚೂರಾಗಿ ತುಳಿದುಬಿಡುವಿ;
ಅವುಗಳಿಂದ ಹೊಡೆದ ಕೊಳ್ಳೆಯನ್ನು ಕೇವಲ ಯೆಹೋವನದಾಗಿ ಪ್ರತ್ಯೇಕಿಸುವಿ,
ಅವುಗಳ ಆಸ್ತಿಯನ್ನು ಲೋಕದ ಕರ್ತನಿಗೆ ಮೀಸಲುಮಾಡುವಿ.

ಇಸ್ರಾಯೇಲನ್ನು ರಕ್ಷಿಸುವ ರಾಜ.

ವ್ಯೂಹಭರಿತದೇಶವೇ, ನಿನ್ನ ವ್ಯೂಹಗಳನ್ನು ಈಗ ಕೂಡಿಸು; 5
ಆಹಾ, ಶತ್ರುಗಳು ನಮಗೆ ಮುತ್ತಿಗೆಹಾಕಿದ್ದಾರೆ;
ಇಸ್ರಾಯೇಲಿನ ಅಧಿಪತಿಯ ಕೆನ್ನೆಗೆ ಕೋಲಿನಿಂದ ಹೊಡೆಯುವರು.
ಎಫ್ರಾತದ ಬೇತ್ಲೆಹೇಮೇ, 2
ನೀನು ಯೆಹೂದದ 2)ಗ್ರಾಮಗಳಲ್ಲಿ ಚಿಕ್ಕದ್ದಾಗಿದ್ದರೂ
ಇಸ್ರಾಯೇಲನ್ನು ಆಳತಕ್ಕವನು ನಿನ್ನೊಳಗಿಂದ ನನಗಾಗಿ ಹೊರಡುವನು;
ಆತನ 3)ಹೊರಡೋಣದ ಮೂಲವು ಪುರಾತನವೂ ಅನಾದಿಯೂ ಆದದ್ದು.
ಹೀಗಿರಲು ಪ್ರಸವವೇದನೆಪಡತಕ್ಕವಳು ಮಗನನ್ನು ಹೆರುವ ವರೆಗೂ 3
4)ನನ್ನ ಜನರು ಶತ್ರುವಶವಾಗಿರುವಂತೆ ಮಾಡುವೆನು,
ಅನಂತರ ಆ ಮಗನ ಸಹೋದರರಲ್ಲಿ ಉಳಿದವರು 5)ಇಸ್ರಾಯೇಲ್ಯರೊಂದಿಗೆ ಹಿಂದಿರುಗುವರು.
ಆತನು ಯೆಹೋವನ ಬಲವನ್ನೂ ತನ್ನ ದೇವರಾದ ಯೆಹೋವನ ನಾಮದ ಮಹಿಮೆಯನ್ನೂ 4
ಹೊಂದಿದವನಾಗಿ ನಿಂತು ತನ್ನ ಹಿಂಡನ್ನು ಮೇಯಿಸುವನು;
ಆ ಹಿಂಡು ನೆಮ್ಮದಿಯಾಗಿ ನೆಲೆಗೊಂಡಿರುವದು;

1) ಮೂಲ: ಚೀಯೋನನ್ನು. 2) ಮೂಲ: ಸಹಸ್ರಗಳಲ್ಲಿ. 3) ಅಥವಾ: ಹೊರಡೋಣಗಳು ಪುರಾತನದಿಂದಲೂ ಅನಾದಿಯಿಂದಲೂ ಉಂಟಾಗುತ್ತಿವೆ. 4) ಮೂಲ: ಅವರೂ ಶತ್ರುವಶವಾಗಿರುವಂತೆ ಮಾಡುವನು. 5) ಅಥವಾ: ಇಸ್ರಾಯೇಲ್ಯರ ಕಡೆಗೆ.

ಆತನು ಭೂಮಿಯ ಕಟ್ಟಕಡೆಯ ವರೆಗೂ ಪ್ರಬಲ
ನಾಗಿರುವನು.
5 ಆತನೇ, [ನಮಗೆ] ಸಮಾಧಾನಪ್ರದನು;
ಅಶ್ಶೂರ್ಯರು ನಮ್ಮ ದೇಶದಲ್ಲಿ ನುಗ್ಗಿ ನಮ್ಮ
ಅರಮನೆಗಳನ್ನು ತುಳಿದುಹಾಕುವಾಗ
ನಾವು ಅವರಿಗೆ ವಿರುದ್ಧವಾಗಿ ಏಳು ಮಂದಿ ಪಾಲಕ
ರನ್ನು,
ಹೌದು, ಎಂಟು ಮಂದಿ ಪುರುಷಶ್ರೇಷ್ಠರನ್ನು ಏರ್ಪ
ಡಿಸುವೆವು.
6 ಅವರ ಕತ್ತಿಯು ಅಶ್ಶೂರ ದೇಶವನ್ನು ತಿಂದುಬಿಡು
ವದು,
ನಿಮ್ರೋದ್ ಸೀಮೆಯ ಪ್ರವೇಶಸ್ಥಾನಗಳು ಅವರ
ಖಡ್ಗಕ್ಕೆ ತುತ್ತಾಗುವವು;
ಅಶ್ಶೂರ್ಯರು ನಮ್ಮ ದೇಶದಲ್ಲಿ ನುಗ್ಗಿ ನಮ್ಮ
ಪ್ರಾಂತವನ್ನು ತುಳಿದುಹಾಕುವಾಗ
[ಆ ಸಮಾಧಾನಪ್ರದನು] ನಮ್ಮನ್ನು ಅವರ ಕೈ
ಯೊಳಗಿಂದ ಉದ್ಧರಿಸುವನು.
7 ಯೆಹೋವನ ವರವಾದ ಇಬ್ಬನಿಯೂ ಹುಲ್ಲನ್ನು
ಬೆಳೆಯಿಸುವ ಹದಮಳೆಗಳೂ
ಹೇಗೆ ಮನುಷ್ಯರನ್ನು ಎದುರುನೋಡದೆ ಮಾನವ
ರನ್ನು ನಿರೀಕ್ಷಿಸದೆ ಹಿತಕರವಾಗಿರುವವೋ
ಹಾಗೆಯೇ ಯಾಕೋಬಿನ ಜನಶೇಷವು ಬಹು
ಜನಾಂಗಗಳ ಮಧ್ಯದಲ್ಲಿ ಹಿತಕರವಾಗಿರುವದು.
8 ಅಲ್ಲದೆ ಸಿಂಹವು ಕಾಡುಮೃಗಗಳನ್ನು,
ಪ್ರಾಯದ ಸಿಂಹವು ಕುರಿಹಿಂಡುಗಳನ್ನು ಹಾದು
ಹೋಗುವಾಗೆಲ್ಲಾ
ಅವುಗಳನ್ನು ಯಾರೂ ರಕ್ಷಿಸಲಾರದಂತೆ ತುಳಿದು
ಸೀಳಿಹಾಕುವ ಹಾಗೆ
ಯಾಕೋಬಿನ ಜನಶೇಷವು ದೇಶದೇಶಗಳೊಳಗೆ
ಬಹುಜನಾಂಗಗಳ ಮಧ್ಯದಲ್ಲಿ ನಾಶಕರವಾಗಿರು
ವದು.
9 [ಯಾಕೋಬೇ,] ನಿನ್ನ ಕೈ ನಿನ್ನ ವಿರೋಧಿಗಳ
ಮೇಲೆ ಎತ್ತಲ್ಪಡಲಿ,
ನಿನ್ನ ವೈರಿಗಳೆಲ್ಲಾ ನಿರ್ಮೂಲವಾಗಲಿ.

### ಇಸ್ರಾಯೇಲಿನ ಮೂಢಭರವಸಭಂಗ.

10 ಯೆಹೋವನು ಇಂತೆನ್ನುತ್ತಾನೆ—
ಆ ದಿನದಲ್ಲಿ ನಿನ್ನ ಕುದುರೆಗಳನ್ನು ನಿನ್ನೊಳ
ಗಿಂದ ಕಡಿದುಬಿಡುವೆನು,
ನಿನ್ನ ರಥಗಳನ್ನು ನಾಶಗೊಳಿಸುವೆನು;
11 ನಿನ್ನ ದೇಶದ ಪಟ್ಟಣಗಳನ್ನು ಹಾಳುಮಾಡಿ
ನಿನ್ನ ಕೋಟೆಗಳನ್ನೆಲ್ಲಾ ಕೆಡವಿಹಾಕುವೆನು;
12 ನಿನ್ನ ಕೈಯಲ್ಲಿನ ಮಂತ್ರತಂತ್ರಗಳನ್ನು ನಿಲ್ಲಿಸಿ
ಬಿಡುವೆನು,
ನಿನ್ನಲ್ಲಿ ಕಣಿಯವರು ಇನ್ನಿರರು;
13 ನಿನ್ನ ಮೂರ್ತಿಗಳನ್ನೂ ಕಲ್ಲುಕಂಬಗಳನ್ನೂ
ನಿನ್ನಲ್ಲಿ ನಿಲ್ಲದಂತೆ ಒಡೆದುಹಾಕುವೆನು,
ನಿನ್ನ ಕೈ ರೂಪಿಸಿದ್ದನ್ನು ಇನ್ನು ಪೂಜಿಸದಿರುವಿ.
ನಿನ್ನ ಅಶೇರವೆಂಬ ವಿಗ್ರಹಸ್ತಂಭಗಳನ್ನು ನಿನ್ನ
ಮಧ್ಯದೊಳಗಿಂದ ಕಿತ್ತುಬಿಟ್ಟು
ನಿನ್ನ 1)ಪಟ್ಟಣಗಳನ್ನು ನಿರ್ಮೂಲಮಾಡುವೆನು.
ಅವಿಧೇಯಜನಾಂಗಗಳಿಗೆ ಉಗ್ರಕೋಪದಿಂದ ಮು
ಯ್ಯಿತೀರಿಸುವೆನು.

## ಇಸ್ರಾಯೇಲಿನ ಮಾನಸಾಂತರ. 6; 7.

### ಯೆಹೋವನಿಗೂ ಆತನ ಜನರಿಗೂ ಇರುವ ವ್ಯಾಜ್ಯ.

ನೀನೆದ್ದು ಬೆಟ್ಟಗಳ ಮುಂದೆ ವ್ಯಾಜ್ಯಹಾಕು,
ನಿನ್ನ ಧ್ವನಿಯು ಗುಡ್ಡಗಳಿಗೆ ಕೇಳಿಸಲಿ ಎಂದು
ಯೆಹೋವನು [ನನಗೆ] ನುಡಿಯುವದನ್ನು ಆಲಿಸಿರಿ.
ಬೆಟ್ಟಗಳೇ, ಯೆಹೋವನ ವ್ಯಾಜ್ಯವನ್ನು ಕೇಳಿರಿ!
ಭೂಮಿಯ ಶಾಶ್ವತವಾದ ಅಸ್ತಿವಾರಗಳೇ, ಕಿವಿಗೊ
ಡಿರಿ;
ಯೆಹೋವನಿಗೆ ಆತನ ಪ್ರಜೆಯ ಮೇಲೆ ವ್ಯಾಜ್ಯವಿದೆ;
ಆತನು ಇಸ್ರಾಯೇಲಿನೊಂದಿಗೆ ವಿವಾದಿಸುತ್ತಾನೆ.
ನನ್ನ ಪ್ರಜೆಯೇ, ನಾನು ನಿನಗೇನು ಮಾಡಿದೆನು,
ನಿನ್ನನ್ನು ಯಾವ ವಿಷಯದಲ್ಲಿ ಬೇಸರಗೊಳಿಸಿ
ದೆನು?
ನನ್ನ ಮೇಲೆ ಸಾಕ್ಷಿಹೇಳು.
ನಾನು ನಿನ್ನನ್ನು ಐಗುಪ್ತದೇಶದೊಳಗಿಂದ ಪಾ
ರುಮಾಡಿ
ದಾಸತ್ವದಿಂದ ಬಿಡಿಸಿದೆನು;
ಮೋಶೆಯನ್ನೂ ಆರೋನನನ್ನೂ ಮಿರ್ಯಾಮಳನ್ನೂ
ನಿನಗೆ ನಾಯಕರನ್ನಾಗಿ ಕಳುಹಿಸಿದೆನು.
ನನ್ನ ಜನರೇ, ಮೋವಾಬಿನ ಅರಸನಾದ ಬಾಲಾ
ಕನು ಕೊಟ್ಟ ಸಲಹೆಯನ್ನೂ
ಬೆಯೋರನ ಮಗನಾದ ಬಿಳಾಮನು ಹೇಳಿದ ಉತ್ತ
ರವನ್ನೂ ಜ್ಞಾಪಕಮಾಡಿಕೊಳ್ಳಿರಿ;
ಯೆಹೋವನ ಧರ್ಮಕಾರ್ಯಗಳು ನಿಮ್ಮ ಗ್ರಹಿ
ಕೆಗೆ ಬರುವ ಹಾಗೆ
ನೀವು ಶಿಟ್ಟೀಮನ್ನು ಬಿಟ್ಟಂದಿನಿಂದ ಗಿಲ್ಗಾಲನ್ನು
ಸೇರುವ ತನಕ ನಡೆದದನ್ನೆಲ್ಲಾ ಸ್ಮರಿಸಿಕೊಳ್ಳಿರಿ
ನಾನು ಯೆಹೋವನ ಸನ್ನಿಧಿಯಲ್ಲಿ ಯಾವ
ಕಾಣಿಕೆಯೊಡನೆ ಕಾಣಿಸಿಕೊಳ್ಳಲಿ,
ಯಾವದನ್ನರ್ಪಿಸಿ ಮಹೋನ್ನತದೇವರ ಸಮ್ಮುಖ
ದಲ್ಲಿ ಅಡ್ಡಬೀಳಲಿ?
ಹೋಮದ ಪಶುಗಳನ್ನೂ ಒಂದು ವರುಷದ ಕರು
ಗಳನ್ನೂ ತೆಗೆದುಕೊಂಡುಬಂದು
ಆತನ ಮುಂದೆ ಕಾಣಿಸಿಕೊಳ್ಳಲೋ?
ಸಾವಿರಾರು ಟಗರುಗಳನ್ನೂ ಲಕ್ಷೋಪಲಕ್ಷ ತೈಲ
ಪ್ರವಾಹಗಳನ್ನೂ ನೋಡಿ
ಯೆಹೋವನು ಮೆಚ್ಚಾನೇ?
ನನ್ನ ದ್ರೋಹದ ನಿಮಿತ್ತ ನನ್ನ ಚೊಚ್ಚಲಮಗ
ನನ್ನು ಅರ್ಪಿಸಲೋ,

1) ಅಥವಾ: ಶತ್ರುಗಳನ್ನು.

ನನ್ನ ಆತ್ಮದ ಪಾಪಕ್ಕಾಗಿ ನನ್ನ ಗರ್ಭದಫಲವನ್ನು ಸಲ್ಲಿಸಲೋ?
8 ಮನುಷ್ಯನೇ, ಒಳ್ಳೆಯದು ಇಂಥದೇ ಎಂದು ಯೆಹೋವನು ನಿನಗೆ ತೋರಿಸಿದ್ದಾನಷ್ಟೆ;
ನ್ಯಾಯವನ್ನು ಆಚರಿಸುವದು, ಕರುಣೆಯಲ್ಲಿ ಆಸಕ್ತನಾಗಿರುವದು, ನಿನ್ನ ದೇವರಿಗೆ ನಮ್ರವಾಗಿ ನಡೆದುಕೊಳ್ಳುವದು,
ಇಷ್ಟನ್ನೇ ಹೊರತು ಯೆಹೋವನು ನಿನ್ನಿಂದ ಇನ್ನೇನು ಅಪೇಕ್ಷಿಸುವನು?

ಯೆರೂಸಲೇಮಿನ ವಂಚನೆಹಿಂಸೆಗಳೂ ಅದಕ್ಕಾಗುವ ಆಶಾಭಂಗವೂ.

9 ಯೆಹೋವನು ದನಿಗೈದು ಪಟ್ಟಣದ ಕಡೆಗೆ ಕೂಗುತ್ತಾನೆ;
(ನಿನ್ನ ನಾಮದಲ್ಲಿ ಭಯಭಕ್ತಿಯಿಡುವದು ಸುಜ್ಞಾನವೇ;)
[ಬೀಸುವ] ದಂಡಕ್ಕೆ ಕಿವಿಗೊಡಿರಿ,
ಅದನ್ನು ನೇಮಿಸಿದವನು ಯಾವನೆಂದು ತಿಳಿದುಕೊಳ್ಳಿರಿ.
10 ದುಷ್ಟನ ಮನೆಯಲ್ಲಿ ದುಷ್ಟತನದಿಂದ ಗಳಿಸಿದ ನಿಧಿ,
ಅಸಹ್ಯಕರವಾದ ಕಿರಿಯಳತೆ, ಇವು ಇನ್ನೂ ಸಿಕ್ಕುತ್ತಿವೆಯೋ?
11 ಕಳ್ಳತಕ್ಕಡಿಯೂ ಮೋಸದ ಕಲ್ಲಿನ ಚೀಲವೂ 1)ಒಬ್ಬನಲ್ಲಿದ್ದರೆ
ಅವನು ನಿರ್ದೋಷಿಯೋ?
12 ಪಟ್ಟಣದ ಧನಿಕರು ತುಂಬಾ ಬಲಾತ್ಕಾರಿಗಳು,
ಅದರ ನಿವಾಸಿಗಳು ಸುಳ್ಳುಗಾರರು,
ಅವರ ಬಾಯನಾಲಿಗೆಯು ಮೋಸಕರ.
13 ಆದಕಾರಣ, [ಯೆರೂಸಲೇಮೇ] ನಿನಗೆ ಕ್ರೂರವಾದ ಪೆಟ್ಟುಹಾಕುವೆನು.
ನಿನ್ನ ಪಾಪಗಳ ನಿಮಿತ್ತ ನಿನ್ನನ್ನು ಹಾಳುಮಾಡುವೆನು.
14 ನೀನು ಉಂಡರೂ ನಿನಗೆ ತೃಪ್ತಿಯಾಗದು;
ಹಸಿವೆಯು ನಿನ್ನೊಳಗೆ ಇದ್ದೇ ಇರುವದು;
ನೀನು [ನಿನ್ನವರನ್ನು] ಕಳುಹಿಸಿಬಿಟ್ಟರೂ ಅವರನ್ನು ಪಾರುಮಾಡಲಾರಿ;
ಪಾರುಮಾಡಿದವರನ್ನೂ ಕತ್ತಿಗೆ ತುತ್ತನ್ನಾಗಿ ಮಾಡುವೆನು.
15 ನೀನು ಬಿತ್ತಿದರೂ ಕೊಯ್ಯುವದಿಲ್ಲ;
ಎಣ್ಣೆಯ ಕಾಯಿಯನ್ನು ತುಳಿದರೂ ಮೈಗೆ ಎಣ್ಣೆ ಹಚ್ಚಿಕೊಳ್ಳುವದಿಲ್ಲ.
ದ್ರಾಕ್ಷೆಯ ಹಣ್ಣನ್ನು ತುಳಿದರೂ ದ್ರಾಕ್ಷಾರಸವನ್ನು ಕುಡಿಯುವದಿಲ್ಲ.
16 ಒಮ್ರಿಯ ನಿಯಮಗಳೂ ಅಹಾಬನ ಮನೆತನದ ಸಕಲಾಚಾರಗಳೂ [ನಿನ್ನಲ್ಲಿ] ಸಲ್ಲುತ್ತಿವೆ,
ನಿನ್ನವರು ಅವರ ದುರ್ನೀತಿಗೆ ಅನುಸಾರವಾಗಿ ನಡೆಯುತ್ತಾರೆ;
ಆದಕಾರಣ ನಾನು ನಿನ್ನನ್ನು ಬೆರಗಿಗೂ
ನಿನ್ನ ನಿವಾಸಿಗಳನ್ನು ಸಿಳ್ಳಿಗೂ ಗುರಿಮಾಡುವೆನು;
ನನ್ನ ಜನರಿಗೆ ಸಂಭವಿಸಬೇಕಾದ ಅವಮಾನವನ್ನು ಅನುಭವಿಸುವಿರಿ.

ಇಸ್ರಾಯೇಲಿನ ಕೊರಗುವಿಕೆ.

7 ಅಯ್ಯೋ, ನನ್ನ ಗತಿಯನ್ನು ಏನೆಂದು ಹೇಳಲಿ!
ಮಾಗಿದ ಹಣ್ಣನ್ನು ಕೊಯ್ದು ದ್ರಾಕ್ಷೆಯ ಹಕ್ಕಲನ್ನು ಆಯ್ದು [ತೋಟದ] ಸ್ಥಿತಿಗೆ ಬಂದಿದ್ದೇನೆ;
ತಿನ್ನುವದಕ್ಕೆ ಗೊಂಚಲೇ ಇಲ್ಲ,
ನನಗೆ ಪ್ರಿಯವಾದ ಮೊದಲು ಮಾಗಿದ ಅಂಜೂರದ ಹಣ್ಣು ಸಿಕ್ಕದು.
ಸದ್ಭಕ್ತರು ದೇಶದೊಳಗಿಂದ ನಾಶವಾಗಿದ್ದಾರೆ, 2
ಜನರಲ್ಲಿ ಸತ್ಯವಂತರೇ ಇಲ್ಲ.
ಸರ್ವರು ರಕ್ತಸುರಿಸಬೇಕೆಂದು ಹೊಂಚುಹಾಕುತ್ತಾರೆ,
ಒಬ್ಬರನ್ನೊಬ್ಬರು ಬಲೆಯೊಡ್ಡಿ ಬೇಟೆಯಾಡುತ್ತಾರೆ.
ಕೆಟ್ಟ ಕೆಲಸಕ್ಕೆ ಎರಡು ಕೈಗಳನ್ನು ಹಾಕಿ ಚೆನ್ನಾಗಿ 3
ಮಾಡುತ್ತಾರೆ;
ಪ್ರಭುವು [ಧನವನ್ನು] ಕೇಳುತ್ತಾನೆ,
ನ್ಯಾಯಾಧಿಪತಿಯು ಲಂಚಕ್ಕೆ [ಕೈಯೊಡ್ಡುತ್ತಾನೆ],
ದೊಡ್ಡಮನುಷ್ಯನು ತನ್ನ ದುರಾಶೆಯನ್ನು ತಿಳಿಸುತ್ತಾನೆ; ಹೀಗೆ ಕುಯುಕ್ತಿಯನ್ನು ಹೆಣೆಯುತ್ತಾರೆ.
ಅವರಲ್ಲಿ ಉತ್ತಮನೂ ಮುಳ್ಳುಕಂಪೆ, 4
ಸತ್ಯವಂತನೂ ಕೂಡ ಮುಳ್ಳುಬೇಲಿಗಿಂತ ಕಡೆ;
ನಿನ್ನ ಕಾವಲುಗಾರರು ಮುಂತಿಳಿಸಿದ ದಿನ,
ನಿನ್ನ ದಂಡನೆಯ ದಿನ ಬಂದಿದೆ;
ಈಗ ನಿನ್ನ ಜನರಿಗೆ ಭ್ರಾಂತಿಹಿಡಿಯುವದು.
ಮಿತ್ರನನ್ನು ನಂಬಬೇಡ; 5
ಆಪ್ತನಲ್ಲಿ ಭರವಸವಿಡದಿರು;
ನಿನ್ನ ಎದೆಯ ಮೇಲೆ ಒರಗುವವಳಿಗೂ
ನಿನ್ನ ಬಾಯಬಾಗಲನ್ನು ಭದ್ರವಾಗಿಟ್ಟುಕೋ.
ಮಗನು ತಂದೆಯನ್ನು ತುಚ್ಛೀಕರಿಸುತ್ತಾನೆ, 6
ಮಗಳು ತಾಯಿಗೆ ಎದುರೇಳುತ್ತಾಳೆ,
ಸೊಸೆಯು ಅತ್ತೆಯನ್ನು ವಿರೋಧಿಸುತ್ತಾಳೆ;
ಹೀಗೆ ಒಬ್ಬ ಮನುಷ್ಯನಿಗೆ ಅವನ ಮನೆಯವರೇ ವೈರಿಗಳಾಗಿದ್ದಾರೆ.

ಇಸ್ರಾಯೇಲಿನ ದೀನಭಕ್ತಿ, ದೇವರ ಕರುಣೆ.

ನಾನಂತು ಯೆಹೋವನನ್ನು ಎದುರುನೋಡುವೆನು; 7
ನನ್ನ ರಕ್ಷಕನಾದ ದೇವರನ್ನು ಕಾದುಕೊಳ್ಳುವೆನು;
ನನ್ನ ದೇವರು ನನ್ನ ಕಡೆಗೆ ಕಿವಿಗೊಡುವನು,
ನನ್ನ ಶತ್ರುವೇ, ನನ್ನ ವಿಷಯದಲ್ಲಿ ಹಿಗ್ಗಬೇಡ; 8
ನಾನು ಬಿದ್ದಿದ್ದರೂ ಏಳುವೆನು,
ಕತ್ತಲಲ್ಲಿ ಕೂತಿದ್ದರೂ ಯೆಹೋವನು ನನಗೆ ಬೆಳಕಾಗಿರುವನು.

1) ಮೂಲ: ನನ್ನಲ್ಲಿದ್ದರೆ ನಾನು.

9 ನಾನು ಯೆಹೋವನಿಗೆ ಪಾಪಮಾಡಿದ್ದರಿಂದ
ಆತನ ರೋಷವನ್ನು ತಾಳಿಕೊಂಡಿರುವೆನು;
ಕಾಲಾನುಕಾಲಕ್ಕೆ ಆತನು ತನ್ನ ವ್ಯಾಜ್ಯವನ್ನು ನಿರ್ವಹಿಸಿ
ನನಗೆ ನ್ಯಾಯವನ್ನು ತೀರಿಸುವನು;
ನನ್ನನ್ನು ಬೆಳಕಿಗೆ ತರುವನು,
ಆತನ ರಕ್ಷಣಧರ್ಮವನ್ನು ನೋಡುವೆನು.
10 ನಿನ್ನ ದೇವರಾದ ಯೆಹೋವನು ಎಲ್ಲಿ ಎಂದು
ನನ್ನನ್ನು ಜರೆದ ಶತ್ರುಗಳು ಇದನ್ನು ನೋಡುವಾಗ
ನಾಚಿಕೆಯು ಅವರನ್ನು ಕವಿದುಕೊಳ್ಳುವದು;
ನಾನು ಅವರನ್ನು ಕಣ್ಣಾರೆ ನೋಡುವೆನು.
ಈಗಲೇ ಬೀದಿಗಳ ಕೆಸರಿನಂತೆ ತುಳಿತಕ್ಕೀಡಾಗುವರು.
11 ಆಹಾ, ನಿನ್ನ ಪೌಳಿಗೋಡೆಗಳನ್ನು ಕಟ್ಟುವ ದಿನವು ಬರುವದು;
ಆ ದಿನದಲ್ಲಿ ನಿನ್ನ ಎಲ್ಲೆಯು ದೂರದ ತನಕ ವಿಸ್ತರಿಸಿಕೊಂಡಿರುವದು.
12 ಅದೇ ದಿನದಲ್ಲಿ ನಿನ್ನ ಜನರು ಅಶ್ಶೂರದಿಂದಲೂ ಐಗುಪ್ತದ ಪಟ್ಟಣಗಳಿಂದಲೂ
ನಿನ್ನ ಬಳಿಗೆ ಕೂಡಿಬರುವರು;
ಸಮುದ್ರದಿಂದ ಸಮುದ್ರದ ವರೆಗೆ,
ಪರ್ವತದಿಂದ ಪರ್ವತದ ವರೆಗೆ,
ಅಂತು ಐಗುಪ್ತದಿಂದ ಯೂಫ್ರೇಟೀಸ್ ನದಿಯ ವರೆಗೂ
ಚದರಿರುವ ನಿನ್ನ ಸಕಲಜನರು ನಿನ್ನನ್ನು ಸೇರುವರು.
13 ಆದರೆ [ಅಷ್ಟರೊಳಗೆ] ಈ ದೇಶವು ತನ್ನ ನಿವಾಸಿಗಳ ನಿಮಿತ್ತ,
ಅವರ ದುಷ್ಕೃತ್ಯಗಳಿಗೆ ಫಲವಾಗಿ ಹಾಳುಬಿದ್ದಿರುವದು.
14 ಫಲವತ್ತಾದ ಭೂಮಿಯ ಮಧ್ಯದಲ್ಲಿನ ಕಾಡಿನೊಳಗೆ
ಪ್ರತ್ಯೇಕವಾಗಿ ತಂಗುವ ನಿನ್ನ ಜನರನ್ನು,
ನಿನ್ನ ಸ್ವಾಸ್ತ್ಯವಾದ ಹಿಂಡನ್ನು ನಿನ್ನ ಕೋಲಿನಿಂದ ಮೇಯಿಸು;
ಪೂರ್ವಕಾಲದಂತೆ ಬಾಷಾನಿನಲ್ಲಿಯೂ ಗಿಲ್ಯಾದಿನಲ್ಲಿಯೂ ಮೇಯಲಿ.
ನೀನು ಐಗುಪ್ತದೇಶದೊಳಗಿಂದ ಪಾರಾಗಿ ಬಂದ ಕಾಲದಲ್ಲಿ
ನಾನು ತೋರಿಸಿದಂತೆ ಅದ್ಭುತಗಳನ್ನು ತೋರಿಸುವೆನು.
ಜನಾಂಗಗಳವರು ನೋಡಿ ತಮ್ಮ ಮಹಾ ಶಕ್ತಿಗೂ ನಾಚಿಕೆಪಡುವರು;
ಬಾಯ ಮೇಲೆ ಕೈಯಿಟ್ಟುಕೊಳ್ಳುವರು,
ಅವರ ಕಿವಿ ಕೇಳದಿರುವದು.
ಹಾವಿನಂತೆ ಧೂಳನ್ನು ನೆಕ್ಕುವರು;
ನೆಲದಲ್ಲಿ ಹರಿದಾಡುವ ಕ್ರಿಮಿಕೀಟಗಳ ಹಾಗೆ
ತಮ್ಮ ಗುಪ್ತಸ್ಥಳಗಳಿಂದ ನಡುಗುತ್ತಾ ಈಚೆಗೆ ಹೊರಡುವರು;
ಯೆಹೋವನೆಂಬ ನಮ್ಮ ದೇವರಾದ ನಿನ್ನನ್ನು ಅಂಜುತ್ತಾ ಸಮೀಪಿಸಿ
ನಿನಗೆ ಭಯಪಡುವರು.
ನಿನಗೆ ಯಾವ ದೇವರು ಸಮಾನ?
ನೀನು ನಿನ್ನ ಸ್ವಾಸ್ತ್ಯದವರಲ್ಲಿ ಉಳಿದವರ ಅಪರಾಧವನ್ನು ಕ್ಷಮಿಸುವವನೂ
ಅವರ ದ್ರೋಹವನ್ನು ಲಕ್ಷಿಸದವನೂ ಆಗಿದ್ದೀ;
ಹೌದು, ನಮ್ಮ ದೇವರು ನಿತ್ಯವೂ ಕೋಪಿಸುವವನಲ್ಲ,
ಕರುಣೆಯೇ ಆತನಿಗೆ ಇಷ್ಟ.
ಆತನು ನಮ್ಮ ಕಡೆಗೆ ತಿರುಗಿಕೊಂಡು ನಮ್ಮನ್ನು ಕನಿಕರಿಸುವನು,
ನಮ್ಮ ಅಪರಾಧಗಳನ್ನು ಅಣಗಿಸುವನು.
[ದೇವರೇ,] ನಿನ್ನ ಜನರ ಪಾಪಗಳನ್ನೆಲ್ಲಾ
ಸಮುದ್ರದ ತಳಕ್ಕೆ ಬಿಸಾಟುಬಿಡುವಿ.
ನೀನು ಪುರಾತನ ಕಾಲದಿಂದಲೂ ನಮ್ಮ ಪಿತೃಗಳಿಗೆ ಪ್ರಮಾಣಮಾಡಿರುವಂತೆ
ಯಾಕೋಬನ ವಂಶದವರಿಗೆ ಸತ್ಯಪರನಾಗಿಯೂ
ಅಬ್ರಹಾಮನ ವಂಶದವರಿಗೆ ಪ್ರೀತಿಪರನಾಗಿಯೂ ನಡೆಯುವಿ.

---

# THE PROPHET NAHUM

## ನಹೂಮನ ಪ್ರವಾದನೆಯ ಗ್ರಂಥ

ಯೆಹೋವನು ಮುಯ್ಯಿತೀರಿಸುವ ದೇವರು.

1 ನಿನೆವೆಯ ವಿಷಯವಾದ ದೈವೋಕ್ತಿ. ಎಲ್ಕೋಷ್ ಊರಿನ ನಹೂಮನಿಗೆ ಆದ ದೈವದರ್ಶನದ ಗ್ರಂಥ.

ಯೆಹೋವನು ಸ್ವಗೌರವವನ್ನು ಕಾಪಾಡಿಕೊಳ್ಳುವ ದೇವರು, ಆತನು ಮುಯ್ಯಿತೀರಿಸುವವನು;
ಹೌದು, ಯೆಹೋವನು ಮುಯ್ಯಿತೀರಿಸುವವನು, ಕೋಪಭರಿತನು;

ಯೆಹೋವನು ತನ್ನ ವಿರೋಧಿಗಳಿಗೆ ಮುಯ್ಯಿತೀರಿ
ಸುತ್ತಾನೆ,
ತನ್ನ ಶತ್ರುಗಳ ಮೇಲೆ ದೀರ್ಘರೋಷವಿಡುತ್ತಾನೆ.
3 ಯೆಹೋವನು ದೀರ್ಘಶಾಂತನಾಗಿದ್ದರೂ ಆತನ
ಶಕ್ತಿಯು ಅಪಾರ,
ಅಪರಾಧಿಗಳನ್ನು ಶಿಕ್ಷಿಸದೆ ಬಿಡನು;
ಯೆಹೋವನು ಬಿರುಗಾಳಿಯಲ್ಲಿಯೂ ತುಫಾನಿ
ನಲ್ಲಿಯೂ ನಡೆಯುತ್ತಾನೆ;
ಮೋಡಗಳು ಆತನ ಹೆಜ್ಜೆಯಿಂದೇಳುವ ಧೂಳು.
4 ಆತನು ಸಮುದ್ರವನ್ನು ಗದರಿಸಿ ಒಣಗಿಸುತ್ತಾನೆ,
ಸಕಲನದಿಗಳನ್ನು ಬತ್ತಿಸುತ್ತಾನೆ,
ಬಾಷಾನೂ ಕರ್ಮೆಲೂ ಕಂದುತ್ತವೆ,
ಲೆಬನೋನಿನ ಚಿಗುರು ಬಾಡುತ್ತದೆ.
5 ಆತನ ಮುಂದೆ ಬೆಟ್ಟಗಳು ಅದರುತ್ತವೆ, ಗುಡ್ಡ
ಗಳು ಕರಗುತ್ತವೆ;
ಆತನ ದರ್ಶನಕ್ಕೆ ಭೂಮಿಯು ಕಂಪಿಸುತ್ತದೆ,
ಹೌದು, ಲೋಕವೂ ಲೋಕನಿವಾಸಿಗಳೆಲ್ಲವೂ ತಲ್ಲ
ಣಿಸುತ್ತವೆ,
6 ಆತನ ಸಿಟ್ಟಿಗೆ ಯಾರು ತಡೆದಾರು?
ಆತನ ರೋಷಾಗ್ನಿಗೆ ಯಾರು ನಿಂತಾರು?
ಆತನ ರೌದ್ರವು ಜ್ವಾಲಾಪ್ರವಾಹದಂತೆ ಹರಿಯು
ತ್ತದೆ,
ಬಂಡೆಗಳು ಆತನಿಂದ ಕೆಡವಲ್ಪಟ್ಟಿವೆ.

ಯೆಹೋವನು ತನ್ನ ಪ್ರಜೆಯ ಬಾಧಕರಿಗೆ ಮಾಡುವ
ದಂಡನೆ.

7 ಯೆಹೋವನು ಒಳ್ಳೆಯವನು;
ಇಕ್ಕಟ್ಟಿನ ದಿನದಲ್ಲಿ ಆಶ್ರಯದುರ್ಗವಾಗಿದ್ದಾನೆ;
ತನ್ನ ಮರೆಹೊಕ್ಕವರನ್ನು ಬಲ್ಲನು.
8 ಆದರೆ ತುಂಬಿತುಳುಕುವ ಜಲಪ್ರವಾಹದಿಂದಲೋ
ಎಂಬಂತೆ
ನಿನೆವೆಯ ಸ್ಥಾನವನ್ನು ತೀರಾ ಹಾಳುಮಾಡಿ
ತನ್ನ ವಿರೋಧಿಗಳನ್ನು ಹಿಂದಟ್ಟಿ ಅಂಧಕಾರಕ್ಕೆ
ತಳ್ಳುವನು.
9 ನೀವು ಯೆಹೋವನಿಗೆ ವಿರುದ್ಧವಾಗಿ ಯಾವ ಕು
ಯುಕ್ತಿಯನ್ನು ಕಲ್ಪಿಸುತ್ತೀರಿ?
ಆತನು ಪೂರಾ ಹಾಳುಮಾಡುವನು;
ಅಪಾಯವು ಎರಡನೆಯ ಸಲ ಉಂಟಾಗಬೇಕಾಗಿಲ್ಲ.
10 1)ಆತನ ವೈರಿಗಳು ಮುಳ್ಳುಗಳಂತೆ ಹೆಣೆದುಕೊಂಡಿ
ದ್ದರೂ
ತಮ್ಮ ಮದ್ಯದಲ್ಲಿ ಮುಳುಗಿದ್ದರೂ
ತುಂಬಾ ಒಣಗಿದ ಕೂಳೆಯಂತೆ ಬೆಂಕಿಗೆ ತುತ್ತಾಗು
ವರು.
11 [ನಿನೆವೆಯೇ,] ಯೆಹೋವನಿಗೆ ವಿರುದ್ಧವಾಗಿ ದು
ರಾಲೋಚನೆ ಮಾಡಿ
ಕೇಡನ್ನು ಸಂಕಲ್ಪಿಸುವವನು ನಿನ್ನೊಳಗಿಂದ ಹೊರ
ಟಿದ್ದಾನೆ.

ಯೆಹೋವನು ಇಂತೆನ್ನುತ್ತಾನೆ— 12
ನಿನ್ನ ಶತ್ರುಗಳು ಎಷ್ಟು ಪ್ರಬಲರಾಗಿದ್ದರೂ ಅವರ
ಸಂಖ್ಯೆ ಎಷ್ಟು ಹೆಚ್ಚಿದ್ದರೂ
ಅವರು ಕಡಿಯಲ್ಪಡುವರು,
2)ಆ ದುರಾಲೋಚಕನು ಇಲ್ಲವಾಗುವನು.
ನಿನ್ನನ್ನು ಬಾಧಿಸಿದ್ದೇನೆ, ಇನ್ನು ಬಾಧಿಸೆನು.
ಅವನು ಹೇರಿದ ನೊಗವನ್ನು ಈಗ ನಿನ್ನ ಮೇಲಿ 13
ನಿಂದ ಮುರಿದುಬಿಟ್ಟು
ಕಣ್ಣಿಗಳನ್ನು ಕಿತ್ತುಹಾಕುವೆನು.
[ಅಶ್ಶೂರವೇ,] ನಿನ್ನ ಹೆಸರಿನ ಸಂತಾನಬೀಜವು 14
ಇನ್ನು ಬಿತ್ತಲ್ಪಡಬಾರದೆಂದು
ಯೆಹೋವನಾದ ನಾನು ಆಜ್ಞಾಪಿಸಿದ್ದೇನೆ;
ನಿನ್ನ ದೇವರ ಮಂದಿರದೊಳಗಿಂದ ಕೆತ್ತಿದ ವಿಗ್ರಹ
ವನ್ನೂ
ಎರಕದ ಬೊಂಬೆಯನ್ನೂ ಕಡಿದುಬಿಡುವೆನು;
ನಿನಗೆ ಗೋರಿಯನ್ನು ಸಿದ್ಧಮಾಡುವೆನು; ನೀನು
ತುಚ್ಛ.
ಆಹಾ, ಶುಭಸಮಾಚಾರವನ್ನು ತಂದು 15
ಸಮಾಧಾನವನ್ನು ಸಾರುವ ದೂತನ ಪಾದಗಳು
ಪರ್ವತಗಳ ಮೇಲೆ ತ್ವರೆಪಡುತ್ತವೆ!
ಯೆಹೂದವೇ, ನಿನ್ನ ಹಬ್ಬಗಳನ್ನು ಆಚರಿಸಿಕೋ,
ನಿನ್ನ ಹರಕೆಗಳನ್ನು ಸಲ್ಲಿಸು; ಆ ದುಷ್ಟನು ಇನ್ನು
ಮುಂದೆ ನಿನ್ನನ್ನು ಹಾದುಹೋಗನು;
ತೀರಾ ನಾಶವಾಗಿದ್ದಾನೆ.

ನಿನೆವೆಯ ಮುತ್ತಿಗೆಯೂ ಸೂರೆಯೂ.

2 [ನಿನೆವೆಯೇ,] ಚದರಿಸುವವನು ನಿನಗೆ ಮುಖಾ
ಮುಖಿಯಾಗಿ ಬಂದಿದ್ದಾನೆ;
ಪೌಳಿಗೋಡೆಯನ್ನು ಕಾಯಿ,
ದಾರಿಯ ಮೇಲೆ ಕಣ್ಣಿಡು,
ನಿನ್ನ ಸೊಂಟವನ್ನು ಬಲಪಡಿಸಿಕೋ,
ನಿನ್ನ ಶಕ್ತಿಯನ್ನು ಚೆನ್ನಾಗಿ ದೃಢಮಾಡಿಕೋ.
(ಆಹಾ, ಯೆಹೋವನು ಯಾಕೋಬಿನ ಅತಿಶಯ 2
ವನ್ನು,
ಇಸ್ರಾಯೇಲಿನ ಅತಿಶಯವನ್ನು ಸಹ ಪುನರುಜ್ಜೀ
ವನಮಾಡುವನು;
ಸೂರೆಗಾರರು ಅವುಗಳನ್ನು ಸೂರೆಗೈದು
ಅವುಗಳ ಶಾಖೆಗಳನ್ನು ಹಾಳುಮಾಡಿದ್ದರಷ್ಟೆ.)
ಶತ್ರುವಿನ ಶೂರರ ಗುರಾಣಿಯು ರಕ್ತವರ್ಣವಾ 3
ಗಿದೆ,
ಪರಾಕ್ರಮಿಗಳ ಉಡುಪು ಕಿರಿಮಂಜಿಯದು;
ಅವನ ಸನ್ನಾಹದಿನದಲ್ಲಿ ರಥಗಳ ಉಕ್ಕು ಥಳಥಳಿ
ಸುತ್ತದೆ,
ಈಟಿಗಳು ಝಳಪಿಸುತ್ತವೆ.
ಪಟ್ಟಣದ ಹೊರಗೆ ರಥಗಳು ರಭಸದಿಂದ ತಿರು 4
ಗಾಡುತ್ತವೆ,
ಮೈದಾನಗಳಲ್ಲಿ ಥಡಥಡ ಓಡಾಡುತ್ತವೆ;

1)ಮೂಲ: ಅವರು. 2) ಮೂಲ: ಅವನು.

ವಂಜುಗಳಂತೆ ಬೆಳಗುತ್ತವೆ.
ಮಿಂಚುಗಳ ಹಾಗೆ ಹಾರುತ್ತವೆ.
5 [ಪಟ್ಟಣದ] ಅರಸನು ತನ್ನ ಸರದಾರರನ್ನು ಸ್ಮರಿಸುತ್ತಾನೆ;
ಹೋಗುತ್ತಾ ಮುಗ್ಗರಿಸುತ್ತಾರೆ;
ಪೌಳಿಗೋಡೆಗೆ ಓಡುತ್ತಾರೆ;
ಮರೆಯು ನಿಲ್ಲಿಸಲ್ಪಟ್ಟಿದೆ.
6 ನದೀ ದ್ವಾರಗಳು ತೆರೆಯಲ್ಪಟ್ಟಿವೆ;
ಅರಮನೆಯು ಕರಗಿಹೋಗುತ್ತದೆ.
7 ವಸ್ತ್ರವನ್ನು ಕಿತ್ತು 1)ರಾಣಿಯನ್ನು ಬೈಲಿಗೆ ತರಲು
ಆಕೆಯ ತೊತ್ತುಗಳು ಎದೆ ಬಡಿದುಕೊಂಡು
ಪಾರಿವಾಳಗಳಂತೆ ಮೂಲುಗುತ್ತಾರೆ.
8 ಪುರಾತನಕಾಲದಿಂದ ನಿನೆವೆಯು ನೀರು ತುಂಬಿದ ಕೆರೆಯಂತೆ ಇರುತ್ತದೆ;
ಅಹಾ, [ಒಡೆದು ಓಡುವ ನೀರಿನಂತೆ ಅದರ ನಿವಾಸಿಗಳು] ಓಡಿಹೋಗುತ್ತಾರೆ;
ನಿಲ್ಲಿರಿ, ನಿಲ್ಲಿರಿ [ಎಂದು ಅಪ್ಪಣೆಯಾದರೂ] ಯಾರೂ ಹಿಂದೆ ನೋಡರು.
9 ಬೆಳ್ಳಿಯನ್ನು ಸೂರೆಮಾಡಿರಿ, ಬಂಗಾರವನ್ನು ಕೊಳ್ಳೆಹೊಡೆಯಿರಿ;
ಕೂಡಿಸಿಟ್ಟ ಧನಕ್ಕೂ ಸಕಲವಿಧಶ್ರೇಷ್ಠವಸ್ತುಗಳ ನಿಧಿಗೂ ಪಾರವೇ ಇಲ್ಲ.
10 ನಗರಿಯು ಬರಿದಾಗಿದೆ, ಬಟ್ಟಬರಿದಾಗಿ ಬೀಳುಬಿದ್ದಿದೆ;
ಎದೆಯು ನೀರಾಗಿ ಹೋಗಿದೆ, ಮೊಣಕಾಲುಗಳು ಅದರುತ್ತವೆ,
ಎಲ್ಲರ ಸೊಂಟಗಳಿಗೂ ವೇದನೆಯಾಗಿದೆ,
ಎಲ್ಲರ ಮುಖಗಳೂ ಬಾಡಿವೆ.
11 ಮೃಗರಾಜರ ಗವಿ, ಪ್ರಾಯದ ಸಿಂಹಗಳ ಹಕ್ಕೆ ಎಲ್ಲಿ?
ಸಿಂಹ, ಸಿಂಹಿ, ಸಿಂಹದ ಮರಿ, ಇವುಗಳು ಯಾರಿಗೂ ಹೆದರದೆ
ತಿರುಗುತ್ತಿದ್ದ ಸ್ಥಳವೆಲ್ಲಿ?
12 ಅಲ್ಲಿ ಸಿಂಹವು ತನ್ನ ಮರಿಗಳಿಗಾಗಿ ಬೇಕಾದಷ್ಟು ಬೇಟೆಯನ್ನು ಸೀಳುತ್ತಿತ್ತು,
ತನ್ನ ಸಿಂಹಿಗಳಿಗಾಗಿ ಮೃಗಗಳ ಕುತ್ತಿಗೆಯನ್ನು ಹಿಸುಕುತ್ತಿತ್ತು;
ತನ್ನ ಗವಿಗಳನ್ನು ಬೇಟೆಯಿಂದಲೂ
ತನ್ನ ಹಕ್ಕೆಗಳನ್ನು ಕೊಂದ ಮೃಗಗಳಿಂದಲೂ ತುಂಬಿಸಿತು.
13 ಸೇನಾಧೀಶ್ವರನಾದ ಯೆಹೋವನು ಇಂತೆನ್ನುತ್ತಾನೆ—
ಅಹಾ, ನಾನು ನಿನಗೆ ವಿರುದ್ಧನಾಗಿದ್ದೇನೆ,
2)ನಿನ್ನ ರಥಗಳನ್ನು ಸುಟ್ಟು ಹೊಗೆಹಾಯಿಸುವೆನು,
ಕತ್ತಿಯು ನಿನ್ನ ಪ್ರಾಯದ ಸಿಂಹಗಳನ್ನು ನುಂಗಿಬಿಡುವದು;
ನಿನಗೆ ಸಿಕ್ಕಿದ ಬೇಟೆಯನ್ನು ಲೋಕದೊಳಗಿಂದ ನಿರ್ಮೂಲಮಾಡುವೆನು.
ನಿನ್ನ ರಾಯಭಾರಿಗಳ ಧ್ವನಿಯು ಇನ್ನು ಕೇ[ಳಿ]ಸದು.

ನಿನೆವೆಯ ಧ್ವಂಸವು ನ್ಯಾಯ.

ಅಯ್ಯೋ, ರಕ್ತಮಯಪುರಿಯ ಗತಿಯನ್ನು ಏನೆಂದು ಹೇಳಲಿ!
ಅದು ಸುಳ್ಳಿನಿಂದಲೂ ಸುಲಿಗೆಯಿಂದಲೂ ತುಂಬಿದೆ
ಕೊಳ್ಳೆಹೊಡೆಯುವದನ್ನು ಬಿಡುವದೇ ಇಲ್ಲ.
ಆಹಾ, ಚಾಟಿಯ ಚಟಚಟ ಶಬ್ದ, ಚಕ್ರಗ[ಳ] ಚೀತ್ಕಾರ,
ಕುದುರೆಗಳ ಭರಧೌಡು, ರಥಗಳ ಹಾರಾಟ,
ರಾಹುತರ ರಭಸ, ಥಳಥಳಿಸುವ ಕತ್ತಿ, ಮಿಂಚು[ವ] ಈಟಿ,
ಅಸಂಖ್ಯಾತ ಹತರು, ಶವಗಳ ಮಹಾರಾಶಿ!
ಸತ್ತವರ ಲೆಕ್ಕವೇ ಇಲ್ಲ.
[ನುಗ್ಗುವವರು] ಅವರ ಹೆಣಗಳನ್ನು ಎಡವುತ್ತಾರೆ
ಅತಿಸುಂದರಿಯೂ ಮಂತ್ರತಂತ್ರನಿಪುಣಳೂ
ಜನಾಂಗಗಳನ್ನು ತನ್ನ ಸೂಳೆತನದಿಂದ,
ಕುಲಗಳನ್ನು ತನ್ನ ಮಂತ್ರತಂತ್ರಗಳಿಂದ
3)ಗುಲಾಮತನಕ್ಕೆ ತಂದವಳೂ
ಆದ ಸೂಳೆಯ ಲೆಕ್ಕವಿಲ್ಲದ ಸೂಳೆತನಗ[ಳ] ನಿಮಿತ್ತ
ಇದೆಲ್ಲಾ ಆಗುವದು.
ಸೇನಾಧೀಶ್ವರ ಯೆಹೋವನು ಇಂತೆನ್ನುತ್ತಾನೆ—
ಇಗೋ, ನಾನು ನಿನಗೆ ವಿರುದ್ಧನಾಗಿದ್ದೇನೆ,
ನಿನ್ನ ನೆರಿಗೆಯನ್ನು ನಿನ್ನ ಕಣ್ಣ ಮುಂದೆಯೇ ಕೀ[ಳಿ]ಸುವೆನು,
ನಿನ್ನ ಬೆತ್ತಲೆತನವನ್ನು ಜನಾಂಗಗಳಿಗೆ ತೋರಿಸು[ವೆ]ವೆನು,
ನಿನ್ನ ಅವಮಾನವನ್ನು ರಾಜ್ಯಗಳಿಗೆ ಕಾಣಿಸುವೆನು
ನಿನ್ನ ಮೇಲೆ ಹೊಲಸನ್ನು ಹಾಕಿ
ಮಾನಕಳೆದು ನಿನ್ನನ್ನು ನೋಟವನ್ನಾಗಿ ಮಾಡು[ವ]ವೆನು,
ನಿನ್ನನ್ನು ನೋಡುವ ಪ್ರತಿಯೊಬ್ಬನು ನಿನ್ನ ಕಡೆ[ಯಿಂದ] ಯಿಂದ ಓಡಿಹೋಗಿ—
ನಿನೆವೆಯೂ ಹಾಳಾಯಿತಲ್ಲಾ, ಯಾರು ಗೋಳಾ[ಡು]ಡಾರು,
ನಿನ್ನನ್ನು ಸಂತೈಸತಕ್ಕವರು ನನಗೆ ಎಲ್ಲಿ ಸಿಕ್ಕಾರು [ಎಂದು] ಅಂದುಕೊಳ್ಳುವನು.

ನಿನೆವೆಯ ನಾಶನವು ಖಂಡಿತ.

ನೀನು ನೋ ಆಮೋನಿಗಿಂತ ಭದ್ರವಾಗಿದ್ದೀ[]ಯೋ?
ಅದು ನೈಲಿನ ಪ್ರವಾಹಗಳಲ್ಲಿ ನೆಲೆಯಾಗಿತ್ತು,
ನೀರು ಅದನ್ನು ಸುತ್ತಿಕೊಂಡಿತ್ತು.
ಮಹಾ ನದಿಯು ಅದಕ್ಕೆ ಪೌಳಿಗೋಡೆ,

1) ಮೂಲ: ಹುಚ್ಚಬ್. ಈ ಮಾತಿನ ಅರ್ಥವು ನಿಶ್ಚಿತವಲ್ಲ. 2) ಮೂಲ: ಅದರ. 3) ಮೂಲ: ಮಾರಿದವಳೂ.

ಜಲಾಶಯವು ಅದರ ದುರ್ಗ.
9 ಕೂಷ್ ಮತ್ತು ಐಗುಪ್ತವು ಅದರ ಅಪಾರ ಬಲ;
ಪೂಟರೂ ಲೂಬ್ಯರೂ 1)ಆದಕ್ಕೆ ಸಹಾಯಕರು.
10 ಆದರೂ ಅದು ಗಡೀಪಾರಾಗಿ ಸೆರೆಹೋಯಿತು;
ಅದರ ಮಕ್ಕಳನ್ನು ಪ್ರತಿ ಬೀದಿಯ ಕೊನೆಯಲ್ಲಿ ಬಂಡೆಗೆ ಅಪ್ಪಳಿಸಿಬಿಟ್ಟರು;
ಆದರ ಘನವಂತರಿಗೋಸ್ಕರ ಚೀಟುಹಾಕಿದರು,
ಆದರ ಮಹನೀಯರೆಲ್ಲರನ್ನು ಸಂಕೋಲೆಗಳಿಂದ ಬಂಧಿಸಿದರು.
11 ನೀನೂ ಓಲಾಡುವಿ, ಬಳಲಿಹೋಗುವಿ;
ನೀನೂ ಶತ್ರುವಿನ ನಿಮಿತ್ತ ಆಶ್ರಯವನ್ನು ಹುಡುಕುವಿ.
12 ನಿನ್ನ ಕೋಟೆಗಳೆಲ್ಲಾ ಮೊದಲು ಮಾಗಿದ ಹಣ್ಣುಳ್ಳ ಅಂಜೂರದ ಮರಗಳಂತಿರುವವು;
ಆ ಮರಗಳನ್ನು ಅಲ್ಲಾಡಿಸಿದರೆ ಹಣ್ಣು ತಿನ್ನುವವನ ಬಾಯಿಗೆ ಬೀಳುವದು.
13 ಆಹಾ, ನಿನ್ನಲ್ಲಿನ ಜನರು ಹೆಣ್ಣಿಗರು;
ನಿನ್ನ ದೇಶದ ಬಾಗಿಲುಗಳು ನಿನ್ನ ಶತ್ರುಗಳಿಗೆ ತೆರೆದು ಹಾಕಿವೆ;
ಬೆಂಕಿಯು ನಿನ್ನ ಅಗುಳಿಗಳನ್ನು ನುಂಗಿಬಿಟ್ಟಿದೆ.
14 ಮುತ್ತಿಗೆಯ ಕಾಲಕ್ಕೆ ನೀರನ್ನು ಸೇದಿಟ್ಟುಕೋ,
ನಿನ್ನ ಬುರುಜುಗಳನ್ನು ಬಲಪಡಿಸಿಕೋ;
ಮಣ್ಣಿಗೆ ಇಳಿ, ಜೇಡಿಯನ್ನು ತುಳಿ, ಇಟ್ಟಿಗೆಯ ಅಚ್ಚನ್ನು ಹಿಡಿ.
15 ಇದ್ದಲ್ಲಿಯೇ ಬೆಂಕಿಯು ನಿನ್ನನ್ನು ನುಂಗುವದು,
ಕತ್ತಿಯು ನಿನ್ನನ್ನು ಕಡಿದುಬಿಡುವದು,
ಮಿಡತೆಗಳೋಪಾದಿಯಲ್ಲಿ ನುಂಗಲ್ಪಡುವಿ;
ನಿನ್ನ ಜನಸಂಖ್ಯೆಯು ಮಿಡತೆಗಳಷ್ಟು ಅಸಂಖ್ಯಾತವಾಗಲಿ.
ಗುಂಪುಮಿಡತೆಗಳಷ್ಟು ಅಪರಿಮಿತವಾಗಲಿ;
ನಿನ್ನ ವರ್ತಕರ ಸಂಖ್ಯೆಯನ್ನು ಆಕಾಶದ ನಕ್ಷತ್ರಗಳಿಗಿಂತ ಹೆಚ್ಚಿಸಿದ್ದೀ; 16
[ಆದರೇನು,] ಮಿಡತೆಯು [ರೆಕ್ಕೆಗಳ ಪರೆಯನ್ನು] ಹರಿದುಕೊಂಡು
ಹಾರಿಹೋಗಿಬಿಡುವದಷ್ಟೆ.
ನಿನ್ನ ಪ್ರಭುಗಳು ಮಿಡತೆಗಳಂತಿದ್ದಾರೆ, 17
ಮಿಡತೆಯ ದಂಡು ಶೀತದಿನದಲ್ಲಿ ಬೇಲಿಗಳೊಳಗೆ ಇಳಿದಿದ್ದು
ಹೊತ್ತು ಹುಟ್ಟಿದಾಗ ಓಡಿಹೋಗಿ
ಯಾರಿಗೂ ಗೊತ್ತಾಗದ ಸ್ಥಳದಲ್ಲಿ ಅಡಗುವ ಪ್ರಕಾರ
ನಿನ್ನ ಸೇನಾಪತಿಗಳು ಮಾಯವಾಗುತ್ತಾರೆ.
ಅಶ್ಶೂರದ ಅರಸನೇ, ನಿನ್ನ ದೇಶಪಾಲಕರು ದೀರ್ಘ 18
ನಿದ್ರೆಮಾಡುತ್ತಿದ್ದಾರೆ;
ನಿನ್ನ ಮಹನೀಯರು ಒರಗಿಹೋಗಿದ್ದಾರೆ;
ನಿನ್ನ ಪ್ರಜೆಗಳು ಬೆಟ್ಟಗಳಲ್ಲಿ ಚದರಿದ್ದಾರೆ,
ಅವರನ್ನು ಕೂಡಿಸತಕ್ಕವರು ಯಾರೂ ಇಲ್ಲ.
ನಿನ್ನ ಗಾಯವು ಗುಣಹೊಂದದು, ನಿನ್ನ ಪೆಟ್ಟು 19
ಗಡಸು;
ನಿನ್ನ ಸುದ್ದಿಯನ್ನು ಕೇಳಿದವರೆಲ್ಲರೂ ನಿನಗೆ ಚಪ್ಪಾಳೆಹಾಕುತ್ತಾರೆ;
ನಿನ್ನ ಕೆಡುಕಿಗೆ ನಿತ್ಯವೂ ಗುರಿಯಾಗದವರು ಎಲ್ಲಿದ್ದಾರೆ?

# THE PROPHET HABAKKUK

## ಹಬಕ್ಕೂಕನ ಪ್ರವಾದನೆಯ ಗ್ರಂಥ

ಪ್ರವಾದಿಯ ಅಸಮಾಧಾನಕ್ಕೆ ದೇವರಿಂದಾಗುವ ಸಮಾಧಾನ. 1; 2.

1 ಪ್ರವಾದಿಯಾದ ಹಬಕ್ಕೂಕನಿಗೆ ಕಂಡುಬಂದ ದೈವೋಕ್ತಿ.

ಪ್ರವಾದಿಯ ಆಕ್ಷೇಪಣೆ.

2 ಯೆಹೋವನೇ, ನಾನು ಮೊರೆಯಿಡುತ್ತಿದ್ದರೂ
ನೀನು ಎಷ್ಟು ಕಾಲ ಕೇಳದೇ ಇರುವಿ?
ಹಿಂಸೆ, ಹಿಂಸೆ ಎಂದು ನಿನ್ನನ್ನು ಕೂಗಿಕೊಂಡರೂ
ರಕ್ಷಿಸದೆ ಇರುವಿ.
ಕೇಡನ್ನು ನನ್ನ ಕಣ್ಣಿಗೆ ಏಕೆ ಬೀಳಿಸುತ್ತಿದ್ದೀ? 3
ಕಷ್ಟವನ್ನೇಕೆ 2)ನನಗೆ ತೋರಿಸುತ್ತಿದ್ದೀ?
ಹಿಂಸೆಬಾಧೆಗಳು ನನ್ನ ಕಣ್ಣೆದುರಿಗೆ ಇದ್ದೇ ಇವೆ;
ಜಗಳವಾಗುತ್ತಿದೆ, ವ್ಯಾಜ್ಯವೇಳುತ್ತಿದೆ.
ಹೀಗಿರಲು ಧರ್ಮೋಪದೇಶವು ಜಡವಾಗಿದೆ, 4
ನ್ಯಾಯವು ಎಂದಿಗೂ ಸಾಗದು;
ದುಷ್ಟನು ಶಿಷ್ಟನನ್ನು ಸುತ್ತಿಕೊಂಡಿದ್ದಾನೆ,
ಆದದರಿಂದ ಸಾಗುವ ನ್ಯಾಯವು ವಕ್ರವೇ.

1) ಮೂಲ: ನಿನ್ನ.
2) ಅಥವಾ: ಸುಮ್ಮನೆ ನೋಡುತ್ತಿದ್ದೀ?

ದೇವರ ಉತ್ತರ.

5 ಜನಾಂಗಗಳ ಮಧ್ಯೆ ನಡೆಯುವದನ್ನು ನೋಡಿರಿ,
ದೃಷ್ಟಿಯಿಡಿರಿ, ಬೆರಗಾಗಿರಿ;
ನಿಮ್ಮ ಕಾಲದಲ್ಲಿ ನಾನು ಒಂದು ಕಾರ್ಯವನ್ನು ಮಾಡುವೆನು,
ಅದು ನಿಮಗೆ ತಿಳಿಸಲ್ಪಟ್ಟರೂ ನೀವು ಅದನ್ನು ನಂಬುವದಿಲ್ಲ.
6 ಇಗೋ, ತೀಕ್ಷ್ಣವೂ ತೀವ್ರವೂ ಆದ ಕಸ್ದೀಯ ಜನಾಂಗವನ್ನು ಎಬ್ಬಿಸುತ್ತಿದ್ದೇನೆ;
ಆ ಜನರು ತಮ್ಮದಲ್ಲದ ಸಂಸ್ಥಾನಗಳನ್ನು ವಶಮಾಡಿಕೊಳ್ಳುವ ಹಾಗೆ
ಲೋಕದಲ್ಲೆಲ್ಲಾ ಸಂಚರಿಸುವರು.
7 ಅವರು ಕ್ರೂರರು, ಭಯಂಕರರು;
ಅವರ ಅಧಿಕಾರವೂ ಗೌರವವೂ ಅವರಿಂದಲೇ ಹೊರಡುವವು.
8 ಅವರ ಕುದುರೆಗಳು ಚಿರತೆಗಳಿಗಿಂತ ವೇಗವಾಗಿವೆ,
ಸಂಜೆಯ ತೋಳಗಳಿಗಿಂತ ಚುರುಕಾಗಿವೆ;
ಅವರ ಸವಾರರು ಕುದುರೆಗಳನ್ನು ಕುಣಿದಾಡಿಸುವರು;
ದೂರದಿಂದ ಹತ್ತಿಕೊಂಡು ಬರುವರು;
ಕೊಳ್ಳೆಗೆ ಆತುರಪಡುವ ಹದ್ದಿನಂತೆ ಹಾರಾಡುವರು.
9 ಎಲ್ಲರೂ ಬಾಧಿಸಲು 1)ಮುಖವನ್ನು ಮುಂದಕ್ಕೆ ಚಾಚಿಕೊಂಡು ನುಗ್ಗುವರು;
ಜನರನ್ನು ಉಸುಬಿನಂತೆ ಲೆಕ್ಕವಿಲ್ಲದಷ್ಟು ಸೆರೆಹಿಡಿದು ಗುಂಪುಕೂಡಿಸುವರು.
10 ಅರಸರನ್ನು ಧಿಕ್ಕರಿಸುವರು;
ಸರದಾರರು ಅವರ ಹಾಸ್ಯಕ್ಕೆ ಗುರಿಯಾಗುವರು.
ಒಂದೊಂದು ಕೋಟೆಯನ್ನೂ ತಾತ್ಸಾರಮಾಡಿ
ದೂಳದಿಬ್ಬಹಾಕಿ ಆಕ್ರಮಿಸುವರು.
11 ಕೂಡಲೆ ಬಿರುಗಾಳಿಯಂತೆ ಬೀಸುತ್ತಾ ಹಾದುಹೋಗುವರು;
ಸ್ವಬಲವೇ ದೇವರು ಎನ್ನುವ ಅಪರಾಧಕ್ಕೆ ಒಳಗಾಗುವರು.

ಪ್ರವಾದಿಯ ಮತ್ತೊಂದು ಆಕ್ಷೇಪಣೆ.

12 ನನ್ನ ದೇವರಾದ ಯೆಹೋವನೇ, ನನ್ನ ಸದಮಲಸ್ವಾಮಿಯೇ,
ನೀನು ಅನಾದಿಯಿಂದಿದ್ದೀಯಲ್ಲಾ; ನಾವು ಸಾಯೆವು.
ಯೆಹೋವನೇ, [ನಮ್ಮ] ನ್ಯಾಯತೀರ್ಪಿಗಾಗಿ ಅವರನ್ನು ನೇಮಿಸಿದ್ದೀ;
ಶರಣನೇ, [ನಮ್ಮ] ಶಿಕ್ಷೆಗಾಗಿ ಅವರನ್ನು ನಿಲ್ಲಿಸಿದ್ದೀ.
13 ಕೇಡನ್ನು ನೋಡಲಾರದ ಅತಿಪವಿತ್ರದೃಷ್ಟಿಯುಳ್ಳವನೇ,
ಕೆಡುಕನ್ನು ಕಟಾಕ್ಷಿಸಲಾರದವನೇ,
ಏಕೆ ಕೆಡುಕರನ್ನು ಕಟಾಕ್ಷಿಸುತ್ತೀ?
ದುಷ್ಟನು ತನಗಿಂತ ಯೋಗ್ಯನನ್ನು ನುಂಗಿಬಿಡುವಾಗ
ಏಕೆ ಸುಮ್ಮನಿದ್ದೀ?
ಮನುಷ್ಯರನ್ನು ಸಮುದ್ರದ ಮೀನುಗಳ ಸ್ಥಿತಿಗೆ ಏಕೆ ತಂದಿದ್ದೀ,
ನಾಯಕನಿಲ್ಲದ ಕ್ರಿಮಿಕೀಟಗಳ ಗತಿಗೆ ಏಕೆ ಒಳಮಾಡಿದ್ದೀ?
ಆಹಾ, ಅವರನ್ನೆಲ್ಲಾ ತನ್ನ ಗಾಳದಿಂದ ಮೇಲಕ್ಕೆಳೆಯುತ್ತಾನೆ,
ತನ್ನ ಬಲೆಯಿಂದ ಬಾಚುತ್ತಾನೆ,
ತನ್ನ ಜಾಲದಲ್ಲಿ ಗುಡ್ಡೆಮಾಡುತ್ತಾನೆ;
ಇದಕ್ಕೆ ಹಿಗ್ಗುತ್ತಾನೆ, ಹೆಚ್ಚಳಪಡುತ್ತಾನೆ;
ತನ್ನ ಬಲೆಗೆ ಬಲಿಕೊಡುತ್ತಾನೆ,
ತನ್ನ ಜಾಲಕ್ಕೆ ಧೂಪಹಾಕುತ್ತಾನೆ;
ಅವುಗಳ ಮೂಲಕವೇ ಅವನ ಭೋಜನವು ಪುಷ್ಟಿ,
ಅವನ ಆಹಾರವು ರುಚಿ.
ಹೀಗಿರಲು ತನ್ನ ಬಲೆಗೆ ಸಿಕ್ಕಿದ್ದನ್ನು ಅವನು ನಿತ್ಯವೂ ಈಚೆಗೆ ಸುರಿಯುತ್ತಿರಲೋ,
ಜನಾಂಗಗಳನ್ನು ಕರುಣಿಸದೆ ಸದಾ ಸಂಹರಿಸುತ್ತಿರಬೇಕೋ?

ದೇವರ ಉತ್ತರ.

ನನ್ನ ಕೋವರದಲ್ಲಿ ನಿಂತುಕೊಳ್ಳುವೆನು,
ಬುರುಜಿನ ಮೇಲೆ ನೆಲೆಯಾಗಿರುವೆನು,
ಯೆಹೋವನು ನನಗೆ ಏನು ಹೇಳುವನೋ,
ನನ್ನ ಆಕ್ಷೇಪಣೆಯನ್ನು ನಿವಾರಿಸಿಕೊಳ್ಳಲು
ಯಾವ ಉತ್ತರಕೊಡಬೇಕೋ ಎಂದು ಎದುರುನೋಡುವೆನು [ಅಂದುಕೊಂಡೆನು.]
ಆಗ ಯೆಹೋವನು ನನಗೆ ಈ ಉತ್ತರವನ್ನು ದಯಪಾಲಿಸಿದನು —
ನಿನಗಾದ ದರ್ಶನವನ್ನು ಬರೆ;
ಓದುವವರು ಶೀಘ್ರವಾಗಿ ಓದುವಂತೆ
ಹಲಿಗೆಗಳ ಮೇಲೆ ಅದನ್ನು ಕೆತ್ತು.
ಅದು ಕ್ಲುಪ್ತಕಾಲದಲ್ಲಿ ನೆರವೇರತಕ್ಕದ್ದು,
ಆದರೆ ಪರಿಣಾಮಕ್ಕೆ ತ್ವರೆಪಡುತ್ತದೆ, ಮೋಸಮಾಡದು;
ತಡವಾದರೂ ಅದಕ್ಕೆ ಕಾದಿರು;
ಅದು ಬಂದೇ ಬರುವದು, ತಾಮಸವಾಗದು.
ಇಗೋ, 2)ಆ ದುಷ್ಟನ ಅಂತರಾತ್ಮವು ಉಬ್ಬಿಕೊಂಡಿದೆ, ಯಥಾರ್ಥವಲ್ಲ;
ನೀತಿವಂತನೋ ತನ್ನ ನಂಬಿಕೆಯಿಂದಲೇ ಬದುಕುವನು.
ಅಲ್ಲದೆ ದ್ರಾಕ್ಷಾರಸವು ಮೋಸಕರವಾದ ಕಾರಣ
ದುಷ್ಟನು ಮದವೇರಿದ್ದಾನೆ, ಸ್ವಸ್ಥಳದಲ್ಲಿ ನಿಲ್ಲನು;
ಪಾತಾಳದ ಹಾಗೆ ಅತ್ಯಾಶೆಪಡುತ್ತಾನೆ,

1) ಮೂಲವು ಕೇವಲ ಅಸ್ಪಷ್ಟ. 2) ಮೂಲ: ಅವನ.

ಮೃತ್ಯುವಿನಂತಿದ್ದಾನೆ, ತೃಪ್ತಿಯೇ ಇಲ್ಲ;
ಸಕಲ ಜನಗಳನ್ನು ಎಳೆದುಕೊಳ್ಳುತ್ತಾನೆ,
ಸಮಸ್ತ ಜನಾಂಗಗಳನ್ನು ರಾಶಿಮಾಡಿಕೊಳ್ಳುತ್ತಾನೆ.

ಕಸ್ದೀಯರ ಅಪರಾಧಗಳ ಖಂಡನೆ.

6 ಇವುಗಳೆಲ್ಲಾ ಅವನ ಪ್ರಸ್ತಾಪವೆತ್ತಿ
ಅವನ ವಿಷಯವಾಗಿ ಈ ಗೇಲಿಯ ಗೀತಗಳನ್ನು ಹಾಡುವವಲ್ಲವೆ—
ಅಯ್ಯೋ, ತನ್ನದಲ್ಲದ್ದನ್ನು ಹೆಚ್ಚೆಚ್ಚಾಗಿ ಕೂಡಿಸಿಕೊಂಡು
ಅಡವುಗಳನ್ನು ಹೊರೆಹೊರೆಯಾಗಿ ಇಟ್ಟುಕೊಳ್ಳುವವನ ಗತಿಯನ್ನು ಏನು ಹೇಳಲಿ!
ಅವನು ಎಷ್ಟು ಕಾಲ ಹೀಗೆ ಮಾಡಾನು!
7 ನಿನ್ನನ್ನು ಕಚ್ಚುವವರು ಫಕ್ಕನೆ ತಲೆಯೆತ್ತುವರು,
ನಿನ್ನನ್ನು ಒದ್ದಾಡಿಸುವವರು ಎಚ್ಚರಗೊಳ್ಳುವರು;
ನೀನು ಅವರಿಗೆ ಸೂರೆಯಾಗುವಿಯಷ್ಟೆ.
8 ನೀನು ಬಹು ಜನಾಂಗಗಳನ್ನು ಕೊಳ್ಳೆಹೊಡೆದು
ಮನುಷ್ಯರ ರಕ್ತವನ್ನು ಸುರಿಸಿ
ದೇಶವನ್ನೂ ಪುರವನ್ನೂ ಅವುಗಳ ನಿವಾಸಿಗಳೆಲ್ಲರನ್ನೂ ಹಿಂಸಿಸಿದ ಕಾರಣ
ಜನಾಂಗಗಳಲ್ಲಿ ಉಳಿದವರೆಲ್ಲರು ನಿನ್ನನ್ನು ಕೊಳ್ಳೆಹೊಡೆಯುವರು.
9 ಅಯ್ಯೋ, ತನ್ನ ಗೂಡನ್ನು ಎತ್ತರದಲ್ಲಿ ಕಟ್ಟಿ
ಕೇಡಿನೊಳಗಿಂದ ತಪ್ಪಿಸಿಕೊಳ್ಳಬೇಕೆಂದು
ತನ್ನ ಕುಲಕ್ಕೆ ಆಸ್ತಿಯನ್ನು ಅನ್ಯಾಯವಾಗಿ ದೋಚಿಕೊಳ್ಳುವವನ ಗತಿಯನ್ನು ಏನು ಹೇಳಲಿ;
10 ನೀನು ಬಹುಜನಾಂಗಗಳನ್ನು ನಿರ್ಮೂಲಮಾಡಿದ್ದು
ನಿನ್ನ ಕುಲಕ್ಕೆ ಅವಮಾನವನ್ನೇ ಆಲೋಚಿಸಿಕೊಂಡ ಹಾಗಾಯಿತು,
ನಿನಗೇ ಕೆಡುಕುಮಾಡಿಕೊಂಡಿದ್ದೀ.
11 ಗೋಡೆಯೊಳಗಿಂದ ಕಲ್ಲು [ನಿನ್ನ ಮೇಲೆ ತಪ್ಪು ಹೊರಿಸಿ] ಕೂಗುವದು;
[ಚಾವಣಿಯ] ಮರಗಳೊಳಗಿಂದ ತೊಲೆಯು ಹೌದೆನ್ನುವದು.

12 ಅಯ್ಯೋ, ಪಟ್ಟಣವನ್ನು ನರಹತ್ಯದಿಂದ ಕಟ್ಟಿ
ಊರನ್ನು ಅನ್ಯಾಯದಿಂದ ಸ್ಥಾಪಿಸುವವನ ಗತಿಯನ್ನು ಏನು ಹೇಳಲಿ!
13 ಜನಗಳು ದುಡಿದದ್ದು ಬೆಂಕಿಗೆ ತುತ್ತಾಗುವದು,
ಜನಾಂಗಗಳು ಪಟ್ಟ ಪರಿಶ್ರಮವು ವ್ಯರ್ಥವಾಗುವದು.
ಆಹಾ, ಇದೆಲ್ಲಾ ಸೇನಾಧೀಶ್ವರನಾದ ಯೆಹೋವನಿಂದಲೇ ಸಂಭವಿಸುವದಷ್ಟೆ.
14 ಸಮುದ್ರದಲ್ಲಿ ನೀರು ಹೇಗೋ ಹಾಗೆಯೇ
ಭೂಮಿಯಲ್ಲಿ ಯೆಹೋವನ ಮಹಿಮೆಯ ಜ್ಞಾನವು ತುಂಬಿಕೊಂಡಿರುವದು.
15 ಅಯ್ಯೋ, ನಿನ್ನ ರೋಷವನ್ನು ಪಾನಕಕ್ಕೆ ಬೆರಸಿ
ನಿನ್ನ ನೆರೆಯವನಿಗೆ ಕುಡಿಸಿ
ಅವರ ಬೆತ್ತಲೆತನವನ್ನು ನೋಡಬೇಕೆಂದು ಅವರನ್ನು ಅಮಲೇರಿಸಿದವನೇ,
ನಿನ್ನ ಗತಿಯನ್ನು ಏನು ಹೇಳಲಿ!
ನೀನು ಮಾನವನ್ನಲ್ಲ, ಅವಮಾನವನ್ನು ತುಂಬಾ ಅನುಭವಿಸುವಿ; 16
ನೀನೂ ಕುಡಿ, ನಿನ್ನ ಸುನ್ನತಿಹೀನತೆಯನ್ನು ಹೊರಪಡಿಸಿಕೋ;
ಯೆಹೋವನ ಬಲಗೈಯಲ್ಲಿನ ಪಾತ್ರೆಯು ನಿನ್ನ ಪಾಲಿಗೂ ಬರುವದು;
ಕೇವಲ ಅವಮಾನವು ನಿನ್ನ ಮಾನವನ್ನು ಮುತ್ತಿಬಿಡುವದು.
ನೀನು ಮನುಷ್ಯರ ರಕ್ತವನ್ನು ಸುರಿಸಿ 17
ದೇಶವನ್ನೂ ಪುರವನ್ನೂ ಅವುಗಳ ನಿವಾಸಿಗಳೆಲ್ಲರನ್ನೂ ಹಿಂಸಿಸಿದ ಕಾರಣ
ಲೆಬನೋನಿಗೆ ಆದಂಥ ಹಿಂಸೆಗೆ ನೀನೂ ಒಳಗಾಗುವಿ,
ಮೃಗಪಶುಗಳ ನಾಶನವು ನಿನ್ನನ್ನೂ ಹೆದರಿಸುವದು.
ಕೆತ್ತಿದ ವಿಗ್ರಹವು ಏತಕ್ಕೆ? ರೂಪಿಸಿದವನು ಅದನ್ನೇಕೆ ಕೆತ್ತಬೇಕಾಗಿತ್ತು? 18
ಸುಳ್ಳುಕಣಿಗಾಗಿ ಇಟ್ಟುಕೊಂಡ ಎರಕದ ಬೊಂಬೆಯಿಂದ ಪ್ರಯೋಜನವೇನು?
ನಿರ್ಮಿಸಿದವನು ತನ್ನ ಕೈಕೆಲಸದ ಮೂಗಬೊಂಬೆಯಲ್ಲಿ ನಂಬಿಕೆಯಿಡುವದಕ್ಕೆ ಏನಾಧಾರ?
ಮರಕ್ಕೆ ಎಚ್ಚತ್ತುಕೋ, ಜಡವಾದ ಕಲ್ಲಿಗೆ ಎದ್ದೇಳು ಎಂದು 19
ಅಪ್ಪಣೆಕೊಡುವವನ ಗತಿಯನ್ನು ಅಯ್ಯೋ, ಏನು ಹೇಳಲಿ!
ಇಂಥ ಬೊಂಬೆಯು ಬೋಧಿಸೀತೇ?
ಇಗೋ, ಅದಕ್ಕೆ ಬೆಳ್ಳಿಬಂಗಾರವು ಹೊದಗಿಸಿದೆ,
ಅದರೊಳಗೆ ಶ್ವಾಸವೇನೂ ಇಲ್ಲ.
ಯೆಹೋವನೋ ತನ್ನ ಪರಿಶುದ್ಧಮಂದಿರದಲ್ಲಿದ್ದಾನೆ; 20
ಭೂಲೋಕವೆಲ್ಲಾ ಆತನ ಮುಂದೆ ಮೌನವಾಗಿರಲಿ.

ಯೆಹೋವನ ಅದ್ಭುತಾಗಮನ.

3

ಪ್ರವಾದಿಯಾದ ಹಬಕ್ಕೂಕನ ಪ್ರಾರ್ಥನೆ.
ರಾಗ— ಶಿಗ್ಯೋನೋತ್.
ಯೆಹೋವನೇ, ನಾನು ನಿನ್ನ ಸುದ್ದಿಯನ್ನು ಕೇಳಿ ಹೆದರಿದ್ದೇನೆ; 2
ಯೆಹೋವನೇ, ಯುಗದ ಮಧ್ಯದಲ್ಲಿ ನಿನ್ನ ರಕ್ಷಣಕಾರ್ಯವನ್ನು ಪುನಃ ಮಾಡು,
ಯುಗದ ಮಧ್ಯದಲ್ಲಿ ಅದನ್ನು ಪ್ರಸಿದ್ಧಿಪಡಿಸು;
ನೀನು ರೋಷಗೊಂಡಿದ್ದರೂ ಕರುಣೆಯನ್ನು ಚಿತ್ತಕ್ಕೆ ತಂದುಕೋ.
ದೇವರು ತೇಮಾನಿನಿಂದ ಬರುತ್ತಾನೆ, 3
ಸದಮಲಸ್ವಾಮಿಯು ಪಾರಾನ್ ಪರ್ವತದಿಂದ ಐತರುತ್ತಾನೆ; ಸೆಲಾ.

ಆತನ ಪ್ರಭಾವವು ಆಕಾಶಮಂಡಲವನ್ನು ಆವರಿಸುತ್ತಿದೆ;
ಆತನ ಮಹಿಮೆಯು ಭೂಮಂಡಲವನ್ನು ತುಂಬುತ್ತಿದೆ;
4 [ಆತನ] ತೇಜಸ್ಸು ಸೂರ್ಯನಂತಿದೆ,
1)ಅದರ ಪಕ್ಕಗಳಲ್ಲಿ ಕಿರಣಗಳು ಹೊರಡುತ್ತಿವೆ;
ಅದೇ ಆತನ ಶಕ್ತಿನಿಧಿ.
5 ಆತನ ಮುಂದೆ ಮುಂದೆ ವ್ಯಾಧಿಯು ನಡೆಯುತ್ತದೆ;
ಆತನ ಹೆಜ್ಜೆಜಾಡುಗಳಲ್ಲಿ ಜ್ವರಜ್ವಾಲೆಯು ಏಳುತ್ತದೆ.
6 ಆತನು ನಿಂತುಕೊಳ್ಳಲು ಭೂಮಿಯು ಕಂಪಿಸುತ್ತದೆ;
ದೃಷ್ಟಿಸಲು ಜನಾಂಗಗಳು ಬೆದರುತ್ತವೆ;
ಪುರಾತನಪರ್ವತಗಳು ಸೀಳಿಹೋಗುತ್ತವೆ;
ಸನಾತನಗಿರಿಗಳು ಕುಸಿದುಬೀಳುತ್ತವೆ;
ಆತನ ಆಗಮನವು ಅನಾದಿಯಿಂದ ಹೀಗೆಯೇ ಇರುವದು.
7 ಇಗೋ, ಕೂಷಾನಿನ ಗುಡಾರಗಳು ಸಂಕಟಪಡುತ್ತಿವೆ,
ಮಿದ್ಯಾನ್ ದೇಶದ ಡೇರೆಗಳು ನಡುಗುತ್ತಿವೆ.
8 ಯೆಹೋವನೇ, ನಿನಗೆ ನದಿಗಳ ಮೇಲೆ ರೌದ್ರವೋ?
ಹೊಳೆಗಳಿಗೆ ಸಿಟ್ಟುಗೊಂಡಿದ್ದೀಯಾ?
ಸಮುದ್ರದ ಮೇಲೆ ಕೋಪವೋ?
ಏಕೆ ನಿನ್ನ ಅಶ್ವಗಳ ಮೇಲೆ ಆರೂಢನಾಗಿ
ನಿನ್ನ ಜಯರಥಗಳಲ್ಲಿ ಆಸೀನನಾಗಿ ಬರುತ್ತಿದ್ದೀ?
9 ನಿನ್ನ ಬಿಲ್ಲು ಈಚೆಗೆ ತೆಗೆಯಲ್ಪಟ್ಟಿದೆ,
(ಆಹಾ, ನಿನ್ನ ವಾಗ್ಬಾಣಗಳು ನಿಶ್ಚಿತ!) ಸೆಲಾ.
ಭೂಮಿಯನ್ನು ನದಿಗಳಿಂದ ಭೇದಿಸಿಬಿಡುತ್ತೀ.
10 ಬೆಟ್ಟಗಳು ನಿನ್ನನ್ನು ನೋಡಿ ತಳಮಳಗೊಳ್ಳುತ್ತವೆ;
ಅತಿವೃಷ್ಟಿಯು ಹೊಯ್ದುಕೊಂಡು ಹೋಗುತ್ತದೆ;
ಸಾಗರವು ಆರ್ಭಟಿಸಿ ಕೈಗಳನ್ನು ಮೇಲಕ್ಕೆತ್ತುತ್ತದೆ.
11 ನಿನ್ನ ಹಾರುವ ಬಾಣಗಳ ಬೆಳಗಿಗೂ
ನಿನ್ನ ಮಿಂಚುವ ಈಟಿಯ ಹೊಳಪಿಗೂ
ಸೂರ್ಯಚಂದ್ರರು ತಮ್ಮ ಗೂಡಿನಲ್ಲಿ ಅಡಗಿಕೊಳ್ಳುತ್ತಾರೆ.
12 ನೀನು ಸಿಟ್ಟಿನಿಂದ ಲೋಕವನ್ನು ತುಳಿದುಕೊಂಡು ಹೋಗುತ್ತೀ.
ಕೋಪದಿಂದ ಜನಾಂಗಗಳನ್ನು ಒಕ್ಕುತ್ತೀ.
ನಿನ್ನ ಪ್ರಜೆಯ ರಕ್ಷಣೆಗೆ, ನಿನ್ನ ಅಭಿಷಿಕ್ತನ ಉದ್ಧಾರಕ್ಕೆ ಹೊರಟಿದ್ದೀ;
ತಲೆಯನ್ನು ಕುತ್ತಿಗೆಯ ಬುಡದ ವರೆಗೆ ಹೊಡೆದು ಹಾಕಿದ ಹಾಗೆ
ತಳಾದಿಯು ಬೈಲಾಗುವಷ್ಟರ ಮಟ್ಟಿಗೆ
ನೀನು ದುಷ್ಟನ ಮನೆಯನ್ನು ಹೊಡೆದಿದ್ದೀ. ಸೆಲಾ.
ದಿಕ್ಕಿಲ್ಲದವರನ್ನು ಮರೆಯಲ್ಲಿ ನುಂಗಲು ಹೆಚ್ಚಳಪಡುವವರಾಗಿ
ನನ್ನನ್ನು ಚದರಿಸಬೇಕೆಂದು ನನ್ನ ಮೇಲೆ ಬಿರುಗಾಳಿಯಂತೆ ನುಗ್ಗಿದ
ಅವನ ಭಟರ ತಲೆಯನ್ನು 2)ಅವನ ದೊಣ್ಣೆಗಳಿಂದಲೇ ಒಡೆದಿದ್ದೀ.
ನಿನ್ನ ಅಶ್ವಗಳನ್ನು ಏರಿದವನಾಗಿ ಸಮುದ್ರವನ್ನು ತುಳಿಯುತ್ತಾ
ಮಹಾಜಲರಾಶಿಯನ್ನು ಹಾದುಹೋಗಿದ್ದೀ.

ಪ್ರವಾದಿಯ ಭಯವೂ ಭರವಸವೂ.

ಅದು ನನಗೆ ಕೇಳಿಸಲು ನನ್ನ ಹೊಟ್ಟೆಯು ತಳಮಳಗೊಂಡಿತು,
ಆ ಶಬ್ದಕ್ಕೆ ನನ್ನ ತುಟಿಗಳು ಅದರಿದವು.
ವಿಪತ್ಕಾಲವು ಜನರನ್ನು ಎದುರಾಯಿಸಿ ಅವರ ಮೇಲೆ ಬೀಳುವಾಗ
ನಾನು ಅದನ್ನು ತಾಳ್ಮೆಯಿಂದ ಕಾದಿರಬೇಕೆಂದು ನನಗೆ ತಿಳಿಯಲು
ಕ್ಷಯವು ನನ್ನ ಎಲುಬುಗಳಲ್ಲಿ ಸೇರಿತು,
ನಾನು ನಿಂತ ಹಾಗೆಯೇ ನಡುಗಿದೆನು.
ಆಹಾ, ಅಂಜೂರವು ಚಿಗುರದಿದ್ದರೂ
ದ್ರಾಕ್ಷಾಲತೆಗಳಲ್ಲಿ ಹಣ್ಣು ಸಿಕ್ಕದಿದ್ದರೂ
ಎಣ್ಣೆಮರಗಳ ಉತ್ಪತ್ತಿಯು ಶೂನ್ಯವಾದರೂ
ಹೊಲಗದ್ದೆಗಳು ಆಹಾರವನ್ನು ಕೊಡದೆಹೋದರೂ
ಹಿಂಡು ಹಟ್ಟಿಯೊಳಗಿಂದ ನಾಶವಾದರೂ
ಮಂದೆಯು ಕೊಟ್ಟಿಗೆಗಳೊಳಗೆ ಇಲ್ಲದಿದ್ದರೂ
ನಾನು ಯೆಹೋವನಲ್ಲಿ ಉಲ್ಲಾಸಿಸುವೆನು,
ನನ್ನ ರಕ್ಷಕನಾದ ದೇವರಲ್ಲಿ ಆನಂದಿಸುವೆನು.
ಕರ್ತನಾದ ಯೆಹೋವನೇ ನನ್ನ ಬಲ;
ಆತನು ನನ್ನ ಕಾಲನ್ನು ಜಿಂಕೆಯ ಕಾಲಿನಂತೆ ಚುರುಕುಮಾಡಿ
ನನ್ನ ಉನ್ನತಪ್ರದೇಶಗಳಲ್ಲಿ ನನ್ನನ್ನು ನಡಿಸುತ್ತಾನೆ.
ಪ್ರಧಾನಗಾಯಕನ ಕೀರ್ತನಸಂಗ್ರಹದಿಂದ ತೆಗೆದದ್ದು;
ನನ್ನ ತಂತಿವಾದ್ಯದೊಡನೆ ಹಾಡತಕ್ಕದ್ದು.

1) ಮೂಲ: ಆತನ. 2) ಪಾಠಾಂತರ: ನಿನ್ನ ದೊಣ್ಣೆಗಳಿಂದ.

# THE PROPHET ZEPHANIAH

## ಚೆಫನ್ಯನ ಪ್ರವಾದನೆಯ ಗ್ರಂಥ

ಯೆಹೋವನ ಭಯಂಕರ ದಿನದ ಎಚ್ಚರಿಕೆ. 1.

1 ಆಮೋನನ ಮಗನೂ ಯೆಹೂದದ ಅರಸನೂ ಆದ ಯೋಷೀಯನ ಕಾಲದಲ್ಲಿ ಕೂಷಿಯ ಮಗನೂ ಗೆದಲ್ಯನ ಮೊಮ್ಮಗನೂ ಹಿಜ್ಕೀಯನಿಗೆ ಹುಟ್ಟಿದ ಅಮರ್ಯನ ಮರಿಮಗನೂ ಆದ ಚೆಫನ್ಯನಿಗೆ ಯೆಹೋವನು ದಯಪಾಲಿಸಿದ ವಾಕ್ಯ.

ಸಮಸ್ತ ಪ್ರಾಣಿಗಳ ನಾಶನ.

2 ಯೆಹೋವನು ಇಂತೆನ್ನುತ್ತಾನೆ—
ನಾನು ಭೂಮಂಡಲದಿಂದ ಸಮಸ್ತವನ್ನು ಅಳಿಸಿ
ಬಿಡುವೆನು.
3 ಜನಪಶುಗಳನ್ನೂ ಆಕಾಶದ ಪಕ್ಷಿಗಳನ್ನೂ
ಸಮುದ್ರದ ಮೀನುಗಳನ್ನೂ ನಾಶಪಡಿಸುವೆನು;
ವಿಗ್ರಹಗಳೆಂಬ ವಿಘ್ನಗಳನ್ನೂ ಅವುಗಳಿಗೆ ಎಡವುವ
ದುಷ್ಟರನ್ನೂ
ಸಂಹರಿಸುವೆನು; ಭೂಮಿಯ ಮೇಲಿಂದ ನರಸಂತಾ
ನವನ್ನು ಕಿತ್ತುಹಾಕುವೆನು;
ಇದು ಯೆಹೋವನ ನುಡಿ.

ಅಪರಾಧಿಯಾದ ಯೆರೂಸಲೇಮಿಗೆ ದೇವರ ದಂಡನೆ ತಪ್ಪದು.

4 ನಾನು ಯೆಹೂದದ ಮೇಲೂ ಯೆರೂಸಲೇಮಿನ
ವರೆಲ್ಲರ ಮೇಲೂ ಕೈಯೆತ್ತಿ
ಈ ಸ್ಥಳದಿಂದ ಬಾಳನ ಪೂಜೆಯನ್ನು ನಿಶ್ಶೇಷ
ಗೊಳಿಸಿ
ಕೆಮಾರ್ಯ ಮೊದಲಾದ ಪೂಜಾರಿಗಳನ್ನು
ನಿರ್ನಾಮಮಾಡುವೆನು;
5 ಮಾಳಿಗೆಗಳ ಮೇಲೆ ಆಕಾಶದ ನಕ್ಷತ್ರಗಣಕ್ಕೆ
ಪೂಜಿಸುವವರನ್ನೂ
ಯೆಹೋವನ ಭಕ್ತರೆಂದು ಪ್ರತಿಜ್ಞೆಮಾಡಿಕೊಂಡು
ಆರಾಧಿಸಿ
ಮಲ್ಕಾಮನ ಮೇಲೆ ಆಣೆಯಿಡುವವರನ್ನೂ
6 ಯೆಹೋವನನ್ನು ಆಶ್ರಯಿಸದೆ ಯೆಹೋವನ ದರ್ಶ
ನವನ್ನು ಬಯಸದೆ
ಯೆಹೋವನ ಮಾರ್ಗಬಿಟ್ಟವರನ್ನೂ ಧ್ವಂಸಪಡಿಸು
ವೆನು.
7 ಕರ್ತನಾದ ಯೆಹೋವನ ಸನ್ನಿಧಿಯಲ್ಲಿ ಮೌನ
ನಾಗಿರಿ;
ಯೆಹೋವನ ದಿನವು ಸಮೀಪಿಸಿತು;
ಯೆಹೋವನು ಯಜ್ಞದ ಔತಣವನ್ನು ಸಿದ್ಧ
ಪಡಿಸಿದ್ದಾನೆ,
ಕರೆದವರನ್ನು ಮಡಿಮಾಡಿದ್ದಾನೆ.
ಯೆಹೋವನ ಆ ಯಜ್ಞದಿನದಲ್ಲಿ 8
ನಾನು ದೇಶಾಧಿಪತಿಗಳನ್ನೂ ರಾಜವಂಶದವರನ್ನೂ
ವಿದೇಶವಸ್ತ್ರಧಾರಿಗಳೆಲ್ಲರನ್ನೂ ದಂಡಿಸುವೆನು.
ಹೊಸ್ತಿಲಹಾರಿ ನುಗ್ಗಿ ಮೋಸಹಿಂಸೆಗಳಿಂದ ದೋ 9
ಚಿದ್ದನ್ನು
ತಮ್ಮ ಒಡೆಯನ ಮನೆಯೊಳಗೆ ತುಂಬಿಸುವವರೆಲ್ಲ
ರನ್ನು ಆ ದಿನದಲ್ಲಿ ದಂಡಿಸುವೆನು.
ಅದೇ ದಿನದಲ್ಲಿ ಮೀನುಬಾಗಲಿಂದ ಕೂಗಾಟ, 10
ಎರಡನೆಯ ಕೇರಿಯಿಂದ ಗೋಳಾಟ,
ಗುಡ್ಡಗಳ ಮೇಲಿಂದ ಧಡಮ್ ಎನ್ನುವ ಶಬ್ದ,
ಅಂತು ದೊಡ್ಡ ಗದ್ದಲವಾಗುವದು;
ಇದು ಯೆಹೋವನ ನುಡಿ.
ಒರಳ ಕೇರಿಯವರೇ, ಕಿರಚಿರಿ, 11
ಎಲ್ಲಾ ಸಾಹುಕಾರರು ಹಾಳಾದರು,
ಹೊರೆಬೆಳ್ಳಿಯವರೆಲ್ಲರು ನಾಶವಾದರು,
ಆ ಕಾಲದಲ್ಲಿ ನಾನು ದೀಪಗಳನ್ನು ಹಿಡಿದು 12
ಯೆರೂಸಲೇಮನ್ನೆಲ್ಲಾ ಹುಡುಕಿಬಿಡುವೆನು;
ಯೆಹೋವನು ಮೇಲನ್ನಾಗಲಿ ಕೇಡನ್ನಾಗಲಿ
ಮಾಡನು ಎಂದು
ಮನಸ್ಸಿನೊಳಗೆ ಅಂದುಕೊಳ್ಳುವವರಾಗಿ
ಮಡ್ಡಿಯ ಮೇಲೆ ಮಂದವಾಗಿರುವ ದ್ರಾಕ್ಷಾರಸಕ್ಕೆ
ಸಮಾನರಾದ
ಜನರನ್ನು ದಂಡಿಸುವೆನು.
ಅವರ ಆಸ್ತಿಯು ಸೂರೆಯಾಗುವದು, 13
ಅವರ ಮನೆಗಳು ಹಾಳಾಗುವವು;
ಅವರು ಮನೆಗಳನ್ನು ಕಟ್ಟಿಕೊಂಡರೂ ಅವುಗಳಲ್ಲಿ
ವಾಸಿಸರು,
ತೋಟಗಳನ್ನು ಮಾಡಿಕೊಂಡರೂ ಅವುಗಳ ದ್ರಾ
ಕ್ಷಾರಸವನ್ನು ಕುಡಿಯರು.

ಯೆಹೋವನ ದಿನದ ವಿವರಣೆ.

ಯೆಹೋವನ ಮಹಾದಿನವು ಹತ್ತಿರವಾಯಿತು, 14
ಸಮೀಪಿಸಿತು, ಬಹು ತ್ವರೆಯಾಗಿ ಬರುತ್ತಿದೆ;
ಆಹಾ, ಕಿವಿಗೊಡಿರಿ, ಯೆಹೋವನ ದಿನವೇ
ಬಂದಿತು;
ಇಗೋ, ಅಲ್ಲಿ ಒಬ್ಬ ಶೂರನು ಘೋರವಾಗಿ ಗೋ
ಳಾಡುತ್ತಿದ್ದಾನೆ!

15 ಆ ದಿನವು ರೌದ್ರದ ದಿನ, ಶ್ರಮಸಂಕಟಗಳ ದಿನ,
ಹಾಳುಪಾಳುಮಾಡುವ ದಿನ, ಕತ್ತಲಿನ ಮೊಬ್ಬಿನ ದಿನ,
ಕಾರ್ಮುಗಿಲ ಕಗ್ಗತ್ತಲ ದಿನ.
16 ಕೋಟೆಗಳನ್ನೂ ದೊಡ್ಡ ಕೊತ್ತಲಗಳನ್ನೂ ಹಿಡಿಯಲು
ಆರ್ಬಟಿಸಿ ಕೊಂಬೂದುವ ದಿನ.
17 ಯೆಹೋವನಾದ ನನಗೆ ಜನರು ಪಾಪಮಾಡಿದ ಕಾರಣ
ಕುರುಡರಂತೆ ನಡೆಯುವ ಹಾಗೆ ಅವರನ್ನು ಸಂಕಟಪಡಿಸುವೆನು;
ಅವರ ರಕ್ತವು ದೂಳಿನಂತೆ ಚೆಲ್ಲಿಹೋಗುವದು,
ಅವರ ಮಾಂಸವು ಮಲದ ಹಾಗೆ ಬಿದ್ದಿರುವದು.
18 ಯೆಹೋವನ ರೌದ್ರದ ದಿನದಲ್ಲಿ
ಅವರ ಬೆಳ್ಳಿಬಂಗಾರಗಳು ಕೂಡಾ ಅವರನ್ನು ರಕ್ಷಿಸಲಾರವು;
ಆತನ ರೋಷಾಗ್ನಿಯು ದೇಶವನ್ನೆಲ್ಲಾ ನುಂಗಿಬಿಡುವದು;
ಆತನು ದೇಶನಿವಾಸಿಗಳೆಲ್ಲರನ್ನೂ ಕೊನೆಗಾಣಿಸುವನು,
ಹೌದು, ಘೋರವಾಗಿ ನಿರ್ಮೂಲಮಾಡುವನು.

### ಯೆಹೂದಕ್ಕೆ ಪ್ರಬೋಧನೆಯೂ ಖಂಡನೆಯೂ
2. 1—3. 8.

ಯೆಹೋವನನ್ನು ಶರಣುಹೊಗಲು ಪ್ರೇರಣೆ.

2 ನಾಚಿಕೆಗೇಡಿಯ ಜನಾಂಗದವರೇ, ತೀರ್ಪುಫಲಿಸುವದರೊಳಗೆ
ಯೆಹೋವನ ಉಗ್ರಕೋಪವು ನಿಮ್ಮ ಮೇಲೆ ಬರುವದಕ್ಕೆ ಮುಂಚೆ,
ಯೆಹೋವನ ಸಿಟ್ಟಿನ ದಿನವು ನಿಮ್ಮನ್ನು ಮುಟ್ಟುವದಕ್ಕೆ ಮೊದಲು
ಸೇರಿಬನ್ನಿರಿ, ಕೂಡಿಕೊಳ್ಳಿರಿ;
2 ಕಾಲವು ಹೊಟ್ಟಿನಂತೆ ಹಾರಿಹೋಗುತ್ತದಲ್ಲಾ.
3 ಯೆಹೋವನ ನಿಯಮವನ್ನು ಕೈಕೊಂಡ ಲೋಕದ ದೀನರೇ,
ನೀವೆಲ್ಲರೂ ಯೆಹೋವನನ್ನು ಆಶ್ರಯಿಸಿರಿ,
ಸದ್ಧರ್ಮವನ್ನು ಅಭ್ಯಾಸಿಸಿರಿ, ದೈನ್ಯವನ್ನು ಹೊಂದಿಕೊಳ್ಳಿರಿ;
ಯೆಹೋವನ ಸಿಟ್ಟಿನ ದಿನದಲ್ಲಿ ಒಂದುವೇಳೆ ಮರೆಯಾಗುವಿರಿ.

ಫಿಲಿಷ್ಟಿಯದ ದುರ್ಗತಿ.

4 ಗಾಜ ನಿರ್ಜನವಾಗುವದು,
ಅಷ್ಕೆಲೋನ್ ಹಾಳಾಗುವದು,
ಅಷ್ಡೋದನ್ನು ಮಧ್ಯಾಹ್ನದಲ್ಲಿ ಓಡಿಸಿಬಿಡುವರು,
ಎಕ್ರೋನ್ ನಿರ್ಮೂಲವಾಗುವದು.
5 ಅಯ್ಯೋ, ಕರಾವಳಿಯಲ್ಲಿ ವಾಸಿಸುವ ಕೆರೇತ್ಯಜನಾಂಗವೇ,
ನಿನ್ನ ಗತಿಯನ್ನು ಏನು ಹೇಳಲಿ!
ಕಾನಾನೇ, ಫಿಲಿಷ್ಟಿಯ ದೇಶವೇ,
ಯೆಹೋವನ ನುಡಿಯು ನಿನಗೆ ವಿರುದ್ಧವಾಗಿದೆ;
ನಿನ್ನಲ್ಲಿ ನಿವಾಸಿಯೇ ನಿಲ್ಲದಂತೆ ನಿನ್ನನ್ನು ನಾಶಮಾಡುವೆನು.
ಸಮುದ್ರತೀರದ ಆ ಪ್ರಾಂತವು ಹುಲ್ಗಾವಲಾಗುವದು,
ಕುರುಬರ ಹೊಂಡಗಳು, ಹಿಂಡುಗಳ ದೊಡ್ಡಿಗಳು, ಇವೇ ಅಲ್ಲಿರುವವು.
ಆ ಕರಾವಳಿಯು ಯೆಹೂದವಂಶಶೇಷದವರ ಪಾಲಾಗುವದು;
ದನಕುರಿಗಳನ್ನು ಅಲ್ಲೇ ಮೇಯಿಸುವರು;
ಸಂಜೆಗೆ ಅಷ್ಕೆಲೋನಿನ ಮನೆಗಳಲ್ಲಿ ಮಲಗಿಕೊಳ್ಳುವರು;
ಅವರ ದೇವರಾದ ಯೆಹೋವನು ಅವರನ್ನು ಪರಾಂಬರಿಸಿ
ಅವರ ದುರವಸ್ಥೆಯನ್ನು ತಪ್ಪಿಸುವನು.

ಅಮ್ಮೋನು ಮೋವಾಬುಗಳ ದುರ್ಗತಿ.

ಮೋವಾಬ್ಯರೂ ಅಮ್ಮೋನ್ಯರೂ ಉಬ್ಬಟೆಯಿಂದ ನನ್ನ ಜನರ ಮೇರೆಯನ್ನು ಮೀರಿ
ಅವರ ಮೇಲೆ ಹೊರಿಸಿರುವ ದೂರುದೂಷಣೆಗಳು ನನ್ನ ಕಿವಿಗೆ ಬಿದ್ದಿವೆ.
ಇಸ್ರಾಯೇಲ್ಯರ ದೇವರಾದ ಸೇನಾಧೀಶ್ವರ ಯೆಹೋವನು ಇಂತೆನ್ನುತ್ತಾನೆ—
ಹೀಗಿರಲು, ನನ್ನ ಜೀವದಾಣೆ, ಸೊದೋಮಿನ ಗತಿಯೇ ಮೋವಾಬಿಗೆ ಆಗುವದು,
ಗೊಮೋರದ ದುರ್ದಶೆಯೇ ಅಮ್ಮೋನ್ಯರಿಗೆ ಸಂಭವಿಸುವದು;
ಆ ಪ್ರಾಂತಗಳು ಮುಳ್ಳುಗಿಡಗಳಿಂದಲೂ
ಸೌಳುಗುಂಡಿಗಳಿಂದಲೂ ತುಂಬಿಕೊಂಡು
ನಿತ್ಯ ನಾಶನಕ್ಕೆ ಈಡಾಗುವವು;
ನನ್ನ ಪ್ರಜೆಯಲ್ಲಿ ಉಳಿದವರು ಅವುಗಳನ್ನು ಸೂರೆಮಾಡುವರು,
ಅವು ನನ್ನ ಜನಶೇಷದವರಿಗೆ ಸ್ವಾಸ್ಥ್ಯವಾಗುವವು.
ಆ ಪ್ರಾಂತಗಳವರು ಸೇನಾಧೀಶ್ವರ ಯೆಹೋವನ ಜನರನ್ನು ದೂಷಿಸಿ
ಅವರ ಮೇಲೆ ಉಬ್ಬಿಕೊಂಡು ಬಂದದರಿಂದ
ಅವರ ಹೆಮ್ಮೆಯ ನಿಮಿತ್ತವೇ ಅವರಿಗೆ ಈ ಗತಿಯಾಗುವದು.
ಯೆಹೋವನು ಅವರಿಗೆ ಭಯಂಕರವಾಗುವನು;
ಲೋಕದ ದೇವರುಗಳನ್ನೆಲ್ಲಾ ಕ್ಷಯಿಸಿಬಿಡುವನು;
ಸಮಸ್ತ ಜನರು, ಅಂದರೆ ಸಮುದ್ರಪ್ರಾಂತದನಿವಾಸಿಗಳಾದ ಸಕಲಜನಾಂಗಗಳವರು
ತಮ್ಮ ತಮ್ಮ ಸ್ಥಳಗಳಲ್ಲೇ ಆತನನ್ನು ಆರಾಧಿಸುವರು.

ಕೂಷಿನ ದುರ್ಗತಿ.

ಕೂಷಿನವರೇ, ನೀವು ಸಹ ನನ್ನ ಖಡ್ಗದಿಂದ ಹತರಾಗುವಿರಿ.

ನಿನೆವೆಯ ದುರ್ಗತಿ.

13 ಯೆಹೋವನು ಬಡಗಲಿಗೆ ಕೈಚಾಚಿ ಅಶ್ಶೂರವನ್ನು
ಧ್ವಂಸಪಡಿಸುವನು;
ನಿನೆವೆಯನ್ನು ಹಾಳುಮಾಡಿ ಮರುಭೂಮಿಯಂತೆ
ಒಣಗಿಸಿಬಿಡುವನು.
14 ಜನಾಂಗಗಳ ಪಶುಗಳೆಲ್ಲಾ ಮಂದೆಮಂದೆಯಾಗಿ
ಅದರ ಮಧ್ಯದಲ್ಲಿ ಮಲಗಿಕೊಳ್ಳುವವು;
ಕೊಕ್ಕರೆಯೂ ಮುಳ್ಳುಹಂದಿಯೂ ಅದರ ಬೋದಿ
ಗೆಗಳಲ್ಲಿ
ವಾಸಮಾಡಿಕೊಳ್ಳುವವು;
ಕಿಟಿಕಿಗಳಲ್ಲಿ ಚಿಲಿಪಿಲಿಗಾನವು ಕೇಳಿಸುವದು;
ಹೊಸ್ತಿಲುಗಳಲ್ಲಿ ಹಾಳುಬಡಿಯುವದು;
ದೇವದಾರು ಹಲಿಗೆಯ ಹೊದಿಕೆಯು ಕೀಳಲ್ಪಡು
ವದು.
15 ಈ ನಿನೆವೆಯು ಮೊದಲು ಉಲ್ಲಾಸದ ನಗರಿಯಾಗಿ
ನೆಮ್ಮದಿಯಿಂದ ನೆಲೆಗೊಂಡಿದ್ದು ತನ್ನ ಹೃದಯ
ದೊಳಗೆ—
ನಾನೇ ಇರುವವಳು, ನನ್ನ ಹೊರತು ಇನ್ನು ಯಾ
ರೂ ಇಲ್ಲ
ಅಂದುಕೊಳ್ಳುತ್ತಿತ್ತು; ಅಯ್ಯೋ, ಎಷ್ಟೋ ಹಾಳಾಗಿ
ಹೋಗಿ
ಮೃಗಗಳು ತಂಗುವ ಹಕ್ಕೆಯಾಗಿದೆ!
ಹಾದುಹೋಗುವವರೆಲ್ಲರೂ ಸಿಳ್ಳುಹಾಕಿ ಕೈಯಾ
ಡಿಸುತ್ತಾರೆ.

ಯೆರೂಸಲೇಮಿನ ಹಟ.

3 ಅಯ್ಯೋ, ಅವಿಧೇಯವೂ ಮಲಿನವೂ ಆದ
ಹಿಂಸಕನಗರಿಯ ಗತಿಯನ್ನು ಏನು ಹೇಳಲಿ!
2 ಅದು ದೈವೋಕ್ತಿಗೆ ಕಿವಿಗೊಡಲಿಲ್ಲ,
ಶಿಕ್ಷಣೆಗೆ ಒಳಪಡಲಿಲ್ಲ,
ಯೆಹೋವನಲ್ಲಿ ಭರವಸವಿಡಲಿಲ್ಲ,
ತನ್ನ ದೇವರ ಸನ್ನಿಧಿಗೆ ಸಮೀಪಿಸಲಿಲ್ಲ.
3 ಅದರಲ್ಲಿನ ಮುಖ್ಯಾಧಿಕಾರಿಗಳು ಗರ್ಜಿಸುವ
ಸಿಂಹಗಳು;
ಅದರ ನ್ಯಾಯಾಧಿಪತಿಗಳು ಸಂಜೆಯ ತೋಳಗಳು;
ಮರುದಿನ ಕಡಿಯುವದಕ್ಕೆ ಎಲುಬು ಕೂಡಾ
ಮಿಗದು.
4 ಅದರ ಪ್ರವಾದಿಗಳು ಬಡಾಯಿಗಾರರು, ದ್ರೋಹಿ
ಗಳು;
ಅದರ ಯಾಜಕರು ಪವಿತ್ರಾಲಯವನ್ನು ಹೊಲೆ
ಗೆಡಿಸಿದ್ದಾರೆ,
ಧರ್ಮವಿಧಿಗಳನ್ನು ಭಂಗಮಾಡಿದ್ದಾರೆ.
5 ಅದರ ಮಧ್ಯೆ ನೆಲೆಗೊಂಡಿರುವ ಯೆಹೋವನು
ನ್ಯಾಯಸ್ವರೂಪನು;
ಎಂದಿಗೂ ಅನ್ಯಾಯವನ್ನು ಮಾಡನು;
ಬೆಳಬೆಳಿಗ್ಗೆ ತನ್ನ ನ್ಯಾಯವನ್ನು ತಪ್ಪದೆ ಪ್ರಕಾಶ
ಗೊಳಿಸುವನು;
ಅನ್ಯಾಯಗಾರನೋ ನಾಚಿಕೆಪಡನು.
[ಯೆಹೋವನು ಇಂತೆನ್ನುತ್ತಾನೆ—] 6
ನಾನು ಜನಾಂಗಗಳನ್ನು ಧ್ವಂಸಪಡಿಸಿದ್ದೇನೆ,
ಅವುಗಳ ಕೊತ್ತಲಗಳು ಪಾಳುಬಿದ್ದವು,
ಅವುಗಳ ಬೀದಿಗಳನ್ನು ಹಾಳುಮಾಡಿದ್ದೇನೆ,
ಯಾರೂ ಹಾದುಹೋಗರು;
ಅವುಗಳ ಪಟ್ಟಣಗಳು ನಾಶವಾದವು,
ಜನರೇ ಇಲ್ಲ, ನಿರ್ನಿವಾಸವಾಗಿವೆ,
[ಇದರಿಂದ, ಯೆರೂಸಲೇಮೇ,] ನೀನು ನನಗೆ ನಿಶ್ಚ 7
ಯವಾಗಿ ಭಯಪಡುವಿ,
ಶಿಕ್ಷಣೆಗೆ ಒಳಪಡುವಿ,
1)ನಿನ್ನ ನಿವಾಸವು ನಾಶವಾಗದು,
ನಾನು 1)ನಿನಗೆ ವಿಧಿಸಿದ್ದೊಂದೂ [ತಗಲದು] ಎಂದು
ಅಂದುಕೊಂಡೆನು;
ಅವರಾದರೋ ಆತುರಗೊಂಡು ತಮ್ಮ ನಡತೆಯನ್ನೆ
ಲ್ಲಾ ಕೆಡಿಸಿಕೊಂಡರು.
ಯೆಹೋವನು ಇಂತೆನ್ನುತ್ತಾನೆ— 8
ಹೀಗಿರಲು ನನ್ನನ್ನು ಕಾದುಕೊಂಡಿರ್ರಿ,
ನಾನು ಬೇಟೆಹಿಡಿಯಲಿಕ್ಕೆ ಏಳುವ ದಿನವನ್ನು
ಎದುರುನೋಡಿರಿ;
ಜನಾಂಗರಾಜ್ಯಗಳ ಮೇಲೆ ನನ್ನ ರೌದ್ರವನ್ನು,
ಹೌದು, ನನ್ನ ಉಗ್ರಕೋಪವನ್ನೆಲ್ಲಾ ಹೊಯ್ದು
ಬಿಡುವದಕ್ಕಾಗಿ
ಆ ಜನಾಂಗಗಳನ್ನು ಸೇರಿಸಿ ಆ ರಾಜ್ಯಗಳನ್ನು
ಕೂಡಿಸಬೇಕೆಂದು
ತೀರ್ಮಾನಿಸಿಕೊಂಡಿದ್ದೇನೆ;
ಲೋಕವೆಲ್ಲಾ ನನ್ನ ರೋಷಾಗ್ನಿಗೆ ತುತ್ತಾಗುವದಷ್ಟೆ.

ಶುಭಕಾಲದ ವಾಗ್ದಾನ. 3, 9—20.

ಯೆಹೋವನ ಸರ್ವಾಧಿಪತ್ಯ.

ಆಗ ಎಲ್ಲರು ಒಂದೇ 2)ಮನಸ್ಸಿನಿಂದ 9
ಯೆಹೋವನನ್ನು ಸೇವಿಸಿ ಆತನ ಹೆಸರನ್ನೆತ್ತಿ ಪ್ರಾ
ರ್ಥಿಸುವಂತೆ
ಜನಾಂಗಗಳವರ ತುಟಿಗಳನ್ನು ಮಾರ್ಪಡಿಸಿ ಶುದ್ಧಿ
ಮಾಡುವೆನು.
3)ಚದರಿಹೋಗಿರುವ ನನ್ನ ಜನರು, ನನ್ನ ಭಕ್ತರು, 10
ಕೂಷಿನ ನದಿಗಳ ಆಚೆಯಿಂದಲೂ
ನನಗೆ ಕಾಣಿಕೆಯನ್ನು ತಂದು ಸಮರ್ಪಿಸುವರು.

ದೇವಜನರ ದೈನ್ಯಭಕ್ತಿ.

ನೀನು ನನಗೆ ಮಾಡಿದ ನಾನಾ ದುಷ್ಕೃತ್ಯಗಳು 11
ಮುಂದಿನ ಆ ಕಾಲದಲ್ಲಿ ನಿನಗೆ ನಾಚಿಕೆಗೀಡಾಗವು;

1) ಮೂಲ: ಅದರ . . . ಅದಕ್ಕೆ. 2) ಮೂಲ: ಹೆಗಲಿನಿಂದ. 3) ಅಥವಾ: ಕೂಷಿನ ನದಿಗಳ ಆಚೆ ನೆಲೆಸುವವರು ಚದರಿ ಹೋಗಿರುವ ನನ್ನ ಜನರನ್ನು, ನನ್ನ ಭಕ್ತರನ್ನು ನನಗೆ ಕಾಣಿಕೆಯಾಗಿ ತಂದು ಸಮರ್ಪಿಸುವರು.

ಆಗ ಅತಿಗರ್ವದಿಂದ ಮೆರೆಯುವವರನ್ನು
ನಿನ್ನೊಳಗಿಂದ ತೊಲಗಿಸಿಬಿಡುವೆನು;
ಅಂದಿನಿಂದ ನನ್ನ ಪವಿತ್ರಪರ್ವತದಲ್ಲಿ ಗರ್ವಪಡದೆ ಇರುವಿ.
12 ದೀನದರಿದ್ರಜನವನ್ನು ನಿನ್ನಲ್ಲಿ ಉಳಿಸುವೆನು;
ಅವರು ಯೆಹೋವನ ನಾಮವನ್ನು ಆಶ್ರಯಿಸಿಕೊಳ್ಳುವರು.
13 ಇಸ್ರಾಯೇಲಿನಲ್ಲಿ ಉಳಿದವರು ಅನ್ಯಾಯವನ್ನು ಮಾಡರು, ಸುಳ್ಳಾಡರು;
ಅವರ ಬಾಯಲ್ಲಿ ಮೋಸದ ನಾಲಿಗೆಯು ಇರದು;
[ಮಂದೆಯಂತೆ] ಮೇದು ಮಲಗಿಕೊಳ್ಳುವರು,
ಅವರನ್ನು ಯಾರೂ ಹೆದರಿಸರು.

ಯೆಹೋವನ ಪ್ರಸನ್ನತೆ.

14 ಚೀಯೋನ್ ನಗರಿಯೇ, ಹರ್ಷಧ್ವನಿಗೈ!
ಇಸ್ರಾಯೇಲೇ, ಆರ್ಭಟಿಸು!
ಯೆರೂಸಲೇಮ್ ಪುರಿಯೇ, ಹೃದಯಪೂರ್ವಕವಾಗಿ ಆನಂದಿಸು, ಉಲ್ಲಾಸಿಸು!
15 ನಿನಗೆ ವಿಧಿಸಿದ ದಂಡನೆಗಳನ್ನು ಯೆಹೋವನು ತಪ್ಪಿಸಿದ್ದಾನೆ,
ನಿನ್ನ ಶತ್ರುವನ್ನು ತಳ್ಳಿಬಿಟ್ಟಿದ್ದಾನೆ;
ಇಸ್ರಾಯೇಲಿನ ಅರಸನಾದ ಯೆಹೋವನು ನಿನ್ನ ಮಧ್ಯದಲ್ಲಿದ್ದಾನೆ;
ಇನ್ನು ಕೇಡಿಗೆ ಅಂಜದಿರುವಿ.
16 ಆ ದಿನದಲ್ಲಿ ಯೆರೂಸಲೇಮಿಗೆ—ಚೀಯೋನೇ, ಭಯಪಡಬೇಡ,
ನಿನ್ನ ಕೈಗಳು ಜೋಲುಬೀಳದಿರಲಿ;
ನಿನ್ನ ದೇವರಾದ ಯೆಹೋವನು ನಿನ್ನ ಮಧ್ಯದಲ್ಲಿ ಶೂರನಾಗಿದ್ದಾನೆ,
ನಿನ್ನನ್ನು ರಕ್ಷಿಸುವನು;
ನಿನ್ನಲ್ಲಿ ಉಲ್ಲಾಸಿಸೇ ಉಲ್ಲಾಸಿಸುವನು;
ತನ್ನ ಪ್ರೀತಿಯಲ್ಲಿ ಮುಣುಗಿ ಮೌನವಾಗಿರುವನು;
ನಿನ್ನಲ್ಲಿ ಆನಂದಿಸಿ ಹರ್ಷಧ್ವನಿಗೈಯುವನು ಎಂದು ಹೇಳೋಣವಾಗುವದು.
ಅಯ್ಯೋ, ಅವಮಾನವು ನಮ್ಮ ಪಟ್ಟಣದ ಮೇಲೆ ಹೊರೆಯಾಗಿ ಕೂತಿದೆ ಎಂದು
ಮಹೋತ್ಸವಕ್ಕೆ ದೂರವಾಗಿ ಶೋಕಿಸುತ್ತಿರುವ ನಿನ್ನವರನ್ನು
ಒಟ್ಟಿಗೆ ಬರಮಾಡುವೆನು.
ಅಹಾ, ಆ ಕಾಲದಲ್ಲಿ ನಿನ್ನನ್ನು ಬಾಧಿಸುವವರಿಗೆ ತಕ್ಕದ್ದನ್ನು ಮಾಡುವೆನು;
ನಿನ್ನಲ್ಲಿ ಕುಂಟುವವರನ್ನು ಉದ್ಧರಿಸುವೆನು,
ಚದರಿಸಲ್ಪಟ್ಟವರನ್ನು ಕೂಡಿಸುವೆನು;
ಅಂತು ಲೋಕದಲ್ಲೆಲ್ಲಾ ಅವಮಾನಪಟ್ಟವರಿಗೆ
ಸ್ತೋತ್ರಕೀರ್ತಿಗಳನ್ನು ಉಂಟುಮಾಡುವೆನು.
ಆ ಕಾಲದಲ್ಲಿ ನಿಮ್ಮನ್ನು ಕರತರುವೆನು, 2
ಹೌದು, ಆ ಕಾಲದಲ್ಲಿ ನಿಮ್ಮನ್ನು ಒಟ್ಟುಗೂಡಿಸುವೆನು;
ನಾನು ನಿಮ್ಮ ದುರವಸ್ಥೆಯನ್ನು ನಿಮ್ಮ ಕಣ್ಣೆದುರಿಗೆ ತಪ್ಪಿಸುವಾಗ
ನಿಮ್ಮನ್ನು ಲೋಕದ ಸಕಲ ಜನಾಂಗಗಳಲ್ಲಿ ಕೀರ್ತಿಸ್ತೋತ್ರಗಳಿಗೆ ಗುರಿಮಾಡುವೆನು.
ಇದು ಯೆಹೋವನ ನುಡಿ.

---

# THE PROPHET HAGGAI

## ಹಗ್ಗಾಯನ ಪ್ರವಾದನೆಯ ಗ್ರಂಥ

1 ಅರಸನಾದ ದಾರ್ಯಾವೆಷನ ಆಳಿಕೆಯ ಎರಡನೆಯ ವರುಷದ ಆರನೆಯ ತಿಂಗಳಿನ ಮೊದಲನೆಯ ದಿನದಲ್ಲಿ ಯೆಹೋವನು ಈ ವಾಕ್ಯವನ್ನು ಶೆಯಲ್ತೀಯೇಲನಿಗೆ ಹುಟ್ಟಿದ ಯೆಹೂದ ದೇಶಾಧಿಪತಿಯಾದ ಜೆರುಬ್ಬಾಬೆಲನಿಗೂ ಯೆಹೋಚಾದಾಕನಿಗೆ ಜನಿಸಿದ ಮಹಾಯಾಜಕನಾದ ಯೆಹೋಶುವನಿಗೂ ಪ್ರವಾದಿಯಾದ ಹಗ್ಗಾಯನ ಮೂಲಕ ಹೇಳಿಕಳುಹಿಸಿದನು—

ದೇವಾಲಯವನ್ನು ಪುನಃ ಕಟ್ಟಲು ಎಚ್ಚರಿಕೆ.

2 ಸೇನಾಧೀಶ್ವರ ಯೆಹೋವನು ಇಂತೆನ್ನುತ್ತಾನೆ—
ಯೆಹೋವನ ಆಲಯವನ್ನು ಕಟ್ಟುವದಕ್ಕೆ
ಸಮಯವು ಇನ್ನು ಬಂದಿಲ್ಲ ಎಂದು
ಈ ಜನರು ಅಂದುಕೊಳ್ಳುತ್ತಾರಲ್ಲಾ.
ಯೆಹೋವನು ಪ್ರವಾದಿಯಾದ ಹಗ್ಗಾಯನ ಮೂಲಕ ಈ ವಾಕ್ಯವನ್ನು ಹೇಳಿಸಿದನು—
ಈ ಆಲಯವು ಹಾಳುಬಿದ್ದಿದೆಯಲ್ಲಾ;
ನೀವು ಒಳಗೋಡೆಗೆಲ್ಲಾ ಹಲಿಗೆಹೊದಿಸಿಕೊಂಡ
ಸ್ವಂತ ಮನೆಗಳಲ್ಲಿ ವಾಸಿಸುವದಕ್ಕೆ ಈ ಸಮಯವು ತಕ್ಕದ್ದೋ?
ಈ ಸಮಯದಲ್ಲಿ ಸೇನಾಧೀಶ್ವರ ಯೆಹೋವನು ಇಂತೆನ್ನುತ್ತಾನೆ—
ನಿಮ್ಮ ಗತಿ ಏನಾಗಿದೆಯೆಂದು ಮನಸ್ಸಿಗೆ ತಂದುಕೊಳ್ಳಿರಿ.

6 ನೀವು ಬಿತ್ತಿದ ಬೀಜವು ಬಹಳ, ತಂದ ಫಲವು
ಸ್ವಲ್ಪ;
ತಿನ್ನುತ್ತೀರಿ, ತೃಪ್ತಿಯಾಗದು,
ಕುಡಿಯುತ್ತೀರಿ, ಆನಂದವಾಗದು;
ಹೊದಿಯುತ್ತೀರಿ, ಬೆಚ್ಚಗಾಗದು;
ಸಂಬಳಗಾರನು ಸಂಬಳಹಾಕುವ ಚೀಲವು ತೂತಿ
ನದು.
7 ಸೇನಾಧೀಶ್ವರ ಯೆಹೋವನು ಇಂತೆನ್ನುತ್ತಾನೆ—
ನಿಮ್ಮ ಗತಿ ಏನಾಗಿದೆಯೆಂದು ಮನಸ್ಸಿಗೆ ತಂದು
ಕೊಳ್ಳಿರಿ.
8 ಮಲೆನಾಡಿಗೆ ಹೋಗಿ ಮರವನ್ನು ತಂದು
ನನ್ನ ಆಲಯವನ್ನು ಕಟ್ಟಿರಿ;
ನಾನು ಅದಕ್ಕೆ ಮೆಚ್ಚಿ ನನ್ನ ಪ್ರಭಾವವನ್ನು ಅಲ್ಲಿ
ಪ್ರಕಾಶಗೊಳಿಸುವೆನು;
ಇದು ಯೆಹೋವನ ನುಡಿ.
9 ನೀವು ಬಹು ಬೆಳೆಯನ್ನು ನಿರೀಕ್ಷಿಸಿದಿರಿ,
ಆಹಾ, ಸ್ವಲ್ಪ ಮಾತ್ರ ಸಿಕ್ಕಿತು; ನೀವು ಮನೆಗೆ
ತೆಗೆದುಕೊಂಡು ಬಂದಾಗ
ನಾನು ಅದರ ಮೇಲೆ ಉಸುರುಬಿಟ್ಟೆನು.
ಸೇನಾಧೀಶ್ವರ ಯೆಹೋವನು ಇಂತೆನ್ನುತ್ತಾನೆ—
ಇದಕ್ಕೆಲ್ಲಾ ಕಾರಣವೇನು?
ನನ್ನ ಆಲಯವು ಹಾಳುಬಿದ್ದಿದೆ,
ನಿಮ್ಮಲ್ಲಿ ಪ್ರತಿಯೊಬ್ಬನು ತನ್ನ ತನ್ನ ಮನೆಯ ಕೆಲ
ಸಕ್ಕೆ
ತವಕಪಡುತ್ತಿದ್ದಾನೆ, ಇದೇ ಕಾರಣ.
0 ನಿಮ್ಮ ನಿಮಿತ್ತವೇ ಆಕಾಶವು ಇಬ್ಬನಿಯನ್ನು ತಡೆ
ದುಬಿಟ್ಟಿದೆ,
ಭೂಮಿಯು ತನ್ನ ಫಲವನ್ನು ನಿಲ್ಲಿಸಿಬಿಟ್ಟಿದೆ.
1 ದೇಶ, ಬೆಟ್ಟ, ಧಾನ್ಯ, ದ್ರಾಕ್ಷಾರಸ, ಎಣ್ಣೆ,
ಭೂಮಿಯ ಉತ್ಪತ್ತಿ, ಮನುಷ್ಯ, ಪಶು, ನಾನಾ ಕೈ
ದುಡಿತ,
ಇವುಗಳಿಗೆಲ್ಲಾ ಹಾಳುದೆಶೆ ತಂದಿದ್ದೇನೆ.

ಎಚ್ಚರಿಕೆಗೆ ಜನರು ಗಮನಿಸಿದ್ದು.

2 ಆಗ ಶೆಯಲ್ತೀಯೇಲನ ಮಗನಾದ ಜೆರುಬ್ಬಾ
ಬೆಲ್, ಯೆಹೋಚಾದಾಕನಿಗೆ ಹುಟ್ಟಿದ ಮಹಾಯಾ
ಜಕನಾದ ಯೆಹೋಶುವ, ಸಮಸ್ತಜನಶೇಷ, ಇವ
ರೆಲ್ಲಾ ಯೆಹೋವನೆಂಬ ತಮ್ಮ ದೇವರ ನುಡಿಗೂ ಯೆ
ಹೋವನೆಂಬ ತಮ್ಮ ದೇವರ ಅಪ್ಪಣೆಯ ಪ್ರಕಾರ
ಪ್ರವಾದಿಯಾದ ಹಗ್ಗಾಯನು ಹೇಳಿದ ಮಾತುಗಳಿಗೂ
ಕಿವಿಗೊಟ್ಟು ಯೆಹೋವನಲ್ಲಿ ಭಯಭಕ್ತಿಯುಳ್ಳವರಾ
3 ದರು. ಯೆಹೋವನ ದೂತನಾದ ಹಗ್ಗಾಯನು
ಇದನ್ನು ನೋಡಿ ಜನರಿಗೆ—ನಿಮ್ಮೊಂದಿಗೆ ಇದ್ದೇನೆ
ಎಂದು ಯೆಹೋವನು ನುಡಿಯುತ್ತಾನೆ ಎಂಬದನ್ನು
4 ಯೆಹೋವನ ದೂತನಾಗಿಯೇ ಹೇಳಿದನು. ಕೂಡಲೆ
ಶೆಯಲ್ತೀಯೇಲನ ಮಗನೂ ಯೆಹೂದ ದೇಶಾಧಿಪತಿ
ಯೂ ಆದ ಜೆರುಬ್ಬಾಬೆಲ್, ಯೆಹೋಚಾದಾಕನಿಗೆ
ಹುಟ್ಟಿದ ಮಹಾಯಾಜಕನಾದ ಯೆಹೋಶುವ,
ಸಮಸ್ತಜನಶೇಷ, ಇವರೆಲ್ಲರ ಮನಸ್ಸುಗಳನ್ನು ಯೆ
ಹೋವನು ಪ್ರೇರಿಸಲು ಅವರು ಅರಸನಾದ ದಾರ್ಯಾ 15
ವೆಷನ ಆಳಿಕೆಯ ಎರಡನೆಯ ವರುಷದ ಆರನೆಯ
ತಿಂಗಳಿನ ಇಪ್ಪತ್ತನಾಲ್ಕನೆಯ ದಿನದಲ್ಲಿ ಬಂದು ತಮ್ಮ
ದೇವರಾದ ಸೇನಾಧೀಶ್ವರ ಯೆಹೋವನ ಆಲಯದ
ಕೆಲಸಕ್ಕೆ ಕೈಹಾಕಿದರು.

ದೇವಾಲಯದ ಮುಂದಿನ ವೈಭವದ ವಾಗ್ದಾನ.

ಏಳನೆಯ ತಿಂಗಳಿನ ಇಪ್ಪತ್ತೊಂದನೆಯ ದಿನದಲ್ಲಿ 2
ಯೆಹೋವನು ಪ್ರವಾದಿಯಾದ ಹಗ್ಗಾಯನ ಮೂಲಕ
ಈ ವಾಕ್ಯವನ್ನು ದಯಪಾಲಿಸಿದನು—ಶೆಯಲ್ತೀಯೇಲ 2
ನಿಗೆ ಹುಟ್ಟಿದ ಯೆಹೂದ ದೇಶಾಧಿಪತಿಯಾದ ಜೆರು
ಬ್ಬಾಬೆಲ್, ಯೆಹೋಚಾದಾಕನಿಗೆ ಹುಟ್ಟಿದ ಮಹಾ
ಯಾಜಕನಾದ ಯೆಹೋಶುವ, ಜನಶೇಷ, ಇವರೆಲ್ಲ
ರಿಗೆ ಹೀಗೆ ನುಡಿ— ಈ ಆಲಯದ ಪೂರ್ವವೈಭವವನ್ನು 3
ನೋಡಿದವರು ನಿಮ್ಮಲ್ಲಿ ಎಷ್ಟು ಮಂದಿ ಉಳಿದಿ
ದ್ದೀರಿ? ಇದರ ಈಗಿನ ಸ್ಥಿತಿಯು ನಿಮಗೆ ಹೇಗೆ ತೋರು
ತ್ತದೆ? ನಿಮ್ಮ ದೃಷ್ಟಿಗೆ ಏನೂ ಇಲ್ಲದಾಗಿ ಕಾಣಿಸುತ್ತದ
ಲ್ಲವೆ. ಯೆಹೋವನು ಇಂತೆನ್ನುತ್ತಾನೆ— 4
ಜೆರುಬ್ಬಾಬೆಲನೇ, ಈಗ ಧೈರ್ಯವಾಗಿರು;
ಯೆಹೋಚಾದಾಕನಿಗೆ ಹುಟ್ಟಿದ ಮಹಾಯಾಜಕ
ನಾದ ಯೆಹೋಶುವನೇ, ಧೈರ್ಯವಾಗಿರು;
ದೇಶೀಯರೇ, ನೀವೆಲ್ಲರೂ ಧೈರ್ಯಗೊಂಡು ಕೆಲಸ
ನಡಿಸಿರಿ;
ಇದು ಯೆಹೋವನ ನುಡಿ;
ನಾನು ನಿಮ್ಮೊಂದಿಗೆ ಇದ್ದೇನೆಂದು
ಸೇನಾಧೀಶ್ವರ ಯೆಹೋವನು ನುಡಿಯುತ್ತಾನೆ.
ನೀವು ಐಗುಪ್ತದಿಂದ ಪಾರಾಗಿ ಬಂದಾಗ 5
ನಾನು ನಿಮಗೆ ಪ್ರಮಾಣವಾಗಿ ಕೊಟ್ಟ ಮಾತ
ನ್ನು [ನೆರವೇರಿಸುವೆನು;]
ನನ್ನ ಆತ್ಮನು ನಿಮ್ಮ ಮಧ್ಯದಲ್ಲಿ ನೆಲೆಗೊಂಡಿರು
ವನು;
ಹೆದರಬೇಡಿರಿ.
ಸೇನಾಧೀಶ್ವರ ಯೆಹೋವನು ಇಂತೆನ್ನುತ್ತಾನೆ— 6
ಸ್ವಲ್ಪ ಕಾಲದ ಮೇಲೆ ನಾನು ಇನ್ನೊಂದೇ ಸಾರಿ
ಆಕಾಶವನ್ನೂ ಭೂಮಿಯನ್ನೂ ಸಮುದ್ರವನ್ನೂ
ಒಣನೆಲವನ್ನೂ ಅದುರಿಸಿ
ಸಕಲಜನಾಂಗಗಳನ್ನು ನಡುಗಿಸುವೆನು; 7
ಆಗ ಸಮಸ್ತಜನಾಂಗಗಳ ಇಷ್ಟವಸ್ತುಗಳು ಬಂದು
ಒದಗಲು
ಈ ಆಲಯವನ್ನು ವೈಭವದಿಂದ ತುಂಬಿಸುವೆನು;
ಇದು ಸೇನಾಧೀಶ್ವರ ಯೆಹೋವನ ನುಡಿ.
ಬೆಳ್ಳಿಯೆಲ್ಲಾ ನನ್ನದು, ಬಂಗಾರವೆಲ್ಲಾ ನನ್ನದು; 8
ಇದು ಸೇನಾಧೀಶ್ವರ ಯೆಹೋವನ ನುಡಿ.
ಈ ಆಲಯದ ಮುಂದಿನ ವೈಭವವು 9
ಹಿಂದಿನ ವೈಭವಕ್ಕಿಂತ ವಿಶೇಷವಾಗಿರುವದು;
ಇದು ಸೇನಾಧೀಶ್ವರ ಯೆಹೋವನ ನುಡಿ;
ಈ ಸ್ಥಳದಲ್ಲಿ ಸಮಾಧಾನವನ್ನು ಅನುಗ್ರಹಿಸು
ವೆನು,
ಇದು ಸೇನಾಧೀಶ್ವರ ಯೆಹೋವನ ನುಡಿ.

ಜನರ ದೋಷವೇ ದುರ್ಭಿಕ್ಷಕ್ಕೆ ಕಾರಣ.

10 ದಾರ್ಯಾವೆಷನ ಆಳಿಕೆಯ ಎರಡನೆಯ ವರು
ಷದ ಒಂಭತ್ತನೆಯ ತಿಂಗಳಿನ ಇಪ್ಪತ್ತನಾಲ್ಕನೆಯ
ದಿನದಲ್ಲಿ ಯೆಹೋವನು ಪ್ರವಾದಿಯಾದ ಹಗ್ಗಾಯನ
11 ಮೂಲಕ ಈ ವಾಕ್ಯವನ್ನು ದಯಪಾಲಿಸಿದನು—ಸೇನಾ
ಧೀಶ್ವರ ಯೆಹೋವನು ಇಂತೆನ್ನುತ್ತಾನೆ—ನೀನು
12 ಯಾಜಕರ ಹತ್ತಿರ ಹೋಗಿ—ಒಬ್ಬನು ತನ್ನ ವಸ್ತ್ರದ
ಸೆರಗಿನಲ್ಲಿ ಮೀಸಲಿನ ಮಾಂಸವನ್ನು ಇಟ್ಟುಕೊಂಡು
ಬರುತ್ತಿರುವಾಗ ಆ ಸೆರಗು ರೊಟ್ಟಿಯನ್ನು ಇಲ್ಲವೆ
ಗುಗ್ಗರಿಯನ್ನು ಅಥವಾ ದ್ರಾಕ್ಷಾರಸವನ್ನು ಇಲ್ಲವೆ
ಎಣ್ಣೆಯನ್ನು ಅಥವಾ ಯಾವ ಆಹಾರಪದಾರ್ಥವನ್ನಾ
ಗಲಿ ಸೋಕಿದರೆ ಅವು ಪರಿಶುದ್ಧವಾಗುವವೋ ಎಂದು
ಧರ್ಮವಿಧಿಯನ್ನು ವಿಚಾರಿಸು. [ಪ್ರವಾದಿಯು
ಹಾಗೆ ವಿಚಾರಿಸಲು] ಯಾಜಕರು ಇಲ್ಲವೆಂದು ಉತ್ತರ
13 ಕೊಟ್ಟರು. ಆ ಮೇಲೆ ಹಗ್ಗಾಯನು—ಹೆಣವನ್ನು
ಮುಟ್ಟಿ ಅಶುದ್ಧನಾದವನು ಇವುಗಳಲ್ಲಿ ಯಾವದ
ನ್ನಾದರೂ ಸೋಕಿದರೆ ಅದು ಅಶುದ್ಧವಾಗುವದೋ
ಎಂದು ಕೇಳಿದ್ದಕ್ಕೆ ಯಾಜಕರು—ಅಶುದ್ಧವೇ ಆಗು
14 ವದು ಎಂದು ಉತ್ತರಕೊಟ್ಟರು. ಆಗ ಹಗ್ಗಾಯನು
ಆ ಪ್ರಸ್ತಾಪವೆತ್ತಿ ಹೀಗಂದನು—ಯೆಹೋವನು ಇಂತೆ
ನ್ನುತ್ತಾನೆ—ಅದರಂತೆ ಈ ಪ್ರಜೆಯು, ಅದರಂತೆ ಈ
ಜನಾಂಗವು, ಅದರಂತೆ ಇವರು ಕೈ ಹಾಕುವ ಎಲ್ಲಾ
ಕೆಲಸವು, ಅಲ್ಲಿ ತಂದಿಡುವ ನೈವೇದ್ಯವು ನನಗೆ ಅಶು
15 ದ್ಧವೇ ಸರಿ. ಯೆಹೋವನ ಆಲಯನಿವೇಶನದಲ್ಲಿ
ಕಲ್ಲಿನ ಮೇಲೆ ಕಲ್ಲಿಡುವ ಈ ಮೊದಲ ದಿನದ ಹಿಂದಿನ
16 ಕಾಲವನ್ನು ನೆನಪಿಗೆ ತಂದುಕೊಳ್ಳಿರಿ; ಆ ಕಾಲದಲ್ಲೆ
ಲ್ಲಾ ಒಬ್ಬನು ಇಪ್ಪತ್ತು ಸೇರಿನ ಮೆದೆಗೆ ಬಂದಾಗ
ಹತ್ತು ಸೇರು ಧಾನ್ಯ ಮಾತ್ರ ಸಿಕ್ಕುತ್ತಿತ್ತಲ್ಲವೇ; ಐವ
ತ್ತು ಸೇರು ದ್ರಾಕ್ಷಾರಸವನ್ನು ಮೊಗೆಯಬೇಕೆಂದು
ತೊಟ್ಟಿಗೆ ಬಂದಾಗ ಇಪ್ಪತ್ತು ಮಾತ್ರ ದೊರೆಯುತ್ತಿ
17 ತ್ತಷ್ಟೆ. ನಾನು ನಿಮ್ಮ ಕೈದುಡಿತದ ಫಲವನ್ನೆಲ್ಲಾ ಆನೆ
ಕಲ್ಲು, ಕಾಡಿಗೆ, ಬಿಸಿಗಾಳಿ, ಇವುಗಳಿಂದ ಹಾಳುಮಾಡಿ
ನಿಮ್ಮನ್ನು ಬಾಧಿಸಿದರೂ ನೀವು ನನ್ನ ಕಡೆಗೆ ತಿರುಗಿಕೊ
ಳ್ಳಲಿಲ್ಲ; ಇದು ಯೆಹೋವನ ನುಡಿ. ಜ್ಞಾಪಕಮಾಡಿ
ಕೊಳ್ಳಿರಿ; ಯೆಹೋವನ ಆಲಯಕ್ಕೆ ಅಸ್ತಿವಾರಹಾಕಿದ
ಈ ದಿವಸದ ಹಿಂದಿನ ಕಾಲವನ್ನು, ಅಂದರೆ ಒಂಭತ್ತನೆಯ
ತಿಂಗಳಿನ ಇಪ್ಪತ್ತನಾಲ್ಕನೆಯ ಈ ದಿನದ ಹಿಂದಿನ ಕಾಲ
ವನ್ನು ನೆನಪಿಗೆ ತಂದುಕೊಳ್ಳಿರಿ. ಕಣಜದಲ್ಲಿ ಕಾಳು
ಇನ್ನು ಇದೆಯೋ? ದ್ರಾಕ್ಷೆ, ಅಂಜೂರ, ದಾಳಿಂಬರ,
ಓಲೀವ, ಈ ಗಿಡಗಳು ಫಲಿಸಲಿಲ್ಲವಲ್ಲಾ. ಇದೇ ದಿವಸ
ಮೊದಲುಗೊಂಡು ನಿಮ್ಮನ್ನು ಆಶೀರ್ವದಿಸುವೆನು.

ದೇಶಾಧಿಪತಿಗೆ ವಾಗ್ದಾನ.

[ಒಂಭತ್ತನೆಯ] ತಿಂಗಳಿನ ಇಪ್ಪತ್ತನಾಲ್ಕನೆಯ
ದಿನದಲ್ಲಿ ಯೆಹೋವನು
ಹಗ್ಗಾಯನಿಗೆ ಈ ಎರಡನೆಯ ವಾಕ್ಯವನ್ನು ದಯ
ಪಾಲಿಸಿದನು—
ಯೆಹೂದ ದೇಶಾಧಿಪತಿಯಾದ ಜೆರುಬ್ಬಾಬೆಲನಿಗೆ
ಹೀಗೆ ನುಡಿ—
ನಾನು ಭೂಮ್ಯಾಕಾಶಗಳನ್ನು ಅದುರಿಸಿ
ರಾಜ್ಯಗಳ ಸಿಂಹಾಸನವನ್ನು ಕೆಡವಿ
ಜನಾಂಗಗಳ ಸಂಸ್ಥಾನಬಲವನ್ನು ಧ್ವಂಸಮಾಡಿ
ರಥಗಳನ್ನೂ ರಥಾರೂಢರನ್ನೂ ದೊಬ್ಬಿಬಿಡುವೆನು;
ಕುದುರೆಗಳೂ ರಾಹುತರೂ ಬಿದ್ದುಹೋಗುವರು,
ಪ್ರತಿಯೊಬ್ಬನು ತನ್ನ ಕಡೆಯವನ ಕತ್ತಿಯಿಂದ ಹತ
ನಾಗುವನು.
ಸೇನಾಧೀಶ್ವರ ಯೆಹೋವನು ಇಂತೆನ್ನುತ್ತಾನೆ—
ಶೆಯಲ್ತೀಯೇಲನ ಮಗನೂ ನನ್ನ ಸೇವಕನೂ
ಆದ ಜೆರುಬ್ಬಾಬೆಲನೇ, ಆ ದಿನದಲ್ಲಿ ನಾನು
ನಿನ್ನನ್ನು ತೆಗೆದುಕೊಂಡು
ಮುದ್ರೆಯುಂಗರವಾಗಿ ಮಾಡಿಕೊಳ್ಳುವೆನು,
ಇದಕ್ಕೆ ನಿನ್ನನ್ನು ಆರಿಸಿಕೊಂಡಿದ್ದೇನೆ;
ಇದು ಸೇನಾಧೀಶ್ವರ ಯೆಹೋವನ ನುಡಿ.

# THE PROPHET ZECHARIAH

## ಜೆಕರ್ಯನ ಪ್ರವಾದನೆಯ ಗ್ರಂಥ

### ನೂತನ ದೇವಾಲಯವನ್ನು ಕಟ್ಟುವ ಕಾಲದ ಪ್ರವಾದನೆಗಳು. 1—8.

ಯೆಹೋವನ ಕಡೆಗೆ ಪುನಃ ತಿರುಗಬೇಕೆಂಬ ಎಚ್ಚರಿಕೆ.

1 ದಾರ್ಯಾವೆಷನ ಆಳಿಕೆಯ ಎರಡನೆಯ ವರು
ಷದ ಎಂಟನೆಯ ತಿಂಗಳಲ್ಲಿ ಯೆಹೋವನು ಇದ್ದೋ
ವಿನ ಮೊಮ್ಮಗನೂ ಬೆರೆಕ್ಯನ ಮಗನೂ ಆದ ಜೆಕ
ರ್ಯನೆಂಬ ಪ್ರವಾದಿಗೆ ಈ ವಾಕ್ಯವನ್ನು ದಯಪಾಲಿಸಿ
ದನು—ಯೆಹೋವನು ನಿಮ್ಮ ಪಿತೃಗಳ ಮೇಲೆ ಬಹು
ಕೋಪಗೊಂಡಿದ್ದಾನೆ. ಆದಕಾರಣ ನೀನು 1)ನಿನ್ನ
ಜನರಿಗೆ ಹೀಗೆ ಹೇಳು—ಸೇನಾಧೀಶ್ವರ ಯೆಹೋವನು
ಇಂತೆನ್ನುತ್ತಾನೆ—ನನ್ನ ಕಡೆಗೆ ಪುನಃ ತಿರುಗಿರಿ;

1) ಮೂಲ: ಅವರಿಗೆ.

ಇದು ಸೇನಾಧೀಶ್ವರ ಯೆಹೋವನ ನುಡಿ; ನಾನು
ನಿಮ್ಮ ಕಡೆಗೆ ಪುನಃ ತಿರುಗುವೆನು; ಇದು ಸೇನಾಧೀ
4 ಶ್ವರ ಯೆಹೋವನ ನುಡಿ. ನಿಮ್ಮ ಪಿತೃಗಳಂತಿರ
ಬೇಡಿರಿ; ಪೂರ್ವಕಾಲದ ಪ್ರವಾದಿಗಳು ಅವರಿಗೆ—
ಸೇನಾಧೀಶ್ವರ ಯೆಹೋವನು ಇಂತೆನ್ನುತ್ತಾನೆ—
ನಿಮ್ಮ ದುರ್ಮಾರ್ಗದುಷ್ಕೃತ್ಯಗಳಿಂದ ಹಿಂದಿರುಗಿರಿ
ಎಂದು ಸಾರಿದರೂ ಅವರು ನನ್ನ ಮಾತನ್ನು ಕಿವಿ
ಗೊಟ್ಟು ಕೇಳಲಿಲ್ಲ; ಇದು ಯೆಹೋವನ ನುಡಿ.
5 ನಿಮ್ಮ ಪಿತೃಗಳು ಎಲ್ಲಿ? ಪ್ರವಾದಿಗಳು ನಿತ್ಯಜೀವಿ
6 ಗಳೋ? ಆದರೆ ನನ್ನ ಸೇವಕರಾದ ಪ್ರವಾದಿಗಳಿಗೆ
ಆಜ್ಞಾಪಿಸಿದ ನನ್ನ ವಾಕ್ಯಗಳೂ ವಿಧಿಗಳೂ ನಿಮ್ಮ
ಪಿತೃಗಳನ್ನು ಹಿಂದಟ್ಟಿ 1)ಹಿಡಿದು ನಿತ್ಯವಾಗಿವೆಯಷ್ಟೆ;
ಅವರು ತಿರುಗಿಕೊಂಡು—ಸೇನಾಧೀಶ್ವರ ಯೆಹೋ
ವನು ನಮ್ಮ ದುರ್ಮಾರ್ಗದುಷ್ಕೃತ್ಯಗಳಿಗೆ ತಕ್ಕ
ಹಾಗೆ ನಮಗೆ ಏನು ಮಾಡಬೇಕೆಂದು ಸಂಕಲ್ಪಿಸಿ
ದನೋ ಅದನ್ನು ನಮಗೆ ಮಾಡಿದ್ದಾನಲ್ಲಾ ಅಂದು
ಕೊಂಡರು.

## ಪ್ರವಾದಿಯ ಎಂಟು ಕನಸುಗಳು. 1. 7—6. 8.

### ನಾಲ್ವರು ಸವಾರರ ವಿಷಯವಾದ ಕನಸು.

7 ದಾರ್ಯಾವೆಷನ ಆಳಿಕೆಯ ಎರಡನೆಯ ವರುಷದ
ಹನ್ನೊಂದನೆಯ ತಿಂಗಳಿನ ಅಂದರೆ ಶೆಬಾಟ್ ತಿಂಗಳಿನ
ಇಪ್ಪತ್ತನಾಲ್ಕನೆಯ ದಿನದಲ್ಲಿ ಯೆಹೋವನ ವಾಕ್ಯವು
ಇದ್ದೋವಿನ ಮೊಮ್ಮಗನೂ ಬೆರೆಕ್ಯನ ಮಗನೂ
ಆದ ಜೆಕರ್ಯನೆಂಬ ಪ್ರವಾದಿಗೆ ಕಂಡುಬಂತು.
8 ರಾತ್ರಿಯಲ್ಲಿ ನನಗೆ ದರ್ಶನವಾಯಿತು—ಇಗೋ,
ಕೆಂಪು ಕುದುರೆಯನ್ನು ಹತ್ತಿದ ಒಬ್ಬ ಪುರುಷನು
ತಗ್ಗಿನಲ್ಲಿರುವ ಸುಗಂಧವೃಕ್ಷಗಳ ನಡುವೆ ನಿಂತಿದ್ದನು;
ಅವನ ಹಿಂದೆ ಕೆಂಪು ಕಪಿಲ ಬಿಳಿ 2)ಕುದುರೆಗಳನ್ನು
9 ಹತ್ತಿದವರಿದ್ದರು. ನನಗೆ [ಕನಸಿನ ಅರ್ಥವನ್ನು]
ವಿವರಿಸುವ ದೇವದೂತನನ್ನು—ಸ್ವಾಮಿ, ಇವರು
ಯಾರು ಎಂದು ನಾನು ಕೇಳಲು ಅವನು ನನಗೆ—
ಇವರು ಇಂಥವರೆಂದು ನಿನಗೆ ತೋರಿಸುವೆನು ಎಂಬ
0 ದಾಗಿ ಹೇಳಿದನು. ಕೂಡಲೆ ಸುಗಂಧವೃಕ್ಷಗಳ
ನಡುವೆ ನಿಂತಿದ್ದವನು—ಇವರು ಲೋಕಸಂಚಾರಾ
ರ್ಥವಾಗಿ ಯೆಹೋವನಿಂದ ಕಳುಹಿಸಲ್ಪಟ್ಟವರು ಎಂದು
1 ಉತ್ತರಕೊಟ್ಟನು. ಆಗ ಅವರು ಸುಗಂಧವೃಕ್ಷಗಳ
ನಡುವೆ ನಿಂತಿದ್ದ ಆ ಯೆಹೋವನ ದೂತನಿಗೆ—ನಾವು
ಲೋಕದಲ್ಲಿ ಸಂಚರಿಸಿ ಬಂದಿದ್ದೇವೆ; ಇಗೋ, ಲೋಕ
ವೆಲ್ಲಾ ನೆಮ್ಮದಿಯಾಗಿ ಸುಮ್ಮನಿದೆ ಎಂದು ಅರಿಕೆಮಾ
2 ಡಿದರು. ಇದನ್ನು ಕೇಳಿ ಯೆಹೋವನ ದೂತನು—
ಸೇನಾಧೀಶ್ವರ ಯೆಹೋವನೇ, ನೀನು ಎಪ್ಪತ್ತು
ವರುಷಗಳಿಂದ ರೋಷಗೊಂಡಿರುವ ಯೆರೂಸಲೇಮು
ಮೊದಲಾದ ಯೆಹೂದದ ಪಟ್ಟಣಗಳನ್ನು ಎಷ್ಟು
3 ಕಾಲ ಕರುಣಿಸದೆ ಇರುವಿ ಎಂದು ಬಿನ್ನವಿಸಲು ನನಗೆ
ವಿವರಿಸುವ ದೂತನಿಗೆ ಯೆಹೋವನು ಕರುಣೆಯ
4 ಒಳ್ಳೆಯ ಮಾತುಗಳಿಂದ ಉತ್ತರಕೊಟ್ಟನು. ಆಗ ಆ
ದೂತನು ನನಗೆ ಈ ಅಪ್ಪಣೆಮಾಡಿದನು—ನೀನು
ಹೀಗೆ ಸಾರು—ಸೇನಾಧೀಶ್ವರ ಯೆಹೋವನು ಇಂತೆ
ನ್ನುತ್ತಾನೆ—ಯೆರೂಸಲೇಮಿಗೂ ಚೀಯೋನಿಗೂ ಅವ
ಮಾನವಾಯಿತಲ್ಲಾ ಎಂದು ಬಹಳವಾಗಿ ಕುದಿಯು
ತ್ತೇನೆ. ನೆಮ್ಮದಿಯಾಗಿರುವ ಜನಾಂಗಗಳ ಮೇಲೆ 15
ನನಗೆ ಬಲು ಸಿಟ್ಟೇರಿದೆ; ನಾನು [ಯೆರೂಸಲೇಮಿನ
ಮೇಲೆ] ಸ್ವಲ್ಪ ಮಾತ್ರ ಸಿಟ್ಟುಗೊಂಡು ಮಾಡಿಸಬೇಕೆಂ
ದಿದ್ದ ಕೇಡಿಗಿಂತ ಅವು ಹೆಚ್ಚಾಗಿ ಮಾಡಿದವಷ್ಟೆ. ಹೀಗಿ 16
ರಲು ಯೆಹೋವನು ಇಂತೆನ್ನುತ್ತಾನೆ—ನಾನು ಕನಿಕರ
ವುಳ್ಳವನಾಗಿ ಯೆರೂಸಲೇಮಿಗೆ ಹಿಂದಿರುಗಿದ್ದೇನೆ;
ನನ್ನ ಆಲಯವು ಅಲ್ಲಿ ಕಟ್ಟಲ್ಪಡುವದು; ಯೆರೂಸ
ಲೇಮಿನಲ್ಲಿ ನೂಲು ಎಳೆಯಲ್ಪಡುವದು; ಇದು
ಸೇನಾಧೀಶ್ವರ ಯೆಹೋವನ ನುಡಿ. ಮತ್ತೊಮ್ಮೆ 17
ಹೀಗೆ ಸಾರು—ಸೇನಾಧೀಶ್ವರ ಯೆಹೋವನು ಇಂತೆ
ನ್ನುತ್ತಾನೆ—ಇನ್ನು ನನ್ನ ಪಟ್ಟಣಗಳಲ್ಲಿ ಶುಭವು ತುಂಬಿ
ತುಳುಕುವದು; ಯೆಹೋವನು ಇನ್ನು ಚೀಯೋನನ್ನು
ಸಂತೈಸುವನು, ಯೆರೂಸಲೇಮನ್ನು ಮತ್ತೆ ತನಗಾಗಿ
ಆರಿಸಿಕೊಳ್ಳುವನು.

### ನಾಲ್ಕು ಕೊಂಬುಗಳ ಮತ್ತು ನಾಲ್ವರು ಕಮ್ಮಾರರ ವಿಷಯವಾದ ಕನಸು.

ನಾನು ಕಣ್ಣೆತ್ತಿನೋಡಲು ಇಗೋ, ನಾಲ್ಕು 18
ಕೊಂಬುಗಳು ಕಾಣಿಸಿದವು. ವಿವರಿಸುವ ದೂತ 19
ನನ್ನು ಕುರಿತು ಇವು ಏನು ಎಂದು ನಾನು ಕೇಳಿದ್ದಕ್ಕೆ
ಅವನು—ಇವು ಯೆಹೂದ ಇಸ್ರಾಯೇಲು ಯೆರೂಸ
ಲೇಮುಗಳನ್ನು ಚದರಿಸಿರುವ ಕೊಂಬುಗಳು ಎಂದು
ಉತ್ತರಕೊಟ್ಟನು. ಅನಂತರ ಯೆಹೋವನು ನನಗೆ 20
ನಾಲ್ಕು ಮಂದಿ ಕಮ್ಮಾರರನ್ನು ತೋರಿಸಿದನು. ಆಗ 21
ನಾನು—ಇವರು ಏನು ಮಾಡುವದಕ್ಕೆ ಬಂದಿದ್ದಾರೆ
ಎಂದು ಕೇಳಲು ಅವನು—ಈ ಕೊಂಬುಗಳು ಯೆ
ಹೂದದವರಲ್ಲಿ ಯಾರೂ ತಲೆಯೆತ್ತದಂತೆ ಅವರನ್ನು
ಚದರಿಸಿವೆಯಷ್ಟೆ; ಇವರಾದರೋ ಯೆಹೂದ ದೇಶದ
ವರನ್ನು ಚದರಿಸಬೇಕೆಂದು ತಲೆಯೆತ್ತಿದ ಜನಾಂಗ
ಗಳ ಕೊಂಬುಗಳನ್ನು ಹೆದರಿಸಿ ಕೆಡವುವದಕ್ಕೆ ಬಂದಿ
ದ್ದಾರೆ ಎಂದು ಹೇಳಿದನು.

### ಅಳತೆಯ ನೂಲಿನವನ ವಿಷಯವಾದ ಕನಸು.

ನಾನು ಕಣ್ಣೆತ್ತಿನೋಡಲು ಇಗೋ, ಕೈಯಲ್ಲಿ 2
ಅಳತೆಯ ನೂಲನ್ನು ಹಿಡಿದುಕೊಂಡಿದ್ದವನು ಕಾಣಿ
ಸಿದನು. ನಾನು ಅವನನ್ನು—ಎಲ್ಲಿಗೆ ಹೋಗುತ್ತೀ 2
ಎಂದು ಕೇಳಲು ಅವನು ನನಗೆ—ಯೆರೂಸಲೇಮಿನ
ಅಗಲ ಉದ್ದ ಇಷ್ಟಿಷ್ಟಿರಬೇಕೆಂದು ಅಳೆದುನೋಡುವ
ದಕ್ಕೆ ಹೋಗುತ್ತೇನೆ ಎಂಬದಾಗಿ ಹೇಳಿದನು. ಇಗೋ, 3
ವಿವರಿಸುವ ದೇವದೂತನು ಮುಂದರಿದು ತನ್ನನ್ನು
ಎದುರುಗೊಳ್ಳುವದಕ್ಕೆ ಬಂದ ಮತ್ತೊಬ್ಬ ದೇವದೂತ
ನಿಗೆ ಹೀಗೆ ಹೇಳಿದನು—ನೀನು ಓಡು, ಆ ಯುವಕನಿಗೆ 4

1) ಮೂಲ: ಹಿಡಿದವಷ್ಟೆ. 2) ಮೂಲ: ಕುದುರೆಗಳಿದ್ದವು.

ಈ ಮಾತನ್ನು ತಿಳಿಸು—ಯೆರೂಸಲೇಮಿನಲ್ಲಿರುವ ಜನ
ಮತ್ತು ಪಶುಗಳ ಸಂಖ್ಯೆಯು ಅಪಾರವಾಗಿರುವದ
ರಿಂದ ಅದು ಪೌಳಿಗೋಡೆಯಿಲ್ಲದ ಹಳ್ಳಿಪಳ್ಳಿಗಳಂತೆ
5 ಹರಡಿಕೊಂಡು ನೆಲೆಯಾಗಿರುವದು. ನಾನೇ ಅದರ
ಸುತ್ತುಮುತ್ತಲು ಅಗ್ನಿಪ್ರಾಕಾರವೂ ಅದರೊಳಗೆ ವೈ
ಭವವೂ ಆಗಿರುವೆನು ಎಂಬದು ಯೆಹೋವನ ನುಡಿ.

ಬಾಬೆಲಿನಲ್ಲಿ ನಿಂತವರು ಚೀಯೋನಿಗೆ ಬರಬೇಕೆಂಬ
ಎಚ್ಚರಿಕೆ.

6 ಎಲೈ, ಎಲೈ, ಉತ್ತರದೇಶದಿಂದ ಓಡಿ ಬನ್ನಿರಿ;
ಇದು ಯೆಹೋವನ ನುಡಿ;
ಚತುರ್ದಿಕ್ಕಿನ ಗಾಳಿಗಳಂತೆ ನಿಮ್ಮನ್ನು ಚದರಿಸಿದ್ದೇ
ನಲ್ಲಾ; ಇದು ಯೆಹೋವನ ನುಡಿ.
7 ಎಲೈ, [1]ಬಾಬೆಲ್ ಪುರಿಯಲ್ಲಿ ವಾಸಿಸುವ ಚೀಯೋ
ನಿನವರೇ, ತಪ್ಪಿಸಿಕೊಂಡು ಬನ್ನಿರಿ.
8 ನಿಮ್ಮನ್ನು ತಾಕುವವನು ಯೆಹೋವನ ಕಣ್ಣು
ಗುಡ್ಡನ್ನು ತಾಕುವವನಾಗಿದ್ದಾನೆ.
ಆದಕಾರಣ [ತನ್ನ] ಪ್ರಸಿದ್ಧಿಗಾಗಿ ನನ್ನನ್ನು ಕಳುಹಿ
ಸಿದ ಸೇನಾಧೀಶ್ವರ ಯೆಹೋವನು ನಿಮ್ಮನ್ನು
ಸೂರೆಮಾಡಿದ ಜನಾಂಗಗಳ ವಿಷಯವಾಗಿ—
9 ಆಹಾ, ನಾನು ಇವರ ಮೇಲೆ ಕೈಬೀಸುವೆನು;
ಇವರು ತಮಗೆ ಅಡಿಯಾಳಾದವರಿಗೆ ಸೂರೆಯಾ
ಗುವರು ಎಂದು ಹೇಳುತ್ತಾನೆ;
ಆಗ ಸೇನಾಧೀಶ್ವರ ಯೆಹೋವನು ನನ್ನನ್ನು ಕಳು
ಹಿಸಿದ್ದಾನೆಂಬದು ನಿಮಗೆ ಗೊತ್ತಾಗುವದು.
10 ಯೆಹೋವನು ಇಂತೆನ್ನುತ್ತಾನೆ—ಚೀಯೋನ್ ನಗ
ರಿಯೇ, ಉಲ್ಲಾಸಗೊಳ್ಳು, ಹರ್ಷಧ್ವನಿಗೈ!
ಇಗೋ, ನಾನು ಬಂದು ನಿನ್ನ ಮಧ್ಯದಲ್ಲಿ
ವಾಸಿಸುವೆನು.
11 ಆ ಕಾಲದಲ್ಲಿ ಬಹು ಜನಾಂಗಗಳು ಯೆಹೋವ
ನಾದ ನನ್ನನ್ನು ಆಶ್ರಯಿಸಿಕೊಂಡು
ನನ್ನ ಜನವಾಗುವವು; ನಾನು ನಿನ್ನ ಮಧ್ಯದಲ್ಲಿ
ವಾಸಿಸುವೆನು;
ಆಗ ಸೇನಾಧೀಶ್ವರ ಯೆಹೋವನೇ ನನ್ನನ್ನು
ನಿನ್ನ ಬಳಿಗೆ ಕಳುಹಿಸಿದ್ದಾನೆಂಬದು ನಿನಗೆ
ಗೊತ್ತಾಗುವದು.
12 ಯೆಹೋವನು ಮೀಸಲಾದ ದೇಶದಲ್ಲಿ ಯೆಹೂ
ದವನ್ನು ತನ್ನ ಸ್ವಾಸ್ತ್ಯವನ್ನಾಗಿ ಅನುಭವಿಸು
ವನು,
ಯೆರೂಸಲೇಮನ್ನು ಮತ್ತೆ ತನಗಾಗಿ ಆರಿಸಿ
ಕೊಳ್ಳುವನು.
13 ಯೆಹೋವನು ತನ್ನ ಪರಿಶುದ್ಧ ನಿವಾಸದಿಂದ ಎದ್ದು
ಹೊರಟಿದ್ದಾನೆ;
ನರಪ್ರಾಣಿಗಳೇ, ನೀವೆಲ್ಲಾ ಆತನ ಮುಂದೆ ಮೌ
ನವಾಗಿರಿ.

ಮಹಾಯಾಜಕನ ಉಡುಪು ಮಾರ್ಪಡುವ ಕನಸು.

ಅನಂತರ ಮಹಾಯಾಜಕನಾದ ಯೆಹೋಶುವನು
ಯೆಹೋವನ ದೂತನ ಮುಂದೆ ನಿಂತಿರುವದನ್ನು
[2]ಯೆಹೋವನು ನನಗೆ ತೋರಿಸಿದನು; ಸೈತಾನನು
ಯೆಹೋಶುವನಿಗೆ ಪ್ರತಿಕಕ್ಷಿಯಾಗಿ ಅವನ ಬಲಗಡೆ
ಯಲ್ಲಿ ನಿಂತಿದ್ದನು. ಆಗ [3]ಯೆಹೋವನ ದೂತನು
ಸೈತಾನನಿಗೆ—ಸೈತಾನನೇ, ಯೆಹೋವನು ನಿನ್ನನ್ನು
ಖಂಡಿಸಲಿ, ಹೌದು, ಯೆರೂಸಲೇಮನ್ನು ಆರಿಸಿ
ಕೊಂಡಿರುವ ಯೆಹೋವನು ನಿನ್ನನ್ನು ಖಂಡಿಸಲಿ;
ಅದು ಉರಿಯಿಂದ ಎಳೆದ ಕೊಳ್ಳಿಯಾಗಿದೆಯಲ್ಲಾ
ಎಂದು ಹೇಳಿದನು. ಯೆಹೋಶುವನು ದೇವದೂತನ
ಮುಂದೆ ಕೊಳೆಬಟ್ಟೆಯಾಗಿ ನಿಂತಿರಲು ದೇವದೂತನು
ತನ್ನ ಸೇವಕರಿಗೆ—ಇವನ ಕೊಳೆಬಟ್ಟೆಗಳನ್ನು ತೆಗೆದು
ಬಿಡಿರಿ ಎಂದು ಅಪ್ಪಣೆಕೊಟ್ಟು, ಅವನಿಗೆ—ಇಗೋ,
ನಿನ್ನ ದೋಷವನ್ನು ನಿನ್ನಿಂದ ತೊಲಗಿಸಿದ್ದೇನೆ, ನಿನಗೆ
ಶ್ರೇಷ್ಠವಸ್ತ್ರವನ್ನು ತೊಡಿಸುವೆನು ಎಂದು ಹೇಳಿದನು.
ಇವನ ತಲೆಗೆ ಶುಭ್ರವಾದ ಮುಂಡಾಸವನ್ನು [4]ಸುತ್ತಿರಿ
ಎಂದು ಅವನು ಅಪ್ಪಣೆಕೊಡಲು ಅವರು ಅವನ ತಲೆಗೆ
ಶುಭ್ರವಾದ ಮುಂಡಾಸವನ್ನು ಸುತ್ತಿ ಅವನಿಗೆ ವಸ್ತ್ರಗ
ಳನ್ನು ಹಾಕಿದರು; ಆಗ ಯೆಹೋವನ ದೂತನು ಎದ್ದು
ನಿಂತಿದ್ದನು. ಮತ್ತು ಯೆಹೋವನ ದೂತನು ಯೆಹೋ
ಶುವನಿಗೆ ಈ ಮಾತುಕೊಟ್ಟನು—ಸೇನಾಧೀಶ್ವರ ಯೆ
ಹೋವನು ಇಂತೆನ್ನುತ್ತಾನೆ—ನೀನು ನನ್ನ ಮಾರ್ಗಗ
ಳಲ್ಲಿ ನಡೆದು ನಾನು ನಿನಗೆ ವಹಿಸಿದ ಪಾರುಪತ್ಯವನ್ನು
ನೆರವೇರಿಸಿದರೆ ನನ್ನ ಆಲಯದ ಮುಖ್ಯಾಧಿಕಾರಿಯಾಗಿ
ನನ್ನ ಪ್ರಾಕಾರಗಳನ್ನು ನೋಡಿಕೊಳ್ಳುವಿ; ಈ ಸನ್ನಿಧಾನ
ದೂತರ ನಡುವೆ ಪ್ರವೇಶಿಸುವ ಹಕ್ಕನ್ನು ನಿನಗೆ ಕೊಡು
ವೆನು. ಮಹಾಯಾಜಕನಾದ ಯೆಹೋಶುವನೇ,
ನೀನೂ ನಿನ್ನ ಮುಂದೆ ಕೂತುಕೊಳ್ಳುವ ನಿನ್ನ ಸಹಕಾ
ರಿಗಳೂ ಕೇಳಿರಿ; ಇಗೋ, ಮೊಳಕೆ ಎಂಬ ನನ್ನ ಸೇವಕ
ನನ್ನು ಹೊರಡಿಸುತ್ತೇನೆಂಬದಕ್ಕೆ ಇವರೇ ಮುಂಗುರುತು.
ನಾನು ಯೆಹೋಶುವನ ಮುಂದೆ ಇಟ್ಟಿರುವ [5]ಕಲ್ಲ
ನ್ನು ನೋಡಿರಿ; ಆ ಒಂದೇ ಕಲ್ಲಿನಲ್ಲಿ [6]ಏಳು ಕಣ್ಣು
ಳ್ಳಾತನ ದೃಷ್ಟಿಯು ಬಿದ್ದಿದೆ; ಇಗೋ, ನಾನೇ ಅದರಲ್ಲಿ
ಕೆತ್ತನೆ ಕೆತ್ತುವೆನು; ಇದು ಸೇನಾಧೀಶ್ವರ ಯೆಹೋ
ವನ ನುಡಿ; ಒಂದೇ ದಿನದೊಳಗೆ ದೇಶದ ಪಾಪವನ್ನು
ಪರಿಹರಿಸುವೆನು. ಸೇನಾಧೀಶ್ವರ ಯೆಹೋವನು ಇಂತೆ
ನ್ನುತ್ತಾನೆ—ಆ ದಿನದಲ್ಲಿ ನೀವೆಲ್ಲರು ನಿಮ್ಮ ನಿಮ್ಮ
ನೆರೆಹೊರೆಯವರನ್ನು ದ್ರಾಕ್ಷಾಲತೆ ಅಂಜೂರಗಿಡ
ಇವುಗಳ ನೆರಳಿಗೆ ಕರೆಯುವಿರಿ.

ದೀಪಸ್ತಂಭದ ಮತ್ತು ಎಣ್ಣೆಯ ಮರಗಳ ಕನಸು.

ಅನಂತರ ವಿವರಿಸುವ ದೇವದೂತನು ಮತ್ತೆ
ಬಂದು ನಿದ್ರೆಹತ್ತಿದವನ ಹಾಗಿದ್ದ ನನ್ನನ್ನು ಎಚ್ಚರ

1) ಅಥವಾ: ಬಾಬೆಲಿನಲ್ಲಿ ಮಗಳಂತೆ ವಾಸಿಸುವ ಚೀಯೋನೇ. 2) ಅಥವಾ: ವಿವರಿಸುವ ದೇವದೂತನ. ಮೂಲ: ಅವ
3) ಮೂಲ: ಯೆಹೋವನು. 4) ಪಾಠಾಂತರ: ಸುತ್ತಲೆಂದು ನಾನು ಸೂಚಿಸಲು. 5) ಅಥವಾ: ರತ್ನವನ್ನು ನೋಡಿರಿ; ಆ ಒ
ರತ್ನಕ್ಕೆ ಏಳು ಮುಖಗಳಿವೆ. 6) ಅಥವಾ: ಏಳು ಕಣ್ಣುಗಳು ಚಿತ್ರಿಸಲ್ಪಟ್ಟಿವೆ.

2 ಗೊಳಿಸಿ ಏನು ನೋಡುತ್ತೀ ಎಂದು ಕೇಳಲು ನಾನು—
ಇಗೋ, ಏಳು ದೀಪಗಳುಳ್ಳ ಸುವರ್ಣಮಯವಾದ
ಒಂದು ದೀಪಸ್ತಂಭವನ್ನು ನೋಡುತ್ತೇನೆ; ಅದರ ಮೇ
ಲಿನ ದೀಪಗಳಿಗೆ ಏಳು ನಾಳಗಳಿವೆ; ಅದರ ಮೇಲ್ಗಡೆ
3 ಎಣ್ಣೆಯ ಪಾತ್ರೆಯಿದೆ; ಆ ಪಾತ್ರೆಯ ಬಲಗಡೆಯ
ಲ್ಲಿ ಒಂದು ಎಣ್ಣೆಯ ಮರ, ಎಡಗಡೆಯಲ್ಲಿ ಒಂದು
ಎಣ್ಣೆಯ ಮರ, ಅಂತು ಎರಡು ಮರಗಳು ಅದರ
4 ಪಕ್ಕಗಳಲ್ಲಿವೆ ಎಂದು ಹೇಳಿದೆನು. ಪುನಃ ನಾನು ಪ್ರ
ಸ್ತಾಪವೆತ್ತಿ ವಿವರಿಸುವ ದೇವದೂತನನ್ನು — ಸ್ವಾಮಿಾ,
5 ಇವು ಏನು ಎಂದು ಕೇಳಿದ್ದಕ್ಕೆ ಆ ದೇವದೂತನು— ಇವು
ಏನೆಂದು ನಿನಗೆ ತಿಳಿಯುವದಿಲ್ಲವೋ ಎಂಬದಾಗಿ ನನ್ನ
ನ್ನು ಪ್ರಶ್ನೆಮಾಡಲು— ಇಲ್ಲ, ಸ್ವಾಮಿಾ ಎಂದು ಅರಿಕೆ
6 ಮಾಡಿದೆನು. ಆಗ ಅವನು ನನಗೆ ಪ್ರತ್ಯುತ್ತರವಾಗಿ
ಹೀಗೆ ಹೇಳಿದನು—ಪರಾಕ್ರಮದಿಂದಲ್ಲ, ಬಲದಿಂದಲ್ಲ,
ನನ್ನ ಆತ್ಮದಿಂದಲೇ ಎಂಬದು ಸೇನಾಧೀಶ್ವರ ಯೆಹೋ
ವನ ನುಡಿ ಎಂಬೀ ಮಾತನ್ನು ಯೆಹೋವನು ಜೆರು
7 ಬ್ಬಾಬೆಲನಿಗೆ ದಯಪಾಲಿಸಿದ್ದಾನೆ. ದೊಡ್ಡ ಬೆಟ್ಟವೇ,
ನೀನು ಯಾರು? ಜೆರುಬ್ಬಾಬೆಲನ ಮುಂದೆ ನೆಲ
ಸಮವಾಗುವಿ; ಅವನು ಕಲಶದ ಕಲ್ಲನ್ನು ಕೋಲಾ
ಹಲದೊಡನೆ ಮೆರವಣಿಗೆಮಾಡುವನು; ಇದರ ಮೇಲೆ
ದೇವರ ದಯೆಯಿರಲಿ, ದೇವರ ದಯೆಯಿರಲಿ ಎಂಬ
8 ಜನಘೋಷವಾಗುವದು. ಅಲ್ಲದೆ ಯೆಹೋವನು ಈ
9 ವಾಕ್ಯವನ್ನು ನನಗೆ ದಯಪಾಲಿಸಿದ್ದಾನೆ— ಜೆರುಬ್ಬಾಬೆ
ಲನ ಕೈಗಳು ಈ ಆಲಯದ ಅಸ್ತಿವಾರವನ್ನು ಹಾಕಿವೆ,
ಆ ಕೈಗಳೇ ಇದನ್ನು ಪೂರೈಸುವವು; ಆಗ ನನ್ನನ್ನು
ನಿಮ್ಮ ಬಳಿಗೆ ಕಳುಹಿಸಿದವನು ಸೇನಾಧೀಶ್ವರ ಯೆ
10 ಹೋವನೇ ಎಂದು ನಿನಗೆ ಗೊತ್ತಾಗುವದು. ಈ [ದೀ
ಪಗಳಿಂದ ಸೂಚಿತವಾದ] ಯೆಹೋವನ ಏಳು
ಕಣ್ಣುಗಳು ಭೂಲೋಕದ ಎಲ್ಲಾ ಕಡೆಗಳಲ್ಲಿಯೂ
ಪ್ರಸರಿಸುತ್ತಾ ತೂಕದ ಗುಂಡು ಜೆರುಬ್ಬಾಬೆಲನ
ಕೈಯಲ್ಲಿರುವದನ್ನು ಸಂತೋಷದಿಂದ ನೋಡುತ್ತವೆ;
ಹೀಗಿರುವಲ್ಲಿ ಅಲ್ಪಕಾರ್ಯಗಳ ದಿನವನ್ನು ಯಾರು
11 ತಿರಸ್ಕರಿಸಾರು? ಇದನ್ನು ಕೇಳಿ ನಾನು ದೇವದೂತ
ನನ್ನು—ದೀಪಸ್ತಂಭದ ಎಡಬಲದಲ್ಲಿರುವ ಈ ಎಣ್ಣೆ
12 ಯ ಮರಗಳು ಏನು ಎಂದು ಪ್ರಶ್ನೆಮಾಡಿ ಮತ್ತೆ ಅವ
ನನ್ನು — ತಮ್ಮೊಳಗಿಂದ ಚಿನ್ನದಂಥ ಎಣ್ಣೆಯನ್ನು ಪಾತ್ರೆ
ಯಲ್ಲಿ ತುಂಬಿಸುವ ಎರಡು ಬಂಗಾರದ ನಾಳಗಳಿವೆ
ಯಲ್ಲಾ; ಆ ನಾಳಗಳ ಬಾಯಿಗೆ ಸೇರಿರುವ ಎರಡು
ಎಣ್ಣೆಕಾಯಿಗುತ್ತಿಗಳು ಏನು ಎಂದು ವಿಚಾರಿಸಿದ್ದಕ್ಕೆ
13 ಅವನು— ಇವು ಏನೆಂದು ನಿನಗೆ ತಿಳಿಯುವದಿಲ್ಲವೋ
ಎಂಬದಾಗಿ ನನ್ನನ್ನು ಕೇಳಲು— ಇಲ್ಲ, ಸ್ವಾಮಿಾ ಎಂದು
14 ಅರಿಕೆಮಾಡಿದೆನು. ಅದಕ್ಕೆ ಅವನು— ಇವು ಸರ್ವಭೂ
ಲೋಕದೊಡೆಯನ ಸನ್ನಿಧಿಸೇವಕರೂ 1)ಎಣ್ಣೆಯ ಬುಗ್ಗೆ
ಗಳೂ ಆದ ಇಬ್ಬರು ಪುರುಷರು ಎಂದು ಹೇಳಿದನು.

ಹಾರುವ ಸುರಳಿಯ ಕನಸು.

5 ಪುನಃ ನಾನು ಕಣ್ಣೆತ್ತಿ ನೋಡಲು ಇಗೋ, ಹಾರು
2 ತ್ತಿರುವ ಒಂದು ಸುರಳಿಯು ಕಾಣಿಸಿತು. ಅವನು
ನನ್ನನ್ನು—ನಿನಗೆ ಏನು ಕಾಣಿಸುತ್ತದೆ ಎಂದು ಕೇಳಿ
ದ್ದಕ್ಕೆ—ಹಾರುತ್ತಿರುವ ಒಂದು ಸುರಳಿಯು ಕಾಣಿಸು
ತ್ತದೆ; ಅದರ ಉದ್ದ ಇಪ್ಪತ್ತುಮೊಳ, ಅಗಲ ಹತ್ತು
ಮೊಳ ಎಂದುತ್ತರಕೊಟ್ಟೆನು. ಆಗ ಅವನು ನನಗೆ— 3
ಇದು ದೇಶದ ಮೇಲೆಲ್ಲಾ ಹೊರಟು ಬಂದಿರುವ
ಶಾಪ; ಇದಕ್ಕೆ ತಕ್ಕಂತೆ ಪ್ರತಿಯೊಬ್ಬ ಕಳ್ಳನು ದೇಶ
ದಿಂದ ತೊಡೆಯಲ್ಪಡುವನು; ಇದಕ್ಕೆ ತಕ್ಕಹಾಗೆ
ಪ್ರತಿಯೊಬ್ಬ ಸುಳ್ಳುಸಾಕ್ಷಿಯೂ ದೇಶದಿಂದ ತೊಡೆ
ಯಲ್ಪಡುವನು. ಸೇನಾಧೀಶ್ವರ ಯೆಹೋವನು ಇಂತೆ 4
ನ್ನುತ್ತಾನೆ—ನನ್ನ ಅಪ್ಪಣೆಯಂತೆ ಇದು ಹೊರಟು
ಕಳ್ಳನ ಮನೆಯೊಳಗೂ ನನ್ನ ಹೆಸರೆತ್ತಿ ಸುಳ್ಳು
ಸಾಕ್ಷಿಹೇಳುವವನ ಮನೆಯೊಳಗೂ ನುಗ್ಗಿ ನಟ್ಟ
ನಡುವೆ ನೆಲೆಗೊಂಡು ಅದನ್ನು ಕಲ್ಲುಮರಸಹಿತವಾಗಿ
ನಾಶಮಾಡುವದು ಎಂದು ಹೇಳಿದನು.

ಕೊಳಗದೊಳಗಣ ಹೆಂಗಸಿನ ವಿಷಯವಾದ ಕನಸು.

ಅನಂತರ ವಿವರಿಸುವ ದೂತನು ಹತ್ತಿರ ಬಂದು— 5
ಕಂಡುಬರುತ್ತಿರುವ ಆ ವಸ್ತು ಏನೆಂದು ನೋಡು ಎಂಬ
ದಾಗಿ ನನಗೆ ಹೇಳಲು ನಾನು—ಏನದು ಎಂದು ಕೇಳಿ 6
ದ್ದಕ್ಕೆ ಅವನು—ಕಂಡುಬರುತ್ತಿರುವ ಆ ವಸ್ತು ಒಂದು
ಕೊಳಗಪಾತ್ರೆ ಎಂದು ತಿಳಿಸಿದನು. ಅಲ್ಲದೆ—ಅದು
ಪೂರ್ಣದೇಶದಲ್ಲಿನ ಪಾಪಿಗಳ 2)ಅಧರ್ಮವೇ ಅಂದ
ನು. ಇಗೋ, ತಟ್ಟೆಯಾಕಾರವಾದ ಸೀಸದ ಮುಚ್ಚ 7
ಳವು ಎತ್ತಲ್ಪಡಲಾಗಿ ಆಹಾ, ಒಬ್ಬ ಹೆಂಗಸು ಕೊಳಗ
ದೊಳಗೆ ಕೂತಿದ್ದಳು. ಅವನು ಕಂಡು—ಇವಳು 8
ಪಾಪಮೂರ್ತಿ ಎಂದು ಹೇಳಿ ಅವಳನ್ನು ಕೊಳಗದೊ
ಳಗೆ ಅದುಮಿ ಸೀಸದ ಭಾರಿ ಮುಚ್ಚಳವನ್ನು ಅದರ
ಬಾಯಿಗೆ ಹಾಕಿಬಿಟ್ಟನು. ನಾನು ಕಣ್ಣೆತ್ತಿನೋಡಲು 9
ಆಹಾ, ಕೊಕ್ಕರೆಯ ರೆಕ್ಕೆಯಂತಿರುವ ರೆಕ್ಕೆಯುಳ್ಳ
ಇಬ್ಬರು ಹೆಂಗಸರು ಕಂಡುಬಂದರು; ಅವರ ರೆಕ್ಕೆಗ
ಳೊಳಗೆ ಗಾಳಿಯು ತುಂಬಿಕೊಂಡಿತ್ತು; ಅವರು ಪೀಪಾ
ಯಿಯನ್ನು ಭೂಮ್ಯಾಕಾಶಗಳ ಅಂತರಾಳದಲ್ಲಿ ಎತ್ತಿ
ಕೊಂಡು ಹೋದರು. ಅವರು ಕೊಳಗವನ್ನು ಎಲ್ಲಿಗೆ 10
ಹೊತ್ತುಕೊಂಡು ಹೋಗುತ್ತಾರೆ ಎಂದು ನನಗೆ ವಿವರಿ
ಸುವ ದೇವದೂತನನ್ನು ನಾನು ಕೇಳಿದ್ದಕ್ಕೆ ಅವನು 11
ನನಗೆ—ಶಿನಾರ್ ದೇಶದಲ್ಲಿ ಅವಳಿಗೆ ಮನೆಕಟ್ಟುವ
ದಕ್ಕಾಗಿ ಹೋಗುತ್ತಾರೆ; ಅದು ಸಿದ್ಧವಾದಾಗ ಆ ಸ್ವಂತ
ಸ್ಥಳದಲ್ಲಿ ನಿಲ್ಲಿಸಲ್ಪಡುವಳು.

ನಾಲ್ಕು ರಥಗಳ ಕನಸು.

ಪುನಃ ನಾನು ಕಣ್ಣೆತ್ತಿನೋಡಲು ಇಗೋ, ಎರಡು 6
ಬೆಟ್ಟಗಳ ನಡುವೆಯಿಂದ ಬರುತ್ತಿರುವ ನಾಲ್ಕು ರಥ
ಗಳು ಕಾಣಿಸಿದವು, ಆ ಬೆಟ್ಟಗಳು ತಾಮ್ರದವುಗಳು.
ಮೊದಲನೆಯ ರಥಕ್ಕೆ ಕೆಂಪು ಕುದುರೆಗಳು, ಎರಡನೆ 2
ಯ ರಥಕ್ಕೆ ಕಪ್ಪು ಕುದುರೆಗಳು, ಮೂರನೆಯ ರಥ 3
ಕ್ಕೆ ಬಿಳಿ ಕುದುರೆಗಳು, ನಾಲ್ಕನೆಯ ರಥಕ್ಕೆ ಮಚ್ಚೆ

1) ಮೂಲ: ಎಣ್ಣೆಯ ಮಕ್ಕಳು. 2) ಪಾಠಾಂತರ: ಸ್ವರೂಪವೇ.

4 ಮಚ್ಚೆಯ ಬಲವಾದ ಕುದುರೆಗಳು ಕಟ್ಟಿದ್ದವು. ವಿವರಿ
ಸುವ ದೇವದೂತನನ್ನು—ಸ್ವಾಮೀ, ಇವುಗಳು ಏನು
5 ಎಂದು ನಾನು ಪ್ರಸ್ತಾಪವೆತ್ತಿ ಕೇಳಲು ಆ ದೇವದೂ
ತನು ನನಗೆ—ಇವು ಆಕಾಶದ ನಾಲ್ಕು ಗಾಳಿಗಳು;
ಭೂಲೋಕದೊಡೆಯನ ಸನ್ನಿಧಾನದಲ್ಲಿ ನಿಂತಿದ್ದು
ಅಲ್ಲಿಂದ ಹೊರಟುಬರುತ್ತಾ ಇವೆ ಎಂದುತ್ತರಕೊಟ್ಟ
6 ನು. ಅನಂತರ ಕಪ್ಪು ಕುದುರೆಗಳು ಉತ್ತರದೇಶಕ್ಕೆ
ಹೊರಟವು. ಬಿಳಿ ಕುದುರೆಗಳು ಅವುಗಳನ್ನು ಹಿಂಬಾ
ಲಿಸಿದವು. ಮಚ್ಚೆಮಚ್ಚೆಯ ಕುದುರೆಗಳು ದಕ್ಷಿಣ
7 ದೇಶಕ್ಕೆ ಹೋದವು. 1)ಕೆಂಪು ಕುದುರೆಗಳು ಬಂದು
ಲೋಕದಲ್ಲಿ ಸಂಚರಿಸುವದಕ್ಕೆ ಹೊರಡಬೇಕೆಂದು
ತ್ವರೆಪಟ್ಟವು; ಅವನು—ಹೊರಡಿರಿ, ಲೋಕದಲ್ಲಿ
ಸಂಚರಿಸಿರಿ ಎಂದಪ್ಪಣೆಮಾಡಲು ಅವು ಲೋಕದಲ್ಲಿ
8 ಸಂಚರಿಸಿದವು. ಆ ಮೇಲೆ ಅವನು ನನಗೆ—ಆಹಾ,
ಉತ್ತರದೇಶಕ್ಕೆ ಹೋದವುಗಳು ಅಲ್ಲಿ ನನ್ನ ಕೋಪ
ವನ್ನು ಶಾಂತಿಗೊಳಿಸಿವೆ ಎಂದು ಕೂಗಿ ಹೇಳಿದನು.

### ಇಸ್ರಾಯೇಲಿನ ಮುಂದಿನ ರಾಜ್ಯಭಾರವನ್ನು ಸೂಚಿಸುವ ಕಾರ್ಯ.

9 ಯೆಹೋವನು ಈ ವಾಕ್ಯವನ್ನು ನನಗೆ ದಯಪಾಲಿಸಿ
10 ದನು—ಇನ್ನು ಸೆರೆಯಲ್ಲಿರುವವರೊಳಗೆ ಸೇರಿದವ
ರಾದ ಹೆಲ್ದಾಯ, ತೋಬೀಯ, ಯೆದಾಯ ಎಂಬ
ವರ ಕೈಯಿಂದ ಬೆಳ್ಳಿಬಂಗಾರಗಳನ್ನು ಈಸಿಕೋ; ಈ
ದಿವಸವೇ ನೀನು ಹೋಗಿ ಬಾಬೆಲಿನಿಂದ ಬಂದ ಇವರು
ಇಳಿದಿರುವ ಚೆಫನ್ಯನ ಮಗನಾದ ಯೋಷೀಯನ
11 ಮನೆಯನ್ನು ಸೇರಿ ಇವರಿಂದ ಬೆಳ್ಳಿಬಂಗಾರಗಳನ್ನು
ತೆಗೆದುಕೊಂಡು ಕಿರೀಟವನ್ನು ರೂಪಿಸಿ ಯೆಹೋ
ಚಾದಾಕನ ಮಗನೂ ಮಹಾಯಾಜಕನೂ ಆದ
12 ಯೆಹೋಶುವನ ತಲೆಯ ಮೇಲೆ ಇಟ್ಟು ಅವನಿಗೆ
ಹೀಗೆ ಹೇಳು—ಸೇನಾಧೀಶ್ವರ ಯೆಹೋವನು ಇಂತೆ
ನ್ನುತ್ತಾನೆ—ಇಗೋ, ಮೊಳಕೆಯೆಂಬ ಪುರುಷನು!
ಅವನು ಇದ್ದಲ್ಲಿಯೇ ವೃದ್ಧಿಯಾಗಿ ಯೆಹೋವನ
13 ಆಲಯವನ್ನು ಕಟ್ಟಿಸುವನು; ಹೌದು, ಅವನೇ
ಯೆಹೋವನ ಆಲಯವನ್ನು ಕಟ್ಟಿಸಿ ರಾಜವೈಭವ
ವನ್ನು ತಾಳಿ ತನ್ನ ಸಿಂಹಾಸನದಲ್ಲಿ ಆಸೀನನಾಗಿ ಆಳು
ವನು; ಮತ್ತು ಯಾಜಕನು 2)ತನ್ನ ಸಿಂಹಾಸನ
ದಲ್ಲಿ ಕೂತ್ರುವನು; ಅವರಿಬ್ಬರೂ ಸಮ್ಮತಿಸಮಾ
14 ಧಾನಗಳಿಂದಿರುವರು. ಆ ಕಿರೀಟವು ಹೇಲೆಮ್,
ತೋಬೀಯ, ಯೆದಾಯ, ಚೆಫನ್ಯನ ಮಗನಾದ
ಹೇನ್, ಇವರ ಜ್ಞಾಪಕಾರ್ಥವಾಗಿ ಯೆಹೋವನ
15 ಆಲಯದಲ್ಲಿ ಇಟ್ಟಿರುವದು. ದೂರದಲ್ಲಿರುವವರು
ಬಂದು ಯೆಹೋವನ ಆಲಯವನ್ನು ಕಟ್ಟುವದಕ್ಕೆ
ಕೈಹಾಕುವರು; ಆಗ ನನ್ನನ್ನು ನಿಮ್ಮ ಬಳಿಗೆ ಕಳು
ಹಿಸಿದಾತನು ಸೇನಾಧೀಶ್ವರ ಯೆಹೋವನೇ ಎಂದು
ನಿಮಗೆ ದೃಢವಾಗುವದು. ನೀವು ನಿಮ್ಮ ದೇವ
ರಾದ ಯೆಹೋವನ ಮಾತನ್ನು ಮನಃಪೂರ್ವಕವಾಗಿ
ಕೇಳಿದರೆ ಇದೆಲ್ಲಾ ನೆರವೇರುವದು.

### ಉಪವಾಸವಿಚಾರ.

ಅರಸನಾದ ದಾರ್ಯಾವೆಷನ ಆಳಿಕೆಯ ನಾಲ್ಕನೆಯ
ವರುಷದ ಕಿಸ್ಲೇವ್ ಎಂಬ ಒಂಭತ್ತನೆಯ ತಿಂಗಳಿನ
ನಾಲ್ಕನೆಯ ದಿನದಲ್ಲಿ ಯೆಹೋವನು ಜೆಕರ್ಯನಿಗ
ಒಂದು ವಾಕ್ಯವನ್ನು ದಯಪಾಲಿಸಿದನು. ಅಷ್ಟರೊ
ಳಗೆ ಬೇತೇಲಿನವರು ಸರೆಚರನನ್ನೂ ರೆಗೆಮ್ಮೆಲೆಕ
ನನ್ನೂ ಅವನ ಪರಿಜನರನ್ನೂ ಯೆಹೋವನ ಪ್ರಸನ್ನ
ತೆಯ ಪ್ರಾರ್ಥನೆಗಾಗಿ ಕಳುಹಿಸಿದ್ದರು. ಆಗ—ನಾವ
ಬಹು ವರುಷಗಳಿಂದ ಮಾಡಿಕೊಂಡು ಬಂದಂತ
ಮುಂದೆಯೂ ಐದನೆಯ ತಿಂಗಳಲ್ಲಿ ಉಪವಾಸ
ಮಾಡಿ ಅಳಬೇಕೋ ಎಂದು ಪ್ರವಾದಿಗಳ ಮತ್ತು
ಸೇನಾಧೀಶ್ವರ ಯೆಹೋವನ ಆಲಯದ ಯಾಜಕರ
ಹತ್ತಿರ ವಿಚಾರಿಸಿಕೊಂಡು ಬನ್ನಿರಿ ಎಂಬದಾಗಿ ಅವರಿಗ
ಅಪ್ಪಣೆಕೊಟ್ಟಿದ್ದರು. ಹೀಗಿರಲು ಸೇನಾಧೀಶ್ವರ
ಯೆಹೋವನು ಈ ವಾಕ್ಯವನ್ನು ನನಗೆ ದಯಪಾಲಿಸಿ
ದನು—ನೀನು ಯಾಜಕರಿಗೂ ದೇಶದ ಸಕಲ ಜನರಿ
ಗೂ ಹೀಗೆ ನುಡಿ—ನೀವು ಈ ಎಪ್ಪತ್ತು ವರುಷಗ
ಳಿಂದಲೂ ಐದನೆಯ ಮತ್ತು ಏಳನೆಯ ತಿಂಗಳ
ಗಳಲ್ಲಿ ಉಪವಾಸಮಾಡಿ ಗೋಳಾಡುತ್ತಿದ್ದಾಗ ಅ
ನಿಮ್ಮ ಉಪವಾಸವು ನನಗಾಗಿಯೇ ಮಾಡಿದ್ದೋ
ನೀವು ಭೋಜನಮಾಡುವಾಗಲೂ ಪಾನಮಾಡುವಾಗ
ಲೂ ಆ ನಿಮ್ಮ ಭೋಜನಪಾನಗಳು ನಿಮ್ಮವಾಗಿಯೇ
ಇರುವವಲ್ಲವೆ. ಯೆರೂಸಲೇಮು ಸುತ್ತಣ ಪಟ್ಟಣ
ಗಳ ಸಮೇತ ಜನಭರಿತವಾಗಿಯೂ ನೆಮ್ಮದಿಯಾಗಿ
ಯೂ ಇದ್ದು ದಕ್ಷಿಣಪ್ರಾಂತದಲ್ಲಿಯೂ ಇಳಕಲಿನ
ಪ್ರದೇಶದಲ್ಲಿಯೂ ಪ್ರಜೆಯು ತುಂಬಿದ್ದಾಗ ಆ ಪೂ
ರ್ವಕಾಲದ ಪ್ರವಾದಿಗಳ ಮೂಲಕ ಯೆಹೋವನು
ಪ್ರಕಟಿಸಿದ ಮಾತುಗಳನ್ನು ನೀವು ಕೇಳಬಾರದೋ?

### ಇಸ್ರಾಯೇಲಿನ ದುರ್ಗತಿಗೆ ಕಾರಣ.

ಅಲ್ಲದೆ ಯೆಹೋವನು ಜೆಕರ್ಯನಿಗೆ ಈ ಮಾತನ್ನು
ದಯಪಾಲಿಸಿದನು—ಸೇನಾಧೀಶ್ವರ ಯೆಹೋವನು
ಇಂತೆಂದಿದ್ದಾನೆ—ಸರಿಯಾಗಿ ನ್ಯಾಯತೀರಿಸಿರಿ, ಒಬ್ಬ
ರಿಗೊಬ್ಬರು ಪ್ರೀತಿಕರುಣೆಗಳನ್ನು ತೋರಿಸಿರಿ; ವಿಧವೆ,
ಅನಾಥ, ವಿದೇಶಿ, ದರಿದ್ರ, ಇವರಾರಿಗೂ ಅನ್ಯಾಯ
ಮಾಡಬೇಡಿರಿ; ನಿಮ್ಮಲ್ಲಿ ಯಾವನೂ ತನ್ನ ಸಹೋ
ದರನಿಗೆ ಕೇಡನ್ನು ಬಗೆಯದಿರಲಿ. ನಿಮ್ಮ ಪಿತೃಗಳಾ
ದರೋ ಗಮನಿಸಲೊಲ್ಲದೆ ಹೆಗಲುಕೊಡದೆಹೋದರು,
ಕೇಳಬಾರದೆಂದು ಕಿವಿಮಂದಮಾಡಿಕೊಂಡರು. ಧ
ರ್ಮೋಪದೇಶವನ್ನೂ ಸೇನಾಧೀಶ್ವರ ಯೆಹೋವನು
ಪೂರ್ವಕಾಲದ ಪ್ರವಾದಿಗಳ ಮೂಲಕ ತನ್ನ ಆತ್ಮ
ನಿಂದ ಹೇಳಿಸಿದ ಮಾತುಗಳನ್ನೂ ಕೇಳಬಾರದೆಂದು
ತಮ್ಮ ಹೃದಯಗಳನ್ನು ವಜ್ರದಷ್ಟು ಕಠಿಣಪಡಿಸಿ
ಕೊಂಡರು; ಆದಕಾರಣ ಸೇನಾಧೀಶ್ವರ ಯೆಹೋ
ವನಿಂದ ಅತಿರೌದ್ರವು ಅವರ ಮೇಲೆ ಬಿತ್ತು. ಆಗ

1) ಪಾಠಾಂತರ: ಬಲವಾದ. 2) ಪಾಠಾಂತರ: ಅವನ ಬಲಗಡೆಯಲ್ಲಿ.

ಸೇನಾಧೀಶ್ವರ ಯೆಹೋವನು ಇಂತೆಂದನು—ನಾನು
ಕೂಗಿದರೂ ಅವರು ಹೇಗೆ ಕೇಳಲಿಲ್ಲವೋ ಹಾಗೆ
14 ಅವರು ಕೂಗಿದರೂ ನಾನು ಕೇಳುವದಿಲ್ಲ; ಅವರು
ನೋಡದ ಎಲ್ಲಾ ಜನಾಂಗಗಳ ಮಧ್ಯಕ್ಕೆ ಅವರನ್ನು
ತೂರಿಬಿಡುವೆನು. ಯೆಹೋವನ ಈ ಮಾತಿನಂತೆ
ಅವರು ಚದರಿದ ಮೇಲೆ ದೇಶವು ಹಾಳಾಯಿತು, ಅದ
ರಲ್ಲಿ ಯಾರೂ ಹೋಗುತ್ತಿರಲಿಲ್ಲ, ಬರುತ್ತಿರಲಿಲ್ಲ; ಆ
ರಮ್ಯದೇಶವನ್ನು ಹಾಳುಗತಿಗೆ ತಂದರಷ್ಟೆ.

### ವಿಧೇಯಜನರಿಗೆ ಯೆಹೋವನು ಸಂಕಲ್ಪಿಸಿರುವ ಭಾಗ್ಯ.

8 ಸೇನಾಧೀಶ್ವರ ಯೆಹೋವನು ಈ ವಾಕ್ಯವನ್ನು
ನನಗೆ ದಯಪಾಲಿಸಿದನು—
2 ಸೇನಾಧೀಶ್ವರ ಯೆಹೋವನು ಇಂತೆನ್ನುತ್ತಾನೆ—
ಚೀಯೋನಿಗೆ ಅವಮಾನವಾಯಿತಲ್ಲಾ ಎಂದು
ಬಹಳವಾಗಿ ಕುದಿಯುತ್ತೇನೆ.
ಅತಿರೋಷಗೊಂಡು ಕುದಿಯುತ್ತೇನೆ.
3 ಯೆಹೋವನು ಇಂತೆನ್ನುತ್ತಾನೆ—
ನಾನು ಚೀಯೋನಿಗೆ ಹಿಂದಿರುಗಿದ್ದೇನೆ,
ಯೆರೂಸಲೇಮಿನ ಮಧ್ಯದಲ್ಲಿ ವಾಸಿಸುವೆನು;
ಆಗ ಯೆರೂಸಲೇಮು ಸುವ್ರತನಗರಿ ಅನ್ನಿಸಿ
ಕೊಳ್ಳುವದು,
ಸೇನಾಧೀಶ್ವರ ಯೆಹೋವನ ಪರ್ವತಕ್ಕೆ
ಪರಿಶುದ್ಧಪರ್ವತವೆಂಬ ಹೆಸರು ಬರುವದು.
4 ಸೇನಾಧೀಶ್ವರ ಯೆಹೋವನು ಇಂತೆನ್ನುತ್ತಾನೆ—
ಇನ್ನು ಮುಂದೆ ಯೆರೂಸಲೇಮಿನ ಚೌಕಗಳಲ್ಲಿ
ಮುದುಕಮುದುಕಿಯರು ಕೂಡ್ರುವರು;
ಅತಿವೃದ್ಧಾಪ್ಯದ ನಿಮಿತ್ತ ಪ್ರತಿಯೊಬ್ಬ ಮುದುಕನ
ಕೈಯಲ್ಲಿ ಊರುಗೋಲಿರುವದು.
5 ಆ ಪಟ್ಟಣದ ಚೌಕಗಳಲ್ಲಿ ಆಟವಾಡುವ ಬಾಲಕ
ಬಾಲಕಿಯರೂ ತುಂಬಿಕೊಂಡಿರುವರು.
6 ಸೇನಾಧೀಶ್ವರ ಯೆಹೋವನು ಇಂತೆನ್ನುತ್ತಾನೆ—
ಆ ಕಾಲದ ಸ್ಥಿತಿಯು ಈ ಜನಶೇಷದವರ ದೃಷ್ಟಿಗೆ
ಅತ್ಯಾಶ್ಚರ್ಯವಾದರೂ
ನನ್ನ ದೃಷ್ಟಿಗೆ ಅತ್ಯಾಶ್ಚರ್ಯವೋ?
ಇದು ಸೇನಾಧೀಶ್ವರ ಯೆಹೋವನ ನುಡಿ.
7 ಸೇನಾಧೀಶ್ವರ ಯೆಹೋವನು ಇಂತೆನ್ನುತ್ತಾನೆ—
ಇಗೋ, ನಾನು ನನ್ನ ಜನರನ್ನು ಮೂಡಣ ದೇಶ
ದಿಂದಲೂ ಪಡುವಣ ದೇಶದಿಂದಲೂ
ಪಾರುಮಾಡಿ ಬರಗೊಳಿಸುವೆನು,
8 ಅವರು ಯೆರೂಸಲೇಮಿನೊಳಗೇ ವಾಸವಾಗಿರು
ವರು;
ಸತ್ಯಸಂಧತೆಯಿಂದಲೂ ಸದ್ಧರ್ಮದಿಂದಲೂ ಅವ
ರು ನನಗೆ ಪ್ರಜೆಯಾಗಿರುವರು,
ಹಾಗೆಯೇ ನಾನು ಅವರಿಗೆ ದೇವರಾಗಿರುವೆನು.
9 ಸೇನಾಧೀಶ್ವರ ಯೆಹೋವನು ಇಂತೆನ್ನುತ್ತಾನೆ—
ದೇವಾಲಯವನ್ನು ಕಟ್ಟುವ ಉದ್ದೇಶದಿಂದ ಸೇನಾ
ಧೀಶ್ವರ ಯೆಹೋವನ ಆ ಮಂದಿರದ ಅಸ್ತಿವಾರವನ್ನು
ಹಾಕಿದ ಕಾಲದಲ್ಲಿಯೂ ಇದ್ದ ಪ್ರವಾದಿಗಳ ಬಾ
ಯಿಂದ ಈ ಮಾತುಗಳನ್ನು ಈಗ ಕೇಳುವವರೇ, ನಿಮ್ಮ
ಕೈಗಳು ಬಲಗೊಳ್ಳಲಿ! ಆ ಕಾಲಕ್ಕೆ ಮುಂಚೆ ಮನು 10
ಷ್ಯನಿಗಾಗಲಿ ಪಶುವಿಗಾಗಲಿ ದುಡಿತದಿಂದ ಏನೂ
ಜೀವನವಾಗುತ್ತಿರಲಿಲ್ಲ; ಹೋಗಿ ಬರುವವರಿಗೆ ಶತ್ರು
ಗಳ ದೆಸೆಯಿಂದ ಭಯವಿಲ್ಲದೆ ಇರಲಿಲ್ಲ; ಒಬ್ಬರನ್ನೊ
ಬ್ಬರು ಎದುರಿಸುವಂತೆ ಎಲ್ಲರನ್ನೂ ಪ್ರೇರಿಸುತ್ತಿದ್ದೆನು.
ಇಂದಿನಿಂದಲೋ ಈ ಜನಶೇಷದವರ ವಿಷಯದಲ್ಲಿ 11
ನಾನು ಪೂರ್ವಕಾಲದಲ್ಲಿ ಇದ್ದಂತೆ ಇರೆನು; ಇದು
ಸೇನಾಧೀಶ್ವರ ಯೆಹೋವನ ನುಡಿ. ನೆಮ್ಮದಿಯ 12
ಬೆಳೆಯಾಗುವದು; ದ್ರಾಕ್ಷಾಲತೆಯು ಹಣ್ಣುಬಿಡುವ
ದು, ಭೂಮಿಯು ಧಾನ್ಯವನ್ನೀಯುವದು, ಆಕಾಶವು
ಇಬ್ಬನಿಯನ್ನು ಸುರಿಸುವದು; ಈ ಜನಶೇಷದವರು
ಇವುಗಳನ್ನೆಲ್ಲಾ ಅನುಭವಿಸುವಂತೆ ಅನುಗ್ರಹಿಸುವೆನು.
ಯೆಹೂದ ಕುಲವೇ, ಇಸ್ರಾಯೇಲ್ ವಂಶವೇ, ನಿಮ್ಮ 13
ಹೆಸರು ಹೇಗೆ ಜನಾಂಗಗಳಲ್ಲಿ ಶಾಪದ ಮಾತಾಗಿ
ಸಲ್ಲುತ್ತಿತ್ತೋ ಹಾಗೆಯೇ ನಾನು ನಿಮ್ಮನ್ನು ರಕ್ಷಿಸಿದ
ಮೇಲೆ ನಿಮ್ಮ ಹೆಸರು ಹರಕೆಯ ಮಾತಾಗಿ ಸಲ್ಲು
ವದು; ಹೆದರಬೇಡಿರಿ, ನಿಮ್ಮ ಕೈಗಳು ಬಲಗೊಳ್ಳಲಿ!
ಸೇನಾಧೀಶ್ವರ ಯೆಹೋವನು ಇಂತೆನ್ನುತ್ತಾನೆ—ನಿ 14
ಮ್ಮ ಪಿತೃಗಳು ನನಗೆ ಸಿಟ್ಟೆಬ್ಬಿಸಿದಾಗ ನಿಮಗೆ ಕೇ
ಡುಮಾಡಬೇಕೆಂದು ನಾನು ನಿಷ್ಕರುಣೆಯಾಗಿ ಸಂಕಲ್ಪಿ
ಸಿದಂತೆ ಈ ಕಾಲದಲ್ಲಿ ಯೆರೂಸಲೇಮಿಗೂ ಯೆಹೂದ 15
ಕುಲಕ್ಕೂ ಮೇಲುಮಾಡಬೇಕೆಂದು ಹೊಸ ಸಂಕಲ್ಪ
ಮಾಡಿಕೊಂಡಿದ್ದೇನೆ; ಹೆದರಬೇಡಿರಿ; ಇದು ಸೇನಾಧೀ
ಶ್ವರ ಯೆಹೋವನ ನುಡಿ. ನೀವು ಮಾಡಬೇಕಾದ 16
ಕಾರ್ಯಗಳು ಇವೇ—ಪ್ರತಿಯೊಬ್ಬನು ತನ್ನ ನೆರೆಯ
ವನ ಸಂಗಡ ನಿಜವನ್ನೇ ಆಡಲಿ; ನಿಮ್ಮ ಚಾವಡಿಗಳಲ್ಲಿ
ಸತ್ಯವನ್ನೂ ಸಮಾಧಾನಪ್ರದನ್ಯಾಯವನ್ನೂ ಸ್ಥಾಪಿ
ಸಿರಿ; ನಿಮ್ಮಲ್ಲಿ ಯಾವನೂ ತನ್ನ ಹೃದಯದಲ್ಲಿ ನೆರೆ 17
ಯವನಿಗೆ ಕೇಡನ್ನು ಬಗೆಯದಿರಲಿ; ಸುಳ್ಳುಸಾಕ್ಷಿಗೆ
ಎಂದೂ ಸಂತೋಷಪಡಬೇಡಿರಿ; ಇವುಗಳನ್ನೆಲ್ಲಾ ದ್ವೇಷಿ
ಸುವವನಾಗಿದ್ದೇನೆ; ಇದು ಯೆಹೋವನ ನುಡಿ.
ಸೇನಾಧೀಶ್ವರ ಯೆಹೋವನು ಈ ಮಾತನ್ನು ನನಗೆ 18
ದಯಪಾಲಿಸಿದನು—ಸೇನಾಧೀಶ್ವರ ಯೆಹೋವನು 19
ಇಂತೆನ್ನುತ್ತಾನೆ—ನಾಲ್ಕನೆಯ ತಿಂಗಳಿನ ಉಪವಾಸ,
ಐದನೆಯ ತಿಂಗಳಿನ ಉಪವಾಸ, ಏಳನೆಯ ತಿಂಗ
ಳಿನ ಉಪವಾಸ, ಹತ್ತನೆಯ ತಿಂಗಳಿನ ಉಪವಾಸ,
ಇವು ಯೆಹೂದ ವಂಶಕ್ಕೆ ವಿಶೇಷವಾದ ಹಬ್ಬಗಳಾಗಿ
ಹರ್ಷೋಲ್ಲಾಸಗಳನ್ನುಂಟುಮಾಡುವವು; ಹೀಗಿರಲು
ಸತ್ಯವನ್ನೂ ಸಮಾಧಾನವನ್ನೂ ಪ್ರೀತಿಸಿರಿ. ಸೇನಾಧೀ 20
ಶ್ವರ ಯೆಹೋವನು ಇಂತೆನ್ನುತ್ತಾನೆ—ಇನ್ನು ಮುಂದೆ
ಜನಾಂಗಗಳೂ ದೊಡ್ಡ ಪಟ್ಟಣಗಳ ನಿವಾಸಿಗಳೂ ಬರು
ವರು; ಒಂದು ಊರಿನವರು ಇನ್ನೊಂದೂರಿಗೆ ಹೋಗಿ— 21
ಯೆಹೋವನ ಪ್ರಸನ್ನತೆಯನ್ನು ಬೇಡುವದಕ್ಕೂ
ಸೇನಾಧೀಶ್ವರ ಯೆಹೋವನನ್ನು ಆಶ್ರಯಿಸುವದಕ್ಕೂ
ಹೋಗೋಣ ಬನ್ನಿರಿ, 1)ನಾವೂ ಹೋಗುತ್ತೇವೆ ಎಂದು

1) ಮೂಲ: ನಾನೂ ಹೋಗುತ್ತೇನೆ.

22 ಹೇಳುವರು. ಹೀಗೆ ಬಹು ದೇಶಗಳವರೂ ಬಲವಾದ
ಜನಾಂಗಗಳವರೂ ಯೆರೂಸಲೇಮಿನಲ್ಲಿ ಸೇನಾಧೀಶ್ವರ
ಯೆಹೋವನನ್ನು ಆಶ್ರಯಿಸುವದಕ್ಕೂ ಯೆಹೋವನ
23 ಪ್ರಸನ್ನತೆಯನ್ನು ಬೇಡುವದಕ್ಕೂ ಬರುವರು. ಸೇನಾ
ಧೀಶ್ವರ ಯೆಹೋವನು ಇಂತೆನ್ನುತ್ತಾನೆ—ಆ ಕಾಲ
ದಲ್ಲಿ ಜನಾಂಗಗಳ ವಿವಿಧಭಾಷೆಗಳವರಾದ ಹತ್ತು
ಜನರು ಯೆಹೂದ್ಯನೊಬ್ಬನ ಸೆರಗನ್ನು ಹಿಡಿದು
ಕೊಂಡು—ನಾವು ನಿಮ್ಮೊಂದಿಗೆ ಬರುವೆವು, ದೇವರು
ನಿಮ್ಮ ಸಂಗಡ ಇದ್ದಾನೆಂಬ ಸುದ್ದಿಯು ನಮ್ಮ ಕಿವಿಗೆ
ಬಿದ್ದಿದೆ ಎಂದು ಹೇಳುವರು.

### ಶತ್ರುಬಾಧೆಯ ಕಾಲದ ಪ್ರವಾದನೆಗಳು.
### 9—14.

ಅರಾಮ್, ತೂರ್, ಫಿಲಿಷ್ಟಿಯ ಈ ರಾಜ್ಯಗಳಿಗಾಗುವ ದಂಡನೆ.

9 ಯೆಹೋವನು ನುಡಿದ ದೈವೋಕ್ತಿಯು
ಹದ್ರಾಕ್ ದೇಶದ ಮೇಲೆ ಬಿದ್ದಿದೆ,
ದಮಸ್ಕವೇ ಅದಕ್ಕೆ ಈಡು;
ಯೆಹೋವನು ನರವಂಶದ ಮೇಲೆ ಕಣ್ಣಿಟ್ಟಿದ್ದಾನೆ,
ಹೌದು, ಇಸ್ರಾಯೇಲಿನ ಸಕಲ ಕುಲಗಳಲ್ಲಿಯೂ
2 ದಮಸ್ಕದ ಪಕ್ಕದಲ್ಲಿನ ಹಮಾತಿನಲ್ಲಿಯೂ
ಬಹು ಜಾಣತನದವುಗಳು ಎಂದುಕೊಂಡಿರುವ
ತೂರ್ ಚೀದೋನ್ ಪಟ್ಟಣಗಳಲ್ಲಿಯೂ ಕಣ್ಣಿ
ಟ್ಟಿದ್ದಾನೆ.
3 ತೂರ್ ಪಟ್ಟಣವು ಕೋಟೆಯನ್ನು ಕಟ್ಟಿಕೊಂಡು
ಬೆಳ್ಳಿಯನ್ನು ದೂಳಿನಂತೆಯೂ
ಬಂಗಾರವನ್ನು ಬೀದಿಯ ಬದಿಯಂತೆಯೂ
ರಾಶಿರಾಶಿ ಮಾಡಿಕೊಂಡಿದೆ.
4 ಆಹಾ, ಕರ್ತನು ಅದರ ಆಸ್ತಿಯನ್ನು ಆಕ್ರಮಿಸಿ
ಪೌಳಿಗೋಡೆಯನ್ನು ಸಮುದ್ರದೊಳಕ್ಕೆ ಹೊಡೆದು
ಹಾಕುವನು;
ಪಟ್ಟಣವು ಬೆಂಕಿಗೆ ತುತ್ತಾಗುವದು.
5 ಅಷ್ಕೆಲೋನು ಇದನ್ನು ನೋಡಿ ಹೆದರುವದು;
ಗಾಜವು ಸಹ ಅತಿಸಂಕಟಪಡುವದು;
ಎಕ್ರೋನು ನಿರೀಕ್ಷೆಗೆಟ್ಟು ಬಹು ವ್ಯಥೆಗೆ ಒಳಗಾ
ಗುವದು; ಗಾಜಕ್ಕೆ ರಾಜನೇ ಇಲ್ಲನಾಗುವನು;
ಅಷ್ಕೆಲೋನು ನಿರ್ಜನವಾಗುವದು;
6 ಅಷ್ಡೋದಿನಲ್ಲಿ ಮಿಶ್ರಜಾತಿಯವರು ವಾಸಮಾಡು
ವರು;
ಹೀಗೆ ಫಿಲಿಷ್ಟಿಯದ ಗರ್ವವನ್ನು ಭಂಗಪಡಿಸುವೆನು.
7 ಅವರು ಸವಿಯುವ ರಕ್ತವನ್ನು ಬಾಯೊಳಗಿಂದ
ತೆಗೆದುಬಿಡುವೆನು;
ಅವರು ಕಚ್ಚುವ ಅಸಹ್ಯಪದಾರ್ಥಗಳನ್ನು ಹಲ್ಲು
ಗಳ ಮಧ್ಯದಿಂದ ಕಿತ್ತುಹಾಕುವೆನು;
ಅವರೂ [1]ಇಸ್ರಾಯೇಲಿನ ದೇವರಿಗೆ ಶೇಷಜನ
ವಾಗಿ ನಿಲ್ಲುವರು;
ಯೆಹೂದದಲ್ಲಿ ಕುಲಪಾಲಕನಂತಿರುವರು;
ಎಕ್ರೋನಿನವರು ಯೆಬೂಸಿಯರ ಹಾಗಿರುವರು
ಯಾರೂ ಹಾದುಹೋಗಿ ಬಾರದಂತೆ
ನನ್ನ ಆಲಯದ ಸುತ್ತಲು ಪಾಳೆಯಹಾಕಿ ಕಾವ
ಲಾಗಿರುವೆನು;
ಇನ್ನು ಮುಂದೆ ಯಾವ ಬಾಧಕನೂ ನನ್ನ ಜನರ
ಮೇಲೆ ಬೀಳನು;
ಏಕಂದರೆ ಈಗ ನಾನು ಕಣ್ಣಿಟ್ಟು ನೋಡುತ್ತಿ
ದ್ದೇನೆ.

### ಸಮಾಧಾನಪ್ರದರಾಜನು.

ಚೀಯೋನ್ ನಗರಿಯೇ, ಬಹು ಸಂತೋಷ
ಪಡು;
ಯೆರೂಸಲೇಮ್ ಪುರಿಯೇ, ಹರ್ಷಧ್ವನಿಗೈ!
ನೋಡು, ನಿನ್ನ ಅರಸು ನಿನ್ನ ಬಳಿಗೆ ಬರುತ್ತಾನೆ;
ಆತನು [2]ನ್ಯಾಯವಂತನು, ಸುರಕ್ಷಿತನು;
ಶಾಂತಗುಣವುಳ್ಳವನಾಗಿಯೂ
ಕತ್ತೆಯನ್ನು, ಹೌದು, ಪ್ರಾಯದ ಕತ್ತೆಮರಿ
ಯನ್ನು
ಹತ್ತಿದವನಾಗಿಯೂ ಬರುತ್ತಾನೆ.
ನಾನು ಎಫ್ರಾಯಿಮಿನ ರಥಬಲವನ್ನೂ ಯೆರೂ
ಸಲೇಮಿನ ಅಶ್ವಬಲವನ್ನೂ ನಿಶ್ಶೇಷಮಾಡು
ವೆನು:
ಯುದ್ಧದ ಬಿಲ್ಲು ಇಲ್ಲವಾಗುವದು;
ಆತನು ಕೊಡುವ ಅಪ್ಪಣೆಯು ಜನಾಂಗಗಳಿಗೆ
ಸಮಾಧಾನಕರವಾಗಿರುವದು;
ಆತನ ಆಳಿಕೆಯು ಸಮುದ್ರದಿಂದ ಸಮುದ್ರದ
ವರೆಗೂ
[ಯೂಫ್ರೇಟೀಸ್] ನದಿಯಿಂದ ಭೂಮಿಯ ಕಟ್ಟ
ಕಡೆಯ ವರೆಗೂ ಹರಡಿಕೊಂಡಿರುವದು.

### ಇಸ್ರಾಯೇಲ್ಯರು ಗ್ರೀಕರನ್ನು ಜಯಿಸುವದು.

[ನನ್ನ ಜನವೇ,] ನೀನು ಒಡಂಬಡಿಕೆಮಾಡಿ
ಕೊಂಡಾಗ ಸುರಿಸಿದ ರಕ್ತವನ್ನು ನಾನು ಸ್ಮರಿಸಿ
ಸೆರೆಯಾಗಿರುವ ನಿನ್ನವರನ್ನು ನೀರಿಲ್ಲದ ಆ
ಬಾವಿಯೊಳಗಿಂದ ಬರಮಾಡುವೆನು.
ಸುನಿರೀಕ್ಷೆಯುಂಟಾದ ಸೆರೆಯವರೇ,
ನಿಮ್ಮ ದುರ್ಗಕ್ಕೆ ಹಿಂದಿರುಗಿರಿ;
ನಿಮಗೆ ಎರಡರಷ್ಟು [ಸುಖವನ್ನು] ದಯಪಾಲಿ
ಸುವೆನು ಎಂದು
ಈಗಲೂ ಪ್ರಕಟಿಸುತ್ತೇನೆ.
ಯೆಹೂದವೆಂಬ ಬಿಲ್ಲನ್ನು ಬೊಗ್ಗಿಸಿಕೊಂಡಿದ್ದೇನೆ,
ಅದರಲ್ಲಿ ಎಫ್ರಾಯಿಮನ್ನು ಹೂಡಿದ್ದೇನೆ;
ಚೀಯೋನೇ, ನಾನು ನಿನ್ನ ಸಂತಾನವನ್ನು [3]ಗ್ರೀಕ್
ಸಂತಾನಕ್ಕೆ ವಿರುದ್ಧವಾಗಿ ಎಬ್ಬಿಸಿ

---

1) ಮೂಲ: ನಮ್ಮ. 2) ಅಥವಾ: ನ್ಯಾಯವಂತನೆಂದು ಸ್ಥಾಪಿಸಲ್ಪಟ್ಟವನು, ರಕ್ಷಣೆಹೊಂದಿದವನು. 3) ಇಬ್ರಿಯ ಮೂ... ಯಾವಾನ್.

ನಿನ್ನನ್ನು ಶೂರನ ಕತ್ತಿಯನ್ನಾಗಿ ಮಾಡುವೆನು.
4 ಯೆಹೋವನು ಸ್ವಜನರಿಗಾಗಿ ಅವರ ಮೇಲ್ಗಡೆ ಕಾಣಿಸಿಕೊಳ್ಳುವನು;
ಆತನ ಬಾಣವು ಸಿಡಿಲಿನಂತೆ ಹಾರುವದು;
ಕರ್ತನಾದ ಯೆಹೋವನು ತುತೂರಿಯನ್ನೂದಿ
ದಕ್ಷಿಣಪ್ರಾಂತದ ಬಿರುಗಾಳಿಗಳೊಡನೆ ನುಗ್ಗುವನು.
5 ಸೇನಾಧೀಶ್ವರ ಯೆಹೋವನು ತನ್ನ ಜನರನ್ನು ಕಾಪಾಡುವನು;
ಅವರು [ಶತ್ರುಗಳನ್ನು] ನುಂಗಿಬಿಡುವರು,
ಕವಣೆಯ ಕಲ್ಲುಗಳನ್ನು ತುಳಿದುಹಾಕುವರು;
[ರಕ್ತವನ್ನು] ಕುಡಿದು ಅಮಲೇರಿದವರಾಗಿ ಭೋರ್ಗರೆಯುವರು;
ಬೋಗುಣಿಗಳಂತೆಯೂ ಯಜ್ಞವೇದಿಯ ಮೂಲೆಗಳ ಹಾಗೂ ರಕ್ತಪೂರ್ಣರಾಗಿರುವರು.
6 ಆ ದಿನದಲ್ಲಿ ಅವರ ದೇವರಾದ ಯೆಹೋವನು
ಅವರನ್ನು ತನ್ನ ಹಿಂಡಾಗಿರುವ ಜನರೆಂದು ರಕ್ಷಿಸುವನು;
ಅವರು ಕಿರೀಟದಲ್ಲಿನ ರತ್ನಗಳಂತೆ
ತಮ್ಮ ದೇಶದಲ್ಲಿ ಥಳಥಳಿಸುವರು.
7 ಆಹಾ, ಅವರ ಸೌಖ್ಯವೆಷ್ಟು, ಅವರ ಸೌಂದರ್ಯವೆಷ್ಟು!
ಧಾನ್ಯವು ಯುವಕರನ್ನು, ದ್ರಾಕ್ಷಾರಸವು ಯುವತಿಯರನ್ನು ಪುಷ್ಟಿಗೊಳಿಸುವದು.

ಕಣಿಯುವರಲ್ಲಿ ನಂಬಿಕೆ ಇಡಕೂಡದು.

10 ಮಳೆಯಾಗುವಂತೆ ಹಿಂಗಾರಿನಲ್ಲಿ ಯೆಹೋವನನ್ನು ಬೇಡಿಕೊಳ್ಳಿರಿ;
ಯೆಹೋವನೇ ಮಿಂಚುಗಳನ್ನು ಉಂಟುಮಾಡುತ್ತಾನೆ,
ಮನುಷ್ಯರಿಗೆ ಸಮೃದ್ಧಿಯಾದ ಮಳೆಯನ್ನು ದಯಪಾಲಿಸುತ್ತಾನೆ,
ಎಲ್ಲರಿಗೂ ಹೊಲದ ಪೈರನ್ನು ಅನುಗ್ರಹಿಸುತ್ತಾನೆ.
2 ವಿಗ್ರಹಗಳು ನುಡಿಯುವದು ಜೊಳ್ಳು;
ಕಣಿಯವರು ಕಾಣುವದು ಸುಳ್ಳು,
ತಿಳಿಸುವ ಕನಸುಗಳು ಕಲ್ಪಿತ,
ಹೇಳುವ ಸಮಾಧಾನವು ವ್ಯರ್ಥ,
ಆದದರಿಂದ ನನ್ನ ಜನರು ದಿಕ್ಕಾಪಾಲಾಗಿದ್ದಾರೆ;
ಕುರುಬನು ಇಲ್ಲದ ಕಾರಣ ಬಾಧೆಗೆ ಒಳಗಾಗಿದ್ದಾರೆ.

ಇಸ್ರಾಯೇಲಿನ ನೂತನ ಬಲ.

3 ನನ್ನ ಕೋಪವು ಕುರುಬರ ಮೇಲೆ ಧಗಧಗಿಸುತ್ತದೆ,
ನಾನು ಹೋತಗಳನ್ನು ದಂಡಿಸುವೆನು;
ಸೇನಾಧೀಶ್ವರ ಯೆಹೋವನು ತನ್ನ ಮಂದೆಯಾದ ಯೆಹೂದ ವಂಶವನ್ನು ಪರಾಂಬರಿಸಿ
ಘನವಾದ ಯುದ್ಧಾಶ್ವವನ್ನಾಗಿ ಮಾಡಿಕೊಳ್ಳುವನು.
[1]ಆ ವಂಶದಿಂದ ಮೂಲೆಗಲ್ಲು, [1]ಆ ವಂಶದಿಂದ ಮೊಳೆ, 4
[1]ಆ ವಂಶದಿಂದ ಯುದ್ಧದ ಬಿಲ್ಲು,
ಅಂತು [1]ಆ ವಂಶದೊಳಗಿಂದ ಸಕಲ ಅಧಿಕಾರಿಗಳು ಉಂಟಾಗುವರು.
ಇವರು ವೀರರಾಗಿ 5
ರಣದೊಳಗೆ [ಶತ್ರುಗಳನ್ನು] ಬೀದಿಗಳ ಕೆಸರಿನಲ್ಲಿ ತುಳಿದುಬಿಡುವರು;
ಯೆಹೋವನು ತಮ್ಮ ಸಂಗಡ ಇದ್ದಾನೆಂದು ಯುದ್ಧಮಾಡುವರು;
ಎದುರಿಸುವ ಸವಾರರು ಭಂಗಪಡುವರು.
ನಾನು ಯೆಹೂದ ವಂಶವನ್ನು ಬಲಗೊಳಿಸಿ 6
ಯೋಸೇಫ ವಂಶವನ್ನು ಉದ್ಧರಿಸುವೆನು;
ನನ್ನ ಕನಿಕರವು ಅವರ ಮೇಲೆ ಇರುವದರಿಂದ
ಅವರನ್ನು ಹಿಂದಕ್ಕೆ ಬರಮಾಡುವೆನು;
ಆಗ ನಾನು ಅವರನ್ನು ತಳ್ಳಿಬಿಟ್ಟದ್ದು ಇಲ್ಲದಂತಾಗುವದು;
ನಾನು ಅವರ ದೇವರಾದ ಯೆಹೋವನಾಗಿದ್ದೇನಲ್ಲಾ,
ಅವರ ಮೊರೆಯನ್ನು ಲಾಲಿಸುವೆನು.

ಚದರಿದವರ ಹಿಂದಿರುಗುವಿಕೆ.

ಎಫ್ರಾಯಿಮ್ಯರು ಶೂರನಂತಿರುವರು, 7
ದ್ರಾಕ್ಷಾರಸಕುಡಿದಂತೆ ಅವರ ಮನಸ್ಸು ಉತ್ಸಾಹಗೊಳ್ಳುವದು;
ಅವರ ಸಂತಾನದವರು ಇದನ್ನು ನೋಡಿ ಸಂತೋಷಪಡುವರು,
ಅವರ ಹೃದಯವು ಯೆಹೋವನಲ್ಲಿ ಆನಂದಿಸುವದು.
ನಾನು ಅವರನ್ನು ಸಿಳ್ಳುಹಾಕಿ ಕರೆದು ಕೂಡಿಸುವೆನು; 8
ಅವರನ್ನು ವಿಮೋಚಿಸಿದ್ದೇನಲ್ಲಾ;
ಅವರು ಹಿಂದೆ ವೃದ್ಧಿಯಾದಂತೆ ಮುಂದೆಯೂ ವೃದ್ಧಿಯಾಗುವರು.
ನಾನು ಅವರನ್ನು ಜನಾಂಗಗಳೊಳಗೆ ಚೆಲ್ಲಿದರೂ 9
ಅವರು ದೂರದೇಶಗಳಲ್ಲಿ ನನ್ನನ್ನು ಸ್ಮರಿಸಿಕೊಂಡು
ಸಂತಾನಸಮೇತವಾಗಿ ಬದುಕಿ ಬಾಳಿ ಹಿಂದಿರುಗಿ ಬರುವರು.
ನಾನು ಅವರನ್ನು ಐಗುಪ್ತ ದೇಶದೊಳಗಿಂದ ಹಿಂದಕ್ಕೆ ಕರೆತರುವೆನು; 10
ಅಶ್ಶೂರದಿಂದ ಕೂಡಿಸುವೆನು;
ಗಿಲ್ಯಾದುಲೆಬನೋನುಗಳ ಪ್ರಾಂತಕ್ಕೆ ಬರಮಾಡುವೆನು;
ಅವರಿಗೆ ಸಾಕಾದಷ್ಟು ಸ್ಥಳ ಸಿಕ್ಕದು.

---

[1] ಅಥವಾ: ಆತನಿಂದ.

11 [1]ಅವರು ಕಷ್ಟವೆಂಬ ಕಡಲನ್ನು ದಾಟಿ ಬರುವರು,
ಅಲ್ಲಕಲ್ಲೋಲವಾದ ಸಮುದ್ರವನ್ನು ಭೇದಿಸಿಬಿಡುವರು,
ನೈಲ್ ನದಿಯೆಲ್ಲಾ ತಳದ ತನಕ ಬಣಗುವದು,
ಅಶ್ಶೂರದ ಗರ್ವವು ತಗ್ಗಿಸಲ್ಪಡುವದು,
ಐಗುಪ್ತದ ರಾಜದಂಡವು ತಪ್ಪಿಹೋಗುವದು.
12 ಅವರು ಯೆಹೋವನಲ್ಲಿ ಬಲಗೊಳ್ಳುವರು,
ಆತನ ಹೆಸರಿನಲ್ಲಿ ನಡೆದುಕೊಳ್ಳುವರು;
ಇದು ಯೆಹೋವನ ನುಡಿ.

ಬಲಿಷ್ಠರ ಪತನ.

11 ಲೆಬನೋನೇ, ನಿನ್ನ ಬಾಗಿಲುಗಳನ್ನು ತೆರೆ,
ಬೆಂಕಿಯು ನಿನ್ನ ದೇವದಾರುಗಳನ್ನು ನುಂಗಲಿ!
2 ತುರಾಯಿ ಮರವೇ, ಗೋಳಾಡು!
ದೇವದಾರು ಬಿದ್ದಿದೆ, [2]ಶ್ರೇಷ್ಠವೃಕ್ಷಗಳು ನಾಶವಾಗಿವೆ.
ಬಾಷಾನಿನ ಅಲ್ಲೋನ್ ಮರಗಳೇ, ಕಿರಚಿರಿ!
ನುಗ್ಗಲಾಗದ ವನವು ಉರುಳಿದೆ.
3 ಆಹಾ, ಕುರುಬರು ಗೋಳಾಡುತ್ತಾರೆ!
ಅವರ [3]ಅತಿಶಯದ ಕಾವಲು ಹಾಳಾಗಿದೆ.
ಇಗೋ, ಪ್ರಾಯದ ಸಿಂಹಗಳು ಗರ್ಜಿಸುತ್ತವೆ!
ಯೊರ್ದನಿನ ದಟ್ಟಡವಿಯು ಪಾಳಾಗಿದೆ.

ಒಳ್ಳೆಯ ಕುರುಬನು, ಅವನಿಗಾಗುವ ತಿರಸ್ಕಾರ.

4 ನನ್ನ ದೇವರಾದ ಯೆಹೋವನು ಹೀಗೆ ಅಪ್ಪಣೆ
ಕೊಟ್ಟನು—ಕೊಯ್ಯುಗ್ಗರಿಗಳ ಮಂದೆಯನ್ನು ಕಾಯಿ;
5 ಕೊಂಡುಕೊಳ್ಳುವವರು ಅವುಗಳನ್ನು ಕೊಯ್ದರೂ
ನಿರ್ದೋಷಿಗಳೆನಿಸಿಕೊಳ್ಳುವರು; ಮಾರುವವರು—
ಯೆಹೋವನಿಗೆ ಸ್ತೋತ್ರವಾಗಲಿ, ಧನವಂತರಾದೆವು
ಅಂದುಕೊಳ್ಳುವರು; ಆ ಮಂದೆಯ ಕುರುಬ
6 ರಾದರೂ ಅವುಗಳನ್ನು ಕರುಣಿಸರಲ್ಲಾ. (ಯೆಹೋ
ವನು ಇಂತೆನ್ನುತ್ತಾನೆ—ನಾನು [4]ಲೋಕನಿವಾಸಿಗ
ಳನ್ನು ಇನ್ನು ಕರುಣಿಸೆನು; ಇಗೋ, ಪ್ರತಿಯೊಬ್ಬ
ನನ್ನು ತನ್ನ ತನ್ನ ನೆರೆಯವನ ಕೈಗೂ ಅರಸನ ಕೈಗೂ
ಒಪ್ಪಿಸುವೆನು; ಆ ಬಲಿಷ್ಠರು ಲೋಕವನ್ನು ಪುಡಿ
ಪುಡಿಮಾಡುವರು; ಅವರ ಕೈಗೆ ಸಿಕ್ಕಿದವರನ್ನು ಉದ್ಧ
7 ರಿಸೆನು). ಆಗ ನಾನು ದೀನಾವಸ್ಥೆಯಲ್ಲಿದ್ದ ಆ
ಕೊಯ್ಯುಗ್ಗರಿಗಳ ಮಂದೆಯನ್ನು ಮೇಯಿಸಿದೆನು.
ಎರಡು ಕೋಲುಗಳನ್ನು ತೆಗೆದುಕೊಂಡು ಒಂದಕ್ಕೆ
ಕನಿಕರವೆಂತಲೂ ಇನ್ನೊಂದಕ್ಕೆ ಒಗ್ಗಟ್ಟೆಂತಲೂ ಹೆಸ
ರಿಟ್ಟು ಅವುಗಳಿಂದ ಮಂದೆಯನ್ನು ಮೇಯಿಸಿದೆನು.
8 ಒಂದೇ ತಿಂಗಳೊಳಗೆ ಮೂವರು ಕುರುಬರನ್ನು
ಅಡಗಿಸಿಬಿಟ್ಟೆನು: ಅನಂತರ ನನಗೆ ಕುರಿಗಳ ವಿಷಯ
ವಾಗಿ ತಾಳ್ಮೆತಪ್ಪಿತು; ಅವೂ ನನಗೆ ಬೇಸರಗೊಂಡವು.
ಆಗ ನಾನು—ನಿಮ್ಮನ್ನು ಮೇಯಿಸೆನು; ಸಾಯು
ವದು ಸಾಯಲಿ, ಹಾಳಾಗುವದು ಹಾಳಾಗಲಿ, ಉಳಿದ
ವುಗಳು ಒಂದರ ಮಾಂಸವನ್ನೊಂದು ತಿನ್ನಲಿ ಅಂದು
ಕೊಂಡು ನಾನು ಎಲ್ಲಾ ಜನಾಂಗಗಳೊಂದಿಗೆ ಮಾಡಿ
ಕೊಂಡಿದ್ದ ಒಡಂಬಡಿಕೆಯನ್ನು ಭಂಗಪಡಿಸಬೇಕೆಂದು
ಕನಿಕರವೆಂಬ ನನ್ನ ಕೋಲನ್ನು ತೆಗೆದು ಕತ್ತರಿಸಿಬಿ
ಟ್ಟೆನು. ಆಗಲೇ ಮುರಿದುಹೋಯಿತು; ಇದರಿಂದ
ಆ ದೀನವಾದ ಮಂದೆಯಲ್ಲಿ ನನ್ನನ್ನು ಲಕ್ಷಿಸುತ್ತಿದ್ದ
ಕುರಿಗಳು ಇದು ಯೆಹೋವನ ನುಡಿ ಎಂದು ತಿಳು
ಕೊಂಡವು. ಅನಂತರ ನಾನು—ನಿಮಗೆ ಸರಿಯಾಗಿ
ತೋರಿದರೆ ನನಗೆ ಸಂಬಳವನ್ನು ಕೊಡಿರಿ, ಇಲ್ಲವಾದರೆ
ಬಿಡಿರಿ ಅನ್ನಲು ಅವರು ಮೂವತ್ತು ತೊಲ ಬೆಳ್ಳಿಯ
ನ್ನು ತೂಗಿ ನನ್ನ ಸಂಬಳಕ್ಕಾಗಿ ಕೊಟ್ಟರು. ಅವರು
ಇವನ ಯೋಗ್ಯತೆ ಇಷ್ಟೇ ಎಂದುಕೊಂಡು ನನಗೆ
ಕೊಟ್ಟ ಆ ಭಾರೀ ಸಂಬಳವನ್ನು ಯೆಹೋವನು
ನೋಡಿ ಅದನ್ನು [5]ಡಬ್ಬಿಗೆ ಹಾಕು ಎಂದು ಅಪ್ಪಣೆ
ಮಾಡಿದಾಗ ನಾನು ಆ ಮೂವತ್ತು ತೊಲ ಬೆಳ್ಳಿ
ಯನ್ನು ತೆಗೆದು ಯೆಹೋವನ ಆಲಯದ ಡಬ್ಬಿಗೆ
ಹಾಕಿದೆನು. ಕೂಡಲೆ ಯೆಹೂದಕ್ಕೂ ಇಸ್ರಾಯೇಲಿ
ಗೂ ಇದ್ದ ಸಹೋದರಭಾವವನ್ನು ಭಂಗಪಡಿಸ
ಬೇಕೆಂದು ಒಗ್ಗಟ್ಟೆಂಬ ನನ್ನ ಎರಡನೆಯ ಕೋಲನ್ನು
ಕತ್ತರಿಸಿಬಿಟ್ಟೆನು.

ಮೂರ್ಖನಾದ ಕುರುಬನು.

ಆ ಮೇಲೆ ಯೆಹೋವನು ನನಗೆ ಹೀಗೆ ಅಪ್ಪಣೆಮಾಡಿ
ದನು—ನೀನು ಮತ್ತೊಮ್ಮೆ ತಕ್ಕ ಸಲಕರಣೆಗಳನ್ನು
ತೆಗೆದುಕೊಂಡು ಮುಕ್ಕಕುರುಬನಂತೆ ನಟಿಸು.
ಇಗೋ, ದೇಶದಲ್ಲಿ ನಾನು ಒಬ್ಬ ಕುರುಬನನ್ನು ಏರ್ಪ
ಡಿಸುವೆನು; ಅವನು ಹಾಳಾಗುತ್ತಿರುವ ಕುರಿಗಳ
ನ್ನು ನೋಡಿಕೊಳ್ಳನು, ಚದರಿದವುಗಳನ್ನು ಹುಡುಕನು,
ಊನವಾದವುಗಳನ್ನು ಗುಣಪಡಿಸನು, ನೆಟ್ಟಗಿರುವವುಗ
ಳನ್ನು ಸಾಕನು; ಕೊಬ್ಬಿದವುಗಳ ಮಾಂಸವನ್ನು
ತಿನ್ನುವನು, ಕುರಿಗಳ ಗೊರಸುಗಳನ್ನು ಚೂರುಚೂರು
ಮಾಡುವನು. ಮಂದೆಯನ್ನು ಕಾಯದೆ ಬಿಟ್ಟು
ಬಿಟ್ಟ ತರವಲ್ಲದ ಕುರುಬನ ಗತಿಯನ್ನು ಏನು
ಹೇಳಲಿ! ಖಡ್ಗವು ಅವನ ತೋಳಿಗೂ ಬಲಗಣ್ಣಿಗೂ
ತಾಕುವದು; ಅವನ ತೋಳು ತೀರಾ ಬಣಗಿಹೋಗು
ವದು, ಅವನ ಬಲಗಣ್ಣು ಪೂರಾ ಮೊಬ್ಬಾಗುವದು.

ಶತ್ರುಗಳಿಗೆ ಯೆರೂಸಲೇಮಿನಿಂದಾಗುವ ಅಪಾಯ.

ಇಸ್ರಾಯೇಲಿನ ವಿಷಯವಾಗಿ ಯೆಹೋವನು 1
ನುಡಿದ ದೈವೋಕ್ತಿ.
ಆಕಾಶಮಂಡಲವನ್ನು ಹರವಿ

1) ಅಥವಾ: ಯೆಹೋವನು ಕಷ್ಟವೆಂಬ ಕಡಲನ್ನು ದಾಟುವನು . . . ಸೀಳಿಬಿಡುವನು. ಮೂಲ: ಅವನು . . . 2) ಮೂ
ಶ್ರೇಷ್ಠವಾದವುಗಳು. 3) ಮೂಲ: ಅತಿಶಯವು. 4) ಅಥವಾ: ದೇಶನಿವಾಸಿಗಳನ್ನು . . . ದೇಶವನ್ನು. 5) ಪಾಠಾಂ
ಕುಂಬಾರನಿಗೆ ಎಸೆ . . . . ಆಲಯದಲ್ಲಿ ಕುಂಬಾರನಿಗೆ ಎಸೆದೆನು.

ಭೂಲೋಕಕ್ಕೆ ಅಸ್ತಿವಾರವನ್ನು ಹಾಕಿ
ಮನುಷ್ಯನೊಳಗೆ ಜೀವಾತ್ಮವನ್ನು ಸೃಷ್ಟಿಸುವ
ಯೆಹೋವನು ಇಂತೆನ್ನುತ್ತಾನೆ—
2 ಆಹಾ! ನಾನು ಯೆರೂಸಲೇಮನ್ನು ಸುತ್ತಣ ಸಕಲ ಜನಾಂಗಗಳಿಗೆ
ಅಮಲೇರಿಸಿ ಓಲಾಡಿಸುವ ಬೋಗುಣಿಯನ್ನಾಗಿ ಮಾಡುವೆನು;
[1]ಯೆರೂಸಲೇಮಿಗೆ ಮುತ್ತಿಗೆಹಾಕುವಾಗ
ಯೆಹೂದಕ್ಕೂ ಇಕ್ಕಟ್ಟಾಗುವದು.
3 ಆ ದಿನದಲ್ಲಿ ನಾನು ಯೆರೂಸಲೇಮನ್ನು ಸಮಸ್ತ ಜನಗಳಿಗೂ
ಭಾರೀ ಬಂಡೆಯನ್ನಾಗಿ ಮಾಡುವೆನು;
ಅದನ್ನೆತ್ತುವವರೆಲ್ಲರಿಗೂ ಕಡುಗಾಯವಾಗುವದು;
ಲೋಕದ ಸಕಲ ರಾಜ್ಯಗಳು [2]ಅದನ್ನೆತ್ತಿ ಹಾಕಲು ಕೂಡಿಬರುವವು.
4 ಯೆಹೋವನು ಇಂತೆನ್ನುತ್ತಾನೆ—
ಆ ದಿನದಲ್ಲಿ ನಾನು ಎಲ್ಲಾ ಕುದುರೆಗಳಿಗೆ
ತಬ್ಬಿಬ್ಬನ್ನು ಉಂಟುಮಾಡುವೆನು,
ಸವಾರರನ್ನು ಭ್ರಮೆಗೊಳಿಸುವೆನು;
ಯೆಹೂದ ವಂಶವನ್ನು ಕಟಾಕ್ಷಿಸಿ
ಜನಾಂಗಗಳ ಅಶ್ವಗಳನ್ನೆಲ್ಲಾ ಕುರುಡುಮಾಡುವೆನು.
5 ಆಗ ಯೆಹೂದದ ಕುಲಪತಿಗಳು ಮನಸ್ಸಿನೊಳಗೆ—
ಯೆರೂಸಲೇಮಿನವರು ತಮ್ಮ ದೇವರೂ ಸೇನಾಧೀಶ್ವರನೂ ಆದ ಯೆಹೋವನಲ್ಲಿ ಬಲಗೊಂಡು
ನಮಗೆ ತ್ರಾಣವಾಗಿದ್ದಾರೆ ಅಂದುಕೊಳ್ಳುವರು.
6 ಆ ದಿನದಲ್ಲಿ ನಾನು ಯೆಹೂದದ ಕುಲಪತಿಗಳನ್ನು
ಸೌದೆಯ ಮಧ್ಯದಲ್ಲಿನ ಅಗ್ಗಿಷ್ಟಿಕೆಯನ್ನಾಗಿಯೂ
ಸಿವುಡುಗಳ ನಡುವಣ ಪಂಜನ್ನಾಗಿಯೂ ಮಾಡುವೆನು;
ಅವರು ಸುತ್ತಣ ಜನಾಂಗಗಳನ್ನೆಲ್ಲಾ ಎಡಬಲಗಳಲ್ಲಿ ನುಂಗಿಬಿಡುವರು;
ಯೆರೂಸಲೇಮಿನವರು ತಮ್ಮ ಸ್ಥಳವಾದ ಯೆರೂಸಲೇಮಿನಲ್ಲೇ ಇನ್ನು ವಾಸಿಸುವರು.
7 ದಾವೀದ ವಂಶದವರ ಮಹಿಮೆಯೂ ಯೆರೂಸಲೇಮಿನವರ ಮಹಿಮೆಯೂ
ಯೆಹೂದದ ಮಹಿಮೆಯನ್ನು ಮೀರದಂತೆ
ಯೆಹೋವನು ಯೆಹೂದದ ಪಾಳೆಯಗಳಿಗೆ ಮೊದಲು ಜಯವನ್ನುಂಟುಮಾಡುವನು;
8 ಆ ದಿನದಲ್ಲಿ ಯೆಹೋವನು ಯೆರೂಸಲೇಮಿನವರನ್ನು ಸುತ್ತಲು ಕಾಪಾಡುವನು;
ಅವರೊಳಗೆ ಈಗಿನ ಕುಂಟನು ಆ ದಿನದಲ್ಲಿ ದಾವೀದನಂತಿರುವನು;
ದಾವೀದ ವಂಶವು ದೇವರಂತೆ, ಯೆಹೋವನ ದೂತನ ಹಾಗೆ
ಅವರಿಗೆ ಮುಂದಾಳಾಗುವದು.
ಯೆರೂಸಲೇಮಿನ ಮೇಲೆ ಬೀಳುವ ಎಲ್ಲಾ ಜನಾಂಗಗಳ ಧ್ವಂಸಕ್ಕೆ 9
ಆ ದಿನದಲ್ಲಿ ಕೈಹಾಕುವೆನು.

ಇಸ್ರಾಯೇಲ್ಯರ ಪಶ್ಚಾತ್ತಾಪ.

ದಾವೀದ ವಂಶದವರಲ್ಲಿಯೂ ಯೆರೂಸಲೇಮಿನವರಲ್ಲಿಯೂ 10
ದೇವರ ದಯೆಯನ್ನು [3]ಹಂಬಲಿಸಿ ಬೇಡುವ ಭಾವವನ್ನು ಸುರಿಸುವೆನು;
ತಾವು [4]ಇರಿದವನನ್ನು ದಿಟ್ಟಿಸಿ ನೋಡುವರು;
ಇದ್ದೊಬ್ಬ ಮಗನನ್ನು ಕಳೆದುಕೊಂಡಂತೆ ಅವನಿಗಾಗಿ ಗೋಳಾಡುವರು.
ಚೊಚ್ಚಲಮಗನ ವಿಯೋಗಕ್ಕೋಸ್ಕರ ದುಃಖಪಟ್ಟಂತೆ ಅವನಿಗಾಗಿ ದುಃಖಿಸುವರು.
ಮೆಗಿದ್ದೋವಿನ ತಗ್ಗಿನೊಳಗೆ [5]ಹದದ್‌ರಿಮ್ಮೋನಿನಲ್ಲಿ ಗೋಳಾಟವಾಗುವಂತೆ 11
ಯೆರೂಸಲೇಮಿನಲ್ಲಿ ಆ ದಿನ ದೊಡ್ಡ ಗೋಳಾಟವಾಗುವದು.
ದೇಶವೆಲ್ಲಾ ಗೋಳಾಡುವದು, 12
ಒಂದೊಂದು ಕುಟುಂಬವು ಬೇರೆ ಬೇರೆ ಗೋಳಾಡುವದು;
ದಾವೀದ ವಂಶದ ಕುಟುಂಬವು ಬೇರೆ,
ಅದರಲ್ಲಿ ಹೆಂಗಸರು ಗಂಡಸರು ಬೇರೆ ಬೇರೆ;
ನಾತಾನ ವಂಶದ ಕುಟುಂಬವು ಬೇರೆ,
ಅದರಲ್ಲಿ ಹೆಂಗಸರು ಗಂಡಸರು ಬೇರೆ ಬೇರೆ;
ಲೇವಿ ವಂಶದ ಕುಟುಂಬವು ಬೇರೆ, 13
ಅದರಲ್ಲಿ ಹೆಂಗಸರು ಗಂಡಸರು ಬೇರೆ ಬೇರೆ;
ಶಿಮ್ಮಿಯ ಸಂತಾನದ ಕುಟುಂಬವು ಬೇರೆ,
ಅದರಲ್ಲಿ ಹೆಂಗಸರು ಗಂಡಸರು ಬೇರೆ ಬೇರೆ;
ಮಿಕ್ಕ ಕುಟುಂಬಗಳೆಲ್ಲಾ ಬೇರೆ ಬೇರೆ, 14
ಒಂದೊಂದರಲ್ಲಿಯೂ ಹೆಂಗಸರು ಗಂಡಸರು ಬೇರೆ ಬೇರೆ.
ಹೀಗೆ ಬೇರೆ ಬೇರೆಯಾಗಿಯೇ ಗೋಳಾಡುವರು.

ದೇಶದ ಶುದ್ಧೀಕರಣ, ಮಿಥ್ಯಾಪ್ರವಾದನೆಯ ನಿರಾಕರಣ.

13 ಆ ದಿನದಲ್ಲಿ ಪಾಪವನ್ನೂ ಅಶುಚಿಯನ್ನೂ ಪರಿಹರಿಸತಕ್ಕ ಒಂದು ಬುಗ್ಗೆಯು
ದಾವೀದ ವಂಶದವರಿಗೂ ಯೆರೂಸಲೇಮಿನವರಿಗೂ ತೆರೆದಿರುವದು.
ಸೇನಾಧೀಶ್ವರ ಯೆಹೋವನು ಇಂತೆನ್ನುತ್ತಾನೆ— 2
ಆ ದಿನದಲ್ಲಿ ನಾನು ವಿಗ್ರಹಗಳನ್ನು ದೇಶದೊಳಗಿಂದ ನಿರ್ನಾಮಮಾಡುವೆನು,

---

1) ಅಥವಾ: ಆಗ ಯೆರೂಸಲೇಮಿಗೆ ಮುತ್ತಿಗೆ ಹಾಕುವವರೊಳಗೆ ಯೆಹೂದವೂ ಸೇರಿರುವದು. 2) ಮೂಲ: ಅದಕ್ಕೆ ವಿರುದ್ಧ ...ವಾಗಿ. 3) ಅಥವಾ: ಬೇಡಿ ಬಲಿಸಿಕೊಳ್ಳುವ. 4) ಪಾಠಾಂತರ: ಇರಿದ ನನ್ನನ್ನು. 5) ಅಥವಾ: ಹದದ್‌ರಿಮ್ಮೋನಿನ ...ಷಿಸುವಾಗಿ.

ಅವು ಇನ್ನು ಯಾರ ನೆನಪಿಗೂ ಬಾರವು;
ಅಲ್ಲದೆ ಪ್ರವಾದಿಗಳನ್ನೂ ದುರಾತ್ಮವನ್ನೂ ದೇಶದೊಳಗಿಂದ ತೊಲಗಿಸಿಬಿಡುವೆನು.
3 ಆಗ ಯಾವನಾದರೂ ಮತ್ತೆ ಪ್ರವಾದನೆಮಾಡಿದರೆ
ಅವನ ಹೆತ್ತ ತಾಯಿತಂದೆಗಳು ಅವನಿಗೆ—
ನೀನುಳಿಯಬೇಡ;
ಯೆಹೋವನ ಹೆಸರೆತ್ತಿ ಸುಳ್ಳಾಡುತ್ತೀ ಎಂದು ಹೇಳಿ
ಆ ಹೆತ್ತ ತಾಯಿತಂದೆಗಳೇ ಅವನ ಪ್ರವಾದನೆಯ ನಿಮಿತ್ತ
ಅವನನ್ನು ಇರಿದುಬಿಡುವರು.
4 ಆ ದಿನದಲ್ಲಿ ಯಾವ ಪ್ರವಾದಿಯೇ ಆಗಲಿ ಪ್ರವಾದನೆ ಮಾಡಬೇಕೆಂದಿರುವಾಗ
ತನಗಾದ ದರ್ಶನವನ್ನು ಪ್ರಕಟಿಸಲು ನಾಚಿಕೆಪಡುವನು;
ಯಾವನೂ ಮೋಸಕ್ಕಾಗಿ 1)ಕಂಬಳಿಯನ್ನು ಹೊದ್ದುಕೊಳ್ಳನು;
5 ಒಬ್ಬನು—ನಾನು ಪ್ರವಾದಿಯಲ್ಲ, ಹೊಲದ ಕೆಲಸದವನು;
ಚಿಕ್ಕತನದಿಂದಲೂ ಗುಲಾಮನಾಗಿದ್ದೇನೆ ಎಂದು ಹೇಳಲು
6 ಮತ್ತೊಬ್ಬನು ಅವನನ್ನು—
ನಿನ್ನ 2)ಎದೆಯ ಮೇಲಿನ ಈ ಗಾಯಗಳೇನು ಎಂದು ಕೇಳಿದರೆ
ಅವನು—ಮಿತ್ರರ ಮನೆಯಲ್ಲಿ ನನಗಾದ ಗಾಯಗಳು ಎಂದುತ್ತರ ಕೊಡುವನು.

ಮುಂದೆಗಾಗುವ ಹಿಂಸೆ, ಶೇಷಕ್ಕೆ ಲಭಿಸುವ ಸುಫಲ.

7 ಸೇನಾಧೀಶ್ವರ ಯೆಹೋವನು ಇಂತೆನ್ನುತ್ತಾನೆ—
ಖಡ್ಗವೇ, ನಾನು ನೇಮಿಸಿದ ಕುರುಬನೂ ನನ್ನ ಸಂಗಡಿಗನೂ
ಆಗಿರುವವನಿಗೆ ವಿರುದ್ಧವಾಗಿ ಎಚ್ಚರಗೊಳ್ಳು;
ಕುರುಬನನ್ನು 3)ಹೊಡೆ, ಕುರಿಗಳು ಚದರಿಹೋಗುವವು;
ಮರಿಗಳ ಮೇಲೂ ಕೈಮಾಡಬೇಕೆಂದಿದ್ದೇನೆ.
8 ದೇಶದೊಳಗೆಲ್ಲಾ ಮೂರರಲ್ಲಿ ಎರಡು ಭಾಗದವರು ಹತರಾಗಿ ಸಾಯುವರು,
ಮೂರನೆಯ ಭಾಗದವರು ಅಲ್ಲಿ ಉಳಿಯುವರು;
ಇದು ಯೆಹೋವನ ನುಡಿ.
9 ಆ ಮೂರನೆಯ ಭಾಗದವರನ್ನು ನಾನು ಬೆಂಕಿಗೆ ಹಾಕಿ
ಬೆಳ್ಳಿಯಂತೆ ಶೋಧಿಸುವೆನು, ಬಂಗಾರದ ಹಾಗೆ ಶುದ್ಧಿಮಾಡುವೆನು;
ಅವರು ನನ್ನ ಹೆಸರೆತ್ತಿ ಪ್ರಾರ್ಥಿಸುವರು,
ನಾನು ಆಲಿಸುವೆನು;
ನಾನು—ಇವರು ನನ್ನ ಜನರು ಅಂದುಕೊಳ್ಳುವೆನು,
ಅವರು—ನಮ್ಮ ದೇವರಾದ ಯೆಹೋವನೇ ಅನ್ನುವರು.

ಯೆರೂಸಲೇಮಿನ ಅದ್ಭುತರಕ್ಷಣೆ, ಶತ್ರುಧ್ವಂಸ.

ಆಹಾ, [ಚೀಯೋನೇ!] ಯೆಹೋವನು ನೇಮಿ 1
ಸಿದ ದಿನವು ಬರುತ್ತಿದೆ; ಸೂರೆಯಾದ ನಿನ್ನ ಆಸ್ತಿ
ಯು ಆಗ ನಿನ್ನ ಮಧ್ಯದಲ್ಲಿ ಹಂಚಿಕೆಯಾಗುವದು.
ನಾನು ಸಕಲ ಜನಾಂಗಗಳನ್ನು ಯೆರೂಸಲೇಮಿಗೆ
ವಿರುದ್ಧವಾಗಿ ಕೂಡಿಸುವೆನು; ಅವು ಪಟ್ಟಣವನ್ನು
ಆಕ್ರಮಿಸಿಕೊಂಡು ಮನೆಗಳನ್ನು ಸೂರೆಮಾಡಿ ಹೆಂಗಸ
ರನ್ನು ಕೆಡಿಸುವವು; ಪಟ್ಟಣದ ಅರವಾಸಿ ಜನರು ಸೆರೆ
ಗೆ ಹೋಗುವರು, ಮಿಕ್ಕವರೋ ಪಟ್ಟಣದಲ್ಲೇ ಉಳಿ
ಯುವರು. ಆಗ ಯೆಹೋವನು ಹೊರಟು ಯುದ್ಧ
ದಿನದಲ್ಲಿ ಹೇಗೋ ಹಾಗೆಯೇ ಆ ಜನಾಂಗಗಳಿಗೆ
ಪ್ರತಿಭಟಿಸುವನು. ಯೆರೂಸಲೇಮಿಗೆ ಮೂಡಲಲ್ಲಿ
ಎದುರಾಗಿರುವ ಎಣ್ಣೆಯ ಮರಗಳ ಗುಡ್ಡದ ಮೇಲೆ
ಆತನ ಪಾದಗಳು ನಿಂತಿರಲು ಆ ಗುಡ್ಡವು ಮೂಡಲಿಂದ
ಪಡುವಲಿಗೆ ಉದ್ದಕ್ಕೂ ಸೀಳಿಹೋಗಿ ಮಧ್ಯದಲ್ಲಿ
ದೊಡ್ಡ ಡೊಂಗರವಾಗುವದು; ಗುಡ್ಡದ ಅರ್ಧಭಾಗವು
ಬಡಗಲಿಗೆ, ಅರ್ಧಭಾಗವು ತೆಂಕಲಿಗೆ ಸರಿದುಕೊಳ್ಳು
ವದು. ನೀವು ನನ್ನ ಗುಡ್ಡಗಳ ನಡುವಣ ಆ 4)ಡೊಂಗ
ರದೊಳಕ್ಕೆ ಓಡಿಹೋಗುವಿರಿ; ಏಕಂದರೆ ಆ ಡೊಂಗರ
ವು 5)ಆಚೆಲಿಗೆ ಮುಟ್ಟಿರುವದು; ಯೆಹೂದದ ಅರಸ
ನಾದ ಉಜ್ಜೀಯನ ಕಾಲದಲ್ಲಿ ಭೂಕಂಪದ ಕಡೆ
ಯಿಂದ ನೀವು ಓಡಿಹೋದಂತೆಯೇ ಓಡಿಹೋಗುವಿರಿ;
ಆಗ ನನ್ನ ದೇವರಾದ ಯೆಹೋವನು ಸಮಸ್ತ ದೇವ
ದೂತಸಮೇತ ಬರುವನು. 6)ಆ ದಿನದಲ್ಲಿ ಬೆಳಕಿರ
ದು, ಜ್ಯೋತಿಗಳು ಉಡುಗಿಹೋಗುವವು. 7)ಇಂಥಾ
ದಿನವು ಒಂದೇ, ಅದು ಯೆಹೋವನಿಗೆ ಗೊತ್ತು,
ಅದು ಹಗಲೂ ಅಲ್ಲ, ಇರುಳೂ ಅಲ್ಲ, ಆದರೆ ಸಂಜೆ
ಯ ವೇಳೆಯಲ್ಲಿ ಬೆಳಕಾಗುವದು. ಆ ದಿನದಲ್ಲಿ
ಜೀವಕರವಾದ ಜಲಪ್ರವಾಹವು ಯೆರೂಸಲೇಮಿ
ನೊಳಗಿಂದ ಹೊರಡುವದು; ಅರ್ಧಭಾಗವು ಪೂರ್ವ
ಸಮುದ್ರಕ್ಕೂ ಅರ್ಧಭಾಗವು ಪಶ್ಚಿಮಸಮುದ್ರಕ್ಕೂ
ಹರಿಯುವದು; ಬೇಸಿಗೆಕಾಲದಲ್ಲಿಯೂ ಮಳೆಗಾಲ
ದಲ್ಲಿಯೂ ಹರಿಯುತ್ತಲೇ ಇರುವದು. ಯೆ
ಹೋವನು ಭೂಲೋಕಕ್ಕೆಲ್ಲಾ ರಾಜನಾಗಿರುವನು;
ಆ ದಿನದಲ್ಲಿ ಯೆಹೋವನೊಬ್ಬನೇ ದೇವರೆಂದೂ
ಆತನ ಹೆಸರೊಂದೇ ಸ್ತುತ್ಯವೆಂದೂ ಎಲ್ಲರಿಗೂ ತಿಳಿದಿ
ರುವದು. ಆಗ ದೇಶವು ಗೆಬದಿಂದ ಯೆರೂಸಲೇ
ಮಿಗೆ ತೆಂಕಲಲ್ಲಿರುವ ರಿಮ್ಮೋನಿನ ವರೆಗೆ ತಗ್ಗಾಗಿ
ಮಾರ್ಪಡುವದು; ಯೆರೂಸಲೇಮೋ ಬೆನ್ಯಾಮಿ

1) ಅಥವಾ: ತುಪ್ಪಟದ ತೊಗಲನ್ನು. 2) ಮೂಲ: ಕೈಗಳ ನಡುವಣ. 3) ಪಾಠಾಂತರ: ಹೊಡೆಯುವೆ
4) ಅಥವಾ: ಡೊಂಗರದ ಮಾರ್ಗವಾಗಿ. 5) ಅಥವಾ: ಬಹು ಹತ್ತಿರಕ್ಕೆ ಬಂದಿರುವದು. 6) ಅಥವಾ: ಆ ಕಾಲದ ಬೆಳ
ಕಳೆಗುಂದುವ ಬೆಳಕಲ್ಲ; ಆ ಕಾಲವು ಒಂದೇ ದೀರ್ಘದಿವಸ; ಅದು ಯೆಹೋವನ ವಿಶೇಷ ಪರಾಂಬರಿಕೆಗೆ ಈಡಾಗಿದೆ; ಹಗಲಿರುಳು ಇರ
ಸಂಜೆಯ ವೇಳೆಯಲ್ಲಿಯೂ ಬೆಳಕೇ. ಈ ವಚನಗಳ ಮೂಲವು ಕೇವಲ ಅಸ್ಪಷ್ಟ. 7) ಅಥವಾ: ಆ ದಿನವು ಅಪೂರ್ವವಾದದ್ದು.

ನಿನ ಬಾಗಿಲಿಂದ ಪೂರ್ವಕಾಲದ ಬಾಗಿಲಿನ ಸ್ಥಳದ
ವರೆಗೆ, ಮೂಲೆಯ ಬಾಗಿಲಿನ ತನಕ, ಹನನೇ
ಲನ ಬುರುಜಿನಿಂದ ಅರಸನ ದ್ರಾಕ್ಷೆಯ ಆಲೆಗಳ ಪರಿ
ಯಂತ ಇದ್ದ ಕಡೆಯೇ ಎತ್ತರದಲ್ಲಿ ನಿಂತಿರುವದು.
11 ಅದರಲ್ಲಿ ಜನರು [ತುಂಬಾ] ವಾಸಿಸುವರು, ಇನ್ನು
ಶಾಪವಿರದು; ಯೆರೂಸಲೇಮು ನೆಮ್ಮದಿಯಾಗಿ ನೆಲೆ
12 ಗೊಂಡಿರುವದು. ಯೆರೂಸಲೇಮಿನ ಮೇಲೆ ಯುದ್ಧ
ಮಾಡಿದ ಸಕಲ ಜನಾಂಗಗಳಿಗೂ ಯೆಹೋವನು ಈ
ವ್ಯಾಧಿಯನ್ನು ತಗಲಿಸುವನು—ಹೆಜ್ಜೆಯ ಮೇಲೆ ನಿಂತ
ನಿಂತ ಹಾಗೆಯೇ ಅವರ ಮಾಂಸವು ಕೊಳೆತುಹೋಗು
ವದು, ಕಣ್ಣು ಗುಣಿಯಲ್ಲೇ ಇಂಗುವದು, ನಾಲಿಗೆ
13 ಯು ಬಾಯಲ್ಲೇ ಕ್ಷಯಿಸುವದು. ಆ ದಿನದಲ್ಲಿ
ಯೆಹೋವನು ಉಂಟುಮಾಡುವ ದೊಡ್ಡ ಗಲಿಬಿಲಿಯು
ಅವರಲ್ಲಿ ಹರಡುವದು; ಒಬ್ಬರ ಕೈಯನ್ನೊಬ್ಬರು
ತಡೆಹಿಡಿಯುವರು, ಒಬ್ಬರ ಮೇಲೊಬ್ಬರು ಕೈಯೆತ್ತು
14 ವರು. ಯೆಹೂದವೂ 1)ಯೆರೂಸಲೇಮಿನ ಪರವಾಗಿ
ಯುದ್ಧಮಾಡುವದು; ಸುತ್ತಣ ಸಕಲ ಜನಾಂಗಗಳ
ಆಸ್ತಿಯು ಅಂದರೆ ಬೆಳ್ಳಿಬಂಗಾರಬಟ್ಟೆಗಳು ರಾಶಿರಾಶಿ
15 ಯಾಗಿ ಬಾಚಲ್ಪಡುವವು. ಜನಾಂಗಗಳಿಗೆ ತಗಲುವಂಥ
ವ್ಯಾಧಿಯೇ ಕುದುರೆ, ಹೇಸರಗತ್ತೆ, ಒಂಟೆ, ಕತ್ತೆ, ಅಂತು
ಆ ಪಾಳೆಯಗಳಲ್ಲಿನ ಸಮಸ್ತಪಶುಗಳಿಗೂ ತಗಲು
16 ವದು. ಅನಂತರ ಯೆರೂಸಲೇಮಿನ ಮೇಲೆ ಬಿದ್ದ
ಸಕಲ ಜನಾಂಗಗಳಲ್ಲಿ ಉಳಿದವರೆಲ್ಲರೂ ಸೇನಾಧೀ
ಶ್ವರ ಯೆಹೋವನೆಂಬ ರಾಜಾಧಿರಾಜನನ್ನು ಆರಾಧಿಸು
ವದಕ್ಕೂ ಪರ್ಣಶಾಲೆಗಳ ಹಬ್ಬವನ್ನು ಆಚರಿಸುವದ
ಕ್ಕೂ ಪ್ರತಿವರುಷವು ಹೊರಟುಬರುವರು. ಲೋ 17
ಕದ ಸಮಸ್ತ ಕುಲಗಳಲ್ಲಿ ಯಾವ ಕುಲದವರು ಸೇ
ನಾಧೀಶ್ವರ ಯೆಹೋವನೆಂಬ ರಾಜಾಧಿರಾಜನನ್ನು
ಆರಾಧಿಸುವದಕ್ಕೆ ಬರುವದಿಲ್ಲವೋ ಅವರಿಗೆ ಮಳೆ
ಬರುವದಿಲ್ಲ. ಐಗುಪ್ತ ಕುಲದವರು ಹೊರಟು 18
ಬಾರದಿದ್ದರೆ 2)ಪರ್ಣಶಾಲೆಗಳ ಹಬ್ಬವನ್ನು ಆಚರಿಸು
ವದಕ್ಕೆ ಬಾರದಿರುವ ಜನಾಂಗಗಳಿಗೆ ಯೆಹೋವನು
ತಗಲಿಸುವ ಬಾಧೆಯು ಅವರಿಗೂ ತಗಲುವದು. ಐಗು 19
ಪ್ತಕ್ಕೂ ಪರ್ಣಶಾಲೆಗಳ ಹಬ್ಬವನ್ನು ಆಚರಿಸುವದಕ್ಕೆ
ಬಾರದಿರುವ ಸಕಲ ಜನಾಂಗಗಳಿಗೂ ಸಂಭವಿಸುವ
ದಂಡನೆಯು ಇದೇ.

ಯೆರೂಸಲೇಮಿನ ಪೂರ್ಣಪರಿಶುದ್ಧತೆ.

ಆ ದಿನದಲ್ಲಿ—ಯೆಹೋವನಿಗೆ ಮೀಸಲು ಎಂಬ 20
ಲಿಪಿಯು ಕುದುರೆಗಳ ಘಂಟೆಗಳ ಮೇಲೂ ಕೆತ್ತಿರು
ವದು; ಯೆಹೋವನ ಆಲಯದ ಪಾತ್ರೆಗಳೆಲ್ಲವೂ
ಯಜ್ಞವೇದಿಯ ಪಕ್ಕದ ಬೋಗುಣಿಗಳಂತೆ ಪರಿಶುದ್ಧ
ವಾಗಿರುವವು. ಅಲ್ಲದೆ ಯೆರೂಸಲೇಮಿನಲ್ಲಿಯೂ 21
ಯೆಹೂದದಲ್ಲಿಯೂ ಇರುವ ಸಕಲ ಪಾತ್ರೆಗಳು
ಸೇನಾಧೀಶ್ವರ ಯೆಹೋವನಿಗೆ ಮೀಸಲಾಗಿರುವವು;
ಯಜ್ಞಮಾಡುವವರೆಲ್ಲರು ಬಂದು ಅವುಗಳನ್ನು ತೆಗೆದು
ಕೊಂಡು ಅವುಗಳಲ್ಲಿ ಬೇಯಿಸುವರು; ಆ ದಿನದಲ್ಲಿ
ಸೇನಾಧೀಶ್ವರ ಯೆಹೋವನ ಆಲಯದೊಳಗೆ ಯಾವ
ವ್ಯಾಪಾರಿಯೂ ಇರನು.

---

# THE PROPHET MALACHI

## ಮಲಾಕಿಯ ಪ್ರವಾದನೆಯ ಗ್ರಂಥ

ಯೆಹೋವನು ಇಸ್ರಾಯೇಲನ್ನು ಕುರಿತು ಮಲಾ
ಕಿಯ ಮೂಲಕ ನುಡಿದ ದೈವೋಕ್ತಿ.

ಸ್ವಜನರ ಮೇಲಣ ಯೆಹೋವನ ಪ್ರೀತಿ.

ಯೆಹೋವನು ಇಂತೆನ್ನುತ್ತಾನೆ—ನಾನು ನಿಮ್ಮ
ನ್ನು ಪ್ರೀತಿಸಿದ್ದೇನೆ; ನೀವೋ—ಯಾವ ವಿಷಯದಲ್ಲಿ
ನಮ್ಮನ್ನು ಪ್ರೀತಿಸಿದ್ದೀ ಅಂದುಕೊಳ್ಳುತ್ತೀರಲ್ಲಾ.
ಏಸಾವನು ಯಾಕೋಬನ ಅಣ್ಣನಲ್ಲವೆ, ಆದರೆ
ನಾನು ಯಾಕೋಬನನ್ನು ಪ್ರೀತಿಸಿ ಏಸಾವನನ್ನು
ದ್ವೇಷಿಸಿ ಅವನ ಬೆಟ್ಟಗಳನ್ನು ಹಾಳುಮಾಡಿ ಅವನ
ಸ್ವಾಸ್ತ್ಯವನ್ನು ಕಾಡುನರಿಗಳ ಪಾಲುಮಾಡಿದೆನಷ್ಟೆ;
ಇದು ಯೆಹೋವನ ನುಡಿ. ಹೀಗಿರಲು ಎದೋ
ಮ್ಯರು—ನಾವು ಹಾಳಾದೆವು, ಆದರೆ ಹಾಳುಪ್ರದೇಶಗ
ಳನ್ನು ಮತ್ತೆ ಕಟ್ಟುವೆವು ಅಂದುಕೊಂಡರೆ ಸೇನಾಧೀ
ಶ್ವರ ಯೆಹೋವನು ಇಂತೆನ್ನುತ್ತಾನೆ—ಅವರು ಕಟ್ಟಿ
ದರೂ ನಾನು ಕೆಡವಿಹಾಕುವೆನು; ಅವರು ದುಷ್ಟ
ಪ್ರಾಂತದವರೂ, ಯೆಹೋವನ ನಿತ್ಯಕೋಪಕ್ಕೆ ಈಡಾದ
ಜನರೂ ಅನ್ನಿಸಿಕೊಳ್ಳುವರು. ನೀವೇ ಇದನ್ನು 5
ಕಣ್ಣಾರೆ ಕಂಡು—ಯೆಹೋವನು ಇಸ್ರಾಯೇಲಿನ
ಮೇರೆಯ ಆಚೆಯೂ ಮಹಾಮಹಿಮೆಯುಳ್ಳವನು
ಅಂದುಕೊಳ್ಳುವಿರಿ.

ಅಯೋಗ್ಯಯಾಜಕಖಂಡನೆ.

ನನ್ನ ನಾಮವನ್ನು ಧಿಕ್ಕರಿಸುವ ಯಾಜಕರೇ, 6
ಮಗನು ತಂದೆಗೆ ಮಾನಸಲ್ಲಿಸುತ್ತಾನಲ್ಲಾ, ಆಳು

1) ಅಥವಾ : ಯೆರೂಸಲೇಮಿನ ಮೇಲೆ. 2) ಪಾಠಾಂತರ : ಅವರಿಗೂ ಮಳೆ ಬರುವದಿಲ್ಲ; ಪರ್ಣಶಾಲೆಗಳ . . . .

ದಣಿಗೆ ಭಯಭಕ್ತಿತೋರಿಸುತ್ತಾನಷ್ಟೆ; ನಾನು
ತಂದೆಯಾಗಿರಲು ನನಗೆ ಸಲ್ಲುವ ಮಾನವೆಲ್ಲಿ; ದಣಿ
ಯಾಗಿರಲು ನನಗೆ ತೋರಿಸುವ ಭಯಭಕ್ತಿಯೆಲ್ಲಿ
ಎಂದು ಸೇನಾಧೀಶ್ವರ ಯೆಹೋವನು ನಿಮಗೇ ನುಡಿ
ಯುತ್ತಾನೆ. ಆದರೆ ನೀವು—ಯಾವ ವಿಷಯದಲ್ಲಿ
ನಿನ್ನ ನಾಮವನ್ನು ಧಿಕ್ಕರಿಸಿದ್ದೇವೆ ಅನ್ನುತ್ತೀರಿ.
7 ನನ್ನ ಯಜ್ಞವೇದಿಯ ಮೇಲೆ ಅಶುದ್ಧ ಪದಾರ್ಥ
ಗಳನ್ನು ಅರ್ಪಿಸುತ್ತೀರಲ್ಲಾ. ಯಾವ ವಿಷಯದಲ್ಲಿ
ನಿನ್ನನ್ನು ಅಶುದ್ಧಗೊಳಿಸಿದ್ದೇವೆ ಅನ್ನುತ್ತೀರೋ?
ಯೆಹೋವನ ಮೇಜಿಗೆ ಘನತೆಯೇನಿದೆ ಎಂದು
8 ನೀವು ಅಂದುಕೊಳ್ಳುವದರಲ್ಲಿಯೇ. ಕುರುಡಾದ
ಪಶುವನ್ನು ಯಜ್ಞಕ್ಕೆ ಒಪ್ಪಿಸುವದು ದೋಷವಲ್ಲ
ವೆಂದು ನೆನಸುತ್ತೀರೋ? ಕುಂಟಾದದ್ದನ್ನೂ ರೋಗದ
ಪಶುವನ್ನೂ ಅರ್ಪಿಸುವದು ದೋಷವಲ್ಲವೆಂದು ನಂಬು
ತ್ತೀರೋ? ಸೇನಾಧೀಶ್ವರ ಯೆಹೋವನು ಇಂತೆನ್ನು
ತ್ತಾನೆ—ಇಂಥದನ್ನು ನಿನ್ನ ದೇಶಾಧಿಪತಿಗೆ ಒಪ್ಪಿಸು;
9 ನಿನಗೆ ಮೆಚ್ಚುವನೋ? ಪ್ರಸನ್ನನಾಗುವನೋ? ಹಾಗಾ
ದರೆ ದೇವರ ದಯೆ ದೊರೆಯುವ ಹಾಗೆ ದೇವರನ್ನು
ಒಲಿಸಿಕೊಳ್ಳಿರಿ; ಆಹಾ, ಇದೇ ನಿಮ್ಮ ಕೈಯ ಕಾಣಿಕೆ;
ನಿಮ್ಮಲ್ಲಿ ಯಾರಿಗಾದರೂ ಆತನು ಪ್ರಸನ್ನನಾಗುವ
ನೋ? ಇದು ಸೇನಾಧೀಶ್ವರ ಯೆಹೋವನ ನುಡಿ.
10 ನನ್ನ ಯಜ್ಞವೇದಿಯ ಮೇಲೆ ಯಾರೂ ಬೆಂಕಿಯ
ನ್ನು ವ್ಯರ್ಥವಾಗಿ ಉರಿಸದಂತೆ ನಿಮ್ಮಲ್ಲೊಬ್ಬನು
[ದೇವಾಲಯದ] ಬಾಗಿಲುಗಳನ್ನು ಮುಚ್ಚಿಬಿಟ್ಟರೆ
ಎಷ್ಟೋ ಒಳ್ಳೇದು! ನಾನು ನಿಮಗೆ ಮೆಚ್ಚೆನು, ನಿಮ್ಮ
ಕೈಯಿಂದ ನೈವೇದ್ಯವನ್ನು ಸ್ವೀಕರಿಸೆನು; ಇದು ಸೇನಾ
11 ಧೀಶ್ವರ ಯೆಹೋವನ ನುಡಿ. ಸೂರ್ಯನು ಮೂಡು
ವ ದಿಕ್ಕಿನಿಂದ ಮುಣುಗುವ ದಿಕ್ಕಿನ ವರೆಗೂ ನನ್ನ
ನಾಮವು ಅನ್ಯಜನಾಂಗಗಳಲ್ಲಿ ಘನವಾಗಿದೆ; ಒಂದೊಂ
ದು ಸ್ಥಳದಲ್ಲಿಯೂ ನನ್ನ ನಾಮಕ್ಕೆ ಧೂಪವನ್ನೂ
ಶುದ್ಧನೈವೇದ್ಯವನ್ನೂ ಅರ್ಪಿಸುತ್ತಾರೆ; ಹೌದು, ಅನ್ಯ
ಜನಾಂಗಗಳಲ್ಲಿಯೇ ನನ್ನ ನಾಮವು ಘನವಾಗಿದೆ;
12 ಇದು ಸೇನಾಧೀಶ್ವರ ಯೆಹೋವನ ನುಡಿ. ನೀವೋ—
ಯೆಹೋವನ ಮೇಜು ಅಶುದ್ಧ, ಅದರ ಮೇಲಣ
ಎಡೆಯು ತುಚ್ಛ ಅಂದುಕೊಳ್ಳುವದರಿಂದ ನನ್ನ ನಾಮ
13 ವನ್ನು ಅಪಕೀರ್ತಿಗೆ ಗುರಿಮಾಡಿದ್ದೀರಿ. ಸೇನಾಧೀಶ್ವರ
ಯೆಹೋವನು ಇಂತೆನ್ನುತ್ತಾನೆ—ಅಯ್ಯೋ, [ಈ ಸೇವೆ
ಯು] ಎಷ್ಟೋ ಬೇಸರವೆಂದು ನೀವು ಅಂದುಕೊಂಡು
ಅದನ್ನು ಛೀಗುಟ್ಟುತ್ತೀರಿ; 1)ಕಳವಿನ ಪಶುವನ್ನೂ
ಕುಂಟಾದದ್ದನ್ನೂ ರೋಗಿಯಾದದ್ದನ್ನೂ ತಂದೊಪ್ಪಿಸು
ತ್ತೀರಿ; ಇಂಥ ನೈವೇದ್ಯವನ್ನು ತಂದೊಪ್ಪಿಸುತ್ತಿರುವಲ್ಲಿ
ನಾನು ಅದನ್ನು ನಿಮ್ಮ ಕೈಯಿಂದ ಸ್ವೀಕರಿಸಲೋ;
14 ಇದು ಯೆಹೋವನ ನುಡಿ. ಒಬ್ಬನು ಹರಕೆಹೊತ್ತು
ತನ್ನ ಹಿಂಡಿನಲ್ಲಿ ಗಂಡುಪಶುವಿದ್ದರೂ ಕಳಂಕ
ವಾದ ಪಶುವನ್ನು ಯೆಹೋವನಿಗೆ ಯಜ್ಞಮಾಡಿದರೆ ಆ
ಮೋಸಗಾರನಿಗೆ ಶಾಪವು ತಗಲಲಿ; ನಾನು ರಾಜಾಧಿ
ರಾಜ, ನನ್ನ ನಾಮವು ಅನ್ಯಜನಾಂಗಗಳ ಭಯಭಕ್ತಿ
ಗೆ ಈಡಾಗಿದೆ; ಇದು ಸೇನಾಧೀಶ್ವರ ಯೆಹೋವ
ನುಡಿ.

ಯಾಜಕರೇ, ಈ ಅಪ್ಪಣೆಯು ಈಗ ನಿಮಗಾಗಿ
ದೆ—ಸೇನಾಧೀಶ್ವರ ಯೆಹೋವನು ಇಂತೆನ್ನುತ್ತಾ
ನೆ—ನನ್ನ ನಾಮವನ್ನು ಘನಪಡಿಸಬೇಕೆಂಬ ಆಜ್ಞೆ
ಯನ್ನು ನೀವು ಆಲಿಸಿ ಮಂದಟ್ಟುಮಾಡಿಕೊಳ್ಳದಿದ್ದ
ನಾನು ನಿಮಗೆ ಶಾಪವನ್ನು ಬರಮಾಡುವೆನು, ನಿಮಗ
ಆಶೀರ್ವಾದವಾಗಿ ದಯಪಾಲಿಸಿದವುಗಳನ್ನೂ ಶಪಿಸು
ವೆನು; ಹೌದು, ಈ ನನ್ನ ಆಜ್ಞೆಯನ್ನು ನಿಮ್ಮಲ್ಲಿ
ಯಾರೂ ಮಂದಟ್ಟುಮಾಡಿಕೊಳ್ಳದ ಕಾರಣ ಅವುಗಳ
ನ್ನು ಶಪಿಸೇ ಇದ್ದೇನೆ. ಆಹಾ, ನಿಮ್ಮ 2)ಬೀಜವನ್ನು
[ಬೆಳೆಯದಂತೆ] ಖಂಡಿಸುವೆನು; ನಿಮ್ಮ ಮುಖದ
ಮೇಲೆ ಮಲವನ್ನು, ನಿಮ್ಮ ಹಬ್ಬದ ಪಶುಗಳ ಮಲ
ವನ್ನು ಚೆಲ್ಲಿಬಿಡುವೆನು; 3)ನೀವು ಆ ಮಲದ ತಿಪ್ಪೆಯ
ಪಾಲಾಗುವಿರಿ. ನಾನು ಲೇವಿಯರೊಂದಿಗೆ ಮಾಡಿ
ಕೊಂಡ ಒಡಂಬಡಿಕೆಯು ನೆಲೆಗೊಳ್ಳಬೇಕೆಂದು ಈ
ಅಪ್ಪಣೆಯನ್ನು ನಿಮಗೆ ಹೇಳಿಕಳುಹಿಸಿದ್ದೇನೆಂಬದು
ನಿಮಗೆ ಗೊತ್ತಾಗುವದು; ಇದು ಸೇನಾಧೀಶ್ವರ ಯೆ
ಹೋವನ ನುಡಿ. ನಾನು ಅವರೊಂದಿಗೆ ಮಾಡಿಕೊಂಡ
ಒಡಂಬಡಿಕೆಯಲ್ಲಿ [ವಾಗ್ದಾನ ಮಾಡಿದ್ದು] ಜೀವ
ಸುಖ; ಅದರಂತೆ ಇವುಗಳನ್ನು ಅವರಿಗೆ ದಯಪಾಲಿ
ಸಿದೆನು; [ಒಡಂಬಡಿಕೆಯಲ್ಲಿ ವಿಧಿಸಿದ್ದು] ಭಯಭಕ್ತಿ
ಅದರಂತೆ ಅವರು ನನ್ನಲ್ಲಿ ಭಯಭಕ್ತಿಯಿಟ್ಟು ನನ್ನ
ನಾಮಕ್ಕೆ ಅಂಜಿದರು. ಅವರ ಬಾಯಲ್ಲಿ ಸತ್ಯಬೋಧ
ನೆಯು ನೆಲೆಸಿತ್ತು, ಅವರ ತುಟಿಗಳಲ್ಲಿ ಅನ್ಯಾಯವೇ
ನೂ ಕಾಣಲಿಲ್ಲ; ಅವರು ಶಾಂತಿಯಿಂದಲೂ ಸದ್ಧರ್ಮ
ದಿಂದಲೂ ನನ್ನೊಂದಿಗೆ ಅನ್ಯೋನ್ಯವಾಗಿ ನಡೆದುಕೊಳ್ಳು
ತ್ತಾ ಬಹು ಜನರನ್ನು ಪಾಪದ ಕಡೆಯಿಂದ ತಿರುಗಿಸಿ
ದರು. ಜ್ಞಾನಾನುಸಾರವಾಗಿ ಮಾತಾಡುವದು ಯಾ
ಜಕನ ತುಟಿಗಳ ಧರ್ಮವಷ್ಟೆ; ಅವನು ಸೇನಾಧೀಶ್ವರ
ಯೆಹೋವನ ದೂತನಾಗಿರುವ ಕಾರಣ ಜನರು
ಅವನ ಬಾಯಿಂದ ಧರ್ಮೋಪದೇಶವನ್ನು ಕೇಳಿಕೊಳ್ಳ
ತಕ್ಕದ್ದು. ನೀವೋ ದಾರಿತಪ್ಪಿದ್ದೀರಿ; ನಿಮ್ಮ ಧರ್ಮೋ
ಪದೇಶದಿಂದ ಬಹು ಜನರನ್ನು ಮುಗ್ಗರಿಸುವ ಹಾಗೆ
ಮಾಡಿದ್ದೀರಿ; ಲೇವಿಯ ಒಡಂಬಡಿಕೆಯನ್ನು ಭಂಗ
ಪಡಿಸಿದ್ದೀರಿ, ಇದು ಸೇನಾಧೀಶ್ವರ ಯೆಹೋವನ ನುಡಿ.
ನೀವು ನನ್ನ ಮಾರ್ಗಗಳನ್ನು ಅನುಸರಿಸದೆ ನಿಮ್ಮ
ಧರ್ಮಶಾಸ್ತ್ರೋಪದೇಶದಲ್ಲಿ ಮುಖದಾಕ್ಷಿಣ್ಯವನ್ನು
ತೋರಿಸಿದ್ದರಿಂದ ನಾನಂತು ನಿಮ್ಮನ್ನು ಎಲ್ಲಾ ಜನರ
ಮುಂದೆ ಮಾನಗೆಟ್ಟವರನ್ನಾಗಿಯೂ ಕೀಳಾದವರನ್ನಾಗಿ
ಯೂ ಮಾಡುವೆನು.

### ಪತ್ನೀಪರಿತ್ಯಾಗಖಂಡನೆ.

ನಮ್ಮೆಲ್ಲರಿಗೂ ಒಬ್ಬನೇ ತಂದೆಯಷ್ಟೆ; ಒಬ್ಬನೇ
ದೇವರು ನಮ್ಮನ್ನು ಸೃಷ್ಟಿಸಿದನಲ್ಲಾ; ಹೀಗಿರಲು ನಾವು
ಒಬ್ಬರಿಗೊಬ್ಬರು ದ್ರೋಹಮಾಡಿ ದೇವರು ನಮ್ಮ ಪಿತೃ

1) ಅಥವಾ: ಕಾಡುಮೃಗದ ಬಾಯಿಂದ ಕಿತ್ತುಕೊಂಡು ಬಂದದ್ದನ್ನೂ. 2) ಅಥವಾ: ನಿಮ್ಮ ಸಂತಾನವನ್ನು ಅಡಗಿಸುವ
ಪಾಠಾಂತರ: ಬಾಹುಬಲವನ್ನು. 3) ಮೂಲ: ನೀವು ಅಲ್ಲಿಗೆ ಬಿಸಾಡಲ್ಪಡುವಿರಿ.

ಗಳೊಂದಿಗೆ ಮಾಡಿಕೊಂಡ ಒಡಂಬಡಿಕೆಯನ್ನು ಭಂಗ
1 ಪಡಿಸುವನೇಕೆ? ಯೆಹೂದವು ದ್ರೋಹಮಾಡಿದೆ,
ಇಸ್ರಾಯೇಲಿನಲ್ಲಿಯೂ ಯೆರೂಸಲೇಮಿನಲ್ಲಿಯೂ
ಒಂದು ದುರಾಚಾರವು ನಡೆಯುತ್ತಿದೆ; ಯೆಹೂದವು
ಅನ್ಯದೇವತೆಯ ಮಗಳನ್ನು ಮದುವೆಯಾಗಿ ಯೆಹೋ
2 ವನ ಪ್ರಿಯ ದೇವಾಲಯವನ್ನು ಹೊಲೆಗೆಡಿಸಿದೆ. ಇಂಥ
ಕೆಲಸವನ್ನು ನಡಿಸಿದ ಪ್ರತಿಯೊಬ್ಬನ ಕುಟುಂಬದಲ್ಲಿ
ಎಬ್ಬಿಸುವವರಾಗಲಿ ಉತ್ತರಕೊಡುವವರಾಗಲಿ ಎಲ್ಲರ
ನ್ನೂ ಯೆಹೋವನು ಯಾಕೋಬಿನ ಗುಡಾರಗಳೊಳ
ಗಿಂದ ನಿರ್ಮೂಲಮಾಡುವನು; ಸೇನಾಧೀಶ್ವರ ಯೆ
ಹೋವನಿಗೆ ನೈವೇದ್ಯ ತಂದರ್ಪಿಸುವವನನ್ನೂ ಕಡಿದು
3 ಬಿಡುವನು. ಇನ್ನೊಂದನ್ನು ನಡಿಸುತ್ತೀರಿ—ಯೆಹೋ
ವನ ಯಜ್ಞವೇದಿಯನ್ನು ಕಣ್ಣೀರಿನಿಂದಲೂ ಅಳು
ವಿಕೆಯಿಂದಲೂ ನರಳಾಟದಿಂದಲೂ ತುಂಬಿಸಿ ಮುಚ್ಚು
ತ್ತೀರಿ; ಆದಕಾರಣ ಆತನು ನಿಮ್ಮ ನೈವೇದ್ಯವನ್ನು
ಇನ್ನು ಲಕ್ಷಿಸನು, ನಿಮ್ಮ ಕೈಯಿಂದ ಅದನ್ನು ಪ್ರಸನ್ನ
4 ನಾಗಿ ಸ್ವೀಕರಿಸನು. ಇದೇಕೆ ಅನ್ನುತ್ತೀರಾ? ನಿನಗೂ
ನಿನ್ನ ಯೌವನದ ಹೆಂಡತಿಗೂ ಆದ ಒಡಂಬಡಿಕೆಗೆ
ಯೆಹೋವನೇ ಸಾಕ್ಷಿಯಾಗಿದ್ದಾನಲ್ಲಾ. ನಿನ್ನ ಸಹ
ಚಾರಿಣಿಯೂ ನಿನ್ನ ಒಡಂಬಡಿಕೆಯ ಪತ್ನಿಯೂ ಆದ
5 ಆಕೆಗೆ ದ್ರೋಹಮಾಡಿದ್ದೀ. 1)ಪರಮಾತ್ಮಾಂಶನಾದ
ಯಾವನೂ ಹೀಗೆ ಮಾಡಲಿಲ್ಲ; ಆ ಪ್ರಸಿದ್ಧನೊಬ್ಬನು
ಏಕೆ ಇಂಥ ಕೃತ್ಯಮಾಡಿದನು? ದೇವರ ವರವಾದ ಸಂತಾ
ನವನ್ನು ಹಾರೈಸಿಯೇ. ಹೀಗಿರಲು ನಿಮ್ಮ ಆತ್ಮವನ್ನು
ಎಚ್ಚರಿಕೆಯಿಂದ ನೋಡಿಕೊಳ್ಳಿರಿ, ಯಾವನೂ ತನ್ನ
6 ಯೌವನದ ಪತ್ನಿಗೆ ದ್ರೋಹಮಾಡದಿರಲಿ. ಇಸ್ರಾಯೇ
ಲಿನ ದೇವರಾದ ಯೆಹೋವನು ಇಂತೆನ್ನುತ್ತಾನೆ—
ನಾನು ಪತ್ನೀತ್ಯಾಗವನ್ನೂ 2)ಹೆಂಡತಿಗೆ ಅನ್ಯಾಯ
ಮಾಡುವವನನ್ನೂ ಹಗೆಮಾಡುತ್ತೇನೆ; ಇದು ಸೇನಾಧೀ
ಶ್ವರ ಯೆಹೋವನ ನುಡಿ; ಆದಕಾರಣ ನಿಮ್ಮ ಆತ್ಮ
ವನ್ನು ಎಚ್ಚರಿಕೆಯಿಂದ ನೋಡಿಕೊಳ್ಳಿರಿ, ದ್ರೋಹ
ಮಾಡಬೇಡಿರಿ.

ದೇವದೂಷಣಖಂಡನೆ; ಯೆಹೋವನ ಆಗಮನ.

7 ನೀವು ಯೆಹೋವನನ್ನು ನಿಮ್ಮ ಮಾತುಗಳಿಂದ
ಬೇಸರಗೊಳಿಸಿದ್ದೀರಿ; ಯಾವ ವಿಷಯದಲ್ಲಿ ಆತ
ನನ್ನು ಬೇಸರಗೊಳಿಸಿದ್ದೇವೆ ಅನ್ನುತ್ತೀರಾ? ಪ್ರತಿ
ಯೊಬ್ಬ ದುರಾಚಾರಿಯು ಯೆಹೋವನ ದೃಷ್ಟಿಗೆ ಒಳ್ಳೆ
ಯವನು, ಅವರೇ ಆತನಿಗೆ ಇಷ್ಟ, ನ್ಯಾಯತೀರಿಸುವ
ದೇವರು ಎಲ್ಲಿಯೋ ಎಂದು ನೀವು ಅಂದುಕೊಳ್ಳು
ವದರಲ್ಲಿಯೇ.

3 ಇಗೋ, ನನ್ನ ದೂತನನ್ನು ಕಳುಹಿಸುತ್ತೇನೆ,
ಆತನು ನನ್ನ ಮುಂದೆ ದಾರಿಯನ್ನು ಸರಿಮಾಡು
ವನು; ನೀವು ಹಂಬಲಿಸುವ ಕರ್ತನು ತನ್ನ ಆಲಯಕ್ಕೆ
ಫಕ್ಕನೆ ಬರುವನು; ಆಹಾ, ನಿಮಗೆ ಇಷ್ಟನಾದ ಒಡಂಬ
ಡಿಕೆಯ ದೂತನು ಐತರುತ್ತಾನೆ; ಇದು ಸೇನಾಧೀ
ಶ್ವರ ಯೆಹೋವನ ನುಡಿ. ಆತನು ಬರುವ ದಿನ 2
ವನ್ನು ಯಾರು ತಾಳಾರು? ಆತನು ಕಾಣಿಸಿಕೊಳ್ಳು
ವಾಗ ಯಾರು ನಿಂತಾರು? ಆತನು ಅಕ್ಕಸಾಲಿಗನ
ಬೆಂಕಿಗೂ ಅಗಸನ ಚೌಳಿಗೂ ಸಮಾನನಾಗಿದ್ದಾನೆ;
ಬೆಳ್ಳಿಯನ್ನು ಶೋಧಿಸುವ ಅಕ್ಕಸಾಲಿಗನಂತೆ ಕುಳಿ 3
ತು ಲೇವಿ ವಂಶದವರನ್ನು ಶೋಧಿಸಿ ಬೆಳ್ಳಿಬಂಗಾರ
ಗಳನ್ನೋ ಎಂಬಂತೆ ಶುದ್ಧೀಕರಿಸುವನು; ಅವರು ಸದ್ಧ
ರ್ಮಿಗಳಾಗಿ ಯೆಹೋವನಿಗೆ ನೈವೇದ್ಯಗಳನ್ನು ತಂದೊ
ಪ್ಪಿಸುವರು. ಆಗ ಯೆಹೂದದ ಮತ್ತು ಯೆರೂಸ 4
ಲೇಮಿನ ನೈವೇದ್ಯವು ಪೂರ್ವದಿನಗಳಲ್ಲಿ, ಪುರಾತನ
ಕಾಲದಲ್ಲಿ ಯೆಹೋವನಿಗೆ ಮೆಚ್ಚಿಕೆಯಾಗಿದ್ದಂತೆ ಆಗಿ
ರುವದು. ನಾನು ನ್ಯಾಯತೀರಿಸುವದಕ್ಕೆ ನಿಮ್ಮ 5
ಬಳಿಗೆ ಬರುವೆನು; ಮಾಟಗಾರ, ಸೂಳೆಗಾರ, ಸುಳ್ಳು
ಸಾಕ್ಷಿ, ಕೂಲಿಹಿಡಿದು ಕೂಲಿಯವನನ್ನು ಮೋಸ
ಪಡಿಸುವವನು, ವಿಧವೆಯರನ್ನೂ ಅನಾಥರನ್ನೂ ಬಾಧಿ
ಸುವವನು, ವಿದೇಶಿಯ ನ್ಯಾಯತಪ್ಪಿಸುವವನು, ಅಂತು
ನನಗಂಜದಿರುವ ಇವರೆಲ್ಲರಿಗೆ ವಿರುದ್ಧವಾಗಿ ನಾನು
ಶೀಘ್ರಸಾಕ್ಷಿಯಾಗಿರುವೆನು; ಇದು ಸೇನಾಧೀಶ್ವರ
ಯೆಹೋವನ ನುಡಿ. ಆದರೂ ಯೆಹೋವನಾದ 6
ನಾನು ಮಾರ್ಪಟ್ಟಿಲ್ಲ; ಆದದರಿಂದ ಯಾಕೋಬ ಸಂತ
ತಿಯವರೇ, ನೀವು ನಾಶವಾಗಲಿಲ್ಲ.

ನೈವೇದ್ಯವನ್ನು ಸಲ್ಲಿಸದ ದೇವದ್ರೋಹದ ಖಂಡನೆ.

ನಿಮ್ಮ ಪಿತೃಗಳ ಕಾಲದಿಂದಲೂ ನೀವು ನನ್ನ ವಿಧಿಗ 7
ಳಿಗೆ ಓರೆಯಾದಿರಿ, ಅವುಗಳನ್ನು ಅನುಸರಿಸಲಿಲ್ಲ.
ನನ್ನ ಕಡೆಗೆ ಪುನಃ ತಿರುಗಿರಿ; ತಿರುಗಿದರೆ ನಾನು
ನಿಮ್ಮ ಕಡೆಗೆ ಪುನಃ ತಿರುಗುವೆನು; ಇದು ಸೇನಾಧೀ
ಶ್ವರ ಯೆಹೋವನ ನುಡಿ. ಯಾವ ವಿಷಯದಲ್ಲಿ
ತಿರುಗೋಣವೆನ್ನುತ್ತೀರಾ? ನರಮನುಷ್ಯನು ದೇವರಿಂದ 8
ಕದ್ದುಕೊಳ್ಳಬಹುದೇ? ನೀವೋ ನನ್ನಿಂದ ಕದ್ದುಕೊ
ಳ್ಳುತ್ತಿದ್ದೀರಿ. ನಿನ್ನಿಂದ ಏನು ಕದ್ದುಕೊಂಡಿದ್ದೇವೆ
ಎಂದು ಕೇಳುತ್ತೀರೋ? ದಶಮಾಂಶ, ನನಗೋಸ್ಕರ
ಪ್ರತ್ಯೇಕಿಸಬೇಕಾದ ಪದಾರ್ಥ, ಇವುಗಳನ್ನೇ. ನೀವು 9
ಅಂದರೆ ಈ ಜನಾಂಗದವರೆಲ್ಲಾ ನನ್ನಿಂದ ಕದ್ದುಕೊ
ಳ್ಳುವವರಾದ ಕಾರಣ ಶಾಪಗ್ರಸ್ತರಾಗಿದ್ದೀರಿ. ನನ್ನ 10
ಆಲಯವು ಆಹಾರಶೂನ್ಯವಾಗದಂತೆ ನೀವು ದಶ
ಮಾಂಶ ಯಾವತ್ತನ್ನೂ ಬಂಡಾರಕ್ಕೆ ತೆಗೆದುಕೊಂಡು
ಬನ್ನಿರಿ; ನಾನು ಪರಲೋಕದ ದ್ವಾರಗಳನ್ನು ತೆರೆದು
ನಿಮ್ಮಲ್ಲಿ ಸ್ಥಳಹಿಡಿಯಲಾಗದಷ್ಟು ಸುವರವನ್ನು ಸುರಿ
ಯುವೆನೋ ಇಲ್ಲವೋ ನನ್ನನ್ನು ಹೀಗೆ ಪರೀಕ್ಷಿಸಿರಿ;
ಇದು ಸೇನಾಧೀಶ್ವರ ಯೆಹೋವನ ನುಡಿ. ನುಂ 11
ಗುವ ಹುಳವನ್ನು ನಾನು ನಿಮಗಾಗಿ ತಡೆಯುವೆನು,
ಅದು ನಿಮ್ಮ ಭೂಮಿಯ ಫಲವನ್ನು ನಾಶಮಾಡದು;

1) ಅಥವಾ: ಪ್ರಾಣವಾಯು ಬೇಕಾದಷ್ಟು ಉಳಿದಿದ್ದರೂ [ದೇವರು] ಒಂದೇ ಒಂದು ಜೋಡಿಯನ್ನು ಸೃಷ್ಟಿಸಿದನಲ್ಲಾ; ಏಕೆ ಒಂದೇ ...ದನ್ನು ಸೃಷ್ಟಿಸಿದನು? ಅತ್ಯುತ್ತಮ ವಂಶವನ್ನು ಹಾರೈಸಿಯೇ. ಮೂಲವು ಕೇವಲ ಅಸ್ಪಷ್ಟ. 2) ಮೂಲ: ತನ್ನ ವಸ್ತ್ರಕ್ಕೆ ಅನ್ಯಾಯ ...ಪಿಸುವವನನ್ನೂ.

ನಿಮ್ಮ ದ್ರಾಕ್ಷೆಯ ಹಣ್ಣು ತೋಟದಲ್ಲಿ ಉದುರಿಹೋ
ಗದು; ಇದು ಸೇನಾಧೀಶ್ವರ ಯೆಹೋವನ ನುಡಿ.
12 ಆಗ ಸಕಲ ಜನಾಂಗಗಳವರು ನಿಮ್ಮನ್ನು ಧನ್ಯ
ರೆಂದು ಕೊಂಡಾಡುವರು; ನಿಮ್ಮ ದೇಶವು ಆನಂದ
ವಾಗಿರುವದು; ಇದು ಸೇನಾಧೀಶ್ವರ ಯೆಹೋವನ
ನುಡಿ.

ಅಪನಂಬಿಕೆಯ ಖಂಡನೆ; ಭಕ್ತರ ಮುಂದಿನ ಉತ್ಸಾಹ.

13 ನೀವು ನನಗೆ ವಿರುದ್ಧವಾಗಿ ಆಡಿದ ಮಾತುಗಳು
ಬಹು ಕಠಿಣ ಎಂದು ಯೆಹೋವನು ಅನ್ನುತ್ತಾನೆ.
ನಿನಗೆ ವಿರುದ್ಧವಾಗಿ ಏನು ಮಾತಾಡಿದ್ದೇವೆ ಅನ್ನು
14 ತ್ತೀರಾ? ನೀವು—ದೇವರನ್ನು ಸೇವಿಸುವದು ವ್ಯರ್ಥ;
ನಾವು ಆತನ ನಿಯಮವನ್ನು ಅನುಸರಿಸಿ ಸೇನಾಧೀ
ಶ್ವರ ಯೆಹೋವನ ಮುಂದೆ ದುಃಖದಿಂದ ವಿಕಾರಿಗ
ಳಾಗಿ ನಡೆದುಕೊಂಡದರಿಂದ ಆದ ಲಾಭವೇನು;
15 ಈಗ ಅಹಂಕಾರಿಗಳನ್ನು ಧನ್ಯರೆಂದು ಕೊಂಡಾಡಬೇ
ಕಾಗಿ ಬಂತು; ಹೌದು, ದುಷ್ಕರ್ಮಿಗಳು ಏಳಿಗೆಗೆ
ಬಂದಿದ್ದಾರೆ, ದೇವರನ್ನು ಪರೀಕ್ಷಿಸಿದರೂ ಸುರಕ್ಷಿತ
ರಾಗಿದ್ದಾರೆ ಅಂದುಕೊಂಡಿದ್ದೀರಲ್ಲಾ.
16 ಇಂಥ ಮಾತುಗಳನ್ನು ಕೇಳಿ ಯೆಹೋವನ ಭಕ್ತ
ರು ಒಬ್ಬರಿಗೊಬ್ಬರು ಮಾತಾಡಿಕೊಳ್ಳಲು ಯೆ
ಹೋವನು ಕಿವಿಗೊಟ್ಟು ಆಲಿಸಿ ಭಯಭಕ್ತಿಯಿಂದ
ತನ್ನ ನಾಮಸ್ಮರಣೆಮಾಡುವವರ ಹೆಸರುಗಳನ್ನು ತನ್ನ
ಮುಂದೆ ಜ್ಞಾಪಕದ ಪುಸ್ತಕದಲ್ಲಿ ಬರೆಯಿಸಿದನು.
17 ಸೇನಾಧೀಶ್ವರ ಯೆಹೋವನು ಇಂತೆನ್ನುತ್ತಾನೆ—
ನಾನು ಕಾರ್ಯಸಾಧಿಸುವ ದಿನದಲ್ಲಿ ಅವರು ನನಗೆ
ಸ್ವಕೀಯ ಜನರಾಗಿರುವರು; ಒಬ್ಬನು ತನ್ನನ್ನು
ಸೇವಿಸುವ ಸ್ವಂತ ಮಗನನ್ನು ಕರುಣಿಸುವಂತೆ ನಾನು
ಅವರನ್ನು ಕರುಣಿಸುವೆನು. ಆಗ ಶಿಷ್ಟರಿಗೂ
ದುಷ್ಟರಿಗೂ ದೇವರನ್ನು ಸೇವಿಸುವವರಿಗೂ ಸೇವಿಸದ
ವರಿಗೂ ಇರುವ ತಾರತಮ್ಯವನ್ನು ಮತ್ತೆ ಕಾಣುವಿರಿ
ಇಗೋ, ಆ ದಿನವು ಬರುತ್ತಿದೆ, ಒಲೆಯಂತೆ
ಉರಿಯುತ್ತಿದೆ; ಸಕಲ ಅಹಂಕಾರಿಗಳೂ ದುಷ್ಕ
ರ್ಮಿಗಳೂ ಹೊಟ್ಟಿನಂತಿರುವರು; ಬರುತ್ತಿರುವ ಆ
ದಿನವು ಅವರಿಗೆ ಅಗ್ನಿಪ್ರಲಯವಾಗುವದು; ಬುಡ
ರೆಂಬೆಗಳಾವದನ್ನೂ ಉಳಿಸದು. ನನ್ನ ನಾಮದಲ್ಲಿ
ಭಯಭಕ್ತಿಯಿಟ್ಟಿರುವ ನಿಮಗೋ [ದೇವರ] ಧರ್ಮ
ವೆಂಬ ಸೂರ್ಯನು ಸ್ವಸ್ಥತೆಯನ್ನುಂಟುಮಾಡುವ
ಕಿರಣಗಳುಳ್ಳವನಾಗಿ ಮೂಡುವನು; ಕೊಟ್ಟಿಗೆಯಿಂದ
ಬಿಟ್ಟ ಕರುಗಳಂತೆ ನೀವು ಹೊರಟು ಬಂದು ಕುಣಿದಾ
ಡುವಿರಿ; ದುಷ್ಟರನ್ನು ತುಳಿದುಬಿಡುವಿರಿ; ನಾನು
ಕಾರ್ಯಸಾಧಿಸುವ ದಿನದಲ್ಲಿ ಅವರು ನಿಮ್ಮ ಅಂಗಾ
ಲುಗಳ ಕೆಳಗೆ ಬೂದಿಯಾಗಿ ಬಿದ್ದಿರುವರು; ಇದು
ಸೇನಾಧೀಶ್ವರ ಯೆಹೋವನ ನುಡಿ.

ಎಲೀಯನ ಬರುವಿಕೆ.

ನನ್ನ ಸೇವಕನಾದ ಮೋಶೆಯ ಧರ್ಮಶಾಸ್ತ್ರ
ವನ್ನು ಅಂದರೆ ನಾನು ಹೋರೇಬ್ ಬೆಟ್ಟದಲ್ಲಿ ಎಲ್ಲಾ
ಇಸ್ರಾಯೇಲ್ಯರಿಗೋಸ್ಕರ ಮೋಶೆಗೆ ನೇಮಿಸಿದ ನಿಯ
ಮವಿಧಿಗಳನ್ನು ಜ್ಞಾಪಕಮಾಡಿಕೊಳ್ಳಿರಿ. ನಾನು
ಬಂದು [1]ದೇಶವನ್ನು ಶಾಪದಿಂದ ಹತಮಾಡದಂತೆ
ಯೆಹೋವನ ಆಗಮನದ ಭಯಂಕರವಾದ ಮಹಾ
ದಿನವು ಬರುವದಕ್ಕೆ ಮುಂಚೆಯೇ ಪ್ರವಾದಿಯಾದ
ಎಲೀಯನನ್ನು ನಿಮ್ಮ ಬಳಿಗೆ ಕಳುಹಿಸುವೆನು;
ಅವನು ತಂದೆಗಳ ಮನಸ್ಸನ್ನು ಮಕ್ಕಳ ಕಡೆಗೂ
ಮಕ್ಕಳ ಮನಸ್ಸನ್ನು ತಂದೆಗಳ ಕಡೆಗೂ ತಿರುಗಿಸುವನು.

---

1) ಅಥವಾ: ಲೋಕವನ್ನು.

ತರ ಹೇಳಿದ ಮಾತು ನೆರವೇರುವಂತೆ ಇದೆಲ್ಲಾ ನಡೆ
ಯಿತು; ಆ ಮಾತು ಏನಂದರೆ—

23 ಇಗೋ, ಒಬ್ಬ ಕನ್ಯಕೆಯು ಗರ್ಭಿಣಿಯಾಗಿ
ಮಗನನ್ನು ಹಡೆಯುವಳು;
ಆತನಿಗೆ ಇಮ್ಮಾನುವೇಲ್ ಎಂದು ಹೆಸರಿಡುವರು
ಎಂಬದು.

ದೇವರು ನಮ್ಮ ಕೂಡ ಇದ್ದಾನೆಂದು ಈ ಹೆಸರಿನ
24 ಅರ್ಥ. ಆಗ ಯೋಸೇಫನು ನಿದ್ದೆ ತಿಳಿದೆದ್ದು ಕರ್ತನ
ದೂತನು ಅಪ್ಪಣೆಕೊಟ್ಟ ಹಾಗೆ ತನ್ನ ಹೆಂಡತಿಯನ್ನು
25 ಸೇರಿಸಿಕೊಂಡನು. ಆದರೆ ಆಕೆಯು ಗಂಡುಮಗ
ನನ್ನು ಹಡೆಯುವ ತನಕ ಆಕೆಯನ್ನು ಅರಿಯಲಿಲ್ಲ.
ಮಗುವಿಗೆ ಯೇಸುವೆಂದು ಹೆಸರಿಟ್ಟನು.

### ಜೋಯಿಸರು ಮೂಡಲಿಂದ ಬಂದು ಯೇಸುವಿಗೆ ನಮಸ್ಕರಿಸಿದ್ದು.

2 ಅರಸನಾದ ಹೆರೋದನ ದಿನಗಳಲ್ಲಿ ಯೂದಾಯ
ಸೀಮೆಯ ಬೇತ್ಲೆಹೇಮ್ ಎಂಬ ಊರಲ್ಲಿ ಯೇಸು
ಹುಟ್ಟಿದಾಗ ಮೂಡಣದೇಶದ ಜೋಯಿಸರು ಯೆರೂಸ
2 ಲೇಮಿಗೆ ಬಂದು—ಯೆಹೂದ್ಯರ ಅರಸನಾಗಿ ಹುಟ್ಟಿ
ದವನು ಎಲ್ಲಿದ್ದಾನೆ? ಆತನನ್ನು ಸೂಚಿಸುವ ನಕ್ಷತ್ರ
ವನ್ನು ನಾವು ಮೂಡಣದೇಶದಲ್ಲಿ ಕಂಡು ಆತನಿಗೆ
3 ಅಡ್ಡಬೀಳುವದಕ್ಕೆ ಬಂದೆವು ಅಂದರು. ಇದನ್ನು
ಕೇಳಿ ಅರಸನಾದ ಹೆರೋದನೂ ಅವನ ಕೂಡ ಯೆರೂ
4 ಸಲೇಮಿನವರೆಲ್ಲರೂ ಕಳವಳಪಟ್ಟರು. ಅವನು
ಯೆಹೂದ್ಯರ ಎಲ್ಲಾ ಮಹಾಯಾಜಕರನ್ನೂ ಶಾಸ್ತ್ರಿ
ಗಳನ್ನೂ ಕೂಡಿಸಿ—ಕ್ರಿಸ್ತನು ಹುಟ್ಟಬೇಕಾದದ್ದು
5 ಎಲ್ಲಿ ಎಂದು ಅವರನ್ನು ಕೇಳಿದನು. ಅವರು ಅವ
ನಿಗೆ—ಯೂದಾಯದ ಬೇತ್ಲೆಹೇಮಿನಲ್ಲಿಯೇ;
ಯಾಕಂದರೆ—

6 ಯೆಹೂದ ಸೀಮೆಯ ಬೇತ್ಲೆಹೇಮೇ,
ಯೆಹೂದದ ಮುಖ್ಯಪಟ್ಟಣಗಳಲ್ಲಿ ನೀನು
ಎಷ್ಟುಮಾತ್ರವೂ ಸಣ್ಣದಲ್ಲ.
ಒಬ್ಬ ಅಧಿಪತಿ ನಿನ್ನೊಳಗಿಂದಲೇ ಹೊರಡುವನು,
ಆತನು ನನ್ನ ಪ್ರಜೆಯಾದ ಇಸ್ರಾಯೇಲನ್ನು
ಆಳತಕ್ಕವನು

ಎಂಬದಾಗಿ ಪ್ರವಾದಿಯ ಮುಖಾಂತರ ಬರೆದದೆ ಎಂದು
7 ಹೇಳಿದರು. ಆಗ ಹೆರೋದನು ಯಾರಿಗೂ ತಿಳಿಯ
ದಂತೆ ಆ ಜೋಯಿಸರನ್ನು ಕರಸಿ ಆ ನಕ್ಷತ್ರವು ಕಾಣಿ
ಸಿದ ಕಾಲವನ್ನು ಅವರ ಕಡೆಯಿಂದ ಚೆನ್ನಾಗಿ ತಿಳು
8 ಕೊಂಡು—ನೀವು ಹೋಗಿ ಆ ಕೂಸಿನ ವಿಷಯದಲ್ಲಿ
ಚೆನ್ನಾಗಿ ವಿಚಾರಣೆ ಮಾಡಿರಿ; ಅದು ಸಿಕ್ಕಿದ ಮೇಲೆ
ನನಗೆ ತಿಳಿಸಿರಿ; ನಾನೂ ಬಂದು ಅದಕ್ಕೆ ಅಡ್ಡಬೀಳ
ಬೇಕು ಎಂದು ಹೇಳಿ ಅವರನ್ನು ಬೇತ್ಲೆಹೇಮಿಗೆ
ಕಳುಹಿಸಿದನು.
9 ಅವರು ಅರಸನ ಮಾತನ್ನು ಕೇಳಿ ಹೊರಟಾಗ
ಮೂಡಣದೇಶದಲ್ಲಿ ಕಂಡ ನಕ್ಷತ್ರವು ಅವರ ಮುಂದೆ
ಮುಂದೆ ನಡೆದು ಕೂಸು ಇದ್ದ ಸ್ಥಳದ ಮೇಲೆ ಬಂದು
10 ನಿಂತಿತು. ಅವರು ನಕ್ಷತ್ರವನ್ನು ಕಂಡು ಅತ್ಯಂತ
11 ಸಂತೋಷಪಟ್ಟರು. ಮತ್ತು ಆ ಮನೆಯೊಳಕ್ಕೆ
ಹೋಗಿ ಆ ಕೂಸನ್ನು ಅದರ ತಾಯಿಯಾದ ಮ
ಯಳ ಬಳಿಯಲ್ಲಿ ಕಂಡು ಅದಕ್ಕೆ ಸಾಷ್ಟಾಂಗನಮ
ಸ್ಕಾರ ಮಾಡಿ ತಮ್ಮ ಗಂಟುಗಳನ್ನು ಬಿಚ್ಚಿ ಅದಕ್
ಚಿನ್ನ ಧೂಪ ರಕ್ತಬೋಳಗಳನ್ನು ಕಾಣಿಕೆಯಾಗಿ
ಕೊಟ್ಟರು. ಆ ಮೇಲೆ ದೇವರು ಕನಸಿನಲ್ಲಿ ಅವರಿಗೆ—
ನೀವು ಹೆರೋದನ ಬಳಿಗೆ ತಿರಿಗಿ ಹೋಗಬಾರದೆಂದು
ಅಪ್ಪಣೆಕೊಟ್ಟದ್ದರಿಂದ ಅವರು ಮತ್ತೊಂದು ದಾರಿ
ಯಿಂದ ತಮ್ಮ ದೇಶಕ್ಕೆ ಹೊರಟುಹೋದರು.

### ಅರಸನು ಯೇಸುವನ್ನು ಕೊಲ್ಲುವದಕ್ಕೆ ಪ್ರಯತ್ನಮಾಡಿದ್ದು.

ಅವರು ಹೋದ ಮೇಲೆ ಕರ್ತನ ದೂತನು ಯೋಸೇ
ಫನಿಗೆ ಕನಸಿನಲ್ಲಿ ಕಾಣಿಸಿಕೊಂಡು—ನೀನು ಎದ್ದು
ಈ ಕೂಸನ್ನೂ ಇದರ ತಾಯಿಯನ್ನೂ ಕರಕೊಂಡು
ಐಗುಪ್ತದೇಶಕ್ಕೆ ಓಡಿಹೋಗಿ ನಾನು ನಿನಗೆ ಹೇಳುವ
ತನಕ ಅಲ್ಲೇ ಇರು; ಹೆರೋದನು ಈ ಕೂಸನ್ನು ಕೊಲ್ಲ
ಬೇಕೆಂದು ಅದನ್ನು ಹುಡುಕುತ್ತಿರುವನು ಅಂದನು.
ಆಗ ಅವನು ಎದ್ದು ಕೂಸನ್ನೂ ಅದರ ತಾಯಿಯನ್ನೂ
ರಾತ್ರಿವೇಳೆಯಲ್ಲಿ ಕರಕೊಂಡು ಐಗುಪ್ತದೇಶಕ್ಕೆ
ಹೊರಟುಹೋಗಿ ಹೆರೋದನು ತೀರಿಹೋಗುವ ತನಕ
ಅಲ್ಲೇ ಇದ್ದನು. ಇದರಿಂದ—ನನ್ನ ಮಗನನ್ನು
ಐಗುಪ್ತದೇಶದೊಳಗಿಂದ ಕರೆದೆನೆಂದು ಕರ್ತನು ಪ್ರವಾ
ದಿಯ ಮುಖಾಂತರ ಹೇಳಿದ ಮಾತು ನೆರವೇರಿತು.
ಆಗ ಹೆರೋದನು ತನಗೆ ಜೋಯಿಸರು ಮೋಸ
ಮಾಡಿದರೆಂದು ತಿಳಿದು ಬಹಳ ಸಿಟ್ಟಾಗಿ ಆಳುಗಳನ್ನು
ಕಳುಹಿಸಿ ತಾನು ಜೋಯಿಸರಿಂದ ತಿಳುಕೊಂಡ
ಕಾಲಕ್ಕೆ ಸರಿಯಾಗಿ, ಬೇತ್ಲೆಹೇಮಿನಲ್ಲಿಯೂ ಅದರ
ಎಲ್ಲಾ ನೆರೆಹೊರೆ ಹಳ್ಳಿಗಳಲ್ಲಿಯೂ ಎರಡು ವರುಷ
ದೊಳಗಿನ ಗಂಡುಕೂಸುಗಳನ್ನೆಲ್ಲಾ ಕೊಲ್ಲಿಸಿದನು.
ಯೆರೆಮೀಯನೆಂಬ ಪ್ರವಾದಿಯು ಹೇಳಿದ ಮಾತು
ಆ ಕಾಲದಲ್ಲಿ ನೆರವೇರಿತು; ಅದೇನಂದರೆ—

ರಾಮದಲ್ಲಿ ಬೊಬ್ಬೆಯು ಕೇಳಿಸಿತು;
ಅಳುವಿಕೆಯೂ ಬಹು ಗೋಳಾಟವೂ ಉಂಟಾ
ದವು;
ರಾಹೇಲಳು ತನ್ನ ಮಕ್ಕಳಿಗೋಸ್ಕರ ಅತ್ತತ್ತು
ಅವರು ಇಲ್ಲದೆಹೋದದ್ದಕ್ಕಾಗಿ ಸಮಾಧಾನ
ಹೊಂದಲೊಲ್ಲದೆ ಇದ್ದಳು

ಎಂಬದು.
ಹೆರೋದನು ತೀರಿಹೋದ ಮೇಲೆ ಐಗುಪ್ತದೇಶ
ದಲ್ಲಿ ಕರ್ತನ ದೂತನು ಯೋಸೇಫನಿಗೆ ಕನಸಿನಲ್ಲಿ
ಕಾಣಿಸಿಕೊಂಡು—ನೀನು ಎದ್ದು ಕೂಸನ್ನೂ ಅದರ
ತಾಯಿಯನ್ನೂ ಕರಕೊಂಡು ಇಸ್ರಾಯೇಲ್‌ದೇಶಕ್ಕೆ
ಹೋಗು; ಕೂಸಿನ ಪ್ರಾಣವನ್ನು ತೆಗೆಯಬೇಕೆಂದಿದ್ದ
ವರು ಸತ್ತುಹೋದರು ಎಂದು ಹೇಳಿದನು. ಆಗ
ಯೋಸೇಫನು ಎದ್ದು ಕೂಸನ್ನೂ ಅದರ ತಾಯಿ
ಯನ್ನೂ ಕರಕೊಂಡು ಇಸ್ರಾಯೇಲ್‌ದೇಶಕ್ಕೆ ಬಂದನು.
ಆದರೆ ಅರ್ಖೆಲಾಯನು ತನ್ನ ತಂದೆಯಾದ ಹೆರೋದ
ನಿಗೆ ಬದಲಾಗಿ ಯೂದಾಯವನ್ನು ಆಳುತ್ತಾನೆಂದು
ಕೇಳಿ ಅಲ್ಲಿಗೆ ಹೋಗುವದಕ್ಕೆ ಅಂಜಿದನು. ಆಗ

ಅವನು ಕನಸಿನಲ್ಲಿ ದೇವರ ಅಪ್ಪಣೆಯನ್ನು ಹೊಂದಿ
ಗಲಿಲಾಯ ಸೀಮೆಗೆ ಹೋದನು. ಮತ್ತು ನಜರೇ
ತೆಂಬ ಊರಿಗೆ ಬಂದು ಅಲ್ಲಿ ಮನೆಮಾಡಿಕೊಂಡು
ಇದ್ದನು. ಇದರಿಂದ—ನಜರಾಯನೆಂಬ ಹೆಸರು ಆತ
ನಿಗೆ ಬರುವದು ಎಂಬದಾಗಿ ಪ್ರವಾದಿಗಳಿಂದ ಹೇಳಿಸಿ
ರುವ ಮಾತು ನೆರವೇರಿತು.

ಸ್ನಾನಿಕನಾದ ಯೋಹಾನನ ಉಪದೇಶ.

(ಮಾರ್ಕ 1. 2—8; ಲೂಕ 3. 1—18;
ಯೋಹಾ. 1. 6—8, 19—34.)

ಆ ದಿನಗಳಲ್ಲಿ ಸ್ನಾನಿಕನಾದ ಯೋಹಾನನು—
2 ಪರಲೋಕರಾಜ್ಯವು ಸಮೀಪವಾಯಿತು; ದೇವರ
ಕಡೆಗೆ ತಿರುಗಿಕೊಳ್ಳಿರಿ ಎಂದು ಯೂದಾಯದ ಅಡವಿ
ಯಲ್ಲಿ ಸಾರಿ ಹೇಳುತ್ತಾ ಬಂದನು.

ಕರ್ತನ ದಾರಿಯನ್ನು ಸಿದ್ಧಮಾಡಿರಿ;
ಆತನ ಹಾದಿಗಳನ್ನು ನೆಟ್ಟಗೆ ಮಾಡಿರಿ ಎಂದು
ಅಡವಿಯಲ್ಲಿ ಕೂಗುವವನ ಶಬ್ದವದೆ

ಎಂಬದಾಗಿ ಪ್ರವಾದಿಯಾದ ಯೆಶಾಯನಿಂದ ಸೂಚಿತ
ನಾದವನು ಇವನೇ. ಈ ಯೋಹಾನನಿಗೆ ಒಂಟೇ
ಕೂದಲಿನ ಹೊದಿಕೆಯೂ ಸೊಂಟದಲ್ಲಿ ತೊಗಲಿನ
ನಡುಕಟ್ಟೂ ಇದ್ದವು. ಅವನಿಗೆ ಮಿಡಿತೆ ಮತ್ತು
ಕಾಡಜೇನು ಆಹಾರವಾಗಿದ್ದವು.

ಆಗ ಯೆರೂಸಲೇಮೂ ಎಲ್ಲಾ ಯೂದಾಯವೂ
ಯೊರ್ದನ್‌ಹೊಳೆಯ ಸುತ್ತಲಿರುವ ಎಲ್ಲಾ ಸೀಮೆಯೂ
ಅವನ ಬಳಿಗೆ ಹೊರಟುಹೋಗಿ, ಅವರು ತಮ್ಮ ತಮ್ಮ
ಪಾಪಗಳನ್ನು ಹೇಳಿಕೊಂಡು ಯೊರ್ದನ್‌ಹೊಳೆಯಲ್ಲಿ
ಅವನಿಂದ ದೀಕ್ಷಾಸ್ನಾನಮಾಡಿಸಿಕೊಳ್ಳುತ್ತಿದ್ದರು.

ಆದರೆ ಅವನು ಫರಿಸಾಯರಲ್ಲಿಯೂ ಸದ್ದುಕಾಯ
ರಲ್ಲಿಯೂ ಅನೇಕರು ತನ್ನಿಂದ ಸ್ನಾನಮಾಡಿಸಿಕೊಳ್ಳು
ವದಕ್ಕೆ ಬರುವದನ್ನು ಕಂಡು ಅವರಿಗೆ—ಎಲೈ ಸರ್ಪ
ಜಾತಿಯವರೇ, ಮುಂದೆ ಕಾಣಬರುವ ದೈವಕೋಪ
ದಿಂದ ತಪ್ಪಿಸಿಕೊಳ್ಳುವದಕ್ಕೆ ನಿಮಗೆ ಉಪದೇಶ ಮಾಡಿ
ದವರಾರು? ಹಾಗಾದರೆ ನಿಮ್ಮ ಮನಸ್ಸು ದೇವರ
ಕಡೆಗೆ ತಿರುಗಿತೆಂಬದನ್ನು ತಕ್ಕ ಫಲದಿಂದ ತೋರಿಸಿರಿ.
ಅಬ್ರಹಾಮನು ನಮಗೆ ಮೂಲಪುರುಷನಲ್ಲವೇ ಎಂಬು
ವ ಆಲೋಚನೆಯನ್ನು ಬಿಡಿರಿ. ದೇವರು ಅಬ್ರಹಾಮ
ನಿಗೆ ಈ ಕಲ್ಲುಗಳಿಂದಲೂ ಮಕ್ಕಳನ್ನು ಹುಟ್ಟಿಸಬಲ್ಲ
ನೆಂದು ನಿಮಗೆ ಹೇಳುತ್ತೇನೆ. ಈಗಲೇ ಮರಗಳ
ಬೇರಿಗೆ ಕೊಡಲಿ ಹಾಕಿಯದೆ; ಒಳ್ಳೇ ಫಲವನ್ನು
ಕೊಡದ ಪ್ರತಿಯೊಂದು ಮರವನ್ನು ಕಡಿದು ಬೆಂಕಿ
ಯಲ್ಲಿ ಹಾಕುವರು. ನಾನಂತೂ ನಿಮ್ಮ ಮನಸ್ಸು
ತಿರುಗಿಕೊಳ್ಳಬೇಕೆಂಬದಕ್ಕೆ ನಿಮಗೆ ನೀರಿನಲ್ಲಿ ಸ್ನಾನ
ಮಾಡಿಸುತ್ತೇನೆ. ಆದರೆ ನನ್ನ ಹಿಂದೆ ಬರುವವನು ನನ
ಗಿಂತ ಶಕ್ತನು; ಆತನ ಕೆರಗಳನ್ನು ಹೊರಲಿಕ್ಕೂ ನಾನು
ಯೋಗ್ಯನಲ್ಲ; ಆತನು ಪವಿತ್ರಾತ್ಮದಲ್ಲಿಯೂ ಬೆಂಕಿ
ಯಲ್ಲಿಯೂ ನಿಮಗೆ ಸ್ನಾನಮಾಡಿಸುವನು. ಆತನು
ಮೊರವನ್ನು ಕೈಯಲ್ಲಿ ಹಿಡಿದಿದ್ದಾನೆ; ತನ್ನ ಕಣದಲ್ಲಿಯ
ರಾಶಿಯನ್ನು ತೂರಿ ಹಸನುಮಾಡಿ ತನ್ನ ಗೋದಿ
ಯನ್ನು ಕಣಜದಲ್ಲಿ ತುಂಬಿಕೊಂಡು ಹೊಟ್ಟನ್ನು ಆರದ
ಬೆಂಕಿಯಲ್ಲಿ ಸುಟ್ಟುಬಿಡುವನು ಎಂದು ಹೇಳಿದನು.

ಯೇಸು ದೀಕ್ಷಾಸ್ನಾನಮಾಡಿಸಿಕೊಂಡದ್ದು.

(ಮಾರ್ಕ 1. 9—11; ಲೂಕ 3. 21, 22.)

ಆ ಕಾಲದಲ್ಲಿ ಯೇಸು ಯೋಹಾನನಿಂದ ಸ್ನಾನ 13
ಮಾಡಿಸಿಕೊಳ್ಳಬೇಕೆಂದು ಗಲಿಲಾಯದಿಂದ ಯೊರ್ದನ್
ಹೊಳೆಗೆ ಬಂದನು. ಆಗ ಯೋಹಾನನು—ನಾನು 14
ನಿನ್ನಿಂದ ಸ್ನಾನಮಾಡಿಸಿಕೊಳ್ಳತಕ್ಕವನಾಗಿರುವಲ್ಲಿ
ನೀನು ನನ್ನ ಬಳಿಗೆ ಬರುವದೇನು ಎಂದು ಹೇಳಿ
ಆತನನ್ನು ತಡೆಯುತ್ತಾ ಇದ್ದನು. ಆದರೆ ಯೇಸು 15
ಅವನಿಗೆ—ಸದ್ಯಕ್ಕೆ ಒಪ್ಪಿಕೋ; ಹೀಗೆ ನಾವು ಎಲ್ಲಾ
ಧರ್ಮವನ್ನು ನೆರವೇರಿಸತಕ್ಕದ್ದಾಗಿದೆ ಎಂದು ಹೇಳಿ
ದಾಗ ಅವನು ಒಪ್ಪಿಕೊಂಡನು.

ಯೇಸು ಸ್ನಾನಮಾಡಿಸಿಕೊಂಡ ಕೂಡಲೆ ನೀರಿನಿಂದ 16
ಮೇಲಕ್ಕೆ ಬರಲು ಇಗೋ, ಆತನಿಗೆ ಆಕಾಶವು ತೆರೆ
ಯಿತು; ಮತ್ತು ದೇವರ ಆತ್ಮ ಪಾರಿವಾಳದ ಹಾಗೆ
ಇಳಿದು ತನ್ನ ಮೇಲೆ ಬರುವದನ್ನು ಕಂಡನು. ಆಗ— 17
ಈತನು ಪ್ರಿಯನಾಗಿರುವ ನನ್ನ ಮಗನು, ಈತನನ್ನು
ನಾನು ಮೆಚ್ಚಿದ್ದೇನೆ ಎಂದು ಆಕಾಶವಾಣಿ ಆಯಿತು.

ಸೈತಾನನು ಯೇಸುವನ್ನು ಪಾಪದಲ್ಲಿ ಸಿಕ್ಕಿಸುವದಕ್ಕೆ
ಪ್ರಯತ್ನಿಸಿದ್ದು.

(ಮಾರ್ಕ 1. 12, 13; ಲೂಕ 4. 1—13.)

4 ಆಗ ಯೇಸು ಸೈತಾನನಿಂದ ಶೋಧಿಸಲ್ಪಡುವದ
ಕ್ಕಾಗಿ ಆತ್ಮನು ಆತನನ್ನು ಅಡವಿಗೆ ಒಯ್ದನು.
ಆತನು ನಾಲ್ವತ್ತು ದಿವಸ ಹಗಲಿರುಳು ಉಪವಾಸವಿದ್ದ 2
ತರುವಾಯ ಆತನಿಗೆ ಹಸಿವಾಯಿತು.

ಆಗ ಆ ಶೋಧಕನು ಆತನ ಬಳಿಗೆ ಬಂದು— 3
ನೀನು ದೇವರ ಮಗನಾಗಿದ್ದರೆ ಈ ಕಲ್ಲುಗಳು ರೊಟ್ಟಿ
ಯಾಗುವಂತೆ ಅಪ್ಪಣೆಕೊಡು ಎಂದು ಹೇಳಲು
ಆತನು—ಮನುಷ್ಯನು ರೊಟ್ಟಿತಿಂದ ಮಾತ್ರದಿಂದ 4
ಬದುಕುವದಿಲ್ಲ, ದೇವರ ಬಾಯಿಂದ ಹೊರಡುವ ಪ್ರತಿ
ಯೊಂದು ಮಾತಿನಿಂದಲೂ ಬದುಕುವನು ಎಂದು ಬರೆ
ದದೆ ಅಂದನು.

ಆಗ ಸೈತಾನನು ಆತನನ್ನು 1)ಪರಿಶುದ್ಧಪಟ್ಟಣಕ್ಕೆ 5
ಕರಕೊಂಡು ಹೋಗಿ ದೇವಾಲಯದ ಶಿಖರದ ಮೇಲೆ
ನಿಲ್ಲಿಸಿ ಆತನಿಗೆ—ನೀನು ದೇವರ ಮಗನಾಗಿದ್ದರೆ 6
ಕೆಳಕ್ಕೆ ದುಮುಕು;

ಆತನು ನಿನ್ನ ವಿಷಯವಾಗಿ ತನ್ನ ದೂತರಿಗೆ
ಅಪ್ಪಣೆಕೊಡುವನು;
ನಿನ್ನ ಕಾಲು ಕಲ್ಲಿಗೆ ತಗಲೀತೆಂದು ಅವರು
ನಿನ್ನನ್ನು ಕೈಗಳಲ್ಲಿ ಎತ್ತಿಕೊಳ್ಳುವರು

1) ಅಂದರೆ, ಯೆರೂಸಲೇಮಿಗೆ.

ಎಂಬದಾಗಿ ಬರೆದದೆಯಲ್ಲಾ ಎಂದು ಹೇಳಿದನು.
7 ಆದಕ್ಕೆ ಯೇಸು—ನಿನ್ನ ದೇವರಾಗಿರುವ ಕರ್ತ
ನನ್ನು ಪರೀಕ್ಷಿಸಬಾರದು ಎಂಬದಾಗಿ ಸಹ ಬರೆದದೆ
ಅಂದನು.
8 ಬಳಿಕ ಸೈತಾನನು ಆತನನ್ನು ಬಹಳ ಎತ್ತರವಾದ
ಬೆಟ್ಟಕ್ಕೆ ಕರಕೊಂಡು ಹೋಗಿ ಪ್ರಪಂಚದ ಎಲ್ಲಾ
ರಾಜ್ಯಗಳನ್ನೂ ಅವುಗಳ ವೈಭವವನ್ನೂ ಆತನಿಗೆ
9 ತೋರಿಸಿ—ನೀನು ನನಗೆ ಸಾಷ್ಟಾಂಗನಮಸ್ಕಾರ ಮಾಡಿ
ದರೆ ಇವುಗಳನ್ನೆಲ್ಲಾ ನಿನಗೆ ಕೊಡುವೆನು ಅಂದನು.
10 ಯೇಸು ಅವನಿಗೆ—ಸೈತಾನನೇ, ನೀನು ತೊಲಗಿ
ಹೋಗು. ನಿನ್ನ ದೇವರಾಗಿರುವ ಕರ್ತನಿಗೆ ಅಡ್ಡಬಿದ್ದು
ಆತನೊಬ್ಬನನ್ನೇ ಆರಾಧಿಸಬೇಕು ಎಂಬದಾಗಿ ಬರೆ
ದದೆ ಎಂದು ಹೇಳಿದನು.
11 ಆಗ ಸೈತಾನನು ಆತನನ್ನು ಬಿಟ್ಟುಬಿಟ್ಟನು. ಮತ್ತು
ದೇವದೂತರು ಬಂದು ಆತನಿಗೆ ಉಪಚಾರ ಮಾಡಿ
ದರು.

### ಯೇಸು ಗಲಿಲಾಯ ಸೀಮೆಯಲ್ಲಿ ಸುವಾರ್ತೆಯನ್ನು ಸಾರುವದಕ್ಕೆ ಪ್ರಾರಂಭಮಾಡಿದ್ದು.

(ಮಾರ್ಕ 1. 14, 15; ಲೂಕ 4. 14, 15.)

12 ಯೋಹಾನನು ಸೆರೆಗೆ ಬಿದ್ದನೆಂದು ಯೇಸು ಕೇಳಿ
ಆ ಸ್ಥಳವನ್ನು ಬಿಟ್ಟು ಗಲಿಲಾಯ ಸೀಮೆಗೆ ಹೊರಟು
13 ಹೋದನು. ಬಳಿಕ ನಜರೇತೆಂಬ ಊರನ್ನು ಬಿಟ್ಟು
ಜೆಬುಲೋನ್ ನೆಫ್ತಲೀಮ್ ಎಂಬ ನಾಡುಗಳಿಗೆ ಬಂದು
ಸಮುದ್ರದ ಹತ್ತಿರದಲ್ಲಿರುವ ಕಪೆರ್ನೌಮೆಂಬ ಊರಿ
14 ನಲ್ಲಿ ಮನೆಮಾಡಿಕೊಂಡು ಇದ್ದನು. ಇದರಿಂದ
ಯೆಶಾಯನೆಂಬ ಪ್ರವಾದಿಯ ಮುಖಾಂತರ ಹೇಳಿ
ಸಿರುವ ಮಾತು ನೆರವೇರಿತು; ಆ ಮಾತು ಏನಂದರೆ—
15 ಜೆಬುಲೋನ್ ಸೀಮೆ ಮತ್ತು ನೆಫ್ತಲೀಮ್ ಸೀಮೆ,
ಯೊರ್ದನಿನ ಆಚೆ, ಸಮುದ್ರದ ಕಡೆಗಿರುವ ಸೀಮೆ,
ಅನ್ಯಜನಗಳಿರುವ ಗಲಿಲಾಯ ಸೀಮೆ,
16 ಕತ್ತಲಲ್ಲಿ ವಾಸಿಸಿದ ಈ ಸೀಮೆಗಳ ಜನರಿಗೆ ದೊಡ್ಡ ಬೆಳಕು ಕಾಣಿಸಿತು;
ಕಾರ್ಗತ್ತಲಾದ ದೇಶದಲ್ಲಿದ್ದವರಿಗೆ ಸೂರ್ಯೋದಯವಾಯಿತು ಎಂಬದು.
17 ಅಂದಿನಿಂದ ಯೇಸು—ಪರಲೋಕರಾಜ್ಯವು ಸಮೀಪಿ
ಸಿತು; ದೇವರ ಕಡೆಗೆ ತಿರುಗಿಕೊಳ್ಳಿರಿ ಎಂದು ಸಾರಿ
ಹೇಳುವದಕ್ಕೆ ಪ್ರಾರಂಭಿಸಿದನು.

### ಯೇಸು ಪ್ರಥಮಶಿಷ್ಯರನ್ನು ಮಾಡಿಕೊಂಡದ್ದು.

(ಮಾರ್ಕ 1. 16—20; ಲೂಕ 5. 2—11; ಯೋಹಾ. 1. 40—42.)

18 ಹೀಗಿರುವಲ್ಲಿ, ಯೇಸು ಗಲಿಲಾಯ ಸಮುದ್ರದ
ಬಳಿಯಲ್ಲಿ ತಿರುಗಾಡುತ್ತಿರುವಾಗ ಅಣ್ಣತಮ್ಮಂದಿ
ರಿಬ್ಬರು ಬಲೆಬೀಸುವದನ್ನು ಕಂಡನು; ಅವರು ಪೇತ್ರ
ನೆನಿಸಿಕೊಳ್ಳುವ ಸೀಮೋನ ಮತ್ತು ಅವನ ತಮ್ಮನಾದ
ಅಂದ್ರೆಯ. ಅವರು ಬೆಸ್ತರು, ಸಮುದ್ರದಲ್ಲಿ ಬಲೆ
ಬೀಸುತ್ತಿದ್ದರು. ಅವರಿಗೆ ಆತನು—ನನ್ನ ಹಿಂದೆ
ಬನ್ನಿರಿ; ಮನುಷ್ಯರನ್ನು ಹಿಡಿಯುವ ಬೆಸ್ತರನ್ನಾಗಿ
ನಿಮ್ಮನ್ನು ಮಾಡುವೆನು ಎಂದು ಹೇಳುತ್ತಲೇ ಅವರು
ತಮ್ಮ ಬಲೆಗಳನ್ನು ಬಿಟ್ಟು ಆತನ ಹಿಂದೆ ಹೋದರು.
ಯೇಸು ಅಲ್ಲಿಂದ ಮುಂದೆ ಹೋಗಿ ಇನ್ನಿಬ್ಬರು ಅಣ್ಣ
ತಮ್ಮಂದಿರನ್ನು ಅಂದರೆ ಜೆಬೆದಾಯನ ಮಗನಾದ
ಯಾಕೋಬನನ್ನೂ ಅವನ ತಮ್ಮನಾದ ಯೋಹಾನ
ನನ್ನೂ ಕಂಡನು; ಇವರು ತಮ್ಮ ತಂದೆಯಾದ ಜೆಬೆ
ದಾಯನ ಕೂಡ ದೋಣಿಯಲ್ಲಿ ತಮ್ಮ ಬಲೆಗಳನ್ನು
ಸರಿಮಾಡುತ್ತಿದ್ದರು. ಆತನು ಇವರನ್ನೂ ಕರೆದನು.
ಕೂಡಲೆ ಅವರು ದೋಣಿಯನ್ನೂ ತಮ್ಮ ತಂದೆಯನ್ನೂ
ಬಿಟ್ಟು ಆತನನ್ನು ಹಿಂಬಾಲಿಸಿದರು.

### ಯೇಸು ಸುವಾರ್ತೆಯನ್ನು ಸಾರಿ ರೋಗಗಳನ್ನು ಪರಿಹರಿಸಿ ಹೆಸರುಗೊಂಡದ್ದು.

(ಮಾರ್ಕ 1. 39; ಲೂಕ 4. 15—44; 6. 17—19.)

ಬಳಿಕ ಯೇಸು ಗಲಿಲಾಯದಲ್ಲೆಲ್ಲಾ ತಿರುಗಾಡಿ
ಅಲ್ಲಿಯವರ ಸಭಾಮಂದಿರಗಳಲ್ಲಿ ಉಪದೇಶ ಮಾಡು
ತ್ತಾ, ಪರಲೋಕರಾಜ್ಯದ ಸುವಾರ್ತೆಯನ್ನು ಸಾರಿ
ಹೇಳುತ್ತಾ ಜನರ ಎಲ್ಲಾತರದ ರೋಗಗಳನ್ನೂ ಎಲ್ಲಾ
ತರದ ಬೇನೆಗಳನ್ನೂ ವಾಸಿಮಾಡುತ್ತಾ ಬಂದನು.
ಆತನ ಸುದ್ದಿಯು ಸಿರಿಯ ದೇಶದಲ್ಲೆಲ್ಲಾ ಹಬ್ಬಿದ್ದ
ರಿಂದ ಮೈಯಲ್ಲಿ ನೆಟ್ಟಗಿಲ್ಲದವರನ್ನು, ಅಂದರೆ ತರ
ತರದ ರೋಗಬಾಧೆಗಳಿಂದ ಕಷ್ಟಪಡುವವರನ್ನೂ ದೆವ್ವ
ಹಿಡಿದವರನ್ನೂ ಮೂರ್ಛಾರೋಗಿಗಳನ್ನೂ ಪಾರ್ಶ್ವ
ವಾಯುವಿನವರನ್ನೂ ಆತನ ಬಳಿಗೆ ಕರತಂದರು.
ಆತನು ಅವರನ್ನು ಸ್ವಸ್ಥಮಾಡಿದನು. ಮತ್ತು ಗಲಿ
ಲಾಯ ದೆಕಪೊಲಿ ಯೆರೂಸಲೇಮ್ ಯೂದಾಯ
ಎಂಬೀ ಸ್ಥಳಗಳಿಂದಲೂ ಯೊರ್ದನ್‌ಹೊಳೆಯ ಆಚೇ
ಕಡೆಯಿಂದಲೂ ಜನರು ಗುಂಪುಗುಂಪಾಗಿ ಆತನ ಹಿಂದೆ
ಹೋದರು.

### ಯೇಸು ಪರ್ವತದ ಮೇಲೆ ಮಾಡಿದ ಪ್ರಸಂಗವು.

(ಲೂಕ 6. 20—49; 11. 1—4; 9—13; 33—36; 12. 22—24; 57—59; 16. 17, 18.)

ಆತನು ಆ ಜನರ ಗುಂಪುಗಳನ್ನು ಕಂಡು ಬೆಟ್ಟ
ವನ್ನೇರಿ ಕೂತುಕೊಂಡ ತರುವಾಯ ಆತನ ಶಿಷ್ಯರು
ಆತನ ಬಳಿಗೆ ಬಂದರು. ಆತನು ಅವರಿಗೆ ಉಪದೇಶ
ಮಾಡಿ ಹೇಳಿದ್ದೇನಂದರೆ—
ಆತ್ಮದಲ್ಲಿ ಬಡವರಾಗಿರುವವರು ಧನ್ಯರು; ಪರ
ಲೋಕರಾಜ್ಯವು ಅವರದು.
ದುಃಖಪಡುವವರು ಧನ್ಯರು; ಅವರು ಸಮಾಧಾನ
ಹೊಂದುವರು.
ಶಾಂತರು ಧನ್ಯರು; ಅವರು ಭೂಮಿಗೆ ಬಾಧ್ಯರಾಗು
ವರು.

6 ನೀತಿಗೆ ಹಸಿದು ಬಾಯಾರಿದವರು ಧನ್ಯರು; ಅವ
ರಿಗೆ ತೃಪ್ತಿಯಾಗುವದು.
7 ಕರುಣೆಯುಳ್ಳವರು ಧನ್ಯರು; ಅವರು ಕರುಣೆ
ಹೊಂದುವರು.
8 ನಿರ್ಮಲಚಿತ್ತರು ಧನ್ಯರು; ಅವರು ದೇವರನ್ನು
ನೋಡುವರು.
9 ಸಮಾಧಾನ ಪಡಿಸುವವರು ಧನ್ಯರು; ಅವರು
ದೇವರ ಮಕ್ಕಳು ಅನ್ನಿಸಿಕೊಳ್ಳುವರು.
10 ನೀತಿಯ ನಿಮಿತ್ತವಾಗಿ ಹಿಂಸೆಯನ್ನು ತಾಳಿಕೊಳ್ಳು
ವವರು ಧನ್ಯರು; ಪರಲೋಕರಾಜ್ಯವು ಅವರದು.
11 ನನ್ನ ನಿಮಿತ್ತವಾಗಿ ಜನರು ನಿಮ್ಮನ್ನು ನಿಂದಿಸಿ
ಹಿಂಸೆಪಡಿಸಿ ನಿಮ್ಮ ಮೇಲೆ ಕೆಟ್ಟ ಕೆಟ್ಟ ಮಾತು
ಗಳನ್ನು ಸುಳ್ಳಾಗಿ ಹೊರಿಸಿದರೆ ನೀವು ಧನ್ಯರು.
12 ಸಂತೋಷಪಡಿರಿ, ಉಲ್ಲಾಸಪಡಿರಿ; ಪರಲೋಕದಲ್ಲಿ
ನಿಮಗೆ ಬಹಳ ಫಲ ಸಿಕ್ಕುವದು; ನಿಮಗಿಂತ ಮುಂಚೆ
ಇದ್ದ ಪ್ರವಾದಿಗಳನ್ನೂ ಹೀಗೆಯೇ ಹಿಂಸೆಪಡಿಸಿದರಲ್ಲಾ.
13 ನೀವು ಭೂಮಿಗೆ ಉಪ್ಪಾಗಿದ್ದೀರಿ. ಉಪ್ಪು ಸಪ್ಪ
ಗಾದರೆ ಅದಕ್ಕೆ ಇನ್ನಾತರಿಂದ ಉಪ್ಪಿನ ರುಚಿ ಬಂದೀತು?
ಜನರು ಅದನ್ನು ಹೊರಗೆಹಾಕಿ ತುಳಿಯುವದಕ್ಕೆ ಅದು
ಯೋಗ್ಯವೇ ಹೊರತು ಮತ್ತಾವ ಕೆಲಸಕ್ಕೂ ಬಾರದು.
14 ನೀವು ಲೋಕಕ್ಕೆ ಬೆಳಕಾಗಿದ್ದೀರಿ. ಗುಡ್ಡದ ಮೇಲೆ
15 ಕಟ್ಟಿರುವ ಊರು ಮರೆಯಾಗಿರಲಾರದು. ಮತ್ತು
ದೀಪವನ್ನು ಹತ್ತಿಸಿ ಕೊಳಗದೊಳಗೆ ಇಡುವದಿಲ್ಲ;
ದೀಪಸ್ತಂಭದ ಮೇಲೆ ಇಡುತ್ತಾರಷ್ಟೆ. ಆಗ ಅದು
16 ಮನೆಯಲ್ಲಿರುವವರೆಲ್ಲರಿಗೆ ಬೆಳಕುಕೊಡುವದು. ಅದ
ರಂತೆ ನಿಮ್ಮ ಬೆಳಕು ಜನರ ಮುಂದೆ ಪ್ರಕಾಶಿಸಲಿ.
ಹೀಗಾದರೆ ಅವರು ನಿಮ್ಮ ಒಳ್ಳೇ ಕ್ರಿಯೆಗಳನ್ನು ನೋಡಿ
ಪರಲೋಕದಲ್ಲಿರುವ ನಿಮ್ಮ ತಂದೆಯನ್ನು ಕೊಂಡಾಡು
ವರು.

17 ಮೋಶೆಯ ಧರ್ಮಶಾಸ್ತ್ರವನ್ನಾಗಲಿ ಪ್ರವಾದಿಗಳ
ವಚನಗಳನ್ನಾಗಲಿ ತೆಗೆದುಹಾಕುವದಕ್ಕೆ ನಾನು ಬಂದೆ
ನೆಂದು ನೆನಸಬೇಡಿರಿ. ತೆಗೆದುಹಾಕುವದಕ್ಕೆ ಬಂದಿಲ್ಲ;
18 ನೆರವೇರಿಸುವದಕ್ಕೆ ಬಂದಿದ್ದೇನೆ. ನಿಮಗೆ ಸತ್ಯವಾಗಿ
ಹೇಳುತ್ತೇನೆ—ಆಕಾಶವೂ ಭೂಮಿಯೂ ಅಳಿದು
ಹೋಗುವ ತನಕ ಧರ್ಮಶಾಸ್ತ್ರವೆಲ್ಲಾ ನೆರವೇ
ರಿದ ಹೊರತು ಅದರೊಳಗಿಂದ ಒಂದು ಸೊನ್ನೆಯಾ
ದರೂ ಒಂದು ಗುಡುಸಾದರೂ ಅಳಿದುಹೋಗಲಾರದು.
19 ಆದದರಿಂದ ಈ ಸಣ್ಣಸಣ್ಣ ಆಜ್ಞೆಗಳಲ್ಲಿಯಾದರೂ
ಒಂದನ್ನು ಮೀರಿ ಜನರಿಗೂ ಹಾಗೆ ಮೀರುವದಕ್ಕೆ
ಬೋಧಿಸುವವನು ಪರಲೋಕರಾಜ್ಯದಲ್ಲಿ ಬಹಳ ಚಿಕ್ಕ
ವನೆನಿಸಿಕೊಳ್ಳುವನು; ಆದರೆ ತಾನೇ ಆ ಆಜ್ಞೆಗಳಂತೆ
ನಡೆದುಕೊಂಡು ಜನರಿಗೂ ಹಾಗೆ ನಡೆಯಬೇಕೆಂದು
ಬೋಧಿಸುವವನು ಪರಲೋಕರಾಜ್ಯದಲ್ಲಿ ದೊಡ್ಡವನೆ
20 ನಿಸಿಕೊಳ್ಳುವನು. ನಿಮ್ಮ ನೀತಿಯು ಶಾಸ್ತ್ರಿಗಳ
ಮತ್ತು ಫರಿಸಾಯರ ನೀತಿಗಿಂತಲೂ ಹೆಚ್ಚಿನದಾಗದಿ
ದ್ದರೆ ನೀವು ಪರಲೋಕರಾಜ್ಯದಲ್ಲಿ ಸೇರಲಾರಿರಿ ಎಂದು
ನಿಮಗೆ ಹೇಳುತ್ತೇನೆ.

ನರಹತ್ಯ ಮಾಡಬಾರದು; ನರಹತ್ಯ ಮಾಡುವ 21
ವನು ನ್ಯಾಯವಿಚಾರಣೆಗೆ ಗುರಿಯಾಗುವನೆಂದು ಹಿರಿ
ಯರಿಗೆ ಹೇಳಿಯದೆ ಎಂದು ಕೇಳಿದ್ದೀರಷ್ಟೆ. ಆದರೆ 22
ನಾನು ನಿಮಗೆ ಹೇಳುವದೇನಂದರೆ—ತನ್ನ ಸಹೋದ
ರನ ಮೇಲೆ ಸಿಟ್ಟುಗೊಳ್ಳುವ ಪ್ರತಿ ಮನುಷ್ಯನು
ನ್ಯಾಯವಿಚಾರಣೆಗೆ ಗುರಿಯಾಗುವನು; ತನ್ನ ಸಹೋ
ದರನನ್ನು ನೋಡಿ—ಛೀ ನೀಚಾ ಅನ್ನುವವನು ನ್ಯಾಯ
ಸಭೆಯ ವಿಚಾರಣೆಗೆ ಒಳಗಾಗುವನು; ಮೂರ್ಖಾ
ಅನ್ನುವವನು 1)ಅಗ್ನಿನರಕಕ್ಕೆ ಗುರಿಯಾಗುವನು.
ಆದಕಾರಣ ನೀನು ನಿನ್ನ ಕಾಣಿಕೆಯನ್ನು ಯಜ್ಞವೇ 23
ದಿಯ ಹತ್ತರಕ್ಕೆ ತಂದಾಗ ನಿನ್ನ ಸಹೋದರನ ಮನಸ್ಸಿ
ನಲ್ಲಿ ನಿನ್ನ ಮೇಲೆ ಏನೋ ವಿರೋಧವದೆ ಎಂಬದು
ನಿನ್ನ ನೆನಪಿಗೆ ಬಂದರೆ, ನಿನ್ನ ಕಾಣಿಕೆಯನ್ನು ಆ 24
ಯಜ್ಞವೇದಿಯ ಮುಂದೆಯೇ ಬಿಟ್ಟುಹೋಗಿ ಮೊದಲು
ನಿನ್ನ ಸಹೋದರನ ಸಂಗಡ ಒಂದಾಗು; ಆ ಮೇಲೆ
ಬಂದು ನಿನ್ನ ಕಾಣಿಕೆಯನ್ನು ಕೊಡು.
ನಿನ್ನ ವಾದಿಯ ಸಂಗಡ ಇನ್ನೂ ದಾರಿಯಲ್ಲಿರುವಾ 25
ಗಲೇ ಅವನ ಕೂಡ ಬೇಗ ಸಮಾಧಾನ ಮಾಡಿಕೋ;
ಇಲ್ಲದಿದ್ದರೆ ಆ ವಾದಿಯು ನಿನ್ನನ್ನು ನ್ಯಾಯಾಧಿ
ಪತಿಗೆ ಒಪ್ಪಿಸಾನು; ನ್ಯಾಯಾಧಿಪತಿಯು ನಿನ್ನನ್ನು
ಓಲೇಕಾರನ ಕೈಗೆ ಒಪ್ಪಿಸಿಕೊಟ್ಟಾನು; ಆಗ ನೀನು
ಸೆರೆಯಲ್ಲಿ ಬಿದ್ದೀಯೆ. ನೀನು ಒಂದು ಕಾಸನ್ನಾ 26
ದರೂ ನಿಲ್ಲಿಸಿಕೊಳ್ಳದೆ ಎಲ್ಲಾ ಸಲ್ಲಿಸುವ ತನಕ
ಅಲ್ಲಿಂದ ಬರುವದೇ ಇಲ್ಲ ಎಂದು ನಿನಗೆ ಸತ್ಯವಾಗಿ
ಹೇಳುತ್ತೇನೆ.
ವ್ಯಭಿಚಾರ ಮಾಡಬಾರದೆಂದು ಹೇಳಿಯದೆ ಎಂಬ 27
ದಾಗಿ ನೀವು ಕೇಳಿದ್ದೀರಷ್ಟೆ. ಆದರೆ ನಾನು ನಿಮಗೆ 28
ಹೇಳುವದೇನಂದರೆ—ಪರಸ್ತ್ರೀಯನ್ನು ನೋಡಿ ಮೋಹಿ
ಸುವ ಪ್ರತಿ ಮನುಷ್ಯನು ಆಗಲೇ ತನ್ನ ಮನಸ್ಸಿನಲ್ಲಿ
ಆಕೆಯ ಕೂಡ ವ್ಯಭಿಚಾರ ಮಾಡಿದವನಾದನು. ನಿನ್ನ 29
ಬಲಗಣ್ಣು ನಿನ್ನನ್ನು ಪಾಪದಲ್ಲಿ ಸಿಕ್ಕಿಸುವದಾದರೆ
ಅದನ್ನು ಕಿತ್ತು ಬಿಸಾಟುಬಿಡು; ನಿನ್ನ ದೇಹವೆಲ್ಲಾ
ನರಕದಲ್ಲಿ ಬೀಳುವದಕ್ಕಿಂತ ಅವಯವಗಳಲ್ಲಿ ಒಂದು
ಹೋಗುವದು ನಿನಗೆ ಹಿತವಲ್ಲವೇ. ನಿನ್ನ ಬಲಗೈ 30
ನಿನ್ನನ್ನು ಪಾಪದಲ್ಲಿ ಸಿಕ್ಕಿಸುವದಾದರೆ ಅದನ್ನು
ಕಡಿದು ಬಿಸಾಟುಬಿಡು; ನಿನ್ನ ದೇಹವೆಲ್ಲಾ ನರಕದಲ್ಲಿ
ಬೀಳುವದಕ್ಕಿಂತ ಅವಯವಗಳಲ್ಲಿ ಒಂದು ಹೋಗು
ವದು ನಿನಗೆ ಹಿತವಲ್ಲವೇ.
ಇದಲ್ಲದೆ ತನ್ನ ಹೆಂಡತಿಯನ್ನು ಬಿಟ್ಟುಬಿಡುವ 31
ವನು ಆಕೆಗೆ ತ್ಯಾಗಪತ್ರವನ್ನು ಕೊಡತಕ್ಕದ್ದೆಂದು ಹೇಳಿ
ಯದೆಯಷ್ಟೆ. ಆದರೆ ನಾನು ನಿಮಗೆ ಹೇಳುವದೇ 32
ನಂದರೆ—ಹಾದರದ ಕಾರಣದಿಂದಲ್ಲದೆ ತನ್ನ ಹೆಂಡತಿ
ಯನ್ನು ಬಿಟ್ಟುಬಿಡುವವನು ಅವಳು ವ್ಯಭಿಚಾರ ಮಾಡು
ವದಕ್ಕೆ ಕಾರಣನಾಗುತ್ತಾನೆ. ಮತ್ತು ಗಂಡಬಿಟ್ಟವ
ಳನ್ನು ಮದುವೆಮಾಡಿಕೊಳ್ಳುವವನು ವ್ಯಭಿಚಾರಮಾಡಿ
ದವನಾಗಿದ್ದಾನೆ.
ಮತ್ತು—ನೀನು ಸುಳ್ಳಾಣೆಯಿಡಬಾರದು; ನೀನು 33
ಇಟ್ಟುಕೊಂಡ ಆಣೆಗಳನ್ನು ಕರ್ತನಿಗೆ ಸಲ್ಲಿಸಬೇಕೆಂದು

1) ಮೂಲ: ಬೆಂಕಿಯ ಗೆಹೆನ್ನಕ್ಕೆ.

34 ಹಿರಿಯರಿಗೆ ಹೇಳಿಯದೆ ಎಂದು ಕೇಳಿದ್ದೀರಷ್ಟೆ. ಆದರೆ
ನಾನು ನಿಮಗೆ ಹೇಳುವದೇನಂದರೆ—ಆಣೆಯನ್ನೇ
ಇಡಬೇಡ. ಆಕಾಶದ ಮೇಲೆ ಆಣೆ ಇಡಬೇಡ; ಅದು
35 ದೇವರ ಸಿಂಹಾಸನವು. ಭೂಮಿಯ ಮೇಲೆ ಆಣೆ
ಇಡಬೇಡ; ಅದು ಆತನ ಪಾದಪೀಠವು. ಯೆರೂಸ
ಲೇಮಿನ ಮೇಲೆ ಆಣೆ ಇಡಬೇಡ; ಅದು ಆ ದೊಡ್ಡ
36 ಅರಸನ ಪಟ್ಟಣವಾಗಿದೆ. ನಿನ್ನ ತಲೆಯ ಮೇಲೆ
ಕೂಡ ಆಣೆ ಇಡಬೇಡ; ನೀನು ಒಂದು ಕೂದಲನ್ನಾ
37 ದರೂ ಬೆಳ್ಳಗೆ ಅಥವಾ ಕರ್‍ರಗೆ ಮಾಡಲಾರಿ. ಆದರೆ
ನಿಮ್ಮ ಮಾತು ಹೌದಾದರೆ ಹೌದು, ಅಲ್ಲವಾದರೆ ಅಲ್ಲ,
ಎಂದಿರಲಿ; ಇದಕ್ಕಿಂತ ಹೆಚ್ಚಾದದ್ದು ಸೈತಾನನಿಂದ
ಬಂದದ್ದು.
38 ಕಣ್ಣಿಗೆ ಪ್ರತಿಯಾಗಿ ಕಣ್ಣನ್ನು ಹಲ್ಲಿಗೆ ಪ್ರತಿ
ಯಾಗಿ ಹಲ್ಲನ್ನು ತೆಗಿಸು ಅಂತ ಹೇಳಿಯದೆ ಎಂದು
39 ಕೇಳಿದ್ದೀರಷ್ಟೆ. ಆದರೆ ನಾನು ನಿಮಗೆ ಹೇಳುವದೇ
ನಂದರೆ—ಕೆಡುಕನನ್ನು ಎದುರಿಸಬೇಡ. ಒಬ್ಬನು
ನಿನ್ನ ಬಲಗೆನ್ನೆಯ ಮೇಲೆ ಹೊಡೆದರೆ ಅವನಿಗೆ
40 ಮತ್ತೊಂದು ಕೆನ್ನೆಯನ್ನೂ ಒಡ್ಡು. ನಿನ್ನ ಸಂಗಡ
ವ್ಯಾಜ್ಯವಾಡಿ ನಿನ್ನ ಒಳಂಗಿಯನ್ನು ತಕ್ಕೊಳ್ಳಬೇಕೆಂದಿ
41 ರುವವನಿಗೆ ಮೇಲಂಗಿಯನ್ನೂ ಬಿಡು. ಒಬ್ಬನು—
ಒಂದು ಮೈಲು ದೂರ ಬಾ ಎಂದು ನಿನ್ನನ್ನು ಬಿಟ್ಟೀ
ಹಿಡಿದರೆ ಅವನ ಸಂಗಡ ಎರಡು ಮೈಲು ಹೋಗು.
42 ನಿನ್ನನ್ನು ಬೇಡುವವನಿಗೆ ಕೊಡು; ನಿನ್ನಲ್ಲಿ ಕಡಾ
ಈಸಿಕೊಳ್ಳಬೇಕೆಂದು ಬಂದವನಿಗೆ ಮುಖತಿರುವಿಕೊಳ್ಳ
ಬೇಡ.
43 ನಿನ್ನ ನೆರೆಯವನನ್ನು ಪ್ರೀತಿಸಿ ನಿನ್ನ ವೈರಿಯನ್ನು
ಹಗೆಮಾಡಬೇಕೆಂದು ಹೇಳಿಯದೆ ಎಂಬದಾಗಿ ಕೇಳಿದ್ದೀ
44 ರಷ್ಟೆ. ಆದರೆ ನಾನು ನಿಮಗೆ ಹೇಳುವದೇನಂದರೆ—
ನಿಮ್ಮ ವೈರಿಗಳನ್ನು ಪ್ರೀತಿಸಿರಿ; ನಿಮ್ಮನ್ನು ಹಿಂಸೆ
45 ಪಡಿಸುವವರಿಗೋಸ್ಕರ ದೇವರನ್ನು ಪ್ರಾರ್ಥಿಸಿರಿ. ಹೀಗೆ
ಮಾಡಿದರೆ, ನೀವು ಪರಲೋಕದಲ್ಲಿರುವ ನಿಮ್ಮ ತಂದೆಗೆ
ಮಕ್ಕಳಾಗುವಿರಿ. ಆತನು ಕೆಟ್ಟವರ ಮೇಲೆಯೂ
ಒಳ್ಳೆಯವರ ಮೇಲೆಯೂ ತನ್ನ ಸೂರ್ಯನು ಮೂಡು
ವಂತೆ ಮಾಡುತ್ತಾನೆ; ನೀತಿವಂತರ ಮೇಲೆಯೂ
ಅನೀತಿವಂತರ ಮೇಲೆಯೂ ಮಳೆಸುರಿಸುತ್ತಾನೆ.
46 ನಿಮಗೆ ಪ್ರೀತಿ ತೋರಿಸುವವರನ್ನೇ ನೀವು ಪ್ರೀತಿಸಿದರೆ
ಫಲವೇನು? 1)ಭ್ರಷ್ಟರೂ ಹಾಗೆ ಮಾಡುವದಿಲ್ಲವೇ.
47 ನಿಮ್ಮ ಸಹೋದರರಿಗೆ ಮಾತ್ರ ನೀವು ಮರ್ಯಾದೆ
ಕೊಟ್ಟರೆ ಏನು ಹೆಚ್ಚು ಮಾಡಿದ ಹಾಗಾಯಿತು? ಅನ್ಯ
48 ಜನಗಳು ಸಹ ಹಾಗೆ ಮಾಡುವದಿಲ್ಲವೇ. ಆದದ
ರಿಂದ ಪರಲೋಕದಲ್ಲಿರುವ ನಿಮ್ಮ ತಂದೆಯು ಯಾವ
ದೋಷವೂ ಇಲ್ಲದವನಾಗಿರುವಂತೆ ನೀವೂ ದೋಷವಿಲ್ಲ
ದವರಾಗಿರ್ರಿ.

6 ಜನರು ನೋಡಲಿ ಎಂದು ನಿಮ್ಮ ಧರ್ಮಕಾರ್ಯ
ಗಳನ್ನು ಅವರ ಮುಂದೆ ಮಾಡಬಾರದು, ನೋಡಿರಿ;
ಹಾಗೆ ಮಾಡಿದರೆ ಪರಲೋಕದಲ್ಲಿರುವ ನಿಮ್ಮ ತಂದೆ
ಯ ಹತ್ತರ ನಿಮಗೆ ಫಲದೊರೆಯದು.
ಆದದರಿಂದ ನೀನು ಧರ್ಮಕೊಡುವಾಗ ನಿನ್ನ
ಮುಂದೆ ಕೊಂಬೂದಿಸಬೇಡ; ಜನರಿಂದ ಹೊಗಳಿಸಿ
ಕೊಳ್ಳಬೇಕೆಂದು ಕಪಟಿಗಳು ಸಭಾಮಂದಿರಗಳಲ್ಲಿಯೂ
ಬೀದಿಗಳಲ್ಲಿಯೂ ಹಾಗೆ ಮಾಡುತ್ತಾರೆ. ಅವರು
ತಮಗೆ ಬರತಕ್ಕ ಫಲವನ್ನು ಹೊಂದಿದ್ದಾಯಿತೆಂದು
ನಿಮಗೆ ಸತ್ಯವಾಗಿ ಹೇಳುತ್ತೇನೆ. ನೀನಾದರೆ ಧರ್ಮ
ಕೊಡುವಾಗ ನೀನು ಧರ್ಮಕೊಟ್ಟದ್ದು ಅಂತರಂಗ
ವಾಗುವ ಹಾಗೆ ನಿನ್ನ ಬಲಗೈ ಮಾಡಿದ್ದು ಎಡಗೈಗೂ
ತಿಳಿಯದಿರಲಿ. ಅಂತರಂಗದಲ್ಲಿ ನಡೆಯುವದನ್ನು
ನೋಡುವ ನಿನ್ನ ತಂದೆಯು ನಿನಗೆ ಫಲಕೊಡುವನು.
ಮತ್ತು ನೀವು ಪ್ರಾರ್ಥನೆಮಾಡುವಾಗ ಕಪಟಿಗಳ
ಹಾಗೆ ಮಾಡಬೇಡಿರಿ. ಜನರು ನೋಡಬೇಕೆಂದು
ಅವರು ಸಭಾಮಂದಿರಗಳಲ್ಲಿಯೂ ಬೀದೀಚೌಕಗಳಲ್ಲಿ
ಯೂ ನಿಂತುಕೊಂಡು ಪ್ರಾರ್ಥನೆಮಾಡುವದಕ್ಕೆ ಇಷ್ಟ
ಪಡುತ್ತಾರೆ. ಅವರು ತಮಗೆ ಬರತಕ್ಕ ಫಲವನ್ನು
ಹೊಂದಿದ್ದಾಯಿತೆಂದು ನಿಮಗೆ ಸತ್ಯವಾಗಿ ಹೇಳುತ್ತೇನೆ.
ಆದರೆ ನೀನು ಪ್ರಾರ್ಥನೆಮಾಡಬೇಕಾದರೆ ನಿನ್ನ
ಏಕಾಂತವಾದ ಕೋಣೆಯೊಳಗೆ ಹೋಗಿ ಬಾಗಲನ್ನು
ಮುಚ್ಚಿಕೊಂಡು ಅಂತರಂಗದಲ್ಲಿಯೂ ಇರುವ ನಿನ್ನ
ತಂದೆಗೆ ಪ್ರಾರ್ಥನೆಮಾಡು; ಅಂತರಂಗದಲ್ಲಿ ನಡೆಯು
ವದನ್ನು ನೋಡುವ ನಿನ್ನ ತಂದೆಯು ನಿನಗೆ ಫಲಕೊಡು
ವನು. ಆದರೆ ಪ್ರಾರ್ಥನೆಮಾಡುವಾಗ ಅಜ್ಞಾನಿಗಳ
ಹಾಗೆ ಹೇಳಿದ್ದನ್ನೇ ಸುಮ್ಮಸುಮ್ಮನೆ ಹೇಳಬೇಡ;
ಅವರು ಬಹಳ ಮಾತುಗಳನ್ನಾಡಿದರೆ ತಮ್ಮ ಪ್ರಾರ್ಥನೆ
ಯನ್ನು ದೇವರು ಕೇಳುತ್ತಾನೆಂದು ನೆನಸುತ್ತಾರೆ.
ಆದದರಿಂದ ನೀವು ಅವರ ಹಾಗೆ ಆಗಬೇಡಿರಿ. ನೀವು
ನಿಮ್ಮ ತಂದೆಯನ್ನು ಬೇಡಿಕೊಳ್ಳುವದಕ್ಕಿಂತ ಮುಂಚೆ
ಯೇ ನಿಮಗೆ ಏನೇನು ಅಗತ್ಯವೆಂಬದು ಆತನಿಗೆ ತಿಳಿ
ದದೆ. ಆದದರಿಂದ ನೀವು ಹೀಗೆ ಪ್ರಾರ್ಥನೆಮಾಡ
ತಕ್ಕದ್ದು—

ಪರಲೋಕದಲ್ಲಿರುವ ನಮ್ಮ ತಂದೆಯೇ,
ನಿನ್ನ ನಾಮವು ಪರಿಶುದ್ಧವೆಂದು ಎಣಿಸಲ್ಪಡಲಿ.
ನಿನ್ನ ರಾಜ್ಯವು ಬರಲಿ.
ನಿನ್ನ ಚಿತ್ತವು ಪರಲೋಕದಲ್ಲಿ ನೆರವೇರುವ
ಪ್ರಕಾರ ಭೂಲೋಕದಲ್ಲಿಯೂ ನೆರವೇರಲಿ.
ನಮ್ಮ ಅನುದಿನದ ಆಹಾರವನ್ನು ಈ ಹೊತ್ತೂ
ದಯಪಾಲಿಸು.
2)ನಮಗೆ ತಪ್ಪು ಮಾಡಿದವರನ್ನು ನಾವು ಕ್ಷಮಿಸಿ
ದಂತೆ ನಮ್ಮ 3)ತಪ್ಪುಗಳನ್ನು ಕ್ಷಮಿಸು.
ನಮ್ಮನ್ನು ಶೋಧನೆಯೊಳಗೆ ಸೇರಿಸದೆ 4)ಕೇಡಿ
ನಿಂದ ನಮ್ಮನ್ನು ತಪ್ಪಿಸು5).

ನೀವು ಜನರ ತಪ್ಪುಗಳನ್ನು ಕ್ಷಮಿಸಿದರೆ ಪರಲೋಕ
ದಲ್ಲಿರುವ ನಿಮ್ಮ ತಂದೆಯು ನಿಮ್ಮ ತಪ್ಪುಗಳನ್ನೂ
ಕ್ಷಮಿಸುವನು. ಆದರೆ ನೀವು ಜನರ ತಪ್ಪುಗಳನ್ನು

---

1) ಮೂಲ: ಸುಂಕದವರೂ. 2) ಮೂಲ: ನಮ್ಮ ಸಾಲಗಾರರನ್ನು. 3) ಮೂಲ: ಸಾಲಗಳನ್ನು. 4) ಅಥ
ಕೆಡುಕನಿಂದ ಅಂದರೆ, ಸೈತಾನನಿಂದ. 5) ಕೆಲವು ಪ್ರತಿಗಳಲ್ಲಿ ಮುಂದಣ ಮಾತುಗಳು ಅವೆ—ಯಾಕಂದರೆ, ರಾಜ್ಯವೂ ಬಲವೂ ಮಹಿ
ಯೂ ಸದಾಕಾಲ ನಿನ್ನವೇ. ಆಮೆನ್.

ಕ್ಷಮಿಸದೆಹೋದರೆ ನಿಮ್ಮ ತಂದೆ ಸಹ ನಿಮ್ಮ ತಪ್ಪುಗ
ಳನ್ನು ಕ್ಷಮಿಸುವದಿಲ್ಲ.
16 ಇದಲ್ಲದೆ ನೀವು ಉಪವಾಸಮಾಡುವಾಗ ಕಪಟಿ
ಗಳಂತೆ ಮುಖವನ್ನು ಸಪ್ಪಗೆಮಾಡಿಕೊಳ್ಳಬೇಡಿರಿ.
ಅವರು ತಾವು ಉಪವಾಸಿಗಳೆಂದು ಜನರಿಗೆ ತೋರುವದ
ಕ್ಕಾಗಿ ತಮ್ಮ ಮುಖವನ್ನು ವಿಕಾರಮಾಡಿಕೊಳ್ಳು
ತ್ತಾರೆ. ಅವರು ತಮಗೆ ಬರತಕ್ಕ ಫಲವನ್ನು ಹೊಂದಿ
17 ದ್ದಾಯಿತೆಂದು ನಿಮಗೆ ಸತ್ಯವಾಗಿ ಹೇಳುತ್ತೇನೆ. ಆದರೆ
ನೀನು ಉಪವಾಸಮಾಡುವಾಗ ತಲೆಗೆ ಎಣ್ಣೆ ಹಚ್ಚಿ
18 ಕೊಂಡು ಮುಖವನ್ನು ತೊಳಕೋ. ಹೀಗೆ ಮಾಡಿ
ದರೆ ನೀನು ಉಪವಾಸಿಯೆಂದು ಜನರಿಗೆ ಕಾಣದೆಹೋ
ದಾಗ್ಯೂ ಅಂತರಂಗದಲ್ಲಿರುವ ನಿನ್ನ ತಂದೆಗೆ ಉಪವಾಸಿ
ಯೆಂದು ಕಾಣಿಸಿಕೊಳ್ಳುವಿ. ಅಂತರಂಗದಲ್ಲಿ ನಡೆ
ಯುವದನ್ನು ನೋಡುವ ನಿನ್ನ ತಂದೆಯು ನಿನಗೆ ಫಲ
ಕೊಡುವನು.

19 ಭೂಲೋಕದಲ್ಲಿ ಗಂಟುಮಾಡಿ ಇಟ್ಟುಕೊಳ್ಳ
ಬೇಡಿರಿ; ಇಲ್ಲಿ ಅಂತೂ ಅದು ನುಸಿಹಿಡಿದು ಕಿಲುಬು
ಹತ್ತಿ ಕೆಟ್ಟುಹೋಗುವದು; ಇಲ್ಲಿ ಕಳ್ಳರು ಕನ್ನಾಕೊ
20 ರೆದು ಕದಿಯುವರು. ಆದರೆ ಪರಲೋಕದಲ್ಲಿ ಗಂಟು
ಮಾಡಿ ಇಟ್ಟುಕೊಳ್ಳಿರಿ; ಅಲ್ಲಿ ಅದು ನುಸಿಹಿಡಿದು
ಕಿಲುಬುಹತ್ತಿ ಕೆಟ್ಟುಹೋಗುವದಿಲ್ಲ; ಅಲ್ಲಿ ಕಳ್ಳರು
ಕನ್ನಾಕೊರೆಯುವದೂ ಇಲ್ಲ, ಕದಿಯುವದೂ ಇಲ್ಲ,
21 ನಿನ್ನ ಗಂಟು ಇದ್ದಲ್ಲಿಯೇ ನಿನ್ನ ಮನಸ್ಸೂ ಇರುವ
ದಷ್ಟೆ.
22 ಕಣ್ಣು ದೇಹಕ್ಕೆ ದೀಪವಾಗಿದೆ; ಹೀಗಿರುವಲ್ಲಿ
ನಿನ್ನ ಕಣ್ಣು ನೆಟ್ಟಗಿದ್ದರೆ ನಿನ್ನ ದೇಹವೆಲ್ಲಾ ಬೆಳಕಾಗಿ
23 ರುವದು. ನಿನ್ನ ಕಣ್ಣು ಕೆಟ್ಟದ್ದಾಗಿದ್ದರೆ ನಿನ್ನ ದೇಹ
ವೆಲ್ಲಾ ಕತ್ತಲಾಗಿರುವದು. ಹಾಗಾದರೆ ನಿನ್ನೊಳಗಿ
ರುವ ಬೆಳಕೇ ಕತ್ತಲಾದರೆ ಆ ಕತ್ತಲು ಎಷ್ಟೆನ್ನ
ಬೇಕು!
24 ಯಾವನೂ ಇಬ್ಬರು ಯಜಮಾನರಿಗೆ ಸೇವೆಮಾಡ
ಲಾರನು. ಅವನು ಒಬ್ಬನನ್ನು 1)ದ್ವೇಷಿಸಿ ಮತ್ತೊಬ್ಬ
ನನ್ನು ಪ್ರೀತಿಸುವನು; ಇಲ್ಲವೆ ಒಬ್ಬನನ್ನು ಹೊಂದಿ
ಕೊಂಡು ಮತ್ತೊಬ್ಬನನ್ನು ತಾತ್ಸಾರಮಾಡುವನು.
ನೀವು ದೇವರನ್ನೂ 2)ಧನವನ್ನೂ ಕೂಡ ಸೇವಿಸ
ಲಾರಿರಿ.
25 ಈ ಕಾರಣದಿಂದ—ನಮ್ಮ ಪ್ರಾಣಧಾರಣೆಗೆ ಏನು
ಊಟಮಾಡಬೇಕು, ಏನು ಕುಡಿಯಬೇಕು, ನಮ್ಮ
ದೇಹರಕ್ಷಣೆಗೆ ಏನು ಹೊದ್ದುಕೊಳ್ಳಬೇಕು ಎಂದು
ಚಿಂತೆಮಾಡಬೇಡಿರಿ ಎಂಬದಾಗಿ ನಿಮಗೆ ಹೇಳುತ್ತೇನೆ.
ಊಟಕ್ಕಿಂತ ಪ್ರಾಣವು ಉಡುಪಿಗಿಂತ ದೇಹವು ಮೇಲಾ
26 ದದ್ದಲ್ಲವೇ. ಆಕಾಶದಲ್ಲಿ ಹಾರಾಡುವ ಹಕ್ಕಿಗಳನ್ನು
ನೋಡಿರಿ; ಅವು ಬಿತ್ತುವದಿಲ್ಲ, ಕೊಯ್ಯುವದಿಲ್ಲ, ಕಣಜ
ಗಳಲ್ಲಿ ತುಂಬಿಟ್ಟುಕೊಳ್ಳುವದಿಲ್ಲ; ಆದಾಗ್ಯೂ ಪರ
ಲೋಕದಲ್ಲಿರುವ ನಿಮ್ಮ ತಂದೆಯು ಅವುಗಳನ್ನು
ಸಾಕಿ ಸಲಹುತ್ತಾನೆ; ಅವುಗಳಿಗಿಂತ ನೀವು ಹೆಚ್ಚಿನವರ
27 ಲ್ಲವೋ? ಚಿಂತೆಮಾಡಿಮಾಡಿ ಒಂದು ಮೊಳ ಉದ್ದ
3)ಬೆಳೆಯುವದು ನಿಮ್ಮಲ್ಲಿ ಯಾರಿಂದಾದೀತು? ಇದ 28
ಲ್ಲದೆ ನೀವು ಉಡುಪಿನ ವಿಷಯದಲ್ಲಿ ಚಿಂತೆಮಾಡುವ
ದೇಕೆ? ಅಡವಿಯ ಹೂವುಗಳು ಬೆಳೆಯುವ ರೀತಿಯನ್ನು
ಯೋಚಿಸಿ ತಿಳಿಯಿರಿ; ಅವು ದುಡಿಯುವದಿಲ್ಲ, ನೂಲು
ವದಿಲ್ಲ; ಆದಾಗ್ಯೂ ಈ ಹೂವುಗಳಲ್ಲಿ ಒಂದಕ್ಕಿರು 29
ವಷ್ಟು ಅಲಂಕಾರವು ಅರಸನಾದ ಸೊಲೊಮೋನನಿಗೆ
ಸಹ ಅವನು ತನ್ನ ಸಕಲ ವೈಭವದಿಂದಿರುವಾಗಲೂ
ಇರಲಿಲ್ಲವೆಂದು ನಿಮಗೆ ಹೇಳುತ್ತೇನೆ. ಎಲೈ ಅಲ್ಪ 30
ವಿಶ್ವಾಸಿಗಳೇ, ಈ ಹೊತ್ತು ಇದ್ದು ನಾಳೆ ಒಲೆಯ
ಪಾಲಾಗುವ ಅಡವಿಯ ಹುಲ್ಲಿಗೆ ದೇವರು ಹೀಗೆ ಉಡಿ
ಸಿದರೆ ಅದಕ್ಕಿಂತ ಎಷ್ಟೋ ಹೆಚ್ಚಾಗಿ ನಿಮಗೆ ಉಡಿಸಿ
ತೊಡಿಸುವನಲ್ಲವೇ. ಹೀಗಿರುವದರಿಂದ—ಏನು ಊಟ 31
ಮಾಡಬೇಕು, ಏನು ಕುಡಿಯಬೇಕು, ಏನು ಹೊದ್ದು
ಕೊಳ್ಳಬೇಕು ಎಂದು ಚಿಂತೆಮಾಡಬೇಡಿರಿ. ಇವೆಲ್ಲವುಗಳಿ 32
ಗಾಗಿ ಅಜ್ಞಾನಿಗಳು ತವಕಪಡುತ್ತಾರೆ. ಇದೆಲ್ಲಾ ನಿಮಗೆ
ಬೇಕಾಗಿದೆ ಎಂದು ಪರಲೋಕದಲ್ಲಿರುವ ನಿಮ್ಮ ತಂದೆಗೆ
ತಿಳಿದದೆಯಷ್ಟೆ. ಹೀಗಿರುವದರಿಂದ, ನೀವು ಮೊದ 33
ಲು ದೇವರ ರಾಜ್ಯಕ್ಕಾಗಿಯೂ ನೀತಿಗಾಗಿಯೂ ತವಕ
ಪಡಿರಿ. ಇವುಗಳ ಕೂಡ ಅವೆಲ್ಲವೂ ನಿಮಗೆ ದೊರಕು
ವವು. ಆದದರಿಂದ ನಾಳಿನ ವಿಷಯವಾಗಿ ಚಿಂತೆ 34
ಮಾಡಬೇಡಿರಿ; ನಾಳಿನ ದಿನವು ತನ್ನದನ್ನು ತಾನೇ
ಚಿಂತಿಸಿಕೊಳ್ಳುವದು. ಆ ಹೊತ್ತಿನ ಕಾಟ ಆ ಹೊತ್ತಿಗೆ
ಸಾಕು.

7
ತೀರ್ಪುಮಾಡ ಬೇಡಿರಿ; ಹಾಗೆ ನಿಮಗೂ ತೀರ್ಪಾ
ಗುವದಿಲ್ಲ. ನೀವು ಮಾಡುವ ತೀರ್ಪಿಗೆ ಸರಿಯಾಗಿ 2
ನಿಮಗೂ ತೀರ್ಪಾಗುವದು; ನೀವು ಅಳೆಯುವ ಅಳತೆ
ಯಿಂದಲೇ ನಿಮಗೂ ಅಳೆಯುವರು. ನೀನು ನಿನ್ನ 3
ಕಣ್ಣಿನಲ್ಲಿರುವ ತೊಲೆಯನ್ನು ಯೋಚಿಸದೆ ನಿನ್ನ
ಸಹೋದರನ ಕಣ್ಣಿನಲ್ಲಿರುವ ರವೆಯನ್ನು ಯೋಚಿಸು
ವದೇಕೆ? ನೀನು ನಿನ್ನ ಸಹೋದರನಿಗೆ—ನಿನ್ನ ಕಣ್ಣಿ 4
ನೊಳಗಿಂದ ರವೆಯನ್ನು ತೆಗೆಯುತ್ತೇನೆ ಬಾ ಎಂದು
ಹೇಳುವದು ಹೇಗೆ? ನಿನ್ನ ಕಣ್ಣಿನಲ್ಲಿ ತೊಲೆಯದೆ
ಯಲ್ಲಾ. ಕಪಟಿಯೇ, ಮೊದಲು ನಿನ್ನ ಕಣ್ಣಿನೊಳ 5
ಗಿಂದ ತೊಲೆಯನ್ನು ತೆಗೆದುಹಾಕಿಕೋ; ಆ ಮೇಲೆ
ನಿನ್ನ ಸಹೋದರನ ಕಣ್ಣಿನೊಳಗಿಂದ ರವೆಯನ್ನು ತೆಗೆ
ಯುವದಕ್ಕೆ ಚೆನ್ನಾಗಿ ಕಾಣಿಸುವದು.
ದೇವರ ವಸ್ತುವನ್ನು ನಾಯಿಗಳಿಗೆ ಹಾಕಬೇಡಿರಿ; 6
ನಿಮ್ಮ ಮುತ್ತುಗಳನ್ನು ಹಂದಿಗಳ ಮುಂದೆ ಚೆಲ್ಲ
ಬೇಡಿರಿ. ಚೆಲ್ಲಿದರೆ ತಮ್ಮ ಕಾಲಿನಿಂದ ಅವುಗಳನ್ನು
ತುಳಿದು ಹಿಂತಿರುಗಿ ಬಂದು ನಿಮ್ಮನ್ನು ಸೀಳಿ
ಬಿಟ್ಟಾವು.
ಬೇಡಿಕೊಳ್ಳಿರಿ, ನಿಮಗೆ ದೊರೆಯುವದು; ಹುಡು 7
ಕಿರಿ, ನಿಮಗೆ ಸಿಕ್ಕುವದು; ತಟ್ಟಿರಿ, ನಿಮಗೆ ತೆರೆಯು
ವದು; ಯಾಕಂದರೆ ಬೇಡಿಕೊಳ್ಳುವ ಪ್ರತಿಯೊಬ್ಬನು 8
ಹೊಂದುವನು, ಹುಡುಕುವವನಿಗೆ ಸಿಕ್ಕುವದು, ತಟ್ಟು
ವವನಿಗೆ ತೆರೆಯುವದು. ನಿಮ್ಮಲ್ಲಿ ಯಾವನಾದರೂ 9
ರೊಟ್ಟಿ ಕೇಳುವ ಮಗನಿಗೆ ಕಲ್ಲನ್ನು ಕೊಡುವನೇ?

1) ಅಥವಾ: ಅಲಕ್ಷ್ಯಮಾಡಿ. 2) ಮೂಲ: ಮಮೋನನನ್ನೂ. 3) ಅಂದರೆ: ಆಯುಸ್ಸು ಹೆಚ್ಚುಮಾಡಿಕೊಳ್ಳುವದು.

10, 11 ಮೀನು ಕೇಳಿದರೆ ಹಾವನ್ನು ಕೊಡುವನೇ? ಹಾಗಾ
ದರೆ ಕೆಟ್ಟವರಾದ ನೀವು ನಿಮ್ಮ ಮಕ್ಕಳಿಗೆ ಒಳ್ಳೆಯ
ಪದಾರ್ಥಗಳನ್ನು ಕೊಡಬಲ್ಲವರಾದರೆ ಪರಲೋಕದಲ್ಲಿ
ರುವ ನಿಮ್ಮ ತಂದೆಯು ತನ್ನನ್ನು ಬೇಡಿಕೊಳ್ಳುವವರಿಗೆ
ಎಷ್ಟೋ ಹೆಚ್ಚಾಗಿ ಒಳ್ಳೆಯ ವರಗಳನ್ನು ಕೊಡುವ
ನಲ್ಲವೇ.
12 ಅಂತು ಜನರು ನಿಮಗೆ ಏನೇನು ಮಾಡಬೇಕೆಂದು
ಅಪೇಕ್ಷಿಸುತ್ತೀರೋ ಅದನ್ನೇ ನೀವು ಅವರಿಗೆ ಮಾ
ಡಿರಿ. ಇದೇ ಧರ್ಮಶಾಸ್ತ್ರದ ಮತ್ತು ಪ್ರವಾದಿಗಳ
ತಾತ್ಪರ್ಯ.

13 ಇಕ್ಕಟ್ಟಾದ ಬಾಗಲಿನಿಂದ ಒಳಕ್ಕೆ ಹೋಗಿರಿ.
ನಾಶಕ್ಕೆ ಹೋಗುವ ಬಾಗಲು ದೊಡ್ಡದು, ದಾರಿ ಅಗ
14 ಲವು; ಅದರಲ್ಲಿ ಹೋಗುವವರು ಬಹು ಜನ. ನಿತ್ಯ
ಜೀವಕ್ಕೆ ಹೋಗುವ ಬಾಗಲು ಇಕ್ಕಟ್ಟು, ದಾರಿ
ಬಿಕ್ಕಟ್ಟು; ಅದನ್ನು ಕಂಡುಹಿಡಿಯುವವರು ಸ್ವಲ್ಪ ಜನ.
15 ಸುಳ್ಳುಪ್ರವಾದಿಗಳ ವಿಷಯದಲ್ಲಿ ಎಚ್ಚರವಾಗಿರಿ.
ಅವರು ಕುರೀವೇಷ ಹಾಕಿಕೊಂಡು ನಿಮ್ಮ ಬಳಿಗೆ
ಬರುತ್ತಾರೆ; ಆದರೆ ಒಳಗೆ ನೋಡಿದರೆ ಅವರು ಹಿಡು
16 ಕೊಂಡು ಹೋಗುವ ತೋಳಗಳೇ. ಅವರ ಫಲಗಳಿಂದ
ಅವರನ್ನು ತಿಳುಕೊಳ್ಳುವಿರಿ. ಮುಳ್ಳುಗಿಡಗಳಲ್ಲಿ
ದ್ರಾಕ್ಷೇಹಣ್ಣುಗಳನ್ನೂ ಮದ್ದುಗುಣಿಕೇಗಿಡಗಳಲ್ಲಿ
17 ಅಂಜೂರಗಳನ್ನೂ ಕೊಯ್ಯುವದುಂಟೇ? ಹಾಗೆಯೇ
ಒಳ್ಳೇ ಮರಗಳೆಲ್ಲಾ ಒಳ್ಳೇ ಫಲವನ್ನು ಕೊಡುವವು;
ಹುಳುಕು ಮರವು ಕೆಟ್ಟ ಫಲವನ್ನು ಕೊಡುವದು.
18 ಒಳ್ಳೇ ಮರವು ಕೆಟ್ಟ ಫಲವನ್ನು ಕೊಡಲಾರದು; ಹು
ಳುಕು ಮರವು ಒಳ್ಳೇ ಫಲವನ್ನು ಕೊಡಲಾರದು.
19 ಒಳ್ಳೇ ಫಲವನ್ನು ಕೊಡದ ಎಲ್ಲಾ ಮರಗಳನ್ನು ಕಡಿದು
20 ಬೆಂಕಿಯಲ್ಲಿ ಹಾಕುತ್ತಾರೆ. ಹೀಗಿರಲಾಗಿ ಅವರ ಫಲ
ಗಳಿಂದ ಅವರನ್ನು ತಿಳಿದುಕೊಳ್ಳುವಿರಿ.
21 ನನ್ನನ್ನು ಸ್ವಾಮೀ, ಸ್ವಾಮೀ ಅನ್ನುವವರೆಲ್ಲರು
ಪರಲೋಕರಾಜ್ಯದಲ್ಲಿ ಸೇರುವರೆಂದು ನೆನಸಬೇಡಿರಿ;
ಪರಲೋಕದಲ್ಲಿರುವ ನನ್ನ ತಂದೆಯ ಚಿತ್ತದಂತೆ ನಡೆ
ಯುವವನೇ ಪರಲೋಕರಾಜ್ಯಕ್ಕೆ ಸೇರುವನು.
22 ಸ್ವಾಮೀ, ಸ್ವಾಮೀ, ನಿನ್ನ ಹೆಸರಿನ ಮೇಲೆ ನಾವು
ಬೋಧನೆ ಹೇಳಲಿಲ್ಲವೇ? ನಿನ್ನ ಹೆಸರಿನ ಮೇಲೆ ದೆವ್ವ
ಗಳನ್ನು ಬಿಡಿಸಲಿಲ್ಲವೇ? ನಿನ್ನ ಹೆಸರಿನ ಮೇಲೆ ಅನೇಕ
ಮಹತ್ಕಾರ್ಯಗಳನ್ನು ಮಾಡಲಿಲ್ಲವೇ ಎಂದು ಆ ದಿನ
23 ದಲ್ಲಿ ಎಷ್ಟೋ ಜನರು ನನಗೆ ಹೇಳುವರು. ಆಗ
ನಾನು ಅವರಿಗೆ—ನಾನೆಂದೂ ನಿಮ್ಮ ಗುರುತು ಕಾ
ಣೆನು; ಧರ್ಮವನ್ನು ಮೀರಿನಡೆಯುವವರೇ, ನನ್ನಿಂದ
ತೊಲಗಿಹೋಗಿರಿ ಎಂದು ಎಲ್ಲರ ಮುಂದೆ ಹೇಳಿಬಿಡು
ವೆನು.
24 ಆದದರಿಂದ, ಈ ನನ್ನ ಮಾತುಗಳನ್ನು ಕೇಳಿ ಅವುಗ
ಳಂತೆ ನಡೆಯುವವನು ಬಂಡೆಯ ಮೇಲೆ ಮನೆಯನ್ನು
ಕಟ್ಟಿಕೊಂಡ ಬುದ್ಧಿಯುಳ್ಳ ಮನುಷ್ಯನನ್ನು ಹೋಲು
25 ವನು. ಕಟ್ಟಿದ ಮೇಲೆ ಮಳೆ ಸುರಿಯಿತು; ಹಳ್ಳಗಳು
ಬಂದವು; ನಾಲ್ಕು ಕಡೆಯಿಂದ ಗಾಳಿ ಬೀಸಿ ಆ ಮನೆಗೆ
ಬಡಿಯಿತು. ಆದಾಗ್ಯೂ ಅದರ ಅಸ್ತಿವಾರವು ಬಂ
ಯ ಮೇಲಿದ್ದದರಿಂದ ಅದು ಬೀಳಲಿಲ್ಲ. ಆದರೆ ಈ
ನನ್ನ ಮಾತುಗಳನ್ನು ಕೇಳಿಯೂ ಅವುಗಳಂತೆ ನಡ
ಯದ ಪ್ರತಿಯೊಬ್ಬನು ಉಸುಬಿನ ಮೇಲೆ ಮನೆಯನ್ನು
ಕಟ್ಟಿಕೊಂಡ ಬುದ್ಧಿಹೀನ ಮನುಷ್ಯನನ್ನು ಹೋಲ
ವನು. ಕಟ್ಟಿದ ಮೇಲೆ ಮಳೆ ಸುರಿಯಿತು; ಹಳ್ಳಗಳ
ಬಂದವು; ನಾಲ್ಕು ಕಡೆಯಿಂದ ಗಾಳಿ ಬೀಸಿ ಆ ಮನೆ
ಹೊಡೆಯಿತು. ಆಗ ಅದು ಧಡಮ್ಮನೆ ಕಡುಕೊಂಡ
ಬಿತ್ತು.

ಯೇಸು ಈ ಮಾತುಗಳನ್ನು ಹೇಳಿ ಮುಗಿಸಿದ
ಮೇಲೆ ಆ ಜನರ ಗುಂಪುಗಳು ಆತನ ಉಪದೇಶಕ್ಕೆ
ಅತ್ಯಾಶ್ಚರ್ಯಪಟ್ಟವು. ಯಾಕಂದರೆ ಆತನು ಅವರ
ಶಾಸ್ತ್ರಿಗಳಂತೆ ಉಪದೇಶಮಾಡದೆ ಅಧಿಕಾರವಿದ್ದವನಂತ
ಅವರಿಗೆ ಉಪದೇಶಮಾಡುತ್ತಿದ್ದನು. ಆತನು ಬೆಟ್ಟ
ದಿಂದಿಳಿದು ಬರುವಾಗ ಜನರು ಗುಂಪುಗುಂಪಾಗಿ ಆತನ
ಹಿಂದೆ ಹೋದರು.

ಯೇಸು ದಯವುಳ್ಳ ಅದ್ಭುತಕಾರ್ಯಗಳನ್ನು ಮಾಡಿ ತನ್ನ
ಮಹಿಮೆಯನ್ನು ತೋರಿಸಿದ್ದು. (8. 2—9. 34.)
ಕುಷ್ಠರೋಗಿಯನ್ನು ಸ್ವಸ್ಥಮಾಡಿದ್ದು.
(ಮಾರ್ಕ 1. 40—44; ಲೂಕ 5. 12—14.)

ಒಬ್ಬ ಕುಷ್ಠರೋಗಿಯು ಯೇಸುವಿನ ಬಳಿಗೆ ಬಂದು
ಆತನಿಗೆ ಅಡ್ಡಬಿದ್ದು—ಸ್ವಾಮೀ, ನಿನಗೆ ಮನಸ್ಸಿದ್ದರ
ನನ್ನನ್ನು ಶುದ್ಧಮಾಡಬಲ್ಲೆ ಅಂದನು. ಆತನು ಕೈ
ನೀಡಿ ಅವನನ್ನು ಮುಟ್ಟಿ—ನನಗೆ ಮನಸ್ಸುಂಟು
ಶುದ್ಧವಾಗು ಅಂದನು. ಕೂಡಲೆ ಅವನ ಕುಷ್ಠವ
ವಾಸಿಯಾಯಿತು. ಆಗ ಯೇಸು ಅವನಿಗೆ—ಯಾ
ರಿಗೂ ಹೇಳಬೇಡ ನೋಡು; ಆದರೆ ಹೋಗಿ ಯಾಜಕ
ನಿಗೆ ನಿನ್ನ ಮೈ ತೋರಿಸಿ ಮೋಶೆ ನೇಮಿಸಿದ ಕಾಣಿಕ
ಯನ್ನು ಕೊಡು; 1)ಅದು ಜನರಿಗೆ ಸಾಕ್ಷಿಯಾಗಲ
ಎಂದು ಹೇಳಿದನು.

ಶತಾಧಿಪತಿಯ ಆಳನ್ನು ಸ್ವಸ್ಥಮಾಡಿದ್ದು.
(ಲೂಕ 7. 1—10; 13. 28, 29.)

ಆತನು ಕಪೆರ್ನೌಮಿಗೆ ಬಂದಾಗ ದಂಡಿನ 2)ಶತಾ
ಧಿಪತಿಯು ಆತನ ಬಳಿಗೆ ಬಂದು—ಪ್ರಭುವೇ, ನನ್ನ
ಆಳು ಪಾರ್ಶ್ವವಾಯುವಿನಿಂದ ಬಹಳ ಕಷ್ಟಪಡುತ್ತಾ
ಮನೆಯಲ್ಲಿ ಬಿದ್ದಿದ್ದಾನೆ ಎಂದು ಹೇಳಿಕೊಂಡನು.
ಆತನು ಅವನಿಗೆ—ನಾನು ಬಂದು ಅವನನ್ನು ವಾಸಿ
ಮಾಡುತ್ತೇನೆ ಎಂದು ಹೇಳಿದ್ದಕ್ಕೆ ಆ ಶತಾಧಿಪತಿಯು—
ಪ್ರಭುವೇ, ನೀನು ನನ್ನ ಮನೆಗೆ ಬರತಕ್ಕಷ್ಟು
ಯೋಗ್ಯತೆ ನನ್ನಲ್ಲಿಲ್ಲ; ನೀನು ಒಂದು ಮಾತು ಹೇಳಿ
ದರೆ ಸಾಕು, ನನ್ನ ಆಳಿಗೆ ಗುಣವಾಗುವದು. ನಾನು
ಸಹ ಮತ್ತೊಬ್ಬರ ಕೈಕೆಳಗಿರುವವನು; ನನ್ನ ಕೈಕೆಳಗೆ
ಸಿಪಾಯಿಗಳಿದ್ದಾರೆ; ನಾನು ಅವರಲ್ಲಿ ಒಬ್ಬನಿಗೆ
ಹೋಗು ಎಂದು ಹೇಳಿದರೆ ಹೋಗುತ್ತಾನೆ; ಮತ್ತೊಬ್ಬ

1) ಅಥವಾ: ಯಾಜಕರಿಗೆ. ಮೂಲ: ಅವರಿಗೆ.

2) ಅಂದರೆ, ನೂರು ಸಿಪಾಯಿಗಳ ಮೇಲಿರುವ ಸರದಾರನು.

ಆ ಸೇವಕನು ಅವನ ಕಾಲಿಗೆ ಬಿದ್ದು ಅವನಿಗೆ—ಒಡೆ
ಯನೇ, ಸ್ವಲ್ಪ ತಾಳಿಕೋ, ನಿನ್ನದೆಲ್ಲಾ ನಾನು ಕೊಟ್ಟು
ತೀರಿಸುತ್ತೇನೆಂದು ನಮಸ್ಕರಿಸಲಾಗಿ ಆ ಸೇವಕನ
ಒಡೆಯನು ಕನಿಕರಪಟ್ಟು ಅವನನ್ನು ಬಿಡಿಸಿ ಆ ಸಾಲ
ವನ್ನೆಲ್ಲಾ ಬಿಟ್ಟುಬಿಟ್ಟನು. ತರುವಾಯ ಆ ಸೇವಕನು
ಹೊರಕ್ಕೆ ಬಂದು ತನಗೆ ನೂರು ಹಣಾ ಕೊಡಬೇಕಾದ
ಒಬ್ಬ ಜೊತೇಸೇವಕನನ್ನು ಕಂಡು ಅವನನ್ನು ಹಿಡಿದು—
ಎಲಾ, ನನ್ನ ಸಾಲ ತೀರಿಸು ಎಂದು ಹೇಳಿ ಕುತ್ತಿಗೆ
ಹಿಸಿಕಿದನು. ಆಗ ಅವನ ಜೊತೇಸೇವಕನು ಅವನ
ಕಾಲಿಗೆ ಬಿದ್ದು—ಸ್ವಲ್ಪ ತಾಳಿಕೋ, ತೀರಿಸುತ್ತೇನೆ
ಎಂದು ಬೇಡಿಕೊಂಡನು. ಆದರೆ ಅವನು ಒಪ್ಪದೆ
ಹೊರಟುಹೋಗಿ ಆ ಸಾಲಾ ತೀರಿಸುವ ತನಕ ಅವ
ನನ್ನು ಸೆರೆಮನೆಯಲ್ಲಿ ಹಾಕಿಸಿದನು. ಅವನ ಜೊತೇ
ಸೇವಕರು ನಡೆದ ಸಂಗತಿಯನ್ನು ನೋಡಿ ಬಹಳವಾಗಿ
ದುಃಖಪಟ್ಟು ಒಡೆಯನ ಬಳಿಗೆ ಬಂದು ನಡೆದದ್ದ
ನ್ನೆಲ್ಲಾ ತಿಳಿಸಿದರು. ಆಗ ಅವನ ಒಡೆಯನು ಅವನನ್ನು
ಕರಸಿ—ಎಲಾ ನೀಚನೇ, ನೀನು ನನ್ನನ್ನು ಬೇಡಿಕೊಂಡ
ದ್ದರಿಂದ ಆ ಸಾಲವನ್ನೆಲ್ಲಾ ನಾನು ಬಿಟ್ಟುಬಿಟ್ಟೆನಲ್ಲಾ;
ನಾನು ನಿನ್ನನ್ನು ಕರುಣಿಸಿದ ಹಾಗೆ ನೀನು ಸಹ ನಿನ್ನ
ಜೊತೇಸೇವಕನನ್ನು ಕರುಣಿಸಬಾರದಾಗಿತ್ತೇ ಎಂದು
ಹೇಳಿ ಸಿಟ್ಟುಮಾಡಿ ತನಗೆ ಕೊಡಬೇಕಾದ ಸಾಲ
ವನ್ನು ತೀರಿಸುವ ತನಕ ಪೀಡಿಸುವವರ ಕೈಗೆ ಒಪ್ಪಿಸಿ
ದನು. ನಿಮ್ಮಲ್ಲಿ ಪ್ರತಿಯೊಬ್ಬನು ತನ್ನ ಸಹೋದರ
ನಿಗೆ ಮನಃಪೂರ್ವಕವಾಗಿ ಕ್ಷಮಿಸದೆಹೋದರೆ ಪರ
ಲೋಕದಲ್ಲಿರುವ ನನ್ನ ತಂದೆಯೂ ನಿಮಗೆ ಹಾಗೆಯೇ
ಮಾಡುವನು ಅಂದನು.

ಯೇಸು ಯೆರೂಸಲೇಮಿಗೆ ಹೋಗಬೇಕೆಂದು ಹೊರಟದ್ದು.
ಹೆಂಡತಿಯ ಪರಿತ್ಯಾಗದ ವಿಷಯವಾಗಿ ಉತ್ತರಕೊಟ್ಟದ್ದು.
(ಮಾರ್ಕ 10. 1—12)

9 ಯೇಸು ಈ ಮಾತುಗಳನ್ನು ಮುಗಿಸಿದ ಮೇಲೆ
ಗಲಿಲಾಯವನ್ನು ಬಿಟ್ಟು ಯೊರ್ದನ್ ಹೊಳೆಯ
ಆಚೆ ಪ್ರಯಾಣಮಾಡಿ ಯೂದಾಯ ಪ್ರಾಂತ್ಯಕ್ಕೆ
ಬಂದನು. ಬಹುಜನರು ಆತನ ಹಿಂದೆ ಗುಂಪುಗುಂಪಾಗಿ
ಹೋದರು; ಆತನು ಅವರನ್ನು ಅಲ್ಲಿಯೇ ಸ್ವಸ್ಥಮಾಡಿ
ದನು.
ಆಗ ಫರಿಸಾಯರು ಆತನ ಹತ್ತಿರಕ್ಕೆ ಬಂದು
ಆತನನ್ನು ಪರೀಕ್ಷಿಸಬೇಕೆಂಬ ಯೋಚನೆಯಿಂದ—
ಒಬ್ಬನು ಯಾವದಾದರೂ ಒಂದು ಕಾರಣದಿಂದ
ತನ್ನ ಹೆಂಡತಿಯನ್ನು ಬಿಟ್ಟುಬಿಡುವದು ಧರ್ಮವೋ
ಹೇಗೆ ಎಂದು ಕೇಳಿದ್ದಕ್ಕೆ ಆತನು—ಮನುಷ್ಯರನ್ನು
ನಿರ್ಮಾಣಮಾಡಿದವನು ಆದಿಯಿಂದಲೇ ಅವರನ್ನು
ಗಂಡುಹೆಣ್ಣಾಗಿ ನಿರ್ಮಿಸಿ ಅವರ ವಿಷಯದಲ್ಲಿ—
ಈ ಕಾರಣದಿಂದ ಪುರುಷನು ತಂದೆತಾಯಿಗಳನ್ನು
ಬಿಟ್ಟು ತನ್ನ ಹೆಂಡತಿಯನ್ನು ಸೇರಿಕೊಳ್ಳುವನು;
ಅವರಿಬ್ಬರು ಒಂದೇ ಶರೀರವಾಗಿರುವರು ಎಂದು ಹೇಳಿ
ದನೆಂಬದಾಗಿ ನೀವು ಓದಲಿಲ್ಲವೋ? ಹೀಗಿರುವಲ್ಲಿ 6
ಅವರು ಇನ್ನು ಇಬ್ಬರಲ್ಲ, ಒಂದೇ ಶರೀರವಾಗಿದ್ದಾರೆ.
ಆದದರಿಂದ ದೇವರು ಕೂಡಿಸಿದ್ದನ್ನು ಮನುಷ್ಯರು
ಅಗಲಿಸಬಾರದು ಅಂದನು.
ಅವರು ಆತನನ್ನು—ಹಾಗಾದರೆ ತ್ಯಾಗಪತ್ರ 7
ವನ್ನು ಕೊಟ್ಟು ಆಕೆಯನ್ನು ಬಿಟ್ಟುಬಿಡಬಹುದೆಂದು
ಮೋಶೆಯು ಯಾಕೆ ಆಜ್ಞೆಕೊಟ್ಟನು ಎಂದು ಕೇಳಲು
ಆತನು—ಮೋಶೆಯು ನಿಮ್ಮ ಮೊಂಡತನವನ್ನು ನೋಡಿ 8
ನಿಮ್ಮ ಹೆಂಡರನ್ನು ಬಿಟ್ಟುಬಿಡುವದಕ್ಕೆ ಅಪ್ಪಣೆಕೊ
ಟ್ಟನು; ಆದರೆ ಆದಿಯಿಂದಲೇ ಹಾಗೆ ಇರಲಿಲ್ಲ.
1)ಮತ್ತು ಹಾದರದ ಕಾರಣದಿಂದಲ್ಲದೆ ತನ್ನ ಹೆಂಡತಿ 9
ಯನ್ನು ಬಿಟ್ಟು ಮತ್ತೊಬ್ಬಳನ್ನು ಮದುವೆಮಾಡಿ
ಕೊಳ್ಳುವವನು ವ್ಯಭಿಚಾರ ಮಾಡುವವನಾಗುತ್ತಾ
ನೆಂದು ನಿಮಗೆ ಹೇಳುತ್ತೇನೆ ಅಂದನು. ಅದಕ್ಕೆ 10
ಶಿಷ್ಯರು—ಹೆಂಡತಿಯ ವಿಷಯವಾಗಿ ಗಂಡನ ಧರ್ಮ
ಹೀಗಿದ್ದರೆ ಮದುವೆಯಾಗುವದು ಒಳ್ಳೇದಲ್ಲ
ಅಂದಾಗ ಆತನು ಅವರಿಗೆ—ಈ ಮಾತನ್ನು ಅಂಗೀ 11
ಕರಿಸುವ ವರವನ್ನು ಹೊಂದಿದವರೇ ಹೊರತು ಮತ್ತಾ
ರೂ ಅದನ್ನು ಅಂಗೀಕರಿಸುವದಿಲ್ಲ. ತಾಯಿಯ 12
ಗರ್ಭದಿಂದ ನಪುಂಸಕರಾಗಿ ಹುಟ್ಟಿದವರು ಕೆಲವರು
ಇದ್ದಾರೆ; ಮನುಷ್ಯರಿಂದ ನಪುಂಸಕರಾಗಿ ಮಾಡಲ್ಪಟ್ಟ
ವರು ಕೆಲವರು ಇದ್ದಾರೆ; ಮತ್ತು ಪರಲೋಕ
ರಾಜ್ಯದ ನಿಮಿತ್ತವಾಗಿ ತಮ್ಮನ್ನು ತಾವೇ ನಪುಂಸಕ
ರಾಗ ಮಾಡಿಕೊಂಡವರು ಕೆಲವರು ಇದ್ದಾರೆ. ಅಂಗೀ
ಕರಿಸಬಲ್ಲವನು ಅಂಗೀಕರಿಸಲಿ ಎಂದು ಹೇಳಿದನು.

ಯೇಸು ಚಿಕ್ಕ ಮಕ್ಕಳನ್ನು ಆಶೀರ್ವದಿಸಿದ್ದು.
(ಮಾರ್ಕ 10. 13—16; ಲೂಕ 18. 15—17)

ಆಗ ಕೆಲವರು ತಮ್ಮ ಚಿಕ್ಕ ಮಕ್ಕಳನ್ನು ಯೇಸು 13
ವಿನ ಬಳಿಗೆ ತಂದು ಆತನು ಅವುಗಳ ಮೇಲೆ
ಕೈಯಿಟ್ಟು ಪ್ರಾರ್ಥನೆ ಮಾಡಬೇಕೆಂದು ಕೇಳಲು
ಶಿಷ್ಯರು ಅವರನ್ನು ಗದರಿಸಿದರು. ಆದರೆ ಯೇಸು— 14
ಮಕ್ಕಳನ್ನು ಬಿಡಿರಿ; ನನ್ನ ಹತ್ತರ ಬರುವದಕ್ಕೆ ಅವು
ಗಳಿಗೆ ಅಡ್ಡಿಮಾಡಬೇಡಿರಿ; ಪರಲೋಕರಾಜ್ಯವು ಇಂಥ
ವರದೇ ಎಂದು ಹೇಳಿ ಅವುಗಳ ಮೇಲೆ ಕೈಯಿಟ್ಟು, 15
ಅಲ್ಲಿಂದ ಹೊರಟುಹೋದನು.

ನಿತ್ಯಜೀವವನ್ನು ಹೇಗೆ ಪಡೆಯಬೇಕೆಂದು ಒಬ್ಬ ಐಶ್ವರ್ಯವಂತನು
ವಿಚಾರಿಸಿದ್ದಕ್ಕೆ ಯೇಸು ಹಣದ ಭ್ರಾಂತಿಯಿಂದಾಗುವ
ಕೇಡನ್ನು ತೋರಿಸಿದ್ದು.
(ಮಾರ್ಕ 10. 17—27; ಲೂಕ 18. 18—27.)

ಆಗ ಒಬ್ಬನು ಬಂದು ಆತನನ್ನು—ಬೋಧಕನೇ, 16
ನಾನು • ನಿತ್ಯಜೀವವನ್ನು ಪಡೆಯಬೇಕಾದರೆ ಏನು
ಒಳ್ಳೇ ಕಾರ್ಯವನ್ನು ಮಾಡಬೇಕು ಎಂದು ಕೇಳ
ಲಾಗಿ ಆತನು ಅವನಿಗೆ—ಒಳ್ಳೇದನ್ನು ಕುರಿತು 17

1) ಕೆಲವು ಪ್ರತಿಗಳಲ್ಲಿ—ಮತ್ತು ಬಿಟ್ಟಿರುವವಳನ್ನು ಮದುವೆಮಾಡಿಕೊಳ್ಳುವವನು ಸಹ ವ್ಯಭಿಚಾರ ಮಾಡುವವನಾಗುತ್ತಾನೆ ಎಂಬ ...ಷ್ಟು ಮಾತುಗಳಿವೆ.

ನನ್ನನ್ನು ಯಾಕೆ ಕೇಳುತ್ತೀ? ಒಳ್ಳೆಯವನು ಒಬ್ಬನೇ.
ಆದರೆ ಆ ಜೀವದಲ್ಲಿ ಸೇರಬೇಕೆಂದಿದ್ದರೆ ದೇವರಾಜ್ಞೆ
ಗಳಿಗೆ ಸರಿಯಾಗಿ ನಡೆದುಕೋ ಎಂದು ಹೇಳಿದ್ದಕ್ಕೆ
18 ಅವನು—ಅವು ಯಾವವು ಎಂದು ಕೇಳಲು ಯೇಸು—
ನರಹತ್ಯಮಾಡಬಾರದು; ವ್ಯಭಿಚಾರಮಾಡಬಾರದು;
ಕದಿಯಬಾರದು; ಸುಳ್ಳುಸಾಕ್ಷಿ ಹೇಳಬಾರದು; ನಿನ್ನ
19 ತಂದೆತಾಯಿಗಳನ್ನು ಸನ್ಮಾನಿಸಬೇಕು; ಮತ್ತು ನಿನ್ನ
ಹಾಗೆಯೇ ನಿನ್ನ ನೆರೆಯವನನ್ನು ಪ್ರೀತಿ ಮಾಡಬೇಕು
20 ಎಂಬಿವುಗಳೇ ಅಂದನು. ಆ ಯೌವನಸ್ಥನು ಆತ
ನನ್ನು—ಇವೆಲ್ಲಕ್ಕೂ ಸರಿಯಾಗಿ ನಡಕೊಂಡಿದ್ದೇನೆ;
ಇನ್ನೇನು ಕಡಿಮೆಯಾಗಿರಬಹುದು? ಎಂದು ಕೇಳಲು,
21 ಯೇಸು ಅವನಿಗೆ—ನೀನು ಸಂಪೂರ್ಣನಾಗಬೇಕೆಂದಿ
ದ್ದರೆ ಹೋಗಿ ನಿನ್ನ ಆಸ್ತಿಯನ್ನು ಮಾರಿ ಬಡವರಿಗೆ
ಕೊಡು; ಪರಲೋಕದಲ್ಲಿ ನಿನಗೆ ಸಂಪತ್ತಿರುವದು;
ನೀನು ಬಂದು ನನ್ನನ್ನು ಹಿಂಬಾಲಿಸು ಎಂದು ಹೇಳಿ
22 ದನು. ಆ ಯೌವನಸ್ಥನು ಬಹಳ ಆಸ್ತಿಯುಳ್ಳವ
ನಾಗಿದ್ದದರಿಂದ ಈ ಮಾತನ್ನು ಕೇಳಿ ದುಃಖದಿಂದ
ಹೊರಟುಹೋದನು.
23 ಆಗ ಯೇಸು ತನ್ನ ಶಿಷ್ಯರನ್ನು ನೋಡಿ—ನಿಮಗೆ
ಸತ್ಯವಾಗಿ ಹೇಳುತ್ತೇನೆ, ಐಶ್ವರ್ಯವಂತನು ಪರಲೋಕ
24 ರಾಜ್ಯದಲ್ಲಿ ಸೇರುವದು ಕಷ್ಟ. ಐಶ್ವರ್ಯವಂತನು
ದೇವರ ರಾಜ್ಯದಲ್ಲಿ ಸೇರುವದಕ್ಕಿಂತ ಒಂಟೆಯು
ಸೂಜಿಯ ಕಣ್ಣಿನಲ್ಲಿ ನುಗ್ಗುವದು ಸುಲಭ ಎಂದು
25 ನಿಮಗೆ ತಿರಿಗಿ ಹೇಳುತ್ತೇನೆ ಅಂದನು. ಶಿಷ್ಯರು ಇದನ್ನು
ಕೇಳಿ ಅತ್ಯಾಶ್ಚರ್ಯಪಟ್ಟು—ಹೀಗಿದ್ದರೆ ಯಾರಿಗೆ
26 ರಕ್ಷಣೆಯಾದೀತು ಎಂದು ಕೇಳಲು ಯೇಸು ಅವರನ್ನು
ದೃಷ್ಟಿಸಿ ನೋಡಿ—ಇದು ಮನುಷ್ಯರಿಗೆ ಅಸಾಧ್ಯ;
ಆದರೆ ದೇವರಿಗೆ ಎಲ್ಲವು ಸಾಧ್ಯವೇ ಅಂದನು.

### ಯೇಸುವಿಗೋಸ್ಕರ ಎಲ್ಲವನ್ನು ಬಿಟ್ಟವರಿಗೂ ಪ್ರತಿಫಲವು ದೇವರ ಕೃಪೆಯಿಂದಲೇ ಸಿಕ್ಕುವದು.

(ಮಾರ್ಕ 10. 28—31; ಲೂಕ 18. 28—30.)

27 ಆಗ ಪೇತ್ರನು ಆತನನ್ನು—ಇಗೋ, ನಾವು ಎಲ್ಲಾ
ಬಿಟ್ಟುಬಿಟ್ಟು ನಿನ್ನನ್ನು ಹಿಂಬಾಲಿಸಿದೆವು; ನಮಗೆ ಏನು
28 ದೊರಕುವದು ಎಂದು ಕೇಳಲು ಯೇಸು ಅವರಿಗೆ—
ನಿಮಗೆ ಸತ್ಯವಾಗಿ ಹೇಳುತ್ತೇನೆ, ಹೊಸ ಸೃಷ್ಟಿಯಲ್ಲಿ
ಮನುಷ್ಯಕುಮಾರನು ತನ್ನ ಮಹಿಮೆಯ ಸಿಂಹಾಸನದ
ಮೇಲೆ ಕೂತುಕೊಳ್ಳುವಾಗ ನನ್ನನ್ನು ಹಿಂಬಾಲಿಸಿರುವ
ನೀವು ಸಹ ಹನ್ನೆರಡು ಸಿಂಹಾಸನಗಳ ಮೇಲೆ ಕೂತು
ಕೊಂಡು ಇಸ್ರಾಯೇಲಿನ ಹನ್ನೆರಡು ಕುಲಗಳಿಗೆ
29 ನ್ಯಾಯತೀರಿಸುವಿರಿ. ಮತ್ತು ನನ್ನ ಹೆಸರಿನ ನಿಮಿತ್ತ
ಮನೆಗಳನ್ನಾಗಲಿ ಅಣ್ಣತಮ್ಮಂದಿರನ್ನಾಗಲಿ ಅಕ್ಕತಂಗಿ
ಯರನ್ನಾಗಲಿ ತಂದೆಯನ್ನಾಗಲಿ ತಾಯಿಯನ್ನಾಗಲಿ
ಮಕ್ಕಳನ್ನಾಗಲಿ ಭೂಮಿಯನ್ನಾಗಲಿ ಬಿಟ್ಟುಬಿಟ್ಟಿರು
ವವರೆಲ್ಲರಿಗೆ 1)ಅನೇಕ ಪಾಲು ಹೆಚ್ಚಾಗಿ ಸಿಕ್ಕುವದು;

ಮತ್ತು ಅವರು ನಿತ್ಯಜೀವಕ್ಕೆ ಬಾಧ್ಯರಾಗುವರು
ಆದರೆ ಬಹುಮಂದಿ ಮೊದಲಿನವರು ಕಡೆಯ
ರಾಗುವರು, ಕಡೆಯವರು ಮೊದಲಿನವರಾಗುವರು
ಅದು ಹೇಗಂದರೆ—ಪರಲೋಕರಾಜ್ಯವು ಒಬ್ಬ
ಮನೆಯ ಯಜಮಾನನಿಗೆ ಹೋಲಿಕೆಯಾಗಿದೆ.
ಅವನು ತನ್ನ ದ್ರಾಕ್ಷೆತೋಟಕ್ಕೆ ಕೂಲೀ ಆಳುಗಳನ್ನು
ಕರೆಯುವದಕ್ಕೆ ಬೆಳಿಗ್ಗೆ ಹೊರಟನು. ಆಳಿಗೆ ದಿನಕ್ಕೆ
ಒಂದು ಪಾವಲಿಯಂತೆ ಕೂಲಿ ಗೊತ್ತುಮಾಡಿ ಅ
ರನ್ನು ದ್ರಾಕ್ಷೇತೋಟಕ್ಕೆ ಕಳುಹಿಸಿದನು. ತರುವಾಯ
ಹೆಚ್ಚುಕಡಿಮೆ 2)ಒಂಭತ್ತು ಘಂಟೆಗೆ ಹೋಗಿ ಪೇ
ಯಲ್ಲಿ ಸುಮ್ಮನೆ ನಿಂತಿದ್ದ ಇನ್ನು ಕೆಲವರನ್ನು
ಕಂಡು—ನೀವು ಸಹ ನನ್ನ ದ್ರಾಕ್ಷೇತೋಟಕ್ಕೆ
ಹೋಗಿರಿ; ನಿಮಗೆ ಸರಿಯಾದ ಕೂಲಿಯನ್ನು ಕೊಡ
ತ್ತೇನೆ ಅನ್ನಲು ಅವರು ತೋಟಕ್ಕೆ ಹೋದರು
ಅವನು ತಿರಿಗಿ ಹೆಚ್ಚುಕಡಿಮೆ ಹನ್ನೆರಡು ಘಂಟೆ
ಮತ್ತು 3)ಮೂರು ಘಂಟೆಗೆ ಹೋಗಿ ಅದೇ ಪ್ರಕಾರ
ಮಾಡಿದನು. ತಿರಿಗಿ ಹೆಚ್ಚುಕಡಿಮೆ 4)ಸಾಯಂಕಾ
ಐದು ಘಂಟೆಗೆ ಹೋಗಿ ಬೇರೆ ಕೆಲವರು ನಿಂತಿರು
ದನ್ನು ಕಂಡು ಅವರನ್ನು—ದಿನವೆಲ್ಲಾ ಇಲ್ಲಿ ಯಾ
ಸುಮ್ಮನೆ ನಿಂತಿದ್ದೀರಿ ಎಂದು ಕೇಳಲು ಅವರು—
ಯಾರೂ ನಮ್ಮನ್ನು ಕೂಲಿಗೆ ಕರೆಯಲಿಲ್ಲ ಅಂದಾ
ಅವನು—ನೀವು ಸಹ ನನ್ನ ದ್ರಾಕ್ಷೇತೋಟಕ್ಕೆ
ಹೋಗಿರಿ ಅಂದನು. ಸಂಜೇಹೊತ್ತಿಗೆ ದ್ರಾಕ್ಷೇತೋಟದ
ಯಜಮಾನನು ತನ್ನ ಪಾರುಪತ್ಯಗಾರನಿಗೆ—ಆ ಆಳು
ಗಳನ್ನು ಕರೆದು ಕಡೆಗೆ ಬಂದವರನ್ನು ಮೊದಲ
ಮಾಡಿಕೊಂಡು ಮೊದಲು ಬಂದವರ ತನಕ ಅವರಿ
ಕೂಲಿಕೊಡು ಎಂದು ಹೇಳಿದನು. ಆಗ ಸಾಯಂಕಾಲ
ಐದು ಘಂಟೆಗೆ ಬಂದವರಿಗೆ ಒಂದೊಂದು ಪಾವಲಿ
ಸಿಕ್ಕಿತು. ತರುವಾಯ ಮೊದಲಿನವರು ಬಂದು ತಮಗ
ಹೆಚ್ಚು ದೊರೆಯುವದೆಂದು ನೆನಸಿದರು; ಆದರೆ ಇವರಿಗ
ಸಹ ಒಂದೊಂದು ಪಾವಲಿಯೇ ಸಿಕ್ಕಿತು. ಅದನ್ನು
ತೆಗೆದುಕೊಂಡು ಮನೆಯ ಯಜಮಾನನ ಮೇಲೆ ಗುಣು
ಗುಟ್ಟಿ—ಕಡೆಗೆ ಬಂದ ಇವರು ಒಂದು ತಾಸು ಹೊತ್ತು
ಮಾತ್ರ ಕೆಲಸ ಮಾಡಿದ್ದಾರೆ; ನಾವು ದಿನವೆಲ್ಲಾ
ಬಿಸಲಿನಲ್ಲಿ ಕೆಲಸ ಮಾಡಿ ಕಷ್ಟಪಟ್ಟಿದ್ದೇವೆ; ಇವರನ್ನು
ನಮಗೆ ಸಮಮಾಡಿದ್ದೀಯೆ ಅಂದರು. ಅದಕ್ಕೆ ಅವನು
ಅವರಲ್ಲಿ ಒಬ್ಬನಿಗೆ—ಏನಪ್ಪಾ, ನಾನು ನಿನಗೆ ಅನ್ಯಾ
ಯಮಾಡಲಿಲ್ಲ; ನೀನು ನನ್ನ ಸಂಗಡ ಒಂದು ಪಾವ
ಲಿಗೆ ಒಡಂಬಟ್ಟಿಯಲ್ಲಾ; ನಿನ್ನ ಕೂಲಿ ತಕ್ಕೊಂಡು
ಹೋಗು; ನಿನಗೆ ಕೊಟ್ಟಂತೆ ಕಡೆಗೆ ಬಂದ ಇವನಿಗೂ
ಕೊಡುವದಕ್ಕೆ ನನಗೆ ಮನಸ್ಸುಂಟು. ನನ್ನ ಬದು
ಕನ್ನು ನಾನು ಬೇಕಾದ ಹಾಗೆ ಮಾಡಬಹುದಲ್ಲವೋ
ನಾನು ಒಳ್ಳೆಯವನಾಗಿರುವದು ನಿನ್ನ ಕಣ್ಣನ್ನು ಬತ್ತು
ತ್ತದೋ ಎಂದು ಹೇಳಿದನು. ಈ ಪ್ರಕಾರ ಕಡೆಯ
ವರು ಮೊದಲಿನವರಾಗುವರು, ಮೊದಲಿನವರು ಕಡೆಯ
ವರಾಗುವರು ಎಂದು ಹೇಳಿದನು.

---

1) ಕೆಲವು ಪ್ರತಿಗಳಲ್ಲಿ—ನೂರರಷ್ಟು ಎಂದು ಬರೆದದೆ. 2) ಮೂಲ: ಮೂರು ತಾಸಿಗೆ. 3) ಮೂಲ: ಆರು ತಾಸಿಗೆ ವ
ಒಂಭತ್ತು ತಾಸಿಗೆ. 4) ಮೂಲ: ಹನ್ನೊಂದು ತಾಸಿಗೆ.

### ಯೇಸು ತನ್ನ ಕಷ್ಟ ಮರಣ ಪುನರುತ್ಥಾನಗಳನ್ನು ಮೂರನೆಯ ಸಾರಿ ಮುಂತಿಳಿಸಿದ್ದು.

(ಮಾರ್ಕ 10. 32—34; ಲೂಕ 18. 31—33.)

7 ಯೇಸು ಯೆರೂಸಲೇಮಿಗೆ ಹೋಗುತ್ತಿರುವಾಗ
ಹನ್ನೆರಡು ಮಂದಿ ಶಿಷ್ಯರನ್ನು ಒತ್ತಟ್ಟಿಗೆ ಕರೆದು
8 ಕೊಂಡು ದಾರಿಯಲ್ಲಿ ಅವರಿಗೆ—ನೋಡಿರಿ, ನಾವು
ಯೆರೂಸಲೇಮಿಗೆ ಹೋಗುತ್ತಾ ಇದ್ದೇವೆ; ಮತ್ತು
ಮನುಷ್ಯಕುಮಾರನನ್ನು ಮಹಾಯಾಜಕರ ಮತ್ತು
9 ಶಾಸ್ತ್ರಿಗಳ ಕೈಗೆ ಹಿಡುಕೊಡುವರು. ಅವರು ಅವನಿಗೆ
ಮರಣದಂಡನೆಯನ್ನು ವಿಧಿಸಿ ಅವನನ್ನು ಅಪಹಾಸ್ಯ
ಮಾಡುವದಕ್ಕೂ ಕೊರಡೆಗಳಿಂದ ಹೊಡೆಯುವದಕ್ಕೂ
ಶಿಲುಬೆಗೆ ಹಾಕುವದಕ್ಕೂ ಅನ್ಯರ ಕೈಗೆ ಒಪ್ಪಿಸುವರು;
ಅವನು ಸತ್ತ ಮೂರನೆಯ ದಿನದಲ್ಲಿ ಜೀವಿತನಾಗಿ ಎಬ್ಬಿ
ಸಲ್ಪಡುವನು ಎಂದು ಹೇಳಿದನು.

### ಇಬ್ಬರು ಶಿಷ್ಯರು ತಮಗೆ ಹೆಚ್ಚಿನ ಪದವಿಯನ್ನು ಕೊಡಬೇಕೆಂದು ಬೇಡಿಕೊಳ್ಳಲು ಯೇಸು ದೀನತೆಯನ್ನು ಕುರಿತು ಬೋಧಿಸಿದ್ದು.

(ಮಾರ್ಕ 10. 35—45.)

) ಆಗ ಜೆಬೆದಾಯನ ಮಕ್ಕಳ ತಾಯಿ ಅತನಿಂದ
ಏನೋ ಒಂದು ಬೇಡಿಕೊಳ್ಳಬೇಕೆಂದು ತನ್ನ ಮಕ್ಕ
ಳನ್ನು ಕರಕೊಂಡು ಬಂದು ಆತನಿಗೆ ಅಡ್ಡಬಿದ್ದಳು.
1 ಆತನು ಆಕೆಯನ್ನು—ನಿನಗೇನು ಬೇಕಮ್ಮಾ ಎಂದು
ಕೇಳಲು ಆಕೆ—ನಿನ್ನ ರಾಜ್ಯದಲ್ಲಿ ನನ್ನ ಈ ಇಬ್ಬರು
ಮಕ್ಕಳಲ್ಲಿ ಒಬ್ಬನು ನಿನ್ನ ಬಲಗಡೆಯಲ್ಲೂ ಮತ್ತೊ
ಬ್ಬನು ಎಡಗಡೆಯಲ್ಲೂ ಕೂತುಕೊಳ್ಳುವದಕ್ಕೆ ಅಪ್ಪಣೆ
2 ಯಾಗಬೇಕು ಅಂದಳು. ಅದಕ್ಕೆ ಯೇಸು—ನೀವು
ಬೇಡಿಕೊಂಡದ್ದು ಏನೆಂದು ನಿಮಗೆ ತಿಳಿಯದು.
ನಾನು ಕುಡಿಯಬೇಕಾಗಿರುವ ಪಾತ್ರೆಯಲ್ಲಿ ನೀವು
ಕುಡಿಯುವದು ನಿಮ್ಮಿಂದಾದೀತೇ ಎಂದು ಕೇಳಲು
3 ಅವರು—ಆಗುವದು ಅಂದರು. ಆಗ ಆತನು
ಅವರಿಗೆ—ನನ್ನ ಪಾತ್ರೆಯಲ್ಲಿ ನೀವು ಕುಡಿಯುವಿರಿ
ಸರಿ; ಆದರೆ ನನ್ನ ಎಡಬಲಗಡೆಗಳಲ್ಲಿ ಕೂತುಕೊಳ್ಳು
ವಂತೆ ಅನುಗ್ರಹಮಾಡುವದು ನನ್ನದಲ್ಲ; ನನ್ನ ತಂದೆ
ಯಿಂದ ಅದು ಯಾರಿಗೆಂದು ಸಿದ್ಧಪಡಿಸಿದೆಯೋ
ಅವರಿಗೇ ಸಿಕ್ಕುವದು ಎಂದು ಹೇಳಿದನು.
4 ಉಳಿದ ಹತ್ತು ಮಂದಿ ಶಿಷ್ಯರು ಇದನ್ನು ಕೇಳಿ
ಆ ಇಬ್ಬರು ಅಣ್ಣತಮ್ಮಂದಿರ ಮೇಲೆ ಸಿಟ್ಟುಗೊಂಡರು.
5 ಆದರೆ ಯೇಸು ಅವರನ್ನು ಹತ್ತಿರಕ್ಕೆ ಕರೆದು ಅವ
ರಿಗೆ—ಜನಗಳನ್ನಾಳುವವರು ಅವರ ಮೇಲೆ ಅಹಂ
ಕಾರದಿಂದ ದೊರೆತನಮಾಡುತ್ತಾರೆ, ಮತ್ತು ದೊಡ್ಡ
ವರು ಬಲಾತ್ಕಾರದಿಂದ ಅಧಿಕಾರನಡಿಸುತ್ತಾರೆ ಎಂದು
6 ನೀವು ಬಲ್ಲಿರಷ್ಟೆ. ನಿಮ್ಮಲ್ಲಿ ಹಾಗಿರಬಾರದು; ಆದರೆ
ನಿಮ್ಮಲ್ಲಿ ದೊಡ್ಡವನಾಗಬೇಕೆಂದಿರುವವನು ನಿಮ್ಮ
7 ಸೇವಕನಾಗಿರಬೇಕು; ನಿಮ್ಮಲ್ಲಿ ಮೊದಲನೆಯವನಾಗ
8 ಬೇಕೆಂದಿರುವವನು ನಿಮ್ಮ ಆಳಾಗಿರಬೇಕು. ಹಾಗೆ
ಯೇ ಮನುಷ್ಯಕುಮಾರನು ಸೇವೆಮಾಡಿಸಿಕೊಳ್ಳುವ
ದಕ್ಕೆ ಬರಲಿಲ್ಲ, ಸೇವೆ ಮಾಡುವದಕ್ಕೂ ಅನೇಕರನ್ನು
ಬಿಡಿಸಿಕೊಳ್ಳುವದಕ್ಕಾಗಿ ತನ್ನ ಪ್ರಾಣವನ್ನು ಈಡು
ಕೊಡುವದಕ್ಕೂ ಬಂದನು ಎಂದು ಹೇಳಿದನು.

### ಯೇಸು ಇಬ್ಬರು ಕುರುಡರಿಗೆ ದೃಷ್ಟಿ ಕೊಟ್ಟದ್ದು.

(ಮಾರ್ಕ 10. 46—52; ಲೂಕ 18. 35—43.)

ಅವರು ಯೆರಿಕೋವಿನಿಂದ ಹೊರಟುಹೋಗುತ್ತಿ 29
ರುವಾಗ ಜನರ ದೊಡ್ಡ ಗುಂಪು ಆತನ ಹಿಂದೆ
ಹೋಯಿತು. ಆಗ ದಾರಿಯ ಮಗ್ಗುಲಲ್ಲಿ ಕೂತಿದ್ದ 30
ಇಬ್ಬರು ಕುರುಡರು, ಯೇಸು ಈ ಮಾರ್ಗವಾಗಿ
ಹೋಗುತ್ತಿದ್ದಾನೆಂದು ಕೇಳಿ—ಸ್ವಾಮಿ, ದಾವೀದನ
ಕುಮಾರನೇ, ನಮ್ಮನ್ನು ಕರುಣಿಸು ಎಂದು ಕೂಗಿ
ಕೊಂಡರು. ಆ ಗುಂಪಿನವರು—ಸುಮ್ಮನಿರಿ ಎಂದು 31
ಅವರನ್ನು ಗದರಿಸಲು ಅವರು—ಸ್ವಾಮಿ, ದಾವೀದನ
ಕುಮಾರನೇ, ನಮ್ಮನ್ನು ಕರುಣಿಸು ಎಂದು ಹೆಚ್ಚಾಗಿ
ಕೂಗಿಕೊಂಡರು. ಆಗ ಯೇಸು ನಿಂತು ಅವರನ್ನು 32
ಕರೆದು—ನಾನು ನಿಮಗೆ ಏನು ಮಾಡಬೇಕೆಂದು
ಕೋರುತ್ತೀರಿ ಎಂದು ಕೇಳಲು ಅವರು—ನಮ್ಮ 33
ಕಣ್ಣುಗಳು ತೆರೆಯಲ್ಪಡಬೇಕು, ಸ್ವಾಮಿ ಅಂದರು.
ಆಗ ಯೇಸು ಕನಿಕರಪಟ್ಟು ಅವರ ಕಣ್ಣುಗಳನ್ನು 34
ಮುಟ್ಟಿದನು. ಕೂಡಲೆ ಅವರಿಗೆ ಕಣ್ಣು ಬಂದವು,
ಅವರು ಆತನ ಹಿಂದೆ ಹೋದರು.

### ಯೇಸು ಅರಸನಂತೆ ಯೆರೂಸಲೇಮಿನಲ್ಲಿ ಪ್ರವೇಶಮಾಡಿದ್ದು.

(ಮಾರ್ಕ 11. 1—11; ಲೂಕ 19. 29—40;
ಯೋಹಾ. 12. 12—19.)

ಅವರು ಯೆರೂಸಲೇಮಿಗೆ ಸಮೀಪಿಸಿ ಎಣ್ಣೆಯ 21
ಮರಗಳ ಗುಡ್ಡದ ಬಳಿಯಲ್ಲಿರುವ ಬೇತ್ಫಗೆಗೆ
ಬಂದಾಗ ಯೇಸು ಇಬ್ಬರು ಶಿಷ್ಯರನ್ನು ಕರೆದು— 2
ನಿಮ್ಮೆದುರಿಗಿರುವ ಹಳ್ಳಿಗೆ ಹೋಗಿರಿ; ಹೋದಕೂಡಲೆ
ಅಲ್ಲಿ ಕಟ್ಟಿರುವ ಕತ್ತೆಯನ್ನೂ ಅದರ ಕೂಡ ಇರುವ
ಮರಿಯನ್ನೂ ಕಾಣುವಿರಿ; ಅವುಗಳನ್ನು ಬಿಚ್ಚಿ ನನ್ನ
ಹತ್ತರಕ್ಕೆ ಹಿಡುಕೊಂಡು ಬನ್ನಿರಿ. ಯಾವನಾದರೂ 3
ನಿಮಗೆ ಏನಾದರೂ ಹೇಳಿದರೆ, ಇವು ಸ್ವಾಮಿಯವ
ರಿಗೆ ಬೇಕಾಗಿವೆ ಅನ್ನಿರಿ; ಕೂಡಲೆ ಅವುಗಳನ್ನು ಬಿಟ್ಟು
ಕೊಡುವನು ಎಂದು ಹೇಳಿ ಕಳುಹಿಸಿದನು. ಒಬ್ಬ 4
ಪ್ರವಾದಿಯ ಮುಖಾಂತರ ಹೇಳಿದ ಮಾತು ನೆರವೇರು
ವಂತೆ ಇದು ಆಯಿತು; ಆ ಮಾತು ಏನಂದರೆ—

ಚೀಯೋನ್ ನಗರಿಗೆ— 5
ನೋಡು, ನಿನ್ನ ಅರಸು ನಿನ್ನ ಬಳಿಗೆ ಬರುತ್ತಾನೆ;
ಆತನು ಶಾಂತಗುಣವುಳ್ಳವನಾಗಿಯೂ
ಕತ್ತೆಯನ್ನು, ಹೌದು ಪ್ರಾಯದ ಕತ್ತೆಮರಿ
ಯನ್ನು ಹತ್ತಿದವನಾಗಿಯೂ ಬರುತ್ತಾ
ನೆಂದು ಹೇಳಿರಿ ಎಂಬದು.

ಆಗ ಶಿಷ್ಯರು ಹೋಗಿ ಯೇಸು ತಮಗೆ ಅಪ್ಪಣೆ 6
ಕೊಟ್ಟಂತೆಯೇ ಕತ್ತೆಯನ್ನೂ ಮರಿಯನ್ನೂ ತಂದು 7
ಅವುಗಳ ಮೇಲೆ ತಮ್ಮ ಬಟ್ಟೆಗಳನ್ನು ಹಾಕಲು
ಆತನು ಹತ್ತಿ ಕೂತುಕೊಂಡನು. ಆಗ ಜನರ ಗುಂಪಿ 8
ನಲ್ಲಿ ಬಹಳ ಮಂದಿ ತಮ್ಮ ಬಟ್ಟೆಗಳನ್ನು ದಾರಿಯಲ್ಲಿ

ಹಾಸಿದರು; ಬೇರೆ ಕೆಲವರು ಮರಗಳಿಂದ ಚಿಗುರು
ಗಳನ್ನು ಕೊಯಿದು ದಾರಿಯಲ್ಲಿ ಹರಡುತ್ತಿದ್ದರು.
9 ಆತನ ಹಿಂದೆಯೂ ಮುಂದೆಯೂ ಗುಂಪಾಗಿ ಹೋಗು
ತ್ತಿದ್ದ ಜನರು—

1)ದಾವೀದನ ಕುಮಾರನಿಗೆ ಜಯ!
ಕರ್ತನ ಹೆಸರಿನಲ್ಲಿ ಬರುವವನಿಗೆ ಆಶೀ
ರ್ವಾದ!
ಮೇಲಣ ಲೋಕಗಳಲ್ಲಿ ಜಯ!

10 ಎಂದು ಆರ್ಭಟಿಸಿದರು. ಆತನು ಯೆರೂಸಲೇ
ಮನ್ನು ಸೇರಲು ಪಟ್ಟಣವೆಲ್ಲಾ ಗದ್ದಲವಾಗಿ, ಈತನು
11 ಯಾರು? ಅಂದರು. ಅದಕ್ಕೆ ಆ ಜನರ ಗುಂಪಿನ
ವರು— ಈತನು ಆ ಪ್ರವಾದಿ, ಗಲಿಲಾಯದ ನಜರೇತಿನ
ಯೇಸು ಅಂದರು.

ಯೇಸು ದೇವಾಲಯದಲ್ಲಿದ್ದ ವ್ಯಾಪಾರಸ್ಥರನ್ನು ಹೊರಡಿಸಿದ್ದು;
ಆತನ ಮಾತಿಗೆ ಅಂಜೂರದ ಮರವು ಒಣಗಿಹೋದದ್ದು.
(ಮಾರ್ಕ 11. 11—24; ಲೂಕ 19. 45—48.)

12 ಬಳಿಕ ಯೇಸು ದೇವಾಲಯಕ್ಕೆ ಹೋಗಿ ಅದರಲ್ಲಿ
ಮಾರುವ ಕೊಳ್ಳುವ ಎಲ್ಲರನ್ನೂ ಹೊರಡಿಸಿಬಿಟ್ಟು
ಚಿನಿವಾರರ ಮೇಜುಗಳನ್ನೂ ಪಾರಿವಾಳಮಾರುವವರ
13 ಕಾಲ್ಮಣೆಗಳನ್ನೂ ಕೆಡವಿ ಅವರಿಗೆ—ನನ್ನ ಆಲಯವು
ಪ್ರಾರ್ಥನಾಲಯವೆನಿಸಿಕೊಳ್ಳುವದು ಎಂದು ಬರೆದದೆ;
ಆದರೆ ನೀವು ಅದನ್ನು ಕಳ್ಳರ ಗವಿ ಮಾಡುತ್ತೀರಿ
14 ಎಂದು ಹೇಳಿದನು. ಆಗ ಕುರುಡರೂ ಕುಂಟರೂ
ದೇವಾಲಯದಲ್ಲಿ ಆತನ ಬಳಿಗೆ ಬರಲು ಅವರನ್ನು
15 ಸ್ವಸ್ಥಮಾಡಿದನು. ಆದರೆ ಮಹಾಯಾಜಕರೂ
ಶಾಸ್ತ್ರಿಗಳೂ ಆತನು ಮಾಡಿದ ಆಶ್ಚರ್ಯಕರವಾದ
ಕಾರ್ಯಗಳನ್ನೂ ದಾವೀದನ ಕುಮಾರನಿಗೆ ಜಯ
ಜಯವೆಂದು ದೇವಾಲಯದಲ್ಲಿ ಕೂಗುತ್ತಿರುವ ಹುಡು
16 ಗರನ್ನೂ ನೋಡಿ ಸಿಟ್ಟುಗೊಂಡು ಆತನಿಗೆ—ಇವರು
ಹೇಳುವದನ್ನು ಕೇಳುತ್ತೀಯಾ ಎಂದು ಹೇಳಲು
ಯೇಸು—ಹೌದು, ಕೇಳುತ್ತೇನೆ, ಸಣ್ಣ ಮಕ್ಕಳ
ಬಾಯಿಂದಲೂ ಮೊಲೇಕೂಸುಗಳ ಬಾಯಿಂದಲೂ
ಸ್ತೋತ್ರವನ್ನು ಸಿದ್ಧಿಗೆ ತಂದಿ ಎಂಬದನ್ನು ನೀವು
17 ಎಂದಾದರೂ ಓದಲಿಲ್ಲವೋ? ಅಂದನು. ಬಳಿಕ ಅವ
ರನ್ನು ಬಿಟ್ಟು ಪಟ್ಟಣದಿಂದ ಹೊರಟು ಬೇಥಾನ್ಯಕ್ಕೆ
ಬಂದು ಅಲ್ಲಿ ರಾತ್ರಿ ಇಳುಕೊಂಡನು.
18 ಬೆಳಿಗ್ಗೆ ಆತನು ಪಟ್ಟಣಕ್ಕೆ ತಿರಿಗಿ ಹೋಗುತ್ತಿರು
19 ವಾಗ ಹಸಿದನು. ದಾರಿಯಲ್ಲಿ ಒಂದು ಅಂಜೂರದ
ಮರವನ್ನು ಕಂಡು ಅದರ ಹತ್ತಿರಕ್ಕೆ ಹೋಗಿ
ಅದರಲ್ಲಿ ಬರೀ ಎಲೆಗಳನ್ನೇ ಹೊರತು ಮತ್ತೇನೂ
ಕಾಣದೆ ಅದಕ್ಕೆ—ಇನ್ನು ಮೇಲೆ ನಿನ್ನಲ್ಲಿ ಫಲವು
ಎಂದೆಂದಿಗೂ ಆಗದೆಹೋಗಲಿ ಎಂದು ಹೇಳಿದನು. ಆ
ಕ್ಷಣವೇ ಆ ಅಂಜೂರದ ಮರವು ಒಣಗಿಹೋಯಿತು.
20 ಶಿಷ್ಯರು ಅದನ್ನು ನೋಡಿ ಬೆರಗಾಗಿ—ಈ ಅಂಜೂರದ
ಮರವು ಒಂದು ಕ್ಷಣದಲ್ಲೇ ಒಣಗಿಹೋಯಿತಲ್ಲಾ;
21 ಅದು ಹೇಗೆ? ಅಂದರು. ಅದಕ್ಕೆ ಯೇಸು—
ನಿಮಗೆ ಸತ್ಯವಾಗಿ ಹೇಳುತ್ತೇನೆ ನೀವು ಸಂಶಯ
ಪಡದೆ ನಂಬಿದರೆ ನಾನು ಅಂಜೂರದ ಮರಕ್ಕೆ ಮಾ
ದಂಥದನ್ನು ನೀವು ಮಾಡುವಿರಿ. ಇದು ಮಾತ್ರ
ವಲ್ಲದೆ ಈ ಬೆಟ್ಟಕ್ಕೆ—ನೀನು ಕಿತ್ತುಕೊಂಡು ಹೋಗಿ
ಸಮುದ್ರದಲ್ಲಿ ಬೀಳು ಎಂದು ಹೇಳಿದರೆ ಅದು
ಆಗುವದು. ನೀವು ನಂಬಿಕೊಂಡು ಪ್ರಾರ್ಥನೆಯಲ್ಲಿ
ಏನೇನು ಬೇಡಿಕೊಳ್ಳುವಿರೋ ಅದನ್ನೆಲ್ಲಾ ಹೊಂದು
ವಿರಿ ಅಂದನು.

ಶಾಸ್ತ್ರಿಗಳು ಯೇಸುವಿನ ಅಧಿಕಾರವನ್ನು ವಿಚಾರಿಸಿದಾಗ, ಆತನು
ತಕ್ಕ ಉತ್ತರಕೊಟ್ಟು ಅವರು ಮಾಡಿದ ದೈವದ್ರೋಹವನ್ನು
ತೋರಿಸುವದಕ್ಕಾಗಿ ಮೂರು ಸಾಮ್ಯಗಳನ್ನು ಹೇಳಿದ್ದು.
(ಮಾರ್ಕ 11. 27—12. 12; ಲೂಕ 20.
1—19; 14. 16—24.)

ತರುವಾಯ ಆತನು ದೇವಾಲಯಕ್ಕೆ ಬಂದು
ಬೋಧಿಸುತ್ತಿರಲಾಗಿ ಮಹಾಯಾಜಕರೂ ಪ್ರಜೆಯ
ಹಿರಿಯರೂ ಆತನ ಬಳಿಗೆ ಬಂದು—ನೀನು ಯಾವ
ಅಧಿಕಾರದಿಂದ ಇದನ್ನೆಲ್ಲಾ ಮಾಡುತ್ತೀ? ಈ ಅಧಿಕಾರ
ವನ್ನು ನಿನಗೆ ಯಾರು ಕೊಟ್ಟರು ಎಂದು ಕೇಳಲು
ಯೇಸು ಅವರಿಗೆ ಹೇಳಿದ್ದೇನಂದರೆ—ನಾನು ಸಹ
ನಿಮ್ಮನ್ನು ಒಂದು ಮಾತು ಕೇಳುತ್ತೇನೆ; ಅದನ್ನು
ನೀವು ನನಗೆ ಹೇಳಿದರೆ ನಾನೂ ಯಾವ ಅಧಿಕಾರ
ದಿಂದ ಇದನ್ನು ಮಾಡುತ್ತೇನೆಂಬದನ್ನು ನಿಮಗೆ
ಹೇಳುತ್ತೇನೆ. ದೀಕ್ಷಾಸ್ನಾನ ಮಾಡಿಸುವ ಅಧಿಕಾರವು
ಯೋಹಾನನಿಗೆ ಎಲ್ಲಿಂದ ಬಂತು? ಪರಲೋಕ
ದಿಂದಲೋ? ಮನುಷ್ಯರಿಂದಲೋ ಅಂದನು. ಆಗ
ಅವರು—ಪರಲೋಕದಿಂದ ಬಂತೆಂದು ನಾವು ಹೇಳಿದರೆ
ಹಾಗಾದರೆ ನೀವು ಅವನನ್ನು ಯಾಕೆ ನಂಬಲಿಲ್ಲ
ಎಂದು ನಮಗೆ ಹೇಳಾನು; ಮನುಷ್ಯರಿಂದ ಬಂತೆಂದು
ಹೇಳಿದರೆ ನಮಗೆ ಜನರ ಭಯವದೆ; ಯೋಹಾನನು
ಪ್ರವಾದಿಯೆಂದು ಎಲ್ಲರೂ ಎಣಿಸಿದ್ದಾರಲ್ಲಾ ಎಂಬ
ದಾಗಿ ತಮ್ಮತಮ್ಮೊಳಗೆ ಮಾತಾಡಿಕೊಳ್ಳುತ್ತಿದ್ದರು.
ಕಡೆಗೆ ಅವರು—ನಾವರಿಯೆವು ಎಂದು ಯೇಸುವಿಗೆ
ಉತ್ತರಕೊಟ್ಟರು. ಆಗ ಆತನು ಅವರಿಗೆ—ಯಾವ
ಅಧಿಕಾರದಿಂದ ಇದನ್ನೆಲ್ಲಾ ಮಾಡುತ್ತೇನೋ ಅದನ್ನು
ನಾನೂ ನಿಮಗೆ ಹೇಳುವದಿಲ್ಲ.

ಆದರೆ ನಿಮಗೆ ಹೇಗೆ ತೋರುತ್ತದೆ? ಒಬ್ಬ ಮನು
ಷ್ಯನಿಗೆ ಇಬ್ಬರು ಮಕ್ಕಳಿದ್ದರು. ಅವನು ಮೊದಲನೆ
ಯವನ ಬಳಿಗೆ ಬಂದು—ಮಗನೇ, ಹೋಗಿ ಈ
ಹೊತ್ತು ದ್ರಾಕ್ಷೇತೋಟದಲ್ಲಿ ಕೆಲಸಮಾಡು ಅಂದಾಗ
ಅವನು—ನಾನು ಹೋಗುವದಿಲ್ಲವೆಂದು ಹೇಳಿದಾಗ್ಯೂ
ತರುವಾಯ ಪಶ್ಚಾತ್ತಾಪಪಟ್ಟು ತೋಟಕ್ಕೆ ಹೋದನು.
ಆ ಮೇಲೆ ಎರಡನೆಯವನ ಬಳಿಗೆ ಬಂದು ಅದೇ
ಮಾತನ್ನು ಹೇಳಿದಾಗ ಅವನು—ಹೋಗುತ್ತೇನಪ್ಪಾ
ಅಂದಾಗ್ಯೂ ಹೋಗಲೇ ಇಲ್ಲ. ಅವರಿಬ್ಬರಲ್ಲಿ ತಂದೆಯ
ಚಿತ್ತದಂತೆ ನಡೆದವನು ಯಾರು ಎಂದು ಕೇಳಿದ್ದಕ್ಕೆ
ಅವರು—ಮೊದಲನೆಯವನೇ ಅಂದರು. ಆಗ ಯೇಸು

1) ಮೂಲ: ಹೊಸನ್ನ.

ಅವರಿಗೆ—1)ಭ್ರಷ್ಟರೂ ಸೂಳೆಯರೂ ನಿಮಗಿಂತ
ಮೊದಲು ದೇವರ ರಾಜ್ಯವನ್ನು ಸೇರುವರು ಎಂದು
32 ನಿಮಗೆ ಸತ್ಯವಾಗಿ ಹೇಳುತ್ತೇನೆ. ಯೋಹಾನನು
ಧರ್ಮಮಾರ್ಗವನ್ನು ಬೋಧಿಸುವವನಾಗಿ ನಿಮ್ಮ
ಬಳಿಗೆ ಬಂದನು, ನೀವು ಅವನನ್ನು ನಂಬಲಿಲ್ಲ;
ಭ್ರಷ್ಟರೂ ಸೂಳೆಯರೂ ಅವನನ್ನು ನಂಬಿದರು;
ನೀವು ಇದನ್ನು ನೋಡಿದಾಗ್ಯೂ ಪಶ್ಚಾತ್ತಾಪ ಪಡಲಿಲ್ಲ,
ಅವನನ್ನು ನಂಬಲಿಲ್ಲ.
33 ಮತ್ತೊಂದು ಸಾಮ್ಯವನ್ನು ಕೇಳಿರಿ—ಒಬ್ಬ ಮನೆಯ
ಯಜಮಾನನಿದ್ದನು. ಅವನು ಒಂದು ದ್ರಾಕ್ಷೇ
ತೋಟವನ್ನು ಮಾಡಿ ಅದರ ಸುತ್ತಲೂ ಬೇಲಿಹಾಕಿಸಿ
ಅದರಲ್ಲಿ ದ್ರಾಕ್ಷೆಯ ಆಲೆಯನ್ನು ಮಾಡಿಸಿ ಹೂಡೆ
ಯನ್ನು ಕಟ್ಟಿಸಿ ಒಕ್ಕಲಿಗರಿಗೆ 2)ವಾರಕ್ಕೆ ಕೊಟ್ಟು
34 ಬೇರೊಂದು ದೇಶಕ್ಕೆ ಹೋದನು. ಫಲಕಾಲ ಹತ್ತರ
ವಾದಾಗ ತನಗೆ ಬರಬೇಕಾದ ಹಣ್ಣುಗಳನ್ನು ತೆಗೆದು
ಕೊಂಡು ಬರುವದಕ್ಕಾಗಿ ಆ ಒಕ್ಕಲಿಗರ ಬಳಿಗೆ ತನ್ನ
35 ಆಳುಗಳನ್ನು ಕಳುಹಿಸಲು ಒಕ್ಕಲಿಗರು ಅವನ ಆಳು
ಗಳನ್ನು ಹಿಡುಕೊಂಡು ಒಬ್ಬನನ್ನು ಹೊಡೆದರು,
ಒಬ್ಬನನ್ನು ಕಡಿದು ಹಾಕಿದರು, ಒಬ್ಬನನ್ನು ಕಲ್ಲೆ
36 ಸೆದು ಕೊಂದರು. ಪುನಃ ಮೊದಲಿನವರಿಗಿಂತ ಹೆಚ್ಚು
ಮಂದಿ ಆಳುಗಳನ್ನು ಕಳುಹಿಸಿದನು, ಅವರಿಗೂ
37 ಹಾಗೆಯೇ ಮಾಡಿದರು. ಕಡೆಯಲ್ಲಿ ನನ್ನ ಮಗನಿ
ಗಾದರೂ ಮರ್ಯಾದೆ ತೋರಿಸಾರು ಅಂದುಕೊಂಡು
ತನ್ನ ಮಗನನ್ನು ಅವರ ಬಳಿಗೆ ಕಳುಹಿಸಿದನು.
38 ಆದರೆ ಆ ಒಕ್ಕಲಿಗರು ಅವನ ಮಗನನ್ನು ಕಂಡು—
ಇವನೇ ಬಾಧ್ಯಸ್ಥನು, ಬನ್ನಿ ಇವನನ್ನು ಕೊಂದುಹಾ
ಕೋಣ, ಇವನ ಸ್ವಾಸ್ತ್ಯವನ್ನು ನಾವೇ ತೆಗೆದುಕೊ
ಳ್ಳೋಣ ಎಂದು ತಮ್ಮತಮ್ಮೊಳಗೆ ಮಾತಾಡಿಕೊಂಡು
39 ಅವನನ್ನು ಹಿಡಿದು ದ್ರಾಕ್ಷೇತೋಟದಿಂದ ಹೊರಕ್ಕೆ
40 ದೊಬ್ಬಿ ಕೊಂದುಹಾಕಿದರು. ಹಾಗಾದರೆ ದ್ರಾಕ್ಷೇ
ತೋಟದ ದಣಿಯು ಬಂದಾಗ ಆ ಒಕ್ಕಲಿಗರಿಗೆ ಏನು
41 ಮಾಡುವನು ಅಂದನು. ಅವರು ಆತನಿಗೆ—ಆ ಕೆಡು
ಕರನ್ನು ಕ್ರೂರವಾಗಿ ಸಂಹರಿಸಿ ಕಾಲಕಾಲಕ್ಕೆ ಹಣ್ಣು
ಗಳನ್ನು ತನಗೆ ಸಲ್ಲಿಸುವಂಥ ಬೇರೆ ಒಕ್ಕಲಿಗರಿಗೆ ತನ್ನ
ತೋಟವನ್ನು ವಾರಕ್ಕೆ ಕೊಡುವನು ಎಂದು ಹೇಳಿದರು.
42 ಯೇಸು ಅವರಿಗೆ—

ಮನೆ ಕಟ್ಟುವವರು ಬೇಡವೆಂದು ಬಿಟ್ಟ ಕಲ್ಲೇ
ಮುಖ್ಯವಾದ ಮೂಲೆಗಲ್ಲಾಯಿತು;
ಇದು ಕರ್ತನಿಂದಲೇ ಆಯಿತು;
ನಮಗೆ ಆಶ್ಚರ್ಯವಾಗಿ ತೋರುತ್ತದೆ

ಎಂಬುವ ಮಾತನ್ನು ನೀವು ಶಾಸ್ತ್ರದಲ್ಲಿ ಎಂದಾದರೂ
43 ಓದಲಿಲ್ಲವೋ? ಆದದರಿಂದ ದೇವರರಾಜ್ಯವು ನಿಮ್ಮಿಂದ
ತೆಗೆಯಲ್ಪಟ್ಟು ಅದರ ಫಲಗಳನ್ನು ಕೊಡುವ ಜನಕ್ಕೆ
44 ಕೊಡಲಾಗುವದು. 3)ಈ ಕಲ್ಲಿನ ಮೇಲೆ ಬೀಳುವ
ವನು ತುಂಡುತುಂಡಾಗುವನು; ಇದು ಯಾರ ಮೇಲೆ
ಬೀಳುತ್ತದೋ ಅವನನ್ನು ಪುಡಿಪುಡಿಮಾಡುವದು
45 ಎಂದು ಹೇಳಿದನು. ಮಹಾಯಾಜಕರೂ ಫರಿಸಾ
ಯರೂ ಆತನ ಸಾಮ್ಯಗಳನ್ನು ಕೇಳಿ ತಮ್ಮನ್ನೇ
ಕುರಿತು ಮಾತಾಡುತ್ತಾನೆಂದು ತಿಳುಕೊಂಡು ಆತ
ನನ್ನು ಹಿಡಿಯುವದಕ್ಕೆ ಸಂದರ್ಭನೋಡುತ್ತಿದ್ದರು;
ಆದರೆ ಜನರು ಆತನನ್ನು ಪ್ರವಾದಿಯೆಂದು ಎಣಿಸಿದ್ದ 46
ರಿಂದ ಅವರಿಗೆ ಭಯಪಟ್ಟರು.

22 ಯೇಸು ಬೋಧನೆಮಾಡುತ್ತಾ ಇನ್ನೂ ಸಾಮ್ಯ
ರೂಪವಾಗಿ ಅವರಿಗೆ ಹೇಳಿದ್ದೇನಂದರೆ—ಪರ 2
ಲೋಕರಾಜ್ಯವು ಮಗನಿಗೆ ಮದುವೆಮಾಡಿದ ಒಬ್ಬ ಅರಸ
ನಿಗೆ ಹೋಲಿಕೆಯಾಗಿದೆ. ಅವನು ಮದುವೆಗೆ ಹೇಳಿಸಿ 3
ಕೊಂಡವರನ್ನು ಕರೆಯುವದಕ್ಕೆ ತನ್ನ ಆಳುಗಳನ್ನು
ಕಳುಹಿಸಲು ಬರುವದಕ್ಕೆ ಅವರಿಗೆ ಮನಸ್ಸಿರಲಿಲ್ಲ.
ತಿರಿಗಿ ಬೇರೆ ಆಳುಗಳನ್ನು ಕರೆದು—ನೀವು ಊಟಕ್ಕೆ 4
ಹೇಳಿಸಿಕೊಂಡವರ ಬಳಿಗೆ ಹೋಗಿ—ಇಗೋ, ಅಡಿಗೆ
ಸಿದ್ಧವಾಗಿದೆ; ನನ್ನ ಹೋರಿಗಳನ್ನೂ ಕೊಬ್ಬಿದ ಪಶುಗ
ಳನ್ನೂ ಕೊಯಿಸಿದ್ದೇನೆ; ಎಲ್ಲಾ ಸಿದ್ಧವಾಗಿದೆ; ಮದು
ವೆಯ ಊಟಕ್ಕೆ ಬನ್ನಿರೆಂಬದಾಗಿ ಅವರಿಗೆ ಹೇಳಿರೆಂದು
ಅಪ್ಪಣೆಕೊಟ್ಟು ಕಳುಹಿಸಿದನು. ಆದರೆ ಅವರು ಅಲ 5
ಕ್ಷ್ಯಮಾಡಿ ಒಬ್ಬನು ತನ್ನ ಹೊಲಕ್ಕೆ ಒಬ್ಬನು ತನ್ನ
ವ್ಯಾಪಾರಕ್ಕೆ ಹೋಗಿಬಿಟ್ಟರು; ಉಳಿದವರು ಅವನ 6
ಆಳುಗಳನ್ನು ಹಿಡಿದು ಬೈದು ಕೊಂದುಹಾಕಿದರು.
ಅರಸನು ಸಿಟ್ಟುಗೊಂಡು ತನ್ನ ದಂಡುಗಳನ್ನು ಕಳುಹಿಸಿ 7
ಆ ಕೊಲೆಗಾರರನ್ನು ನಾಶಮಾಡಿ ಅವರ ಪಟ್ಟಣವನ್ನು
ಸುಟ್ಟುಬಿಟ್ಟನು. ಆಗ ತನ್ನ ಆಳುಗಳಿಗೆ—ಮದುವೆಗೆ 8
ಸಿದ್ಧವಾಗಿದೆ ಸರಿ, ಆದರೆ ಕರೆಯಲ್ಪಟ್ಟವರು ಯೋಗ್ಯ
ರಾಗಿರಲಿಲ್ಲ. ನೀವು ಈಗ ನಾಲ್ಕು ಹಾದಿಗಳು ಕೂಡು 9
ವ ಸ್ಥಳಗಳಿಗೆ ಹೋಗಿ ಕಂಡವರನ್ನೆಲ್ಲಾ ಮದುವೆಯ
ಊಟಕ್ಕೆ ಕರೆಯಿರಿ ಎಂದು ಹೇಳಿದನು. ಆ ಆಳು 10
ಗಳು ಹಾದಿಗಳಿಗೆ ಹೋಗಿ ಕೆಟ್ಟವರು ಒಳ್ಳೆಯ
ವರು ಅನ್ನದೆ ಕಂಡವರನ್ನೆಲ್ಲಾ ಕೂಡಿಸಿ ಕರಕೊಂಡು
ಬಂದರು. ಹೀಗೆ ಮನೆತುಂಬ ಊಟಕ್ಕೆ ಕೂತರು.
ಆ ಮೇಲೆ ಅರಸನು ಕೂತವರನ್ನು ನೋಡುವದಕ್ಕೆ 11
ಒಳಕ್ಕೆ ಬರಲಾಗಿ ಮದುವೇಬಟ್ಟೆಯನ್ನು ಹಾಕಿ
ಕೊಳ್ಳದ ಒಬ್ಬನನ್ನು ಕಂಡು ಅವನನ್ನು—ಏನಪ್ಪಾ, 12
ಮದುವೆಯಬಟ್ಟೆ ಇಲ್ಲದೆ ನೀನಿಲ್ಲಿ ಹೇಗೆ ಒಳಕ್ಕೆ ಬಂದಿ
ಎಂದು ಕೇಳಲು ಅವನು ಸುಮ್ಮನಿದ್ದನು. ಆ 13
ಮೇಲೆ ಅರಸನು ಸೇವಕರಿಗೆ—ಅವನ ಕೈಕಾಲು ಕಟ್ಟಿ
ಅವನನ್ನು ಹೊರಗೆ ಕತ್ತಲೆಗೆ ನೂಕಿರಿ ಎಂದು ಹೇಳಿ
ದನು. ಅಲ್ಲಿ ಗೋಳಾಟವೂ ಕಟಕಟನೆ ಹಲ್ಲುಕಡಿ
ಯೋಣವೂ ಇರುವವು. ಹೀಗೆ ಕರೆಯಲ್ಪಟ್ಟವರು 14
ಬಹು ಜನ, ಆಯಲ್ಪಟ್ಟವರು ಸ್ವಲ್ಪ ಜನ ಅಂದನು.

ಅನೇಕರು ಯೇಸುವನ್ನು ಮಾತಿನಲ್ಲಿ ಸಿಕ್ಕಿಸುವದಕ್ಕೆ
ಪ್ರಯತ್ನಮಾಡಿ ಸೋತುಹೋದದ್ದು.
(ಮಾರ್ಕ 12. 13—37; ಲೂಕ 20. 20—44.)

ಆಗ್ಗೆ ಫರಿಸಾಯರು ಹೊರಟು ಆತನನ್ನು ಮಾತಿ 15
ನಲ್ಲಿ ಹೇಗೆ ಸಿಕ್ಕಿಸುವ ಎಂದು ಕೂಡಿ ಆಲೋಚಿಸಿ
ಕೊಂಡು ಆತನ ಬಳಿಗೆ ತಮ್ಮ ಶಿಷ್ಯರನ್ನು ಹೆರೋದಿ 16
ಯರ ಕೂಡ ಕಳುಹಿಸಿದರು. ಇವರು ಬಂದು—

1) ಮೂಲ: ಸುಂಕದವರೂ. 2) ಅಥವಾ: ಕೋರಿಗೆ. 3) ಕೆಲವು ಪ್ರತಿಗಳಲ್ಲಿ 44ನೆಯ ವಚನವಿಲ್ಲ.

ಗುರುವೇ, ನೀನು ಸತ್ಯವಂತನು, ದೇವರ ಮಾರ್ಗವನ್ನು
ಸತ್ಯವಾಗಿ ಬೋಧಿಸುವವನು, ಯಾರಿಗೂ ಹೆದರದ
ವನು; ನೀನು ಜನರ ಮುಖದಿಚ್ಛೆಗೆ ಮಾತಾಡುವವ
17 ನಲ್ಲ ಎಂದು ಬಲ್ಲೆವು. ಹೀಗಿರಲಾಗಿ ಕೈಸರನಿಗೆ
ತೆರಿಗೆ ಕೊಡುವದು ಸರಿಯೋ ಸರಿಯಲ್ಲವೋ ? ನಿನಗೆ
ಹೇಗೆ ತೋರುತ್ತದೆ? ನಮಗೆ ಹೇಳು ಅಂದರು.
18 ಯೇಸು ಅವರ ಕೆಡುಕನ್ನು ಅರಿತುಕೊಂಡವನಾಗಿ--
ಕಪಟಿಗಳೇ, ನನ್ನನ್ನು ಯಾಕೆ ಪರೀಕ್ಷೆಮಾಡುತ್ತೀರಿ?
19 ತೆರಿಗೆಗೆ ಕೊಡುವ ನಾಣ್ಯವನ್ನು ನನಗೆ ತೋರಿಸಿರಿ
ಅನ್ನಲು ಅವರು ಆತನಿಗೆ ಒಂದು ಹಣವನ್ನು ತಂದು
20 ಕೊಟ್ಟರು. ಆತನು— ಈ ತಲೆಯೂ ಈ ಮುದ್ರೆಯೂ
21 ಯಾರದು ಎಂದು ಕೇಳಿದ್ದಕ್ಕೆ ಅವರು—ಕೈಸರನದು
ಅಂದರು. ಆಗ ಆತನು ಅವರಿಗೆ—ಹಾಗಾದರೆ
ಕೈಸರನದನ್ನು ಕೈಸರನಿಗೆ ಕೊಡಿರಿ; ದೇವರದನ್ನು
22 ದೇವರಿಗೆ ಕೊಡಿರಿ ಎಂದು ಹೇಳಿದನು. ಅವರು ಈ
ಮಾತನ್ನು ಕೇಳಿ ಆಶ್ಚರ್ಯಪಟ್ಟು ಆತನನ್ನು ಬಿಟ್ಟು
ಹೋದರು.
23 ಅದೇ ದಿನದಲ್ಲಿ ಸದ್ದುಕಾಯರು ಆತನ ಬಳಿಗೆ
ಬಂದರು. ಇವರು ಪುನರುತ್ಥಾನವಿಲ್ಲ ಅನ್ನುವವರು.
24 ಇವರು ಆತನಿಗೆ ಪ್ರಶ್ನೆಮಾಡಿದ್ದೇನಂದರೆ—ಬೋಧ
ಕನೇ, ಒಬ್ಬನು ಮಕ್ಕಳಿಲ್ಲದೆ ಸತ್ತರೆ ಅವನ ಹೆಂಡತಿ
ಯನ್ನು ಅವನ ತಮ್ಮನು ಮದುವೆಮಾಡಿಕೊಂಡು ತನ್ನ
ಅಣ್ಣನಿಗೆ ಸಂತಾನವನ್ನು ಪಡೆಯಬೇಕೆಂದು ಮೋಶೆ
25 ಯು ಹೇಳಿದನಷ್ಟೆ. ಆದರೆ ನಮ್ಮಲ್ಲಿ ಏಳು ಮಂದಿ
ಅಣ್ಣತಮ್ಮಂದಿರಿದ್ದರು. ಮೊದಲನೆಯವನು ಮದುವೆ
ಯಾಗಿ ತೀರಿಹೋದನು. ಅವನಿಗೆ ಸಂತಾನವಿಲ್ಲದ
26 ಕಾರಣ ಹೆಂಡತಿಯನ್ನು ತನ್ನ ತಮ್ಮನಿಗೆ ಬಿಟ್ಟನು; ಅದ
ರಂತೆ ಎರಡನೆಯವನೂ ಮೂರನೆಯವನೂ ಮುಂತಾದ
27 ವರು ಏಳನೆಯವನ ವರೆಗೂ ಮಾಡಿದರು. ಅವರೆ
28 ಲ್ಲರು ಸತ್ತ ಮೇಲೆ ಆ ಹೆಂಗಸೂ ಸತ್ತಳು. ಹಾಗಾ
ದರೆ ಪುನರುತ್ಥಾನದಲ್ಲಿ ಆಕೆ ಆ ಏಳು ಮಂದಿಯಲ್ಲಿ
ಯಾರ ಹೆಂಡತಿಯಾಗಿರುವಳು? ಆಕೆಯನ್ನು ಅವರೆ
ಲ್ಲರೂ ಮದುವೆಮಾಡಿಕೊಂಡಿದ್ದರಲ್ಲಾ ಅಂದರು.
29 ಅದಕ್ಕೆ ಯೇಸು ಉತ್ತರವಾಗಿ ಅವರಿಗೆ—ನೀವು
ಶಾಸ್ತ್ರವನ್ನಾದರೂ ದೇವರ ಶಕ್ತಿಯನ್ನಾದರೂ ತಿಳಿ
30 ಯದೆ ತಪ್ಪುವವರಾಗಿದ್ದೀರಿ; ಪುನರುತ್ಥಾನವಾದ
ಮೇಲೆ ಮದುವೆಮಾಡಿಕೊಳ್ಳುವದೂ ಇಲ್ಲ, ಮಾಡಿ
ಕೊಡುವದೂ ಇಲ್ಲ; ಪರಲೋಕದಲ್ಲಿರುವ ದೇವದೂತ
31 ರಂತೆ ಇರುತ್ತಾರೆ. ಸತ್ತವರ ಪುನರುತ್ಥಾನದ ವಿಷಯ
32 ವಾಗಿ ಹೇಳಬೇಕಾದರೆ—ನಾನು ಅಬ್ರಹಾಮನ
ದೇವರು, ಇಸಾಕನ ದೇವರು, ಯಾಕೋಬನ ದೇವರು
ಎಂದು ದೇವರು ನಿಮಗೆ ನುಡಿದದ್ದನ್ನು ನೀವು ಓದಲಿ
ಲ್ಲವೇ. ಆತನು ಜೀವಿತರಿಗೆ ದೇವರಾಗಿದ್ದಾನೆ ಹೊರತು
33 ಜೀವವಿಲ್ಲದವರಿಗೆ ಅಲ್ಲ ಎಂದು ಹೇಳಿದನು. ಜನರು
ಅದನ್ನು ಕೇಳಿ ಆತನ ಬೋಧನೆಗೆ ಅತ್ಯಾಶ್ಚರ್ಯ
ಪಟ್ಟರು.
34 ಆತನು ಸದ್ದುಕಾಯರ ಬಾಯಿ ಕಟ್ಟಿದನೆಂದು ಫರಿ
35 ಸಾಯರು ಕೇಳಿ ಅಲ್ಲಿಗೆ ಕೂಡಿಬಂದರು. ಅವರ

ಲ್ಲಿದ್ದ ಒಬ್ಬ ಧರ್ಮೋಪದೇಶಕನು ಆತನನ್ನು ಪರೀಕ್ಷೆ
ಮಾಡಬೇಕೆಂದು — ಗುರುವೇ, ಧರ್ಮಶಾಸ್ತ್ರದಲ್ಲಿ
ಯಾವ ಆಜ್ಞೆ ಮುಖ್ಯವಾದದ್ದು ಎಂದು ಆತನನ್ನು
ಕೇಳಿದ್ದಕ್ಕೆ ಆತನು—ನಿನ್ನ ದೇವರಾಗಿರುವ ಕರ್ತ
ನನ್ನು ನಿನ್ನ ಪೂರ್ಣ ಹೃದಯದಿಂದಲೂ ನಿನ್ನ ಪೂರ್ಣ
ಪ್ರಾಣದಿಂದಲೂ ನಿನ್ನ ಪೂರ್ಣ ಬುದ್ಧಿಯಿಂದಲೂ
ಪ್ರೀತಿಸಬೇಕು ಎಂಬ ಆಜ್ಞೆಯೇ ಮುಖ್ಯವಾದದ್ದು
ಮತ್ತು ಮೊದಲನೆಯದು. ಇದಕ್ಕೆ ಸಮಾನವಾದ
ಎರಡನೆಯ ಆಜ್ಞೆ ಒಂದು ಉಂಟು, ಅದು ಯಾ
ದಂದರೆ—ನಿನ್ನ ನೆರೆಯವನನ್ನು ನಿನ್ನಂತೆಯೆ
ಪ್ರೀತಿಸಬೇಕು ಎಂಬದೇ. ಈ ಎರಡು ಆಜ್ಞೆಗಳ
ಎಲ್ಲಾ ಧರ್ಮಶಾಸ್ತ್ರಕ್ಕೂ ಪ್ರವಾದನಗ್ರಂಥಕ್ಕೂ ಆಧಾ
ವಾಗಿವೆ ಎಂದು ಹೇಳಿದನು.
ಫರಿಸಾಯರು ಕೂಡಿಬಂದಿರುವಾಗ ಯೇಸು ಅ
ರಿಗೆ—ಬರಬೇಕಾದ ಕ್ರಿಸ್ತನ ವಿಷಯವಾಗಿ ನಿಮ
ಹೇಗೆ ತೋರುತ್ತದೆ? ಆತನು ಯಾರ ಮಗನು? ಎಂದ
ಪ್ರಶ್ನೆಹಾಕಿದ್ದಕ್ಕೆ ಅವರು ಆತನಿಗೆ—ದಾವೀದನ 43
ಮಗನು ಎಂದು ಹೇಳಲು ಆತನು—ಹಾಗಾದರೆ

ನಾನು ನಿನ್ನ ವಿರೋಧಿಗಳನ್ನು ನಿನ್ನ ಪಾದಗ
ಕೆಳಗೆ ಹಾಕುವ ತನಕ
ನನ್ನ ಬಲಗಡೆಯಲ್ಲಿ ಕೂತುಕೊಂಡಿರು ಎಂದ
ಕರ್ತನು ನನ್ನ ಒಡೆಯನಿಗೆ ನುಡಿದನು

ಎಂಬ ಮಾತಿನಲ್ಲಿ ದಾವೀದನು ಪವಿತ್ರಾತ್ಮಪ್ರೇರಿ
ನಾಗಿ ಆತನನ್ನು ಒಡೆಯನು ಅನ್ನುವದು ಹೇಗೆ
ದಾವೀದನು ಆತನನ್ನು ಒಡೆಯನೆಂದು ಹೇಳಿದ ಮೇ
ಆತನು ಅವನಿಗೆ ಮಗನಾಗುವದು ಹೇಗೆ? ಅಂದನು
ಅದಕ್ಕೆ ಉತ್ತರವಾಗಿ ಯಾರೂ ಒಂದು ಮಾತಾದರೂ
ಆತನಿಗೆ ಹೇಳಲಾರದೆಹೋದರು. ಇದಲ್ಲದೆ ಅಂ
ನಿಂದ ಆತನನ್ನು ಇನ್ನೇನಾದರೂ ಕೇಳುವದಕ್ಕೆ ಯಾ
ಗೂ ಧೈರ್ಯ ಹುಟ್ಟಲಿಲ್ಲ.

ಯೇಸು ಶಾಸ್ತ್ರಿಗಳನ್ನೂ ಫರಿಸಾಯರನ್ನೂ ಗದರಿಸಿದ್ದು;
ಯೆರೂಸಲೇಮಿನ ವಿಷಯದಲ್ಲಿ ದುಃಖಪಟ್ಟದ್ದು.
(ಮಾರ್ಕ 12. 38—40; ಲೂಕ 20. 45—47;
11. 39—54; 13. 34, 35.)

ತರುವಾಯ ಯೇಸು ಜನರ ಗುಂಪಿಗೂ ತನ್ನ 2
ಶಿಷ್ಯರಿಗೂ ಹೇಳಿದ್ದೇನಂದರೆ—ಶಾಸ್ತ್ರಿಗಳೂ ಫರಿ 2
ಸಾಯರೂ ಮೋಶೆಯ ಪೀಠದಲ್ಲಿ ಕೂತುಕೊಂ
ದ್ದಾರೆ; ಆದದರಿಂದ ಅವರು ನಿಮಗೆ ಏನೇನು ಹೇಳ
ತ್ತಾರೋ ಅದನ್ನೆಲ್ಲಾ ಮಾಡಿರಿ, ಕಾಪಾಡಿಕೊಳ್ಳಿರಿ
ಆದರೆ ಅವರ ನಡತೆಯ ಪ್ರಕಾರ ನಡೆಯಬೇಡಿರಿ
ಅವರು ಹೇಳುತ್ತಾರೇ ಹೊರತು ನಡೆಯುವದಿಲ್ಲ
1)ಅವರು ಭಾರವಾದ ಹೊರೆಗಳನ್ನು ಕಟ್ಟಿ ಜನರ ಹೆ
ಲಿನ ಮೇಲೆ ಹೊರಿಸುತ್ತಾರೆ; ತಾವಾದರೋ ಬೆರಳಿನಿಂ
ಲಾದರೂ ಅವುಗಳನ್ನು 2)ಮುಟ್ಟಲೊಲ್ಲರು. ಅವರ
ತಮ್ಮ ಕೆಲಸಗಳನ್ನೆಲ್ಲಾ ಜನರಿಗೆ ಕಾಣಬೇಕೆಂದ
ಮಾಡುತ್ತಾರೆ. ತಾವು ಕಟ್ಟಿಕೊಳ್ಳುವ ಜ್ಞಾಪ

1) ಕೆಲವು ಪ್ರತಿಗಳಲ್ಲಿ—ಯಾರೂ ಹೊರಲಾರದಂಥ ಎಂದು ಬರೆದದೆ. 2) ಮೂಲ: ಕದಲಿಸಲೊಲ್ಲರು

ಪಟ್ಟಿಗಳನ್ನು ಅಗಲಮಾಡುತ್ತಾರೆ, ಗೊಂಡೆಗಳನ್ನು ಉದ್ದಮಾಡುತ್ತಾರೆ. ಇದಲ್ಲದೆ ಔತಣಪ್ರಸ್ತಗಳಲ್ಲಿ ಪ್ರಥಮಸ್ಥಾನ, ಸಭಾಮಂದಿರಗಳಲ್ಲಿ ಮುಖ್ಯ ಪೀಠಗಳು, ಅಂಗಡೀಬೀದಿಗಳಲ್ಲಿ ನಮಸ್ಕಾರಗಳು, ಜನರಿಂದ ಬೋಧಕರನ್ನಿಸಿಕೊಳ್ಳುವದು, ಇವುಗಳೇ ಅವರಿಗೆ ಇಷ್ಟ. ಆದರೆ ನೀವು ಬೋಧಕರನ್ನಿಸಿಕೊಳ್ಳಬೇಡಿರಿ; ಒಬ್ಬನೇ ನಿಮ್ಮ ಬೋಧಕನು, ನೀವೆಲ್ಲರು ಸಹೋದರರು. ಇದಲ್ಲದೆ ಭೂಲೋಕದಲ್ಲಿ ಯಾರನ್ನೂ ನಮ್ಮ ತಂದೆ ಎಂದು ಕರೆಯಬೇಡಿರಿ; ಪರಲೋಕದಲ್ಲಿರುವಾತನೊಬ್ಬನೇ ನಿಮಗೆ ತಂದೆ. ಮತ್ತು ಗುರುಗಳು ಅನ್ನಿಸಿಕೊಳ್ಳಬೇಡಿರಿ; ಕ್ರಿಸ್ತನೊಬ್ಬನೇ ನಿಮಗೆ ಗುರುವು. ನಿಮ್ಮಲ್ಲಿ ಹೆಚ್ಚಿನವನು ನಿಮ್ಮ ಸೇವಕನಾಗಿರಬೇಕು. ತನ್ನನ್ನು ಹೆಚ್ಚಿಸಿಕೊಳ್ಳುವವನು ತಗ್ಗಿಸಲ್ಪಡುವನು, ತನ್ನನ್ನು ತಗ್ಗಿಸಿಕೊಳ್ಳುವವನು ಹೆಚ್ಚಿಸಲ್ಪಡುವನು.

ಅಯ್ಯೋ, ಕಪಟಿಗಳಾದ ಶಾಸ್ತ್ರಿಗಳೇ, ಫರಿಸಾಯರೇ, ಪರಲೋಕರಾಜ್ಯದ ಬಾಗಲನ್ನು ಮನುಷ್ಯರ ಎದುರಿಗೆ ಮುಚ್ಚಿಬಿಡುತ್ತೀರಿ; ನೀವಂತೂ ಒಳಕ್ಕೆ ಹೋಗುವದಿಲ್ಲ, ಒಳಕ್ಕೆ ಹೋಗಬೇಕೆಂದಿರುವವರನ್ನೂ ಹೋಗಗೊಡಿಸುವದಿಲ್ಲ[1].

ಅಯ್ಯೋ, ಕಪಟಿಗಳಾದ ಶಾಸ್ತ್ರಿಗಳೇ, ಫರಿಸಾಯರೇ, ನೀವು ಒಬ್ಬನನ್ನು ನಿಮ್ಮ ಮತದಲ್ಲಿ ಸೇರಿಸಿಕೊಳ್ಳುವದಕ್ಕಾಗಿ ಭೂಮಿಯನ್ನೂ ಸಮುದ್ರವನ್ನೂ ಸುತ್ತಿಕೊಂಡು ಬರುತ್ತೀರಿ; ಅವನು ಸೇರಿದ ಮೇಲೆ ಅವನನ್ನು ನಿಮಗಿಂತ ಎರಡಷ್ಟಾಗಿ ನರಕಪಾತ್ರನಾಗಮಾಡುತ್ತೀರಿ.

ಅಯ್ಯೋ, ದಾರಿತೋರಿಸುವ ಕುರುಡರೇ, ಒಬ್ಬನು ದೇವಾಲಯದ ಮೇಲೆ ಆಣೆಯಿಟ್ಟುಕೊಂಡರೆ ಅದೇನು ಆಣೆಯಲ್ಲ, ಆದರೆ ಒಬ್ಬನು ದೇವಾಲಯದ ಚಿನ್ನದ ಮೇಲೆ ಆಣೆಯಿಟ್ಟುಕೊಂಡರೆ ಅದನ್ನು ನಡಿಸಲೇಬೇಕು ಎಂದು ನೀವು ಹೇಳುತ್ತೀರಿ. ಹುಚ್ಚರೇ, ಕುರುಡರೇ, ಯಾವದು ಹೆಚ್ಚಿನದು? ಚಿನ್ನವೋ, ಚಿನ್ನವನ್ನು ಪಾವನಮಾಡುವ ದೇವಾಲಯವೋ? ಒಬ್ಬನು ಯಜ್ಞವೇದಿಯ ಮೇಲೆ ಆಣೆಯಿಟ್ಟುಕೊಂಡರೆ ಅದೇನು ಆಣೆಯಲ್ಲ; ಆದರೆ ಅದರಲ್ಲಿರುವ ಕಾಣಿಕೆಯ ಮೇಲೆ ಆಣೆಯಿಟ್ಟುಕೊಂಡರೆ ಅದನ್ನು ನಡಿಸಲೇಬೇಕು ಎಂದು ಹೇಳುತ್ತೀರಿ. ಕುರುಡರೇ, ಯಾವದು ಹೆಚ್ಚಿನದು? ಕಾಣಿಕೆಯೋ, ಆ ಕಾಣಿಕೆಯನ್ನು ಪಾವನಮಾಡುವ ಯಜ್ಞವೇದಿಯೋ? ಹೀಗಿರುವದರಿಂದ ಯಜ್ಞವೇದಿಯ ಮೇಲೆ ಆಣೆಯಿಟ್ಟುಕೊಂಡರೆ ಅದರ ಮೇಲೆಯೂ ಅದರಲ್ಲಿರುವ ಎಲ್ಲಾದರ ಮೇಲೆಯೂ ಆಣೆಯಿಟ್ಟುಕೊಂಡ ಹಾಗಾಯಿತು. ದೇವಾಲಯದ ಮೇಲೆ ಆಣೆಯಿಟ್ಟುಕೊಂಡರೆ ಅದರ ಮೇಲೆಯೂ ಅದರಲ್ಲಿ ವಾಸಮಾಡುವಾತನ ಮೇಲೆಯೂ ಆಣೆಯಿಟ್ಟುಕೊಂಡ ಹಾಗಾಯಿತು. ಪರಲೋಕದ ಮೇಲೆ ಆಣೆಯಿಟ್ಟುಕೊಂಡರೆ ದೇವರಸಿಂಹಾಸನದ ಮೇಲೆಯೂ ಅದರಲ್ಲಿ ಕೂತಿರುವಾತನ ಮೇಲೆಯೂ ಆಣೆಯಿಟ್ಟುಕೊಂಡ ಹಾಗಾಯಿತು.

ಅಯ್ಯೋ, ಕಪಟಿಗಳಾದ ಶಾಸ್ತ್ರಿಗಳೇ, ಫರಿಸಾ 23
ಯರೇ, ನೀವು ಮರುಗ ಸೋಪು ಜೀರಿಗೆಗಳಲ್ಲಿ ಹತ್ತರ
ಲ್ಲೊಂದು ಪಾಲು ಕೊಡುತ್ತೀರಿ ಸರಿ, ಆದರೆ ಧರ್ಮ
ಶಾಸ್ತ್ರದಲ್ಲಿ ಗೌರವವಾದದ್ದನ್ನು, ಅಂದರೆ ನ್ಯಾಯ
ವನ್ನೂ ಕರುಣೆಯನ್ನೂ ನಂಬಿಕೆಯನ್ನೂ ಬಿಟ್ಟುಬಿಟ್ಟಿರಿ.
ಇವುಗಳನ್ನು ಮಾಡಬೇಕಾಗಿತ್ತು; ಅವುಗಳನ್ನೂ ಬಿಡ
ಬಾರದು. ದಾರಿತೋರಿಸುವ ಕುರುಡರೇ, ನೀವು 24
ಸೊಳ್ಳೇ ಸೋಸುವವರು, ಒಂಟೇ ನುಂಗುವವರು.

ಅಯ್ಯೋ, ಕಪಟಿಗಳಾದ ಶಾಸ್ತ್ರಿಗಳೇ, ಫರಿಸಾ 25
ಯರೇ, ನೀವು ಪಂಚಪಾತ್ರೆ ಬಟ್ಟಲು ಇವುಗಳ ಹೊರ
ಭಾಗವನ್ನು ಶುಚಿಮಾಡುತ್ತೀರಿ; ಆದರೆ ಅವು ಒಳಗೆ
ಸುಲುಕೊಂಡವುಗಳಿಂದಲೂ ಇಹಭೋಗಪದಾರ್ಥಗಳಿಂ
ದಲೂ ತುಂಬಿರುತ್ತವೆ. ಕುರುಡನಾದ ಫರಿಸಾಯನೇ, 26
ಮೊದಲು ಪಂಚಪಾತ್ರೆ ಬಟ್ಟಲುಗಳ ಒಳಭಾಗವನ್ನು
ಶುಚಿಮಾಡು, ಆಗ ಅವುಗಳ ಹೊರಭಾಗವೂ ಶುಚಿ
ಯಾಗುವದು.

ಅಯ್ಯೋ, ಕಪಟಿಗಳಾದ ಶಾಸ್ತ್ರಿಗಳೇ, ಫರಿಸಾ 27
ಯರೇ, ನೀವು ಸುಣ್ಣಾ ಹಚ್ಚಿದ ಸಮಾಧಿಗಳಿಗೆ ಹೋ
ಲಿಕೆಯಾಗಿದ್ದೀರಿ; ಇವು ಹೊರಗೆ ಚಂದವಾಗಿ ಕಾಣು
ತ್ತವೆ, ಒಳಗೆ ನೋಡಿದರೆ ಸತ್ತವರ ಎಲುಬುಗಳಿಂದಲೂ
ಎಲ್ಲಾ ಹೊಲಸಿನಿಂದಲೂ ತುಂಬಿರುತ್ತವೆ. ಹಾಗೆಯೇ 28
ನೀವು ಸಹ ಹೊರಗೆ ಜನರಿಗೆ ಸತ್ಪುರುಷರಂತೆ ಕಾಣಿಸಿ
ಕೊಳ್ಳುತ್ತೀರಿ ಸರಿ, ಆದರೆ ಒಳಗೆ ಕಪಟದಿಂದಲೂ
ಅನ್ಯಾಯದಿಂದಲೂ ತುಂಬಿದವರಾಗಿದ್ದೀರಿ.

ಅಯ್ಯೋ, ಕಪಟಿಗಳಾದ ಶಾಸ್ತ್ರಿಗಳೇ, ಫರಿಸಾ 29
ಯರೇ, ನೀವು ಪ್ರವಾದಿಗಳ ಸಮಾಧಿಗಳನ್ನು ಕಟ್ಟಿ,
ನೀತಿವಂತರ ಗೋರಿಗಳನ್ನು ಅಲಂಕರಿಸಿ—ನಾವು ನಮ್ಮ 30
ಹಿರಿಯರ ಕಾಲದಲ್ಲಿ ಇರುತ್ತಿದ್ದರೆ ಪ್ರವಾದಿಗಳನ್ನು
ಕೊಂದ ಪಾಪದಲ್ಲಿ ಪಾಲುಗಾರರಾಗುತ್ತಿರಲಿಲ್ಲ ಅನ್ನು
ತ್ತೀರಿ. ಹಾಗಾದರೆ ನೀವು ಪ್ರವಾದಿಗಳನ್ನು ಕೊಂದವರ 31
ಮಕ್ಕಳೇ ಹೌದು ಎಂಬದಕ್ಕೆ ನಿಮಗೆ ನೀವೇ ಸಾಕ್ಷಿ
ಗಳಾಗಿದ್ದೀರಿ. ಒಳ್ಳೇದು, ನೀವು ನಿಮ್ಮ ಹಿರಿಯರ 32
ಪಾಪದ ಅಳತೆಯನ್ನು ಪೂರ್ತಿಮಾಡಿರಿ. ಹಾವುಗಳೇ, 33
ಸರ್ಪಜಾತಿಯವರೇ, ನರಕದಂಡನೆಗೆ ಹೇಗೆ ತಪ್ಪಿಸಿ
ಕೊಂಡೀರಿ? ಆದದರಿಂದ ನೋಡಿರಿ, ನಾನು ನಿಮ್ಮ 34
ಬಳಿಗೆ ಪ್ರವಾದಿಗಳನ್ನೂ ಜ್ಞಾನಿಗಳನ್ನೂ ಶಾಸ್ತ್ರಿಗಳನ್ನೂ
ಕಳುಹಿಸುತ್ತೇನೆ; ಅವರಲ್ಲಿ ಕೆಲವರನ್ನು ಕೊಲ್ಲುವಿರಿ,
ಶಿಲುಬೆಗೆ ಹಾಕುವಿರಿ; ಕೆಲವರನ್ನು ನಿಮ್ಮ ಸಭಾ
ಮಂದಿರಗಳಲ್ಲಿ ಕೊರಡೆಗಳಿಂದ ಹೊಡೆದು ಊರಿಂದ
ಊರಿಗೆ ಅಟ್ಟಿಕೊಂಡುಹೋಗುವಿರಿ. ಹೀಗೆ ನೀತಿ 35
ವಂತನಾದ ಹೇಬೆಲನ ರಕ್ತವು ಮೊದಲುಗೊಂಡು ನೀವು
ದೇವಾಲಯಕ್ಕೂ ಯಜ್ಞವೇದಿಗೂ ನಡುವೆ ಕೊಂದು
ಹಾಕಿದ ಬರಕೀಯನ ಮಗನಾದ ಜಕರೀಯನ ರಕ್ತದ
ವರೆಗೂ ಭೂಮಿಯ ಮೇಲೆ ಸುರಿಸಲ್ಪಟ್ಟ ಎಲ್ಲಾ ನೀತಿ
ವಂತರ ರಕ್ತದಿಂದುಂಟಾಗುವ ಅಪರಾಧವು ನಿಮ್ಮ
ತಲೆಯ ಮೇಲೆ ಬರುವದು. ಅದೆಲ್ಲಾ ಈ ಸಂತತಿ 36
ಯವರ ಮೇಲೆ ಬರುವದೆಂದು ನಿಮಗೆ ಸತ್ಯವಾಗಿ
ಹೇಳುತ್ತೇನೆ.

1) 14ನೆಯ ವಚನ ಮೂಲಗ್ರಂಥದಲ್ಲಿ ಇಲ್ಲ.

37 ಯೆರೂಸಲೇಮೇ, ಯೆರೂಸಲೇಮೇ, ಪ್ರವಾದಿಗಳ
ಪ್ರಾಣ ತೆಗೆಯುವವಳೇ, ದೇವರು ನಿನ್ನ ಬಳಿಗೆ
ಕಳುಹಿಸಿಕೊಟ್ಟವರನ್ನು ಕಲ್ಲೆಸೆದು ಕೊಲ್ಲುವವಳೇ,
ಕೋಳಿ ತನ್ನ ಮರಿಗಳನ್ನು ರೆಕ್ಕೆಗಳ ಕೆಳಗೆ ಕೂಡಿಸಿ
ಕೊಳ್ಳುವಂತೆ ನಿನ್ನ ಮಕ್ಕಳನ್ನು ಕೂಡಿಸಿಕೊಳ್ಳುವದಕ್ಕೆ
ನನಗೆ ಎಷ್ಟೋ ಸಾರಿ ಮನಸ್ಸಿತ್ತು; ಆದರೆ ನಿಮಗೆ
38 ಮನಸ್ಸಿಲ್ಲದೆ ಹೋಯಿತು. ನೋಡಿರಿ, ನಿಮ್ಮ ಆಲ
39 ಯವು ನಿಮಗೆ ಬರೀದಾಗಿ ಬಿಟ್ಟದೆ. ಈಗಿನಿಂದ—
ಕರ್ತನ ಹೆಸರಿನಲ್ಲಿ ಬರುವವನಿಗೆ ಆಶೀರ್ವಾದ ಎಂದು
ನೀವು ಹೇಳುವ ತನಕ ನೀವು ನನ್ನನ್ನು ನೋಡುವದೇ
ಇಲ್ಲವೆಂದು ನಿಮಗೆ ಹೇಳುತ್ತೇನೆ ಅಂದನು.

ಯೆರೂಸಲೇಮಿನ ನಾಶನವನ್ನೂ ಯುಗದ ಸಮಾಪ್ತಿಯನ್ನೂ
ಕುರಿತು ಯೇಸು ಕಾಲಜ್ಞಾನ ಹೇಳಿದ್ದು.
(ಮಾರ್ಕ 13. 1—31; ಲೂಕ 21. 5—33.)

24 ಆ ಮೇಲೆ ಯೇಸು ದೇವಾಲಯದಿಂದ ಹೊರಟು
ಹೋಗುತ್ತಿರಲು ಆತನ ಶಿಷ್ಯರು ಆತನಿಗೆ ದೇವಾ
ಲಯದ ಕಟ್ಟಣಗಳನ್ನು ತೋರಿಸುವದಕ್ಕೆ ಹತ್ತರಕ್ಕೆ
2 ಬಂದರು. ಆಗ ಆತನು—ಇವುಗಳನ್ನೆಲ್ಲಾ ನೋಡುತ್ತೀ
ರಲ್ಲವೇ. ಇಲ್ಲಿ ಕಲ್ಲಿನ ಮೇಲೆ ಕಲ್ಲು ಉಳಿಯುವದಿಲ್ಲ,
ಎಲ್ಲಾ ಕೆಡವಲ್ಪಡುವದು ಎಂದು ನಿಮಗೆ ಸತ್ಯವಾಗಿ
ಹೇಳುತ್ತೇನೆ ಅಂದನು.
3 ಬಳಿಕ ಆತನು ಎಣ್ಣೆಯ ಮರಗಳ ಗುಡ್ಡದ ಮೇಲೆ
ಕೂತಿದ್ದಾಗ ಶಿಷ್ಯರು ಆತನ ಬಳಿಗೆ ಪ್ರತ್ಯೇಕವಾಗಿ
ಬಂದು—ಅದು ಯಾವಾಗ ಆಗುವದು? ನೀನು
ಪ್ರತ್ಯಕ್ಷನಾಗುವದಕ್ಕೂ ಯುಗದ ಸಮಾಪ್ತಿಗೂ ಸೂಚ
4 ನೆಯೇನು? ನಮಗೆ ಹೇಳು ಅನ್ನಲು ಯೇಸು ಅವ
ರಿಗೆ ಉತ್ತರವಾಗಿ ಹೇಳಿದ್ದೇನಂದರೆ—ಯಾರಾದರೂ
5 ನಿಮ್ಮನ್ನು ಮೋಸಗೊಳಿಸಾರು ನೋಡಿಕೊಳ್ಳಿರಿ. ಯಾ
ಕಂದರೆ ಅನೇಕರು ಬಂದು ನನ್ನ ಹೆಸರನ್ನು ಎತ್ತಿ
ಕೊಂಡು—ನಾನು ಕ್ರಿಸ್ತನು, ನಾನು ಕ್ರಿಸ್ತನು ಎಂದು
6 ಹೇಳಿ ಎಷ್ಟೋ ಜನರನ್ನು ಮೋಸಗೊಳಿಸುವರು. ಇದ
ಲ್ಲದೆ ಯುದ್ಧಗಳಾಗುವದನ್ನೂ ಯುದ್ಧವಾಗುವ
ಹಾಗಿದೆ ಎಂಬ ಸುದ್ದಿಗಳನ್ನೂ ನೀವು ಕೇಳಬೇಕಾಗಿರು
ವದು. ಕಳವಳಪಡದಂತೆ ನೋಡಿಕೊಳ್ಳಿರಿ; ಯಾ
ಕಂದರೆ ಹಾಗಾಗುವದು ಅಗತ್ಯ. ಆದರೂ ಇದು
7 ಇನ್ನೂ ಅಂತ್ಯಕಾಲವಲ್ಲ. ಜನಕ್ಕೆ ವಿರೋಧವಾಗಿ
ಜನವೂ ರಾಜ್ಯಕ್ಕೆ ವಿರೋಧವಾಗಿ ರಾಜ್ಯವೂ ಏಳುವವು;
ಮತ್ತು ಅಲ್ಲಲ್ಲಿ ಬರಗಳು ಬರುವವು, ಭೂಕಂಪಗಳು
8 ಆಗುವವು; ಇವೆಲ್ಲಾ [ನೂತನಕಾಲವು ಹುಟ್ಟುವ]
9 ಪ್ರಸವವೇದನೆಯ ಪ್ರಾರಂಭ. ಆಗ ನಿಮ್ಮನ್ನು ಉಪ
ದ್ರವಕ್ಕೆ ಒಪ್ಪಿಸಿ ಕೊಲ್ಲುವರು; ನನ್ನ ಹೆಸರಿನ ನಿಮಿತ್ತ
ನಿಮ್ಮನ್ನು ಎಲ್ಲಾ ಜನಾಂಗಗಳವರು ಹಗೆಮಾಡುವರು.
10 ಆಗ ಅನೇಕರು ಹಿಂಜರಿದು ಒಬ್ಬರನ್ನೊಬ್ಬರು ಹಿಡು
ಕೊಡುವರು; ಒಬ್ಬರ ಮೇಲೊಬ್ಬರು ದ್ವೇಷಮಾಡು
11 ವರು. ಬಹುಮಂದಿ ಸುಳ್ಳುಪ್ರವಾದಿಗಳು ಸಹ ಎದ್ದು
12 ಅನೇಕರನ್ನು ಮೋಸಗೊಳಿಸುವರು. ಇದಲ್ಲದೆ ಅಧ
ರ್ಮವು ಹೆಚ್ಚಾಗುವದರಿಂದ ಬಹು ಜನರ ಪ್ರೀತಿಯು
13 ತಣ್ಣಗಾಗಿಹೋಗುವದು. ಆದರೆ ಕಡೇ ವರೆಗೂ ತಾಳು

ವವನು ರಕ್ಷಣೆಹೊಂದುವನು. ಇದಲ್ಲದೆ ಪರಲೋಕ
ರಾಜ್ಯದ ಈ ಸುವಾರ್ತೆಯು ಸರ್ವಲೋಕದಲ್ಲಿ ಎಲ್ಲಾ
ಜನಾಂಗಗಳಿಗೆ ಸಾಕ್ಷಿಗಾಗಿ ಸಾರಲಾಗುವದು; ಆಗ
ಅಂತ್ಯವು ಬರುವದು.
ಆದದರಿಂದ ಪ್ರವಾದಿಯಾದ ದಾನಿಯೇಲನು ಹೇ
ದಂಥ ಹಾಳುಮಾಡುವ ಅಸಹ್ಯವಸ್ತುವು ಪವಿತ್ರಸ್ಥಾನ
ದಲ್ಲಿ ನಿಂತಿರುವದನ್ನು ನೀವು ಕಾಣುವಾಗ (ಇದನ್ನು
ಓದುವವನು ತಿಳುಕೊಳ್ಳಲಿ) ಯೂದಾಯದಲ್ಲಿರು
ವವರು ಬೆಟ್ಟಗಳಿಗೆ ಓಡಿಹೋಗಲಿ; ಮಾಳಿಗೆಯ ಮೇಲೆ
ಇರುವವನು ತನ್ನ ಮನೆಯೊಳಗಿರುವದನ್ನು ತೆಗೆದು
ಕೊಳ್ಳುವದಕ್ಕೆ ಇಳಿಯದೆ, ಹೊಲದಲ್ಲಿರುವವನು ತನ್ನ
ಹೊದಿಕೆಯನ್ನು ತೆಗೆದುಕೊಳ್ಳುವದಕ್ಕೆ ಹಿಂತಿರುಗಿ
ಬಾರದೆ ಓಡಿಹೋಗಲಿ. ಆದರೆ ಆ ದಿನಗಳಲ್ಲಿ ಬಸುರಿ
ಯರಿಗೂ ಮೊಲೆಕೂಸಿರುವ ಹೆಂಗಸರಿಗೂ ಆಗುವ
ಕಷ್ಟವನ್ನು ಏನು ಹೇಳಲಿ. ಆಗ ಮಹಾ ಸಂಕಟ
ಉಂಟಾಗುವದರಿಂದ ನಿಮ್ಮ ಪಲಾಯನವು ಚಳಿಗಾಲ
ದಲ್ಲಿಯಾಗಲಿ ಸಬ್ಬತ್‌ದಿನದಲ್ಲಿಯಾಗಲಿ ಆಗಬಾರ
ದೆಂದು ಪ್ರಾರ್ಥನೆಮಾಡಿರಿ. ಅಂಥ ಸಂಕಟವು ಲೋಕ
ಹುಟ್ಟಿದ್ದು ಮೊದಲುಗೊಂಡು ಇಂದಿನವರೆಗೂ ಆಗಲಿಲ್ಲ,
ಇನ್ನು ಮೇಲೆಯೂ ಆಗುವದಿಲ್ಲ. [ಕರ್ತನು] ಆ ದಿನ
ಗಳನ್ನು ಕಡಿಮೆಮಾಡದಿದ್ದರೆ ಒಂದು ನರಪ್ರಾಣಿಯಾ
ದರೂ ಉಳಿಯದು; ಆದರೆ ತಾನು ಆದುಕೊಂಡವರ
ಗೋಸ್ಕರ ಆ ದಿನಗಳನ್ನು ಕಡಿಮೆಮಾಡುವನು. ಆಗ
ಯಾರಾದರೂ ನಿಮಗೆ—ಇಗೋ ಕ್ರಿಸ್ತನು ಇಲ್ಲಿದ್ದಾನೆ
ಅಗೋ ಅಲ್ಲಿದ್ದಾನೆ ಎಂದು ಹೇಳಿದರೆ ನಂಬಬೇಡಿರಿ
ಸುಳ್ಳುಕ್ರಿಸ್ತರೂ ಸುಳ್ಳುಪ್ರವಾದಿಗಳೂ ಎದ್ದು ಸಾಧ್ಯ
ವಾದರೆ ದೇವರಾದುಕೊಂಡವರನ್ನು ಸಹ ಮೋಸಗೊಳಿ
ಸುವದಕ್ಕೋಸ್ಕರ ದೊಡ್ಡ ದೊಡ್ಡ ಸೂಚಕಕಾರ್ಯ
ಗಳನ್ನೂ ಅದ್ಭುತಕಾರ್ಯಗಳನ್ನೂ ಮಾಡಿ ತೋರಿಸು
ವರು. ಇಗೋ ನಿಮಗೆ ಮುಂದಾಗಿ ಹೇಳಿದ್ದೇನೆ.
ಆದಕಾರಣ ಯಾರಾದರೂ ನಿಮಗೆ—ಅಗೋ ಕ್ರಿಸ್ತನು
ಅಡವಿಯಲ್ಲಿ ಇದ್ದಾನೆಂದು ಹೇಳಿದರೆ ಹೊರಟುಹೋಗ
ಬೇಡಿರಿ; ಇಗೋ ಕೋಣೆಗಳಲ್ಲಿದ್ದಾನೆಂದು ಹೇಳಿದರೆ
ನಂಬಬೇಡಿರಿ. ಹೇಗೆ ಮಿಂಚು ಮೂಡಣದಲ್ಲಿ ಹುಟ್ಟಿ
ಪಡುವಣದ ವರೆಗೂ ಕಾಣಿಸುತ್ತದೋ ಹಾಗೆಯೇ
ಮನುಷ್ಯಕುಮಾರನ ಪ್ರತ್ಯಕ್ಷತೆಯು ಇರುವದು.
ಹೆಣ ಬಿದ್ದಲ್ಲಿ ಹದ್ದುಗಳು ಕೂಡುವವು.
ಆ ದಿನಗಳ ಸಂಕಟವು ತೀರಿದಕೂಡಲೆ ಸೂರ್ಯನು
ಕತ್ತಲಾಗಿಹೋಗುವನು, ಚಂದ್ರನು ಬೆಳಕುಕೊಡದೆ
ಇರುವನು, ನಕ್ಷತ್ರಗಳು ಆಕಾಶದಿಂದ ಉದುರುವವು,
ಆಕಾಶದ ಶಕ್ತಿಗಳು ಕದಲುವವು. ಆಗ ಮನುಷ್ಯ
ಕುಮಾರನನ್ನು ಸೂಚಿಸುವ ಗುರುತು ಆಕಾಶದಲ್ಲಿ
ಕಾಣಬರುವದು. ಆಗ ಭೂಲೋಕದಲ್ಲಿರುವ ಎಲ್ಲಾ
ಕುಲದವರು ಎದೆಬಡಕೊಳ್ಳುವರು, ಮತ್ತು ಮನುಷ್ಯ
ಕುಮಾರನು ಬಲದಿಂದಲೂ ಬಹು ಮಹಿಮೆಯಿಂದಲೂ
ಆಕಾಶದ ಮೇಘಗಳ ಮೇಲೆ ಬರುವದನ್ನು ಕಾಣು
ವರು. ಮತ್ತು ಆತನು ತುತೂರಿಯ ಮಹಾ ಶಬ್ದದಿಂದ
ತನ್ನ ದೂತರನ್ನು ಕಳುಹಿಸುವನು. ಅವರು ಆತನು
ಆದುಕೊಂಡವರನ್ನು ಆಕಾಶದ ಒಂದು ಕಡೆಯಿಂದ

ಮತ್ತೊಂದು ಕಡೆಯ ವರೆಗೆ ನಾಲ್ಕೂ ದಿಕ್ಕುಗಳಿಂದ ಒಟ್ಟುಗೂಡಿಸುವರು.

ಅಂಜೂರದ ಮರದ ದೃಷ್ಟಾಂತದಿಂದ ಬುದ್ಧಿಕಲಿಯಿರಿ. ಅದರ ಕೊಂಬೆ ಇನ್ನೂ ಎಳೆಯದಾಗಿದ್ದು ಎಲೆ ಬಿಡುವಾಗ ಬೇಸಿಗೆಯು ಹತ್ತರವಾಯಿತೆಂದು ತಿಳುಕೊಳ್ಳುತ್ತೀರಲ್ಲಾ. ಹಾಗೆಯೇ ನೀವು ಸಹ ಇದನ್ನೆಲ್ಲಾ ನೋಡುವಾಗ 1)ಆ ದಿನವು ಹತ್ತರವದೆ, ಬಾಗಲಲ್ಲೇ ಅದೆ ಎಂದು ತಿಳುಕೊಳ್ಳಿರಿ. ಇದೆಲ್ಲಾ ಆಗುವ ತನಕ ಈ ಸಂತತಿಯು ಅಳಿದುಹೋಗುವದೇ ಇಲ್ಲವೆಂದು ನಿಮಗೆ ಸತ್ಯವಾಗಿ ಹೇಳುತ್ತೇನೆ. ಭೂಮ್ಯಾಕಾಶಗಳು ಅಳಿದುಹೋಗುವವು, ಆದರೆ ನನ್ನ ಮಾತುಗಳು ಅಳಿದುಹೋಗುವದೇ ಇಲ್ಲ.

### ಮನುಷ್ಯಕುಮಾರನು ಪ್ರತ್ಯಕ್ಷನಾಗುವ ಕಾಲ ತಿಳಿಯದ ಕಾರಣ ಎಚ್ಚರವಾಗಿರಬೇಕೆಂದು ಯೇಸು ಬೋಧಿಸಿದ್ದು.

(ಮಾರ್ಕ 13. 32—37; ಲೂಕ 21. 34—36; 19. 12—27.)

ಇದಲ್ಲದೆ ಆ ದಿನದ ವಿಷಯವೂ ಆ ಗಳಿಗೆಯ ವಿಷಯವೂ ನನ್ನ ತಂದೆಯೊಬ್ಬನಿಗೆ ತಿಳಿಯುವದೇ ಹೊರತು ಮತ್ತಾರಿಗೂ ತಿಳಿಯದು; ಪರಲೋಕದಲ್ಲಿರುವ ದೂತರಿಗೂ ತಿಳಿಯದು, ಮಗನಿಗೂ ತಿಳಿಯದು. ನೋಹನ ದಿವಸಗಳು ಹೇಗಿದ್ದವೋ ಹಾಗೆಯೇ ಮನುಷ್ಯಕುಮಾರನ ಪ್ರತ್ಯಕ್ಷತೆಯೂ ಇರುವದು. ಹೇಗಂದರೆ ಜಲಪ್ರಳಯಕ್ಕೆ ಮುಂಚಿನ ದಿನಗಳಲ್ಲಿ ನೋಹನು ನಾವೆಯಲ್ಲಿ ಸೇರಿದ ದಿನದ ತನಕ ಜನರು ಉಣ್ಣುತ್ತಾ ಕುಡಿಯುತ್ತಾ ಮದುವೆಮಾಡಿಕೊಳ್ಳುತ್ತಾ ಮಾಡಿಕೊಡುತ್ತಾ ಇದ್ದು ಪ್ರಳಯದ ನೀರು ಬಂದು ಎಲ್ಲರನ್ನು ಬಡುಕೊಂಡುಹೋಗುವ ತನಕ ಏನೂ ತಿಳಿಯದೆ ಇದ್ದರಲ್ಲಾ. ಅದರಂತೆ ಮನುಷ್ಯಕುಮಾರನು ಪ್ರತ್ಯಕ್ಷನಾಗುವ ಕಾಲದಲ್ಲಿಯೂ ಇರುವದು. ಆವಾಗ ಇಬ್ಬರು ಹೊಲದಲ್ಲಿರುವರು; ಒಬ್ಬನು ತೆಗೆದುಕೊಳ್ಳಲ್ಪಡುವನು, ಒಬ್ಬನು ಬಿಡಲ್ಪಡುವನು. ಇಬ್ಬರು ಹೆಂಗಸರು ಬೀಸುವ ಕಲ್ಲಿನ ಮುಂದೆ ಕೂತು ಬೀಸುತ್ತಿರುವರು; ಒಬ್ಬಳು ತೆಗೆದುಕೊಳ್ಳಲ್ಪಡುವಳು, ಒಬ್ಬಳು ಬಿಡಲ್ಪಡುವಳು.

ಹೀಗಿರಲಾಗಿ ನಿಮ್ಮ ಕರ್ತನು ಬರುವ ದಿನವು ನಿಮಗೆ ಗೊತ್ತಿಲ್ಲವಾದದರಿಂದ ಎಚ್ಚರವಾಗಿರ್ರಿ. ಕಳ್ಳನು ಬರುವ ಜಾವ ಮನೆಯ ಯಜಮಾನನಿಗೆ ತಿಳಿದಿದ್ದರೆ ಅವನು ಎಚ್ಚರವಾಗಿದ್ದು ತನ್ನ ಮನೆಗೆ ಕನ್ನಹಾಕಗೊಡಿಸುತ್ತಿರಲಿಲ್ಲವೆಂದು ತಿಳುಕೊಳ್ಳಿರಿ. ಆದಕಾರಣ ನೀವು ಸಹ ಸಿದ್ಧವಾಗಿರ್ರಿ; ನೀವು ನೆನಸದ ಗಳಿಗೆಯಲ್ಲಿ ಮನುಷ್ಯಕುಮಾರನು ಬರುತ್ತಾನೆ. ಹಾಗಾದರೆ ಯಜಮಾನನು ತನ್ನ ಮನೆಯವರಿಗೆ ಹೊತ್ತುಹೊತ್ತಿಗೆ ಆಹಾರ ಕೊಡಲಿಕ್ಕೆ ಅವರ ಮೇಲಿಟ್ಟ ನಂಬಿಗಸ್ತನೂ ವಿವೇಕಿಯೂ ಆದಂಥ ಆಳು ಯಾರು? ಯಜಮಾನನು ಬಂದು ಯಾವ ಆಳು ಹೀಗೆ ಮಾಡುವದನ್ನು ಕಾಣುವನೋ ಆ ಆಳು ಧನ್ಯನು. ಅಂಥವನನ್ನು ಅವನು
ತನ್ನ ಎಲ್ಲಾ ಆಸ್ತಿಯ ಮೇಲೆ ನೇಮಿಸುವನು ಎಂದು
ನಿಮಗೆ ನಿಜವಾಗಿ ಹೇಳುತ್ತೇನೆ. ಆದರೆ ಆ ಕೆಟ್ಟ 48
ಆಳು—ನನ್ನ ಯಜಮಾನನು ತಡಮಾಡುತ್ತಾನೆ ಅಂತ
ತನ್ನ ಮನಸ್ಸಿನಲ್ಲಿ ಅಂದುಕೊಂಡು ತನ್ನ ಜೊತೆ ಆಳು 49
ಗಳನ್ನು ಹೊಡೆಯುವದಕ್ಕೆ ತೊಡಗಿ ಕುಡಿಕರ ಸಂಗಡ
ತಿನ್ನುತ್ತಾ ಕುಡಿಯುತ್ತಾ ಇರುವದಾದರೆ, ಅವನು ನೆನ 50
ಸದ ದಿನದಲ್ಲಿಯೂ ತಿಳಿಯದ ಗಳಿಗೆಯಲ್ಲಿಯೂ ಆ
ಆಳಿನ ಯಜಮಾನನು ಬಂದು ಅವನನ್ನು ಕಠಿಣವಾಗಿ 51
ಹೊಡಿಸಿ ಕಪಟಿಗಳಿಗೆ ಆಗತಕ್ಕ ಗತಿಯನ್ನು ಅವನಿಗೆ
ನೇಮಿಸುವನು. ಅಲ್ಲಿ ಗೋಳಾಟವೂ ಕಟಕಟನೆ ಹಲ್ಲು
ಕಡಿಯೋಣವೂ ಇರುವವು.

25 ಆಗ ಪರಲೋಕರಾಜ್ಯವು 2)ಆರತಿಗಳನ್ನು ತೆಗೆದು
ಕೊಂಡು ಮದಲಿಂಗನನ್ನು ಎದುರುಗೊಳ್ಳುವದಕ್ಕೆ
ಹೊರಟಂಥ ಹತ್ತು ಮಂದಿ ಕನ್ಯೆಯರಿಗೆ ಹೋಲಿಕೆಯಾ
ಗಿರುವದು. ಅವರಲ್ಲಿ ಐದು ಮಂದಿ ಬುದ್ಧಿಯಿಲ್ಲ 2
ದವರು, ಐದು ಮಂದಿ ಬುದ್ಧಿವಂತೆಯರು. ಬುದ್ಧಿ 3
ಯಿಲ್ಲದವರು ತಮ್ಮ ಆರತಿಗಳನ್ನು ತಕ್ಕೊಂಡರು,
ಆದರೆ ಎಣ್ಣೆ ತಕ್ಕೊಳ್ಳಲಿಲ್ಲ. ಬುದ್ಧಿವಂತೆಯರು ತಮ್ಮ 4
ಆರತಿಗಳ ಕೂಡ ಪಾತ್ರೆಗಳಲ್ಲಿ ಎಣ್ಣೆ ತಕ್ಕೊಂಡರು.
ಮದಲಿಂಗನು ಬರುವದಕ್ಕೆ ತಡಮಾಡಲು ಅವರೆಲ್ಲರು 5
ತೂಕಡಿಸಿ ಮಲಗಿದರು. ಆದರೆ ಅರ್ಧರಾತ್ರಿಯಲ್ಲಿ— 6
ಇಗೋ, ಮದಲಿಂಗನು! ಅವನನ್ನು ಎದುರುಗೊಳ್ಳು
ವದಕ್ಕೆ ಹೊರಡಿರಿ ಎಂಬ ಕೂಗಾಯಿತು. ಆಗ ಆ 7
ಕನ್ಯೆಯರೆಲ್ಲರು ಎಚ್ಚತ್ತು ತಮ್ಮ ಆರತಿಗಳನ್ನು
ನೆಟ್ಟಗೆಮಾಡಿದರು. ಆಗ್ಗೆ ಬುದ್ಧಿಯಿಲ್ಲದವರು 8
ಬುದ್ಧಿವಂತೆಯರಿಗೆ—ನಿಮ್ಮ ಎಣ್ಣೆಯಲ್ಲಿ ನಮಗೆ
ಸ್ವಲ್ಪ ಕೊಡಿರಿ. ನಮ್ಮ ಆರತಿಗಳು ಆರಿಹೋಗುತ್ತವೆ
ಎಂದು ಹೇಳಿದರು. ಅದಕ್ಕೆ ಆ ಬುದ್ಧಿವಂತೆಯರು— 9
ನಿಮಗೆ ಕೊಟ್ಟರೆ ನಮಗೂ ನಿಮಗೂ ಕೂಡ ಸಾಲದೆ
ಹೋದೀತು; ನೀವು ಮಾರುವವರ ಬಳಿಗೆ ಹೋಗಿ
ಕೊಂಡುಕೊಂಡರೆ ಒಳ್ಳೇದು ಅಂದರು. ಅವರು 10
ಕೊಂಡುಕೊಳ್ಳಲಿಕ್ಕೆ ಹೋದಾಗ ಮದಲಿಂಗನು ಬಂದ
ನು. ಸಿದ್ಧವಾಗಿದ್ದವರು ಅವನ ಸಂಗಡ ಮದುವೆಯ
ಮನೆಯೊಳಕ್ಕೆ ಹೋದರು. ಬಾಗಲು ಮುಚ್ಚಲಾ
ಯಿತು. ತರುವಾಯ ಉಳಿದ ಕನ್ಯೆಯರು ಸಹ 11
ಬಂದು—ಸ್ವಾಮೀ, ಸ್ವಾಮೀ, ನಮಗೆ ತೆರೆಯಿರಿ
ಅಂದರು. ಆತನು—ನಿಮ್ಮನ್ನು ನಾನರಿಯೆನೆಂದು 12
ನಿಮಗೆ ಸತ್ಯವಾಗಿ ಹೇಳುತ್ತೇನೆ ಅಂದನು. ಆದ 13
ಕಾರಣ ಆ ದಿನವಾದರೂ ಗಳಿಗೆಯಾದರೂ ನಿಮಗೆ
ಗೊತ್ತಿಲ್ಲವಾದದರಿಂದ ಎಚ್ಚರವಾಗಿರ್ರಿ.
ದೇಶಾಂತರಕ್ಕೆ ಹೋಗುವ ಒಬ್ಬ ಮನುಷ್ಯನು 14
ತನ್ನ ಆಳುಗಳನ್ನು ಕರೆದು ಅವರಿಗೆ ತನ್ನ ಆಸ್ತಿಯನ್ನು
ಒಪ್ಪಿಸಿಕೊಟ್ಟಂತಿರುವದು. ಅವನು ಒಬ್ಬನಿಗೆ ಐದು 15
3)ತಲಾಂತು, ಒಬ್ಬನಿಗೆ ಎರಡು, ಒಬ್ಬನಿಗೆ ಒಂದು,

---

1) ಅಥವಾ: ಆತನು ಹತ್ತರದಲ್ಲಿದ್ದಾನೆ, ಬಾಗಲಲ್ಲೇ ಇದ್ದಾನೆ. 2) ಅಥವಾ: ದೀವಟಿಗೆಗಳನ್ನು. 3) ತಲಾಂತು ಅಂದರೆ ಸುಮಾರು 3,000 ರೂಪಾಯಿ.

ಹೀಗೆ ಅವನವನ ಸಾಮರ್ಥ್ಯದ ಪ್ರಕಾರ ಕೊಟ್ಟು
16 ಬೇರೊಂದು ದೇಶಕ್ಕೆ ಹೋದನು. ಐದು ತಲಾಂತು
ಹೊಂದಿದವನು ಹೋಗಿ ಅದನ್ನು ವ್ಯಾಪಾರಕ್ಕೆ ಹಾಕಿ
17 ಇನ್ನೂ ಐದು ತಲಾಂತು ಗಳಿಸಿಕೊಂಡನು. ಹಾಗೆಯೇ
ಎರಡು ತಲಾಂತು ಹೊಂದಿದವನು ಇನ್ನೂ ಎರಡು
18 ಸಂಪಾದಿಸಿಕೊಂಡನು. ಆದರೆ ಒಂದು ತಲಾಂತು
ಹೊಂದಿದವನು ಹೋಗಿ ಭೂಮಿಯನ್ನು ಅಗಿದು ತನ್ನ
19 ದಣಿಯ ಹಣವನ್ನು ಬಚ್ಚಿಟ್ಟನು. ಬಹುಕಾಲದ
ಮೇಲೆ ಆ ಆಳುಗಳ ದಣಿಯು ಬಂದು ಅವರಿಂದ
20 ಲೆಕ್ಕ ತೆಗೆದುಕೊಳ್ಳಲು ಐದು ತಲಾಂತು ಹೊಂದಿದ
ವನು ಮುಂದೆಬಂದು ಇನ್ನೂ ಐದು ತಲಾಂತು
ತಂದು—ಸ್ವಾಮಿ, ನೀನು ಐದು ತಲಾಂತನ್ನು ನನಗೆ
ಕೊಟ್ಟಿದ್ದಿಯಲ್ಲಾ, ಇಗೋ, ಇನ್ನು ಐದು ತಲಾಂತು
21 ಸಂಪಾದಿಸಿದ್ದೇನೆ ಅಂದನು. ಅವನ ದಣಿಯು—
ಭಲಾ, ನಂಬಿಗಸ್ತನಾದ ಒಳ್ಳೇ ಆಳು ನೀನು; ಸ್ವಲ್ಪ
ಕೆಲಸದಲ್ಲಿ ನಂಬಿಗಸ್ತನಾಗಿದ್ದಿ, ದೊಡ್ಡ ಕೆಲಸದಲ್ಲಿ
ನಿನ್ನನ್ನು ಇಡುತ್ತೇನೆ; ನಿನ್ನ ದಣಿಯ ಸೌಭಾಗ್ಯದಲ್ಲಿ
22 ಸೇರು ಅಂದನು. ಆಗ ಎರಡು ತಲಾಂತು ಹೊಂದಿದ
ವನು ಮುಂದೆಬಂದು—ಸ್ವಾಮಿ, ಎರಡು ತಲಾಂತು
ನನಗೆ ಒಪ್ಪಿಸಿದಿಯಲ್ಲಾ; ಇಗೋ, ಇನ್ನು ಎರಡು
23 ತಲಾಂತು ಸಂಪಾದಿಸಿದ್ದೇನೆ ಅಂದನು. ಅವನ ದಣಿಯು
ಅವನಿಗೆ—ಭಲಾ, ನಂಬಿಗಸ್ತನಾದ ಒಳ್ಳೇ ಆಳು ನೀನು;
ಸ್ವಲ್ಪ ಕೆಲಸದಲ್ಲಿ ನಂಬಿಗಸ್ತನಾಗಿದ್ದಿ, ದೊಡ್ಡ ಕೆಲಸ
ದಲ್ಲಿ ನಿನ್ನನ್ನು ಇಡುತ್ತೇನೆ; ನಿನ್ನ ದಣಿಯ ಸೌಭಾಗ್ಯ
24 ದಲ್ಲಿ ಸೇರು ಎಂದು ಹೇಳಿದನು. ತರುವಾಯ ಒಂದೇ
ತಲಾಂತು ಹೊಂದಿದವನು ಸಹ ಮುಂದೆಬಂದು—
ಸ್ವಾಮಿ, ನೀನು ಕಠಿಣ ಮನುಷ್ಯನು, ನೀನು ಬಿತ್ತ
ದಿರುವಲ್ಲಿ ಕೊಯ್ಯುವವನು, ನೀನು ತೂರದಿರುವಲ್ಲಿ
25 ರಾಶಿಮಾಡಿಕೊಳ್ಳುವವನು ಎಂದು ತಿಳಿದು ಹೆದರಿ
ಕೊಂಡು ಹೋಗಿ ನಿನ್ನ ತಲಾಂತನ್ನು ಭೂಮಿಯಲ್ಲಿ
ಬಚ್ಚಿಟ್ಟೆನು; ಇಗೋ, ನಿನ್ನದು ನಿನಗೆ ಸಂದಿದೆ
26 ಅಂದನು. ಆಗ ಅವನ ದಣಿಯು ಅವನಿಗೆ—ಮೈಗಳ್ಳ
ನಾದ ಕೆಟ್ಟ ಆಳು ನೀನು; ನಾನು ಬಿತ್ತದಿರುವಲ್ಲಿ
ಕೊಯ್ಯುವವನು ತೂರದಿರುವಲ್ಲಿ ರಾಶಿಮಾಡಿಕೊಳ್ಳು
27 ವವನು ಎಂದು ತಿಳಿದಿಯಾ? ಹಾಗಾದರೆ, ನೀನು
ನನ್ನ ಹಣವನ್ನು ಸಾಹುಕಾರರಲ್ಲಿ ಬಡ್ಡಿಗೆ ಹಾಕ
ಬೇಕಾಗಿತ್ತು; ನಾನು ಬಂದು ನನ್ನದನ್ನು ಬಡ್ಡಿಸಹಿತ
28 ಪಡಕೊಳ್ಳುತ್ತಿದ್ದೆನು ಎಂದು ಹೇಳಿ ತನ್ನ ಸೇವಕರಿಗೆ—
ಅವನಿಂದ ಆ ತಲಾಂತು ತೆಗೆದು ಹತ್ತು ತಲಾಂತು
29 ಇದ್ದವನಿಗೆ ಕೊಡಿರಿ. ಇದ್ದವರಿಗೆಲ್ಲಾ ಕೊಡಲ್ಪಡು
ವದು, ಅವರಿಗೆ ಮತ್ತೂ ಹೆಚ್ಚಾಗುವದು; ಇಲ್ಲದವನ
30 ಕಡೆಯಿಂದ ಇದ್ದದ್ದೂ ತೆಗೆಯಲ್ಪಡುವದು. ಮತ್ತು
ಕೆಲಸಕ್ಕೆ ಬಾರದ ಈ ಆಳನ್ನು ಹೊರಗೆ ಕತ್ತಲೆಗೆ
ಹಾಕಿಬಿಡಿರಿ ಎಂದು ಹೇಳಿದನು. ಅಲ್ಲಿ ಗೋಳಾಟವೂ
ಕಟಕಟನೆ ಹಲ್ಲು ಕಡಿಯೋಣವೂ ಇರುವವು.

31 ಇದಲ್ಲದೆ ಮನುಷ್ಯಕುಮಾರನು ತನ್ನ ಮಹಿಮೆ
ಯಿಂದ ಎಲ್ಲಾ ದೇವದೂತರೊಂದಿಗೆ ಕೂಡಿಬರುವಾಗ
ತನ್ನ ಮಹಿಮೆಯ ಸಿಂಹಾಸನದಲ್ಲಿ ಕೂತುಕೊಳ್ಳು
32 ವನು; ಮತ್ತು ಎಲ್ಲಾ ದೇಶಗಳ ಜನರು ಆತನ ಮುಂದೆ
ಕೂಡಿಸಲ್ಪಡುವರು. ಕುರುಬನು ಆಡುಗಳನ್ನೂ ಕು
ಗಳನ್ನೂ ಬೇರೆಬೇರೆಮಾಡುವ ಪ್ರಕಾರ ಆತನು ಅ
ರನ್ನು ಬೇರೆಬೇರೆಮಾಡಿ ಕುರಿಗಳನ್ನು ತನ್ನ ಬಲಗ
ಯಲ್ಲಿ ಆಡುಗಳನ್ನು ಎಡಗಡೆಯಲ್ಲಿ ನಿಲ್ಲಿಸುವನ
ಆಗ ಅರಸನು ತನ್ನ ಬಲಗಡೆಯಲ್ಲಿರುವವರಿಗೆ—ನ
ತಂದೆಯ ಆಶೀರ್ವಾದ ಹೊಂದಿದವರೇ ಬನ್ನಿ
ಲೋಕಾದಿಯಿಂದ ನಿಮಗೋಸ್ಕರ ಸಿದ್ಧಮಾಡಿ
ರಾಜ್ಯವನ್ನು ಸ್ವಾಸ್ತ್ಯವಾಗಿ ತೆಗೆದುಕೊಳ್ಳಿರಿ. ನಾನ
ಹಸಿದಿದ್ದೆನು, ನನಗೆ ಊಟಕ್ಕೆ ಕೊಟ್ಟಿರಿ; ನಾನ
ಬಾಯಾರಿದ್ದೆನು, ನನಗೆ ಕುಡಿಯುವದಕ್ಕೆ ಕೊಟ್ಟಿ
ಪರದೇಶಿಯಾಗಿದ್ದೆನು, ನನ್ನನ್ನು ಸೇರಿಸಿಕೊಂಡಿ
ಬಟ್ಟೆಯಿಲ್ಲದವನಾಗಿದ್ದೆನು, ನನಗೆ ಉಡುವದಕ
ಕೊಟ್ಟಿರಿ; ರೋಗದಲ್ಲಿ ಬಿದ್ದಿದ್ದೆನು, ನನ್ನನ್ನು ಆರೈ
ಮಾಡುವದಕ್ಕೆ ಬಂದಿರಿ; ಸೆರೆಮನೆಯಲ್ಲಿದ್ದೆನು, ನನ
ನ್ನು ನೋಡುವದಕ್ಕೆ ಬಂದಿರಿ ಎಂದು ಹೇಳುವನ
ಅದಕ್ಕೆ ನೀತಿವಂತರು—ಸ್ವಾಮಿ, ಯಾವಾಗ ನೀನ
ಹಸಿದದ್ದನ್ನು ಕಂಡು ನಿನಗೆ ಊಟಕ್ಕೆ ಕೊಟ್ಟೆವು
ಇಲ್ಲವೆ ನೀನು ಬಾಯಾರಿದ್ದನ್ನು ಕಂಡು ಕುಡಿಯ
ವದಕ್ಕೆ ಕೊಟ್ಟೆವು? ಯಾವಾಗ ನೀನು ಪರದೇಶಿಯಾ
ರುವದನ್ನು ಕಂಡು ಸೇರಿಸಿಕೊಂಡೆವು? ಇಲ್ಲವೆ ನಿನ
ಬಟ್ಟೆಯಿಲ್ಲದ್ದನ್ನು ಕಂಡು ಉಡುವದಕ್ಕೆ ಕೊಟ್ಟೆವು
ಯಾವಾಗ ನೀನು ರೋಗದಲ್ಲಿ ಬಿದ್ದದ್ದನ್ನು ಅಥವ
ಸೆರೆಮನೆಯಲ್ಲಿ ಇದ್ದದ್ದನ್ನು ಕಂಡು ನಿನ್ನನ್ನು ನೋಡ
ವದಕ್ಕೆ ಬಂದೆವು ಎಂದು ಉತ್ತರವಾಗಿ ಹೇಳುವರ
ಅದಕ್ಕೆ ಅರಸನು—ಈ ನನ್ನ ಸಹೋದರರಲ್ಲಿ ಕೇವ
ಅಲ್ಪನಾದವನೊಬ್ಬನಿಗೆ ಏನೇನು ಮಾಡಿದಿರೋ ಅದನ
ನನಗೂ ಮಾಡಿದ ಹಾಗಾಯಿತು ಎಂದು ನಿಮ
ಸತ್ಯವಾಗಿ ಹೇಳುತ್ತೇನೆ ಅನ್ನುವನು. ಆ ಮೇ
ಆತನು ಎಡಗಡೆಯಲ್ಲಿರುವವರಿಗೆ—ಶಾಪಗ್ರಸ್ತರೆ
ನನ್ನನ್ನು ಬಿಟ್ಟು ಪಿಶಾಚನಿಗೂ ಅವನ ದೂತರಿಗ
ಸಿದ್ಧಮಾಡಿರುವ ನಿತ್ಯ ಬೆಂಕಿಯೊಳಕ್ಕೆ ಹೋಗಿ
ನಾನು ಹಸಿದಿದ್ದೆನು, ನೀವು ನನಗೆ ಊಟಕ್ಕೆ ಕೊ
ಲಿಲ್ಲ; ನಾನು ಬಾಯಾರಿದ್ದೆನು, ನೀವು ನನಗೆ ಕು
ಯುವದಕ್ಕೆ ಕೊಡಲಿಲ್ಲ; ಪರದೇಶಿಯಾಗಿದ್ದೆನು, ನೀ
ನನ್ನನ್ನು ಸೇರಿಸಿಕೊಳ್ಳಲಿಲ್ಲ; ಬಟ್ಟೆಯಿಲ್ಲದವನಾ
ದ್ದೆನು, ನೀವು ನನಗೆ ಉಡುವದಕ್ಕೆ ಕೊಡಲಿಲ್ಲ; ರೋ
ದಲ್ಲಿ ಬಿದ್ದಿದ್ದೆನು, ಸೆರೆಮನೆಯಲ್ಲಿದ್ದೆನು, ನೀ
ನನ್ನನ್ನು ಆರೈಕೆಮಾಡುವದಕ್ಕೆ ಬರಲಿಲ್ಲವೆಂದು ಹೇಳ
ವನು. ಅದಕ್ಕೆ ಅವರು ಸಹ—ಸ್ವಾಮಿ, ಯಾವಾ
ನೀನು ಹಸಿದದ್ದನ್ನೂ ನೀನು ಬಾಯಾರಿದ್ದನ್ನೂ ನೀನ
ಪರದೇಶಿಯಾದದ್ದನ್ನೂ ಬಟ್ಟೆಯಿಲ್ಲದವನಾಗಿದ್ದ
ನ್ನೂ ರೋಗದಲ್ಲಿ ಬಿದ್ದದ್ದನ್ನೂ ಸೆರೆಮನೆಯಲ್ಲಿ
ದ್ದನ್ನೂ ಕಂಡು ನಿನಗೆ ಉಪಚಾರಮಾಡದೆ ಹೋದೆವು
ಅನ್ನುವರು. ಆಗ ಆತನು—ನೀವು ಈ ಕೇವ
ಅಲ್ಪನಾದವರಲ್ಲಿ ಒಬ್ಬನಿಗೆ ಏನೇನು ಮಾಡದೆ ಹೋ
ದಿರೋ ಅದನ್ನು ನನಗೂ ಮಾಡದೆ ಹೋದಹಾಗ
ಯಿತು ಎಂದು ನಿಮಗೆ ಸತ್ಯವಾಗಿ ಹೇಳುತ್ತೇನೆ ಅನ
ವನು. ಮತ್ತು ಇವರು ನಿತ್ಯಶಿಕ್ಷೆಗೂ ನೀತಿವಂತರ
ನಿತ್ಯಜೀವಕ್ಕೂ ಹೋಗುವರು.

ಅಧಿಕಾರಸ್ಥರು ಯೇಸುವನ್ನು ಕೊಲ್ಲಬೇಕೆಂದು ಆಲೋಚಿಸಿದ್ದು.
ಒಬ್ಬ ಸ್ತ್ರೀಯು ಬೆಲೆಯುಳ್ಳ ಪರಿಮಳ ತೈಲವನ್ನು
ಆತನ ಮೇಲೆ ಹೊಯಿದದ್ದು.

(ಮಾರ್ಕ 14. 1—11; ಲೂಕ 22. 1—6; ಯೋಹಾ. 12. 1—8.)

6 ಯೇಸು ಈ ಮಾತುಗಳನ್ನೆಲ್ಲಾ ಆಡಿ ಮುಗಿಸಿದ
2 ಮೇಲೆ ತನ್ನ ಶಿಷ್ಯರಿಗೆ—ಎರಡು ದಿವಸಗಳಾದ
ಮೇಲೆ ಪಸ್ಕಹಬ್ಬ ಬರುತ್ತದೆಂದು ಬಲ್ಲಿರಿ; ಆಗ ಮನು
ಷ್ಯಕುಮಾರನನ್ನು ಶಿಲುಬೆಗೆ ಹಾಕುವದಕ್ಕೆ ಒಪ್ಪಿಸಿ
ಕೊಡೋಣವಾಗುವದು ಎಂದು ಹೇಳಿದನು.
ಆ ಕಾಲದಲ್ಲಿ ಮಹಾಯಾಜಕರೂ ಪ್ರಜೆಯ
ಹಿರಿಯರೂ ಕಾಯಫನೆಂಬ ಮಹಾಯಾಜಕನ ಮಠಕ್ಕೆ
ಕೂಡಿಬಂದು ಯೇಸುವನ್ನು ಉಪಾಯದಿಂದ ಹಿಡಿದು
ಕೊಲ್ಲಬೇಕೆಂಬದಾಗಿ ಆಲೋಚನೆಮಾಡಿಕೊಂಡರು.
ಆದರೂ—ಹಬ್ಬದಲ್ಲಿ ಹಿಡಿಯಬಾರದು, ನಮ್ಮ ಜನ
ರಲ್ಲಿ ಗದ್ದಲವಾದೀತು ಎಂದು ಮಾತಾಡಿಕೊಂಡರು.
ಯೇಸು ಬೇಥಾನ್ಯದಲ್ಲಿ ಕುಷ್ಠರೋಗಿಯಾದ
ಸೀಮೋನನ ಮನೆಯಲ್ಲಿದ್ದಾಗ ಒಬ್ಬ ಸ್ತ್ರೀಯು
1)ಬಹು ಬೆಲೆಯುಳ್ಳ ಸುಗಂಧತೈಲದ ಭರಣಿಯನ್ನು
ತೆಗೆದುಕೊಂಡು ಆತನ ಬಳಿಗೆ ಬಂದು ಆತನು
ಊಟಕ್ಕೆ ಕೂತಿರುವಾಗ ಆ ತೈಲವನ್ನು ಆತನ ತಲೆಯ
ಮೇಲೆ ಹೊಯಿದಳು. ಶಿಷ್ಯರು ಇದನ್ನು ಕಂಡು
ಕೋಪಗೊಂಡು—ಈ ನಷ್ಟ ಯಾತಕ್ಕೆ? ಈ ತೈಲವನ್ನು
ಬಹಳ ಹಣಕ್ಕೆ ಮಾರಿ ಬಡವರಿಗೆ ಕೊಡಬಹುದಾಗಿ
ತ್ತಲ್ಲಾ ಅಂದರು. ಯೇಸು ಅದನ್ನು ತಿಳಿದು ಅವ
ರಿಗೆ—ಈ ಸ್ತ್ರೀಗೆ ಯಾಕೆ ತೊಂದರೆಕೊಡುತ್ತೀರಿ? ಈಕೆ
ನನಗೆ ಒಳ್ಳೇ ಕಾರ್ಯವನ್ನು ಮಾಡಿದ್ದಾಳೆ. ಬಡವರು
ಯಾವಾಗಲೂ ನಿಮ್ಮ ಬಳಿಯಲ್ಲಿ ಇರುತ್ತಾರೆ, ಆದರೆ
ನಾನು ನಿಮ್ಮಲ್ಲಿ ಯಾವಾಗಲೂ ಇರುವದಿಲ್ಲ.
ಈಕೆಯು ಈ ತೈಲವನ್ನು ನನ್ನ ದೇಹದ ಮೇಲೆ
ಹೊಯಿದದ್ದು ನನ್ನ ಉತ್ತರಕ್ರಿಯೆಗಾಗಿಯೇ. ಈ
ಸುವಾರ್ತೆಯು ಸರ್ವಲೋಕದಲ್ಲಿ ಎಲ್ಲೆಲ್ಲಿ ಸಾರ
ಲಾಗುವದೋ ಅಲ್ಲಲ್ಲಿ ಈಕೆ ಮಾಡಿದ್ದನ್ನು ಸಹ
ಈಕೆಯ ನೆನಪಿಗಾಗಿ ಹೇಳುವರೆಂದು ನಿಮಗೆ ಸತ್ಯವಾಗಿ
ಹೇಳುತ್ತೇನೆ ಎಂದು ಹೇಳಿದನು.
ಆ ಮೇಲೆ ಹನ್ನೆರಡು ಮಂದಿ ಶಿಷ್ಯರಲ್ಲಿ ಒಬ್ಬನಾದ
ಇಸ್ಕರಿಯೋತ ಯೂದನೆಂಬವನು ಮಹಾಯಾಜಕರ
ಬಳಿಗೆ ಹೋಗಿ—ನಾನು ಅವನನ್ನು ನಿಮಗೆ ಹಿಡು
ಕೊಟ್ಟರೆ ನನಗೆ ಏನು ಕೊಡುತ್ತೀರಿ? ಅಂದನು. ಅವರು
ಅವನಿಗೆ ಮೂವತ್ತು ರೂಪಾಯಿ ತೂಗಿ ಕೊಟ್ಟರು.
ಅಂದಿನಿಂದ ಅವನು ಆತನನ್ನು ಹಿಡುಕೊಡುವದಕ್ಕೆ
ಅನುಕೂಲವಾದ ಸಮಯವನ್ನು ನೋಡುತ್ತಿದ್ದನು.

ಯೇಸು ತನ್ನ ಶಿಷ್ಯರ ಸಂಗಡ ಕಡೇ ಭೋಜನವನ್ನು ಮಾಡಿದ್ದು.
(ಮಾರ್ಕ 14. 12—31; ಲೂಕ 22. 7—34;
ಯೋಹಾ. 13. 21—26.)

ಹುಳಿಯಿಲ್ಲದ ರೊಟ್ಟಿಯ ಹಬ್ಬದ ಮೊದಲನೆಯ
ದಿವಸದಲ್ಲಿ ಶಿಷ್ಯರು ಯೇಸುವಿನ ಬಳಿಗೆ ಬಂದು—
ಪಸ್ಕದ ಊಟಮಾಡುವದಕ್ಕೆ ನಾವು ನಿನಗೆ ಎಲ್ಲಿ
ಸಿದ್ಧಮಾಡಬೇಕನ್ನುತ್ತೀ ಎಂದು ಕೇಳಲು ಆತನು— 18
ನೀವು ಪಟ್ಟಣದೊಳಕ್ಕೆ ಇಂಥವನ ಬಳಿಗೆ ಹೋಗಿ
ಅವನಿಗೆ—ನನ್ನ ಕಾಲ ಸಮೀಪವಾಯಿತು, ನಿನ್ನ ಮನೆ
ಯಲ್ಲಿ ನನ್ನ ಶಿಷ್ಯರ ಸಂಗಡ ಪಸ್ಕಹಬ್ಬಮಾಡುತ್ತೇ
ನೆಂದು ಬೋಧಕನು ಹೇಳುತ್ತಾನೆ ಎಂಬದಾಗಿ ಹೇಳಿರಿ
ಅಂದನು. ಶಿಷ್ಯರು ಯೇಸು ತಮಗೆ ಅಪ್ಪಣೆಕೊಟ್ಟಂತೆ 19
ಮಾಡಿ ಪಸ್ಕಕ್ಕೆ ಸೌರಿಸಿದರು.
ಸಂಜೆಯಾದಾಗ ಆತನು ಹನ್ನೆರಡು ಮಂದಿ ಶಿಷ್ಯರ 20
ಸಂಗಡ ಊಟಕ್ಕೆ ಕೂತುಕೊಂಡನು. ಅವರು ಊಟ 21
ಮಾಡುತ್ತಿರುವಾಗ ಆತನು—ನಿಮ್ಮಲ್ಲಿ ಒಬ್ಬನು
ನನ್ನನ್ನು ಹಿಡುಕೊಡುವನೆಂದು ನಿಮಗೆ ಸತ್ಯವಾಗಿ
ಹೇಳುತ್ತೇನೆ ಅಂದನು. ಆಗ ಅವರು ಬಹಳ ದುಃಖ 22
ಪಟ್ಟು—ಸ್ವಾಮೀ, ನಾನಲ್ಲವಲ್ಲ ಎಂದು ಪ್ರತಿಯೊ
ಬ್ಬರು ಕೇಳತೊಡಗಿದರು. ಅದಕ್ಕಾತನು—ಬಟ್ಟಲಲ್ಲಿ 23
ನನ್ನ ಸಂಗಡ ಕೈ ಅದ್ದಿದವನೇ ನನ್ನನ್ನು ಹಿಡು
ಕೊಡುವನು. ಮನುಷ್ಯಕುಮಾರನು ಹೊರಟುಹೋ 24
ಗುತ್ತಾನೆ ಸರಿ; ಹಾಗೆ ಆತನ ವಿಷಯವಾಗಿ ಬರೆದದೆ
ಯಲ್ಲಾ. ಆದರೆ ಯಾವನು ಮನುಷ್ಯಕುಮಾರನನ್ನು
ಹಿಡುಕೊಡುವನೋ ಅವನ ಗತಿಯನ್ನು ಏನು ಹೇಳಲಿ.
ಆ ಮನುಷ್ಯನು ಹುಟ್ಟದಿದ್ದರೆ ಅವನಿಗೆ ಒಳ್ಳೇದಾಗಿತ್ತು
ಅಂದನು. ಆಗ ಆತನನ್ನು ಹಿಡುಕೊಡಬೇಕೆಂದಿದ್ದ 25
ಯೂದನು—ಗುರುವೇ, ನಾನಲ್ಲವಲ್ಲ? ಅನ್ನಲಾಗಿ
ಯೇಸು ಅವನಿಗೆ—ನೀನೇ ಹೇಳಿದ್ದೀ ಎಂದು ಹೇಳಿ
ದನು. ಅವರು ಊಟಮಾಡುತ್ತಿರುವಾಗ ಯೇಸು 26
ರೊಟ್ಟಿಯನ್ನು ತೆಗೆದುಕೊಂಡು ದೇವರ ಸ್ತೋತ್ರ
ಮಾಡಿ ಮುರಿದು ಶಿಷ್ಯರಿಗೆ ಕೊಟ್ಟು—ತಕ್ಕೊಳ್ಳಿರಿ,
ತಿನ್ನಿರಿ, ಇದು ನನ್ನ ದೇಹ ಅಂದನು. ಆ ಮೇಲೆ 27
ಪಾತ್ರೆಯನ್ನು ತೆಗೆದುಕೊಂಡು ಸ್ತೋತ್ರಮಾಡಿ ಅವ
ರಿಗೆ ಕೊಟ್ಟು—ಇದರಲ್ಲಿರುವದನ್ನು ಎಲ್ಲರೂ ಕುಡಿ
ಯಿರಿ; ಇದು ನನ್ನ ರಕ್ತ, ಇದು 2)ಒಡಂಬಡಿಕೆಯ 28
ರಕ್ತ, ಇದು ಪಾಪಗಳ ಕ್ಷಮೆಗಾಗಿ ಬಹು ಜನರಿ
ಗೋಸ್ಕರ ಸುರಿಸಲ್ಪಡುವ ರಕ್ತ. ನಾನು ನನ್ನ ತಂದೆಯ 29
ರಾಜ್ಯದಲ್ಲಿ ದ್ರಾಕ್ಷಾರಸವನ್ನು ನಿಮ್ಮ ಸಂಗಡ ಹೊಸ
ದಾಗಿ ಕುಡಿಯುವ ದಿನದ ವರೆಗೂ ಇನ್ನು ಕುಡಿಯು
ವದೇ ಇಲ್ಲ ಎಂದು ನಿಮಗೆ ಹೇಳುತ್ತೇನೆ ಅಂದನು.
ಬಳಿಕ ಅವರು ಕೀರ್ತನೆಯನ್ನು ಹಾಡಿ ಎಣ್ಣೆಯ ಮರ 30
ಗಳ ಗುಡ್ಡಕ್ಕೆ ಹೊರಟುಹೋದರು.
ಆಗ ಯೇಸು ಅವರಿಗೆ—ನೀವೆಲ್ಲರೂ ಈ ರಾತ್ರಿ 31
ನನ್ನ ವಿಷಯದಲ್ಲಿ ದಿಗಿಲುಪಟ್ಟು ಹಿಂಜರಿಯುವಿರಿ.
ಕುರುಬನನ್ನು ಹೊಡೆಯುವೆನು; ಹಿಂಡಿನ ಕುರಿಗಳು
ಚದರಿಹೋಗುವವು ಎಂದು ಬರೆದದೆಯಲ್ಲಾ. ಆದರೆ 32
ನಾನು ಜೀವಿತನಾಗಿ ಎದ್ದ ಮೇಲೆ ನಿಮ್ಮ ಮುಂದೆ
ಗಲಿಲಾಯಕ್ಕೆ ಹೋಗುವೆನು ಎಂದು ಹೇಳಿದನು.
ಪೇತ್ರನು ಆತನಿಗೆ—ಎಲ್ಲರೂ ನಿನ್ನ ವಿಷಯದಲ್ಲಿ 33
ದಿಗಿಲುಪಟ್ಟು ಹಿಂಜರಿದರೂ ನಾನು ಎಂದಿಗೂ ಹಿಂಜರಿ
ಯುವದಿಲ್ಲ ಎಂದು ಉತ್ತರಕೊಡಲು ಯೇಸು— 34
ನಿನಗೆ ಸತ್ಯವಾಗಿ ಹೇಳುತ್ತೇನೆ. ಇದೇ ರಾತ್ರಿಯಲ್ಲಿ

1) ಮೂಲ: ಚಂದ್ರಕಾಂತಶಿಲೆಯ ಭರಣಿಯನ್ನು. 2) ಕೆಲವು ಪ್ರತಿಗಳಲ್ಲಿ—ಹೊಸ ಒಡಂಬಡಿಕೆಯ ಎಂದು ಬರೆದಿದೆ.

ಕೋಳಿಕೂಗುವದಕ್ಕಿಂತ ಮುಂಚೆ ನೀನು ನನ್ನ ವಿಷಯ
ದಲ್ಲಿ—ಅವನನ್ನು ಅರಿಯೆನೆಂಬದಾಗಿ ಮೂರು ಸಾರಿ
35 ಹೇಳುವಿ ಅಂದನು. ಪೇತ್ರನು ಆತನಿಗೆ—ನಾನು ನಿನ್ನ
ಸಂಗಡ ಸಾಯಬೇಕಾದರೂ ನಿನ್ನನ್ನು ಅರಿಯೆನೆಂಬ
ದಾಗಿ ಹೇಳುವದೇ ಇಲ್ಲ ಎಂದು ಹೇಳಿದನು. ಅದ
ರಂತೆ ಶಿಷ್ಯರೆಲ್ಲರೂ ಹೇಳಿದರು.

ಯೇಸು ಗೆತ್ಸೇಮನೆ ತೋಟದಲ್ಲಿ ಪ್ರಾರ್ಥಿಸುವಾಗ ಯೂದನು
ಆತನನ್ನು ಶತ್ರುಗಳಿಗೆ ಹಿಡುಕೊಟ್ಟದ್ದು.
(ಮಾರ್ಕ 14. 32—50; ಲೂಕ 22. 40—53;
ಯೋಹಾ. 18. 1—12.)

36 ಅನಂತರ ಯೇಸು ತನ್ನ ಶಿಷ್ಯರ ಸಂಗಡ ಗೆತ್ಸೇಮನೆ
ಎಂಬ ತೋಟಕ್ಕೆ ಬಂದು ಅವರಿಗೆ—ಇಲ್ಲೇ ಕೂತುಕೊ
ಳ್ಳಿರಿ, ನಾನು ಅತ್ತಲಾಗಿ ಹೋಗಿ ಪ್ರಾರ್ಥನೆ ಮಾಡಿ
37 ಬರುತ್ತೇನೆ ಎಂದು ಹೇಳಿ ಪೇತ್ರನನ್ನೂ ಜೆಬೆದಾಯನ
ಇಬ್ಬರು ಮಕ್ಕಳನ್ನೂ ಕರಕೊಂಡು ಹೋಗಿ ದುಃಖ
38 ಪಟ್ಟು ಮನಗುಂದಿದವನಾದನು. ಮತ್ತು ಅವರಿಗೆ—
ನನ್ನ ಪ್ರಾಣವು ಸಾಯುವಷ್ಟು ದುಃಖಕ್ಕೆ ಒಳಗಾಗಿದೆ;
ನೀವು ಇಲ್ಲೇ ಇದ್ದು ನನ್ನ ಸಂಗಡ ಎಚ್ಚರವಾಗಿರ್ರಿ
39 ಎಂದು ಹೇಳಿ ಸ್ವಲ್ಪ ಮುಂದೆ ಹೋಗಿ ಬೋರಲ
ಬಿದ್ದು—ನನ್ನ ತಂದೆಯೇ, ಸಾಧ್ಯವಾಗಿದ್ದರೆ ಈ
1)ಪಾತ್ರೆಯು ನನ್ನನ್ನು ಬಿಟ್ಟುಹೋಗಲಿ; ಹೇಗೂ ನನ್ನ
ಚಿತ್ತದಂತಾಗದೆ ನಿನ್ನ ಚಿತ್ತದಂತೆಯೇ ಆಗಲಿ ಎಂದು
40 ದೇವರನ್ನು ಪ್ರಾರ್ಥಿಸಿದನು. ಆ ಮೇಲೆ ಆ ಶಿಷ್ಯರ
ಬಳಿಗೆ ಬಂದು ಅವರು ನಿದ್ದೆಮಾಡುವದನ್ನು ಕಂಡು
ಪೇತ್ರನಿಗೆ—ಹೀಗೋ? ಒಂದು ಗಳಿಗೆಯಾದರೂ ನನ್ನ
41 ಸಂಗಡ ಎಚ್ಚರವಾಗಿರಲಾರಿರಾ? ಶೋಧನೆಗೆ ಒಳ
ಗಾಗದಂತೆ ಎಚ್ಚರವಾಗಿದ್ದು ಪ್ರಾರ್ಥಿಸಿರಿ; 2)ಮನಸ್ಸು
ಸಿದ್ಧವಾಗಿದೆ ಸರಿ, ಆದರೆ 3)ದೇಹಕ್ಕೆ ಬಲ ಸಾಲದು
42 ಎಂದು ಹೇಳಿದನು. ತಿರಿಗಿ ಎರಡನೆಯ ಸಾರಿ
ಹೋಗಿ—ನನ್ನ ತಂದೆಯೇ, ನಾನು ಕುಡಿದ ಹೊರತು
ಈ ಪಾತ್ರೆ ಬಿಟ್ಟುಹೋಗಕೂಡದಾಗಿದ್ದರೆ ನಿನ್ನ ಚಿತ್ತವೇ
43 ಆಗಲಿ ಎಂದು ಪ್ರಾರ್ಥನೆಮಾಡಿದನು. ಆತನು ತಿರಿಗಿ
ಬಂದಾಗ ಅವರು ನಿದ್ದೆಮಾಡುವದನ್ನು ಕಂಡನು;
44 ಅವರ ಕಣ್ಣುಗಳು ಭಾರವಾಗಿದ್ದವು. ಆ ಮೇಲೆ ತಿರಿಗಿ
ಅವರನ್ನು ಬಿಟ್ಟುಹೋಗಿ ತಿರಿಗಿ ಅದೇ ಮಾತನ್ನು
45 ಹೇಳುತ್ತಾ ಮೂರನೆಯ ಸಾರಿ ಪ್ರಾರ್ಥಿಸಿದನು. ತರು
ವಾಯ ಶಿಷ್ಯರ ಬಳಿಗೆ ಬಂದು ಅವರಿಗೆ—ನೀವು ಇನ್ನೂ
ನಿದ್ದೆಮಾಡಿ ದಣುವಾರಿಸಿಕೊಳ್ಳಿರಿ; ಇಗೋ, ಗಳಿಗೆ
ಸಮೀಪಿಸಿತು, ಈಗ ಮನುಷ್ಯಕುಮಾರನು ದುರ್ಜನರ
46 ಕೈಗೆ ಒಪ್ಪಿಸಲ್ಪಡುತ್ತಾನೆ. ಏಳಿರಿ, ಹೋಗೋಣ;
ನನ್ನನ್ನು ಹಿಡುಕೊಡುವವನು ಹತ್ತರಕ್ಕೆ ಬಂದಿದ್ದಾನೆ
ನೋಡಿರಿ ಎಂದು ಹೇಳಿದನು.
47 ಆತನು ಇನ್ನೂ ಮಾತಾಡುತ್ತಿರಲು ಇಗೋ ಹನ್ನೆರಡು
ಮಂದಿ ಶಿಷ್ಯರಲ್ಲಿ ಒಬ್ಬನಾದ ಯೂದನು ಬಂದನು;
ಮಹಾಯಾಜಕರು ಜನರ ಹಿರಿಯರು ಇವರ ಕಡೆ
ಯಿಂದ ಬಹು ಜನರ ಗುಂಪು ಕತ್ತಿ ದೊಣ್ಣೆಗಳನ್ನು

ಹಿಡುಕೊಂಡು ಅವನ ಸಂಗಡ ಬಂತು. ಇದಲ್ಲ
ಆತನನ್ನು ಹಿಡುಕೊಡುವವನು ಅವರಿಗೆ—ನಾನ
ಯಾರಿಗೆ ಮುದ್ದಿಡುತ್ತೇನೋ ಅವನೇ ಆತನು; ಅ
ನನ್ನು ಹಿಡಿಯಿರಿ ಎಂದು ಗುರುತು ಹೇಳಿಕೊಟ್ಟನು
ಕೂಡಲೆ ಅವನು ಯೇಸುವಿನ ಬಳಿಗೆ ಹೋಗಿ—ಗುರ
ವೇ, ನಮಸ್ಕಾರ ಎಂದು ಹೇಳಿ ಆತನಿಗೆ ಮುದ್ದಿಟ್ಟನು
ಯೇಸು ಅವನಿಗೆ—ಗೆಳೆಯನೇ, ನೀನು ಬಂದ ಕೆಲ
ಇದೇಯೋ? ಎಂದು ಹೇಳಲು ಅವರು ಹತ್ತರಕ್ಕೆ ಬಂದ
ಯೇಸುವಿನ ಮೇಲೆ ಕೈ ಹಾಕಿ ಆತನನ್ನು ಹಿಡಿದರು
ಹಿಡಿಯುತ್ತಲೆ ಯೇಸುವಿನ ಸಂಗಡ ಇದ್ದವರಲ್ಲಿ
ಒಬ್ಬನು ಕೈಚಾಚಿ ತನ್ನ ಕತ್ತಿಯನ್ನು ಹಿರಿದು ಮಹ
ಯಾಜಕನ ಆಳನ್ನು ಹೊಡೆದು ಅವನ ಕಿವಿಯನ್ನು
ಕಡಿದುಹಾಕಿದನು. ಆಗ ಯೇಸು ಅವನಿಗೆ—ನಿನ್ನ
ಕತ್ತಿಯನ್ನು ತಿರಿಗಿ ಒರೆಯಲ್ಲಿ ಸೇರಿಸು; ಕತ್ತಿಯನ್ನು
ಹಿಡಿದವರೆಲ್ಲರು ಕತ್ತಿಯಿಂದ ಸಾಯುವರು. ನಾನ
ನನ್ನ ತಂದೆಯನ್ನು ಬೇಡಿಕೊಳ್ಳಲಾರೆನೆಂದೂ ಬೇ
ಕೊಂಡರೆ ಆತನು ನನಗೆ ಈಗಲೇ ಹನ್ನೆರಡು ಗಣಗ
ಗಿಂತ ಹೆಚ್ಚು ಮಂದಿ ದೇವದೂತರನ್ನು ಕಳುಹಿ
ಕೊಡುವದಿಲ್ಲವೆಂದೂ ನೆನಸುತ್ತೀಯಾ? ಕಳುಹಿ
ಕೊಟ್ಟರೆ ನನಗೆ ಇಂಥಿಂಥದು ಆಗಬೇಕೆಂಬುವ ಶಾಸ್ತ್ರ
ಮಾತುಗಳು ನೆರವೇರುವದು ಹೇಗೆ ಎಂದು ಹೇ
ದನು. ಅದೇ ಗಳಿಗೆಯಲ್ಲಿ ಯೇಸು ಗುಂಪುಗು
ಪಾಗಿ ಕೂಡಿದ್ದ ಜನರಿಗೆ—ಕಳ್ಳನನ್ನು ಹಿಡಿಯುವದಕ್ಕೆ
ಬಂದಂತೆ ಕತ್ತಿಗಳನ್ನೂ ದೊಣ್ಣೆಗಳನ್ನೂ ತೆಗೆದು
ಕೊಂಡು ನನ್ನನ್ನು ಹಿಡಿಯುವದಕ್ಕೆ ಬಂದಿರಾ? ನಾನು
ದಿನಾಲು ದೇವಾಲಯದಲ್ಲಿ ಕೂತುಕೊಂಡು ಬೋ
ಸುತ್ತಿದ್ದಾಗ ನೀವು ನನ್ನನ್ನು ಹಿಡಿಯಲಿಲ್ಲ; ಆದರ
ಪ್ರವಾದಿಗಳು ಬರೆದ ವಚನಗಳು ನೆರವೇರುವಂತೆ ಇದ
ಲ್ಲಾ ಆಯಿತು ಎಂದು ಹೇಳಿದನು. ಆಗ ಶಿಷ್ಯರೆಲ್ಲರೂ
ಆತನನ್ನು ಬಿಟ್ಟು ಓಡಿಹೋದರು.

ಹಿರಿಸಭೆಯವರು ಯೇಸುವನ್ನು ಮರಣದಂಡನೆಗೆ ತಕ್ಕವನೆಂದು
ಪಿಲಾತನ ಬಳಿಗೆ ತೆಗೆದುಕೊಂಡುಹೋದದ್ದು. ಅಷ್ಟರಲ್ಲಿ
ಪೇತ್ರನು ಅವನನ್ನು ಅರಿಯೆನೆಂದು ಹೇಳಿದ್ದು.
(ಮಾರ್ಕ 14. 53—72; ಲೂಕ 22. 54—71;
ಯೋಹಾ. 18. 12—27.)

ಯೇಸುವನ್ನು ಹಿಡಿದವರು ಆತನನ್ನು ಮಹಾ
ಯಾಜಕನಾದ ಕಾಯಫನ ಬಳಿಗೆ ತೆಗೆದುಕೊಂಡು
ಹೋದರು. ಅಲ್ಲಿ ಶಾಸ್ತ್ರಿಗಳೂ ಹಿರಿಯರೂ ಕೂಡಿ
ಬಂದಿದ್ದರು. ಪೇತ್ರನಾದರೋ ದೂರದಿಂದ ಆತನ
ಹಿಂದೆ ಹೋಗುತ್ತಾ ಮಹಾಯಾಜಕನ ಮಠದ ಅಂಗ
ಳದ ತನಕ ಬಂದು ಒಳಗೆ ಹೊಕ್ಕು ಆತನ ಗತಿ ಏನಾ
ಗುವದೋ ನೋಡಬೇಕೆಂದು ಓಲೇಕಾರರ ಸಂಗಡ
ಕೂತುಕೊಂಡನು. ಆಗ ಮಹಾಯಾಜಕರೂ ಹಿರಿಯ
ಸಭೆಯವರೆಲ್ಲರೂ ಯೇಸುವನ್ನು ಕೊಲ್ಲಿಸಬೇಕೆಂದು
ಆತನ ಮೇಲೆ ಸುಳ್ಳುಸಾಕ್ಷಿಯನ್ನು ಹುಡುಕಿದರು;
ಆದರೆ ಬಹುಮಂದಿ ಸುಳ್ಳುಸಾಕ್ಷಿಗಳು ಬಂದು ನಿಂತರೂ

1) ಅಂದರೆ, ಕಷ್ಟಾನುಭವ. 2) ಮೂಲ: ಆತ್ಮ. 3) ಅಥವಾ: ಶರೀರಭಾವವಾದರೆ.

ಏನೂ ಸಿಕ್ಕಲಿಲ್ಲ. ಕಡೆಗೆ ಇಬ್ಬರು ಮುಂದೆ ಬಂದು—
ನಾನು ದೇವರ ಆಲಯವನ್ನು ಕೆಡವಿಬಿಟ್ಟು ಮೂರು
ದಿನಗಳಲ್ಲಿ ಕಟ್ಟಬಲ್ಲೆನೆಂದು ಇವನು ಹೇಳಿದನು
ಅಂದರು; ಆಗ ಮಹಾಯಾಜಕನು ಎದ್ದುನಿಂತು—
ನೀನೇನೂ ಉತ್ತರ ಹೇಳುವದಿಲ್ಲವೋ? ಇವರು ನಿನ್ನ
ಮೇಲೆ ಹೇಳುವ ಈ ಸಾಕ್ಷಿ ಏನು ಎಂದು ಆತನನ್ನು
ಕೇಳಿದನು. ಆದರೆ ಯೇಸು ಸುಮ್ಮನಿದ್ದನು. ಆಗ
ಮಹಾಯಾಜಕನು—ನಿನಗೆ ಜೀವಸ್ವರೂಪನಾದ ದೇವರ
ಆಣೆಯನ್ನು ಇಡುತ್ತೇನೆ; ನೀನು ದೇವಕುಮಾರನಾದ
ಕ್ರಿಸ್ತನು ಹೌದೋ ಅಲ್ಲವೋ ಎಂಬದನ್ನು ನಮಗೆ ಹೇಳ
ಬೇಕು ಎಂದು ಅನ್ನಲಾಗಿ ಯೇಸು—ನೀನೇ ಹೇಳಿದ್ದೀ;
ಇದಲ್ಲದೆ ಇನ್ನು ಮೇಲೆ ಮನುಷ್ಯಕುಮಾರನು ಸರ್ವ
ಶಕ್ತನ ಬಲಗಡೆಯಲ್ಲಿ ಆಸೀನನಾಗಿರುವದನ್ನೂ ಆಕಾ
ಶದ ಮೇಘಗಳ ಮೇಲೆ ಕುಳಿತು ಬರುವದನ್ನೂ ಕಾಣು
ವಿರಿ ಎಂದು ನಿಮಗೆ ಹೇಳುತ್ತೇನೆ ಅಂದನು. ಆಗ ಮಹಾ
ಯಾಜಕನು ತನ್ನ ಬಟ್ಟೆಗಳನ್ನು ಹರಕೊಂಡು—ಇದು
ದೇವದೂಷಣೆಯ ಮಾತು; ನಮಗೆ ಸಾಕ್ಷಿಗಳು ಇನ್ನು
ಯಾತಕ್ಕೆ ಬೇಕು? ಇವನು ಈಗಲೇ ಆಡಿದ ದೂಷ
ಣೆಯ ಮಾತನ್ನು ಕೇಳಿದಿರಲ್ಲಾ; ನಿಮಗೆ ಹೇಗೆ ತೋರು
ತ್ತದೆ? ಅನ್ನಲು ಇವನು ಮರಣದಂಡನೆ ಹೊಂದತಕ್ಕ
ವನು ಎಂದು ಉತ್ತರಕೊಟ್ಟರು. ಆಗ ಆತನ ಮುಖದ
ಮೇಲೆ ಉಗುಳಿ ಆತನನ್ನು ಗುದ್ದಿದರು; ಕೆಲವರು
ಆತನ ಕೆನ್ನೆಗೆ ಏಟುಹಾಕಿ—ಕ್ರಿಸ್ತನೇ, ನಿನ್ನನ್ನು ಹೊಡೆ
ದವರಾರು? ನಮಗೆ ಪ್ರವಾದನೆ ಹೇಳು ಅಂದರು.

ಇತ್ತಲಾಗಿ ಪೇತ್ರನು ಹೊರಗೆ ಅಂಗಳದಲ್ಲಿ ಕೂತಿ
ದ್ದನು. ಅಲ್ಲಿ ಒಬ್ಬ ದಾಸಿಯು ಅವನ ಬಳಿಗೆ
ಬಂದು—ನೀನು ಸಹ ಗಲಿಲಾಯದ ಯೇಸುವಿನ ಕೂಡ
ಇದ್ದವನು ಅನ್ನಲು ಅವನು—ಅಲ್ಲ, ನೀನು ಏನನ್ನು
ತ್ತೀಯೋ ನನಗೆ ಗೊತ್ತಿಲ್ಲ ಎಂದು ಎಲ್ಲರ ಮುಂದೆ
ಹೇಳಿದನು. ಅವನು ಅಲ್ಲಿಂದ ಬಾಗಲಿನ ಕಡೆಗೆ
ಹೊರಟುಹೋದಾಗ ಮತ್ತೊಬ್ಬಳು ಅವನನ್ನು ಕಂಡು
ಅಲ್ಲಿರುವವರಿಗೆ—ಇವನೂ ನಜರೇತಿನ ಯೇಸುವಿನ
ಕೂಡ ಇದ್ದವನು ಎಂದು ಹೇಳಿದಳು. ಅವನು ತಿರಿಗಿ—
ಅಲ್ಲ, ಆ ಮನುಷ್ಯನನ್ನು ನಾನರಿಯೆನು ಎಂದು ಆಣೆ
ಯಿಟ್ಟುಕೊಂಡು ಹೇಳಿದನು. ಸ್ವಲ್ಪ ಹೊತ್ತಿನ ಮೇಲೆ
ಅಲ್ಲಿ ನಿಂತವರು ಮುಂದೆ ಬಂದು ಪೇತ್ರನಿಗೆ—ನಿಶ್ಚಯ
ವಾಗಿ ನೀನು ಸಹ ಅವರಲ್ಲಿ ಒಬ್ಬನು, ನಿನ್ನ ಭಾಷೆಯೇ
ನಿನ್ನನ್ನು [ಗಲಿಲಾಯದವನೆಂದು] ತೋರಿಸಿಕೊಡುತ್ತದೆ
ಎಂದು ಹೇಳಲಾಗಿ ಅವನು—ಆ ಮನುಷ್ಯನನ್ನು
ನಾನರಿಯೆನು ಎಂದು ಹೇಳಿ ಶಾಪಹಾಕಿಕೊಳ್ಳು
ವದಕ್ಕೂ ಆಣೆಯಿಟ್ಟುಕೊಳ್ಳುವದಕ್ಕೂ ಪ್ರಾರಂಭಿಸಿ
ದನು. ಕೂಡಲೆ ಕೋಳಿ ಕೂಗಿತು. ಆಗ ಪೇತ್ರನು—
ಕೋಳಿ ಕೂಗುವದಕ್ಕಿಂತ ಮುಂಚೆ ಮೂರು ಸಾರಿ ನನ್ನ
ವಿಷಯವಾಗಿ ಅವನನ್ನು ಅರಿಯೆನೆಂಬದಾಗಿ ಹೇಳುವಿ
ಎಂದು ಯೇಸು ಹೇಳಿದ ಮಾತನ್ನು ನೆನಸಿ ಹೊರಗೆ
ಹೋಗಿ ಬಹು ವ್ಯಥೆಪಟ್ಟು ಅತ್ತನು.

7 ಬೆಳಗಾಗಲು ಎಲ್ಲಾ ಮಹಾಯಾಜಕರೂ ಜನರ
ಹಿರಿಯರೂ ಯೇಸುವನ್ನು ಕೊಲ್ಲಿಸಬೇಕೆಂದು
ಆಲೋಚನೆಮಾಡಿಕೊಂಡು ಆತನನ್ನು ಕಟ್ಟಿಸಿ ತೆಗೆದು
ಕೊಂಡು ಹೋಗಿ ದೇಶಾಧಿಪತಿಯಾದ ಪಿಲಾತನಿಗೆ
ಒಪ್ಪಿಸಿದರು.

ಯೂದನು ಪಶ್ಚಾತ್ತಾಪಪಟ್ಟು ಆತ್ಮಹತ್ಯ ಮಾಡಿಕೊಂಡದ್ದು.

ಆಗ ಆತನನ್ನು ಹಿಡುಕೊಟ್ಟ ಯೂದನು ಆತನಿಗೆ 3
ಮರಣದಂಡನೆಯ ತೀರ್ಪಾಯಿತೆಂದು ನೋಡಿ ಪಶ್ಚಾ
ತ್ತಾಪಪಟ್ಟು ಆ ಮೂವತ್ತು ರೂಪಾಯಿಗಳನ್ನು
ಮಹಾಯಾಜಕರಿಗೂ ಹಿರಿಯರಿಗೂ ತಿರಿಗಿ ತಂದು—
ತಪ್ಪಿಲ್ಲದವನನ್ನು ಮರಣಕ್ಕೆ ಒಪ್ಪಿಸಿಕೊಟ್ಟು ಪಾಪ 4
ಮಾಡಿದೆನು ಅಂದನು. ಅದಕ್ಕವರು—ಅದು ನಮ
ಗೇನು? ನೀನೇ ನೋಡಿಕೋ ಅಂದರು. ಆಗ ಅವನು 5
ಆ ಹಣವನ್ನು ದೇವಾಲಯದೊಳಗೆ ಬಿಸಾಟುಬಿಟ್ಟು
ಹೊರಟುಹೋಗಿ ಉರ್ಲು ಹಾಕಿಕೊಂಡು ಸತ್ತನು.
ಮಹಾಯಾಜಕರು ಆ ಹಣವನ್ನು ತೆಗೆದುಕೊಂಡು 6
ಅದು ಜೀವಹತ್ಯಕ್ಕೆ ಕೊಟ್ಟ ಕ್ರಯವಾದ್ದರಿಂದ ಅದನ್ನು
ಕಾಣಿಕೇಪೆಟ್ಟಿಗೆಯಲ್ಲಿ ಹಾಕಬಾರದು ಅಂದರು. ಬಳಿಕ 7
ಆಲೋಚನೆಮಾಡಿ, ಪರದೇಶಿಗಳನ್ನು ಹೂಣುವದ
ಕ್ಕೋಸ್ಕರ ಅದರಿಂದ ಕುಂಬಾರನ ಹೊಲವೆಂಬ ಭೂಮಿ
ಯನ್ನು ಕೊಂಡುಕೊಂಡರು. ಈ ಕಾರಣದಿಂದ ಇಂದಿನ 8
ವರೆಗೂ ಆ ಹೊಲಕ್ಕೆ ಜೀವಹತ್ಯದ ಹೊಲವೆಂಬ ಹೆಸರು
ಅದೆ. ಹೀಗೆ ಪ್ರವಾದಿಯಾದ ಯೆರೆಮೀಯನು ಹೇಳಿದ 9
ಮಾತು ನೆರವೇರಿತು, ಅದೇನಂದರೆ—

ಅವರು ಆ ಮೂವತ್ತು ರೂಪಾಯಿ ತೆಗೆದು
ಕೊಂಡು
ಕರ್ತನು ನನಗೆ ಅಪ್ಪಣೆಮಾಡಿದಂತೆ 10
ಅದನ್ನು ಕುಂಬಾರನ ಹೊಲಕ್ಕೆ ಕೊಟ್ಟರು.
ಇದೇ ಅವರು ಕ್ರಯಕಟ್ಟಿದವನ ಬೆಲೆ,
ಇದೇ ಇಸ್ರಾಯೇಲ್ಯರಲ್ಲಿ ಕೆಲವರು ಕ್ರಯಕಟ್ಟಿ
ದವನ ಬೆಲೆ ಎಂಬದು.

ಪಿಲಾತನು ಯೇಸುವನ್ನು ಮರಣದಂಡನೆಗೆ ಒಪ್ಪಿಸಿದ್ದು.
(ಮಾರ್ಕ 15. 2—15; ಲೂಕ 23. 2, 3, 13—25;
ಯೋಹಾ. 18. 29—40; 19. 16.)

ಯೇಸು ದೇಶಾಧಿಪತಿಯ ಮುಂದೆ ನಿಂತಿರುವಾಗ 11
ದೇಶಾಧಿಪತಿಯು ಆತನನ್ನು—ನೀನು ಯೆಹೂದ್ಯರ
ಅರಸನು ಹೌದೋ ಎಂದು ಕೇಳಿದನು. ಯೇಸು—
ನೀನೇ ಹೇಳಿದ್ದೀ ಅಂದನು. ಮತ್ತು ಮಹಾಯಾಜ 12
ಕರೂ ಹಿರಿಯರೂ ಆತನ ಮೇಲೆ ದೂರುಹೇಳುತ್ತಿರು
ವಾಗ ಆತನು ಏನೂ ಉತ್ತರಕೊಡಲಿಲ್ಲ. ಆಗ ಪಿಲಾ 13
ತನು ಆತನನ್ನು—ಇವರು ನಿನ್ನ ಮೇಲೆ ಎಷ್ಟು ಸಾಕ್ಷಿ
ಹೇಳುತ್ತಾರೆ, ನೀನು ಕೇಳುವದಿಲ್ಲವೋ? ಎಂದು ಕೇಳಿ
ದನು. ಆತನು ಅವನಿಗೆ ಒಂದು ಮಾತಿಗಾದರೂ 14
ಉತ್ತರಕೊಡಲಿಲ್ಲ. ಅದನ್ನು ನೋಡಿ ದೇಶಾಧಿಪತಿಯು
ಬಹಳ ಆಶ್ಚರ್ಯಪಟ್ಟನು. ಆದರೆ ಆ ಹಬ್ಬದಲ್ಲಿ 15
ಜನರು ಅಪೇಕ್ಷಿಸುವ ಸೆರೆಯವನನ್ನು ಅವರಿಗೆ ಬಿಟ್ಟು
ಕೊಡುವದು ದೇಶಾಧಿಪತಿಯ ಪದ್ಧತಿಯಾಗಿತ್ತು. ಆ 16
ಕಾಲದಲ್ಲಿ ಬರಬ್ಬನೆಂಬ ಪ್ರಸಿದ್ಧನಾದ ಒಬ್ಬ ಸೆರೆ
ಯವನು ಸಿಕ್ಕಿಬಿದ್ದನು. ಹೀಗಿರಲಾಗಿ ಅವರು 17-18

ಕೂಡಿಬಂದ ಸಮಯದಲ್ಲಿ ಪಿಲಾತನು ಹೊಟ್ಟೇಕಿಚ್ಚಿ
ನಿಂದ ಆತನನ್ನು ಒಪ್ಪಿಸಿಕೊಟ್ಟಿದ್ದರೆಂದು ತಿಳಿದು—
ನಿಮಗೆ ಯಾರನ್ನು ಬಿಟ್ಟುಕೊಡಬೇಕನ್ನುತ್ತೀರಿ? ಬರಬ್ಬ
ನನ್ನೋ? ಕ್ರಿಸ್ತನನ್ನಿಸಿಕೊಳ್ಳುವ ಯೇಸುವನ್ನೋ
19 ಎಂದು ಅವರನ್ನು ಕೇಳಿದನು. ಇದಲ್ಲದೆ ಅವನು
ನ್ಯಾಯಾಸನದಲ್ಲಿ ಕೂತಿರುವಾಗ ಅವನ ಹೆಂಡತಿ
ಯು— ನೀನು ಆ ಸತ್ಪುರುಷನ ಗೊಡವೆಗೆ ಹೋಗ
ಬೇಡ; ಅವನ ದೆಸೆಯಿಂದ ಈ ಹೊತ್ತು ಕನಸಿನಲ್ಲಿ
ಬಹಳ ತೊಂದರೆ ಪಟ್ಟೆನು ಎಂದು ಅವನ ಬಳಿಗೆ ಹೇಳಿ
20 ಕಳುಹಿಸಿದಳು. ಅತ್ತಲಾಗಿ ಮಹಾಯಾಜಕರೂ ಹಿರಿ
ಯರೂ ಬರಬ್ಬನನ್ನು ಬಿಟ್ಟುಕೊಡಬೇಕೆಂದು ಬೇಡಿ
ಕೊಳ್ಳುವ ಹಾಗೂ ಯೇಸುವನ್ನು ನಾಶಗೊಳಿಸುವ
21 ಹಾಗೂ ಜನರನ್ನು ಒಡಂಬಡಿಸಿದರು. ಅದಕ್ಕೆ ದೇಶಾಧಿ
ಪತಿಯು ಅವರನ್ನು — ಈ ಇಬ್ಬರಲ್ಲಿ ಯಾರನ್ನು ನಿಮಗೆ
ಬಿಟ್ಟುಕೊಡಬೇಕನ್ನುತ್ತೀರಿ ಎಂದು ಕೇಳಲು—ಬರಬ್ಬ
22 ನನ್ನು ಅಂದರು. ಪಿಲಾತನು ಅವರನ್ನು—ಹಾಗಾದರೆ
ಕ್ರಿಸ್ತನನ್ನಿಸಿಕೊಳ್ಳುವ ಯೇಸುವನ್ನು ನಾನೇನು ಮಾ
ಡಲಿ ಎಂದು ಕೇಳಲು ಎಲ್ಲರೂ — ಅವನನ್ನು ಶಿಲುಬೆಗೆ
23 ಹಾಕಿಸು ಅಂದರು. ಅದಕ್ಕವನು—ಯಾಕೆ? ಕೆಟ್ಟ
ದ್ದೇನು ಮಾಡಿದನು? ಅಂದನು. ಆದರೆ ಅವರು—
ಅವನನ್ನು ಶಿಲುಬೆಗೆ ಹಾಕಿಸು ಎಂದು ಬಹಳವಾಗಿ
24 ಆರ್ಭಟಿಸಿದರು. ಆಗ ಪಿಲಾತನು ತನ್ನ ಯತ್ನ ನಡೆ
ಯುವದಿಲ್ಲ, ಗದ್ದಲ ಮಾತ್ರ ಹೆಚ್ಚಾಗುತ್ತದೆ ಎಂದು
ತಿಳಿದು ನೀರು ತಕ್ಕೊಂಡು ಜನರ ಮುಂದೆ ಕೈ
ತೊಳಕೊಂಡು— ಈ ಪುರುಷನನ್ನು ಕೊಲ್ಲಿಸಿದ್ದಕ್ಕೆ
ನಾನು ಸೇರಿದವನಲ್ಲ, ನೀವೇ ನೋಡಿಕೊಳ್ಳಿರಿ ಅನ್ನ
25 ಲಾಗಿ ಜನರೆಲ್ಲಾ—ಅವನನ್ನು ಕೊಲ್ಲಿಸಿದ್ದಕ್ಕೆ ನಾವೂ
ನಮ್ಮ ಮಕ್ಕಳೂ ಉತ್ತರ ಕೊಡುತ್ತೇವೆ ಅಂದರು.
26 ಆಗ ಬರಬ್ಬನನ್ನು ಅವರಿಗೆ ಬಿಟ್ಟುಕೊಟ್ಟು ಯೇಸು
ವನ್ನು ಕೊರಡೆಗಳಿಂದ ಹೊಡಿಸಿ ಶಿಲುಬೆಗೆ ಹಾಕುವ
ದಕ್ಕೆ ಒಪ್ಪಿಸಿದನು.

### ಯೇಸುವನ್ನು ಅಪಹಾಸ್ಯಮಾಡಿ ಶಿಲುಬೆಗೆ ಹಾಕಿದ್ದು.

(ಮಾರ್ಕ 15. 16—41; ಲೂಕ 23. 26, 33—49;
ಯೋಹಾ. 19. 2, 3, 16—30.)

27 ಆ ಮೇಲೆ ದೇಶಾಧಿಪತಿಯ ಸಿಪಾಯಿಗಳು ಯೇಸು
ವನ್ನು ಅರಮನೆಯೊಳಕ್ಕೆ ತೆಗೆದುಕೊಂಡುಹೋಗಿ
ಪಟಾಲಮನ್ನೆಲ್ಲಾ ಆತನ ಸುತ್ತಲು ಕೂಡಿಸಿಕೊಂಡು
28 ಆತನ ಬಟ್ಟೆಗಳನ್ನು ತೆಗೆದುಹಾಕಿ ಕೆಂಪು ಒಲ್ಲಿಯನ್ನು
29 ಹೊದಿಸಿ ಮುಳ್ಳುಬಳ್ಳಿಯಿಂದ ಕಿರೀಟವನ್ನು ಹೆಣೆದು
ಆತನ ತಲೆಯ ಮೇಲೆ ಇಟ್ಟು ಬಲಗೈಯಲ್ಲಿ ಬೆತ್ತ
ವನ್ನು ಕೊಟ್ಟು ಆತನ ಮುಂದೆ ಮೊಣಕಾಲೂರಿ—
ಯೆಹೂದ್ಯರ ಅರಸನೇ, ನಿನಗೆ ನಮಸ್ಕಾರ ಎಂದು ಆತ
30 ನನ್ನು ಪರಿಹಾಸ್ಯಮಾಡಿದರು. ಮತ್ತು ಆತನ ಮೇಲೆ
ಉಗುಳಿ ಆ ಬೆತ್ತವನ್ನು ಕಸಕೊಂಡು ಆತನ ತಲೆಯ
31 ಮೇಲೆ ಹೊಡೆದರು. ಹೀಗೆ ಆತನನ್ನು ಪರಿಹಾಸ್ಯ

ಮಾಡಿದ ಮೇಲೆ ಆ ಒಲ್ಲಿಯನ್ನು ತೆಗೆದು ಆತನ ಬಟ್ಟೆ
ಗಳನ್ನು ಹೊದಿಸಿ ಆತನನ್ನು ಶಿಲುಬೆಗೆ ಹಾಕುವದಕ್ಕೆ
ತೆಗೆದುಕೊಂಡುಹೋದರು.
ಹೊರಕ್ಕೆ ಹೋಗುತ್ತಿರುವಾಗ ಕುರೇನೆಪಟ್ಟಣದ
ಸೀಮೋನನೆಂಬವನನ್ನು ಕಂಡು ಅವನನ್ನು ಆತನ
ಶಿಲುಬೆಯನ್ನು ಹೊರುವದಕ್ಕೆ ಬಿಟ್ಟೀಹಿಡಿದರು. ಮತ್ತು
ಗೊಲ್ಗೊಥಾ ಅಂದರೆ ಕಪಾಲಸ್ಥಳ ಎಂಬ ಸ್ಥಾನಕ್ಕೆ
ಬಂದಾಗ ಆತನಿಗೆ ಕಹಿ ಬೆರಸಿದ ದ್ರಾಕ್ಷಾರಸವನ್ನು
ಕುಡಿಯುವದಕ್ಕೆ ಕೊಟ್ಟರು; ಆತನು ಅದನ್ನು ರುಚಿ
ನೋಡಿ ಕುಡಿಯಲೊಲ್ಲದೆ ಇದ್ದನು. ಬಳಿಕ ಅವರು
ಆತನನ್ನು ಶಿಲುಬೆಗೆ ಹಾಕಿ ಆತನ ಬಟ್ಟೆಗಳಿಗಾಗಿ
ಚೀಟು ಹಾಕಿ ಪಾಲುಮಾಡಿಕೊಂಡರು; ಮತ್ತು ಅಲ್ಲಿ
ಕೂತುಕೊಂಡು ಆತನನ್ನು ಕಾಯುತ್ತಾ ಇದ್ದರು.
ಇದಲ್ಲದೆ ಆತನ ಮೇಲೆ ಹೊರಿಸಿದ ಅಪರಾಧವನ್ನು
ಬರೆದು ಆತನ ತಲೆಯ ಮೇಲ್ಗಡೆ ಹಚ್ಚಿದರು; ಅದೇ
ನಂದರೆ—ಇವನು ಯೇಸು, ಯೆಹೂದ್ಯರ ಅರಸನು
ಎಂಬದೇ. ಆಗ ಇಬ್ಬರು ಕಳ್ಳರನ್ನು ತಂದು ಒಬ್ಬ
ನನ್ನು ಬಲಗಡೆಯಲ್ಲಿ ಒಬ್ಬನನ್ನು ಎಡಗಡೆಯಲ್ಲಿ ಆತನ
ಸಂಗಡ ಶಿಲುಬೆಗೆ ಹಾಕಿದರು. ಅಲ್ಲಿ ಹಾದುಹೋಗು
ವವರು ತಲೇ ಆಡಿಸಿ—ದೇವಾಲಯವನ್ನು ಕೆಡವಿ
ಮೂರು ದಿನದಲ್ಲಿ ಕಟ್ಟುವವನೇ, ನಿನ್ನನ್ನು ರಕ್ಷಿಸಿ
ಕೋ; ದೇವರಮಗನು ಆಗಿದ್ದರೆ ಶಿಲುಬೆಯಿಂದ
ಇಳಿದು ಬಾ ಎಂದು ಆತನನ್ನು ಹಂಗಿಸುತ್ತಿದ್ದರು.
ಅದೇ ಮೇರೆಗೆ ಮಹಾಯಾಜಕರೂ ಶಾಸ್ತ್ರಿಗಳೂ ಹಿರಿ
ಯರೂ— ಅವನು ಮತ್ತೊಬ್ಬರನ್ನು ರಕ್ಷಿಸಿದನು,
ತನ್ನನ್ನು ರಕ್ಷಿಸಿಕೊಳ್ಳಲಾರನು. ಅವನು ಇಸ್ರಾಯೇ
ಲಿನ ಅರಸನಲ್ಲವೇ. ಈಗ ಶಿಲುಬೆಯಿಂದ ಇಳಿದು
ಬರಲಿ, ಇಳಿದು ಬಂದರೆ ಅವನಲ್ಲಿ ನಂಬಿಕೆಯಿಟ್ಟೇವು.
ದೇವರಲ್ಲಿ ಭರವಸವಿಟ್ಟಿದ್ದಾನೆ, ದೇವರು ಅವನಲ್ಲಿ
ಇಷ್ಟಪಟ್ಟರೆ ಈಗ ಅವನನ್ನು ಬಿಡಿಸಲಿ; ತಾನು ದೇವರ
ಮಗನಾಗಿದ್ದೇನೆಂದು ಹೇಳಿದನಲ್ಲಾ ಎಂದು ಹಾಸ್ಯ
ದಿಂದ ಮಾತಾಡುತ್ತಿದ್ದರು. ಆತನ ಸಂಗಡ ಶಿಲುಬೆಗೆ
ಹಾಕಲ್ಪಟ್ಟ ಕಳ್ಳರು ಸಹ ಆತನನ್ನು ಅದೇ ಪ್ರಕಾರ
ನಿಂದಿಸುತ್ತಿದ್ದರು.
1)ಮಧ್ಯಾಹ್ನ ಹನ್ನೆರಡು ಘಂಟೆಯಿಂದ ಮೂರು
ಘಂಟೆಯ ವರೆಗೆ ಆ ದೇಶದ ಮೇಲೆಲ್ಲಾ ಕತ್ತಲೆ ಕವಿ
ಯಿತು. ಸುಮಾರು ಮೂರು ಘಂಟೆಗೆ ಯೇಸು—
ಏಲೀ, ಏಲೀ, ಲಮಾ ಸಬಕ್ತಾನೀ, ಅಂದರೆ ನನ್ನ
ದೇವರೇ, ನನ್ನ ದೇವರೇ, ಯಾಕೆ ನನ್ನನ್ನು ಕೈಬಿಟ್ಟಿದ್ದೀ
ಎಂದು ಮಹಾಧ್ವನಿಯಿಂದ ಕೂಗಿದನು. ಅಲ್ಲಿ ನಿಂತಿ
ದ್ದವರಲ್ಲಿ ಕೆಲವರು ಅದನ್ನು ಕೇಳಿ— ಇವನು ಎಲೀಯ
ನನ್ನು ಕರೆಯುತ್ತಾನೆ ಅಂದರು. ಕೂಡಲೆ ಅವರಲ್ಲಿ
ಒಬ್ಬನು ಓಡಿಹೋಗಿ ಸ್ಪಂಜನ್ನು ತಂದು ಹುಳಿರಸ
ದಿಂದ ತುಂಬಿಸಿ ಕೋಲಿಗೆ ಸಿಕ್ಕಿಸಿ ಆತನಿಗೆ ಕುಡಿಯು
ವದಕ್ಕೆ ಕೊಟ್ಟನು. ಮಿಕ್ಕಾದವರು — ಬಿಡು, ಎಲೀ
ಯನು ಬಂದು ಅವನನ್ನು ರಕ್ಷಿಸುವನೇನೋ ನೋ
ಡೋಣ ಅಂದರು2). ಯೇಸು ತಿರಿಗಿ ಮಹಾ

1) ಮೂಲ: ಆರು ತಾಸಿನಿಂದ ಒಂಭತ್ತು ತಾಸಿನ ತನಕ. 2) ಕೆಲವು ಪ್ರತಿಗಳಲ್ಲಿ—ಮತ್ತೊಬ್ಬನು ಈಟಿಯನ್ನು ತೆಗೆದುಕೊಂಡು ಆತನ ಪಕ್ಕೆಯನ್ನು ತಿವಿದನು; ತಿವಿಯಲು ನೀರೂ ರಕ್ತವೂ ಹೊರಟಿತು ಎಂದು ಬರೆದದೆ.

51 ಧ್ವನಿಯಿಂದ ಕೂಗಿ ಪ್ರಾಣಬಿಟ್ಟನು. ಆಗ
ಇಗೋ ದೇವಾಲಯದ ತೆರೆಯು ಮೇಲಿಂದ ಕೆಳಗಿನ
ವರೆಗೂ ಹರಿದು ಎರಡು ಭಾಗವಾಯಿತು; ಭೂಮಿ
52 ಯು ಅದರಿತು; ಬಂಡೆಗಳು ಸೀಳಿಹೋದವು; ಸಮಾಧಿ
ಗಳು ತೆರೆದವು; ನಿದ್ರೆಹೋಗಿದ್ದ ಅನೇಕ ಭಕ್ತರ
53 ದೇಹಗಳು ಎದ್ದವು; ಮತ್ತು ಆತನು ಎದ್ದ ಮೇಲೆ
ಸಮಾಧಿಗಳೊಳಗಿಂದ ಹೊರಗೆ ಬಂದು ಪರಿಶುದ್ಧ
ಪಟ್ಟಣದೊಳಕ್ಕೆ ಹೋಗಿ ಅನೇಕರಿಗೆ ಕಾಣಿಸಿಕೊಂ
54 ಡರು. ಶತಾಧಿಪತಿಯು ಮತ್ತು ಅವನ ಸಂಗಡ
ಯೇಸುವನ್ನು ಕಾಯುತ್ತಿದ್ದವರು ಭೂಕಂಪವನ್ನೂ
ನಡೆದ ಸಂಗತಿಗಳನ್ನೂ ನೋಡಿ ಬಹಳ ಹೆದರಿಕೊಂಡು—
ನಿಜವಾಗಿ ಈತನು ದೇವಕುಮಾರನಾಗಿದ್ದನು ಅಂದ
55 ರು. ಇದಲ್ಲದೆ ಅನೇಕ ಸ್ತ್ರೀಯರು ಅಲ್ಲಿ ಇದ್ದು
ದೂರದಿಂದ ನೋಡುತ್ತಿದ್ದರು. ಇವರು ಯೇಸುವಿನ
ಸೇವೆಮಾಡುತ್ತಾ ಗಲಿಲಾಯದಿಂದ ಆತನ ಹಿಂದೆ ಬಂದಿ
56 ದ್ದರು. ಇವರಲ್ಲಿ ಮಗ್ದಲದ ಮರಿಯಳೂ ಯಾ
ಕೋಬ ಯೋಸೆಯರ ತಾಯಿಯಾದ ಮರಿಯಳೂ
ಜೆಬೆದಾಯನ ಮಕ್ಕಳ ತಾಯಿಯೂ ಇದ್ದರು.

ಶಿಷ್ಯರು ಯೇಸುವಿನ ದೇಹವನ್ನು ಸಮಾಧಿಯಲ್ಲಿ ಇರಿಸಿದ್ದು;
ಅಧಿಕಾರಸ್ಥರು ಕಾವಲಿಟ್ಟದ್ದು.
(ಮಾರ್ಕ 15. 42—47; ಲೂಕ 23. 50—56;
ಯೋಹಾ. 19. 38—42.)

57 ಸಂಜೆಯಾದಾಗ ಅರಿಮಥಾಯದ ಯೋಸೇಫನೆಂಬ
ಒಬ್ಬ ಧನವಂತನು ಬಂದನು; ಇವನು ಸಹ ಯೇಸು
58 ವಿನ ಶಿಷ್ಯನಾಗಿದ್ದನು. ಇವನು ಪಿಲಾತನ ಬಳಿಗೆ
ಹೋಗಿ ಯೇಸುವಿನ ದೇಹವನ್ನು ತನಗೆ ಕೊಡಿಸಬೇ
ಕೆಂದು ಬೇಡಿಕೊಳ್ಳಲಾಗಿ ಪಿಲಾತನು ಅದನ್ನು ಕೊಡ
59 ಬೇಕೆಂದು ಅಪ್ಪಣೆಮಾಡಿದನು. ಯೋಸೇಫನು ಆ
ದೇಹವನ್ನು ತೆಗೆದುಕೊಂಡು ಅದನ್ನು ಶುದ್ಧವಾದ
60 ನಾರುಮಡಿಯಲ್ಲಿ ಸುತ್ತಿ ಬಂಡೆಯಲ್ಲಿ ತೋಡಿದ್ದ ತನ್ನ
ಹೊಸ ಸಮಾಧಿಯಲ್ಲಿ ಇಟ್ಟು ಸಮಾಧಿಯ ಬಾಗಲಿಗೆ
61 ದೊಡ್ಡ ಕಲ್ಲನ್ನು ಉರುಳಿಸಿ ಹೋದನು. ಮಗ್ದಲದ
ಮರಿಯಳೂ ಆ ಬೇರೆ ಮರಿಯಳೂ ಅಲ್ಲಿ ಸಮಾಧಿಗೆ
ಎದುರಾಗಿ ಕೂತಿದ್ದರು.
62 ಮರುದಿನ ಅಂದರೆ ಸೌರಣೆಯ ದಿನ ಕಳೆದ ಮೇಲೆ
ಮಹಾಯಾಜಕರೂ ಫರಿಸಾಯರೂ ಪಿಲಾತನ ಬಳಿಗೆ
63 ಕೂಡಿಬಂದು— ದೊರೆಯೇ, ಆ ಮೋಸಗಾರನು ಬದು
ಕಿದ್ದಾಗ ತಾನು ಮೂರು ದಿನದ ಮೇಲೆ ಏಳುತ್ತೇನೆ
64 ಅಂತ ಹೇಳಿದ್ದು ನಮ್ಮ ನೆನಪಿಗೆ ಬಂತು; ಆದಕಾರಣ
ಮೂರನೆಯ ದಿನದ ತನಕ ಸಮಾಧಿಯನ್ನು ಭದ್ರ
ಮಾಡಿ ಕಾಯುವದಕ್ಕೆ ಅಪ್ಪಣೆಕೊಡಬೇಕು; ಇಲ್ಲದಿ
ದ್ದರೆ ಅವನ ಶಿಷ್ಯರು ಬಂದು ಅವನನ್ನು ಕದ್ದುಕೊಂಡು
ಹೋಗಿ ಸತ್ತವನು ಬದುಕಿ ಬಂದಿದ್ದಾನೆ ಎಂದು
ಹೇಳಾರು; ಆಗ ಮೊದಲನೆಯ ಮೋಸಕ್ಕಿಂತ ಕಡೆಯ
65 ಮೋಸವು ಕೆಡುಕಾದೀತು ಅಂದರು. ಪಿಲಾತನು
ಅವರಿಗೆ—ಕಾವಲುಗಾರರನ್ನು ತಕ್ಕೊಳ್ಳಿ; ಹೋಗಿ
ನಿಮಗೆ ತಿಳಿದ ಹಾಗೆ ಭದ್ರಮಾಡಿ ಕಾಯಿರಿ ಎಂದು
ಹೇಳಲಾಗಿ ಅವರು ಹೊರಟು ಕಾವಲುಗಾರರೊಂ 66
ದಿಗೆ ಆ ಕಲ್ಲಿಗೆ ಮುದ್ರೆಹಾಕಿ ಸಮಾಧಿಯನ್ನು ಭದ್ರ
ಮಾಡಿದರು.

ಯೇಸುವಿನ ಪುನರುತ್ಥಾನವು.
(ಮಾರ್ಕ 16. 1—10; ಲೂಕ 24. 1—10; ಯೋಹಾ. 20. 1—18.)

28
ಸಬ್ಬತ್‌ದಿನ ಆದ ಮೇಲೆ ವಾರದ ಮೊದಲನೆಯ
ದಿವಸ [1])ಬೆಳಗಾಗುವಾಗ ಮಗ್ದಲದ ಮರಿಯಳೂ
ಆ ಬೇರೆ ಮರಿಯಳೂ ಸಮಾಧಿಯನ್ನು ನೋಡುವದಕ್ಕೆ
ಬಂದರು. ಆಗ ಮಹಾ ಭೂಕಂಪವಾಯಿತು. ಕರ್ತನ 2
ದೂತನು ಆಕಾಶದಿಂದ ಇಳಿದು ಬಂದು ಆ ಕಲ್ಲನ್ನು
ಬಾಗಲಿನಿಂದ ಉರುಳಿಸಿ ಅದರ ಮೇಲೆ ಕೂತುಕೊಂ
ಡನು. ಅವನ ಮುಖಭಾವವು ಮಿಂಚಿನಂತೆ ಇತ್ತು, 3
ಅವನ ಉಡುಪು ಹಿಮದಂತೆ ಬೆಳ್ಳಗಿತ್ತು; ಕಾವಲು 4
ಗಾರರು ಅವನಿಗೆ ಹೆದರಿ ನಡುಗಿ ಸತ್ತವರ ಹಾಗಾ
ದರು. ಆಗ ದೂತನು ಆ ಹೆಂಗಸರಿಗೆ— ನೀವು ಹೆದರ 5
ಬೇಡಿರಿ; ಶಿಲುಬೆಗೆ ಹಾಕಲ್ಪಟ್ಟಿದ್ದ ಯೇಸುವನ್ನು
ಹುಡುಕುತ್ತೀರೆಂದು ಬಲ್ಲೆನು; ಆತನು ಇಲ್ಲಿ ಇಲ್ಲ;
ತಾನು ಹೇಳಿದಂತೆ ಎದ್ದಿದ್ದಾನೆ; ಬನ್ನಿ, [2])ಆತನು ಮಲ 6
ಗಿದ್ದ ಸ್ಥಳವನ್ನು ನೋಡಿರಿ; ಮತ್ತು ಬೇಗ ಹೋಗಿ 7
ಆತನ ಶಿಷ್ಯರಿಗೆ—ಸತ್ತವನು ಬದುಕಿದ್ದಾನೆ, ಆತನು
ನಿಮ್ಮ ಮುಂದೆ ಗಲಿಲಾಯಕ್ಕೆ ಹೋಗುತ್ತಾನೆ, ಅಲ್ಲಿ
ಆತನನ್ನು ಕಾಣುವಿರಿ ಎಂದು ತಿಳಿಸಿರಿ; ನಾನು ನಿಮಗೆ
ಹೇಳಿದ್ದೇನೆ, ನೋಡಿರಿ ಎಂದು ಹೇಳಿದನು. ಅವರು 8
ಭಯದಿಂದಲೂ ಮಹಾ ಸಂತೋಷದಿಂದಲೂ ಬೇಗ
ಸಮಾಧಿಯ ಬಳಿಯಿಂದ ಹೊರಟು ಆತನ ಶಿಷ್ಯರಿಗೆ
ತಿಳಿಸುವದಕ್ಕೆ ಓಡಿಹೋದರು. ಆಗ ಯೇಸು ಅವರ 9
ಎದುರಿಗೆ ಬಂದು—ನಿಮಗೆ ಶುಭವಾಗಲಿ ಅಂದನು.
ಅವರು ಹತ್ತರಕ್ಕೆ ಬಂದು ಆತನ ಪಾದಗಳನ್ನು ಹಿಡಿದು
ಆತನಿಗೆ ನಮಸ್ಕಾರಮಾಡಿದರು. ಯೇಸು ಅವರಿಗೆ— 10
ಹೆದರ ಬೇಡಿರಿ; ನನ್ನ ಸಹೋದರರ ಬಳಿಗೆ ಹೋಗಿ
ಅವರು ಗಲಿಲಾಯಕ್ಕೆ ಹೋಗಬೇಕೆಂದು ಹೇಳಿರಿ; ಅಲ್ಲಿ
ನನ್ನನ್ನು ನೋಡುವರು ಎಂದು ಹೇಳಿದನು.
ಅವರು ಹೋಗುತ್ತಿರುವಾಗ ಕಾವಲುಗಾರರಲ್ಲಿ 11
ಕೆಲವರು ಪಟ್ಟಣದೊಳಕ್ಕೆ ಬಂದು ನಡೆದ ಸಂಗತಿಗಳ
ನ್ನೆಲ್ಲಾ ಮಹಾಯಾಜಕರಿಗೆ ತಿಳಿಸಿದರು. ಇವರು 12
ಹಿರಿಯರ ಸಂಗಡ ಕೂಡಿಕೊಂಡು ಆಲೋಚನೆಮಾಡಿ
ಆ ಸಿಪಾಯಿಗಳಿಗೆ ಬಹಳ ಹಣಕೊಟ್ಟು—ಅವನ 13
ಶಿಷ್ಯರು ರಾತ್ರಿಯಲ್ಲಿ ಬಂದು ನಾವು ನಿದ್ದೆಮಾಡುತ್ತಿರು
ವಾಗ ಅವನನ್ನು ಕದ್ದುಕೊಂಡು ಹೋದರು ಎಂದು
ಹೇಳಿರಿ; ಈ ಸುದ್ದಿ ದೇಶಾಧಿಪತಿಯ ಕಿವಿಗೆ ಬಿದ್ದರೆ 14
ನಾವು ಅವನನ್ನು ಸಮಾಧಾನಪಡಿಸಿ ನಿಮಗೆ ಭಯ
ವಿಲ್ಲದ ಹಾಗೆ ಮಾಡುತ್ತೇವೆ ಅಂದರು. ಇವರು 15
ಆ ಹಣವನ್ನು ತೆಗೆದುಕೊಂಡು ತಮಗೆ ಹೇಳಿಕೊಟ್ಟ
ಹಾಗೆ ಮಾಡಿದರು. ಈ ಮಾತು ಇಂದಿನ ವರೆಗೂ
ಯೆಹೂದ್ಯರಲ್ಲಿ ಹಬ್ಬಿ ಅದೆ.

1) ಅಥವಾ: ಪ್ರಾರಂಭವಾಗುವದಕ್ಕೆ ಸ್ವಲ್ಪ ಹೊತ್ತು ಮಾತ್ರ ಇದ್ದಾಗ. 2) ಕೆಲವು ಪ್ರತಿಗಳಲ್ಲಿ—ಕರ್ತನು ಎಂದು ಬರೆದದೆ.

ಯೇಸುವಿನ ಕಡೆಯ ಮಾತುಗಳು.

16 ಬಳಿಕ ಹನ್ನೊಂದು ಮಂದಿ ಶಿಷ್ಯರು ಗಲಿಲಾಯಕ್ಕೆ
ಹೋಗಿ ಯೇಸು ತಮಗೆ ಗೊತ್ತುಮಾಡಿದ್ದ ಬೆಟ್ಟಕ್ಕೆ
17 ಸೇರಿದರು. ಅಲ್ಲಿ ಆತನನ್ನು ಕಂಡು ಆತನಿಗೆ ಅಡ್ಡ
18 ಬಿದ್ದರು; ಆದರೆ ಕೆಲವರು ಸಂದೇಹಪಟ್ಟರು. ಆಗ
ಯೇಸು ಹತ್ತರಕ್ಕೆ ಬಂದು—ಪರಲೋಕದಲ್ಲಿಯೂ
ಭೂಲೋಕದಲ್ಲಿಯೂ ಎಲ್ಲಾ ಅಧಿಕಾರವು ನನಗೆ
ಕೊಡಲ್ಪಟ್ಟದೆ. ಆದ್ದರಿಂದ ನೀವು ಹೊರಟುಹೋಗಿ
ಎಲ್ಲಾ ದೇಶಗಳ ಜನರನ್ನು ಶಿಷ್ಯರನ್ನಾಗಿ ಮಾಡಿರಿ; ಅವ
ರಿಗೆ ತಂದೆಯ, ಮಗನ, ಪವಿತ್ರಾತ್ಮನ ಹೆಸರಿನಲ್ಲಿ
ದೀಕ್ಷಾಸ್ನಾನಮಾಡಿಸಿ ನಾನು ನಿಮಗೆ ಆಜ್ಞಾಪಿಸಿದ್ದ 20
ನ್ನೆಲ್ಲಾ ಕಾಪಾಡಿಕೊಳ್ಳುವದಕ್ಕೆ ಅವರಿಗೆ ಉಪದೇಶ
ಮಾಡಿರಿ. ನೋಡಿರಿ, ನಾನು ಯುಗದ ಸಮಾಪ್ತಿಯು
ವರೆಗೂ ಎಲ್ಲಾ ದಿವಸ ನಿಮ್ಮ ಸಂಗಡ ಇರುತ್ತೇನೆ
ಎಂದು ಹೇಳಿದನು.

# THE GOSPEL ACCORDING TO

# SAINT MARK

## ಮಾರ್ಕನು ಬರೆದ ಸುವಾರ್ತೆ

ಸ್ನಾನಿಕನಾದ ಯೋಹಾನನ ವಿಷಯ.

(ಮತ್ತಾ. 3. 1—12; ಲೂಕ 3. 1—18; ಯೋಹಾ. 1. 19—28.)

1 1)ದೇವಕುಮಾರನಾದ ಯೇಸು ಕ್ರಿಸ್ತನ ವಿಷಯ
ವಾದ ಸುವಾರ್ತೆಯ ಪ್ರಾರಂಭವು.
2 ಇಗೋ, ನಾನು ನನ್ನ ದೂತನನ್ನು ನಿನ್ನ
ಮುಂದೆ ಕಳುಹಿಸುತ್ತೇನೆ;
ನೀನು ಹೋಗುವ ದಾರಿಯನ್ನು ಅವನು ಸರಿ
ಮಾಡುವನೆಂತಲೂ
3 ಕರ್ತನ ದಾರಿಯನ್ನು ಸಿದ್ಧಮಾಡಿರಿ; ಆತನ
ಹಾದಿಗಳನ್ನು ನೆಟ್ಟಗೆಮಾಡಿರಿ ಎಂದು ಅಡವಿ
ಯಲ್ಲಿ ಕೂಗುವವನ ಶಬ್ದವದೆ ಎಂತಲೂ
4 2)ಪ್ರವಾದಿಯಾದ ಯೆಶಾಯನ ಗ್ರಂಥದಲ್ಲಿ ಬರೆದಿರುವ
ಪ್ರಕಾರ ಯೋಹಾನನು ಬಂದು ಜನರಿಗೆ—ನೀವು
ಪಾಪಪರಿಹಾರಕ್ಕಾಗಿ ದೇವರ ಕಡೆಗೆ ತಿರುಗಿಕೊಂಡು
ದೀಕ್ಷಾಸ್ನಾನಮಾಡಿಸಿಕೊಳ್ಳಬೇಕೆಂದು ಸಾರಿಹೇಳುತ್ತಾ
ಅಡವಿಯಲ್ಲಿ ದೀಕ್ಷಾಸ್ನಾನಮಾಡಿಸುತ್ತಾ ಇದ್ದನು.
5 ಆಗ ಯೂದಾಯ ಸೀಮೆಯೆಲ್ಲವೂ ಯೆರೂಸಲೇಮಿ
ನವರೆಲ್ಲರೂ ಅವನ ಬಳಿಗೆ ಹೊರಟುಹೋಗಿ ತಮ್ಮ
ತಮ್ಮ ಪಾಪಗಳನ್ನು ಹೇಳಿಕೊಂಡು ಯೊರ್ದನ್ ಹೊಳೆ
ಯಲ್ಲಿ ಅವನಿಂದ ದೀಕ್ಷಾಸ್ನಾನಮಾಡಿಸಿಕೊಳ್ಳುತ್ತಿ
6 ದ್ದರು. ಈ ಯೋಹಾನನು ಒಂಟೆಯ ಕೂದಲಿನ ಹೊ
ದಿಕೆಯನ್ನು ಹೊದ್ದುಕೊಂಡು ಸೊಂಟಕ್ಕೆ ತೊಗಲಿನ
ನಡುಕಟ್ಟನ್ನು ಕಟ್ಟಿಕೊಂಡಿದ್ದನು; ಅವನು ಮಿಡಿತೆ
ಯನ್ನೂ ಕಾಡುಜೇನನ್ನೂ ಆಹಾರಮಾಡುತ್ತಿದ್ದನು.
7 ಅವನು—ನನಗಿಂತ ಶಕ್ತನು ನನ್ನ ಹಿಂದೆ ಬರುತ್ತಾನೆ;
ಆತನ ಕೆರಗಳ ಬಾರನ್ನು ಬೊಗ್ಗಿಕೊಂಡು ಬಿಚ್ಚುವ
ದಕ್ಕೂ ನಾನು ಯೋಗ್ಯನಲ್ಲ. ನಾನು ನಿಮಗೆ ನೀರಿನ 8
ಸ್ನಾನಮಾಡಿಸಿದೆನು; ಆತನಾದರೋ ನಿಮಗೆ ಪವಿತ್ರಾ
ತ್ಮದ ಸ್ನಾನಮಾಡಿಸುವನು ಎಂದು ಸಾರಿಹೇಳಿದನು.

ಯೇಸು ಪ್ರತಿಷ್ಠೆಯನ್ನು ಹೊಂದಿ ತನ್ನ ಉದ್ಯೋಗವನ್ನು
ಪ್ರಾರಂಭಿಸಿದ್ದು.

(ಮತ್ತಾ. 3. 13—4. 17; ಲೂಕ 3. 21, 22; 4. 1—15;
ಯೋಹಾ. 1. 31—33.)

ಆ ದಿನಗಳಲ್ಲಿ ಯೇಸು ಗಲಿಲಾಯ ಸೀಮೆಗೆ ಸೇರಿದ 9
ನಜರೇತೆಂಬ ಊರಿನಿಂದ ಬಂದು ಯೊರ್ದನ್ ಹೊಳೆ
ಯಲ್ಲಿ ಯೋಹಾನನಿಂದ ಸ್ನಾನಮಾಡಿಸಿಕೊಂಡನು.
ಮಾಡಿಸಿಕೊಂಡ ಕೂಡಲೆ ಆತನು ನೀರಿನೊಳಗಿಂದ ಮೇಲ 10
ಕ್ಕೆ ಬರಲು ಆಕಾಶವೊಡೆದು ದೇವರಾತ್ಮವು ಪಾರಿವಾಳದ
ಹಾಗೆ ತನ್ನ ಮೇಲೆ ಇಳಿಯುವದನ್ನು ಕಂಡನು. ಆಗ— 11
ನೀನು ಪ್ರಿಯನಾಗಿರುವ ನನ್ನ ಮಗನು, ನಿನ್ನನ್ನು
ನಾನು ಮೆಚ್ಚಿದ್ದೇನೆ ಎಂದು ಆಕಾಶವಾಣಿ ಆಯಿತು.
ಕೂಡಲೆ ಯೇಸು ದೇವರಾತ್ಮಪ್ರೇರಿತನಾಗಿ 12
ಅಡವಿಗೆ ಹೋದನು. ಆತನು ನಾಲ್ವತ್ತು ದಿವಸ ಅಡವಿ 13
ಯಲ್ಲಿ ಮೃಗಗಳೊಂದಿಗೆ ಇದ್ದು ಸೈತಾನನಿಂದ ಶೋಧಿ
ಸಲ್ಪಡುವವನಾದನು; ಮತ್ತು ದೇವದೂತರು ಆತನಿಗೆ
ಉಪಚಾರಮಾಡಿದರು.
ಯೋಹಾನನು ಸೆರೆಗೆ ಬಿದ್ದ ಮೇಲೆ ಯೇಸು 14
ಗಲಿಲಾಯ ಸೀಮೆಗೆ ಬಂದು—ಕಾಲ ಪರಿಪೂರ್ಣ 15
ವಾಯಿತು, ದೇವರ ರಾಜ್ಯವು ಸಮೀಪಿಸಿತು, ದೇವರ
ಕಡೆಗೆ ತಿರುಗಿಕೊಂಡು ಸುವಾರ್ತೆಯನ್ನು ನಂಬಿರಿ
ಎಂದು ದೇವರ ಸುವಾರ್ತೆಯನ್ನು ಸಾರಿಹೇಳಿದನು.

1) ಕೆಲವು ಪ್ರತಿಗಳಲ್ಲಿ ದೇವಕುಮಾರನಾದ ಎಂಬ ಪದವು ಇಲ್ಲ. 2) ಕೆಲವು ಪ್ರತಿಗಳಲ್ಲಿ—ಪ್ರವಾದಿಗಳ ಎಂದು ಬರೆದದೆ.

### ಯೇಸು ಪ್ರಥಮ ಶಿಷ್ಯರನ್ನು ಮಾಡಿಕೊಂಡದ್ದು.

(ಮತ್ತಾ. 4. 18—22; ಲೂಕ 5. 1—11.)

16 ಹೀಗಿರುವಲ್ಲಿ ಆತನು ಗಲಿಲಾಯ ಸಮುದ್ರದ
ಬಳಿಯಲ್ಲಿ ಹೋಗುತ್ತಿರುವಾಗ ಸೀಮೋನನೂ ಸೀಮೋ
ನನ ತಮ್ಮನಾದ ಅಂದ್ರೆಯನೂ ಸಮುದ್ರದಲ್ಲಿ ಬಲೆ
17 ಬೀಸುವದನ್ನು ಕಂಡನು. ಅವರು ಬೆಸ್ತರು. ಯೇಸು
ಅವರಿಗೆ—ನನ್ನ ಹಿಂದೆ ಬನ್ನಿರಿ; ಮನುಷ್ಯರನ್ನು ಹಿಡಿ
ಯುವ ಬೆಸ್ತರನ್ನಾಗಿ ನಿಮ್ಮನ್ನು ಮಾಡುವೆನು ಎಂದು
18 ಹೇಳುತ್ತಲೇ ಅವರು ತಮ್ಮ ಬಲೆಗಳನ್ನು ಬಿಟ್ಟು ಆತನ
19 ಹಿಂದೆ ಹೋದರು. ಇನ್ನೂ ಸ್ವಲ್ಪ ಮುಂದೆ ಹೋಗಿ
ಜೆಬೆದಾಯನ ಮಗನಾದ ಯಾಕೋಬನನ್ನೂ ಅವನ
20 ತಮ್ಮನಾದ ಯೋಹಾನನನ್ನೂ ಕಂಡನು. ಇವರು
ದೋಣಿಯಲ್ಲಿ ತಮ್ಮ ಬಲೆಗಳನ್ನು ಸರಿಮಾಡುತ್ತಿದ್ದರು.
ಕೂಡಲೆ ಇವರನ್ನೂ ಕರೆದನು. ಅವರು ತಮ್ಮ ತಂದೆ
ಯಾದ ಜೆಬೆದಾಯನನ್ನು ಕೂಲಿಯಾಳುಗಳ ಸಂಗಡ
ದೋಣಿಯಲ್ಲಿ ಬಿಟ್ಟು ಆತನ ಹಿಂದೆ ಹೋದರು.

### ಯೇಸು ಉಪದೇಶಮಾಡಿ ದೆವ್ವಗಳನ್ನು ಬಿಡಿಸಿ ರೋಗಿಗಳನ್ನು ಸ್ವಸ್ಥಮಾಡಿ ಹೆಸರುಗೊಂಡದ್ದು.

(ಮತ್ತಾ. 8. 14—16; ಲೂಕ 4. 31—41.)

21 ಬಳಿಕ ಅವರು ಕಪೆರ್ನೌಮೆಂಬ ಊರಿಗೆ ಸೇರಿದರು.
ಕೂಡಲೆ ಸಬ್ಬತ್‍ದಿನದಲ್ಲಿ ಯೇಸು ಸಭಾಮಂದಿರಕ್ಕೆ
22 ಹೋಗಿ ಉಪದೇಶಮಾಡಿದನು. ಜನರು ಆತನ ಉಪ
ದೇಶಕ್ಕೆ ಅತ್ಯಾಶ್ಚರ್ಯಪಟ್ಟರು; ಯಾಕಂದರೆ ಆತನು
ಶಾಸ್ತ್ರಿಗಳಂತೆ ಉಪದೇಶಮಾಡದೆ ಅಧಿಕಾರವಿದ್ದವನಂತೆ
23 ಅವರಿಗೆ ಉಪದೇಶಮಾಡುತ್ತಿದ್ದನು. ಆಗ ಅವರ
ಸಭಾಮಂದಿರದಲ್ಲಿ ದೆವ್ವಹಿಡಿದ ಒಬ್ಬ ಮನುಷ್ಯ
24 ನಿದ್ದನು. ಆ ದೆವ್ವವು—ನಜರೇತಿನ ಯೇಸುವೇ, ನಮ್ಮ
ಗೊಡವೆ ನಿನಗೇಕೆ? ನಮ್ಮನ್ನು ನಾಶಮಾಡುವದಕ್ಕೆ
ಬಂದೆಯಾ? ನಿನ್ನನ್ನು ಬಲ್ಲೆನು; ನೀನು ದೇವರು
25 ಪ್ರತಿಷ್ಠಿಸಿದವನೇ ಎಂದು ಕೂಗಿ ಹೇಳಿತು. ಯೇಸು
ಅದನ್ನು ಗದರಿಸಿ—ಸುಮ್ಮನಿರು, ಇವನನ್ನು ಬಿಟ್ಟು
26 ಹೋಗು ಎನ್ನಲಾಗಿ ಆ ದೆವ್ವವು ಅವನನ್ನು ಒದ್ದಾಡಿಸಿ
27 ಅಬ್ಬರಿಸಿಕೂಗಿ ಬಿಟ್ಟುಹೋಯಿತು. ಅದಕ್ಕೆ ಎಲ್ಲರು
ಬೆರಗಾಗಿ—ಇದೇನಿರಬಹುದು? ಇದು ಹೊಸ ಉಪ
ದೇಶ. ಈತನು ಅಧಿಕಾರದಿಂದ ದೆವ್ವಗಳಿಗೂ ಅಪ್ಪಣೆ
ಕೊಡುತ್ತಾನೆ; ಅವು ಆತನ ಮಾತನ್ನು ಕೇಳುತ್ತವೆ
ಎಂದು ತಮ್ಮತಮ್ಮೊಳಗೆ ವಿಚಾರಮಾಡಿಕೊಂಡರು.
28 ಕೂಡಲೆ ಆತನ ಸುದ್ದಿಯು ಗಲಿಲಾಯ ಸೀಮೆಯಲ್ಲಿ
29 ಎಲ್ಲೆಲ್ಲಿಯೂ ಹಬ್ಬಿತು. 1)ಆ ಮೇಲೆ ಅವರು ಸಭಾ
ಮಂದಿರದಿಂದ ಹೊರಟು ಯಾಕೋಬ ಯೋಹಾನರ
ಸಂಗಡ ಸೀಮೋನ ಅಂದ್ರೆಯರ ಮನೆಗೆ ಬಂದರು.
30 ಅಲ್ಲಿ ಸೀಮೋನನ ಅತ್ತೆ ಜ್ವರ ಬಂದು ಮಲಗಿರಲಾಗಿ
ಅವರು ಆಕೆಯ ಸಂಗತಿಯನ್ನು ಆತನಿಗೆ ತಿಳಿಸಿದರು.
31 ಆತನು ಹತ್ತರಕ್ಕೆ ಬಂದು ಆಕೆಯ ಕೈಯನ್ನು ಹಿಡಿದು
ಎಬ್ಬಿಸಲು ಜ್ವರವು ಆಕೆಯನ್ನು ಬಿಟ್ಟುಹೋಯಿತು;
ಆಕೆಯು ಅವರಿಗೆ ಉಪಚಾರಮಾಡಿದಳು.
ಸಂಜೆಯಾಗಿ ಹೊತ್ತುಮುಣುಗಿದ ಮೇಲೆ ಜನರು 32
ಮೈಯಲ್ಲಿ ನೆಟ್ಟಗಿಲ್ಲದವರೆಲ್ಲರನ್ನೂ ದೆವ್ವಹಿಡಿದವ
ರನ್ನೂ ಆತನ ಬಳಿಗೆ ಕರತಂದರು. ಊರೆಲ್ಲಾ ಬಾಗ 33
ಲಿನ ಮುಂದೆ ಒಟ್ಟುಗೂಡಿತ್ತು. ಆಗ ಆತನು ತರತರ 34
ವಾದ ರೋಗಗಳಿಂದ ಮೈಯಲ್ಲಿ ನೆಟ್ಟಗಿಲ್ಲದ ಬಹು
ಜನರನ್ನು ವಾಸಿಮಾಡಿ ಅನೇಕ ದೆವ್ವಗಳನ್ನು ಬಿಡಿಸಿ
ದನು. ಮತ್ತು ತಾನು 2)ಇಂಥವನೆಂದು ಅವುಗಳಿಗೆ ತಿಳಿ
ದದ್ದರಿಂದ ಆತನು ಅವುಗಳನ್ನು ಮಾತಾಡಗೊಡಿಸಲಿಲ್ಲ.

### ಯೇಸು ಸುವಾರ್ತೆಯನ್ನು ಸಾರುತ್ತಾ ಗಲಿಲಾಯದಲ್ಲಿ ಸಂಚರಿಸಿದ್ದು.

(ಲೂಕ 4. 42—44.)

ಮುಂಜಾನೆ ಇನ್ನೂ ಮೊಬ್ಬಿರುವಾಗ ಆತನು 35
ಎದ್ದು ಹೊರಟು ಅಡವಿಯ ಸ್ಥಳಕ್ಕೆ ಹೋಗಿ ದೇವರನ್ನು
ಪ್ರಾರ್ಥಿಸುತ್ತಿದ್ದನು. ಸೀಮೋನನೂ ಅವನ ಸಂಗಡ 36
ಇದ್ದವರೂ ಆತನನ್ನು ಹಿಂದಟ್ಟಿ ಕಂಡು—ಎಲ್ಲರು 37
ನಿನ್ನನ್ನು ಹುಡುಕುತ್ತಾರೆ ಅನ್ನಲಾಗಿ ಆತನು ಅವ 38
ರಿಗೆ—ನಾವು ಸಮೀಪದಲ್ಲಿರುವ ಬೇರೆ ಊರುಗಳಿಗೆ
ಹೋಗೋಣ; ಅಲ್ಲಿಯೂ ನಾನು ಸುವಾರ್ತೆಯನ್ನು
ಸಾರಬೇಕು; ಇದಕ್ಕಾಗಿಯೇ ನಾನು ಹೊರಟುಬಂದಿ
ದ್ದೇನೆ ಎಂದು ಹೇಳಿದನು. ಬಳಿಕ ಆತನು ಗಲಿಲಾಯ 39
ದಲ್ಲೆಲ್ಲಾ ಹೋಗಿ ಅವರ ಸಭಾಮಂದಿರಗಳಲ್ಲಿ
ಸುವಾರ್ತೆಯನ್ನು ಸಾರುತ್ತಾ ದೆವ್ವಗಳನ್ನು ಬಿಡಿಸುತ್ತಾ
ಇದ್ದನು.

### ಕುಷ್ಠರೋಗಿಯನ್ನು ಸ್ವಸ್ಥಮಾಡಿದ್ದು.

(ಮತ್ತಾ. 8. 2—4; ಲೂಕ 5. 12—16.)

ಒಬ್ಬ ಕುಷ್ಠರೋಗಿಯು ಯೇಸುವಿನ ಬಳಿಗೆ 40
ಬಂದು ಆತನ ಮುಂದೆ ಮೊಣಕಾಲೂರಿಕೊಂಡು—
ನಿನಗೆ ಮನಸ್ಸಿದ್ದರೆ ನನ್ನನ್ನು ಶುದ್ಧಮಾಡಬಲ್ಲೆ ಎಂದು
ಬೇಡಿಕೊಳ್ಳಲು ಆತನು ಕನಿಕರಪಟ್ಟು ಕೈನೀಡಿ ಅವ
ನನ್ನು ಮುಟ್ಟಿ—ನನಗೆ ಮನಸ್ಸುಂಟು; ಶುದ್ಧವಾಗು 41
ಅಂದನು. ಕೂಡಲೆ ಅವನ ಕುಷ್ಠವು ಹೋಗಿ, 42-44
ಅವನು ಶುದ್ಧವಾದನು. ಆಗ ಯೇಸು ಅವನಿಗೆ—
ಯಾರಿಗೂ ಏನೂ ಹೇಳಬೇಡ ನೋಡು; ಆದರೆ
ಹೋಗಿ ಯಾಜಕನಿಗೆ ನಿನ್ನ ಮೈ ತೋರಿಸಿ ಮೋಶೆ
ಯು ನೇಮಕಮಾಡಿರುವದನ್ನು ಅರ್ಪಿಸಿ ನಿನ್ನ
ಶುದ್ಧಾಚಾರವನ್ನು ನೆರವೇರಿಸು, ಅದು ಜನರಿಗೆ ಸಾಕ್ಷಿ
ಯಾಗಲಿ ಎಂದು ಖಂಡಿತವಾಗಿ ಹೇಳಿ ಅವನನ್ನು ಕಳು
ಹಿಸಿಬಿಟ್ಟನು. ಆದರೆ ಅವನು ಹೊರಟುಹೋಗಿ ಆ 45
ಸಂಗತಿಯನ್ನು ಬಹಳವಾಗಿ ಸಾರಿ ಹಬ್ಬಿಸಿದ್ದರಿಂದ
ಯೇಸು ಬಹಿರಂಗವಾಗಿ ಇನ್ನು ಯಾವ ಊರೊಳಕ್ಕೂ
ಹೋಗಲಾರದೆ ಹೊರಗೆ ಅಡವಿಯ ಸ್ಥಳಗಳಲ್ಲಿ
ಇದ್ದನು. ಮತ್ತು ಜನರು ನಾಲ್ಕು ಕಡೆಯಿಂದಲೂ
ಆತನ ಬಳಿಗೆ ಬರುತ್ತಿದ್ದರು.

---

1) ಪಾಠಾಂತರ: ಆ ಮೇಲೆ ಆತನು . . . ಬಂದನು. 2) ಕೆಲವು ಪ್ರತಿಗಳಲ್ಲಿ ಕ್ರಿಸ್ತನೆಂದು ಬರೆದದೆ.

### ಯೇಸು ಒಬ್ಬ ರೋಗಿಗೆ ಪಾಪವನ್ನು ಕ್ಷಮಿಸಿದ್ದಕ್ಕೆ ಶಾಸ್ತ್ರಿಗಳು ಆತನ ಮೇಲೆ ಆಕ್ಷೇಪಣೆ ಮಾಡಿದ್ದು.

(ಮತ್ತಾ. 9. 1—8; ಲೂಕ 5. 17—26.)

2 ಕೆಲವು ದಿನಗಳಾದ ಮೇಲೆ ಆತನು ಕಪೆರ್ನೌಮಿಗೆ
ತಿರಿಗಿ ಬಂದನು. ಮನೆಯಲ್ಲಿದ್ದಾನೆಂಬ ವರ್ತಮಾನವು
2 ಹಬ್ಬಿದಾಗ ಬಹುಜನರು ಕೂಡಿಬಂದದ್ದರಿಂದ ಬಾಗ
ಲಿನ ಬಳಿಯಲ್ಲಾದರೂ ಸ್ಥಳವಿರಲಿಲ್ಲ, ಆತನು ಅವ
3 ರಿಗೆ ದೇವರ ವಾಕ್ಯವನ್ನು ಹೇಳುತ್ತಿದ್ದನು. ಅಷ್ಟರಲ್ಲಿ
ಕೆಲವರು ಒಬ್ಬ ಪಾರ್ಶ್ವವಾಯುರೋಗಿಯನ್ನು ನಾಲ್ಕು
ಮಂದಿಯಿಂದ ಹೊರಿಸಿಕೊಂಡು ಆತನ ಬಳಿಗೆ ತಂದರು.
4 ಜನರು ಗುಂಪಾಗಿದ್ದದರಿಂದ ಅವರು ಆತನ ಹತ್ತರಕ್ಕೆ
ಸೇರಲಾರದೆ ಆತನಿದ್ದ ಮನೆಯ ಮೇಲ್ಚಾವಣಿಯನ್ನು
ಬಿಚ್ಚಿ ದ್ವಾರಮಾಡಿ ಪಾರ್ಶ್ವವಾಯುರೋಗಿಯು ಮಲ
5 ಗಿದ್ದ ಹಾಸಿಗೆಯನ್ನು ಇಳಿಸಿದರು. ಯೇಸು ಅವರ
ನಂಬಿಕೆಯನ್ನು ನೋಡಿ ಆ ಪಾರ್ಶ್ವವಾಯುರೋ
ಗಿಗೆ—ಮಗನೇ, ನಿನ್ನ ಪಾಪಗಳು ಕ್ಷಮಿಸಲ್ಪಟ್ಟಿವೆ
6 ಎಂದು ಹೇಳಿದನು. ಆದರೆ ಶಾಸ್ತ್ರಿಗಳಲ್ಲಿ ಕೆಲವರು
7 ಅಲ್ಲಿ ಕೂತುಕೊಂಡಿದ್ದು—ಇವನು ಯಾಕೆ ಹೀಗೆ
ಮಾತನಾಡುತ್ತಾನೆ? ಇದು ದೇವದೂಷಣೆ. ದೇವ
ರೊಬ್ಬನೇ ಹೊರತು ಮತ್ತಾರು ಪಾಪಗಳನ್ನು ಕ್ಷಮಿಸ
ಬಲ್ಲರು? ಎಂದು ತಮ್ಮ ತಮ್ಮ ಮನಸ್ಸಿನಲ್ಲಿ ಅಂದು
8 ಕೊಂಡರು. ಹೀಗೆ ಅಂದುಕೊಳ್ಳುವದನ್ನು ಕೂಡಲೆ
ಯೇಸು ತನ್ನ ಆತ್ಮದಲ್ಲಿ ತಿಳಿದುಕೊಂಡು ಅವರಿಗೆ—
ನೀವು ನಿಮ್ಮ ಮನಸ್ಸಿನಲ್ಲಿ ಯಾಕೆ ಹೀಗೆ ಅಂದು
9 ಕೊಳ್ಳುತ್ತೀರಿ? ಯಾವದು ಸುಲಭ? ನಿನ್ನ ಪಾಪಗಳು
ಕ್ಷಮಿಸಲ್ಪಟ್ಟಿವೆ ಅನ್ನುವದೋ? ಎದ್ದು ನಿನ್ನ ಹಾಸಿಗೆ
10 ಯನ್ನು ತೆಗೆದುಕೊಂಡು ನಡೆ ಅನ್ನುವದೋ? ಆದರೆ
ಪಾಪಗಳನ್ನು ಕ್ಷಮಿಸಿಬಿಡುವದಕ್ಕೆ ಮನುಷ್ಯಕುಮಾರ
ನಿಗೆ ಭೂಲೋಕದಲ್ಲಿ ಅಧಿಕಾರ ಉಂಟೆಂಬದು ನಿಮಗೆ
ತಿಳಿಯಬೇಕು ಎಂದು ಹೇಳಿ ಪಾರ್ಶ್ವವಾಯುರೋಗಿ
11 ಯನ್ನು ನೋಡಿ—ಎದ್ದು ನಿನ್ನ ಹಾಸಿಗೆಯನ್ನು
ಎತ್ತಿಕೊಂಡು ಮನೆಗೆ ಹೋಗೆಂದು ನಿನಗೆ ಹೇಳು
12 ತ್ತೇನೆ ಅಂದನು. ಅವನು ಎದ್ದು ಕೂಡಲೆ ತನ್ನ
ಹಾಸಿಗೆಯನ್ನು ತೆಗೆದುಕೊಂಡು ಎಲ್ಲರ ಮುಂದೆ
ಹೊರಟುಹೋದನು. ಅದಕ್ಕೆ ಎಲ್ಲರು ಬೆರಗಾಗಿ—
ಇದುವರೆಗೆ ನಾವು ಇಂಥದನ್ನು ಎಂದಿಗೂ ನೋಡಿದ್ದೇ
ಇಲ್ಲವೆಂದು ಹೇಳುತ್ತಾ ದೇವರನ್ನು ಕೊಂಡಾಡಿದರು.

### ಯೇಸು ಭ್ರಷ್ಟರ ಕೂಡ ಊಟಮಾಡಿದ್ದಕ್ಕೆ ಶಾಸ್ತ್ರಿಗಳು ಆತನ ಮೇಲೆ ಆಕ್ಷೇಪಣೆ ಮಾಡಿದ್ದು.

(ಮತ್ತಾ. 9. 9—13; ಲೂಕ 5. 27—32.)

13 ಆತನು ಹೊರಟು ತಿರಿಗಿ ಸಮುದ್ರದ ಬಳಿಗೆ ಹೋ
ದನು. ಜನರ ಗುಂಪೆಲ್ಲಾ ಆತನ ಬಳಿಗೆ ಬಂದಾಗ
14 ಆತನು ಅವರಿಗೆ ಉಪದೇಶಮಾಡಿದನು. ಆತನು
[ಅಲ್ಲಿಂದ] ಹೋಗುತ್ತಿರುವಾಗ ಸುಂಕಕ್ಕೆ ಕೂತಿದ್ದ
ಅಲ್ಫಾಯನ ಮಗನಾದ ಲೇವಿಯನ್ನು ನೋಡಿ—
ನನ್ನನ್ನು ಹಿಂಬಾಲಿಸು ಎಂದು ಅವನನ್ನು ಕರೆಯಲು
ಅವನು ಎದ್ದು ಆತನ ಹಿಂದೆ ಹೋದನು. ಅನಂತರ 1
ಆತನು ಅವನ ಮನೆಯೊಳಗೆ ಊಟಕ್ಕೆ ಕೂತಿರುವಲ್ಲಿ,
ಬಹು ಮಂದಿ ಸುಂಕದವರೂ ಪಾಪಿಗಳೂ ಯೇಸುವಿನ
ಮತ್ತು ಆತನ ಶಿಷ್ಯರ ಪಙ್ಕ್ತಿಯಲ್ಲೇ ಕೂತುಕೊಂಡರು.
1)ಅಂಥವರು ಬಹುಮಂದಿ ಇದ್ದರು. ಫರಿಸಾಯರಾದ 1
ಶಾಸ್ತ್ರಿಗಳು ಆತನ ಹಿಂದೆ ಹೋಗಿ ಆತನು ಪಾಪಿಗಳ
ಮತ್ತು ಸುಂಕದವರ ಸಂಗಡ ಊಟಮಾಡುವದನ್ನು
ಕಂಡು ಆತನ ಶಿಷ್ಯರಿಗೆ— ಈತನು ಸುಂಕದವರ ಮತ್ತು
ಪಾಪಿಗಳ ಸಂಗಡ ಊಟಮಾಡುತ್ತಾನೆ ನೋಡಿರಿ ಎಂದು
ಹೇಳಿದರು. ಯೇಸು ಅದನ್ನು ಕೇಳಿ—ಕ್ಷೇಮದಿಂದಿರು 1
ವವರಿಗೆ ವೈದ್ಯನು ಬೇಕಾಗಿಲ್ಲ; ಕ್ಷೇಮವಿಲ್ಲದವರಿಗೆ
ಬೇಕು. ನಾನು ನೀತಿವಂತರನ್ನು ಕರೆಯುವದಕ್ಕೆ
ಬಂದವನಲ್ಲ, ಪಾಪಿಗಳನ್ನು ಕರೆಯುವದಕ್ಕೆ ಬಂದ
ವನು ಅಂದನು.

### ಯೇಸುವಿನ ಶಿಷ್ಯರು ಉಪವಾಸಮಾಡದ್ದಕ್ಕೆ ಶಾಸ್ತ್ರಿಗಳು ಆತನ ಮೇಲೆ ಆಕ್ಷೇಪಣೆ ಮಾಡಿದ್ದು.

(ಮತ್ತಾ. 9. 14—17; ಲೂಕ 5. 33—38.)

ಇದಲ್ಲದೆ ಯೋಹಾನನ ಶಿಷ್ಯರೂ ಫರಿಸಾಯರೂ 18
ಉಪವಾಸವಾಗಿದ್ದರು. ಅವರು ಆತನ ಬಳಿಗೆ ಬಂದು—
ಯೋಹಾನನ ಶಿಷ್ಯರೂ ಫರಿಸಾಯರ ಶಿಷ್ಯರೂ ಉಪ
ವಾಸಮಾಡುತ್ತಾರಲ್ಲ? ನಿನ್ನ ಶಿಷ್ಯರು ಯಾಕೆ ಉಪ
ವಾಸಮಾಡುವದಿಲ್ಲ? ಎಂದು ಕೇಳಲು ಯೇಸು 19
ಅವರಿಗೆ—ಮದುವೆಯ ಜನರು ತಮ್ಮ ಸಂಗಡ ಮದ
ಲಿಂಗನು ಇರುವಲ್ಲಿ ಉಪವಾಸಮಾಡುವದುಂಟೇ?
ಮದಲಿಂಗನು ತಮ್ಮ ಸಂಗಡ ಇರುವ ತನಕ ಅವರು
ಉಪವಾಸಮಾಡಲಾಗದು. ಆದರೆ ಮದಲಿಂಗನನ್ನು 20
ಅವರ ಬಳಿಯಿಂದ ತೆಗೆದುಕೊಂಡುಹೋಗುವ ಕಾಲ
ಬರುತ್ತದೆ; ಆ ಕಾಲದಲ್ಲೇ ಉಪವಾಸಮಾಡುವರು.
ಯಾರೂ ಹೊಸ ಬಟ್ಟೆಯ ತುಂಡನ್ನು ಹಳೆಯ ವಸ್ತ್ರಕ್ಕೆ 21
ತ್ಯಾಪೆಹಚ್ಚುವದಿಲ್ಲ; ಹಚ್ಚಿದರೆ ಆ ಹೊಸ ತ್ಯಾಪೆಯು
ಹಳೆಯ ವಸ್ತ್ರವನ್ನು ಹಿಂಜುವದರಿಂದ ಹರಕು ಹೆಚ್ಚಾಗು
ವದು. ಮತ್ತು ಹಳೆಯ ಬುದ್ದಲಿಗಳಲ್ಲಿ ಹೊಸ ದ್ರಾಕ್ಷಾ 22
ರಸವನ್ನು ಯಾರೂ ಹಾಕಿಡುವದಿಲ್ಲ; ಇಟ್ಟರೆ ಆ
ದ್ರಾಕ್ಷಾರಸವು ಬುದ್ದಲಿಗಳನ್ನು ಒಡೆದು ದ್ರಾಕ್ಷಾ
ರಸವು ಬುದ್ದಲಿಗಳು ಎರಡೂ ಕೆಟ್ಟುಹೋಗುವವು.
ಆದರೆ ಹೊಸ ದ್ರಾಕ್ಷಾರಸವನ್ನು ಹೊಸ ಬುದ್ದಲಿಗಳಲ್ಲಿ
[ಹಾಕಿಡತಕ್ಕದ್ದು] ಎಂದು ಹೇಳಿದನು.

### ಯೇಸುವೂ ಆತನ ಶಿಷ್ಯರೂ ಸಬ್ಬತ್‍ದಿನವನ್ನು ಅಲಕ್ಷ್ಯ ಮಾಡುತ್ತಾರೆಂದು ಶಾಸ್ತ್ರಿಗಳು ಆತನ ಮೇಲೆ ಆಕ್ಷೇಪಣೆಮಾಡಿದ್ದು.

(ಮತ್ತಾ. 12. 1—14; ಲೂಕ 6. 1—11.)

ಯೇಸು ಸಬ್ಬತ್‍ದಿನದಲ್ಲಿ ಪೈರಿನ ಹೊಲಗಳನ್ನು 23
ಹಾದುಹೋಗುತ್ತಿರುವಾಗ, ಆತನ ಶಿಷ್ಯರು ನಡೆಯು

1) ಪಾಠಾಂತರ: ಅಂಥವರು ಬಹುಮಂದಿ ಇದ್ದರು; ಆತನನ್ನು ಹಿಂಬಾಲಿಸಿದರು. ಆತನು ಪಾಪಿಗಳ .... ಸಂಗಡ ಊಟಮಾಡುವದನ್ನು ಫರಿಸಾಯರಾದ ಶಾಸ್ತ್ರಿಗಳು ಕಂಡು ....

24 ತ್ತಾ ತೆನೆಗಳನ್ನು ಮುರುಕೊಂಡರು. ಫರಿಸಾಯರು
ಆತನನ್ನು—ನೋಡು, ಇವರು ಸಬ್ಬತ್‍ದಿನದಲ್ಲಿ
ಮಾಡಬಾರದ ಕೆಲಸವನ್ನು ಯಾಕೆ ಮಾಡುತ್ತಾರೆ
25 ಎಂದು ಕೇಳಿದರು. ಆತನು ಅವರಿಗೆ—ದಾವೀದನು
ತಾನೂ ತನ್ನ ಸಂಗಡ ಇದ್ದವರೂ ಕೊರತೆಯುಳ್ಳವ
ರಾಗಿ ಹಸಿದಾಗ ಏನು ಮಾಡಿದನೆಂಬದನ್ನು ನೀವು
26 ಎಂದಾದರೂ ಓದಲಿಲ್ಲವೋ? ಅವನು ಮಹಾಯಾ
ಜಕನಾದ ಅಬಿಯಾತರನ ಕಾಲದಲ್ಲಿ ದೇವರಮಂದಿರ
ದೊಳಕ್ಕೆ ಹೋಗಿ ಯಾಜಕರು ಹೊರತು ಮತ್ತಾರೂ
ತಿನ್ನಬಾರದ ನೈವೇದ್ಯದ ರೊಟ್ಟಿಗಳನ್ನು ತಾನು ತಿಂದು
ತನ್ನ ಸಂಗಡ ಇದ್ದವರಿಗೂ ಕೊಟ್ಟನಲ್ಲಾ? ಎಂದು
27 ಹೇಳಿದನು. ಮತ್ತು ಆತನು—ಸಬ್ಬತ್‍ದಿನವು
ಮನುಷ್ಯರಿಗೋಸ್ಕರ ಉಂಟಾಯಿತೇ ಹೊರತು ಮನು
28 ಷ್ಯರು ಸಬ್ಬತ್‍ದಿನಕ್ಕೋಸ್ಕರ ಉಂಟಾಗಲಿಲ್ಲ; ಹೀಗಿರ
ಲಾಗಿ ಮನುಷ್ಯಕುಮಾರನು ಸಬ್ಬತ್‍ದಿನಕ್ಕೂ ಒಡೆಯ
ನಾಗಿದ್ದಾನೆ ಅಂದನು.

3 ಇನ್ನೊಂದು ಸಮಯದಲ್ಲಿ ಯೇಸು ಸಭಾಮಂದಿ
ರಕ್ಕೆ ಹೋದಾಗ ಅಲ್ಲಿ ಕೈಬತ್ತಿಹೋದವನೊಬ್ಬನಿ
2 ದ್ದನು. ಅವರು ಆತನ ಮೇಲೆ ತಪ್ಪುಹೊರಿಸಬೇ
ಕೆಂದು ಆಲೋಚಿಸಿ ಸಬ್ಬತ್‍ದಿನದಲ್ಲಿ ಅವನನ್ನು ಸ್ವಸ್ಥ
ಮಾಡುವನೋ ಏನೋ ಎಂದು ಆತನನ್ನು ಹೊಂಚಿ
3 ನೋಡುತ್ತಾ ಇದ್ದರು. ಆತನು ಕೈಬತ್ತಿದವನಿಗೆ—
4 ಎದ್ದು ನಡುವೆ ಬಾ ಎಂದು ಹೇಳಿ ಅವರಿಗೆ—ಸಬ್ಬತ್
ದಿನದಲ್ಲಿ ಯಾವದನ್ನು ಮಾಡುವದು ನ್ಯಾಯ?
ಮೇಲನ್ನು ಮಾಡುವದೋ, ಕೇಡನ್ನು ಮಾಡುವದೋ?
ಪ್ರಾಣವನ್ನು ಉಳಿಸುವದೋ, ತೆಗೆಯುವದೋ? ಎಂದು
5 ಹೇಳಲು ಅವರು ಸುಮ್ಮನಿದ್ದರು. ಆಗ ಆತನು
ಅವರ ಮನಸ್ಸು ಕಲ್ಲಾಗಿರುವದನ್ನು ಕಂಡು ದುಃಖ
ಪಟ್ಟು ಕೋಪದಿಂದ ಸುತ್ತಲೂ ಅವರನ್ನು ನೋಡಿ ಆ
ಮನುಷ್ಯನಿಗೆ—ನಿನ್ನ ಕೈ ಚಾಚು ಎಂದು ಹೇಳಿದನು.
6 ಅವನು ಚಾಚಿದನು; ಕೈ ವಾಸಿಯಾಯಿತು. ಫರಿಸಾ
ಯರು ಹೊರಕ್ಕೆ ಹೋಗಿ ಕೂಡಲೆ ಹೆರೋದ್ಯರನ್ನು
ಕೂಡಿಕೊಂಡು ಇವನನ್ನು ಯಾವ ಉಪಾಯದಿಂದ
ಕೊಲ್ಲೋಣ ಎಂದು ಆತನಿಗೆ ವಿರೋಧವಾಗಿ ಆಲೋ
ಚನೆ ಮಾಡಿಕೊಂಡರು.

ಯೇಸು ವಿಂಗಡವಾಗಿ ಹೋಗಿ ಹನ್ನೆರಡು ಮಂದಿ
ಅಪೊಸ್ತಲರನ್ನು ನೇಮಿಸಿದ್ದು.
(ಮತ್ತಾ. 10. 1—4; ಲೂಕ 6. 12—19.)

7 ಯೇಸು ತನ್ನ ಶಿಷ್ಯರ ಕೂಡ ಆ ಸ್ಥಳವನ್ನು ಬಿಟ್ಟು
ಸಮುದ್ರದ ಬಳಿಗೆ ಹೋದನು. ಗಲಿಲಾಯದಿಂದ
8 ಬಹುಜನರು ಆತನ ಹಿಂದೆ ಹೋದರು. ಇದಲ್ಲದೆ
ಆತನು ಇಂಥಿಂಥ ಕೆಲಸಗಳನ್ನು ಮಾಡುತ್ತಾನೆಂದು
ಕೇಳಿ ಬಹುಜನರು ಯೂದಾಯದಿಂದಲೂ ಯೆರೂಸ
ಲೇಮಿನಿಂದಲೂ ಇದೂಮಾಯದಿಂದಲೂ ಯೊರ್ದನ್
ಹೊಳೆಯ ಆಚೆಯಿಂದಲೂ ತೂರ್ ಸೀದೋನ್ ಪಟ್ಟಣ
9 ಗಳ ಸುತ್ತಲಿನಿಂದಲೂ ಆತನ ಬಳಿಗೆ ಬಂದರು. ಜನರು
ಗುಂಪಾಗಿದ್ದದರಿಂದ ಮೈಮೇಲೆ ಬಿದ್ದು ನೂಕಾರೆಂದು
ಆತನು ತನಗೆ ಒಂದು ದೋಣಿಯು ಸಿದ್ಧವಾಗಿರಲಿ
ಎಂಬದಾಗಿ ಶಿಷ್ಯರಿಗೆ ಹೇಳಿದನು. ಯಾಕಂದರೆ 10
ಆತನು ಅನೇಕರನ್ನು ಸ್ವಸ್ಥಮಾಡಿದ್ದದರಿಂದ ರೋಗ
ಪೀಡಿತರಾಗಿದ್ದವರೆಲ್ಲರೂ ಆತನನ್ನು ಮುಟ್ಟಬೇಕೆಂದು
ಮೇಲೆ ಬೀಳುತ್ತಿದ್ದರು. ಮತ್ತು ದೆವ್ವಗಳು ಆತ 11
ನನ್ನು ಕಂಡಾಗೆಲ್ಲಾ ಆತನ ಪಾದಕ್ಕೆ ಬಿದ್ದು—ನೀನು
ದೇವಕುಮಾರನೆಂದು ಕೂಗುತ್ತಿದ್ದವು. ಆದರೆ ಆತನು 12
ತಾನು ಇಂಥವನೆಂಬದಾಗಿ ಯಾರಿಗೂ ಪ್ರಕಟಿಸಬಾರ
ದೆಂದು ಅವರಿಗೆ ಬಹು ಖಂಡಿತವಾಗಿ ಹೇಳಿದನು.
ಆ ಮೇಲೆ ಯೇಸು ಬೆಟ್ಟವನ್ನು ಹತ್ತಿ ತನಗೆ ಬೇಕಾ 13
ದವರನ್ನು ಹತ್ತಿರಕ್ಕೆ ಕರೆಯಲು ಅವರು ಆತನ ಬಳಿಗೆ
ಬಂದರು. ಆತನು ಹನ್ನೆರಡು ಮಂದಿಯನ್ನು ಆರಿಸಿ 14
ಅವರು ತನ್ನ ಸಂಗಡ ಇರಬೇಕೆಂತಲೂ ದೆವ್ವಗಳನ್ನು 15
ಬಿಡಿಸುವ ಅಧಿಕಾರವುಳ್ಳವರಾಗಿ ಸುವಾರ್ತೆಯನ್ನು
ಸಾರುವದಕ್ಕೆ ತಾನು ಅವರನ್ನು ಕಳುಹಿಸುವೆನೆಂತಲೂ
ಆ ಹನ್ನೆರಡು ಮಂದಿಯನ್ನು ಆರಿಸಿ ನೇಮಿಸಿದನು.
ಸೀಮೋನನೆಂಬವನಿಗೆ ಪೇತ್ರನೆಂದು ಹೆಸರನ್ನು 16
ಇಟ್ಟನು. ಜೆಬೆದಾಯನ ಮಗನಾದ ಯಾಕೋಬನಿಗೂ 17
ಯಾಕೋಬನ ತಮ್ಮನಾದ ಯೋಹಾನನಿಗೂ ಬೊವನೆ
ರ್ಗೆಸ್ ಅಂದರೆ ಗುಡುಗಿನ ಮರಿಗಳು ಎಂದು ಹೆಸರಿಟ್ಟ
ನು. ಉಳಿದವರು ಯಾರಂದರೆ, ಅಂದ್ರೆಯ, ಫಿಲಿಪ್ಪ, 18
ಬಾರ್ತೊಲೊಮಾಯ, ಮತ್ತಾಯ, ತೋಮ, ಅಲ್ಫಾ
ಯನ ಮಗನಾದ ಯಾಕೋಬ, ತದ್ದಾಯ, ಮತಾಭಿ
ಮಾನಿ ಎಂದು ಹೆಸರುಗೊಂಡ ಸೀಮೋನ, ಯೇಸು 19
ವನ್ನು ಹಿಡುಕೊಟ್ಟ ಇಸ್ಕರಿಯೋತ ಯೂದ, ಇವರೇ.

ಯೇಸುವಿನ ವೈರಿಗಳು ಆತನನ್ನು ದೂಷಿಸಿದ್ದು; ಆತನ ಸ್ವಂತ
ಜನರು ಆತನ ವಿಷಯವಾಗಿ ಅನುಮಾನಪಟ್ಟದ್ದು.
(ಮತ್ತಾ. 12. 22—32; 46—50;
ಲೂಕ 11. 14—22; 8. 19—21.)

ಆತನು ಮನೆಯೊಳಗೆ ಬಂದಾಗ ಜನರು ತಿರಿಗಿ 20
ನೆರೆದದ್ದರಿಂದ ಊಟಕ್ಕೂ ಅವಕಾಶವಾಗಲಿಲ್ಲ. ಇದನ್ನು 21
ಕೇಳಿ ಆತನ ಬಂಧುಗಳು ಅವನಿಗೆ ಹುಚ್ಚುಹಿಡಿದದೆ
ಎಂದು ಹೇಳಿ ಆತನನ್ನು ಹಿಡಿಯುವದಕ್ಕೆ ಹೊರಟರು.
ಇದಲ್ಲದೆ ಯೆರೂಸಲೇಮಿನಿಂದ ಬಂದಿದ್ದ ಶಾಸ್ತ್ರಿ 22
ಗಳು—ಇವನನ್ನು ಬೆಲ್ಜೆಬೂಲನು ಹಿಡಿದಿದ್ದಾನೆಂತಲೂ
ಇವನು ದೆವ್ವಗಳ ಒಡೆಯನ ಸಹಾಯದಿಂದ ದೆವ್ವಗ
ಳನ್ನು ಬಿಡಿಸುತ್ತಾನೆಂತಲೂ ಹೇಳುತ್ತಿದ್ದರು. ಆತನು 23
ಅವರನ್ನು ಹತ್ತಿರಕ್ಕೆ ಕರೆದು ಅವರಿಗೆ ಸಾಮ್ಯರೂಪ
ವಾಗಿ ಹೇಳಿದ್ದೇನಂದರೆ—ಸೈತಾನನು ಸೈತಾನನನ್ನು
ಬಿಡಿಸುವದುಂಟೇ? ಒಂದು ರಾಜ್ಯದಲ್ಲಿ ಭೇದಹುಟ್ಟಿ 24
ದರೆ ಆ ರಾಜ್ಯವು ಉಳಿಯಲಾರದು; ಒಂದು ಮನೆ 25
ಯಲ್ಲಿ ಭೇದಹುಟ್ಟಿದರೆ ಆ ಮನೆಯು ನಿಲ್ಲಲಾರದು.
ಅದರಂತೆ ಸೈತಾನನು ತನಗೆ ವಿರೋಧವಾಗಿ ಎದ್ದು 26
ತನ್ನಲ್ಲಿ ಭೇದಹುಟ್ಟಿಸಿಕೊಂಡರೆ ಅವನು ನಿಲ್ಲಲಾರದೆ
ನಾಶವಾಗಿ ಹೋಗುವನು. ಅದಲ್ಲದೆ ಒಬ್ಬನು 27
ಮೊದಲು ಬಲಿಷ್ಠನನ್ನು ಕಟ್ಟಿಹಾಕದೆ ಆ ಬಲಿಷ್ಠನ
ಮನೆಯನ್ನು ಹೊಕ್ಕು ಅವನ ಸೊತ್ತನ್ನು ಸುಲುಕೊ
ಳ್ಳುವದಕ್ಕಾಗುವದಿಲ್ಲ; ಕಟ್ಟಿಹಾಕಿದ ಮೇಲೆ ಅವನ
ಮನೆಯನ್ನು ಸುಲುಕೊಂಡಾನು. ಇದಲ್ಲದೆ ಅವರು— 30

28 ಇವನಿಗೆ ದೆವ್ವ ಹಿಡಿದದೆ ಎಂದು ಹೇಳಿದ್ದರಿಂದ ಆತನು
ಅವರಿಗೆ—ನಿಮಗೆ ಸತ್ಯವಾಗಿ ಹೇಳುತ್ತೇನೆ, ಮನು
ಷ್ಯರು ಎಷ್ಟು ದೂಷಿಸಿದಾಗ್ಯೂ ಅವರು ಮಾಡುವ
ಎಲ್ಲಾ ಪಾಪಗಳಿಗೂ ದೂಷಣೆಗಳಿಗೂ ಕ್ಷಮಾಪಣೆ
29 ಉಂಟಾಗುವದು, ಆದರೆ ಪವಿತ್ರಾತ್ಮನನ್ನು ದೂಷಿಸಿ
ದವನು ಎಂದಿಗೂ ಕ್ಷಮಾಪಣೆ ಹೊಂದನು; ಅವನು
ಶಾಶ್ವತ ಪಾಪದೊಳಗೆ ಸೇರಿದವನಾದನು ಎಂದು ಹೇಳಿ
ದನು.
31 ಜನರು ಆತನ ಸುತ್ತಲು ಕೂತುಕೊಂಡಿದ್ದಾಗ
ಆತನ ತಾಯಿಯೂ ತಮ್ಮಂದಿರೂ ಬಂದು ಹೊರಗೆ
32 ನಿಂತುಕೊಂಡು ಆತನನ್ನು ಕರೇ ಕಳುಹಿಸಿದರು. ಆ
ಜನರು ಆತನಿಗೆ—ನಿನ್ನ ತಾಯಿಯೂ ನಿನ್ನ ತಮ್ಮಂದಿರೂ
ನಿನ್ನನ್ನು ಹುಡುಕಿಕೊಂಡು ಬಂದು ಹೊರಗೆ ನಿಂತಿರು
33 ತ್ತಾರೆ ನೋಡು ಎಂದು ಹೇಳಿದ್ದಕ್ಕೆ ಆತನು ಅವರಿಗೆ—
ನನಗೆ ತಾಯಿಯೂ ತಮ್ಮಂದಿರೂ ಯಾರು? ಎಂದು
34 ಹೇಳಿ ತನ್ನ ಸುತ್ತಲು ಕೂತಿದ್ದವರನ್ನು ನೋಡಿ—ಇಗೋ,
35 ನನ್ನ ತಾಯಿ, ನನ್ನ ತಮ್ಮಂದಿರು. ದೇವರ ಚಿತ್ತದಂತೆ ನಡೆ
ಯುವವನೇ ನನಗೆ ತಮ್ಮನೂ ತಂಗಿಯೂ ತಾಯಿಯೂ
ಆಗಬೇಕು ಅಂದನು.

### ದೇವರ ರಾಜ್ಯವನ್ನು ಕುರಿತ ಸಾಮ್ಯಗಳು.

(ಮತ್ತಾ. 13. 1—34; ಲೂಕ 8 4—18; 13. 18, 19.)

4 ಆತನು ತಿರಿಗಿ ಸಮುದ್ರದ ದಡದಲ್ಲಿ ಉಪದೇಶ
ಮಾಡುತ್ತಿದ್ದನು. ಬಹುಜನರು ಆತನ ಬಳಿಗೆ ಕೂಡಿ
ಬಂದದ್ದರಿಂದ ಆತನು ಸಮುದ್ರದಲ್ಲಿದ್ದ ದೋಣಿಹತ್ತಿ
ಕೂತುಕೊಂಡನು; ಆ ಜನರೆಲ್ಲರು ಸಮುದ್ರದ ಹತ್ತರ
2 ನೆಲದ ಮೇಲೆ ಇದ್ದರು. ಆಗ ಆತನು ಅವರಿಗೆ
ಸಾಮ್ಯರೂಪವಾಗಿ ಅನೇಕ ಸಂಗತಿಗಳನ್ನು ಉಪದೇಶ
ಮಾಡಿದನು. ಆ ಉಪದೇಶದಲ್ಲಿ ಅವರಿಗೆ ಹೇಳಿದ್ದೇ
ನಂದರೆ—
3 ಕೇಳಿರಿ! ಬಿತ್ತುವವನು ಬಿತ್ತುವದಕ್ಕೆ ಹೊರಟನು.
4 ಬಿತ್ತುವಾಗ ಕೆಲವು ಬೀಜ ದಾರಿಯ ಮಗ್ಗುಲಲ್ಲಿ ಬಿದ್ದ
ವು; ಹಕ್ಕಿಗಳು ಬಂದು ಅವುಗಳನ್ನು ತಿಂದುಬಿಟ್ಟವು.
5 ಬೇರೆ ಕೆಲವು ಬೀಜ ಬಹಳ ಮಣ್ಣಿಲ್ಲದ ಬಂಡೆಯ ನೆಲ
ದಲ್ಲಿ ಬಿದ್ದವು; ಅಲ್ಲಿ ಮಣ್ಣು ತೆಳ್ಳಗಿದ್ದದರಿಂದ ಅವು
6 ಬೇಗ ಮೊಳೆತವು; ಆದರೆ ಬಿಸಲೇರಿದಾಗ ಬಾಡಿ ಬೇರಿ
7 ಲ್ಲದಕಾರಣ ಒಣಗಿಹೋದವು. ಮತ್ತೆ ಕೆಲವು ಬೀಜ
ಮುಳ್ಳುಗಿಡಗಳಲ್ಲಿ ಬಿದ್ದವು; ಮುಳ್ಳುಗಿಡಗಳು ಬೆಳೆದು
ಅವುಗಳನ್ನು ಅಡಗಿಸಿಬಿಟ್ಟದ್ದರಿಂದ ಅವು ಫಲಕೊಡ
8 ಲಿಲ್ಲ. ಇನ್ನು ಕೆಲವು ಬೀಜ ಒಳ್ಳೆಯ ನೆಲದಲ್ಲಿ ಬಿದ್ದು
ಹುಟ್ಟಿ ಬೆಳೆಯುತ್ತಾ ಬಂದು ಒಂದು ಮೂವತ್ತರಷ್ಟು,
9 ಒಂದು ಅರುವತ್ತರಷ್ಟು, ಒಂದು ನೂರರಷ್ಟು ಫಲ
ವನ್ನು ಕೊಟ್ಟವು ಎಂದು ಹೇಳಿ—ಕೇಳುವದಕ್ಕೆ ಕಿವಿ
ಯುಳ್ಳವನು ಕೇಳಲಿ ಅಂದನು.
10 ಆತನು ಒಬ್ಬನೇ ಇದ್ದಾಗ ಆತನ ಹತ್ತಿರ ಇದ್ದ
ವರು ಹನ್ನೆರಡು ಮಂದಿ ಶಿಷ್ಯರ ಕೂಡ ಆ ಸಾಮ್ಯಗಳ
11 ವಿಷಯದಲ್ಲಿ ಆತನನ್ನು ಕೇಳಿದರು. ಆತನು ಅವ
ರಿಗೆ— ದೇವರ ರಾಜ್ಯದ ಗುಟ್ಟು ನಿಮಗೇ ಕೊಟ್ಟಿದೆ;
ಹೊರಗಿನವರಿಗೆ ಎಲ್ಲವೂ ಸಾಮ್ಯದ ಮರೆಯಲ್ಲಿವೆ.
ಅವರು ಕಣ್ಣಿದ್ದು ನೋಡಿದರೂ ಕಾಣಬಾರದು, 12
ಕಿವಿಯಿದ್ದು ಕೇಳಿದರೂ ತಿಳುಕೊಳ್ಳಬಾರದು,
ಹಾಗೆ ಕಂಡು ತಿಳುಕೊಂಡರೆ ಅವರು ದೇವರ
ಕಡೆಗೆ ತಿರುಗಿಕೊಂಡು ಪಾಪಕ್ಷಮೆಯನ್ನು
ಹೊಂದಾರು
ಎಂದೇ ಮರೆಮಾಡಲಾಗಿದೆ. ಆ ಮೇಲೆ ಆತನು 13
ಅವರಿಗೆ ಹೇಳಿದ್ದೇನಂದರೆ—ಈ ಸಾಮ್ಯದ ಅರ್ಥ
ನಿಮಗೆ ಗೊತ್ತಾಗಲಿಲ್ಲವೋ? ಹಾಗಾದರೆ ನನ್ನ ಎಲ್ಲಾ
ಸಾಮ್ಯಗಳನ್ನು ಹೇಗೆ ತಿಳುಕೊಂಡೀರಿ? ಆ ಬಿತ್ತುವ 14
ವನು ವಾಕ್ಯವೆಂಬ ಬೀಜವನ್ನು ಬಿತ್ತುತ್ತಾನೆ. ಕೆಲವರು 15
ವಾಕ್ಯವನ್ನು ಕೇಳಿದ ಕೂಡಲೆ ಸೈತಾನನು ಬಂದು
ಅವರಲ್ಲಿ ಬಿತ್ತಿದ್ದ ವಾಕ್ಯವನ್ನು ತೆಗೆದುಬಿಡುತ್ತಾನೆ.
ಇವರೇ ವಾಕ್ಯವು ಬಿತ್ತಲ್ಪಟ್ಟ ದಾರಿಯ ಮಗ್ಗುಲಾಗಿ
ರುವವರು. ಅದೇ ಪ್ರಕಾರ ಬೇರೆ ಕೆಲವರು 16-17
ವಾಕ್ಯವನ್ನು ಕೇಳಿದ ಕೂಡಲೆ ಸಂತೋಷದಿಂದ ಅದನ್ನು
ಸ್ವೀಕರಿಸುತ್ತಾರೆ; ತಮಗೆ ಬೇರಿಲ್ಲದ ಕಾರಣ ಇವರು
ಸ್ವಲ್ಪ ಕಾಲ ಮಾತ್ರವೇ ಇದ್ದು ಬಳಿಕ ಆ ವಾಕ್ಯದ
ನಿಮಿತ್ತವಾಗಿ ಸಂಕಟವಾಗಲಿ ಹಿಂಸೆಯಾಗಲಿ ಬಂದರೆ
ಬೇಗ ಎಡವಿಬೀಳುತ್ತಾರೆ; ಇವರೇ ಬೀಜಬಿದ್ದ ಬಂಡೆ
ಯ ನೆಲವಾಗಿರುವವರು. ಇನ್ನು ಕೆಲವರು 18-19
ವಾಕ್ಯವನ್ನು ಕೇಳಿದಾಗ್ಯೂ ಪ್ರಪಂಚದ ಚಿಂತೆಗಳೂ
ಐಶ್ವರ್ಯದಿಂದುಂಟಾಗುವ ಮೋಸವೂ ಇತರ ವಿಷಯ
ಗಳ ಮೇಲಣ ಆಶೆಗಳೂ ಒಳಗೆ ಸೇರಿ ಆ ವಾಕ್ಯವನ್ನು
ಅಡಗಿಸಿಬಿಡುವದರಿಂದ ಫಲವನ್ನು ಕೊಡದೆ ಇರುತ್ತಾರೆ;
ಇವರೇ ಮುಳ್ಳುಗಿಡಗಳಲ್ಲಿ ಬೀಜಬಿದ್ದ ನೆಲವಾಗಿರುವ
ವರು. ಮತ್ತೆ ಕೆಲವರು ವಾಕ್ಯವನ್ನು ಕೇಳಿ ಕೈ 20
ಕೊಂಡು ಮೂವತ್ತರಷ್ಟಾಗಲಿ ಅರುವತ್ತರಷ್ಟಾಗಲಿ
ನೂರರಷ್ಟಾಗಲಿ ಫಲವನ್ನು ಕೊಡುತ್ತಾರೆ; ಇವರೇ
ಬೀಜಬಿದ್ದ ಒಳ್ಳೆಯ ನೆಲವಾಗಿರುವವರು ಅಂದನು.
ಇದಲ್ಲದೆ ಆತನು ಅವರಿಗೆ—ದೀಪವನ್ನು ತಂದು 21
ಕೊಳಗದೊಳಗಾಗಲಿ ಮಂಚದ ಕೆಳಗಾಗಲಿ ಇಡುವ
ದುಂಟೇ? ದೀಪಸ್ತಂಭದ ಮೇಲೆ ಇಡುತ್ತಾರಲ್ಲಾ?
ಯಾವದಾಗಲಿ ಪ್ರಕಾಶಕ್ಕೆ ಬರಬೇಕೇ ಹೊರತು ರಹಸ್ಯ 22
ವಾಗಿರುವದಿಲ್ಲ; ಯಾವದಾಗಲಿ ಬೈಲಿಗೆ ಬರಬೇಕೇ
ಹೊರತು ಗುಟ್ಟಾಗಿರುವದಿಲ್ಲ. ಕೇಳುವದಕ್ಕೆ ಕಿವಿ 23
ಯುಳ್ಳವನು ಕೇಳಲಿ ಎಂದು ಹೇಳಿದನು. ಮತ್ತು 24
ಆತನು ಅವರಿಗೆ—ನೀವು ಕಿವಿಗೊಡುವ ವಿಷಯದಲ್ಲಿ
ಎಚ್ಚರಿಕೆ. ನೀವು ಅಳೆಯುವ ಅಳತೆಯಿಂದಲೇ ನಿಮಗೂ
ಅಳೆಯುವರು; ಇನ್ನೂ ಕೂಡಿಸಿಕೊಡುವರು. ಇದ್ದವ
ನಿಗೆ ಕೊಡಲ್ಪಡುವದು; ಇಲ್ಲದವನ ಕಡೆಯಿಂದ 25
ಇದ್ದದ್ದೂ ತೆಗೆಯಲ್ಪಡುವದು ಎಂದು ಹೇಳಿದನು.
ಇನ್ನೂ ಆತನು ಅವರಿಗೆ ಹೇಳಿದ್ದು—ಒಬ್ಬನು 26
ಭೂಮಿಯಲ್ಲಿ ಬೀಜವನ್ನು ಹಾಕಿ ರಾತ್ರಿ ಮಲಗುತ್ತಾ
ಹಗಲು ಎದ್ದಿರುತ್ತಾ ಇರಲು ಅವನಿಗೆ ತಿಳಿಯದ ರೀತಿ 27
ಯಲ್ಲಿ ಆ ಬೀಜವು ಹುಟ್ಟಿ ಬೆಳೆಯುವದು. ಇದ
ರಂತೆ ದೇವರ ರಾಜ್ಯ. ಭೂಮಿಯು ಮೊದಲು ಗರಿ 28
ಯನ್ನೂ, ಆ ಮೇಲೆ ಹೊಡೆಯನ್ನೂ, ತರುವಾಯ
ತೆನೆಯಲ್ಲಿ ತುಂಬಾ ಕಾಳನ್ನೂ ತನ್ನಷ್ಟಕ್ಕೆ ತಾನೇ
ಹುಟ್ಟಿಸುತ್ತದೆ. ಆದರೆ ಫಲಮಾಗಿದ ಕೂಡಲೆ ಅವನು 29
ಸುಗ್ಗಿ ಕಾಲ ಬಂತೆಂದು ಕೊಯಿಸುತ್ತಾನೆ ಅಂದನು.

30 ಇನ್ನೂ ಆತನು ಹೇಳಿದ್ದು—ದೇವರ ರಾಜ್ಯವನ್ನು
ಯಾವದಕ್ಕೆ ಹೋಲಿಸೋಣ? ಯಾವ ಸಾಮ್ಯದಿಂದ
31 ಅದನ್ನು ತೋರಿಸಿಕೊಡೋಣ? ಅದು ಸಾಸಿವೆಕಾಳಿ
ನಂತಿರುತ್ತದೆ. ಭೂಮಿಯಲ್ಲಿ ಬಿತ್ತುವಾಗ ಅದು
ಭೂಮಿಯಲ್ಲಿರುವ ಎಲ್ಲಾ ಬೀಜಗಳಿಗಿಂತಲೂ ಸಣ್ಣ
32 ದಾಗಿದೆ. ಬಿತ್ತಿದ ಮೇಲೆ ಅದು ಬೆಳೆದು ಎಲ್ಲಾ
ಕಾಯಿಪಲ್ಯದ ಗಿಡಗಳಿಗಿಂತ ದೊಡ್ಡದಾಗಿ ದೊಡ್ಡದೊಡ್ಡ
ಕೊಂಬೆಗಳನ್ನು ಬಿಡುವದರಿಂದ ಆಕಾಶದಲ್ಲಿ ಹಾರಾ
ಡುವ ಹಕ್ಕಿಗಳು ಅದರ ನೆರಳಿನಲ್ಲಿ ವಾಸಮಾಡುವದ
ಕ್ಕಾಗುತ್ತದೆ ಅಂದನು.
33 ಆತನು ಈ ತರದ ಅನೇಕ ಸಾಮ್ಯಗಳಿಂದ ಜನರ
ಗ್ರಹಿಕೆಗೆ ತಕ್ಕ ಹಾಗೆ ದೇವರ ವಾಕ್ಯವನ್ನು ಹೇಳುತ್ತಿ
34 ದ್ದನು. ಸಾಮ್ಯವಿಲ್ಲದೆ ಅವರಿಗೆ ಹೇಳಲಿಲ್ಲ. ಆದರೆ
ಪ್ರತ್ಯೇಕವಾಗಿ ಆತನು ತನ್ನ ಆಪ್ತಶಿಷ್ಯರಿಗೆ ಎಲ್ಲವನ್ನು
ಬಿಚ್ಚಿ ಹೇಳಿದನು.

ಯೇಸು ಸಮುದ್ರದ ಮೇಲಣ ಬಿರುಗಾಳಿಯನ್ನು ನಿಲ್ಲಿಸಿದ್ದು.
(ಮತ್ತಾ. 8. 23—27; ಲೂಕ 8. 22—25.)

35 ಆ ಹೊತ್ತು ಸಾಯಂಕಾಲವಾದಾಗ ಆತನು ಅವ
ರಿಗೆ—ಆಚೇದಡಕ್ಕೆ ಹೋಗೋಣ ಎಂದು ಹೇಳಲು
36 ಅವರು ಆ ಜನರ ಗುಂಪನ್ನು ಬಿಟ್ಟು ಆತನನ್ನು ಅದೇ
ದೋಣಿಯಲ್ಲಿ ಹಾಗೆಯೇ ಕರಕೊಂಡುಹೋದರು.
37 ಬೇರೆ ದೋಣಿಗಳೂ ಆತನ ಸಂಗಡ ಇದ್ದವು. ತರು
ವಾಯ ದೊಡ್ಡ ಬಿರುಗಾಳಿ ಎದ್ದು ತೆರೆಗಳು ಆ
ದೋಣಿಗೆ ಬಡಿದು ಒಳಗೆ ನುಗ್ಗಿದ್ದರಿಂದ ಆ ದೋಣಿ
38 ಆಗಲೇ ತುಂಬುವದಕ್ಕೆ ಬಂದಿತ್ತು. ಆತನು ದೋಣಿಯ
ಹಿಂಭಾಗದಲ್ಲಿ ತಲೆಗಿಂಬನ್ನು ಒರಗಿ ನಿದ್ದೆಮಾಡುತ್ತಿ
ದ್ದನು. ಅವರು ಆತನನ್ನು ಎಬ್ಬಿಸಿ—ಗುರುವೇ,
ನಾವು ಮುಳುಗಿಹೋಗುವದರಲ್ಲಿ ನಿನಗೆ ಚಿಂತೆಯಿ
39 ಲ್ಲವೇ ಎಂದು ಕೇಳಲು ಆತನು ಎದ್ದು ಗಾಳಿಯನ್ನು
ಗದರಿಸಿ ಸಮುದ್ರಕ್ಕೆ—ಸುಮ್ಮನಿರು, ಮೊರೆಯಬೇಡ
ಎಂದು ಅಪ್ಪಣೆಕೊಟ್ಟನು. ಕೊಡುತ್ತಲೆ ಗಾಳಿ ನಿಂತು
40 ಹೋಗಿ ಎಲ್ಲಾ ಶಾಂತವಾಯಿತು. ತರುವಾಯ
ಆತನು ಅವರನ್ನು—ಯಾಕೆ ಧೈರ್ಯಗೆಡುತ್ತೀರಿ?
ಇನ್ನೂ ನಿಮಗೆ ನಂಬಿಕೆಯಿಲ್ಲವೇ ಎಂದು ಕೇಳಲು
41 ಅವರು ಬಹು ಭಯಪಟ್ಟು—ಈತನು ಯಾರಿರ
ಬಹುದು? ಗಾಳಿಯೂ ಸಮುದ್ರವೂ ಸಹ ಈತನು
ಹೇಳಿದ ಹಾಗೆ ಕೇಳುತ್ತವಲ್ಲಾ ಎಂದು ತಮ್ಮತಮ್ಮೊ
ಳಗೆ ಮಾತಾಡಿಕೊಂಡರು.

ದೆವ್ವಗಳ ದಂಡಿನಿಂದ ಹಿಡಿಯಲ್ಪಟ್ಟವನನ್ನು ಕುರಿತದ್ದು.
(ಮತ್ತಾ. 8. 28—34; ಲೂಕ 8. 26—39.)

5 ಆ ಮೇಲೆ ಅವರು ಸಮುದ್ರದ ಆಚೇದಡಕ್ಕೆ ಗೆರ
2 ಸೇನರ ಸೀಮೆಗೆ ಮುಟ್ಟಿದರು. ಆತನು ದೋಣಿ
ಯಿಂದ ಇಳಿದುಬಂದ ಕೂಡಲೆ ದೆವ್ವಹಿಡಿದವನೊ
ಬ್ಬನು ಸಮಾಧಿಯ ಗವಿಗಳೊಳಗಿಂದ ಆತನೆದುರಿಗೆ
ಬಂದನು. ಅವನಿಗೆ ಸಮಾಧಿಯ ಗವಿಗಳೇ ವಾಸ 3-4
ಸ್ಥಳವಾಗಿದ್ದವು. ಅವನನ್ನು ಅನೇಕಸಾರಿ ಬೇಡಿ
ಗಳಿಂದಲೂ ಸರಪಣಿಗಳಿಂದಲೂ ಕಟ್ಟಿದ್ದರೂ ಅವನು
ಸರಪಣಿಗಳನ್ನು ಕಿತ್ತು ಬೇಡಿಗಳನ್ನು ಮುರಿದು
ಹಾಕಿದ್ದನು; ಅವನನ್ನು ಇನ್ನು ಯಾರೂ ಸರಪಣಿ
ಯಿಂದಾದರೂ ಕಟ್ಟಲಾರದೆ ಹೋದರು; ಅವನನ್ನು
ಹತೋಟಿಗೆ ತರುವದಕ್ಕೆ ಯಾರಿಂದಲೂ ಆಗಲಿಲ್ಲ.
ಅವನು ನಿತ್ಯ ರಾತ್ರಿಹಗಲು ಸಮಾಧಿಯ ಗವಿಗಳ 5
ಲ್ಲಿಯೂ ಗುಡ್ಡಗಳಲ್ಲಿಯೂ ಆರ್ಭಟಿಸುತ್ತಾ ಕಲ್ಲು
ಗಳಿಂದ ತನ್ನನ್ನು ಕಡಿದುಕೊಳ್ಳುತ್ತಾ ಇದ್ದನು. ಅವನು 6
ಯೇಸುವನ್ನು ದೂರದಿಂದ ಕಂಡು ಓಡಿಬಂದು ಆತನಿಗೆ
ಅಡ್ಡಬಿದ್ದು ಮಹಾಶಬ್ದದಿಂದ ಆರ್ಭಟಿಸಿ—ಯೇಸುವೇ, 7
ಪರಾತ್ಪರನಾದ ದೇವರ ಮಗನೇ, ನನ್ನ ಗೊಡವೆ
ನಿನಗೇಕೆ? ದೇವರಾಣೆ, ನನ್ನನ್ನು ಕಾಡಬೇಡ ಎಂದು
ಹೇಳಿದನು. ಯಾಕಂದರೆ—ಎಲಾ ದೆವ್ವಾ, ಇವನನ್ನು 8
ಬಿಟ್ಟುಹೋಗು ಎಂದು ಯೇಸು ಹೇಳಿದ್ದನು.
ಮತ್ತು—ನಿನ್ನ ಹೆಸರೇನೆಂದು ಅವನನ್ನು ಕೇಳಿದ್ದಕ್ಕೆ 9
ಅವನು—ನನ್ನ ಹೆಸರು ದಂಡು; ಯಾಕಂದರೆ ನಾವು
ಬಹು ಮಂದಿ ಇದ್ದೇವೆ ಎಂದು ಹೇಳಿ—ನಮ್ಮನ್ನು ಈ 10
ಸೀಮೆಯಿಂದ ಹೊರಡಿಸಬೇಡವೆಂದು ಆತನನ್ನು ಬಹಳ
ವಾಗಿ ಬೇಡಿಕೊಂಡನು. ಅಲ್ಲಿಯ ಗುಡ್ಡದಲ್ಲಿ ಹಂದಿ 11
ಗಳ ದೊಡ್ಡ ಹಿಂಡು ಮೇಯುತ್ತಿತ್ತು. ಆ ದೆವ್ವ 12
ಗಳು—ಆ ಹಂದಿಗಳೊಳಗೆ ಸೇರಿಕೊಳ್ಳುವದಕ್ಕೆ
ನಮ್ಮನ್ನು ಕಳುಹಿಸಿಕೊಡು ಎಂದು ಬೇಡಿಕೊಂಡವು.
ಆತನು—ಆಗಲಿ ಎಂದು ಅವುಗಳಿಗೆ ಅಪ್ಪಣೆಕೊಡಲು 13
ಆ ದೆವ್ವಗಳು ಹೊರಗೆ ಬಂದು ಹಂದಿಗಳೊಳಗೆ ಹೊ
ಕ್ಕವು; ಆ ಗುಂಪು ಓಡಿ ಕಡಿದಾದ ಸ್ಥಳದಿಂದ ಸಮುದ್ರ
ದೊಳಗೆ ಬಿದ್ದು ಅಲ್ಲಿ ಉಸುರುಕಟ್ಟಿ ಸತ್ತಿತು. ಹೆಚ್ಚು
ಕಡಿಮೆ ಎರಡು ಸಾವಿರ ಹಂದಿಗಳಿದ್ದವು. ಅವುಗ 14
ಳನ್ನು ಮೇಯಿಸುವವರು ಓಡಿಹೋಗಿ ಆ ಊರಲ್ಲಿ
ಯೂ ಹಳ್ಳಿಗಳಲ್ಲಿಯೂ ತಿಳಿಸಲು ಜನರು ನಡೆದ
ಸಂಗತಿ ಏನೆಂದು ನೋಡುವದಕ್ಕೆ ಹೊರಟು ಯೇಸು
ಇದ್ದಲ್ಲಿಗೆ ಬಂದು ಆ ದೆವ್ವಹಿಡಿದಿದ್ದವನು, ಅಂದರೆ 15
ದೆವ್ವಗಳ ದಂಡಿನಿಂದ ಹಿಡಿಯಲ್ಪಟ್ಟಿದ್ದವನು, ಬಟ್ಟೆಗ
ಳನ್ನು ಹಾಕಿಕೊಂಡು ಸ್ವಸ್ಥಬುದ್ಧಿಯಿಂದ ಕೂತಿರುವ
ದನ್ನು ನೋಡಿ ಹೆದರಿದರು. ನಡೆದ ಸಂಗತಿಯನ್ನು 16
ನೋಡಿದ್ದವರು ಆ ದೆವ್ವಹಿಡಿದಿದ್ದವನಿಗೆ ಹೀಗೆಹೀಗಾ
ಯಿತೆಂಬದನ್ನೂ ಹಂದಿಗಳ ವಿಷಯವನ್ನೂ ಅವರಿಗೆ
ವಿವರಿಸಲು ಅವರು ತಮ್ಮ ಸೀಮೆಯನ್ನು ಬಿಟ್ಟು 17
ಹೋಗಬೇಕೆಂದು ಯೇಸುವನ್ನು ಬೇಡಿಕೊಂಡರು.
ಆತನು ದೋಣಿಯನ್ನು ಹತ್ತುವಾಗ ಆ ದೆವ್ವಹಿಡಿದಿದ್ದ 18
ವನು—ನಾನು ನಿನ್ನ ಬಳಿಯಲ್ಲಿಯೇ ಇರುತ್ತೇನೆಂದು
ಆತನನ್ನು ಬೇಡತೊಡಗಿದನು. ಆದರೆ ಆತನು ಅವ 19
ನನ್ನು ಇರಗೊಡದೆ ಅವನಿಗೆ—ನೀನು ನಿನ್ನ ಮನೆಗೂ
ನಿನ್ನ ಜನರ ಬಳಿಗೂ ಹೋಗಿ ಸ್ವಾಮಿಯು ನಿನ್ನಲ್ಲಿ
ಕರುಣೆಯಿಟ್ಟು ನಿನಗೆ ಎಂಥೆಂಥ ಉಪಕಾರಗಳನ್ನು
ಮಾಡಿದ್ದಾನೋ ಅದನ್ನು ಹೇಳು ಅಂದನು. ಅವನು 20
ಹೊರಟುಹೋಗಿ ಯೇಸು ತನಗೆ ಮಾಡಿದ ಉಪಕಾರ
ಗಳನ್ನು ದೆಕಪೊಲಿ ಎಂಬ ಸೀಮೆಯಲ್ಲಿ ಸಾರುವದಕ್ಕೆ
ಪ್ರಾರಂಭಿಸಿದನು; ಎಲ್ಲರೂ ಆಶ್ಚರ್ಯಪಟ್ಟರು.

ಯೇಸು ಸತ್ತ ಹುಡುಗಿಯನ್ನು ಬದುಕಿಸಿದ್ದು; ಮತ್ತು ಒಬ್ಬ
ಸ್ತ್ರೀಯ ರಕ್ತಕುಸುಮರೋಗವನ್ನು ವಾಸಿಮಾಡಿದ್ದು.
(ಮತ್ತಾ. 9. 18—26; ಲೂಕ 8. 40—56.)

21 ಯೇಸು ತಿರಿಗಿ ದೋಣಿಯಲ್ಲಿ ಈಚೇದಡಕ್ಕೆ ಬಂ
ದಾಗ ಜನರು ಬಹು ದೊಡ್ಡ ಗುಂಪಾಗಿ ಆತನ ಬಳಿಗೆ
22 ಬಂದರು; ಆತನು ಸಮುದ್ರದ ದಡದಲ್ಲಿದ್ದನು. ಆಗ
ಸಭಾಮಂದಿರದ ಅಧಿಕಾರಿಗಳಲ್ಲಿ ಒಬ್ಬನಾದ ಯಾ
ಯಿರನೆಂಬವನು ಬಂದು ಯೇಸುವನ್ನು ಕಂಡು ಆತನ
23 ಪಾದಗಳಿಗೆ ಬಿದ್ದು—ನನ್ನ ಚಿಕ್ಕ ಮಗಳು ಈಗ
ಸಾಯುತ್ತಾಳೆ; ಆಕೆಯು ವಾಸಿಯಾಗಿ ಬದುಕಿ
ಕೊಳ್ಳುವಂತೆ ನೀನು ಬಂದು ಆಕೆಯ ಮೇಲೆ ಕೈಯಿಡ
ಬೇಕು ಎಂದು ಆತನನ್ನು ಬಹಳವಾಗಿ ಬೇಡಿಕೊಂಡನು.
24 ಆತನು ಅವನ ಸಂಗಡ ಹೋದನು; ಮತ್ತು ಬಹು
ಜನರು ಆತನನ್ನು ನೂಕಿಕೊಂಡು ಹಿಂದೆ ಹೋದರು.
25 ಆಗ ಹನ್ನೆರಡು ವರುಷದಿಂದ ರಕ್ತಕುಸುಮರೋಗ
26 ವಿದ್ದ ಒಬ್ಬ ಹೆಂಗಸು ಬಂದಳು. ಆಕೆಯು ಅನೇಕ
ವೈದ್ಯರಿಂದ ಬಹು ಕಷ್ಟವನ್ನು ಅನುಭವಿಸಿ ಕೈಯಲ್ಲಿ
ದ್ದುದ್ದನ್ನೆಲ್ಲಾ ಕಳಕೊಂಡರೂ ರೋಗವು ಹೆಚ್ಚುತ್ತಾ
ಬಂದದ್ದೇ ಹೊರತು ಮತ್ತೇನು ಪ್ರಯೋಜನವನ್ನೂ
27-28 ಹೊಂದಿರಲಿಲ್ಲ. ಆ ಹೆಂಗಸು ಯೇಸುವಿನ ಸಮಾ
ಚಾರವನ್ನು ಕೇಳಿ—ನಾನು ಆತನ ಉಡುಪನ್ನು ಮುಟ್ಟಿ
ದರೆ ಸಾಕು, ನೆಟ್ಟಗಾಗುವೆನು ಎಂದು ಆಲೋಚಿಸಿ
29 ಗುಂಪಿನಲ್ಲಿ ಹಿಂದಿನಿಂದ ಬಂದು ಆತನ ಉಡುಪನ್ನು
ಮುಟ್ಟಿದಳು. ಮುಟ್ಟಿದ ಕೂಡಲೆ ಆಕೆಗೆ ರಕ್ತಹರಿ
ಯುವದು ನಿಂತುಹೋದದರಿಂದ ಆಕೆಯು—ನನ್ನನ್ನು
ಕಾಡಿದ ರೋಗವು ಹೋಗಿ ನನಗೆ ಗುಣವಾಯಿತು
30 ಎಂದು ತನ್ನೊಳಗೆ ತಿಳುಕೊಂಡಳು. ಆ ಕ್ಷಣವೇ
ಯೇಸು ತನ್ನಿಂದ ಶಕ್ತಿಯು ಹೊರಟಿತೆಂದು ತನ್ನಲ್ಲಿ
ತಿಳುಕೊಂಡು ಗುಂಪಿನಲ್ಲಿ ಹಿಂತಿರುಗಿ—ನನ್ನ ಉಡು
ಪನ್ನು ಯಾರು ಮುಟ್ಟಿದರು? ಎಂದು ಕೇಳಲು
31 ಆತನ ಶಿಷ್ಯರು ಆತನಿಗೆ—ಜನರು ನಿನ್ನನ್ನು ನೂಕುವ
ದನ್ನು ಕಂಡೂ ಕಂಡು ನನ್ನನ್ನು ಯಾರು ಮುಟ್ಟಿದ
32 ರೆಂದು ಕೇಳುತ್ತೀಯಲ್ಲಾ ಎಂದು ಹೇಳಿದರು. ಆದರೆ
ಆತನು ಈ ಕೆಲಸ ಮಾಡಿದವಳನ್ನು ಕಾಣಬೇಕೆಂದು
33 ಸುತ್ತಲು ನೋಡುತ್ತಾ ಇರಲಾಗಿ ಆ ಹೆಂಗಸು ತನ
ಗಾದದ್ದನ್ನು ತಿಳುಕೊಂಡು ಅಂಜಿ ನಡುಗುತ್ತಾ ಬಂದು
ಆತನಿಗೆ ಅಡ್ಡಬಿದ್ದು ಇದ್ದ ಸಂಗತಿಯನ್ನೆಲ್ಲಾ ಹೇಳಿ
34 ದಳು. ಆತನು ಆಕೆಗೆ—ಮಗಳೇ, ನಿನ್ನ ನಂಬಿಕೆಯೇ
ನಿನ್ನನ್ನು ಸ್ವಸ್ಥಮಾಡಿತು; ಸಮಾಧಾನದಿಂದ ಹೋಗು;
ನಿನ್ನನ್ನು ಕಾಡಿದ ರೋಗವು ಹೋಗಿ ನಿನಗೆ ಗುಣವಾ
ಗಲಿ ಎಂದು ಹೇಳಿದನು.
35 ಆತನು ಇನ್ನೂ ಮಾತಾಡುತ್ತಿರುವಲ್ಲಿ ಸಭಾಮಂದಿ
ರದ ಅಧಿಕಾರಿಯ ಕಡೆಯವರು ಬಂದು—ನಿನ್ನ ಮಗ
ಳು ತೀರಿಹೋದಳು; ಇನ್ನೇಕೆ ಗುರುವಿಗೆ ತೊಂದರೆ
36 ಕೊಡುವದು? ಅಂದರು. ಅವರು ಆಡಿದ ಮಾತನ್ನು
ಯೇಸು ಲಕ್ಷ್ಯಮಾಡದೆ ಸಭಾಮಂದಿರದ ಅಧಿಕಾ
ರಿಗೆ—ಅಂಜಬೇಡ, ನಂಬಿಕೆ ಮಾತ್ರ ಇರಲಿ ಎಂದು
37 ಹೇಳಿದನು. ಮತ್ತು ಆತನು ಪೇತ್ರ, ಯಾಕೋಬ,
ಯಾಕೋಬನ ತಮ್ಮನಾದ ಯೋಹಾನ ಇವರನ್ನೇ
ಹೊರತು ಬೇರೆ ಯಾರನ್ನೂ ತನ್ನೊಂದಿಗೆ ಬರಗೊಡ
ಲಿಲ್ಲ. ಅವರು ಆ ಸಭಾಮಂದಿರದ ಅಧಿಕಾರಿಯ 3
ಮನೆಗೆ ಬಂದಾಗ ಆತನು ಗದ್ದಲವನ್ನೂ ಕೆಲವರು
ಬಹಳವಾಗಿ ಅಳುವದನ್ನೂ ಗೋಳಾಡುವದನ್ನೂ
ಕಂಡನು. ಆತನು ಒಳಕ್ಕೆ ಹೋಗಿ—ನೀವು ಗದ್ದಲ 3
ಮಾಡುವದೂ ಅಳುವದೂ ಯಾಕೆ? ಹುಡುಗಿ
ಸತ್ತಿಲ್ಲ; ನಿದ್ದೆಮಾಡುತ್ತಾಳೆ ಅನ್ನಲು ಅವರು ಆತ 4
ನನ್ನು ಹಾಸ್ಯಮಾಡಿದರು. ಆದರೆ ಆತನು ಎಲ್ಲರನ್ನು
ಹೊರಕ್ಕೆ ಕಳುಹಿಸಿ ಆ ಹುಡುಗಿಯ ತಂದೆತಾಯಿಗ
ಳನ್ನೂ ತನ್ನೊಂದಿಗಿದ್ದವರನ್ನೂ ಹುಡುಗಿಯಿದ್ದಲ್ಲಿಗೆ
ಕರಕೊಂಡು ಹೋಗಿ ಅವಳ ಕೈಹಿಡಿದು—ತಲಿಥಾ 4
ಕೂಮ್ ಅಂದನು. ಈ ಮಾತಿಗೆ—ಅಮ್ಮಣ್ಣೀ,
ಏಳನ್ನುತ್ತೇನೆ ಎಂದರ್ಥ. ಕೂಡಲೆ ಆ ಹುಡುಗಿ 4
ಎದ್ದು ನಡೆದಾಡಿದಳು; ಆಕೆಯು ಹನ್ನೆರಡು ವರುಷ
ವಯಸ್ಸಿನವಳು. ಅವರು ಬಹಳ ಆಶ್ಚರ್ಯದಿಂದ 4
ಬೆರಗಾದರು. ಆ ಮೇಲೆ ಆತನು ಅವರಿಗೆ—ಇದು
ಯಾರಿಗೂ ತಿಳಿಯಬಾರದೆಂದು ಬಹು ಖಂಡಿತವಾಗಿ
ಹೇಳಿ ಆ ಹುಡುಗಿಗೆ ಊಟಮಾಡಿಸಿರಿ ಅಂದನು.

ಯೇಸುವಿನ ಸ್ವಂತ ಊರಿನವರು ಆತನನ್ನು ತಾತ್ಸಾರಮಾಡಿದ್ದು.
(ಮತ್ತಾ. 13. 54—58; ಲೂಕ 4. 15—30.)

6 ಆತನು ಅಲ್ಲಿಂದ ಹೊರಟು ತನ್ನ ಊರಿಗೆ ಬಂದ
ನು; ಶಿಷ್ಯರು ಆತನ ಹಿಂದೆಯೇ ಬಂದರು. ಸಬ್ಬತ್ 2
ದಿನ ಬಂದಾಗ ಆತನು ಸಭಾಮಂದಿರಕ್ಕೆ ಹೋಗಿ ಉಪ
ದೇಶಮಾಡುವದಕ್ಕೆ ಪ್ರಾರಂಭಿಸಿದನು. ಎಲ್ಲರು ಕೇಳಿ
ಅತ್ಯಾಶ್ಚರ್ಯಪಟ್ಟು—ಇವನಿಗೆ ಈ ಮಾತುಗಳು
ಎಲ್ಲಿಂದ ಬಂದಿದ್ದಾವು? ಇವನು ಪಡೆದಿರುವ ಈ
ಜ್ಞಾನವೇನು? ಇವನ ಕೈಯಿಂದ ಇಂಥ ಮಹತ್ಕಾ
ರ್ಯಗಳಾಗುವದೇನು? ಇವನು ಆ ಬಡಗಿಯಲ್ಲವೇ.
ಇವನು ಮರಿಯಳ ಮಗನಲ್ಲವೇ. ಯಾಕೋಬ
ಯೋಸೆ ಯೂದ ಸೀಮೋನ ಇವರ ಅಣ್ಣನಲ್ಲವೇ.
ಇವನ ತಂಗಿಯರು ಇಲ್ಲಿ ನಮ್ಮಲ್ಲಿ ಇದ್ದಾರಲ್ಲವೇ
ಎಂದು ಮಾತಾಡಿಕೊಂಡು ಆತನ ವಿಷಯವಾಗಿ ಬೇಸರ
ಗೊಂಡರು. ಯೇಸು ಅವರಿಗೆ—ಪ್ರವಾದಿಯು ಬೇರೆ
ಎಲ್ಲಿದ್ದರೂ ಅವನಿಗೆ ಮರ್ಯಾದೆ ಉಂಟು; ಆದರೆ
ಸ್ವದೇಶದಲ್ಲಿಯೂ ಸ್ವಂತ ಜನರಲ್ಲಿಯೂ ಸ್ವಂತ ಮನೆ
ಯಲ್ಲಿಯೂ ಮಾತ್ರ ಮರ್ಯಾದೆಯಿಲ್ಲ ಎಂದು ಹೇಳಿ
ದನು. ಆತನು ಅಲ್ಲಿ ಕೆಲವು ಮಂದಿ ರೋಗಿಗಳ
ಮೇಲೆ ಕೈಯಿಟ್ಟು ಸ್ವಸ್ಥಮಾಡಿದ್ದೇ ಹೊರತು ಬೇರೆ
ಯಾವ ಮಹತ್ಕಾರ್ಯವನ್ನೂ ಮಾಡುವದಕ್ಕಾಗಲಿಲ್ಲ.
ಅವರು ತನ್ನನ್ನು ನಂಬದೆಹೋದದ್ದಕ್ಕೆ ಆತನು ಆಶ್ಚ
ರ್ಯಪಟ್ಟನು.

ಯೇಸು ಹನ್ನೆರಡು ಮಂದಿ ಶಿಷ್ಯರನ್ನು ಸುವಾರ್ತೆಸಾರುವದಕ್ಕೆ
ಕಳುಹಿಸಿದ್ದು.
(ಮತ್ತಾ. 9. 35—10. 14; ಲೂಕ 9. 1—6.)

ಆತನು ಹಳ್ಳಿಪಳ್ಳಿಗಳನ್ನು ಸುತ್ತಿಕೊಂಡು ಉಪದೇಶ
ಮಾಡುತ್ತಾ ಬಂದನು. ಮತ್ತು ಹನ್ನೆರಡು ಮಂದಿ

ಶಿಷ್ಯರನ್ನು ಹತ್ತಿರಕ್ಕೆ ಕರೆದು ಅವರನ್ನು ಇಬ್ಬರಿಬ್ಬ
ರಾಗಿ ಕಳುಹಿಸಲಾರಂಭಿಸಿದನು. ಕಳುಹಿಸುವಾಗ
8 ಅವರಿಗೆ ದೆವ್ವಗಳ ಮೇಲೆ ಅಧಿಕಾರ ಕೊಟ್ಟು—ಕೋಲು
ಹೊರತು ದಾರಿಗೆ ಏನೂ ತಕ್ಕೊಂಡು ಹೋಗಬೇಡಿರಿ;
9 ಬುತ್ತಿ, ಹಸಿಬೆ, ಹಮ್ಮಿಣಿಯಲ್ಲಿ ದುಡ್ಡು ಬೇಡ. ಕೆರ
ಗಳನ್ನು ಮೆಟ್ಟಿಕೊಳ್ಳಬಹುದು. ಎರಡು ಅಂಗಿಗಳನ್ನು
10 ತೊಟ್ಟುಕೊಳ್ಳಬೇಡಿರಿ ಎಂದು ಅಪ್ಪಣೆಕೊಟ್ಟನು. ಇದ
ಲ್ಲದೆ ಆತನು ಅವರಿಗೆ—ನೀವು ಎಲ್ಲಿಯಾದರೂ ಒಂದು
ಮನೆಯಲ್ಲಿ ಇಳುಕೊಂಡಾಗ ಆ ಸ್ಥಳದಿಂದ ಹೊರ
11 ಡುವ ತನಕ ಅಲ್ಲೇ ಇರಿ. ಮತ್ತು ಯಾವ ಸ್ಥಳದವ
ರಾದರೂ ನಿಮ್ಮನ್ನು ಸೇರಿಸಿಕೊಳ್ಳದೆಯೂ ನೀವು
ಹೇಳುವದನ್ನು ಕೇಳದೆಯೂ ಹೋದರೆ ಆ ಸ್ಥಳದಿಂದ
ಹೊರಟುಹೋಗುವಾಗ ನಿಮ್ಮ ಕಾಲಿಗೆ ಹತ್ತಿದ
ಧೂಳನ್ನು ಝಾಡಿಸಿಬಿಡಿರಿ; ಅದು ಅವರಿಗೆ ಸಾಕ್ಷಿ
12 ಯಾಗಿರಲಿ ಎಂದು ಹೇಳಿದನು. ಅವರು ಹೊರಟು
ಹೋಗಿ ಜನರಿಗೆ—ದೇವರ ಕಡೆಗೆ ತಿರುಗಿಕೊಳ್ಳ
13 ಬೇಕೆಂದು ಸಾರಿ ಅನೇಕ ದೆವ್ವಗಳನ್ನು ಬಿಡಿಸಿ
ಅನೇಕ ರೋಗಿಗಳಿಗೆ ಎಣ್ಣೆಹಚ್ಚಿ ವಾಸಿಮಾಡಿದರು.

ಅರಸನು ಸ್ನಾನಿಕನಾದ ಯೋಹಾನನನ್ನು ಕೊಲ್ಲಿಸಿದ ಮೇಲೆ ಯೇಸುವಿನ ಸುದ್ದಿಯನ್ನು ಕೇಳಿ ದಿಗಿಲುಬಿದ್ದದ್ದು.
(ಮತ್ತಾ. 14. 1—12; ಲೂಕ 9. 7—9; 3. 19, 20.)

14 ಮತ್ತು ಅರಸನಾದ ಹೆರೋದನು [ಯೇಸುವಿನ
ಸುದ್ದಿಯನ್ನು] ಕೇಳಿದನು. ಯಾಕಂದರೆ ಆತನ
ಹೆಸರು ಪ್ರಸಿದ್ಧವಾಯಿತು, ಮತ್ತು ಜನರು ಆತನ
ವಿಷಯದಲ್ಲಿ—ಸ್ನಾನಿಕನಾದ ಯೋಹಾನನೇ ತಿರಿಗಿ
ಬದುಕಿ ಬಂದಿದ್ದಾನೆ; ಆದದರಿಂದ ಮಹತ್ಕಾರ್ಯ
ಗಳನ್ನು ನಡಿಸುವ ಶಕ್ತಿಗಳು ಅವನಲ್ಲಿ ಅವೆ ಎಂದು
15 ಹೇಳುತ್ತಿದ್ದರು. ಕೆಲವರು—ಇವನು ಎಲೀಯನೆಂತಲೂ
ಕೆಲವರು—ಇವನು ಹಿಂದಿನ ಪ್ರವಾದಿಗಳಂತಿರುವ ಒಬ್ಬ
16 ಪ್ರವಾದಿಯೆಂತಲೂ ಹೇಳಿದರು. ಆದರೆ ಹೆರೋದನು
ಆತನ ಸುದ್ದಿಯನ್ನು ಕೇಳಿ—ನಾನು ತಲೆಹೊಯಿಸಿದ
ಯೋಹಾನನೇ ತಿರಿಗಿ ಬದುಕಿ ಬಂದಿದ್ದಾನೆ ಅಂದನು.
17 ಹೆರೋದನು ತಾನು ಇಟ್ಟುಕೊಂಡಿದ್ದ ಹೆರೋದ್ಯಳ
ನಿಮಿತ್ತ ಯೋಹಾನನನ್ನು ಹಿಡಿತರಿಸಿ ಸೆರೆಯಲ್ಲಿ ಕಟ್ಟಿ
ಹಾಕಿಸಿದ್ದನು. ಆ ಹೆರೋದ್ಯಳು ಹೆರೋದನ ಅಣ್ಣ
18 ನಾದ ಫಿಲಿಪ್ಪನ ಹೆಂಡತಿ. ಯೋಹಾನನು ಹೆರೋದ
ನಿಗೆ—ನಿನ್ನ ಅಣ್ಣನ ಹೆಂಡತಿಯನ್ನು ಇಟ್ಟುಕೊಂಡಿರುವ
19 ದು ಧರ್ಮವಲ್ಲವೆಂದು ಹೇಳುತ್ತಿದ್ದನು. ಇದಕ್ಕೆ ಹೆರೋ
ದ್ಯಳು ಅವನ ಮೇಲೆ ದ್ವೇಷವಿಟ್ಟುಕೊಂಡು ಅವನನ್ನು
20 ಕೊಲ್ಲಿಸಬೇಕೆಂದಿದ್ದರೂ ಆಗದೆಹೋಯಿತು. ಹೆರೋ
ದನು ಯೋಹಾನನನ್ನು ನೀತಿವಂತನೆಂದೂ ದೇವಭಕ್ತ
ನೆಂದೂ ತಿಳಿದು ಅಂಜಕೊಂಡು ಅವನಿಗೆ ಯಾವ ಅಪಾ
ಯವೂ ಬಾರದಂತೆ ಇಟ್ಟಿದ್ದನು. ಇದಲ್ಲದೆ ಯೋಹಾ
ನನು ಹೇಳಿದ್ದನ್ನು ಅವನು ಕೇಳಿದಾಗ ಮನಸ್ಸಿನಲ್ಲಿ
ಬಹು ಗಲಿಬಿಲಿ ಹುಟ್ಟಿದರೂ ಅವನ ಮಾತನ್ನು
21 ಸಂತೋಷದಿಂದ ಕೇಳುತ್ತಿದ್ದನು. ಹೀಗಿರಲಾಗಿ ಅವ
ಳಿಗೆ ಅನುಕೂಲವಾದ ದಿವಸ ಬಂತು; ಹೇಗಂದರೆ
ಹೆರೋದನು ತಾನು ಹುಟ್ಟಿದ ದಿವಸದಲ್ಲಿ ಪ್ರಭು
ಗಳಿಗೂ ಸಹಸ್ರಾಧಿಪತಿಗಳಿಗೂ ಗಲಿಲಾಯ ಸೀಮೆಯ
ಮುಖ್ಯಸ್ಥರಿಗೂ ಔತಣವನ್ನು ಮಾಡಿಸಿದಾಗ ಹೆರೋ 22
ದ್ಯಳ ಮಗಳು ಒಳಕ್ಕೆ ಬಂದು ನಾಟ್ಯವಾಡಿ ಹೆರೋದ
ನನ್ನೂ ಅವನ ಸಂಗಡ ಪಙ್ಕ್ತಿಯಲ್ಲಿ ಊಟಕ್ಕೆ ಕೂತಿದ್ದ
ವರನ್ನೂ ಮೆಚ್ಚಿಸಿದಳು. ಅರಸನು ಆ ಹುಡುಗಿಗೆ—
ಬೇಕಾದದ್ದನ್ನು ಕೇಳಿಕೋ, ಕೊಡುತ್ತೇನೆ. ನೀನು 23
ನನ್ನನ್ನು ಏನು ಕೇಳಿಕೊಂಡರೂ ಸರಿ, ನನ್ನ ರಾಜ್ಯದಲ್ಲಿ
ಅರ್ಧ ರಾಜ್ಯವನ್ನು ಕೇಳಿದರೂ, ನಿನಗೆ ಕೊಡುತ್ತೇನೆ
ಎಂದು ಆಣೆಯಿಟ್ಟುಕೊಂಡು ಹೇಳಿದನು. ಆಗ ಅವಳು 24
ಹೊರಕ್ಕೆ ಹೋಗಿ—ನಾನು ಏನು ಕೇಳಿಕೊಳ್ಳಲಿ?
ಎಂದು ತನ್ನ ತಾಯಿಯನ್ನು ಕೇಳಲಾಗಿ ಅವಳು—
ಸ್ನಾನಿಕನಾದ ಯೋಹಾನನ ತಲೆಯನ್ನು ಕೇಳಿಕೋ
ಅಂದಳು. ಕೂಡಲೆ ಅವಳು ಅರಸನ ಬಳಿಗೆ ಅವಸರ 25
ದಿಂದ ಬಂದು—ಈ ಕ್ಷಣದಲ್ಲೇ ಸ್ನಾನಿಕನಾದ ಯೋಹಾ
ನನ ತಲೆಯನ್ನು ಪರಾತಿನಲ್ಲಿ ನನಗೆ ತರಿಸಿಕೊಡಬೇ
ಕೆಂದೇ ನನ್ನ ಕೋರಿಕೆ ಎಂದು ಅರಿಕೆಮಾಡಿಕೊಂಡಳು.
ಅದಕ್ಕೆ ಅರಸನು ಬಹು ದುಃಖಪಟ್ಟರೂ ತಾನು ಇಟ್ಟು 26
ಕೊಂಡ ಆಣೆಗಳ ನಿಮಿತ್ತವಾಗಿಯೂ ತನ್ನ ಪಙ್ಕ್ತಿಯಲ್ಲಿ
ಕೂತಿದ್ದವರ ನಿಮಿತ್ತವಾಗಿಯೂ ಅವಳನ್ನು ಅಸಡ್ಡೆ
ಮಾಡುವದಕ್ಕೆ ಮನಸ್ಸಿಲ್ಲದೆ ಕೂಡಲೆ ತನ್ನ ಮೈಗಾವ 27
ಲಿನ ಸಿಪಾಯಿಗಳಲ್ಲಿ ಒಬ್ಬನಿಗೆ—ನೀನು ಹೋಗಿ
ಯೋಹಾನನ ತಲೆಯನ್ನು ತಂದುಕೊಡು ಎಂದು
ಅಪ್ಪಣೆಕೊಟ್ಟು ಕಳುಹಿಸಿದನು; ಅವನು ಹೋಗಿ ಸೆರೆ 28
ಮನೆಯಲ್ಲಿ ಅವನ ತಲೆಯನ್ನು ಹೊಯಿದು ಪರಾತಿ
ನಲ್ಲಿ ತಂದು ಆ ಹುಡುಗಿಗೆ ಕೊಟ್ಟನು. ಆ ಹುಡುಗಿ
ಅದನ್ನು ತನ್ನ ತಾಯಿಗೆ ಕೊಟ್ಟಳು. ಯೋಹಾನನ 29
ಶಿಷ್ಯರು ಈ ಸಂಗತಿಗಳನ್ನು ಕೇಳಿದಾಗ ಅವರು ಬಂದು
ಅವನ ಶವವನ್ನು ಹೊತ್ತುಕೊಂಡು ಹೋಗಿ ಸಮಾಧಿ
ಯಲ್ಲಿ ಇಟ್ಟರು.

ಯೇಸು ಐದುಸಾವಿರ ಜನರಿಗೆ ಊಟಮಾಡಿಸಿದ್ದು; ಸಮುದ್ರದ ಮೇಲೆ ನಡೆದದ್ದು; ರೋಗಿಗಳನ್ನು ಸ್ವಸ್ಥಮಾಡಿದ್ದು.
(ಮತ್ತಾ. 14. 13—36; ಲೂಕ 9. 10—17; ಯೋಹಾ. 6. 1—21.)

ಇತ್ತಲಾಗಿ ಅಪೊಸ್ತಲರು ಆತನ ಬಳಿಗೆ ಕೂಡಿ 30
ಬಂದು ತಾವು ಮಾಡಿದ್ದನ್ನೂ ಉಪದೇಶಿಸಿದ್ದನ್ನೂ
ಎಲ್ಲಾ ಆತನಿಗೆ ತಿಳಿಸಲು ಆತನು ಅವರಿಗೆ—ನೀವು 31
ಮಾತ್ರ ವಿಂಗಡವಾಗಿ ಅಡವಿಗೆ ಬಂದು ಸ್ವಲ್ಪ ದಣು
ವಾರಿಸಿಕೊಳ್ಳಿರಿ ಎಂದು ಹೇಳಿದನು. ಯಾಕಂದರೆ
ಬಹಳ ಮಂದಿ ಬರುತ್ತಾ ಹೋಗುತ್ತಾ ಇದ್ದದರಿಂದ
ಅವರಿಗೆ ಊಟಮಾಡುವದಕ್ಕೂ ಅವಕಾಶ ಸಿಕ್ಕಲಿಲ್ಲ,
ಆಗ ಅವರು ದೋಣಿಯಲ್ಲಿ ಹೊರಟು ವಿಂಗಡವಾಗಿ 32
ಅಡವಿಗೆ ಹೋದರು. ಅವರು ಹೋಗುವದನ್ನು ಬಹು 33
ಜನರು ಕಂಡು ಅವರ ಗುರುತನ್ನು ಹಿಡಿದು ಎಲ್ಲಾ
ಊರುಗಳಿಂದ ಕಾಲುನಡಿಗೆಯಾಗಿ ಓಡಿ ಅವರಿಗಿಂತ
ಮುಂಚೆ ಅಲ್ಲಿ ಸೇರಿದರು. ಆತನು ಹೊರಗೆ ಬಂದು 34
ಬಹುಜನರ ಗುಂಪನ್ನು ಕಂಡು ಇವರು ಕುರುಬ
ನಿಲ್ಲದ ಕುರಿಗಳ ಹಾಗಿದ್ದಾರಲ್ಲಾ ಎಂದು ಕನಿಕರಪಟ್ಟು
ಅವರಿಗೆ ಬಹಳ ಉಪದೇಶಮಾಡುತ್ತಿದ್ದನು. ಅಷ್ಟರಲ್ಲಿ 35

ಬಹಳ ಹೊತ್ತಾದ್ದರಿಂದ ಆತನ ಶಿಷ್ಯರು ಆತನ ಬಳಿಗೆ
36 ಬಂದು—ಇದು ಅಡವಿ, ಈಗ ಹೊತ್ತು ಬಹಳವಾಯಿತು;
ಈ ಜನರಿಗೆ ಅಪ್ಪಣೆಕೊಡು; ಇವರು ಸುತ್ತಲಿರುವ ಹಳ್ಳಿ
ಪಳ್ಳಿಗಳಿಗೆ ಹೋಗಿ ತಮ್ಮ ಊಟಕ್ಕೆ ಏನಾದರೂ ಕೊಂಡು
37 ಕೊಳ್ಳಲಿ ಅಂದದ್ದಕ್ಕೆ ಯೇಸು—ನೀವೇ ಅವರಿಗೆ
ಊಟಕ್ಕೆ ಕೊಡಿರಿ ಎಂದು ಉತ್ತರಕೊಟ್ಟನು. ಅದ
ಕ್ಕವರು—ನಾವು ಹೋಗಿ ಇನ್ನೂರು ಹಣಕ್ಕೆ ರೊಟ್ಟಿ
ಯನ್ನು ಕೊಂಡುಕೊಂಡು ಅವರಿಗೆ ಊಟಕ್ಕೆ ಕೊಡ
38 ಬೇಕೋ? ಎಂದು ಕೇಳಲು ಆತನು—ನಿಮ್ಮಲ್ಲಿ ಎಷ್ಟು
ರೊಟ್ಟಿಗಳಿವೆ? ಹೋಗಿ ನೋಡಿಕೊಂಡು ಬನ್ನಿ ಅಂದನು.
ಅವರು ತಿಳುಕೊಂಡು ಬಂದು—ಐದು ರೊಟ್ಟಿ ಎರಡು
39 ಮೀನು ಅಂದರು. ಆಗ ಆತನು ಅವರಿಗೆ—ಎಲ್ಲರೂ
ಹಸುರುಹುಲ್ಲಿನ ಮೇಲೆ ಪಙ್ತಿಪಙ್ತಿಯಾಗಿ ಕೂತು
40 ಕೊಳ್ಳಲಿ ಎಂದು ಅಪ್ಪಣೆಕೊಟ್ಟಾಗ ಜನರು ಪಙ್ತಿಗೆ
ನೂರರಂತೆ ಐವತ್ತರಂತೆ ಸಾಲುಸಾಲಾಗಿ ಕೂತು
41 ಕೊಂಡರು. ಆ ಮೇಲೆ ಆತನು ಆ ಐದು ರೊಟ್ಟಿ
ಎರಡು ಮೀನುಗಳನ್ನು ತೆಗೆದುಕೊಂಡು ಆಕಾಶದ
ಕಡೆಗೆ ನೋಡಿ ದೇವರ ಸ್ತೋತ್ರಮಾಡಿ ಆ ರೊಟ್ಟಿ
ಗಳನ್ನು ಮುರಿದು—ನೀವು ಜನರಿಗೆ ಹಂಚಿರಿ ಎಂದು
ಶಿಷ್ಯರ ಕೈಗೆ ಕೊಟ್ಟು ಆ ಎರಡು ಮೀನುಗಳನ್ನೂ ಎಲ್ಲ
42 ರಿಗೆ ಹಂಚಿಸಿದನು. ಅವರೆಲ್ಲರೂ ಊಟಮಾಡಿ ತೃಪ್ತ
43 ರಾದರು. ರೊಟ್ಟಿತುಂಡುಗಳನ್ನೂ ಮೀನಿನ ತುಂಡು
ಗಳನ್ನೂ ಕೂಡಿಸಲಾಗಿ ಹನ್ನೆರಡು ಪುಟ್ಟಿ ತುಂಬಿತು.
44 ಊಟಮಾಡಿದವರು ಐದುಸಾವಿರ ಮಂದಿ ಗಂಡಸರು.
45 ಇದಾದ ಕೂಡಲೆ ಆತನು ತನ್ನ ಶಿಷ್ಯರಿಗೆ—ನಾನು
ಈ ಜನರ ಗುಂಪನ್ನು ಕಳುಹಿಸಿಬಿಡುವಷ್ಟರೊಳಗೆ ನೀವು
ದೋಣಿಯನ್ನು ಹತ್ತಿ ಮುಂದಾಗಿ ಆಚೇದಡಕ್ಕೆ ಬೇತ್ಸಾ
ಯಿದಕ್ಕೆ ಹೋಗಿರಿ ಎಂದು ಬಲವಂತಮಾಡಿದನು.
46 ಆತನು ಜನರಿಗೆ ಅಪ್ಪಣೆಕೊಟ್ಟನಂತರ ಪ್ರಾರ್ಥನೆ
47 ಮಾಡುವದಕ್ಕಾಗಿ ಬೆಟ್ಟಕ್ಕೆ ಹೋದನು. ಹೊತ್ತು
ಮುಳುಗಿದ ಮೇಲೆ ದೋಣಿಯು ಸಮುದ್ರದ ನಡುವೆ
48 ಇತ್ತು; ಯೇಸು ಒಬ್ಬನೇ ದಡದಲ್ಲಿದ್ದನು. ಎದುರು
ಗಾಳಿ ಬೀಸುತ್ತಿದ್ದದರಿಂದ ಶಿಷ್ಯರು ಹುಟ್ಟು ಹಾಕಿ ಹಾಕಿ
ಒದ್ದಾಡುವದನ್ನು ಆತನು ಕಂಡು ಹೆಚ್ಚುಕಡಿಮೆ
ರಾತ್ರಿಯ ನಾಲ್ಕನೆಯ ಜಾವದಲ್ಲಿ ಸಮುದ್ರದ ಮೇಲೆ
ನಡೆದು ಅವರ ಕಡೆಗೆ ಬಂದು ಅವರನ್ನು ದಾಟಿ
49 ಮುಂದಕ್ಕೆ ಹೋಗಬೇಕೆಂದಿದ್ದನು. ಸಮುದ್ರದ ಮೇಲೆ
ನಡೆಯುವ ಆತನನ್ನು ಅವರು ಕಂಡು ಭೂತವೆಂದು
ಭಾವಿಸಿ ಅಬ್ಬರಿಸಿ ಕೂಗಿದರು; ಅವರೆಲ್ಲರೂ ಆತನನ್ನು
50 ನೋಡಿ ತತ್ತರಿಸಿದರು. ಆತನು ಕೂಡಲೆ ಅವರನ್ನು
ಮಾತಾಡಿಸಿ ಅವರಿಗೆ—ಧೈರ್ಯವಾಗಿರಿ; ನಾನು; ಅಂಜ
51 ಬೇಡಿರಿ ಎಂದು ಹೇಳಿದನು. ತರುವಾಯ ಆತನು
ದೋಣಿಯನ್ನು ಹತ್ತಿ ಅವರ ಬಳಿಗೆ ಬಂದ ಮೇಲೆ ಗಾಳಿ
ನಿಂತುಹೋಯಿತು. ಆಗ ಅವರು ತಮ್ಮೊಳಗೆ ಬಹಳ
52 ವಾಗಿ ಬೆರಗಾದರು. ಯಾಕಂದರೆ ಅವರು ರೊಟ್ಟಿಯ
ವಿಷಯವಾದ ಮಹತ್ಕಾರ್ಯವನ್ನು ಗ್ರಹಿಸಲಿಲ್ಲ;
ಅವರ ಮನಸ್ಸು ಕಲ್ಲಾಗಿತ್ತು.
53 ಅವರು ಸಮುದ್ರವನ್ನು ದಾಟಿ ಗೆನೆಜರೇತ್ ದೇಶದ
ದಡಕ್ಕೆ ಮುಟ್ಟಿ ದೋಣಿಯನ್ನು ಕಟ್ಟಿದರು. ಅವರು
ದೋಣಿಯಿಂದ ಇಳಿದ ಕೂಡಲೆ ಜನರು ಆತನ ಗುರು
ತನ್ನು ಹಿಡಿದು ಆ ಸೀಮೆಯಲ್ಲೆಲ್ಲಾ ಓಡಾಡುತ್ತಾ
ಮೈಯಲ್ಲಿ ನೆಟ್ಟಗಿಲ್ಲದವರನ್ನು ದೋಲಿಯ ಮೇಲೆ
ಹಾಕಿಕೊಂಡು ಆತನು ಎಲ್ಲೆಲ್ಲಿ ಇದ್ದಾನೆಂದು ಕೇಳಿ
ದರೋ ಅಲ್ಲಲ್ಲಿಗೆ ತೆಗೆದುಕೊಂಡು ಹೋದರು. ಆತನು
ಯಾವ ಗ್ರಾಮಗಳಿಗೂ ಯಾವ ಊರು ಹಳ್ಳಿಗಳಿಗೂ
ಹೋದನೋ ಅಲ್ಲಿಯವರು ರೋಗಿಗಳನ್ನು ಪೇಟೆಗಳಲ್ಲಿ
ಇಟ್ಟು—ನಿನ್ನ ಉಡುಪಿನ ಗೊಂಡೆಯನ್ನಾದರೂ ಮುಟ್ಟ
ಗೊಡಿಸಬೇಕೆಂದು ಆತನನ್ನು ಬೇಡಿಕೊಂಡರು; ಆತ
ನನ್ನು ಮುಟ್ಟಿದವರೆಲ್ಲರೂ ಸ್ವಸ್ಥರಾದರು.

### ಊಟದಿಂದ ಮನುಷ್ಯರು ಕೆಡುವದಿಲ್ಲವೆಂದು ಯೇಸು ಬೋಧಿಸಿದ್ದು.

(ಮತ್ತಾ. 15. 1—20.)

ತರುವಾಯ ಯೆರೂಸಲೇಮಿನಿಂದ ಬಂದಿದ್ದ ಫರಿಸಾ
ಯರೂ ಶಾಸ್ತ್ರಿಗಳಲ್ಲಿ ಕೆಲವರೂ ಆತನ ಬಳಿಗೆ ಕೂಡಿ
ಬಂದರು. ಫರಿಸಾಯರೂ ಯೆಹೂದ್ಯರೆಲ್ಲರೂ ಹಿರಿಯ
ರಿಂದ ಬಂದ ಸಂಪ್ರದಾಯವನ್ನು ಹಿಡಿದು ತಮ್ಮ ಕೈ
ಗಳನ್ನು ಚನ್ನಾಗಿ ತೊಳಕೊಳ್ಳದೆ ಅಹಾರ ತೆಗೆದು
ಕೊಳ್ಳುವದಿಲ್ಲ; ಮತ್ತು ಪೇಟೆಗೆ ಹೋಗಿ ಬಂದರೆ
1)ನೀರನ್ನು ಪ್ರೋಕ್ಷಿಸಿಕೊಳ್ಳದೆ ಆಹಾರ ತೆಗೆದುಕೊಳ್ಳು
ವದಿಲ್ಲ; ಇದಲ್ಲದೆ ಅವರಲ್ಲಿ ತಂಬಿಗೆ ಬಟ್ಟಲು ತಪ್ಪಲೆ
ಗಳನ್ನು ಬೆಳಗಿ ತೊಳೆಯುವದೇ ಮೊದಲಾದ ಅನೇಕಾ
ಚಾರಗಳನ್ನು ನಡಿಸುವ ನೇಮಕವುಂಟು. ಆತನ ಶಿಷ್ಯ
ರಲ್ಲಿ ಕೆಲವರು ಮೈಲಿಗೆಯ ಕೈಯಿಂದ, ಅಂದರೆ ಕೈ
ತೊಳಕೊಳ್ಳದೆ ಆಹಾರ ತೆಗೆದುಕೊಳ್ಳುವದನ್ನು ಆ
ಫರಿಸಾಯರೂ ಶಾಸ್ತ್ರಿಗಳೂ ಕಂಡು ಆತನನ್ನು—ನಿನ್ನ
ಶಿಷ್ಯರು ಹಿರಿಯರಿಂದ ಬಂದ ಸಂಪ್ರದಾಯದಂತೆ ಯಾಕೆ
ನಡೆದುಕೊಳ್ಳುವದಿಲ್ಲ? ಮೈಲಿಗೆಯ ಕೈಯಿಂದ ಯಾಕೆ
ಆಹಾರ ತೆಗೆದುಕೊಳ್ಳುತ್ತಾರೆ ಎಂದು ಕೇಳಿದರು.
ಅದಕ್ಕೆ ಆತನು—ಕಪಟಿಗಳಾದ ನಿಮ್ಮ ವಿಷಯದಲ್ಲಿ
ಯೆಶಾಯನು ವಿಹಿತವಾಗಿ ಪ್ರವಾದಿಸಿದ್ದಾನೆ; ಅವನು
ಬರೆದದ್ದೇನಂದರೆ—

ಈ ಜನರು ಮಾತಿನಿಂದ ನನ್ನನ್ನು ಸನ್ಮಾನಿಸು
ತ್ತಾರೆ,
ಆದರೆ ಅವರ ಮನಸ್ಸು ನನಗೆ ದೂರವಾಗಿದೆ.
ಮನುಷ್ಯರು ಕಲ್ಪಿಸಿದ ಕಟ್ಟಳೆಗಳನ್ನೇ ಅವರು
ಬೋಧಿಸುವದರಿಂದ ನನಗೆ ಭಕ್ತಿತೋರಿಸು
ವದು ವ್ಯರ್ಥ ಎಂಬದೇ.

ನೀವು ದೇವರ ಆಜ್ಞೆಯನ್ನು ಬಿಟ್ಟು ಮನುಷ್ಯರು ಕಲ್ಪಿ
ಸಿದ ಸಂಪ್ರದಾಯವನ್ನು ಹಿಡಿದಿದ್ದೀರಿ ಎಂದು ಹೇಳಿ
ದನು. ಆತನು ಇನ್ನೂ ಅವರಿಗೆ—ನೀವು ನಿಮ್ಮ ಸಂಪ್ರ
ದಾಯವನ್ನು ಹಿಡಿದು ನಡಿಸುವದಕ್ಕಾಗಿ ದೇವರ
ಆಜ್ಞೆಯನ್ನು ವ್ಯರ್ಥಮಾಡುತ್ತೀರಿ; ಬಹು ಚೆನ್ನಾಗಿದೆ
ಯಲ್ಲವೇ. ತಂದೆತಾಯಿಗಳನ್ನು ಸನ್ಮಾನಿಸಬೇಕೆಂತ 1
ಲೂ ತಂದೆಯನ್ನಾಗಲಿ ತಾಯಿಯನ್ನಾಗಲಿ ದೂಷಿಸು

1) ಕೆಲವು ಪ್ರತಿಗಳಲ್ಲಿ—ಸ್ನಾನಮಾಡದೆ ಎಂದು ಬರೆದದೆ.

ವವನಿಗೆ ಮರಣದಂಡನೆ ಆಗಬೇಕೆಂತಲೂ ಮೋಶೆಯು
11 ಹೇಳಿದ್ದಾನೆ; ನೀವೋ ಒಬ್ಬನು ತನ್ನ ತಂದೆಯನ್ನಾಗಲಿ
ತಾಯಿಯನ್ನಾಗಲಿ ನೋಡಿ—ನಾನು ನಿನ್ನ ಸಂರಕ್ಷಣೆ
ಗಾಗಿ ಕೊಡತಕ್ಕದ್ದನ್ನು ಕೊರ್ಬಾನ್ ಮಾಡಿದ್ದೇನೆ
(ಅಂದರೆ ದೇವರಿಗಾಗಿ ಇಟ್ಟಿದ್ದೇನೆ) ಎಂದು ಹೇಳುವ
12 ದಾದರೆ ಅವನು ತನ್ನ ತಂದೆಗಾಗಲಿ ತಾಯಿಗಾಗಲಿ
13 ಇನ್ನೇನೂ ಮಾಡಬಾರದೆಂದು ಹೇಳುತ್ತೀರಿ. ಹೀಗೆ
ನೀವು ಕಲಿಸುತ್ತಾ ಬಂದಿರುವ ಸಂಪ್ರದಾಯದಿಂದ
ದೇವರ ವಾಕ್ಯವನ್ನು ನಿರರ್ಥಕಮಾಡುತ್ತೀರಿ, ಮತ್ತು
ಇಂಥ ಕಾರ್ಯಗಳನ್ನು ಇನ್ನೂ ಎಷ್ಟೋ ಮಾಡುತ್ತೀರಿ
ಎಂದು ಹೇಳಿದನು.
14 ಆ ಮೇಲೆ ಯೇಸು ಜನರ ಗುಂಪನ್ನು ತಿರಿಗಿ ಹತ್ತ
ರಕ್ಕೆ ಕರೆದು ಅವರಿಗೆ—ಎಲ್ಲರೂ ಕಿವಿಗೊಟ್ಟು ನನ್ನ
15 ಮಾತನ್ನು ಕೇಳಿರಿ, ತಿಳುಕೊಳ್ಳಿರಿ. ಹೊರಗಿನಿಂದ
ಮನುಷ್ಯನೊಳಕ್ಕೆ ಹೋಗಿ ಅವನನ್ನು ಹೊಲೆಮಾಡ
ತಕ್ಕಂಥದು ಒಂದೂ ಇಲ್ಲ; ಆದರೆ ಮನುಷ್ಯನೊಳಗಿಂದ
ಹೊರಡುವವುಗಳೇ ಮನುಷ್ಯನನ್ನು ಹೊಲೆಮಾಡು
17 ವಂಥವುಗಳಾಗಿವೆ ಎಂದು ಹೇಳಿದನು.1) ತರುವಾಯ
ಆತನು ಜನರನ್ನು ಬಿಟ್ಟು ಮನೆಯೊಳಕ್ಕೆ ಹೋದಾಗ
ಆತನ ಶಿಷ್ಯರು ಆ ಸಾಮ್ಯದ ಅರ್ಥವೇನೆಂದು ಆತನನ್ನು
18 ಕೇಳಲು ಆತನು ಅವರಿಗೆ—ನಿಮಗೂ ಅಷ್ಟು ಬುದ್ಧಿ
ಇಲ್ಲವೇ? ಹೊರಗಿನಿಂದ ಮನುಷ್ಯನೊಳಕ್ಕೆ ಹೋಗು
19 ವಂಥದು ಅವನ ಹೃದಯದೊಳಕ್ಕೆ ಸೇರದೆ ಹೊಟ್ಟೆ
ಯಲ್ಲಿ ಸೇರಿ ಬಹಿರ್ದೇಶಕ್ಕೆ ಹೋಗುವದರಿಂದ ಅವ
ನನ್ನು ಹೊಲೆಮಾಡಲಾರದೆಂದು ನಿಮಗೆ ತಿಳಿಯಲಿಲ್ಲ
ವೋ ಎಂದು ಹೇಳಿದನು. ಹೀಗೆ ಹೇಳಿದ್ದರಿಂದ
ತಿನ್ನುವ ಪದಾರ್ಥಗಳೆಲ್ಲಾ ಶುದ್ಧವೆಂದು ಸೂಚಿಸಿದನು.
20 ಆತನು ಇನ್ನೂ—ಮನುಷ್ಯನೊಳಗಿಂದ ಹೊರಡುವಂಥ
21 ದೇ ಮನುಷ್ಯನನ್ನು ಹೊಲೆಮಾಡುವದು; ಒಳಗಿನಿಂದ
22 ಅಂದರೆ ಮನುಷ್ಯರ ಮನಸ್ಸಿನೊಳಗಿಂದ ಸೂಳೆಗಾರಿಕೆ
ಕಳ್ಳತನ ಕೊಲೆ ಹಾದರ ದ್ರವ್ಯಾಶೆ ಕೆಡುಕುತನ ಮೋಸ
ಬಂಡತನ ಹೊಟ್ಟೇಕಿಚ್ಚು ಬೈಗಳು ಸೊಕ್ಕು ಬುದ್ಧಿಗೇಡಿ
ತನ ಇವೇ ಮೊದಲಾದವುಗಳ ಕೆಟ್ಟ ಆಲೋಚನೆಗಳು
23 ಹೊರಡುತ್ತವೆ. ಈ ಕೆಟ್ಟ ವಿಷಯಗಳೆಲ್ಲಾ ಒಳಗಿನಿಂದ
ಹೊರಟು ಮನುಷ್ಯನನ್ನು ಹೊಲೆಮಾಡುತ್ತವೆ ಅಂದನು.

ಯೇಸು ಅನ್ಯಮತಸ್ಥಳ ಮಗಳನ್ನೂ ಒಬ್ಬ ಮೂಕನನ್ನೂ ಸ್ವಸ್ಥಮಾಡಿದ್ದು.
(ಮತ್ತಾ. 15. 21—28.)

24 ಅಲ್ಲಿಂದ ಯೇಸು ಎದ್ದು ಹೊರಟು 2)ತೂರ್ ಪಟ್ಟ
ಣದ ಪ್ರಾಂತ್ಯಗಳಿಗೆ ಹೋಗಿ ಒಂದು ಮನೆಯೊಳಗೆ
ಇಳುಕೊಂಡು ಅದು ಯಾರಿಗೂ ಗೊತ್ತಾಗಬಾರದೆಂದಿ
ದ್ದನು; ಆದರೆ ಆತನು ಗುಪ್ತವಾಗಿರುವದಕ್ಕೆ ಆಗದೆ
25 ಹೋಯಿತು. ಕೂಡಲೆ ಒಬ್ಬ ಹೆಂಗಸು ಆತನ ಸುದ್ದಿ
ಯನ್ನು ಕೇಳಿ ಬಂದು ಆತನ ಪಾದಕ್ಕೆ ಬಿದ್ದಳು.
26 ಆಕೆಯ ಮಗಳಿಗೆ ದೆವ್ವ ಹಿಡಿದಿತ್ತು. ಆ ಹೆಂಗಸು
3)ಅನ್ಯಮತದವಳೂ ಸುರೋಫೊಯಿನಿಕ್ಯರವಳೂ ಆಗಿ
ದ್ದಳು. ಆಕೆಯು ತನ್ನ ಮಗಳ ದೆವ್ವವನ್ನು ಬಿಡಿಸ 27
ಬೇಕೆಂದು ಆತನನ್ನು ಬೇಡಿಕೊಂಡಾಗ ಆತನು
ಆಕೆಗೆ—ಮಕ್ಕಳಿಗೆ ಮೊದಲು ತೃಪ್ತಿಯಾಗಲಿ; ಮಕ್ಕ
ಳು ತಿನ್ನುವ ರೊಟ್ಟಿಯನ್ನು ತಕ್ಕೊಂಡು ನಾಯಿಮರಿ
ಗಳಿಗೆ ಹಾಕುವದು ಸರಿಯಲ್ಲ ಎಂದು ಹೇಳಿದನು.
ಅದಕ್ಕೆ ಆಕೆಯು—ಸ್ವಾಮಿ, ಆ ಮಾತು ನಿಜವೇ; 28
ಮೇಜನ ಕೆಳಗಿರುವ ನಾಯಿಮರಿಗಳಂತೂ ಮಕ್ಕಳ
ಕೈಯಿಂದ ಬೀಳುವ ರೊಟ್ಟೀತುಂಡುಗಳನ್ನು ತಿನ್ನುತ್ತ
ವಲ್ಲಾ ಎಂದು ಉತ್ತರಕೊಡಲು ಆತನು—ಈ ಮಾತ 29
ನ್ನು ಹೇಳಿದ್ದರಿಂದ ದೆವ್ವವು ನಿನ್ನ ಮಗಳನ್ನು ಬಿಟ್ಟು
ಬಿಟ್ಟಿದೆ, ಹೋಗು ಅಂದನು. ಆಕೆಯು ತನ್ನ ಮನೆಗೆ 30
ಹೋಗಿ ನೋಡಲಾಗಿ ಆ ಹುಡುಗಿ ಹಾಸಿಗೆಯ
ಮೇಲೆ ಮಲಗಿದ್ದಳು; ದೆವ್ವ ಅವಳನ್ನು ಬಿಟ್ಟು
ಹೋಗಿತ್ತು.
ಅನಂತರ ಆತನು ತೂರ್ ಪಟ್ಟಣದ ಪ್ರಾಂತ್ಯಗ 31
ಳನ್ನು ಬಿಟ್ಟು ಸೀದೋನ್ ಪಟ್ಟಣದ ಮಾರ್ಗವಾಗಿ
ದೆಕಪೊಲಿಯ ಪ್ರಾಂತ್ಯಗಳನ್ನು ಹಾದು ಗಲಿಲಾಯ
ಸಮುದ್ರಕ್ಕೆ ಬಂದನು. ಆಗ ಕೆಲವರು ತೊದಲು
ಮಾತಾಡುವ ಒಬ್ಬ ಕಿವುಡನನ್ನು ಆತನ ಬಳಿಗೆ ಕರ 32
ತಂದು—ಇವನ ಮೇಲೆ ನಿನ್ನ ಕೈಯಿಡಬೇಕು ಎಂದು
ಆತನನ್ನು ಬೇಡಿಕೊಂಡರು. ಆತನು ಅವನನ್ನು ಜನರ 33
ಗುಂಪಿನಿಂದ ಒತ್ತಟ್ಟಿಗೆ ಕರಕೊಂಡು ಹೋಗಿ ತನ್ನ
ಬೆರಳುಗಳನ್ನು ಅವನ ಕಿವಿಗಳಲ್ಲಿ ಇಟ್ಟು ಉಗುಳಿ
ಅವನ ನಾಲಿಗೆಯನ್ನು ಮುಟ್ಟಿ ಆಕಾಶದ ಕಡೆಗೆ 34
ನೋಡಿ ನಿಟ್ಟುಸುರುಬಿಟ್ಟು ಅವನಿಗೆ—ಎಪ್ಫಥಾ ಎಂದು
ಹೇಳಿದನು. ಆ ಶಬ್ದಕ್ಕೆ ತೆರೆಯಲಿ ಎಂದರ್ಥ.
ಹೇಳುತ್ತಲೇ ಅವನ ಕಿವಿ ತೆರೆದವು; ಅವನ ನಾಲಿಗೆಯ 35
ಕಟ್ಟು ಬಿಚ್ಚಿಹೋಯಿತು; ಅವನು ನೆಟ್ಟಗೆ ಮಾತಾಡಿ
ದನು. ಆಗ ಆತನು—ಯಾರಿಗೂ ತಿಳಿಸಬಾರದೆಂದು 36
ಅವರಿಗೆ ಖಂಡಿತವಾಗಿ ಹೇಳಿದನು. ಆದರೆ ಎಷ್ಟು
ಖಂಡಿತವಾಗಿ ಹೇಳಿದರೂ ಅವರು ಮತ್ತಷ್ಟು ಹೆಚ್ಚಾಗಿ
ಅದನ್ನು ಹಬ್ಬಿಸಿದರು. ಅವರು ಅತ್ಯಂತಾಶ್ಚರ್ಯ 37
ಪಟ್ಟು—ಎಲ್ಲಾ ಚೆನ್ನಾಗಿ ಮಾಡಿದ್ದಾನೆ; ಕಿವುಡರಾದರೂ
ಕೇಳುವಂತೆ ಮಾಡುತ್ತಾನೆ, ಮೂಕರಾದರೂ ಮಾತಾ
ಡುವಂತೆ ಮಾಡುತ್ತಾನೆ ಅಂದುಕೊಂಡರು.

ಯೇಸು ನಾಲ್ಕುಸಾವಿರ ಜನರಿಗೆ ಊಟಮಾಡಿಸಿದ್ದು.
(ಮತ್ತಾ. 15. 32—39.)

ಆ ದಿವಸಗಳಲ್ಲಿ ಜನರು ತಿರಿಗಿ ಗುಂಪುಕೂಡಿ 8
ಬಂದಾಗ ಅವರಿಗೆ ಊಟಕ್ಕೆ ಏನೂ ಇಲ್ಲದೆ ಇರಲು
ಯೇಸು ತನ್ನ ಶಿಷ್ಯರನ್ನು ಹತ್ತರಕ್ಕೆ ಕರೆದು—ಈ 2
ಜನರನ್ನು ನೋಡಿ ಕನಿಕರಪಡುತ್ತೇನೆ, ಇವರು ನನ್ನ
ಬಳಿಗೆ ಬಂದು ಮೂರು ದಿನವಾಯಿತು; ಇವರಿಗೆ
ಊಟಕ್ಕೆ ಏನೂ ಇಲ್ಲ; ಇವರನ್ನು ಉಪವಾಸವಾಗಿ 3
ಮನೆಗೆ ಕಳುಹಿಸಿಬಿಟ್ಟರೆ ದಾರಿಯಲ್ಲಿ ಬಳಲಿ ಹೋಗು

1) 16ನೆಯ ವಚನವು ಮೂಲಗ್ರಂಥದ ಹೆಚ್ಚು ಪ್ರತಿಗಳಲ್ಲಿ ಇಲ್ಲ; ಅದು ಯಾವದಂದರೆ—ಯಾವನಿಗಾದರೂ ಕೇಳುವದಕ್ಕೆ ಕಿವಿ ಯಿದ್ದರೆ ಕೇಳಲಿ ಎಂಬುದು. 2) ಪಾಠಾಂತರ: ತೂರ್ ಸೀದೋನ್ ಪಟ್ಟಣಗಳ. 3) ಮೂಲ: ಗ್ರೀಕಳು.

ವರು; ಇವರಲ್ಲಿ ಕೆಲವರು ದೂರದಿಂದ ಬಂದಿದ್ದಾರಲ್ಲಾ
4 ಎಂದು ಅವರಿಗೆ ಹೇಳಿದ್ದಕ್ಕೆ ಶಿಷ್ಯರು—ಈ ಅಡವಿ
ಯಲ್ಲಿ ಎಲ್ಲಿಂದ ರೊಟ್ಟಿಯನ್ನು ತಂದು ಈ ಜನರನ್ನು
5 ತೃಪ್ತಿಪಡಿಸುವದಕ್ಕಾದೀತು? ಅಂದರು. ಆತನು—
ನಿಮ್ಮಲ್ಲಿ ಎಷ್ಟು ರೊಟ್ಟಿಗಳಿವೆ ಎಂದು ಅವರನ್ನು ಕೇಳಿ
6 ದ್ದಕ್ಕೆ ಅವರು—ಏಳು ಅವೆ ಅಂದರು. ಆಗ ಆತನು
ಜನರ ಗುಂಪಿಗೆ—ನೆಲದ ಮೇಲೆ ಕೂತುಕೊಳ್ಳಿರಿ
ಎಂದು ಅಪ್ಪಣೆಕೊಟ್ಟು ಆ ಏಳು ರೊಟ್ಟಿಗಳನ್ನು
ತೆಗೆದುಕೊಂಡು ದೇವರ ಸ್ತೋತ್ರಮಾಡಿ ಅವುಗಳನ್ನು
ಮುರಿದು ಹಂಚುವದಕ್ಕಾಗಿ ತನ್ನ ಶಿಷ್ಯರ ಕೈಗೆ ಕೊಟ್ಟ
7 ನು; ಅವರು ಗುಂಪಿನವರಿಗೆ ಹಂಚಿಕೊಟ್ಟರು. ಇದ
ಲ್ಲದೆ ಅವರಲ್ಲಿ ಕೆಲವು ಸಣ್ಣ ಮೀನುಗಳಿದ್ದವು; ಅವುಗ
ಳನ್ನು ಆತನು ತೆಗೆದುಕೊಂಡು ದೇವರ ಸ್ತೋತ್ರ
ಮಾಡಿ—ಇವುಗಳನ್ನೂ ಹಂಚಿಕೊಡಿರಿ ಅಂದನು.
8 ಅವರು ಊಟಮಾಡಿ ತೃಪ್ತರಾದರು. ಮಿಕ್ಕ ತುಂಡು
9 ಗಳನ್ನು ಕೂಡಿಸಲಾಗಿ ಏಳು ಹೆಡಿಗೆ ಆದವು. ಊಟ
ಮಾಡಿದವರು ಹೆಚ್ಚುಕಡಿಮೆ ನಾಲ್ಕುಸಾವಿರ ಮಂದಿ.
10 ಬಳಿಕ ಆತನು ಅವರನ್ನು ಕಳುಹಿಸಿಬಿಟ್ಟು ಕೂಡಲೆ
ತನ್ನ ಶಿಷ್ಯರನ್ನು ಕರಕೊಂಡು ದೋಣಿಯನ್ನು ಹತ್ತಿ
ದಲ್ಮನೂಥ ಸೀಮೆಗೆ ಬಂದನು.

ಯೇಸು ಯೆಹೂದ್ಯ ಮತಾಭಿಮಾನಿಗಳ ವಿಷಯವಾಗಿ
ಎಚ್ಚರಿಕೆ ಕೊಟ್ಟದ್ದು.
(ಮತ್ತಾ. 16. 1—12; ಲೂಕ 11. 16; 12. 1;
ಯೋಹಾ. 6. 30.)

11 ತರುವಾಯ ಫರಿಸಾಯರು ಹೊರಟುಬಂದು ಆತನ
ಕೂಡ ತರ್ಕ ಮಾಡುತ್ತಾ ಪರೀಕ್ಷಿಸುವದಕ್ಕಾಗಿ—ನೀನು
ಆಕಾಶದಲ್ಲಿ ಒಂದು ಸೂಚಕಕಾರ್ಯವನ್ನು ತೋರಿಸಿ
ಕೊಡಬೇಕೆಂದು ಕೇಳುತ್ತಿರಲು ಆತನು ತನ್ನ ಆತ್ಮ
12 ದಲ್ಲಿ ನೊಂದು ನಿಟ್ಟುಸುರುಬಿಟ್ಟು—ಈ ಸಂತತಿಯು
ಸೂಚಕಕಾರ್ಯವನ್ನು ಅಪೇಕ್ಷಿಸುವದು ಯಾಕೆ?
ನಿಮಗೆ ಸತ್ಯವಾಗಿ ಹೇಳುತ್ತೇನೆ, ಈ ಸಂತತಿಗೆ ಸೂಚಕ
13 ಕಾರ್ಯವು ಸಿಕ್ಕುವದೇ ಇಲ್ಲ ಎಂದು ಹೇಳಿ ಅವ
ರನ್ನು ಬಿಟ್ಟು ತಿರಿಗಿ ದೋಣಿಯನ್ನು ಹತ್ತಿ ಆಚೇದಡಕ್ಕೆ
ಹೋದನು.
14 ಆದರೆ ಶಿಷ್ಯರು ರೊಟ್ಟೀಬುತ್ತಿ ಕಟ್ಟಿಕೊಳ್ಳುವದನ್ನು
ಮರೆತರು. ದೋಣಿಯಲ್ಲಿ ಅವರಿಗೆ ಒಂದು ರೊಟ್ಟಿ
15 ಮಾತ್ರ ಇತ್ತು; ಬೇರೆ ಇರಲಿಲ್ಲ. ಯೇಸು ಅವರಿಗೆ—
ಎಚ್ಚರಿಕೆ, ಫರಿಸಾಯರ ಮತ್ತು ಹೆರೋದನ ಹುಳಿ
ಹಿಟ್ಟಿನ ವಿಷಯದಲ್ಲಿ ನೋಡಿಕೊಳ್ಳಿರಿ ಎಂದು ಖಂಡಿತ
16 ವಾಗಿ ಹೇಳಲು ಅವರು—ನಮ್ಮಲ್ಲಿ ರೊಟ್ಟಿಯಿಲ್ಲ
ವಲ್ಲಾ ಎಂದು ತಮ್ಮತಮ್ಮೊಳಗೆ ಮಾತಾಡಿಕೊಳ್ಳುತ್ತಿ
17 ದ್ದರು. ಆತನು ಅದನ್ನು ತಿಳಿದು—ರೊಟ್ಟಿಯಿಲ್ಲ
ವಲ್ಲಾ ಎಂದು ಮಾತಾಡಿಕೊಳ್ಳುವದೇಕೆ? ನೀವು
ಇನ್ನೂ ಗ್ರಹಿಸಲಿಲ್ಲವೋ? ತಿಳುವಳಿಕೆ ಬರಲಿಲ್ಲವೋ?
18 ನಿಮ್ಮ ಮನಸ್ಸು ಕಲ್ಲಾಗಿದೆಯೋ? ಕಣ್ಣಿದ್ದೂ ಕಾಣು
ವದಿಲ್ಲವೋ? ಕಿವಿಯಿದ್ದೂ ಕೇಳುವದಿಲ್ಲವೋ? ನಿಮಗೆ
19 ನೆನಪಿಲ್ಲವೋ? ನಾನು ಆ ಐದು ರೊಟ್ಟಿಗಳನ್ನು
ಮುರಿದು ಐದುಸಾವಿರ ಜನರಿಗೆ ಹಂಚಿಸಿದಾಗ ತುಂಡು

ತುಂಬಿದ ಎಷ್ಟು ಪುಟ್ಟಿಗಳನ್ನು ತೆಗೆದುಕೊಂಡು ಹೋ
ದಿರಿ ಎಂದು ಕೇಳಿದ್ದಕ್ಕೆ ಅವರು—ಹನ್ನೆರಡು ಪುಟ್ಟಿ
ಅಂದರು. ಮತ್ತು ಆ ಏಳು ರೊಟ್ಟಿಗಳನ್ನು ನಾಲ್ಕು
ಸಾವಿರ ಜನರಿಗೆ ಹಂಚಿಸಿದಾಗ ತುಂಡು ತುಂಬಿದ
ಎಷ್ಟು ಹೆಡಿಗೆಗಳನ್ನು ತೆಗೆದುಕೊಂಡು ಹೋದಿರಿ ಎಂದು
ಕೇಳಿದ್ದಕ್ಕೆ ಅವರು—ಏಳು ಹೆಡಿಗೆ ಅಂದರು. ಆಗ
ಆತನು ಇವರಿಗೆ—ನಿಮಗೆ ಇನ್ನೂ ತಿಳುವಳಿಕೆ ಬರ
ಲಿಲ್ಲವೇ? ಎಂದು ಹೇಳಿದನು.

ಯೇಸು ಕುರುಡನಿಗೆ ಕಣ್ಣುಕೊಟ್ಟದ್ದು.

ಮತ್ತು ಅವರು ಬೇತ್ಸಾಯಿದ ಊರಿಗೆ ಬಂದರು.
ಅಲ್ಲಿ ಜನರು ಒಬ್ಬ ಕುರುಡನನ್ನು ಯೇಸುವಿನ ಬಳಿಗೆ
ಕರಕೊಂಡುಬಂದು—ಇವನನ್ನು ಮುಟ್ಟಬೇಕು ಎಂದು
ಆತನನ್ನು ಬೇಡಿಕೊಂಡರು. ಆತನು ಕುರುಡನ
ಕೈ ಹಿಡುಕೊಂಡು ಊರ ಹೊರಕ್ಕೆ ಕರಕೊಂಡು
ಹೋಗಿ ಅವನ ಕಣ್ಣುಗಳಲ್ಲಿ ಉಗುಳಿ ಅವನ ಮೇಲೆ
ಕೈಯಿಟ್ಟು—ನಿನಗೇನಾದರೂ ಕಾಣುತ್ತದೋ? ಎಂದು
ಅವನನ್ನು ಕೇಳಿದನು. ಅವನು ತಲೆಯೆತ್ತಿ ನೋಡಿ—
ನನಗೆ ಜನರು ಕಾಣುತ್ತಾರೆ; ಅವರು ಮರಗಳಂತೆ
ಕಾಣಿಸಿದರೂ ತಿರುಗಾಡುತ್ತಾ ಇದ್ದಾರೆ ಅಂದನು. ಆಗ
ಆತನು ಅವನ ಕಣ್ಣುಗಳ ಮೇಲೆ ತಿರಿಗಿ ಕೈಯಿಟ್ಟನು;
ಅವನು ಕಣ್ಣುಬಿಟ್ಟು ನೋಡಲು ಅವನಿಗೆ ಗುಣ
ವಾಗಿತ್ತು; ಎಲ್ಲವೂ ಸ್ಪಷ್ಟವಾಗಿ ಕಾಣಿಸಿತು. ತರು
ವಾಯ ಆತನು—ನೀನು ಊರೊಳಕ್ಕೇನೂ ಹೋಗ
ಬೇಡ ಎಂದು ಹೇಳಿ ಅವನನ್ನು ಅವನ ಮನೆಗೆ ಕಳು
ಹಿಸಿಬಿಟ್ಟನು.

ಪೇತ್ರನು ಯೇಸುವನ್ನು ಕ್ರಿಸ್ತನೆಂದು ಒಪ್ಪಿಕೊಂಡ ಮೇಲೆ
ಯೇಸು ತನ್ನ ಮರಣವನ್ನೂ ತನ್ನ ಶಿಷ್ಯರಿಗೆ ಬರುವ
ಕಷ್ಟಗಳನ್ನೂ ಮುಂದಾಗಿ ತಿಳಿಸಿದ್ದು.
(ಮತ್ತಾ. 16. 13—28; ಲೂಕ 9. 18—27.)

ಯೇಸುವೂ ಆತನ ಶಿಷ್ಯರೂ ಫಿಲಿಪ್ಪನಕೈಸರೈಯ
ಎಂಬ ಪಟ್ಟಣಕ್ಕೆ ಸೇರಿದ ಗ್ರಾಮಗಳಿಗೆ ಹೊರಟರು.
ದಾರಿಯಲ್ಲಿ ಆತನು—ಜನರು ನನ್ನನ್ನು ಯಾರು
ಅನ್ನುತ್ತಾರೆ ಎಂದು ತನ್ನ ಶಿಷ್ಯರನ್ನು ಕೇಳಿದ್ದಕ್ಕೆ
ಅವರು—ನಿನ್ನನ್ನು ಕೆಲವರು ಸ್ನಾನಿಕನಾದ ಯೋಹಾ
ನನು ಅನ್ನುತ್ತಾರೆ; ಕೆಲವರು ಎಲೀಯನು ಅನ್ನು
ತ್ತಾರೆ; ಇನ್ನು ಕೆಲವರು ಪ್ರವಾದಿಗಳಲ್ಲಿ ಒಬ್ಬನು
ಅನ್ನುತ್ತಾರೆ ಎಂದು ಹೇಳಿದರು. ಆತನು ಅವರನ್ನು—
ಆದರೆ ನೀವು ನನ್ನನ್ನು ಯಾರನ್ನುತ್ತೀರಿ? ಎಂದು ಕೇಳ
ಲಾಗಿ ಪೇತ್ರನು—ನೀನು ಬರಬೇಕಾಗಿರುವ ಕ್ರಿಸ್ತನು
ಎಂದು ಉತ್ತರಕೊಟ್ಟನು. ಅದಕ್ಕೆ ಆತನು—ನನ್ನ
ವಿಷಯವಾಗಿ ಯಾರಿಗೂ ಹೇಳಬೇಡಿರಿ ಎಂದು ಅವರಿಗೆ
ಖಂಡಿತವಾಗಿ ಹೇಳಿದನು. ಇದಲ್ಲದೆ ಆತನು—
ಮನುಷ್ಯಕುಮಾರನು ಬಹು ಕಷ್ಟಗಳನ್ನನುಭವಿಸಿ
ಹಿರಿಯರಿಂದಲೂ ಮಹಾಯಾಜಕರಿಂದಲೂ ಶಾಸ್ತ್ರಿಗ
ಳಿಂದಲೂ ನಿರಾಕೃತನಾಗಿ ಕೊಲ್ಲಲ್ಪಟ್ಟು ಮೂರು
ದಿನದ ಮೇಲೆ ಜೀವಿತನಾಗಿ ಎದ್ದು ಬರಬೇಕಾಗಿದೆ

ಎಂದು ಉಪದೇಶಮಾಡುವದಕ್ಕೆ ಪ್ರಾರಂಭಮಾಡಿದನು.
32 ಆತನು ಈ ಮಾತನ್ನು ಏನೂ ಗುಂಬವಿಲ್ಲದೆ ಹೇಳಿದನು.
ಆಗ ಪೇತ್ರನು ಆತನ ಕೈ ಹಿಡಿದು ಆತನನ್ನು ಗದರಿ
33 ಸುವದಕ್ಕೆ ಪ್ರಾರಂಭಿಸಲು ಆತನು ಹಿಂತಿರುಗಿಕೊಂಡು
ತನ್ನ ಶಿಷ್ಯರನ್ನು ನೋಡಿ ಪೇತ್ರನಿಗೆ—ಸೈತಾನನೇ,
ನನ್ನ ಮುಂದೆ ನಿಲ್ಲಬೇಡ, ನಡೆ, ನಿನ್ನ ಯೋಚನೆ ಮನು
ಷ್ಯರ ಯೋಚನೆಯೇ ಹೊರತು ದೇವರದಲ್ಲ ಎಂದು
ಗದರಿಸಿ ಹೇಳಿದನು.
34 ಆ ಮೇಲೆ ಆತನು ತನ್ನ ಶಿಷ್ಯರ ಜೊತೆಗೆ ಜನರ
ಗುಂಪನ್ನೂ ಹತ್ತಿರ ಕರೆದು ಅವರಿಗೆ ಹೇಳಿದ್ದೇನಂದರೆ—
ಯಾವನಿಗಾದರೂ ನನ್ನ ಹಿಂದೆ ಬರುವದಕ್ಕೆ ಮನಸ್ಸಿ
ದ್ದರೆ ಅವನು ತನ್ನನ್ನು ನಿರಾಕರಿಸಿ ತನ್ನ ಶಿಲುಬೆಯನ್ನು
35 ಹೊತ್ತುಕೊಂಡು ನನ್ನ ಹಿಂದೆ ಬರಲಿ. ತನ್ನ ಪ್ರಾಣ
ವನ್ನು ಉಳಿಸಿಕೊಳ್ಳಬೇಕೆಂದಿರುವವನು ಅದನ್ನು ಕಳ
ಕೊಳ್ಳುವನು; ಆದರೆ ನನ್ನ ನಿಮಿತ್ತವಾಗಿಯೂ ಸುವಾ
ರ್ತೆಯ ನಿಮಿತ್ತವಾಗಿಯೂ ತನ್ನ ಪ್ರಾಣವನ್ನು ಕಳ
36 ಕೊಂಡವನು ಅದನ್ನು ಉಳಿಸಿಕೊಳ್ಳುವನು. ಒಬ್ಬ
ಮನುಷ್ಯನು ಲೋಕವನ್ನೆಲ್ಲಾ ಸಂಪಾದಿಸಿಕೊಂಡರೂ
ಪ್ರಾಣನಷ್ಟಪಟ್ಟರೆ ಅವನಿಗೆ ಪ್ರಯೋಜನವೇನು?
37 ಒಬ್ಬನು ತನ್ನ ಪ್ರಾಣಕ್ಕೆ ಏನು ಈಡು ಕೊಡಬಹುದು?
38 ವ್ಯಭಿಚಾರಿಣಿಯಂತಿರುವ ಈ ಪಾಪಿಷ್ಠ ಸಂತತಿಯಲ್ಲಿ
ಯಾವನು ನನಗೂ ನನ್ನ ಮಾತುಗಳಿಗೂ ನಾಚಿ
ಕೊಳ್ಳುತ್ತಾನೋ ಅವನಿಗೆ ಮನುಷ್ಯಕುಮಾರನು,
ತಾನು ತನ್ನ ತಂದೆಯ ಪ್ರಭಾವದೊಡನೆ ಪರಿಶುದ್ಧ
ದೇವದೂತರ ಸಮೇತವಾಗಿ ಬರುವಾಗ ನಾಚಿಕೊಳ್ಳು
ವನು ಅಂದನು.

9 ಮತ್ತು ಅವರಿಗೆ—ನಿಮಗೆ ನಿಜವಾಗಿ ಹೇಳುತ್ತೇನೆ,
ಇಲ್ಲಿ ನಿಂತಿರುವವರೊಳಗೆ ಕೆಲವರು ದೇವರ ರಾಜ್ಯವು
ಪ್ರಬಲವಾಗಿ ಬಂದಿರುವದನ್ನು ನೋಡುವ ತನಕ ಮರಣ
ಹೊಂದುವದಿಲ್ಲವೆಂದು ಹೇಳಿದನು.

### ಯೇಸು ಪ್ರಕಾಶರೂಪವುಳ್ಳವನಾದದ್ದು.

(ಮತ್ತಾ. 17. 1—13; ಲೂಕ 9. 28—36.)

2 ಆರು ದಿವಸಗಳಾದ ಮೇಲೆ ಯೇಸು ಪೇತ್ರ ಯಾ
ಕೋಬ ಯೋಹಾನರನ್ನು ಮಾತ್ರ ವಿಂಗಡವಾಗಿ ಕರ
ಕೊಂಡು ಎತ್ತರವಾದ ಬೆಟ್ಟಕ್ಕೆ ಹೋದನು. ಅಲ್ಲಿ
ಅವರ ಕಣ್ಣಮುಂದೆ ಆತನ ರೂಪ ಬೇರೆಯಾಯಿತು.
3 ಆತನ ವಸ್ತ್ರಗಳು ಬಹು ಬೆಳ್ಳಗೆ ಹೊಳೆಯುತ್ತಿದ್ದವು;
ಭೂಲೋಕದಲ್ಲಿರುವ ಯಾವ ಅಗಸನಾದರೂ ಅಷ್ಟು
4 ಬೆಳ್ಳಗೆ ಮಾಡಲಾರನು. ಇದಲ್ಲದೆ ಎಲೀಯನೂ
ಮೋಶೆಯೂ ಅವರಿಗೆ ಕಾಣಿಸಿಕೊಂಡು ಯೇಸುವಿನ
5 ಸಂಗಡ ಮಾತಾಡುತ್ತಿದ್ದರು. ಆಗ ಪೇತ್ರನು ಯೇಸು
ವಿಗೆ—ಗುರುವೇ, ನಾವು ಇಲ್ಲೇ ಇರುವದು ಒಳ್ಳೇದು;
ಮೂರು ಪರ್ಣಶಾಲೆಗಳನ್ನು ಕಟ್ಟುವೆವು; ನಿನಗೊಂದು
ಮೋಶೆಗೊಂದು ಎಲೀಯನಿಗೊಂದು ಎಂದು ಹೇಳಿದನು.
6 ಏನು ಹೇಳಬೇಕೋ ತಿಳಿಯದೆ ಹೀಗೆ ಮಾತಾಡಿದನು.
7 ಅವರು ಬಹಳವಾಗಿ ಹೆದರಿಕೊಂಡಿದ್ದರು. ಅಷ್ಟರಲ್ಲಿ
ಮೋಡವು ಬಂದು ಅವರ ಮೇಲೆ ಕವಿಯಿತು. ಆ ಮೋಡ
ದೊಳಗಿಂದ—ಈತನು ಪ್ರಿಯನಾಗಿರುವ ನನ್ನ ಮಗ
ನು; ಈತನ ಮಾತನ್ನು ಕೇಳಿರಿ ಎಂದು ಆಕಾಶವಾಣಿ
ಆಯಿತು. ಫಕ್ಕನೆ ಅವರು ಸುತ್ತಲೂ ನೋಡಿದಾಗ 8
ತಮ್ಮ ಸಂಗಡ ಯೇಸುವನ್ನೇ ಹೊರತು ಆಗಿನಿಂದ
ಮತ್ತಾರನ್ನೂ ಕಾಣಲಿಲ್ಲ.
ಅವರು ಆ ಬೆಟ್ಟದಿಂದ ಇಳಿದು ಬರುತ್ತಿರುವಾಗ 9
ಆತನು ಅವರಿಗೆ—ನೀವು ಕಂಡಿರುವದನ್ನು ಮನುಷ್ಯ
ಕುಮಾರನು ಸತ್ತು ಜೀವಿತನಾಗಿ ಎದ್ದು ಬರುವತನಕ
ಯಾರಿಗೂ ತಿಳಿಸಬಾರದೆಂದು ಖಂಡಿತವಾಗಿ ಹೇಳಿದನು.
ಅವರು ಈ ಮಾತನ್ನು ಹಿಡಿದು ಸತ್ತುಜೀವಿತನಾಗಿ 10
ಏಳುವದಂದರೇನು ಎಂದು ತಮ್ಮತಮ್ಮೊಳಗೆ ಮಾತಾಡಿ
ಕೊಂಡರು. ಇದಲ್ಲದೆ ಅವರು—ಎಲೀಯನು ಮೊದಲು 11
ಬರುವದು ಅಗತ್ಯವೆಂಬದಾಗಿ ಶಾಸ್ತ್ರಿಗಳು ಹೇಳುತ್ತಾ
ರಲ್ಲಾ, ಇದು ಹೇಗೆ? ಎಂದು ಆತನನ್ನು ಕೇಳಿದ್ದಕ್ಕೆ
ಆತನು—ಎಲೀಯನು ಮೊದಲು ಬಂದು ಎಲ್ಲವನ್ನು 12
ತಿರಿಗಿ ಸರಿಮಾಡುವದು ನಿಜ. ಮತ್ತು ಮನುಷ್ಯ
ಕುಮಾರನ ವಿಷಯವಾಗಿ—ಅವನು ಬಹು ಕಷ್ಟಗಳನ್ನ
ನುಭವಿಸಿ ಹೀನೈಸಲ್ಪಡಬೇಕೆಂಬದಾಗಿ ಬರೆದದೆ, ಇದು
ಹೇಗೆ? ಆದರೆ ನಾನು ನಿಮಗೆ ಹೇಳುವದೇನಂದರೆ— 13
ಎಲೀಯನು ಬಂದನು; ಮತ್ತು ಅವನ ವಿಷಯವಾಗಿ
ಬರೆದಿರುವ ಪ್ರಕಾರ ಜನರು ತಮ್ಮ ಮನಸ್ಸಿಗೆ ಬಂದಂತೆ
ಅವನಿಗೆ ಮಾಡಿದರು ಅಂದನು.

### ಯೇಸು ಮೂರ್ಛಾರೋಗಿಯನ್ನು ಸ್ವಸ್ಥಮಾಡಿದ್ದು.

(ಮತ್ತಾ. 17. 14—21; ಲೂಕ 9. 37—42.)

ತರುವಾಯ ಅವರು [ಉಳಿದ] ಶಿಷ್ಯರ ಬಳಿಗೆ ಬಂದು 14
ಅವರ ಸುತ್ತಲು ಜನರ ದೊಡ್ಡ ಗುಂಪು ಇರುವದನ್ನೂ
ಅವರ ಸಂಗಡ ಶಾಸ್ತ್ರಿಗಳು ತರ್ಕಮಾಡುವದನ್ನೂ
ಕಂಡರು. ಕೂಡಲೆ ಆ ಗುಂಪಿನವರೆಲ್ಲರು ಯೇಸು 15
ವನ್ನು ಕಂಡು ಬಹು ಆಶ್ಚರ್ಯಪಟ್ಟು ಆತನ ಬಳಿಗೆ
ಓಡಿಬಂದು ಆತನನ್ನು ವಂದಿಸಿದರು. ಆತನು ಶಾಸ್ತ್ರಿ 16
ಗಳನ್ನು—ಇವರ ಸಂಗಡ ಏನು ತರ್ಕಮಾಡುತ್ತೀರಿ?
ಎಂದು ಕೇಳಿದ್ದಕ್ಕೆ ಆ ಗುಂಪಿನಲ್ಲಿ ಒಬ್ಬನು— 17
ಬೋಧಕನೇ, ನನ್ನ ಮಗನನ್ನು ನಿನ್ನ ಬಳಿಗೆ ಕರ
ಕೊಂಡು ಬಂದೆನು; ಅವನಿಗೊಂದು ಮೂಗದೆವ್ವ 18
ಹಿಡಿದದೆ; ಅದು ಎಲ್ಲಿ ಅವನ ಮೇಲೆ ಬಂದರೂ
ಅವನನ್ನು ಕೆಡವುತ್ತದೆ; ಆಗ ಅವನು ನೊರೆಸುರಿಸುತ್ತಾ
ಕರಕರನೆ ಹಲ್ಲು ಕಡಿಯುತ್ತಾ ಕುಂದಿಹೋಗುತ್ತಾನೆ.
ಅದನ್ನು ಬಿಡಿಸಬೇಕೆಂದು ನಿನ್ನ ಶಿಷ್ಯರಿಗೆ ಹೇಳಿಕೊಂಡೆ;
ಅವರ ಕೈಯಿಂದ ಆಗದೆಹೋಯಿತು ಎಂದು ಉತ್ತರ
ಕೊಟ್ಟನು. ಅದಕ್ಕಾತನು—ಎಲಾ, ನಂಬಿಕೆಯಿಲ್ಲ 19
ದಂಥ ಸಂತಾನವೇ, ನಾನು ಇನ್ನೆಷ್ಟು ದಿನ ನಿಮ್ಮ
ಸಂಗಡ ಇರಲಿ? ಇನ್ನೆಷ್ಟು ದಿನ ನಿಮ್ಮನ್ನು ಸಹಿಸಿ
ಕೊಳ್ಳಲಿ? ಅವನನ್ನು ನನ್ನ ಬಳಿಗೆ ತೆಗೆದುಕೊಂಡು
ಬನ್ನಿರಿ, ಅನ್ನಲು ಅವನನ್ನು ಆತನ ಬಳಿಗೆ ತೆಗೆದು 20
ಕೊಂಡು ಬಂದರು. ಆತನನ್ನು ಕಂಡ ಕೂಡಲೆ ಆ
ದೆವ್ವವು ಅವನನ್ನು ಬಹಳವಾಗಿ ಒದ್ದಾಡಿಸಲು ಅವನು
ನೆಲಕ್ಕೆ ಬಿದ್ದು ನೊರೆಸುರಿಸುತ್ತಾ ಹೊರಳಾಡಿದನು.
ಯೇಸು ಅವನ ತಂದೆಯನ್ನು—ಇದು ಇವನಿಗೆ ಬಂದು 21
ಎಷ್ಟು ದಿನವಾಯಿತು ಎಂದು ಕೇಳಿದಾಗ ಅವನು—

22 ಚಿಕ್ಕಂದಿನಲ್ಲಿಯೇ ಬಂದಿದೆ; ಮತ್ತು ಇವನನ್ನು
ಕೊಲ್ಲಬೇಕೆಂದು ಆಗಾಗ್ಗೆ ಬೆಂಕಿಯಲ್ಲಿಯೂ ನೀರಿ
ನಲ್ಲಿಯೂ ಕೆಡವಿತು; ನಿನ್ನ ಕೈಲಿ ಏನಾದರೂ ಆಗುವ
ಹಾಗಿದ್ದರೆ ನಮ್ಮ ಮೇಲೆ ಕರುಣವಿಟ್ಟು ನಮಗೆ
23 ಸಹಾಯಮಾಡು ಅಂದನು. ಯೇಸು ಅವನಿಗೆ—
ನಿನ್ನ ಕೈಲಿ ಆಗುವ ಹಾಗಿದ್ದರೆ ಅನ್ನುತ್ತೀಯೋ?
ನಂಬುವವನಿಗೆ ಎಲ್ಲಾ ಆಗುವದು ಎಂದು ಹೇಳಿದನು.
24 ಕೂಡಲೆ ಆ ಹುಡುಗನ ತಂದೆಯು—ನಂಬುತ್ತೇನೆ,
ನನಗೆ ನಂಬಿಕೆ ಕಡಿಮೆಯಾಗಿದ್ದರೂ ಸಹಾಯಮಾಡು
25 ಎಂದು ಕೂಗಿ ಹೇಳಿದನು. ಆಗ ಯೇಸು ಜನರ
ಗುಂಪು ಓಡಿಬರುವದನ್ನು ಕಂಡು ಆ ದೆವ್ವವನ್ನು
ಗದರಿಸಿ—ಎಲೇ, ಕಿವುಡಾದ ಮೂಗದೆವ್ವವೇ, ಇವ
ನನ್ನು ಬಿಟ್ಟು ಹೋಗು; ಇನ್ನು ಮುಂದೆ ಹಿಡಿಯ
ಬೇಡವೆಂದು ನಾನು ನಿನಗೆ ಅಪ್ಪಣೆಕೊಡುತ್ತೇನೆ
26 ಅಂದನು. ಆಗ ಅದು ಅಬ್ಬರಿಸಿ ಅವನನ್ನು ಒದ್ದಾ
ಡಿಸಿ ಬಿಟ್ಟುಹೋಯಿತು. ಆ ಹುಡುಗನು ಸತ್ತಹಾಗೆ
ಬಿದ್ದಿದ್ದರಿಂದ ಬಹುಜನರು—ಸತ್ತುಹೋದ ಅಂದರು.
27 ಆದರೆ ಯೇಸು ಅವನನ್ನು ಕೈಹಿಡಿದು ಎಬ್ಬಿಸಲು
28 ಅವನು ಎದ್ದು ನಿಂತನು. ಯೇಸು ಮನೆಗೆ ಬಂದಾಗ
ಆತನ ಶಿಷ್ಯರು—ಅದನ್ನು ಬಿಡಿಸಲಿಕ್ಕೆ ನಮ್ಮಿಂದ
ಯಾಕೆ ಆಗಲಿಲ್ಲವೆಂದು ಆತನನ್ನು ಏಕಾಂತದಲ್ಲಿ
29 ಕೇಳಲು ಆತನು—ಈ ಜಾತಿಯು ದೇವರ ಪ್ರಾರ್ಥನೆ
ಯಿಂದಲೇ ಹೊರತು ಬೇರೆ ಯಾತರಿಂದಲೂ ಬಿಟ್ಟು
ಹೋಗುವದಿಲ್ಲವೆಂದು ಅವರಿಗೆ ಹೇಳಿದನು.

ಯೇಸು ತನ್ನ ಮರಣ ಪುನರುತ್ಥಾನಗಳನ್ನು ಎರಡನೆಯ
ಸಾರಿ ಮುಂದಾಗಿ ತಿಳಿಸಿದ್ದು.
(ಮತ್ತಾ. 17. 22, 23; ಲೂಕ 9. 43—45.)

30 ಅಲ್ಲಿಂದ ಅವರು ಹೊರಟು ಗಲಿಲಾಯವನ್ನು
ಹಾದು ಹೋಗುತ್ತಿದ್ದರು. ಇದು ಜನರಿಗೆ ಗೊತ್ತಾಗ
31 ಬಾರದೆಂದು ಆತನಿಗೆ ಮನಸ್ಸಿತ್ತು. ಯಾಕಂದರೆ
ಆತನು ತನ್ನ ಶಿಷ್ಯರಿಗೆ ಉಪದೇಶಮಾಡುತ್ತಾ—
ಮನುಷ್ಯಕುಮಾರನು ಜನರ ಕೈಗೆ ಒಪ್ಪಿಸಲ್ಪಡುತ್ತಾನೆ;
ಅವರು ಅವನನ್ನು ಕೊಲ್ಲುವರು; ಕೊಂದ ಮೂರು
ದಿನದ ಮೇಲೆ ಆತನು ಜೀವಿತನಾಗಿ ಎದ್ದು ಬರುವ
32 ನೆಂದು ಹೇಳಿದನು. ಅವರು ಆ ಮಾತನ್ನು ಗ್ರಹಿಸ
ಲಿಲ್ಲ, ಆದರೆ ಆತನನ್ನು ಕೇಳುವದಕ್ಕೆ ಅಂಜಿದರು.

ಯೇಸು ತನ್ನ ಶಿಷ್ಯರಿಗೆ ದೀನಭಾವ ಇರಬೇಕೆಂತಲೂ ಪಾಪದಲ್ಲಿ
ಸಿಕ್ಕಿಸುವಂಥದನ್ನು ತೆಗೆದುಹಾಕಬೇಕೆಂತಲೂ ಬೋಧಿಸಿದ್ದು.
(ಮತ್ತಾ. 18. 1—9; ಲೂಕ 9. 46—50.)

33 ಮತ್ತು ಅವರು ಕಪೆರ್ನೌಮಿಗೆ ಬಂದರು. ಅಲ್ಲಿ
ಆತನು ಮನೆಯಲ್ಲಿದ್ದಾಗ—ನೀವು ದಾರಿಯಲ್ಲಿ ಏನು
ಮಾತಾಡಿಕೊಳ್ಳುತ್ತಿದ್ದಿರಿ ಎಂದು ಶಿಷ್ಯರನ್ನು ಕೇಳಲು
34 ಅವರು ಸುಮ್ಮನಿದ್ದರು; ಯಾಕಂದರೆ ಅವರು ದಾರಿ
ಯಲ್ಲಿ ಒಬ್ಬರಕೂಡೊಬ್ಬರು—[ತಮ್ಮಲ್ಲಿ] ಯಾವನು
ಹೆಚ್ಚಿನವನೆಂದು ವಾಗ್ವಾದಮಾಡಿಕೊಂಡಿದ್ದರು. ಆತನು
ಕೂತುಕೊಂಡು ತನ್ನ ಹನ್ನೆರಡು ಮಂದಿ ಶಿಷ್ಯರನ್ನು
ಕರೆದು ಅವರಿಗೆ—ಯಾವನಾದರೂ ಮೊದಲಿನವನಾಗ
ಬೇಕೆಂದಿದ್ದರೆ ಅವನು ಎಲ್ಲರಲ್ಲಿ ಕಡೆಯವನೂ
ಎಲ್ಲರ ಆಳೂ ಆಗಿರಬೇಕು ಎಂದು ಹೇಳಿ ಒಂದು
ಚಿಕ್ಕ ಮಗುವನ್ನು ತೆಗೆದುಕೊಂಡು ಅವರ ನಡುವೆ
ನಿಲ್ಲಿಸಿ ಅಪ್ಪಿಕೊಂಡು ಅವರಿಗೆ—ಯಾವನಾದರೂ ನನ್ನ
ಹೆಸರಿನಲ್ಲಿ ಇಂಥ ಚಿಕ್ಕ ಮಕ್ಕಳಲ್ಲಿ ಒಂದನ್ನು ಸೇರಿಸಿ
ಕೊಂಡರೆ ನನ್ನನ್ನು ಸೇರಿಸಿಕೊಂಡ ಹಾಗಾಯಿತು;
ಮತ್ತು ಯಾವನಾದರೂ ನನ್ನನ್ನು ಸೇರಿಸಿಕೊಂಡರೆ
ನನ್ನನ್ನಲ್ಲ, ನನ್ನನ್ನು ಕಳುಹಿಸಿಕೊಟ್ಟಾತನನ್ನೇ ಸೇರಿಸಿ
ಕೊಂಡ ಹಾಗಾಯಿತು ಎಂದು ಹೇಳಿದನು.
ಯೋಹಾನನು ಆತನಿಗೆ—ಬೋಧಕನೇ, ಯಾವ
ನೋ ಒಬ್ಬನು ನಿನ್ನ ಹೆಸರನ್ನು ಹೇಳಿ ದೆವ್ವಬಿಡಿಸು
ವದನ್ನು ನಾವು ಕಂಡು ಅವನು ನಮಗೆ ಸೇರಿದವನಲ್ಲ
ವಾದ್ದರಿಂದ ಅವನಿಗೆ ಅಡ್ಡಿಮಾಡಿದೆವು ಎಂದು ಹೇಳ
ಲಾಗಿ ಯೇಸು—ಅವನಿಗೆ ಅಡ್ಡಿಮಾಡಬೇಡಿರಿ; ನನ್ನ
ಹೆಸರಿನ ಮೇಲೆ ಮಹತ್ತನ್ನು ಮಾಡಿ ಏಕಾಏಕಿ
ನನ್ನನ್ನು ದೂಷಿಸುವವನು ಒಬ್ಬನೂ ಇಲ್ಲ. ನಮ್ಮ
ನ್ನು ಎದುರಿಸದವನು ನಮ್ಮ ಪಕ್ಷದವನೇ. ನೀವು
ಕ್ರಿಸ್ತನವರೆಂದು ನಿಮಗೆ ಯಾವನಾದರೂ ಒಂದು
ತಂಬಿಗೆ ನೀರನ್ನು ಕುಡಿಯುವದಕ್ಕೆ ಕೊಟ್ಟರೆ ಬರತಕ್ಕ
ಪ್ರತಿಫಲವು ಅವನಿಗೆ ತಪ್ಪುವದೇ ಇಲ್ಲವೆಂದು ನಿಮಗೆ
ಸತ್ಯವಾಗಿ ಹೇಳುತ್ತೇನೆ. ಮತ್ತು ನಂಬುವ ಈ
ಚಿಕ್ಕವರಲ್ಲಿ ಒಬ್ಬನಿಗೆ ಯಾವನಾದರೂ ಅಡ್ಡಿಯಾದರೆ
ಅಂಥವನ ಕೊರಳಿಗೆ ಬೀಸುವ ಕಲ್ಲು ಕಟ್ಟಿ ಅವನನ್ನು
ಸಮುದ್ರದಲ್ಲಿ ಹಾಕಿದರೂ ಅವನಿಗೆ ಲೇಸು. ಇದ
ಲ್ಲದೆ ನಿನ್ನ ಕೈ ನಿನ್ನನ್ನು ಪಾಪದಲ್ಲಿ ಸಿಕ್ಕಿಸುವ
ದಾದರೆ ಅದನ್ನು ಕತ್ತರಿಸಿಬಿಡು; ಎರಡು ಕೈಯುಳ್ಳವ
ನಾಗಿದ್ದು ಆರದ ಬೆಂಕಿಯಾಗಿರುವ ನರಕದಲ್ಲಿ ಬೀಳು
ವದಕ್ಕಿಂತ ಕೈಕಳಕೊಂಡವನಾಗಿ ಜೀವದಲ್ಲಿ ಸೇರುವದು
ನಿನಗೆ ಉತ್ತಮ.1) ಮತ್ತು ನಿನ್ನ ಕಾಲು ನಿನ್ನನ್ನು
ಪಾಪದಲ್ಲಿ ಸಿಕ್ಕಿಸುವದಾದರೆ ಅದನ್ನು ಕಡಿದುಬಿಡು;
ಎರಡು ಕಾಲುಳ್ಳವನಾಗಿದ್ದು ನರಕದಲ್ಲಿ ಹಾಕಿಸಿ
ಕೊಳ್ಳುವದಕ್ಕಿಂತ ಕಾಲುಕಳಕೊಂಡವನಾಗಿ ಜೀವದಲ್ಲಿ
ಸೇರುವದು ನಿನಗೆ ಉತ್ತಮ. ನಿನ್ನ ಕಣ್ಣು ನಿನ್ನನ್ನು
ಪಾಪದಲ್ಲಿ ಸಿಕ್ಕಿಸುವದಾದರೆ ಅದನ್ನು ಕಿತ್ತುಬಿಸಾಡು;
ಎರಡು ಕಣ್ಣುಳ್ಳವನಾಗಿದ್ದು ನರಕದಲ್ಲಿ ಹಾಕಿಸಿ
ಕೊಳ್ಳುವದಕ್ಕಿಂತ ಒಂದೇ ಕಣ್ಣುಳ್ಳವನಾಗಿದ್ದು ದೇವರ
ರಾಜ್ಯದಲ್ಲಿ ಸೇರುವದು ನಿನಗೆ ಉತ್ತಮ. ನರಕ
ದಲ್ಲಿ ಅವರನ್ನು ಕಡಿಯುವ ಹುಳ ಸಾಯುವದಿಲ್ಲ,
ಬೆಂಕಿ ಆರುವದಿಲ್ಲ. ಪ್ರತಿಯೊಬ್ಬನಿಗೂ ಬೆಂಕಿಯೆಂಬ
ಉಪ್ಪಿನ ಹದವು ಕೊಡಲ್ಪಡಬೇಕು. ಉಪ್ಪು ಒಳ್ಳೆಯ
ಪದಾರ್ಥವೇ; ಉಪ್ಪು ಸಪ್ಪೆಯಾದರೆ ಅದನ್ನು ಇನ್ನಾ್ಯ
ತರಿಂದ ರುಚಿಗೊಳಿಸುವಿರಿ? ನಿಮ್ಮೊಳಗೆ ಉಪ್ಪು ಇರಲಿ,
ಒಬ್ಬರಿಗೊಬ್ಬರು ಸಮಾಧಾನದಿಂದಿರಿ.

---

1) 44ನೆಯ ಮತ್ತು 46ನೆಯ ವಚನಗಳು ಉತ್ತಮ ಪ್ರತಿಗಳಲ್ಲಿ ಇಲ್ಲ, ಅವೆರಡೂ 48ನೆಯ ವಚನಕ್ಕೆ ಸಮವಾಗಿವೆ.

### ಹೆಂಡತಿಯ ಪರಿತ್ಯಾಗದ ವಿಷಯವಾಗಿ ಯೇಸು ಉತ್ತರ ಕೊಟ್ಟದ್ದು.

(ಮತ್ತಾ. 19. 1—9; ಲೂಕ 16. 18.)

10 ಅಲ್ಲಿಂದ ಆತನು ಎದ್ದು ಯೂದಾಯ ಪ್ರಾಂತ್ಯ
ಕ್ಕೂ ಯೊರ್ದನ್ ಹೊಳೆಯ ಆಚೆಯ ಸೀಮೆಗೂ
ಬಂದನು. ಅಲ್ಲಿ ಜನರು ತಿರಿಗಿ ಗುಂಪುಗುಂಪಾಗಿ ಆತನ
ಬಳಿಗೆ ಕೂಡಿಬರಲು ಆತನು ತಿರಿಗಿ ಎಂದಿನಂತೆ ಅವರಿಗೆ
2 ಉಪದೇಶಮಾಡುತ್ತಿದ್ದನು. ಆಗ ಫರಿಸಾಯರು
ಹತ್ತಿರಕ್ಕೆ ಬಂದು ಆತನನ್ನು ಪರೀಕ್ಷಿಸಬೇಕೆಂಬ
ಯೋಚನೆಯಿಂದ—ಒಬ್ಬನು ಹೆಂಡತಿಯನ್ನು ಬಿಟ್ಟು
ಬಿಡುವದು ಧರ್ಮವೋ ಹೇಗೆ ಎಂದು ಕೇಳಿದರು.
3 ಆತನು ಅದಕ್ಕೆ—ಮೋಶೆ ನಿಮಗೆ ಏನು ಅಜ್ಞೆಕೊಟ್ಟನು
4 ಅನ್ನಲಾಗಿ ಅವರು—ತ್ಯಾಗಪತ್ರವನ್ನು ಬರೆದು
ಕೊಟ್ಟು ಆಕೆಯನ್ನು ಬಿಟ್ಟುಬಿಡಬಹುದೆಂದು ಮೋಶೆ
5 ಯು ಅಪ್ಪಣೆಕೊಟ್ಟನು ಅಂದರು. ಆದರೆ ಯೇಸು
ಅವರಿಗೆ—ಅವನು ನಿಮ್ಮ ಮೊಂಡತನವನ್ನು ನೋಡಿ
6 ನಿಮಗೆ ಇಂಥ ಆಜ್ಞೆಯನ್ನು ಬರೆದಿಟ್ಟನು. ದೇವ
ರಾದರೋ ಸೃಷ್ಟಿಯ ಮೊದಲಿನಿಂದಲೇ ಮನುಷ್ಯ
7 ರನ್ನು ಗಂಡುಹೆಣ್ಣಾಗಿ ನಿರ್ಮಿಸಿದನೆಂತಲೂ ಈ
ಕಾರಣದಿಂದ ಪುರುಷನು ತನ್ನ ತಂದೆತಾಯಿಗಳನ್ನು
ಬಿಟ್ಟು ತನ್ನ ಹೆಂಡತಿಯನ್ನು ಸೇರಿಕೊಂಡು ಅವರಿ
ಬ್ಬರು ಒಂದೇ ಶರೀರವಾಗಿರುವರೆಂತಲೂ ಬರೆದದೆ.
8 ಹೀಗಿರುವಲ್ಲಿ ಅವರು ಇನ್ನು ಇಬ್ಬರಲ್ಲ, ಒಂದೇ ಶರೀರ
9 ವಾಗಿದ್ದಾರೆ. ಆದದರಿಂದ ದೇವರು ಕೂಡಿಸಿದ್ದನ್ನು
ಮನುಷ್ಯರು ಅಗಲಿಸಬಾರದು ಎಂದು ಹೇಳಿದನು.
10 ಮನೆಯಲ್ಲಿ ಆತನ ಶಿಷ್ಯರು ಈ ವಿಷಯದಲ್ಲಿ ಆತನನ್ನು
11 ತಿರಿಗಿ ಕೇಳಿದಾಗ ಆತನು ಅವರಿಗೆ—ತನ್ನ ಹೆಂಡತಿ
ಯನ್ನು ಬಿಟ್ಟು ಮತ್ತೊಬ್ಬಳನ್ನು ಮದುವೆಮಾಡಿ
ಕೊಳ್ಳುವವನು ತನ್ನ ಹೆಂಡತಿಗೆ ದ್ರೋಹಿಯಾಗಿ ವ್ಯಭಿ
12 ಚಾರ ಮಾಡಿದವನಾಗಿದ್ದಾನೆ; ಮತ್ತು ಹೆಂಡತಿಯು
ತನ್ನ ಗಂಡನನ್ನು ಬಿಟ್ಟು ಬೇರೊಬ್ಬನನ್ನು ಮದುವೆ
ಮಾಡಿಕೊಂಡರೆ ಅವಳು ವ್ಯಭಿಚಾರ ಮಾಡಿದವಳಾಗಿ
ದ್ದಾಳೆ ಎಂದು ಹೇಳಿದನು.

### ಯೇಸು ಚಿಕ್ಕ ಮಕ್ಕಳನ್ನು ಆಶೀರ್ವದಿಸಿದ್ದು.

(ಮತ್ತಾ. 19. 13—15; ಲೂಕ 18. 15—17.)

13 ಬಳಿಕ ಕೆಲವರು ತಮ್ಮ ಚಿಕ್ಕ ಮಕ್ಕಳನ್ನು ಯೇಸು
ವಿನಿಂದ ಮುಟ್ಟಿಸಬೇಕೆಂದು ಆತನ ಬಳಿಗೆ ತರಲು
14 ಶಿಷ್ಯರು ಅವರನ್ನು ಗದರಿಸಿದರು. ಆದರೆ ಯೇಸು
ಅದನ್ನು ಕಂಡು ಕೋಪಗೊಂಡು ಅವರಿಗೆ—ಮಕ್ಕ
ಳನ್ನು ನನ್ನ ಹತ್ತಿರಕ್ಕೆ ಬರಗೊಡಿಸಿರಿ; ಅವುಗಳಿಗೆ ಅಡ್ಡಿ
15 ಮಾಡಬೇಡಿರಿ; ದೇವರ ರಾಜ್ಯವು ಇಂಥವರದೇ. ನಿಮಗೆ
ಸತ್ಯವಾಗಿ ಹೇಳುತ್ತೇನೆ, ಯಾವನು ಶಿಶುಭಾವದಿಂದ
ದೇವರ ರಾಜ್ಯವನ್ನು ಅಂಗೀಕರಿಸುವದಿಲ್ಲವೋ ಅವನು
16 ಅದರಲ್ಲಿ ಸೇರುವದೇ ಇಲ್ಲ ಎಂದು ಹೇಳಿ ಅವುಗಳನ್ನು
ಅಪ್ಪಿಕೊಂಡು ಅವುಗಳ ಮೇಲೆ ಕೈಯಿಟ್ಟು ಆಶೀರ್ವ
ದಿಸಿದನು.

### ಯೇಸು ಹಣದ ಭ್ರಮೆಯಿಂದಾಗುವ ಕೇಡನ್ನು ತೋರಿಸಿದ್ದು.

(ಮತ್ತಾ. 19. 16—30; ಲೂಕ 18. 18—30.)

ಆತನು ಹೊರಟು ದಾರಿಹಿಡಿದು ಹೋಗುವಾಗ 17
ಒಬ್ಬನು ಓಡುತ್ತಾ ಆತನ ಎದುರಿಗೆ ಬಂದು ಮೊಣಕಾ
ಲೂರಿ—ಒಳ್ಳೇ ಬೋಧಕನೇ, ನಾನು ನಿತ್ಯಜೀವಕ್ಕೆ
ಬಾಧ್ಯಸ್ಥನಾಗಬೇಕಾದರೆ ಏನು ಮಾಡಬೇಕೆಂದು ಆತ
ನನ್ನು ಕೇಳಲಾಗಿ ಯೇಸು ಅವನಿಗೆ—ನನ್ನನ್ನು ಒಳ್ಳೆ 18
ಯವನೆಂದು ಯಾಕೆ ಹೇಳುತ್ತೀ? ದೇವರೊಬ್ಬನೇ
ಹೊರತು ಮತ್ತಾವನೂ ಒಳ್ಳೆಯವನಲ್ಲ. ನರಹತ್ಯ 19
ಮಾಡಬಾರದು; ವ್ಯಭಿಚಾರಮಾಡಬಾರದು; ಕದಿಯ
ಬಾರದು; ಸುಳ್ಳುಸಾಕ್ಷಿ ಹೇಳಬಾರದು; ಮೋಸಮಾಡ
ಬಾರದು; ನಿನ್ನ ತಂದೆತಾಯಿಗಳನ್ನು ಸನ್ಮಾನಿಸಬೇಕು
ಎಂಬ ದೇವರಾಜ್ಞೆಗಳು ನಿನಗೆ ಗೊತ್ತಿವೆಯಷ್ಟೆ ಎಂದು
ಹೇಳಿದನು. ಅವನು ಆತನಿಗೆ—ಬೋಧಕನೇ, ನಾನು 20
ಚಿಕ್ಕಂದಿನಿಂದಲೂ ಇವೆಲ್ಲಕ್ಕೂ ಸರಿಯಾಗಿ ನಡಕೊಂಡು
ಬಂದಿದ್ದೇನೆ ಎಂದು ಹೇಳಲು ಯೇಸು ಅವನನ್ನು 21
ದೃಷ್ಟಿಸಿನೋಡಿ ಪ್ರೀತಿಸಿ ಅವನಿಗೆ—ನಿನಗೆ ಒಂದು
ಕಡಿಮೆಯಾಗಿದೆ; ಹೋಗು, ನಿನ್ನ ಬದುಕನ್ನೆಲ್ಲಾ
ಮಾರಿ ಬಡವರಿಗೆ ಕೊಡು; ಪರಲೋಕದಲ್ಲಿ ನಿನಗೆ
ಸಂಪತ್ತಿರುವದು; ನೀನು ಬಂದು ನನ್ನನ್ನು ಹಿಂಬಾ
ಲಿಸು ಎಂದು ಹೇಳಿದನು. ಆದರೆ ಅವನು ಬಹಳ 22
ಆಸ್ತಿಯುಳ್ಳವನಾಗಿದ್ದದರಿಂದ ಈ ಮಾತಿಗೆ ಮೋರೆ
ಬಾಡಿದವನಾಗಿ ದುಃಖದಿಂದ ಹೊರಟುಹೋದನು.
ಆಗ ಯೇಸು ಸುತ್ತಲೂ ನೋಡಿ ತನ್ನ ಶಿಷ್ಯರಿಗೆ— 23
ಧನವಂತರು ದೇವರ ರಾಜ್ಯದಲ್ಲಿ ಸೇರುವದು ಎಷ್ಟೋ
ಕಷ್ಟ ಎಂದು ಹೇಳಿದನು. ಶಿಷ್ಯರು ಆತನ ಮಾತುಗ 24
ಳನ್ನು ಕೇಳಿ ಬೆರಗಾದರು. ಯೇಸು ತಿರಿಗಿ ಅವ
ರಿಗೆ—ಮಕ್ಕಳಿರಾ, [1]ದೇವರ ರಾಜ್ಯದಲ್ಲಿ ಸೇರುವದು
ಎಷ್ಟೋ ಕಷ್ಟ. ಐಶ್ವರ್ಯವಂತನು ದೇವರ ರಾಜ್ಯ 25
ದಲ್ಲಿ ಸೇರುವದಕ್ಕಿಂತ ಒಂಟೆಯು ಸೂಜೀಕಣ್ಣಿನಲ್ಲಿ
ನುಗ್ಗಿಹೋಗುವದು ಸುಲಭ ಎಂದು ಹೇಳಿದನು. ಈ 26
ಮಾತಿಗೆ ಅವರು ಇನ್ನಷ್ಟು ಆಶ್ಚರ್ಯಪಟ್ಟು—[ಹೀಗಿದ್ದರೆ]
ಯಾರಿಗೆ ರಕ್ಷಣೆಯಾದೀತು ಎಂದು ತಮ್ಮ ತಮ್ಮೊಳಗೆ
ಹೇಳಿಕೊಳ್ಳಲು ಯೇಸು ಅವರನ್ನು ದೃಷ್ಟಿಸಿನೋಡಿ— 27
ಇದು ಮನುಷ್ಯರಿಗೆ ಅಸಾಧ್ಯ; ದೇವರಿಗೆ ಅಸಾಧ್ಯ
ವಲ್ಲ; ದೇವರಿಗೆ ಎಲ್ಲವು ಸಾಧ್ಯವೇ ಅಂದನು. ಪೇತ್ರ 28
ನು ಆತನಿಗೆ—ಇಗೋ, ನಾವು ಎಲ್ಲಾ ಬಿಟ್ಟುಬಿಟ್ಟು
ನಿನ್ನನ್ನು ಹಿಂಬಾಲಿಸಿದ್ದೇವೆ ಎಂದು ಹೇಳುವದಕ್ಕೆ
ಪ್ರಾರಂಭಿಸಲು ಯೇಸು—ನಿಮಗೆ ಸತ್ಯವಾಗಿ ಹೇಳು 29
ತ್ತೇನೆ, ಯಾವನು ನನ್ನ ನಿಮಿತ್ತವೂ ಸುವಾರ್ತೆಯ
ನಿಮಿತ್ತವೂ ಮನೆಯನ್ನಾಗಲಿ ಅಣ್ಣತಮ್ಮಂದಿರನ್ನಾಗಲಿ
ಅಕ್ಕತಂಗಿಯರನ್ನಾಗಲಿ ತಾಯಿಯನ್ನಾಗಲಿ ತಂದೆಯ
ನ್ನಾಗಲಿ ಮಕ್ಕಳನ್ನಾಗಲಿ ಭೂಮಿಯನ್ನಾಗಲಿ ಬಿಟ್ಟು
ಬಿಟ್ಟಿರುವನೋ ಅವನಿಗೆ ಈಗಿನ ಕಾಲದಲ್ಲಿ ಮನೆ ಅಣ್ಣ 30

---

[1] ಕೆಲವು ಪ್ರತಿಗಳಲ್ಲಿ—ಧನವನ್ನು ನಂಬಿಕೊಂಡಿರುವವರು ಎಂಬ ಮಾತು ಹೆಚ್ಚಾಗಿ ಸೇರಿಸಿ ಅದೆ.

ತಮ್ಮ ಅಕ್ಕ ತಂಗಿ ತಾಯಿ ಮಕ್ಕಳು ಭೂಮಿ ಇವೆಲ್ಲ
ವೂ ಹಿಂಸೆಗಳು ಸಹಿತವಾಗಿ ನೂರರಷ್ಟು ಸಿಕ್ಕೇ ಸಿಕ್ಕು
ತ್ತವೆ; ಮತ್ತು ಮುಂದಣ ಲೋಕದಲ್ಲಿ ನಿತ್ಯಜೀವವು
31 ದೊರೆಯುವದು. ಆದರೆ ಬಹು ಮಂದಿ ಮೊದಲಿನ
ವರು ಕಡೆಯವರಾಗುವರು, ಕಡೆಯವರು ಮೊದಲಿನವ
ರಾಗುವರು ಎಂದು ಹೇಳಿದನು.

ಯೇಸು ತನ್ನ ಮರಣ ಪುನರುತ್ಥಾನಗಳನ್ನು ಮೂರನೆಯ ಸಾರಿ ಮುಂದಾಗಿ ತಿಳಿಸಿದ್ದು.

(ಮತ್ತಾ. 20. 17—19; ಲೂಕ 18. 31—34.)

32 ಅವರು ಯೆರೂಸಲೇಮಿನ ದಾರಿಯನ್ನು ಹಿಡಿದು
ಹೋಗುತ್ತಿರುವಾಗ ಯೇಸು ಅವರ ಮುಂದೆ ಮುಂದೆ
ಹೋಗುತ್ತಿದ್ದನು. ಅವರು [ನೋಡಿ] ಬೆರಗಾದರು;
ಆತನ ಹಿಂದೆ ಬರುವವರು ಭಯಪಡುವವರಾದರು.
ಆಗ ಆತನು ತನ್ನ ಹನ್ನೆರಡು ಮಂದಿ ಶಿಷ್ಯರನ್ನು ತಿರಿಗಿ
ಕರೆದುಕೊಂಡು ಮುಂದೆ ತನಗಾಗುವದನ್ನು ಹೇಳುವ
33 ದಕ್ಕೆ ತೊಡಗಿ ಅವರಿಗೆ—ನೋಡಿರಿ, ನಾವು ಯೆರೂಸ
ಲೇಮಿಗೆ ಹೋಗುತ್ತಾ ಇದ್ದೇವೆ. ಮತ್ತು ಮನುಷ್ಯ
ಕುಮಾರನನ್ನು ಮಹಾಯಾಜಕರ ಮತ್ತು ಶಾಸ್ತ್ರಿಗಳ
ಕೈಗೆ ಹಿಡುಕೊಡುವರು. ಅವರು ಅವನಿಗೆ ಮರಣ
ದಂಡನೆಯನ್ನು ವಿಧಿಸಿ ಅವನನ್ನು ಅನ್ಯರ ಕೈಗೆ ಒಪ್ಪಿ
34 ಸುವರು. ಇವರು ಅವನನ್ನು ಅಪಹಾಸ್ಯಮಾಡುವರು,
ಅವನ ಮೇಲೆ ಉಗುಳುವರು, ಅವನನ್ನು ಕೊರಡೆ
ಗಳಿಂದ ಹೊಡೆಯುವರು, ಕೊಂದುಹಾಕುವರು.
ಅವನು ಮೂರು ದಿನದ ಮೇಲೆ ಜೀವಿತನಾಗಿ ಎದ್ದು
ಬರುವನು ಎಂದು ಹೇಳಿದನು.

ಯೇಸು ತನ್ನ ಶಿಷ್ಯರಿಗೆ ದೀನಭಾವವಿರಬೇಕೆಂದು ಬೋಧಿಸಿದ್ದು.

(ಮತ್ತಾ. 20. 20—28.)

35 ಆಗ ಜೆಬೆದಾಯನ ಮಕ್ಕಳಾದ ಯಾಕೋಬ
ಯೋಹಾನರು ಆತನ ಬಳಿಗೆ ಬಂದು ಆತನಿಗೆ—ಗುರು
ವೇ, ನಾವು ಒಂದನ್ನು ಕೇಳಿಕೊಳ್ಳುತ್ತೇವೆ; ಅದನ್ನು
ನಮಗೋಸ್ಕರ ನಡಿಸಿಕೊಡಬೇಕೆಂದು ಹೇಳಿದರು.
36 ಆತನು ಅವರನ್ನು—ನಿಮಗೇನು ನಡಿಸಿಕೊಡಬೇಕು
37 ಎಂದು ಕೇಳಲು ಅವರು—ನಿನಗೆ ಮಹಾಪದವಿ
ಬಂದಾಗ ನಮ್ಮಲ್ಲಿ ಒಬ್ಬನು ನಿನ್ನ ಬಲಗಡೆಯಲ್ಲೂ
ಮತ್ತೊಬ್ಬನು ಎಡಗಡೆಯಲ್ಲೂ ಕೂತುಕೊಳ್ಳುವಂತೆ
38 ನಮಗೆ ಅನುಗ್ರಹಮಾಡಬೇಕು ಅಂದರು. ಆದರೆ
ಯೇಸು ಅವರನ್ನು—ನೀವು ಬೇಡಿಕೊಂಡದ್ದು ಏನೆಂದು
ನಿಮಗೆ ತಿಳಿಯದು; ನಾನು ಕುಡಿಯುವ ಪಾತ್ರೆ
ಯಲ್ಲಿ ಕುಡಿಯುವದು ನಿಮ್ಮಿಂದಾದೀತೇ? ನನಗಾ
ಗುವ ದೀಕ್ಷಾಸ್ನಾನವನ್ನು ಹೊಂದುವದು ನಿಮ್ಮಿಂದಾ
ದೀತೇ ಎಂದು ಕೇಳಲು ಅವರು—ಆಗುವದು
39 ಅಂದರು. ಆಗ ಯೇಸು ಅವರಿಗೆ—ನಾನು ಕುಡಿ
ಯುವ ಪಾತ್ರೆಯಲ್ಲಿ ಕುಡಿಯುವಿರಿ; ನನಗಾಗುವ
40 ಸ್ನಾನವು ನಿಮಗಾಗುವದು; ಆದರೆ ನನ್ನ ಬಲಗಡೆ
ಯಲ್ಲಾದರೂ ಎಡಗಡೆಯಲ್ಲಾದರೂ ಕೂತುಕೊಳ್ಳು
ವಂತೆ ಅನುಗ್ರಹಮಾಡುವದು ನನ್ನದಲ್ಲ; ಅದು

ಯಾರಿಗೆಂದು ಸಿದ್ಧಪಡಿಸಿದೆಯೋ ಅವರಿಗೇ ಸಿಕ್ಕು
ವದು ಎಂದು ಹೇಳಿದನು. ಉಳಿದ ಹತ್ತು ಮಂದಿ 4
ಶಿಷ್ಯರು ಇದನ್ನು ಕೇಳಿ ಯಾಕೋಬ ಯೋಹಾನರ
ಮೇಲೆ ಸಿಟ್ಟಿಗೆದ್ದರು. ಯೇಸು ಅವರನ್ನು ಹತ್ತಿರಕ್ಕೆ
ಕರೆದು ಅವರಿಗೆ—ಜನಗಳನ್ನಾಳುವವರೆನಿಸಿಕೊಳ್ಳುವ
ವರು ಅವರ ಮೇಲೆ ಅಹಂಕಾರದಿಂದ ದೊರೆತನಮಾಡು
ತ್ತಾರೆ, ಮತ್ತು ಅವರಲ್ಲಿ ದೊಡ್ಡವರು ಬಲಾತ್ಕಾರದಿಂದ
ಅಧಿಕಾರ ನಡಸುತ್ತಾರೆ ಎಂದು ನೀವು ಬಲ್ಲಿರಷ್ಟೆ; ಆದರೆ 4
ನಿಮ್ಮಲ್ಲಿ ಹಾಗಿರಬಾರದು; ನಿಮ್ಮಲ್ಲಿ ದೊಡ್ಡವನಾಗ
ಬೇಕೆಂದಿರುವವನು ನಿಮ್ಮ ಸೇವಕನಾಗಿರಬೇಕು;
ನಿಮ್ಮಲ್ಲಿ ಮೊದಲನೆಯವನಾಗಬೇಕೆಂದಿರುವವನು 4
ಎಲ್ಲರ ಆಳಾಗಿರಬೇಕು. ಮನುಷ್ಯಕುಮಾರನು ಸಹ 4
ಸೇವೆಮಾಡಿಸಿಕೊಳ್ಳುವದಕ್ಕೆ ಬರಲಿಲ್ಲ, ಸೇವೆಮಾಡು
ವದಕ್ಕೂ ಅನೇಕರನ್ನು ಬಿಡಿಸಿಕೊಳ್ಳುವದಕ್ಕಾಗಿ ತನ್ನ
ಪ್ರಾಣವನ್ನು ಈಡುಕೊಡುವದಕ್ಕೂ ಬಂದನು ಎಂದು
ಹೇಳಿದನು.

ಯೇಸು ಬಾರ್ತಿಮಾಯನೆಂಬ ಒಬ್ಬ ಕುರುಡನಿಗೆ ದೃಷ್ಟಿಕೊಟ್ಟದ್ದು.

(ಮತ್ತಾ. 20. 29—34; ಲೂಕ 18. 35—43.)

ಆ ಮೇಲೆ ಅವರು ಯೆರಿಕೋವಿಗೆ ಬಂದರು. 4
ಆತನೂ ಆತನ ಶಿಷ್ಯರೂ ಬಹು ಜನರ ಗುಂಪೂ ಆ
ಊರಿನಿಂದ ಹೊರಟುಹೋಗುತ್ತಿರುವಾಗ ತಿಮಾಯನ
ಮಗನಾದ ಬಾರ್ತಿಮಾಯನು ದಾರಿಯ ಮಗ್ಗುಲಲ್ಲಿ
ಕೂತಿದ್ದನು. ಅವನು ಕುರುಡ ಭಿಕ್ಷಗಾರನು. ಈ 4
ಮಾರ್ಗವಾಗಿ ಹೋಗುವವನು ನಜರೇತಿನ ಯೇಸು
ವೆಂದು ಅವನು ಕೇಳಿ—ದಾವೀದನ ಕುಮಾರನೇ,
ಯೇಸುವೇ, ನನ್ನನ್ನು ಕರುಣಿಸು ಎಂದು ಕೂಗಿಕೊಳ್ಳು
ವದಕ್ಕೆ ಪ್ರಾರಂಭಿಸಿದನು. ಅನೇಕರು—ಸುಮ್ಮನಿರು 4
ಎಂದು ಅವನನ್ನು ಗದರಿಸಲು ಅವನು—ದಾವೀದನ
ಕುಮಾರನೇ, ನನ್ನನ್ನು ಕರುಣಿಸು ಎಂದು ಮತ್ತಷ್ಟು
ಕೂಗಿಕೊಂಡನು. ಆಗ ಯೇಸು ನಿಂತು—ಅವನನ್ನು 4
ಕರೆಯಿರಿ ಅನ್ನಲು ಅವರು ಆ ಕುರುಡನನ್ನು ಕರೆದು—
ಧೈರ್ಯವಿರಲಿ, ಏಳು, ನಿನ್ನನ್ನು ಕರೆಯುತ್ತಾನೆ ಅಂದ
ರು. ಅವನು ತನ್ನ ಹೊದಿಕೆಯನ್ನು ತೆಗೆದುಹಾಕಿ 5
ತಟ್ಟನೆ ಎದ್ದು ಯೇಸುವಿನ ಬಳಿಗೆ ಬಂದನು. ಯೇಸು 5
ಅವನನ್ನು—ನಾನು ನಿನಗೆ ಏನು ಮಾಡಬೇಕೆಂದು
ಕೋರುತ್ತೀ ಎಂದು ಕೇಳಲು ಆ ಕುರುಡನು—ನನಗೆ
ಕಣ್ಣು ಬರುವಂತೆ ಮಾಡಬೇಕು, ಗುರುವೇ, ಅಂದನು.
ಯೇಸು ಅವನಿಗೆ—ಹೋಗು, ನಿನ್ನ ನಂಬಿಕೆಯೇ 5
ನಿನ್ನನ್ನು ಸ್ವಸ್ಥಮಾಡಿ ಅದೆ ಎಂದು ಹೇಳಿದನು; ಕೂಡಲೆ
ಅವನಿಗೆ ಕಣ್ಣು ಬಂದವು; ಅವನು ಆ ದಾರಿಯಲ್ಲಿ ಆತನ
ಹಿಂದೆ ಹೋದನು.

ಯೇಸು ಅರಸನಂತೆ ಯೆರೂಸಲೇಮಿನಲ್ಲಿ ಪ್ರವೇಶಮಾಡಿದ್ದು.

(ಮತ್ತಾ. 21. 1—9; ಲೂಕ 19. 29—38; ಯೋಹಾ. 12. 12—16.)

ಅವರು ಯೆರೂಸಲೇಮಿಗೆ ಸಮೀಪಿಸಿ ಎಣ್ಣೇಮರ 1
ಗಳ ಗುಡ್ಡದ ಬಳಿಯಲ್ಲಿರುವ ಬೇತ್ಫಗೆಗೂ ಬೇಥಾ

ನ್ಯಕ್ಕೆ ಬಂದಾಗ ಆತನು ತನ್ನ ಶಿಷ್ಯರಲ್ಲಿ ಇಬ್ಬರನ್ನು
2 ಕರೆದು—ನಿಮ್ಮೆದುರಿಗಿರುವ ಹಳ್ಳಿಗೆ ಹೋಗಿರಿ; ಅದ
ರೊಳಕ್ಕೆ ಸೇರುತ್ತಿರುವಾಗಲೇ ಅಲ್ಲಿ ಕಟ್ಟಿರುವ ಒಂದು
ಕತ್ತೇಮರಿಯನ್ನು ಕಾಣುವಿರಿ; ಇದುವರೆಗೆ ಅದರ
ಮೇಲೆ ಯಾರೂ ಹತ್ತಿಲ್ಲ; ಅದನ್ನು ಬಿಚ್ಚಿ ಹಿಡು
3 ಕೊಂಡು ಬನ್ನಿರಿ. ಯಾವನಾದರೂ ನಿಮ್ಮನ್ನು—
ಏನು ಹೀಗೆ ಮಾಡುವದು ಎಂದು ಕೇಳಿದರೆ—ಇದು
ಸ್ವಾಮಿಯವರಿಗೆ ಬೇಕಾಗಿದೆ, ಅವರು ತಡಮಾಡದೆ
ತಿರಿಗಿ ಇಲ್ಲಿಗೆ ಕಳುಹಿಸಿಕೊಡುವರು ಅನ್ನಿರಿ ಎಂದು
4 ಹೇಳಿ ಕಳುಹಿಸಿದನು. ಆ ಶಿಷ್ಯರು ಹೋಗಿ ಬೀದಿ
ಯಲ್ಲಿ ಹೊರಗೆ ಬಾಗಲಿನ ಹತ್ತಿರ ಒಂದು ಕತ್ತೇಮರಿ
5 ಕಟ್ಟಿರುವದನ್ನು ಕಂಡು ಅದನ್ನು ಬಿಚ್ಚಿದರು. ಅಲ್ಲಿ
ನಿಂತಿದ್ದವರಲ್ಲಿ ಕೆಲವರು—ಈ ಮರಿಯನ್ನು ಬಿಚ್ಚಿ
ಏನು ಮಾಡುತ್ತೀರಿ? ಎಂದು ಅವರನ್ನು ಕೇಳಿದ್ದಕ್ಕೆ
6 ಯೇಸು ಹೇಳಿದಂತೆಯೇ ಅವರು ಹೇಳಿದಾಗ ಆ
7 ಜನರು ತೆಗೆದುಕೊಂಡುಹೋಗಗೊಡಿಸಿದರು. ಶಿಷ್ಯರು
ಆ ಮರಿಯನ್ನು ಯೇಸುವಿನ ಬಳಿಗೆ ತಂದು ತಮ್ಮ
ಬಟ್ಟೆಗಳನ್ನು ಅದರ ಮೇಲೆ ಹಾಕಲು ಆತನು ಅದನ್ನು
8 ಹತ್ತಿ ಕೂತುಕೊಂಡನು. ಆಗ ಅನೇಕರು ತಮ್ಮ
ಬಟ್ಟೆಗಳನ್ನು ದಾರಿಯಲ್ಲಿ ಹಾಸಿದರು. ಬೇರೆ ಕೆಲ
ವರು ತೋಟಗಳಿಂದ ಚಿಗುರುಗಳನ್ನು ಕೊಯಿದು
9 ತಂದು ಹಾಸಿದರು. ಆತನ ಹಿಂದೆಯೂ ಮುಂದೆಯೂ
ಹೋಗುತ್ತಿದ್ದವರು—[1]ಜಯ, ಕರ್ತನ ಹೆಸರಿನಲ್ಲಿ
10 ಬರುವವನಿಗೆ ಆಶೀರ್ವಾದ; ನಮ್ಮ ಪಿತೃವಾದ ದಾವೀ
ದನ ರಾಜ್ಯವು ಬರುತ್ತದೆ, ಅದಕ್ಕೆ ಆಶೀರ್ವಾದ; ಮೇಲಣ
ಲೋಕಗಳಲ್ಲಿ [1]ಜಯ ಎಂದು ಆರ್ಭಟಿಸಿದರು.
11 ತರುವಾಯ ಯೇಸು ಯೆರೂಸಲೇಮನ್ನು ಸೇರಿ
ದೇವಾಲಯಕ್ಕೆ ಹೋಗಿ ಸುತ್ತಲೂ ಎಲ್ಲಾ ನೋಡಿ
ಕೊಂಡು ಅಷ್ಟರಲ್ಲಿ ಸಂಜೆಯಾದದ್ದರಿಂದ ಹನ್ನೆರಡು
ಮಂದಿ ಶಿಷ್ಯರನ್ನು ಕರಕೊಂಡು ಬೇಥಾನ್ಯಕ್ಕೆ ಹೊರಟು
ಹೋದನು.

ಯೇಸುವಿನ ಮಾತಿಗೆ ಅಂಜೂರದ ಮರವು ಒಣಗಿಹೋದದ್ದು;
ದೇವಾಲಯದಲ್ಲಿ ವ್ಯಾಪಾರಮಾಡುವವರನ್ನು ಹೊರಡಿಸಿದ್ದು.
(ಮತ್ತಾ. 21. 12—22; ಲೂಕ 19. 45—48.)

12 ಮರುದಿನ ಅವರು ಬೇಥಾನ್ಯವನ್ನು ಬಿಟ್ಟು ಬರುತ್ತಿ
13 ರುವಾಗ ಆತನು ಹಸಿದನು. ಮತ್ತು ಎಲೆಬಿಟ್ಟಿದ್ದ
ಒಂದು ಅಂಜೂರದ ಮರವನ್ನು ದೂರದಲ್ಲಿ ಕಂಡು
ಅದರಲ್ಲಿ ತನಗೇನಾದರೂ ಹಣ್ಣು ಸಿಕ್ಕೀತೆಂದು ಅಲ್ಲಿಗೆ
ಹೋದನು. ಅದರ ಹತ್ತಿರಕ್ಕೆ ಬಂದಾಗ ಅದರಲ್ಲಿ
ಬರೀ ಎಲೆಗಳನ್ನೇ ಹೊರತು ಮತ್ತೇನೂ ಕಾಣಲಿಲ್ಲ;
14 ಅದು ಅಂಜೂರದ ಹಣ್ಣಿನ ಕಾಲವಲ್ಲ. ಆಗ ಯೇಸು
ಆ ಮರಕ್ಕೆ—ಇನ್ನು ಮೇಲೆ ಒಬ್ಬರೂ ನಿನ್ನಲ್ಲಿ ಹಣ್ಣ
ನ್ನು ಎಂದೆಂದಿಗೂ ತಿನ್ನದ ಹಾಗಾಗಲಿ ಎಂದು ಹೇಳಿ
ದನು. ಆತನ ಶಿಷ್ಯರು ಅದನ್ನು ಕೇಳಿದರು.
15 ಅವರು ಯೆರೂಸಲೇಮಿಗೆ ಬಂದಾಗ ಯೇಸು
ದೇವಾಲಯಕ್ಕೆ ಹೋಗಿ ಅದರಲ್ಲಿ ಮಾರುವವರನ್ನೂ
ಕೊಳ್ಳುವವರನ್ನೂ ಹೊರಡಿಸಿಬಿಡುವದಕ್ಕೆ ಪ್ರಾರಂಭಿಸಿ
ಚಿನಿವಾರರ ಮೇಜುಗಳನ್ನೂ ಪಾರಿವಾಳಮಾರುವವರ
ಕಾಲ್ಮಣೆಗಳನ್ನೂ ಕೆಡವಿದನು; ಒಬ್ಬನನ್ನಾದರೂ ಸಾ 16
ಮಾನು ಹೊತ್ತುಕೊಂಡು ದೇವಾಲಯದೊಳಗೆ ಹಾದು
ಹೋಗಗೊಡಿಸಲಿಲ್ಲ. ಮತ್ತು ಆತನು ಉಪದೇಶ 17
ಮಾಡಿ—ನನ್ನ ಆಲಯವು ಎಲ್ಲಾ ಜನಾಂಗಗಳಿಗೂ
ಪ್ರಾರ್ಥನಾಲಯವೆನಿಸಿಕೊಳ್ಳುವದು ಎಂದು ಬರೆದಿದೆ
ಯಲ್ಲಾ? ಆದರೆ ನೀವು ಅದನ್ನು ಕಳ್ಳರ ಗವಿ ಮಾಡಿ
ದ್ದೀರಿ ಎಂದು ಹೇಳಿದನು. ಅದನ್ನು ಮಹಾಯಾಜ 18
ಕರೂ ಶಾಸ್ತ್ರಿಗಳೂ ಕೇಳಿ ಅವನನ್ನು ಯಾವ ಉಪಾ
ಯದಿಂದ ಕೊಲ್ಲೋಣ ಎಂದು ಸಂದರ್ಭನೋಡುತ್ತಿ
ದ್ದರು; ಯಾಕಂದರೆ ಜನರೆಲ್ಲಾ ಆತನ ಉಪದೇಶವನ್ನು
ಕೇಳಿ ಅತ್ಯಾಶ್ಚರ್ಯಪಟ್ಟದ್ದರಿಂದ ಅವರು ಆತನಿಗೆ
ಹೆದರುತ್ತಿದ್ದರು.
ಪ್ರತಿಸಾಯಂಕಾಲ ಯೇಸುವೂ ಆತನ ಶಿಷ್ಯರೂ 19
ಪಟ್ಟಣವನ್ನು ಬಿಟ್ಟು ಹೊರಗೆ ಹೋಗುತ್ತಿದ್ದರು.
ಬೆಳಿಗ್ಗೆ ಅವರು ಬರುತ್ತಿರುವಾಗ ಆ ಅಂಜೂರದ 20
ಮರವು ಬುಡದಿಂದಲೂ ಒಣಗಿಹೋಗಿರುವದನ್ನು
ಕಂಡರು. ಆಗ ಪೇತ್ರನು ಹಿಂದಿನ ದಿನದ ಸಂಗತಿ 21
ಯನ್ನು ನೆನಸಿಕೊಂಡು ಆತನಿಗೆ—ಗುರುವೇ, ಇಗೋ,
ನೀನು ಶಾಪಕೊಟ್ಟ ಅಂಜೂರದ ಮರವು ಒಣಗಿಹೋ
ಗಿದೆ ಎಂದು ಹೇಳಿದ್ದಕ್ಕೆ ಯೇಸು ಹೇಳಿದ್ದೇನಂದರೆ— 22
ನಿಮಗೆ ದೇವರಲ್ಲಿ ನಂಬಿಕೆಯಿರಲಿ. ನಿಮಗೆ ಸತ್ಯ 23
ವಾಗಿ ಹೇಳುತ್ತೇನೆ, ಯಾವನಾದರೂ ಈ ಬೆಟ್ಟಕ್ಕೆ—
ನೀನು ಕಿತ್ತುಕೊಂಡು ಹೋಗಿ ಸಮುದ್ರದಲ್ಲಿ ಬೀಳು
ಎಂದು ಹೇಳಿ ತನ್ನ ಮನಸ್ಸಿನಲ್ಲಿ ಸಂಶಯಪಡದೆ
ತಾನು ಹೇಳಿದ್ದು ಆಗುವದೆಂದು ನಂಬಿದರೆ ಅವನು
ಹೇಳಿದಂತೆಯೇ ಆಗುವದು. ಆದಕಾರಣ ನೀವು 24
ಪ್ರಾರ್ಥನೆಮಾಡಿ ಏನೇನು ಬೇಡಿಕೊಳ್ಳುತ್ತೀರೋ ಅದ
ನ್ನೆಲ್ಲಾ ಹೊಂದಿದ್ದೇವೆಂದು ನಂಬಿರಿ; ಅದು ನಿಮಗೆ
ಸಿಕ್ಕುವದೆಂದು ನಿಮಗೆ ಹೇಳುತ್ತೇನೆ. ಇದಲ್ಲದೆ ನೀವು 25
ನಿಂತುಕೊಂಡು ಪ್ರಾರ್ಥನೆಮಾಡುವಾಗೆಲ್ಲಾ ಯಾರ
ಮೇಲೆ ಏನಾದರೂ ವಿರೋಧವಿದ್ದರೆ ಅದನ್ನು ಅವನಿಗೆ
ಕ್ಷಮಿಸಿರಿ; ಕ್ಷಮಿಸಿದರೆ ಪರಲೋಕದಲ್ಲಿರುವ ನಿಮ್ಮ
ತಂದೆಯು ಸಹ ನಿಮ್ಮ ತಪ್ಪುಗಳನ್ನು ನಿಮಗೆ ಕ್ಷಮಿಸಿ
ಬಿಡುವನು ಅಂದನು.[2]

ಶಾಸ್ತ್ರಿಗಳು ಯೇಸುವಿನ ಅಧಿಕಾರವನ್ನು ವಿಚಾರಿಸಿದಾಗ ಆತನು
ತಕ್ಕ ಉತ್ತರಕೊಟ್ಟು ಅವರು ಮಾಡಿದ ದೈವದ್ರೋಹವನ್ನು
ಸಾಮ್ಯದಿಂದ ಸೂಚಿಸಿದ್ದು.
(ಮತ್ತಾ. 21. 23—46; ಲೂಕ 20. 1—19.)

ಅವರು ತಿರಿಗಿ ಯೆರೂಸಲೇಮಿಗೆ ಬಂದಾಗ ಆತನು 27
ದೇವಾಲಯದಲ್ಲಿ ತಿರುಗಾಡುತ್ತಿರಲಾಗಿ ಮಹಾಯಾಜ
ಕರೂ ಶಾಸ್ತ್ರಿಗಳೂ ಹಿರಿಯರೂ ಆತನ ಬಳಿಗೆ
ಬಂದು—ನೀನು ಯಾವ ಅಧಿಕಾರದಿಂದ ಇದನ್ನೆಲ್ಲಾ 28

1) ಮೂಲ: ಹೊಸನ್ನ. 2) ಕೆಲವು ಪ್ರತಿಗಳಲ್ಲಿ 26ನೆಯ ವಚನ ಉಂಟು—ಆದರೆ ನೀವು ಕ್ಷಮಿಸಿಬಿಡದಿದ್ದರೆ ಪರಲೋಕದಲ್ಲಿರುವ ನಿಮ್ಮ ತಂದೆಯು ನಿಮ್ಮ ತಪ್ಪುಗಳನ್ನು ಕ್ಷಮಿಸಿಬಿಡುವದಿಲ್ಲ.

ಮಾಡುತ್ತೀ? ಇದನ್ನು ಮಾಡುವದಕ್ಕೆ ಈ ಅಧಿಕಾರ
ವನ್ನು ನಿನಗೆ ಯಾರು ಕೊಟ್ಟರು ಎಂದು ಆತನನ್ನು
29 ಕೇಳಿದರು. ಯೇಸು ಅವರಿಗೆ—ನಾನು ನಿಮ್ಮನ್ನೂ
ಒಂದು ಮಾತು ಕೇಳುತ್ತೇನೆ, ನನಗೆ ಉತ್ತರ ಹೇಳಿದರೆ
ನಾನು ಸಹ ಯಾವ ಅಧಿಕಾರದಿಂದ ಇದನ್ನು ಮಾಡು
30 ತ್ತೇನೆಂಬದನ್ನು ನಿಮಗೆ ಹೇಳುತ್ತೇನೆ. ದೀಕ್ಷಾಸ್ನಾನ
ಮಾಡಿಸುವ ಅಧಿಕಾರವು ಯೋಹಾನನಿಗೆ ಪರಲೋಕ
ದಿಂದ ಬಂತೋ? ಮನುಷ್ಯರಿಂದ ಬಂತೋ? ಉತ್ತರ
31 ಕೊಡಿರಿ ಅಂದನು. ಆಗ ಅವರು--ಪರಲೋಕದಿಂದ
ಬಂತೆಂದು ನಾವು ಹೇಳಿದರೆ ಹಾಗಾದರೆ ನೀವು ಅವ
32 ನನ್ನು ಯಾಕೆ ನಂಬಲಿಲ್ಲ ಅಂದಾನು; ಮನುಷ್ಯರಿಂದ
ಬಂತೆಂದು ಹೇಳಿದರೆ ಏನಾಗುವದೋ ಎಂಬದಾಗಿ
ತಮ್ಮತಮ್ಮೊಳಗೆ ಮಾತಾಡಿಕೊಳ್ಳುತ್ತಿದ್ದರು. ಯೋಹಾ
ನನು ಪ್ರವಾದಿಯೆಂದು ಜನರೆಲ್ಲರೂ ಅನುಮಾನವಿಲ್ಲದೆ
ತಿಳುಕೊಂಡಿದ್ದದರಿಂದ ಇವರಿಗೆ ಜನರ ಭಯವಿತ್ತು.
33 ಹೀಗಿರಲಾಗಿ ಅವರು—ನಾವರಿಯೆವು ಎಂದು ಯೇಸು
ವಿಗೆ ಉತ್ತರಕೊಟ್ಟರು. ಆಗ ಯೇಸು ಅವರಿಗೆ—
ಯಾವ ಅಧಿಕಾರದಿಂದ ಇದನ್ನು ಮಾಡುತ್ತೇನೋ
ಅದನ್ನು ನಾನೂ ನಿಮಗೆ ಹೇಳುವದಿಲ್ಲ ಅಂದನು.

12 ಆಗ ಯೇಸು ಅವರ ಕೂಡ ಸಾಮ್ಯರೂಪವಾಗಿ
ಮಾತಾಡುವದಕ್ಕೆ ತೊಡಗಿ—ಒಬ್ಬ ಮನುಷ್ಯನು
ಒಂದು ದ್ರಾಕ್ಷೆಯ ತೋಟವನ್ನು ಮಾಡಿ ಸುತ್ತಲು
ಬೇಲಿಹಾಕಿಸಿ ದ್ರಾಕ್ಷೆಯ ಆಲೆಗಾಗಿ ಒಂದು ಗುಂಡಿ
ಯನ್ನು ತೆಗಿಸಿ ಹೂಡೆಯನ್ನು ಕಟ್ಟಿಸಿ ಒಕ್ಕಲಿಗರಿಗೆ
1)ವಾರಕ್ಕೆ ಕೊಟ್ಟು ಬೇರೊಂದು ದೇಶಕ್ಕೆ ಹೋದನು.
2 ಫಲಕಾಲ ಬಂದಾಗ ದ್ರಾಕ್ಷೆಯ ತೋಟದ ಹಣ್ಣಿನ
ಪಾಲನ್ನು ಆ ಒಕ್ಕಲಿಗರಿಂದ ತೆಗೆದುಕೊಂಡು ಬರುವದ
ಕ್ಕಾಗಿ ಒಬ್ಬ ಆಳನ್ನು ಅವರ ಬಳಿಗೆ ಕಳುಹಿಸಿದನು.
3 ಅವರು ಅವನನ್ನು ಹಿಡುಕೊಂಡು ಹೊಡೆದು ಬರಿಗೈಲಿ
4 ಕಳುಹಿಸಿಬಿಟ್ಟರು. ಆ ದಣಿಯು ತಿರಿಗಿ ಮತ್ತೊಬ್ಬ
ಆಳನ್ನು ಅವರ ಬಳಿಗೆ ಕಳುಹಿಸಲು ಅವನನ್ನು ಅವರು
ತಲೆತಲೆಯ ಮೇಲೆ ಹೊಡೆದು ಅಪಮಾನ ಪಡಿಸಿದರು.
5 ಆ ಮೇಲೆ ಇನ್ನೊಬ್ಬನನ್ನು ಕಳುಹಿಸಲು ಅವನನ್ನು
ಕೊಂದುಹಾಕಿದರು. ಇನ್ನೂ ಅನೇಕರನ್ನು ಕಳುಹಿಸಿ
ದನು. ಅವರಲ್ಲಿ ಕೆಲವರನ್ನು ಹೊಡೆದರು, ಕೆಲವರನ್ನು
6 ಕಡಿದುಹಾಕಿದರು. ಅವನಿಗೆ ಇನ್ನೂ ಒಬ್ಬನಿದ್ದನು;
ಯಾರಂದರೆ ಅವನ ಮುದ್ದು ಮಗನೇ. ನನ್ನ ಮಗ
ನಿಗಾದರೂ ಮರ್ಯಾದೆತೋರಿಸಿಯಾರೆಂದು ದಣಿಯು
ಕಡೆಯಲ್ಲಿ ಅವನನ್ನು ಅವರ ಬಳಿಗೆ ಕಳುಹಿಸಿದನು.
7 ಆದರೆ ಆ ಒಕ್ಕಲಿಗರು—ಇವನೇ ಬಾಧ್ಯಸ್ಥನು; ಬನ್ನಿ
ಇವನನ್ನು ಕೊಂದುಹಾಕೋಣ; ಆಗ ಸ್ವಾಸ್ತ್ಯ ನಮ್ಮ
ದಾಗುವದು ಎಂದು ಒಬ್ಬರಸಂಗಡಲೊಬ್ಬರು ಮಾತಾ
8 ಡಿಕೊಂಡು ಅವನನ್ನು ಹಿಡಿದು ಕೊಂದುಹಾಕಿ ದ್ರಾಕ್ಷೆ
9 ಯ ತೋಟದಿಂದ ಹೊರಕ್ಕೆ ಬಿಸಾಟುಬಿಟ್ಟರು. ಹಾಗಾ
ದರೆ ದ್ರಾಕ್ಷೆಯ ತೋಟದ ದಣಿಯು ಏನು ಮಾಡು
ವನು? ಅವನು ಬಂದು ಆ ಒಕ್ಕಲಿಗರನ್ನು ಸಂಹರಿಸಿ
ತನ್ನ ತೋಟವನ್ನು ಬೇರೆ ಜನರಿಗೆ ಮಾಡುವದಕ್ಕೆ
ಕೊಡುವನು.

ಮನೆಕಟ್ಟುವವರು ಬೇಡವೆಂದು ಬಿಟ್ಟ ಕಲ್ಲೇ 10
ಮುಖ್ಯವಾದ ಮೂಲೆಗಲ್ಲಾಯಿತು.
ಇದು ಕರ್ತನಿಂದಲೇ ಆಯಿತು;
ನಮಗೆ ಆಶ್ಚರ್ಯವಾಗಿ ತೋರುತ್ತದೆ
ಎಂಬುವ ಶಾಸ್ತ್ರವಚನವನ್ನು ನೀವು ಓದಿಲ್ಲವೇ ಅಂದನು.
ಇವನು ತಮ್ಮನ್ನೇ ಕುರಿತು ಈ ಸಾಮ್ಯವನ್ನು ಹೇಳಿ
ದನು ಎಂದು ಅವರು ತಿಳುಕೊಂಡು ಆತನನ್ನು ಹಿಡಿ
ಯುವದಕ್ಕೆ ಸಂದರ್ಭನೋಡುತ್ತಿದ್ದರು. ಆದರೆ ಜನ
ರಿಗೆ ಭಯಪಟ್ಟು, ಆತನನ್ನು ಬಿಟ್ಟುಹೋದರು.

ಬೇರೆ ಬೇರೆ ಪಕ್ಷದವರು ಯೇಸುವನ್ನು ಮಾತಿನಲ್ಲಿ
ಸಿಕ್ಕಿಸುವದಕ್ಕೆ ಪ್ರಯತ್ನಮಾಡಿ ಸೋತುಹೋದದ್ದು.
(ಮತ್ತಾ. 22. 15—46; ಲೂಕ 20. 20—44.)

ಆ ಮೇಲೆ ಅವರು ಆತನನ್ನು ಮಾತಿನಲ್ಲಿ ಹಿಡಿಯು
ವದಕ್ಕೆ ಫರಿಸಾಯರಲ್ಲಿಯೂ ಹೆರೋದ್ಯರಲ್ಲಿಯೂ
ಕೆಲವರನ್ನು ಆತನ ಬಳಿಗೆ ಕಳುಹಿಸಿದರು. ಇವರು
ಬಂದು—ಬೋಧಕನೇ, ನೀನು ಸತ್ಯವಂತನು, ಯಾರಿ
ಗೂ ಹೆದರದವನು; ನೀನು ಜನರ ಮುಖದಿಚ್ಛೆಗೆ ಮಾ
ತಾಡದೆ ದೇವರ ಮಾರ್ಗವನ್ನು ಸತ್ಯವಾಗಿ ಬೋಧಿಸು
ವವನಾಗಿದ್ದೀ ಎಂದು ಬಲ್ಲೆವು. 2)ಕೈಸರನಿಗೆ ತೆರಿಗೆ
ಕೊಡುವದು ಸರಿಯೋ ಸರಿಯಲ್ಲವೋ, ಕೊಡಬೇಕೋ 1
ಬೇಡವೋ ಎಂದು ಆತನನ್ನು ಕೇಳಿದರು. ಆತನು
ಅವರ ಕಪಟವನ್ನು ತಿಳಿದು—ನನ್ನನ್ನು ಯಾಕೆ ಪರೀಕ್ಷೆ
ಮಾಡುತ್ತೀರಿ? ನನಗೆ ಒಂದು ಹಣವನ್ನು ತಂದು
ತೋರಿಸಿರಿ ಅನ್ನಲು ಅವರು ತಂದರು. ಆಗ ಆತನು— 1
ಈ ತಲೆಯೂ ಮುದ್ರೆಯೂ ಯಾರದು ಎಂದು ಕೇಳಿ
ದ್ದಕ್ಕೆ ಅವರು—ಕೈಸರನದು ಅಂದರು. ಯೇಸು— 1
ಕೈಸರನದನ್ನು ಕೈಸರನಿಗೆ ಕೊಡಿರಿ; ದೇವರದನ್ನು
ದೇವರಿಗೆ ಕೊಡಿರಿ ಎಂದು ಹೇಳಿದನು. ಅವರು ಆತನ
ವಿಷಯದಲ್ಲಿ ಬಹು ಆಶ್ಚರ್ಯಪಟ್ಟರು.
ತರುವಾಯ ಸದ್ದುಕಾಯರು ಆತನ ಬಳಿಗೆ 1
ಬಂದರು. ಇವರು ಪುನರುತ್ಥಾನವಿಲ್ಲ ಅನ್ನುವವರು.
ಇವರು ಆತನಿಗೆ ಪ್ರಶ್ನೆಮಾಡಿದ್ದೇನಂದರೆ—ಬೋಧ 1
ಕನೇ, ಅಣ್ಣನಾದವನು ಮಕ್ಕಳಿಲ್ಲದೆ ಹೆಂಡತಿಯನ್ನು
ಬಿಟ್ಟು ಸತ್ತರೆ ಆಕೆಯನ್ನು ಅವನ ತಮ್ಮನು ಮದುವೆ
ಮಾಡಿಕೊಂಡು ತನ್ನ ಅಣ್ಣನಿಗೆ ಸಂತಾನವನ್ನು
ಪಡೆಯಬೇಕೆಂದು ಮೋಶೆಯು ನಮಗೆ ಬರೆದಿಟ್ಟನಷ್ಟೆ.
ಏಳು ಮಂದಿ ಅಣ್ಣತಮ್ಮಂದಿರಿದ್ದರು. ಮೊದಲನೆ 2
ಯವನು ಹೆಂಡತಿಯನ್ನು ಮಾಡಿಕೊಂಡು ಸಂತಾನ
ವಿಲ್ಲದೆ ಸತ್ತನು. ಎರಡನೆಯವನೂ ಆಕೆಯನ್ನು 2
ಮದುವೆಮಾಡಿಕೊಂಡು ಸಂತಾನವಿಲ್ಲದೆ ಸತ್ತನು. ಅದ
ರಂತೆ ಮೂರನೆಯವನು. ಇದೇ ಪ್ರಕಾರ ಏಳು 2
ಮಂದಿಯೂ ಸಂತಾನವಿಲ್ಲದೆ ಹೋದರು. ಕಡೆಯಲ್ಲಿ
ಆ ಸ್ತ್ರೀಯೂ ಸತ್ತಳು. ಪುನರುತ್ಥಾನದಲ್ಲಿ ಆಕೆ 2
ಯಾರ ಹೆಂಡತಿಯಾಗಿರುವಳು? ಆಕೆಯನ್ನು ಏಳು
ಮಂದಿಯೂ ಮದುವೆಮಾಡಿಕೊಂಡಿದ್ದರಲ್ಲಾ ಅಂದರು.
ಯೇಸು ಅವರಿಗೆ—ನೀವು ಶಾಸ್ತ್ರವನ್ನಾದರೂ ದೇವರ 2-

40 ಸ್ನ
ಯಲ
ವಂತೆ

ವಾ: ಕೋರಿಗೆ. 2) ಅಂದರೆ, ರೋಮ್ಸಾಮ್ರಾಜ್ಯದ ಚಕ್ರವರ್ತಿಗೆ.

ಶಕ್ತಿಯನ್ನಾದರೂ ತಿಳಿಯದಿರುವದರಿಂದಲೇ ತಪ್ಪುವವ
25 ರಾಗಿದ್ದೀರಲ್ಲವೆ. ಸತ್ತವರು ಬದುಕಿ ಎದ್ದಮೇಲೆ
ಮದುವೆಮಾಡಿಕೊಳ್ಳುವದೂ ಇಲ್ಲ, ಮಾಡಿಕೊಡು
ವದೂ ಇಲ್ಲ; ಪರಲೋಕದಲ್ಲಿರುವ ದೇವದೂತರಂತೆ
26 ಇರುತ್ತಾರೆ. ಆದರೆ ಸತ್ತವರು ಬದುಕಿ ಏಳುತ್ತಾರೆಂಬ
ವಿಷಯದಲ್ಲಿ ಹೇಳಬೇಕಾದರೆ—ನಾನು ಅಬ್ರಹಾ
ಮನ ದೇವರು, ಇಸಾಕನ ದೇವರು, ಯಾಕೋಬನ
ದೇವರು ಎಂದು ದೇವರು ಮೋಶೆಗೆ ನುಡಿದದ್ದನ್ನು
ನೀವು ಮೋಶೆಯ ಗ್ರಂಥದಲ್ಲಿ ಪೊದೆಯ ಸಂಗತಿ
27 ಯಿರುವ ಅಧ್ಯಾಯದಲ್ಲಿ ಓದಲಿಲ್ಲವೇ? ಆತನು ಜೀವಿ
ತರಿಗೆ ದೇವರಾಗಿದ್ದಾನೆ ಹೊರತು ಜೀವವಿಲ್ಲದವರಿಗೆ
ಅಲ್ಲ; ನೀವು ಹಿಡಿದ ಅಭಿಪ್ರಾಯವು ಬಹು ತಪ್ಪಾಗಿದೆ
ಎಂದು ಹೇಳಿದನು.

28 ಶಾಸ್ತ್ರಿಗಳಲ್ಲಿ ಒಬ್ಬನು ಅವರ ತರ್ಕವನ್ನು ಕೇಳಿ
ಯೇಸು ಅವರಿಗೆ ಒಳ್ಳೆಯ ಉತ್ತರಕೊಟ್ಟನೆಂದು ತಿಳಿದು
ಹತ್ತಿರಕ್ಕೆ ಬಂದು—ಎಲ್ಲಾ ಆಜ್ಞೆಗಳಲ್ಲಿ ಮೊದಲನೆ
ಯದು ಯಾವದು ಎಂದು ಆತನನ್ನು ಕೇಳಿದ್ದಕ್ಕೆ
29 ಯೇಸು—ಇಸ್ರಾಯೇಲ್ ಜನವೇ ಕೇಳು, ನಮ್ಮ
30 ದೇವರಾದ ಕರ್ತನು 1)ಒಬ್ಬನೇ ದೇವರು; ನಿನ್ನ ದೇವ
ರಾದ ಕರ್ತನನ್ನು ಪೂರ್ಣಹೃದಯದಿಂದಲೂ ಪೂರ್ಣ
ಪ್ರಾಣದಿಂದಲೂ ಪೂರ್ಣಬುದ್ಧಿಯಿಂದಲೂ ಪೂರ್ಣಶಕ್ತಿ
ಯಿಂದಲೂ ಪ್ರೀತಿಸಬೇಕು ಎಂಬದೇ ಮೊದಲನೆಯ
31 ಆಜ್ಞೆ; ನಿನ್ನ ನೆರೆಯವನನ್ನು ನಿನ್ನಂತೆಯೇ ಪ್ರೀತಿಸ
ಬೇಕು ಎಂಬದೇ ಎರಡನೆಯ ಆಜ್ಞೆ; ಇವುಗಳಿಗಿಂತ
ಹೆಚ್ಚಿನ ಆಜ್ಞೆ ಮತ್ತೊಂದಿಲ್ಲ ಎಂದು ಉತ್ತರಕೊಟ್ಟನು.
32 ಆಗ ಆ ಶಾಸ್ತ್ರಿಯು—ಬೋಧಕನೇ, ಚೆನ್ನಾಗಿ ಹೇಳಿದೆ;
ಒಬ್ಬನೇ ಇದ್ದಾನೆ, ಆತನ ಹೊರತು ಮತ್ತೊಬ್ಬ ದೇವ
33 ರಿಲ್ಲ ಎಂದು ನೀನು ಹೇಳಿದ್ದು ಸತ್ಯ. ಆತನನ್ನು
ಪೂರ್ಣಮನಸ್ಸಿನಿಂದಲೂ ಪೂರ್ಣಬುದ್ಧಿಯಿಂದಲೂ
ಪೂರ್ಣಶಕ್ತಿಯಿಂದಲೂ ಪ್ರೀತಿಸುವದು ಮತ್ತು ತನ್ನನ್ನು
ಪ್ರೀತಿಸಿಕೊಳ್ಳುವಂತೆ ತನ್ನ ನೆರೆಯವನನ್ನು ಪ್ರೀತಿಸು
ವದು ಇವೆರಡೂ ಎಲ್ಲಾ ಸರ್ವಾಂಗಹೋಮಗಳಿ
ಗಿಂತಲೂ ಎಲ್ಲಾ ಯಜ್ಞಗಳಿಗಿಂತಲೂ ಹೆಚ್ಚಿನವು
34 ಅಂದನು. ಅವನು ಬುದ್ಧಿಯಿಂದ ಉತ್ತರಕೊಟ್ಟದ್ದನ್ನು
ಯೇಸು ಕಂಡು—ನೀನು ದೇವರ ರಾಜ್ಯಕ್ಕೆ ದೂರ
ವಾದವನಲ್ಲ ಅಂದನು. ಅಂದಿನಿಂದ ಆತನನ್ನು ಪ್ರಶ್ನೆ
ಮಾಡುವದಕ್ಕೆ ಯಾರಿಗೂ ಧೈರ್ಯವಿರಲಿಲ್ಲ.

35 ಯೇಸು ದೇವಾಲಯದಲ್ಲಿ ಉಪದೇಶಮಾಡುತ್ತಿರ
ಲಾಗಿ ಪ್ರಶ್ನೆಮಾಡಿ—ಶಾಸ್ತ್ರಿಗಳು ಬರಬೇಕಾದ ಕ್ರಿಸ್ತ
ನನ್ನು ದಾವೀದನ ಮಗನೆಂದು ಹೇಳುತ್ತಾರಲ್ಲಾ, ಅದು
ಹೇಗಾದೀತು?

36 ನಾನು ನಿನ್ನ ವಿರೋಧಿಗಳನ್ನು ನಿನ್ನ ಪಾದಗಳ
ಕೆಳಗೆ ಹಾಕುವ ತನಕ
ನನ್ನ ಬಲಗಡೆಯಲ್ಲಿ ಕೂತುಕೊಂಡಿರು ಎಂದು
ಕರ್ತನು ನನ್ನ ಒಡೆಯನಿಗೆ ನುಡಿದನು

ಎಂಬದಾಗಿ ದಾವೀದನೇ ಪವಿತ್ರಾತ್ಮನ ಪ್ರೇರಣೆಯಿಂದ
37 ಹೇಳಿದನು. ದಾವೀದನೇ ಆತನನ್ನು ಒಡೆಯನೆಂದು
ಹೇಳಿರುವಲ್ಲಿ ಆತನು ಅವನಿಗೆ ಮಗನಾಗುವದು ಹೇಗೆ?
ಎಂದು ಕೇಳಿದನು.

ಯೇಸು ಶಾಸ್ತ್ರಿಗಳ ವಿಷಯದಲ್ಲಿ ಎಚ್ಚರಿಕೆ ಹೇಳಿದ್ದು.
(ಮತ್ತಾ. 23; ಲೂಕ 20. 45—47.)

ಸಾಧಾರಣ ಜನರು ಆತನ ಮಾತನ್ನು ಸಂತೋಷ 38
ದಿಂದ ಕೇಳುತ್ತಿದ್ದರು. ಆತನು ಉಪದೇಶಮಾಡಿ
ಹೇಳಿದ್ದೇನಂದರೆ—ಶಾಸ್ತ್ರಿಗಳ ವಿಷಯದಲ್ಲಿ ಎಚ್ಚರಿಕೆ
ಯಾಗಿರಿ. ನಿಲುವಂಗಿಗಳನ್ನು ತೊಟ್ಟುಕೊಂಡು ತಿರುಗಾ
ಡುವದು, ಅಂಗಡಿಬೀದಿಗಳಲ್ಲಿ ನಮಸ್ಕಾರಗಳು, ಸಭಾ 39
ಮಂದಿರಗಳಲ್ಲಿ ಮುಖ್ಯಪೀಠಗಳು, ಔತಣಪ್ರಸ್ತಗಳಲ್ಲಿ
ಪ್ರಥಮಸ್ಥಾನಗಳು, ಇವುಗಳಲ್ಲಿಯೇ ಅವರು ಮನಸ್ಸು
ಳ್ಳವರಾಗಿದ್ದಾರೆ. ವಿಧವೆಯರ ಮನೆಗಳನ್ನು ನುಂಗಿ 40
ನಟನೆಗಾಗಿ ದೇವರಿಗೆ ಉದ್ದವಾದ ಪ್ರಾರ್ಥನೆಗಳನ್ನು
ಮಾಡುವವರಾದ ಇವರು ಹೆಚ್ಚಾದ ದಂಡನೆಯನ್ನು
ಹೊಂದುವರು ಅಂದನು.

ದೇವರಿಗೆ ಕಾಣಿಕೆಕೊಡುವವರ ತಾರತಮ್ಯವನ್ನು ಕುರಿತು
ಮಾತಾಡಿದ್ದು.
(ಲೂಕ 21. 1—4.)

ಯೇಸು ಬೊಕ್ಕಸದ ಮನೆಗೆ ಎದುರಾಗಿ ಕೂತು 41
ಕೊಂಡು ಜನರು ಬೊಕ್ಕಸದಲ್ಲಿ ಹಣ ಹಾಕುವದನ್ನು
ನೋಡುತ್ತಿದ್ದನು. ಅನೇಕ ಮಂದಿ ಐಶ್ವರ್ಯವಂತರು
ಬಹಳ ಬಹಳ ಹಾಕುತ್ತಿರಲು ಒಬ್ಬ ಬಡ ವಿಧವೆಯು 42
ಬಂದು ಎರಡು ಕಾಸು ಅಂದರೆ ಒಂದು ದುಗ್ಗಾಣಿ
ಹಾಕಿದಳು. ಆಗ ಆತನು ತನ್ನ ಶಿಷ್ಯರನ್ನು ಹತ್ತಿರಕ್ಕೆ 43
ಕರೆದು—ನಿಮಗೆ ನಿಜವಾಗಿ ಹೇಳುತ್ತೇನೆ, ಬೊಕ್ಕಸ
ದಲ್ಲಿ ಹಾಕಿದವರೆಲ್ಲರಲ್ಲಿ ಈ ಬಡ ವಿಧವೆ ಹೆಚ್ಚು ಹಾಕಿ
ದ್ದಾಳೆ. ಹೇಗಂದರೆ ಎಲ್ಲರು ತಮಗೆ ಸಾಕಾಗಿ ಮಿಕ್ಕ 44
ದ್ದರಲ್ಲಿ ಹಾಕಿದರು; ಈಕೆಯೋ ತನ್ನ ಬಡತನದಲ್ಲಿಯೂ
ತನಗಿದ್ದದ್ದನ್ನೆಲ್ಲಾ ಹಾಕಿದಳು, ತನ್ನ ಜೀವನವನ್ನೇ
ಕೊಟ್ಟುಬಿಟ್ಟಳು ಅಂದನು.

ಯೇಸು ಯೆರೂಸಲೇಮಿನ ನಾಶನವನ್ನೂ ಯುಗದ
ಸಮಾಪ್ತಿಯನ್ನೂ ಮುಂದಾಗಿ ತಿಳಿಸಿದ್ದು.
(ಮತ್ತಾ. 24; ಲೂಕ 21. 5—36.)

ಯೇಸು ದೇವಾಲಯವನ್ನು ಬಿಟ್ಟು ಹೋಗು 13
ತ್ತಿರಲು ಆತನ ಶಿಷ್ಯರಲ್ಲಿ ಒಬ್ಬನು ಆತನಿಗೆ—
ಗುರುವೇ, ನೋಡು, ಎಂಥಾ ಕಲ್ಲುಗಳು! ಎಂಥಾ
ಕಟ್ಟಡಗಳು! ಎಂದು ಹೇಳಿದನು. ಯೇಸು—ಈ 2
ದೊಡ್ಡ ಕಟ್ಟಣಗಳನ್ನು ನೋಡುತ್ತೀಯಾ? ಇಲ್ಲಿ
ಕಲ್ಲಿನ ಮೇಲೆ ಕಲ್ಲು ಉಳಿಯುವದಿಲ್ಲ; ಎಲ್ಲಾ ಕೆಡ
ವಲ್ಪಡುವದು ಅಂದನು.
ಬಳಿಕ ಆತನು ಎಣ್ಣೇಮರಗಳ ಗುಡ್ಡದ ಮೇಲೆ 3
ದೇವಾಲಯಕ್ಕೆ ಎದುರಾಗಿ ಕೂತಿದ್ದಾಗ ಪೇತ್ರ ಯಾ

1) ಅಥವಾ: ಅದ್ವಿತೀಯನು. ಮೂಲ: ಒಬ್ಬನೇ ಕರ್ತನು.

4 ಕೋಬ ಯೋಹಾನ ಅಂದ್ರೆಯ ಇವರು—ಅದು
ಯಾವಾಗ ಆಗುವದು? ಅದೆಲ್ಲಾ ನೆರವೇರುವದಕ್ಕಿರು
ವಾಗ ಯಾವ ಸೂಚನೆ ತೋರುವದು? ನಮಗೆ ಹೇಳು
5 ಎಂದು ಆತನನ್ನು ಪ್ರತ್ಯೇಕವಾಗಿ ಕೇಳಲು ಯೇಸು
ಅವರಿಗೆ ಹೇಳಿದ್ದೇನಂದರೆ—ಯಾರಾದರೂ ನಿಮ್ಮನ್ನು
6 ಮೋಸಗೊಳಿಸಾರು ನೋಡಿಕೊಳ್ಳಿರಿ. ಅನೇಕರು ಬಂದು
ನನ್ನ ಹೆಸರನ್ನು ಎತ್ತಿಕೊಂಡು—ನಾನು ಕ್ರಿಸ್ತನು,
ನಾನು ಕ್ರಿಸ್ತನು ಎಂದು ಹೇಳಿ ಎಷ್ಟೋ ಜನರನ್ನು
7 ಮೋಸಗೊಳಿಸುವರು. ಇದಲ್ಲದೆ ಯುದ್ಧಗಳಾಗುವ
ದನ್ನೂ ಯುದ್ಧವಾಗುವ ಹಾಗಿದೆ ಎಂಬ ಸುದ್ದಿಗಳನ್ನೂ
ನೀವು ಕೇಳುವಾಗ ಕಳವಳಪಡಬೇಡಿರಿ. ಹಾಗಾಗು
ವದು ಅಗತ್ಯ; ಆದರೂ ಇದು ಇನ್ನೂ ಅಂತ್ಯಕಾಲ
8 ವಲ್ಲ. ಜನಕ್ಕೆ ವಿರೋಧವಾಗಿ ಜನವೂ ರಾಜ್ಯಕ್ಕೆ
ವಿರೋಧವಾಗಿ ರಾಜ್ಯವೂ ಏಳುವವು; ಮತ್ತು ಭೂಕಂಪ
ಗಳು ಅಲ್ಲಲ್ಲಿ ಆಗುವವು; ಬರಗಳು ಬರುವವು;
ಇವೆಲ್ಲಾ [ನೂತನ ಕಾಲವು ಹುಟ್ಟುವ] ಪ್ರಸವವೇದ
ನೆಯ ಪ್ರಾರಂಭ.
9 ಆದರೆ ನಿಮ್ಮ ವಿಷಯದಲ್ಲಿ ನೋಡಿಕೊಳ್ಳಿರಿ.
ನಿಮ್ಮನ್ನು ನ್ಯಾಯವಿಚಾರಣೆಯ ಸಭೆಗಳಿಗೆ ಎಳ
ಕೊಂಡುಹೋಗುವರು; ಸಭಾಮಂದಿರಗಳಲ್ಲಿ ನಿಮ್ಮನ್ನು
ಹೊಡೆಯುವರು; ನನ್ನ ನಿಮಿತ್ತವಾಗಿ ನಿಮ್ಮನ್ನು
ಅಧಿಪತಿಗಳ ಮುಂದೆಯೂ ಅರಸುಗಳ ಮುಂದೆಯೂ
ಸಾಕ್ಷಿಗಳಾಗಿ ನಿಲ್ಲಿಸುವರು. ಹೀಗೆ ಅವರಿಗೆ ಸಾಕ್ಷಿ
10 ಯಾಗುವದು. ಮೊದಲು ಎಲ್ಲಾ ಜನಾಂಗಗಳಿಗೆ
11 ಸುವಾರ್ತೆಯು ಸಾರಲ್ಪಡಬೇಕು. ನಿಮ್ಮನ್ನು ಹಿಡು
ಕೊಂಡುಹೋಗಿ ಒಪ್ಪಿಸುವಾಗ ಏನು ಹೇಳಬೇಕು
ಎಂದು ಮುಂಚಿತವಾಗಿ ಚಿಂತೆಮಾಡಬೇಡಿರಿ; ಆ ಗಳಿಗೆ
ಯಲ್ಲಿ ನಿಮಗೆ ಸೂಚನೆಯಾಗುವಂಥ ಮಾತನ್ನೇ
ಆಡಿರಿ; ಮಾತಾಡುವವರು ನೀವಲ್ಲ, ಪವಿತ್ರಾತ್ಮನೇ.
12 ಇದಲ್ಲದೆ ಅಣ್ಣನು ತಮ್ಮನನ್ನು ತಂದೆಯು ಮಗನನ್ನು
ಮರಣಕ್ಕೆ ಒಪ್ಪಿಸುವರು. ಮಕ್ಕಳು ಹೆತ್ತವರ ಮೇಲೆ
13 ತಿರುಗಿಬಿದ್ದು ಅವರನ್ನು ಕೊಲ್ಲಿಸುವರು. ಮತ್ತು ನನ್ನ
ಹೆಸರಿನ ನಿಮಿತ್ತವಾಗಿ ನಿಮ್ಮನ್ನು ಎಲ್ಲರೂ ಹಗೆಮಾಡು
ವರು. ಆದರೆ ಕಡೇವರೆಗೂ ತಾಳುವವನು ರಕ್ಷಣೆ
ಹೊಂದುವನು.
14 ಇದಲ್ಲದೆ ಹಾಳುಮಾಡುವ ಅಸಹ್ಯವಸ್ತುವು ನಿಲ್ಲ
ಬಾರದ ಸ್ಥಳದಲ್ಲಿ ನಿಂತಿರುವದನ್ನು ನೀವು ಕಾಣುವಾಗ
(ಇದನ್ನು ಓದುವವನು ತಿಳುಕೊಳ್ಳಲಿ) ಯೂದಾಯ
15 ದಲ್ಲಿರುವವರು ಬೆಟ್ಟಗಳಿಗೆ ಓಡಿಹೋಗಲಿ. ಮಾಳಿ
ಗೆಯ ಮೇಲೆ ಇರುವವನು ತನ್ನ ಮನೆಯೊಳಗಿಂದ
ಏನಾದರೂ ತೆಗೆದುಕೊಳ್ಳುವದಕ್ಕೆ ಇಳಿಯದೆ ಒಳಕ್ಕೆ
16 ಹೋಗದೆ ಹೊಲದಲ್ಲಿರುವವನು ತನ್ನ ಹೊದಿಕೆಯನ್ನು
ತೆಗೆದುಕೊಳ್ಳುವದಕ್ಕೆ ಹಿಂತಿರುಗಿ ಬಾರದೆ ಓಡಿಹೋ
17 ಗಲಿ. ಆದರೆ ಆ ದಿನಗಳಲ್ಲಿ ಬಸುರಿಯರಿಗೂ ಮೊಲೆ
ಕೂಸಿರುವ ಹೆಂಗಸರಿಗೂ ಆಗುವ ಕಷ್ಟವನ್ನು ಏನು
18-19 ಹೇಳಲಿ! ಆ ದಿವಸಗಳು ಸಂಕಟದಿವಸಗಳಾಗಿರು
ವದರಿಂದ ಇದೆಲ್ಲಾ ಚಳಿಗಾಲದಲ್ಲಿ ಆಗಬಾರದೆಂದು
ಪ್ರಾರ್ಥನೆಮಾಡಿರಿ; ಅಂಥ ಸಂಕಟವು ದೇವರು ಮಾಡಿದ

ಸೃಷ್ಟಿಮೊದಲುಗೊಂಡು ಇಂದಿನ ವರೆಗೂ ಆಗಲಿಲ್ಲ;
ಇನ್ನು ಮೇಲೆಯೂ ಆಗುವದಿಲ್ಲ. ಕರ್ತನು ಆ ದಿನ
ಗಳನ್ನು ಕಡಿಮೆಮಾಡದಿದ್ದರೆ ಒಂದು ನರಪ್ರಾಣಿಯಾ
ದರೂ ಉಳಿಯದು; ಆದರೆ ತಾನು ಆದುಕೊಂಡವರಿ
ಗೋಸ್ಕರ ಆ ದಿನಗಳನ್ನು ಕಡಿಮೆಮಾಡಿದ್ದಾನೆ. ಆಗ
ಯಾರಾದರೂ ನಿಮಗೆ—ಇಗೋ ಕ್ರಿಸ್ತನು ಇಲ್ಲಿದ್ದಾನೆ,
ಅಗೋ ಅಲ್ಲಿದ್ದಾನೆ ಎಂದು ಹೇಳಿದರೆ ನಂಬಬೇಡಿರಿ;
ಸುಳ್ಳು ಕ್ರಿಸ್ತರೂ ಸುಳ್ಳು ಪ್ರವಾದಿಗಳೂ ಎದ್ದು ಸಾಧ್ಯ
ವಾದರೆ ದೇವರಾದುಕೊಂಡವರನ್ನು ಮೋಸಗೊಳಿಸು
ವದಕ್ಕೋಸ್ಕರ ಸೂಚಕಕಾರ್ಯಗಳನ್ನೂ ಅದ್ಭುತಕಾ
ರ್ಯಗಳನ್ನೂ ಮಾಡಿ ತೋರಿಸುವರು. ನೀವಂತು
ನೋಡಿಕೊಳ್ಳಿರಿ; ನಿಮಗೆ ಎಲ್ಲವನ್ನೂ ಮುಂದಾಗಿ
ಹೇಳಿದ್ದೇನೆ.
ಇದಲ್ಲದೆ ಆ ದಿನಗಳಲ್ಲಿ ಆ ಸಂಕಟ ತೀರಿದ ಮೇಲೆ
ಸೂರ್ಯನು ಕತ್ತಲಾಗಿ ಹೋಗುವನು; ಚಂದ್ರನು
ಬೆಳಕುಕೊಡದೆ ಇರುವನು; ನಕ್ಷತ್ರಗಳು ಆಕಾಶದಿಂದ
ಉದುರುತ್ತಿರುವವು; ಆಕಾಶದಲ್ಲಿರುವ ಶಕ್ತಿಗಳು
ಕದಲುವವು. ಆಗ ಮನುಷ್ಯಕುಮಾರನು ಬಹು
ಬಲದಿಂದಲೂ ಮಹಿಮೆಯಿಂದಲೂ ಮೇಘಗಳಲ್ಲಿ
ಬರುವದನ್ನು ಕಾಣುವರು. ಮತ್ತು ಆತನು ತನ್ನ
ದೂತರನ್ನು ಕಳುಹಿಸಿ ತಾನು ಆದುಕೊಂಡವರನ್ನು
ಭೂಮಿಯ ಕಟ್ಟಕಡೆಯಿಂದ ಆಕಾಶದ ಕಟ್ಟಕಡೆಯ
ವರೆಗೆ ನಾಲ್ಕೂ ದಿಕ್ಕುಗಳಿಂದ ಒಟ್ಟುಗೂಡಿಸುವನು.
ಅಂಜೂರದ ಮರದ ದೃಷ್ಟಾಂತದಿಂದ ಬುದ್ಧಿಕಲಿ
ಯಿರಿ; ಅದರ ಕೊಂಬೆ ಇನ್ನೂ ಎಳೇದಾಗಿದ್ದು ಎಲೆ
ಬಿಡುವಾಗ ಬೇಸಿಗೆಯು ಹತ್ತರವಾಯಿತೆಂದು ತಿಳು
ಕೊಳ್ಳುತ್ತೀರಲ್ಲಾ. ಹಾಗೆಯೇ ನೀವು ಸಹ ಇದೆಲ್ಲಾ
ಆಗುವದನ್ನು ನೋಡುವಾಗ ಹತ್ತರವದೆ, ಬಾಗಲಲ್ಲೇ
ಅದೆ ಎಂದು ತಿಳುಕೊಳ್ಳಿರಿ. ಇದೆಲ್ಲಾ ಆಗುವ ತನಕ
ಈ ಸಂತತಿಯು ಅಳಿದುಹೋಗುವದೇ ಇಲ್ಲವೆಂದು
ನಿಮಗೆ ಸತ್ಯವಾಗಿ ಹೇಳುತ್ತೇನೆ. ಭೂಮ್ಯಾಕಾಶಗಳು
ಅಳಿದುಹೋಗುವವು, ಆದರೆ ನನ್ನ ಮಾತುಗಳು ಅಳಿದು
ಹೋಗುವದೇ ಇಲ್ಲ.
ಇದಲ್ಲದೆ ಆ ದಿನದ ವಿಷಯವಾಗಲಿ ಆ ಗಳಿಗೆಯ
ವಿಷಯವಾಗಲಿ ನನ್ನ ತಂದೆಗೆ ತಿಳಿಯುವದೇ ಹೊರತು
ಮತ್ತಾರಿಗೂ ತಿಳಿಯದು; ಪರಲೋಕದಲ್ಲಿರುವ ದೂತ
ರಿಗೂ ತಿಳಿಯದು; ಮಗನಿಗೂ ತಿಳಿಯದು. ಆ
ಕಾಲವು ಯಾವಾಗ ಬರುವದೋ ನಿಮಗೆ ಗೊತ್ತಿಲ್ಲ
ವಾದ್ದರಿಂದ ನೋಡಿಕೊಳ್ಳಿರಿ, ಜಾಗರೂಕರಾಗಿರಿ[1].
ಒಬ್ಬ ಮನುಷ್ಯನು ತನ್ನ ಮನೆಯನ್ನು ಬಿಟ್ಟು ಬೇ
ರೊಂದು ದೇಶಕ್ಕೆ ಹೋಗುವಾಗ ತನ್ನ ಆಳುಗಳಿಗೆ
ಮನೇ ಅಡಳಿತವನ್ನು ಒಪ್ಪಿಸಿಕೊಟ್ಟು ಒಬ್ಬೊಬ್ಬನಿಗೆ
ಅವನವನ ಕೆಲಸವನ್ನು ನೇಮಿಸಿ ಬಾಗಲುಕಾಯು
ವವನನ್ನು ಕರೆದು—ನೀನು ಎಚ್ಚರವಾಗಿರಬೇಕೆಂದು
ಅಪ್ಪಣೆ ಕೊಡುವ ಪ್ರಕಾರ [ನಾನು ನಿಮಗೆ ಅಪ್ಪಣೆ
ಕೊಡುತ್ತೇನೆ]. ಮನೇಯಜಮಾನನು ಸಂಜೆಯಲ್ಲೋ
ಸರುಹೊತ್ತಿನಲ್ಲೋ ಕೋಳಿ ಕೂಗುವಾಗಲೋ ಮುಂ
ಜಾನೆಯಲ್ಲೋ ಯಾವಾಗ ಬರುತ್ತಾನೋ ನಿಮಗೆ

1) ಕೆಲವು ಪ್ರತಿಗಳಲ್ಲಿ—ಜಾಗರೂಕರಾಗಿರಿ, ದೇವರನ್ನು ಪ್ರಾರ್ಥಿಸಿರಿ ಎಂದು ಬರೆದದೆ.

36 ಗೊತ್ತಿಲ್ಲದ ಕಾರಣ ಎಚ್ಚರವಾಗಿರಿ; ಅವನು ಏಕಾಏಕಿ
37 ಬಂದು ನೀವು ನಿದ್ರೆಮಾಡುವದನ್ನು ಕಂಡಾನು. ನಾನು
ನಿಮಗೆ ಹೇಳಿದ್ದನ್ನು ಎಲ್ಲರಿಗೂ ಹೇಳುತ್ತೇನೆ. ಎಚ್ಚರ
ವಾಗಿರಿ ಅಂದನು.

ಅಧಿಕಾರಸ್ಥರು ಯೇಸುವನ್ನು ಕೊಲ್ಲುವದಕ್ಕೆ ಉಪಾಯ ಮಾಡಿದ್ದು; ಒಬ್ಬ ಸ್ತ್ರೀಯು ಪರಿಮಳತೈಲವನ್ನು ಆತನ ಮೇಲೆ ಹೊಯಿದದ್ದು.

(ಮತ್ತಾ. 26. 1—16; ಲೂಕ 22. 1—6;
ಯೋಹಾ. 11. 47—53; 12. 1—8.)

14 ಪಸ್ಕದ ಮತ್ತು ಹುಳಿಯಿಲ್ಲದ ರೊಟ್ಟಿಯ ಹಬ್ಬ
ಬರುವದಕ್ಕೆ ಇನ್ನೂ ಎರಡು ದಿನಗಳಿದ್ದಾಗ ಮಹಾ
ಯಾಜಕರೂ ಶಾಸ್ತ್ರಿಗಳೂ ಯೇಸುವನ್ನು ಉಪಾಯ
ದಿಂದ ಹಿಡಿದು ಕೊಲ್ಲುವದಕ್ಕೆ ಮಾರ್ಗವನ್ನು ಹುಡು
2 ಕುತ್ತಿದ್ದರು. ಯಾಕಂದರೆ—ಹಬ್ಬದಲ್ಲಿ ಹಿಡಿಯಬಾ
ರದು, ನಮ್ಮ ಜನರಲ್ಲಿ ಗದ್ದಲವಾದೀತು ಎಂದು ಮಾ
ತಾಡಿಕೊಂಡರು.
3 ಆತನು ಬೇಥಾನ್ಯದಲ್ಲಿ ಕುಷ್ಠರೋಗಿಯಾದ
ಸೀಮೋನನ ಮನೆಯಲ್ಲಿ ಇದ್ದು ಊಟಕ್ಕೆ ಕೂತಿ
ದ್ದಾಗ ಒಬ್ಬ ಸ್ತ್ರೀಯು ಬಹು ಬೆಲೆಯುಳ್ಳ ಅಚ್ಚ
ಜಟಾಮಾಂಸಿ ತೈಲದ ಭರಣಿಯನ್ನು ತೆಗೆದುಕೊಂಡು
ಬಂದು ಆ ಭರಣಿಯನ್ನು ಒಡೆದು ತೈಲವನ್ನು ಆತನ
4 ತಲೆಯ ಮೇಲೆ ಹೊಯಿದಳು. ಆದರೆ ಕೆಲವರು ತಮ್ಮೊ
ಳಗೆ ಕೋಪಗೊಂಡು—ಈ ತೈಲವನ್ನು ನಷ್ಟಮಾಡಿ
5 ದ್ದೇಕೆ? ಇದನ್ನು ಮುನ್ನೂರು ಹಣಕ್ಕಿಂತ ಹೆಚ್ಚು
ಬೆಲೆಗೆ ಮಾರಿ ಬಡವರಿಗೆ ಕೊಡಬಹುದಾಗಿತ್ತಲ್ಲಾ
6 ಎಂದು ಹೇಳಿ ಆಕೆಗೆ ಛೀ ಹಾಕಿದರು. ಆದರೆ
ಯೇಸು—ಈಕೆಯನ್ನು ಬಿಡಿರಿ. ಈಕೆಗೆ ಯಾಕೆ
ತೊಂದರೆಕೊಡುತ್ತೀರಿ? ಈಕೆ ನನಗೆ ಒಳ್ಳೆಯ ಕಾರ್ಯ
7 ವನ್ನು ಮಾಡಿದ್ದಾಳೆ. ಬಡವರು ಯಾವಾಗಲೂ ನಿಮ್ಮ
ಬಳಿಯಲ್ಲಿ ಇರುತ್ತಾರೆ; ನಿಮಗೆ ಮನಸ್ಸು ಬಂದಾಗ
ಅವರಿಗೆ ಉಪಕಾರಮಾಡಬಹುದು; ಆದರೆ ನಾನು
ಯಾವಾಗಲೂ ನಿಮ್ಮ ಬಳಿಯಲ್ಲಿ ಇರುವದಿಲ್ಲ.
8 ಈಕೆಯು ತನ್ನ ಕೈಲಾಗುವಷ್ಟು ಮಾಡಿದ್ದಾಳೆ; ಈಕೆ
ಯು ಮುಂದಾಗಿ ನನ್ನ ಉತ್ತರಕ್ರಿಯೆಗೋಸ್ಕರ ನನ್ನ
9 ದೇಹಕ್ಕೆ ಈ ತೈಲವನ್ನು ಹಚ್ಚಿದ್ದಾಳೆ. ಸುವಾರ್ತೆಯು
ಸರ್ವಲೋಕದಲ್ಲಿ ಎಲ್ಲೆಲ್ಲಿ ಸಾರಲಾಗುವದೋ ಅಲ್ಲಲ್ಲಿ
ಈಕೆ ಮಾಡಿದ್ದನ್ನು ಸಹ ಈಕೆಯ ನೆನಪಿಗಾಗಿ ಹೇಳು
ವರೆಂದು ನಿಮಗೆ ಸತ್ಯವಾಗಿ ಹೇಳುತ್ತೇನೆ ಅಂದನು.
10 ಆ ಮೇಲೆ ಹನ್ನೆರಡು ಮಂದಿ ಶಿಷ್ಯರಲ್ಲಿ ಒಬ್ಬನಾದ
ಇಸ್ಕರಿಯೋತ ಯೂದನು ಯೇಸುವನ್ನು ಮಹಾಯಾ
ಜಕರಿಗೆ ಹಿಡುಕೊಡಬೇಕೆಂತ ಅವರ ಬಳಿಗೆ ಹೋದನು.
11 ಅವರು ಕೇಳಿ ಸಂತೋಷಪಟ್ಟು—ನಿನಗೆ ಹಣಕೊಡು
ತ್ತೇವೆಂದು ಮಾತುಕೊಟ್ಟರು. ಅವನು ಆತನನ್ನು
ಅನುಕೂಲವಾಗಿ ಹಿಡುಕೊಡುವದು ಹೇಗೆ ಎಂದು
ನೋಡುತ್ತಿದ್ದನು.

ಯೇಸು ತನ್ನ ಶಿಷ್ಯರ ಸಂಗಡ ಕಡೇ ಭೋಜನವನ್ನು ಮಾಡಿದ್ದು.

(ಮತ್ತಾ. 26. 17—29; ಲೂಕ 22. 7—23;
ಯೋಹಾ. 13. 21—39.)

ಹುಳಿಯಿಲ್ಲದ ರೊಟ್ಟಿಯ ಹಬ್ಬದ ಮೊದಲನೆಯ 12
ದಿವಸ, ಅಂದರೆ ಪಸ್ಕದ ಕುರಿಮರಿಯನ್ನು ಕೊಯ್ಯುವ
ದಿವಸ, ಆತನ ಶಿಷ್ಯರು—ನೀನು ಪಸ್ಕದ ಊಟ ಮಾಡು
ವಂತೆ ನಾವು ಎಲ್ಲಿ ಹೋಗಿ ಸಿದ್ಧಮಾಡಬೇಕನ್ನುತ್ತೀ
ಎಂದು ಆತನನ್ನು ಕೇಳಲು ಆತನು ತನ್ನ ಶಿಷ್ಯರಲ್ಲಿ 13
ಇಬ್ಬರನ್ನು ಕರೆದು—ನೀವು ಪಟ್ಟಣದೊಳಕ್ಕೆ ಹೋಗಿರಿ;
ಅಲ್ಲಿ ಒಬ್ಬ ಮನುಷ್ಯನು ತುಂಬಿದ ಕೊಡವನ್ನು
ಹೊತ್ತುಕೊಂಡು ನಿಮ್ಮೆದುರಿಗೆ ಬರುವನು; ನೀವು
ಅವನ ಹಿಂದೆ ಹೋಗಿರಿ; ಅವನು ಯಾವ ಮನೆಗೆ 14
ಹೋಗುವನೋ ಆ ಮನೆಯ ಯಜಮಾನನಿಗೆ—ನಮ್ಮ
ಬೋಧಕನು ತನ್ನ ಶಿಷ್ಯರ ಸಂಗಡ ಪಸ್ಕದ ಊಟವನ್ನು
ಮಾಡುವದಕ್ಕೆ ತನಗೆ ಭೋಜನಶಾಲೆ ಎಲ್ಲಿ ಎಂದು
ಕೇಳುತ್ತಾನೆ ಎಂಬದಾಗಿ ಹೇಳಿರಿ. ಅವನು ತಕ್ಕ 15
ಸಾಮಾನೆಲ್ಲಾ ಸಿದ್ಧವಾಗಿ ಇಟ್ಟಿರುವ ಮೇಲಂತಸ್ತಿನ
ದೊಡ್ಡ ಕೊಠಡಿಯನ್ನು ನಿಮಗೆ ತೋರಿಸುವನು; ಅಲ್ಲಿ
ನಮಗೆ ಸಿದ್ಧಮಾಡಿರಿ ಎಂದು ಹೇಳಿ ಅವರನ್ನು ಕಳು
ಹಿಸಿಕೊಟ್ಟನು. ಶಿಷ್ಯರು ಹೊರಟು ಪಟ್ಟಣಕ್ಕೆ ಹೋಗಿ 16
ಆತನು ತಮಗೆ ಹೇಳಿದಂತೆ ಕಂಡು ಪಸ್ಕಕ್ಕೆ ಸೌರಿಸಿ
ದರು.
ಸಂಜೆಯಾದಾಗ ಆತನು ಹನ್ನೆರಡು ಮಂದಿ ಶಿಷ್ಯರ 17
ಸಂಗಡ ಬಂದನು. ಅವರು ಕೂತುಕೊಂಡು ಊಟ 18
ಮಾಡುತ್ತಿರುವಾಗ ಯೇಸು—ನಿಮ್ಮಲ್ಲಿ ಒಬ್ಬನು ನನ್ನ
ನ್ನು ಹಿಡುಕೊಡುವನು, ಅವನು ನನ್ನ ಸಂಗಡ ಊಟ
ಮಾಡುವವನೇ ಎಂದು ನಿಮಗೆ ಸತ್ಯವಾಗಿ ಹೇಳು
ತ್ತೇನೆ ಅಂದನು. ಆಗ ಅವರು ದುಃಖಿತರಾಗಿ—ನಾನಲ್ಲ 19
ವಲ್ಲಾ, ನಾನಲ್ಲವಲ್ಲಾ ಎಂದು ಒಬ್ಬೊಬ್ಬರು ಆತನನ್ನು
ಕೇಳತೊಡಗಿದರು. ಆತನು ಅವರಿಗೆ—ಅವನು ನನ್ನ 20
ಹನ್ನೆರಡು ಮಂದಿಯಲ್ಲಿ ಒಬ್ಬನು, ನನ್ನ ಸಂಗಡ ಬಟ್ಟ
ಲಲ್ಲಿ ಕೈ ಅದ್ದುವವನೇ. ಮನುಷ್ಯಕುಮಾರನು 21
ಹೊರಟುಹೋಗುತ್ತಾನೆ ಸರಿ; ಹಾಗೆ ಆತನ ವಿಷಯ
ವಾಗಿ ಬರೆದದೆಯಲ್ಲಾ. ಆದರೆ ಯಾವನು ಮನುಷ್ಯ
ಕುಮಾರನನ್ನು ಹಿಡುಕೊಡುವನೋ ಅವನ ಗತಿಯನ್ನು
ಏನು ಹೇಳಲಿ. ಆ ಮನುಷ್ಯನು ಹುಟ್ಟದಿದ್ದರೆ ಅವನಿಗೆ
ಒಳ್ಳೇದಾಗಿತ್ತು ಎಂದು ಹೇಳಿದನು.
ಅವರು ಊಟಮಾಡುತ್ತಿರುವಾಗ ಆತನು ರೊಟ್ಟಿ 22
ಯನ್ನು ತೆಗೆದುಕೊಂಡು ದೇವರ ಸ್ತೋತ್ರಮಾಡಿ
ಮುರಿದು ಅವರಿಗೆ ಕೊಟ್ಟು—ತಕ್ಕೊಳ್ಳಿರಿ; ಇದು
ನನ್ನ ದೇಹ ಅಂದನು. ಆ ಮೇಲೆ ಪಾತ್ರೆಯನ್ನು 23
ತೆಗೆದುಕೊಂಡು ಸ್ತೋತ್ರಮಾಡಿ ಅವರಿಗೆ ಕೊಟ್ಟನು;
ಅವರೆಲ್ಲರೂ ಅದರಲ್ಲಿ ಕುಡಿದರು. ಮತ್ತು ಆತನು 24
ಅವರಿಗೆ—ಇದು ನನ್ನ ರಕ್ತ, ಇದು 1)ಒಡಂಬಡಿಕೆಯ
ರಕ್ತ; ಇದು ಬಹು ಜನರಿಗೋಸ್ಕರ ಸುರಿಸಲ್ಪಡುವ ರಕ್ತ.

1) ಕೆಲವು ಪ್ರತಿಗಳಲ್ಲಿ—ಹೊಸ ಒಡಂಬಡಿಕೆಯ ರಕ್ತ ಎಂದು ಬರೆದದೆ.

25 ನಿಮಗೆ ಸತ್ಯವಾಗಿ ಹೇಳುತ್ತೇನೆ, ನಾನು ದೇವರ ರಾಜ್ಯ
ದಲ್ಲಿ ದ್ರಾಕ್ಷಾರಸವನ್ನು ಹೊಸದಾಗಿ ಕುಡಿಯುವ
ದಿನದ ವರೆಗೂ ಅದನ್ನು ಇನ್ನು ಕುಡಿಯುವದೇ ಇಲ್ಲ
ಅಂದನು.

ಯೇಸು ಗೆತ್ಸೇಮನೆ ತೋಟಕ್ಕೆ ಹೋಗಿ ಪ್ರಾರ್ಥಿಸಿದ್ದು;
ಯೂದನು ಆತನನ್ನು ಶತ್ರುಗಳಿಗೆ ಹಿಡುಕೊಟ್ಟದ್ದು.
(ಮತ್ತಾ. 26. 30—56; ಲೂಕ 22. 31—53;
ಯೋಹಾ. 13. 36—38; 18. 1—11.)

26 ಬಳಿಕ ಅವರು ಕೀರ್ತನೆಹಾಡಿ ಎಣ್ಣೇಮರಗಳ
27 ಗುಡ್ಡಕ್ಕೆ ಹೊರಟುಹೋದರು. ಆಗ ಯೇಸು ಅವ
ರಿಗೆ—ನೀವೆಲ್ಲರೂ ದಿಗಿಲುಪಟ್ಟು ಹಿಂಜರಿಯುವಿರಿ.
ಕುರುಬನನ್ನು ಹೊಡೆಯುವೆನು, ಕುರಿಗಳು ಚದರಿ
28 ಹೋಗುವವು ಎಂದು ಬರೆದದೆಯಲ್ಲಾ. ಆದಾಗ್ಯೂ
ನಾನು ಜೀವಿತನಾಗಿ ಎದ್ದ ಮೇಲೆ ನಿಮ್ಮ ಮುಂದೆ
ಗಲಿಲಾಯಕ್ಕೆ ಹೋಗುವೆನು ಎಂದು ಹೇಳಿದನು.
29 ಆದರೆ ಪೇತ್ರನು ಆತನಿಗೆ—ಎಲ್ಲರೂ ದಿಗಿಲುಪಟ್ಟು
ಹಿಂಜರಿದರೂ ನಾನು ಹಿಂಜರಿಯುವದಿಲ್ಲ ಎಂದು
30 ಹೇಳಲು ಯೇಸು—ನಿನಗೆ ಸತ್ಯವಾಗಿ ಹೇಳುತ್ತೇನೆ,
ಈ ಹೊತ್ತು ಈ ರಾತ್ರಿಯಲ್ಲಿಯೇ ಕೋಳಿ ಎರಡು
ಸಾರಿ ಕೂಗುವದಕ್ಕಿಂತ ಮುಂಚೆ ನೀನು ನನ್ನ ವಿಷಯ
ದಲ್ಲಿ—ಅವನನ್ನು ಅರಿಯೆನೆಂಬದಾಗಿ ಮೂರು ಸಾರಿ
31 ಹೇಳುವಿ ಅಂದನು. ಆದರೆ ಅವನು—ನಾನು ನಿನ್ನ
ಸಂಗಡ ಸಾಯಬೇಕಾದರೂ ನಿನ್ನನ್ನು ಅರಿಯೆನೆಂಬ
ದಾಗಿ ಹೇಳುವದೇ ಇಲ್ಲವೆಂದು ಬಹು ಖಂಡಿತ
ವಾಗಿ ಮಾತಾಡಿದನು. ಅದರಂತೆ ಅವರೆಲ್ಲರೂ ಹೇಳಿ
ದರು.
32 ತರುವಾಯ ಅವರು ಗೆತ್ಸೇಮನೆ ಎಂಬ ತೋಟಕ್ಕೆ
ಬಂದರು. ಆತನು ತನ್ನ ಶಿಷ್ಯರಿಗೆ—ಇಲ್ಲೇ ಕೂತು
ಕೊಳ್ಳಿರಿ, ನಾನು ಪ್ರಾರ್ಥನೆಮಾಡಿ ಬರುತ್ತೇನೆ ಎಂದು
ಹೇಳಿ ಪೇತ್ರ ಯಾಕೋಬ ಯೋಹಾನರನ್ನು ತನ್ನ
33 ಜೊತೆಯಲ್ಲಿ ಕರಕೊಂಡು ಹೋಗಿ ಬೆಚ್ಚಿಬೆರಗಾಗಿ
34 ಮನಗುಂದಿದವನಾದನು. ಮತ್ತು ಅವರಿಗೆ—ನನ್ನ
ಪ್ರಾಣವು ಸಾಯುವಷ್ಟು ದುಃಖಕ್ಕೆ ಒಳಗಾಗಿದೆ. ನೀವು
ಇಲ್ಲೇ ಇದ್ದು ಎಚ್ಚರವಾಗಿರ್ರಿ ಎಂದು ಹೇಳಿ ಸ್ವಲ್ಪ
35 ಮುಂದೆ ಹೋಗಿ ನೆಲದ ಮೇಲೆ ಅಡ್ಡಬಿದ್ದು ಸಾಧ್ಯ
ವಾದರೆ ಆ ಗಳಿಗೆ ತನ್ನನ್ನು ಬಿಟ್ಟುಹೋಗುವಂತೆ
36 ದೇವರನ್ನು ಪ್ರಾರ್ಥಿಸಿ—ಅಪ್ಪಾ, ತಂದೆಯೇ, ನಿನಗೆ
ಎಲ್ಲವೂ ಸಾಧ್ಯ; ಈ 1)ಪಾತ್ರೆಯನ್ನು ನನ್ನಿಂದ ತೊಲ
ಗಿಸು; ಆದರೂ ನನ್ನ ಚಿತ್ತದಂತಾಗದೆ ನಿನ್ನ ಚಿತ್ತ
37 ದಂತೆಯೇ ಆಗಲಿ ಅಂದನು. ಆ ಮೇಲೆ ಆತನು
ಬಂದು ಅವರು ನಿದ್ದೆಮಾಡುವದನ್ನು ಕಂಡು ಪೇತ್ರ
ನಿಗೆ—ಸೀಮೋನನೇ, ನಿದ್ದೆಮಾಡುತ್ತೀಯಾ? ಒಂದು
38 ಗಳಿಗೆಯಾದರೂ ಎಚ್ಚರವಾಗಿರಲಾರೆಯಾ? ಶೋಧ
ನೆಗೆ ಒಳಗಾಗದಂತೆ ಎಚ್ಚರವಾಗಿದ್ದು ಪ್ರಾರ್ಥಿಸಿರಿ;
2)ಮನಸ್ಸು ಸಿದ್ಧವಾಗಿದೆ ಸರಿ, ಆದರೆ 3)ದೇಹಕ್ಕೆ ಬಲ
39 ಸಾಲದು ಎಂದು ಹೇಳಿದನು. ಆ ಮೇಲೆ ತಿರಿಗಿ
ಹೋಗಿ ಅದೇ ಮಾತನ್ನು ಹೇಳುತ್ತಾ ಪ್ರಾರ್ಥಿಸಿದನು.
ತಿರಿಗಿ ಬಂದಾಗ ಅವರು ನಿದ್ದೆಮಾಡುವದನ್ನು ಕಂಡನು;
ಅವರ ಕಣ್ಣುಗಳು ಬಹು ಭಾರವಾಗಿದ್ದವು; ಮತ್ತು
ಆತನು ಕೇಳಿದ್ದಕ್ಕೆ ಏನು ಉತ್ತರಕೊಡಬೇಕೋ ಅವ
ರಿಗೆ ತಿಳಿಯಲಿಲ್ಲ. ಆತನು ಮೂರನೆಯ ಸಾರಿ
ಹೋಗಿ ಬಂದು ಅವರಿಗೆ—ನೀವು ಇನ್ನೂ ನಿದ್ದೆಮಾಡಿ
ದಣುವಾರಿಸಿಕೊಳ್ಳಿರಿ; ಸಾಕು; ಆ ಗಳಿಗೆ ಬಂತು;
ಇಗೋ, ಮನುಷ್ಯಕುಮಾರನು ದುರ್ಜನರ ಕೈಗೆ ಒಪ್ಪಿ
ಸಲ್ಪಡುತ್ತಾನೆ. ಏಳಿರಿ, ಹೋಗೋಣ; ನನ್ನನ್ನು
ಹಿಡುಕೊಡುವವನು ಹತ್ತಿರಕ್ಕೆ ಬಂದಿದ್ದಾನೆ ನೋಡಿರಿ
ಎಂದು ಹೇಳಿದನು.

ಆತನು ಇನ್ನೂ ಮಾತಾಡುತ್ತಿರುವಾಗಲೇ ಹನ್ನೆ
ರಡು ಮಂದಿ ಶಿಷ್ಯರಲ್ಲಿ ಒಬ್ಬನಾದ ಯೂದನು ಬಂದನು.
ಮಹಾಯಾಜಕರು ಶಾಸ್ತ್ರಿಗಳು ಹಿರಿಯರು ಇವರ ಕಡೆ
ಯಿಂದ ಒಂದು ಗುಂಪು ಕತ್ತಿದೊಣ್ಣೆಗಳನ್ನು ಹಿಡು
ಕೊಂಡು ಅವನ ಸಂಗಡ ಬಂತು; ಇದಲ್ಲದೆ ಆತನನ್ನು
ಹಿಡುಕೊಡುವವನು ಅವರಿಗೆ—ನಾನು ಯಾರಿಗೆ ಮು
ದ್ದಿಡುತ್ತೇನೋ ಅವನೇ ಆತನು; ಅವನನ್ನು ಹಿಡಿದು
ಭದ್ರವಾಗಿ ತೆಗೆದುಕೊಂಡುಹೋಗಿರಿ ಎಂದು ಗುರುತು
ಹೇಳಿಕೊಟ್ಟಿದ್ದನು. ಅಲ್ಲಿಗೆ ಬಂದ ಕೂಡಲೆ ಅವನು
ಯೇಸುವಿನ ಬಳಿಗೆ ಹೋಗಿ—ಗುರುವೇ ಎಂದು ಹೇಳಿ
ಆತನಿಗೆ ಮುದ್ದಿಡಲು ಅವರು ಆತನ ಮೇಲೆ ಕೈಹಾಕಿ
ಆತನನ್ನು ಹಿಡಿದರು. ಆದರೆ ಹತ್ತರ ನಿಂತಿದ್ದವರಲ್ಲಿ
ಒಬ್ಬನು ತನ್ನ ಕತ್ತಿಯನ್ನು ಹಿರಿದು ಮಹಾಯಾಜಕನ
ಆಳನ್ನು ಹೊಡೆದು ಅವನ ಕಿವಿಯನ್ನು ಕಡಿದುಹಾಕಿ
ದನು. ಅವರು ಯೇಸುವನ್ನು ಹಿಡಿದಾಗ ಆತನು
ಅವರಿಗೆ—ಕಳ್ಳನನ್ನು ಹಿಡಿಯುವದಕ್ಕೆ ಬಂದಂತೆ ಕತ್ತಿ
ಗಳನ್ನೂ ದೊಣ್ಣೆಗಳನ್ನೂ ತೆಗೆದುಕೊಂಡು ನನ್ನನ್ನು
ಹಿಡಿಯುವದಕ್ಕೆ ಬಂದಿರಾ? ನಾನು ದಿನಾಲು ನಿಮ್ಮ
ಸಂಗಡ ಇದ್ದು ದೇವಾಲಯದಲ್ಲಿ ಬೋಧಿಸುತ್ತಿದ್ದಾಗ
ನೀವು ನನ್ನನ್ನು ಹಿಡಿಯಲಿಲ್ಲ. ಆದರೆ ಶಾಸ್ತ್ರವಚನ
ಗಳು ನೆರವೇರುವಂತೆ ಇದೆಲ್ಲಾ ಆಯಿತು ಎಂದು
ಉತ್ತರಕೊಟ್ಟನು. ಆಗ ಶಿಷ್ಯರೆಲ್ಲರೂ ಆತನನ್ನು
ಬಿಟ್ಟು ಓಡಿಹೋದರು.

ಒಬ್ಬಾನೊಬ್ಬ ಯೌವನಸ್ಥನು ಬರೀ ಮೈಮೇಲೆ
ನಾರುಮಡಿಯನ್ನು ಹೊದ್ದವನಾಗಿ ಆತನ ಹಿಂದೆ ಜನರ
ಕೂಡ ಬರುತ್ತಿದ್ದನು. ಅವರು ಅವನನ್ನು ಹಿಡಿಯ
ಲಾಗಿ ಅವನು ಆ ನಾರುಮಡಿಯನ್ನು ಬಿಟ್ಟು ಬರೀ
ಮೈಲಿ ಓಡಿಹೋದನು.

ಹಿರೀಸಭೆಯವರು ಯೇಸುವನ್ನು ಮರಣದಂಡನೆಗೆ ತಕ್ಕವನೆಂದು
ತೀರ್ಪುಮಾಡಿ ದೇಶಾಧಿಪತಿಯ ಬಳಿಗೆ ತೆಗೆದುಕೊಂಡು
ಹೋದದ್ದು; ಪೇತ್ರನು ಯೇಸುವನ್ನು ನಾನರಿಯೆನೆಂದು ಹೇಳಿದ್ದು.
(ಮತ್ತಾ. 26. 57—75; ಲೂಕ 22. 54—71;
ಯೋಹಾ. 18. 12—27.)

ಅಷ್ಟರಲ್ಲಿ ಅವರು ಯೇಸುವನ್ನು ಮಹಾಯಾಜ
ಕನ ಬಳಿಗೆ ತೆಗೆದುಕೊಂಡು ಹೋದರು. ಇವನ

1) ಅಂದರೆ, ಕಷ್ಟಾನುಭವವನ್ನು. 2) ಮೂಲ: ಆತ್ಮ. 3) ಅಥವಾ, ನರಭಾವಕ್ಕೆ.

ಬಳಿಗೆ ಮಹಾಯಾಜಕರು ಹಿರಿಯರು ಶಾಸ್ತ್ರಿಗಳು ಇವ
54 ರೆಲ್ಲರೂ ಕೂಡಿಬಂದರು. ಮತ್ತು ಪೇತ್ರನು ದೂರ
ದಿಂದ ಆತನ ಹಿಂದೆ ಹೋಗುತ್ತಾ ಮಹಾಯಾಜಕನ
ಮಠದ ಅಂಗಳದೊಳಗೂ ಬಂದು ಓಲೇಕಾರರ ಸಂಗಡ
ಬೆಂಕಿಯ ಮುಂದೆ ಕೂತುಕೊಂಡು ಚಳಿಕಾಯಿಸಿ
55 ಕೊಳ್ಳುತ್ತಿದ್ದನು. ಆಗ ಮಹಾಯಾಜಕರೂ ಹಿರೀ
ಸಭೆಯವರೆಲ್ಲರೂ ಯೇಸುವನ್ನು ಕೊಲ್ಲಿಸಬೇಕೆಂದು
ಆತನ ಮೇಲೆ ಸಾಕ್ಷಿಯನ್ನು ಹುಡುಕಿದರು; ಆದರೆ
56 ಏನೂ ಸಿಕ್ಕಲಿಲ್ಲ. ಬಹುಮಂದಿ ಬಂದು ಆತನ
ಮೇಲೆ ಸುಳ್ಳುಸಾಕ್ಷಿ ಹೇಳಿದರೂ ಅವರ ಸಾಕ್ಷಿ ಒಂದ
57-58 ಕ್ಕೊಂದು ಸರಿಬೀಳಲಿಲ್ಲ. ತರುವಾಯ ಕೆಲವರು
ಎದ್ದು ನಿಂತು—ಕೈಯಿಂದ ಕಟ್ಟಿರುವ ಈ ದೇವಾ
ಲಯವನ್ನು ನಾನು ಕೆಡವಿಬಿಟ್ಟು ಕೈಯಿಂದ ಕಟ್ಟದಿ
ರುವ ಮತ್ತೊಂದನ್ನು ಮೂರು ದಿನಗಳಲ್ಲಿ ಕಟ್ಟುವೆನು
ಎಂಬದಾಗಿ ಆತನ ಮೇಲೆ ಸುಳ್ಳುಸಾಕ್ಷಿ ಹೇಳಿದರು.
ಎಂದು ಇವನು ಹೇಳಿದ್ದನ್ನು ನಾವು ಕೇಳಿದ್ದೇವೆ
59 ಹೀಗೆ ಹೇಳಿದರೂ ಅವರ ಸಾಕ್ಷಿ ಒಂದಕ್ಕೊಂದು ಸರಿ
60 ಬೀಳಲಿಲ್ಲ. ಆಗ ಮಹಾಯಾಜಕನು ಎದ್ದು ನಡುವೆ
ನಿಂತು—ನೀನೇನೂ ಉತ್ತರಹೇಳುವದಿಲ್ಲವೋ? ಇವರು
ನಿನ್ನ ಮೇಲೆ ಹೇಳುವ ಈ ಸಾಕ್ಷಿ ಏನು? ಎಂದು
61 ಯೇಸುವನ್ನು ಪ್ರಶ್ನಿಸಿದನು. ಆದರೆ ಆತನು ಸುಮ್ಮ
ನಿದ್ದು ಏನೂ ಉತ್ತರ ಹೇಳಲಿಲ್ಲ. ತಿರಿಗಿ ಮಹಾ
ಯಾಜಕನು—ಭಗವಂತನ ಕುಮಾರನಾದ ಕ್ರಿಸ್ತನೋ
62 ನೀನು? ಎಂದು ಆತನನ್ನು ಕೇಳಲಾಗಿ ಯೇಸು—
ನಾನೇ, ಇದಲ್ಲದೆ ಮನುಷ್ಯಕುಮಾರನು ಸರ್ವ
ಶಕ್ತನ ಬಲಗಡೆಯಲ್ಲಿ ಆಸೀನನಾಗಿರುವದನ್ನೂ ಆಕಾ
ಶದ ಮೇಘಗಳೊಂದಿಗೆ ಬರುವದನ್ನೂ ನೋಡುವಿರಿ
63 ಅಂದನು. ಇದನ್ನು ಕೇಳಿ ಮಹಾಯಾಜಕನು ತನ್ನ
ಅಂಗಿಗಳನ್ನು ಹರಕೊಂಡು—ನಮಗೆ ಸಾಕ್ಷಿಗಳು
64 ಇನ್ನು ಯಾತಕ್ಕೆ ಬೇಕು? ಇವನು ಮಾಡಿದ ದೂಷಣೆ
ಯನ್ನು ಕೇಳಿದಿರಲ್ಲಾ; ನಿಮಗೆ ಹೇಗೆ ಕಾಣುತ್ತದೆ
ಅನ್ನಲು ಅವರೆಲ್ಲರು—ಇವನು ಮರಣದಂಡನೆ ಹೊಂದ
65 ತಕ್ಕವನು ಎಂದು ತೀರ್ಪುಮಾಡಿದರು. ಆ ಮೇಲೆ
ಕೆಲವರು ಆತನನ್ನು ಉಗುಳಿ ಆತನ ಮುಖಕ್ಕೆ
ಮುಸುಕುಹಾಕಿ ಗುದ್ದಿ—ಪ್ರವಾದನೆ ಹೇಳು ಅನ್ನುತ್ತಿ
ದ್ದರು. ಮತ್ತು ಓಲೇಕಾರರು ಆತನ ಕೆನ್ನೆಗೆ ಏಟು
ಹಾಕುತ್ತಾ ತಮ್ಮ ವಶಕ್ಕೆ ತೆಗೆದುಕೊಂಡರು.
66 ಇತ್ತಲಾಗಿ ಪೇತ್ರನು ಕೆಳಗೆ ಅಂಗಳದಲ್ಲಿ ಇದ್ದಾಗ
ಮಹಾಯಾಜಕನ ದಾಸಿಯರಲ್ಲಿ ಒಬ್ಬಳು ಬಂದು
67 ಅವನು ಚಳಿಕಾಯಿಸಿಕೊಳ್ಳುತ್ತಿರುವದನ್ನು ಕಂಡು ಅವ
ನನ್ನು ನೋಡಿ—ನೀನು ಸಹ ಆ ನಜರೇತಿನವನಾದ
68 ಯೇಸುವಿನ ಕೂಡ ಇದ್ದವನು ಅಂದಳು. ಅವನು—
ಅಲ್ಲ; ನೀನು ಏನನ್ನುತ್ತೀಯೋ ನನಗೆ ಗೊತ್ತಿಲ್ಲ, ತಿಳಿ
ಯುವದಿಲ್ಲ ಎಂದು ಹೇಳಿ ಹೊರಂಗಳಕ್ಕೆ ಹೋದನು.1)
69 ಅಲ್ಲಿ ದಾಸಿಯು ಅವನನ್ನು ಕಂಡು ಹತ್ತರದಲ್ಲಿ
ನಿಂತಿದ್ದವರಿಗೆ—ಇವನೂ ಅವರಲ್ಲಿ ಒಬ್ಬನು ಎಂದು
70 ತಿರಿಗಿ ಹೇಳುವದಕ್ಕೆ ತೊಡಗಿದಳು. ಅವನು ತಿರಿಗಿ
ಅಲ್ಲ ಅಂದನು. ಸ್ವಲ್ಪ ಹೊತ್ತಿನ ಮೇಲೆ ಅಲ್ಲಿ ನಿಂತ
ವರು ಪೇತ್ರನಿಗೆ—ನಿಶ್ಚಯವಾಗಿ ನೀನು ಅವರಲ್ಲಿ
ಒಬ್ಬನು; ನೀನು ಗಲಿಲಾಯದವನಷ್ಟೆ ಎಂದು ತಿರಿಗಿ
ಹೇಳಿದರು. ಆದರೆ ಅವನು—ನೀವು ಹೇಳುವ ಆ 71
ಮನುಷ್ಯನನ್ನು ನಾನರಿಯೆನು ಎಂದು ಹೇಳಿ ಶಪಿಸಿ
ಕೊಳ್ಳುವದಕ್ಕೂ ಆಣೆಯಿಟ್ಟುಕೊಳ್ಳುವದಕ್ಕೂ ಪ್ರಾ
ರಂಭಿಸಿದನು. ಕೂಡಲೆ ಕೋಳಿ ಎರಡನೆಯ ಸಾರಿ
ಕೂಗಿತು. ಆಗ ಪೇತ್ರನು—ಕೋಳಿ ಎರಡು ಸಾರಿ 72
ಕೂಗುವದಕ್ಕಿಂತ ಮುಂಚೆ ಮೂರು ಸಾರಿ ನನ್ನ ವಿಷಯ
ವಾಗಿ ಅವನನ್ನು ಅರಿಯೆನೆಂಬದಾಗಿ ಹೇಳುವಿ ಎಂದು
ಯೇಸು ತನಗೆ ಹೇಳಿದ ಮಾತನ್ನು ನೆನಪಿಗೆ ತಂದು
ಕೊಂಡು ಆ ವಿಷಯದಲ್ಲಿ ಯೋಚಿಸಿ ಅತ್ತನು.

ಪಿಲಾತನು ಯೇಸುವನ್ನು ವಿಚಾರಿಸಿ ಆತನಲ್ಲಿ ಅಪರಾಧವಿಲ್ಲ
ವೆಂದು ಕಂಡರೂ ಆತನನ್ನು ಮರಣದಂಡನೆಗೆ ಒಪ್ಪಿಸಿದ್ದು.
(ಮತ್ತಾ. 27. 1, 2, 11—26; ಲೂಕ 23. 1—25;
ಯೋಹಾ. 18. 28—19. 16.)

15 ಬೆಳಗಾದ ಕೂಡಲೆ ಮಹಾಯಾಜಕರೂ ಹಿರಿ
ಯರೂ ಶಾಸ್ತ್ರಿಗಳೂ ಹಿರೀಸಭೆಯವರೆಲ್ಲರೂ ಒಟ್ಟು
ಗೂಡಿ ಆಲೋಚನೆ ಮಾಡಿಕೊಂಡು ಯೇಸುವನ್ನು
ಕಟ್ಟಿಸಿ ತೆಗೆದುಕೊಂಡು ಹೋಗಿ ಪಿಲಾತನಿಗೆ ಒಪ್ಪಿಸಿ
ದರು. ಪಿಲಾತನು ಆತನನ್ನು—ನೀನು ಯೆಹೂದ್ಯರ 2
ಅರಸನು ಹೌದೋ ಎಂದು ಕೇಳಲು ಆತನು—ನೀನೇ
ಹೇಳಿದ್ದೀ ಎಂದು ಉತ್ತರಕೊಟ್ಟನು. ಮಹಾಯಾಜ 3-4
ಕರು ಆತನ ಮೇಲೆ ತುಂಬಾ ದೂರು ಹೇಳುತ್ತಿದ್ದರು.
ಆಗ ಪಿಲಾತನು ಇನ್ನೊಂದಾವರ್ತಿ ಆತನನ್ನು—ನೀನು
ಏನೂ ಉತ್ತರಕೊಡುವದಿಲ್ಲವೇ? ಇವರು ನಿನ್ನ ಮೇಲೆ
ಎಷ್ಟು ದೂರುಗಳನ್ನು ಹೇಳುತ್ತಾರೆ ನೋಡು ಎಂದು
ಕೇಳಿದನು. ಆದರೆ ಯೇಸು ಇನ್ನೇನೂ ಉತ್ತರಕೊಡ 5
ಲಿಲ್ಲ. ಅದನ್ನು ನೋಡಿ ಪಿಲಾತನು ಆಶ್ಚರ್ಯ
ಪಟ್ಟನು.
ಅವನು ಆ ಹಬ್ಬದಲ್ಲಿ ಜನರು ಬೇಡಿದ ಸೆರೆಯವ 6
ನನ್ನು ಅವರಿಗೆ ಬಿಟ್ಟುಕೊಡುವ ಪದ್ಧತಿಯಿತ್ತು. ಆಗ 7
ಬರಬ್ಬನೆಂಬವನೊಬ್ಬನಿದ್ದನು; ಇವನನ್ನು ದಂಗೆಯಲ್ಲಿ
ಕೊಲೆಪಾತಕ ಮಾಡಿದ ದಂಗೆಗಾರರ ಕೂಡ ಕಟ್ಟಿಹಾಕಿ
ದ್ದರು. ಜನರು ಪಿಲಾತನ ಬಳಿಗೆ ಹೋಗಿ—ನೀನು 8
ನಮಗೆ ಮಾಡುತ್ತಾ ಬಂದ ಪ್ರಕಾರ ಮಾಡು ಎಂದು
ಬೇಡಿಕೊಳ್ಳುತ್ತಿದ್ದರು. ಮಹಾಯಾಜಕರು ಹೊಟ್ಟೇ 9-10
ಕಿಚ್ಚಿನಿಂದ ಯೇಸುವನ್ನು ಒಪ್ಪಿಸಿಕೊಟ್ಟಿದ್ದಾರೆಂದು
ಪಿಲಾತನು ಗ್ರಹಿಸಿಕೊಂಡು—ನಾನು ಯೆಹೂದ್ಯರ
ಅರಸನನ್ನು ನಿಮಗೆ ಬಿಟ್ಟುಕೊಡಬೇಕನ್ನುತ್ತೀರೋ
ಎಂದು ಅವರನ್ನು ಕೇಳಿದನು. ಅತ್ತಲಾಗಿ ಮಹಾ 11
ಯಾಜಕರು—ಬರಬ್ಬನನ್ನೇ ಬಿಟ್ಟುಕೊಡಬೇಕೆಂದು
ಬೇಡಿಕೊಳ್ಳಿರಿ ಎಂಬದಾಗಿ ಜನರನ್ನು ಪ್ರೇರೇಪಿಸಿದರು.
ಆದಕ್ಕೆ ಪಿಲಾತನು ತಿರಿಗಿ ಅವರನ್ನು—ಹಾಗಾದರೆ 12
ನೀವು ಹೇಳುವ ಯೆಹೂದ್ಯರ ಅರಸನನ್ನು ನಾನೇನು
ಮಾಡಲಿ ಎಂದು ಕೇಳಲು ಅವರು—ಅವನನ್ನು ಶಿಲು 13
ಬೆಗೆ ಹಾಕಿಸು ಎಂದು ತಿರಿಗಿ ಬೊಬ್ಬೆಹಾಕಿದರು.

1) ಕೆಲವು ಪ್ರತಿಗಳಲ್ಲಿ—ಕೋಳಿ ಕೂಗಿತು ಎಂಬದು ಇಲ್ಲಿ ಸೇರಿಸಿ ಇದೆ.

14 ಪಿಲಾತನು—ಯಾಕೆ? ಕೆಟ್ಟದ್ದೇನು ಮಾಡಿದನು?
ಅಂದನು. ಆದರೆ ಅವರು—ಅವನನ್ನು ಶಿಲುಬೆಗೆ
15 ಹಾಕಿಸು ಎಂದು ಬಹಳವಾಗಿ ಆರ್ಭಟಿಸಿದರು. ಆದಕ್ಕೆ
ಪಿಲಾತನು ಜನರ ಮನಸ್ಸನ್ನು ಸಮಾಧಾನಪಡಿಸಬೇ
ಕೆಂದು ಬರಬ್ಬನನ್ನು ಅವರಿಗೆ ಬಿಟ್ಟುಕೊಟ್ಟು ಯೇಸು
ವನ್ನು ಕೊರಡೆಗಳಿಂದ ಹೊಡಿಸಿ ಶಿಲುಬೆಗೆ ಹಾಕುವ
ದಕ್ಕೆ ಒಪ್ಪಿಸಿದನು.

ಯೇಸುವನ್ನು ಪರಿಹಾಸ್ಯಮಾಡಿ ಶಿಲುಬೆಗೆ ಹಾಕಿದ್ದು;
ಆತನು ಪ್ರಾಣಬಿಟ್ಟದ್ದು.
(ಮತ್ತಾ. 27. 27—56; ಲೂಕ 23. 26—49;
ಯೋಹಾ. 19. 17—30.)

16 ಸಿಪಾಯಿಗಳು ಆತನನ್ನು ಅಧಿಪತಿಯ ಅರಮನೆಗೆ
ಸೇರಿದ ಅಂಗಳದೊಳಕ್ಕೆ ಸಾಗಿಸಿಕೊಂಡುಹೋಗಿ ಪಟಾ
17 ಲಮನ್ನೆಲ್ಲಾ ಒಟ್ಟಿಗೆ ಕರೆದು ಆತನಿಗೆ ಕೆಂಪು ಒಲ್ಲಿ
ಯನ್ನು ಹೊದಿಸಿ ಮುಳ್ಳಿನ ಕಿರೀಟವನ್ನು ಹೆಣೆದು
18 ಆತನಿಗಿಟ್ಟು—ಯೆಹೂದ್ಯರ ಅರಸನೇ, ನಿನಗೆ ನಮ
19 ಸ್ಕಾರ ಎಂದು ಆತನಿಗೆ ವಂದನೆಮಾಡಿ ಬೆತ್ತದಿಂದ
ಆತನ ತಲೆಯ ಮೇಲೆ ಹೊಡೆದು ಆತನ ಮೇಲೆ
ಉಗುಳಿ ಆತನ ಮುಂದೆ ಮೊಣಕಾಲೂರಿ ಅಡ್ಡ
20 ಬಿದ್ದರು. ಹೀಗೆ ಆತನನ್ನು ಪರಿಹಾಸ್ಯಮಾಡಿದ ಮೇಲೆ
ಆ ಒಲ್ಲಿಯನ್ನು ತೆಗೆದು ಆತನ ಬಟ್ಟೆಗಳನ್ನು ಹೊದಿಸಿ
ಆತನನ್ನು ಶಿಲುಬೆಗೆ ಹಾಕುವದಕ್ಕೆ ತೆಗೆದುಕೊಂಡು
ಹೋದರು.
21 ಆಗ ಹೊಲದಿಂದ ಹೊರಟು ಆ ಮಾರ್ಗವಾಗಿ
ಬರುತ್ತಿದ್ದ ಒಬ್ಬನನ್ನು ಆತನ ಶಿಲುಬೆಯನ್ನು ಹೊರು
ವದಕ್ಕೆ ಬಿಟ್ಟೀಹಿಡಿದರು. ಇವನು ಯಾರಂದರೆ—
ಅಲೆಕ್ಸಾಂದ್ರ ರೂಫ ಎಂಬವರ ತಂದೆಯಾದ ಕುರೇನೆ
22 ಪಟ್ಟಣದ ಸೀಮೋನನು. ಬಳಿಕ ಆತನನ್ನು ಗೊಲ್ಗೊಥಾ
ಎಂಬ ಸ್ಥಳಕ್ಕೆ ಕರಕೊಂಡು ಬಂದರು. ಗೊಲ್ಗೊಥಾ
23 ಅಂದರೆ ಕಪಾಲಸ್ಥಳ. ಅಲ್ಲಿ ಆತನಿಗೆ ರಕ್ತಬೋಳ ಬೆರ
ಸಿದ ದ್ರಾಕ್ಷಾರಸವನ್ನು ಕೊಟ್ಟರು; ಆದರೆ ಆತನು
24 ತೆಗೆದುಕೊಳ್ಳಲಿಲ್ಲ. ಅವರು ಆತನನ್ನು ಶಿಲುಬೆಗೆ
ಹಾಕಿ ಆತನ ಬಟ್ಟೆಗಳಲ್ಲಿ ಯಾವ ಯಾವದು ಯಾರಾ
ರಿಗೆ ಆಗಬೇಕೆಂದು ಚೀಟುಹಾಕಿ ಪಾಲುಮಾಡಿ
25 ಕೊಂಡರು. ಆತನನ್ನು ಶಿಲುಬೆಗೆ ಹಾಕುವಾಗ
26 [1])ಹೊತ್ತಾರೆ ಒಂಬತ್ತು ಘಂಟೆಯಾಗಿತ್ತು. ಇದಲ್ಲದೆ
ಅವರು ಹೊರಿಸಿದ ಅಪರಾಧವನ್ನು ಸೂಚಿಸುವ ಒಂದು
ವಿಳಾಸವು ಶಿಲುಬೆಯ ಮೇಲೆ ಬರೆದಿತ್ತು; ಅದೇ
27 ನಂದರೆ—ಯೆಹೂದ್ಯರ ಅರಸನು ಎಂಬದೇ. ಅದಲ್ಲದೆ
ಇಬ್ಬರು ಕಳ್ಳರನ್ನು ತಂದು ಒಬ್ಬನನ್ನು ಆತನ ಬಲ
ಗಡೆಯಲ್ಲಿ ಒಬ್ಬನನ್ನು ಎಡಗಡೆಯಲ್ಲಿ ಆತನ ಸಂಗಡ
29 ಶಿಲುಬೆಗೆ ಹಾಕಿದರು[2]). ಅಲ್ಲಿ ಹಾದುಹೋಗುವವರು
ತಲೇ ಆಡಿಸಿ ಆಹಾ, ದೇವಾಲಯವನ್ನು ಕೆಡವಿ
30 ಮೂರು ದಿನದಲ್ಲಿ ಕಟ್ಟುವವನೇ, ಶಿಲುಬೆಯಿಂದ
ಇಳಿದು ನಿನ್ನನ್ನು ರಕ್ಷಿಸಿಕೋ ಎಂದು ಆತನನ್ನು ಹಂಗಿ
ಸುತ್ತಿದ್ದರು. ಅದೇ ಮೇರೆಗೆ ಮಹಾಯಾಜಕರೂ
ಶಾಸ್ತ್ರಿಗಳೂ—ಅವನು ಮತ್ತೊಬ್ಬರನ್ನು ರಕ್ಷಿಸಿದನು
ತನ್ನನ್ನು ರಕ್ಷಿಸಿಕೊಳ್ಳಲಾರನು. ಇಸ್ರಾಯೇಲ್ಯರ
ಅರಸನಾದ ಈ ಕ್ರಿಸ್ತನು ಈಗ ಶಿಲುಬೆಯಿಂದ ಇಳಿದು
ಬರಲಿ; ಇಳಿದುಬಂದರೆ ನಾವು ನೋಡಿ ನಂಬೇವು
ಎಂದು ತಮ್ಮತಮ್ಮೊಳಗೆ ಹಾಸ್ಯದಿಂದ ಮಾತಾಡು
ತ್ತಿದ್ದರು. ಆತನ ಸಂಗಡ ಶಿಲುಬೆಗೆ ಹಾಕಲ್ಪಟ್ಟವರು
ಸಹ ಆತನನ್ನು ನಿಂದಿಸುತ್ತಿದ್ದರು.
ಮಧ್ಯಾಹ್ನವಾದಾಗ ಆ ದೇಶದ ಮೇಲೆಲ್ಲಾ ಕತ್ತಲೆ
ಕವಿದು [3])ಸಾಯಂಕಾಲ ಮೂರು ಘಂಟೆಯ ತನಕ
ಇತ್ತು. ಮೂರು ಘಂಟೆಗೆ ಯೇಸು—ಎಲೋಹಿ,
ಎಲೋಹಿ, ಲಮಾ ಸಬಕ್ತಾನೀ ಅಂದರೆ ನನ್ನ ದೇವರೇ,
ನನ್ನ ದೇವರೇ, ಯಾಕೆ ನನ್ನನ್ನು ಕೈಬಿಟ್ಟಿದ್ದೀ ಎಂದು
ಮಹಾಧ್ವನಿಯಿಂದ ಕೂಗಿದನು. ಹತ್ತರ ನಿಂತಿದ್ದವ
ರಲ್ಲಿ ಕೆಲವರು ಅದನ್ನು ಕೇಳಿ—ಎಲೀಯನನ್ನು ಕರೆ
ಯುತ್ತಾನೆ ಕಾಣಿರೋ, ಅಂದರು. ಆಗ ಒಬ್ಬನು ಓಡಿ
ಹೋಗಿ ಸ್ಪಂಜನ್ನು ಹುಳಿರಸದಿಂದ ತುಂಬಿಸಿ ಕೋಲಿಗೆ
ಸಿಕ್ಕಿಸಿ ಆತನಿಗೆ ಕುಡಿಯುವದಕ್ಕೆ ಕೊಟ್ಟು—ಬಿಡಿರಿ,
ಎಲೀಯನು ಇವನನ್ನು ಇಳಿಸುವದಕ್ಕೆ ಬರುವನೇನೋ
ನೋಡೋಣ ಅಂದನು. ಆದರೆ ಯೇಸು ಮಹಾಧ್ವನಿ
ಯನ್ನು ಗೈದು ಪ್ರಾಣಬಿಟ್ಟನು. ಆಗ ದೇವಾಲಯದ
ತೆರೆಯು ಮೇಲಿಂದ ಕೆಳಗಿನ ವರೆಗೂ ಹರಿದು ಎರಡು
ಭಾಗವಾಯಿತು. ಆತನು ಹೀಗೆ ಪ್ರಾಣಬಿಟ್ಟದ್ದನ್ನು
ಆತನ ಹತ್ತರ ಎದುರಿಗೆ ನಿಂತಿದ್ದ ಶತಾಧಿಪತಿಯು
ನೋಡಿ—ನಿಜವಾಗಿ ಈ ಮನುಷ್ಯನು ದೇವಕುಮಾರ
ನಾಗಿದ್ದನು ಅಂದನು. ಇದಲ್ಲದೆ ಅಲ್ಲಿ ಸ್ತ್ರೀಯರು 40
ಸಹ ದೂರದಿಂದ ನೋಡುತ್ತಿದ್ದರು; ಇವರಲ್ಲಿ, ಆತನು
ಗಲಿಲಾಯದಲ್ಲಿದ್ದಾಗ ಆತನನ್ನು ಹಿಂಬಾಲಿಸಿ ಸೇವೆ
ಮಾಡುತ್ತಿದ್ದವರಾದ ಮಗ್ದಲದ ಮರಿಯ, ಚಿಕ್ಕ
ಯಾಕೋಬನ ಮತ್ತು ಯೋಸೆಯ ತಾಯಿಯಾದ
ಮರಿಯ, ಸಲೋಮೆ ಎಂಬವರೂ ಆತನ ಸಂಗಡ
ಯೆರೂಸಲೇಮಿಗೆ ಬಂದಿದ್ದ ಇನ್ನೂ ಅನೇಕ ಸ್ತ್ರೀ
ಯರೂ ಇದ್ದರು.

ಶಿಷ್ಯರು ಯೇಸುವಿನ ದೇಹವನ್ನು ಸಮಾಧಿಯಲ್ಲಿಟ್ಟದ್ದು.
(ಮತ್ತಾ. 27. 57—61; ಲೂಕ 23. 50—56;
ಯೋಹಾ. 19. 38—42.)

ಆಗಲೇ ಸಂಜೆಯಾಗಿತ್ತು; ಮತ್ತು ಆ ದಿನವು ಸೌರ
ಣೆಯ ದಿನ. ಅಂದರೆ ಸಬ್ಬತ್‌ದಿನದ ಹಿಂದಿನ ದಿನ
ಆಗಿತ್ತು. ಹೀಗಿರಲಾಗಿ ಅರಿಮಥಾಯದ ಯೋಸೇಫ
ನೆಂಬವನು ಬಂದು ಧೈರ್ಯದಿಂದ ಪಿಲಾತನ ಬಳಿಗೆ
ಹೋಗಿ ಯೇಸುವಿನ ದೇಹವನ್ನು ತನಗೆ ಕೊಡಿಸಬೇ
ಕೆಂದು ಬೇಡಿಕೊಂಡನು. ಇವನು ಹಿರೀಸಭೆಯವರಲ್ಲಿ
ಘನವಂತನು, ದೇವರ ರಾಜ್ಯವನ್ನು ಎದುರುನೋಡು

1) ಮೂಲ: ಮೂರು ತಾಸಾಗಿತ್ತು. 2) 28ನೆಯ ವಚನವು ಮೂಲಗ್ರಂಥದ ಹೆಚ್ಚು ಪ್ರತಿಗಳಲ್ಲಿ ಇಲ್ಲ. ಅದು ಯಾವದಂದ[ರೆ] ಆತನು ಅಧರ್ಮಿಗಳ ಸಂಗಡ ಎಣಿಸಲ್ಪಟ್ಟನು ಎಂಬ ಶಾಸ್ತ್ರವಚನವು ಹೀಗೆ ನೆರವೇರಿತು ಎಂಬದು. 3) ಮೂಲ: ಒಂಬ[ತ್ತನೆಯ] ತಾಸಿನ ತನಕ.

44 ತ್ತಿದ್ದವನು. ಪಿಲಾತನು—ಅವನು ಇಷ್ಟು ಬೇಗ
ಸತ್ತನೋ ಎಂದು ಆಶ್ಚರ್ಯಪಟ್ಟು ಶತಾಧಿಪತಿಯನ್ನು
ಕರೆಸಿ—ಅವನು ಆಗಲೇ ಸತ್ತನೋ ಎಂದು ಅವನನ್ನು
45 ಕೇಳಿ ಆತನು ಸತ್ತದ್ದನ್ನು ಶತಾಧಿಪತಿಯಿಂದ ತಿಳಿದು
46 ಶವವನ್ನು ಯೋಸೇಫನಿಗೆ ಕೊಡಿಸಿದನು. ಯೋಸೇ
ಫನು ನಾರುಮಡಿಯನ್ನು ಕೊಂಡುತಂದು ಆತನನ್ನು
ಇಳಿಸಿ ನಾರುಮಡಿಯಲ್ಲಿ ಸುತ್ತಿ ಬಂಡೆಯಲ್ಲಿ ತೋ
ಡಿದ್ದ ಸಮಾಧಿಯಲ್ಲಿಟ್ಟು ಸಮಾಧಿಯ ಬಾಗಲಿಗೆ
47 ಕಲ್ಲನ್ನು ಉರುಳಿಸಿದನು. ಮಗ್ದಲದ ಮರಿಯಳೂ
ಯೋಸೆಯ ತಾಯಿ ಮರಿಯಳೂ ಆತನನ್ನಿಡುವ ಸ್ಥಳ
ವನ್ನು ನೋಡಿದರು.

ಸ್ತ್ರೀಯರು ಯೇಸುವಿನ ಸಮಾಧಿಯು ಖಾಲಿಯಾಗಿರುವದನ್ನು
ಕಂಡು ದೂತರ ದರ್ಶನವನ್ನು ನೋಡಿದ್ದು.

(ಮತ್ತಾ. 28. 1—8; ಲೂಕ 24. 1—10; ಯೋಹಾ. 20. 1.)

16 ಸಬ್ಬತ್‌ದಿನ ಕಳೆದ ಮೇಲೆ, ಮಗ್ದಲದ ಮರಿ
ಯಳೂ ಯಾಕೋಬನ ತಾಯಿ ಮರಿಯಳೂ ಸಲೋ
ಮೆಯೂ ಆತನ ದೇಹಕ್ಕೆ ಹಚ್ಚುವದಕ್ಕಾಗಿ ಸುಗಂಧ
2 ದ್ರವ್ಯಗಳನ್ನು ಕೊಂಡರು. ಮತ್ತು ವಾರದ ಮೊದಲ
ನೆಯ ದಿನದ ಬೆಳಿಗ್ಗೆ ಹೊತ್ತು ಮೂಡುವಾಗ ಅವರು
3 ಸಮಾಧಿಯ ಬಳಿಗೆ ಬಂದರು. ಸಮಾಧಿಗೆ ಮುಚ್ಚಿದ್ದ
ಕಲ್ಲು ಬಹಳ ದೊಡ್ಡದಾಗಿದ್ದದರಿಂದ ಅವರು—ಸಮಾ
ಧಿಯ ಬಾಗಲಿಂದ ಆ ಕಲ್ಲನ್ನು ನಮಗೋಸ್ಕರ ಉರು
4 ಳಿಸುವವರು ಯಾರಿದ್ದಾರೆ ಎಂದು ತಮ್ಮತಮ್ಮೊಳಗೆ
ಮಾತಾಡಿಕೊಳ್ಳುತ್ತಾ ಇರಲಾಗಿ ತಲೆಯೆತ್ತಿ ನೋಡಿ
5 ಆ ಕಲ್ಲು ಉರುಳಿಸಲ್ಪಟ್ಟಿರುವದನ್ನು ಕಂಡರು. ಅವರು
ಸಮಾಧಿಯೊಳಕ್ಕೆ ಹೋಗಿ ಒಬ್ಬ ಯೌವನಸ್ಥನು
ಬಿಳೀ ಅಂಗಿಯನ್ನು ತೊಟ್ಟುಕೊಂಡು ಬಲಗಡೆ ಕೂತಿರು
6 ವದನ್ನು ಕಂಡು ಬೆಚ್ಚಿಬೆರಗಾದರು. ಅವನು ಅವ
ರಿಗೆ—ಬೆರಗಾಗಬೇಡಿರಿ. ಶಿಲುಬೆಗೆ ಹಾಕಲ್ಪಟ್ಟಿದ್ದ ನಜ
ರೇತಿನ ಯೇಸುವನ್ನು ಹುಡುಕುತ್ತೀರಲ್ಲವೇ. ಆತನು
ಜೀವಿತನಾಗಿ ಎದ್ದಿದ್ದಾನೆ; ಇಲ್ಲಿ ಇಲ್ಲ. ಆತನನ್ನು
7 ಇಟ್ಟಿದ್ದ ಸ್ಥಳವು ಇದೇ, ನೋಡಿರಿ. ಆದರೆ ನೀವು
ಹೋಗಿ ಆತನ ಶಿಷ್ಯರಿಗೂ ಪೇತ್ರನಿಗೂ—ಆತನು
ನಿಮಗೆ ಹೇಳಿದಂತೆ ನಿಮ್ಮ ಮುಂದೆ ಗಲಿಲಾಯಕ್ಕೆ
ಹೋಗುತ್ತಾನೆ, ಅಲ್ಲಿ ಆತನನ್ನು ಕಾಣುವಿರಿ ಎಂದು
8 ತಿಳಿಸಿರಿ ಎಂದು ಹೇಳಿದನು. ಅವರು ಭ್ರಮೆ ಹಿಡಿದವ
ರಾಗಿ ನಡುಗುತ್ತಾ ಹೊರಕ್ಕೆ ಬಂದು ಸಮಾಧಿಯ
ಬಳಿಯಿಂದ ಓಡಿಹೋದರು; ಅವರು ಹೆದರಿಕೊಂಡದ
ರಿಂದ ಯಾರಿಗೂ ಏನೂ ಹೇಳಲಿಲ್ಲ.

ಯೇಸು ಜೀವಿತನಾಗಿ ಎದ್ದ ಮೇಲೆ ತನ್ನ ಶಿಷ್ಯರಿಗೆ
ಕಾಣಿಸಿಕೊಂಡದ್ದು.

[ವಾರದ ಮೊದಲನೆಯ ದಿನ ಬೆಳಿಗ್ಗೆ ಯೇಸು 9
ಜೀವಿತನಾಗಿ ಎದ್ದ ಮೇಲೆ ಮಗ್ದಲದ ಮರಿಯಳಿಗೆ
ಮೊದಲು ಕಾಣಿಸಿಕೊಂಡನು. ಆಕೆಗೆ ಏಳು ದೆವ್ವ
ಗಳನ್ನು ಬಿಡಿಸಿದ್ದನು. ಆಕೆ ಹೋಗಿ ಆತನು ಕಾಣಿಸಿ 10
ಕೊಂಡದ್ದನ್ನು ಮುಂಚೆ ಆತನ ಜೊತೆಯಲ್ಲಿದ್ದವರಿಗೆ
ತಿಳಿಸಿದಳು; ಇವರು ಹಂಬಲಿಸುತ್ತಾ ಅಳುತ್ತಾ ಕೂತಿ
ದ್ದರು. ಆತನು ಬದುಕಿದ್ದಾನೆ, ನನಗೆ ಕಾಣಿಸಿಕೊಂಡ 11
ನು ಎಂಬ ಮಾತನ್ನು ಕೇಳಿದಾಗ ಅವರು ನಂಬಲಿಲ್ಲ.
ಇದಾದ ಮೇಲೆ ಶಿಷ್ಯರಲ್ಲಿ ಇಬ್ಬರು ಒಂದು 12
ಹಳ್ಳಿಗೆ ನಡಕೊಂಡು ಹೋಗುತ್ತಿದ್ದಾಗ ಆತನು ಅವ
ರಿಗೆ ರೂಪಾಂತರದಿಂದ ಕಾಣಿಸಿಕೊಂಡನು. ಅವರು 13
ಹೋಗಿ ಉಳಿದವರಿಗೆ ತಿಳಿಸಿದರು. ಆದರೆ ಅವರನ್ನೂ
ನಂಬಲಿಲ್ಲ.
ತರುವಾಯ ಹನ್ನೊಂದು ಮಂದಿ ಶಿಷ್ಯರು 14
ಊಟಕ್ಕೆ ಕೂತಿದ್ದಾಗ ಆತನು ಅವರಿಗೂ ಕಾಣಿಸಿ
ಕೊಂಡನು. ತಾನು ಜೀವಿತನಾಗಿ ಎದ್ದು ಬಂದ ಮೇಲೆ
ತನ್ನನ್ನು ಕಂಡವರ ಮಾತನ್ನು ಅವರು ನಂಬಲಿಲ್ಲವಾದ
ಕಾರಣ ಆತನು ಅವರ ಅಪನಂಬಿಕೆಗೂ ಅವರ ಮನ
ಸ್ಸಿನ ಕಾಠಿಣ್ಯಕ್ಕೂ ಅವರನ್ನು ಗದರಿಸಿದನು. ಆ ಮೇಲೆ 15
ಅವರಿಗೆ—ನೀವು ಲೋಕದ ಎಲ್ಲಾ ಕಡೆಗೆ ಹೋಗಿ
ಜಗತ್ತಿಗೆಲ್ಲಾ ಸುವಾರ್ತೆಯನ್ನು ಸಾರಿರಿ. ನಂಬಿ ದೀಕ್ಷಾ 16
ಸ್ನಾನ ಮಾಡಿಸಿಕೊಳ್ಳುವವನು ರಕ್ಷಣೆಹೊಂದುವನು;
ನಂಬದೆ ಹೋಗುವವನು ದಂಡನೆಗೆ ಗುರಿಯಾಗುವನು.
ಇದಲ್ಲದೆ ನಂಬುವವರಿಂದ ಈ ಸೂಚಕಕಾರ್ಯಗಳು 17
ಉಂಟಾಗುವವು; ನನ್ನ ಹೆಸರನ್ನು ಹೇಳಿ ದೆವ್ವಗಳನ್ನು
ಬಿಡಿಸುವರು; ಹೊಸಭಾಷೆಗಳಿಂದ ಮಾತಾಡುವರು;
ಹಾವುಗಳನ್ನು ಎತ್ತುವರು; ವಿಷಪದಾರ್ಥವನ್ನೇನಾದರೂ 18
ಕುಡಿದರೂ ಅವರಿಗೆ ಯಾವ ಕೇಡೂ ಆಗುವದಿಲ್ಲ;
ಅವರು ರೋಗಿಗಳ ಮೇಲೆ ಕೈಯಿಟ್ಟರೆ ಇವರಿಗೆ ಗುಣ
ವಾಗುವದು ಎಂದು ಹೇಳಿದನು.
ಯೇಸುಸ್ವಾಮಿಯು ಅವರ ಕೂಡ ಮಾತಾಡಿದ 19
ಮೇಲೆ ಆಕಾಶಕ್ಕೆ ಒಯ್ಯಲ್ಪಟ್ಟು ದೇವರ ಬಲಗಡೆ
ಯಲ್ಲಿ ಆಸನಾರೂಢನಾದನು. ಇತ್ತಲಾಗಿ ಅವರು 20
ಹೊರಟುಹೋಗಿ ಎಲ್ಲೆಲ್ಲಿಯೂ ಸುವಾರ್ತೆಯನ್ನು
ಸಾರಿದರು; ಮತ್ತು ಕರ್ತನು ಅವರ ಕೂಡ ಕೆಲಸ
ಮಾಡುತ್ತಾ ಸೂಚಕಕಾರ್ಯಗಳಿಂದ ಸುವಾರ್ತೆಯ
ವಾಕ್ಯವನ್ನು ಬಲಪಡಿಸುತ್ತಾ ಇದ್ದನು.][1)]

1) 9ನೆಯ ವಚನದಿಂದ 20ನೆಯ ವಚನದ ಪರ್ಯಂತರ ಬರೆದಿರುವ ಮಾತುಗಳು ಕೆಲವು ಪುರಾತನ ಪ್ರತಿಗಳಲ್ಲಿ ಇಲ್ಲ. ಕೆಲವು ಪ್ರತಿಗಳಲ್ಲಿ ಅವುಗಳಿಗೆ ಬದಲಾಗಿ ಬೇರೊಂದು ಸಮಾಪ್ತಿವಾಕ್ಯವು ಉಂಟು; ಅದೇನಂದರೆ—ಆದರೆ ತಮಗೆ ಆಜ್ಞಾಪಿಸಲ್ಪಟ್ಟ ಮಾತುಗಳನ್ನೆಲ್ಲಾ ಪೇತ್ರನ ಸಂಗಡವಿದ್ದವರಿಗೆ ಸಂಕ್ಷೇಪವಾಗಿ ತಿಳಿಸಿದರು. ತರುವಾಯ ಯೇಸು ತಾನೇ ನಿರಂತರವಾದ ರಕ್ಷಣೆಯನ್ನು ತಿಳಿಸುವ ಲಯವಾಗದ ದಿವ್ಯ ಪ್ರಕಟಣೆಯನ್ನು ಪೂರ್ವದಿಂದ ಪಶ್ಚಿಮದ ವರೆಗೂ ಇವರ ಮುಖಾಂತರ ಪ್ರಚುರಪಡಿಸಿದನು.

# THE GOSPEL ACCORDING TO
# SAINT LUKE

## ಲೂಕನು ಬರೆದ ಸುವಾರ್ತೆ

### ಪೀಠಿಕೆ.

1 2 ಶ್ರೀಮತ್ ಥೆಯೋಫಿಲನೇ, ನಮ್ಮಲ್ಲಿ ನಿಶ್ಚಯಕ್ಕೆ
ಬಂದಿರುವ ಕಾರ್ಯಗಳನ್ನು ಮೊದಲಿಂದ ಕಣ್ಣಾರೆ
ಕಂಡು ಸುವಾರ್ತಾವಾಕ್ಯವನ್ನು ಸಾರುತ್ತಿದ್ದವರು
ನಮಗೆ ತಿಳಿಸಿದ ಪ್ರಕಾರ ಆ ಕಾರ್ಯಗಳನ್ನು ಚರಿತ್ರ
ರೂಪವಾಗಿ ಬರೆಯುವದಕ್ಕೆ ಅನೇಕರು ಪ್ರಯತ್ನಿಸಿರ
3 ಲಾಗಿ ನಾನು ಬುಡದಿಂದ ಎಲ್ಲವನ್ನೂ ಚೆನ್ನಾಗಿ ವಿಚಾ
ರಿಸಿದವನಾದಕಾರಣ ಅವುಗಳನ್ನು ನಿನಗೆ ಕ್ರಮವಾಗಿ
ಬರೆಯುವದು ಒಳ್ಳೇದೆಂದು ನನಗೂ ತೋಚಿತು.
4 ನಿನಗೆ ಉಪದೇಶಿಸಿರುವ ವಿಷಯಗಳು ಯಥಾರ್ಥ
ವಾದವುಗಳೆಂದು ಇದರಿಂದ ನೀನು ಗೊತ್ತುಮಾಡಿ
ಕೊಳ್ಳಬಹುದು.

### ದೇವದೂತನು ಸ್ನಾನಿಕನಾದ ಯೋಹಾನನ ಜನನವನ್ನು ಮುಂತಿಳಿಸಿದ್ದು.

5 ಯೂದಾಯದ ಅರಸನಾದ ಹೆರೋದನ ಕಾಲ
ದಲ್ಲಿ ಅಬೀಯನ ವರ್ಗಕ್ಕೆ ಸೇರಿದ ಜಕರೀಯನೆಂಬ
ಒಬ್ಬ ಯಾಜಕನಿದ್ದನು. ಅವನ ಹೆಂಡತಿಯು ಆರೋ
ನನ ವಂಶದವಳು. ಆಕೆಯ ಹೆಸರು ಎಲಿಸಬೇತ್.
6 ಅವರಿಬ್ಬರೂ ಕರ್ತನ ಎಲ್ಲಾ ಆಜ್ಞೆಗಳನ್ನೂ ನೇಮ
ನಿಷ್ಠೆಗಳನ್ನೂ ಕೈಕೊಂಡು ತಪ್ಪಿಲ್ಲದೆ ನಡಕೊಳ್ಳುತ್ತಾ
7 ದೇವರ ದೃಷ್ಟಿಯಲ್ಲಿ ನೀತಿವಂತರಾಗಿದ್ದರು. ಆದರೆ
ಎಲಿಸಬೇತಳು ಬಂಜೆಯಾದದರಿಂದ ಅವರಿಗೆ ಮಕ್ಕ
ಳಿರಲಿಲ್ಲ; ಇದಲ್ಲದೆ ಅವರಿಬ್ಬರೂ ದಿನಹೋದವರಾ
ಗಿದ್ದರು.
8 ಹೀಗಿರಲಾಗಿ ಜಕರೀಯನ ವರ್ಗದ ಸರತಿ ಬಂ
ದಾಗ ಅವನು ದೇವರ ಸನ್ನಿಧಿಯಲ್ಲಿ ಯಾಜಕಧರ್ಮ
9 ವನ್ನು ನಡಿಸುತ್ತಿರಲು ದೇವಾಲಯದೊಳಕ್ಕೆ ಹೋಗಿ
ಧೂಪವನ್ನರ್ಪಿಸುವದು ಯಾಜಕರ ಮರ್ಯಾದೆಯ
10 ಪ್ರಕಾರ ಅವನ ಪಾಲಿಗೆ ಬಂತು. ಧೂಪವನ್ನು ಅರ್ಪಿ
ಸುವ ಹೊತ್ತಿನಲ್ಲಿ ಜನರ ಗುಂಪೆಲ್ಲಾ ಹೊರಗೆ ನಿಂತು
11 ದೇವರನ್ನು ಪ್ರಾರ್ಥಿಸುತ್ತಿರಲಾಗಿ ಕರ್ತನ ದೂತನು
ಧೂಪಪೀಠದ ಬಲಗಡೆಯಲ್ಲಿ ನಿಂತುಕೊಂಡವನಾಗಿ
12 ಅವನಿಗೆ ಕಾಣಿಸಿಕೊಂಡನು. ಜಕರೀಯನು ಅವನನ್ನು
13 ಕಂಡು ತತ್ತರಗೊಂಡು ಭಯಹಿಡಿದವನಾದನು. ಆದರೆ
ಆ ದೂತನು ಅವನಿಗೆ— ಜಕರೀಯಾ, ಭಯಪಡ
ಬೇಡ; ನಿನ್ನ ವಿಜ್ಞಾಪನೆ ದೇವರಿಗೆ ಮುಟ್ಟಿತು; ನಿನ್ನ
ಹೆಂಡತಿಯಾದ ಎಲಿಸಬೇತಳು ನಿನಗೆ ಒಬ್ಬ ಮಗನನ್ನು
ಹೆರುವಳು. ನೀನು ಅವನಿಗೆ ಯೋಹಾನನೆಂದು ಹೆಸ
ರಿಡಬೇಕು. ನಿನಗೆ ಸಂತೋಷವೂ ಉಲ್ಲಾಸವೂ ಉಂ
ಟಾಗುವದು; ಮತ್ತು ಅವನು ಹುಟ್ಟಿದ್ದಕ್ಕೆ ಬಹು
ಜನರು ಸಂತೋಷಪಡುವರು. ಅವನು ಕರ್ತನ ದೃಷ್ಟಿ
ಯಲ್ಲಿ ಮಹಾಪುರುಷನಾಗಿರುವನು; ದ್ರಾಕ್ಷಾರಸವ
ನ್ನಾಗಲಿ ಯಾವ ಮದ್ಯವನ್ನಾಗಲಿ ಕುಡಿಯದವನಾಗಿ
ರುವನು; ಅವನು ಹುಟ್ಟಿದಂದಿನಿಂದಲೂ ಪವಿತ್ರಾತ್ಮ
ಭರಿತನಾಗಿರುವನು. ಇಸ್ರಾಯೇಲ್ಯರಲ್ಲಿ ಅನೇಕರನ್ನು
ಅವರ ದೇವರಾಗಿರುವ ಕರ್ತನ ಕಡೆಗೆ ತಿರುಗಿಸುವನು.
ಅವನು ಆತನ ಮುಂದೆ ಹೋಗಿ ಎಲೀಯನ ಗುಣ
ಶಕ್ತಿಗಳಿಂದ ಕೂಡಿದವನಾಗಿ ತಂದೆಗಳ ಹೃದಯವನ್ನು
ಮಕ್ಕಳ ಕಡೆಗೂ ಹಟಹಿಡಿದವರನ್ನು ನೀತಿವಂತರ
ಜ್ಞಾನದ ಕಡೆಗೂ ತಿರುಗಿಸಿ ಸಿದ್ಧವಾದ ಜನವನ್ನು
ಕರ್ತನಿಗೆ ಒದಗಿಸುವನು ಎಂದು ಹೇಳಿದನು. ಜಕರೀ
ಯನು ಆ ದೂತನಿಗೆ—ಇದನ್ನು ನಾನು ಯಾತರಿಂದ
ತಿಳುಕೊಳ್ಳಲಿ? ನಾನು ಮುದುಕನು; ನನ್ನ ಹೆಂಡ
ತಿಯೂ ದಿನಹೋದವಳು ಎಂದು ಹೇಳಿದ್ದಕ್ಕೆ ಆ
ದೂತನು—ನಾನು ದೇವರ ಸನ್ನಿಧಿಯಲ್ಲಿ ನಿಲ್ಲುವ
ಗಬ್ರಿಯೇಲನು; ನಿನ್ನ ಕೂಡ ಮಾತಾಡಿ ಈ ಶುಭವರ್ತ
ಮಾನವನ್ನು ನಿನಗೆ ತಿಳಿಸುವದಕ್ಕಾಗಿ ನಾನು ಕಳುಹಿಸ
ಲ್ಪಟ್ಟಿದ್ದೇನೆ. ಈ ನನ್ನ ಮಾತು ತಕ್ಕ ಸಮಯದಲ್ಲಿ ನೆರ
ವೇರುವದು; ಆದರೆ ನೀನು ಅದನ್ನು ನಂಬದೆಹೋದದ್ದ
ರಿಂದ ಅದೆಲ್ಲಾ ಸಂಭವಿಸುವ ದಿನದ ವರೆಗೂ ಮಾತನಾ
ಡಲಾರದೆ ಮೂಕನಾಗಿರುವಿ ಎಂದು ಅವನಿಗೆ ಉತ್ತರಕೊ
ಟ್ಟನು. ಇಷ್ಟರೊಳಗೆ ಜನರು ಜಕರೀಯನನ್ನು ಕಾದು
ಕೊಂಡಿದ್ದು ಅವನು ದೇವಾಲಯದೊಳಗೆ ತಡಮಾಡಿ
ದ್ದಕ್ಕೆ ಆಶ್ಚರ್ಯಪಟ್ಟರು. ಅವನು ಹೊರಗೆ ಬಂದಾಗ
ಅವರ ಕೂಡ ಏನೂ ಮಾತಾಡಲಾರದೆ ಇರಲು ಅವರು—
ಇವನಿಗೆ ದೇವಾಲಯದಲ್ಲಿ ಏನೋ ದಿವ್ಯ ದರ್ಶನವಾ
ಗಿರಬೇಕು ಎಂದು ತಿಳುಕೊಂಡರು. ಅವನು ಅವರಿಗೆ
ಕೈಸನ್ನೆ ಮಾಡುತ್ತಾ ಮೂಕನಾಗಿಯೇ ಇದ್ದನು.
ಅವನ ಯಾಜಕವರ್ಗದ ದಿನಗಳು ತೀರಿದನಂತರ
ಅವನು ತನ್ನ ಮನೆಗೆ ಹೋದನು.

ಆ ದಿವಸಗಳಾದ ಮೇಲೆ ಅವನ ಹೆಂಡತಿಯಾದ
ಎಲಿಸಬೇತಳು ಬಸುರಾಗಿ ಐದು ತಿಂಗಳು ಮನೆಯಲ್ಲೇ
ಮರೆಯಾಗಿದ್ದು—ಕರ್ತನು ಈ ಕಾಲದಲ್ಲಿ ನನ್ನನ್ನು
ಪರಾಮರಿಸಿ ನನಗೆ ಈ ರೀತಿಯಾಗಿ ಮಾಡಿ ಜನರಲ್ಲಿ

ನನಗಿದ್ದ ಅವಮಾನವನ್ನು ಪರಿಹರಿಸಿದ್ದಾನಲ್ಲಾ ಅನ್ನು
ತ್ತಿದ್ದಳು.

ದೇವದೂತನು ಯೇಸುವಿನ ಜನನವನ್ನು ಮುಂತಿಳಿಸಿದ್ದು.

26 ಆರನೆಯ ತಿಂಗಳಲ್ಲಿ ದೇವರು ಗಬ್ರಿಯೇಲನೆಂಬ
ತನ್ನ ದೂತನನ್ನು ಗಲಿಲಾಯ ಸೀಮೆಯ ನಜರೇತೆಂಬ
27 ಊರಿಗೆ ಒಬ್ಬ ಕನ್ಯೆಯ ಬಳಿಗೆ ಕಳುಹಿಸಿದನು; ಆ
ಕನ್ಯೆಯ ಹೆಸರು ಮರಿಯಳು; ಆಕೆಯು ದಾವೀದನ
ಮನೆತನದ ಯೋಸೇಫನೆಂಬ ಪುರುಷನಿಗೆ ನಿಶ್ಚಿತಾರ್ಥ
28 ವಾಗಿದ್ದಳು. ಆ ದೂತನು ಆಕೆಯ ಬಳಿಗೆ ಬಂದು—
ದೇವರ ದಯೆ ಹೊಂದಿದವಳೇ, ನಿನಗೆ ಶುಭವಾಗಲಿ;
29 ಕರ್ತನು ನಿನ್ನ ಸಂಗಡ ಇದ್ದಾನೆ ಅಂದನು. ಆಕೆಯು
ಆ ಮಾತಿಗೆ ತತ್ತರಿಸಿ—ಇದೆಂಥ ಆಶೀರ್ವಾದ ಎಂದು
30 ಯೋಚನೆಮಾಡುತ್ತಿರಲಾಗಿ ಆ ದೂತನು ಆಕೆಗೆ—
ಮರಿಯಳೇ, ಹೆದರಬೇಡ; ನಿನಗೆ ದೇವರ ದಯೆ ದೊರ
31 ಕಿತು. ಇಗೋ, ನೀನು ಗರ್ಭಿಣಿಯಾಗಿ ಒಬ್ಬ ಮಗ
ನನ್ನು ಹೆರುವಿ; ಆತನಿಗೆ ಯೇಸುವೆಂದು ಹೆಸರಿಡ
32 ಬೇಕು. ಆತನು ಮಹಾಪುರುಷನಾಗಿ ಪರಾತ್ಪರನ
ಕುಮಾರನೆನಿಸಿಕೊಳ್ಳುವನು; ಇದಲ್ಲದೆ ದೇವರಾಗಿರುವ
ಕರ್ತನು ಆತನ ಮೂಲಪಿತನಾದ ದಾವೀದನ ಸಿಂಹಾ
33 ಸನವನ್ನು ಆತನಿಗೆ ಕೊಡುವನು. ಆತನು ಯಾಕೋ
ಬನ ವಂಶವನ್ನು ಸದಾಕಾಲ ಆಳುವನು; ಆತನ
34 ರಾಜ್ಯಕ್ಕೆ ಅಂತ್ಯವೇ ಇಲ್ಲ ಎಂದು ಹೇಳಿದನು. ಮರಿ
ಯಳು ಆ ದೂತನನ್ನು—ಇದು ಹೇಗಾದೀತು? ನಾನು
ಪುರುಷನನ್ನು ಅರಿತವಳಲ್ಲವಲ್ಲಾ ಎಂದು ಕೇಳಿದ್ದಕ್ಕೆ
35 ದೂತನು—ನಿನ್ನ ಮೇಲೆ ಪವಿತ್ರಾತ್ಮ ಬರುವದು;
ಪರಾತ್ಪರನ ಶಕ್ತಿಯ ನೆರಳು ನಿನ್ನ ಮೇಲೆ ಬೀಳುವದು;
ಆದದರಿಂದ ಹುಟ್ಟುವ ಆ ಪವಿತ್ರ ಶಿಶು ದೇವರ ಮಗ
36 ನೆನಿಸಿಕೊಳ್ಳುವದು. ಮತ್ತು ನಿನ್ನ ಬಂಧುವಾದ
ಎಲಿಸಬೇತಳಿದ್ದಾಳಲ್ಲಾ, ಆಕೆ ಸಹ ಮುಪ್ಪಿನವಳಾ
ದರೂ ಗರ್ಭಿಣಿಯಾಗಿದ್ದಾಳೆ; ಆಕೆಯ ಗರ್ಭದಲ್ಲಿ
ಗಂಡುಮಗುವದೆ; ಬಂಜೆಯೆನಿಸಿಕೊಂಡಿದ್ದ ಆಕೆಗೆ
37 ಇದೇ ಆರನೆಯ ತಿಂಗಳು. 1)ದೇವರಿಂದ ಬರುವ
ಯಾವ ಮಾತಾದರೂ ನಿಷ್ಫಲವಾಗುವದಿಲ್ಲ ಅಂದನು.
38 ಆಗ ಮರಿಯಳು—ಇಗೋ, ನಾನು ಕರ್ತನ ದಾಸಿ;
ನಿನ್ನ ಮಾತಿನಂತೆ ನನಗಾಗಲಿ ಅಂದಳು. ಆ ಮೇಲೆ ಆ
ದೂತನು ಆಕೆಯ ಬಳಿಯಿಂದ ಹೊರಟುಹೋದನು.

ಯೇಸುವಿನ ತಾಯಿಯಾದ ಮರಿಯಳು ಯೋಹಾನನ ತಾಯಿಗೆ
ಭೇಟಿಕೊಟ್ಟದ್ದು, ಮತ್ತು ದೇವರನ್ನು ಕೊಂಡಾಡಿದ್ದು.

39 ಆ ಕಾಲದಲ್ಲಿ ಮರಿಯಳು ಎದ್ದು ಅವಸರದಿಂದ
ಮಲೆನಾಡಿಗೆ ಹೊರಟು ಯೆಹೂದದಲ್ಲಿರುವ ಒಂದೂ
40 ರಿಗೆ ಹೋಗಿ ಜಕರೀಯನ ಮನೆಯನ್ನು ಸೇರಿ
41 ಎಲಿಸಬೇತಳಿಗೆ ವಂದಿಸಿದಳು. ಎಲಿಸಬೇತಳು ಮರಿ
ಯಳ ವಂದನೆಯನ್ನು ಕೇಳುತ್ತಲೇ ಆಕೆಯ ಗರ್ಭದ
42 ಲ್ಲಿದ್ದ ಕೂಸು ಹಾರಾಡಿತು. ಮತ್ತು ಎಲಿಸಬೇತಳು
ಪವಿತ್ರಾತ್ಮಭರಿತಳಾಗಿ ಮಹಾಧ್ವನಿಯಿಂದ ಕೂಗಿ—
ನೀನು ಸ್ತ್ರೀಯರೊಳಗೆ ಆಶೀರ್ವಾದ ಹೊಂದಿದವಳು,
ಮತ್ತು ನಿನ್ನಲ್ಲಿ ಹುಟ್ಟುವ ಕೂಸು ಆಶೀರ್ವಾದ
ಹೊಂದಿದ್ದು. ನನ್ನ ಸ್ವಾಮಿಯ ತಾಯಿಯು ನನ್ನ 43
ಬಳಿಗೆ ಬರುವಷ್ಟು ಭಾಗ್ಯ ನನಗೆ ಎಲ್ಲಿಂದಾಯಿತು?
ಇಗೋ, ನಿನ್ನ ವಂದನೆಯು ನನ್ನ ಕಿವಿಗೆ ಬೀಳುತ್ತಲೇ 44
ಕೂಸು ನನ್ನ ಗರ್ಭದಲ್ಲಿ ಉಲ್ಲಾಸದಿಂದ ಹಾರಾಡಿತು.
ನಂಬಿದವಳಾದ ನೀನು ಧನ್ಯಳೇ; ಕರ್ತನು ನಿನಗೆ 45
ಹೇಳಿದ ಮಾತುಗಳು ನೆರವೇರುವವು ಅಂದಳು. ಆಗ 46
ಮರಿಯಳು ಹೇಳಿದ್ದೇನಂದರೆ—

ನನ್ನ ಪ್ರಾಣವು ಕರ್ತನನ್ನು ಕೊಂಡಾಡುತ್ತದೆ,
ನನ್ನ ಆತ್ಮವು ನನ್ನ ರಕ್ಷಕನಾದ ದೇವರ ವಿಷ 47
ಯದಲ್ಲಿ ಉಲ್ಲಾಸಗೊಂಡದೆ.
ಆತನು ತನ್ನ ದಾಸಿಯ ದೀನಸ್ಥಿತಿಯ ಮೇಲೆ 48
ಲಕ್ಷ್ಯವಿಟ್ಟಿದ್ದಾನೆ.
ಇಗೋ, ಇಂದಿನಿಂದ ತಲತಲಾಂತರದವರೆಲ್ಲಾ
ನನ್ನನ್ನು ಧನ್ಯಳೆಂದು ಹೊಗಳುವರು.
ಶಕ್ತನಾಗಿರುವಾತನು ನನಗೆ ದೊಡ್ಡ ಉಪಕಾರ 49
ಗಳನ್ನು ಮಾಡಿದ್ದಾನೆ; ಆತನ ನಾಮವು
ಪರಿಶುದ್ಧವಾದದ್ದು.
ಆತನಲ್ಲಿ ಭಯಭಕ್ತಿಯುಳ್ಳವರ ಮೇಲೆ ಆತನ 50
ದಯವು ತಲತಲಾಂತರದ ವರೆಗೂ ಇರು
ವದು.
ಆತನು ತನ್ನ ಭುಜಪರಾಕ್ರಮವನ್ನು ತೋರಿಸಿ 51
ಸೊಕ್ಕಿದ ಮನಸ್ಸುಳ್ಳವರನ್ನು ಚದರಿಸಿಬಿಟ್ಟಿ
ದ್ದಾನೆ.
ಪ್ರಭುಗಳನ್ನು ಸಿಂಹಾಸನಗಳಿಂದ ದೊಬ್ಬಿ 52
ದೀನಸ್ಥಿತಿಯವರನ್ನು ಉನ್ನತಸ್ಥಿತಿಗೆ ತಂದಿ
ದ್ದಾನೆ.
ಹಸಿದವರನ್ನು ಮೃಷ್ಟಾನ್ನದಿಂದ ತೃಪ್ತಿಪಡಿಸಿ 53
ಸ್ಥಿತಿವಂತರನ್ನು ಬರಿಗೈಯಲ್ಲಿ ಕಳುಹಿಸಿ
ಬಿಟ್ಟಿದ್ದಾನೆ.
ಆತನು ನಮ್ಮ ಪೂರ್ವಿಕರಿಗೆ ಹೇಳಿದ್ದಕ್ಕೆ ಸರಿ 54-55
ಯಾಗಿ
ಅಬ್ರಹಾಮನಿಗೂ ಅವನ ವಂಶದವರಿಗೂ ಯಾ
ವಾಗಲೂ ದಯೆ ತೋರಿಸಬೇಕೆಂಬದನ್ನು
ನೆನಸಿಕೊಂಡು
ತನ್ನ ಸೇವಕನಾದ ಇಸ್ರಾಯೇಲನನ್ನು ಕೈಹಿಡಿ
ದಿದ್ದಾನೆ

ಅಂದಳು. ಮರಿಯಳು ಹೆಚ್ಚುಕಡಿಮೆ ಮೂರು ತಿಂಗಳು 56
ಎಲಿಸಬೇತಳ ಬಳಿಯಲ್ಲಿದ್ದು ತನ್ನ ಮನೆಗೆ ಹಿಂತಿರುಗಿ
ಹೋದಳು.

ಸ್ನಾನಿಕನಾದ ಯೋಹಾನನ ಜನನವೂ ನಾಮಕರಣವೂ.
ಅವನ ತಂದೆಯು ದೇವರನ್ನು ಕೊಂಡಾಡಿದ್ದು.

ಎಲಿಸಬೇತಳು ದಿನತುಂಬಿ ಗಂಡುಮಗುವನ್ನು 57
ಹೆತ್ತಳು. ಆಕೆಯ ನೆರೆಹೊರೆಯವರೂ ಬಂಧುಬಾಂಧ 58

1) ಅಥವಾ, ಯಾವ ಕಾರ್ಯವೂ ದೇವರಿಗೆ ಅಸಾಧ್ಯವಲ್ಲ.

ವರೂ ಆಕೆಯ ಮೇಲೆ ಕರ್ತನು ತನ್ನ ದಯವನ್ನು
ವಿಶೇಷವಾಗಿ ತೋರಿಸಿದ್ದಾನೆಂಬದನ್ನು ಕೇಳಿ ಆಕೆಯ
59 ಕೂಡ ಸಂತೋಷಪಟ್ಟರು. ಎಂಟನೆಯ ದಿನದಲ್ಲಿ
ಅವರು ಆ ಮಗುವಿಗೆ ಸುನ್ನತಿಮಾಡುವದಕ್ಕಾಗಿ
ಬಂದು ಅದಕ್ಕೆ ಜಕರೀಯನೆಂದು ತಂದೆಯ ಹೆಸರನ್ನು
60 ಇಡಬೇಕೆಂದಿದ್ದರು. ಈ ವಿಷಯದಲ್ಲಿ ಅದರ ತಾಯಿ
ಯು—ಅದು ಬೇಡ, ಯೋಹಾನನೆಂದು ಹೆಸರಿಡಬೇಕು
61 ಅನ್ನಲು ಅವರು—ನಿನ್ನ ಬಂಧುಬಾಂಧವರಲ್ಲಿ ಈ
ಹೆಸರಿನವರು ಒಬ್ಬರಾದರೂ ಇಲ್ಲವಲ್ಲಾ ಎಂದು
62 ಆಕೆಗೆ ಹೇಳಿ ಇದಕ್ಕೆ ಏನು ಹೆಸರಿಡಬೇಕೆಂದಿರುತ್ತೀ
63 ಎಂಬದಾಗಿ ತಂದೆಗೆ ಸನ್ನೆಮಾಡಿದರು. ಅವನು ಒಂದು
ಹಲಿಗೆಯನ್ನು ತರಿಸಿಕೊಂಡು—ಯೋಹಾನನೆಂತಲೇ
ಅದರ ಹೆಸರು ಎಂದು ಬರೆದನು. ಅದಕ್ಕೆ ಎಲ್ಲರೂ
64 ಆಶ್ಚರ್ಯಪಟ್ಟರು. ಕೂಡಲೆ ಅವನಿಗೆ ಬಾಯಿ
ಬಂತು, ನಾಲಿಗೆ ಸಡಲವಾಯಿತು, ಅವನು ಮಾತಾ
ಡುವ ಶಕ್ತಿಯುಳ್ಳವನಾಗಿ ದೇವರನ್ನು ಕೊಂಡಾಡಿದನು.
65 ಇದನ್ನು ಕೇಳಿದ ನೆರೆಹೊರೆಯವರಿಗೆಲ್ಲಾ ಹೆದರಿಕೆ
ಯುಂಟಾಯಿತು; ಮತ್ತು ಈ ಎಲ್ಲಾ ಸಂಗತಿಗಳನ್ನು
ಕುರಿತು ಯೂದಾಯದ ಮಲೆನಾಡಿನಲ್ಲೆಲ್ಲಾ ಮಾತಾ
66 ಡಿಕೊಳ್ಳುತ್ತಿದ್ದರು. ಕೇಳಿದವರೆಲ್ಲರೂ—ಅಹಾ, ಈ
ಕೂಸು ಎಂಥವನಾಗುವನೋ ಎಂದು ಈ ಸಂಗತಿಗಳ
ನ್ನು ಮನಸ್ಸಿನಲ್ಲಿಟ್ಟುಕೊಂಡರು. ಮತ್ತು ಕರ್ತನ
ಹಸ್ತವು ಅದರ ಮೇಲೆ ಇತ್ತು.

67 ಇದಲ್ಲದೆ ಆ ಮಗುವಿನ ತಂದೆಯಾದ ಜಕರೀ
ಯನು ಪವಿತ್ರಾತ್ಮಭರಿತನಾಗಿ ಪ್ರವಾದನವಚನವನ್ನು
ನುಡಿದದ್ದೇನಂದರೆ—

68-70 ಇಸ್ರಾಯೇಲ್ ಜನರ ದೇವರಾಗಿರುವ ಕರ್ತ
ನಿಗೆ ಸ್ತೋತ್ರವು;
ಅತನು ಪೂರ್ವದಲ್ಲಿದ್ದ ತನ್ನ ಶ್ರೀಪ್ರವಾದಿಗಳ
ಬಾಯಿಂದ ತಾನು ಹೇಳಿದಂತೆಯೇ
ತನ್ನ ಪ್ರಜೆಯನ್ನು ಪರಾಮರಿಸಿ ಅವರಿಗೆ ಬಿಡು
ಗಡೆಯನ್ನುಂಟುಮಾಡಿದ್ದಾನೆ;
ತನ್ನ ಸೇವಕನಾದ ದಾವೀದನ ಮನೆತನದಲ್ಲಿ
ನಮಗೋಸ್ಕರ 1)ಒಬ್ಬ ರಕ್ಷಣವೀರನನ್ನು
ಎಬ್ಬಿಸಿದ್ದಾನೆ.
71-73 ಆತನು ನಮ್ಮ ಪಿತೃಗಳಿಗೆ ದಯೆಯನ್ನು
ತೋರಿಸುವವನಾಗಿಯೂ
ನಮ್ಮ ಮೂಲಪಿತೃವಾದ ಅಬ್ರಹಾಮನಿಗೆ
ಪ್ರಮಾಣಮಾಡಿ ಕೊಟ್ಟ ತನ್ನ ಪರಿಶುದ್ಧ
ವಾದ ಒಡಂಬಡಿಕೆಯನ್ನು ನೆನಸಿಕೊಳ್ಳು
ವವನಾಗಿಯೂ ಇದ್ದು
ನಮ್ಮ ವೈರಿಗಳಿಂದಲೂ ನಮ್ಮನ್ನು ದ್ವೇಷಿಸು
ವವರೆಲ್ಲರ ಕೈಯಿಂದಲೂ ನಮ್ಮನ್ನು
ತಪ್ಪಿಸಿ ರಕ್ಷಿಸಿದ್ದಾನೆ.
74-75 ಹೀಗೆ ನಾವು ನಮ್ಮ ವೈರಿಗಳ ಕೈಯಿಂದ ಬಿಡು
ಗಡೆಹೊಂದಿ ಭಯವಿಲ್ಲದವರಾಗಿದ್ದು
ನಮ್ಮ ಜೀವಮಾನದಲ್ಲೆಲ್ಲಾ ನಿರ್ಮಲಚಿತ್ತ
ದಿಂದಲೂ ನೀತಿಯಿಂದಲೂ
ತನ್ನ ಸನ್ನಿಧಿಯಲ್ಲಿ ಸೇವೆಮಾಡುವಂತೆ ನಮಗೆ
ಅನುಕೂಲಮಾಡಿದ್ದಾನೆ.

ಮಗುವೇ, ನೀನಾದರೋ ಪರಾತ್ಪರನ ಪ್ರವಾದಿ
ಯೆನಿಸಿಕೊಳ್ಳುವಿ.
ನೀನು ಕರ್ತನ ಮುಂದೆ ಹೋಗಿ ಆತನ ಹಾದಿ
ಗಳನ್ನು ಸಿದ್ಧಮಾಡುವವನಾಗಿಯೂ
ನಮ್ಮ ದೇವರು ಅತ್ಯಂತಕರುಣೆಯಿಂದ ದಯ 77
ಪಾಲಿಸುವ ಪಾಪಪರಿಹಾರವೆಂಬ ರಕ್ಷಣೆಯ
ತಿಳುವಳಿಕೆಯನ್ನು ಆತನ ಪ್ರಜೆಗೆ ಕೊಡು
ವವನಾಗಿಯೂ ಇರುವಿ.
ಆ ಕರುಣೆಯಿಂದಲೇ ನಮಗೆ ಮೇಲಿನಿಂದ
ಅರುಣೋದಯವು ಉಂಟಾಗಿ
ಕತ್ತಲಲ್ಲಿಯೂ ಮರಣಾಂಧಕಾರದಲ್ಲಿಯೂ
ವಾಸಿಸಿರುವವರಾದ ನಮಗೆ ಪ್ರಕಾಶ
ಕೊಟ್ಟು
ನಮ್ಮ ಕಾಲುಗಳನ್ನು 2)ಸಮಾಧಾನದ ಮಾರ್ಗ
ದಲ್ಲಿ ಸೇರಿಸಿ ನಡಿಸುವದು
ಅಂದನು. ಆ ಬಾಲಕನು ಬೆಳೆದು ಆತ್ಮದಲ್ಲಿ ಬಲ
ವುಳ್ಳವನಾದನು. ಮತ್ತು ಇಸ್ರಾಯೇಲ್ ಜನರಿಗೆ
ತನ್ನನ್ನು ತೋರ್ಪಡಿಸಿಕೊಳ್ಳುವ ದಿನದ ವರೆಗೆ ಅರಣ್ಯ
ಪ್ರದೇಶಗಳಲ್ಲಿ ಇದ್ದನು.

ಯೇಸು ಕ್ರಿಸ್ತನ ಜನನವು; ದೇವದೂತರು ಅದನ್ನು ಕುರುಬರಿಗೆ ತಿಳಿಸಿದ್ದು.

ಆ ಕಾಲದಲ್ಲಿ ರಾಜ್ಯವೆಲ್ಲಾ ಖಾನೆಸುಮಾರಿ ಬರಸಿ
ಕೊಳ್ಳಬೇಕೆಂಬ ಆಜ್ಞೆಯು ಚಕ್ರವರ್ತಿಯಾದ ಔಗುಸ್ತ
ನಿಂದ ಹೊರಟಿತು. ಕುರೇನ್ಯನು ಸುರಿಯಕ್ಕೆ ಅಧಿಪತಿ
ಯಾಗಿದ್ದಾಗ ಈ ಮೊದಲನೆಯ ಖಾನೆಸುಮಾರಿ ನಡೆ
ಯಿತು. ಆಗ ಎಲ್ಲರೂ ಖಾನೆಸುಮಾರಿ ಬರಸಿ
ಕೊಳ್ಳುವದಕ್ಕಾಗಿ ತಮ್ಮತಮ್ಮ ಊರುಗಳಿಗೆ ಹೊರ
ಟರು. ಯೋಸೇಫನು ಸಹ ತಾನು ದಾವೀದನ 4
ಮನೆತನದವನೂ ಗೋತ್ರದವನೂ ಆಗಿದ್ದದರಿಂದ
ಹೆಸರುಬರಸಿಕೊಳ್ಳುವದಕ್ಕಾಗಿ ತನಗೆ ನಿಶ್ಚಿತಾರ್ಥ
ವಾಗಿದ್ದ ಮರಿಯಳ ಸಂಗಡ ಗಲಿಲಾಯಸೀಮೆಯ
ನಜರೇತ್ ಎಂಬ ಊರಿನಿಂದ ಹೊರಟು ಯೂದಾಯ
ದಲ್ಲಿರುವ ಬೇತ್ಲೆಹೇಮೆಂಬ ದಾವೀದನೂರಿಗೆ ಹೋದ
ನು. ಆಗ ಮರಿಯಳು ಪೂರ್ಣಗರ್ಭಿಣಿಯಾಗಿದ್ದಳು.
ಅವರು ಅಲ್ಲಿದ್ದಾಗ ಆಕೆಗೆ ದಿನತುಂಬಿತು. ಆಕೆಯು
ತನ್ನ ಚೊಚ್ಚಲುಮಗನನ್ನು ಹೆತ್ತು ಬಟ್ಟೆಯಲ್ಲಿ ಸುತ್ತಿ
ಛತ್ರದಲ್ಲಿ ಅವರಿಗೆ ಸ್ಥಳವಿಲ್ಲದ ಕಾರಣ ಅವನನ್ನು
ಗೋದಲಿಯಲ್ಲಿ ಮಲಗಿಸಿದಳು.

ಆ ಸೀಮೆಯಲ್ಲಿ ಕುರುಬರು ಹೊಲದಲ್ಲಿದ್ದು
ಕೊಂಡು ರಾತ್ರಿಯಲ್ಲಿ ತಮ್ಮ ಕುರೀಹಿಂಡನ್ನು ಕಾಯು
ತ್ತಿರಲಾಗಿ ಕರ್ತನ ದೂತನೊಬ್ಬನು ಬಂದು ಅವರ
ಎದುರಿನಲ್ಲಿ ನಿಂತನು. ಕರ್ತನ ಪ್ರಭೆಯು ಅವರ
ಸುತ್ತಲು ಪ್ರಕಾಶಿಸಿತು; ಅವರು ಬಹಳವಾಗಿ ಹೆದರಿ

1) ಮೂಲ: ರಕ್ಷಣೆಯ ಕೊಂಬನ್ನು. 2) ಅಥವಾ: ಸುಕ್ಷೇಮದ.

10 ದರು. ಆ ದೂತನು ಅವರಿಗೆ—ಹೆದರಬೇಡಿರಿ, ಕೇಳಿರಿ;
ಜನರಿಗೆಲ್ಲಾ ಮಹಾ ಸಂತೋಷವನ್ನುಂಟುಮಾಡುವ
11 ಶುಭಸಮಾಚಾರವನ್ನು ನಿಮಗೆ ತಿಳಿಸುತ್ತೇನೆ. ಅದೇ
ನಂದರೆ, ಈ ಹೊತ್ತು ನಿಮಗೋಸ್ಕರ ದಾವೀದನೂರ
ಲ್ಲಿ ಒಬ್ಬ ರಕ್ಷಕನು ಹುಟ್ಟಿದ್ದಾನೆ. ಆತನು ಕರ್ತನಾಗಿ
12 ರುವ ಕ್ರಿಸ್ತನೇ. ಆತನು ನಿಮಗೆ ಗೊತ್ತಾಗುವದಕ್ಕೆ
ಗುರುತೇನಂದರೆ—ಬಟ್ಟೆಯಿಂದ ಸುತ್ತಿರುವ ಒಂದು
ಕೂಸು ಗೋದಲಿಯಲ್ಲಿ ಮಲಗಿರುವದನ್ನು ಕಾಣು
13 ವಿರಿ ಎಂದು ಹೇಳಿದನು. ಫಕ್ಕನೆ ಆ ದೂತನ ಸಂಗಡ
ಪರಲೋಕಸೈನ್ಯದವರ ಒಂದು ದೊಡ್ಡ ಗುಂಪು ಕಾಣಿಸಿ
ಕೊಂಡು—

14 ಮೇಲಣಲೋಕಗಳಲ್ಲಿ ದೇವರಿಗೆ ಮಹಿಮೆ,
ಭೂಲೋಕದಲ್ಲಿ ಮನುಷ್ಯರೊಳಗೆ [1]ಸಮಾ
ಧಾನ
ದೇವರು ಅವರಿಗೆ ಒಲಿಯುತ್ತಾನೆ[2]

ಎಂದು ದೇವರನ್ನು ಕೊಂಡಾಡುತ್ತಾ ಹೇಳಿದರು.
15 ದೇವದೂತರು ಅವರ ಬಳಿಯಿಂದ ಪರಲೋಕಕ್ಕೆ
ಹೊರಟುಹೋದ ಮೇಲೆ ಆ ಕುರುಬರು—ನಾವು
ಈಗಲೇ ಬೇತ್ಲೆಹೇಮಿಗೆ ಹೋಗಿ ಕರ್ತನು ನಮಗೆ
ತಿಳಿಯಪಡಿಸಿದ ಈ ಸಂಗತಿಯನ್ನು ನೋಡೋಣ ನಡೆ
ಯಿರಿ ಎಂದು ತಮ್ಮತಮ್ಮೊಳಗೆ ಮಾತಾಡಿಕೊಂಡು
16 ತಟ್ಟನೆ ಹೋಗಿ ಮರಿಯಳನ್ನೂ ಯೋಸೇಫನನ್ನೂ
ಗೋದಲಿಯಲ್ಲಿ ಮಲಗಿರುವ ಆ ಕೂಸನ್ನೂ ಕಂಡು
17 ಕೊಂಡರು. ಅದನ್ನು ನೋಡಿದಾಗ ಅವರು ಆ ಮಗು
ವಿನ ವಿಷಯದಲ್ಲಿ ತಮಗೆ ಹೇಳಿದ್ದ ಮಾತನ್ನು ತಿಳಿಯ
18 ಪಡಿಸಿದರು. ಅದನ್ನು ಕೇಳಿದವರೆಲ್ಲರೂ ತಮಗೆ
ಕುರುಬರು ಹೇಳಿದ ಮಾತುಗಳಿಗೆ ಆಶ್ಚರ್ಯಪಟ್ಟರು.
19 ಆದರೆ ಮರಿಯಳು ಆ ಮಾತುಗಳನ್ನೆಲ್ಲಾ ತನ್ನ ಮನ
20 ಸ್ಸಿನಲ್ಲಿಟ್ಟುಕೊಂಡು ಯೋಚಿಸುತ್ತಿದ್ದಳು. ಕುರುಬರು
ತಮಗೆ ದೂತರಿಂದ ಹೇಳಲ್ಪಟ್ಟಂತೆಯೇ ಎಲ್ಲಾ ಸಂಗತಿ
ಗಳನ್ನು ಕೇಳಿ ನೋಡಿ ಅವುಗಳಿಗೋಸ್ಕರ ದೇವರನ್ನು
ಕೊಂಡಾಡುತ್ತಾ ಸ್ತುತಿಸುತ್ತಾ ಹಿಂತಿರುಗಿ ಹೋದರು.

### ಯೇಸುವಿನ ನಾಮಕರಣವು; ಆತನನ್ನು ದೇವಾಲಯದಲ್ಲಿ ದೇವರಿಗೆ ಸಮರ್ಪಿಸಿದ್ದು.

21 ಆ ಕೂಸಿಗೆ ಸುನ್ನತಿಮಾಡುವದಕ್ಕೆ ಕಳೆಯ
ಬೇಕಾದ ಎಂಟು ದಿವಸಗಳು ತುಂಬಿದ ಮೇಲೆ ಅದಕ್ಕೆ
ಯೇಸುವೆಂದು ಹೆಸರಿಟ್ಟರು. ಅದು ಗರ್ಭದಲ್ಲಿ
ಮೂಡುವದಕ್ಕಿಂತ ಮೊದಲು ದೇವದೂತನು ಅದೇ
ಹೆಸರನ್ನು ಸೂಚಿಸಿದ್ದನು.
22 ಬಳಿಕ ಮೋಶೆಯ ನೇಮದ ಪ್ರಕಾರ ಅವರ
ಸೂತಕ ಕಳೆಯುವದಕ್ಕೆ ತಕ್ಕಷ್ಟು ದಿವಸಗಳು ತುಂಬ
ಲು ಅವರು ಆ ಕೂಸನ್ನು ಯೆರೂಸಲೇಮಿಗೆ ತೆಗೆದು
23 ಕೊಂಡು ಹೋದರು. ಯಾಕಂದರೆ ಚೊಚ್ಚಲು
ಗಂಡೆಲ್ಲಾ ಕರ್ತನಿಗೆ ಮೀಸಲೆನಿಸಿಕೊಳ್ಳುವದು ಎಂಬ
ದಾಗಿ ಕರ್ತನ ಧರ್ಮಶಾಸ್ತ್ರದಲ್ಲಿ ಬರೆದಿರುವಂತೆ
ಅದನ್ನು ಕರ್ತನಿಗೆ ಸಮರ್ಪಿಸಬೇಕಾಗಿತ್ತು. ಇದಲ್ಲದೆ 24
ಕರ್ತನ ಧರ್ಮಶಾಸ್ತ್ರದಲ್ಲಿ ಹೇಳಿರುವಂತೆ ಒಂದು
ಜೋಡಿ ಬೆಳವವನ್ನಾಗಲಿ ಎರಡು ಪಾರಿವಾಳದ ಮರಿ
ಗಳನ್ನಾಗಲಿ ಬಲಿಕೊಡಬೇಕಾಗಿತ್ತು. ಆ ಕಾಲದಲ್ಲಿ 25
ಯೆರೂಸಲೇಮಿನಲ್ಲಿ ಸಿಮೆಯೋನನೆಂಬ ಒಬ್ಬ ಮನು
ಷ್ಯನಿದ್ದನು. ಈ ಮನುಷ್ಯನು ನೀತಿವಂತನೂ ದೇವ
ಭಕ್ತನೂ ಆಗಿದ್ದು [3]ಇಸ್ರಾಯೇಲ್ ಜನರನ್ನು ಸಂತೈ
ಸುವವನು ಯಾವಾಗ ಬಂದಾನೆಂದು ಹಾರೈಸುತ್ತಿ
ದ್ದನು; ಮತ್ತು ಪವಿತ್ರಾತ್ಮಪ್ರೇರಿತನಾಗಿದ್ದನು.
ಇದಲ್ಲದೆ, ಕರ್ತನು ಕಳುಹಿಸಬೇಕಾದ ಕ್ರಿಸ್ತನನ್ನು 26
ಕಾಣುವದಕ್ಕಿಂತ ಮುಂಚೆ ನೀನು ಸಾಯುವದಿಲ್ಲ
ವೆಂದು ಪವಿತ್ರಾತ್ಮನ ಮೂಲಕ ಅವನಿಗೆ ದೈವೋಕ್ತಿ
ಉಂಟಾಗಿತ್ತು. ಇವನು ಪವಿತ್ರಾತ್ಮನ ಪ್ರೇರಣೆಯಿಂದ 27
ದೇವಾಲಯಕ್ಕೆ ಬಂದನು; ಆಗ ತಂದೆತಾಯಿಗಳು
ಯೇಸುವೆಂಬ ಮಗುವಿಗೆ ಧರ್ಮಶಾಸ್ತ್ರದಲ್ಲಿ ಹೇಳಿರುವ
ಪದ್ಧತಿಯ ಪ್ರಕಾರ ನಡಿಸಬೇಕೆಂದು ಅದನ್ನು ಒಳಕ್ಕೆ
ತರಲು ಅವನು ಅದನ್ನು ತನ್ನ ಕೈಯಲ್ಲಿ ತಕ್ಕೊಂಡು 28
ದೇವರನ್ನು ಕೊಂಡಾಡಿ—

ಒಡೆಯನೇ, ನಿನ್ನ ಮಾತು ನೆರವೇರಿತು; 29
ಈಗ ಸಮಾಧಾನದಿಂದ ಹೋಗುವದಕ್ಕೆ ನಿನ್ನ
ದಾಸನಿಗೆ ಅಪ್ಪಣೆಯಾಯಿತು.
ನೀನು ನೇಮಿಸಿರುವ ರಕ್ಷಕನನ್ನು ನಾನು 30
ಕಣ್ಣಾರೆ ಕಂಡೆನು.
ಎಲ್ಲಾ ಜನಗಳಿಗೆ ಪ್ರತ್ಯಕ್ಷನಾಗಲಿ ಎಂದು ಆತ 31
ನನ್ನು ಒದಗಿಸಿಕೊಟ್ಟಿದ್ದೀ.
ಆತನು ಅನ್ಯದೇಶದವರಿಗೆ ಜ್ಞಾನೋದಯದ 32
ಬೆಳಕು,
ನಿನ್ನ ಪ್ರಜೆಯಾದ ಇಸ್ರಾಯೇಲ್ಯರಿಗೆ ಕೀರ್ತಿ,

ಅಂದನು. ಆ ಮಗುವಿನ ವಿಷಯವಾಗಿ ಹೇಳಿದ ಈ 33
ಮಾತುಗಳಿಗೆ ಅದರ ತಂದೆತಾಯಿಗಳು ಆಶ್ಚರ್ಯಪಡು
ತ್ತಿರಲು ಸಿಮೆಯೋನನು ಅವರನ್ನು ಆಶೀರ್ವದಿಸಿ 34
ತಾಯಿಯಾದ ಮರಿಯಳಿಗೆ—ಇಗೋ, ಈತನು ಇಸ್ರಾ
ಯೇಲ್ ಜನರಲ್ಲಿ ಅನೇಕರು ಬೀಳುವದಕ್ಕೂ ಅನೇ
ಕರು ಏಳುವದಕ್ಕೂ ಕಾರಣನಾಗಿರುವನು; ಮತ್ತು
ಜನರು ಎದುರುಮಾತಾಡುವದಕ್ಕೆ ಗುರುತಾಗಿರುವನು;
ಹೀಗೆ ಬಹುಜನರ ಅಂತರಂಗದ ವಿಚಾರಗಳು ಬೈಲಿಗೆ 35
ಬಂದಾವು; ಇದಕ್ಕೆ ಈತನು ಹುಟ್ಟಿದ್ದು. ಇದಲ್ಲದೆ
ನಿನ್ನ ಪ್ರಾಣಕ್ಕಂತೂ ಅಲಗು ನಾಟಿದಂತಾಗುವದು
ಎಂದು ಹೇಳಿದನು.
ಇದಲ್ಲದೆ ಅಸೇರನ ಕುಲದ ಫನುವೇಲನ ಮಗ 36
ಳಾದ ಅನ್ನಳೆಂಬ ಒಬ್ಬ ಪ್ರವಾದಿನಿ ಇದ್ದಳು. ಆಕೆ
ಬಹಳ ಮುಪ್ಪಿನವಳು; ಆಕೆ ತನ್ನ ಕನ್ಯಾವಸ್ಥೆ ಕಳೆದ
ತರುವಾಯ ಗಂಡನ ಕೂಡ ಏಳು ವರುಷ ಬಾಳುವೆ
ಮಾಡಿ ಎಂಭತ್ತುನಾಲ್ಕು ವರುಷ ವಿಧವೆಯಾಗಿದ್ದಳು. 37
ಆಕೆ ದೇವಾಲಯವನ್ನು ಬಿಟ್ಟುಹೋಗದೆ ಉಪವಾಸ
ವಿಜ್ಞಾಪನೆಗಳಿಂದ ರಾತ್ರಿ ಹಗಲೂ ದೇವರ ಸೇವೆಯನ್ನು
ಮಾಡುತ್ತಿದ್ದಳು. ಆಕೆ ಅದೇ ಗಳಿಗೆಯಲ್ಲಿ ಹತ್ತರ 38

1) ಅಥವಾ: ಸುಕ್ಷೇಮ. 2) ಕೆಲವು ಪ್ರತಿಗಳಲ್ಲಿ—ಭೂಲೋಕದಲ್ಲಿ ಸಮಾಧಾನ, ಮನುಷ್ಯರ ಮೇಲೆ ದೇವರ ದಯೆ ಎಂದು ಬರೆದದೆ. 3) ಮೂಲ: ಇಸ್ರಾಯೇಲ್ ಜನರ ದುಃಖಶಾಂತಿಯನ್ನು ಹಾರೈಸುತ್ತಿದ್ದನು.

ಕ್ಕೆ ಬಂದು ದೇವರಿಂದಾದ ಉಪಕಾರವನ್ನು ನೆನಸಿ
ಕೊಂಡಾಡಿದ್ದಲ್ಲದೆ ಯೆರೂಸಲೇಮಿನ ಬಿಡುಗಡೆ
ಯನ್ನು ಹಾರೈಸುತ್ತಿದ್ದವರೆಲ್ಲರ ಸಂಗಡ ಆತನ ವಿಷಯ
39 ವಾಗಿ ಮಾತಾಡುವವಳಾದಳು. ಇತ್ತಲಾಗಿ ಅವರು
ಕರ್ತನ ಧರ್ಮಶಾಸ್ತ್ರದಲ್ಲಿ ಹೇಳಿರುವ ಕಾರ್ಯಗಳ
ನ್ನೆಲ್ಲಾ ನೆರವೇರಿಸಿದ ಮೇಲೆ ಗಲಿಲಾಯಕ್ಕೆ ಸೇರಿದ
ನಜರೇತೆಂಬ ತಮ್ಮ ಊರಿಗೆ ಹಿಂತಿರುಗಿ ಹೋದರು.
40 ಆ ಬಾಲಕನು ಬೆಳೆದು ಬಲಗೊಂಡು ಜ್ಞಾನದಿಂದ
ತುಂಬಿದವನಾದನು; ಮತ್ತು ಆತನ ಮೇಲೆ ದೇವರ
ದಯವಿತ್ತು.

ಯೇಸು ಹನ್ನೆರಡು ವರುಷದವನಾದಾಗ ಯೆರೂಸಲೇಮಿಗೆ ಹೋಗಿ ದೇವಾಲಯದಲ್ಲಿ ವಿದ್ವಾಂಸರ ಸಂಗಡ ಸಂಭಾಷಣೆ ಮಾಡಿದ್ದು.

41 ಆತನ ತಂದೆತಾಯಿಗಳು ಪ್ರತಿವರುಷವೂ ಪಸ್ಕ
ಹಬ್ಬದ ಜಾತ್ರೆಗೆ ಯೆರೂಸಲೇಮಿಗೆ ಹೋಗುತ್ತಿದ್ದರು.
42 ಹೀಗಿರಲಾಗಿ ಆತನು ಹನ್ನೆರಡು ವರುಷದವನಾದಾಗ
ಅವರು ಹಬ್ಬದ ಪದ್ಧತಿಯ ಪ್ರಕಾರ ಅಲ್ಲಿಗೆ ಹೋದರು.
43 ಹಬ್ಬದ ದಿವಸಗಳನ್ನು ತೀರಿಸಿಕೊಂಡು ಹಿಂತಿರುಗಿ
ಬರುವಾಗ ಬಾಲಕನಾದ ಯೇಸು ಯೆರೂಸಲೇಮಿ
ನಲ್ಲಿಯೇ ಉಳುಕೊಂಡನು. ಆತನ ತಂದೆತಾಯಿಗಳು
44 ಅದನ್ನು ತಿಳಿಯದೆ ಆತನು ಯಾತ್ರೆಯವರ ಗುಂಪಿ
ನಲ್ಲಿ ಸೇರಿರುವನು ಎಂದು ಭಾವಿಸಿ ಒಂದು ದಿನದ
ಪ್ರಯಾಣ ನಡೆದು ಬಂಧುಬಾಂಧವರಲ್ಲಿಯೂ ಪರಿ
45 ಚಿತಿಯವರಲ್ಲಿಯೂ ಆತನನ್ನು ಹುಡುಕಿ ಕಾಣದೆ
ತಿರಿಗಿ ಯೆರೂಸಲೇಮಿಗೆ ಹುಡುಕಿಕೊಂಡು ಹೋದರು.
46 ಮೂರು ದಿನದ ಮೇಲೆ ಆತನನ್ನು ದೇವಾಲಯದಲ್ಲಿ
ಕಂಡರು. ಆತನು ಬೋಧಕರ ನಡುವೆ ಕುಳಿತು
ಕೊಂಡು ಅವರ ಉಪದೇಶವನ್ನು ಕೇಳುತ್ತಾ ಪ್ರಶ್ನೆ
47 ಮಾಡುತ್ತಾ ಇದ್ದನು. ಆತನು ಆಡಿದ ಮಾತುಗಳನ್ನು
ಕೇಳಿದವರೆಲ್ಲರು ಆತನ ಬುದ್ಧಿಗೂ ಉತ್ತರಗಳಿಗೂ
48 ಆಶ್ಚರ್ಯಪಟ್ಟರು. ತಂದೆತಾಯಿಗಳು ಆತನನ್ನು
ಕಂಡು ಬೆರಗಾದರು; ಮತ್ತು ಆತನ ತಾಯಿಯು—
ಕಂದಾ, ನೀನು ನಮಗೆ ಯಾಕೆ ಹೀಗೆ ಮಾಡಿದಿ?
ನಿನ್ನ ತಂದೆಯೂ ನಾನೂ ಎಷ್ಟೋ ತಳಮಳಗೊಂಡು
ನಿನ್ನನ್ನು ಹುಡುಕಿ ಬಂದೆವಲ್ಲಾ ಎಂದು ಹೇಳಲು
49 ಆತನು ಅವರಿಗೆ—ನೀವು ನನ್ನನ್ನು ಹುಡುಕಿದ್ದೇನು?
ನಾನು ನನ್ನ ತಂದೆಯ ಮನೆಯಲ್ಲಿ ಇರಬೇಕಾದದ್ದು
ನಿಮಗೆ ತಿಳಿಯಲಿಲ್ಲವೇ? ಎಂದು ಉತ್ತರಕೊಟ್ಟನು.
50 ಆದರೆ ಆತನು ಹೇಳಿದ ಮಾತಿನ ಅರ್ಥವನ್ನು ಅವರು
51 ಗ್ರಹಿಸಲಿಲ್ಲ. ಬಳಿಕ ಆತನು ಅವರ ಜೊತೆಯಲ್ಲಿ
ನಜರೇತಿಗೆ ಬಂದು ಅವರಿಗೆ ಅಧೀನನಾಗಿದ್ದನು.
ಆತನ ತಾಯಿಯು ಈ ಸಂಗತಿಗಳನ್ನೆಲ್ಲಾ ತನ್ನ
ಮನಸ್ಸಿನಲ್ಲಿ ಇಟ್ಟುಕೊಂಡಳು.
52 ಯೇಸು ಜ್ಞಾನದಲ್ಲಿಯೂ ದೇಹಬಲದಲ್ಲಿಯೂ
ವೃದ್ಧಿಯಾಗುತ್ತಾ ಬಂದನು; ಇದಲ್ಲದೆ ದೇವರ
ಮತ್ತು ಮನುಷ್ಯರ ದಯೆಯು ಆತನ ಮೇಲೆ ಹೆಚ್ಚಾ
ಗುತ್ತಾ ಬಂತು.

ಸ್ನಾನಿಕನಾದ ಯೋಹಾನನು ಉಪದೇಶ ಮಾಡಿದ್ದು.
(ಮತ್ತಾ. 3. 1—12; ಮಾರ್ಕ 1. 2—8.)

ಚಕ್ರವರ್ತಿಯಾದ ತಿಬೇರಿಯನು ಪಟ್ಟಕ್ಕೆ ಬಂದ ಹದಿ
ನೈದನೆಯ ವರುಷದಲ್ಲಿ, ಪೊಂತ್ಯಪಿಲಾತನು ಯೂದಾ
ಯಕ್ಕೆ ಅಧಿಪತಿಯೂ ಹೆರೋದನು ಗಲಿಲಾಯಕ್ಕೆ
ಉಪರಾಜನೂ ಅವನ ತಮ್ಮನಾದ ಫಿಲಿಪ್ಪನು ಇತು
ರಾಯ ತ್ರಕೋನೀತಿ ಸೀಮೆಗಳಿಗೆ ಉಪರಾಜನೂ
ಲುಸನ್ಯನು ಅಬಿಲೇನೆಗೆ ಉಪರಾಜನೂ ಆಗಿರುವಲ್ಲಿ
ಅನ್ನನೂ ಕಾಯಫನೂ ಮಹಾಯಾಜಕರಾಗಿದ್ದ ಕಾಲ
ದಲ್ಲಿ ಜಕರೀಯನ ಮಗನಾದ ಯೋಹಾನನಿಗೆ ಅಡವಿ
ಯಲ್ಲಿ ದೇವರ ವಾಕ್ಯವುಂಟಾಯಿತು. ಅವನು
ಯೊರ್ದನ್ ಹೊಳೆಯ ಸುತ್ತಲಿರುವ ಪ್ರಾಂತ್ಯದಲ್ಲೆಲ್ಲಾ
ಸಂಚರಿಸಿ ಜನರಿಗೆ—ನೀವು ಪಾಪಪರಿಹಾರಕ್ಕಾಗಿ ದೇವರ
ಕಡೆಗೆ ತಿರುಗಿಕೊಂಡು ದೀಕ್ಷಾಸ್ನಾನ ಮಾಡಿಸಿಕೊಳ್ಳ
ಬೇಕೆಂದು ಸಾರಿ ಹೇಳುವವನಾದನು. ಇದು ಯೆಶಾ
ಯನೆಂಬ ಪ್ರವಾದಿಯ ಗ್ರಂಥದಲ್ಲಿ ಬರೆದಿರುವ
ಮಾತಿಗೆ ಅನುಸಾರವಾಗಿ ನಡೆಯಿತು. ಆ ಮಾತು
ಏನಂದರೆ—

ಕರ್ತನ ದಾರಿಯನ್ನು ಸಿದ್ಧಮಾಡಿರಿ,
ಆತನ ಹಾದಿಗಳನ್ನು ನೆಟ್ಟಗೆ ಮಾಡಿರಿ.
ಎಲ್ಲಾ ಹಳ್ಳಕೊಳ್ಳಗಳು ಮುಚ್ಚಲ್ಪಡುವವು,
ಎಲ್ಲಾ ಬೆಟ್ಟಗುಡ್ಡಗಳು ತಗ್ಗಿಸಲ್ಪಡುವವು,
ಡೊಂಕಾಗಿರುವಂಥದು ನೀಟಾಗುವದು,
ಕೊರಕಲಾದ ದಾರಿಗಳು ಸಮವಾಗುವವು.
ಎಲ್ಲಾ ಮನುಷ್ಯರೂ ದೇವರಿಂದ ಸಿದ್ಧವಾಗುವ
ರಕ್ಷಣೆಯನ್ನು ಕಾಣುವರು ಎಂಬದಾಗಿ
ಅಡವಿಯಲ್ಲಿ ಕೂಗುವವನ ಶಬ್ದವದೆ ಎಂಬದೇ.

ಹೀಗಿರಲಾಗಿ ಅವನು ತನ್ನಿಂದ ದೀಕ್ಷಾಸ್ನಾನ ಮಾಡಿಸಿ
ಕೊಳ್ಳುವದಕ್ಕಾಗಿ ಹೊರಟುಬಂದ ಜನರ ಗುಂಪು
ಗಳಿಗೆ—ಎಲೈ ಸರ್ಪಜಾತಿಯವರೇ, ಮುಂದೆ ಕಾಣ
ಬರುವ ದೈವಕೋಪದಿಂದ ತಪ್ಪಿಸಿಕೊಳ್ಳುವದಕ್ಕೆ
ನಿಮಗೂ ಉಪದೇಶ ಮಾಡಿದವರಾರು? ಹಾಗಾದರೆ
ನಿಮ್ಮ ಮನಸ್ಸು ದೇವರ ಕಡೆಗೆ ತಿರುಗಿತೆಂಬದನ್ನು
ತಕ್ಕ ಫಲಗಳಿಂದ ತೋರಿಸಿರಿ. ಅಬ್ರಹಾಮನು
ನಮಗೆ ಮೂಲಪುರುಷನಲ್ಲವೇ ಎಂದು ನಿಮ್ಮೊಳಗೆ
ಅಂದುಕೊಳ್ಳುವವರಾಗಬೇಡಿರಿ. ದೇವರು ಅಬ್ರಹಾಮ
ನಿಗೆ ಈ ಕಲ್ಲುಗಳಿಂದಲೂ ಮಕ್ಕಳನ್ನು ಹುಟ್ಟಿಸಬಲ್ಲ
ನೆಂದು ನಿಮಗೆ ಹೇಳುತ್ತೇನೆ. ಈಗಲೇ ಮರಗಳ
ಬೇರಿಗೆ ಕೊಡಲಿ ಹಾಕಿಯದೆ; ಒಳ್ಳೇ ಫಲವನ್ನು
ಕೊಡದ ಪ್ರತಿಯೊಂದು ಮರವನ್ನು ಕಡಿದು ಬೆಂಕಿ
ಯಲ್ಲಿ ಹಾಕುವರು ಎಂದು ಹೇಳಿದನು. ಆಗ ಆ
ಗುಂಪಿನವರು—ಹಾಗಾದರೆ ನಾವೇನು ಮಾಡಬೇಕು
ಎಂದು ಅವನನ್ನು ಕೇಳಿದ್ದಕ್ಕೆ ಅವನು—ಎರಡು ಅಂಗಿ
ಗಳುಳ್ಳವನು ಇಲ್ಲದವನಿಗೆ ಒಂದು ಕೊಡಲಿ; ಆಹಾರ
ವುಳ್ಳವನು ಇಲ್ಲದವನಿಗೆ ಕೊಡಲಿ ಎಂದು ಅವರಿಗೆ
ಹೇಳಿದನು. ಸುಂಕದವರು ಸಹ ದೀಕ್ಷಾಸ್ನಾನ ಮಾಡಿಸಿ
ಕೊಳ್ಳಬೇಕೆಂದು ಬಂದು—ಗುರುವೇ, ನಾವೇನು
ಮಾಡಬೇಕು ಎಂದು ಅವನನ್ನು ಕೇಳಲು ಅವನು—

ನೇಮಿಸಿದ ಹಾಸಲಿಗಿಂತ ಹೆಚ್ಚಾಗಿ ಏನೂ ಎಳಕೊಳ್ಳ
14 ಬೇಡಿರಿ ಎಂದು ಅವರಿಗೆ ಹೇಳಿದನು. ಸಿಪಾಯಿಗಳು
ಸಹ ಬಂದು—ನಾವು ಏನು ಮಾಡಬೇಕು ಎಂದು ಅವ
ನನ್ನು ಕೇಳಿದಾಗ ಅವನು ಅವರಿಗೆ—ಯಾರನ್ನಾದರೂ
ಬೆದರಿಸಬೇಡಿರಿ; ಯಾರ ಮೇಲಾದರೂ ಸುಳ್ಳು ದೂರು
ತಂದು ದುಡ್ಡು ಕಸಕೊಳ್ಳಬೇಡಿರಿ; ನಿಮ್ಮ ಸಂಬಳದಲ್ಲಿ
ತೃಪ್ತರಾಗಿರಿ ಎಂದು ಹೇಳಿದನು.
15 ಹೀಗಿರುವಲ್ಲಿ ಇಸ್ರಾಯೇಲ್ ಜನರು ಬರಬೇಕಾದ
ಕ್ರಿಸ್ತನನ್ನು ಎದುರುನೋಡುವವರಾಗಿದ್ದದರಿಂದ ಅವ
ರೆಲ್ಲರು ಯೋಹಾನನ ವಿಷಯವಾಗಿ—ಇವನೇ ಆ
ಕ್ರಿಸ್ತನಾಗಿರಬಹುದೋ ಏನೋ ಎಂದು ತಮ್ಮ ಮನಸ್ಸಿ
16 ನಲ್ಲಿ ವಿಚಾರಮಾಡಿಕೊಳ್ಳುತ್ತಿರಲು ಯೋಹಾನನು
ಅವರೆಲ್ಲರಿಗೆ—ನಾನಂತೂ ನಿಮಗೆ ನೀರಿನ ಸ್ನಾನ
ಮಾಡಿಸುವವನು; ಆದರೆ ನನಗಿಂತ ಶಕ್ತನು ಬರು
ತ್ತಾನೆ. ಆತನ ಕೆರಗಳ ಬಾರನ್ನು ಬಿಚ್ಚುವದಕ್ಕೂ
ನಾನು ಯೋಗ್ಯನಲ್ಲ. ಆತನು ಪವಿತ್ರಾತ್ಮದಲ್ಲಿಯೂ
ಬೆಂಕಿಯಲ್ಲಿಯೂ ನಿಮಗೆ ಸ್ನಾನಮಾಡಿಸುವನು.
17 ಆತನು ಮೊರವನ್ನು ಕೈಯಲ್ಲಿ ಹಿಡಿದಿದ್ದಾನೆ; ತನ್ನ
ಕಣದಲ್ಲಿಯ ರಾಶಿಯನ್ನು ತೂರಿ ಹಸನುಮಾಡಿ ತನ್ನ
ಗೋದಿಯನ್ನು ಕಣಜದಲ್ಲಿ ತುಂಬಿಕೊಳ್ಳುವದಕ್ಕಿದ್ದಾನೆ;
ಹೊಟ್ಟನ್ನು ಆರದ ಬೆಂಕಿಯಲ್ಲಿ ಸುಟ್ಟುಬಿಡುವನು
ಎಂದು ಉತ್ತರಕೊಟ್ಟನು.
18 ಇನ್ನು ಬೇರೆ ಅನೇಕ ಮಾತುಗಳಿಂದ ಅವನು ಇಸ್ರಾ
ಯೇಲ್ ಜನರಿಗೆ ಬುದ್ಧಿಹೇಳಿ ಸುವಾರ್ತೆಯನ್ನು ಸಾರು
19 ತ್ತಿದ್ದನು. ಆದರೆ ಉಪರಾಜನಾದ ಹೆರೋದನು
ತನ್ನ ಅಣ್ಣನ ಹೆಂಡತಿಯಾದ ಹೆರೋದ್ಯಳ ನಿಮಿತ್ತ
ವಾಗಿಯೂ ತಾನು ಮಾಡಿದ್ದ ಎಲ್ಲಾ ದುಷ್ಕೃತ್ಯಗಳ
20 ನಿಮಿತ್ತವಾಗಿಯೂ ಯೋಹಾನನಿಂದ ಗದರಿಸಲ್ಪಟ್ಟವ
ನಾಗಿ ಅವನನ್ನು ಸೆರೆಮನೆಯಲ್ಲಿ ಹಾಕಿಸಿ ತನ್ನ
ದುಷ್ಕೃತ್ಯಗಳ ಲೆಕ್ಕವನ್ನು ಇನ್ನೂ ಹೆಚ್ಚಿಸಿದನು.

### ಯೇಸು ದೀಕ್ಷಾಸ್ನಾನ ಮಾಡಿಸಿಕೊಂಡದ್ದು.

(ಮತ್ತಾ. 3. 13—17; ಮಾರ್ಕ 1. 9—11;
ಯೋಹಾ. 1. 32—34.)

21 ಜನರೆಲ್ಲಾ ದೀಕ್ಷಾಸ್ನಾನ ಮಾಡಿಸಿಕೊಂಡಾಗ
ಯೇಸು ಸಹ ಸ್ನಾನ ಮಾಡಿಸಿಕೊಂಡು ಪ್ರಾರ್ಥನೆ
22 ಮಾಡುತ್ತಿರುವಲ್ಲಿ ಆಕಾಶವು ತೆರೆಯಿತು; ಮತ್ತು
ಪವಿತ್ರಾತ್ಮನು ದೇಹಾಕಾರವಾಗಿ ಪಾರಿವಾಳದ ಹಾಗೆ
ಆತನ ಮೇಲೆ ಇಳಿದನು. ಆಗ—ನೀನು ಪ್ರಿಯನಾಗಿ
ರುವ ನನ್ನ ಮಗನು, ನಿನ್ನನ್ನು ನಾನು ಮೆಚ್ಚಿದ್ದೇನೆ
ಎಂದು ಆಕಾಶವಾಣಿ ಆಯಿತು.

### ಯೇಸು ಕ್ರಿಸ್ತನ ವಂಶಾವಳಿ.

23 ಯೇಸು ಉಪದೇಶಮಾಡುವದಕ್ಕೆ ಪ್ರಾರಂಭಿಸಿದಾಗ
ಹೆಚ್ಚುಕಡಿಮೆ ಮೂವತ್ತು ವರುಷದವನಾಗಿದ್ದನು.
ಆತನು ಜನರ ಎಣಿಕೆಯಲ್ಲಿ ಯೋಸೇಫನ ಮಗನು.
24 ಯೋಸೇಫನು ಹೇಲೀಯ ಮಗನು; ಇವನು ಮತ್ತಾ
ತನ ಮಗನು; ಇವನು ಲೇವಿಯ ಮಗನು; ಇವನು
ಮೆಲ್ಖಿಯ ಮಗನು; ಇವನು ಯನ್ನಾಯನ ಮಗನು;
ಇವನು ಯೋಸೇಫನ ಮಗನು; ಇವನು ಮತ್ತಥೀ 25
ಯನ ಮಗನು; ಇವನು ಆಮೋಸನ ಮಗನು;
ಇವನು ನಹೂಮನ ಮಗನು; ಇವನು ಎಸ್ಲಿಯ
ಮಗನು; ಇವನು ನಗ್ಗಾಯನ ಮಗನು; ಇವನು 26
ಮಹಾಥನ ಮಗನು; ಇವನು ಮತ್ತಥೀಯನ ಮಗನು;
ಇವನು ಶಿಮಿಾಯ ಮಗನು; ಇವನು ಯೋಸೇಖನ
ಮಗನು; ಇವನು ಯೂದನ ಮಗನು; ಇವನು 27
ಯೋಹಾನನ ಮಗನು; ಇವನು ರೇಸನ ಮಗನು;
ಇವನು ಜೆರುಬಾಬೆಲನ ಮಗನು; ಇವನು ಸಲಥಿ
ಯೇಲನ ಮಗನು; ಇವನು ನೇರಿಯ ಮಗನು;
ಇವನು ಮೆಲ್ಖಿಯ ಮಗನು; ಇವನು ಅದ್ದಿಯ 28
ಮಗನು; ಇವನು ಕೋಸಾಮನ ಮಗನು; ಇವನು
ಎಲ್ಮದಾಮನ ಮಗನು; ಇವನು ಏರನ ಮಗನು;
ಇವನು ಯೆಹೋಷುವನ ಮಗನು; ಇವನು ಎಲಿಯೇ 29
ಜರನ ಮಗನು; ಇವನು ಯೋರೈಮನ ಮಗನು;
ಇವನು ಮತ್ಥಾತನ ಮಗನು; ಇವನು ಲೇವಿಯ
ಮಗನು; ಇವನು ಸಿಮಿಯೋನನ ಮಗನು; ಇವನು 30
ಯೂದನ ಮಗನು; ಇವನು ಯೋಸೇಫನ ಮಗನು;
ಇವನು ಯೋನಾಮನ ಮಗನು; ಇವನು ಎಲಿಯಕೀ
ಮನ ಮಗನು; ಇವನು ಮೆಲೆಯಾನ ಮಗನು; 31
ಇವನು ಮೆನ್ನನ ಮಗನು; ಇವನು ಮತ್ತಾಥನ
ಮಗನು; ಇವನು ನಾತಾನನ ಮಗನು; ಇವನು
ದಾವೀದನ ಮಗನು; ಇವನು ಇಶಾಯನ ಮಗನು; 32
ಇವನು ಓಬೇದನ ಮಗನು; ಇವನು ಬೋವಜನ
ಮಗನು; ಇವನು ಸಲ್ಮೋನನ ಮಗನು; ಇವನು
ನಹಸ್ಸೋನನ ಮಗನು; ಇವನು ಅಮ್ಮಿನಾದಾಬನ 33
ಮಗನು; ಇವನು ಅರ್ನೈಯನ ಮಗನು; ಇವನು
ಎಸ್ರೋನನ ಮಗನು; ಇವನು ಪೆರೆಸನ ಮಗನು;
ಇವನು ಯೂದನ ಮಗನು; ಇವನು ಯಾಕೋಬನ 34
ಮಗನು; ಇವನು ಇಸಾಕನ ಮಗನು; ಇವನು ಅಬ್ರ
ಹಾಮನ ಮಗನು; ಇವನು ತೇರನ ಮಗನು; ಇವನು
ನಹೋರನ ಮಗನು; ಇವನು ಸೆರೂಗನ ಮಗನು; 35
ಇವನು ರೆಗೂವನ ಮಗನು; ಇವನು ಪೆಲೆಗನ
ಮಗನು; ಇವನು ಹೇಬೆರನ ಮಗನು; ಇವನು
ಸಾಲನ ಮಗನು; ಇವನು ಕಯಿನಾನನ ಮಗನು; 36
ಇವನು ಅರ್ಫಕ್ಷಾದನ ಮಗನು; ಇವನು ಶೇಮನ
ಮಗನು; ಇವನು ನೋಹನ ಮಗನು; ಇವನು ಲಾಮೆ
ಕನ ಮಗನು; ಇವನು ಮತೂಷಲನ ಮಗನು; 37
ಇವನು ಹನೋಕನ ಮಗನು; ಇವನು ಯೆರೆದನ
ಮಗನು; ಇವನು ಮಹಲಲೇಲನ ಮಗನು; ಇವನು
ಕಯಿನಾನನ ಮಗನು; ಇವನು ಎನೋಷನ ಮಗನು; 38
ಇವನು ಸೇಥನ ಮಗನು; ಇವನು ಆದಾಮನ
ಮಗನು; ಇವನು ದೇವರ ಮಗನು.

### ಸೈತಾನನು ಯೇಸುವನ್ನು ಪಾಪದಲ್ಲಿ ಸಿಕ್ಕಿಸುವದಕ್ಕೆ ಪ್ರಯತ್ನಿಸಿದ್ದು.

(ಮತ್ತಾ. 4. 1—11; ಮಾರ್ಕ 1. 12, 13.)

4 ಯೇಸು ಪವಿತ್ರಾತ್ಮಭರಿತನಾಗಿ ಯೊರ್ದನ್ ಹೊಳೆ
ಯಿಂದ ಹಿಂತಿರುಗಿ ದೇವರಾತ್ಮನಿಂದ ನಾಲ್ವತ್ತು ದಿವಸ

2 ಅಡವಿಯಲ್ಲಿ ನಡಿಸಲ್ಪಡುತ್ತಾ ಸೈತಾನನಿಂದ ಶೋಧಿ
ಸಲ್ಪಟ್ಟನು. ಆ ದಿವಸಗಳಲ್ಲಿ ಆತನು ಏನೂ ತಿನ್ನ
ಲಿಲ್ಲ. ಅವು ಕಳೆದ ಮೇಲೆ ಆತನಿಗೆ ಹಸಿವಾಯಿತು.
3 ಆಗ ಸೈತಾನನು ಆತನಿಗೆ—ನೀನು ದೇವರ ಮಗನಾ
ಗಿದ್ದರೆ ಈ ಕಲ್ಲು ರೊಟ್ಟಿಯಾಗುವಂತೆ ಇದಕ್ಕೆ ಅಪ್ಪಣೆ
4 ಕೊಡು ಎಂದು ಹೇಳಲು ಯೇಸು ಅವನಿಗೆ—ಮನು
ಷ್ಯನು ರೊಟ್ಟಿ ತಿಂದ ಮಾತ್ರದಿಂದ ಬದುಕುವದಿಲ್ಲ
ಎಂದು ಬರೆದದೆ ಎಂತ ಉತ್ತರಕೊಟ್ಟನು.
5 ಬಳಿಕ ಸೈತಾನನು ಆತನನ್ನು ಮೇಲಕ್ಕೆ ಕರೆದು
ಕೊಂಡು ಹೋಗಿ ಕ್ಷಣಮಾತ್ರದಲ್ಲಿ ಲೋಕದ ಎಲ್ಲಾ
6 ರಾಜ್ಯಗಳನ್ನು ಆತನಿಗೆ ತೋರಿಸಿ—ಇವೆಲ್ಲವುಗಳ
ಅಧಿಕಾರವನ್ನೂ ಇವುಗಳ ವೈಭವವನ್ನೂ ನಿನಗೆ ಕೊಡು
ವೆನು; ಇದೆಲ್ಲಾ ನನಗೆ ಕೊಟ್ಟದೆ, ಇದನ್ನು ನನ್ನ
7 ಮನಸ್ಸು ಬಂದವನಿಗೆ ಕೊಡುತ್ತೇನೆ; ನೀನು ನನ್ನ
ಮುಂದೆ ಅಡ್ಡಬಿದ್ದರೆ ಇದೆಲ್ಲಾ ನಿನ್ನದಾಗುವದು
8 ಎಂದು ಆತನಿಗೆ ಹೇಳಿದನು. ಅದಕ್ಕೆ ಯೇಸು—
ನಿನ್ನ ದೇವರಾಗಿರುವ ಕರ್ತನಿಗೆ ಅಡ್ಡಬಿದ್ದು ಆತ
ನೊಬ್ಬನನ್ನೇ ಆರಾಧಿಸಬೇಕು ಎಂಬದಾಗಿ ಬರೆದದೆ
ಎಂದು ಉತ್ತರಕೊಟ್ಟನು.
9 ಇದಲ್ಲದೆ ಅವನು ಆತನನ್ನು ಯೆರೂಸಲೇಮಿಗೆ
ಕರೆದುಕೊಂಡು ಹೋಗಿ ದೇವಾಲಯದ ಶಿಖರದ
ಮೇಲೆ ನಿಲ್ಲಿಸಿ ಆತನಿಗೆ—ನೀನು ದೇವರ ಮಗನಾಗಿ
ದ್ದರೆ ಇಲ್ಲಿಂದ ಕೆಳಕ್ಕೆ ದುಮುಕು.
10 ನಿನ್ನನ್ನು ಕಾಯುವದಕ್ಕೆ ಆತನು ನಿನ್ನ ವಿಷಯ
ವಾಗಿ ತನ್ನ ದೂತರಿಗೆ ಅಪ್ಪಣೆ ಕೊಡುವನು;
11 ಮತ್ತು ನಿನ್ನ ಕಾಲು ಕಲ್ಲಿಗೆ ತಗಲೀತೆಂದು
ಅವರು ನಿನ್ನನ್ನು ಕೈಗಳಲ್ಲಿ ಎತ್ತಿಕೊಳ್ಳು
ವರು
ಎಂಬದಾಗಿ ಬರೆದದೆಯಲ್ಲಾ ಎಂದು ಹೇಳಿದನು.
12 ಅದಕ್ಕೆ ಯೇಸು—ನಿನ್ನ ದೇವರಾಗಿರುವ ಕರ್ತನನ್ನು
ಪರೀಕ್ಷಿಸಬಾರದೆಂದು ಹೇಳಿಯದೆ ಎಂತ ಉತ್ತರ
ಕೊಟ್ಟನು.
13 ಸೈತಾನನು ಸಕಲವಿಧವಾದ ಶೋಧನೆಯನ್ನು ಮು
ಗಿಸಿ ಸ್ವಲ್ಪಕಾಲ ಆತನನ್ನು ಬಿಟ್ಟು ಹೊರಟುಹೋದನು.

ಯೇಸು ಗಲಿಲಾಯದಲ್ಲಿ ಉಪದೇಶಮಾಡಿ ಕೀರ್ತಿಹೊಂದಿದ್ದು.
(ಮತ್ತಾ. 4. 12—17; ಮಾರ್ಕ 1. 14, 15.)

14 ತರುವಾಯ ಯೇಸು ಪವಿತ್ರಾತ್ಮನ ಶಕ್ತಿಯಿಂದ ಕೂಡಿ
ದವನಾಗಿ ತಿರಿಗಿ ಗಲಿಲಾಯಕ್ಕೆ ಹೋದನು; ಆತನ
ಸುದ್ದಿಯು ಸುತ್ತಲಿರುವ ಪ್ರಾಂತ್ಯದಲ್ಲೆಲ್ಲಾ ಹಬ್ಬಿ
15 ಕೊಂಡಿತು. ಆತನು ಅವರ ಸಭಾಮಂದಿರಗಳಲ್ಲಿ ಬೋಧಿ
ಸುತ್ತಾ ಬಂದನು; ಎಲ್ಲರೂ ಆತನನ್ನು ಹೊಗಳಿದರು.

ನಜರೇತಿನವರು ಯೇಸುವನ್ನು ತಳ್ಳಿಬಿಟ್ಟದ್ದು.
(ಮತ್ತಾ. 13. 54—58; ಮಾರ್ಕ 6. 1—6.)

16 ಹೀಗಿರಲಾಗಿ ಆತನು ತಾನು ಬೆಳೆದ ನಜರೇತಿಗೆ
ಬಂದು ತನ್ನ ವಾಡಿಕೆಯ ಪ್ರಕಾರ ಸಬ್ಬತ್‌ದಿನದಲ್ಲಿ
ಸಭಾಮಂದಿರಕ್ಕೆ ಹೋಗಿ ಓದುವದಕ್ಕಾಗಿ ಎದ್ದು
ನಿಂತನು. ಆಗ ಯೆಶಾಯನೆಂಬ ಪ್ರವಾದಿಯ ಗ್ರಂಥದ
ಸುರಳಿಯನ್ನು ಆತನ ಕೈಗೆ ಕೊಡಲಾಗಿ ಆತನು ಆ
ಸುರಳಿಯನ್ನು ಬಿಚ್ಚಿ ಮುಂದೆ ಹೇಳುವ ಮಾತು ಬರೆ
ದಿರುವ ಸ್ಥಳವನ್ನು ಕಂಡು ಓದಿದನು; ಆ ಮಾತೇ
ನಂದರೆ—

ಕರ್ತನ ಆತ್ಮವು ನನ್ನ ಮೇಲೆ ಅದೆ,
ಆತನು ನನ್ನನ್ನು ಬಡವರಿಗೆ ಶುಭವರ್ತಮಾನ
ವನ್ನು ಸಾರುವದಕ್ಕೆ ಅಭಿಷೇಕಿಸಿದನು,
ಸೆರೆಯವರಿಗೆ ಬಿಡುಗಡೆಯಾಗುವದನ್ನು
ಮತ್ತು ಕುರುಡರಿಗೆ ಕಣ್ಣು ಬರುವದನ್ನು ಪ್ರಸಿದ್ಧ
ಪಡಿಸುವದಕ್ಕೂ
ಕುಗ್ಗಿಸಲ್ಪಟ್ಟವರನ್ನು ಬಿಡಿಸಿ ಕಳುಹಿಸುವದಕ್ಕೂ
ಕರ್ತನು ನೇಮಿಸಿರುವ ಶುಭವರ್ಷವನ್ನು ಪ್ರಚು
ರಪಡಿಸುವದಕ್ಕೂ
ಆತನು ನನ್ನನ್ನು ಕಳುಹಿಸಿದ್ದಾನೆ ಎಂಬದು.

ಓದಿದ ಮೇಲೆ ಆತನು ಆ ಸುರಳಿಯನ್ನು ಸುತ್ತಿ ಸಭಾ
ಮಂದಿರದ ಆಳಿನ ಕೈಗೆ ಕೊಟ್ಟು ಕೂತುಕೊಂಡನು.
ಅಲ್ಲಿದ್ದವರೆಲ್ಲರ ಕಣ್ಣುಗಳು ಆತನ ಮೇಲೆಯೇ ಬಿದ್ದಿ
ರಲಾಗಿ ಆತನು ಅವರಿಗೆ—ಈ ಹೊತ್ತು [1]ನೀವು ನನ್ನ
ಮಾತನ್ನು ಕೇಳುವಲ್ಲಿ ಈ ವೇದೋಕ್ತಿ ನೆರವೇರಿದೆ
ಎಂದು ಹೇಳುತ್ತಿರುವಾಗ ಎಲ್ಲರು ಆತನನ್ನು ಹೊಗಳಿ
ಆತನ ಬಾಯಿಂದ ಹೊರಡುವ ಇಂಪಾದ ಮಾತುಗಳಿಗೆ
ಆಶ್ಚರ್ಯಪಟ್ಟು ಇವನು ಯೋಸೇಫನ ಮಗನಲ್ಲವೇ
ಎಂದು ಮಾತಾಡಿಕೊಂಡರು. ಆತನು ಅವರಿಗೆ—
ನೀವಂತೂ ವೈದ್ಯನೇ, ನಿನ್ನನ್ನೇ ವಾಸಿಮಾಡಿಕೋ ಎಂಬ
ಗಾದೆಯನ್ನು ನನಗೆ ಹೇಳಿ ಕಪೆರ್ನೌಮಿನಲ್ಲಿ ಎಂಥೆಂಥ
ಕಾರ್ಯಗಳು ನಡೆದವೆಂದು ನಾವು ಕೇಳಿದೆವೋ ಅಂಥ
ವುಗಳನ್ನು ಈ ನಿನ್ನ ಸ್ವಂತ ಸ್ಥಳದಲ್ಲಿ ಮಾಡು ಅನ್ನುವಿ
ರಷ್ಟೆ. ಆದರೆ ಯಾವ ಪ್ರವಾದಿಯೂ ಸ್ವದೇಶದಲ್ಲಿ
ಸಮ್ಮತನಲ್ಲವೆಂದು ನಿಮಗೆ ಸತ್ಯವಾಗಿ ಹೇಳುತ್ತೇನೆ.
ಕೇಳಿರಿ, ಎಲೀಯನ ಕಾಲದಲ್ಲಿ ಮೂರು ವರುಷ ಆರು
ತಿಂಗಳು ಮಳೆಬಾರದೆ ದೇಶದಲ್ಲೆಲ್ಲಾ ದೊಡ್ಡ ಬರ
ಉಂಟಾದಾಗ ಇಸ್ರಾಯೇಲ್ ಜನರಲ್ಲಿ ಎಷ್ಟೋ ಮಂದಿ
ವಿಧವೆಯರು ಇದ್ದದ್ದು ನಿಜ; ಆದರೆ ಅವರಲ್ಲಿ ಒಬ್ಬರ
ಬಳಿಗೂ ದೇವರು ಎಲೀಯನನ್ನು ಕಳುಹಿಸದೆ ಸೀ
ದೋನ್‌ದೇಶಕ್ಕೆ ಸೇರಿದ ಸರೆಪ್ತ ಊರಿನಲ್ಲಿದ್ದ ಒಬ್ಬ
ವಿಧವೆಯ ಬಳಿಗೆ ಮಾತ್ರ ಕಳುಹಿಸಿದನು. ಮತ್ತು
ಎಲೀಷನೆಂಬ ಪ್ರವಾದಿಯ ಕಾಲದಲ್ಲಿ ಇಸ್ರಾಯೇಲ್
ಜನರೊಳಗೆ ಎಷ್ಟೋ ಮಂದಿ ಕುಷ್ಠರೋಗಿಗಳು ಇದ್ದಾ
ಗ್ಯೂ ಅವರಲ್ಲಿ ಒಬ್ಬನಾದರೂ ಶುದ್ಧನಾಗದೆ ಸುರಿಯ
ದೇಶದವನಾದ ನಾಮಾನನು ಮಾತ್ರ ಶುದ್ಧನಾದನು
ಎಂದು ಹೇಳಿದನು. ಸಭಾಮಂದಿರದಲ್ಲಿರುವವರೆಲ್ಲರು
ಈ ಮಾತುಗಳನ್ನು ಕೇಳಿ ಬಹಳವಾಗಿ ಸಿಟ್ಟುಗೊಂಡು
ಎದ್ದು ಆತನನ್ನು ಊರಹೊರಕ್ಕೆ ಅಟ್ಟಿ ತಮ್ಮ ಊರು
ಕಟ್ಟಿದ್ದ ಗುಡ್ಡದ ಕಡಿದಾದ ಸ್ಥಳಕ್ಕೆ ನಡಿಸಿಕೊಂಡು
ಹೋಗಿ ಅಲ್ಲಿಂದ ಕೆಳಕ್ಕೆ ದೊಬ್ಬಬೇಕೆಂದಿದ್ದರು. ಆದರೆ

1) ಅಥವಾ: ನೀವು ಸುದ್ದಿ ಕೇಳಿದ ಪ್ರಕಾರ; ಮೂಲ: ನಿಮ್ಮ ಕಿವಿಗಳಲ್ಲಿ.

ಆತನು ಅವರ ಮಧ್ಯದಲ್ಲಿ ಹಾದು ಹೊರಟು
ಹೋದನು.

ಯೇಸು ಕಪೆರ್ನೌಮೆಂಬ ಊರಿನಲ್ಲಿ ದೆವ್ವಗಳನ್ನು ಬಿಡಿಸಿ
ರೋಗಿಗಳನ್ನು ಸ್ವಸ್ಥಮಾಡಿದ್ದು.
(ಮತ್ತಾ. 8. 14—17; ಮಾರ್ಕ 1. 21—39.)

31 ಬಳಿಕ ಆತನು ಗಟ್ಟಾ ಇಳಿದು ಗಲಿಲಾಯಕ್ಕೆ
32 ಸೇರಿದ ಕಪೆರ್ನೌಮೆಂಬ ಊರಿಗೆ ಬಂದನು. ಅಲ್ಲಿ
ಸಬ್ಬತ್‌ದಿನದಲ್ಲಿ ಅವರಿಗೆ ಉಪದೇಶಮಾಡುತ್ತಿರಲು
ಆತನ ಮಾತು ಅಧಿಕಾರವುಳ್ಳದ್ದಾಗಿದ್ದದರಿಂದ ಅವರು
33 ಆತನ ಉಪದೇಶಕ್ಕೆ ಅತ್ಯಾಶ್ಚರ್ಯಪಟ್ಟರು. ಆ ಸಭಾ
ಮಂದಿರದಲ್ಲಿ ದೆವ್ವಹಿಡಿದ ಒಬ್ಬ ಮನುಷ್ಯನಿದ್ದನು.
34 ಆ ದೆವ್ವವು—ಹಾ! ನಜರೇತಿನ ಯೇಸುವೇ, ನಮ್ಮ
ಗೊಡವೆ ನಿನಗೇಕೆ? ನಮ್ಮನ್ನು ನಾಶಮಾಡುವದಕ್ಕೆ
ಬಂದೆಯಾ? ನಿನ್ನನ್ನು ಬಲ್ಲೆನು. ನೀನು ದೇವರು
35 ಪ್ರತಿಷ್ಠಿಸಿದವನೇ ಎಂದು ಅಬ್ಬರಿಸಿ ಹೇಳಿತು. ಯೇಸು
ಅದನ್ನು ಗದರಿಸಿ—ಸುಮ್ಮನಿರು, ಇವನನ್ನು ಬಿಟ್ಟು
ಹೋಗು ಎನ್ನಲಾಗಿ ಆ ದೆವ್ವವು ಅವನನ್ನು ನಡುವೆ
ಕೆಡವಿ ಅವನಿಗೆ ಯಾವ ಕೇಡನ್ನೂ ಮಾಡದೆ ಬಿಟ್ಟು
36 ಹೋಯಿತು. ಅದಕ್ಕೆ ಎಲ್ಲರು ಬೆರಗಾಗಿ—ಇದೆಂಥ
ಮಾತಾಗಿರಬಹುದು? ಈತನು ಅಧಿಕಾರದಿಂದಲೂ ಬಲ
ದಿಂದಲೂ ದೆವ್ವಗಳಿಗೆ ಅಪ್ಪಣೆಕೊಡುತ್ತಾನೆ, ಅವು ಬಿಟ್ಟು
ಹೋಗುತ್ತವೆ ಎಂದು ತಮ್ಮತಮ್ಮೊಳಗೆ ಮಾತಾಡಿ
37 ಕೊಂಡರು. ಮತ್ತು ಆತನ ಸುದ್ದಿಯು ಸುತ್ತಲಿರುವ
ಪ್ರಾಂತ್ಯದ ಊರುಗಳಲ್ಲೆಲ್ಲಾ ಹಬ್ಬಿತು.
38 ಆತನು ಸಭಾಮಂದಿರದಿಂದೆದ್ದು ಸೀಮೋನನ ಮ
ನೆಗೆ ಬಂದನು. ಅಲ್ಲಿ ಸೀಮೋನನ ಅತ್ತೆಯು ಕಠಿನ
ಜ್ವರದಿಂದ ಬಹಳ ಕಷ್ಟಪಡುತ್ತಿರಲಾಗಿ ಆಕೆಯ ವಿಷ
39 ಯದಲ್ಲಿ ಆತನನ್ನು ಬೇಡಿಕೊಂಡರು. ಆತನು ಆಕೆಯ
ಬಳಿ ನಿಂತು ಬಾಗಿ ಆ ಜ್ವರವನ್ನು ಗದರಿಸಲು ಅದು
ಆಕೆಯನ್ನು ಬಿಟ್ಟುಹೋಯಿತು. ಕೂಡಲೆ ಆಕೆಯು
ಎದ್ದು ಅವರಿಗೆ ಉಪಚಾರ ಮಾಡಿದಳು.
40 ಹೊತ್ತು ಮುಣುಗುವಾಗ ಆದದ್ದೇನಂದರೆ ಯಾ
ರಾರ ಮನೆಯಲ್ಲಿ ತರತರದ ರೋಗಗಳಿಂದ ಅಸ್ವಸ್ಥ
ವಾದವರಿದ್ದರೋ ಅವರೆಲ್ಲರು ಆ ರೋಗಿಗಳನ್ನು ಆತನ
ಹತ್ತರಕ್ಕೆ ಕರಕೊಂಡು ಬಂದರು; ಆತನು ಪ್ರತಿಯೊ
ಬ್ಬನ ಮೇಲೆಯೂ ಕೈಯಿಟ್ಟು ಅವರನ್ನು ವಾಸಿಮಾಡಿ
41 ದನು. ದೆವ್ವಗಳು ಸಹ—ನೀನು ದೇವರ ಕುಮಾ
ರನು ಎಂದು ಅಬ್ಬರಿಸಿ ಅನೇಕರನ್ನು ಬಿಟ್ಟುಹೋದವು.
ತಾನು ಕ್ರಿಸ್ತನೆಂದು ಅವುಗಳಿಗೆ ತಿಳಿದದ್ದರಿಂದ ಆತನು
ಅವುಗಳನ್ನು ಮಾತಾಡದಂತೆ ಗದರಿಸಿದನು.
42 ಬೆಳಗಾದ ಮೇಲೆ ಆತನು ಹೊರಟು ಅಡವಿಯ
ಸ್ಥಳಕ್ಕೆ ಹೋದನು; ಜನರು ಗುಂಪುಗುಂಪಾಗಿ ಆತ
ನನ್ನು ಹುಡುಕಿಕೊಂಡು ಆತನಿದ್ದಲ್ಲಿಗೆ ಬಂದು—ನೀನು
ನಮ್ಮನ್ನು ಬಿಟ್ಟುಹೋಗಬೇಡ ಎಂದು ಆತನನ್ನು ತಡೆ
43 ದರು. ಆದರೆ ಆತನು ಅವರಿಗೆ—ನಾನು ದೇವರ ರಾ
ಜ್ಯದ ಸುವಾರ್ತೆಯನ್ನು ಬೇರೆ ಊರುಗಳಿಗೂ ಸಾರಿ
ಹೇಳಬೇಕಾಗಿದೆ; ಇದಕ್ಕಾಗಿಯೇ ಕಳುಹಿಸಲ್ಪಟ್ಟಿದ್ದೇನೆ
ಎಂದು ಹೇಳಿದನು.
ಬಳಿಕ ಆತನು 1)ಯೂದಾಯ ದೇಶದ ಸಭಾ 44
ಮಂದಿರಗಳಲ್ಲಿ ಸುವಾರ್ತೆಯನ್ನು ಸಾರುತ್ತಾ ಇದ್ದನು.

ಯೇಸು ಆಶ್ಚರ್ಯರೀತಿಯಿಂದ ಮೀನುಗಳನ್ನು ದೊರಕಿಸಿಕೊಟ್ಟು
ಪ್ರಥಮಶಿಷ್ಯರನ್ನು ಮಾಡಿಕೊಂಡದ್ದು.

ಒಂದಾನೊಂದು ದಿವಸ ಜನರು ಒತ್ತಾಗಿ ಬಂದು **5**
ಆತನ ಮೇಲೆ ಬಿದ್ದುಕೊಂಡು ದೇವರ ವಾಕ್ಯವನ್ನು
ಕೇಳುತ್ತಿರಲು ಗೆನೇಜರೆತ್ ಕೆರೆಯ ಅಂಚಿನಲ್ಲಿ ನಿಂತಿದ್ದ 2
ಆತನು ಆ ಕೆರೆಯ ದಡದಲ್ಲಿ ಎರಡು ದೋಣಿಗಳನ್ನು
ಕಂಡನು. ಬೆಸ್ತರು ಅವುಗಳೊಳಗಿಂದ ಹೊರಗೆ ಬಂದು
ತಮ್ಮ ಬಲೆಗಳನ್ನು ತೊಳೆಯುತ್ತಿದ್ದರು. ಆ ದೋಣಿ 3
ಗಳಲ್ಲಿ ಸೀಮೋನನ ಒಂದು ದೋಣಿಯನ್ನು ಆತನು
ಹತ್ತಿ ದಡದಿಂದ ಸ್ವಲ್ಪ ದೂರಕ್ಕೆ ನೂಕಬೇಕೆಂದು ಅವ
ನನ್ನು ಕೇಳಿಕೊಂಡನು. ತರುವಾಯ ಆತನು ಕೂತು
ಕೊಂಡು ದೋಣಿಯೊಳಗಿಂದಲೇ ಆ ಜನರ ಗುಂಪಿಗೆ
ಉಪದೇಶಮಾಡಿದನು. ಮಾತಾಡುವದನ್ನು ಮುಗಿ 4
ಸಿದ ಮೇಲೆ ಸೀಮೋನನಿಗೆ—ಆಳವಾದ ಸ್ಥಳಕ್ಕೆ
ದೋಣಿಯನ್ನು ನಡಿಸಿ ಮೀನುಬೇಟೆಗಾಗಿ ನಿಮ್ಮ ಬಲೆ
ಗಳನ್ನು ಹಾಕಿರಿ ಎಂದು ಹೇಳಿದನು. ಅದಕ್ಕೆ ಸೀಮೋ 5
ನನು—ಗುರುವೇ, ನಾವು ರಾತ್ರಿಯೆಲ್ಲಾ ಪ್ರಯಾಸ
ಪಟ್ಟರೂ ಏನೂ ಸಿಕ್ಕಲಿಲ್ಲ; ಆದರೆ ನಿನ್ನ ಮಾತಿನ
ಮೇಲೆ ಬಲೆಗಳನ್ನು ಹಾಕುತ್ತೇನೆ ಅಂದನು. ಹಾಕಿದ 6
ಮೇಲೆ ಮೀನುಗಳು ರಾಶಿರಾಶಿಯಾಗಿ ಸಿಕ್ಕಿಕೊಂಡು
ಅವರ ಬಲೆಗಳು ಹರಿದುಹೋಗುತ್ತಿದ್ದವು. ಆಗ ಅವರು 7
ಮತ್ತೊಂದು ದೋಣಿಯಲ್ಲಿದ್ದ ತಮ್ಮ ಪಾಲುಗಾರ
ರಿಗೆ—ನೀವು ಬಂದು ನಮಗೆ ನೆರವಾಗಬೇಕೆಂದು ಸನ್ನೆ
ಮಾಡಿದರು. ಅವರು ಬಂದು ಆ ಎರಡು ದೋಣಿಗ
ಳಲ್ಲಿ ಮೀನುಗಳನ್ನು ತುಂಬಿಸಲು ಅವು ಮುಳುಗುವ
ಹಾಗಾದವು. ಸೀಮೋನ್ ಪೇತ್ರನು ಇದನ್ನು ಕಂಡು 8
ಯೇಸುವಿನ ಮೊಣಕಾಲಿಗೆ ಬಿದ್ದು—ಸ್ವಾಮೀ,
ನಾನು ಪಾಪಾತ್ಮನು; ನನ್ನನ್ನು ಬಿಟ್ಟುಹೋಗಬೇಕು
ಅಂದನು. ಯಾಕಂದರೆ ಅವನಿಗೂ ಅವನ ಸಂಗಡ 9
ಇದ್ದವರೆಲ್ಲರಿಗೂ ತಾವು ಹಿಡಿದ ಮೀನುಗಳ ನಿಮಿತ್ತ
ವಿಸ್ಮಯ ಹಿಡಿದಿತ್ತು; ಸೀಮೋನನ ಪಾಲುಗಾರರಾಗಿ 10
ದ್ದಂಥ ಜೆಬೆದಾಯನ ಮಕ್ಕಳಾದ ಯಾಕೋಬ ಯೋ
ಹಾನರೂ ಹಾಗೆಯೇ ವಿಸ್ಮಯಪಟ್ಟರು. ಯೇಸು
ಸೀಮೋನನಿಗೆ—ಅಂಜಬೇಡ, ಇಂದಿನಿಂದ ನೀನು ಮ
ನುಷ್ಯರನ್ನು ಹಿಡಿಯುವವನಾಗುವಿ ಎಂದು ಹೇಳಿದನು.
ಅವರು ತಮ್ಮ ದೋಣಿಗಳನ್ನು ದಡಕ್ಕೆ ತಂದು ಎಲ್ಲ 11
ವನ್ನೂ ಬಿಟ್ಟು ಆತನನ್ನು ಹಿಂಬಾಲಿಸಿದರು.

ಯೇಸು ಕುಷ್ಠರೋಗಿಯನ್ನು ವಾಸಿಮಾಡಿದ್ದು.
(ಮತ್ತಾ. 8. 2—4; ಮಾರ್ಕ 1. 40—45.)

ಆತನು ಒಂದಾನೊಂದು ಊರಿನಲ್ಲಿದ್ದಾಗ ಮೈ 12
ಯೆಲ್ಲಾ ಕುಷ್ಠರೋಗ ತುಂಬಿದ್ದ ಒಬ್ಬ ಮನುಷ್ಯನು

1) ಕೆಲವು ಪ್ರತಿಗಳಲ್ಲಿ—ಗಲಿಲಾಯದ ಎಂದು ಬರೆದದೆ.

ಯೇಸುವನ್ನು ಕಂಡು ಅಡ್ಡಬಿದ್ದು — ಸ್ವಾಮೀ, ನಿನಗೆ
ಮನಸ್ಸಿದ್ದರೆ ನನ್ನನ್ನು ಶುದ್ಧಮಾಡಬಲ್ಲೆ ಎಂದು ಬೇಡಿ
13 ಕೊಂಡನು. ಆತನು ಕೈಸೇಡಿ ಅವನನ್ನು ಮುಟ್ಟಿ—
ನನಗೆ ಮನಸ್ಸುಂಟು; ಶುದ್ಧನಾಗು ಅಂದನು. ಕೂಡಲೆ
14 ಅವನ ಕುಷ್ಠವು ಹೋಯಿತು. ಆಗ ಆತನು ಅವ
ನಿಗೆ— ನೀನು ಯಾರಿಗೂ ಹೇಳಬೇಡ; ಆದರೆ ಹೋಗಿ
ಯಾಜಕನಿಗೆ ನಿನ್ನ ಮೈ ತೋರಿಸಿ ಮೋಶೆಯು
ನೇಮಕ ಮಾಡಿರುವದನ್ನು ಅರ್ಪಿಸಿ ನಿನ್ನ ಶುದ್ಧಾ
ಚಾರವನ್ನು ನೆರವೇರಿಸು, ಅದು ಜನರಿಗೆ ಸಾಕ್ಷಿಯಾ
15 ಗಲಿ ಎಂದು ಅಪ್ಪಣೆಕೊಟ್ಟನು. ಆದರೂ ಆತನ
ಸುದ್ದಿಯು ಮತ್ತಷ್ಟು ಹಬ್ಬಿತು; ಮತ್ತು ಜನರು
ಆತನ ಉಪದೇಶವನ್ನು ಕೇಳುವದಕ್ಕೂ ತಮ್ಮ ತಮ್ಮ
ಜಾಡ್ಯಗಳನ್ನು ವಾಸಿಮಾಡಿಸಿಕೊಳ್ಳುವದಕ್ಕೂ ಗುಂಪು
16 ಗುಂಪಾಗಿ ನೆರೆದರು. ಆತನಾದರೋ ಅರಣ್ಯಪ್ರದೇಶ
ಗಳಿಗೆ ಹೋಗಿ ದೇವರ ಪ್ರಾರ್ಥನೆಯನ್ನು ಮಾಡು
ತ್ತಿದ್ದನು.

ಯೇಸು ಪಾರ್ಶ್ವವಾಯುರೋಗಿಯ ಪಾಪವನ್ನು ಕ್ಷಮಿಸಿ
ಅವನನ್ನು ಗುಣಮಾಡಿದ್ದು.
(ಮತ್ತಾ. 9. 2—8; ಮಾರ್ಕ 2. 1—12.)

17 ಒಂದಾನೊಂದು ದಿನದಲ್ಲಿ ಆತನು ಉಪದೇಶಮಾ
ಡುತ್ತಿರಲು ಗಲಿಲಾಯ ಯೂದಾಯಗಳ ಎಲ್ಲಾ
ಗ್ರಾಮಗಳಿಂದಲೂ ಯೆರೂಸಲೇಮಿನಿಂದಲೂ ಬಂದಿದ್ದ
ಫರಿಸಾಯರೂ ನ್ಯಾಯಶಾಸ್ತ್ರಿಗಳೂ ಆತನ ಹತ್ತಿರ
ಕೂತುಕೊಂಡಿದ್ದರು. ಗುಣಮಾಡುವದಕ್ಕೆ ಕರ್ತನ
18 ಶಕ್ತಿಯು ಆತನಲ್ಲಿತ್ತು. ಹೀಗಿರುವಲ್ಲಿ ಕೆಲವು ಮಂದಿ
ಗಂಡಸರು ಒಬ್ಬ ಪಾರ್ಶ್ವವಾಯುರೋಗದವನನ್ನು
ದೋಲಿಯಲ್ಲಿ ಹೊತ್ತುಕೊಂಡು ಬಂದರು; ಆದರೆ ಅವ
ನನ್ನು ಒಳಗೆ ತೆಗೆದುಕೊಂಡುಹೋಗಿ ಆತನ ಮುಂದೆ
19 ಇಡಬೇಕೆಂದು ಪ್ರಯತ್ನಿಸಿದರೂ ಜನರು ಗುಂಪಾಗಿದ್ದ
ದರಿಂದ ಅವನನ್ನು ಒಳಗೆ ತೆಗೆದುಕೊಂಡುಹೋಗುವ
ಮಾರ್ಗವನ್ನು ಕಾಣದೆ ಮನೆಯ ಮೇಲೆ ಹತ್ತಿ
ಹಂಚುಗಳನ್ನು ತೆಗೆದು ಅವನನ್ನು ಹಾಸಿಗೆಯ ಸಹಿತ
20 ನಡುವೆ ಯೇಸುವಿನ ಮುಂದೆ ಇಳಿಯಬಿಟ್ಟರು. ಆತನು
ಅವರ ನಂಬಿಕೆಯನ್ನು ನೋಡಿ—ಅಪ್ಪಾ, ನಿನ್ನ ಪಾಪ
21 ಗಳು ಕ್ಷಮಿಸಲ್ಪಟ್ಟಿವೆ ಅಂದನು. ಅದಕ್ಕೆ ಆ ಶಾಸ್ತ್ರಿ
ಗಳೂ ಫರಿಸಾಯರೂ—ದೇವದೂಷಣೆಯ ಮಾತನ್ನಾ
ಡುವ ಇವನು ಎಷ್ಟರವನು? ಪಾಪಗಳನ್ನು ಕ್ಷಮಿಸಿ
ಬಿಡುವದು ದೇವರೊಬ್ಬನಿಂದ ಹೊರತು ಮತ್ತಾರಿಂದಾ
22 ದೀತು ಎಂದು ಅಂದುಕೊಳ್ಳುತ್ತಿದ್ದರು. ಆದರೆ ಅವರು
ಹಾಗಂದುಕೊಳ್ಳುವದನ್ನು ಯೇಸು ತಿಳಿದುಕೊಂಡು
ಅವರಿಗೆ—ನೀವು ನಿಮ್ಮ ಮನಸ್ಸಿನಲ್ಲಿ ಅಂದುಕೊಳ್ಳುವ
23 ದೇನು? ಯಾವದು ಸುಲಭ? ನಿನ್ನ ಪಾಪಗಳು ಕ್ಷಮಿ
ಸಲ್ಪಟ್ಟಿವೆ ಅನ್ನುವದೋ? ಎದ್ದು ನಡೆ ಅನ್ನುವದೋ?
24 ಆದರೆ ಪಾಪಗಳನ್ನು ಕ್ಷಮಿಸಿಬಿಡುವದಕ್ಕೆ ಮನುಷ್ಯ
ಕುಮಾರನಿಗೆ ಭೂಲೋಕದಲ್ಲಿ ಅಧಿಕಾರ ಉಂಟೆಂ
ಬದು ನಿಮಗೆ ತಿಳಿಯಬೇಕು ಎಂದು ಹೇಳಿ ಆ ಪಾರ್ಶ್ವ
ವಾಯುರೋಗದವನನ್ನು ನೋಡಿ—ಎದ್ದು ನಿನ್ನ ಹಾಸಿ
ಗೆಯನ್ನು ಎತ್ತಿಕೊಂಡು ಮನೆಗೆ ಹೋಗೆಂದು ನಿನಗೆ

ಹೇಳುತ್ತೇನೆ ಅಂದನು. ಅಂದ ಕೂಡಲೆ ಅವನು
ಅವರ ಮುಂದೆ ಎದ್ದು ತಾನು ಮಲಗಿದ್ದ ಹಾಸಿಗೆ
ಯನ್ನು ಎತ್ತಿಕೊಂಡು ದೇವರನ್ನು ಕೊಂಡಾಡುತ್ತಾ
ಮನೆಗೆ ಹೋದನು. ನೋಡಿದವರೆಲ್ಲರು ಬೆರಗಾಗಿ
ದೇವರನ್ನು ಕೊಂಡಾಡಿದರು; ಮತ್ತು ಅವರು ಭಯ
ದಿಂದ ತುಂಬಿದವರಾಗಿ—ನಾವು ಈ ಹೊತ್ತು ಅಪೂರ್ವ
ಸಂಗತಿಯನ್ನು ಕಂಡೆವು ಅಂದರು.

ಯೇಸು ಪಾಪಿಷ್ಠರ ಕೂಡ ತಾನು ಊಟಮಾಡಿದ್ದಕ್ಕೆ ಮತ್ತು
ತನ್ನ ಶಿಷ್ಯರು ಉಪವಾಸ ಮಾಡದೆಹೋದದ್ದಕ್ಕೆ
ಕಾರಣ ತೋರಿಸಿದ್ದು.
(ಮತ್ತಾ. 9. 9—17; ಮಾರ್ಕ 2. 13—22.)

ಇದಾದ ಮೇಲೆ ಆತನು ಹೊರಟು ಸುಂಕಕ್ಕೆ ಕೂ
ತಿದ್ದ ಲೇವಿಯೆಂಬ ಒಬ್ಬ ಸುಂಕದವನನ್ನು ಕಂಡು—
ನನ್ನನ್ನು ಹಿಂಬಾಲಿಸು ಎಂದು ಅವನನ್ನು ಕರೆಯಲು
ಅವನು ಎಲ್ಲವನ್ನೂ ಬಿಟ್ಟು ಎದ್ದು ಆತನ ಹಿಂದೆ ಹೋ
ದನು. ತರುವಾಯ ಲೇವಿಯು ತನ್ನ ಮನೆಯಲ್ಲಿ
ಆತನಿಗೆ ಒಂದು ದೊಡ್ಡ ಔತಣವನ್ನು ಮಾಡಿಸಲು
ಸುಂಕದವರೂ ಇತರರೂ ಗುಂಪಾಗಿ ಕೂಡಿ ಅವರ
ಸಂಗಡ ಊಟಕ್ಕೆ ಕೂತುಕೊಂಡಿದ್ದರು. ಅದನ್ನು
ಕಂಡು ಫರಿಸಾಯರೂ ಅವರಲ್ಲಿದ್ದ ಶಾಸ್ತ್ರಿಗಳೂ ಆತನ
ಶಿಷ್ಯರ ಮೇಲೆ ಗುಣುಗುಟ್ಟುತ್ತಾ— ನೀವು ಸುಂಕದವರ
ಮತ್ತು ಪಾಪಿಗಳ ಸಂಗಡ ಊಟಮಾಡುವದೇಕೆ ಎಂದು
ಕೇಳಿದರು. ಅದಕ್ಕೆ ಯೇಸು—ಕ್ಷೇಮದಿಂದಿರುವವ
ರಿಗೆ ವೈದ್ಯನು ಬೇಕಾಗಿಲ್ಲ, ಕ್ಷೇಮವಿಲ್ಲದವರಿಗೆ
ಬೇಕು; ದೇವರ ಕಡೆಗೆ ತಿರುಗಿಕೊಳ್ಳಿರಿ ಎಂದು ನೀತಿ
ವಂತರನ್ನು ಕರೆಯುವದಕ್ಕೆ ನಾನು ಬಂದವನಲ್ಲ, ಪಾಪಿ
ಗಳನ್ನು ಕರೆಯುವದಕ್ಕೆ ಬಂದವನು ಎಂದು ಅವರಿಗೆ
ಉತ್ತರಕೊಟ್ಟನು.

ಅವರು ಆತನಿಗೆ—ಯೋಹಾನನ ಶಿಷ್ಯರು ಪದೇ
ಪದೇ ಉಪವಾಸಗಳನ್ನೂ ವಿಜ್ಞಾಪನೆಗಳನ್ನೂ ಮಾಡು
ತ್ತಾ ಇದ್ದಾರೆ; ಅದರಂತೆ ಫರಿಸಾಯರ ಶಿಷ್ಯರೂ ಮಾ
ಡುತ್ತಾರೆ; ಆದರೆ ನಿನ್ನ ಶಿಷ್ಯರು ಊಟಮಾಡುತ್ತಾರೆ,
ಕುಡಿಯುತ್ತಾರೆ ಎಂದು ಹೇಳಲು ಯೇಸು ಅವರಿಗೆ—
ಮದಲಿಂಗನು ಮದುವೇಜನರ ಸಂಗಡ ಇರುವಲ್ಲಿ
ಅವರಿಗೆ ಉಪವಾಸಮಾಡಿಸುವದಕ್ಕೆ ನಿಮ್ಮಿಂದಾದೀತೇ?
ಆದರೆ ಮದಲಿಂಗನನ್ನು ಅವರ ಬಳಿಯಿಂದ ತೆಗೆದು
ಕೊಂಡುಹೋಗುವ ಕಾಲ ಬರುತ್ತದೆ. ಆ ಕಾಲ
ದಲ್ಲೇ ಉಪವಾಸಮಾಡುವರು ಎಂದು ಉತ್ತರಕೊ
ಟ್ಟನು. ಅವರಿಗೆ ಒಂದು ಸಾಮ್ಯವನ್ನು ಸಹ ಹೇಳಿ
ದನು, ಅದೇನಂದರೆ—ಯಾರೂ ಹೊಸ ವಸ್ತ್ರದಿಂದ
ಒಂದು ತುಂಡನ್ನು ಹರಕೊಂಡು ಹಳೇ ವಸ್ತ್ರಕ್ಕೆ ತ್ಯಾಪೆ
ಹಚ್ಚುವದಿಲ್ಲ; ಹಚ್ಚಿದರೆ ಆ ಹೊಸದನ್ನು ಹರಿದು ಕೆಡಿ
ಸಿದ ಹಾಗಾಗುವದಲ್ಲದೆ ಹೊಸದರಿಂದ ಹರಿದು ಹಚ್ಚಿದ
ತ್ಯಾಪೆಯು ಹಳೇದಕ್ಕೆ ಒಪ್ಪುವದೂ ಇಲ್ಲ. ಮತ್ತು
ಹಳೇ ಬುದ್ದಲಿಗಳಲ್ಲಿ ಹೊಸ ದ್ರಾಕ್ಷಾರಸವನ್ನು
ಯಾರೂ ಹಾಕಿಡುವದಿಲ್ಲ; ಇಟ್ಟರೆ ಆ ಹೊಸ ದ್ರಾಕ್ಷಾ
ರಸವು ಬುದ್ದಲಿಗಳನ್ನು ಒಡೆದು ತಾನೂ ಚೆಲ್ಲಿಹೋಗು
ವದಲ್ಲದೆ ಬುದ್ದಲಿಗಳೂ ಕೆಟ್ಟುಹೋಗುವವು. ಆದರೆ

ಹೊಸ ದ್ರಾಕ್ಷಾರಸವನ್ನು ಹೊಸ ಬುದ್ದಲಿಗಳಲ್ಲಿ ಹಾಕ
9 ಡತಕ್ಕದ್ದು. ಇದಲ್ಲದೆ ಹಳೇ ದ್ರಾಕ್ಷಾರಸವನ್ನು ಕುಡಿ
ದವನು ಹೊಸದು ಬೇಕು ಅನ್ನುವದಿಲ್ಲ; ಹಳೇದೇ
ಉತ್ತಮ ಅನ್ನುವನು.

### ಯೇಸುವೂ ಆತನ ಶಿಷ್ಯರೂ ಸಬ್ಬತ್‌ದಿನವನ್ನು ಅಲಕ್ಷ್ಯ ಮಾಡುತ್ತಾರೆಂದು ಫರಿಸಾಯರು ಆತನ ಮೇಲೆ ಆಕ್ಷೇಪಣೆಮಾಡಿದ್ದು.

(ಮತ್ತಾ. 12. 1—14; ಮಾರ್ಕ 2. 23—3. 6.)

6 ಒಂದಾನೊಂದು ಸಬ್ಬತ್‌ದಿನದಲ್ಲಿ ಯೇಸು ಪೈರಿನ
ಹೊಲಗಳನ್ನು ಹಾದುಹೋಗುತ್ತಿರುವಾಗ ಆತನ
ಶಿಷ್ಯರು ತೆನೆಗಳನ್ನು ಮುರಿದು ಕೈಗಳಲ್ಲಿ ಹೊಸಗಿ
2 ಕೊಂಡು ತಿನ್ನುತ್ತಿದ್ದರು. ಆದರೆ ಫರಿಸಾಯರಲ್ಲಿ
ಕೆಲವರು—ಸಬ್ಬತ್‌ದಿನದಲ್ಲಿ ಮಾಡಬಾರದ ಕೆಲಸ
ವನ್ನು ನೀವು ಯಾಕೆ ಮಾಡುತ್ತೀರಿ ಎಂದು ಕೇಳಿದ್ದಕ್ಕೆ
3 ಯೇಸು ಅವರಿಗೆ—ದಾವೀದನು ತಾನೂ ತನ್ನ ಸಂಗಡ
ಇದ್ದವರೂ ಹಸಿದಾಗ ಏನು ಮಾಡಿದನೆಂಬದನ್ನು ನೀವು
4 ಓದಲಿಲ್ಲವೋ? ಅವನು ದೇವರ ಮಂದಿರದೊಳಕ್ಕೆ
ಹೋಗಿ ಯಾಜಕರು ಮಾತ್ರವೇ ಹೊರತು ಮತ್ತಾರೂ
ತಿನ್ನಬಾರದ ನೈವೇದ್ಯದ ರೊಟ್ಟಿಗಳನ್ನು ಈಸಿಕೊಂಡು
ತಿಂದು ತನ್ನ ಸಂಗಡ ಇದ್ದವರಿಗೂ ಕೊಟ್ಟನಲ್ಲಾ?
5 ಎಂದು ಉತ್ತರಕೊಟ್ಟು ಮನುಷ್ಯಕುಮಾರನು ಸಬ್ಬತ್
ದಿನಕ್ಕೆ ಒಡೆಯನಾಗಿದ್ದಾನೆ ಎಂದು ಅವರಿಗೆ ಹೇಳಿ
ದನು.
6 ಮತ್ತೊಂದು ಸಬ್ಬತ್‌ದಿನದಲ್ಲಿ ಆತನು ಸಭಾ
ಮಂದಿರಕ್ಕೆ ಹೋಗಿ ಉಪದೇಶಮಾಡುತ್ತಿದ್ದಾಗ ಅಲ್ಲಿ
7 ಬಲಗೈ ಬತ್ತಿದವನೊಬ್ಬನು ಇದ್ದನು. ಶಾಸ್ತ್ರಿಗಳೂ
ಫರಿಸಾಯರೂ ಆತನ ಮೇಲೆ ತಪ್ಪುಹೊರಿಸುವದಕ್ಕೆ
ಆಸ್ಪದ ಸಿಕ್ಕಬೇಕೆಂದು ಸಬ್ಬತ್‌ದಿನದಲ್ಲಿ ಸ್ವಸ್ಥಮಾ
ಡುವನೋ ಏನೋ ಎಂದು ಆತನನ್ನು ಹೊಂಚಿನೋಡು
8 ತ್ತಿದ್ದರು. ಆದರೆ ಆತನು ಅವರ ಯೋಚನೆಗಳನ್ನು
ತಿಳಿದು ಕೈ ಬತ್ತಿಹೋಗಿದ್ದ ಆ ಮನುಷ್ಯನಿಗೆ—ಎದ್ದು
ನಡುವೆ ಬಂದು ನಿಂತುಕೋ ಎಂದು ಹೇಳಿದನು.
9 ಅವನು ಎದ್ದು ನಿಂತುಕೊಂಡನು. ಆಗ ಯೇಸು
ಅವರಿಗೆ—ನಿಮ್ಮನ್ನು ಒಂದು ಮಾತು ಕೇಳುತ್ತೇನೆ;
ಸಬ್ಬತ್‌ದಿನದಲ್ಲಿ ಯಾವದನ್ನು ಮಾಡುವದು ನ್ಯಾಯ?
ಮೇಲನ್ನು ಮಾಡುವದೋ, ಕೇಡನ್ನು ಮಾಡುವದೋ?
ಪ್ರಾಣವನ್ನು ಉಳಿಸುವದೋ, ಹಾಳುಮಾಡುವದೋ
0 ಎಂದು ಹೇಳಿ ಸುತ್ತಲೂ ಅವರೆಲ್ಲರನ್ನು ನೋಡಿ ಆ
ಮನುಷ್ಯನಿಗೆ—ನಿನ್ನ ಕೈಚಾಚು ಎಂದು ಹೇಳಿದನು.
ಅವನು ಹಾಗೆಯೇ ಮಾಡಿದನು; ಕೈವಾಸಿಯಾಯಿತು.
1 ಆದರೆ ಅವರಲ್ಲಿ ದುರ್ಬುದ್ಧಿ ತುಂಬಿದ್ದದರಿಂದ—ಈ
ಯೇಸುವಿಗೆ ಏನು ಮಾಡೋಣ ಎಂದು ತಮ್ಮತಮ್ಮೊ
ಳಗೆ ಮಾತಾಡಿಕೊಂಡರು.

### ಯೇಸು ಹನ್ನೆರಡು ಮಂದಿ ಅಪೊಸ್ತಲರನ್ನು ನೇಮಿಸಿದ್ದು.

(ಮತ್ತಾ. 10. 2—4; ಮಾರ್ಕ 3. 13—19.)

2 ಆ ದಿವಸಗಳಲ್ಲಿ ಆತನು ಪ್ರಾರ್ಥನೆಮಾಡುವದ
ಕ್ಕಾಗಿ ಬೆಟ್ಟಕ್ಕೆ ಹೋಗಿ ರಾತ್ರಿಯನ್ನೆಲ್ಲಾ ಪ್ರಾರ್ಥನೆ
ಯಲ್ಲೇ ಕಳೆದನು. ಬೆಳಗಾದ ಮೇಲೆ ಆತನು ತನ್ನ 13
ಶಿಷ್ಯರನ್ನು ಹತ್ತರಕ್ಕೆ ಕರೆದು ಅವರಲ್ಲಿ ಹನ್ನೆರಡು
ಮಂದಿಯನ್ನು ಆರಿಸಿಕೊಂಡು ಅವರಿಗೆ ಅಪೊಸ್ತಲರೆಂತ
ಹೆಸರಿಟ್ಟನು. ಅವರು ಯಾರಾರಂದರೆ—ಆತನಿಂದ 14
ಪೇತ್ರನೆಂಬ ಹೆಸರನ್ನು ಹೊಂದಿದ ಸೀಮೋನ, ಅವನ
ತಮ್ಮನಾದ ಅಂದ್ರೆಯ, ಯಾಕೋಬ, ಯೋಹಾನ,
ಫಿಲಿಪ್ಪ, ಬಾರ್ತೊಲೊಮಾಯ, ಮತ್ತಾಯ, ತೋಮ, 15
ಅಲ್ಫಾಯನ ಮಗನಾದ ಯಾಕೋಬ, ಮತಾಭಿಮಾನಿ
ಅನ್ನಿಸಿಕೊಂಡ ಸೀಮೋನ, ಯಾಕೋಬನ ಮಗನಾದ 16
ಯೂದ, ಆತನನ್ನು ಹಿಡಿದುಕೊಡುವ ದ್ರೋಹಿಯಾದ
ಇಸ್ಕರಿಯೋತ ಯೂದ, ಇವರೇ.

### ಯೇಸು ಪರ್ವತದ ಮೇಲೆ ಒಂದು ಸಮಭೂಮಿಯಲ್ಲಿ ಮಾಡಿದ ಪ್ರಸಂಗವು.

(ಮತ್ತಾ. 5. 3—12; 39—48; 7. 1—5; 16—18; 24—27.)

ಆ ಮೇಲೆ ಆತನು ಅವರ ಸಂಗಡ ಬೆಟ್ಟದಿಂದ 17
ಇಳಿದು ಸಮಭೂಮಿಯಲ್ಲಿ ನಿಂತನು. ಆತನ ಶಿಷ್ಯರ
ದೊಡ್ಡಗುಂಪು ಮತ್ತು ಎಲ್ಲಾ ಯೂದಾಯದಿಂದಲೂ
ಯೆರೂಸಲೇಮಿನಿಂದಲೂ ತೂರ್ ಸೀದೋನ್ ಪಟ್ಟಣ
ಗಳಿರುವ ಸಮುದ್ರತೀರದಿಂದಲೂ ಬಂದಿದ್ದ ಜನರ
ಮಹಾಸಮೂಹವು ಆತನ ಸಂಗಡ ಇದ್ದವು. ಆ
ಜನರು ಆತನ ಉಪದೇಶವನ್ನು ಕೇಳುವದಕ್ಕೂ ತಮ್ಮ
ರೋಗಗಳನ್ನು ವಾಸಿಮಾಡಿಸಿಕೊಳ್ಳುವದಕ್ಕೂ ಬಂದಿ
ದ್ದರು. ಅವರಲ್ಲಿ ದೆವ್ವಗಳ ಕಾಟವಿದ್ದವರು ಸ್ವಸ್ಥ 18
ವಾದರು. ಮತ್ತು ಆತನಿಂದ ಶಕ್ತಿ ಹೊರಟು ಎಲ್ಲ 19
ರನ್ನು ವಾಸಿಮಾಡುತ್ತಿದ್ದದರಿಂದ ಆ ಗುಂಪಿನ ಜನ
ರೆಲ್ಲಾ ಆತನನ್ನು ಮುಟ್ಟುವದಕ್ಕೆ ಪ್ರಯತ್ನಮಾಡಿ
ದರು. ತರುವಾಯ ಆತನು ತನ್ನ ಶಿಷ್ಯರ ಕಡೆಗೆ 20
ಕಣ್ಣೆತ್ತಿನೋಡಿ ಹೇಳಿದ್ದೇನಂದರೆ—
ಬಡವರಾದ ನೀವು ಧನ್ಯರು; ದೇವರ ರಾಜ್ಯವು 21
ನಿಮ್ಮದೇ. ಈಗ ಹಸಿದಿರುವವರಾದ ನೀವು ಧನ್ಯರು;
ನಿಮಗೆ ತೃಪ್ತಿಯಾಗುವದು. ಈಗ ಅಳುವವರಾದ
ನೀವು ಧನ್ಯರು; ನೀವು ನಗುವಿರಿ. ಮನುಷ್ಯಕುಮಾ 22
ರನ ನಿಮಿತ್ತವಾಗಿ ಜನರು ನಿಮ್ಮನ್ನು ಹಗೆಮಾಡಿ
ನಿಮಗೆ ಬಹಿಷ್ಕಾರಹಾಕಿ ನಿಂದಿಸಿ ನಿಮ್ಮ ಹೆಸರನ್ನು
ಕೆಟ್ಟದೆಂದು ತೆಗೆದುಹಾಕಿದರೆ ನೀವು ಧನ್ಯರು. ಆ 23
ದಿನದಲ್ಲಿ ಸಂತೋಷಪಡಿರಿ, ಕುಣಿದಾಡಿರಿ; ಪರಲೋಕ
ದಲ್ಲಿ ನಿಮಗೆ ಬಹಳ ಫಲ ಸಿಕ್ಕುವದು ಎಂದು ತಿಳು
ಕೊಳ್ಳಿರಿ. ಈ ಜನರ ಪಿತೃಗಳು ಪ್ರವಾದಿಗಳಿಗೂ
ಹಾಗೆಯೇ ಮಾಡಿದರು. ಆದರೆ ಐಶ್ವರ್ಯವಂತರೇ, 24
ನಿಮ್ಮ ಗತಿಯನ್ನು ಏನು ಹೇಳಲಿ! ನಿಮ್ಮ ಸುಖ
ನಿಮಗೆ ಬಂದದೆ. ಈಗ ಹೊಟ್ಟೆತುಂಬಿದವರೇ, ನಿಮ್ಮ 25
ಗತಿಯನ್ನು ಏನು ಹೇಳಲಿ! ನೀವು ಹಸಿಯುವಿರಿ.
ಈಗ ನಗುವವರೇ, ನಿಮ್ಮ ಗತಿಯನ್ನು ಏನು ಹೇಳಲಿ!
ನೀವು ದುಃಖಪಟ್ಟು ಅಳುವಿರಿ. ಜನರೆಲ್ಲಾ ನಿಮ್ಮನ್ನು 26
ಹೊಗಳಿದರೆ ನಿಮ್ಮ ಗತಿಯನ್ನು ಏನು ಹೇಳಲಿ! ಅವರ
ಪಿತೃಗಳು ಸುಳ್ಳುಪ್ರವಾದಿಗಳನ್ನು ಹಾಗೆಯೇ ಹೊಗ
ಳಿದರು.

27 ಕೇಳುವವರಾದ ನಿಮಗೆ ನಾನು ಹೇಳುವದೇ
ನಂದರೆ— ನಿಮ್ಮ ವೈರಿಗಳನ್ನು ಪ್ರೀತಿಸಿರಿ; ನಿಮ್ಮನ್ನು
28 ಹಗೆಮಾಡುವವರಿಗೆ ಉಪಕಾರಮಾಡಿರಿ; ನಿಮ್ಮನ್ನು
ಶಪಿಸುವವರಿಗೆ ಆಶೀರ್ವಾದಮಾಡಿರಿ; ನಿಮ್ಮನ್ನು
ಬಯ್ಯುವವರಿಗೋಸ್ಕರ ದೇವರನ್ನು ಪ್ರಾರ್ಥಿಸಿರಿ.
29 ನಿನ್ನನ್ನು ಕೆನ್ನೆಯ ಮೇಲೆ ಬಡಿದವನಿಗೆ ಮತ್ತೊಂದು
ಕೆನ್ನೆಯನ್ನೂ ತಿರುಗಿಸು; ನಿನ್ನ ಮೇಲಂಗಿಯನ್ನು ಕಸು
ಕೊಳ್ಳುವವನಿಗೆ ಒಳಂಗಿಯನ್ನೂ ತಡೆಯಬೇಡ.
30 ನಿನ್ನನ್ನು ಬೇಡುವವರೆಲ್ಲರಿಗೆ ಕೊಡು; ನಿನ್ನ ಸೊತ್ತು
ಕಸುಕೊಳ್ಳುವವನನ್ನು ಹಿಂದಕ್ಕೆ ಕೊಡೆಂದು ಕೇಳಬೇಡ.
31 ಜನರು ನಿಮಗೆ ಏನೇನು ಮಾಡಬೇಕೆಂದು ಅಪೇಕ್ಷಿಸು
ತ್ತೀರೋ, ಅಂಥದನ್ನೇ ನೀವು ಅವರಿಗೆ ಮಾಡಿರಿ.
32 ನಿಮಗೆ ಪ್ರೀತಿ ತೋರಿಸುವವರನ್ನೇ ನೀವು ಪ್ರೀತಿಸಿದರೆ
ನಿಮಗೆ ಏನು ಹೊಗಳಿಕೆ ಬಂದೀತು? ಪಾಪಿಷ್ಠರು ಸಹ
ತಮಗೆ ಪ್ರೀತಿ ತೋರಿಸುವವರನ್ನು ಪ್ರೀತಿಸುತ್ತಾರಲ್ಲಾ.
33 ನಿಮಗೆ ಮೇಲನ್ನು ಮಾಡುವವರಿಗೇ ನೀವು ಮೇಲನ್ನು
ಮಾಡಿದರೆ ನಿಮಗೆ ಏನು ಹೊಗಳಿಕೆ ಬಂದೀತು?
34 ಪಾಪಿಷ್ಠರು ಸಹ ಹಾಗೆ ಮಾಡುತ್ತಾರಲ್ಲಾ. ಅವರು
ನಮಗೂ ಸಾಲಕೊಟ್ಟಾರೆಂದು ನೀವು ಯಾರಿಗಾದರೂ
ಸಾಲಕೊಟ್ಟರೆ, ನಿಮಗೆ ಏನು ಹೊಗಳಿಕೆ ಬಂದೀತು?
ಪಾಪಿಷ್ಠರು ಸಹ ತಾವು ಕೊಟ್ಟಷ್ಟು ತಮಗೆ ತಿರಿಗಿ
ಸಿಕ್ಕೀತೆಂದು ಪಾಪಿಷ್ಠರಿಗೆ ಸಾಲ ಕೊಡುತ್ತಾರಲ್ಲಾ.
35 ನೀವಾದರೋ ನಿಮ್ಮ ವೈರಿಗಳನ್ನು ಪ್ರೀತಿಸಿ ಅವರಿಗೆ
ಉಪಕಾರಮಾಡಿರಿ. [1]ಧೈರ್ಯವನ್ನು ಬಿಡದೆ ಸಾಲ
ಕೊಡಿರಿ[2]; ಹೀಗೆ ಮಾಡಿದರೆ, ನಿಮಗೆ ಬಹಳ ಫಲ
ಸಿಕ್ಕುವದು, ಮತ್ತು ನೀವು ಪರಾತ್ಪರನ ಮಕ್ಕಳಾಗು
ವಿರಿ. ಆತನಂತೂ ಉಪಕಾರನೆನಸದವರಿಗೂ ಕೆಟ್ಟವರಿ
36 ಗೂ ಉಪಕಾರಿಯಾಗಿದ್ದಾನೆ. ನಿಮ್ಮ ತಂದೆ ಕರುಣ
ವುಳ್ಳವನಾಗಿರುವ ಪ್ರಕಾರವೇ ನೀವೂ ಕರುಣವುಳ್ಳವ
ರಾಗಿರಿ.
37 ಇದಲ್ಲದೆ ತೀರ್ಪುಮಾಡಬೇಡಿರಿ, ಆಗ ನಿಮಗೂ
ತೀರ್ಪಾಗುವದಿಲ್ಲ; ಅಪರಾಧಿಯೆಂದು ನಿರ್ಣಯಿಸ
ಬೇಡಿರಿ, ಆಗ ನಿಮ್ಮನ್ನೂ ಅಪರಾಧಿಗಳೆಂದು ನಿರ್ಣಯಿ
ಸುವದಿಲ್ಲ; ಬಿಡಿಸಿರಿ, ಆಗ ನಿಮ್ಮನ್ನು ಬಿಡಿಸುವರು;
38 ಕೊಡಿರಿ, ಆಗ ನಿಮಗೂ ಕೊಡುವರು; ಜಡಿದು ಅಲ್ಲಾ
ಡಿಸಿ ಹೊರ ಚೆಲ್ಲುವ ಹಾಗೆ ತುಂಬಾ ಅಳತೆಯನ್ನು
ಅಳೆದು ನಿಮ್ಮ ಸೆರಗಿಗೆ ಹಾಕುವರು. ನೀವು ಅಳೆ
ಯುವ ಅಳತೆಯಿಂದಲೇ ನಿಮಗೂ ಅಳೆಯುವರು
ಅಂದನು.
39 ಇದಲ್ಲದೆ ಆತನು ಅವರಿಗೆ ಒಂದು ಸಾಮ್ಯವನ್ನು
ಹೇಳಿದನು. ಅದೇನಂದರೆ—ಕುರುಡನು ಕುರುಡನಿಗೆ
ದಾರೀ ತೋರಿಸುವದಕ್ಕಾದೀತೇ? ಅವರಿಬ್ಬರೂ ಕುಣಿ
40 ಯಲ್ಲಿ ಬೀಳುವರಲ್ಲವೆ. ಗುರುವಿಗಿಂತ ಶಿಷ್ಯನು ದೊಡ್ಡ
ವನಲ್ಲ; ಆದರೆ ತೀರಾ ಕಲಿತವನಾದ ಪ್ರತಿಯೊಬ್ಬನು
ತನ್ನ ಗುರುವಿನಂತಾಗಿರುವನು.
41 ಇದಲ್ಲದೆ ನೀನು ನಿನ್ನ ಕಣ್ಣಿನಲ್ಲಿರುವ ತೊಲೆ
ಯನ್ನು ಯೋಚಿಸದೆ ನಿನ್ನ ಸಹೋದರನ ಕಣ್ಣಿನಲ್
ರುವ ರವೆಯನ್ನು ಯೋಚಿಸುವದೇಕೆ? ಇಲ್ಲವೆ ನಿನ್
ಕಣ್ಣಿನಲ್ಲಿರುವ ತೊಲೆಯನ್ನೇ ನೀನು ನೋಡದೆ ನಿನ್
ಸಹೋದರನಿಗೆ—ಅಣ್ಣಾ, ನಿನ್ನ ಕಣ್ಣಿನೊಳಗಿನ ರ
ಯನ್ನು ತೆಗೆಯುತ್ತೇನೆ ಬಾ ಎಂದು ಹೇಳುವದಕ
ಹೇಗಾದೀತು? ಕಪಟಿಯೇ, ಮೊದಲು ನಿನ್ನ ಕಣ್
ನೊಳಗಿಂದ ತೊಲೆಯನ್ನು ತೆಗೆದುಹಾಕಿಕೋ,
ಮೇಲೆ ನಿನ್ನ ಸಹೋದರನ ಕಣ್ಣಿನೊಳಗಿನ ರವೆಯನ್
ತೆಗೆಯುವದಕ್ಕೆ ಚೆನ್ನಾಗಿ ಕಾಣಿಸುವದು. ಒಳ್ಳೆಯ
ಮರವು ಹುಳುಕು ಫಲವನ್ನು ಕೊಡುವದಿಲ್ಲ; ಹಾಗ
ಯೇ ಹುಳುಕುಮರವು ಒಳ್ಳೆಯ ಫಲವನ್ನು ಕೊಡುವ
ದಿಲ್ಲ. ಪ್ರತಿಯೊಂದು ಮರದ ಗುಣವು ಅದರ ಫಲ
ದಿಂದಲೇ ಗೊತ್ತಾಗುವದು. ಮುಳ್ಳುಗಿಡಗಳಲ್ಲಿ
ಅಂಜೂರದ ಹಣ್ಣುಗಳನ್ನು ಕೀಳುವದಿಲ್ಲ; ಗಜ್ಜುಗದ
ಮೆಳೆಯಲ್ಲಿ ದ್ರಾಕ್ಷೇಹಣ್ಣುಗಳನ್ನು ಕೊಯ್ಯುವದಿಲ್ಲ
ಒಳ್ಳೆಯವನು ತನ್ನ ಹೃದಯವೆಂಬ ಒಳ್ಳೆಯ ಬೊಕ್ಕಸ
ದೊಳಗಿಂದ ಒಳ್ಳೆಯದನ್ನು ತರುತ್ತಾನೆ; ಕೆಟ್ಟವನು ಕೆಟ್ಟ
ಬೊಕ್ಕಸದೊಳಗಿಂದ ಕೆಟ್ಟದ್ದನ್ನು ತರುತ್ತಾನೆ; ಹೃದಯ
ದಲ್ಲಿ ತುಂಬಿರುವದೇ ಬಾಯಲ್ಲಿ ಹೊರಡುವದು.
ಇದಲ್ಲದೆ ನೀವು ನನ್ನನ್ನು ಸ್ವಾಮೀ ಸ್ವಾಮೀ
ಅಂತ ಕರೆದು ನಾನು ಹೇಳುವದನ್ನು ನಡಿಸದೆ ಇರುವ
ದೇಕೆ? ನನ್ನ ಬಳಿಗೆ ಬಂದು ನನ್ನ ಮಾತುಗಳನ್ನು
ಕೇಳಿ ಅವುಗಳಂತೆ ನಡೆಯುವವನು ಯಾರಿಗೆ ಸಮಾನ
ನೆಂಬದನ್ನು ನಿಮಗೆ ತೋರಿಸುತ್ತೇನೆ. ಅವನು ಆಳ
ವಾಗಿ ಅಗಿದು ಬಂಡೆಯ ಮೇಲೆ ಅಸ್ತಿವಾರವನ್ನು ಹಾಕಿ
ಮನೇ ಕಟ್ಟಿದವನಿಗೆ ಸಮಾನನು; ಹೊಳೆಬಂದು ಪ್ರವಾ
ಹವು ಆ ಮನೆಗೆ ಬಡಿದಾಗ್ಯೂ ಅದು ಚೆನ್ನಾಗಿ ಕಟ್ಟಿದ್ದ
ರಿಂದ ಆ ಪ್ರವಾಹವು ಅದನ್ನು ಅಲ್ಲಾಡಿಸಲಾರದೆ
ಹೋಯಿತು. ಆದರೆ ನನ್ನ ಮಾತುಗಳನ್ನು ಕೇಳಿಯೂ
ಅವುಗಳಂತೆ ನಡೆಯದಿರುವವನು ಅಸ್ತಿವಾರವಿಲ್ಲದೆ
ನೆಲದ ಮೇಲೆ ಮನೇ ಕಟ್ಟಿದವನಿಗೆ ಸಮಾನನು.
ಪ್ರವಾಹವು ಅದಕ್ಕೆ ಬಡಿಯಿತು; ಬಡಿದ ಕೂಡಲೆ
ಅದು ಕುಸಿದುಬಿದ್ದು ಪೂರಾ ಹಾಳಾಯಿತು.

ಯೇಸು ಶತಾಧಿಪತಿಯ ಆಳನ್ನು ಸ್ವಸ್ಥಮಾಡಿದ್ದು.
(ಮತ್ತಾ. 8. 5—13.)

ಆತನು ತನ್ನ ಮಾತುಗಳನ್ನೆಲ್ಲಾ ಜನರು ಕೇಳು
ವಂತೆ ಹೇಳಿ ಮುಗಿಸಿದ ಮೇಲೆ ಕಪೆರ್ನೌಮಿಗೆ ಬಂದ
ನು. ಅಲ್ಲಿ ದಂಡಿನ [3]ಶತಾಧಿಪತಿಗೆ ಇಷ್ಟನಾದ ಒಬ್ಬ
ಆಳು ಕ್ಷೇಮವಿಲ್ಲದೆ ಸಾಯುವ ಹಾಗಿದ್ದನು.
ಅವನು ಯೇಸುವಿನ ಸುದ್ದಿಯನ್ನು ಕೇಳಿ ಆತನ
ಬಳಿಗೆ—ನೀನು ಬಂದು ನನ್ನ ಆಳನ್ನು ಸ್ವಸ್ಥಮಾಡ
ಬೇಕೆಂದು ಆತನನ್ನು ಬೇಡಿಕೊಳ್ಳುವ ಹಾಗೆ ಯೆಹೂ
ದ್ಯರ ಹಿರಿಯರನ್ನು ಕಳುಹಿಸಿದನು. ಅವರು ಯೇಸು
ವಿನ ಬಳಿಗೆ ಬಂದು—ನಿನ್ನಿಂದ ಇಂಥ ಉಪಕಾರ

---

1) ಅಥವಾ, ತಿರಿಗಿ ಸಿಕ್ಕೀತೆಂದು ಆಶೆಯಿಟ್ಟುಕೊಳ್ಳದೆ. 2) ಕೆಲವು ಪ್ರತಿಗಳಲ್ಲಿ—ಒಬ್ಬರ ವಿಷಯದಲ್ಲಿಯೂ ನಿರಾಶೆಪಡದೆ, ನಿ
ವೈರಿಗಳನ್ನು ಪ್ರೀತಿಸಿ, ಉಪಕಾರ ಮಾಡಿರಿ, ಸಾಲಕೊಡಿರಿ ಎಂದು ಬರೆದದೆ. 3) ಶತಾಧಿಪತಿ ಅಂದರೆ ನೂರು ಸಿಪಾಯಿಗಳ ಮೇಲಿ
ಸರದಾರನು.

5 ಹೊಂದುವದಕ್ಕೆ ಅವನು ಯೋಗ್ಯನು; ಅವನು ನಮ್ಮ
ಜನರನ್ನು ಪ್ರೀತಿಸುವವನು, ತಾನೇ ನಮ್ಮ ಸಭಾ
ಮಂದಿರವನ್ನು ನಮಗಾಗಿ ಕಟ್ಟಿಸಿದನು ಎಂದು ಆತ
6 ನನ್ನು ಬಹಳವಾಗಿ ಬೇಡಿಕೊಳ್ಳಲು ಯೇಸು ಅವರ
ಸಂಗಡ ಹೋದನು. ಆತನು ಇನ್ನೂ ಮನೆಗೆ ಮುಟ್ಟು
ವದಕ್ಕೆ ಸ್ವಲ್ಪ ದೂರವಿರುವಾಗಲೇ ಶತಾಧಿಪತಿಯು
ಸ್ನೇಹಿತರನ್ನು ಆತನ ಬಳಿಗೆ ಕಳುಹಿಸಿ—ಪ್ರಭುವೇ,
ತೊಂದರೆ ತೆಗೆದುಕೊಳ್ಳ ಬೇಡ; ನೀನು ನನ್ನ ಮನೆಗೆ
7 ಬರತಕ್ಕಷ್ಟು ಯೋಗ್ಯತೆ ನನ್ನಲ್ಲಿಲ್ಲ. ಈ ಕಾರಣದಿಂದ
ನಾನು ನನ್ನನ್ನು ನಿನ್ನ ಬಳಿಗೆ ಬರುವದಕ್ಕೆ ತಕ್ಕವನೆಂದು
ಎಣಿಸಿಕೊಳ್ಳಲಿಲ್ಲ. ಆದರೆ ನೀನು ಒಂದು ಮಾತು
8 ಹೇಳು, ನನ್ನ ಆಳಿಗೆ ಗುಣವಾಗುವದು. ನಾನು ಸಹ
ಮತ್ತೊಬ್ಬರ ಕೈಕೆಳಗಿರುವವನು; ನನ್ನ ಕೈಕೆಳಗೆ ಸಿಪಾ
ಯಿಗಳಿದ್ದಾರೆ; ನಾನು ಅವರಲ್ಲಿ ಒಬ್ಬನಿಗೆ ಹೋಗು
ಎಂದು ಹೇಳಿದರೆ ಹೋಗುತ್ತಾನೆ; ಮತ್ತೊಬ್ಬನಿಗೆ ಬಾ
ಎಂದು ಹೇಳಿದರೆ ಬರುತ್ತಾನೆ; ನನ್ನ ಆಳಿಗೆ ಇಂಥಿಂಥ
ದನ್ನು ಮಾಡು ಎಂದು ಹೇಳಿದರೆ ಮಾಡುತ್ತಾನೆ ಎಂಬ
9 ದಾಗಿ ಹೇಳಿಸಿದನು. ಯೇಸು ಈ ಮಾತನ್ನು ಕೇಳಿ
ಅವನ ವಿಷಯದಲ್ಲಿ ಆಶ್ಚರ್ಯಪಟ್ಟು ತನ್ನ ಹಿಂದೆ
ಬರುತ್ತಿರುವ ಗುಂಪನ್ನು ಹಿಂತಿರುಗಿ ನೋಡಿ—ನಾನು
ಇಂಥ ದೊಡ್ಡ ನಂಬಿಕೆಯನ್ನು ಇಸ್ರಾಯೇಲ್ ಜನರಲ್ಲಿ
ಯೂ ಕಾಣಲಿಲ್ಲವೆಂದು ನಿಮಗೆ ಹೇಳುತ್ತೇನೆ ಅಂದನು.
10 ತರುವಾಯ ಆ ಶತಾಧಿಪತಿಯು ಕಡೆಯಿಂದ ಬಂದವರು
ತಿರಿಗಿ ಮನೆಗೆ ಹೋಗಿ ಆಳು ಆರೋಗ್ಯವಾಗಿರುವದನ್ನು
ಕಂಡರು.

ನಾಯಿನೆಂಬ ಊರಿನಲ್ಲಿ ಸತ್ತುಹೋಗಿದ್ದ ಒಬ್ಬ ಯೌವನಸ್ಥ
ನನ್ನು ಯೇಸು ಬದುಕಿಸಿದ್ದು.

11 ಸ್ವಲ್ಪಕಾಲದ ಮೇಲೆ ಆತನು ನಾಯಿನೆಂಬ ಊರಿಗೆ
ಹೋದನು. ಆತನ ಜೊತೆಯಲ್ಲಿ ಆತನ ಶಿಷ್ಯರೂ
12 ಇನ್ನೂ ಅನೇಕ ಜನರೂ ಹೋಗುತ್ತಿದ್ದರು. ಆತನು
ಊರಬಾಗಲಿನ ಹತ್ತಿರಕ್ಕೆ ಬಂದಾಗ ಸತ್ತುಹೋಗಿದ್ದ
ಒಬ್ಬನನ್ನು ಹೊರಗೆ ತರುತ್ತಿದ್ದರು. ಇವನು ತನ್ನ
ತಾಯಿಗೆ ಒಬ್ಬನೇ ಮಗನು; ಆಕೆಯು ಗಂಡಸತ್ತವ
ಳಾಗಿದ್ದಳು. ಆಕೆಯ ಸಂಗಡ ಗ್ರಾಮಸ್ಥರು ಅನೇಕರಿ
13 ದ್ದರು. ಸ್ವಾಮಿಯು ಆಕೆಯನ್ನು ಕಂಡು ಕನಿಕರಿಸಿ—
14 ಅಳಬೇಡ ಎಂದು ಆಕೆಗೆ ಹೇಳಿ ಚಟ್ಟದ ಹತ್ತಿರಕ್ಕೆ
ಹೋಗಿ ಅದನ್ನು ಮುಟ್ಟಲು ಹೊತ್ತುಕೊಂಡವರು
ನಿಂತರು. ಆಗ ಆತನು—ಯೌವನಸ್ಥನೇ, ಏಳು ಎಂದು
15 ನಿನಗೆ ಹೇಳುತ್ತೇನೆ ಅಂದನು. ಅನ್ನುತ್ತಲೇ ಸತ್ತಿದ್ದ
ವನು ಎದ್ದು ಕೂತುಕೊಂಡು ಮಾತಾಡುವದಕ್ಕೆ ತೊಡ
ಗಿದನು. ಯೇಸು ಅವನನ್ನು ಅವನ ತಾಯಿಗೆ ಕೊಟ್ಟ
16 ನು. ಎಲ್ಲರು ಭಯಹಿಡಿದವರಾಗಿ—ಮಹಾಪ್ರವಾದಿ
ಯು ನಮ್ಮಲ್ಲಿ ಎದ್ದಿದ್ದಾನೆ, ದೇವರು ತನ್ನ ಜನರಿಗೆ
ದರ್ಶನವನ್ನು ಅನುಗ್ರಹಿಸಿದ್ದಾನೆ ಎಂದು ದೇವರನ್ನು
17 ಕೊಂಡಾಡುವವರಾದರು. ಈ ವಾರ್ತೆಯು ಯೂದಾ
ಯದಲ್ಲಿಯೂ ಸುತ್ತಲಿರುವ ಎಲ್ಲಾ ಪ್ರಾಂತ್ಯದಲ್ಲಿಯೂ
ಹಬ್ಬಿತು.

ಸ್ನಾನಿಕನಾದ ಯೋಹಾನನು ಹೇಳಿಕಳುಹಿಸಿದ ಮಾತಿಗೆ ಯೇಸು
ಉತ್ತರಕೊಟ್ಟದ್ದು.
(ಮತ್ತಾ. 11. 2—19.)

ಯೋಹಾನನ ಶಿಷ್ಯರು ನಡೆದ ಸಂಗತಿಗಳನ್ನೆಲ್ಲಾ 18
ಅವನಿಗೆ ತಿಳಿಸಲು ಅವನು ತನ್ನ ಶಿಷ್ಯರಲ್ಲಿ ಇಬ್ಬರನ್ನು 19
ಕರೆದು—ಬರಬೇಕಾದವನು ನೀನೋ, ನಾವು ಬೇರೊ
ಬ್ಬನ ದಾರಿಯನ್ನು ನೋಡಬೇಕೋ ಎಂದು ಸ್ವಾಮಿಗೆ
ಹೇಳಿಕಳುಹಿಸಿದನು. ಅವರು ಆತನ ಬಳಿಗೆ ಬಂದು— 20
ಬರಬೇಕಾದವನು ನೀನೋ, ನಾವು ಮತ್ತೊಬ್ಬನ ದಾರಿ
ಯನ್ನು ನೋಡಬೇಕೋ ಎಂದು ಕೇಳುವದಕ್ಕಾಗಿ
ಸ್ನಾನಿಕನಾದ ಯೋಹಾನನು ನಮ್ಮನ್ನು ನಿನ್ನ ಬಳಿಗೆ
ಕಳುಹಿಸಿದ್ದಾನೆ ಅಂದರು. ಅದೇ ಗಳಿಗೆಯಲ್ಲಿ ಆತನು 21
ಅನೇಕರನ್ನು ರೋಗ ಉಪದ್ರವ ದೆವ್ವ ಇಂಥವುಗಳಿಂದ
ಬಿಡಿಸಿ ವಾಸಿಮಾಡಿದನು; ಮತ್ತು ಅನೇಕ ಮಂದಿ
ಕುರುಡರಿಗೆ ಕಣ್ಣನ್ನು ದಯಪಾಲಿಸಿದನು. ಹೀಗಿರಲು 22
ಆತನು ಅವರಿಗೆ ಪ್ರತ್ಯುತ್ತರವಾಗಿ—ನೀವು ಹೋಗಿ
ಕಂಡು ಕೇಳಿದವುಗಳನ್ನು ಯೋಹಾನನಿಗೆ ತಿಳಿಸಿರಿ;
ಕುರುಡರಿಗೆ ಕಣ್ಣು ಬರುತ್ತವೆ, ಕುಂಟರಿಗೆ ಕಾಲುಬರು
ತ್ತವೆ, ಕುಷ್ಠರೋಗಿಗಳು ಶುದ್ಧರಾಗುತ್ತಾರೆ, ಕಿವುಡರಿಗೆ
ಕಿವಿಬರುತ್ತವೆ, ಸತ್ತವರು ಜೀವವನ್ನು ಹೊಂದುತ್ತಾರೆ,
ಬಡವರಿಗೆ ಸುವಾರ್ತೆ ಸಾರಲ್ಪಡುತ್ತದೆ. ನನ್ನ ವಿಷಯ 23
ದಲ್ಲಿ ಸಂಶಯಪಡದವನೇ ಧನ್ಯನು ಎಂದು ಹೇಳಿದನು.
ಯೋಹಾನನ ದೂತರು ಹಿಂತಿರುಗಿ ಹೋಗಲು 24
ಆತನು ಯೋಹಾನನ ವಿಷಯವಾಗಿ ಆ ಜನರ ಗುಂಪು
ಗಳಿಗೆ ಹೇಳತೊಡಗಿದ್ದೇನಂದರೆ—ಏನು ನೋಡ
ಬೇಕೆಂದು ಅಡವಿಗೆ ಹೋಗಿದ್ದಿರಿ? ಗಾಳಿಯಿಂದ ಅಲ್ಲಾ
ಡುವ ದಂಟನ್ನೋ? ಅಲ್ಲವಾದರೆ ಏನು ನೋಡಬೇಕೆಂದು 25
ಹೋಗಿದ್ದಿರಿ? ನಯವಾದ ಉಡುಪನ್ನು ಹಾಕಿಕೊಂಡ
ಮನುಷ್ಯನನ್ನೋ? ಶೋಭಾಯಮಾನವಾದ ಉಡುಪ
ನ್ನು ಧರಿಸಿ ಭೋಗದಲ್ಲಿ ಬಾಳುವವರು ಅರಮನೆಗಳಲ್ಲಿ
ಇರುತ್ತಾರಷ್ಟೆ. ಹಾಗಾದರೆ ಏನು ನೋಡಬೇಕೆಂದು 26
ಹೋಗಿದ್ದಿರಿ? ಪ್ರವಾದಿಯನ್ನೋ? ಹೌದು, ಪ್ರವಾದಿ
ಗಿಂತಲೂ ಹೆಚ್ಚಿನವನನ್ನು ನೋಡಿದಿರಿ ಎಂದು ನಿಮಗೆ
ಹೇಳುತ್ತೇನೆ.
ಇಗೋ, ನನ್ನ ದೂತನನ್ನು ನಿನ್ನ ಮುಂದೆ 27
ಕಳುಹಿಸುತ್ತೇನೆ.
ನೀನು ಹೋಗುವ ದಾರಿಯನ್ನು ಅವನು ನಿನ್ನ
ಮುಂದೆ ಸರಿಮಾಡುವನು
ಎಂದು ಯಾರ ವಿಷಯವಾಗಿ ಬರೆದದೆಯೋ ಆ ಪುರು
ಷನು ಇವನೇ. ಸ್ತ್ರೀಯರಲ್ಲಿ ಹುಟ್ಟಿದವರೊಳಗೆ 28
ಯೋಹಾನನಿಗಿಂತ ದೊಡ್ಡವನು ಒಬ್ಬನೂ ಇಲ್ಲ;
ಆದರೂ ದೇವರ ರಾಜ್ಯದಲ್ಲಿ ಚಿಕ್ಕವನು ಅವನಿಗಿಂತಲೂ
ದೊಡ್ಡವನೆಂದು ನಿಮಗೆ ಹೇಳುತ್ತೇನೆ. ಇದಲ್ಲದೆ 29
ಜನರೆಲ್ಲರೂ ಸುಂಕದವರೂ ಯೋಹಾನನ ಉಪದೇಶ
ವನ್ನು ಕೇಳಿದಾಗ ಅವನಿಂದ ದೀಕ್ಷಾಸ್ನಾನ ಮಾಡಿಸಿ
ಕೊಂಡದ್ದರಲ್ಲಿ ದೇವರು ನೀತಿವಂತನೆಂದು ಒಪ್ಪಿ
ಕೊಂಡರು. ಆದರೆ ಫರಿಸಾಯರೂ ಧರ್ಮೋಪದೇಶ 30
ಕರೂ ಅವನಿಂದ ದೀಕ್ಷಾಸ್ನಾನ ಮಾಡಿಸಿಕೊಳ್ಳದೆ

ಹೋದದ್ದರಲ್ಲಿ ತಮ್ಮ 1) ವಿಷಯವಾಗಿ ದೇವರ ಸಂಕಲ್ಪ
31 ವನ್ನು ನಿರಾಕರಿಸಿದರು. ಹೀಗಿರುವಲ್ಲಿ ಈ ಕಾಲದ
ಜನರನ್ನು ಯಾರಿಗೆ ಹೋಲಿಸಲಿ? ಅವರು ಯಾರನ್ನು
32 ಹೋಲುತ್ತಾರೆ? ಪೇಟೆಯಲ್ಲಿ ಕೂತುಕೊಂಡು—ನಿಮ
ಗೋಸ್ಕರ ಕೊಳಲೂದಿದೆವು, ನೀವು ಕುಣಿಯಲಿಲ್ಲ;
ಗೋಳಾಡಿದೆವು, ನೀವು ಅಳಲಿಲ್ಲ ಎಂದು ಒಬ್ಬರಿಗೊಬ್ಬ
ರು ಕೂಗಿ ಹೇಳುವಂಥ ಹುಡುಗರನ್ನು ಹೋಲುತ್ತಾರೆ.
33 ಹೇಗಂದರೆ ಸ್ನಾನಿಕನಾದ ಯೋಹಾನನು ಬಂದಿದ್ದಾನೆ;
ಅವನು ರೊಟ್ಟಿ ತಿನ್ನದವನು, ದ್ರಾಕ್ಷಾರಸ ಕುಡಿಯ
ದವನು; ನೀವು—ಅವನಿಗೆ ದೆವ್ವ ಹಿಡಿದದೆ ಅನ್ನುತ್ತೀರಿ.
34 ಮನುಷ್ಯಕುಮಾರನು ಬಂದಿದ್ದಾನೆ, ಅವನು ಅನ್ನ
ಪಾನಗಳನ್ನು ತೆಗೆದುಕೊಳ್ಳುವವನಾಗಿದ್ದಾನೆ; ನೀವು—
ಇಗೋ, ಇವನು ಹೊಟ್ಟೆಬಾಕನು, ಕುಡುಕನು,
2)ಭ್ರಷ್ಟರ ಮತ್ತು ಪಾಪಿಷ್ಠರ ಗೆಳೆಯನು ಅನ್ನುತ್ತೀರಿ.
35 ಆದರೆ ಜ್ಞಾನವು ಸಕಲ ಜ್ಞಾನಾವಲಂಬಿಗಳ ಮೂಲಕ
ಜ್ಞಾನವೇ ಎಂದು ಗೊತ್ತಾಗುವದು ಅಂದನು.

### ಯೇಸು ಒಬ್ಬ ಫರಿಸಾಯನ ಮನೆಯಲ್ಲಿ ಊಟಮಾಡುವಾಗ ದುರಾಚಾರಿಯಾದ ಒಬ್ಬ ಹೆಂಗಸು ಬಂದು ಆತನ ಪಾದಸೇವೆ ಮಾಡಿದ್ದು.

36 ಫರಿಸಾಯರಲ್ಲಿ ಒಬ್ಬನು ಆತನನ್ನು ತನ್ನ ಜೊತೆ
ಯಲ್ಲಿ ಊಟಮಾಡಬೇಕೆಂದು ಬೇಡಿಕೊಂಡಾಗ ಆತನು
ಆ ಫರಿಸಾಯನ ಮನೆಗೆ ಹೋಗಿ ಊಟಕ್ಕೆ ಒರಗಿ
37 ಕೊಂಡನು. ಆಗ ಆ ಊರಲ್ಲಿದ್ದ ದುರಾಚಾರಿಯಾದ
ಒಬ್ಬ ಹೆಂಗಸು ಫರಿಸಾಯನ ಮನೆಯಲ್ಲಿ ಆತನು
ಊಟಕ್ಕೆ ಒರಗಿದ್ದಾನೆಂದು ಗೊತ್ತುಹಿಡುಕೊಂಡು
ಸುಗಂಧತೈಲದ ಭರಣಿಯನ್ನು ತೆಗೆದುಕೊಂಡು ಬಂದು
38 ಹಿಂದೆ ಆತನ ಪಾದಗಳ ಬಳಿಯಲ್ಲಿ ನಿಂತುಕೊಂಡು
ಅಳುತ್ತಾ ತನ್ನ ಕಣ್ಣೀರಿನಿಂದ ಆತನ ಪಾದಗಳನ್ನು
ತ್ಯಾವಮಾಡಿ ತನ್ನ ತಲೇಕೂದಲಿನಿಂದ ಒರಸಿ ಅವು
39 ಗಳಿಗೆ ಮುದ್ದಿಟ್ಟು ಆ ತೈಲವನ್ನು ಹಚ್ಚಿದಳು. ಆದರೆ
ಆತನನ್ನು ಊಟಕ್ಕೆ ಕರೆದ ಫರಿಸಾಯನು ಇದನ್ನು
ಕಂಡು—ಇವಳು ದುರಾಚಾರಿ; ಇವನು 3)ಪ್ರವಾದಿ
ಯಾಗಿದ್ದರೆ ತನ್ನನ್ನು ಮುಟ್ಟಿದ ಈ ಹೆಂಗಸು ಇಂಥವ
40 ಳೆಂದು ತಿಳುಕೊಳ್ಳುತ್ತಿದ್ದನು ಅಂದುಕೊಂಡನು. ಆದಕ್ಕೆ
ಯೇಸು—ಸೀಮೋನನೇ, ನಾನು ನಿನಗೆ ಹೇಳಬೇಕಾದ
ಒಂದು ಮಾತದೆ ಅಂದಾಗ ಅವನು—ಬೋಧಕನೇ,
41 ಹೇಳು ಅಂದನು. ಆಗ ಯೇಸು—ಒಬ್ಬ ಸಾಹುಕಾರ
ನಿಗೆ ಇಬ್ಬರು ಸಾಲಗಾರರಿದ್ದರು; ಒಬ್ಬನು ಐನೂರು
ಹಣ ಕೊಡಬೇಕಾಗಿತ್ತು. ಮತ್ತೊಬ್ಬನು ಐವತ್ತು
42 ಹಣ ಕೊಡಬೇಕಾಗಿತ್ತು. ತೀರಿಸುವದಕ್ಕೆ ಅವರಿಗೆ ಗತಿ
ಯಿಲ್ಲದ್ದರಿಂದ ಆ ಇಬ್ಬರಿಗೂ ಸಾಲವನ್ನು ಬಿಟ್ಟು
ಬಿಟ್ಟನು. ಹಾಗಾದರೆ ಅವರಲ್ಲಿ ಯಾವನು ಆ ಸಾಹು
ಕಾರನನ್ನು ಹೆಚ್ಚಾಗಿ ಪ್ರೀತಿಸಾನು ಎಂದು ಕೇಳಿದ್ದಕ್ಕೆ
43 ಸೀಮೋನನು—ಯಾವನಿಗೆ ಹೆಚ್ಚಾಗಿ ಬಿಟ್ಟನೋ
ಅವನೇ ಎಂದು ಭಾವಿಸುತ್ತೇನೆ ಅಂದನು. ಯೇಸು
ಅವನಿಗೆ—ನೀನು ಸರಿಯಾಗಿ ತೀರ್ಪುಮಾಡಿದಿ ಎಂದು

ಹೇಳಿ ಆ ಹೆಂಗಸಿನ ಕಡೆಗೆ ತಿರುಗಿಕೊಂಡು ಸೀಮೋ
ನಿಗೆ ಹೇಳಿದ್ದೇನಂದರೆ—ಈ ಹೆಂಗಸನ್ನು ನೋಡಿದಿಯಾ
ನಾನು ನಿನ್ನ ಮನೆಗೆ ಬಂದಾಗ ನೀನು ನನ್ನ ಕಾಲಿ
ನೀರು ಕೊಡಲಿಲ್ಲ; ಇವಳಾದರೋ ನನ್ನ ಕಾಲ
ಗಳನ್ನು ಕಣ್ಣೀರಿನಿಂದ ತ್ಯಾವಮಾಡಿ ತನ್ನ ತಲೆಯಕೂ
ಲಿನಿಂದ ಒರಸಿದಳು. ನೀನು ನನಗೆ ಮುದ್ದಿಡಲಿಲ್ಲ
ಇವಳಾದರೋ ನಾನು ಒಳಗೆ ಬಂದಾಗಿನಿಂದ ನನ್ನ
ಕಾಲಿಗೆ ಮುದ್ದಿಡುವದನ್ನು ಬಿಟ್ಟಿಲ್ಲ. ನೀನು ನನ್ನ
ತಲೆಗೆ ಎಣ್ಣೆ ಹಚ್ಚಲಿಲ್ಲ; ಇವಳಾದರೋ ಸುಗಂಧ
ತೈಲವನ್ನು ಕಾಲಿಗೆ ಹಚ್ಚಿದಳು. ಹೀಗಿರಲು ನಾನು
ಹೇಳುವ ಮಾತೇನಂದರೆ—ಇವಳ ಪಾಪಗಳು ಬಹ
ವಾಗಿದ್ದರೂ ಅವು ಕ್ಷಮಿಸಲ್ಪಟ್ಟವೆ. ಇದಕ್ಕೆ ಪ್ರಮಾಣ
ವೇನಂದರೆ ಇವಳು ತೋರಿಸಿದ ಪ್ರೀತಿ ಬಹಳ. ಆದರ
ಯಾವನಿಗೆ ಸ್ವಲ್ಪ ಮಾತ್ರ ಕ್ಷಮಿಸಲ್ಪಟ್ಟದೆಯೋ
ಅವನು ತೋರಿಸುವ ಪ್ರೀತಿಯು ಸ್ವಲ್ಪವೇ ಅಂದನು
ಆ ಮೇಲೆ ಆತನು ಅವಳಿಗೆ—ನಿನ್ನ ಪಾಪಗಳು
ಕ್ಷಮಿಸಲ್ಪಟ್ಟವೆ ಎಂದು ಹೇಳಿದನು. ಆತನ ಸಂಗಡ
ಊಟಕ್ಕೆ ಒರಗಿಕೊಂಡವರು—ಪಾಪಗಳನ್ನು ಸಹ
ಕ್ಷಮಿಸಿಬಿಡುವವನು ಇವನಾರು ಎಂದು ತಮ್ಮ
ತಮ್ಮೊಳಗೆ ಅಂದುಕೊಂಡರು. ಆದರೆ ಆತನು ಆ
ಹೆಂಗಸಿಗೆ—ನಿನ್ನ ನಂಬಿಕೆಯೇ ನಿನ್ನನ್ನು ರಕ್ಷಿಸಿ ಅದೆ;
ಸಮಾಧಾನದಿಂದ ಹೋಗು ಎಂದು ಹೇಳಿದನು.

### ಯೇಸು ಸುವಾರ್ತೆಯನ್ನು ಸಾರುತ್ತಾ ಸಂಚಾರಮಾಡುವಲ್ಲಿ ಭಕ್ತರಾದ ಸ್ತ್ರೀಯರು ಸೇವೆಮಾಡಿದ್ದು.

ತರುವಾಯ ಆತನು ದೇವರ ರಾಜ್ಯದ ಸುವಾರ್ತೆ
ಯನ್ನು ಸಾರುತ್ತಾ ಊರುಗಳಲ್ಲಿಯೂ ಗ್ರಾಮಗಳಲ್ಲಿ
ಯೂ ಸಂಚರಿಸಿದನು. ಆತನ ಸಂಗಡ ಹನ್ನೆರಡು ಮಂದಿ
ಶಿಷ್ಯರೂ ಇದ್ದರು. ದೆವ್ವಗಳ ಕಾಟದಿಂದಲೂ ರೋಗ
ಗಳಿಂದಲೂ ಗುಣಹೊಂದಿದ ಕೆಲವು ಹೆಂಗಸರು ಸಹ
ಇದ್ದರು. ಈ ಹೆಂಗಸರು ಯಾರಾರಂದರೆ—ಏಳು ದೆವ್ವ
ಗಳು ಬಿಟ್ಟುಹೋಗಿದ್ದ ಮಗ್ದಲದವಳೆಂಬ ಮರಿಯಳು,
ಹೆರೋದನ ಮನೆವಾರ್ತೆಯವನಾದ ಕೂಜನ ಹೆಂಡತಿ
ಯೋಹಾನಳು, ಸುಸನ್ನಳು, ಇನ್ನು ಬೇರೆ ಅನೇಕರು.
ಇವರು ತಮ್ಮ ಆಸ್ತಿಯಿಂದ ಅವನಿಗೆ ಕೊಟ್ಟು ಉಪ
ಚಾರಮಾಡುತ್ತಿದ್ದರು.

### ಬಿತ್ತುವವನ ಸಾಮ್ಯವೂ, ಅದರ ವಿವರವೂ, ದೀಪದ ದೃಷ್ಟಾಂತವೂ.

(ಮತ್ತಾ. 13. 1—23; ಮಾರ್ಕ 4. 1—25.)

ಬಹುಜನರು ಗುಂಪುಕೂಡಿರುವಾಗ ಪಟ್ಟಣಪಟ್ಟಣ
ದಿಂದ ಜನರು ಆತನ ಬಳಿಗೆ ಬರುತ್ತಿರಲು ಆತನು
ಸಾಮ್ಯರೂಪವಾಗಿ ಹೇಳಿದ್ದೇನಂದರೆ—ಬಿತ್ತುವವನು
ಬೀಜವನ್ನು ಬಿತ್ತುವದಕ್ಕೆ ಹೊರಟನು. ಅವನು ಬಿತ್ತು
ವಾಗ ಕೆಲವು ಬೀಜ ದಾರಿಯ ಮಗ್ಗುಲಲ್ಲಿ ಬಿದ್ದು
ತುಳಿಯಲ್ಪಟ್ಟವು; ಆಕಾಶದಲ್ಲಿ ಹಾರಾಡುವ ಹಕ್ಕಿಗಳು
ಅವುಗಳನ್ನು ತಿಂದುಬಿಟ್ಟವು. ಬೇರೆ ಕೆಲವು ಬೀಜ

---

1) ಅಥವಾ, ಕೇಡಿಗಾಗಿ. 2) ಮೂಲ: ಸುಂಕದವರ. 3) ಕೆಲವು ಪ್ರತಿಗಳಲ್ಲಿ—ಆ ಪ್ರವಾದಿಯಾಗಿದ್ದರೆ ಎಂದು ಬರೆದದೆ.

ಬಂಡೆಯ ಮೇಲೆ ಬಿದ್ದವು; ಅವು ಮೊಳೆತು ತ್ಯಾವ
7 ವಿಲ್ಲದ ಕಾರಣ ಒಣಗಿಹೋದವು. ಮತ್ತೆ ಕೆಲವು ಬೀಜ
ಮುಳ್ಳುಗಿಡಗಳ ನಡುವೆ ಬಿದ್ದವು; ಅವುಗಳ ಸಂಗಡ
ಮುಳ್ಳುಗಿಡಗಳು ಬೆಳೆದು ಅವುಗಳನ್ನು ಅಡಗಿಸಿಬಿಟ್ಟವು.
8 ಇನ್ನು ಕೆಲವು ಬೀಜ ಒಳ್ಳೆಯ ನೆಲದಲ್ಲಿ ಬಿದ್ದು ಮೊಳೆತು
ನೂರರಷ್ಟು ಫಲವನ್ನು ಕೊಟ್ಟವು. ಈ ಮಾತುಗಳನ್ನು
ಹೇಳಿ ಆತನು—ಕೇಳುವದಕ್ಕೆ ಕಿವಿಯುಳ್ಳವನು ಕೇಳಲಿ
ಎಂದು ಕೂಗಿದನು.
9 ಆತನ ಶಿಷ್ಯರು—ಈ ಸಾಮ್ಯದ ಅರ್ಥವೇನೆಂದು
10 ಆತನನ್ನು ಕೇಳಿದಾಗ ಆತನು—ದೇವರ ರಾಜ್ಯದ
ಗುಟ್ಟುಗಳನ್ನು ತಿಳಿಯುವ ವರವು ನಿಮಗೇ ಕೊಟ್ಟದೆ,
ಉಳಿದವರಿಗೆ ಕಣ್ಣಿದ್ದರೂ ನೋಡದಂತೆಯೂ, ಕಿವಿ
ಯಿದ್ದರೂ ತಿಳುಕೊಳ್ಳದಂತೆಯೂ ಸಾಮ್ಯರೂಪವಾಗಿ
11 ಹೇಳಲಾಗುತ್ತದೆ. ಈ ಸಾಮ್ಯದ ಅರ್ಥವೇನಂದರೆ—
12 ಆ ಬೀಜವಂದರೆ ದೇವರ ವಾಕ್ಯ. ಕೆಲವರು ವಾಕ್ಯ
ವನ್ನು ಕೇಳಿದ ಕೂಡಲೆ 1)ಸೈತಾನನು ಬಂದು ಅವರು
ನಂಬಿ ರಕ್ಷಣೆಹೊಂದಬಾರದೆಂದು ವಾಕ್ಯವನ್ನು ಅವರ
ಹೃದಯದಿಂದ ತೆಗೆದುಬಿಡುತ್ತಾನೆ; ಇವರೇ ದಾರಿಯ
13 ಮಗ್ಗುಲಾಗಿರುವವರು. ಕೆಲವರು ವಾಕ್ಯವನ್ನು ಕೇಳಿ
ದಾಗಲೇ ಅದನ್ನು ಸಂತೋಷದಿಂದ ಅಂಗೀಕರಿಸುತ್ತಾರೆ;
ಇವರಿಗೆ ಬೇರಿಲ್ಲದ ಕಾರಣ ಸ್ವಲ್ಪಕಾಲ ಮಾತ್ರವೇ
ನಂಬಿಕೊಂಡಿದ್ದು ಶೋಧನೆಯ ಕಾಲದಲ್ಲಿ ಬಿದ್ದು
ಹೋಗುತ್ತಾರೆ; ಇವರೇ ಬಂಡೆಯ ನೆಲವಾಗಿರುವವರು;
14 ಬೇರೆ ಕೆಲವರು ವಾಕ್ಯವನ್ನು ಕೇಳಿದ ಮೇಲೆ ಬರ
ಬರುತ್ತಾ ಈ ಜೀವಮಾನದಲ್ಲಿ ಆಗುವ ಚಿಂತೆ
ಐಶ್ವರ್ಯ ಭೋಗಗಳಿಂದ ಅಡಗಿಸಲ್ಪಟ್ಟು ಫಲವನ್ನು
ಮಾಗಿಸುವದಿಲ್ಲ; ಇವರೇ ಮುಳ್ಳುಗಿಡಗಳಲ್ಲಿ ಬೀಜ
15 ಬಿದ್ದ ನೆಲವಾಗಿರುವವರು. ಮತ್ತೆ ಕೆಲವರು ವಾಕ್ಯ
ವನ್ನು ಕೇಳಿ ಸುಗುಣವುಳ್ಳ ಒಳ್ಳೆಯ ಹೃದಯದಲ್ಲಿ
ಇಟ್ಟುಕೊಂಡು ತಾಳ್ಮೆಯಿಂದ ಫಲವನ್ನು ಕೊಡುತ್ತಾರೆ;
ಇವರೇ ಬೀಜ ಬಿದ್ದ ಒಳ್ಳೆಯ ನೆಲವಾಗಿರುವವರು.
16 ಇದಲ್ಲದೆ ಯಾರೂ ದೀಪವನ್ನು ಹಚ್ಚಿ ಮಡಿಕೆ
ಯಿಂದ ಮುಚ್ಚುವದಿಲ್ಲ, ಮಂಚದ ಕೆಳಗೂ ಇಡುವದಿ
ಲ್ಲ; ಮನೆಯೊಳಕ್ಕೆ ಬರುವವರಿಗೆ ಬೆಳಕುಕಾಣಿಸುವಂತೆ
17 ಅದನ್ನು ದೀಪಸ್ತಂಭದ ಮೇಲೆ ಇಡುತ್ತಾರಷ್ಟೆ. ಪ್ರಕಾ
ಶಕ್ಕೆ ಬಾರದ ಯಾವ ರಹಸ್ಯವೂ ಇಲ್ಲ; ಮತ್ತು ಗೊತ್ತಾ
ಗದೆ ಬೈಲಿಗೆ ಬಾರದೆ ಇರುವಂಥ ಗುಟ್ಟು ಒಂದೂ
18 ಇಲ್ಲ. ಆದದರಿಂದ ನೀವು ಹೇಗೆ ಕಿವಿಗೊಡ ಬೇಕೋ
ನೋಡಿಕೊಳ್ಳಿರಿ; ಯಾಕಂದರೆ ಇದ್ದವನಿಗೆ ಕೊಡಲ್ಪ
ಡುವದು; ಇಲ್ಲದವನ ಕಡೆಯಿಂದ ಅವನು ತನ್ನದೆಂದು
ಎಣಿಸುವಂಥದೂ ತೆಗೆಯಲ್ಪಡುವದು ಅಂದನು.

ದೇವರ ಚಿತ್ತವನ್ನು ಅನುಸರಿಸುವವರೇ ತನ್ನ ಸಂಬಂಧಿಕರೆಂದು
ಯೇಸು ಹೇಳಿದ್ದು.
(ಮತ್ತಾ. 12. 46—50; ಮಾರ್ಕ 3. 31—35.)

19 ಆತನ ತಾಯಿಯೂ ತಮ್ಮಂದಿರೂ ಆತನಿದ್ದಲ್ಲಿಗೆ
ಬಂದು ಜನರ ಗುಂಪಿನ ನಿಮಿತ್ತ ಆತನ ಬಳಿಗೆ ಸೇರ
ಲಾರದೆ ಇದ್ದರು. ಜನರು ಆತನಿಗೆ—ನಿನ್ನ ತಾಯಿ 20
ಯೂ ನಿನ್ನ ಅಣ್ಣತಮ್ಮಂದಿರೂ ನಿನ್ನನ್ನು ಕಾಣಬೇ
ಕೆಂದು ಹೊರಗೆ ನಿಂತಿರುತ್ತಾರೆ ಎಂದು ಹೇಳಿದಾಗ
ಆತನು ಅವರಿಗೆ—ಯಾರು ದೇವರ ವಾಕ್ಯವನ್ನು ಕೇಳಿ 21
ಅದರಂತೆ ನಡೆಯುತ್ತಾರೋ ಅವರೇ ನನಗೆ ತಾಯಿಯೂ
ಅಣ್ಣತಮ್ಮಂದಿರೂ ಆಗಬೇಕು ಎಂದು ಉತ್ತರಕೊಟ್ಟನು.

ಯೇಸು ಸಮುದ್ರದ ಮೇಲಣ ಬಿರುಗಾಳಿಯನ್ನು ನಿಲ್ಲಿಸಿದ್ದು.
(ಮತ್ತಾ. 8. 18, 23—27; ಮಾರ್ಕ 4. 35—41.)

ಒಂದಾನೊಂದು ದಿನದಲ್ಲಿ ಆತನು ತನ್ನ ಶಿಷ್ಯರ 22
ಸಂಗಡ ಒಂದು ದೋಣಿಯನ್ನು ಹತ್ತಿ ಕೆರೆಯ ಆಚೇ
ದಡಕ್ಕೆ ಹೋಗೋಣ ಎಂದು ಅವರಿಗೆ ಹೇಳಲು ಅವರು
ದೋಣಿಯನ್ನು ನೀರಿನೊಳಗೆ ನೂಕಿ ಹೊರಟರು.
ಅವರು ಹೋಗುತ್ತಿರುವಾಗ ಆತನಿಗೆ ನಿದ್ರೆಹತ್ತಿತು; 23
ಅಷ್ಟರಲ್ಲಿ ಬಿರುಗಾಳಿ ಕೆರೆಯ ಮೇಲೆ ಬರಲು ದೋಣಿ
ಯೊಳಗೆ ನೀರು ತುಂಬಿಕೊಂಡದರಿಂದ ಅವರು ಅಪಾ
ಯಕ್ಕೆ ಗುರಿಯಾದರು. ಹೀಗಿರಲಾಗಿ ಅವರು ಆತನ 24
ಹತ್ತರ ಬಂದು—ಗುರುವೇ, ಗುರುವೇ, ಸಾಯುತ್ತೇವೆ
ಎಂದು ಹೇಳಿ ಆತನನ್ನು ಎಬ್ಬಿಸಿದರು. ಆಗ ಆತನು
ಎದ್ದು ಗಾಳಿಯನ್ನೂ ಉಬ್ಬುವ ನೀರನ್ನೂ ಗದರಿಸಿ
ದನು. ಗದರಿಸಲು ಅವು ನಿಂತವು, ಶಾಂತವಾಯಿತು.
ತರುವಾಯ ಆತನು—ನಿಮ್ಮ ನಂಬಿಕೆ ಎಲ್ಲಿ? ಎಂದು 25
ಅವರನ್ನು ಕೇಳಿದನು. ಅವರಾದರೋ ಭಯಪಟ್ಟು—
ಈತನು ಯಾರಿರಬಹುದು ? ಗಾಳಿಗೂ ನೀರಿಗೂ ಅಪ್ಪಣೆ
ಕೊಡುತ್ತಾನೆ; ಅವು ಕೂಡ ಹೇಳಿದ ಹಾಗೆ ಕೇಳುತ್ತ
ವಲ್ಲಾ ಎಂದು ಒಬ್ಬರಿಗೊಬ್ಬರು ಮಾತಾಡಿಕೊಂಡು
ಅತ್ಯಾಶ್ಚರ್ಯಪಟ್ಟರು.

ದೆವ್ವಗಳ ದಂಡಿನಿಂದ ಹಿಡಿಯಲ್ಪಟ್ಟವನನ್ನು ಕುರಿತದ್ದು.
(ಮತ್ತಾ. 8. 24—34; ಮಾರ್ಕ 5. 1—20.)

ಆ ಮೇಲೆ ಅವರು ಗಲಿಲಾಯಕ್ಕೆ ಎದುರಾಗಿರುವ 26
ಗೆರಸೇನರ ಸೀಮೆಗೆ ಮುಟ್ಟಿದರು. ಆತನು ದಡಕ್ಕೆ 27
ಇಳಿಯುತ್ತಲೇ ಆ ಊರಿನವನಾದ ಒಬ್ಬ ಮನುಷ್ಯನು
ಆತನೆದುರಿಗೆ ಬಂದನು. ಅವನಿಗೆ ದೆವ್ವಗಳು ಹಿಡಿ
ದಿದ್ದವು. ಬಹುಕಾಲದಿಂದ ಬಟ್ಟೆಯನ್ನೇ ಹಾಕಿ
ಕೊಳ್ಳದೆ ಯಾವ ಮನೆಯಲ್ಲಿಯೂ ಇರದೆ ಸಮಾ
ಧಿಯ ಗವಿಗಳಲ್ಲಿಯೇ ಇರುತ್ತಿದ್ದನು. ಇವನು 28
ಯೇಸುವನ್ನು ಕಂಡು ಅರ್ಭಟಿಸಿ ಆತನ ಮುಂದೆ
ಬಿದ್ದು ಮಹಾಶಬ್ದದಿಂದ—ಯೇಸುವೇ, ಪರಾತ್ಪರ
ನಾದ ದೇವರ ಮಗನೇ, ನನ್ನ ಗೊಡವೆ ನಿನಗೇಕೆ?
ನನ್ನನ್ನು ಕಾಡಬೇಡವೆಂತ ನಿನ್ನನ್ನು ಬೇಡಿಕೊಳ್ಳು
ತ್ತೇನೆ ಅಂದನು. ಯಾಕಂದರೆ—ಈ ಮನುಷ್ಯನನ್ನು 29
ಬಿಟ್ಟುಹೋಗಬೇಕೆಂದು ಆತನು ಆ ದೆವ್ವಕ್ಕೆ ಅಪ್ಪಣೆ
ಕೊಟ್ಟಿದ್ದನು. ಅದು ಬಹು ಕಾಲದಿಂದ ಅವನನ್ನು
ಹಿಡಿದಿತ್ತು; ಇದಲ್ಲದೆ ಅವನನ್ನು ಕಾವಲಲ್ಲಿಟ್ಟು ಸರ
ಪಣಿಗಳಿಂದಲೂ ಬೇಡಿಗಳಿಂದಲೂ ಕಟ್ಟಿದ್ದರೂ ಅವನು

1) ಮೂಲ: ಅಪವಾದಕನು.

ಆ ಬಂಧಗಳನ್ನು ಮುರಿದುಹಾಕುತ್ತಿದ್ದನು; ಮತ್ತು
ಆ ದೆವ್ವ ಅವನನ್ನು ಅರಣ್ಯಪ್ರದೇಶಗಳಿಗೆ ಓಡಿಸುತ್ತಿತ್ತು.
30 ಯೇಸು—ನಿನ್ನ ಹೆಸರೇನೆಂದು ಅವನನ್ನು ಕೇಳಿದ್ದಕ್ಕೆ
ಅವನು—ನನ್ನ ಹೆಸರು ದಂಡು ಅಂದನು; ಯಾಕಂದರೆ
31 ಬಹಳ ದೆವ್ವಗಳು ಅವನೊಳಗೆ ಹೊಕ್ಕಿದ್ದವು. ಪಾತಾ
ಳಕ್ಕೆ ಹೋಗಿಬಿಡುವಂತೆ ನಮಗೆ ಅಜ್ಞೆಮಾಡಬೇಡ
32 ವೆಂದು ಅವು ಆತನನ್ನು ಬೇಡಿಕೊಂಡವು. ಅಲ್ಲಿಯ
ಗುಡ್ಡದಲ್ಲಿ ಬಹಳ ಹಂದಿಗಳ ಒಂದು ಹಿಂಡು ಮೇಯು
ತ್ತಿತ್ತು. ಆ ದೆವ್ವಗಳು—ಆ ಹಂದಿಗಳೊಳಗೆ ಸೇರಿ
ಕೊಳ್ಳುವದಕ್ಕೆ ನಮಗೆ ಅಪ್ಪಣೆಯಾಗಬೇಕೆಂದು ಆತ
33 ನನ್ನು ಬೇಡಿಕೊಂಡವು. ಆತನು ಆಗಲಿ ಎಂದು ಅವು
ಗಳಿಗೆ ಅಪ್ಪಣೆಕೊಡಲು ದೆವ್ವಗಳು ಆ ಮನುಷ್ಯ
ನೊಳಗಿಂದ ಹೊರಗೆ ಬಂದು ಹಂದಿಗಳೊಳಗೆ ಹೊಕ್ಕವು;
ಆ ಗುಂಪು ಓಡಿ ಕಡಿದಾದ ಸ್ಥಳದಿಂದ ಕೆರೆಯೊಳಗೆ
34 ಬಿದ್ದು ಉಸುರುಕಟ್ಟಿ ಸತ್ತಿತು. ಮೇಯಿಸುವವರು
ನಡೆದದ್ದನ್ನು ಕಂಡು ಓಡಿಹೋಗಿ ಆ ಊರಲ್ಲಿಯೂ
35 ಹಳ್ಳಿಗಳಲ್ಲಿಯೂ ಅದನ್ನು ತಿಳಿಸಲು ಜನರು ನಡೆದ
ಸಂಗತಿಯನ್ನು ನೋಡುವದಕ್ಕೆ ಹೊರಟು ಯೇಸು
ವಿದ್ದಲ್ಲಿಗೆ ಬಂದು ದೆವ್ವಗಳು ಬಿಟ್ಟುಹೋಗಿದ್ದ ಆ
ಮನುಷ್ಯನು ಬಟ್ಟೆಗಳನ್ನು ಹಾಕಿಕೊಂಡು ಸ್ವಸ್ಥಬುದ್ಧಿ
ಯಿಂದ ಯೇಸುವಿನ ಪಾದಗಳ ಬಳಿಯಲ್ಲಿ ಕೂತಿ
36 ರುವದನ್ನು ಕಂಡು ಹೆದರಿದರು. ನಡೆದ ಸಂಗತಿ
ಯನ್ನು ನೋಡಿದ್ದವರು ಆ ದೆವ್ವಹಿಡಿದಿದ್ದವನಿಗೆ
ಬಿಡುಗಡೆಯಾದ ರೀತಿಯನ್ನು ಅವರಿಗೆ ತಿಳಿಸಲು
37 ಗೆರಸೇನರ ಸುತ್ತಲಿರುವ ಸೀಮೆಯವರಿಗೆಲ್ಲಾ ಮಹಾ
ಭಯಹಿಡಿದದ್ದರಿಂದ ಅವರು ಯೇಸುವನ್ನು—
ನೀನು ನಮ್ಮನ್ನು ಬಿಟ್ಟುಹೋಗಬೇಕೆಂದು ಬೇಡಿ
38 ಕೊಂಡರು. ಆತನು ದೋಣಿಯನ್ನು ಹತ್ತಿ ಹಿಂತಿರುಗಿ
ಹೋದನು. ಹೊರಡುವಾಗ ದೆವ್ವಗಳಿಂದ ಬಿಡುಗಡೆ
ಯಾದ ಆ ಮನುಷ್ಯನು—ನಾನು ನಿನ್ನ ಬಳಿಯಲ್ಲಿ
ಯೇ ಇರುತ್ತೇನೆ ಎಂದು ಆತನನ್ನು ಬೇಡಿಕೊಂಡಾಗ
39 ಆತನು—ನೀನು ನಿನ್ನ ಮನೆಗೆ ಹಿಂತಿರುಗಿ ಹೋಗಿ
ದೇವರು ನಿನಗೆ ಎಂಥೆಂಥ ಉಪಕಾರಗಳನ್ನು ಮಾಡಿ
ದನೋ ಅದನ್ನೆಲ್ಲಾ ವಿವರವಾಗಿ ಹೇಳು ಎಂದು ಅವ
ನನ್ನು ಕಳುಹಿಸಿಬಿಟ್ಟನು. ಅವನು ಹೊರಟುಹೋಗಿ
ಯೇಸು ತನಗೆ ಮಾಡಿದ ಉಪಕಾರಗಳನ್ನು ಆ ಊರ
ಲ್ಲೆಲ್ಲಾ ಸಾರಿದನು.

ಯೇಸು ಸತ್ತಹುಡುಗಿಯನ್ನು ಬದುಕಿಸಿದ್ದು; ಮತ್ತು ಒಬ್ಬ
ಸ್ತ್ರೀಯ ರಕ್ತಕುಸುಮರೋಗವನ್ನು ವಾಸಿಮಾಡಿದ್ದು.
(ಮತ್ತಾ. 9. 18—26; ಮಾರ್ಕ 5. 21—43.)

40 ಯೇಸು ಹಿಂತಿರುಗಿ ಬಂದಾಗ ಜನರೆಲ್ಲರೂ ಆತ
ನನ್ನು ಕಾದುಕೊಂಡಿದ್ದು ಸಂತೋಷದಿಂದ ಸ್ವೀಕರಿಸಿ
41-42 ದರು. ಆಗ ಸಭಾಮಂದಿರದ ಅಧಿಕಾರಿಯಾದ
ಯಾಯಿರನೆಂಬ ಒಬ್ಬ ಮನುಷ್ಯನು ಬಂದು ಯೇಸು
ವಿನ ಪಾದಗಳಿಗೆ ಬಿದ್ದನು. ಹೆಚ್ಚುಕಡಿಮೆ ಹನ್ನೆರ
ವರುಷದವಳಾದ ಅವನ ಒಬ್ಬಳೇ ಮಗಳು ಸಾಯು
ವಳಾಗಿದ್ದ ಕಾರಣ ಆತನನ್ನು ತನ್ನ ಮನೆಗೆ ಬರ
ಕೆಂದು ಬೇಡಿಕೊಂಡನು. ಆತನು ಹೋಗುತ್ತಿರುವ
ಜನರು ಗುಂಪುಗುಂಪಾಗಿ ಆತನನ್ನು ಇರಿಕಿಸುತ್ತಿದ್ದರ
ಆಗ ಹನ್ನೆರಡು ವರುಷದಿಂದ ರಕ್ತಕುಸುಮರೋ
ವಿದ್ದ ಒಬ್ಬ ಹೆಂಗಸು ಬಂದಳು. 1)ಆಕೆಯು ಒ
ರಿಂದಲೂ ಗುಣಹೊಂದಲಾರದೆ ಇದ್ದಳು. ಆಕೆಯ
ಹಿಂದಿನಿಂದ ಬಂದು ಆತನ ಉಡುಪಿನ ಗೊಂಡೆಯನ
ಮುಟ್ಟಿದಳು; ಮುಟ್ಟುತ್ತಲೇ ಆಕೆಗೆ ರಕ್ತಹರಿಯ
ವದು ನಿಂತಿತು. ಆಗ ಯೇಸು—ನನ್ನನ್ನು ಮು
ದವರಾರು ಎಂದು ಕೇಳಿದನು. ಎಲ್ಲರೂ—ನಾನ
ನಾನಲ್ಲ ಅನ್ನಲು 2)ಪೇತ್ರನು—ಗುರುವೇ ಎಷ್ಟೋ
ಜನರು ನಿನ್ನನ್ನು ಒತ್ತೊತ್ತಿ ಮೈಮೇಲೆ ಬೀಳುತ್ತಿದ್ದಾ
ರಲ್ಲಾ ಅಂದನು. ಆದರೆ ಯೇಸು—ಯಾರೊ
ಒಬ್ಬರು ನನ್ನನ್ನು ಮುಟ್ಟಿದರು; ನನ್ನಿಂದ ಶಕ್ತಿಯ
ಹೊರಟಿತೆಂಬದು ನನಗೆ ಗೊತ್ತಾಯಿತು ಅಂದಾ
ಆ ಹೆಂಗಸು ತಾನು ಮರೆಯಾಗಿಲ್ಲವೆಂತ ತಿಳಿದು ನಡ
ಗುತ್ತಾ ಬಂದು ಆತನಿಗೆ ಅಡ್ಡಬಿದ್ದು ತಾನು ಇಂ
ಕಾರಣದಿಂದ ಈತನನ್ನು ಮುಟ್ಟಿದೆನೆಂತಲೂ ಮುಟ್ಟಿ
ಕೂಡಲೆ ತನಗೆ ವಾಸಿಯಾಯಿತೆಂತಲೂ ಎಲ್ಲಾ ಜನ
ಮುಂದೆ ತಿಳಿಸಿದಳು. ಆತನು ಆಕೆಗೆ—ಮಗಳೆ
ನಿನ್ನ ನಂಬಿಕೆಯೇ ನಿನ್ನನ್ನು ಸ್ವಸ್ಥಮಾಡಿತು; ಸಮಾ
ಧಾನದಿಂದ ಹೋಗು ಎಂದು ಹೇಳಿದನು.
ಆತನು ಇನ್ನೂ ಮಾತಾಡುತ್ತಿರುವಲ್ಲಿ ಸಭಾಮಂದಿ
ರದ ಅಧಿಕಾರಿಯ ಕಡೆಯವನೊಬ್ಬನು ಬಂದು—ನಿನ್ನ
ಮಗಳು ಸತ್ತಳು; ಗುರುವಿಗೆ ತೊಂದರೆ ಕೊಡಬೇಡ
ಅಂದನು. ಆದರೆ ಯೇಸು ಅದನ್ನು ಕೇಳಿ ಅವನಿಗೆ—
ಅಂಜಬೇಡ, ನಂಬಿಕೆ ಮಾತ್ರ ಇರಲಿ, ಆಕೆ ಬದುಕ
ವಳು ಎಂದು ಉತ್ತರಕೊಟ್ಟನು. ತರುವಾಯ ಆತನು
ಆ ಮನೆಗೆ ಹೋಗಿ ಪೇತ್ರನು ಯೋಹಾನನು ಯಾಕೋ
ಬನು ಆ ಹುಡುಗಿಯ ತಂದೆತಾಯಿಗಳು ಇಷ್ಟು ಮಂದಿ
ಯನ್ನೇ ಹೊರತು ಬೇರೆ ಯಾರನ್ನೂ ತನ್ನ ಸಂಗಡ
ಒಳಕ್ಕೆ ಬರಗೊಡಲಿಲ್ಲ. ಎಲ್ಲರು ಅಳುತ್ತಾ ಆಕೆಗೋ
ಸ್ಕರ ಎದೆಬಡುಕೊಳ್ಳುತ್ತಾ ಇದ್ದರು. ಯೇಸು—
ಅಳಬೇಡಿರಿ, ಆಕೆ ಸತ್ತಿಲ್ಲ, ನಿದ್ದೆಮಾಡುತ್ತಾಳೆ ಅನ್ನ
ಲಾಗಿ ಜನರು ಆಕೆ ಸತ್ತಳೆಂದು ತಿಳಿದುಕೊಂಡದ್ದರಿಂದ
ಆತನನ್ನು ಹಾಸ್ಯಮಾಡಿದರು. ಆದರೆ ಆತನು ಆಕೆಯ
ಕೈ ಹಿಡಿದು—ಅಮ್ಮಣ್ಣೀ, ಏಳು ಎಂದು ಕೂಗಿದನು
ಆಕೆಯ ಪ್ರಾಣ ತಿರಿಗಿ ಬಂದು ತಕ್ಷಣವೇ ಆಕೆ
ಎದ್ದಳು. ತರುವಾಯ ಆತನು—ಈಕೆಗೆ ಊಟಮಾಡಿ
ಸಿರಿ ಎಂದು ಅಪ್ಪಣೆಕೊಟ್ಟನು. ಆಕೆಯ ತಂದೆತಾಯಿ
ಗಳು ಬೆರಗಾದರು. ಆತನು—ಈ ನಡೆದ ಸಂಗತಿ
ಯನ್ನು ಯಾರಿಗೂ ತಿಳಿಸಬೇಡಿರೆಂದು ಖಂಡಿತವಾಗಿ
ಹೇಳಿದನು.

1) ಕೆಲವು ಪ್ರತಿಗಳಲ್ಲಿ—ಆಕೆಯು ತನ್ನ ಬದುಕನ್ನೆಲ್ಲಾ ವೈದ್ಯರಿಗೆ ಕೊಟ್ಟು ಕಳಕೊಂಡಾಗ್ಯೂ ಎಂದು ಬರೆದದೆ. 2) ಕೆಲವು
ಗಳಲ್ಲಿ—ಪೇತ್ರನೂ ಅವನ ಸಂಗಡ ಇದ್ದವರೂ ಎಂದು ಬರೆದದೆ.

ಯೇಸು ಹನ್ನೆರಡು ಮಂದಿ ಶಿಷ್ಯರನ್ನು ಸುವಾರ್ತೆ
ಸಾರುವದಕ್ಕೆ ಕಳುಹಿಸಿದ್ದು.
(ಮತ್ತಾ. 10. 1, 5—14; ಮಾರ್ಕ 6. 7—13.)

9 ಆತನು ಹನ್ನೆರಡು ಮಂದಿ ಶಿಷ್ಯರನ್ನು ಒಟ್ಟಿಗೆ
ಕರೆದು ಅವರಿಗೆ ಎಲ್ಲಾ ದೆವ್ವಗಳನ್ನು ಬಿಡಿಸುವ ಮತ್ತು
ರೋಗಗಳನ್ನು ವಾಸಿಮಾಡುವ ಶಕ್ತಿ ಅಧಿಕಾರಗಳನ್ನು
2 ಕೊಟ್ಟು ದೇವರ ರಾಜ್ಯದ ವಿಷಯವನ್ನು ಸಾರುವ
ದಕ್ಕೂ ಅಸ್ವಸ್ಥರಾದವರನ್ನು ಸ್ವಸ್ಥಮಾಡುವದಕ್ಕೂ
3 ಅವರನ್ನು ಕಳುಹಿಸಿದನು. ಕಳುಹಿಸುವಾಗ ಅವರಿಗೆ
ಹೇಳಿದ್ದೇನಂದರೆ—ದಾರಿಗೆ ಏನೂ ತಕ್ಕೊಂಡುಹೋಗ
ಬೇಡಿರಿ, ಕೋಲು ಹಸಿಬೆ ಬುತ್ತಿ ಹಣ ಬೇಡ; ಎರಡಂಗಿ
4 ಗಳಿರಬಾರದು. ಇದಲ್ಲದೆ ನೀವು ಯಾವ ಮನೆಯಲ್ಲಿ
ಇಳುಕೊಂಡರೂ ಅಲ್ಲೇ ಇರ್ರಿ, ಅಲ್ಲಿಂದಲೇ ಹೊರಡಿರಿ.
5 ಮತ್ತು ಯಾವ ಊರಿನವರಾದರೂ ನಿಮ್ಮನ್ನು ಸೇರಿಸಿ
ಕೊಳ್ಳದೆ ಹೋದರೆ ಆ ಊರನ್ನು ನೀವು ಬಿಟ್ಟುಹೊರ
ಡುವಾಗ ನಿಮ್ಮ ಕಾಲಿಗೆ ಹತ್ತಿದ ಧೂಳನ್ನು ಝಾಡಿಸಿ
ಬಿಡಿರಿ; ಅದು ಅವರಿಗೆ ವಿರೋಧವಾಗಿ ಸಾಕ್ಷಿಯಾಗಿರಲಿ
6 ಅಂದನು. ಆಗ ಅವರು ಹೊರಟುಹೋಗಿ ಎಲ್ಲೆಲ್ಲಿಯೂ
ಸುವಾರ್ತೆಯನ್ನು ಸಾರುತ್ತಾ ರೋಗಿಗಳಿಗೆ ವಾಸಿಮಾ
ಡುತ್ತಾ ಗ್ರಾಮಗಳಲ್ಲೆಲ್ಲಾ ಸಂಚರಿಸಿದರು.

ಅರಸನಾದ ಹೆರೋದನು ಯೇಸುವಿನ ಸುದ್ದಿಯನ್ನು ಕೇಳಿದ್ದು.
(ಮತ್ತಾ. 14. 1—12; ಮಾರ್ಕ 6. 14—29.)

7 ಹೀಗಿರಲಾಗಿ ಉಪರಾಜನಾದ ಹೆರೋದನು ನಡೆದ
ಸಂಗತಿಗಳನ್ನೆಲ್ಲಾ ಕೇಳಿ ಬಹಳವಾಗಿ ಕಳವಳಪಡು
ವವನಾದನು. ಯಾಕಂದರೆ ಸತ್ತಿದ್ದ ಯೋಹಾನನು
8 ತಿರಿಗಿ ಬದುಕಿಬಂದಿದ್ದಾನೆಂದು ಕೆಲವರೂ, ಎಲೀಯನು
ಕಾಣಿಸಿಕೊಂಡನೆಂದು ಕೆಲವರೂ, ಪೂರ್ವದ ಪ್ರವಾದಿ
ಗಳಲ್ಲಿ ಯಾವನೋ ಒಬ್ಬನು ಎದ್ದಿದ್ದಾನೆಂದು ಕೆಲ
9 ವರೂ ಹೇಳಿಕೊಳ್ಳುತ್ತಿದ್ದರು. ಆದರೆ ಹೆರೋದನು—
ಯೋಹಾನನನ್ನು ನಾನೇ ತಲೆಹೊಯ್ಸಿದೆನಷ್ಟೆ. ಇವ
ನಾರು? ಇವನ ವಿಷಯವಾಗಿ ಆಶ್ಚರ್ಯಕರವಾದ
ಸಂಗತಿಗಳನ್ನು ಕೇಳುತ್ತೇನಲ್ಲಾ ಎಂದು ಹೇಳಿ ಅವ
ನನ್ನು ನೋಡಬೇಕೆಂದು ಪ್ರಯತ್ನಿಸಿದನು.

ಯೇಸು ಐದು ಸಾವಿರ ಜನರಿಗೆ ಊಟಮಾಡಿಸಿದ್ದು.
(ಮತ್ತಾ. 14 13—21; ಮಾರ್ಕ 6. 30—44;
ಯೋಹಾ. 6. 1—13.)

10 ಇತ್ತಲಾಗಿ ಅಪೊಸ್ತಲರು ಹಿಂತಿರುಗಿ ಬಂದು ತಾವು
ಮಾಡಿದ್ದನ್ನೆಲ್ಲಾ ಯೇಸುವಿಗೆ ವಿವರವಾಗಿ ಹೇಳಲು
ಆತನು ಅವರನ್ನು ಬೇತ್ಸಾಯಿದವೆಂಬ ಊರಿಗೆ ವಿಂಗ
11 ಡವಾಗಿ ಕರಕೊಂಡು ಹೋದನು. ಆದರೆ ಜನರ ಗುಂಪು
ಇದನ್ನು ತಿಳಿದು ಆತನ ಹಿಂದೆ ಹೋಗಲು ಆತನು
ಅವರನ್ನು ಪ್ರೀತಿಯಿಂದ ಸ್ವೀಕರಿಸಿ ದೇವರ ರಾಜ್ಯದ
ವಿಷಯವಾಗಿ ಅವರ ಸಂಗಡ ಮಾತಾಡಿ ಕ್ಷೇಮ
12 ಬೇಕಾದವರಿಗೆ ವಾಸಿಮಾಡಿದನು. ಹೊತ್ತು ಇಳಿಯು
ತ್ತಾ ಬಂತು. ಆ ಹನ್ನೆರಡು ಮಂದಿ ಶಿಷ್ಯರು ಆತನ
ಬಳಿಗೆ ಬಂದು—ಈ ಗುಂಪಿಗೆ ಅಪ್ಪಣೆಕೊಡು; ಇವರು
ಸುತ್ತಲಿರುವ ಹಳ್ಳಿಪಳ್ಳಿಗಳಿಗೆ ಹೋಗಿ ಇಳುಕೊಂಡು
ಊಟಕ್ಕೆ ಬೇಕಾದ ಪದಾರ್ಥಗಳನ್ನು ದೊರಕಿಸಿಕೊ
ಳ್ಳಲಿ; ನಾವು ಇಲ್ಲಿ ಅಡವಿಯ ಸ್ಥಳದಲ್ಲಿ ಇದ್ದೇವಲ್ಲಾ
ಎಂದು ಆತನಿಗೆ ಹೇಳಲಾಗಿ ಆತನು—ನೀವೇ ಅವರಿಗೆ 13
ಊಟಕ್ಕೆ ಕೊಡಿರಿ ಅಂದನು. ಅದಕ್ಕವರು—ನಮ್ಮಲ್ಲಿ
ಐದು ರೊಟ್ಟಿ ಎರಡು ಮೀನು ಹೊರತು ಹೆಚ್ಚೇನೂ
ಇಲ್ಲ; ನಾವು ಹೋಗಿ ಈ ಜನರಿಗೆಲ್ಲಾ ಆಹಾರವನ್ನು
ಕೊಂಡುಕೊಳ್ಳಬೇಕೋ? ಅಂದರು. ಗಂಡಸರೇ ಹೆಚ್ಚು 14
ಕಡಿಮೆ ಐದು ಸಾವಿರ ಮಂದಿಯಿದ್ದರು. ಆಗ ಆತನು
ತನ್ನ ಶಿಷ್ಯರಿಗೆ—ಇವರನ್ನು ಒಂದೊಂದು ಪಙ್ತಿಗೆ
ಹೆಚ್ಚುಕಡಿಮೆ ಐವತ್ತೈವತ್ತರಂತೆ ಕೂಡ್ರಿಸಿರಿ ಎಂದು
ಹೇಳಲು ಅವರು ಹಾಗೆಯೇ ಎಲ್ಲರನ್ನೂ ಕೂಡ್ರಿಸಿ 15
ದರು. ಆ ಮೇಲೆ ಆತನು ಆ ಐದು ರೊಟ್ಟಿ ಎರಡು 16
ಮೀನುಗಳನ್ನು ತೆಗೆದುಕೊಂಡು ಆಕಾಶದ ಕಡೆಗೆ
ನೋಡಿ ಅವುಗಳನ್ನು ಆಶೀರ್ವದಿಸಿ ಮುರಿದು ಶಿಷ್ಯರ
ಕೈಗೆ ಕೊಟ್ಟು—ಈ ಜನರ ಗುಂಪಿಗೆ ಹಂಚಿರಿ ಅಂದನು.
ಅವರೆಲ್ಲರು ಊಟಮಾಡಿ ತೃಪ್ತರಾದರು; ಉಳಿದ 17
ತುಂಡುಗಳನ್ನು ಕೂಡಿಸಲಾಗಿ ಅವು ಹನ್ನೆರಡು ಪುಟ್ಟಿ
ಆದವು.

ಪೇತ್ರನು ಯೇಸುವನ್ನು ಕ್ರಿಸ್ತನೆಂದು ಅರಿಕೆಮಾಡಿದ್ದು;
ಯೇಸು ತನ್ನ ಮರಣವನ್ನು ಮುಂತಿಳಿಸಿದ್ದು.
(ಮತ್ತಾ. 16. 13—28; ಮಾರ್ಕ 8. 27—9. 1.)

ಒಂದಾನೊಂದು ದಿವಸ ಆತನು ಏಕಾಂತವಾಗಿ 18
ಪ್ರಾರ್ಥನೆಮಾಡುತ್ತಿರುವಾಗ ಆತನ ಶಿಷ್ಯರು ಆತನ
ಸಂಗಡ ಇದ್ದರು. ಆತನು—ನನ್ನನ್ನು ಸಾಮಾನ್ಯ
ಜನರು ಯಾರು ಅನ್ನುತ್ತಾರೆ ಎಂದು ಅವರನ್ನು ಕೇಳಿ
ದ್ದಕ್ಕೆ ಅವರು—ನಿನ್ನನ್ನು ಸ್ನಾನಿಕನಾದ ಯೋಹಾನನು 19
ಅನ್ನುತ್ತಾರೆ; ಕೆಲವರು ಎಲೀಯನು ಅನ್ನುತ್ತಾರೆ;
ಇನ್ನು ಕೆಲವರು ಪೂರ್ವದ ಪ್ರವಾದಿಗಳಲ್ಲಿ ಯಾವನೋ
ಒಬ್ಬನು ಎದ್ದಿದ್ದಾನೆ ಅನ್ನುತ್ತಾರೆ ಎಂದು ಹೇಳಿದರು.
ಆತನು ಅವರನ್ನು—ಆದರೆ ನೀವು ನನ್ನನ್ನು ಯಾರು 20
ಅನ್ನುತ್ತೀರಿ ಎಂದು ಕೇಳಲಾಗಿ ಪೇತ್ರನು—ನೀನು
ದೇವರಿಂದ ಬರಬೇಕಾಗಿರುವ ಕ್ರಿಸ್ತನು ಎಂದು ಉತ್ತರ
ಕೊಟ್ಟನು. ಆಗ ಆತನು—ಇದನ್ನು ಯಾರಿಗೂ ಹೇಳ 21
ಬೇಡಿರಿ ಎಂದು ಬಹು ಖಂಡಿತವಾಗಿ ಅವರಿಗೆ ಅಪ್ಪಣೆ
ಕೊಟ್ಟು—ಮನುಷ್ಯಕುಮಾರನು ಬಹು ಕಷ್ಟಗಳನ್ನನು 22
ಭವಿಸಿ ಹಿರಿಯರಿಂದಲೂ ಮಹಾಯಾಜಕರಿಂದಲೂ
ಶಾಸ್ತ್ರಿಗಳಿಂದಲೂ ನಿರಾಕೃತನಾಗಿ ಕೊಲ್ಲಲ್ಪಟ್ಟು
ಮೂರನೆಯ ದಿನದಲ್ಲಿ ಜೀವಿತನಾಗಿ ಎಬ್ಬಿಸಲ್ಪಡ
ಬೇಕಾಗಿದೆ ಎಂದು ಹೇಳಿದನು. ಇದಲ್ಲದೆ ಆತನು 23
ಎಲ್ಲರಿಗೂ ಹೇಳಿದ್ದೇನಂದರೆ—ಯಾವನಿಗಾದರೂ
ನನ್ನ ಹಿಂದೆ ಬರುವದಕ್ಕೆ ಮನಸ್ಸಿದ್ದರೆ ಅವನು ತನ್ನನ್ನು
ನಿರಾಕರಿಸಿ ತನ್ನ ಶಿಲುಬೆಯನ್ನು ದಿನಾಲೂ ಹೊತ್ತು
ಕೊಂಡು ನನ್ನ ಹಿಂದೆ ಬರಲಿ. ತನ್ನ ಪ್ರಾಣವನ್ನು 24
ಉಳಿಸಿಕೊಳ್ಳಬೇಕೆಂದಿರುವವನು ಅದನ್ನು ಕಳಕೊಳ್ಳು
ವನು; ಆದರೆ ನನ್ನ ನಿಮಿತ್ತವಾಗಿ ತನ್ನ ಪ್ರಾಣವನ್ನು
ಕಳಕೊಂಡವನು ಅದನ್ನು ಉಳಿಸಿಕೊಳ್ಳುವನು. ಒಬ್ಬ 25
ಮನುಷ್ಯನು ಲೋಕವನ್ನೆಲ್ಲಾ ಸಂಪಾದಿಸಿಕೊಂಡರೂ

ತನ್ನನ್ನೇ ಕೆಡಿಸಿಕೊಂಡರೆ ಅಥವಾ ನಷ್ಟಪಡಿಸಿಕೊಂಡರೆ
26 ಅವನಿಗೆ ಪ್ರಯೋಜನವೇನು? ಯಾವನು ನನಗೂ
ನನ್ನ ಮಾತುಗಳಿಗೂ ನಾಚಿಕೊಳ್ಳುತ್ತಾನೋ ಅವನಿಗೆ
ಮನುಷ್ಯಕುಮಾರನು ತನಗೂ ತನ್ನ ತಂದೆಗೂ ಪರಿ
ಶುದ್ಧ ದೂತರಿಗೂ ಇರುವ ಪ್ರಭಾವದೊಡನೆ ಬರುವಾಗ
27 ನಾಚಿಕೊಳ್ಳುವನು. ನಿಮಗೆ ಸತ್ಯವಾಗಿ ಹೇಳುತ್ತೇನೆ,
ಇಲ್ಲಿ ನಿಂತಿರುವವರೊಳಗೆ ಕೆಲವರು ದೇವರ ರಾಜ್ಯ
ವನ್ನು ನೋಡುವ ತನಕ ಮರಣಹೊಂದುವದಿಲ್ಲವೆಂದು
ಅಂದನು.

ಯೇಸು ಪ್ರಕಾಶರೂಪದಿಂದ ಕಾಣಿಸಿಕೊಂಡದ್ದು.
(ಮತ್ತಾ. 17. 1—8; ಮಾರ್ಕ 9. 2—8.)

28 ಯೇಸು ಈ ಮಾತುಗಳನ್ನು ಹೇಳಿ ಸುಮಾರು
ಎಂಟು ದಿವಸಗಳಾದ ಮೇಲೆ ಪೇತ್ರ ಯೋಹಾನ
ಯಾಕೋಬರನ್ನು ಕರಕೊಂಡು ಪ್ರಾರ್ಥನೆಮಾಡುವ
29 ದಕ್ಕೆ ಬೆಟ್ಟವನ್ನು ಹತ್ತಿದನು. ಆತನು ಪ್ರಾರ್ಥನೆಮಾ
ಡುತ್ತಿರಲಾಗಿ ಆತನ ಮುಖಭಾವವು ಬೇರೆಯಾಯಿತು.
30 ಆತನ ಉಡುಪು ಬೆಳ್ಳಗಾಗಿ ಮಿಂಚುತ್ತಾ ಬಂತು. ಇದ
ಲ್ಲದೆ ಇಬ್ಬರು ಪುರುಷರು ಆತನ ಸಂಗಡ ಮಾತಾಡು
ತ್ತಿದ್ದರು. ಇವರು ಯಾರಂದರೆ ಮೋಶೆಯೂ ಎಲೀ
31 ಯನೂ. ಇವರು ವೈಭವದೊಡನೆ ಕಾಣಿಸಿಕೊಂಡು
ಯೆರೂಸಲೇಮಿನಲ್ಲಿ ಆತನು ನೆರವೇರಿಸಬೇಕಾಗಿದ್ದ
32 ಮರಣದ ವಿಷಯವಾಗಿ ಮಾತಾಡುತ್ತಿದ್ದರು. ಇಷ್ಟರಲ್ಲಿ
ಪೇತ್ರನಿಗೂ ಅವನ ಸಂಗಡ ಇದ್ದವರಿಗೂ ನಿದ್ರೆ
ಯಿಂದ ಮೈಭಾರವಾಗಿತ್ತು. ಆದರೆ, ಎಚ್ಚರವಾದ
ಮೇಲೆ ಅವರು ಆತನ ಮಹಿಮೆಯನ್ನೂ ಆತನ
ಸಂಗಡ ನಿಂತಿದ್ದ ಆ ಇಬ್ಬರು ಪುರುಷರನ್ನೂ
33 ಕಂಡರು. ಇವರು ಆತನನ್ನು ಬಿಟ್ಟುಹೋಗುತ್ತಿರುವಾಗ
ಪೇತ್ರನು ಯೇಸುವಿಗೆ—ಗುರುವೇ ನಾವು ಇಲ್ಲೇ ಇರು
ವದು ಒಳ್ಳೇದು, ಮೂರು ಪರ್ಣಶಾಲೆಗಳನ್ನು ಕಟ್ಟು
ವೆವು; ನಿನಗೊಂದು ಮೋಶೆಗೊಂದು ಎಲೀಯನಿಗೊಂ
ದು ಎಂದು ಹೇಳಿದನು. ತಾನಂದದ್ದು ತನಗೇ ಗೊತ್ತಾ
34 ಗಲಿಲ್ಲ. ಅವನು ಇದನ್ನು ಹೇಳುತ್ತಿರುವಲ್ಲಿ ಮೋಡವು
ಬಂದು ಅವರ ಮೇಲೆ ಕವಿಯಿತು. ಅವರು ಮೋಡ
35 ದೊಳಗೆ ಸೇರಿದಾಗ ಹೆದರಿದರು. ಆಗ ಆ ಮೋಡದೊ
ಳಗಿಂದ—ಈತನು ನನ್ನ ಮಗನು. ನಾನು ಆರಿಸಿ
ಕೊಂಡವನು; ಈತನ ಮಾತನ್ನು ಕೇಳಿರಿ ಎಂಬ ಆಕಾಶ
36 ವಾಣಿ ಆಯಿತು. ಆ ವಾಣಿ ಆದ ಮೇಲೆ ಯೇಸು
ವನ್ನು ಮಾತ್ರ ಕಂಡರು. ತಾವು ಕಂಡ ಈ ಸಂಗತಿ
ಗಳೊಳಗೆ ಒಂದನ್ನಾದರೂ ಆ ದಿವಸಗಳಲ್ಲಿ ಯಾರಿಗೂ
ತಿಳಿಸದೆ ಸುಮ್ಮನಿದ್ದರು.

ಯೇಸು ಅಪಸ್ಮಾರ ರೋಗಿಯನ್ನು ಸ್ವಸ್ಥಮಾಡಿದ್ದು.
(ಮತ್ತಾ. 17. 14—18; ಮಾರ್ಕ 9. 14—27.)

37 ಮರುದಿವಸ ಅವರು ಬೆಟ್ಟದಿಂದ ಇಳಿದು ಬಂದಾಗ
38 ಜನರ ದೊಡ್ಡ ಗುಂಪು ಆತನೆದುರಿಗೆ ಬಂತು. ಆಗ
ಆ ಗುಂಪಿನಲ್ಲಿ ಒಬ್ಬನು—ಬೋಧಕನೇ, ನನ್ನ ಮಗನ
ಮೇಲೆ ದೃಷ್ಟಿಯಿಡಬೇಕು ಎಂದು ನಿನ್ನನ್ನು ಬೇಡಿ
ಕೊಳ್ಳುತ್ತೇನೆ. ನನಗೆ ಇವನೊಬ್ಬನೇ ಮಗನು.
ಇವನನ್ನು ದೆವ್ವಹಿಡಿಯುತ್ತದೆ, ಹಿಡಿಯುತ್ತಲೇ ಕೂ
ಕೊಳ್ಳುತ್ತಾನೆ. ಬಾಯಲ್ಲಿ ನೊರೆ ಬರುವಷ್ಟು ಇ
ನನ್ನು ಒದ್ದಾಡಿಸುತ್ತದೆ; ಮತ್ತು ಬಹು ಕಷ್ಟಕೊಟ್ಟು
ಜಜ್ಜದ ಹೊರತು ಬಿಡುವದಿಲ್ಲ. ಅದನ್ನು ಬಿಡಿ
ಬೇಕೆಂದು ನಿನ್ನ ಶಿಷ್ಯರನ್ನು ಬೇಡಿಕೊಂಡೆನು. ಆದ
ಅವರಿಂದ ಆಗದೆಹೋಯಿತು ಎಂದು ಕೂಗಿ ಹೇ
ದನು. ಅದಕ್ಕೆ ಯೇಸು—ಎಲಾ, ನಂಬಿಕೆಯಿಲ್ಲದಂಥ
ಮೂರ್ಖಸಂತಾನವೇ, ನಾನು ಇನ್ನೆಷ್ಟು ದಿನ ನಿಮ್ಮ
ಸಂಗಡ ಇದ್ದು ನಿಮ್ಮನ್ನು ಸಹಿಸಿಕೊಳ್ಳಲಿ? ನಿನ್ನ ಮಗ
ನನ್ನು ಇಲ್ಲಿಗೆ ಕರಕೊಂಡು ಬಾ ಅಂದನು. ಆ
ಹುಡುಗನು ಇನ್ನೂ ಬರುತ್ತಿರುವಾಗ ಆ ದೆವ್ವವು ಅವ
ನನ್ನು ನೆಲಕ್ಕೆ ಅಪ್ಪಳಿಸಿ ಬಹಳವಾಗಿ ಒದ್ದಾಡಿಸಿತು.
ಆದರೆ ಯೇಸು ಆ ದೆವ್ವವನ್ನು ಗದರಿಸಿ ಆ ಹುಡುಗ
ನಿಗೆ ವಾಸಿಮಾಡಿ ಅವನ ತಂದೆಯ ಕೈಗೆ ಕೊಟ್ಟನು.
ಅದನ್ನು ನೋಡಿ ಎಲ್ಲರು ದೇವರ ಮಹತ್ವಕ್ಕೆ ಬೆರ
ಗಾದರು.

ಯೇಸು ತನ್ನ ಮರಣವನ್ನು ಎರಡನೆಯ ಸಾರಿ ಮುಂತಿಳಿಸಿದ್ದು.
(ಮತ್ತಾ. 17. 22, 23; ಮಾರ್ಕ 9. 30—32.)

ಯೇಸು ಮಾಡಿದ ಎಲ್ಲಾ ಕಾರ್ಯಗಳಿಗೆ ಎಲ್ಲರು
ಆಶ್ಚರ್ಯಪಡುತ್ತಿರಲಾಗಿ ಆತನು ತನ್ನ ಶಿಷ್ಯರಿಗೆ—
ನೀವಂತೂ ಈ ಮಾತುಗಳನ್ನು ನಿಮ್ಮ ಮನಸ್ಸಿನಲ್ಲಿ
ಇಟ್ಟುಕೊಳ್ಳಿರಿ; ಯಾಕಂದರೆ ಮನುಷ್ಯಕುಮಾರನು
ಮನುಷ್ಯರ ಕೈಗೆ ಒಪ್ಪಿಸಲ್ಪಡುವನು ಎಂದು ಹೇಳಿ
ದನು. ಅವರು ಈ ಮಾತನ್ನು ಗ್ರಹಿಸಲಿಲ್ಲ; ಅದು
ಅವರಿಗೆ ಮರೆಯಾದದರಿಂದ ಅದರ ಅರ್ಥವನ್ನು ಅವರು
ತಿಳಿಯದೆಹೋದರು. ಆ ಮಾತಿನ ವಿಷಯದಲ್ಲಿ
ಅವರು ಆತನನ್ನು ಕೇಳುವದಕ್ಕೆ ಅಂಜಿದರು.

ಯೇಸು ತನ್ನ ಶಿಷ್ಯರಲ್ಲಿ ನಮ್ರತೆಯುಳ್ಳವನೇ ದೊಡ್ಡವನೆಂದು
ತೋರಿಸಿದ್ದು.
(ಮತ್ತಾ. 18. 1—5; ಮಾರ್ಕ 9. 33—37.)

ತರುವಾಯ ಶಿಷ್ಯರೊಳಗೆ—ತಮ್ಮಲ್ಲಿ ಯಾವನು
ಹೆಚ್ಚಿನವನಾಗುವನು ಎಂಬ ವಿಚಾರಹುಟ್ಟಿತು. ಯೇಸು
ಅವರ ಮನಸ್ಸಿನ ವಿಚಾರವನ್ನು ತಿಳಿದು ಒಂದು ಚಿಕ್ಕ
ಮಗುವನ್ನು ಹಿಡಿದುಕೊಂಡು ತನ್ನ ಬಳಿಯಲ್ಲಿ ನಿಲ್ಲಿಸಿ
ಅವರಿಗೆ—ಯಾವನಾದರೂ ನನ್ನ ಹೆಸರಿನಲ್ಲಿ ಈ ಚಿಕ್ಕ
ಮಗುವನ್ನು ಸೇರಿಸಿಕೊಂಡರೆ ನನ್ನನ್ನು ಸೇರಿಸಿಕೊಂಡ
ಹಾಗಾಯಿತು; ಮತ್ತು ಯಾವನಾದರೂ ನನ್ನನ್ನು
ಸೇರಿಸಿಕೊಂಡರೆ ನನ್ನನ್ನು ಕಳುಹಿಸಿಕೊಟ್ಟಾತನನ್ನೇ
ಸೇರಿಸಿಕೊಂಡ ಹಾಗಾಯಿತು; ಯಾಕಂದರೆ ನಿಮ್ಮೆಲ್ಲ
ರಲ್ಲಿ ಯಾವನು ಚಿಕ್ಕವನೋ ಅವನೇ ದೊಡ್ಡವನು
ಎಂದು ಹೇಳಿದನು.

ಯೇಸುವಿನ ಶಿಷ್ಯರನ್ನು ಎದುರಿಸದವರು ಅವರ ಪಕ್ಷದವರಾಗಿ
ದ್ದಾರೆಂಬುವ ಬೋಧೆ.
(ಮಾರ್ಕ 9. 38—40.)

ಅದಕ್ಕೆ ಯೋಹಾನನು—ಗುರುವೇ, ಯಾವನೋ
ಒಬ್ಬನು ನಿನ್ನ ಹೆಸರನ್ನು ಹೇಳಿ ದೆವ್ವಬಿಡಿಸುವದನ್ನು

ನಾವು ಕಂಡು ಅವನು ನಮಗೆ ಸೇರಿದವನಲ್ಲವಾದ್ದ
50 ರಿಂದ ಅವನಿಗೆ ಅಡ್ಡಿಮಾಡಿದೆವು ಅನ್ನಲು ಯೇಸು ಅವ
ನಿಗೆ—ಅಡ್ಡಿಮಾಡಬೇಡಿರಿ; ನಿಮ್ಮನ್ನು ಎದುರಿಸದವನು
ನಿಮ್ಮ ಪಕ್ಷದವನೇ ಎಂದು ಹೇಳಿದನು.

ಯೇಸು ಯೆರೂಸಲೇಮಿಗೆ ಹೋಗುವಾಗ ಆತನನ್ನು
ಸಮಾರ್ಯರು ಸೇರಿಸಿಕೊಳ್ಳದೆ ಹೋದದ್ದು.

51 ಯೇಸು ತಾನು ಪರಲೋಕವನ್ನೇರುವ ದಿವಸಗಳು
ತುಂಬುತ್ತಾ ಬರುವಾಗ ಯೆರೂಸಲೇಮಿಗೆ ಹೋಗುವ
52 ದಕ್ಕೆ [1]ಮನಸ್ಸನ್ನು ದೃಢಮಾಡಿಕೊಂಡು ತನ್ನ ಮುಂ
ದಾಗಿ ದೂತರನ್ನು ಕಳುಹಿಸಿದನು. ಇವರು ಹೊರಟು
ಆತನಿಗೆ ಬೇಕಾದದ್ದನ್ನು ಸಿದ್ಧಮಾಡುವದಕ್ಕಾಗಿ
53 ಸಮಾರ್ಯದವರ ಒಂದು ಹಳ್ಳಿಗೆ ಬಂದರು. ಆದರೆ
ಆತನು ಯೆರೂಸಲೇಮಿಗೆ ಹೋಗುವವನಾದದರಿಂದ
ಆ ಸಮಾರ್ಯದವರು ಆತನನ್ನು ಸೇರಿಸಿಕೊಳ್ಳಲಿಲ್ಲ.
54 ಆತನ ಶಿಷ್ಯರಾದ ಯಾಕೋಬ ಯೋಹಾನರು ಇದನ್ನು
ಕಂಡು—ಸ್ವಾಮಿಾ, ಆಕಾಶದಿಂದ ಬೆಂಕಿಬಿದ್ದು ಇವ
ರನ್ನು ನಾಶಮಾಡಲಿ ಎಂದು[2] ನಾವು ಹೇಳುವದಕ್ಕೆ
ನಿನಗೆ ಮನಸ್ಸುಂಟೋ ಎಂದು ಕೇಳಲು ಆತನು ತಿರಿಗಿ
55-56 ಕೊಂಡು ಅವರನ್ನು [3]ಗದರಿಸಿದನು. ಆಗ ಅವ
ರೆಲ್ಲರು ಬೇರೆ ಹಳ್ಳಿಗೆ ಹೋದರು.

ತನ್ನ ಶಿಷ್ಯರು ದೇವರ ಸೇವೆಗೆ ಮೊದಲಾಗಿ ಬೇರೆ ಯಾವದನ್ನೂ
ಚಿಂತಿಸಕೂಡದೆಂದು ಯೇಸು ಬೋಧಿಸಿದ್ದು.
(ಮತ್ತಾ. 8. 19—22.)

57 ಅವರು ದಾರಿಯಲ್ಲಿ ಹೋಗುತ್ತಿರುವಾಗ ಯಾವ
ನೋ ಒಬ್ಬನು ಯೇಸುವಿಗೆ—ನೀನು ಎಲ್ಲಿಗೆ ಹೋದ
ರೂ ನಾನು ನಿನ್ನ ಹಿಂದೆ ಬರುತ್ತೇನೆ ಎಂದು ಹೇಳಲು
58 ಆತನು ಅವನಿಗೆ—ನರಿಗಳಿಗೆ ಗುದ್ದುಗಳಿವೆ, ಆಕಾಶ
ದಲ್ಲಿ ಹಾರಾಡುವ ಹಕ್ಕಿಗಳಿಗೆ ಗೂಡುಗಳಿವೆ; ಆದರೆ
ಮನುಷ್ಯಕುಮಾರನಿಗೆ ತಲೆಯಿಡುವಷ್ಟು ಸ್ಥಳವೂ
59 ಇಲ್ಲ ಎಂದು ಹೇಳಿದನು. ಆತನು ಮತ್ತೊಬ್ಬನಿಗೆ—
ನನ್ನನ್ನು ಹಿಂಬಾಲಿಸು ಎಂದು ಹೇಳಲು ಅವನು—
ಸ್ವಾಮಿಾ, ನಾನು ಮೊದಲು ಹೋಗಿ ನನ್ನ ತಂದೆಯ
ಉತ್ತರಕ್ರಿಯೆಗಳನ್ನು ಮಾಡಿ ಬರುವಂತೆ ನನಗೆ
60 ಅಪ್ಪಣೆಯಾಗಬೇಕು ಅಂದನು. ಆದರೆ ಆತನು
ಅವನಿಗೆ—ಸತ್ತವರೇ ತಮ್ಮವರಲ್ಲಿ ಸತ್ತುಹೋದವರ
ಉತ್ತರಕ್ರಿಯೆಗಳನ್ನು ಮಾಡಲಿ, ನೀನಂತೂ ಹೋಗಿ
ದೇವರ ರಾಜ್ಯವನ್ನು ಪ್ರಸಿದ್ಧಿಪಡಿಸು ಎಂದು ಹೇಳಿ
61 ದನು. ಇನ್ನೊಬ್ಬನು ಸಹ—ಸ್ವಾಮಿಾ, ನಿನ್ನನ್ನು
ಹಿಂಬಾಲಿಸುತ್ತೇನೆ; ಆದರೆ ಮೊದಲು ನನ್ನ ಮನೆಯ
ವರಿಗೆ ಹೇಳಿ ಬರುವದಕ್ಕೆ ನನಗೆ ಅಪ್ಪಣೆಯಾಗಬೇಕು
ಅಂದನು. ಯೇಸು ಅವನಿಗೆ—ಯಾವನಾದರೂ ನೇಗಿ 62
ಲಿನ ಮೇಲೆ ತನ್ನ ಕೈಯನ್ನು ಹಾಕಿ ಹಿಂದಕ್ಕೆ ನೋಡಿ
ದರೆ ಅವನು ದೇವರ ರಾಜ್ಯಕ್ಕೆ ತಕ್ಕವನಲ್ಲವೆಂದು
ಹೇಳಿದನು.

ಯೇಸು ಎಪ್ಪತ್ತು ಮಂದಿ ಶಿಷ್ಯರನ್ನು ಸುವಾರ್ತೆ ಸಾರುವದಕ್ಕೆ
ಕಳುಹಿಸಿದ್ದು; ಅವರು ಹಿಂತಿರುಗಿ ಬಂದು ತಾವು
ಮಾಡಿದ್ದನ್ನು ತಿಳಿಸಿದ್ದು.
(ಮತ್ತಾ. 9. 37, 38; 10. 7—16; 11. 25—27.)

**10** ಇದಾದ ಮೇಲೆ ಸ್ವಾಮಿಯು ಇನ್ನೂ [4]ಎಪ್ಪತ್ತು
ಮಂದಿಯನ್ನು ನೇಮಿಸಿ ಅವರನ್ನು ಇಬ್ಬಿಬ್ಬರಾಗಿ
ತಾನು ಹೋಗಬೇಕೆಂದಿದ್ದ ಪ್ರತಿಯೊಂದೂರಿಗೂ ಪ್ರತಿ
ಯೊಂದು ಸ್ಥಳಕ್ಕೂ ಮುಂದಾಗಿ ಕಳುಹಿಸಿದನು. ಕಳು 2
ಹಿಸುವಾಗ ಅವರಿಗೆ ಹೇಳಿದ್ದೇನಂದರೆ—ಬೆಳೆಯು
ಬಹಳ, ಕೆಲಸದವರು ಸ್ವಲ್ಪ; ಆದದರಿಂದ ಬೆಳೆಯ
ಯಜಮಾನನನ್ನು—ನಿನ್ನ ಬೆಳೆಗೆ ಕೆಲಸದವರನ್ನು ಕಳು
ಹಿಸಬೇಕೆಂದು ಬೇಡಿಕೊಳ್ಳಿರಿ. ಹೋಗಿರಿ; ತೋಳಗಳ 3
ನಡುವೆ ಕುರಿಮರಿಗಳನ್ನು ಹೊಗಿಸಿದಂತೆ ನಾನು
ನಿಮ್ಮನ್ನು ಕಳುಹಿಸಿಕೊಡುತ್ತೇನೆ ನೋಡಿರಿ. ಹಣದ 4
ಚೀಲವನ್ನಾಗಲಿ ಹಸಿಬೆಯನ್ನಾಗಲಿ ಕೆರಗಳನ್ನಾಗಲಿ
ತೆಗೆದುಕೊಂಡು ಹೋಗಬೇಡಿರಿ; ದಾರಿಯಲ್ಲಿ ಯಾರಿ
ಗೂ ವಂದಿಸಬೇಡಿರಿ. ಇದಲ್ಲದೆ ನೀವು ಯಾವ ಮನೆ 5
ಯೊಳಗೆ ಹೋದರೂ—ಈ ಮನೆಗೆ ಶುಭವಾಗಲಿ ಎಂದು
ಮೊದಲು ಹೇಳಿರಿ. ಆಶೀರ್ವಾದಪಾತ್ರನು ಅಲ್ಲಿ 6
ಇದ್ದರೆ ನಿಮ್ಮ ಆಶೀರ್ವಾದವು ಅವನ ಮೇಲೆ ನಿಲ್ಲು
ವದು; ಇಲ್ಲದಿದ್ದರೆ ಅದು ನಿಮಗೆ ಹಿಂತಿರುಗುವದು.
ಆ ಮನೆಯಲ್ಲಿಯೇ ಇದ್ದುಕೊಂಡು ಅವರು ಕೊಡು 7
ವಂಥದನ್ನು ಊಟಮಾಡಿರಿ, ಕುಡಿಯಿರಿ. ಆಳು ತನ್ನ
ಕೂಲಿಗೆ ಯೋಗ್ಯನಷ್ಟೆ. ಒಂದು ಮನೆಯನ್ನು ಬಿಟ್ಟು
ಮತ್ತೊಂದು ಮನೆಗೆ ಹೋಗಿ ಇಳುಕೊಳ್ಳಬೇಡಿರಿ.
ಮತ್ತು ನೀವು ಯಾವ ಊರಿಗಾದರೂ ಹೋದ ಮೇಲೆ 8
ಆ ಜನರು ನಿಮ್ಮನ್ನು ಸೇರಿಸಿಕೊಂಡರೆ ಅವರು ನಿಮಗೆ
ಬಡಿಸಿದ್ದನ್ನು ಊಟಮಾಡಿರಿ. ಅಲ್ಲಿರುವ ರೋಗಿಗ 9
ಳಿಗೆ ವಾಸಿಮಾಡಿ ಅವರಿಗೆ—ದೇವರ ರಾಜ್ಯವು ನಿಮ್ಮ
ಸಮಿಾಪಕ್ಕೆ ಬಂದದೆ ಎಂದು ಹೇಳಿರಿ. ಆದರೆ ನೀವು 10
ಯಾವ ಊರಿಗಾದರೂ ಹೋದ ಮೇಲೆ ಆ ಜನರು
ನಿಮ್ಮನ್ನು ಸೇರಿಸಿಕೊಳ್ಳದೆಹೋದರೆ ನೀವು ಆ ಊರ
ಬೀದಿಗಳಿಗೆ ಬಂದು—ನಿಮ್ಮ ಊರಿಂದ ನಮ್ಮ ಕಾಲು 11
ಗಳಿಗೆ ಹತ್ತಿದ ಧೂಳನ್ನೂ ಒರಸಿಬಿಡುತ್ತೇವೆ; ಅದು
ನಿಮಗೇ ಇರಲಿ; ಆದಾಗ್ಯೂ ದೇವರ ರಾಜ್ಯವು ಸಮಿಾ
ಪಕ್ಕೆ ಬಂದದೆ ಎಂದು ನಿಮಗೆ ತಿಳಿದಿರಲಿ ಎಂಬದಾಗಿ
ಹೇಳಿರಿ. ಆ ದಿವಸದಲ್ಲಿ ಅಂಥ ಊರಿನ ಗತಿಯು 12
ಸೊದೋಮೂರಿನ ಗತಿಗಿಂತಲೂ ಕಠಿಣವಾಗಿರುವದು

---

1) ಮೂಲ: ಮುಖವನ್ನು. 2) ಕೆಲವು ಪ್ರತಿಗಳಲ್ಲಿ—ಎಲೀಯನು ಹೇಳಿದಂತೆ ನಾವೂ ಎಂದು ಬರೆದದೆ. 3) ಕೆಲವು ಪ್ರತಿಗಳಲ್ಲಿ—ಗದರಿಸಿ ಹೇಳಿದ್ದೇನಂದರೆ, ನೀವೆಂಥ ಆತ್ಮಕ್ಕೆ ಅಧೀನರಾದಿರೆಂದು ನಿಮಗೆ ತಿಳಿಯದು; ಮನುಷ್ಯಕುಮಾರನು ಮನುಷ್ಯರ ಪ್ರಾಣಗಳನ್ನು ನಾಶಮಾಡುವದಕ್ಕೆ ಬಂದವನಲ್ಲ, ರಕ್ಷಿಸುವದಕ್ಕೇ ಬಂದವನು ಎಂದು ಬರೆದದೆ. 4) ಇಲ್ಲಿಯೂ 17ನೆಯ ವಚನದಲ್ಲಿಯೂ ಕೆಲವು ಪ್ರತಿಗಳೊಳಗೆ—ಎಪ್ಪತ್ತೆರಡು ಎಂದು ಬರೆದದೆ.

13 ಎಂದು ನಿಮಗೆ ಹೇಳುತ್ತೇನೆ. ಅಯ್ಯೋ ಖೊರಾ
ಜಿನೇ, ಅಯ್ಯೋ ಬೇತ್ಸಾಯಿದವೇ, ನಿಮ್ಮಲ್ಲಿ ನಡೆದ
ಮಹತ್ಕಾರ್ಯಗಳು ತೂರ್ ಮತ್ತು ಸೀದೋನ್ ಪಟ್ಟಣ
ಗಳಲ್ಲಿ ನಡೆದಿದ್ದರೆ ಅಲ್ಲಿಯವರು ಆಗಲೇ ಗೋಣೀ
ತಟ್ಟು ಹೊದ್ದುಕೊಂಡು ಬೂದಿಯಲ್ಲಿ ಕೂತುಕೊಂಡು
14 ದೇವರ ಕಡೆಗೆ ತಿರುಗಿಕೊಳ್ಳುತ್ತಿದ್ದರು. ಆದರೆ
ನ್ಯಾಯವಿಚಾರಣೆಯಲ್ಲಿ ನಿಮ್ಮ ಗತಿಗಿಂತಲೂ ತೂರ್
ಸೀದೋನ್ ಪಟ್ಟಣಗಳ ಗತಿಯು ಮೇಲಾಗಿರುವದು.
15 ಎಲಾ ಕಪೆರ್ನೌಮೇ, ನೀನು ಪರಲೋಕಕ್ಕೆ ಏರಿಸಲ್ಪ
16 ಡುವಿಯೋ? ಪಾತಾಳಕ್ಕೇ ಇಳಿಯುವಿ. ನಿಮ್ಮ ಮಾತ
ನ್ನು ಕೇಳುವವನು ನನ್ನ ಮಾತನ್ನು ಕೇಳುವವನಾಗಿ
ದ್ದಾನೆ; ನಿಮ್ಮನ್ನು ಅಲಕ್ಷ್ಯಮಾಡುವವನು ನನ್ನನ್ನು
ಅಲಕ್ಷ್ಯಮಾಡುವವನಾಗಿದ್ದಾನೆ; ನನ್ನನ್ನು ಅಲಕ್ಷ್ಯ
ಮಾಡುವವನು ನನ್ನನ್ನು ಕಳುಹಿಸಿಕೊಟ್ಟಾತನನ್ನೇ
ಅಲಕ್ಷ್ಯಮಾಡುವವನಾಗಿದ್ದಾನೆ ಅಂದನು.

17 ತರುವಾಯ ಆ ಎಪ್ಪತ್ತು ಮಂದಿಯು ಸಂತೋಷ
ವುಳ್ಳವರಾಗಿ ಹಿಂತಿರುಗಿ ಬಂದು—ಸ್ವಾಮಿ, ದೆವ್ವಗಳು
ಕೂಡಾ ನಿನ್ನ ಹೆಸರನ್ನು ಕೇಳಿ ನಮಗೆ ಅಧೀನವಾಗು
18 ತ್ತವೆ ಅಂದರು. ಆತನು ಅವರಿಗೆ—ಸೈತಾನನು ಸಿಡಿಲಿ
19 ನಂತೆ ಆಕಾಶದಿಂದ ಬೀಳುವದನ್ನು ಕಂಡೆನು. ನೋ
ಡಿರಿ, ಹಾವುಗಳನ್ನೂ ಚೇಳುಗಳನ್ನೂ ವೈರಿಯ ಸಮಸ್ತ
ಬಲವನ್ನೂ ತುಳಿಯುವದಕ್ಕೆ ನಿಮಗೆ ಅಧಿಕಾರ ಕೊಟ್ಟಿ
ದ್ದೇನೆ. ಯಾವದೂ ನಿಮಗೆ ಕೇಡುಮಾಡುವದೇ
20 ಇಲ್ಲ. ಆದರೂ ದೆವ್ವಗಳು ನಮಗೆ ಅಧೀನವಾ
ಗಿವೆ ಎಂದು ಸಂತೋಷಪಡದೆ ನಿಮ್ಮ ಹೆಸರುಗಳು ಪರ
ಲೋಕದಲ್ಲಿ ಬರೆದಿರುತ್ತವೆ ಎಂದು ಸಂತೋಷಪಡಿರಿ
ಎಂಬದಾಗಿ ಹೇಳಿದನು.

21 ಅದೇ ಗಳಿಗೆಯಲ್ಲಿ ಆತನು ಪವಿತ್ರಾತ್ಮನ ಪ್ರೇರಣೆ
ಯಿಂದ ಉಲ್ಲಾಸಗೊಂಡು ಹೇಳಿದ್ದೇನಂದರೆ—ತಂದೆ
ಯೇ, ಪರಲೋಕ ಭೂಲೋಕಗಳ ಒಡೆಯನೇ, ನೀನು
ಜ್ಞಾನಿಗಳಿಗೂ ಬುದ್ಧಿವಂತರಿಗೂ ಈ ಮಾತುಗಳನ್ನು
ಮರೆಮಾಡಿ ಬಾಲಕರಿಗೆ ಪ್ರಕಟಮಾಡಿದ್ದೀ ಎಂದು
ನಿನ್ನನ್ನು ಕೊಂಡಾಡುತ್ತೇನೆ. ಹೌದು, ತಂದೆಯೇ,
ಹೀಗೆ ಮಾಡುವದೇ ಒಳ್ಳೇದೆಂದು ನಿನ್ನ ದೃಷ್ಟಿಗೆ ತೋರಿ
22 ದ್ದರಿಂದ ನಿನ್ನನ್ನು ಕೊಂಡಾಡುತ್ತೇನೆ. ನನ್ನ ತಂದೆ
ಯು ಎಲ್ಲವನ್ನೂ ನನಗೆ ಒಪ್ಪಿಸಿದ್ದಾನೆ. ಮಗನು
ಇಂಥವನೆಂದು ತಂದೆಯೇ ಹೊರತು ಇನ್ನಾವನೂ ತಿಳಿ
ದವನಲ್ಲ; ತಂದೆ ಇಂಥವನೆಂದು ಮಗನೇ ಹೊರತು
ಇನ್ನಾವನೂ ತಿಳಿದವನಲ್ಲ; ಮತ್ತು ಮಗನು ತಂದೆ
ಯನ್ನು ಯಾರಿಗೆ ಪ್ರಕಟಿಸುವದಕ್ಕೆ ಮನಸ್ಸುಳ್ಳವ
ನಾಗಿದ್ದಾನೋ ಅವನೂ ಆತನನ್ನು ತಿಳಿದವನಾಗಿದ್ದಾನೆ
23 ಅಂದನು. ಆ ಮೇಲೆ ಆತನು ಶಿಷ್ಯರ ಕಡೆಗೆ ತಿರುಗಿ
ಕೊಂಡು ವಿಂಗಡವಾಗಿ ಹೇಳಿದ್ದೇನಂದರೆ—ನೀವು
ನೋಡುತ್ತಿರುವ ಸಂಗತಿಗಳನ್ನು ನೋಡುವವರು ಧನ್ಯ
24 ರು. ಬಹು ಮಂದಿ ಪ್ರವಾದಿಗಳೂ ಅರಸರೂ ನೀವು
ನೋಡುತ್ತಿರುವ ಸಂಗತಿಗಳನ್ನು ನೋಡಬೇಕೆಂದು
ಅಪೇಕ್ಷಿಸಿದರೂ ನೋಡಲಿಲ್ಲ, ನೀವು ಕೇಳುತ್ತಿರುವ
ಸಂಗತಿಗಳನ್ನು ಕೇಳಬೇಕೆಂದು ಅಪೇಕ್ಷಿಸಿದರೂ ಕೇಳ
ಲಿಲ್ಲ ಎಂಬದಾಗಿ ನಿಮಗೆ ಹೇಳುತ್ತೇನೆ ಅಂದನು.

### ಯೇಸು ಕರುಣೆಯುಳ್ಳ ಸಮಾರ್ಯದವನ ದೃಷ್ಟಾಂತವನ್ನು ಹೇಳಿದ್ದು.

ಆಗ ಒಬ್ಬ ಧರ್ಮೋಪದೇಶಕನು ಎದ್ದು ಆತ
ನನ್ನು ಪರೀಕ್ಷಿಸುವದಕ್ಕಾಗಿ—ಬೋಧಕನೇ, ನಾನು
ನಿತ್ಯಜೀವಕ್ಕೆ ಬಾಧ್ಯನಾಗುವಂತೆ ಏನು ಮಾಡಬೇಕು
ಎಂದು ಕೇಳಲು ಆತನು ಅವನಿಗೆ—ಶಾಸ್ತ್ರದಲ್ಲಿ ಏನು
ಬರೆದದೆ? ಹೇಗೆ ಓದಿದ್ದೀ? ಎಂದು ಹೇಳಿದನು.
ಅದಕ್ಕೆ ಅವನು—ನಿನ್ನ ದೇವರಾಗಿರುವ ಕರ್ತನನ್ನು
ನಿನ್ನ ಪೂರ್ಣಹೃದಯದಿಂದಲೂ ನಿನ್ನ ಪೂರ್ಣಪ್ರಾಣ
ದಿಂದಲೂ ನಿನ್ನ ಪೂರ್ಣಶಕ್ತಿಯಿಂದಲೂ ನಿನ್ನ ಪೂರ್ಣ
ಬುದ್ಧಿಯಿಂದಲೂ ಪ್ರೀತಿಸಬೇಕು. ಮತ್ತು ನಿನ್ನ ನೆರೆ
ಯವನನ್ನು ನಿನ್ನಂತೆಯೇ ಪ್ರೀತಿಸಬೇಕು ಎಂದು ಬರೆ
ದದೆ ಅಂದನು. ಆತನು ಅವನಿಗೆ—ನೀನು ಸರಿಯಾಗಿ
ಉತ್ತರಕೊಟ್ಟಿ; ಇದರಂತೆ ಮಾಡು, ಮಾಡಿದರೆ ಜೀವಿ
ಸುವಿ ಎಂದು ಹೇಳಿದನು. ಆದರೆ ಅವನು ತನ್ನನ್ನು
ನೀತಿವಂತನೆಂದು ತೋರಿಸಿಕೊಳ್ಳುವದಕ್ಕೆ ಅಪೇಕ್ಷಿಸಿ—
ನನ್ನ ನೆರೆಯವನು ಯಾರು ಎಂದು ಯೇಸುವನ್ನು
ಕೇಳಲು ಯೇಸು ಅವನಿಗೆ ಪ್ರತ್ಯುತ್ತರವಾಗಿ ಹೇಳಿ
ದ್ದೇನಂದರೆ—ಒಬ್ಬಾನೊಬ್ಬ ಮನುಷ್ಯನು ಯೆರೂಸ
ಲೇಮಿನಿಂದ ಘಟ್ಟಾ ಇಳಿದು ಯೆರಿಕೋವಿಗೆ ಹೋಗು
ತ್ತಿರುವಾಗ ಕಳ್ಳರ ಕೈಗೆ ಸಿಕ್ಕಿದನು. ಅವರು ಅವ
ನನ್ನು ಸುಲಿಗೆ ಮಾಡಿಕೊಂಡು ಗಾಯವಾಗುವಷ್ಟು
ಹೊಡೆದು ಅವನನ್ನು ಅರೆಜೀವಮಾಡಿ ಬಿಟ್ಟುಹೋದರು.
ಆಗ ಹೇಗೋ ಒಬ್ಬ ಯಾಜಕನು ಆ ದಾರಿಯಲ್ಲಿ
ಇಳಿದುಬರುತ್ತಾ ಅವನನ್ನು ಕಂಡು ವಾರೆಯಾಗಿ
ಹೋದನು. ಅದೇ ರೀತಿಯಲ್ಲಿ ಒಬ್ಬ ಲೇವಿಯನೂ
ಆ ಸ್ಥಳಕ್ಕೆ ಬಂದು ಅವನನ್ನು ಕಂಡು ವಾರೆಯಾಗಿ
ಹೋದನು. ಆದರೆ ಒಬ್ಬ ಸಮಾರ್ಯದವನು
ಪ್ರಯಾಣಮಾಡುತ್ತಾ ಅವನಿದ್ದಲ್ಲಿಗೆ ಬಂದು ಅವ
ನನ್ನು ಕಂಡು ಕನಿಕರಿಸಿ ಅವನ ಹತ್ತಿರಕ್ಕೆ ಹೋಗಿ
ಅವನ ಗಾಯಗಳಲ್ಲಿ ಎಣ್ಣೆಯನ್ನೂ ದ್ರಾಕ್ಷಾರಸವನ್ನೂ
ಹೊಯ್ದು ಕಟ್ಟಿ ತನ್ನ ಸ್ವಂತ ವಾಹನದ ಮೇಲೆ ಹತ್ತಿ
ಸಿಕೊಂಡು ಛತ್ರಕ್ಕೆ ಕರಕೊಂಡು ಹೋಗಿ ಅವನನ್ನು
ಆರೈಕೆಮಾಡಿದನು. ಮರುದಿನ ಅವನು ಎರಡು ಹಣ
ಗಳನ್ನು ತೆಗೆದು ಛತ್ರದವನಿಗೆ ಕೊಟ್ಟು—ಇವನನ್ನು
ಆರೈಕೆಮಾಡು; ಇದಕ್ಕಿಂತ ಹೆಚ್ಚಾಗಿ ಏನಾದರೂ ವೆಚ್ಚ
ಮಾಡಿದರೆ ನಾನು ಹಿಂತಿರುಗಿ ಬಂದಾಗ ನಿನಗೆ ಕೊಡು
ವೆನು ಅಂದನು. ಈ ಮೂವರಲ್ಲಿ ಯಾವನು ಕಳ್ಳರ
ಕೈಗೆ ಸಿಕ್ಕಿದವನಿಗೆ ನೆರೆಯವನಾದನೆಂದು ನಿನಗೆ
ತೋರುತ್ತದೆ ಹೇಳು ಎಂದು ಕೇಳಿದ್ದಕ್ಕೆ ಆ ಧರ್ಮೋ
ಪದೇಶಕನು—ಅವನಿಗೆ ದಯತೋರಿಸಿದವನೇ ಅಂದ
ನು. ಆಗ ಯೇಸು ಅವನಿಗೆ—ಹೋಗು, ನೀನೂ
ಅದರಂತೆ ಮಾಡು ಎಂದು ಹೇಳಿದನು.

### ಮಾರ್ಥಳು ಮರಿಯಳು ಎಂಬವರ ಮನೆಯಲ್ಲಿ ಯೇಸು ಇಳುಕೊಂಡದ್ದು.

ಅವರು ಸಂಚಾರಮಾಡುತ್ತಿರುವಾಗ ಆತನು ಒಂದಾ
ನೊಂದು ಹಳ್ಳಿಗೆ ಬಂದನು; ಅಲ್ಲಿ ಮಾರ್ಥಳೆಂಬ

ಒಬ್ಬ ಸ್ತ್ರೀಯು ಆತನನ್ನು ತನ್ನ ಮನೆಯಲ್ಲಿ ಇಳಿಸಿ
39 ಕೊಂಡಳು. ಆಕೆಗೆ ಮರಿಯಳೆಂಬ ಒಬ್ಬ ತಂಗಿ ಇದ್ದ
ಳು. ಈಕೆಯು ಸ್ವಾಮಿಯ ಪಾದಗಳ ಬಳಿಯಲ್ಲಿ
ಕೂತುಕೊಂಡು ಆತನ ವಾಕ್ಯವನ್ನು ಕೇಳುತ್ತಿದ್ದಳು.
40 ಆದರೆ ಮಾರ್ಥಳು ಬಹಳ ಸೇವೆಯ ವಿಷಯವಾಗಿ
ಬೇಸತ್ತು ಆತನ ಬಳಿಗೆ ಬಂದು—ಸ್ವಾಮೀ, ನನ್ನ
ತಂಗಿಯು ಸೇವೆಗೆ ನನ್ನೊಬ್ಬಳನ್ನೇ ಬಿಟ್ಟಿದ್ದಾಳೆ.
ಇದಕ್ಕೆ ನಿನಗೆ ಚಿಂತೆಯಿಲ್ಲವೋ? ನನಗೆ ನೆರವಾಗ
41 ಬೇಕೆಂದು ಆಕೆಗೆ ಹೇಳು ಅಂದಳು. ಸ್ವಾಮಿಯು
ಆಕೆಗೆ—ಮಾರ್ಥಳೇ, ಮಾರ್ಥಳೇ, ನೀನು ಅನೇಕ
ವಿಷಯವಾಗಿ ಚಿಂತೆಯಲ್ಲಿಯೂ ಗಡಿಬಿಡಿಯಲ್ಲಿಯೂ
42 ಸಿಕ್ಕಿಕೊಂಡಿದ್ದೀ. ಕೆಲವು ಮಾತ್ರ ಬೇಕಾದದ್ದು,
ಅಥವಾ 1)ಒಂದೇ, ಮರಿಯಳು ಆ ಉತ್ತಮ ಭಾಗ
ವನ್ನು ಆರಿಸಿಕೊಂಡಿದ್ದಾಳೆ; ಅದು ಆಕೆಯಿಂದ ತೆಗೆಯ
ಲ್ಪಡುವದಿಲ್ಲ ಎಂದು ಉತ್ತರಕೊಟ್ಟನು.

ಮನುಷ್ಯರು ದೇವರ ಪ್ರಾರ್ಥನೆಯಲ್ಲಿ ಆಸಕ್ತರಾಗಿರಬೇಕೆಂದು ಯೇಸುವು ಸಾಮ್ಯರೂಪವಾಗಿ ಬೋಧಿಸಿದ್ದು.
(ಮತ್ತಾ. 6. 9—13; 7. 7—11.)

11 ಆತನು ಒಂದಾನೊಂದು ಸ್ಥಳದಲ್ಲಿ ಪ್ರಾರ್ಥನೆ
ಮಾಡಿ ಮುಗಿಸಿದಾಗ ಆತನ ಶಿಷ್ಯರಲ್ಲಿ ಒಬ್ಬನು
ಆತನಿಗೆ—ಸ್ವಾಮೀ, ಯೋಹಾನನು ತನ್ನ ಶಿಷ್ಯರಿಗೆ
ಕಲಿಸಿದ ಹಾಗೆ ನಮಗೂ ಪ್ರಾರ್ಥನೆಮಾಡುವದನ್ನು
2 ಕಲಿಸು ಎಂದು ಕೇಳಿದನು. ಅದಕ್ಕಾತನು—ನೀವು
ಪ್ರಾರ್ಥಿಸುವಾಗ—
ತಂದೆಯೇ, ನಿನ್ನ ನಾಮವು ಪರಿಶುದ್ಧವೆಂದು
ಎಣಿಸಲ್ಪಡಲಿ.
ನಿನ್ನ ರಾಜ್ಯವು ಬರಲಿ.
3 ನಮ್ಮ ಅನುದಿನದ ಆಹಾರವನ್ನು ಪ್ರತಿದಿನವೂ
ದಯಪಾಲಿಸು.
4 ನಮಗೆ ತಪ್ಪುಮಾಡಿರುವ ಪ್ರತಿಯೊಬ್ಬನನ್ನು
ನಾವು ಕ್ಷಮಿಸುತ್ತೇವಾದ್ದರಿಂದ ನಮ್ಮ
ಪಾಪಗಳನ್ನು ಕ್ಷಮಿಸು.
ನಮ್ಮನ್ನು ಶೋಧನೆಯೊಳಗೆ ಸೇರಿಸಬೇಡ
ಎಂದು ಹೇಳಿರಿ ಅಂದನು.
5 ಮತ್ತು ಅವರಿಗೆ ಹೇಳಿದ್ದೇನಂದರೆ—ನಿಮ್ಮಲ್ಲಿ ಒಬ್ಬ
ನಿಗೆ ಸ್ನೇಹಿತನಿದ್ದಾನೆ ಎಂದು ಹೇಳೋಣ. ಅವನು
ನಡುಹೊತ್ತಿನಲ್ಲಿ ಆ ಸ್ನೇಹಿತನ ಬಳಿಗೆ ಹೋಗಿ—
ಸ್ನೇಹಿತನೇ, ನನಗೆ ಮೂರು ರೊಟ್ಟಿಗಳನ್ನು ಕಡವಾಗಿ
6 ಕೊಡು. ನನ್ನ ಸ್ನೇಹಿತರಲ್ಲಿ ಒಬ್ಬನು ಎಲ್ಲಿಗೋ
ಪ್ರಯಾಣವಾಗಿ ನನ್ನ ಬಳಿಗೆ ಬಂದಿದ್ದಾನೆ; ಅವನಿಗೆ
ಊಟಮಾಡಿಸುವದಕ್ಕೆ ನನ್ನಲ್ಲಿ ಏನೂ ಇಲ್ಲ ಎಂದು
7 ಕೇಳಲು ಆ ಸ್ನೇಹಿತನು—ನನಗೆ ತೊಂದರೆಕೊಡಬೇಡ;
ಈಗ ಕದಹಾಕಿ ಅದೆ; ನನ್ನ ಚಿಕ್ಕ ಮಕ್ಕಳು ನನ್ನ
ಕೂಡ ಮಲಗಿದ್ದಾರೆ; ನಾನು ಎದ್ದು ನಿನಗೆ ಕೊಡುವದ
ಕ್ಕಾಗುವದಿಲ್ಲ ಎಂದು ಒಳಗಿನಿಂದ ಉತ್ತರಕೊಟ್ಟರೂ
ಕೊಡಬಹುದು. ಆದರೆ ಸ್ನೇಹದ ನಿಮಿತ್ತವಾಗಿ ಎದ್ದು 8
ಕೊಡದೆ ಇದ್ದರೂ ಅವನ ಕಾಟದ ದೆಸೆಯಿಂದ ಎದ್ದು
ಬಂದು ಕೇಳಿದಷ್ಟು ಅವನಿಗೆ ಕೊಡುವನೆಂದು ನಿಮಗೆ
ಹೇಳುತ್ತೇನೆ. ಹಾಗೆಯೇ ನಾನು ನಿಮಗೆ ಹೇಳುವ 9
ದೇನಂದರೆ—ಬೇಡಿಕೊಳ್ಳಿರಿ, ನಿಮಗೆ ದೊರೆಯುವದು;
ಹುಡುಕಿರಿ, ನಿಮಗೆ ಸಿಕ್ಕುವದು; ತಟ್ಟಿರಿ, ನಿಮಗೆ
ತೆರೆಯುವದು. ಯಾಕಂದರೆ ಬೇಡಿಕೊಳ್ಳುವ ಪ್ರತಿ 10
ಯೊಬ್ಬನು ಹೊಂದುವನು, ಹುಡುಕುವವನಿಗೆ ಸಿಕ್ಕು
ವದು, ತಟ್ಟುವವನಿಗೆ ತೆರೆಯುವದು. ನಿಮ್ಮಲ್ಲಿ ತಂದೆ 11
ಯಾದವನು 2)ಮೀನನ್ನು ಕೇಳುವ ಮಗನಿಗೆ ಮೀನು
ಕೊಡದೆ ಹಾವನ್ನು ಕೊಡುವನೇ? ಅಥವಾ 3)ತತ್ತಿ 12
ಯನ್ನು ಕೇಳಿದರೆ ಚೇಳನ್ನು ಕೊಡುವನೇ? ಹಾಗಾದರೆ 13
ಕೆಟ್ಟವರಾದ ನೀವು ನಿಮ್ಮ ಮಕ್ಕಳಿಗೆ ಒಳ್ಳೇ ಪದಾರ್ಥ
ಗಳನ್ನು ಕೊಡಬಲ್ಲವರಾದರೆ ಪರಲೋಕದಲ್ಲಿರುವ
ನಿಮ್ಮ ತಂದೆಯು ತನ್ನನ್ನು ಬೇಡಿಕೊಳ್ಳುವವರಿಗೆ
ಎಷ್ಟೋ ಹೆಚ್ಚಾಗಿ ಪವಿತ್ರಾತ್ಮವರವನ್ನು ಕೊಡುವ
ನಲ್ಲವೇ ಅಂದನು.

ಫರಿಸಾಯರು ಯೇಸುವನ್ನು ದೂಷಿಸಿ ಸೂಚಕಕಾರ್ಯವನ್ನು ನೋಡಬೇಕೆಂದು ಕೇಳಿಕೊಂಡಾಗ ಯೇಸು ಕೊಟ್ಟ ಉತ್ತರ.
(ಮತ್ತಾ. 12. 22—45. ಮಾರ್ಕ 3. 22—30; 8. 11, 12.)

ಒಂದಾನೊಂದು ಸಮಯದಲ್ಲಿ ಆತನು ಮೂಕ 14
ದೆವ್ವವನ್ನು ಬಿಡಿಸುತ್ತಿದ್ದನು. ಆ ದೆವ್ವವು ಬಿಟ್ಟು
ಹೋದ ಮೇಲೆ ಮೂಕನು ಮಾತಾಡಿದನು; ಅದಕ್ಕೆ
ಜನರು ಆಶ್ಚರ್ಯಪಟ್ಟರು. ಆದರೆ ಅವರಲ್ಲಿ ಕೆಲ 15
ವರು—ಇವನು ದೆವ್ವಗಳ ಒಡೆಯನಾದ ಬೆಲ್ಜೆಬೂಲನ
ಸಹಾಯದಿಂದ ದೆವ್ವಗಳನ್ನು ಬಿಡಿಸುತ್ತಾನೆ ಅಂದರು.
ಬೇರೆ ಕೆಲವರು ಆತನನ್ನು ಪರೀಕ್ಷಿಸುವದಕ್ಕಾಗಿ— 16
ನೀನು ಆಕಾಶದಲ್ಲಿ ಒಂದು ಸೂಚಕಕಾರ್ಯವನ್ನು
ತೋರಿಸಿ ಕೊಡಬೇಕು ಎಂದು ಕೇಳಿದರು. ಆತನು 17
ಅವರ ಆಲೋಚನೆಗಳನ್ನು ತಿಳುಕೊಂಡು ಅವರಿಗೆ
ಹೇಳಿದ್ದೇನಂದರೆ—ತನ್ನಲ್ಲಿ ಭೇದಹುಟ್ಟಿದ ರಾಜ್ಯವು
ಹಾಳಾಗುತ್ತದೆ; ಮತ್ತು ತನ್ನಲ್ಲಿ ಭೇದಹುಟ್ಟಿದ ಮನೆ
ಬೀಳುತ್ತದೆ. ಆದರಂತೆ ಸೈತಾನನು ತನ್ನಲ್ಲಿ ಭೇದ 18
ಹುಟ್ಟಿಸಿಕೊಂಡರೆ ಅವನ ರಾಜ್ಯವು ಹೇಗೆ ಉಳಿದೀತು?
ಬೆಲ್ಜೆಬೂಲನ ಬಲದಿಂದ ದೆವ್ವಗಳನ್ನು ಬಿಡಿಸುತ್ತೀ
ಎಂದು ನನಗೆ ಹೇಳುತ್ತೀರಲ್ಲಾ. ನಾನು ಬೆಲ್ಜೆಬೂಲನ 19
ಬಲದಿಂದ ದೆವ್ವಗಳನ್ನು ಬಿಡಿಸುವದಾದರೆ ನಿಮ್ಮವರು
ಯಾರ ಬಲದಿಂದ ಬಿಡಿಸುತ್ತಾರೆ? ಆದದರಿಂದ ಅವರೇ
ನಿಮಗೆ ನ್ಯಾಯತೀರಿಸುವವರಾಗುವರು. ನಾನು 20
ದೇವರ 4)ಬಲದಿಂದಲೇ ದೆವ್ವಗಳನ್ನು ಬಿಡಿಸುವದಾ
ದರೆ ದೇವರ ರಾಜ್ಯವು ನಿಮ್ಮ ಹತ್ತಿರಕ್ಕೆ ಬಂತಲ್ಲಾ.
ಒಬ್ಬ ಬಲಿಷ್ಠನು ಸರ್ವಾಯುಧಗಳನ್ನು ಧರಿಸಿಕೊಂಡು 21
ತನ್ನ ಮನೆಯನ್ನು ಕಾಪಾಡಿಕೊಂಡಿರುವಾಗ ಅವನ
ವಸ್ತುಗಳು ಭದ್ರವಾಗಿಯೇ ಇರುವವು; ಆದರೆ ಅವನಿ 22
ಗಿಂತ ಬಲಿಷ್ಠನು ಬಂದು ಅವನನ್ನು ಸೋಲಿಸಿದ ಮೇಲೆ

1) ಕೆಲವು ಪ್ರತಿಗಳಲ್ಲಿ—ಬೇಕಾದದ್ದು ಒಂದೇ ಎಂದು ಬರೆದದೆ. 2) ಕೆಲವು ಪ್ರತಿಗಳಲ್ಲಿ—ರೊಟ್ಟಿಯನ್ನು ಕೇಳುವ ಮಗನಿಗೆ ಕಲ್ಲನ್ನು ಕೊಡುವನೇ ಎಂದು ಹೆಚ್ಚಾಗಿ ಬರೆದದೆ. 3) ಅಥವಾ, ಮೊಟ್ಟೆಯನ್ನು. 4) ಮೂಲ: ಬೆರಳಿನಿಂದ.

ಆ ಮೊದಲಿನವನು ನೆಚ್ಚಿಕೊಂಡಿದ್ದ ಆಯುಧಗಳನ್ನೆಲ್ಲಾ
ತೆಗೆದುಕೊಂಡು ತಾನು ಸುಲಿಗೆಮಾಡಿದ್ದನ್ನು ಹಂಚಿ
23 ಕೊಡುವನು. ನನ್ನ ಪಕ್ಷ ಹಿಡಿಯದವನು ನನಗೆ
ವಿರೋಧಿ; ನನ್ನ ಜೊತೆಯಲ್ಲಿ ಒಟ್ಟುಗೂಡಿಸದವನು
24 ಚದರಿಸುವವನಾಗುತ್ತಾನೆ. ದೆವ್ವವು ಮನುಷ್ಯನನ್ನು
ಬಿಟ್ಟುಹೋದ ಮೇಲೆ ವಿಶ್ರಾಂತಿಯನ್ನು ಹುಡುಕುತ್ತಾ
ನೀರಿಲ್ಲದ ಸ್ಥಳಗಳಲ್ಲಿ ತಿರುಗಾಡುತ್ತದೆ; ವಿಶ್ರಾಂತಿ
ಸಿಕ್ಕದ ಕಾರಣ ಅದು—ನಾನು ಬಿಟ್ಟು ಬಂದ ನನ್ನ
ಮನೆಗೆ ಹಿಂತಿರುಗಿ ಹೋಗುತ್ತೇನೆ ಅಂದುಕೊಂಡು
25 ಬಂದು ಆ ಮನೆ ಗುಡಿಸಿ ಅಲಂಕರಿಸಿದ್ದಾಗಿರುವದನ್ನು
26 ಕಂಡು ಹೊರಟುಹೋಗಿ ತನಗಿಂತ ಕೆಟ್ಟವುಗಳಾದ
ಬೇರೆ ಏಳು ದೆವ್ವಗಳನ್ನು ಕರಕೊಂಡು ಬರುವದು;
ಅವು ಒಳಹೊಕ್ಕು ಅಲ್ಲಿ ವಾಸಮಾಡುವವು; ಆಗ ಆ
ಮನುಷ್ಯನ ಅಂತ್ಯಸ್ಥಿತಿಯು ಮೊದಲಿಗಿಂತ ಕೆಟ್ಟದ್ದಾ
ಗುವದು ಅಂದನು.
27 ಆತನು ಈ ಮಾತುಗಳನ್ನು ಹೇಳುತ್ತಿರುವಾಗ
ಜನರಲ್ಲಿ ಒಬ್ಬ ಸ್ತ್ರೀಯು—ನಿನ್ನನ್ನು ಹೊತ್ತ ಗರ್ಭ
ವೂ ನೀನು ಕುಡಿದ ಮೊಲೆಗಳೂ ಧನ್ಯವಾದವುಗಳು
28 ಎಂದು ಕೂಗಿದಳು. ಆತನು—ಹಾಗನ್ನ ಬೇಡ,
ದೇವರ ವಾಕ್ಯವನ್ನು ಕೇಳಿ ಅದಕ್ಕೆ ಸರಿಯಾಗಿ ನಡ
ಕೊಳ್ಳುವವರೇ ಧನ್ಯರು ಅಂದನು.
29 ಜನರು ಗುಂಪುಗುಂಪಾಗಿ ಕೂಡಿಬರುತ್ತಿರುವಾಗ
ಆತನು ಹೇಳುವದಕ್ಕೆ ತೊಡಗಿದ್ದೇನಂದರೆ—ಈ ಸಂತತಿ
ಕೆಟ್ಟ ಸಂತತಿಯೇ; ಇದು ಸೂಚಕಕಾರ್ಯವನ್ನು
ನೋಡಬೇಕೆಂದು ಅಪೇಕ್ಷಿಸುತ್ತದೆ. ಆದರೆ ಯೋನ
ನಲ್ಲಿ ಆದ ಸೂಚಕಕಾರ್ಯವೇ ಹೊರತು ಬೇರೆ
30 ಯಾವದೂ ಇದಕ್ಕೆ ಸಿಕ್ಕುವದಿಲ್ಲ. ಹೇಗೆಂದರೆ
ಯೋನನು ನಿನೆವೆ ಪಟ್ಟಣದವರಿಗೆ ಗುರುತಾದ ಹಾಗೆ
ಯೇ ಮನುಷ್ಯಕುಮಾರನು ಈ ಸಂತತಿಗೆ ಗುರುತಾಗಿ
31 ರುವನು. ದಕ್ಷಿಣದೇಶದ ರಾಣಿಯು ನ್ಯಾಯವಿಚಾ
ರಣೆಯಲ್ಲಿ ಈ ಸಂತತಿಯವರೊಂದಿಗೆ ಎದ್ದುನಿಂತು
ಇವರನ್ನು ಅಪರಾಧಿಗಳೆಂದು ಹೇಳುವಳು; ಆಕೆಯು
ಸೊಲೊಮೋನನ ಜ್ಞಾನವನ್ನು ತಿಳುಕೊಳ್ಳುವದಕ್ಕೆ
ಭೂಮಿಯ ಕಟ್ಟಕಡೆಯಿಂದ ಬಂದಳು; ಆದರೆ ಇಲ್ಲಿ
32 ಸೊಲೊಮೋನನಿಗಿಂತಲೂ ಹೆಚ್ಚಿನವನಿದ್ದಾನೆ. ನ್ಯಾಯ
ವಿಚಾರಣೆಯಲ್ಲಿ ನಿನೆವೆ ಪಟ್ಟಣದವರು ಈ ಸಂತತಿಯ
ವರೊಂದಿಗೆ ನಿಂತು ಇವರನ್ನು ಅಪರಾಧಿಗಳೆಂದು
ಹೇಳುವರು. ಅವರು ಯೋನನು ಸಾರಿದ ವಾಕ್ಯ
ವನ್ನು ಕೇಳಿ ದೇವರ ಕಡೆಗೆ ತಿರುಗಿಕೊಂಡರು; ಆದರೆ
ಇಲ್ಲಿ ಯೋನನಿಗಿಂತಲೂ ಹೆಚ್ಚಿನವನಿದ್ದಾನೆ.
33 ಯಾರೂ ದೀಪವನ್ನು ಹಚ್ಚಿ ಮರೆಯಲ್ಲಾಗಲಿ
ಕೊಳಗದೊಳಗಾಗಲಿ ಇಡುವದಿಲ್ಲ. ಮನೆಯೊಳಕ್ಕೆ
ಬರುವವರಿಗೆ ಬೆಳಕು ಕಾಣಿಸುವಂತೆ ಆ ದೀಪವನ್ನು
34 ದೀಪಸ್ತಂಭದ ಮೇಲೆ ಇಡುತ್ತಾರಷ್ಟೆ. ನಿನ್ನ ಕಣ್ಣು
ದೇಹಕ್ಕೆ ದೀಪವಾಗಿದೆ; ನಿನ್ನ ಕಣ್ಣು ನೆಟ್ಟಗಿರುವಾಗ
ಅದರಂತೆ ನಿನ್ನ ದೇಹವೆಲ್ಲಾ ಬೆಳಕಾಗಿರುವದು; ಅದು
ಕೆಟ್ಟದ್ದಾಗಿರುವಾಗ ಅದರಂತೆ ನಿನ್ನ ದೇಹವು ಕತ್ತಲಾ
35 ಗಿರುವದು. ಆದದರಿಂದ ನಿನ್ನೊಳಗಿರುವ ಬೆಳಕೇ ಕತ್ತ
36 ಲಾಗಿದೆಯೋ ಏನೋ ನೋಡು. ನಿನ್ನ ದೇಹವೆಲ್ಲಾ
ಬೆಳಕಾಗಿದ್ದು ಒಂದು ಭಾಗದಲ್ಲಿಯೂ ಕತ್ತಲಿಲ್ಲದ್ದಾಗಿ
ದ್ದರೆ ದೀಪವು ಹೊಳೆದು ನಿನಗೆ ಬೆಳಕನ್ನು ಕೊಡು
ಕಾಲದಲ್ಲಿ ಹೇಗೋ ಹಾಗೆಯೇ ಅದು ಪೂರ್ಣವಾಗಿ ಬೆ
ಕಾಗಿರುವದು ಅಂದನು.

### ಯೇಸು ಫರಿಸಾಯರ ದುರ್ಗುಣಗಳನ್ನು ಖಂಡಿಸಿದ್ದು.
(ಮತ್ತಾ. 23. 1—36.)

ಆತನು ಮಾತಾಡುತ್ತಿರುವಾಗ ಒಬ್ಬ ಫರಿಸಾಯನು
ಆತನನ್ನು ಊಟಕ್ಕೆ ಬರಬೇಕೆಂದು ಕೇಳಿಕೊಳ್ಳಲು
ಆತನು ಒಳಕ್ಕೆ ಹೋಗಿ ಊಟಕ್ಕೆ ಕೂತುಕೊಂಡನು
ಆತನು ತೊಳಕೊಳ್ಳದೆ ಊಟಕ್ಕೆ ಕೂತದ್ದನ್ನು ಆ ಫರಿ
ಸಾಯನು ಕಂಡು ಆಶ್ಚರ್ಯಪಟ್ಟನು. ಸ್ವಾಮಿಯು
ಅವನಿಗೆ—ಫರಿಸಾಯರಾದ ನೀವು ಪಂಚಪಾತ್ರೆ ಬಟ್ಟಲು
ಇವುಗಳ ಹೊರಭಾಗವನ್ನು ಶುಚಿಮಾಡುತ್ತೀರಿ ಸರಿ;
ಆದರೆ ನಿಮ್ಮ ಒಳಭಾಗವು ಸುಲಿಗೆಯಿಂದಲೂ ಕೆಟ್ಟ
ತನದಿಂದಲೂ ತುಂಬಿರುತ್ತದೆ. ಬುದ್ಧಿಯಿಲ್ಲದವರೇ,
ಹೊರಭಾಗವನ್ನು ಮಾಡಿದಾತನು ಒಳಭಾಗವನ್ನೂ
ಮಾಡಿದನಲ್ಲವೇ. ಹೇಗೂ ಒಳಗಿರುವಂಥದನ್ನು
ದಾನಾಕೊಡಿರಿ; ಆಗ ಸಕಲವೂ ನಿಮಗೆ ಶುದ್ಧವಾಗಿ
ರುವದು.
ಅಯ್ಯೋ ಫರಿಸಾಯರೇ, ನೀವು ಮರುಗ ಸದಾಪು
ಮುಂತಾದ ಸಕಲ ಪಲ್ಯಗಳಲ್ಲಿ ಹತ್ತರಲ್ಲೊಂದು ಪಾಲು
ಕೊಡುತ್ತೀರಿ ಸರಿ; ಆದರೆ ನ್ಯಾಯವನ್ನೂ ದೇವರ
ಪ್ರೀತಿಯನ್ನೂ ಒತ್ತಟ್ಟಿಗೆ ಬಿಟ್ಟಿದ್ದೀರಿ; ಇವುಗಳನ್ನು
ಮಾಡಬೇಕಾಗಿತ್ತು, ಅವುಗಳನ್ನೂ ಬಿಡಬಾರದು.
ಅಯ್ಯೋ ಫರಿಸಾಯರೇ, ಸಭಾಮಂದಿರಗಳಲ್ಲಿ ಮುಖ್ಯ
ಪೀಠಗಳೂ ಅಂಗಡಿ ಬೀದಿಗಳಲ್ಲಿ ನಮಸ್ಕಾರಗಳೂ
ನಿಮಗೆ ಇಷ್ಟ. ನಿಮ್ಮ ಗತಿಯನ್ನು ಏನು ಹೇಳಲಿ;
ನೆಲಸಮವಾದ ಸಮಾಧಿಗಳ ಹಾಗಿದ್ದೀರಿ; ಅವುಗಳ
ಮೇಲೆ ತಿರುಗಾಡುವ ಜನರಿಗೆ ಇವು ಸಮಾಧಿಗಳೆಂದು
ತಿಳಿಯದು ಎಂದು ಹೇಳಿದನು.
ಇದನ್ನು ಕೇಳಿ ಒಬ್ಬ ಧರ್ಮೋಪದೇಶಕನು ಆತ
ನಿಗೆ—ಬೋಧಕನೇ, ಈ ಮಾತುಗಳನ್ನು ಹೇಳುವದ
ರಿಂದ ನಮ್ಮನ್ನೂ ನಿಂದಿಸಿದ ಹಾಗಾಯಿತು ಎಂದು
ಹೇಳಲು ಆತನು—ಧರ್ಮೋಪದೇಶಕರೇ, ನಿಮ್ಮ ಗತಿ
ಯನ್ನೂ ಏನು ಹೇಳಲಿ? ನೀವು ಜನರ ಮೇಲೆ ಹೊರ
ಲಾರದ ಹೊರೆಗಳನ್ನು ಹೊರಿಸುತ್ತೀರಿ; ನೀವಾದರೋ
ಆ ಹೊರೆಗಳನ್ನು ಒಂದು ಬೆರಳಿನಿಂದಲೂ ಮುಟ್ಟುವ
ದಿಲ್ಲ. ನಿಮ್ಮ ಗತಿಯನ್ನು ಏನು ಹೇಳಲಿ? ನೀವು ಪ್ರ
ವಾದಿಗಳ ಗೋರಿಗಳನ್ನು ಕಟ್ಟುತ್ತೀರಿ; ಅವರನ್ನು
ಕೊಂದವರು ನಿಮ್ಮ ಪಿತೃಗಳೇ. ಹೀಗಿರುವದರಿಂದ
ನಿಮ್ಮ ಪಿತೃಗಳು ಮಾಡಿದ್ದಕ್ಕೆ ನೀವೇ ಸಾಕ್ಷಿಗಳಾಗಿರು
ವದಲ್ಲದೆ ಅವರ ಕೃತ್ಯಗಳಿಗೆ ಒಪ್ಪಿಕೊಂಡ ಹಾಗಾ
ಯಿತು. ಹೇಗಂದರೆ ಅವರು ಪ್ರವಾದಿಗಳನ್ನು ಕೊಂದ
ರು, ನೀವು ಗೋರಿಗಳನ್ನೇ ಕಟ್ಟುತ್ತೀರಿ. ಆದದರಿಂದ
ದೇವರ ಜ್ಞಾನವು ಹೇಳಿದ್ದೇನಂದರೆ—ನಾನು ಅವರ
ಬಳಿಗೆ ಪ್ರವಾದಿಗಳನ್ನೂ ಅಪೊಸ್ತಲರನ್ನೂ ಕಳುಹಿಸು
ವೆನು; ಅವರಲ್ಲಿ ಕೆಲವರನ್ನು ಕೊಲ್ಲುವರು; ಕೆಲವ
ರನ್ನು ಹಿಂಸೆಪಡಿಸುವರು. ಹೀಗೆ ಲೋಕಾದಿ 50
ಯಿಂದ ಹೇಬೆಲನ ರಕ್ತವು ಮೊದಲುಗೊಂಡು ಯಜ್ಞ

ವೇದಿಗೂ ದೇವಾಲಯಕ್ಕೂ ನಡುವೆ ಹತವಾದ ಜಕ
ರೀಯನ ರಕ್ತದವರೆಗೂ ಸುರಿಸಲ್ಪಟ್ಟ ಎಲ್ಲಾ ಪ್ರವಾದಿ
ಗಳ ರಕ್ತಕ್ಕೂ ಈ ಸಂತತಿಯವರು ಉತ್ತರಕೊಡಬೇಕು
ಎಂಬದೇ; ಹೌದು, ಈ ಸಂತತಿಯವರೇ ಉತ್ತರಕೊಡ
2 ಬೇಕೆಂದು ನಿಮಗೆ ಹೇಳುತ್ತೇನೆ. ಅಯ್ಯೋ ಧರ್ಮೋ
ಪದೇಶಕರೇ, ಜ್ಞಾನಕ್ಕೆ ಸಾಧನವಾದ ಬೀಗದಕೈಯನ್ನು
ತೆಗೆದುಬಿಟ್ಟಿರಿ. ನೀವೂ ಒಳಕ್ಕೆ ಹೋಗಲಿಲ್ಲ; ಒಳಕ್ಕೆ
ಹೋಗುತ್ತಿರುವವರಿಗೂ ಅಡ್ಡಿಮಾಡಿದಿರಿ ಅಂದನು.
3 ಬಳಿಕ ಆತನು ಅಲ್ಲಿಂದ ಹೊರಗೆ ಬಂದಾಗ ಶಾಸ್ತ್ರಿ
ಗಳೂ ಫರಿಸಾಯರೂ ಆತನನ್ನು ಕಠಿನವಾಗಿ ವಿರೋ
ಧಿಸಿ ಅನೇಕ ವಿಷಯಗಳನ್ನು ಕುರಿತು ಆತನನ್ನು ಅಡ್ಡಾ
4 ದಿಡ್ಡೀ ಪ್ರಶ್ನೆಮಾಡುತ್ತಾ ಆತನ ಬಾಯಿಮಾತಿನಲ್ಲಿ
ಏನಾದರೂ ಹಿಡಿಯಬೇಕೆಂದು ಆತನನ್ನು ಹೊಂಚಿ
ನೋಡುತ್ತಿದ್ದರು.

ಫರಿಸಾಯರ ಉಪದೇಶಕ್ಕೆ ಎಚ್ಚರಿಕೆಯಾಗಿರಬೇಕೆಂದು
ಯೇಸು ಬೋಧಿಸಿದ್ದು.
(ಮತ್ತಾ. 10. 26—33.)

12 ಇಷ್ಟರಲ್ಲಿ ಸಾವಿರಾರು ಜನರು ಒಬ್ಬರನ್ನೊಬ್ಬರು
ತುಳಿಯುವಷ್ಟು ಕೂಡಿಬಂದಿರಲಾಗಿ ಆತನು ಮೊ
ದಲು ತನ್ನ ಶಿಷ್ಯರಿಗೆ ಹೇಳುವದಕ್ಕೆ ತೊಡಗಿದ್ದೇನಂ
ದರೆ—ಫರಿಸಾಯರ ಕಪಟವೆಂಬ ಹುಳಿಹಿಟ್ಟಿನ ವಿಷಯ
2 ದಲ್ಲಿ ಜಾಗರೂಕರಾಗಿರ್ರಿ. ಮರೆಯಾಗಿರುವ ಯಾ
ವದೂ ವ್ಯಕ್ತವಾಗದೆ ಇರುವದಿಲ್ಲ; ಹೊರಪಡದ ರಹ
3 ಸ್ಯವೂ ಇಲ್ಲ. ಹೀಗಿರುವದರಿಂದ ನೀವು ಕತ್ತಲಲ್ಲಿ
ಹೇಳಿದಂಥದು ಬೆಳಕಿನಲ್ಲಿ ಕೇಳಲಾಗುವದು; ಮತ್ತು
ನೀವು ಕೋಣೆಗಳೊಳಗೆ ಕಿವಿಮಾತು ಆಡಿದ್ದು ಮಾಳಿಗೆ
ಗಳ ಮೇಲೆ ಸಾರಲಾಗುವದು.
4 ನನ್ನ ಸ್ನೇಹಿತರಾದ ನಿಮಗೆ ಹೇಳುತ್ತೇನೆ—ದೇಹ
ವನ್ನು ಕೊಂದು ಆದಕ್ಕಿಂತ ಹೆಚ್ಚಿನದೇನೂ ಮಾಡ
5 ಲಾರದವರಿಗೆ ಹೆದರಬೇಡಿರಿ. ನೀವು ಯಾರಿಗೆ ಹೆದರ
ಬೇಕೋ ನಿಮಗೆ ತಿಳಿಸುತ್ತೇನೆ; ಕೊಂದ ಮೇಲೆ ನರಕ
ದೊಳಗೆ ಹಾಕುವ ಅಧಿಕಾರವುಳ್ಳವನಿಗೆ ಹೆದರಬೇಕು;
ಹೌದು, ಆತನಿಗೇ ಹೆದರಬೇಕೆಂದು ನಿಮಗೆ ಹೇಳುತ್ತೇನೆ.
6 ಐದು ಗುಬ್ಬಿಗಳನ್ನು ಎರಡು ದುಡ್ಡಿಗೆ ಮಾರುತ್ತಾ
ರಲ್ಲಾ? ಆದಾಗ್ಯೂ ಅವುಗಳಲ್ಲಿ ಒಂದಾದರೂ ದೇವರಿಗೆ
7 ಮರೆತುಹೋಗುವದಿಲ್ಲ. ನಿಮ್ಮ ತಲೇಕೂದಲುಗಳು
ಸಹ ಎಲ್ಲವೂ ಎಣಿಕೆಯಾಗಿವೆ. ಹೆದರಬೇಡಿರಿ; ಬಹಳ
8 ಗುಬ್ಬಿಗಳಿಗಿಂತ ನೀವು ಹೆಚ್ಚಿನವರು. ನಾನು ನಿಮಗೆ
ಹೇಳುತ್ತೇನೆ, ಯಾವನು ಮನುಷ್ಯರ ಮುಂದೆ ತಾನು
ಯೇಸುವಿನವನೆಂದು ಒಪ್ಪಿಕೊಳ್ಳುವನೋ ಮನುಷ್ಯ
ಕುಮಾರನು ಸಹ ಅವನನ್ನು ದೇವದೂತರ ಮುಂದೆ
9 ತನ್ನವನೆಂದು ಒಪ್ಪಿಕೊಳ್ಳುವನು. ಆದರೆ ಯಾವನು
ಮನುಷ್ಯರ ಮುಂದೆ ತಾನು ಯೇಸುವಿನವನಲ್ಲ
ವೆಂದು ಹೇಳುವನೋ ಅವನನ್ನು ನಾನು ದೇವದೂತರ
10 ಮುಂದೆ ನನ್ನವನಲ್ಲವೆಂದು ಹೇಳುವೆನು. ಮನುಷ್ಯ
ಕುಮಾರನ ಮೇಲೆ ಏನಾದರೂ ಮಾತಾಡುವ ಪ್ರತಿ
ಯೊಬ್ಬನಿಗೆ ಕ್ಷಮಾಪಣೆಯಾಗುವದು; ಆದರೆ ಪವಿ
ತ್ರಾತ್ಮನನ್ನು ದೂಷಿಸಿದವನಿಗೆ ಕ್ಷಮಾಪಣೆಯಿಲ್ಲ.

ಅವರು ನಿಮ್ಮನ್ನು ಸಭಾಮಂದಿರಗಳ ಅಧ್ಯಕ್ಷರ 11
ಮುಂದಕ್ಕೂ ಅಧಿಕಾರಿಗಳ ಮುಂದಕ್ಕೂ ಅಧಿಪತಿಗಳ
ಮುಂದಕ್ಕೂ ಹಿಡುಕೊಂಡು ಹೋಗುವಾಗ ಹೇಗೆ
ಉತ್ತರಕೊಡಬೇಕು? ಏನು ಉತ್ತರಕೊಡಬೇಕು?
ಏನು ಹೇಳಬೇಕು ಎಂದು ಚಿಂತೆಮಾಡಬೇಡಿರಿ. ಯಾ 12
ಕಂದರೆ ನೀವು ಹೇಳತಕ್ಕದ್ದನ್ನು ಪವಿತ್ರಾತ್ಮನು ಆ ಗಳಿಗೆ
ಯಲ್ಲಿಯೇ ನಿಮಗೆ ಕಲಿಸಿಕೊಡುವನು ಅಂದನು.

ಯೇಸು ಬುದ್ಧಿಯಿಲ್ಲದ ಐಶ್ವರ್ಯವಂತನ ಸಾಮ್ಯವನ್ನು ಹೇಳಿ
ದ್ರವ್ಯಾಶೆಯ ವಿಷಯವಾಗಿಯೂ ಇಹಲೋಕದ ಚಿಂತೆಯ
ವಿಷಯವಾಗಿಯೂ ಎಚ್ಚರಿಸಿದ್ದು.
(ಮತ್ತಾ. 6. 25—33.)

ಆಗ ಜನರಲ್ಲಿ ಒಬ್ಬನು—ಬೋಧಕನೇ, ತಂದೆಯ 13
ಆಸ್ತಿಯನ್ನು ನನಗೆ ಪಾಲುಮಾಡಿಕೊಡುವಂತೆ ನನ್ನ
ಅಣ್ಣನಿಗೆ ಹೇಳು ಎಂದು ಆತನನ್ನು ಕೇಳಿಕೊಳ್ಳಲು
ಆತನು—ಎಲಾ ಮನುಷ್ಯಾ, ನನ್ನನ್ನು ನಿಮಗೆ ನ್ಯಾ 14
ಯಾಧಿಪತಿಯನ್ನಾಗಿ ಅಥವಾ ಪಾಲುಮಾಡುವವನ
ನ್ನಾಗಿ ನೇಮಿಸಿದವರಾರು ಎಂದು ಅವನನ್ನು ಕೇಳಿ
ಜನರಿಗೆ—ಎಲ್ಲಾ ಲೋಭಕ್ಕೂ ಎಚ್ಚರಿಕೆಯಾಗಿದ್ದು 15
ನಿಮ್ಮನ್ನು ಕಾಪಾಡಿಕೊಳ್ಳಿರಿ. ಒಬ್ಬನಿಗೆ ಎಷ್ಟು ಆಸ್ತಿ
ಯಿದ್ದರೂ ಅದು ಅವನಿಗೆ ಜೀವಾಧಾರವಾಗುವದಿಲ್ಲ
ಎಂದು ಹೇಳಿ ಒಂದು ಸಾಮ್ಯವನ್ನು ಹೇಳಿದನು; ಅದೇ 16
ನಂದರೆ ಒಬ್ಬಾನೊಬ್ಬ ಐಶ್ವರ್ಯವಂತನ ಭೂಮಿಯು
ಚೆನ್ನಾಗಿ ಬೆಳೆಯಿತು. ಆಗ ಅವನು ತನ್ನೊಳಗೆ— 17
ನಾನೇನು ಮಾಡಲಿ? ನನ್ನ ಬೆಳೆಯನ್ನು ತುಂಬಿಡುವ
ದಕ್ಕೆ ನನಗೆ ಸ್ಥಳವಿಲ್ಲವಲ್ಲಾ ಎಂದು ಆಲೋಚಿಸಿ—
ಒಂದು ಕೆಲಸ ಮಾಡುತ್ತೇನೆ; ನನ್ನ ಕಣಜಗಳನ್ನು 18
ಕೀಳಿಸಿ ಅವುಗಳಿಗಿಂತ ದೊಡ್ಡ ಕಣಜಗಳನ್ನು
ಕಟ್ಟಿಸುವೆನು. ಅಲ್ಲಿ ನನ್ನ ಎಲ್ಲಾ ದವಸಧಾನ್ಯಗಳನ್ನೂ
ಸರಕುಗಳನ್ನೂ ತುಂಬಿಟ್ಟು ನನ್ನ ಜೀವಾತ್ಮಕ್ಕೆ— 19
ಜೀವವೇ, ಅನೇಕ ವರುಷಗಳಿಗೆ ಬೇಕಾದಷ್ಟು ಸರಕು
ನಿನಗೆ ಬಿದ್ದದೆ; ವಿಶ್ರಮಿಸಿಕೋ, ಊಟಮಾಡು,
ಕುಡಿ, ಸುಖಪಡು ಎಂದು ಹೇಳುವೆನು ಅಂದುಕೊಂ
ಡನು. ಆದರೆ ದೇವರು ಅವನಿಗೆ—ಬುದ್ಧಿಹೀನನು 20
ನೀನು! ಈ ಹೊತ್ತು ರಾತ್ರಿ ನಿನ್ನ ಪ್ರಾಣವನ್ನು ನಿನ್ನ
ಕಡೆಯಿಂದ ಕೇಳುವರು; ಆಗ ನೀನು ಸಿದ್ಧಮಾಡಿಟ್ಟಿ
ರುವದು ಯಾರಿಗಾಗುವದು ಎಂದು ಹೇಳಿದನು. ತನ 21
ಗೋಸ್ಕರ ದ್ರವ್ಯವನ್ನಿಟ್ಟುಕೊಂಡು ದೇವರ ವಿಷಯಗ
ಳಲ್ಲಿ ಐಶ್ವರ್ಯವಂತನಾಗದೆ ಇರುವವನು ಅವನಂತೆ
ಯೇ ಇದ್ದಾನೆ ಅಂದನು.
ಇದಲ್ಲದೆ ಆತನು ತನ್ನ ಶಿಷ್ಯರಿಗೆ ಹೇಳಿದ್ದೇನಂದರೆ— 22
ಈ ಕಾರಣದಿಂದ ಪ್ರಾಣಧಾರಣೆಗೆ ಏನು ಊಟಮಾಡ
ಬೇಕು? ದೇಹರಕ್ಷಣೆಗೆ ಏನು ಹೊದ್ದುಕೊಳ್ಳಬೇಕು
ಎಂದು ಚಿಂತೆಮಾಡಬೇಡಿರಿ ಎಂಬದಾಗಿ ನಿಮಗೆ ಹೇಳು
ತ್ತೇನೆ. ಊಟಕ್ಕಿಂತ ಪ್ರಾಣವು ಉಡುಪಿಗಿಂತ ದೇಹವು 23
ಮೇಲಾದದ್ದಷ್ಟೆ. ಕಾಗೆಗಳನ್ನು ಲಕ್ಷ್ಯವಿಟ್ಟು ಯೋಚಿ 24
ಸಿರಿ; ಅವು ಬಿತ್ತುವದಿಲ್ಲ, ಕೊಯ್ಯುವದಿಲ್ಲ, ಅವುಗಳಿಗೆ
ಉಗ್ರಾಣವೂ ಇಲ್ಲ, ಕಣಜವೂ ಇಲ್ಲ; ಆದಾಗ್ಯೂ
ದೇವರು ಅವುಗಳನ್ನು ಸಾಕಿಸಲಹುತ್ತಾನೆ. ಹಕ್ಕಿಗಳಿ

25 ಗಿಂತ ನೀವು ಎಷ್ಟೋ ಹೆಚ್ಚಿನವರಲ್ಲವೇ. ಚಿಂತೆಮಾಡಿ
ಮಾಡಿ 1)ಒಂದು ಮೊಳ ಉದ್ದ ಬೆಳೆಯುವದು ನಿಮ್ಮಲ್ಲಿ
26 ಯಾರಿಂದಾದೀತು? ಆದದರಿಂದ ಕೇವಲ ಅಲ್ಪವಾದದ್ದ
ನ್ನಾದರೂ ಮಾಡುವದಕ್ಕೆ ನೀವು ಅಶಕ್ತರಾಗಿರಲಾಗಿ
ಮಿಕ್ಕಾದದ್ದರ ವಿಷಯದಲ್ಲಿ ಚಿಂತೆಮಾಡುವದೇಕೆ?
27 ಹೂವುಗಳು ಬೆಳೆಯುವ ರೀತಿಯನ್ನು ಲಕ್ಷ್ಯಪಟ್ಟು
ಯೋಚಿಸಿರಿ; ಅವು ದುಡಿಯುವದಿಲ್ಲ, ನೂಲುವದಿಲ್ಲ;
ಆದರೂ ಈ ಹೂವುಗಳೊಳಗೆ ಒಂದಕ್ಕಿರುವಷ್ಟು ಅಲಂ
ಕಾರವು ಅರಸನಾದ ಸೊಲೊಮೋನನಿಗೆ ಸಹ ಅವನು
ತನ್ನ ಸಕಲ ವೈಭವದಿಂದಿರುವಾಗಲೂ ಇರಲಿಲ್ಲವೆಂದು
28 ನಿಮಗೆ ಹೇಳುತ್ತೇನೆ. ಎಲೈ ಅಲ್ಪವಿಶ್ವಾಸಿಗಳೇ, ಈ
ಹೊತ್ತು ಇದ್ದು ನಾಳೆ ಒಲೆಯ ಪಾಲಾಗುವ ಅಡವಿಯ
ಹುಲ್ಲಿಗೆ ದೇವರು ಹೀಗೆ ಉಡಿಸಿದರೆ ಅದಕ್ಕಿಂತ
ಎಷ್ಟೋ ಹೆಚ್ಚಾಗಿ ನಿಮಗೆ ಉಡಿಸಿ ತೊಡಿಸುವನು.
29 ಏನು ಊಟಮಾಡಬೇಕು? ಏನು ಕುಡಿಯಬೇಕು
ಎಂದು ತವಕಪಡಬೇಡಿರಿ, ಮತ್ತು ಅನುಮಾನ ಪಡ
30 ಬೇಡಿರಿ. ಇವೆಲ್ಲವುಗಳ ಮೇಲೆ ಇಹಲೋಕದ ಜನ
ಗಳು ತವಕಪಡುತ್ತಾರೆ; ಇವು ನಿಮಗೆ ಅವಶ್ಯವೆಂದು
31 ನಿಮ್ಮ ತಂದೆಗೆ ತಿಳಿದಿದೆ. ನೀವಾದರೋ ದೇವರ
ರಾಜ್ಯಕ್ಕಾಗಿ ತವಕಪಡಿರಿ; ಇದರ ಕೂಡ ಅವೂ
32 ನಿಮಗೆ ದೊರಕುವವು. ಚಿಕ್ಕ ಹಿಂಡೇ, ಹೆದರಬೇಡ;
ಆ ರಾಜ್ಯವನ್ನು ನಿಮಗೆ ದಯಪಾಲಿಸುವದಕ್ಕೆ ನಿಮ್ಮ
33 ತಂದೆಯು ಸಂತೋಷವುಳ್ಳವನಾಗಿದ್ದಾನೆ. ನಿಮಗಿ
ರುವದನ್ನು ಮಾರಿಬಿಟ್ಟು ದಾನಾಕೊಡಿರಿ; ಹಳೇವಾಗ
ದಂಥ ಹಮ್ಮಿಣಿಗಳನ್ನು ಮಾಡಿಕೊಂಡು ಪರಲೋಕ
ದಲ್ಲಿ ಲಯವಾಗದ ದ್ರವ್ಯವನ್ನು ಇಟ್ಟುಕೊಳ್ಳಿರಿ. ಅಲ್ಲಿ
ಕಳ್ಳನು ಸಮೀಪಕ್ಕೆ ಬರುವದಿಲ್ಲ; ಅದು ನುಸಿಹಿಡಿದು
34 ನಾಶವಾಗುವದಿಲ್ಲ. ನಿಮ್ಮ ಗಂಟು ಇದ್ದಲ್ಲಿಯೇ
ನಿಮ್ಮ ಮನಸ್ಸೂ ಇರುವದಷ್ಟೆ.

ತನ್ನ ಶಿಷ್ಯರು ಯಾವಾಗಲೂ ಎಚ್ಚರವಾಗಿರಬೇಕೆಂಬದಾಗಿ
ಯೇಸು ಎರಡು ಸಾಮ್ಯಗಳನ್ನು ಹೇಳಿದ್ದು.
(ಮತ್ತಾ. 24. 42—51.)

35 ನಿಮ್ಮ ನಡುಗಳು ಕಟ್ಟಿರಲಿ; ನಿಮ್ಮ ದೀವಟಿಗೆ
36 ಗಳು ಉರಿಯುತ್ತಾ ಇರಲಿ. ನೀವಂತೂ ತಮ್ಮ ಯಜ
ಮಾನನು ಬಂದು ತಟ್ಟಿದ ಕೂಡಲೆ ಕದವನ್ನು ತೆರೆಯು
ವದಕ್ಕೆ ಸಿದ್ಧವಾಗಿದ್ದು ಮದುವೇ ಊಟವನ್ನು ಯಾ
ವಾಗ ತೀರಿಸಿಕೊಂಡು ಬರುವನೋ ಎಂದು ಅವನನ್ನು
37 ಎದುರುನೋಡುತ್ತಿರುವ ಮನುಷ್ಯರಂತಿರಿ. ಯಜ
ಮಾನನು ಬಂದು ಯಾವ ಯಾವ ಆಳುಗಳು ಎಚ್ಚರ
ವಾಗಿರುವದನ್ನು ಕಂಡುಕೊಳ್ಳುವನೋ ಆ ಆಳುಗಳೇ
ಧನ್ಯರು. ಆತನೇ ನಡುಕಟ್ಟಿಕೊಂಡು ಅವರನ್ನು
ಊಟಕ್ಕೆ ಕೂಡ್ರಿಸಿ ಹತ್ತರಕ್ಕೆ ಬಂದು ಅವರಿಗೆ ಸೇವೆ
ಮಾಡುವನು ಎಂದು ನಿಮಗೆ ಸತ್ಯವಾಗಿ ಹೇಳುತ್ತೇನೆ.
38 ಎರಡನೆಯ ಜಾವದಲ್ಲಿಯಾಗಲಿ ಮೂರನೆಯ ಜಾವ
ದಲ್ಲಿಯಾಗಲಿ ಬಂದಾತನಿಗೆ ಹಾಗೆ ಕಾಣಿಸಿಕೊಂಡವರು
39 ಧನ್ಯರು. ಕಳ್ಳನು ಬರುವ ಗಳಿಗೆಯು ಮನೇಯಜ
ಮಾನನಿಗೆ ತಿಳಿದಿದ್ದರೆ ಅವನು ಎಚ್ಚರವಾಗಿದ್ದು ತನ್ನ
ಮನೆಗೆ ಕನ್ನಾಹಾಕಗೊಡಿಸುತ್ತಿರಲಿಲ್ಲವೆಂದು ತಿಳುಕೊ
ಳ್ಳಿರಿ. ನೀವು ಸಹ ಸಿದ್ಧವಾಗಿರ್ರಿ. ನೀವು ನೆನಸದ ಗಳಿಗೆ
ಯಲ್ಲಿ ಮನುಷ್ಯಕುಮಾರನು ಬರುತ್ತಾನೆ ಅಂದನು.
ಆಗ ಪೇತ್ರನು—ಸ್ವಾಮೀ, ನೀನು ಈ ಸಾಮ್ಯ
ವನ್ನು ನಮಗೆ ಮಾತ್ರ ಹೇಳುತ್ತೀಯೋ? ಎಲ್ಲರಿಗೂ
ಹೇಳುತ್ತೀಯೋ ಎಂದು ಕೇಳಲು ಸ್ವಾಮಿ ಹೇಳಿದ್ದೇ
ನಂದರೆ—ಹೊತ್ತುಹೊತ್ತಿಗೆ ಅಶನಕ್ಕೆ ಬೇಕಾದದ್ದನ್ನು
ಅಳೆದುಕೊಡುವದಕ್ಕಾಗಿ ಯಜಮಾನನು ತನ್ನ ಮನೆ
ಯವರ ಮೇಲೆ ನೇಮಿಸಿದ ನಂಬಿಗಸ್ತನೂ ವಿವೇ
ಕಿಯೂ ಆಗಿರುವ ಮನೆವಾರ್ತೆಯವನು ಯಾರು?
ಯಜಮಾನನು ಬಂದು ಯಾವ ಆಳು ಹೀಗೆ ಮಾಡುವ
ದನ್ನು ಕಾಣುವನೋ ಆ ಆಳು ಧನ್ಯನು. ಅಂಥವನನ್ನು
ಅವನು ತನ್ನ ಎಲ್ಲಾ ಆಸ್ತಿಯ ಮೇಲೆ ನೇಮಿಸುವನು
ಎಂದು ನಿಮಗೆ ಸತ್ಯವಾಗಿ ಹೇಳುತ್ತೇನೆ. ಆದರೆ ಆ
ಆಳು—ನನ್ನ ಯಜಮಾನನು ಬರುವದಕ್ಕೆ ತಡಮಾಡು
ತ್ತಾನೆ ಅಂತ ತನ್ನ ಮನಸ್ಸಿನಲ್ಲಿ ಅಂದುಕೊಂಡು
ಗಂಡಾಳು ಹೆಣ್ಣಾಳುಗಳನ್ನು ಹೊಡೆಯುವದಕ್ಕೂ
ತಿಂದು ಕುಡಿದು ಅಮಲೇರುವದಕ್ಕೂ ತೊಡಗಿದರೆ
ಅವನು ನೆನಸದ ದಿನದಲ್ಲಿಯೂ ತಿಳಿಯದ ಗಳಿಗೆ
ಯಲ್ಲಿಯೂ ಆ ಆಳಿನ ಯಜಮಾನನು ಬಂದು
ಅವನನ್ನು ಕಠಿನವಾಗಿ ಹೊಡಿಸಿ ಅಪನಂಬಿಗಸ್ತರಿಗೆ
ಆಗತಕ್ಕ ಗತಿಯನ್ನು ಅವನಿಗೆ ನೇಮಿಸುವನು. ತನ್ನ
ಯಜಮಾನನ ಚಿತ್ತವನ್ನು ತಿಳಿದ ಆಳು ಸಿದ್ಧಮಾಡದೆ
ಹೋದರೆ ಅಥವಾ ಅವನ ಚಿತ್ತಕ್ಕನುಸಾರ ನಡೆಯ
ದಿದ್ದರೆ ಅವನು ಬಹಳ ಪೆಟ್ಟು ತಿನ್ನುವನು. ತಿಳಿ
ಯದೆ ಪೆಟ್ಟುಗಳಿಗೆ ಯೋಗ್ಯವಾದದ್ದನ್ನು ನಡಿಸಿದವನು
ಸ್ವಲ್ಪ ಪೆಟ್ಟು ತಿನ್ನುವನು. ಯಾವನಿಗೆ ಬಹಳವಾಗಿ
ಕೊಟ್ಟದೆಯೋ ಅವನ ಕಡೆಯಿಂದ ಬಹಳವಾಗಿ ನಿರೀ
ಕ್ಷಿಸಲ್ಪಡುವದು; ಇದಲ್ಲದೆ ಯಾವನ ವಶಕ್ಕೆ ಬಹಳ
ವಾಗಿ ಒಪ್ಪಿಸಿದೆಯೋ ಅವನ ಕಡೆಯಿಂದ ಇನ್ನೂ
ಹೆಚ್ಚಾಗಿ ಕೇಳುವರು.

ಯೇಸುವನ್ನು ಅನುಸರಿಸುವವರಿಗೆ ನೆಂಟರ
ವಿರೋಧವಿರುವದೆಂತಲೂ ನೂತನ ಕಾಲದ ಸೂಚನೆಗಳನ್ನು
ಗುರುತು ಹಿಡಿಯಬೇಕೆಂತಲೂ ಬೋಧೆ.
(ಮತ್ತಾ. 10. 34.—36; 16. 1—3.)

ನಾನು ಬೆಂಕಿಯನ್ನು ಭೂಮಿಯ ಮೇಲೆ ಹಾಕ
ಬೇಕೆಂದು ಬಂದೆನು; ಅದು ಇಷ್ಟರೊಳಗೆ ಹತ್ತಿ
ಕೊಂಡಿದ್ದರೆ ನನಗೆ ಎಷ್ಟೋ ಸಂತೋಷ! ಆದರೆ
ನಾನು ಹೊಂದತಕ್ಕ ದೀಕ್ಷಾಸ್ನಾನ ಒಂದುಂಟು.
ಅದು ನೆರವೇರುವ ತನಕ ನಾನು ಎಷ್ಟೋ ಬಿಕ್ಕಟ್ಟಿ
ನಲ್ಲಿದ್ದೇನೆ. ಭೂಲೋಕದಲ್ಲಿ ಸಮಾಧಾನವನ್ನುಂಟು
ಮಾಡುವದಕ್ಕೆ ಬಂದೆನೆಂದು ಭಾವಿಸುತ್ತೀರೋ? ಅದಕ್ಕೆ
ಬರಲಿಲ್ಲ, ಭೇದವನ್ನುಂಟುಮಾಡುವದಕ್ಕೆ ಬಂದೆನೆಂದು
ನಿಮಗೆ ಹೇಳುತ್ತೇನೆ. ಹೇಗಂದರೆ—ಇಂದಿನಿಂದ ಒಂದೇ
ಮನೆಯಲ್ಲಿರುವ ಐದು ಮಂದಿಯೊಳಗೆ ಇಬ್ಬರಿಗೆ

1) ಅಂದರೆ, ಆಯುಸ್ಸು ಹೆಚ್ಚು ಮಾಡಿಕೊಳ್ಳುವದು.

ವಿರೋಧವಾಗಿ ಮೂವರು, ಮೂವರಿಗೆ ವಿರೋಧ
ವಾಗಿ ಇಬ್ಬರು, ಈ ಮೇರೆಗೆ ಭೇದವುಳ್ಳವರಾಗಿರು
53 ವರು. ಮಗನಿಗೆ ವಿರೋಧವಾಗಿ ತಂದೆಯು,
ತಂದೆಗೆ ವಿರೋಧವಾಗಿ ಮಗನು, ಮಗಳಿಗೆ ವಿರೋಧ
ವಾಗಿ ತಾಯಿಯು, ತಾಯಿಗೆ ವಿರೋಧವಾಗಿ ಮಗಳು,
ಸೊಸೆಗೆ ವಿರೋಧವಾಗಿ ಅತ್ತೆಯು, ಅತ್ತೆಗೆ ವಿರೋಧ
ವಾಗಿ ಸೊಸೆಯು ಭೇದವುಳ್ಳವರಾಗಿರುವರು ಅಂದನು.
54 ಇದಲ್ಲದೆ ಆತನು ಜನರೆಲ್ಲರಿಗೂ ಹೇಳಿದ್ದೇ
ನಂದರೆ — ಪಶ್ಚಿಮ ದಿಕ್ಕಿನಲ್ಲಿ ಮೋಡ ಏಳುವದನ್ನು
ನೀವು ನೋಡಿದ ಕೂಡಲೆ ಮಳೆ ಬರುತ್ತದೆ ಅನ್ನುತ್ತೀರಿ;
55 ಹಾಗೇ ಆಗುತ್ತದೆ. ದಕ್ಷಿಣ ದಿಕ್ಕಿನ ಗಾಳಿ ಬೀಸಲಾಗಿ
ಸೆಕೆ ಹುಟ್ಟುವದು ಅನ್ನುತ್ತೀರಿ; ಅದೂ ಆಗುತ್ತದೆ.
56 ಕಪಟಿಗಳು ನೀವು, ಭೂಮ್ಯಾಕಾಶಗಳ ಭಾವವನ್ನು
ಶೋಧಿಸುವದಕ್ಕೆ ನಿಮಗೆ ಗೊತ್ತಿರುವಲ್ಲಿ ಈ ಸಮಯ
ವನ್ನು ಶೋಧಿಸುವದಕ್ಕೆ ನಿಮಗೆ ಯಾಕೆ ಗೊತ್ತಿಲ್ಲ?
57 ಇದಲ್ಲದೆ ಇಂಥಿಂಥದು ನ್ಯಾಯವಾದದ್ದೆಂದು
ನೀವೇ ಯಾಕೆ ತೀರ್ಮಾನಮಾಡಿಕೊಳ್ಳುವದಿಲ್ಲ?
58 ನೀನು ವಾದಿಯ ಸಂಗಡ ನ್ಯಾಯಾಧಿಪತಿಯ
ಮುಂದಕ್ಕೆ ಹೋಗುತ್ತಿರುವಾಗ ದಾರಿಯಲ್ಲಿಯೇ
ತಂಟೆಹರಿಸಿಕೊಳ್ಳಲು ಪ್ರಯತ್ನಮಾಡು; ಇಲ್ಲದಿದ್ದರೆ
ಅವನು ನಿನ್ನನ್ನು ನ್ಯಾಯಾಧಿಪತಿಯ ಬಳಿಗೆ ಎಳ
ಕೊಂಡು ಹೋದಾನು; ನ್ಯಾಯಾಧಿಪತಿಯು ನಿನ್ನನ್ನು
ಸೆರೇಯಜಮಾನನ ವಶಕ್ಕೆ ಒಪ್ಪಿಸಾನು; ಸೆರೇಯಜ
59 ಮಾನನು ನಿನ್ನನ್ನು ಸೆರೆಮನೆಯಲ್ಲಿ ಹಾಕಾನು. ನೀನು
ಒಂದು ಕಾಸನ್ನಾದರೂ ನಿಲ್ಲಿಸಿಕೊಳ್ಳದೆ ಎಲ್ಲಾ ಸಲ್ಲಿ
ಸುವ ತನಕ ಅಲ್ಲಿಂದ ಬರುವದೇ ಇಲ್ಲವೆಂದು ನಿನಗೆ
ಹೇಳುತ್ತೇನೆ ಅಂದನು.

ಮನುಷ್ಯರು ದೇವರ ಕಡೆಗೆ ತಿರುಗದಿದ್ದರೆ ನಾಶವಾಗುತ್ತಾರೆಂದು
ಬೋಧಿಸುವದಕ್ಕಾಗಿ ಯೇಸು ಗೊಡ್ಡು ಅಂಜೂರದ ಮರದ
ಸಾಮ್ಯವನ್ನು ಹೇಳಿದ್ದು.

13 ಅದೇ ಸಮಯದಲ್ಲಿ ಕೆಲವರು ಆತನ ಹತ್ತಿರ
ದಲ್ಲಿದ್ದು — ಪಿಲಾತನು ಗಲಿಲಾಯದವರ ರಕ್ತವನ್ನು
ಅವರು ಕೊಟ್ಟ ಬಲಿಗಳ ಸಂಗಡ ಬೆರಸಿದನೆಂದು ಆತ
2 ನಿಗೆ ತಿಳಿಸಿದರು. ಅದಕ್ಕೆ ಆತನು ಅವರಿಗೆ— ಆ
ಗಲಿಲಾಯದವರು ಅಂಥ ಕೊಲೆಯನ್ನು ಅನುಭವಿಸಿದ್ದ
ರಿಂದ ಅವರನ್ನು ಎಲ್ಲಾ ಗಲಿಲಾಯದವರಿಗಿಂತ ಪಾಪಿಷ್ಠ
3 ರೆಂದು ಭಾವಿಸುತ್ತೀರೋ? ಹಾಗೆ ಭಾವಿಸಕೂಡದೆಂದು
ನಿಮಗೆ ಹೇಳುತ್ತೇನೆ. ದೇವರ ಕಡೆಗೆ ತಿರುಗಿಕೊಳ್ಳ
ದಿದ್ದರೆ ನೀವೆಲ್ಲರೂ ಹಾಗೆಯೇ ಹಾಳಾಗಿ ಹೋಗುವಿರಿ.
4 ಇಲ್ಲವೆ ಸಿಲೊವಾಮಿನಲ್ಲಿ ಬುರುಜುಬಿದ್ದು ಸತ್ತ ಆ ಹದಿ
ನೆಂಟು ಮಂದಿಯು ಯೆರೂಸಲೇಮಿನಲ್ಲಿ ವಾಸವಾಗಿ
ರುವ ಎಲ್ಲಾ ಮನುಷ್ಯರಿಗಿಂತಲೂ ಅಪರಾಧಿಗಳೆಂದು
5 ಭಾವಿಸುತ್ತೀರೋ? ಹಾಗಲ್ಲವೆಂದು ನಿಮಗೆ ಹೇಳುತ್ತೇ
ನೆ. ದೇವರ ಕಡೆಗೆ ತಿರುಗಿಕೊಳ್ಳದಿದ್ದರೆ ನೀವೆಲ್ಲರೂ
ಅದರಂತೆ ಹಾಳಾಗಿ ಹೋಗುವಿರಿ ಎಂದು ಹೇಳಿದನು.
6 ಆ ಮೇಲೆ ಆತನು ಒಂದು ಸಾಮ್ಯವನ್ನು ಹೇಳಿ
ದನು. ಅದೇನಂದರೆ — ಒಬ್ಬಾನೊಬ್ಬನು ತನ್ನ
ದ್ರಾಕ್ಷೆಯ ತೋಟದಲ್ಲಿ ಒಂದು ಅಂಜೂರದ ಗಿಡ
ವನ್ನು ನೆಡಿಸಿದ್ದನು. ತರುವಾಯ ಅವನು ಅದರಲ್ಲಿ
ಹಣ್ಣನ್ನು ಹುಡುಕುತ್ತಾ ಬಂದನು, ಸಿಕ್ಕಲಿಲ್ಲ. ಬಳಿಕ 7
ಅವನು ತೋಟಮಾಡುವವನಿಗೆ— ನೋಡು, ನಾನು
ಮೂರು ವರುಷದಿಂದಲೂ ಈ ಅಂಜೂರದ ಮರದಲ್ಲಿ
ಹಣ್ಣನ್ನು ಹುಡುಕುತ್ತಾ ಬಂದಿದ್ದೇನೆ; ಆದರೂ ನನಗೆ
ಸಿಕ್ಕಲಿಲ್ಲ. ಇದನ್ನು ಕಡಿದು ಹಾಕು; ಇದರಿಂದ
ಭೂಮಿಯೂ ಯಾಕೆ ಬಂಜೆಯಾಗಬೇಕು ಎಂದು
ಹೇಳಿದನು. ಆದರೆ ತೋಟಮಾಡುವವನು— ಅಯ್ಯಾ, 8
ಈ ವರುಷವೂ ಇದನ್ನು ಬಿಡು; ಅಷ್ಟರಲ್ಲಿ ನಾನು
ಇದರ ಸುತ್ತಲು ಅಗಿದು ಗೊಬ್ಬರಹಾಕುತ್ತೇನೆ;
ಮುಂದೆ ಹಣ್ಣುಬಿಟ್ಟರೆ ಸರಿ; ಇಲ್ಲದಿದ್ದರೆ ಇದನ್ನು 9
ಕಡಿದುಹಾಕಬಹುದು ಎಂದು ಉತ್ತರಕೊಟ್ಟನು.

ಯೇಸು ಸಬ್ಬತ್‌ದಿನದಲ್ಲಿ ಒಬ್ಬ ಹೆಂಗಸನ್ನು ಸ್ವಸ್ಥಮಾಡಿದ್ದು.

ಒಂದಾನೊಂದು ಸಬ್ಬತ್‌ದಿನದಲ್ಲಿ ಆತನು ಒಂದು 10
ಸಭಾಮಂದಿರದೊಳಗೆ ಉಪದೇಶಮಾಡುತ್ತಾ ಇದ್ದನು.
ಅಲ್ಲಿ ಹದಿನೆಂಟು ವರುಷಗಳಿಂದ ದೆವ್ವ ಬಡಿದು 11
ಮೈಯಲ್ಲಿ ರೋಗವುಳ್ಳ ಒಬ್ಬ ಸ್ತ್ರೀಯು ಇದ್ದಳು.
ಆಕೆಯು ನಡುಬೊಗ್ಗಿಹೋಗಿ ಸ್ವಲ್ಪವಾದರೂ ಮೈ
ಯನ್ನು ಮೇಲಕ್ಕೆ ಎತ್ತಲಾರದೆ ಇದ್ದಳು. ಯೇಸು ಆಕೆ 12
ಯನ್ನು ನೋಡಿ ಹತ್ತರಕ್ಕೆ ಕರೆದು ಆಕೆಗೆ— ಅಮ್ಮಾ,
ನಿನಗೆ ರೋಗ ಬಿಡುಗಡೆಯಾಯಿತು ಎಂದು ಹೇಳಿ
ಆಕೆಯ ಮೇಲೆ ತನ್ನ ಕೈಗಳನ್ನಿಟ್ಟನು; ಇಟ್ಟಕೂಡಲೆ 13
ಆಕೆ ನೆಟ್ಟಗಾದಳು, ದೇವರನ್ನು ಕೊಂಡಾಡಿದಳು.
ಆದರೆ ಆ ಸಭಾಮಂದಿರದ ಅಧಿಕಾರಿಯು ನಡೆದ 14
ಸಂಗತಿಯನ್ನು ನೋಡಿ ಸಬ್ಬತ್‌ದಿನದಲ್ಲಿ ಯೇಸು ಸ್ವಸ್ಥ
ಮಾಡಿದನಲ್ಲಾ ಎಂದು ರೋಷಗೊಂಡು ಜನರಿಗೆ—
ಕೆಲಸಮಾಡುವದಕ್ಕೆ ಆರು ದಿವಸಗಳು ಅವೆಯಷ್ಟೆ; ಆ
ದಿವಸಗಳಲ್ಲಿ ಬಂದು ವಾಸಿಮಾಡಿಸಿಕೊಳ್ಳಿರಿ, ಸಬ್ಬತ್
ದಿನದಲ್ಲಿ ಮಾತ್ರ ಬೇಡ ಎಂದು ಹೇಳಿದನು. ಆ 15
ಮಾತನ್ನು ಕೇಳಿ ಸ್ವಾಮಿಯು ಅವನಿಗೆ— ಕಪಟಿಗಳು
ನೀವು, ನಿಮ್ಮಲ್ಲಿ ಪ್ರತಿಯೊಬ್ಬನೂ ಸಬ್ಬತ್‌ದಿನದಲ್ಲಿ
ತನ್ನ ಎತ್ತನ್ನಾಗಲಿ ಕತ್ತೆಯನ್ನಾಗಲಿ ಗೋದಲಿಯಿಂದ
ಬಿಚ್ಚಿ ನೀರು ಕುಡಿಸುವದಕ್ಕಾಗಿ ಹಿಡುಕೊಂಡು ಹೋಗು
ತ್ತಾನಲ್ಲವೇ. ಹಾಗಾದರೆ ಹದಿನೆಂಟು ವರುಷಗಳ 16
ತನಕ ಸೈತಾನನು ಕಟ್ಟಿಹಾಕಿದ್ದವಳೂ ಅಬ್ರಹಾಮನ
ವಂಶದವಳೂ ಆಗಿರುವ ಈಕೆಯನ್ನು ಸಬ್ಬತ್‌ದಿನ
ದಲ್ಲಿ ಈ ಕಟ್ಟಿನೊಳಗಿಂದ ಬಿಡಿಸಬಾರದೋ ಎಂದು
ಉತ್ತರಕೊಟ್ಟನು. ಈ ಮಾತುಗಳನ್ನು ಆತನು ಹೇಳು 17
ತ್ತಿರಲಾಗಿ ಆತನ ವಿರೋಧಿಗಳೆಲ್ಲರೂ ನಾಚಿಕೊಂಡರು;
ಗುಂಪುಕೂಡಿದ್ದ ಜನರೆಲ್ಲಾ ಆತನಿಂದಾಗುತ್ತಿದ್ದ ಎಲ್ಲಾ
ಮಹತ್ವದ ಕಾರ್ಯಗಳಿಗೆ ಸಂತೋಷಪಟ್ಟರು.

ದೇವರ ರಾಜ್ಯವು ಸಾಸಿವೆಕಾಳಿಗೂ ಹುಳಿಹಿಟ್ಟಿಗೂ ಸಮಾನವಾಗಿದೆ
ಎಂಬುವ ಬೋಧೆ.

(ಮತ್ತಾ. 13. 31—33; ಮಾರ್ಕ 4. 30—32.)

ಆತನು ಹೇಳಿದ್ದೇನಂದರೆ— ದೇವರ ರಾಜ್ಯವು ಯಾವ 18
ದಕ್ಕೆ ಹೋಲಿಕೆಯಾಗಿದೆ? ಅದನ್ನು ನಾನು ಯಾವ 19
ದಕ್ಕೆ ಹೋಲಿಸಲಿ? ಅದು ಸಾಸಿವೆಕಾಳಿಗೆ ಹೋಲಿಕೆ

ಯಾಗಿದೆ. ಒಬ್ಬ ಮನುಷ್ಯನು ಅದನ್ನು ತೆಗೆದು
ಕೊಂಡುಹೋಗಿ ತನ್ನ ತೋಟದಲ್ಲಿ ಹಾಕಿದನು; ಅದು
ಬೆಳೆದು ಮರವಾಯಿತು; ಮತ್ತು ಆಕಾಶದಲ್ಲಿ ಹಾರಾ
ಡುವ ಪಕ್ಷಿಗಳು ಅದರ ಕೊಂಬೆಗಳಲ್ಲಿ ವಾಸಮಾಡಿ
20 ದವು ಅಂದನು. ಆತನು ಇನ್ನೂ ಹೇಳಿದ್ದೇನಂದರೆ—
ದೇವರ ರಾಜ್ಯವನ್ನು ನಾನು ಯಾವದಕ್ಕೆ ಹೋಲಿಸಲಿ?
21 ಅದು ಹುಳಿಹಿಟ್ಟಿಗೆ ಹೋಲಿಕೆಯಾಗಿದೆ. ಅದನ್ನು
ಒಬ್ಬ ಹೆಂಗಸು ತಕ್ಕೊಂಡು ಮೂರು ಸೇರು ಹಿಟ್ಟಿನಲ್ಲಿ
ಕಲಸಿಡಲು ಆ ಹಿಟ್ಟೆಲ್ಲಾ ಹುಳಿಯಾಯಿತು ಅಂದನು.

ಇಕ್ಕಟ್ಟಾದ ಬಾಗಲಲ್ಲಿ ಪ್ರವೇಶಿಸಿರಿ ಎಂಬುವ ಬೋಧೆ.
(ಮತ್ತಾ. 7. 13, 14; 8. 11, 12.)

22 ಆತನು ಊರೂರಿಗೂ ಗ್ರಾಮಗ್ರಾಮಕ್ಕೂ
ಹೋಗಿ ಉಪದೇಶಮಾಡುತ್ತಾ, ಯೆರೂಸಲೇಮಿಗೆ
23 ಪ್ರಯಾಣಮಾಡುತ್ತಿದ್ದನು. ಆ ಕಾಲದಲ್ಲಿ ಒಬ್ಬನು—
ಸ್ವಾಮಿಾ, ರಕ್ಷಣೆ ಹೊಂದುವವರು ಸ್ವಲ್ಪಜನರೋ
24 ಎಂದು ಕೇಳಲು ಆತನು ಅವರಿಗೆ—ಇಕ್ಕಟ್ಟಾದ
ಬಾಗಲಿನಿಂದ ಒಳಕ್ಕೆ ಹೋಗುವದಕ್ಕೆ ಹೆಣಗಾಡಿರಿ.
ಬಹುಜನ ಒಳಕ್ಕೆ ಹೋಗುವಹಕ್ಕೆ ನೋಡುವರು,
ಆದರೆ ಅವರಿಂದಾಗುವದಿಲ್ಲ ಎಂದು ನಿಮಗೆ ಹೇಳು
25 ತ್ತೇನೆ. ಮನೇಯಜಮಾನನು ಎದ್ದು ಕದಾ ಹಾಕಿ
ಕೊಂಡಮೇಲೆ ನೀವು ಹೊರಗೆ ನಿಂತುಕೊಂಡು ಕದ
ತಟ್ಟಿ—ಸ್ವಾಮಿಾ, ನಮಗೆ ತೆರೆಯಿರಿ ಎಂದು ಹೇಳುವ
ದಕ್ಕೆ ತೊಡಗುವಾಗ ಅವನು—ನೀವು ಎಲ್ಲಿಯವರೋ?
26 ನಿಮ್ಮ ಗುರುತು ನನಗಿಲ್ಲ ಅಂದಾನು. ಅದಕ್ಕೆ ನೀವು—
ನಿನ್ನ ಸನ್ನಿಧಿಯಲ್ಲಿ ನಾವು ಊಟಮಾಡಿದೆವು, ಕುಡಿ
ದೆವು, ನಮ್ಮ ಬೀದಿಗಳಲ್ಲಿ ನೀನು ಉಪದೇಶಮಾಡಿದಿ
27 ಎಂದು ಹೇಳುವದಕ್ಕೆ ತೊಡಗೀರಿ; ಆದರೆ ಅವನು—
ನೀವು ಎಲ್ಲಿಯವರೋ ನಿಮ್ಮ ಗುರುತು ನನಗಿಲ್ಲ;
ಅಧರ್ಮಮಾಡುವ ನೀವೆಲ್ಲರೂ ನನ್ನ ಕಡೆಯಿಂದ
ಹೊರಟುಹೋಗಿರಿ ಎಂದು ನಿಮಗೆ ಹೇಳುತ್ತೇನೆ ಅನ್ನು
28 ವನು. ಅಬ್ರಹಾಮ ಇಸಾಕ ಯಾಕೋಬ ಇವರು
ಮತ್ತು ಎಲ್ಲಾ ಪ್ರವಾದಿಗಳು ದೇವರ ರಾಜ್ಯದಲ್ಲಿರುವ
ದನ್ನೂ ನಿಮ್ಮನ್ನು ಮಾತ್ರ ಹೊರಗೆ ಹಾಕುವದನ್ನೂ
ನೀವು ನೋಡುವಾಗ ನಿಮಗೆ ಗೋಳಾಟವೂ ಕಟಕಟನೆ
29 ಹಲ್ಲುಕಡಿಯೋಣವೂ ಇರುವವು. ಇದಲ್ಲದೆ ಪೂರ್ವ
ಪಶ್ಚಿಮ ಉತ್ತರ ದಕ್ಷಿಣ ದಿಕ್ಕುಗಳಿಂದಲೂ ಜನರು
ಬಂದು ದೇವರ ರಾಜ್ಯದಲ್ಲಿ ಊಟಕ್ಕೆ ಕೂಡ್ರುವರು.
30 ಇಗೋ, ಕಡೆಯವರಾಗಿರುವ ಕೆಲವರು ಮೊದಲಿ
ನವರಾಗುವರು; ಮೊದಲಿನವರಾಗಿರುವ ಕೆಲವರು ಕಡೆ
ಯವರಾಗುವರು ಅಂದನು.

ಯೇಸು ಉಪರಾಜನಾದ ಹೆರೋದನನ್ನು ಕುರಿತು ಹೇಳಿದ್ದು;
ಯೆರೂಸಲೇಮಿನ ವಿಷಯದಲ್ಲಿ ದುಃಖಪಟ್ಟದ್ದು.
(ಮತ್ತಾ. 23. 37—39.)

31 ಅದೇ ಗಳಿಗೆಯಲ್ಲಿ ಕೆಲವು ಮಂದಿ ಫರಿಸಾಯರು
ಹತ್ತರ ಬಂದು ಆತನಿಗೆ—ನೀನು ಇಲ್ಲಿಂದ ಹೊರಟು
ಹೋಗು, ಹೆರೋದನು ನಿನ್ನನ್ನು ಕೊಲ್ಲಬೇಕೆಂದಿದ್ದಾ
ಎಂದು ಹೇಳಲು ಆತನು ಅವರಿಗೆ—ನೀವು ಹೋಗಿ—
ಇಗೋ ನಾನು ಈಹೊತ್ತು ನಾಳೆ ದೆವ್ವಗಳನ್ನು
ಬಿಡಿಸುತ್ತಾ ರೋಗಗಳನ್ನು ವಾಸಿಮಾಡುತ್ತಾ ಇದ
ಮೂರನೆಯ ದಿನದಲ್ಲಿ [1]ಸಿದ್ಧಿಗೆ ಬರುತ್ತೇನೆ ಎಂದ
ಆ ನರಿಗೆ ಹೇಳಿರಿ. ಹೇಗೂ ನಾನು ಈಹೊತ್ತು
ನಾಳೆ ನಾಡಿದು ಸಂಚಾರ ಮಾಡಬೇಕು; ಪ್ರವಾ
ಯಾದವನು ಯೆರೂಸಲೇಮಿನಲ್ಲಿಯೇ ಹೊರತು ಬೇ
ಪಟ್ಟಣದಲ್ಲಿ ಕೊಲ್ಲಲ್ಪಡಕೂಡದಷ್ಟೆ. ಯೆರೂಸಲೇಮೇ
ಯೆರೂಸಲೇಮೇ, ಪ್ರವಾದಿಗಳ ಪ್ರಾಣತೆಗೆಯುವವಳೇ
ದೇವರು ನಿನ್ನ ಬಳಿಗೆ ಕಳುಹಿಸಿಕೊಟ್ಟವರನ್ನು ಕಲ್ಲ
ಸೆದು ಕೊಲ್ಲುವವಳೇ, ಕೋಳಿ ತನ್ನ ಮರಿಗಳನ್ನು ರೆಕ್ಕೆ
ಗಳ ಕೆಳಗೆ ಕೂಡಿಸಿಕೊಳ್ಳುವಂತೆ ನಿನ್ನ ಮಕ್ಕಳನ್ನು
ಕೂಡಿಸಿಕೊಳ್ಳುವದಕ್ಕೆ ನನಗೆ ಎಷ್ಟೋ ಸಾರಿ ಮನ
ಸ್ಸಿತ್ತು; ಆದರೆ ನಿಮಗೆ ಮನಸ್ಸಿಲ್ಲದೆ ಹೋಯಿತು
ನೋಡಿರಿ, ನಿಮ್ಮ ಆಲಯವು ನಿಮಗೆ ಬರೀದಾಗಿ ಬಿಟ್ಟದೆ
ಕರ್ತನ ಹೆಸರಿನಲ್ಲಿ ಬರುವವನಿಗೆ ಆಶೀರ್ವಾದ ಎಂದ
ನೀವು ಹೇಳುವತನಕ ನೀವು ನನ್ನನ್ನು ನೋಡುವದೇ
ಇಲ್ಲವೆಂದು ನಿಮಗೆ ಹೇಳುತ್ತೇನೆ ಅಂದನು.

ಒಬ್ಬ ಪ್ರಮುಖನ ಮನೆಯಲ್ಲಿ ಯೇಸು ಊಟಕ್ಕೆ ಕೂತಿದ್ದಾಗ
ಕರಿಸಿಕೊಂಡವರಿಗೂ ಕರೆದವನಿಗೂ ಆತನು ಸಾಮ್ಯರೂಪವಾಗಿ
ಉಪದೇಶಮಾಡಿದ್ದು.
(ಮತ್ತಾ. 22. 2—10 ಸರಿನೋಡಿರಿ.)

ಆತನು ಸಬ್ಬತ್‌ದಿನದಲ್ಲಿ ಫರಿಸಾಯರ ಮುಖ್ಯ
ಸ್ಥರಲ್ಲಿ ಒಬ್ಬನ ಮನೆಗೆ ಊಟಕ್ಕೆ ಹೋದಾಗ
ಅವರು ಆತನನ್ನು ಹೊಂಚಿನೋಡುತ್ತಿದ್ದರು. ಆಗ
ಯೇಸು ತನ್ನೆದುರಿಗೆ ಜಲೋದರವುಳ್ಳ ಒಬ್ಬ ಮನುಷ್ಯ
ನಿರುವದನ್ನು ನೋಡಿ—ಸಬ್ಬತ್‌ದಿನದಲ್ಲಿ ಸ್ವಸ್ಥಮಾಡು
ವದು ಸರಿಯೋ? ಸರಿಯಲ್ಲವೋ ಎಂದು ಧರ್ಮೋಪ
ದೇಶಕರನ್ನೂ ಫರಿಸಾಯರನ್ನೂ ಕೇಳಿದನು. ಅವರು
ಸುಮ್ಮನೇ ಇರಲು ಆತನು ಅವನ ಕೈ ಹಿಡಿದು ಅವ
ನಿಗೆ ವಾಸಿಮಾಡಿ ಕಳುಹಿಸಿ—ನಿಮ್ಮಲ್ಲಿ ಯಾವನೊ
ಬ್ಬನ ಮಗನಾಗಲಿ[2]) ಎತ್ತಾಗಲಿ ಬಾವಿಯಲ್ಲಿ ಬಿದ್ದರೆ
ಅವನು ತಡಮಾಡದೆ ಸಬ್ಬತ್‌ದಿನದಲ್ಲಾದರೂ ಮೇಲಕ್ಕೆ
ತೆಗೆಯುವದಿಲ್ಲವೇ ಎಂದು ಅವರನ್ನು ಕೇಳಿದನು.
ಅವರು ಅದಕ್ಕೆ ಉತ್ತರಕೊಡಲಾರದೆ ಇದ್ದರು.
ಊಟಕ್ಕೆ ಕರಿಸಿಕೊಂಡವರು ಪಙ್ತಿಯ ಮೊದಲ
ನೆಯ ಸ್ಥಾನವನ್ನು ಆರಿಸಿಕೊಳ್ಳುವದನ್ನು ನೋಡಿ
ಯೇಸು ಒಂದು ಸಾಮ್ಯವನ್ನು ಹೇಳಿದನು, ಏನಂ
ದರೆ—ಯಾವನಾದರೂ ನಿನ್ನನ್ನು ಮದುವೇ ಊಟಕ್ಕೆ
ಕರೆದರೆ ಪಙ್ತಿಯೊಳಗೆ ಮೊದಲನೆಯ ಸ್ಥಾನದಲ್ಲಿ
ಕೂತುಕೊಳ್ಳಬೇಡ; ಒಂದು ವೇಳೆ ನಿನಗಿಂತ ಮಾನ
ವುಳ್ಳವನನ್ನು ಅವನು ಕರೆದಿರಬಹುದು, ಮತ್ತು ನಿನ್ನ
ನ್ನೂ ಅವನನ್ನೂ ಕರೆದವನು ಬಂದು—ಇವನಿಗೆ ಸ್ಥಳ
ಬಿಡು ಎಂದು ನಿನಗೆ ಹೇಳುವಾಗ ನೀನು ನಾಚಿಕೊಂಡು
ಕಡೆಯಸ್ಥಾನದಲ್ಲಿ ಕೂತುಕೊಳ್ಳುವದಕ್ಕೆ ಹೋಗುವಿ.

1) ಅಥವಾ, ಕಾರ್ಯವನ್ನು ಮುಗಿಸಿರುವೆನು.
2) ಕೆಲವು ಪ್ರತಿಗಳಲ್ಲಿ—ಕತ್ತೆಯಾಗಲಿ ಎಂದು ಬರೆದದೆ.

0 ಆದರೆ ಯಾವನಾದರೂ ನಿನ್ನನ್ನು ಕರೆದಾಗ ನೀನು
ಹೋಗಿ ಕಡೆಯ ಸ್ಥಾನದಲ್ಲಿ ಕೂತುಕೋ; ಹೀಗೆ
ಮಾಡಿದರೆ ನಿನ್ನನ್ನು ಕರೆದವನು ಬಂದು ನಿನ್ನನ್ನು
ನೋಡಿ—ಸ್ನೇಹಿತನೇ, ಇನ್ನೂ ಮೇಲಕ್ಕೆ ಬಾ ಅನ್ನು
ವನು. ಆಗ ನಿನ್ನ ಸಂಗಡ ಕೂತಿರುವವರೆಲ್ಲರ ಮುಂದೆ
1 ನಿನಗೆ ಮಾನಬರುವದು. ತನ್ನನ್ನು ಹೆಚ್ಚಿಸಿಕೊಳ್ಳುವ
ಪ್ರತಿಯೊಬ್ಬನು ತಗ್ಗಿಸಲ್ಪಡುವನು; ತನ್ನನ್ನು ತಗ್ಗಿಸಿ
ಕೊಳ್ಳುವವನು ಹೆಚ್ಚಿಸಲ್ಪಡುವನು ಅಂದನು.
2 ಆತನು ತನ್ನನ್ನು ಊಟಕ್ಕೆ ಕರೆದವನಿಗೆ ಸಹ ಒಂದು
ಮಾತು ಹೇಳಿದನು; ಅದೇನಂದರೆ—ನೀನು ಮಧ್ಯಾ
ಹ್ನದ ಊಟಕ್ಕೆ ಅಥವಾ ಸಾಯಂಕಾಲದ ಊಟಕ್ಕೆ ನಿನ್ನ
ಸ್ನೇಹಿತರನ್ನಾಗಲಿ ನಿನ್ನ ಅಣ್ಣತಮ್ಮಂದಿರನ್ನಾಗಲಿ ನಿನ್ನ
ಬಂಧುಬಾಂಧವರನ್ನಾಗಲಿ ಐಶ್ವರ್ಯವಂತರಾದ ನೆರೆ
ಯವರನ್ನಾಗಲಿ ಕರೆಯಬೇಡ. ಒಂದು ವೇಳೆ ಅವರು
ಸಹ ಪ್ರತಿಯಾಗಿ ನಿನ್ನನ್ನು ಕರೆದಾರು, ಮತ್ತು ನಿನಗೆ
3 ಮುಯ್ಯಿಗೆಮುಯ್ಯಾಗುವದು. ಆದರೆ ನೀನು ಔತಣ
ಮಾಡಿಸುವಾಗ ಬಡವರು ಊನವಾದವರು ಕುಂಟರು
4 ಕುರುಡರು ಇಂಥವರನ್ನು ಕರೆ; ಅವರು ನಿನಗೆ ಮುಯ್ಯಿ
ಗೆಮುಯ್ಯಿಮಾಡುವದಕ್ಕೆ ಏನೂ ಇಲ್ಲದವರಾಗಿದ್ದರೂ
ನೀತಿವಂತರು ಜೀವಿತರಾಗಿ ಎದ್ದುಬರುವಲ್ಲಿ ನಿನಗೆ ಮು
ಯ್ಯಿಗೆಮುಯ್ಯಾಗುವದರಿಂದ ನೀನು ಧನ್ಯನಾಗುವಿ
ಅಂದನು.
5 ಊಟಕ್ಕೆ ಕೂತವರಲ್ಲಿ ಒಬ್ಬನು ಈ ಮಾತುಗಳನ್ನು
ಕೇಳಿ—ದೇವರ ರಾಜ್ಯದಲ್ಲಿ ಊಟಮಾಡುವವನೇ
6 ಧನ್ಯನು ಎಂದು ಹೇಳಲು ಯೇಸು ಅವನಿಗೆ ಹೇಳಿದ್ದೇ
ನಂದರೆ—ಒಬ್ಬಾನೊಬ್ಬ ಮನುಷ್ಯನು ದೊಡ್ಡ ಅಡಿಗೆ
7 ಮಾಡಿಸಿ ಅನೇಕರಿಗೆ ಊಟಕ್ಕೆ ಹೇಳಿಸಿದನು. ಆ
ಮೇಲೆ ಊಟದ ಹೊತ್ತಿಗೆ ಅವನು ಊಟಕ್ಕೆ ಹೇಳಿಸಿ
ಕೊಂಡವರ ಬಳಿಗೆ—ಈಗ ಸಿದ್ಧವಾಗಿದೆ, ಬರಬೇಕು
ಎಂದು ಕರೆಯುವದಕ್ಕೆ ತನ್ನ ಆಳನ್ನು ಕಳುಹಿಸಿದನು.
8 ಆದರೆ ಅವರೆಲ್ಲರೂ ಕ್ಷಮಿಸಬೇಕೆಂದು ಒಂದೇ ಮನ
ಸ್ಸಿನಿಂದ ಹೇಳುವದಕ್ಕೆ ತೊಡಗಿದರು. ಮೊದಲನೆಯ
ವನು ಆ ಆಳನ್ನು ನೋಡಿ—ಹೊಲವನ್ನು ಕ್ರಯಕ್ಕೆ
ತಕ್ಕೊಂಡಿದ್ದೇನೆ, ಅದನ್ನು ಹೋಗಿ ನೋಡುವದಕ್ಕೆ
ನನಗೆ ಅಗತ್ಯವಿದೆ, ನನ್ನನ್ನು ಕ್ಷಮಿಸಬೇಕೆಂದು ಕೇಳಿ
9 ಕೊಂಡೆನೆಂಬದಾಗಿ ಹೇಳು ಅಂದನು. ಮತ್ತೊಬ್ಬನು—
ನಾನು ಐದು ಜೋಡಿ ಎತ್ತುಗಳನ್ನು ತಕ್ಕೊಂಡಿದ್ದೇನೆ,
ಅವುಗಳನ್ನು ಪರೀಕ್ಷಿಸುವದಕ್ಕೆ ಹೋಗುತ್ತೇನೆ, ನನ್ನ
ನ್ನು ಕ್ಷಮಿಸಬೇಕೆಂದು ಕೇಳಿಕೊಂಡೆನೆಂಬದಾಗಿ ಹೇಳು
0 ಅಂದನು. ಇನ್ನೊಬ್ಬನು—ನಾನು ಮದುವೆಮಾಡಿ
ಕೊಂಡಿದ್ದೇನೆ, ಆದ್ದರಿಂದ ನಾನು ಬರುವದಕ್ಕಾಗುವ
1 ದಿಲ್ಲ ಅಂದನು. ಆ ಆಳು ಬಂದು ತನ್ನ ಯಜಮಾನ
ನಿಗೆ ಈ ಸಂಗತಿಗಳನ್ನು ತಿಳಿಸಲು ಮನೇಯಜಮಾನನು
ಸಿಟ್ಟುಗೊಂಡು ಆಳಿಗೆ—ನೀನು ತಟ್ಟನೆ ಈ ಊರಿನ
ಬೀದಿಬೀದಿಗೂ ಸಂದುಸಂದಿಗೂ ಹೋಗಿ ಬಡವರು
ಊನವಾದವರು ಕುರುಡರು ಕುಂಟರು ಇಂಥವರನ್ನು
2 ಇಲ್ಲಿಗೆ ಕರಕೊಂಡು ಬಾ ಎಂದು ಹೇಳಿದನು. ಬಳಿಕ
ಆ ಆಳು—ಅಯ್ಯಾ, ನೀನು ಅಪ್ಪಣೆಕೊಟ್ಟಂತೆ ಮಾಡಿ
ದ್ದಾಯಿತು; ಆದರೂ ಇನ್ನೂ ಸ್ಥಳವದೆ ಅಂದನು.
3 ಆಗ ಆ ಯಜಮಾನನು ತನ್ನ ಆಳಿಗೆ ಹೇಳಿದ್ದು—
ನೀನು ಹಾದಿಗಳಿಗೂ ಬೇಲಿಗಳ ಬಳಿಗೂ ಹೋಗಿ
ಅಲ್ಲಿ ಸಿಕ್ಕಿದವರನ್ನು ಬಲವಂತಮಾಡಿ ಒಳಕ್ಕೆ ಕರ
ಕೊಂಡು ಬಾ, ನನ್ನ ಮನೆ ತುಂಬಲಿ. ಆದರೆ ಊಟಕ್ಕೆ 24
ಹೇಳಿಸಿಕೊಂಡವರಲ್ಲಿ ಒಬ್ಬನಾದರೂ ನಾನು ಮಾಡಿ
ಸಿದ ಅಡಿಗೆಯ ಸವಿಯನ್ನು ನೋಡಬಾರದು ಎಂದು
ನಿಮಗೆ ಹೇಳುತ್ತೇನೆ ಅಂದನು.

ಯೇಸು ತನ್ನನ್ನು ಅನುಸರಿಸುವವರು ತಕ್ಕ ಆಲೋಚನೆಮಾಡಿ
ಕೊಂಡು ಬರಬೇಕೆಂದು ಸಾಮ್ಯರೂಪವಾಗಿ ಉಪದೇಶಿಸಿದ್ದು.
(ಮತ್ತಾ. 10. 37—39.)

ಬಹು ಜನರು ಗುಂಪುಗುಂಪಾಗಿ ಯೇಸುವಿನ ಸಂಗ 25
ಡ ಹೋಗುತ್ತಾ ಇರಲು ಆತನು ತಿರುಗಿಕೊಂಡು ಅವ
ರಿಗೆ ಹೇಳಿದ್ದೇನಂದರೆ—ಯಾವನಾದರೂ ನನ್ನ ಬಳಿಗೆ 26
ಬಂದು ತನ್ನ ತಂದೆ ತಾಯಿ ಹೆಂಡತಿ ಮಕ್ಕಳು ಅಣ್ಣ
ತಮ್ಮಂದಿರು ಅಕ್ಕತಂಗಿಯರು ಇವರನ್ನೂ ತನ್ನ ಪ್ರಾಣ
ವನ್ನು ಸಹ ಹಗೆಮಾಡದಿದ್ದರೆ ಅವನು ನನ್ನ ಶಿಷ್ಯನಾ
ಗಿರಲಾರನು. ಯಾವನಾದರೂ ತನ್ನ ಶಿಲುಬೆಯನ್ನು 27
ಹೊತ್ತುಕೊಂಡು ನನ್ನ ಹಿಂದೆ ಬಂದ ಹೊರತು ಅವನು
ನನ್ನ ಶಿಷ್ಯನಾಗಿರಲಾರನು. ನಿಮ್ಮಲ್ಲಿ ಯಾವನಾದರೂ 28
ಒಂದು ಬುರುಜನ್ನು ಕಟ್ಟಿಸಬೇಕೆಂದು ಯೋಚಿಸಿದರೆ
ಅವನು ಮೊದಲು ಕೂತುಕೊಂಡು—ಅದಕ್ಕೆ ಎಷ್ಟು
ಖರ್ಚು ಹಿಡಿದೀತು, ಅದನ್ನು ತೀರಿಸುವದಕ್ಕೆ ಸಾಕಾ
ಗುವಷ್ಟು ಹಣ ನನ್ನಲ್ಲಿ ಉಂಟೋ ಎಂದು ಲೆಕ್ಕಮಾ
ಡುವದಿಲ್ಲವೇ? ಹೀಗೆ ಲೆಕ್ಕಮಾಡದೆ ಅದಕ್ಕೆ ಅಸ್ತಿವಾ 29
ರಹಾಕಿದ ಮೇಲೆ ಆ ಕೆಲಸವನ್ನು ಪೂರೈಸಲಾರದೆ
ಹೋದರೆ ನೋಡುವವರೆಲ್ಲರು—ಈ ಮನುಷ್ಯನು 30
ಕಟ್ಟಿಸುವದಕ್ಕಂತೂ ತೊಡಗಿದನು, ಕೆಲಸಪೂರೈಸಲಾ
ರದೆ ಹೋದನು ಎಂದು ಅವನನ್ನು ಹಾಸ್ಯಮಾಡಾರು.
ಇಲ್ಲವೆ ಯಾವ ಅರಸನಾದರೂ ಮತ್ತೊಬ್ಬ ಅರಸನ 31
ಸಂಗಡ ಯುದ್ಧಮಾಡುವದಕ್ಕೆ ಹೋಗುವಾಗ ತನ್ನ
ಮೇಲೆ ಇಪ್ಪತ್ತು ಸಾವಿರ ದಂಡು ತೆಗೆದುಕೊಂಡು
ಬರುವವನನ್ನು ತಾನು ಹತ್ತು ಸಾವಿರ ದಂಡಿನಿಂದ
ಎದುರಿಸುವದಕ್ಕೆ ಶಕ್ತನಾಗುವೆನೋ ಇಲ್ಲವೋ ಎಂದು
ಕೂತುಕೊಂಡು ಆಲೋಚಿಸುವದಿಲ್ಲವೇ? ತಾನು ಶಕ್ತ 32
ನಲ್ಲದಿದ್ದರೆ ಬರುವ ಅರಸನು ಇನ್ನೂ ದೂರದಲ್ಲಿರು
ವಾಗಲೇ ರಾಯಭಾರಿಗಳನ್ನು ಕಳುಹಿಸಿ ಸಂಧಾನಕ್ಕೆ
ಒಪ್ಪಂದವನ್ನು ಕೇಳಿಕೊಳ್ಳುವನು. ಹಾಗೆಯೇ ನಿಮ್ಮ 33
ಲ್ಲಿ ಯಾವನೇ ಆಗಲಿ ತನಗಿರುವದನ್ನೆಲ್ಲಾ ಬಿಟ್ಟುಬಿಡದೆ
ಹೋದರೆ ಅವನು ನನ್ನ ಶಿಷ್ಯನಾಗಿರಲಾರನು.
ಉಪ್ಪಂತೂ ಒಳ್ಳೆಯ ಪದಾರ್ಥವೇ; ಉಪ್ಪು ಸಹ 34
ಸಪ್ಪಗಾದರೆ ಅದಕ್ಕೆ ಇನ್ನಾತರಿಂದ ರುಚಿಬಂದೀತು?
ಅದು ಭೂಮಿಗಾದರೂ ತಿಪ್ಪೆಗಾದರೂ ಉಪಯೋಗ 35
ವಲ್ಲ; ಅದನ್ನು ಹೊರಗೆ ಬಿಸಾಡುತ್ತಾರೆ. ಕೇಳುವದಕ್ಕೆ
ಕಿವಿಯುಳ್ಳವನು ಕೇಳಲಿ ಅಂದನು.

ದೇವರ ಕಡೆಗೆ ತಿರುಗಿದ ಪಾಪಿಯ ವಿಷಯದಲ್ಲಿ ಪರಲೋಕದಲ್ಲಿ
ಆಗುವ ಸಂತೋಷವನ್ನು ಸೂಚಿಸುವ ಮೂರು ದೃಷ್ಟಾಂತಗಳು.
(ಮತ್ತಾ. 18. 12—14.)

ಯೇಸುವಿನ ಉಪದೇಶವನ್ನು ಕೇಳಬೇಕೆಂದು 15
ಎಲ್ಲಾ ಸುಂಕದವರೂ ಪಾಪಿಗಳೂ ಆತನ ಬಳಿಗೆ

2 ಬರುತ್ತಾ ಇರಲು ಫರಿಸಾಯರೂ ಶಾಸ್ತ್ರಿಗಳೂ—
ಇವನು ಪಾಪಿಗಳನ್ನು ಸೇರಿಸಿಕೊಂಡು ಅವರ ಜೊತೆ
ಯಲ್ಲಿ ಊಟಮಾಡುತ್ತಾನೆ ಎಂದು ಹೇಳಿಕೊಂಡು
ಗುಣುಗುಟ್ಟುತ್ತಿದ್ದರು.
3 ಆಗ ಆತನು ಅವರಿಗೆ ಒಂದು ಸಾಮ್ಯವನ್ನು ಹೇಳಿ
4 ದನು. ಅದೇನಂದರೆ—ನಿಮ್ಮೊಳಗೆ ಯಾವ ಮನುಷ್ಯ
ನಾದರೂ ತನಗೆ ನೂರು ಕುರಿಗಳಿರಲಾಗಿ ಅವುಗಳಲ್ಲಿ
ಒಂದು ಕಳೆದುಹೋದರೆ ಅವನು ತೊಂಭತ್ತೊಂಭತ್ತನ್ನು
ಅಡವಿಯಲ್ಲಿ ಬಿಟ್ಟು ಕಳೆದುಹೋದದ್ದು ಸಿಕ್ಕುವ ತನಕ
ಅದನ್ನು ಹುಡುಕಿಕೊಂಡು ಹೋಗದೆ ಇದ್ದಾನೇ?
5 ಸಿಕ್ಕಿದ ಮೇಲೆ ಅವನು ಸಂತೋಷಪಡುತ್ತಾ ಅದನ್ನು
6 ತನ್ನ ಹೆಗಲಿನ ಮೇಲೆ ಇಟ್ಟುಕೊಂಡು ಮನೆಗೆ ಬಂದು
ಸ್ನೇಹಿತರನ್ನೂ ನೆರೆಹೊರೆಯವರನ್ನೂ ಕೂಡಿಸಿ—ಕಳೆ
ದುಹೋಗಿದ್ದ ಕುರಿ ಸಿಕ್ಕಿತು, ನನ್ನ ಸಂಗಡ ಸಂತೋಷಿ
7 ಸಿರಿ ಎಂದು ಅವರಿಗೆ ಹೇಳುವನಲ್ಲವೇ. ಅದರಂತೆ
ದೇವರ ಕಡೆಗೆ ತಿರುಗಿಕೊಳ್ಳುವದಕ್ಕೆ ಅವಶ್ಯವಿಲ್ಲದ
ತೊಂಭತ್ತೊಂಭತ್ತು ಮಂದಿ ನೀತಿವಂತರಿಗಿಂತ ದೇವರ
ಕಡೆಗೆ ತಿರುಗಿಕೊಳ್ಳುವ ಒಬ್ಬ ಪಾಪಿಯ ವಿಷಯವಾಗಿ
ಪರಲೋಕದಲ್ಲಿ ಸಂತೋಷವುಂಟಾಗುವದೆಂದು ನಿಮಗೆ
ಹೇಳುತ್ತೇನೆ.
8 ಯಾವ ಹೆಂಗಸು ತನ್ನಲ್ಲಿ ಹತ್ತು ಪಾವಲಿಗಳಿರ
ಲಾಗಿ ಒಂದು ಪಾವಲಿ ಹೋದರೆ ದೀಪಾಹಚ್ಚಿ ಮನೆ
ಯನ್ನು ಗುಡಿಸಿ ಸಿಕ್ಕುವ ತನಕ ಅದನ್ನು ಎಚ್ಚರದಿಂದ
9 ಹುಡುಕದೆ ಇದ್ದಾಳು? ಸಿಕ್ಕಿದ ಮೇಲೆ ಆಕೆಯು ತನ್ನ
ಗೆಣತಿಯರನ್ನೂ ನೆರೆಹೊರೆಯವರನ್ನೂ ಕೂಡಿಸಿ—
ಹೋಗಿದ್ದ ಪಾವಲಿ ಸಿಕ್ಕಿತು, ನನ್ನ ಸಂಗಡ ಸಂತೋಷಿ
10 ಸಿರಿ ಎಂದು ಹೇಳುವಳಲ್ಲವೇ. ಅದರಂತೆ ಒಬ್ಬ ಪಾಪಿ
ಯು ದೇವರ ಕಡೆಗೆ ತಿರುಗಿಕೊಳ್ಳುವ ವಿಷಯದಲ್ಲಿ
ದೇವದೂತರ ಮುಂದೆ ಸಂತೋಷವಾಗುವದೆಂದು
ನಿಮಗೆ ಹೇಳುತ್ತೇನೆ ಅಂದನು.
11 ಇನ್ನೂ ಆತನು ಹೇಳಿದ್ದೇನಂದರೆ—ಒಬ್ಬಾನೊಬ್ಬ
12 ಮನುಷ್ಯನಿಗೆ ಇಬ್ಬರು ಮಕ್ಕಳಿದ್ದರು. ಅವರಲ್ಲಿ ಕಿರಿ
ಯವನು ತಂದೆಗೆ—ಅಪ್ಪಾ, ಆಸ್ತಿಯಲ್ಲಿ ನನಗೆ ಬರ
ತಕ್ಕ ಪಾಲನ್ನು ಕೊಡು ಎಂದು ಕೇಳಿಕೊಳ್ಳಲು ತಂದೆ
13 ಯು ಬದುಕನ್ನು ಅವರಿಗೆ ಹಂಚಿಕೊಟ್ಟನು. ಸ್ವಲ್ಪ
ದಿವಸದ ಮೇಲೆ ಆ ಕಿರೀಮಗನು ಎಲ್ಲಾ ಕೂಡಿಸಿ
ಕೊಂಡು ದೂರದೇಶಕ್ಕೆ ಹೊರಟುಹೋಗಿ ಅಲ್ಲಿ ಪಟಿಂ
ಗನಾಗಿ ಬದುಕಿ ತನ್ನ ಆಸ್ತಿಯನ್ನು ಸೂರೆಮಾಡಿ
14 ಬಿಟ್ಟನು. ಹೀಗೆ ಅವನು ಎಲ್ಲಾ ಹಾಳುಮಾಡಿಕೊಂಡ
ಮೇಲೆ ಆ ದೇಶದಲ್ಲೆಲ್ಲಾ ಘೋರವಾದ ಬರ ಬಂದು
15 ಏನೂ ಗತಿಯಿಲ್ಲದವನಾದನು. ಆಗ ಅವನು ಹೋಗಿ
ಆ ದೇಶದ ನಿವಾಸಿಗಳೊಳಗೆ ಒಬ್ಬನಲ್ಲಿ ಸೇರಿಕೊಂಡನು;
ಆ ಮನುಷ್ಯನು ಹಂದಿಗಳನ್ನು ಮೇಯಿಸುವದಕ್ಕೆ ಅವ
16 ನನ್ನು ತನ್ನ ಹೊಲಗಳಿಗೆ ಕಳುಹಿಸಿದನು. ಹೀಗಿರಲಾಗಿ
ಅವನು ಹಂದಿ ತಿನ್ನುತ್ತಿದ್ದ ಕಾಯಿಗಳನ್ನಾದರೂ ತಿಂದು
ಹಸಿವನ್ನು ತೀರಿಸಿಕೊಳ್ಳಬೇಕೆಂದು ಆಶೆಪಟ್ಟನು; ಆದ
17 ರೂ ಯಾರೂ ಅವನಿಗೆ ಕೊಡಲಿಲ್ಲ. ಆಗ ಅವನಿಗೆ
ಬುದ್ಧಿಬಂದು ಅವನು—ನನ್ನ ತಂದೆಯ ಬಳಿಯಲ್ಲಿ

ಎಷ್ಟೋ ಮಂದಿ ಕೂಲಿಯಾಳುಗಳಿಗೆ ಬೇಕಾದಷ
ಆಹಾರವದೆ; ನಾನಾದರೋ ಇಲ್ಲಿ ಹಸಿವಿನಿಂದ ಸಾಯ
ತ್ತೇನೆ. ನಾನು ಎದ್ದು ನನ್ನ ತಂದೆಯ ಬಳಿಗೆ ಹೋ
ಅವನಿಗೆ—ಅಪ್ಪಾ, ಪರಲೋಕಕ್ಕೆ ವಿರೋಧವಾಗಿಯ
ನಿನ್ನ ಮುಂದೆಯೂ ಪಾಪ ಮಾಡಿದ್ದೇನೆ; ಇನ
ನಾನು ನಿನ್ನ ಮಗನೆನಿಸಿಕೊಳ್ಳುವದಕ್ಕೆ ಯೋಗ
ನಲ್ಲ; ನನ್ನನ್ನು ನಿನ್ನ ಕೂಲಿಯಾಳುಗಳಲ್ಲಿ ಒಬ
ನಂತೆ ಮಾಡು ಎಂದು ಹೇಳುವೆನು ಅಂದುಕೊಂಡ
ಎದ್ದು ತನ್ನ ತಂದೆಯ ಕಡೆಗೆ ಬಂದನು. ಅವನ
ಇನ್ನೂ ದೂರದಲ್ಲಿರುವಾಗ ಅವನ ತಂದೆಯು ಅ
ನನ್ನು ಕಂಡು ಕನಿಕರಪಟ್ಟು ಓಡಿಬಂದು ಅವನ ಕೊ
ಳನ್ನು ಅಪ್ಪಿಕೊಂಡು ಅವನಿಗೆ ಬಹಳವಾಗಿ ಮುದ್ದಿ
ಟ್ಟನು. ಆದರೂ ಮಗನು ಅವನಿಗೆ—ಅಪ್ಪಾ, ಪ
ಲೋಕಕ್ಕೆ ವಿರೋಧವಾಗಿಯೂ ನಿನ್ನ ಮುಂದೆಯ
ಪಾಪಮಾಡಿದ್ದೇನೆ; ಇನ್ನು ನಾನು ನಿನ್ನ ಮಗನೆನಿ
ಕೊಳ್ಳುವದಕ್ಕೆ ಯೋಗ್ಯನಲ್ಲ ಎಂದು ಹೇಳಲು ತಂದ
ಯು ತನ್ನ ಆಳುಗಳಿಗೆ—ಶ್ರೇಷ್ಠವಾದ ನಿಲುವಂಗ
ಯನ್ನು ತಟ್ಟನೆ ತಂದು ಇವನಿಗೆ ತೊಡಿಸಿರಿ; ಇವನ
ಕೈಗೆ ಉಂಗುರವನ್ನು ಇಡಿರಿ; ಕಾಲಿಗೆ ಜೋಡು ಮೆ
ಸಿರಿ; ಕೊಬ್ಬಿಸಿದ ಆ ಕರುವನ್ನು ತಂದು ಕೊಯ್ಯಿರಿ
ಹಬ್ಬಮಾಡೋಣ, ಉಲ್ಲಾಸಪಡೋಣ. ಈ ನನ್ನ
ಮಗನು ಸತ್ತವನಾಗಿದ್ದನು, ತಿರಿಗಿ ಬದುಕಿ ಬಂದನು
[1]ಪೋಲಿಹೋಗಿದ್ದನು, ಸಿಕ್ಕಿದನು ಎಂದು ಹೇಳಿದನು
ಆಗ ಅವರು ಉಲ್ಲಾಸಪಡುವದಕ್ಕೆ ತೊಡಗಿದರು
ಆದರೆ ಅವನ ಹಿರೀಮಗನು ಹೊಲದಲ್ಲಿದ್ದನು. ಅವನು
ಮನೆಯ ಹತ್ತಹತ್ತರಕ್ಕೆ ಬರುತ್ತಿರುವಾಗ ವಾದ್ಯನರ್ತ
ನಗಳನ್ನು ಕೇಳಿ ಆಳುಗಳಲ್ಲಿ ಒಬ್ಬನನ್ನು ತನ್ನ ಬಳಿಗ
ಕರೆದು—ಇದೇನು ಎಂದು ವಿಚಾರಿಸಿದನು. ಆಳ
ಅವನಿಗೆ—ನಿನ್ನ ತಮ್ಮ ಬಂದಿದ್ದಾನೆ; ಇವನು ಸುರಕ್ಷಿ
ತವಾಗಿ ಬಂದದ್ದರಿಂದ ನಿನ್ನ ತಂದೆಯು ಆ ಕೊಬ್ಬಿ
ಸಿದ ಕರುವನ್ನು ಕೊಯ್ಸಿದ್ದಾನೆ ಎಂದು ಹೇಳಿದನು.
ಇದನ್ನು ಕೇಳಿ ಅವನಿಗೆ ಸಿಟ್ಟುಬಂದು ಒಳಕ್ಕೆ ಹೋಗ
ಲೊಲ್ಲದೆ ಇದ್ದನು. ಆಗ ಅವನ ತಂದೆಯು ಹೊರಗೆ
ಬಂದು ಅವನನ್ನು ಬೇಡಿಕೊಂಡನು. ಆದರೆ ಅವನು
ತನ್ನ ತಂದೆಗೆ—ನೋಡು, ಇಷ್ಟು ವರುಷ ನಿನಗೆ ಸೇವ
ಮಾಡಿದ್ದೇನೆ, ಮತ್ತು ನಾನು ನಿನ್ನ ಒಂದಪ್ಪಣೆಯನ್ನಾ
ದರೂ ಎಂದೂ ಮೀರಲಿಲ್ಲ; ಆದರೂ ನಾನು ನನ್ನ ಸ್ನೇಹಿ
ತರ ಸಂಗಡ ಉಲ್ಲಾಸಪಡುವದಕ್ಕಾಗಿ ನೀನು ಎಂದೂ
ನನಗೆ ಒಂದು ಆಡನ್ನಾದರೂ ಕೊಡಲಿಲ್ಲ. ಆದರೆ
ಸೂಳೆಯರನ್ನು ಕಟ್ಟಿಕೊಂಡು ನಿನ್ನ ಬದುಕನ್ನು ನುಂಗಿ
ಬಿಟ್ಟ ಈ ನಿನ್ನ ಮಗನು ಬಂದಾಗ ಕೊಬ್ಬಿಸಿದ ಕರು
ವನ್ನು ಇವನಿಗೆ ಕೊಯ್ಸಿದಿ ಎಂದು ಉತ್ತರಕೊಟ್ಟನು.
ಅದಕ್ಕೆ ತಂದೆಯು—ಕಂದಾ, ನೀನು ಯಾವಾಗಲೂ
ನನ್ನ ಸಂಗಡ ಇದ್ದೀ, ಮತ್ತು ನನ್ನದೆಲ್ಲಾ ನಿನ್ನದೇ
ಆದರೆ ಉಲ್ಲಾಸಪಡುವದೂ ಸಂತೋಷಗೊಳ್ಳುವದೂ
ನ್ಯಾಯವಾದದ್ದೇ; ಯಾಕಂದರೆ ಈ ನಿನ್ನ ತಮ್ಮ ಸತ್ತ
ವನಾಗಿದ್ದನು, ತಿರಿಗಿ ಬದುಕಿ ಬಂದನು; [1]ಪೋಲಿ
ಹೋಗಿದ್ದನು, ಸಿಕ್ಕಿದನು ಎಂದು ಹೇಳಿದನು.

1) ಅಥವಾ: ಕೆಟ್ಟುಹೋಗಿದ್ದನು.

ಮುಂದಿನ ಕಾಲಕ್ಕೆ ಸಿದ್ಧಮಾಡಿಕೊಂಡ ಕಳ್ಳನಾದ ಮನೆ
ವಾರ್ತೆಯವನ ಸಾಮ್ಯ.

16 ಯೇಸು ತನ್ನ ಶಿಷ್ಯರಿಗೂ ಹೇಳಿದ್ದೇನಂದರೆ—
ಐಶ್ವರ್ಯವಂತನಾದ ಒಬ್ಬ ಮನುಷ್ಯನಿಗೆ ಒಬ್ಬ
ಮನೆವಾರ್ತೆಯವನಿದ್ದನು. ಇವನ ವಿಷಯವಾಗಿ
ಯಜಮಾನನ ಬಳಿಯಲ್ಲಿ—ಇವನು ನಿನ್ನ ಆಸ್ತಿಯನ್ನು
ಹಾಳುಮಾಡುತ್ತಾ ಇದ್ದಾನೆ ಎಂದು ಯಾರೋ ದೂರು
2 ಹೇಳಿರಲಾಗಿ ಯಜಮಾನನು ಅವನನ್ನು ಕರೆದು—
ಇದೇನು ನಾನು ನಿನ್ನ ವಿಷಯದಲ್ಲಿ ಕೇಳುವ ಸಂಗತಿ?
ನಿನ್ನ ಮನೆವಾರ್ತೆಯ ಲೆಕ್ಕವನ್ನು ಒಪ್ಪಿಸು; ನೀನು
ಇನ್ನು ಮನೆವಾರ್ತೆಯವನಾಗಿರುವದಕ್ಕಾಗುವದಿಲ್ಲ
3 ಎಂದು ಹೇಳಿದನು. ಹೀಗಿರಲಾಗಿ ಆ ಮನೆವಾರ್ತೆ
ಯವನು—ನಾನೇನು ಮಾಡಲಿ? ನನ್ನ ಯಜಮಾನನು
ನನ್ನಿಂದ ಈ ಮನೆವಾರ್ತೆಕೆಲಸವನ್ನು ತೆಗೆದುಬಿಡುತ್ತಾ
ನಲ್ಲಾ. ಅಗಿಯುವದಕ್ಕೆ ನನಗೆ ಬಲವಿಲ್ಲ; ಭಿಕ್ಷ
4 ಬೇಡುವದಕ್ಕೆ ನನಗೆ ನಾಚಿಕೆಯಾಗುತ್ತದೆ. ಈ ಮನೆ
ವಾರ್ತೆಕೆಲಸದಿಂದ ನನ್ನನ್ನು ತೆಗೆದ ಮೇಲೆ ಜನರು
ನನ್ನನ್ನು ತಮ್ಮ ಮನೆಗಳೊಳಗೆ ಸೇರಿಸಿಕೊಳ್ಳುವಂತೆ
ನಾನು ಮಾಡಬೇಕಾದದ್ದು ಗೊತ್ತಾಯಿತು ಎಂದು
5 ತನ್ನೊಳಗೆ ಅಂದುಕೊಂಡು ತನ್ನ ಯಜಮಾನನ ಸಾಲ
ಗಾರರಲ್ಲಿ ಪ್ರತಿಯೊಬ್ಬನನ್ನೂ ಕರೆದು ಮೊದಲನೆಯ
ವನನ್ನು—ನೀನು ನನ್ನ ಯಜಮಾನನಿಗೆ ಏನು ಕೊಡ
6 ಬೇಕು ಎಂದು ಕೇಳಲು ಅವನು—1)ನೂರು ಬುದ್ದಲಿ
ಎಣ್ಣೆ ಅಂದಾಗ ಅವನಿಗೆ—ಈ ನಿನ್ನ ಪತ್ರವನ್ನು
ತೆಗೆದುಕೊಂಡು ಬೇಗ ಕೂತುಕೊಂಡು ಐವತ್ತು
7 ಬುದ್ದಲಿ ಅಂತ ಬರಿ ಎಂದು ಹೇಳಿದನು. ಬಳಿಕ
ಮತ್ತೊಬ್ಬನನ್ನು—ನೀನು ಏನು ಕೊಡಬೇಕು ಎಂದು
ಕೇಳಲು ಅವನು—ನೂರು ಖಂಡಗ ಗೋದಿ ಅಂದಾಗ
ಅವನಿಗೆ—ಈ ನಿನ್ನ ಪತ್ರವನ್ನು ತೆಗೆದುಕೊಂಡು
8 ಎಂಭತ್ತು ಖಂಡಗ ಅಂತ ಬರಿ ಎಂದು ಹೇಳಿದನು. ಯಜ
ಮಾನನು ಇದನ್ನು ಕೇಳಿ ಅನ್ಯಾಯಗಾರನಾದ ಆ ಮನೆ
ವಾರ್ತೆಯವನನ್ನು—ಇವನು ಜಾಣತನಮಾಡಿದನು
ಎಂದು ಹೊಗಳಿದನು. ಯಾಕಂದರೆ ಲೌಕಿಕರು
ತಮ್ಮಂಥವರ ವಿಷಯದಲ್ಲಿ ಬೆಳಕಿನ ರಾಜ್ಯದವರಿ
9 ಗಿಂತಲೂ ಜಾಣರಾಗಿದ್ದಾರೆ. 2)ಅನ್ಯಾಯದ ಧನದ
ಮೂಲಕವಾಗಿ ನಿಮಗೆ ಸ್ನೇಹಿತರನ್ನು ಮಾಡಿಕೊಳ್ಳಿರಿ;
ಹೀಗೆ ಮಾಡಿದರೆ ಅದು ನಿಮ್ಮ ಕೈಬಿಟ್ಟುಹೋದಾಗ
ಅವರು ನಿಮ್ಮನ್ನು ಶಾಶ್ವತವಾದ ವಾಸಸ್ಥಾನಗಳಲ್ಲಿ
ಸೇರಿಸಿಕೊಳ್ಳುವರು ಎಂದು ನಾನು ನಿಮಗೆ ಹೇಳು
10 ತ್ತೇನೆ. ಸ್ವಲ್ಪವಾದದ್ದರಲ್ಲಿ ನಂಬಿಗಸ್ತನಾದವನು
ಬಹಳವಾದದ್ದರಲ್ಲಿಯೂ ನಂಬಿಗಸ್ತನಾಗುವನು; ಸ್ವಲ್ಪ
ವಾದದ್ದರಲ್ಲಿ ಅನ್ಯಾಯಗಾರನಾದವನು ಬಹಳವಾದದ್ದ
11 ರಲ್ಲಿಯೂ ಅನ್ಯಾಯಗಾರನಾಗುವನು. ಹೀಗಿರುವದ
ರಿಂದ 2)ಅನ್ಯಾಯದ ಧನದ ವಿಷಯದಲ್ಲಿ ನೀವು ನಂಬಿ
ಗಸ್ತರಲ್ಲದವರಾದರೆ ನಿಜವಾದ ಧನವನ್ನು ನಿಮ್ಮ
12 ವಶಕ್ಕೆ ಯಾರು ಕೊಟ್ಟಾರು? ಮತ್ತೊಬ್ಬನ ಸೊತ್ತಿನ
ವಿಷಯದಲ್ಲಿ ನೀವು ನಂಬಿಗಸ್ತರಲ್ಲದವರಾದರೆ ನಿಮ್ಮ
ದನ್ನು ನಿಮಗೆ ಯಾರು ಕೊಟ್ಟಾರು? ಯಾವ ಆಳಾ 13
ದರೂ ಇಬ್ಬರು ಯಜಮಾನರಿಗೆ ಸೇವೆಮಾಡಲಾರನು;
ಅವನು ಒಬ್ಬನನ್ನು ದ್ವೇಷಿಸಿ ಮತ್ತೊಬ್ಬನನ್ನು ಪ್ರೀತಿಸು
ವನು, ಇಲ್ಲವೆ ಒಬ್ಬನನ್ನು ಹೊಂದಿಕೊಂಡು ಮತ್ತೊಬ್ಬ
ನನ್ನು ತಾತ್ಸಾರಮಾಡುವನು. ನೀವು ದೇವರನ್ನೂ
ಧನವನ್ನೂ ಕೂಡ ಸೇವಿಸಲಾರಿರಿ ಅಂದನು.

ಯೇಸು ನುಡಿದ ನಾನಾ ವಚನಗಳು.

ಫರಿಸಾಯರು ಈ ಮಾತುಗಳನ್ನೆಲ್ಲಾ ಕೇಳಿ 14
ತಾವು ಹಣದಾಸೆಯುಳ್ಳವರಾಗಿದ್ದದರಿಂದ ಹಾಸ್ಯಮಾಡಿ
ದರು. ಆಗ ಆತನು ಅವರಿಗೆ ಹೇಳಿದ್ದೇನಂದರೆ— 15
ಮನುಷ್ಯರ ಮುಂದೆ ನೀತಿವಂತರೆಂದು ತೋರಿಸಿಕೊಳ್ಳು
ವವರು ನೀವು; ಆದರೆ ದೇವರು ನಿಮ್ಮ ಹೃದಯ
ಗಳನ್ನು ತಿಳುಕೊಂಡಿದ್ದಾನೆ. ಮನುಷ್ಯರಲ್ಲಿ ಶ್ರೇಷ್ಠ
ವೆನಿಸಿಕೊಳ್ಳುವಂಥದು ದೇವರ ದೃಷ್ಟಿಯಲ್ಲಿ ಅಸಹ್ಯ
ವಾಗಿದೆ.

ಧರ್ಮಶಾಸ್ತ್ರವೂ ಪ್ರವಾದಿಗಳೂ ಯೋಹಾನನ 16
ತನಕವೇ. ಈಚೆಗೆ ದೇವರ ರಾಜ್ಯವು ಸಾರಲ್ಪಡುತ್ತಾ
ಇದೆ. ಅದರಲ್ಲಿ ಸಕಲರೂ ಬಲಾತ್ಕಾರವಾಗಿ ನುಗ್ಗು
ತ್ತಾರೆ.

ಧರ್ಮಶಾಸ್ತ್ರದೊಳಗಿನ ಒಂದು ಗುಡಸಾದರೂ 17
ಬಿದ್ದುಹೋಗುವದಕ್ಕಿಂತಲೂ ಆಕಾಶವೂ ಭೂಮಿಯೂ
ಅಳಿದುಹೋಗುವದು ಸುಲಭ.

ತನ್ನ ಹೆಂಡತಿಯನ್ನು ಬಿಟ್ಟು ಬೇರೊಬ್ಬಳನ್ನು 18
ಮದುವೆಮಾಡಿಕೊಳ್ಳುವ ಪ್ರತಿಯೊಬ್ಬನು ವ್ಯಭಿಚಾರ
ಮಾಡುವವನಾಗಿದ್ದಾನೆ; ಮತ್ತು ಗಂಡಬಿಟ್ಟವಳನ್ನು
ಮದುವೆಮಾಡಿಕೊಳ್ಳುವವನು ವ್ಯಭಿಚಾರಮಾಡುವವ
ನಾಗಿದ್ದಾನೆ.

ಭೋಗಪುರುಷನು ಭಿಕ್ಷಗಾರನು ಇವರ ದೃಷ್ಟಾಂತ.

ಐಶ್ವರ್ಯವಂತನಾದ ಒಬ್ಬ ಮನುಷ್ಯನಿದ್ದನು. 19
ಅವನು ಸಕಲಾತಿ ನಯವಾದ ನಾರುಮಡಿ ಮುಂತಾದ
ವಸ್ತ್ರಗಳನ್ನು ಧರಿಸಿಕೊಂಡು ಪ್ರತಿದಿನವೂ ವೈಭವ
ದೊಡನೆ ಸುಖಸಂತೋಷಪಡುತ್ತಿದ್ದನು. ಅವನ ಮನೇ 20
ಬಾಗಲಲ್ಲಿ ಲಾಜರನೆಂಬ ಒಬ್ಬ ಭಿಕ್ಷಗಾರನು ಬಿದ್ದು
ಕೊಂಡಿದ್ದನು. ಇವನು ಮೈತುಂಬಾ ಹುಣ್ಣಿದ್ದವನು; 21
ಐಶ್ವರ್ಯವಂತನ ಮೇಜಿನಿಂದ ಬಿದ್ದ ಎಂಜಲನ್ನು
ತಿಂದು ಹಸಿವು ತೀರಿಸಿಕೊಳ್ಳಬೇಕೆಂದಿದ್ದನು; ಇಷ್ಟು
ಮಾತ್ರವಲ್ಲದೆ ನಾಯಿಗಳು ಸಹ ಬಂದು ಅವನ
ಹುಣ್ಣುಗಳನ್ನು ನೆಕ್ಕುವವು. ಹೀಗಿರುವಲ್ಲಿ ಸ್ವಲ್ಪ 22
ಕಾಲದ ಮೇಲೆ ಆ ಭಿಕ್ಷಗಾರನು ಸತ್ತನು; ದೇವ
ದೂತರು ಅವನನ್ನು ತೆಗೆದುಕೊಂಡುಹೋಗಿ 3)ಅಬ್ರ
ಹಾಮನ ಎದೆಗೆ ಒರಗಿಸಿದರು. ಆ ಐಶ್ವರ್ಯವಂತನು
ಸಹ ಸತ್ತನು; ಅವನಿಗೆ ಉತ್ತರಕ್ರಿಯೆಗಳು ಆದವು.
ಅವನು ಪಾತಾಳದೊಳಗೆ ಯಾತನೆಪಡುತ್ತಾ ಇರುವಲ್ಲಿ 23

1) ಹೆಚ್ಚುಕಡಿಮೆ 1350 ಮಣ. 2) ಅಥವಾ, ಪ್ರಾಪಂಚಿಕ. 3) ಅಂದರೆ, ಪರಲೋಕದಲ್ಲಿ ಸೇರಿಸಿದರು.

ಕಣ್ಣೆತ್ತಿ ದೂರದಿಂದ ಅಬ್ರಹಾಮನನ್ನೂ ಇವನ ಎದೆಗೆ
24 ಒರಗಿಕೊಂಡಿದ್ದ ಲಾಜರನನ್ನೂ ನೋಡಿ—ತಂದೆಯೇ,
ಅಬ್ರಹಾಮನೇ, ನನ್ನ ಮೇಲೆ ದಯವಿಟ್ಟು ಲಾಜರ
ನನ್ನು ಕಳುಹಿಸು; ಅವನು ತನ್ನ ತುದಿಬೆರಳನ್ನು ನೀರಿ
ನಲ್ಲಿ ಅದ್ದಿ ನನ್ನ ನಾಲಿಗೆಯನ್ನು ತಣ್ಣಗೆ ಮಾಡಲಿ; ಈ
ಉರಿಯಲ್ಲಿ ಸಂಕಟಪಡುತ್ತೇನೆ ಎಂದು ಕೂಗಿ ಹೇಳಿ
25 ದನು. ಆದರೆ ಅಬ್ರಹಾಮನು—ಕಂದಾ, ನೀನು ಆಶಿ
ಸಿದ ಸುಖವನ್ನು ನಿನ್ನ ಜೀವಮಾನದಲ್ಲಿ ಹೊಂದಿದಿ;
ಹಾಗೆಯೇ ಲಾಜರನು ಕಷ್ಟವನ್ನು ಹೊಂದಿದನು ಎಂಬ
ದನ್ನು ನೆನಪಿಗೆ ತಂದುಕೋ. ಈಗಲಾದರೋ ಇಲ್ಲಿ
26 ಇವನಿಗೆ ಸಮಾಧಾನ, ಆದರೆ ನಿನಗೆ ಸಂಕಟ. ಇದು
ಮಾತ್ರವಲ್ಲದೆ ನಮಗೂ ನಿಮಗೂ ನಡುವೆ ದೊಡ್ಡ
ದೊಂದು ಡೊಂಗರ ಸ್ಥಾಪಿಸಿಯದೆ; ಆದಕಾರಣ ಈ
ಕಡೆಯಿಂದ ನಿಮ್ಮ ಬಳಿಗೆ ಹೋಗಬೇಕೆಂದಿರುವವರು
ಹೋಗಲಾರರು; ಮತ್ತು ಆ ಕಡೆಯಿಂದ ನಮ್ಮ ಬಳಿಗೆ
27 ಯಾರೂ ದಾಟುವದಕ್ಕಾಗದು ಅಂದನು. ಆಗ
ಅವನು—ಅಪ್ಪಾ, ಹಾಗಾದರೆ ಲಾಜರನನ್ನು ನನ್ನ
ತಂದೆಯ ಮನೆಗೆ ಕಳುಹಿಸಬೇಕೆಂದು ನಿನ್ನನ್ನು ಬೇಡಿ
28 ಕೊಳ್ಳುತ್ತೇನೆ. ನನಗೆ ಐದು ಮಂದಿ ಅಣ್ಣತಮ್ಮಂದಿ
ರಿದ್ದಾರೆ; ಅವರು ಸಹ ಈ ಯಾತನೆಯ ಸ್ಥಳಕ್ಕೆ
ಬಂದಾರು; ಬಾರದಂತೆ ಅವನು ತಾನು ಕಂಡದ್ದನ್ನು
29 ಅವರಿಗೆ ಚೆನ್ನಾಗಿ ಹೇಳಲಿ ಅಂದನು. ಆದರೆ ಅಬ್ರ
ಹಾಮನು—ಮೋಶೆಯ ಧರ್ಮಶಾಸ್ತ್ರವೂ ಪ್ರವಾದಿಗಳ
ಗ್ರಂಥಗಳೂ ಅವರಲ್ಲಿ ಅವೆ; ಅವುಗಳನ್ನು ಕೇಳಲಿ
30 ಅನ್ನಲು ಅವನು—ತಂದೆಯೇ, ಅಬ್ರಹಾಮನೇ,
ಹಾಗಲ್ಲ; ಸತ್ತವರ ಕಡೆಯಿಂದ ಒಬ್ಬನು ಅವರ ಬಳಿಗೆ
ಹೋದರೆ ಅವರು ದೇವರ ಕಡೆಗೆ ತಿರುಗಿಕೊಳ್ಳುವರು
31 ಅಂದನು. ಅಬ್ರಹಾಮನು ಅವನಿಗೆ—ಅವರು ಮೋಶೆ
ಯ ಮಾತನ್ನೂ ಪ್ರವಾದಿಗಳ ಮಾತನ್ನೂ ಕೇಳದಿದ್ದರೆ
ಸತ್ತುಹೋಗಿದ್ದವನೊಬ್ಬನು ಜೀವಿತನಾಗಿ ಎದ್ದರೂ
ಅವರು ಒಪ್ಪುವದಿಲ್ಲ ಎಂದು ಹೇಳಿದನು.

ಮತ್ತೊಬ್ಬರಿಗೆ ವಿಘ್ನವಾಗದೆ ಅವರ ತಪ್ಪುಗಳನ್ನು
ಕ್ಷಮಿಸಬೇಕೆಂಬುವ ಬೋಧೆ.
(ಮತ್ತಾ. 18. 6, 7, 15, 21, 22.)

17 ಆತನು ತನ್ನ ಶಿಷ್ಯರಿಗೆ—ತೊಡಕುಗಳು ಬಾರದೆ
ಇರಲಾರವು; ಆದರೂ ಅವು ಯಾವನಿಂದ ಬರುತ್ತವೆ
2 ಯೋ ಅವನ ಗತಿಯನ್ನು ಏನು ಹೇಳಲಿ? ಅವನು
ಈ ಚಿಕ್ಕವರಲ್ಲಿ ಒಬ್ಬನಿಗೆ ತೊಡಕನ್ನೊಡ್ಡುವದಕ್ಕಿಂತ
ತನ್ನ ಕುತ್ತಿಗೆಗೆ ಬೀಸುವ ಕಲ್ಲನ್ನು ಕಟ್ಟಿಸಿಕೊಂಡು
3 ಸಮುದ್ರದಲ್ಲಿ ಹಾಕಿಸಿಕೊಳ್ಳುವದೇ ಲೇಸು. ನಿಮ್ಮ
ವಿಷಯದಲ್ಲಿ ಎಚ್ಚರಿಕೆಯಾಗಿರಿ. ನಿನ್ನ ಸಹೋದರನು
ತಪ್ಪುಮಾಡಿದರೆ ಅವನನ್ನು ಗದರಿಸು; ಅವನು ಪಶ್ಚಾ
4 ತ್ತಾಪಪಟ್ಟರೆ ಅವನ ತಪ್ಪನ್ನು ಕ್ಷಮಿಸಿಬಿಡು. ಅವನು
ದಿನಕ್ಕೆ ಏಳು ಸಾರಿ ನಿನಗೆ ತಪ್ಪುಮಾಡಿ ಏಳು ಸಾರಿ
ಯೂ ನಿನ್ನ ಕಡೆಗೆ ತಿರುಗಿಕೊಂಡು—ನನಗೆ ಪಶ್ಚಾ
ತ್ತಾಪವಾಯಿತು ಎಂದು ಹೇಳಿದರೆ ಅವನಿಗೆ ಕ್ಷಮಿಸು
ಎಂದು ಹೇಳಿದನು.

ನಂಬಿಕೆಯ ಮಹತ್ವದ ವರ್ಣನೆ.
(ಮತ್ತಾ. 17. 20; 21. 21.)

ಅಪೊಸ್ತಲರು ಸ್ವಾಮಿಗೆ—ನಮ್ಮ ನಂಬಿಕೆಯನ
ಹೆಚ್ಚಿಸು ಎಂದು ಹೇಳಲು ಸ್ವಾಮಿಯು—ಸಾಸಿವ
ಕಾಳಷ್ಟು ನಂಬಿಕೆ ನಿಮಗಿದ್ದರೆ ನೀವು ಈ ಅತ್ತಿ
ಮರಕ್ಕೆ—ನೀನು ಬೇರುಸಹಿತ ಕಿತ್ತುಕೊಂಡುಹೋ
ಸಮುದ್ರದಲ್ಲಿ ನಾಟಿಕೋ ಎಂದು ಹೇಳಿದರೂ ಅದ
ನಿಮ್ಮ ಮಾತನ್ನು ಕೇಳುವದು.

ಮಾಡಬೇಕಾದದ್ದನ್ನು ಮಾಡುವದು ನಮ್ಮ ಕರ್ತವ್ಯವೇ ಹೊರ
ಪುಣ್ಯವಲ್ಲವೆಂಬ ಬೋಧೆ.

ನಿಮ್ಮಲ್ಲಿ ಯಾವನಿಗಾದರೂ ಉಳುವ ಅಥವ
ಕುರಿಮೇಯಿಸುವ ಆಳಿರಲಾಗಿ ಅವನು ಹೊಲದಿಂ
ಮನೆಗೆ ಬಂದ ಆ ಆಳಿಗೆ—ನೀನು ತಟ್ಟನೆ ಬಂದ
ಊಟಕ್ಕೆ ಕೂತುಕೋ ಎಂದು ಹೇಳಾನೇ? ಹಾ
ಹೇಳದೆ—ನೀನು ನನ್ನ ಊಟಕ್ಕೇನಾದರೂ ಸಿದ್ಧ
ಮಾಡು, ನಾನು ಊಟಮಾಡಿ ಕುಡಿಯುವ ತನ
ನಡುಕಟ್ಟಿಕೊಂಡು ನನಗೆ ಸೇವೆಮಾಡು; ಆ ಮೇ
ನೀನು ಊಟಮಾಡಿ ಕುಡಿ ಎಂದು ಹೇಳುವನಲ್ಲವೇ
ತನ್ನ ಅಪ್ಪಣೆಯಂತೆ ನಡೆದ ಆ ಆಳಿಗೆ—ನಿನ್ನಿಂದ ಉ
ಕಾರವಾಯಿತೆಂದು ಅವನಿಗೆ ಹೇಳುವನೇ? ಇದರಂ
ಯೇ ನಿಮ್ಮ ಸಂಗತಿ. ನೀವು ನಿಮಗೆ ಅಪ್ಪಣೆಯಾಗಿ
ರುವದನ್ನೆಲ್ಲಾ ಮಾಡಿದ ಮೇಲೆ—ನಾವು ಆಳುಗಳು
ಪ್ರಯೋಜನವಿಲ್ಲದವರು, ಮಾಡಬೇಕಾದದ್ದನ್ನೇ ಮಾ
ಡಿದ್ದೇವೆ ಅನ್ನಿರಿ ಎಂದು ಹೇಳಿದನು.

ಯೇಸು ಹತ್ತುಮಂದಿ ಕುಷ್ಠರೋಗಿಗಳನ್ನು ಸ್ವಸ್ಥಮಾಡಿದಾಗ
ಒಬ್ಬನು ಮಾತ್ರ ಉಪಕಾರಸ್ತುತಿಮಾಡಿದ್ದು.

ಆತನು ಯೆರೂಸಲೇಮಿಗೆ ಪ್ರಯಾಣಮಾಡುವಾಗ
ಸಮಾರ್ಯ ಗಲಿಲಾಯ ಸೀಮೆಗಳ ನಡುವೆ ಹಾದು
ಹೋದನು. ಒಂದು ಹಳ್ಳಿಗೆ ಬಂದಾಗ ಹತ್ತುಮಂದಿ
ಕುಷ್ಠರೋಗಿಗಳು ಆತನ ಎದುರಿಗೆ ಬಂದು ದೂರ
ದಲ್ಲಿ ನಿಂತು—ಯೇಸುವೇ, ಗುರುವೇ, ನಮ್ಮ ಮೇಲೆ
ದಯವಿಡು ಎಂದು ಕೂಗಿಹೇಳಿದರು. ಆತನು ಅವ
ರನ್ನು ನೋಡಿ—ನೀವು ಹೋಗಿ ಯಾಜಕರಿಗೆ
ಮೈ ತೋರಿಸಿಕೊಳ್ಳಿರಿ ಎಂದು ಹೇಳಿದನು. ಅವರು
ಹೋಗುತ್ತಿರುವಾಗಲೇ ಶುದ್ಧರಾದರು. ಅವರಲ್ಲಿ
ಒಬ್ಬನು ತನಗೆ ಗುಣವಾದದ್ದನ್ನು ನೋಡಿ ಮಹಾಶಬ್ದ
ದಿಂದ ದೇವರನ್ನು ಕೊಂಡಾಡುತ್ತಾ ಹಿಂತಿರುಗಿ ಬಂದು
ಯೇಸುವಿನ ಪಾದಗಳಿಗೆ ಅಡ್ಡಬಿದ್ದು ಆತನಿಗೆ ಉಪ
ಕಾರಸ್ತುತಿಮಾಡಿದನು. ಅವನು ಸಮಾರ್ಯದವನು
ಯೇಸು ಇದನ್ನು ನೋಡಿ—ಹತ್ತು ಮಂದಿ ಶುದ್ಧ
ರಾದರಲ್ಲವೇ. ಮಿಕ್ಕ ಒಂಭತ್ತು ಮಂದಿ ಎಲ್ಲಿ
ದೇವರನ್ನು ಸ್ತುತಿಸುವದಕ್ಕೆ ಈ ಅನ್ಯದೇಶದವನೇ
ಹೊರತು ಇನ್ನಾರೂ ಹಿಂತಿರುಗಿ ಬರಲಿಲ್ಲವೇ ಎಂದು
ಹೇಳಿ ಆವನಿಗೆ—ಎದ್ದು ಹೋಗು, ನಿನ್ನ ನಂಬಿಕೆ
ಯು ನಿನ್ನನ್ನು ಸ್ವಸ್ಥಮಾಡಿಯದೆ ಎಂದು ಹೇಳಿದನು.

ದೇವರ ರಾಜ್ಯವು ಯಾವಾಗ ಮತ್ತು ಎಲ್ಲಿ ಬರುವದು ಎಂಬ ವಿಷಯವಾಗಿ ಯೇಸು ಉಪದೇಶಮಾಡಿದ್ದು.

0 ದೇವರ ರಾಜ್ಯವು ಯಾವಾಗ ಬರುವದೆಂದು
ಫರಿಸಾಯರು ಆತನನ್ನು ಕೇಳಿದಾಗ ಆತನು ಅವ
ರಿಗೆ—ದೇವರ ರಾಜ್ಯವು ಪ್ರತ್ಯಕ್ಷವಾಗಿ ಬರುವಂಥದಲ್ಲ.
1 ಇಗೋ ಇಲ್ಲಿ ಇದೆ, ಅಗೋ ಅಲ್ಲಿ ಅದೆ ಎಂದು ಹೇಳು
ವದಕ್ಕಾಗದು; ದೇವರ ರಾಜ್ಯವು ನಿಮ್ಮಲ್ಲಿಯೇ ಅದೆ
ಅಂತ ತಿಳುಕೊಳ್ಳಿರಿ ಎಂದು ಉತ್ತರಕೊಟ್ಟನು.
2 ಮತ್ತು ಆತನು ತನ್ನ ಶಿಷ್ಯರಿಗೆ ಹೇಳಿದ್ದೇನಂದರೆ—
ಒಂದು ಕಾಲ ಬರುತ್ತದೆ, ಅದರಲ್ಲಿ ನೀವು ಮನುಷ್ಯ
ಕುಮಾರನ ದಿವಸಗಳೊಳಗೆ ಒಂದು ದಿನವನ್ನು ನೋಡ
ಬೇಕೆಂದು ಅಪೇಕ್ಷಿಸಿದರೂ ಅದನ್ನು ನೋಡದೆ ಇರು
3 ವಿರಿ. ಜನರು ನಿಮಗೆ—ಅಗೋ ಅಲ್ಲಿದ್ದಾನೆ, ಇಗೋ
ಇಲ್ಲಿದ್ದಾನೆ ಎಂದು ಹೇಳಿದರೆ ನೀವು ಹೊರಟುಹೋಗ
4 ಬೇಡಿರಿ, ಅವರನ್ನು ಹಿಂಬಾಲಿಸಲೂ ಬೇಡಿರಿ. ಯಾಕಂದ
ರೆ ಮಿಂಚು ಮಿಂಚುತ್ತಾ ಆಕಾಶದಲ್ಲಿ ಒಂದು ಕಡೆ
ಯಿಂದ ಮತ್ತೊಂದು ಕಡೆಯ ವರೆಗೂ ಹೇಗೆ ಹೊಳೆ
ಯುವದೋ ಹಾಗೆಯೇ ಮನುಷ್ಯಕುಮಾರನು ತನ್ನ
5 ದಿನದಲ್ಲಿರುವನು. ಆದರೆ ಮೊದಲು ಆತನು ಬಹು
ಕಷ್ಟಗಳನ್ನನುಭವಿಸಿ ಈಗಿನ ಕಾಲದ ಜನರಿಂದ ನಿರಾ
6 ಕರಿಸಲ್ಪಡಬೇಕು. ನೋಹನ ದಿವಸಗಳಲ್ಲಿ ನಡೆದ
ಹಾಗೆಯೇ ಮನುಷ್ಯಕುಮಾರನ ದಿವಸಗಳಲ್ಲಿಯೂ
7 ನಡೆಯುವದು. ನೋಹನು ನಾವೆಯಲ್ಲಿ ಸೇರಿದ ದಿನದ
ತನಕ ಜನರು ಊಟಮಾಡುತ್ತಿದ್ದರು, ಕುಡಿಯುತ್ತಿದ್ದ
ರು, ಮದುವೆಮಾಡಿಕೊಳ್ಳುತ್ತಿದ್ದರು, ಮದುವೆಮಾಡಿ
ಕೊಡುತ್ತಿದ್ದರು. ಆಗ ಜಲಪ್ರಳಯವು ಬಂದು ಎಲ್ಲ
8 ರನ್ನು ನಾಶಮಾಡಿತು. ಮತ್ತು ಲೋಟನ ದಿವಸಗ
ಳಲ್ಲಿ ನಡೆದ ಪ್ರಕಾರ ನಡೆಯುವದು. ಅವರು ಊಟ
ಮಾಡುತ್ತಿದ್ದರು, ಕುಡಿಯುತ್ತಿದ್ದರು, ಕೊಳ್ಳುತ್ತಿದ್ದರು,
ಮಾರುತ್ತಿದ್ದರು, ನೆಡುತ್ತಿದ್ದರು, ಕಟ್ಟುತ್ತಿದ್ದರು.
9 ಆದರೆ ಲೋಟನು ಸೊದೋಮ್ ಊರನ್ನು ಬಿಟ್ಟು
ಹೋದ ದಿವಸದಲ್ಲಿ ಆಕಾಶದಿಂದ ಬೆಂಕಿಗಂಧಕಗಳು
0 ಸುರಿದು ಅವರೆಲ್ಲರನ್ನು ನಾಶಮಾಡಿದವು. ಮನುಷ್ಯ
ಕುಮಾರನು ಪ್ರತ್ಯಕ್ಷವಾಗುವ ದಿವಸದಲ್ಲಿ ಅದೇ ರೀತಿ
1 ಯಾಗಿ ಇರುವದು. ಆ ದಿನದಲ್ಲಿ ಮಾಳಿಗೆಯ
ಮೇಲೆ ಇರುವವನು ಮನೆಯೊಳಗಿರುವ ತನ್ನ ವಸ್ತು
ಗಳನ್ನು ತೆಗೆದುಕೊಳ್ಳುವದಕ್ಕೆ ಇಳಿದು ಬರಬಾರದು;
ಅದೇ ಪ್ರಕಾರ ಹೊಲದಲ್ಲಿರುವವನು ಸಹ ತಿರುಗಿ ಹಿಂದ
2 ಕ್ಕೆ ಹೋಗಬಾರದು. ಲೋಟನ ಹೆಂಡತಿಯನ್ನು ನೆನ
3 ಪಿಗೆ ತಂದುಕೊಳ್ಳಿರಿ. ತನ್ನ ಪ್ರಾಣವನ್ನು ದೊರಕಿಸಿ
ಕೊಳ್ಳಬೇಕೆಂದಿರುವವನು ಅದನ್ನು ಕಳಕೊಳ್ಳುವನು;
ಪ್ರಾಣವನ್ನು ಕಳಕೊಂಡವನು ಅದನ್ನು ರಕ್ಷಿಸಿಕೊಳ್ಳು
4 ವನು. ಆ ರಾತ್ರಿಯಲ್ಲಿ ಒಂದೇ ಮಂಚದ ಮೇಲೆ
ಇಬ್ಬರಿರುವರು; ಒಬ್ಬನು ತೆಗೆದುಕೊಳ್ಳಲ್ಪಡುವನು,
5 ಮತ್ತೊಬ್ಬನು ಬಿಡಲ್ಪಡುವನು. ಇಬ್ಬರು ಹೆಂಗಸರು
ಒಂದೇ ಕಲ್ಲಲ್ಲಿ ಬೀಸುತ್ತಿರುವರು; ಒಬ್ಬಳು ತೆಗೆದು
ಕೊಳ್ಳಲ್ಪಡುವಳು, ಮತ್ತೊಬ್ಬಳು ಬಿಡಲ್ಪಡುವಳು1)
ಅಂದನು. ಈ ಮಾತಿಗೆ ಶಿಷ್ಯರು—ಸ್ವಾಮೀ, ಅದು 37
ಎಲ್ಲಿ ಆಗುವದು ಎಂದು ಕೇಳಲು ಆತನು ಅವರಿಗೆ—
ಹೆಣ ಎಲ್ಲಿಯೋ ಅಲ್ಲಿಯೇ ಹದ್ದುಗಳು ಕೂಡುವವು
ಎಂದು ಉತ್ತರಕೊಟ್ಟನು.

ಯೇಸು ಪ್ರಾರ್ಥನೆಯ ವಿಷಯದಲ್ಲಿ ಅನ್ಯಾಯಗಾರನಾದ ನ್ಯಾಯಾಧಿಪತಿಯ ಸಾಮ್ಯದ ಮೂಲಕ ಉಪದೇಶಮಾಡಿದ್ದು.

**18** ಬೇಸರಗೊಳ್ಳದೆ ಯಾವಾಗಲೂ ಪ್ರಾರ್ಥನೆ
ಮಾಡುತ್ತಿರಬೇಕೆಂಬದಕ್ಕೆ ಆತನು ಅವರಿಗೆ ಒಂದು
ಸಾಮ್ಯವನ್ನು ಹೇಳಿದನು. ಅದೇನಂದರೆ—ಒಂದಾ 2
ನೊಂದು ಊರಿನಲ್ಲಿ ಒಬ್ಬ ನ್ಯಾಯಾಧಿಪತಿ ಇದ್ದನು;
ಅವನು ದೇವರಿಗೆ ಹೆದರದೆ ಮನುಷ್ಯರನ್ನು ಲಕ್ಷ್ಯ
ಮಾಡದೆ ಇದ್ದವನು. ಅದೇ ಊರಿನಲ್ಲಿ ಒಬ್ಬ ವಿಧವೆ 3
ಇದ್ದಳು. ಆಕೆಯು ಅವನ ಬಳಿಗೆ ಬಂದು—ನ್ಯಾಯ
ವಿಚಾರಣೆಮಾಡಿ ನನ್ನ ವಿರೋಧಿಯಿಂದ ನನ್ನನ್ನು ಬಿಡಿ
ಸು ಎಂದು ಹೇಳಿಕೊಳ್ಳುತ್ತಿದ್ದಳು. ಅವನು ಸ್ವಲ್ಪ 4
ಕಾಲ ಮನಸ್ಸುಕೊಡಲಿಲ್ಲ. ಆ ಮೇಲೆ ಅವನು—
ನಾನು ದೇವರಿಗೆ ಹೆದರುವವನಲ್ಲ, ಮನುಷ್ಯರನ್ನು
ಲಕ್ಷ್ಯ ಮಾಡುವವನಲ್ಲ; ಆದರೂ ಈ ವಿಧವೆ ನನ್ನನ್ನು 5
ಕಾಡುತ್ತಾ ಬರುವದರಿಂದ ಈಕೆಯ ನ್ಯಾಯವನ್ನು
ವಿಚಾರಿಸಿ ತೀರ್ಪುಮಾಡುವೆನು; ಇಲ್ಲವಾದರೆ ಈಕೆಯು
ಬಂದು ಬಂದು ಕಡೆಗೆ ನನ್ನನ್ನು ದಣಿಸಾಳು ಎಂದು
ತನ್ನೊಳಗೆ ಅಂದುಕೊಂಡನು. ಸ್ವಾಮಿಯು ಈ 6
ಸಾಮ್ಯವನ್ನು ಹೇಳಿದ ಮೇಲೆ—ಅನ್ಯಾಯಗಾರನಾದ
ಈ ನ್ಯಾಯಾಧಿಪತಿ ಅಂದುಕೊಂಡದ್ದನ್ನು ಆಲೋಚಿಸಿ
ಕೊಳ್ಳಿರಿ. ದೇವರಾದುಕೊಂಡವರು ಆತನಿಗೆ ಹಗಲು 7
ರಾತ್ರಿ ಮೊರೆಯಿಡುವಲ್ಲಿ ಆತನು ಅವರ ವಿಷಯದಲ್ಲಿ
ತಡಮಾಡಿದರೂ ಅವರ ನ್ಯಾಯವನ್ನು ತೀರಿಸದೆ ಇರು
ವನೇ? ಅವರಿಗೆ ಬೇಗ ನ್ಯಾಯತೀರಿಸುವನೆಂದು ನಿಮಗೆ
ಹೇಳುತ್ತೇನೆ. ಹೀಗಿದ್ದರೂ ಮನುಷ್ಯಕುಮಾರನು 8
ಬಂದಾಗ ಭೂಮಿಯ ಮೇಲೆ ನಂಬಿಕೆಯನ್ನು ಕಾಣು
ವನೋ? ಅಂದನು.

ಪ್ರಾರ್ಥನೆಮಾಡುವದಕ್ಕಾಗಿ ದೇವಾಲಯಕ್ಕೆ ಹೋದ ಫರಿಸಾಯನನ್ನೂ ಸುಂಕದವನನ್ನೂ ಕುರಿತದ್ದು.

ಇದಲ್ಲದೆ ತಾವೇ ನೀತಿವಂತರೆಂದು ತಮ್ಮಲ್ಲಿ ಭರ 9
ವಸವಿಟ್ಟುಕೊಂಡು ಉಳಿದವರನ್ನು ಉದಾಸೀನಮಾಡು
ವಂಥ ಕೆಲವರಿಗೆ ಒಂದು ಸಾಮ್ಯವನ್ನು ಹೇಳಿದನು.
ಅದೇನಂದರೆ — ಪ್ರಾರ್ಥನೆಮಾಡಬೇಕೆಂದು ಇಬ್ಬರು 10
ಮನುಷ್ಯರು ದೇವಾಲಯಕ್ಕೆ ಹೋದರು; ಒಬ್ಬನು
ಫರಿಸಾಯನು, ಒಬ್ಬನು ಸುಂಕದವನು. ಫರಿಸಾಯ 11
ನು ನಿಂತುಕೊಂಡು ಪ್ರಾರ್ಥಿಸುವಾಗ ತನ್ನೊಳಗೆ—
ದೇವರೇ, ಸುಲುಕೊಳ್ಳುವವರೂ ಅನ್ಯಾಯಗಾರರೂ

1) ಕೆಲವು ಪ್ರತಿಗಳಲ್ಲಿ ೩೬ನೇ ವಚನವದೆ. ಅದೇನಂದರೆ—ಹೊಲದಲ್ಲಿ ಇಬ್ಬರಿರುವರು; ಒಬ್ಬನು ತಕ್ಕೊಳ್ಳಲ್ಪಡುವನು, ಮತ್ತೊಬ್ಬನು ಡಲ್ಪಡುವನು ಎಂಬದೇ.

ಹಾದರಮಾಡುವವರೂ ಆಗಿರುವ ಉಳಿದ ಜನರಂತೆ
ನಾನಲ್ಲ, ಈ ಸುಂಕದವನಂತೆಯೂ ಅಲ್ಲ ; ಆದದರಿಂದ
12 ನಿನಗೆ ಸ್ತೋತ್ರಮಾಡುತ್ತೇನೆ. ವಾರಕ್ಕೆ ಎರಡಾವರ್ತಿ
ಉಪವಾಸಮಾಡುತ್ತೇನೆ; ನಾನು ಸಂಪಾದಿಸುವ ಎಲ್ಲಾ
ದರಲ್ಲಿಯೂ ಹತ್ತರಲ್ಲೊಂದು ಪಾಲು ಕೊಡುತ್ತೇನೆ
13 ಅಂದುಕೊಂಡನು. ಆದರೆ ಆ ಸುಂಕದವನು ದೂರ
ದಲ್ಲಿ ನಿಂತು ಆಕಾಶದ ಕಡೆಗೆ ಕಣ್ಣೆತ್ತಿ ನೋಡುವದ
ಕ್ಕೂ ಮನಸ್ಸಿಲ್ಲದೆ ಎದೆಯನ್ನು ಬಡುಕೊಳ್ಳುತ್ತಾ—
ದೇವರೇ, ಪಾಪಿಯಾದ ನನ್ನನ್ನು ಕರುಣಿಸು ಅಂದನು.
14 ಇವನು ನೀತಿವಂತನೆಂದು ನಿರ್ಣಯಿಸಲ್ಪಟ್ಟವನಾಗಿ
ತನ್ನ ಮನೆಗೆ ಹೋದನು. ಆ ಫರಿಸಾಯನು ಅಂಥವ
ನಾಗಿ ಹೋಗಲಿಲ್ಲ ಎಂದು ನಿಮಗೆ ಹೇಳುತ್ತೇನೆ.
ತನ್ನನ್ನು ಹೆಚ್ಚಿಸಿಕೊಳ್ಳುವ ಪ್ರತಿಯೊಬ್ಬನು ತಗ್ಗಿಸ
ಲ್ಪಡುವನು; ತನ್ನನ್ನು ತಗ್ಗಿಸಿಕೊಳ್ಳುವವನು ಹೆಚ್ಚಿಸ
ಲ್ಪಡುವನು ಅಂದನು.

### ಯೇಸು ಚಿಕ್ಕ ಮಕ್ಕಳನ್ನು ಆಶೀರ್ವದಿಸಿದ್ದು.

(ಮತ್ತಾ. 19. 13—15; ಮಾರ್ಕ 10. 13—16.)

15 ಕೆಲವರು ತಮ್ಮ ಕೂಸುಗಳನ್ನು ಸಹ ಯೇಸುವಿ
ನಿಂದ ಮುಟ್ಟಿಸಬೇಕೆಂದು ಆತನ ಬಳಿಗೆ ತರಲು ಶಿಷ್ಯರು
16 ಕಂಡು ಅವರನ್ನು ಗದರಿಸಿದರು. ಆದರೆ ಯೇಸು
ಆ ಕೂಸುಗಳನ್ನು ತನ್ನ ಬಳಿಗೆ ಕರತರಿಸಿ—ಮಕ್ಕಳ
ನ್ನು ನನ್ನ ಹತ್ತಿರಕ್ಕೆ ಬರಗೊಡಿಸಿರಿ; ಅವುಗಳಿಗೆ ಅಡ್ಡಿ
17 ಮಾಡಬೇಡಿರಿ; ದೇವರ ರಾಜ್ಯವು ಇಂಥವರದೇ. ನಿಮ
ಗೆ ಸತ್ಯವಾಗಿ ಹೇಳುತ್ತೇನೆ, ಯಾವನು ಶಿಶುಭಾವದಿಂದ
ದೇವರ ರಾಜ್ಯವನ್ನು ಅಂಗೀಕರಿಸುವದಿಲ್ಲವೋ ಅವನು
ಅದರಲ್ಲಿ ಸೇರುವದೇ ಇಲ್ಲ ಅಂದನು.

### ನಿತ್ಯಜೀವವನ್ನು ಹೇಗೆ ಪಡೆಯಬೇಕೆಂದು ಒಬ್ಬ ಐಶ್ವರ್ಯ ವಂತನು ಕೇಳಿದ್ದಕ್ಕೆ ಯೇಸು ಹಣದ ಭ್ರಾಂತಿಯಿಂದಾಗುವ ಕೇಡನ್ನು ತೋರಿಸಿದ್ದು.

(ಮತ್ತಾ. 19. 16—29; ಮಾರ್ಕ 10. 17—30.)

18 ಒಬ್ಬ ಅಧಿಕಾರಿಯು ಬಂದು—ಒಳ್ಳೇ ಬೋಧಕನೇ'
ನಾನು ನಿತ್ಯಜೀವಕ್ಕೆ ಬಾಧ್ಯನಾಗುವಂತೆ ಏನು ಮಾಡ
19 ಬೇಕು ಎಂದು ಆತನನ್ನು ಕೇಳಲಾಗಿ ಯೇಸು ಅವ
ನಿಗೆ—ನನ್ನನ್ನು ಒಳ್ಳೆಯವನೆಂದು ಯಾಕೆ ಹೇಳುತ್ತೀ?
ದೇವರೊಬ್ಬನೇ ಹೊರತು ಮತ್ತಾವನೂ ಒಳ್ಳೆಯವ
20 ನಲ್ಲ. ವ್ಯಭಿಚಾರ ಮಾಡಬಾರದು; ನರಹತ್ಯೆ ಮಾಡ
ಬಾರದು; ಕದಿಯ ಬಾರದು; ಸುಳ್ಳುಸಾಕ್ಷಿ ಹೇಳ
ಬಾರದು; ನಿನ್ನ ತಂದೆತಾಯಿಗಳನ್ನು ಸನ್ಮಾನಿಸಬೇಕು
ಎಂಬ ದೇವರಾಜ್ಞೆಗಳು ನಿನಗೆ ಗೊತ್ತಿವೆಯಷ್ಟೆ ಎಂದು
21 ಹೇಳಿದನು. ಅದಕ್ಕವನು—ನಾನು ಚಿಕ್ಕಂದಿನಿಂದಲೂ
ಇವೆಲ್ಲಕ್ಕೂ ಸರಿಯಾಗಿ ನಡಕೊಂಡು ಬಂದಿದ್ದೇನೆ
22 ಎಂದು ಹೇಳಲು ಯೇಸು ಅದನ್ನು ಕೇಳಿ ಅವನಿಗೆ—
ಇನ್ನೂ ನಿನಗೆ ಒಂದು ಕಡಿಮೆಯಾಗಿದೆ; ನಿನ್ನ ಬದುಕ
ನ್ನೆಲ್ಲಾ ಮಾರಿ ಬಡವರಿಗೆ ಹಂಚಿಕೊಡು; ಪರಲೋಕ
ದಲ್ಲಿ ನಿನಗೆ ಸಂಪತ್ತಿರುವದು; ನೀನು ಬಂದು ನನ್ನನ್ನು

ಹಿಂಬಾಲಿಸು ಎಂದು ಹೇಳಿದನು. ಅವನು ಬಹ
ಐಶ್ವರ್ಯವಂತನಾಗಿದ್ದದರಿಂದ ಇದನ್ನು ಕೇಳಿ ಬಹ
ವ್ಯಸನಗೊಂಡನು. ಆಗ ಯೇಸು ಅವನನ
ನೋಡಿ—ಧನವಂತರು ದೇವರ ರಾಜ್ಯದಲ್ಲಿ ಸೇರುವ
ಎಷ್ಟೋ ಕಷ್ಟ. ಐಶ್ವರ್ಯವಂತನು ದೇವರ ರಾ
ದಲ್ಲಿ ಸೇರುವದಕ್ಕಿಂತ ಒಂಟೆಯು ಸೂಜೀಕಣ್ಣಿನ
ನುಗ್ಗುವದು ಸುಲಭ ಅಂದನು. ಈ ಮಾತನ್ನು ಕೇ
ದವರು—[ಹೀಗಿದ್ದರೆ] ಯಾರಿಗೆ ರಕ್ಷಣೆಯಾದೀ
ಎಂದು ಕೇಳಲು ಆತನು—ಮನುಷ್ಯರಿಗೆ ಅಸಾ
ವಾದ ಕಾರ್ಯಗಳು ದೇವರಿಗೆ ಸಾಧ್ಯವಾಗಿವೆ ಅಂದನ
ಆಗ ಪೇತ್ರನು—ಇಗೋ, ನಾವು ನಮ್ಮ ನಮ್ಮ ಮ
ಮಾರುಗಳನ್ನು ಬಿಟ್ಟು ನಿನ್ನ ಹಿಂದೆ ಬಂದೆವು ಎಂ
ಹೇಳಲು ಆತನು ಅವರಿಗೆ—ನಿಮಗೆ ಸತ್ಯವಾ
ಹೇಳುತ್ತೇನೆ, ಯಾವನು ದೇವರ ರಾಜ್ಯದ ನಿಮಿ
ಮನೆಯನ್ನಾಗಲಿ ಹೆಂಡತಿಯನ್ನಾಗಲಿ ಅಣ್ಣತಮ್ಮಂದಿ
ನ್ನಾಗಲಿ ತಂದೆತಾಯಿಗಳನ್ನಾಗಲಿ ಮಕ್ಕಳನ್ನಾಗ
ಬಿಟ್ಟುಬಿಟ್ಟಿರುವನೋ ಅವನಿಗೆ ಈಗಿನ ಕಾಲದ
ಅನೇಕ ಪಾಲು ಹೆಚ್ಚಾದವುಗಳು ಸಿಕ್ಕೇ ಸಿಕ್ಕುತ್ತ
ಮತ್ತು ಮುಂದಣ ಲೋಕದಲ್ಲಿ ನಿತ್ಯಜೀವವು ದೊ
ಯುವದು ಎಂದು ಹೇಳಿದನು.

### ಯೇಸು ತನ್ನ ಮರಣ ಪುನರುತ್ಥಾನಗಳನ್ನು ಮೂರನೆಯ ಸಾ ಮುಂತಿಳಿಸಿದ್ದು.

(ಮತ್ತಾ. 20. 18—19; ಮಾರ್ಕ 10. 32—34.)

ಆತನು ತನ್ನ ಹನ್ನೆರಡು ಮಂದಿ ಶಿಷ್ಯರನ್ನು ಕರೆದ
ಕೊಂಡು ಅವರಿಗೆ—ನೋಡಿರಿ, ನಾವು ಯೆರೂಸಲ
ಮಿಗೆ ಹೋಗುತ್ತಾ ಇದ್ದೇವೆ, ಮತ್ತು ಮನುಷ್ಯಕುಮ
ರನ ವಿಷಯದಲ್ಲಿ ಪ್ರವಾದಿಗಳು ಬರೆದದ್ದೆಲ್ಲಾ ಅ
ನಲ್ಲಿ ನೆರವೇರುವದು. ಹೇಗಂದರೆ—ಅವನನ್ನು ಅನ್ಯ
ಕೈಗೆ ಒಪ್ಪಿಸುವರು, ಇವರು ಅವನನ್ನು ಅಪಹಾಸ
ಮಾಡುವರು, ಬೈಯುವರು, ಉಗುಳುವರು, ಕೊರ
ಗಳಿಂದ ಹೊಡೆಯುವರು, ಕೊಂದುಹಾಕುವರು; ಮತ್ತು
ಮೂರನೆಯ ದಿನದಲ್ಲಿ ಅವನು ಜೀವಿತನಾಗಿ ಎದ್ದು
ಬರುವನು ಎಂದು ಹೇಳಿದನು. ಅವರು ಈ ಸಂಗತಿ
ಳಲ್ಲಿ ಒಂದನ್ನಾದರೂ ಗ್ರಹಿಸಲಿಲ್ಲ, ಈ ಮಾತುಗಳ
ಅವರಿಗೆ ಮರೆಯಾಗಿದ್ದವು, ಅವುಗಳ ಅರ್ಥ ಅವರಿ
ಗೊತ್ತಾಗಲಿಲ್ಲ.

### ಒಬ್ಬ ಕುರುಡನನ್ನು ಸ್ವಸ್ಥಮಾಡಿದ್ದು.

(ಮತ್ತಾ. 20. 29—34; ಮಾರ್ಕ 10. 46—52.)

ಆತನು ಯೆರಿಕೋವಿನ ಸಮೀಪಕ್ಕೆ ಬಂದಾಗ
ದಾರಿಯ ಮಗ್ಗುಲಲ್ಲಿ ಕೂತು ಭಿಕ್ಷೆಬೇಡುತ್ತಿದ್ದ ಒಬ್ಬ
ಕುರುಡನು ಗುಂಪಾಗಿ ಹೋಗುತ್ತಿದ್ದ ಜನರ ಶಬ್ದವನ್ನು
ಕೇಳಿ ಇದೇನು ಎಂದು ವಿಚಾರಿಸಿದನು. ಅವರು ಅವ
ನಿಗೆ—ನಜರೇತಿನ ಯೇಸು ಈ ಮಾರ್ಗವಾಗಿ ಹೋಗು
ತ್ತಿದ್ದಾನೆಂದು ತಿಳಿಸಿದಾಗ ಅವನು—ಯೇಸುವೇ
ದಾವೀದನ ಕುಮಾರನೇ, ನನ್ನನ್ನು ಕರುಣಿಸು ಎಂದು

9 ಕೂಗಿ ಕೇಳಿಕೊಂಡನು. ಮುಂದೆ ಹೋಗುತ್ತಿದ್ದವರು
ಸುಮ್ಮನಿರು ಎಂದು ಅವನನ್ನು ಗದರಿಸಲು ಅವನು—
ದಾವೀದನ ಕುಮಾರನೇ, ನನ್ನನ್ನು ಕರುಣಿಸು ಎಂದು
0 ಮತ್ತಷ್ಟು ಕೂಗಿಕೊಂಡನು. ಆಗ ಯೇಸು ನಿಂತು
ಅವನನ್ನು ತನ್ನ ಬಳಿಗೆ ಕರತರುವದಕ್ಕೆ ಅಪ್ಪಣೆಕೊಟ್ಟ
ನು. ಅವನು ಹತ್ತಿರಕ್ಕೆ ಬಂದನು. ಆತನು ಅವ
ನನ್ನು—ನಾನು ನಿನಗೆ ಏನು ಮಾಡಬೇಕೆಂದು ಕೋರು
ತ್ತೀ ಎಂದು ಕೇಳಲು ಅವನು—ನನಗೆ ಕಣ್ಣು ಬರು
2 ವಂತೆ ಮಾಡಬೇಕು, ಸ್ವಾಮೀ ಅಂದನು. ಯೇಸು
ಅವನಿಗೆ— ನಿನಗೆ ಕಣ್ಣು ಬರಲಿ; ನಿನ್ನ ನಂಬಿಕೆಯೇ
3 ನಿನ್ನನ್ನು ಸ್ವಸ್ಥಮಾಡಿ ಅದೆ ಎಂದು ಹೇಳಿದನು. ತಕ್ಷ
ಣವೇ ಅವನಿಗೆ ಕಣ್ಣು ಬಂದವು; ಅವನು ದೇವರನ್ನು
ಕೊಂಡಾಡುತ್ತಾ ಆತನ ಹಿಂದೆ ಹೋದನು. ಜನರೆಲ್ಲರು
ನಡೆದ ಸಂಗತಿಯನ್ನು ನೋಡಿ ದೇವರನ್ನು ಸ್ತುತಿಸಿದರು.

### ಯೇಸು ಸುಂಕದವನಾದ ಜಕ್ಕಾಯನ ಮನೆಗೆ ಹೋದದ್ದು.

**19** ಆತನು ಯೆರಿಕೋ ಊರನ್ನು ಹೊಕ್ಕು ದಾಟಿ
2 ಹೋಗುತ್ತಿದ್ದನು. ಅಲ್ಲಿ ಜಕ್ಕಾಯನೆಂಬ ಹೆಸರುಳ್ಳ
ಒಬ್ಬ ಮನುಷ್ಯನಿದ್ದನು; ಅವನು ಸುಂಕದ ಗುತ್ತಿಗೆ
ದಾರನು ಮತ್ತು ಐಶ್ವರ್ಯವಂತನು. ಅವನು ಯೇಸು
ಎಂಥವನೆಂದು ನೋಡಲಪೇಕ್ಷಿಸಿದರೂ ತಾನು ಗಿಡ್ಡನಾ
ಗಿದ್ದದರಿಂದ ಜನರ ಗುಂಪಿನ ನಿಮಿತ್ತ ನೋಡಲಾರದೆ
ಹೋದನು. ಆದಕಾರಣ ಆತನನ್ನು ನೋಡುವದಕ್ಕಾಗಿ
ಮುಂದೆ ಓಡಿಹೋಗಿ ಆತನು ಬರುತ್ತಿರುವ ಮಾರ್ಗ
ದಲ್ಲಿದ್ದ ಅಲದ ಮರವನ್ನು ಹತ್ತಿದನು. ಯೇಸು
ಅಲ್ಲಿಗೆ ಬಂದು ಮೇಲಕ್ಕೆ ನೋಡಿ—ಜಕ್ಕಾಯನೇ,
ತಟ್ಟನೆ ಇಳಿದು ಬಾ, ನಾನು ಈಹೊತ್ತು ನಿನ್ನ ಮನೆ
ಯಲ್ಲಿ ಇಳುಕೊಳ್ಳಬೇಕು ಎಂದು ಅವನಿಗೆ ಹೇಳಲು
ಅವನು ತಟ್ಟನೆ ಇಳಿದು ಬಂದು ಆತನನ್ನು ಸಂತೋಷ
ದಿಂದ ಸೇರಿಸಿಕೊಂಡನು. ಇದನ್ನು ನೋಡಿದವರೆಲ್ಲ
ರು—ಈತನು ಪಾಪಿಯಾಗಿರುವವನ ಬಳಿಯಲ್ಲಿ ಇಳು
ಕೊಳ್ಳುವದಕ್ಕೆ ಹೋಗಿದ್ದಾನೆ ಎಂದು ಗುಣುಗುಟ್ಟಿ
ದರು. ಆದರೆ ಜಕ್ಕಾಯನು ನಿಂತುಕೊಂಡು ಸ್ವಾ
ಮಿಗೆ—ಸ್ವಾಮೀ, ನೋಡು ನನ್ನ ಆಸ್ತಿಯಲ್ಲಿ ಅರ್ಧ
ವನ್ನು ಬಡವರಿಗೆ ಕೊಡುತ್ತೇನೆ; ಮತ್ತು ನಾನು ಅನ್ಯಾ
ಯವಾಗಿ ಯಾರಿಂದ ಏನಾದರೂ ಎಳಕೊಂಡದ್ದೇಯಾ
ದರೆ ನಾಲ್ಕರಷ್ಟು ಹಿಂದಕ್ಕೆ ಕೊಡುತ್ತೇನೆ ಎಂದು
ಹೇಳಿದನು. ಇದನ್ನು ಕೇಳಿ ಯೇಸು—ಈಹೊತ್ತು ಈ
ಮನೆಗೆ ರಕ್ಷಣೆಯಾಯಿತು; ಇವನು ಸಹ ಅಬ್ರಹಾ
ಮನ ವಂಶಸ್ಥನಲ್ಲವೇ. ಮನುಷ್ಯಕುಮಾರನು ಕೆಟ್ಟು
ಹೋಗಿರುವದನ್ನು ಹುಡುಕಿ ರಕ್ಷಿಸುವದಕ್ಕೆ ಬಂದನು
ಎಂದು ಹೇಳಿದನು.

### ಹತ್ತು ಮೊಹರಿಗಳ ವಿಷಯವಾದ ಸಾಮ್ಯ.
(ಮತ್ತಾ. 25. 14—30.)

ಅವರು ಈ ಮಾತುಗಳನ್ನು ಕೇಳುತ್ತಿರಲಾಗಿ
ಯೇಸು ತಾನು ಯೆರೂಸಲೇಮಿಗೆ ಸಮೀಪವಾಗಿದ್ದದ
ರಿಂದಲೂ ದೇವರ ರಾಜ್ಯವು ಕೂಡಲೆ ಪ್ರತ್ಯಕ್ಷವಾಗುವ
ಹಾಗಿದೆ ಎಂದು ಅವರು ಭಾವಿಸಿದ್ದದರಿಂದಲೂ ಇನ್ನೂ
ಒಂದು ಸಾಮ್ಯವನ್ನು ಹೇಳಿದನು. ಅದೇನಂದರೆ— 12
ಶ್ರೀಮಂತನಾದ ಒಬ್ಬಾನೊಬ್ಬ ಮನುಷ್ಯನು ತಾನು
ರಾಜ್ಯಾಧಿಕಾರವನ್ನು ಪಡೆದುಕೊಂಡು ಹಿಂತಿರುಗಿ ಬರ
ಬೇಕೆಂದು ದೂರದೇಶಕ್ಕೆ ಹೊರಟನು. ಹೊರಡುವಾಗ 13
ತನ್ನ ಆಳುಗಳಲ್ಲಿ ಹತ್ತು ಮಂದಿಯನ್ನು ಕರೆದು ಅವ
ರಿಗೆ ಹತ್ತು ಮೊಹರಿಗಳನ್ನು ಕೊಟ್ಟು—ನಾನು ಬರುವ
ತನಕ ವ್ಯಾಪಾರಮಾಡಿಕೊಂಡಿರ್ರಿ ಎಂದು ಹೇಳಿ ಹೋ
ದನು. ಆದರೆ ಅವನ ಪಟ್ಟಣದ ನಿವಾಸಿಗಳು ಅವನನ್ನು 14
ದ್ವೇಷಿಸಿ ಅವನ ಹಿಂದೆ ರಾಯಭಾರಿಗಳನ್ನು ಕಳುಹಿಸಿ
ಇವನು ನಮ್ಮ ಮೇಲೆ ದೊರೆತನಮಾಡುವದು ನಮಗೆ
ಇಷ್ಟವಿಲ್ಲ ಎಂದು ಹೇಳಿಸಿದರು. ಆ ಮೇಲೆ ಅವನು 15
ರಾಜ್ಯಾಧಿಕಾರವನ್ನು ಪಡಕೊಂಡು ಹಿಂತಿರುಗಿ ಬಂದು
ತಾನು ಹಣವನ್ನು ಕೊಟ್ಟಿದ್ದ ಆಳುಗಳು ವ್ಯಾಪಾರದಿಂದ
ಎಷ್ಟೆಷ್ಟು ಲಾಭ ಸಂಪಾದಿಸಿಕೊಂಡಿದ್ದಾರೆಂದು ತಿಳು
ಕೊಳ್ಳುವದಕ್ಕಾಗಿ ಅವರನ್ನು ತನ್ನ ಬಳಿಗೆ ಕರಿಸಿದನು.
ಮೊದಲನೆಯವನು ಆತನ ಮುಂದೆ ಬಂದು—ದೊರೆ 16
ಯೇ, ನೀನು ಕೊಟ್ಟ ಮೊಹರಿಯಿಂದ ಹತ್ತು ಮೊಹರಿ
ಗಳು ಸಂಪಾದನೆಯಾದವು ಅನ್ನಲು ಅವನು ಅವನಿಗೆ— 17
ಭಲಾ! ನೀನು ಒಳ್ಳೇ ಆಳು; ನೀನು ಬಹು ಸ್ವಲ್ಪವಾದ
ದ್ದರಲ್ಲಿ ನಂಬಿಕೆಯುಳ್ಳವನಾಗಿದ್ದದರಿಂದ ಹತ್ತು
ಗ್ರಾಮಗಳ ಮೇಲೆ ಅಧಿಕಾರಿಯಾಗಿರು ಎಂದು ಹೇಳಿ
ದನು. ಎರಡನೆಯವನು ಬಂದು—ದೊರೆಯೇ, ನೀನು 18
ಕೊಟ್ಟ ಮೊಹರಿಯಿಂದ ಐದು ಮೊಹರಿಗಳು ದೊರಕಿ
ದವು ಅನ್ನಲು ಅವನು ಇವನಿಗೆ—ನೀನು ಸಹ ಐದು 19
ಗ್ರಾಮಗಳ ಮೇಲಿರು ಎಂದು ಹೇಳಿದನು. ಬಳಿಕ 20
ಮತ್ತೊಬ್ಬನು ಬಂದು—ದೊರೆಯೇ, ಇಗೋ ನೀನು
ಕೊಟ್ಟ ಮೊಹರಿ. ನೀನು ಇಡದೆಯಿರುವದನ್ನು ಎತ್ತಿ 21
ಕೊಂಡು ಹೋಗುವ ಬಿತ್ತದೆಯಿರುವದನ್ನು ಕೊ
ಯ್ಯುವ ಕಠಿನ ಮನುಷ್ಯನು ಎಂದು ನಿನಗೆ ಹೆದರಿ
ಕೊಂಡು ಇದನ್ನು ವಸ್ತ್ರದಲ್ಲಿ ಕಟ್ಟಿ ಇಟ್ಟುಕೊಂಡೆನು
ಅಂದನು. ಅದಕ್ಕೆ ಅವನು—ನೀನು ಕೆಟ್ಟ ಆಳು, ನಿನ್ನ 22
ಮಾತಿನ ಮೇಲೆಯೇ ನಿನಗೆ ತೀರ್ಪುಮಾಡುತ್ತೇನೆ.
ನಾನು ಇಡದೆಯಿರುವದನ್ನು ಎತ್ತಿಕೊಂಡು ಹೋಗುವ
ಬಿತ್ತದೆಯಿರುವದನ್ನು ಕೊಯ್ಯುವ ಕಠಿನ ಮನು
ಷ್ಯನು ಎಂದು ತಿಳಿದಿಯಾ? ಹಾಗಾದರೆ ನೀನು ನನ್ನ 23
ಹಣವನ್ನು ಸಾಹುಕಾರನ ಕೈಯಲ್ಲಿ ಯಾಕೆ ಕೊಡ
ಲಿಲ್ಲ? ಆ ಮೇಲೆ ನಾನು ಬಂದು ಅದನ್ನು ಬಡ್ಡಿ ಸಹಿತ
ತೆಗೆದುಕೊಳ್ಳುತ್ತಿದ್ದೆನು ಎಂದು ಹೇಳಿ ಹತ್ತಿರ ನಿಂತಿದ್ದ 24
ವರಿಗೆ—ಆ ಮೊಹರಿಯನ್ನು ಇವನಿಂದ ತೆಗೆದುಕೊಂಡು
ಹತ್ತು ಮೊಹರಿಗಳುಳ್ಳವನಿಗೆ ಕೊಡಿರಿ ಎಂದು ಹೇಳಿ
ದನು. ಅವರು—ದೊರೆಯೇ, ಹತ್ತು ಮೊಹರಿಗಳು 25
ಅವನಲ್ಲಿ ಅವೆಯಲ್ಲಾ ಎಂದು ಅವನಿಗೆ ಹೇಳಿದರು.
ಅದಕ್ಕವನು—ಇದ್ದವರಿಗೆಲ್ಲಾ ಕೊಡಲ್ಪಡುವದು, 26
ಇಲ್ಲದವನ ಕಡೆಯಿಂದ ಇದ್ದದ್ದೂ ತೆಗೆಯಲ್ಪಡುವದು
ಎಂದು ನಾನು ನಿಮಗೆ ಹೇಳುತ್ತೇನೆ; ಮತ್ತು ತಮ್ಮ 27
ಮೇಲೆ ನಾನು ದೊರೆತನ ಮಾಡುವದು ಇಷ್ಟವಿಲ್ಲವೆಂದು
ಹೇಳಿದ ಆ ನನ್ನ ವೈರಿಗಳನ್ನು ಇಲ್ಲಿಗೆ ತಂದು ನನ್ನ
ಮುಂದೆ ಸಂಹಾರಮಾಡಬೇಕು ಅಂದನು.

ಯೇಸು ಅರಸನಂತೆ ಯೆರೂಸಲೇಮಿಗೆ ಪ್ರವೇಶಮಾಡಿದ್ದು.
ದೇವಾಲಯದಲ್ಲಿದ್ದ ವ್ಯಾಪಾರಸ್ಥರನ್ನು ಹೊರಡಿಸಿದ್ದು.
(ಮತ್ತಾ. 21. 1—16; ಮಾರ್ಕ 11. 1—18;
ಯೋಹಾ 12. 12—16.)

28 ಆತನು ಈ ಮಾತುಗಳನ್ನು ಹೇಳಿದ ಮೇಲೆ ಗಟ್ಟಾ
ಹತ್ತಿ ಯೆರೂಸಲೇಮಿಗೆ ಮುಂದೆಮುಂದೆ ಹೋದನು.
29 ಆ ಮೇಲೆ ಆತನು ಎಣ್ಣೇಮರಗಳ ಗುಡ್ಡ ಎನಿಸಿ
ಕೊಳ್ಳುವ ಗುಡ್ಡದ ಬಳಿಯಲ್ಲಿರುವ ಬೇತ್ಪಗೆಗೂ
ಬೇಥಾನ್ಯಕ್ಕೂ ಸಮೀಪಿಸಿದಾಗ ಶಿಷ್ಯರಲ್ಲಿ ಇಬ್ಬರನ್ನು
30 ಕರೆದು — ನಿಮ್ಮೆದುರಿಗಿರುವ ಹಳ್ಳಿಗೆ ಹೋಗಿರಿ; ಅದ
ರೊಳಗೆ ಸೇರುತ್ತಿರುವಾಗಲೇ ಅಲ್ಲಿ ಕಟ್ಟಿರುವ ಒಂದು
ಕತ್ತೇಮರಿಯನ್ನು ಕಾಣುವಿರಿ; ಇದು ವರೆಗೆ ಅದರ
ಮೇಲೆ ಯಾರೂ ಹತ್ತಿಲ್ಲ; ಅದನ್ನು ಬಿಚ್ಚಿ ಹಿಡು
31 ಕೊಂಡು ಬನ್ನಿರಿ. ಯಾವನಾದರೂ ನಿಮ್ಮನ್ನು —
ಯಾಕೆ ಬಿಚ್ಚುತ್ತೀರಿ ಎಂದು ಕೇಳಿದರೆ ಇದು ಸ್ವಾಮಿ
ಯವರಿಗೆ ಬೇಕಾಗಿದೆ ಅನ್ನಿರಿ ಎಂದು ಹೇಳಿಕಳುಹಿಸಿ
32 ದನು. ಕಳುಹಿಸಲ್ಪಟ್ಟವರು ಹೋಗಿ ಆತನು ತಮಗೆ
33 ಹೇಳಿದಂತೆಯೇ ಕಂಡರು. ಅವರು ಆ ಕತ್ತೇಮರಿ
ಯನ್ನು ಬಿಚ್ಚುತ್ತಿರುವಾಗ ಅದರ ಯಜಮಾನರು—
ಈ ಮರಿಯನ್ನು ಯಾಕೆ ಬಿಚ್ಚುತ್ತೀರಿ ಎಂದು ಅವ
34 ರನ್ನು ಕೇಳಿದ್ದಕ್ಕೆ ಅವರು — ಇದು ಸ್ವಾಮಿಯವರಿಗೆ
35 ಬೇಕಾಗಿದೆ ಎಂದು ಹೇಳಿದರು. ಅದನ್ನು ಯೇಸುವಿನ
ಬಳಿಗೆ ತಂದು ತಮ್ಮ ಬಟ್ಟೆಗಳನ್ನು ಆ ಕತ್ತೇಮರಿಯ
36 ಮೇಲೆ ಹಾಕಿ ಯೇಸುವನ್ನು ಕೂಡ್ರಿಸಿದರು. ಆತನು
ಹೋಗುತ್ತಿರುವಾಗ ಅವರು ತಮ್ಮ ಬಟ್ಟೆಗಳನ್ನು ದಾರಿ
37 ಯಲ್ಲಿ ಹಾಸಿದರು. ಆತನು ಪಟ್ಟಣವನ್ನು ಸಮೀಪಿಸಿ
ಎಣ್ಣೇಮರಗಳ ಗುಡ್ಡದಿಂದ ಇಳಿಯುವ ಸ್ಥಳಕ್ಕೆ
ಬಂದಾಗ ಶಿಷ್ಯಮಂಡಲಿಯವರೆಲ್ಲಾ ಸಂತೋಷಪಡುತ್ತಾ
ತಾವು ಕಂಡಿದ್ದ ಎಲ್ಲಾ ಮಹತ್ಕಾರ್ಯಗಳ ವಿಷಯ
ದಲ್ಲಿ —
38 ಕರ್ತನ ಹೆಸರಿನಲ್ಲಿ ಬರುವ ಅರಸನಿಗೆ ಆಶೀ
ರ್ವಾದ,
ಪರಲೋಕದಲ್ಲಿ ಮಂಗಳ,
ಮೇಲಣಲೋಕಗಳಲ್ಲಿ ಮಹಿಮೆ
ಎಂದು ಮಹಾ ಶಬ್ದದಿಂದ ದೇವರನ್ನು ಕೊಂಡಾಡುವ
39 ದಕ್ಕೆ ತೊಡಗಿದರು. ಜನರ ಗುಂಪಿನೊಳಗಿದ್ದ ಫರಿಸಾ
ಯರಲ್ಲಿ ಕೆಲವರು ಆತನಿಗೆ— ಬೋಧಕನೇ, ನಿನ್ನ ಶಿಷ್ಯ
40 ರನ್ನು ಗದರಿಸು ಎಂದು ಹೇಳಿದ್ದಕ್ಕೆ ಆತನು — ಇವರು
ಸುಮ್ಮನಾದರೆ ಈ ಕಲ್ಲುಗಳೇ ಕೂಗುವವು ಎಂದು
ನಿಮಗೆ ಹೇಳುತ್ತೇನೆ ಅಂದನು.
41 ತರುವಾಯ ಆತನು ಸಮೀಪಕ್ಕೆ ಬಂದಾಗ ಪಟ್ಟಣ
42 ವನ್ನು ನೋಡಿ ಅದರ ವಿಷಯವಾಗಿ ಅತ್ತು — ನೀನಾ
ದರೂ 1)ಸಮಾಧಾನಕ್ಕೆ ಬೇಕಾದದ್ದನ್ನು ಇದೇ ದಿನ
ದಲ್ಲಿ ತಿಳಿದುಕೊಂಡರೆ ಎಷ್ಟೋ ಒಳ್ಳೇದು. ಆದರೆ ಈಗ
43-44 ಅದು ನಿನ್ನ ಕಣ್ಣಿಗೆ ಮರೆಯಾಗಿದೆ. ದೇವರು ನಿನಗೆ
ದರ್ಶನಕೊಟ್ಟ ಸಮಯವನ್ನು ನೀನು ತಿಳುಕೊಳ್ಳ
ಲಿಲ್ಲವಾದದರಿಂದ ನಿನ್ನ ವೈರಿಗಳು ಒಡ್ಡುಕಟ್ಟಿ ನಿ
ಸುತ್ತಲೂ ಮುತ್ತಿಗೆ ಹಾಕಿ ಎಲ್ಲಾ ಕಡೆಗಳಲ್ಲಿಯ
ನಿನ್ನನ್ನು ಬಂದುಮಾಡಿ ನಿನ್ನನ್ನೂ ನಿನ್ನೊಳಗಿರು
ನಿನ್ನ ಜನರನ್ನೂ ನಿರ್ಮೂಲಮಾಡಿ ನಿನ್ನಲ್ಲಿ ಕಲ್ಲಿ
ಮೇಲೆ ಕಲ್ಲು ನಿಲ್ಲದಂತೆ ಮಾಡುವ ದಿವಸಗಳು ನಿ
ಮೇಲೆ ಬರುವವು ಅಂದನು.
ಬಳಿಕ ಆತನು ದೇವಾಲಯಕ್ಕೆ ಹೋಗಿ ಮಾ
ವವರನ್ನು ಹೊರಡಿಸಿಬಿಡುವದಕ್ಕೆ ಪ್ರಾರಂಭಿಸಿ ಅ
ರಿಗೆ— ನನ್ನ ಆಲಯವು ಪ್ರಾರ್ಥನಾಲಯವಾಗಿ
ವದು ಎಂದು ಬರೆದದೆಯಲ್ಲಾ; ಆದರೆ ನೀವು ಅದನ
ಕಳ್ಳರ ಗವಿ ಮಾಡಿದ್ದೀರಿ ಎಂದು ಹೇಳಿದನು.
ಮತ್ತು ಆತನು ದಿನಾಲು ದೇವಾಲಯದಲ್ಲಿ ಉ
ದೇಶಮಾಡುತ್ತಿದ್ದನು. ಅಷ್ಟರಲ್ಲಿ ಮಹಾಯಾಜಕರ
ಶಾಸ್ತ್ರಿಗಳೂ ಪ್ರಜೆಗಳಲ್ಲಿ ಮುಖ್ಯಸ್ಥರೂ ಆತನನ
ಕೊಲ್ಲುವದಕ್ಕೆ ಸಂದರ್ಭನೋಡುತ್ತಿದ್ದರು. ಆದ
ಜನರೆಲ್ಲರು ಆತನನ್ನು ಅಂಟಿಕೊಂಡು ಉಪದೇಶವನ
ಗಮನಿಸಿ ಕೇಳುತ್ತಿದ್ದದರಿಂದ ಏನು ಮಾಡಬೇಕೋ
ತೋರಲಿಲ್ಲ.

ಶಾಸ್ತ್ರಿಗಳು ಯೇಸುವಿನ ಅಧಿಕಾರವನ್ನು ವಿಚಾರಿಸಿದಾಗ ಆತ
ತಕ್ಕ ಉತ್ತರಕೊಟ್ಟು ಅವರು ಮಾಡಿದ ದೇವದ್ರೋಹವನ್ನು
ಸಾಮ್ಯಗಳಿಂದ ಸೂಚಿಸಿದ್ದು.
(ಮತ್ತಾ. 21. 23—46; ಮಾರ್ಕ 11. 27—12. 12.)

ಆ ದಿವಸಗಳೊಳಗೆ ಒಂದು ದಿನ ಆತನು
ದೇವಾಲಯದಲ್ಲಿ ಜನರಿಗೆ ಉಪದೇಶಮಾಡುತ್ತಾ
ಸುವಾರ್ತೆಯನ್ನು ಸಾರುತ್ತಿರಲಾಗಿ ಮಹಾಯಾ
ಕರೂ ಶಾಸ್ತ್ರಿಗಳೂ ಸಭೆಯ ಹಿರಿಯರನ್ನು ಕೂ
ಕೊಂಡು ಫಕ್ಕನೆ ಬಂದು — ನೀನು ಯಾವ ಅಧಿಕಾ
ದಿಂದ ಇದನ್ನೆಲ್ಲಾ ಮಾಡುತ್ತೀ? ಈ ಅಧಿಕಾರವನ
ನಿನಗೆ ಯಾರು ಕೊಟ್ಟರು, ನಮಗೆ ಹೇಳು ಎಂದ
ಆತನನ್ನು ಕೇಳಲು ಆತನು ಅವರಿಗೆ— ನಾನು ಸ
ನಿಮ್ಮನ್ನು ಒಂದು ಮಾತು ಕೇಳುತ್ತೇನೆ, ನನ
ಹೇಳಿರಿ. ದೀಕ್ಷಾಸ್ನಾನಮಾಡಿಸುವ ಅಧಿಕಾರವು ಯೊ
ಹಾನನಿಗೆ ಪರಲೋಕದಿಂದ ಬಂತೋ ಮನುಷ್ಯರಿಂ
ಬಂತೋ ಎಂದು ಅವರನ್ನು ಕೇಳಿದನು. ಆಗ ಅವರು—
ಪರಲೋಕದಿಂದ ಬಂತೆಂದು ನಾವು ಹೇಳಿದರೆ ನೀ
ಅವನನ್ನು ಯಾಕೆ ನಂಬಲಿಲ್ಲ ಅಂದಾನು; ಮನುಷ
ರಿಂದ ಬಂತೆಂದು ಹೇಳಿದರೆ ಜನರೆಲ್ಲರೂ ಯೋಹಾ
ನನ್ನು ಪ್ರವಾದಿಯೆಂದು ನಂಬಿರುವದರಿಂದ ಅವರ
ನಮ್ಮನ್ನು ಕಲ್ಲೆಸೆದು ಕೊಂದಾರು ಎಂಬದಾಗಿ ತಮ
ತಮ್ಮೊಳಗೆ ಮಾತಾಡಿಕೊಂಡು ಅದು ಎಲ್ಲಿಂದ ಬಂತೋ
ನಾವರಿಯೆವು ಎಂದು ಉತ್ತರಕೊಟ್ಟರು. ಆಗ ಯೇಸ
ಅವರಿಗೆ— ಇದನ್ನೆಲ್ಲಾ ಯಾವ ಅಧಿಕಾರದಿಂದ ಮಾಡ
ತ್ತೇನೋ ಅದನ್ನು ನಾನೂ ನಿಮಗೆ ಹೇಳುವದಿ
ಎಂದು ಹೇಳಿದನು.
ಆಗ ಆತನು ಜನರಿಗೆ ಒಂದು ಸಾಮ್ಯವನ್ನು ಹೇಳ
ವದಕ್ಕೆ ತೊಡಗಿದನು. ಆದೇನಂದರೆ— ಒಬ್ಬ ಮನ

1) ಅಥವಾ, ಸುಕ್ಷೇಮಕ್ಕೆ.

ಷ್ಯನು ಒಂದು ದ್ರಾಕ್ಷೆಯತೋಟವನ್ನು ಮಾಡಿ
ಅದನ್ನು ಒಕ್ಕಲಿಗರಿಗೆ ವಾರಕ್ಕೆ ಕೊಟ್ಟು ಬೇರೊಂದು
0 ದೇಶಕ್ಕೆ ಹೋಗಿ ಅಲ್ಲಿ ಬಹುಕಾಲ ಇದ್ದನು. ಫಲ
ಕಾಲ ಬಂದಾಗ ದ್ರಾಕ್ಷೆಯತೋಟದ ಹುಟ್ಟುವಳಿಯ
ಪಾಲನ್ನು ಈಸಿಕೊಳ್ಳುವದಕ್ಕಾಗಿ ಒಬ್ಬ ಆಳನ್ನು ಒಕ್ಕಲಿ
ಗರ ಬಳಿಗೆ ಕಳುಹಿಸಿದನು. ಆದರೆ ಆ ಒಕ್ಕಲಿಗರು
1 ಅವನನ್ನು ಹೊಡೆದು ಬರಿಗೈಲಿ ಕಳುಹಿಸಿಬಿಟ್ಟರು. ಆ
ಧಣಿಯು ಬೇರೊಬ್ಬ ಆಳನ್ನು ಕಳುಹಿಸಲಾಗಿ ಅವರು
ಅವನನ್ನೂ ಹೊಡೆದು ಅವಮಾನಪಡಿಸಿ ಬರಿಗೈಲಿ ಕಳು
2 ಹಿಸಿಬಿಟ್ಟರು. ಆ ಮೇಲೆ ಮೂರನೆಯವನನ್ನು ಕಳು
ಹಿಸಲು ಅವರು ಅವನನ್ನೂ ಗಾಯವಾಗುವಷ್ಟು
3 ಹೊಡೆದು ಹೊರಕ್ಕೆ ಅಟ್ಟಿದರು. ಆಗ ಆ ದ್ರಾಕ್ಷೆಯ
ತೋಟದ ಧಣಿಯು — ನಾನೇನು ಮಾಡಲಿ? ನನ್ನ
ಮುದ್ದುಮಗನನ್ನು ಕಳುಹಿಸುತ್ತೇನೆ, ಒಂದು ವೇಳೆ
ಅವನಿಗಾದರೂ ಮರ್ಯಾದೆ ತೋರಿಸಾರು ಅಂದು
4 ಕೊಂಡನು. ಆದರೆ [ಕಳುಹಿಸಿದಾಗ] ಆ ಒಕ್ಕಲಿಗರು
ಅವನನ್ನು ಕಂಡು — ಇವನೇ ಬಾಧ್ಯಸ್ಥನು; ಇವನನ್ನು
ಕೊಂದುಹಾಕೋಣ, ಇವನ ಸ್ವಾಸ್ತ್ಯ ನಮ್ಮದಾಗಲಿ
ಎಂದು ಒಬ್ಬರಸಂಗಡಲೊಬ್ಬರು ಮಾತಾಡಿಕೊಂಡು
5 ಅವನನ್ನು ದ್ರಾಕ್ಷೆಯತೋಟದಿಂದ ಹೊರಕ್ಕೆ ದೊಬ್ಬಿ
ಕೊಂದುಹಾಕಿದರು. ಹಾಗಾದರೆ ದ್ರಾಕ್ಷೆಯತೋಟದ
6 ಧಣಿಯು ಅವರಿಗೆ ಏನು ಮಾಡುವನು? ಅವನು ಬಂದು
ಆ ಒಕ್ಕಲಿಗರನ್ನು ಸಂಹರಿಸಿ ತನ್ನ ತೋಟವನ್ನು
ಬೇರೆ ಜನರಿಗೆ ಮಾಡುವದಕ್ಕೆ ಕೊಡುವನು ಅಂದನು.
7 ಇದನ್ನು ಜನರು ಕೇಳಿ — ಹಾಗಾಗಬಾರದು ಅಂದರು.
ಆದರೆ ಆತನು ಅವರನ್ನು ದೃಷ್ಟಿಸಿನೋಡಿ — ಹಾಗಾದರೆ

ಮನೇಕಟ್ಟುವವರು ಬೇಡವೆಂದು ಬಿಟ್ಟ ಕಲ್ಲೇ
ಮುಖ್ಯವಾದ ಮೂಲೆಗಲ್ಲಾಯಿತು

8 ಎಂದು ಬರೆದಿರುವ ಮಾತೇನು? ಈ ಕಲ್ಲಿನ ಮೇಲೆ
ಬೀಳುವ ಪ್ರತಿಯೊಬ್ಬನು ತುಂಡುತುಂಡಾಗುವನು;
ಇದು ಯಾರ ಮೇಲೆ ಬೀಳುವದೋ ಅವನನ್ನು ಪುಡಿ
ಪುಡಿ ಮಾಡುವದು ಅಂದನು.
9 ಶಾಸ್ತ್ರಿಗಳೂ ಮಹಾಯಾಜಕರೂ ಈ ಮಾತು
ಗಳನ್ನು ಕೇಳಿ ತಮ್ಮನ್ನೇ ಕುರಿತು ಈ ಸಾಮ್ಯವನ್ನು
ಹೇಳಿದನು ಎಂದು ತಿಳುಕೊಂಡು ಅದೇ ಗಳಿಗೆಯಲ್ಲಿ
ಆತನನ್ನು ಹಿಡಿಯುವದಕ್ಕೆ ಸಂದರ್ಭನೋಡಿದರು;
ಆದರೆ ಜನರಿಗೆ ಭಯಪಟ್ಟರು.

### ವಿರೋಧಿಗಳು ಯೇಸುವನ್ನು ಮಾತಿನಲ್ಲಿ ಸಿಕ್ಕಿಸುವದಕ್ಕೆ ಪ್ರಯತ್ನಮಾಡಿ ಸೋತುಹೋದದ್ದು.

(ಮತ್ತಾ. 22. 15—23. 7; ಮಾರ್ಕ 12. 13—40.)

0 ಆ ಮೇಲೆ ಅವರು ಯೇಸುವನ್ನು ಅಧಿಪತಿಯ
ವಶಕ್ಕೂ ಅಧಿಕಾರಕ್ಕೂ ಒಪ್ಪಿಸಬೇಕೆಂದು ಹೊಂಚಿ
ನೋಡುವವರಾಗಿ ನೀತಿವಂತರಂತೆ ನಟಿಸುತ್ತಿರುವ
ಗೂಢಚಾರರನ್ನು ಆತನ ಮಾತಿನಲ್ಲಿ ಏನನ್ನಾದರೂ
ಹಿಡಿಯುವದಕ್ಕೆ [ಆತನ ಬಳಿಗೆ] ಕಳುಹಿಸಿದರು.
1 ಇವರು — ಬೋಧಕನೇ, ನೀನು ಸರಿಯಾಗಿ ಮಾತಾಡು
ತ್ತಾ ಉಪದೇಶಮಾಡುತ್ತೀ. ನೀನು ಮುಖದಾಕ್ಷಿಣ್ಯ
ವಿಲ್ಲದೆ ದೇವರ ಮಾರ್ಗವನ್ನು ಸತ್ಯವಾಗಿ ಬೋಧಿಸು
ವವನಾಗಿದ್ದೀ ಎಂದು ಬಲ್ಲೆವು. 1)ಕೈಸರನಿಗೆ ಕಂದಾಯ 22
ಕೊಡುವದು ಸರಿಯೋ ಸರಿಯಲ್ಲವೋ ಎಂದು ಆತ
ನನ್ನು ಕೇಳಿದರು. ಆತನು ಅವರ ಕುಯುಕ್ತಿಯನ್ನು 23
ಕಂಡುಕೊಂಡು ಅವರಿಗೆ — ನನಗೆ ಒಂದು ಹಣವನ್ನು 24
ತೋರಿಸಿರಿ. ಇದರಲ್ಲಿ ಯಾರ ತಲೆಯೂ ಮುದ್ರೆಯೂ
ಅದೆ ಎಂದು ಕೇಳಿದ್ದಕ್ಕೆ ಅವರು — ಕೈಸರನದು
ಅಂದರು. ಆತನು ಅವರಿಗೆ — ಹಾಗಾದರೆ ಕೈಸರನ 25
ದನ್ನು ಕೈಸರನಿಗೆ ಕೊಡಿರಿ, ದೇವರದನ್ನು ದೇವರಿಗೆ
ಕೊಡಿರಿ ಎಂದು ಹೇಳಿದನು. ಆತನ ಮಾತಿನಲ್ಲಿ ಅವರು 26
ಜನರ ಮುಂದೆ ಏನೂ ಹಿಡಿಯಲಾರದೆ ಆತನು ಕೊಟ್ಟ
ಉತ್ತರಕ್ಕೆ ಆಶ್ಚರ್ಯಪಟ್ಟು ಸುಮ್ಮಗಾದರು.
ತರುವಾಯ ಪುನರುತ್ಥಾನವಿಲ್ಲವೆಂದು ಹೇಳುವವ 27
ರಾದ ಸದ್ದುಕಾಯರಲ್ಲಿ ಕೆಲವರು ಬಂದು ಆತನಿಗೆ
ಪ್ರಶ್ನೆಮಾಡಿದ್ದೇನಂದರೆ — ಬೋಧಕನೇ, ಅಣ್ಣನಾದ 28
ವನು ಹೆಂಡತಿಯುಳ್ಳವನಾಗಿದ್ದು ಮಕ್ಕಳಿಲ್ಲದೆ ಸತ್ತರೆ
ಅವನ ತಮ್ಮನು ಆಕೆಯನ್ನು ಮದುವೆಮಾಡಿಕೊಂಡು
ತನ್ನ ಅಣ್ಣನಿಗೆ ಸಂತಾನವನ್ನು ಪಡೆಯಬೇಕೆಂದು ಮೋ
ಶೆಯು ನಮಗೆ ಬರೆದಿಟ್ಟನಷ್ಟೆ. ಒಳ್ಳೇದು, ಏಳು 29
ಮಂದಿ ಅಣ್ಣತಮ್ಮಂದಿರಿದ್ದರು. ಮೊದಲನೆಯವನು
ಹೆಂಡತಿಯನ್ನು ಮಾಡಿಕೊಂಡು ಮಕ್ಕಳಿಲ್ಲದೆ ಸತ್ತನು.
ಎರಡನೆಯವನೂ ಅವನ ತರುವಾಯ ಮೂರನೆ 30-31
ಯವನೂ ಆಕೆಯನ್ನು ಮದುವೆಮಾಡಿಕೊಂಡರು.
ಇದೇ ರೀತಿಯಾಗಿ ಏಳು ಮಂದಿಯೂ ಮಾಡಿಕೊಂಡು
ಮಕ್ಕಳಿಲ್ಲದೆ ಸತ್ತರು. ಕಡೆಯಲ್ಲಿ ಆ ಸ್ತ್ರೀಯೂ 32
ಸತ್ತಳು. ಹಾಗಾದರೆ ಪುನರುತ್ಥಾನದಲ್ಲಿ ಆ ಸ್ತ್ರೀಯು 33
ಅವರೊಳಗೆ ಯಾರ ಹೆಂಡತಿಯಾಗಿರುವಳು? ಆಕೆ
ಯನ್ನು ಏಳು ಮಂದಿಯೂ ಮದುವೆಮಾಡಿಕೊಂಡಿದ್ದ
ರಲ್ಲಾ ಅಂದರು. ಯೇಸು ಅವರಿಗೆ — ಈ ಲೋಕದ 34
ಜನರು ಮದುವೆಮಾಡಿಕೊಳ್ಳುತ್ತಾರೆ, ಮದುವೆಮಾಡಿ
ಕೊಡುತ್ತಾರೆ; ಆದರೆ ಆ ಲೋಕವನ್ನೂ ಸತ್ತವರೊಳ 35
ಗಿಂದ ಪುನರುತ್ಥಾನವನ್ನೂ ಪಡೆಯುವದಕ್ಕೆ ಯೋಗ್ಯ
ರೆನಿಸಿಕೊಂಡಿರುವವರು ಮದುವೆಮಾಡಿಕೊಳ್ಳುವದೂ
ಇಲ್ಲ, ಮಾಡಿಕೊಡುವದೂ ಇಲ್ಲ. ಅವರು ಇನ್ನು 36
ಮರಣಕ್ಕೆ ಗುರಿಯಾಗುವದೇ ಇಲ್ಲ. ಪುನರುತ್ಥಾನ
ವನ್ನು ಹೊಂದಿದವರಾಗಿದ್ದು ದೇವದೂತರಿಗೆ ಸರಿಸಮಾ
ನರೂ ದೇವರ ಮಕ್ಕಳೂ ಆಗಿದ್ದಾರೆ. ಸತ್ತವರು 37
ಬದುಕಿ ಏಳುತ್ತಾರೆಂಬದನ್ನು ಮೋಶೆಯೂ ಸೂಚಿಸಿ
ದ್ದಾನೆ. ಅವನು ಪೊದೆಯ ಸಂಗತಿಯಿರುವ ಅಧ್ಯಾಯ
ದಲ್ಲಿ ಕರ್ತನನ್ನು ಅಬ್ರಹಾಮನ ದೇವರು ಇಸಾಕನ
ದೇವರು ಯಾಕೋಬನ ದೇವರು ಎಂದು ಹೇಳಿದ್ದಾನೆ.
ದೇವರು ಜೀವಿತರಿಗೆ ದೇವರಾಗಿದ್ದಾನೆ ಹೊರತು ಜೀವ 38
ವಿಲ್ಲದವರಿಗೆ ಅಲ್ಲ. ಆತನಿಗೆ ಎಲ್ಲರೂ ಜೀವಿಸುವವರೇ
ಎಂದು ಹೇಳಿದನು. ಶಾಸ್ತ್ರಿಗಳಲ್ಲಿ ಕೆಲವರು — ಬೋಧ 39
ಕನೇ, ಚೆನ್ನಾಗಿ ಹೇಳಿದಿ ಅಂದರು. ಆತನನ್ನು ಇನ್ನೇನು 40
ಕೇಳುವದಕ್ಕೂ ಅವರಿಗೆ ಧೈರ್ಯವಿಲ್ಲದೆ ಹೋಯಿತು.
ಆಗ ಆತನು — ಬರಬೇಕಾದ ಕ್ರಿಸ್ತನು ದಾವೀದನ 41

1) ಅಂದರೆ, ರೋಮ್‌ಸಾಮ್ರಾಜ್ಯದ ಚಕ್ರವರ್ತಿಗೆ.

ಮಗನೆಂದು ಹೇಳುತ್ತಾರಲ್ಲಾ, ಅದು ಹೇಗಾದೀತು?
42-43 ನಾನು ನಿನ್ನ ವಿರೋಧಿಗಳನ್ನು ನಿನ್ನ ಪಾದ
ಗಳಿಗೆ ಪೀಠವಾಗ ಮಾಡುವ ತನಕ
ನನ್ನ ಬಲಗಡೆಯಲ್ಲಿ ಕೂತುಕೊಂಡಿರು ಎಂದು
ಕರ್ತನು ನನ್ನ ಒಡೆಯನಿಗೆ ನುಡಿದನು
ಎಂಬದಾಗಿ ಕೀರ್ತನಗ್ರಂಥದಲ್ಲಿ ದಾವೀದನೇ ಹೇಳುತ್ತಾ
44 ನಷ್ಟೆ. ದಾವೀದನು ಆತನನ್ನು ಒಡೆಯನೆಂದು ಹೇಳಿದ
ಮೇಲೆ ಆತನು ಅವನಿಗೆ ಮಗನಾಗುವದು ಹೇಗೆ
ಎಂದು ಅವರನ್ನು ಕೇಳಿದನು.
45 ಜನರೆಲ್ಲರು ಕೇಳುತ್ತಿರುವಲ್ಲಿ ಆತನು ತನ್ನ
46 ಶಿಷ್ಯರಿಗೆ ಹೇಳಿದ್ದೇನಂದರೆ—ಶಾಸ್ತ್ರಿಗಳ ವಿಷಯದಲ್ಲಿ
ಎಚ್ಚರಿಕೆಯಾಗಿರ್ರಿ. ಅವರು ನಿಲುವಂಗಿಗಳನ್ನು
ತೊಟ್ಟುಕೊಂಡು ತಿರುಗಾಡುವದರಲ್ಲಿ ಮನಸ್ಸುಳ್ಳ
ವರೂ, ಅಂಗಡಿಬೀದಿಗಳಲ್ಲಿ ನಮಸ್ಕಾರಗಳು, ಸಭಾ
ಮಂದಿರಗಳಲ್ಲಿ ಮುಖ್ಯ ಪೀಠಗಳು, ಔತಣಪ್ರಸ್ತ
ಗಳಲ್ಲಿ ಪ್ರಥಮಸ್ಥಾನ, ಇವುಗಳಲ್ಲಿ ಇಷ್ಟವುಳ್ಳವರೂ
47 ಆಗಿದ್ದಾರೆ. ಅವರು ವಿಧವೆಯರ ಮನೆಗಳನ್ನು ನುಂಗಿ
ನಟನೆಗಾಗಿ ದೇವರಿಗೆ ಉದ್ದವಾದ ಪ್ರಾರ್ಥನೆಗಳನ್ನು
ಮಾಡುತ್ತಾರೆ; ಇಂಥವರು ಹೆಚ್ಚಾದ ದಂಡನೆಯನ್ನು
ಹೊಂದುವರು ಅಂದನು.

ದೇವರಿಗೆ ಕಾಣಿಕೆಕೊಡುವವರ ತಾರತಮ್ಯವನ್ನು ಕುರಿತು ಮಾತಾಡಿದ್ದು.
(ಮಾರ್ಕ 12. 41–44.)

21 ಯೇಸು ತಲೆಯೆತ್ತಿ ನೋಡಿ ಐಶ್ವರ್ಯವಂತರು
ಕಾಣಿಕೆಗಳನ್ನು ಬೊಕ್ಕಸದಲ್ಲಿ ಹಾಕುವದನ್ನು
2 ಕಂಡನು. ಆಗ ಒಬ್ಬ ಬಡ ವಿಧವೆಯು ಬಂದು ಎರಡು
ಕಾಸುಗಳನ್ನು ಹಾಕಲು ಆತನು ಅದನ್ನು ನೋಡಿ—
3 ನಿಮಗೆ ಸತ್ಯವಾಗಿ ಹೇಳುತ್ತೇನೆ, ಈ ಬಡ ವಿಧವೆ ಎಲ್ಲರಿ
4 ಗಿಂತಲೂ ಹೆಚ್ಚು ಹಾಕಿದ್ದಾಳೆ. ಹೇಗಂದರೆ ಅವರೆಲ್ಲರು
ತಮಗೆ ಸಾಕಾಗಿ ಮಿಕ್ಕದ್ದರಲ್ಲಿ ಕಾಣಿಕೆಕೊಟ್ಟರು;
ಈಕೆಯೋ ತನ್ನ ಬಡತನದಲ್ಲಿಯೂ ತನಗಿದ್ದ ಜೀವನ
ವನ್ನೆಲ್ಲಾ ಕೊಟ್ಟುಬಿಟ್ಟಳು ಅಂದನು.

ಯೇಸು ಯೆರೂಸಲೇಮಿನ ನಾಶವನ್ನೂ ಯುಗದ ಸಮಾಪ್ತಿಯನ್ನೂ ಮುಂತಿಳಿಸಿದ್ದು.
(ಮತ್ತಾ. 24. 1—44; ಮಾರ್ಕ 13. 1—37.)

5 ಕೆಲವರು ದೇವಾಲಯದ ವಿಷಯದಲ್ಲಿ ಅದು ಅಂದ
ವಾದ ಕಲ್ಲುಗಳಿಂದಲೂ ಹರಕೆಯ ಒಡವೆಗಳಿಂದಲೂ
6 ಅಲಂಕಾರವಾಗಿದೆ ಎಂದು ಹೇಳುತ್ತಿರುವಾಗ ಆತನು—
ನೀವು ಇವುಗಳನ್ನು ನೋಡುತ್ತೀರಲ್ಲಾ, ಇಲ್ಲಿ ಕಲ್ಲಿನ
ಮೇಲೆ ಕಲ್ಲು ಉಳಿಯದೆ ಎಲ್ಲಾ ಕೆಡವಲ್ಪಡುವ ದಿವಸ
7 ಗಳು ಬರುವವು ಅಂದನು. ಅವರು—ಬೋಧಕನೇ,
ಅದು ಯಾವಾಗ ಆಗುವದು? ಅದು ಸಂಭವಿಸುವದ
ಕ್ಕಿರುವಾಗ ಯಾವ ಸೂಚನೆ ತೋರುವದು ಎಂದು
8 ಆತನನ್ನು ಕೇಳಲು ಆತನು ಹೇಳಿದ್ದೇನಂದರೆ—
ನೀವು ಮೋಸಹೋಗದಂತೆ ನೋಡಿಕೊಳ್ಳಿರಿ. ಯಾ
ಕಂದರೆ ಅನೇಕರು ಬಂದು ನನ್ನ ಹೆಸರನ್ನು ಎತ್ತಿಕೊಂಡು
ನಾನು ಕ್ರಿಸ್ತನು ನಾನು ಕ್ರಿಸ್ತನು ಎಂತಲೂ ಆ

ಕಾಲ ಹತ್ತಿರವಾಯಿತು ಎಂತಲೂ ಹೇಳುವರು; ಅವ
ಹಿಂದೆ ಹೋಗಬೇಡಿರಿ. ಇದಲ್ಲದೆ ಯುದ್ಧಗಳೂ ಗ
ಲಿಬಿಗಳೂ ಆಗುವದನ್ನು ನೀವು ಕೇಳುವಾಗ ದಿಗಿ
ಪಡಬೇಡಿರಿ; ಯಾಕಂದರೆ ಇದೆಲ್ಲಾ ಮೊದಲು ಆ
ವದು ಅಗತ್ಯ; ಆದರೂ ಕೂಡಲೆ ಅಂತ್ಯ ಬರುವದಿ
ಅಂದನು.
ಆಗ ಆತನು ಅವರಿಗೆ ಹೇಳಿದ್ದೇನಂದರೆ—ಜನಕ
ವಿರೋಧವಾಗಿ ಜನವೂ ರಾಜ್ಯಕ್ಕೆ ವಿರೋಧವಾ
ರಾಜ್ಯವೂ ಏಳುವವು; ಮತ್ತು ಮಹಾಭೂಕಂಪಗಳಾಗ
ವವು; ಅಲ್ಲಲ್ಲಿ ಬರಗಳೂ ಉಪದ್ರವಗಳೂ ಬರುವವ
ಉತ್ಪಾತಗಳೂ ಆಕಾಶದಲ್ಲಿ ಮಹಾ ಸೂಚನೆಗಳ
ತೋರುವವು. ಆದರೆ ಇವೆಲ್ಲಾ ನಡೆಯುವದಕ್ಕಿಂ
ಮುಂಚೆ ಅವರು ನಿಮ್ಮನ್ನು ಹಿಡಿದು ಸಭಾಮಂದಿರಗ
ಮತ್ತು ಸೆರೆಮನೆಗಳ ಅಧಿಕಾರಸ್ಥರ ವಶಕ್ಕೆ ಕೊಟ್ಟು
ನನ್ನ ಹೆಸರಿನ ನಿಮಿತ್ತವಾಗಿ ಅರಸುಗಳ ಮುಂದಕ್ಕೂ
ಅಧಿಪತಿಗಳ ಮುಂದಕ್ಕೂ ತೆಗೆದುಕೊಂಡುಹೋಗಿ ಹಿಂಸ
ಪಡಿಸುವರು. ಇದು ಸಾಕ್ಷಿಹೇಳುವದಕ್ಕೆ ನಿಮಗ
ಅನುಕೂಲವಾಗುವದು. ಆದದರಿಂದ ಏನು ಉತ್ತರ
ಕೊಡಬೇಕೆಂಬ ವಿಷಯದಲ್ಲಿ ನಾವು ಮುಂದಾಗಿ
ಯೋಚಿಸುವದಿಲ್ಲವೆಂದು ನಿಮ್ಮ ಮನಸ್ಸಿನಲ್ಲಿ ನಿಶ್ಚಯ
ಮಾಡಿಕೊಳ್ಳಿರಿ. ಯಾಕಂದರೆ ನಿಮ್ಮ ವಿರೋಧಿ
ಗಳೆಲ್ಲರೂ ಎದುರುನಿಲ್ಲುವದಕ್ಕೂ ಎದುರುಮಾ
ತಾಡುವದಕ್ಕೂ ಆಗದಂಥ ಬಾಯನ್ನೂ ಬುದ್ಧಿ
ಯನ್ನೂ ನಾನೇ ನಿಮಗೆ ಕೊಡುತ್ತೇನೆ. ಆದರ
ತಂದೆತಾಯಿಗಳೂ ಅಣ್ಣತಮ್ಮಂದಿರೂ ಬಂಧುಬಾಂಧ
ವರೂ ಸ್ನೇಹಿತರೂ ನಿಮ್ಮನ್ನು ಒಪ್ಪಿಸಿಕೊಡುವರು;
ಮತ್ತು ನಿಮ್ಮಲ್ಲಿ ಕೆಲವರನ್ನು ಕೊಲ್ಲಿಸುವರು. ಇದ
ಲ್ಲದೆ ನನ್ನ ಹೆಸರಿನ ನಿಮಿತ್ತ ನಿಮ್ಮನ್ನು ಎಲ್ಲರೂ ಹಗೆ
ಮಾಡುವರು. ಆದರೂ ನಿಮ್ಮದೊಂದು ತಲೆಕೂದ
ಲಾದರೂ ನಾಶವಾಗುವದಿಲ್ಲ. ನಿಮ್ಮ ಸೈರಣೆ
ಯಿಂದ ನಿಮ್ಮ ಪ್ರಾಣಗಳನ್ನು ಪಡಕೊಳ್ಳುವಿರಿ. ಆದರೆ
ದಂಡುಗಳು ಯೆರೂಸಲೇಮ್ ಪಟ್ಟಣಕ್ಕೆ ಮುತ್ತಿಗೆ
ಹಾಕಿರುವದನ್ನು ನೀವು ಕಾಣುವಾಗ ಅದು ಹಾಳಾ
ಗುವ ಕಾಲ ಸಮೀಪವಾಯಿತೆಂದು ತಿಳುಕೊಳ್ಳಿರಿ.
ಆಗ ಯೂದಾಯದಲ್ಲಿರುವವರು ಬೆಟ್ಟಗಳಿಗೆ ಓಡಿ
ಹೋಗಲಿ; ಆ ಪಟ್ಟಣದಲ್ಲಿರುವವರು ಅದರೊಳಗಿಂದ
ಹೊರಟುಹೋಗಲಿ; ಹಳ್ಳಿಯವರು ಅದರೊಳಕ್ಕೆ ಹೋಗ
ದಿರಲಿ. ಯಾಕಂದರೆ ಬರೆದಿರುವದೆಲ್ಲಾ ನೆರವೇರುವದ
ಕ್ಕಾಗಿ ಅವು ದಂಡನೆಯ ದಿವಸಗಳಾಗಿವೆ. ಆ ದಿನಗಳ
ಲ್ಲಿ ಬಸುರಿಯರಿಗೂ ಮೊಲೆಕೂಸಿರುವ ಹೆಂಗಸರಿಗೂ
ಆಗುವ ಕಷ್ಟವನ್ನು ಏನು ಹೇಳಲಿ! ಈ ಸೀಮೆಯ
ಮೇಲೆ ಮಹಾವಿಪತ್ತೂ ಈ ಜನರಿಗೆ ಉಗ್ರದಂಡನೆಯೂ
ಆಗುವವು. ಅವರು ಕತ್ತಿಯ ಬಾಯಿಗೆ ಬೀಳುವರು;
ಅವರನ್ನು ಅನ್ಯದೇಶಗಳಿಗೆಲ್ಲಾ ಸೆರೆಹಿಡಿದುಕೊಂಡು
ಹೋಗುವರು; ಅನ್ಯದೇಶದವರ ಸಮಯಗಳು ಪೂರೈ
ಸುವ ತನಕ ಯೆರೂಸಲೇಮ್ ಪಟ್ಟಣವು ಅನ್ಯದೇಶದ
ವರಿಂದ ತುಳಿದಾಡಲ್ಪಡುತ್ತಿರುವದು. ಇದಲ್ಲದೆ
ಸೂರ್ಯ ಚಂದ್ರ ನಕ್ಷತ್ರಗಳಲ್ಲಿ ಸೂಚನೆಗಳು ತೋ
ರುವವು. ಭೂಮಿಯ ಮೇಲೆ ಸಮುದ್ರದ ಮತ್ತು ತೆರೆ
ಗಳ ಘೋಷದ ನಿಮಿತ್ತವಾಗಿ ಜನಗಳಿಗೆ ದಿಕ್ಕು ಕಾಣದೆ

26 ಸಂಕಟವು ಉಂಟಾಗುವದು. ಆಕಾಶದ ಶಕ್ತಿಗಳು
ಕದಲುವದರಿಂದ ಮನುಷ್ಯರು ಭಯಹಿಡಿದವರಾಗಿ
ಲೋಕಕ್ಕೆ ಏನು ಬರುವದೋ ಎಂದು ಎದುರುನೋಡು
27 ತ್ತಾ ಪ್ರಾಣಹೋದಂತಾಗುವರು. ಆಗ ಮನುಷ್ಯ
ಕುಮಾರನು ಬಲದಿಂದಲೂ ಬಹುಮಹಿಮೆಯಿಂದಲೂ
28 ಮೇಘದಲ್ಲಿ ಬರುವದನ್ನು ಕಾಣುವರು. ಆದರೆ ಇವು
ಸಂಭವಿಸುವದಕ್ಕೆ ತೊಡಗುವಾಗ ಮೇಲಕ್ಕೆ ನೋಡಿರಿ,
ನಿಮ್ಮ ತಲೆ ಎತ್ತಿರಿ; ನಿಮ್ಮ ಬಿಡುಗಡೆಯು ಸಮೀಪ
29 ವಾಗಿದೆ ಅಂದನು. ಆತನು ಅವರಿಗೆ ಒಂದು ಸಾಮ್ಯ
ಕೊಟ್ಟು ಹೇಳಿದ್ದೇನಂದರೆ—ಅಂಜೂರ ಮುಂತಾದ
30 ಮರಗಳನ್ನೂ ನೋಡಿರಿ. ಅವು ಚಿಗುರಿದ ಕೂಡಲೆ
ನೀವು ಅದನ್ನು ಕಂಡು ಈಗ ಬೇಸಿಗೆಯು ಹತ್ತಿರ
ವಾಯಿತೆಂದು ನೀವಾಗಿ ತಿಳುಕೊಳ್ಳುತ್ತೀರಲ್ಲಾ.
31 ಹಾಗೆಯೇ ನೀವು ಸಹ ಇವುಗಳಾಗುವದನ್ನು ನೋಡು
ವಾಗ ದೇವರ ರಾಜ್ಯವು ಹತ್ತಿರವದೆ ಎಂದು ತಿಳುಕೊಳ್ಳಿ
32 ರಿ. ಎಲ್ಲಾ ಆಗುವ ತನಕ ಈ ಸಂತತಿಯು ಅಳಿದು
ಹೋಗುವದೇ ಇಲ್ಲವೆಂದು ನಿಮಗೆ ಸತ್ಯವಾಗಿ ಹೇಳು
33 ತ್ತೇನೆ. ಭೂಮ್ಯಾಕಾಶಗಳು ಅಳಿದುಹೋಗುವವು,
ಆದರೆ ನನ್ನ ಮಾತುಗಳು ಅಳಿದುಹೋಗುವದೇ ಇಲ್ಲ.
34 ನಿಮ್ಮ ವಿಷಯದಲ್ಲಿ ಜಾಗರೂಕರಾಗಿರ್ರಿ. ಅತಿ
ಭೋಜನದ ಮದಡಿನಿಂದಲೂ ಅಮಲಿನಿಂದಲೂ ಪ್ರಪಂಚ
ದ ಚಿಂತೆಗಳಿಂದಲೂ ನಿಮ್ಮ ಹೃದಯಗಳು ಭಾರವಾಗಿರ
ಲಾಗಿ ಆ ದಿವಸವು ನಿಮ್ಮ ಮೇಲೆ ಉರ್ಲಿನಂತೆ
35 ಫಕ್ಕನೆ ಬಂದೀತು. ಆ ದಿವಸವು ಭೂನಿವಾಸಿಗಳೆಲ್ಲರ
36 ಮೇಲೆ ಬರುವದು. ಆದರೆ ಬರುವದಕ್ಕಿರುವ ಇವೆಲ್ಲ
ವುಗಳೊಳಗಿಂದ ತಪ್ಪಿಸಿಕೊಳ್ಳುವದಕ್ಕೂ ಮನುಷ್ಯ
ಕುಮಾರನ ಮುಂದೆ ನಿಂತುಕೊಳ್ಳುವದಕ್ಕೂ ನೀವು
ಪೂರ್ಣ ಶಕ್ತರಾಗುವಂತೆ ಎಲ್ಲಾ ಕಾಲದಲ್ಲಿಯೂ
ದೇವರಿಗೆ ವಿಜ್ಞಾಪನೆಮಾಡಿಕೊಳ್ಳುತ್ತಾ ಎಚ್ಚರವಾಗಿರ್ರಿ
ಅಂದನು.

ಅಧಿಕಾರಿಗಳು ಯೇಸುವನ್ನು ಕೊಲ್ಲುವದಕ್ಕೆ ಉಪಾಯ ಮಾಡಿದ್ದು.

(ಮತ್ತಾ. 26. 1—5; 14—16; ಮಾರ್ಕ 14. 1, 2, 10, 11.)

37 ಆತನು ಹಗಲು ದೇವಾಲಯದಲ್ಲಿ ಉಪದೇಶಮಾ
ಡುತ್ತಾ ರಾತ್ರಿ ಪಟ್ಟಣದ ಹೊರಗೆ ಹೋಗಿ ಎಣ್ಣೇ
ಮರಗಳ ತೋಪು ಎನಿಸಿಕೊಳ್ಳುವ ಗುಡ್ಡದಲ್ಲಿ ಇಳು
38 ಕೊಳ್ಳುತ್ತಾ ಇದ್ದನು. ಜನರೆಲ್ಲರು ಆತನ ಉಪದೇಶ
ವನ್ನು ಕೇಳಬೇಕೆಂದು ಬೆಳಿಗ್ಗೆ ಎದ್ದು ದೇವಾಲಯಕ್ಕೆ
ಆತನ ಬಳಿಗೆ ಬರುತ್ತಿದ್ದರು.

22 ಹುಳಿಯಿಲ್ಲದ ರೊಟ್ಟಿಯನ್ನು ತಿನ್ನುವ ಪಸ್ಕ
2 ವೆಂಬ ಹಬ್ಬವು ಹತ್ತಿರವಾದಾಗ ಮಹಾಯಾಜಕ
ರೂ ಶಾಸ್ತ್ರಿಗಳೂ ಯೇಸುವನ್ನು ಕೊಲ್ಲಬೇಕೆಂದಿದ್ದು
ಜನರಿಗೆ ಹೆದರಿ ತಕ್ಕ ಮಾರ್ಗವನ್ನು ಹುಡುಕುತ್ತಿದ್ದರು.
3 ಆಗ ಸೈತಾನನು ಹನ್ನೆರಡು ಮಂದಿ ಶಿಷ್ಯರ ಲೆಕ್ಕದಲ್ಲಿ
ಸೇರಿದವನಾದ ಇಸ್ಕರಿಯೋತೆಂಬ ಯೂದನಲ್ಲಿ ಪ್ರವೇ
4 ಶಿಸಲು ಅವನು ಮಹಾಯಾಜಕರ ಬಳಿಗೂ ಕಾವಲಿನ
ದಳವಾಯಿಗಳ ಬಳಿಗೂ ಹೋಗಿ ತಾನು ಯೇಸುವನ್ನು
ಹಿಡುಕೊಡುವ ಉಪಾಯವನ್ನು ಕುರಿತು ಅವರ ಸಂಗ
ಡ ಮಾತಾಡಿದನು. ಅವರು ಸಂತೋಷಪಟ್ಟು ನಿನಗೆ 5
ಹಣ ಕೊಡುತ್ತೇವೆಂದು ಒಪ್ಪಂದ ಮಾಡಲು ಅವನು 6
ಒಡಂಬಟ್ಟು ಆತನನ್ನು ಗದ್ದಲವಾಗದಂತೆ ಅವರಿಗೆ
ಹಿಡುಕೊಡುವದಕ್ಕೆ ಅನುಕೂಲವಾದ ಸಮಯವನ್ನು
ನೋಡುತ್ತಿದ್ದನು.

ಯೇಸು ತನ್ನ ಶಿಷ್ಯರ ಸಂಗಡ ಕಡೇ ಭೋಜನ ಮಾಡಿದ್ದು.

(ಮತ್ತಾ. 26. 17—29; ಮಾರ್ಕ 14. 12—25; ಯೋಹಾ. 13. 1—35; ೧ ಕೊರಿ. 11. 23—25.)

ಹುಳಿಯಿಲ್ಲದ ರೊಟ್ಟಿಯನ್ನು ತಿನ್ನುವ ದಿವಸಗಳ 7
ಲ್ಲಿ ಪಸ್ಕದ ಕುರಿಮರಿಯನ್ನು ಕೊಯ್ಯ ತಕ್ಕ ದಿವಸ
ಬಂದಾಗ ಯೇಸು ಪೇತ್ರನಿಗೂ ಯೋಹಾನನಿಗೂ— 8
ನೀವು ಹೋಗಿ ನಾವು ಪಸ್ಕದ ಊಟಮಾಡುವಂತೆ ಸಿದ್ಧ
ಮಾಡಿರಿ ಎಂದು ಹೇಳಿ ಅವರನ್ನು ಕಳುಹಿಸಿದನು.
ಅವರು—ನಾವು ಎಲ್ಲಿ ಸಿದ್ಧಮಾಡಬೇಕನ್ನುತ್ತೀ ಎಂದು 9
ಆತನನ್ನು ಕೇಳಲು ಆತನು ಅವರಿಗೆ—ನೋಡಿರಿ, 10
ನೀವು ಪಟ್ಟಣದೊಳಕ್ಕೆ ಹೋದ ಮೇಲೆ ಒಬ್ಬ ಮನು
ಷ್ಯನು ತುಂಬಿದ ಕೊಡವನ್ನು ಹೊತ್ತುಕೊಂಡು ನಿಮ್ಮೆ
ದುರಿಗೆ ಬರುವನು. ಅವನು ಹೋಗುವ ಮನೆಗೆ
ನೀವು ಅವನ ಹಿಂದೆ ಹೋಗಿ ಆ ಮನೆಯ ಯಜಮಾ 11
ನನಿಗೆ—ನಮ್ಮ ಬೋಧಕನು ತನ್ನ ಶಿಷ್ಯರ ಸಂಗಡ
ಪಸ್ಕದ ಊಟವನ್ನು ಮಾಡುವದಕ್ಕೆ ಭೋಜನಶಾಲೆ
ಎಲ್ಲಿ ಎಂದು ನಿನ್ನನ್ನು ಕೇಳುತ್ತಾನೆ ಎಂಬದಾಗಿ ಹೇಳಿ
ರಿ. ಅವನು ತಕ್ಕ ಸಾಮಾನಿಟ್ಟಿರುವ ಮೇಲಂತಸ್ತಿನ 12
ದೊಡ್ಡ ಕೊಠಡಿಯನ್ನು ನಿಮಗೆ ತೋರಿಸುವನು; ಅಲ್ಲಿ
ಸಿದ್ಧ ಮಾಡಿರಿ ಎಂದು ಹೇಳಿ ಕಳುಹಿಸಿದನು. ಅವರು 13
ಹೊರಟು ಆತನು ತಮಗೆ ಹೇಳಿದಂತೆ ಕಂಡು ಪಸ್ಕಕ್ಕೆ
ಸೌರಿಸಿದರು.

ಗಳಿಗೆ ಬಂದಾಗ ಆತನು ತನ್ನ ಹನ್ನೆರಡು ಮಂದಿ 14
ಅಪೊಸ್ತಲರ ಸಂಗಡ ಊಟಕ್ಕೆ ಕೂತುಕೊಂಡನು.
ಆಗ ಆತನು ಅವರಿಗೆ—ನಾನು ಶ್ರಮೆ ಅನುಭವಿಸುವ. 15
ದಕ್ಕಿಂತ ಮುಂಚೆ ನಿಮ್ಮ ಸಂಗಡ ಈ ಪಸ್ಕದ ಊಟ
ವನ್ನು ಮಾಡುವದಕ್ಕೆ ಕುತೂಹಲದಿಂದ ಅಪೇಕ್ಷಿಸಿ
ದ್ದೇನೆ. ನಾನು ನಿಮಗೆ ಹೇಳುತ್ತೇನೆ, ಇದು ದೇವರ 16
ರಾಜ್ಯದಲ್ಲಿ ನೆರವೇರುವ ತನಕ ನಾನು ಇನ್ನು ಮೇಲೆ
ಪಸ್ಕದ ಊಟವನ್ನು ಮಾಡುವದೇ ಇಲ್ಲ ಎಂದು ಹೇಳಿ
ದನು. ಆ ಮೇಲೆ ಆತನು [ದ್ರಾಕ್ಷಾರಸದ] ಪಾತ್ರೆ 17
ಯನ್ನು ತೆಗೆದುಕೊಂಡು ದೇವರ ಸ್ತೋತ್ರಮಾಡಿ—
ಇದನ್ನು ತಕ್ಕೊಂಡು ನಿಮ್ಮಲ್ಲಿ ಹಂಚಿಕೊಳ್ಳಿರಿ. ಇಂದಿ 18
ನಿಂದ ದೇವರ ರಾಜ್ಯವು ಬರುವ ತನಕ ನಾನು ದ್ರಾಕ್ಷಾ
ರಸವನ್ನು ಕುಡಿಯುವದೇ ಇಲ್ಲವೆಂದು ನಿಮಗೆ ಹೇಳು
ತ್ತೇನೆ ಅಂದನು. ಬಳಿಕ ಆತನು ರೊಟ್ಟಿಯನ್ನು ತೆಗೆ 19
ದುಕೊಂಡು ಸ್ತೋತ್ರಮಾಡಿ ಮುರಿದು ಅವರಿಗೆ
ಕೊಟ್ಟು—ಇದು ನಿಮಗೋಸ್ಕರ ಕೊಟ್ಟಿರುವ ನನ್ನ
ದೇಹ; ನನ್ನನ್ನು ನೆನಸಿಕೊಳ್ಳುವದಕ್ಕೋಸ್ಕರ 1)ಹೀಗೆ

1) ಅಥವಾ, ಮುರಿದು ತಿನ್ನಿರಿ.

20 ಮಾಡಿರಿ ಅಂದನು. ಊಟವಾದ ಮೇಲೆ ಆತನು ಅದೇ
ರೀತಿಯಾಗಿ ಪಾತ್ರೆಯನ್ನು ತೆಗೆದುಕೊಂಡು—1)ಈ
ಪಾತ್ರೆಯು ನಿಮಗೋಸ್ಕರ ಸುರಿಸಲ್ಪಡುವ ನನ್ನ ರಕ್ತ
ದಿಂದ ಸ್ಥಾಪಿತವಾಗುವ ಹೊಸ ಒಡಂಬಡಿಕೆಯನ್ನು
21 ಸೂಚಿಸುತ್ತದೆ. ಆದರೂ ನೋಡಿರಿ, ನನ್ನನ್ನು ಹಿಡು
ಕೊಡುವವನು ನನ್ನೊಡನೆ ಮೇಜಿನ ಮೇಲೆ ಕೈಯಿಟ್ಟು
22 ಊಟಮಾಡುತ್ತಿದ್ದಾನೆ. ಮನುಷ್ಯಕುಮಾರನು ನೇಮ
ಕವಾದ ಪ್ರಕಾರ ಹೊರಟುಹೋಗುತ್ತಾನೆ ಸರಿ; ಆದರೆ
ಆತನನ್ನು ಹಿಡುಕೊಡುವ ಮನುಷ್ಯನ ಗತಿಯನ್ನು
23 ಏನು ಹೇಳಲಿ ಅಂದನು. ಇದನ್ನು ಕೇಳಿ ಅವರು—
ಇಂಥ ಕೆಲಸವನ್ನು ಮಾಡ ಬೇಕೆಂದಿರುವವನು ನಮ್ಮ
ಲ್ಲಿ ಯಾವನಾಗಿರಬಹುದು ಎಂದು ಒಬ್ಬರನ್ನೊಬ್ಬರು
ಕೇಳ ತೊಡಗಿದರು.
24 ಇದಲ್ಲದೆ ತಮ್ಮಲ್ಲಿ ಯಾವನು ಹೆಚ್ಚಿನವನೆನಿಸಿ
ಕೊಳ್ಳುವವನು ಎಂಬ ವಿಷಯದಲ್ಲಿ ಅವರೊಳಗೆ
25 ಚರ್ಚೆ ಹುಟ್ಟಿತು. ಆಗ ಆತನು ಅವರಿಗೆ— ಅನ್ಯ
ದೇಶದ ಅರಸರು ತಮ್ಮ ತಮ್ಮ ಜನಗಳ ಮೇಲೆ ದೊರೆ
ತನಮಾಡುತ್ತಾರೆ, ಮತ್ತು ಅವರ ಮೇಲೆ ಅಧಿಕಾರ
26 ನಡಿಸುವವರು ಧರ್ಮಿಷ್ಠರೆನಿಸಿಕೊಳ್ಳುತ್ತಾರೆ. ನೀವು
ಹಾಗಿರಬಾರದು; ನಿಮ್ಮಲ್ಲಿ ಹೆಚ್ಚಿನವನು ಚಿಕ್ಕವನಂತಾ
ಗಬೇಕು, ಮುಖ್ಯಸ್ಥನು ಸೇವಕನಂತಾಗಬೇಕು.
27 ಯಾವನು ಹೆಚ್ಚಿನವನು? ಊಟಕ್ಕೆ ಕೂತವನೋ
ಸೇವೆಮಾಡುವವನೋ? ಊಟಕ್ಕೆ ಕೂತವನಲ್ಲವೇ.
ಆದರೆ ನಾನು ನಿಮ್ಮಲ್ಲಿ ಸೇವೆಮಾಡುವವನಂತಿದ್ದೇನೆ.
28 ನೀವು ನನ್ನ ಕಷ್ಟಗಳಲ್ಲಿ ನನ್ನ ಸಂಗಡ ಎಡೆಬಿಡದೆ ಇದ್ದ
29 ವರು. ಆದದರಿಂದ ನನ್ನ ತಂದೆಯು ನನಗೆ ರಾಜ್ಯ
ವನ್ನು ನೇಮಿಸಿದ ಪ್ರಕಾರ ನಾನು ನಿಮಗೂ ನೇಮಿಸು
30 ತ್ತೇನೆ; ನನ್ನ ರಾಜ್ಯದಲ್ಲಿ ನೀವು ನನ್ನ ಮೇಜಿನ ಮೇಲೆ
ಊಟಮಾಡುವಿರಿ, ಕುಡಿಯುವಿರಿ; ಮತ್ತು ಸಿಂಹಾಸ
ನಗಳ ಮೇಲೆ ಕೂತುಕೊಂಡು ಇಸ್ರಾಯೇಲಿನ ಹನ್ನೆ
31 ರಡು ಕುಲಗಳಿಗೆ ನ್ಯಾಯತೀರಿಸುವಿರಿ. ಸೀಮೋನನೇ,
ಸೀಮೋನನೇ, ನೋಡು, ಸೈತಾನನು ನಿಮ್ಮನ್ನು
ಗೋದಿಯಂತೆ ಒನೆಯಬೇಕೆಂದು ಅಪ್ಪಣೆ ಕೇಳಿಕೊಂಡ
32 ನು; ಆದರೆ ನಿನ್ನ ನಂಬಿಕೆ ಕುಂದಿಹೋಗಬಾರದೆಂದು
ನಾನು ನಿನ್ನ ವಿಷಯದಲ್ಲಿ ದೇವರಿಗೆ ವಿಜ್ಞಾಪನೆಮಾಡಿ
ಕೊಂಡೆನು. ನೀನು ತಿರುಗಿಕೊಂಡ ಮೇಲೆ ನಿನ್ನ ಸಹೋ
33 ದರರನ್ನು ದೃಢಪಡಿಸು ಎಂದು ಹೇಳಿದನು. ಆದರೆ
ಅವನು—ಸ್ವಾಮೀ, ನಿನ್ನ ಸಂಗಡ ಸೆರೆಮನೆಗೆ ಹೋಗು
ವದಕ್ಕೂ ಸಾಯುವದಕ್ಕೂ ಸಿದ್ಧವಾಗಿದ್ದೇನೆ ಅನ್ನಲು
34 ಆತನು — ಪೇತ್ರನೇ, ನನ್ನ ವಿಷಯದಲ್ಲಿ — ಇವನನ್ನು
ಅರಿಯೆನೆಂದು ನೀನು ಮೂರು ಸಾರಿ ಹೇಳುವ ತನಕ
ಈಹೊತ್ತು ಕೋಳಿ ಕೂಗುವದಿಲ್ಲವೆಂದು ನಿನಗೆ ಹೇಳು
ತ್ತೇನೆ ಅಂದನು.
35 ಮತ್ತು ಆತನು—ನಿಮ್ಮನ್ನು ನಾನು ಹಮ್ಮಿಣಿ
ಹಸಿಬೆ ಜೋಡುಗಳಿಲ್ಲದೆ ಕಳುಹಿಸಿದಾಗ ನಿಮಗೆ ಏನಾ
ದರೂ ಕೊರತೆಯಾಯಿತೋ ಎಂದು ಕೇಳಲು ಅವರು
36 ಏನೂ ಇಲ್ಲವೆಂದು ಉತ್ತರಕೊಟ್ಟರು. ಅದಕ್ಕೆ
ಆತನು—ಈಗಲಾದರೋ ಹಮ್ಮಿಣಿಯಿದ್ದವನು ಅದ

ನ್ನು ತಕ್ಕೊಳ್ಳಲಿ, ಹಸಿಬೆಯಿದ್ದವನು ಅದನ್ನು ತಕೊ
ಳ್ಳಲಿ, ಮತ್ತು ಕತ್ತಿಯಿಲ್ಲದವನು ತನ್ನ ಮೇಲಂ
ಯನ್ನು ಮಾರಿ ಒಂದು ಕತ್ತಿಯನ್ನು ಕೊಂಡುಕೊ
ಲಿ. ಯಾಕಂದರೆ—ಆತನು ಅಪರಾಧಿಗಳಲ್ಲಿ ಒಬ
ನಂತೆ ಎಣಿಸಲ್ಪಟ್ಟನು ಎಂದು ಬರೆದಿರುವ ಮಾತ
ನನ್ನಲ್ಲಿ ನೆರವೇರಬೇಕಾಗಿದೆ ಎಂದು ನಿಮಗೆ ಹೇಳ
ತ್ತೇನೆ; ನನ್ನ ವಿಷಯವಾದದ್ದು ಕೊನೆಗಾಣಬೇಕ
ಎಂದು ಹೇಳಿದನು. ಅವರು—ಸ್ವಾಮೀ, ಇಗೋ
ಇಲ್ಲಿ ಎರಡು ಕತ್ತಿಗಳಿವೆ ಅನ್ನಲು ಆತನು ಅವರಿಗೆ—
ಅಷ್ಟು ಸಾಕು ಅಂದನು.

ಯೇಸು ಗೆತ್ಸೇಮನೆತೋಟಕ್ಕೆ ಹೋಗಿ ಪ್ರಾರ್ಥಿಸಿದ್ದು;
ಯೂದನು ಆತನನ್ನು ಶತ್ರುಗಳಿಗೆ ಹಿಡುಕೊಟ್ಟದ್ದು.
(ಮತ್ತಾ. 26. 36—56; ಮಾರ್ಕ 14. 32—50; ಯೋಹಾ.
18. 1—11.)

ತರುವಾಯ ಆತನು ಹೊರಟು ಪದ್ಧತಿಪ್ರಕಾರ
ಎಣ್ಣೇಮರಗಳ ಗುಡ್ಡಕ್ಕೆ ಹೋದನು. ಶಿಷ್ಯರೂ ಆತನ
ಹಿಂದೆ ಹೋದರು. ಆತನು ಕ್ಲುಪ್ತಸ್ಥಳಕ್ಕೆ ಬಂದಾಗ
ಅವರಿಗೆ—ನೀವು ಶೋಧನೆಗೆ ಒಳಗಾಗದಂತೆ ದೇವರ
ನ್ನು ಪ್ರಾರ್ಥಿಸಿರಿ ಎಂದು ಹೇಳಿದನು. ಆ ಮೇಲ
ಆತನು ಅವರನ್ನು ಬಿಟ್ಟು ಕಲ್ಲೆಸುಗೆಯಷ್ಟು ದೂರ
ಹೋಗಿ ಮೊಣಕಾಲೂರಿ—ತಂದೆಯೇ, ನಿನಗ
ಇಷ್ಟವಿದ್ದರೆ 2)ಈ ಪಾತ್ರೆಯನ್ನು ನನ್ನಿಂದ ತೊಲಗಿಸು
ಹೇಗೂ ನನ್ನ ಚಿತ್ತವಲ್ಲ, ನಿನ್ನ ಚಿತ್ತವೇ ಆಗಲ
ಅಂದನು. ಆಗ ಪರಲೋಕದಿಂದ ಬಂದ ಒಬ್ಬ ದೇವ
ದೂತನು ಆತನಿಗೆ ಕಾಣಿಸಿಕೊಂಡು ಆತನನ್ನು ಬಲ
ಪಡಿಸಿದನು. ಆತನು ಮನೋವ್ಯಥೆಯುಳ್ಳವನಾಗಿ
ಇನ್ನೂ ಆಸಕ್ತಿಯಿಂದ ಪ್ರಾರ್ಥಿಸುತ್ತಿರಲಾಗಿ ಆತನ
ಬೆವರು ಭೂಮಿಗೆ ಬೀಳುತ್ತಿರುವ ರಕ್ತದ ದೊಡ್ಡ ಹನಿ
ಗಳೋಪಾದಿಯಲ್ಲಿತ್ತು. ಆತನು ಪ್ರಾರ್ಥನೆ ಮುಗಿಸಿ
ಎದ್ದು ಶಿಷ್ಯರ ಬಳಿಗೆ ಬಂದು ದುಃಖಭಾರದಿಂದ ಇವ
ರಿಗೆ ನಿದ್ರೆಹತ್ತಿರುವದನ್ನು ಕಂಡು ಅವರಿಗೆ—ನೀವು
ನಿದ್ರೆಮಾಡುವದೇನು? ಏಳಿರಿ, ಶೋಧನೆಗೆ ಒಳಗಾಗ
ದಂತೆ ಪ್ರಾರ್ಥಿಸಿರಿ ಎಂದು ಹೇಳಿದನು.

ಆತನು ಇನ್ನೂ ಮಾತಾಡುತ್ತಿರಲು ಇಗೋ, ಜನರ
ಗುಂಪು ಕಾಣಿಸಿತು. ಹನ್ನೆರಡು ಮಂದಿ ಶಿಷ್ಯರಲ್ಲಿ
ಒಬ್ಬನಾದ ಯೂದನೆಂಬವನು ಆ ಜನರ ಮುಂದ
ಮುಂದೆ ನಡೆದನು. ಅವನು ಯೇಸುವಿಗೆ ಮುದ್ದಿಡು
ವದಕ್ಕಾಗಿ ಆತನ ಬಳಿಗೆ ಬರಲು ಯೇಸು ಅವನಿಗೆ—
ಯೂದನೇ, ಮುದ್ದಿಟ್ಟು ಮನುಷ್ಯಕುಮಾರನನ್ನು
ಹಿಡುಕೊಡುತ್ತೀಯಾ ಎಂದು ಕೇಳಿದನು. ಆತನ ಸುತ್ತ
ಲಿದ್ದವರು ಮುಂದೆ ಆಗುವದನ್ನು ತಿಳಿದು—ಸ್ವಾಮೀ
ನಾವು ಕತ್ತಿಯಿಂದ ಹೊಡೆಯೋಣೋ ಎಂದು ಕೇಳಿ
ದರು. ಅವರಲ್ಲಿ ಒಬ್ಬನು ಮಹಾಯಾಜಕನ ಆಳನ್ನು
ಹೊಡೆದು ಅವನ ಬಲಗಿವಿಯನ್ನು ಕಡಿದುಹಾಕಿದನು.
ಆದರೆ ಯೇಸು—ಇಷ್ಟಕ್ಕೇ ಬಿಡಿರಿ ಎಂದು ಹೇಳಿ ಆ
ಕಿವಿಯನ್ನು ಮುಟ್ಟಿ ಅವನಿಗೆ ವಾಸಿಮಾಡಿದನು.

1) ಅಥವಾ, ಪಾತ್ರೆಯಲ್ಲಿರುವದು. 2) ಅಂದರೆ, ಈ ಕಷ್ಟಾನುಭವವನ್ನು.

52 ಬಳಿಕ ಯೇಸು ತನ್ನನ್ನು ಹಿಡಿಯುವದಕ್ಕೆ ಬಂದ
ಮಹಾಯಾಜಕರಿಗೂ ದೇವಾಲಯದ ಕಾವಲಿನ ದಳ
ವಾಯಿಗಳಿಗೂ ಸಭೆಯ ಹಿರಿಯರಿಗೂ—ಕಳ್ಳನನ್ನು
ಹಿಡಿಯುವದಕ್ಕೆ ಬಂದಂತೆ ಕತ್ತಿಗಳನ್ನೂ ದೊಣ್ಣೆ
53 ಗಳನ್ನೂ ತೆಗೆದುಕೊಂಡು ಬಂದಿರಾ? ನಾನು ದಿನಾಲು
ದೇವಾಲಯದಲ್ಲಿ ನಿಮ್ಮ ಸಂಗಡ ಇದ್ದಾಗ ನೀವು ನನ್ನ
ಮೇಲೆ ಕೈಹಾಕಲಿಲ್ಲ; ಆದರೆ ಇದು ನಿಮ್ಮ ಕಾಲ,
ಇದು ಅಂಧಕಾರದ ದೊರೆತನ ಎಂದು ಹೇಳಿದನು.

ಪೇತ್ರನು ಯೇಸುವನ್ನು ನಾನರಿಯೆನೆಂದು ಹೇಳಿದ್ದು; ಹಿರೀಸಭೆಯವರು ಯೇಸುವನ್ನು ಮರಣದಂಡನೆಗೆ ತಕ್ಕವನೆಂದು ತೀರ್ಪುಮಾಡಿ ಅಧಿಪತಿಯ ಬಳಿಗೆ ತೆಗೆದುಕೊಂಡುಹೋದದ್ದು.
(ಮತ್ತಾ. 26. 57—75; ಮಾರ್ಕ 14. 53—72;
ಯೋಹಾ. 18. 12—27.)

54 ಅವರು ಆತನನ್ನು ಹಿಡಿದು ಸಾಗಿಸಿಕೊಂಡು ಮಹಾ
ಯಾಜಕನ ಮನೆಯೊಳಕ್ಕೆ ತೆಗೆದುಕೊಂಡು ಹೋ
ದರು; ಪೇತ್ರನು ದೂರದಿಂದ ಹಿಂದೆಹಿಂದೆ ಹೋಗುತ್ತಿ
55 ದ್ದನು. ಅಂಗಳದ ನಡುವೆ ಅವರು ಬೆಂಕಿ ಹೊತ್ತಿಸಿ
ಒಟ್ಟಾಗಿ ಕೂತುಕೊಳ್ಳಲು ಅವರ ನಡುವೆ ಪೇತ್ರನೂ
56 ಕೂತುಕೊಂಡನು. ಅವನು ಬೆಳಕಿಗೆ ಮುಖವಾಗಿ
ಕೂತಿರುವಾಗ ಒಬ್ಬ ದಾಸಿಯು ಅವನನ್ನು ಕಂಡು
ಅವನನ್ನು ದೃಷ್ಟಿಸಿ ನೋಡಿ—ಇವನು ಸಹ ಅವನ
57 ಸಂಗಡ ಇದ್ದವನು ಅಂದಳು. ಆದರೆ ಅವನು—ನಾನು
58 ಅವನನ್ನು ಅರಿಯೆನಮ್ಮಾ ಎಂದು ಹೇಳಿದನು. ತುಸ
ಹೊತ್ತಿನ ಮೇಲೆ ಒಬ್ಬನು ಅವನನ್ನು ಕಂಡು—ನೀನು
ಸಹ ಅವರಲ್ಲಿ ಒಬ್ಬನು ಅನ್ನಲು ಪೇತ್ರನು—ಅಲ್ಲಪ್ಪಾ
59 ಅಂದನು. ಹೆಚ್ಚುಕಡಿಮೆ ಒಂದು ಘಂಟೆ ಹೊತ್ತಿನ
ಮೇಲೆ ಇನ್ನೊಬ್ಬನು—ನಿಶ್ಚಯವಾಗಿ ಇವನು ಸಹ
ಅವನ ಸಂಗಡ ಇದ್ದವನು, ಇವನು ಗಲಿಲಾಯದವ
60 ನಷ್ಟೆ ಎಂದು ದೃಢವಾಗಿ ಹೇಳಿದನು. ಆದರೆ ಪೇತ್ರನು
ನೀನು ಹೇಳುವದೇನೋ ನಾನರಿಯೆನಪ್ಪಾ ಅಂದನು.
ಅವನು ಈ ಮಾತನ್ನು ಆಡುತ್ತಿರುವಾಗಲೇ ಕೋಳಿ
61 ಕೂಗಿತು. ಸ್ವಾಮಿಯು ಹಿಂತಿರುಗಿಕೊಂಡು ಪೇತ್ರ
ನನ್ನು ದೃಷ್ಟಿಸಿ ನೋಡಿದನು. ಆಗ ಪೇತ್ರನು—
ಈಹೊತ್ತು ಕೋಳಿ ಕೂಗುವದಕ್ಕಿಂತ ಮುಂಚೆ
ಮೂರು ಸಾರಿ ನನ್ನ ವಿಷಯವಾಗಿ ಅವನನ್ನು ಅರಿಯೆ
ನೆಂಬದಾಗಿ ಹೇಳುವಿ ಎಂದು ಸ್ವಾಮಿ ನುಡಿದ ಮಾತ
62 ನ್ನು ನೆನಸಿ ಹೊರಗೆ ಹೋಗಿ ಬಹು ವ್ಯಥೆಪಟ್ಟು
ಅತ್ತನು.
63 ಆ ಮೇಲೆ ಯೇಸುವನ್ನು ಹಿಡಿದವರು ಆತನನ್ನು
64 ಹಾಸ್ಯಮಾಡುತ್ತಾ ಆತನಿಗೆ ಮುಸುಕುಹಾಕಿ ಹೊ
ಡೆದು—ನಿನ್ನನ್ನು ಹೊಡೆದವನಾರು? ಪ್ರವಾದನೆ ಹೇಳು
65 ಎಂದು ಆತನನ್ನು ಕೇಳಿದರು. ಆತನಿಗೆ ಇನ್ನೂ ಅನೇಕ
ದೂಷಣೆಯ ಮಾತುಗಳನ್ನಾಡಿದರು.
66 ಬೆಳಗಾಗುವಾಗ ಯೆಹೂದ್ಯರ ಹಿರೀಸಭೆಯವರು
ಅಂದರೆ ಮಹಾಯಾಜಕರೂ ಶಾಸ್ತ್ರಿಗಳೂ ಕೂಡಿ ಆತ
ನನ್ನು ತಮ್ಮ ನ್ಯಾಯವಿಚಾರಣಾಸಭೆಗೆ ತೆಗೆದುಕೊಂಡು
67 ಬಂದು—ನೀನು ಕ್ರಿಸ್ತನಾಗಿದ್ದರೆ ನಮಗೆ ಹೇಳು
ಅಂದರು. ಆತನು ಅವರಿಗೆ—ನಾನು ನಿಮಗೆ ಹೇಳಿದರೆ
ನೀವು ನಂಬುವದಿಲ್ಲ, ನಾನು ನಿಮ್ಮನ್ನು ಏನಾದರೂ 68
ಕೇಳಿದರೆ ನೀವು ಉತ್ತರಕೊಡುವದಿಲ್ಲ. ಆದರೆ ಇಂದಿ 69
ನಿಂದ ಮನುಷ್ಯಕುಮಾರನು ಸರ್ವಶಕ್ತನಾದ ದೇವರ
ಬಲಗಡೆಯಲ್ಲಿ ಆಸೀನನಾಗಿರುವನು ಎಂದು ಹೇಳಿ
ದನು. ಆಗ ಎಲ್ಲರು—ಹಾಗಾದರೆ ನೀನು ದೇವರ 70
ಕುಮಾರನೋ ಎಂದು ಕೇಳಲು ಆತನು ಅವರಿಗೆ—
ನನ್ನನ್ನು ಅವನೇ ಎಂದು ನೀವೇ ಹೇಳುತ್ತೀರಿ ಎಂದು
ಹೇಳಿದನು. ಅದಕ್ಕೆ ಅವರು—ನಮಗೆ ಸಾಕ್ಷಿ ಇನ್ನು 71
ಯಾತಕ್ಕೆ ಬೇಕು? ನಾವೇ ಇವನ ಬಾಯಿಂದ ಕೇಳಿ
ದೆವಲ್ಲಾ ಅಂದರು.

ಪಿಲಾತನು ಯೇಸುವನ್ನು ವಿಚಾರಿಸಿ ಆತನಲ್ಲಿ ಅಪರಾಧವಿಲ್ಲವೆಂದು ಕಂಡರೂ ಆತನಿಗೆ ಮರಣದಂಡನೆಯನ್ನು ವಿಧಿಸಿದ್ದು.
(ಮತ್ತಾ. 27. 2, 11—31; ಮಾರ್ಕ 15. 1—20;
ಯೋಹಾ. 18. 28—19. 16.)

23 ಅಲ್ಲಿ ಕೂಡಿದ್ದವರೆಲ್ಲರು ಎದ್ದು ಆತನನ್ನು
ಪಿಲಾತನ ಬಳಿಗೆ ತೆಗೆದುಕೊಂಡು ಹೋಗಿ—
ಇವನು ತಾನೇ ಕ್ರಿಸ್ತನೆಂಬ ಒಬ್ಬ ಅರಸನಾಗಿದ್ದೇನೆಂದು 2
ಹೇಳುತ್ತಾ ಕೈಸರನಿಗೆ ತೆರಿಗೆಕೊಡಬಾರದೆಂದು ಬೋಧಿ
ಸುತ್ತಾ ನಮ್ಮ ದೇಶದವರ ಮನಸ್ಸು ಕೆಡಿಸುವದನ್ನು
ನಾವು ಕಂಡೆವು ಎಂಬದಾಗಿ ಆತನ ಮೇಲೆ ದೂರು
ಹೇಳುವದಕ್ಕೆ ತೊಡಗಿದರು. ಪಿಲಾತನು ಆತನನ್ನು— 3
ನೀನು ಯೆಹೂದ್ಯರ ಅರಸನು ಹೌದೋ ಎಂದು
ಕೇಳಲು ಆತನು—ನೀನೇ ಹೇಳಿದ್ದೀ ಎಂದು ಉತ್ತರ
ಕೊಟ್ಟನು. ಪಿಲಾತನು ಮಹಾಯಾಜಕರಿಗೂ ಜನರ 4
ಗುಂಪಿಗೂ—ಈ ಮನುಷ್ಯನಲ್ಲಿ ನನಗೆ ಯಾವ ಅಪ
ರಾಧವೂ ಕಾಣಿಸುವದಿಲ್ಲವೆಂದು ಹೇಳಿದನು. ಅದಕ್ಕೆ 5
ಅವರು—ಗಲಿಲಾಯದಲ್ಲಿ ಪ್ರಾರಂಭಮಾಡಿ ಇಲ್ಲಿಯ
ವರೆಗೂ ಯೂದಾಯ ಸೀಮೆಯಲ್ಲೆಲ್ಲಾ ಇವನು
ಬೋಧನೆಮಾಡುತ್ತಾ ಜನರ ಮನಸ್ಸನ್ನು ಕದಲಿಸು
ತ್ತಾನೆ ಎಂದು ಇನ್ನೂ ಒತ್ತಿಹೇಳಿದರು. ಇದನ್ನು ಪಿಲಾ 6
ತನು ಕೇಳಿ—ಈ ಮನುಷ್ಯನು ಗಲಿಲಾಯದವನೋ
ಎಂದು ವಿಚಾರಿಸಿ ಇವನು ಹೆರೋದನ ಅಧಿಕಾರಕ್ಕೆ 7
ಒಳಪಟ್ಟವನು ಎಂದು ತಿಳುಕೊಂಡು ಆತನನ್ನು ಹೆರೋ
ದನ ಬಳಿಗೆ ಕಳುಹಿಸಿದನು. ಹೆರೋದನು ಆ ದಿವಸ
ಗಳಲ್ಲಿ ಯೆರೂಸಲೇಮಿನಲ್ಲೇ ಇದ್ದನು.
ಹೆರೋದನು ಯೇಸುವನ್ನು ನೋಡಿದಾಗ ಬಹಳ 8
ಸಂತೋಷಪಟ್ಟನು; ಯಾಕಂದರೆ ಆತನ ವಿಷಯ
ವಾಗಿ ಅನೇಕ ಸಂಗತಿಗಳನ್ನು ಕೇಳಿದ್ದರಿಂದ ಆತನನ್ನು
ಕಾಣಬೇಕೆಂದು ಬಹುಕಾಲದಿಂದ ಅಪೇಕ್ಷಿಸಿದ್ದನು.
ಆತನಿಂದ ಯಾವದಾದರೂ ಒಂದು ಸೂಚಕಕಾರ್ಯ
ವಾಗುವದನ್ನು ನೋಡಬೇಕೆಂದು ನಿರೀಕ್ಷಿಸಿದನು.
ಆದರೆ ಅವನು ಅನೇಕ ಮಾತುಗಳಿಂದ ಆತನನ್ನು ಪ್ರಶ್ನೆ 9
ಮಾಡಿದಾಗ್ಯೂ ಆತನು ಅವನಿಗೆ ಏನೂ ಉತ್ತರಕೊಡ
ಲಿಲ್ಲ. ಮಹಾಯಾಜಕರೂ ಶಾಸ್ತ್ರಿಗಳೂ ನಿಂತು 10
ಕೊಂಡು ಆತನ ಮೇಲೆ ಬಹು ಬಲವಾಗಿ ದೂರು
ಹೇಳುತ್ತಿದ್ದರು. ಕಡೆಗೆ ಹೆರೋದನು ತನ್ನ ಸಿಪಾಯಿ 11
ಗಳನ್ನು ಕೂಡಿಕೊಂಡು ಆತನನ್ನು ತಿರಸ್ಕರಿಸಿ ಹಾಸ್ಯ
ಮಾಡಿ ಶೋಭಾಯಮಾನವಾದ ಉಡುಪನ್ನು ಹಾಕಿಸಿ

12 ಪಿಲಾತನ ಬಳಿಗೆ ತಿರಿಗಿ ಕಳುಹಿಸಿಕೊಟ್ಟನು. ಅದೇ
ದಿನದಲ್ಲಿ ಹೆರೋದನೂ ಪಿಲಾತನೂ ಒಬ್ಬರಿಗೊಬ್ಬರು
ಸ್ನೇಹಿತರಾದರು; ಅದಕ್ಕಿಂತ ಮೊದಲು ವೈರಿಗಳಾಗಿ
ದ್ದರು.
13 ತರುವಾಯ ಪಿಲಾತನು ಮಹಾಯಾಜಕರನ್ನೂ ಅಧಿ
14 ಕಾರಿಗಳನ್ನೂ ಪ್ರಜೆಗಳನ್ನೂ ಒಟ್ಟಾಗಿ ಕರಸಿ ಅವರಿಗೆ—
ಈ ಮನುಷ್ಯನು ಪ್ರಜೆಗಳನ್ನು ತಿರುಗಿಬೀಳುವಂತೆ
ಮಾಡುವವನು ಎಂದು ಇವನನ್ನು ನನ್ನ ಬಳಿಗೆ ತಂದಿ
ರಲ್ಲಾ; ನೀವು ಇವನ ಮೇಲೆ ತಂದ ದೂರುಗಳ ವಿಷಯ
ವಾಗಿ ನಾನು ನಿಮ್ಮ ಮುಂದೆಯೇ ವಿಚಾರಣೆಮಾಡಿದರೂ
ಇವನಲ್ಲಿ ಒಂದು ತಪ್ಪಾದರೂ ನನಗೆ ಕಾಣಲಿಲ್ಲ.
15 ಹೆರೋದನಿಗಾದರೂ ಕಾಣಲಿಲ್ಲ; ಅವನು ಇವನನ್ನು
ಹಿಂತಿರುಗಿ ನಮ್ಮ ಬಳಿಗೆ ಕಳುಹಿಸಿದನಲ್ಲಾ. ಇವನು
ಮರಣದಂಡನೆಗೆ ಯೋಗ್ಯವಾದದ್ದೇನೂ ಮಾಡಿದವ
16 ನಲ್ಲವೆಂದಾಯಿತು. ಆದದರಿಂದ ನಾನು ಇವನನ್ನು
ಹೊಡಿಸಿ ಬಿಟ್ಟುಬಿಡುತ್ತೇನೆ ಎಂದು ಹೇಳಿದನು1).
18 ಆದರೆ ಅವರು—ಅವನನ್ನು ಕೊಲ್ಲಿಸು, ನಮಗೆ ಬರಬ್ಬ
19 ನನ್ನು ಬಿಟ್ಟುಕೊಡು ಎಂದು ಒಟ್ಟಾಗಿ ಕೂಗಿದರು. ಈ
ಬರಬ್ಬನನ್ನು ಆ ಪಟ್ಟಣದಲ್ಲಿ ನಡೆದ ಒಂದಾನೊಂದು
ದಂಗೆಯ ನಿಮಿತ್ತವಾಗಿಯೂ ಕೊಲೆಯ ನಿಮಿತ್ತವಾ
20 ಗಿಯೂ ಸೆರೆಮನೆಯಲ್ಲಿ ಹಾಕಿದ್ದರು. ಪಿಲಾತನು
ಯೇಸುವನ್ನು ಬಿಡಿಸಬೇಕೆಂದು ಮನಸ್ಸುಳ್ಳವನಾ
21 ಗಿದ್ದು ತಿರಿಗಿ ಅವರ ಸಂಗಡ ಮಾತಾಡಿದನು. ಆದರೆ
ಅವರು—ಅವನನ್ನು ಶಿಲುಬೆಗೆ ಹಾಕಿಸು, ಶಿಲುಬೆಗೆ
22 ಹಾಕಿಸು ಎಂದು ಕೂಗುತ್ತಿದ್ದರು. ಅವನು ಮೂರ
ನೆಯ ಸಾರಿ—ಯಾಕೆ? ಕೆಟ್ಟದ್ದೇನು ಮಾಡಿದನು?
ನಾನು ಇವನಲ್ಲಿ ಮರಣದಂಡನೆಗೆ ತಕ್ಕ ಅಪರಾಧ
ವೇನೂ ಕಾಣಲಿಲ್ಲ; ಆದದರಿಂದ ಇವನನ್ನು ಹೊಡಿಸಿ
23 ಬಿಟ್ಟುಬಿಡುತ್ತೇನೆ ಎಂದು ಅವರಿಗೆ ಹೇಳಿದನು. ಆದರೆ
ಅವರು ದೊಡ್ಡ ಕೂಗಾಟ ಮಾಡುತ್ತಾ—ಅವನನ್ನು
ಶಿಲುಬೆಗೆ ಹಾಕಿಸಬೇಕೆಂದು ಕೇಳಿಕೊಂಡು ಬಲವಂತ
24 ಮಾಡಿದರು; ಅವರ ಕೂಗಾಟವು ಗೆದ್ದಿತು. ಪಿಲಾ
ತನು—ನೀವು ಕೇಳಿಕೊಂಡಂತೆ ಆಗಲಿ ಎಂದು ನಿರ್ಣ
25 ಯಿಸಿ ದಂಗೆ ಕೊಲೆಗಳ ನಿಮಿತ್ತವಾಗಿ ಸೆರೆಮನೆಯಲ್ಲಿ
ಬಿದ್ದ ಆ ಮನುಷ್ಯನನ್ನು ಅವರು ಕೇಳಿಕೊಳ್ಳುತ್ತಿದ್ದ
ಪ್ರಕಾರ ಬಿಟ್ಟುಕೊಟ್ಟು ಯೇಸುವನ್ನು ಅವರ ಚಿತ್ತಾ
ನುಸಾರ ಒಪ್ಪಿಸಿದನು.

ಯೇಸುವನ್ನು ಶಿಲುಬೆಗೆ ಹಾಕಿದ್ದು; ಆತನು ಪ್ರಾಣಬಿಟ್ಟದ್ದು.
(ಮತ್ತಾ. 27. 32—56; ಮಾರ್ಕ 15. 21—41;
ಯೋಹಾ. 19. 17—30.)

26 ಅವರು ಆತನನ್ನು ತೆಗೆದುಕೊಂಡು ಹೋಗುತ್ತಿರು
ವಾಗ ಹೊಲದಿಂದ ಬರುತ್ತಿದ್ದ ಕುರೇನೆಪಟ್ಟಣದ
ಸೀಮೋನನೆಂಬವನನ್ನು ಹಿಡಿದು ಶಿಲುಬೆಯನ್ನು ಅವನ
ಮೇಲೆ ಇಟ್ಟು ಯೇಸುವಿನ ಹಿಂದೆ ಹೊತ್ತುಕೊಂಡು
ಬರುವ ಹಾಗೆ ಮಾಡಿದರು.

ಜನರೂ ಸ್ತ್ರೀಯರೂ ದೊಡ್ಡ ಗುಂಪಾಗಿ ಆ
ಹಿಂದೆ ಬಂದರು. ಆ ಸ್ತ್ರೀಯರು ಎದೆಬಡುಕೊಳ್ಳು
ಆತನ ವಿಷಯದಲ್ಲಿ ಗೋಳಾಡುತ್ತಾ ಇದ್ದರು. ಯೇ
ಅವರ ಕಡೆಗೆ ತಿರುಗಿಕೊಂಡು—ಯೆರೂಸಲೇವಿ
ಸ್ತ್ರೀಯರೇ, ನನಗೋಸ್ಕರ ಅಳಬೇಡಿರಿ, ನಿಮಗೋ
ರವೂ ನಿಮ್ಮ ಮಕ್ಕಳಿಗೋಸ್ಕರವೂ ಅಳಿರಿ. ಯಾ
ದರೆ ಬಂಜೆಯರೂ ಬಸುರಾಗದವರೂ ಮೊಲೆಕುಡಿ
ದವರೂ ಧನ್ಯರು ಎಂದು ಜನರು ಹೇಳುವ ದಿವಸಗ
ಬರುತ್ತವೆ. ಆ ಕಾಲದಲ್ಲಿ ಜನರು—ಬೆಟ್ಟಗಳೆ
ನಮ್ಮ ಮೇಲೆ ಬೀಳಿರಿ; ಗುಡ್ಡಗಳೇ, ನಮ್ಮನ್ನು ಮು
ಕೊಳ್ಳಿರಿ ಅನ್ನುವರು. ಮರ ಹಸಿಯಾಗಿರುವಾ
ಇಷ್ಟೆಲ್ಲಾ ಮಾಡಿದರೆ ಮರ ಒಣಗಿರುವಾಗ ಏನಾ
ಬಹುದು? ಅಂದನು.
ಆತನ ಸಂಗಡ ಕೊಲ್ಲುವದಕ್ಕಾಗಿ ದುಷ್ಕರ್ಮಿಗಳ
ಗಿದ್ದ ಬೇರೆ ಇಬ್ಬರನ್ನೂ ತೆಗೆದುಕೊಂಡು ಹೋದರ
ಅವರು ಕಪಾಲವೆಂಬ ಸ್ಥಳಕ್ಕೆ ಬಂದಾಗ ಅ
ಆತನನ್ನೂ ಆ ದುಷ್ಕರ್ಮಿಗಳನ್ನೂ ಶಿಲುಬೆಗೆ ಹಾ
ದರು, ಒಬ್ಬನನ್ನು ಆತನ ಬಲಗಡೆಯಲ್ಲಿ ಒಬ್ಬನನ
ಆತನ ಎಡಗಡೆಯಲ್ಲಿ ಹಾಕಿದರು. ಆಗ ಯೇಸು—
ತಂದೆಯೇ, ಅವರಿಗೆ ಕ್ಷಮಿಸು; ತಾವು ಏನ
ಮಾಡುತ್ತೇವೆಂಬದನ್ನು ಅರಿಯರು ಅಂದನು.
ಮೇಲೆ ಆತನ ಬಟ್ಟೆಗಳನ್ನು ಪಾಲುಮಾ
ಚೀಟುಹಾಕಿದರು. ಜನರು ನೋಡುತ್ತಾ ನಿಂತರು
ಇದಲ್ಲದೆ ಅಧಿಕಾರಿಗಳು ಹಾಸ್ಯಮಾಡಿ—ಅವನ
ಮತ್ತೊಬ್ಬರನ್ನು ರಕ್ಷಿಸಿದನು; ಅವನು ದೇವರಾರಿ
ಕೊಂಡ ಕ್ರಿಸ್ತನು ಆಗಿದ್ದರೆ ತನ್ನನ್ನು ತಾನೇ ರಕ್ಷಿ
ಕೊಳ್ಳಲಿ ಅಂದರು. ಸಿಪಾಯಿಗಳೂ ಆತನನ
ಹಾಸ್ಯಮಾಡಿದರು; ಅವರು ಆತನ ಹತ್ತರ ಬಂದ
ಹುಳಿಮದ್ಯವನ್ನು ತೋರಿಸಿ—ನೀನು ಯೆಹೂದ್ಯ
ಅರಸನಾಗಿದ್ದರೆ ನಿನ್ನನ್ನು ರಕ್ಷಿಸಿಕೋ ಅಂದರು
ಇದಲ್ಲದೆ ಆತನ ಮೇಲ್ಗಡೆಯಲ್ಲಿ—ಇವನು ಯೆಹೂ
ದ್ಯರ ಅರಸನು ಎಂಬದಾಗಿ ಒಂದು ವಿಳಾಸವಿತ್ತು.
ತೂಗಹಾಕಿದ್ದ ಆ ದುಷ್ಕರ್ಮಿಗಳಲ್ಲಿ ಒಬ್ಬನು ಆ
ನನ್ನು ದೂಷಿಸಿ—ನೀನು ಬರಬೇಕಾದ ಕ್ರಿಸ್ತನಲ್ಲವೆ
ನಿನ್ನನ್ನು ರಕ್ಷಿಸಿಕೋ, ನಮ್ಮನ್ನೂ ರಕ್ಷಿಸು ಎಂದ
ಹೇಳಿದ್ದಕ್ಕೆ ಎರಡನೆಯವನು ಅವನನ್ನು ಗದರಿಸಿ—
ನೀನು ಇದೇ ದಂಡನೆಯಲ್ಲಿರುವಾಗಲೂ ದೇವರಿ
ಹೆದರುವದಿಲ್ಲವೋ? ನಾವಂತೂ ನ್ಯಾಯವಾಗಿ ದಂಡ
ಯಲ್ಲಿದ್ದೇವೆ, ನಾವು ಮಾಡಿದ್ದಕ್ಕೆ ತಕ್ಕ ಪ್ರತಿಫಲವನ್ನು
ಹೊಂದುತ್ತಾ ಇದ್ದೇವೆ; ಈತನಾದರೋ ಅಲ್ಲದ್ದೇನ
ಮಾಡಲಿಲ್ಲ ಎಂದು ಹೇಳಿ—ಯೇಸುವೇ, ನೀನು ನಿನ
2)ರಾಜ್ಯವನ್ನು ಪಡೆದವನಾಗಿ ಬರುವಾಗ ನನ್ನನ
ನೆನಸಿಕೋ ಅಂದನು. ಅದಕ್ಕೆ ಯೇಸು—ಈಹೊತ್ತೆ
ನನ್ನ ಸಂಗಡ ಪರದೈಸಿನಲ್ಲಿರುವಿ ಎಂದು ನಿನಗೆ ಸತ
ವಾಗಿ ಹೇಳುತ್ತೇನೆ ಎಂದು ಉತ್ತರಕೊಟ್ಟನು. ಇಷ
ರಲ್ಲಿ ಹೆಚ್ಚುಕಡಿಮೆ ಮಧ್ಯಾಹ್ನವಾಯಿತು. ಆಗಲಿಂ
ಸೂರ್ಯನು ಕಾಂತಿಗುಂದಿ 3)ಮೂರು ಘಂಟೆಯ

1) ಕೆಲವು ಪ್ರತಿಗಳಲ್ಲಿ 17ನೆಯ ವಚನ ಉಂಟು; ಅದರಲ್ಲಿ—ಅಧಿಪತಿಯು ಹಬ್ಬದಕಾಲದಲ್ಲಿ ಸೆರೆಯವರೊಳಗೆ ಒಬ್ಬನನ್ನು ಬೇಕಾಗಿತ್ತೆಂದು ಬರೆದದೆ. 2) ಕೆಲವು ಪ್ರತಿಗಳಲ್ಲಿ ರಾಜ್ಯಾಧಿಕಾರಕ್ಕೆ ಬರುವಾಗ ಎಂದು ಬರೆದದೆ. 3) ಮೂಲ: ಒಂಭತ್ತು

ತನಕ ಆ ದೇಶದ ಮೇಲೆಲ್ಲಾ ಕತ್ತಲೆಕವಿಯಿತು;
ಇದಲ್ಲದೆ ದೇವಾಲಯದ ತೆರೆಯು ನಡುವೆ ಹರಿದು
ಹೋಯಿತು. ಆ ಮೇಲೆ ಯೇಸು—ತಂದೆಯೇ, ನನ್ನ
ಆತ್ಮವನ್ನು ನಿನ್ನ ಕೈಗೆ ಒಪ್ಪಿಸಿಕೊಡುತ್ತೇನೆ ಎಂದು
ಮಹಾಧ್ವನಿಯಿಂದ ಕೂಗಿದನು; ಇದನ್ನು ಹೇಳಿದ
ಮೇಲೆ ಪ್ರಾಣಬಿಟ್ಟನು. ಶತಾಧಿಪತಿಯು ನಡೆದ
ಸಂಗತಿಯನ್ನು ನೋಡಿ—ಈ ಮನುಷ್ಯನು ಸತ್ಪುರು
ಷನೇ ನಿಜ ಎಂದು ದೇವರನ್ನು ಕೊಂಡಾಡಿದನು. ಈ
ನೋಟಕ್ಕಾಗಿ ಕೂಡಿಬಂದಿದ್ದ ಜನರೆಲ್ಲರು ನಡೆದ
ಸಂಗತಿಯನ್ನು ನೋಡಿ ಎದೆಬಡುಕೊಳ್ಳುತ್ತಾ ಹಿಂತಿ
ರುಗಿ ಹೋದರು. ಇದಲ್ಲದೆ ಆತನ ಪರಿಚಿತಿಯವ
ರೆಲ್ಲರೂ ಗಲಿಲಾಯದಿಂದ ಆತನ ಹಿಂದೆ ಬಂದಿದ್ದ
ಸ್ತ್ರೀಯರೂ ದೂರದಲ್ಲಿ ನಿಂತು ಈ ಸಂಗತಿಗಳನ್ನು
ನೋಡುತ್ತಿದ್ದರು.

ಯೇಸುವನ್ನು ಸಮಾಧಿಯಲ್ಲಿಟ್ಟದ್ದು.
(ಮತ್ತಾ. 27. 57—61; ಮಾರ್ಕ 15. 42—47;
ಯೋಹಾ. 19. 38—42.)

-51 ಅರಿಮಥಾಯವೆಂಬ ಯೆಹೂದ್ಯರದೊಂದು ಪಟ್ಟ
ಣದ ಒಬ್ಬ ಮನುಷ್ಯನಿದ್ದನು; ಅವನ ಹೆಸರು ಯೋಸೇ
ಫನು. ಅವನು ಹಿರೀಸಭೆಯವನು, ಉತ್ತಮನು,
ಸತ್ಪುರುಷನು, ದೇವರ ರಾಜ್ಯವನ್ನು ಎದುರುನೋಡು
ತ್ತಿದ್ದವನು; ಅವನು ಹಿರೀಸಭೆಯವರ ಆಲೋಚನೆಗೂ
ಕೃತ್ಯಕ್ಕೂ ಸಮ್ಮತಿಪಟ್ಟಿರಲಿಲ್ಲ. ಅವನು ಪಿಲಾತನ
ಬಳಿಗೆ ಹೋಗಿ ಯೇಸುವಿನ ದೇಹವನ್ನು ತನಗೆ
ಕೊಡಿಸಬೇಕೆಂದು ಬೇಡಿಕೊಂಡು ಅದನ್ನು ಇಳಿಸಿ
ನಾರುಮಡಿಯಲ್ಲಿ ಸುತ್ತಿ ಬಂಡೆಯಲ್ಲಿ ತೋಡಿದ್ದ
ಸಮಾಧಿಯಲ್ಲಿ ಇಟ್ಟನು. ಅದರಲ್ಲಿ ಅದುವರೆಗೆ
ಯಾರನ್ನೂ ಮಲಗಿಸಿರಲಿಲ್ಲ. ಆ ದಿನವು ಸೌರಣೆಯ
ದಿನವಾಗಿತ್ತು; ಮತ್ತು ಸಬ್ಬತ್‌ದಿನ ಪ್ರಾರಂಭವಾಗು
ವದಕ್ಕೆ ಸ್ವಲ್ಪ ಹೊತ್ತು ಮಾತ್ರ ಇತ್ತು. ಹೀಗಿರುವಲ್ಲಿ
ಗಲಿಲಾಯದಿಂದ ಆತನ ಸಂಗಡ ಬಂದಿದ್ದ ಸ್ತ್ರೀಯರು
ಜೊತೆಯಲ್ಲಿ ಹಿಂದೆಯೇ ಹೋಗಿ ಆ ಸಮಾಧಿಯನ್ನೂ
ಆತನ ದೇಹವನ್ನಿಟ್ಟ ರೀತಿಯನ್ನೂ ನೋಡಿ ಹಿಂತಿರುಗಿ
ಬಂದು ಪರಿಮಳದ್ರವ್ಯಗಳನ್ನೂ ಸುಗಂಧತೈಲವನ್ನೂ
ಸಿದ್ಧಮಾಡಿಕೊಂಡರು.

ಯೇಸುವಿನ ಪುನರುತ್ಥಾನವು.
(ಮತ್ತಾ. 28. 1—8; ಮಾರ್ಕ 16. 1—18;
ಯೋಹಾ. 20. 1—23; ೧ ಕೊರಿ. 15. 5.)

ಆ ಸ್ತ್ರೀಯರು ಸಬ್ಬತ್‌ದಿನದಲ್ಲಿ ಧರ್ಮಸಿಯಮದ
4 ಪ್ರಕಾರ ವಿಶ್ರಮಿಸಿಕೊಂಡು ವಾರದ ಮೊದಲ
ನೆಯ ದಿವಸದಲ್ಲಿ ಇನ್ನೂ ಮೊಬ್ಬಿರುವಾಗ ತಾವು
ಸಿದ್ಧಮಾಡಿದ್ದ ಸುಗಂಧದ್ರವ್ಯಗಳನ್ನು ತೆಗೆದುಕೊಂಡು
ಸಮಾಧಿಗೆ ಬಂದರು. ಸಮಾಧಿಗೆ ಮುಚ್ಚಿದ
ಕಲ್ಲು ಅಲ್ಲಿಂದ ಉರುಳಿಸಲ್ಪಟ್ಟಿರುವದನ್ನು ಕಂಡು
ಒಳಕ್ಕೆ ಹೋಗಿ ನೋಡುವಲ್ಲಿ ಯೇಸುಸ್ವಾಮಿಯ 3
ದೇಹವು ಕಾಣಲಿಲ್ಲ. ಈ ವಿಷಯದಲ್ಲಿ ಅವರಿಗೆ 4
ಗಲಿಬಿಲಿ ಉಂಟಾದಾಗ ಹೊಳೆಯುವ ಉಡುಪನ್ನು
ಧರಿಸಿದ್ದ ಇಬ್ಬರು ಪುರುಷರು ಅಕಸ್ಮಾತ್ತಾಗಿ ಅವರ
ಬಳಿಯಲ್ಲಿ ನಿಂತುಕೊಂಡರು. ಆ ಸ್ತ್ರೀಯರು ಭಯ 5
ಹಿಡಿದವರಾಗಿ ತಮ್ಮ ಮುಖಗಳನ್ನು ನೆಲದ ಕಡೆಗೆ
ಬೊಗ್ಗಿಸಿಕೊಂಡಿರುವಾಗ ಆ ಪುರುಷರು ಅವರಿಗೆ—
ಸತ್ತವರೊಳಗೆ ಬದುಕಿರುವವನನ್ನು ಹುಡುಕುವ
ದೇನು? ಆತನು ಇಲ್ಲಿ ಇಲ್ಲ, ಎದ್ದಿದ್ದಾನೆ. ಆತನು 6-7
ಇನ್ನೂ ಗಲಿಲಾಯದಲ್ಲಿದ್ದಾಗ—ಮನುಷ್ಯಕುಮಾರ
ನು ಪಾಪಿಗಳಾದ ಮನುಷ್ಯರ ಕೈಗೆ ಒಪ್ಪಿಸಲ್ಪಟ್ಟು
ಶಿಲುಬೆಗೆ ಹಾಕಲ್ಪಟ್ಟು ಮೂರನೆಯ ದಿನದಲ್ಲಿ ಎದ್ದು
ಬರುವದು ಅಗತ್ಯವೆಂದು ನಿಮಗೆ ಹೇಳಿದ್ದನ್ನು ನೆನ
ಪಿಗೆ ತಂದುಕೊಳ್ಳಿರಿ ಎಂದು ಹೇಳಿದರು. ಸ್ತ್ರೀಯರು 8
ಆತನ ಮಾತುಗಳನ್ನು ನೆನಪಿಗೆ ತಂದುಕೊಂಡು ಸಮಾ 9
ಧಿಯ ಬಳಿಯಿಂದ ಹಿಂತಿರುಗಿ ಹೋಗಿ ಆ ಸಂಗತಿಗಳ
ನ್ನೆಲ್ಲಾ ಹನ್ನೊಂದು ಮಂದಿ ಶಿಷ್ಯರಿಗೂ ಉಳಿದವರೆಲ್ಲ
ರಿಗೂ ತಿಳಿಸಿದರು. ಆ ಸ್ತ್ರೀಯರು ಯಾರಂದರೆ ಮಗ್ದಲ 10
ದ ಮರಿಯಳು, ಯೋಹಾನಳು, ಯಾಕೋಬನ ತಾಯಿ
ಯಾದ ಮರಿಯಳು ಇವರೇ. ಇವರ ಜೊತೆಯಲ್ಲಿದ್ದ
ಬೇರೆ ಸ್ತ್ರೀಯರು ಸಹ ಅಪೊಸ್ತಲರಿಗೆ ಆ ಸಂಗತಿಗಳನ್ನು
ಹೇಳಿದರು. ಅವರು ನಂಬಲಿಲ್ಲ; ಆ ಮಾತುಗಳು 11
ಅವರಿಗೆ ಬರೀ ಹರಟೆಯಾಗಿ ತೋರಿದವು. [ಆದರೆ 12
ಪೇತ್ರನು ಎದ್ದು ಸಮಾಧಿಗೆ ಓಡಿಹೋಗಿ ಬೊಗ್ಗಿ
ನೋಡಿ ನಾರುಬಟ್ಟೆಗಳನ್ನು ಮಾತ್ರ ಕಂಡು ನಡೆದ
ಸಂಗತಿಗೆ ತನ್ನಲ್ಲಿ ಆಶ್ಚರ್ಯಪಡುತ್ತಾ ಹೊರಟು
ಹೋದನು.][1]

ಅದೇ ದಿನದಲ್ಲಿ ಶಿಷ್ಯರಲ್ಲಿ ಇಬ್ಬರು ಯೆರೂಸಲೇ 13
ಮಿಗೆ ಆರುವರೆ ಮೈಲು ದೂರದಲ್ಲಿದ್ದ ಎಮ್ಮಾಹು
ಎಂಬ ಹಳ್ಳಿಗೆ ಹೋಗುತ್ತಾ ಸಂಭವಿಸಿದ ಈ ಎಲ್ಲಾ 14
ಕಾರ್ಯಗಳ ವಿಷಯವಾಗಿ ಸಂಭಾಷಣೆಮಾಡುತ್ತಿದ್ದ
ರು. ಅವರು ಸಂಭಾಷಣೆಯಲ್ಲಿ ಚರ್ಚಿಸುತ್ತಿರುವಾಗ 15
ಯೇಸು ತಾನೇ ಹತ್ತಿರಕ್ಕೆ ಬಂದು ಅವರ ಜೊತೆಯಲ್ಲಿ
ಹೋದನು. ಆದರೆ ಅವರು ಆತನ ಗುರುತನ್ನು ಹಿಡಿ 16
ಯಲಿಲ್ಲ; ಅವರ ಕಣ್ಣುಕಟ್ಟಿದ ಹಾಗಾಯಿತು.
ಆತನು ಅವರನ್ನು—ನೀವು ಮಾರ್ಗದಲ್ಲಿ ಹೋಗುತ್ತಾ 17
ಚರ್ಚಿಸಿ ಮಾತಾಡಿಕೊಳ್ಳುವ ಈ ಸಂಗತಿಗಳೇನು
ಎಂದು ಕೇಳಲು ಅವರು ದುಃಖದ ಮುಖವುಳ್ಳವರಾಗಿ
ನಿಂತರು. ಅವರಲ್ಲಿ ಕ್ಲೆಯೊಫನೆಂಬವನು ಆತನನ್ನು— 18
ಯೆರೂಸಲೇಮಿಗೆ ಬಂದ ಪರಸ್ಥಳದವರೆಲ್ಲರಿಗೂ ಈ
ದಿವಸಗಳಲ್ಲಿ ಅದರೊಳಗೆ ನಡೆದಿರುವ ಸಂಗತಿಗಳು
ಗೊತ್ತಿರಲಾಗಿ ನಿನಗೆ ಮಾತ್ರ ಗೊತ್ತಿಲ್ಲವೋ ಎಂದು
ಕೇಳಲು ಆತನು ಅವರನ್ನು—ಯಾವ ಸಂಗತಿಗಳು 19
ಎಂದು ಕೇಳಿದನು. ಅದಕ್ಕೆ ಅವರು—ನಜರೇತಿನವ
ನಾದ ಯೇಸುವಿನ ಸಂಗತಿಗಳೇ; ಆತನು ದೇವರ
ಮುಂದೆ ಮತ್ತು ಮನುಷ್ಯರ ಮುಂದೆ ಕೃತ್ಯದಲ್ಲಿಯೂ
ಮಾತಿನಲ್ಲಿಯೂ ಸಮರ್ಥನಾದ ಪ್ರವಾದಿಯಾಗಿದ್ದನು.
ಆತನನ್ನು ಮಹಾಯಾಜಕರೂ ನಮ್ಮ ಅಧಿಕಾರಿಗಳೂ 20

1) ಈ ಅಧ್ಯಾಯದಲ್ಲಿ ಆವರಣಚಿಹ್ನೆಗಳೊಳಗೆ ಇರುವ ಮಾತುಗಳು ಕೆಲವು ಪ್ರಾಚೀನ ಪ್ರತಿಗಳಲ್ಲಿ ಸಿಕ್ಕುವದಿಲ್ಲ.

ಮರಣದಂಡನೆಗೆ ಒಪ್ಪಿಸಿಕೊಟ್ಟು ಶಿಲುಬೆಗೆ ಹಾಕಿಸಿ
21 ದರು. ನಾವಾದರೋ ಇಸ್ರಾಯೇಲ್ ಜನರನ್ನು
ಬಿಡಿಸತಕ್ಕವನು ಆತನೇ ಎಂದು ನಿರೀಕ್ಷಿಸಿಕೊಂಡಿದ್ದೆವು.
ಇದು ಮಾತ್ರವಲ್ಲದೆ ಆ ಕಾರ್ಯಗಳು ನಡೆದು ಈ
22 ಹೊತ್ತು ಮೂರನೆಯ ದಿನ; ಆದರೂ ನಮ್ಮಲ್ಲಿ ಕೆಲವು
ಮಂದಿ ಸ್ತ್ರೀಯರು ಬೆಳಗಾಗುವಾಗ ಸಮಾಧಿಯ ಬಳಿ
23 ಯಲ್ಲಿ ಇದ್ದು ಆತನ ದೇಹವನ್ನು ಕಾಣದೆ ಅಲ್ಲಿಂದ
ಬಂದು ತಮಗೆ ದೇವದೂತರ ದರ್ಶನವಾಯಿತೆಂತಲೂ
ಆತನು ಬದುಕುತ್ತಾನೆಂದು ಅವರು ಹೇಳಿದರೆಂತಲೂ
ತಿಳಿಸಿ ನಮಗೆ ಅತ್ಯಾಶ್ಚರ್ಯವನ್ನುಂಟುಮಾಡಿದರು.
24 ನಮ್ಮ ಸಂಗಡ ಇದ್ದವರಲ್ಲಿ ಕೆಲವರು ಸಮಾಧಿಗೆ
ಹೋಗಿ ಆ ಸ್ತ್ರೀಯರು ಹೇಳಿದ ಪ್ರಕಾರವೇ ಕಂಡರು;
ಆತನನ್ನು ಮಾತ್ರ ಕಾಣಲಿಲ್ಲ ಎಂದು ಹೇಳಿದರು.
25 ಆತನು ಅವರಿಗೆ—ಎಲಾ, ಬುದ್ಧಿಯಿಲ್ಲದವರೇ, ಪ್ರವಾ
ದಿಗಳು ಹೇಳಿದ್ದೆಲ್ಲವನ್ನು ನಂಬುವದರಲ್ಲಿ ಮಂದ
26 ಹೃದಯರೇ, ಕ್ರಿಸ್ತನು ಇಂಥ ಶ್ರಮೆಗಳನ್ನು ಅನು
ಭವಿಸಿ ತನ್ನ ಮಹಾಪದವಿಗೆ ಸೇರುವದು ಅಗತ್ಯ
27 ವಾಗಿತ್ತಲ್ಲವೇ ಎಂದು ಹೇಳಿ ಮೋಶೆಯ ಮತ್ತು
ಎಲ್ಲಾ ಪ್ರವಾದಿಗಳ ಗ್ರಂಥಗಳು ಮೊದಲುಗೊಂಡು
ಸಮಸ್ತಗ್ರಂಥಗಳಲ್ಲಿ ತನ್ನ ವಿಷಯವಾಗಿರುವ ಸೂಚನೆ
28 ಗಳನ್ನು ಅವರಿಗೆ ವಿವರಿಸಿದನು. ಅವರು ಹೋಗು
ತ್ತಿರುವ ಹಳ್ಳಿಯ ಸಮೀಪಕ್ಕೆ ಬಂದಾಗ ಆತನು
ಇನ್ನೂ ಮುಂದಕ್ಕೆ ಹೋಗುವವನಂತೆ ಕಾಣಿಸಿದನು.
29 ಆದರೆ ಅವರು—ನಮ್ಮ ಸಂಗಡ ಇರು, ಸಂಜೆಯಾ
ಯಿತು, ಹೊತ್ತು ಇಳಿಯುತ್ತಾ ಬಂತು ಎಂದು ಆತನಿಗೆ
ಹೇಳಿ ಬಲವಂತಮಾಡಲು ಆತನು ಅವರ ಕೂಡ ಇರು
30 ವದಕ್ಕೆ ಊರೊಳಕ್ಕೆ ಹೋದನು. ಆತನು ಅವರ
ಸಂಗಡ ಊಟಕ್ಕೆ ಕೂತುಕೊಂಡಾಗ ರೊಟ್ಟಿಯನ್ನು
ತೆಗೆದುಕೊಂಡು ದೇವರ ಸ್ತೋತ್ರಮಾಡಿ ಮುರಿದು
ಅವರಿಗೆ ಕೊಡುತ್ತಿರಲಾಗಿ ಅವರ ಕಣ್ಣುಗಳು ತೆರೆದವು,
31 ಅವರು ಆತನ ಗುರುತನ್ನು ಹಿಡಿದರು; ಆತನು ಅವರ
32 ಕಣ್ಣಿಗೆ ಮಾಯವಾದನು. ಆಗ ಅವರು ಒಬ್ಬರಿ
ಗೊಬ್ಬರು—ಆತನು ದಾರಿಯಲ್ಲಿ ನಮ್ಮ ಸಂಗಡ
ಮಾತಾಡಿದಾಗಲೂ ಗ್ರಂಥಗಳ ಅರ್ಥವನ್ನು ನಮಗೆ
ಬಿಚ್ಚಿಹೇಳಿದಾಗಲೂ ನಮ್ಮ ಹೃದಯವು ನಮ್ಮಲ್ಲಿ
33 ಕುದಿಯಿತಲ್ಲವೇ ಎಂದು ಹೇಳಿಕೊಂಡು ಅದೇ ಗಳಿಗೆ
ಯಲ್ಲಿ ಎದ್ದು ಯೆರೂಸಲೇಮಿಗೆ ಹಿಂತಿರುಗಿ ಹೋದರು.
ಅಲ್ಲಿ ಹನ್ನೊಂದು ಮಂದಿ ಶಿಷ್ಯರೂ ಅವರ ಸಂಗಡ
34 ಇದ್ದವರೂ ಒಟ್ಟಾಗಿ ಕೂಡಿಕೊಂಡಿದ್ದು—ಸ್ವಾಮಿ
ಎದ್ದದ್ದು ನಿಜ, ಆತನು ಸೀಮೋನನಿಗೆ ಕಾಣಿಸಿ
35 ಕೊಂಡನು ಎಂದು ಹೇಳುತ್ತಿದ್ದರು. ಇದನ್ನು ಕಂಡು
ಅವರು ದಾರಿಯಲ್ಲಿ ನಡೆದ ಸಂಗತಿಯನ್ನೂ ರೊಟ್ಟಿ
ಮುರಿಯುವದರಲ್ಲಿ ತಾವು ಆತನ ಗುರುತು ಹಿಡಿದೆ
ವೆಂಬದನ್ನೂ ವಿವರಿಸಿದರು.
36 ಅವರು ಈ ಸಂಗತಿಗಳನ್ನು ಕುರಿತು ಮಾತಾಡು
ತ್ತಿರುವಾಗ ಆತನೇ ಅವರ ನಡುವೆ ನಿಂತು [—ನಿಮಗೆ
1)ಮನಶ್ಶಾಂತಿಯಾಗಲಿ ಎಂದು ಅವರಿಗೆ ಹೇಳಿದನು
ಅವರು ದಿಗಿಲುಬಿದ್ದು ಭಯಹಿಡಿದವರಾಗಿ ತಾವು ಕಂ
ಡ್ಡನ್ನು ಭೂತವೆಂದು ಭಾವಿಸಿದರು. ಆತನು ಅವರಿಗೆ—
ಯಾಕೆ ಕಳವಳಗೊಳ್ಳುತ್ತೀರಿ? ನಿಮ್ಮ ಹೃದಯದ
ಅನುಮಾನಗಳು ಹುಟ್ಟುವದೇಕೆ? ನನ್ನ ಕೈಗಳನ್ನು
ನನ್ನ ಕಾಲುಗಳನ್ನೂ ನೋಡಿರಿ, ನಾನೇ ಅಲ್ಲವೆ
ನನ್ನನ್ನು ಮುಟ್ಟಿ ನೋಡಿರಿ, ನಿಮಗೆ ಕಾಣು
ಪ್ರಕಾರ ನನಗೆ ಮಾಂಸವೂ ಎಲುಬುಗಳೂ ಉಂಟು
ಅವು ಭೂತಕ್ಕಿಲ್ಲ ಎಂದು ಹೇಳಿದನು. [ಇದನ
ಹೇಳಿದ ಮೇಲೆ ಆತನು ತನ್ನ ಕೈಗಳನ್ನೂ ಕಾಲ
ಗಳನ್ನೂ ಅವರಿಗೆ ತೋರಿಸಿದನು.] ಆದರೆ ಅವರ
ಸಂತೋಷದ ದೆಸೆಯಿಂದ ಇನ್ನೂ ನಂಬದೆ ಆಶ್ಚರ್ಯ
ಪಡುತ್ತಿರಲಾಗಿ ಆತನು—ತಿನ್ನತಕ್ಕ ಪದಾರ್ಥವೇನ
ದರೂ ಇಲ್ಲಿ ನಿಮಗುಂಟೋ ಎಂದು ಅವರನ್ನು ಕೇಳಲ
ಅವರು ಸುಟ್ಟ ಮೀನಿನ ಒಂದು ತುಂಡನ್ನು ಆತನಿಗೆ ಕೊ
ಟ್ಟರು. ಆತನು ತಕ್ಕೊಂಡು ಅವರ ಮುಂದೆ ತಿಂದನು
ತರುವಾಯ ಆತನು—ನಾನು ಇನ್ನೂ ನಿಮ
ಸಂಗಡ ಇದ್ದಾಗ ಇದೆಲ್ಲಾ ನಿಮಗೆ ತಿಳಿಸಲಿಲ್ಲವೇ
ನನ್ನ ವಿಷಯವಾಗಿ ಮೋಶೆಯ ಧರ್ಮಶಾಸ್ತ್ರದಲ್ಲಿಯ
ಪ್ರವಾದಿಗಳ ಗ್ರಂಥಗಳಲ್ಲಿಯೂ ಕೀರ್ತನೆಗಳಲ್ಲಿಯ
ಬರೆದಿರುವದೆಲ್ಲಾ ನೆರವೇರುವದು ಅಗತ್ಯವೆಂದು ನಿಮ
ಹೇಳಲಿಲ್ಲವೇ ಅಂದನು. ಆ ಮೇಲೆ ಅವರು ಶಾಸ್ತ್ರ
ವಚನಗಳನ್ನು ತಿಳುಕೊಳ್ಳುವಂತೆ ಆತನು ಅವರ ಬುದ್ಧಿ
ಯನ್ನು ತೆರೆದು ಅವರಿಗೆ—ಕ್ರಿಸ್ತನು ಶ್ರಮೆಪಟ್ಟು
ಸತ್ತು ಮೂರನೆಯ ದಿನದಲ್ಲಿ ಜೀವಿತನಾಗಿ ಎದ್ದು ಬರು
ನೆಂತಲೂ ಪಾಪಪರಿಹಾರಕ್ಕೋಸ್ಕರ ದೇವರ ಕಡೆ
ತಿರುಗಿಕೊಳ್ಳಬೇಕೆಂಬ ಮಾತು ಯೆರೂಸಲೇಮು
ಮೊದಲುಗೊಂಡು ಸಮಸ್ತ ದೇಶದವರಿಗೂ ಆತ
ಹೆಸರಿನಲ್ಲಿ ಸಾರಲ್ಪಡುವದೆಂತಲೂ ಬರೆದದೆ. ಇವುಗ
ವಿಷಯದಲ್ಲಿ ನೀವೇ ಸಾಕ್ಷಿ ಹೇಳುವವರಾಗಿದ್ದೀರಿ
ಇಗೋ ನನ್ನ ತಂದೆಯು ವಾಗ್ದಾನಮಾಡಿದ್ದನ್ನು
ನಿಮಗೆ ಕಳುಹಿಸಿಕೊಡುತ್ತೇನೆ. ದೇವರು ಮೇಲಣ
ಲೋಕದಿಂದ ನಿಮಗೆ ಶಕ್ತಿಯನ್ನು ಹೊದಿಸುವ ತನಕ
ಈ ಪಟ್ಟಣದಲ್ಲೇ ಕಾದುಕೊಂಡಿರ್ರಿ ಎಂದು ಹೇಳಿದನು

ಯೇಸುವಿನ ಪರಲೋಕಾರೋಹಣವು.

(ಮಾರ್ಕ 16. 19, 20; ಅ. ಕೃ. 1. 4—14.)

ಮತ್ತು ಆತನು ಅವರನ್ನು ಬೇಥಾನ್ಯದ ತನಕ ಕ
ಕೊಂಡು ಹೋಗಿ ತನ್ನ ಕೈಗಳನ್ನು ಎತ್ತಿ ಅವರನ್ನು
ಆಶೀರ್ವದಿಸಿದನು. ಆಶೀರ್ವದಿಸುತ್ತಿರುವಾಗ ಆತನು
ಅವರನ್ನು ಬಿಟ್ಟು [ಪರಲೋಕಕ್ಕೆ ಒಯ್ಯಲ್ಪಟ್ಟನು]
ಅವರು [ಆತನನ್ನು ಆರಾಧಿಸಿ] ಬಹುಸಂತೋಷ
ದಿಂದ ಯೆರೂಸಲೇಮಿಗೆ ಹಿಂತಿರುಗಿ ಹೋಗಿ ಯಾವಾ
ಗಲೂ ದೇವಾಲಯದಲ್ಲಿ ದೇವರನ್ನು ಕೊಂಡಾಡು
ತ್ತಿದ್ದರು.

1) ಅಥವಾ, ಶುಭವಾಗಲಿ.

# THE GOSPEL ACCORDING TO

# SAINT JOHN

## ಯೋಹಾನನು ಬರೆದ ಸುವಾರ್ತೆ

### ಅನಾದಿಯಿಂದಿದ್ದ ದೇವರ ವಾಕ್ಯವು ನರಾವತಾರ ಎತ್ತಿದ್ದು.

ಆದಿಯಲ್ಲಿ ವಾಕ್ಯವಿತ್ತು; ಆ ವಾಕ್ಯವು ದೇವರ
2 ಬಳಿಯಲ್ಲಿತ್ತು; ಆ ವಾಕ್ಯವು ದೇವರಾಗಿತ್ತು. ಆ
ವಾಕ್ಯವೆಂಬವನು ಆದಿಯಲ್ಲಿ ದೇವರ ಬಳಿಯಲ್ಲಿದ್ದನು.
3 ಆತನ ಮೂಲಕವಾಗಿ ಸಮಸ್ತವು ಉಂಟಾಯಿತು;
ಉಂಟಾಗಿರುವ ವಸ್ತುಗಳಲ್ಲಿ ಆತನಿಲ್ಲದೆ ಒಂದಾದರೂ
4 ಉಂಟಾಗಲಿಲ್ಲ. ಆತನಲ್ಲಿ ಜೀವವಿತ್ತು; ಆ ಜೀವವು
5 ಮನುಷ್ಯರಿಗೆ ಬೆಳಕಾಗಿತ್ತು. ಆ ಬೆಳಕು ಕತ್ತಲಲ್ಲಿ
ಪ್ರಕಾಶಿಸುತ್ತದೆ; ಕತ್ತಲು ಅದನ್ನು [1])ಮುಸುಕಲಿಲ್ಲ.
6 ದೇವರು ಕಳುಹಿಸಿದ ಒಬ್ಬ ಮನುಷ್ಯನು ಬಂದನು;
ಅವನ ಹೆಸರು ಯೋಹಾನನು. ಈ ಯೋಹಾನನು
7 ಸಾಕ್ಷಿಗಾಗಿ ಬಂದನು. ತನ್ನ ಮೂಲಕವಾಗಿ ಎಲ್ಲರು
ನಂಬುವಂತೆ ಅವನು ಆ ಬೆಳಕಿನ ವಿಷಯದಲ್ಲಿ ಸಾಕ್ಷಿ
8 ಕೊಡುವದಕ್ಕೆ ಬಂದನು. ಅವನೇ ಆ ಬೆಳಕಲ್ಲ, ಆ
ಬೆಳಕಿನ ವಿಷಯದಲ್ಲಿ ಸಾಕ್ಷಿಕೊಡುವದಕ್ಕಾಗಿ ಬಂದ
ವನು.
9 ನಿಜವಾದ ಬೆಳಕು ಲೋಕಕ್ಕೆ ಬರುವದಾಗಿತ್ತು;
ಆ ಬೆಳಕೇ ಪ್ರತಿ ಮನುಷ್ಯನಿಗೂ ಬೆಳಕನ್ನು ಕೊಡು
10 ವಂಥದು. ಆತನು ಲೋಕದಲ್ಲಿ ಇದ್ದನು; ಮತ್ತು
ಲೋಕವು ಆತನ ಮೂಲಕವಾಗಿ ಉಂಟಾಯಿತು;
11 ಆದರೂ ಲೋಕವು ಆತನನ್ನು ಅರಿಯಲಿಲ್ಲ. ಆತನು
ತನ್ನ ಸ್ವಾಸ್ಥ್ಯಕ್ಕೆ ಬಂದನು; ಆದರೆ ಸ್ವಂತಜನರು ಆತ
12 ನನ್ನು ಅಂಗೀಕರಿಸಲಿಲ್ಲ. ಯಾರಾರು ಆತನನ್ನು ಅಂಗೀ
ಕರಿಸಿದರೋ, ಅಂದರೆ ಆತನ ಹೆಸರಿನಲ್ಲಿ ನಂಬಿಕೆಯಿ
ಟ್ಟರೋ, ಅವರಿಗೆ ದೇವರ ಮಕ್ಕಳಾಗುವ ಅಧಿಕಾರ
13 ಕೊಟ್ಟನು. ಇವರು ರಕ್ತಸಂಬಂಧದಿಂದಾಗಲಿ ಕಾಮ
ದಿಂದಾಗಲಿ ಪುರುಷಸಂಕಲ್ಪದಿಂದಾಗಲಿ ಹುಟ್ಟಿದವರಲ್ಲ,
ದೇವರಿಂದಲೇ ಹುಟ್ಟಿದವರು.
14 ಆ ವಾಕ್ಯವೆಂಬವನು ನರಾವತಾರ ಎತ್ತಿ ನಮ್ಮ
ಮಧ್ಯದಲ್ಲಿ ವಾಸಮಾಡಿದನು. ನಾವು ಆತನ ಮಹಿಮೆ
ಯನ್ನು ನೋಡಿದೆವು; ಆ ಮಹಿಮೆಯು ತಂದೆಯ
ಬಳಿಯಿಂದ ಬಂದ ಒಬ್ಬನೇ ಮಗನಿಗೆ ಇರತಕ್ಕ
ಮಹಿಮೆ. ಆತನು ಕೃಪೆಯಿಂದಲೂ ಸತ್ಯದಿಂದಲೂ
ತುಂಬಿದವನಾಗಿದ್ದನು.
15 ಯೋಹಾನನು ಆತನ ವಿಷಯವಾಗಿ ಸಾಕ್ಷಿ ಕೊಡು
ತ್ತಾನೆ; ಹೇಗಂದರೆ—ನನ್ನ ಹಿಂದೆ ಬರುವವನು ನನ
ಗಿಂತ ಮೊದಲೇ ಇದ್ದದರಿಂದ ನನಗೆ ಮುಂದಿನವನಾ
ದನು ಎಂಬದಾಗಿ ನಾನು ಹೇಳಿದವನು ಈತನೇ ಎಂದು
ಕೂಗಿ ಹೇಳಿದ್ದಾನೆ.
ಧರ್ಮಶಾಸ್ತ್ರವು ಮೋಶೆಯ ಮುಖಾಂತರ ಕೊಡ 17
ಲ್ಪಟ್ಟಿತು; ಕೃಪೆಯೂ ಸತ್ಯವೂ ಯೇಸು ಕ್ರಿಸ್ತನ
ಮುಖಾಂತರ ಬಂದವು. ನಾವೆಲ್ಲರು ಆತನ ಪರಿಪೂರ್ಣ 16
ತೆಯೊಳಗಿಂದ ಕೃಪೆಯ ಮೇಲೆ ಕೃಪೆಯನ್ನು ಹೊಂದಿ
ದೆವು. ದೇವರನ್ನು ಯಾರೂ ಎಂದೂ ಕಂಡಿಲ್ಲ; ಯಾ 18
ವನು ಏಕಪುತ್ರನೂ ಸ್ವತಃ ದೇವರೂ ಆಗಿದ್ದು ತಂದೆಯ
ಎದೆಯಲ್ಲಿದ್ದಾನೋ ಆತನೇ ತಿಳಿಯಪಡಿಸಿದನು.

### ಸ್ನಾನಿಕನಾದ ಯೋಹಾನನು ಯೇಸುವಿನ ವಿಷಯವಾಗಿ ಸಾಕ್ಷಿ ಹೇಳಿದ್ದು.

ಯೋಹಾನನು ಕೊಟ್ಟ ಸಾಕ್ಷಿ ಏನಂದರೆ—ಯೆಹೂ 19
ದ್ಯರು ಯೆರೂಸಲೇಮಿನಿಂದ ಯಾಜಕರನ್ನೂ ಲೇವಿಯ
ರನ್ನೂ ಅವನ ಬಳಿಗೆ ಕಳುಹಿಸಿ—ನೀನು ಯಾರೆಂದು
ಕೇಳಿದ್ದಕ್ಕೆ ಅವನು ಮರೆಮಾಜದೆ—ನಾನು ಕ್ರಿಸ್ತನಲ್ಲ 20
ವೆಂದು ಎಲ್ಲರ ಮುಂದೆ ಹೇಳಿದನು. ಹಾಗಾದರೆ ನೀನು 21
ಯಾರು? ಎಲೀಯನೋ? ಎಂದು ಅವರು ಕೇಳಲು
ಅಲ್ಲವೆಂದನು. ನೀನು ಬರಬೇಕಾದ ಆ ಪ್ರವಾದಿ
ಯೋ? ಅಂದದ್ದಕ್ಕೂ ಅಲ್ಲವೆಂದನು. ಆಗ ಅವರು— 22
ನೀನು ಯಾರು? ನಮ್ಮನ್ನು ಕಳುಹಿಸಿದವರಿಗೆ ನಾವು
ಉತ್ತರ ಹೇಳಬೇಕಲ್ಲಾ; ನಿನ್ನ ವಿಷಯವಾಗಿ ಏನು
ಹೇಳುತ್ತೀ? ಎಂದು ಕೇಳಲು ಅವನು—

ಕರ್ತನ ದಾರಿಯನ್ನು ನೆಟ್ಟಗೆ ಮಾಡಿರಿ ಎಂದು 23
ಅಡವಿಯಲ್ಲಿ ಕೂಗುವವನ ಶಬ್ದವದೆ

ಎಂಬದಾಗಿ ಯೆಶಾಯಪ್ರವಾದಿಯು ಹೇಳಿದನಷ್ಟೆ; ಆ
ಶಬ್ದವೇ ನಾನು ಎಂದು ಉತ್ತರಕೊಟ್ಟನು. ಬಂದಿದ್ದ 24
ವರು ಫರಿಸಾಯರ ಕಡೆಯವರಾಗಿದ್ದು—ನೀನು ಕ್ರಿಸ್ತ 25
ನೂ ಎಲೀಯನೂ ಆ ಪ್ರವಾದಿಯೂ ಅಲ್ಲವಾದರೆ
ಸ್ನಾನಮಾಡಿಸುವದೇನು? ಎಂದು ಅವನನ್ನು ಕೇಳಿ
ದರು. ಅದಕ್ಕೆ ಯೋಹಾನನು—ನಾನು ನೀರಿನಿಂದ 26
ಸ್ನಾನಮಾಡಿಸುವವನು; ಆದರೆ ನೀವು ಅರಿಯದೆ
ಇರುವ ಒಬ್ಬಾತನು ನಿಮ್ಮ ಮಧ್ಯದಲ್ಲಿ ನಿಂತಿದ್ದಾನೆ;
ಆತನೇ ನನ್ನ ಹಿಂದೆ ಬರತಕ್ಕವನು; ಆತನ ಕೆರದ 27
ಬಾರನ್ನು ಬಿಚ್ಚುವದಕ್ಕೂ ನಾನು ಯೋಗ್ಯನಲ್ಲ ಅಂದ

1) ಅಥವಾ: ಗ್ರಹಿಸಲಿಲ್ಲ.

28 ನು. ಇದೆಲ್ಲಾ ಯೊರ್ದನ್‌ಹೊಳೆಯ ಆಚೇಕಡೆಯಲ್ಲಿ
ರುವ ಬೇಥಾನ್ಯದಲ್ಲಿ ನಡೆಯಿತು. ಅಲ್ಲಿ ಯೋಹಾ
ನನು ಸ್ನಾನಕೊಡುತ್ತಿದ್ದನು.
29 ಮರುದಿನ ಯೋಹಾನನು ತನ್ನ ಕಡೆಗೆ ಬರುವ
ಯೇಸುವನ್ನು ನೋಡಿ—ಅಗೋ [ಯಜ್ಞಕ್ಕೆ] ದೇವರು
ನೇಮಿಸಿದ 1)ಕುರಿ, ಲೋಕದ ಪಾಪವನ್ನು ನಿವಾರಣೆ
30 ಮಾಡುವವನು. ನನ್ನ ಹಿಂದೆ ಬರುವವನು ನನಗಿಂತ
ಮೊದಲೇ ಇದ್ದದರಿಂದ ನನಗೆ ಮುಂದಿನವನಾದನು
ಎಂದು ನಾನು ಹೇಳಿದ ಮಾತು ಈತನ ವಿಷಯವಾ
31 ಗಿಯೇ. ನನಗೂ ಆತನ ಗುರುತಿರಲಿಲ್ಲ; ಆದರೆ ಆತ
ನನ್ನು ಇಸ್ರಾಯೇಲ್ಯರಿಗೆ ತಿಳಿಯಪಡಿಸುವದಕ್ಕೋಸ್ಕ
ರವೇ ನಾನು ನೀರಿನ ಸ್ನಾನವನ್ನು ಮಾಡಿಸುವವನಾಗಿ
32 ಬಂದೆನು ಅಂದನು. ಇದಲ್ಲದೆ ಯೋಹಾನನು ಸಾಕ್ಷಿ
ಕೊಟ್ಟು ಹೇಳಿದ್ದೇನಂದರೆ—ದೇವರಾತ್ಮವು ಪಾರಿವಾಳ
ದಂತೆ ಆಕಾಶದಿಂದ ಇಳಿಯುವದನ್ನು ನೋಡಿದೆನು.
33 ಅದು ಆತನ ಮೇಲೆ ನೆಲೆಗೊಂಡಿತು. ನನಗೂ ಆತನ
ಗುರುತಿರಲಿಲ್ಲ; ಆದರೆ ನೀರಿನ ಸ್ನಾನವನ್ನು ಮಾಡಿಸು
ವದಕ್ಕೆ ನನ್ನನ್ನು ಕಳುಹಿಸಿದಾತನು—ಯಾವನ ಮೇಲೆ
ಆತ್ಮವು ಇಳಿದುಬಂದು ಇರುವದನ್ನು ನೀನು ನೋಡು
ವಿಯೋ ಆತನೇ ಪವಿತ್ರಾತ್ಮದ ಸ್ನಾನವನ್ನು ಕೊಡು
34 ವವನು ಎಂದು ತಾನೇ ನನಗೆ ಹೇಳಿದನು. ನಾನು
ಅದನ್ನು ನೋಡಿ ಈತನೇ ದೇವಕುಮಾರನೆಂದು ಸಾಕ್ಷಿ
ಕೊಟ್ಟಿದ್ದೇನೆ ಅಂದನು.

ಯೇಸು ಪ್ರಥಮ ಶಿಷ್ಯರನ್ನು ಮಾಡಿಕೊಂಡದ್ದು.

35 ಮರುದಿನ ತಿರಿಗಿ ಯೋಹಾನನೂ ಅವನ ಶಿಷ್ಯರಲ್ಲಿ
ಇಬ್ಬರೂ ನಿಂತುಕೊಂಡಿದ್ದಾಗ ಯೋಹಾನನು ಅಲ್ಲಿ
36 ತಿರುಗಾಡುತ್ತಿರುವ ಯೇಸುವನ್ನು ನೋಡಿ—ಅಗೋ
ಯಜ್ಞಕ್ಕೆ ದೇವರು ನೇಮಿಸಿದ ಕುರಿ ಅಂದನು.
37 ಆ ಇಬ್ಬರು ಶಿಷ್ಯರು ಅದನ್ನು ಕೇಳಿ ಯೇಸುವಿನ ಹಿಂದೆ
38 ಹೋದರು. ಯೇಸು ಹಿಂತಿರುಗಿ ಅವರು ತನ್ನ ಹಿಂದೆ
ಬರುವದನ್ನು ಕಂಡು—ನಿಮಗೆ ಏನು ಬೇಕಾಗಿದೆ
ಎಂದು ಕೇಳಲು ಅವರು—ರಬ್ಬಿಯೇ, ನೀನು ಇಳು
ಕೊಂಡಿರುವದು ಎಲ್ಲಿ? ಅಂದರು. (ರಬ್ಬಿ ಅಂದರೆ
39 ಗುರು.) ಆತನು—ಬಂದು ನೋಡಿರಿ ಅಂದಾಗ ಅವರು
ಬಂದು ಆತನು ಇಳುಕೊಂಡಿದ್ದ ಸ್ಥಳವನ್ನು ನೋಡಿ
ಆ ದಿವಸ ಆತನ ಸಂಗಡ ಇದ್ದರು. ಆಗ ಹೆಚ್ಚುಕಡಿಮೆ
40 2)ಸಾಯಂಕಾಲ ನಾಲ್ಕು ಘಂಟೆಯಾಗಿತ್ತು. ಯೋಹಾ
ನನ ಮಾತನ್ನು ಕೇಳಿ ಯೇಸುವನ್ನು ಹಿಂಬಾಲಿಸಿದ ಆ
ಇಬ್ಬರಲ್ಲಿ ಸೀಮೋನ್ ಪೇತ್ರನ ತಮ್ಮನಾದ ಅಂದ್ರೆ
41 ಯನು ಒಬ್ಬನು. ಇವನು ಮೊದಲು ತನ್ನ ಅಣ್ಣನಾದ
ಸೀಮೋನನನ್ನು ಕಂಡುಕೊಂಡು ಅವನಿಗೆ—ಮೆಸ್ಸೀ
42 ಯನು ನಮಗೆ ಸಿಕ್ಕಿದನು ಎಂದು ಹೇಳಿ ಅವನನ್ನು
ಯೇಸುವಿನ ಬಳಿಗೆ ಕರಕೊಂಡು ಬಂದನು. (ಮೆಸ್ಸೀ
ಯನು ಅಂದರೆ 3)ಕ್ರಿಸ್ತನು.) ಯೇಸು ಅವನನ್ನು
ನೋಡಿ—ನೀನು ಯೋಹಾನನ ಮಗನಾದ ಸೀಮೋ

ನನು; ಇನ್ನು ಮೇಲೆ ಕೇಫನೆನಿಸಿಕೊಳ್ಳುವಿ ಅಂದ
(ಕೇಫನಂದರೆ 4)ಪೇತ್ರ.)
ಮರುದಿನ ಯೇಸು ಗಲಿಲಾಯಕ್ಕೆ ಹೊರಟುಹ
ಗಬೇಕೆಂದಿರುವಾಗ ಫಿಲಿಪ್ಪನನ್ನು ಕಂಡುಕೊಂಡು
ನನ್ನನ್ನು ಹಿಂಬಾಲಿಸು ಅಂದನು. ಈ ಫಿಲಿಪ್ಪ
ಬೇತ್ಸಾಯಿದದವನು, ಅಂದರೆ ಅಂದ್ರೆಯ ಪೇ
ಊರಿನವನು. ಫಿಲಿಪ್ಪನು ನತಾನಯೇಲನನ್ನು ಕ
ಕೊಂಡು ಅವನಿಗೆ—ಯಾವನ ವಿಷಯವಾಗಿ ಮೊ
ಯು ಧರ್ಮಶಾಸ್ತ್ರದಲ್ಲಿ ಬರೆದನೋ ಮತ್ತು ಪ್ರವ
ಗಳು ಬರೆದರೋ, ಆತನು ನಮಗೆ ಸಿಕ್ಕಿದನು; ಆತ
ಯಾರಂದರೆ ಯೋಸೇಫನ ಮಗನಾದ ನಜರೇ
ಯೇಸು ಎಂದು ಹೇಳಿದನು. ನತಾನಯೇಲನು
ಒಳ್ಳೇದೇನಾದರೂ ನಜರೇತಿನಿಂದ ಬರುವದುಂಟ
ಅಂದಾಗ ಫಿಲಿಪ್ಪನು—ಬಂದು ನೋಡು ಅಂದ
ಯೇಸು ತನ್ನ ಕಡೆಗೆ ಬರುವ ನತಾನಯೇಲನ
ಕಂಡು ಅವನ ವಿಷಯವಾಗಿ—ಇಗೋ ಇವನು
ವಾದ ಇಸ್ರಾಯೇಲನು; ಇವನಲ್ಲಿ ಕಪಟವಿ
ಅಂದನು. ನತಾನಯೇಲನು—ನನ್ನನ್ನು ನೀನು ಹೆ
ಬಲ್ಲೆ? ಎಂದು ಯೇಸುವನ್ನು ಕೇಳಿದ್ದಕ್ಕೆ ಆತನು
ಫಿಲಿಪ್ಪನು ನಿನ್ನನ್ನು ಕರೆಯುವದಕ್ಕಿಂತ ಮು
ನೀನು ಆ ಅಂಜೂರದ ಮರದ ಕೆಳಗೆ ಇದ್ದಾಗ ನಿ
ನ್ನು ನೋಡಿದೆನು ಅಂದನು. ಆದಕ್ಕೆ ನತಾನಯೇ
ಲನು—ಗುರುವೇ, ನೀನು ದೇವಕುಮಾರನು ನ
ನೀನೇ ಇಸ್ರಾಯೇಲಿನ ಅರಸನು ಅಂದನು. ಅದ
ಯೇಸು—ಆ ಅಂಜೂರದ ಮರದ ಕೆಳಗೆ ನಿನ್ನ
ನೋಡಿದೆನೆಂದು ನಾನು ನಿನಗೆ ಹೇಳಿದ ಮಾತ್ರದಿ
ನಂಬುತ್ತೀಯೋ? ಇದಕ್ಕಿಂತ ಹೆಚ್ಚಿನ ಕಾರ್ಯಗಳ
ನೋಡುವಿ ಅಂದನು. ಇದಲ್ಲದೆ ಅವನಿಗೆ—ನಾ
ನಿಮಗೆ ನಿಜನಿಜವಾಗಿ ಹೇಳುತ್ತೇನೆ, ಪರಲೋಕ
ತೆರೆದಿರುವದನ್ನೂ ಮನುಷ್ಯಕುಮಾರನ ಮೇಲೆ ದೇ
ದೂತರು ಏರಿಹೋಗುತ್ತಾ ಇಳಿದುಬರುತ್ತಾ ಇರು
ದನ್ನೂ ನೋಡುವಿರಿ ಎಂದು ಹೇಳಿದನು.

ಯೇಸು ಮಾಡಿದ ಮೊದಲನೆಯ ಅದ್ಭುತಕಾರ್ಯ.

ಮೂರನೆಯ ದಿನದಲ್ಲಿ ಗಲಿಲಾಯದ ಕಾನಾ ಊ
ನಲ್ಲಿ ಒಂದು ಮದುವೆ ಆಯಿತು; ಯೇಸುವಿ
ತಾಯಿ ಅಲ್ಲಿ ಇದ್ದಳು; ಯೇಸುವನ್ನೂ ಆತನ ಶಿ
ರನ್ನೂ ಮದುವೆಗೆ ಕರೆದರು. ದ್ರಾಕ್ಷಾರಸವು ಸಾಲ
ಹೋಗಲಾಗಿ ಯೇಸುವಿನ ತಾಯಿ ಆತನಿಗೆ—ಅವರ
ದ್ರಾಕ್ಷಾರಸವಿಲ್ಲ ಎಂದು ಹೇಳಿದಳು. ಯೇ
ಆಕೆಗೆ—ಅಮ್ಮಾ, ನನ್ನ ಗೊಡವೆ ನಿನಗೇಕೆ? ನ
ಸಮಯವು ಇನ್ನೂ ಬಂದಿಲ್ಲ ಎಂದು ಹೇಳಲು ಆ
ತಾಯಿಯು ಕೆಲಸದವರಿಗೆ—ಆತನು ನಿಮಗೆ ಏ
ಹೇಳುವನೋ ಅದನ್ನು ಮಾಡಿರಿ ಅಂದಳು. ಯೆಹೂ
ದ್ಯರ ಶುದ್ಧಾಚಾರದ ಪದ್ಧತಿಯ ಪ್ರಕಾರ ಎರ
ಮೂರು ಕೊಳಗ ನೀರು ಹಿಡಿಯುವ ಆರು ಕಲ್ಲ

1) ಅಥವಾ: ಕುರಿಮರಿ. 2) ಮೂಲ: ಹತ್ತು ತಾಸಾಗಿತ್ತು. 3) ಕ್ರಿಸ್ತನು ಅಂದರೆ ಪಟ್ಟಾಭಿಷೇಕಹೊಂದಿದವನು, ಬರ
ರಕ್ಷಕನು. 4) ಪೇತ್ರ ಅಂದರೆ ಗುಂಡು ಅಥವಾ ಬಂಡೆಗಲ್ಲು.

ಬಾನೆಗಳು ಅಲ್ಲಿ ಇಟ್ಟಿದ್ದವು. ಯೇಸು ಅವರಿಗೆ—ಆ
ಬಾನೆಗಳಲ್ಲಿ ನೀರು ತುಂಬಿರಿ ಅನ್ನಲು ಅವುಗಳನ್ನು
ಕಂಠದ ಮಟ್ಟಿಗೆ ತುಂಬಿದರು. ಆಗ ಅವರಿಗೆ—ಈಗ
ಅದನ್ನು ತೋಡಿಕೊಂಡು ಹೋಗಿ ಔತಣದ ಪಾರುಪತ್ಯ
ಗಾರನಿಗೆ ಕೊಡಿರಿ ಎಂದು ಹೇಳಿದಾಗ ತಕ್ಕೊಂಡು
ಹೋಗಿ ಕೊಟ್ಟರು. ಅದು ಎಲ್ಲಿಂದ ಬಂತೋ ನೀರನ್ನು
ತೋಡಿದ ಕೆಲಸದವರಿಗೆ ತಿಳಿದಿತ್ತೇ ಹೊರತು ಔತಣದ
ಪಾರುಪತ್ಯಗಾರನಿಗೆ ತಿಳಿಯದಿರಲಾಗಿ ಅವನು ಅಷ್ಟ
ರೊಳಗೆ ದ್ರಾಕ್ಷಾರಸವಾದ ಆ ನೀರನ್ನು ರುಚಿನೋಡಿ
ದಾಗ ಮದಲಿಂಗನನ್ನು ಕರೆದು—ಎಲ್ಲರು ಹಿರಿದಿನ
ದ್ರಾಕ್ಷಾರಸವನ್ನು ಮೊದಲು ಕೊಟ್ಟು ಅಮಲೇರಿದ
ಮೇಲೆ ಕಿರಿದಿನ ದ್ರಾಕ್ಷಾರಸವನ್ನು ಕೊಡುತ್ತಾರೆ;
ನೀನು ಹಿರಿದಿನ ದ್ರಾಕ್ಷಾರಸವನ್ನು ಇದುವರೆಗೂ
ಇಟ್ಟುಕೊಂಡಿದ್ದೀ ಅಂದನು. ಯೇಸು ಈ ಮೊದಲನೆಯ
ಸೂಚಕಕಾರ್ಯವನ್ನು ಗಲಿಲಾಯದ ಕಾನಾ ಊರಿ
ನಲ್ಲಿ ಮಾಡಿ ತನ್ನ ಮಹಿಮೆಯನ್ನು ತೋರ್ಪಡಿಸಿದನು;
ಮತ್ತು ಆತನ ಶಿಷ್ಯರು ಆತನಲ್ಲಿ ನಂಬಿಕೆಯಿಟ್ಟರು.
ಇದಾದ ಮೇಲೆ ಆತನೂ ಆತನ ತಾಯಿಯೂ
ತಮ್ಮಂದಿರೂ ಆತನ ಶಿಷ್ಯರೂ ಘಟ್ಟಾ ಇಳಿದು ಕಪೆರ್ನೌ
ಮಿಗೆ ಹೋಗಿ ಅಲ್ಲಿ ಕೆಲವು ದಿವಸ ಇದ್ದರು.

ಯೇಸು ದೇವಾಲಯದಲ್ಲಿ ವ್ಯಾಪಾರವನ್ನು ನಿಲ್ಲಿಸಿದ್ದು.

ಆಗ ಯೆಹೂದ್ಯರ ಪಸ್ಕಹಬ್ಬವು ಹತ್ತರ ಬಂದದ
ರಿಂದ ಯೇಸು ಯೆರೂಸಲೇಮಿಗೆ ಹೋದನು.
ಅಲ್ಲಿ ದೇವಾಲಯದೊಳಗೆ ದನ ಕುರಿ ಪಾರಿವಾಳ
ಮಾರುವವರನ್ನೂ ಕೂತಿರುವ ಚಿನಿವಾರರನ್ನೂ ಕಂಡು
ಹಗ್ಗದಿಂದ ಕೊರಡೆ ಮಾಡಿ ಅದರಿಂದ ಕುರಿ ದನ
ಸಹಿತ ಎಲ್ಲರನ್ನು ದೇವಾಲಯದ ಹೊರಕ್ಕೆ ಅಟ್ಟಿ ಚಿನಿ
ವಾರರ ರೊಕ್ಕವನ್ನು ಚೆಲ್ಲಿ ಮೇಜುಗಳನ್ನು ಕೆಡವಿದನು.
ಪಾರಿವಾಳಮಾರುವವರಿಗೆ—ಇವುಗಳನ್ನು ಇಲ್ಲಿಂದ
ತಕ್ಕೊಂಡು ಹೋಗಿರಿ; ನನ್ನ ತಂದೆಯ ಮನೆಯನ್ನು
ಸಂತೆ ಮಾಡಬೇಡಿರಿ ಎಂದು ಹೇಳಿದನು. ಆಗ—
ನಿನ್ನ ಆಲಯಾಭಿಮಾನವು ಬೆಂಕಿಯಂತೆ ನನ್ನನ್ನು
ದಹಿಸುತ್ತದೆ ಎಂದು ಬರೆದ ಮಾತು ಶಿಷ್ಯರ ನೆನಪಿಗೆ
ಬಂತು. ಯೆಹೂದ್ಯರು ಆತನನ್ನು—ನಿನಗೆ ಇದನ್ನೆಲ್ಲಾ
ಮಾಡುವ ಅಧಿಕಾರ ಉಂಟೆಂಬದಕ್ಕೆ ಏನು ಸೂಚಕ
ಕಾರ್ಯವನ್ನು ತೋರಿಸುತ್ತೀ? ಎಂದು ಕೇಳಿದ್ದಕ್ಕೆ
ಯೇಸು—ಈ ದೇವಾಲಯವನ್ನು ಕೆಡವಿರಿ; ನಾನು
ಮೂರು ದಿನದಲ್ಲಿ ಅದನ್ನು ಎಬ್ಬಿಸುವೆನು ಅಂದನು.
ಅದಕ್ಕೆ ಯೆಹೂದ್ಯರು—ಈ ದೇವಾಲಯವನ್ನು ಕಟ್ಟು
ವದಕ್ಕೆ ನಾಲ್ವತ್ತಾರು ವರುಷ ಹಿಡಿಯಿತು; ನೀನು
ಮೂರು ದಿನದಲ್ಲಿ ಅದನ್ನು ಎಬ್ಬಿಸುವಿಯೋ? ಅಂದರು.
ಆದರೆ ಆತನು ತನ್ನ ದೇಹವೆಂಬ ದೇವಾಲಯದ ವಿಷ
ಯವಾಗಿ ಆ ಮಾತನ್ನು ಹೇಳಿದ್ದನು. ಆದದರಿಂದ
ಆತನು ಸತ್ತು ಬದುಕಿ ಎದ್ದಮೇಲೆ ಈ ಮಾತು ಆತನ
ಶಿಷ್ಯರ ನೆನಪಿಗೆ ಬಂದು ಶಾಸ್ತ್ರದಲ್ಲಿ ಬರೆದದ್ದನ್ನೂ
ಆತನ ಮಾತನ್ನೂ ಅವರು ನಂಬುವವರಾದರು.

ಯೇಸು ಒಬ್ಬ ಶಾಸ್ತ್ರಿಗೆ ಪುನರ್ಜನ್ಮದ ವಿಷಯವಾಗಿ ಉಪದೇಶ ಮಾಡಿದ್ದು.

ಆತನು ಪಸ್ಕಹಬ್ಬದ ಜಾತ್ರೆಯಲ್ಲಿ ಯೆರೂಸಲೇ 23
ಮಿನೊಳಗೆ ಇದ್ದಾಗ ಬಹು ಜನರು ಆತನು ಮಾಡಿದ
ಸೂಚಕಕಾರ್ಯಗಳನ್ನು ನೋಡಿ ಆತನ ಹೆಸರಿನಲ್ಲಿ
ನಂಬಿಕೆಯಿಟ್ಟರು. ಆದರೆ ಯೇಸು ಎಲ್ಲರನ್ನೂ ಬಲ್ಲ 24
ವನಾದ್ದರಿಂದ ಅವರಿಗೆ ವಶವಾಗಲಿಲ್ಲ. ಆತನು ಪ್ರತಿ 25
ಮನುಷ್ಯನ ಅಂತರ್ಯವನ್ನು ತಿಳಿದವನಾದ ಕಾರಣ
ಯಾವನೂ ಯಾವ ಮನುಷ್ಯನ ವಿಷಯದಲ್ಲಿಯೂ
ಆತನಿಗೆ ಸಾಕ್ಷಿಕೊಡಬೇಕಾದ ಅವಶ್ಯವಿರಲಿಲ್ಲ.

ಫರಿಸಾಯರಲ್ಲಿ ಯೆಹೂದ್ಯರ ಹಿರೀಸಭೆಯವನಾದ 3
ನಿಕೊದೇಮನೆಂಬ ಒಬ್ಬ ಮನುಷ್ಯನಿದ್ದನು. ಅವನು 2
ರಾತ್ರಿಯಲ್ಲಿ ಯೇಸುವಿನ ಬಳಿಗೆ ಬಂದು ಆತನಿಗೆ—
ಗುರುವೇ, ನೀನು ದೇವರ ಕಡೆಯಿಂದ ಬಂದ ಬೋಧಕ
ನೆಂದು ಬಲ್ಲೆವು. ನೀನು ಮಾಡುವಂಥ ಈ ಸೂಚಕ
ಕಾರ್ಯಗಳನ್ನು ದೇವರ ಸಹಾಯವಿಲ್ಲದೆ ಮಾಡು
ವದು ಯಾರಿಂದಲೂ ಆಗದು ಎಂದು ಹೇಳಿದನು.
ಅದಕ್ಕೆ ಯೇಸು—ನಾನು ನಿನಗೆ ನಿಜನಿಜವಾಗಿ ಹೇಳು 3
ತ್ತೇನೆ, ಒಬ್ಬನು 1)ಹೊಸದಾಗಿ ಹುಟ್ಟದಿದ್ದರೆ ಅವನು
ದೇವರ ರಾಜ್ಯವನ್ನು ಕಾಣಲಾರನು ಅಂದನು.
ನಿಕೊದೇಮನು ಆತನನ್ನು—ಮನುಷ್ಯನು ಮುದುಕ 4
ನಾದ ಮೇಲೆ ಹುಟ್ಟುವದು ಹೇಗೆ? ಅವನು ತನ್ನ
ತಾಯಿಯ ಗರ್ಭದಲ್ಲಿ ತಿರಿಗಿ ಸೇರಿ ಹುಟ್ಟುವದಾದೀ
ತೇ? ಎಂದು ಕೇಳಿದನು. ಅದಕ್ಕೆ ಯೇಸು—ನಾನು 5
ನಿನಗೆ ನಿಜನಿಜವಾಗಿ ಹೇಳುತ್ತೇನೆ, ಒಬ್ಬನು ನೀರಿ
ನಿಂದಲೂ ಆತ್ಮನಿಂದಲೂ ಹುಟ್ಟದಿದ್ದರೆ ದೇವರ ರಾಜ್ಯ
ಕ್ಕೆ ಸೇರಲಾರನು. ದೇಹದಿಂದ ಹುಟ್ಟಿದ್ದು ದೇಹವೇ; 6
ಆತ್ಮನಿಂದ ಹುಟ್ಟಿದ್ದು ಆತ್ಮವೇ. ನೀವು 1)ಹೊಸದಾಗಿ 7
ಹುಟ್ಟಬೇಕು ಎಂದು ನಾನು ನಿನಗೆ ಹೇಳಿದ್ದರಿಂದ
ಆಶ್ಚರ್ಯಪಡಬೇಡ. ಗಾಳಿಯು ಮನಸ್ಸು ಬಂದ ಕಡೆ 8
ಬೀಸುತ್ತದೆ; ಅದರ ಸಪ್ಪಳವನ್ನು ಕೇಳುತ್ತೀ; ಆದರೆ
ಅದು ಎಲ್ಲಿಂದ ಬರುತ್ತದೋ ಎಲ್ಲಿಗೆ ಹೋಗುತ್ತದೋ
ನಿನಗೆ ತಿಳಿಯದು; ಆತ್ಮನಿಂದ ಹುಟ್ಟಿದವರೆಲ್ಲರು ಅದ
ರಂತೆಯೇ ಅಂದನು. ಅದಕ್ಕೆ ನಿಕೊದೇಮನು—ಇದು 9
ಆಗುವದು ಹೇಗೆ? ಅಂದಾಗ ಯೇಸು ಅವನಿಗೆ ಹೇಳಿ 10
ದ್ದೇನಂದರೆ—ಇಸ್ರಾಯೇಲ್ ಜನಕ್ಕೆ ಬೋಧಕನಾಗಿ
ರುವ ನಿನಗೆ ಇದು ತಿಳಿಯುವದಿಲ್ಲವೋ? ನಿನಗೆ ನಿಜ 11
ನಿಜವಾಗಿ ಹೇಳುತ್ತೇನೆ, ತಿಳಿದದ್ದನ್ನು ಹೇಳುತ್ತೇವೆ,
ನೋಡಿದ್ದಕ್ಕೆ ಸಾಕ್ಷಿಕೊಡುತ್ತೇವೆ; ನೀವು ನಮ್ಮ ಸಾಕ್ಷಿ
ಯನ್ನು ಒಪ್ಪುವದಿಲ್ಲ. ನಾನು ಭೂಲೋಕದಲ್ಲಿ ನಡೆ 12
ಯುವ ಕಾರ್ಯಗಳನ್ನು ಕುರಿತು ನಿಮಗೆ ಹೇಳುವಾಗ
ನೀವು ನಂಬದೆಹೋದರೆ ಪರಲೋಕದ ಕಾರ್ಯಗಳನ್ನು
ಕುರಿತು ನಿಮಗೆ ಹೇಳಿದರೆ ಹೇಗೆ ನಂಬೀರಿ? ಪರಲೋ 13
ಕದಿಂದ ಇಳಿದುಬಂದವನೇ ಅಂದರೆ 2)ಮನುಷ್ಯಕುಮಾ
ರನೇ ಹೊರತು ಮತ್ತಾರೂ ಪರಲೋಕಕ್ಕೆ ಏರಿಹೋದ
ವನಲ್ಲ. ಇದಲ್ಲದೆ [ಜನರು ನೋಡಿ ಜೀವದಿಂದುಳಿಯ 14

1) ಅಥವಾ, ಮೇಲಿನಿಂದ. 2) ಕೆಲವು ಪ್ರತಿಗಳಲ್ಲಿ—ಪರಲೋಕದಲ್ಲಿರುವ ಮನುಷ್ಯಕುಮಾರನೇ ಎಂದು ಬರೆದದೆ.

ಬೇಕೆಂದು] ಮೋಶೆಯು ಅಡವಿಯಲ್ಲಿ ಆ ಸರ್ಪ
15 ವನ್ನು ಎತ್ತರದಲ್ಲಿಟ್ಟ ಹಾಗೆಯೇ ಮನುಷ್ಯಕುಮಾರ
ನು ತನ್ನನ್ನು ನಂಬುವವರೆಲ್ಲರೂ ನಿತ್ಯಜೀವವನ್ನು
ಪಡೆಯಬೇಕೆಂದು ಎತ್ತರದಲ್ಲಿಡಲ್ಪಡಬೇಕು.
16 ದೇವರು ಲೋಕದ ಮೇಲೆ ಎಷ್ಟೋ ಪ್ರೀತಿಯನ್ನಿ
ಟ್ಟು ತನ್ನ ಒಬ್ಬನೇ ಮಗನನ್ನು ಕೊಟ್ಟನು; ಆತನನ್ನು
ನಂಬುವ ಒಬ್ಬನಾದರೂ ನಾಶವಾಗದೆ ಎಲ್ಲರೂ ನಿತ್ಯ
ಜೀವವನ್ನು ಪಡೆಯಬೇಕೆಂದು ಆತನನ್ನು ಕೊಟ್ಟನು.
17 ದೇವರು ತನ್ನ ಮಗನ ಮುಖಾಂತರ ಲೋಕಕ್ಕೆ ರಕ್ಷ
ಣೆಯಾಗಬೇಕೆಂದು ಆತನನ್ನು ಕಳುಹಿಸಿಕೊಟ್ಟನೇ
ಹೊರತು ತೀರ್ಪುಮಾಡುವದಕ್ಕಾಗಿ ಕಳುಹಿಸಲಿಲ್ಲ.
18 ಆತನನ್ನು ನಂಬುವವನಿಗೆ ತೀರ್ಪು ಆಗುವದಿಲ್ಲ; ಆದರೆ
ನಂಬದವನಿಗೆ ದೇವರ ಒಬ್ಬನೇ ಮಗನ ಹೆಸರನ್ನು
ನಂಬದೆ ಹೋದದರಿಂದ ಆಗಲೇ ತೀರ್ಪು ಆಗಿಹೋಯಿ
19 ತು. ಆ ತೀರ್ಪು ಏನಂದರೆ—ಬೆಳಕು ಲೋಕಕ್ಕೆ
ಬಂದಿದ್ದರೂ ಮನುಷ್ಯರ ಕೃತ್ಯಗಳು ಕೆಟ್ಟವುಗಳಾಗಿರು
ವದರಿಂದ ಅವರು ಬೆಳಕಿಗಿಂತ ಕತ್ತಲೆಯನ್ನೇ ಹೆಚ್ಚಾಗಿ
20 ಪ್ರೀತಿಸಿದರು. ಕೆಟ್ಟದ್ದನ್ನು ಮಾಡುವವರು ಬೆಳಕನ್ನು
ಸಹಿಸುವದಿಲ್ಲ, ತಮ್ಮ ಕೃತ್ಯಗಳು ದುಷ್ಕೃತ್ಯಗಳಾಗಿ
21 ತೋರಿಬಂದಾವೆಂದು ಬೆಳಕಿಗೆ ಬರುವದಿಲ್ಲ; ಆದರೆ
ಸತ್ಯವನ್ನು ಅನುಸರಿಸಿ ನಡೆಯುವವನು ತಾನು ದೇವ
ರಿಂದ ನಡಿಸಿಕೊಂಡು ತನ್ನ ಕೃತ್ಯಗಳನ್ನು ಮಾಡಿದ್ದೇ
ನೆಂದು ತೋರಿಬರುವಂತೆ ಬೆಳಕಿಗೆ ಬರುತ್ತಾನೆ.

### ಸ್ನಾನಿಕನಾದ ಯೋಹಾನನು ಯೇಸುವಿನ ವಿಷಯವಾಗಿ ತಿರಿಗಿ ಸಾಕ್ಷಿ ಹೇಳಿದ್ದು.

22 ಆ ಮೇಲೆ ಯೇಸು ತನ್ನ ಶಿಷ್ಯರೊಡನೆ ಯೂದಾ
ಯ ದೇಶಕ್ಕೆ ಬಂದು ಅಲ್ಲಿ ಅವರ ಕೂಡ ಇದ್ದು
23 ದೀಕ್ಷಾಸ್ನಾನಮಾಡಿಸುತ್ತಿದ್ದನು. ಯೋಹಾನನೂ
ಸಲೀಮೂರಿನ ಹತ್ತರವಿರುವ ಐನೋನೆಂಬ ಸ್ಥಳದಲ್ಲಿ
ದ್ದು ದೀಕ್ಷಾಸ್ನಾನಮಾಡಿಸುತ್ತಿದ್ದನು; ಅಲ್ಲಿ ಬಹಳ
ನೀರಿತ್ತು; ಜನರು ಬಂದು ಸ್ನಾನಮಾಡಿಸಿಕೊಳ್ಳುತ್ತಾ
24 ಇದ್ದರು; ಆ ಕಾಲದಲ್ಲಿ ಯೋಹಾನನು ಇನ್ನೂ
25 ಸೆರೆಯಲ್ಲಿ ಹಾಕಲ್ಪಟ್ಟಿರಲಿಲ್ಲ. ಹೀಗಿರಲಾಗಿ ಯೋ
ಹಾನನ ಶಿಷ್ಯರಲ್ಲಿ ಕೆಲವರಿಗೂ ಒಬ್ಬ ಯೆಹೂದ್ಯನಿಗೂ
ಶುದ್ಧಾಚಾರವನ್ನು ಕುರಿತು ವಿಚಾರ ನಡೆಯಿತು.
26 ಆಗ ಅವರು ಯೋಹಾನನ ಬಳಿಗೆ ಬಂದು ಅವನಿಗೆ—
ಗುರುವೇ, ಯೊರ್ದನ್‌ಹೊಳೆಯ ಆಚೆ ನಿನ್ನ ಬಳಿ
ಯಲ್ಲಿದ್ದ ಒಬ್ಬನ ವಿಷಯದಲ್ಲಿ ನೀನು ಸಾಕ್ಷಿಕೊಟ್ಟಿ
ಯಲ್ಲಾ; ಅವನೂ ಸ್ನಾನಮಾಡಿಸುತ್ತಾನೆ, ಅವನ ಬಳಿಗೆ
27 ಎಲ್ಲರು ಹೋಗುತ್ತಾರೆ ಎಂದು ಹೇಳಲು ಯೋಹಾನ
ನು—ಪರಲೋಕದಿಂದ ಅನುಗ್ರಹಿಸೋಣವಾದದ್ದನ್ನೇ
ಹೊರತು ಮನುಷ್ಯನು ಹೆಚ್ಚೇನು ಹೊಂದಲಾರನು.
28 ನಾನು ಕ್ರಿಸ್ತನಲ್ಲ. ಆತನ ಮುಂದೆ ಕಳುಹಿಸಲ್ಪಟ್ಟವ
ನಾಗಿದ್ದೇನೆ ಎಂದು ನಾನು ಹೇಳಿದ್ದಕ್ಕೆ ನೀವೇ ಸಾಕ್ಷಿ.
29 ಮದಲಗಿತ್ತಿಯುಳ್ಳವನೇ ಮದಲಿಂಗನು; ಆದರೂ
ಮದಲಿಂಗನ ಗೆಳೆಯನು ಅವನ ಹತ್ತರ ನಿಂತುಕೊಂಡು

ಅವನ ಮಾತುಗಳನ್ನು ಕೇಳಿ ಮದಲಿಂಗನ ಧ್ವ
ಬಹು ಸಂತೋಷ ಪಡುತ್ತಾನಲ್ಲವೇ. ಇದರಂತೆ ನ
ರುವ ಸಂತೋಷ; ಅದು ನೆರವೇರಿತು. ಆತನು ವೃ
ಯಾಗಬೇಕು; ನಾನು ಕಡಿಮೆಯಾಗಬೇಕು ಅಂದ
ಮೇಲಣಿಂದ ಬರುವವನು ಎಲ್ಲರ ಮೇಲೆ ಇದ
ನೆ; ಭೂಲೋಕದಿಂದ ಹುಟ್ಟಿದವನು ಭೂಲೋಕದ
ನಾಗಿದ್ದು ಭೂಲೋಕದ ಮಾತನ್ನು ಆಡುತ್ತಾನೆ;
ಲೋಕದಿಂದ ಬರುವವನು ಎಲ್ಲರ ಮೇಲೆ ಇದ್ದಾ
ತಾನು ನೋಡಿ ಕೇಳಿದ್ದಕ್ಕೆ ಸಾಕ್ಷಿಕೊಡುತ್ತಾನೆ; ಆದ
ಆತನ ಸಾಕ್ಷಿಯನ್ನು ಯಾರೂ ಒಪ್ಪುವದಿಲ್ಲ. ಆ
ಸಾಕ್ಷಿಯನ್ನು ಒಪ್ಪಿದವನು ದೇವರು ಸತ್ಯವಂತನೆಂ
ಮಾತಿಗೆ ಮುದ್ರೆಹಾಕಿದವನಾಗಿದ್ದಾನೆ. ಹೇಗಂದ
ದೇವರು ಯಾರನ್ನು ಕಳುಹಿಸಿದ್ದಾನೋ ಆತನಿಗೆ ಆ
ವರವನ್ನು ಅಳತೆಮಾಡದೆ ಅನುಗ್ರಹಿಸುವದರಿಂ
ಆತನು ದೇವರ ಮಾತುಗಳನ್ನೇ ಆಡುತ್ತಾನೆ. ತಂ
ಯಾದ ದೇವರು ತನ್ನ ಮಗನನ್ನು ಪ್ರೀತಿಸಿ ಎಲ್ಲವನ್
ಆತನ ಕೈಯಲ್ಲಿ ಕೊಟ್ಟಿದ್ದಾನೆ. ಆತನ ಮಗನನ
ನಂಬುವವನಿಗೆ ನಿತ್ಯಜೀವ ಉಂಟು; ಮಗನಿಗೆ ಒ
ಗಾಗದವನು ಜೀವವನ್ನು ಕಾಣುವದೇ ಇಲ್ಲ; ದೇವ
ಕೋಪವು ಅವನ ಮೇಲೆ ನೆಲೆಗೊಂಡಿರುವದು.

### ಯೇಸು ಸಮಾರ್ಯದ ಹೆಂಗಸಿನ ಸಂಗಡ ಸಂಭಾಷಣೆ ಮಾಡಿದ

ಯೇಸು ಯೋಹಾನನಿಗಿಂತ ಹೆಚ್ಚು ಶಿಷ್ಯರನ್
ಮಾಡಿಕೊಂಡು ಅವರಿಗೆ ದೀಕ್ಷಾಸ್ನಾನಮಾಡಿಸುತ್
ನೆಂಬ ಸುದ್ದಿಯನ್ನು ಫರಿಸಾಯರು ಕೇಳಿದರೆಂದ
ಕರ್ತನಿಗೆ ತಿಳಿದಾಗ ಆತನು ಯೂದಾಯವನ್
ಬಿಟ್ಟು ಗಲಿಲಾಯಕ್ಕೆ ತಿರಿಗಿ ಹೋದನು. (ಆದರ
ಸ್ನಾನಮಾಡಿಸುತ್ತಿದ್ದವನು ಯೇಸುವಲ್ಲ; ಆತನ ಶಿ
ರೇ ಮಾಡಿಸುತ್ತಿದ್ದರು.) ಆತನು ಸಮಾರ್ಯಸೀ
ಯನ್ನು ಹಾದುಹೋಗಬೇಕಾಯಿತು. ಹೋಗುವಾ
ಸಮಾರ್ಯಸೀಮೆಗೆ ಸೇರಿದ ಸುಖರೆಂಬ ಊರಿ
ಬಂದನು. ಅದು ಯಾಕೋಬನು ತನ್ನ ಮಗನಾ
ಯೋಸೇಫನಿಗೆ ಕೊಟ್ಟ ಭೂಮಿಯ ಹತ್ತಿರದಲ್ಲಿತ್ತ
ಅಲ್ಲಿ ಯಾಕೋಬನು ತೆಗೆಸಿದ ಬಾವಿಯಿತ್ತು
ಯೇಸು ದಾರಿನಡೆದು ದಣಿದು ಆ ಬಾವಿಯ ಬ
ಯಲ್ಲಿ ಹಾಗೆ ಕೂತುಕೊಂಡನು; ಹೆಚ್ಚು ಕಡಿಮ
1)ಮಧ್ಯಾಹ್ನವಾಗಿತ್ತು. ಆತನ ಶಿಷ್ಯರು ಊಟಕ್ಕೆ
ಬೇಕಾದದ್ದನ್ನು ಕೊಂಡುಕೊಳ್ಳುವದಕ್ಕಾಗಿ ಊರೊ
ಗೆ ಹೋಗಿರಲು ಸಮಾರ್ಯದವಳಾದ ಒಬ್ಬ ಹೆಂಗಸ
ನೀರು ಸೇದುವದಕ್ಕೆ ಬಂದಳು. ಯೇಸು ಆಕೆಯ
ನ್ನು—ಅಮ್ಮಾ, ನೀರು ಕುಡಿಯುವದಕ್ಕೆ ಕೊಡ
ಎಂದು ಕೇಳಿದನು. ಯೆಹೂದ್ಯರಿಗೂ ಸಮಾಯ
ರಿಗೂ ಬಳಿಕೆಯಿಲ್ಲದಿರಲಾಗಿ ಆ ಸಮಾರ್ಯದವಳ
ಆತನಿಗೆ—ಯೆಹೂದ್ಯನಾದ ನೀನು ಸಮಾರ್ಯದ
ಳಾದ ನನ್ನನ್ನು ನೀರು ಬೇಡುವದು ಹೇಗೆ ಎಂದ
ಹೇಳಿದಳು. ಅದಕ್ಕೆ ಯೇಸು—ದೇವರು ಕೊಡು
ವರವೇನೆಂಬದೂ ಕುಡಿಯುವದಕ್ಕೆ ನೀರುಕೊಡ

1) ಮೂಲ: ಆರು ತಾಸಾಗಿತ್ತು.

ಎಂದು ನಿನಗೆ ಹೇಳಿದವನು ಯಾರೆಂಬದೂ ನಿನಗೆ
ತಿಳಿದಿದ್ದರೆ ನೀನು ಅವನನ್ನು ಬೇಡಿಕೊಳ್ಳುತ್ತಿದ್ದಿ,
ಅವನು ನಿನಗೆ ಜೀವಕರವಾದ ನೀರನ್ನು ಕೊಡುತ್ತಿದ್ದ
1 ನು ಅಂದನು. ಆ ಹೆಂಗಸು ಆತನಿಗೆ—ಅಯ್ಯಾ,
ಸೇದುವದಕ್ಕೆ ನಿನ್ನಲ್ಲಿ ಏನೂ ಇಲ್ಲ, ಬಾವಿ ಆಳವಾಗಿ
ದೆ; ಹೀಗಿರುವಾಗ ಆ ಜೀವಕರವಾದ ನೀರು ನಿನಗೆ
2 ಎಲ್ಲಿಂದ ಬಂತು? ನಮ್ಮ ಹಿರಿಯನಾದ ಯಾಕೋಬನಿ
ಗಿಂತ ನೀನು ದೊಡ್ಡವನೋ? ಅವನೇ ಈ ಬಾವಿ
ಯನ್ನು ನಮಗೆ ಕೊಟ್ಟವನು; ಅವನೂ ಅವನ ಮಕ್ಕ
ಳೂ ಅವನು ಸಾಕಿದೆಲ್ಲವು ಸಹಿತವಾಗಿ ಇದೇ ಬಾವಿಯ
3 ನೀರು ಕುಡಿದರು ಅನ್ನಲು ಯೇಸು ಆಕೆಗೆ—ಈ
ನೀರನ್ನು ಕುಡಿಯುವವರೆಲ್ಲರಿಗೆ ತಿರಿಗಿ ನೀರಡಿಕೆ
4 ಯಾಗುವದು; ನಾನು ಕೊಡುವ ನೀರನ್ನು ಕುಡಿದವ
ನಿಗೆ ಎಂದಿಗೂ ನೀರಡಿಕೆಯಾಗುವದಿಲ್ಲ; ನಾನು ಅವ
ನಿಗೆ ಕೊಡುವ ನೀರು ಅವನಲ್ಲಿ ಉಕ್ಕುವ ಒರತೆ
ಯಾಗಿದ್ದು ನಿತ್ಯಜೀವವನ್ನು ಉಂಟುಮಾಡುವದು
5 ಎಂದು ಹೇಳಿದನು. ಆ ಹೆಂಗಸು—ಅಯ್ಯಾ, ನನಗೆ
ಆ ನೀರನ್ನು ಕೊಡು; ಕೊಟ್ಟರೆ ಇನ್ನು ಮೇಲೆ ನನಗೆ
ನೀರಡಿಕೆಯಾಗಲಿಕ್ಕಿಲ್ಲ; ನೀರು ಸೇದುವದಕ್ಕೆ ಇಷ್ಟು
ದೂರ ಬರಬೇಕಾದದ್ದೂ ಇರುವದಿಲ್ಲ ಅನ್ನಲು
6 ಯೇಸು ಅವಳಿಗೆ—ಹೋಗಿ ನಿನ್ನ ಗಂಡನನ್ನು
ಇಲ್ಲಿಗೆ ಕರಕೊಂಡು ಬಾ ಎಂದು ಹೇಳಿದನು.
7 ಅದಕ್ಕೆ ಆ ಹೆಂಗಸು—ನನಗೆ ಗಂಡನಿಲ್ಲ ಅಂದಳು.
ಯೇಸು ಆಕೆಗೆ—ನನಗೆ ಗಂಡನಿಲ್ಲವೆಂದು ನೀನು
8 ಹೇಳಿದ್ದು ಸರಿಯಾದ ಮಾತು; ನಿನಗೆ ಐದುಮಂದಿ
ಗಂಡಂದಿರಿದ್ದರು, ಈಗ ಇರುವವನು ನಿನಗೆ ಗಂಡ
ನಲ್ಲ; ನೀನು ಹೇಳಿದ್ದು ನಿಜವಾದ ಸಂಗತಿ ಅಂದನು.
9 ಆ ಹೆಂಗಸು ಆತನಿಗೆ—ಅಯ್ಯಾ, ನೀನು ಪ್ರವಾದಿ
0 ಯೆಂದು ನನಗೆ ಕಾಣುತ್ತದೆ. ನಮ್ಮ ಹಿರಿಯರು
ಈ ಬೆಟ್ಟದಲ್ಲಿ ದೇವಾರಾಧನೆಮಾಡುತ್ತಿದ್ದರು; ಆದರೆ
ನೀವು ಆರಾಧನೆಮಾಡತಕ್ಕ ಸ್ಥಳವು ಯೆರೂಸಲೇಮಿ
1 ನಲ್ಲಿ ಅದೆ ಅನ್ನುತ್ತೀರಿ ಎಂದು ಹೇಳಿದಾಗ ಯೇಸು
ಆಕೆಗೆ—ಅಮ್ಮಾ, ನಾನು ಹೇಳುವ ಮಾತನ್ನು ನಂಬು;
ಒಂದು ಕಾಲ ಬರುತ್ತದೆ, ಆ ಕಾಲದಲ್ಲಿ ನೀವು
ತಂದೆಯನ್ನು ಆರಾಧಿಸಬೇಕಾದರೆ ಈ ಬೆಟ್ಟಕ್ಕೂ ಹೋ
ಗುವದಿಲ್ಲ, ಯೆರೂಸಲೇಮಿಗೂ ಹೋಗುವದಿಲ್ಲ.
2 ಬರಬೇಕಾದ ರಕ್ಷಣೆಯು ಯೆಹೂದ್ಯರೊಳಗಿಂದ ಬರು
ತ್ತದಷ್ಟೆ. ಆದದರಿಂದ ನಾವು ಅರಿತಿರುವದನ್ನೇ ಆರಾ
ಧಿಸುವವರಾಗಿದ್ದೇವೆ; ನೀವು ಅರಿಯದೆ ಇರುವಂಥ
3 ದನ್ನು ಆರಾಧಿಸುವವರು. ಅದಿರಲಿ; ಸತ್ಯಭಾವದಿಂದ
ದೇವಾರಾಧನೆಮಾಡುವವರು ಆತ್ಮೀಯ ರೀತಿಯಲ್ಲಿ
ಸತ್ಯಕ್ಕೆ ತಕ್ಕ ಹಾಗೆ ತಂದೆಯನ್ನು ಆರಾಧಿಸುವ ಕಾಲ
ಬರುತ್ತದೆ; ಅದು ಈಗಲೇ ಬಂದಿದೆ; ತಂದೆಯು
ತನ್ನನ್ನು ಆರಾಧಿಸುವವರು ಇಂಥವರೇ ಆಗಿರಬೇಕೆಂದು
4 ಅಪೇಕ್ಷಿಸುತ್ತಾನಲ್ಲವೇ. ದೇವರು ಆತ್ಮಸ್ವರೂಪನು;
ಆತನನ್ನು ಆರಾಧಿಸುವವರು ಆತ್ಮೀಯ ರೀತಿಯಲ್ಲಿ
ಸತ್ಯಕ್ಕೆ ತಕ್ಕ ಹಾಗೆ ಆರಾಧಿಸಬೇಕು ಅಂದನು. ಆ
ಹೆಂಗಸು ಆತನಿಗೆ—ಮೆಸ್ಸೀಯನು ಅಂದರೆ ಕ್ರಿಸ್ತನು
ಬರುತ್ತಾನೆಂದು ಬಲ್ಲೆನು; ಆತನು ಬಂದ ಮೇಲೆ
ನಮಗೆ ಎಲ್ಲಾ ತಿಳಿಸುವನು ಎಂದು ಹೇಳಲು ಯೇಸು
ಆಕೆಗೆ—ನಿನ್ನ ಸಂಗಡ ಮಾತಾಡುತ್ತಿರುವ ನಾನೇ ಆ
ಮೆಸ್ಸೀಯನು ಎಂದು ಹೇಳಿದನು.

ಅಷ್ಟರೊಳಗೆ ಆತನ ಶಿಷ್ಯರು ಬಂದು ಆತನು ಒಬ್ಬ 27
ಹೆಂಗಸಿನ ಸಂಗಡ ಮಾತಾಡುತ್ತಿರುವದನ್ನು ಕಂಡು
ಆಶ್ಚರ್ಯಪಟ್ಟರು. ಆದರೂ—ನಿನಗೆ ಏನು ಬೇಕು?
ಆಕೆಯ ಸಂಗಡ ಯಾಕೆ ಮಾತಾಡುತ್ತೀ? ಎಂದು
ಒಬ್ಬರೂ ಕೇಳಲಿಲ್ಲ. ಆಗ ಆ ಹೆಂಗಸು ತನ್ನ ಕೊಡ 28
ವನ್ನು ಅಲ್ಲೇ ಬಿಟ್ಟು ಊರೊಳಕ್ಕೆ ಹೋಗಿ ಜನರಿಗೆ—
ಅಲ್ಲಿ ಒಬ್ಬನಿದ್ದಾನೆ, ನಾನು ಇದುವರೆಗೆ ಮಾಡಿದ್ದ 29
ನ್ನೆಲ್ಲಾ ನನಗೆ ಹೇಳಿದನು; ಬಂದು ಅವನನ್ನು ನೋ
ಡಿರಿ; ಬರತಕ್ಕ ಕ್ರಿಸ್ತನು ಅವನೇ ಏನೋ? ಎಂದು
ಹೇಳಲು ಆತನ ಬಳಿಗೆ ಬರುವದಕ್ಕೆ ಊರೊಳಗಿಂದ 30
ಹೊರಟರು.

ಅಷ್ಟರೊಳಗೆ ಶಿಷ್ಯರು—ಗುರುವೇ, ಊಟಮಾಡು 31
ಎಂದು ಆತನನ್ನು ಬೇಡಿಕೊಂಡರು. ಆದರೆ ಆತನು 32
ಅವರಿಗೆ—ನಿಮಗೆ ತಿಳಿಯದಂಥ ಆಹಾರವು ನನ
ಗುಂಟು ಎಂದು ಹೇಳಲು ಶಿಷ್ಯರು—ಆತನಿಗೆ ಯಾರಾ 33
ದರೂ ಊಟಕ್ಕೆ ತಂದುಕೊಟ್ಟರೋ ಏನೋ ಎಂದು
ತಮ್ಮತಮ್ಮೊಳಗೆ ಮಾತಾಡಿಕೊಂಡರು. ಯೇಸು ಅವ 34
ರಿಗೆ—ನನ್ನನ್ನು ಕಳುಹಿಸಿದಾತನ ಚಿತ್ತದಂತೆ ಮಾಡಿ
ಆತನ ಕೆಲಸವನ್ನು ಪೂರೈಸುವದೇ ನನ್ನ ಆಹಾರವು.
ಇನ್ನು ನಾಲ್ಕು ತಿಂಗಳಿಗೆ ಸುಗ್ಗಿ ಬರುವದೆಂದು ನೀವು 35
ಹೇಳುವದುಂಟಷ್ಟೆ. ನಿಮ್ಮ ಕಣ್ಣೆತ್ತಿ ಹೊಲಗಳನ್ನು
ನೋಡಿರಿ; ಅವು ಬೆಳ್ಳಗಾಗಿ ಕೊಯ್ಲಿಗೆ ಬಂದವೆಂದು
ನಿಮಗೆ ಹೇಳುತ್ತೇನೆ. ಕೊಯ್ಯುವವನಿಗೆ ಈಗಲೇ 36
ಕೂಲಿ ದೊರೆಯುತ್ತದೆ; ಅವನು ನಿತ್ಯಜೀವಕ್ಕೆ ಫಲ
ವನ್ನು ಕೂಡಿಸಿಡುತ್ತಾನೆ; ಹೀಗೆ ಬಿತ್ತುವವನಿಗೂ
ಕೊಯ್ಯುವವನಿಗೂ ಕೂಡ ಸಂತೋಷವಾಗುವದು.
ಬಿತ್ತುವವನೊಬ್ಬ, ಕೊಯ್ಯುವವನೊಬ್ಬ ಎಂಬ ಗಾದೆ 37
ಯಂತೆ ಆಯಿತು. ನೀವು ಕಷ್ಟಮಾಡದಂಥ ಬೆಳೆ 38
ಯನ್ನು ಕೊಯ್ಯುವದಕ್ಕೆ ನಾನು ನಿಮ್ಮನ್ನು ಕಳುಹಿಸಿ
ದೆನು; ಬೇರೊಬ್ಬರು ಕಷ್ಟಮಾಡಿದ್ದಾರೆ; ನೀವು ನಡುವೆ
ಅವರ ಕಷ್ಟದಲ್ಲಿ ಸೇರಿದ್ದೀರಿ ಎಂದು ಹೇಳಿದನು.

ನಾನು ಮಾಡಿದ್ದನ್ನೆಲ್ಲಾ ಆತನು ನನಗೆ ಹೇಳಿದ 39
ನೆಂಬದಾಗಿ ಸಾಕ್ಷಿಕೊಡುತ್ತಿರುವ ಆ ಹೆಂಗಸಿನ ಮಾತಿನ
ಮೇಲೆ ಆ ಊರಿನ ಸಮಾರ್ಯರಲ್ಲಿ ಅನೇಕರು ಆತ
ನನ್ನು ನಂಬುವವರಾದರು. ಆದ್ದರಿಂದ ಆ ಸಮಾರ್ಯ 40
ರು ಆತನ ಬಳಿಗೆ ಬಂದು—ನೀನು ನಮ್ಮಲ್ಲಿ ಇರ
ಬೇಕೆಂದು ಆತನನ್ನು ಬೇಡಿಕೊಳ್ಳಲು ಆತನು ಎರಡು
ದಿವಸ ಅವರಲ್ಲೇ ಇದ್ದನು. ಹೆಚ್ಚು ಜನರು ಆತನ 41
ವಾಕ್ಯವನ್ನು ಕೇಳಿ ನಂಬಿ ಆ ಹೆಂಗಸಿಗೆ—ನಾವು ಆತ 42
ನನ್ನು ನಂಬಿರುವದು ಇನ್ನು ನಿನ್ನ ಮಾತಿನ ಮೇಲೆ
ಅಲ್ಲ; ನಾವು ಕಿವಿಯಾರೆ ಕೇಳಿ ಈತನು ಲೋಕರಕ್ಷ
ಕನೇ ಹೌದೆಂದು ತಿಳುಕೊಂಡಿದ್ದೇವೆ ಎಂದು ಹೇಳಿದರು.

ಯೇಸು ಒಬ್ಬ ಪ್ರಧಾನನ ಮಗನನ್ನು ಮಾತಿನಿಂದಲೇ
ಸ್ವಸ್ಥಮಾಡಿದ್ದು.

ಆ ಎರಡು ದಿವಸಗಳಾದ ಮೇಲೆ ಆತನು ಅಲ್ಲಿಂದ 43
ಹೊರಟು ಗಲಿಲಾಯಕ್ಕೆ ಹೋದನು. ಯಾಕಂದರೆ 44

ಪ್ರವಾದಿಗೆ ಸ್ವದೇಶದಲ್ಲಿ ಮರ್ಯಾದೆಯಿಲ್ಲವೆಂದು
45 ಯೇಸು ತಾನೇ ಹೇಳಿದನು. ಗಲಿಲಾಯದವರು
ತಾವೂ ಯೆರೂಸಲೇಮಿನ ಜಾತ್ರೆಗೆ ಹೋಗಿ ಆತನು
ಅಲ್ಲಿ ಮಾಡಿದ್ದನ್ನೆಲ್ಲಾ ನೋಡಿದ್ದರಿಂದ ಆತನು ಗಲಿ
ಲಾಯಕ್ಕೆ ಬಂದಾಗ ಆತನನ್ನು ಆದರದಿಂದ ಅಂಗೀಕರಿ
ಸಿದರು.
46 ಹೀಗಿರಲಾಗಿ ಯೇಸು, ತಾನು ನೀರನ್ನು ದ್ರಾಕ್ಷಾ
ರಸವಾಗಿ ಮಾಡಿದ ಗಲಿಲಾಯದ ಕಾನಾ ಊರಿಗೆ
ಮತ್ತೂ ಬಂದನು. ಅಲ್ಲಿದ್ದಾಗ ಅರಮನೆಯ ಒಬ್ಬ
ಪ್ರಧಾನನ ಮಗನು ಕಪೆರ್ನೌಮಿನಲ್ಲಿ ಅಸ್ವಸ್ಥನಾ
47 ಗಿದ್ದನು. ಯೇಸು ಯೂದಾಯದಿಂದ ಗಲಿಲಾಯಕ್ಕೆ
ಬಂದ ಸುದ್ದಿಯನ್ನು ಆ ಪ್ರಧಾನನು ಕೇಳಿದಾಗ ತನ್ನ
ಮಗನು ಸಾಯುವ ಹಾಗಿದ್ದದರಿಂದ ಯೇಸುವಿನ
ಬಳಿಗೆ ಹೋಗಿ— ನೀನು ಇಳಿದು ಬಂದು ನನ್ನ ಮಗ
48 ನನ್ನು ಸ್ವಸ್ಥಮಾಡಬೇಕೆಂದು ಬೇಡಿಕೊಂಡನು; ಯೇಸು
ಅವನಿಗೆ— ನೀವು ಸೂಚಕಕಾರ್ಯಗಳನ್ನೂ ಅದ್ಭುತ
ಕಾರ್ಯಗಳನ್ನೂ ನೋಡದಿದ್ದರೆ ನಂಬುವದೇ ಇಲ್ಲ
49 ವೆಂದು ಹೇಳಿದನು. ಆ ಪ್ರಧಾನನು— ಸ್ವಾಮೀ, ನನ್ನ
ಮಗನು ಸಾಯುವದಕ್ಕೆ ಮುಂಚೆ ನೀನು ಬರಬೇಕು
50 ಅನ್ನಲು ಯೇಸು ಅವನಿಗೆ— ನಿನ್ನ ಮಗನು ಬದುಕು
ತ್ತಾನೆ ಹೋಗು ಎಂದು ಉತ್ತರಕೊಟ್ಟನು. ಆ
ಗೃಹಸ್ಥನು ಯೇಸು ತನಗೆ ಹೇಳಿದ ಮಾತನ್ನು ನಂಬಿ
51 ಹೊರಟುಹೋದನು. ಅವನು ಇನ್ನೂ ಘಟ್ಟಾಯಿಳಿದು
ಹೋಗುತ್ತಿರುವಲ್ಲಿ ಅವನ ಆಳುಗಳು ಅವನೆದುರಿಗೆ
ಬಂದು— ನಿನ್ನ ಮಗನು ಬದುಕಿಕೊಂಡನು ಅಂದರು.
52 ಎಷ್ಟು ಘಂಟೆಗೆ ಅವನಿಗೆ ರೋಗವು ಇಳಿತರವಾಯಿ
ತೆಂದು ಅವನು ಅವರನ್ನು ಕೇಳಿದಾಗ ಅವರು— ನಿನ್ನೆ
1)ಮಧ್ಯಾಹ್ನದ ಒಂದು ಘಂಟೆಗೆ ಜ್ವರವು ಅವನನ್ನು
53 ಬಿಟ್ಟಿತು ಅಂದರು. ಆಗ ನಿನ್ನ ಮಗನು ಬದುಕುತ್ತಾ
ನೆಂದು ಯೇಸು ತನಗೆ ಹೇಳಿದ ತಾಸಿನಲ್ಲಿಯೇ ಅದಾ
ಯಿತೆಂದು ತಂದೆಯು ತಿಳುಕೊಂಡದರಿಂದ ಅವನೂ
ಅವನ ಮನೆಯವರೆಲ್ಲರೂ ಆತನನ್ನು ನಂಬಿದರು.
54 ಯೇಸು ಯೂದಾಯದಿಂದ ಗಲಿಲಾಯಕ್ಕೆ ಬಂದ
ಮೇಲೆ ಈ ಎರಡನೆಯ ಸೂಚಕಕಾರ್ಯವನ್ನು ಮಾಡಿ
ದನು.

ಯೇಸು ಸಬ್ಬತ್‌ದಿನದಲ್ಲಿ ಒಬ್ಬ ರೋಗಿಯನ್ನು
ಸ್ವಸ್ಥಮಾಡಿದ್ದರಿಂದ ಯೆಹೂದ್ಯರು ಆತನನ್ನು ವಿರೋಧಿಸಿದ್ದು.

5 ಇದಾದ ಮೇಲೆ ಯೆಹೂದ್ಯರದೊಂದು ಜಾತ್ರೆ
ಬಂದದರಿಂದ ಯೇಸು ಯೆರೂಸಲೇಮಿಗೆ ಹೋದನು.
2 ಯೆರೂಸಲೇಮಿನಲ್ಲಿ ಕುರೀ ಅಗಸೇಬಾಗಲಿನ ಹತ್ತರ
ದಲ್ಲಿ ಒಂದು ಕೊಳವಿದೆ; ಇದಕ್ಕೆ ಇಬ್ರಿಯ ಮಾತಿನಲ್ಲಿ
3 2)ಬೇತ್ಸಥಾ ಎಂದು ಹೆಸರು. ಅಲ್ಲಿ ಐದು ಮಂಟಪ
ಗಳವೆ; ಇವುಗಳಲ್ಲಿ ಬಹುಮಂದಿ ರೋಗಿಗಳೂ ಕುರು

ಡರೂ ಕುಂಟರೂ ಮೈ ಒಣಗಿದವರೂ ಬಿದ್ದುಕೊಂಡಿರ
ವರು3). ಅಲ್ಲಿ ಮೂವತ್ತೆಂಟು ವರುಷದಿಂದ ರೋಗಿ
ಯಾಗಿದ್ದ ಒಬ್ಬ ಮನುಷ್ಯನಿದ್ದನು. ಅವನು ಬಿದ್ದಿರ
ವದನ್ನು ಯೇಸು ಕಂಡು ಇವನು ಹೀಗಾಗಿ ಬಹು
ಕಾಲವಾಗಿದೆ ಎಂದು ತಿಳಿದು— ನಿನಗೆ ಸ್ವಸ್ಥವಾಗಲಿಕ್ಕೆ
ಮನಸ್ಸುಂಟೋ? ಎಂದು ಅವನನ್ನು ಕೇಳಿದ್ದಕ್ಕೆ ಆ
ರೋಗಿಯು— ಸ್ವಾಮೀ, ನೀರು ಉಕ್ಕುವಾಗ ನನ್ನನ್ನು
ಕೊಳದೊಳಗೆ ಇಳಿಸುವವರು ಒಬ್ಬರೂ ಇಲ್ಲ; ನಾನು
ಬರುವದರೊಳಗೆ ನನಗಿಂತ ಮುಂದಾಗಿ ಮತ್ತೊಬ್ಬನು
ಇಳಿಯುತ್ತಾನೆ ಅಂದನು. ಯೇಸು ಅವನಿಗೆ— ಎದ್ದು
ನಿನ್ನ ಹಾಸಿಗೆಯನ್ನು ಹೊತ್ತುಕೊಂಡು ನಡೆ ಎಂದು
ಹೇಳಿದನು. ಆ ಕ್ಷಣವೇ ಆ ಮನುಷ್ಯನು ಸ್ವಸ್ಥ
ನಾಗಿ ತನ್ನ ಹಾಸಿಗೆಯನ್ನು ಹೊತ್ತುಕೊಂಡು ನಡೆದನು.
ಆದರೆ ಆ ದಿವಸ ಸಬ್ಬತ್‌ದಿನವಾಗಿತ್ತು; ಹೀಗಿರುವ
ದರಿಂದ ಯೆಹೂದ್ಯರು ಸ್ವಸ್ಥವಾದವನಿಗೆ— ಈಹೊತ್ತು
ಸಬ್ಬತ್‌ದಿನವಾಗಿದೆ; ನೀನು ಹಾಸಿಗೆಯನ್ನು ಹೊರು
ವದು ಸರಿಯಲ್ಲವೆಂದು ಹೇಳಿದ್ದಕ್ಕೆ ಅವನು—
ನನ್ನನ್ನು ಸ್ವಸ್ಥಮಾಡಿದವನೇ ನಿನ್ನ ಹಾಸಿಗೆಯನ್ನು
ಹೊತ್ತುಕೊಂಡು ನಡೆ ಎಂದು ನನಗೆ ಹೇಳಿದನು
ಅಂದನು. ಹೊತ್ತುಕೊಂಡು ನಡೆ ಎಂದು ನಿನಗೆ
ಹೇಳಿದ ಮನುಷ್ಯನು ಯಾರೆಂದು ಅವನನ್ನು ಕೇಳಿದರು.
ಆದರೆ ಅವನಾರೆಂಬದು ಸ್ವಸ್ಥವಾದವನಿಗೆ ತಿಳಿದಿರಲಿಲ್ಲ;
ಆ ಸ್ಥಳದಲ್ಲಿ ಜನರ ಗುಂಪು ಇದ್ದದರಿಂದ ಯೇಸು
ಸರಕೊಂಡುಹೋಗಿದ್ದನು. ಇದಾದ ಮೇಲೆ ಯೇಸು
ಅವನನ್ನು ದೇವಾಲಯದಲ್ಲಿ ಕಂಡುಕೊಂಡು— ನಿನಗೆ
ಸ್ವಸ್ಥವಾಯಿತಲ್ಲಾ; ಇನ್ನು ಮೇಲೆ ಪಾಪಮಾಡ
ಬೇಡ; ನಿನಗೆ ಹೆಚ್ಚಿನ ಕೇಡು ಬಂದೀತು ಅಂದನು. ಆ
ಮನುಷ್ಯನು ಅಲ್ಲಿಂದ ಹೋಗಿ— ನನ್ನನ್ನು ಸ್ವಸ್ಥಮಾಡಿ
ದವನು ಯೇಸುವೇ ಎಂದು ಯೆಹೂದ್ಯರಿಗೆ ತಿಳಿಸಿದನು.
ಆದಕಾರಣ ಯೆಹೂದ್ಯರು— ಯೇಸು ಸಬ್ಬತ್‌ದಿನ
ದಲ್ಲಿ ಇಂಥ ಕೆಲಸಗಳನ್ನು ಮಾಡುತ್ತಾನಲ್ಲಾ ಎಂದು
ಆತನನ್ನು ಹಿಂಸಿಸುವವರಾದರು. ಅದಕ್ಕೆ ಯೇಸು—
ನನ್ನ ತಂದೆಯು ಇಂದಿನ ವರೆಗೂ ಕೆಲಸಮಾಡುತ್ತಾನೆ
ನಾನೂ ಕೆಲಸಮಾಡುತ್ತೇನೆ ಅಂದನು. ಈ ಮಾತನ್ನು
ಹೇಳಿದ್ದರಿಂದ ಆತನು ಸಬ್ಬತ್‌ದಿನವನ್ನು ಅಲಕ್ಷ್ಯಮಾಡಿ
ದ್ದಲ್ಲದೆ ದೇವರನ್ನು ತನ್ನ ತಂದೆ ಎಂದು ಹೇಳಿ
ತನ್ನನ್ನು ದೇವರಿಗೆ ಸರಿಗಟ್ಟಿಕೊಂಡನೆಂದು ಯೆಹೂ
ದ್ಯರು ಆತನನ್ನು ಕೊಲ್ಲುವದಕ್ಕೆ ಮತ್ತಷ್ಟು ಪ್ರಯತ್ನ
ಮಾಡಿದರು.

ದೇವಕುಮಾರನ ಅಧಿಕಾರವನ್ನು ಕುರಿತು ಮತ್ತು ಆತನಿಗಿರುವ
ಸಾಕ್ಷಿಯನ್ನು ಕುರಿತು ಯೇಸು ಮಾಡಿದ ಉಪದೇಶ.

ಅದಕ್ಕೆ ಯೇಸು ಅವರಿಗೆ— ನಿಮಗೆ ನಿಜನಿಜವಾಗಿ
ಹೇಳುತ್ತೇನೆ, ತಂದೆಯು ಮಾಡುವದನ್ನು ಕಂಡು

1) ಮೂಲ: ಏಳು ತಾಸಿಗೆ. 2) ಕೆಲವು ಪ್ರತಿಗಳಲ್ಲಿ ಬೇತ್ಸಾಯಿದವೆಂದು, ಬೇರೆ ಕೆಲವು ಪ್ರತಿಗಳಲ್ಲಿ ಬೇಥೆಸ್ದ ಎಂದು ಬ
3) ಕೆಲವು ಪ್ರತಿಗಳಲ್ಲಿ ಇನ್ನೂ ಬರೆದಿರುವದೇನಂದರೆ— ಇವರು ನೀರು ಉಕ್ಕುವದನ್ನು ಕಾದುಕೊಂಡಿರುವರು. (4) ಒಬ್ಬ ದೇವದೂ
ಆಗಾಗ್ಗೆ ಕೊಳದಲ್ಲಿ ಇಳಿದುಬಂದು ನೀರನ್ನು ಉಕ್ಕಿಸುವನು; ನೀರನ್ನು ಉಕ್ಕಿಸಿದ ಮೇಲೆ ಮೊದಲು ಒಳಗೆ ಹೋದವನು ಯಾವ ರೋಗ
ಬಿದ್ದಿದ್ದರೂ ಸ್ವಸ್ಥವಾಗುವನು.

ಮಗನು ಮಾಡುತ್ತಾನೆ ಹೊರತು ತನ್ನಷ್ಟಕ್ಕೆ ತಾನೇ
ಏನೂ ಮಾಡಲಾರನು; ಆತನು ಮಾಡುವದನ್ನೆಲ್ಲಾ
20 ಹಾಗೆಯೇ ಮಗನೂ ಮಾಡುತ್ತಾನೆ. ತಂದೆಯು
ಮಗನ ಮೇಲೆ ಮಮತೆಯಿಟ್ಟು ತಾನು ಮಾಡುವವು
ಗಳನ್ನೆಲ್ಲಾ ಅವನಿಗೆ ತೋರಿಸುತ್ತಾನೆ. ಇದಲ್ಲದೆ ಇವು
ಗಳಿಗಿಂತ ದೊಡ್ಡ ಕೆಲಸಗಳನ್ನು ಅವನಿಗೆ ತೋರಿಸು
ವನು; ಅವುಗಳನ್ನು ನೋಡಿ ನಿಮಗೆ ಆಶ್ಚರ್ಯವಾಗು
21 ವದು. ತಂದೆಯು ಹೇಗೆ ಸತ್ತವರನ್ನು ಎಬ್ಬಿಸಿ ಬದು
ಕಿಸುತ್ತಾನೋ ಹಾಗೆಯೇ ಮಗನು ಸಹ ತನಗೆ ಬೇಕಾ
22 ದವರನ್ನು ಬದುಕಿಸುತ್ತಾನೆಂದು ತಿಳುಕೊಳ್ಳಿರಿ. ಇದ
ಲ್ಲದೆ ತಂದೆಯು ಯಾರಿಗೂ ತೀರ್ಪುಮಾಡುವದೂ
ಇಲ್ಲ; ತೀರ್ಪುಮಾಡುವ ಅಧಿಕಾರವನ್ನೆಲ್ಲಾ ಮಗನಿಗೆ
23 ಕೊಟ್ಟಿದ್ದಾನೆ; ಎಲ್ಲರು ತನಗೆ ಮಾನಕೊಡುವ ಪ್ರಕಾ
ರವೇ ಮಗನಿಗೂ ಮಾನಕೊಡಬೇಕೆಂದು ತಂದೆಯು
ಇಚ್ಛೈಸುತ್ತಾನೆ. ಮಗನಿಗೆ ಮಾನಕೊಡದವನು ಅವ
ನನ್ನು ಕಳುಹಿಸಿದ ತಂದೆಗೂ ಮಾನಕೊಡದವನಾಗಿ
24 ದ್ದಾನೆ. ನಿಮಗೆ ನಿಜನಿಜವಾಗಿ ಹೇಳುತ್ತೇನೆ, ನನ್ನ
ವಾಕ್ಯವನ್ನು ಕೇಳಿ ನನ್ನನ್ನು ಕಳುಹಿಸಿದಾತನನ್ನು
ನಂಬುವವನು ನಿತ್ಯಜೀವವನ್ನು ಹೊಂದಿದ್ದಾನೆ. ಅವನು
ತೀರ್ಪಿಗೆ ಗುರಿಯಾಗುವದಿಲ್ಲ; ಮರಣದಿಂದ ಪಾರಾಗಿ
25 ಜೀವಕ್ಕೆ ಸೇರಿದ್ದಾನೆ. ನಿಮಗೆ ನಿಜನಿಜವಾಗಿ ಹೇಳು
ತ್ತೇನೆ, ಸತ್ತವರು ದೇವಕುಮಾರನ ಧ್ವನಿಯನ್ನು
ಕೇಳುವ ಕಾಲ ಬರುತ್ತದೆ, ಈಗಲೇ ಬಂದಿದೆ; ಕೇಳಿ
26 ದವರು ಬದುಕುವರು. ತಂದೆಯು ತಾನು ಹೇಗೆ
ಸ್ವತಃ ಜೀವವುಳ್ಳವನಾಗಿದ್ದಾನೋ ಹಾಗೆಯೇ ಮಗನೂ
27 ಸ್ವತಃ ಜೀವವುಳ್ಳವನಾಗಿರುವಂತೆ ಮಾಡಿದನು. ಮತ್ತು
ಮಗನು ಮನುಷ್ಯಕುಮಾರನಾಗಿರುವದರಿಂದ ತೀರ್ಪು
28 ಮಾಡುವ ಅಧಿಕಾರವನ್ನೂ ಅವನಿಗೆ ಕೊಟ್ಟನು. ಅದಕ್ಕೆ
ಆಶ್ಚರ್ಯಪಡಬೇಡಿರಿ; ಸಮಾಧಿಗಳಲ್ಲಿರುವವರೆಲ್ಲರು
29 ಆತನ ಧ್ವನಿಯನ್ನು ಕೇಳಿ ಎದ್ದು ಹೊರಗೆ ಬರುವ
ಕಾಲ ಬರುತ್ತದೆ. ಒಳ್ಳೇದನ್ನು ಮಾಡಿದವರಿಗೆ ಜೀವ
ಕ್ಕಾಗಿ ಪುನರುತ್ಥಾನವಾಗುವದು; ಕೆಟ್ಟದ್ದನ್ನು ನಡಿಸಿ
ದವರಿಗೆ ತೀರ್ಪಿಗಾಗಿ ಪುನರುತ್ಥಾನವಾಗುವದು.

30 ನನ್ನಷ್ಟಕ್ಕೆ ನಾನೇ ಏನೂ ಮಾಡಲಾರೆನು; ತಂದೆ
ಹೇಳಿದ್ದನ್ನು ಕೇಳಿ ನ್ಯಾಯತೀರಿಸುತ್ತೇನೆ; ಮತ್ತು
ಸ್ವಂತ ಚಿತ್ತ ನೆರವೇರಬೇಕೆಂದು ಅಪೇಕ್ಷಿಸದೆ ನನ್ನನ್ನು
ಕಳುಹಿಸಿದಾತನ ಚಿತ್ತ ನೆರವೇರಬೇಕೆಂದು ಅಪೇಕ್ಷಿಸು
ವದರಿಂದ ನಾನು ಮಾಡುವ ತೀರ್ಪು ನ್ಯಾಯವಾಗಿದೆ.
31 ನನ್ನ ವಿಷಯವಾಗಿ ನಾನೇ ಸಾಕ್ಷಿಹೇಳಿಕೊಂಡರೆ
32 ನನ್ನ ಸಾಕ್ಷಿ ನಿಜವಾಗದು. ನನ್ನ ವಿಷಯವಾಗಿ
ಸಾಕ್ಷಿಹೇಳುವವನು ಮತ್ತೊಬ್ಬನಿದ್ದಾನೆ; ಆತನು ನನ್ನ
ವಿಷಯವಾಗಿ ಹೇಳುವ ಸಾಕ್ಷಿ ನಿಜವೆಂದು ಬಲ್ಲೆನು.
33 ನೀವು ಯೋಹಾನನ ಬಳಿಯಲ್ಲಿ ಕೇಳಿಕೊಂಡು
ಬರುವದಕ್ಕೆ ಕಳುಹಿಸಿದಿರಿ; ಅವನು ಸತ್ಯಕ್ಕೆ ಸಾಕ್ಷಿ
34 ಹೇಳಿದನು. ನಾನಂತೂ ನನಗೆ ಬೇಕಾದ ಸಾಕ್ಷಿಯನ್ನು
ಮನುಷ್ಯರಿಂದ ತಕ್ಕೊಳ್ಳುವದಿಲ್ಲ; ಆದರೂ ನಿಮಗೆ
35 ರಕ್ಷಣೆ ಆಗಬೇಕೆಂದು ಇದನ್ನು ಹೇಳಿದ್ದೇನೆ. ಯೋ
ಹಾನನು ಉರಿಯುವ ದೀಪದೋಪಾದಿಯಲ್ಲಿ ಪ್ರಕಾ
ಶಿಸಿದನು. ಅವನು ಕೊಡುವ ಬೆಳಕಿನಲ್ಲಿ ಸ್ವಲ್ಪ
ಕಾಲ ವಿನೋದಗೊಳ್ಳುವದಕ್ಕೆ ಮನಸ್ಸುಮಾಡಿದಿರಿ.

ನನಗಂತೂ ಯೋಹಾನನ ಸಾಕ್ಷಿಗಿಂತ ಹೆಚ್ಚಿನ ಸಾಕ್ಷಿ 36
ಉಂಟು; ಹೇಗಂದರೆ ಪೂರೈಸುವದಕ್ಕೆ ತಂದೆ ನನಗೆ
ಕೊಟ್ಟಿರುವ ಕೆಲಸಗಳು, ಅಂದರೆ ನಾನು ಮಾಡುವ
ಕೆಲಸಗಳೇ, ತಂದೆಯು ನನ್ನನ್ನು ಕಳುಹಿಸಿಕೊಟ್ಟನೆಂಬ
ದಾಗಿ ನನ್ನ ವಿಷಯದಲ್ಲಿ ಸಾಕ್ಷಿಕೊಡುತ್ತವೆ. ಇದಲ್ಲದೆ 37
ನನ್ನನ್ನು ಕಳುಹಿಸಿಕೊಟ್ಟ ತಂದೆಯು ನನ್ನ ವಿಷಯ
ವಾಗಿ ಸಾಕ್ಷಿಹೇಳಿದ್ದಾನೆ. ನೀವು ಎಂದಾದರೂ ಆತನ
ಧ್ವನಿಯನ್ನು ಕೇಳಿದ್ದೂ ಇಲ್ಲ, ಆತನ ರೂಪವನ್ನು
ನೋಡಿದ್ದೂ ಇಲ್ಲ, ಆತನ ವಾಕ್ಯವು ನಿಮ್ಮಲ್ಲಿ ನೆಲೆ 38
ಗೊಂಡದ್ದೂ ಇಲ್ಲ; ಆತನು ಕಳುಹಿಸಿಕೊಟ್ಟವನ
ಮಾತನ್ನು ನೀವು ನಂಬದೆ ಇದ್ದೀರಷ್ಟೆ. ಶಾಸ್ತ್ರಗಳಿಂದ 39
ನಿತ್ಯಜೀವವು ದೊರೆಯುತ್ತದೆಂದು ನೀವು ನೆನಸಿ ಅವು
ಗಳನ್ನು ವಿಚಾರಿಸುತ್ತೀರಲ್ಲಾ; ಅವುಗಳೂ ನನ್ನ ವಿಷ
ಯದಲ್ಲಿ ಸಾಕ್ಷಿಕೊಡುವವುಗಳಾಗಿವೆ. ಆದರೂ ಜೀವ 40
ಹೊಂದುವದಕ್ಕಾಗಿ ನನ್ನ ಬಳಿಗೆ ಬರುವದಕ್ಕೆ ನಿಮಗೆ
ಮನಸ್ಸಿಲ್ಲ.

ನಾನು ಮನುಷ್ಯರಿಂದಾಗುವ ಮಾನವನ್ನು ಅಂಗೀ 41
ಕರಿಸುವದಿಲ್ಲ. ಆದರೆ ನಿಮ್ಮನ್ನು ನಾನು ಬಲ್ಲೆನು, 42
ದೇವರಲ್ಲಿ ನಿಮಗೆ ಪ್ರೀತಿಯಿಲ್ಲವೆಂದು ನನಗೆ
ತಿಳಿದದೆ. ನಾನು ನನ್ನ ತಂದೆಯ ಹೆಸರಿನ ಮೇಲೆ 43
ಬಂದಿದ್ದೇನೆ; ನನ್ನನ್ನು ನೀವು ಒಪ್ಪಿಕೊಳ್ಳುವದಿಲ್ಲ;
ಮತ್ತೊಬ್ಬನು ಸ್ವಂತ ಹೆಸರಿನ ಮೇಲೆ ಬಂದರೆ ಅವ
ನನ್ನು ಒಪ್ಪಿಕೊಳ್ಳುವಿರಿ. ಒಬ್ಬನೇ ದೇವರಿಂದ ಬರು 44
ವಂಥ ಮಾನವನ್ನು ಅಪೇಕ್ಷಿಸದೆ ಒಬ್ಬರಿಂದೊಬ್ಬರು
ಮಾನವನ್ನು ಅಂಗೀಕರಿಸುವವರಾದ ನೀವು ಹೇಗೆ
ನಂಬೀರಿ? ನಾನು ತಂದೆಯ ಮುಂದೆ ನಿಮ್ಮ ಮೇಲೆ 45
ತಪ್ಪುಹೊರಿಸುವೆನೆಂದು ನೆನಸಬೇಡಿರಿ; ನೀವು ಆಶ್ರ
ಯಿಸಿಕೊಂಡಿರುವ ಮೋಶೆಯೇ ನಿಮ್ಮ ಮೇಲೆ ತಪ್ಪು
ಹೊರಿಸುವವನು. ಅವನು ನನ್ನ ವಿಷಯವಾಗಿ ಬರೆ 46
ದನು; ಆದದರಿಂದ ನೀವು ಮೋಶೆಯ ಮಾತನ್ನು
ನಂಬುವವರಾಗಿದ್ದರೆ ನನ್ನ ಮಾತನ್ನೂ ನಂಬುತ್ತಿದ್ದಿರಿ.
ಅವನು ಬರೆದ ಮಾತುಗಳನ್ನು ನೀವು ನಂಬದಿದ್ದರೆ 47
ನಾನು ಹೇಳುವ ಮಾತುಗಳನ್ನು ಹೇಗೆ ನಂಬೀರಿ?
ಅಂದನು.

ಯೇಸು ಐದು ಸಾವಿರ ಜನರಿಗೆ ಆಶ್ಚರ್ಯವಾಗಿ ಊಟ
ಮಾಡಿಸಿದ್ದು; ಸಮುದ್ರದ ಮೇಲೆ ನಡೆದದ್ದು.
(ಮತ್ತಾ. 14. 13—33; ಮಾರ್ಕ 6. 32—51;
ಲೂಕ 9. 10—17.)

ತರುವಾಯ ಯೇಸು ಗಲಿಲಾಯದ ಸಮುದ್ರದ 6
ಆಚೆಗೆ ಹೋದನು; ಅದಕ್ಕೆ ತಿಬೇರಿಯದ ಸಮುದ್ರ
ವೆಂತಲೂ ಹೇಳುತ್ತಾರೆ. ಬಹು ಜನರ ಗುಂಪು ರೋಗಿ 2
ಗಳಲ್ಲಿ ಆತನು ನಡಿಸಿದ ಸೂಚಕಕಾರ್ಯಗಳನ್ನು ನೋ
ಡಿದ್ದರಿಂದ ಆತನ ಹಿಂದೆ ಹೋಗುತ್ತಿತ್ತು. ಆದರೆ 3
ಯೇಸು ಬೆಟ್ಟವನ್ನೇರಿ ಅಲ್ಲಿ ತನ್ನ ಶಿಷ್ಯರ ಸಂಗಡ
ಕೂತುಕೊಂಡನು. ಆ ಕಾಲದಲ್ಲಿ ಯೆಹೂದ್ಯರ ಪಸ್ಕ 4
ಹಬ್ಬವು ಹತ್ತರವಾಗಿತ್ತು. ಹೀಗಿರಲಾಗಿ ಯೇಸು 5
ಕಣ್ಣೆತ್ತಿ ನೋಡಿದಾಗ ಬಹು ಜನರ ಗುಂಪು ತನ್ನ ಬಳಿಗೆ

ಬರುವದನ್ನು ಕಂಡು—ಇವರ ಊಟಕ್ಕೆ ನಾವು ಎಲ್ಲಿಂದ
ರೊಟ್ಟಿ ಕೊಂಡುತರೋಣ? ಎಂದು ಫಿಲಿಪ್ಪನನ್ನು
6 ಕೇಳಿದನು. ತಾನು ಮಾಡಬೇಕೆಂದಿದ್ದದ್ದು ತನಗೆ ತಿಳಿ
ದಿದ್ದರೂ ಅವನನ್ನು ಪರೀಕ್ಷಿಸುವದಕ್ಕೆ ಈ ಮಾತನ್ನು
7 ಹೇಳಿದನು. ಅದಕ್ಕೆ ಫಿಲಿಪ್ಪನು—ಒಬ್ಬೊಬ್ಬನಿಗೆ ಸ್ವಲ್ಪ
ಸ್ವಲ್ಪ ಸಿಕ್ಕಬೇಕಾದರೆ ಇನ್ನೂರು ಹಣದ ರೊಟ್ಟಿಯಾ
8 ದರೂ ಸಾಲದು ಅಂದನು. ಆಗ ಆತನ ಶಿಷ್ಯರಲ್ಲಿ ಒಬ್ಬ
ನಾಗಿರುವ ಸೀಮೋನ್‌ಪೇತ್ರನ ತಮ್ಮನಾದ ಅಂದ್ರೆ
9 ಯನು ಆತನಿಗೆ—ಇಲ್ಲಿರುವ ಒಬ್ಬ ಹುಡುಗನ ಬಳಿ
ಯಲ್ಲಿ ಐದು ಜವೆಗೋದಿಯ ರೊಟ್ಟಿಗಳೂ ಎರಡು
ಮೀನುಗಳೂ ಅವೆ; ಆದರೆ ಇಷ್ಟು ಜನರಿಗೆ ಅವು
10 ಯಾತಕ್ಕಾದಾವು? ಎಂದು ಹೇಳಲಾಗಿ ಯೇಸು—ಆ
ಜನರನ್ನು ಊಟಕ್ಕೆ ಕೂಡ್ರಿಸಿರಿ ಅಂದನು. ಆ ಸ್ಥಳ
ದಲ್ಲಿ ಬಹಳ ಹುಲ್ಲು ಬೆಳೆದಿತ್ತು; ಜನರು ಕೂತು
ಕೊಂಡರು. ಗಂಡಸರ ಸಂಖ್ಯೆ ಹೆಚ್ಚುಕಡಿಮೆ ಐದು
11 ಸಾವಿರವಿತ್ತು. ತರುವಾಯ ಯೇಸು ಆ ರೊಟ್ಟಿಗಳನ್ನು
ತೆಗೆದುಕೊಂಡು ದೇವರ ಸ್ತೋತ್ರಮಾಡಿ ಕೂತು
ಕೊಂಡವರಿಗೆ ಹಂಚಿಕೊಟ್ಟನು; ಅದರಂತೆ ಮೀನು
ಗಳಲ್ಲಿಯೂ ಅವರಿಗೆ ಬೇಕಾದಷ್ಟು ಹಂಚಿಕೊಟ್ಟನು.
12 ಅವರಿಗೆ ತೃಪ್ತಿಯಾದ ಮೇಲೆ ಯೇಸು ತನ್ನ ಶಿಷ್ಯರಿಗೆ—
ಮಿಕ್ಕ ತುಂಡುಗಳನ್ನು ಕೂಡಿಸಿರಿ; ಇದರಲ್ಲಿ ಯಾ
ವದೂ ವ್ಯರ್ಥವಾಗಬಾರದು ಎಂದು ಹೇಳಿದನು.
13 ಅವರು ಕೂಡಿಸಲಾಗಿ ಆ ಐದು ಜವೆಗೋದಿಯ ರೊಟ್ಟಿ
ಗಳಲ್ಲಿ ಜನರು ತಿಂದು ಮಿಕ್ಕ ತುಂಡುಗಳಿಂದ
14 ಹನ್ನೆರಡು ಪುಟ್ಟಿ ತುಂಬಿದವು. ಆತನು ಮಾಡಿದ ಈ
ಸೂಚಕಕಾರ್ಯವನ್ನು ಆ ಜನರು ನೋಡಿ—ಲೋ
ಕಕ್ಕೆ ಬರಬೇಕಾದ ಪ್ರವಾದಿ ಈತನೇ ನಿಜ ಎಂದು
ಹೇಳಿಕೊಂಡರು.

15 ಆಗ ಯೇಸು—ಅವರು ಬಂದು ತನ್ನನ್ನು ಹಿಡು
ಕೊಂಡುಹೋಗಿ ಅರಸನನ್ನಾಗಿ ಮಾಡಬೇಕೆಂಬ ಯೋ
ಚನೆಯಲ್ಲಿದ್ದಾರೆಂದು ತಿಳಿದುಕೊಂಡು ತಿರಿಗಿ ತಾನೊಬ್ಬ
16 ನೇ ಒಂಟಿಗನಾಗಿ ಬೆಟ್ಟಕ್ಕೆ ಹೋಗಿಬಿಟ್ಟನು. ಸಂಜೆ
ಯಾದಾಗ ಆತನ ಶಿಷ್ಯರು ಸಮುದ್ರಕ್ಕೆ ಇಳಿದು
17 ದೋಣಿಯನ್ನು ಹತ್ತಿ ಸಮುದ್ರಮಾರ್ಗವಾಗಿ ಕಪೆ
ರ್ನೌಮಿನ ಕಡೆಗೆ ಹೊರಟರು. ಆಗಲೇ ಕತ್ತಲಾಗಿತ್ತು,
ಮತ್ತು ಯೇಸು ಅವರ ಬಳಿಗೆ ಇನ್ನೂ ಬಂದಿರಲಿಲ್ಲ.
18 ಇದಲ್ಲದೆ ಬಿರುಗಾಳಿ ಬೀಸುವದರಿಂದ ಸಮುದ್ರವು
19 ಅಲ್ಲಕಲ್ಲೋಲವಾಗಿತ್ತು. ಹೀಗಿರಲಾಗಿ ಅವರು ಹುಟ್ಟು
ಹಾಕುತ್ತಾ ಹೆಚ್ಚುಕಡಿಮೆ [1]ಒಂದು ಹರದಾರಿ
ದೂರ ಹೋದ ಬಳಿಕ ಯೇಸು ಸಮುದ್ರದ ಮೇಲೆ
ನಡೆಯುತ್ತಾ ದೋಣಿಯ ಸಮೀಪಕ್ಕೆ ಬರುವದನ್ನು
20 ನೋಡಿ ಅಂಜಿದರು. ಆದರೆ ಆತನು—ಅಂಜಬೇಡಿರಿ,
21 ನಾನು, ಅಂದನು. ಆಗ ಆತನನ್ನು ದೋಣಿಯೊಳಗೆ
ಕರಕೊಳ್ಳುವದಕ್ಕೆ ಮನಸ್ಸಾಗಿದ್ದರು; ಮತ್ತು ಆ
ಕ್ಷಣವೇ ಆ ದೋಣಿಯು ಅವರು ಹೋಗಬೇಕೆಂದಿದ್ದ
ಭೂಮಿಗೆ ಮುಟ್ಟಿತು.

ಯೇಸು ತಾನೇ ಜೀವಕರವಾದ ರೊಟ್ಟಿ ಎಂದು ಬೋಧಿಸಿದ್ದರಿಂದ
ಆತನ ಶಿಷ್ಯರಲ್ಲಿ ಅನೇಕರು ಹಿಂಜರಿದದ್ದು.

ಮರುದಿವಸ ಸಮುದ್ರದ ಆಚೇಕಡೆಯಲ್ಲಿ ನಿಂತ
ಕೊಂಡಿದ್ದ ಜನರು ಯೇಸುವನ್ನು ಹುಡುಕುತ್ತಿದ್ದರು
ಇಲ್ಲಿ ಒಂದೇ ಹಡಗು ಇದ್ದ ಹೊರತು ಬೇರೆ ದೋ
ಣಿಯು ಇರಲಿಲ್ಲವೆಂದೂ ಶಿಷ್ಯರು ಮಾತ್ರ ಹೊರಟ
ಹೋದದ್ದಲ್ಲದೆ ಯೇಸು ತನ್ನ ಶಿಷ್ಯರ ಸಂಗಡ
ಹಡಗನ್ನು ಹತ್ತಲಿಲ್ಲವೆಂದೂ ಅವರಿಗೆ ತಿಳಿದಿತ್ತು. ಆದ
ಅಷ್ಟರೊಳಗೆ ಬೇರೆ ದೋಣಿಗಳು ತಿಬೇರಿಯದಿಂ
ಹೊರಟು ಸ್ವಾಮಿಯು ಸ್ತೋತ್ರಮಾಡಿ ಜನರಿಗೆ ರೊಟ್ಟಿ
ಊಟಮಾಡಿಸಿದ ಸ್ಥಳದ ಸಮೀಪಕ್ಕೆ ಬಂದಿದ್ದವು
ಹೀಗಿರಲಾಗಿ ಯೇಸು ಇಲ್ಲಿ ಇಲ್ಲ, ಆತನ ಶಿಷ್ಯರು
ಇಲ್ಲ ಎಂದು ಆ ಜನರು ನೋಡಿ ತಾವೇ ಆ ಸಣ್ಣ
ದೋಣಿಗಳನ್ನು ಹತ್ತಿ ಯೇಸುವನ್ನು ಹುಡುಕುತ್ತಾ
ಕಪೆರ್ನೌಮಿಗೆ ಬಂದರು. ಮತ್ತು ಸಮುದ್ರದ ಆಚೆ
ಕಡೆಯಲ್ಲಿ ಆತನನ್ನು ಕಂಡುಕೊಂಡು—ಗುರುವೇ
ಯಾವಾಗ ಇಲ್ಲಿಗೆ ಬರೋಣವಾಯಿತು? ಎಂದು
ಕೇಳಿದ್ದಕ್ಕೆ, ಯೇಸು ಅವರಿಗೆ—ನಿಮಗೆ ನಿಜನಿಜವಾಗಿ
ಹೇಳುತ್ತೇನೆ, ನೀವು ನನ್ನನ್ನು ಹುಡುಕುವದು ಸೂಚಕ
ಕಾರ್ಯಗಳನ್ನು ನೋಡಿದ್ದರಿಂದಲ್ಲ, ಆ ರೊಟ್ಟಿ
ತಿಂದು ಹೊಟ್ಟೆ ತುಂಬಿಸಿಕೊಂಡಿದ್ದರಿಂದಲೇ. ದುಡಿ
ಯಿರಿ; ಕೆಟ್ಟುಹೋಗುವ ಆಹಾರಕ್ಕಾಗಿ ದುಡಿಯ
ಬೇಡಿರಿ, ನಿತ್ಯಜೀವಕ್ಕೆ ಉಳಿಯುವ ಆಹಾರಕ್ಕಾಗಿ
ದುಡಿಯಿರಿ; ಇಂಥ ಆಹಾರವನ್ನು ಮನುಷ್ಯಕುಮಾ
ರನು ನಿಮಗೆ ಕೊಡುವನು; ಇದಕ್ಕಾಗಿ ತಂದೆಯಾದ
ದೇವರು ಆತನನ್ನು ನೇಮಿಸಿ ಮುದ್ರೆಹಾಕಿದ್ದಾನೆ
ಅಂದನು.

ಅವರು—ದೇವರಿಗೆ ಮೆಚ್ಚಿಕೆಯಾದ ಕೆಲಸಗಳನ್ನು
ನಾವು ನಡಿಸಬೇಕಾದರೆ ಏನು ಮಾಡಬೇಕೆಂದು ಆತ
ನನ್ನು ಕೇಳಿದ್ದಕ್ಕೆ ಯೇಸು—ದೇವರು ಮೆಚ್ಚುವ
ಕೆಲಸ ಯಾವದಂದರೆ ಆತನು ಕಳುಹಿಸಿಕೊಟ್ಟವನನ್ನು
ನೀವು ನಂಬುವದೇ ಅಂದನು. ಅವರು ಆತನನ್ನು—
ಹಾಗಾದರೆ ನಾವು ನೋಡಿ ನಿನ್ನ ಮಾತನ್ನು ನಂಬು
ವಂತೆ ಏನು ಸೂಚಕಕಾರ್ಯ ಮಾಡುತ್ತೀ? ನಮ್ಮ
ಹಿರಿಯರು ಅಡವಿಯಲ್ಲಿ ಮನ್ನಾ ತಿಂದರು; ಪರ
ಲೋಕದಿಂದ ರೊಟ್ಟಿಯನ್ನು ಅವರಿಗೆ ತಿನ್ನುವದಕ್ಕೆ
ಕೊಟ್ಟನು ಎಂದು ಶಾಸ್ತ್ರದಲ್ಲಿ ಬರೆದದೆಯಲ್ಲಾ, ನೀನು
ಏನು ಕೆಲಸ ನಡಿಸುತ್ತೀ? ಎಂದು ಕೇಳಿದಾಗ ಯೇಸು
ಅವರಿಗೆ—ನಿಮಗೆ ನಿಜನಿಜವಾಗಿ ಹೇಳುತ್ತೇನೆ. ಮೋ
ಶೆಯು ನಿಮಗೆ ಪರಲೋಕದಿಂದ ರೊಟ್ಟಿ ಕೊಟ್ಟವ
ನಲ್ಲ; ನನ್ನ ತಂದೆಯು ಪರಲೋಕದಿಂದ ಬರುವ ನಿಜ
ವಾದ ರೊಟ್ಟಿಯನ್ನು ನಿಮಗೆ ಕೊಡುತ್ತಾನೆ. ದೇವರು
ಕೊಡುವ ಆ ರೊಟ್ಟಿ ಯಾವದಂದರೆ ಪರಲೋಕದಿಂದ
ಇಳಿದುಬಂದು ಲೋಕಕ್ಕೆ ಜೀವವನ್ನು ಉಂಟುಮಾಡು
ವಂಥದೇ ಎಂದು ಹೇಳಿದನು. ಆಗ ಅವರು—ಸ್ವಾಮೀ

1) ಮೂಲ: ಇಪ್ಪತ್ತೈದು ಮೂವತ್ತು ಸ್ತಾದ್ಯಗಳು.

ಆ ರೊಟ್ಟಿಯನ್ನು ನಮಗೆ ಯಾವಾಗಲೂ ಕೊಡು
5 ಅನ್ನಲು ಯೇಸು ಅವರಿಗೆ—ಜೀವಕೊಡುವ ರೊಟ್ಟಿ
ನಾನೇ; ನನ್ನ ಬಳಿಗೆ ಬರುವವನಿಗೆ ಎಂದಿಗೂ ಹಸಿವೆ
ಯಾಗುವದಿಲ್ಲ, ನನ್ನನ್ನು ನಂಬುವವನಿಗೆ ಎಂದಿಗೂ
6 ನೀರಡಿಕೆಯಾಗುವದಿಲ್ಲ. ಆದರೆ ನೀವು ನನ್ನನ್ನು
ನೋಡಿದ್ದರೂ ನಂಬದೆ ಇದ್ದೀರಿ ಎಂದು ನಿಮಗೆ ಹೇಳಿದೆ
7 ನಲ್ಲವೇ. ತಂದೆಯು ನನಗೆ ಕೊಡುವಂಥವರೆಲ್ಲರು
ನನ್ನ ಬಳಿಗೆ ಬರುವರು; ಮತ್ತು ನನ್ನ ಬಳಿಗೆ ಬರು
8 ವವನನ್ನು ನಾನು ತಳ್ಳಿಬಿಡುವದೇ ಇಲ್ಲ. ನನ್ನ
ಚಿತ್ತದಂತೆ ನಡೆಯುವದಕ್ಕಾಗಿ ನಾನು ಬಂದಿಲ್ಲ,
ನನ್ನನ್ನು ಕಳುಹಿಸಿದಾತನ ಚಿತ್ತವನ್ನೇ ನೆರವೇರಿಸುವ
9 ದಕ್ಕೆ ಪರಲೋಕದಿಂದ ಬಂದೆನು. ನನ್ನನ್ನು ಕಳು
ಹಿಸಿದಾತನ ಚಿತ್ತವು ಏನಂದರೆ ಆತನು ನನಗೆ ಕೊಟ್ಟವ
ರಲ್ಲಿ ಒಬ್ಬನನ್ನೂ ನಾನು ಕೆಡಗೊಡಿಸದೆ ಅವನನ್ನು
0 ಕಡೇದಿನದಲ್ಲಿ ಎಬ್ಬಿಸಬೇಕೆಂಬದೇ. ಮಗನನ್ನು ನೋಡಿ
ಆತನನ್ನು ನಂಬುವ ಪ್ರತಿಯೊಬ್ಬನಿಗೆ ನಿತ್ಯಜೀವವು
ಸಿಕ್ಕಬೇಕೆಂಬದೇ ನನ್ನ ತಂದೆಯ ಚಿತ್ತವಾಗಿದೆ; ಮತ್ತು
ನಾನು ಕಡೇದಿನದಲ್ಲಿ ಅವನನ್ನು ಎಬ್ಬಿಸುವೆನು ಎಂದು
ಹೇಳಿದನು.

1 ಆತನು—ಪರಲೋಕದಿಂದ ಇಳಿದುಬಂದ ರೊಟ್ಟಿ
ನಾನೇ ಎಂದು ಹೇಳಿದ್ದಕ್ಕೆ ಯೆಹೂದ್ಯರು ಆತನ
2 ವಿಷಯವಾಗಿ ಗುಣುಗುಟ್ಟಿ—ಇವನು ಯೋಸೇಫನ
ಮಗನಾದ ಯೇಸು ಅಲ್ಲವೇ. ಇವನ ತಂದೆತಾಯಿ
ಗಳನ್ನು ನಾವು ಬಲ್ಲೆವಲ್ಲವೇ. ಈಗ ಇವನು ಪರ
ಲೋಕದಿಂದ ಇಳಿದುಬಂದಿದ್ದೇನೆಂದು ಹೇಳುವದು
3 ಹೇಗೆ? ಅಂದರು. ಅದಕ್ಕೆ ಯೇಸು ಅವರಿಗೆ—ನಿಮ್ಮ
4 ನಿಮ್ಮೊಳಗೆ ಗುಣುಗುಟ್ಟಬೇಡಿರಿ. ನನ್ನನ್ನು ಕಳುಹಿಸಿ
ಕೊಟ್ಟಂಥ ತಂದೆಯು ಎಳೆದ ಹೊರತು ಯಾವನೂ
ನನ್ನ ಬಳಿಗೆ ಬರಲಾರನು; ಮತ್ತು ನಾನು ಅವನನ್ನು
5 ಕಡೇದಿನದಲ್ಲಿ ಎಬ್ಬಿಸುವೆನು. ಅವರೆಲ್ಲರು ದೇವ
ರಿಂದ ಶಿಕ್ಷಿತರಾಗಿರುವರು ಎಂದು ಪ್ರವಾದಿಗಳ ಗ್ರಂಥ
ದಲ್ಲಿ ಬರೆದದೆ; ತಂದೆಯಿಂದ ಕೇಳಿ ಕಲಿತವರೆಲ್ಲರು
6 ನನ್ನ ಬಳಿಗೆ ಬರುತ್ತಾರೆ. ಯಾವನಾದರೂ ತಂದೆಯನ್ನು
ನೋಡಿದ್ದಾನೆಂದು ತಿಳಿಯಬೇಡಿರಿ; ದೇವರ ಬಳಿಯಿಂದ
7 ಬಂದವನೊಬ್ಬನೇ ತಂದೆಯನ್ನು ನೋಡಿದ್ದಾನೆ. ನಂಬಿರು
ವವನು ನಿತ್ಯಜೀವವನ್ನು ಹೊಂದಿದ್ದಾನೆಂದು ನಿಮಗೆ
8 ನಿಜನಿಜವಾಗಿ ಹೇಳುತ್ತೇನೆ. ಜೀವಕೊಡುವ ರೊಟ್ಟಿ
9 ನಾನೇ, ನಿಮ್ಮ ಹಿರಿಯರು ಅಡವಿಯಲ್ಲಿ ಮನ್ನಾ
0 ತಿಂದರೂ ಸತ್ತುಹೋದರು; ಪರಲೋಕದಿಂದ ಇಳಿದು
ಬರುವ ರೊಟ್ಟಿ ಎಂಥದಂದರೆ ಅದನ್ನು ತಿಂದವನು
1 ಸಾಯುವದಿಲ್ಲ. ಪರಲೋಕದಿಂದ ಇಳಿದುಬರುವ
ಜೀವವುಳ್ಳ ರೊಟ್ಟಿಯು ನಾನೇ; ಈ ರೊಟ್ಟಿಯನ್ನು
ಯಾವನಾದರೂ ತಿಂದರೆ ಅವನು ಸದಾಕಾಲ ಬದು
ಕುವನು. ಮತ್ತು ನಾನು ಕೊಡುವ ರೊಟ್ಟಿ ನನ್ನ
ಮಾಂಸವೇ; ಅದನ್ನು ಲೋಕದ ಜೀವಕ್ಕೋಸ್ಕರ
ಕೊಡುವೆನು ಎಂದು ಹೇಳಿದನು.

2 ಆಗ ಯೆಹೂದ್ಯರು—ಇವನು ತನ್ನ ಮಾಂಸ
ವನ್ನು ನಮಗೆ ಹೇಗೆ ತಿನ್ನುವದಕ್ಕೆ ಕೊಟ್ಟಾನು
ಎಂದು ತಮ್ಮತಮ್ಮೊಳಗೆ ವಾಗ್ವಾದಮಾಡುತ್ತಿರಲು
3 ಯೇಸು ಅವರಿಗೆ—ನಿಮಗೆ ನಿಜನಿಜವಾಗಿ ಹೇಳುತ್ತೇನೆ,
ನೀವು ಮನುಷ್ಯಕುಮಾರನ ಮಾಂಸವನ್ನು ತಿನ್ನದೆ
ಅವನ ರಕ್ತವನ್ನು ಕುಡಿಯದೆ ಹೋದರೆ ನಿಮ್ಮೊಳಗೆ
ಜೀವವಿಲ್ಲ; ನನ್ನ ಮಾಂಸವನ್ನು ತಿಂದು ನನ್ನ ರಕ್ತ 54
ವನ್ನು ಕುಡಿಯುವವನು ನಿತ್ಯಜೀವವನ್ನು ಹೊಂದಿ
ದ್ದಾನೆ; ಮತ್ತು ನಾನು ಅವನನ್ನು ಕಡೇದಿನದಲ್ಲಿ ಎಬ್ಬಿ
ಸುವೆನು. ಯಾಕಂದರೆ ನನ್ನ ಮಾಂಸವೇ ನಿಜವಾದ 55
ಆಹಾರ, ನನ್ನ ರಕ್ತವೇ ನಿಜವಾದ ಪಾನ; ನನ್ನ ಮಾಂಸ 56
ವನ್ನು ತಿಂದು ನನ್ನ ರಕ್ತವನ್ನು ಕುಡಿಯುವವನು
ನನ್ನಲ್ಲಿ ಇರುತ್ತಾನೆ; ನಾನು ಅವನಲ್ಲಿ ಇರುತ್ತೇನೆ.
ಜೀವಸ್ವರೂಪನಾದ ತಂದೆಯು ನನ್ನನ್ನು ಕಳುಹಿಸಿ 57
ಕೊಟ್ಟಿರಲಾಗಿ ನಾನು ತಂದೆಯಿಂದ ಜೀವಿಸುತ್ತೇನೆ;
ಅದರಂತೆ ನನ್ನನ್ನು ತಿನ್ನುವವನೇ ನನ್ನಿಂದ ಜೀವಿಸು
ವನು. ಪರಲೋಕದಿಂದ ಇಳಿದುಬಂದ ರೊಟ್ಟಿ ಇದೇ. 58
ನಿಮ್ಮ ಹಿರಿಯರು ಮನ್ನಾ ತಿಂದರೂ ಸತ್ತರು; ಇದು
ಹಾಗಲ್ಲ; ಈ ರೊಟ್ಟಿಯನ್ನು ತಿನ್ನುವವನು ಸದಾಕಾಲ
ಜೀವಿಸುವನು ಎಂದು ಹೇಳಿದನು. ಕಪೆರ್ನೌಮಿನ 59
ಸಭಾಮಂದಿರದಲ್ಲಿ ಉಪದೇಶಮಾಡುವಾಗ ಇದನ್ನು
ಹೇಳಿದನು.

ಆತನ ಶಿಷ್ಯರಲ್ಲಿ ಅನೇಕರು ಇದನ್ನು ಕೇಳಿ—ಇದು 60
ಕಠಿಣವಾದ ಮಾತು, ಇದನ್ನು ಯಾರು ಕೇಳಾರು?
ಅಂದುಕೊಂಡರು. ಯೇಸು ತನ್ನ ಶಿಷ್ಯರು ಇದಕ್ಕೆ 61
ಗುಣುಗುಟ್ಟುತ್ತಾರೆಂದು ತನ್ನಲ್ಲಿ ತಿಳುಕೊಂಡು ಅವ
ರಿಗೆ—ಈ ಮಾತಿನಿಂದ ನಿಮಗೆ ಬೇಸರವಾಯಿತೋ?
ಹಾಗಾದರೆ ಮನುಷ್ಯಕುಮಾರನು ತಾನು ಮೊದಲು 62
ಇದ್ದಲ್ಲಿಗೆ ಏರಿಹೋಗುವದನ್ನು ನೀವು ನೋಡಿದರೆ ಏನ
ನ್ನುವಿರಿ? ಬದುಕಿಸುವಂಥದು ಆತ್ಮವೇ; ಮಾಂಸವು 63
ಯಾವದಕ್ಕೂ ಬರುವದಿಲ್ಲ. ನಾನು ನಿಮಗೆ ಹೇಳಿ
ರುವ ಮಾತುಗಳೇ ಆತ್ಮವಾಗಿಯೂ ಜೀವವಾಗಿಯೂ
ಅವೆ. ಆದರೆ ನಿಮ್ಮಲ್ಲಿ ಕೆಲವರು ನಂಬದವರಾಗಿದ್ದಾ 64
ರೆ ಅಂದನು. ನಂಬದವರು ಇಂಥವರು, ತನ್ನನ್ನು ಹಿಡು
ಕೊಡುವವನು ಇಂಥವನು ಎಂಬದು ಯೇಸುವಿಗೆ
ಮೊದಲಿನಿಂದ ತಿಳಿದಿತ್ತು. ಮತ್ತು ಆತನು—ತಂದೆ 65
ಯ ಅನುಗ್ರಹವಿಲ್ಲದೆ ಯಾರೂ ನನ್ನ ಬಳಿಗೆ ಬರಲಾ
ರರು ಎಂಬದನ್ನು ನಾನು ನಿಮಗೆ ಆದರ ದೆಸೆಯಿಂದಲೇ
ಹೇಳಿದೆನು ಅಂದನು.

ಅಂದಿನಿಂದ ಆತನ ಶಿಷ್ಯರಲ್ಲಿ ಅನೇಕರು ಹಿಂಜರಿದು 66
ಆತನ ಕೂಡ ಸಂಚಾರಮಾಡುವದನ್ನು ಬಿಟ್ಟರು.
ಯೇಸು ಇದನ್ನು ನೋಡಿ ತನ್ನ ಹನ್ನೆರಡು ಮಂದಿ 67
ಯನ್ನು—ನೀವು ಸಹ ಹೋಗಬೇಕೆಂದಿದ್ದೀರಾ? ಎಂದು
ಕೇಳಿದ್ದಕ್ಕೆ ಸೀಮೋನ್‌ಪೇತ್ರನು—ಸ್ವಾಮೀ, ನಿನ್ನನ್ನು 68
ಬಿಟ್ಟು ನಾವು ಇನ್ನಾರ ಬಳಿಗೆ ಹೋಗೋಣ? ನಿನ್ನಲ್ಲಿ
ನಿತ್ಯಜೀವವನ್ನು ಉಂಟುಮಾಡುವ ವಾಕ್ಯಗಳುಂಟು;
ನೀನು ದೇವರು ಪ್ರತಿಷ್ಠಿಸಿದವನೇ ಎಂದು ನಾವು ನಂಬಿ 69
ದ್ದೇವೆ ಮತ್ತು ತಿಳಿದಿದ್ದೇವೆ ಅಂದನು. ಅದಕ್ಕೆ 70
ಯೇಸು—ಹನ್ನೆರಡು ಮಂದಿಯಾದ ನಿಮ್ಮನ್ನು ನಾನು
ಆರಿಸಿ ತೆಗೆದುಕೊಂಡೆನಲ್ಲವೋ? ನಿಮ್ಮಲ್ಲಿಯೂ ಒಬ್ಬ
ನು ಸೈತಾನನ ಮಗನಾಗಿದ್ದಾನೆ ಅಂದನು. ಈ ಮಾತಿ 71
ನಿಂದ ಆತನು ಸೀಮೋನನ ಮಗನಾದ ಇಸ್ಕರಿಯೋತ
ಯೂದನನ್ನು ಸೂಚಿಸಿದನು. ಇವನು ಆ ಹನ್ನೆರಡು

ಮಂದಿಯಲ್ಲಿ ಒಬ್ಬನಾಗಿದ್ದು ಮುಂದೆ ಆತನನ್ನು ಹಿಡು
ಕೊಡುವವನಾದನು.

ಯೇಸು ಪರ್ಣಶಾಲೆಗಳ ಜಾತ್ರೆಗೆ ಹೋಗಿ ಉಪದೇಶಮಾಡಿದ್ದು;
ಆತನ ವಿಷಯವಾಗಿ ಜನರಲ್ಲಿ ವಾಗ್ವಾದ ನಡೆದದ್ದು;
ಅಧಿಕಾರಸ್ಥರು ಆತನನ್ನು ಹಿಡಿಯುವದಕ್ಕೆ ಪ್ರಯತ್ನಮಾಡಿದ್ದು.

7 ಈ ಸಂಗತಿಗಳಾದ ಮೇಲೆ ಯೇಸು ಗಲಿಲಾಯ
ದಲ್ಲಿ ಸಂಚಾರಮಾಡುತ್ತಿದ್ದನು; ಯೆಹೂದ್ಯರು ಆತ
ನನ್ನು ಕೊಲ್ಲುವ ಪ್ರಯತ್ನದಲ್ಲಿದ್ದದರಿಂದ ಆತನಿಗೆ
ಯೂದಾಯದಲ್ಲಿ ಸಂಚಾರಮಾಡುವ ಮನಸ್ಸಿರಲಿಲ್ಲ.
2 ಪರ್ಣಶಾಲೆಗಳ ಹಬ್ಬವೆಂಬ ಯೆಹೂದ್ಯರದೊಂದು
3 ಜಾತ್ರೆಯು ಸಮೀಪವಾದಾಗ ಆತನ ಅಣ್ಣತಮ್ಮಂದಿರು
ಆತನಿಗೆ—ನೀನು ಮಾಡುವ ಕಾರ್ಯಗಳನ್ನು ನಿನ್ನ
ಶಿಷ್ಯರು ಸಹ ನೋಡುವಂತೆ ಇಲ್ಲಿಂದ ಹೊರಟು ಯೂ
4 ದಾಯಕ್ಕೆ ಹೋಗು; ಪ್ರಸಿದ್ಧಿಗೆ ಬರಬೇಕೆಂದಿರುವ
ಯಾವನಾದರೂ ತಾನು ಮಾಡುವದನ್ನು ಮರೆಯಲ್ಲಿ
ಮಾಡುವದಿಲ್ಲವಲ್ಲಾ; ನೀನು ಇಂಥ ಕಾರ್ಯಗಳನ್ನು
ಮಾಡುವವನಾದ್ದರಿಂದ ಲೋಕಕ್ಕೆ ತಿಳಿಯಪಡಿಸಿಕೋ
5 ಎಂದು ಹೇಳಿದರು. ಯಾಕಂದರೆ ಆತನ ಅಣ್ಣತಮ್ಮಂ
6 ದಿರು ಸಹ ಆತನನ್ನು ನಂಬದೆ ಇದ್ದರು. ಯೇಸು ಅವ
ರಿಗೆ—ನನ್ನ ಸಮಯವು ಇನ್ನೂ ಬಂದಿಲ್ಲ; ನಿಮ್ಮ
7 ಸಮಯವು ಯಾವಾಗಲೂ ಸಿದ್ಧವಾಗಿದೆ. ಲೋಕವು
ನಿಮ್ಮನ್ನು ಹಗೆಮಾಡಲಾರದು; ಆದರೆ ನಾನು ಅದರ
ಕ್ರಿಯೆಗಳು ಕೆಟ್ಟವುಗಳೆಂದು ಸಾಕ್ಷಿಹೇಳುವದರಿಂದ
8 ನನ್ನನ್ನು ಹಗೆಮಾಡುತ್ತದೆ. ನೀವೇ ಜಾತ್ರೆಗೆ ಹೋಗಿರಿ;
ನನ್ನ ಸಮಯವು ಇನ್ನೂ ಒದಗದೆ ಇರುವದರಿಂದ ನಾನು
ಈ ಜಾತ್ರೆಗೆ ಈಗ ಹೋಗುವದಿಲ್ಲವೆಂದು ಹೇಳಿದನು.
9 ಇದನ್ನು ಹೇಳಿ ಗಲಿಲಾಯದಲ್ಲಿಯೇ ನಿಂತನು.
10 ಆದರೆ ಆತನ ಅಣ್ಣತಮ್ಮಂದಿರು ಜಾತ್ರೆಗೆ ಹೋದ
ಮೇಲೆ ಆತನು ಸಹ ಹೋದನು; ಜನರಿಗೆ ಕಾಣುವಂತೆ
11 ಹೋಗದೆ ಮರೆಯಾಗಿ ಹೋದನು. ಜಾತ್ರೆಯಲ್ಲಿ
ಯೆಹೂದ್ಯರು—ಅವನು ಎಲ್ಲಿದ್ದಾನೆಂದು ಆತನನ್ನು
12 ಹುಡುಕುತ್ತಿದ್ದರು. ಮತ್ತು ಜನರ ಗುಂಪುಗಳಲ್ಲಿ
ಆತನ ವಿಷಯವಾಗಿ ಬಹಳ ಗುಜುಗುಜು ಮಾತು ನಡೆ
ಯುತ್ತಿತ್ತು. ಕೆಲವರು—ಆತನು ಒಳ್ಳೆಯವನು ಅಂದ
ರು; ಇನ್ನು ಕೆಲವರು—ಅಲ್ಲ, ಜನರನ್ನು ತಪ್ಪಾದ
13 ಮಾರ್ಗಕ್ಕೆ ಎಳೆಯುತ್ತಾನೆ ಅಂದರು. ಆದರೂ ಯೆ
ಹೂದ್ಯರ ಭಯದಿಂದ ಯಾರೂ ಆತನ ವಿಷಯದಲ್ಲಿ
ಧಾರಾಳವಾಗಿ ಮಾತಾಡಲಿಲ್ಲ.
14 ಜಾತ್ರೆಯ ಮಧ್ಯಕಾಲದಲ್ಲಿ ಯೇಸು ದೇವಾಲಯ
15 ಕ್ಕೆ ಹೋಗಿ ಬೋಧಿಸುತ್ತಿದ್ದನು. ಯೆಹೂದ್ಯರು ಅದ
ಕ್ಕೆ ಆಶ್ಚರ್ಯಪಟ್ಟು—ವಿದ್ಯಾಭ್ಯಾಸಮಾಡದಿರುವ ಈತ
ನಿಗೆ ಶಾಸ್ತ್ರಗಳು ತಿಳಿದಿರುವದು ಹೇಗೆ ಎಂದು ಹೇಳುತ್ತಿ
16 ದ್ದರು. ಅದಕ್ಕೆ ಯೇಸು—ನಾನು ಹೇಳುವ ಬೋಧ
ನೆಯು ನನ್ನದಲ್ಲ, ನನ್ನನ್ನು ಕಳುಹಿಸಿದಾತನದು.
17 ಆತನ ಚಿತ್ತದಂತೆ ನಡೆ[illegible]ಯುವದಕ್ಕೆ ಯಾರಿಗೆ ಮನಸ್ಸ
ದೆಯೋ ಅವರಿಗೆ ಈ ಬೋಧನೆಯು ದೇವರಿಂದ ಬಂದ
ದ್ದೋ ನಾನೇ ಕಲ್ಪಿಸಿ ಹೇಳಿದ್ದೋ ಗೊತ್ತಾಗುವದು.
18 ಕಲ್ಪಿಸಿ ಹೇಳುವವನು [illegible] ತನಗೆ ಮಾನಬರಬೇಕೆಂದು

ಅಪೇಕ್ಷಿಸುತ್ತಾನೆ; ತನ್ನನ್ನು ಕಳುಹಿಸಿದವನಿಗೆ ಮ
ಬರಬೇಕೆಂದು ಅಪೇಕ್ಷಿಸುವವನು ಸತ್ಯವಂತನು,
ರ್ಮವು ಅವನಲ್ಲಿ ಇಲ್ಲ. ಮೋಶೆಯು ನಿವ
ಧರ್ಮಶಾಸ್ತ್ರವನ್ನು ಕೊಟ್ಟಿದ್ದರೂ ನಿಮ್ಮಲ್ಲಿ
ನಾದರೂ ಧರ್ಮಶಾಸ್ತ್ರದಂತೆ ನಡೆಯುವದಿಲ್ಲವ
ಯಾಕೆ ನನ್ನನ್ನು ಕೊಲ್ಲುವದಕ್ಕೆ ನೋಡುತ್ತೀ
ಎಂದು ಹೇಳಿದನು. ಅದಕ್ಕೆ ಆ ಜನರು—ನಿನಗೆ ದೆ
ಹಿಡಿದದೆ; ಯಾರು ನಿನ್ನನ್ನು ಕೊಲ್ಲುವದಕ್ಕೆ ನೋ
ತ್ತಾರೆ? ಅಂದರು. ಯೇಸು ಅವರಿಗೆ—ಒಂದೇ ಕ್ರಿ
ಯನ್ನು ಮಾಡಿದೆನು; ಅದಕ್ಕೆ ನೀವೆಲ್ಲರು ಬೆರಗಾ
ದ್ದೀರಿ. ಮೋಶೆಯು ನಿಮಗೆ ಸುನ್ನತಿಯೆಂಬ ಸಂಸ
ರವನ್ನು ನೇಮಿಸಿದನು. ಅದು ಮೋಶೆಯಿಂದ ಬ
ದ್ದೆಂದು ನಾನು ಹೇಳುವದಿಲ್ಲ. ಮೂಲಪುರು
ಕಾಲದಿಂದ ಬಂದದ್ದು. ಮತ್ತು ಆ ಸುನ್ನತಿಯನ
ಸಬ್ಬತ್‌ದಿನದಲ್ಲಿಯೂ ಮಾಡುತ್ತೀರಿ. ಮೋಶೆ
ನೇಮವನ್ನು ಮೀರಬಾರದೆಂದು ಒಬ್ಬನು ಸಬ್ಬತ್‌ದಿ
ದಲ್ಲಿ ಸುನ್ನತಿಮಾಡಿಸಿಕೊಳ್ಳುವದಾದರೆ ನಾನು ಸ
ತ್‌ದಿನದಲ್ಲಿ ಒಬ್ಬ ಮನುಷ್ಯನನ್ನು ಸಂಪೂರ್ಣವಾ
ಸ್ವಸ್ಥಮಾಡಿದ್ದಕ್ಕೆ ನನ್ನ ಮೇಲೆ ಕೋಪಗೊಳ್ಳು
ರೋ? ಕಣ್ಣಿಗೆ ತೋರಿದ್ದರ ಮೇಲೆ ತೀರ್ಪುಮಾ
ಬೇಡಿರಿ; ನ್ಯಾಯವಾದ ತೀರ್ಪುಮಾಡಿರಿ ಎಂದು ಹೇ
ದನು.
ಯೆರೂಸಲೇಮಿನವರಲ್ಲಿ ಕೆಲವರು—ಇವನನ್ನ
ವೇ ಅವರು ಕೊಲ್ಲಬೇಕೆಂದಿರುವದು? ನೋಡಿರಿ, ಇ
ನು ಧಾರಾಳವಾಗಿ ಮಾತಾಡುತ್ತಾನೆ, ಅವರು ಅವನಿ
ಏನೂ ಹೇಳುವದಿಲ್ಲ. ಹಿರೀಸಭೆಯವರು ಇವನೇ ಬರ
ಕಾದ ಕ್ರಿಸ್ತನೆಂದು ನಿಶ್ಚಯಮಾಡಿಕೊಂಡಿದ್ದಾರೇನೋ
ಆದರೂ ಇವನು ಎಲ್ಲಿಯವನೆಂದು ಬಲ್ಲೆವು; ಕ್ರಿಸ್ತ
ಬರುವಾಗ ಅವನು ಎಲ್ಲಿಯವನೋ ಒಬ್ಬರಿಗೂ
ಯುವದಿಲ್ಲವೆಂದು ಮಾತಾಡಿಕೊಳ್ಳುತ್ತಿದ್ದರು. ಯೆ
ಸು ಇದನ್ನು ತಿಳಿದು ದೇವಾಲಯದಲ್ಲಿ ಉಪದೇ
ಮಾಡುವಾಗ—ನನ್ನನ್ನು ಬಲ್ಲಿರಿ, ನಾನು ಎಲ್ಲಿಯ
ನೆಂದು ಬಲ್ಲಿರಿ ನಿಜವೇ, ಆದರೂ ನಾನು ನನ್ನಷ್ಟ
ಬಂದವನಲ್ಲ, ನನ್ನನ್ನು ಕಳುಹಿಸಿದಾತನು ನಿಜವಾ
ವನು; ನೀವು ಆತನನ್ನು ಅರಿತವರಲ್ಲ. ನಾನು ಆ
ನನ್ನು ಬಲ್ಲೆನು; ಆತನ ಕಡೆಯಿಂದ ಬಂದವನಾದ
ರಿಂದಲೂ ನನ್ನನ್ನು ಆತನೇ ಕಳುಹಿಸಿದ್ದರಿಂದಲ
ಆತನನ್ನು ಬಲ್ಲೆನೆಂದು ಕೂಗಿ ಹೇಳಿದನು. ಇದಕ್ಕಾ
ಆತನನ್ನು ಹಿಡಿಯುವದಕ್ಕೆ ನೋಡುತ್ತಿದ್ದರು; ಆದ
ಆತನ ಕಾಲ ಇನ್ನೂ ಬಾರದೆ ಇದ್ದಕಾರಣ ಯಾರ
ಆತನ ಮೇಲೆ ಕೈಹಾಕಲಿಲ್ಲ. ಜನರಲ್ಲಿ ಅನೇಕರ
ಆತನನ್ನು ನಂಬಿ—ಕ್ರಿಸ್ತನು ಬಂದಾಗ ಈತನು ಮಾ
ದ್ದಕ್ಕಿಂತ ಹೆಚ್ಚು ಸೂಚಕಕಾರ್ಯಗಳನ್ನು ಮಾಡಾನೆ
ಎಂದು ಹೇಳಿದರು.
ಜನರು ಆತನ ವಿಷಯವಾಗಿ ಗುಜುಗುಜು ಆಡಿ
ಈ ಮಾತುಗಳನ್ನು ಫರಿಸಾಯರು ಕೇಳಲು ಮ
ಯಾಜಕರೂ ಫರಿಸಾಯರೂ ಆತನನ್ನು ಹಿಡಿಯುವ
ಕ್ಕೆ ಓಲೇಕಾರರನ್ನು ಕಳುಹಿಸಿದರು. ಆಗ ಯೇಸು—
ಇನ್ನು ಸ್ವಲ್ಪ ಕಾಲ ನಾನು ನಿಮ್ಮಲ್ಲಿ ಇದ್ದು
ಮೇಲೆ ನನ್ನನ್ನು ಕಳುಹಿಸಿದಾತನ ಬಳಿಗೆ ಹೊರ

34 ಹೋಗುತ್ತೇನೆ. ನೀವು ನನ್ನನ್ನು ಹುಡುಕುವಿರಿ,
ಆದರೆ ನನ್ನನ್ನು ಕಂಡುಕೊಳ್ಳದೆ ಹೋಗುವಿರಿ, ನಾನು
35 ಇರುವಲ್ಲಿಗೆ ನೀವು ಬರಲಾರಿರಿ ಅಂದನು. ಅದಕ್ಕೆ
ಯೆಹೂದ್ಯರು—ಇವನು ನಮಗೆ ಸಿಕ್ಕದ ಹಾಗೆ ಎಲ್ಲಿ
ಹೋಗಬೇಕೆಂದಿರುತ್ತಾನೆ? ಗ್ರೀಕರೊಳಗೆ ಚದರಿಕೊಂಡಿ
ರುವ ನಮ್ಮವರ ಬಳಿಗೆ ಹೋಗಿ ಆ ಗ್ರೀಕರಿಗೆ ಉಪ
36 ದೇಶ ಮಾಡಬೇಕೆಂದಿರುತ್ತಾನೋ? ನನ್ನನ್ನು ಹುಡುಕು
ವಿರಿ, ಆದರೆ ನನ್ನನ್ನು ಕಂಡುಕೊಳ್ಳದೆ ಹೋಗುವಿರಿ,
ನಾನು ಇರುವಲ್ಲಿಗೆ ನೀವು ಬರಲಾರಿರಿ ಎಂದು ಅವನು
ಹೇಳಿದ ಮಾತು ಏನಿದ್ದೀತು? ಎಂಬದಾಗಿ ತಮ್ಮ
ತಮ್ಮೊಳಗೆ ಮಾತಾಡಿಕೊಂಡರು.
37 ಆ ಜಾತ್ರೆಯ ಮಹಾದಿವಸವಾದ ಕಡೇ ದಿನದಲ್ಲಿ
ಯೇಸು ನಿಂತುಕೊಂಡು—ಯಾವನಿಗಾದರೂ ನೀರ
ಡಿಕೆಯಾಗಿದ್ದರೆ ಅವನು ನನ್ನ ಬಳಿಗೆ ಬಂದು ಕುಡಿ
38 ಯಲಿ. ನನ್ನನ್ನು ನಂಬಿದವನ ಹೊಟ್ಟೆಯೊಳಗಿಂದ
ಶಾಸ್ತ್ರದಲ್ಲಿ ಹೇಳಿರುವ ಪ್ರಕಾರ ಜೀವಕರವಾದ ನೀರಿನ
ಹೊಳೆಗಳು ಹರಿಯುವವು ಎಂದು ಕೂಗಿ ಹೇಳಿದನು.
39 ಇದನ್ನು ಯೇಸು ತನ್ನನ್ನು ನಂಬಿದವರು ಹೊಂದಲಿ
ರುವ ಪವಿತ್ರಾತ್ಮವರವನ್ನು ಕುರಿತು ಹೇಳಿದನು;
ಆತನು ಇನ್ನೂ ತನ್ನ ಮಹಿಮೆಯ ಪದವಿಯನ್ನು
ಹೊಂದದೆ ಇದ್ದಕಾರಣ ಪವಿತ್ರಾತ್ಮವರವು ಇನ್ನೂ
40 ಬಂದಿದ್ದಿಲ್ಲ. ಜನರಲ್ಲಿ ಕೆಲವರು ಆ ಮಾತುಗಳನ್ನು
ಕೇಳಿ—ನಿಜವಾಗಿ ಈತನು ಬರಬೇಕಾದ ಪ್ರವಾದಿ
41 ಅಂದರು; ಮತ್ತು ಕೆಲವರು—ಈತನು ಬರಬೇಕಾದ
42 ಕ್ರಿಸ್ತನು ಅಂದರು. ಇನ್ನೂ ಕೆಲವರು—ಕ್ರಿಸ್ತನು
ಗಲಿಲಾಯದಿಂದ ಬರುವದು ಹೇಗೆ? ದಾವೀದನ
ಸಂತಾನದಿಂದಲೂ ದಾವೀದನು ಇದ್ದ ಬೇತ್ಲೆಹೇಮೆಂಬ
ಗ್ರಾಮದಿಂದಲೂ ಕ್ರಿಸ್ತನು ಬರುವನು ಎಂಬದಾಗಿ
43 ಶಾಸ್ತ್ರದಲ್ಲಿ ಉಂಟಲ್ಲವೇ ಎಂದು ಹೇಳಿದರು. ಹೀಗೆ
ಜನರಲ್ಲಿ ಆತನನ್ನು ಕುರಿತು ಭೇದ ಉಂಟಾಯಿತು.
44 ಅವರಲ್ಲಿ ಕೆಲವರು ಆತನನ್ನು ಹಿಡಿಯಬೇಕೆಂದಿದ್ದರೂ
ಒಬ್ಬರೂ ಆತನ ಮೇಲೆ ಕೈಹಾಕಲಿಲ್ಲ.
45 ಬಳಿಕ ಆ ಓಲೇಕಾರರು ಮಹಾಯಾಜಕರ ಮತ್ತು
ಫರಿಸಾಯರ ಬಳಿಗೆ ಬಂದಾಗ ಇವರು—ನೀವು ಯಾಕೆ
ಅವನನ್ನು ಹಿಡತರಲಿಲ್ಲ? ಎಂದು ಅವರನ್ನು ಕೇಳಿದ್ದಕ್ಕೆ
46 ಆ ಓಲೇಕಾರರು—ಈ ಮನುಷ್ಯನು ಮಾತಾಡುವ
ರೀತಿಯಲ್ಲಿ ಯಾರೂ ಎಂದೂ ಮಾತಾಡಿದ್ದಿಲ್ಲ ಎಂದು
47 ಉತ್ತರಕೊಟ್ಟರು. ಅದಕ್ಕೆ ಫರಿಸಾಯರು—ನೀವೂ
48 ಮರುಳಾದಿರಾ? ಹಿರೀಸಭೆಯವರಲ್ಲಿಯಾಗಲಿ ಫರಿಸಾ
ಯರಲ್ಲಿಯಾಗಲಿ ಯಾರಾದರೂ ಅವನನ್ನು ನಂಬಿ
49 ದ್ದಾರೋ? ಧರ್ಮಶಾಸ್ತ್ರವನ್ನರಿಯದಂಥ ಈ ಹಿಂಡು
50 ಶಾಪಗ್ರಸ್ತವಾದದ್ದೇ ಅಂದರು. ಮುಂಚೆ ಯೇಸುವಿನ
ಬಳಿಗೆ ಬಂದಿದ್ದ ನಿಕೊದೇಮನು ಅವರಲ್ಲಿ ಒಬ್ಬ
51 ನಾಗಿದ್ದನು; ಅವನು ಅವರಿಗೆ—ನಮ್ಮ ಧರ್ಮಶಾಸ್ತ್ರವು
ಮೊದಲು ಒಬ್ಬನನ್ನು ವಿಚಾರಿಸಿ ಅವನು ಮಾಡುವ
ದೇನೆಂದು ತಿಳುಕೊಳ್ಳದೆ ಅವನ ವಿಷಯವಾಗಿ ತೀರ್ಪು
52 ಮಾಡುವದುಂಟೋ? ಎಂದು ಹೇಳಿದ್ದಕ್ಕೆ ಅವರು—
ನೀನೂ ಗಲಿಲಾಯದವನೋ? ಗಲಿಲಾಯದಲ್ಲಿ ಪ್ರವಾ
ದಿ ಹುಟ್ಟುವದೇ ಇಲ್ಲ, ವಿಚಾರಿಸಿ ನೋಡು ಅಂದರು.

ಫರಿಸಾಯರು ವ್ಯಭಿಚಾರಿಣಿಯಾದ ಒಬ್ಬ ಹೆಂಗಸನ್ನು ಯೇಸುವಿನ
ಮುಂದೆ ತೀರ್ಪಿಗಾಗಿ ನಿಲ್ಲಿಸಿದ್ದು 1).

[ಎಲ್ಲರು ತಮ್ಮ ತಮ್ಮ ಮನೆಗೆ ಹೋದರು. 53 **8**
ಯೇಸು ಎಣ್ಣೇಮರಗಳ ಗುಡ್ಡಕ್ಕೆ ಹೋದನು. 1
ಬೆಳಿಗ್ಗೆ ಆತನು ತಿರಿಗಿ ದೇವಾಲಯಕ್ಕೆ ಬಂದಾಗ 2
ಜನರೆಲ್ಲರು ಆತನ ಬಳಿಗೆ ಬಂದರು; ಆತನು ಕೂತು 3
ಕೊಂಡು ಅವರಿಗೆ ಉಪದೇಶಮಾಡುತ್ತಿರುವಲ್ಲಿ ಶಾಸ್ತ್ರಿ
ಗಳೂ ಫರಿಸಾಯರೂ ವ್ಯಭಿಚಾರದಲ್ಲಿ ಸಿಕ್ಕಿದ ಒಬ್ಬ
ಹೆಂಗಸನ್ನು ಆತನ ಬಳಿಗೆ ತಂದು ಆಕೆಯನ್ನು ನಡುವೆ
ನಿಲ್ಲಿಸಿ—ಬೋಧಕನೇ, ಈ ಹೆಂಗಸು ವ್ಯಭಿಚಾರ 4
ಮಾಡುತ್ತಿರುವಾಗಲೇ ಕೈಗೆ ಸಿಕ್ಕಿದಳು. ಇಂಥವ 5
ರನ್ನು ಕಲ್ಲೆಸೆದು ಕೊಲ್ಲಬೇಕೆಂದು ಮೋಶೆಯು
ಧರ್ಮಶಾಸ್ತ್ರದಲ್ಲಿ ನಮಗೆ ಅಪ್ಪಣೆಕೊಟ್ಟಿದ್ದಾನೆ; ಈಕೆ
ಯ ವಿಷಯದಲ್ಲಿ ನೀನು ಏನು ಹೇಳುತ್ತೀ ಎಂದು
ಆತನನ್ನು ಕೇಳಿದರು. ಆತನ ಮೇಲೆ ತಪ್ಪುಹೊರಿಸು 6
ವದಕ್ಕೆ ಏನಾದರೂ ಒಂದು ನಿಮಿತ್ತ ಬೇಕಾಗಿದ್ದದರಿಂದ
ಈತನು ಏನನ್ನುತ್ತಾನೋ ನೋಡೋಣ ಎಂದು ಹಾಗೆ
ಕೇಳಿದರು. ಆದರೆ ಯೇಸು ಬೊಗ್ಗಿಕೊಂಡು ಬೆರಳಿ
ನಿಂದ ನೆಲದ ಮೇಲೆ ಬರೆಯುತ್ತಾ ಇದ್ದನು. ಅವರು 7
ಆತನನ್ನು ಬಿಡದೆ ಕೇಳುತ್ತಿರುವಾಗ ಆತನು ನೆಟ್ಟಗೆ
ಕೂತುಕೊಂಡು ಅವರಿಗೆ—ನಿಮ್ಮಲ್ಲಿ ಪಾಪವಿಲ್ಲದವನು
ಯಾರೋ ಅವನೇ ಮೊದಲು ಆಕೆಯ ಮೇಲೆ ಕಲ್ಲನ್ನು
ಹಾಕಲಿ ಎಂದು ಹೇಳಿ ತಿರಿಗಿ ಬೊಗ್ಗಿಕೊಂಡು ನೆಲದ 8
ಮೇಲೆ ಬರೆಯುತ್ತಾ ಇದ್ದನು. ಆ ಮಾತನ್ನು ಕೇಳಿ 9
ತಾವೇ ಪಾಪಿಗಳೆಂದು ಮನಸ್ಸಿನಲ್ಲಿ ತಿಳುಕೊಂಡು ಹಿರಿ
ಯರು ಮೊದಲುಗೊಂಡು ಕಿರಿಯರ ವರೆಗೂ ಒಬ್ಬರ
ಹಿಂದೊಬ್ಬರು ಹೊರಗೆ ಹೋದರು; ಯೇಸು ಒಬ್ಬನೇ
ಉಳಿದನು, ಮತ್ತು ನಡುವೆ ನಿಂತಿದ್ದ ಹೆಂಗಸು ಅಲ್ಲೇ
ಇದ್ದಳು. ಯೇಸು ನೆಟ್ಟಗೆ ಕೂತುಕೊಂಡು ಆ ಸ್ತ್ರೀಯ 10
ನ್ನೇ ಹೊರತು ಯಾರನ್ನೂ ನೋಡದೆ ಆಕೆಗೆ—ಅಮ್ಮಾ,
ನಿನ್ನ ಮೇಲೆ ತಪ್ಪುಹೊರಿಸುವವರು ಎಲ್ಲಿದ್ದಾರೆ? ನಿನಗೆ
ಯಾರೂ ಶಿಕ್ಷೆಯನ್ನು ವಿಧಿಸಲಿಲ್ಲವೋ? ಅಂದನು.
ಯಾರೂ ವಿಧಿಸಲಿಲ್ಲ, ಸ್ವಾಮೀ, ಅಂದಳು. ಯೇಸು 11
ಆಕೆಗೆ—ನಾನೂ ನಿನಗೆ ಶಿಕ್ಷೆವಿಧಿಸುವದಿಲ್ಲ; ಹೋಗು,
ಇನ್ನು ಮೇಲೆ ಪಾಪಮಾಡಬೇಡ ಎಂದು ಹೇಳಿದನು.]

ಯೇಸು ತನ್ನ ದೈವತ್ವವನ್ನು ಸೂಚಿಸಿದಾಗ ಯೆಹೂದ್ಯರು ಆತನ
ಸಂಗಡ ವಿವಾದಮಾಡಿ ಆತನನ್ನು ಕೊಲ್ಲುವದಕ್ಕೆ ಪ್ರಯತ್ನಿಸಿದ್ದು.

ಯೇಸು ತಿರಿಗಿ ಅವರ ಸಂಗಡ ಮಾತಾಡಲಾ 12
ರಂಭಿಸಿ—ನಾನೇ ಲೋಕಕ್ಕೆ ಬೆಳಕು; ನನ್ನನ್ನು ಅನು
ಸರಿಸುವವನು ಕತ್ತಲೆಯಲ್ಲಿ ನಡೆಯದೆ ಜೀವಕೊಡುವ
ಬೆಳಕನ್ನು ಹೊಂದಿದವನಾಗಿರುವನು ಎಂದು ಹೇಳಿ

1) 7. 53 ಮೊದಲುಗೊಂಡು 8. 11ರ ತನಕ ಬರೆದಿರುವ ವಚನಗಳು ಕೆಲವು ಪ್ರಾಚೀನ ಪ್ರತಿಗಳಲ್ಲಿ ಸಿಕ್ಕುವದಿಲ್ಲ; ಕೆಲವು ಪ್ರತಿಗಳಲ್ಲಿ ಹೆಚ್ಚುಕಡಿಮೆ ಉಂಟು.

13 ದನು. ಇದನ್ನು ಕೇಳಿ ಫರಿಸಾಯರು ಆತನಿಗೆ—ನಿನ್ನ
ವಿಷಯವಾಗಿ ನೀನೇ ಸಾಕ್ಷಿಹೇಳಿಕೊಳ್ಳುತ್ತೀ; ನಿನ್ನ
14 ಸಾಕ್ಷಿ ನಿಜವಾಗದು ಎಂದು ಹೇಳಲು ಯೇಸು ಅವ
ರಿಗೆ—ನಾನು ಎಲ್ಲಿಂದ ಬಂದವನಾಗಿಯೂ ಎಲ್ಲಿಗೆ
ಹೋಗುವವನಾಗಿಯೂ ಇದ್ದೇನೆಂಬದು ನನಗೆ ಗೊತ್ತಿ
ರುವದರಿಂದ ನನ್ನ ವಿಷಯವಾಗಿ ನಾನೇ ಸಾಕ್ಷಿ ಹೇಳಿ
ಕೊಂಡರೂ ನನ್ನ ಸಾಕ್ಷಿ ನಿಜವಾಗಿರುವದು. ನೀವಾ
ದರೋ ನಾನು ಎಲ್ಲಿಂದ ಬಂದವನು, ಎಲ್ಲಿಗೆ ಹೋಗು
15 ವವನು ಎಂಬದನ್ನು ತಿಳಿಯದವರು. ನೀವು ಹೊರಗಿನ
ತೋರಿಕೆಯ ಪ್ರಕಾರ ತೀರ್ಪುಮಾಡುವವರು; ನಾನು
16 ಯಾವನಿಗೂ ತೀರ್ಪುಮಾಡುವದಿಲ್ಲ. ತೀರ್ಪುಮಾಡಿ
ದರೂ ನನ್ನ ತೀರ್ಪು ಸರಿಯಾದದ್ದೇ; ಯಾಕಂದರೆ
ನಾನು ಒಂಟಿಗನಲ್ಲ; ನಾನೂ ನನ್ನನ್ನು ಕಳುಹಿಸಿಕೊಟ್ಟ
17 ತಂದೆಯೂ ಇಬ್ಬರು ಇದ್ದೇವೆ. ಇಬ್ಬರ ಸಾಕ್ಷಿ ನಿಜ
ವಾಗುತ್ತದೆಂಬದಾಗಿ ನಿಮ್ಮ ಧರ್ಮಶಾಸ್ತ್ರದಲ್ಲೇ ಬರೆ
18 ದದೆ. ನನ್ನನ್ನು ಕುರಿತು ನಾನು ಸಾಕ್ಷಿ ಹೇಳುವವನಾಗಿ
ದ್ದೇನೆ, ಅದಲ್ಲದೆ ನನ್ನನ್ನು ಕಳುಹಿಸಿದ ತಂದೆಯೂ
ನನ್ನ ವಿಷಯವಾಗಿ ಸಾಕ್ಷಿಹೇಳುತ್ತಾನೆ ಅಂದನು.
19 ಅವರು—ನಿನ್ನ ತಂದೆ ಎಲ್ಲಿದ್ದಾನೆ? ಎಂದು ಕೇಳಲು
ಯೇಸು—ನೀವು ನನ್ನನ್ನೂ ತಿಳಿದಿಲ್ಲ, ನನ್ನ ತಂದೆ
ಯನ್ನೂ ತಿಳಿದಿಲ್ಲ; ನನ್ನನ್ನು ತಿಳಿದಿದ್ದರೆ ನನ್ನ ತಂದೆ
20 ಯನ್ನೂ ತಿಳಿದಿರುವಿರಿ ಅಂದನು. ಯೇಸು ದೇವಾಲಯ
ದೊಳಗೆ ಕಾಣಿಕೆಯ ಪೆಟ್ಟಿಗೆಗಳು ಇರುವ ಅಂಗಳದಲ್ಲಿ
ಉಪದೇಶಮಾಡುತ್ತಿರುವಾಗ ಈ ಮಾತುಗಳನ್ನು ಹೇಳಿ
ದನು. ಆತನ ಕಾಲ ಇನ್ನೂ ಬಾರದೆ ಇದ್ದ ಕಾರಣ
ಯಾರೂ ಆತನನ್ನು ಹಿಡಿಯಲಿಲ್ಲ.
21 ಯೇಸು ತಿರಿಗಿ ಅವರಿಗೆ—ನಾನು ಹೋಗುತ್ತೇನೆ;
ನೀವು ನನ್ನನ್ನು ಹುಡುಕುವಿರಿ; ಮತ್ತು ನಿಮ್ಮ ಪಾಪ
ದಲ್ಲೇ ಸಾಯುವಿರಿ. ನಾನು ಹೋಗುವಲ್ಲಿಗೆ ನೀವು
22 ಬರಲಾರಿರಿ ಅಂದನು. ಆ ಮಾತಿಗೆ ಯೆಹೂ
ದ್ಯರು—ನಾನು ಹೋಗುವಲ್ಲಿಗೆ ನೀವು ಬರಲಾರಿರೆಂದು
ಹೇಳುತ್ತಾನಲ್ಲಾ? ಇವನು ತನ್ನನ್ನು ತಾನೇ ಕೊಂದು
ಕೊಳ್ಳಬೇಕೆಂದಿದ್ದಾನೋ ಎಂದು ಮಾತಾಡಿಕೊಂಡರು.
23 ಆತನು ಅವರಿಗೆ—ನೀವು ಕೆಳಗಿನವರು, ನಾನು ಮೇಲಿ
ನವನು; ನೀವು ಈ ಲೋಕದವರು, ನಾನು ಈ ಲೋಕ
24 ದವನಲ್ಲ. ಆದದರಿಂದ ನೀವು ನಿಮ್ಮ ಪಾಪಗಳಲ್ಲಿಯೇ
ಸಾಯುವಿರೆಂದು ನಿಮಗೆ ಹೇಳಿದೆನು; ನನ್ನನ್ನು [1]ಆತ
ನೆಂದು ನೀವು ನಂಬದೆ ಹೋದರೆ ನಿಮ್ಮ ಪಾಪಗಳಲ್ಲಿಯೇ
25 ಸಾಯುವಿರೆಂದು ಹೇಳಿದನು. ಆಗ ಅವರು—ನೀನು
ಯಾರು? ಅಂದಾಗ ಯೇಸು—[2]ನಾನು ನಿಮಗೆ
26 ಹೇಳಿದಂಥದೇ. ನಿಮ್ಮ ವಿಷಯವಾಗಿ ಮಾತಾಡುವ
ದಕ್ಕೂ ನಿಮ್ಮ ಮೇಲೆ ತೀರ್ಪುಮಾಡುವದಕ್ಕೂ ಅನೇಕ
ಸಂಗತಿಗಳು ನನಗುಂಟು; ಆದರೆ ನನ್ನನ್ನು ಕಳುಹಿಸಿ
ಕೊಟ್ಟಾತನು ಸತ್ಯವಂತನು; ಆತನಿಂದ ನಾನು ಕೇಳಿ
27 ದವುಗಳನ್ನೇ ಲೋಕಕ್ಕೆ ಹೇಳುತ್ತೇನೆ ಅಂದನು. ಆತನು
ತಂದೆಯನ್ನು ಸೂಚಿಸಿ ಇದನ್ನು ಹೇಳಿದನೆಂದು ಅವರಿಗೆ
28 ಗೊತ್ತಾಗಲಿಲ್ಲ. ಹೀಗಿರಲಾಗಿ ಯೇಸು—ನೀವು

ಮನುಷ್ಯಕುಮಾರನನ್ನು ಎತ್ತರದಲ್ಲಿಟ್ಟಾಗ ಇವನೇ
ಆತನೆಂದೂ ತನ್ನಷ್ಟಕ್ಕೆ ತಾನೇ ಏನೂ ಮಾಡದೆ ತಂ
ಯು ತನಗೆ ಬೋಧಿಸಿದ ಹಾಗೆ ಅದನ್ನೆಲ್ಲಾ ಮಾತ
ಡಿದನೆಂದೂ ನನ್ನ ವಿಷಯವಾಗಿ ನಿಮಗೆ ತಿಳಿಯುವದು
ನನ್ನನ್ನು ಕಳುಹಿಸಿಕೊಟ್ಟಾತನು ನನ್ನ ಸಂಗಡ ಇದ್ದಾನೆ
ನಾನು ಆತನಿಗೆ ಮೆಚ್ಚಿಕೆಯಾದದ್ದನ್ನು ಯಾವಾಗಲೂ
ಮಾಡುವದರಿಂದ ಆತನು ನನ್ನನ್ನು ಒಂಟಿಗನಾಗಿ ಬಿ
ಲಿಲ್ಲ ಅಂದನು.
ಆತನು ಈ ಮಾತುಗಳನ್ನಾಡುವಾಗ ಅನೇಕರು ಆ
ನಲ್ಲಿ ನಂಬಿಕೆಯಿಟ್ಟರು. ಆಗ ಯೇಸು ತನ್ನನ್ನು
ನಂಬಿದ ಯೆಹೂದ್ಯರಿಗೆ—ನೀವು ನನ್ನ ವಾಕ್ಯದಲ್ಲಿ
ನೆಲೆಗೊಂಡವರಾದರೆ ನಿಜವಾಗಿ ನನ್ನ ಶಿಷ್ಯರಾಗಿದ್ದು
ಸತ್ಯವನ್ನು ತಿಳಿದುಕೊಳ್ಳುವಿರಿ; ಮತ್ತು ಸತ್ಯವು ನಿಮ್ಮ
ನ್ನು ಬಿಡುಗಡೆಮಾಡುವದು ಎಂದು ಹೇಳಿದನು. ಅ
ಕ್ಕವರು—ನಾವು ಅಬ್ರಹಾಮನ ಸಂತಾನದವರು
ನಾವು ಯಾರಿಗೂ ಎಂದೂ ದಾಸರಾಗಿಲ್ಲ; ನಿಮಗ
ಬಿಡುಗಡೆಯಾಗುವದೆಂದು ನೀನು ಹೇಳುವದು ಹೇಗೆ
ಅಂದರು. ಅದಕ್ಕೆ ಯೇಸು—ನಿಮಗೆ ನಿಜನಿಜವಾಗಿ
ಹೇಳುತ್ತೇನೆ, ಪಾಪಮಾಡುವವರೆಲ್ಲರು ಪಾಪಕ್ಕೆ ದಾಸ
ರಾಗಿದ್ದಾರೆ. ದಾಸನು ಮನೆಯಲ್ಲಿ ಶಾಶ್ವತವಾಗಿ ಇರು
ವದಿಲ್ಲ; ಮಗನು ಶಾಶ್ವತವಾಗಿ ಇರುವನು; ಆದದ
ರಿಂದ ಮಗನು ನಿಮ್ಮನ್ನು ಬಿಡುಗಡೆಮಾಡಿದರೆ ನಿಜ
ವಾಗಿ ನಿಮಗೆ ಬಿಡುಗಡೆಯಾಗುವದು. ನೀವು ಅಬ್ರ
ಹಾಮನ ಸಂತಾನದವರು ನಿಜ; ಆದರೂ ನನ್ನ ವಾಕ್
ವು ನಿಮ್ಮಲ್ಲಿ ಸಾಗದೆ ಇರುವ ಕಾರಣ ನನ್ನನ್ನು
ಕೊಲ್ಲುವದಕ್ಕೆ ನೋಡುತ್ತೀರಿ. ನಾನು ತಂದೆಯ ಬಳಿ
ಯಲ್ಲಿ ನೋಡಿದ್ದನ್ನು ಹೇಳುತ್ತೇನೆ; ನೀವೂ [3]ತಂದ
ಯಿಂದ ಕೇಳಿದ್ದನ್ನು ಮಾಡಿರಿ ಅಂದನು. ಅದಕ್
ವರು—ನಮ್ಮ ತಂದೆಯು ಅಬ್ರಹಾಮನೇ ಅಂದಾಗ
ಯೇಸು ಅವರಿಗೆ—ನೀವು ಅಬ್ರಹಾಮನ ಮಕ್ಕಳಾಗಿ
ದ್ದರೆ ಅಬ್ರಹಾಮನು ಮಾಡಿದಂಥ ಕೃತ್ಯಗಳನ್ನು
ಮಾಡುತ್ತಿದ್ದಿರಿ. ನೀವು ಹಾಗೆ ಮಾಡದೆ ದೇವರಿಂದ
ಕೇಳಿದ ಸತ್ಯವನ್ನು ನಿಮಗೆ ಹೇಳಿದವನಾದ ನನ್ನನ್ನು
ಕೊಲ್ಲುವದಕ್ಕೆ ನೋಡುತ್ತೀರಿ; ಅಬ್ರಹಾಮನು ಹೀಗ
ಮಾಡಲಿಲ್ಲ. ನೀವು ನಿಮ್ಮ ತಂದೆಯ ಕೃತ್ಯಗಳನ್ನು
ಮಾಡುತ್ತೀರಿ ಅಂದನು. ಅದಕ್ಕವರು—ನಾವು ಹಾದ
ರಕ್ಕೆ ಹುಟ್ಟಿದವರಲ್ಲ; ನಮಗೆ ಒಬ್ಬನೇ ತಂದೆ, ಆತನು
ದೇವರೇ ಅಂದರು. ಯೇಸು ಅವರಿಗೆ—ದೇವರು
ನಿಮ್ಮ ತಂದೆಯಾಗಿದ್ದರೆ, ನನ್ನನ್ನು ಪ್ರೀತಿಸುತ್ತಿದ್ದಿರಿ
ಯಾಕಂದರೆ ನಾನು ದೇವರಿಂದಲೇ ಹೊರಟು ಲೋಕಕ್ಕೆ
ಬಂದವನಾಗಿದ್ದೇನೆ. ನನ್ನಷ್ಟಕ್ಕೆ ನಾನೇ ಬರಲಿಲ್ಲ
ಆತನೇ ನನ್ನನ್ನು ಕಳುಹಿಸಿದ್ದಾನೆ. ನೀವು ನನ್ನ ಮಾ
ತನ್ನು ಗ್ರಹಿಸದೆ ಇರುವದಕ್ಕೆ ಕಾರಣವೇನು? ನನ್
ಬೋಧನೆಗೆ ಕಿವಿಗೊಡಲಾರದೆ ಇರುವದೇ ಕಾರಣ
ಸೈತಾನನು ನಿಮ್ಮ ತಂದೆ; ನೀವು ಆ ತಂದೆಯಿಂದ
ಹುಟ್ಟಿದವರಾಗಿದ್ದು ನಿಮ್ಮ ತಂದೆಯ ದುರಿಚ್ಛೆಗಳನ್ನೇ
ನಡಿಸಬೇಕೆಂದಿದ್ದೀರಿ. ಅವನು ಆದಿಯಿಂದಲೂ ಕೊಲ

1) ಆತನಂದರೆ, ಬರಬೇಕಾದ ಕ್ರಿಸ್ತನು. 2) ಅಥವಾ, ನಾನು ಮೊದಲಿಂದಲೂ. 3) ಅಥವಾ, ನಿಮ್ಮ ತಂದೆಯಿಂದ ಕೇಳಿ
ಮಾಡುವವರಾಗಿದ್ದೀರಿ.

ಗಾರನಾಗಿದ್ದು ಸತ್ಯದಲ್ಲಿ ನಿಲ್ಲಲಿಲ್ಲ; ಅವನಲ್ಲಿ ಸತ್ಯವು
ಇಲ್ಲವೇ ಇಲ್ಲ. ಅವನು ಸುಳ್ಳಾಡುವಾಗ ಸ್ವಭಾವಾನು
ಸಾರವಾಗಿ ಆಡುತ್ತಾನೆ; ಅವನು ಸುಳ್ಳುಗಾರನೂ
45 ಸುಳ್ಳಿಗೆ ಮೂಲಪುರುಷನೂ ಆಗಿದ್ದಾನೆ. ನಾನು ಸತ್ಯ
ವನ್ನು ಹೇಳುವವನಾದದರಿಂದ ನೀವು ನನ್ನನ್ನು ನಂಬು
46 ವದಿಲ್ಲ. ನನ್ನಲ್ಲಿ ಪಾಪವನ್ನು ತೋರಿಸಿಕೊಡುವವರು
ನಿಮ್ಮೊಳಗೆ ಯಾರಿದ್ದಾರೆ? ನಾನು ಸತ್ಯವನ್ನು ಹೇಳು
ವವನಾಗಿರುವಲ್ಲಿ ನೀವು ನನ್ನ ಮಾತನ್ನು ನಂಬದೆ ಇರು
47 ವದು ಯಾಕೆ? ದೇವರಿಂದ ಹುಟ್ಟಿದವನು ದೇವರ
ಮಾತುಗಳನ್ನು ಕೇಳುತ್ತಾನೆ. ನೀವು ದೇವರಿಂದ
ಹುಟ್ಟದ ಕಾರಣ ಅವುಗಳನ್ನು ಕೇಳುವದಿಲ್ಲ ಎಂದು
ಹೇಳಿದನು.
48 ಅದಕ್ಕೆ ಯೆಹೂದ್ಯರು—ನೀನು ಸಮಾರ್ಯನೂ
ದೆವ್ವಹಿಡಿದವನೂ ಆಗಿದ್ದೀ ಎಂದು ನಾವು ಹೇಳುವದು
49 ಸರಿಯಲ್ಲವೋ ಎಂದು ಹೇಳಲು ಯೇಸು—ನಾನು
ದೆವ್ವಹಿಡಿದವನಲ್ಲ, ನನ್ನ ತಂದೆಯನ್ನು ಸನ್ಮಾನಿಸು
ವವನಾಗಿದ್ದೇನೆ; ಆದರೂ ನೀವು ನನ್ನನ್ನು ಅವಮಾನ
50 ಪಡಿಸುತ್ತೀರಿ. ನನಗೆ ಮಾನಬರಬೇಕೆಂದು ನಾನು
ಅಪೇಕ್ಷಿಸುವದಿಲ್ಲ; ನನಗೆ ಮಾನಬರಬೇಕೆಂದು ಅಪೇ
ಕ್ಷಿಸುವವನು ಒಬ್ಬನಿದ್ದಾನೆ; ಆತನೇ ನ್ಯಾಯತೀರಿಸು
51 ವನು. ನಿಮಗೆ ನಿಜನಿಜವಾಗಿ ಹೇಳುತ್ತೇನೆ, ಯಾವ
ನಾದರೂ ನನ್ನ ವಾಕ್ಯವನ್ನು ಕೈಕೊಂಡು ನಡೆದರೆ
ಅವನು ಎಂದಿಗೂ ಸಾವನ್ನು ಕಾಣುವದಿಲ್ಲ ಅಂದನು.
52 ಅದಕ್ಕೆ ಯೆಹೂದ್ಯರು—ನೀನು ದೆವ್ವಹಿಡಿದವನೆಂದು
ಈಗ ನಮಗೆ ತಿಳಿಯಿತು; ಅಬ್ರಹಾಮನು ಸತ್ತನು,
ಪ್ರವಾದಿಗಳು ಸತ್ತರು; ಆದರೆ ನೀನು—ನನ್ನ ವಾಕ್ಯ
ವನ್ನು ಕೈಕೊಂಡು ನಡೆಯುವವನು ಎಂದಿಗೂ ಸಾವ
53 ನ್ನು ಅನುಭವಿಸುವದಿಲ್ಲವೆಂದು ಹೇಳುತ್ತೀ. ನಮ್ಮ
ಮೂಲಪುರುಷನಾದ ಅಬ್ರಹಾಮನಿಗಿಂತ ನೀನು ದೊಡ್ಡ
ವನೋ? ಅವನೂ ಸತ್ತುಹೋದನು, ಪ್ರವಾದಿಗಳೂ
ಸತ್ತುಹೋದರು; ನಿನ್ನನ್ನು ಯಾರೆಂತ ಮಾಡಿಕೊ
54 ಳ್ಳುತ್ತೀ ಎಂದು ಹೇಳಲು ಯೇಸು—ನನ್ನನ್ನು ನಾನೇ
ಮಹಿಮೆಪಡಿಸಿಕೊಂಡರೆ ನನ್ನ ಮಹಿಮೆ ಹುರುಳಿಲ್ಲದ್ದು;
ನನ್ನನ್ನು ಮಹಿಮೆಪಡಿಸುವವನು ನನ್ನ ತಂದೆಯೇ.
ನೀವು ಆತನನ್ನು ನಮ್ಮ ದೇವರು ಅನ್ನುತ್ತೀರಿ; ಆದರೂ
55 ನೀವು ಆತನನ್ನು ತಿಳಿಯದೆ ಇದ್ದೀರಿ. ನಾನಂತು ಆತ
ನನ್ನು ಬಲ್ಲೆನು; ಆತನನ್ನು ಅರಿಯೆನೆಂದು ಹೇಳಿದರೆ
ನಿಮ್ಮ ಹಾಗೆ ಸುಳ್ಳುಗಾರನಾಗುವೆನು; ಆದರೆ ಆತ
ನನ್ನು ತಿಳಿದಿದ್ದೇನೆ, ಆತನ ವಾಕ್ಯವನ್ನು ಕೈಕೊಂಡು
56 ನಡೆಯುತ್ತೇನೆ. ನಿಮ್ಮ ಮೂಲಪುರುಷನಾದ ಅಬ್ರ
ಹಾಮನು ನನ್ನ ದಿನವನ್ನು ತಾನು ನೋಡೇನೆಂದು
ಉಲ್ಲಾಸಪಟ್ಟನು; ಅದನ್ನು ನೋಡಿ ಸಂತೋಷಗೊಂ
57 ಡನು ಅಂದನು. ಅದಕ್ಕೆ ಯೆಹೂದ್ಯರು—ನಿನಗೆ ಇನ್ನೂ
ಐವತ್ತು ವರುಷವಾಗಿಲ್ಲ; ಅಬ್ರಹಾಮನನ್ನು ನೋಡಿ
58 ದ್ದೀಯಾ? ಅಂದಾಗ ಯೇಸು—ನಿಮಗೆ ನಿಜನಿಜವಾಗಿ
ಹೇಳುತ್ತೇನೆ, ಅಬ್ರಹಾಮನು ಹುಟ್ಟುವದಕ್ಕಿಂತ
59 ಮುಂಚಿನಿಂದಲೂ ನಾನು ಇದ್ದೇನೆ ಅಂದನು. ಅವರು
ಈ ಮಾತನ್ನು ಕೇಳಿ ಆತನನ್ನು ಕೊಲ್ಲುವದಕ್ಕಾಗಿ
ಕಲ್ಲುತಕ್ಕೊಳ್ಳಲು ಯೇಸು ಅಡಗಿಕೊಂಡು ದೇವಾ
ಲಯದೊಳಗಿಂದ ಹೊರಟುಹೋದನು.

ಯೇಸು ಸಬ್ಬತ್‌ದಿನದಲ್ಲಿ ಹುಟ್ಟುಕುರುಡನಿಗೆ ಕಣ್ಣುಕೊಟ್ಟದ್ದು;
ಫರಿಸಾಯರು ಆ ಕುರುಡನನ್ನು ಬಹಿಷ್ಕರಿಸಿದ್ದು.

ಯೇಸು ಹಾದುಹೋಗುತ್ತಿರುವಾಗ ಒಬ್ಬ ಹುಟ್ಟು 9
ಕುರುಡನನ್ನು ಕಂಡನು. ಆತನ ಶಿಷ್ಯರು— 2
ಗುರುವೇ, ಇವನು ಕುರುಡನಾಗಿ ಹುಟ್ಟಿರುವದಕ್ಕೆ
ಯಾರು ಪಾಪಮಾಡಿದರು? ಇವನೋ? ಇವನ ತಂದೆ
ತಾಯಿಗಳೋ? ಎಂದು ಆತನನ್ನು ಕೇಳಿದ್ದಕ್ಕೆ
ಯೇಸು—ಇವನೂ ಪಾಪಮಾಡಲಿಲ್ಲ, ಇವನ ತಂದೆ 3
ತಾಯಿಗಳೂ ಪಾಪಮಾಡಲಿಲ್ಲ; ದೇವರ ಕ್ರಿಯೆಗಳು
ಇವನಲ್ಲಿ ತೋರಿಬರುವದಕ್ಕೆ ಇದಾಯಿತು. ನನ್ನನ್ನು 4
ಕಳುಹಿಸಿದಾತನ ಕಾರ್ಯಗಳನ್ನು ನಾವು ಹಗಲಿರು
ವಾಗಲೇ ನಡಿಸಬೇಕು. ರಾತ್ರಿ ಬರುತ್ತದೆ, ಅದು
ಬಂದ ಮೇಲೆ ಯಾರೂ ಕೆಲಸ ಮಾಡಲಾರರು.
ನಾನು ಲೋಕದಲ್ಲಿರುವಾಗ ಲೋಕಕ್ಕೆ ಬೆಳಕಾಗಿದ್ದೇನೆ 5
ಅಂದನು. ಇದನ್ನು ಹೇಳಿ ನೆಲದ ಮೇಲೆ ಉಗುಳಿ 6
ಆ ಉಗುಳಿನಿಂದ ಕೆಸರು ಮಾಡಿ ಆ ಕೆಸರನ್ನು ಅವನ
ಕಣ್ಣುಗಳಿಗೆ ಹಚ್ಚಿ—ನೀನು ಸಿಲೋವ ಕೊಳಕ್ಕೆ 7
ಹೋಗಿ ತೊಳಕೋ ಅಂದನು. (ಸಿಲೋವ ಎಂಬ
ಮಾತಿಗೆ ಕಳುಹಿಸಲ್ಪಟ್ಟವನು ಎಂಬರ್ಥ.) ಅವನು ಹೋ
ಗಿ ತೊಳಕೊಂಡು ಕಣ್ಣು ಹೊಂದಿದವನಾಗಿ ಬಂದನು.
ಆಗ ನೆರೆಹೊರೆಯವರೂ ಅವನು ಭಿಕ್ಷಗಾರನಾಗಿದ್ದ 8
ದ್ದನ್ನು ಮೊದಲು ನೋಡಿದವರೂ—ಇವನು ಕೂತಿದ್ದ
ಆ ಭಿಕ್ಷಕನಲ್ಲವೇ ಅಂದರು. ಕೆಲವರು—ಹೌದು, 9
ಅವನೇ ಅಂದರು; ಇನ್ನು ಕೆಲವರು—ಅವನಲ್ಲ,
ಅವನ ಹಾಗಿದ್ದಾನೆ ಅಂದರು. ಅವನಾದರೆ—ನಾನೇ
ಅವನು ಅಂದನು. ಆಗ ಅವರು—ನಿನಗೆ ಕಣ್ಣು 10
ಹೇಗೆ ಬಂದವು? ಎಂದು ಅವನನ್ನು ಕೇಳಿದ್ದಕ್ಕೆ
ಇವನು—ಯೇಸು ಎಂಬವನಿದ್ದಾನಲ್ಲಾ, ಅವನು 11
ಕೆಸರುಮಾಡಿ ನನ್ನ ಕಣ್ಣಿಗೆ ಹಚ್ಚಿ ಸಿಲೋವ ಕೊಳಕ್ಕೆ
ಹೋಗಿ ತೊಳಕೋ ಎಂದು ಹೇಳಿದನು. ನಾನು
ಹೋಗಿ ತೊಳಕೊಂಡೆನು; ಕಣ್ಣುಬಂದವು ಅಂದನು.
ಅವರು—ಅವನೆಲ್ಲಿದ್ದಾನೆ ಎಂದು ಅವನನ್ನು ಕೇಳಿ 12
ದ್ದಕ್ಕೆ ಅವನು—ನನಗೆ ಗೊತ್ತಿಲ್ಲ ಅಂದನು.
ಮುಂಚೆ ಕುರುಡನಾಗಿದ್ದ ಇವನನ್ನು ಫರಿಸಾಯರ 13
ಬಳಿಗೆ ಕರಕೊಂಡು ಹೋದರು. ಯೇಸು ಕೆಸರು 14
ಮಾಡಿ ಅವನಿಗೆ ಕಣ್ಣುಕೊಟ್ಟ ದಿವಸವು ಸಬ್ಬತ್‌ದಿವಸ
ವಾಗಿತ್ತು. ಅದಕಾರಣ ಆ ಫರಿಸಾಯರು ಸಹ ಅವ 15
ನನ್ನು ವಿಚಾರಿಸಿ—ನಿನಗೆ ಹೇಗೆ ಕಣ್ಣುಬಂದವು ಎಂದು
ಕೇಳಿದರು. ಅವನು ಅವರಿಗೆ—ಕೆಸರನ್ನು ನನ್ನ ಕಣ್ಣಿನ
ಮೇಲೆ ಇಟ್ಟನು, ನಾನು ತೊಳಕೊಂಡೆನು, ಕಣ್ಣು
ಕಾಣುತ್ತವೆ ಎಂದು ಉತ್ತರಕೊಟ್ಟನು. ಆ ಫರಿಸಾಯ 16
ರಲ್ಲಿ ಕೆಲವರು—ಈ ಮನುಷ್ಯನು ದೇವರಿಂದ ಬಂದವ
ನಲ್ಲ; ಅವನು ಸಬ್ಬತ್‌ದಿವಸವನ್ನು ಲಕ್ಷ್ಯಮಾಡುವ
ದಿಲ್ಲವಲ್ಲಾ ಅಂದರು. ಇನ್ನು ಕೆಲವರು—ಇಂಥ
ಮಹತ್ತುಗಳನ್ನು ಮಾಡುವದು ಭಕ್ತಿಹೀನನ ಕೈಯಿಂದ
ಹೇಗಾದೀತು? ಅಂದರು. ಹೀಗೆ ಅವರಲ್ಲಿ ಭೇದ
ವಾಯಿತು. ಹೀಗಿರಲಾಗಿ ಅವರು ತಿರಿಗಿ ಆ ಕುರುಡ 17
ನನ್ನು—ಅವನು ನಿನಗೆ ಕಣ್ಣುಕೊಟ್ಟದ್ದರಿಂದ ನೀನು

ಅವನ ವಿಷಯವಾಗಿ ಏನು ಹೇಳುತ್ತೀ ಎಂದು ಕೇಳಿ
ದಾಗ ಅವನು—ಆತನು ಪ್ರವಾದಿ ಅನ್ನುತ್ತೇನೆ ಎಂದು
ಹೇಳಿದನು.
18 ಆದರೆ ಕಣ್ಣು ಬಂದವನ ವಿಷಯವಾಗಿ ಆ ಯೆಹೂ
ದ್ಯರು—ಇವನು ಕುರುಡನಾಗಿದ್ದು ಈಗ ಕಣ್ಣುಳ್ಳವ
ನಾದನೆಂದು ನಂಬದೆ ಅವನ ತಂದೆತಾಯಿಗಳನ್ನು
19 ಕರೆಯಿಸಿ—ಕುರುಡನಾಗಿ ಹುಟ್ಟಿದನೆಂದು ನೀವು ಹೇಳು
ವಂಥ ನಿಮ್ಮ ಮಗನು ಇವನೋ? ಈಗ ಇವನಿಗೆ
ಕಣ್ಣು ಹೇಗೆ ಬಂದವು ಎಂದು ಅವರನ್ನು ಕೇಳಿದರು.
20 ಅವನ ತಂದೆತಾಯಿಗಳು—ಇವನು ನಮ್ಮ ಮಗನೆಂದೂ
21 ಕುರುಡನಾಗಿ ಹುಟ್ಟಿದನೆಂದೂ ಬಲ್ಲೆವು; ಈಗ ಹೇಗೆ
ಕಣ್ಣು ಬಂದವೋ ಅರಿಯೆವು; ಕಣ್ಣು ಕೊಟ್ಟವನು
ಯಾರೋ ಅರಿಯೆವು; ಇವನನ್ನೇ ಕೇಳಿರಿ; ಪ್ರಾಯ
ದವನಾಗಿದ್ದಾನಲ್ಲಾ; ಇವನೇ ತನ್ನ ವಿಷಯವಾಗಿ
22 ಹೇಳುವನು ಎಂದು ಉತ್ತರಕೊಟ್ಟರು. ಅವನ ತಂದೆ
ತಾಯಿಗಳು ಯೆಹೂದ್ಯರಿಗೆ ಅಂಜಿದ ಕಾರಣ ಈ
ಪ್ರಕಾರ ಹೇಳಿದರು. ಯಾಕಂದರೆ—ಯಾರಾದರೂ
ಯೇಸುವನ್ನು ಕ್ರಿಸ್ತನೆಂದು ಒಪ್ಪಿಕೊಂಡು ಹೇಳಿದರೆ
ಅಂಥವನಿಗೆ ಬಹಿಷ್ಕಾರಹಾಕಬೇಕೆಂದು ಯೆಹೂದ್ಯರು
23 ಅದಕ್ಕೆ ಮುಂಚೆ ಗೊತ್ತುಮಾಡಿಕೊಂಡಿದ್ದರು. ಇವನು
ಪ್ರಾಯದವನು, ಇವನನ್ನೇ ಕೇಳಿರಿ ಎಂದು ಅವನ
ತಂದೆತಾಯಿಗಳು ಹೇಳಿದ್ದಕ್ಕೆ ಇದೇ ಕಾರಣ.
24 ಆದಕಾರಣ ಅವರು ಕುರುಡನಾಗಿದ್ದ ಆ ಮನುಷ್ಯ
ನನ್ನು ಎರಡನೆಯ ಸಾರಿ ಕರೆದು—ನೀನು ದೇವರಿಗೆ
ಮಾನಬರುವಂತೆ ಹೇಳು; ಆ ಮನುಷ್ಯನು ಭಕ್ತಿಹೀನ
25 ನೆಂದು ನಾವು ಬಲ್ಲೆವು ಎಂದು ಹೇಳಲು ಅವನು—
ಆತನು ಭಕ್ತಿಹೀನನೋ ಏನೋ ನಾನರಿಯೆ, ಒಂದು
ಮಾತ್ರ ಬಲ್ಲೆ, ಕುರುಡನಾಗಿದ್ದೆನು, ಈಗ ಕಣ್ಣು
26 ಕಾಣುತ್ತವೆ ಅಂದನು. ಅವರು ಅವನನ್ನು—ನಿನಗೆ
ಏನು ಮಾಡಿದನು? ನಿನಗೆ ಹೇಗೆ ಕಣ್ಣು ಕೊಟ್ಟನು
27 ಎಂದು ಕೇಳಿದ್ದಕ್ಕೆ ಅವನು—ನಿಮಗೆ ಆಗಲೇ ಹೇಳಿದೆ
ನಲ್ಲಾ, ನೀವು ಕೇಳಲಿಲ್ಲ; ಯಾಕೆ ತಿರಿಗಿ ಕೇಳ
ಬೇಕೆಂದಿದ್ದೀರಿ? ಆತನ ಶಿಷ್ಯರಾಗುವದಕ್ಕೆ ನಿಮಗೂ
28 ಮನಸ್ಸದೆಯೋ? ಅಂದನು. ಅದಕ್ಕೆ ಅವರು ಅವ
ನನ್ನು ಬೈದು—ನೀನು ಆ ಮನುಷ್ಯನ ಶಿಷ್ಯ; ನಾವು
29 ಮೋಶೆಯ ಶಿಷ್ಯರು; ಮೋಶೆಯ ಸಂಗಡ ದೇವರು
ಮಾತಾಡಿದನೆಂದು ನಾವು ಬಲ್ಲೆವು; ಆದರೆ ಇವನು
30 ಎಲ್ಲಿಯವನೋ ಅರಿಯೆವು ಅಂದರು. ಅದಕ್ಕೆ ಆ
ಮನುಷ್ಯನು—ಆತನು ನನಗೆ ಕಣ್ಣು ಕೊಟ್ಟರೂ ಆತನು
ಎಲ್ಲಿಯವನೋ ನಿಮಗೆ ಗೊತ್ತಿಲ್ಲದೆ ಇರುವದು
31 ಆಶ್ಚರ್ಯವಲ್ಲವೇ. ಭಕ್ತಿಹೀನರ ಪ್ರಾರ್ಥನೆಯನ್ನು
ದೇವರು ಕೇಳುವದಿಲ್ಲ; ಯಾವನು ಭಕ್ತನಾಗಿದ್ದು
ಆತನ ಚಿತ್ತದಂತೆ ನಡೆಯುತ್ತಾನೋ ಅವನ ಪ್ರಾರ್ಥನೆ
32 ಯನ್ನು ಕೇಳುತ್ತಾನೆಂದು ಬಲ್ಲೆವು. ಹುಟ್ಟುಕುರುಡ
ನಿಗೆ ಯಾರಾದರೂ ಕಣ್ಣು ಕೊಟ್ಟ ಸಂಗತಿಯನ್ನು
33 ಲೋಕಾದಿಯಿಂದ ಒಬ್ಬರೂ ಕೇಳಿದ್ದಿಲ್ಲ; ಈತನು
ದೇವರಿಂದ ಬಂದವನಲ್ಲದಿದ್ದರೆ ಏನೂ ಮಾಡಲಾರದೆ
34 ಇರುತ್ತಿದ್ದನು ಅಂದನು. ಈ ಮಾತಿಗೆ ಅವರು—

ನೀನು ಕೇವಲ ಪಾಪದಲ್ಲಿ ಹುಟ್ಟಿದವನು, ನಮ
ಉಪದೇಶಮಾಡುತ್ತೀಯೋ ಎಂದು ಹೇಳಿ ಅವನನ್ನು
ಹೊರಗೆ ಹಾಕಿದರು.

ಯೇಸು ಆ ಬಹಿಷ್ಕಾರದವನನ್ನು ಹುಡುಕಿದ್ದು;
ಒಳ್ಳೇ ಕುರುಬನ ವಿಷಯವಾಗಿಯೂ ಕಳ್ಳಕುರುಬರ
ವಿಷಯವಾಗಿಯೂ ಉಪಮಾನ ಹೇಳಿದ್ದು.

ಅವನನ್ನು ಹೊರಗೆ ಹಾಕಿದರೆಂದು ಯೇಸು ಕೇ
ಅವನನ್ನು ಕಂಡುಕೊಂಡು—ನೀನು [1])ಮನುಷ್ಯಕುಮಾ
ರನನ್ನು ನಂಬುತ್ತೀಯೋ ಎಂದು ಕೇಳಿದನು. ಅ
ಕ್ಕವನು—ಆತನು ಯಾರು, ಸ್ವಾಮಿ? ತಿಳಿಸಿದ
ಆತನನ್ನು ನಂಬುತ್ತೇನೆ ಅಂದಾಗ ಯೇಸು—ನೀನ
ಅವನನ್ನು ಕಂಡಿದ್ದೀ; ನಿನ್ನ ಸಂಗಡ ಮಾತಾಡ
ತ್ತಿರುವ ನಾನೇ ಅವನು ಅಂದನು. ಅವನು—ನಂಬು
ತ್ತೇನೆ, ಸ್ವಾಮಿ, ಎಂದು ಹೇಳಿ ಆತನಿಗೆ ಅಡ್ಡ
ಬಿದ್ದನು.
ಆಗ ಯೇಸು—ನಾನು ನ್ಯಾಯತೀರ್ಪಿಗಾಗಿ ಈ
ಲೋಕಕ್ಕೆ ಬಂದಿದ್ದೇನೆ; ಆ ತೀರ್ಪು ಏನಂದರೆ, ಕಣ್ಣಿಲ್ಲ
ದವರಿಗೆ ಕಣ್ಣು ಬರುವವು, ಕಣ್ಣಿದ್ದವರು ಕುರುಡ
ರಾಗುವರು ಅಂದನು. ಇದನ್ನು ಆತನ ಸಂಗಡ ಇದ್ದ
ಫರಿಸಾಯರು ಕೇಳಿ—ನಾವೂ ಕುರುಡರೇನು? ಎಂದ
ಕೇಳಿದಾಗ ಯೇಸು ಅವರಿಗೆ—ನೀವು ಕುರುಡರಾ
ಗಿದ್ದರೆ ನಿಮಗೆ ಪಾಪವು ಇರುತ್ತಿರಲಿಲ್ಲ; ನಮಗ
ಕಣ್ಣು ಕಾಣುತ್ತವೆ ಅನ್ನುತ್ತೀರಾದ್ದರಿಂದ ನಿಮ
ಪಾಪವು ಉಳಿದದೆ.
ನಿಮಗೆ ನಿಜನಿಜವಾಗಿ ಹೇಳುತ್ತೇನೆ, ಕುರಿ
ಹಟ್ಟಿಯೊಳಗೆ ಬಾಗಲಿಂದ ಬಾರದೆ ಮತ್ತೆಲ್ಲಿಂದಾ
ದರೂ ಹತ್ತಿಬರುವವನು ಕಳ್ಳನೂ ಸುಲುಕೊಳ್ಳು
ವವನೂ ಆಗಿದ್ದಾನೆ. ಬಾಗಲಿಂದ ಒಳಗೆ ಬರುವವನು
ಆ ಕುರಿಗಳ ಕುರುಬನು. ಬಾಗಲು ಕಾಯುವವನು
ಅವನಿಗೆ ಬಾಗಲನ್ನು ತೆರೆಯುತ್ತಾನೆ, ಕುರಿಗಳು ಅವನ
ಸ್ವರಕ್ಕೆ ಕಿವಿಗೊಡುತ್ತವೆ. ಅವನು ಸ್ವಂತ ಕುರಿಗಳನ್ನು
ಹೆಸರು ಹೇಳಿ ಕರೆದು ಹೊರಗೆ ಬಿಡುತ್ತಾನೆ. ಸ್ವಂ
ಕುರಿಗಳನ್ನೆಲ್ಲಾ ಹೊರಗೆ ಬಿಟ್ಟ ಮೇಲೆ ತಾನು ಅವುಗ
ಮುಂದೆ ಹೋಗುತ್ತಾನೆ; ಕುರಿಗಳು ಅವನ ಸ್ವರವನ್ನು
ತಿಳುಕೊಂಡು ಅವನ ಹಿಂದೆ ಹೋಗುತ್ತವೆ. ಅ
ಅನ್ಯರ ಸ್ವರವನ್ನು ತಿಳಿಯುವದಿಲ್ಲ; ಅನ್ಯನ ಹಿಂ
ಹೋಗದೆ ಅವನ ಬಳಿಯಿಂದ ಓಡಿಹೋಗುತ್ತವೆ. ಈ
ಉಪಮಾನವನ್ನು ಯೇಸು ಅವರಿಗೆ ಹೇಳಿದನು.
ಆದರೂ ಆತನ ಮಾತಿನ ಅರ್ಥವನ್ನು ಅವರು
ಗ್ರಹಿಸಲಿಲ್ಲ.
ಆದಕಾರಣ ಯೇಸು ಮತ್ತೂ ಅವರಿಗೆ—ನಿಮಗೆ
ನಿಜನಿಜವಾಗಿ ಹೇಳುತ್ತೇನೆ, ಕುರಿಗಳಿಗೆ ನಾನೇ ಬಾಗ
ಲಾಗಿದ್ದೇನೆ. ನನಗಿಂತ ಮುಂಚೆ ಬಂದವರೆಲ್ಲರು
ಕಳ್ಳರೂ ಸುಲುಕೊಳ್ಳುವವರೂ ಆಗಿದ್ದಾರೆ; ಆದರ
ಕುರಿಗಳು ಅವರಿಗೆ ಕಿವಿಗೊಡಲಿಲ್ಲ. ನಾನೇ ಆ
ಬಾಗಲು; ನನ್ನ ಮುಖಾಂತರವಾಗಿ ಯಾವನಾದರೂ

1) ಕೆಲವು ಪ್ರತಿಗಳಲ್ಲಿ—ದೇವಕುಮಾರನೆಂದು ಬರೆದದೆ.

ಒಳಗೆ ಹೋದರೆ ಸುರಕ್ಷಿತವಾಗಿದ್ದು ಒಳಗೆ ಹೋಗು
ವನು, ಹೊರಗೆ ಬರುವನು, ಮೇವನ್ನು ಕಂಡುಕೊಳ್ಳು
0 ವನು. ಕಳ್ಳನು ಕದ್ದುಕೊಳ್ಳುವದಕ್ಕೂ ಕೊಯ್ಯುವ
ದಕ್ಕೂ ಹಾಳುಮಾಡುವದಕ್ಕೂ ಬರುತ್ತಾನೆ ಹೊರತು
ಮತ್ತಾವದಕ್ಕೂ ಬರುವದಿಲ್ಲ; ನಾನಾದರೋ ಅವು
ಗಳಿಗೆ ಜೀವವು ಇರಬೇಕೆಂತಲೂ 1)ಸಮೃದ್ಧಿಯು ಇರ
ಬೇಕೆಂತಲೂ ಬಂದೆನು.
ನಾನೇ ಒಳ್ಳೇ ಕುರುಬನು; ಒಳ್ಳೇ ಕುರುಬನು
ತನ್ನ ಕುರಿಗಳಿಗೋಸ್ಕರ ತನ್ನ ಪ್ರಾಣವನ್ನು ಕೊಡು
2 ತ್ತಾನೆ. ಕೂಲಿಯಾಳು ಕುರುಬನೂ ಕುರಿಗಳ ಒಡೆ
ಯನೂ ಆಗಿರದೆ ತೋಳ ಬರುವದನ್ನು ಕಾಣುತ್ತಲೇ
ಕುರಿಗಳನ್ನು ಬಿಟ್ಟು ಓಡಿಹೋಗುತ್ತಾನೆ; ತೋಳವು
ಅವುಗಳನ್ನು ಹಿಡುಕೊಂಡು ಹಿಂಡನ್ನು ಚದರಿಸುತ್ತದೆ.
3 ಅವನು ಕೂಲಿಯಾಳು; ಕುರಿಗಳ ಚಿಂತೆ ಅವನಿಗಿಲ್ಲ.
4-15 ನಾನೇ ಒಳ್ಳೇ ಕುರುಬನು; ತಂದೆಯು ನನ್ನನ್ನು
ನಾನು ತಂದೆಯನ್ನು ತಿಳಿದಿರುವಂತೆಯೇ ನಾನು ನನ್ನ
ಕುರಿಗಳನ್ನು ತಿಳಿದಿದ್ದೇನೆ; ನನ್ನ ಕುರಿಗಳು ನನ್ನನ್ನು
ತಿಳಿದವೆ; ಮತ್ತು ಕುರಿಗಳಿಗೋಸ್ಕರ ನನ್ನ ಪ್ರಾಣವನ್ನು
6 ಕೊಡುತ್ತೇನೆ. ಇದಲ್ಲದೆ ಈ ಹಟ್ಟಿಗೆ ಸೇರದಿರುವ
ಇನ್ನು ಬೇರೆ ಕುರಿಗಳು ನನಗೆ ಅವೆ, ಅವುಗಳನ್ನೂ
ನಾನು ತರಬೇಕು; ಅವು ನನ್ನ ಸ್ವರಕ್ಕೆ ಕಿವಿಗೊಡುವವು;
ಆಗ ಒಂದೇ ಹಿಂಡು ಆಗುವದು, ಒಬ್ಬನೇ ಕುರುಬ
7 ನಿರುವನು. ನಾನು ತಿರಿಗಿ ಪಡಕೊಳ್ಳುತ್ತೇನೆಂದು ನನ್ನ
ಪ್ರಾಣವನ್ನು ಕೊಡುತ್ತೇನೆ; ಆದರ ನಿಮಿತ್ತವಾಗಿ
8 ತಂದೆಯು ನನ್ನನ್ನು ಪ್ರೀತಿಸುತ್ತಾನೆ. ನನ್ನ ಪ್ರಾಣ
ವನ್ನು ಯಾರೂ ನನ್ನಿಂದ ತೆಗೆಯರು, ನನ್ನಷ್ಟಕ್ಕೆ
ನಾನೇ ಅದನ್ನು ಕೊಡುತ್ತೇನೆ; ಅದನ್ನು ಕೊಡುವದಕ್ಕೆ
ನನಗೆ ಅಧಿಕಾರ ಉಂಟು, ಅದನ್ನು ತಿರಿಗಿ ಪಡಕೊಳ್ಳು
ವದಕ್ಕೆ ನನಗೆ ಅಧಿಕಾರ ಉಂಟು; ಈ ಅಪ್ಪಣೆಯನ್ನು
ನನ್ನ ತಂದೆಯಿಂದ ಹೊಂದಿದ್ದೇನೆ ಅಂದನು.
9 ಈ ಮಾತುಗಳ ದೆಸೆಯಿಂದ ಯೆಹೂದ್ಯರಲ್ಲಿ ತಿರಿಗಿ
20 ಭೇದವಾಯಿತು. ಅವರಲ್ಲಿ ಅನೇಕರು—ಅವನಿಗೆ
ದೆವ್ವಹಿಡಿದದೆ, ಹುಚ್ಚುಹಿಡಿದದೆ, ಯಾಕೆ ಅವನ ಮಾತು
21 ಕೇಳುತ್ತೀರಿ? ಅಂದರು. ಮತ್ತು ಕೆಲವರು—ಇವು
ದೆವ್ವಹಿಡಿದವನ ಮಾತುಗಳಲ್ಲ; ದೆವ್ವವು ಕುರುಡರಿಗೆ
ಕಣ್ಣುಕೊಡಬಲ್ಲದೇ? ಅಂದರು.

ಯೇಸು ಪ್ರತಿಷ್ಠೆಯ ಹಬ್ಬದಲ್ಲಿ ತಾನು ದೇವರ ಮಗನೆಂದು
ಸೂಚಿಸಲು ಯೆಹೂದ್ಯರು ಆತನನ್ನು ಹಿಡಿಯುವದಕ್ಕೆ
ತಿರಿಗಿ ಪ್ರಯತ್ನಮಾಡಿದ್ದು.

22 ಆ ಕಾಲದಲ್ಲಿ ದೇವಾಲಯಪ್ರತಿಷ್ಠೆಯ ಹಬ್ಬವು
ಯೆರೂಸಲೇಮಿನಲ್ಲಿ ನಡೆಯಿತು; ಆಗ ಚಳಿಕಾಲವಾ
23 ಗಿತ್ತು. ಯೇಸು ದೇವಾಲಯದೊಳಗೆ ಸೊಲೊಮೋ
ನನ ಮಂಟಪದಲ್ಲಿ ತಿರುಗಾಡುತ್ತಾ ಇರುವಾಗ
24 ಯೆಹೂದ್ಯರು ಆತನನ್ನು ಸುತ್ತಿಕೊಂಡು—ಇನ್ನು
ಎಷ್ಟು ಕಾಲ ನಮ್ಮಲ್ಲಿ ಅನುಮಾನ ಹುಟ್ಟಿಸುತ್ತೀ?
ನೀನು ಕ್ರಿಸ್ತನಾಗಿದ್ದರೆ ಅದನ್ನು ನಮಗೆ ಸ್ಪಷ್ಟವಾಗಿ
ಹೇಳು ಅಂದರು. ಅದಕ್ಕೆ ಯೇಸು—ನಿಮಗೆ ಹೇಳಿ 25
ದೆನು, ಆದರೆ ನೀವು ನಂಬದೆ ಇದ್ದೀರಿ; ನನ್ನ ತಂದೆಯ
ಹೆಸರಿನಲ್ಲಿ ನಾನು ಮಾಡುವ ಕ್ರಿಯೆಗಳೇ ನನಗೆ
ಸಾಕ್ಷಿಯಾಗಿವೆ. ಆದರೂ ನೀವು ನನ್ನ ಕುರಿಗಳಿಗೆ ಸೇರಿ 26
ದವರಲ್ಲವಾದದರಿಂದ ನಂಬದೆ ಇದ್ದೀರಿ. ನನ್ನ ಕುರಿ 27
ಗಳು ನನ್ನ ಸ್ವರಕ್ಕೆ ಕಿವಿಗೊಡುತ್ತವೆ; ನಾನು ಅವು
ಗಳನ್ನು ಬಲ್ಲೆನು; ಅವು ನನ್ನ ಹಿಂದೆ ಬರುತ್ತವೆ. ನಾನು 28
ಅವುಗಳಿಗೆ ನಿತ್ಯಜೀವವನ್ನು ಕೊಡುತ್ತೇನೆ; ಅವು ಎಂದಿ
ಗೂ ನಾಶವಾಗುವದೇ ಇಲ್ಲ; ಅವುಗಳನ್ನು ಯಾರೂ
ನನ್ನ ಕೈಯೊಳಗಿಂದ ಕಸಕೊಳ್ಳರು. ನನ್ನ ತಂದೆಯು 29
ನನಗೆ ಕೊಟ್ಟದ್ದು ಎಲ್ಲಾದ್ದಕ್ಕಿಂತ ದೊಡ್ಡದು;
2)ಅದನ್ನು ತಂದೆಯ ಕೈಯೊಳಗಿಂದ ಯಾರೂ ಕಸ
ಕೊಳ್ಳಲಾರರು. ನಾನೂ ತಂದೆಯೂ ಒಂದಾಗಿದ್ದೇವೆ 30
ಅಂದನು.
ಯೆಹೂದ್ಯರು ಆತನನ್ನು ಹೊಡೆದು ಕೊಲ್ಲಬೇ 31
ಕೆಂದು ತಿರಿಗಿ ಕಲ್ಲುಗಳನ್ನು ತೆಗೆದುಕೊಂಡು ಬರಲು
ಯೇಸು ಅವರನ್ನು—ತಂದೆಯ ಕಡೆಯಿಂದ ಅನೇಕ 32
ಒಳ್ಳೇ ಕ್ರಿಯೆಗಳನ್ನು ನಿಮಗೆ ತೋರಿಸಿದೆನು; ಅವು
ಗಳಲ್ಲಿ ಯಾವ ಕ್ರಿಯೆಯ ದೆಸೆಯಿಂದ ನನ್ನ ಮೇಲೆ
ಕಲ್ಲೆಸೆಯುತ್ತೀರಿ ಎಂದು ಕೇಳಿದ್ದಕ್ಕೆ ಯೆಹೂದ್ಯರು— 33
ನಾವು ನಿನ್ನ ಮೇಲೆ ಕಲ್ಲೆಸೆಯುವದು ಒಳ್ಳೇ ಕಾರ್ಯದ
ದೆಸೆಯಿಂದಲ್ಲ, ದೇವದೂಷಣೆಯ ದೆಸೆಯಿಂದಲೂ
ನೀನು ಮನುಷ್ಯನಾಗಿದ್ದು ನಿನ್ನನ್ನು ನೀನೇ ದೇವರನ್ನು
ಮಾಡಿಕೊಳ್ಳುವದರ ದೆಸೆಯಿಂದಲೂ ನಿನ್ನ ಮೇಲೆ
ಕಲ್ಲೆಸೆಯುತ್ತೇವೆ ಅಂದರು. ಅದಕ್ಕೆ ಯೇಸು— 34
ನೀವು ದೇವರುಗಳೇ ಎಂದು ನಾನು ಹೇಳಿದೆನು ಎಂಬ
ದಾಗಿ ನಿಮ್ಮ ಧರ್ಮಶಾಸ್ತ್ರದಲ್ಲಿ ಬರೆದದೆಯಲ್ಲಾ;
ಶಾಸ್ತ್ರವು ಸುಳ್ಳಾಗಲಾರದಷ್ಟೆ; ಹಾಗಾದರೆ ದೇವರ 35
ವಾಕ್ಯವನ್ನು ಹೊಂದಿದವರನ್ನು ದೇವರುಗಳೆಂದು
ಆತನು ಹೇಳಿರುವಲ್ಲಿ ತಂದೆಯು ಪ್ರತಿಷ್ಠೆಮಾಡಿ 36
ಲೋಕಕ್ಕೆ ಕಳುಹಿಸಿಕೊಟ್ಟವನಾದ ನಾನು ದೇವರ
ಮಗನಾಗಿದ್ದೇನೆಂದು ಹೇಳಿದ್ದಕ್ಕೆ ನೀನು ದೇವ
ದೂಷಣೆ ಮಾಡುತ್ತೀ ಅನ್ನುತ್ತೀರೋ? ನಾನು 37
ನನ್ನ ತಂದೆಯ ಕ್ರಿಯೆಗಳನ್ನು ಮಾಡದಿದ್ದರೆ ನನ್ನ
ಮಾತನ್ನು ನಂಬಬೇಡಿರಿ; ಮಾಡಿದರೆ ನನ್ನ ಮಾತನ್ನು 38
ನಂಬದೆ ಇದ್ದರೂ ಆ ಕ್ರಿಯೆಗಳ ಸಾಕ್ಷಿಯನ್ನಾದ
ರೂ ನಂಬಿರಿ; ಆಗ ನನ್ನಲ್ಲಿ ತಂದೆಯು ಇದ್ದಾನೆಂತಲೂ
ತಂದೆಯಲ್ಲಿ ನಾನು ಇದ್ದೇನೆಂತಲೂ ನೀವು ತಿಳು
ಕೊಂಡು ಮನನಮಾಡಿಕೊಳ್ಳುವಿರಿ ಅಂದನು. ಅವ 39
ರು ತಿರಿಗಿ ಆತನನ್ನು ಹಿಡಿಯುವದಕ್ಕೆ ನೋಡಿದರು;
ಆದರೆ ಅವರ ಕೈಗೆ ತಪ್ಪಿಸಿಕೊಂಡು ಹೋದನು.
ಆ ಮೇಲೆ ಆತನು ಯೊರ್ದನ್‌ಹೊಳೆಯ ಆಚೆ 40
ಯೋಹಾನನು ಮೊದಲು ಸ್ನಾನಮಾಡಿಸುತ್ತಿದ್ದ ಸ್ಥಳ
ಕ್ಕೆ ತಿರಿಗಿ ಹೋಗಿ ಅಲ್ಲಿ ಇದ್ದನು. ಅನೇಕರು ಆತನ 41
ಬಳಿಗೆ ಬಂದು—ಯೋಹಾನನು ಒಂದು ಸೂಚಕ
ಕಾರ್ಯವನ್ನೂ ಮಾಡಲಿಲ್ಲ; ಆದರೆ ಈತನ ವಿಷಯ

1) ಅಥವಾ, ಅದು ಸಮೃದ್ಧಿಯಾಗಿ. 2) ಕೆಲವು ಪ್ರತಿಗಳಲ್ಲಿ—ಅವುಗಳನ್ನು ನನಗೆ ಕೊಟ್ಟ ನನ್ನ ತಂದೆಯು ಎಲ್ಲರಿಗಿಂತ ದೊಡ್ಡ
ವನಾಗಿದ್ದಾನೆ: ಅವುಗಳನ್ನು.

ವಾಗಿ ಯೋಹಾನನು ಹೇಳಿದ್ದೆಲ್ಲಾ ನಿಜವಾಗಿತ್ತು
42 ಎಂದು ಮಾತಾಡುತ್ತಿದ್ದರು. ಅಲ್ಲಿ ಅನೇಕರು ಆತ
ನನ್ನು ನಂಬಿದರು.

ಯೇಸು ಸತ್ತುಹೋಗಿದ್ದ ಲಾಜರನೆಂಬವನನ್ನು ಬದುಕಿಸಿದ್ದು.

11 ಬೇಥಾನ್ಯದ ಲಾಜರನೆಂಬವನೊಬ್ಬನು ಅಸ್ವಸ್ಥ
ನಾಗಿದ್ದನು. ಅದು ಮಾರ್ಥಳು ಮರಿಯಳು ಎಂಬ
2 ಅಕ್ಕತಂಗಿಯರು ಇದ್ದ ಊರು. ಈ ಮರಿಯಳು
ಯೇಸುಸ್ವಾಮಿಗೆ ತೈಲವನ್ನು ಹಚ್ಚಿ ಆತನ ಪಾದಗಳ
ನ್ನು ತನ್ನ ತಲೇಕೂದಲಿನಿಂದ ಒರಸಿದವಳು. ಈಕೆಯ
3 ತಮ್ಮನಾದ ಲಾಜರನೇ ಅಸ್ವಸ್ಥನಾಗಿದ್ದನು. ಹೀಗಿರ
ಲಾಗಿ ಅವನ ಅಕ್ಕಂದಿರು—ಸ್ವಾಮೀ, ನಿನ್ನ ಪ್ರಿಯ
ಮಿತ್ರನು ಅಸ್ವಸ್ಥನಾಗಿದ್ದಾನೆ ಎಂಬದಾಗಿ ಯೇಸುವಿನ
4 ಬಳಿಗೆ ಹೇಳಿಕಳುಹಿಸಿದರು. ಯೇಸು ಅದನ್ನು ಕೇಳಿ—
ಈ ರೋಗವು ಮರಣಕ್ಕಾಗಿ ಬಂದದ್ದಲ್ಲ; ಇದರಿಂದ
ದೇವಕುಮಾರನಿಗೆ ಮಹಿಮೆ ಉಂಟಾಗುವಂತೆ ದೇವರ
5 ಮಹಿಮೆಗೋಸ್ಕರ ಬಂದದ್ದು ಅಂದನು. ಮಾರ್ಥಳಲ್ಲಿ
ಯೂ ಆಕೆಯ ತಂಗಿಯಲ್ಲಿಯೂ ಲಾಜರನಲ್ಲಿಯೂ
6 ಯೇಸುವಿಗೆ ಪ್ರೀತಿ ಇತ್ತು. ಆದರೂ ಲಾಜರನು ಅಸ್ವ
ಸ್ಥನಾಗಿದ್ದಾನೆಂದು ಆತನು ಕೇಳಿದ ಮೇಲೆ ಎರಡು ದಿನ
7 ತಾನಿದ್ದ ಸ್ಥಳದಲ್ಲೇ ನಿಂತನು. ಬಳಿಕ ಶಿಷ್ಯರಿಗೆ—
ತಿರಿಗಿ ಯೂದಾಯಕ್ಕೆ ಹೋಗೋಣ ಎಂದು ಹೇಳಿದನು.
8 ಶಿಷ್ಯರು—ಗುರುವೇ, ಯೆಹೂದ್ಯರು ಆಗಲೇ ನಿನ್ನನ್ನು
ಕಲ್ಲೆಸೆದು ಕೊಲ್ಲಬೇಕೆಂದಿದ್ದರು; ತಿರಿಗಿ ಅಲ್ಲಿಗೇ
9 ಹೋಗುತ್ತೀಯಾ? ಅನ್ನಲು ಯೇಸು—ಹಗಲಿಗೆ ಹನ್ನೆ
ರಡು ತಾಸು ಉಂಟಲ್ಲವೇ. ಒಬ್ಬನು ಹಗಲಲ್ಲಿ ತಿರು
ಗಾಡಿದರೆ ಈ ಲೋಕದ ಬೆಳಕು ಕಾಣಿಸುವದರಿಂದ
10 ಅವನು ಎಡವುವದಿಲ್ಲ; ರಾತ್ರಿಯಲ್ಲಿ ತಿರುಗಾಡಿದರೆ
ಅವನಿಗೆ ಬೆಳಕಿಲ್ಲದ್ದರಿಂದ ಎಡವುವನು ಎಂದು ಉತ್ತರ
11 ಕೊಟ್ಟನು. ಈ ಮಾತುಗಳನ್ನು ಹೇಳಿದ ಮೇಲೆ
ಅವರಿಗೆ—ನಮ್ಮ ಮಿತ್ರನಾದ ಲಾಜರನು ನಿದ್ರೆಮಾಡು
ತ್ತಾನೆ; ನಾನು ಅವನನ್ನು ನಿದ್ರೆಯಿಂದ ಎಬ್ಬಿಸುವದ
12 ಕ್ಕಾಗಿ ಹೋಗುತ್ತೇನೆ ಎಂದು ಹೇಳಿದನು. ಅದಕ್ಕೆ
ಶಿಷ್ಯರು—ಸ್ವಾಮೀ, ಅವನು ನಿದ್ರೆಮಾಡುತ್ತಿದ್ದರೆ ಸ್ವಸ್ಥ
13 ನಾಗುವನು ಅಂದರು. ಯೇಸು ಅವನ ಮರಣವನ್ನು
ಸೂಚಿಸಿ ಅದನ್ನು ಹೇಳಿದ್ದನು; ಆದರೆ ಅವರು
ನಿದ್ರೆಯ ವಿಶ್ರಾಂತಿಯನ್ನು ಕುರಿತು ಹೇಳುತ್ತಾನೆಂದು
14 ನೆನಸಿದರು. ಆಗ ಯೇಸು ಸ್ಪಷ್ಟವಾಗಿ ಅವರಿಗೆ—
15 ಲಾಜರನು ಸತ್ತುಹೋದನು; ಮತ್ತು ನಾನು ಅಲ್ಲಿ
ಇಲ್ಲದೆ ಇದ್ದದ್ದಕ್ಕೆ ನಿಮ್ಮ ನಿಮಿತ್ತವಾಗಿ ಸಂತೋಷ
ಪಡುತ್ತೇನೆ, ಯಾಕಂದರೆ ಅದರಿಂದ ನೀವು ನಂಬುವದಕ್ಕೆ
ಮಾರ್ಗವಾಯಿತು; ಆದರೆ ಅವನ ಬಳಿಗೆ ಹೋಗೋಣ
16 ಎಂದು ಹೇಳಿದನು. ಆಗ ದಿದುಮನೆಂಬ ತೋಮನು
ಜೊತೇಶಿಷ್ಯರಿಗೆ—ನಾವು ಸಹ ಹೋಗಿ ಆತನೊಡನೆ
ಸಾಯೋಣ ಎಂದು ಹೇಳಿದನು.
17 ಯೇಸು ಬಂದಾಗ ಲಾಜರನನ್ನು ಸಮಾಧಿಯ
ಲ್ಲಿಟ್ಟು ನಾಲ್ಕು ದಿವಸವಾಯಿತೆಂದು ಆತನಿಗೆ ತಿಳಿದು

ಬಂತು. ಬೇಥಾನ್ಯವು ಯೆರೂಸಲೇಮಿಗೆ ಸಮೀ
ವಾಗಿತ್ತು; ಇದಕ್ಕೂ ಅದಕ್ಕೂ ಹೆಚ್ಚುಕಡಿಮೆ ಒಂ
[1]ಹರದಾರಿ ಅಂತರ. ಆದದರಿಂದ ಯೆಹೂದ್ಯರ
ಅನೇಕರು ಮಾರ್ಥಳ ಮತ್ತು ಮರಿಯಳ ಬಳಿಗೆ ಅ
ರನ್ನು ತಮ್ಮನ ವಿಷಯದಲ್ಲಿ ಸಂತೈಸಬೇಕೆಂದು ಬಂ
ದ್ದರು. ಹೀಗಿರುವಲ್ಲಿ ಮಾರ್ಥಳು ಯೇಸು ಬರುತ
ನೆಂದು ಕೇಳಿ ಆತನನ್ನು ಎದುರುಗೊಳ್ಳುವದ
ಹೋದಳು; ಆದರೆ ಮರಿಯಳು ಮನೆಯಲ್ಲೇ ಕೂ
ಕೊಂಡಿದ್ದಳು. ಮತ್ತು ಮಾರ್ಥಳು ಯೇಸುವಿಗೆ—
ಸ್ವಾಮೀ, ನೀನು ಇಲ್ಲಿ ಇರುತ್ತಿದ್ದರೆ ನನ್ನ ತಮ್ಮ
ಸಾಯುತ್ತಿರಲಿಲ್ಲ; ಈಗಲಾದರೋ ದೇವರನ್ನು ಏನ
ಬೇಡಿಕೊಳ್ಳುತ್ತೀಯೋ ಅದನ್ನು ದೇವರು ನಿನ
ಅನುಗ್ರಹಿಸುವನೆಂದು ಬಲ್ಲೆನು ಎಂದು ಹೇಳಿದಳ
ಯೇಸು ಆಕೆಗೆ—ನಿನ್ನ ತಮ್ಮನು ಎದ್ದುಬರುವನೆಂದ
ಹೇಳಿದನು. ಮಾರ್ಥಳು—ಸತ್ತವರಿಗೆ ಕಡೇ ದಿನದ
ಪುನರುತ್ಥಾನವಾಗುವಾಗ ಅವನೂ ಎದ್ದುಬರುವನೆಂದ
ನಾನು ಬಲ್ಲೆನು ಅಂದಳು. ಯೇಸು ಆಕೆಗೆ—ನಾನ
ಪುನರುತ್ಥಾನವೂ ಜೀವವೂ ಆಗಿದ್ದೇನೆ; ನನ್ನನ
ನಂಬುವವನು ಸತ್ತರೂ ಬದುಕುವನು; ಮತ್ತು ಬದ
ಕುತ್ತಾ ನನ್ನನ್ನು ನಂಬುವ ಪ್ರತಿಯೊಬ್ಬನೂ ಎಂದಿಗ
ಸಾಯುವದಿಲ್ಲ; ಇದನ್ನು ನಂಬುತ್ತೀಯಾ? ಎಂದ
ಹೇಳಿದನು. ಆಕೆ—ಹೌದು, ಸ್ವಾಮೀ, ಲೋಕಕ
ಬರಬೇಕಾದ ದೇವಕುಮಾರನಾದ ಕ್ರಿಸ್ತನು ನೀನ
ಎಂದು ನಂಬಿದ್ದೇನೆ ಅಂದಳು.
ಇದನ್ನು ಹೇಳಿ ಆಕೆ ಹೋಗಿ ತನ್ನ ತಂಗಿಯಾ
ಮರಿಯಳನ್ನು ಗುಪ್ತವಾಗಿ ಕರೆದು—ಗುರುವು ಬಂ
ದ್ದಾನೆ, ನಿನ್ನನ್ನು ಕರೆಯುತ್ತಾನೆ ಅಂದಳು. ಮ
ಯಳು ಇದನ್ನು ಕೇಳುತ್ತಲೇ ತಟ್ಟನೆ ಎದ್ದು ಆತ
ಬಳಿಗೆ ಹೋದಳು. ಯೇಸು ಇನ್ನೂ ಊರೊಳ
ಬಾರದೆ ಮಾರ್ಥಳು ಆತನಿಗೆದುರಾಗಿ ಬಂದ ಸ್ಥಳದಲ್ಲೇ
ಇದ್ದನು. ಮರಿಯಳ ಕೂಡ ಮನೆಯಲ್ಲಿ ಇದ್
ಕೊಂಡು ಆಕೆಯನ್ನು ಸಂತೈಸುತ್ತಿದ್ದ ಯೆಹೂದ್ಯರು—
ಆಕೆ ತಟ್ಟನೆ ಎದ್ದು ಹೊರಗೆ ಹೋಗುವದನ್ನು ಕಂಡ
ಈಕೆ ಅಳುವದಕ್ಕಾಗಿ ಸಮಾಧಿಗೆ ಹೋಗುತ್ತಾಳೆಂದ
ನೆನಸಿ ಆಕೆಯ ಹಿಂದೆ ಹೋದರು. ಮರಿಯಳ
ಯೇಸು ಇದ್ದಲ್ಲಿಗೆ ಬಂದು ಆತನನ್ನು ಕಂಡು ಆತ
ಪಾದಕ್ಕೆ ಬಿದ್ದು—ಸ್ವಾಮೀ, ನೀನು ಇಲ್ಲಿ ಇರುತ್
ದ್ದರೆ ನನ್ನ ತಮ್ಮನು ಸಾಯುತ್ತಿರಲಿಲ್ಲ ಅಂದಳ
ಆಕೆ ಗೋಳಾಡುವದನ್ನೂ ಆಕೆಯ ಸಂಗಡ ಬಂ
ಯೆಹೂದ್ಯರು ಗೋಳಾಡುವದನ್ನೂ ಯೇಸು ಕಂಡಾ
ಆತ್ಮದಲ್ಲಿ ನೊಂದುಕೊಂಡು ತತ್ತರಿಸಿ—ಅವನನ್
ಎಲ್ಲಿ ಇಟ್ಟಿದ್ದೀರಿ ಎಂದು ಕೇಳಿದನು. ಅವರು—
ಸ್ವಾಮೀ, ಬಂದು ನೋಡು ಅಂದರು. ಯೇಸು ಕಣ್ಣೀ
ರು ಬಿಟ್ಟನು. ಯೆಹೂದ್ಯರು ನೋಡಿ—ಆಹಾ, ಈತನ
ಅವನ ಮೇಲೆ ಎಷ್ಟೋ ಮಮತೆ ಇಟ್ಟಿದ್ದನು ಅಂದ
ಕೊಂಡರು. ಅವರಲ್ಲಿ ಕೆಲವರು—ಈತನು ಆ ಕುರು
ನಿಗೆ ಕಣ್ಣು ಕೊಟ್ಟನಲ್ಲಾ; ಈ ಮನುಷ್ಯನನ್
ಸಾಯದ ಹಾಗೆ ಮಾಡಲಾರದೆ ಇದ್ದನೇ? ಅಂದರು

1) ಮೂಲ: ಹದಿನೈದು ಸ್ತಾದ್ಯಗಳು.

8 ಯೇಸು ತನ್ನಲ್ಲಿ ತಿರಿಗಿ ನೊಂದುಕೊಳ್ಳುತ್ತಾ ಸಮಾ
ಧಿಯ ಬಳಿಗೆ ಬಂದನು. ಅದು ಗವಿಯಾಗಿತ್ತು, ಆದರ
9 ಬಾಯಿಗೆ ಒಂದು ಕಲ್ಲು ಆನಿಸಿತ್ತು. ಯೇಸು—ಆ
ಕಲ್ಲನ್ನು ತೆಗೆದುಹಾಕಿರಿ ಅನ್ನಲು ತೀರಿಹೋದವನ
ಅಕ್ಕನಾದ ಮಾರ್ಥಳು—ಸ್ವಾಮಿಾ, ಅವನು ಸತ್ತು
ನಾಲ್ಕು ದಿವಸವಾಯಿತು; ಈಗ ನಾತ ಹುಟ್ಟಿದೆ
0 ಅಂದಳು. ಯೇಸು ಆಕೆಗೆ—ನೀನು ನಂಬಿದರೆ
ದೇವರ ಮಹಿಮೆಯನ್ನು ಕಾಣುವಿ ಎಂದು ನಾನು
1 ನಿನಗೆ ಹೇಳಲಿಲ್ಲವೇ ಎಂದು ಉತ್ತರಕೊಟ್ಟನು. ಆಗ
ಕಲ್ಲನ್ನು ತೆಗೆದುಹಾಕಿದರು. ಮತ್ತು ಯೇಸು ಕಣ್ಣೆತ್ತಿ
ಮೇಲಕ್ಕೆ ನೋಡಿ—ತಂದೆಯೇ, ನೀನು ನನ್ನ ಪ್ರಾರ್ಥನೆ
ಯನ್ನು ಕೇಳಿದ್ದಕ್ಕೆ ನಿನ್ನನ್ನು ಕೊಂಡಾಡುತ್ತೇನೆ;
2 ನೀನು ಯಾವಾಗಲೂ ನನ್ನ ಪ್ರಾರ್ಥನೆಯನ್ನು ಕೇಳು
ವವನಾಗಿದ್ದೀ ಎಂದು ನನಗೆ ಗೊತ್ತೇ ಇದೆ; ಆದರೂ
ನೀನೇ ನನ್ನನ್ನು ಕಳುಹಿಸಿಕೊಟ್ಟಿ ಎಂದು ಸುತ್ತಲು
ನಿಂತಿರುವ ಜನರು ನಂಬುವಂತೆ ಅವರಿಗೋಸ್ಕರ ಈ
3 ಮಾತುಗಳನ್ನಾಡಿದೆನೆಂದು ಹೇಳಿದನು. ಅದನ್ನು
ಹೇಳಿದ ಮೇಲೆ ದೊಡ್ಡ ಶಬ್ದದಿಂದ—ಲಾಜರನೇ,
4 ಹೊರಗೆ ಬಾ ಎಂದು ಕೂಗಿದನು. ಸತ್ತಿದ್ದವನು
ಹೊರಗೆ ಬಂದನು; ಅವನ ಕೈಕಾಲುಗಳು ಬಟ್ಟೆಗಳಿಂದ
ಕಟ್ಟಿದ್ದವು, ಅವನ ಮುಖವು ಕೈಪಾವಡದಿಂದ ಸುತ್ತಿತ್ತು.
ಯೇಸು ಅವರಿಗೆ—ಅವನನ್ನು ಬಿಚ್ಚಿರಿ, ಹೋಗಲಿ
ಎಂದು ಹೇಳಿದನು.

ಯೆಹೂದ್ಯರ ಹಿರೀಸಭೆಯುವರು ಯೇಸುವನ್ನು ಕೊಲ್ಲ
ಬೇಕೆಂದು ಆಲೋಚನೆ ಮಾಡಿಕೊಂಡದ್ದು.

5 ಮರಿಯಳ ಬಳಿಗೆ ಬಂದ ಯೆಹೂದ್ಯರು ಆತನು
ಮಾಡಿದ ಕಾರ್ಯವನ್ನು ನೋಡಿದಾಗ ಅವರಲ್ಲಿ ಅನೇ
6 ಕರು ಆತನನ್ನು ನಂಬಿದರು; ಆದರೆ ಕೆಲವರು ಫರಿ
ಸಾಯರ ಬಳಿಗೆ ಹೋಗಿ ಯೇಸು ಮಾಡಿದ್ದನ್ನು ಅವ
ರಿಗೆ ತಿಳಿಸಿದರು.
7 ಆಗ ಮಹಾಯಾಜಕರೂ ಫರಿಸಾಯರೂ ಹಿರೀಸಭೆ
ಯನ್ನು ಕೂಡಿಸಿ—ನಾವು ಮಾಡುವದು ಇದೇನು? ಈ
ಮನುಷ್ಯನು ಬಹು ಸೂಚಕಕಾರ್ಯಗಳನ್ನು ಮಾಡು
8 ತ್ತಾನಲ್ಲಾ; ನಾವು ಅವನನ್ನು ಹೀಗೆಯೇ ಬಿಟ್ಟರೆ
ಎಲ್ಲರೂ ಅವನನ್ನು ನಂಬಾರು; ಮತ್ತು ರೋಮ್
ರಾಜ್ಯದವರು ಬಂದು ನಮ್ಮ ಸ್ಥಾನವನ್ನೂ ಜನವನ್ನೂ
9 ಸೆಳಕೊಂಡಾರು ಅಂದರು. ಆದರೆ ಅವರಲ್ಲಿ ಕಾಯಫ
ನೆಂಬವನೊಬ್ಬನು ಆ ವರುಷಕ್ಕೆ ಮಹಾಯಾಜಕ
ನಾಗಿದ್ದು ಅವರಿಗೆ—ನಿಮಗೇನೂ ತಿಳಿಯುವದಿಲ್ಲ;
0 ಜನವೆಲ್ಲಾ ನಾಶವಾಗುವದಕ್ಕಿಂತ ಒಬ್ಬ ಮನುಷ್ಯನು
ಜನಕ್ಕೋಸ್ಕರ ಸಾಯುವದು ನಿಮಗೆ ಹಿತವೆಂದು
ನೀವು ಆಲೋಚಿಸುವದೂ ಇಲ್ಲ ಎಂಬದಾಗಿ ಹೇಳಿ
1 ದನು. ಇದನ್ನು ಅವನು ತನ್ನಷ್ಟಕ್ಕೆ ತಾನೇ ಹೇಳಲಿಲ್ಲ;
ಆದರೆ ತಾನು ಆ ವರುಷದ ಮಹಾಯಾಜಕನಾಗಿದ್ದ
ದರಿಂದ ದೇವಪ್ರೇರಣೆಯಿಂದ ಮಾತಾಡಿ ಯೇಸು ಆ
ಜನಕ್ಕೋಸ್ಕರ ಸಾಯುವದಕ್ಕಿದ್ದನೆಂದು ಹೇಳಿದನು.
2 ಯೇಸು ಆ ಜನಕ್ಕೋಸ್ಕರ ಮಾತ್ರವಲ್ಲದೆ ಚದರಿರುವ
ದೇವರ ಮಕ್ಕಳನ್ನು ಒಟ್ಟುಗೂಡಿಸುವದಕ್ಕೆ ಸಹ
ಸಾಯುವದಕ್ಕಿದ್ದನು. ಆ ದಿನದಿಂದ ಆತನನ್ನು 53
ಕೊಲ್ಲುವದಕ್ಕೆ ಆಲೋಚಿಸುತ್ತಿದ್ದರು.
ಹೀಗಿರಲಾಗಿ ಯೇಸು ಇನ್ನೂ ಯೆಹೂದ್ಯರೊಳಗೆ 54
ಬಹಿರಂಗವಾಗಿ ತಿರುಗಾಡದೆ ಅಲ್ಲಿಂದ ಅಡವಿಯ ಹತ್ತಿ
ರದ ಪ್ರದೇಶಕ್ಕೆ ಹೋಗಿ ಎಫ್ರಾಯಿಮ್ ಎಂಬ ಊರ
ಲ್ಲಿ ಶಿಷ್ಯರ ಸಂಗಡ ಇದ್ದನು.

ಯೇಸು ಪಸ್ಕಹಬ್ಬಕ್ಕೆ ಬಂದಾಗ ಮರಿಯಳು ಆತನ ಪಾದಗಳ
ಮೇಲೆ ಪರಿಮಳತೈಲವನ್ನು ಸುರಿಸಿದ್ದು.

ಆಗ ಯೆಹೂದ್ಯರ ಪಸ್ಕಹಬ್ಬ ಹತ್ತಿರವಾಗಿರಲಾಗಿ 55
ಬಹು ಜನರು ತಮ್ಮನ್ನು ಶುದ್ಧಿಮಾಡಿಕೊಳ್ಳುವದ
ಕ್ಕಾಗಿ ಹಬ್ಬಕ್ಕಿಂತ ಮುಂಚೆ ಹಳ್ಳಿಗಳಿಂದ ಯೆರೂಸ
ಲೇಮಿಗೆ ಬಂದರು. ಅವರು ಯೇಸುವನ್ನು ಹುಡು 56
ಕುತ್ತಾ ದೇವಾಲಯದಲ್ಲಿ ನಿಂತುಕೊಂಡು—ಅವನು
ಹಬ್ಬಕ್ಕೆ ಬಾರದೆ ಇದ್ದಾನೋ? ನಿಮಗೆ ಹೇಗೆ ಕಾಣು
ತ್ತದೆ ಎಂದು ತಮ್ಮಲ್ಲಿ ಮಾತಾಡಿಕೊಳ್ಳುತ್ತಾ ಇದ್ದರು.
ಆದರೆ ಮಹಾಯಾಜಕರೂ ಫರಿಸಾಯರೂ ಆತನನ್ನು 57
ಹಿಡಿಯಬೇಕೆಂಬದಾಗಿ ಯೋಚಿಸಿ—ಅವನಿರುವ ಸ್ಥಳವು
ಯಾರಿಗಾದರೂ ತಿಳಿದರೆ ಅದನ್ನು ತಮಗೆ ತಿಳಿಸ
ಬೇಕೆಂದು ಅಪ್ಪಣೆ ಕೊಟ್ಟಿದ್ದರು.
ಪಸ್ಕಹಬ್ಬವು ಇನ್ನು ಆರು ದಿವಸ ಮುಂದೆ **12**
ಇರಲಾಗಿ ಯೇಸು ಬೇಥಾನ್ಯಕ್ಕೆ ಬಂದನು.
ಯೇಸುವು ಸತ್ತವರೊಳಗಿಂದ ಎಬ್ಬಿಸಿದ ಲಾಜರನು
ಅಲ್ಲಿದ್ದನು. ಯೇಸುವಿಗೆ ಅಲ್ಲಿ ಔತಣಮಾಡಿಸಲು 2
ಮಾರ್ಥಳು ನೆರವಾಗಿದ್ದಳು; ಲಾಜರನು ಆತನ ಸಂಗಡ
ಊಟಕ್ಕೆ ಕೂತವರಲ್ಲಿ ಒಬ್ಬನು. ಆಗ ಮರಿಯಳು 3
ಬಹು ಬೆಲೆಯುಳ್ಳ ಅಚ್ಚ ಜಟಾಮಾಂಸಿ ತೈಲವನ್ನು
ಒಂದು ಸೇರಷ್ಟು ತಂದು ಯೇಸುವಿನ ಪಾದಕ್ಕೆ ಹಚ್ಚಿ
ತನ್ನ ತಲೇಕೂದಲಿನಿಂದ ಆತನ ಪಾದಗಳನ್ನು ಒರಸಿ
ದಳು. ಆ ತೈಲದ ಪರಿಮಳವು ಮನೆಯಲ್ಲೆಲ್ಲಾ
ತುಂಬಿಕೊಂಡಿತು. ಆದರೆ ಆತನ ಶಿಷ್ಯರಲ್ಲಿ ಒಬ್ಬನು, 4
ಅಂದರೆ ಆತನನ್ನು ಹಿಡುಕೊಡುವದಕ್ಕಿದ್ದ ಇಸ್ಕರಿ
ಯೋತ ಯೂದನೆಂಬವನು—ಯಾಕೆ ಈ ತೈಲವನ್ನು 5
ಮುನ್ನೂರು ಹಣಕ್ಕೆ ಮಾರಿ ಬಡವರಿಗೆ ಕೊಡಲಿಲ್ಲ
ಅಂದನು. ಅವನು ಬಡವರಿಗೋಸ್ಕರ ಚಿಂತಿಸಿ ಇದನ್ನು 6
ಹೇಳಲಿಲ್ಲ; ಅವನು ಕಳ್ಳನಾಗಿದ್ದು ತನ್ನ ವಶದಲ್ಲಿದ್ದ
ಅವರ ಹಣದ ಚೀಲದಲ್ಲಿ ಹಾಕಿದ್ದನ್ನು ತಕ್ಕೊಳ್ಳುವವ
ನಾಗಿದ್ದದರಿಂದಲೇ ಹೇಳಿದನು. ಆಗ ಯೇಸು—ಈಕೆ 7
ಯನ್ನು ಬಿಡು; ನನ್ನನ್ನು ಹೂಣಿಡುವ ದಿವಸಕ್ಕಾಗಿ
ಅದನ್ನು ಇಟ್ಟುಕೊಳ್ಳಲಿ. ಬಡವರು ಯಾವಾಗಲೂ 8
ನಿಮ್ಮ ಬಳಿಯಲ್ಲಿ ಇರುತ್ತಾರೆ, ಆದರೆ ನಾನು ಯಾವಾ
ಗಲೂ ನಿಮ್ಮ ಬಳಿಯಲ್ಲಿ ಇರುವದಿಲ್ಲ ಅಂದನು.
ಯೆಹೂದ್ಯರ ಜನಸಮೂಹವು ಆತನು ಅಲ್ಲಿ ಇದ್ದಾ 9
ನೆಂದು ತಿಳಿದು ಯೇಸುವನ್ನು ನೋಡುವದಕ್ಕಾಗಿ
ಮಾತ್ರವಲ್ಲದೆ ಆತನು ಸತ್ತವರೊಳಗಿಂದ ಎಬ್ಬಿಸಿದ
ಲಾಜರನನ್ನು ಸಹ ನೋಡಬೇಕೆಂಬದಾಗಿ ಬಂದರು.
ಆದರೆ ಮಹಾಯಾಜಕರು ಲಾಜರನನ್ನೂ ಕೊಲ್ಲಬೇ 10
ಕೆಂದು ಆಲೋಚಿಸಿದರು. ಯಾಕಂದರೆ ಅವನ ದೆಸೆ 11

ಯಿಂದ ಯೆಹೂದ್ಯರಲ್ಲಿ ಅನೇಕರು ಹೋಗಿ ಯೇಸು
ವನ್ನು ನಂಬುವವರಾದರು.

### ಯೇಸು ಯೆರೂಸಲೇಮಿನಲ್ಲಿ ಅರಸನಂತೆ ಪ್ರವೇಶಮಾಡಿದ್ದು.

(ಮತ್ತಾ. 21. 4—9; ಮಾರ್ಕ 11. 7—10;
ಲೂಕ 19. 35—38.)

12 ಮರುದಿವಸ ಜಾತ್ರೆಗೆ ಬಂದಿದ್ದ ಜನಸಮೂಹವು
ಯೇಸು ಯೆರೂಸಲೇಮಿಗೆ ಬರುತ್ತಾನೆಂದು ಕೇಳಿ
13 ಖರ್ಜೂರದ ಗರಿಗಳನ್ನು ತಕ್ಕೊಂಡು ಆತನನ್ನು ಎದು
ರುಗೊಳ್ಳುವದಕ್ಕೆ ಹೊರಗೆ ಬಂದು—

1)ಜಯ, ಕರ್ತನ ಹೆಸರಿನಲ್ಲಿ ಬರುವವನಿಗೆ
ಆಶೀರ್ವಾದ;
ಇಸ್ರಾಯೇಲಿನ ಅರಸನಿಗೆ ಆಶೀರ್ವಾದ

14 ಎಂದು ಆರ್ಭಟಿಸಿದರು. ಮತ್ತು ಯೇಸು ಕತ್ತೆಮರಿ
ಯನ್ನು ತರಿಸಿಕೊಂಡು ಅದರ ಮೇಲೆ ಕೂತುಕೊಂಡನು.
ಇದರಿಂದ—

15 ಚೀಯೋನ್ ನಗರಿಯೇ, ಹೆದರಬೇಡ;
ಇಗೋ, ನಿನ್ನ ಅರಸನು ಕತ್ತೆಮರಿಯ ಮೇಲೆ
ಕೂತುಕೊಂಡು ಬರುತ್ತಾನೆ

16 ಎಂಬ ಶಾಸ್ತ್ರದ ಮಾತು ನೆರವೇರಿತು. ಇದು ಆತನ
ಶಿಷ್ಯರಿಗೆ ಮೊದಲು ತಿಳಿದಿರಲಿಲ್ಲ. ಆದರೆ ಯೇಸು ತನ್ನ
ಮಹಿಮೆಯ ಪದವಿಗೆ ಬಂದ ಮೇಲೆ ಇದು ಆತನ ವಿಷ
ಯವಾಗಿಯೇ ಬರೆದದೆ ಎಂದೂ ಆತನಿಗೆ ನಾವು ಅದನ್ನೆ
17 ಲ್ಲಾ ಮಾಡಿದೆವೆಂದೂ ಅವರ ನೆನಪಿಗೆ ಬಂತು. ಇದಲ್ಲದೆ
ಆತನು ಲಾಜರನನ್ನು ಸಮಾಧಿಯೊಳಗಿಂದ ಕರೆದು ಬದು
ಕಿಸಿದ ವೇಳೆಯಲ್ಲಿ ಆತನ ಸಂಗಡ ಇದ್ದ ಜನರು ಅದ
18 ನ್ನು ಸಾರುತ್ತಿದ್ದರು. ಆತನು ಈ ಸೂಚಕಕಾರ್ಯವನ್ನು
ಮಾಡಿದನೆಂದು ಕೇಳಿದ ಕಾರಣದಿಂದಲೂ ಜನರು ಆತ
19 ನನ್ನು ಎದುರುಗೊಳ್ಳುವದಕ್ಕೆ ಹೋಗಿದ್ದರು. ಹೀಗಿರ
ಲಾಗಿ ಫರಿಸಾಯರು— ನಿಮ್ಮ ಯತ್ನವೇನೂ ಸಾಗಲಿಲ್ಲ,
ನೋಡಿರಿ; ಲೋಕವೆಲ್ಲಾ ಆತನ ಹಿಂದೆ ಹೋಯಿತಲ್ಲಾ
ಎಂದು ಒಬ್ಬರಿಗೊಬ್ಬರು ಮಾತಾಡಿಕೊಂಡರು.

### ಯೇಸು ತಾನು ಸಾಯುವದರಿಂದ ಎಲ್ಲರನ್ನು ತನ್ನ ಕಡೆಗೆ ಎಳಕೊಳ್ಳುವೆನೆಂದು ಹೇಳಿದ್ದು.

20 ಇದಲ್ಲದೆ ದೇವಾರಾಧನೆ ಮಾಡಬೇಕೆಂದು ಜಾತ್ರೆಗೆ
21 ಬಂದವರಲ್ಲಿ ಕೆಲವು ಮಂದಿ ಗ್ರೀಕರಿದ್ದರು. ಇವರು
ಗಲಿಲಾಯದಲ್ಲಿರುವ ಬೇತ್ಸಾಯಿದ ಊರಿನ ಫಿಲಿಪ್ಪನ
ಬಳಿಗೆ ಬಂದು—ಅಯ್ಯಾ, ಯೇಸುವನ್ನು ನೋಡಬೇ
22 ಕೆಂದಿದ್ದೇವೆಂದು ಅವನನ್ನು ಬೇಡಿಕೊಂಡರು. ಫಿಲಿಪ್ಪನು
ಬಂದು ಅಂದ್ರೆಯನಿಗೆ ಹೇಳಿದನು; ಅಂದ್ರೆಯನೂ ಫಿಲಿ
23 ಪ್ಪನೂ ಯೇಸುವಿಗೆ ಹೇಳಿದರು. ಆಗ ಯೇಸು ಅವ
ರಿಗೆ ಉತ್ತರಕೊಟ್ಟು ಹೇಳಿದ್ದೇನಂದರೆ—ಮನುಷ್ಯ
ಕುಮಾರನು ತನ್ನ ಮಹಿಮೆಯ ಪದವಿಯನ್ನು
24 ಹೊಂದುವ ಸಮಯ ಬಂದದೆ. ನಿಮಗೆ ನಿಜನಿಜವಾಗಿ
ಹೇಳುತ್ತೇನೆ, ಗೋದಿಯ ಕಾಳು ಭೂಮಿಯಲ್ಲಿ ಬಿದ್ದು
ಸಾಯದಿದ್ದರೆ ಒಂದೇಯಾಗಿ ಉಳಿಯುವದು; ಸತ್ತರೆ

ಬಹಳ ಫಲಕೊಡುವದು. ತನ್ನ ಪ್ರಾಣದ ಮೇ
ಮಮತೆಯಿಡುವವನು ಅದನ್ನು ಕಳಕೊಳ್ಳುವನ
ಇಹಲೋಕದಲ್ಲಿ ತನ್ನ ಪ್ರಾಣವನ್ನು ಹಗೆಮಾಡುವವ
ನಿತ್ಯಜೀವಕ್ಕಾಗಿ ಅದನ್ನು ಕಾಪಾಡಿಕೊಳ್ಳುವನ
ಯಾವನಾದರೂ ನನ್ನ ಸೇವೆಯನ್ನು ಮಾಡುವವನ
ದರೆ ನನ್ನ ಹಿಂದೆ ಬರಲಿ; ಮತ್ತು ಎಲ್ಲಿ ನಾನು ಇ
ತ್ತೇನೋ ಅಲ್ಲಿ ನನ್ನ ಸೇವಕನು ಸಹ ಇರುವನ
ಯಾವನಾದರೂ ನನ್ನ ಸೇವೆಯನ್ನು ಮಾಡುವ
ನಾದರೆ ತಂದೆಯು ಅವನಿಗೆ ಬಹುಮಾನ ಮಾಡುವನ
ಈಗ ನನ್ನ ಪ್ರಾಣವು ತತ್ತರಿಸುತ್ತದೆ; ಮತ್ತು ನಾನೇನ
ಹೇಳಲಿ? ತಂದೆಯೇ, ಈ ಕಾಲದೊಳಗಿಂದ ನನ್ನನ
ತಪ್ಪಿಸು. ಆದರೆ ಇದಕ್ಕಾಗಿಯೇ ಈ ಕಾಲ ಸೇರಿದೆನ
ತಂದೆಯೇ, ನಿನ್ನ ಹೆಸರನ್ನು ಮಹಿಮೆಪಡಿಸಿಕೊ
ಅಂದನು. ಅದಕ್ಕೆ—ಮಹಿಮೆಪಡಿಸಿದ್ದೇನೆ, ತಿರಿಗಿ ಮ
ಹಿಮೆಪಡಿಸುವೆನು ಎಂದು ಆಕಾಶವಾಣಿಯಾಯಿತು
ಅಲ್ಲಿ ನಿಂತುಕೊಂಡಿದ್ದ ಜನರು ಅದನ್ನು ಕೇಳಿ—ಗುಡ
ಗಿತು ಅಂದರು. ಇನ್ನು ಕೆಲವರು—ದೇವದೂತನ
ಈತನ ಸಂಗಡ ಮಾತಾಡಿದನು ಅಂದರು. ಆದ
ಯೇಸು ಅವರಿಗೆ—ಈ ಆಕಾಶವಾಣಿ ನನಗಾಗಿ ಆ
ಲಿಲ್ಲ; ನಿಮಗಾಗಿ ಆಯಿತು. ಈಗ ಈ ಲೋಕ
ತೀರ್ಪು ಆಗುತ್ತದೆ; ಈಗ ಇಹಲೋಕಾಧಿಪತಿಯ
ಹೊರಗೆ ನೂಕಲ್ಪಡುವನು. ಆದರೆ ನಾನು ಭೂ
ಯಲ್ಲಿಂದ ಮೇಲಕ್ಕೆ ಎತ್ತಲ್ಪಟ್ಟಾಗ ಎಲ್ಲರನ್ನೂ ನ
ಬಳಿಗೆ ಎಳಕೊಳ್ಳುವೆನು ಎಂದು ಹೇಳಿದನು. ಈ ಮಾ
ನಿಂದ ತಾನು ಇಂಥ ಸಾವು ಸಾಯತಕ್ಕವನೆಂದು ಸೂ
ಸಿದನು. ಅದಕ್ಕೆ ಆ ಜನರು—ಕ್ರಿಸ್ತನು ಸದ
ಕಾಲವೂ ಇರುತ್ತಾನೆಂದು ಧರ್ಮಶಾಸ್ತ್ರದಲ್ಲಿ ಕೇ
ದ್ದೇವೆ; ಹಾಗಾದರೆ ಮನುಷ್ಯಕುಮಾರನು ಮೇಲ
ಎತ್ತಲ್ಪಡಬೇಕೆಂದು ನೀನು ಹೇಳುವದು ಹೇಗೆ?
ಮನುಷ್ಯಕುಮಾರನು ಯಾರು? ಅಂದರು. ಯೇಸ
ಅವರಿಗೆ—ಇನ್ನು ಸ್ವಲ್ಪ ಕಾಲವೇ ಬೆಳಕು ನಿಮ್ಮ
ಇರುತ್ತದೆ; ಕತ್ತಲೆಯು ನಿಮ್ಮನ್ನು ಮುಸುಕಿಕೊ
ದಂತೆ ಬೆಳಕು ನಿಮಗೆ ಇರುವಾಗಲೇ ಸಂಚಾರಮಾಡಿ
ಕತ್ತಲೆಯಲ್ಲಿ ಸಂಚಾರಮಾಡುವವನಿಗೆ ತಾನು ಎ
ಹೋಗುತ್ತೇನೆಂದು ತಿಳಿಯದು; ನಿಮಗೆ ಬೆಳಕು ಇ
ವಾಗಲೇ ಬೆಳಕನ್ನು ನಂಬಿರಿ; ನಂಬಿದರೆ ನೀವು ಬೆಳ
ನವರಾಗುವಿರಿ ಎಂದು ಹೇಳಿದನು. ಇದನ್ನು ಯೇಸ
ಹೇಳಿದ ಮೇಲೆ ಅವರನ್ನು ಬಿಟ್ಟುಹೋಗಿ ಅಡ
ಕೊಂಡನು.

### ಯೇಸು ಯೆಹೂದ್ಯರೊಳಗೆ ನಡಿಸಿದ ಕೆಲಸದ ಫಲ.

ಆತನು ಅವರ ಮುಂದೆ ಅಷ್ಟು ಸೂಚಕಕಾರ
ಗಳನ್ನು ಮಾಡಿದರೂ ಅವರು ಆತನನ್ನು ನಂಬಲಿಲ್
ಇದರಿಂದ ಪ್ರವಾದಿಯಾದ ಯೆಶಾಯನು ನುಡಿ
ಮಾತು ನೆರವೇರಿತು; ಅದೇನಂದರೆ—

ಕರ್ತನೇ, ನಮ್ಮ ಉಪದೇಶವನ್ನು ಯಾ
ನಂಬಿದರು?

1) ಮೂಲ: ಹೊಸನ್ನ, ಅಂದರೆ ಪ್ರಸನ್ನನಾಗು.

ಕರ್ತನ ಬಾಹುವು ಯಾರಿಗೆ ಗೋಚರವಾ
ಯಿತು? ಎಂಬದು.
9 ಅವರು ನಂಬಲಾರದೆ ಹೋದದ್ದಕ್ಕೆ ಯೆಶಾಯನು
ಮತ್ತೊಂದು ಮಾತಿನಲ್ಲಿ ಕಾರಣವನ್ನು ಸೂಚಿಸಿದ್ದಾನೆ;
ಅದೇನಂದರೆ—
0 ಅವರು ಕಣ್ಣಿನಿಂದ ಕಾಣದೆ ಹೃದಯದಿಂದ
ಗ್ರಹಿಸದೆ
ತಿರುಗಿಕೊಳ್ಳದೆ ತನ್ನಿಂದ ಸ್ವಸ್ಥತೆಯನ್ನು ಹೊಂದ
ದೆ ಇರುವಂತೆ
ಆತನು ಅವರ ಕಣ್ಣುಗಳನ್ನು ಕುರುಡುಮಾಡಿ
ಅವರ ಹೃದಯವನ್ನು ಕಠಿನಮಾಡಿದನು ಎಂಬ
ದೇ.
1 ಯೆಶಾಯನು ಆತನ ಮಹಿಮೆಯನ್ನು ನೋಡಿದ್ದ
ರಿಂದ ಆತನ ವಿಷಯದಲ್ಲಿ ಮಾತಾಡುತ್ತಿರುವಾಗ ಆ
2 ಮಾತನ್ನು ನುಡಿದನು. ಆದರೂ ಹಿರೀಸಭೆಯವ
ರಲ್ಲಿಯೂ ಅನೇಕರು ಆತನನ್ನು ನಂಬಿದರು. ಆದರೆ
ತಮಗೆ ಸಭೆಯಿಂದ ಬಹಿಷ್ಕಾರವಾದೀತೆಂದು ಫರಿಸಾ
ಯರಿಗೆ ಅಂಜಿಕೊಂಡು ಅದನ್ನು ಜನರ ಮುಂದೆ ಹೇಳ
3 ಲಿಲ್ಲ. ಯಾಕಂದರೆ ದೇವರಿಂದ ಬರುವ ಮಾನಕ್ಕಿಂತ
ಮನುಷ್ಯರಿಂದ ಬರುವ ಮಾನವೇ ಅವರಿಗೆ ಇಷ್ಟವಾ
ಗಿತ್ತು.
4 ಯೇಸು ಕೂಗಿ ಹೇಳಿದ ಮಾತು ಏನಂದರೆ—
ನನ್ನನ್ನು ನಂಬಿದವನು ನನ್ನನ್ನೇ ನಂಬುವವನಲ್ಲ.
ನನ್ನನ್ನು ಕಳುಹಿಸಿಕೊಟ್ಟಾತನನ್ನು ನಂಬುವವನಾಗಿ
5 ದ್ದಾನೆ. ಮತ್ತು ನನ್ನನ್ನು ನೋಡುವವನು ನನ್ನ
ನ್ನು ಕಳುಹಿಸಿಕೊಟ್ಟಾತನನ್ನು ನೋಡುವವನಾಗಿದ್ದಾನೆ.
6 ನನ್ನನ್ನು ನಂಬುವ ಒಬ್ಬನಾದರೂ ಕತ್ತಲಲ್ಲಿ ಇರ
ಬಾರದೆಂದು ನಾನು ಬೆಳಕಾಗಿ ಲೋಕಕ್ಕೆ ಬಂದಿ
7 ದ್ದೇನೆ. ಯಾವನಾದರೂ ನನ್ನ ಮಾತುಗಳನ್ನು ಕೇಳಿ
ದರೂ ಕೈಕೊಂಡು ನಡೆಯದೆ ಹೋದರೆ ನಾನೇ
ಅವನಿಗೆ ತೀರ್ಪುಮಾಡುವದಿಲ್ಲ; ಲೋಕಕ್ಕೆ ತೀರ್ಪು
ಮಾಡುವದಕ್ಕಾಗಿ ನಾನು ಬಂದಿಲ್ಲ; ಲೋಕವನ್ನು
8 ರಕ್ಷಿಸುವದಕ್ಕಾಗಿ ಬಂದಿದ್ದೇನೆ. ನನ್ನನ್ನು ಲಕ್ಷ್ಯಮಾ
ಡದೆ ನನ್ನ ಮಾತುಗಳನ್ನು ಅಂಗೀಕರಿಸದೆ ಇರುವವನಿಗೆ
ತೀರ್ಪುಮಾಡುವಂಥದು ಒಂದು ಇದೆ, ಅದು ಯಾವ
ದಂದರೆ, ನಾನು ಆಡಿದ ಮಾತು; ಅದೇ ಅವನಿಗೆ ಕಡೇ
9 ದಿನದಲ್ಲಿ ತೀರ್ಪುಮಾಡುವದು. ಯಾಕಂದರೆ ನನ್ನ
ಷ್ಟಕ್ಕೆ ನಾನೇ ಮಾತಾಡಿದವನಲ್ಲ; ನನ್ನನ್ನು ಕಳುಹಿಸಿ
ಕೊಟ್ಟ ತಂದೆಯೇ — ನೀನು ಇಂಥಿಂಥದನ್ನು ಹೇಳ
ಬೇಕು, ಹೀಗೆ ಹೀಗೆ ಮಾತಾಡಬೇಕು ಎಂಬದಾಗಿ
0 ನನಗೆ ಅಜ್ಞೆಕೊಟ್ಟಿದ್ದಾನೆ. ಆತನ ಆಜ್ಞೆ ನಿತ್ಯಜೀವ
ವಾಗಿದೆ ಎಂದು ಬಲ್ಲೆನು. ಆದದರಿಂದ ನಾನು ಮಾ
ತಾಡುವದನ್ನೆಲ್ಲಾ ತಂದೆ ನನಗೆ ಹೇಳಿದ ಮೇರೆಗೆ ಮಾತಾ
ಡುತ್ತೇನೆ ಅಂದನು.

ಯೇಸು ತನ್ನ ಶಿಷ್ಯರ ಕಾಲುಗಳನ್ನು ತೊಳೆದದ್ದು;
ತನಗೆ ದ್ರೋಹಮಾಡುವವನನ್ನು ಕುರಿತು ಸೂಚಿಸಿದ್ದು.

3 ಪಸ್ಕಹಬ್ಬದ ಮುಂದೆ ಯೇಸು ತಾನು ಈ ಲೋಕ
ವನ್ನು ಬಿಟ್ಟು ತಂದೆಯ ಬಳಿಗೆ ಹೋಗಬೇಕಾದ
ಕಾಲ ಬಂತೆಂದು ತಿಳುಕೊಂಡು ಲೋಕದಲ್ಲಿರುವ ತನ್ನ
ವರನ್ನು ಪ್ರೀತಿಸಿ ಪರಿಪೂರ್ಣವಾಗಿ ಅವರನ್ನು ಪ್ರೀತಿ
ಸುತ್ತಾ ಬಂದನು. ಅವರು ಊಟಕ್ಕೆ ಕೂತುಕೊಂಡಿ 2
ದ್ದರು; ಅಷ್ಟರೊಳಗೆ ಸೈತಾನನು ಸೀಮೋನನ ಮಗ
ನಾದ ಇಸ್ಕರಿಯೋತ ಯೂದನ ಮನಸ್ಸಿನಲ್ಲಿ ಯೇಸು
ವನ್ನು ಹಿಡುಕೊಡಬೇಕೆಂಬ ಆಲೋಚನೆಯನ್ನು ಹುಟ್ಟಿ
ಸಿದ್ದನು. ಯೇಸು ತನ್ನ ಕೈಯಲ್ಲಿ ತಂದೆ ಎಲ್ಲವನ್ನು 3
ಕೊಟ್ಟಿದ್ದಾನೆಂತಲೂ ತಾನು ದೇವರ ಬಳಿಯಿಂದ
ಹೊರಟುಬಂದಿದ್ದು ಮತ್ತೆ ದೇವರ ಬಳಿಗೆ ಹೋಗುತ್ತೇ
ನೆಂತಲೂ ತಿಳುಕೊಂಡವನಾಗಿ ಊಟವನ್ನು ಬಿಟ್ಟು
ಎದ್ದು ಹೊದ್ದಿದ್ದ ಮೇಲ್ಹೊದಿಕೆಯನ್ನು ತೆಗೆದಿಟ್ಟು 4
ಕೈಪಾವಡವನ್ನು ತಕ್ಕೊಂಡು ನಡುವಿಗೆ ಕಟ್ಟಿಕೊಂಡನು.
ಆಗ ಬೋಗುಣಿಯಲ್ಲಿ ನೀರುಹಾಕಿಕೊಂಡು ಶಿಷ್ಯರ 5
ಕಾಲುಗಳನ್ನು ತೊಳೆಯುವದಕ್ಕೂ ನಡುವಿಗೆ ಕಟ್ಟಿ
ಕೊಂಡಿದ್ದ ಕೈಪಾವಡದಿಂದ ಒರಸುವದಕ್ಕೂ ಪ್ರಾರಂಭಿ
ಸಿದನು. ಹೀಗೆ ಸೀಮೋನ ಪೇತ್ರನ ಬಳಿಗೆ ಬರಲು 6
ಇವನು ಆತನಿಗೆ—ಸ್ವಾಮಿಾ, ನೀನು ನನ್ನ ಕಾಲು
ಗಳನ್ನು ತೊಳೆಯಬೇಕೇ? ಎಂದು ಹೇಳಿದನು. ಅದಕ್ಕೆ 7
ಯೇಸು — ನಾನು ಮಾಡುವದು ಈಗ ನಿನಗೆ ತಿಳಿ
ಯುವದಿಲ್ಲ, ಇನ್ನು ಮೇಲೆ ನಿನಗೆ ತಿಳಿಯುವದು
ಅಂದನು. ಪೇತ್ರನು — ನೀನು ನನ್ನ ಕಾಲುಗಳನ್ನು 8
ಎಂದಿಗೂ ತೊಳೆಯಬಾರದು ಎಂದು ಹೇಳಿದ್ದಕ್ಕೆ
ಯೇಸು—ನಾನು ನಿನ್ನನ್ನು ತೊಳೆಯದಿದ್ದರೆ ನನ್ನ
ಸಂಗಡ ನಿನಗೆ ಪಾಲಿಲ್ಲ ಅಂದನು. ಸೀಮೋನ 9
ಪೇತ್ರನು—ಸ್ವಾಮಿಾ, ನನ್ನ ಕಾಲುಗಳನ್ನು ಮಾತ್ರ
ವಲ್ಲದೆ ಕೈಗಳನ್ನೂ ತಲೆಯನ್ನೂ ಸಹ ತೊಳೆಯಬೇಕು
ಅಂದನು. ಯೇಸು ಅವನಿಗೆ—ಸ್ನಾನಮಾಡಿಕೊಂಡ 10
ವನ ಕಾಲುಗಳನ್ನು ತೊಳೆಯುವದಲ್ಲದೆ ಬೇರೇನೂ
ತೊಳೆಯಬೇಕಾಗಿರುವದಿಲ್ಲ, ಅವನ ಮೈಯೆಲ್ಲಾ
ಶುದ್ಧವಾಗಿದೆ. ನೀವೂ ಶುದ್ಧರಾಗಿದ್ದೀರಿ; ಆದರೆ
ನಿಮ್ಮಲ್ಲಿ ಎಲ್ಲರೂ ಶುದ್ಧರಲ್ಲವೆಂದು ಹೇಳಿದನು.
ಯೇಸು ತನ್ನನ್ನು ಹಿಡುಕೊಡುವವನು ಇಂಥವನೇ 11
ಎಂದು ತಿಳಿದಿದ್ದರಿಂದ ನಿಮ್ಮಲ್ಲಿ ಎಲ್ಲರೂ ಶುದ್ಧರಲ್ಲ
ವೆಂದನು.

ಆತನು ಅವರ ಕಾಲುಗಳನ್ನು ತೊಳೆದ ಮೇಲೆ 12
ತನ್ನ ಮೇಲ್ಹೊದಿಕೆಯನ್ನು ಹಾಕಿಕೊಂಡು ತಿರಿಗಿ
ಕೂತುಕೊಂಡು ಅವರಿಗೆ ಹೇಳಿದ್ದೇನಂದರೆ—ನಾನು
ನಿಮಗೆ ಮಾಡಿದ್ದು ಏನೆಂದು ಗೊತ್ತಾಯಿತೋ? ನೀವು 13
ನನ್ನನ್ನು ಗುರುವೆಂದೂ ಕರ್ತನೆಂದೂ ಕರೆಯುತ್ತೀರಿ;
ನೀವು ಕರೆಯುವದು ಸರಿ; ನಾನು ಅಂಥವನೇ ಹೌದು.
ಕರ್ತನೂ ಗುರುವೂ ಆಗಿರುವ ನಾನು ನಿಮ್ಮ ಕಾಲು 14
ಗಳನ್ನು ತೊಳೆದಿರಲಾಗಿ ನೀವು ಸಹ ಒಬ್ಬರ ಕಾಲನ್ನು
ಒಬ್ಬರು ತೊಳೆಯುವ ಹಂಗಿನವರಾಗಿದ್ದೀರಿ. ನಾನು 15
ನಿಮಗೆ ಮಾಡಿದ ಮೇರೆಗೆ ನೀವು ಸಹ ಮಾಡುವಂತೆ
ನಿಮಗೆ ಮಾದರಿಯನ್ನು ತೋರಿಸಿದ್ದೇನೆ. ನಿಮಗೆ 16
ನಿಜನಿಜವಾಗಿ ಹೇಳುತ್ತೇನೆ, ದಣಿಗಿಂತ ಆಳು ದೊಡ್ಡ
ವನಲ್ಲ, ಕಳುಹಿಸಲ್ಪಟ್ಟವನು ಕಳುಹಿಸಿದವನಿಗಿಂತ
ದೊಡ್ಡವನಲ್ಲ. ನೀವು ಇದನ್ನು ತಿಳುಕೊಂಡು ಇದ 17
ರಂತೆ ಮಾಡಿದರೆ ನೀವು ಧನ್ಯರು. ನಾನು ನಿಮ್ಮೆ 18
ಲ್ಲರನ್ನು ಕುರಿತು ಈ ಮಾತನ್ನು ಹೇಳಲಿಲ್ಲ; ನಾನು

ಅದುಕೊಂಡವರನ್ನು ನಾನು ಬಲ್ಲೆನು; ಆದರೆ—ನನ್ನ
ಕೂಡ ಊಟಮಾಡುವವನೇ ನನಗೆ ಕಾಲನ್ನು ಅಡ್ಡ
ಗೊಟ್ಟಿದ್ದಾನೆ ಎಂಬ ಶಾಸ್ತ್ರದ ಮಾತು ನೆರವೇರಬೇಕಾ
19 ಗಿದೆ. ಅದು ನಡೆಯುವಾಗ ನನ್ನನ್ನೇ ಆತನೆಂದು ನೀವು
ನಂಬುವಂತೆ ಅದು ನಡೆಯುವದಕ್ಕಿಂತ ಮುಂಚೆ
20 ಅದನ್ನು ಇಂದಿನಿಂದ ನಿಮಗೆ ಹೇಳುತ್ತೇನೆ. ನಿಮಗೆ
ನಿಜನಿಜವಾಗಿ ಹೇಳುತ್ತೇನೆ, ನಾನು ಕಳುಹಿಸಿಕೊಟ್ಟ
ವನನ್ನು ಅಂಗೀಕರಿಸುವವನು ನನ್ನನ್ನು ಅಂಗೀಕರಿಸು
ವವನಾಗಿದ್ದಾನೆ; ನನ್ನನ್ನು ಅಂಗೀಕರಿಸುವವನು ನನ್ನ
ನ್ನು ಕಳುಹಿಸಿಕೊಟ್ಟಾತನನ್ನು ಅಂಗೀಕರಿಸುವವನಾಗಿ
ದ್ದಾನೆ.
21 ಇದನ್ನು ಹೇಳಿ ಯೇಸು ಆತ್ಮದಲ್ಲಿ ತತ್ತರ
ಗೊಂಡು—ನಿಮಗೆ ನಿಜನಿಜವಾಗಿ ಹೇಳುತ್ತೇನೆ,
ನಿಮ್ಮಲ್ಲಿ ಒಬ್ಬನು ನನ್ನನ್ನು ಹಿಡುಕೊಡುವನೆಂದು
22 ಸ್ಪಷ್ಟವಾಗಿ ಹೇಳಿದನು. ಈತನು ಯಾರ ವಿಷಯವಾಗಿ
ಈ ಮಾತನ್ನು ಹೇಳುತ್ತಾನೆಂದು ಶಿಷ್ಯರು ಅನುಮಾನ
23 ಪಟ್ಟು ಒಬ್ಬರನ್ನೊಬ್ಬರು ನೋಡುವವರಾದರು. ಶಿಷ್ಯ
ರೊಳಗೆ ಯೇಸುವಿಗೆ ಪ್ರಿಯನಾಗಿದ್ದ ಒಬ್ಬನು ಆತನ
24 ಎದೆಯ ಹತ್ತರ ಒರಗಿಕೊಂಡಿದ್ದನು; ಇವನಿಗೆ ಸೀಮೋ
ನ ಪೇತ್ರನು ಸನ್ನೆ ಮಾಡಿ—ಯಾರನ್ನು ಕುರಿತು
25 ಮಾತಾಡಿದನು, ತಿಳಿಸು ಎಂದು ಹೇಳಿದನು. ಅವನು
ಹಾಗೆಯೇ ಯೇಸುವಿನ ಎದೆಯ ಕಡೆಗೆ ಬಾಗಿ—
ಸ್ವಾಮಿಾ, ಅವನು ಯಾರು? ಅಂತ ಕೇಳಿದನು.
26 ಅದಕ್ಕೆ ಯೇಸು—ನಾನು ಈ ತುತ್ತನ್ನು ಅದ್ದಿ ಯಾರಿಗೆ
ಕೊಡುತ್ತೇನೋ ಅವನೇ ಎಂದು ಹೇಳಿ ಆ ತುತ್ತನ್ನು
ಅದ್ದಿ ತೆಗೆದು ಇಸ್ಕರಿಯೋತ ಸೀಮೋನನ ಮಗನಾದ
27 ಯೂದನಿಗೆ ಕೊಟ್ಟನು. ಅವನು ಆ ತುತ್ತನ್ನು ತೆಗೆದು
ಕೊಂಡ ಕೂಡಲೆ ಸೈತಾನನು ಅವನೊಳಗೆ ಹೊಕ್ಕನು.
ಆಗ ಯೇಸು ಅವನಿಗೆ—ನೀನು ಮಾಡುವದನ್ನು
28 ಬೇಗನೆ ಮಾಡಿಬಿಡು ಎಂದು ಹೇಳಿದನು. ಆತನು
ಅವನಿಗೆ ಇದನ್ನು ಯಾತಕ್ಕಾಗಿ ಹೇಳಿದನೆಂಬದು
ಊಟಕ್ಕೆ ಕೂತವರಲ್ಲಿ ಯಾರಿಗೂ ಗೊತ್ತಾಗಲಿಲ್ಲ;
29 ಅವರಲ್ಲಿ ಕೆಲವರು—ಯೂದನ ವಶದಲ್ಲಿ ಹಣದ ಚೀಲ
ವಿದ್ದುದರಿಂದ ಹಬ್ಬಕ್ಕಾಗಿ ನಮಗೆ ಬೇಕಾದದ್ದನ್ನು
ಕೊಂಡುಕೋ ಎಂಬದಾಗಿಯೋ ಬಡವರಿಗೆ ಏನಾದರೂ
ಕೊಡು ಎಂಬದಾಗಿಯೋ ಯೇಸು ಅವನಿಗೆ ಹೇಳು
30 ತ್ತಾನೆ ಎಂದು ನೆನಸಿದರು. ಅವನು ಆ ತುತ್ತನ್ನು
ತೆಗೆದುಕೊಂಡು ಕೂಡಲೇ ಹೊರಗೆ ಹೋದನು. ಆಗ
ರಾತ್ರಿಯಾಗಿತ್ತು.

ಯೇಸು ತಾನು ಶ್ರಮೆ ಅನುಭವಿಸುವದಕ್ಕಿಂತ ಮುಂಚೆ ಶಿಷ್ಯರಿಗೆ ಹೇಳಿದ ಕಡೇ ಮಾತುಗಳು.

31 ಅವನು ಹೊರಗೆ ಹೋದ ಮೇಲೆ ಯೇಸು—ಈಗ
ಮನುಷ್ಯಕುಮಾರನು ಮಹಿಮೆಪಟ್ಟಿದ್ದಾನೆ, ಮತ್ತು
32 ದೇವರು ಆತನಲ್ಲಿ ಮಹಿಮೆಪಟ್ಟಿದ್ದಾನೆ. ದೇವರು
ಆತನಲ್ಲಿ ಮಹಿಮೆಪಟ್ಟಿರಲಾಗಿ ತನ್ನಲ್ಲಿ ದೇವರು
ಆತನನ್ನೂ ಮಹಿಮೆಪಡಿಸುವನು, ಕೂಡಲೇ ಮಹಿಮೆ
33 ಪಡಿಸುವನು. ಪ್ರಿಯ ಮಕ್ಕಳೇ, ಇನ್ನು ಸ್ವಲ್ಪಕಾಲ
ವೇ ನಿಮ್ಮ ಸಂಗಡ ಇರುತ್ತೇನೆ. ನನ್ನನ್ನು ಹುಡುಕು

ವಿರಿ, ಆದರೆ ನಾನು ಹೋಗುವಲ್ಲಿಗೆ ನೀವು ಬರಲಾ
ಎಂದು ನಾನು ಯೆಹೂದ್ಯರಿಗೆ ಹೇಳಿದಂತೆ ಈಗ ನಿ
ಗೂ ಹೇಳುತ್ತೇನೆ. ನಾನು ನಿಮಗೆ ಒಂದು ಹೊ
ಆಜ್ಞೆಯನ್ನು ಕೊಡುತ್ತೇನೆ; ಏನಂದರೆ ನೀವು ಒಬ್ಬ
ನ್ನೊಬ್ಬರು ಪ್ರೀತಿಸಬೇಕು; ನಾನು ನಿಮ್ಮನ್ನು ಪ್ರೀ
ಸಿದ ಮೇರೆಗೆ ನೀವು ಸಹ ಒಬ್ಬರನ್ನೊಬ್ಬರು ಪ್ರೀ
ಬೇಕು ಎಂಬದೇ. ನಿಮ್ಮೊಳಗೆ ಒಬ್ಬರ ಮೇಲೊಬ್ಬ
ಪ್ರೀತಿಯಿದ್ದರೆ ಎಲ್ಲರೂ ನಿಮ್ಮನ್ನು ನನ್ನ ಶಿಷ್ಯರೆಂ
ತಿಳುಕೊಳ್ಳುವರು ಅಂದನು.
ಸೀಮೋನ ಪೇತ್ರನು ಆತನನ್ನು—ಸ್ವಾಮಿಾ, ಎ
ಗೆ ಹೋಗುತ್ತೀ? ಎಂದು ಕೇಳಿದ್ದಕ್ಕೆ ಯೇಸು
ನಾನು ಹೋಗುವಲ್ಲಿಗೆ ನೀನು ಈಗ ನನ್ನ ಹಿಂದೆ ಬ
ಲಾರಿ, ತರುವಾಯ ನನ್ನ ಹಿಂದೆ ಬರುವಿ ಅಂದನ
ಪೇತ್ರನು ಆತನಿಗೆ—ಸ್ವಾಮಿಾ, ನಾನು ಯಾಕೆ ಈ
ನಿನ್ನ ಹಿಂದೆ ಬರಲಾರೆನು? ನಿನಗಾಗಿ ನನ್ನ ಪ್ರಾಣ
ನ್ನಾದರೂ ಕೊಟ್ಟೇನು ಎಂದು ಹೇಳಲು ಯೇಸು
ನನಗಾಗಿ ಪ್ರಾಣ ಕೊಟ್ಟೀಯಾ? ನಿನಗೆ ನಿಜನಿಜವಾ
ಹೇಳುತ್ತೇನೆ, ನೀನು ನನ್ನ ವಿಷಯದಲ್ಲಿ ಅವನನ
ಅರಿಯೆನೆಂದು ಮೂರು ಸಾರಿ ಹೇಳುವ ತನಕ ಕೋ
ಕೂಗುವದೇ ಇಲ್ಲ ಅಂದನು.
ನಿಮ್ಮ ಹೃದಯವು ಕಳವಳಗೊಳ್ಳದೆ ಇರಲಿ;
ದೇವರನ್ನು ನಂಬಿರಿ, ನನ್ನನ್ನೂ ನಂಬಿರಿ. ನನ್ನ 2
ತಂದೆಯ ಮನೆಯಲ್ಲಿ ಬಹಳ ಬಿಡಾರಗಳು ಅವೆ; ಇ
ದಿದ್ದರೆ ನಿಮಗೆ ಹೇಳುತ್ತಿದ್ದೆನು; ನಿಮಗೆ ಸ್ಥಳವನ
ಸಿದ್ಧಮಾಡುವದಕ್ಕೆ ಹೋಗುತ್ತೇನಲ್ಲಾ. ನಾ
ಹೋಗಿ ನಿಮಗೆ ಸ್ಥಳವನ್ನು ಸಿದ್ಧಮಾಡಿದ ಮೇ
ತಿರಿಗಿ ಬಂದು ನಿಮ್ಮನ್ನು ಕರಕೊಂಡು ಹೋ
ನನ್ನ ಬಳಿಗೆ ಸೇರಿಸಿಕೊಳ್ಳುವೆನು; ಯಾಕಂದ
ನಾನಿರುವ ಸ್ಥಳದಲ್ಲಿ ನೀವು ಸಹ ಇರಬೇಕು. ಮತ
ನಾನು ಹೋಗುವ ಸ್ಥಳದ ಮಾರ್ಗವು ನಿಮಗೆ ತಿಳಿದ
ಅಂದನು.
ತೋಮನು ಆತನನ್ನು—ಸ್ವಾಮಿಾ, ನೀನು ಎಲ್ಲಿ
ಹೋಗುತ್ತೀಯೋ ನಮಗೆ ತಿಳಿಯದು; ಮಾರ್ಗ
ಹೇಗೆ ತಿಳಿದೀತು ಎಂದು ಕೇಳಲು ಯೇಸು ಅವನಿಗೆ
ನಾನೇ ಮಾರ್ಗವೂ ಸತ್ಯವೂ ಜೀವವೂ ಆಗಿದ್ದೇ
ನನ್ನ ಮೂಲಕವಾಗಿ ಹೊರತು ಯಾರೂ ತಂದೆ
ಬಳಿಗೆ ಬರುವದಿಲ್ಲ. ನೀವು ನನ್ನನ್ನು ಅರಿತಿದ್ದ
ನನ್ನ ತಂದೆಯನ್ನೂ ಅರಿಯುತ್ತಿದ್ದಿರಿ; ಈಗಿನಿಂದ ಆ
ನನ್ನು ಅರಿತುಕೊಂಡಿದ್ದೀರಿ; ಆತನನ್ನು ನೋಡಿದ್ದೀ
ರಲ್ಲಾ ಎಂದು ಹೇಳಿದನು.
ಫಿಲಿಪ್ಪನು—ಸ್ವಾಮಿಾ, ನಮಗೆ ತಂದೆಯನ್ನು ತೋ
ರಿಸು, ನಮಗೆ ಅಷ್ಟೇ ಸಾಕು ಅಂದನು. ಯೇಸು ಅ
ನಿಗೆ—ಫಿಲಿಪ್ಪನೇ, ನಾನು ಇಷ್ಟು ದಿವಸ ನಿಮ್ಮ ಸಂಗ
ಇದ್ದರೂ ನೀನು ಇನ್ನೂ ನನ್ನನ್ನು ಅರಿತುಕೊಳ್ಳಲಿಲ್ಲವೆ
ನನ್ನನ್ನು ನೋಡಿದವನು ತಂದೆಯನ್ನು ನೋಡಿದ್ದಾ
ನಮಗೆ ತಂದೆಯನ್ನು ತೋರಿಸೆಂದು ನೀನು ಹೇಳುವದ
ಹೇಗೆ? ನಾನು ತಂದೆಯಲ್ಲಿದ್ದೇನೆ, ತಂದೆಯು ನನ್ನ
ಇದ್ದಾನೆ ಎಂದು ನೀನು ನಂಬುವದಿಲ್ಲವೋ? ನಾ
ನಿಮಗೆ ಹೇಳುವ ಮಾತುಗಳನ್ನು ನನ್ನಷ್ಟಕ್ಕೆ ನಾ
ಆಡುವದಿಲ್ಲ; ತಂದೆಯು ನನ್ನಲ್ಲಿ ಇದ್ದುಕೊಂ

ತನ್ನ ಕ್ರಿಯೆಗಳನ್ನು ನಡಿಸುತ್ತಾನೆ. ನಾನು ತಂದೆಯಲ್ಲಿ
ಇದ್ದೇನೆ, ತಂದೆಯು ನನ್ನಲ್ಲಿ ಇದ್ದಾನೆಂಬುವ ನನ್ನ
ಮಾತನ್ನು ನಂಬಿರಿ; ಇಲ್ಲದಿದ್ದರೆ ಆ ಕ್ರಿಯೆಗಳನ್ನೇ
ನೋಡಿ ನನ್ನ ಮಾತನ್ನು ನಂಬಿರಿ.
2 ನಿಮಗೆ ನಿಜನಿಜವಾಗಿ ಹೇಳುತ್ತೇನೆ, ನನ್ನನ್ನು ನಂಬು
ವವನು ನಾನು ನಡಿಸುವ ಕ್ರಿಯೆಗಳನ್ನು ತಾನೂ ನಡಿ
ಸುವನು; ಮತ್ತು ಅವುಗಳಿಗಿಂತ ಮಹತ್ತಾದ ಕ್ರಿಯೆ
ಗಳನ್ನು ನಡಿಸುವನು. ಯಾಕಂದರೆ ನಾನು ತಂದೆಯ
3 ಬಳಿಗೆ ಹೋಗುತ್ತೇನೆ. ಇದಲ್ಲದೆ ನೀವು ನನ್ನ ಹೆಸ
ರಿನಲ್ಲಿ ಏನೇನು ಬೇಡಿಕೊಳ್ಳುವಿರೋ, ಅದನ್ನು ನೆರ
ವೇರಿಸುವೆನು; ಹೀಗೆ ಮಗನ ಮೂಲಕವಾಗಿ ತಂದೆಗೆ
4 ಮಹಿಮೆ ಉಂಟಾಗುವದು. ನೀವು ನನ್ನ ಹೆಸರಿನಲ್ಲಿ
ನನ್ನನ್ನು ಏನಾದರೂ ಬೇಡಿಕೊಂಡರೆ ಅದನ್ನು ನೆರ
ವೇರಿಸುವೆನು.
5 ನೀವು ನನ್ನನ್ನು ಪ್ರೀತಿಸುವವರಾದರೆ ನನ್ನ ಆಜ್ಞೆ
6 ಗಳನ್ನು ಕೈಕೊಂಡು ನಡೆಯುವಿರಿ. ಆಗ ನಾನು
ತಂದೆಯನ್ನು ಕೇಳಿಕೊಳ್ಳುವೆನು; ಆತನು ನಿಮಗೆ
ಬೇರೊಬ್ಬ ಸಹಾಯಕನನ್ನು ಸದಾಕಾಲ ನಿಮ್ಮ ಸಂಗಡ
7 ಇರುವದಕ್ಕೆ ಕೊಡುವನು. ಆ ಸಹಾಯಕನು ಯಾ
ರಂದರೆ 1)ಸತ್ಯದ ಆತ್ಮನೇ. ಲೋಕವು ಆತನನ್ನು
ನೋಡದೆಯೂ ತಿಳಿಯದೆಯೂ ಇರುವದರಿಂದ ಆತ
ನನ್ನು ಹೊಂದಲಾರದು. ನೀವು ಆತನನ್ನು ಬಲ್ಲಿರಿ;
ಹೇಗಂದರೆ ನಿಮ್ಮ ಬಳಿಯಲ್ಲಿ ವಾಸಮಾಡುತ್ತಾನೆ,
ಮತ್ತು ನಿಮ್ಮೊಳಗೆ ಇರುವನು.
8 ನಾನು ನಿಮ್ಮನ್ನು ಅನಾಥರಾಗಿ ಬಿಡುವದಿಲ್ಲ;
9 ನಿಮ್ಮ ಬಳಿಗೆ ಬರುತ್ತೇನೆ. ಇನ್ನು ಸ್ವಲ್ಪಕಾಲವಾದ
ಮೇಲೆ ಲೋಕವು ನನ್ನನ್ನು ನೋಡುವದಿಲ್ಲ, ಆದರೆ
ನೀವು ನನ್ನನ್ನು ನೋಡುವಿರಿ; ನಾನು ಬದುಕುವದ
0 ರಿಂದ ನೀವೂ ಬದುಕುವಿರಿ. ನಾನು ನನ್ನ ತಂದೆಯ
ಲ್ಲಿಯೂ ನೀವು ನನ್ನಲ್ಲಿಯೂ ನಾನು ನಿಮ್ಮಲ್ಲಿಯೂ
ಇರುವದನ್ನು ನೀವು ಆ ದಿನದಲ್ಲಿ ತಿಳಿದುಕೊಳ್ಳುವಿರಿ.
1 ನನ್ನ ಆಜ್ಞೆಗಳನ್ನು ಹೊಂದಿ ಅವುಗಳನ್ನು ಕೈಕೊಂಡು
ನಡೆಯುವವನೇ ನನ್ನನ್ನು ಪ್ರೀತಿಸುವವನು. ನನ್ನನ್ನು
ಪ್ರೀತಿಸುವವನು ನನ್ನ ತಂದೆಗೆ ಪ್ರಿಯನಾಗಿರುವನು.
ನಾನೂ ಅವನನ್ನು ಪ್ರೀತಿಸಿ ಅವನಿಗೆ ಕಾಣಿಸಿಕೊಳ್ಳು
ವೆನು ಎಂದು ಹೇಳಿದನು.
2 ಯೂದನು (ಇವನು ಇಸ್ಕರಿಯೋತನಲ್ಲ)—
ಸ್ವಾಮೀ, ನೀನು ಲೋಕಕ್ಕೆ ಕಾಣಿಸಿಕೊಳ್ಳದೆ ನಮಗೆ
ಮಾತ್ರ ಕಾಣಿಸಿಕೊಳ್ಳುವದಕ್ಕೆ ಏನು ಸಂಭವಿಸಿತು
3 ಎಂದು ಕೇಳಿದ್ದಕ್ಕೆ ಯೇಸು ಅವನಿಗೆ—ಯಾರಾದರೂ
ನನ್ನನ್ನು ಪ್ರೀತಿಸುವವನಾದರೆ ನನ್ನ ಮಾತನ್ನು ಕೈ
ಕೊಂಡು ನಡೆಯುವನು; ಅವನನ್ನು ನನ್ನ ತಂದೆಯು
ಪ್ರೀತಿಸುವನು, ಮತ್ತು ನಾವಿಬ್ಬರೂ ಅವನ ಬಳಿಗೆ
ಬಂದು ಅವನ ಬಳಿಯಲ್ಲಿ ಬಿಡಾರವನ್ನು ಮಾಡಿಕೊಳ್ಳು
4 ವೆವು. ನನ್ನನ್ನು ಪ್ರೀತಿಸದೆ ಇರುವವನು ನನ್ನ ಮಾತು
ಗಳನ್ನು ಕೈಕೊಂಡು ನಡೆಯುವದಿಲ್ಲ; ನೀವು ಆಲಿ
ಸುವ ಮಾತು ನನ್ನದಲ್ಲ, ನನ್ನನ್ನು ಕಳುಹಿಸಿದ
ತಂದೆಯ ಮಾತೇ.

ಈ ಮಾತುಗಳನ್ನು ನಾನು ಇನ್ನೂ ನಿಮ್ಮ ಬಳಿ 25
ಯಲ್ಲಿರುವಾಗ ನಿಮಗೆ ಹೇಳಿದ್ದೇನೆ. ಆದರೆ ಆ ಸಹಾ 26
ಯಕನು ಅಂದರೆ ನನ್ನ ಹೆಸರಿನಲ್ಲಿ ತಂದೆಯು ಕಳು
ಹಿಸಿಕೊಡುವ ಪವಿತ್ರಾತ್ಮನೇ ನಿಮಗೆ ಎಲ್ಲವನ್ನು ಉಪ
ದೇಶಿಸಿ ನಾನು ನಿಮಗೆ ಹೇಳಿದ್ದನ್ನೆಲ್ಲಾ ನಿಮ್ಮ ನೆನಪಿಗೆ
ತರುವನು.
ಶಾಂತಿಯನ್ನು ನಿಮಗೆ ಬಿಟ್ಟುಹೋಗುತ್ತೇನೆ. 27
ನನ್ನಲ್ಲಿರುವಂಥ ಶಾಂತಿಯನ್ನು ನಿಮಗೆ ಕೊಡುತ್ತೇನೆ;
ಲೋಕವು ಕೊಡುವ ರೀತಿಯಿಂದ ನಾನು ನಿಮಗೆ
ಕೊಡುವದಿಲ್ಲ. ನಿಮ್ಮ ಹೃದಯವು ಕಳವಳಗೊಳ್ಳ
ದಿರಲಿ, ಹೆದರದಿರಲಿ. ನಾನು ಹೋಗಿ ತಿರಿಗಿ ನಿಮ್ಮ 28
ಬಳಿಗೆ ಬರುತ್ತೇನೆಂದು ನಿಮಗೆ ಹೇಳಿದ್ದನ್ನು ಕೇಳಿದಿರಿ.
ನೀವು ನನ್ನನ್ನು ಪ್ರೀತಿಸುವವರಾಗಿದ್ದರೆ ನಾನು ತಂದೆ
ಯ ಬಳಿಗೆ ಹೋಗುವ ವಿಷಯದಲ್ಲಿ ಸಂತೋಷಪಡು
ತ್ತಿದ್ದಿರಿ; ಯಾಕಂದರೆ ತಂದೆಯು ನನಗಿಂತ ದೊಡ್ಡ
ವನು. ಅದೆಲ್ಲಾ ನಡೆಯುವಾಗ ನೀವು ನನ್ನನ್ನು ನಂಬು 29
ವಂತೆ ಅದು ನಡೆಯುವದಕ್ಕಿಂತ ಮುಂಚೆಯೇ ಈಗ
ನಿಮಗೆ ಹೇಳಿದ್ದೇನೆ. ಇನ್ನು ನಾನು ನಿಮ್ಮ ಸಂಗಡ 30
ಬಹಳ ಮಾತುಗಳನ್ನಾಡುವದಿಲ್ಲ, ಯಾಕಂದರೆ ಇಹ
ಲೋಕಾಧಿಪತಿಯು ಬರುತ್ತಾನೆ. ಅವನಿಗೆ ಸಮ್ಮಂಧ
ಪಟ್ಟದ್ದು ಯಾವದೊಂದೂ ನನ್ನಲ್ಲಿಲ್ಲ; ಆದರೂ 31
ನಾನು ತಂದೆಯನ್ನು ಪ್ರೀತಿಸುತ್ತೇನೆಂಬದು ಲೋಕಕ್ಕೆ
ತಿಳಿದಿರಬೇಕೆಂದು ತಂದೆಯು ನನಗೆ ಕೊಟ್ಟ ಆಜ್ಞೆಯ
ಮೇರೆಗೆ ಇದನ್ನು ಮಾಡುತ್ತೇನೆ. ಏಳಿರಿ, ಇಲ್ಲಿಂದ
ಹೋಗೋಣ.

15 ನಾನೇ ನಿಜವಾದ ದ್ರಾಕ್ಷೇಬಳ್ಳಿ. ನನ್ನ ತಂದೆ
ತೋಟಗಾರನು. ನನ್ನಲ್ಲಿದ್ದು ಫಲಕೊಡದಿರುವ 2
ಪ್ರತಿಯೊಂದು ಕೊಂಬೆಯನ್ನು ಆತನು ತೆಗೆದುಹಾಕು
ತ್ತಾನೆ; ಫಲಕೊಡುವ ಪ್ರತಿಯೊಂದು ಕೊಂಬೆಯು
ಹೆಚ್ಚು ಫಲಕೊಡುವ ಹಾಗೆ ಅದನ್ನು ಶುದ್ಧಿಮಾಡು
ತ್ತಾನೆ. ನಾನು ನಿಮಗೆ ಹೇಳಿದ ವಾಕ್ಯದ ದೆಸೆಯಿಂದ 3
ಈಗ ಶುದ್ಧರಾಗಿದ್ದೀರಿ. ನೀವು ನನ್ನಲ್ಲಿ ನೆಲೆಗೊಂಡಿರ್ರಿ, 4
ನಾನೂ ನಿಮ್ಮಲ್ಲಿ ನೆಲೆಗೊಂಡಿರುವೆನು. ಕೊಂಬೆಯು
ಬಳ್ಳಿಯಲ್ಲಿ ನೆಲೆಗೊಂಡಿರದಿದ್ದರೆ ಹೇಗೆ ತನ್ನಷ್ಟಕ್ಕೆ
ತಾನೇ ಫಲಕೊಡಲಾರದೋ ಹಾಗೆಯೇ ನೀವು ನನ್ನಲ್ಲಿ
ನೆಲೆಗೊಂಡಿರದಿದ್ದರೆ ಫಲಕೊಡಲಾರಿರಿ. ನಾನು ದ್ರಾಕ್ಷೇ 5
ಬಳ್ಳಿ, ನೀವು ಕೊಂಬೆಗಳು; ಒಬ್ಬನು ನನ್ನಲ್ಲಿಯೂ
ನಾನು ಅವನಲ್ಲಿಯೂ ನೆಲೆಗೊಂಡಿದ್ದರೆ ಅವನೇ ಬಹಳ
ಫಲಕೊಡುವನು; ನೀವು ನನ್ನನ್ನು ಬಿಟ್ಟು ಏನೂ
ಮಾಡಲಾರಿರಿ. ಯಾವನು ನನ್ನಲ್ಲಿ ನೆಲೆಗೊಂಡಿರುವ 6
ದಿಲ್ಲವೋ ಅವನು ಆ ಕೊಂಬೆಯಂತೆ ಹೊರಕ್ಕೆ ಬಿಸಾ
ಡಲ್ಪಟ್ಟು ಒಣಗಿಹೋಗುವನು; ಅಂಥ ಕೊಂಬೆಗಳನ್ನು
ಕೂಡಿಸಿ ಬೆಂಕಿಯಲ್ಲಿ ಹಾಕುತ್ತಾರೆ, ಅವು ಸುಟ್ಟು
ಹೋಗುತ್ತವೆ. ನೀವು ನನ್ನಲ್ಲಿಯೂ ನನ್ನ ವಾಕ್ಯಗಳು 7
ನಿಮ್ಮಲ್ಲಿಯೂ ನೆಲೆಗೊಂಡಿದ್ದರೆ ಏನು ಬೇಕಾದರೂ
ಬೇಡಿಕೊಳ್ಳಿರಿ, ಅದು ನಿಮಗೆ ದೊರೆಯುವದು. ನೀವು 8
ಬಹಳ ಫಲಕೊಡುವದರಿಂದಲೇ ನನ್ನ ತಂದೆಗೆ ಮಹಿಮೆ
ಉಂಟಾಗುವದು; ಮತ್ತು ನನ್ನ ಶಿಷ್ಯರಾಗುವಿರಿ.

1) ಅಥವಾ, ಸತ್ಯವನ್ನು ತಿಳಿಸುವ.

9 ತಂದೆ ನನ್ನನ್ನು ಪ್ರೀತಿಸಿದ ಹಾಗೆಯೇ ನಾನೂ
ನಿಮ್ಮನ್ನು ಪ್ರೀತಿಸಿದ್ದೇನೆ; ನನ್ನ ಪ್ರೀತಿಯಲ್ಲಿ ನೆಲೆ
10 ಗೊಂಡಿರ್ರಿ. ನಾನು ನನ್ನ ತಂದೆಯು ಆಜ್ಞೆಗಳನ್ನು ಕೈ
ಕೊಂಡು ನಡೆದು ಆತನ ಪ್ರೀತಿಯಲ್ಲಿ ನೆಲೆಗೊಂಡಿರುವ
ಮೇರೆಗೆ ನೀವು ನನ್ನ ಆಜ್ಞೆಗಳನ್ನು ಕೈಕೊಂಡು ನಡೆ
ದರೆ ನನ್ನ ಪ್ರೀತಿಯಲ್ಲಿ ನೆಲೆಗೊಂಡಿರುವಿರಿ.
11 ನನ್ನಲ್ಲಿರುವ ಆನಂದವು ನಿಮ್ಮಲ್ಲಿಯೂ ಇರಬೇ
ಕೆಂತಲೂ ನಿಮ್ಮ ಆನಂದವು ಪರಿಪೂರ್ಣವಾಗಬೇ
12 ಕೆಂತಲೂ ಇದನ್ನೆಲ್ಲಾ ನಿಮಗೆ ಹೇಳಿದ್ದೇನೆ. ನಾನು
ನಿಮ್ಮನ್ನು ಪ್ರೀತಿಸಿದ ಮೇರೆಗೆ ನೀವು ಒಬ್ಬರನ್ನೊಬ್ಬರು
ಪ್ರೀತಿಸಬೇಕೆಂಬದೇ ನಾನು ಕೊಡುವ ಆಜ್ಞೆಯಾ
13 ಗಿದೆ. ಪ್ರಾಣವನ್ನೇ ಸ್ನೇಹಿತರಿಗೋಸ್ಕರ ಕೊಡುವ
ಪ್ರೀತಿಗಿಂತ ಹೆಚ್ಚಿನ ಪ್ರೀತಿಯು ಯಾವದೂ ಇಲ್ಲ.
14 ನಾನು ನಿಮಗೆ ಕೊಟ್ಟ ಆಜ್ಞೆಗಳಿಗೆ ಸರಿಯಾಗಿ
15 ನೀವು ನಡೆದರೆ ನೀವು ನನ್ನ ಸ್ನೇಹಿತರು. ಇನ್ನು
ಮೇಲೆ ನಾನು ನಿಮ್ಮನ್ನು ಆಳುಗಳನ್ನುವದಿಲ್ಲ;
ಯಜಮಾನನು ಮಾಡುವಂಥದು ಆಳಿಗೆ ತಿಳಿಯುವ
ದಿಲ್ಲ. ನಿಮ್ಮನ್ನು ಸ್ನೇಹಿತರೆಂದು ಹೇಳಿದ್ದೇನೆ; ತಂದೆಯ
ಕಡೆಯಿಂದ ನಾನು ಕೇಳಿದ್ದನ್ನೆಲ್ಲಾ ನಿಮಗೆ ತಿಳಿಸಿ
16 ದ್ದೇನೆ. ನೀವು ನನ್ನನ್ನು ಆರಿಸಿ ತೆಗೆದುಕೊಂಡಿಲ್ಲ;
ನಾನು ನಿಮ್ಮನ್ನು ಆರಿಸಿ ತೆಗೆದುಕೊಂಡೆನು. ನೀವು ಹೊ
ರಟುಹೋಗಿ ಫಲಕೊಡುವವರಾಗಬೇಕೆಂತಲೂ ನೀವು
ಕೊಡುವ ಫಲವು ನಿಲ್ಲುವಂಥದಾಗಬೇಕೆಂತಲೂ ನಿಮ್ಮ
ನ್ನು ನೇಮಿಸಿದ್ದೇನೆ. ಹೀಗಿರಲಾಗಿ ನನ್ನ ಹೆಸರಿನಲ್ಲಿ
ತಂದೆಯನ್ನು ಏನೇನು ಬೇಡಿಕೊಳ್ಳುವಿರೋ ಅದನ್ನು
ಆತನು ನಿಮಗೆ ಕೊಡುವನು.
17 ನೀವು ಒಬ್ಬರನ್ನೊಬ್ಬರು ಪ್ರೀತಿಸಬೇಕೆಂತಲೇ ಇವು
18 ಗಳನ್ನು ನಿಮಗೆ ಅಜ್ಞಾಪಿಸುತ್ತೇನೆ. ಲೋಕವು ನಿಮ್ಮ
ಮೇಲೆ ದ್ವೇಷಮಾಡುವದಾದರೆ ಅದು ಮೊದಲು ನನ್ನ
19 ಮೇಲೆ ದ್ವೇಷಮಾಡಿತೆಂದು ತಿಳುಕೊಳ್ಳಿರಿ. ನೀವು
ಲೋಕದ ಕಡೆಯವರಾಗಿರುತ್ತಿದ್ದರೆ ಲೋಕವು ನಿಮ್ಮ
ಮೇಲೆ ತನ್ನವರೆಂದು ಮಮತೆ ಇಡುತ್ತಿತ್ತು; ಆದರೆ
ನೀವು ಲೋಕದ ಕಡೆಯವರಲ್ಲದೆ ಇರುವದರಿಂದಲೂ
ನಾನು ನಿಮ್ಮನ್ನು ಲೋಕದೊಳಗಿಂದ ಆರಿಸಿ ತೆಗೆದು
ಕೊಂಡಿರುವದರಿಂದಲೂ ಲೋಕವು ನಿಮ್ಮ ಮೇಲೆ
20 ದ್ವೇಷಮಾಡುತ್ತದೆ. ದಣಿಗಿಂತ ಆಳು ದೊಡ್ಡವನಲ್ಲ
ವೆಂಬದಾಗಿ ನಾನು ನಿಮಗೆ ಹೇಳಿದ ಮಾತನ್ನು ಜ್ಞಾಪಕ
ಮಾಡಿಕೊಳ್ಳಿರಿ. ಅವರು ನನ್ನನ್ನು ಹಿಂಸೆಪಡಿಸಿದರೆ
ನಿಮ್ಮನ್ನು ಸಹ ಹಿಂಸೆಪಡಿಸುವರು: ಅವರು ನನ್ನ
ಮಾತನ್ನು ಕೈಕೊಂಡು ನಡೆದರೆ ನಿಮ್ಮ ಮಾತನ್ನು ಸಹ
21 ಕೈಕೊಂಡು ನಡೆಯುವರು. ಆದರೆ ಅವರು ನನ್ನನ್ನು
ಕಳುಹಿಸಿಕೊಟ್ಟಾತನನ್ನು ತಿಳಿಯದವರಾದದರಿಂದ ಇದ
ನ್ನೆಲ್ಲಾ ನನ್ನ ಹೆಸರಿನ ನಿಮಿತ್ತ ನಿಮಗೆ ಮಾಡುವರು.
22 ನಾನು ಬಂದು ಅವರ ಕೂಡ ಮಾತಾಡದಿದ್ದರೆ ಅವರಿಗೆ
ಪಾಪವು ಇರುತ್ತಿದ್ದಿಲ್ಲ; ಆದರೆ ಅವರು ಮಾಡಿದ
23 ಪಾಪಕ್ಕಾಗಿ ಅವರಿಗೆ ಈಗ ನೆವವಿಲ್ಲ. ನನ್ನ ಮೇಲೆ
ದ್ವೇಷಮಾಡುವವನು ನನ್ನ ತಂದೆಯ ಮೇಲೆಯೂ
24 ದ್ವೇಷಮಾಡುವವನಾಗಿದ್ದಾನೆ. ಮತ್ತಾರೂ ನಡಿಸದ
ಕ್ರಿಯೆಗಳನ್ನು ನಾನು ಅವರಲ್ಲಿ ನಡಿಸದೆ ಇದ್ದರೆ ಅವ
ರಿಗೆ ಪಾಪವು ಇರುತ್ತಿದ್ದಿಲ್ಲ; ಆದರೆ ಈಗ ಅವರು

ನೋಡಿದ್ದಾರೆ, ಆದರೂ ನನ್ನ ಮೇಲೆಯೂ ನನ್ನ ತ
ಯ ಮೇಲೆಯೂ ದ್ವೇಷಮಾಡಿದ್ದಾರೆ. ಅ
ನನ್ನನ್ನು ನಿಷ್ಕಾರಣವಾಗಿ ದ್ವೇಷಿಸಿದರು ಎಂದು ಅ
ಧರ್ಮಶಾಸ್ತ್ರದಲ್ಲಿ ಬರೆದಿರುವ ಮಾತು ನೆರವೇರು
ಹೀಗಾಯಿತು.
ಆದರೆ ತಂದೆಯ ಬಳಿಯಿಂದ ನಾನು ನಿಮಗೆ ಕ
ಹಿಸಿಕೊಡುವ ಸಹಾಯಕನು, ಅಂದರೆ ತಂದೆ
ಬಳಿಯಿಂದ ಹೊರಡುವ ಸತ್ಯದ ಆತ್ಮನು, ಬಂದ
ಆತನು ನನ್ನನ್ನು ಕುರಿತು ಸಾಕ್ಷಿ ಹೇಳುವನು. ನ
ಮೊದಲಿನಿಂದ ನನ್ನ ಸಂಗಡ ಇದ್ದ ಕಾರಣ ನೀ
ಸಾಕ್ಷಿಗಳಾಗಿದ್ದೀರಿ.
ನೀವು ಧೈರ್ಯಗೆಟ್ಟು ಹಿಂಜರಿಯಬಾರದೆಂದ
ಇದನ್ನೆಲ್ಲಾ ನಿಮಗೆ ಹೇಳಿದ್ದೇನೆ. ನಿಮಗೆ ಬಹಿ
ಷ್ಕಾರ ಹಾಕುವರು; ಅದಲ್ಲದೆ ನಿಮ್ಮನ್ನು ಕೊ
ವವನು ತಾನು ದೇವರಿಗೆ ಯಜ್ಞವನ್ನು ಮಾಡಿದ್ದೇನೆ
ನೆನಸುವ ಕಾಲ ಬರುತ್ತದೆ. ಅವರು ತಂದೆಯನ
ರೂ ನನ್ನನ್ನಾದರೂ ತಿಳಿಯದವರಾಗಿರುವದರಿಂದ ಇ
ದನ್ನು ನಿಮಗೆ ಮಾಡುವರು. ಆ ಕಾಲ ಬಂದ
ಆತನು ನಮಗೆ ಇಂಥಿಂಥದನ್ನು ಹೇಳಿದನಲ್ಲಾ ಎ
ನೀವು ನೆನಪಿಗೆ ತರುವಂತೆ ನಿಮ್ಮ ಸಂಗಡ ಈ ಮ
ಗಳನ್ನು ಆಡಿದ್ದೇನೆ.
ನಾನು ನಿಮ್ಮ ಸಂಗಡ ಇದ್ದದರಿಂದ ಮೊದಲು
ಗಳನ್ನು ನಿಮಗೆ ಹೇಳಲಿಲ್ಲ. ಆದರೆ ಈಗ ನಾ
ನನ್ನನ್ನು ಕಳುಹಿಸಿಕೊಟ್ಟಾತನ ಬಳಿಗೆ ಹೋಗುತ್ತೇ
ನೀನು ಎಲ್ಲಿಗೆ ಹೋಗುತ್ತೀ ಎಂದು ನಿಮ್ಮಲ್ಲಿ ಒಬ್ಬ
ದರೂ ನನ್ನನ್ನು ಕೇಳುವದಿಲ್ಲ; ಆದರೆ ನಾನು
ಮಾತುಗಳನ್ನು ನಿಮಗೆ ಹೇಳಿದ್ದರಿಂದ ನಿಮ್ಮ ಹ
ಯವು ದುಃಖದಿಂದ ತುಂಬಿಯದೆ. ಆದರೂ ನಾ
ನಿಮಗೆ ಸತ್ಯವನ್ನು ಹೇಳುತ್ತೇನೆ, ಕೇಳಿರಿ; ನಾ
ಹೋಗುವದು ನಿಮಗೆ ಹಿತಕರವಾಗಿದೆ; ಹೇಗಂ
ನಾನು ಹೋಗದಿದ್ದರೆ ಆ ಸಹಾಯಕನು ನಿ
ಬಳಿಗೆ ಬರುವದಿಲ್ಲ; ನಾನು ಹೋದರೆ ಆತನ
ನಿಮ್ಮ ಬಳಿಗೆ ಕಳುಹಿಸಿಕೊಡುತ್ತೇನೆ. ಆತನು ಬಂ
ಪಾಪ ನೀತಿ ನ್ಯಾಯತೀರ್ವಿಕೆ ಈ ವಿಷಯಗಳಲ್ಲಿ ಲ
ಕಕ್ಕೆ ಅರುಹನ್ನು ಹುಟ್ಟಿಸುವನು. ಅವರು ನನ್ನ
ನಂಬದೆ ಇರುವದರಿಂದ ಪಾಪದ ವಿಷಯದಲ್ಲಿಯ
ನಾನು ತಂದೆಯ ಬಳಿಗೆ ಹೋಗಿ ಇನ್ನು ಮೇಲೆ ನಿ
ಕಾಣಿಸದೆ ಇರುವದರಿಂದ ನೀತಿಯ ವಿಷಯದಲ್ಲಿಯ
ಇಹಲೋಕಾಧಿಪತಿಗೆ ನ್ಯಾಯತೀರ್ವಿಕೆಯಾದದರಿ
ನ್ಯಾಯತೀರ್ವಿಕೆಯ ವಿಷಯದಲ್ಲಿಯೂ ಲೋಕ
ಅರುಹನ್ನು ಹುಟ್ಟಿಸುವನು.
ನಾನು ನಿಮಗೆ ಹೇಳಬೇಕಾದದ್ದು ಇನ್ನೂ ಬ
ಉಂಟು; ಆದರೆ ಸದ್ಯಕ್ಕೆ ಅದನ್ನು ಹೊರಲಾ
ಸತ್ಯದ ಆತ್ಮನು ಬಂದಾಗ ಆತನು ನಿಮ್ಮನ್ನು ನ
ಕೊಂಡು ಹೋಗಿ ಸಕಲ ವಿಷಯದಲ್ಲಿಯೂ ಸತ್
ಸೇರಿಸುವನು. ಆತನು ತನ್ನಷ್ಟಕ್ಕೆ ತಾನೇ ಮಾ
ಡದೆ ಕೇಳಿದ ಮಾತುಗಳನ್ನೇ ಆಡುವನು; ಮ
ಮುಂದಾಗುವ ಸಂಗತಿಗಳನ್ನು ನಿಮಗೆ ತಿಳಿಸುವ
ಆತನು ನನ್ನದರೊಳಗಿಂದ ತೆಗೆದುಕೊಂಡು ನಿ
ತಿಳಿಸುತ್ತಾ ನನ್ನನ್ನೇ ಮಹಿಮೆಪಡಿಸುವನು. ತಂ

ಇರುವದೆಲ್ಲಾ ನನ್ನದು; ಆದದರಿಂದಲೇ ನನ್ನದರೊಳ
ಗಿಂದ ತೆಗೆದುಕೊಂಡು ನಿಮಗೆ ತಿಳಿಸುವನೆಂದು ಹೇಳಿ
16 ದೆನು. ಸ್ವಲ್ಪಕಾಲವಾದ ಮೇಲೆ ನಾನು ನಿಮಗೆ
ಕಾಣುವದಿಲ್ಲ; ಅನಂತರ ಸ್ವಲ್ಪಕಾಲವಾದ ಮೇಲೆ
ನನ್ನನ್ನು ನೋಡುವಿರಿ ಅಂದನು.
17 ಇದನ್ನು ಕೇಳಿ ಆತನ ಶಿಷ್ಯರಲ್ಲಿ ಕೆಲವರು—ಇದೇನು
ಈತನು ಹೇಳುವ ಮಾತು? ಸ್ವಲ್ಪಕಾಲವಾದ ಮೇಲೆ
ನಾನು ನಿಮಗೆ ಕಾಣುವದಿಲ್ಲ, ಅನಂತರ ಸ್ವಲ್ಪಕಾಲ
ವಾದ ಮೇಲೆ ನನ್ನನ್ನು ನೋಡುವಿರಿ ಅನ್ನುತ್ತಾನೆ;
ಮತ್ತು ನಾನು ತಂದೆಯ ಬಳಿಗೆ ಹೋಗುವದರಿಂದ
ಅನ್ನುತ್ತಾನೆ ಎಂದು ತಮ್ಮತಮ್ಮೊಳಗೆ ಮಾತಾಡಿ
18 ಕೊಂಡು—ಸ್ವಲ್ಪಕಾಲವೆಂದು ಈತನು ಹೇಳುವ ಈ
ಮಾತೇನು? ಏನು ಮಾತಾಡುತ್ತಾನೋ ನಮಗೆ ತಿಳಿ
19 ಯದು ಅಂದುಕೊಳ್ಳುತ್ತಿದ್ದರು. ಯೇಸು ತನ್ನನ್ನು
ಕೇಳಬೇಕೆಂದಿದ್ದಾರೆಂದು ತಿಳಿದು ಅವರಿಗೆ—ಸ್ವಲ್ಪ
ಕಾಲವಾದ ಮೇಲೆ ನಾನು ನಿಮಗೆ ಕಾಣುವದಿಲ್ಲ,
ಇನ್ನು ಸ್ವಲ್ಪಕಾಲವಾದ ಮೇಲೆ ನನ್ನನ್ನು ನೋಡುವಿರಿ
ಎಂದು ನಾನು ಹೇಳಿದ್ದಕ್ಕೆ ನೀವು ನಿಮ್ಮನಿಮ್ಮೊಳಗೆ
20 ವಿಚಾರಿಸಿಕೊಳ್ಳುತ್ತೀರಾ? ನಿಮಗೆ ನಿಜನಿಜವಾಗಿ
ಹೇಳುತ್ತೇನೆ, ನೀವು ಅಳುತ್ತಾ ಗೋಳಾಡುತ್ತಾ
ಇರುವಿರಿ, ಆದರೆ ಲೋಕವು ಸಂತೋಷಿಸುವದು;
ನಿಮಗೆ ದುಃಖವಾಗುವದು, ಆದರೆ ನಿಮ್ಮ ದುಃಖವು
21 ಹೋಗಿ ಆನಂದ ಬರುವದು. ಒಬ್ಬ ಸ್ತ್ರೀ ಹೆರುವಾಗ
ತನ್ನ ಬೇನೆಯ ಕಾಲ ಬಂತೆಂದು ಆಕೆಗೆ ದುಃಖ
ವಾಗುತ್ತದೆ; ಆದರೆ ಕೂಸನ್ನು ಹೆತ್ತ ಮೇಲೆ ಲೋಕ
ದಲ್ಲಿ ಒಬ್ಬ ಮನುಷ್ಯನು ಹುಟ್ಟಿದನೆಂಬ ಆನಂದದಿಂದ
22 ಆ ಬೇನೆಯನ್ನು ನೆನಸುವದಿಲ್ಲ. ಹಾಗೆಯೇ ನಿಮಗೂ
ಈಗ ದುಃಖವಿದ್ದರೂ ನಾನು ನಿಮ್ಮನ್ನು ತಿರಿಗಿ ನೋಡು
ವೆನು, ಆಗ ನಿಮ್ಮ ಹೃದಯಕ್ಕೆ ಆನಂದವಾಗುವದು,
ಮತ್ತು ನಿಮ್ಮ ಆನಂದವನ್ನು ಯಾರೂ ನಿಮ್ಮಿಂದ ತೆಗೆ
23 ಯುವದಿಲ್ಲ. ಆ ದಿನದಲ್ಲಿ ನೀವು ನನಗೆ ಯಾವ
ಪ್ರಶ್ನೆಯನ್ನೂ ಮಾಡುವದಿಲ್ಲ.
ನಿಮಗೆ ನಿಜನಿಜವಾಗಿ ಹೇಳುತ್ತೇನೆ, ನೀವು ತಂದೆ
ಯನ್ನು ಏನಾದರೂ ಬೇಡಿಕೊಂಡರೆ ಅದನ್ನು ಆತನು
24 ನನ್ನ ಹೆಸರಿನ ಮೇಲೆ ನಿಮಗೆ ಕೊಡುವನು. ನೀವು
ಇದುವರೆಗೆ ನನ್ನ ಹೆಸರಿನ ಮೇಲೆ ಯಾವದೊಂದನ್ನೂ
ಬೇಡಿಕೊಂಡಿಲ್ಲ; ಬೇಡಿಕೊಳ್ಳಿರಿ, ನಿಮಗೆ ಸಿಕ್ಕುವದು;
ಆಗ ನಿಮ್ಮ ಆನಂದವು ಪರಿಪೂರ್ಣವಾಗುವದು.
25 ಈ ಸಂಗತಿಗಳನ್ನು ಗೂಢಾರ್ಥವಾಗಿ ನಿಮಗೆ ಹೇಳಿ
ದ್ದೇನೆ: ಆದರೆ ಇನ್ನು ಮೇಲೆ ಸಾಮ್ಯರೂಪವಾಗಿ ನಿಮ್ಮ
ಸಂಗಡ ಮಾತಾಡದೆ ತಂದೆಯ ವಿಷಯದಲ್ಲಿ ಸ್ಪಷ್ಟ
26 ವಾಗಿ ತಿಳಿಸುವ ಕಾಲ ಬರುತ್ತದೆ. ಆ ದಿನದಲ್ಲಿ ನನ್ನ
ಹೆಸರಿನ ಮೇಲೆ ಬೇಡಿಕೊಳ್ಳುವಿರಿ. ನಾನು ತಂದೆಯ
ನ್ನು ನಿಮಗೋಸ್ಕರ ಕೇಳಿಕೊಳ್ಳುವೆನೆಂತ ನಿಮಗೆ ಹೇಳು
27 ವದಿಲ್ಲ; ನೀವು ನನ್ನ ಮೇಲೆ ಮಮತೆಯಿಟ್ಟು ನನ್ನ
ನ್ನು ತಂದೆಯ ಬಳಿಯಿಂದ ಹೊರಟುಬಂದವನೆಂದು
ನಂಬಿದ್ದರಿಂದ ತಂದೆಯು ತಾನೇ ನಿಮ್ಮ ಮೇಲೆ
28 ಮಮತೆ ಇಡುತ್ತಾನಲ್ಲವೇ. ತಂದೆಯ ಬಳಿಯಿಂದ
ಹೊರಟು ಈ ಲೋಕಕ್ಕೆ ಬಂದಿದ್ದೇನೆ; ಇನ್ನು ಲೋಕ
ವನ್ನು ಬಿಟ್ಟು ತಂದೆಯ ಬಳಿಗೆ ಹೋಗುತ್ತೇನೆ ಅಂದನು.

ಅದಕ್ಕೆ ಶಿಷ್ಯರು—ನೀನು ಹೇಳುವ ಸಂಗತಿಯನ್ನು 29
ಈಗ ಗೂಢಾರ್ಥವಾಗಿ ಹೇಳದೆ ಸ್ಪಷ್ಟವಾಗಿ ಮಾತಾಡು
ತ್ತೀಯಲ್ಲಾ; ನೀನು ಸಮಸ್ತವನ್ನು ತಿಳಿದವನೆಂದೂ 30
ನಿನಗೆ ಪ್ರಶ್ನೆಮಾಡಬೇಕಾದ ಅವಶ್ಯವಿಲ್ಲವೆಂದೂ ಈಗ
ತಿಳಿಯಿತು; ಇದರಿಂದ ನಿನ್ನನ್ನು ದೇವರ ಬಳಿಯಿಂದ
ಬಂದವನೆಂದು ನಂಬುತ್ತೇವೆ ಅಂದದ್ದಕ್ಕೆ ಯೇಸು— 31
ಈಗ ನಂಬುತ್ತೀರೋ? ನೋಡಿರಿ, ನಿಮ್ಮಲ್ಲಿ ಒಬ್ಬೊ 32
ಬ್ಬನು ತನ್ನತನ್ನ ಸ್ಥಳಕ್ಕೆ ಚದರಿಹೋಗಿ ನನ್ನನ್ನು ಒಂಟಿ
ಗನಾಗಿ ಬಿಡುವ ಕಾಲ ಬರುವದು, ಈಗ ಬಂದಿದೆ.
ಆದರೆ ನಾನು ಒಂಟಿಗನಲ್ಲ, ತಂದೆಯು ನನ್ನ ಸಂಗಡ
ಇದ್ದಾನೆ. ನೀವು ನನ್ನಲ್ಲಿದ್ದು ಮನಶ್ಶಾಂತಿಯನ್ನು 33
ಹೊಂದಿದವರಾಗಿರಬೇಕೆಂದು ಇದನ್ನೆಲ್ಲಾ ನಿಮಗೆ ಹೇಳಿ
ದ್ದೇನೆ. ಲೋಕದಲ್ಲಿ ನಿಮಗೆ ಸಂಕಟ ಉಂಟು;
ಧೈರ್ಯವಾಗಿರಿ, ನಾನು ಲೋಕವನ್ನು ಜಯಿಸಿದ್ದೇನೆ
ಎಂದು ಹೇಳಿದನು.

ಯೇಸು ತನ್ನ ಶಿಷ್ಯರಿಗಾಗಿಯೂ ತನ್ನ ಎಲ್ಲಾ ಭಕ್ತರಿಗಾಗಿಯೂ
ದೇವರಿಗೆ ಮಾಡಿದ ವಿಜ್ಞಾಪನೆ.

# 17

ಯೇಸು ಈ ಮಾತುಗಳನ್ನಾಡಿದ ಮೇಲೆ ಆಕಾ
ಶದ ಕಡೆಗೆ ಕಣ್ಣೆತ್ತಿ ಹೇಳಿದ್ದೇನಂದರೆ—ತಂದೆಯೇ,
ಕಾಲ ಬಂದದೆ; ನಿನ್ನ ಮಗನನ್ನು ಮಹಿಮೆಪಡಿಸು,
ಆಗ ಮಗನು ನಿನ್ನನ್ನು ಮಹಿಮೆಪಡಿಸುವದಕ್ಕಾಗು
ವದು. ನೀನು ಅವನಿಗೆ ಯಾರಾರನ್ನು ಕೊಟ್ಟಿದ್ದೀ 2
ಯೋ ಅವರೆಲ್ಲರಿಗೆ ಅವನು ನಿತ್ಯಜೀವವನ್ನು ಕೊಡ
ಬೇಕೆಂದು ಅವನಿಗೆ ಎಲ್ಲಾ ಮನುಷ್ಯರ ಮೇಲೆ ಅಧಿ
ಕಾರವನ್ನು ಕೊಟ್ಟಿಯಲ್ಲಾ. ಒಬ್ಬನೇ ಸತ್ಯದೇವರಾ 3
ಗಿರುವ ನಿನ್ನನ್ನೂ ನೀನು ಕಳುಹಿಸಿಕೊಟ್ಟ ಯೇಸು
ಕ್ರಿಸ್ತನನ್ನೂ ತಿಳಿಯುವದೇ ನಿತ್ಯಜೀವವು. ಮಾಡ 4
ಬೇಕೆಂದು ನೀನು ನನಗೆ ಕೊಟ್ಟ ಕೆಲಸವನ್ನು ನಾನು
ನೆರವೇರಿಸಿ ನಿನ್ನನ್ನು ಭೂಲೋಕದಲ್ಲಿ ಮಹಿಮೆ
ಪಡಿಸುವೆನು. ಈಗ ತಂದೆಯೇ, ನೀನು ನಿನ್ನ ಬಳಿ 5
ಯಲ್ಲಿ ನನ್ನನ್ನು ಮಹಿಮೆಪಡಿಸು; ಲೋಕ ಉಂಟಾಗು
ವದಕ್ಕಿಂತ ಮುಂಚೆ ನಿನ್ನ ಬಳಿಯಲ್ಲಿ ನನಗಿದ್ದ
ಮಹಿಮೆಯಿಂದಲೇ ನನ್ನನ್ನು ಮಹಿಮೆಪಡಿಸು.
ಲೋಕದೊಳಗಿಂದ ನೀನು ನನಗೆ ಕೊಟ್ಟ ಮನುಷ್ಯ 6
ರಿಗೆ ನಿನ್ನ ಹೆಸರನ್ನು ತಿಳಿಯಪಡಿಸಿದೆನು. ಇವರು ನಿನ್ನ
ವರಾಗಿದ್ದರು, ನೀನು ಇವರನ್ನು ನನಗೆ ಕೊಟ್ಟೆ; ಮತ್ತು
ಇವರು ನಿನ್ನ ವಾಕ್ಯವನ್ನು ಕೈಕೊಂಡು ನಡೆದಿದ್ದಾರೆ.
ನೀನು ನನಗೆ ಕೊಟ್ಟದ್ದೆಲ್ಲಾ ನಿನ್ನಿಂದಲೇ ಬಂದದೆ 7
ಎಂದು ಈಗ ಇವರು ತಿಳುಕೊಂಡಿದ್ದಾರೆ. ಹೇಗಂದರೆ 8
ನೀನು ನನಗೆ ಕೊಟ್ಟ ಮಾತುಗಳನ್ನು ನಾನು ಇವರಿಗೆ
ಕೊಟ್ಟಿದ್ದೇನೆ; ಇವರು ಆ ಮಾತುಗಳನ್ನು ಕೈಕೊಂಡು
ನನ್ನನ್ನು ನಿನ್ನ ಬಳಿಯಿಂದ ಹೊರಟುಬಂದವನೆಂದು
ನಿಜವಾಗಿ ತಿಳಿದು ನೀನೇ ನನ್ನನ್ನು ಕಳುಹಿಸಿಕೊಟ್ಟಿ
ರುವದಾಗಿ ನಂಬಿದ್ದಾರೆ. ನಾನು ಇವರಿಗೋಸ್ಕರ ಕೇಳಿ 9
ಕೊಳ್ಳುತ್ತೇನೆ; ಲೋಕಕ್ಕೋಸ್ಕರ ಕೇಳಿಕೊಳ್ಳದೆ ನೀನು
ನನಗೆ ಕೊಟ್ಟವರಿಗೋಸ್ಕರವೇ ಕೇಳಿಕೊಳ್ಳುತ್ತೇನೆ;
ನಿನ್ನವರಾಗಿದ್ದಾರೆ. ನನ್ನದೆಲ್ಲಾ ನಿನ್ನದೇ, ನಿನ್ನದೆಲ್ಲಾ 10
ನನ್ನದೇ; ಮತ್ತು ಇವರಿಂದ ನನಗೆ ಮಹಿಮೆ ಉಂಟಾ

11 ಗಿದೆ. ಇನ್ನು ನಾನು ಲೋಕದಲ್ಲಿ ಇರುವದಿಲ್ಲ, ಇವ
ರು ಲೋಕದಲ್ಲಿ ಇರುತ್ತಾರೆ, ನಾನು ನಿನ್ನ ಬಳಿಗೆ ಬರು
ತ್ತೇನೆ. ಪವಿತ್ರನಾದ ತಂದೆಯೇ, ನಾವು ಒಂದಾಗಿ
ರುವ ಹಾಗೆ ಇವರೂ ಒಂದಾಗಿರಬೇಕೆಂದು ನೀನು
ನನಗೆ ಕೊಟ್ಟ ನನ್ನ ಹೆಸರಿನಲ್ಲಿ ಇವರನ್ನು ಕಾಯ
12 ಬೇಕು. ನಾನು ಇವರ ಸಂಗಡ ಇದ್ದಾಗ ನೀನು
ನನಗೆ ಕೊಟ್ಟಿರುವ ನಿನ್ನ ಹೆಸರಿನಲ್ಲಿ ಇವರನ್ನು ಕಾಯು
ತ್ತಾ ಬಂದೆನು, ಇವರನ್ನು ಕಾಪಾಡಿದೆನು; ಶಾಸ್ತ್ರದ
ಮಾತು ನೆರವೇರುವಂತೆ ನಾಶಕ್ಕೆ ಗುರಿಯಾದ ಆ
ಮನುಷ್ಯನೇ ಹೊರತು ಇವರಲ್ಲಿ ಮತ್ತಾರೂ ನಾಶ
13 ವಾಗಲಿಲ್ಲ. ಆದರೆ ಈಗ ನಿನ್ನ ಬಳಿಗೆ ಬರುವವನಾಗಿ
ದ್ದೇನೆ; ಆದದರಿಂದ ಇವರಲ್ಲಿ ನನ್ನ ಆನಂದವು ಪರಿ
ಪೂರ್ಣವಾಗಿರುವಂತೆ ಲೋಕದಲ್ಲಿದ್ದು ಈ ಮಾತು
14 ಗಳನ್ನು ಆಡುತ್ತೇನೆ. ನಾನು ನಿನ್ನ ವಾಕ್ಯವನ್ನು ಇವ
ರಿಗೆ ಕೊಟ್ಟಿದ್ದೇನೆ; ನಾನು ಲೋಕದವನಲ್ಲದೆ ಇರುವ
ಪ್ರಕಾರ ಇವರೂ ಲೋಕದವರಲ್ಲ; ಆದಕಾರಣ ಲೋ
15 ಕವು ಇವರ ಮೇಲೆ ದ್ವೇಷ ಮಾಡಿ ಅದೆ. ಇವರನ್ನು
ಲೋಕದೊಳಗಿಂದ ತೆಗೆದುಕೊಂಡು ಹೋಗಬೇಕೆಂದು
ನಾನು ಕೇಳಿಕೊಳ್ಳುವದಿಲ್ಲ; ಕೆಡುಕನಿಂದ ತಪ್ಪಿಸಿ
16 ಕಾಪಾಡಬೇಕೆಂದು ಕೇಳಿಕೊಳ್ಳುತ್ತೇನೆ. ನಾನು ಲೋ
ಕದವನಲ್ಲದೆ ಇರುವ ಪ್ರಕಾರ ಇವರು ಲೋಕದವರಲ್ಲ.
17 ಇವರನ್ನು ಸತ್ಯದಲ್ಲಿ ಸೇರಿಸಿ ಪ್ರತಿಷ್ಠೆ ಪಡಿಸು; ನಿನ್ನ
18 ವಾಕ್ಯವೇ ಸತ್ಯವು. ನೀನು ನನ್ನನ್ನು ಲೋಕಕ್ಕೆ ಕಳು
ಹಿಸಿಕೊಟ್ಟಂತೆ ನಾನೂ ಇವರನ್ನು ಲೋಕಕ್ಕೆ ಕಳುಹಿಸಿ
19 ಕೊಟ್ಟೆನು. ಇವರು ನಿಜವಾಗಿ ಪ್ರತಿಷ್ಠಿತರಾಗಬೇ
ಕೆಂದು ಇವರಿಗೋಸ್ಕರ ನಾನು ನನ್ನನ್ನು ಪ್ರತಿಷ್ಠೆಪಡಿಸಿ
ಕೊಳ್ಳುತ್ತೇನೆ.
20 ಆದರೆ ಇವರಿಗೋಸ್ಕರ ಮಾತ್ರವಲ್ಲದೆ ಇವರ
ವಾಕ್ಯದಿಂದ ನನ್ನನ್ನು ನಂಬುವವರಿಗೋಸ್ಕರ ಸಹ ಕೇಳಿ
21 ಕೊಳ್ಳುತ್ತೇನೆ. ನೀನು ನನ್ನನ್ನು ಕಳುಹಿಸಿಕೊಟ್ಟಿದ್ದೀ
ಎಂದು ಲೋಕವು ನಂಬುವದಕ್ಕಾಗಿ ಅವರೆಲ್ಲರೂ
ಒಂದಾಗಿರಬೇಕೆಂತಲೂ ತಂದೆಯೇ, ನೀನು ನನ್ನಲ್ಲಿ
ಯೂ ನಾನು ನಿನ್ನಲ್ಲಿಯೂ ಇರುವ ಪ್ರಕಾರ ಅವರೂ
22 ನಮ್ಮಲ್ಲಿ ಇರಬೇಕೆಂತಲೂ ಕೇಳಿಕೊಳ್ಳುತ್ತೇನೆ. ನಾವು
ಒಂದಾಗಿರುವ ಪ್ರಕಾರ ಅವರೂ ಒಂದಾಗಿರಬೇಕೆಂದು
ನೀನು ನನಗೆ ಕೊಟ್ಟಿರುವ ಮಹಿಮೆಯನ್ನು ನಾನು ಅವ
23 ರಿಗೆ ಕೊಟ್ಟಿದ್ದೇನೆ. ನಾನು ಅವರಲ್ಲಿಯೂ ನೀನು
ನನ್ನಲ್ಲಿಯೂ ಇರಲಾಗಿ ಅವರ ಐಕ್ಯವು ಪೂರ್ಣ ಸಿದ್ಧಿಗೆ
ಬರುವದರಿಂದ ನೀನು ನನ್ನನ್ನು ಕಳುಹಿಸಿಕೊಟ್ಟಿದ್ದೀ
ಎಂದೂ ನೀನು ನನ್ನನ್ನು ಪ್ರೀತಿಸಿದಂತೆ ಅವರನ್ನೂ ಪ್ರೀತಿ
24 ಸಿದ್ದೀ ಎಂದೂ ಲೋಕಕ್ಕೆ ತಿಳಿದುಬರುವದು. ತಂದೆ
ಯೇ, ನೀನು ಯಾರನ್ನು ನನಗೆ ಕೊಟ್ಟಿಯೋ ಅವರು
ನಾನಿರುವ ಸ್ಥಳದಲ್ಲಿ ನನ್ನ ಕೂಡ ಇದ್ದುಕೊಂಡು
ಲೋಕವು ಹುಟ್ಟುವದಕ್ಕಿಂತ ಮುಂಚೆಯೇ ನೀನು
ನನ್ನನ್ನು ಪ್ರೀತಿಸಿ ನನಗೆ ಕೊಟ್ಟಿರುವ ಮಹಿಮೆಯನ್ನು
25 ನೋಡಬೇಕೆಂದು ಇಚ್ಛೈಸುತ್ತೇನೆ. ನೀತಿಸ್ವರೂಪನಾದ
ತಂದೆಯೇ, ಲೋಕವಂತೂ ನಿನ್ನನ್ನು ತಿಳಿಯಲಿಲ್ಲ,
ಆದರೆ ನಾನು ನಿನ್ನನ್ನು ತಿಳಿದಿದ್ದೇನೆ; ಮತ್ತು ಇವರು
ನೀನೇ ನನ್ನನ್ನು ಕಳುಹಿಸಿಕೊಟ್ಟಿರುವದಾಗಿ ತಿಳು
26 ಕೊಂಡಿದ್ದಾರೆ. ನಾನು ಅವರಿಗೆ ನಿನ್ನ ಹೆಸರನ್ನು ತಿಳಿಸಿ
ದ್ದೇನೆ, ಇನ್ನೂ ತಿಳಿಸುವೆನು. ನೀನು ನನ್ನ ಮೇ
ಇಟ್ಟಂಥ ಪ್ರೀತಿಯು ಅವರಲ್ಲಿ ಇರಬೇಕೆಂದೂ ನಾನ
ಅವರಲ್ಲಿ ಇರಬೇಕೆಂದೂ ಪ್ರಾರ್ಥಿಸುತ್ತೇನೆ ಅಂದನು

ಇಸ್ಕರಿಯೋತ ಯೂದನು ಯೇಸುವನ್ನು ವೈರಿಗಳಿಗೆ
ಹಿಡುಕೊಟ್ಟದ್ದು.

(ಮತ್ತಾ. 26. 47—56; ಮಾರ್ಕ 14. 43—50;
ಲೂಕ 22. 47—53.)

ಯೇಸು ಇದನ್ನು ಹೇಳಿದ ಮೇಲೆ ತನ್ನ ಶಿಷ್ಯರ
ಸಂಗಡ ಕೆದ್ರೋನ್ ಹಳ್ಳದ ಆಚೆಗೆ ಹೊರಟುಹೋದ
ನು. ಅಲ್ಲಿ ಒಂದು ತೋಟವಿತ್ತು; ಅದರೊಳಕ್ಕೆ ಆತನ
ಆತನ ಶಿಷ್ಯರೂ ಹೋದರು. ಯೇಸುವೂ ಆತನ ಶಿ
ರೂ ಆಗಾಗ್ಗೆ ಅಲ್ಲಿ ಕೂಡುತ್ತಾ ಇದ್ದದರಿಂದ ಆತ
ನನ್ನು ಹಿಡುಕೊಟ್ಟ ಯೂದನಿಗೂ ಆ ಸ್ಥಳವು ಗೊತ
ಗಿತ್ತು. ಹೀಗಿರಲಾಗಿ ಯೂದನು ಸಿಪಾಯಿಗಳ ಪ
ಲವನ್ನೂ ಮಹಾಯಾಜಕರು ಮತ್ತು ಫರಿಸಾಯ
ಕೊಟ್ಟ ಓಲೇಕಾರರನ್ನೂ ಕರಕೊಂಡು ದೀವಿಟಿಗಳನ
ಪಂಜುಗಳನ್ನೂ ಆಯುಧಗಳನ್ನೂ ಹಿಡಿಸಿಕೊಂ
ಅಲ್ಲಿಗೆ ಬಂದನು. ಆಗ ಯೇಸು ತನ್ನ ಮೇಲೆ ಬ
ವದನ್ನೆಲ್ಲಾ ತಿಳಿದು ಹೊರಗೆ ಹೋಗಿ—ನೀವು ಯ
ನ್ನು ಹುಡುಕುತ್ತೀರಿ ಎಂದು ಅವರನ್ನು ಕೇಳಿದನ
ಆದಕ್ಕೆ ಅವರು—ನಜರೇತಿನ ಯೇಸುವನ್ನು ಹುಡು
ತ್ತೇವೆ ಅನ್ನಲು ಯೇಸು ಅವರಿಗೆ—ನಾನೇ ಅವ
ಎಂದು ಹೇಳಿದನು. ಆತನನ್ನು ಹಿಡುಕೊಡುವ ಯ
ದನು ಸಹ ಅವರ ಸಂಗಡ ನಿಂತಿದ್ದನು. ಆತನು ಅ
ರಿಗೆ—ನಾನೇ ಅವನು ಎಂದು ಹೇಳಿದಾಗ ಅವ
ಹಿಂದಕ್ಕೆ ಸರಿದು ನೆಲದ ಮೇಲೆ ಬಿದ್ದರು. ಆತನು-
ಯಾರನ್ನು ಹುಡುಕುತ್ತೀರೆಂದು ತಿರಿಗಿ ಅವರನ
ಕೇಳಲು ಅವರು—ನಜರೇತಿನ ಯೇಸುವನ್ನು ಹು
ಕುತ್ತೇವೆ ಅಂದರು. ಅದಕ್ಕೆ ಯೇಸು—ನಾನೇ ಅ
ನೆಂದು ನಿಮಗೆ ಹೇಳಿದೆನಲ್ಲಾ; ನೀವು ನನ್ನನ್ನೇ ಹು
ಕುವವರಾದರೆ ಇವರು ಹೋಗಬಿಡಿರಿ ಅಂದನ
ನೀನು ನನಗೆ ಕೊಟ್ಟವರಲ್ಲಿ ಒಬ್ಬನನ್ನಾದರೂ ನಾ
ಕಳಕೊಳ್ಳಲಿಲ್ಲವೆಂದು ಆತನು ಹೇಳಿದ ಮಾತು ಹೀ
ನೆರವೇರಿತು. ಸೀಮೋನ ಪೇತ್ರನಲ್ಲಿ ಒಂದು ಕ
ಇತ್ತು; ಅದನ್ನು ಅವನು ಹಿರಿದು ಮಹಾಯಾಜಕ
ಆಳನ್ನು ಹೊಡೆದು ಅವನ ಬಲಗಿವಿಯನ್ನು ಕತ್ತರಿ
ದನು. ಆ ಆಳಿನ ಹೆಸರು ಮಲ್ಕನು. ಆಗ ಯೇಸ
ಪೇತ್ರನಿಗೆ—ಕತ್ತಿಯನ್ನು ಒರೆಯಲ್ಲಿ ಹಾಕು; ತ
ನನಗೆ ಕೊಟ್ಟಿರುವ ಪಾತ್ರೆಯಲ್ಲಿ ನಾನು ಕುಡಿ
ಬಾರದೋ ಎಂದು ಹೇಳಿದನು.

ಮಹಾಯಾಜಕನು ಯೇಸುವನ್ನು ವಿಚಾರಿಸಿದ್ದು; ಪೇತ್ರನು
ಆತನನ್ನು ನಾನರಿಯೆನೆಂದು ಸುಳ್ಳು ಹೇಳಿದ್ದು.

(ಮತ್ತಾ. 26. 69—75; ಮಾರ್ಕ 14. 66—72;
ಲೂಕ 22. 54—62.)

ಆ ಮೇಲೆ ಆ ಸಿಪಾಯಿಗಳೂ ಸಹಸ್ರಾಧಿಪತಿಯ
ಯೆಹೂದ್ಯರ ಓಲೇಕಾರರೂ ಯೇಸುವನ್ನು ಹಿ

ಕೊಂಡು ಕಟ್ಟಿ ಮೊದಲು ಅನ್ನನ ಬಳಿಗೆ ಕರಕೊಂಡು
3 ಹೋದರು. ಇವನು ಆ ವರುಷದಲ್ಲಿ ಮಹಾಯಾಜ
4 ಕನಾಗಿದ್ದ ಕಾಯಫನ ಮಾವನಾಗಿದ್ದನು. ಆ
ಕಾಯಫನೇ—ಒಬ್ಬ ಮನುಷ್ಯನು ಜನಕ್ಕೋಸ್ಕರ
ಸಾಯುವದು ಹಿತಕರವೆಂದು ಯೆಹೂದ್ಯರಿಗೆ ಆಲೋ
ಚನೆ ಕೊಟ್ಟವನು.

5 ಸೀಮೋನ ಪೇತ್ರನೂ ಮತ್ತೊಬ್ಬ ಶಿಷ್ಯನೂ ಯೇಸು
ವಿನ ಹಿಂದೆ ಹೋದರು. ಆ ಶಿಷ್ಯನಿಗೆ ಮಹಾಯಾಜ
ಕನ ಪರಿಚಿತಿ ಇದ್ದದರಿಂದ ಯೇಸುವಿನ ಕೂಡ ಮಹಾ
6 ಯಾಜಕನ ಅಂಗಳದೊಳಕ್ಕೆ ಹೋದನು; ಪೇತ್ರನು
ಹೊರಗೆ ಬಾಗಲ ಹತ್ತರ ನಿಂತಿದ್ದರಿಂದ ಮಹಾಯಾಜ
ಕನ ಪರಿಚಿತನಾದ ಆ ಶಿಷ್ಯನು ಹೊರಗೆ ಬಂದು ಬಾಗ
ಲು ಕಾಯುವವಳ ಸಂಗಡ ಮಾತಾಡಿ ಪೇತ್ರನನ್ನು
7 ಒಳಕ್ಕೆ ಕರಕೊಂಡು ಹೋದನು. ಆಗ ಬಾಗಲು
ಕಾಯುವ ದಾಸಿಯು—ನೀನು ಸಹ ಈ ಮನುಷ್ಯನ
ಶಿಷ್ಯರಲ್ಲಿ ಒಬ್ಬನೇನು? ಎಂದು ಪೇತ್ರನನ್ನು ಕೇಳಲು
8 ಅವನು—ಅಲ್ಲ ಅಂದನು. ಆಗ ಚಳಿಯಾಗಿದ್ದದರಿಂದ
ಆಳುಗಳೂ ಓಲೇಕಾರರೂ ಇದ್ದಲಿನ ಬೆಂಕಿ ಮಾಡಿ
ಚಳಿಕಾಸಿಕೊಳ್ಳುತ್ತಾ ನಿಂತಿರಲಾಗಿ ಪೇತ್ರನೂ ಅವರ
ಸಂಗಡ ನಿಂತುಕೊಂಡು ಚಳಿಕಾಸಿಕೊಳ್ಳುತ್ತಿದ್ದನು.

9 ಅಷ್ಟರೊಳಗೆ ಮಹಾಯಾಜಕನು ಯೇಸುವನ್ನು
ಆತನ ಶಿಷ್ಯರ ವಿಷಯವಾಗಿಯೂ ಉಪದೇಶದ ವಿಷಯ
0 ವಾಗಿಯೂ ವಿಚಾರಿಸಿದನು. ಅದಕ್ಕೆ ಯೇಸು—ನಾನು
ಧಾರಾಳವಾಗಿ ಲೋಕದ ಮುಂದೆ ಮಾತಾಡಿದ್ದೇನೆ;
ಯೆಹೂದ್ಯರೆಲ್ಲಾ ಕೂಡುವಂಥ ಸಭಾಮಂದಿರಗಳ
ಲ್ಲಿಯೂ ದೇವಾಲಯದಲ್ಲಿಯೂ ಯಾವಾಗಲೂ ಉಪ
ದೇಶಮಾಡುತ್ತಾ ಬಂದೆನು; ಮರೆಯಾಗಿ ಯಾವ
1 ದನ್ನೂ ಮಾತಾಡಲಿಲ್ಲ. ನನ್ನನ್ನು ಯಾಕೆ ವಿಚಾರಿ
ಸುತ್ತೀ? ನಾನು ಏನೇನು ಮಾತಾಡಿದೆನೋ ಅದನ್ನು
ಕೇಳಿದವರಲ್ಲಿ ವಿಚಾರಿಸು; ನಾನು ಹೇಳಿದ್ದು ಇವರಿಗೆ
2 ತಿಳಿದಿದೆಯಲ್ಲಾ ಎಂದು ಉತ್ತರಕೊಟ್ಟನು. ಯೇಸು
ಈ ಮಾತನ್ನು ಹೇಳಿದಾಗ ಹತ್ತರ ನಿಂತಿದ್ದ ಓಲೇಕಾರ
ರಲ್ಲಿ ಒಬ್ಬನು—ಮಹಾಯಾಜಕನಿಗೆ ಹೀಗೆ ಉತ್ತರ
ಕೊಡುತ್ತೀಯಾ ಎಂದು ಹೇಳಿ ಆತನ ಕೆನ್ನೆಗೆ ಒಂದು
3 ಏಟು ಹಾಕಿದನು. ಯೇಸು ಅವನಿಗೆ—ನಾನು
ಮಾತಾಡಿದ್ದರಲ್ಲಿ ಏನಾದರೂ ದೋಷವಿದ್ದರೆ ಆ ದೋಷ
ಇಂಥದೆಂದು ಸಾಕ್ಷಿಹೇಳು; ನಾನು ಮಾತಾಡಿದ್ದು
ಸರಿಯಾಗಿದ್ದರೆ ನನ್ನನ್ನು ಯಾಕೆ ಹೊಡೆಯುತ್ತೀ
4 ಎಂದು ಹೇಳಿದನು. ಆಗ ಅನ್ನನು ಆತನನ್ನು
ಕಟ್ಟಿಸಿ ಮಹಾಯಾಜಕನಾದ ಕಾಯಫನ ಬಳಿಗೆ ಕಳು
ಹಿಸಿಕೊಟ್ಟನು.

5 ಇತ್ತಲಾಗಿ ಸೀಮೋನ ಪೇತ್ರನು ನಿಂತುಕೊಂಡು
ಚಳಿಕಾಸಿಕೊಳ್ಳುತ್ತಾ ಇದ್ದನು. ಆಗ ಅಲ್ಲಿದ್ದವರು
ಅವನನ್ನು—ನೀನು ಅವನ ಶಿಷ್ಯರಲ್ಲಿ ಒಬ್ಬನೇನು?
6 ಎಂದು ಕೇಳಲು ಅವನು—ಅಲ್ಲ ಅಂದನು. ಮಹಾ
ಯಾಜಕನ ಆಳುಗಳಲ್ಲಿ ಪೇತ್ರನು ಕಿವಿಕತ್ತರಿಸಿದವನ
ಬಂಧುವಾಗಿದ್ದ ಒಬ್ಬನು—ನಾನು ನಿನ್ನನ್ನು ತೋಟ
7 ದಲ್ಲಿ ಅವನ ಸಂಗಡ ಕಂಡೆನಲ್ಲವೇ ಅಂದನು. ಅದಕ್ಕೆ
ಪೇತ್ರನು ತಿರಿಗಿ ಅಲ್ಲ ಅಂದನು. ಕೂಡಲೆ ಕೋಳಿ
ಕೂಗಿತು.

### ಪಿಲಾತನು ಯೇಸುವನ್ನು ವಿಚಾರಿಸಿ ಆತನಿಗೆ ಮರಣವನ್ನು ವಿಧಿಸಿದ್ದು.

(ಮತ್ತಾ. 27. 2, 11—26; ಮಾರ್ಕ 15. 1—15; ಲೂಕ 23. 1—25.)

ಆ ಮೇಲೆ ಅವರು ಯೇಸುವನ್ನು ಕಾಯಫನ ಬಳಿ 28
ಯಿಂದ ಅರಮನೆಗೆ ಕರಕೊಂಡು ಹೋದರು. ಆಗ
ಮುಂಜಾನೆ ಆಗಿತ್ತು. ಅವರು ತಮಗೆ ಮೈಲಿಗೆ ತಟ್ಟಿ
ಪಸ್ಕದ ಊಟವನ್ನು ಮಾಡುವದಕ್ಕೆ ಅಡ್ಡಿಯಾದೀ
ತೆಂದು ಅರಮನೆಯೊಳಕ್ಕೆ ಹೋಗಲಿಲ್ಲ. ಹೀಗಿರ 29
ಲಾಗಿ ಪಿಲಾತನು ಹೊರಕ್ಕೆ ಅವರ ಬಳಿಗೆ ಬಂದು—ಈ
ಮನುಷ್ಯನ ಮೇಲೆ ಏನು ದೂರು ತರುತ್ತೀರಿ ಎಂದು
ಕೇಳಿದನು. ಅವರು ಅವನಿಗೆ—ಇವನು ದುಷ್ಕರ್ಮಿ 30
ಯಲ್ಲದಿದ್ದರೆ ನಾವು ಇವನನ್ನು ನಿನಗೆ ಒಪ್ಪಿಸಿಕೊಡು
ತ್ತಿದ್ದಿಲ್ಲವೆಂದು ಉತ್ತರಕೊಟ್ಟರು. ಆಗ ಪಿಲಾತನು 31
ಅವರಿಗೆ—ನೀವೇ ಅವನನ್ನು ತಕ್ಕೊಂಡುಹೋಗಿ ನಿಮ್ಮ
ಧರ್ಮಶಾಸ್ತ್ರದ ಪ್ರಕಾರ ಅವನಿಗೆ ತೀರ್ಪುಮಾಡಿರಿ
ಎಂದು ಹೇಳಿದನು. ಅದಕ್ಕೆ ಯೆಹೂದ್ಯರು—ಮರಣ
ದಂಡನೆಯನ್ನು ವಿಧಿಸುವ ಅಧಿಕಾರವು ನಮಗಿಲ್ಲ
ಅಂದರು. ಇದರಿಂದ ಯೇಸು ತಾನು ಎಂಥಾ 32
ಸಾವು ಸಾಯುವೆನೆಂದು ಸೂಚಿಸಿ ಹೇಳಿದ ಮಾತು ನೆರ
ವೇರಿತು.

ಆಗ ಪಿಲಾತನು ತಿರಿಗಿ ಅರಮನೆಯೊಳಕ್ಕೆ ಹೋಗಿ 33
ಯೇಸುವನ್ನು ಕರೆದು ಆತನನ್ನು—ನೀನು ಯೆಹೂ
ದ್ಯರ ಅರಸನು ಹೌದೋ ಎಂದು ಕೇಳಿದನು.
ಯೇಸು—ನಿನ್ನಷ್ಟಕ್ಕೆ ನೀನೇ ಇದನ್ನು ಹೇಳುತ್ತೀ 34
ಯೋ? ಮತ್ತೊಬ್ಬರು ನನ್ನ ವಿಷಯದಲ್ಲಿ ನಿನಗೆ
ಹೇಳಿದ್ದಾರೋ ಎಂದು ಕೇಳಲು ಪಿಲಾತನು—ನಾನೇನು 35
ಯೆಹೂದ್ಯನೇ? ನಿನ್ನ ಸ್ವಂತ ಜನವೂ ಮಹಾಯಾಜ
ಕರೂ ನಿನ್ನನ್ನು ನನಗೆ ಒಪ್ಪಿಸಿದ್ದಾರೆ; ನೀನು ಏನು
ಮಾಡಿದ್ದೀ ಎಂದು ಕೇಳಿದ್ದಕ್ಕೆ ಯೇಸು—ನನ್ನ 36
ರಾಜ್ಯವು ಈ ಲೋಕದ್ದಲ್ಲ; ನನ್ನ ರಾಜ್ಯವು ಈ ಲೋಕ
ದ್ದಾಗಿದ್ದರೆ ನಾನು ಯೆಹೂದ್ಯರ ಕೈಯಲ್ಲಿ ಬೀಳದಂತೆ
ನನ್ನ ಪರಿವಾರದವರು ಕಾದಾಡುತ್ತಿದ್ದರು; ಆದರೆ
ನನ್ನ ರಾಜ್ಯವು ಇಲ್ಲಿಯದಲ್ಲವೆಂದು ಉತ್ತರಕೊಟ್ಟನು.
ಅದಕ್ಕೆ ಪಿಲಾತನು—ಹಾಗಾದರೆ ನೀನು ಅರಸನು ಹೌದ 37
ಲ್ಲವೇ ಅಂದನು. ಯೇಸು ಅವನಿಗೆ—ನನ್ನನ್ನು ಅರಸ
ನೆಂದು ನೀನೇ ಹೇಳಿದ್ದೀ. ನಾನು ಸತ್ಯದ ವಿಷಯ
ದಲ್ಲಿ ಸಾಕ್ಷಿಹೇಳುವದಕ್ಕೋಸ್ಕರ ಹುಟ್ಟಿದವನು, ಅದ
ಕ್ಕೋಸ್ಕರವೇ ಈ ಲೋಕಕ್ಕೆ ಬಂದಿದ್ದೇನೆ. ಸತ್ಯ
ಪರರೆಲ್ಲರು ನನ್ನ ಮಾತಿಗೆ ಕಿವಿಕೊಡುತ್ತಾರೆ ಎಂದು
ಉತ್ತರಕೊಟ್ಟನು. ಪಿಲಾತನು—ಸತ್ಯವಂದರೇನು? 38
ಅಂದನು.

ಇದನ್ನು ಹೇಳಿ ಪಿಲಾತನು ತಿರಿಗಿ ಯೆಹೂದ್ಯರ
ಬಳಿಗೆ ಹೊರಕ್ಕೆ ಬಂದು—ನನಗೆ ಅವನಲ್ಲಿ ಯಾವ ಅಪ
ರಾಧವೂ ಕಾಣಿಸುವದಿಲ್ಲ. ಆದರೆ ಪಸ್ಕಹಬ್ಬದಲ್ಲಿ 39
ನಾನು ಒಬ್ಬನನ್ನು ನಿಮಗೆ ಬಿಟ್ಟುಕೊಡುವ ಪದ್ಧತಿ
ಉಂಟಷ್ಟೆ; ನಾನು ಯೆಹೂದ್ಯರ ಅರಸನನ್ನು ಬಿಟ್ಟು
ಕೊಡುವದು ನಿಮಗೆ ಇಷ್ಟವೋ ಎಂದು ಅವರನ್ನು

40 ಕೇಳಿದನು. ಅದಕ್ಕೆ ಅವರು—ಇವನನ್ನು ಬೇಡ,
ಬರಬ್ಬನನ್ನು ಬಿಟ್ಟುಕೊಡಬೇಕು ಎಂದು ತಿರಿಗಿ ಕೂಗಿ
ಹೇಳಿದರು. ಈ ಬರಬ್ಬನು ಕಳ್ಳನಾಗಿದ್ದನು.

19 ಆ ಮೇಲೆ ಪಿಲಾತನು ಯೇಸುವನ್ನು ಕೊರಡೆ
2 ಯಿಂದ ಹೊಡಿಸಿದನು. ಮತ್ತು ಸಿಪಾಯಿಗಳು
ಮುಳ್ಳುಬಳ್ಳಿಯಿಂದ ಕಿರೀಟವನ್ನು ಹೆಣೆದು ಆತನ
ತಲೆಯ ಮೇಲೆ ಇಟ್ಟು ಕೆಂಪು ಒಲ್ಲಿಯನ್ನು ಆತನಿಗೆ
3 ಹೊದಿಸಿ ಆತನ ಬಳಿಗೆ ಬಂದು—ಯೆಹೂದ್ಯರ ಅರ
ಸನೇ, ನಿನಗೆ ನಮಸ್ಕಾರ! ಎಂದು ಹೇಳಿ ಆತನ ಕೆನ್ನೆಗೆ
4 ಏಟು ಹಾಕಿದರು. ತರುವಾಯ ಪಿಲಾತನು ತಿರಿಗಿ
ಹೊರಗೆ ಬಂದು ಯೆಹೂದ್ಯರಿಗೆ—ನನಗೆ ಅವನಲ್ಲಿ
ಯಾವ ಅಪರಾಧವೂ ಕಾಣಿಸಲಿಲ್ಲವೆಂಬದು ನಿಮಗೆ
ತಿಳಿಯುವಂತೆ ಅವನನ್ನು ನಿಮ್ಮ ಬಳಿಗೆ ಹೊರಗೆ ತರು
5 ತ್ತೇನೆ, ನೋಡಿರಿ ಎಂದು ಹೇಳಿದನು. ಆಗ ಯೇಸು
ಮುಳ್ಳಿನ ಕಿರೀಟವನ್ನೂ ಕೆಂಪು ಒಲ್ಲಿಯನ್ನೂ ಧರಿಸಿ
ದವನಾಗಿ ಹೊರಕ್ಕೆ ಬಂದನು. ಪಿಲಾತನು ಅವರಿಗೆ—
6 ಇಗೋ, ಈ ಮನುಷ್ಯನು! ಅಂದನು. ಮಹಾಯಾಜ
ಕರೂ ಓಲೇಕಾರರೂ ಆತನನ್ನು ಕಾಣುತ್ತಲೇ—ಶಿಲು
ಬೆಗೆ ಹಾಕಿಸು, ಶಿಲುಬೆಗೆ ಹಾಕಿಸು ಎಂದು ಕೂಗಿದರು.
ಪಿಲಾತನು ಅವರಿಗೆ—ಬೇಕಾದರೆ ನೀವೇ ಅವನನ್ನು
ತಕ್ಕೊಂಡುಹೋಗಿ ಶಿಲುಬೆಗೆ ಹಾಕಿಸಿರಿ; ನನಗೆ ಅವ
ನಲ್ಲಿ ಅಪರಾಧವು ಕಾಣಿಸಲಿಲ್ಲವೆಂದು ಹೇಳಿದನು.
7 ಯೆಹೂದ್ಯರು ಅವನಿಗೆ—ನಮಗೆ ಒಂದು ನೇಮ
ಉಂಟು, ಆ ನೇಮದ ಪ್ರಕಾರ ಇವನು ಸಾಯತಕ್ಕ
ವನು; ಯಾಕಂದರೆ ಅವನು ತನ್ನನ್ನು ದೇವರ ಮಗ
ನಾಗಿ ಮಾಡಿಕೊಂಡಿದ್ದಾನೆ ಎಂದು ಉತ್ತರಕೊಟ್ಟರು.
8 ಪಿಲಾತನು ಈ ಮಾತನ್ನು ಕೇಳಿ ಮತ್ತಷ್ಟು ಹೆದರಿ
9 ಕೊಂಡು ತಿರಿಗಿ ಅರಮನೆಯೊಳಕ್ಕೆ ಹೋಗಿ—ನೀನು
ಎಲ್ಲಿಂದ ಬಂದವನು ಎಂದು ಯೇಸುವನ್ನು ಕೇಳಿದನು.
10 ಆದರೆ ಯೇಸು ಅವನಿಗೆ ಉತ್ತರಕೊಡಲಿಲ್ಲ. ಪಿಲಾ
ತನು—ನನ್ನ ಸಂಗಡಲೂ ನೀನು ಮಾತಾಡುವ
ದಿಲ್ಲವೋ? ನಿನ್ನನ್ನು ಬಿಡಿಸುವ ಅಧಿಕಾರವೂ ನಿನ್ನನ್ನು
ಶಿಲುಬೆಗೆ ಹಾಕಿಸುವ ಅಧಿಕಾರವೂ ನನಗೆ ಉಂಟೆಂಬದು
ನಿನಗೆ ಗೊತ್ತಿಲ್ಲವೋ ಎಂದು ಆತನನ್ನು ಕೇಳಿದನು.
11 ಅದಕ್ಕೆ ಯೇಸು—ಮೇಲಣಿಂದ ನಿನಗೆ ಕೊಡಲ್ಪಡ
ದಿದ್ದರೆ ನನ್ನ ಮೇಲೆ ನಿನಗೆ ಯಾವ ಅಧಿಕಾರವೂ ಇರು
ತ್ತಿರಲಿಲ್ಲ. ಆದಕಾರಣ ನನ್ನನ್ನು ನಿನಗೆ ಒಪ್ಪಿಸಿದವ
ನಿಗೆ ಹೆಚ್ಚಿನ ಪಾಪ ಉಂಟು ಅಂದನು.
12 ಈ ಮಾತಿನ ದೆಸೆಯಿಂದ ಪಿಲಾತನು ಆತನನ್ನು ಬಿಡಿ
ಸುವದಕ್ಕೆ ಪೇಚಾಡಿದನು. ಆದರೆ ಯೆಹೂದ್ಯರು—
ನೀನು ಇವನನ್ನು ಬಿಡಿಸಿದರೆ ನೀನು ಕೈಸರನಿಗೆ ಮಿತ್ರ
ನಲ್ಲ; ತನ್ನನ್ನು ಅರಸನಾಗಿ ಮಾಡಿಕೊಳ್ಳುವವನು
13 ಕೈಸರನಿಗೆ ವಿರೋಧಿ ಎಂದು ಕೂಗಿ ಹೇಳಿದರು. ಈ
ಮಾತುಗಳನ್ನು ಪಿಲಾತನು ಕೇಳಿ ಯೇಸುವನ್ನು
ಹೊರಕ್ಕೆ ಕರತರಿಸಿ ಇಬ್ರಿಯ ಮಾತಿನಲ್ಲಿ ಗಬ್ಬಥಾ
ಯೆನಿಸಿಕೊಳ್ಳುವ ಕಲ್ಲುಹಾಸಿದ ಕಟ್ಟೆ ಎಂಬ ಹೆಸ
ರುಳ್ಳ ಸ್ಥಳಕ್ಕೆ ಹೋಗಿ ನ್ಯಾಯಪೀಠದ ಮೇಲೆ
14 ಕೂತುಕೊಂಡನು. ಪಸ್ಕಹಬ್ಬದ ಸೌರಣೆಯ ದಿವಸ
ದಲ್ಲಿ 1)ಬೆಳಿಗ್ಗೆ ಹೆಚ್ಚುಕಡಿಮೆ ಆರು ಘಂಟೆಯಾಗಿತ್ತು
ಅವನು ಯೆಹೂದ್ಯರಿಗೆ—ಇಗೋ, ನಿಮ್ಮ ಅರಸನ
ಎಂದು ಹೇಳಿದನು. ಅದಕ್ಕೆ ಅವರು—ಅವನನ
ಕೊಲ್ಲಿಸು, ಕೊಲ್ಲಿಸು, ಶಿಲುಬೆಗೆ ಹಾಕಿಸು ಎಂ
ಕೂಗಿದರು. ಪಿಲಾತನು—ನಿಮ್ಮ ಅರಸನನ್ನು ಶಿ
ಬೆಗೆ ಹಾಕಿಸಲೋ? ಅಂದದ್ದಕ್ಕೆ ಮಹಾಯಾ
ಕರು—ಕೈಸರನೇ ಹೊರತು ನಮಗೆ ಬೇರೆ ಅರಸನಿ
ಎಂದು ಉತ್ತರಕೊಟ್ಟರು. ಆಗ ಅವನು ಆತನನ
ಶಿಲುಬೆಗೆ ಹಾಕಿಸುವದಕ್ಕೆ ಅವರ ವಶಕ್ಕೆ ಕೊಟ್ಟನ

ಯೇಸುವನ್ನು ಶಿಲುಬೆಗೆ ಹಾಕಿದ್ದೂ ಹೂಣಿಟ್ಟದ್ದೂ.
(ಮತ್ತಾ. 27. 32—50; 57—61; ಮಾರ್ಕ 15. 21—37
42—47; ಲೂಕ 23. 26, 33—46; 50—56.)

ಅವರು ಯೇಸುವನ್ನು ತೆಗೆದುಕೊಂಡು ಹೋದರು
ಆತನು ತನ್ನ ಶಿಲುಬೆಯನ್ನು ತಾನೇ ಹೊತ್ತುಕೊಂ
ಕಪಾಲಸ್ಥಳವೆಂಬ ಸ್ಥಾನಕ್ಕೆ ಹೋದನು. ಇದ
ಇಬ್ರಿಯ ಮಾತಿನಲ್ಲಿ ಗೊಲ್ಗೊಥಾ ಎಂದು ಹೆಸರ
ಅಲ್ಲಿ ಆತನನ್ನೂ ಆತನ ಸಂಗಡ ಇನ್ನಿಬ್ಬರನ್ನೂ ಶಿ
ಬೆಗೆ ಹಾಕಿದರು; ಅವರಲ್ಲಿ ಆ ಕಡೆ ಒಬ್ಬನನ್ನು
ಕಡೆ ಒಬ್ಬನನ್ನು ನಡುವೆ ಯೇಸುವನ್ನು ಇಟ್ಟರು.
ಇದಲ್ಲದೆ ಪಿಲಾತನು ಒಂದು ವಿಳಾಸವನ್ನು ಬರೆ
ಆತನ ಶಿಲುಬೆಯ ಮೇಲ್ಗಡೆ ಹಚ್ಚಿಸಿದನು. ಅ
ನಂದರೆ—

ನಜರೇತಿನ ಯೇಸು, ಯೆಹೂದ್ಯರ ಅರಸ
ಎಂಬದೇ.

ಅವರು ಯೇಸುವನ್ನು ಶಿಲುಬೆಗೆ ಹಾಕಿದ ಸ್ಥಳವು ಪ
ಣಕ್ಕೆ ಹತ್ತಿರವಾಗಿದ್ದದರಿಂದ ಯೆಹೂದ್ಯರಲ್ಲಿ ಬಹ
ಮಂದಿ ಆ ವಿಳಾಸವನ್ನು ಓದಿದರು. ಅದು ಇಬ್ರಿ
ಲಾತೀನ್ ಗ್ರೀಕ್ ಭಾಷೆಗಳಲ್ಲಿ ಬರೆದಿತ್ತು. ಹೀಗಿ
ಲಾಗಿ ಯೆಹೂದ್ಯರ ಮಹಾಯಾಜಕರು ಪಿಲಾತನಿಗೆ—
ಯೆಹೂದ್ಯರ ಅರಸನು ಎಂದು ಬರೆಯದೆ ನಾ
ಯೆಹೂದ್ಯರ ಅರಸನೆಂದು ಹೇಳಿದವನು ಎಂಬದಾ
ಬರೆಯಬೇಕೆಂತ ಹೇಳಿದರು. ಅದಕ್ಕೆ ಪಿಲಾತನು—
ನಾನು ಬರೆದದ್ದು ಬರೆದಾಯಿತು ಅಂದನು.
ಸಿಪಾಯಿಗಳು ಯೇಸುವನ್ನು ಶಿಲುಬೆಗೆ ಹಾಕಿ
ಮೇಲೆ ಅವರು ಆತನ ಮೇಲುಹೊದಿಕೆಗಳನ್ನು ತಕ್ಕೊ
ಡು ನಾಲ್ಕು ಪಾಲು ಮಾಡಿ ಒಬ್ಬೊಬ್ಬ ಸಿಪಾಯಿ
ಒಂದೊಂದು ಪಾಲಿನ ಪ್ರಕಾರ ಹಂಚಿಕೊಂಡರು. ಆತ
ಒಳಂಗಿಯನ್ನು ಸಹ ತಕ್ಕೊಂಡರು; ಆದರೆ ಆ ಅಂಗಿ
ಹೊಲಿಗೆ ಇರಲಿಲ್ಲ, ಅದು ಮೇಲಿನಿಂದ ಅಖಂಡವಾ
ಹೆಣೆದದ್ದಾಗಿತ್ತು. ಅದನ್ನು ನೋಡಿ ಅವರು—ನಾ
ಇದನ್ನು ಹರಿಯಬಾರದು; ಚೀಟುಹಾಕಿ ಇ
ಯಾರಿಗೆ ಬರುವದೋ ನೋಡೋಣ ಎಂದು ಮಾತಾ
ಕೊಂಡರು. ಇದರಿಂದ—

ನನ್ನ ಬಟ್ಟೆಗಳನ್ನು ತಮ್ಮಲ್ಲಿ ಪಾಲುಮಾ
ಕೊಂಡರು,
ನನ್ನ ಅಂಗಿಗೋಸ್ಕರ ಚೀಟುಹಾಕಿದರು

1) ಅಥವಾ: ಹಗಲು ಹೆಚ್ಚುಕಡಿಮೆ ಆರು ತಾಸಾಗಿತ್ತು, ಅಂದರೆ ಮಧ್ಯಾಹ್ನವಾಗಿತ್ತು.

ಎಂಬ ಶಾಸ್ತ್ರದ ಮಾತು ನೆರವೇರಿತು. ಸಿಪಾಯಿಗಳು
ಇದನ್ನೆಲ್ಲಾ ಮಾಡಿದರು.
5 ಯೇಸುವಿನ ಶಿಲುಬೆಯ ಬಳಿಯಲ್ಲಿ ಆತನ
ತಾಯಿಯೂ ಆತನ ತಾಯಿಯ ತಂಗಿಯೂ ಕ್ಲೋಪನ
ಹೆಂಡತಿಯಾದ ಮರಿಯಳೂ ಮಗ್ದಲದ ಮರಿಯಳೂ
6 ನಿಂತಿದ್ದರು. ಯೇಸು ತನ್ನ ತಾಯಿಯನ್ನೂ ಹತ್ತರ
ದಲ್ಲಿ ನಿಂತಿದ್ದ ತನ್ನ ಪ್ರೀತಿಯ ಶಿಷ್ಯನನ್ನೂ ನೋಡಿ
ತಾಯಿಗೆ—ಅಮ್ಮಾ, ಇಗೋ ನಿನ್ನ ಮಗನು ಎಂದು
7 ಹೇಳಿದನು. ತರುವಾಯ ಆ ಶಿಷ್ಯನಿಗೆ—ಇಗೋ ನಿನ್ನ
ತಾಯಿ ಎಂದು ಹೇಳಿದನು. ಆ ಹೊತ್ತಿನಿಂದ ಆ ಶಿಷ್ಯನು
ಆಕೆಯನ್ನು ತನ್ನ ಮನೆಯಲ್ಲೇ ಇರಿಸಿಕೊಂಡನು.
8 ಇದಾದ ಮೇಲೆ ಯೇಸು ಈಗ ಎಲ್ಲಾ ತೀರಿತೆಂದು
ತಿಳಿದು ಶಾಸ್ತ್ರದ ಮಾತು ನೆರವೇರುವಂತೆ—ನನಗೆ
9 ನೀರಡಿಕೆ ಆಗಿದೆ ಅಂದನು. ಅಲ್ಲಿ ಹುಳಿರಸ ತುಂಬಿದ
ಗಡಿಗೆ ಇಟ್ಟಿರಲಾಗಿ ಅವರು ಸ್ಪಂಜನ್ನು ಹುಳಿರಸದಿಂದ
ತುಂಬಿಸಿ ಹಿಸೋಪ್‌ಗಿಡದ ಕೋಲಿಗೆ ಸಿಕ್ಕಿಸಿ ಆತನ
0 ಬಾಯಿಗೆ ಮುಟ್ಟಿಸಿದರು. ಯೇಸು ಆ ಹುಳಿರಸವನ್ನು
ತಕ್ಕೊಂಡ ಮೇಲೆ—ತೀರಿತು ಎಂದು ಹೇಳಿ ತಲೇ
ಬಾಗಿಸಿ ಆತ್ಮವನ್ನು ಒಪ್ಪಿಸಿಕೊಟ್ಟನು.
1 ಆ ಹೊತ್ತು ಸೌರಣೆಯ ದಿವಸವಾಗಿದ್ದದರಿಂದ ಯೆ
ಹೂದ್ಯರು—ಸಬ್ಬತ್‌ದಿನದಲ್ಲಿ ಶವಗಳು ಶಿಲುಬೆಯ
ಮೇಲೆ ಇರಬಾರದೆಂದು ಪಿಲಾತನನ್ನು—ಅವರ ಕಾಲುಗ
ಳನ್ನು ಮುರಿಸಿ ಅವರನ್ನು ತೆಗಸಿಹಾಕಬೇಕೆಂಬದಾಗಿ
ಕೇಳಿಕೊಂಡರು; ಯಾಕಂದರೆ ಆ ಸಬ್ಬತ್‌ದಿನವು ಬಹು
2 ವಿಶೇಷವಾದದ್ದು. ಆದದರಿಂದ ಸಿಪಾಯಿಗಳು ಬಂದು
ಮೊದಲನೆಯವನ ಕಾಲುಗಳನ್ನೂ ಅವನ ಜೊತೆಯಲ್ಲಿ
ಶಿಲುಬೆಗೆ ಹಾಕಿಸಿಕೊಂಡಿದ್ದ ಮತ್ತೊಬ್ಬನ ಕಾಲುಗಳ
3 ನ್ನೂ ಮುರಿದರು. ಆದರೆ ಯೇಸುವಿನ ಬಳಿಗೆ
ಬಂದಾಗ ಆತನು ಆಗಲೇ ಸತ್ತಿರುವದನ್ನು ಅವರು
4 ಕಂಡು ಆತನ ಕಾಲುಗಳನ್ನು ಮುರಿಯಲಿಲ್ಲ. ಆದ
ರೂ ಸಿಪಾಯಿಗಳಲ್ಲಿ ಒಬ್ಬನು ಈಟಿಯಿಂದ ಆತನ
ಪಕ್ಕೆಯನ್ನು ತಿವಿದನು; ತಿವಿದ ಕೂಡಲೆ ರಕ್ತ
5 ವೂ ನೀರೂ ಹೊರಟಿತು. ಅದನ್ನು ಕಂಡವನೇ
ಸಾಕ್ಷಿ ಹೇಳಿದ್ದಾನೆ, ಅವನ ಸಾಕ್ಷಿ ಸತ್ಯವೇ;
ತಾನು ಹೇಳುವದು ಸತ್ಯವೆಂದು 1)ಅವನು ಬಲ್ಲನು;
ನೀವು ಸಹ ನಂಬಬೇಕೆಂದು ಇದನ್ನು ಹೇಳಿದ್ದಾನೆ.
6 ಯಾಕಂದರೆ—ಆತನ ಒಂದು ಎಲುಬನ್ನಾದರೂ
ಮುರಿಯಕೂಡದು ಎಂದು ಶಾಸ್ತ್ರದಲ್ಲಿ ಬರೆದ ಮಾತು
7 ನೆರವೇರುವಂತೆ ಇದಾಯಿತು; ಮತ್ತು—ಅವರು
ತಾವು ಇರಿದವನನ್ನು ದಿಟ್ಟಿಸಿನೋಡುವರು ಎಂದು
ಶಾಸ್ತ್ರದಲ್ಲಿ ಮತ್ತೊಂದು ಮಾತು ಹೇಳಿ ಅದೆ.
8 ಇದಾದ ಮೇಲೆ ಯೆಹೂದ್ಯರ ಭಯದಿಂದ ಗುಪ್ತ
ವಾಗಿ ಯೇಸುವಿನ ಶಿಷ್ಯನಾಗಿದ್ದ ಅರಿಮಥಾಯದ
ಯೋಸೇಫನು—ಯೇಸುವಿನ ದೇಹವನ್ನು ತೆಗೆದು
ಕೊಂಡು ಹೋಗುವದಕ್ಕೆ ಅಪ್ಪಣೆಯಾಗಬೇಕೆಂದು
ಪಿಲಾತನನ್ನು ಬೇಡಿಕೊಂಡನು. ಪಿಲಾತನು ಅಪ್ಪಣೆ
ಕೊಡಲಾಗಿ ಅವನು ಬಂದು ಆತನ ದೇಹವನ್ನು ತೆಗೆ
ದುಕೊಂಡು ಹೋದನು. ಇದಲ್ಲದೆ ಮೊದಲು ಒಂದು 39
ಸಾರಿ ರಾತ್ರಿವೇಳೆಯಲ್ಲಿ ಯೇಸುವಿನ ಬಳಿಗೆ ಬಂದಿದ್ದ
ನಿಕೊದೇಮನು ಸಹ ರಕ್ತಬೋಳ ಅಗರುಗಳನ್ನು
ಕಲಸಿದ ಚೂರ್ಣವನ್ನು ನೂರು ಸೇರಿನಷ್ಟು ತಕ್ಕೊಂಡು
ಅಲ್ಲಿಗೆ ಬಂದನು. ಅವರು ಯೇಸುವಿನ ದೇಹವನ್ನು 40
ತಕ್ಕೊಂಡು ಯೆಹೂದ್ಯರಲ್ಲಿ ಹೂಣಿಡುವ ಪದ್ಧತಿಯ
ಪ್ರಕಾರ ಅದನ್ನು ಆ ಸುಗಂಧದ್ರವ್ಯಗಳ ಸಹಿತವಾಗಿ
ನಾರುಬಟ್ಟೆಯಲ್ಲಿ ಸುತ್ತಿದರು. ಆತನನ್ನು ಶಿಲುಬೆಗೆ 41
ಹಾಕಿದ ಸ್ಥಳದಲ್ಲಿ ಒಂದು ತೋಟವಿತ್ತು; ಆ ತೋಟ
ದಲ್ಲಿ ಒಂದು ಹೊಸ ಸಮಾಧಿ ಇತ್ತು; ಅದರಲ್ಲಿ ಅದು
ವರೆಗೆ ಯಾರನ್ನೂ ಇಟ್ಟಿದ್ದಿಲ್ಲ. ಆ ದಿನವು ಯೆಹೂ 42
ದ್ಯರ ಸೌರಣೆಯ ದಿನವಾದದ್ದರಿಂದ ಆ ಸಮಾಧಿ
ಹತ್ತರವಿರುತ್ತದೆಂದು ಯೇಸುವನ್ನು ಅಲ್ಲೇ ಇಟ್ಟರು.

### ಯೇಸು ಜೀವಿಸಿಬಂದು ತನ್ನ ಶಿಷ್ಯರಿಗೆ ಕಾಣಿಸಿಕೊಂಡದ್ದು.

(ಮತ್ತಾ. 28. 1—10; ಮಾರ್ಕ 16. 1—11;
ಲೂಕ 24. 1—12.)

**20** ವಾರದ ಮೊದಲನೆಯ ದಿನದಲ್ಲಿ ಮಗ್ದಲದ ಮರಿ
ಯಳು ಮುಂಜಾನೆ ಇನ್ನೂ ಕತ್ತಲೆ ಇರುವಾಗಲೇ
ಸಮಾಧಿಯ ಬಳಿಗೆ ಬಂದು ಸಮಾಧಿಯ ಕಲ್ಲು
ಅಲ್ಲಿಂದ ತೆಗೆದಿರುವದನ್ನು ಕಂಡಳು. ಆಕೆ ಸೀಮೋನ 2
ಪೇತ್ರನ ಬಳಿಗೂ ಯೇಸುವಿಗೆ ಪ್ರಿಯನಾಗಿದ್ದ ಆ
ಮತ್ತೊಬ್ಬ ಶಿಷ್ಯನ ಬಳಿಗೂ ಓಡಿ ಬಂದು ಅವರಿಗೆ—
ಸ್ವಾಮಿಯನ್ನು ಸಮಾಧಿಯೊಳಗಿಂದ ತೆಗೆದುಕೊಂಡು
ಹೋಗಿ ಆತನನ್ನು ಎಲ್ಲಿಟ್ಟಿದ್ದಾರೋ ನಮಗೆ ಗೊತ್ತಿಲ್ಲ
ವೆಂದು ಹೇಳಿದಳು. ಆಗ ಪೇತ್ರನೂ ಆ ಮತ್ತೊಬ್ಬ 3
ಶಿಷ್ಯನೂ ಹೊರಟು ಸಮಾಧಿಯ ಕಡೆಗೆ ಹೋದರು.
ಅವರಿಬ್ಬರೂ ಜೊತೆಯಾಗಿ ಓಡಿದರು; ಆದರೆ ಆ 4
ಮತ್ತೊಬ್ಬ ಶಿಷ್ಯನು ಪೇತ್ರನಿಗಿಂತ ಮುಂದೆ ಓಡಿ
ಮೊದಲೇ ಸಮಾಧಿಗೆ ಮುಟ್ಟಿ ಬೊಗ್ಗಿ ನೋಡಿ ಆ 5
ನಾರುಬಟ್ಟೆಗಳು ಬಿದ್ದಿರುವದನ್ನು ಕಂಡನು; ಆದರೆ
ಒಳಕ್ಕೆ ಹೋಗಲಿಲ್ಲ. ಸೀಮೋನ ಪೇತ್ರನು ಅವನ 6
ಹಿಂದೆ ಬಂದು ಸಮಾಧಿಯೊಳಕ್ಕೆ ಹೋಗಿ ಆ ನಾರು
ಬಟ್ಟೆಗಳು ಬಿದ್ದಿರುವದನ್ನೂ ಆತನ ತಲೆಯ ಮೇಲಿದ್ದ
ಕೈಪಾವಡವು ಆ ನಾರುಬಟ್ಟೆಗಳ ಕೂಡ ಇರದೆ ಸುತ್ತಿ 7
ಒಂದು ಕಡೆಯಲ್ಲಿ ಬೇರೇ ಇರುವದನ್ನೂ ನೋಡಿದನು.
ಆಗ ಸಮಾಧಿಯ ಬಳಿಗೆ ಮೊದಲು ಬಂದಿದ್ದ ಆ 8
ಮತ್ತೊಬ್ಬ ಶಿಷ್ಯನು ಸಹ ಒಳಕ್ಕೆ ಹೋಗಿ ನೋಡಿ ನಂಬಿ
ದನು. ಆತನು ಸತ್ತ ಮೇಲೆ ಜೀವದಿಂದೆದ್ದು ಬರಬೇ 9
ಕೆಂಬದಾಗಿ ಶಾಸ್ತ್ರದಲ್ಲಿ ಬರೆದಿರುವ ಮಾತು ಅವರಿಗೆ
ಇನ್ನೂ ತಿಳಿದಿರಲಿಲ್ಲ. ತರುವಾಯ ಆ ಶಿಷ್ಯರು ತಿರಿಗಿ 10
ತಮ್ಮವರ ಬಳಿಗೆ ಹೋದರು.
ಆದರೆ ಮರಿಯಳು ಹೊರಗೆ ಸಮಾಧಿಯ ಬಳಿಯಲ್ಲಿ 11
ಅಳುತ್ತಾ ನಿಂತಿದ್ದಳು. ಹೀಗೆ ಆಕೆ ಅಳುತ್ತಿರುವಾಗ
ಸಮಾಧಿಯೊಳಗೆ ಬೊಗ್ಗಿ ನೋಡಲು ಯೇಸುವಿನ 12
ದೇಹವು ಇಟ್ಟಿದ್ದ ಸ್ಥಳದಲ್ಲಿ ಬೆಳ್ಳಗಿರುವ ವಸ್ತ್ರಗಳನ್ನು

1) ಅಥವಾ, ಆತನು.

ಹೊದ್ದುಕೊಂಡ ಇಬ್ಬರು ದೇವದೂತರನ್ನು ಕಂಡಳು;
ಅವರಲ್ಲಿ ಒಬ್ಬನು ತಲೆ ಇದ್ದ ಕಡೆಯಲ್ಲಿ ಒಬ್ಬನು
13 ಕಾಲಿದ್ದ ಕಡೆಯಲ್ಲಿ ಕೂತಿದ್ದರು. ಅವರು ಆಕೆ
ಯನ್ನು—ಅಮ್ಮಾ, ನೀನು ಯಾಕೆ ಅಳುತ್ತೀ ಎಂದು
ಕೇಳಲು ಆಕೆ—ನನ್ನ ಸ್ವಾಮಿಯನ್ನು ತೆಗೆದುಕೊಂಡು
ಹೋಗಿದ್ದಾರೆ; ಆತನನ್ನು ಎಲ್ಲಿ ಇಟ್ಟಿದ್ದಾರೋ ನನಗೆ
14 ಗೊತ್ತಿಲ್ಲ ಅಂದಳು. ಇದನ್ನು ಹೇಳಿ ತಿರುಗಿಕೊಂಡು
ಯೇಸು ನಿಂತಿರುವದನ್ನು ಕಂಡಳು, ಆದರೆ ಆತನು
15 ಯೇಸು ಅಂತ ಆಕೆಗೆ ತಿಳಿಯಲಿಲ್ಲ. ಯೇಸು ಆಕೆ
ಯನ್ನು—ಅಮ್ಮಾ, ಯಾಕೆ ಅಳುತ್ತೀ? ಯಾರನ್ನು
ಹುಡುಕುತ್ತೀ? ಎಂದು ಕೇಳಲು ಆಕೆ ಆತನನ್ನು
ತೋಟಗಾರನೆಂದು ನೆನಸಿ ಆತನಿಗೆ—ಅಯ್ಯಾ, ನೀನು
ಆತನನ್ನು ಎತ್ತಿಕೊಂಡು ಹೋಗಿದ್ದರೆ ಎಲ್ಲಿ ಇಟ್ಟಿದ್ದೀ
ನನಗೆ ಹೇಳು; ನಾನು ತೆಗೆದುಕೊಂಡು ಹೋಗುತ್ತೇನೆ
16 ಎಂದು ಹೇಳಿದಳು. ಯೇಸು ಆಕೆಗೆ—ಮರಿಯಳೇ,
ಎಂದು ಹೇಳಿದನು. ಆಕೆ ತಿರುಗಿಕೊಂಡು ಇಬ್ರಿಯ
ಮಾತಿನಲ್ಲಿ—ರಬ್ಬೂನಿ, ಅಂದಳು. (ರಬ್ಬೂನಿ ಅಂದರೆ
17 ಗುರುವೇ ಎಂದು ಅರ್ಥ.) ಯೇಸು ಆಕೆಗೆ—ನನ್ನನ್ನು
ಹಿಡಿಯಬೇಡ; ಯಾಕಂದರೆ ನಾನು ಇನ್ನೂ ತಂದೆಯ
ಬಳಿಗೆ ಏರಿಹೋದವನಲ್ಲ. ನೀನು ನನ್ನ ಸಹೋದರರ
ಬಳಿಗೆ ಹೋಗಿ—ನಾನು ನನ್ನ ತಂದೆಯೂ ನಿಮ್ಮ
ತಂದೆಯೂ ನನ್ನ ದೇವರೂ ನಿಮ್ಮ ದೇವರೂ ಆಗಿರು
ವಾತನ ಬಳಿಗೆ ಏರಿಹೋಗುತ್ತೇನೆ ಎಂದು ಅವರಿಗೆ
18 ಹೇಳು ಅಂದನು. ಮಗ್ದಲದ ಮರಿಯಳು ಹೋಗಿ—
ನಾನು ಸ್ವಾಮಿಯವರನ್ನು ನೋಡಿದ್ದೇನೆ; ಆತನು
ಇಂಥಿಂಥದನ್ನು ನನಗೆ ಹೇಳಿದನು ಎಂದು ಶಿಷ್ಯರಿಗೆ
ತಿಳಿಸಿದಳು.

19 ಅದೇ ದಿವಸದ ಅಂದರೆ ವಾರದ ಮೊದಲನೆಯ
ದಿವಸದ ಸಂಜೆಯಲ್ಲಿ ಶಿಷ್ಯರು ಯೆಹೂದ್ಯರ ಭಯ
ದಿಂದ ತಾವು ಇದ್ದ ಮನೆಯ ಬಾಗಲುಗಳನ್ನು ಮುಚ್ಚಿ
ಕೊಂಡಿರಲು ಯೇಸು ಬಂದು ನಡುವೆ ನಿಂತು—
20 ನಿಮಗೆ [1]ಸಮಾಧಾನವಾಗಲಿ ಅಂದನು. ಇದನ್ನು
ಹೇಳಿದ ಮೇಲೆ ಅವರಿಗೆ ತನ್ನ ಕೈಗಳನ್ನೂ ಪಕ್ಕೆ
ಯನ್ನೂ ತೋರಿಸಿದನು. ಶಿಷ್ಯರು ಸ್ವಾಮಿಯನ್ನು
21 ನೋಡಿದ್ದರಿಂದ ಸಂತೋಷ ಪಟ್ಟರು. ಯೇಸು ಅವ
ರಿಗೆ—ನಿಮಗೆ [1]ಸಮಾಧಾನವಾಗಲಿ ಎಂದು ತಿರಿಗಿ
ಹೇಳಿ—ತಂದೆ ನನ್ನನ್ನು ಕಳುಹಿಸಿಕೊಟ್ಟ ಹಾಗೆಯೇ
ನಾನೂ ನಿಮ್ಮನ್ನು ಕಳುಹಿಸಿಕೊಡುತ್ತೇನೆ ಅಂದನು.
22 ಇದನ್ನು ಹೇಳಿ ಅವರ ಮೇಲೆ ಊದಿ ಅವರಿಗೆ—
23 ಪವಿತ್ರಾತ್ಮವರವನ್ನು ತಕ್ಕೊಳ್ಳಿರಿ; ನೀವು ಯಾರ ಪಾಪ
ಗಳನ್ನು ಕ್ಷಮಿಸಿಬಿಡುತ್ತೀರೋ ಅವರಿಗೆ ಅವುಗಳ
ಕ್ಷಮಾಪಣೆಯಾಗುತ್ತದೆ; ಯಾರ ಪಾಪಗಳನ್ನು ಕ್ಷಮಿ
ಸದೆ ಉಳಿಸುತ್ತೀರೋ ಅವರಿಗೆ ಅವುಗಳು ಉಳಿಯುತ್ತವೆ
ಅಂದನು.

24 ಯೇಸು ಬಂದಾಗ ಹನ್ನೆರಡು ಮಂದಿ ಶಿಷ್ಯರೊಳಗೆ
ಒಬ್ಬನಾದ ದಿದುಮನೆನಿಸಿಕೊಳ್ಳುವ ತೋಮನು ಅವರ
25 ಸಂಗಡ ಇರಲಿಲ್ಲ. ಆದದರಿಂದ ಉಳಿದ ಶಿಷ್ಯರು—
ನಾವು ಸ್ವಾಮಿಯನ್ನು ನೋಡಿದ್ದೇವೆ ಎಂದು ಅವ
ಹೇಳಿದರು. ಅದಕ್ಕೆ ಅವನು—ನಾನು ಆತನ ಕೈಗಳ
ಮೊಳೆಗಳಿಂದಾದ ಘಾಯವನ್ನು ನೋಡಿ ಆ ಮೊಳೆ
ಘಾಯದಲ್ಲಿ ನನ್ನ ಬೆರಳನ್ನು ಇಟ್ಟು ಆತನ ಪ
ಯಲ್ಲಿ ನನ್ನ ಕೈಯನ್ನು ಹಾಕಿದರೆ ಹೊರತು ನಿ
ಮಾತನ್ನು ನಂಬುವದೇ ಇಲ್ಲ ಅಂದನು.

ಎಂಟು ದಿವಸಗಳಾದ ಮೇಲೆ ಆತನ ಶಿಷ್ಯರು ತಿ
ಒಳಗಿದ್ದಾಗ ತೋಮನೂ ಅವರ ಸಂಗಡ ಇದ್ದ
ಬಾಗಲುಗಳು ಮುಚ್ಚಿದ್ದವು. ಆಗ ಯೇಸು ಬಂ
ನಡುವೆ ನಿಂತು—ನಿಮಗೆ [1]ಸಮಾಧಾನವಾಗಲಿ ಅ
ನು. ಆ ಮೇಲೆ ತೋಮನಿಗೆ—ನಿನ್ನ ಬೆರಳನ್ನು
ಕಡೆ ಚಾಚಿ ನನ್ನ ಕೈಗಳನ್ನು ಮುಟ್ಟಿ ನೋಡು; ನ
ಕೈಚಾಚಿ ನನ್ನ ಪಕ್ಕೆಯಲ್ಲಿ ಹಾಕು; ನಂಬದವ
ಗಿರಬೇಡ, ನಂಬುವವನಾಗು ಎಂದು ಹೇಳಿದ
ತೋಮನು ಆತನಿಗೆ—ನನ್ನ ಸ್ವಾಮಿ, ನನ್ನ ದೇವ
ಎಂದು ಹೇಳಿದನು. ಯೇಸು ಅವನಿಗೆ—ನೀ
ನನ್ನನ್ನು ನೋಡಿದ್ದರಿಂದ ನಂಬಿದ್ದೀ; ನೋ
ನಂಬಿದವರು ಧನ್ಯರು ಎಂದು ಹೇಳಿದನು.

ಯೇಸು ಇನ್ನು ಬೇರೆ ಎಷ್ಟೋ ಸೂಚಕಕಾರ
ಗಳನ್ನು ತನ್ನ ಶಿಷ್ಯರ ಮುಂದೆ ಮಾಡಿದನು. ಅವುಗ
ಈ ಗ್ರಂಥದಲ್ಲಿ ಬರೆದಿರುವದಿಲ್ಲ. ಆದರೆ ಯೇ
ದೇವಕುಮಾರನಾದ ಕ್ರಿಸ್ತನೆಂದು ನೀವು ನಂಬುವ
ಯೂ, ನಂಬಿ ಆತನ ಹೆಸರಿನ ಮೂಲಕವಾಗಿ ಜ
ವನ್ನು ಪಡಕೊಳ್ಳುವಂತೆಯೂ ಇಷ್ಟೆಲ್ಲಾ ಬರೆದದೆ.

ಯೇಸು ಗಲಿಲಾಯದ ಸಮುದ್ರದ ಬಳಿಯಲ್ಲಿ ತನ್ನ ಶಿಷ್ಯರಿ
ತಿರಿಗಿ ದರ್ಶನಕೊಟ್ಟದ್ದು. ಸಮಾಪ್ತಿಯ ವಚನಗಳು.

ತರುವಾಯ ಯೇಸು ತಿಬೇರಿಯ ಸಮುದ್ರದ
ಬಳಿಯಲ್ಲಿ ಶಿಷ್ಯರಿಗೆ ತಿರಿಗಿ ತನ್ನನ್ನು ತೋರಿಸಿಕೊಂಡ
ನು. ತನ್ನನ್ನು ತೋರಿಸಿಕೊಂಡ ರೀತಿ ಯಾವದಂದರೆ
ಸೀಮೋನ ಪೇತ್ರನೂ ದಿದುಮನೆಂಬ ತೋಮನೂ ಗ
ಲಾಯದ ಕಾನಾ ಊರಿನ ನತಾನಯೇಲನೂ ಜ
ದಾಯನ ಕುಮಾರರೂ ಆತನ ಶಿಷ್ಯರಲ್ಲಿ ಇನ್ನಿಬ್ಬರ
ಕೂಡಿದ್ದರು. ಅವರಿಗೆ ಸೀಮೋನ ಪೇತ್ರನು—ನಾ
ಮೀನು ಹಿಡಿಯುವದಕ್ಕೆ ಹೋಗುತ್ತೇನೆಂದು ಹೇಳ
ಅವರು—ನಾವೂ ನಿನ್ನ ಸಂಗಡ ಬರುತ್ತೇವೆ ಅಂದ
ಅವರು ಹೊರಟು ದೋಣಿಯನ್ನು ಹತ್ತಿದರು. ಆ
ಆ ರಾತ್ರಿಯಲ್ಲಿ ಒಂದು ಮೀನೂ ಸಿಕ್ಕಲಿಲ್ಲ. ಬೆಳಗ
ಗುವಾಗ ಯೇಸು ದಡದಲ್ಲಿ ನಿಂತಿದ್ದನು; ಆದಾಗ
ಶಿಷ್ಯರು ಆತನನ್ನು ಯೇಸುವೆಂದು ತಿಳಿಯಲಿಲ್ಲ. ಅ
ಯೇಸು ಅವರನ್ನು—ಮಕ್ಕಳಿರಾ, ಊಟಕ್ಕೆ ನಿಮ
ಏನೂ ಇಲ್ಲವೇ ಎಂದು ಕೇಳಲು ಅವರು ಇಲ್ಲವೆಂ
ಉತ್ತರಕೊಟ್ಟರು. ಆತನು ಅವರಿಗೆ—ನೀವು ದೋ
ಯ ಬಲಗಡೆಯಲ್ಲಿ ಬಲೆ ಬೀಸಿದರೆ ಸಿಕ್ಕುವದು ಎಂ
ಹೇಳಿದನು. ಅವರು ಹಾಗೆ ಬೀಸಿದಾಗ ಮೀನುಗ
ಬಹಳ ಹೆಚ್ಚಾಗಿ ಸಿಕ್ಕಿದ್ದರಿಂದ ಬಲೆಯನ್ನು ಎಳೆಯ

1) ಅಥವಾ, ಶುಭವಾಗಲಿ.

ವದಕ್ಕೆ ಆಗದೆ ಹೋಯಿತು. ಆಗ ಯೇಸುವಿಗೆ ಪ್ರಿಯ
ನಾಗಿದ್ದ ಶಿಷ್ಯನು ಪೇತ್ರನಿಗೆ—ಅವರು ಸ್ವಾಮಿಯವರು
ಎಂದು ಹೇಳಿದನು. ಸ್ವಾಮಿಯವರೆಂದು ಸೀಮೋನ
ಪೇತ್ರನು ಕೇಳಿ ಮೈಮೇಲೆ ಬಟ್ಟೆಯಿಲ್ಲದವನಾಗಿದ್ದ
ರಿಂದ ಒಲ್ಲಿಯನ್ನು ಸುತ್ತಿಕೊಂಡು ಸಮುದ್ರದಲ್ಲಿ
8 ದುಮುಕಿದನು. ದಡವು ದೂರವಾಗಿರದೆ ಹೆಚ್ಚು
ಕಡಿಮೆ ಇನ್ನೂರು ಮೊಳದಲ್ಲಿದ್ದರಿಂದ ಉಳಿದ ಶಿಷ್ಯರು
ಮೀನು ತುಂಬಿದ ಆ ಬಲೆಯನ್ನು ಎಳೆಯುತ್ತಾ ದೋಣಿ
9 ಯಲ್ಲಿಯೇ ಬಂದರು. ಅವರು ಭೂಮಿಗೆ ಇಳಿದಾಗ
ಕೆಂಡಗಳನ್ನೂ ಅವುಗಳ ಮೇಲೆ ಇಟ್ಟಿದ್ದ ಮೀನುಗ
10 ಳನ್ನೂ ರೊಟ್ಟಿಸಹಿತವಾಗಿ ಕಂಡರು. ಯೇಸು ಅವ
ರಿಗೆ—ನೀವು ಈಗ ಹಿಡಿದ ಮೀನುಗಳಲ್ಲಿ ಕೆಲವನ್ನು
11 ತನ್ನಿರಿ ಎಂದು ಹೇಳಲು ಸೀಮೋನ ಪೇತ್ರನು ದೋಣಿ
ಯನ್ನು ಹತ್ತಿ ಬಲೆಯನ್ನು ಭೂಮಿಗೆ ಎಳಕೊಂಡು
ಬಂದನು. ಅದು ನೂರೈವತ್ತುಮೂರು ದೊಡ್ಡ ಮೀನು
ಗಳಿಂದ ತುಂಬಿತ್ತು. ಅಷ್ಟು ಮೀನುಗಳು ಇದ್ದರೂ
12 ಬಲೆ ಹರಿಯಲಿಲ್ಲ. ಯೇಸು ಅವರಿಗೆ—ಬಂದು
ಊಟಮಾಡಿರಿ ಎಂದು ಹೇಳಿದನು. ಶಿಷ್ಯರು ಆತ
ನನ್ನು ಸ್ವಾಮಿಯವರೆಂದು ತಿಳಿದಿದ್ದರಿಂದ ನೀನಾ
ರೆಂದು ವಿಚಾರಿಸುವದಕ್ಕೆ ಅವರಲ್ಲಿ ಒಬ್ಬರೂ ಧೈರ್ಯ
13 ಪಡಲಿಲ್ಲ. ಯೇಸು ಬಂದು ರೊಟ್ಟಿಯನ್ನು ತೆಗೆದು
ಕೊಂಡು ಅವರಿಗೆ ಕೊಟ್ಟನು; ಹಾಗೆಯೇ ಮೀನನ್ನೂ
14 ಕೊಟ್ಟನು. ಯೇಸು ಸತ್ತು ಜೀವದಿಂದೆದ್ದ ಮೇಲೆ
ಶಿಷ್ಯರಿಗೆ ಕಾಣಿಸಿಕೊಂಡದ್ದು ಇದೇ ಮೂರನೆಯ
ಸಾರಿ.

15 ಅವರು ಊಟಮಾಡಿದ ಮೇಲೆ ಯೇಸು ಸೀಮೋನ
ಪೇತ್ರನನ್ನು—ಯೋಹಾನನ ಮಗನಾದ ಸೀಮೋನನೇ,
ನೀನು ಇವರಿಗಿಂತ ಹೆಚ್ಚಾಗಿ ನನ್ನ ಮೇಲೆ ಪ್ರೀತಿ
ಇಟ್ಟಿದ್ದೀಯೋ ಎಂದು ಕೇಳಲು ಅವನು—ಹೌದು,
ಸ್ವಾಮೀ, ನಿನ್ನ ಮೇಲೆ ಮಮತೆ ಇಟ್ಟಿದ್ದೇನೆಂಬದನ್ನು
ನೀನೇ ಬಲ್ಲೆ ಅಂದನು. ಆತನು ಅವನಿಗೆ—ನನ್ನ ಕುರಿ
16 ಮರಿಗಳನ್ನು ಮೇಯಿಸು ಎಂದು ಹೇಳಿದನು. ಆತನು
ತಿರಿಗಿ ಎರಡನೆಯ ಸಾರಿ ಅವನನ್ನು—ಯೋಹಾನನ
ಮಗನಾದ ಸೀಮೋನನೇ, ನನ್ನ ಮೇಲೆ ಪ್ರೀತಿ ಇಟ್ಟಿ
ದ್ದೀಯೋ ಎಂದು ಕೇಳಲು ಅವನು—ಹೌದು,
ಸ್ವಾಮೀ, ನಿನ್ನ ಮೇಲೆ ಮಮತೆ ಇಟ್ಟಿದ್ದೇನೆಂಬದನ್ನು
ನೀನೇ ಬಲ್ಲೆ ಅಂದನು. ಆತನು ಅವನಿಗೆ—ನನ್ನ ಕುರಿ
ಗಳನ್ನು ಕಾಯಿ ಎಂದು ಹೇಳಿದನು. ಆತನು ಮೂರ
ನೆಯ ಸಾರಿ—ಯೋಹಾನನ ಮಗನಾದ ಸೀಮೋನನೇ,
ನನ್ನ ಮೇಲೆ ಮಮತೆ ಇಟ್ಟಿದ್ದೀಯೋ ಎಂದು ಕೇಳಿ
ದನು. ಮೂರನೆಯ ಸಾರಿ ಆತನು—ನನ್ನ ಮೇಲೆ
ಮಮತೆ ಇಟ್ಟಿದ್ದೀಯೋ ಎಂದು ತನ್ನನ್ನು ಕೇಳಿದ್ದಕ್ಕೆ
ಪೇತ್ರನು ದುಃಖಪಟ್ಟು—ಸ್ವಾಮೀ, ನೀನು ಎಲ್ಲಾ
ಬಲ್ಲೆ; ನಿನ್ನ ಮೇಲೆ ನಾನು ಮಮತೆ ಇಟ್ಟಿದ್ದೇನೆಂಬದು
ನಿನಗೆ ತಿಳಿದದೆ ಅಂದನು. ಅವನಿಗೆ ಯೇಸು—ನನ್ನ
ಕುರಿಗಳನ್ನು ಮೇಯಿಸು. ನಿನಗೆ ನಿಜನಿಜವಾಗಿ 18
ಹೇಳುತ್ತೇನೆ, ನೀನು ಯೌವನಸ್ಥನಾಗಿದ್ದಾಗ ನೀನೇ
ನಡುವನ್ನು ಕಟ್ಟಿಕೊಂಡು ಇಷ್ಟಬಂದ ಕಡೆಗೆ ತಿರುಗಾ
ಡುತ್ತಿದ್ದಿ; ಆದರೆ ನೀನು ಮುದುಕನಾದಾಗ ನಿನ್ನ ಕೈ
ಗಳನ್ನು ಚಾಚುವಿ, ಮತ್ತೊಬ್ಬನು ನಿನ್ನ ನಡುವನ್ನು
ಕಟ್ಟಿಕೊಂಡು ನಿನಗೆ ಇಷ್ಟವಿಲ್ಲದ ಕಡೆಗೆ ನಿನ್ನನ್ನು ತೆಗೆ
ದುಕೊಂಡು ಹೋಗುವನು ಎಂದು ಹೇಳಿದನು. ಅವ 19
ನು ಎಂಥಾ ಸಾವಿನಿಂದ ದೇವರನ್ನು ಮಹಿಮೆಪಡಿಸು
ವನು ಎಂಬದನ್ನು ಆತನು ಈ ಮಾತಿನಿಂದ ಸೂಚಿಸಿ
ದನು. ಇದನ್ನು ಹೇಳಿ ಆತನು ಅವನಿಗೆ—ನನ್ನನ್ನು
ಹಿಂಬಾಲಿಸು ಎಂದು ಹೇಳಿದನು.

ಪೇತ್ರನು ತಿರುಗಿಕೊಂಡು ಯೇಸುವಿಗೆ ಪ್ರಿಯ 20
ನಾಗಿದ್ದ ಶಿಷ್ಯನು ಹಿಂದೆ ಬರುವದನ್ನು ಕಂಡನು.
ಆ ಶಿಷ್ಯನು ಊಟದಲ್ಲಿ ಯೇಸುವಿನ ಎದೆಯ ಕಡೆಗೆ
ಬಾಗಿ—ಸ್ವಾಮೀ, ನಿನ್ನನ್ನು ಹಿಡುಕೊಡುವವನು
ಯಾರು ಎಂದು ಕೇಳಿದವನೇ. ಇವನನ್ನು ಪೇತ್ರನು 21
ಕಂಡು ಯೇಸುವನ್ನು—ಸ್ವಾಮೀ, ಇವನ ವಿಷಯ
ವೇನು ಎಂದು ಕೇಳಲು ಯೇಸು ಅವನಿಗೆ—ನಾನು 22
ಬರುವ ತನಕ ಇವನು ಇರಬೇಕೆಂದು ನನಗೆ ಮನಸ್ಸಿ
ದ್ದರೆ ಅದು ನಿನಗೇನು? ನೀನು ನನ್ನನ್ನು ಹಿಂಬಾಲಿಸು
ಎಂದು ಹೇಳಿದನು. ಇದರ ದೆಸೆಯಿಂದ ಆ ಶಿಷ್ಯನು 23
ಸಾಯುವದಿಲ್ಲವೆಂಬ ಮಾತು ಸಹೋದರರಲ್ಲಿ ಹಬ್ಬಿತು.
ಆದರೆ ಅವನು ಸಾಯುವದಿಲ್ಲವೆಂದು ಯೇಸು ಅವ
ನಿಗೆ ಹೇಳಲಿಲ್ಲ; ನಾನು ಬರುವ ತನಕ ಅವನು ಇರ
ಬೇಕೆಂದು ನನಗೆ ಮನಸ್ಸಿದ್ದರೆ ಅದು ನಿನಗೇನು ಎಂತ
ಲೇ ಆತನು ಹೇಳಿದನು.

ಈ ಸಂಗತಿಗಳನ್ನು ಬರೆದು ಇವುಗಳ ವಿಷಯವಾಗಿ 24
ಸಾಕ್ಷಿ ಹೇಳುವ ಶಿಷ್ಯನು ಇವನೇ. ಇವನ ಸಾಕ್ಷಿ ಸತ್ಯ
ವೆಂದು ನಾವು ಬಲ್ಲೆವು.

ಇದಲ್ಲದೆ ಯೇಸು ಮಾಡಿದ್ದು ಇನ್ನೂ ಬಹಳ 25
ವಿದೆ; ಅದನ್ನೆಲ್ಲಾ ಒಂದೊಂದಾಗಿ ಬರೆಯುವದಾದರೆ
ಬರೆಯಬೇಕಾದ ಪುಸ್ತಕಗಳನ್ನು ಲೋಕವೇ ಹಿಡಿಸದೆ
ಹೋದೀತೆಂದು ನಾನು ನೆನಸುತ್ತೇನೆ.

THE

# ACTS OF THE APOSTLES

## ಅಪೊಸ್ತಲರ ಕೃತ್ಯಗಳು

ಯೇಸು ಪರಲೋಕಕ್ಕೆ ಏರಿಹೋದದ್ದು.
(ಮಾರ್ಕ 16. 19; ಲೂಕ 24. 50—53.)

1 ಥೆಯೊಫಿಲನೇ, ನಾನು ಮೊದಲು ಬರೆದ ಚರಿತ್ರೆ
ಯಲ್ಲಿ ಯೇಸು ಮಾಡುವದಕ್ಕೂ ಉಪದೇಶಿಸುವದಕ್ಕೂ
2 ಪ್ರಾರಂಭಿಸಿದ್ದೆಲ್ಲವನ್ನು ಹೇಳಿ ತಾನು ಆರಿಸಿಕೊಂಡಿದ್ದ
ಅಪೊಸ್ತಲರಿಗೆ ಪವಿತ್ರಾತ್ಮನ ಮೂಲಕ ಆಜ್ಞೆಕೊಟ್ಟು
ಮೇಲಣಲೋಕವನ್ನೇರಿದ ದಿನದ ವರೆಗೆ ವಿವರಿಸಿದೆನಷ್ಟೆ.
3 ಆತನು ಬಾಧೆಪಟ್ಟು ಸತ್ತ ಮೇಲೆ ತನ್ನನ್ನು ಜೀವಂತ
ನೆಂದು ಅನೇಕ ಪ್ರಮಾಣಗಳಿಂದ ಅಪೊಸ್ತಲರಿಗೆ ತೋರಿ
ಸಿಕೊಂಡನು. ನಾಲ್ವತ್ತು ದಿವಸಗಳ ತನಕ ಅವರಿಗೆ
ಕಾಣಿಸಿಕೊಳ್ಳುತ್ತಾ ದೇವರ ರಾಜ್ಯದ ವಿಷಯವಾದ
ಸಂಗತಿಗಳನ್ನು ಹೇಳುತ್ತಾ ಇದ್ದನು.
4-5 ಹೀಗಿರಲಾಗಿ ಆತನು ಅವರೊಂದಿಗೆ ಕೂಡಿದ್ದಾಗ್ಗೆ
ಅವರಿಗೆ—ಯೋಹಾನನಂತೂ ನೀರಿನಲ್ಲಿ ದೀಕ್ಷಾ
ಸ್ನಾನ ಮಾಡಿಸಿದನು, ನಿಮಗಾದರೋ ಇನ್ನು ಸ್ವಲ್ಪ
ದಿವಸಗಳೊಳಗಾಗಿ ಪವಿತ್ರಾತ್ಮದಲ್ಲಿ ಸ್ನಾನವಾಗುವದು.
ಆದಕಾರಣ ನೀವು ಯೆರೂಸಲೇಮನ್ನು ಬಿಟ್ಟುಹೋಗ
ದೆ ತಂದೆ ಮಾಡಿದಂಥ ನೀವು ನನ್ನಿಂದ ಕೇಳಿದಂಥ
ವಾಗ್ದಾನಕ್ಕೆ ಕಾದುಕೊಂಡಿರ್ರಿ ಎಂದು ಅಪ್ಪಣೆ ಕೊಟ್ಟ
6 ನು. ಕೂಡಿಬಂದವರು ಆತನನ್ನು—ಸ್ವಾಮಿ, ನೀನು
ಇದೇ ಕಾಲದಲ್ಲಿ ಇಸ್ರಾಯೇಲ್ ಜನರಿಗೆ ರಾಜ್ಯವನ್ನು
ತಿರಿಗಿ ಸ್ಥಾಪಿಸಿಕೊಡುವಿಯೋ? ಎಂದು ಕೇಳಲು
7 ಆತನು ಅವರಿಗೆ—ತಂದೆಯು ಸ್ವಂತ ಅಧಿಕಾರದಲ್ಲಿಟ್ಟು
ಕೊಂಡಿರುವ ಕಾಲಗಳನ್ನೂ ಸಮಯಗಳನ್ನೂ ತಿಳು
8 ಕೊಳ್ಳುವದು ನಿಮ್ಮ ಕೆಲಸವಲ್ಲ. ಆದರೆ ಪವಿತ್ರಾತ್ಮ
ನಿಮ್ಮ ಮೇಲೆ ಬರಲು ನೀವು ಬಲವನ್ನು ಹೊಂದಿ
ಯೆರೂಸಲೇಮಿನಲ್ಲಿಯೂ ಎಲ್ಲಾ ಯೂದಾಯ ಸಮಾ
ರ್ಯ ಸೀಮೆಗಳಲ್ಲಿಯೂ ಭೂಲೋಕದ ಕಟ್ಟಕಡೆಯ
9 ವರೆಗೂ ನನಗೆ ಸಾಕ್ಷಿಗಳಾಗಿರಬೇಕು ಅಂದನು. ಈ
ಮಾತುಗಳನ್ನು ಹೇಳಿದ ಬಳಿಕ ಅವರು ನೋಡುತ್ತಾ
ಇದ್ದ ಹಾಗೆ ಆತನು ಏರಿಸಲ್ಪಟ್ಟನು; ಮೋಡವು ಆತ
ನನ್ನು ಕವಿದುಕೊಂಡದ್ದರಿಂದ ಅವರ ಕಣ್ಣಿಗೆ ಮರೆ
10 ಯಾದನು. ಆತನು ಹೋಗುತ್ತಿರುವಾಗ ಅವರು
ಆಕಾಶದ ಕಡೆಗೆ ದೃಷ್ಟಿಸಿ ನೋಡುತ್ತಾ ಇರಲಾಗಿ

ಶುಭ್ರವಸ್ತ್ರಧಾರಿಗಳಾದ ಇಬ್ಬರು ಪುರುಷರು ಫ
ಅವರ ಹತ್ತರ ನಿಂತುಕೊಂಡು—ಗಲಿಲಾಯದವ
ನೀವು ಯಾಕೆ ಆಕಾಶದ ಕಡೆಗೆ ನೋಡುತ್ತಾ ನಿ
ದ್ದೀರಿ? ನಿಮ್ಮ ಬಳಿಯಿಂದ ಆಕಾಶದೊಳಕ್ಕೆ ಸೇರಿಸ
ಟ್ಟಿರುವ ಈ ಯೇಸು ಯಾವ ರೀತಿಯಲ್ಲಿ ಆಕ
ದೊಳಕ್ಕೆ ಹೋಗಿರುವದನ್ನು ನೀವು ಕಂಡಿರೋ ಅ
ರೀತಿಯಲ್ಲಿ ಬರುವನು ಎಂದು ಹೇಳಿದರು.
ಆಗ ಅವರು ಎಣ್ಣೇಮರಗಳ ತೋಪು ಎ
ಕೊಳ್ಳುವ ಗುಡ್ಡದಿಂದ ಯೆರೂಸಲೇಮಿಗೆ ಹಿಂತಿರ
ಬಂದರು. ಆ ಗುಡ್ಡಕ್ಕೂ ಯೆರೂಸಲೇಮಿಗೂ [1]ಸ
ತ್‍ದಿನದಲ್ಲಿ ಪ್ರಯಾಣಮಾಡುವಷ್ಟು ದೂರ. ಅವ
ಅಲ್ಲಿಗೆ ಬಂದು ತಾವು ಇರುತ್ತಿದ್ದ ಮೇಲಂತಸ್ತಿ
ಹೋದರು; ಯಾರಾರಂದರೆ—ಪೇತ್ರ, ಯೋಹಾ
ಯಾಕೋಬ, ಅಂದ್ರೆಯ, ಫಿಲಿಪ್ಪ, ತೋಮ, ಬಾತ
ಲೊಮಾಯ, ಮತ್ತಾಯ, ಅಲ್ಫಾಯನ ಯಾಕೋ
ಮತಾಭಿಮಾನಿ ಅನ್ನಿಸಿಕೊಂಡ ಸೀಮೋನ, ಯಾಕೆ
ಬನ ಯೂದ, ಇವರೇ. ಇವರೆಲ್ಲರು ಏಕಮನಸ್
ದೇವರ ಪ್ರಾರ್ಥನೆಯಲ್ಲಿ ನಿರತರಾಗಿದ್ದರು. ಕೆಲ
ಮಂದಿ ಹೆಂಗಸರೂ ಯೇಸುವಿನ ತಾಯಿಯಾದ ವ
ಯಳೂ ಆತನ ತಮ್ಮಂದಿರೂ ಅವರ ಸಂಗಡ ಇದ್ದ

ಯೂದನಿಗೆ ಬದಲಾಗಿ ಬೇರೊಬ್ಬನನ್ನು ಅಪೊಸ್ತಲನಾಗಿ
ಆದುಕೊಂಡದ್ದು.

ಆ ದಿವಸಗಳಲ್ಲಿ ಸುಮಾರು ನೂರಿಪ್ಪತ್ತು ಮ
ಸಹೋದರರು ಕೂಡಿಬಂದಿರಲಾಗಿ ಪೇತ್ರನು ಅ
ಮಧ್ಯದಲ್ಲಿ ಎದ್ದು ನಿಂತು ಹೀಗಂದನು—ಸಹೋ
ರರೇ, ಯೇಸುವನ್ನು ಹಿಡಿದುಕೊಂಡವರಿಗೆ ದಾರೀತ
ರಿಸಿದ ಯೂದನ ವಿಷಯವಾಗಿ ಪವಿತ್ರಾತ್ಮನು ದಾ
ದನ ಬಾಯಿಂದ ಮೊದಲೇ ಹೇಳಿಸಿದ ಶಾಸ್ತ್ರವಚನ
ನೆರವೇರುವದು ಅವಶ್ಯವಾಗಿತ್ತು. ಯೂದನು ನ
ಲೆಕ್ಕದಲ್ಲಿ ಸೇರಿ ಈ ಸೇವೆಯಲ್ಲಿ ಪಾಲು ಹೊಂದಿದ
ನಾಗಿದ್ದನು. (ಈ ಮನುಷ್ಯನು ತನ್ನ ದ್ರೋಹದಿ
ಸಂಪಾದಿಸಿದ ಹಣಕ್ಕೆ ಒಂದು ಹೊಲವನ್ನು ಕೊಂ
ಕೊಂಡನು; ಮತ್ತು ತಲೆಕೆಳಗಾಗಿ ಬಿದ್ದು ಅ

[1]) ಅಂದರೆ, ಹೆಚ್ಚುಕಡಿಮೆ ಮುಕ್ಕಾಲು ಮೈಲಿ.

ಹೊಟ್ಟೆ ಒಡೆದು ಕರುಳುಗಳೆಲ್ಲಾ ಹೊರಗೆ ಸುರಿದವು.
9 ಇದು ಯೆರೂಸಲೇಮ್ ಪಟ್ಟಣದ ನಿವಾಸಿಗಳಿಗೆಲ್ಲಾ
ತಿಳಿದುಬಂದದರಿಂದ ಆ ಹೊಲಕ್ಕೆ ಅವರ ಮಾತಿನಲ್ಲಿ
ಅಕೆಲ್ದಮಾ, ಅಂದರೆ ಜೀವಹತ್ಯದ ಹೊಲ ಎಂಬ ಹೆಸ
0 ರು ಬಂತು.) ಅವನ ವಿಷಯವಾಗಿ—ಅವನ ಮನೆ
ಹಾಳುಬೀಳಲಿ, ಅದು ಜನಶೂನ್ಯವಾಗಲಿ ಎಂತಲೂ
ಅವನ ಉದ್ಯೋಗವು ಮತ್ತೊಬ್ಬನಿಗಾಗಲಿ ಎಂತಲೂ
1-22 ಕೀರ್ತನೆಗಳ ಗ್ರಂಥದಲ್ಲಿ ಬರೆದದೆ. ಆದದರಿಂದ ಕರ್ತ
ನಾದ ಯೇಸು ನಮ್ಮಲ್ಲಿ ಬರುತ್ತಾ ಹೋಗುತ್ತಾ ಇದ್ದ
ಕಾಲವೆಲ್ಲಾ, ಅಂದರೆ ಯೋಹಾನನು ದೀಕ್ಷಾಸ್ನಾನ
ಮಾಡಿಸಿದ್ದು ಮೊದಲುಗೊಂಡು ಯೇಸು ನಮ್ಮ ಬಳಿ
ಯಿಂದ ಮೇಲಣಲೋಕವನ್ನೇರಿದ ದಿನದ ವರೆಗೂ
ನಮ್ಮ ಜೊತೆಯಲ್ಲಿದ್ದ ವರೊಳಗೆ ಒಬ್ಬನು ನಮ್ಮೊಂದಿಗೆ
ಆತನ ಪುನರುತ್ಥಾನದ ವಿಷಯದಲ್ಲಿ ಸಾಕ್ಷಿಹೇಳುವವ
3 ನಾಗಬೇಕು ಅಂದನು. ಈ ಮಾತುಗಳನ್ನು ಕೇಳಿ ಅವರು
ಯೂಸ್ತನೆನಿಸಿಕೊಳ್ಳುವ ಬಾರ್ಸಬನೆಂಬ ಯೋಸೇಫನ
4-25 ನ್ನೂ ಮತ್ತೀಯನನ್ನೂ ನಿಲ್ಲಿಸಿ ಪ್ರಾರ್ಥನೆ ಮಾಡು
ತ್ತಾ—ಕರ್ತನೇ, ಎಲ್ಲರ ಹೃದಯವನ್ನು ಬಲ್ಲಾತನೇ,
ಯೂದನು ಅಪೊಸ್ತಲತನವೆಂಬ ಈ ಸೇವಾಸ್ಥಾನದಿಂದ
ಭ್ರಷ್ಟನಾಗಿ ತನಗೆ ತಕ್ಕ ಸ್ಥಳಕ್ಕೆ ಹೋಗಿರುವದರಿಂದ ಆ
ಸ್ಥಾನವನ್ನು ಹೊಂದುವದಕ್ಕೆ ಈ ಇಬ್ಬರಲ್ಲಿ ನೀನು ಆರಿಸಿ
ಕೊಂಡವನನ್ನು ತೋರಿಸಿಕೊಡು ಎಂದು ಹೇಳಿದರು.
6 ಆ ಮೇಲೆ ಅವರಿಗೋಸ್ಕರ ಚೀಟುಹಾಕಿದರು. ಚೀಟು
ಮತ್ತೀಯನಿಗೆ ಬಂದದರಿಂದ ಅವನು ಹನ್ನೊಂದು
ಮಂದಿ ಅಪೊಸ್ತಲರ ಸಂಗಡ ಸೇರಿ ಎಣಿಸಲ್ಪಟ್ಟನು.

ಪವಿತ್ರಾತ್ಮನರವು ಬಂದದ್ದು; ಮೂರು ಸಾವಿರ ಜನ
ಶಿಷ್ಯರ ಮಂಡಲಿಗೆ ಸೇರಿದ್ದು.

2 ಪಂಚಾಶತ್ತಮ ದಿನದ ಹಬ್ಬವು ಬಂದಿರಲಾಗಿ ಅವ
2 ರೆಲ್ಲರು ಒಂದೇ ಸ್ಥಳದಲ್ಲಿ ಕೂಡಿದ್ದರು. ಆಗ
ಬಿರುಗಾಳಿ ಬೀಸುತ್ತದೋ ಎಂಬಂತೆ ಫಕ್ಕನೆ ಆಕಾಶ
ದೊಳಗಿಂದ ಒಂದು ಶಬ್ದವುಂಟಾಗಿ ಅವರು ಕೂತಿದ್ದ
3 ಮನೆಯನ್ನೆಲ್ಲಾ ತುಂಬಿಕೊಂಡಿತು. ಅದಲ್ಲದೆ ಉರಿ
ಯಂತಿದ್ದ ನಾಲಿಗೆಗಳು ವಿಂಗಡಿಸಿಕೊಳ್ಳುವ ಹಾಗೆ
ಅವರಿಗೆ ಕಾಣಿಸಿ ಅವರಲ್ಲಿ ಒಬ್ಬೊಬ್ಬರ ಮೇಲೆ
4 ಒಂದೊಂದಾಗಿ ಕೂತುಕೊಂಡವು. ಆಗ ಅವರೆಲ್ಲರು
ಪವಿತ್ರಾತ್ಮಭರಿತರಾಗಿ ಆ ಆತ್ಮ ತಮತಮಗೆ ನುಡಿ
ಯುವ ಶಕ್ತಿಯನ್ನು ಕೊಡುವ ಪ್ರಕಾರ ಬೇರೆಬೇರೆ
ಭಾಷೆಗಳಿಂದ ಮಾತಾಡುವದಕ್ಕೆ ಪ್ರಾರಂಭಿಸಿದರು.
5 1)ಆಕಾಶದ ಕೆಳಗಿರುವ ಎಲ್ಲಾ ದೇಶದವರೊಳಗಿಂದ
ಬಂದ ಸದ್ಭಕ್ತರಾದ ಯೆಹೂದ್ಯರು ಯೆರೂಸಲೇಮಿನಲ್ಲಿ
6 ವಾಸವಾಗಿದ್ದರು. ಆ ಸಪ್ಪಳವಾದಾಗ ಜನರು ಗುಂಪು
ಗುಂಪಾಗಿ ಕೂಡಿಬಂದು ಪ್ರತಿಯೊಬ್ಬರು ತಮ್ಮತಮ್ಮ
ಭಾಷೆಯಲ್ಲೇ ಇವರು ಮಾತಾಡುವದನ್ನು ಕೇಳಿ ಭ್ರಮೆ
7 ಗೊಂಡರು. ಎಲ್ಲರು ಆಶ್ಚರ್ಯದಿಂದ ಬೆರಗಾಗಿ—
ಇಗೋ, ಮಾತಾಡುತ್ತಿರುವ ಇವರೆಲ್ಲರು ಗಲಿಲಾಯ
ದವರಲ್ಲವೇ. ನಾವು ಪ್ರತಿಯೊಬ್ಬರು ನಮ್ಮನಮ್ಮ 8
ಹುಟ್ಟುಭಾಷೆಯಲ್ಲಿ ಇವರು ಮಾತಾಡುವದನ್ನು ಕೇಳು
ತ್ತೇವಲ್ಲಾ, ಇದು ಹೇಗೆ? ಪಾರ್ಥ್ಯರೂ ಮೇದ್ಯರೂ 9
ಏಲಾಮ್ಯರೂ ಮೆಸೊಪೊತಾಮ್ಯ, ಯೂದಾಯ, ಕಪ್ಪ
ದೋಕ್ಯ, ಪೊಂತ, ಆಸ್ಯ, ಫ್ರುಗ್ಯ, ಪಂಫುಲ್ಯ, ಐಗುಪ್ತ, 10
ಕುರೇನೆಯ ಮಗ್ಗುಲಲ್ಲಿರುವ ಲಿಬ್ಯ, ಈ ಸೀಮೆಗಳಲ್ಲಿ
ವಾಸವಾಗಿರುವವರೂ ರೋಮಾಪುರದಿಂದ ಬಂದು ಇಳಿ
ದಿರುವ ಯೆಹೂದ್ಯರೂ ಯೆಹೂದ್ಯ ಮತಾವಲಂಬಿ
ಗಳೂ ಕ್ರೇತ್ಯರೂ ಅರಬೀದೇಶದವರೂ ಆಗಿರುವ ನಾವು 11
ನಮ್ಮನಮ್ಮ ಭಾಷೆಗಳಲ್ಲಿ ಇವರು ದೇವರ ಮಹತ್ತುಗಳ
ವಿಷಯವಾಗಿ ಹೇಳುವದನ್ನು ಕೇಳುತ್ತೇವೆ ಅಂದು
ಕೊಂಡರು. ಎಲ್ಲರೂ ಬೆರಗಾಗಿ ಕಳವಳಗೊಂಡು— 12
ಇದೇನಾಗಿರಬಹುದು ಎಂದು ಒಬ್ಬರನ್ನೊಬ್ಬರು ಕೇಳು
ತ್ತಿದ್ದರು. ಕೆಲವರು—ಇವರು ಮದ್ಯಪಾನ ಮಾಡಿ 13
ಮತ್ತರಾಗಿದ್ದಾರೆಂದು ಹಾಸ್ಯಮಾಡಿದರು.
ಆಗ ಪೇತ್ರನು ಹನ್ನೊಂದು ಮಂದಿ ಅಪೊಸ್ತಲರ 14
ಸಹಿತ ಎದ್ದು ನಿಂತು ಘಟ್ಟಿಯಾದ ಧ್ವನಿಯಿಂದ ಅವ
ರಿಗೆ ಹೀಗೆ ಪ್ರಸಂಗಮಾಡಿದನು—ಯೆಹೂದ್ಯರೇ,
ಯೆರೂಸಲೇಮಿನಲ್ಲಿ ವಾಸವಾಗಿರುವ ಎಲ್ಲಾ ಜನರೇ,
ಈ ಸಂಗತಿಯು ಏನೆಂದು ನಿಮಗೆ ಗೊತ್ತಾಗುವ ಹಾಗೆ
ನನ್ನ ಮಾತಿಗೆ ಕಿವಿಗೊಡಿರಿ; ನೀವು ಭಾವಿಸಿದಂತೆ 15
ಇವರು ಅಮಲೇರಿದವರಲ್ಲ; ಈಗ 2)ಬೆಳಿಗ್ಗೆ ಒಂಭತ್ತು
ಘಂಟೆಯಾಗಿದೆಯಷ್ಟೆ. ಆದರೆ ಇದು ಪ್ರವಾದಿಯಾದ 16
ಯೋವೇಲನ ಮೂಲಕವಾಗಿ ಹೇಳಿಸಿದ ಸಂಗತಿ.
ಅದೇನಂದರೆ—

ಕಡೇ ದಿವಸಗಳಲ್ಲಿ ನಾನು ಎಲ್ಲಾ ಮನು 17
ಷ್ಯರ ಮೇಲೆ ನನ್ನ ಆತ್ಮವನ್ನು ಸುರಿಸು
ವೆನು;
ನಿಮ್ಮಲ್ಲಿರುವ ಗಂಡಸರೂ ಹೆಂಗಸರೂ ಪ್ರವಾ
ದಿಸುವರು;
ನಿಮ್ಮ ಯೌವನಸ್ಥರಿಗೆ ದಿವ್ಯದರ್ಶನಗಳಾಗು
ವವು;
ನಿಮ್ಮ ಹಿರಿಯರಿಗೆ ಕನಸುಗಳು ಬೀಳುವವು;
ಇದಲ್ಲದೆ ಆ ದಿನಗಳಲ್ಲಿ ನನ್ನ ದಾಸದಾಸಿ 18
ಯರ ಮೇಲೆಯೂ ನನ್ನ ಆತ್ಮವನ್ನು ಸುರಿ
ಸುವೆನು;
ಅವರೂ ಪ್ರವಾದಿಸುವರು.
ಕರ್ತನ ಆಗಮನದ ಗಂಭೀರವಾದ ಮಹಾ 19-20
ದಿನವು ಬರುವದಕ್ಕೆ ಮುಂಚೆ
ಮೇಲೆ ಆಕಾಶದಲ್ಲಿ ಅದ್ಭುತಕಾರ್ಯಗಳನ್ನೂ
ಕೆಳಗೆ ಭೂಮಿಯಲ್ಲಿ ಸೂಚಕಕಾರ್ಯಗ
ಳನ್ನೂ ಉಂಟುಮಾಡುವೆನು.
ರಕ್ತ, ಬೆಂಕಿ, ಹಬೆಯಂತೆ ಏರುವ ಹೊಗೆ,
ಇವು ಉಂಟಾಗುವವು.
ಸೂರ್ಯನು ಕತ್ತಲಾಗುವನು, ಚಂದ್ರನು
ರಕ್ತವಾಗುವನು;
ಆದರೂ ಕರ್ತನ ನಾಮವನ್ನು ಹೇಳಿಕೊಳ್ಳು 21

1) ಅಂದರೆ, ಲೋಕದಲ್ಲಿರುವ. 2) ಮೂಲ: ಮೂರು ತಾಸಾಗಿದೆಯಷ್ಟೆ.

ವವರೆಲ್ಲರಿಗೆ ರಕ್ಷಣೆಯಾಗುವದೆಂದು ದೇ
ವರು ಹೇಳುತ್ತಾನೆ ಎಂಬದೇ.
22 ಇಸ್ರಾಯೇಲ್ ಜನರೇ, ನನ್ನ ಮಾತುಗಳನ್ನು ಲಾಲಿ
ಸಿರಿ—ನಜರೇತಿನ ಯೇಸು ಇದ್ದನಲ್ಲಾ, ದೇವರು
ನಿಮಗೂ ತಿಳಿದಿರುವಂತೆ ಆತನ ಕೈಯಿಂದ ಮಹತ್ತು
ಗಳನ್ನೂ ಅದ್ಭುತಗಳನ್ನೂ ಸೂಚಕಕಾರ್ಯಗಳನ್ನೂ
ನಿಮ್ಮಲ್ಲಿ ನಡಿಸಿ ಆತನನ್ನು ತನಗೆ ಮೆಚ್ಚಿಕೆಯಾದವ
23 ನೆಂದು ನಿಮಗೆ ತೋರಿಸಿಕೊಟ್ಟನು. ಆ ಯೇಸು
ದೇವರ ಸ್ಥಿರಸಂಕಲ್ಪಕ್ಕೂ ಭವಿಷ್ಯದ್‌ಜ್ಞಾನಕ್ಕೂ ಅನು
ಸಾರವಾಗಿ ಒಪ್ಪಿಸಲ್ಪಟ್ಟಿರಲು ನೀವು ಅನ್ಯಜನರ
ಕೈಯಿಂದ ಆತನನ್ನು ಶಿಲುಬೆಗೆ ಹಾಕಿಸಿ ಕೊಂದಿರಿ.
24 ಆತನನ್ನು ದೇವರು 1)ಮರಣವೇದನೆಗಳಿಂದ ಬಿಡಿಸಿ
ಎಬ್ಬಿಸಿದನು; ಯಾಕಂದರೆ ಮರಣವು ಆತನನ್ನು ಹಿಡು
25 ಕೊಂಡಿರುವದು ಅಸಾಧ್ಯವಾಗಿತ್ತು. ಆತನ ವಿಷಯ
ದಲ್ಲಿ ದಾವೀದನು—

ಕರ್ತನು ಯಾವಾಗಲೂ ನನ್ನೆದುರಿನಲ್ಲಿರು
ವದನ್ನು ನೋಡುತ್ತಿದ್ದೆನು.
ನಾನು ಕದಲದಂತೆ ಆತನು ನನ್ನ ಬಲಗಡೆ
ಯಲ್ಲಿಯೇ ಇದ್ದಾನೆ.
26 ಆದಕಾರಣ ನನ್ನ ಹೃದಯವು ಹರ್ಷಿಸಿತು;
ನನ್ನ ನಾಲಿಗೆಯು ಉಲ್ಲಾಸಧ್ವನಿಯನ್ನು ಮಾ
ಡಿತು.
ನನ್ನ ಶರೀರವೂ ನಿರೀಕ್ಷೆಯಿಂದ ನೆಲೆಯಾಗಿರು
ವದು;
27 ಯಾಕಂದರೆ ನೀನು ನನ್ನ ಜೀವಾತ್ಮವನ್ನು
ಪಾತಾಳದಲ್ಲಿ ಬಿಡುವದಿಲ್ಲ,
ನಿನ್ನ ಪ್ರಿಯನಿಗೆ 2)ಕೊಳೆಯುವ ಅವಸ್ಥೆಯನ್ನು
ನೋಡಗೊಡಿಸುವದಿಲ್ಲ.
28 ಜೀವಮಾರ್ಗಗಳನ್ನು ನನಗೆ ತಿಳಿಯಪಡಿಸಿದ್ದೀ;
ನಿನ್ನ ಸಮ್ಮುಖದಲ್ಲಿ ನನ್ನನ್ನು ಆನಂದಭರಿತ
ನಾಗಮಾಡುವಿ

29 ಎಂದು ಹೇಳಿದ್ದಾನೆ. ಸಹೋದರರೇ, ಮೂಲಪಿತೃ
ವಾದ ದಾವೀದನ ವಿಷಯದಲ್ಲಿ ನಾನು ಧೈರ್ಯದಿಂದ
ನಿಮ್ಮ ಸಂಗಡ ಮಾತಾಡಬಹುದು ಏನಂದರೆ—ಅವನು
ತೀರಿಹೋಗಿ ಹೂಣಲ್ಪಟ್ಟನು; ಅವನ ಸಮಾಧಿ ಈ
30 ದಿನದ ವರೆಗೂ ನಮ್ಮಲ್ಲಿ ಅದೆ. ಅವನು ಪ್ರವಾದಿ
ಯಾಗಿದ್ದು—ನಿನ್ನ ಸಂತತಿಯವರೊಳಗೆ ಒಬ್ಬನನ್ನು
ನಾನು ನಿನ್ನ ಸಿಂಹಾಸನದ ಮೇಲೆ ಕುಳ್ಳಿರಿಸುವೆನೆಂದು
ತನಗೆ ದೇವರು ಆಣೆಯಿಟ್ಟು ಹೇಳಿದ್ದನ್ನು ಬಲ್ಲವನಾಗಿ
31 ಮುಂದಾಗುವದನ್ನು ಕಂಡು ಕ್ರಿಸ್ತನ ಪುನರುತ್ಥಾನ
ವನ್ನೇ ಕುರಿತು—ಆತನು ಪಾತಾಳದಲ್ಲಿ ಬಿಡಲ್ಪಡ
ಲಿಲ್ಲವೆಂತಲೂ ಆತನ ಶರೀರವು ಕೊಳೆಯುವ ಅವಸ್ಥೆ
32 ಯನ್ನನುಭವಿಸುವದಿಲ್ಲವೆಂತಲೂ ಹೇಳಿದನು. ಈ
ಯೇಸುವನ್ನೇ ದೇವರು ಎಬ್ಬಿಸಿದನು; ಇದಕ್ಕೆ ನಾವೆ
33 ಲ್ಲರು ಸಾಕ್ಷಿಗಳಾಗಿದ್ದೇವೆ. ಆತನು ದೇವರ ಬಲಗೈ
ಯಿಂದ ಉನ್ನತಸ್ಥಾನಕ್ಕೆ ಏರಿಸಲ್ಪಟ್ಟು ವಾಗ್ದಾನವಾ
ಗಿದ್ದ ಪವಿತ್ರಾತ್ಮವರವನ್ನು ತಂದೆಯಿಂದ ಹೊಂದಿ ನೀವು
ನೋಡಿ ಕೇಳುವದನ್ನು ಸುರಿಸಿದ್ದಾನೆ. ದಾವೀದನು
ಆಕಾಶಕ್ಕೆ ಏರಿಹೋಗಲಿಲ್ಲವಲ್ಲಾ. ತಾನೇ ಹೇಳ
ಮಾತೇನಂದರೆ—

ನಾನು ನಿನ್ನ ವಿರೋಧಿಗಳನ್ನು ನಿನ್ನ ಪಾ
ಗಳಿಗೆ ಪೀಠವಾಗಿ ಮಾಡುವ ತನಕ
ನನ್ನ ಬಲಗಡೆಯಲ್ಲಿ ಕೂತುಕೊಂಡಿರು ಎಂ
ಕರ್ತನು ನನ್ನ ಒಡೆಯನಿಗೆ ನುಡಿದ
ಎಂಬದೇ.

ಆದದರಿಂದ ನೀವು ಶಿಲುಬೆಗೆ ಹಾಕಿಸಿದ ಈ ಯೇಸು
ನ್ನೇ ದೇವರು ಒಡೆಯನನ್ನಾಗಿಯೂ ಕ್ರಿಸ್ತನನ್ನಾಗಿಯ
ಮಾಡಿದ್ದಾನೆಂಬದು ಇಸ್ರಾಯೇಲ್ ಕುಲದವರಿಗೆಲ
ನಿಸ್ಸಂದೇಹವಾಗಿ ತಿಳಿದಿರಲಿ ಎಂದು ಹೇಳಿದನು.

ಇದನ್ನು ಅವರು ಕೇಳಿ ಹೃದಯದಲ್ಲಿ ಅಲ
ನೆಟ್ಟಂತಾಗಿ ಪೇತ್ರನನ್ನೂ ಉಳಿದ ಅಪೊಸ್ತಲರನ್ನೂ
ಸಹೋದರರೇ, ನಾವೇನು ಮಾಡಬೇಕು ಎಂದು ಕೇ
ಲು ಪೇತ್ರನು ಅವರಿಗೆ—ನಿಮ್ಮ ಪಾಪಗಳು ಪರಿಹಾ
ವಾಗುವದಕ್ಕಾಗಿ ನಿಮ್ಮಲ್ಲಿ ಪ್ರತಿಯೊಬ್ಬರು ದೇವ
ಕಡೆಗೆ ತಿರುಗಿಕೊಂಡು 3)ಯೇಸು ಕ್ರಿಸ್ತನ ಹೆಸರಿ
ಮೇಲೆ ದೀಕ್ಷಾಸ್ನಾನಮಾಡಿಸಿಕೊಳ್ಳಿರಿ, ಆಗ ನೀ
ಪವಿತ್ರಾತ್ಮದಾನವನ್ನು ಹೊಂದುವಿರಿ; ಆ ವಾಗ್ದಾನ
ನಿಮಗೂ ನಿಮ್ಮ ಮಕ್ಕಳಿಗೂ ದೂರವಾಗಿರುವ
ರೆಲ್ಲರಿಗೂ ಅಂತೂ ನಮ್ಮ ದೇವರಾಗಿರುವ ಕರ್ತನ
ತನ್ನ ಕಡೆಗೆ ಕರೆಯುವವರೆಲ್ಲರಿಗೆ ಮಾಡೋಣವಾಗಿ
ಎಂದು ಹೇಳಿದನು. ಬೇರೆ ಅನೇಕವಾದ ಮಾತ
ಗಳಿಂದ ಅವನು ಖಂಡಿತವಾಗಿ ಸಾಕ್ಷಿನುಡಿದು—ವಕ್ರ
ಬುದ್ಧಿಯುಳ್ಳ ಈ ಸಂತತಿಯವರಿಂದ ತಪ್ಪಿಸಿಕೊಳ್ಳಿ
ಎಂದು ಅವರನ್ನು ಎಚ್ಚರಿಸಿದನು. ಅವನ ಮಾತಿ
ಒಪ್ಪಿಕೊಂಡವರು ದೀಕ್ಷಾಸ್ನಾನಮಾಡಿಸಿಕೊಂಡರು
ಆ ದಿವಸ ಸುಮಾರು ಮೂರು ಸಾವಿರ ಜನರು ಅ
ರಲ್ಲಿ ಸೇರಿದರು. ಇವರು ಅಪೊಸ್ತಲರ ಬೋಧನ
ಯನ್ನು ಕೇಳುವದರಲ್ಲಿಯೂ ಸಹೋದರರ ಅನ್ಯೋ
ನ್ಯತೆಯಲ್ಲಿಯೂ ರೊಟ್ಟಿಮುರಿಯುವದರಲ್ಲಿಯೂ ಪ್ರಾ
ರ್ಥನೆಗಳಲ್ಲಿಯೂ ನಿರತರಾಗಿದ್ದರು.

ಎಲ್ಲರಿಗೂ ಭಯ ಉಂಟಾಯಿತು; ಇದಲ್ಲದ
ಅನೇಕ ಅದ್ಭುತಕಾರ್ಯಗಳೂ ಸೂಚಕಕಾರ್ಯಗಳೂ
ಅಪೊಸ್ತಲರ ಕೈಯಿಂದ ನಡೆದವು. ನಂಬಿದವರೆಲ್ಲರು
ಒಗ್ಗಟ್ಟಾಗಿದ್ದು ತಮ್ಮದೆಲ್ಲವನ್ನೂ ಹುದುವಾಗಿ ಅನು
ಭೋಗಿಸುತ್ತಾ ತಮ್ಮತಮ್ಮ ಚರಸ್ಥಿರಸೊತ್ತುಗಳನ್ನು
ಮಾರಿ ಬಂದ ಹಣವನ್ನು ಎಲ್ಲರಿಗೂ ಅವರವರ ಆಗತ್ಯ
ವಿದ್ದ ಹಾಗೆ ಹಂಚಿಕೊಡುತ್ತಾ ಇದ್ದರು. ಅವರು
ದಿನಾಲು ಏಕಮನಸ್ಸಿನಿಂದ ದೇವಾಲಯದಲ್ಲಿ ಕೂ
ಡುತ್ತಾ ಮನೆಮನೆಗಳಲ್ಲಿ ರೊಟ್ಟಿಮುರಿದು ಉಲ್ಲಾಸ
ದಿಂದಲೂ ಸರಲ ಹೃದಯದಿಂದಲೂ ಊಟಮಾಡುತ್ತಾ
ಇದ್ದರು; ದೇವರನ್ನು ಕೊಂಡಾಡುವವರಾಗಿಯೂ ಜನ
ರೆಲ್ಲರ ದಯವನ್ನು ಹೊಂದುವವರಾಗಿಯೂ ಇದ್ದರು
ಕರ್ತನು ರಕ್ಷಣೆಯ ಮಾರ್ಗದಲ್ಲಿರುವವರನ್ನು ದಿನಾ
ಲು ಅವರ ಮಂಡಲಿಗೆ ಸೇರಿಸುತ್ತಿದ್ದನು.

1) ಅಥವಾ, ಮರಣಬಂಧನಗಳಿಂದ. 2) ಮೂಲದ ಸಾಮಾನ್ಯಾರ್ಥ: ನಾಶ. 3) ಅಥವಾ, ಯೇಸುವನ್ನೇ ಕ್ರಿಸ್ತನೆಂದು ಸ

ಹುಟ್ಟುಕುಂಟನು ಪೇತ್ರನ ಮೂಲಕ ನಡೆಯುವ ಶಕ್ತಿಯನ್ನು
ಹೊಂದಿದ್ದು. ಪೇತ್ರನು ಯೇಸುವಿನ ಮಹಿಮೆಯ
ವಿಷಯದಲ್ಲಿ ಉಪನ್ಯಾಸಮಾಡಿದ್ದು.

3 ಒಂದಾನೊಂದು ದಿವಸ ಪೇತ್ರ ಯೋಹಾನರು
1)ಮಧ್ಯಾಹ್ನದ ಮೇಲೆ ಮೂರು ಘಂಟೆಗೆ ನಡೆಯ
ತಕ್ಕ ಪ್ರಾರ್ಥನೆಗಾಗಿ ದೇವಾಲಯಕ್ಕೆ ಹೋಗುತ್ತಿರಲು
ಹುಟ್ಟುಕುಂಟನಾಗಿದ್ದ ಒಬ್ಬ ಮನುಷ್ಯನನ್ನು ಯಾರೋ
ಹೊತ್ತುಕೊಂಡು ಬಂದರು. ದೇವಾಲಯದೊಳಕ್ಕೆ
ಹೋಗುವವರಿಂದ ಭಿಕ್ಷಬೇಡುವದಕ್ಕಾಗಿ ಅವನನ್ನು
ದೇವಾಲಯದ ಸುಂದರದ್ವಾರವೆಂಬ ಬಾಗಿಲಿನಲ್ಲಿ
ದಿನಾಲು ಕೂಡ್ರಿಸುತ್ತಿದ್ದರು. ಅವನು ದೇವಾಲಯ
ದೊಳಕ್ಕೆ ಹೋಗುತ್ತಿರುವ ಪೇತ್ರ ಯೋಹಾನರನ್ನು
ಕಂಡು ಭಿಕ್ಷಾಕೊಡಬೇಕು ಎಂದು ಕೇಳಲು ಪೇತ್ರ
ಯೋಹಾನರಿಬ್ಬರೂ ಅವನನ್ನು ದೃಷ್ಟಿಸಿ ನೋಡಿದರು.
ಪೇತ್ರನು—ನಮ್ಮನ್ನು ನೋಡು ಅಂದನು. ಅವನು
ಅವರಿಂದ ಏನಾದರೂ ದೊರಕೀತೆಂದು ನಿರೀಕ್ಷಿಸಿ ಅವ
ರನ್ನು ಲಕ್ಷ್ಯವಿಟ್ಟು ನೋಡಿದನು. ಆಗ ಪೇತ್ರನು—
ಬೆಳ್ಳಿಭಂಗಾರವಂತೂ ನನ್ನಲ್ಲಿಲ್ಲ, ನನ್ನಲ್ಲಿರುವದನ್ನು
ನಿನಗೆ ಕೊಡುತ್ತೇನೆ. ನಜರೇತಿನ ಯೇಸುಕ್ರಿಸ್ತನ
ಹೆಸರಿನಲ್ಲೇ ಎದ್ದು ನಡೆದಾಡು ಎಂದು ಹೇಳಿ ಅವನನ್ನು
ಬಲಗೈಹಿಡಿದು ಎತ್ತಿದನು. ಆ ಕ್ಷಣವೇ ಅವನ ಕಾಲು
ಗಳಿಗೂ ಹರಡುಗಳಿಗೂ ಬಲಬಂತು; ಅವನು ಹಾರಿ
ನಿಂತು ನಡೆದಾಡಿದನು; ನಡೆಯುತ್ತಾ ಹಾರುತ್ತಾ ದೇವ
ರನ್ನು ಕೊಂಡಾಡುತ್ತಾ ಅವರ ಜೊತೆಯಲ್ಲಿ ದೇವಾ
ಲಯದೊಳಗೆ ಹೋದನು. ಅವನು ನಡೆಯುತ್ತಾ
ದೇವರನ್ನು ಕೊಂಡಾಡುತ್ತಾ ಇರುವದನ್ನು ಜನರೆಲ್ಲರು
ನೋಡಿ ಇವನು ದೇವಾಲಯದ ಸುಂದರದ್ವಾರವೆಂಬ
ಬಾಗಿಲಿನಲ್ಲಿ ಕೂತು ಭಿಕ್ಷಾಬೇಡುತ್ತಿದ್ದವನೆಂದು ಗುರು
ತುಹಿಡಿದು ಅವನಿಗೆ ಸಂಭವಿಸಿದ್ದಕ್ಕೆ ವಿಸ್ಮಯಹಿಡಿದವ
ರಾಗಿ ಬಹಳ ಬೆರಗಾದರು.

ಅವನು ಪೇತ್ರ ಯೋಹಾನರನ್ನು ಹಿಡುಕೊಂಡೇ
ಇರುವಾಗ ಆಶ್ಚರ್ಯಪಡುತ್ತಿರುವ ಆ ಜನರೆಲ್ಲರು
ಅವರ ಬಳಿಗೆ ಸೊಲೊಮೋನನದೆಂಬ ಹೆಸರುಳ್ಳ ಮಂಟ
ಪಕ್ಕೆ ಗುಂಪುಗುಂಪಾಗಿ ಓಡಿಬಂದರು. ಪೇತ್ರನು
ಇದನ್ನು ನೋಡಿ ಜನರಿಗೆ—ಇಸ್ರಾಯೇಲ್ ಜನರೇ,
ನೀವು ಯಾಕೆ ಇದಕ್ಕೆ ಆಶ್ಚರ್ಯಪಡುತ್ತೀರಿ? ನೀವು
ನಮ್ಮ ಮೇಲೆ ದೃಷ್ಟಿಯಿಟ್ಟು ನೋಡುವದೇನು? ನಾವು
ಸ್ವಂತ ಶಕ್ತಿಯಿಂದಾಗಲಿ ದೇವಭಕ್ತಿಯಿಂದಾಗಲಿ ಇವ
ನನ್ನು ನಡೆಯುವಂತೆ ಮಾಡಿದೆವೆಂದು ಭಾವಿಸಬೇಡಿರಿ.
ನಮ್ಮ ಪಿತೃಗಳಾದ ಅಬ್ರಹಾಮ ಇಸಾಕ ಯಾಕೋ
ಬರ ದೇವರು ತನ್ನ ಸೇವಕನಾದ ಯೇಸುವನ್ನು ಮಹಿ
ಮೆಪಡಿಸಿದ್ದಾನೆ. ನೀವಂತೂ ಆತನನ್ನು ಹಿಡಿದು
ಕೊಟ್ಟಿರಿ; ಮತ್ತು ಪಿಲಾತನು ಆತನನ್ನು ಬಿಡಿಸ
ಬೇಕೆಂದು ನಿರ್ಣಯಿಸಿದಾಗ ಆತನನ್ನು ಬೇಡವೆಂದಿರಿ.
ನೀವು ಪರಿಶುದ್ಧನೂ ನೀತಿವಂತನೂ ಆಗಿರುವ ಪುರುಷ 14
ನನ್ನು ಬೇಡವೆಂದು ಹೇಳಿ ಕೊಲೆಗಾರನಾದ ಮನುಷ್ಯ
ನನ್ನು ಬಿಡಿಸಿಕೊಡಬೇಕೆಂದು ಬೇಡಿಕೊಂಡು ಜೀವ
ನಾಯಕನನ್ನು ಕೊಲ್ಲಿಸಿದಿರಿ. ಆದರೆ ದೇವರು ಆತ 15
ನನ್ನು ಸತ್ತವರೊಳಗಿಂದ ಎಬ್ಬಿಸಿದನು; ಈ ವಿಷಯ
ದಲ್ಲಿ ನಾವೇ ಸಾಕ್ಷಿಗಳು. ನೀವು ನೋಡುವಂಥ ನಿಮ 16
ಗೆ ಗುರುತಿರುವಂಥ ಈ ಮನುಷ್ಯನು ನೆಟ್ಟಗಾದದ್ದಕ್ಕೆ
ಆತನ ಹೆಸರಿನಲ್ಲಿ ಇಟ್ಟ ನಂಬಿಕೆಯೇ ಕಾರಣ; ಆ
ಹೆಸರೇ ಇವನನ್ನು ಬಲಪಡಿಸಿತು. ಆತನ ಮೂಲಕ
ಉಂಟಾಗಿರುವ ನಂಬಿಕೆಯೇ ಇವನಿಗೆ ನಿಮ್ಮೆಲ್ಲರ
ಮುಂದೆ ಪೂರ್ಣಕ್ಷೇಮವನ್ನು ಕೊಟ್ಟಿತು.

ಸಹೋದರರೇ, ಅದಿರಲಿ, ನೀವು ಆ ಕಾರ್ಯವನ್ನು 17
ತಿಳಿಯದೆ ಮಾಡಿದಿರೆಂದು ಬಲ್ಲೆನು; ನಿಮ್ಮ ಅಧಿ
ಕಾರಿಗಳೂ ತಿಳಿಯದೆ ಮಾಡಿದರು. ಆದರೆ ದೇವರು 18
ತಾನು ನೇಮಿಸಿದ ಕ್ರಿಸ್ತನು ಬಾಧೆಯನ್ನನುಭವಿಸಿ
ಸಾಯಬೇಕೆಂಬದಾಗಿ ಎಲ್ಲಾ ಪ್ರವಾದಿಗಳ ಬಾಯಿಂದ
ಮುಂಚಿತವಾಗಿ ಹೇಳಿಸಿದ ಮಾತನ್ನು ಹೀಗೆ ನೆರವೇರಿಸಿ
ದನು. ಆದದರಿಂದ ದೇವರು ನಿಮ್ಮ ಪಾಪಗಳನ್ನು 19
ಅಳಿಸಿಬಿಡುವ ಹಾಗೆ ನೀವು ಪಶ್ಚಾತ್ತಾಪಪಟ್ಟು ಆತನ
ಕಡೆಗೆ ತಿರುಗಿಕೊಳ್ಳಿರಿ. ತಿರುಗಿದರೆ ದೇವರ ಸನ್ನಿಧಾನ
ದಿಂದ ವಿಶ್ರಾಂತಿಕಾಲಗಳು ಒದಗಿ ಆತನು ನಿಮಗೆ 20
ನೇಮಕವಾಗಿರುವ ಕ್ರಿಸ್ತನಾದ ಯೇಸುವನ್ನು ಕಳುಹಿ
ಸಿಕೊಡುವನು. ಆದರೆ ಸಮಸ್ತವನ್ನು ಸರಿಮಾಡುವ 21
ಕಾಲವು ಬರುವ ತನಕ ಪರಲೋಕವೇ ಆ ಕ್ರಿಸ್ತನ
ಸ್ಥಾನವಾಗಿರಬೇಕು. ಆ ಕಾಲದ ವಿಷಯವಾಗಿ ದೇವ
ರು ಪೂರ್ವದಲ್ಲಿದ್ದ ತನ್ನ ಪರಿಶುದ್ಧ ಪ್ರವಾದಿಗಳ
ಬಾಯಿಂದ ಹೇಳಿಸಿದ್ದಾನೆ. ಮೋಶೆಯು ಹೇಳಿದ್ದೇನಂದ 22
ರೆ—ದೇವರಾಗಿರುವ ಕರ್ತನು ನನ್ನನ್ನು ಏರ್ಪಡಿಸಿ
ದಂತೆ ನಿಮ್ಮ ಸಹೋದರರಲ್ಲಿ ಮತ್ತೊಬ್ಬ ಪ್ರವಾದಿ
ಯನ್ನು ನಿಮಗೆ ಏರ್ಪಡಿಸಿಕೊಡುವನು, ಆತನು ನಿಮ
ಗೆ ಹೇಳುವ ಎಲ್ಲಾ ಮಾತುಗಳಿಗೆ ಕಿವಿಗೊಡಬೇಕು;
ಆ ಪ್ರವಾದಿಯ ಮಾತನ್ನು ಕೇಳದಿರುವ ಪ್ರತಿಯೊಬ್ಬ 23
ನು ನಮ್ಮ ಜನರೊಳಗಿಂದ ಸಂಪೂರ್ಣವಾಗಿ ನಾಶವಾಗು
ವನು ಎಂಬದೇ. ಇದಲ್ಲದೆ ಸಮುವೇಲನೂ ಅವನ 24
ತರುವಾಯ ಬಂದು ಪ್ರವಾದಿಸಿದ ಎಲ್ಲಾ ಪ್ರವಾದಿ
ಗಳೂ ಸಹ ಈಗಿನ ದಿನಗಳ ವಿಷಯದಲ್ಲಿ ತಿಳಿಸಿದರು.
ನೀವು ಪ್ರವಾದಿಗಳ ಶಿಷ್ಯರೂ ದೇವರು ನಮ್ಮ ಪಿತೃಗಳ 25
ಸಂಗಡ ಮಾಡಿಕೊಂಡ ಒಡಂಬಡಿಕೆಗೆ ಬಾಧ್ಯರೂ ಆಗಿ
ದ್ದೀರಿ. ಆತನು ಅಬ್ರಹಾಮನಿಗೆ—ನಿನ್ನ ಸಂತತಿಯ
ಮೂಲಕ ಭೂಲೋಕದ ಎಲ್ಲಾ ಕುಲದವರಿಗೂ ಆಶೀ
ರ್ವಾದವುಂಟಾಗುವದು ಎಂದು ಹೇಳಿ ಆ ಒಡಂಬಡಿಕೆ
ಯನ್ನು ಮಾಡಿಕೊಂಡನಲ್ಲಾ. ಮೊದಲು ನಿಮಗಾಗಿ 26
ಯೇ ದೇವರು ತನ್ನ ಸೇವಕನನ್ನು ಏರ್ಪಡಿಸಿ ಈತನು
ನಿಮ್ಮಲ್ಲಿ ಪ್ರತಿಯೊಬ್ಬನನ್ನು ಅವನವನ ಕೆಟ್ಟ ನಡತೆ
ಗಳಿಂದ ತಿರುಗಿಸಿ ನಿಮ್ಮನ್ನು ಆಶೀರ್ವದಿಸಬೇಕೆಂದು
ಆತನನ್ನು ಕಳುಹಿಸಿಕೊಟ್ಟಿದ್ದಾನೆ ಎಂದು ಹೇಳಿದನು.

1) ಮೂಲ: ಒಂಭತ್ತನೇ ತಾಸಿನಲ್ಲಿ.

ಯೆಹೂದ್ಯರ ಅಧಿಕಾರಿಗಳು ಪೇತ್ರ ಯೋಹಾನರನ್ನು ಹಿಡಿಸಿ
ಯೇಸುವಿನ ಹೆಸರನ್ನು ಎತ್ತಬಾರದೆಂದು ಆಜ್ಞೆಮಾಡಲು
ಅವರು ಧೈರ್ಯವಾಗಿ ಉತ್ತರಕೊಟ್ಟದ್ದು.

4 ಅಪೊಸ್ತಲರು ಜನರಿಗೆ ಉಪದೇಶಮಾಡುತ್ತಾ
2 ಸತ್ತವರು ಜೀವಿತರಾಗಿ ಏಳುವರು ಎಂಬದನ್ನು
ಯೇಸುವಿನ ದೃಷ್ಟಾಂತದಿಂದ ಸಾರುತ್ತಾ ಇದ್ದದ್ದಕ್ಕೆ
ಯಾಜಕರೂ ದೇವಾಲಯದ ಅಧಿಪತಿಯೂ ಸದ್ದು
ಕಾಯರೂ ಅಸಮಾಧಾನಪಟ್ಟು ಅಪೊಸ್ತಲರು ಜನರ
3 ಸಂಗಡ ಮಾತಾಡುತ್ತಿರುವಾಗಲೇ ಬಂದು ಅವರನ್ನು
ಹಿಡಿದು ಆಗಲೇ ಸಾಯಂಕಾಲವಾಗಿದ್ದದರಿಂದ ಮರು
4 ದಿನದ ವರೆಗೆ ಕಾವಲಲ್ಲಿಟ್ಟರು. ಆದರೆ ವಾಕ್ಯವನ್ನು
ಕೇಳಿದವರಲ್ಲಿ ಅನೇಕರು ನಂಬಿದರು; ಗಂಡಸರ ಸಂಖ್ಯೆ
ಸುಮಾರು ಐದು ಸಾವಿರ ತನಕ ಬೆಳೆಯಿತು.
5 ಮರುದಿನ ಯೆಹೂದ್ಯರ ಅಧಿಕಾರಿಗಳೂ ಹಿರಿಯ
ರೂ ಶಾಸ್ತ್ರಿಗಳೂ ಯೆರೂಸಲೇಮಿನಲ್ಲಿ ಕೂಡಿಬಂದರು.
6 ಅನ್ನನೆಂಬ ಮಹಾಯಾಜಕನೂ ಕಾಯಫನೂ ಯೋಹಾ
ನನೂ ಅಲೆಕ್ಸಾಂದ್ರನೂ ಮಹಾಯಾಜಕನ ಸಂಬಂಧಿ
7 ಗಳೆಲ್ಲರೂ ಇದ್ದರು. ಇವರು ಪೇತ್ರ ಯೋಹಾನರನ್ನು
ನಡುವೆ ನಿಲ್ಲಿಸಿ—ನೀವು ಎಂಥಾ ಶಕ್ತಿಯಿಂದ ಇಲ್ಲವೆ
ಎಂಥಾ ಹೆಸರಿನಿಂದ ಇದನ್ನು ಮಾಡಿದಿರಿ ಎಂದು ಕೇಳ
8 ಲು ಪೇತ್ರನು ಪವಿತ್ರಾತ್ಮಭರಿತನಾಗಿ ಅವರಿಗೆ—ಜನರ
9 ಅಧಿಕಾರಿಗಳೇ, ಹಿರಿಯರೇ, ಒಬ್ಬ ಅಂಗಹೀನನಿಗೆ ಆದ
ಉಪಕಾರದ ವಿಷಯದಲ್ಲಿ ಅವನಿಗೆ ಯಾತರಿಂದ ನೆಟ್ಟ
ಗಾಯಿತು ಎಂಬದಾಗಿ ನಮ್ಮನ್ನು ಈಹೊತ್ತು ವಿಚಾರಣೆ
10 ಮಾಡುವದಾದರೆ ನಿಮ್ಮೆಲ್ಲರಿಗೂ ಇಸ್ರಾಯೇಲ್ ಜನ
ರೆಲ್ಲರಿಗೂ ತಿಳಿಯಬೇಕಾದದ್ದೇನಂದರೆ—ನೀವು ಶಿಲು
ಬೆಗೆ ಹಾಕಿಸಿದಂಥ ಮತ್ತು ದೇವರು ಸತ್ತವರೊಳಗಿಂದ
ಎಬ್ಬಿಸಿದಂಥ ನಜರೇತಿನ ಯೇಸು ಕ್ರಿಸ್ತನ ಹೆಸರಿ
ನಿಂದಲೇ ಈ ಮನುಷ್ಯನು ನಿಮ್ಮೆದುರಿನಲ್ಲಿ ಸ್ವಸ್ಥನಾಗಿ
11 ನಿಂತಿರುತ್ತಾನೆ. ಮನೆಕಟ್ಟುವವರಾದ ನೀವು ಹೀನೈ
ಸಿದ ಕಲ್ಲು ಆತನು; ಆತನೇ ಮುಖ್ಯವಾದ ಮೂಲೆ
12 ಗಲ್ಲಾದನು. ಬರಬೇಕಾದ ರಕ್ಷಣೆಯು ಇನ್ನಾರಲ್ಲಿ
ಯೂ ಸಿಕ್ಕುವದಿಲ್ಲ; ಆ ಹೆಸರಿನಿಂದಲೇ ಹೊರತು
ಆಕಾಶದ ಕೆಳಗೆ ಮನುಷ್ಯರೊಳಗೆ ಕೊಡಲ್ಪಟ್ಟಿರುವ
ಬೇರೆ ಯಾವ ಹೆಸರಿನಿಂದಲೂ ನಮಗೆ ರಕ್ಷಣೆಯಾಗು
ವದಿಲ್ಲ ಎಂದು ಹೇಳಿದನು.
13 ಪೇತ್ರ ಯೋಹಾನರು ಧೈರ್ಯದಿಂದ ಮಾತಾಡುವ
ದನ್ನು ಆ ಸಭಿಕರು ನೋಡಿ ಅವರು ಶಾಸ್ತ್ರಾಭ್ಯಾಸ
ಮಾಡದ ಸಾಧಾರಣರೆಂದು ತಿಳಿದು ಆಶ್ಚರ್ಯಪಟ್ಟರು.
14 ಇವರು ಯೇಸುವಿನ ಸಂಗಡ ಇದ್ದವರೆಂದು ಗುರುತು
ಹಿಡಿದರು; ಮತ್ತು ಕ್ಷೇಮಹೊಂದಿದ ಆ ಮನುಷ್ಯನು
ಅವರ ಕೂಡ ನಿಂತಿರುವದನ್ನು ನೋಡಿ ಪ್ರತಿಯಾಗಿ
15 ಏನೂ ಮಾತಾಡಲಾರದೆ ಇದ್ದರು. ಆ ಮೇಲೆ ಸಭೆ
ಯಿಂದ ಸ್ವಲ್ಪ ಹೊರಗೆ ಹೋಗಿರೆಂದು ಅವರಿಗೆ ಅಪ್ಪಣೆ
16 ಕೊಟ್ಟು—ಈ ಮನುಷ್ಯರಿಗೆ ನಾವೇನು ಮಾಡೋಣ?
ಪ್ರಸಿದ್ಧವಾದ ಒಂದು ಸೂಚಕಕಾರ್ಯವು ಇವರ
ಮೂಲಕವಾಗಿ ನಡೆಯಿತೆಂಬದು ಯೆರೂಸಲೇಮಿನಲ್ಲಿ
ವಾಸಮಾಡುವವರೆಲ್ಲರಿಗೂ ಗೊತ್ತಾಗಿದೆಯಷ್ಟೆ; ಅದು

ಆಗಲಿಲ್ಲವೆನ್ನುವದಕ್ಕಾಗದು. ಆದರೆ ಇದು ಜನರ
ಇನ್ನೂ ಹಬ್ಬದಂತೆ ಮುಂದೆ ಆ ಹೆಸರನ್ನು ಎ
ಯಾರ ಸಂಗಡಲೂ ಮಾತಾಡಬಾರದೆಂದು ಅವರನ
ಬೆದರಿಸೋಣ ಎಂಬದಾಗಿ ಒಬ್ಬರ ಕೂಡೊಬ್ಬರು ಆಲೋ
ಚನೆಮಾಡಿಕೊಂಡು ಅವರನ್ನು ಕರೆಯಿಸಿ—ಆ ಯೇಸು
ವಿನ ಹೆಸರನ್ನು ಎತ್ತಿ ಹೇಗೂ ಮಾತಾಡಬಾರದು, ಉ
ದೇಶಮಾಡಲೂ ಬಾರದು ಎಂದು ಅವರಿಗೆ ಖಂಡಿ
ವಾಗಿ ಅಪ್ಪಣೆಕೊಟ್ಟರು. ಅದಕ್ಕೆ ಪೇತ್ರ ಯೋಹಾ
ರು ಅವರಿಗೆ—ದೇವರ ಮಾತನ್ನು ಕೇಳುವದಕ್ಕಿಂ
ಲೂ ನಿಮ್ಮ ಮಾತನ್ನು ಕೇಳುವದು ದೇವರ ಮುಂ
ನ್ಯಾಯವೋ ಏನು? ನೀವೇ ತೀರ್ಪುಮಾಡಿಕೊಳ್ಳಿ
ನಾವಂತೂ ಕಂಡು ಕೇಳಿದ್ದನ್ನು ಹೇಳದೆ ಇರಲಾರೆ
ಎಂದು ಉತ್ತರಕೊಟ್ಟರು. ನಡೆದಿದ್ದ ಕಾರ್ಯಕ್ಕೋ
ಸ್ಕರ ಜನರೆಲ್ಲರು ದೇವರನ್ನು ಕೊಂಡಾಡುತ್ತಾ ಇದ
ಕಾರಣ ಅವರ ದೆಸೆಯಿಂದ ಸಭಿಕರು ಅಪೊಸ್ತಲರನ
ದಂಡಿಸತಕ್ಕ ಉಪಾಯವನ್ನು ಕಾಣದೆ ಅವರನ್ನು ಇನ
ಷ್ಟು ಬೆದರಿಸಿ ಬಿಟ್ಟುಬಿಟ್ಟರು. ಈ ಸೂಚಕಕಾಯ
ದಿಂದ ಸ್ವಸ್ಥತೆಹೊಂದಿದ ಆ ಮನುಷ್ಯನಿಗೆ ನಾಲ್ವತ್ತ
ವರುಷಕ್ಕಿಂತ ಹೆಚ್ಚು ವಯಸ್ಸಾಗಿತ್ತು.
ಇವರು ಬಿಡುಗಡೆ ಹೊಂದಿ ಸ್ವಂತ ಜನರ ಬಳಿಗೆ
ಹೋಗಿ ಮಹಾಯಾಜಕರೂ ಹಿರಿಯರೂ ತಮ
ಹೇಳಿದ ಮಾತುಗಳನ್ನೆಲ್ಲಾ ತಿಳಿಸಿದರು. ಅವರು ಕೇ
ಏಕಮನಸ್ಸಾಗಿ ದೇವರನ್ನು ಘಟ್ಟಿಯಾದ ಧ್ವನಿಯಿಂ
ಹೀಗೆ ಪ್ರಾರ್ಥಿಸಿದರು—ಒಡೆಯನೇ, ಭೂಮ್ಯಾಕಾ
ಗಳನ್ನೂ ಸಮುದ್ರವನ್ನೂ ಅವುಗಳಲ್ಲಿರುವ ಸಮಸ್ತ
ವನ್ನೂ ಉಂಟುಮಾಡಿದಾತನೇ, ನೀನು ಪವಿತ್ರಾತ
ಮೂಲಕವಾಗಿ ನಿನ್ನ ಸೇವಕನಾಗಿದ್ದ ನಮ್ಮ ಪಿತೃವಾ
ದಾವೀದನ ಬಾಯಿಂದ—

ಅನ್ಯಜನಗಳು ಯಾಕೆ ರೇಗಿದರು?
ಜನಾಂಗಗಳವರು ವ್ಯರ್ಥಕಾರ್ಯಗಳನ್
ಯಾಕೆ ಯೋಚಿಸಿದರು?
ಕರ್ತನಿಗೂ ಆತನು ಅಭಿಷೇಕಿಸಿದವನಿಗೂ
ವಿರೋಧವಾಗಿ
ಭೂಪತಿಗಳು ಸನ್ನದ್ಧರಾಗಿ ನಿಂತರು,
ಅಧಿಕಾರಿಗಳು ಏಕವಾಗಿ ಕೂಡಿಕೊಂಡರು

ಎಂದು ಹೇಳಿಸಿದಿಯಲ್ಲವೇ. ಆ ಮಾತಿಗೆ ಅನುಸಾ
ವಾಗಿಯೇ ಈ ಪಟ್ಟಣದಲ್ಲಿ ಹೆರೋದನೂ ಪೊಂತ
ಪಿಲಾತನೂ ನೀನು ಅಭಿಷೇಕಿಸಿದ ನಿನ್ನ ಪವಿತ್ರ ಸೇವ
ನಾದ ಯೇಸುವಿಗೆ ವಿರೋಧವಾಗಿ ಅನ್ಯಜನರ ಮತ್ತು
ಇಸ್ರಾಯೇಲ್ ಜನರ ಸಹಿತವಾಗಿ ಕೂಡಿಕೊಂಡ
ನಿನ್ನ ಕೈಯೂ ನಿನ್ನ ಸಂಕಲ್ಪವೂ ಮೊದಲು ನೇಮಿಸಿ
ದ್ದನ್ನೇ ನಡಿಸಿದರು. ಕರ್ತನೇ, ಈಗ ನೀನು ಅವರ 2
ಬೆದರಿಸುವಿಕೆಗಳನ್ನು ನೋಡಿ ನಿನ್ನ ಪವಿತ್ರ ಸೇವ
ನಾದ ಯೇಸುವಿನ ಹೆಸರಿನ ಮೂಲಕವಾಗಿ ರೋಗ
ಪರಿಹಾರವೂ ಸೂಚಕಕಾರ್ಯಗಳೂ ಅದ್ಭುತಕಾರ್ಯ
ಗಳೂ ಉಂಟಾಗುವಂತೆ ನಿನ್ನ ಕೈ ಚಾಚುತ್ತಿರುವಲ್ಲಿ
ನಿನ್ನ ದಾಸರು ನಿನ್ನ ವಾಕ್ಯವನ್ನು ಧೈರ್ಯದಿಂದ ಹೇಳ
ವ ಹಾಗೆ ಅನುಗ್ರಹಿಸು ಅಂದರು. ಹೀಗೆ ಪ್ರಾರ್ಥನ
ಮಾಡಿದ ಮೇಲೆ ಅವರು ಕೂಡಿದ್ದ ಸ್ಥಳವು ನಡುಗಿತು

ಅವರೆಲ್ಲರು ಪವಿತ್ರಾತ್ಮಭರಿತರಾಗಿ ದೇವರ ವಾಕ್ಯ
ವನ್ನು ಧೈರ್ಯದಿಂದ ಹೇಳುವವರಾದರು.

ಶಿಷ್ಯರಲ್ಲಿ ಅನೇಕರು ತಮ್ಮ ಆಸ್ತಿಯನ್ನು ಮಾರಿ ಬಂದ ಹಣವನ್ನು ಹುದುವಾಗಿ ಅನುಭೋಗಿಸುವದಕ್ಕೆ ಕೊಡಲು ಅನನೀಯನೂ ಸಪ್ಫೈರಳೂ ಮೋಸಮಾಡಿ ಸತ್ತದ್ದು.

32 ನಂಬಿದ್ದ ಮಂಡಲಿಯವರ ಹೃದಯವೂ ಪ್ರಾಣವೂ
ಒಂದೇ ಆಗಿತ್ತು. ಇದಲ್ಲದೆ ಒಬ್ಬನಾದರೂ ತನಗಿದ್ದ
ಆಸ್ತಿಯಲ್ಲಿ ಯಾವದೊಂದನ್ನೂ ಸ್ವಂತವಾದದ್ದೆಂದು
ಹೇಳಲಿಲ್ಲ. ಎಲ್ಲವೂ ಅವರಿಗೆ ಹುದುವಾಗಿ ಇತ್ತು.
33 ಮತ್ತು ಕರ್ತನಾದ ಯೇಸು ಜೀವಂತನಾಗಿ ಎದ್ದು
ಬಂದನೆಂಬದಕ್ಕೆ ಅಪೊಸ್ತಲರು ಬಹು ಬಲವಾಗಿ ಸಾಕ್ಷಿ
ಹೇಳುತ್ತಿದ್ದರು. ಬಹಳ ದಯವು ಅವರೆಲ್ಲರ ಮೇಲೆ
34 ಇತ್ತು. ಅವರಲ್ಲಿ ಕೊರತೆಪಡುವವನು ಒಬ್ಬನೂ ಇರ
ಲಿಲ್ಲ, ಯಾಕಂದರೆ ಹೊಲಮನೆಗಳಿದ್ದವರು ಅವುಗಳನ್ನು
35 ಮಾರಿ ಬಂದ ಕ್ರಯವನ್ನು ತಂದು ಅಪೊಸ್ತಲರ ಪಾದ
ಗಳ ಬಳಿಯಲ್ಲಿ ಇಡುತ್ತಿದ್ದರು; ಅದನ್ನು ಪ್ರತಿಯೊ
ಬ್ಬನಿಗೆ ಅವನವನ ಅವಶ್ಯದಂತೆ ಹಂಚಿಕೊಡುತ್ತಿದ್ದರು.
36 ಈ ಪ್ರಕಾರ ಮಾಡಿದವರೊಳಗೆ 1)ಕುಪ್ರದ್ವೀಪ
ದಲ್ಲಿ ಹುಟ್ಟಿದ ಲೇವಿಯನಾಗಿದ್ದ ಯೋಸೇಫನೆಂಬವನು
ಒಬ್ಬನು. ಅವನಿಗೆ ಅಪೊಸ್ತಲರು ಬಾರ್ನಬ ಅಂದರೆ
37 ಧೈರ್ಯದಾಯಕ ಎಂದು ಹೆಸರಿಟ್ಟಿದ್ದರು. ಅವನು
ತನಗಿದ್ದ ಭೂಮಿಯನ್ನು ಮಾರಿ ಬಂದ ಹಣವನ್ನು
ತಂದು ಅಪೊಸ್ತಲರ ಪಾದಗಳ ಬಳಿಯಲ್ಲಿ ಇಟ್ಟನು.
5 ಆದರೆ ಅನನೀಯನೆಂಬ ಒಬ್ಬ ಮನುಷ್ಯನು ಸಪ್ಫೈ
ರಳೆಂಬ ತನ್ನ ಹೆಂಡತಿಯ ಸಮೇತ ಒಂದು ಭೂಮಿ
2 ಯನ್ನು ಮಾರಿ ಹೆಂಡತಿಯ ಸಮ್ಮತಿಯಿಂದ ಅದರ
ಕ್ರಯದಲ್ಲಿ ಒಂದು ಭಾಗವನ್ನು ಬಚ್ಚಿಟ್ಟುಕೊಂಡು
ಒಂದು ಭಾಗವನ್ನು ತಂದು ಅಪೊಸ್ತಲರ ಪಾದಗಳ
3 ಬಳಿಯಲ್ಲಿ ಇಟ್ಟನು. ಆಗ ಪೇತ್ರನು—ಅನನೀ
ಯಾ, ಸೈತಾನನು ನಿನ್ನ ಹೃದಯದಲ್ಲಿ ತುಂಬಿ
ಕೊಂಡದ್ದೇನು? ನೀನು ಯಾಕೆ ಆ ಹೊಲದ ಕ್ರಯ
ದಲ್ಲಿ ಕೆಲವನ್ನು ಬಚ್ಚಿಟ್ಟುಕೊಂಡು ಪವಿತ್ರಾತ್ಮನನ್ನು
4 ವಂಚಿಸಬೇಕೆಂದಿದ್ದೀ? ಆ ಆಸ್ತಿ ಇದ್ದಾಗ ನಿನ್ನ
ದಾಗಿಯೇ ಇತ್ತಲ್ಲವೇ. ಮಾರಿದ ಮೇಲೆಯೂ ಬಂದ
ಹಣವು ನಿನ್ನ ಅಧೀನದಲ್ಲೇ ಇತ್ತಲ್ಲವೇ. ನೀನು ಈ
ಕಾರ್ಯವನ್ನು ನಿನ್ನ ಹೃದಯದಲ್ಲಿ ಯೋಚಿಸಿಕೊಂ
ಡದ್ದು ಯಾಕೆ? ನೀನು ಸುಳ್ಳಾಡಿದ್ದು ಮನುಷ್ಯರಿಗಲ್ಲ,
5 ದೇವರಿಗೆ ಆಡಿದಿ ಅಂದನು. ಈ ಮಾತುಗಳನ್ನು ಅನ
ನೀಯನು ಕೇಳಿದ ಕೂಡಲೆ ಬಿದ್ದು ಪ್ರಾಣಬಿಟ್ಟನು;
6 ಕೇಳಿದವರೆಲ್ಲರಿಗೂ ಮಹಾ ಭಯ ಹಿಡಿಯಿತು. ಆಗ
ಯೌವನಸ್ಥರು ಎದ್ದು ಅವನನ್ನು ವಸ್ತ್ರದಲ್ಲಿ ಸುತ್ತಿ
ಹೊತ್ತುಕೊಂಡು ಹೋಗಿ ಹೂಣಿಟ್ಟರು.
7 ಸುಮಾರು ಮೂರು ಘಂಟೆ ಹೊತ್ತಿನ ಮೇಲೆ ಅವನ
ಹೆಂಡತಿಯು ನಡೆದ ಸಂಗತಿಯನ್ನು ತಿಳಿಯದೆ ಒಳಗೆ
8 ಬಂದಳು. ಪೇತ್ರನು ಆಕೆಯನ್ನು ನೋಡಿ—ನೀವು ಆ
ಹೊಲವನ್ನು ಮಾರಿದ್ದು ಇಷ್ಟೇ ಹಣಕ್ಕೋ? ನನಗೆ
ಹೇಳು ಎಂದು ಕೇಳಲು ಆಕೆಯು—ಹೌದು, ಇಷ್ಟಕ್ಕೇ
ಅಂದಳು. ಆಗ ಪೇತ್ರನು ಆಕೆಗೆ—ನೀವಿಬ್ಬರೂ 9
ಕರ್ತನ ಆತ್ಮನನ್ನು ಪರೀಕ್ಷಿಸುವದಕ್ಕೆ ಯಾಕೆ ಒಡಂಬ
ಟ್ಟಿರಿ? ಅಗೋ, ನಿನ್ನ ಗಂಡನನ್ನು ಹೂಣಿಟ್ಟವರು
ಬಂದು ಬಾಗಿಲಿನಲ್ಲಿ ಕಾಲಿಟ್ಟಿದ್ದಾರೆ, ನಿನ್ನನ್ನೂ ಹೊತ್ತು
ಕೊಂಡು ಹೋಗುವರು ಎಂದು ಹೇಳಿದನು. ಕೂಡಲೆ 10
ಆಕೆಯು ಅವನ ಪಾದಗಳ ಮುಂದೆ ಬಿದ್ದು ಪ್ರಾಣ
ಬಿಟ್ಟಳು. ಆ ಯೌವನಸ್ಥರು ಒಳಗೆ ಬಂದು ಆಕೆ
ಯು ಸತ್ತಿರುವದನ್ನು ಕಂಡು ಆಕೆಯನ್ನು ಹೊತ್ತು
ಕೊಂಡು ಹೋಗಿ ಗಂಡನ ಮಗ್ಗುಲಲ್ಲಿ ಹೂಣಿಟ್ಟರು.
ಮತ್ತು ಸರ್ವಸಭೆಗೂ ಈ ಸಂಗತಿಗಳನ್ನು ಕೇಳಿದವ 11
ರೆಲ್ಲರಿಗೂ ಮಹಾ ಭಯಹಿಡಿಯಿತು.

ಅಧಿಕಾರಿಗಳು ಅಪೊಸ್ತಲರನ್ನು ಸೆರೆಯಲ್ಲಿ ಹಾಕಿಸಲು ದೇವದೂತನು ಅವರನ್ನು ಬಿಡಿಸಿದ್ದು; ಅವರ ವಿಷಯದಲ್ಲಿ ಗಮಲಿಯೇಲನು ಹೇಳಿದ ಆಲೋಚನೆ.

ಇದಲ್ಲದೆ ಅಪೊಸ್ತಲರ ಕೈಯಿಂದ ಅನೇಕ ಸೂಚಕ 12
ಕಾರ್ಯಗಳೂ ಅದ್ಭುತಕಾರ್ಯಗಳೂ ಜನರಲ್ಲಿ ನಡೆ
ಯುತ್ತಾ ಇದ್ದವು. ಮತ್ತು ಎಲ್ಲರು ಒಗ್ಗಟ್ಟಾಗಿ
ಸೊಲೊಮೋನನ ಮಂಟಪದಲ್ಲಿ ಇರುತ್ತಿದ್ದರು. ಅವರ 13
ಜೊತೆಯಲ್ಲಿರುವದಕ್ಕೆ ಮಿಕ್ಕಾದವರೊಳಗೆ ಒಬ್ಬರಿಗೂ
ಧೈರ್ಯವಿರಲಿಲ್ಲ. ಆದರೂ ಜನರು ಅವರನ್ನು ಬಹಳ
ವಾಗಿ ಕೊಂಡಾಡುತ್ತಿದ್ದರು; ಮತ್ತು ಇನ್ನು ಎಷ್ಟೋ 14
ಮಂದಿ ಗಂಡಸರೂ ಹೆಂಗಸರೂ ಕರ್ತನಲ್ಲಿ ನಂಬಿಕೆ
ಯಿಡುವವರಾಗಿ ಅವರ ಮಂಡಲಿಯಲ್ಲಿ ಸೇರಿಕೊಳ್ಳು
ತ್ತಿದ್ದರು. ಹೀಗಿರುವದರಿಂದ ಜನರು ರೋಗಿಗಳನ್ನು 15
ಡೋಲಿಗಳ ಮೇಲೆಯೂ ಹಾಸಿಗೆಗಳ ಮೇಲೆಯೂ
ಇಟ್ಟು ಪೇತ್ರನು ಬರುವಾಗ್ಗೆ ಅವನ ನೆರಳು ಇವರಲ್ಲಿ
ಯಾವನ ಮೇಲಾದರೂ ಬೀಳಲಿ ಎಂದು ಅವರನ್ನು
ಬೀದಿಗೆ ತೆಗೆದುಕೊಂಡು ಬರುತ್ತಿದ್ದರು. ಯೆರೂಸ 16
ಲೇಮಿನ ಸುತ್ತಲಿರುವ ಊರುಗಳ ಜನರು ಸಹ ರೋಗಿ
ಗಳನ್ನೂ ದೆವ್ವಗಳ ಕಾಟವಿದ್ದವರನ್ನೂ ಹೊತ್ತುಕೊಂಡು
ಗುಂಪುಗುಂಪಾಗಿ ಬರುತ್ತಿದ್ದರು; ಅವರೆಲ್ಲರಿಗೂ ವಾಸಿ
ಯಾಗುವದು.
ಹೀಗಿರುವಲ್ಲಿ ಮಹಾಯಾಜಕನೂ ಸದ್ದುಕಾಯರ 17
ಮತಕ್ಕೆ ಸೇರಿದವರಾದ ಅವನ ಜೊತೆಯಲ್ಲಿದ್ದವರೆಲ್ಲ
ರೂ ಎದ್ದು ಮತಾಭಿಮಾನದಿಂದ ತುಂಬಿದವರಾಗಿ 18
ಅಪೊಸ್ತಲರನ್ನು ಹಿಡಿದು ಪಟ್ಟಣದ ಕಾವಲಿನಲ್ಲಿಟ್ಟರು.
ಆದರೆ ಕರ್ತನ ದೂತನು ರಾತ್ರಿಯಲ್ಲಿ ಸೆರೆಮನೆಯ 19
ಬಾಗಿಲುಗಳನ್ನು ತೆರೆದು ಅವರನ್ನು ಹೊರಕ್ಕೆ ಕರೆದು
ಕೊಂಡು ಬಂದು—ನೀವು ಹೋಗಿ ದೇವಾಲಯದಲ್ಲಿ 20
ನಿಂತುಕೊಂಡು ಈ ಸಜ್ಜೀವವಿಷಯವಾದ ಮಾತುಗಳ
ನ್ನೆಲ್ಲಾ ಜನರಿಗೆ ಹೇಳಿರಿ ಅಂದನು. ಅವರು ಈ ಆಜ್ಞೆ 21
ಯನ್ನು ಹೊಂದಿ ಬೆಳಕುಹರಿಯುವಾಗಲೇ ದೇವಾಲಯ
ದೊಳಗೆ ಹೋಗಿ ಉಪದೇಶಮಾಡಿದರು. ಇತ್ತಲಾಗಿ
ಮಹಾಯಾಜಕನೂ ಅವನ ಜೊತೆಯಲ್ಲಿದ್ದವರೂ
ಬಂದು ಹಿರೀಸಭೆಯನ್ನೂ ಇಸ್ರಾಯೇಲ್ಯರ ಯಜ

1) ಅಂದರೆ, ಸೈಪ್ರಸ್‌ದ್ವೀಪದಲ್ಲಿ.

ಮಾನರ ಸಭೆಯೆಲ್ಲವನ್ನೂ ಕೂಡಿಸಿ ಅವರನ್ನು ಕರ
22 ತರುವದಕ್ಕೆ ಸೆರೆಮನೆಗೆ ಕಳುಹಿಸಿದರು. ಓಲೇಕಾ
ರರು ಹೋಗಿ ಅವರನ್ನು ಸೆರೆಮನೆಯಲ್ಲಿ ಕಾಣದೆ
23 ಹಿಂತಿರಿಗಿ ಬಂದು—ಕಾವಲಿನ ಮನೆ ಪೂರ್ಣ ಭದ್ರ
ವಾಗಿ ಮುಚ್ಚಿರುವದನ್ನೂ ಕಾವಲುಗಾರರು ಬಾಗಿಲು
ಗಳಲ್ಲಿ ನಿಂತಿರುವದನ್ನೂ ಕಂಡೆವು; ಆದರೆ ತೆರೆದಾಗ
ಒಳಗೆ ಒಬ್ಬರನ್ನೂ ಕಾಣಲಿಲ್ಲ ಎಂದು ತಿಳಿಸಿದರು.
24 ದೇವಾಲಯದ ಅಧಿಪತಿಯೂ ಮಹಾಯಾಜಕರೂ
ಈ ಮಾತುಗಳನ್ನು ಕೇಳಿ ಇದರಿಂದ ಏನಾದೀತೋ
25 ಎಂದು ಕಳವಳಪಟ್ಟರು. ಹೀಗಿರಲಾಗಿ ಯಾರೋ
ಒಬ್ಬನು ಬಂದು—ಅಗೋ, ನೀವು ಸೆರೆಮನೆಯಲ್ಲಿ
ಟ್ಟಿದ್ದ ಆ ಮನುಷ್ಯರು ದೇವಾಲಯದಲ್ಲಿ ನಿಂತು
ಕೊಂಡು ಜನರಿಗೆ ಉಪದೇಶಮಾಡುತ್ತಿದ್ದಾರೆಂದು ಅವ
26 ರಿಗೆ ತಿಳಿಸಿದನು. ಆಗ ಅಧಿಪತಿಯು ಓಲೇಕಾರರ
ಸಂಗಡ ಹೋಗಿ ಅವರನ್ನು ಕರೆದುಕೊಂಡು ಬಂದನು;
ಆದರೆ ತಮಗೆ ಜನರು ಕಲ್ಲೆಸೆದಾರೆಂದು ಹೆದರಿ
27 ಬಲಾತ್ಕಾರ ಮಾಡಲಿಲ್ಲ. ಅವರನ್ನು ಕರೆತಂದು ಹಿರೀ
ಸಭೆಯ ಮುಂದೆ ನಿಲ್ಲಿಸಲು ಮಹಾಯಾಜಕನು ಅವ
28 ರನ್ನು ವಿಚಾರಣೆಮಾಡುತ್ತಾ—ನೀವು ಈ ಹೆಸರನ್ನು
ಎತ್ತಿ ಉಪದೇಶಮಾಡಲೇ ಬಾರದೆಂದು ನಾವು ನಿಮಗೆ
ಖಂಡಿತವಾಗಿ ಅಪ್ಪಣೆಕೊಟ್ಟೆವಲ್ಲಾ; ಆದರೂ ನೀವು
ಯೆರೂಸಲೇಮನ್ನು ನಿಮ್ಮ ಉಪದೇಶದಿಂದ ತುಂಬಿಸಿ
ದಿರಿ, ಮತ್ತು ಆ ಮನುಷ್ಯನನ್ನು ಕೊಲ್ಲಿಸಿದ್ದಕ್ಕೆ ನಮ್ಮ
ನ್ನು ಹೊಣೆಮಾಡಬೇಕೆಂದಿದ್ದೀರಿ ಎಂದು ಹೇಳಿದ್ದಕ್ಕೆ
29 ಪೇತ್ರನೂ ಉಳಿದ ಅಪೊಸ್ತಲರೂ—ಮನುಷ್ಯರಿಗಿಂತ
ಲೂ ದೇವರಿಗೆ ಹೆಚ್ಚಾಗಿ ವಿಧೇಯರಾಗಿರಬೇಕಲ್ಲಾ.
30 ನೀವು ಮರದ ಕಂಭಕ್ಕೆ ತೂಗಹಾಕಿ ಕೊಂದ ಯೇಸು
ವನ್ನು ನಮ್ಮ ಪಿತೃಗಳ ದೇವರು ಎಬ್ಬಿಸಿದನು.
31 ದೇವರು ಆತನನ್ನೇ ಇಸ್ರಾಯೇಲ್ ಜನರಿಗೆ ಮಾನಸಾಂ
ತರವನ್ನೂ ಪಾಪಪರಿಹಾರವನ್ನೂ ದಯಪಾಲಿಸುವದ
ಕ್ಕಾಗಿ ನಾಯಕನೆಂತಲೂ ರಕ್ಷಕನೆಂತಲೂ ತನ್ನ ಬಲಗೈ
32 ಯಿಂದ ಉನ್ನತಸ್ಥಾನಕ್ಕೆ ಏರಿಸಿದನು. ಈ ಕಾರ್ಯ
ಗಳಿಗೆ ನಾವು ಸಾಕ್ಷಿ; ದೇವರು ತನಗೆ ವಿಧೇಯರಾಗಿ
ರುವವರಿಗೆ ದಯಪಾಲಿಸಿರುವ ಪವಿತ್ರಾತ್ಮನೂ ಸಾಕ್ಷಿ
ಎಂದು ಹೇಳಿದರು.
33 ಸಭಿಕರು ಈ ಮಾತನ್ನು ಕೇಳಿ ರೌದ್ರವಾಗಿ ಅವ
34 ರನ್ನು ಕೊಲ್ಲಿಸಬೇಕೆಂದು ಯೋಚಿಸಿದರು; ಆದರೆ
ಎಲ್ಲಾ ಜನರಿಂದ ಮಾನಹೊಂದಿದ ನ್ಯಾಯಶಾಸ್ತ್ರಿ
ಯಾದ ಗಮಲಿಯೇಲನೆಂಬ ಒಬ್ಬ ಫರಿಸಾಯನು
ಹಿರೀಸಭೆಯಲ್ಲಿ ಎದ್ದುನಿಂತು ಈ ಮನುಷ್ಯರನ್ನು ಸ್ವಲ್ಪ
ಹೊತ್ತು ಹೊರಗೆ ಕಳುಹಿಸಬೇಕೆಂದು ಅಪ್ಪಣೆಕೊಟ್ಟು
35 ಸಭೆಯವರಿಗೆ—ಇಸ್ರಾಯೇಲ್ ಜನರೇ, ನೀವು ಈ
ಮನುಷ್ಯರ ವಿಷಯದಲ್ಲಿ ಮಾಡಬೇಕೆಂದಿರುವದನ್ನು
36 ಕುರಿತು ಎಚ್ಚರಿಕೆಯುಳ್ಳವರಾಗಿರ್ರಿ. ಇದಕ್ಕಿಂತ ಮುಂಚೆ
ಥೈದನು ಎದ್ದು ತಾನು ದೊಡ್ಡ ಮನುಷ್ಯನೆಂದು ಹೇಳಿ
ಕೊಂಡನು; ಅವನ ಪಕ್ಷಕ್ಕೆ ಸುಮಾರು ನಾನೂರು
ಜನರು ಸೇರಿಕೊಂಡರು. ಅವನು ಕೊಲ್ಲಲ್ಪಟ್ಟನು,
ಮತ್ತು ಅವನನ್ನು ನಂಬಿದವರೆಲ್ಲರು ಚದರಿಸಲ್ಪಟ್ಟು
37 ಇಲ್ಲವಾದರು. ಅವನ ತರುವಾಯ ಖಾನೇಸುಮಾ
ರಿಯ ಕಾಲದಲ್ಲಿ ಗಲಿಲಾಯದ ಯೂದನು ಎದ್ದು

ಜನರನ್ನು ತನ್ನ ಸಹಿತ ತಿರುಗಿಬೀಳುವದಕ್ಕೆ ಪ್ರೇರೇಪಿ
ದನು. ಅವನೂ ಹಾಳಾದನು; ಮತ್ತು ಅವನನ್ನು
ನಂಬಿದವರೆಲ್ಲರು ಚದರಿಹೋದರು. ಹೀಗಿರುವದರಿಂ
ನಾನು ನಿಮಗೆ ಹೇಳುವದೇನಂದರೆ ನೀವು ಆ ಮನು
ಷ್ಯರ ಗೊಡವೆಗೆ ಹೋಗಬೇಡಿರಿ, ಅವರನ್ನು ಬಿಡಿರಿ
ಯಾಕಂದರೆ ಈ ಯೋಚನೆಯು ಅಥವಾ ಈ ಕೆಲಸ
ಮನುಷ್ಯರಿಂದಾಗಿದ್ದರೆ ತಾನೇ ಕೆಡುವದು; ಅದು ದೇ
ರಿಂದಾಗಿದ್ದರೆ ಅದನ್ನು ಕೆಡಿಸುವದಕ್ಕೆ ನಿಮ್ಮಿಂದ ಆಗ
ವದಿಲ್ಲ. ನೀವು ಒಂದು ವೇಳೆ ದೇವರ ಮೇಲೆ ಯುದ್ಧ
ಮಾಡುವವರಾಗಿ ಕಾಣಿಸಿಕೊಂಡೀರಿ ಎಂದು ಹೇಳಿದನು
ಅವರು ಅವನ ಮಾತಿಗೆ ಒಪ್ಪಿ ಅಪೊಸ್ತಲರನ್ನು
ಕರೆಸಿ ಹೊಡಿಸಿ ಯೇಸುವಿನ ಹೆಸರನ್ನು ಹೇಳಿ ಮಾತ
ಡಬಾರದೆಂದು ಅಪ್ಪಣೆಕೊಟ್ಟು ಅವರನ್ನು ಬಿಟ್ಟು
ಬಿಟ್ಟರು. ಅಪೊಸ್ತಲರು ತಾವು ಆ ಹೆಸರಿನ ನಿಮಿತ್ತ
ವಾಗಿ ಅವಮಾನಪಡುವದಕ್ಕೆ ಯೋಗ್ಯರೆನಿಸಿಕೊಂ
ವೆಂದು ಸಂತೋಷಿಸುತ್ತಾ ಹಿರೀಸಭೆಯ ಎದುರಿನಿಂದ
ಹೊರಟುಹೋಗಿ ಪ್ರತಿದಿನ ಎಡೆಬಿಡದೆ ದೇವಾಲಯದ
ಲ್ಲಿಯೂ ಮನೆಮನೆಯಲ್ಲಿಯೂ ಉಪದೇಶಮಾಡುತ್ತಾ
ಕ್ರಿಸ್ತನಾದ ಯೇಸುವಿನ ವಿಷಯವಾದ ಶುಭವರ್ತ
ಮಾನವನ್ನು ಸಾರುತ್ತಾ ಇದ್ದರು.

ಸಭೆಯಲ್ಲಿ ಲೌಕಿಕ ಕಾರ್ಯಗಳನ್ನು ನಡಿಸುವದಕ್ಕೆ
ಅಪೊಸ್ತಲರು ಏಳು ಮಂದಿ ಸಹಾಯಕರನ್ನು ನೇಮಿಸಿದ್ದು.

ಆ ದಿವಸಗಳಲ್ಲಿ ಶಿಷ್ಯರು ಹೆಚ್ಚುತ್ತಾ ಬರಲಾಗಿ
ಅವರೊಳಗೆ ಗ್ರೀಕ್‌ಭಾಷೆಯವರು ಇಬ್ರಿಯ ಭಾಷೆಯ
ವರ ಮೇಲೆ—ದಿನದಿನದ ಉಪಚಾರದಲ್ಲಿ ನಮ್ಮ ವಿಧವೆ
ಯರನ್ನು ಸರಿಯಾಗಿ ಪರಾಂಬರಿಸುವದಿಲ್ಲವೆಂದು
ಗುಣುಗುಟ್ಟಿದರು. ಆಗ ಹನ್ನೆರಡು ಮಂದಿ ಅಪೊಸ್ತ
ಲರು ಶಿಷ್ಯಮಂಡಲಿಯನ್ನು ಕೂಡಿಸಿ—ನಾವು ದೇವರ
ವಾಕ್ಯೋಪದೇಶವನ್ನು ಬಿಟ್ಟು ಉಪಚಾರಮಾಡುತ್ತಿರು
ವದು ತಕ್ಕದ್ದಲ್ಲವಲ್ಲಾ; ಆದದರಿಂದ ಸಹೋದರರೇ,
ಸಂಭಾವಿತರೂ ಪವಿತ್ರಾತ್ಮಭರಿತರೂ ಜ್ಞಾನಸಂಪ
ನ್ನರೂ ಆಗಿರುವ ಏಳು ಮಂದಿಯನ್ನು ನಿಮ್ಮೊಳಗಿಂದ
ನೋಡಿ ಆರಿಸಿಕೊಳ್ಳಿರಿ; ಅವರನ್ನು ಈ ಕೆಲಸದ ಮೇಲೆ
ನೇಮಿಸುವೆವು. ನಾವಾದರೋ ಪ್ರಾರ್ಥನೆಯನ್ನೂ
ವಾಕ್ಯೋಪದೇಶವನ್ನೂ ಮಾಡುವದರಲ್ಲಿ ನಿರತರಾಗಿರು
ವೆವು ಎಂದು ಹೇಳಿದರು. ಈ ಮಾತು ಸರ್ವಮಂಡ
ಲಿಗೆ ಒಳ್ಳೇದೆಂದು ತೋಚಿತು. ಅವರು ಪವಿತ್ರಾತ್ಮ
ಭರಿತನೂ ನಂಬಿಕೆಯಿಂದ ತುಂಬಿದವನೂ ಆದ ಸ್ತೆಫನ
ನನ್ನೂ, ಫಿಲಿಪ್ಪ, ಪ್ರೊಖೋರ, ನಿಕನೋರ, ತಿಮೋನ,
ಪರ್ಮೇನ, ಯೆಹೂದ್ಯ ಮತಾವಲಂಬಿಯಾದ ಅಂತಿ
ಯೋಕ್ಯದ ನಿಕೊಲಾಯ ಎಂಬವರನ್ನೂ ಆರಿಸಿಕೊಂಡು
ಅಪೊಸ್ತಲರ ಮುಂದೆ ನಿಲ್ಲಿಸಿದರು. ಅಪೊಸ್ತಲರು
ಪ್ರಾರ್ಥನೆಮಾಡಿ ಅವರ ಮೇಲೆ ಕೈಗಳನ್ನಿಟ್ಟು ನೇಮಿ
ಸಿದರು
ಮತ್ತು ದೇವರ ವಾಕ್ಯವು ಪ್ರಬಲವಾಯಿತು. ಶಿಷ್ಯರ
ಸಂಖ್ಯೆಯು ಯೆರೂಸಲೇಮಿನಲ್ಲಿ ಬಹಳವಾಗಿ ಹೆಚ್ಚು
ತ್ತಾ ಬಂತು. ಯಾಜಕರಲ್ಲಿಯೂ ಬಹುಜನರು
ಕ್ರಿಸ್ತನಂಬಿಕೆಗೆ ಒಳಗಾಗುತ್ತಾ ಇದ್ದರು.

ದೇವದೂಷಣೆ ಮಾಡಿದನೆಂದು ಕೆಲವರು ಸ್ತೆಫನನ ಮೇಲೆ
ತಪ್ಪುಹೊರಿಸಿದ್ದು; ಅವನು ಪ್ರತಿವಾದ ಮಾಡಿದ ಮೇಲೆ
ಮರಣದಂಡನೆಯನ್ನು ಹೊಂದಿದ್ದು.

8 ಸ್ತೆಫನನು ದೇವರ ಕೃಪೆಯಿಂದಲೂ ಬಲದಿಂದಲೂ
ತುಂಬಿದವನಾಗಿ ಜನರಲ್ಲಿ ಮಹಾ ಅದ್ಭುತಕಾರ್ಯಗ
ಳನ್ನೂ ಸೂಚಕಕಾರ್ಯಗಳನ್ನೂ ಮಾಡುತ್ತಾ ಇದ್ದನು.
9 ಆದರೆ ಲಿಬೆರ್ತೀನರೆಂಬವರ ಸಮಾಜದವರಲ್ಲಿಯೂ
ಕುರೇನ್ಯದವರ ಮತ್ತು ಅಲೆಕ್ಸಾಂದ್ರಿಯದವರ ಸಮಾ
ಜದವರಲ್ಲಿಯೂ ಕಿಲಿಕ್ಯ ಆಸ್ಯ ಸೀಮೆಗಳಿಂದ ಬಂದ
ವರ ಸಮಾಜದವರಲ್ಲಿಯೂ ಕೆಲವರು ಎದ್ದು ಸ್ತೆಫನನ
0 ಸಂಗಡ ತರ್ಕಮಾಡುತ್ತಾ ಇರಲು ಅವನ ಮಾತಿನಲ್ಲಿ
ಕಂಡುಬಂದ ಜ್ಞಾನವನ್ನೂ ಪವಿತ್ರಾತ್ಮಶಕ್ತಿಯನ್ನೂ
1 ಎದುರಿಸಲಾರದೆ ಹೋದರು. ಆಗ ಅವರು ಕೆಲವು
ಮನುಷ್ಯರಿಗೆ—ಇವನು ಮೋಶೆಗೆ ವಿರೋಧವಾಗಿಯೂ
ದೇವರಿಗೆ ವಿರೋಧವಾಗಿಯೂ ದೂಷಣೆಯ ಮಾತು
ಗಳನ್ನಾಡುವದನ್ನು ಕೇಳಿದೆವೆಂದು ಹೇಳಿರಿ ಎಂಬದಾಗಿ
2 ಬೋಧಿಸಿ ಜನರನ್ನೂ ಹಿರಿಯರನ್ನೂ ಶಾಸ್ತ್ರಿಗಳನ್ನೂ
ರೇಗಿಸಿದರು; ಮತ್ತು ಬಂದು ಅವನನ್ನು ಹಿಡಿದು
3 ಹಿರೀಸಭೆಗೆ ತೆಗೆದುಕೊಂಡು ಹೋಗಿ ಸುಳ್ಳುಸಾಕ್ಷಿ
ಗಳನ್ನು ಕರತಂದು ನಿಲ್ಲಿಸಿದರು. ಆ ಸಾಕ್ಷಿಗಳು—
ಈ ಮನುಷ್ಯನು ಈ ಪರಿಶುದ್ಧವಾದ ಸ್ಥಳಕ್ಕೆ ವಿರೋಧ
ವಾಗಿಯೂ ಧರ್ಮಶಾಸ್ತ್ರಕ್ಕೆ ವಿರೋಧವಾಗಿಯೂ ಮಾ
4 ತಾಡುವದನ್ನು ಬಿಡುವದೇ ಇಲ್ಲ. ಆ ನಜರೇತಿನ
ಯೇಸು ಈ ದೇವಾಲಯವನ್ನು ಕೆಡವಿ ಮೋಶೆ ನಮಗೆ
ನೇಮಿಸಿರುವ ಆಚಾರಗಳನ್ನು ಬೇರೆ ಮಾಡುವನೆಂಬ
ದಾಗಿ ಇವನು ಹೇಳುವದನ್ನು ನಾವು ಕೇಳಿದ್ದೇವೆ
5 ಅಂದರು. ಆಗ ಹಿರೀಸಭೆಯಲ್ಲಿ ಕೂತಿದ್ದವರೆಲ್ಲರು
ಅವನನ್ನು ದೃಷ್ಟಿಸಿ ನೋಡಿ ಅವನ ಮುಖವು ದೇವ
ದೂತನ ಮುಖದಂತೆ ಇರುವದನ್ನು ಕಂಡರು.

7 ಆಗ ಮಹಾಯಾಜಕನು—ಈ ಮಾತುಗಳು
ಹೌದೋ ಎಂದು ಕೇಳಿದ್ದಕ್ಕೆ ಅವನು—ಸಹೋದ
2 ರರೇ, ತಂದೆಗಳೇ, ಕೇಳಿರಿ—ನಮ್ಮ ಮೂಲಪುರುಷನಾದ
ಅಬ್ರಹಾಮನು ಖಾರಾನಿನಲ್ಲಿ ವಾಸಮಾಡಿದ್ದಕ್ಕಿಂತ
ಮುಂಚೆ ಮೆಸೊಪೊತಾಮ್ಯದಲ್ಲಿ ಪ್ರಾಗ ಪ್ರಭಾವಸ್ವರೂಪ
3 ನಾದ ದೇವರು ಅವನಿಗೆ ಕಾಣಿಸಿಕೊಂಡು—ನಿನ್ನ
ಸ್ವದೇಶವನ್ನೂ ನಿನ್ನ ಬಂಧುಬಳಗವನ್ನೂ ಬಿಟ್ಟು
ನಾನು ತೋರಿಸುವ ದೇಶಕ್ಕೆ ಹೊರಟುಹೋಗು ಎಂದು
4 ಹೇಳಿದನು. ಆಗ ಅವನು ಕಸ್ದೀಯರ ದೇಶದಿಂದ
ಹೊರಟುಹೋಗಿ ಖಾರಾನಿನಲ್ಲಿ ವಾಸವಾಗಿದ್ದನು.
ಅವನ ತಂದೆ ಸತ್ತ ಮೇಲೆ ದೇವರು ಅವನನ್ನು ಅಲ್ಲಿಂದ
ನೀವು ಈಗ ವಾಸವಾಗಿರುವ ಈ ದೇಶಕ್ಕೆ ಬರಮಾಡಿ
5 ದನು. ಇದರಲ್ಲಿ ಅವನಿಗೆ ಕಾಲಿಡುವಷ್ಟು ಭೂಮಿ
ಯನ್ನು ಸ್ವಾಸ್ತ್ಯವಾಗಿ ಕೊಡದೆ ಅವನಿಗೆ ಮಕ್ಕಳು
ಇನ್ನೂ ಇಲ್ಲದಿರುವಾಗ—ಈ ದೇಶವನ್ನು ನಿನಗೂ
ನಿನ್ನ ಹಿಂದೆ ಬರುವ ನಿನ್ನ ಸಂತತಿಗೂ ಸ್ವಾಸ್ತಿಯಾಗಿ
ಕೊಡುವೆನು ಎಂದು ಅವನಿಗೆ ವಾಗ್ದಾನಮಾಡಿದನು.
6 ಇದಲ್ಲದೆ ದೇವರು ಹೇಳಿದ್ದೇನಂದರೆ—ನಿನ್ನ ಸಂತಾ
ನದವರು ಅನ್ಯದೇಶದಲ್ಲಿ ಪ್ರವಾಸಿಗಳಾಗಿರುವರು. ಆ
ಅನ್ಯದೇಶದವರು ಅವರನ್ನು ದಾಸರನ್ನಾಗಿ ಮಾಡಿ
ಕೊಂಡು ನಾನೂರು ವರುಷಗಳ ತನಕ ಕ್ರೂರವಾಗಿ
ನಡಿಸುವರು. ಮತ್ತು ನಿನ್ನ ಸಂತಾನದವರು ದಾಸ 7
ರಾಗಿ ಸೇವಿಸುವ ಅನ್ಯಜನರಿಗೆ ನಾನೇ ನ್ಯಾಯತೀರಿಸು
ವೆನು. ಆ ಮೇಲೆ ಅವರು ಹೊರಟುಬಂದು ಈ ಸ್ಥಳ
ದಲ್ಲಿ ನನ್ನನ್ನು ಆರಾಧಿಸುವರು ಎಂಬದೇ. ಇದಲ್ಲದೆ 8
ದೇವರು ಅವನ ಸಂಗಡ ಒಡಂಬಡಿಕೆಯನ್ನು ಮಾಡಿ
ಕೊಂಡು ಅದಕ್ಕೆ ಗುರುತಾಗಿ ಸುನ್ನತಿಯನ್ನು ನೇಮಿ
ಸಿದನು. ಅದಕ್ಕನುಸಾರವಾಗಿ ಅಬ್ರಹಾಮನು
ಇಸಾಕನನ್ನು ಪಡೆದು ಎಂಟನೆಯ ದಿವಸದಲ್ಲಿ ಅವ
ನಿಗೆ ಸುನ್ನತಿಮಾಡಿದನು. ಮುಂದೆ ಇಸಾಕನು
ಯಾಕೋಬನನ್ನು ಪಡೆದನು, ಯಾಕೋಬನು
ಹನ್ನೆರಡು ಮಂದಿ ಮೂಲಪಿತೃಗಳನ್ನು ಪಡೆದನು.
ಮೂಲಪಿತೃಗಳು ಹೊಟ್ಟೇಕಿಚ್ಚಿನಿಂದ ಯೋಸೇಫ 9
ನನ್ನು ಐಗುಪ್ತದೇಶಕ್ಕೆ ಮಾರಿಬಿಟ್ಟರು. ಅಲ್ಲಿ ದೇವರು 10
ಅವನ ಸಂಗಡ ಇದ್ದು ಅವನಿಗೆ ಬಂದ ಎಲ್ಲಾ ಸಂಕಟ
ಗಳಿಂದ ಅವನನ್ನು ಬಿಡಿಸಿ ಐಗುಪ್ತದೇಶದ ಅರಸನಾದ
ಫರೋಹನ ಸಮ್ಮುಖದಲ್ಲಿ ದಯಾಪಾತ್ರನೂ ಜ್ಞಾನ
ವುಳ್ಳವನೂ ಆಗಿರುವಂತೆ ಅನುಗ್ರಹಿಸಿದನು. ಫರೋ
ಹನು ಅವನನ್ನು ಐಗುಪ್ತದೇಶದ ಮೇಲೆಯೂ ತನ್ನ
ಎಲ್ಲಾ ಮನೆಯ ಮೇಲೆಯೂ ಅಧಿಕಾರಿಯಾಗಿ
ಇಟ್ಟನು. ಆಗ ಐಗುಪ್ತ ಕಾನಾನ್‍ದೇಶಗಳಲ್ಲಿ 11
ಎಲ್ಲೆಲ್ಲಿಯೂ ಬರ ಬಂದು ದೊಡ್ಡ ಸಂಕಟವಾಯಿತು;
ನಮ್ಮ ಪಿತೃಗಳಿಗೆ ಕಾಳುಕಡ್ಡಿ ಸಿಕ್ಕಲಿಲ್ಲ. ಆದರೆ 12
ಐಗುಪ್ತದೇಶದಲ್ಲಿ ದವಸಧಾನ್ಯ ಉಂಟೆಂಬದನ್ನು ಯಾ
ಕೋಬನು ಕೇಳಿ ನಮ್ಮ ಪಿತೃಗಳನ್ನು ಮೊದಲು
ಒಂದು ಸಾರಿ ಅಲ್ಲಿಗೆ ಕಳುಹಿಸಿದನು. ಅವರು 13
ಎರಡನೆಯ ಸಾರಿ ಬಂದಾಗ ಯೋಸೇಫನು ಅಣ್ಣ
ತಮ್ಮಂದಿರಿಗೆ ತನ್ನ ಗುರುತು ಸಿಕ್ಕುವಂತೆ ಮಾಡಿದನು.
ಮತ್ತು ಯೋಸೇಫನ ವಂಶವು ಫರೋಹನಿಗೆ ತಿಳಿಯ
ಬಂತು. ಆ ಮೇಲೆ ಯೋಸೇಫನು ತನ್ನ ತಂದೆ 14
ಯಾದ ಯಾಕೋಬನನ್ನೂ ತನ್ನ ಎಲ್ಲಾ ಬಂಧುಬಳಗ
ವನ್ನೂ ಒಟ್ಟಿಗೆ ಎಪ್ಪತ್ತೈದು ಮಂದಿಯನ್ನು ಕರೆಯಿಸಿ
ಕೊಳ್ಳಲಾಗಿ ಯಾಕೋಬನು ಐಗುಪ್ತದೇಶಕ್ಕೆ ಇಳಿದು
ಹೋದನು. ಅಲ್ಲಿ ಅವನೂ ನಮ್ಮ ಪಿತೃಗಳೂ 15
ತೀರಿಹೋದರು. ಅವರನ್ನು ಶೇಕೆಮಿಗೆ ತೆಗೆದುಕೊಂಡು 16
ಹೋಗಿ ಅಲ್ಲಿ ಹಮೋರನ ಮಕ್ಕಳಿಂದ ಅಬ್ರಹಾಮನು
ಬೆಳ್ಳಿಕೊಟ್ಟು ಕೊಂಡುಕೊಂಡಿದ್ದ ಸಮಾಧಿಯೊಳಗೆ
ಇಟ್ಟರು.
ಆದರೆ ದೇವರು ಅಬ್ರಹಾಮನಿಗೆ ವಾಗ್ದಾನಮಾ 17
ಡಿದ್ದ ಕಾಲವು ಹತ್ತರಕ್ಕೆ ಬರುತ್ತಿರುವಾಗ ನಮ್ಮ
ಜನರು ಐಗುಪ್ತದೇಶದಲ್ಲಿ ಹೆಚ್ಚಿ ಬಹಳವಾದರು.
ಕಡೆಗೆ ಯೋಸೇಫನನ್ನು ಅರಿಯದ ಬೇರೊಬ್ಬ ಅರಸನು 18
ಆಳಿಕೆಗೆ ಬಂದನು. ಈ ಅರಸನು ನಮ್ಮ ಜನರಲ್ಲಿ 19
ಕುಯುಕ್ತಿಮಾಡಿ ಅವರ ಕೂಸುಗಳನ್ನು ಜೀವದಿಂದು
ಳಿಸಬಾರದೆಂದು ಹೊರಗೆ ಹಾಕಿಸಿ ನಮ್ಮ ಪಿತೃಗಳನ್ನು
ಕ್ರೂರವಾಗಿ ನಡಿಸಿದನು. ಆ ಸಮಯದಲ್ಲೇ 20
ಮೋಶೆಯು ಹುಟ್ಟಿದನು. ಅವನು ದಿವ್ಯಸುಂದರ
ನಾಗಿದ್ದನು; ಮತ್ತು ತಂದೆಯ ಮನೆಯಲ್ಲಿ ಮೂರು
ತಿಂಗಳು ಸಾಕಲ್ಪಟ್ಟನು. ಆ ಮೇಲೆ ಅವನನ್ನು ಹೊರಗೆ 21

ಹಾಕಿದಾಗ ಫರೋಹನ ಮಗಳು ಅವನನ್ನು ಎತ್ತಿ
ಕೊಂಡು ಹೋಗಿ ತನ್ನ ಮಗನಾಗಿ ಸಾಕಿದಳು.
22 ಮೋಶೆಯು ಐಗುಪ್ತದೇಶದವರ ಸರ್ವವಿದ್ಯೆಗಳಲ್ಲಿ
ಯೂ ಉಪದೇಶಹೊಂದಿ ಮಾತುಗಳಲ್ಲಿಯೂ ಕಾರ್ಯ
23 ಗಳಲ್ಲಿಯೂ ಸಮರ್ಥನಾದನು. ಅವನಿಗೆ ನಾಲ್ವತ್ತು
ವರುಷ ವಯಸ್ಸು ತುಂಬುತ್ತಾ ಇರಲು ಇಸ್ರಾಯೇಲ್
ವಂಶಸ್ಥರಾದ ತನ್ನ ಸಹೋದರರನ್ನು ಹೋಗಿನೋಡ
ಬೇಕೆಂಬ ಆಶೆಯು ಅವನ ಹೃದಯದಲ್ಲಿ ಹುಟ್ಟಿತು.
24 ಅವರಲ್ಲಿ ಒಬ್ಬನಿಗೆ ಅನ್ಯಾಯವಾಗುವದನ್ನು ಅವನು
ನೋಡಿ ಅವನಿಗೆ ಆಶ್ರಯಕೊಟ್ಟು ಪೀಡಿಸುವ
ಐಗುಪ್ತ್ಯನನ್ನು ಹೊಡೆದುಹಾಕಿ ಮುಯ್ಯಿಗೆ ಮುಯ್ಯಿ
25 ತೀರಿಸಿದನು. ದೇವರು ತನ್ನ ಕೈಯಿಂದ ಬಿಡುಗಡೆ
ಯನ್ನು ಉಂಟುಮಾಡುತ್ತಾನೆಂಬದು ತನ್ನ ಸಹೋದರ
ರಿಗೆ ತಿಳಿದುಬರುವದೆಂದು ಭಾವಿಸಿದನು; ಆದರೆ ಅವರು
26 ಹಾಗೆ ತಿಳುಕೊಳ್ಳಲಿಲ್ಲ. ಮರುದಿನ ತಾವು ತಾವೇ
ಹೊಡೆದಾಡಿಕೊಳ್ಳುತ್ತಿರುವಾಗ ಅವನು ಎದುರಾಗಿ
ಬಂದು—ಜನರೇ, ನೀವು ಸಹೋದರರಲ್ಲವೇ. ನೀವೇಕೆ
ಒಬ್ಬರಿಗೊಬ್ಬರು ಅನ್ಯಾಯಮಾಡುತ್ತೀರಿ ಎಂದು ಹೇಳಿ
27 ಅವರನ್ನು ಸಮಾಧಾನಪಡಿಸಬೇಕೆಂದಿದ್ದನು. ಆದರೆ
ತನ್ನ ಸ್ವಕುಲದವನಿಗೆ ಅನ್ಯಾಯಮಾಡುತ್ತಿದ್ದವನು—
ನಿನ್ನನ್ನು ನಮ್ಮ ಮೇಲೆ ಅಧಿಕಾರಿಯನ್ನಾಗಿಯೂ ನ್ಯಾ
28 ಯಾಧಿಪತಿಯನ್ನಾಗಿಯೂ ಇಟ್ಟವರು ಯಾರು? ನಿನ್ನೆ
ಆ ಐಗುಪ್ತ್ಯನನ್ನು ಕೊಂದಂತೆ ನನ್ನನ್ನೂ ಕೊಲ್ಲ
ಬೇಕೆಂದಿದ್ದೀಯೋ ಎಂದು ಅವನನ್ನು ನೂಕಿಬಿಟ್ಟನು.
29 ಈ ಮಾತನ್ನು ಕೇಳಿ ಮೋಶೆಯು ಓಡಿಹೋಗಿ ಮಿದ್ಯಾ
ನ್‌ದೇಶದಲ್ಲಿ ಪ್ರವಾಸಿಯಾದನು. ಅಲ್ಲಿ ಇಬ್ಬರು
ಗಂಡುಮಕ್ಕಳನ್ನು ಪಡೆದನು.
30 ನಾಲ್ವತ್ತು ವರುಷ ತುಂಬಿದ ಮೇಲೆ ದೇವದೂತನು
ಸೀನಾಯಿಬೆಟ್ಟದ ಅಡವಿಯಲ್ಲಿ ಮುಳ್ಳಿನ ಪೊದೆಯೊ
ಳಗೆ ಉರಿಯುವ ಬೆಂಕಿಯಲ್ಲಿ ಅವನಿಗೆ ಕಾಣಿಸಿಕೊಂ
31 ಡನು. ಮೋಶೆಯು ಅದನ್ನು ಕಂಡು ಆ ನೋಟಕ್ಕೆ
ಆಶ್ಚರ್ಯಪಟ್ಟು ಚೆನ್ನಾಗಿ ನೋಡಬೇಕೆಂದು ಹತ್ತಿರ
32 ಬರಲು—ನಾನು ನಿನ್ನ ಪಿತೃಗಳ ದೇವರು, ಅಬ್ರಹಾಮ
ಇಸಾಕ ಯಾಕೋಬರ ದೇವರು ಎಂದು ಕರ್ತನ ಶಬ್ದ
ವುಂಟಾಯಿತು. ಆಗ ಮೋಶೆಯು ನಡುಗುತ್ತಾ ಸ್ಥಿರ
ವಾಗಿ ನೋಡುವದಕ್ಕೆ ಧೈರ್ಯವಿಲ್ಲದವನಾದನು.
33 ಮತ್ತು ಕರ್ತನು ಅವನಿಗೆ—ನಿನ್ನ ಕಾಲಿನ ಕೆರಗಳನ್ನು
ತೆಗೆ; ನೀನು ನಿಂತಿರುವ ಸ್ಥಳವು ಪರಿಶುದ್ಧಭೂಮಿ.
34 ಐಗುಪ್ತದೇಶದಲ್ಲಿರುವ ನನ್ನ ಜನರ ದುರವಸ್ಥೆಯನ್ನು
ನೋಡೇ ನೋಡಿದ್ದೇನೆ; ಅವರ ಮೊರೆಯನ್ನು ಕೇಳಿ
ಅವರನ್ನು ಬಿಡಿಸುವದಕ್ಕೆ ಇಳಿದುಬಂದಿದ್ದೇನೆ; ಈಗ
ನಿನ್ನನ್ನು ಐಗುಪ್ತದೇಶಕ್ಕೆ ಕಳುಹಿಸುತ್ತೇನೆ, ಬಾ,
ಎಂದು ಹೇಳಿದನು.
35 ಅವರು ಯಾವ ಮೋಶೆಯನ್ನು—ನಿನ್ನನ್ನು ಅಧಿ
ಕಾರಿಯನ್ನಾಗಿಯೂ ನ್ಯಾಯಾಧಿಪತಿಯನ್ನಾಗಿಯೂ
ಇಟ್ಟವರು ಯಾರೆಂದು ಹೇಳಿ ಬೇಡವೆಂದರೋ ಅವನ
ನ್ನೇ ದೇವರು ಪೊದೆಯಲ್ಲಿ ಕಾಣಿಸಿಕೊಂಡ ದೂತನ
ಕೈಯಿಂದ ಅಧಿಕಾರಿಯನ್ನಾಗಿಯೂ ಬಿಡುಗಡೆಮಾಡು

ವವನನ್ನಾಗಿಯೂ ನೇಮಿಸಿದನು. ಅವನೇ ಐಗುಪ್ತದೇ
ದಲ್ಲಿಯೂ ಕೆಂಪು ಸಮುದ್ರದಲ್ಲಿಯೂ ನಾಲ್ವತ
ವರುಷ ಅಡವಿಯಲ್ಲಿಯೂ ಅದ್ಭುತಕಾರ್ಯಗಳನ
ಸೂಚಕಕಾರ್ಯಗಳನ್ನೂ ಮಾಡುತ್ತಾ ಅವರನ್ನು ನ
ಸಿಕೊಂಡು ಬಂದವನು. ಆ ಮೋಶೆಯೇ—ದೇವರ
ನನ್ನನ್ನು ಏರ್ಪಡಿಸಿದಂತೆ ನಿಮ್ಮ ಸಹೋದರರ
ಮತ್ತೊಬ್ಬ ಪ್ರವಾದಿಯನ್ನು ನಿಮಗೆ ಏರ್ಪಡಿಸಿಕೊಡ
ವನು ಎಂದು ಇಸ್ರಾಯೇಲ್ ಜನರಿಗೆ ಹೇಳಿದವನ
ಅವನೇ ಸೀನಾಯಿಬೆಟ್ಟದಲ್ಲಿ ತನ್ನೊಡನೆ ಮಾತಾಡಿದ
ದೂತನಿಗೂ ನಮ್ಮ ಪಿತೃಗಳಿಗೂ ಅಡವಿಯಲ್ಲಿದ್ದ ಸ
ಯೊಳಗೆ ಮಧ್ಯಸ್ಥನಾಗಿದ್ದು ಜೀವಕರವಾದ ದೇವೋ
ಕ್ತಿಗಳನ್ನು ಹೊಂದಿ ನಮಗೆ ಕೊಟ್ಟವನು. ಆದ
ನಮ್ಮ ಪಿತೃಗಳು ಅವನ ಮಾತುಗಳನ್ನು ಕೇಳುವದಕ
ಮನಸ್ಸಿಲ್ಲದವರಾಗಿ ಅವನನ್ನು ತಳ್ಳಿಬಿಟ್ಟು ತಿರಿ
ಐಗುಪ್ತದೇಶದ ಕಡೆಗೆ ಮನಸ್ಸಿಟ್ಟರು. ಅವರ
ಆರೋನನಿಗೆ—ಐಗುಪ್ತದೇಶದಿಂದ ನಮ್ಮನ್ನು ಕ
ಕೊಂಡು ಬಂದ ಆ ಮೋಶೆಯು ಏನಾದನೋ ಗೊತ್ತಿ
ಲ್ಲ, ನಮ್ಮ ಮುಂದುಗಡೆಯಲ್ಲಿ ಹೋಗುವದಕ್ಕೆ ದೇವ
ರುಗಳನ್ನು ನಮಗೆ ಮಾಡಿಕೊಡು ಎಂದು ಹೇಳಿದರು
ಆ ದಿನಗಳಲ್ಲಿ ಅವರು ಒಂದು ಬಸವನನ್ನು ಮಾ
ಆ ವಿಗ್ರಹಕ್ಕೆ ಬಲಿಯನ್ನರ್ಪಿಸಿ ತಮ್ಮ ಕೈಗಳಿಂ
ಮಾಡಿದ ವಸ್ತುಗಳಲ್ಲಿ ಉಲ್ಲಾಸಪಟ್ಟರು. ಆದ
ದೇವರು ಅವರಿಗೆ ವಿಮುಖನಾಗಿ ಆಕಾಶದ ನಕ್ಷತ್ರ
ಗಣವನ್ನು ಪೂಜಿಸುವದಕ್ಕೆ ಅವರನ್ನು ಒಪ್ಪಿಸಿಬಿಟ್ಟನು
ಪ್ರವಾದಿಗಳ ಗ್ರಂಥದಲ್ಲಿ ಬರೆದಿರುವದೇನಂದರೆ—

ಇಸ್ರಾಯೇಲ್ ವಂಶದವರೇ, ನೀವು ಅರಣ
ದಲ್ಲಿದ್ದ ನಾಲ್ವತ್ತು ವರುಷ
ನನಗೆ ಯಜ್ಞಗಳನ್ನೂ ಬಲಿಗಳನ್ನೂ ಅರ್ಪಿಸ
ತ್ತಿದ್ದಿರೋ? ಇಲ್ಲವಲ್ಲಾ;
ಅದಕ್ಕೆ ಬದಲಾಗಿ ನೀವು ಪೂಜಿಸಬೇಕೆಂದ
ಮಾಡಿಕೊಂಡ ಮೂರ್ತಿಗಳನ್ನು
ಅಂದರೆ ಮೊಲೋಖನ ಗುಡಾರವನ್ನೂ ರೊಂಫಾ
ದೇವತೆಯ ನಕ್ಷತ್ರರೂಪವನ್ನೂ ಹೊತ್ತು
ಕೊಂಡು ಹೋದಿರಿ.
ಆದದರಿಂದ ನಾನು ನಿಮ್ಮನ್ನು ಬಾಬೆಲಿನ ಆಚ
ಗೆ ಗಡೀಪಾರು ಮಾಡುವೆನು ಎಂಬದು.

ದೇವದರ್ಶನಗುಡಾರವು ಅಡವಿಯೊಳಗೆ ನಮ್ಮ ಪಿತ
ಗಳ ಬಳಿಯಲ್ಲಿ ಇತ್ತು. ಮೋಶೆಯ ಸಂಗಡ ಮಾತಾ
ದವನು—ನೀನು ನೋಡಿದ ಮಾದರಿಯ ಪ್ರಕಾರವೆ
ಅದನ್ನು ಮಾಡಿಸಬೇಕೆಂದು ನೇಮಿಸಿದ್ದನು. ನಮ
ಹಿರಿಯರು ಅದನ್ನು ತಮ್ಮ ತಂದೆಗಳಿಂದ ಹೊಂದಿದರು
ಅವರು ಯೆಹೋಶುವನ ಹಿಂದೆ ಬಂದು ದೇವರು ತಮ
ಮುಂದೆ ಹೊರಡಿಸಿದ ಅನ್ಯಜನಗಳ ದೇಶವನ್ನು ಸ್ವಾಧೀ
ನಮಾಡಿಕೊಂಡಾಗ ಆ ಗುಡಾರವನ್ನು ಕೂಡ ತಂದರು
ಅದು ದಾವೀದನ ಕಾಲದ ವರೆಗೂ ಇಲ್ಲೇ ಇತ್ತು
ದಾವೀದನು ದೇವರ ಸನ್ನಿಧಾನದಲ್ಲಿ ಕೃಪೆಹೊಂದಿ
1)ಯಾಕೋಬನ ವಂಶದವರಿಗೋಸ್ಕರ ದೇವಾಲಯ
ವನ್ನು ಕಟ್ಟಿಸುವದಕ್ಕೆ ಅಪ್ಪಣೆಯಾಗಬೇಕೆಂದು ಕೇಳ

1) ಕೆಲವು ಪ್ರತಿಗಳಲ್ಲಿ—ಯಾಕೋಬನ ದೇವರಿಗೋಸ್ಕರವೆಂದು ಬರೆದದೆ.

47 ಕೊಂಡನು. ಆದರೆ ಆತನಿಗೋಸ್ಕರ ಮನೆಯನ್ನು
48 ಕಟ್ಟಿಸಿದವನು ಸೊಲೊಮೋನನು. ಆದರೂ ಪರಾತ್ಪ
ರನು ಕೈಯಿಂದ ಕಟ್ಟಿದ ಮನೆಗಳಲ್ಲಿ ವಾಸಮಾಡು
ವವನಲ್ಲ.
49 ಆಕಾಶವು ನನಗೆ ಸಿಂಹಾಸನ,
ಭೂಮಿಯು ನನ್ನ ಪಾದಗಳಿಗೆ ಪೀಠ.
ನೀವು ನನಗೆ ಎಂಥ ಮನೆಯನ್ನು ಕಟ್ಟಿಕೊಡು
ವಿರಿ?
ನನ್ನ ವಿಶ್ರಾಂತಿಗೆ ತಕ್ಕ ಸ್ಥಳವು ಯಾವದು?
50 ಇವುಗಳನ್ನೆಲ್ಲಾ ನನ್ನ ಕೈಯೇ ನಿರ್ಮಿಸಿತಲ್ಲಾ
ಎಂಬದಾಗಿ ಕರ್ತನು ಹೇಳುತ್ತಾನೆ
ಎಂದು ಪ್ರವಾದಿಯು ನುಡಿದಿದ್ದಾನೆ.
51 ಚಂಡಿಗಳೇ, 1)ಮನಶ್ಶುದ್ಧಿಯೂ ಕರ್ಣಶುದ್ಧಿಯೂ
ಇಲ್ಲದವರೇ, ನಿಮ್ಮ ಪಿತೃಗಳು ಹೇಗೋ ಹಾಗೆಯೇ
ನೀವೂ ಯಾವಾಗಲೂ ಪವಿತ್ರಾತ್ಮನನ್ನು ಎದುರಿಸುವವ
52 ರಾಗಿದ್ದೀರಿ. ಪ್ರವಾದಿಗಳಲ್ಲಿ ನಿಮ್ಮ ಪಿತೃಗಳು ಹಿಂಸೆ
ಪಡಿಸದವರು ಯಾರಿದ್ದಾರೆ? ಅವರು ಆ ನೀತಿಸ್ವರೂ
ಪನ ಆಗಮನದ ವಿಷಯದಲ್ಲಿ ಮುಂತಿಳಿಸಿದವರನ್ನು
ಕೊಂದರು, ನೀವು ಈಗ ಆತನನ್ನು ಹಿಡುಕೊಟ್ಟು
53 ಕೊಂದವರಾದಿರಿ. ದೇವದೂತರ ಮೂಲಕ ನೇಮಕ
ವಾದ ಧರ್ಮಶಾಸ್ತ್ರವನ್ನು ನೀವು ಹೊಂದಿದವರಾದರೂ
ಅದನ್ನು ಅನುಸರಿಸುವದಿಲ್ಲ ಎಂದು ಹೇಳಿದನು.
54 ಈ ಮಾತುಗಳನ್ನು ಕೇಳಿ ಅವರು ರೌದ್ರಮನಸ್ಸು
55 ಳ್ಳವರಾಗಿ ಅವನ ಮೇಲೆ ಹಲ್ಲು ಕಡಿದರು. ಆದರೆ
ಅವನು ಪವಿತ್ರಾತ್ಮಭರಿತನಾಗಿ ಆಕಾಶದ ಕಡೆಗೆ ದೃಷ್ಟಿ
ಸಿ ನೋಡಿ ದೇವರ ಪ್ರಭಾವವನ್ನೂ ದೇವರ ಬಲಗಡೆ
56 ಯಲ್ಲಿ ನಿಂತಿದ್ದ ಯೇಸುವನ್ನೂ ಕಂಡು—ಅಗೋ,
ಆಕಾಶವು ತೆರೆದಿರುವದನ್ನೂ ಮನುಷ್ಯಕುಮಾರನು
ದೇವರ ಬಲಗಡೆಯಲ್ಲಿ ನಿಂತಿರುವದನ್ನೂ ನೋಡು
57 ತ್ತೇನೆ ಎಂದು ಹೇಳಿದನು. ಆದರೆ ಅವರು ಮಹಾಶಬ್ದ
ದಿಂದ ಕೂಗಿ ಕಿವಿಗಳನ್ನು ಮುಚ್ಚಿಕೊಂಡು ಒಟ್ಟಾಗಿ
58 ಅವನ ಮೇಲೆ ಬಿದ್ದು ಅವನನ್ನು ಊರ ಹೊರಕ್ಕೆ ನೂಕಿ
ಕೊಂಡು ಹೋಗಿ ಕೊಲ್ಲುವದಕ್ಕೆ ಕಲ್ಲೆಸೆದರು. ಸಾಕ್ಷಿ
ಯವರು ತಮ್ಮ ಬಟ್ಟೆಗಳನ್ನು ತೆಗೆದು ಸೌಲನೆಂಬ
ಒಬ್ಬ ಯೌವನಸ್ಥನ ಕಾಲುಗಳ ಬಳಿಯಲ್ಲಿ ಇಟ್ಟರು.
59 ಅವರು ಸ್ತೆಫನನ ಮೇಲೆ ಕಲ್ಲೆಸೆಯುತ್ತಾ ಇರಲು
60 ಅವನು ಕರ್ತನ ಹೆಸರನ್ನು ಹೇಳಿ—ಯೇಸುಸ್ವಾಮಿ
ಯೇ, ನನ್ನಾತ್ಮವನ್ನು ಸೇರಿಸಿಕೋ ಎಂದು ಪ್ರಾರ್ಥಿ
ಸಿ ಮೊಣಕಾಲೂರಿ—ಕರ್ತನೇ, ಈ ಪಾಪವನ್ನು
ಅವರ ಮೇಲೆ ಹೊರಿಸಬೇಡವೆಂದು ಮಹಾಶಬ್ದದಿಂದ
8 ಕೂಗಿದನು. ಇದನ್ನು ಹೇಳಿ ನಿದ್ರೆಹೋದನು. ಸೌಲ
ನು ಅವನ ಕೊಲೆಗೆ ಸಮ್ಮತಿಸುವವನಾಗಿದ್ದನು.
ಆ ದಿವಸದಲ್ಲಿ ಯೆರೂಸಲೇಮಿನಲ್ಲಿದ್ದ ಸಭೆಗೆ
ದೊಡ್ಡ ಹಿಂಸೆ ಉಂಟಾಯಿತು. ಅಪೊಸ್ತಲರು ಹೊರ
ತಾಗಿ ಎಲ್ಲರು ಯೂದಾಯ ಸಮಾರ್ಯ ಸೀಮೆಗಳಲ್ಲಿ
2 ಚದರಿಹೋದರು. ಭಕ್ತರಾದ ಜನರು ಸ್ತೆಫನನನ್ನು
ಹೂಣಿಟ್ಟು ಅವನಿಗೋಸ್ಕರ ಬಹಳವಾಗಿ ಗೋಳಾಡಿ
3 ದರು. ಆದರೆ ಸೌಲನು ಮನೆಮನೆಗಳಲ್ಲಿ ಹೊಕ್ಕು
ಗಂಡಸರನ್ನೂ ಹೆಂಗಸರನ್ನೂ ಎಳಕೊಂಡು ಬಂದು ಸೆರೆ
ಮನೆಗೆ ಹಾಕಿಸಿ ಸಭೆಯನ್ನು ಹಾಳುಮಾಡುತ್ತಿದ್ದನು.

ಫಿಲಿಪ್ಪನು ಸಮಾರ್ಯದಲ್ಲಿ ಸುವಾರ್ತೆಯನ್ನು ಪ್ರಸಂಗಿಸಿದ್ದು; ಸೀಮೋನನೆಂಬ ಮಂತ್ರವಾದಿಯನ್ನು ಕುರಿತದ್ದು.

ಚದರಿಹೋದವರು ಅಲ್ಲಲ್ಲಿ ಹೋಗಿ ಸುವಾರ್ತಾ 4
ವಾಕ್ಯವನ್ನು ಸಾರುತ್ತಿದ್ದರು. ಫಿಲಿಪ್ಪನು ಸಮಾರ್ಯ 5
ವೆಂಬ ಪಟ್ಟಣಕ್ಕೆ ಹೋಗಿ ಕ್ರಿಸ್ತನನ್ನು ಅಲ್ಲಿರುವವರಿಗೆ
ಪ್ರಕಟಿಸಿದನು. ಗುಂಪಾಗಿ ಕೂಡಿದ ಜನಗಳು ಫಿಲಿಪ್ಪ 6
ನ ಮಾತುಗಳನ್ನು ಕೇಳಿ ಅವನು ಮಾಡಿದ ಸೂಚಕ
ಕಾರ್ಯಗಳನ್ನು ನೋಡಿ ಅವನು ಹೇಳಿದ ಸಂಗತಿಗಳಿ
ಗೆ ಏಕಮನಸ್ಸಾಗಿ ಲಕ್ಷ್ಯಕೊಟ್ಟರು. ಯಾಕಂದರೆ 7
ಅನೇಕರೊಳಗಿಂದ ದೆವ್ವಗಳು ಮಹಾಶಬ್ದದಿಂದ ಕೂಗಿ
ಹೊರಗೆ ಬಂದವು; ಮತ್ತು ಅನೇಕ ಪಾರ್ಶ್ವವಾಯು
ರೋಗಿಗಳೂ ಕುಂಟರೂ ಸ್ವಸ್ಥಮಾಡಲ್ಪಟ್ಟರು. ಆ 8
ಪಟ್ಟಣದಲ್ಲಿ ಬಹು ಸಂತೋಷವಾಯಿತು.
ಆದರೆ ಕೆಲವು ಕಾಲದಿಂದ ಆ ಪಟ್ಟಣದಲ್ಲಿದ್ದ 9
ಸೀಮೋನನೆಂಬ ಒಬ್ಬ ಮನುಷ್ಯನು ತಾನು ಏನೋ
ಒಬ್ಬ ಮಹಾತ್ಮನೆಂದು ಹೇಳಿಕೊಂಡು ಮಂತ್ರತಂತ್ರ
ಗಳನ್ನು ನಡಿಸಿ ಸಮಾರ್ಯದ ಜನರಲ್ಲಿ ಬೆರಗನ್ನು
ಹುಟ್ಟಿಸುತ್ತಿದ್ದನು. ಚಿಕ್ಕವರು ಮೊದಲುಗೊಂಡು 10
ದೊಡ್ಡವರ ಪರ್ಯಂತರ ಎಲ್ಲರೂ—ಇವನು ಮಹಾ
ಶಕ್ತಿ ಎನಿಸಿಕೊಂಡಿರುವ ದೇವರ ಶಕ್ತಿಯೇ ಎಂದು
ಹೇಳುತ್ತಾ ಅವನಿಗೆ ಲಕ್ಷ್ಯಕೊಡುತ್ತಿದ್ದರು. ಬಹು 11
ಕಾಲದಿಂದಲೂ ಅವನು ಮಂತ್ರತಂತ್ರಗಳನ್ನು ನಡಿಸಿ
ಜನರಲ್ಲಿ ಬೆರಗನ್ನು ಹುಟ್ಟಿಸಿದ್ದ ಕಾರಣದಿಂದ
ಅವರು ಅವನಿಗೆ ಲಕ್ಷ್ಯಕೊಡುತ್ತಿದ್ದರು. ಆದರೆ ಫಿಲಿ 12
ಪ್ಪನು ದೇವರ ರಾಜ್ಯದ ವಿಷಯದಲ್ಲಿಯೂ ಯೇಸು
ಕ್ರಿಸ್ತನ ಹೆಸರಿನ ವಿಷಯದಲ್ಲಿಯೂ ಶುಭವರ್ತಮಾನ
ವನ್ನು ಸಾರಲು ಗಂಡಸರೂ ಹೆಂಗಸರೂ ನಂಬಿ ದೀಕ್ಷಾ
ಸ್ನಾನಮಾಡಿಸಿಕೊಂಡರು. ಆಗ ಸೀಮೋನನು ಕೂಡ 13
ನಂಬಿ ದೀಕ್ಷಾಸ್ನಾನಮಾಡಿಸಿಕೊಂಡು ಫಿಲಿಪ್ಪನ ಸಂಗಡ
ಯಾವಾಗಲೂ ಇದ್ದು ಸೂಚಕಕಾರ್ಯಗಳೂ ಮಹ
ತ್ಕಾರ್ಯಗಳೂ ಉಂಟಾಗುವದನ್ನು ನೋಡಿ ಬೆರಗಾ
ದನು.
ಸಮಾರ್ಯದವರು ದೇವರ ವಾಕ್ಯವನ್ನು ಸ್ವೀಕರಿಸಿ 14
ದ ವರ್ತಮಾನವನ್ನು ಯೆರೂಸಲೇಮಿನಲ್ಲಿದ್ದ ಅಪೊ
ಸ್ತಲರು ಕೇಳಿ ಪೇತ್ರ ಯೋಹಾನರನ್ನು ಅವರ ಬಳಿಗೆ
ಕಳುಹಿಸಿದರು. ಇವರು ಅಲ್ಲಿಗೆ ಬಂದು ಆ ಜನರಿಗೆ 15
ಪವಿತ್ರಾತ್ಮವರವು ದೊರೆಯಬೇಕೆಂದು ಅವರಿಗೋಸ್ಕರ
ಪ್ರಾರ್ಥನೆಮಾಡಿದರು. ಯಾಕಂದರೆ ಆ ವರವು ಅವರ 16
ಲ್ಲಿ ಒಬ್ಬನ ಮೇಲಾದರೂ ಇನ್ನೂ ಬಂದಿರಲಿಲ್ಲ. ಅವ
ರು ಕರ್ತನಾದ ಯೇಸುವಿನ ಹೆಸರಿನಲ್ಲಿ ದೀಕ್ಷಾಸ್ನಾನ
ವನ್ನು ಮಾತ್ರ ಮಾಡಿಸಿಕೊಂಡಿದ್ದರು. ಅಪೊಸ್ತಲರು 17
ಅವರ ಮೇಲೆ ಕೈಗಳನ್ನಿಡಲು ಅವರು ಪವಿತ್ರಾತ್ಮ
ವರವನ್ನು ಹೊಂದಿದರು. ಅಪೊಸ್ತಲರು ಕೈಗಳನ್ನಿಡು 18
ವದರ ಮೂಲಕವಾಗಿ ಪವಿತ್ರಾತ್ಮದಾನವಾಗುವದನ್ನು

1) ಮೂಲ: ಹೃದಯದಲ್ಲಿಯೂ ಕಿವಿಯಲ್ಲಿಯೂ ಸುನ್ನತಿಯಿಲ್ಲದವರೇ.

ಸೀಮೋನನು ನೋಡಿ ಹಣವನ್ನು ತಂದು ಅವರ
19 ಮುಂದಿಟ್ಟು—ನಾನು ಯಾರ ಮೇಲೆ ಕೈಗಳನ್ನಿಡು
ತ್ತೇನೋ ಅವರು ಪವಿತ್ರಾತ್ಮವರವನ್ನು ಹೊಂದುವಂತೆ
ಈ ಅಧಿಕಾರವನ್ನು ನನಗೂ ಕೊಡಿರಿ ಅಂದನು.
20 ಆದರೆ ಪೇತ್ರನು ಅವನಿಗೆ—ನಿನ್ನ ಬೆಳ್ಳಿಯು ನಿನ್ನ
ಕೂಡ ಹಾಳಾಗಿಹೋಗಲಿ. ದೇವರ ವರವನ್ನು ಹಣಕ್ಕೆ
21 ಕೊಂಡುಕೊಳ್ಳಬಹುದೆಂದು ಭಾವಿಸುತ್ತೀಯೋ? ಈ
ಕಾರ್ಯದಲ್ಲಿ ನಿನಗೆ ಭಾಗವೂ ಇಲ್ಲ, ಪಾಲೂ ಇಲ್ಲ;
22 ನಿನ್ನ ಹೃದಯವು ದೇವರ ಮುಂದೆ ಸರಿಯಲ್ಲ. ಆದದ
ರಿಂದ ಈ ನಿನ್ನ ಕೆಟ್ಟತನವನ್ನು ಬಿಟ್ಟು ದೇವರ ಕಡೆಗೆ
ತಿರುಗಿಕೊಂಡು ಕರ್ತನು ನಿನ್ನ ಮನಸ್ಸಿನ ಆಲೋಚನೆ
ಯನ್ನು ಕ್ಷಮಿಸುವನೋ ಏನೋ ಆತನನ್ನು ಬೇಡಿಕೋ.
23 ಯಾಕಂದರೆ ನೀನು ಹಾನಿಕರವಾದ ವಿಷವೂ ದುಷ್ಟತ್ವ
ದಲ್ಲಿ ಬಿಗಿಯುವ ಬಂಧನವೂ ಆಗಿರುವವನೆಂದು ಕಾಣು
24 ತ್ತದೆ ಅಂದನು. ಅದಕ್ಕೆ ಸೀಮೋನನು—ನೀವು ಹೇಳಿ
ರುವ ಸಂಗತಿಗಳಲ್ಲಿ ಯಾವದೂ ನನ್ನ ಮೇಲೆ ಬಾರ
ದಂತೆ ನನಗೋಸ್ಕರ ನೀವೇ ಕರ್ತನನ್ನು ಬೇಡಿಕೊಳ್ಳಿರಿ
ಎಂದು ಹೇಳಿದನು.
25 ಹೀಗಿರಲಾಗಿ ಅವರು ಕರ್ತನ ವಾಕ್ಯವನ್ನು ಪ್ರಮಾ
ಣಪೂರ್ವಕವಾಗಿ ಹೇಳಿದ ಮೇಲೆ ಯೆರೂಸಲೇಮಿಗೆ
ಹಿಂತಿರುಗಿ ಹೊರಟು ಸಮಾರ್ಯದವರ ಅನೇಕ ಊರು
ಗಳಲ್ಲಿ ಸುವಾರ್ತೆಯನ್ನು ಸಾರಿದರು.

### ಫಿಲಿಪ್ಪನು ಐಥಿಯೋಪ್ಯದವನಿಗೆ ಸುವಾರ್ತೆಯನ್ನು ತಿಳಿಸಿದ್ದು.

26 ಅಷ್ಟರಲ್ಲಿ ಕರ್ತನ ದೂತನು ಫಿಲಿಪ್ಪನಿಗೆ—ನೀನು
ಎದ್ದು ದಕ್ಷಿಣ ಕಡೆಗೆ ಯೆರೂಸಲೇಮಿನಿಂದ ಗಾಜಕ್ಕೆ
ಹೋಗುವ ದಾರಿಯಲ್ಲಿ ಹೋಗು, ಅದು ಅಡವಿ ಎಂದು
27 ಹೇಳಿದನು. ಅವನು ಎದ್ದು ಹೊರಟುಹೋದನು;
ಹೋಗುತ್ತಿರುವಾಗ ಐಥಿಯೋಪ್ಯ ದೇಶದ ಒಬ್ಬ ಮನು
ಷ್ಯನನ್ನು ಕಂಡನು. ಅವನು ಕಂಚುಕಿಯೂ ಐಥಿ
ಯೋಪ್ಯದವರ ರಾಣಿಯಾಗಿದ್ದ ಕಂದಾಕೆಯ ಕೈಕೆಳಗೆ
ದೊಡ್ಡ ಅಧಿಕಾರಿಯೂ ಆಕೆಯ ಎಲ್ಲಾ ಖಜಾನೆಯ
28 ಮೇಲ್ವಿಚಾರಕನೂ ಆಗಿದ್ದನು. ಅವನು ದೇವಾರಾಧನೆ
ಗೋಸ್ಕರ ಯೆರೂಸಲೇಮಿಗೆ ಬಂದು ಹಿಂತಿರುಗಿ ಹೋ
ಗುವಾಗ ತನ್ನ ರಥದಲ್ಲಿ ಕೂತುಕೊಂಡು ಯೆಶಾಯ
29 ಪ್ರವಾದಿಯ ಗ್ರಂಥವನ್ನು ಓದುತ್ತಿದ್ದನು. ದೇವರಾ
ತ್ಮನು ಫಿಲಿಪ್ಪನಿಗೆ—ನೀನು ಆ ರಥದ ಹತ್ತಿರ ಹೋಗಿ
30 ಅದರ ಸಂಗಡಲೇ ನಡೆ ಎಂದು ಹೇಳಿದನು. ಫಿಲಿಪ್ಪನು
ಓಡಿಹೋಗಿ ಆ ಮನುಷ್ಯನು ಯೆಶಾಯ ಪ್ರವಾದಿಯ
ಗ್ರಂಥವನ್ನು ಓದುತ್ತಿರುವದನ್ನು ಕೇಳಿ—ಎಲೈ, ನೀನು
31 ಓದುವದು ನಿನಗೆ ತಿಳಿಯುತ್ತದೋ? ಅನ್ನಲು ಅವನು—
ಯಾರಾದರೂ ನನಗೆ ಅರ್ಥ ತಿಳಿಸಿಕೊಟ್ಟ ಹೊರತು
ಅದು ನನಗೆ ಹೇಗೆ ತಿಳಿದೀತು ಎಂದು ಹೇಳಿ—
ನೀನು ರಥವನ್ನು ಹತ್ತಿ ನನ್ನ ಬಳಿಯಲ್ಲಿ ಕೂತುಕೋ
32 ಎಂಬುದಾಗಿ ಫಿಲಿಪ್ಪನನ್ನು ಕೇಳಿಕೊಂಡನು. ಅವನು
ಓದುತ್ತಿದ್ದ ಶಾಸ್ತ್ರವಚನವು ಯಾವದಂದರೆ—

ವಧ್ಯಸ್ಥಾನಕ್ಕೆ ಒಯ್ಯಲ್ಪಡುವ ಕುರಿಯ
ಆತನು ಒಯ್ಯಲ್ಪಟ್ಟನು;
ಕುರಿಮರಿಯು ಉಣ್ಣೆ ಕತ್ತರಿಸುವವನ ಮು
ಮೌನವಾಗಿರುವಂತೆ
ಆತನು ಬಾಯಿ ತೆರೆಯಲೇ ಇಲ್ಲ.
ಆತನಿಗುಂಟಾದ ದೀನಾವಸ್ಥೆಯಲ್ಲಿ ನ್ಯಾಯ
ಇಲ್ಲದೆಹೋಯಿತು.
ಆತನ ಸಕಾಲದವರನ್ನು ಹೇಳತಕ್ಕದ್ದೇನು?
ಆತನ ಜೀವವನ್ನು ಭೂಮಿಯ ಮೇಲಿನಿ
ತೆಗೆದುಬಿಟ್ಟರಲ್ಲಾ ಎಂಬದೇ.

ಕಂಚುಕಿಯು ಈ ವಚನವನ್ನು ಕುರಿತು—ಪ್ರವಾ
ಯು ಇದನ್ನು ಯಾರ ವಿಷಯದಲ್ಲಿ ಹೇಳಿದ್ದಾ
ತನ್ನ ವಿಷಯದಲ್ಲಿಯೋ? ಮತ್ತೊಬ್ಬನ ವಿಷಯ
ಲ್ಲಿಯೋ? ದಯಮಾಡಿ ಹೇಳಬೇಕು ಎಂದು ಫಿಲಿ
ನನ್ನು ಕೇಳಲು ಫಿಲಿಪ್ಪನು ಉಪದೇಶಿಸುವದಕ್ಕೆ ತೊ
ಅದೇ ವಚನವನ್ನು ಆಧಾರಮಾಡಿಕೊಂಡು ಅವನ
ಯೇಸುವಿನ ವಿಷಯವಾದ ಸುವಾರ್ತೆಯನ್ನು ತಿ
ದನು. ಅವರು ದಾರಿಯಲ್ಲಿ ಹೋಗುತ್ತಿರುವಾ
ನೀರಿನ ಬಳಿಗೆ ಬಂದರು. ಕಂಚುಕಿಯು—ಅಗೋ
ನೀರು; ನನಗೆ ದೀಕ್ಷಾಸ್ನಾನವಾಗುವದಕ್ಕೆ ಅ
ಏನು ಎಂದು ಹೇಳಿ1) ರಥವನ್ನು ನಿಲ್ಲಿಸು ಎಂ
ಅಪ್ಪಣೆಕೊಟ್ಟನು; ಫಿಲಿಪ್ಪನು ಕಂಚುಕಿಯು ಇ
ರೂ ನೀರಿನೊಳಗೆ ಇಳಿದರು. ಫಿಲಿಪ್ಪನು ಅವನ
ದೀಕ್ಷಾಸ್ನಾನ ಮಾಡಿಸಿದನು. ಅವರು ನೀರನ
ಬಿಟ್ಟು ಮೇಲಕ್ಕೆ ಬಂದಾಗ ಕರ್ತನ ಆತ್ಮ ಫಿಲಿ
ನನ್ನು ಎತ್ತಿಕೊಂಡುಹೋಗಲಾಗಿ ಕಂಚುಕಿಯು ಸ
ತೋಷವುಳ್ಳವನಾಗಿ ತನ್ನ ದಾರಿಯನ್ನು ಹಿಡಿದು ಅ
ನನ್ನು ಕಾಣಲೇ ಇಲ್ಲ. ತರುವಾಯ ಫಿಲಿಪ್ಪನ
ಅಜೋತಿನಲ್ಲಿ ಕಾಣಿಸಿಕೊಂಡು ಅಲ್ಲಿಂದ ಕೈಸರೈಯ
ತನಕ ಎಲ್ಲಾ ಊರುಗಳಲ್ಲಿ ಸುವಾರ್ತೆಯನ್ನು ಸಾ
ತ್ತಾ ಹೋದನು.

### ಸಭೆಯವರನ್ನು ಹಿಂಸೆಪಡಿಸಿದ ಸೌಲನು ತಾನೇ ಯೇಸುವಿನ ಶಿಷ್ಯನಾದದ್ದು.

ಸೌಲನು ಇನ್ನು ಕರ್ತನ ಶಿಷ್ಯರ ಮೇಲೆ ರೌ
ನಾಗಿದ್ದು ಬೆದರಿಕೆಯ ಮಾತುಗಳನ್ನಾಡುತ್ತಾ ಅ
ರನ್ನು ಸಂಹರಿಸಬೇಕೆಂದು ಆಶೆಪಡುತ್ತಾ ಮಹಾಯಾ
ಕನ ಬಳಿಗೆ ಹೋಗಿ—ಆ ಮಾರ್ಗವನ್ನು ಹಿಡಿದವ
ಯಾರಾದರೂ ಸಿಕ್ಕಿದರೆ ಅವರು ಗಂಡಸರಾದರೂ ಸ
ಯೇ ಹೆಂಗಸರಾದರೂ ಸರಿಯೇ ನಾನು ಅವರ
ಬೇಡಿಹಾಕಿಸಿ ಯೆರೂಸಲೇಮಿಗೆ ತರುವಂತೆ ದಮ
ದಲ್ಲಿರುವ ಆಯಾ ಸಭಾಮಂದಿರದವರಿಗೆ ನೀನು ಕಾ
ದವನ್ನು ಕೊಡಬೇಕು ಎಂದು ಅವನನ್ನು ಬೇಡಿಕೊ
ಡನು. ಅವನು ಪ್ರಯಾಣಮಾಡುತ್ತಾ ದಮಸ್ಕ
ಹತ್ತಿರಕ್ಕೆ ಬರಲು ಫಕ್ಕನೆ ಆಕಾಶದೊಳಗಿಂದ ಒಂ
ಬೆಳಕು ಅವನ ಸುತ್ತಲು ಮಿಂಚಿತು. ಅವನು ನೆಲ

---

1) ಕೆಲವು ಪ್ರತಿಗಳಲ್ಲಿ ಹೆಚ್ಚು ಬರೆದಿರುವದೇನಂದರೆ—(37) ಹೇಳಲು ಫಿಲಿಪ್ಪನು—ನೀನು ಮನಃಪೂರ್ವಕವಾಗಿ ನಂಬುವದಾ
ಬಹುದು ಎಂದು ಹೇಳಿದನು. ಅದಕ್ಕೆ ಅವನು—ಯೇಸು ಕ್ರಿಸ್ತನನ್ನು ದೇವಕುಮಾರನೆಂದು ನಂಬುತ್ತೇನೆ ಎಂದು ಹೇಳಿ.

ಬಿದ್ದು—ಸೌಲನೇ, ಸೌಲನೇ, ನನ್ನನ್ನು ಯಾಕೆ ಹಿಂಸೆ
ಪಡಿಸುತ್ತೀ ಎಂದು ಹೇಳುವ ವಾಣಿಯನ್ನು ಕೇಳಿದನು.
5 ಅವನು—ಕರ್ತನೇ, ನೀನಾರು ಎಂದು ಕೇಳಿದ್ದಕ್ಕೆ
ಕರ್ತನು—ನೀನು ಹಿಂಸೆಪಡಿಸುವ ಯೇಸುವೇ ನಾನು.
6 ನೀನೆದ್ದು ಊರೊಳಕ್ಕೆ ಹೋಗು, ನೀನು ಮಾಡಬೇಕಾ
ದದ್ದು ಅಲ್ಲಿ ನಿನಗೆ ತಿಳಿಸಲ್ಪಡುವದು ಎಂದು ಹೇಳಿ
7 ದನು. ಅವನ ಜೊತೆಯಲ್ಲಿ ಪ್ರಯಾಣಮಾಡುತ್ತಿದ್ದ
ವರು ಧ್ವನಿಯನ್ನು ಮಾತ್ರ ಕೇಳಿ ಯಾರನ್ನೂ ಕಾಣದೆ
8 ಮೂಕರಂತೆ ನಿಂತರು. ಸೌಲನು ನೆಲದಿಂದ ಎದ್ದು
ಕಣ್ಣು ತೆರೆದಾಗ ಏನೂ ಕಾಣಿಸಲಿಲ್ಲ. ಆಗ ಅವರು
ಅವನನ್ನು ಕೈಹಿಡಿದು ದಮಸ್ಕದೊಳಕ್ಕೆ ಕರೆದುಕೊಂಡು
9 ಹೋದರು. ಅವನು ಮೂರು ದಿವಸ ಕಣ್ಣು ಕಾಣದೆ
ಏನೂ ತಿನ್ನಲಿಲ್ಲ, ಏನೂ ಕುಡಿಯಲಿಲ್ಲ.
10 ದಮಸ್ಕದಲ್ಲಿ ಅನನೀಯನೆಂಬ ಒಬ್ಬ ಶಿಷ್ಯನಿದ್ದನು;
ಕರ್ತನು ದರ್ಶನದಲ್ಲಿ—ಅನನೀಯನೇ, ಎಂದು ಅವ
ನನ್ನು ಕರೆಯಲು ಅವನು—ಕರ್ತನೇ, ಇಗೋ,
11 ಇದ್ದೇನೆ ಅಂದನು. ಕರ್ತನು ಅವನಿಗೆ—ನೀನೆದ್ದು
ನೆಟ್ಟನೇಬೀದಿ ಎಂಬ ಬೀದಿಗೆ ಹೋಗಿ ಯೂದನ ಮನೆ
ಯಲ್ಲಿ ತಾರ್ಸದ ಸೌಲನೆಂಬವನನ್ನು ವಿಚಾರಿಸು;
12 ಅವನು ಪ್ರಾರ್ಥನೆಮಾಡುತ್ತಾನೆ. ಮತ್ತು ಅನನೀ
ಯನೆಂಬ ಒಬ್ಬ ಮನುಷ್ಯನು ಒಳಗೆ ಬಂದು ತನಗೆ
ತಿರಿಗಿ ಕಣ್ಣು ಕಾಣುವಂತೆ ತನ್ನ ಮೇಲೆ ಕೈಯಿಡುವ
13 ದನ್ನು ನೋಡಿದ್ದಾನೆ ಎಂದು ಹೇಳಿದನು. ಅದಕ್ಕೆ
ಅನನೀಯನು—ಕರ್ತನೇ, ಆ ಮನುಷ್ಯನು ಯೆರೂಸ
ಲೇಮಿನಲ್ಲಿ ನಿನ್ನನ್ನು ನಂಬಿದ ದೇವಜನರಿಗೆ ಎಷ್ಟೋ
ಕೇಡನ್ನುಂಟುಮಾಡಿದನೆಂದು ಅವನ ವಿಷಯವಾಗಿ
14 ಅನೇಕರಿಂದ ಕೇಳಿದ್ದೇನೆ; ಮತ್ತು ಇಲ್ಲಿಯೂ ನಿನ್ನ
ಹೆಸರನ್ನು ಸ್ಮರಿಸುವವರೆಲ್ಲರಿಗೆ ಬೇಡಿಹಾಕಿಸುವ ಅಧಿ
ಕಾರವನ್ನು ಮಹಾಯಾಜಕರಿಂದ ಹೊಂದಿದ್ದಾನೆ
15 ಅಂದನು. ಕರ್ತನು ಅವನಿಗೆ—ನೀನು ಹೋಗು; ಆ
ಮನುಷ್ಯನು ಅನ್ಯಜನರಿಗೂ ಅರಸುಗಳಿಗೂ ಇಸ್ರಾ
ಯೇಲ್ಯರಿಗೂ ನನ್ನ ಹೆಸರನ್ನು ತಿಳಿಸುವದಕ್ಕಾಗಿ ನಾನು
16 ಆರಿಸಿಕೊಂಡ ಸಾಧನವಾಗಿದ್ದಾನೆ. ಅವನು ನನ್ನ ಹೆಸ
ರಿನ ನಿಮಿತ್ತ ಎಷ್ಟು ಹಿಂಸೆ ಅನುಭವಿಸಬೇಕೆಂಬದನ್ನು
ನಾನೇ ಅವನಿಗೆ ತೋರಿಸುವೆನು ಎಂದು ಹೇಳಿದನು.
17 ಆಗ ಅನನೀಯನು ಹೊರಟು ಆ ಮನೆಯೊಳಗೆ
ಹೋಗಿ ಅವನ ಮೇಲೆ ತನ್ನ ಕೈಗಳನ್ನಿಟ್ಟು—ಸಹೋ
ದರನಾದ ಸೌಲನೇ, ನೀನು ಬಂದ ದಾರಿಯಲ್ಲಿ ನಿನಗೆ
ಕಾಣಿಸಿಕೊಂಡ ಕರ್ತನಾದ ಯೇಸು ನಿನಗೆ ಕಣ್ಣು
ಕಾಣುವಂತೆಯೂ ನೀನು ಪವಿತ್ರಾತ್ಮಭರಿತನಾಗುವಂ
ತೆಯೂ ನನ್ನನ್ನು ನಿನ್ನ ಬಳಿಗೆ ಕಳುಹಿಸಿದ್ದಾನೆ ಎಂದು
18 ಹೇಳಿದನು. ಕೂಡಲೆ ಅವನ ಕಣ್ಣುಗಳಿಂದ ಪರೆಗ
ಳಂತೆ ಏನೋ ಬಿದ್ದು ಅವನ ಕಣ್ಣು ಕಾಣಿಸಿದವು.
19 ಅವನು ಎದ್ದು ದೀಕ್ಷಾಸ್ನಾನಮಾಡಿಸಿಕೊಂಡನು. ತರು
ವಾಯ ಊಟಮಾಡಿ ಬಲಹೊಂದಿದನು.
20 ಮುಂದೆ ಅವನು ದಮಸ್ಕದಲ್ಲಿದ್ದ ಶಿಷ್ಯರ ಸಂಗಡ
ಕೆಲವು ದಿವಸ ಇದ್ದು ತಡಮಾಡದೆ ಸಭಾಮಂದಿರಗ
ಳಲ್ಲಿ ಯೇಸುವಿನ ವಿಷಯವಾಗಿ ಆತನೇ ದೇವಕುಮಾರ
ನೆಂದು ಸಾರುವದಕ್ಕೆ ಪ್ರಾರಂಭಮಾಡಿದನು. ಕೇಳಿದ
ವರೆಲ್ಲರು ಬೆರಗಾಗಿ—ಈ ಹೆಸರು ಹೇಳುವವರನ್ನು
ಯೆರೂಸಲೇಮಿನಲ್ಲಿ ಹಾಳುಮಾಡಿದವನು ಇವನ
ಲ್ಲವೇ. ಅಂಥವರನ್ನು ಬೇಡಿಹಾಕಿಸಿ ಮಹಾಯಾಜಕರ
ಬಳಿಗೆ ತೆಗೆದುಕೊಂಡು ಹೋಗಬೇಕೆಂದೇ ಇಲ್ಲಿಗೆ ಬಂದ
ನಲ್ಲವೇ ಎಂದು ಮಾತಾಡಿಕೊಂಡರು. ಆದರೆ ಸೌಲನು 22
ಇನ್ನೂ ಅಧಿಕ ಸಾಮರ್ಥ್ಯವುಳ್ಳವನಾಗಿ ಯೇಸುವೇ
ಕ್ರಿಸ್ತನೆಂದು ಸಿದ್ಧಾಂತಪಡಿಸಿ ದಮಸ್ಕದಲ್ಲಿದ್ದ ಯೆಹೂ
ದ್ಯರನ್ನು ಉತ್ತರವಿಲ್ಲದವರಾಗ ಮಾಡಿದನು.
ಅನೇಕ ದಿವಸಗಳು ಹೋದ ಮೇಲೆ ಯೆಹೂ 23
ದ್ಯರು ಅವನನ್ನು ಕೊಲ್ಲಬೇಕೆಂದು ಆಲೋಚನೆಮಾಡಿ
ಕೊಂಡರು. ಅವರ ಆಲೋಚನೆಯು ಸೌಲನಿಗೆ ತಿಳಿ 24
ಯಬಂತು. ಅವನನ್ನು ಕೊಲ್ಲುವದಕ್ಕಾಗಿ ಅವರು
ಹಗಲಿರುಳೂ ಪಟ್ಟಣದ ಬಾಗಿಲುಗಳನ್ನು ಕಾಯುತ್ತಿ
ದ್ದರು. ಆದರೆ ಅವನ ಶಿಷ್ಯರು ರಾತ್ರಿಕಾಲದಲ್ಲಿ ಅವ 25
ನನ್ನು ಕರೆದುಕೊಂಡುಹೋಗಿ ಒಂದು ಹೆಡಿಗೆಯಲ್ಲಿ
ಕೂಡ್ರಿಸಿ ಗೋಡೆಯೊಳಗಿಂದ ಇಳಿಸಿದರು.
ಅವನು ಯೆರೂಸಲೇಮಿಗೆ ಬಂದು ಶಿಷ್ಯರೊಳಗೆ 26
ಸೇರಿಕೊಳ್ಳಬೇಕೆಂದು ಪ್ರಯತ್ನಮಾಡಿದಾಗ ಎಲ್ಲರು
ಅವನನ್ನು ಶಿಷ್ಯನೆಂದು ನಂಬದೆ ಅವನಿಗೆ ಭಯಪಟ್ಟರು.
ಆದರೆ ಬಾರ್ನಬನು ಅವನನ್ನು ಕೈಹಿಡಿದು ಅಪೊಸ್ತ 27
ಲರ ಬಳಿಗೆ ಕರೆದುಕೊಂಡುಹೋಗಿ ಅವನು ದಾರಿ
ಯಲ್ಲಿ ಕರ್ತನನ್ನು ಕಂಡದ್ದನ್ನೂ ಕರ್ತನು ಅವನ
ಸಂಗಡ ಮಾತಾಡಿದ್ದನ್ನೂ ದಮಸ್ಕದೊಳಗೆ ಯೇಸು
ವಿನ ಹೆಸರಿನಲ್ಲಿ ಧೈರ್ಯದಿಂದ ಮಾತಾಡಿದ್ದನ್ನೂ ಅವ
ರಿಗೆ ವಿವರವಾಗಿ ಹೇಳಿದನು. ಆ ಮೇಲೆ ಅವನು 28
ಯೆರೂಸಲೇಮಿನಲ್ಲಿದ್ದುಕೊಂಡು ಅವರಲ್ಲಿ ಬರುತ್ತಾ
ಹೋಗುತ್ತಾ ಕರ್ತನ ಹೆಸರಿನಲ್ಲಿ ಧೈರ್ಯದಿಂದ ಬೋಧಿ
ಸಿದನು. ಮತ್ತು ಗ್ರೀಕ್‌ಭಾಷೆಯನ್ನಾಡುವ ಯೆಹೂ 29
ದ್ಯರ ಸಂಗಡ ಮಾತಾಡಿ ತರ್ಕಿಸುತ್ತಿದ್ದನು. ಆದರೆ
ಅವರು ಅವನನ್ನು ಕೊಲ್ಲುವದಕ್ಕೆ ಪ್ರಯತ್ನಮಾಡಿದರು.
ಇದು ಸಹೋದರರಿಗೆ ತಿಳಿದು ಬರಲು ಅವರು ಅವ 30
ನನ್ನು ಕೈಸರೈಯಕ್ಕೆ ಕರಕೊಂಡು ಹೋಗಿ ಅಲ್ಲಿಂದ
ತಾರ್ಸಕ್ಕೆ ಕಳುಹಿಸಿದರು.
ಹೀಗಿರಲಾಗಿ ಯೂದಾಯ ಗಲಿಲಾಯ ಸಮಾರ್ಯ 31
ಸೀಮೆಗಳಲ್ಲಿದ್ದ ಸಭೆಯು ಸಮಾಧಾನಹೊಂದಿತು;
ಮತ್ತು ಭಕ್ತಿಯಲ್ಲಿ ಬೆಳೆದು ಕರ್ತನ ಭಯದಲ್ಲಿ
ನಡೆದು ಪವಿತ್ರಾತ್ಮನಿಂದ ಪ್ರೋತ್ಸಾಹವನ್ನು ಹೊಂದಿ
ಹೆಚ್ಚುತ್ತಾ ಬಂತು.

ಐನೇಯನೆಂಬ ಪಾರ್ಶ್ವವಾಯುರೋಗಿ ಅದ್ಭುತವಾಗಿ
ವಾಸಿಯಾದದ್ದು.

ಪೇತ್ರನು ಎಲ್ಲಾ ಕಡೆಯೂ ಸಂಚಾರಮಾಡುತ್ತಿರು 32
ವಾಗ ಲುದ್ದದಲ್ಲಿ ವಾಸಿಯಾಗಿದ್ದ ದೇವಜನರ ಬಳಿಗೂ
ಬಂದನು. ಅಲ್ಲಿ ಪಾರ್ಶ್ವವಾಯುರೋಗಿಯಾಗಿ ಎಂಟು 33
ವರುಷಗಳಿಂದ ಹಾಸಿಗೆಯ ಮೇಲೆ ಬಿದ್ದಿದ್ದ ಐನೇಯ
ನೆಂಬ ಒಬ್ಬ ಮನುಷ್ಯನನ್ನು ಕಂಡನು. ಪೇತ್ರನು 34
ಅವನಿಗೆ—ಐನೇಯನೇ, ಯೇಸು ಕ್ರಿಸ್ತನು ನಿನ್ನನ್ನು
ವಾಸಿಮಾಡುತ್ತಾನೆ; ಎದ್ದು ನಿನ್ನ ಹಾಸಿಗೆಯನ್ನು
ಹಾಸಿಕೋ ಎಂದು ಹೇಳಿದನು. ಕೂಡಲೆ ಅವನು
ಎದ್ದನು. ಮತ್ತು ಲುದ್ದದಲ್ಲಿಯೂ ಸಾರೋನಪ್ರಾಂತ್ಯ 35

ದಲ್ಲಿಯೂ ವಾಸವಾಗಿದ್ದವರೆಲ್ಲರು ಅವನನ್ನು ನೋಡಿ
ದರು, ಮತ್ತು ಅವರು ಕರ್ತನ ಕಡೆಗೆ ತಿರುಗಿಕೊಂಡರು.

ಸತ್ತುಹೋಗಿದ್ದ ದೊರ್ಕಳೆಂಬ ಒಬ್ಬ ಶಿಷ್ಯಳನ್ನು ಬದುಕಿಸಿದ್ದು.

36 ಯೊಪ್ಪದಲ್ಲಿ ತಬಿಥಾ ಎಂಬ ಒಬ್ಬ ಶಿಷ್ಯಳಿದ್ದಳು. ಆ
ಹೆಸರಿಗೆ ಗ್ರೀಕ್‌ಭಾಷೆಯಲ್ಲಿ ದೊರ್ಕ ಎಂದರ್ಥ.
ಆಕೆಯು ಸತ್ಕ್ರಿಯೆಗಳನ್ನೂ ದಾನಧರ್ಮಗಳನ್ನೂ ಬಹ
37 ಳವಾಗಿ ಮಾಡುತ್ತಿದ್ದಳು. ಆ ಕಾಲದಲ್ಲಿ ಆಕೆ ರೋಗ
ದಲ್ಲಿ ಬಿದ್ದು ಸತ್ತಳು, ಮತ್ತು ಆಕೆಯ ಶವವನ್ನು
38 ತೊಳೆದು ಮೇಲಂತಸ್ತಿನಲ್ಲಿಟ್ಟರು. ಯೊಪ್ಪಕ್ಕೆ ಲುದ್ದವು
ಹತ್ತಿರವಾಗಿರಲಾಗಿ ಪೇತ್ರನು ಅಲ್ಲಿ ಇದ್ದಾನೆಂದು
ಶಿಷ್ಯರು ಕೇಳಿ ಇಬ್ಬರು ಮನುಷ್ಯರನ್ನು ಅವನ ಬಳಿಗೆ
ಕಳುಹಿಸಿ— ತಡಮಾಡದೆ ನಮ್ಮ ತನಕ ಬರಬೇಕೆಂದು
39 ಬೇಡಿಕೊಂಡರು. ಪೇತ್ರನು ಎದ್ದು ಅವರ ಜೊತೆಯಲ್ಲಿ
ಹೋದನು. ಅವನು ಬಂದ ಕೂಡಲೆ ಅವರು ಅವ
ನನ್ನು ಮೇಲಂತಸ್ತಿಗೆ ಕರೆದುಕೊಂಡು ಹೋದರು.
ಅಲ್ಲಿ ವಿಧವೆಯರೆಲ್ಲರು ಅಳುತ್ತಾ ಅವನ ಹತ್ತಿರ ನಿಂತು
ಕೊಂಡು ದೊರ್ಕಳು ತಮ್ಮ ಸಂಗಡ ಇದ್ದಾಗ ಮಾಡಿ
ಕೊಟ್ಟಿದ್ದ ಒಳಂಗಿಗಳನ್ನೂ ಮೇಲಂಗಿಗಳನ್ನೂ ತೋರಿ
40 ಸಿದರು. ಪೇತ್ರನು ಅವರೆಲ್ಲರನ್ನು ಹೊರಕ್ಕೆ ಕಳು
ಹಿಸಿ ಮೊಣಕಾಲೂರಿ ಪ್ರಾರ್ಥನೆಮಾಡಿ ಶವದ ಕಡೆಗೆ
ತಿರುಗಿಕೊಂಡು— ತಬಿಥಾ, ಏಳು ಅಂದನು. ಆಕೆಯು
ಕಣ್ಣು ತೆರೆದು ಪೇತ್ರನನ್ನು ನೋಡಿ ಎದ್ದು ಕೂತುಕೊಂ
41 ಡಳು. ಅವನು ಆಕೆಯನ್ನು ಕೈಕೊಟ್ಟು ಎಬ್ಬಿಸಿ ದೇವಜನ
ರನ್ನೂ ವಿಧವೆಯರನ್ನೂ ಕರೆದು ಜೀವಿತಳಾದ ಆಕೆಯ
42 ನ್ನು ಅವರೆದುರಿಗೆ ನಿಲ್ಲಿಸಿದನು. ಈ ಸಂಗತಿಯು ಯೊಪ್ಪ
ದಲ್ಲೆಲ್ಲಾ ತಿಳಿಯಬಂದು ಅನೇಕರು ಕರ್ತನ ಮೇಲೆ
43 ನಂಬಿಕೆಯಿಟ್ಟರು. ಆ ಮೇಲೆ ಪೇತ್ರನು ಯೊಪ್ಪದಲ್ಲಿ
ಚರ್ಮಕಾರನಾದ ಸೀಮೋನನೆಂಬವನ ಬಳಿಯಲ್ಲಿ
ಬಹಳ ದಿವಸದ ವರೆಗೂ ಇದ್ದನು.

ಅನ್ಯಜನರಿಗೆ ಕ್ರಿಸ್ತನ ಸುವಾರ್ತೆಯನ್ನು ತಿಳಿಸುವದಕ್ಕೆ
ಪೇತ್ರನು ಅಪ್ಪಣೆಹೊಂದಿದ್ದು. ಅವರಲ್ಲಿ ಕೊರ್ನೇಲ್ಯನೆಂಬವನು
ನಂಬಿ ದೀಕ್ಷಾಸ್ನಾನಮಾಡಿಸಿಕೊಂಡದ್ದು.

10 ಕೈಸರೈಯದಲ್ಲಿ ಇತಾಲ್ಯದ ಪಟಾಲವೆನಿಸಿಕೊಳ್ಳು
ವ ಒಂದು ಪಟಾಲಮಿನ ಶತಾಧಿಪತಿಯಾದ ಕೊರ್ನೇ
2 ಲ್ಯನೆಂಬ ಒಬ್ಬ ಮನುಷ್ಯನಿದ್ದನು. ಅವನು ಭಕ್ತನೂ
ತನ್ನ ಮನೆಯವರೆಲ್ಲರ ಸಹಿತವಾಗಿ ದೇವರಿಗೆ ಭಯ
ಪಡುವವನೂ ಆಗಿದ್ದು ಜನರಿಗೆ ಬಹಳವಾಗಿ ದಾನ
ಧರ್ಮಮಾಡುತ್ತಾ ದೇವರಿಗೆ ನಿತ್ಯವೂ ಪ್ರಾರ್ಥನೆಮಾ
3 ಡುತ್ತಾ ಇದ್ದನು. 1)ಮಧ್ಯಾಹ್ನದ ಮೇಲೆ ಸುಮಾರು
ಮೂರು ಘಂಟೆಗೆ ಅವನಿಗೆ ಒಂದು ದರ್ಶನ ಉಂಟಾಗಿ
ಒಬ್ಬ ದೇವದೂತನು ತನ್ನ ಬಳಿಗೆ ಬಂದು— ಕೊರ್ನೇ
ಲ್ಯನೇ ಎಂದು ಕರೆಯುವದನ್ನು ಅವನು ಪ್ರತ್ಯಕ್ಷವಾಗಿ
4 ಕಂಡನು. ಅವನು ಆ ದೂತನನ್ನು ದೃಷ್ಟಿಸಿನೋಡಿ
ಭಯಹಿಡಿದವನಾಗಿ— ಏನು ಸ್ವಾಮಿಾ ಎಂದು ಕೇಳಲು

ದೂತನು ಅವನಿಗೆ— ನಿನ್ನ ಪ್ರಾರ್ಥನೆಗಳೂ ನಿನ್ನ ದಾ
ಧರ್ಮಗಳೂ ದೇವರ ಮುಂದೆ ಜ್ಞಾಪಕಾರ್ಥವಾಗಿ
ಬಂದವು. ಈಗ ನೀನು ಯೊಪ್ಪಕ್ಕೆ ಜನರನ್ನು ಕಳು
ಹಿಸಿ ಪೇತ್ರನೆನಿಸಿಕೊಳ್ಳುವ ಸೀಮೋನನನ್ನು ಕ
ಯಿಸಬೇಕು. ಅವನು ಚರ್ಮಕಾರನಾದ ಸೀಮೋ
ನನ ಬಳಿಯಲ್ಲಿ ಇಳುಕೊಂಡಿದ್ದಾನೆ; ಈ ಸೀಮೋನ
ಮನೆಯು ಸಮುದ್ರದ ಬಳಿಯಲ್ಲಿ ಅದೆ ಎಂದು ಹೇ
ದನು. ಕೊರ್ನೇಲ್ಯನು ತನ್ನ ಸಂಗಡ ಮಾತಾಡಿ
ದೇವದೂತನು ಹೊರಟುಹೋದ ಮೇಲೆ ತನ್ನ ಪ
ಚಾರಕರಲ್ಲಿ ಇಬ್ಬರನ್ನೂ ತನ್ನ ಹತ್ತಿರ ಯಾವಾಗಲ
ಇರುತ್ತಿದ್ದ ಸಿಪಾಯಿಗಳಲ್ಲಿ ಒಬ್ಬ ದೇವಭಕ್ತನನು
ಕರೆದು ಅವರಿಗೆ ಈ ಸಂಗತಿಗಳನ್ನೆಲ್ಲಾ ವಿವರವಾ
ಹೇಳಿ ಅವರನ್ನು ಯೊಪ್ಪಕ್ಕೆ ಕಳುಹಿಸಿದನು.
ಮರುದಿನ ಅವರು ಪ್ರಯಾಣಮಾಡಿ ಆ ಊರಿ
ಹತ್ತಿರಕ್ಕೆ ಬರುತ್ತಿರುವಾಗ ಪೇತ್ರನು ಸುಮಾರ
ಮಧ್ಯಾಹ್ನದಲ್ಲಿ ಪ್ರಾರ್ಥನೆಮಾಡುವದಕ್ಕಾಗಿ ಮಾಳಿ
ಯನ್ನು ಹತ್ತಿದನು. ಅವನು ಬಹಳ ಹಸಿದು ಊಟ
ಮಾಡಬೇಕೆಂದಿದ್ದನು. ಊಟಕ್ಕೆ ಸಿದ್ಧವಾಗುತ್ತಿರ
ವಷ್ಟರಲ್ಲಿ ಅವನು ಧ್ಯಾನಪರವಶನಾಗಿ ಆಕಾಶವು ತೆ
ದಿರುವದನ್ನೂ ನಾಲ್ಕು ಮೂಲೆಗಳನ್ನು ಹಿಡಿದಿದ್ದ
ದೊಡ್ಡ ಜೋಳಿಗೆಯಂತಿರುವ ಏನೋ ಒಂದು ವಸ್ತುವ
ಭೂಮಿಯ ಮೇಲೆ ಇಳಿಯುವದನ್ನೂ ಕಂಡನು. ಅದ
ರೊಳಗೆ ಸಕಲ ವಿಧವಾದ ಪಶುಗಳೂ ನೆಲದ ಮೇಲ
ಹರಿದಾಡುವ ಕ್ರಿಮಿಕೀಟಗಳೂ ಅಂತರಿಕ್ಷದಲ್ಲಿ ಹಾರಾ
ಡುವ ಹಕ್ಕಿಗಳೂ ಇದ್ದವು. ಆಗ— ಪೇತ್ರನೇ, ಎದ್ದು
ಕೊಯ್ದು ತಿನ್ನು ಎಂದು ಅವನಿಗೆ ಒಂದು ವಾಣಿ ಕೇಳಿ
ಸಿತು. ಅದಕ್ಕೆ ಪೇತ್ರನು— ಬೇಡವೇ ಬೇಡ ಸ್ವಾಮಿಾ
ನಾನು ಎಂದೂ ಹೊಲೆ ಪದಾರ್ಥವನ್ನಾಗಲಿ ಅಶುದ್ಧ
ಪದಾರ್ಥವನ್ನಾಗಲಿ ತಿಂದವನಲ್ಲ ಅಂದನು. ದೇವರು
ಶುದ್ಧಮಾಡಿದ್ದನ್ನು ನೀನು ಹೊಲೆ ಎನ್ನಬೇಡವೆಂದು
ತಿರಿಗಿ ಎರಡನೆಯ ಸಾರಿ ಅವನಿಗೆ ವಾಣಿ ಕೇಳಿಸಿತು
ಹೀಗೆ ಮೂರು ಸಾರಿ ಆಯಿತು. ಆದ ಕೂಡಲೇ ಆ
ವಸ್ತುವು ಆಕಾಶದೊಳಗೆ ಸೇರಿಕೊಂಡಿತು.
ಪೇತ್ರನು ತನಗಾದ ದರ್ಶನವು ಏನಾಗಿರಬಹು
ದೆಂದು ತನ್ನಲ್ಲಿ ಕಳವಳ ಪಡುತ್ತಿರುವಾಗಲೇ ಕೊರ್ನೇ
ಲ್ಯನು ಕಳುಹಿಸಿದ್ದ ಆ ಮನುಷ್ಯರು ಸೀಮೋನನ ಮನೆ
ಯಾವದು ಎಂದು ಕೇಳಿಕೊಂಡು ಬಂದು ಆ ಮನೆಯ
ಬಾಗಿಲಲ್ಲಿ ನಿಂತು— ಪೇತ್ರನೆನಿಸಿಕೊಳ್ಳುವ ಸೀಮೋ
ನನು ಇಲ್ಲಿ ಇಳುಕೊಂಡಿದ್ದಾನೋ ಎಂದು ಕೂಗಿ ಕೇಳಿ
ದರು. ಪೇತ್ರನು ಆ ದರ್ಶನದ ವಿಷಯದಲ್ಲಿ ಆಲೋ
ಚನೆ ಮಾಡುತ್ತಿರಲು ದೇವರಾತ್ಮನು ಅವನಿಗೆ— ಅಗೋ
2)ಇಬ್ಬರು ಮನುಷ್ಯರು ನಿನ್ನನ್ನು ವಿಚಾರಿಸುತ್ತಾರೆ
ನೀನೆದ್ದು ಕೆಳಗಿಳಿದು ಏನೂ ಸಂಶಯ ಪಡದೆ ಅವರ
ಜೊತೆಯಲ್ಲಿ ಹೋಗು, ನಾನೇ ಅವರನ್ನು ಕಳುಹಿಸಿ
ದ್ದೇನೆ ಎಂದು ಹೇಳಿದನು. ಪೇತ್ರನು ಕೆಳಗಿಳಿದು ಆ
ಮನುಷ್ಯರ ಬಳಿಗೆ ಬಂದು— ಇಗೋ, ನೀವು ವಿಚಾರಿಸು
ವವನು ನಾನೇ; ನೀವು ಬಂದ ಕಾರಣವೇನು ಎಂದು
ಕೇಳಲು ಅವರು— ಕೊರ್ನೇಲ್ಯನೆಂಬ ಒಬ್ಬ ಶತಾಧಿಪತಿ

1) ಮೂಲ: ಸುಮಾರು ಒಂಬತ್ತು ತಾಸಿಗೆ. 2) ಕೆಲವು ಪ್ರತಿಗಳಲ್ಲಿ ಮೂರು ಮಂದಿ ಎಂದು ಬರೆದದೆ.

ಇದ್ದಾನೆ. ಅವನು ನೀತಿವಂತನೂ ದೇವರಿಗೆ ಭಯ
ಪಡುವವನೂ ಯೆಹೂದ್ಯ ಜನರೆಲ್ಲರಿಂದ ಒಳ್ಳೇ ಹೆಸರು
ಹೊಂದಿದವನೂ ಆಗಿದ್ದಾನೆ; ನಿನ್ನನ್ನು ತನ್ನ ಮನೆಗೆ
ಕರೇಕಳುಹಿಸಿಕೊಂಡು ನಿನ್ನಿಂದ ಬೋಧನೆಯನ್ನು ಕೇಳ
ಬೇಕೆಂದು ದೇವದೂತನ ಮುಖಾಂತರವಾಗಿ ಅಪ್ಪಣೆ
ಹೊಂದಿದನು ಎಂದು ಹೇಳಿದರು. ಪೇತ್ರನು ಇದನ್ನು
ಕೇಳಿ ಅವರನ್ನು ಒಳಕ್ಕೆ ಕರೆದು ಉಪಚರಿಸಿದನು.
ಮರುದಿನ ಅವನು ಎದ್ದು ಅವರ ಜೊತೆಯಲ್ಲಿ
ಹೊರಟನು; ಯೊಪ್ಪದಲ್ಲಿದ್ದ ಸಹೋದರರಲ್ಲಿ ಕೆಲವರು
ಅವನ ಕೂಡ ಹೋದರು. ಮರುದಿನ ಅವನು ಕೈಸ
ರೈಯಕ್ಕೆ ಸೇರಿದನು. ಕೊರ್ನೇಲ್ಯನು ತನ್ನ ಬಂಧು
ಬಳಗದವರನ್ನೂ ಪ್ರಾಣಮಿತ್ರರನ್ನೂ ಕೂಡ ಕರಿಸಿ
ಪೇತ್ರನನ್ನು ಎದುರುನೋಡುತ್ತಿದ್ದನು. ಅವನು
ಬಂದಾಗ ಕೊರ್ನೇಲ್ಯನು ಅವನನ್ನು ಎದುರುಗೊಂಡು
ಅವನ ಪಾದಕ್ಕೆ ಬಿದ್ದು ನಮಸ್ಕಾರ ಮಾಡಿದನು. ಆದರೆ
ಪೇತ್ರನು—ಏಳಪ್ಪಾ, ನಾನೂ ಮನುಷ್ಯನು ಎಂದು
ಹೇಳಿ ಅವನನ್ನು ಎತ್ತಿ ಅವನ ಸಂಗಡ ಸಂಭಾಷಣೆ
ಮಾಡುತ್ತಾ ಮನೆಯೊಳಕ್ಕೆ ಬಂದನು. ಅಲ್ಲಿ ಬಹು
ಜನರು ಕೂಡಿಬಂದಿರುವದನ್ನು ಕಂಡು ಅವರಿಗೆ—
ಯೆಹೂದ್ಯರು ಅನ್ಯಜನರ ಕೂಡ ಹೊಕ್ಕುಬಳಿಕೆಮಾ
ಡುವದು ಯೆಹೂದ್ಯರ ಸಂಪ್ರದಾಯಕ್ಕೆ ವಿರುದ್ಧವಾ
ಗಿದೆ ಎಂದು ನೀವು ಬಲ್ಲಿರಷ್ಟೆ. ನನಗಂತೂ ಯಾವ
ಮನುಷ್ಯನನ್ನಾದರೂ ಹೊಲೆಯನು ಇಲ್ಲವೆ ಅಶುದ್ಧನು
ಅನ್ನಬಾರದೆಂದು ದೇವರು ತೋರಿಸಿದ್ದಾನೆ. ಆದ
ಕಾರಣ ನೀವು ನನ್ನನ್ನು ಕರೇಕಳುಹಿಸಿದಾಗ ನಾನು
ಯಾವ ಎದುರುಮಾತನ್ನೂ ಹೇಳದೆ ಬಂದೆನು. ಈಗ
ನೀವು ನನ್ನನ್ನು ಕರಿಸಿದ ಉದ್ದೇಶವೇನು ನನಗೆ ತಿಳಿಸ
ಬೇಕು ಎಂದು ಹೇಳಿದನು. ಅದಕ್ಕೆ ಕೊರ್ನೇಲ್ಯನು—
ನಾನು ನಾಲ್ಕು ದಿವಸಗಳ ಹಿಂದೆ 1)ಮಧ್ಯಾಹ್ನದ
ಮೇಲೆ ಮೂರು ಘಂಟೆಗೆ ನಡೆಯತಕ್ಕ ದೇವರ
ಪ್ರಾರ್ಥನೆಯನ್ನು ಇಷ್ಟು ಹೊತ್ತಿನ ವರೆಗೂ ನನ್ನ
ಮನೆಯಲ್ಲಿ ಮಾಡುತ್ತಿದ್ದಾಗ ಹೊಳೆಯುವ ವಸ್ತ್ರ
ವನ್ನು ಧರಿಸಿಕೊಂಡಿದ್ದ ಒಬ್ಬ ಮನುಷ್ಯನು ನನ್ನೆದುರಿಗೆ
ನಿಂತುಕೊಂಡು—ಕೊರ್ನೇಲ್ಯನೇ, ನಿನ್ನ ಪ್ರಾರ್ಥನೆಯು
ಕೇಳಬಂತು, ನಿನ್ನ ದಾನಧರ್ಮಗಳು ದೇವರ ಸನ್ನಿ
ಧಾನದಲ್ಲಿ ನೆನಪಿಗೆ ಬಂದವು. ನೀನು ಯೊಪ್ಪಕ್ಕೆ ಕಳು
ಹಿಸಿ ಪೇತ್ರನೆನಿಸಿಕೊಳ್ಳುವ ಸೀಮೋನನನ್ನು ಕರಿಸ
ಬೇಕು; ಅವನು ಚರ್ಮಕಾರನಾದ ಸೀಮೋನನ ಮನೆ
ಯಲ್ಲಿ ಇಳುಕೊಂಡಿದ್ದಾನೆ; ಆ ಮನೆ ಸಮುದ್ರದ ಬಳಿ
ಯಲ್ಲಿ ಅದೆ ಅಂದನು. ನಾನು ತಡಮಾಡದೆ ನಿನ್ನ
ಹತ್ತರ ಕಳುಹಿಸಿದೆನು. ನೀನು ಬಂದದ್ದು ಉಪಕಾರ
ವಾಯಿತು. ಹೀಗಿರುವದರಿಂದ ಕರ್ತನು ನಿನಗೆ
ಅಪ್ಪಣೆಕೊಟ್ಟಿರುವ ಎಲ್ಲಾ ಮಾತುಗಳನ್ನು ಕೇಳುವ
ದಕ್ಕೆ ನಾವೆಲ್ಲರು ಈಗ ದೇವರ ಸನ್ನಿಧಾನದಲ್ಲಿ ಕೂಡಿ
ದ್ದೇವೆ ಅಂದನು.
ಆಗ ಪೇತ್ರನು ಉಪದೇಶಮಾಡಲಾರಂಭಿಸಿ ಹೇಳಿ
ದ್ದೇನಂದರೆ—ದೇವರು ಪಕ್ಷಪಾತಿಯಲ್ಲ, ಯಾವ
ಜನರಲ್ಲಿಯಾದರೂ ದೇವರಿಗೆ ಭಯಪಟ್ಟು ನೀತಿ
ಯನ್ನು ನಡಿಸುವವರು ಆತನಿಗೆ ಮೆಚ್ಚಿಗೆಯಾಗಿದ್ದಾ
ರೆಂದು ಈಗ ಸಂದೇಹವಿಲ್ಲದೆ ನನಗೆ ತಿಳಿದುಬಂದಿದೆ.
ಎಲ್ಲಾ ಜನಗಳಿಗೂ ಕರ್ತನಾಗಿರುವ ಯೇಸು ಕ್ರಿಸ್ತನ 36
ಮೂಲಕ ದೇವರು ಸಮಾಧಾನದ ಶುಭಸಮಾಚಾರ
ವನ್ನು ಪ್ರಕಟಿಸುತ್ತಾ ಇಸ್ರಾಯೇಲ್ ಜನರಿಗೆ ಅನುಗ್ರ
ಹಿಸಿದ ವಾಕ್ಯವು ನಿಮಗೇ ತಿಳಿದಿರುವದು. ದೀಕ್ಷಾ 37
ಸ್ನಾನಮಾಡಿಸಿಕೊಳ್ಳಬೇಕೆಂದು ಯೋಹಾನನು ಸಾರಿದ
ತರುವಾಯ ಈ ವಾಕ್ಯವು ಗಲಿಲಾಯದಿಂದ ಪ್ರಾರಂ
ಭವಾಗಿ ಯೂದಾಯದಲ್ಲೆಲ್ಲಾ ಪ್ರಬಲವಾಯಿತು.
ದೇವರು ನಜರೇತಿನ ಯೇಸುವನ್ನು ಪವಿತ್ರಾತ್ಮ 38
ದಿಂದಲೂ ಬಲದಿಂದಲೂ ಅಭಿಷೇಕಿಸಿದನು; ದೇವರು
ಆತನ ಸಂಗಡ ಇದ್ದದರಿಂದ ಆತನು ಉಪಕಾರಗಳನ್ನು
ಮಾಡುತ್ತಾ ಸೈತಾನನಿಂದ ಬಾಧಿಸಲ್ಪಡುತ್ತಿರುವವರೆಲ್ಲ
ರನ್ನು ಗುಣಮಾಡುತ್ತಾ ಸಂಚರಿಸಿದನು; ಇದೆಲ್ಲಾ
ನಿಮಗೆ ಗೊತ್ತಾಗಿರುವದಷ್ಟೆ. ಆತನು ಯೆಹೂದ್ಯರ 39
ಸೀಮೆಯಲ್ಲಿಯೂ ಯೆರೂಸಲೇಮಿನಲ್ಲಿಯೂ ಮಾಡಿ
ದ ಎಲ್ಲಾ ಕಾರ್ಯಗಳಿಗೆ ನಾವು ಸಾಕ್ಷಿಗಳಾಗಿದ್ದೇವೆ.
ಆತನನ್ನು ಮರದ ಕಂಭಕ್ಕೆ ತೂಗಹಾಕಿ ಕೊಂದರು. 40
ದೇವರು ಆತನನ್ನು ಮೂರನೆಯ ದಿನದಲ್ಲಿ ಎಬ್ಬಿಸಿ 41
ಪ್ರತ್ಯಕ್ಷನಾಗುವಂತೆ ಮಾಡಿದನು; ಆತನು ಎಲ್ಲರಿಗೆ
ಪ್ರತ್ಯಕ್ಷನಾಗದೆ ದೇವರು ಮುಂಚಿತವಾಗಿ ಆರಿಸಿ
ಕೊಂಡಿದ್ದ ಸಾಕ್ಷಿಗಳಾದ ನಮಗೆ ಪ್ರತ್ಯಕ್ಷನಾದನು.
ಆತನು ಸತ್ತವರೊಳಗಿಂದ ಜೀವಿತನಾಗಿ ಎದ್ದು ಬಂದ
ಮೇಲೆ ನಾವು ಆತನ ಸಂಗಡ ಅನ್ನಪಾನಗಳನ್ನು
ತಕ್ಕೊಂಡೆವು. ಆತನೇ ಜೀವಿತರಿಗೂ ಸತ್ತವರಿಗೂ 42
ನ್ಯಾಯಾಧಿಪತಿಯಾಗಿ ದೇವರಿಂದ ನೇಮಕವಾದವನು
ಎಂಬದನ್ನು ಜನರಿಗೆ ಸಾರಿ ಸಾಕ್ಷಿಹೇಳಬೇಕೆಂದು
ದೇವರು ನಮಗೆ ಅಪ್ಪಣೆಕೊಟ್ಟನು. ಆತನಲ್ಲಿ ನಂಬಿಕೆ 43
ಯಿಡುವ ಪ್ರತಿಯೊಬ್ಬನು ಆತನ ಹೆಸರಿನ ಮೂಲಕ
ವಾಗಿ ಪಾಪಪರಿಹಾರವನ್ನು ಹೊಂದುವನೆಂದು ಆತನ
ವಿಷಯದಲ್ಲಿ ಪ್ರವಾದಿಗಳೆಲ್ಲರು ಸಾಕ್ಷಿಹೇಳಿದ್ದಾರೆ
ಅಂದನು.
ಪೇತ್ರನು ಈ ಮಾತುಗಳನ್ನು ಇನ್ನೂ ಹೇಳುತ್ತಿರು 44
ವಾಗ ಅವನ ವಾಕ್ಯವನ್ನು ಕೇಳಿದವರೆಲ್ಲರ ಮೇಲೆ
ಪವಿತ್ರಾತ್ಮವರವು ಇಳಿಯಿತು. ಅವರು ನಾನಾ 45-46
ಭಾಷೆಗಳನ್ನಾಡುತ್ತಾ ದೇವರನ್ನು ಕೊಂಡಾಡುತ್ತಾ ಇರು
ವದನ್ನು ಪೇತ್ರನ ಸಂಗಡ ಬಂದಿದ್ದ 2)ಯೆಹೂದ್ಯ
ರಾದ ವಿಶ್ವಾಸಿಗಳು ಕೇಳಿದಾಗ—ಅನ್ಯಜನಗಳಿಗೂ
ಪವಿತ್ರಾತ್ಮದಾನ ಮಾಡಲ್ಪಟ್ಟಿದೆಯಲ್ಲಾ ಎಂದು ಆಶ್ಚ
ರ್ಯಪಟ್ಟರು. ನಡೆದ ಸಂಗತಿಯನ್ನು ಪೇತ್ರನು
ನೋಡಿ—ನಮ್ಮ ಹಾಗೆಯೇ ಪವಿತ್ರಾತ್ಮವರವನ್ನು 47
ಹೊಂದಿದ ಇವರಿಗೆ ನೀರಿನ ದೀಕ್ಷಾಸ್ನಾನವಾಗದಂತೆ
ಯಾರಾದರೂ ಅಭ್ಯಂತರ ಮಾಡಾರೇ ಎಂದು ಹೇಳಿ
ಅವರಿಗೆ—ನೀವು ಯೇಸುಕ್ರಿಸ್ತನ ಹೆಸರಿನಲ್ಲಿ ದೀಕ್ಷಾ
ಸ್ನಾನಮಾಡಿಸಿಕೊಳ್ಳಬೇಕೆಂದು ಅಪ್ಪಣೆಕೊಟ್ಟನು. ಆ
ಮೇಲೆ ಅವರು ಅವನನ್ನು—ಇನ್ನೂ ಕೆಲವು ದಿವಸ
ಇರಬೇಕೆಂದು ಬೇಡಿಕೊಂಡರು.

1) ಮೂಲ: ಒಂಭತ್ತು ತಾಸಿಗೆ. 2) ಮೂಲ: ಸುನ್ನತಿಯುವರಾದ.

ಪೇತ್ರನು ಅನ್ಯಜನರೊಂದಿಗೆ ಬಳಿಕೆ ಮಾಡಿದ್ದಕ್ಕೆ
ಯೆರೂಸಲೇಮಿನಲ್ಲಿದ್ದ ಯೆಹೂದ್ಯ ಕ್ರೈಸ್ತರು ಆಕ್ಷೇಪಣೆ
ಮಾಡಲು ಪೇತ್ರನು ಪ್ರತಿವಾದ ಹೇಳಿದ್ದು.

11 ಅನ್ಯಜನರು ಸಹ ದೇವರ ವಾಕ್ಯವನ್ನು ಅಂಗೀ
ಕರಿಸಿದರೆಂಬ ಸಮಾಚಾರವನ್ನು ಅಪೊಸ್ತಲರೂ ಯೂ
2-3 ದಾಯದಲ್ಲಿದ್ದ ಸಹೋದರರೂ ಕೇಳಿದರು. ಪೇತ್ರನು
ಯೆರೂಸಲೇಮಿಗೆ ಬಂದಾಗ ಸುನ್ನತಿಯವರು—ನೀನು
ಸುನ್ನತಿಯಿಲ್ಲದವರಲ್ಲಿ ಸೇರಿ ಅವರ ಸಂಗಡ ಊಟ
ಮಾಡಿದೆಯಲ್ಲಾ ಎಂದು ಅವನ ಕೂಡ ವಿವಾದಿಸಿದರು.
4 ಪೇತ್ರನು ನಡೆದ ಸಂಗತಿಯನ್ನು ಅವರಿಗೆ ಮೊದಲಿನಿಂದ
5 ಕ್ರಮವಾಗಿ ವಿವರಿಸಿ ಹೇಳಿದ್ದೇನಂದರೆ—ನಾನು
ಯೊಪ್ಪ ಪಟ್ಟಣದಲ್ಲಿ ಪ್ರಾರ್ಥನೆಮಾಡುತ್ತಿದ್ದಾಗ ಧ್ಯಾನ
ಪರವಶನಾಗಿದ್ದ ನನಗೆ ಒಂದು ದರ್ಶನವಾಯಿತು;
ಅದೇನಂದರೆ ಆಕಾಶದಿಂದ ನಾಲ್ಕು ಮೂಲೆಗಳನ್ನು
ಹಿಡಿದಿದ್ದ ದೊಡ್ಡ ಜೋಳಿಗೆಯಂತಿರುವ ಒಂದು ವಸ್ತುವು
6 ಇಳಿಸಲ್ಪಟ್ಟು ನಾನಿದ್ದಲ್ಲಿಗೆ ಬಂತು. ಅದೇನೆಂದು
ತಿಳುಕೊಳ್ಳುವದಕ್ಕೆ ನಾನು ಚೆನ್ನಾಗಿ ನೋಡಿದಾಗ
ನೆಲದ ಮೇಲೆ ತಿರುಗಾಡುವ ಪಶು ಮೃಗ ಕ್ರಿಮಿಕೀಟ
ಗಳನ್ನೂ ಅಂತರಿಕ್ಷದಲ್ಲಿ ಹಾರಾಡುವ ಹಕ್ಕಿಗಳನ್ನೂ
7 ಕಂಡೆನು. ಆಗ—ಪೇತ್ರನೇ, ಎದ್ದು ಕೊಯ್ದು ತಿನ್ನು
ಎಂದು ನನಗೆ ಹೇಳುವ ವಾಣಿಯನ್ನು ಕೇಳಿದೆನು.
8 ನಾನು—ಬೇಡವೇ ಬೇಡ, ಸ್ವಾಮೀ, ಹೊಲೆಯಾದ
ಪದಾರ್ಥವಾಗಲಿ ಅಶುದ್ಧ ಪದಾರ್ಥವಾಗಲಿ ಎಂದೂ
9 ನನ್ನ ಬಾಯೊಳಗೆ ಸೇರಿದ್ದಿಲ್ಲ ಅಂದೆನು. ಅದಕ್ಕೆ—
ದೇವರು ಶುದ್ಧಮಾಡಿದ್ದನ್ನು ನೀನು ಹೊಲೆ ಎನ್ನ
ಬಾರದು ಎಂಬದಾಗಿ ಎರಡನೆಯ ಸಾರಿ ಆಕಾಶವಾಣಿ
10 ಯಾಯಿತು. ಹೀಗೆ ಮೂರು ಸಾರಿ ಆಯಿತು. ಆ
11 ಮೇಲೆ ಎಲ್ಲವೂ ತಿರಿಗಿ ಆಕಾಶಕ್ಕೆ ಎತ್ತಲ್ಪಟ್ಟಿತು. ಆ
ಕ್ಷಣದಲ್ಲೇ ಮೂರು ಮಂದಿ ಮನುಷ್ಯರು ನಾವಿದ್ದ
ಮನೆಯ ಮುಂದೆ ನಿಂತಿದ್ದರು. ಅವರು ಕೈಸರೈಯ
12 ದಿಂದ ನನ್ನ ಹತ್ತರಕ್ಕೆ ಕಳುಹಿಸಲ್ಪಟ್ಟವರು. ದೇವ
ರಾತ್ಮನು—ನೀನು ಏನೂ ಭೇದಮಾಡದೆ ಅವರ ಜೊತೆ
ಯಲ್ಲಿ ಹೋಗು ಎಂದು ನನಗೆ ಹೇಳಿದನು. ಈ ಆರು
ಮಂದಿ ಸಹೋದರರು ಸಹ ನನ್ನ ಸಂಗಡ ಬಂದರು.
13 ಆ ಮನುಷ್ಯನ ಮನೆಯೊಳಗೆ ನಾವು ಸೇರಲು ಅವನು
ನಮಗೆ—ಒಬ್ಬ ದೇವದೂತನು ನನ್ನ ಮನೆಯಲ್ಲಿ
ನಿಂತಿರುವದನ್ನು ಕಂಡೆನು. ಆ ದೂತನು—ನೀನು
ಯೊಪ್ಪಕ್ಕೆ ಕಳುಹಿಸಿ ಪೇತ್ರನೆನಿಸಿಕೊಳ್ಳುವ ಸೀಮೋನ
14 ನನ್ನು ಕರಿಸು; ಅವನು ನಿನಗೆ ಕೆಲವು ಮಾತುಗಳನ್ನು
ಹೇಳುವನು. ಆ ಮಾತುಗಳಿಂದ ನಿನಗೂ ನಿನ್ನ
ಮನೆಯವರೆಲ್ಲರಿಗೂ ರಕ್ಷಣೆಯಾಗುವದು ಎಂದು
15 ಹೇಳಿದನೆಂಬದಾಗಿ ತಿಳಿಸಿದನು. ನಾನು ಮಾತಾಡು
ವದಕ್ಕೆ ಪ್ರಾರಂಭಿಸಿದಾಗ ಪವಿತ್ರಾತ್ಮವರವು ಮೊದಲು
ನಮ್ಮ ಮೇಲೆ ಇಳಿದಂತೆ ಅವರ ಮೇಲೆಯೂ ಇಳಿ
16 ಯಿತು. ಆಗ—ಯೋಹಾನನಂತೂ ನೀರಿನ ದೀಕ್ಷಾ
ಸ್ನಾನ ಮಾಡಿಸಿದನು; ನಿಮಗಾದರೋ ಪವಿತ್ರಾತ್ಮ
ದಲ್ಲಿ ಸ್ನಾನವಾಗುವದು ಎಂದು ಯೇಸುಸ್ವಾ
ಹೇಳಿದ ಮಾತು ನನ್ನ ನೆನಪಿಗೆ ಬಂತು. ದೇ
ಕರ್ತನಾಗಿರುವ ಯೇಸು ಕ್ರಿಸ್ತನಲ್ಲಿ ನಂಬಿಕೆಯಿ
ನಮಗೆ ಕೊಟ್ಟ ವರಕ್ಕೆ ಸರಿಯಾದ ವರವನ್ನು
ರಿಗೂ ಕೊಟ್ಟಿರಲಾಗಿ ದೇವರನ್ನು ತಡೆಯುವ
ನಾನು ಶಕ್ತನೋ? ಹೀಗೆಂದ ಮಾತುಗಳನ್ನು
ಸುನ್ನತಿಯವರು ಕೇಳಿ ಆಕ್ಷೇಪಣೆ ಮಾಡುವದ
ಬಿಟ್ಟು—ಹಾಗಾದರೆ ದೇವರು ಅನ್ಯಜನರಿಗೂ ಜ
ಕೊಡಬೇಕೆಂದು ಅವರ ಮನಸ್ಸುಗಳನ್ನು ತನ್ನ ಕ
ತಿರುಗಿಸಿದ್ದಾನೆ ಎಂದು ದೇವರನ್ನು ಕೊಂಡಾಡಿದ

ಅಂತಿಯೋಕ್ಯದಲ್ಲಿ ಬಹುಜನ ಗ್ರೀಕರು ನಂಬಿದ್ದು;
ಬಾರ್ನಬ ಸೌಲರು ಅಲ್ಲಿ ಬೋಧಿಸಿದ್ದು;
ಆ ಪಟ್ಟಣದಲ್ಲಿ ಕ್ರೈಸ್ತರೆಂಬ ಹೆಸರು ಉತ್ಪತ್ತಿಯಾದದ್ದು.

ಸ್ತೆಫನನ ವಿಷಯದಲ್ಲಿ ಉಂಟಾದ ಹಿಂಸೆಯಿ
ಚದರಿಹೋದವರು ಯೆಹೂದ್ಯರಿಗೇ ಹೊರತು ಮತ
ರಿಗೂ ದೇವರ ವಾಕ್ಯವನ್ನು ಹೇಳದೆ ಫೊಯಿನಿಕೆ ಕು
ಅಂತಿಯೋಕ್ಯ ಪ್ರಾಂತ್ಯಗಳ ವರೆಗೂ ಸಂಚರಿಸಿದರ
ಅವರಲ್ಲಿ ಕುಪ್ರದ್ವೀಪದವರು ಕೆಲವರೂ ಕುರೇ
ದವರು ಕೆಲವರೂ ಅಂತಿಯೋಕ್ಯಕ್ಕೆ ಬಂದು 1)ಗ್ರೀ
ಸಂಗಡಲೂ ಮಾತಾಡಿ ಕರ್ತನಾದ ಯೇಸುವಿನ ವಿ
ಯವಾದ ಸುವಾರ್ತೆಯನ್ನು ತಿಳಿಸಿದರು. ಕರ್ತ
ಹಸ್ತವು ಅವರಿಗೆ ಸಹಾಯವಾದ್ದರಿಂದ ಬಹು ಜನ
ನಂಬಿ ಕರ್ತನ ಕಡೆಗೆ ತಿರುಗಿಕೊಂಡರು. ಇವ
ವಿಷಯವಾದ ವರ್ತಮಾನವು ಯೆರೂಸಲೇಮಿನಲ್ಲಿ
ಸಭೆಯವರ ಕಿವಿಗೆ ಬಿದ್ದಾಗ ಅವರು ಬಾರ್ನಬನನ
ಅಂತಿಯೋಕ್ಯಕ್ಕೆ ಕಳುಹಿಸಿದರು. ಅವನು ಒಳ್ಳೆ
ಯವನೂ ಪವಿತ್ರಾತ್ಮಭರಿತನೂ ನಂಬಿಕೆಯಿಂದ ತುಂ
ದವನೂ ಆಗಿದ್ದನು. ಆದಕಾರಣ ಅಲ್ಲಿಗೆ ಬಂ
ದೇವರ ಕೃಪಾಕಾರ್ಯವನ್ನು ನೋಡಿದಾಗ ಸಂತೋ
ಪಟ್ಟು—ನೀವು ದೃಢಮನಸ್ಸಿನಿಂದ ಕರ್ತನಲ್ಲಿ ನೆ
ಗೊಂಡಿರ್ರಿ ಎಂದು ಅವರೆಲ್ಲರಿಗೆ ಬುದ್ಧಿಹೇಳಿದನ
ಆಗ ಬಹುಮಂದಿ ಕರ್ತನಿಗೆ ಸೇರಿಕೊಂಡರು. ತ
ವಾಯ ಬಾರ್ನಬನು ಸೌಲನನ್ನು ಹುಡುಕುವದಕ್ಕಾ
ತಾರ್ಸಕ್ಕೆ ಹೋಗಿ ಅವನನ್ನು ಕಂಡು ಅಂತಿಯೋಕ್ಯ
ಕರೆದುಕೊಂಡುಬಂದನು. ಆ ಮೇಲೆ ಅವರು ಪೂ
ಒಂದು ವರುಷ ಸಭೆಯವರ ಸಂಗಡ ಕೂಡಿಯಿದ
ಬಹು ಜನರಿಗೆ ಉಪದೇಶಮಾಡಿದರು. ಅಂತಿಯೋಕ್ಯ
ಲ್ಲಿಯೇ ಶಿಷ್ಯರಿಗೆ ಕ್ರೈಸ್ತರೆಂಬ ಹೆಸರು ಮೊದಲು ಬಂತ

ಬಾರ್ನಬ ಸೌಲರು ಯೆರೂಸಲೇಮಿಗೆ ದ್ರವ್ಯಸಹಾಯವನ್ನು
ತೆಗೆದುಕೊಂಡು ಹೋದದ್ದು; ಅಷ್ಟರಲ್ಲಿ ಅರಸನಾದ
ಹೆರೋದನು ಯಾಕೋಬನನ್ನು ಕೊಲ್ಲಿಸಿ ಪೇತ್ರನನ್ನು
ಸೆರೆಯಲ್ಲಿ ಹಾಕಿಸಿದ್ದು; ದೇವದೂತನು ಪೇತ್ರನನ್ನು
ಬಿಡಿಸಿದ್ದು; ಅರಸನು ಸತ್ತದ್ದು.

ಆ ಕಾಲದಲ್ಲಿ ಪ್ರವಾದಿಗಳಾಗಿದ್ದ ಕೆಲವರು ಯೆರ
ಸಲೇಮಿನಿಂದ ಅಂತಿಯೋಕ್ಯಕ್ಕೆ ಬಂದರು. ಅವರ

1) ಕೆಲವು ಪ್ರತಿಗಳಲ್ಲಿ—ಗ್ರೀಕ್ ಭಾಷೆಯನ್ನಾಡುವ ಯೆಹೂದ್ಯರ ಎಂದು ಬರೆದದೆ.

ಅಗಬನೇಂಬವನೊಬ್ಬನು ಎದ್ದು [1]ಲೋಕಕ್ಕೆಲ್ಲಾ
ದೊಡ್ಡ ಕ್ಷಾಮ ಬರುವದು ಎಂದು ಪವಿತ್ರಾತ್ಮಪ್ರೇರಣೆ
ಯಿಂದ ಸೂಚಿಸಿದನು. ಅದು ಕ್ಲೌದ್ಯಚಕ್ರವರ್ತಿಯ
29 ಕಾಲದಲ್ಲಿ ಉಂಟಾಯಿತು; ಆಗ ಆ ಶಿಷ್ಯರಲ್ಲಿ ಪ್ರತಿ
ಯೊಬ್ಬರು ಯೂದಾಯ ಸೀಮೆಯಲ್ಲಿ ವಾಸವಾಗಿದ್ದ
ಸಹೋದರರಿಗೆ ತಮ್ಮತಮ್ಮ ಶಕ್ತ್ಯನುಸಾರ ದ್ರವ್ಯ
ಸಹಾಯ ಮಾಡಬೇಕೆಂದು ನಿಶ್ಚಯಿಸಿಕೊಂಡರು.
30 ಹಾಗೆಯೇ ಮಾಡಿ ಅದನ್ನು ಬಾರ್ನಬ ಸೌಲರ ಕೈ
ಯಿಂದ ಸಭೆಯ ಹಿರಿಯರಿಗೆ ಕಳುಹಿಸಿದರು.

2 ಆ ಸಮಯದಲ್ಲೇ ಅರಸನಾದ ಹೆರೋದನು ಸಭೆ
ಯವರಲ್ಲಿ ಕೆಲವರನ್ನು ಹಿಂಸೆಪಡಿಸುವದಕ್ಕೆ ಕೈ
2 ಹಾಕಿ ಯೋಹಾನನ ಅಣ್ಣನಾದ ಯಾಕೋಬನನ್ನು
3 ಕತ್ತಿಯಿಂದ ಕೊಲ್ಲಿಸಿದನು. ಇದು ಯೆಹೂದ್ಯರಿಗೆ
ಮೆಚ್ಚಿಕೆಯಾಗಿದೆ ಎಂದು ನೋಡಿ ಅಷ್ಟಕ್ಕೆ ನಿಲ್ಲದೆ
ಪೇತ್ರನನ್ನೂ ಹಿಡಿಸಿದನು. ಆ ಕಾಲದಲ್ಲಿ ಹುಳಿ
4 ಯಿಲ್ಲದ ರೊಟ್ಟಿಯ ಹಬ್ಬ ನಡೆಯುತ್ತಿತ್ತು. ಅವನನ್ನು
ಪಸ್ಕಹಬ್ಬವಾದ ಮೇಲೆ ಜನರ ಮುಂದೆ ತರಿಸಬೇಕೆಂಬ
ಯೋಚನೆಯಿಂದ ಸೆರೆಯಲ್ಲಿ ಹಾಕಿಸಿ ಅವನನ್ನು
ಕಾಯಲಿಕ್ಕೆ ನಾಲ್ಕು ನಾಲ್ಕು ಸಿಪಾಯಿಗಳಿದ್ದ ನಾಲ್ಕು
5 ಗುಂಪುಗಳ ವಶಕ್ಕೆ ಕೊಟ್ಟನು. ಪೇತ್ರನು ಸೆರೆಮನೆ
ಯೊಳಗೆ ಕಾವಲಲ್ಲಿದ್ದಾಗ ಸಭೆಯವರು ಅವನಿಗೋ
ಸ್ಕರ ಆಸಕ್ತಿಯಿಂದ ದೇವರಿಗೆ ಪ್ರಾರ್ಥನೆ ಮಾಡು
6 ತ್ತಿದ್ದರು. ಹೆರೋದನು ಅವನನ್ನು ಜನರ ಮುಂದೆ
ತರಿಸಬೇಕೆಂದಿದ್ದ ದಿವಸದ ಹಿಂದಿನ ರಾತ್ರಿಯಲ್ಲಿ
ಪೇತ್ರನು ಎರಡು ಸರಪಣಿಗಳಿಂದ ಕಟ್ಟಲ್ಪಟ್ಟವನಾಗಿ
ಇಬ್ಬರು ಸಿಪಾಯಿಗಳ ನಡುವೆ ನಿದ್ದೆಮಾಡುತ್ತಿದ್ದನು.
ಕಾವಲುಗಾರರು ಬಾಗಿಲ ಮುಂದೆ ನಿಂತು ಸೆರೆಮನೆ
7 ಯನ್ನು ಕಾಯುತ್ತಿದ್ದರು ಫಕ್ಕನೆ ಕರ್ತನ ದೂತನು
ಪೇತ್ರನೆದುರಿಗೆ ನಿಂತನು. ಅವನಿದ್ದ ಕೋಣೆಯಲ್ಲಿ
ಬೆಳಕು ಹೊಳೆಯಿತು. ಅವನು ಪೇತ್ರನನ್ನು ಪಕ್ಕೆ
ತಟ್ಟಿ ಎಬ್ಬಿಸಿ—ತಟ್ಟನೆ ಏಳು ಅಂದನು. ಆಗಲೇ
ಅವನ ಕೈಗಳಿಗೆ ಹಾಕಿದ್ದ ಸರಪಣಿಗಳು ಕಳಚಿಬಿದ್ದವು.
8 ಆ ದೂತನು ಅವನಿಗೆ—ನಡುಕಟ್ಟಿಕೊಂಡು ನಿನ್ನ ಕೆರ
ಗಳನ್ನು ಮೆಟ್ಟಿಕೋ ಎಂದು ಹೇಳಲು ಅವನು ಹಾಗೇ
ಮಾಡಿದನು. ನಿನ್ನ ಮೇಲಂಗಿಯನ್ನು ಹಾಕಿಕೊಂಡು
9 ನನ್ನ ಹಿಂದೆ ಬಾ ಅಂದನು. ಅವನು ಹೊರಗೆ ಬಂದು
ಆ ದೂತನ ಹಿಂದೆಯೇ ಹೋಗುತ್ತಾ ದೂತನ ಮೂಲಕ
ವಾಗಿ ನಡೆದ ಸಂಗತಿ ನಿಜವಾದದ್ದೆಂದು ತಿಳಿಯದೆ
ತಾನು ನೋಡಿದ್ದು ಕನಸು ಎಂದು ನೆನಸಿದನು.
10 ಅವರು ಮೊದಲನೆಯ ಎರಡನೆಯ ಕಾವಲುಗಳನ್ನು
ದಾಟಿ ಪಟ್ಟಣಕ್ಕೆ ಹೋಗುವ ಕಬ್ಬಿಣದ ಬಾಗಿಲಿಗೆ
ಬಂದಾಗ ಅದು ತನ್ನಷ್ಟಕ್ಕೆ ತಾನೇ ಅವರಿಗೆ ತೆರೆಯಿತು.
ಅವರು ಹೊರಗೆ ಬಂದು ಒಂದು ಬೀದಿಯನ್ನು ದಾಟಿ
ದರು; ಕೂಡಲೇ ಆ ದೂತನು ಅವನನ್ನು ಬಿಟ್ಟು
11 ಹೋದನು. ಆಗ ಪೇತ್ರನು ಎಚ್ಚರವಾಗಿ—ಕರ್ತನು
ತನ್ನ ದೂತನನ್ನು ಕಳುಹಿಸಿ ಹೆರೋದನ ಕೈಯಿಂದಲೂ
ಯೆಹೂದ್ಯಜನರು ನನಗೆ ಮಾಡಬೇಕೆಂದಿದ್ದ ಕೇಡಿ
ನಿಂದಲೂ ನನ್ನನ್ನು ಬಿಡಿಸಿದನೆಂದು ನನಗೀಗ ನಿಜವಾಗಿ
ತಿಳಿದು ಬಂದಿದೆ ಅಂದುಕೊಂಡನು. ತರುವಾಯ 12
ಅವನು ಯೋಚನೆಮಾಡಿಕೊಂಡು ಮಾರ್ಕನೆನಿಸಿ
ಕೊಳ್ಳುವ ಯೋಹಾನನ ತಾಯಿಯಾದ ಮರಿಯಳ
ಮನೆಗೆ ಬಂದನು. ಅಲ್ಲಿ ಅನೇಕರು ಕೂಡಿಬಂದು
ಪ್ರಾರ್ಥನೆಮಾಡುತ್ತಿದ್ದರು. ಪೇತ್ರನು ಬಾಗಿಲಿನ ಕದ 13
ವನ್ನು ತಟ್ಟಲು ರೋದೆ ಎಂಬ ಒಬ್ಬ ಚಾಕರಿಯವಳು
ನೋಡುವದಕ್ಕೆ ಬಂದಳು. ಅವಳು ಪೇತ್ರನ ಧ್ವನಿ 14
ಯನ್ನು ಗೊತ್ತುಹಿಡಿದು ಸಂತೋಷದ ನಿಮಿತ್ತದಿಂದಲೇ
ಬಾಗಿಲನ್ನು ತೆರೆಯದೆ ಒಳಕ್ಕೆ ಓಡಿಹೋಗಿ—ಪೇತ್ರನು
ಬಾಗಿಲ ಮುಂದೆ ನಿಂತಿದ್ದಾನೆ ಎಂದು ತಿಳಿಸಿದಳು.
ಅವರು ಅವಳಿಗೆ—ನಿನಗೆ ಹುಚ್ಚು ಹಿಡಿದದೆ ಎಂದು
ಹೇಳಿದರು. ಆದರೆ ಅವಳು ತಾನು ಹೇಳಿದಂತೆಯೇ 15
ಅದೆ ಎಂದು ದೃಢವಾಗಿ ಹೇಳುತ್ತಾ ಇರಲು ಅವನ
ದೂತನಾಗಿರಬೇಕು ಅಂದರು. ಅಷ್ಟರಲ್ಲಿ ಪೇತ್ರನು 16
ಇನ್ನೂ ತಟ್ಟುತ್ತಾ ಇರಲು ಅವರು ಬಾಗಿಲನ್ನು ತೆರೆದು
ಅವನನ್ನು ಕಂಡು ಬೆರಗಾದರು. ಆದರೆ ಅವನು 17
ಸುಮ್ಮಗಿರ್ರಿ ಎಂದು ಅವರಿಗೆ ಕೈಸನ್ನೆ ಮಾಡಿ ತನ್ನನ್ನು
ಕರ್ತನು ಸೆರೆಮನೆಯೊಳಗಿಂದ ಹೊರಗೆ ಕರೆದು
ಕೊಂಡು ಬಂದ ರೀತಿಯನ್ನು ವಿವರಿಸಿ ಈ ಸಂಗತಿ
ಗಳನ್ನು ಯಾಕೋಬನಿಗೂ ಸಹೋದರರೆಲ್ಲರಿಗೂ
ತಿಳಿಸಿರೆಂದು ಹೇಳಿ ಬೇರೆ ಸ್ಥಳಕ್ಕೆ ಹೊರಟುಹೋದನು.
ಬೆಳಗಾದ ಮೇಲೆ ಪೇತ್ರನು ಏನಾದನೆಂದು ಸಿಪಾಯಿ 18
ಗಳಲ್ಲಿ ಬಹಳ ಕಳವಳ ಉಂಟಾಯಿತು. ಹೆರೋದನು 19
ಅವನನ್ನು ಹುಡುಕಿಸಿ ಅವನು ಸಿಕ್ಕಲಿಲ್ಲವಾದದರಿಂದ
ಕಾವಲುಗಾರರನ್ನು ವಿಚಾರಣೆಮಾಡಿ ಅವರಿಗೆ ಮರಣ
ದಂಡನೆಯನ್ನು ವಿಧಿಸಿದನು. ಬಳಿಕ ಯೂದಾಯ
ದಿಂದ ಕೈಸರೈಯಕ್ಕೆ ಹೋಗಿ ಅಲ್ಲಿ ಕೆಲವು ಕಾಲ
ಇದ್ದನು.

ತೂರ್ ಸೀದೋನ್ ಪಟ್ಟಣಗಳ ನಿವಾಸಿಗಳು ತಮ್ಮ 20
ಮೇಲೆ ಹೆರೋದನು ಬಹಳವಾಗಿ ಕೋಪಿಸಿಕೊಂಡಿರು
ವದನ್ನು ನೋಡಿ ಒಂದೇ ಮನಸ್ಸಿನಿಂದ ಅವನ ಸನ್ನಿಧಿಗೆ
ಬಂದು ಅರಸನ ಅಂತಃಪುರದ ಮೇಲಣ ಅಧಿಕಾರಿ
ಯಾದ ಬ್ಲಾಸ್ತನನ್ನು ಒಲಿಸಿಕೊಂಡು ಸಮಾಧಾನ
ವಾಗಬೇಕೆಂದು ಅರಸನನ್ನು ಬೇಡಿಕೊಂಡರು. ಯಾ
ಕಂದರೆ ಅರಸನ ಸೀಮೆಯಿಂದಲೇ ಅವರ ಸೀಮೆಗೆ
ದವಸಧಾನ್ಯ ಬರುತ್ತಿತ್ತು. ಗೊತ್ತುಮಾಡಿದ ಒಂದು 21
ದಿನದಲ್ಲಿ ಹೆರೋದನು ರಾಜವಸ್ತ್ರವನ್ನು ಧರಿಸಿಕೊಂಡು
ರಾಜಾಸನದ ಮೇಲೆ ಕೂತು ಅವರಿಗೆ ಉಪನ್ಯಾಸ
ಮಾಡಿದನು. ಕೂಡಿದ್ದ ಜನರು—ಇದು ಮನುಷ್ಯನ 22
ನುಡಿಯಲ್ಲ, ದೇವರ ನುಡಿಯೇ ಎಂದು ಆರ್ಭಟಿಸಿ
ದರು. ಆ ಘನವನ್ನು ಅವನು ದೇವರಿಗೆ ಸಲ್ಲಿಸದೆ 23
ಹೋದದರಿಂದ ಕರ್ತನ ದೂತನು ಆ ಕ್ಷಣದಲ್ಲೇ ಅವ
ನನ್ನು ಬಡಿದನು; ಅವನು ಹುಳಬಿದ್ದು ಸತ್ತನು.

ಆದರೆ ದೇವರ ವಾಕ್ಯವು ಹಬ್ಬಿ ಹೆಚ್ಚುತ್ತಾ ಬಂತು. 24
ಬಾರ್ನಬ ಸೌಲರು ಮಾಡಬೇಕಾದ ಧರ್ಮಕಾರ್ಯ 25
ವನ್ನು ತೀರಿಸಿ ಮಾರ್ಕನೆನಿಸಿಕೊಳ್ಳುವ ಯೋಹಾನ
ನನ್ನು ಕರಕೊಂಡು ಯೆರೂಸಲೇಮಿನಿಂದ ಹಿಂತಿರುಗಿ
ಬಂದರು.

1) ಅಥವಾ, ರೋಮ್‌ಸಾಮ್ರಾಜ್ಯಕ್ಕೆಲ್ಲಾ.

ಸುವಾರ್ತೆಯನ್ನು ಸಾರುವದಕ್ಕೆ ಪೌಲನು ಮಾಡಿದ
ಮೊದಲನೆಯ ಪ್ರಯಾಣದ ಸಂಗತಿಗಳು. (13. 1—14. 28.)
ಬಾರ್ನಬ ಸೌಲರು ಕುಪ್ರದ್ವೀಪಕ್ಕೆ ಹೋದದ್ದು.
ಎಲುಮನೆಂಬ ಮಂತ್ರವಾದಿಯನ್ನು ಕುರಿತದ್ದು.

13 ಅಂತಿಯೋಕ್ಯದಲ್ಲಿದ್ದ ಸಭೆಯೊಳಗೆ ಪ್ರವಾದಿ
ಗಳೂ ಬೋಧಕರೂ ಇದ್ದರು; ಯಾರಾರಂದರೆ—
ಬಾರ್ನಬ, ನೀಗರನೆಂಬ ಸಿಮೆಯೋನ, ಕುರೇನ್ಯದ
ಲೂಕ್ಯ, ಉಪರಾಜನಾದ ಹೆರೋದನ ಸಾಕತಮ್ಮನಾದ
2 ಮೆನಹೇನ, ಸೌಲ ಇವರೇ. ಇವರು ಕರ್ತನನ್ನು
ಸೇವಿಸುತ್ತಾ ಉಪವಾಸಮಾಡುತ್ತಾ ಇದ್ದಾಗ ಪವಿತ್ರಾ
ತ್ಮನು—ನಾನು ಬಾರ್ನಬ ಸೌಲರನ್ನು ಕರೆದ ಕೆಲಸ
ಕ್ಕಾಗಿ ಅವರನ್ನು ಪ್ರತ್ಯೇಕಿಸಿರಿ ಎಂದು ಹೇಳಿದನು.
3 ಆಗ ಅವರು ಉಪವಾಸವಿದ್ದು ಪ್ರಾರ್ಥನೆ ಮಾಡಿ ಆ
ಇಬ್ಬರ ಮೇಲೆ ಹಸ್ತಾರ್ಪಣಮಾಡಿ ಅವರನ್ನು ಕಳು
ಹಿಸಿಕೊಟ್ಟರು.
4 ಹೀಗೆ ಅವರು ಪವಿತ್ರಾತ್ಮನಿಂದ ಕಳುಹಿಸಿಕೊಂಡವ
ರಾಗಿ ಸೆಲ್ಯೂಕ್ಯಕ್ಕೆ ಬಂದರು; ಅಲ್ಲಿಂದ ಸಮುದ್ರ
5 ಪ್ರಯಾಣವಾಗಿ ಕುಪ್ರದ್ವೀಪಕ್ಕೆ ಹೋದರು. ಸಲಮಿಾ
ಸಿಗೆ ಸೇರಿದಾಗ ಯೆಹೂದ್ಯರ ಸಭಾಮಂದಿರಗಳಲ್ಲಿ
ದೇವರ ವಾಕ್ಯವನ್ನು ಪ್ರಸಿದ್ಧಿಪಡಿಸಿದರು. ಯೋಹಾ
6 ನನು ಪರಿಚಾರಕನಾಗಿ ಅವರ ಸಂಗಡ ಇದ್ದನು. ಅವರು
ದ್ವೀಪದಲ್ಲೆಲ್ಲಾ ಸಂಚಾರಮಾಡಿ ಪಾಫೋಸ್ ಎಂಬ
ಊರಿನ ತನಕ ಬಂದು ಅಲ್ಲಿ ಸುಳ್ಳುಪ್ರವಾದಿಯೂ
ಮಂತ್ರವಾದಿಯೂ ಆಗಿದ್ದ ಬಾರ್ಯೇಸು ಎಂಬ ಒಬ್ಬ
7 ಯೆಹೂದ್ಯ ಮನುಷ್ಯನನ್ನು ಕಂಡರು. ಅವನು ಬುದ್ಧಿ
ವಂತನಾಗಿದ್ದ ಸೆರ್ಗ್ಯಪೌಲನೆಂಬ ಅಧಿಪತಿಯ ಹತ್ತರ
ದಲ್ಲಿದ್ದನು. ಅಧಿಪತಿಯು ಬಾರ್ನಬ ಸೌಲರನ್ನು
ತನ್ನ ಬಳಿಗೆ ಕರಸಿ ದೇವರ ವಾಕ್ಯವನ್ನು ಕೇಳುವದಕ್ಕೆ
8 ಅಪೇಕ್ಷೆ ಅದೆ ಎಂದು ಹೇಳಿದನು. ಆದರೆ ಆ ಮಂತ್ರ
ವಾದಿಯಾದ ಎಲುಮನು ಅವರಿಗೆ ಎದುರು ನಿಂತು
ಅಧಿಪತಿಯು ಕ್ರಿಸ್ತನನ್ನು ನಂಬದ ಹಾಗೆ ಪ್ರಯತ್ನಿ
ಸಿದನು. ಎಲುಮನೆಂಬ ಹೆಸರಿಗೆ ಮಂತ್ರವಾದಿ ಎಂಬದೇ
9 ಅರ್ಥ. ಆಗ ಪೌಲನೆನಿಸಿಕೊಳ್ಳುವ ಸೌಲನು ಪವಿ
10 ತ್ರಾತ್ಮಭರಿತನಾಗಿ ಅವನನ್ನು ದೃಷ್ಟಿಸಿನೋಡಿ—ಎಲೋ,
ಎಲ್ಲಾ ಮೋಸದಿಂದಲೂ ಎಲ್ಲಾ ಕೆಟ್ಟತನದಿಂದಲೂ
ತುಂಬಿರುವವನೇ, ಸೈತಾನನ ಮಗನೇ, ಎಲ್ಲಾ ನೀತಿಗೂ
ವಿರೋಧಿಯೇ, ನೀನು ಕರ್ತನ ನೀಟಾದ ಮಾರ್ಗ
ಗಳನ್ನು ಡೊಂಕುಮಾಡುವದನ್ನು ಬಿಡುವದಿಲ್ಲವೋ?
11 ಇಗೋ, ಕರ್ತನು ನಿನ್ನ ಮೇಲೆ ಕೈ ಎತ್ತಿದ್ದಾನೆ;
ನೀನು ಕುರುಡನಾಗಿ ಕೆಲವು ಕಾಲ ಸೂರ್ಯನನ್ನು
ಕಾಣದೆ ಇರುವಿ ಎಂದು ಹೇಳಿದನು. ಆ ಕ್ಷಣವೇ ಅವ
ನಿಗೆ ಕಣ್ಣು ಮೊಬ್ಬಾಗಿ ಕತ್ತಲೆ ಉಂಟಾಯಿತು; ಅವನು
ಕೈಹಿಡಿಯುವವರನ್ನು ಹುಡುಕುತ್ತಾ ತಿರುಗಾಡಿದನು.
12 ಅಧಿಪತಿಯು ಆ ಸಂಗತಿಯನ್ನು ನೋಡಿ ಕರ್ತನ
ಬೋಧನೆಗೆ ಅತ್ಯಾಶ್ಚರ್ಯಪಟ್ಟು ನಂಬುವವನಾದನು.

ಪಿಸಿದ್ಯದ ಅಂತಿಯೋಕ್ಯದಲ್ಲಿ ಪೌಲನು ಇಸ್ರಾಯೇಲ್
ಜನರಿಗೆ ಉಪನ್ಯಾಸಮಾಡಿದ್ದು.

ತರುವಾಯ ಪೌಲನೂ ಅವನ ಜೊತೆಯಲ್ಲಿ
ವರೂ ಪಾಫೋಸೂರನ್ನು ಬಿಟ್ಟು ಸಮುದ್ರಪ್ರಯಾ
ಮಾಡಿ ಪಂಫುಲ್ಯ ಸೀಮೆಗೆ ಸೇರಿದ ಪೆರ್ಗೆಗೆ ಬಂದರ
ಯೋಹಾನನು ಅವರನ್ನು ಬಿಟ್ಟು ಹಿಂತಿರುಗಿ ಯೆರೂ
ಲೇಮಿಗೆ ಹೋದನು. ಆ ಮೇಲೆ ಅವರು ಪೆ
ಯಿಂದ ಸಂಚಾರಮಾಡಿ ಪಿಸಿದ್ಯ ಸೀಮೆಗೆ ಸೇರ
ಅಂತಿಯೋಕ್ಯಕ್ಕೆ ಬಂದರು. ಸಬ್ಬತ್‌ದಿನದಲ್ಲಿ ಅವ
ಸಭಾಮಂದಿರಕ್ಕೆ ಹೋಗಿ ಕೂತುಕೊಂಡರು. ಧರ
ಶಾಸ್ತ್ರವು ಪ್ರವಾದಿಗಳ ಗ್ರಂಥವು ಇವುಗಳ ಪಾರಾಯ
ವಾದ ಮೇಲೆ ಸಭಾಮಂದಿರದ ಯಜಮಾನರು
ಸಹೋದರರೇ, ಜನರಿಗೆ ಹೇಳತಕ್ಕ ಬುದ್ಧಿಮಾತೇನ
ದರೂ ನಿಮಗಿದ್ದರೆ ಹೇಳಿರಿ ಎಂದು ಅವರಿಗೆ ಹೇ
ಕಳುಹಿಸಿದರು. ಆಗ ಪೌಲನು ಎದ್ದು ಕೈಸ
ಮಾಡಿ ಹೇಳಿದ್ದೇನಂದರೆ—
ಇಸ್ರಾಯೇಲ್ ಜನರೇ, ಮತ್ತು 1)ಯೆಹೂ
ಮತಾವಲಂಬಿಗಳೇ, ಕೇಳಿರಿ. ನಮ್ಮ ಇಸ್ರಾಯೇ
ಜನರ ದೇವರು ನಮ್ಮ ಪಿತೃಗಳನ್ನು ಆರಿಸಿಕೊಂಡ
ನಮ್ಮ ಜನರು ಐಗುಪ್ತದೇಶದಲ್ಲಿ ಪ್ರವಾಸವಾಗಿದ್ದಾ
ಅವರನ್ನು ವೃದ್ಧಿಗೆ ತಂದು ಭುಜಬಲದಿಂದ ಆ ದೇ
ದೊಳಗಿಂದ ಬರಮಾಡಿದನು. ಆತನು ಸುಮಾ
ನಾಲ್ವತ್ತು ವರುಷಗಳ ವರೆಗೂ 2)ಅಡವಿಯಲ್ಲಿ ಅವ
ನಡಾವಳಿಯನ್ನು ಸಹಿಸಿಕೊಂಡು ಕಾನಾನ್ ದೇ
ದಲ್ಲಿದ್ದ ಅನ್ಯಜನಗಳ ಏಳು ರಾಜ್ಯಗಳನ್ನು ನಿರ್ಮೂ
ಮಾಡಿ ಆ ಜನರ ದೇಶವನ್ನು ಅವರಿಗೆ ಬಾಧ್ಯವಾ
ಹಂಚಿಕೊಟ್ಟನು. ಇಷ್ಟರೊಳಗೆ ಸುಮಾರು ನಾನ
ರೈವತ್ತು ವರುಷಗಳು ಗತಿಸಿದವು. ಇದಾದ ಮೇ
ಪ್ರವಾದಿಯಾದ ಸಮುವೇಲನ ಕಾಲದ ವರೆಗೆ ನಾ
ಯಾಧಿಪತಿಗಳನ್ನು ಕೊಟ್ಟನು. ತರುವಾಯ ಅವ
ತಮಗೆ ಅರಸನು ಬೇಕೆಂದು ಕೇಳಿಕೊಳ್ಳ
ದೇವರು ಅವರಿಗೆ ಬೆನ್ಯಾಮೀನನ ಕುಲದ ಕೀಷ
ಮಗನಾದ ಸೌಲನನ್ನು ಕೊಟ್ಟನು. ಅವನು ನಾಲ್ವತ
ವರುಷ ಆಳಿದನು. ಆ ಮೇಲೆ ದೇವರು ಅವನನ
ತೆಗೆದುಹಾಕಿ ದಾವೀದನನ್ನು ಅವರ ಮೇಲೆ ಅರ
ನನ್ನಾಗಿ ಮಾಡಿ—ಇಷಯನ ಮಗನಾದ ದಾವೀ
ನು ನನಗೆ ಸಿಕ್ಕಿದನು, ಅವನು ನನಗೆ ಒಪ್ಪುವ ಮನ
ಷ್ಯನು, ಅವನು ನನ್ನ ಇಷ್ಟವನ್ನೆಲ್ಲಾ ನೆರವೇರಿಸುವನ
ಎಂಬದಾಗಿ ಅವನ ವಿಷಯದಲ್ಲಿ ಸಾಕ್ಷಿಹೇಳಿದನ
ಅವನ ಸಂತಾನದಿಂದ ದೇವರು ತನ್ನ ವಾಗ್ದಾನ
ಪ್ರಕಾರ ಇಸ್ರಾಯೇಲ್ಯರಿಗೆ ಒಬ್ಬ ರಕ್ಷಕನನ
ಹುಟ್ಟಿಸಿದ್ದಾನೆ. ಆ ರಕ್ಷಕನೇ ಯೇಸು. ಆತನ ಆ
ಮನಕ್ಕೆ ಮುಂಚೆ ಯೋಹಾನನು ಇಸ್ರಾಯೇಲ್ ಜ
ರೆಲ್ಲರಿಗೆ—ನೀವು ದೇವರ ಕಡೆಗೆ ತಿರುಗಿಕೊಂಡು ಸ್ನಾ
ಮಾಡಿಸಿಕೊಳ್ಳಬೇಕೆಂದು ಸಾರಿದನು. ಯೋಹಾನನ

1) ಮೂಲ: ದೇವರಿಗೆ ಭಯಪಡುವವರೇ. 2) ಕೆಲವು ಪ್ರತಿಗಳಲ್ಲಿ—ದಾದಿಯು ಕೂಸನ್ನು ಸಾಕುವಂತೆ ಅವರನ್ನು ಅಡವಿ
ಸಾಕಿ ಸಲಹಿ ಎಂದು ಬರೆದದೆ.

1)ತನ್ನ ಸೇವೆಯನ್ನು ಪೂರೈಸುತ್ತಿರುವಾಗ ಜನರಿಗೆ—
ನನ್ನನ್ನು ಯಾರೆಂದು ಯೋಚಿಸುತ್ತೀರಿ? ನಾನು ಆತ
ನಲ್ಲ, ಆದರೆ ನನ್ನ ಹಿಂದೆ ಒಬ್ಬನು ಬರುತ್ತಾನೆ, ಆತನ
ಪಾದದ ಕೆರಗಳನ್ನು ಬಿಚ್ಚುವದಕ್ಕೆ ನಾನು ಯೋಗ್ಯ
ನಲ್ಲ ಎಂದು ಹೇಳಿದನು.
26 ಸಹೋದರರೇ, ಅಬ್ರಹಾಮನ ವಂಶಸ್ಥರೇ, ಮತ್ತು
ನಿಮ್ಮಲ್ಲಿರುವ ಯೆಹೂದ್ಯಮತಾವಲಂಬಿಗಳೇ, ನಮ
27 ಗೆ ಈ ರಕ್ಷಣೆಯ ವಾಕ್ಯವು ಕಳುಹಿಸಿ ಅದೆ. ಯೆರೂಸ
ಲೇಮಿನಲ್ಲಿ ವಾಸವಾಗಿರುವವರೂ ಅವರ ಅಧಿಕಾರಿ
ಗಳೂ ಆತನನ್ನಾಗಲಿ ಪ್ರತಿ ಸಬ್ಬತ್‌ದಿನದಲ್ಲಿ ಪಾರಾ
ಯಣವಾಗುವ ಪ್ರವಾದಿಗಳ ವಾಕ್ಯಗಳನ್ನಾಗಲಿ ಗ್ರಹಿ
ಸದೆ ಆತನನ್ನು ಅಪರಾಧಿಯೆಂದು ತೀರ್ಪುಮಾಡಿ ಆ
28 ವಾಕ್ಯಗಳನ್ನೇ ನೆರವೇರಿಸಿದರು. ಮರಣದಂಡನೆಗೆ
ಕಾರಣವೇನೂ ತಮಗೆ ಸಿಕ್ಕದಿದ್ದರೂ ಆತನನ್ನು
ಕೊಲ್ಲಿಸಬೇಕೆಂದು ಪಿಲಾತನನ್ನು ಕೇಳಿಕೊಂಡರು.
29 ಆತನ ವಿಷಯವಾಗಿ ಶಾಸ್ತ್ರದಲ್ಲಿ ಬರೆದಿರುವದನ್ನೆಲ್ಲಾ
ನೆರವೇರಿಸಿದ ಮೇಲೆ ಆತನನ್ನು ಮರದ ಕಂಭದಿಂದ
ಇಳಿಸಿ ಸಮಾಧಿಯಲ್ಲಿಟ್ಟರು.
30 ಆದರೆ ದೇವರು ಆತನನ್ನು ಸತ್ತವರೊಳಗಿಂದ
31 ಎಬ್ಬಿಸಿದನು. ಮತ್ತು ಆತನು ಗಲಿಲಾಯದಿಂದ
ಯೆರೂಸಲೇಮಿಗೆ ತನ್ನ ಜೊತೆಯಲ್ಲಿ ಬಂದವರಿಗೆ
ಅನೇಕ ದಿವಸಗಳ ಪರಿಯಂತರ ಕಾಣಿಸಿಕೊಂಡನು.
ಅವರು ಈಗ ಜನರ ಮುಂದೆ ಆತನಿಗೆ ಸಾಕ್ಷಿಗಳಾಗಿ
32-33 ದ್ದಾರೆ. ದೇವರು ನಮ್ಮ ಪಿತೃಗಳಿಗೆ ಮಾಡಿದ
ವಾಗ್ದಾನವನ್ನು 2)ನಮ್ಮ ಮಕ್ಕಳಿಗೋಸ್ಕರ ನೆರವೇರಿಸಿ
ದ್ದಾನೆಂಬ ಶುಭಸಮಾಚಾರವನ್ನು ನಾವು ನಿಮಗೆ
ಸಾರುವವರಾಗಿದ್ದೇವೆ. ಆತನು ಯೇಸುವನ್ನು ಎಬ್ಬಿ
ಸಿದ್ದರಲ್ಲಿ—ನನಗೆ ನೀನು ಮಗನು, ನಾನೇ ಈ
ಹೊತ್ತು ನಿನ್ನನ್ನು ಪಡೆದಿದ್ದೇನೆ ಎಂದು ಎರಡನೆಯ
ಕೀರ್ತನೆಯಲ್ಲಿ ಬರೆದಿರುವ ಮಾತು ನೆರವೇರಿತು.
34 ಇದಲ್ಲದೆ ದೇವರು ಯೇಸುವನ್ನು ಸತ್ತವರೊಳಗಿಂದ
ಎಬ್ಬಿಸಿದ್ದರಿಂದ ಆತನು ಇನ್ನೆಂದಿಗೂ ಕೊಳೆಯುವ
ಅವಸ್ಥೆಗೆ ಸೇರತಕ್ಕವನಲ್ಲವೆಂಬದರ ವಿಷಯದಲ್ಲಿ ದೇ
ವರು ಹೇಳಿರುವದೇನಂದರೆ—ದಾವೀದನಿಗೆ ಖಂಡಿತ
ವಾಗಿ ವಾಗ್ದಾನಮಾಡಿದ ಕೃಪಾವರಗಳನ್ನು ನಿಮಗೆ
ಕೊಡುತ್ತೇನೆ, ಅವು ನಂಬಿಕೆಯಾದವುಗಳೇ ಎಂಬದು.
35 ಅದಕ್ಕನುಸಾರವಾಗಿ ಆತನು—ನೀನು ನಿನ್ನ ಪ್ರಿಯನಿಗೆ
3)ಕೊಳೆಯುವ ಅವಸ್ಥೆಯನ್ನು ನೋಡಗೊಡಿಸುವ
ದಿಲ್ಲವೆಂದು ಬೇರೊಂದು ಕೀರ್ತನೆಯಲ್ಲಿ ಹೇಳಿ
36 ದ್ದಾನೆ. ದಾವೀದನಾದರೋ 4)ತನ್ನ ಸಕಾಲದವರಿಗೆ
ಸೇವೆಮಾಡಿದನಂತರ ದೈವಸಂಕಲ್ಪದಿಂದ ನಿದ್ರೆಹೋಗಿ
ತನ್ನ ಪಿತೃಗಳ ಬಳಿಯಲ್ಲಿ ಇಡಲ್ಪಟ್ಟು ಕೊಳೆಯುವ
37 ಅವಸ್ಥೆಯನ್ನು ಅನುಭವಿಸಿದನು. ಆದರೆ ದೇವರು
ಎಬ್ಬಿಸಿದಾತನು ಕೊಳೆಯುವ ಅವಸ್ಥೆಯನ್ನು ಅನು
ಭವಿಸಲಿಲ್ಲ.
38 ಆದದರಿಂದ ಸಹೋದರರೇ, ಆತನ ಮೂಲಕವಾಗಿ
ಪಾಪಪರಿಹಾರವು ದೊರೆಯುತ್ತದೆಂಬದು ನಿಮಗೆ ಸಾ
ರೋಣವಾಗುತ್ತದೆಂದು ನಿಮಗೆ ತಿಳಿದಿರಲಿ. ಮೋಶೆ 39
ಯ ಧರ್ಮಶಾಸ್ತ್ರದ ಮೂಲಕ ನೀವು ಬಿಡುಗಡೆ ಹೊಂದ
ಲಾಗದ ಎಲ್ಲಾ ಪಾಪಗಳಿಂದ ನಂಬುವವರೆಲ್ಲರು ಆತನ
ಮೂಲಕವಾಗಿ ಬಿಡುಗಡೆಹೊಂದಿ ನೀತಿವಂತರೆನಿಸಿ
ಕೊಳ್ಳುತ್ತಾರೆ. ಹೀಗಿರಲಾಗಿ ಪ್ರವಾದಿಗಳ ಗ್ರಂಥದಲ್ಲಿ 40
ಹೇಳಿರುವದು ನಿಮಗೆ ಸಂಭವಿಸದಂತೆ ನೋಡಿಕೊಳ್ಳಿರಿ.
ಅದೇನಂದರೆ—

ಎಲೈ ತಿರಸ್ಕಾರಮಾಡುವವರೇ, ಆಶ್ಚರ್ಯ 41
ಪಡಿರಿ, ನಾಶವಾಗಿಹೋಗಿರಿ.
ನಿಮ್ಮ ಕಾಲದಲ್ಲಿ ನಾನು ಒಂದು ಕಾರ್ಯ
ವನ್ನು ಮಾಡುವೆನು;
ಆ ಕಾರ್ಯವನ್ನು ಒಬ್ಬನು ನಿಮಗೆ ವಿವರಿಸಿ
ದರೂ
ನೀವು ಅದನ್ನು ಎಷ್ಟು ಮಾತ್ರಕ್ಕೂ ನಂಬುವದಿಲ್ಲ

ಎಂಬದು ಎಂದು ಹೇಳಿದನು.
ಪೌಲನೂ ಬಾರ್ನಬನೂ ಸಭಾಮಂದಿರವನ್ನು ಬಿಟ್ಟು 42
ಹೋಗುತ್ತಿರುವಾಗ ಜನರು ಈ ಮಾತುಗಳನ್ನು
ಬರುವ ಸಬ್ಬತ್‌ದಿನದಲ್ಲಿಯೂ ತಮಗೆ ಹೇಳಬೇ
ಕೆಂದು ಕೇಳಿಕೊಂಡರು. ಸಭೆಯು ಮುಗಿದ ತರು 43
ವಾಯ ಯೆಹೂದ್ಯರಲ್ಲಿಯೂ ದೇವಭಕ್ತರಾಗಿದ್ದ
ಯೆಹೂದ್ಯ ಮತಾವಲಂಬಿಗಳಲ್ಲಿಯೂ ಅನೇಕರು
ಪೌಲ ಬಾರ್ನಬರನ್ನು ಹಿಂಬಾಲಿಸಿದರು. ಇವರು ಅವರ
ಸಂಗಡ ಮಾತಾಡಿ ದೇವರ ಕೃಪಾಶ್ರಯದಲ್ಲಿ ನೆಲೆ
ಗೊಂಡಿರಬೇಕೆಂದು ಅವರನ್ನು ಪ್ರೋತ್ಸಾಹಪಡಿಸಿದರು.
ಮುಂದಿನ ಸಬ್ಬತ್‌ದಿನದಲ್ಲಿ ಸ್ವಲ್ಪ ಕಡಿಮೆ ಊರೆಲ್ಲಾ 44
ದೇವರ ವಾಕ್ಯವನ್ನು ಕೇಳುವದಕ್ಕೆ ಕೂಡಿಬಂತು.
ಆದರೆ ಜನರು ಗುಂಪುಗುಂಪಾಗಿ ಬರುವದನ್ನು ನೋಡಿ 45
ಯೆಹೂದ್ಯರು ಮತಾಭಿಮಾನದಿಂದ ತುಂಬಿದವರಾಗಿ
ಪೌಲನು ಹೇಳಿದ ಮಾತುಗಳಿಗೆ ಎದುರ್ಹೇಳುತ್ತಾ
ದೂಷಣೆಮಾಡುತ್ತಾ ಇದ್ದರು. ಆಗ ಪೌಲನೂ ಬಾರ್ನ 46
ಬನೂ ಧೈರ್ಯದಿಂದ ಮಾತಾಡಿ—ದೇವರ ವಾಕ್ಯವನ್ನು
ಮೊದಲು ನಿಮಗೇ ಹೇಳುವದು ಅವಶ್ಯವಾಗಿತ್ತು;
ಆದರೆ ನೀವು ಅದನ್ನು ತಳ್ಳಿಬಿಟ್ಟು ನಿಮ್ಮನ್ನು ನಿತ್ಯ
ಜೀವಕ್ಕೆ ಅಪಾತ್ರರೆಂದು ತೀರ್ಪುಮಾಡಿಕೊಂಡದ್ದರಿಂದ
ಇಗೋ, ನಾವು ನಿಮ್ಮನ್ನು ಬಿಟ್ಟು ಅನ್ಯಜನರ ಕಡೆಗೆ
ಹೋಗುತ್ತೇವೆ. ಹಾಗೆಯೇ ಕರ್ತನು ನಮಗೆ ಅಪ್ಪಣೆ 47
ಕೊಟ್ಟಿದ್ದಾನೆ; ಹೇಗಂದರೆ—

ನೀನು ಲೋಕದ ಕಟ್ಟಕಡೆಯ ವರೆಗೆ ರಕ್ಷಕ
ನಾಗಿರುವಂತೆ
ನಿನ್ನನ್ನು ಅನ್ಯಜನಾಂಗಗಳಿಗೂ ಬೆಳಕನ್ನಾಗಿ
ನೇಮಿಸಿದ್ದೇನೆ

ಎಂದು ದೇವರು ಹೇಳಿದ್ದಾನೆ ಅಂದರು. ಅಲ್ಲಿದ್ದ ಅನ್ಯ 48
ಜನರು ಆ ಮಾತನ್ನು ಕೇಳಿ ಸಂತೋಷವಟ್ಟು ದೇವರ
ವಾಕ್ಯವನ್ನು ಹೊಗಳಿದರು; ಮತ್ತು ನಿತ್ಯಜೀವಕ್ಕೆ
ನೇಮಿಸಲ್ಪಟ್ಟವರೆಲ್ಲರು ನಂಬಿದರು. ಕರ್ತನ ವಾಕ್ಯವು 49
ಆ ಸೀಮೆಯ ಎಲ್ಲಾ ಕಡೆಗಳಲ್ಲಿ ಹಬ್ಬುತ್ತಾ ಬಂತು.
ಆದರೆ ಯೆಹೂದ್ಯರು 5)ತಮ್ಮ ಮತಕ್ಕೆ ಸೇರಿದ್ದ 50

---

1) ಮೂಲ: ತನ್ನ [illegible]. 2) ಕೆಲವು ಪ್ರತಿಗಳಲ್ಲಿ—[illegible] ನಮಗೋಸ್ಕರ ಎಂದು ಬರೆದದೆ. 3) ಮೂಲದ [illegible]. 4) [illegible], ತನ್ನ ಕಾಲದಲ್ಲಿ ದೈವಸಂಕಲ್ಪವನ್ನು ನೆರವೇರಿಸಿ. 5) ಮೂಲ: ದೇವಭಕ್ತೆಯರಾದ.

ಕುಲೀನ ಸ್ತ್ರೀಯರನ್ನೂ ಊರಿನ ಪ್ರಮುಖರನ್ನೂ
ಪ್ರೇರಿಸಿ ಪೌಲ ಬಾರ್ನಬರ ಮೇಲೆ ಹಿಂಸೆಯನ್ನು
ಎಬ್ಬಿಸಿ ಅವರನ್ನು ತಮ್ಮ ಮೇರೆಯಿಂದ ಆಚೆಗೆ ಅಟ್ಟಿ
51 ದರು. ಇವರು ತಮ್ಮ ಕಾಲಿಗೆ ಹತ್ತಿದ್ದ ಧೂಳನ್ನು
ಅವರ ಮೇಲೆ ಝಾಡಿಸಿಬಿಟ್ಟು ಇಕೋನ್ಯಕ್ಕೆ ಹೋದ
52 ರು. ಶಿಷ್ಯರಾದವರು ಸಂತೋಷಪೂರ್ಣರೂ ಪವಿತ್ರಾತ್ಮ
ಭರಿತರೂ ಆದರು.

ಲುಸ್ತ್ರಪಟ್ಟಣದಲ್ಲಿ ಪೌಲ ಬಾರ್ನಬರು ಹುಟ್ಟುಕುಂಟನನ್ನು
ವಾಸಿಮಾಡಲು ಆ ಊರಿನ ಜನರು ಮೊದಲು ಅವರನ್ನು
ಪೂಜಿಸಿದ್ದು, ಆ ಮೇಲೆ ಅಟ್ಟಿಬಿಟ್ಟದ್ದು.

**14** ಇಕೋನ್ಯದಲ್ಲಿ ಪೌಲ ಬಾರ್ನಬರು ಅದೇ
ಪ್ರಕಾರವಾಗಿ ಯೆಹೂದ್ಯರ ಸಭಾಮಂದಿರದೊಳಗೆ
ಹೋಗಿ ಬಲವಾಗಿ ಮಾತಾಡಿದ್ದರಿಂದ ಯೆಹೂದ್ಯರಲ್ಲಿ
ಯೂ ಗ್ರೀಕರಲ್ಲಿಯೂ ಬಹುಮಂದಿ ನಂಬುವವರಾ
2 ದರು. ಆದರೆ ನಂಬದೆ ಹೋದ ಯೆಹೂದ್ಯರು ಅನ್ಯ
ಜನರ ಮನಸ್ಸನ್ನು ಸಹೋದರರಿಗೆ ವಿರುದ್ಧವಾಗಿ ರೇಗಿಸಿ
3 ಕೆಡಿಸಿದರು. ಹೀಗಿರಲಾಗಿ ಪೌಲ ಬಾರ್ನಬರು ಬಹು
ಕಾಲ ಅಲ್ಲಿದ್ದು ಕರ್ತನು ಅವರ ಕೈಯಿಂದ ಸೂಚಕ
ಕಾರ್ಯಗಳೂ ಅದ್ಭುತಕಾರ್ಯಗಳೂ ಆಗುವಂತೆ
ದಯಪಾಲಿಸಿ ತನ್ನ ಕೃಪಾವಾಕ್ಯಕ್ಕೆ ಸಾಕ್ಷಿಕೊಟ್ಟದ್ದ
ರಿಂದ ಆತನ ಮೇಲೆ ಭರವಸವಿಟ್ಟು ಧೈರ್ಯದಿಂದ
4 ಮಾತಾಡುತ್ತಿದ್ದರು. ಆಗ ಆ ಊರಿನ ಜನರಲ್ಲಿ ಭೇದ
ವುಂಟಾಯಿತು; ಕೆಲವರು ಯೆಹೂದ್ಯರ ಪಕ್ಷದವರಾ
5 ದರು, ಕೆಲವರು ಅಪೊಸ್ತಲರ ಪಕ್ಷದವರಾದರು. ಅನ್ಯ
ಜನರೂ ಯೆಹೂದ್ಯರೂ ಕೂಡಿ ತಮ್ಮ ಅಧಿಪತಿಗಳ
ಸಮ್ಮತಿಯಿಂದ ಅಪೊಸ್ತಲರನ್ನು ಅವಮಾನಪಡಿಸುವ
ದಕ್ಕೂ ಕಲ್ಲೆಸೆದು ಕೊಲ್ಲುವದಕ್ಕೂ ಪ್ರವರ್ತಿಸಿದಾಗ
6 ಅಪೊಸ್ತಲರು ಅದನ್ನು ತಿಳಿದು ಓಡಿಹೋಗಿ ಲುಕ
ವೋನ್ಯದಲ್ಲಿದ್ದ ಲುಸ್ತ್ರ ದೆರ್ಬೆ ಎಂಬ ಊರುಗಳಿಗೂ
7 ಅವುಗಳಿಗೆ ಸೇರಿರುವ ಸೀಮೆಗೂ ಹೋಗಿ ಅಲ್ಲಿ
ಸುವಾರ್ತೆಯನ್ನು ಸಾರಿದರು.
8 ಲುಸ್ತ್ರದೊಳಗೆ ಕಾಲುಗಳಲ್ಲಿ ಬಲವಿಲ್ಲದ ಒಬ್ಬ
ಮನುಷ್ಯನು ಕೂತಿದ್ದನು. ಅವನು ಹುಟ್ಟುಕುಂಟ
9 ನಾಗಿದ್ದು ಎಂದಿಗೂ ನಡೆಯದೆ ಇದ್ದವನು. ಪೌಲನು
ಆಡುವ ಮಾತುಗಳನ್ನು ಅವನು ಕಿವಿಗೊಟ್ಟು ಕೇಳು
ತ್ತಿದ್ದನು. ಪೌಲನು ಅವನನ್ನು ಸ್ಥಿರವಾಗಿ ನೋಡಿ
ವಾಸಿಯಾಗುವದಕ್ಕೆ ಬೇಕಾದ ನಂಬಿಕೆಯು ಅವನಲ್ಲಿ
10 ಉಂಟೆಂದು ತಿಳಿದು—ನಿನ್ನ ಕಾಲೂರಿ ನೆಟ್ಟಗೆ ನಿಂತು
ಕೋ ಎಂದು ಮಹಾಧ್ವನಿಯಿಂದ ಹೇಳಿದನು. ಕೂಡಲೆ
11 ಆ ಮನುಷ್ಯನು ಹಾರಿ ನಡೆದಾಡಿದನು. ಪೌಲನು
ಮಾಡಿದ್ದನ್ನು ಗುಂಪು ಕೂಡಿದ್ದ ಜನರು ನೋಡಿ—
ದೇವತೆಗಳು ಮನುಷ್ಯರ ರೂಪದಿಂದ ನಮ್ಮ ಬಳಿಗೆ
ಇಳಿದುಬಂದರು ಎಂದು ಲುಕವೋನ್ಯಭಾಷೆಯಲ್ಲಿ ಕೂ
12 ಗಾಡಿದರು. ಬಾರ್ನಬನನ್ನು 1)ದ್ಯಾಸ್‌ದೇವರೆಂತಲೂ
ಪೌಲನು ಮಾತಾಡುವದರಲ್ಲಿ ಮುಖ್ಯನಾದ್ದರಿಂದ
ಅವನನ್ನು 2)ಹೆರ್ಮೆದೇವರೆಂತಲೂ ಅಂದುಕೊಂಡರು.

ಊರ ಮುಂದಿದ್ದ ದ್ಯಾಸ್‌ದೇವರ ದೇವಸ್ಥಾನದ ಪೂಜಾ
ರಿಯು ಎತ್ತುಗಳನ್ನೂ ಹೂವಿನ ಹಾರಗಳನ್ನೂ ಊ
ಬಾಗಿಲಿನ ಹತ್ತರಕ್ಕೆ ತಂದು ಜನರೊಂದಿಗೆ ಅವರಿ
ಬಲಿಕೊಡಬೇಕೆಂದಿದ್ದನು. ಇದನ್ನು ಕೇಳಿ ಅಪೊಸ್ತ
ರಾದ ಬಾರ್ನಬ ಪೌಲರು ತಮ್ಮ ವಸ್ತ್ರಗಳನ್ನು ಹ
ಕೊಂಡು ಜನರ ಗುಂಪಿನೊಳಗೆ ಕೂಗುತ್ತಾ ನುಗ್ಗಿ—
ಜನರೇ, ನೀವು ಮಾಡುವದು ಇದೇನು? ನಾವ
ಮನುಷ್ಯರು, ನಿಮ್ಮಂಥ ಸ್ವಭಾವವುಳ್ಳವರು. ನೀವು
ವ್ಯರ್ಥವಾದ ಕೆಲಸಗಳನ್ನು ಬಿಟ್ಟುಬಿಟ್ಟು ಭೂಮ್ಯಾಕ
ಶಗಳನ್ನೂ ಸಮುದ್ರವನ್ನೂ ಅವುಗಳಲ್ಲಿರುವ ಸಮಸ್ತ
ವನ್ನೂ ನಿರ್ಮಾಣಮಾಡಿದ ಜೀವಸ್ವರೂಪನಾದ ದೇವ
ಕಡೆಗೆ ತಿರುಗಿಕೊಳ್ಳಬೇಕೆಂದು ಸುವಾರ್ತೆಯನ್ನು
ನಿಮಗೆ ಸಾರಿಹೇಳುವವರಾಗಿದ್ದೇವೆ. ಗತಿಸಿಹೋ
ಕಾಲದಲ್ಲಿ ಆತನು ಎಲ್ಲಾ ಜನಾಂಗಗಳನ್ನು ತಮ
ತಮ್ಮ ಮನಸ್ಸಿಗೆ ತೋಚಿದ ಮಾರ್ಗಗಳಲ್ಲಿ ನಡೆಯು
ವದಕ್ಕೆ ಬಿಟ್ಟನು. ಆದರೂ ಆತನು ತನ್ನ ವಿಷಯ
ದಲ್ಲಿ ಸಾಕ್ಷಿಕೊಡದೆ ಇರಲಿಲ್ಲ; ನಿಮಗೆ ಆಕಾಶದಿಂ
ಮಳೆಯನ್ನೂ ಸುಗ್ಗೀಕಾಲಗಳನ್ನೂ ದಯಪಾಲಿಸಿ
ಆಹಾರಕೊಟ್ಟು ನಿಮ್ಮ ಮನಸ್ಸುಗಳನ್ನು ಆನಂದದಿಂದ
ತುಂಬಿಸಿ ಉಪಕಾರಮಾಡುತ್ತಾ ಬಂದವನು ಆತನೇ
ಎಂದು ಹೇಳಿದರು. ಅವರು ಈ ಮಾತುಗಳನ್ನು ಹೇಳಿ
ದರೂ ಜನರನ್ನು ತಮಗೆ ಬಲಿಕೊಡದಂತೆ ತಡೆಯು
ವದು ಕಷ್ಟವಾಗಿತ್ತು.
ತರುವಾಯ ಅಂತಿಯೋಕ್ಯದಿಂದಲೂ ಇಕೋನ್ಯ
ದಿಂದಲೂ ಯೆಹೂದ್ಯರು ಬಂದು ಜನರನ್ನು ಪ್ರೇರೇಪಿಸಿ
ಪೌಲನನ್ನು ಕೊಲ್ಲುವದಕ್ಕೆ ಕಲ್ಲೆಸೆದು ಅವನು ಸತ್ತ
ನೆಂದು ಭಾವಿಸಿ ಊರಹೊರಕ್ಕೆ ಎಳೆದುಬಿಟ್ಟರು. ಆದರೆ
ಶಿಷ್ಯರು ಅವನ ಸುತ್ತಲು ನಿಂತುಕೊಂಡಿರುವಾಗ ಅವನು
ಎದ್ದು ಊರೊಳಕ್ಕೆ ಹೋದನು. ಮರುದಿನ ಬಾರ್ನ
ಬನ ಜೊತೆಯಲ್ಲಿ ದೆರ್ಬೆಗೆ ಹೊರಟನು. ಆ ಊರಿನಲ್ಲಿ
ಅವರು ಸುವಾರ್ತೆಯನ್ನು ಸಾರಿ ಅನೇಕರನ್ನು ಶಿಷ್ಯ
ರಾಗ ಮಾಡಿದ ಮೇಲೆ ಹಿಂತಿರುಗಿ ಲುಸ್ತ್ರಕ್ಕೂ ಇಕೋ
ನ್ಯಕ್ಕೂ ಅಂತಿಯೋಕ್ಯಕ್ಕೂ ಬಂದು ಶಿಷ್ಯರ ಮನಸ್ಸು
ಗಳನ್ನು ದೃಢಪಡಿಸಿದರು. ನಾವು ಬಹು ಸಂಕಟ
ಗಳನ್ನು ತಾಳಿ ದೇವರ ರಾಜ್ಯದೊಳಗೆ ಸೇರಬೇಕೆಂಬ
ದಾಗಿ ಎಚ್ಚರಿಕೆಯ ಮಾತನ್ನು ಹೇಳಿ ಕ್ರಿಸ್ತನಂಬಿಕೆ
ಯಲ್ಲಿ ಸ್ಥಿರವಾಗಿರ್ರಿ ಎಂದು ಅವರನ್ನು ಧೈರ್ಯಗೊಳಿ
ಸಿದರು. ಇದಲ್ಲದೆ ಪ್ರತಿಸಭೆಯಲ್ಲಿ ಸಭೆಯವರ ಸಮ್ಮ
ತಿಯಿಂದ ಹಿರಿಯರನ್ನು ಗೊತ್ತುಮಾಡಿ ನೇಮಿಸಿ
ಉಪವಾಸವಿದ್ದು ಪ್ರಾರ್ಥನೆಮಾಡಿ ಅವರು ನಂಬಿದ್ದ
ಕರ್ತನ ಕೈಗೆ ಅವರನ್ನು ಒಪ್ಪಿಸಿದರು. ತರುವಾಯ
ಪಿಸಿದ್ಯ ಸೀಮೆಯನ್ನು ಹಾದು ಪಂಫುಲ್ಯಸೀಮೆಗೆ
ಬಂದು ಅದಕ್ಕೆ ಸೇರಿರುವ ಪೆರ್ಗೆಯಲ್ಲಿ ಕರ್ತನ
ವಾಕ್ಯವನ್ನು ಹೇಳಿದ ಮೇಲೆ ಅತಾಲ್ಯಕ್ಕೆ ಇಳಿದು
ಅಲ್ಲಿಂದ ಸಮುದ್ರಪ್ರಯಾಣವಾಗಿ ಅಂತಿಯೋಕ್ಯಕ್ಕೆ
ಮುಟ್ಟಿದರು. ಅವರು ನೆರವೇರಿಸಿ ಬಂದ ಕೆಲಸಕ್ಕೋ
ಸ್ಕರ ದೇವರ ಕೃಪಾಶಯಕ್ಕೆ ಒಪ್ಪಿಸಲ್ಪಟ್ಟವರಾಗಿ
ಆ ಊರಿಂದಲೇ ಹೊರಟಿದ್ದರು. ಅಲ್ಲಿ ಸಭೆಯನ್ನು

1) ದ್ಯಾಸ್‌ದೇವರು ಅಂದರೆ ಸ್ವರ್ಗಾಧಿಪತಿ. 2) ಹೆರ್ಮೆದೇವರು ಅಂದರೆ ಬೃಹಸ್ಪತಿ.

ಕೂಡಿಸಿ ದೇವರು ತವ್ಮೊಂದಿಗಿದ್ದು ಮಾಡಿದ್ದೆಲ್ಲವನ್ನೂ
ಆತನು ಅನ್ಯಜನರಿಗೆ ನಂಬಿಕೆಯ ಬಾಗಿಲನ್ನು ತೆರೆದ
ದ್ದನ್ನೂ ವಿವರವಾಗಿ ಹೇಳಿದರು. ತರುವಾಯ ಅವರು
ಅಲ್ಲಿ ಶಿಷ್ಯರ ಸಂಗಡ ಬಹುಕಾಲ ಇದ್ದರು.

ಯೆಹೂದ್ಯರಲ್ಲದ ಕ್ರೈಸ್ತರಿಗೆ ಸುನ್ನತಿ ಮೊದಲಾದ ಯೆಹೂದ್ಯ
ಆಚಾರಗಳು ಅವಶ್ಯವಲ್ಲವೆಂದು ತೀರ್ಮಾನವಾದದ್ದು.

5 ಬಳಿಕ ಕೆಲವರು ಯೂದಾಯದಿಂದ ಅಂತಿ
ಯೋಕ್ಯಕ್ಕೆ ಬಂದು — ನೀವು ಮೋಶೆಯ ಗ್ರಂಥದಲ್ಲಿ
ಹೇಳಿರುವ ನೇಮದ ಪ್ರಕಾರ ಸುನ್ನತಿಮಾಡಿಸಿಕೊಳ್ಳ
ದಿದ್ದರೆ ನಿಮಗೆ ರಕ್ಷಣೆಯಾಗಲಾರದು ಎಂಬದಾಗಿ
ಸಹೋದರರಿಗೆ ಉಪದೇಶಮಾಡುತ್ತಿದ್ದರು. ಅವರಿಗೂ
ಪೌಲ ಬಾರ್ನಬರಿಗೂ ಭೇದವೂ ಮಹಾ ವಿವಾದವೂ
ಉಂಟಾದಾಗ ಇದರ ವಿಷಯವಾಗಿ ಸಹೋದರರು
ಪೌಲ ಬಾರ್ನಬರನ್ನೂ ತಮ್ಮಲ್ಲಿ ಬೇರೆ ಕೆಲವರನ್ನೂ
ಯೆರೂಸಲೇಮಿನಲ್ಲಿದ್ದ ಅಪೊಸ್ತಲರ ಮತ್ತು ಸಭೆಯ
ಹಿರಿಯರ ಬಳಿಗೆ ಹೋಗಬೇಕೆಂದು ನೇಮಿಸಿದರು.
ಸಭೆಯವರು ಅವರನ್ನು ಸಾಗಕಳುಹಿಸಿದ ಮೇಲೆ
ಅವರು ಫೊಯಿನಿಕೆ ಸಮಾರ್ಯ ಸೀಮೆಗಳನ್ನು ಹಾದು
ಹೋಗುತ್ತಿರುವಾಗ ಅನ್ಯಜನರು ಕರ್ತನ ಕಡೆಗೆ ತಿರುಗಿ
ಕೊಂಡ ಸಂಗತಿಯನ್ನು ಅಲ್ಲಿದ್ದ ಸಹೋದರರಿಗೆ ವಿವರ
ವಾಗಿ ಹೇಳಿ ಅವರೆಲ್ಲರನ್ನು ಬಹಳವಾಗಿ ಸಂತೋಷ
ಪಡಿಸಿದರು. ಅವರು ಯೆರೂಸಲೇಮಿಗೆ ಬಂದ ಮೇಲೆ
ಸಭೆಯವರೂ ಅಪೊಸ್ತಲರೂ ಸಭೆಯ ಹಿರಿಯರೂ ಅವ
ರನ್ನು ಸೇರಿಸಿಕೊಂಡಾಗ ದೇವರು ತವ್ಮೊಂದಿಗಿದ್ದು
ಮಾಡಿದ ಕಾರ್ಯಗಳನ್ನೆಲ್ಲಾ ಅವರಿಗೆ ತಿಳಿಸಿದರು.
ಆದರೆ ಫರಿಸಾಯ ಮತದವರಲ್ಲಿ ಯೇಸುವನ್ನು
ನಂಬಿದ್ದ ಕೆಲವರು ಎದ್ದು — ದೇವರ ಕಡೆಗೆ ತಿರುಗಿ
ಕೊಂಡಿರುವ ಅನ್ಯಜನರಿಗೆ ಸುನ್ನತಿಮಾಡಿಸಬೇಕು,
ಮತ್ತು ಮೋಶೆಯ ಧರ್ಮಶಾಸ್ತ್ರವನ್ನು ಕೈಕೊಂಡು
ನಡೆಯುವದಕ್ಕೆ ಅವರಿಗೆ ಅಪ್ಪಣೆಕೊಡಬೇಕು ಎಂದು
ಹೇಳಿದರು. ಅಪೊಸ್ತಲರೂ ಸಭೆಯ ಹಿರಿಯರೂ ಈ
ವಿಷಯವನ್ನು ಕುರಿತು ಆಲೋಚಿಸುವದಕ್ಕೆ ಕೂಡಿ
ಬಂದಿರುವಾಗ ಬಹು ವಿವಾದವು ನಡೆದ ಮೇಲೆ
ಪೇತ್ರನು ಎದ್ದು ಅವರಿಗೆ —
ಸಹೋದರರೇ, ಅನ್ಯಜನರು ನನ್ನ ಬಾಯಿಂದ
ಸುವಾರ್ತೆಯ ವಾಕ್ಯವನ್ನು ಕೇಳಿ ನಂಬಬೇಕೆಂದು
ದೇವರು ಬಹಳ ದಿವಸಗಳ ಕೆಳಗೆ ನಿಮ್ಮೊಳಗಿಂದ
ನನ್ನನ್ನು ಆರಿಸಿಕೊಂಡದ್ದು ನಿಮಗೇ ತಿಳಿದದೆ. ಮತ್ತು
ಹೃದಯವನ್ನು ಬಲ್ಲವನಾಗಿರುವ ದೇವರು ಹೇಗೆ
ಪವಿತ್ರಾತ್ಮವರವನ್ನು ನಮಗೆ ದಯಪಾಲಿಸಿದನೋ
ಹಾಗೆಯೇ ಅವರಿಗೂ ದಯಪಾಲಿಸಿ ಅವರನ್ನು ತನ್ನ
ಜನರೆಂದು ಸಾಕ್ಷಿಕೊಟ್ಟನು. ಇದಲ್ಲದೆ ಆತನು
ನಮಗೂ ಅವರಿಗೂ ಏನೂ ಭೇದಮಾಡದೆ ಅವರ ಹೃದ
ಯಗಳನ್ನೂ ನಂಬಿಕೆಯ ಮೂಲಕವಾಗಿ ಶುದ್ಧೀಕರಿ
ಸಿದನು. ಹೀಗಿರುವದರಿಂದ ನಮ್ಮ ಪಿತೃಗಳಾಗಲಿ
ನಾವಾಗಲಿ ಹೊರಲಾರದ ನೊಗವನ್ನು ನೀವು ಶಿಷ್ಯರ
ಹೆಗಲಿನ ಮೇಲೆ ಹಾಕಿ ದೇವರನ್ನು ಪರೀಕ್ಷಿಸುವದು
ಯಾಕೆ? ಕರ್ತನಾದ ಯೇಸುವಿನ ಕೃಪೆಯಿಂದಲೇ
ನಾವು ರಕ್ಷಣೆ ಹೊಂದುವೆವೆಂಬದಾಗಿ ನಂಬುತ್ತೇವಲ್ಲಾ;
ಹಾಗೆಯೇ ಅವರೂ ಹೊಂದುವರು ಎಂದು ಹೇಳಿದನು.
ಗುಂಪುಕೂಡಿದ್ದವರೆಲ್ಲರು ಈ ಮಾತುಗಳನ್ನು ಕೇಳಿ 12
ಮೌನವಾಗಿದ್ದು ಬಾರ್ನಬನೂ ಪೌಲನೂ ತಮ್ಮ
ಮೂಲಕವಾಗಿ ದೇವರು ಅನ್ಯಜನರಲ್ಲಿ ಮಾಡಿದ್ದ ಎಲ್ಲಾ
ಸೂಚಕಕಾರ್ಯಗಳನ್ನೂ ಅದ್ಭುತಕಾರ್ಯಗಳನ್ನೂ
ವಿವರಿಸುವದನ್ನು ಕಿವಿಗೊಟ್ಟು ಕೇಳಿದರು. ಅವರು 13
ಮಾತಾಡುವದನ್ನು ಮುಗಿಸಿದ ಮೇಲೆ ಯಾಕೋ
ಬನು ಆ ಪ್ರಸ್ತಾಪವನ್ನು ಹಿಡಿದು ಹೇಳಿದ್ದೇನಂದರೆ —
ಸಹೋದರರೇ, ನಾನು ಹೇಳುವದನ್ನು ಕೇಳಿರಿ — 14
ದೇವರು ಮೊದಲಲ್ಲಿ ಅನ್ಯಜನರನ್ನು ಕಟಾಕ್ಷಿಸಿನೋಡಿ
ತನ್ನ ಹೆಸರಿಗಾಗಿ ಅವರೊಳಗಿಂದ ಒಂದು ಪ್ರಜೆಯನ್ನು
ಆರಿಸಿಕೊಂಡ ವಿಧವನ್ನು ಸಿಮೆಯೋನನು ವಿವರಿಸಿ
ದನಷ್ಟೆ. ಇದಕ್ಕೆ ಪ್ರವಾದಿಗಳ ಮಾತುಗಳೂ ಒಪ್ಪು 15
ತ್ತವೆ. ಹೇಗಂದರೆ —
ಇದಾದ ಮೇಲೆ ನಾನು ಹಿಂತಿರುಗಿ ಬಂದು 16
ದಾವೀದನ ಬಿದ್ದುಹೋಗಿರುವ ಗುಡಾರವನ್ನು
ಎತ್ತುವೆನು.
ಅದರಲ್ಲಿ ಹಾಳಾದದ್ದನ್ನು ನಾನು ಸರಿಮಾಡಿಸಿ
ಅದನ್ನು ನೆಟ್ಟಗೆ ನಿಲ್ಲಿಸುವೆನು.
ಮನುಷ್ಯಜಾತಿಯ ಉಳಿದ ಜನಗಳೂ 17
ಅಂದರೆ ದೇವಜನರೆನಿಸಿಕೊಳ್ಳುವ ಸಕಲ
ಜನಾಂಗಗಳೂ
ಕರ್ತನನ್ನು ಹುಡುಕುವವರಾಗಿರಬೇಕೆಂದು
ಆದಿಯಿಂದ ಈ ಕಾರ್ಯಗಳನ್ನು ತಿಳಿಯಪಡಿ 18
ಸುವ ಕರ್ತನು ನುಡಿಯುತ್ತಾನೆ
ಎಂದು ಬರೆದದೆ. ಹೀಗಿರಲಾಗಿ ನನ್ನ ಅಭಿಪ್ರಾಯ ಏನಂ 19
ದರೆ — ಅನ್ಯಜನರಲ್ಲಿ ದೇವರ ಕಡೆಗೆ ತಿರುಗಿಕೊಳ್ಳುವವ
ರನ್ನು ತೊಂದರೆಪಡಿಸಬಾರದು. ಆದರೆ ವಿಗ್ರಹಕ್ಕೆ 20
ನೈವೇದ್ಯಮಾಡಿದ್ದನ್ನೂ ಹಾದರವನ್ನೂ ಕುತ್ತಿಗೆಹಿಸುಕಿ
ಕೊಂದದ್ದನ್ನೂ ರಕ್ತವನ್ನೂ ವಿಸರ್ಜಿಸಬೇಕೆಂದು ನಾವು
ಅವರಿಗೆ ಕಾಗದವನ್ನು ಬರೆದು ಅಪ್ಪಣೆಕೊಡೋಣ.
ಯಾಕಂದರೆ ಪುರಾತನಕಾಲದಿಂದ ಎಲ್ಲಾ ಪಟ್ಟಣಗಳಲ್ಲಿ 21
ಮೋಶೆಯ ಗ್ರಂಥವನ್ನು ಬೋಧಿಸುವವರು ಇದ್ದಾರೆ;
ಅದು ಪ್ರತಿ ಸಬ್ಬತ್‌ದಿನವೂ ಸಭಾಮಂದಿರಗಳಲ್ಲಿ
ಪಾರಾಯಣವಾಗುತ್ತದಲ್ಲಾ ಎಂದು ಹೇಳಿದನು.
ಆಗ ಅಪೊಸ್ತಲರೂ ಸಭೆಯ ಹಿರಿಯರೂ ಸರ್ವ 22
ಸಭೆಯ ಸಮ್ಮತಿಯಿಂದ ತಮ್ಮಲ್ಲಿ ಕೆಲವರನ್ನು ಆರಿಸಿ
ಕೊಂಡು ಪೌಲ ಬಾರ್ನಬರ ಜೊತೆಯಲ್ಲಿ ಅಂತಿಯೋ
ಕ್ಯಕ್ಕೆ ಕಳುಹಿಸುವದು ಯುಕ್ತವೆಂದು ತೀರ್ಮಾನಿಸಿ
ದರು. ಆದಕಾರಣ ಸಹೋದರರಲ್ಲಿ ಮುಖ್ಯರಾಗಿದ್ದ
ಬಾರ್ಸಬ್ಬನೆನಿಸಿಕೊಳ್ಳುವ ಯೂದನನ್ನೂ ಸೀಲ
ನನ್ನೂ ಆರಿಸಿಕೊಂಡು ಅವರ ಕೈಯಲ್ಲಿ ಬರೆದು 23
ಕೊಟ್ಟದ್ದೇನಂದರೆ — ಸಹೋದರರಾಗಿರುವ ಅಪೊಸ್ತ
ಲರೂ ಹಿರಿಯರೂ ಅಂತಿಯೋಕ್ಯ ಸಿರಿಯ ಕಿಲಿಕ್ಯ
ಸೀಮೆಗಳಲ್ಲಿ ವಾಸಿಸುವ ಅನ್ಯಜನರೊಳಗಿಂದ ಸಹೋ
ದರರಾದವರಿಗೆ ಮಾಡುವ ವಂದನೆ; ಅದಾಗಿ ನಮ್ಮೊಳ 24
ಗಿಂದ ಹೋದ ಕೆಲವರು ನಮ್ಮಿಂದ ಏನೂ ಅಪ್ಪಣೆ
ಹೊಂದದೆ ತಮ್ಮ ಮಾತುಗಳಿಂದ ನಿಮ್ಮಲ್ಲಿ ಅಸಮಾ
ಧಾನವನ್ನು ಹುಟ್ಟಿಸಿ ನಿಮ್ಮ ಮನಸ್ಸುಗಳನ್ನು ಕಳ

ವಳಗೊಳಿಸಿದ್ದಾರೆಂಬದನ್ನು ಕೇಳಿದ್ದರಿಂದ ನಾವು ಕೆಲ
25-26 ವರನ್ನು ಆರಿಸಿಕೊಂಡು ನಮ್ಮ ಕರ್ತನಾದ ಯೇಸು
ಕ್ರಿಸ್ತನ ಹೆಸರಿನ ನಿಮಿತ್ತ ಜೀವದ ಹಂಗನ್ನು ತೊರೆದವ
ರಾದ ನಮ್ಮ ಪ್ರಿಯ ಬಾರ್ನಬ ಪೌಲರ ಜೊತೆಯಲ್ಲಿ
ನಿಮ್ಮ ಬಳಿಗೆ ಕಳುಹಿಸಿಕೊಡುವದು ಯುಕ್ತವೆಂದು
27 ನಾವೆಲ್ಲರೂ ಏಕಮನಸ್ಸಾಗಿ ತೀರ್ಮಾನಿಸಿದೆವು. ಆದ
ದರಿಂದ ಯೂದನನ್ನೂ ಸೀಲನನ್ನೂ ಕಳುಹಿಸಿದ್ದೇವೆ.
ಅವರು ಈ ಸಂಗತಿಗಳನ್ನು ಬಾಯಿಮಾತಿನಿಂದಲೂ
28-29 ನಿಮಗೆ ತಿಳಿಸುವರು. ವಿಗ್ರಹಕ್ಕೆ ನೈವೇದ್ಯಮಾಡಿ
ದ್ದನ್ನೂ ರಕ್ತವನ್ನೂ ಕುತ್ತಿಗೆಹಿಸುಕಿ ಕೊಂದದ್ದನ್ನೂ
ಹಾದರವನ್ನೂ ವಿಸರ್ಜಿಸುವದು ಅವಶ್ಯವಾಗಿದೆ. ಇದಕ್ಕೆ
ಹೆಚ್ಚಿನ ಭಾರವನ್ನು ನಿಮ್ಮ ಮೇಲೆ ಹಾಕಬಾರದೆಂದು
ಪವಿತ್ರಾತ್ಮನಿಗೂ ನಮಗೂ ವಿಹಿತವಾಗಿ ತೋರಿತು.
ನೀವು ಎಚ್ಚರವಾಗಿದ್ದು ಇವುಗಳ ಗೊಡವೆಗೆ ಹೋಗ
ದಿದ್ದರೆ ನಿಮಗೆ ಒಳ್ಳೇದಾಗುವದು. ಶುಭವಾಗಲಿ.
30 ಅವರು ಅಪ್ಪಣೆ ತೆಗೆದುಕೊಂಡು ಅಂತಿಯೋಕ್ಯಕ್ಕೆ
ಬಂದು ಮಂಡಲಿಯನ್ನು ಕೂಡಿಸಿ ಆ ಕಾಗದವನ್ನು
31 ಅವರಿಗೆ ಒಪ್ಪಿಸಿದರು. ಅವರು ಓದಿ ಅದರಿಂದ ಧೈರ್ಯ
32 ತಂದುಕೊಂಡು ಸಂತೋಷಪಟ್ಟರು. ಯೂದನೂ
ಸೀಲನೂ ತಾವೇ ಪ್ರವಾದಿಗಳಾಗಿದ್ದದರಿಂದ ಸಹೋದರ
ರನ್ನು ಅನೇಕ ಮಾತುಗಳಿಂದ ಪ್ರಬೋಧಿಸಿ ದೃಢಪಡಿ
33 ಸಿದರು. ಅಲ್ಲಿ ಕೆಲವು ಕಾಲ ಕಳೆದನಂತರ ತಮ್ಮನ್ನು
ಕಳುಹಿಸಿದ್ದವರ ಬಳಿಗೆ ತಿರಿಗಿ ಹೋಗುವದಕ್ಕೆ ಸಹೋ
35 ದರರಿಂದ ಅಪ್ಪಣೆ ತೆಗೆದುಕೊಂಡರು[1]. ಆದರೆ ಪೌಲ
ನೂ ಬಾರ್ನಬನೂ ಅಂತಿಯೋಕ್ಯದಲ್ಲಿಯೇ ನಿಂತು
ಬೇರೆ ಅನೇಕರೊಂದಿಗೆ ಉಪದೇಶಮಾಡುತ್ತಾ ಕರ್ತನ
ವಾಕ್ಯವೆಂಬ ಸುವಾರ್ತೆಯನ್ನು ಸಾರುತ್ತಾ ಇದ್ದರು.

ಸುವಾರ್ತೆಯನ್ನು ಸಾರುವದಕ್ಕೆ ಪೌಲನು ಮಾಡಿದ ಎರಡನೆಯ
ಪ್ರಯಾಣವನ್ನು ಕುರಿತದ್ದು (15. 36—18. 22).
ಬಾರ್ನಬ ಮಾರ್ಕರು ಕುಪ್ರದ್ವೀಪಕ್ಕೆ ಬೇರೆ ಹೋದದ್ದು.

36 ಕೆಲವು ದಿವಸಗಳಾದ ಮೇಲೆ ಪೌಲನು ಬಾರ್ನಬ
ನಿಗೆ—ನಾವು ಕರ್ತನ ವಾಕ್ಯವನ್ನು ಸಾರಿದ ಎಲ್ಲಾ
ಊರುಗಳಿಗೆ ತಿರಿಗಿ ಹೋಗಿ ಅಲ್ಲಿರುವ ಸಹೋದರರು
ಹೇಗಿದ್ದಾರೆಂದು ನೋಡೋಣ ಬಾ ಎಂದು ಹೇಳಿದನು.
37 ಬಾರ್ನಬನು ಮಾರ್ಕನೆನಿಸಿಕೊಳ್ಳುವ ಯೋಹಾನ
38 ನನ್ನು ತಮ್ಮ ಸಂಗಡ ಕರೆದುಕೊಂಡುಹೋಗಬೇಕೆಂದಿ
ದ್ದಾಗ ಪೌಲನು—ನಮ್ಮೊಂದಿಗೆ ಕೆಲಸಕ್ಕೆ ಬಾರದೆ
ಪಂಫುಲ್ಯದಲ್ಲಿ ನಮ್ಮನ್ನು ಬಿಟ್ಟವನನ್ನು ಕರೆದು
ಕೊಂಡು ಹೋಗುವದು ತಕ್ಕದ್ದಲ್ಲವೆಂದು ನೆನಸಿದನು.
39 ಈ ವಿಷಯದಲ್ಲಿ ತೀಕ್ಷ್ಣ ವಾಗ್ವಾದವುಂಟಾಗಿ ಅವರು
ಒಬ್ಬರನ್ನೊಬ್ಬರು ಅಗಲಿದರು. ಬಾರ್ನಬನು ಮಾರ್ಕ
ನನ್ನು ಕರಕೊಂಡು ಸಮುದ್ರಮಾರ್ಗವಾಗಿ ಕುಪ್ರ
40 ದ್ವೀಪಕ್ಕೆ ಹೋದನು. ಪೌಲನು ಸೀಲನನ್ನು ಆರಿಸಿ
ಕೊಂಡು ಸಹೋದರರಿಂದ ಕರ್ತನ ಕೃಪಾಶ್ರಯಕ್ಕೆ
41 ಒಪ್ಪಿಸಲ್ಪಟ್ಟವನಾಗಿ ಹೊರಟು ಸಿರಿಯ ಕಿಲಿಕ್ಯ ಸೀಮೆ
ಗಳಲ್ಲಿ ಸಂಚರಿಸುತ್ತಾ ಸಭೆಗಳನ್ನು ದೃಢಪಡಿಸಿದನು.

ಪೌಲನು ತಿಮೊಥೆಯನನ್ನು ಕೂಡಿಸಿಕೊಂಡದ್ದು; ಕನಸಿನ
ಯಿಂದ ಮಕೆದೋನ್ಯಕ್ಕೆ ಹೋದದ್ದು.

ಆ ಮೇಲೆ ಅವನು ದೆರ್ಬೆಗೂ ಲುಸ್ತ್ರಕ್ಕೂ
ಬಂದನು. ಲುಸ್ತ್ರದಲ್ಲಿ ತಿಮೊಥೆಯನೆಂಬ ಒಬ್ಬ
ಶಿಷ್ಯನಿದ್ದನು. ಅವನು ಕ್ರಿಸ್ತನನ್ನು ನಂಬಿದ್ದ ಒ
ಯೆಹೂದ್ಯ ಸ್ತ್ರೀಯ ಮಗನು. ಅವನ ತಂದೆ ಗ್ರೀಕ
ಅವನ ವಿಷಯವಾಗಿ ಲುಸ್ತ್ರದಲ್ಲಿಯೂ ಇಕೋನ್ಯದ
ಯೂ ಇದ್ದ ಸಹೋದರರು ಒಳ್ಳೇ ಸಾಕ್ಷಿಹೇಳ
ದ್ದರು. ಅವನು ತನ್ನ ಸಂಗಡ ಬರಬೇಕೆಂದು ಪೌಲ
ಅಪೇಕ್ಷಿಸಿ ಆಯಾ ಸ್ಥಳಗಳಲ್ಲಿದ್ದ ಯೆಹೂದ್ಯರ ನಿ
ತ್ತವಾಗಿ ಅವನಿಗೆ ಸುನ್ನತಿ ಮಾಡಿಸಿದನು. ಯಾ
ದರೆ ಅವನ ತಂದೆ ಗ್ರೀಕನೆಂದು ಎಲ್ಲರಿಗೂ ಗೊತ್ತಿತ
ಬಳಿಕ ಅವರು ಊರೂರುಗಳಲ್ಲಿ ಸಂಚಾರಮಾಡುತ್ತಿ
ವಾಗ ಯೆರೂಸಲೇಮಿನಲ್ಲಿದ್ದ ಅಪೊಸ್ತಲರೂ ಸಭೆ
ಹಿರಿಯರೂ ನಿರ್ಣಯಿಸಿದ್ದ ವಿಧಿಗಳನ್ನು ಅವ
ಒಪ್ಪಿಸಿ ಇವುಗಳನ್ನು ನೀವು ಅನುಸರಿಸಿ ನಡೆಯ
ಕೆಂದು ಬೋಧಿಸಿದರು. ಸಭೆಗಳು ಕ್ರಿಸ್ತನಂ
ಯಲ್ಲಿ ದೃಢವಾಗುತ್ತಾ ಸಂಖ್ಯೆಯಲ್ಲಿ ದಿನೇ ದಿ
ಹೆಚ್ಚುತ್ತಾ ಬಂದವು.

ಆಸ್ಯಸೀಮೆಯಲ್ಲಿ ವಾಕ್ಯವನ್ನು ಹೇಳಬಾರದೆಂ
ಪವಿತ್ರಾತ್ಮನು ತಡೆದದ್ದರಿಂದ ಅವರು ಫ್ರುಗ್ಯಗಲಾ
ಸೀಮೆಯನ್ನು ಹಾದುಹೋಗಿ ಮೂಸ್ಯಕ್ಕೆ ಎದುರಾ
ಬಂದಾಗ ಬಿಥೂನ್ಯಕ್ಕೆ ಹೋಗುವ ಪ್ರಯತ್ನಮಾಡಿದರ
ಅಲ್ಲಿಯೂ ಯೇಸುವಿನ ಆತ್ಮನು ಅವರನ್ನು ಹೋ
ಗೊಡಿಸಲಿಲ್ಲ. ಆಗ ಅವರು ಮೂಸ್ಯವನ್ನು ಸುಮ್
ದಾಟಿ ತ್ರೋವಕ್ಕೆ ಬಂದರು. ಅಲ್ಲಿ ರಾತ್ರಿಕಾಲದ
ಪೌಲನಿಗೆ ಒಂದು ದರ್ಶನವಾಯಿತು, ಏನಂದರೆ-
ಮಕೆದೋನ್ಯ ದೇಶದವನಾದ ಒಬ್ಬ ಮನುಷ್ಯನು ನಿಂ
ಕೊಂಡು—ನೀನು ಸಮುದ್ರವನ್ನು ದಾಟಿ ಮಕೆದೋ
ನ್ಯಕ್ಕೆ ಬಂದು ನಮಗೆ ನೆರವಾಗಬೇಕೆಂದು ಅವನನ
ಬೇಡಿಕೊಳ್ಳುತ್ತಿದ್ದನು. ಅವನಿಗೆ ಆ ದರ್ಶನವಾ
ಮೇಲೆ ಆ ಸೀಮೆಯವರಿಗೆ ಸುವಾರ್ತೆಯನ್ನು ಸಾರು
ದಕ್ಕೆ ದೇವರು ನಮ್ಮನ್ನು ಕರೆದಿದ್ದಾನೆಂದು ನಾವು ನಿ
ಯಿಸಿಕೊಂಡು ಕೂಡಲೆ ಮಕೆದೋನ್ಯಕ್ಕೆ ಹೊರ
ಹೋಗುವ ಪ್ರಯತ್ನಮಾಡಿದೆವು. ನಾವು ತ್ರೋ
ದಿಂದ ಸಮುದ್ರಪ್ರಯಾಣಮಾಡಿ ನೆಟ್ಟಗೆ ಸಮೊಥ್ರಾಕೆ
ಬಂದು ಮರುದಿನ ನೆಯಾಪೊಲಿಗೆ ಸೇರಿ ಅಲ್ಲಿಂದ ಫಿ
ಪ್ಪಿಗೆ ಮುಟ್ಟಿದೆವು.

ಫಿಲಿಪ್ಪಿ ಪಟ್ಟಣದಲ್ಲಿ ಸಭೆಯನ್ನು ಸ್ಥಾಪಿಸಿದ್ದು; ಪೌಲ ಸೀಲ
ಸೆರೆಯಲ್ಲಿ ಬಿದ್ದದ್ದು; ಭೂಕಂಪ ಉಂಟಾಗಿ
ಅವರು ಬಿಡಿಸಲ್ಪಟ್ಟದ್ದು.

ಫಿಲಿಪ್ಪಿ ಎಂಬದು ಮಕೆದೋನ್ಯದಲ್ಲಿ ಪ್ರಧಾ
ಪಟ್ಟಣವೂ ರೋಮಾಪುರದವರ ಒಂದು ಪ್ರವಾಸಸ್ಥಾ
ವೂ ಆಗಿದೆ. ಈ ಪಟ್ಟಣದಲ್ಲಿ ನಾವು ಕೆಲವು ದಿವ

1) ಕೆಲವು ಪ್ರತಿಗಳಲ್ಲಿ 34ನೇ ವಚನ ಉಂಟು; ಅದೇನಂದರೆ—ಆದರೆ ಅಲ್ಲೇ ಇರುವದು ಸೀಲನಿಗೆ ಒಳ್ಳೇದಾಗಿ ತೋಚಿತು ಎ

3 ಇದ್ದೆವು. ನದೀತೀರದಲ್ಲಿ ದೇವರ ಪ್ರಾರ್ಥನೆ ನಡೆ
ಯುವ ಸ್ಥಳ ಇರುವದೆಂದು ನೆನಸಿ ಸಬ್ಬತ್‍ದಿನದಲ್ಲಿ
ಊರಬಾಗಿಲಿನ ಹೊರಗೆ ಹೋಗಿ ಅಲ್ಲಿ ಕೂಡಿಬಂದಿದ್ದ
ಸ್ತ್ರೀಯರ ಸಂಗಡ ಕೂತುಕೊಂಡು ಮಾತಾಡಿದೆವು.
4 ನಮ್ಮ ಮಾತುಗಳನ್ನು ಕೇಳಿದವರಲ್ಲಿ ಲುದ್ಯಳೆಂಬ
ಒಬ್ಬ ಸ್ತ್ರೀಯು ಇದ್ದಳು. ಆಕೆ ಧೂಮ್ರವರ್ಣದ
ವಸ್ತ್ರಗಳನ್ನು ಮಾರುವವಳೂ ಥುವತೈರ ಎಂಬ ಊರಿನ
ವಳೂ ದೇವಭಕ್ತಳೂ ಆಗಿದ್ದಳು. ಪೌಲನು ಹೇಳಿದ
ಮಾತುಗಳಿಗೆ ಲಕ್ಷ್ಯಕೊಡುವದಕ್ಕೆ ಕರ್ತನು ಆಕೆಯ
5 ಹೃದಯವನ್ನು ತೆರೆದನು. ಆಕೆಯೂ ಆಕೆಯ ಮನೆ
ಯವರೂ ದೀಕ್ಷಾಸ್ನಾನಮಾಡಿಸಿಕೊಂಡ ಮೇಲೆ
ಆಕೆ—ನಾನು ಕರ್ತನನ್ನು ನಂಬಿದವಳೆಂದು ನಿಶ್ಚಯಿಸಿ
ಕೊಂಡಿದ್ದರೆ ನನ್ನ ಮನೆಯಲ್ಲಿ ಬಂದು ಇರ್ರಿ ಎಂದು
ಬೇಡಿಕೊಂಡು ನಮ್ಮನ್ನು ಬಲವಂತ ಮಾಡಿದಳು.
6 ಬಳಿಕ ಪ್ರಾರ್ಥನೆ ನಡೆಯುವ ಆ ಸ್ಥಳಕ್ಕೆ ನಾವು
ಹೋಗುತ್ತಿರುವಾಗ ಗಾರುಡಗಾತಿಯಾದ ಒಬ್ಬ ದಾಸಿ
ಯು ನಮ್ಮೆದುರಿಗೆ ಬಂದಳು. ಅವಳು ಕಣಿ ಹೇಳುವ
ದರಿಂದ ಅವಳ ಯಜಮಾನರಿಗೆ ಬಹು ಆದಾಯವಾಗು
7 ತ್ತಿತ್ತು. ಪೌಲನೂ ನಾವೂ ಹೋಗುತ್ತಿರುವಾಗ ಅವಳು
ಹಿಂದೆ ಬಂದು—ಈ ಮನುಷ್ಯರು ಪರಾತ್ಪರನಾದ
ದೇವರ ದಾಸರು; ನಿಮಗೆ ರಕ್ಷಣೆಯ ಮಾರ್ಗವನ್ನು
8 ಸಾರುತ್ತಾರೆ ಎಂದು ಕೂಗುತ್ತಿದ್ದಳು. ಹೀಗೆ ಅನೇಕ
ದಿವಸ ಮಾಡಿದ್ದರಿಂದ ಪೌಲನು ಬಹಳವಾಗಿ ಬೇಸರ
ಗೊಂಡು ಹಿಂತಿರುಗಿ ಆ ದೆವ್ವಕ್ಕೆ—ಅವಳನ್ನು ಬಿಟ್ಟು
ಹೋಗು ಎಂದು ಯೇಸು ಕ್ರಿಸ್ತನ ಹೆಸರಿನಲ್ಲಿ ನಿನಗೆ
ಅಪ್ಪಣೆಕೊಡುತ್ತೇನೆ ಎಂದು ಹೇಳಿದನು. ಅದೇ ಗಳಿಗೆ
ಯಲ್ಲಿಯೇ ಅದು ಬಿಟ್ಟುಹೋಯಿತು.
9 ಅವಳ ಯಜಮಾನರು ತಮ್ಮ ಆದಾಯದ ನಿರೀಕ್ಷೆ
ತಪ್ಪಿತಲ್ಲಾ ಎಂದು ತಿಳಿದು ಪೌಲನನ್ನೂ ಸೀಲನನ್ನೂ
ಹಿಡಿದು ಚಾವಡಿಗೆ ಅಧಿಕಾರಿಗಳ ಬಳಿಗೆ ಎಳಕೊಂಡು
0 ಹೋದರು. ಅವರನ್ನು ಅಧಿಪತಿಗಳ ಮುಂದೆ ತಂದು—
ಈ ಮನುಷ್ಯರು ನಮ್ಮ ಪಟ್ಟಣವನ್ನು ಬಹಳವಾಗಿ
1 ಗಲಿಬಿಲಿ ಮಾಡುತ್ತಾರೆ; ಇವರು ಯೆಹೂದ್ಯರಾಗಿದ್ದು
ರೋಮಾಯರಾದ ನಾವು ಅವಲಂಬಿಸಿ ನಡಿಸಕೂಡ
2 ದಂಥ ಆಚಾರಗಳನ್ನು ಪ್ರಕಟಿಸುತ್ತಾರೆ ಅಂದರು. ಆಗ
ದೊಂಬೀ ಜನರು ಕೂಡಿ ಅವರಿಗೆ ವಿರೋಧವಾಗಿ
ಒಟ್ಟಾಗಿ ಎದ್ದರು; ಮತ್ತು ಅಧಿಪತಿಗಳು—ಇವರ ವಸ್ತ್ರ
ಗಳನ್ನು ಹರಿದು ತೆಗೆದು ಚಡಿಗಳಿಂದ ಹೊಡೆಯಬೇ
3 ಕೆಂದು ಅಪ್ಪಣೆಕೊಟ್ಟರು. ಅವರಿಗೆ ಬಹಳ ಪೆಟ್ಟುಗಳನ್ನು
ಹೊಡಿಸಿದ ಮೇಲೆ ಸೆರೆಮನೆಯೊಳಗೆ ಹಾಕಿಸಿ—ಇವ
ರನ್ನು ಭದ್ರವಾಗಿ ಕಾಯಬೇಕೆಂದು ಸೆರೆಯ ಯಜ
4 ಮಾನನಿಗೆ ಖಂಡಿತವಾಗಿ ಹೇಳಿದರು. ಅವನು ಇಂಥಾ
ಅಪ್ಪಣೆಯನ್ನು ಹೊಂದಿ ಅವರನ್ನು ಸೆರೆಮನೆಯ ಒಳ
ಕೋಣೆಯಲ್ಲಿ ಹಾಕಿ ಅವರ ಕಾಲುಗಳಿಗೆ ಕೋಳವನ್ನು
5 ಹಾಕಿ ಬಿಗಿಸಿದನು. ಮಧ್ಯರಾತ್ರಿಯಲ್ಲಿ ಪೌಲನೂ
ಸೀಲನೂ ಪ್ರಾರ್ಥನೆಮಾಡುವವರಾಗಿ ದೇವರಿಗೆ ಸ್ತುತಿ
ಪದಗಳನ್ನು ಹಾಡುತ್ತಿದ್ದರು; ಸೆರೆಯಲ್ಲಿದ್ದವರು
6 ಲಕ್ಷ್ಯವಿಟ್ಟು ಕೇಳುತ್ತಿದ್ದರು. ಅಕಸ್ಮಾತ್ತಾಗಿ ಮಹಾ
ಭೂಕಂಪವುಂಟಾಯಿತು; ಸೆರೆಮನೆಯ ಅಸ್ತಿವಾರಗಳು
ಕದಲಿದವು. ಅದೇ ಕ್ಷಣದಲ್ಲಿ ಕದಗಳೆಲ್ಲಾ ತೆರೆದವು,
ಎಲ್ಲರ ಬೇಡಿಗಳು ಕಳಚಿಬಿದ್ದವು. ಸೆರೆಯ ಯಜ 27
ಮಾನನು ನಿದ್ದೆಯಿಂದ ಎಚ್ಚತ್ತು ಸೆರೆಮನೆಯ ಕದ
ಗಳು ತೆರೆದಿರುವದನ್ನು ಕಂಡು ಸೆರೆಯಲ್ಲಿದ್ದವರು
ಓಡಿಹೋದರೆಂದು ಭಾವಿಸಿ ಕತ್ತಿಯನ್ನು ಹಿರಿದು ಆತ್ಮ
ಹತ್ಯ ಮಾಡಿಕೊಳ್ಳಬೇಕೆಂದಿದ್ದನು. ಆದರೆ ಪೌಲನು 28
ಮಹಾ ಶಬ್ದದಿಂದ ಕೂಗಿ ಅವನಿಗೆ—ನೀನೇನೂ ಕೇಡು
ಮಾಡಿಕೊಳ್ಳಬೇಡ, ನಾವೆಲ್ಲರೂ ಇಲ್ಲೇ ಇದ್ದೇವೆ ಎಂದು
ಹೇಳಲು ಅವನು—ದೀಪ ತರಬೇಕೆಂದು ಕೂಗಿ 29
ಒಳಕ್ಕೆ ಹಾರಿ ನಡುಗುತ್ತಾ ಪೌಲ ಸೀಲರ ಮುಂದೆ
ಬಿದ್ದನು. ಮತ್ತು ಅವರನ್ನು ಹೊರಗೆ ಕರಕೊಂಡು 30
ಬಂದು—ಸ್ವಾಮಿಗಳೇ, ನಾನು ರಕ್ಷಣೆಹೊಂದುವದಕ್ಕೆ
ಏನು ಮಾಡಬೇಕೆಂದು ಕೇಳಲು ಅವರು—ಕರ್ತನಾದ 31
ಯೇಸುವಿನ ಮೇಲೆ ನಂಬಿಕೆಯಿಡು, ಆಗ ನೀನು
ರಕ್ಷಣೆಹೊಂದುವಿ, ನಿನ್ನ ಮನೆಯವರೂ ರಕ್ಷಣೆಹೊಂ
ದುವರು ಎಂದು ಹೇಳಿ ಅವನಿಗೂ ಅವನ ಮನೆಯಲ್ಲಿದ್ದ
ವರೆಲ್ಲರಿಗೂ ದೇವರ ವಾಕ್ಯವನ್ನು ತಿಳಿಸಿದರು. ಆ 32
ಮೇಲೆ ಅವನು ರಾತ್ರಿಯ ಅದೇ ಗಳಿಗೆಯಲ್ಲಿ ಅವ 33
ರನ್ನು ಕರಕೊಂಡುಹೋಗಿ ಅವರ ಗಾಯಗಳನ್ನು ತೊ
ಳೆದು ಕೂಡಲೆ ತಾನು ತನ್ನವರೆಲ್ಲರ ಸಹಿತವಾಗಿ ದೀಕ್ಷಾ
ಸ್ನಾನಮಾಡಿಸಿಕೊಂಡನು. ತರುವಾಯ ಅವರನ್ನು 34
ತನ್ನ ಮನೆಗೆ ಕರಕೊಂಡುಹೋಗಿ ಊಟಮಾಡಿಸಿದನು.
ಅವನು ತನ್ನ ಮನೆಯವರೆಲ್ಲರ ಸಂಗಡ ನಂಬಿ ಉಲ್ಲಾಸ
ಗೊಂಡನು.
ಬೆಳಗಾದ ಮೇಲೆ ಅಧಿಪತಿಗಳು ಆ ಮನುಷ್ಯರನ್ನು 35
ಬಿಟ್ಟುಬಿಡು ಎಂದು ಜವಾನರ ಕೈಯಲ್ಲಿ ಹೇಳಿಕಳುಹಿಸಿ
ದರು. ಸೆರೇಯಜಮಾನನು ಈ ಮಾತನ್ನು ಪೌಲನಿಗೆ 36
ತಿಳಿಸಿ—ಅಧಿಪತಿಗಳು ನಿಮ್ಮನ್ನು ಬಿಟ್ಟುಬಿಡಬೇಕೆಂದು
ಹೇಳಿಕಳುಹಿಸಿದ್ದಾರೆ, ಆದದರಿಂದ ಈಗ ನೀವು ಸಮಾ
ಧಾನದಿಂದ ಹೊರಟುಹೋಗಿರಿ ಎಂದು ಹೇಳಿದನು.
ಅದಕ್ಕೆ ಪೌಲನು—ಅವರು ವಿಚಾರಣೆಮಾಡದೆ ರೋ 37
ಮಾಪುರದ ಹಕ್ಕುದಾರರಾದ ನಮ್ಮನ್ನು ಎಲ್ಲರ ಮುಂದೆ
ಹೊಡಿಸಿ ಸೆರೆಮನೆಯೊಳಗೆ ಹಾಕಿಸಿದರು; ಈಗ ನಮ್ಮ
ನ್ನು ಗುಪ್ತವಾಗಿ ಹೊರಗೆ ಕಳುಹಿಸುತ್ತಾರೋ? ಹಾಗೆ
ಎಂದಿಗೂ ಆಗಕೂಡದು; ಅವರೇ ಬಂದು ನಮ್ಮನ್ನು
ಹೊರಗೆ ಕರಕೊಂಡುಹೋದರೆ ಸರಿ ಎಂದು ಹೇಳಿ
ದನು. ಜವಾನರು ಈ ಮಾತುಗಳನ್ನು ಅಧಿಪತಿಗಳಿಗೆ 38
ತಿಳಿಸಿದಾಗ ರೋಮಾಪುರದ ಹಕ್ಕುದಾರರು ಎಂಬ ಮಾ
ತನ್ನು ಅವರು ಕೇಳಿ ಭಯಪಟ್ಟರು; ಮತ್ತು ಅವರ 39
ಬಳಿಗೆ ಹೋಗಿ ವಿನಯವಾಗಿ ಮಾತಾಡಿ ಹೊರಕ್ಕೆ ಕರೆ
ದುಕೊಂಡು ಬಂದು—ನೀವು ಊರನ್ನು ಬಿಟ್ಟುಹೋಗ
ಬೇಕೆಂದು ಬೇಡಿಕೊಂಡರು. ಆಗ ಅವರು ಸೆರೆಮನೆ 40
ಯೊಳಗಿಂದ ಹೊರಟು ಲುದ್ಯಳ ಮನೆಗೆ ಬಂದು ಸಹೋ
ದರರನ್ನು ನೋಡಿ ಅವರನ್ನು ಧೈರ್ಯಗೊಳಿಸಿ ಹೊರಟು
ಹೋದರು.

ಥೆಸಲೊನೀಕದಲ್ಲಿ ಪೌಲನು ಸಭೆಯನ್ನು ಸ್ಥಾಪಿಸಿದ ಮೇಲೆ
ಯೆಹೂದ್ಯರು ಅವನನ್ನು ಹೊರಡಿಸಿದ್ದು.

ಮುಂದೆ ಅವರು ಮಾರ್ಗಹಿಡಿದು ಅಂಫಿಪೊಲಿ 17
ಅಪೊಲೋನ್ಯ ಎಂಬ ಊರುಗಳನ್ನು ದಾಟಿ ಥೆಸ

ಲೊನೀಕಕ್ಕೆ ಬಂದರು. ಅಲ್ಲಿ ಯೆಹೂದ್ಯರದೊಂದು
2 ಸಭಾಮಂದಿರವಿತ್ತು. ಪೌಲನು ತನ್ನ ಪದ್ಧತಿಯ
ಪ್ರಕಾರ ಅಲ್ಲಿದ್ದವರ ಬಳಿಗೆ ಹೋಗಿ ಮೂರು ಸಬ್ಬತ್
ದಿನಗಳಲ್ಲಿ ಶಾಸ್ತ್ರಾಧಾರದಿಂದ ಅವರ ಸಂಗಡ ವಾದಿಸಿ
3 ಆಯಾ ವಚನಗಳ ಅರ್ಥವನ್ನು ಬಿಚ್ಚಿ—ಕ್ರಿಸ್ತನು
ಬಾಧೆಯನ್ನನುಭವಿಸಿ ಸತ್ತು ಎದ್ದು ಬರುವದು ಅಗತ್ಯ
ವೆಂತಲೂ ನಾನು ನಿಮಗೆ ಪ್ರಸಿದ್ಧಿಪಡಿಸುವ ಯೇಸುವೇ
4 ಆ ಕ್ರಿಸ್ತನೆಂತಲೂ ಸ್ಥಾಪಿಸಿದನು. ಅವರಲ್ಲಿ ಕೆಲವರೂ
ದೇವಭಕ್ತರಾದ ಗ್ರೀಕರಲ್ಲಿ ದೊಡ್ಡ ಗುಂಪೂ ಪ್ರಮುಖ
ಸ್ತ್ರೀಯರಲ್ಲಿ ಅನೇಕರೂ ಒಡಂಬಟ್ಟು ಪೌಲ ಸೀಲ
5 ರನ್ನು ಸೇರಿಕೊಂಡರು. ಯೆಹೂದ್ಯರು ಹೊಟ್ಟೇ
ಕಿಚ್ಚುಪಟ್ಟು ಪೇಟೆಯಲ್ಲಿ ತಿರುಗಾಡುವ ಕೆಲವು ಪೋಕ
ರನ್ನು ಕರೆದುಕೊಂಡು ಬಂದು ಗುಂಪುಕೂಡಿಸಿ ಊರಲ್ಲಿ
ಗದ್ದಲ ಎಬ್ಬಿಸಿ ಪೌಲ ಸೀಲರನ್ನು ಪಟ್ಟಣದ ಸಭೆಗೆದು
ರಿಗೆ ತರಬೇಕೆಂದು ಅವರನ್ನು ಹುಡುಕುತ್ತಾ ಯಾಸೋ
6 ನನ ಮನೆಯ ಮೇಲೆ ಬಿದ್ದರು. ಅವರು ಸಿಕ್ಕದೆ
ಹೋದದ್ದರಿಂದ ಆ ಜನರು ಯಾಸೋನನನ್ನೂ ಕೆಲವು
ಮಂದಿ ಸಹೋದರರನ್ನೂ ಊರಿನ ಅಧಿಕಾರಿಗಳ ಬಳಿಗೆ
ಎಳಕೊಂಡು ಹೋಗಿ—ಲೋಕವನ್ನು ಅಲ್ಲಕಲ್ಲೋಲ
7 ಮಾಡಿದ ಆ ಮನುಷ್ಯರು ಇಲ್ಲಿಗೂ ಬಂದಿದ್ದಾರೆ, ಯಾ
ಸೋನನು ಅವರನ್ನು ಸೇರಿಸಿಕೊಂಡಿದ್ದಾನೆ, ಅವರೆಲ್ಲರು
ಯೇಸುವೆಂಬ ಬೇರೊಬ್ಬ ಅರಸನು ಇದ್ದಾನೆಂದು
ಹೇಳಿ ಚಕ್ರವರ್ತಿಯ ಆಜ್ಞೆಗಳಿಗೆ ವಿರುದ್ಧವಾಗಿ ನಡೆ
8 ಯುತ್ತಾರೆ ಎಂದು ಕೂಗಿದರು. ಪಟ್ಟಣದವರೂ ಪಟ್ಟ
ಣದ ಅಧಿಕಾರಿಗಳೂ ಈ ಮಾತುಗಳನ್ನು ಕೇಳಿ ಕಳವಳ
9 ಪಟ್ಟು ಯಾಸೋನ ಮೊದಲಾದವರಿಂದ ಹೊಣೆ ತೆಗೆದು
ಕೊಂಡರು; ತೆಗೆದುಕೊಂಡ ಮೇಲೆ ಅವರನ್ನು ಬಿಟ್ಟು
ಬಿಟ್ಟರು.

ಬೆರೋಯ ಊರಿನವರು ದೇವರ ವಾಕ್ಯವನ್ನು ಚೆನ್ನಾಗಿ ಕೇಳಿದ್ದು.
ಥೆಸಲೊನೀಕದವರು ಅಲ್ಲಿಯೂ ಬಂದು ಜನರನ್ನು
ರೇಗಿಸಿದ್ದರಿಂದ ಪೌಲನು ಅಥೇನೆ ಪಟ್ಟಣಕ್ಕೆ
ಹೊರಟುಹೋದದ್ದು.

10 ಕೂಡಲೇ ಸಹೋದರರು ರಾತ್ರಿಯಲ್ಲಿ ಪೌಲ ಸೀಲ
ರನ್ನು ಬೆರೋಯಕ್ಕೆ ಕಳುಹಿಸಿಬಿಟ್ಟರು. ಅವರು
ಅಲ್ಲಿಗೆ ಸೇರಿ ಯೆಹೂದ್ಯರ ಸಭಾಮಂದಿರದೊಳಕ್ಕೆ
11 ಹೋದರು. ಆ ಸಭೆಯವರು ಥೆಸಲೊನೀಕದವರಿಗಿಂತ
ಸದ್ಗುಣವುಳ್ಳವರಾಗಿದ್ದು ದೇವರ ವಾಕ್ಯವನ್ನು ಸಿದ್ಧ
ಮನಸ್ಸಿನಿಂದ ಅಂಗೀಕರಿಸಿ ಇವರು ಹೇಳುವ ಮಾತು
ಹೌದೋ ಏನೋ ಎಂಬ ವಿಷಯದಲ್ಲಿ ಪ್ರತಿದಿನವೂ
12 ಶಾಸ್ತ್ರಗ್ರಂಥಗಳನ್ನು ಶೋಧಿಸುತ್ತಿದ್ದರು. ಹೀಗಿರ
ಲಾಗಿ ಅವರಲ್ಲಿ ಬಹಳ ಮಂದಿ ನಂಬಿದರು; ಅದಲ್ಲದೆ
ಕುಲೀನರಾದ ಗ್ರೀಕ್‌ಹೆಂಗಸರಲ್ಲಿಯೂ ಗಂಡಸರಲ್ಲಿ
13 ಯೂ ಅನೇಕರು ನಂಬಿದರು. ಆದರೆ ಪೌಲನು ಬೆರೋ
ಯದಲ್ಲಿಯೂ ದೇವರ ವಾಕ್ಯವನ್ನು ಪ್ರಸಿದ್ಧಿಪಡಿಸು
ತ್ತಾನೆಂಬ ವರ್ತಮಾನವು ಥೆಸಲೊನೀಕದ ಯೆಹೂದ್ಯ
ರಿಗೆ ತಿಳಿದುಬಂದಾಗ ಅವರು ಅಲ್ಲಿಗೂ ಬಂದು ಜನರ

ಗುಂಪುಗಳನ್ನು ರೇಗಿಸಿ ಕಲಕಿದರು. ಕೂಡಲೇ ಸಹೋ
ದರರು ಪೌಲನನ್ನು ಸಮುದ್ರದ ತನಕ ಹೋಗುವದ
ಕಳುಹಿಸಿಕೊಟ್ಟರು. ಆದರೆ ಸೀಲನೂ ತಿಮೊಥೆಯನ
ಅಲ್ಲೇ ನಿಂತರು. ಪೌಲನನ್ನು ಸಾಗಕಳುಹಿಸಿದವ
ಅವನನ್ನು ಅಥೇನೆಯ ವರೆಗೂ ಕರೆದುಕೊಂಡ
ಹೋಗಿ—ಸೀಲನನ್ನೂ ತಿಮೊಥೆಯನನ್ನೂ ಕೂಡಿ
ಮಟ್ಟಿಗೆ ಬೇಗ ನನ್ನ ಬಳಿಗೆ ಬರಹೇಳಿರಿ ಎಂದು ಅಪ್ಪ
ಯನ್ನು ಅವನಿಂದ ಹೊಂದಿ ಹೊರಟುಬಂದರು.

ಅಥೇನೆ ಪಟ್ಟಣದಲ್ಲಿ ಪೌಲನು ತತ್ವವಿಚಾರಕರಿಗೆ
ಉಪನ್ಯಾಸಮಾಡಿದ್ದು.

ಪೌಲನು ಅವರಿಗೋಸ್ಕರ ಅಥೇನೆಯಲ್ಲಿ ಕಾದ
ಕೊಂಡಿರುವಾಗ ಆ ಪಟ್ಟಣದಲ್ಲಿ ಎಲ್ಲೆಲ್ಲಿಯೂ ವಿಗ್ರ
ಗಳೇ ಇರುವದನ್ನು ನೋಡಿ ಅವನ ಮನಸ್ಸು ಅ
ನೊಳಗೆ ಕುದಿಯಿತು. ಆದದರಿಂದ ಅವನು ಸಭಾ
ಮಂದಿರದಲ್ಲಿ ಯೆಹೂದ್ಯರ ಮತ್ತು 1)ಯೆಹೂದ್ಯ
ಮತಾವಲಂಬಿಗಳ ಸಂಗಡಲೂ ಪ್ರತಿದಿನ ಪೇಟೆಯಲ್ಲಿ
ಕಂಡುಬಂದವರ ಸಂಗಡಲೂ ವಾದಿಸಿದನು. ಇದಲ್ಲದ
ಎಪಿಕೂರಿಯರು ಸ್ತೋಯಿಕರು ಎಂಬ ತತ್ವವಿಚಾರ
ಕರಲ್ಲಿ ಕೆಲವರು ಅವನ ಸಂಗಡ ಚರ್ಚೆಮಾಡಿದರು
ಅವರಲ್ಲಿ ಕೆಲವರು—ಈ ಮಾತಾಳಿ ಏನು ಹೇಳಬೇ
ಕೆಂದಿದ್ದಾನೆ? ಅಂದರು. ಅವನು ಯೇಸುವಿನ ವಿಷಯ
ವಾಗಿಯೂ ಸತ್ತವರು ಎದ್ದುಬರುವರೆಂಬುವ ವಿಷಯ
ವಾಗಿಯೂ ಸಾರುತ್ತಿದ್ದರಿಂದ—ಇವನು ಅನ್ಯದೇಶದ ದೈ
ವಗಳನ್ನು ಪ್ರಸಿದ್ಧಿಪಡಿಸುವವನಾಗಿ ತೋರುತ್ತಾನೆಂದು
ಬೇರೆ ಕೆಲವರು ಹೇಳಿದರು. ಅವರು ಅವನನ್ನು ಹಿಡಿದು
2)ಅರಿಯೊಪಾಗಕ್ಕೆ ಕರೆದುಕೊಂಡು ಹೋಗಿ—ನೀನು
ಹೇಳುವ ಈ ನೂತನತರವಾದ ಉಪದೇಶವನ್ನು ನಾವು
ತಿಳಿಯಬಹುದೇ? ಅಪೂರ್ವವಾದ ಸಂಗತಿಗಳನ್ನು
ನಮಗೆ ಶ್ರುತಪಡಿಸುತ್ತೀಯಲ್ಲಾ; ಆದಕಾರಣ ಅವೇನಿ
ದ್ದಾವು ತಿಳಿಯಬೇಕೆಂದು ನಮಗೆ ಅಪೇಕ್ಷೆಯದೆ
ಅಂದರು. ಅಥೇನೆಯರೂ ಅಲ್ಲಿ ವಾಸವಾಗಿದ್ದ ಪರ
ಸ್ಥಳದವರೂ ಹೊಸ ಹೊಸ ಸಂಗತಿಗಳನ್ನು ಹೇಳುವದ
ಕ್ಕೂ ಕೇಳುವದಕ್ಕೂ ಹೊರತು ಬೇರೆ ಯಾವದಕ್ಕೂ
ಸಮಯ ಕೊಡುತ್ತಿರಲಿಲ್ಲ. ಪೌಲನು ಅರಿಯೊಪಾಗದ
ಮಧ್ಯದಲ್ಲಿ ನಿಂತುಕೊಂಡು ಹೇಳಿದ್ದೇನಂದರೆ—
ಅಥೇನೆಯ ಜನರೇ, ನೀವು ಎಲ್ಲಾದರಲ್ಲೂ ಅತಿ
ಭಕ್ತಿವಂತರೆಂದು ನನಗೆ ತೋರುತ್ತದೆ. ನಾನು ನಿಮ್ಮ
ಪಟ್ಟಣದಲ್ಲಿ ತಿರುಗಾಡುತ್ತಾ ನೀವು ಪೂಜಿಸುವ ದೇವ
ತಾಪ್ರತಿಮೆಗಳನ್ನು ಚೆನ್ನಾಗಿ ನೋಡುತ್ತಾ ಇದ್ದಾಗ
ಒಂದು ಬಲಿಪೀಠವು ನನ್ನ ಕಣ್ಣಿಗೆ ಬಿತ್ತು; ಅದರ ಮೇಲೆ
ತಿಳಿಯದ ದೇವರಿಗೆ ಎಂದು ಬರೆದಿತ್ತು. ಆದಕಾರಣ
ನೀವು ಯಾವದನ್ನು ತಿಳಿಯದೆ ಪೂಜಿಸುತ್ತೀರೋ
ಅದನ್ನೇ ನಿಮಗೆ ತಿಳಿಯಪಡಿಸುತ್ತೇನೆ, ಕೇಳಿರಿ. ಜಗ
ತ್ತನ್ನೂ ಅದರಲ್ಲಿರುವ ಎಲ್ಲಾ ವಸ್ತುಗಳನ್ನೂ ಉಂಟು
ಮಾಡಿದ ದೇವರು ಭೂಮ್ಯಾಕಾಶಗಳ ಒಡೆಯನಾಗಿ
ರುವದರಿಂದ ಆತನು ಕೈಯಿಂದ ಕಟ್ಟಿರುವ ಗುಡಿಗ

1) ಮೂಲ: ದೇವಭಕ್ತರ. 2) ಅಂದರೆ, ಹಿರೀಸಭೆಯು ಕೂಡುವ ಸ್ಥಳಕ್ಕೆ.

25 ಇಲ್ಲಿ ವಾಸಮಾಡುವವನಲ್ಲ; ತಾನೇ ಎಲ್ಲರಿಗೂ ಜೀವ
ಶ್ವಾಸ ಮುಂತಾದದ್ದೆಲ್ಲವನ್ನೂ ಕೊಡುವವನಾಗಿರ
ಲಾಗಿ ಕೊರತೆಯಿದ್ದವನಂತೆ ಮನುಷ್ಯರ ಕೈಗಳಿಂದ
26 ಸೇವೆಹೊಂದುವವನೂ ಅಲ್ಲ. ಆತನು ಒಬ್ಬನಿಂದಲೇ
ಎಲ್ಲಾ ಜನಾಂಗದವರನ್ನು ಹುಟ್ಟಿಸಿ ಅವರವರು ಇರ
ತಕ್ಕ ಕಾಲಗಳನ್ನೂ ಅವರವರ ನಿವಾಸಗಳ ಮೇರೆಗಳ
ನ್ನೂ ನಿಷ್ಕರ್ಷಿಸಿ ಭೂಮಂಡಲದಲ್ಲೆಲ್ಲಾ ವಾಸಮಾಡಿಸಿ
27 ಒಂದು ವೇಳೆ ಅವರು ತಡವಾಡಿ ಕಂಡುಕೊಂಡಾರೇನೋ
ಎಂದು ತನ್ನನ್ನು ಹುಡುಕುವವರನ್ನಾಗಿ ಮಾಡಿದನು.
ಆತನು ನಮ್ಮಲ್ಲಿ ಒಬ್ಬನಿಗೂ ದೂರವಾದವನಲ್ಲ.
28 ಆತನಲ್ಲಿಯೇ ನಾವು ಜೀವಿಸುತ್ತೇವೆ, ಚಲಿಸುತ್ತೇವೆ,
ಇರುತ್ತೇವೆ. ನಿಮ್ಮ ಕವಿಗಳಲ್ಲಿಯೂ ಕೆಲವರು—
ನಾವು ಆತನ ಸಂತಾನದವರೇ ಎಂಬದಾಗಿ ಹೇಳಿದ್ದಾರೆ.
29 ನಾವು ದೇವರ ಸಂತಾನದವರಾಗಿದ್ದ ಮೇಲೆ ದೈವವು
ಮನುಷ್ಯನ ಶಿಲ್ಪವಿದ್ಯೆಯಿಂದಲೂ ಕಲ್ಪನೆಯಿಂದಲೂ
ಕೆತ್ತಿರುವ ಚಿನ್ನ ಬೆಳ್ಳಿ ಕಲ್ಲುಗಳಿಗೆ ಸಮಾನವೆಂದು
30 ನಾವು ಭಾವಿಸಬಾರದು. ಆ ಅಜ್ಞಾನಕಾಲಗಳನ್ನು
ದೇವರು ಲಕ್ಷ್ಯಕ್ಕೆ ತರಲಿಲ್ಲ; ಈಗಲಾದರೋ ಆತನು
ನಾಲ್ಕು ದಿಕ್ಕಿನಲ್ಲಿರುವ ಮನುಷ್ಯರೆಲ್ಲರೂ ತನ್ನ ಕಡೆಗೆ
31 ತಿರುಗಿಕೊಳ್ಳಬೇಕೆಂದು ಅಪ್ಪಣೆಕೊಡುತ್ತಾನೆ. ಯಾ
ಕಂದರೆ ಆತನು ನಿಷ್ಕರ್ಷೆಮಾಡಿದ ಪುರುಷನ ಕೈಯಿಂದ
ನೀತಿಗನುಸಾರವಾಗಿ ಭೂಲೋಕದ ನ್ಯಾಯವಿಚಾರಣೆ
ಮಾಡುವದಕ್ಕೆ ಒಂದು ದಿವಸವನ್ನು ಗೊತ್ತುಮಾಡಿ
ದ್ದಾನೆ. ಅವನನ್ನು ಸತ್ತವರೊಳಗಿಂದ ಎಬ್ಬಿಸಿದ್ದರಲ್ಲಿ
ಇದನ್ನು ನಂಬುವದಕ್ಕೆ ಎಲ್ಲರಿಗೂ ಆಧಾರ ಕೊಟ್ಟಿ
ದ್ದಾನೆ ಅಂದನು.
32 ಸತ್ತವರು ಎದ್ದುಬರುವ ವಿಷಯವನ್ನು ಕೇಳಿದಾಗ
ಕೆಲವರು ಅಪಹಾಸ್ಯಮಾಡಿದರು; ಬೇರೆ ಕೆಲವರು—
ನೀನು ಈ ವಿಷಯದಲ್ಲಿ ಹೇಳುವದನ್ನು ನಾವು ಇ
33 ನ್ನೊಂದು ಸಾರಿ ಕೇಳುತ್ತೇವೆ ಅಂದರು. ಹೀಗಿರಲು
ಪೌಲನು ಅವರ ಮಧ್ಯದಿಂದ ಹೊರಟುಹೋದನು.
34 ಕೆಲವರು ಅವನನ್ನು ಅಂಟಿಕೊಂಡು ನಂಬಿದರು; ನಂಬಿ
ದವರಲ್ಲಿ ಅರಿಯೊಪಾಗದ ಸಭೆಯವನಾದ ದಿಯೊನು
ಸ್ಯನೂ ದಾಮರಿಯೆಂಬಾಕೆಯೂ ಇನ್ನು ಕೆಲವರೂ
ಇದ್ದರು.

ಪೌಲನು ಕೊರಿಂಥದಲ್ಲಿ ಒಂದುವರೆ ವರುಷವಿದ್ದು ಸುವಾರ್ತೆಯನ್ನು ಸಾರಿದ್ದು; ಅಂತಿಯೋಕ್ಯಕ್ಕೆ ತಿರಿಗಿ ಬಂದದ್ದು.

18 ಇದಾದ ಮೇಲೆ ಪೌಲನು ಅಥೇನೆಯನ್ನು ಬಿಟ್ಟು
2 ಕೊರಿಂಥಕ್ಕೆ ಹೋದನು. ಪೊಂತದಲ್ಲಿ ಹುಟ್ಟಿದ
ಅಕ್ವಿಲನೆಂಬ ಒಬ್ಬ ಯೆಹೂದ್ಯನನ್ನು ಅಲ್ಲಿ ಕಂಡನು.
ಯೆಹೂದ್ಯರೆಲ್ಲರೂ ರೋಮಾಪುರವನ್ನು ಬಿಟ್ಟುಹೋಗ
ಬೇಕೆಂದು ಕ್ಲೌದಿಯ ಚಕ್ರವರ್ತಿಯು ವಿಧಿಸಿದಕಾರಣ
ಅಕ್ವಿಲನೂ ಅವನ ಹೆಂಡತಿಯಾದ ಪ್ರಿಸ್ಕಿಲ್ಲಳೂ ಕೆಲ
ವು ದಿವಸಗಳ ಮುಂಚೆ ಇತಾಲ್ಯ ದೇಶದಿಂದ ಅಲ್ಲಿಗೆ
3 ಬಂದಿದ್ದರು. ಪೌಲನು ಅವರ ಮನೆಗೆ ಹೋಗಿ ತಾನೂ
ಅವರೂ ಒಂದೇ ಕಸಬಿನವರಾಗಿದ್ದದರಿಂದ ಅವರಲ್ಲಿದ್ದು
ಅವರೊಂದಿಗೆ ಕೆಲಸಮಾಡುತ್ತಿದ್ದನು; ಗುಡಾರವಮಾ
ಡುವದು ಅವರ ಕಸಬಾಗಿತ್ತು. ಅವನು ಪ್ರತಿಸಬ್ಬತ್ 4
ದಿನವೂ ಸಭಾಮಂದಿರದಲ್ಲಿ ಚರ್ಚಿಸಿ ಯೆಹೂದ್ಯರನ್ನೂ
ಗ್ರೀಕರನ್ನೂ ಒಡಂಬಡಿಸುತ್ತಿದ್ದನು.
ಸೀಲನೂ ತಿಮೊಥೆಯನೂ ಮಕೆದೋನ್ಯದಿಂದ 5
ಬಂದಾಗ ಪೌಲನು ದೇವರ ವಾಕ್ಯವನ್ನು ಬೋಧಿಸುವ
ದರಲ್ಲಿ ಅತ್ಯಾಸಕ್ತಿಯುಳ್ಳವನಾಗಿ ಯೇಸುವೇ ಬರ
ಬೇಕಾದ ಕ್ರಿಸ್ತನೆಂದು ಯೆಹೂದ್ಯರಿಗೆ ಖಂಡಿತವಾಗಿ
ಸಾಕ್ಷಿಹೇಳಿದನು. ಅವರು ಎದುರಿಸಿ ದೂಷಿಸಲಾಗಿ 6
ಅವನು ತನ್ನ ವಸ್ತ್ರಗಳನ್ನು ಝಾಡಿಸಿ ಅವರಿಗೆ—
ನಿಮ್ಮ ನಾಶನಕ್ಕೆ ನೀವೇ ಹೊಣೆ. ನಾನು ಇಂದಿ
ನಿಂದ ಶುದ್ಧಮನಸ್ಸುಳ್ಳವನಾಗಿ ಅನ್ಯಜನರ ಬಳಿಗೆ
ಹೋಗುತ್ತೇನೆ ಎಂದು ಹೇಳಿ ಆ ಸ್ಥಳವನ್ನು ಬಿಟ್ಟು 7
ದೇವರಿಗೆ ಭಯಪಡುವವನಾಗಿದ್ದ ತೀತಯುಸ್ತನೆಂಬ
ವನ ಮನೆಗೆ ಹೋದನು. ಅವನ ಮನೆ ಸಭಾಮಂದಿ
ರದ ಮಗ್ಗುಲಲ್ಲೇ ಇತ್ತು. ಸಭಾಮಂದಿರದ ಅಧ್ಯಕ್ಷ 8
ನಾದ ಕ್ರಿಸ್ಪನು ತನ್ನ ಮನೆಯವರೆಲ್ಲರ ಸಹಿತ ಕರ್ತ
ನಲ್ಲಿ ನಂಬಿಕೆಯಿಟ್ಟನು. ಮತ್ತು ಕೊರಿಂಥದವರಲ್ಲಿ
ಅನೇಕರು ಕೇಳಿ ನಂಬಿ ದೀಕ್ಷಾಸ್ನಾನಮಾಡಿಸಿಕೊಂಡ
ರು. ಇದಲ್ಲದೆ ಕರ್ತನು ರಾತ್ರಿಕಾಲದಲ್ಲಿ ಪೌಲನಿಗೆ 9
ದರ್ಶನಕೊಟ್ಟು— ನೀನು ಹೆದರಬೇಡ; ಸುಮ್ಮನಿರದೆ
ಮಾತಾಡುತ್ತಲೇ ಇರು, ನಾನೇ ನಿನ್ನೊಂದಿಗಿದ್ದೇನೆ; 10
ಯಾರೂ ನಿನ್ನ ಮೇಲೆ ಬಿದ್ದು ಕೇಡು ಮಾಡುವದಿಲ್ಲ;
ಈ ಪಟ್ಟಣದಲ್ಲಿ ನನಗೆ ಬಹಳ ಮಂದಿ ಇದ್ದಾರೆ
ಎಂದು ಹೇಳಿದನು. ಅವನು ಒಂದು ವರುಷ ಆರು 11
ತಿಂಗಳು ಅಲ್ಲೇ ಇದ್ದುಕೊಂಡು ಆ ಜನರಿಗೆ ದೇವರ
ವಾಕ್ಯವನ್ನು ಉಪದೇಶಮಾಡುತ್ತಿದ್ದನು.
ಗಲ್ಲಿಯೋನನು ಅಖಾಯದ ಅಧಿಪತಿಯಾಗಿರಲು 12
ಯೆಹೂದ್ಯರು ಒಗ್ಗಟ್ಟಾಗಿ ಪೌಲನ ಮೇಲೆ ಬಿದ್ದು
ಅವನನ್ನು ನ್ಯಾಯಸ್ಥಾನದ ಮುಂದೆ ಹಿಡಿತಂದು—
ಇವನು ದೇವರನ್ನು ಧರ್ಮಶಾಸ್ತ್ರಕ್ಕೆ ವಿರುದ್ಧವಾಗಿ 13
ಪೂಜಿಸುವದಕ್ಕೆ ಜನರನ್ನು ಒಡಂಬಡಿಸುತ್ತಾನೆಂದು
ದೂರುಹೇಳಿದರು. ಪೌಲನು ಪ್ರತಿವಾದ ಮಾಡ 14
ಬೇಕೆಂದಿದ್ದಾಗ ಗಲ್ಲಿಯೋನನು ಯೆಹೂದ್ಯರಿಗೆ—
ಎಲೈ ಯೆಹೂದ್ಯರೇ, ಅನ್ಯಾಯವು ದುಷ್ಕಾರ್ಯವು
ಇಂಥದೇನಾದರೂ ಇದ್ದಪಕ್ಷಕ್ಕೆ ನಾನು ನಿಮ್ಮ ಮಾತ
ನ್ನು ಸಹನದಿಂದ ಕೇಳುವದು ನ್ಯಾಯವೇ. ಆದರೆ 15
ನೀವು ಮಾಡುವ ವಿವಾದವು ಬೋಧನೆಯನ್ನೂ ಹೆಸರು
ಗಳನ್ನೂ ನಿಮ್ಮ ಧರ್ಮಶಾಸ್ತ್ರವನ್ನೂ ಕುರಿತದ್ದಾಗಿರು
ವದರಿಂದ ಅವುಗಳನ್ನು ನೀವೇ ನೋಡಿಕೊಳ್ಳಿರಿ. ಇಂಥ
ವಿಷಯಗಳನ್ನು ವಿಚಾರಣೆಮಾಡುವದಕ್ಕೆ ನನಗಂತೂ
ಮನಸ್ಸಿಲ್ಲ ಎಂದು ಹೇಳಿ ಅವರನ್ನು ನ್ಯಾಯಸ್ಥಾನದ 16
ಎದುರಿನಿಂದ ಹೊರಡಿಸಿಬಿಟ್ಟನು. ಆಗ ಜನರೆಲ್ಲರು 17
ಸಭಾಮಂದಿರದ ಅಧ್ಯಕ್ಷನಾದ ಸೋಸ್ಥೆನನನ್ನು ಹಿಡಿದು
ಕೊಂಡು ನ್ಯಾಯಸ್ಥಾನದ ಮುಂದೆಯೇ ಹೊಡೆದರು.
ಗಲ್ಲಿಯೋನನು ಅವುಗಳಲ್ಲಿ ಒಂದನ್ನೂ ಲಕ್ಷ್ಯಕ್ಕೆ
ತರಲಿಲ್ಲ.
ಪೌಲನು ಇನ್ನು ಅನೇಕ ದಿವಸ ಅಲ್ಲಿದ್ದ ಮೇಲೆ 18
ಸಹೋದರರಿಂದ ಅಪ್ಪಣೆತೆಗೆದುಕೊಂಡು ತನಗೆ ದೀಕ್ಷೆ

ಇದ್ದದರಿಂದ ಕೆಂಖ್ರೆಯದಲ್ಲಿ 1)ಕ್ಷೌರಮಾಡಿಸಿಕೊಂಡು
ಹಡಗನ್ನು ಹತ್ತಿ ಸಿರಿಯಕ್ಕೆ ಹೊರಟನು. ಪ್ರಿಸ್ಕಿಲ್ಲಳೂ
19 ಅಕ್ವಿಲನೂ ಅವನ ಸಂಗಡ ಹೊರಟರು. ಎಫೆಸಕ್ಕೆ
ಬಂದಾಗ ಅವರನ್ನು ಅಲ್ಲೇ ಬಿಟ್ಟನು. ತಾನು ಸಭಾ
ಮಂದಿರದೊಳಕ್ಕೆ ಹೋಗಿ ಯೆಹೂದ್ಯರ ಸಂಗಡ ವಾದಿ
20 ಸಿದನು. ಅವರು ಅವನನ್ನು ಇನ್ನೂ ಕೆಲವು ಕಾಲ
ಇರಬೇಕೆಂದು ಕೇಳಿಕೊಂಡಾಗ ಅವನು ಒಪ್ಪದೆ—
21 ದೇವರ ಚಿತ್ತವಾದರೆ ತಿರಿಗಿ ನಿಮ್ಮ ಬಳಿಗೆ ಬರುತ್ತೇ
ನೆಂದು ಹೇಳಿ ಅವರ ಅಪ್ಪಣೆ ತೆಗೆದುಕೊಂಡು ಹೋದ
ನು. ಆ ಮೇಲೆ ಎಫೆಸದಿಂದ ಸಮುದ್ರಪ್ರಯಾಣಮಾಡಿ
22 ಕೈಸರೈಯದಲ್ಲಿ ಇಳಿದು ಯೆರೂಸಲೇಮಿಗೆ ಹೋಗಿ
ಸಭೆಯನ್ನು ವಂದಿಸಿ ಅಂತಿಯೋಕ್ಯಕ್ಕೆ ಬಂದನು.

ಸುವಾರ್ತೆಯನ್ನು ಸಾರುವದಕ್ಕೆ ಪೌಲನು ಮಾಡಿದ
ಮೂರನೆಯ ಪ್ರಯಾಣವನ್ನು ಕುರಿತದ್ದು.
(18. 23—21. 17.)

ಅಪೊಲ್ಲೋಸನನ್ನು ಕುರಿತದ್ದು.

23 ಪೌಲನು ಅಂತಿಯೋಕ್ಯದಲ್ಲಿ ಕೆಲವು ಕಾಲ ಇದ್ದು
ತಿರಿಗಿ ಹೊರಟು ಕ್ರಮವಾಗಿ ಗಲಾತ್ಯ ಸೀಮೆಯಲ್ಲಿ
ಯೂ ಫ್ರುಗ್ಯದಲ್ಲಿಯೂ ಸಂಚಾರಮಾಡುತ್ತಾ ಶಿಷ್ಯರೆಲ್ಲ
ರನ್ನು ದೃಢಪಡಿಸಿದನು.
24 ಅಷ್ಟರೊಳಗೆ ಅಲೆಕ್ಸಾಂದ್ರಿಯದಲ್ಲಿ ಹುಟ್ಟಿದ ಅ
ಪೊಲ್ಲೋಸನೆಂಬ ಒಬ್ಬ ಯೆಹೂದ್ಯನು ಎಫೆಸಕ್ಕೆ ಬಂದ
ನು. ಅವನು ವಾಕ್ಚಾತುರ್ಯವುಳ್ಳವನು, ಶಾಸ್ತ್ರಗಳಲ್ಲಿ
25 ಪ್ರವೀಣನು. ಅವನು ಕರ್ತನ ಮಾರ್ಗದ ವಿಷಯದಲ್ಲಿ
ಉಪದೇಶ ಹೊಂದಿದವನಾಗಿದ್ದನು; ಮತ್ತು ಆಸಕ್ತ
ಮನಸ್ಸುಳ್ಳವನಾಗಿದ್ದು ಯೋಹಾನನು ಮಾಡಿಸಿದ
ದೀಕ್ಷಾಸ್ನಾನವನ್ನು ಮಾತ್ರ ಬಲ್ಲವನಾದಾಗ್ಯೂ ಯೇ
ಸುವಿನ ಸಂಗತಿಗಳನ್ನು ಸೂಕ್ಷ್ಮವಾಗಿ ಹೇಳಿ ಉಪದೇ
26 ಶಿಸಿದನು. ಅವನು ಸಭಾಮಂದಿರದಲ್ಲಿ ಧೈರ್ಯದಿಂದ
ಮಾತಾಡುವದಕ್ಕೆ ಪ್ರಾರಂಭಿಸಿದನು. ಅವನ ಮಾತು
ಗಳನ್ನು ಪ್ರಿಸ್ಕಿಲ್ಲಳೂ ಅಕ್ವಿಲನೂ ಕೇಳಿ ಅವನನ್ನು
ತಮ್ಮ ಮನೆಗೆ ಕರೆದುಕೊಂಡು ಹೋಗಿ ದೇವರ
ಮಾರ್ಗವನ್ನು ಅವನಿಗೆ ಇನ್ನೂ ಸೂಕ್ಷ್ಮವಾಗಿ ವಿವರಿಸಿ
27 ದರು. ಆ ಮೇಲೆ ಅಖಾಯಕ್ಕೆ ಹೋಗಬೇಕೆಂದು ಅವ
ನಿಗೆ ಮನಸ್ಸಾದಾಗ ಸಹೋದರರು ಅವನನ್ನು ಪ್ರೋ
ತ್ಸಾಹಗೊಳಿಸಿ ಅಲ್ಲಿದ್ದ ಶಿಷ್ಯರಿಗೆ ಇವನನ್ನು ಸೇರಿಸಿ
ಕೊಳ್ಳಬೇಕೆಂದು ಪತ್ರಿಕೆಯನ್ನು ಬರೆದುಕೊಟ್ಟರು.
28 ಅವನು ಹೋಗಿ ಯೇಸುವೇ ಕ್ರಿಸ್ತನೆಂದು ಶಾಸ್ತ್ರಾ
ಧಾರದಿಂದ ತೋರಿಸಿಕೊಟ್ಟು, ಎಲ್ಲರ ಮುಂದೆ ಬಲ
ವಾಗಿ ಯೆಹೂದ್ಯರನ್ನು ಖಂಡಿಸಿ ದೇವರ ಕೃಪೆಯಿಂದ
ನಂಬಿದ್ದವರಿಗೆ ಬಹಳ ಸಹಾಯಮಾಡಿದನು.

ಪೌಲನು ಎಫೆಸಕ್ಕೆ ಬಂದು ಯೋಹಾನನ ಶಿಷ್ಯರಿಗೆ
ಪವಿತ್ರಾತ್ಮವರದ ವಿಷಯದಲ್ಲಿ ಬೋಧಿಸಿದ್ದು.

**19** ಅಪೊಲ್ಲೋಸನು ಕೊರಿಂಥದಲ್ಲಿದ್ದಾಗ ಪೌಲನು
ಮಲೆನಾಡಿನಲ್ಲಿ ಸಂಚಾರಮಾಡಿ ಎಫೆಸಕ್ಕೆ ಬಂದು
ಕೆಲವು ಮಂದಿ ಶಿಷ್ಯರನ್ನು ಕಂಡು—ನೀವು ನಂಬಿದಾ
ಪವಿತ್ರಾತ್ಮವರವನ್ನು ಹೊಂದಿದಿರೋ ಎಂದು ಅವರನ್
ಕೇಳಲು ಅವರು ಅವನಿಗೆ—ಇಲ್ಲ, ಪವಿತ್ರಾತ್ಮವ
ಉಂಟೆಂಬದನ್ನೇ ನಾವು ಕೇಳಲಿಲ್ಲ ಅಂದರು. ಅವನು
ನೀವು ಯಾವದನ್ನು ನಂಬಿ ದೀಕ್ಷಾಸ್ನಾನಮಾಡಿ
ಕೊಂಡಿರಿ ಎಂದು ಕೇಳಿದ್ದಕ್ಕೆ ಅವರು—ಯೋಹಾನ
ಬೋಧನೆಯನ್ನು ನಂಬಿ ದೀಕ್ಷಾಸ್ನಾನಮಾಡಿಸಿಕೊಂ
ವು ಅಂದರು. ಅದಕ್ಕೆ ಪೌಲನು—ಯೋಹಾನನು
ವರ ಕಡೆಗೆ ತಿರುಗಿಕೊಂಡವರಿಗೆ ದೀಕ್ಷಾಸ್ನಾನಮಾಡಿ
ತನ್ನ ಹಿಂದೆ ಬರುವಾತನಲ್ಲಿ ಅಂದರೆ ಯೇಸುವಿನ
ನಂಬಿಕೆಯಿಡಬೇಕೆಂಬದಾಗಿ ಜನರಿಗೆ ಹೇಳಿದನು ಎಂ
ಹೇಳಲು ಅವರು ಆ ಮಾತನ್ನು ಕೇಳಿ ಕರ್ತನಾ
ಯೇಸುವಿನ ಹೆಸರಿನಲ್ಲಿ ದೀಕ್ಷಾಸ್ನಾನ ಮಾಡಿ
ಕೊಂಡರು. ಪೌಲನು ಅವರ ಮೇಲೆ ಕೈಗಳನ್ನಿಡಲ
ಪವಿತ್ರಾತ್ಮವರವು ಅವರ ಮೇಲೆ ಬಂತು; ಅವ
ನಾನಾ ಭಾಷೆಗಳನ್ನಾಡಿದರು, ಪ್ರವಾದಿಸಿದರು. ಅವ
ಸುಮಾರು ಹನ್ನೆರಡು ಮಂದಿ ಗಂಡಸರು.

ಪೌಲನು ಎಫೆಸದಲ್ಲಿ ಸುಮಾರು ಮೂರು ವರುಷ ಇದ್ದು
ಸುವಾರ್ತೆಯನ್ನು ಪ್ರಕಟಿಸಿ ಅದ್ಭುತಕಾರ್ಯಗಳನ್ನು
ನಡಿಸಿದ್ದು; ದೇಮೇತ್ರಿಯನೆಂಬ ಅಕ್ಕಸಾಲಿಗನಿಂದ
ಗಲಭೆ ಉಂಟಾದದ್ದು.

ಆ ಪಟ್ಟಣದಲ್ಲಿ ಪೌಲನು ಸಭಾಮಂದಿರದೊಳ
ಹೋಗಿ ಮೂರು ತಿಂಗಳು ಅಲ್ಲೇ ದೇವರ ರಾಜ್ಯ
ವಿಷಯಗಳನ್ನು ಕುರಿತು ವಾದಿಸುತ್ತಾ ಜನರನ
ಒಡಂಬಡಿಸುತ್ತಾ ಧೈರ್ಯದಿಂದ ಮಾತಾಡಿದನು. ಕೆ
ವರು ತಮ್ಮ ಮನಸ್ಸುಗಳನ್ನು ಕಠಿಣಮಾಡಿಕೊಂಡ
ಒಡಂಬಡದೆ ಗುಂಪುಕೂಡಿದ ಜನರ ಮುಂದೆ
ಮಾರ್ಗವು ಕೆಟ್ಟದ್ದೆಂದು ಹೇಳಲು ಅವನು ಅವರನ
ಬಿಟ್ಟುಹೋಗಿ ಶಿಷ್ಯರನ್ನು ಬೇರೆಮಾಡಿ ತುರನ್ನನ ತಕ
ಶಾಲೆಯಲ್ಲಿ ಪ್ರತಿದಿನವೂ ವಾದಿಸಿದನು. ಇದು ಎರಡ
ವರುಷಗಳ ವರೆಗೂ ನಡೆದದ್ದರಿಂದ ಅಸ್ಯಸೀಮೆಯಲ್ಲಿ
ವಾಸವಾಗಿದ್ದ ಯೆಹೂದ್ಯರೂ ಗ್ರೀಕರೂ ಎಲ್ಲರು
ಕರ್ತನ ವಾಕ್ಯವನ್ನು ಕೇಳಿದರು.
ದೇವರು ಪೌಲನ ಕೈಯಿಂದ ವಿಶೇಷವಾದ ಮಹ
ತ್ಕಾರ್ಯಗಳನ್ನು ನಡಿಸುತ್ತಾ ಇದ್ದದರಿಂದ ಜನರ
ಅವನ ಮೈಮೇಲಿನಿಂದ ಕೈವಸ್ತ್ರಗಳನ್ನೂ ಉಡಿವಸ್ತ್ರ
ಗಳನ್ನೂ ತಂದು ರೋಗಿಗಳ ಮೇಲೆ ಹಾಕಲು ಅ
ರವರ ರೋಗಗಳು ವಾಸಿಯಾದವು, ದೆವ್ವಗಳೂ ಬಿಟ್ಟು
ಹೋದವು. ದೆವ್ವಬಿಡಿಸುವವರೆನಿಸಿಕೊಂಡು ದೇ
ಸಂಚಾರಿಗಳಾದ ಯೆಹೂದ್ಯರಿದ್ದರು. ಅವರಲ್ಲಿ ಕೆ
ವರು ದೆವ್ವಹಿಡಿದವರ ಮೇಲೆ—ಪೌಲನು ಸಾರು
ಯೇಸುವಿನ ಆಣೆ ಎಂದು ಹೇಳಿ ಕರ್ತನಾದ ಯೇಸು
ವಿನ ಹೆಸರನ್ನು ಪ್ರಯೋಗಮಾಡುವದಕ್ಕೆ ತೊಡಗಿ
ದರು. ಮಹಾಯಾಜಕ ಸ್ಕೇವನೆಂಬ ಒಬ್ಬ ಯೆಹೂ
ದ್ಯನ ಏಳು ಮಂದಿ ಮಕ್ಕಳು ಹಾಗೆ ಮಾಡುತ್ತಿದ್ದರು

1) ದೀಕ್ಷೆ ಬಿಟ್ಟದರಿಂದ ಕ್ಷೌರಮಾಡಿಸಿಕೊಂಡವನು ಅಕ್ವಿಲನೇ ಎಂದು ಕೆಲವರು ಅರ್ಥಮಾಡಿಕೊಳ್ಳುತ್ತಾರೆ.

ಆದರೆ ದೆವ್ವವು ಅವರಲ್ಲಿ ಇಬ್ಬರಿಗೆ—ಯೇಸುವಿನ
ಗುರುತು ನನಗುಂಟು, ಪೌಲನನ್ನೂ ಬಲ್ಲೆನು, ನೀವಾ
ದರೆ ಯಾರು? ಎಂದು ಹೇಳಿತು; ಮತ್ತು ದೆವ್ವಹಿಡಿ
ದಿದ್ದ ಆ ಮನುಷ್ಯನು ಅವರ ಮೇಲೆ ಹಾರಿ ಬಿದ್ದು ಅವ
ರಿಬ್ಬರನ್ನೂ ಸೋಲಿಸಿ ಬಲಾತ್ಕರಿಸಿದ್ದರಿಂದ ಅವರು
ಬೆತ್ತಲೆಯಾಗಿಯೂ ಗಾಯವುಳ್ಳವರಾಗಿಯೂ ಆ ಮನೆ
ಯೊಳಗಿಂದ ಓಡಿಹೋದರು. ಈ ಸಂಗತಿಯು ಎಫೆಸ
ದಲ್ಲಿ ವಾಸವಾಗಿದ್ದ ಎಲ್ಲಾ ಯೆಹೂದ್ಯರಿಗೂ ಗ್ರೀಕ
ರಿಗೂ ತಿಳಿದುಬಂದಾಗ ಅವರೆಲ್ಲರಿಗೆ ಭಯಹಿಡಿ
ಯಿತು. ಮತ್ತು ಕರ್ತನಾದ ಯೇಸುವಿನ ಹೆಸರು
ಪ್ರಖ್ಯಾತಿಗೆ ಬಂತು. ಆತನನ್ನು ನಂಬಿದವರಲ್ಲಿ ಅನೇ
ಕರು ಬಂದು ತಮ್ಮ ಕೃತ್ಯಗಳನ್ನು ಒಪ್ಪಿಕೊಂಡು ತಿಳಿ
ಸಿದರು. ಇದಲ್ಲದೆ ಮಾಟ ಮಂತ್ರಗಳನ್ನು ನಡಿಸಿ
ದವರಲ್ಲಿ ಅನೇಕರು ತಮ್ಮ ಪುಸ್ತಕಗಳನ್ನು ತಂದು
ಕೂಡಿಸಿ ಎಲ್ಲರ ಮುಂದೆ ಸುಟ್ಟುಬಿಟ್ಟರು. ಅವುಗಳ
ಕ್ರಯವನ್ನು ಲೆಕ್ಕಮಾಡಿ 1)ಐವತ್ತು ಸಾವಿರ ಬೆಳ್ಳೀ
ನಾಣ್ಯ ಆಯಿತೆಂದು ತಿಳಿದುಕೊಂಡರು. ಈ ರೀತಿ
ಯಾಗಿ ಕರ್ತನ ವಾಕ್ಯವು ಬಹಳವಾಗಿ ಹೆಚ್ಚುತ್ತಾ
ಪ್ರಬಲವಾಯಿತು.

ಈ ಸಂಗತಿಗಳು ಆದ ಮೇಲೆ ಪೌಲನು ತಾನು
ಮಕೆದೋನ್ಯದಲ್ಲಿಯೂ ಅಖಾಯದಲ್ಲಿಯೂ ಸಂಚಾ
ರಮಾಡಿ ಯೆರೂಸಲೇಮಿಗೆ ಹೋಗಬೇಕೆಂದು ಮನ
ಸ್ಸಿನಲ್ಲಿ ಉದ್ದೇಶಿಸಿ ಅಲ್ಲಿಗೆ ಹೋದ ಮೇಲೆ ರೋಮಾ
ಪುರವನ್ನು ಸಹ ನೋಡಬೇಕೆಂದು ಹೇಳಿದನು. ಆದರೆ
ಅವನು ತನಗೆ ಸೇವೆಮಾಡುವವರಲ್ಲಿ ಇಬ್ಬರಾದ ತಿಮೊ
ಥೆಯನನ್ನೂ ಎರಸ್ತನನ್ನೂ ಮಕೆದೋನ್ಯಕ್ಕೆ ಕಳು
ಹಿಸಿ ತಾನು ಆಸ್ಯಸೀಮೆಯಲ್ಲಿ ಕೆಲವು ಕಾಲ ನಿಂತನು.

ಆ ಕಾಲದಲ್ಲಿ ಕ್ರಿಸ್ತ ಮಾರ್ಗದ ವಿಷಯವಾಗಿ
ಬಹಳ ಗಲಭೆ ಹುಟ್ಟಿತು. ಹೇಗಂದರೆ ದೇಮೇತ್ರಿಯ
ನೆಂಬ ಒಬ್ಬ ಅಕ್ಕಸಾಲಿಗನು ಬೆಳ್ಳಿಯಿಂದ ಅರ್ತೆಮಿಾ
ದೇವಿಯ ಗುಡಿಯಂತೆ ಸಣ್ಣಸಣ್ಣ ಗುಡಿಗಳನ್ನು ಮಾಡಿ
ಸುವವನಾಗಿದ್ದು ಆ ಕಸಬಿನವರಿಗೆ ಬಹಳ ಕೆಲಸ
ಕೊಡುತ್ತಿದ್ದನು. ಅವನು ಅವರನ್ನೂ ಆ ಕಸಬಿನ
ಸಂಬಂಧವಾದ ಕೆಲಸದವರನ್ನೂ ಒಟ್ಟಿಗೆ ಕರಸಿ ಅವ
ರಿಗೆ—ಜನರೇ, ಈ ಕೆಲಸದಿಂದ ನಮಗೆ ಐಶ್ವರ್ಯ
ಉಂಟಾಗುತ್ತದೆಂದು ನೀವು ಬಲ್ಲಿರಿ. ಆದರೆ ಕೈಯಿಂದ
ಮಾಡಿದ ಮೂರ್ತಿಗಳು ದೇವರುಗಳಲ್ಲವೆಂದು ಆ
ಪೌಲನು ಹೇಳಿ ಎಫೆಸದಲ್ಲಿ ಮಾತ್ರವಲ್ಲದೆ ಸ್ವಲ್ಪ
ಕಡಿಮೆ ಆಸ್ಯಸೀಮೆಯಲ್ಲೆಲ್ಲಾ ಬಹಳ ಜನರನ್ನು
ಒಡಂಬಡಿಸಿ ತಿರುಗಿಸಿಬಿಟ್ಟಿದ್ದಾನೆ ಎಂಬದನ್ನು ನೀವು
ನೋಡುತ್ತೀರಿ, ಕೇಳುತ್ತೀರಿ. ಇದರಿಂದ ನಮ್ಮ
ಉದ್ಯೋಗಕ್ಕೆ ಅಪಕೀರ್ತಿ ಬರುವ ಹಾಗಿರುವದಲ್ಲದೆ
ಅರ್ತೆಮಿಾ ಮಹಾದೇವಿಯ ದೇವಸ್ಥಾನವು ಗಣನೆಗೆ
ಬಾರದೆಹೋಗುವ ಹಾಗೆಯೂ ಎಲ್ಲಾ ಆಸ್ಯಸೀಮೆಯೂ
ಲೋಕವೂ ಪೂಜಿಸುವ ಈ ದೇವಿಯ ವೈಭವಕ್ಕೆ ಹಾನಿ
ಬರುವ ಹಾಗೆಯೂ ಗಂಡಾಂತರವುಂಟೆಂದು ಹೇಳಿದನು.
ಅವರು ಈ ಮಾತುಗಳನ್ನು ಕೇಳಿ ಕೋಪಾಕ್ರಾಂತ
ರಾಗಿ—ಎಫೆಸದವರ ಅರ್ತೆಮಿಾದೇವಿ ಮಹಾದೇವಿ
ಎಂದು ಆರ್ಭಟಿಸಿದರು. ಆಗ ಊರೆಲ್ಲಾ ಗಲಿಬಿಲಿ 29
ಯಾಯಿತು. ಪ್ರಯಾಣದಲ್ಲಿ ಪೌಲನಿಗೆ ಜೊತೆಯವ
ರಾಗಿದ್ದ ಮಕೆದೋನ್ಯದ ಗಾಯನನ್ನೂ ಅರಿಸ್ತಾರ್ಕ
ನನ್ನೂ ಜನರು ಹಿಡಿದುಕೊಂಡು ಒಗ್ಗಟ್ಟಾಗಿ ನಾಟಕ
ಶಾಲೆಯೊಳಗೆ ನುಗ್ಗಿದರು. ಪೌಲನು ಜನರೊಳಗೆ 30
ಹೋಗಬೇಕೆಂದಿದ್ದಾಗ ಶಿಷ್ಯರು ಅವನನ್ನು ಬಿಡಲಿಲ್ಲ.
ಇದಲ್ಲದೆ ಆಸ್ಯಸೀಮೆಯ ಅಧಿಕಾರಿಗಳಲ್ಲಿ ಕೆಲವರು 31
ಅವನಿಗೆ ಸ್ನೇಹಿತರಾಗಿದ್ದದರಿಂದ ಅವನ ಬಳಿಗೆ
ಜನರನ್ನು ಕಳುಹಿಸಿ—ನೀನು ನಾಟಕಶಾಲೆಯೊಳಗೆ
ಹೋಗಿ ನಿನ್ನನ್ನು ಅಪಾಯಕ್ಕೆ ಗುರಿಮಾಡಿಕೊಳ್ಳಬೇಡ
ಎಂದು ಬೇಡಿಕೊಂಡರು. ಸಭೆಯು ಗಲಿಬಿಲಿ 32
ಯಾಯಿತು, ಮತ್ತು ಹೆಚ್ಚಾದ ಜನರಿಗೆ ತಾವು ಕೂಡಿ
ಬಂದಿದ್ದ ಕಾರಣವು ಗೊತ್ತಿರಲಿಲ್ಲ. ಕೆಲವರು ಒಂದು
ಬಗೆಯಾಗಿ ಮತ್ತೆ ಕೆಲವರು ಇನ್ನೊಂದು ಬಗೆಯಾಗಿ
ಕೂಗುತ್ತಿದ್ದರು. ಯೆಹೂದ್ಯರು ಅಲೆಕ್ಸಾಂದ್ರನನ್ನು 33
ಮುಂದಕ್ಕೆ ನೂಕಲು ಗುಂಪಿನಲ್ಲಿ ಕೆಲವರು ಅವನಿಗೆ
ಸೂಚನೆ ಕೊಟ್ಟರು. ಆಗ ಅಲೆಕ್ಸಾಂದ್ರನು ಕೈಸನ್ನೆ
ಮಾಡಿ ಕೂಡಿದ್ದ ಜನರಿಗೆ ಪ್ರತಿವಾದ ಮಾಡಬೇಕೆಂದಿ
ದ್ದನು. ಆದರೆ ಅವನು ಯೆಹೂದ್ಯನೆಂದು ತಿಳಿದಾಗ 34
ಎಲ್ಲರೂ ಒಂದೇ ಶಬ್ದದಿಂದ—ಎಫೆಸದವರ ಅರ್ತೆಮಿಾ
ದೇವಿ ಮಹಾದೇವಿ ಎಂದು ಎರಡು ಘಂಟೆ ಹೊತ್ತು
ಕೂಗಿದರು. ಕಡೆಗೆ ಪಟ್ಟಣದ ಯಜಮಾನನು ಜನರ 35
ಗುಂಪನ್ನು ಸಮಾಧಾನಪಡಿಸಿ—ಎಫೆಸದವರೇ, ಎಫೆಸ
ಪಟ್ಟಣದವರು ಅರ್ತೆಮಿಾ ಮಹಾದೇವಿಯ ದೇವ
ಸ್ಥಾನಕ್ಕೂ ಆಕಾಶದಿಂದ ಬಿದ್ದ ಆಕೆಯ ಮೂರ್ತಿಗೂ
ಪಾಲಕರಾಗಿದ್ದಾರೆಂಬದನ್ನು ತಿಳಿಯದಿರುವ ಮನು
ಷ್ಯನು ಇದ್ದಾನೇ? ಈ ಸಂಗತಿ ಅಲ್ಲವೆನ್ನುವದಕ್ಕೆ 36
ಯಾರಿಂದಲೂ ಆಗದಿರುವದರಿಂದ ನೀವು ಶಾಂತಿಯಿಂದಿ
ರಬೇಕು; ದುಡುಕಿನಿಂದ ಏನೂ ಮಾಡಬಾರದು. ನೀವು 37
ತಂದಿರುವ ಈ ಮನುಷ್ಯರು ದೇವಸ್ಥಾನದಲ್ಲಿ ಕಳ್ಳತನ
ಮಾಡುವವರಲ್ಲ, ನಮ್ಮ ದೇವಿಯನ್ನು ದೂಷಿಸುವ
ವರೂ ಅಲ್ಲ. ಹೀಗಿರುವದರಿಂದ ದೇಮೇತ್ರಿಯನಿಗೂ 38
ಅವನ ಪಕ್ಷವನ್ನು ಹಿಡಿದಿರುವ ಕಸಬಿನವರಿಗೂ
ಯಾವನ ಮೇಲಾದರೂ ಒಂದು ವ್ಯವಹಾರವಿದ್ದರೆ
ನ್ಯಾಯಸ್ಥಾನಗಳುಂಟು, ಅಧಿಪತಿಗಳಿದ್ದಾರೆ, ಒಬ್ಬರ
ಮೇಲೊಬ್ಬರು ವ್ಯಾಜ್ಯವಾಡಿಕೊಳ್ಳಲಿ. ಏನಾದರೂ 39
ಹೆಚ್ಚು ವಿಚಾರಣೆ ಬೇಕಾದರೆ ಅದು ನ್ಯಾಯವಾಗಿ
ನೆರೆದ ಸಭೆಯಲ್ಲಿ ತೀರ್ಮಾನಿಸಲ್ಪಡಬೇಕು. ಈ ದಿನ 40
ದಲ್ಲಿ ನ್ಯಾಯವಾದ ಕಾರಣವಿಲ್ಲದೆ ನೆರೆದ ಕೂಟದ
ವಿಷಯದಲ್ಲಿ ಇದು ಒಂದು ದಂಗೆ ಎಂಬದಾಗಿ ನಮ್ಮ
ಮೇಲೆ ತಪ್ಪುಹೊರಿಸುವದಕ್ಕೆ ಆಸ್ಪದವಾಯಿತು. ಈ
ದೊಂಬಿಯನ್ನು ಕುರಿತು ವಿಚಾರಣೆನಡೆದರೆ ನಮ್ಮಿಂದ
ಉತ್ತರಕೊಡುವದಕ್ಕೆ ಆಗುವದೇ ಇಲ್ಲ ಎಂದು ಹೇಳಿ
ದನು. ಈ ಮಾತುಗಳನ್ನು ಹೇಳಿ ಸಭೆಯನ್ನು ಮುರಿ 41
ದನು.

1) ಅಂದರೆ, ಸುಮಾರು ಇಪ್ಪತ್ತೈದು ಸಾವಿರ ರೂಪಾಯಿ.

ಪೌಲನು ಮಕೆದೋನ್ಯಕ್ಕೂ ಗ್ರೀಸ್‌ದೇಶಕ್ಕೂ ಹೋದ ಮೇಲೆ
ತ್ರೋವಕ್ಕೆ ಬಂದದ್ದು; ಅಲ್ಲಿ ನಡೆದ ಯೂತಿಖನ ಸಂಗತಿಯು.

**20** ಗದ್ದಲವು ನಿಂತ ತರುವಾಯ ಪೌಲನು ಶಿಷ್ಯ
ರನ್ನು ಕೂಡ ಕರೆಸಿ ಧೈರ್ಯಗೊಳಿಸಿ ಅವರ ಅಪ್ಪಣೆ
2 ತೆಗೆದುಕೊಂಡು ಮಕೆದೋನ್ಯಕ್ಕೆ ಹೊರಟನು. ಆ
ಸೀಮೆಯಲ್ಲಿ ಸಂಚಾರಮಾಡಿ ಅಲ್ಲಿಯವರನ್ನು ಅನೇಕ
ಮಾತುಗಳಿಂದ ಧೈರ್ಯಪಡಿಸಿ ಗ್ರೀಸ್ ದೇಶಕ್ಕೆ
೩ ಬಂದನು. ಅಲ್ಲಿ ಮೂರು ತಿಂಗಳು ಕಳೆದ ಮೇಲೆ
ಸಿರಿಯ ದೇಶಕ್ಕೆ ಸಮುದ್ರಮಾರ್ಗವಾಗಿ ಹೋಗ
ಬೇಕೆಂದಿದ್ದಾಗ ಅವನಿಗೆ ವಿರುದ್ಧವಾಗಿ ಯೆಹೂದ್ಯ
ರಲ್ಲಿ ಒಳಸಂಚು ಹುಟ್ಟಿದ್ದರಿಂದ ಅವನು ಮಕೆದೋ
ನ್ಯದ ಮೇಲೆ ಹಿಂತಿರುಗಿ ಹೋಗುವದಕ್ಕೆ ತೀರ್ಮಾನ
4 ಮಾಡಿದನು. ಪುರ್ರನ ಮಗನಾದ ಬೆರೋಯಪಟ್ಟ
ಣದ ಸೋಪತ್ರನೂ ಥೆಸಲೊನೀಕದವರಲ್ಲಿ ಅರಿಸ್ತಾ
ರ್ಕನೂ ಸೆಕುಂದನೂ ದೆರ್ಬೆಪಟ್ಟಣದ ಗಾಯನೂ
ತಿಮೊಥೆಯನೂ ಆಸ್ಯಸೀಮೆಯವರಲ್ಲಿ ತುಖಿಕನೂ
ತ್ರೊಫಿಮನೂ ಆಸ್ಯಸೀಮೆಯ ವರೆಗೆ ಅವನ ಜೊತೆ
೫ ಯಲ್ಲಿ ಹೋದರು. ಇವರು ಮುಂಚಿತವಾಗಿ ಹೋಗಿ
6 ನಮಗೋಸ್ಕರ ತ್ರೋವದಲ್ಲಿ ಕಾದುಕೊಂಡರು. ಹುಳಿ
ಯಿಲ್ಲದ ರೊಟ್ಟಿಯ ಹಬ್ಬದ ದಿವಸಗಳನ್ನು ಪೂರೈಸಿದ
ಮೇಲೆ ನಾವು ಫಿಲಿಪ್ಪಿಯಿಂದ ಹೊರಟು ಹಡಗನ್ನು
ಹತ್ತಿ ಐದು ದಿವಸದಲ್ಲಿ ತ್ರೋವದಲ್ಲಿ ಬಂದು ಅವ
ರನ್ನು ಸೇರಿದೆವು. ಅಲ್ಲಿ ಏಳು ದಿವಸಗಳಿದ್ದೆವು.
7 ವಾರದ ಮೊದಲನೆಯ ದಿವಸದಲ್ಲಿ ನಾವು ರೊಟ್ಟಿ
ಮುರಿಯುವ ನಿಯಮಕ್ಕಾಗಿ ಕೂಡಿಬಂದಾಗ ಮರು
ದಿನ ಹೊರಡಬೇಕೆಂದಿದ್ದ ಪೌಲನು ಅವರಿಗೆ ಪ್ರಸಂಗಿ
ಸುತ್ತಾ ಸರಿಹೊತ್ತಿನ ವರೆಗೂ ಉಪನ್ಯಾಸವನ್ನು ನಡಿಸಿ
8 ದನು. ನಾವು ಕೂಡಿದ್ದ ಮೇಲಂತಸ್ತಿನಲ್ಲಿ ಅನೇಕ ದೀಪ
9 ಗಳಿದ್ದವು. ಯೂತಿಖನೆಂಬ ಒಬ್ಬ ಯೌವನಸ್ಥನು
ಕಿಟಿಕಿಯಲ್ಲಿ ಕೂತುಕೊಂಡು ಗಾಢನಿದ್ರೆಯಿಂದ ತೂಕ
ಡಿಸಿದನು. ಪೌಲನು ಇನ್ನೂ ಪ್ರಸಂಗಮಾಡುತ್ತಾ ಇದ್ದಾ
ಗ ಆ ಯೌವನಸ್ಥನು ನಿದ್ರೆಯಿಂದ ತೂಕಡಿಕೆ ಹೆಚ್ಚಾಗಿ
ಮೂರನೆಯ ಅಂತಸ್ತಿನಿಂದ ಕೆಳಕ್ಕೆ ಬಿದ್ದನು; ಅವನನ್ನು
10 ಎತ್ತಿನೋಡುವಾಗ ಸತ್ತಿದ್ದನು. ಆದರೆ ಪೌಲನು ಇಳಿ
ದುಹೋಗಿ ಅವನ ಮೇಲೆ ಬಿದ್ದು ತಬ್ಬಿಕೊಂಡು—
ಗೋಳಾಡಬೇಡಿರಿ, ಅವನ ಪ್ರಾಣ ಅವನಲ್ಲಿ ಅದೆ ಎಂದು
11 ಹೇಳಿದನು. ಆಗ ಅವನು ಮೇಲಕ್ಕೆ ಹೋಗಿ ರೊಟ್ಟಿ
ಮುರಿದು ಊಟಮಾಡಿ ಬಹಳ ಹೊತ್ತು ಬೆಳಗಾಗುವ
ತನಕ ಸಲ್ಲಾಪಮಾಡಿ ಹಾಗೆ ಹೊರಟುಹೋದನು.
12 ಅವರು ಜೀವಿತನಾದ ಆ ಹುಡುಗನನ್ನು ಕರೆದುಕೊಂಡು
ಬರಲು ಅವರಿಗೆ ಬಹಳ ಆದರಣೆ ಉಂಟಾಯಿತು.

ಪೌಲನು ಎಫೆಸ ಪಟ್ಟಣದ ಸಭೇಹಿರಿಯರನ್ನು ಮಿಲೇತಕ್ಕೆ
ಕರಿಸಿ ಅಪ್ಪಣೆತೆಗೆದುಕೊಳ್ಳುವಲ್ಲಿ ಪ್ರಸಂಗಮಾಡಿದ್ದು.

13 ನಾವು ಮೊದಲು ಹೋಗಿ ಅಸ್ಸೊಸಿನಲ್ಲಿ ಪೌಲನನ್ನು
ಹತ್ತಿಸಿಕೊಳ್ಳಬೇಕೆಂದು ಅಲ್ಲಿಗೆ ಸಮುದ್ರಪ್ರಯಾಣ
ಮಾಡಿದೆವು. ಪೌಲನು ತಾನು ಕಾಲುನಡೆಯ
ಹೋಗಬೇಕೆಂದು ಹಾಗೆಯೇ ನಮಗೆ ಅಪ್ಪಣೆ ಮಾ
ದ್ದನು. ಅಸ್ಸೊಸಿನಲ್ಲಿ ಅವನು ನಮ್ಮನ್ನು ಕೂ
ಕೊಂಡಾಗ ನಾವು ಅವನನ್ನು ಹತ್ತಿಸಿಕೊಂಡು ಮಿ
ಲೇನೆಗೆ ಬಂದೆವು. ಅಲ್ಲಿಂದ ಹೊರಟು ಮರುದಿ
ಖೀಯೊಸ್‌ದ್ವೀಪಕ್ಕೆದುರಾಗಿ ಬಂದು ಅದರ ಮ
ದಿನ ಸಾಮೊಸಿನ ಹತ್ತರ ಬಂದೆವು[1]. ಅದರ ಮ
ದಿನ ಮಿಲೇತಕ್ಕೆ ಸೇರಿದೆವು. ಪೌಲನು ತನಗೆ ಸಾ
ವಾದರೆ ಪಂಚಾಶತ್ತಮ ದಿವಸದ ಹಬ್ಬಕ್ಕೆ ಯೆರ
ಸಲೇಮಿನಲ್ಲಿರಬೇಕೆಂದು ಅವಸರಪಡುತ್ತಾ ಇದ್ದ
ರಿಂದ ಆಸ್ಯಸೀಮೆಯಲ್ಲಿ ಕಾಲವನ್ನು ಕಳೆಯುವದ
ಮನಸ್ಸಿಲ್ಲದೆ ಎಫೆಸಪಟ್ಟಣವನ್ನು ದಾಟಿಹೋಗಬ
ಕೆಂದು ತೀರ್ಮಾನಿಸಿಕೊಂಡಿದ್ದನು.

ಅವನು ಮಿಲೇತದಿಂದ ಎಫೆಸಕ್ಕೆ ಹೇಳಿಕಳುಹಿ
ಅಲ್ಲಿಯ ಸಭೆಯ ಹಿರಿಯರನ್ನು ಕರಿಸಿದನು. ಅವ
ಅವನ ಬಳಿಗೆ ಬಂದಾಗ ಅವರಿಗೆ ಅವನು ಹೇಳಿದ್ದೆ
ನಂದರೆ—

ನಾನು ಆಸ್ಯಸೀಮೆಯಲ್ಲಿ ಕಾಲಿಟ್ಟ ಮೊದಲನೆಯ
ದಿವಸದಿಂದ ನಿಮ್ಮ ಮಧ್ಯೆ ಎಲ್ಲಾ ಕಾಲದಲ್ಲಿಯು
ಹೇಗೆ ನಡಕೊಂಡೆನೆಂಬದನ್ನು ನೀವೇ ಬಲ್ಲಿರಿ. ನಾನ
ಬಹು ನಮ್ರತೆಯಿಂದಲೂ ಕಣ್ಣೀರಿನಿಂದಲೂ ಕರ್ತ
ಸೇವೆ ಮಾಡುತ್ತಿದ್ದೆನು. ಇದರಲ್ಲಿ ಯೆಹೂದ್ಯರ ಒ
ಸಂಚುಗಳಿಂದ ಸಂಭವಿಸಿದ ಕಷ್ಟಗಳನ್ನು ಸಹಿಸ
ತ್ತಿದ್ದೆನು. ನಾನು ನಿಮಗೆ ಹಿತಕರವಾದದ್ದೆಲ್ಲವನ್ನು
ಹೇಳುವದಕ್ಕೂ ಸಭೆಯಲ್ಲಿಯೂ ಮನೆಮನೆಯಲ್ಲಿ
ಯೂ ಉಪದೇಶಿಸುವದಕ್ಕೂ ಹಿಂತೆಗಿಯದೆ ಯೆಹೂ
ದ್ಯರಿಗೂ ಗ್ರೀಕರಿಗೂ ದೇವರ ಕಡೆಗೆ ತಿರುಗಬೇಕೆಂ
ಲೂ ನಮ್ಮ ಕರ್ತನಾದ ಯೇಸುವಿನ ಮೇಲೆ ನಂಬಿ
ಯಿಡಬೇಕೆಂತಲೂ ಖಂಡಿತವಾಗಿ ಬೋಧಿಸುವವನಾ
ಗಿದ್ದೆನು; ಇದೆಲ್ಲಾ ನಿಮಗೇ ತಿಳಿದಿದೆ. ಇಗೋ
ನಾನು ಈಗ ಆತ್ಮನಿರ್ಬಂಧವುಳ್ಳವನಾಗಿ ಯೆರೂಸ
ಲೇಮಿಗೆ ಹೋಗುತ್ತೇನೆ. ಅಲ್ಲಿ ನನಗೆ ಏನು ಸಂಭ
ವಿಸುವದೋ ನಾನರಿಯೆ. ನಿನಗೆ ಬೇಡಿಗಳೂ ಸಂಕಟ
ಗಳೂ ಕಾದುಕೊಂಡವೆ ಎಂದು ಪವಿತ್ರಾತ್ಮನು ಎಲ್ಲಾ
ಪಟ್ಟಣಗಳಲ್ಲಿಯೂ ನನಗೆ ಖಂಡಿತವಾಗಿ ಹೇಳುತ್ತಾನೆ
ಇಷ್ಟುಮಾತ್ರ ಬಲ್ಲೆನು. ಆದರೆ ಪ್ರಾಣವನ್ನು ಉಳಿಸಿ
ಕೊಳ್ಳುವದೇ ವಿಶೇಷವೆಂದು ನಾನು ಎಣಿಸುವದಿಲ್ಲ
ದೇವರ ಕೃಪೆಯ ವಿಷಯವಾದ ಸುವಾರ್ತೆಯನ್ನು
ಆಸಕ್ತಿಯಿಂದ ಪ್ರಕಟಿಸಬೇಕೆಂಬದಾಗಿ ಕರ್ತನಾದ
ಯೇಸುವಿನಿಂದ ನಾನು ಹೊಂದಿರುವ ಸೇವೆಯೆಂಬ
ಓಟವನ್ನು ಕಡೆಗಾಣಿಸುವದೊಂದೇ ನನ್ನ ಅಪೇಕ್ಷೆ
ಇಗೋ, ಇಷ್ಟು ದಿವಸ ನಿಮ್ಮಲ್ಲಿ ಸಂಚಾರಮಾಡಿ
ದೇವರ ರಾಜ್ಯವನ್ನು ಸಾರಿದವನಾದ ನನ್ನ ಮುಖವನ್ನು
ಇನ್ನು ಮೇಲೆ ನಿಮ್ಮಲ್ಲಿ ಒಬ್ಬರೂ ಕಾಣುವದಿಲ್ಲ
ವೆಂದು ಬಲ್ಲೆನು. ಆದಕಾರಣ ನಾನು ಈಹೊತ್ತು
ಪ್ರಮಾಣವಾಗಿ ಹೇಳುತ್ತೇನೆ, ನಿಮ್ಮಲ್ಲಿ ಯಾರಾದರು
ನಾಶವಾದರೆ ಅದು ನನ್ನ ದೋಷವಲ್ಲ. ಯಾಕಂದರ

1) ಕೆಲವು ಪ್ರತಿಗಳಲ್ಲಿ—ತ್ರೋಗುಲ್ಯದಲ್ಲಿ ಸ್ವಲ್ಪ ಇದ್ದು ಎಂಬ ಹೆಚ್ಚು ಮಾತು ಉಂಟು.

ಒಂದನ್ನೂ ಮರೆಮಾಡದೆ ದೇವರ ಸಂಕಲ್ಪವನ್ನೆಲ್ಲಾ
ನಿಮಗೆ ತಿಳಿಸಿದೆನು. 1)ದೇವರು ಸ್ವರಕ್ತದಿಂದ ಸಂಪಾ
ದಿಸಿಕೊಂಡ ಸಭೆಯನ್ನು ಪರಿಪಾಲಿಸುವದಕ್ಕಾಗಿ ಪವಿ
ತ್ರಾತ್ಮನು ನಿಮ್ಮನ್ನೇ ಆ ಹಿಂಡಿನಲ್ಲಿ ಅಧ್ಯಕ್ಷರಾಗಿ
ಇಟ್ಟಿರುವದರಿಂದ ನಿಮ್ಮ ವಿಷಯದಲ್ಲಿಯೂ ಎಲ್ಲಾ
ಹಿಂಡಿನ ವಿಷಯದಲ್ಲಿಯೂ ಎಚ್ಚರಿಕೆಯಾಗಿರಿ.
ನಾನು ಹೋದ ಮೇಲೆ ಕ್ರೂರವಾದ ತೋಳಗಳು
ನಿಮ್ಮೊಳಗೆ ಬರುವವೆಂದು ನಾನು ಬಲ್ಲೆನು; ಅವು
ಹಿಂಡನ್ನು ಕನಿಕರಿಸುವದಿಲ್ಲ. ಇದಲ್ಲದೆ ನಿಮ್ಮಲ್ಲಿಯೂ
ಕೆಲವರು ಎದ್ದು ವ್ಯತ್ಯಾಸ ಬೋಧನೆಗಳನ್ನು ಮಾಡಿ
ಯೇಸುವಿನ ಶಿಷ್ಯರನ್ನು ತಮ್ಮ ಹಿಂದೆ ಎಳಕೊಳ್ಳು
ವರು. ಆದಕಾರಣ ನಾನು ಕಣ್ಣೀರುಸುರಿಸುತ್ತಾ
ಮೂರು ವರುಷ ಹಗಲಿರುಳು ಎಡೆಬಿಡದೆ ಪ್ರತಿಯೊಬ್ಬ
ನಿಗೆ ಬುದ್ಧಿಹೇಳಿದೆನೆಂದು ನೀವು ಜ್ಞಾಪಕಮಾಡಿ
ಕೊಂಡು ಎಚ್ಚರವಾಗಿರಿ. ನಾನೀಗ ನಿಮ್ಮನ್ನು ಕರ್ತ
ನಿಗೂ ಆತನ ಕೃಪಾವಾಕ್ಯಕ್ಕೂ ಒಪ್ಪಿಸಿಕೊಡುತ್ತೇನೆ.
ಆತನು ನಿಮ್ಮಲ್ಲಿ ಭಕ್ತಿವೃದ್ಧಿಯನ್ನುಂಟುಮಾಡುವ
ದಕ್ಕೂ ಪವಿತ್ರರಾದವರೆಲ್ಲರಲ್ಲಿ ನಿಮಗೆ ಹಕ್ಕನ್ನು
ಅನುಗ್ರಹಿಸುವದಕ್ಕೂ ಶಕ್ತನಾಗಿದ್ದಾನೆ. ನಾನು
ಯಾರ ಬೆಳ್ಳಿಬಂಗಾರವನ್ನಾಗಲಿ ಉಡಿಗೆತೊಡಿಗೆಯ
ನ್ನಾಗಲಿ ಬಯಸಲಿಲ್ಲ. ಈ ಕೈಗಳೇ ಕೆಲಸಮಾಡಿ
ನನ್ನ ಕೊರತೆಗಳನ್ನೂ ನನ್ನ ಜೊತೆಯಲ್ಲಿದ್ದವರ
ಕೊರತೆಗಳನ್ನೂ ನೀಗಿದ್ದನ್ನು ನೀವೇ ಬಲ್ಲಿರಿ. ಎಲ್ಲಾ
ವಿಷಯಗಳಲ್ಲಿ ನಾನು ನಿಮಗೆ ಮಾದರಿ ತೋರಿಸಿದ್ದೇನೆ.
ನೀವೂ ಹಾಗೆಯೇ ದುಡಿದು ಬಲವಿಲ್ಲದವರಿಗೆ ಉಪ
ಕಾರಮಾಡಬೇಕು; ಮತ್ತು — ತೆಗೆದುಕೊಳ್ಳುವದ
ಕ್ಕಿಂತ ಕೊಡುವದೇ ಹೆಚ್ಚಿನ ಭಾಗ್ಯವೆಂಬದಾಗಿ ಕರ್ತ
ನಾದ ಯೇಸು ತಾನೇ ಹೇಳಿದ ಮಾತುಗಳನ್ನು ನೆನಪಿ
ನಲ್ಲಿಟ್ಟುಕೊಂಡಿರಬೇಕು ಅಂದನು.
ಈ ಮಾತುಗಳನ್ನು ಅವನು ಹೇಳಿದ ಮೇಲೆ ಮೊಣ
ಕಾಲೂರಿಕೊಂಡು ಅವರೆಲ್ಲರ ಸಂಗಡ ಪ್ರಾರ್ಥನೆಮಾಡಿ
-38 ದನು. ಆಗ ಅವರೆಲ್ಲರು ಬಹಳವಾಗಿ ಅತ್ತರು.
ನೀವು ಇನ್ನು ಮೇಲೆ ನನ್ನ ಮುಖವನ್ನು ಕಾಣುವದಿಲ್ಲ
ವೆಂದು ಪೌಲನು ಹೇಳಿದ ಮಾತಿಗೆ ಅವರು ವಿಶೇಷವಾಗಿ
ವ್ಯಥೆಪಟ್ಟು ಅವನ ಕೊರಳನ್ನು ತಬ್ಬಿಕೊಂಡು ಅವನಿಗೆ
ಮುದ್ದಿಟ್ಟರು. ಆ ಮೇಲೆ ಅವರು ಅವನನ್ನು ಹಡಗಿಗೆ
ಸಾಗಕಳುಹಿಸಿದರು.

ಪೌಲನು ಮಿಲೇತದಿಂದ ಯೆರೂಸಲೇಮಿಗೆ ಮಾಡಿದ
ಪ್ರಯಾಣದಲ್ಲಿ ನಡೆದ ವೃತ್ತಾಂತ.

1 ನಾವು ಪ್ರಯಾಸದಿಂದ ಅವರನ್ನು ಬಿಟ್ಟು ಹಡ
ಗನ್ನು ಹತ್ತಿದ ಮೇಲೆ ನೆಟ್ಟಗೆ ಹೋಗಿ ಕೋಸ್
ದ್ವೀಪಕ್ಕೆ ಸೇರಿದೆವು. ಮರುದಿನ ರೋದಕ್ಕೆ ಹೋಗಿ
ಅಲ್ಲಿಂದ ಪತರಕ್ಕೆ ಬಂದೆವು. ಅಲ್ಲಿ ಫೊಯಿನೀಕೆಗೆ
ಹೋಗುವ ಹಡಗನ್ನು ಕಂಡು ಹತ್ತಿ ಪ್ರಯಾಣವನ್ನು
ಸಾಗಿಸಿದೆವು. ಮುಂದೆ ಕುಪ್ರದ್ವೀಪವನ್ನು ಕಂಡು 3
ಅದನ್ನು ಎಡಗಡೆಗೆ ಬಿಟ್ಟು ಸಿರಿಯದೇಶದ ಕಡೆಗೆ ಸಾಗಿ
ತೂರ್‌ಪಟ್ಟಣಕ್ಕೆ ಬಂದು ಇಳಿದೆವು. ಯಾಕಂದರೆ ಅಲ್ಲಿ
ಸರಕನ್ನು ಇಳಿಸಬೇಕಾಗಿತ್ತು. ಅಲ್ಲಿ ಶಿಷ್ಯರನ್ನು 4
ಹುಡುಕಿ ಕಂಡು ಏಳು ದಿವಸ ನಿಂತೆವು. ಅವರು
ಆತ್ಮನ ಪ್ರೇರಣೆಯಿಂದ ಪೌಲನಿಗೆ — ನೀನು ಯೆರೂ
ಸಲೇಮಿಗೆ ಕಾಲಿಡಬೇಡವೆಂದು ಹೇಳಿದರು. ಆ ದಿವಸ 5
ಗಳನ್ನು ತೀರಿಸಿಕೊಂಡು ನಾವು ಹೊರಡುವಾಗ ಅವ
ರೆಲ್ಲರೂ ಹೆಂಡರು ಮಕ್ಕಳು ಸಹಿತವಾಗಿ ಬಂದು
ನಮ್ಮನ್ನು ಊರ ಹೊರಕ್ಕೆ ಸಾಗಕಳುಹಿಸಿದರು. ನಾವು
ಸಮುದ್ರತೀರದಲ್ಲಿ ಮೊಣಕಾಲೂರಿಕೊಂಡು ಪ್ರಾರ್ಥನೆ
ಮಾಡಿ ಒಬ್ಬರಿಗೊಬ್ಬರು ವಂದನೆಮಾಡಿ ಹಡಗನ್ನು 6
ಹತ್ತಿದೆವು; ಅವರು ಹಿಂತಿರುಗಿ ತಮ್ಮತಮ್ಮ ಮನೆ
ಗಳಿಗೆ ಹೋದರು.

ನಾವು ತೂರ್‌ಪಟ್ಟಣದಿಂದ ಹೊರಟು ಪ್ತೊಲೆಮಾ 7
ಯಕ್ಕೆ ಸೇರಿ ಸಮುದ್ರಪ್ರಯಾಣವನ್ನು ಮುಗಿಸಿದೆವು.
ಅಲ್ಲಿದ್ದ ಸಹೋದರರನ್ನು ವಂದಿಸಿ ಅವರ ಬಳಿಯಲ್ಲಿ
ಒಂದು ದಿವಸ ಇದ್ದು ಮರುದಿನ ಹೊರಟು ಕೈಸರೈ 8
ಯಕ್ಕೆ ಬಂದು ಸೌವಾರ್ತಿಕನಾದ ಫಿಲಿಪ್ಪನ
ಮನೆಗೆ ಹೋಗಿ ಅವನ ಬಳಿಯಲ್ಲಿಯೇ ಇಳುಕೊಂಡೆ
ವು. ಅವನು ಆ ಏಳ್ವರಲ್ಲಿ ಒಬ್ಬನು. ಅವನಿಗೆ 9
ಮದುವೆಯಾಗದ ನಾಲ್ಕು ಮಂದಿ ಹೆಣ್ಣುಮಕ್ಕಳಿದ್ದರು;
ಅವರು ಪ್ರವಾದಿಸುವವರಾಗಿದ್ದರು. ನಾವು ಅಲ್ಲಿ 10
ಅನೇಕ ದಿವಸಗಳು ಇದ್ದ ಮೇಲೆ, ಅಗಬನೆಂಬ ಒಬ್ಬ
ಪ್ರವಾದಿಯು ಯೂದಾಯದಿಂದ ನಮ್ಮ ಬಳಿಗೆ ಬಂದು
ಪೌಲನ ನಡುಕಟ್ಟನ್ನು ತೆಗೆದು ತನ್ನ ಕೈಕಾಲುಗಳನ್ನು 11
ಕಟ್ಟಿಕೊಂಡು — ಈ ನಡುಕಟ್ಟು ಯಾವನದೋ ಆ
ಮನುಷ್ಯನನ್ನು ಯೆಹೂದ್ಯರು ಇದೇ ರೀತಿಯಾಗಿ
ಯೆರೂಸಲೇಮಿನಲ್ಲಿ ಕಟ್ಟಿ ಅನ್ಯಜನರ ಕೈಗೆ ಒಪ್ಪಿಸಿ
ಕೊಡುವರು, ಹೀಗೆ ಪವಿತ್ರಾತ್ಮನು ಹೇಳುತ್ತಾನೆಂಬ
ದಾಗಿ ಹೇಳಿದನು. ಆ ಮಾತನ್ನು ಕೇಳಿದಾಗ ನಾವೂ 12
ಆ ಸ್ಥಳದವರೂ — ನೀನು ಯೆರೂಸಲೇಮಿಗೆ ಹೋಗ
ಬಾರದೆಂದು ಪೌಲನನ್ನು ಬೇಡಿಕೊಂಡೆವು. ಅದಕ್ಕೆ 13
ಪೌಲನು — ನೀವು ಅತ್ತತ್ತು ಯಾಕೆ ನನ್ನನ್ನು ಎದೆ
ಒಡಿಸುತ್ತೀರಿ? ನಾನು ಕರ್ತನಾದ ಯೇಸುವಿನ ಹೆಸ
ರಿನ ನಿಮಿತ್ತವಾಗಿ ಯೆರೂಸಲೇಮಿನಲ್ಲಿ ಬೇಡೀಹಾಕಿಸಿ
ಕೊಳ್ಳುವದಕ್ಕೆ ಮಾತ್ರವಲ್ಲದೆ ಸಾಯುವದಕ್ಕೂ
ಸಿದ್ಧವಾಗಿದ್ದೇನೆ ಅಂದನು. ಅವನು ಒಡಂಬಡದೆ ಇದ್ದ 14
ದರಿಂದ ಕರ್ತನ ಚಿತ್ತವಿದ್ದಂತೆ ಆಗಲಿ ಎಂದು ಹೇಳಿ
ನಾವು ಸುಮ್ಮಗಾದೆವು.

ಆ ದಿವಸಗಳಾದ ಮೇಲೆ ಸೌರಿಸಿಕೊಂಡು ಯೆರೂ 15
ಸಲೇಮಿಗೆ ಹೊರಟೆವು. ಕೈಸರೈಯದಿಂದ ಕೆಲವು 16
ಶಿಷ್ಯರು ನಮ್ಮ ಜೊತೆಯಲ್ಲಿ ಬಂದು ನಾವು ಇಳು
ಕೊಳ್ಳಬೇಕಾಗಿದ್ದವನ ಮನೆಯ ತನಕ ಕರಕೊಂಡು
ಹೋದರು. ಆ ಮನೆಯವನು ಆದಿಶಿಷ್ಯರಲ್ಲಿ ಒಬ್ಬ
ನಾದ ಕುಪ್ರದೇಶದ ಮ್ನಾಸೋನನೆಂಬವನು.

1) ಕೆಲವು ಪ್ರತಿಗಳಲ್ಲಿ ಕರ್ತನು ಎಂದು ಬರೆದಿದೆ.

ಯೆರೂಸಲೇಮಿನ ಸಭೇಹಿರಿಯರು ಹೇಳಿದ ಆಲೋಚನೆಯನ್ನು
ಅನುಸರಿಸಿ ಪೌಲನು ವಿರೋಧಿಗಳಾದ ಯೆಹೂದ್ಯಕ್ರೈಸ್ತರನ್ನು
ಸಮಾಧಾನಪಡಿಸುವದಕ್ಕೆ ಪ್ರಯತ್ನಮಾಡಿದ್ದು.

17 ನಾವು ಯೆರೂಸಲೇಮಿಗೆ ಬಂದಾಗ ಸಹೋದರರು
18 ನಮ್ಮನ್ನು ಸಂತೋಷದಿಂದ ಸೇರಿಸಿಕೊಂಡರು. ಮರು
ದಿನ ಪೌಲನು ನಮ್ಮನ್ನು ಕರೆದುಕೊಂಡು ಯಾಕೋ
ಬನ ಬಳಿಗೆ ಹೋದನು.' ಸಭೇಹಿರಿಯರೆಲ್ಲರು ಸಹ
19 ಬಂದರು. ಪೌಲನು ಅವರನ್ನು ವಂದಿಸಿ ತನ್ನ
ಸೇವೆಯ ಮೂಲಕವಾಗಿ ದೇವರು ಅನ್ಯಜನರಲ್ಲಿ ಮಾ
ಡಿದ ಕಾರ್ಯಗಳನ್ನು ಒಂದೊಂದಾಗಿ ವಿವರಿಸಿದನು.
20 ಅವರು ಇದನ್ನು ಕೇಳಿ ದೇವರನ್ನು ಕೊಂಡಾಡಿದರು.
ಆಗ ಅವರು ಅವನಿಗೆ ಹೇಳಿದ್ದು — ಸಹೋದರನೇ,
ಯೆಹೂದ್ಯರಲ್ಲಿ ಯೇಸುವನ್ನು ನಂಬಿರುವವರು ಎಷ್ಟೋ
ಸಾವಿರ ಮಂದಿ ಇದ್ದಾರೆಂಬದನ್ನು ನೋಡುತ್ತೀಯಲ್ಲಾ.
ಅವರೆಲ್ಲರೂ ಧರ್ಮಶಾಸ್ತ್ರದಲ್ಲಿ ಅಭಿಮಾನಿಗಳಾಗಿ
21 ದ್ದಾರೆ. ನೀನು ಅನ್ಯಜನರಲ್ಲಿ ವಾಸವಾಗಿರುವ ಯೆಹೂ
ದ್ಯರೆಲ್ಲರಿಗೆ— ನಿಮ್ಮ ಮಕ್ಕಳಿಗೆ ಸುನ್ನತಿಮಾಡಿಸಬೇಡಿರಿ,
ನಿಮ್ಮ ಆಚಾರಗಳನ್ನು ಅನುಸರಿಸಿ ನಡೆಯಬೇಡಿರಿ
ಎಂದು ಹೇಳಿ ಮೋಶೆಯ ಧರ್ಮವನ್ನು ತ್ಯಾಗಮಾಡ
ಬೇಕೆಂಬದಾಗಿ ಬೋಧಿಸುತ್ತೀ ಎಂದು ನಿನ್ನ ವಿಷಯ
22 ದಲ್ಲಿ ಬಹಳವಾಗಿ ಕೇಳಿದ್ದಾರೆ. ಹೀಗಿರುವಲ್ಲಿ ಏನು
ಮಾಡಬೇಕು? ನೀನು ಬಂದಿರುವದನ್ನು ಹೇಗೂ
23 ಕೇಳುವರು. ಆದಕಾರಣ ನಾವು ನಿನಗೆ ಹೇಳುವ
ಕೆಲಸವನ್ನು ಮಾಡು. ನಮ್ಮಲ್ಲಿ ವ್ರತಹಿಡಿದವರು
24 ನಾಲ್ಕುಮಂದಿ ಇದ್ದಾರೆ. ನೀನು ಅವರನ್ನು ಕರೆದು
ಕೊಂಡುಹೋಗಿ ಅವರೊಡನೆ ನಿನ್ನನ್ನು ಶುದ್ಧಿಮಾಡಿ
ಕೊಂಡು ಅವರು ತಮ್ಮ ವ್ರತವನ್ನು ತೀರಿಸಿಕೊಳ್ಳುವ
ದಕ್ಕಾಗಿ ಅವರಿಗೋಸ್ಕರ ಹಣ ವೆಚ್ಚಮಾಡು. ಹೀಗೆ
ಮಾಡಿದರೆ ಎಲ್ಲರೂ ನಿನ್ನ ವಿಷಯವಾಗಿ ತಾವು
ಕೇಳಿದ ಸುದ್ದಿ ನಿಜವಲ್ಲವೆಂತಲೂ ನೀನಾದರೂ ಧರ್ಮ
ಶಾಸ್ತ್ರವನ್ನು ಕೈಕೊಂಡು ನಡೆಯುತ್ತೀ ಎಂತಲೂ ತಿಳು
25 ಕೊಳ್ಳುವರು. ಅನ್ಯಜನರಲ್ಲಿ ಯೇಸುವನ್ನು ನಂಬಿರು
ವವರ ವಿಷಯವಾದರೋ ವಿಗ್ರಹಕ್ಕೆ ನೈವೇದ್ಯಮಾಡಿ
ದ್ದನ್ನೂ ರಕ್ತವನ್ನೂ ಕುತ್ತಿಗೆಹಿಸುಕಿಕೊಂದದ್ದನ್ನೂ
ಹಾದರವನ್ನೂ ಬಿಟ್ಟು ದೂರವಾಗಿರಬೇಕೆಂಬದಾಗಿ
26 ನಾವು ತೀರ್ಮಾನಿಸಿ ಬರೆದೆವು ಎಂದು ಹೇಳಿದರು. ಆಗ
ಪೌಲನು ಆ ಮನುಷ್ಯರನ್ನು ಕರೆದುಕೊಂಡು ಮರು
ದಿನ ಅವರೊಡನೆ ತನ್ನನ್ನು ಶುದ್ಧಿಮಾಡಿಕೊಂಡು
1)ವ್ರತದ ದಿವಸಗಳು ಮುಗಿದವೆಂದು ತಿಳಿಸುವವನಾಗಿ
ದೇವಾಲಯದೊಳಗೆ ಹೋದನು. ಪ್ರತಿಯೊಬ್ಬನಿಗೋ
ಸ್ಕರ ಮಾಡಬೇಕಾದ ಅರ್ಪಣೆಯನ್ನು ಮುಂದೆ ಅರ್ಪಿಸ
ಬೇಕಾಗಿತ್ತು.

ಯೆಹೂದ್ಯರು ಪೌಲನ ಮೇಲೆ ಬಿದ್ದು ಕೊಲ್ಲಬೇಕೆಂದಿದ್ದಾಗ
ರೋಮ್‌ರಾಜ್ಯದ ಸರದಾರನೂ ಸಿಪಾಯಿಗಳೂ ಅವನನ್ನು
ಬಿಡಿಸಿದ್ದು; ಅವನು ಜನರಿಗೆ ಪ್ರತಿವಾದಿಸಿದ್ದು.

27 ಆ ಏಳು ದಿವಸಗಳು ತುಂಬುತ್ತಿರುವಾಗ ಆಸ್ಯ
ಸೀಮೆಯಿಂದ ಬಂದಿದ್ದ ಯೆಹೂದ್ಯರು ಅವನನ್ನು
ದೇವಾಲಯದಲ್ಲಿ ಕಂಡು ಗುಂಪುಕೂಡಿದ ಜನರೆ
ರನ್ನು ಕಲಕಿ ಅವನನ್ನು ಹಿಡಿದು— ಇಸ್ರಾಯೇ
ಜನರೇ, ಸಹಾಯಮಾಡಿರಿ, ನಮ್ಮ ಜನರಿಗೂ ಧರ್ಮ
ಶಾಸ್ತ್ರಕ್ಕೂ ಈ ಆಲಯಕ್ಕೂ ವಿರುದ್ಧವಾಗಿ ಎಲ್ಲೆ
ಯೂ ಎಲ್ಲರಿಗೂ ಬೋಧನೆ ಹೇಳುವ ಆ ಮನುಷ್ಯನ
ಇವನೇ. ಇದಲ್ಲದೆ ಇವನು ಗ್ರೀಕರನ್ನು ದೇವಾಲಯ
ದೊಳಗೆ ಕರೆದುಕೊಂಡು ಬಂದು ಈ ಪರಿಶುದ್ಧಸ್ಥ
ವನ್ನು ಹೊಲೆಮಾಡಿದ್ದಾನೆ ಎಂದು ಕೂಗಿದರು
ಮುಂಚೆ ಅವರು ಎಫೆಸದ ತ್ರೊಫಿಮನನ್ನು ಅವ
ಸಂಗಡ ಪಟ್ಟಣದಲ್ಲಿ ಕಂಡಿದ್ದರಿಂದ ಅವನನ್ನು ಪೌಲನ
ದೇವಾಲಯದೊಳಗೆ ಕರೆದುಕೊಂಡು ಬಂದನೆಂದು ಭಾ
ವಿಸಿದರು. ಆಗ ಪಟ್ಟಣವೆಲ್ಲಾ ಕಲಕಿಹೋಯಿತ
ಜನರು ಎಲ್ಲಾ ಕಡೆಯಿಂದ ಓಡಿಬಂದು ಕೂ
ದರು. ಮತ್ತು ಪೌಲನನ್ನು ಹಿಡಿದು ದೇವಾಲಯ
ಹೊರಗೆ ಎಳೆದುಕೊಂಡು ಬಂದರು. ಕೂಡಲೇ ಬಾ
ಲುಗಳನ್ನು ಮುಚ್ಚಿದರು. ಅವರು ಅವನನ್ನು ಕೊಲ
ವದಕ್ಕೆ ಪ್ರಯತ್ನಿಸುತ್ತಿದ್ದಾಗ ಯೆರೂಸಲೇಮಿನಲ್ಲೆಲ
ಗಲಿಬಿಲಿಯಾಯಿತೆಂದು ಪಟಾಲಮಿನ ಸಹಸ್ರಾಧಿಪತಿ
ವರದಿ ಬಂತು. ಅವನು ತಕ್ಷಣವೇ ಸಿಪಾಯಿಗಳನ
ಶತಾಧಿಪತಿಗಳನ್ನೂ ತೆಗೆದುಕೊಂಡು ಅವರ ಮೇ
ಓಡಿಬಂದನು. ಅವರು ಸಹಸ್ರಾಧಿಪತಿಯನ್ನೂ ಸಿಪಾ
ಯಿಗಳನ್ನೂ ನೋಡಿ ಪೌಲನನ್ನು ಹೊಡೆಯುವದನ್ನು
ಬಿಟ್ಟರು. ಸಹಸ್ರಾಧಿಪತಿಯು ಹತ್ತರಕ್ಕೆ ಬಂದು ಅ
ನನ್ನು ಹಿಡಿದು ಅವನಿಗೆ ಜೋಡು ಬೇಡಿಯನ್ನು ಹಾ
ಬೇಕೆಂದು ಅಪ್ಪಣೆಕೊಟ್ಟು — ಇವನಾರು? ಏನು ಮಾ
ದ್ದಾನೆ ಎಂದು ಕೇಳಲು ಕೆಲವರು ಹೀಗೆ ಕೆಲವರ
ಹಾಗೆ ಕೂಗುತ್ತಿರಲು ಗದ್ದಲದ ನಿಮಿತ್ತ ನಿಜ ಸ್ಥಿ
ಯನ್ನು ತಿಳಿಯಲಾರದೆ ಅವನನ್ನು ಕೋಟೆಯೊಳಗೆ ತ
ದುಕೊಂಡುಹೋಗಿರೆಂದು ಅಪ್ಪಣೆಕೊಟ್ಟನು. ಪೌಲನ
ಮೆಟ್ಲುಗಳ ಮೇಲೆ ಬಂದಾಗ ಜನರ ನೂಕಾಟ
ನಿಮಿತ್ತ ಸಿಪಾಯಿಗಳು ಅವನನ್ನು ಹೊತ್ತುಕೊಂ
ಹೋಗಬೇಕಾಯಿತು. ಯಾಕಂದರೆ ಗುಂಪಾಗಿ ಕ
ಡಿದ ಜನರು ಹಿಂದಿನಿಂದ ಬಂದು ಅವನನ್ನು ಕೊಲ್ಲಿ
ಎಂದು ಕೂಗುತ್ತಿದ್ದರು.

ಪೌಲನನ್ನು ಕೋಟೆಯೊಳಗೆ ಸೇರಿಸುವದರೊಳಗಾ
ಅವನು ಆ ಸಹಸ್ರಾಧಿಪತಿಯನ್ನು — ನಿನಗೆ ಒಂದ
ಮಾತು ಹೇಳುವದಕ್ಕೆ ನನಗೆ ಅಪ್ಪಣೆ ಆದೀತೇ? ಎಂದ
ಕೇಳಲು ಅವನು— ಗ್ರೀಕ್‌ಭಾಷೆ ನಿನಗೆ ಬರುತ್ತದೋ
ಕೆಲವು ದಿವಸಗಳ ಹಿಂದೆ ದಂಗೆ ಎಬ್ಬಿಸಿ ಆ ನಾಲ
ಸಾವಿರ ಮಂದಿ ಘಾತಕರನ್ನು ಅಡವಿಗೆ ಕರೆದುಕೊಂ
ಹೋದ ಆ ಐಗುಪ್ತ್ಯನು ನೀನೇ ಅಲ್ಲವೇ ಎಂದ
ಕೇಳಿದನು. ಅದಕ್ಕೆ ಪೌಲನು— ನಾನು ಯೆಹ
ದ್ಯನು, ತಾರ್ಸದವನು, ಕಿಲಿಕ್ಯಸೀಮೆಯ ಪ್ರಖ್ಯಾತವಾ
ಪಟ್ಟಣದವನು. ಈ ಜನರಿಗೆ ಕೆಲವು ಮಾತುಗಳನ
ಹೇಳುವದಕ್ಕೆ ನನಗೆ ಅಪ್ಪಣೆಯಾಗಬೇಕೆಂದು ಕೇ
ಕೊಳ್ಳುತ್ತೇನೆ ಅಂದನು. ಸಹಸ್ರಾಧಿಪತಿಯು ಅಪ್ಪ
ಕೊಡಲು ಪೌಲನು ಮೆಟ್ಲುಗಳ ಮೇಲೆ ನಿಂತುಕೊಂ
ಜನರಿಗೆ ಕೈಸನ್ನೆಮಾಡಿದನು. ಗದ್ದಲವು ಬಹ

1) ಮೂಲ: ಶುದ್ಧಾಚಾರದ.

ಮಟ್ಟಿಗೆ ಶಾಂತವಾದ ಮೇಲೆ ಅವನು ಇಬ್ರಿಯ ಭಾಷೆ
ಯಲ್ಲಿ —
22 ಸಹೋದರರೇ, ತಂದೆಗಳೇ, ಈಗ ನಾನು ನಿಮಗೆ
ಮಾಡುವ ಪ್ರತಿವಾದವನ್ನು ಕೇಳಿರಿ ಎಂದು ಕೂಗಿ
ಹೇಳಿದನು.
2 ಅವನು ತಮ್ಮ ಸಂಗಡ ಇಬ್ರಿಯ ಭಾಷೆಯಲ್ಲಿ ಮಾ
ತಾಡುವದನ್ನು ಕೇಳಿ ಅವರು ಮತ್ತೂ ನಿಶ್ಶಬ್ದವಾದರು.
ಆಗ ಅವನು ಹೇಳಿದ್ದೇನಂದರೆ —
3 ನಾನು ಯೆಹೂದ್ಯನು, ಕಿಲಿಕ್ಯದ ತಾರ್ಸದಲ್ಲಿ
ಹುಟ್ಟಿದವನು, ಆದರೆ ಈ ಪಟ್ಟಣದಲ್ಲೇ ಬೆಳೆದವನು.
ಗಮಲಿಯೇಲನ ಪಾದಸನ್ನಿಧಿಯಲ್ಲಿ ನಮ್ಮ ಪಿತೃ
ಗಳ ಧರ್ಮಶಾಸ್ತ್ರದಲ್ಲಿ ಪೂರ್ಣ ಶಿಕ್ಷಿತನಾದೆನು;
ನೀವೆಲ್ಲರೂ ಈಹೊತ್ತು ದೇವರ ವಿಷಯದಲ್ಲಿ ಅಭಿ
ಮಾನಿಗಳಾಗಿರುವಂತೆಯೇ ನಾನು ಅಭಿಮಾನಿಯಾಗಿ
4 ದ್ದೆನು. ಕ್ರಿಸ್ತ ಮಾರ್ಗದವರನ್ನು ಹಿಂಸಿಸುವವನಾಗಿ
ಗಂಡಸರಿಗೂ ಹೆಂಗಸರಿಗೂ ಬೇಡೀಹಾಕಿಸುತ್ತಾ ಅವರ
ನ್ನು ಸೆರೆಮನೆಗಳಿಗೆ ಕೊಡಿಸುತ್ತಾ ಇದ್ದೆನು, ಅವರ ಕೊ
5 ಲೆಗಾದರೂ ಹಿಂತೆಗೆಯಲಿಲ್ಲ. ಈ ವಿಷಯದಲ್ಲಿ ಮಹಾ
ಯಾಜಕನೂ ಹಿರೀಸಭೆಯವರೆಲ್ಲರೂ ಸಾಕ್ಷಿಗಳಾಗಿ
ದ್ದಾರೆ. ಅವರಿಂದಲೇ ನಾನು ದಮಸ್ಕದಲ್ಲಿದ್ದ ಸಹೋ
ದರರಿಗೆ ಕಾಗದಗಳನ್ನು ತೆಗೆದುಕೊಂಡು ಅಲ್ಲಿಗೆ ಹೋ
ದವರನ್ನೂ ಬೇಡಿಗಳಿಂದ ದಂಡನೆಗಾಗಿ ಯೆರೂಸಲೇ
6 ಮಿಗೆ ತರಬೇಕೆಂದು ಹೊರಟೆನು. ನಾನು ಪ್ರಯಾಣ
ಮಾಡುತ್ತಾ ದಮಸ್ಕದ ಹತ್ತರಕ್ಕೆ ಬಂದಾಗ ಸುಮಾರು
ಮಧ್ಯಾಹ್ನದಲ್ಲಿ ಫಕ್ಕನೆ ಆಕಾಶದೊಳಗಿಂದ ಒಂದು
ದೊಡ್ಡ ಬೆಳಕು ನನ್ನ ಸುತ್ತಲು ಹೊಳೆಯಿತು, ನಾನು
7 ನೆಲಕ್ಕೆ ಬಿದ್ದೆನು. ಆಗ— ಸೌಲನೇ, ಸೌಲನೇ, ನನ್ನನ್ನು
ಯಾಕೆ ಹಿಂಸೆಪಡಿಸುತ್ತೀ? ಎಂದು ನನಗೆ ಹೇಳಿದ
8 ಒಂದು ಶಬ್ದವನ್ನು ಕೇಳಿದೆನು. ಅದಕ್ಕೆ ನಾನು—
ಕರ್ತನೇ, ನೀನಾರು? ಎಂದು ಕೇಳಲು ಆತನು — ನೀನು
ಹಿಂಸೆಪಡಿಸುವ ನಜರೇತಿನ ಯೇಸುವೇ ನಾನು ಎಂದು
9 ನನಗೆ ಹೇಳಿದನು. ನನ್ನ ಜೊತೆಯಲ್ಲಿದ್ದವರು ಬೆಳ
ಕನ್ನು ಕಂಡರೇ ಹೊರತು ನನ್ನ ಸಂಗಡ ಮಾತಾಡಿದ
10 ವನ ಶಬ್ದವನ್ನು ಕೇಳಲಿಲ್ಲ. ಆಗ ನಾನು— ಕರ್ತನೇ,
ನಾನೇನು ಮಾಡಬೇಕು? ಎಂದು ಕೇಳಲು ಕರ್ತನು
ನನಗೆ — ನೀನೆದ್ದು ದಮಸ್ಕದೊಳಕ್ಕೆ ಹೋಗು, ಮಾಡು
ವದಕ್ಕೆ ನಿನಗೆ ನೇಮಿಸಿರುವದೆಲ್ಲಾ ಅಲ್ಲಿ ತಿಳಿಸಲ್ಪಡು
11 ವದು ಎಂದು ಹೇಳಿದನು. ಆ ಬೆಳಕಿನ ಪ್ರಭಾವದಿಂದ
ನನಗೆ ಕಣ್ಣು ಕಾಣದೆ ಇದ್ದದರಿಂದ ನನ್ನ ಜೊತೆಯಲ್ಲಿ
ದ್ದವರು ನನ್ನನ್ನು ಕೈಹಿಡಿದು ದಮಸ್ಕದೊಳಕ್ಕೆ ಕರೆದು
12 ಕೊಂಡುಹೋದರು. ಅಲ್ಲಿ ಧರ್ಮಶಾಸ್ತ್ರಕ್ಕೆ ಸರಿಯಾಗಿ
ನಡೆಯುವ ಸದ್ಭಕ್ತನೂ ಆ ಸ್ಥಳದ ಯೆಹೂದ್ಯರೆಲ್ಲ
13 ರಿಂದ ಒಳ್ಳೆಯವನೆಂದು ಹೆಸರು ಹೊಂದಿದವನೂ ಆಗಿದ್ದ
ಅನನೀಯನೆಂಬವನು ನನ್ನ ಬಳಿಗೆ ಬಂದು ನಿಂತು—
ಸಹೋದರನಾದ ಸೌಲನೇ, ನಿನಗೆ ಕಣ್ಣು ಕಾಣಿಸಲಿ
ಎಂದು ಹೇಳಿದನು. ಹೇಳಿದಾಕ್ಷಣವೇ ನನಗೆ ಕಣ್ಣು
14 ಕಾಣಿಸಿತು, ನಾನು ಅವನನ್ನು ನೋಡಿದೆನು. ಆ
ಮೇಲೆ ಅವನು— ನಮ್ಮ ಪಿತೃಗಳ ದೇವರು ತನ್ನ ಚಿತ್ತ
ವನ್ನು ನೀನು ತಿಳುಕೊಳ್ಳುವದಕ್ಕೂ ಆ ನೀತಿವಂತ
ನನ್ನು ನೋಡುವದಕ್ಕೂ ಆತನ ಬಾಯಿಂದ ಒಂದು
ಮಾತನ್ನು ಕೇಳುವದಕ್ಕೂ ನಿನ್ನನ್ನು ನೇಮಿಸಿದ್ದಾನೆ.
ನೀನು ಕಂಡು ಕೇಳಿದ್ದರ ವಿಷಯದಲ್ಲಿ ಎಲ್ಲಾ ಮನು 15
ಷ್ಯರ ಮುಂದೆ ಆತನಿಗೆ ಸಾಕ್ಷಿಯಾಗಿರಬೇಕು. ಈಗ 16
ನೀನೇಕೆ ತಾಮಸಮಾಡುತ್ತೀ? ಎದ್ದು ಆತನ ಹೆಸ
ರನ್ನು ಹೇಳಿಕೊಳ್ಳುವವನಾಗಿ ದೀಕ್ಷಾಸ್ನಾನಮಾಡಿಸಿ
ಕೊಂಡು ನಿನ್ನ ಪಾಪಗಳನ್ನು ತೊಳೆದುಕೋ ಅಂದನು.
ಅನಂತರದಲ್ಲಿ ನಾನು ಯೆರೂಸಲೇಮಿಗೆ ಹಿಂತಿ 17
ರುಗಿ ಬಂದು ದೇವಾಲಯದೊಳಗೆ ಪ್ರಾರ್ಥನೆಮಾಡುತ್ತಿ
ದ್ದಾಗ ಧ್ಯಾನಪರವಶನಾಗಿ [1]ಯೇಸುವನ್ನು ಕಂಡೆನು.
ಆತನು — ನೀನು ತ್ವರೆಪಟ್ಟು ಬೇಗನೆ ಯೆರೂಸಲೇಮಿ 18
ನಿಂದ ಹೊರಟುಹೋಗು, ನನ್ನ ವಿಷಯದಲ್ಲಿ ನೀನು
ಹೇಳುವ ಸಾಕ್ಷಿಯನ್ನು ಅವರು ಅಂಗೀಕರಿಸುವದಿಲ್ಲ
ಅಂದನು. ಅದಕ್ಕೆ ನಾನು — ಕರ್ತನೇ, ಎಲ್ಲಾ ಸಭಾ 19
ಮಂದಿರಗಳಲ್ಲಿ ನಿನ್ನ ಮೇಲೆ ನಂಬಿಕೆಯಿಟ್ಟವರನ್ನು
ನಾನು ಸೆರೆಮನೆಯಲ್ಲಿ ಹಾಕಿಸುತ್ತಾ ಹೊಡಿಸುತ್ತಾ ಇದ್ದೆ
ನೆಂಬದನ್ನು ಅವರೇ ತಿಳಿದಿದ್ದಾರೆ; ಮತ್ತು ನಿನ್ನ ಸಾಕ್ಷಿ 20
ಯಾದ ಸ್ತೆಫನನ ರಕ್ತವು ಚೆಲ್ಲಿಸಲ್ಪಟ್ಟಾಗ ನಾನೂ
ಹತ್ತರ ನಿಂತು ಒಪ್ಪಿಕೊಂಡು ಅವನನ್ನು ಕೊಂದವರ
ವಸ್ತ್ರಗಳನ್ನು ಕಾಯುತ್ತಿದ್ದೆನಲ್ಲಾ ಅಂದೆನು. ಆತನು — 21
ನೀನು ಹೋಗು, ನಾನು ನಿನ್ನನ್ನು ದೂರಕ್ಕೆ ಅನ್ಯಜನರ
ಬಳಿಗೆ ಕಳುಹಿಸುತ್ತೇನೆಂದು ಹೇಳಿದನು.
ಈ ಮಾತಿನ ತನಕ ಅವರು ಕೇಳುತ್ತಿದ್ದರು; ಆ 22
ಮೇಲೆ — ಇಂಥವನನ್ನು ಭೂಮಿಯಿಂದ ತೆಗೆದುಹಾಕಿ
ಬಿಡು; ಇವನು ಬದುಕುವದು ಯುಕ್ತವಲ್ಲವೆಂದು
ಕೂಗಿಹೇಳಿದರು. ಅವರು ಕೂಗುತ್ತಾ ತಮ್ಮ ವಸ್ತ್ರ 23
ಗಳನ್ನು ಕಿತ್ತುಹಾಕುತ್ತಾ ಧೂಳನ್ನು ತೂರುತ್ತಾ ಇರ
ಲಾಗಿ ಯಾವ ಕಾರಣದಿಂದ ಹೀಗೆ ಅವನಿಗೆ ವಿರುದ್ಧ 24
ವಾಗಿ ಕೂಗಾಡುತ್ತಾರೆಂಬದನ್ನು ಸಹಸ್ರಾಧಿಪತಿಯು
ತಿಳುಕೊಳ್ಳುವದಕ್ಕಾಗಿ ಅವನನ್ನು ಕೋಟೆಯೊಳಗೆ
ತಂದು ಕೊರಡೆಗಳಿಂದ ಹೊಡೆದು ವಿಚಾರಿಸಬೇಕೆಂದು
ಆಜ್ಞಾಪಿಸಿದನು. ಅವರು ಪೌಲನನ್ನು ಬೊಗ್ಗಿಸಿ ಬಾರು 25
ಗಳಿಂದ ಕಟ್ಟುವಾಗ ಅವನು ತನ್ನ ಹತ್ತರ ನಿಂತಿದ್ದ
ಶತಾಧಿಪತಿಯನ್ನು — ರೋಮಾಪುರದ ಹಕ್ಕುದಾರನಾದ
ಮನುಷ್ಯನನ್ನು ನ್ಯಾಯವಿಚಾರಣೆಮಾಡದೆ ಕೊರಡೆ
ಗಳಿಂದ ಹೊಡಿಸುವದು ನಿಮಗೆ ನ್ಯಾಯವೋ? ಎಂದು
ಕೇಳಿದನು. ಶತಾಧಿಪತಿಯು ಆ ಮಾತನ್ನು ಕೇಳಿ 26
ಸಹಸ್ರಾಧಿಪತಿಯ ಬಳಿಗೆ ಹೋಗಿ — ನೀನು ಏನು ಮಾ
ಡಬೇಕೆಂದಿದ್ದೀ? ಈ ಮನುಷ್ಯನು ರೋಮಾಪುರದ
ಹಕ್ಕುದಾರನು ಎಂದು ಹೇಳಲು ಸಹಸ್ರಾಧಿಪತಿಯು 27
ಪೌಲನ ಹತ್ತರಕ್ಕೆ ಬಂದು — ನೀನು ರೋಮಾಪುರದವರ
ಹಕ್ಕುಳ್ಳವನೇನು? ನನಗೆ ಹೇಳು ಎಂದು ಅವನನ್ನು
ಕೇಳಿದನು. ಅವನು, ಹೌದು ಅಂದನು. ಅದಕ್ಕೆ ಸಹ 28
ಸ್ರಾಧಿಪತಿಯು — ನಾನು ಬಹಳ ಹಣಕೊಟ್ಟು ಆ ಹಕ್ಕ
ನ್ನು ಕೊಂಡುಕೊಂಡೆನು ಅನ್ನಲು ಪೌಲನು — ನಾನಾ
ದರೋ ಹಕ್ಕುದಾರನಾಗಿ ಹುಟ್ಟಿದವನು ಅಂದನು.
ಅವನನ್ನು ಹೊಡೆದುವಿಚಾರಿಸುವದಕ್ಕೆ ಬಂದವರು ಕೂ 29

1) ಮೂಲ: ಆತನನ್ನು.

ಡಲೆ ಅವನನ್ನು ಬಿಟ್ಟರು. ಅದಲ್ಲದೆ ಅವನನ್ನು ರೋ
ಮಾಪುರದ ಹಕ್ಕುದಾರನೆಂದು ಸಹಸ್ರಾಧಿಪತಿಗೆ ತಿಳಿದು
ಬಂದಾಗ ತಾನು ಅವನನ್ನು ಕಟ್ಟಿಸಿದ್ದರಿಂದ ಅವ
ನಿಗೂ ಭಯಹಿಡಿಯಿತು.

ಪೌಲನು ಹಿರೀಸಭೆಯುವರ ಮುಂದೆ ನಿಂತು ಮಾತಾಡಿದ್ದು.

30 ಪೌಲನ ಮೇಲೆ ಯೆಹೂದ್ಯರು ಯಾವ ತಪ್ಪು ಹೊರಿ
ಸುತ್ತಾರೆಂಬುವ ವಿಷಯದಲ್ಲಿ ನಿಜವಾದ ಸಂಗತಿಯನ್ನು
ತಿಳಿಯಬೇಕೆಂದು ಅಪೇಕ್ಷಿಸಿ ಸಹಸ್ರಾಧಿಪತಿಯು ಮರು
ದಿನ ಅವನ ಬೇಡಿಗಳನ್ನು ಬಿಚ್ಚಿ ಮಹಾಯಾಜಕರೂ
ಹಿರೀಸಭೆಯುವರೆಲ್ಲರೂ ಕೂಡಿಬರುವದಕ್ಕೆ ಅಪ್ಪಣೆ
ಕೊಟ್ಟು ಪೌಲನನ್ನು ಕರೆದುಕೊಂಡುಹೋಗಿ ಅವರ
ಮುಂದೆ ನಿಲ್ಲಿಸಿದನು.

23 ಈಗ ಪೌಲನು ಹಿರೀಸಭೆಯನ್ನು ದೃಷ್ಟಿಸಿ
ನೋಡಿ—ಸಹೋದರರೇ, ನಾನು ಈ ದಿನದ ವರೆ
ಗೂ ಒಳ್ಳೇ ಮನಸ್ಸಾಕ್ಷಿಯಿಂದ ದೇವರ ಮುಂದೆ
2 ನಡೆದುಕೊಂಡಿದ್ದೇನೆ ಅಂದನು. ಅದಕ್ಕೆ ಮಹಾಯಾ
ಜಕನಾದ ಅನನೀಯನು—ಅವನ ಬಾಯ ಮೇಲೆ
ಹೊಡೆಯಿರಿ ಎಂದು ಹತ್ತರದಲ್ಲಿ ನಿಂತಿದ್ದವರಿಗೆ ಅಪ್ಪಣೆ
3 ಕೊಡಲು ಪೌಲನು ಅವನಿಗೆ— ಎಲೈ ಸುಣ್ಣಾ ಹಚ್ಚಿದ
ಗೋಡೆಯೇ, ದೇವರು ನಿನ್ನನ್ನು ಹೊಡೆಯುವನು.
ನೀನು ಧರ್ಮಶಾಸ್ತ್ರಾನುಸಾರವಾಗಿ ನನ್ನ ವಿಚಾರಣೆ
ಮಾಡುವದಕ್ಕೆ ಕೂತುಕೊಂಡು ಧರ್ಮಶಾಸ್ತ್ರವಿರುದ್ಧ
ವಾಗಿ ನನ್ನನ್ನು ಹೊಡೆಯುವದಕ್ಕೆ ಅಪ್ಪಣೆಕೊಡು
4 ತ್ತೀಯೋ? ಅಂದನು. ಹತ್ತರ ನಿಂತಿದ್ದವರು— ದೇವರು
ನೇಮಿಸಿದ ಮಹಾಯಾಜಕನನ್ನು ನೀನು ಬೈಯುತ್ತೀ
5 ಯಾ? ಅನ್ನಲು ಪೌಲನು— ಸಹೋದರರೇ, ಮಹಾ
ಯಾಜಕನೆಂದು ನನಗೆ ತಿಳಿಯಲಿಲ್ಲ. ನಿನ್ನ ಜನ
ರಲ್ಲಿ ಅಧಿಪತಿಯಾಗಿರುವವನ ವಿಷಯವಾಗಿ ಕೆಟ್ಟದ್ದೇ
6 ನೂ ಆಡಬಾರದೆಂದು ಬರೆದದೆಯಷ್ಟೆ ಅಂದನು. ಸಭೆ
ಯವರಲ್ಲಿ ಒಂದು ಪಾಲು ಸದ್ದುಕಾಯರೂ ಒಂದು
ಪಾಲು ಫರಿಸಾಯರೂ ಇರುವದನ್ನು ಪೌಲನು ತಿಳಿ
ದು— ಸಹೋದರರೇ, ನಾನು ಫರಿಸಾಯನು, ಫರಿಸಾ
ಯರ ಮಗನು; ಸತ್ತವರೆದ್ದುಬರುವರು ಎಂಬ ನಿರೀ
ಕ್ಷೆಯ ವಿಷಯವಾಗಿ ನನ್ನನ್ನು ವಿಚಾರಣೆಮಾಡುತ್ತಾರೆ
7 ಎಂದು ಹಿರೀಸಭೆಯಲ್ಲಿ ಕೂಗಿದನು. ಇದನ್ನು ಅವನು
ಹೇಳಿದಾಗ ಫರಿಸಾಯರಿಗೂ ಸದ್ದುಕಾಯರಿಗೂ ಜಗಳ
8 ಹುಟ್ಟಿತು; ಸಭೆಯಲ್ಲಿ ಭೇದವುಂಟಾಯಿತು. ಯಾಕಂ
ದರೆ— ಸತ್ತವರು ಎದ್ದುಬರುವದಿಲ್ಲವೆಂತಲೂ ದೇವ
ದೂತನಾಗಲಿ ದೇಹವಿಲ್ಲದ ಆತ್ಮವಾಗಲಿ ಇಲ್ಲವೆಂತಲೂ
ಸದ್ದುಕಾಯರು ಹೇಳುವರು; ಆ ಎರಡೂ ಉಂಟೆಂದು
9 ಫರಿಸಾಯರು ಒಪ್ಪಿಕೊಳ್ಳುವರು. ಆಗ ದೊಡ್ಡ ಕೂ
ಗಾಟವಾಯಿತು. ಫರಿಸಾಯರ ಪಕ್ಷದವರಾದ ಶಾಸ್ತ್ರಿ
ಗಳಲ್ಲಿ ಕೆಲವರು ಎದ್ದು— ಈ ಮನುಷ್ಯನಲ್ಲಿ ನಮಗೆ
ಕೆಟ್ಟದ್ದೇನೂ ಕಾಣಬರುವದಿಲ್ಲ; ಆತ್ಮವಾಗಲಿ ದೇವ
ದೂತನಾಗಲಿ ಅವನ ಸಂಗಡ ಮಾತಾಡಿದ್ದರೂ
ಮಾತಾಡಿರಬಹುದು ಎಂದು ವಾಗ್ವಾದಮಾಡಿದರು.
10 ಜಗಳವು ಬಹಳವಾದಾಗ ಅವರು ಪೌಲನನ್ನು ಎಳದಾಡಿ
ಚೂರುಚೂರು ಮಾಡಾರೆಂದು ಸಹಸ್ರಾಧಿಪತಿಯು
ಭಯಪಟ್ಟು ಸಿಪಾಯಿಗಳಿಗೆ— ನೀವು ಹೋಗಿ ಅವ
ಮಧ್ಯದಿಂದ ಅವನನ್ನು ಬಲವಂತವಾಗಿ ಹಿಡಿದು ಕೋ
ಯೊಳಗೆ ತರಬೇಕೆಂದು ಆಜ್ಞೆ ಕೊಟ್ಟನು.
ಆ ದಿನದ ರಾತ್ರಿ ಕರ್ತನು ಪೌಲನ ಬಳಿಯ
ನಿಂತುಕೊಂಡು— ಧೈರ್ಯದಿಂದಿರು; ನೀನು ಯೆರೂ
ಲೇಮಿನಲ್ಲಿ ನನ್ನ ಸಂಗತಿಯನ್ನೆಲ್ಲಾ ಸಾಕ್ಷಿಯಾಗಿ ಹೇ
ದಂತೆಯೇ ರೋಮಾಪುರದಲ್ಲಿಯೂ ಸಾಕ್ಷಿಹೇಳಬೇಕ
ಗುವದು ಅಂದನು.

ಕೆಲವರು ಪೌಲನನ್ನು ಕೊಲ್ಲುವದಕ್ಕೆ ಶಪಥಮಾಡಲು
ಸಹಸ್ರಾಧಿಪತಿಯು ಅವನನ್ನು ಕೈಸರೈಯಕ್ಕೆ ದೇಶಾಧಿಪತಿ
ಯಾದ ಫೇಲಿಕ್ಸನ ಬಳಿಗೆ ಕಳುಹಿಸಿದ್ದು.

ಬೆಳಗಾದ ಮೇಲೆ ಯೆಹೂದ್ಯರು ಒಳಸಂಚು ಮಾ
ಡಿ— ನಾವು ಪೌಲನನ್ನು ಕೊಲ್ಲುವ ತನಕ ಅನ್ನಪಾನವೇ
ನೂ ಮುಟ್ಟುವದಿಲ್ಲವೆಂದು ಶಪಥಮಾಡಿಕೊಂಡರು
ಹೀಗೆ ಮಾಡಿದವರು ನಾಲ್ವತ್ತು ಮಂದಿಗಿಂತ ಹೆಚ್ಚಾಗಿದ್ದ
ರು. ಇವರು ಮಹಾಯಾಜಕರ ಮತ್ತು ಸಭೇಹಿರಿಯರ
ಬಳಿಗೆ ಹೋಗಿ— ನಾವು ಪೌಲನನ್ನು ಕೊಲ್ಲುವ ತನಕ
ಬಾಯಲ್ಲಿ ಏನೂ ಹಾಕುವದಿಲ್ಲವೆಂದು ಕಠಿನ ಶಪಥ
ವನ್ನು ಮಾಡಿಕೊಂಡಿದ್ದೇವೆ. ಆದದರಿಂದ ನೀವು ಸಭೆ
ಯವರ ಸಹಿತ ಸಹಸ್ರಾಧಿಪತಿಯ ಬಳಿಗೆ ಹೋಗಿ ಪೌಲ
ನ ಸಂಗತಿಯನ್ನು ಇನ್ನೂ ಸೂಕ್ಷ್ಮವಾಗಿ ವಿಮರ್ಶೆ
ಮಾಡಬೇಕೆಂದು ನೆವಹೇಳಿ ಅವನನ್ನು ಕೋಟೆಯಿಂದ
ನಿಮ್ಮ ಬಳಿಗೆ ಕರೆದುಕೊಂಡು ಬರುವ ಹಾಗೆ ಕೇಳಿ
ಕೊಳ್ಳಬೇಕು. ನಾವಾದರೋ ಅವನು ಹತ್ತರ ಬರುವ
ದಕ್ಕಿಂತ ಮುಂಚೆಯೇ ಅವನನ್ನು ಕೊಲ್ಲುವದಕ್ಕೆ ಸಿದ್ಧ
ವಾಗಿದ್ದೇವೆ ಅಂದರು. ಅವರು ಹೊಂಚಿಕೊಂಡಿರುವ
ದನ್ನು ಪೌಲನ ಸೋದರಳಿಯನು ಕೇಳಿ ಕೋಟೆಯೊಳ
ಗೆ ಬಂದು ಪೌಲನಿಗೆ ತಿಳಿಸಿದನು. ಪೌಲನು ಶತಾಧಿ
ಪತಿಗಳಲ್ಲಿ ಒಬ್ಬನನ್ನು ಕರೆಯಿಸಿ— ಈ ಯೌವನಸ್ಥ
ನನ್ನು ಸಹಸ್ರಾಧಿಪತಿಯ ಬಳಿಗೆ ಕರೆದುಕೊಂಡು
ಹೋಗು; ಅವನಿಗೆ ತಿಳಿಸಬೇಕಾದ ಒಂದು ಮಾತು
ಅದೆ ಎಂದು ಹೇಳಿದನು. ಶತಾಧಿಪತಿ ಅವನನ್ನು ಸಹ
ಸ್ರಾಧಿಪತಿಯ ಬಳಿಗೆ ಕರೆದುಕೊಂಡು ಹೋಗಿ— ಸೆರೆ
ಯವನಾದ ಪೌಲನು ನನ್ನನ್ನು ಕರೆದು ಈ ಯೌವನ
ಸ್ಥನನ್ನು ತಮ್ಮ ಬಳಿಗೆ ಕರೆದುಕೊಂಡುಹೋಗುವಂತೆ
ಬೇಡಿಕೊಂಡನು; ತಮಗೆ ತಿಳಿಸಬೇಕಾದ ಏನೋ
ಒಂದು ಮಾತು ಅದೆಯಂತೆ ಎಂಬದಾಗಿ ಹೇಳಲು
ಸಹಸ್ರಾಧಿಪತಿಯು ಅವನನ್ನು ಕೈಹಿಡಿದು ಒಂದು ಕಡೆ
ಗೆ ಏಕಾಂತವಾಗಿ ಕರೆದುಕೊಂಡು ಹೋಗಿ— ನೀನು
ನನಗೆ ಹೇಳಬೇಕಾದದ್ದು ಏನು? ಎಂದು ಕೇಳಿದನು
ಅವನು— ಯೆಹೂದ್ಯರು ಪೌಲನ ಸಂಗತಿಯನ್ನು
ಇನ್ನೂ ಸೂಕ್ಷ್ಮವಾಗಿ ವಿಚಾರಣೆಮಾಡಬೇಕೆಂಬ ನೆವ
ಹೇಳಿ ನೀನು ನಾಳೆ ಅವನನ್ನು ಹಿರೀಸಭೆಯ ಬಳಿಗೆ
ಕರೆದುಕೊಂಡು ಬರಬೇಕೆಂದು ಕೇಳಿಕೊಳ್ಳುವದಕ್ಕೆ
ಒಪ್ಪಂದ ಮಾಡಿಕೊಂಡಿದ್ದಾರೆ. ನೀನು ಅವರ ಮಾತಿಗೆ
ಒಡಂಬಡಬೇಡ; ಯಾಕಂದರೆ ನಾಲ್ವತ್ತಕ್ಕಿಂತ ಹೆಚ್ಚು
ಮಂದಿ ತಾವು ಅವನನ್ನು ಕೊಲ್ಲುವ ತನಕ ಅನ್ನಪಾನ
ವೇನೂ ಮುಟ್ಟುವದಿಲ್ಲವೆಂದು ಶಪಥವನ್ನು ಮಾಡಿ

ಕೊಂಡು ಅವನಿಗೋಸ್ಕರ ಹೊಂಚುಹಾಕುತ್ತಾ ಇದ್ದಾರೆ. ಈಗ ಅವರು ನಿನ್ನ ಅಪ್ಪಣೆಯನ್ನು ಎದುರುನೋಡುತ್ತಾ ಸಿದ್ಧವಾಗಿದ್ದಾರೆ ಅಂದನು. ಆಗ ಸಹಸ್ರಾಧಿಪತಿಯು ಆ ಯೌವನಸ್ಥನಿಗೆ— ಈ ಸಂಗತಿಗಳನ್ನು ನನಗೆ ಸೂಚಿಸಿದ್ದನ್ನು ನೀನು ಯಾರಿಗೂ ಹೇಳಬೇಡ ಎಂದು ಖಂಡಿತವಾಗಿ ಅಪ್ಪಣೆ ಕೊಟ್ಟು ಅವನನ್ನು ಕಳುಹಿಸಿಬಿಟ್ಟನು. ಆ ಮೇಲೆ ಅವನು ಶತಾಧಿಪತಿಗಳಲ್ಲಿ ಇಬ್ಬರನ್ನು ಕರೆಯಿಸಿ—1)ರಾತ್ರಿ ಒಂಭತ್ತು ಘಂಟೆಗೆ ಕೈಸರೈಯದ ತನಕ ಹೋಗುವಂತೆ ಇನ್ನೂರು ಮಂದಿ ಸಿಪಾಯಿಗಳನ್ನೂ ಎಪ್ಪತ್ತುಮಂದಿ ಸವಾರರನ್ನೂ ಇನ್ನೂರು ಮಂದಿ ಭಲ್ಲೆಯವರನ್ನೂ ಸಿದ್ಧಮಾಡಿರಿ; ಮತ್ತು ಕುದುರೆಗಳನ್ನು ಸಿದ್ಧಮಾಡಿ ಪೌಲನನ್ನು ಹತ್ತಿಸಿ ದೇಶಾಧಿಪತಿಯಾದ ಫೇಲಿಕ್ಸನ ಬಳಿಗೆ ಸುರಕ್ಷಿತವಾಗಿ ಕರೆದುಕೊಂಡುಹೋಗಬೇಕೆಂದು ಹೇಳಿದನು. ಇದಲ್ಲದೆ ಈ ಕೆಳಗಣ ಅಭಿಪ್ರಾಯದ ಒಂದು ಕಾಗದವನ್ನು ಬರೆದನು, ಏನಂದರೆ—

ಮಹಾರಾಜರಾಜಶ್ರೀ ದೇಶಾಧಿಪತಿಯಾದ ಫೇಲಿಕ್ಸನಿಗೆ ಕ್ಲೌದ್ಯ ಲೂಸ್ಯನು ಮಾಡುವ ವಂದನೆ. ಯೆಹೂದ್ಯರು ಈ ಮನುಷ್ಯನನ್ನು ಹಿಡಿದು ಕೊಲ್ಲಬೇಕೆಂದಿದ್ದಾಗ ನಾನು ಸಿಪಾಯಿಗಳೊಂದಿಗೆ ಹೋಗಿ ಅವನನ್ನು ರೋಮಾಪುರದ ಹಕ್ಕುದಾರನೆಂದು ತಿಳಿದು ಅವನನ್ನು ತಪ್ಪಿಸಿದೆನು. ಇದಲ್ಲದೆ ಅವನ ಮೇಲೆ ತಪ್ಪು ಹೊರಿಸಿದ ಕಾರಣವನ್ನು ತಿಳಿಯಲಪೇಕ್ಷಿಸಿ ಅವನನ್ನು ಅವರ ಹಿರೀಸಭೆಗೆ ಕರೆದುಕೊಂಡುಹೋದೆನು. ಅಲ್ಲಿ ಅವರು ತಮ್ಮ ಧರ್ಮಶಾಸ್ತ್ರವಿಷಯಗಳನ್ನು ಹಿಡಿದು ಅವನ ಮೇಲ ತಪ್ಪು ಹೊರಿಸಿದರೇ ಹೊರತು ಮರಣದಂಡನೆಗಾಗಲಿ ಬೇಡಿಗಾಗಲಿ ಆಧಾರವಾದ ಯಾವ ಅಪರಾಧವನ್ನೂ ಹೊರಿಸಲಿಲ್ಲವೆಂದು ನನಗೆ ಕಂಡುಬಂತು. ಈ ಮನುಷ್ಯನಿಗೆ ವಿರುದ್ಧವಾಗಿ ಒಳಸಂಚು ಹುಟ್ಟಿತೆಂದು ನನಗೆ ತಿಳಿದುಬಂದದರಿಂದ ಕೂಡಲೆ ನಾನು ಅವನನ್ನು ನಿನ್ನ ಬಳಿಗೆ ಕಳುಹಿಸಿ ತಪ್ಪುಹೊರಿಸುವವರಿಗೆ ನಿನ್ನ ಮುಂದೆಯೇ ಅವನಿಗೆ ವಿರುದ್ಧವಾಗಿ ಮಾತಾಡುವ ಹಾಗೆ ಅಪ್ಪಣೆ ಕೊಟ್ಟೆನು ಎಂಬದೇ.

ಸಿಪಾಯಿಗಳು ತಮಗೆ ಅಪ್ಪಣೆಯಾದಂತೆ ರಾತ್ರಿಕಾಲದಲ್ಲಿ ಪೌಲನನ್ನು ಅಂತಿಪತ್ರಿಗೆ ಕರೆದುಕೊಂಡು ಹೋದರು. ಮರುದಿನ ಅವರು ಸವಾರರನ್ನು ಅವನ ಜೊತೆಯಲ್ಲಿ ಹೋಗುವಂತೆ ಮಾಡಿ ತಾವು ಕೋಟೆಗೆ ಹಿಂತಿರುಗಿ ಬಂದರು. ಸವಾರರು ಕೈಸರೈಯಕ್ಕೆ ಸೇರಿ ದೇಶಾಧಿಪತಿಗೆ ಕಾಗದವನ್ನು ಒಪ್ಪಿಸಿ ಪೌಲನನ್ನು ಅವನ ಮುಂದೆ ಸಿಲ್ಲಿಸಿದರು. ದೇಶಾಧಿಪತಿಯು ಆ ಕಾಗದವನ್ನು ಓದಿ ಪೌಲನು ಯಾವ ಸೀಮೆಯವನು? ಎಂದು ಕೇಳಿ ಅವನು ಕಿಲಿಕ್ಯದವನೆಂದು ತಿಳಿದು— ನಿನ್ನ ಮೇಲೆ ತಪ್ಪುಹೊರಿಸುವವರು ಬಂದನಂತರ ನಿನ್ನ ಕಾರ್ಯವನ್ನು ಪೂರ್ಣವಾಗಿ ವಿಚಾರಿಸುತ್ತೇನೆ ಎಂದು ಹೇಳಿ ಅವನನ್ನು ಹೆರೋದನ ಅರಮನೆಯಲ್ಲಿ ಇಟ್ಟು ಕಾಯಬೇಕೆಂಬದಾಗಿ ಅಪ್ಪಣೆಮಾಡಿದನು.

ಫೇಲಿಕ್ಸನ ಮುಂದೆ ನಡೆದ ನ್ಯಾಯವಿಚಾರಣೆ.

24 ಐದು ದಿವಸಗಳಾದ ಮೇಲೆ ಮಹಾಯಾಜಕ
ನಾದ ಅನನೀಯನು ಸಭೇಹಿರಿಯರಲ್ಲಿ ಕೆಲವರನ್ನೂ
ತೆರ್ತುಲ್ಲನೆಂಬ ಒಬ್ಬ ವಕೀಲನನ್ನೂ ಕರೆದುಕೊಂಡು
ಬಂದು ಪೌಲನ ಮೇಲೆ ದೇಶಾಧಿಪತಿಗೆ ಫಿರಿಯಾದಿ
ಹೇಳಿದನು. ಪೌಲನನ್ನು ಕರೆಯಿಸಿದನಂತರ ತೆರ್ತುಲ್ಲ 2
ನು ಅವನ ಮೇಲೆ ತಪ್ಪುಹೊರಿಸುವದಕ್ಕೆ ಪ್ರಾರಂಭಿಸಿ
ಹೀಗಂದನು— ಶ್ರೀಮತ್ ಮಹಾ ಫೇಲಿಕ್ಸನೇ, ನಿನ್ನ
ಮೂಲಕವಾಗಿ ನಮಗೆ ಬಹು ಸಮಾಧಾನ ಉಂಟಾಗು
ವದರಿಂದಲೂ ನಿನ್ನ ಪರಾಮರಿಕೆಯಿಂದ ಈ ದೇಶದ
ಜನರಿಗೆ ಎಲ್ಲಾ ವಿಧದಲ್ಲಿಯೂ ಎಲ್ಲಾ ಸ್ಥಳದಲ್ಲಿಯೂ
ಸುಧಾರಣೆಗಳು ಆಗುವದರಿಂದಲೂ ನಾವು ಈ ಉಪ 3
ಕಾರಗಳನ್ನು ಕೃತಜ್ಞತೆಯಿಂದ ಒಪ್ಪಿಕೊಳ್ಳುತ್ತೇವೆ.
ಆದರೆ ನಿನ್ನನ್ನು ಹೆಚ್ಚಾಗಿ ಬೇಸರಗೊಳಿಸುವದಕ್ಕೆ ಮನ 4
ಸ್ಸಿಲ್ಲದೆ ನಾವು ಸಂಕ್ಷೇಪವಾಗಿ ಹೇಳುವ ಮಾತುಗಳ
ನ್ನು ದಯೆಯಿಂದ ಲಾಲಿಸಬೇಕೆಂದು ಬೇಡಿಕೊಳ್ಳು
ತ್ತೇನೆ. ಈ ಮನುಷ್ಯನನ್ನು ಪೀಡೆಯಂತಿದ್ದು ಲೋಕ 5
ದಲ್ಲಿ ಎಲ್ಲೆಲ್ಲಿಯೂ ಇರುವ ಎಲ್ಲಾ ಯೆಹೂದ್ಯರಲ್ಲಿ
ದಂಗೆಯನ್ನು ಎಬ್ಬಿಸುವವನೆಂತಲೂ ನಜರೇತಿನವರ
ಪಾಷಂಡಮತದಲ್ಲಿ ಪ್ರಮುಖನೆಂತಲೂ ಕಂಡೆವು.
ಇದಲ್ಲದೆ ಇವನು ದೇವಾಲಯವನ್ನು ಹೊಲೆಮಾಡುವ 6
ದಕ್ಕೆ ಪ್ರಯತ್ನಮಾಡಿದನು; ಆದಕಾರಣ ಇವನನ್ನು
ನಾವು ಹಿಡಿದೆವು.2) ಇವನನ್ನು ನೀನೇ ವಿಚಾರಿಸಿದರೆ 8
ನಾವು ಇವನ ಮೇಲೆ ಹೊರಿಸುವ ಈ ತಪ್ಪುಗಳೆಲ್ಲಾ
ನಿಜವೋ ಸುಳ್ಳೋ ಇವನಿಂದಲೇ ತಿಳಿದುಕೊಳ್ಳಬಹು
ದು ಎಂದು ಹೇಳಿದನು. ಆಗ ಯೆಹೂದ್ಯರು ಈ ಸಂಗ 9
ತಿಗಳು ನಿಜವೇ ಎಂದು ಹೇಳಿ ತಾವೂ ಆ ದೋಷಾರೋ
ಪಣೆ ಮಾಡುವದರಲ್ಲಿ ಸೇರಿದರು.

ದೇಶಾಧಿಪತಿಯು ಪೌಲನಿಗೆ—ನೀನು ಮಾತಾಡ 10
ಬಹುದೆಂದು ಸನ್ನೆಮಾಡಲು ಅವನು ಪ್ರತ್ಯುತ್ತರವನ್ನು
ಹೇಳಿದ್ದೇನಂದರೆ—

ನೀನು ಅನೇಕ ವರುಷಗಳಿಂದ ಈ ದೇಶದ ಜನರಿಗೆ
ನ್ಯಾಯಾಧಿಪತಿಯಾಗಿರುತ್ತೀ ಎಂದು ತಿಳಿದು ನಾನು
ಧೈರ್ಯವಾಗಿ ಪ್ರತಿವಾದ ಮಾಡುತ್ತೇನೆ. ನಾನು ದೇ 11
ವಾರಾಧನೆಮಾಡುವದಕ್ಕೆ ಯೆರೂಸಲೇಮಿಗೆ ಹೋಗಿ
ಹನ್ನೆರಡು ದಿವಸ ಮಾತ್ರವಾಯಿತೆಂದು ನೀನು ತಿಳಿ
ದುಕೊಳ್ಳಬಹುದು. ಅಲ್ಲಿ ದೇವಾಲಯದಲ್ಲಾಗಲಿ 12
ಸಭಾಮಂದಿರಗಳಲ್ಲಾಗಲಿ ಪಟ್ಟಣದಲ್ಲಾಗಲಿ ನಾನು
ಯಾರ ಸಂಗಡಲಾದರೂ ವಾದಿಸುವದನ್ನು ಇಲ್ಲವೆ ಜನ
ರ ಗುಂಪು ಕೂಡಿಸುವದನ್ನು ಇವರು ಕಾಣಲಿಲ್ಲ. ಇದ 13
ಲ್ಲದೆ ಇವರು ಈಗ ನನ್ನ ಮೇಲೆ ಹೊರಿಸುವ ತಪ್ಪುಗಳ
ನ್ನು ನಿಜವೆಂದು ನಿನಗೆ ತೋರಿಸಲಾರರು. ಒಂದನ್ನು 14
ಮಾತ್ರ ನಿನ್ನ ಮುಂದೆ ಒಪ್ಪಿಕೊಳ್ಳುತ್ತೇನೆ, ಅದೇನಂದ
ರೆ—ಇವರು ಪಾಷಂಡಮತವೆಂದು ಹೇಳುವ ಮಾರ್ಗ

1) ಮೂಲ: ಮೂರು ತಾಸು ರಾತ್ರಿಗೆ. 2) ಕೆಲವು ಪ್ರತಿಗಳಲ್ಲಿ ಬರೆದಿರುವ ಹೆಚ್ಚು ಮಾತುಗಳೇನಂದರೆ—ನಮ್ಮ ಧರ್ಮಶಾಸ್ತ್ರಕ್ಕನುಸಾರವಾಗಿ ಅವನನ್ನು ವಿಚಾರಿಸಬೇಕೆಂದಿದ್ದೆವು. (7) ಆದರೆ ಸಹಸ್ರಾಧಿಪತಿಯಾದ ಲೂಸ್ಯನು ಬಂದು ಬಲಾತ್ಕಾರಮಾಡಿ ಅವನನ್ನು ನಮ್ಮಿಂದ ತಪ್ಪಿಸಿ, (8) ಅವನ ಮೇಲೆ ತಪ್ಪುಹೊರಿಸುವವರು ನಿನ್ನ ಹತ್ತರ ಬರಬೇಕೆಂದು ಅಪ್ಪಣೆಕೊಟ್ಟನು.

ಕ್ಕನುಸಾರವಾಗಿ ನಾನು ನಮ್ಮ ಪಿತೃಗಳ ದೇವರನ್ನು
ಸೇವಿಸುವವನಾಗಿದ್ದೇನೆ. ಧರ್ಮಶಾಸ್ತ್ರಕ್ಕನುಗುಣ
ವಾಗಿರುವ ಮತ್ತು ಪ್ರವಾದಿಗಳ ಗ್ರಂಥಗಳಲ್ಲಿ ಬರೆದಿ
15 ರುವ ಎಲ್ಲಾ ವಿಷಯಗಳನ್ನು ನಂಬುತ್ತೇನೆ. ಇದಲ್ಲದೆ
ನೀತಿವಂತರಿಗೂ ಅನೀತಿವಂತರಿಗೂ ಪುನರುತ್ಥಾನವಾ
ಗುವದೆಂದು ಇವರು ದೇವರಲ್ಲಿ ನಿರೀಕ್ಷೆಯಿಟ್ಟಿರುವ
16 ಪ್ರಕಾರವೇ ನಾನೂ ನಿರೀಕ್ಷೆಯುಳ್ಳವನಾಗಿದ್ದೇನೆ; ಇದ
ರ ದೆಸೆಯಿಂದ ದೇವರ ವಿಷಯದಲ್ಲಿಯೂ ಮನುಷ್ಯರ
ವಿಷಯದಲ್ಲಿಯೂ ನಾನು ನಿರ್ದೋಷಿ ಎಂದು ಸಾಕ್ಷಿ
ಹೇಳುವ ಮನಸ್ಸು ನನಗೆ ಯಾವಾಗಲೂ ಇರಬೇಕೆಂದು
17 ಅಭ್ಯಾಸಮಾಡಿಕೊಳ್ಳುತ್ತೇನೆ. ಕೆಲವು ವರುಷಗಳಾದ
ಮೇಲೆ ನಾನು ನನ್ನ ಸ್ವದೇಶದವರಿಗೆ ಧರ್ಮದ್ರವ್ಯ
ಗಳನ್ನು ತರುವದಕ್ಕೂ ಕಾಣಿಕೆಗಳನ್ನು ಒಪ್ಪಿಸುವದ
18 ಕ್ಕೂ ಬಂದೆನು. ನಾನು ಶುದ್ಧಮಾಡಿಕೊಂಡವನಾಗಿ
ಅವುಗಳನ್ನು ಒಪ್ಪಿಸುತ್ತಿರುವಲ್ಲಿ ನನ್ನನ್ನು ದೇವಾಲಯ
ದಲ್ಲಿ ಕಂಡರು; ನನ್ನ ಬಳಿಯಲ್ಲಿ ಜನರ ಗುಂಪು ಇರಲಿ
19 ಲ್ಲ, ಗದ್ದಲವೂ ಇರಲಿಲ್ಲ. ನನ್ನನ್ನು ಕಂಡವರು ಆಸ್ಯ
ಸೀಮೆಯಿಂದ ಬಂದ ಕೆಲವು ಯೆಹೂದ್ಯರೇ; ನನ್ನ
ಮೇಲೆ ಅವರಿಗೆ ಏನಾದರೂ ಇದ್ದರೆ ತಾವೇ ನಿನ್ನ
ಮುಂದೆ ತಪ್ಪುಹೊರಿಸುವದಕ್ಕೆ ಇಲ್ಲಿ ಬರಬೇಕಾಗಿತ್ತು.
20 ಇಲ್ಲವಾದ್ದರಿಂದ ನಾನು ಹಿರೀಸಭೆಯ ಎದುರಿನಲ್ಲಿ
ನಿಂತಿದ್ದಾಗ ನನ್ನಲ್ಲಿ ಅಕ್ರಮವನ್ನೇನಾದರೂ ಕಂಡಿದ್ದ
21 ರೆ ಇವರೇ ಹೇಳಲಿ. ನಾನು ಇವರ ನಡುವೆ ನಿಂತು—
ಪುನರುತ್ಥಾನದ ವಿಷಯದಲ್ಲಿ ಈಹೊತ್ತು ನಿಮ್ಮಿಂದ
ನನಗೆ ವಿಚಾರಣೆಯಾಗುತ್ತದೆ ಎಂದು ಕೂಗಿದ್ದನ್ನೇ
ಹೊರತು ಬೇರೆ ಏನೂ ಹೇಳಲಾರರು ಅಂದನು.
22 ಫೇಲಿಕ್ಸನು ಕ್ರಿಸ್ತ ಮಾರ್ಗವನ್ನು ತಕ್ಕ ಮಟ್ಟಿಗೆ
ತಿಳಿದವನಾದರೂ ಅವರಿಗೆ—ಸಹಸ್ರಾಧಿಪತಿಯಾದ ಲೂ
ಸ್ಯನು ಬಂದ ಮೇಲೆ ನಿಮ್ಮ ಕಾರ್ಯವನ್ನು ತೀರ್ಮಾ
ನಿಸುತ್ತೇನೆಂದು ಹೇಳಿ ವಿಚಾರಣೆಯನ್ನು ತಡೆಮಾಡಿ
23 ದನು. ಆಗ ಅವನು ಶತಾಧಿಪತಿಗೆ—ಪೌಲನು ಕಾವ
ಲಲ್ಲಿರಬೇಕು, ಆದರೆ ಅವನು ಬಿಡುವಾಗಿರಲಿ, ಅವ
ನನ್ನು ಉಪಚರಿಸುವದಕ್ಕೆ ಅವನ ಸ್ವಂತ ಜನರಲ್ಲಿ
ಯಾರಿಗೂ ಅಡ್ಡಿಮಾಡಬಾರದೆಂದು ಅಪ್ಪಣೆಮಾಡಿ
ದನು.

ಪೌಲನು ಎರಡು ವರುಷ ಕಾವಲಲ್ಲಿದ್ದದ್ದು; ಅವನು
ಪ್ರಸ್ತಾಪಿಸಿದ್ದನ್ನು ಫೇಲಿಕ್ಸನು ಕೇಳಿ ಮನಸ್ಸಿನಲ್ಲಿ
ದಿಗಿಲುಬಿದ್ದದ್ದು.

24 ಕೆಲವು ದಿವಸಗಳಾದ ಮೇಲೆ ಫೇಲಿಕ್ಸನು ಯೆಹೂ
ದ್ಯಳಾದ ದ್ರೂಸಿಲ್ಲಳೆಂಬ ಸ್ವಂತ ಹೆಂಡತಿಯೊಂದಿಗೆ
ಬಂದು ಪೌಲನನ್ನು ಕರಿಸಿಕೊಂಡು ಕ್ರಿಸ್ತಯೇಸುವಿ
ನಲ್ಲಿಡತಕ್ಕ ನಂಬಿಕೆಯ ವಿಷಯವಾಗಿ ಅವನು ಹೇಳಿದ
25 ಮಾತುಗಳನ್ನು ಕೇಳಿದನು. ಪೌಲನು ಸುನೀತಿ ದಮೆ
ಮುಂದಣ ನ್ಯಾಯವಿಚಾರಣೆ ಇವುಗಳ ವಿಷಯವಾಗಿ
ಪ್ರಸ್ತಾಪಿಸುತ್ತಿದ್ದಾಗ ಫೇಲಿಕ್ಸನು ಭಯಗ್ರಸ್ತನಾಗಿ
ಅವನಿಗೆ—ಸದ್ಯಕ್ಕೆ ಹೋಗು; ಸಮಯ ದೊರಕಿ
26 ದಾಗ ನಿನ್ನನ್ನು ಕರಿಸುವೆನು ಎಂದು ಹೇಳಿದನು. ಇದ
ಲ್ಲದೆ ತನಗೆ ಪೌಲನಿಂದ ಹಣ ಸಿಕ್ಕೀತೆಂಬ ನಿರೀಕ್ಷೆ

ಅವನಿಗಿದ್ದ ಕಾರಣ ಅವನನ್ನು ಬಾರಿಬಾರಿಗೂ ಕ
ಅವನ ಸಂಗಡ ಸಲ್ಲಾಪಮಾಡುತ್ತಿದ್ದನು. ಎರ
ವರುಷಗಳು ತುಂಬಿದ ಮೇಲೆ ಫೇಲಿಕ್ಸನ ಸ್ಥಾನ
ಪೋರ್ಕಿಯ ಫೆಸ್ತನು ಬಂದನು. ಫೇಲಿಕ್ಸನು ಯೆಹ
ದ್ಯರ ಪ್ರೀತಿಯನ್ನು ಸಂಪಾದಿಸಬೇಕೆಂಬ ಕೋ
ಯಿಂದ ಪೌಲನನ್ನು ಹಾಗೆಯೇ ಸೆರೆಯಲ್ಲಿ ಬಿ
ಹೋದನು.

ದೇಶಾಧಿಪತಿಯಾದ ಫೆಸ್ತನು ಪೌಲನನ್ನು ತಿರಿಗಿ ಯೆರೂಸಲೇ
ಕಳುಹಿಸಬೇಕೆಂದಿದ್ದಾಗ ಪೌಲನು ಚಕ್ರವರ್ತಿಗೆ
ಅಪ್ಪೀಲ್ ಮಾಡಿದ್ದು.

ಫೆಸ್ತನು ಸೀಮೆಯ ಕಾರ್ಯಭಾರವನ್ನು ವಹಿಸಿ
ಕೊಂಡು ಮೂರು ದಿವಸಗಳ ತರುವಾಯ ಕೈಸರೈ
ಯದಿಂದ ಯೆರೂಸಲೇಮಿಗೆ ಹೋದನು. ಅಲ್ಲಿ ಮು
ಯಾಜಕನೂ ಯೆಹೂದ್ಯರಲ್ಲಿ ಪ್ರಮುಖರೂ ಅವ
ಪೌಲನ ಮೇಲಣ ಫಿರಿಯಾದಿಯನ್ನು ಹೇಳಿ—ನೀ
ದಯಮಾಡಿ ಅವನನ್ನು ಯೆರೂಸಲೇಮಿಗೆ ಕರತ
ಬೇಕೆಂದು ಪೌಲನ ಕೇಡಿಗಾಗಿ ಬಿನ್ನಹವನ್ನು ಮ
ದರು. ಮಾರ್ಗದಲ್ಲಿ ಅವನನ್ನು ಕೊಲ್ಲುವದಕ
ಹೊಂಚುಹಾಕಿಕೊಂಡಿದ್ದರು. ಫೆಸ್ತನು ಅವರಿಗೆ
ಪೌಲನು ಕೈಸರೈಯದಲ್ಲಿ ಕಾವಲೊಳಗಿದ್ದಾನೆ, ನಾ
ಬೇಗ ಅಲ್ಲಿಗೆ ಹೊರಟುಹೋಗಬೇಕೆಂದಿದ್ದೇನೆ;
ಕಾರಣ ನಿಮ್ಮಲ್ಲಿ ಪ್ರಮುಖರು ನನ್ನೊಂದಿಗೆ ಬಂ
ಆ ಮನುಷ್ಯನಲ್ಲಿ ಅನುಚಿತವಾದದ್ದೇನಾದರೂ ಇದ
ಅವನ ಮೇಲೆ ತಪ್ಪುಹೊರಿಸಲಿ ಎಂದು ಹೇಳಿದನು.
ಅವನು ಅವರಲ್ಲಿ ಎಂಟು ಹತ್ತಕ್ಕಿಂತ ಹೆಚ್ಚು ದಿ
ಗಳು ನಿಲ್ಲದೆ ಕೈಸರೈಯಕ್ಕೆ ಹೋಗಿ ಮರುದಿನ ನ್ಯಾ
ಸ್ಥಾನದಲ್ಲಿ ಕೂತುಕೊಂಡು ಪೌಲನನ್ನು ತರಬೇಕೆಂ
ಅಪ್ಪಣೆಮಾಡಿದನು. ಅವನು ಬಂದ ಮೇಲೆ ಯೆರೂ
ಲೇಮಿನಿಂದ ಬಂದಿದ್ದ ಯೆಹೂದ್ಯರು ಅವನ ಸುತ್ತ
ನಿಂತುಕೊಂಡು ತಾವು ಸ್ಥಾಪಿಸಲಾರದ ಅನ
ದೊಡ್ಡ ದೊಡ್ಡ ತಪ್ಪುಗಳನ್ನು ಹೊರಿಸುತ್ತಿರಲು ಪ
ನು—ಯೆಹೂದ್ಯರ ಧರ್ಮಶಾಸ್ತ್ರದ ವಿಷಯದಲ್ಲಾ
ದೇವಾಲಯದ ವಿಷಯದಲ್ಲಾಗಲಿ ಚಕ್ರವರ್ತಿಯ
ಯದಲ್ಲಾಗಲಿ ನಾನು ಯಾವ ತಪ್ಪನ್ನೂ ಮಾಡಲಿ
ವೆಂದು ಪ್ರತ್ಯುತ್ತರ ಹೇಳಿದನು. ಫೆಸ್ತನು ಯೆಹೂ
ಪ್ರೀತಿಯನ್ನು ಸಂಪಾದಿಸಿಕೊಳ್ಳಬೇಕೆಂದು ಅಪೇಕ್
ಪೌಲನನ್ನು—ನೀನು ಯೆರೂಸಲೇಮಿಗೆ ಹೋಗಿ ಅ
ಈ ಕಾರ್ಯಗಳ ವಿಷಯವಾಗಿ ನನ್ನ ಮುಂದೆ ವಿಚ
ಸಲ್ಪಡುವದಕ್ಕೆ ನಿನಗೆ ಇಷ್ಟವುಂಟೋ? ಎಂದು ಕ
ಲು ಪೌಲನು—ನಾನು ಚಕ್ರವರ್ತಿಯ ನ್ಯಾಯಸ್ಥಾನ
ಮುಂದೆ ನಿಂತಿದ್ದೇನೆ; ಇಲ್ಲಿಯೇ ನನ್ನ ವಿಚಾರಣೆಯ
ತಕ್ಕದ್ದು. ಯೆಹೂದ್ಯರಿಗೆ ನಾನು ಅನ್ಯಾಯವೇ
ಮಾಡಲಿಲ್ಲ; ಅದು ನಿನಗೂ ಚೆನ್ನಾಗಿ ತಿಳಿದೇ ಇ
ನಾನು ಅನ್ಯಾಯ ಮಾಡಿದವನಾಗಿ ಮರಣದಂಡನ
ಕಾರಣವಾದ ಯಾವದನ್ನಾದರೂ ನಡಿಸಿದ್ದಾದರೆ ಮ
ದಂಡನೆಯನ್ನು ಬೇಡವೆನ್ನುವದಿಲ್ಲ. ಇವರು ನ
ಮೇಲೆ ಹೊರಿಸುವ ತಪ್ಪುಗಳಲ್ಲಿ ಒಂದೂ ನಿಜವಲ್ಲ
ಮೇಲೆ ಇವರ ಮೇಲಣ ದಯೆಯಿಂದ ನನ್ನನ್ನು ಒಪ್ಪ

ಕೊಡುವದಕ್ಕೆ ಒಬ್ಬರಿಗೂ ಅಧಿಕಾರವಿಲ್ಲ. ನಾನು
ಚಕ್ರವರ್ತಿಯ ಎದುರಿನಲ್ಲಿ ಹೇಳಿಕೊಳ್ಳುತ್ತೇನೆ ಎನಲು
ಫೆಸ್ತನು ತನ್ನ ಸಭೆಯವರ ಸಂಗಡ ಆಲೋಚನೆಮಾಡಿದ
ಮೇಲೆ ಪೌಲನಿಗೆ—ಚಕ್ರವರ್ತಿಯ ಎದುರಿನಲ್ಲಿ ಹೇಳಿ
ಕೊಳ್ಳುತ್ತೇನೆ ಅಂದಿಯಲ್ಲಾ, ಚಕ್ರವರ್ತಿಯ ಬಳಿಗೆ
ಹೋಗಬೇಕು ಎಂದು ಹೇಳಿದನು.

ಫೆಸ್ತನು ಅಗ್ರಿಪ್ಪರಾಜನಿಗೆ ಪೌಲನ ಸಂಗತಿಯನ್ನು ತಿಳಿಸಿದ
ಮೇಲೆ ಪೌಲನು ಅವರಿಬ್ಬರ ಮುಂದೆ ಪ್ರತಿವಾದ ಮಾಡಿದ್ದು.

ಕೆಲವು ದಿವಸಗಳು ಗತಿಸಿದನಂತರ ಅಗ್ರಿಪ್ಪರಾಜ
ನೂ ಬೆರ್ನಿಕೆರಾಣಿಯೂ ಫೆಸ್ತನ ದರ್ಶನಮಾಡಿಕೊಳ್ಳು
ವದಕ್ಕೆ ಕೈಸರೈಯಕ್ಕೆ ಬಂದರು. ಅವರು ಅನೇಕ
ದಿವಸ ಅಲ್ಲಿ ನಿಂತಿರಲಾಗಿ ಫೆಸ್ತನು ಪೌಲನ ಸಂಗತಿ
ಯನ್ನು ರಾಜನಿಗೆ ತಿಳಿಸಿ ಹೇಳಿದ್ದೇನಂದರೆ— ಫೇಲಿಕ್ಸನು
ಬಿಟ್ಟುಹೋದ ಒಬ್ಬ ಸೆರೆಯವನು ಇದ್ದಾನೆ. ನಾನು
ಯೆರೂಸಲೇಮಿನಲ್ಲಿದ್ದಾಗ ಯೆಹೂದ್ಯರ ಮಹಾಯಾಜ
ಕರೂ ಸಭೇಹಿರಿಯರೂ ಅವನ ವಿಷಯವಾಗಿ ನನಗೆ ಫಿರಿ
ಯಾದಿ ಹೇಳಿ ಅವನಿಗೆ ವಿರುದ್ಧವಾಗಿ ತೀರ್ಪು ಆಗಬೇಕೆಂ
ದು ಬೇಡಿಕೊಂಡರು. ನಾನು ಅವರಿಗೆ—ಪ್ರತಿವಾದಿಯು
ವಾದಿಗಳಿಗೆ ಮುಖಾಮುಖಿಯಾಗಿ ನಿಂತು ತನ್ನ ಮೇಲೆ
ಆರೋಪಿಸಿದ ದೋಷವಿಷಯದಲ್ಲಿ ಪ್ರತಿವಾದಮಾಡು
ವದಕ್ಕೆ ಆಸ್ಪದಕೊಡದೆ ಅವನನ್ನು ಒಪ್ಪಿಸಿಬಿಡುವದು
ರೋಮಾಯರ ಪದ್ಧತಿಯಲ್ಲವೆಂದು ಹೇಳಿದೆನು.
ಅವರು ಇಲ್ಲಿಗೆ ಕೂಡಿಬಂದಾಗ ನಾನು ಸ್ವಲ್ಪವಾದರೂ
ತಡಮಾಡದೆ ಮರುದಿನವೇ ನ್ಯಾಯಸ್ಥಾನದ ಮೇಲೆ
ಕೂತುಕೊಂಡು ಆ ಮನುಷ್ಯನನ್ನು ತರಬೇಕೆಂದು
ಅಪ್ಪಣೆಕೊಟ್ಟೆನು. ತಪ್ಪುಹೊರಿಸುವವರು ನಿಂತುಕೊಂಡು
ನಾನು ಭಾವಿಸಿದ್ದ ಅಪರಾಧಗಳಲ್ಲಿ ಒಂದನ್ನಾದರೂ
ಅವನ ಮೇಲೆ ಹೊರಿಸದೆ ಅವರ ಮತದ ವಿಷಯದಲ್ಲಿ
ಯೂ ಸತ್ತುಹೋದಂಥ ಯೇಸುವೆಂಬ ಒಬ್ಬನ ವಿಷಯ
ದಲ್ಲಿಯೂ ಅವನ ಮೇಲೆ ಕೆಲವು ವಿವಾದದ ಮಾತು
ಗಳನ್ನು ತಂದರು. ಆ ಯೇಸು ಜೀವಿತನಾಗಿದ್ದಾ
ನೆಂದು ಪೌಲನು ಹೇಳಿದನು. ಇಂಥ ಕಾರ್ಯಗಳನ್ನು
ಹೇಗೆ ವಿಚಾರಣೆಮಾಡಬೇಕೋ ನನಗೆ ತೋರದೆ—
ನೀನು ಯೆರೂಸಲೇಮಿಗೆ ಹೋಗಿ ಅಲ್ಲಿ ಇವುಗಳ ವಿಷ
ಯವಾಗಿ ವಿಚಾರಣೆಹೊಂದುವದಕ್ಕೆ ನಿನಗೆ ಮನಸ್ಸುಂ
ಟೋ? ಎಂದು ನಾನು ಕೇಳಲು ಪೌಲನು ಚಕ್ರವರ್ತಿಯ
ಎದುರಿನಲ್ಲಿ ಹೇಳಿಕೊಳ್ಳುವ ಪರ್ಯಂತರ ತನ್ನನ್ನು
ಕಾಯಬೇಕೆಂದು ಕೇಳಿಕೊಂಡಾಗ ನಾನು ಚಕ್ರವರ್ತಿ
ಯ ಬಳಿಗೆ ಕಳುಹಿಸುವ ತನಕ ಅವನನ್ನು ಕಾಯುವ
ದಕ್ಕೆ ಅಪ್ಪಣೆಕೊಟ್ಟೆನು ಎಂದು ಹೇಳಿದನು. ಅದಕ್ಕೆ
ಅಗ್ರಿಪ್ಪನು—ಆ ಮನುಷ್ಯನು ಹೇಳಿಕೊಳ್ಳುವದನ್ನು
ಕೇಳುವದಕ್ಕೆ ನನಗೂ ಮನಸ್ಸದೆ ಎಂದು ಹೇಳಲು
ಫೆಸ್ತನು—ನಾಳೆ ಕೇಳಬಹುದು ಅಂದನು.
ಮರುದಿನ ಅಗ್ರಿಪ್ಪರಾಜನೂ ಬೆರ್ನಿಕೆರಾಣಿಯೂ
ಬಹು ಆಡಂಬರದಿಂದ ಬಂದು ಸಹಸ್ರಾಧಿಪತಿಗಳ ಮತ್ತು
ಪಟ್ಟಣದ ಮುಖಂಡರ ಸಂಗಡ ಸಭಾಸ್ಥಾನದೊಳಗೆ
ಸೇರಿದಾಗ ಫೆಸ್ತನು ಅಪ್ಪಣೆಕೊಡಲು ಪೌಲನನ್ನು ಕರ
ತಂದರು. ಆಗ ಫೆಸ್ತನು—ಅಗ್ರಿಪ್ಪರಾಜನೇ, ನಮ್ಮ
ಸಂಗಡ ಕೂಡಿಬಂದಿರುವ ಎಲ್ಲಾ ಜನರೇ, ಈ ಮನುಷ್ಯ
ನನ್ನು ನೋಡುತ್ತೀರಲ್ಲಾ, ಇವನ ವಿಷಯದಲ್ಲಿ ಯೆಹೂ
ದ್ಯರೆಲ್ಲರೂ—ಇವನು ಇನ್ನು ಮೇಲೆ ಬದುಕಬಾರ
ದೆಂದು ಕೂಗುತ್ತಾ ಯೆರೂಸಲೇಮಿನಲ್ಲಿಯೂ ಇಲ್ಲಿ
ಯೂ ನನ್ನನ್ನು ಬೇಡಿಕೊಂಡರು. ಇವನು ಮರಣ 25
ದಂಡನೆಗೆ ಕಾರಣವಾದದ್ದೇನೂ ಮಾಡಲಿಲ್ಲವೆಂದು
ನನಗೆ ಕಂಡುಬಂತು. ತಾನೇ ಚಕ್ರವರ್ತಿಗೆ ವಿಜ್ಞಾಪನೆ
ಮಾಡಿಕೊಂಡದ್ದರಿಂದ ಇವನನ್ನು ಕಳುಹಿಸುವದಕ್ಕೆ
ತೀರ್ಮಾನಿಸಿದೆನು. ಇವನ ವಿಷಯದಲ್ಲಿ ಮಹಾ 26
ಸನ್ನಿಧಾನಕ್ಕೆ ಬರೆಯುವದಕ್ಕೆ ನಿಶ್ಚಯವಾದದ್ದೇನೂ
ಇಲ್ಲ. ಸೆರೆಯವನ ಮೇಲೆ ಆರೋಪಿಸಿರುವ ದೋಷ
ಗಳನ್ನು ಸೂಚಿಸದೆ ಅವನನ್ನು ಕಳುಹಿಸುವದು ಯುಕ್ತ
ವಲ್ಲವೆಂದು ನನಗೆ ತೋರುತ್ತದೆ. ಆದದರಿಂದ ವಿಚಾ 27
ರಣೆಯಾದ ಮೇಲೆ ಬರೆಯುವದಕ್ಕೆ ಏನಾದರೂ ಸಿಕ್ಕೀ
ತೆಂದು ಇವನನ್ನು ನಿಮ್ಮ ಮುಂದೆ ಮುಖ್ಯವಾಗಿ
ಅಗ್ರಿಪ್ಪರಾಜನೇ ನಿನ್ನ ಮುಂದೆ ಕರೆಯಿಸಿದ್ದೇನೆ
ಅಂದನು.

**26**

ಆಗ ಅಗ್ರಿಪ್ಪನು ಪೌಲನಿಗೆ—ನೀನು ನಿನ್ನ ಪಕ್ಷ
ದಲ್ಲಿ ಮಾತಾಡಬಹುದು ಅನ್ನಲು ಪೌಲನು ಕೈ
ಯೆತ್ತಿ ಪ್ರತಿವಾದ ಮಾಡಿದ್ದೇನಂದರೆ—
ಅಗ್ರಿಪ್ಪರಾಜನೇ, ಯೆಹೂದ್ಯರು ನನ್ನ ಮೇಲೆ ಆರೋ 2
ಪಿಸುವ ಎಲ್ಲಾ ದೋಷಗಳ ವಿಷಯವಾಗಿ ನಿನ್ನ ಎದುರಿ
ನಲ್ಲಿ ನಾನು ಈಹೊತ್ತು ಪ್ರತಿವಾದ ಮಾಡಬೇಕಾಗಿ
ರುವದರಿಂದ ನನ್ನನ್ನು ಧನ್ಯನೆಂದು ಎಣಿಸಿಕೊಳ್ಳುತ್ತೇನೆ.
ಯಾಕಂದರೆ ಯೆಹೂದ್ಯರಲ್ಲಿರುವ ಎಲ್ಲಾ ಆಚಾರ 3
ಗಳನ್ನೂ ವಿವಾದಗಳನ್ನೂ ನೀನು ಚೆನ್ನಾಗಿ ಬಲ್ಲವನಾ
ಗಿರುತ್ತೀ. ನನ್ನ ಮಾತುಗಳನ್ನು ಸಹನದಿಂದ ಕೇಳ
ಬೇಕೆಂದು ಬೇಡಿಕೊಳ್ಳುತ್ತೇನೆ. ನಾನು ಮೊದಲಿಂದ 4
ಲೂ ಯೆರೂಸಲೇಮಿನಲ್ಲಿ ನನ್ನ ದೇಶದ ಜನರೊಳಗಿದ್ದು
ಕೊಂಡು ಬಾಲ್ಯದಿಂದ ಬದುಕಿದ ಬಗೆಯು ಎಲ್ಲಾ
ಯೆಹೂದ್ಯರಿಗೆ ತಿಳಿದೇ ಅದೆ; ನಮ್ಮ ಧರ್ಮದಲ್ಲಿ 5
ಬಹು ಖಂಡಿತವಾದ ಮತವನ್ನನುಸರಿಸಿ ಫರಿಸಾಯ
ನಾಗಿ ನಡಕೊಂಡೆನೆಂದು ಪ್ರಾರಂಭದಿಂದಲೂ ಅವರು
ಬಲ್ಲರು; ಸಾಕ್ಷಿಹೇಳುವದಕ್ಕೆ ಅವರಿಗೆ ಮನಸ್ಸಿದ್ದರೆ
ಹೇಳಬಹುದು. ಈಗಲೂ ದೇವರು ನಮ್ಮ ಪಿತೃಗ 6
ಳಿಗೆ ಮಾಡಿದ ವಾಗ್ದಾನವು ನೆರವೇರುವದೆಂಬ ನಿರೀಕ್ಷೆ
ಯನ್ನು ಕುರಿತೇ ವಿಚಾರಿಸಲ್ಪಡುವವನಾಗಿ ಇಲ್ಲಿ ನಿಂತಿ
ದ್ದೇನೆ. ನಮ್ಮ ಹನ್ನೆರಡು ಕುಲದವರು ಹಗಲಿರುಳು 7
ಆಸಕ್ತಿಯಿಂದ ದೇವರನ್ನು ಸೇವಿಸುತ್ತಾ ಆ ವಾಗ್ದಾನದ
ಫಲವನ್ನು ಹೊಂದುವದಕ್ಕೆ ನಿರೀಕ್ಷಿಸುತ್ತಾ ಇದ್ದಾರೆ.
ರಾಜಾ, ಆ ನಿರೀಕ್ಷೆಯ ವಿಷಯದಲ್ಲಿಯೇ ಯೆಹೂ
ದ್ಯರು ನನ್ನ ಮೇಲೆ ದೋಷಾರೋಪಣೆಮಾಡುತ್ತಾರೆ.
ದೇವರು ಸತ್ತವರನ್ನು ಎಬ್ಬಿಸಿದ್ದು ನಂಬತಕ್ಕದ್ದಲ್ಲ 8
ವೆಂದು ನೀವು ಯಾಕೆ ತೀರ್ಮಾನಿಸುತ್ತೀರಿ? ನಜರೇ 9
ತಿನ ಯೇಸುವಿನ ಹೆಸರಿಗೆ ವಿರುದ್ಧವಾಗಿ ಅನೇಕ
ಕಾರ್ಯಗಳನ್ನು ನಡಿಸಬೇಕೆಂದು ನಾನೂ ಯೋಚಿಸಿ
ಕೊಂಡಿದ್ದೆನು. ಯೆರೂಸಲೇಮಿನಲ್ಲಿ ಹಾಗೆಯೇ ನಡಿ 10
ಸಿದೆನು. ಮಹಾಯಾಜಕರಿಂದ ಅಧಿಕಾರವನ್ನು
ಪಡೆದು ದೇವಜನರಲ್ಲಿ ಅನೇಕರನ್ನು ಸೆರೆಮನೆಗಳಲ್ಲಿ
ಇಡಿಸಿ ಅವರಿಗೆ ಮರಣದ ತೀರ್ಪಾದಾಗ ನನ್ನ ಸಮ್ಮತಿ

11 ಯನ್ನು ಸೂಚಿಸಿದೆನು. ಎಲ್ಲಾ ಸಭಾಮಂದಿರಗಳಲ್ಲಿ
ಯೂ ನಾನು ಅನೇಕಾವರ್ತಿ ಅವರನ್ನು ದಂಡಿಸಿ ಅವ
ರಿಂದ ದೂಷಣೆಯ ಮಾತುಗಳನ್ನಾಡಿಸುವದಕ್ಕೆ ಪ್ರಯ
ತ್ನಿಸಿದೆನು. ಇದಲ್ಲದೆ ಅವರ ಮೇಲೆ ಬಹು ಕೋಪಾ
ವೇಶವುಳ್ಳವನಾಗಿ ಪರಪಟ್ಟಣಗಳ ತನಕ ಅವರನ್ನು
12 ಹಿಂಸೆಪಡಿಸಿದೆನು. ಈ ಉದ್ದೇಶದಿಂದ ನಾನು ಮಹಾ
ಯಾಜಕರಿಂದ ಅಧಿಕಾರವನ್ನೂ ಉದ್ಯೋಗವನ್ನೂ
ಹೊಂದಿ ದಮಸ್ಕಕ್ಕೆ ಹೋಗುತ್ತಾ ನಾನು ದಾರಿಯಲ್ಲಿ
13 ದ್ದಾಗ ರಾಜನೇ, ಮಧ್ಯಾಹ್ನದ ಹೊತ್ತಿನಲ್ಲಿ ಪರಲೋಕ
ದಿಂದಾದ ಒಂದು ಬೆಳಕು ನನ್ನ ಸುತ್ತಲೂ ನನ್ನ ಜೊತೆ
ಯಲ್ಲಿ ಪ್ರಯಾಣಮಾಡುತ್ತಿದ್ದವರ ಸುತ್ತಲೂ ಸೂ
ರ್ಯನ ಹೊಳಪಿಗಿಂತ ಹೆಚ್ಚಾಗಿ ಹೊಳೆಯುವದನ್ನು
14 ಕಂಡೆನು. ನಾವೆಲ್ಲರು ನೆಲಕ್ಕೆ ಬೀಳಲು—ಸೌಲನೇ,
ಸೌಲನೇ, ನನ್ನನ್ನು ಯಾಕೆ ಹಿಂಸೆಪಡಿಸುತ್ತೀ? ಮುಳ್ಳು
ಗೋಲನ್ನು ಒದೆಯುವದು ನಿನಗೆ ಕಷ್ಟ ಎಂದು ಇಬ್ರಿ
ಯ ಭಾಷೆಯಿಂದ ಹೇಳುವ ವಾಣಿಯನ್ನು ಕೇಳಿದೆನು.
15 ಆಗ ನಾನು—ಕರ್ತನೇ, ನೀನಾರು? ಅನ್ನಲು ಕರ್ತ
ನು—ನೀನು ಹಿಂಸೆಪಡಿಸುವ ಯೇಸುವೇ ನಾನು.
16 ನೀನು ಎದ್ದು ನಿಂತುಕೋ. ನಿನ್ನನ್ನು ನನ್ನ ಸೇವಕ
ನಾಗಿಯೂ ಸಾಕ್ಷಿಯಾಗಿಯೂ ನೇಮಿಸುವದಕ್ಕೋ
ಸ್ಕರ ನಿನಗೆ ಕಾಣಿಸಿಕೊಂಡಿದ್ದೇನೆ. ನಾನು ಈಗಲೂ
ಮುಂದೆ ನಿನಗೆ ಕೊಡಲಿಕ್ಕಿರುವ ದರ್ಶನಗಳಲ್ಲಿಯೂ
ನಿನಗೆ ಕಾಣಿಸಿಕೊಂಡದ್ದನ್ನು ಕುರಿತು ನೀನು ಸಾಕ್ಷಿ
17 ಯಾಗಿರಬೇಕು. ನಾನು ನಿನ್ನನ್ನು ಇಸ್ರಾಯೇಲ್
ಜನರ ಕೈಯೊಳಗಿಂದಲೂ ಅನ್ಯಜನರ ಕೈಯೊಳಗಿಂದ
18 ಲೂ ಬಿಡಿಸುವೆನು. ಅವರು ಕತ್ತಲೆಯಿಂದ ಬೆಳಕಿಗೂ
ಸೈತಾನನ ಅಧಿಕಾರದಿಂದ ದೇವರ ಕಡೆಗೂ ತಿರುಗಿ
ಕೊಂಡು ನನ್ನಲ್ಲಿ ನಂಬಿಕೆಯಿಡುವದರಿಂದ ಪಾಪಪರಿ
ಹಾರವನ್ನೂ ಪವಿತ್ರರಾದವರಲ್ಲಿ ಹಕ್ಕನ್ನೂ ಹೊಂದು
ವಂತೆ ಅವರ ಕಣ್ಣುಗಳನ್ನು ತೆರೆಯಬೇಕೆಂದು ಅವರ
ಬಳಿಗೆ ನಾನು ನಿನ್ನನ್ನು ಕಳುಹಿಸುತ್ತೇನೆ ಅಂದನು.
19 ಆದಕಾರಣ ಅಗ್ರಿಪ್ಪರಾಜನೇ, ಪರಲೋಕದಿಂದ ನನಗೆ
ಉಂಟಾದ ಆ ದರ್ಶನಕ್ಕೆ ನಾನು ಅವಿಧೇಯನಾಗದೆ
20 ಮೊದಲು ದಮಸ್ಕದವರಿಗೆ, ಆ ಮೇಲೆ ಯೆರೂಸಲೇಮಿ
ನಲ್ಲಿಯೂ ಯೂದಾಯದ ಎಲ್ಲಾ ಸೀಮೆಯಲ್ಲಿಯೂ
ಇರುವವರಿಗೆ ಮತ್ತು ಅನ್ಯಜನರಿಗೆ ಸಹ—ನೀವು ದೇವರ
ಕಡೆಗೆ ತಿರುಗಿಕೊಳ್ಳಬೇಕೆಂತಲೂ ಮಾನಸಾಂತರಕ್ಕೆ
ಯೋಗ್ಯವಾದ ಕೃತ್ಯಗಳನ್ನು ಮಾಡಬೇಕೆಂತಲೂ ಸಾರಿ
21 ದೆನು. ಈ ಕಾರಣದಿಂದ ಯೆಹೂದ್ಯರು ದೇವಾ
ಲಯದಲ್ಲಿ ನನ್ನನ್ನು ಹಿಡಿದು ಕೊಲ್ಲುವದಕ್ಕೆ ಪ್ರಯತ್ನಿ
22 ಸಿದರು. ಆದರೆ ನಾನು ದೇವರಿಂದ ಸಹಾಯವನ್ನು
ಪಡೆದು ಈ ದಿನದ ವರೆಗೂ ಸುರಕ್ಷಿತವಾಗಿದ್ದು ಚಿಕ್ಕವ
ರಿಗೂ ದೊಡ್ಡವರಿಗೂ ಸಾಕ್ಷಿಹೇಳುವವನಾಗಿದ್ದೇನೆ.
ಪ್ರವಾದಿಗಳೂ ಮೋಶೆಯೂ ಮುಂದೆ ಆಗುವವೆಂದು
ತಿಳಿಸಿದ ಸಂಗತಿಗಳನ್ನೇ ಹೊರತು ಇನ್ನೇನೂ ಹೇಳು
23 ವವನಲ್ಲ. ಆ ಸಂಗತಿಗಳು ಏನಂದರೆ—ಕ್ರಿಸ್ತನು
ಬಾಧೆಪಟ್ಟು ಸಾಯಬೇಕಾದವನು, ಮತ್ತು ಆತನು
ಸತ್ತವರೊಳಗಿಂದ ಮೊದಲನೆಯವನಾಗಿ ಎದ್ದು ಯೆ
ಹೂದ್ಯರಿಗೂ ಅನ್ಯಜನರಿಗೂ ಬೆಳಕನ್ನು ಪ್ರಸಿದ್ಧಿಪಡಿಸು
ವವನಾಗಿರುವನು ಎಂಬದೇ.

ಹೀಗೆ ಪೌಲನು ಪ್ರತಿವಾದ ಮಾಡುತ್ತಿದ್ದಾ
ಫೆಸ್ತನು ಮಹಾಶಬ್ದದಿಂದ—ಪೌಲನೇ, ನೀನು ಮ
ಳಾಗಿದ್ದೀ; ನೀನು ಬಹಳವಾಗಿ ಮಾಡುವ ಶಾಸ್ತ್ರವಿ
ರವು ನಿನ್ನನ್ನು ಮರುಳುಗೊಳಿಸುತ್ತದೆ ಎಂದು ಹೇ
ದನು. ಅದಕ್ಕೆ ಪೌಲನು—ಶ್ರೀಮನ್ ಮಹಾ ಫೆಸ್ತನೆ
ನಾನು ಮರುಳಾಗಿಲ್ಲ; ಸ್ವಸ್ಥಬುದ್ಧಿಯುಳ್ಳವನಾಗಿ ಸ
ವಾದ ಮಾತುಗಳನ್ನಾಡುತ್ತೇನೆ. ಅಗ್ರಿಪ್ಪರಾಜನ
ಈ ಸಂಗತಿಗಳನ್ನು ತಿಳಿದವನು; ಅವನ ಮುಂ
ಧೈರ್ಯವಾಗಿ ಮಾತಾಡುತ್ತೇನೆ. ಇವುಗಳಲ್ಲಿ ಒಂದ
ದರೂ ಅವನಿಗೆ ಮರೆಯಾದದ್ದಲ್ಲವೆಂದು ನಂಬಿದ್ದೇ
ಯಾಕಂದರೆ ಇದು ಮೂಲೆಯಲ್ಲಿ ನಡೆದ ಕಾಯ
ವಲ್ಲ. ಅಗ್ರಿಪ್ಪರಾಜನೇ, ಪ್ರವಾದಿಗಳಲ್ಲಿ ನಿನ
ನಂಬಿಕೆಯುಂಟೋ? ಉಂಟೆಂದು ಬಲ್ಲೆನು ಅಂದನ
ಅದಕ್ಕೆ ಅಗ್ರಿಪ್ಪನು—ಅಲ್ಪಪ್ರಯತ್ನದಿಂದ ನನ್ನನ
ಕ್ರೈಸ್ತನಾಗುವದಕ್ಕೆ ಒಡಂಬಡಿಸುತ್ತೀಯಾ? ಎಂ
ಹೇಳಲು ಪೌಲನು—ಅಲ್ಪಪ್ರಯತ್ನದಿಂದಾಗಲಿ ಅಧಿ
ಪ್ರಯತ್ನದಿಂದಾಗಲಿ ನೀನು ಮಾತ್ರವಲ್ಲದೆ ಈಹೊತ
ನನ್ನ ಮಾತುಗಳನ್ನು ಕೇಳುವವರೆಲ್ಲರೂ ಈ ಬೇಡಿಗ
ಹೊರತು ನನ್ನಂತೆ ಆಗಬೇಕೆಂದು ದೇವರನ್ನು ಪ್ರಾರ್ಥಿ
ಸುತ್ತೇನೆ ಅಂದನು.

ಆ ಮೇಲೆ ರಾಜನೂ ದೇಶಾಧಿಪತಿಯೂ ಬೆರ್ನಿ
ಯೂ ಅವರ ಸಂಗಡ ಕೂತಿದ್ದವರೂ ಎದ್ದು ಆಚೆ
ಹೋಗಿ—ಈ ಮನುಷ್ಯನು ಮರಣದಂಡನೆಗಾಗ
ಬೇಡಿಗಾಗಲಿ ಆಧಾರವಾದದ್ದೇನೂ ಮಾಡುವವನ
ಎಂಬದಾಗಿ ತಮ್ಮತಮ್ಮೊಳಗೆ ಮಾತಾಡಿಕೊಳ್ಳುತ್ತಿದ್ದರು
ಅಗ್ರಿಪ್ಪನು ಫೆಸ್ತನಿಗೆ—ಈ ಮನುಷ್ಯನು ಚಕ್ರವರ್ತಿಯ
ಎದುರಿನಲ್ಲಿ ಹೇಳಿಕೊಳ್ಳುತ್ತೇನೆಂದು ಹೇಳದೆ ಹೋ
ದ್ದರೆ ಇವನನ್ನು ಬಿಡಬಹುದಾಗಿತ್ತು ಎಂದು ಹೇ
ದನು.

ಪೌಲನು ಕೈಸರೈಯದಿಂದ ರೋಮಾಪುರಕ್ಕೆ ಪ್ರಯಾಣ
ಮಾಡುತ್ತಿರಲು ಹಡಗು ಮೆಲೀತೆದ್ವೀಪದ ದಡದಲ್ಲಿ ಒಡೆದು
ನಾಶವಾದದ್ದು.

ನಾವು ಸಮುದ್ರಮಾರ್ಗವಾಗಿ ಇತಾಲ್ಯದೇ 2
ಶಕ್ಕೆ ಹೋಗಬೇಕೆಂದು ತೀರ್ಮಾನವಾದ ಮೇಲೆ
ಪೌಲನನ್ನೂ ಬೇರೆ ಕೆಲವು ಸೆರೆಯವರನ್ನೂ ಚಕ್ರವರ್ತಿ
ಯ ಪಟಾಲಮಿಗೆ ಸೇರಿದ ಯೂಲ್ಯನೆಂಬ ಒಬ್ಬ ಶತಾ
ಪತಿಗೆ ಒಪ್ಪಿಸಿದರು. ಆಗ ಅದ್ರಮಿತ್ತಿಯದಿಂದ ಬಂದ
ಆಸ್ಯಸೀಮೆಯ ಕರಾವಳಿಯ ಸ್ಥಳಗಳಿಗೆ ಹೋಗುವ
ಕ್ಕಿದ್ದ ಒಂದು ಹಡಗನ್ನು ಹತ್ತಿ ಸಮುದ್ರಪ್ರಯಾ
ವನ್ನು ಪ್ರಾರಂಭಿಸಿದೆವು. ಮಕೆದೋನ್ಯಕ್ಕೆ ಸೇರಿ
ಥೆಸಲೊನೀಕದ ಅರಿಸ್ತಾರ್ಕನು ನಮ್ಮ ಜೊತೆಯ
ಲ್ಲಿದ್ದನು. ಮರುದಿನ ಸೀದೋನಿಗೆ ಮುಟ್ಟಿದೆವು
ಯೂಲ್ಯನು ಪೌಲನಿಗೆ ದಯೆಯನ್ನು ತೋರಿಸುವ
ನಾಗಿ ಅವನನ್ನು ಸ್ನೇಹಿತರ ಬಳಿಗೆ ಹೋಗಿ ಸತ್ಕಾ
ಹೊಂದುವದಕ್ಕೆ ಬಿಟ್ಟನು. ಅಲ್ಲಿಂದ ಹೊರಟು ಎದುರ
ಗಾಳಿ ಬೀಸುತ್ತಿದ್ದದರಿಂದ ಕುಪ್ರದ್ವೀಪದ ಮರೆಯಲ್ಲಿ
ಸಾಗಿ ಕಿಲಿಕ್ಯಕ್ಕೂ ಪಂಫುಲ್ಯಕ್ಕೂ ಎದುರಾಗಿರು
ಸಮುದ್ರವನ್ನು ದಾಟಿ ಲುಕೀಯ ಸೀಮೆಯಲ್ಲಿರು

ಮುರಕ್ಕೆ ಬಂದೆವು. ಅಲ್ಲಿ ಅಲೆಕ್ಸಾಂದ್ರಿಯದಿಂದ ಬಂದು
ಇತಾಲ್ಯದೇಶಕ್ಕೆ ಹೋಗುತ್ತಿದ್ದ ಒಂದು ಹಡಗನ್ನು
ಶತಾಧಿಪತಿಯು ಕಂಡು ನಮ್ಮನ್ನು ಅದರ ಮೇಲೆ
ಹತ್ತಿಸಿದನು. ಅನೇಕ ದಿವಸ ನಿಧಾನವಾಗಿ ಸಾಗುತ್ತಾ
ಎಷ್ಟೋ ಪ್ರಯಾಸದಿಂದ ಕ್ನೀದಕ್ಕೆ ಎದುರಾಗಿ ಬಂದಾಗ
ಗಾಳಿಯು ನಮ್ಮನ್ನು ಅಲ್ಲಿಗೆ ಮುಟ್ಟಗೊಡಿಸದೆ ಇದ್ದ
ದರಿಂದ ಕ್ರೇತದ್ವೀಪದ ಮರೆಯಲ್ಲಿ ಸಾಗಿ ಸಲ್ಮೋನೆಗೆ
ಎದುರಾಗಿ ಬಂದು ಪ್ರಯಾಸದಿಂದ ಆ ದ್ವೀಪದ ಕರಾ
ವಳಿಯನ್ನು ಹಿಡಿದು ಹೋಗಿ ಚಂದರೇವುಗಳೆಂಬ
ಸ್ಥಳಕ್ಕೆ ಸೇರಿದೆವು. ಅದರ ಹತ್ತಿರದಲ್ಲಿ ಲಸಾಯವೆಂಬ
ಪಟ್ಟಣವು ಇತ್ತು.

ಹೀಗೆ ಬಹುಕಾಲ ಕಳೆದುಹೋಯಿತು; ಮಹಾ
ಉಪವಾಸದ ದಿವಸವು ಆಗಿಹೋಗಿತ್ತು. ಈ ಸಂದರ್ಭ
ದಲ್ಲಿ ಸಮುದ್ರಪ್ರಯಾಣ ಮಾಡುವದು ಅಪಾಯಕರ
ವಾಗಿದ್ದದರಿಂದ ಪೌಲನು—ಜನರೇ, ಈ ಪ್ರಯಾಣ
ದಿಂದ ಸರಕಿಗೂ ಹಡಗಿಗೂ ಮಾತ್ರವಲ್ಲದೆ ನಮ್ಮ
ಪ್ರಾಣಗಳಿಗೂ ಕಷ್ಟವೂ ಬಹು ನಷ್ಟವೂ ಸಂಭವಿಸುವ
ದೆಂದು ನನಗೆ ತೋರುತ್ತದೆ ಎಂದು ಅವರನ್ನು ಎಚ್ಚರಿಸಿ
ದನು. ಆದರೆ ಪೌಲನು ಹೇಳಿದ ಮಾತುಗಳಿಗಿಂತ
ನಾವಿಕನೂ ಹಡಗಿನ ಯಜಮಾನನೂ ಹೇಳಿದ ಮಾತಿಗೆ
ಶತಾಧಿಪತಿಯು ಹೆಚ್ಚಾಗಿ ಲಕ್ಷ್ಯಕೊಟ್ಟನು. ಆ ರೇವು
ಹಿಮಕಾಲವನ್ನು ಕಳೆಯುವದಕ್ಕೆ ಅನುಕೂಲವಲ್ಲದ್ದ
ರಿಂದ ಅಲ್ಲಿಂದ ಹೊರಟು ಸಾಧ್ಯವಾದರೆ ಹೇಗೂ
ಫೊಯಿನಿಕ್ಸ ಊರನ್ನು ಸೇರಿ ಅಲ್ಲೇ ಆ ಹಿಮಕಾಲ
ವನ್ನು ಕಳೆಯಬೇಕೆಂದು ಹೆಚ್ಚು ಜನರು ಆಲೋಚನೆ
ಹೇಳಿದರು. ಫೊಯಿನಿಕ್ಸವು ಕ್ರೇತದ್ವೀಪದ ಒಂದು
ರೇವು; ಅದು ಈಶಾನ್ಯ ದಿಕ್ಕಿಗೂ ಆಗ್ನೇಯ ದಿಕ್ಕಿಗೂ
ಅಭಿಮುಖವಾಗಿದೆ. ತೆಂಕಣ ಗಾಳಿ ಮೆಲ್ಲಗೆ ಬೀಸಲಾಗಿ
ತಮ್ಮ ಉದ್ದೇಶವು ಸಾರ್ಥಕವಾಯಿತೆಂದು ಭಾವಿಸಿ
ಲಂಗರ ಎತ್ತಿ ಕ್ರೇತದ್ವೀಪವನ್ನು ಅನುಸರಿಸಿ ತೀರದ
ಮಗ್ಗುಲಲ್ಲೇ ಹೋಗುತ್ತಿದ್ದರು. ಸ್ವಲ್ಪ ಹೊತ್ತಿನ
ಮೇಲೆ ಆ ದ್ವೀಪದ ಮೇಲಣಿಂದ ಈಶಾನ್ಯಪೂರ್ವ
ವಾಯು ಎಂಬ ಹುಚ್ಚುಗಾಳಿಯು ಹೊಡೆಯಿತು. ಆ
ಹೊಡೆತಕ್ಕೆ ಹಡಗು ಸಿಕ್ಕಿಕೊಂಡು ಗಾಳಿಗೆದುರಾಗಿ
ನಿಲ್ಲುವದಕ್ಕೆ ಆಗದೆಹೋದದರಿಂದ ಗಾಳಿಗೆ ಆಸ್ಪದ
ಕೊಟ್ಟು ನೂಕಿಸಿಕೊಂಡು ಹೋದೆವು. ಕ್ಲೌಡವೆಂಬ
ಒಂದು ಸಣ್ಣ ದ್ವೀಪದ ಮರೆಯಲ್ಲಿ ಹಡಗನ್ನು ನಡಿಸಿ
ಕೊಂಡು ಬಂದ ತರುವಾಯ ಹಡಗಿನ ದೋಣಿಯನ್ನು
ಎತ್ತಿ ಭದ್ರಮಾಡಿಕೊಳ್ಳುವದು ನಮಗೆ ಪ್ರಯಾಸವಾ
ಯಿತು. ಅದನ್ನು ಮೇಲಕ್ಕೆ ಎತ್ತಿದ ತರುವಾಯ
ಹೊರಜಗಳನ್ನು ತಗೆದುಕೊಂಡು ಹಡಗಿನ ಕೆಳಭಾಗ
ವನ್ನು ಬಿಗಿದರು. ಆ ಮೇಲೆ ಸುರ್ತಿಸ್ ಎಂಬ ಕಳ್ಳು
ಸುಬಿನಲ್ಲಿ ಸಿಕ್ಕಿಬಿದ್ದೇವೆಂದು ಭಯಪಟ್ಟು ಹಾಯಿ
ಯನ್ನು ಸಡಿಲುಮಾಡಿ ನೂಕಿಸಿಕೊಂಡು ಹೋದೆವು
ಗಾಳಿಯು ನಮ್ಮನ್ನು ಅತ್ಯಂತವಾಗಿ ಹೊಯಿದಾಡಿ
ಸಿದ್ದರಿಂದ ಅವರು ಮರುದಿನ ಸರಕನ್ನು ಬಿಸಾಡು
ತ್ತಿದ್ದರು. ಮೂರನೆಯ ದಿನದಲ್ಲಿ ಹಡಗಿನ 1)ಅಡ್ಡ
ಮರವನ್ನು ತಮ್ಮ ಕೈಯಿಂದಲೇ ಹೊರಗೆ ಎತ್ತಿಹಾಕಿ
ದರು. ಅನೇಕ ದಿವಸಗಳತನಕ ಸೂರ್ಯನಾಗಲಿ 20
ನಕ್ಷತ್ರಗಳಾಗಲಿ ನಮಗೆ ಕಾಣಿಸದೆ ದೊಡ್ಡ ಬಿರುಗಾಳಿ
ನಮ್ಮ ಮೇಲೆ ಹೊಡೆದದ್ದರಿಂದ ತಪ್ಪಿಸಿಕೊಂಡೇವೆಂಬ
ಎಲ್ಲಾ ನಿರೀಕ್ಷೆಯು ಅಂದಿನಿಂದ ಕಳೆದುಹೋಯಿತು.
ಅವರು ಬಹುಕಾಲ ಊಟವಿಲ್ಲದೆ ಇದ್ದ ಮೇಲೆ 21
ಪೌಲನು ಅವರ ಮಧ್ಯದಲ್ಲಿ ನಿಂತುಕೊಂಡು—ಎಲೈ
ಜನರೇ, ನೀವು ಕ್ರೇತದಿಂದ ಹೊರಟು ಈ ಕಷ್ಟನಷ್ಟ
ಗಳಿಗೆ ಗುರಿಯಾಗದಂತೆ ನನ್ನ ಮಾತನ್ನು ಕೇಳಬೇ
ಕಾಗಿತ್ತು. ಈಗಲಾದರೂ ನೀವು ಧೈರ್ಯದಿಂದಿರ 22
ಬೇಕೆಂದು ನಿಮಗೆ ಬುದ್ಧಿಹೇಳುತ್ತೇನೆ; ಹಡಗು ನಷ್ಟ
ವಾಗುವದೇ ಹೊರತು ನಿಮ್ಮಲ್ಲಿ ಒಬ್ಬರಿಗೂ ಪ್ರಾಣನಷ್ಟ
ವಾಗುವದಿಲ್ಲ. ನಾನು ಯಾರವನಾಗಿದ್ದೇನೋ ಯಾ 23
ರನ್ನು ಸೇವಿಸುತ್ತೇನೋ ಆ ದೇವರಿಂದ ಬಂದ ಒಬ್ಬ
ದೂತನು ಕಳೆದ ರಾತ್ರಿಯಲ್ಲಿ ನನ್ನ ಹತ್ತಿರ ನಿಂತು—
ಪೌಲನೇ, ಭಯಪಡಬೇಡ, ನೀನು ಚಕ್ರವರ್ತಿಯ 24
ಮುಂದೆ ನಿಲ್ಲಬೇಕು; ಇದಲ್ಲದೆ ನಿನ್ನ ಸಂಗಡ ಈ
ಹಡಗಿನಲ್ಲಿ ಪ್ರಯಾಣಮಾಡುವವರೆಲ್ಲರ ಪ್ರಾಣ ದೇವ
ರು ನಿನ್ನ ಮೇಲಣ ದಯೆಯಿಂದ ಉಳಿಸಿಕೊಟ್ಟಿದ್ದಾ
ನೆಂದು ನನ್ನ ಸಂಗಡ ಹೇಳಿದನು. ಆದದರಿಂದ ಜನರೇ 25
ಧೈರ್ಯವಾಗಿರ್ರಿ. ನನಗೆ ಹೇಳಲ್ಪಟ್ಟ ಪ್ರಕಾರವೇ
ಆಗುವದೆಂದು ದೇವರನ್ನು ನಂಬುತ್ತೇನೆ. ಆದರೆ ನಾವು 26
ಯಾವದೋ ಒಂದು ದ್ವೀಪದ ದಡವನ್ನು ತಾಕಬೇಕಾ
ಗಿದೆ ಎಂದು ಹೇಳಿದನು.

ಹದಿನಾಲ್ಕನೆಯ ರಾತ್ರಿ ಬಂದ ಮೇಲೆ ನಾವು ಆದ್ರಿ 27
ಯ ಸಮುದ್ರದಲ್ಲಿ ಅತ್ತ ಇತ್ತ ಬಡಿಸಿಕೊಂಡು ಹೋಗು
ತ್ತಿರುವಾಗ ಸುಮಾರು ಮಧ್ಯರಾತ್ರಿಯಲ್ಲಿ ನಾವಿಕರು
ಒಂದು ದೇಶದ ಹತ್ತಿರ ಬಂದೆವೆಂದು ನೆನಸಿ ಆಳತೇ 28
ಗುಂಡನ್ನು ಇಳಿಸಿ ಇಪ್ಪತ್ತು ಮಾರುದ್ದವೆಂದು ಕಂಡ
ರು. ಸ್ವಲ್ಪ ಹೊತ್ತಿನ ಮೇಲೆ ಅವರು ತಿರಿಗಿ ಆಳತೇ
ಗುಂಡನ್ನು ಇಳಿಸಿ ನೋಡಲಾಗಿ ಹದಿನೈದು ಮಾರುದ್ದ
ವೆಂದು ಕಂಡರು. ಬಂಡೇಸ್ಥಳವನ್ನು ತಾಕೇವೆಂದು 29
ಭಯಪಟ್ಟು ಹಡಗಿನ ಹಿಂಭಾಗದಿಂದ ನಾಲ್ಕು ಲಂಗರ
ಗಳನ್ನು ಬಿಟ್ಟು ಯಾವಾಗ ಬೆಳಗಾದೀತು ಎಂದು
ಹಾರೈಸುತ್ತಿದ್ದರು. ಆದರೆ ನಾವಿಕರು ಮುಂಭಾಗದಲ್ಲಿ 30
ಲಂಗರಗಳನ್ನು ಹಾಕಬೇಕೆಂಬುವ ನೆವದಿಂದ ದೋಣಿ
ಯನ್ನು ಸಮುದ್ರದಲ್ಲಿ ಇಳಿಸಿ ಹಡಗನ್ನು ಬಿಟ್ಟು
ತಪ್ಪಿಸಿಕೊಂಡುಹೋಗುವದಕ್ಕೆ ಪ್ರಯತ್ನಿಸುತ್ತಿರುವಾಗ
ಪೌಲನು ಶತಾಧಿಪತಿಗೂ ಸಿಪಾಯಿಗಳಿಗೂ—ಇವರು 31
ಹಡಗಿನಲ್ಲಿ ನಿಲ್ಲದೆ ಹೋದರೆ ನೀವೂ ಉಳುಕೊಳ್ಳುವ
ದಕ್ಕಾಗುವದಿಲ್ಲವೆಂದು ಹೇಳಿದನು. ಆಗ ಸಿಪಾಯಿ 32
ಗಳು ದೋಣಿಯ ಹಗ್ಗಗಳನ್ನು ಕತ್ತರಿಸಿ ಅದು ಬಿದ್ದು
ಹೋಗುವಂತೆ ಮಾಡಿದರು. ಬೆಳಗಾಗುತ್ತಿರುವಷ್ಟರಲ್ಲಿ 33
ಪೌಲನು ಏನಾದರೂ ಆಹಾರವನ್ನು ತೆಗೆದುಕೊಳ್ಳಬೇ
ಕೆಂದು ಎಲ್ಲರನ್ನು ಬೇಡಿಕೊಳ್ಳುವವನಾಗಿ—ನೀವು
ಈಹೊತ್ತಿಗೆ ಹದಿನಾಲ್ಕು ದಿವಸದಿಂದ ಕಾದುಕೊಂಡು
ಆಹಾರವೇನೂ ತೆಗೆದುಕೊಳ್ಳದೆ ಉಪವಾಸವಾಗಿಯೇ
ಇದ್ದೀರಾದದರಿಂದ ಆಹಾರ ತೆಗೆದುಕೊಳ್ಳಬೇಕೆಂದು 34
ನಿಮ್ಮನ್ನು ಬೇಡಿಕೊಳ್ಳುತ್ತೇನೆ. ಇದು ನಿಮ್ಮ ಪ್ರಾಣ

1) ಅಥವಾ, ಸಾಮಾನುಗಳನ್ನು.

ರಕ್ಷಣೆಗೆ ಅವಶ್ಯ. ನಿಮ್ಮಲ್ಲಿ ಯಾರ ತಲೆಯಿಂದಾದ
ರೂ ಒಂದು ಕೂದಲೂ ಉದುರಿಹೋಗುವದಿಲ್ಲವೆಂದು
35 ಹೇಳಿ ರೊಟ್ಟಿಯನ್ನು ತೆಗೆದುಕೊಂಡು ಎಲ್ಲರ ಮುಂದೆ
ದೇವರ ಸ್ತೋತ್ರಮಾಡಿ ಅದನ್ನು ಮುರಿದು ತಿನ್ನುವದಕ್ಕೆ
36 ಪ್ರಾರಂಭಿಸಿದನು. ಆಗ ಎಲ್ಲರು ಧೈರ್ಯತಂದು
ಕೊಂಡು ತಾವೂ ಆಹಾರವನ್ನು ತೆಗೆದುಕೊಂಡರು.
37 ಆ ಹಡಗಿನಲ್ಲಿದ್ದ ನಾವೆಲ್ಲರು ಇನ್ನೂರ ಎಪ್ಪತ್ತಾರು
38 ಮಂದಿ. ಸಾಕಾದಷ್ಟು ತಿಂದ ಮೇಲೆ ಗೋದಿಯನ್ನು
ಸಮುದ್ರಕ್ಕೆ ಚೆಲ್ಲಿ ಹಡಗನ್ನು ಹಗುರ ಮಾಡಿದರು.
39 ಬೆಳಗಾದ ಮೇಲೆ ಆ ದೇಶದ ಗುರುತನ್ನು ತಿಳಿಯದೆ
ಉಸುಬಿನ ದಡವುಳ್ಳ ಒಂದು ಕೊಲ್ಲಿಯನ್ನು ನೋಡಿ
ಆ ದಡದ ಮೇಲೆ ಹಡಗನ್ನು ನೂಕುವದಕ್ಕೆ ಸಾಧ್ಯವಾ
40 ದೀತೆಂದು ಯೋಚಿಸಿ ಅವರು ಲಂಗರಗಳನ್ನು ಸರಿದು
ಸಮುದ್ರದಲ್ಲೇ ಬಿಟ್ಟು ಚುಕಾಣಿಗಳ ಕಟ್ಟುಗಳನ್ನು
ಬಿಚ್ಚಿ ದೊಡ್ಡ ಹಾಯಿಯನ್ನು ಗಾಳಿಗೆ ಎತ್ತಿಕಟ್ಟಿ
41 ಹಡಗನ್ನು ಆ ದಡಕ್ಕೆ ನಡಿಸುತ್ತಿದ್ದರು. ಆದರೆ ಮಧ್ಯ
ದಲ್ಲಿ ಅವರಿಗೆ ಮರಳದಿಬ್ಬ ಸಿಕ್ಕಿದಾಗ ಆದಕ್ಕೆ ನಾವೆ
ಯನ್ನು ಹತ್ತಿಸಿದರು. ಮುಂಭಾಗವು ತಗಲಿಕೊಂಡು
ಅಲ್ಲಾಡದೆ ನಿಂತಿತು. ಹಿಂಭಾಗವು ತೆರೆಗಳ ಹೊಡೆತ
42 ದಿಂದ ಒಡೆದುಹೋಗುತ್ತಾ ಬಂತು. ಸೆರೆಯವರಲ್ಲಿ
ಕೆಲವರು ಈಜಿ ತಪ್ಪಿಸಿಕೊಂಡಾರೆಂದು ಸಿಪಾಯಿಗಳು
ಅವರನ್ನು ಕೊಲ್ಲಬೇಕೆಂಬದಾಗಿ ಆಲೋಚನೆ ಹೇಳಿದರು.
43 ಆದರೆ ಶತಾಧಿಪತಿಯು ಪೌಲನನ್ನು ಉಳಿಸಬೇಕೆಂದು
ಅಪೇಕ್ಷಿಸಿ ಅವರ ಆಲೋಚನೆಯನ್ನು ಬೇಡವೆಂದು—
ಈಜಬಲ್ಲವರು ಹಡಗದಿಂದ ಧುಮುಕಿ ಮೊದಲಾಗಿ
44 ತೀರಕ್ಕೆ ಹೋಗಬೇಕೆಂತಲೂ ಮಿಕ್ಕಾದವರಲ್ಲಿ ಕೆಲವರು
ಹಲಿಗೆಗಳ ಮೇಲೆ ಕೆಲವರು ಹಡಗಿನ ತುಂಡುಗಳ ಮೇಲೆ
ಹೋಗಬೇಕೆಂತಲೂ ಅಪ್ಪಣೆಕೊಟ್ಟನು. ಈ ರೀತಿ
ಯಿಂದ ಎಲ್ಲರೂ ಸುರಕ್ಷಿತವಾಗಿ ತೀರಕ್ಕೆ ಸೇರಿದರು.

ಮೆಲೀತೆದ್ವೀಪದಲ್ಲಿ ಪೌಲನಿಗೆ ಸಂಭವಿಸಿದ ಅಪಾಯವೂ
ಉಂಟಾದ ಸನ್ಮಾನವೂ.

**28** ನಾವು ದಡಕ್ಕೆ ಸೇರಿದ ಮೇಲೆ ಆ ದ್ವೀಪದ
ಹೆಸರು ಮೆಲೀತೆ ಎಂದು ನಮಗೆ ತಿಳಿದುಬಂತು.
2 ಅನ್ಯಭಾಷೆಯವರಾದ ಆ ದ್ವೀಪದವರು ನಮಗೆ ಮಾಡಿ
ದ ಉಪಕಾರವು ಅಷ್ಟಿಷ್ಟಲ್ಲ. ಮಳೆಯು ಆಗಲೇ
ಹೊಯ್ಯುತ್ತಿದ್ದರಿಂದಲೂ ಚಳಿಯಾಗಿರುವದರಿಂದಲೂ
ಅವರು ಬೆಂಕಿಯನ್ನು ಹೊತ್ತಿಸಿ ನಮ್ಮೆಲ್ಲರನ್ನು ಸೇರಿಸಿ
3 ಕೊಂಡರು. ಪೌಲನು ಒಂದು ಹೊರೆ ಕಟ್ಟಿಗೆಯನ್ನು
ಕೂಡಿಸಿ ಬೆಂಕಿಯ ಮೇಲೆ ಹಾಕಲು ಆ ಕಾವಿನ ದೆಸೆ
ಯಿಂದ ಒಂದು ಹಾವು ಹೊರಗೆ ಬಂದು ಅವನ ಕೈ
4 ಯನ್ನು ಬಿಗಿಯಾಗಿ ಹಿಡುಕೊಂಡಿತು. ಆ ಜಂತು
ಅವನ ಕೈಯಿಂದ ಜೋತಾಡುವದನ್ನು ದ್ವೀಪದವರು
ನೋಡಿ—ಈ ಮನುಷ್ಯನು ಕೊಲೆಪಾತಕನೇ ಸರಿ;
ಸಮುದ್ರದಿಂದ ತಪ್ಪಿಸಿಕೊಂಡು ಬಂದರೂ ನ್ಯಾಯವು
ಇವನನ್ನು ಬದುಕಗೊಡಿಸುವದಿಲ್ಲವೆಂದು ತಮ್ಮತಮ್ಮೊ
5 ಳಗೆ ಮಾತಾಡಿಕೊಂಡರು. ಆದರೆ ಪೌಲನು ಆ
ಜಂತುವನ್ನು ಬೆಂಕಿಯೊಳಕ್ಕೆ ಝಾಡಿಸಿಬಿಟ್ಟನು; ಅವ
6 ನಿಗೆ ಏನೂ ಕೇಡಾಗಲಿಲ್ಲ. ಇವನು ಬಾತುಹೋದಾನು

ಇಲ್ಲವೆ ಅಕಸ್ಮಾತ್ತಾಗಿ ಸತ್ತುಬಿದ್ದಾನು ಎಂದು ಅವರ
ನೋಡಿಕೊಂಡೇ ಇದ್ದರು. ಬಹಳ ಹೊತ್ತು ನೋ
ಕೊಂಡಿದ್ದ ಮೇಲೆ ಅವನಿಗೆ ವಿಕಾರವೇನೂ ಆಗಿ
ವೆಂದು ಕಂಡು ಬೇರೆ ಯೋಚನೆಯುಳ್ಳವರಾಗಿ—
ಇವನು ಒಬ್ಬ ದೇವರು ಎಂದು ಹೇಳಿಕೊಂಡರು.
ಆ ಸ್ಥಳದ ಸಮೀಪದಲ್ಲಿ ದ್ವೀಪದ ಮುಖ್ಯಸ್
ನಾದ ಪೊಪ್ಲಿಯನೆಂಬವನಿಗೆ ಕೆಲವು ಭೂಮಿ ಇತ್ತ
ಅವನು ನಮ್ಮನ್ನು ಸೇರಿಸಿಕೊಂಡು ಮೂರು ದಿವ
ಆದರದಿಂದ ಸತ್ಕರಿಸಿದನು. ಅವನ ತಂದೆಯು ಜ್ವ
ದಿಂದಲೂ ರಕ್ತಭೇದಿಯಿಂದಲೂ ಪೀಡಿತನಾಗಿ ಮ
ಗಿದ್ದನು. ಪೌಲನು ಅವನ ಬಳಿಗೆ ಹೋಗಿ ದೇವ
ಪ್ರಾರ್ಥನೆ ಮಾಡಿ ಅವನ ಮೇಲೆ ಕೈಗಳನ್ನಿಟ್ಟು ಅ
ನನ್ನು ವಾಸಿಮಾಡಿದನು. ಇದಾದ ಮೇಲೆ ಆ ದ್ವೀಪ
ದಲ್ಲಿದ್ದ ಮಿಕ್ಕಾದ ರೋಗಿಗಳು ಅವನ ಬಳಿಗೆ ಬಂದ
ಸ್ವಸ್ಥರಾದರು. ಅವರು ನಮ್ಮನ್ನು ಬಹಳವಾಗಿ ಸನ್ಮಾ
ನಿಸಿದ್ದಲ್ಲದೆ ನಾವು ಬಿಟ್ಟು ಹೊರಟಾಗ ನಮಗೆ ಅವಶ
ವಾದ ಪದಾರ್ಥಗಳನ್ನು ತಂದು ಹಡಗಿನಲ್ಲಿಟ್ಟರು.

ಪೌಲನು ರೋಮಾಪುರಕ್ಕೆ ಸೇರಿ ಅಲ್ಲಿ ಎರಡು ವರುಷ
ಸೆರೆಯವನಾಗಿದ್ದು ಕ್ರಿಸ್ತನ ವಿಷಯವಾಗಿ
ಉಪದೇಶಮಾಡುತ್ತಾ ಬಂದದ್ದು.

ಮೂರು ತಿಂಗಳಾದ ಮೇಲೆ ಅಲೆಕ್ಸಾಂದ್ರಿಯದಿಂ
ಬಂದು ಆ ದ್ವೀಪದಲ್ಲಿ ಹಿಮಕಾಲವನ್ನು ಕಳೆದಿ
ಒಂದು ಹಡಗನ್ನು ಹತ್ತಿ ಹೊರಟೆವು. ಆ ಹಡಗಿ
ಅಶ್ವಿನೀದೇವತೆಗಳೆಂಬ ಚಿಹ್ನೆ. ನಾವು ಸುರಕೂಸಿ
ಮುಟ್ಟಿ ಅಲ್ಲಿ ಮೂರು ದಿವಸ ನಿಂತೆವು. ಅಲ್ಲಿಂ
ನಾವು ಸುತ್ತಿಕೊಂಡುಹೋಗಿ ರೇಗಿಯಕ್ಕೆ ಸೇ
ದೆವು. ಒಂದು ದಿನವಾದ ಮೇಲೆ ತೆಂಕಣಗಾ
ಹುಟ್ಟಿದ್ದರಿಂದ ಎರಡನೆಯ ದಿನದಲ್ಲಿ ಪೊತಿಯೋಲಕ
ಬಂದೆವು. ಅಲ್ಲಿ ಕ್ರೈಸ್ತ ಸಹೋದರರು ಸಿಕ್ಕಿದರು
ಅವರು ನಮ್ಮನ್ನು ತಮ್ಮ ಬಳಿಯಲ್ಲಿ ಏಳು ದಿವಸ ಇ
ಬೇಕೆಂದು ಬೇಡಿಕೊಂಡರು. ತರುವಾಯ ರೋಮ
ಪುರಕ್ಕೆ ಬಂದೆವು. ಅಲ್ಲಿದ್ದ ಸಹೋದರರು ನಮ
ಸಮಾಚಾರವನ್ನು ಕೇಳಿದಾಗ ನಮ್ಮನ್ನು ಎದುರುಗೊ
ಳ್ಳುವದಕ್ಕಾಗಿ ಕೆಲವರು ಅಪ್ಪಿಯಪೇಟೆಯ ವರೆಗ
ಕೆಲವರು ತ್ರಿಛತ್ರವೆಂಬ ಸ್ಥಳದ ವರೆಗೂ ಬಂದರ
ಪೌಲನು ಅವರನ್ನು ನೋಡಿ ದೇವರ ಸ್ತೋತ್ರವನ
ಮಾಡಿ ಧೈರ್ಯಗೊಂಡನು.
ನಾವು ರೋಮಾಪುರಕ್ಕೆ ಬಂದ ಮೇಲೆ ಪೌಲನ
ತನ್ನನ್ನು ಕಾಯುತ್ತಿದ್ದ ಸಿಪಾಯಿಯೊಂದಿಗೆ ಪ್ರತ್ಯೇ
ವಾಗಿರಬಹುದೆಂಬ ಅಪ್ಪಣೆಯನ್ನು ಹೊಂದಿದನು.
ಮೂರು ದಿವಸಗಳಾದ ಮೇಲೆ ಪೌಲನು ಯೆಹೂದ
ರಲ್ಲಿ ಪ್ರಮುಖರನ್ನು ತನ್ನ ಬಳಿಗೆ ಕರೆಯಿಸಿದನ
ಅವರು ಕೂಡಿದ ಮೇಲೆ ಅವನು ಅವರಿಗೆ—ಸಹೋ
ರರೇ, ನಾನು ನಮ್ಮ ಜನರಿಗೂ ನಮ್ಮ ಪಿತೃಗ
ಆಚಾರಗಳಿಗೂ ವಿರುದ್ಧವಾಗಿ ಏನೂ ಮಾಡದವನ
ದರೂ ಯೆರೂಸಲೇಮಿನಿಂದ ರೋಮಾಯರ ಕೈ
ಸೆರೆಯವನಾಗಿ ಒಪ್ಪಿಸಲ್ಪಟ್ಟೆನು. ಅವರು ನನ್ನನ
ವಿಚಾರಣೆಮಾಡಿ ನನ್ನಲ್ಲಿ ಮರಣದಂಡನೆಗೆ ಕಾರ

ವೇನೂ ಇಲ್ಲದ್ದರಿಂದ ನನ್ನನ್ನು ಬಿಡಿಸಬೇಕೆಂದಿದ್ದರು.
19 ಅದಕ್ಕೆ ಯೆಹೂದ್ಯರು ಅಡ್ಡಮಾತಾಡಿದ್ದರಿಂದ ನಾನು
ಚಕ್ರವರ್ತಿಯ ಎದುರಿನಲ್ಲಿ ಹೇಳಿಕೊಳ್ಳುತ್ತೇನೆಂದು
ಹೇಳಬೇಕಾಗಿ ಬಂತು. ನನ್ನ ಸ್ವದೇಶದವರ ಮೇಲೆ
ದೋಷಾರೋಪಣೆ ಮಾಡಬೇಕೆಂಬ ಅಭಿಪ್ರಾಯದಿಂದ
20 ಅದನ್ನು ಹೇಳಲಿಲ್ಲ. ಈ ಕಾರಣದಿಂದ ನಾನು ನಿಮ್ಮ
ನ್ನು ಕಂಡು ಮಾತಾಡಬೇಕೆಂದು ಕರೆಯಿಸಿದೆನು.
ಇಸ್ರಾಯೇಲ್ ಜನರ ನಿರೀಕ್ಷೆಯ ನಿಮಿತ್ತವಾಗಿ ಈ
ಬೇಡಿಯಿಂದ ಕಟ್ಟಲ್ಪಟ್ಟಿದ್ದೇನೆ ಎಂದು ಹೇಳಿದನು.
21 ಅವರು ಅವನಿಗೆ—ನಿನ್ನ ವಿಷಯವಾಗಿ ನಮಗೆ ಯೂ
ದಾಯದಿಂದ ಕಾಗದಗಳು ಬರಲಿಲ್ಲ, ಸಹೋದರರಲ್ಲಿ
ಒಬ್ಬರೂ ಬಂದು ನಿನ್ನ ವಿಷಯವಾಗಿ ಕೆಟ್ಟದ್ದನ್ನು ತಿಳಿ
22 ಸಲೂ ಇಲ್ಲ, ಮಾತಾಡಲೂ ಇಲ್ಲ. ಆದರೆ ನಿನ್ನ ಅಭಿಪ್ರಾ
ಯವನ್ನು ನಿನ್ನಿಂದಲೇ ಕೇಳುವದು ನಮಗೆ ಯುಕ್ತ
ವೆಂದು ತೋರುತ್ತದೆ. ಆ ಮತದ ವಿಷಯದಲ್ಲಿ
ಜನರು ಎಲ್ಲೆಲ್ಲಿಯೂ ವಿರುದ್ಧವಾಗಿ ಮಾತಾಡುತ್ತಾ
ರೆಂಬದೊಂದೇ ನಮಗೆ ಗೊತ್ತದೆ ಅಂದರು.
23 ಅವರು ಅವನಿಗೆ ಒಂದು ದಿವಸವನ್ನು ಗೊತ್ತುಮಾ
ಡಲು ಬಹುಮಂದಿ ಅವನ ಬಿಡಾರದಲ್ಲಿ ಅವನ ಬಳಿಗೆ
ಬಂದರು. ಅವನು ಬೆಳಗಿನಿಂದ ಸಾಯಂಕಾಲದ ವರೆ
ಗೂ ದೇವರ ರಾಜ್ಯವನ್ನು ಕುರಿತು ಪ್ರಮಾಣವಾಗಿ
ಸಾಕ್ಷಿ ಹೇಳುತ್ತಾ ಮೋಶೆಯ ಧರ್ಮಶಾಸ್ತ್ರವನ್ನೂ ಪ್ರ
ವಾದಿಗಳ ಗ್ರಂಥಗಳನ್ನೂ ಆಧಾರಮಾಡಿಕೊಂಡು
ಯೇಸುವಿನ ವಿಷಯದಲ್ಲಿ ಅವರನ್ನು ಒಡಂಬಡಿಸುತ್ತಾ
24 ಇದ್ದನು. ಅವನು ಹೇಳಿದ ಮಾತುಗಳಿಗೆ ಕೆಲವರು
25 ಒಪ್ಪಿಕೊಂಡರು; ಕೆಲವರು ನಂಬದೆ ಹೋದರು. ಅವ
ರಲ್ಲಿ ಐಕಮತ್ಯವಿಲ್ಲದೆ ಇರುವಾಗ ಪೌಲನು ಅವ
ರಿಗೆ—ಪವಿತ್ರಾತ್ಮನು ಪ್ರವಾದಿಯಾದ ಯೆಶಾಯನ
ಬಾಯಿಂದ ನಿಮ್ಮ ಪಿತೃಗಳಿಗೆ ವಿಹಿತವಾಗಿ ಹೇಳಿದ್ದೇ 26
ನಂದರೆ—

ನೀನು ಈ ಜನರ ಬಳಿಗೆ ಹೋಗಿ ಅವರಿಗೆ—
ನೀವು ಕಿವಿಯಿದ್ದು ಕೇಳಿದರೂ ತಿಳುಕೊಳ್ಳು
ವದೇ ಇಲ್ಲ;
ಕಣ್ಣಿದ್ದು ನೋಡಿದರೂ ಕಾಣುವದೇ ಇಲ್ಲ ಎಂಬ
ದಾಗಿ ಹೇಳು.
ಯಾಕಂದರೆ ಈ ಜನರ ಹೃದಯವು ಕೊಬ್ಬಿತು; 27
ಇವರ ಕಿವಿ ಮಂದವಾಯಿತು;
ಇವರು ಕಣ್ಣು ಮುಚ್ಚಿಕೊಂಡಿದ್ದಾರೆ;
ತಾವು ಕಣ್ಣಿನಿಂದ ಕಂಡು
ಕಿವಿಯಿಂದ ಕೇಳಿ ಹೃದಯದಿಂದ ತಿಳಿದು
ನನ್ನ ಕಡೆಗೆ ತಿರುಗಿಕೊಂಡು ನನ್ನಿಂದ ಸ್ವಸ್ಥತೆ
ಯನ್ನು ಹೇಗೂ ಹೊಂದಬಾರದೆಂದು ಮಾ
ಡಿಕೊಂಡಿದ್ದಾರೆ ಎಂಬದೇ.

ಆದಕಾರಣ ದೇವರಿಂದಾದ ಈ ರಕ್ಷಣೆಯು ಅನ್ಯ 28
ಜನರಿಗೆ ಹೇಳಿಕಳುಹಿಸಲ್ಪಟ್ಟಿದೆ ಎಂದು ನಿಮಗೆ ಚೆನ್ನಾಗಿ
ತಿಳಿದಿರಲಿ; ಅವರಾದರೂ ಕೇಳುವರು ಎಂದು ಹೇಳಿ
ದನು. ಅವನು ಈ ಮಾತನ್ನು ಹೇಳಿದ ಮೇಲೆ ಅವರು 29
ಹೊರಟುಹೋದರು.
ತರುವಾಯ ಅವನು ತಾನೇ ಮಾಡಿಕೊಂಡ ಬಾಡಿ 30
ಗೆಯ ಮನೆಯಲ್ಲಿ ಪೂರಾ ಎರಡು ವರುಷ ಇದ್ದು ತನ್ನ
ಬಳಿಗೆ ಬರುವವರೆಲ್ಲರನ್ನು ಸೇರಿಸಿಕೊಂಡು ಯಾವ 31
ಅಡ್ಡಿಯೂ ಇಲ್ಲದೆ ತುಂಬಾ ಧೈರ್ಯದಿಂದ ದೇವರ
ರಾಜ್ಯವನ್ನು ಪ್ರಸಿದ್ಧಿಪಡಿಸುತ್ತಾ ಕರ್ತನಾದ ಯೇಸು
ಕ್ರಿಸ್ತನ ವಿಷಯವಾಗಿ ಉಪದೇಶಮಾಡುತ್ತಾ ಇದ್ದನು.

---

# THE EPISTLE OF SAINT PAUL TO THE
# ROMANS

## ಪೌಲನು ರೋಮಾಪುರದವರಿಗೆ ಬರೆದ ಪತ್ರಿಕೆ

ಪೀಠಿಕೆ.

ಯೇಸು ಕ್ರಿಸ್ತನ ದಾಸನೂ ಅಪೊಸ್ತಲನಾಗುವ
ದಕ್ಕೆ ಕರೆಯಲ್ಪಟ್ಟವನೂ ದೇವರ ಸುವಾರ್ತೆಯನ್ನು
ಸಾರುವದಕ್ಕೆ ನೇಮಿಸಲ್ಪಟ್ಟವನೂ ಆಗಿರುವ ಪೌಲನು
ರೋಮಾಪುರದಲ್ಲಿ ದೇವರಿಗೆ ಪ್ರಿಯರೂ ದೇವಜನರಾ
ಗುವದಕ್ಕೆ ಕರೆಯಲ್ಪಟ್ಟವರೂ ಆಗಿರುವವರೆಲ್ಲರಿಗೆ ಬರೆ
ಯುವದೇನಂದರೆ—ನಮ್ಮ ತಂದೆಯಾಗಿರುವ ದೇವ
ರಿಂದಲೂ ಕರ್ತನಾದ ಯೇಸು ಕ್ರಿಸ್ತನಿಂದಲೂ ನಿಮಗೆ
ಕೃಪೆಯೂ ಶಾಂತಿಯೂ ಆಗಲಿ. ಸುವಾರ್ತೆಯನ್ನು
ಸಾರಿ ಹೇಳಿಸುತ್ತೇನೆಂದು ದೇವರು ಮುಂಚಿತವಾಗಿ
ಪವಿತ್ರಶಾಸ್ತ್ರಗಳಲ್ಲಿ ತನ್ನ ಪ್ರವಾದಿಗಳ ಮೂಲಕ
ಮಾತುಕೊಟ್ಟನು. ಈ ಸುವಾರ್ತೆಯು ದೇವರ 3
ಮಗನೂ ನಮ್ಮ ಕರ್ತನೂ ಆಗಿರುವ ಯೇಸು ಕ್ರಿಸ್ತನ
ವಿಷಯವಾದದ್ದು. ಆತನು ವಂಶಕ್ರಮದಿಂದ ದಾವೀ
ದನ ಸಂತಾನದಲ್ಲಿ ಹುಟ್ಟಿದವನೂ, ಪವಿತ್ರವಾದ ಆತ್ಮ 4
ವುಳ್ಳವನಾಗಿದ್ದು ಸತ್ತಮೇಲೆ ಜೀವಿತನಾಗಿ ಎದ್ದು ಬಂದ
ಮಹತ್ಕಾರ್ಯದಿಂದ ದೇವಕುಮಾರನೆಂದು ನಿರ್ಣ
ಯಿಸಲ್ಪಟ್ಟವನೂ ಆಗಿದ್ದಾನೆ. ಆತನ ಹೆಸರಿನ ಪ್ರಸಿದ್ಧಿ 5
ಗಾಗಿ ಎಲ್ಲಾ ಅನ್ಯಜನಗಳಲ್ಲಿ ನಂಬಿಕೆಯೆಂಬ ವಿಧೇ
ಯತ್ವ ಉಂಟಾಗುವದಕ್ಕೋಸ್ಕರ ನಾವು ಆತನ ಮೂಲ
ಕವಾಗಿ ಕೃಪೆಯನ್ನೂ ಅಪೊಸ್ತಲತನವನ್ನೂ ಹೊಂದಿ

6 ದೆವು. ಯೇಸು ಕ್ರಿಸ್ತನವರಾಗುವದಕ್ಕೆ ಕರೆಯಲ್ಪಟ್ಟ
ನೀವು ಸಹ ಆ ಅನ್ಯಜನರೊಳಗಿನವರಾದ್ದರಿಂದ ನಿಮಗೆ
ಬರೆಯುತ್ತೇನೆ.
8 ಮೊದಲನೇದು, ನಿಮ್ಮ ನಂಬಿಕೆಯು ಲೋಕದ
ಲ್ಲೆಲ್ಲಾ ಪ್ರಸಿದ್ಧಿಗೆ ಬಂದದ್ದರಿಂದ ನಿಮ್ಮೆಲ್ಲರ ವಿಷಯ
ವಾಗಿ ಯೇಸು ಕ್ರಿಸ್ತನ ಮೂಲಕ ನನ್ನ ದೇವರಿಗೆ
9-10 ಸ್ತೋತ್ರ ಮಾಡುತ್ತೇನೆ. ನಾನು ಪ್ರಾರ್ಥನೆ ಮಾಡು
ವಾಗೆಲ್ಲಾ ತಪ್ಪದೆ ನಿಮಗೋಸ್ಕರ ವಿಜ್ಞಾಪನೆಮಾಡಿ
ಇನ್ನು ಮೇಲೆಯಾದರೂ ನಿಮ್ಮ ಬಳಿಗೆ ಬರುವದಕ್ಕೆ
ದೇವರ ಚಿತ್ತದಿಂದ ನನಗೆ ಹೇಗೂ ಅನುಕೂಲವಾಗ
ಬೇಕೆಂದು ಬೇಡಿಕೊಳ್ಳುತ್ತೇನೆ; ಇದಕ್ಕೆ ದೇವರೇ ನನ್ನ
ಸಾಕ್ಷಿ; ಆತನ ಮಗನ ಸುವಾರ್ತೆಯನ್ನು ಸಾರುತ್ತಾ
ಆತನನ್ನೇ ನನ್ನ ಆತ್ಮದಲ್ಲಿ ಆರಾಧಿಸುವವನಾಗಿದ್ದೇನೆ.
11-12 ನನ್ನ ಮುಖಾಂತರವಾಗಿ ನಿಮಗೆ ಪಾರಮಾರ್ಥಿಕ
ವರವೇನಾದರೂ ದೊರಕಿ ನೀವು ದೃಢವಾಗುವದಕ್ಕೋ
ಸ್ಕರ ಅಂದರೆ ನಾನು ನಿಮ್ಮ ನಂಬಿಕೆಯಿಂದ ನೀವು
ನನ್ನ ನಂಬಿಕೆಯಿಂದ ಸಹಾಯಹೊಂದಿ ಈ ಪ್ರಕಾರ
ನಿಮ್ಮೊಂದಿಗೆ ನಾನು ಧೈರ್ಯಗೊಳ್ಳುವದಕ್ಕೋಸ್ಕರ
ನಿಮ್ಮನ್ನು ನೋಡಬೇಕೆಂದು ಅಪೇಕ್ಷಿಸುತ್ತೇನೆ.
13 ಸಹೋದರರೇ, ನನ್ನ ಕೆಲಸವು ಇತರ ಜನಗಳಲ್ಲಿ ಸಫಲ
ವಾದಂತೆ ನಿಮ್ಮಲ್ಲಿಯೂ ಸಫಲವಾದೀತೆಂದು ನಿಮ್ಮ
ಬಳಿಗೆ ಬರುವದಕ್ಕೆ ಅನೇಕಾವರ್ತಿ ಮನಸ್ಸುಮಾಡಿ
ಕೊಂಡಿದ್ದಾಗ್ಯೂ ಇಂದಿನ ವರೆಗೂ ಅಡ್ಡಿಯಾಯಿತೆಂದು
14 ನಿಮಗೆ ತಿಳಿದಿರಬೇಕೆಂಬದು ನನ್ನ ಅಪೇಕ್ಷೆ. ಗ್ರೀಕ
ರಿಗೂ ಇತರ ಜನಗಳಿಗೂ ಜ್ಞಾನಿಗಳಿಗೂ ಮೂಢರಿಗೂ
ತೀರಿಸಬೇಕಾದ ಒಂದು ಋಣ ನನ್ನ ಮೇಲೆ ಅದೆ.
15 ಹೀಗಿರುವದರಿಂದ ರೋಮಾಪುರದಲ್ಲಿರುವ ನಿಮಗೆ
ಸಹ ಸುವಾರ್ತೆಯನ್ನು ಸಾರುವದಕ್ಕೆ ನಾನಂತೂ ಸಿದ್ಧ
ವಾಗಿದ್ದೇನೆ.

ಪತ್ರಿಕೆಯ ಪ್ರಸ್ತಾಪವು.

ಸುವಾರ್ತೆಯ ವಿಷಯದಲ್ಲಿ ನಾನು ನಾಚಿಕೊಳ್ಳುವ
16 ವನಲ್ಲ. ಆ ಸುವಾರ್ತೆಯು ದೇವರ ಬಲಸ್ವರೂಪವಾ
ಗಿದ್ದು ಮೊದಲು ಯೆಹೂದ್ಯರಿಗೆ ಆ ಮೇಲೆ
ಗ್ರೀಕರಿಗೆ ಅಂತೂ ನಂಬುವವರೆಲ್ಲರಿಗೂ ರಕ್ಷಣೆ
17 ಉಂಟುಮಾಡುವಂಥದಾಗಿದೆ. ಹೇಗಂದರೆ 1)ದೇವ
ರಿಂದ ದೊರಕುವ ನೀತಿಯು ಅದರಲ್ಲಿ ತೋರಿಬರುತ್ತದೆ.
ನೀತಿವಂತನು ನಂಬಿಕೆಯಿಂದಲೇ ಬದುಕುವನೆಂಬ
ಶಾಸ್ತ್ರೋಕ್ತಿಯ ಪ್ರಕಾರ ಆ ನೀತಿಯು ನಂಬಿಕೆಯ
ಫಲವಾಗಿದ್ದು ನಂಬಿಕೆಯನ್ನು ವೃದ್ಧಿಪಡಿಸುವಂಥದಾ
ಗಿದೆ.

ಎಲ್ಲಾ ಮನುಷ್ಯರು ದೇವರ ಸನ್ನಿಧಿಯಲ್ಲಿ ಅಪರಾಧಿಗಳು.

18 ದುಷ್ಟತನವನ್ನು ನಡಿಸಿ ಸತ್ಯವನ್ನು ಅಣಗಿಸುವವ
ರಾದ ಮನುಷ್ಯರ ಎಲ್ಲಾ ವಿಧವಾದ ಭಕ್ತಿಹೀನತೆಯ
ಮೇಲೆಯೂ ದುಷ್ಟತನದ ಮೇಲೆಯೂ ದೇವರ
ಕೋಪವು ಪರಲೋಕದಿಂದ ತೋರಿಬರುತ್ತದೆ. ಯ
ಕಂದರೆ ದೇವರ ವಿಷಯವಾಗಿ ತಿಳಿಯಬ
ವಾದದ್ದು ಅವರ ಮನಸ್ಸಿಗೆ ಸ್ಪಷ್ಟವಾಗಿ ತಿಳಿದ
ಅದನ್ನು ಅವರಿಗೆ ದೇವರೇ ಸ್ಪಷ್ಟವಾಗಿ ತಿಳಿಸಿದ
ಹೇಗಂದರೆ ಕಣ್ಣಿಗೆ ಕಾಣದಿರುವ ಆತನ ಗುಣಲಕ್ಷ
ಗಳು ಅಂದರೆ ಆತನ ನಿತ್ಯಶಕ್ತಿಯೂ ದೇವತ್ವವೂ
ದುತ್ಪತ್ತಿ ಮೊದಲುಗೊಂಡು ಆತನು ಮಾಡಿದ ಸ
ಗಳ ಮೂಲಕ ಬುದ್ಧಿಗೆ ಗೊತ್ತಾಗಿ ಕಾಣಬರುತ್ತ
ಹೀಗಿರುವದರಿಂದ ಅವರು ಉತ್ತರವಿಲ್ಲದವರಾಗಿದ್ದಾ
ಯಾಕಂದರೆ ದೇವರ ವಿಷಯವಾಗಿ ಅವರಿಗೆ ತಿಳುವ
ಯಿದ್ದರೂ ಅವರು ಆತನನ್ನು ದೇವರೆಂದು ಘನಪ
ಲಿಲ್ಲ; ಆತನ ಉಪಕಾರಗಳನ್ನು ನೆನಸಿ ಆತನ
ಸ್ತುತಿಸಲಿಲ್ಲ. ಅವರು ವಿಚಾರ ಮಾಡಿಮಾಡಿ
ಕಾಣಲಿಲ್ಲ; ವಿವೇಕವಿಲ್ಲದ ಅವರ ಮನಸ್ಸು ಕತ್ತ
ಯಿತು. ತಾವು ಜ್ಞಾನಿಗಳೆಂದು ಹೇಳಿಕೊಂಡು ಹು
ರಾದರು. ಲಯವಿಲ್ಲದ ದೇವರ ಮಹಿಮೆಯ
ಬಿಟ್ಟು ಅದಕ್ಕೆ ಬದಲಾಗಿ ಲಯವಾಗುವ ಮನು
ಪಶು ಪಕ್ಷಿ ಸರ್ಪಾದಿಗಳ ಮೂರ್ತಿಯನ್ನು ಮ
ಕೊಂಡರು.
ಆದಕಾರಣ ಅವರು ಮನಸ್ಸಿನ ದುರಾಶೆಗಳ
ನಡೆದು ತಮ್ಮ ದೇಹಗಳನ್ನು ಮಾನಹೀನವ
ಕೊಳ್ಳಲಿ ಎಂದು ದೇವರು ಅವರನ್ನು ಹೊಲಸು
ನಡತೆಗೆ ಒಪ್ಪಿಸಿದನು. ಅವರು ಸತ್ಯದೇವರನ್ನು ಬಿ
ಅಸತ್ಯವಾದದ್ದನ್ನು ಹಿಡಿದುಕೊಂಡು ಸೃಷ್ಟಿಕರ್ತನ
ಪೂಜಿಸದೆ ಸೃಷ್ಟಿವಸ್ತುಗಳನ್ನೇ ಪೂಜಿಸಿ ಸೇವಿಸು
ರಾದರು. ಸೃಷ್ಟಿಕರ್ತನೊಬ್ಬನೇ ನಿರಂತರ ಸ
ಹೊಂದತಕ್ಕವನು. ಆಮೆನ್.
ಅವರು ಇಂಥದನ್ನು ಮಾಡಿದ್ದರಿಂದ ದೇವ
ಅವರನ್ನು ಕೇವಲ ತುಚ್ಛವಾದ ಕಾಮಾಭಿಲಾ
ಒಪ್ಪಿಸಿದನು. ಹೇಗಂದರೆ ಅವರ ಹೆಂಗಸರು ಸ್ವಾ
ವಿಕವಾದ ಭೋಗವನ್ನು ಬಿಟ್ಟು ಸ್ವಭಾವಕ್ಕೆ ವಿರು
ವಾದ ಭೋಗವನ್ನು ಅನುಸರಿಸಿದರು. ಅದರಂತೆ ಗ
ಸರು ಸಹ ಸ್ವಾಭಾವಿಕವಾದ ಸ್ತ್ರೀಭೋಗವನ್ನು ಬಿ
ಒಬ್ಬರ ಮೇಲೊಬ್ಬರು ತಮ್ಮ ಕಾಮಾತುರದಿಂದ ತ
ಪಡುತ್ತಾ ಗಂಡಸರ ಸಂಗಡ ಗಂಡಸರು ಕೇವಲ
ಲಕ್ಷಣವಾದದ್ದನ್ನು ನಡಿಸಿ ತಮ್ಮ ಭ್ರಾಂತಿಗೆ
ಫಲವನ್ನು ತಮ್ಮಲ್ಲಿ ಹೊಂದುವವರಾದರು.
ಇದಲ್ಲದೆ ದೇವರ ಜ್ಞಾನವು ಅವರಿಗೆ ಇಷ್ಟವಿಲ್ಲ
ರಿಂದ ಅಲ್ಲದ ಕೃತ್ಯಗಳನ್ನು ನಡಿಸುವವರಾಗುವ
ದೇವರು ಅವರನ್ನು ಅನಿಷ್ಟಭಾವಕ್ಕೆ ಒಪ್ಪಿಸಿದನು.
ಗಂದರೆ ಅವರು ಸಕಲವಿಧವಾದ ಅನ್ಯಾಯ ದುರ್ಮಾ
ತನ ಲೋಲುಪ್ತಿ ದುಷ್ಟತ್ವಗಳಿಂದಲೂ ಹೊಟ್ಟೇಕಿ
ಕೊಲೆ ಜಗಳ ಮೋಸ ಹಗೆತನಗಳಿಂದಲೂ ತುಂಬಿ
ರಾದರು. ಅವರು ಕಿವಿ ಊದುವವರೂ ಚಾಡಿಹೇ
ವವರೂ ದೇವರನ್ನು ದ್ವೇಷಿಸುವವರೂ ಸೊಕ್ಕಿನವ
ಅಹಂಕಾರಿಗಳೂ ಬಡಾಯಿಕೊಚ್ಚುವವರೂ ಕೇಡ
ಕಲ್ಪಿಸುವವರೂ ತಂದೆತಾಯಿಗಳ ಮಾತನ್ನು ಕೇಳ
ರೂ ವಿವೇಕವಿಲ್ಲದವರೂ ಮಾತಿಗೆ ತಪ್ಪುವವರೂ ಮ

1) ಅಥವಾ, ದೇವರಿಗೆ ಮೆಚ್ಚಿಕೆಯಾಗಿರುವ ನೀತಿ. ಮೂಲ; ದೇವರ ನೀತಿ.

ಯಿಲ್ಲದವರೂ ಕರುಣೆಯಿಲ್ಲದವರೂ ಆದರು. ಇಂಥವು
ಗಳನ್ನು ನಡಿಸುವವರು ಮರಣಕ್ಕೆ ಪಾತ್ರರಾಗಿದ್ದಾ
ರೆಂಬ ದೇವವಿಧಿಯು ಅವರಿಗೆ ತಿಳಿದಿದ್ದರೂ ಅವರು
ತಾವೇ ಅವುಗಳನ್ನು ಮಾಡುವದಲ್ಲದೆ ಮಾಡುವವ
ರನ್ನು ಅನುಮೋದಿಸುತ್ತಾರೆ.

ಯೆಹೂದ್ಯರಾದರೂ ಅಪರಾಧಿಗಳು.

ಆದದರಿಂದ ಎಲೈ ಮನುಷ್ಯನೇ, ಮತ್ತೊಬ್ಬರಲ್ಲಿ
ದೋಷವೆಣಿಸುವ ನೀನು ಯಾವನಾದರೂ ಸರಿಯೇ,
ಉತ್ತರ ಹೇಳುವದಕ್ಕೆ ನಿನಗೆ ಮಾರ್ಗವಿಲ್ಲ. ಹೇ
ಗಂದರೆ ಮತ್ತೊಬ್ಬರಲ್ಲಿ ದೋಷವೆಣಿಸುವದರಿಂದ
ನಿನ್ನನ್ನು ನೀನೇ ದೋಷಿಯೆಂದು ತೀರ್ಪುಮಾಡಿಕೊಂಡ
ಹಾಗಾಯಿತು. ಮತ್ತೊಬ್ಬರಲ್ಲಿ ದೋಷವೆಣಿಸುವ
ನೀನು ಆ ದೋಷಗಳನ್ನೇ ನಡಿಸುತ್ತೀಯಲ್ಲಾ. ಆದರೆ
ಅಂಥವುಗಳನ್ನು ನಡಿಸುವವರ ವಿಷಯದಲ್ಲಿ ದೇವರು
ಮಾಡುವ ತೀರ್ಪು ಸತ್ಯಕ್ಕನುಸಾರವಾಗಿಯೇ ಇರುವ
ದೆಂದು ಬಲ್ಲೆವು. ಎಲೈ ಮನುಷ್ಯನೇ, ಅಂಥವುಗಳನ್ನು
ನಡಿಸುವವರಲ್ಲಿ ದೋಷವೆಣಿಸಿ ಅವುಗಳನ್ನೇ ಮಾಡು
ತ್ತಿರುವ ನೀನು ದೇವರ ದಂಡನೆಯ ತೀರ್ಪಿಗೆ ತಪ್ಪಿಸಿ
ಕೊಂಡೇನೆಂದು ಯೋಚಿಸುತ್ತೀಯಾ? ಆತನ ಅಪಾರ
ವಾದ ದಯಾ ಸಹನ ದೀರ್ಘಶಾಂತಿಗಳನ್ನು ಅಸಡ್ಡೆ
ಮಾಡುತ್ತೀಯಾ? ಮನಸ್ಸನ್ನು ಬೇರೆಮಾಡಿಕೊಳ್ಳು
ವದಕ್ಕೆ ದೇವರ ಉಪಕಾರವು ನಿನ್ನನ್ನು ಪ್ರೇರಿಸುತ್ತ
ದೆಂಬದು ನಿನಗೆ ಗೊತ್ತಿಲ್ಲವೇ? ನೀನು ನಿನ್ನ ಮೊಂಡ
ತನವನ್ನೂ ಪಶ್ಚಾತ್ತಾಪವಿಲ್ಲದ ಮನಸ್ಸನ್ನೂ ಅನು
ಸರಿಸುವದರಿಂದ ನಿನಗೋಸ್ಕರ ದೇವರ ಕೋಪವನ್ನು
ಕೂಡಿಟ್ಟುಕೊಳ್ಳುತ್ತಾ ಇದ್ದೀ. ದೇವರ ಕೋಪವೂ
ನ್ಯಾಯವಾದ ತೀರ್ಪೂ ಪ್ರಕಟವಾಗುವ ದಿವಸ ಬರು
ತ್ತದಷ್ಟೆ. ಆತನು ಪ್ರತಿಯೊಬ್ಬನಿಗೆ ಅವನವನ ಕೃತ್ಯ
ಗಳಿಗೆ ತಕ್ಕ ಪ್ರತಿಫಲವನ್ನು ಕೊಡುವನು. ಯಾರು
ಪ್ರಭಾವ ಮಾನ ನಿರ್ಲಯತ್ವಗಳನ್ನು ಹೊಂದಬೇ
ಕೆಂದು ಒಳ್ಳೇದನ್ನು ಬೇಸರಗೊಳ್ಳದೆ ಮಾಡುತ್ತಾರೋ
ಅವರಿಗೆ ನಿತ್ಯಜೀವವನ್ನು ಕೊಡುವನು. ಯಾರು ಸ್ವೇಚ್ಛೆ
ಯುಳ್ಳವರಾಗಿ ಸತ್ಯವನ್ನು ಅನುಸರಿಸದೆ ಅನ್ಯಾಯ
ವನ್ನು ಅನುಸರಿಸುತ್ತಾರೋ ಅವರಿಗೆ ಕೋಪ ರೌದ್ರ
ಗಳು ಬರುವವು. ಕೆಟ್ಟದ್ದನ್ನು ನಡಿಸುವ ಪ್ರತಿ
ಯೊಬ್ಬ ನರಪ್ರಾಣಿಗೆ ಕಷ್ಟವೂ ಸಂಕಟವೂ ಬರು
ವವು—ಯೆಹೂದ್ಯರಿಗೆ ಮೊದಲು, ಅನಂತರ ಗ್ರೀಕ
ರಿಗೆ ಸಹ. ಆದರೆ ಒಳ್ಳೇದನ್ನು ನಡಿಸುವ ಪ್ರತಿ
ಯೊಬ್ಬನಿಗೆ ಪ್ರಭಾವವೂ ಮಾನವೂ ಮನಶ್ಶಾಂತಿ
ಯೂ ಉಂಟಾಗುವವು—ಯೆಹೂದ್ಯರಿಗೆ ಮೊದಲು,
ಅನಂತರ ಗ್ರೀಕರಿಗೆ ಸಹ. ದೇವರಿಗೆ ಪಕ್ಷಪಾತ
ವಿಲ್ಲ. ಧರ್ಮಶಾಸ್ತ್ರವಿಲ್ಲದವರಾಗಿ ಪಾಪಮಾಡಿದವರು
ಧರ್ಮಶಾಸ್ತ್ರವಿಲ್ಲದವರಾಗಿ ನಾಶಹೊಂದುವರು; ಆದ
ರೆ ಧರ್ಮಶಾಸ್ತ್ರವುಳ್ಳವರಾಗಿದ್ದು ಪಾಪಮಾಡಿದವರು
ಧರ್ಮಶಾಸ್ತ್ರಕ್ಕನುಸಾರವಾಗಿ ತೀರ್ಪನ್ನು ಹೊಂದು
ವರು. ಧರ್ಮಶಾಸ್ತ್ರ ಕೇಳಿದ ಮಾತ್ರದಿಂದಲೇ
ಯಾರೂ ದೇವರ ಸನ್ನಿಧಿಯಲ್ಲಿ ನೀತಿವಂತರಾಗುವದಿಲ್ಲ;
ಅದನ್ನು ಅನುಸರಿಸುವವರೇ ನೀತಿವಂತರೆಂದು ನಿರ್ಣ
ಯಿಸಲ್ಪಡುವರು. ಧರ್ಮಶಾಸ್ತ್ರವಿಲ್ಲದ ಅನ್ಯಜನರು 14
ಸ್ವಾಭಾವಿಕವಾಗಿ ಧರ್ಮಶಾಸ್ತ್ರದಲ್ಲಿ ಹೇಳಿದಂತೆ ನಡೆ
ದರೆ ಅವರು ಧರ್ಮಶಾಸ್ತ್ರವಿಲ್ಲದವರಾಗಿದ್ದರೂ ತಾವೇ
ತಮಗೆ ಧರ್ಮಪ್ರಮಾಣವಾಗಿದ್ದಾರೆ; ಹೇಗಂದರೆ 15
ಅವರು ಧರ್ಮಶಾಸ್ತ್ರದ ಮುಖ್ಯ ತಾತ್ಪರ್ಯ ತಮ್ಮ
ಹೃದಯದಲ್ಲಿ ಬರೆದದೆ ಎಂಬದನ್ನು ತೋರ್ಪಡಿಸು
ತ್ತಾರೆ. ಇದಕ್ಕೆ ಅವರ ಮನಸ್ಸು ಸಹ ಸಾಕ್ಷಿ ನುಡಿ
ಯುತ್ತದೆ; ಅವರ ಯೋಚನೆಗಳು ವಾದಿಪ್ರತಿವಾದಿ
ಗಳಂತೆ—ಇದು ತಪ್ಪೆಂದು ತಪ್ಪಲ್ಲವೆಂದು ಸೂಚಿಸು
ತ್ತವೆ. ನಾನು ಸಾರುವ ಸುವಾರ್ತೆಯಲ್ಲಿ ಬೋಧಿ 16
ಸಿರುವ ಪ್ರಕಾರ ದೇವರು ಯೇಸು ಕ್ರಿಸ್ತನ ಮೂಲಕ
ವಾಗಿ ಮನುಷ್ಯರ ಗುಟ್ಟುಗಳನ್ನು ಹಿಡಿದು ವಿಚಾರಿಸುವ
ದಿನವು ಬರುತ್ತದೆ. ಆ ದಿನದಲ್ಲಿ ಇದೆಲ್ಲಾ ತಿಳಿದು
ಬರುವದು.

ನೀನು ಯೆಹೂದ್ಯನೆನಿಸಿಕೊಂಡವನೂ ಧರ್ಮಶಾ 17
ಸ್ತ್ರದಲ್ಲಿ ಭರವಸವಿಟ್ಟವನೂ ದೇವರ ವಿಷಯವಾಗಿ
ಹೊಗಳಿಕೊಳ್ಳುವವನೂ ಆತನ ಚಿತ್ತವನ್ನು ಬಲ್ಲವನೂ 18
ಧರ್ಮಶಾಸ್ತ್ರದಿಂದ ಉಪದೇಶವನ್ನು ಹೊಂದಿ ಇದು
ತಕ್ಕದ್ದು ಅದು ತಕ್ಕದ್ದಲ್ಲವೆಂದು [1]ವಿವೇಚಿಸುವವನೂ
ಆಗಿದ್ದೀ. ಧರ್ಮಶಾಸ್ತ್ರದಲ್ಲಿ ಜ್ಞಾನಸತ್ಯಗಳ ಸ್ವರೂಪ 19
ವೇ ನನಗೆ ಇರುವದರಿಂದ ಕುರುಡರಿಗೆ ದಾರಿ ತೋರಿ
ಸುವವನೂ ಕತ್ತಲೆಯಲ್ಲಿರುವವರಿಗೆ ಬೆಳಕೂ ತಿಳು 20
ವಳಿಕೆಯಿಲ್ಲದವರಿಗೆ ಶಿಕ್ಷಕನೂ ಬಾಲಕರಿಗೆ ಉಪಾ
ಧ್ಯಾಯನೂ ಆಗಿದ್ದೇನೆಂದು ನಂಬಿಕೊಂಡಿದ್ದೀ. ಹೀಗಿರ 21
ಲಾಗಿ ಮತ್ತೊಬ್ಬನಿಗೆ ಉಪದೇಶಮಾಡುವ ನೀನು
ನಿನಗೆ ಉಪದೇಶಮಾಡಿಕೊಳ್ಳದೆ ಇದ್ದೀಯೋ? ಕದಿಯ
ಬಾರದೆಂದು ಬೋಧಿಸುವ ನೀನು ಕದಿಯುತ್ತೀಯೋ?
ಹಾದರ ಮಾಡಬಾರದೆಂದು ಹೇಳುವ ನೀನು ಹಾದರ 22
ಮಾಡುತ್ತೀಯೋ? ಮೂರ್ತಿಗಳಲ್ಲಿ ಅಸಹ್ಯಪಡುತ್ತಿ
ರುವ ನೀನು ದೇವಸ್ಥಾನದಲ್ಲಿ ಕಳ್ಳತನ ಮಾಡುತ್ತೀ
ಯೋ? ಧರ್ಮಶಾಸ್ತ್ರದಲ್ಲಿ ಅಭಿಮಾನಿಯಾಗಿರುವ 23
ನೀನು ಧರ್ಮಶಾಸ್ತ್ರವನ್ನು ಮೀರಿ ನಡೆದು ದೇವರನ್ನು
ಅವಮಾನಪಡಿಸುತ್ತೀಯೋ? ನಿಮ್ಮ ದೆಸೆಯಿಂದ 24
ಅನ್ಯಜನರಲ್ಲಿ ದೇವರ ನಾಮವು ದೂಷಣೆಗೆ ಗುರಿಯಾ
ಗುತ್ತದೆಂದು ಬರೆದದೆಯಲ್ಲಾ.

ನೀನು ಧರ್ಮಶಾಸ್ತ್ರಾನುಸಾರವಾಗಿ ನಡೆಯುವವ 25
ನಾದರೆ ಸುನ್ನತಿಯೆಂಬ ಸಂಸ್ಕಾರವು ಪ್ರಯೋಜನಕರ
ವಾದದ್ದೇ ಸರಿ; ಆದರೆ ನೀನು ಧರ್ಮಶಾಸ್ತ್ರವನ್ನು
ಮೀರಿ ನಡೆಯುವವನಾಗಿದ್ದರೆ ನಿನಗೆ ಸುನ್ನತಿಯಿದ್ದ
ರೂ ಇಲ್ಲದಂತಾಯಿತು. ಹೀಗಿರಲಾಗಿ ಸುನ್ನತಿಯಿಲ್ಲ 26
ದವನು ಧರ್ಮಶಾಸ್ತ್ರದ ನೇಮಗಳ ಪ್ರಕಾರ ನಡೆದರೆ
ಸುನ್ನತಿಯಿಲ್ಲದವನಾಗಿದ್ದರೂ ಸುನ್ನತಿಯಿದ್ದವನಂತೆ
ಎಣಿಸಲ್ಪಡುವದಿಲ್ಲವೇ? ಅವನು ಶರೀರದಲ್ಲಿ ಸುನ್ನತಿ 27
ಯಿಲ್ಲದವನಾಗಿದ್ದು ಧರ್ಮಶಾಸ್ತ್ರದಲ್ಲಿ ಹೇಳಿದ್ದನ್ನು
ನೆರವೇರಿಸುವದರಲ್ಲಿ ಶಾಸ್ತ್ರವೂ ಸುನ್ನತಿಯೂ
ಇದ್ದು ಧರ್ಮವನ್ನು ಮೀರಿ ನಡೆಯುವ ನಿನ್ನನ್ನು

---

1) ಅಥವಾ, ಉತ್ತಮ ಕಾರ್ಯಗಳನ್ನು ಮೆಚ್ಚಿಕೊಂಡವನೂ.

28 ದೋಷಿಯೆಂದು ನಿರ್ಣಯಿಸುವದಿಲ್ಲವೇ? ಹೊರಗೆ
ಮಾತ್ರ ಯೆಹೂದ್ಯನಾಗಿರುವವನು ಯೆಹೂದ್ಯನಲ್ಲ;
ಮತ್ತು ಹೊರಗೆ ಶರೀರದಲ್ಲಿ ಮಾತ್ರ ಮಾಡಿರುವ
29 ಸುನ್ನತಿಯು ಸುನ್ನತಿಯಲ್ಲ. ಆದರೆ ಒಳಗೆ ಯೆಹೂದ್ಯ
ನಾಗಿರುವವನೇ ಯೆಹೂದ್ಯನು; ಮತ್ತು ಹೃದಯ
ದಲ್ಲಿ ಆಗುವ ಸುನ್ನತಿಯೇ ಸುನ್ನತಿ. ಇದು ಬಾಹ್ಯಾ
ಚಾರಕ್ಕೆ ಸಂಬಂಧಪಟ್ಟದ್ದಲ್ಲ, ಆತ್ಮಸಂಬಂಧಪಟ್ಟದ್ದೇ;
ಇಂಥಾ ಸುನ್ನತಿಯಿದ್ದವನಿಗೆ ಬರುವ ಹೊಗಳಿಕೆಯು
ದೇವರಿಂದಲೇ ಹೊರತು ಮನುಷ್ಯರಿಂದ ಬರುವದಲ್ಲ.

3 ಹಾಗಾದರೆ ಯೆಹೂದ್ಯರ ಶ್ರೇಷ್ಠತ್ವವೇನು? ಸುನ್ನ
2 ತಿಯಿಂದ ಲಾಭವೇನು? ಎಲ್ಲಾ ವಿಷಯಗಳಲ್ಲಿ
ಯೂ ಬಹಳ ಉಂಟು. ಮೊದಲನೇದಾಗಿ ದೈವೋಕ್ತಿ
3 ಗಳು ಅವರ ವಶಕ್ಕೆ ಒಪ್ಪಿಸಲ್ಪಟ್ಟವು. ಅವರಲ್ಲಿ
ಕೆಲವರು ನಂಬದೆ ಹೋಗಿದ್ದರೇನು? ಅವರು ನಂಬದೆ
ಹೋದದರಿಂದ ದೇವರು ವಚನಕ್ಕೆ ತಪ್ಪುವವನಾದನೋ?
4 ಎಂದಿಗೂ ಇಲ್ಲ; ಎಲ್ಲಾ ಮನುಷ್ಯರು ಸುಳ್ಳುಗಾರ
ರಾದರೂ ದೇವರು ಸತ್ಯವಂತನೇ ಸರಿ.

ನೀನು ಎಲ್ಲಾ ನುಡಿಗಳಲ್ಲಿ ನ್ಯಾಯಸ್ಥನೆಂದು
ಕಾಣಿಸಿಕೊಳ್ಳಬೇಕು,
ನಿನ್ನ ಮೇಲೆ ವ್ಯಾಜ್ಯ ನಡೆಯುವಾಗ ನೀನು
ಗೆಲ್ಲಬೇಕು

ಎಂದು ಬರೆದದೆ.

5 ನಾವು ನೀತಿ ತಪ್ಪಿ ನಡೆಯುವದರಿಂದ ದೇವರಲ್ಲಿರುವ
ನೀತಿ ಪ್ರಸಿದ್ಧಿಗೆ ಬರುವದಾದರೆ ನಾವು ಏನು ಹೇಳೋ
ಣ? ಉಗ್ರದಂಡನೆಯನ್ನು ಮಾಡುವ ದೇವರು ಅನ್ಯಾ
ಯಸ್ಥನೇನು? (ಈ ಮಾತನ್ನು ಲೋಕರೀತಿಯಾಗಿ
6 ಆಡಿದ್ದೇನೆ.) ಎಂದಿಗೂ ಅಲ್ಲ. ದೇವರು ಅನ್ಯಾಯಸ್ಥ
7 ನಾಗಿದ್ದರೆ ಲೋಕಕ್ಕೆ ಹೇಗೆ ನ್ಯಾಯತೀರಿಸಾನು? ನನ್ನ
ಸುಳ್ಳಿನಿಂದ ದೇವರ ಸತ್ಯವು ಪ್ರಸಿದ್ಧಿಗೆ ಬಂದು ಆತನ
ಮಹಿಮೆ ಹೆಚ್ಚಾದರೆ ಇನ್ನು ನನಗೆ ಪಾಪಿಯೆಂದು
8 ತೀರ್ಪಾಗುವದು ಯಾಕೆ? ಮೇಲು ಬರುವಂತೆ
ಕೇಡು ಮಾಡೋಣ ಎಂದು ಯಾಕೆ ಹೇಳಬಾರದು?
ಕೆಲವರು ನಮ್ಮನ್ನು ಕುರಿತು—ಇವರು ಹೀಗೆ ಬೋಧನೆ
ಮಾಡುವವರೆಂದು ದೂಷಿಸಿ ಹೇಳುತ್ತಾರಲ್ಲಾ; ಅಂಥವ
ರಿಗೆ ದಂಡನೆಯ ತೀರ್ಪಾಗುವದು ನ್ಯಾಯ.

ಮನುಷ್ಯರೆಲ್ಲರೂ ಅಪರಾಧಿಗಳೆಂಬದಕ್ಕೆ ಶಾಸ್ತ್ರಪ್ರಮಾಣ.

9 ಹಾಗಾದರೆ ಏನು ಹೇಳಬೇಕು? 1)ನಾವು ಅನ್ಯರಿ
ಗಿಂತ ಉತ್ತಮಸ್ಥಾನದಲ್ಲಿದ್ದೇವೋ? ಎಷ್ಟು ಮಾತ್ರ
ಕ್ಕೂ ಇಲ್ಲ. ಯೆಹೂದ್ಯರೇ ಆಗಲಿ ಗ್ರೀಕರೇ
ಆಗಲಿ ಎಲ್ಲರೂ ಪಾಪಕ್ಕೆ ಒಳಬಿದ್ದವರೆಂದು ಮೊದಲೇ
10 ತೋರಿಸಿಕೊಟ್ಟಿದ್ದೇವಲ್ಲಾ. ಇದು ಶಾಸ್ತ್ರದಲ್ಲಿ ಬರೆ
ದಿರುವ ಮಾತುಗಳಿಗೆ ಸರಿಯಾಗಿದೆ; ಅವು ಯಾವ
ವಂದರೆ—

ನೀತಿವಂತನು ಇಲ್ಲ, ಒಬ್ಬನಾದರೂ ಇಲ್ಲ;
ತಿಳುವಳಿಕೆಯುಳ್ಳವನು ಇಲ್ಲ, ದೇವರನ್ನು
ಡುಕುವವನು ಇಲ್ಲ.
ಎಲ್ಲರೂ ದಾರಿತಪ್ಪಿ ನಡೆಯುತ್ತಾರೆ, ಎಲ್ಲ
ಕೆಲಸಕ್ಕೆ ಬಾರದವರಾದರು.
ಒಳ್ಳೇದನ್ನು ಮಾಡುವವನು ಇಲ್ಲ, ಒಬ್ಬ
ದರೂ ಇಲ್ಲ.
ಅವರ ಗಂಟಲು ತೆರೆದಿರುವ ಸಮಾಧಿಯಾಗಿ
ಅವರು ನಾಲಿಗೆಯಿಂದ ವಂಚನೆಯ ಮಾ
ಗಳನ್ನಾಡುತ್ತಾರೆ;
ಅವರ ತುಟಿಗಳ ಹಿಂದೆ ಹಾವಿನ ವಿಷವದೆ.
ಅವರ ಬಾಯಿ ಶಾಪದಿಂದಲೂ ಕ್ರೋಧ
ಮಾತುಗಳಿಂದಲೂ ತುಂಬಿ ಅದೆ.
ಅವರ ಕಾಲುಗಳು ರಕ್ತವನ್ನು ಸುರಿಸ
ಆತುರಪಡುತ್ತವೆ.
ಅವರು ಹೋದ ದಾರಿಗಳಲ್ಲಿ ನಾಶಸಂಕಟಗ
ಉಂಟಾಗುತ್ತವೆ.
ಸಮಾಧಾನದ ಮಾರ್ಗವನ್ನೇ ಅರಿಯರು.
ಅವರ ಕಣ್ಣೆದುರಿಗೆ ದೇವರ ಭಯವೇ ಇ
ಎಂಬವುಗಳೇ.

ಧರ್ಮಶಾಸ್ತ್ರದ ನುಡಿಗಳೆಲ್ಲವು ಆ ಶಾಸ್ತ್ರಕ್ಕೆ ಒಳಗಾ
ವರಿಗೇ ಹೇಳಿವೆಯೆಂದು ಬಲ್ಲೆವಷ್ಟೆ; 2)ಹೀಗೆ ಎಲ್ಲ
ಬಾಯಿ ಕಟ್ಟಿಹೋಗುವದು, ಲೋಕವೆಲ್ಲಾ ದೇ
ಮುಂದೆ ಅಪರಾಧಿಯಾಗಿ ನಿಲ್ಲುವದು. ಯಾಕಂದ
ಯಾವನಾದರೂ ನೇಮನಿಷ್ಠೆಗಳನ್ನನುಸರಿಸಿ ದೇ
ಸನ್ನಿಧಿಯಲ್ಲಿ ನೀತಿವಂತನೆಂದು ನಿರ್ಣಯಿಸಲ್ಪಡು
ಲ್ಲ. 3)ಧರ್ಮಶಾಸ್ತ್ರದಿಂದ ಪಾಪದ ಅರುಹು ಉಂ
ಗುತ್ತದಷ್ಟೆ.

ಎಲ್ಲಾ ಮನುಷ್ಯರು ನೀತಿವಂತರಾಗುವದಕ್ಕೆ
ಯೇಸು ಕ್ರಿಸ್ತನನ್ನು ನಂಬುವದೇ ಮಾರ್ಗ.

ಈಗಲಾದರೋ 4)ದೇವರಿಂದ ದೊರಕುವ ನೀ
ಯು ಧರ್ಮಶಾಸ್ತ್ರನಿಯಮಗಳಿಲ್ಲದೆ ಪ್ರಕಟವಾಗಿ
ಅದು ಮೋಶೆಯ ಧರ್ಮಶಾಸ್ತ್ರದಿಂದಲೂ ಪ್ರವಾ
ಗಳ ನುಡಿಗಳಿಂದಲೂ ಸಾಕ್ಷಿಗೊಂಡಿರುತ್ತದೆ. ದೇ
ರಿಂದಾಗುವ ಆ ನೀತಿಯು ಯಾವದಂದರೆ ಯೇ
ಕ್ರಿಸ್ತನನ್ನು ನಂಬುವದರಿಂದಲೇ ನಂಬುವವರೆಲ್ಲ
ದೊರಕುವಂಥದು. ಹೆಚ್ಚುಕಡಿಮೆ ಏನೂ ಇ
ಎಲ್ಲರೂ ಪಾಪಮಾಡಿ ದೇವರ ಮಹಿಮೆಯನ
ಹೊಂದದೆ ಹೋಗಿದ್ದಾರೆ. ಅವರು ನೀತಿವಂತರೆಂ
ನಿರ್ಣಯ ಹೊಂದುವದು ದೇವರ ಉಚಿತಾರ್ಥವಾ
ಕೃಪೆಯಿಂದಲೇ ಕ್ರಿಸ್ತ ಯೇಸುವಿನಿಂದಾದ ಪಾ
ವಿಮೋಚನೆಯ ಮೂಲಕವಾಗಿ ಆಗುವದು. ಈತ
ತನ್ನ ರಕ್ತವನ್ನು ಸುರಿಸಿ ನಂಬಿಕೆಯಿದ್ದವರಿಗ
ಕೃಪಾಧಾರವಾಗಬೇಕೆಂದು ದೇವರು ಈತನನ್ನು ಮ
ದಿಟ್ಟನು. ದೇವರು ಹಿಂದಿನ ಕಾಲದ ಪಾಪಗಳನ

1) ಅಥವಾ, ಅನ್ಯರು ನಮಗಿಂತ ಶ್ರೇಷ್ಠರೋ? 2) ಅಥವಾ, ಆದದರಿಂದ ಎಲ್ಲರ ಬಾಯಿಯೂ ಕಟ್ಟಿತು, ಲೋಕದವ
ದೇವರ ಮುಂದೆ ಅಪರಾಧಿಗಳಾದರು. ಯಾವನಾದರೂ ನೇಮನಿಷ್ಠೆಗಳನ್ನನುಸರಿಸಿ ನೀತಿವಂತನೆಂದು ನಿರ್ಣಯಿಸಲ್ಪಡುವದಿಲ್ಲವೆಂದು
ಯಲ್ಲಾ. 3) ಅಥವಾ, ಧರ್ಮಶಾಸ್ತ್ರದ ನಿಯಮಗಳಿಂದ. 4) ಅಥವಾ, ದೇವರಿಗೆ ಮೆಚ್ಚಿಕೆಯಾಗಿರುವ.

ದಂಡಿಸದೆ ಸಹಿಸಿಕೊಂಡಿರಲಾಗಿ ತನ್ನ ನೀತಿಯನ್ನು
ಈಗಿನ ಕಾಲದಲ್ಲಿ ಹೀಗೆ ತೋರಿಸಿ ತಾನು ನೀತಿಸ್ವರೂ
ಪನಾಗಿಯೂ ಯೇಸುವಿನಲ್ಲಿ ನಂಬಿಕೆಯಿಡುವವರನ್ನು
ನೀತಿವಂತರೆಂದು ನಿರ್ಣಯಿಸುವವನಾಗಿಯೂ ಕಾಣಿಸಿ
ಕೊಂಡಿದ್ದಾನೆ.

ಹಾಗಾದರೆ ಹೊಗಳಿಕೊಳ್ಳುವದಕ್ಕೆ ಆಸ್ಪದ
ವೆಲ್ಲಿ? ಅದು ಇಲ್ಲದೆ ಹೋಯಿತು. ಯಾವ ಪ್ರಮಾಣ
ದಿಂದ? ಕರ್ಮಮಾರ್ಗವನ್ನು ಅನುಸರಿಸುವದರಿಂದ
ಲೋ? ಅಲ್ಲ; ವಿಶ್ವಾಸಮಾರ್ಗವನ್ನು ಅನುಸರಿಸುವದ
ರಿಂದಲೇ. ಧರ್ಮಪ್ರಮಾಣಸಂಬಂಧವಾದ ಕರ್ಮ
ಗಳಿಲ್ಲದೆ ನಂಬಿಕೆಯಿಂದಲೇ ಮನುಷ್ಯರು ನೀತಿವಂತ
ರೆಂದು ನಿರ್ಣಯಿಸಲ್ಪಡುವರೆಂಬದಾಗಿ ನಿಶ್ಚಯಮಾಡಿ
ಕೊಂಡಿದ್ದೇವಲ್ಲಾ. ದೇವರು ಯೆಹೂದ್ಯರಿಗೆ ಮಾತ್ರ
ದೇವರಾಗಿದ್ದಾನೋ? ಅನ್ಯಜನಗಳಿಗೆ ಸಹ ದೇವರ
ಲ್ಲವೇ. ಹೌದು, ದೇವರು ಒಬ್ಬನೇ ಆಗಿರಲಾಗಿ
ಆತನು ಅನ್ಯಜನರಿಗೆ ಸಹ ದೇವರಾಗಿದ್ದಾನೆ. ಆತನು
ಸುನ್ನತಿಯವರನ್ನು ನೀತಿವಂತರೆಂದು ನಿರ್ಣಯಿಸುವ
ದಕ್ಕೆ ಅವರ ನಂಬಿಕೆಯೇ ಆಧಾರ; ಸುನ್ನತಿಯಿಲ್ಲದ
ವರನ್ನೂ ಹಾಗೆಯೇ ನಿರ್ಣಯಿಸುವದಕ್ಕೆ ನಂಬಿಕೆಯೇ
ಕಾರಣ. ಹಾಗಾದರೆ ನಂಬಿಕೆಯಿಂದ ಧರ್ಮಪ್ರಮಾ
ಣವನ್ನು ನಿರರ್ಥಕಮಾಡುತ್ತೇವೋ? ಎಂದಿಗೂ ಇಲ್ಲ.
ಧರ್ಮಪ್ರಮಾಣವನ್ನು ಸ್ಥಿರಪಡಿಸುತ್ತೇವೆ.

ಅಬ್ರಹಾಮನಾದರೂ ನಂಬಿಕೆಯಿಂದಲೇ ನೀತಿವಂತ
ನಾದನೆಂಬ ತರ್ಕ.

ಹಾಗಾದರೆ ವಂಶಾನುಕ್ರಮವಾಗಿ ನಮಗೆ ಮೂ
ಲಪಿತೃವಾಗಿರುವ ಅಬ್ರಹಾಮನು ಏನು ಪಡಕೊಂಡ
ನೆಂದು ಹೇಳಬೇಕು? ಅಬ್ರಹಾಮನು ಪುಣ್ಯಕ್ರಿಯೆ
ಗಳಿಂದಲೇ ನೀತಿವಂತನಾದ ಪಕ್ಷದಲ್ಲಿ ಹೊಗಳಿಕೊಳ್ಳು
ವದಕ್ಕೆ ಅವನಿಗೆ ಆಸ್ಪದವಿರುವದು; ಆದರೆ ದೇವರ
ಮುಂದೆ ಹೊಗಳಿಕೊಳ್ಳುವದಕ್ಕೆ ಆಸ್ಪದವಿರುವದಿಲ್ಲ.
ಇದರ ವಿಷಯದಲ್ಲಿ ಶಾಸ್ತ್ರವು ಹೇಳುವದನ್ನು ಆಲೋ
ಚಿಸಿರಿ. ಅಬ್ರಹಾಮನು ದೇವರನ್ನು ನಂಬಿದನು;
ಆ ನಂಬಿಕೆ ಅವನ ಲೆಕ್ಕಕ್ಕೆ ನೀತಿ ಎಂದು ಎಣಿಸಲ್ಪಟ್ಟಿ
ತು ಎಂದು ಹೇಳುತ್ತದೆ. ಕೆಲಸ ಮಾಡಿದವನಿಗೆ
ಬರುವ ಕೂಲಿಯು ದಯದಿಂದ ದೊರಕುವಂಥದೆಂದು
ಎಣಿಕೆಯಾಗುವದಿಲ್ಲ; ಅದು ಸಲ್ಲತಕ್ಕದ್ದೇ ಎಂದು
ಎಣಿಕೆಯಾಗುವದು. ಆದರೆ ಯಾವನು ಪುಣ್ಯಕ್ರಿಯೆ
ಗಳನ್ನು ಮಾಡಿದವನಾಗಿರದೆ ಪಾಪಾತ್ಮರನ್ನು ನೀತಿ
ವಂತರೆಂದು ನಿರ್ಣಯಿಸುವಾತನಲ್ಲಿ ನಂಬಿಕೆಯಿಡು
ತ್ತಾನೋ ಅವನ ನಂಬಿಕೆಯೇ ನೀತಿ ಎಂದು ಎಣಿಸಲ್ಪ
ಡುವದು. ದೇವರು ಯಾವನನ್ನು ಪುಣ್ಯಕ್ರಿಯೆಗಳಿಲ್ಲ
ದೆ ನೀತಿವಂತನೆಂದು ಎಣಿಸುತ್ತಾನೋ ಅವನು ಧನ್ಯ
ನೆಂದು ದಾವೀದನು ಸಹ ಹೇಳುತ್ತಾನೆ. ಹೇಗಂದರೆ—

ಯಾರ ಅಪರಾಧಗಳು ಪರಿಹಾರವಾಗಿವೆಯೋ,
ಯಾರ ಪಾಪಗಳು ಕ್ಷಮಿಸಲ್ಪಟ್ಟಿವೆಯೋ ಅವ
ರೇ ಧನ್ಯರು.
ಕರ್ತನು ಯಾವನ ಪಾಪವನ್ನು ಲೆಕ್ಕಕ್ಕೆ ತರು
ವದಿಲ್ಲವೋ ಆ ಮನುಷ್ಯನೇ ಧನ್ಯನು.

ಈ ಶುಭವಚನವು ಸುನ್ನತಿಯಿದ್ದವರಿಗೆ ಮಾತ್ರವೋ? 9
ಸುನ್ನತಿಯಿಲ್ಲದವರಿಗೆ ಸಹ ಆಗುತ್ತದೋ? ನೋಡೋ
ಣ. ಅಬ್ರಹಾಮನ ಲೆಕ್ಕಕ್ಕೆ ಅವನ ನಂಬಿಕೆಯೇ
ನೀತಿಯೆಂದು ಎಣಿಸಲ್ಪಟ್ಟಿತೆಂಬದಾಗಿ ಹೇಳುತ್ತೇವಲ್ಲಾ.
ಅದು ಯಾವಾಗ ಎಣಿಸಲ್ಪಟ್ಟಿತು? ಅವನಿಗೆ ಸುನ್ನತಿ 10
ಯಾದ ಮೇಲೆಯೋ? ಸುನ್ನತಿಯಾಗುವದಕ್ಕೆ ಮೊದ
ಲೋ? ಸುನ್ನತಿಯಾದ ಮೇಲೆ ಅಲ್ಲ, ಸುನ್ನತಿಯಾಗು
ವದಕ್ಕೆ ಮೊದಲೇ ಎಣಿಸಲ್ಪಟ್ಟಿತು. ಆ ಮೇಲೆ ಸುನ್ನ 11
ತಿಯೆಂಬ ಸಂಸ್ಕಾರವನ್ನು ಗುರುತಾಗಿ ಹೊಂದಿದನು.
ಇದು ಸುನ್ನತಿಯಾಗುವದಕ್ಕೆ ಮೊದಲೇ ಅವನಿಗಿದ್ದ
ನಂಬಿಕೆಯಿಂದಾದ ನೀತಿಗೆ ಮುದ್ರೆಯಾಗಿತ್ತು. ಹೀಗಿ
ರುವದರಿಂದ ಅವನು ನಂಬುವವರೆಲ್ಲರಿಗೂ, ಅವರು
ಸುನ್ನತಿಯಿಲ್ಲದವರಾದಾಗ್ಯೂ ಮೂಲತಂದೆಯಾದನು;
ಅವರೂ ನೀತಿವಂತರೆಂದು ಎಣಿಸಲ್ಪಡುವರು. ಇದ 12
ಲ್ಲದೆ ಸುನ್ನತಿಯುವರಲ್ಲಿ ಯಾರಾರು ಸುನ್ನತಿ ಹೊಂದಿ
ದ್ದಲ್ಲದೆ ನಮ್ಮ ಪಿತೃವಾಗಿರುವ ಅಬ್ರಹಾಮನಿಗೆ ಸುನ್ನ
ತಿಯಾಗುವದಕ್ಕೆ ಮುಂಚೆ ಇದ್ದ ನಂಬಿಕೆಯ ಹೆಜ್ಜೆಗಳ
ನ್ನು ಹಿಡಿದು ನಡೆಯುತ್ತಾರೋ ಅವರಿಗೆ ಸಹ ಮೂಲ
ತಂದೆಯಾಗಿದ್ದಾನೆ.

ನೀನು ಲೋಕಕ್ಕೆ ಬಾಧ್ಯನಾಗುವಿ ಎಂಬ ವಾಗ್ದಾ 13
ನವು ಅಬ್ರಹಾಮನಿಗಾಗಲಿ ಅವನ ಸಂತತಿಯವರಿಗಾಗ
ಲಿ ಧರ್ಮಶಾಸ್ತ್ರದಿಂದ ಆದದ್ದಲ್ಲ; ನಂಬಿಕೆಯೆಂಬ ನೀತಿ
ಯಿಂದ ಆದದ್ದೇ. ಧರ್ಮಶಾಸ್ತ್ರದವರು ಬಾಧ್ಯರಾಗಿ 14
ದ್ದರೆ ನಂಬಿಕೆಯು ವ್ಯರ್ಥವಾಯಿತು, ವಾಗ್ದಾನವೂ
ಬರೀದಾಯಿತು. ಯಾಕಂದರೆ ಧರ್ಮಶಾಸ್ತ್ರವು ಜನ 15
ರನ್ನು ದೇವರ ಕೋಪಕ್ಕೆ ಗುರಿಮಾಡುವಂಥದು.
ಧರ್ಮಶಾಸ್ತ್ರವಿಲ್ಲದ ಪಕ್ಷದಲ್ಲಿ ಮೀರೋಣವೆಂಬ
ದೂ ಇಲ್ಲ. ಆದಕಾರಣ ಆ ಬಾಧ್ಯತೆಯು ಕೃಪೆ 16
ಯಿಂದಲೇ ದೊರೆಯುವಂಥದ್ದಾಗಿರುವಂತೆ ಅದು ನಂಬಿ
ಕೆಯ ಮೂಲಕ ಸಿಕ್ಕುತ್ತದೆ. ಹೀಗೆ ಆ ವಾಗ್ದಾನವು
ಅಬ್ರಹಾಮನ ಸಂತತಿಯವರೆಲ್ಲರಿಗೂ, ಅಂದರೆ ಧರ್ಮ
ಶಾಸ್ತ್ರವನ್ನು ಆಧಾರಮಾಡಿಕೊಂಡವರಿಗೆ ಮಾತ್ರವಲ್ಲದೆ
ಅಬ್ರಹಾಮನಲ್ಲಿದ್ದಂಥ ನಂಬಿಕೆಯುಳ್ಳವರಿಗೆ ಸಹ
ಸ್ಥಿರವಾಗಿ ನಿಲ್ಲುವದು.

ನಾನು ನಿನ್ನನ್ನು ಅನೇಕ ಜನಾಂಗಗಳಿಗೆ ಮೂಲ 17
ಪಿತೃವಾಗಿ ನೇಮಿಸಿದ್ದೇನೆಂದು ಶಾಸ್ತ್ರದಲ್ಲಿ ಬರೆದಿರುವ
ಪ್ರಕಾರ ಅಬ್ರಹಾಮನು ನಮ್ಮೆಲ್ಲರಿಗೂ ದೇವರ ಸನ್ನಿಧಿ
ಯಲ್ಲಿ ಮೂಲಪಿತೃವಾಗಿದ್ದಾನೆ. ದೇವರು ಸತ್ತವರನ್ನು
ಬದುಕಿಸುವವನಾಗಿಯೂ ಇಲ್ಲದ್ದನ್ನು ಇರುವದಾಗಿ
ಕರೆಯುವವನಾಗಿಯೂ ಇದ್ದಾನೆಂದು ಅಬ್ರಹಾಮನು
ನಂಬಿದನು. ನಿನ್ನ ಸಂತಾನವು ನಕ್ಷತ್ರಗಳಷ್ಟಾಗುವ 18
ದು ಎಂಬದಾಗಿ ತನಗೆ ಹೇಳಲ್ಪಟ್ಟ ಮಾತು ನೆರವೇರು
ವದಕ್ಕೆ ಮಾರ್ಗ ತೋರದೆ ಇರುವದರಿಂದ ಅಬ್ರಹಾಮ
ನು ತಾನು ಅನೇಕ ಜನಾಂಗಗಳಿಗೆ ಮೂಲಪಿತೃವಾಗು
ವೆನೆಂಬ ನಿರೀಕ್ಷೆಗೆ ಆಸ್ಪದವಿಲ್ಲದಿರುವಾಗಲೂ ನಿರೀಕ್ಷಿ
ಸಿ ನಂಬಿದನು. ಅವನು ಹೆಚ್ಚುಕಡಿಮೆ ನೂರುವರು 19
ಷದವನಾಗಿದ್ದು ತನ್ನ ದೇಹವು ಆಗಲೇ ಮೃತಪ್ರಾ
ಯವಾಯಿತೆಂದೂ ಸಾರಳಿಗೆ ಗರ್ಭಕಾಲ ಕಳೆದು
ಹೋಯಿತೆಂದೂ ಯೋಚಿಸಿದಾಗ್ಯೂ ಅವನ ನಂಬಿಕೆ
ಯು ಕುಂದಲಿಲ್ಲ. ದೇವರು ಮಾಡಿದ ವಾಗ್ದಾನದ 20

ವಿಷಯದಲ್ಲಿ ಅವನು ಅಪನಂಬಿಕೆಯಿಂದ ಚಂಚಲಚಿತ್ತ
21 ನಾಗಲಿಲ್ಲ. ದೇವರನ್ನು ಘನಪಡಿಸುವವನಾಗಿ ಆತ
ನು ತನ್ನ ವಾಗ್ದಾನವನ್ನು ನೆರವೇರಿಸುವದಕ್ಕೆ ಸಮರ್ಥ
ನೆಂದು ಪೂರಾ ಭರವಸವಿಟ್ಟು 1)ದೃಢ ನಂಬಿಕೆಯುಳ್ಳವ
22 ನಾದನು. ಆದದರಿಂದ ಆ ನಂಬಿಕೆಯು ಅವನ ಲೆಕ್ಕ
23 ಕ್ಕೆ ನೀತಿಯೆಂದು ಎಣಿಸಲ್ಪಟ್ಟಿತು. ಆದರೆ ಅದು ಅವ
ನ ಲೆಕ್ಕಕ್ಕೆ ನೀತಿಯೆಂದು ಎಣಿಸಲ್ಪಟ್ಟಿತೆಂಬದು ಅವನಿ
ಗೋಸ್ಕರ ಮಾತ್ರವಲ್ಲದೆ ನಮಗೋಸ್ಕರವೂ ಬರೆದಿ
24 ರುವದು. ನಮ್ಮ ಕರ್ತನಾದ ಯೇಸುವನ್ನು ಸತ್ತವ
ರೊಳಗಿಂದ ಎಬ್ಬಿಸಿದ ದೇವರನ್ನು ನಂಬುವ ನಮ
ಗೂ ನಂಬಿಕೆಯು ನೀತಿಯೆಂದು ಎಣಿಸಲ್ಪಡುವದು.
25 ದೇವರು ಆತನನ್ನು ನಮ್ಮ ಅಪರಾಧಗಳ ನಿಮಿತ್ತ
ಮರಣಕ್ಕೆ ಒಪ್ಪಿಸಿಕೊಟ್ಟು ನಮಗೆ ನೀತಿವಂತರೆಂಬ
ನಿರ್ಣಯವು ಉಂಟಾಗುವ ನಿಮಿತ್ತ ಜೀವದಿಂದ ಎಬ್ಬಿಸಿ
ದನು.

ನಂಬಿರುವವರಿಗೆ ರಕ್ಷಣೆ ತಪ್ಪುವದಿಲ್ಲವೆಂಬ ಸಿದ್ಧಾಂತ.

5 ಹೀಗಿರಲಾಗಿ ನಾವು ನಂಬಿಕೆಯಿಂದ ನೀತಿವಂತ
ರಾದ ಕಾರಣ ನಮ್ಮ ಕರ್ತನಾದ ಯೇಸು ಕ್ರಿಸ್ತನ
ಮೂಲಕ ದೇವರೊಂದಿಗೆ ಉಂಟಾದ ಸಮಾಧಾನ
2 ದಲ್ಲಿ ಇರೋಣ. ನಾವು ಈಗ ನೆಲೆಗೊಂಡಿರುವ ದೇವರ
ಕೃಪಾಶ್ರಯದಲ್ಲಿ ಆತನ ಮುಖಾಂತರವೇ ನಂಬಿಕೆ
ಯಿಂದ ಪ್ರವೇಶವಾಯಿತು. ಮತ್ತು ದೇವರ ಮಹಿಮೆ
ಯನ್ನು ಹೊಂದುವೆವೆಂಬ ಭರವಸದಿಂದ ಉಲ್ಲಾಸವಾಗಿ
3 ದ್ದೇವೆ. ಇದು ಮಾತ್ರವಲ್ಲದೆ ನಮಗೆ ಉಂಟಾಗುವ
4 ಉಪದ್ರವಗಳಲ್ಲಿಯೂ ಉಲ್ಲಾಸವಾಗಿದ್ದೇವೆ. ಯಾಕಂ
ದರೆ ಉಪದ್ರವದಿಂದ ತಾಳ್ಮೆ ಹುಟ್ಟುತ್ತದೆ, ತಾಳ್ಮೆ
ಯಿಂದ ಅನುಭವಸಿದ್ಧಿ ಹುಟ್ಟುತ್ತದೆ, ಅನುಭವದಿಂದ
5 ನಿರೀಕ್ಷಣ ಹುಟ್ಟುತ್ತದೆಂದು ಬಲ್ಲೆವು. ಈ ನಿರೀಕ್ಷೆ
ಯು ನಮ್ಮ ಆಶೆಯನ್ನು ಭಂಗಪಡಿಸುವದಿಲ್ಲ; ನ
ಮಗೆ ಕೊಟ್ಟಿರುವ ಪವಿತ್ರಾತ್ಮನ ಮೂಲಕವಾಗಿ ದೇವರ
ಪ್ರೀತಿರಸವು ನಮ್ಮ ಹೃದಯಗಳಲ್ಲಿ ಧಾರಾಳವಾಗಿ
ಸುರಿದದೆಯಲ್ಲಾ.
6 ನಾವು ಅಶಕ್ತರಾಗಿದ್ದಾಗಲೇ ಕ್ರಿಸ್ತನು ನೇಮಿತ
ಕಾಲದಲ್ಲಿ ಭಕ್ತಿಹೀನರಿಗೋಸ್ಕರ ಪ್ರಾಣಕೊಟ್ಟನು.
7 ನೀತಿವಂತನಿಗೋಸ್ಕರ ಯಾರಾದರೂ ಪ್ರಾಣಕೊಡು
ವದು ಅಪರೂಪ. ಉಪಕಾರಿಗೋಸ್ಕರ ಪ್ರಾಣಕೊಡು
ವದಕ್ಕೆ ಯಾವನಾದರೂ ಧೈರ್ಯಮಾಡಿದರೂ ಮಾ
8 ಡಾನು. ಆದರೆ ನಾವು ಪಾಪಿಗಳಾಗಿದ್ದಾಗಲೂ ಕ್ರಿಸ್ತ
ನು ನಮಗೋಸ್ಕರ ಪ್ರಾಣಕೊಟ್ಟದ್ದರಲ್ಲಿ ದೇವರು
ನಮ್ಮ ಮೇಲೆ ತನಗಿರುವ ಪ್ರೀತಿಯನ್ನು ಸಿದ್ಧಾಂತಪಡಿ
9 ಸಿದ್ದಾನೆ. ಈಗ ನಾವು ಆತನ ರಕ್ತದಿಂದ ನೀತಿ
ವಂತರಾಗಿರಲಾಗಿ ಆತನ ಮೂಲಕ ಬರುವ ಕೋಪಕ್ಕೆ
10 ತಪ್ಪಿಸಿಕೊಳ್ಳುವದು ಮತ್ತೂ ನಿಶ್ಚಯವಲ್ಲವೇ. ದೇವ
ರಿಗೆ ವೈರಿಗಳಾಗಿದ್ದ ನಾವು ಆತನ ಮಗನ ಮರಣದ
ಮೂಲಕ ಆತನೊಂದಿಗೆ ಸಮಾಧಾನವಾಗಿರಲಾಗಿ
ಆತನ ಕೂಡ ಸಮಾಧಾನವಾದ ನಮಗೆ ಆ ಮಗನಿಗಿ

ರುವ ಜೀವದಿಂದ ರಕ್ಷಣೆಯಾಗುವದು ಮತ್ತೂ ನಿ
ಯವಲ್ಲವೇ. ಇಷ್ಟು ಮಾತ್ರವೇ ಅಲ್ಲದೆ ನಾವು ನ
ಕರ್ತನಾದ ಯೇಸು ಕ್ರಿಸ್ತನ ಮೂಲಕ ಸಮಾಧ
ಸ್ಥಿತಿ ಹೊಂದಿದವರಾಗಿ ಆತನ ಮುಖಾಂತರ ದೇವರ
ಹರ್ಷಗೊಳ್ಳುತ್ತೇವೆ.

ಆದಾಮನಿಂದ ಎಲ್ಲರಿಗೂ ಮರಣವಾದಂತೆ ಕ್ರಿಸ್ತನನ್ನು
ನಂಬಿದವರೆಲ್ಲರಿಗೂ ರಕ್ಷಣೆಯಾಗುವದೆಂಬ ಸಿದ್ಧಾಂತ.

ಈ ವಿಷಯ ಹೇಗಂದರೆ—ಒಬ್ಬ ಮನುಷ್ಯನಿ
ಲೇ ಪಾಪವೂ ಪಾಪದಿಂದ ಮರಣವೂ ಲೋಕದ
ಳಗೆ ಸೇರಿದವು; ಎಲ್ಲರು ಪಾಪ ಮಾಡಿದ್ದರಿ
ಮರಣವು ಹೀಗೆ ಎಲ್ಲರಲ್ಲಿಯೂ ವ್ಯಾಪಿಸಿ
ಧರ್ಮಶಾಸ್ತ್ರ ಉಂಟಾಗುವದಕ್ಕೆ ಮುಂಚೆಯೂ ಪಾ
ವು ಲೋಕದಲ್ಲಿತ್ತು; ಆದರೆ ಧರ್ಮಶಾಸ್ತ್ರವಿಲ್ಲದಿ
ವಾಗ ಪಾಪವು ಲೆಕ್ಕಕ್ಕೆ ಬರುವದಿಲ್ಲ. ಆದರೂ ಆ
ಮನ ಕಾಲದಿಂದ ಮೋಶೆಯ ಕಾಲದ ವರೆಗ
ಮರಣದ ಆಳಿಕೆಯು ನಡೆಯುತ್ತಿತ್ತು. ಆದಾಮ
ಬೇವಾಜ್ಞೆಮೀರಿ ಮಾಡಿದ ಪಾಪಕ್ಕೆ ಸಮಾನವಾ
ಪಾಪವನ್ನು ಮಾಡದೆ ಇದ್ದವರ ಮೇಲೆಯೂ ಅ
ನಡೆಯುತ್ತಿತ್ತು. ಆ ಆದಾಮನು ಬರಬೇಕಾ
ಒಬ್ಬಾತನಿಗೆ ಸೂಚಕಪುರುಷನಾಗಿದ್ದಾನೆ.
ಆದರೆ ಆ ಅಪರಾಧದ ಸಂಗತಿಗೂ ದೇವರ ಕೃ
ದಾನದ ಸಂಗತಿಗೂ ಬಹಳ ಹೆಚ್ಚುಕಡಿಮೆ ಉಂ
ಹೇಗಂದರೆ ಆ ಒಬ್ಬನ ಅಪರಾಧದಿಂದ ಎಲ್ಲಾ ಮ
ಷ್ಯರು ಸತ್ತದ್ದು ನಿಶ್ಚಯವಾಗಿರಲಾಗಿ ದೇವರ ಕೃ
ಯೂ ಯೇಸು ಕ್ರಿಸ್ತನೆಂಬ ಈ ಒಬ್ಬ ಪುರುಷನ ಕೃ
ಯಿಂದ ಸಿಕ್ಕುವ ವರವೂ ಎಲ್ಲಾ ಮನುಷ್ಯರಿಗೆ ಹ
ಳವಾಗಿ ಸಿದ್ಧವಾಗಿರುವದು ಮತ್ತೂ ನಿಶ್ಚಯವಲ್ಲವ
ಇದಲ್ಲದೆ ಪಾಪಮಾಡಿದ ಒಬ್ಬನಿಂದಲೇ ದುಷ್ಫ
ಬಂದಂತೆ ಈ ವರವು ಬರಲಿಲ್ಲ; ಹೇಗಂದರೆ ಒಬ್ಬ
ಮನುಷ್ಯನ ಪಾಪದ ದೆಸೆಯಿಂದ ಸಾಯಬೇಕೆಂ
ನಿರ್ಣಯವು ಉಂಟಾಯಿತು, ಆದರೆ ದೇವರ ಕೃಪಾ
ನವು ಅನೇಕರ ಅಪರಾಧಗಳ ಕಾರಣದಿಂದ ಉಂಟಾ
ಅವರನ್ನು ನೀತಿವಂತರೆಂದು ನಿರ್ಣಯಿಸುವಂಥ
ಗಿದೆ. ಒಬ್ಬನು ಮಾಡಿದ ಅಪರಾಧದಿಂದ ಮರಣ
ಉಂಟಾಗಿ ಆ ಒಬ್ಬನ ದೆಸೆಯಿಂದಲೇ ಆಳುವದಾದ
ದೇವರು ಧಾರಾಳವಾಗಿ ಅನುಗ್ರಹಿಸುವ ಕೃಪಾದಾ
ವನ್ನೂ ನೀತಿಯೆಂಬ ವರವನ್ನೂ ಹೊಂದಿದವ
ಯೇಸು ಕ್ರಿಸ್ತನೆಂಬ ಈ ಒಬ್ಬ ಪುರುಷನ ಮೂಲ
ಜೀವಭರಿತರಾಗಿ ಆಳುವದು ಮತ್ತೂ ನಿಶ್ಚಯ
ಲ್ಲವೇ.
ಹೀಗಿರಲಾಗಿ ಒಂದೇ ಅಪರಾಧದ ಮೂಲಕ ಎಲ
ಮನುಷ್ಯರಿಗೆ ಸಾಯಬೇಕೆಂಬ ನಿರ್ಣಯವು ಹೇ
ಉಂಟಾಯಿತೋ ಹಾಗೆಯೇ ಒಂದೇ ಸತ್ಕಾರ್ಯದಿಂ
ಎಲ್ಲಾ ಮನುಷ್ಯರಿಗೆ ನೀತಿವಂತರೆಂಬ ನಿರ್ಣಯ
ಉಂಟಾಗಿ ಜೀವವನ್ನು ಫಲಿಸುತ್ತದೆ. ಒಬ್ಬನ ಅವಿ
ಯತ್ವದಿಂದ ಎಲ್ಲರೂ ಹೇಗೆ ಪಾಪಿಗಳಾದರೋ ಹಾ

1) ಅಥವಾ, ನಂಬಿಕೆಯಿಂದಲೇ ಬಲಗೊಂಡನು.

ಯೇ ಒಬ್ಬನ ವಿಧೇಯತ್ವದಿಂದ ಎಲ್ಲರೂ ನೀತಿವಂತ
ರಾಗುವರು. ಅಪರಾಧಗಳು ಹೆಚ್ಚಾಗಿ ಕಂಡುಬರುವ
ಹಾಗೆ ಧರ್ಮಶಾಸ್ತ್ರವು ಮಧ್ಯೆ ಬಂತು. ಆದರೆ
ಪಾಪವು ಹೆಚ್ಚಿದಲ್ಲೇ ಕೃಪೆಯು ಎಷ್ಟೋ ಹೆಚ್ಚಾಗಿ
ಪ್ರಬಲವಾಯಿತು. ಹೀಗೆ ಪಾಪವು ಮರಣವ
ನ್ನುಂಟುಮಾಡುತ್ತಾ ಅಧಿಕಾರವನ್ನು ನಡಿಸಿದ ಹಾಗೆ
ಯೇ ದೇವರ ಕೃಪೆಯು ನಮ್ಮ ಕರ್ತನಾದ ಯೇಸು
ಕ್ರಿಸ್ತನ ಮೂಲಕ ನೀತಿಯನ್ನು ಕೊಟ್ಟು ನಿತ್ಯ
ಜೀವವನ್ನುಂಟುಮಾಡುತ್ತಾ ಅಧಿಕಾರವನ್ನು ನಡಿ
ಸುವದು.

ಸತ್ತು ಜೀವಿತನಾಗಿ ಎದ್ದ ಕ್ರಿಸ್ತನಲ್ಲಿ ಐಕ್ಯವಾದವರು
ಪಾಪದ ಪಾಲಿಗೆ ಸತ್ತು ಹೊಸ ನಡತೆಯುಳ್ಳವರಾಗುವರು
ಎಂಬ ಬೋಧನೆ.

ಹಾಗಾದರೆ ಏನು ಹೇಳೋಣ? ದೇವರ ಕೃಪೆ
ಯು ಹೆಚ್ಚಲಿ ಎಂದು ನಾವು ಪಾಪದಲ್ಲಿ ಇನ್ನೂ ಇರ
ಬೇಕೋ? ಎಂದಿಗೂ ಇರಬಾರದು. ಪಾಪದ
ಪಾಲಿಗೆ ಸತ್ತವರಾದ ನಾವು ಇನ್ನೂ ಅದರಲ್ಲೇ ಬದುಕು
ವದು ಹೇಗೆ? ಕ್ರಿಸ್ತ ಯೇಸುವಿನಲ್ಲಿ ಸೇರುವದಕ್ಕೆ
ದೀಕ್ಷಾಸ್ನಾನಮಾಡಿಸಿಕೊಂಡವರಾದ ನಾವೆಲ್ಲರು ಆತನ
ಮರಣದಲ್ಲಿ ಪಾಲುಗಾರರಾಗುವದಕ್ಕೆ ದೀಕ್ಷಾಸ್ನಾನ
ಮಾಡಿಸಿಕೊಂಡೆವೆಂದು ನಿಮಗೆ ತಿಳಿಯದೋ? ಹೀಗಿರ
ಲಾಗಿ ನಾವು ದೀಕ್ಷಾಸ್ನಾನಮಾಡಿಸಿಕೊಂಡಾಗ ಆತನ
ಮರಣದಲ್ಲಿ ಪಾಲುಗಾರರಾಗಿ ಆತನೊಂದಿಗೆ ಹೂಣ
ಲ್ಪಟ್ಟೆವು. ಆದದರಿಂದ ಕ್ರಿಸ್ತನು ಸತ್ತು ತಂದೆಯ
ಮಹಿಮೆಯಿಂದ ಜೀವಿತನಾಗಿ ಎಬ್ಬಿಸಲ್ಪಟ್ಟಂತೆಯೇ
ನಾವು ಕೂಡ ಜೀವದಿಂದೆದ್ದು ಹೊಸಬರಾಗಿ ನಡ
ಕೊಳ್ಳಬೇಕು. ಹೇಗಂದರೆ ನಾವು ಆತನ ಮರಣಕ್ಕೆ
ಸದೃಶವಾದ ಮರಣವನ್ನು ಹೊಂದಿ ಆತನಲ್ಲಿ ಐಕ್ಯ
ವಾಗಿದ್ದರೆ ಆತನ ಪುನರುತ್ಥಾನಕ್ಕೆ ಸದೃಶವಾದ ಪುನ
ರುತ್ಥಾನವನ್ನೂ ಹೊಂದಿ ಆತನಲ್ಲಿ ಐಕ್ಯವಾಗುವೆವು.
ಪಾಪಾಧೀನಸ್ವಭಾವವು ನಾಶವಾಗಿ ನಾವು ಇನ್ನೂ
ಪಾಪದ ವಶದಲ್ಲಿರದಂತೆ ನಮ್ಮ ಪೂರ್ವಸ್ವಭಾವವು
ಕ್ರಿಸ್ತನ ಕೂಡ ಶಿಲುಬೆಗೆ ಹಾಕಲ್ಪಟ್ಟಿತೆಂದು ತಿಳಿದಿ
ದ್ದೇವೆ. ಸತ್ತವನು ಪಾಪದ ವಶದಿಂದ ಬಿಡುಗಡೆ
ಹೊಂದಿದ್ದಾನಷ್ಟೆ.

ಇದಲ್ಲದೆ ನಾವು ಕ್ರಿಸ್ತನೊಡನೆ ಸತ್ತ ಪಕ್ಷದಲ್ಲಿ
ಆತನೊಡನೆ ಜೀವಿಸುವೆವೆಂದು ನಂಬುತ್ತೇವೆ. ಯಾಕಂ
ದರೆ ಕ್ರಿಸ್ತನು ಸತ್ತ ಮೇಲೆ ಜೀವಿತನಾಗಿ ಎದ್ದು ಬಂದ
ದರಿಂದ ಆತನು ಇನ್ನು ಮುಂದೆ ಸಾಯತಕ್ಕವ
ನಲ್ಲ, ಮರಣವು ಇನ್ನೂ ಆತನನ್ನು ಆಳುವದಿಲ್ಲವೆಂದು
ನಮಗೆ ತಿಳಿದದೆ. ಆತನು ಸತ್ತದ್ದು ಒಂದೇ ಸಾರಿ,
ಅದು ಪಾಪದ ಪಾಲಿಗೆ; ಆತನು ಜೀವಿಸುವದು ದೇವರಿ
ಗಾಗಿಯೇ. ಅದೇ ಪ್ರಕಾರ ನೀವು ಸಹ ನಿಮ್ಮನ್ನು
ಕ್ರಿಸ್ತ ಯೇಸುವಿನ ಐಕ್ಯದಿಂದ ಪಾಪದ ಪಾಲಿಗೆ
ಸತ್ತವರೂ ದೇವರಿಗಾಗಿ ಜೀವಿಸುವವರೂ ಎಂದು ಎಣಿಸಿ
ಕೊಳ್ಳಿರಿ.

ನಂಬಿದವರು ಪಾಪದ ದಾಸತ್ವದಿಂದ ಬಿಡುಗಡೆಯಾಗಿ ದೇವರಿಗೆ
ದಾಸರಾಗುವರು.

ಹೀಗಿರುವದರಿಂದ ಸಾಯತಕ್ಕ ನಿಮ್ಮ ದೇಹದ 12
ಮೇಲೆ ಪಾಪವನ್ನು ಆಳಗೊಡಿಸಿ ನೀವು ದೇಹದ ದುರಾ
ಶೆಗಳಿಗೆ ಒಳಪಡಬೇಡಿರಿ. ಇದು ಮಾತ್ರವಲ್ಲದೆ ನೀವು 13
ನಿಮ್ಮ ಅಂಗಗಳನ್ನು ಪಾಪಕ್ಕೆ ಒಪ್ಪಿಸುವವರಾಗಿದ್ದು
ದುಷ್ಟತ್ವವನ್ನು ನಡಿಸುವ ಸಾಧನಗಳಾಗಮಾಡಬೇಡಿರಿ;
ಆದರೆ ಸತ್ತವರೊಳಗಿಂದ ಜೀವಿತರಾಗಿರಲಾಗಿ ನಿಮ್ಮ
ನ್ನು ದೇವರಿಗೆ ಒಪ್ಪಿಸಿಕೊಟ್ಟು ನಿಮ್ಮ ಅಂಗಗಳನ್ನು
ನೀತಿಕೃತ್ಯಗಳನ್ನು ನಡಿಸುವ ಸಾಧನಗಳನ್ನಾಗಿ ಆತ
ನಿಗೆ ಸಮರ್ಪಿಸಿರಿ. ಯಾಕಂದರೆ ಪಾಪವು ನಿಮ್ಮ 14
ಮೇಲೆ ಅಧಿಕಾರನಡಿಸದು; ನೀವು ಧರ್ಮಶಾಸ್ತ್ರಕ್ಕೆ
ಅಧೀನರಲ್ಲ, ಕೃಪೆಗೆ ಅಧೀನರಾಗಿದ್ದೀರಷ್ಟೆ.
ಹಾಗಾದರೇನು? ನಾವು ಧರ್ಮಶಾಸ್ತ್ರಾಧೀನರಲ್ಲ, 15
ಕೃಪಾಧೀನರಾಗಿದ್ದೇವೆಂದು ಪಾಪವನ್ನು ಮಾಡಬ
ಹುದೋ? ಎಂದಿಗೂ ಮಾಡಬಾರದು. ನೀವು ಯಾವ 16
ನಿಗೆ [1]ದಾಸರಂತೆ ವಿಧೇಯರಾಗುತ್ತೇವೆಂದು ನಿಮ್ಮ
ನ್ನು ಒಪ್ಪಿಸಿಕೊಡುತ್ತೀರೋ ಆ ಯಜಮಾನನಿಗೆ
ದಾಸರಾಗಿಯೇ ಇರುವಿರೆಂಬದು ನಿಮಗೆ ಗೊತ್ತಿಲ್ಲ
ವೋ? ಪಾಪಕ್ಕೆ ದಾಸರಾದರೆ ಮರಣವೇ ಫಲ;
[ನಂಬಿಕೆಯೆಂಬ] ವಿಧೇಯತ್ವಕ್ಕೆ ದಾಸರಾದರೆ ನೀತಿ
ಯೇ ಫಲ. ಆದರೆ ನೀವು ಮುಂಚೆ ಪಾಪಕ್ಕೆ ದಾಸರಾ 17
ಗಿದ್ದರೂ ನಿಮಗೆ ಕಲಿಸಲ್ಪಟ್ಟ ಬೋಧನೆಗೆ ನೀವು ಮನಃ
ಪೂರ್ವಕವಾಗಿ ಅಧೀನರಾದದರಿಂದಲೂ ಪಾಪದಿಂದ 18
ಬಿಡುಗಡೆಯನ್ನು ಹೊಂದಿ ನೀತಿಗೆ ದಾಸರಾದದರಿಂ
ದಲೂ ದೇವರಿಗೆ ಸ್ತೋತ್ರವಾಗಲಿ. ನಿಮ್ಮ ನರಭಾ 19
ವದ ಬಲಹೀನತೆಯ ದೆಸೆಯಿಂದ ಲೋಕರೀತಿಯಾಗಿ
ಮಾತಾಡುತ್ತೇನೆ. ಅಧರ್ಮಮಾಡುವದಕ್ಕಾಗಿ
ನಿಮ್ಮ ಅಂಗಗಳನ್ನು ಬಂಡುತನಕ್ಕೂ ಅಧರ್ಮಕ್ಕೂ
ದಾಸರನ್ನಾಗಿ ಒಪ್ಪಿಸಿಕೊಟ್ಟಿದ್ದಂತೆಯೇ ಈಗ ಪರಿಶುದ್ಧ
ರಾಗುವದಕ್ಕಾಗಿ ನಿಮ್ಮ ಅಂಗಗಳನ್ನು ನೀತಿಗೆ ದಾಸರ
ನ್ನಾಗಿ ಒಪ್ಪಿಸಿಕೊಡಿರಿ. ನೀವು ಪಾಪಕ್ಕೆ ದಾಸರಾಗಿ 20
ದ್ದಾಗ ನೀತಿಯ ಹಂಗಿನವರಾಗಿದ್ದಿಲ್ಲ. ಆದರೆ ನೀವು 21
ಆಗ ಮಾಡಿದ ಕೃತ್ಯಗಳಿಂದ ನಿಮಗುಂಟಾದ ಫಲ
ವೇನು? ಈಗ ಅವುಗಳ ವಿಷಯದಲ್ಲಿ ನಿಮಗೆ ನಾಚಿಕೆ
ಯುಂಟಷ್ಟೆ. ಕಡೆಗೆ ಅವುಗಳಿಂದ ಬರುವದು ಮರಣ
ವಲ್ಲವೇ. ಈಗಲಾದರೋ ನೀವು ಪಾಪದಿಂದ ಬಿಡು 22
ಗಡೆಯನ್ನು ಹೊಂದಿ ದೇವರಿಗೆ ದಾಸರಾದದರಿಂದ ಪರಿ
ಶುದ್ಧರಾಗುವದೇ ನಿಮಗೆ ಫಲ; ಕಡೆಗೆ ದೊರೆಯು
ವಂಥದು ನಿತ್ಯಜೀವ. ಯಾಕಂದರೆ ಪಾಪವು ಕೊಡುವ 23
ಸಂಬಳ ಮರಣ; ದೇವರ ಉಚಿತಾರ್ಥವರವು ನಮ್ಮ
ಕರ್ತನಾದ ಕ್ರಿಸ್ತ ಯೇಸುವಿನಲ್ಲಿರುವ ನಿತ್ಯಜೀವ.

ಕ್ರಿಸ್ತನಲ್ಲಿ ಐಕ್ಯವಾದವರಿಗೆ ಧರ್ಮಶಾಸ್ತ್ರದ ಹಂಗು ತಪ್ಪಿದ್ದು.

7 ಸಹೋದರರೇ, ಧರ್ಮಶಾಸ್ತ್ರವನ್ನು ತಿಳಿದವರಿಗೆ
ನಾನು ಹೇಳುವದೇನಂದರೆ— ಒಬ್ಬ ಮನುಷ್ಯನು ಜೀವ

[1] 16ನೆಯ ವಚನ ಮೊದಲುಗೊಂಡು 23ನೆಯ ವಚನದ ವರೆಗೆ, ದಾಸ ಎಂಬದಕ್ಕೆ ಬದಲಾಗಿ ಆಳು ಅಂತ ಓದಿಕೊಳ್ಳಬಹುದು.

ದಿಂದಿರುವ ತನಕ ಮಾತ್ರ ಅವನ ಮೇಲೆ ಧರ್ಮಶಾ
ಸ್ತ್ರದ ಅಧಿಕಾರವು ನಡೆಯುತ್ತದೆಂಬದು ನಿಮಗೆ ಗೊ
2 ತ್ತಿಲ್ಲವೇ? ಇದಕ್ಕೆ ದೃಷ್ಟಾಂತ—ಗಂಡನು ಜೀವ
ದಿಂದಿರುವ ತನಕ ಹೆಂಡತಿಯು ನ್ಯಾಯದ ಪ್ರಕಾರ
ಅವನಿಗೆ ಬದ್ಧಳಾಗಿರುವಳು; ಗಂಡನು ಸತ್ತರೆ ಗಂಡನ
3 ಹಂಗು ಆಕೆಗೆ ತಪ್ಪುವದು. ಹೀಗಿರಲಾಗಿ ಗಂಡನು
ಜೀವದಿಂದಿರುವಾಗ ಆಕೆ ಬೇರೊಬ್ಬನನ್ನು ಸೇರಿದರೆ
ವ್ಯಭಿಚಾರಿಣಿ ಎನಿಸಿಕೊಳ್ಳುವಳು. ಆದರೆ ಗಂಡನು
ಸತ್ತ ಮೇಲೆ ಅವನ ಹಂಗು ತಪ್ಪಿದ್ದರಿಂದ ಆಕೆ ಮತ್ತೊ
ಬ್ಬ ಗಂಡನನ್ನು ಮಾಡಿಕೊಂಡರೂ ವ್ಯಭಿಚಾರಿಣಿಯಲ್ಲ.
4 ಹಾಗೆಯೇ ನನ್ನ ಸಹೋದರರೇ, ನೀವು ಸಹ ಕ್ರಿಸ್ತನ
ದೇಹದ ಮೂಲಕವಾಗಿ ಧರ್ಮಶಾಸ್ತ್ರದ ಪಾಲಿಗೆ
ಸತ್ತಿರಿ. ದೇವರಿಗೆ ಫಲವಾಗುವದಕ್ಕಾಗಿ ಮತ್ತೊಬ್ಬ
ನನ್ನು ಅಂದರೆ ಸತ್ತು ಜೀವಿತನಾಗಿ ಎದ್ದಾತನನ್ನು ಸೇರಿ
5 ಕೊಂಡಿರಿ. ನಾವು ಶರೀರಾಧೀನಸ್ವಭಾವವನ್ನು ಅನು
ಸರಿಸುತ್ತಿದ್ದಾಗ ದುರಾಶೆಗಳು ಧರ್ಮಶಾಸ್ತ್ರದಿಂದಲೇ
ಪ್ರೇರಿತವಾಗಿ ನಮ್ಮ ಅಂಗಗಳಲ್ಲಿ ಯತ್ನೈಸುತ್ತಾ
6 ಮರಣಕ್ಕೆ ಫಲವನ್ನು ಹುಟ್ಟಿಸುತ್ತಿದ್ದವು. ಈಗಲಾ
ದರೋ ನಮ್ಮನ್ನು ವಶಮಾಡಿಕೊಂಡಿದ್ದ ಧರ್ಮಶಾ
ಸ್ತ್ರದ ಪಾಲಿಗೆ ನಾವು ಸತ್ತಕಾರಣ ಆ ಧರ್ಮಶಾಸ್ತ್ರ
ದಿಂದ ವಿಮುಕ್ತರಾಗಿದ್ದೇವೆ. ಹೀಗಿರಲಾಗಿ ಶಾಸ್ತ್ರದ
ಹೊರಗಣ ಅರ್ಥಕ್ಕೆ ಅನುಕೂಲವಾದ ಹಳೇ ರೀತಿ
ಯಲ್ಲಿ ನಾವು ದೇವರನ್ನು ಸೇವಿಸುವವರಲ್ಲ. ಪವಿತ್ರಾ
ತ್ಮಪ್ರೇರಿತವಾದ ಹೊಸ ರೀತಿಯಲ್ಲಿ ಆತನನ್ನು ಸೇವಿ
ಸುವವರಾಗಿದ್ದೇವೆ.

ಪಾಪದಿಂದ ಬಿಡಿಸಲು ಧರ್ಮಶಾಸ್ತ್ರಕ್ಕೆ ಶಕ್ತಿ ಸಾಲದು.

7 ಹಾಗಾದರೆ ಏನು ಹೇಳೋಣ? ಧರ್ಮಶಾಸ್ತ್ರವು
ಪಾಪಸ್ವರೂಪವೋ? ಎಂದಿಗೂ ಅಲ್ಲ. ಧರ್ಮ
ಶಾಸ್ತ್ರದಿಂದಲೇ ಹೊರತು ಪಾಪವೆಂಬದು ಏನೋ ನನಗೆ
ಗೊತ್ತಾಗುತ್ತಿರಲಿಲ್ಲ. ದೃಷ್ಟಾಂತವಾಗಿ, ಆಶಿಸಬಾರ
ದೆಂದು ಧರ್ಮಶಾಸ್ತ್ರವು ಹೇಳದಿದ್ದರೆ ದುರಾಶೆಯಂದರೆ
8 ಏನೋ ನನಗೆ ತಿಳಿಯುತ್ತಿದ್ದಿಲ್ಲ. ಆದರೆ ಪಾಪವು
ಈ ಆಜ್ಞೆಯಿಂದ ಅನುಕೂಲಹೊಂದಿ ಸಕಲವಿಧವಾದ
ದುರಾಶೆಗಳನ್ನು ನನ್ನಲ್ಲಿ ಹುಟ್ಟಿಸಿತು. ಧರ್ಮ
ಶಾಸ್ತ್ರವು ಇಲ್ಲದಿರುವಾಗ ಪಾಪವು ಅಚೇತನವಾಗಿದೆ.
9 ಮೊದಲು ನಾನು ಧರ್ಮಶಾಸ್ತ್ರವಿಲ್ಲದವನಾಗಿದ್ದು ಜೀವ
ದಿಂದಿದ್ದೆನು. ಆಜ್ಞೆಯು ಬಂದಾಗ ಪಾಪಕ್ಕೆ ಜೀವ
10 ಬಂತು, ನಾನು ಸತ್ತೆನು. ಜೀವಿಸುವದಕ್ಕಾಗಿ ಕೊಟ್ಟಿ
ರುವ ಆಜ್ಞೆಯೇ ಮರಣಕ್ಕೆ ಕಾರಣವಾಯಿತೆಂದು
11 ನನಗೆ ಕಂಡುಬಂತು. ಹೇಗಂದರೆ ಪಾಪವು ಆಜ್ಞೆ
ಯಿಂದ ಅನುಕೂಲಹೊಂದಿ ನನ್ನನ್ನು ವಂಚಿಸಿ ಆ
12 ಆಜ್ಞೆಯ ಮೂಲಕವೇ ನನ್ನನ್ನು ಕೊಂದಿತು. ಹೀಗಿರ
ಲಾಗಿ ಧರ್ಮಶಾಸ್ತ್ರವು ಪರಿಶುದ್ಧವಾದದ್ದು. ಮತ್ತು
ಆಜ್ಞೆಯು ಪರಿಶುದ್ಧವೂ ನ್ಯಾಯವೂ ಹಿತವೂ ಆಗಿರು
ವಂಥದು ಸರಿ.

13 ಹಾಗಾದರೆ ಹಿತವಾದದ್ದು ನನಗೆ ಮರಣಕ್ಕೆ ಕಾರಣ
ವಾಯಿತೋ? ಹಾಗೆ ಎಂದಿಗೂ ಹೇಳಬಾರದು. ಪಾಪ
ವೇ ಮರಣಕ್ಕೆ ಕಾರಣವಾದದ್ದು; ಅದು ಹಿತವಾದದ
ಮೂಲಕ ನನಗೆ ಮರಣವನ್ನು ಉಂಟುಮಾಡಿದ್ದರಿ
ಪಾಪವೇ ಎಂದು ಕಾಣಿಸಿಕೊಂಡಿತು; ಮತ್ತು ಆಜ್ಞೆ
ಮೂಲಕ ಪಾಪವು ಕೇವಲ ಪಾಪಸ್ವರೂಪವೇ ಎಂ
ಕಾಣಬಂತು.

ಧರ್ಮಶಾಸ್ತ್ರವು ಪಾರಮಾರ್ಥಿಕವಾದದ್ದೆಂದು ನಾ
ಬಲ್ಲೆವು. ಆದರೆ ನಾನು ದೇಹಧರ್ಮಕ್ಕೆ ಒಳಗಾದ
ನೂ ಪಾಪದ ಸ್ವಾಧೀನದಲ್ಲಿರುವದಕ್ಕೆ ಮಾರಲ್ಪಟ್ಟ
ನೂ ಆಗಿದ್ದೇನೆ. ಹೇಗಂದರೆ ನಾನು ಮಾಡುವ
ನನಗೇ ಗೊತ್ತಿಲ್ಲ; ಯಾವದನ್ನು ಮಾಡಬೇಕೆಂ
ನಾನು ಇಚ್ಛೈಸುತ್ತೇನೋ ಅದನ್ನು ನಡಿಸದೆ ನನ
ಅಸಹ್ಯವಾದದ್ದನ್ನು ಮಾಡುತ್ತೇನೆ. ಆದರೆ ನಾ
ಮಾಡುವಂಥದಕ್ಕೆ ನನ್ನ ಮನಸ್ಸು ಒಪ್ಪದಿದ್ದ
ಧರ್ಮಶಾಸ್ತ್ರವು ಉತ್ತಮವಾದದ್ದೆಂದು ಒಪ್ಪಿಕೊಂ
ಹಾಗಾಯಿತು. ಹೀಗಿರಲಾಗಿ ಆ ಅಸಹ್ಯವಾದದ್ದನ
ಮಾಡುವವನು ಇನ್ನು ನಾನಲ್ಲ, ನನ್ನಲ್ಲಿ ನೆಲೆಗೊಂ
ರುವ ಪಾಪವೇ ಅದನ್ನು ಮಾಡುತ್ತದೆ. ನನ್ನ
ಅಂದರೆ ನನ್ನ ಶರೀರಾಧೀನಸ್ವಭಾವದಲ್ಲಿ ಒಳ್ಳೇದೇನ
ವಾಸವಾಗಿಲ್ಲವೆಂದು ನನಗೆ ತಿಳಿದದೆ. ಒಳ್ಳೇದನ
ಮಾಡುವದಕ್ಕೆ ನನಗೇನೋ ಮನಸ್ಸುಂಟು; ಆದ
ಆದನ್ನು ಮಾಡುವದು ನನ್ನಿಂದಾಗದು. ನಾನ
ಮೆಚ್ಚುವ ಒಳ್ಳೇ ಕಾರ್ಯವನ್ನು ಮಾಡದೆ ಮೆ
ದಿರುವ ಕೆಟ್ಟ ಕಾರ್ಯವನ್ನೇ ಮಾಡುವವನಾಗಿದ್ದೇ
ಮಾಡಬಾರದೆನ್ನುವ ಕೆಲಸವನ್ನು ನಾನು ಮಾಡಿದ
ಆದನ್ನು ಮಾಡಿದವನು ಇನ್ನು ನಾನಲ್ಲ, ನನ್ನ
ನೆಲೆಗೊಂಡಿರುವ ಪಾಪವೇ ಅದನ್ನು ಮಾಡಿತು. ಹೀಗಿ
ಲಾಗಿ ಒಳ್ಳೇದನ್ನು ಮಾಡಬೇಕೆಂದಿರುವ ನನಗೆ ಕೆಟ್ಟದ್ದ
ಸಿದ್ಧವಾಗಿದೆಯೆಂಬ ನಿಯಮ ನನಗೆ ಕಾಣಬರುತ್ತ
ಅಂತರಾತ್ಮದೊಳಗೆ ದೇವರ ನಿಯಮದಲ್ಲಿ ಆನಂ
ಪಡುವವನಾಗಿದ್ದೇನೆ. ಆದರೆ ನನ್ನ ಅಂಗಗಳ
ಬೇರೊಂದು ನಿಯಮ ಉಂಟೆಂದು ನೋಡುತ್ತೇ
ಅದು ನನ್ನ ಮನಸ್ಸಿನಲ್ಲಿರುವ ನಿಯಮಕ್ಕೆ ವಿರು
ವಾಗಿ ಕಾದಾಡಿ ನನ್ನನ್ನು ಸೆರೆಹಿಡಿದು ನನ್ನ ಅಂಗಗ
ಲ್ಲಿರುವ ಪಾಪದ ನಿಯಮಕ್ಕೆ ವಶಮಾಡುವಂಥದ
ಗಿದೆ. ಅಯ್ಯೋ, ನಾನು ಎಂಥ ದುರವಸ
ಯಲ್ಲಿ ಬಿದ್ದ ಮನುಷ್ಯನು! ಇಂಥ ಮರಣಕ್ಕೆ ಬ
ಗಾದ ಈ ದೇಹದಿಂದ ನನ್ನನ್ನು ಬಿಡಿಸುವವನು ಯಾರು
ಬಿಡಿಸುವವನು ಇದ್ದಾನೆಂಬದಕ್ಕಾಗಿ ನಮ್ಮ ಕತ
ನಾದ ಯೇಸು ಕ್ರಿಸ್ತನ ಮೂಲಕ ದೇವರಿಗೆ ಸ್ತೋತ್ರ
ಹೀಗಿರಲಾಗಿ ನನ್ನಷ್ಟಕ್ಕೆ ನಾನೇ ಮನಸ್ಸಿನಿಂದ ದೇವ
ನಿಯಮಕ್ಕೆ ಆಳಾಗಿಯೂ ಶರೀರಭಾವದಿಂದ ಪಾ
ಪೆಂಬ ನಿಯಮಕ್ಕೆ ಆಳಾಗಿಯೂ ನಡಕೊಳ್ಳುವವನಾ
ದ್ದೇನೆ.

ಪವಿತ್ರಾತ್ಮನು ನಂಬಿರುವವರನ್ನು ಪಾಪಮರಣಗಳಿಂದ ಬಿಡಿ
ಅವರನ್ನು ದೇವರ ಮಕ್ಕಳಾಗ ಮಾಡಿದ್ದು.

ಆದದರಿಂದ ಕ್ರಿಸ್ತ ಯೇಸುವಿನಲ್ಲಿರುವವರಿಗೆ ಅ
ರಾಧನಿರ್ಣಯವು ಈಗ ಇಲ್ಲವೇ ಇಲ್ಲ. ಯಾ
ಕಂದರೆ ಜೀವವನ್ನುಂಟುಮಾಡುವ ಪವಿತ್ರಾತ್ಮನಿಂದಾ

ನಿಯಮವು 1)ನಿನ್ನನ್ನು ಪಾಪಮರಣಗಳಿಗೆ ಕಾರಣವಾ
ದ ನಿಯಮದಿಂದ ಕ್ರಿಸ್ತಯೇಸುವಿನ ಮೂಲಕ ಬಿಡಿ
ಸಿತು. ಧರ್ಮಶಾಸ್ತ್ರವು ನಮ್ಮ ಶರೀರಾಧೀನಸ್ವಭಾ
ವದ ನಿಮಿತ್ತ ನಿರ್ಬಲವಾಗಿ ಯಾವ ಕೆಲಸವನ್ನು
ಮಾಡಲಾರದೆ ಇತ್ತೋ ಅದನ್ನು ದೇವರೇ ಮಾಡಿ
ದನು. ಏನಂದರೆ ಆತನು ಪಾಪನಿವಾರಣೆಗಾಗಿ ತನ್ನ
ಮಗನನ್ನು ಪಾಪಾಧೀನವಾದ ನರಭಾವದ ರೂಪ
ದಲ್ಲಿ ಕಳುಹಿಸಿಕೊಟ್ಟು ನರಭಾವದಲ್ಲಿಯೇ 2)ಪಾಪಕ್ಕೆ
ಮರಣದಂಡನೆಯನ್ನು ವಿಧಿಸಿದನು. ಹೀಗಿರಲು ಶರೀರ
ಭಾವಕ್ಕೆ ಅನುಸಾರವಾಗಿ ನಡೆಯದೆ ಪವಿತ್ರಾತ್ಮಾನು
ಸಾರವಾಗಿ ನಡೆಯುವವರಾದ ನಮ್ಮಲ್ಲಿ ಧರ್ಮಶಾಸ್ತ್ರದ
ನಿಯಮವು ನೆರವೇರುವದಕ್ಕೆ ಮಾರ್ಗವಾಯಿತು.

ಶರೀರಭಾವವನ್ನು ಅನುಸರಿಸುವವರು 3)ಅದಕ್ಕೆ
ಸಂಬಂಧಪಟ್ಟವುಗಳ ಮೇಲೆ ಮನಸ್ಸಿಡುತ್ತಾರೆ, ಪವಿತ್ರಾ
ತ್ಮನನ್ನನುಸರಿಸುವವರು 4)ಪವಿತ್ರಾತ್ಮನಿಗೆ ಸಂಬಂಧ
ಪಟ್ಟವುಗಳ ಮೇಲೆ ಮನಸ್ಸಿಡುತ್ತಾರೆ. ಶರೀರಭಾವ
ದವುಗಳ ಮೇಲೆ ಮನಸ್ಸಿಡುವದು ಮರಣ; ಪವಿತ್ರಾತ್ಮ
ನವುಗಳ ಮೇಲೆ ಮನಸ್ಸಿಡುವದು ಜೀವವೂ ಮನ
ಶ್ಶಾಂತಿಯೂ ಆಗಿದೆ. ಯಾಕಂದರೆ ಶರೀರಭಾವದವು
ಗಳ ಮೇಲೆ ಮನಸ್ಸಿಡುವದು ದೇವರಿಗೆ ಶತ್ರುತ್ವವು;
ಅಂಥ ಮನಸ್ಸು ದೇವರ ನಿಯಮಕ್ಕೆ ಒಳಪಡುವದೂ
ಇಲ್ಲ, ಒಳಪಡುವದಕ್ಕಾಗುವದೂ ಇಲ್ಲ. ಶರೀರ
ಭಾವಾಧೀನರು ದೇವರಿಗೆ ಮೆಚ್ಚಿಕೆಯಾಗಿರಲಾರರು.

ನೀವಾದರೋ ನಿಮ್ಮಲ್ಲಿ ದೇವರ ಆತ್ಮನು
ವಾಸವಾಗಿರುವದಾದರೆ ಶರೀರಭಾವಾಧೀನರಲ್ಲ, ದೇವ
ರಾತ್ಮನಿಗೆ ಅಧೀನರಾಗಿದ್ದೀರಿ. ಯಾವನಿಗಾದರೂ
ಕ್ರಿಸ್ತನ ಆತ್ಮನು ಇಲ್ಲದಿದ್ದರೆ ಅವನು ಕ್ರಿಸ್ತನವನಲ್ಲ.
ಆದರೆ ಕ್ರಿಸ್ತನು ನಿಮ್ಮಲ್ಲಿದ್ದರೆ ದೇಹವು ಪಾಪದ ದೆಸೆ
ಯಿಂದ ಸತ್ತದ್ದಾಗಿದ್ದರೂ ಆತ್ಮವು ನೀತಿಯ ದೆಸೆ
ಯಿಂದ ಜೀವಸ್ವರೂಪವಾಗಿದೆ. ಯೇಸುವನ್ನು ಸತ್ತವ
ರೊಳಗಿಂದ ಜೀವಿತನಾಗಿ ಎಬ್ಬಿಸಿದಾತನ ಆತ್ಮನು
ನಿಮ್ಮಲ್ಲಿ ವಾಸವಾಗಿದ್ದರೆ ಕ್ರಿಸ್ತ ಯೇಸುವನ್ನು ಸತ್ತವ
ರೊಳಗಿಂದ ಎಬ್ಬಿಸಿದಾತನು 5)ನಿಮ್ಮಲ್ಲಿ ವಾಸವಾಗಿ
ರುವ ತನ್ನ ಆತ್ಮನ ಮೂಲಕ ನಿಮ್ಮ ಮರ್ತ್ಯದೇಹ
ಗಳನ್ನು ಸಹ ಬದುಕಿಸುವನು.

ಹೀಗಿರಲಾಗಿ ಸಹೋದರರೇ, ನಾವು ಹಂಗಿನಲ್ಲಿ
ದ್ದೇವೆ; ಆದರೆ [ಪವಿತ್ರಾತ್ಮಾನುಸಾರ ನಡೆಯುವ
ಹಂಗಿನಲ್ಲಿದ್ದೇವೆಯೇ ಹೊರತು] ಶರೀರಭಾವವನ್ನು
ಅನುಸರಿಸಿ ಬದುಕಬೇಕೆಂಬ ಹಂಗಿನಲ್ಲಿಲ್ಲ. ನೀವು
ಶರೀರಭಾವವನ್ನು ಅನುಸರಿಸಿ ಬದುಕಿದರೆ ಸಾಯು
ವದು ನಿಶ್ಚಯ; ನೀವು ಪವಿತ್ರಾತ್ಮನಿಂದ ದೇಹದ
ದುರಭ್ಯಾಸಗಳನ್ನು ನಾಶಮಾಡುವದಾದರೆ ಜೀವಿಸು
ವಿರಿ.

ಯಾರಾರು ದೇವರ ಆತ್ಮನಿಂದ ನಡಿಸಿಕೊಳ್ಳು
ತ್ತಾರೋ ಅವರು ದೇವರ ಮಕ್ಕಳು. ನೀವು ತಿರಿಗಿ
ಭಯದಲ್ಲಿ ಬೀಳುವ ಹಾಗೆ ದಾಸನ ಭಾವವನ್ನು
ಹೊಂದಿದವರಲ್ಲ, ಮಗನ ಭಾವವನ್ನು ಹೊಂದಿದವ
ರಾಗಿದ್ದೀರಿ. ಈ ಭಾವದಿಂದ ನಾವು ದೇವರನ್ನು ಅಪ್ಪಾ,
ತಂದೆಯೇ, ಎಂದು ಕೂಗುತ್ತೇವೆ. ನಾವು ದೇವರ 16
ಮಕ್ಕಳಾಗಿದ್ದೇವೆಂಬದಕ್ಕೆ ಪವಿತ್ರಾತ್ಮನೇ ನಮ್ಮ
ಆತ್ಮದೊಂದಿಗ ಸಾಕ್ಷಿಹೇಳುತ್ತಾನೆ. ಮಕ್ಕಳಾಗಿದ್ದರೆ 17
ಬಾಧ್ಯರಾಗಿದ್ದೇವೆ; ದೇವರಿಗೆ ಬಾಧ್ಯರು, ಕ್ರಿಸ್ತ
ನೊಂದಿಗೆ ಬಾಧ್ಯರು. ಹೇಗಂದರೆ ಕ್ರಿಸ್ತನಿಗೆ ಸಂಭ
ವಿಸಿದ ಬಾಧೆಗಳಲ್ಲಿ ನಾವು ಪಾಲುಗಾರರಾಗುವದಾದರೆ
ಆತನ ಮಹಿಮೆಯಲ್ಲಿಯೂ ಪಾಲುಗಾರರಾಗುವೆವು.

ಈಗ ದೇವಪುತ್ರರೂ ಜಗತ್ತೂ ನರಳುತ್ತಿದ್ದರೂ ಮುಂದೆ
ಜಯೋತ್ಸವವಾಗುವದು.

ನಮಗೋಸ್ಕರ ಮುಂದಿನ ಕಾಲದಲ್ಲಿ ಪ್ರತ್ಯಕ್ಷ 18
ವಾಗುವ ಮಹಿಮಪದವಿಯನ್ನು ಆಲೋಚಿಸಿ ಈಗಿನ
ಕಾಲದ ಕಷ್ಟಗಳು ಅಲ್ಪವೇ ಸರಿ ಎಂದು ಎಣಿಸುತ್ತೇನೆ.
ದೇವಪುತ್ರರ ಮಹಿಮೆಯು ಯಾವಾಗ ಪ್ರತ್ಯಕ್ಷ 19
ವಾದೀತೆಂದು ಜಗತ್ತು ಬಹು ಲವಲವಿಕೆಯಿಂದ ಎದುರು
ನೋಡುತ್ತಿರುವದು. ಜಗತ್ತು ವ್ಯರ್ಥತ್ವಕ್ಕೆ ಒಳ 20
ಗಾಯಿತು; ಹೀಗೆ ಒಳಗಾದದ್ದು ಸ್ವೇಚ್ಛೆಯಿಂದಲ್ಲ,
ಅದನ್ನು ಒಳಪಡಿಸಿದವನ ಸಂಕಲ್ಪದಿಂದಲೇ. ಆದ 21
ರೂ ಅದಕ್ಕೊಂದು ನಿರೀಕ್ಷೆಯುಂಟು; ಏನಂದರೆ
ಆ ಜಗತ್ತು ಕೂಡ ನಾಶದ ವಶದಿಂದ ಬಿಡುಗಡೆ
ಯಾಗಿ ದೇವರ ಮಕ್ಕಳ ಮಹಿಮೆಯುಳ್ಳ ವಿಮೋಚನೆ
ಯಲ್ಲಿ ಪಾಲುಹೊಂದುವದೇ.

ಜಗತ್ತೆಲ್ಲಾ ಇಂದಿನ ವರೆಗೂ ನರಳುತ್ತಾ ಪ್ರಸವ 22
ವೇದನೆಪಡುತ್ತಾ ಇರುತ್ತದೆಂದು ನಾವು ಬಲ್ಲೆವು.
ಇದು ಮಾತ್ರವಲ್ಲದೆ ಪ್ರಥಮಫಲವಾಗಿರುವ ಪವಿ 23
ತ್ರಾತ್ಮವರವನ್ನು ಹೊಂದಿದ ನಾವಾದರೂ ದೇವ
ಪುತ್ರರ ಪದವಿಯನ್ನು ಅಂದರೆ ದೇಹಕ್ಕೆ ಬರ
ಬೇಕಾದ ವಿಮೋಚನೆಯನ್ನು ಎದುರುನೋಡುತ್ತಾ
ನಮ್ಮೊಳಗೆ ನರಳುತ್ತೇವೆ. ನಾವು ರಕ್ಷಣೆಯನ್ನು 24
ಹೊಂದಿದವರಾದರೂ ಇನ್ನು ಎದುರುನೋಡುವವ
ರಾಗಿದ್ದೇವೆ. ಎದುರುನೋಡುವ ಪದವಿ ಪ್ರತ್ಯಕ್ಷ
ವಾಗಿದ್ದರೆ ಎದುರುನೋಡುವದೇಕೆ? ಪ್ರತ್ಯಕ್ಷವಾದ
ದ್ದನ್ನು ಎದುರುನೋಡುವದುಂಟೇ? ಆದರೆ ಕಾಣದಿರು 25
ವದನ್ನು ನಾವು ಎದುರುನೋಡುವವರಾಗಿದ್ದರೆ ತಾಳ್ಮೆ
ಯಿಂದ ಕಾದುಕೊಂಡಿರುವೆವು.

ಹಾಗೆ ಪವಿತ್ರಾತ್ಮನು ಸಹ ನಮ್ಮ ಅಶಕ್ತಿಯನ್ನು 26
ನೋಡಿ ಸಹಾಯಮಾಡುತ್ತಾನೆ. ಹೇಗಂದರೆ ನಾವು
ತಕ್ಕ ಪ್ರಕಾರ ಏನು ಬೇಡಿಕೊಳ್ಳಬೇಕೋ ನಮಗೆ
ಗೊತ್ತಿಲ್ಲದ್ದರಿಂದ ಪವಿತ್ರಾತ್ಮನು ತಾನೇ ಮಾತಿಲ್ಲ
ದಂಥ ನರಳಾಟದಿಂದ ನಮಗೋಸ್ಕರ ಬೇಡಿಕೊಳ್ಳು
ತ್ತಾನೆ. ಆದರೆ ಹೃದಯಗಳನ್ನು ಶೋಧಿಸಿ ನೋಡು 27
ವಾತನಿಗೆ ಪವಿತ್ರಾತ್ಮನ ಮನೋಭಾವವು ಏನೆಂದು ತಿಳಿ
ದದೆ; ಆ ಆತ್ಮನು ದೇವರ ಚಿತ್ತಾನುಸಾರವಾಗಿ

1) ಕೆಲವು ಪ್ರತಿಗಳಲ್ಲಿ — ನನ್ನನ್ನು ಎಂದು ಬರೆದದೆ. 2) ಅಥವಾ, ಪಾಪದ ಅಧಿಕಾರವು ತೀರಿತೆಂದು. 3) ಅಥವಾ, ಪ್ರಪಂಚದ
ವಿಷಯಗಳ. 4) ಅಥವಾ, ಪಾರಮಾರ್ಥಿಕ ವಿಷಯಗಳ. 5) ಕೆಲವು ಪ್ರತಿಗಳಲ್ಲಿ—ನಿಮ್ಮಲ್ಲಿ ತನ್ನ ಆತ್ಮನು ವಾಸವಾಗಿರುವದರಿಂದ
ಎಂದು ಬರೆದದೆ.

ದೇವಜನರಿಗೋಸ್ಕರ ಬೇಡಿಕೊಳ್ಳುವನೆಂದು ಆತನು
ಬಲ್ಲನು.
28 ಇದಲ್ಲದೆ ದೇವರ ಸಂಕಲ್ಪದ ಮೇರೆಗೆ ಕರೆಯ
ಲ್ಪಟ್ಟು ಆತನನ್ನು ಪ್ರೀತಿಸುವವರ ಹಿತಕ್ಕಾಗಿ ಎಲ್ಲಾ
ಕಾರ್ಯಗಳು ಅನುಕೂಲವಾಗುತ್ತವೆ ಎಂದು ನಮಗೆ
29 ಗೊತ್ತದೆ. ಯಾಕಂದರೆ ದೇವರು ತನ್ನ ಮಗನಿಗೆ
ಅನೇಕ ಮಂದಿ ಸಹೋದರರಿದ್ದು ಅವರಲ್ಲಿ ಆತನೇ
ಹಿರಿಯನಾಗಿರಬೇಕೆಂದು ಉದ್ದೇಶಿಸಿ ತಾನು ಯಾ
ರನ್ನು ತನ್ನವರೆಂದು ಮೊದಲು ತಿಳುಕೊಂಡನೋ ಅವ
ರನ್ನು ತನ್ನ ಮಗನ ಸಾರೂಪ್ಯವುಳ್ಳವರಾಗುವದಕ್ಕೆ
30 ಮೊದಲೇ ನೇಮಿಸಿದನು. ಮತ್ತು ಯಾರನ್ನು
ಮೊದಲು ನೇಮಿಸಿದನೋ ಅವರನ್ನು ಕರೆದನು; ಯಾ
ರನ್ನು ಕರೆದನೋ ಅವರನ್ನು ನೀತಿವಂತರೆಂದು
ನಿರ್ಣಯಿಸಿದನು; ಯಾರನ್ನು ನೀತಿವಂತರೆಂದು ನಿರ್ಣ
ಯಿಸಿದನೋ ಅವರನ್ನು ಮಹಿಮಪದವಿಗೆ ಸೇರಿಸಿ
ದನು.
31 ಹಾಗಾದರೆ ಈ ವಿಷಯಗಳಲ್ಲಿ ನಾವು ಏನು ಹೇ
ಳೋಣ? ದೇವರು ನಮ್ಮ ಕಡೆ ಇದ್ದರೆ ನಮ್ಮನ್ನು
32 ಎದುರಿಸುವವರು ಯಾರು? ಸ್ವಂತ ಮಗನನ್ನು
ಉಳಿಸಿಕೊಳ್ಳದೆ ಆತನನ್ನು ನಮ್ಮೆಲ್ಲರಿಗೋಸ್ಕರ
ಒಪ್ಪಿಸಿಕೊಟ್ಟನಲ್ಲಾ; ಮಗನನ್ನು ಕೊಟ್ಟ ಮೇಲೆ ಸಮ
33 ಸ್ತವನ್ನೂ ನಮಗೆ ದಯಪಾಲಿಸದೆ ಇರುವನೇ? ದೇವ
ರು ಆದುಕೊಂಡವರ ಮೇಲೆ ಯಾರು ತಪ್ಪು ಹೊರಿ
ಸಾರು? 1)ದೇವರೇ ನಮ್ಮನ್ನು ನೀತಿವಂತರೆಂದು
34 ನಿರ್ಣಯಿಸುವವನಾಗಿದ್ದಾನೆ. ಅಪರಾಧಿಗಳೆಂದು ನಿರ್ಣ
ಯಿಸುವವರು ಯಾರು? ಕ್ರಿಸ್ತ ಯೇಸು ಮರಣ
ವನ್ನು ಹೊಂದಿದ್ದಲ್ಲದೆ ಜೀವಿತನಾಗಿ ಎದ್ದು ದೇವರ
ಬಲಗಡೆಯಲ್ಲಿದ್ದು ನಮಗೋಸ್ಕರ ಬೇಡುವವನಾಗಿ
35 ದ್ದಾನೆ. ಕ್ರಿಸ್ತನ ಪ್ರೀತಿಯಿಂದ ನಮ್ಮನ್ನು ಅಗಲಿಸು
ವವರು ಯಾರು? ಕಷ್ಟವೋ ಸಂಕಟವೋ ಹಿಂಸೆಯೋ
ಅನ್ನವಿಲ್ಲದಿರುವದೋ ವಸ್ತ್ರವಿಲ್ಲದಿರುವದೋ ಗಂಡಾಂ
ತರವೋ ಖಡ್ಗವೋ?
36 ದೇವರೇ, ನಾವು ನಿನ್ನ ನಿಮಿತ್ತ ದಿನವೆಲ್ಲಾ
ಕೊಲೆಗೆ ಗುರಿಯಾಗಿದ್ದೇವೆ;
ಜನರು ನಮ್ಮನ್ನು ಕೊಯ್ಗುರಿಗಳಂತೆ ಎಣಿಸಿ
ದರು
37 ಎಂಬದಾಗಿ ಬರೆದಿರುವಂತೆ ಆಗುತ್ತದಲ್ಲಾ. ಆದರೆ
ನಮ್ಮನ್ನು ಪ್ರೀತಿಸಿದಾತನ ಮೂಲಕವಾಗಿ ನಾವು
ಈ ಎಲ್ಲಾ ವಿಷಯಗಳಲ್ಲಿ ಪೂರ್ಣ ಜಯಶಾಲಿಗಳಾ
38 ಗುತ್ತೇವೆ. ಹೇಗಂದರೆ ಮರಣವಾಗಲಿ ಜೀವವಾಗಲಿ
ದೇವದೂತರಾಗಲಿ ದುರಾತ್ಮಗಳಾಗಲಿ ಈಗಿನ ಸಂಗತಿ
39 ಗಳಾಗಲಿ ಮುಂದಣ ಸಂಗತಿಗಳಾಗಲಿ ಮಹತ್ವಗಳಾ
ಗಲಿ ಮೇಲಣ ಲೋಕವಾಗಲಿ ಕೆಳಗಣ ಲೋಕವಾ
ಗಲಿ ಬೇರೆ ಯಾವ ಸೃಷ್ಟಿಯಾಗಲಿ ನಮ್ಮನ್ನು ನಮ್ಮ
ಕರ್ತನಾದ ಯೇಸು ಕ್ರಿಸ್ತನಲ್ಲಿ ತೋರಿಬಂದ ದೇವರ
ಪ್ರೀತಿಯಿಂದ ಅಗಲಿಸಲಾರವೆಂದು ನನಗೆ ನಿಶ್ಚಂ
ಉಂಟು.

ಇಸ್ರಾಯೇಲ್ಯರ ಅಪನಂಬಿಕೆಯು ಅತ್ಯಂತ ದುಃಖಕರವಾದದ್

ನನಗೆ ಮಹಾದುಃಖವೂ ನನ್ನ ಹೃದಯದಲ್ಲಿ ಎಡೆ
ಡದ ವೇದನೆಯೂ ಉಂಟು. ಈ ಮಾತನ್ನು ಸುಳ್ಳಾ
ಡದೆ ಕ್ರಿಸ್ತನ ಮುಂದೆ ಸತ್ಯವಾಗಿ ಹೇಳುತ್ತೇನೆ; ಪ
ತ್ರಾತ್ಮಾಧೀನವಾಗಿರುವ ನನ್ನ ಮನಸ್ಸೇ ಸಾಕ್ಷಿ. ಶರೀ
ಸಂಬಂಧವಾಗಿ ಸ್ವಜನರಾಗಿರುವ ನನ್ನ ಸಹೋದರರಿಗೆ
ಸ್ಕರ ನಾನೇ ಸಾಧ್ಯವಾದರೆ ಕ್ರಿಸ್ತನನ್ನು ಅಗಲಿ ಶಾ
ಗ್ರಸ್ತನಾಗುವದಕ್ಕೆ ಒಪ್ಪಿಕೊಂಡೇನು. ಅವರು ಇಸ
ಯೇಲನ ವಂಶದವರೂ ದೇವರು ಪುತ್ರರಾಗಿ ಸ್ವೀ
ರಿಸಿದವರೂ ಆಗಿದ್ದಾರೆ. ಅವರಲ್ಲಿ ದೇವರ ತೇ
ಸ್ಸಾನ್ನಿಧ್ಯವು ಇದೆ; ಅವರ ಸಂಗಡ ದೇವರು ಒ
ಬಡಿಕೆಗಳನ್ನು ಮಾಡಿಕೊಂಡನು; ಅವರಿಗೆ ಧವ
ಶಾಸ್ತ್ರವೂ ದೇವಾಲಯದಲ್ಲಿ ನಡೆಯುವ ಆರಾಧ
ಯೂ ವಾಗ್ದಾನಗಳೂ ಕೊಡೋಣವಾದವು. ಅ
ಹಾಮ ಇಸಾಕ ಯಾಕೋಬರು ಅವರ ಪಿತೃಗಳ
ಕ್ರಿಸ್ತನು ಶರೀರಸಂಬಂಧವಾಗಿ ಅವರ ವಂಶದಲ್ಲಿಯ
ಹುಟ್ಟಿದವನು, ಆತನು ೨)ಎಲ್ಲಾದರ ಮೇಲೆ ಒಡೆ
ನೂ ನಿರಂತರ ಸ್ತುತಿ ಹೊಂದತಕ್ಕ ದೇವರೂ ಆಗಿದ್ದಾ
ಆಮೆನ್.

ದೇವರು ಇಸ್ರಾಯೇಲ್ಯರನ್ನು ತಳ್ಳಿಬಿಟ್ಟದ್ದು ಆತನ
ವಾಗ್ದಾನಗಳಿಗೆ ವಿರುದ್ಧವಾದದ್ದಲ್ಲ.

ದೇವರು ಹೇಳಿದ ಮಾತು ತಪ್ಪಿತೆಂದು ನಾ
ಭಾವಿಸಕೂಡದು. ಯಾಕಂದರೆ ಇಸ್ರಾಯೇ
ವಂಶದಲ್ಲಿ ಹುಟ್ಟಿದವರೆಲ್ಲರೂ ಇಸ್ರಾಯೇಲ್ಯರಲ್ಲ
ಹಾಗೆಯೇ ಅಬ್ರಹಾಮನ ವಂಶದಲ್ಲಿ ಹುಟ್ಟಿದ ಮಾ
ಕ್ಕೆ ಅವರೆಲ್ಲರು ಮಕ್ಕಳೆಂದು ಎಣಿಸಲ್ಪಡುವದಿಲ್ಲ
ಆದರೆ—ಇಸಾಕನಿಂದ ಹುಟ್ಟುವವರೇ ನಿನ್ನ ಸಂತ
ಅನ್ನಿಸಿಕೊಳ್ಳುವರು ಎಂದು ದೇವರು ಹೇಳಿದನು.
ಮಾತಿನ ಅರ್ಥವೇನಂದರೆ ಶರೀರಸಂಬಂಧವಾಗಿ ಹು
ದವರೆಲ್ಲರೂ ದೇವರ ಮಕ್ಕಳಲ್ಲ, ವಾಗ್ದಾನಸಂಬಂ
ವಾಗಿ ಹುಟ್ಟಿದವರೇ ಅಬ್ರಹಾಮನ ಸಂತತಿಯವರೆಂ
ಎಣಿಸಲ್ಪಡುವದು ಎಂಬದು. ಮುಂದಿನ ವರುಷ
ಇದೇ ಕಾಲದಲ್ಲಿ ನಾನು ಬರುವೆನು, ಆಗ ಸಾರಳಿ
ಮಗನು ಇರುವನು ಎಂಬುವ ಮಾತು ವಾಗ್ದಾನವ
ಗಿದೆಯಷ್ಟೆ. ಇದು ಮಾತ್ರವಲ್ಲದೆ ರೆಬೆಕ್ಕಳು ಸ
ನಮ್ಮ ಪಿತೃವಾದ ಇಸಾಕನಿಂದ ಅವಳಿ ಜವಳಿ ಮಕ
ಳಿಗೆ ಬಸುರಾದಾಗ ಆದರಂತೆಯೇ ಆಯಿತು. ಆ
ಮಕ್ಕಳು ಒಬ್ಬ ತಂದೆಯ ಮಕ್ಕಳಾಗಿದ್ದರೂ ಅವರ
ಇನ್ನು ಹುಟ್ಟದೆಯೂ ಒಳ್ಳೇವನ್ನಾಗಲಿ ಕೆಟ್ಟದ್ದನ್ನಾಗ

1) ಅಥವಾ, ನಮ್ಮನ್ನು ನೀತಿವಂತರೆಂದು ನಿರ್ಣಯಿಸುವವನಾದ ದೇವರೋ? ಮರಣವನ್ನು ಹೊಂದಿ, ಮರಣವನ್ನು ಹೊಂದಿ
ಜೀವಿತನಾಗಿ ಎದ್ದು ದೇವರ ಬಲಗಡೆಯಲ್ಲಿದ್ದು ನಮಗೋಸ್ಕರ ಬೇಡುವವನಾಗಿರುವ ಕ್ರಿಸ್ತ ಯೇಸುವೋ? ೨) ಅಥವಾ, ಎ
ಮೇಲೆ ಒಡೆಯನಾಗಿರುವ ದೇವರು ನಿರಂತರ ಸ್ತೋತ್ರ ಹೊಂದತಕ್ಕವನೆ; ಅಥವಾ, ಆತನು ಎಲ್ಲಾದರ ಮೇಲೆ ಒಡೆಯನು. ದ
ನಿರಂತರ ಸ್ತೋತ್ರವಾಗಲಿ.

ಮಾಡದೆಯೂ ಇದ್ದಾಗ—ಹಿರಿಯನು ಕಿರಿಯನಿಗೆ
ಸೇವೆಮಾಡುವನೆಂಬದಾಗಿ ಆಕೆಗೆ ಹೇಳಲ್ಪಟ್ಟಿತು. ಇದ
ರಿಂದ ದೇವರು ತನಗೆ ಮನಸ್ಸಿದ್ದವರನ್ನು ಆರಿಸಿಕೊ
ಳ್ಳುತ್ತಾನೆಂಬ ಸಂಕಲ್ಪವು ಸ್ಥಿರವಾಗಿರಬೇಕೆಂದು ತೋರಿ
ಸಿದನು. ಆ ಸಂಕಲ್ಪವು ಪುಣ್ಯಕ್ರಿಯೆಗಳ ಮೇಲೆ
ಆಧಾರಗೊಳ್ಳದೆ ಕರೆಯುವಾತನ ಚಿತ್ತದ ಮೇಲೆಯೇ
ಆಧಾರಗೊಂಡಿದೆ. ಇದಕ್ಕನುಸಾರವಾಗಿ—ಯಾಕೋ
ಬನನ್ನು ಪ್ರೀತಿಸಿದೆನು, ಏಸಾವನನ್ನು [1]ದ್ವೇಷಿಸಿದೆನು
ಎಂದು ಬರೆದದೆ.

### ದೇವರು ಇಸ್ರಾಯೇಲ್ಯರನ್ನು ತಳ್ಳಿಬಿಟ್ಟದ್ದು ಆತನ ನ್ಯಾಯಕ್ಕೆ ವಿರುದ್ಧವಾದದ್ದಲ್ಲ.

ಹಾಗಾದರೆ ಏನು ಹೇಳೋಣ? ದೇವರಲ್ಲಿ
ಅನ್ಯಾಯ ಉಂಟೋ? ಎಂದಿಗೂ ಇಲ್ಲ. ಯಾ
ವನ ಮೇಲೆ ನನ್ನ ಕರುಣೆ ಉಂಟೋ ಅವನನ್ನು ಕರು
ಣಿಸುವೆನು, ಯಾವನ ಮೇಲೆ ನನ್ನ ಕನಿಕರವದೆಯೋ
ಅವನಿಗೆ ಕನಿಕರತೋರಿಸುವೆನು ಎಂದು ದೇವರು
ಮೋಶೆಗೆ ಹೇಳಿರುತ್ತಾನಷ್ಟೆ. ಆದದರಿಂದ ದೇವರ
ದಯವು ಮನುಷ್ಯರಿಗೆ ಇಚ್ಛೈಸುವದರಿಂದಾಗಲಿ ಪ್ರಯ
ತ್ನಿಸುವದರಿಂದಾಗಲಿ ದೊರೆಯದೆ ದೇವರು ಕರುಣಿಸು
ವದರಿಂದಲೇ ದೊರೆಯುತ್ತದೆ. ದೇವರು ಫರೋಹ
ನನ್ನು ಕುರಿತು—ನಾನು ನಿನ್ನಲ್ಲಿ ನನ್ನ ಶಕ್ತಿಯನ್ನು
ತೋರಿಸಿ ನನ್ನ ಹೆಸರನ್ನು ಲೋಕದಲ್ಲೆಲ್ಲಾ ಪ್ರಖ್ಯಾತ
ಪಡಿಸಬೇಕೆಂಬ ಉದ್ದೇಶದಿಂದಲೇ ನಿನ್ನನ್ನು ಉನ್ನತ
ಸ್ಥಾನಕ್ಕೆ ತಂದಿದ್ದೇನೆಂದು ಹೇಳಿದನೆಂಬದಾಗಿ ಶಾಸ್ತ್ರೋ
ಕ್ತಿ ಉಂಟು. ದೇವರು ಯಾರನ್ನು ಕರುಣಿಸಿದರೂ
ಯಾರನ್ನು ಕಠಿಣಪಡಿಸಿದರೂ ಅದೆಲ್ಲವು ಆತನ
ಇಷ್ಟಾನುಸಾರವಾಗಿಯೇ ಇದೆ ಎಂಬದು ಇದರಿಂದ
ತೋರಿಬರುತ್ತದೆ.

ದೇವರ ಇಷ್ಟವನ್ನು ಎದುರಿಸುವವರು ಇಲ್ಲದಿರು
ವಲ್ಲಿ ಆತನು ತಪ್ಪುಹಿಡಿಯುವದು ಹೇಗೆ ಎಂದು ನನ್ನ
ನ್ನು ಕೇಳುವಿ. ಎಲೋ ಮನುಷ್ಯನೇ, ಹಾಗನ್ನಬೇಡ;
ದೇವರಿಗೆ ಎದುರುಮಾತಾಡುವದಕ್ಕೆ ನೀನು ಎಷ್ಟರ
ವನು? ರೂಪಿಸಲ್ಪಟ್ಟದ್ದು ರೂಪಿಸಿದವನಿಗೆ—ನನ್ನ
ನ್ನು ಹೀಗೇಕೆ ಮಾಡಿದೆ ಎಂದು ಕೇಳುವದುಂಟೇ?
ಉತ್ತಮವಾದ ಬಳಕೆಗೆ ಒಂದು ಪಾತ್ರೆಯನ್ನೂ
ಹೀನವಾದ ಬಳಕೆಗೆ ಮತ್ತೊಂದು ಪಾತ್ರೆಯನ್ನೂ
ಒಂದೇ ಮುದ್ದೆಯಿಂದ ಮಾಡುವದಕ್ಕೆ ಕುಂಬಾರ
ನಿಗೆ ಮಣ್ಣಿನ ಮೇಲೆ ಅಧಿಕಾರವಿಲ್ಲವೋ? ಆದರೆ
ದೇವರು ತನ್ನ ಕೋಪವನ್ನು ತೋರಿಸಿ ತನ್ನ ಶಕ್ತಿ
ಯನ್ನು ಪ್ರಸಿದ್ಧಿಪಡಿಸಬೇಕೆಂದಿದ್ದರೂ ಹಾಗೆ ಮಾ
ಡದೆ ತನ್ನ ಕೋಪಕ್ಕೆ ಗುರಿಯಾದ ನಾಶನಪಾತ್ರ
ರನ್ನು ಬಹು ಸೈರಣೆಯಿಂದ ಸೈರಿಸಿಕೊಂಡಿದ್ದಾನೆ.
ಮತ್ತು ಪ್ರಭಾವಹೊಂದುವದಕ್ಕೆ ತಾನು ಮುಂದಾಗಿ
ಸಿದ್ಧಮಾಡಿದ ಕರುಣಾಪಾತ್ರರಲ್ಲಿ ತನ್ನ ಮಹಿಮಾತಿ
ಶಯವನ್ನು ತೋರ್ಪಡಿಸಿದ್ದಾನೆ. ಆತನು ಕರುಣಿ
ಸಿದ ನಮ್ಮನ್ನು ಯೆಹೂದ್ಯರೊಳಗಿಂದ ಮಾತ್ರ ಕರೆ
ಯದೆ ಹೋಶೇಯನ ಗ್ರಂಥದ ವಚನದಲ್ಲಿ ತಾನು
ಸೂಚಿಸಿದಂತೆ ಅನ್ಯಜನರೊಳಗಿಂದ ಸಹ ಕರೆದನು. ಆ 25
ವಚನವೇನಂದರೆ—

ನನ್ನ ಜನವಲ್ಲದ್ದನ್ನು ನನ್ನ ಜನವೆಂದೂ
ನನಗೆ ಅಪ್ರಿಯವಾದವಳನ್ನು ಪ್ರಿಯಳೆಂದೂ
ಹೇಳುವೆನು.
ಮತ್ತು ಯಾವ ಸ್ಥಳದಲ್ಲಿ—ನೀವು ನನ್ನ ಜನರ 26
ಲ್ಲವೆಂದು ಅವರಿಗೆ ಹೇಳಲ್ಪಟ್ಟಿತೋ
ಆ ಸ್ಥಳದಲ್ಲಿಯೇ ಅವರು ಜೀವವುಳ್ಳ ದೇವರ
ಪುತ್ರರು ಎನಿಸಿಕೊಳ್ಳುವರು ಎಂಬದು.

ಇದಲ್ಲದೆ ಯೆಶಾಯನು ಇಸ್ರಾಯೇಲ್ ಜನರ ವಿಷಯ 27
ದಲ್ಲಿ—ಕರ್ತನು ಈ ದೇಶದವರ ವಿಷಯ ಪೂರ್ಣವಾ
ಗಿಯೂ ತೀವ್ರವಾಗಿಯೂ ಲೆಕ್ಕವನ್ನು ತೀರಿಸುವನಾದ
ದರಿಂದ ಇಸ್ರಾಯೇಲ್ಯರ ಸಂಖ್ಯೆಯು ಸಮುದ್ರದ
ಉಸುಬಿನಂತೆ ಅಸಂಖ್ಯವಾಗಿದ್ದರೂ ಅವರಲ್ಲಿ ಒಂದು
ಅಂಶ ಮಾತ್ರ ರಕ್ಷಣೆಹೊಂದುವದೆಂದು ಕೂಗಿ ಹೇಳು
ತ್ತಾನೆ. ಅದೇ ಅಭಿಪ್ರಾಯದಿಂದ ಯೆಶಾಯನು 28
ಮತ್ತೊಂದು ವಚನದಲ್ಲಿ—

ಸೇನಾಧೀಶ್ವರನಾದ ಕರ್ತನು ನಮಗೆ ಸಂತಾ 29
ನವನ್ನು ಉಳಿಸದೆ ಹೋಗಿದ್ದರೆ
ಸೊದೋಮಿನ ಗತಿಯೇ ನಮಗಾಗುತ್ತಿತ್ತು,
ಗೊಮೋರದ ದುರ್ದಶೆಯೇ ಸಂಭವಿಸು
ತ್ತಿತ್ತು ಎಂದು ಹೇಳುತ್ತಾನೆ.

### ಇಸ್ರಾಯೇಲ್ಯರನ್ನು ದೇವರು ತಳ್ಳಿಬಿಟ್ಟದ್ದಕ್ಕೆ ಇಸ್ರಾಯೇಲ್ಯರೇ ಕಾರಣ.

ಹಾಗಾದರೆ ಏನು ಹೇಳೋಣ? ನೀತಿಯನ್ನು ಹೊಂ 30
ದುವದಕ್ಕೆ ಪ್ರಯತ್ನಮಾಡದ ಅನ್ಯಜನರಿಗೆ ನೀತಿಯು
ಅಂದರೆ ನಂಬಿಕೆಯಿಂದುಂಟಾಗುವ ನೀತಿಯು ದೊರ
ಕಿತು. ಆದರೆ ಇಸ್ರಾಯೇಲ್ಯರು ನೀತಿಯನ್ನು ದೊ 31
ರಕಿಸುವ ಧರ್ಮವನ್ನು ಹಿಡಿಯಬೇಕೆಂದು ಪ್ರಯತ್ನಿಸಿ
ದರೂ ಆ ಧರ್ಮವನ್ನು ಹಿಡಿಯಲಾರದೆ ಹೋದರೆಂದು
ಹೇಳಬೇಕು. ಅದಕ್ಕೆ ಕಾರಣವೇನು? ಅವರು ನಂಬಿಕೆ 32
ಯನ್ನು ಆಧಾರಮಾಡಿಕೊಳ್ಳದೆ ನೇಮನಿಷ್ಠೆಗಳನ್ನು
ಆಧಾರಮಾಡಿಕೊಂಡದ್ದೇ ಕಾರಣ.

ಇಗೋ, ಚೀಯೋನಿನಲ್ಲಿ ಎಡವುವ ಕಲ್ಲ 33
ನ್ನೂ ಮುಗ್ಗರಿಸುವ ಬಂಡೆಯನ್ನೂ ಇಡು
ತ್ತೇನೆಂತಲೂ
ಅದರ ಮೇಲೆ ನಂಬಿಕೆಯಿಡುವವನು ಆಶಾ
ಭಂಗಪಡುವದಿಲ್ಲವೆಂತಲೂ

ಶಾಸ್ತ್ರದಲ್ಲಿ ಬರೆದದೆಯಲ್ಲಾ. ಆ ಎಡವುವ ಕಲ್ಲಿಗೆ
ಅವರು ಎಡವಿಬಿದ್ದರು.

ಸಹೋದರರೇ, ಇಸ್ರಾಯೇಲ್ಯರು ರಕ್ಷಣೆಹೊಂದ 10
ಬೇಕೆಂಬದೇ ನನ್ನ ಮನೋಭಿಲಾಷೆಯೂ ದೇವರಿಗೆ
ನಾನು ಮಾಡುವ ವಿಜ್ಞಾಪನೆಯೂ ಆಗಿದೆ. ದೇವರ 2
ಲ್ಲಿ ಆಸಕ್ತರಾಗಿದ್ದಾರೆಂದು ನಾನು ಅವರ ವಿಷಯದಲ್ಲಿ
ಸಾಕ್ಷಿಕೊಡುತ್ತೇನೆ; ಆದರೂ ಅವರ ಆಸಕ್ತಿ ಜ್ಞಾನಾನು

1) ಅಥವಾ, ಅಲಕ್ಷ್ಯಮಾಡಿದೆನು.

3 ಸಾರವಾದದ್ದಲ್ಲ. ಅವರು ದೇವರಿಂದ ದೊರಕುವ
ನೀತಿಯನ್ನರಿಯದೆ ಸ್ವನೀತಿಯನ್ನೇ ಸ್ಥಾಪಿಸಬೇಕೆಂದು
ಪ್ರಯತ್ನಿಸುತ್ತಾ ಇದ್ದದರಿಂದ ದೇವರ ನೀತಿಗೆ ಅಧೀನ
4 ರಾಗಲಿಲ್ಲ. ನಂಬುವವರೆಲ್ಲರಿಗೆ ನೀತಿಯನ್ನು ದೊರಕಿ
ಸಿರುವ ಕ್ರಿಸ್ತನಿಂದಲೇ ಕರ್ಮಮಾರ್ಗಕ್ಕೆ ಅಂತ್ಯವಾ
5 ಯಿತು. 1)ನೇಮನಿಷ್ಠೆಗಳಿಂದಾಗುವ ನೀತಿಯ
ವಿಷಯದಲ್ಲಿ—ಅದನ್ನು ಅನುಸರಿಸಿದವನೇ ಅದ
ರಿಂದ ಜೀವಿಸುವನೆಂದು ಮೋಶೆಯು ಬರೆಯುತ್ತಾನೆ.
6 ಆದರೆ ನಂಬಿಕೆಯಿಂದುಂಟಾಗುವ ನೀತಿಯು ಏನು
ಹೇಳುತ್ತದೆ? ಕ್ರಿಸ್ತನನ್ನು ಕೆಳಕ್ಕೆ ಕರೆದುಕೊಂಡು
ಬರುವದಕ್ಕೆ ಯಾರು ಮೇಲಣ ಲೋಕಕ್ಕೆ ಏರಿಹೋ
7 ದಾರು? ಎಂದಾಗಲಿ ಕ್ರಿಸ್ತನನ್ನು ಸತ್ತವರೊಳಗಿಂದ ಎಬ್ಬಿ
ಸಿಕೊಂಡು ಬರುವದಕ್ಕೆ ಯಾರು ಪ್ರೇತಲೋಕಕ್ಕೆ
ಇಳಿದುಹೋದಾರು? ಎಂದಾಗಲಿ ನಿನ್ನ ಮನಸ್ಸಿನಲ್ಲಿ
8 ಅಂದುಕೊಳ್ಳಬೇಡ. ದೇವರ ವಾಕ್ಯವು ನಿನ್ನ ಸಮೀಪ
ದಲ್ಲಿಯೇ ಇದೆ; ಅದು ನಿನ್ನ ಬಾಯಲ್ಲಿಯೂ ನಿನ್ನ
ಹೃದಯದಲ್ಲಿಯೂ ಇದೆ ಅನ್ನುತ್ತದೆ. ಆ ವಾಕ್ಯವು
ನಾವು ಸಾರುವ ನಂಬಿಕೆಯ ವಿಷಯವಾದ ವಾಕ್ಯವೇ.
9 ಅದೇನಂದರೆ ನೀನು ಯೇಸುವನ್ನೇ ಕರ್ತನೆಂದು
ಬಾಯಿಂದ ಅರಿಕೆಮಾಡಿಕೊಂಡು ದೇವರು ಆತನನ್ನು
ಸತ್ತವರೊಳಗಿಂದ ಎಬ್ಬಿಸಿದನೆಂದು ಹೃದಯದಿಂದ
ನಂಬಿದರೆ ನಿನಗೆ ರಕ್ಷಣೆಯಾಗುವದು ಎಂಬದೇ.
10 ಹೃದಯದಿಂದ ನಂಬುವದರ ಮೂಲಕ ನೀತಿಯು
ದೊರಕುತ್ತದೆ, ಬಾಯಿಂದ ಅರಿಕೆಮಾಡುವದರ ಮೂಲ
11 ಕ ರಕ್ಷಣೆಯಾಗುತ್ತದೆ. ಆತನ ಮೇಲೆ ನಂಬಿಕೆ
ಯಿಡುವ ಯಾವನಾದರೂ ಆಶಾಭಂಗಪಡುವದಿಲ್ಲ
12 ವೆಂದು ಶಾಸ್ತ್ರವು ಹೇಳುತ್ತದೆಯಷ್ಟೆ. ಈ ವಿಷಯದಲ್ಲಿ
ಯೆಹೂದ್ಯನಿಗೂ ಗ್ರೀಕನಿಗೂ ಹೆಚ್ಚುಕಡಿಮೆ ಏನೂ
ಇಲ್ಲ. ಎಲ್ಲರಿಗೂ ಒಬ್ಬನೇ ಕರ್ತ; ಆತನು ತನ್ನ
ನಾಮವನ್ನು ಹೇಳಿಕೊಳ್ಳುವವರಿಗೆ ಹೇರಳವಾಗಿ ಕೊ
13 ಡುವವನಾಗಿದ್ದಾನೆ. ಕರ್ತನ ನಾಮವನ್ನು ಹೇಳಿ
ಕೊಳ್ಳುವವರೆಲ್ಲರಿಗೆ ರಕ್ಷಣೆಯಾಗುವದೆಂದು ಬರೆದದೆ.

### ಇಸ್ರಾಯೇಲ್ಯರ ಅಪನಂಬಿಕೆಗೆ ಅವರಿಗೆ ಜ್ಞಾನವಿಲ್ಲವೆಂಬದು ಕಾರಣವಲ್ಲ.

14 ಆದರೆ ತಾವು ಯಾವನನ್ನು ನಂಬಲಿಲ್ಲವೋ ಆತನ
ನಾಮವನ್ನು ಹೇಳಿಕೊಳ್ಳುವದು ಹೇಗೆ? ಮತ್ತು
ಆತನ ಸುದ್ದಿ ಕೇಳದಿರುವಲ್ಲಿ ಆತನನ್ನು ನಂಬುವದು
ಹೇಗೆ? ಸಾರಿ ಹೇಳುವವನಿಲ್ಲದೆ ಕೇಳುವದು ಹೇಗೆ?
15 ಸಾರುವವರು ಕಳುಹಿಸಲ್ಪಡದೆ ಸಾರುವದೆಲ್ಲಿ? ಇದಕ್ಕೆ
ಸರಿಯಾಗಿ ಶುಭದ ಸುವಾರ್ತೆಯನ್ನು ಸಾರುವವರ
ಪಾದಗಳು ಎಷ್ಟೋ ಅಂದವಾಗಿವೆ ಎಂದು ಬರೆದದೆ.
16 ಆದರೂ ಆ ಶುಭವರ್ತಮಾನಕ್ಕೆ ಎಲ್ಲರೂ ಕಿವಿ
ಗೊಡಲಿಲ್ಲ. ಈ ವಿಷಯದಲ್ಲಿ ಯೆಶಾಯನು—ಕರ್ತ
ನೇ, ನಾವು ಸಾರಿದ ವಾರ್ತೆಯನ್ನು ಯಾರು ನಂಬಿದರು
17 ಎಂದು ನುಡಿಯುತ್ತಾನೆ. ಆದಕಾರಣ ಸಾರಿದ ವಾರ್ತೆ
ಯು ನಂಬಿಕೆಗೆ ಆಧಾರ, ಆ ವಾರ್ತೆಗೆ ಕ್ರಿಸ್ತನ
ವಾಕ್ಯವೇ ಆಧಾರ. ಆದರೂ ಅವರ ಕಿವಿಗೆ ಬೀಳಲಿ
ವೇನು ಎಂದು ಕೇಳುತ್ತೇನೆ. ಬಿದ್ದದ್ದು ನಿಶ್ಚಯ.

ಸಾರುವವರ ಧ್ವನಿಯು ಭೂಮಿಯಲ್ಲೆಲ
ಪ್ರಸರಿಸಿತು,
ಅವರ ನುಡಿಗಳು ಲೋಕದ ಕಟ್ಟಕಡೆಯ
ಗೂ ವ್ಯಾಪಿಸಿದವು.

ಆದರೆ ಇಸ್ರಾಯೇಲ್ಯರು ಆ ವಾರ್ತೆಯನ್ನು ತಿಳುಕೊ
ಳ್ಳಲಿಲ್ಲವೇನು ಎಂದು ಕೇಳುತ್ತೇನೆ. ಈ ವಿಷ
ದಲ್ಲಿ—

ಜನಾಂಗವಲ್ಲದವರ ಮೂಲಕ ನಿಮ್ಮ
ಹುರುಡುಹುಟ್ಟಿಸುವೆನು;
ವಿವೇಕವಿಲ್ಲದ ಜನರ ಮೂಲಕ ನಿಮ್ಮನ
ಸಿಟ್ಟಿಗೆಬ್ಬಿಸುವೆನು

ಎಂದು ಮೊದಲು ಮೋಶೆಯು ಹೇಳುತ್ತಾನೆ. ಇದ
ದೆ ಯೆಶಾಯನು ಧೈರ್ಯವಾಗಿ ಮಾತಾಡಿ—

ನನ್ನನ್ನು ಹುಡುಕದವರಿಗೂ ಸಿಕ್ಕಿದೆನು,
ನನ್ನ ವಿಷಯ ವಿಚಾರಮಾಡದವರಿಗೂ ಪ್ರ
ಕ್ಷನಾದೆನು

ಎಂದು ಹೇಳುತ್ತಾನೆ. ಆದರೆ ಅವನು ಇಸ್ರಾಯೇಲ್ಯ
ನ್ನು ಕುರಿತು—ನನ್ನ ಮಾತಿಗೆ ಅವಿಧೇಯರಾಗಿ
ದುರುಮಾತಾಡುವ ಜನರನ್ನು ನಾನು ದಿನವೆಲ್ಲಾ
ಚಾಚಿ ಕರೆದೆನೆಂದು ಹೇಳುತ್ತಾನೆ.

### ದೇವರು ಇಸ್ರಾಯೇಲ್ಯರಲ್ಲಿ ಎಲ್ಲರನ್ನೂ ತಳ್ಳಿಬಿಡಲಿಲ್ಲ.

ಹಾಗಾದರೆ ದೇವರು ತನ್ನ ಪ್ರಜೆಯನ್ನು ಬೇಡ
ವೆಂದು ತಳ್ಳಿಬಿಟ್ಟದ್ದುಂಟೇ ಎಂದು ಕೇಳುತ್ತೇನೆ. ಎಂದಿ
ಗೂ ಇಲ್ಲ. ನಾನು ಸಹ ಇಸ್ರಾಯೇಲ್ಯನು, ಅ
ಹಾಮನ ಸಂತತಿಯವನು, ಬೆನ್ಯಾಮೀನನ ಕುಲದ
ನು ಆಗಿದ್ದೇನಲ್ಲಾ. ದೇವರು ತಾನು ಮುಂದಾ
ತನ್ನ ಜನರಾಗುವದಕ್ಕೆ ಗೊತ್ತುಮಾಡಿಕೊಂಡಿದ್ದ
ಜೆಯನ್ನು ತಳ್ಳಿಬಿಡಲಿಲ್ಲ. ಎಲೀಯನ ಚರಿತ್ರೆಯ
ಶಾಸ್ತ್ರವು ಹೇಳುವ ಮಾತು ನಿಮಗೆ ತಿಳಿಯದೋ
ಅವನು ದೇವರ ಮುಂದೆ—ಕರ್ತನೇ, ಅವರು ನಿ
ಪ್ರವಾದಿಗಳನ್ನು ಸಂಹರಿಸಿದ್ದಾರೆ, ನಿನ್ನ ಯಜ್ಞವೇ
ಗಳನ್ನು ಒಡೆದುಹಾಕಿದ್ದಾರೆ, ನಾನೊಬ್ಬನೇ ಉಳಿದಿ
ನೆ, ನನ್ನ ಪ್ರಾಣವನ್ನೂ ತೆಗೆಯಬೇಕೆಂದಿದ್ದಾರೆ ಎಂ
ಇಸ್ರಾಯೇಲ್ಯರ ಮೇಲೆ ದೂರು ಹೇಳಿದ್ದಕ್ಕೆ ದೇವ
ಉತ್ತರವೇನಂದರೆ—ಬಾಳನ ವಿಗ್ರಹಕ್ಕೆ ಅಡ್ಡಬೀಳ
ಇರುವ ಏಳುಸಾವಿರ ಪುರುಷರನ್ನು ನನಗಾಗಿ ಉಳ
ಕೊಂಡಿದ್ದೇನೆ ಎಂಬದೇ. ಅದರಂತೆ ಈಗಿನ ಕಾಲದ
ಯೂ ದೇವರು ಕೃಪೆಯಿಂದ ಆದುಕೊಂಡವರಾ
ಕೆಲವರು ಉಳಿದಿದ್ದಾರೆ. ಕೃಪೆಯಿಂದ ಆದುಕೊ
ಡನು ಅಂದ ಮೇಲೆ ಪುಣ್ಯಕ್ರಿಯೆಗಳ ಕಾರಣದಿಂದ
ದುಕೊಳ್ಳಲಿಲ್ಲವಷ್ಟೆ; ಹಾಗಲ್ಲದ ಪಕ್ಷಕ್ಕೆ ಕೃಪೆಯು ನ
ಇನ್ನು ಕೃಪೆಯನ್ನುವದಕ್ಕಾಗುವದಿಲ್ಲ. ಇದರಿಂದ
ಯತಕ್ಕದ್ದೇನು? ಇಸ್ರಾಯೇಲ್ಯರು ಹುಡುಕಿದ
ಅವರೆಲ್ಲರಿಗೆ ದೊರೆಯಲಿಲ್ಲ, ಅವರೊಳಗೆ ಆಯಲ್ಪ

1) ಅಥವಾ, ಧರ್ಮಶಾಸ್ತ್ರದಿಂದಾಗುವ.

ವರಿಗೆ ದೊರೆಯಿತು. ಮಿಕ್ಕವರು ಮೊಂಡರಾದರು. ದೇವರು ಅವರಿಗೆ ಜಡಭಾವವನ್ನು ಅಂದರೆ ಕಾಣದ ಕಣ್ಣುಗಳನ್ನೂ ಕೇಳದ ಕಿವಿಗಳನ್ನೂ ಕೊಟ್ಟನು; ಈ ಭಾವವು ಈ ಹೊತ್ತಿನ ವರೆಗೂ ಹಾಗೆಯೇ ಅದೆ ಎಂದು ಬರೆದ ಪ್ರಕಾರ ಅವರಿಗೆ ಆಯಿತು. ಇದಲ್ಲದೆ—

ಅವರ ಊಟವೇ ಅವರಿಗೆ ಉರ್ಲೂ ಬೋನೂ
ಎಡತಡೆಯೂ ಶಿಕ್ಷೆಯೂ ಆಗಲಿ;
ಅವರ ಕಣ್ಣು ಮೊಬ್ಬಾಗಿ ಕಾಣದೆಹೋಗಲಿ;
ಅವರ ಬೆನ್ನು ಯಾವಾಗಲೂ ಬೊಗ್ಗಿಕೊಂಡಿರುವಂತೆ ಮಾಡು

ಎಂದು ದಾವೀದನು ಹೇಳುತ್ತಾನೆ.

### ದೇವರು ಇಸ್ರಾಯೇಲ್ಯರನ್ನು ತಳ್ಳಿದ್ದು ಶಾಶ್ವತವಲ್ಲ.

ಹಾಗಾದರೆ ಅವರು ಬಿದ್ದೇಹೋಗುವಂತೆ ಎಡವಿದರೇನು ಎಂದು ಕೇಳುತ್ತೇನೆ. ಹಾಗೆ ಎಂದಿಗೂ ಹೇಳಬಾರದು. ಅವರು ಬಿದ್ದೇಹೋದದ್ದರಿಂದ ಕ್ರಿಸ್ತನಿಂದ ಉಂಟಾಗುವ ರಕ್ಷಣೆಯು ಅನ್ಯಜನರಿಗೆ ಉಂಟಾಯಿತು. ಇದರಿಂದ ದೇವರು ಅವರಲ್ಲಿ ಹುರುಡು ಹುಟ್ಟಿಸುತ್ತಾನೆ. ಅವರು ಬಿದ್ದುಹೋದದ್ದು ಸರ್ವಲೋಕದ ಭಾಗ್ಯಕ್ಕೂ ಅವರು ಸೋತುಹೋದದ್ದು ಅನ್ಯಜನಗಳ ಭಾಗ್ಯಕ್ಕೂ ಮಾರ್ಗವಾಗಿರಲಾಗಿ ಅವರ ಪೂರ್ಣ ಪುನಃಸ್ಥಾಪನೆಯು ಎಷ್ಟೋ ಹೆಚ್ಚಾಗಿ ಭಾಗ್ಯಕ್ಕೆ ಕಾರಣವಾಗುವದು.

ಅನ್ಯಜನರಾಗಿರುವ ನಿಮ್ಮ ಸಂಗಡ ಮಾತಾಡುತ್ತೇನೆ. ನಾನು ಅನ್ಯಜನರಿಗೆ ಅಪೊಸ್ತಲನಾಗಿರಲಾಗಿ ನನ್ನ ಉದ್ಯೋಗವನ್ನು ಗಣ್ಯತೆಗೆ ತರುತ್ತೇನೆ. ಹೀಗೆ ಒಂದು ವೇಳೆ ಸ್ವಜನರಲ್ಲಿ ಹುರುಡನ್ನು ಹುಟ್ಟಿಸಿ ಅವರಲ್ಲಿ ಸಹ ಕೆಲವರನ್ನು ರಕ್ಷಣೆಯ ಮಾರ್ಗಕ್ಕೆ ತಂದೇನು. ಯಾಕಂದರೆ ಇಸ್ರಾಯೇಲ್ಯರನ್ನು ತಳ್ಳುವದರಿಂದ ಲೋಕವು ದೇವರ ಸಂಗಡ ಸಮಾಧಾನವಾಗುವದಕ್ಕೆ ಮಾರ್ಗವಾದ ಮೇಲೆ ಅವರನ್ನು ಸೇರಿಸಿಕೊಳ್ಳುವದರಿಂದ ಏನಾಗುವದು? ಸತ್ತವರು ಜೀವಿತರಾಗಿ ಎದ್ದುಬಂದಂತಾಗುವದಲ್ಲವೇ. ಕಣಕದಲ್ಲಿ ಮೊದಲನೆಯ ಉರುಳಿ ನೈವೇದ್ಯವಾದ ಮೇಲೆ ಕಣಕವೆಲ್ಲಾ ನೈವೇದ್ಯವಾದ ಹಾಗಾಯಿತು; ಬೇರು ದೇವರದಾಗಿದ್ದ ಮೇಲೆ ಕೊಂಬೆಗಳೂ ದೇವರವು. ಆದರೆ ಕೆಲವು ಕೊಂಬೆಗಳು ಮುರಿದುಹಾಕಲ್ಪಡಲು ಕಾಡೆಣ್ಣೇಮರದಂತಿರುವ ನೀನು ಅವುಗಳ ತಾವಿನಲ್ಲಿ ಕಸಿಕಟ್ಟಿಸಿಕೊಂಡವನಾಗಿ ಊರೆಣ್ಣೇಮರದ ರಸವತ್ತಾದ ಬೇರಿನಲ್ಲಿ ಪಾಲುಹೊಂದಿದರೂ ಆ ಕೊಂಬೆಗಳನ್ನು ಕಡೆಗಣಿಸಿ ನಿನ್ನನ್ನು ಹೆಚ್ಚಿಸಿಕೊಳ್ಳಬೇಡ; ಹೆಚ್ಚಿಸಿಕೊಂಡರೂ ಆ ಬೇರಿಗೆ ನೀನು ಆಧಾರವಲ್ಲ, ಅದು ನಿನಗೆ ಆಧಾರವಾಗಿದೆಯಷ್ಟೆ. ಈ ಮಾತಿಗೆ—ನಾನು ಕಸಿಕಟ್ಟಿಸಿಕೊಳ್ಳುವಂತೆ ಕೊಂಬೆಗಳು ಮುರಿದುಹಾಕಲ್ಪಟ್ಟವಲ್ಲಾ ಎಂದು ನೀನು ಒಂದು ವೇಳೆ ಹೇಳಬಹುದು. ನೀನು ಹೇಳುವದು ನಿಜ; ಅವರು ನಂಬದೆಹೋದದರಿಂದ ಮುರಿದುಹಾಕಲ್ಪಟ್ಟರು, ನೀನು ನಿಂತಿರುವದು ನಂಬಿಕೆಯಿಂದಲೇ. ಗರ್ವಪಡಬೇಡ, ಭಯದಿಂದಿರು; ದೇವರು ಹುಟ್ಟುಕೊಂಬೆ
ಗಳನ್ನು ಉಳಿಸದೆ ಇದ್ದ ಮೇಲೆ ನಿನ್ನನ್ನೂ ಉಳಿಸುವ
ದಿಲ್ಲ. ಆದದರಿಂದ ದೇವರ ದಯೆಯನ್ನೂ ಕಾಠಿಣ್ಯ 22
ವನ್ನೂ ನೋಡು; ಬಿದ್ದವರ ಕಡೆಗೆ ಕಾಠಿಣ್ಯ; ನಿನ್ನ ಕಡೆ
ಗೆ ನೀನು ದೇವರ ದಯೆಯನ್ನು ಆಶ್ರಯಿಸಿಕೊಂ
ಡೇ ಇದ್ದರೆ ಆತನ ದಯೆ; ಇಲ್ಲವಾದರೆ ನಿನ್ನನ್ನೂ
ಕಡಿದುಹಾಕುವನು. ಇಸ್ರಾಯೇಲ್ಯರು ಕೂಡ ಇನ್ನು 23
ಅಪನಂಬಿಕೆಯಲ್ಲಿ ನಿಲ್ಲದ ಪಕ್ಷಕ್ಕೆ ಕಸಿಕಟ್ಟಲ್ಪಡುವ
ರು; ದೇವರು ಅವರನ್ನು ತಿರಿಗಿ ಕಸಿಕಟ್ಟುವದಕ್ಕೆ ಸಮ
ರ್ಥನಾಗಿದ್ದಾನೆ. ನೀನು ಹುಟ್ಟು ಕಾಡುಮರದಿಂದ 24
ಕಡಿದು ತೆಗೆಯಲ್ಪಟ್ಟು ನಿನಗೆ ಸಂಬಂಧಪಡದ ಊರು
ಮರದಲ್ಲಿ ಕಸಿಕಟ್ಟಿಸಿಕೊಂಡವನಾದ ಮೇಲೆ ಅದರಲ್ಲಿ
ಹುಟ್ಟಿದ ಕೊಂಬೆಗಳಾಗಿರುವ ಅವರು ಸ್ವಂತ ಮರದಲ್ಲಿ
ಕಸಿಕಟ್ಟಲ್ಪಡುವದು ಎಷ್ಟೋ ಸಹಜವಾಗಿದೆಯಲ್ಲವೇ.

### ಸರ್ವರಿಗೂ ಕರುಣೆಯನ್ನು ತೋರಿಸಬೇಕೆಂಬದು ದೇವರ ಮುಖ್ಯೋದ್ದೇಶ.

ಸಹೋದರರೇ, ನಿಮ್ಮನ್ನು ನೀವೇ ಬುದ್ಧಿವಂತ 25
ರೆಂಬದಾಗಿ ಎಣಿಸಿಕೊಳ್ಳದಂತೆ ಇದುವರೆಗೆ ಗುಪ್ತವಾ
ಗಿದ್ದ ಒಂದು ಸಂಗತಿ ನಿಮಗೆ ತಿಳಿದಿರಬೇಕೆಂದು ಅಪೇ
ಕ್ಷಿಸುತ್ತೇನೆ; ಅದೇನಂದರೆ ಇಸ್ರಾಯೇಲ್ಯರಲ್ಲಿ ಒಂದು
ಪಾಲು ಜನರಿಗೆ ಉಂಟಾದ ಮೊಂಡತನವು ಯಾವಾಗ
ಲೂ ಇರದೆ ಅನ್ಯಜನಗಳ ಸಮುದಾಯವು ದೇವರ
ರಾಜ್ಯದಲ್ಲಿ ಸೇರುವ ತನಕ ಮಾತ್ರ ಇರುವದು; ಆ 26
ಮೇಲೆ ಇಸ್ರಾಯೇಲ್ ಜನವೆಲ್ಲಾ ರಕ್ಷಣೆಹೊಂದು
ವದು. ಇದಕ್ಕೆ ಆಧಾರವಾಗಿ ಶಾಸ್ತ್ರದಲ್ಲಿ—

ಬಿಡಿಸುವವನು ಚೀಯೋನಿನೊಳಗಿಂದ ಹೊರ
ಟು ಬಂದು
ಯಾಕೋಬನಲ್ಲಿರುವ ಭಕ್ತಿಹೀನತೆಯನ್ನು ನಿ
ವಾರಣೆಮಾಡುವನು.
ನಾನು ಅವರ ಸಂಗಡ ಮಾಡಿಕೊಂಡ ಈ ಒಡಂಬ 27
ಡಿಕೆಯು
ನಾನು ಅವರ ಪಾಪಗಳನ್ನು ಪರಿಹರಿಸುವಾಗ
ನೆರವೇರುವದು

ಎಂದು ಬರೆದದೆ. ಅವರು ಸುವಾರ್ತೆಯನ್ನು ಬೇಡ 28
ವೆಂದದ್ದರಿಂದ ದೇವರು ನಿಮಗೆ ಹಿತವನ್ನು ಉಂಟು
ಮಾಡಿ ಅವರನ್ನು ಶತ್ರುಗಳೆಂದೆಣಿಸಿದ್ದಾನೆ. ಆದರೂ
ಅವರು ತಾನು ಆರಿಸಿಕೊಂಡ ಅಬ್ರಹಾಮ ಇಸಾಕ
ಯಾಕೋಬರೆಂಬ ಪಿತೃಗಳ ವಂಶಸ್ಥರಾಗಿರುವದರಿಂದ
ಅವರನ್ನು ಪ್ರಿಯರೆಂದು ಎಣಿಸಿದ್ದಾನೆ. ದೇವರು ವರ 29
ಗಳನ್ನು ಅನುಗ್ರಹಿಸಿದ್ದಕ್ಕೂ ಜನರನ್ನು ಕರೆದದ್ದಕ್ಕೂ
ಪಶ್ಚಾತ್ತಾಪಪಡುವವನಲ್ಲ. ಯಾವ ಪ್ರಕಾರ ನೀವು 30
ಪೂರ್ವದಲ್ಲಿ ಅವಿಧೇಯರಾಗಿದ್ದರೂ ಈಗ ಅವರ
ಅವಿಧೇಯತೆಯ ದೆಸೆಯಿಂದ ಕರುಣೆಹೊಂದಿದ್ದೀರೋ
ಅದೇ ಪ್ರಕಾರವಾಗಿ ಅವರು ಈಗ ಅವಿಧೇಯರಾಗಿದ್ದ 31
ರೂ ನಿಮಗೆ ದೊರಕಿದ ಕರುಣೆಯನ್ನು ಹೊಂದುವರು.
ಯಾಕಂದರೆ ದೇವರು ಎಲ್ಲರಿಗೂ ಕರುಣೆಯನ್ನು ತೋ 32
ರಿಸಬೇಕೆಂಬ ಉದ್ದೇಶವುಳ್ಳವನಾಗಿದ್ದು ಎಲ್ಲರನ್ನೂ
ಅವಿಧೇಯತೆಯೆಂಬ ದುಸ್ಥಿತಿಯಲ್ಲಿ ಕಟ್ಟಿಹಾಕಿದ್ದಾನೆ.
ಆಹಾ, ದೇವರ ಐಶ್ವರ್ಯವೂ ಜ್ಞಾನವೂ ವಿವೇಕ 33

ವೂ ಎಷ್ಟೋ ಅಗಾಧ! ಆತನ ತೀರ್ಮಾನಗಳು ಪರಿ
ಶೋಧನೆಗೆ ಎಷ್ಟೋ ಅಗಮ್ಯ! ಆತನ ಮಾರ್ಗಗಳು
34 ಕಂಡುಹಿಡಿಯುವದಕ್ಕೆ ಎಷ್ಟೋ ಅಸಾಧ್ಯ! ಕರ್ತನ
ಮನಸ್ಸನ್ನು ತಿಳುಕೊಂಡವನಾರು? ಆತನಿಗೆ ಆಲೋ
35 ಚನಾ ಕರ್ತನು ಯಾರು? ಮೊದಲು ಆತ
ನಿಗೆ ಕೊಟ್ಟು ಪ್ರತಿಫಲವನ್ನು ತೆಗೆದುಕೊಳ್ಳುವವನು
36 ಯಾರು? ಸಮಸ್ತವು ಆತನಿಂದ ಉತ್ಪತ್ತಿಯಾಗಿ
ಆತನಿಂದ ನಡೆಯುತ್ತಾ ಆತನಿಗಾಗಿ ಇರುತ್ತದೆ; ಆತ
ನಿಗೇ ಸದಾಕಾಲವೂ ಸ್ತೋತ್ರ. ಆಮೆನ್.

### ದೇವಜನರು ನಡಕೊಳ್ಳಬೇಕಾದ ರೀತಿ.

12 ಆದದರಿಂದ ಸಹೋದರರೇ, ದೇವರ ಕನಿಕರವನ್ನು
ನಿಮ್ಮ ನೆನಪಿಗೆ ತಂದು ನಿಮ್ಮನ್ನು ಬೇಡಿಕೊಳ್ಳುವದೇ
ನಂದರೆ—ನೀವು ನಿಮ್ಮ ನಿಮ್ಮ ದೇಹಗಳನ್ನು ದೇವ
ರಿಗೆ [1]ಮೀಸಲಾಗಿಯೂ ಮೆಚ್ಚಿಗೆಯಾಗಿಯೂ ಇರುವ
ಸಜೀವಯಜ್ಞವಾಗಿ ಅರ್ಪಿಸಿರಿ; ಇದೇ ನಿಮ್ಮ ವಿವೇಕ
2 ಪೂರ್ವಕವಾದ ಆರಾಧನೆಯು. ಇಹಲೋಕದ ನಡ
ವಳಿಕೆಯನ್ನು ಅನುಸರಿಸದೆ ನೂತನಮನಸ್ಸನ್ನು
ಹೊಂದಿಕೊಂಡು ಪರಲೋಕಭಾವದವರಾಗಿರಿ. ಹೀಗಾ
ದರೆ ದೇವರ ಚಿತ್ತಕ್ಕನುಸಾರವಾದದ್ದು ಅಂದರೆ
ಉತ್ತಮವಾದದ್ದೂ ಮೆಚ್ಚಿಕೆಯಾದದ್ದೂ ದೋಷವಿಲ್ಲ
ದ್ದೂ ಯಾವ ಯಾವದೆಂದು ವಿವೇಚಿಸಿ ತಿಳುಕೊಳ್ಳು
ವಿರಿ.
3 ದೇವರು ನನಗೆ ಕೃಪೆಮಾಡಿದ ಸೇವೆಯನ್ನು ನಡಿ
ಸಿ ನಿಮ್ಮಲ್ಲಿ ಒಬ್ಬೊಬ್ಬನಿಗೂ ಹೇಳುವದೇನಂದರೆ
ಯಾರೂ ತನ್ನ ಯೋಗ್ಯತೆಗೆ ಮೀರಿ ತನ್ನನ್ನು ಭಾವಿಸಿ
ಕೊಳ್ಳದೆ ದೇವರು ಒಬ್ಬೊಬ್ಬನಿಗೆ ಎಂಥೆಂಥ ವಿಶ್ವಾಸ
ಬಲವನ್ನು ಕೊಟ್ಟನೋ ಅದಕ್ಕೆ ತಕ್ಕ ಹಾಗೆ ನ್ಯಾಯ
ವಾದ ಅಭಿಪ್ರಾಯದಿಂದ ತನ್ನನ್ನು ಭಾವಿಸಿಕೊಳ್ಳ
4 ಬೇಕು. ಯಾಕಂದರೆ ನಮಗೆ ಒಂದೇ ದೇಹದಲ್ಲಿ
ಬಹಳ ಅಂಗಗಳಿರಲಾಗಿ ಆ ಎಲ್ಲಾ ಅಂಗಗಳಿಗೆ ಹೇಗೆ
5 ಒಂದೇ ಕೆಲಸ ಇರುವದಿಲ್ಲವೋ ಹಾಗೆಯೇ ನಾ
ವೆಲ್ಲರು ಒಟ್ಟಾಗಿ ಕ್ರಿಸ್ತನಲ್ಲಿ ಒಂದೇ ದೇಹವಾ
ಗಿದ್ದು ಒಬ್ಬೊಬ್ಬರಾಗಿ ಪರಸ್ಪರ ಅಂಗಗಳಾಗಿದ್ದೇವೆ.
6 ದೇವರು ನಮಗೆ ಕೃಪೆಮಾಡಿದ ಪ್ರಕಾರ ನಾವು
ಬೇರೆ ಬೇರೆ ವರಗಳನ್ನು ಹೊಂದಿದ್ದೇವೆ. ಹೊಂದಿದ
ವರವು ಪ್ರವಾದನೆಯ ರೂಪವಾಗಿದ್ದರೆ ನಮ್ಮ ವಿಶ್ವಾಸ
7 ವರಕ್ಕೆ ತಕ್ಕ ಹಾಗೆ ಪ್ರವಾದನೆ ಹೇಳೋಣ. ಅದು
ಸಭಾಸೇವೆಯ ರೂಪವಾಗಿದ್ದರೆ ಸಭಾಸೇವೆಯನ್ನು
8 ಮಾಡುತ್ತಾ ಇರೋಣ. ಬೋಧಿಸುವವನು ಬೋಧಿಸು
ವದರಲ್ಲಿಯೂ ಬುದ್ಧಿಹೇಳುವವನು ಬುದ್ಧಿಹೇಳುವದ
ರಲ್ಲಿಯೂ ನಿರತನಾಗಿರಲಿ. ದಾನಕೊಡುವವನು
ಯಥಾರ್ಥಮನಸ್ಸಿನಿಂದ ಕೊಡಲಿ. ಹಿರೀತನ ನಡಿಸು
ವವನು ಆಸಕ್ತಿಯಿಂದ ನಡಿಸಲಿ. ಕಷ್ಟದಲ್ಲಿರುವವರಿಗೆ
ಉಪಕಾರಮಾಡುವವನು ಸಂತೋಷವಾಗಿ ಮಾಡಲಿ.
9 ನಿಮ್ಮ ಪ್ರೀತಿಯು ನಿಷ್ಕಪಟವಾಗಿರಲಿ. ಕೆಟ್ಟ
ತನಕ್ಕೆ ಹೇಸಿಕೊಂಡು ಒಳ್ಳೇದನ್ನು ಬಿಗಿಯಾಗಿ ಹಿಡಿ
ಕೊಳ್ಳಿರಿ. ಕ್ರೈಸ್ತ ಸಹೋದರರು ಅಣ್ಣತಮ್ಮಂದಿರೆಂ
ಒಬ್ಬರನ್ನೊಬ್ಬರು ಪ್ರೀತಿಸಿರಿ. ಮಾನಮರ್ಯಾ
ಯನ್ನು ತೋರಿಸುವದರಲ್ಲಿ ಒಬ್ಬರಿಗಿಂತ ಒಬ್ಬ
ಮುಂದಾಗಿರಿ. ಜಾಗ್ರತೆ ಬೇಕಾದಲ್ಲಿ ಆಲಸ್ಯವಾಗಿರ
ಆಸಕ್ತಚಿತ್ತರಾಗಿದ್ದು ಕರ್ತನ ಸೇವೆ ಮಾಡುವ
ರಾಗಿರ್ರಿ. ಕ್ರೈಸ್ತರು ನಿರೀಕ್ಷಿಸುವ ಮಹಾಪದ
ಯನ್ನು ನೆನಸಿ ಉಲ್ಲಾಸವಾಗಿರ್ರಿ. ಉಪದ್ರವದ
ಸೈರಣೆಯುಳ್ಳವರಾಗಿರ್ರಿ. ಬೇಸರಗೊಳ್ಳದೆ ಪ್ರಾರ್ಥನ
ಮಾಡಿರಿ. ದೇವಜನರಿಗೆ ಕೊರತೆಬಂದಾಗ ಸಹಾಂ
ಮಾಡಿರಿ. ಅತಿಥಿಸತ್ಕಾರವನ್ನು ಅಭ್ಯಾಸಿಸಿರಿ. ನಿವ
ನ್ನು ಹಿಂಸಿಸುವವರಿಗೆ ಆಶೀರ್ವಾದಮಾಡಿರಿ; ಶಪಿಸ
ಆಶೀರ್ವದಿಸಿರಿ. ಸಂತೋಷಪಡುವವರ ಸಂಗ
ಸಂತೋಷಪಡಿರಿ, ಅಳುವವರ ಸಂಗಡ ಅಳಿರಿ. ನಿವ
ನಿಮ್ಮೊಳಗೆ ಏಕಮನಸ್ಸುಳ್ಳವರಾಗಿರ್ರಿ. ದೊಡ್ಡ
ಕೆಯ ಮೇಲೆ ಮನಸ್ಸಿಡದೆ ದೀನರ ಸಂಗಡ ಬಳ
ಯಾಗಿರ್ರಿ. ನಿಮ್ಮನ್ನು ನೀವೇ ಬುದ್ಧಿವಂತರೆಂ
ಎಣಿಸಿಕೊಳ್ಳಬೇಡಿರಿ.
ಯಾರಿಗೂ ಅಪಕಾರಕ್ಕೆ ಅಪಕಾರವನ್ನು ಮಾ
ಬೇಡಿರಿ. ಎಲ್ಲರ ದೃಷ್ಟಿಯಲ್ಲಿ ಯಾವ
ಗೌರವವಾದದ್ದೋ ಅದನ್ನೇ ಯೋಚಿಸಿ ಸಾಧಿಸಿ
ಸಾಧ್ಯವಾದರೆ ನಿಮ್ಮಿಂದಾಗುವ ಮಟ್ಟಿಗೆ ಎಲ್ಲ
ಸಂಗಡ ಸಮಾಧಾನದಿಂದಿರಿ. ಪ್ರಿಯರೇ, ನೀ
ಮುಯ್ಯಿಗೆ ಮುಯ್ಯಿ ತೀರಿಸದೆ ಶಿಕ್ಷಿಸುವದನ್ನು ದೇ
ರಿಗೆ ಬಿಡಿರಿ. ಯಾಕಂದರೆ ಮುಯ್ಯಿಗೆ ಮುಯಿ
ತೀರಿಸುವದು ನನ್ನ ಕೆಲಸ, ನಾನೇ ಪ್ರತಿಫಲವನ
ಕೊಡುವೆನು ಎಂದು ಕರ್ತನು ಹೇಳುತ್ತಾನೆಂಬದಾ
ಬರೆದದೆ. ಹಾಗಾದರೆ ನಿನ್ನ ವೈರಿ ಹಸಿದಿದ್ದರೆ ಅ
ನಿಗೆ ಊಟಕ್ಕೆ ಬಡಿಸು; ಬಾಯಾರಿದ್ದರೆ ಕುಡಿಯು
ದಕ್ಕೆ ಕೊಡು. ಹೀಗೆ ಮಾಡುವದರಿಂದ ಅವನ ತಲೆಂ
ಮೇಲೆ ಕೆಂಡಗಳನ್ನು ಕೂಡಿಸಿಟ್ಟಂತಾಗುವದು. ಕೆ
ತನಕ್ಕೆ ಸೋತುಹೋಗದೆ ಒಳ್ಳೇತನದಿಂದ ಕೆಟ್ಟತ
ವನ್ನು ಸೋಲಿಸು.

### ಅಧಿಕಾರಸ್ಥರಿಗೆ ಅಧೀನರಾಗಿರಬೇಕೆಂದು ಬೋಧನೆ.

ಪ್ರತಿ ಮನುಷ್ಯನು ತನ್ನ ಮೇಲಿರುವ ಅಧಿ
ಕಾರಿಗಳಿಗೆ ಅಧೀನನಾಗಿರಲಿ; ಯಾಕಂದರೆ ದೇವ
ರಿಂದ ಹೊರತು ಒಬ್ಬರಿಗೂ ಅಧಿಕಾರವಿರುವದಿಲ್ಲ
ಇರುವ ಅಧಿಕಾರಿಗಳು ದೇವರಿಂದ ನೇಮಿಸಲ್ಪಟ್ಟವರ
ಆದದರಿಂದ ಅಧಿಕಾರಕ್ಕೆ ಎದುರುಬೀಳುವವನು ದೇ
ನೇಮಕವನ್ನು ಎದುರಿಸುತ್ತಾನೆ; ಎದುರಿಸುವವ
ಶಿಕ್ಷೆಗೊಳಗಾಗುವರು. ಕೆಟ್ಟಕೆಲಸ ಮಾಡುವವನಿ
ಅಧಿಪತಿಯಿಂದ ಭಯವಿರುವದೇ ಹೊರತು ಒಳ್ಳೇ ಕೆಲ
ಮಾಡುವವನಿಗೆ ಭಯವೇನೂ ಇಲ್ಲ. ನೀನು ಅಧಿಕ
ರಿಗೆ ಭಯಪಡದೆ ಇರಬೇಕೆಂದು ಅಪೇಕ್ಷಿಸುತ್ತೀಯೊ
ಒಳ್ಳೇದನ್ನು ಮಾಡು; ಆಗ ಆ ಅಧಿಕಾರಿಯಿಂದ

1) ಅಥವಾ, ಪವಿತ್ರವಾಗಿಯೂ.

ನಿನಗೆ ಹೊಗಳಿಕೆಯುಂಟಾಗುವದು; ಅವನು ನಿನ್ನ ಹಿತಕ್ಕೋಸ್ಕರ ದೇವರ ಸೇವಕನಾಗಿದ್ದಾನಲ್ಲಾ. ಆದರೆ ನೀನು ಕೆಟ್ಟದ್ದನ್ನು ಮಾಡಿದರೆ ಭಯಪಡಬೇಕು; ಅವನು ಸುಮ್ಮನೆ ಕೈಯಲ್ಲಿ ಕತ್ತಿಯನ್ನು ಹಿಡಿದಿಲ್ಲ; ಅವನು ದೇವರ ಸೇವಕನಾಗಿದ್ದು ಕೆಟ್ಟದ್ದನ್ನು ನಡಿಸುವವನಿಗೆ ದೇವರ ದಂಡನೆಯನ್ನು ವಿಧಿಸುತ್ತಾನೆ. ಆದಕಾರಣ ದಂಡನೆಯಾದೀತೆಂದು ಮಾತ್ರವಲ್ಲದೆ ಮನಸ್ಸಿಗೆ ನ್ಯಾಯವಾಗಿ ತೋರುವದರಿಂದಲೂ ಅವನಿಗೆ ಅಧೀನನಾಗುವದು ಅವಶ್ಯ. ಈ ಕಾರಣದಿಂದಲೇ ನೀವು ಕಂದಾಯವನ್ನು ಕೂಡ ಕೊಡುತ್ತೀರಿ. ಯಾಕಂದರೆ ಕಂದಾಯ ಎತ್ತುವವರು ದೇವರ ಉದ್ಯೋಗಿಗಳಾಗಿದ್ದು ಆ ಕೆಲಸದಲ್ಲಿಯೇ ನಿರತರಾಗಿರುತ್ತಾರೆ. ಅವರವರಿಗೆ ಸಲ್ಲಿಸತಕ್ಕದ್ದನ್ನು ಸಲ್ಲಿಸಿರಿ; ಯಾರಿಗೆ ಕಂದಾಯವೋ ಅವರಿಗೆ ಕಂದಾಯವನ್ನು, ಯಾರಿಗೆ ಸುಂಕವೋ ಅವರಿಗೆ ಸುಂಕವನ್ನು, ಯಾರಿಗೆ ಭಯವೋ ಅವರಿಗೆ ಭಯವನ್ನು, ಯಾರಿಗೆ ಮರ್ಯಾದೆಯೋ ಅವರಿಗೆ ಮರ್ಯಾದೆಯನ್ನು ಸಲ್ಲಿಸಿರಿ.

ಧರ್ಮಶಾಸ್ತ್ರವೆಲ್ಲಾ ಪ್ರೀತಿಯಿಂದಲೇ ನೆರವೇರುವದು ಎಂಬ ಬೋಧನೆ.

ಒಬ್ಬರನ್ನೊಬ್ಬರು ಪ್ರೀತಿಸಬೇಕೆಂಬ ಋಣವೇ ಹೊರತು ಬೇರೆ ಯಾವ ಸಾಲವೂ ನಿಮಗೆ ಇರಬಾರದು. ಮತ್ತೊಬ್ಬರನ್ನು ಪ್ರೀತಿಸುವವನು ಧರ್ಮಪ್ರಮಾಣವನ್ನೆಲ್ಲಾ ನೆರವೇರಿಸಿದ್ದಾನೆ. ಹೇಗಂದರೆ ವ್ಯಭಿಚಾರಮಾಡಬಾರದು, ನರಹತ್ಯಮಾಡಬಾರದು, ಕದಿಯಬಾರದು, ಪರರ ಸೊತ್ತನ್ನು ಆಶಿಸಬಾರದು ಈ ಮೊದಲಾದ ಎಲ್ಲಾ ಕಟ್ಟಳೆಗಳು—ನಿನ್ನ ನೆರೆಯವನನ್ನು ನಿನ್ನಂತೆಯೇ ಪ್ರೀತಿಸಬೇಕು ಎಂಬ ಒಂದೇ ಮಾತಿನಲ್ಲಿ ಅಡಕವಾಗಿವೆ. ಪ್ರೀತಿಯು ಮತ್ತೊಬ್ಬರಿಗೆ ಯಾವ ಕೇಡನ್ನೂ ಮಾಡುವದಿಲ್ಲ. ಆದಕಾರಣ ಪ್ರೀತಿಯಿಂದಲೇ ಧರ್ಮಪ್ರಮಾಣವು ನೆರವೇರುತ್ತದೆ.

ಸಂಪೂರ್ಣ ರಕ್ಷಣೋದಯ ಹತ್ತಿರಬಂದದರಿಂದ ನಾವು ಸಜ್ಜನರಾಗಿ ನಡೆದುಕೊಳ್ಳಬೇಕೆಂಬುವ ಬೋಧನೆ.

ಈಗಿನ ಕಾಲವು ಎಚ್ಚರವಾಗತಕ್ಕ ಕಾಲವೆಂದು ಅರಿತು ಇದನ್ನೆಲ್ಲಾ ಮಾಡಿರಿ. ನಾವು ಕ್ರಿಸ್ತನನ್ನು ಮೊದಲು ನಂಬಿದ ಕಾಲದಲ್ಲಿ ಇದ್ದದ್ದಕ್ಕಿಂತ ಈಗ ನಮ್ಮ ವಿಮೋಚನೆಯು ಹತ್ತಿರವಾಯಿತು. ಇರುಳು ಬಹಳ ಮಟ್ಟಿಗೆ ಕಳೆಯಿತು; ಹಗಲು ಸಮೀಪವಾಯಿತು. ಕತ್ತಲೆಗೆ ಅನುಗುಣವಾದ ಕೃತ್ಯಗಳನ್ನು ಬಿಟ್ಟು, ಬೆಳಕಿಗೆ ಅನುಗುಣವಾದ ಆಯುಧಗಳನ್ನು ಧರಿಸಿಕೊಳ್ಳೋಣ. ದುಂದೌತಣ ಕುಡಿಕತನಗಳಲ್ಲಿಯಾಗಲಿ ಕಾಮವಿಲಾಸ ನಿರ್ಲಜ್ಜಾಕೃತ್ಯಗಳಲ್ಲಿಯಾಗಲಿ ಜಗಳಹೊಟ್ಟೇಕಿಚ್ಚುಗಳಲ್ಲಿಯಾಗಲಿ ಕಾಲಕಳೆಯದೆ ಹಗಲುಹೊತ್ತಿಗೆ ತಕ್ಕಹಾಗೆ ಮಾನಸ್ಥರಾಗಿ ನಡೆದುಕೊಳ್ಳೋಣ. ದೇಹದ ಆಶೆಗಳನ್ನು ಪೂರೈಸುವದಕ್ಕಾಗಿ ಚಿಂತಿಸದೆ ಕರ್ತನಾದ ಯೇಸು ಕ್ರಿಸ್ತನನ್ನು ಧರಿಸಿಕೊಳ್ಳಿರಿ.

ಸಂದೇಹಾಸ್ಪದವಾದ ಕಾರ್ಯಗಳ ವಿಷಯದಲ್ಲಿ ನಾನಾ ಅಭಿಪ್ರಾಯಗಳು ಹುಟ್ಟಿದಾಗ ಪ್ರತಿಯೊಬ್ಬನು ತನ್ನ ತನ್ನ ಇಷ್ಟದಂತೆ ನಡೆಯದೆ ಎಲ್ಲರಿಗೂ ಭಕ್ತಿವೃದ್ಧಿಯಾಗುವಂತೆ ನಡೆಯಬೇಕೆಂಬುವ ಬೋಧನೆ.

(೧ ಕೊರಿಂಥ 8—10.)

**14** ನಂಬಿಕೆಯಲ್ಲಿ ದೃಢವಿಲ್ಲದವರನ್ನೂ ಸೇರಿಸಿ
ಕೊಳ್ಳಿರಿ, ಆದರೆ ಸಂದೇಹಾಸ್ಪದವಾದ ಕಾರ್ಯಗ
ಳನ್ನು ಅವರ ಮುಂದೆ ಚರ್ಚಿಸಬೇಡಿರಿ. ಒಬ್ಬನು 2
ಯಾವದನ್ನಾದರೂ ತಿನ್ನಬಹುದೆಂದು ನಂಬುತ್ತಾನೆ;
ನಂಬಿಕೆಯಲ್ಲಿ ದೃಢವಿಲ್ಲದವನು ಕಾಯಿಪಲ್ಯಗಳನ್ನು
ಮಾತ್ರ ತಿನ್ನುತ್ತಾನೆ. ತಿನ್ನುವವನು ತಿನ್ನದವನನ್ನು 3
ಹೀನೈಸಬಾರದು; ತಿನ್ನದವನು ತಿನ್ನುವವನನ್ನು
ದೋಷಿಯೆಂದು ಎಣಿಸಬಾರದು. ದೇವರು ಇಬ್ಬರ
ನ್ನೂ ಸೇರಿಸಿಕೊಂಡಿದ್ದಾನಲ್ಲಾ. ಮತ್ತೊಬ್ಬನ ಸೇವ 4
ಕನ ವಿಷಯವಾಗಿ ತೀರ್ಪುಮಾಡುವದಕ್ಕೆ ನೀನು
ಯಾರು? ಅವನು ನಿರ್ದೋಷಿಯಾಗಿ ನಿಂತರೂ ದೋಷಿ
ಯಾಗಿ ಬಿದ್ದರೂ ಅದು ಅವನ ಯಜಮಾನನಿಗೇ ಸೇರಿ
ದ್ದು. ಅವನು ನಿರ್ದೋಷಿಯಾಗಿ ನಿಲ್ಲಿಸಲ್ಪಡುವನು;
ಅವನನ್ನು ನಿಲ್ಲಿಸುವದಕ್ಕೆ ಕರ್ತನು ಶಕ್ತನಾಗಿದ್ದಾನೆ.
ಒಬ್ಬನು ಒಂದು ದಿನಕ್ಕಿಂತ ಮತ್ತೊಂದು ದಿನವನ್ನು 5
ವಿಶೇಷವೆಂದೆಣಿಸುತ್ತಾನೆ; ಮತ್ತೊಬ್ಬನು ಎಲ್ಲಾ ದಿವಸ
ಗಳನ್ನೂ ವಿಶೇಷವೆಂದೆಣಿಸುತ್ತಾನೆ; ಪ್ರತಿಯೊಬ್ಬನು
ತನ್ನ ತನ್ನ ಮನಸ್ಸಿನಲ್ಲಿ ನಿಶ್ಚಯಿಸಿಕೊಂಡಿರಬೇಕು.
ದಿನವನ್ನು ಗಣ್ಯಮಾಡುವವನು ಕರ್ತನಿಗಾಗಿ ಅದನ್ನು 6
ಗಣ್ಯಮಾಡುತ್ತಾನೆ. ತಿನ್ನುವವನು ಕರ್ತನಿಗಾಗಿ ತಿನ್ನು
ತ್ತಾನೆ; ಅವನು ದೇವಸ್ತೋತ್ರ ಮಾಡುತ್ತಾನಲ್ಲಾ.
ತಿನ್ನದವನು ಸಹ ಕರ್ತನಿಗಾಗಿಯೇ ತಿನ್ನದೆ ದೇವ
ಸ್ತೋತ್ರ ಮಾಡುತ್ತಾನೆ. ನಮ್ಮಲ್ಲಿ ಒಬ್ಬನಾದರೂ 7
ತನಗಾಗಿ ಬದುಕುವದೂ ಇಲ್ಲ, ತನಗಾಗಿ ಸಾಯು
ವದೂ ಇಲ್ಲ. ನಾವು ಬದುಕಿದರೆ ಕರ್ತನಿಗಾಗಿ ಬದು 8
ಕುತ್ತೇವೆ; ಸತ್ತರೆ ಕರ್ತನಿಗಾಗಿ ಸಾಯುತ್ತೇವೆ;
ಬದುಕಿದರೂ ಸತ್ತರೂ ನಾವು ಕರ್ತನವರೇ. ಯಾ 9
ಕಂದರೆ ಸತ್ತವರಿಗೂ ಜೀವಿಸುವವರಿಗೂ ಒಡೆಯ
ನಾಗಿರಬೇಕೆಂತಲೇ ಕ್ರಿಸ್ತನು ಸತ್ತು ಜೀವಿತನಾದನು.
ತಿನ್ನದವನೇ, ನಿನ್ನ ಸಹೋದರನ ವಿಷಯವಾಗಿ 10
ನೀನು ತೀರ್ಪುಮಾಡುವದೇನು? ತಿನ್ನುವವನೇ,
ನಿನ್ನ ಸಹೋದರನನ್ನು ನೀನು ಹೀನೈಸುವದೇನು?
ನಾವೆಲ್ಲರೂ ದೇವರ ನ್ಯಾಯಾಸನದ ಮುಂದೆ
ನಿಲ್ಲಬೇಕಲ್ಲಾ.
ನನ್ನ ಜೀವದಾಣೆ, ಎಲ್ಲರೂ ನನಗೆ ಅಡ್ಡ 11
ಬೀಳುವರು,
ಎಲ್ಲರೂ ನನ್ನನ್ನು ದೇವರೆಂದು ಪ್ರತಿಜ್ಞೆಮಾಡು
ವರು
ಎಂಬದಾಗಿ ಕರ್ತನು ಹೇಳಿದ್ದಾನೆ
ಎಂದು ಬರೆದದೆ. ಹೀಗಿರಲಾಗಿ ನಮ್ಮಲ್ಲಿ ಪ್ರತಿ 12
ಯೊಬ್ಬನು ತನ್ನ ತನ್ನ ವಿಷಯವಾಗಿ ದೇವರ ಮುಂದೆ
ಉತ್ತರಕೊಡಬೇಕು.
ಆದಕಾರಣ ಇನ್ನು ಮೇಲೆ ಒಬ್ಬರ ವಿಷಯದ 13

ಲ್ಲೊಬ್ಬರು ತೀರ್ಪುಮಾಡದೆ ಇರೋಣ. ಅದಕ್ಕೆ ಬದ
ಲಾಗಿ ಸಹೋದರನ ಎದುರಿಗೆ ಅಡ್ಡಿಯನ್ನಾಗಲಿ ಎಡ
ತಡೆಯನ್ನಾಗಲಿ ಹಾಕಬಾರದೆಂದು ತೀರ್ಮಾನಿಸಿಕೊ
14 ಳ್ಳಿರಿ. ಯಾವ ಪದಾರ್ಥವೂ ಸ್ವತಃ ಅಶುದ್ಧವಾದ
ದ್ದಲ್ಲವೆಂದು ಬಲ್ಲೆನು, ಮತ್ತು ಕರ್ತನಾದ ಯೇಸು
ವಿನಲ್ಲಿದ್ದುಕೊಂಡು ದೃಢವಾಗಿ ನಂಬಿದ್ದೇನೆ; ಆದರೆ
ಯಾವದಾದರೂ ಒಂದು ಪದಾರ್ಥವನ್ನು ಅಶುದ್ಧ
ವೆಂದು ಒಬ್ಬನು ಭಾವಿಸಿದರೆ ಅವನಿಗೆ ಅದು ಅಶುದ್ಧ.
15 ನೀನು ತೆಗೆದುಕೊಳ್ಳುವ ಆಹಾರದಿಂದ ನಿನ್ನ
ಸಹೋದರನ ಮನಸ್ಸಿಗೆ ನೋವಾದರೆ ನೀನು ಪ್ರೀತಿಗೆ
ತಕ್ಕಂತೆ ಇನ್ನು ನಡೆಯುವವನಲ್ಲ. ಯಾವನಿಗೋಸ್ಕರ
ಕ್ರಿಸ್ತನು ಪ್ರಾಣಕೊಟ್ಟನೋ ಅವನನ್ನು ನಿನಗೆ ಇಷ್ಟ
16 ವಾದ ಆಹಾರದ ನಿಮಿತ್ತ ಕೆಡಿಸಬಾರದು. ನಿಮಗಿ
17 ರುವ ಮೇಲು ದೂಷಣೆಗೆ ಆಸ್ಪದವಾಗಬಾರದು. ಯಾ
ಕಂದರೆ ತಿನ್ನುವದೂ ಕುಡಿಯುವದೂ ದೇವರ ರಾಜ್ಯ
ವಲ್ಲ; ನೀತಿಯೂ ಸಮಾಧಾನವೂ ಪವಿತ್ರಾತ್ಮ
18 ನಿಂದಾಗುವ ಆನಂದವೂ ಆಗಿದೆ. ಈ ಪ್ರಕಾರವಾಗಿ
ಕ್ರಿಸ್ತನ ಸೇವೆಯನ್ನು ಮಾಡುವವನು ದೇವರಿಗೆ ಮೆಚ್ಚಿ
ಕೆಯಾದವನಾಗಿಯೂ ಮನುಷ್ಯರಿಗೆ ಸಂಭಾವಿತನಾಗಿ
19 ಯೂ ಇರುವನಷ್ಟೆ. ಆದದರಿಂದ ನಾವು ಸಮಾ
ಧಾನಕ್ಕೂ ಪರಸ್ಪರ ಭಕ್ತಿವೃದ್ಧಿಗೂ ಅನುಕೂಲವಾಗಿ
20 ರುವವುಗಳನ್ನು ಸಾಧಿಸಿಕೊಳ್ಳೋಣ. ದೇವರು
ಕಟ್ಟಿದ್ದನ್ನು ನೀನು ಆಹಾರದ ನಿಮಿತ್ತವಾಗಿ ಕೆಡವ
ಬೇಡ. ಎಲ್ಲಾ ಪದಾರ್ಥಗಳೂ ಶುದ್ಧವೇ; ಆದರೆ
ತಿಂದು ಮತ್ತೊಬ್ಬರಿಗೆ ವಿಘ್ನವನ್ನುಂಟುಮಾಡುವದು
21 ಕೆಟ್ಟದ್ದು. ಮಾಂಸ ತಿನ್ನುವದನ್ನಾಗಲಿ ದ್ರಾಕ್ಷಾರಸ
ಕುಡಿಯುವದನ್ನಾಗಲಿ ನಿನ್ನ ಸಹೋದರನಿಗೆ ಅಡ್ಡಿಯ
ನ್ನುಂಟುಮಾಡುವ ಬೇರೆ ಯಾವದನ್ನಾಗಲಿ ಬಿಟ್ಟುಬಿಡು
22 ವದೇ ಒಳ್ಳೇದು. ನಿನಗಿರುವ ನಂಬಿಕೆಯು ದೇವ
ರಿಗೆ ಮಾತ್ರ ಗೋಚರವಾಗಿ ನಿನ್ನ ಮಟ್ಟಿಗೇ ಇರಲಿ.
ತಾನು ಒಪ್ಪಿದ ಕೆಲಸದ ವಿಷಯದಲ್ಲಿ ಇದು ಸರಿಯೋ
ಸರಿಯಲ್ಲವೋ ಎಂದು ಸಂಶಯಪಡದವನೇ ಧನ್ಯನು.
23 ಸಂಶಯಪಟ್ಟು ಉಣ್ಣುವವನು ಸಂಶಯದಿಂದ ಉಣ್ಣುವ
ಕಾರಣ ದೋಷಿಯಾಗಿದ್ದಾನೆ. 1)ಯಾವದಕ್ಕೆ ನಂಬಿ
ಕೆಯು ಆಧಾರವಿಲ್ಲವೋ ಅದು ಪಾಪ.

**15** ದೃಢವಾದ ನಂಬಿಕೆಯುಳ್ಳ ನಾವು ನಮ್ಮ
ಸುಖವನ್ನು ನೋಡಿಕೊಳ್ಳದೆ ದೃಢವಿಲ್ಲದವರ ಅನು
2 ಮಾನಗಳನ್ನು ಸಹಿಸಿಕೊಳ್ಳಬೇಕು. ನಮ್ಮಲ್ಲಿ
ಪ್ರತಿಯೊಬ್ಬನು ತನ್ನ ನೆರೆಯವನ ಹಿತವನ್ನೂ ಭಕ್ತಿ
ವೃದ್ಧಿಯನ್ನೂ ಅಪೇಕ್ಷಿಸುವವನಾಗಿ ಅವನ ಸುಖವನ್ನು
3 ನೋಡಿಕೊಳ್ಳಲಿ. ಯಾಕಂದರೆ ಕ್ರಿಸ್ತನು ಸಹ ತನ್ನ
ಸುಖವನ್ನು ನೋಡಿಕೊಳ್ಳಲಿಲ್ಲ. ದೇವರೇ, ನಿನ್ನ
ನ್ನು ದೂಷಿಸಿದವರ ದೂಷಣೆಗಳು ನನ್ನ ಮೇಲೆ ಬಂದವು
ಎಂಬದಾಗಿ ಬರೆದಿರುವಂತೆ ಆತನಿಗೆ ಸಂಭವಿಸಿತಲ್ಲಾ.
4 ಪೂರ್ವದಲ್ಲಿ ಬರೆದದ್ದೆಲ್ಲಾ ನಮ್ಮನ್ನು ಉಪದೇಶಿಸು
ವದಕ್ಕಾಗಿ ಬರೆಯಲ್ಪಟ್ಟಿತು. ನಾವು ಓದಿ ಸ್ಥಿರಚಿತ್ತ
ವನ್ನೂ ಆದರಣೆಯನ್ನೂ ಹೊಂದಿ ರಕ್ಷಣೆಯ ನಿರೀಕ್ಷೆ
ಯುಳ್ಳವರಾಗಿರುವಂತೆ ಆ ಗ್ರಂಥಗಳು ಬರೆಯಲ್ಪ

ಟ್ಟವು. ಆ ಸ್ಥಿರಚಿತ್ತವನ್ನೂ ಆದರಣೆಯನ್ನೂ ಕೊಡು
ದೇವರು ನೀವು ಕ್ರಿಸ್ತ ಯೇಸುವನ್ನು ಅನುಸರಿ
ಒಂದೇ ಮನಸ್ಸುಳ್ಳವರಾಗಿರುವಂತೆ ನಿಮಗೆ ದಯ
ಲಿಸಲಿ. ಹೀಗೆ ನೀವು ಏಕಮನಸ್ಸಿನಿಂದ ಒಮ್ಮುಖವಾ
ನಮ್ಮ ಕರ್ತನಾದ ಯೇಸು ಕ್ರಿಸ್ತನ ತಂದೆಯ
ದೇವರನ್ನು ಕೊಂಡಾಡುವಿರಿ.

ಆದದರಿಂದ ಕ್ರಿಸ್ತನು ನಿಮ್ಮನ್ನು ಸೇರಿಸಿಕೊಂಡ
ನೀವು ಸಹ ಒಬ್ಬರನ್ನೊಬ್ಬರು ಸೇರಿಸಿಕೊಂಡು ದೇವ
ಮಹಿಮೆಯನ್ನು ಪ್ರಕಾಶಪಡಿಸಿರಿ. ಯಾಕಂದ
ನಾನು ಹೇಳುವದೇನಂದರೆ—ಕ್ರಿಸ್ತನು ಪಿತೃಗಳ
ಉಂಟಾದ ದೇವರ ವಾಗ್ದಾನಗಳನ್ನು ದೃಢಪಡಿ
ಆತನ ಸತ್ಯವನ್ನು ತೋರಿಸುವದಕ್ಕಾಗಿ ಸುನ್ನತಿಯೆಂ
ಸಂಸ್ಕಾರಕ್ಕೆ ಒಳಗಾದನು; ಜನಾಂಗಗಳಾದರೆ ಕ
ರುಣ್ಯದ ನಿಮಿತ್ತ ದೇವರನ್ನು ಕೊಂಡಾಡುತ್ತಾರ
ಬದೇ. ಇದಕ್ಕೆ ಸರಿಯಾಗಿ ಶಾಸ್ತ್ರದಲ್ಲಿಯೂ ಬರೆದ
ಹೇಗಂದರೆ—

ಈ ಕಾರಣದಿಂದ ಅನ್ಯಜನಗಳ ಮಧ್ಯದ
ನಿನ್ನನ್ನು ಸ್ತುತಿಸುವೆನು;
ನಿನ್ನ ನಾಮವನ್ನು ಸಂಕೀರ್ತಿಸುವೆನು ಎಂದ

ಇನ್ನೊಂದು ಸ್ಥಳದಲ್ಲಿ—

ಜನಾಂಗಗಳಿರಾ, ದೇವರ ಜನರೊಡನೆ ಉಲ
ಸಪಡಿರಿ ಎಂದೂ

ಬೇರೊಂದು ಸ್ಥಳದಲ್ಲಿ—

ಸರ್ವಜನಾಂಗಗಳೇ, ಕರ್ತನನ್ನು ಕೀರ್ತಿಸಿ
ಸಮಸ್ತಪ್ರಜೆಗಳೂ ಆತನನ್ನು ಸಂಕೀರ್ತಿಸ
ಎಂದೂ

ಬರೆದದೆ. ಮತ್ತೊಂದು ಸ್ಥಳದಲ್ಲಿ ಯೆಶಾಯನ
ಹೇಳುವದೇನಂದರೆ—

ಇಷಯನ ಅಂಕುರದವನು
ಅಂದರೆ ಜನಾಂಗಗಳನ್ನು ಆಳತಕ್ಕವನು ಬರ
ತ್ತಾನೆ;
ಜನಾಂಗಗಳು ಆತನನ್ನು ನಿರೀಕ್ಷಿಸುತ್ತಿರ
ವರು.

ನಿರೀಕ್ಷೆಯ ಮೂಲನಾದ ದೇವರು ನಂಬಿಕೆಯಿಂದು
ಟಾಗುವ ಸಂತೋಷವನ್ನೂ ಮನಶ್ಶಾಂತಿಯನ
ನಿಮಗೆ ಪರಿಪೂರ್ಣವಾಗಿ ದಯಪಾಲಿಸಿ ನೀವು ಪವಿತ್ರಾ
ತ್ಮನ ಬಲಗೂಡಿದವರಾಗಿ ನಿರೀಕ್ಷೆಯಲ್ಲಿ ಅಭಿವೃ
ಯನ್ನು ಹೊಂದುವಂತೆ ಅನುಗ್ರಹಿಸಲಿ.

ಪೌಲನು ತನ್ನ ಹಿಂದಿನ ಕೆಲಸವನ್ನು ಸಂಕ್ಷೇಪವಾಗಿ ತಿಳಿಸಿ
ತಾನು ರೋಮಾಪುರಕ್ಕೆ ಬರಬೇಕೆಂಬ ಅಭಿಪ್ರಾಯವನ್ನು
ಸೂಚಿಸಿ ಸಭೆಯವರ ಪ್ರಾರ್ಥನೆ ಕೇಳಿಕೊಳ್ಳುತ್ತಾನೆ.

ನನ್ನ ಸಹೋದರರೇ, ನೀವಂತೂ ಒಳ್ಳೇತನದಿಂ
ಭರಿತರಾಗಿಯೂ ಸಕಲ ಜ್ಞಾನದಿಂದ ತುಂಬಿದವರಾ
ಯೂ ಒಬ್ಬರಿಗೊಬ್ಬರು ಬುದ್ಧಿಹೇಳುವದಕ್ಕೆ ಶಕ್ತರಾ
ಯೂ ಇದ್ದೀರೆಂದು ನಿಮ್ಮ ವಿಷಯದಲ್ಲಿ ನನಗ
ಗೊತ್ತಿದೆ. ಆದರೂ ನಿಮಗೆ ಜ್ಞಾಪಕಕೊಡಬೇಕೆಂದು

1) ಅಥವಾ, ಸಂಶಯಪಟ್ಟು ಮಾಡುವದೆಲ್ಲಾ ಪಾಪವೇ.

ಅಲ್ಲಲ್ಲಿ ಹೆಚ್ಚಾದ ಧೈರ್ಯದಿಂದ ಬರೆದಿದ್ದೇನೆ. ಯಾ
ಕಂದರೆ ನಾನು ಅನ್ಯಜನರಿಗೋಸ್ಕರ ಯೇಸು ಕ್ರಿಸ್ತನ
ಸೇವಕನಾಗುವದಕ್ಕೆ ನನಗೆ ದೇವರ ಅನುಗ್ರಹವಾಯಿ
ತು. ನಾನು ದೇವರ ಸುವಾರ್ತೆಯ ಸೇವೆಯನ್ನು ಯಾ
ಜಕಸೇವೆ ಎಂಬಂತೆ ನಡಿಸಿ ಅನ್ಯದೇಶಸ್ಥರೆಂಬ ಕಾಣಿಕೆ
ಯು ಪವಿತ್ರಾತ್ಮನ ಮೂಲಕವಾಗಿ ಪವಿತ್ರವಾಗಿದ್ದು ದೇ
ವರಿಗೆ ಸಮರ್ಪಕವಾಗುವಂತೆ ಯತ್ನಿಸುವವನಾಗಿದ್ದೇ
ನೆ. ದೇವರ ಸೇವೆಯಲ್ಲಿ ಹೊಗಳಿಕೊಳ್ಳುವದಕ್ಕೆ ಕ್ರಿಸ್ತ
ಯೇಸುವಿನಲ್ಲಿ ನನಗೆ ಕಾರಣವುಂಟು. ಕ್ರಿಸ್ತನು ಅನ್ಯ
ಜನಗಳನ್ನು ತನಗೆ ಅಧೀನಮಾಡಿಕೊಳ್ಳುವದಕ್ಕಾಗಿ
ನನ್ನ ಕೈಯಿಂದ ಮಾತಿನಲ್ಲಿಯೂ ಕ್ರಿಯೆಯಲ್ಲಿಯೂ
ಸೂಚಕಕಾರ್ಯ ಅದ್ಭುತಕಾರ್ಯಗಳ ಬಲದಿಂದ
ಲೂ ಪವಿತ್ರಾತ್ಮನ ಬಲದಿಂದಲೂ ಮಾಡಿಸಿದ ಕಾರ್ಯ
ಗಳನ್ನೇ ಹೊರತು ಬೇರೆ ಯಾವ ಕಾರ್ಯಗಳನ್ನೂ
ಹೇಳುವದಕ್ಕೆ ನನಗೆ ಧೈರ್ಯಸಾಲದು. ನಾನು
ಯೆರೂಸಲೇಮ್ ಮೊದಲುಗೊಂಡು ಇಲ್ಲುರಿಕ
ಸೀಮೆಯ ಪರ್ಯಂತರಕ್ಕೂ ಸುತ್ತಿ ಕ್ರಿಸ್ತನ ಸುವಾ
ರ್ತೆಯ ಸಾರೋಣವನ್ನು ನೆರವೇರಿಸಿದ್ದೇನೆ. ಮತ್ತೊ
ಬ್ಬರು ಹಾಕಿದ ಅಸ್ತಿವಾರದ ಮೇಲೆ ಕಟ್ಟಬಾರದೆಂದು
ಮನಸ್ಸಿನಲ್ಲಿ ನೆನಸಿ ಇತರರು ಕ್ರಿಸ್ತನ ಹೆಸರನ್ನು ತಿಳಿ
ಸಿದ ಕಡೆಯಲ್ಲಿ ಸುವಾರ್ತೆಯನ್ನು ಪ್ರಕಟಿಸುವದಿಲ್ಲ
ವೆಂಬದಾಗಿ ನಿಷ್ಕರ್ಷೆಮಾಡಿಕೊಂಡೆನು.

ಯಾರಿಗೆ ಆತನ ಸಮಾಚಾರ ಬಂದಿರಲಿಲ್ಲ
ವೋ ಅವರೇ ಆತನನ್ನು ನೋಡುವರು;
ಯಾರು ಆತನ ವರ್ತಮಾನವನ್ನು ಕೇಳಿರಲಿಲ್ಲ
ವೋ ಅವರೇ ಗ್ರಹಿಸಿಕೊಳ್ಳುವರು.

ಎಂಬದಾಗಿ ಬರೆದಿರುವ ಪ್ರಕಾರ ನನ್ನ ಕೆಲಸವನ್ನು
ನಡಿಸಿದ್ದೇನೆ.

ಈ ಕಾರಣದಿಂದ ನಿಮ್ಮ ಬಳಿಗೆ ಬರುವದಕ್ಕೆ ನನ
ಗೆ ಅನೇಕಾವರ್ತಿ ಅಭ್ಯಂತರವಾಯಿತು. ಆದರೆ ಇನ್ನು
ಮೇಲೆ ಈ ಪ್ರಾಂತ್ಯಗಳಲ್ಲಿ ನನಗೆ ಅನುಕೂಲವಿಲ್ಲದ್ದರಿಂ
ದಲೂ ನಿಮ್ಮ ಬಳಿಗೆ ಬರುವದಕ್ಕೆ ಅನೇಕ ವರುಷಗ
ಳಿಂದ ಅಭಿಲಾಷೆ ಇರುವದರಿಂದಲೂ ನಾನು ಸ್ಪೇನ್
ದೇಶಕ್ಕೆ ಹೋಗುವಾಗ ನನ್ನ ಮಾರ್ಗದಲ್ಲಿ ನಿಮ್ಮ
ದರ್ಶನವನ್ನು ಮಾಡಬೇಕೆಂಬ ಅಭಿಪ್ರಾಯ ಉಂಟು.
ತರುವಾಯ ನಿಮ್ಮ ಸಹವಾಸದಲ್ಲಿ ನನಗೆ ಸ್ವಲ್ಪಮಟ್ಟಿ
ಗೆ ಸಂತೃಪ್ತಿಯಾದ ಮೇಲೆ ನೀವು ಆ ದೇಶಕ್ಕೆ ನನ್ನ
ಪ್ರಯಾಣವನ್ನು ಸಾಗಿಸುವಿರೆಂದು ನಂಬುತ್ತೇನೆ. ಆ
ದರೆ ಈಗ ನಾನು ದೇವಜನರಿಗೆ ಒಂದು ಧರ್ಮಕಾರ್ಯ
ವನ್ನು ಮಾಡುವವನಾಗಿ ಯೆರೂಸಲೇಮಿಗೆ ಹೋಗು
ತ್ತೇನೆ. ಯಾಕಂದರೆ ಯೆರೂಸಲೇಮಿನಲ್ಲಿರುವ ದೇವ
ಜನರೊಳಗೆ ಬಡವರಿಗೋಸ್ಕರ ಸ್ವಲ್ಪ ಹಣದ ಸಹಾಯ
ವನ್ನು ಮಾಡಬೇಕೆಂಬದಾಗಿ ಮಕೆದೋನ್ಯ ಅಖಾಯ
ಸೀಮೆಗಳವರು ಇಷ್ಟಪಟ್ಟಿದ್ದಾರೆ. ಇದನ್ನು ಮಾಡುವ
ದಕ್ಕೆ ಇವರು ಇಷ್ಟಪಟ್ಟದ್ದಲ್ಲದೆ ಇವರು ಅವರ ಹಂಗಿ
ನವರಾಗಿದ್ದಾರೆ. ಹೇಗಂದರೆ ಅನ್ಯಜನರು ಅವರ ಆತ್ಮ
ಸಂಬಂಧವಾದ ಸಂಪತ್ತಿಗೆ ಪಾಲುಗಾರರಾದ ಮೇಲೆ
ಲೋಕಸಂಬಂಧವಾದ ಕಾರ್ಯಗಳಲ್ಲಿ ಅವರಿಗೆ ಸೇ
ವೆಮಾಡುವ ಹಂಗಿನಲ್ಲಿದ್ದಾರಲ್ಲವೇ. ನಾನು ಈ ಕೆಲಸ
ವನ್ನು ತೀರಿಸಿಕೊಂಡು ಈ ಪ್ರೀತಿಯ ಫಲವನ್ನು ಅಲ್ಲಿ
ಯವರ ವಶಕ್ಕೆ ಯಥಾಕ್ರಮವಾಗಿ ಕೊಟ್ಟ ಮೇಲೆ
ನಿಮ್ಮ ಮಾರ್ಗವಾಗಿ ಸ್ಪೇನ್ ದೇಶಕ್ಕೆ ಹೋಗುವೆನು.
ಇದಲ್ಲದೆ ನಿಮ್ಮ ಬಳಿಗೆ ಬರುವಾಗ ಕ್ರಿಸ್ತನಿಂದಾಗುವ 29
ವರಗಳನ್ನು ಹೇರಳವಾಗಿ ತರುವೆನೆಂದು ಬಲ್ಲೆನು.

ಸಹೋದರರೇ, ನೀವು ನನಗೋಸ್ಕರ ದೇವರ ಮುಂ 30
ದೆ ಮಾಡುವ ಪ್ರಾರ್ಥನೆಗಳಲ್ಲಿ ನನ್ನೊಂದಿಗೆ ಬಲೀಯ
ವಾಗಿ ವಿಜ್ಞಾಪಿಸಿಕೊಳ್ಳಬೇಕೆಂದು ನಮ್ಮ ಕರ್ತನಾದ
ಯೇಸು ಕ್ರಿಸ್ತನ ನಿಮಿತ್ತವಾಗಿಯೂ ಪವಿತ್ರಾತ್ಮನಿಂ
ದಾಗುವ ಪ್ರೀತಿಯ ನಿಮಿತ್ತವಾಗಿಯೂ ನಿಮ್ಮನ್ನು
ಬೇಡಿಕೊಳ್ಳುತ್ತೇನೆ. ದೇವರು ನನ್ನನ್ನು ಯೂದಾಯ 31
ದಲ್ಲಿರುವ ಅವಿಧೇಯರ ಕೈಗೆ ತಪ್ಪಿಸಬೇಕೆಂತಲೂ ಯೆ
ರೂಸಲೇಮಿಗೋಸ್ಕರ ನಾನು ಮಾಡುವಂಥ ಈ ಧರ್ಮ
ಕಾರ್ಯವು ಅಲ್ಲಿರುವ ದೇವಜನರಿಗೆ ಹಿತಕರವಾಗಿ
ತೋರಬೇಕೆಂತಲೂ ಪ್ರಾರ್ಥಿಸಿರಿ. ಹೀಗೆ ನಾನು ದೇವ 32
ರ ಚಿತ್ತಾನುಸಾರ ಆನಂದವುಳ್ಳವನಾಗಿ ನಿಮ್ಮಲ್ಲಿಗೆ
ಬಂದು ನಿಮ್ಮ ಸಂಗಡ ವಿಶ್ರಾಂತಿಹೊಂದಲಾಗುವದು.
ಶಾಂತಿದಾಯಕನಾದ ದೇವರು ನಿಮ್ಮೆಲ್ಲರೊಂದಿಗಿರ 33
ಲಿ. ಆಮೆನ್.

ಶಿಫಾರಸೂ, ವಂದನೆಗಳೂ, ಎಚ್ಚರಿಕೆಯೂ.

16
ನಾನು ನಿಮ್ಮ ಬಳಿಗೆ ಕಳುಹಿಸುವ ನಮ್ಮ ಸಹೋ
ದರಿಯಾದ ಫೊಯಿಬೆಯನ್ನು ಪ್ರೀತಿಯಿಂದ ಅಂಗೀ
ಕರಿಸಿರಿ. ಆಕೆಯು ಕೆಂಕ್ರೆಯ ಪಟ್ಟಣದಲ್ಲಿರುವ ಸ
ಭೆಯ ಸೇವಕಳಾಗಿದ್ದಾಳೆ; ನೀವು ಆಕೆಯನ್ನು ಕರ್ತನ 2
ಶಿಷ್ಯಳೆಂದು ದೇವಜನರಿಗೆ ತಕ್ಕ ಹಾಗೆ ಸೇರಿಸಿಕೊಂಡು
ಸಹಾಯವು ಯಾವ ವಿಷಯದಲ್ಲಿ ಬೇಕಾಗಿದ್ದರೂ
ಸಹಾಯವನ್ನು ಮಾಡಿರಿ. ಆಕೆಯು ನನಗೂ ಅನೇಕ
ರಿಗೂ ಸಹಾಯಮಾಡಿದವಳು.

ಕ್ರಿಸ್ತ ಯೇಸುವಿನ ಸೇವೆಯಲ್ಲಿ ನನ್ನ ಜೊತೆಕೆಲಸ 3
ದವರಾದ ಪ್ರಿಸ್ಕಳಿಗೂ ಅಕ್ವಿಲನಿಗೂ ನನ್ನ ವಂದನೆ
ಗಳನ್ನು ಹೇಳಿರಿ. ಅವರು ನನ್ನ ಪ್ರಾಣದ ಸಂರಕ್ಷಣೆ 4
ಗಾಗಿ ತಮ್ಮ ಪ್ರಾಣಗಳನ್ನು ಅಪಾಯಕ್ಕೆ ಗುರಿಮಾಡಿ
ದರು. ನಾನು ಮಾತ್ರವೇ ಅಲ್ಲ, ಅನ್ಯಜನರ ಸಭೆಗಳವ
ರೆಲ್ಲರೂ ಅವರ ಉಪಕಾರವನ್ನು ಸ್ಮರಿಸುತ್ತಾರೆ. ಅ 5
ವರ ಮನೆಯಲ್ಲಿ ಕೂಡುವ ಸಭೆಗೆ ಸಹ ನನ್ನ ವಂದನೆ
ಯನ್ನು ಹೇಳಿರಿ. ಆಸ್ಯ ಸೀಮೆಯಲ್ಲಿ ಕ್ರಿಸ್ತನಿಗೆ ಪ್ರಥ
ಮಫಲವಾಗಿರುವ ನನ್ನ ಪ್ರಿಯನಾದ ಎಪೈನೆತನಿಗೆ
ವಂದನೆ. ನಿಮಗೋಸ್ಕರ ಬಹು ಶ್ರಮೆಪಟ್ಟ ಮರಿಯಳಿ 6
ಗೆ ವಂದನೆ. ನನ್ನ ಸ್ವಜನರೂ ಜೊತೆಸೆರೆಯವರೂ ಆಗಿ 7
ರುವ ಅಂದ್ರೋನಿಕನಿಗೂ ಯೂನ್ಯನಿಗೂ ವಂದನೆ;
ಅವರು ಅಪೊಸ್ತಲರಲ್ಲಿ ಪ್ರಸಿದ್ಧರಾಗಿದ್ದಾರೆ, ಮತ್ತು
ನನಗಿಂತ ಮುಂಚೆ ಕ್ರಿಸ್ತನನ್ನು ನಂಬುವವರಾದರು.
ಕರ್ತನಲ್ಲಿ ನನ್ನ ಪ್ರಿಯನಾದ ಅಂಪ್ಲಿಯಾತನಿಗೆ ವಂದ 8
ನೆ. ಕ್ರಿಸ್ತನ ಸೇವೆಯಲ್ಲಿ ನಮ್ಮ ಜೊತೆಕೆಲಸದವನಾದ 9
ಉರ್ಬಾನನಿಗೂ ನನ್ನ ಪ್ರಿಯನಾದ ಸ್ತಾಖುನಿಗೂ
ವಂದನೆಗಳು. ಕ್ರಿಸ್ತನ ಸೇವೆಯಲ್ಲಿ ಪರಿಶೋಧಿತನಾದ 10
ಅಪೆಲ್ಲನಿಗೆ ವಂದನೆ. ಅರಿಸ್ತೊಬೂಲನ ಮನೆಯವರಿಗೆ
ವಂದನೆಗಳು. ನನ್ನ ಸ್ವಜನದವನಾದ ಹೆರೊಡಿಯೋನ 11
ನಿಗೆ ವಂದನೆ. ನಾರ್ಕಿಸ್ಸನ ಮನೆಯವರೊಳಗೆ ಕ್ರಿಸ್ತ

12 ನನ್ನ ನಂಬಿದವರಿಗೆ ವಂದನೆಗಳು. ಕರ್ತನ ಸೇವೆ
ಯಲ್ಲಿ ಪ್ರಯಾಸಪಟ್ಟವರಾದ ತ್ರುಫೈನಳಿಗೂ ತ್ರುಫೋ
ಸಳಿಗೂ ವಂದನೆಗಳು. ಕರ್ತನ ಸೇವೆಯಲ್ಲಿ ಬಹಳ
ವಾಗಿ ಪ್ರಯಾಸಪಟ್ಟಿರುವ ಪ್ರಿಯ ಪೆರ್ಸೀಸಳಿಗೆ ವಂದ
13 ನೆ. ಕರ್ತನ ಭಕ್ತರಲ್ಲಿ ಪ್ರಸಿದ್ಧನಾದ ರೂಫನಿಗೂ
ನನಗೆ ತಾಯಿಯಂತಿರುವ ಅವನ ತಾಯಿಗೂ ವಂದನೆ
14 ಗಳು. ಅಸುಂಕ್ರಿತನಿಗೂ ಪ್ಲೆಗೋನನಿಗೂ ಹೆರ್ಮೇ
ಯನಿಗೂ ಪತ್ರೋಬನಿಗೂ ಹೆರ್ಮಾನನಿಗೂ ಅವ
15 ರೊಂದಿಗಿರುವ ಸಹೋದರರಿಗೂ ವಂದನೆಗಳು. ಫಿಲೊ
ಲೊಗನಿಗೂ ಯೂಲ್ಯಳಿಗೂ ನೇರ್ಯನಿಗೂ ಅವನ
ತಂಗಿಗೂ ಒಲುಂಪನಿಗೂ ಇವರೊಂದಿಗಿರುವ ದೇವ
16 ಜನರೆಲ್ಲರಿಗೂ ವಂದನೆಗಳು. ಪವಿತ್ರವಾದ ಮುದ್ದಿ
ಟ್ಟು ಒಬ್ಬರನ್ನೊಬ್ಬರು ವಂದಿಸಿರಿ. ಕ್ರಿಸ್ತನ ಸಭೆಗಳೆಲ್ಲಾ
ನಿಮ್ಮನ್ನು ವಂದಿಸುತ್ತವೆ.
17 ಸಹೋದರರೇ, ನೀವು ಹೊಂದಿದ ಉಪದೇಶಕ್ಕೆ
ವಿರುದ್ಧವಾಗಿ ಭೇದಗಳನ್ನೂ ವಿಘ್ನಗಳನ್ನೂ ನಿಮ್ಮಲ್ಲಿ
ಉಂಟುಮಾಡುವವರನ್ನು ಗುರುತಿಟ್ಟು ಅವರನ್ನು ಬಿಟ್ಟು
ತೊಲಗಿ ಹೋಗಿರಿ ಎಂದು ನಿಮ್ಮನ್ನು ಬೇಡಿಕೊಳ್ಳು
18 ತ್ತೇನೆ. ಅಂಥವರು ನಮ್ಮ ಕರ್ತನಾದ ಕ್ರಿಸ್ತನ ಸೇವೆ
ಯನ್ನು ಮಾಡದೆ ತಮ್ಮ ಹೊಟ್ಟೆಯ ಸೇವೆಯನ್ನೇ
ಮಾಡುವವರಾಗಿ ನಯದ ನುಡಿಗಳಿಂದಲೂ ಹೊಗಳಿಕೆ
ಯ ಮಾತುಗಳಿಂದಲೂ ನಿಷ್ಕಪಟಿಗಳ ಹೃದಯಗಳ
19 ನ್ನು ಮೋಸಗೊಳಿಸುತ್ತಾರೆ. ನಿಮ್ಮ ವಿಧೇಯತ್ವವು
ಎಲ್ಲರಿಗೂ ಪ್ರಸಿದ್ಧವಾದದರಿಂದ ಇದನ್ನು ಬರೆದಿದ್ದೇನೆ;
ನಿಮ್ಮ ವಿಷಯದಲ್ಲಿ ಆನಂದಪಡುತ್ತೇನೆ. ನೀವು ಒ
ಳ್ಳೇತನದ ವಿಷಯದಲ್ಲಿ ಜಾಣರೂ ಕೆಟ್ಟತನದ ವಿಷಯ
ದಲ್ಲಿ ಕಳಂಕವಿಲ್ಲದವರೂ ಆಗಿರಬೇಕೆಂದು ಅಪೇಕ್ಷಿಸು
20 ತ್ತೇನೆ. ಶಾಂತಿದಾಯಕನಾದ ದೇವರು ಶೀಘ್ರವಾಗಿ
ಸೈತಾನನನ್ನು ನಿಮ್ಮ ಕಾಲುಗಳ ಕೆಳಗೆ ಹಾಕಿ ತುಳಿ
ಡಿಡುವನು.
1) ನಮ್ಮ ಕರ್ತನಾದ ಯೇಸು ಕ್ರಿಸ್ತನ ಕೃಪೆಯ
ನಿಮ್ಮೊಂದಿಗಿರಲಿ.
ನನ್ನ ಜೊತೆಕೆಲಸದವನಾದ ತಿಮೊಥೆಯನೂ ನ
ಸ್ವಜನರಾದ ಲೂಕ್ಯನೂ ಯಾಸೋನನೂ ಸೋಸಿಪ
ನೂ ನಿಮಗೆ ವಂದನೆಗಳನ್ನು ಹೇಳುತ್ತಾರೆ. ಈ ಪ
ಕೆಯನ್ನು ಬರೆದ ತೆರ್ತ್ಯನೆಂಬ ನಾನು ನಿಮ್ಮನ್ನು ಕ
ನಲ್ಲಿ ವಂದಿಸುತ್ತೇನೆ. ನನಗೂ ಸಮಸ್ತ ಸಭೆಗೂ ಅ
ಥಿಸತ್ಕಾರವನ್ನು ಮಾಡುತ್ತಿರುವ ಗಾಯನು ನಿ
ನ್ನು ವಂದಿಸುತ್ತಾನೆ. ಈ ಪಟ್ಟಣದ ಖಜಾನೆ
ಮೇಲ್ವಿಚಾರಕನಾಗಿರುವ ಎರಸ್ತನೂ ಸಹೋದರನಾ
ಕ್ವರ್ತನೂ ನಿಮಗೆ ವಂದನೆಗಳನ್ನು ಹೇಳುತ್ತಾರೆ.

ದೇವಸ್ತೋತ್ರವಚನವು.

ಅನಾದಿಯಾಗಿ ಗುಪ್ತವಾಗಿದ್ದ ಮರ್ಮವು ಈಗ
ಪ್ರಕಾಶಕ್ಕೆ ಬಂದು ನಿತ್ಯವಾದ ದೇವರ ಅಪ್ಪಣೆ
ಪ್ರಕಾರ ಪ್ರವಾದಿಗಳ ಗ್ರಂಥಗಳ ಮೂಲಕ ಅನ್ಯಜ
ರೆಲ್ಲರಿಗೆ ನಂಬಿಕೆಯೆಂಬ ವಿಧೇಯತ್ವವನ್ನು ಉಂ
ಮಾಡುವದಕ್ಕೋಸ್ಕರ ತಿಳಿಸಲ್ಪಟ್ಟಿದೆ. ಪ್ರಕಾಶಕ್ಕೆ ಬ
ದಿರುವ ಈ ಮರ್ಮಕ್ಕೆ ಅನುಸಾರ ಅಂದರೆ ಯೇ
ಕ್ರಿಸ್ತನ ವಿಷಯವಾದಂಥ ನಾನು ಸಾರುವಂಥ ಸು
ರ್ತೆಗನುಸಾರ ನಿಮ್ಮನ್ನು ಸ್ಥಿರಪಡಿಸುವದಕ್ಕೆ ಶಕ್ತ
ಗಿರುವ ಜ್ಞಾನನಿಧಿಯಾದ ಒಬ್ಬನೇ ದೇವರಿಗೆ ಯೇ
ಕ್ರಿಸ್ತನ ಮೂಲಕ ಯುಗಯುಗಾಂತರಗಳಲ್ಲಿ ಯ
ಸ್ತೋತ್ರವಾಗಲಿ. ಆಮೆನ್.

---

THE FIRST EPISTLE OF SAINT PAUL TO T

# CORINTHIANS

## ಪೌಲನು ಕೊರಿಂಥದವರಿಗೆ ಬರೆದ ಮೊದಲನೆಯ ಪತ್ರಿಕೆ

ಒಕ್ಕಣೆ.

1 ದೇವರ ಚಿತ್ತದಿಂದ ಯೇಸು ಕ್ರಿಸ್ತನ ಅಪೊಸ್ತಲ
ನಾಗುವದಕ್ಕೆ ಕರೆಯಲ್ಪಟ್ಟ ಪೌಲನೂ ಸಹೋದರನಾದ
2 ಸೊಸ್ಥೆನನೂ ಕೊರಿಂಥದಲ್ಲಿನ ದೇವರ ಸಭೆಗೆ ಅಂದರೆ
ಕ್ರಿಸ್ತೇಸುವಿನಲ್ಲಿ ಪ್ರತಿಷ್ಠಿತರೂ ದೇವಜನರಾಗುವದ
ಕರೆಯಲ್ಪಟ್ಟವರೂ ಆಗಿರುವವರಿಗೆ ಮತ್ತು ನಮ
ಸಮಸ್ತದೇವಜನರಿಗೂ ಕರ್ತನಾಗಿರುವ ಯೇಸು ಕ್ರಿ
ನ ನಾಮಸ್ಮರಣೆಯನ್ನು ಮಾಡುವವರು ಎಲ್ಲಿದ್ದ
ಅವರೆಲ್ಲರಿಗೆ ಬರೆಯುವದೇನಂದರೆ— ನಮ್ಮ ತ

---

1) ಕೆಲವು ಪ್ರಾಚೀನ ಪ್ರತಿಗಳಲ್ಲಿ 20ನೆಯ ವಚನದ ಕಡೇ ಭಾಗವಿಲ್ಲ; ಆದರೆ ಅವುಗಳಲ್ಲಿ 24ನೆಯ ವಚನವದೆ, ಏನಂದರೆ
ಕರ್ತನಾದ ಯೇಸು ಕ್ರಿಸ್ತನ ಕೃಪೆಯು ನಿಮ್ಮೊಂದಿಗಿರಲಿ. ಆಮೆನ್.

ಯಾಗಿರುವ ದೇವರಿಂದಲೂ ಕರ್ತನಾದ ಯೇಸು ಕ್ರಿಸ್ತ
ಸಿಂದಲೂ ನಿಮಗೆ ಕೃಪೆಯೂ ಶಾಂತಿಯೂ ಆಗಲಿ.

### ಪೌಲನು ಸಭೆಯವರ ವಿಷಯದಲ್ಲಿ ದೇವರಿಗೆ ಮಾಡಿದ ಕೃತಜ್ಞತಾಸ್ತುತಿ.

ಕ್ರಿಸ್ತ ಯೇಸುವಿನಲ್ಲಿ ದೇವರು ನಿಮಗೆ ಅನುಗ್ರಹಿ
ಸಿದ ಕೃಪೆಯ ನಿಮಿತ್ತ ನಾನು ನಿಮ್ಮ ವಿಷಯದಲ್ಲಿ
ಯಾವಾಗಲೂ ದೇವರನ್ನು ಕೊಂಡಾಡುತ್ತೇನೆ.
6 ಯಾಕಂದರೆ ಕ್ರಿಸ್ತನ ವಿಷಯವಾದ ಸಾಕ್ಷಿಯು
ನಿಮ್ಮಲ್ಲಿ ದೃಢವಾಗಿ ನೆಲೆಗೊಂಡ ಕಾರಣ ನೀವು ಎಲ್ಲಾ
ನುಡಿಯಲ್ಲಿಯೂ ಎಲ್ಲಾ ತಿಳುವಳಿಕೆಯಲ್ಲಿಯೂ ಆತ
ನಲ್ಲಿ ಸಮೃದ್ಧಿಹೊಂದಿದವರಾಗಿದ್ದೀರಿ. ಹೀಗೆ ನೀವು
ಯಾವ ಕೃಪಾವರದಲ್ಲಿಯೂ ಕೊರತೆಯಿಲ್ಲದವರಾಗಿ
ನಮ್ಮ ಕರ್ತನಾದ ಯೇಸು ಕ್ರಿಸ್ತನ ಪ್ರತ್ಯಕ್ಷತೆ
ಯನ್ನು ಎದುರುನೋಡುತ್ತಾ ಇದ್ದೀರಿ. ನಮ್ಮ ಕರ್ತ
ನಾದ ಯೇಸು ಕ್ರಿಸ್ತನ ದಿನದಲ್ಲಿ ಯಾರೂ ನಿಮ್ಮ
ಮೇಲೆ ತಪ್ಪುಹೊರಿಸಲಾಗದಂತೆ ಆತನು ನಿಮ್ಮನ್ನು
ಕಡೇ ವರೆಗೂ ದೃಢಪಡಿಸುವನು. ದೇವರು ನಂಬಿ
ಗಸ್ತನು; ನಮ್ಮ ಕರ್ತನಾದ ಯೇಸು ಕ್ರಿಸ್ತನೆಂಬ
ತನ್ನ ಮಗನ ಅನ್ಯೋನ್ಯತೆಗೆ ನಿಮ್ಮನ್ನು ಕರೆದವನು
ಆತನೇ.

### ಕೊರಿಂಥದವರು ಬೇರೆ ಬೇರೆ ಬೋಧಕರನ್ನು ಅನುಸರಿಸಿದ್ದರಿಂದ ಸಭೆಯಲ್ಲಿ ಉಂಟಾದ ಭೇದಗಳನ್ನು ಕುರಿತದ್ದು.

(1. 10—4. 20.)

ಸಹೋದರರೇ, ನಿಮ್ಮೆಲ್ಲರ ಮಾತು ಒಂದೇ ಆಗಿರ
ಬೇಕು; ನಿಮ್ಮಲ್ಲಿ ಭೇದಗಳಿರಬಾರದು, ನೀವು ಒಂದೇ
ಮನಸ್ಸೂ ಒಂದೇ ಅಭಿಪ್ರಾಯವೂ ಉಳ್ಳವರಾಗಿದ್ದು
ಹೊಂದಿಕೆಯಿಂದಿರಬೇಕು ಎಂಬದಾಗಿ ನಾನು ನಮ್ಮ
ಕರ್ತನಾದ ಯೇಸು ಕ್ರಿಸ್ತನ ಹೆಸರಿನಲ್ಲಿ ನಿಮ್ಮನ್ನು
ಬೇಡಿಕೊಳ್ಳುತ್ತೇನೆ. ಯಾಕಂದರೆ ನನ್ನ ಸಹೋದರರೇ,
ನಿಮ್ಮಲ್ಲಿ ಜಗಳಗಳುಂಟೆಂದು ನಿಮ್ಮ ವಿಷಯವಾಗಿ
ಖ್ಲೋಯೆಯ ಮನೆಯವರಿಂದ ನನಗೆ ತಿಳಿದುಬಂತು.
ನಿಮ್ಮೊಳಗೆ ಪ್ರತಿಯೊಬ್ಬನು— ನಾನು ಪೌಲನವನು,
ಇಲ್ಲವೆ—ನಾನು ಅಪೊಲ್ಲೋಸನವನು, ಅಥವಾ—
ನಾನು ಕೇಫನವನು, ಇಲ್ಲವೆ— ನಾನು ಕ್ರಿಸ್ತನವನು
ಎಂದು ಹೇಳಿಕೊಳ್ಳುತ್ತಾನಂತೆ. ಕ್ರಿಸ್ತನು ವಿಭಾಗವಾಗಿ
ದ್ದಾನೋ? ನಿಮಗೋಸ್ಕರ ಶಿಲುಬೆಗೆ ಹಾಕಿಸಿಕೊಂಡ
ವನು ಪೌಲನೋ? ನೀವು ಪೌಲನ ಹೆಸರಿನಲ್ಲಿ ದೀಕ್ಷಾ
-15 ಸ್ನಾನಮಾಡಿಸಿಕೊಂಡಿರೋ? ನಿಮ್ಮಲ್ಲಿ ಕ್ರಿಸ್ಪ
ನಿಗೂ ಗಾಯನಿಗೂ ಹೊರತಾಗಿ ಮತ್ತಾರಿಗೂ ನಾನು
ದೀಕ್ಷಾಸ್ನಾನಮಾಡಿಸಲಿಲ್ಲವಾದದರಿಂದ ನೀವು ನನ್ನ
ಹೆಸರಿನಲ್ಲಿ ದೀಕ್ಷಾಸ್ನಾನಮಾಡಿಸಿಕೊಂಡಿರೆಂದು ಯಾ
ರೂ ಹೇಳಲಾಗದು. ಆದಕ್ಕಾಗಿ ದೇವರಿಗೆ ಸ್ತೋತ್ರ
ಮಾಡುತ್ತೇನೆ. ಇದಲ್ಲದೆ ಸ್ತೆಫನನ ಮನೆಯವರಿಗೆ
ಸಹ ದೀಕ್ಷಾಸ್ನಾನಮಾಡಿಸಿದೆನು. ಇವರಿಗಲ್ಲದೆ ಇನ್ನಾ
ರಿಗೂ ನಾನು ದೀಕ್ಷಾಸ್ನಾನಮಾಡಿಸಿದಂತೆ ಕಾಣೆನು.
ದೀಕ್ಷಾಸ್ನಾನಮಾಡಿಸುವದಕ್ಕಲ್ಲ, ಸುವಾರ್ತೆಯನ್ನು 17
ಸಾರುವದಕ್ಕೇ ಕ್ರಿಸ್ತನು ನನ್ನನ್ನು ಕಳುಹಿಸಿದನು.
ಆದರೆ ವಾಕ್ಚಾತುರ್ಯದಿಂದ ಸಾರಬೇಕೆಂದು ಕಳುಹಿಸ
ಲಿಲ್ಲ; ಹಾಗೆ ಸಾರಿದರೆ ಕ್ರಿಸ್ತನ ಶಿಲುಬೆಯು ನಿರರ್ಥಕ
ವಾಗುವದು.

### ಕ್ರಿಸ್ತನ ಸುವಾರ್ತೆಯು ಮಾನುಷಜ್ಞಾನಕ್ಕೆ ಅನುಸಾರವಾದದ್ದಲ್ಲ.

ಶಿಲುಬೆಯ ವಿಷಯವಾದ ಮಾತು ನಾಶನದ 18
ಮಾರ್ಗದಲ್ಲಿರುವವರಿಗೆ ಹುಚ್ಚುಮಾತಾಗಿದೆ, ರಕ್ಷ
ಣೆಯ ಮಾರ್ಗದಲ್ಲಿರುವ ನಮಗಾದರೋ ದೇವರ
ಶಕ್ತಿಯಾಗಿದೆ.

ಜ್ಞಾನಿಗಳ ಜ್ಞಾನವನ್ನು ನಾಶಮಾಡುವೆನು, 19
ವಿವೇಕಿಗಳ ವಿವೇಕವನ್ನು ನಿರಾಕರಿಸುವೆನು

ಎಂಬದಾಗಿ ಶಾಸ್ತ್ರೋಕ್ತಿಯುಂಟಲ್ಲಾ. ಜ್ಞಾನಿಯು 20
ಎಲ್ಲಿ? ಶಾಸ್ತ್ರಿಯೆಲ್ಲಿ? ಇಹಲೋಕದ ತರ್ಕವಾದಿ ಎಲ್ಲಿ?
ದೇವರು ಇಹಲೋಕಜ್ಞಾನವನ್ನು ಹುಚ್ಚುತನವಾಗ
ಮಾಡಿದ್ದಾನಲ್ಲವೇ. ಹೇಗಂದರೆ [1])ಲೋಕವು ಜ್ಞಾನ 21
ವೆನಿಸುವ ಮಾರ್ಗದಿಂದ ದೇವರನ್ನು ತಿಳುಕೊಳ್ಳದೆ
ಹೋದದ್ದು ದೇವರ ಜ್ಞಾನದ ಸಂಕಲ್ಪವೆ; ಹೀಗಾದ
ಮೇಲೆ ಹುಚ್ಚುಮಾತು ಎಣಿಸಿಕೊಂಡಿರುವ ನಮ್ಮ
ಪ್ರಸಂಗದಿಂದಲೇ ನಂಬುವವರನ್ನು ರಕ್ಷಿಸುವದು ದೇವ
ರಿಗೆ ಒಳ್ಳೇದೆಂದು ತೋಚಿತು. ಯೆಹೂದ್ಯರು ಸೂಚ 22
ಕಕಾರ್ಯಗಳನ್ನು ಕೇಳುತ್ತಾರೆ, ಗ್ರೀಕರು ಜ್ಞಾನವನ್ನು
ಹುಡುಕುತ್ತಾರೆ; ನಾವಾದರೋ ಶಿಲುಬೆಗೆ ಹಾಕಲ್ಪಟ್ಟ 23
ವನಾದ ಕ್ರಿಸ್ತನನ್ನು ಪ್ರಚುರಪಡಿಸುತ್ತೇವೆ. ಇಂಥ
ಕ್ರಿಸ್ತನ ಸಂಗತಿಯು ಯೆಹೂದ್ಯರಿಗೆ ವಿಘ್ನವೂ ಅನ್ಯ
ಜನರಿಗೆ ಹುಚ್ಚುಮಾತೂ ಆಗಿದೆ; ಆದರೆ ದೇವರಿಂದ 24
ಕರಿಸಿಕೊಂಡವರು ಯೆಹೂದ್ಯರಾಗಲಿ ಗ್ರೀಕರಾಗಲಿ
ಅವರಿಗೆ [2])ಇಂಥವನು ದೇವರ ಶಕ್ತಿಯೂ ದೇವರ
ಜ್ಞಾನವೂ ಆಗಿರುವ ಕ್ರಿಸ್ತನೇ. ಲೋಕದವರು ದೇವ 25
ರಲ್ಲಿ ಯಾವದನ್ನು ಬುದ್ಧಿಹೀನತೆಯೆಂದು ಎಣಿಸು
ತ್ತಾರೋ ಅದು ಮನುಷ್ಯರ ಜ್ಞಾನಕ್ಕಿಂತಲೂ ಶ್ರೇಷ್ಠ
ಜ್ಞಾನವಾಗಿದೆ. ಅವರು ದೇವರಲ್ಲಿ ಯಾವದನ್ನು ಬಲ
ಹೀನತೆಯೆಂದು ಎಣಿಸುತ್ತಾರೋ ಅದು ಮನುಷ್ಯರ
ಬಲಕ್ಕಿಂತಲೂ ಬಲವುಳ್ಳದ್ದಾಗಿದೆ.

ಸಹೋದರರೇ, ದೇವರು ನಿಮ್ಮನ್ನು ಕರೆದಾಗ ಎಂಥ 26
ವರನ್ನು ಕರೆದನೆಂದು ಆಲೋಚಿಸಿರಿ. ನಿಮ್ಮೊಳಗೆ ಲೌಕಿ
ಕದೃಷ್ಟಿಯಲ್ಲಿ ಜ್ಞಾನಿಗಳೂ ಅನೇಕರಿಲ್ಲ, ಅಧಿಕಾರಿ
ಗಳೂ ಅನೇಕರಿಲ್ಲ, ಕುಲೀನರೂ ಅನೇಕರಿಲ್ಲ. ದೇವ 27
ರು ಜ್ಞಾನಿಗಳನ್ನು ನಾಚಿಕೆಪಡಿಸುವದಕ್ಕಾಗಿ ಈ ಲೋಕ
ದ ಬುದ್ಧಿಹೀನರನ್ನು ಆರಿಸಿಕೊಂಡಿದ್ದಾನೆ; ದೇವರು
ಬಲಿಷ್ಠರನ್ನು ನಾಚಿಕೆಪಡಿಸುವದಕ್ಕಾಗಿ ಈ ಲೋಕದ
ಬಲಹೀನರನ್ನು ಆರಿಸಿಕೊಂಡಿದ್ದಾನೆ; ದೇವರು ಈ 28-29

---

1) ಅಥವಾ, ದೇವರ ಜ್ಞಾನವನ್ನು ತೋರ್ಪಡಿಸುವ ಕಾರ್ಯಗಳಲ್ಲಿ ಲೋಕವು . . . . ತಿಳುಕೊಳ್ಳದೆ ಹೋದ ಮೇಲೆ. ಮೂಲ: ವರ ಜ್ಞಾನದಲ್ಲಿ ಲೋಕವು . . . . 2) ಅಥವಾ, ಇಂಥ ಕ್ರಿಸ್ತನೇ ದೇವರ ಶಕ್ತಿಯೂ ದೇವರ ಜ್ಞಾನವೂ ಆಗಿದ್ದಾನೆ.

ಲೋಕದ ಕುಲಹೀನರನ್ನೂ ಅಸಡ್ಡೆಯಾದವರನ್ನೂ
ಆರಿಸಿಕೊಂಡದ್ದಲ್ಲದೆ ಗಣ್ಯರನ್ನು ಇಲ್ಲದಂತೆ ಮಾಡು
ವದಕ್ಕಾಗಿ ಗಣನೆಗೆ ಬಾರದವರನ್ನು ಆರಿಸಿಕೊಂಡಿ
ದ್ದಾನೆ. ಹೀಗಿರಲು ದೇವರ ಮುಂದೆ ಹೊಗಳಿಕೊ
30 ಳ್ಳುವದಕ್ಕೆ ಯಾರಿಗೂ ಆಸ್ಪದವಿಲ್ಲ. ನೀವು ಕ್ರಿಸ್ತ
ಯೇಸುವಿನಲ್ಲಿರುವದು ಆತನಿಂದಲೇ. ಕ್ರಿಸ್ತ ಯೇಸು
ನಮಗೆ ದೇವರ ಕಡೆಯಿಂದ 1)ಜ್ಞಾನವೂ ನೀತಿ ಶುದ್ಧೀ
31 ಕರಣ ವಿಮೋಚನೆಗಳಿಗೆ ಕಾರಣನೂ ಆದನು. ಹೆಚ್ಚ
ಳಪಡುವವನು ಕರ್ತನಲ್ಲಿಯೇ ಹೆಚ್ಚಳಪಡಲಿ ಎಂಬ
ವೇದೋಕ್ತಿ ನೆರವೇರುವದಕ್ಕೆ ಇದರಿಂದ ಮಾರ್ಗವಾ
ಯಿತು.

**2** ಸಹೋದರರೇ, ನಾನಂತೂ ದೇವರು ಹೇಳಿಕೊಟ್ಟ
ಮಾತನ್ನು ತಿಳಿಸುವವನಾಗಿ ನಿಮ್ಮ ಬಳಿಗೆ ಬಂದಾಗ
ವಾಕ್ಚಾತುರ್ಯದಿಂದಾಗಲಿ ಜ್ಞಾನಾಡಂಬರದಿಂದಾಗಲಿ
2 ಬರಲಿಲ್ಲ. ನಾನು ಶಿಲುಬೆಗೆ ಹಾಕಲ್ಪಟ್ಟವನಾದ
ಯೇಸು ಕ್ರಿಸ್ತನನ್ನೇ ಹೊರತು ಬೇರೆ ಯಾವದನ್ನೂ
ತಿಳಿಯದವನಾಗಿ ನಿಮ್ಮಲ್ಲಿ ಇರುವೆನೆಂದು ತೀರ್ಮಾನಿ
3 ಸಿಕೊಂಡೆನು. ಇದಲ್ಲದೆ ನಾನು ನಿಮ್ಮಲ್ಲಿಗೆ ಬಂದಾಗ
ನಿಮ್ಮ ಬಳಿಯಲ್ಲಿ ಬಲಹೀನನೂ ಭಯಪಡುವವನೂ
4-5 ಬಹು ನಡುಗುವವನೂ ಆಗಿದ್ದೆನು. ನಿಮ್ಮ ನಂಬಿ
ಕೆಯು ಮಾನುಷಜ್ಞಾನವನ್ನು ಆಧಾರಮಾಡಿಕೊಳ್ಳದೆ
ದೇವರ ಶಕ್ತಿಯನ್ನು ಆಧಾರಮಾಡಿಕೊಂಡಿರಬೇಕೆಂದು
ನನ್ನ ಬೋಧನೆಯಲ್ಲಿಯೂ ಪ್ರಸಂಗದಲ್ಲಿಯೂ ಮನ
ವೊಲಿಸುವ ಜ್ಞಾನವಾಕ್ಯಗಳನ್ನು ನಾನು ಪ್ರಯೋಗಿ
ಸದೆ ದೇವರಾತ್ಮನ ಬಲವನ್ನು ತೋರ್ಪಡಿಸುವ ವಾಕ್ಯ
ಗಳನ್ನೇ ಪ್ರಯೋಗಿಸಿದೆನು.
6 ಆದರೂ ಪ್ರವೀಣರಲ್ಲಿ ಜ್ಞಾನವನ್ನೇ ಹೇಳುತ್ತೇವೆ.
ಅದು ಇಹಲೋಕದ ಜ್ಞಾನವಲ್ಲ, ಇಲ್ಲದೆ ಹೋಗುವ
7 ಇಹಲೋಕಾಧಿಕಾರಿಗಳ ಜ್ಞಾನವೂ ಅಲ್ಲ. ಇದುವರೆಗೆ
ಗುಪ್ತವಾಗಿದ್ದ ಸತ್ಯಾರ್ಥವನ್ನು ತಿಳಿಸುವಲ್ಲಿ ದೇವರ
ಜ್ಞಾನವನ್ನೇ ಹೇಳುತ್ತೇವೆ. ಅದು ಯಾವದಂದರೆ
ದೇವರು ನಮ್ಮ ಮಹಿಮೆಗಾಗಿ ಲೋಕೋತ್ಪತ್ತಿಗಿಂತ
ಮೊದಲೇ ನೇಮಿಸಿ ಇದು ವರೆಗೆ ಮರೆಮಾಡಿದ ಜ್ಞಾನ
8 ವೇ. ಇದನ್ನು ಇಹಲೋಕಾಧಿಕಾರಿಗಳಲ್ಲಿ ಯಾರೂ
ಅರಿಯಲಿಲ್ಲ; ಅರಿತಿದ್ದರೆ ಅವರು ಮಹಿಮೆಯುಳ್ಳ
9 ಕರ್ತನನ್ನು ಶಿಲುಬೆಗೆ ಹಾಕಿಸುತ್ತಿರಲಿಲ್ಲ; ಆದರೆ ಬರೆ
ದಿರುವ ಪ್ರಕಾರ—

ದೇವರು ತನ್ನನ್ನು ಪ್ರೀತಿಸುವವರಿಗಾಗಿ
ಸಿದ್ಧಮಾಡಿರುವಂಥದೆಲ್ಲವನ್ನು
ಕಣ್ಣು ಕಾಣಲಿಲ್ಲ, ಕಿವಿ ಕೇಳಲಿಲ್ಲ
ಅದರ ಭಾವನೆಯು ಮನುಷ್ಯನ ಹೃದಯದಲ್ಲಿ
ಹುಟ್ಟಲಿಲ್ಲ.

10 ನಮಗಾದರೋ ದೇವರು ತನ್ನ ಆತ್ಮನ ಮೂಲಕ
ಅದನ್ನು ಪ್ರಕಟಿಸಿದನು. ಆ ಆತ್ಮನು ಎಲ್ಲಾ ವಿಷಯ
ಗಳನ್ನು, ದೇವರ ಅಗಾಧವಾದ ವಿಷಯಗಳನ್ನು ಕೂಡ
11 ಪರಿಶೋಧಿಸುವವನಾಗಿದ್ದಾನೆ. ಮನುಷ್ಯನ ಒಳಗಿನ
ಆಲೋಚನೆಗಳು ಅವನಲ್ಲಿರುವ ಜೀವಾತ್ಮಕ್ಕೆ ಹೊರ
ತು ಮತ್ತಾರಿಗೆ ತಿಳಿಯುವದು? ಹಾಗೆಯೇ ದೇ
ಆಲೋಚನೆಗಳನ್ನು ದೇವರ ಆತ್ಮನೇ ಹೊರತು ಬೇ
ಯಾರೂ ಗ್ರಹಿಸುವದಿಲ್ಲ. ನಾವು ಪ್ರಾಪಂಚಿಕ ಆ
ವನ್ನು ಹೊಂದದೆ ದೇವರು ನಮಗೆ ದಯಪಾಲಿ
ರುವ ಕೃಪಾವರಗಳನ್ನು ತಿಳುಕೊಳ್ಳುವದಕ್ಕಾಗಿ ದೇ
ರಿಂದ ಬಂದ ಆತ್ಮವನ್ನೇ ಹೊಂದಿದೆವು. ಇವುಗಳ
ಮಾನುಷಜ್ಞಾನವು ಕಲಿಸಿದ ಮಾತುಗಳಿಂದ ಹೇ
ದೇವರಾತ್ಮನೇ ಕಲಿಸಿಕೊಟ್ಟ ಮಾತುಗಳಿಂದ ಹೇ
ಆತ್ಮಸಂಬಂಧವಾದವುಗಳನ್ನು ಆತ್ಮಸಿಗೆ ಯುಕ್ತವಾ
ರೀತಿಯಲ್ಲಿ ವಿವರಿಸುತ್ತೇವೆ. 2)ಪ್ರಾಕೃತಮನುಷ್ಯ
ದೇವರಾತ್ಮನ ವಿಷಯಗಳನ್ನು ಬೇಡವೆನ್ನುತ್ತಾನೆ; ಅ
ಅವನಿಗೆ ಹುಚ್ಚುಮಾತಾಗಿ ತೋರುತ್ತವೆ; ಅ
ಆತ್ಮವಿಚಾರದಿಂದ ತಿಳಿಯತಕ್ಕವುಗಳಾಗಿರಲಾಗಿ ಅವ
ಅವುಗಳನ್ನು ಗ್ರಹಿಸಲಾರನು. ದೇವರಾತ್ಮನಿಂದ ನಡ
ಕೊಳ್ಳುವವನೋ ಎಲ್ಲವನ್ನೂ ವಿಚಾರಿಸಿ ತಿಳುಕೋ
ತ್ತಾನೆ; ಆದರೆ ಇವನನ್ನು ಯಾವನಾದರೂ ವಿಚಾ
ತಿಳುಕೊಳ್ಳುವದಿಲ್ಲ. ಕರ್ತನ ಮನಸ್ಸನ್ನು ತಿ
ಕೊಂಡು ಆತನಿಗೆ ಉಪದೇಶಿಸುವವನಾರು ಎಂದು ಬ
ದದೆಯಲ್ಲಾ. ನಮಗಾದರೋ ಕ್ರಿಸ್ತನ ಮನಸ್ಸು ದೊ
ಕಿತು.

ಸಹೋದರರೇ, ನಾನಂತೂ ದೇವರಾತ್ಮನಿಂದ ನ
ಸಿಕೊಳ್ಳುವವರಿಗೆ ತಕ್ಕಂತೆ ನಿಮ್ಮ ಸಂಗಡ ಮಾತಾ
ಲಾರದೆ ಪ್ರಾಪಂಚಿಕರೂ ಕ್ರಿಸ್ತನ ವಿಷಯದಲ್ಲಿ
ಗೂಸುಗಳೂ ಆಗಿರುವಂಥವರಿಗೆ ತಕ್ಕಂತೆ ನಿಮ
ಸಂಗಡ ಮಾತಾಡಬೇಕಾಯಿತು. ನಿಮಗೆ ಹಾ
ಕುಡಿಸಿದೆನು, ಅನ್ನಾ ಕೊಡಲಿಲ್ಲ; ಅನ್ನಾ ತಿನ್ನುವದ
ನಿಮಗೆ ಇನ್ನೂ ಶಕ್ತಿ ಇರಲಿಲ್ಲ, ಈಗಲಾದರೂ ಶ
ಯಿಲ್ಲ; ಯಾಕಂದರೆ ಇನ್ನೂ ಶರೀರಾಧೀನಸ್ವಭಾ
ವುಳ್ಳವರಾಗಿದ್ದೀರಿ. ನಿಮ್ಮೊಳಗೆ ಹೊಟ್ಟೇಕಿಚ್ಚು ಜ
ಳಗಳು ಇರುವಲ್ಲಿ ನೀವು ಶರೀರಾಧೀನಸ್ವಭಾವವುಳ್ಳ
ರಾಗಿದ್ದು ಕೇವಲ ನರಪ್ರಾಣಿಗಳಂತೆ ನಡೆಯುತ್ತಿ
ಲ್ಲವೇ. ಒಬ್ಬನು—ನಾನು ಪೌಲನವನು ಎಂ
ಮತ್ತೊಬ್ಬನು—ನಾನು ಅಪೊಲ್ಲೋಸನವನು ಎಂ
ಹೇಳುತ್ತಿರುವಾಗ ನೀವು ಕೇವಲ ನರಪ್ರಾಣಿಗಳಾಗಿದ್ದ
ರಲ್ಲವೇ.

ಸುವಾರ್ತೆಯನ್ನು ಸಾರುವವರು ದೇವರ ಕೈಯಲ್ಲಿ ಬರೀ ಸಾಧ
ಗಳಷ್ಟೆ; ಕಾರ್ಯಕರ್ತನು ದೇವರೇ.

ಹಾಗಾದರೆ ಅಪೊಲ್ಲೋಸನು ಏನು? ಪೌಲ
ಏನು? ಅವರು ಸೇವಕರು; ಅವರ ಮುಖಾಂತರ ನೀ
ಕ್ರಿಸ್ತನನ್ನು ನಂಬುವವರಾದಿರಿ; ಕರ್ತನು ಒಬ್ಬೊಬ
ಸಿಗೆ ದಯಪಾಲಿಸಿದ ಪ್ರಕಾರ ಅವರು ಸೇವೆಮಾಡುವ
ರಾಗಿದ್ದಾರೆ. ನಾನು ಸಸಿಯನ್ನು ನೆಟ್ಟೆನು, ಅಪ
ಲ್ಲೋಸನು ನೀರುಹೊಯಿದನು, ಆದರೆ ಬೆಳೆಸುತ
ಬಂದವನು ದೇವರು. ಹೀಗಿರಲಾಗಿ ನೆಡುವವನಾಗ
ನೀರುಹೊಯ್ಯುವವನಾಗಲಿ ವಿಶೇಷವಾದವನಲ್ಲ, ಬ

1) ಅಥವಾ, ಜ್ಞಾನವು ಅಂದರೆ . . . . ಕಾರಣನು ಆದನು.

2) ಅಂದರೆ, ಜ್ಞಾನೋದಯವಾಗದ ಮನುಷ್ಯನು, ಪ್ರಾಪಂ

ಸುವ ದೇವರೇ ವಿಶೇಷವಾದವನು. ನೆಡುವವನೂ ನೀರು
ಹೊಯ್ಯುವವನೂ ಒಂದೇ ಆಗಿದ್ದಾರೆ. ಆದರೂ
ಪ್ರತಿಯೊಬ್ಬನಿಗೆ ಅವನವನ ಕಷ್ಟಕ್ಕೆ ತಕ್ಕ ಹಾಗೆ ಕೂಲಿ
ಯು ದೊರೆಯುವದು. ನಾವು ದೇವರ ಜೊತೆಕೆಲ
ಸದವರು: ನೀವು 1)ದೇವರ ಹೊಲವೂ ದೇವರ
ಕಟ್ಟಡವೂ ಆಗಿದ್ದೀರಿ.

2)ದೇವರು ನನಗೆ ಕೃಪೆಯಿಂದ ಒಪ್ಪಿಸಿದ ಕೆಲಸ
ವನ್ನು ನಡಿಸಿ ನಾನು ಪ್ರವೀಣಶಿಲ್ಪಿಯಂತೆ ಅಸ್ತಿ
ವಾರ ಹಾಕಿದೆನು, ಮತ್ತೊಬ್ಬನು ಅದರ ಮೇಲೆ ಕಟ್ಟು
ತ್ತಾನೆ. ಪ್ರತಿಯೊಬ್ಬನು ತಾನು ಅದರ ಮೇಲೆ
ಎಂಥದನ್ನು ಕಟ್ಟುತ್ತಾನೋ ಎಚ್ಚರಿಕೆಯಾಗಿರಬೇಕು.
ಹಾಕಿರುವ ಅಸ್ತಿವಾರವು ಯೇಸು ಕ್ರಿಸ್ತನೇ; ಆ
ಅಸ್ತಿವಾರವನ್ನಲ್ಲದೆ ಮತ್ತೊಂದು ಅಸ್ತಿವಾರವನ್ನು
ಯಾರೂ ಹಾಕಲಾರರಷ್ಟೆ. ಆ ಅಸ್ತಿವಾರದ ಮೇಲೆ
ಚಿನ್ನ ಬೆಳ್ಳಿ ರತ್ನ ಕಟ್ಟಿಗೆ ಹುಲ್ಲು ಆಪು ಮುಂತಾದ
ವುಗಳಲ್ಲಿ ಯಾವದರಿಂದ ಕಟ್ಟಿದರೂ ಅವನವನ
ಕೆಲಸವು ವ್ಯಕ್ತವಾಗುವದು. ಕ್ರಿಸ್ತನು ಬರುವ ದಿನವು
ಬೆಂಕಿಯೊಡನೆ ಉದಯವಾಗಿ ಆ ಕೆಲಸವನ್ನು ಸ್ಪಷ್ಟ
ವಾಗಿ ತೋರಿಸುವದು; ಅವನವನ ಕೆಲಸವೆಂಥದೋ ಆ
ಬೆಂಕಿ ಶೋಧಿಸುವದು. ಒಬ್ಬನು ಆ ಅಸ್ತಿವಾರದ
ಮೇಲೆ ಕಟ್ಟಿದ್ದು ಉಳಿದರೆ ಅವನಿಗೆ ಸಂಬಳಬರು
ವದು. ಒಬ್ಬನು ಕಟ್ಟಿದ್ದು ಸುಟ್ಟುಹೋದರೆ ಅವನಿಗೆ
ಸಂಬಳವು ನಷ್ಟವಾಗುವದು; ತಾನಾದರೋ ರಕ್ಷಣೆ
ಹೊಂದುವನು, ಆದರೆ ಬೆಂಕಿಯೊಳಗಿಂದ ತಪ್ಪಿಸಿ
ಕೊಂಡವನ ಹಾಗಿರುವನು.

ನೀವು ದೇವರ ಆಲಯವಾಗಿದ್ದೀರೆಂದೂ ದೇವರ
ಆತ್ಮನು ನಿಮ್ಮಲ್ಲಿ ವಾಸಮಾಡುತ್ತಾನೆಂದೂ ನಿಮಗೆ
ಗೊತ್ತಿಲ್ಲವೋ? ಯಾವನಾದರೂ ದೇವರ ಆಲಯ
ವನ್ನು ಕೆಡಿಸಿದರೆ ದೇವರು ಅವನನ್ನು ಕೆಡಿಸುವನು.
ಯಾಕಂದರೆ ದೇವರ ಆಲಯವು ಪವಿತ್ರವಾದದ್ದು, ಆ
ಆಲಯವು ನೀವೇ.

ಯಾವನೂ ತನ್ನನ್ನು ತಾನೇ ಮೋಸಗೊಳಿಸದಿರಲಿ.
ತಾನು ನಿಮ್ಮಲ್ಲಿ ಲೋಕಸಂಬಂಧವಾಗಿ ಜ್ಞಾನಿಯಾ
ಗಿದ್ದೇನೆಂದು ಭಾವಿಸಿಕೊಳ್ಳುವವನು ಜ್ಞಾನಿಯಾಗು
ವಂತೆ ಹುಚ್ಚನಾಗಲಿ. ಯಾಕಂದರೆ ಇಹಲೋಕ
ಜ್ಞಾನವು ದೇವರ ಮುಂದೆ ಹುಚ್ಚುತನವಾಗಿದೆ. ಆತ
ನು ಜ್ಞಾನಿಗಳನ್ನು ಅವರ ತಂತ್ರಗಳಲ್ಲಿಯೇ ಹಿಡುಕೊ
ಳ್ಳುತ್ತಾನೆಂತಲೂ ಜ್ಞಾನಿಗಳ ಯೋಚನೆಗಳು ನಿಷ್ಫಲ
ವಾದವುಗಳೆಂದು ಕರ್ತನು ತಿಳುಕೊಳ್ಳುತ್ತಾನೆಂತಲೂ
ಬರೆದದೆಯಲ್ಲಾ. ಆದಕಾರಣ ಮನುಷ್ಯಮಾತ್ರದ
ವರ ವಿಷಯದಲ್ಲಿ ಯಾರೂ ಹಿಗ್ಗದಿರಲಿ. ಯಾಕಂ
ದರೆ ಸಮಸ್ತವೂ ನಿಮ್ಮದು; ಪೌಲನಾಗಲಿ ಅಪೊ
ಲ್ಲೋಸನಾಗಲಿ ಕೇಫನಾಗಲಿ, ಲೋಕವಾಗಲಿ ಜೀವ
ವಾಗಲಿ ಮರಣವಾಗಲಿ, ಈಗಿನ ಸಂಗತಿಗಳಾಗಲಿ
ಮುಂದಣ ಸಂಗತಿಗಳಾಗಲಿ ಸಮಸ್ತವೂ ನಿಮ್ಮದೇ;
ನೀವಂತೂ ಕ್ರಿಸ್ತನವರು, ಕ್ರಿಸ್ತನು ದೇವರವನು.

ಸುವಾರ್ತಾಬೋಧಕರ ವಿಷಯದಲ್ಲಿ ಮನುಷ್ಯರ ಎಣಿಕೆ
ವಿಶೇಷವಲ್ಲ, ದೇವರ ಎಣಿಕೆಯೇ ಮುಖ್ಯ.

ಜನರು ನಮ್ಮನ್ನು ಕ್ರಿಸ್ತನ ಕೈಕೆಳಗಿನವರೆಂತಲೂ ದೇ 4
ವರು ತಿಳಿಸಿರುವ ಸತ್ಯಾರ್ಥಗಳ ವಿಷಯದಲ್ಲಿ ಮನೆ
ವಾರ್ತೆಯವರೆಂತಲೂ ಎಣಿಸಬೇಕು. ಹೀಗಿರಲು 2
ಮನೆವಾರ್ತೆಯವನು ನಂಬಿಗಸ್ತನಾಗಿ ಕಂಡುಬರುವದು
ಅವಶ್ಯವಲ್ಲವೇ. ನನಗಾದರೋ ನಿಮ್ಮಿಂದಾಗಲಿ ಮನು 3
ಷ್ಯರು ನೇಮಿಸುವ ದಿನದಲ್ಲಾಗುವ ನ್ಯಾಯಸಭೆಯಿಂ
ದಾಗಲಿ ವಿಚಾರಣೆಯಾಗುವದು ಅತ್ಯಲ್ಪಕಾರ್ಯವಾ
ಗಿದೆ; ನಾನೂ ನನ್ನನ್ನು ವಿಚಾರಿಸಿಕೊಳ್ಳುವದಿಲ್ಲ.
ನನ್ನಲ್ಲಿ ದೋಷವಿದೆಯೆಂದು ನನ್ನ ಬುದ್ಧಿಗೆ ತೋರು 4
ವದಿಲ್ಲವಾದರೂ ದೋಷವಿಲ್ಲದವನೆಂಬ ನಿರ್ಣಯವು
ಇದರಿಂದಾಗುವದಿಲ್ಲ; ನನ್ನನ್ನು ವಿಚಾರಣೆಮಾಡುವ
ವನು ಕರ್ತನೇ. ಆದದರಿಂದ ಕಾಲಕ್ಕೆ ಮೊದಲು 5
ಯಾವದನ್ನು ಕುರಿತೂ ತೀರ್ಪುಮಾಡಬೇಡಿರಿ; ಕರ್ತನು
ಬರುವ ತನಕ ತಡೆಯಿರಿ. ಆತನು ಕತ್ತಲೆಯಲ್ಲಿರುವ
ಗುಪ್ತಕಾರ್ಯಗಳನ್ನು ಬೆಳಕಿಗೆ ತರುವನು, ಹೃದ
ಯದ ಯೋಚನೆಗಳನ್ನು ಪ್ರತ್ಯಕ್ಷಪಡಿಸುವನು; ಆ
ಕಾಲದಲ್ಲಿ ಪ್ರತಿಯೊಬ್ಬನಿಗೆ ಬರತಕ್ಕ ಹೊಗಳಿಕೆಯು
ದೇವರಿಂದ ಬರುವದು.

ಪೌಲನು ಕೊರಿಂಥ ಸಭೆಯವರನ್ನು ತಂದೆಯೋಪಾದಿಯಲ್ಲಿ
ಗದರಿಸಿದ್ದು.

ಸಹೋದರರೇ, ನಾನು ನಿಮಗೋಸ್ಕರವೇ ಹಿಂದಣ 6
ಮಾತುಗಳನ್ನು ಸಾಮ್ಯರೂಪವಾಗಿ ನನ್ನ ವಿಷಯದಲ್ಲಿ
ಯೂ ಅಪೊಲ್ಲೋಸನ ವಿಷಯದಲ್ಲಿಯೂ ಹೇಳಿದ್ದೇನೆ.
ನೀವು ನಮ್ಮನ್ನು ದೃಷ್ಟಾಂತವಾಗಿ ಇಟ್ಟುಕೊಂಡು
ಶಾಸ್ತ್ರದಲ್ಲಿ ಬರೆದಿರುವದನ್ನು ಮೀರಿಹೋಗಬಾರ
ದೆಂಬದನ್ನೂ ನಿಮ್ಮಲ್ಲಿ ಯಾರೂ ಒಬ್ಬ ಬೋಧಕ
ನನ್ನು ವಿರೋಧಿಸಿ ಮತ್ತೊಬ್ಬನ ಪಕ್ಷವನ್ನು ಹಿಡಿದು
ಉಬ್ಬಿಕೊಳ್ಳಬಾರದೆಂಬದನ್ನೂ ಕಲಿತುಕೊಳ್ಳಬೇಕು.
ನಿನಗೂ ಇತರರಿಗೂ ತಾರತಮ್ಯ ಮಾಡಿದವರು 7
ಯಾರು? ದೇವರಿಂದ ಹೊಂದದೆ ಇರುವಂಥದು
ನಿನ್ನಲ್ಲಿ ಒಂದಾದರೂ ಉಂಟೋ? ಹೊಂದಿದ ಮೇಲೆ
ಹೊಂದದವನಂತೆ ನೀನು ಯಾಕೆ ಹಿಗ್ಗಿಕೊಳ್ಳುತ್ತೀ?
ಈಗಾಗಲೇ ನೀವು ತೃಪ್ತರಾದಿರಿ, ಈಗಾಗಲೇ ಐಶ್ವ 8
ರ್ಯವಂತರಾದಿರಿ, ನಮ್ಮ ಸಹಾಯವಿಲ್ಲದೆ ಅರಸ
ರಾದಿರಿ. ನೀವು ನಿಜವಾಗಿ ಅರಸರಾಗಿದ್ದರೆ ನನಗೆ
ಎಷ್ಟೋ ಆನಂದವಾಗುತ್ತಿತ್ತು; ಆಗ ನಾವು ಸಹ
ನಿಮ್ಮೊಂದಿಗೆ ಅರಸರಾಗಿರುತ್ತಿದ್ದೆವು. ಹಾಗಾಗದೆ 9
ದೇವರು ಅಪೊಸ್ತಲರಾದ ನಮ್ಮನ್ನು ಮರಣವಿಧಿ
ಹೊಂದಿದವರನ್ನೋ ಎಂಬಂತೆ 3)ಕಡೆಯವರಾಗಿ ತೋರಿ
ಸಿದ್ದಾನೆಂದು ನನಗೆ ತೋಚುತ್ತದೆ; ನಾವು ದೇವದೂತ

1) ಅಥವಾ, ದೇವರ ಸಾಗುವಳಿಯೂ. 2) ಅಥವಾ, ದೇವರು ನನಗೆ ಅನುಗ್ರಹಿಸಿದ ಕೃಪೆಯನ್ನವಲಂಬಿಸಿ. 3) ಅಥವಾ,
...ೇ ವಿನೋದವಾಗಿ.

ರಿಗೂ ಮನುಷ್ಯರಿಗೂ ಅಂತೂ ಜಗತ್ತಿಗೆಲ್ಲಾ ನೋಟವಾ
10 ದೆವು. ನಾವಂತು ಕ್ರಿಸ್ತನ ನಿಮಿತ್ತ ಹುಚ್ಚರಾಗಿ
ದ್ದೇವೆ, ನೀವೋ ಕ್ರಿಸ್ತನಲ್ಲಿ ಬುದ್ಧಿವಂತರಾಗಿದ್ದೀರಿ;
ನಾವು ಬಲಹೀನರು, ನೀವು ಬಲಿಷ್ಠರು; ನೀವು ಮಾನ
11 ಶಾಲಿಗಳು, ನಾವು ಮಾನಹೀನರು. ಈ ಗಳಿಗೆಯ
ವರೆಗೂ ನಾವು ಹಸಿದವರೂ ಬಾಯಾರಿಕೆಯುಳ್ಳ
ವರೂ ಮೈಗೆ ವಸ್ತ್ರವಿಲ್ಲದವರೂ ಗುದ್ದು ತಿನ್ನುವವರೂ
12 ಮನೆಯಿಲ್ಲದವರೂ ಸ್ವಂತ ಕೈಗಳಿಂದ ಕೆಲಸಮಾಡಿ
ದುಡಿಯುವವರೂ ಆಗಿದ್ದೇವೆ. ಬೈಸಿಕೊಂಡು ಹರಸು
ತ್ತೇವೆ; ಹಿಂಸೆಪಟ್ಟು ಸಹಿಸಿಕೊಳ್ಳುತ್ತೇವೆ; ಅಪಕೀರ್ತಿ
13 ಹೊಂದಿ ಆದರಿಸುತ್ತೇವೆ. ನಾವು ಈಗಿನ ವರೆಗೂ
ಲೋಕದ ಕಸವೋ ಎಲ್ಲಾದರ ಹೊಲಸೋ ಎಂಬಂತೆ
ಆಗಿದ್ದೇವೆ.
14 ನಿಮ್ಮನ್ನು ನಾಚಿಕೆಪಡಿಸುವದಕ್ಕಾಗಿ ಬರೆಯದೆ
ನನ್ನ ಪ್ರಿಯ ಮಕ್ಕಳೆಂದು ಭಾವಿಸಿ ನಿಮಗೆ ಬುದ್ಧಿ
ಹೇಳುವದಕ್ಕಾಗಿಯೇ ಈ ಮಾತುಗಳನ್ನು ಬರೆದಿದ್ದೇನೆ.
15 ನಿಮಗೆ ಕ್ರಿಸ್ತನಲ್ಲಿ ಉಪಾಧ್ಯಾಯರು ಸಾವಿರಾರು
ಮಂದಿ ಇದ್ದರೂ ತಂದೆಗಳು ಬಹುಮಂದಿ ಇಲ್ಲ;
ನಾನೇ ನಿಮ್ಮನ್ನು ಸುವಾರ್ತೆಯ ಮೂಲಕ ಕ್ರಿಸ್ತ
16 ಯೇಸುವಿನಲ್ಲಿ ಪಡೆದೆನು. ಆದದರಿಂದ ನನ್ನನ್ನು
ಅನುಸರಿಸಬೇಕೆಂದು ನಿಮ್ಮನ್ನು ಬೇಡಿಕೊಳ್ಳುತ್ತೇನೆ.
17 ಈ ನಿಮಿತ್ತದಿಂದ ಕರ್ತನಲ್ಲಿ ನನ್ನ ಮಗನಾದ
ತಿಮೊಥೆಯನನ್ನು ನಿಮ್ಮ ಬಳಿಗೆ ಕಳುಹಿಸಿಕೊಟ್ಟಿ
ದ್ದೇನೆ. ಅವನು ನನಗೆ ಪ್ರಿಯನೂ ನಂಬಿಗಸ್ತನೂ
ಆಗಿದ್ದಾನೆ. ಅವನು ಕ್ರಿಸ್ತನ ಸೇವೆಯಲ್ಲಿರುವ ನನ್ನ
ನಡಾವಳಿಯನ್ನು ಅಂದರೆ ನಾನು ಎಲ್ಲೆಲ್ಲಿಯೂ ಪ್ರತಿ
ಯೊಂದು ಸಭೆಯಲ್ಲಿಯೂ ಬೋಧಿಸುವ ಕ್ರಮವನ್ನು
18 ನಿಮ್ಮ ನೆನಪಿಗೆ ತರುವನು. ನಿಮ್ಮಲ್ಲಿ ಕೆಲವರು—
ಪೌಲನು ನಮ್ಮ ಬಳಿಗೆ ಬರುವದಿಲ್ಲವೆಂದು ಉಬ್ಬಿ
19 ಕೊಂಡಿದ್ದಾರೆ. ಆದರೆ ಕರ್ತನ ಚಿತ್ತವಿದ್ದರೆ ನಾನು
ಬೇಗ ನಿಮ್ಮ ಬಳಿಗೆ ಬಂದು ಉಬ್ಬಿಕೊಂಡಿರುವವರ
ಮಾತನ್ನಲ್ಲ ಅವರ ಶಕ್ತಿಯನ್ನೇ ಗೊತ್ತುಮಾಡಿಕೊ
20 ಳ್ಳುವೆನು. ದೇವರ ರಾಜ್ಯವು ಮಾತಿನಲ್ಲಿ ಇಲ್ಲ,
21 ಶಕ್ತಿಯಲ್ಲಿಯೇ ಆಧಾರಗೊಂಡದೆ. ನಿಮ್ಮ ಇಷ್ಟ
ವೇನು? ಬೆತ್ತತೆಗೆದುಕೊಂಡು ನಿಮ್ಮ ಬಳಿಗೆ ಬರ
ಲೋ? ಪ್ರೀತಿಯಿಂದಲೂ ಸೌಮ್ಯಭಾವದಿಂದಲೂ ಕೂಡಿ
ದವನಾಗಿ ಬರಲೋ?

ಸಭೆಯಲ್ಲಿ ನಡೆದಿದ್ದ ವಿಪರೀತ ಜಾರತ್ವವನ್ನು ಕುರಿತದ್ದು.

5 ನಿಮ್ಮಲ್ಲಿ ಜಾರತ್ವವುಂಟೆಂದು ಜನರು ಸಾಧಾರಣ
ವಾಗಿ ಹೇಳುತ್ತಾರೆ. ಒಬ್ಬನು ತನ್ನ ಅಪ್ಪನ ಹೆಂಡ
ತಿಯನ್ನು ಇಟ್ಟುಕೊಂಡಿದ್ದಾನಂತೆ; ಅಂಥ ಜಾರ
2 ತ್ವವು ಅನ್ಯಜನರಲ್ಲಿಯೂ ಇಲ್ಲ. ಹೀಗಿದ್ದರೂ ನೀವು
ದುಃಖವನ್ನು ತೋರಿಸದೆ ಈ ಕಾರ್ಯಮಾಡಿದವನನ್ನು
ನಿಮ್ಮೊಳಗಿಂದ ಬಹಿಷ್ಕರಿಸದೆ ಉಬ್ಬಿಕೊಂಡೇ ಇದ್ದೀ
3 ರಲ್ಲಾ. ನಾನಂತೂ ದೇಹದಿಂದ ದೂರವಾಗಿದ್ದರೂ
ಆತ್ಮದಿಂದ ಹತ್ತರದಲ್ಲಿದ್ದು ಈ ಕಾರ್ಯಮಾಡಿದವ
ನನ್ನು ಕುರಿತು ಆಗಲೇ ಹತ್ತರವಿದ್ದವನಂತೆ ತೀರ್ಪು
4 ಮಾಡಿದ್ದೇನಂದರೆ—ನೀವೂ ನನ್ನಾತ್ಮನೂ ಕರ್ತನಾದ

ಯೇಸುವಿನ ಸಾಮರ್ಥ್ಯ ಸಹಿತ ಒಟ್ಟುಗೂಡಿ ಬಂ
ಲಾಗಿ ಕರ್ತನಾದ ಯೇಸುವಿನ ಪ್ರತ್ಯಕ್ಷತೆಯ
ದಲ್ಲಿ ಅಂಥವನ ಆತ್ಮವು ರಕ್ಷಣೆಹೊಂದುವದಕ
ಅವನ ಶರೀರಭಾವವು ನಾಶವಾಗಬೇಕೆಂದು ನ
ಕರ್ತನಾದ ಯೇಸುವಿನ ಹೆಸರಿನಲ್ಲಿ ಅವನನ್ನು ಸೈ
ನನಿಗೆ ಒಪ್ಪಿಸಿಕೊಡಬೇಕೆಂಬದೇ. ನೀವು ಹಿಗ್ಗು
ಒಳ್ಳೇದಲ್ಲ. ಸ್ವಲ್ಪ ಹುಳಿ ಕಲಸಿದರೆ ಕಣಿಕವೆ
ಹುಳಿಯಾಗುತ್ತದೆಂಬದು ನಿಮಗೆ ತಿಳಿಯದೋ? ನಿ
ಹುಳಿಯಿಲ್ಲದವರೆನಿಸಿಕೊಂಡದ್ದರಿಂದ ಹಳೆ ಹ
ಯನ್ನು ತೆಗೆದುಹಾಕಿ ಹೊಸ ಕಣಿಕದಂತಾಗಿರ್ರಿ. ಯ
ಕಂದರೆ ನಮ್ಮ ಪಸ್ಕದ ಯಜ್ಞದ ಕುರಿಯು ಕೊ
ದದೆ; ಅದಾವದಂದರೆ ಕ್ರಿಸ್ತನೇ. ಆದಕಾರಣ ನ
ಹಳೇ ಹುಳಿಯನ್ನು ಅಂದರೆ ದುರ್ಮಾರ್ಗ
ದುಷ್ಟತ್ವ ಎಂಬ ಹುಳಿಯನ್ನು ಇಟ್ಟುಕೊಳ್ಳದೆ ಸರ
ಸತ್ಯತೆ ಎಂಬ ಹುಳಿಯಿಲ್ಲದ ರೊಟ್ಟಿಯನ್ನೇ ತೆಗೆ
ಕೊಂಡು ಹಬ್ಬವನ್ನು ಆಚರಿಸೋಣ.
ಜಾರರ ಸಹವಾಸ ಮಾಡಬಾರದೆಂದು ನನ್ನ ಪ
ಯಲ್ಲಿ ಬರೆದಿದ್ದೆನಷ್ಟೆ. ಈ ಲೋಕದಲ್ಲಿರುವ ಜಾರ
ಲೋಭಿಗಳು, ಸುಲುಕೊಳ್ಳುವವರು, ವಿಗ್ರಹಾರ
ಕರು ಇವರ ಸಹವಾಸವನ್ನು ಬಿಟ್ಟುಬಿಡಬೇಕೆಂದು ನ
ತಾತ್ಪರ್ಯವಲ್ಲ; ಹಾಗೆ ಬಿಡಬೇಕಾದರೆ ನೀವು
ಲೋಕವನ್ನೇ ಬಿಟ್ಟುಹೋಗಬೇಕಾಗುವದು. ಆ
ಕ್ರೈಸ್ತಸಹೋದರನೆನಿಸಿಕೊಂಡವನು ಜಾರನಾದ
ಲೋಭಿಯಾದರೂ ವಿಗ್ರಹಾರಾಧಕನಾದರೂ ಬೈಯ
ವನಾದರೂ ಕುಡಿಕನಾದರೂ ಸುಲುಕೊಳ್ಳುವವ
ದರೂ ಆಗಿದ್ದ ಪಕ್ಷದಲ್ಲಿ ಅವನ ಸಹವಾಸ ಮಾಡ
ರದು, ಅಂಥವನ ಸಂಗಡ ಊಟಮಾಡಲೂ ಬಾರ
ಎಂದು ಬರೆದಿದ್ದೆನು. ಹೊರಗಿನವರನ್ನು ಕುರಿ
ತೀರ್ಪುಮಾಡುವದಕ್ಕೆ ನನಗೇನಧಿಕಾರ? ಒಳಗಿ
ರನ್ನು ಕುರಿತು ತೀರ್ಪುಮಾಡುವವರು ನೀವು ಅಲ್ಲ
ಹೊರಗಿನವರನ್ನು ಕುರಿತು ತೀರ್ಪುಮಾಡುವವ
ದೇವರು. ಆ ದುಷ್ಟನನ್ನು ನಿಮ್ಮ ಮಧ್ಯದಿ
ತೆಗೆದುಹಾಕಬೇಕು.

ಕ್ರೈಸ್ತರು ಕ್ರೈಸ್ತರಲ್ಲದವರ ಮುಂದೆ ವ್ಯಾಜ್ಯವಾಡಿದ್ದನ್ನು
ಕುರಿತದ್ದು.

ನಿಮ್ಮಲ್ಲಿ ಒಬ್ಬನಿಗೆ ಮತ್ತೊಬ್ಬನ ಮೇಲೆ ವ್ಯಾ
ವಿದ್ದರೆ ನ್ಯಾಯವಿಚಾರಣೆಗೆ ದೇವಜನರ ಮುಂ
ಹೋಗದೆ ಅನ್ಯಜನರ ಮುಂದೆ ಹೋಗುವದಕ್ಕೆ
ನಿಗೆ ಧೈರ್ಯವುಂಟೋ? ದೇವಜನರು ಲೋಕ
ತೀರ್ಪುಮಾಡುವರೆಂಬದು ನಿಮಗೆ ತಿಳಿಯದೋ? ಲೋ
ಕವು ನಿಮ್ಮಿಂದ ತೀರ್ಪನ್ನು ಹೊಂದಬೇಕಾಗಿರುವ
ಅತ್ಯಲ್ಪ ಸಂಗತಿಗಳನ್ನು ಕುರಿತು ತೀರ್ಪುಮಾಡುವದ
ಅಯೋಗ್ಯರಾಗಿದ್ದೀರೋ? ನಾವು ದೇವದೂತರಿಗ
ತೀರ್ಪುಮಾಡುವೆವೆಂಬದು ನಿಮಗೆ ತಿಳಿಯದೋ? ಐ
ಕಜೀವದ ಕಾರ್ಯಗಳನ್ನು ಕುರಿತು ನಾವು ತೀರ್
ಮಾಡುವದು ದೊಡ್ಡದೋ? ಐಹಿಕಜೀವಸಂಬಂಧದ
ನಿರ್ಣಯಿಸತಕ್ಕ ಕಾರ್ಯಗಳು ನಿಮ್ಮಲ್ಲಿದ್ದರೆ ತೀರ್
ಮಾಡುವದಕ್ಕೆ ಸಭೆಯಲ್ಲಿ ಗಣನೆಗೆ ಬಾರದವರನ್

ಕುಳ್ಳಿರಿಸಿಕೊಳ್ಳುತ್ತೀರೋ? ನಿಮ್ಮಲ್ಲಿ ನಾಚಿಕೆ
ಹುಟ್ಟಿಸುವದಕ್ಕೆ ಇದನ್ನು ಹೇಳುತ್ತೇನೆ. ಏನು, ತನ್ನ
ಸಹೋದರರ ಮಧ್ಯದಲ್ಲಿ ನ್ಯಾಯವನ್ನು ಬಗೆಹರಿಸಬಲ್ಲ
ವನಾದ ಜಾಣನು ನಿಮ್ಮಲ್ಲಿ ಒಬ್ಬನಾದರೂ ಇಲ್ಲವೋ?
ಸಹೋದರನು ಸಹೋದರನ ಮೇಲೆ ವ್ಯಾಜ್ಯವಾಡು
ವದು ಅಲ್ಲದೆ ಅದನ್ನು ಕ್ರಿಸ್ತಭಕ್ತರಲ್ಲದವರ ಮುಂದೆ
ತೆಗೆದುಕೊಂಡುಹೋಗುವದು ಸರಿಯೋ? ನಿಮ್ಮ
ನಿಮ್ಮಲ್ಲಿ ವ್ಯಾಜ್ಯವಾಡುವದೇ ನೀವು ಸೋತವರೆಂಬ
ದಕ್ಕೆ ಗುರುತು. ಅದಕ್ಕಿಂತ ಅನ್ಯಾಯವನ್ನು ಯಾಕೆ
ಸಹಿಸಬಾರದು? ಆಸ್ತಿಯ ನಷ್ಟವನ್ನು ಯಾಕೆ
ತಾಳಬಾರದು? ಆದರೆ ನೀವು ಅನ್ಯಾಯಮಾಡುತ್ತೀರಿ;
ಆಸ್ತಿಯನ್ನು ಅಪಹರಿಸುತ್ತೀರಿ; ಸಹೋದರರಲ್ಲಿ
ಯೇ ಹೀಗೆ ಮಾಡುತ್ತೀರಿ. ಅನ್ಯಾಯಗಾರರು ದೇವರ
ರಾಜ್ಯಕ್ಕೆ ಬಾಧ್ಯರಾಗುವದಿಲ್ಲವೆಂಬದು ನಿಮಗೆ ತಿಳಿ
ಯದೋ? ಮೋಸಹೋಗಬೇಡಿರಿ, ಜಾರರು ವಿಗ್ರಹಾ
ರಾಧಕರು ವ್ಯಭಿಚಾರಿಗಳು ವಿಟರು ಪುರುಷಗಾಮಿಗಳು
ಕಳ್ಳರು ಲೋಭಿಗಳು ಕುಡಿಕರು ಬೈಯುವವರು ಸುಲು
ಕೊಳ್ಳುವವರು ಇವರೊಳಗೆ ಒಬ್ಬರಾದರೂ ದೇವರ
ರಾಜ್ಯಕ್ಕೆ ಬಾಧ್ಯರಾಗುವದಿಲ್ಲ. ನಿಮ್ಮಲ್ಲಿ ಕೆಲವರು
ಅಂಥವರಾಗಿದ್ದಿರಿ; ಆದರೂ ಕರ್ತನಾದ ಯೇಸು
ಕ್ರಿಸ್ತನ ಹೆಸರಿನಲ್ಲಿಯೂ ನಮ್ಮ ದೇವರ ಆತ್ಮದಲ್ಲಿ
ಯೂ ತೊಳೆದುಕೊಂಡಿರಿ, ದೇವಜನರಾದಿರಿ, ನೀತಿ
ವಂತರೆಂಬ ನಿರ್ಣಯವನ್ನು ಹೊಂದಿದಿರಿ.

ಜಾರತ್ವವು ಅತಿಭಯಂಕರವಾದ ಪಾಪಕೃತ್ಯ; ದೇಹವು
ಪವಿತ್ರಾತ್ಮನಿಗೆ ಅನುಕೂಲವಾದ ಗರ್ಭಗುಡಿಯಾಗಿರಬೇಕು
ಎಂಬುವ ಬೋಧೆ.

ಎಲ್ಲಾ ಕಾರ್ಯಗಳನ್ನು ಮಾಡುವದಕ್ಕೆ ನನಗೆ
ಸ್ವಾತಂತ್ರ್ಯವೇನೋ ಉಂಟು, ಆದರೆ ಎಲ್ಲವೂ ಹಿತ
ವಾಗಿರುವದಿಲ್ಲ. ಎಲ್ಲಾ ಕಾರ್ಯಗಳನ್ನು ಮಾಡುವ
ದಕ್ಕೆ ನನಗೆ ಸ್ವಾತಂತ್ರ್ಯವುಂಟು, ಆದರೆ ನಾನು ಯಾವ
ದಕ್ಕೂ ಒಳಗಾಗುವದಿಲ್ಲ. ಭೋಜನಪದಾರ್ಥಗಳು
ಹೊಟ್ಟೆಗಾಗಿಯೂ ಹೊಟ್ಟೆಯು ಭೋಜನಪದಾರ್ಥಗಳಿ
ಗಾಗಿಯೂ ಅವೆ; ದೇವರು ಇದನ್ನೂ ಅವುಗಳನ್ನೂ
ಕೂಡ ತೆಗೆದುಹಾಕುವನು. ಆದರೂ ದೇಹವು ಹಾದರ
ಕ್ಕೋಸ್ಕರ ಇರುವಂಥದಲ್ಲ, ಕರ್ತನಿಗೋಸ್ಕರವಾ
ಗಿದೆ; ಕರ್ತನು ದೇಹಕ್ಕೋಸ್ಕರ ಇದ್ದಾನೆ. ದೇವ
ರು ಕರ್ತನನ್ನು ಎಬ್ಬಿಸಿದ್ದಲ್ಲದೆ ನಮ್ಮನ್ನೂ ತನ್ನ
ಪರಾಕ್ರಮದಿಂದ ಎಬ್ಬಿಸುವನು. ನಿಮ್ಮ ದೇಹಗಳು
ಕ್ರಿಸ್ತನ ಅಂಗಗಳಾಗಿವೆ ಎಂಬದು ನಿಮಗೆ ತಿಳಿಯದೋ?
ಹೀಗಿರಲಾಗಿ ಕ್ರಿಸ್ತನ ಅಂಗಗಳಾಗಿರುವಂಥವುಗಳನ್ನು
ತೆಗೆದುಬಿಟ್ಟು ಸೂಳೆಯ ಅಂಗಗಳಾಗಮಾಡಬಹು
ದೋ? ಎಂದಿಗೂ ಮಾಡಬಾರದು. ಸೂಳೆಯ ಸಂಸರ್ಗ
ಮಾಡುವವನು ಅವಳೊಂದಿಗೆ ಒಂದೇ ದೇಹವಾಗಿದ್ದಾ
ನೆಂಬದು ನಿಮಗೆ ತಿಳಿಯದೋ? ಗಂಡಹೆಂಡರಿಬ್ಬರು
ಒಂದೇ ಶರೀರವಾಗಿರುವರೆಂದು ದೇವರು ಹೇಳುತ್ತಾ
ನಲ್ಲಾ. ಕರ್ತನ ಸಂಸರ್ಗದಲ್ಲಿರುವವನಾದರೋ
ಆತನೊಂದಿಗೆ ಒಂದೇ ಆತ್ಮವಾಗಿದ್ದಾನೆ. ಜಾರತ್ವಕ್ಕೆ
ದೂರವಾಗಿ ಓಡಿಹೋಗಿರಿ. ಮನುಷ್ಯರು ಮಾಡುವ
ಇತರ ಪಾಪಕೃತ್ಯಗಳು ದೇಹಕ್ಕೆ ಹೊರಗಾಗಿವೆ, ಆದರೆ
ಜಾರತ್ವಮಾಡುವವನು ತನ್ನ ದೇಹಕ್ಕೆ ಹಾನಿಕರವಾದ
ಪಾಪವನ್ನು ಮಾಡುತ್ತಾನೆ. ದೇವರಿಂದ ದೊರಕಿ 19
ನಿಮ್ಮೊಳಗೆ ನೆಲೆಗೊಂಡಿರುವ ಪವಿತ್ರಾತ್ಮನಿಗೆ ನಿಮ್ಮ
ದೇಹವು ಗರ್ಭಗುಡಿಯಾಗಿದೆಂಬದು ನಿಮಗೆ ತಿಳಿಯ
ದೋ? ನೀವು ನಿಮ್ಮ ಸ್ವಂತ ಸೊತ್ತಲ್ಲ; ನೀವು 20
ಕ್ರಯಕ್ಕೆ ಕೊಳ್ಳಲ್ಪಟ್ಟವರು; ಆದಕಾರಣ ನಿಮ್ಮ
ದೇಹದಲ್ಲಿ ದೇವರ ಪ್ರಭಾವವನ್ನು ಪ್ರಕಾಶಪಡಿಸಿರಿ.

ಕೊರಿಂಥದವರು ಹಾಕಿದ್ದ ಪ್ರಶ್ನೆಗಳಿಗೆ ಪೌಲನ ಉತ್ತರ
(7. 1—14. 40). ಮದುವೆಯನ್ನು ಕುರಿತದ್ದು.

7 ನೀವು ಬರೆದ ಸಂಗತಿಗಳನ್ನು ಕುರಿತು ನಾನು
ಹೇಳುವ ಅಭಿಪ್ರಾಯವೇನಂದರೆ—ಸ್ತ್ರೀಸಂಪರ್ಕವಿ
ಲ್ಲದೆ ಇರುವದು ಮನುಷ್ಯನಿಗೆ ಒಳ್ಳೇದು; ಆದರೆ ಜಾರ 2
ತ್ವವು ಪ್ರಬಲವಾಗಿರುವದರಿಂದ ಪ್ರತಿಯೊಬ್ಬನಿಗೆ ಸ್ವಂತ
ಹೆಂಡತಿಯು ಇರಲಿ, ಪ್ರತಿಯೊಬ್ಬಳಿಗೆ ಸ್ವಂತ ಗಂಡನು
ಇರಲಿ. ಗಂಡನು ಹೆಂಡತಿಗೆ ಸಲ್ಲತಕ್ಕದ್ದನ್ನು ಸಲ್ಲಿಸಲಿ, 3
ಹಾಗೆಯೇ ಹೆಂಡತಿಯು ಗಂಡನಿಗೆ ಸಲ್ಲಿಸಲಿ. ಹೆಂಡ 4
ತಿಗೆ ಸ್ವಂತ ದೇಹದ ಮೇಲೆ ಅಧಿಕಾರವಿಲ್ಲ; ಅದು
ಗಂಡನಿಗುಂಟು. ಹಾಗೆಯೇ ಪುರುಷನಿಗೆ ಸ್ವಂತ
ದೇಹದ ಮೇಲೆ ಅಧಿಕಾರವಿಲ್ಲ; ಅದು ಹೆಂಡತಿ
ಗುಂಟು. ಪ್ರಾರ್ಥನೆಗೆ ಮನಸ್ಸು ಕೊಡುವದಕ್ಕಾಗಿ 5
ನೀವು ಪರಸ್ಪರ ಸಮ್ಮತಿಯಿಂದ ಸ್ವಲ್ಪಕಾಲ ದಂಪತಿ
ಧರ್ಮವನ್ನು ಬಿಟ್ಟು ಅಗಲಿರಬಹುದೇ ಹೊರತು ಅನ್ಯಥಾ
ಹಾಗೆ ಮಾಡಬಾರದು; ಆ ಮೇಲೆ ಸೈತಾನನು
ನಿಮಗೆ ದಮೆಯಿಲ್ಲದಿರುವದನ್ನು ನೋಡಿ ನಿಮಗೆ
ದುಷ್ಪ್ರೇರಣೆಮಾಡದಂತೆ ತಿರಿಗಿ ಕೂಡಿಕೊಳ್ಳಿರಿ. ಹೀಗೆ 6
ಮಾಡಬಹುದೆಂದು ಹೇಳುವದು ಹಿತೋಪದೇಶವೇ
ಹೊರತು ಆಜ್ಞೆಯಲ್ಲ. ನಾನಿರುವಂತೆಯೇ ಎಲ್ಲಾ 7
ಮನುಷ್ಯರು ಇರಬೇಕೆಂಬದು ನನ್ನ ಇಷ್ಟ; ಆದರೆ
ಒಬ್ಬನು ಒಂದು ವಿಧವಾಗಿ ಮತ್ತೊಬ್ಬನು ಇನ್ನೊಂದು
ವಿಧವಾಗಿ ದೇವರಿಂದ ವರವನ್ನು ಹೊಂದಿಕೊಂಡಿದ್ದಾರೆ.
ಮದುವೆಯಿಲ್ಲದವರನ್ನೂ ವಿಧವೆಯರನ್ನೂ ಕುರಿತು 8
ನಾನು ಹೇಳುವದೇನಂದರೆ—ನಾನಿರುವಂತೆಯೇ ಇರು
ವದು ಅವರಿಗೆ ಒಳ್ಳೇದು; ಅವರು ದಮೆಯಿಲ್ಲದವರಾ 9
ದರೆ ಮದುವೆಮಾಡಿಕೊಳ್ಳಲಿ; ಕಾಮತಾಪಪಡುವದ
ಕ್ಕಿಂತ ಮದುವೆಮಾಡಿಕೊಳ್ಳುವದು ಉತ್ತಮವಷ್ಟೆ.
ಮದುವೆಮಾಡಿಕೊಂಡಿರುವವರಿಗೆ ನನ್ನ ಅಪ್ಪಣೆ ಮಾತ್ರ 10
ವಲ್ಲದೆ ಕರ್ತನ ಅಪ್ಪಣೆಯು ಏನಂದರೆ—ಹೆಂಡ
ತಿಯು ಗಂಡನನ್ನು ಬಿಟ್ಟು ಅಗಲಬಾರದು; ಒಂದು 11
ವೇಳೆ ಅಗಲಿದರೂ ಪುರುಷಸಹವಾಸವಿಲ್ಲದೆ ಇರ
ಬೇಕು, ಇಲ್ಲವೆ ಗಂಡನ ಸಂಗಡ ಸಮಾಧಾನವಾಗ
ಬೇಕು; ಮತ್ತು ಗಂಡನು ಹೆಂಡತಿಯನ್ನು ಬಿಡಬಾರದು.
ಮಿಕ್ಕಾದವರ ವಿಷಯದಲ್ಲಿ ಕರ್ತನ ಮಾತು ಇಲ್ಲ 12
ವಾದರೂ ನನ್ನ ಅಭಿಪ್ರಾಯವೇನಂದರೆ—ಒಬ್ಬ ಸಹೋ
ದರನಿಗೆ ಕ್ರಿಸ್ತನಂಬಿಕೆಯಿಲ್ಲದ ಹೆಂಡತಿಯಿರಲಾಗಿ ಆಕೆ
ಅವನೊಂದಿಗೆ ಒಗತನಮಾಡುವದಕ್ಕೆ ಸಮ್ಮತಿಸಿದರೆ
ಅವನು ಆಕೆಯನ್ನು ಬಿಡಬಾರದು. ಒಬ್ಬ ಸ್ತ್ರೀಗೆ ಕ್ರಿಸ್ತ 13
ನಂಬಿಕೆಯಿಲ್ಲದ ಗಂಡನಿರಲಾಗಿ ಅವನು ಆಕೆಯೊಂದಿಗೆ

ಒಗತನಮಾಡುವದಕ್ಕೆ ಸಮ್ಮತಿಸಿದರೆ ಆಕೆಯು ಅವ
14 ನನ್ನು ಬಿಡಬಾರದು. ಯಾಕಂದರೆ ಕ್ರಿಸ್ತನಂಬಿಕೆ
ಯಿಲ್ಲದ ಗಂಡನು ತನ್ನ ಹೆಂಡತಿಯಲ್ಲಿ ದೇವಜನಕ್ಕೆ
ಸಂಬಂಧಪಟ್ಟವನಾದನು; ಮತ್ತು ಕ್ರಿಸ್ತನಂಬಿಕೆಯಿ
ಲ್ಲದ ಹೆಂಡತಿಯು ನಮ್ಮ ಸಹೋದರನಾದ ತನ್ನ ಗಂಡ
ನಲ್ಲಿ ದೇವಜನಕ್ಕೆ ಸಂಬಂಧಪಟ್ಟವಳಾದಳು. ಹಾಗಲ್ಲ
ದಿದ್ದರೆ ನಿಮ್ಮ ಮಕ್ಕಳು ಅಪವಿತ್ರರಾಗುತ್ತಿದ್ದರು;
ಈಗಲಾದರೋ ಅವರು ದೇವಜನರಲ್ಲಿ ಸೇರಿದವರೇ
15 ಆಗಿದ್ದಾರೆ. ಆದರೆ ಕ್ರಿಸ್ತನಂಬಿಕೆಯಿಲ್ಲದವನು ಅಗಲ
ಬೇಕೆಂದಿದ್ದರೆ ಅಗಲಿಹೋಗಲಿ; ಇಂಥಾ ಸಂದರ್ಭ
ಗಳಲ್ಲಿ ಕ್ರೈಸ್ತಸಹೋದರನಾಗಲಿ ಸಹೋದರಿಯಾಗಲಿ
ಬದ್ಧರಲ್ಲ. ಸಮಾಧಾನದಲ್ಲಿರಬೇಕೆಂದು ದೇವರು
16 ನಮ್ಮನ್ನು ಕರೆದಿದ್ದಾನೆ. ಎಲೌ ಸ್ತ್ರೀಯೇ, ನಿನ್ನ
ಗಂಡನನ್ನು ರಕ್ಷಿಸುವಿಯೋ ಏನೋ ನಿನಗೇನುಗೊತ್ತು?
ಎಲೈ ಪುರುಷನೇ, ನಿನ್ನ ಹೆಂಡತಿಯನ್ನು ರಕ್ಷಿಸುವಿಯೋ
ಏನೋ ನಿನಗೇನು ಗೊತ್ತು?

17 ಆದರೂ ಕರ್ತನು ಪ್ರತಿಯೊಬ್ಬನಿಗೆ ಯಾವ
ಯಾವ ಸ್ಥಿತಿಯನ್ನು ನೇಮಿಸಿದ್ದಾನೋ, ಅಂದರೆ
ದೇವರು ಕರೆಯುವಾಗ ಪ್ರತಿಯೊಬ್ಬನು ಯಾವ ಯಾವ
ಸ್ಥಿತಿಯಲ್ಲಿ ಇದ್ದಾನೋ ಆಯಾ ಸ್ಥಿತಿಗೆ ಸರಿಯಾಗಿ
ನಡೆದುಕೊಳ್ಳಲಿ. ಹೀಗೆ ಎಲ್ಲಾ ಸಭೆಗಳಲ್ಲಿಯೂ
18 ಆಜ್ಞಾಪಿಸುತ್ತೇನೆ. ದೇವರು ಕರೆದ ಕಾಲದಲ್ಲಿ ಯಾವ
ನಾದರೂ ಸುನ್ನತಿಯುಳ್ಳವನಾಗಿದ್ದನೋ ಅವನು ಸುನ್ನ
ತಿಯಿಲ್ಲದವನಂತಾಗಬಾರದು. ದೇವರು ಕರೆದಾಗ
ಯಾವನಾದರೂ ಸುನ್ನತಿಯಿಲ್ಲದವನಾಗಿದ್ದನೋ ಅವ
19 ನು ಸುನ್ನತಿ ಮಾಡಿಸಿಕೊಳ್ಳಬಾರದು. ಸುನ್ನತಿ
ಯಿದ್ದರೂ ಪ್ರಯೋಜನವಿಲ್ಲ, ಸುನ್ನತಿಯಿಲ್ಲದಿದ್ದರೂ
ಪ್ರಯೋಜನವಿಲ್ಲ; ದೇವರ ಕಟ್ಟಳೆಗಳನ್ನು ಅನುಸರಿಸಿ
20 ನಡೆಯುವದೇ ಪ್ರಯೋಜನವಾಗಿದೆ. ದೇವರು ಕರೆ
ದಾಗ ಪ್ರತಿಯೊಬ್ಬನು ಯಾವ ಸ್ಥಿತಿಯಲ್ಲಿದ್ದನೋ ಆ
21 ಸ್ಥಿತಿಯಲ್ಲಿಯೇ ಇರಬೇಕು. ದೇವರು ಕರೆದಾಗ
ನೀನು ಮತ್ತೊಬ್ಬನ ದಾಸನಾಗಿದ್ದಿಯೋ? ಅದಕ್ಕೆ
ಚಿಂತೆಮಾಡಬೇಡ. ಆದರೆ [1])ಬಿಡುಗಡೆಹೊಂದುವದಕ್ಕೆ
ನಿನ್ನ ಕೈಯಿಂದಾದರೆ ಸ್ವತಂತ್ರನಾಗುವದೇ ಉತ್ತಮ.
22 ಯಾವನು ಮತ್ತೊಬ್ಬನ ದಾಸನಾಗಿದ್ದು ಕರ್ತನ
ಸೇವೆಗೆ ಕರೆಯಲ್ಪಟ್ಟಿರುವನೋ ಅವನು ಕರ್ತನ
ಮೂಲಕ ಬಿಡುಗಡೆಹೊಂದಿರುವ ಸ್ವತಂತ್ರನು. ಅದೇ
ಪ್ರಕಾರ ಯಾವನು ಸ್ವತಂತ್ರನಾಗಿದ್ದು ಕರೆಯಲ್ಪಟ್ಟಿರು
23 ವನೋ ಅವನು ಕ್ರಿಸ್ತನಿಗೆ ದಾಸನು. ನೀವು
ಕ್ರಯಕ್ಕೆ ಕೊಳ್ಳಲ್ಪಟ್ಟವರು, ಮನುಷ್ಯರಿಗೆ ದಾಸರಾಗ
24 ಬೇಡಿರಿ. ಸಹೋದರರೇ, ಪ್ರತಿಯೊಬ್ಬನು ಕರೆ
ಯಲ್ಪಟ್ಟಾಗ ಯಾವ ಸ್ಥಿತಿಯಲ್ಲಿದ್ದನೋ ಅದೇ ಸ್ಥಿತಿ
ಯಲ್ಲಿ ದೇವರ ಮುಂದೆ ಇದ್ದುಕೊಂಡಿರಲಿ.

25 ಕನ್ನಿಕೆಯರನ್ನು ಕುರಿತು ಕರ್ತನಿಂದ ಬಂದ ಆಜ್ಞೆ
ನನಗೆ ಯಾವದೂ ಇಲ್ಲ; ಆದರೆ ನಂಬಿಗಸ್ತನಾಗಿರು
ವದಕ್ಕೆ ಕರ್ತನಿಂದ ಕರುಣೆಯನ್ನು ಹೊಂದಿದವನಾಗಿ
26 ನನ್ನ ಅಭಿಪ್ರಾಯವನ್ನು ಹೇಳುತ್ತೇನೆ. ಈಗಿನ ಕಷ್ಟ
ಕಾಲದ ನಿಮಿತ್ತ ಜನರು ಇದ್ದ ಹಾಗೆ ಇರುವದು

ಒಳ್ಳೇದೆಂದು ಭಾವಿಸುತ್ತೇನೆ. ಹೆಂಡತಿಯನ್ನು ಕ
ಕೊಂಡಿದ್ದೀಯೋ? ಬಿಡುಗಡೆಯಾಗುವದಕ್ಕೆ ಪ್ರಯ
ತ್ನಿಸಬೇಡ. ಹೆಂಡತಿಯ ಕಟ್ಟಿಲ್ಲದವನಾಗಿದ್ದೀಯೋ
ಹೆಂಡತಿಯನ್ನು ದೊರಕಿಸಿಕೊಳ್ಳುವದಕ್ಕೆ ಪ್ರಯತ್ನಿ
ಬೇಡ. ಒಂದು ವೇಳೆ ನೀನು ಮದುವೆಮಾ
ಕೊಂಡರೂ ಪಾಪವಿಲ್ಲ, ಕನ್ನಿಕೆಯು ಮದುವೆಮಾ
ಕೊಂಡರೂ ಪಾಪವಿಲ್ಲ. ಆದರೆ ಮದುವೆಮಾಡಿಕೊಂ
ವರಿಗೆ ಶರೀರಸಂಬಂಧವಾಗಿ ಕಷ್ಟ ಸಂಭವಿಸುವದು
ಇದು ನಿಮಗೆ ಉಂಟಾಗಬಾರದೆಂದು ನನ್ನ ಅಪೇಕ್ಷೆ
ಸಹೋದರರೇ, ನಾನು ಹೇಳುವದೇನಂದರೆ—ಸ
ಯವು ಸಂಕೋಚವಾದದ್ದರಿಂದ ಇನ್ನು ಮೇಲೆ ಹೆಂಡ
ಯುಳ್ಳವರು ಹೆಂಡತಿಯಿಲ್ಲದವರಂತೆಯೂ, ಅ
ವವರು ಅಳದವರಂತೆಯೂ, ಸಂತೋಷಪಡುವವರ
ಸಂತೋಷಪಡದವರಂತೆಯೂ, ಕೊಂಡುಕೊಳ್ಳುವವರ
ಕೊಂಡದ್ದು ತಮ್ಮದೇ ಎಂದು ಹೇಳದವರಂತೆಯೂ
ಲೋಕವನ್ನು ಅನುಭೋಗಿಸುವವರು ಅದನ್ನು ಪ
ಪೂರ್ಣವಾಗಿ ಅನುಭೋಗಿಸದವರಂತೆಯೂ ಇರಬೇಕು
ಯಾಕಂದರೆ ಈ ಪ್ರಪಂಚದ ತೋರಿಕೆಯು ಗತಿ
ಹೋಗುತ್ತಾ ಅದೆ. ಆದರೆ ನೀವು ಚಿಂತೆಯಿಲ್ಲದ
ರಾಗಿರಬೇಕೆಂಬದು ನನ್ನ ಇಷ್ಟ. ಮದುವೆಯಿಲ್ಲದವನ
ತಾನು ಕರ್ತನನ್ನು ಹೇಗೆ ಮೆಚ್ಚಿಸಬೇಕೆಂದು ಕರ್ತ
ಕಾರ್ಯಗಳನ್ನು ಕುರಿತು ಚಿಂತಿಸುತ್ತಾನೆ. ಮದು
ಯಾದವನು ತನ್ನ ಹೆಂಡತಿಯನ್ನು ಹೇಗೆ ಮೆಚ್ಚಿಸಬೆ
ಕೆಂದು ಪ್ರಪಂಚದ ಕಾರ್ಯಗಳನ್ನು ಕುರಿತು ಚಿಂತಿಸ
ತ್ತಾನೆ. ಆದರಂತೆ ಮುತ್ತೈದೆಗೂ ಕನ್ನಿಕೆಗೂ ವ್ಯತ್ಯಾ
ವುಂಟು. ಮದುವೆಯಿಲ್ಲದವಳು ತಾನು ದೇಹಾ
ಗಳಲ್ಲಿ ಪವಿತ್ರಳಾಗಿರಬೇಕೆಂದು ಕರ್ತನ ಕಾಯ
ಗಳನ್ನು ಕುರಿತು ಚಿಂತಿಸುತ್ತಾಳೆ; ಆದರೆ ಮದು
ಯಾದವಳು ತನ್ನ ಗಂಡನನ್ನು ಹೇಗೆ ಮೆಚ್ಚಿಸಬೆ
ಕೆಂದು ಪ್ರಪಂಚದ ಕಾರ್ಯಗಳನ್ನು ಕುರಿತು ಚಿಂ
ಸುತ್ತಾಳೆ. ನಾನು ನಿಮಗೆ ಉರ್ಲುಫಾಕಬೇಕೆಂದ
ಇದನ್ನು ಹೇಳುವದಿಲ್ಲ, ನೀವು ಸಜ್ಜನರಿಗೆ ತಕ
ಹಾಗೆ ನಡೆದು ಭಿನ್ನಭಾವವಿಲ್ಲದೆ ಕರ್ತನಿಗೆ ಪಾ
ಸೇವೆಯನ್ನು ಮಾಡುವವರಾಗಬೇಕೆಂದು ನಿಮ್ಮ ಹಿ
ಕ್ಕೋಸ್ಕರವೇ ಹೇಳುತ್ತೇನೆ. ಒಬ್ಬನು ತನ್ನ ಮ
ಳಿಗೆ ಮದುವೆಯಿಲ್ಲದಿರುವದು ಮರ್ಯಾದೆಯಲ್ಲ
ವೆಂದು ಭಾವಿಸಿದರೆ ಮತ್ತು ಆಕೆಗೆ ಪ್ರಾಯ ಕಳೆದ
ಹೋಗುತ್ತದಲ್ಲಾ, ಮದುವೆಯಾಗುವದು ಅವಶ್ಯ
ವೆಂದು ಅವನಿಗೆ ಕಂಡರೆ ತನ್ನಿಷ್ಟದಂತೆ ಮಾಡಲಿ
ಅವನು ಪಾಪಮಾಡುವದಿಲ್ಲ, ಮದುವೆಮಾಡಿಕೊಡಲಿ
ಆದರೆ ಒಬ್ಬನು ದೃಢಚಿತ್ತನಾಗಿದ್ದು ಬಲವಂತವೇನ
ಇಲ್ಲದೆ ತನ್ನಿಷ್ಟವನ್ನು ನಡಿಸುವದಕ್ಕೆ ಹಕ್ಕುಳ್ಳವನಾ
ತನ್ನ ಮಗಳನ್ನು ಮದುವೆಮಾಡಿಕೊಡುವದಿಲ್ಲವೆಂದ
ತನ್ನೊಳಗೆ ನಿರ್ಣಯಿಸಿಕೊಂಡರೆ ಅವನು ಹಾ
ಮಾಡುವದು ಒಳ್ಳೇದು. ಹಾಗಾದರೆ ತನ್ನ ಮ
ಳನ್ನು ಮದುವೆಮಾಡಿಕೊಡುವವನು ಒಳ್ಳೇದನ್ನು
ಮಾಡುತ್ತಾನೆ. ಮದುವೆಮಾಡಿಕೊಡದೆ ಇರುವವನ
ಇನ್ನೂ ಒಳ್ಳೇದನ್ನು ಮಾಡುತ್ತಾನೆ. ಮುತ್ತೈದೆಯ

[1]) ಅಥವಾ, ಬಿಡುಗಡೆಹೊಂದುವದಕ್ಕೆ ಸಾಧ್ಯವಾದರೂ ದಾಸನಾಗಿಯೇ ಇರುವದು ಒಳ್ಳೇದು.

ತನ್ನ ಗಂಡನು ಜೀವದಿಂದಿರುವ ತನಕ ಅವನಿಗೆ ಬದ್ಧ
ಳಾಗಿದ್ದಾಳೆ; ಗಂಡನು ಸತ್ತಿದ್ದರೆ ಆಕೆಯು ಬೇಕಾದವ
ನನ್ನು ಮದುವೆಮಾಡಿಕೊಳ್ಳುವದಕ್ಕೆ ಸ್ವತಂತ್ರಳಾಗಿ
ದ್ದಾಳೆ. ಆದರೆ ಈ ಕಾರ್ಯವು ಕರ್ತನ ಶಿಷ್ಯರಿಗೆ
40 ತಕ್ಕಂತೆ ನಡೆಯಲಿ. ಆದರೂ ಮದುವೆಮಾಡಿಕೊಳ್ಳು
ವದಕ್ಕಿಂತಲೂ ಇದ್ದ ಹಾಗೆಯೇ ಇರುವದು ಆಕೆಗೆ
ಸುಖವೆಂದು ನನ್ನ ಅಭಿಪ್ರಾಯ; ನನಗೂ ದೇವರ ಆತ್ಮ
ವುಂಟೆಂದು ನೆನಸುತ್ತೇನೆ.

## ವಿಗ್ರಹಾರಾಧನೆಯ ಗೊಡವೆಗೆ ಹೋಗುವದನ್ನು ಕುರಿತದ್ದು.

(8. 1—11. 1.)

ವಿಗ್ರಹಕ್ಕೆ ಅರ್ಪಿತವಾದದ್ದನ್ನು ಉಣ್ಣುವದು ದೋಷವಲ್ಲದಿದ್ದರೂ
ಕೆಲವು ಸಂದರ್ಭಗಳಲ್ಲಿ ಇತರರಿಗೋಸ್ಕರ ಉಣ್ಣದೆ
ಇರುವದು ಉತ್ತಮವೆಂಬ ಬೋಧನೆ.

8 ವಿಗ್ರಹಕ್ಕೆ ನೈವೇದ್ಯಮಾಡಿದ ಪದಾರ್ಥಗಳ ವಿಷ
ಯದಲ್ಲಿ ಈಗ ನೋಡೋಣ. ನಮ್ಮೆಲ್ಲರಿಗೆ ಜ್ಞಾನ
ವುಂಟೆಂದು ಬಲ್ಲೆವು. ಜ್ಞಾನವು ಉಬ್ಬಿಸುತ್ತದೆ,
ಪ್ರೀತಿಯು ಭಕ್ತಿವೃದ್ಧಿಯನ್ನುಂಟುಮಾಡುತ್ತದೆ.
2 ಇಂಥಿಂಥದನ್ನು ತಿಳುಕೊಂಡಿದ್ದೇನೆಂದು ನೆನಸಿದವನು
ತಾನು ತಿಳಿಯಬೇಕಾದ ರೀತಿಯಿಂದ ಇನ್ನೂ ತಿಳು
3 ಕೊಳ್ಳಲಿಲ್ಲ. ಆದರೆ ಯಾವನು ದೇವರನ್ನು ಪ್ರೀತಿ
ಸುತ್ತಾನೋ ಅವನನ್ನೇ ದೇವರು ತಿಳುಕೊಳ್ಳುತ್ತಾನೆ.
4 ವಿಗ್ರಹಗಳಿಗೆ ನೈವೇದ್ಯಮಾಡಿದ ಪದಾರ್ಥಗಳನ್ನು
ತಿನ್ನುವದರ ವಿಷಯದಲ್ಲಿ ನಾನು ಹೇಳುವದೇನಂ
ದರೆ— ಜಗತ್ತಿನಲ್ಲಿ ವಿಗ್ರಹವು ಏನೂ ಅಲ್ಲವೆಂದೂ
ಒಬ್ಬ ದೇವರಿದ್ದಾನೆ ಹೊರತು ಬೇರೆ ದೇವರಿಲ್ಲ
5 ವೆಂದೂ ಬಲ್ಲೆವು. ಅನೇಕರನ್ನು ದೇವರುಗಳೆಂದೂ
ಕರ್ತರೆಂದೂ ಪೂಜಿಸುವದುಂಟು ನಿಜವೇ; ಆಕಾಶ
ದಲ್ಲಿಯಾಗಲಿ ಭೂಮಿಯ ಮೇಲೆಯಾಗಲಿ ದೇವರು
6 ಗಳೆನಿಸಿಕೊಳ್ಳುವವರಿದ್ದಾರೆ, ನಮಗಾದರೋ ಒಬ್ಬ
ನೇ ದೇವರಿದ್ದಾನೆ; ಆತನು ತಂದೆಯೆಂಬಾತನೇ;
ಆತನು ಸಮಸ್ತಕ್ಕೂ ಮೂಲಕಾರಣನು; ನಾವು ಆತ
ನಿಗಾಗಿ ಉಂಟಾದೆವು. ಮತ್ತು ನಮಗೆ ಒಬ್ಬನೇ
ಕರ್ತ; ಆತನು ಯೇಸು ಕ್ರಿಸ್ತನೇ; ಆತನ ಮುಖಾಂ
ತರ ಸಮಸ್ತವೂ ಉಂಟಾಯಿತು, ನಾವೂ ಆತನ
7 ಮುಖಾಂತರ ಉಂಟಾದೆವು. ಆದರೆ ಈ ಜ್ಞಾನವು
ಎಲ್ಲರಲ್ಲಿಯೂ ಇಲ್ಲ. ಕೆಲವರು ಈ ವರೆಗೂ
ವಿಗ್ರಹದ ಬಳಿಗೆ ಹೋಗುವ ರೂಢಿಯಲ್ಲಿದ್ದದರಿಂದ
ತಾವು ತಿನ್ನುವ ಪದಾರ್ಥಗಳನ್ನು ವಿಗ್ರಹಕ್ಕೆ ನೈವೇದ್ಯ
ಮಾಡಿಟ್ಟದೆಂದು ತಿನ್ನುತ್ತಾರೆ; ಹೀಗೆ ಅವರ ಮನಸ್ಸು
8 ಬಲಹೀನವಾಗಿದ್ದು ಕಲೆಯನ್ನು ಹೊಂದುತ್ತದೆ. ಆದರೆ
ಆಹಾರವು ನಮ್ಮನ್ನು ದೇವರ ಸನ್ನಿಧಿಗೆ ಸೇರಿಸಲಾ
ಗದು. ತಿನ್ನದಿದ್ದರೆ ನಮಗೆ ಕಡಿಮೆಯಿಲ್ಲ, ತಿಂದರೆ
9 ನಮಗೆ ಹೆಚ್ಚಿಲ್ಲ. ಆದರೂ ಈ ನಿಮ್ಮ ಸ್ವಾತಂ
ತ್ರ್ಯವು ನಂಬಿಕೆಯಲ್ಲಿ ಬಲವಿಲ್ಲದವರಿಗೆ ಒಂದು ವೇಳೆ
10 ವಿಘ್ನವಾದೀತು, ಎಚ್ಚರಿಕೆಯಾಗಿರಿ. ಜ್ಞಾನಿಯಾದ
ನೀನು ವಿಗ್ರಹಾಲಯದಲ್ಲಿ ಊಟಕ್ಕೆ ಕೂತಿರುವಾಗ
ನಿರ್ಬಲವಾದ ಮನಸ್ಸುಳ್ಳ ಸಹೋದರನು ಕಂಡರೆ
ಅವನೂ ವಿಗ್ರಹಕ್ಕೆ ನೈವೇದ್ಯಮಾಡಿದ ಪದಾರ್ಥಗಳನ್ನು
ತಿನ್ನುವದಕ್ಕೆ ಧೈರ್ಯತಂದುಕೊಂಡಾನಲ್ಲವೇ. ಹೀಗೆ 11
ಆ ಬಲಹೀನನು ನಿನ್ನ ಜ್ಞಾನದಿಂದ ನಾಶವಾಗು
ತ್ತಾನೆ. ಅವನು ಸಹೋದರನಲ್ಲವೇ. ಅವನಿಗಾಗಿ
ಯೂ ಕ್ರಿಸ್ತನು ತನ್ನ ಪ್ರಾಣ ಕೊಟ್ಟನಲ್ಲವೇ. ಹೀಗಿರ 12
ಲಾಗಿ ಸಹೋದರರಿಗೆ ಪಾಪಮಾಡಿ ಅವರ ನಿರ್ಬಲ
ವಾದ ಮನಸ್ಸನ್ನು ನೋಯಿಸಿ ಕ್ರಿಸ್ತನಿಗೆ ಪಾಪಮಾ
ಡುವವರಾಗುತ್ತೀರಿ. ಆದದರಿಂದ ಭೋಜನಪದಾ 13
ರ್ಥದಿಂದ ನನ್ನ ಸಹೋದರನಿಗೆ ವಿಘ್ನವಾಗುವದಾದರೆ
ನಾನು ಎಂದಿಗೂ ಮಾಂಸವನ್ನು ತಿನ್ನುವದಿಲ್ಲ; ನಾನು
ನನ್ನ ಸಹೋದರನಿಗೆ ವಿಘ್ನವನ್ನುಂಟುಮಾಡಬಾರ
ದಲ್ಲಾ.

ಸಭೆಯಿಂದ ಪೋಷಣೆಹೊಂದುವದಕ್ಕೆ ಬೋಧಕರಿಗೆ ಹಕ್ಕಿದ್ದರೂ
ಪೌಲನು ಇತರರ ಹಿತಕ್ಕೋಸ್ಕರ ಆ ಹಕ್ಕನ್ನು ಬಳಸದೆ
ಹೋದದರಲ್ಲಿ ಅವನ ನಡತೆಯೇ ಹಿಂದಿನ
ಬೋಧೆಗೆ ದೃಷ್ಟಾಂತ.

ನಾನು ಸ್ವತಂತ್ರನಲ್ಲವೇ. ಅಪೊಸ್ತಲನಲ್ಲವೇ. 9
ನಮ್ಮ ಕರ್ತನಾದ ಯೇಸುವನ್ನು ಕಂಡವನಲ್ಲವೇ.
ನಾನು ಕರ್ತನ ಸೇವೆಯಲ್ಲಿ ಮಾಡಿದ ಕೆಲಸದ
ಫಲವು ನೀವೇ ಅಲ್ಲವೇ. ಇತರರಿಗೆ ನಾನು ಅಪೊಸ್ತಲ 2
ನಲ್ಲದಿದ್ದರೂ ನಿಮಗಾದರೂ ಅಪೊಸ್ತಲನಾಗಿದ್ದೇನೆ.
ನಾನು ಅಪೊಸ್ತಲನಾಗಿದ್ದೇನೆಂಬದಕ್ಕೆ ಕರ್ತನಿಗೆ ಸೇರಿ
ದವರಾದ ನೀವೇ ಪ್ರಮಾಣವಾಗಿದ್ದೀರಷ್ಟೆ. ನನ್ನ 3
ನ್ನು ವಿಚಾರಿಸುವವರಿಗೆ ಇದೇ ನನ್ನ ಉತ್ತರ. ಅನ್ನ 4
ಪಾನಗಳಿಗೆ ನಮಗೆ ಹಕ್ಕಿಲ್ಲವೇ. ಕ್ರೈಸ್ತ ಸಹೋದರಿ 5
ಯಾಗಿರುವ ಹೆಂಡತಿಯನ್ನು ಕರಕೊಂಡು ಸಂಚರಿಸುವ
ದಕ್ಕೆ ಮಿಕ್ಕಾದ ಅಪೊಸ್ತಲರಂತೆಯೂ ಕರ್ತನ ತಮ್ಮಂ
ದಿರಂತೆಯೂ ಕೇಫನಂತೆಯೂ ನಮಗೆ ಹಕ್ಕಿಲ್ಲವೇ.
ಅಥವಾ, ಕೈಕೆಲಸವನ್ನು ಮಾಡದೆ ಜೀವಿಸುವದಕ್ಕೆ 6
ನನಗೂ ಬಾರ್ನಬನಿಗೂ ಮಾತ್ರ ಹಕ್ಕಿಲ್ಲವೇನು?
ಯಾವ ಸಿಪಾಯಿಯಾದರೂ ಸ್ವಂತ ಖರ್ಚಿನಿಂದ 7
ಯುದ್ಧಕ್ಕೆ ಹೋಗುವದುಂಟೇ? ದ್ರಾಕ್ಷೇತೋಟ
ವನ್ನು ಮಾಡಿದವನು ಅದರ ಫಲವನ್ನು ತಿನ್ನದೆ ಇರುವ
ದುಂಟೋ? ಪಶುಗಳನ್ನು ಸಾಕಿದವನು ಅವುಗಳ ಹೈನಿ
ನಿಂದ ಜೀವಿಸದೆ ಇರುವದುಂಟೋ? ನಾನು ಹೇಳಿದ್ದು 8
ಬರೀ ಲೋಕವಾಡಿಕೆಯ ಮಾತೋ? ಧರ್ಮಶಾಸ್ತ್ರವೂ
ಇದನ್ನು ಹೇಳುವದಿಲ್ಲವೋ? ಕಣತುಳಿಯುವ 9
ಎತ್ತಿನ ಬಾಯಿ ಕಟ್ಟಬಾರದೆಂದು ಮೋಶೆಯ ಧರ್ಮ
ಶಾಸ್ತ್ರದಲ್ಲಿ ಬರೆದದೆ. ದೇವರು ಚಿಂತಿಸುವದು ಎತ್ತು
ಗಳಿಗಾಗಿಯೋ? ಅಥವಾ ನಮಗೋಸ್ಕರವಾಗಿಯೇ 10
ಹೇಳುತ್ತಾನೋ? ಹೌದು, ನಮಗೋಸ್ಕರ ಬರೆ
ದದೆ. ಉಳುವವನು ಬೆಳೆಯಲ್ಲಿ ತನಗೆ ಪಾಲು ದೊರ
ಕುತ್ತದೆಂದು ಉಳುವದೂ, ಒಕ್ಕುವವನು ತನಗೆ ಪಾಲು
ದೊರಕುತ್ತದೆಂದು ಒಕ್ಕುವದೂ ನ್ಯಾಯ. ನಾವು 11
ನಿಮಗೋಸ್ಕರ ಆತ್ಮಸಂಬಂಧವಾದ ಬೀಜವನ್ನು ಬಿತ್ತಿದ
ಮೇಲೆ ನಿಮ್ಮಿಂದ ಶರೀರಸಂಬಂಧವಾದ ಪೈರನ್ನು
ಕೊಯ್ಯುವದು ದೊಡ್ಡದೋ? ಈ ಹಕ್ಕು ಇತರರಿಗೆ 12
ನಿಮ್ಮ ಮೇಲೆ ಇದ್ದರೆ ನಮಗೆ ಎಷ್ಟೋ ಹೆಚ್ಚಾಗಿ ಇರ
ಬೇಕಲ್ಲಾ. ಆದರೂ ನಾವು ಈ ಹಕ್ಕನ್ನು ನಡಿಸದೆ

ಕ್ರಿಸ್ತನ ಸುವಾರ್ತೆಗೆ ಅಡ್ಡಿಮಾಡಬಾರದೆಂದು ಎಲ್ಲ
13 ವನ್ನೂ ಸಹಿಸಿಕೊಂಡೆವು. ದೇವಾಲಯದ ಊಳಿಗ
ವನ್ನು ನಡಿಸುವವರು ದೇವಾಲಯದ ಆದಾಯದಿಂದ
ಊಟಮಾಡುತ್ತಾರೆಂಬದೂ ಯಜ್ಞವೇದಿಯ ಬಳಿಯಲ್ಲಿ
ಸೇವೆಮಾಡುವವರು ಆ ವೇದಿಗೆ ಬರುವ ಪದಾರ್ಥಗ
ಳಲ್ಲಿ ಪಾಲುಹೊಂದುತ್ತಾರೆಂಬದೂ ನಿಮಗೆ ತಿಳಿಯ
14 ದೋ? ಅದೇ ರೀತಿಯಾಗಿ ಕರ್ತನು ಸಹ ಸುವಾ
ರ್ತೆಯನ್ನು ಸಾರುವವರು ಸುವಾರ್ತೆಯಿಂದಲೇ ಜೀವನ
ಮಾಡಬೇಕೆಂದು ನೇಮಿಸಿದನು.
15 ನಾನಂತೂ ಈ ಹಕ್ಕುಗಳಲ್ಲಿ ಒಂದನ್ನೂ ನಡಿಸ
ಲಿಲ್ಲ; ನನ್ನ ವಿಷಯದಲ್ಲಿಯೂ ಹೀಗಾಗಬೇಕೆಂದು ಈ
ಸಂಗತಿಗಳನ್ನು ನಾನು ಬರೆಯಲಿಲ್ಲ. ಅದಕ್ಕಿಂತ
ಸಾಯುವದೇ ನನಗೆ ಲೇಸು. ಹೊಗಳಿಕೊಳ್ಳುವದಕ್ಕೆ
ನನಗಿರುವ ಈ ಆಸ್ಪದವನ್ನು ಯಾರೂ ತೆಗೆದುಬಿಡಬಾ
16 ರದು. ನಾನು ಸುವಾರ್ತೆಯನ್ನು ಸಾರಿದರೂ ಹೊಗಳಿ
ಕೊಳ್ಳುವದಕ್ಕೆ ನನಗೇನೂ ಆಸ್ಪದವಿಲ್ಲ; ಸಾರಲೇ
ಬೇಕೆಂಬ ನಿರ್ಬಂಧ ನನಗುಂಟು. ಸಾರದಿದ್ದರೆ ನನ್ನ ಗತಿ
17 ಯನ್ನು ಏನು ಹೇಳಲಿ. ನಾನು ಸ್ವಂತ ಇಷ್ಟದಿಂದ ಈ
ಕೆಲಸವನ್ನು ಮಾಡಿದರೆ ನನಗೆ ಬಹುಮಾನದೊರೆಯು
ವದು; ಮತ್ತೊಬ್ಬನ ಇಷ್ಟದಿಂದ ಮಾಡಿದರೆ ಮನೆ
18 ವಾರ್ತೆಯು ನನ್ನ ವಶಕ್ಕೆ ಕೊಡಲ್ಪಟ್ಟಿದೆ. ಹಾಗಾದರೆ
ನನಗಾಗುವ ಬಹುಮಾನವೇನು? ಸುವಾರ್ತೆಯನ್ನು
ಸಾರುವಾಗ ಅದರಿಂದ ಜೀವನಮಾಡುವ ಹಕ್ಕನ್ನು ನಡಿ
ಸದೆ ಅದನ್ನು ಉಚಿತಾರ್ಥವಾಗಿ ದಾನಮಾಡುವದೇ
ನನಗೆ ಬಹುಮಾನ.
19 ನಾನು ಎಲ್ಲಾ ವಿಷಯದಲ್ಲಿ ಸ್ವತಂತ್ರನಾಗಿದ್ದರೂ
ಹೆಚ್ಚು ಜನರನ್ನು ಸಂಪಾದಿಸಿಕೊಳ್ಳಬೇಕೆಂದು
20 ನನ್ನನ್ನು ಎಲ್ಲರಿಗೂ ಅಧೀನಮಾಡಿದೆನು. ಯೆಹೂ
ದ್ಯರನ್ನು ಸಂಪಾದಿಸಿಕೊಳ್ಳುವದಕ್ಕೆ ಯೆಹೂದ್ಯರಿಗೆ
ಯೆಹೂದ್ಯನಂತಾದೆನು. ನಾನು ನಿಯಮಗಳಿಗೆ ಅಧೀ
ನನಲ್ಲದವನಾದರೂ ನಿಯಮಗಳಿಗೆ ಅಧೀನರಾದವರ
ನ್ನು ಸಂಪಾದಿಸಿಕೊಳ್ಳುವದಕ್ಕಾಗಿ ಅವರಿಗೆ ನಿಯಮಗ
21 ಳಿಗೆ ಅಧೀನನಂತಾದೆನು. ನಾನು ದೇವರ ನೇಮವಿಲ್ಲ
ದವನಲ್ಲ, ಕ್ರಿಸ್ತನ ನಿಯಮಕ್ಕೊಳಗಾದವನೇ; ಆದರೂ
ನಿಯಮವಿಲ್ಲದವರನ್ನು ಸಂಪಾದಿಸಿಕೊಳ್ಳುವದಕ್ಕಾಗಿ
22 ಅವರಿಗೆ ನಿಯಮವಿಲ್ಲದವನಂತಾದೆನು. ಬಲ
ವಿಲ್ಲದವರನ್ನು ಸಂಪಾದಿಸುವದಕ್ಕೆ ಅವರಿಗೆ ಬಲವಿಲ್ಲದ
ವನಾದೆನು. ಯಾವ ವಿಧದಲ್ಲಿಯಾದರೂ ಕೆಲವರನ್ನು
ರಕ್ಷಿಸಬೇಕೆಂದು ಯಾರಾರಿಗೆ ಎಂಥೆಂಥವನಾಗಬೇ
23 ಕೋ ಅಂಥಂಥವನಾಗಿದ್ದೇನೆ. ನಾನು ಇತರರ ಸಂಗಡ
ಸುವಾರ್ತೆಯ ಫಲದಲ್ಲಿ ಪಾಲುಗಾರನಾಗಬೇಕೆಂದು
ಇದೆಲ್ಲವನ್ನು ಸುವಾರ್ತೆಗೋಸ್ಕರವೇ ಮಾಡುತ್ತೇನೆ.
24 ರಂಗಸ್ಥಾನದಲ್ಲಿ ಓಡುವದಕ್ಕೆ ಗೊತ್ತಾದವರೆಲ್ಲರೂ
ಓಡುತ್ತಾರಾದರೂ ಒಬ್ಬನು ಮಾತ್ರ ಬಿರುದನ್ನು
ಹೊಂದುತ್ತಾನೆ ಎಂಬದು ನಿಮಗೆ ತಿಳಿಯದೋ? ಅವ
ರಂತೆ ನೀವೂ ಬಿರುದನ್ನು ಪಡಕೊಳ್ಳಬೇಕೆಂತಲೇ
25 ಓಡಿರಿ. ಅದರಲ್ಲಿ ಹೋರಾಡುವವರೆಲ್ಲರು ಎಲ್ಲಾ
ವಿಷಯಗಳಲ್ಲಿ ಮಿತವಾಗಿರುತ್ತಾರೆ. ಅವರು ಬಾಡಿ
ಹೋಗುವ ಜಯಮಾಲಿಕೆಯನ್ನು ಹೊಂದುವದಕ್ಕೆ
ಸಾಧನೆಮಾಡುತ್ತಾರೆ; ನಾವಾದರೋ ಬಾಡಿಹೋ

ಗದ ಜಯಮಾಲಿಕೆಯನ್ನು ಹೊಂದುವದಕ್ಕೆ ಸಾ
ಮಾಡುವವರಾಗಿದ್ದೇವೆ. ಹೀಗಿರಲಾಗಿ ನಾನು
ಗುರಿಗೊತ್ತಿಲ್ಲದವನಾಗಿ ಓಡದೆ ಗೆಲ್ಲಬೇಕೆಂದಿರ
ಅವರಂತೆಯೇ ಓಡುತ್ತೇನೆ; ನಾನು ಗಾಳಿಯ
ಗುದ್ದುವವನಾಗಿರದೆ ಗೆಲ್ಲಬೇಕೆಂದವನಾಗಿ ಗುದ್ದಾ
ತ್ತೇನೆ. ಇತರರನ್ನು ಹೋರಾಟಕ್ಕೆ ಕರೆದ ಮೇ
ನಾನೇ ಅಯೋಗ್ಯನೆನಿಸಿಕೊಂಡೇನೋ ಎಂಬ ಭ
ದಿಂದ ನನ್ನ ಮೈಯನ್ನು ಜಜ್ಜಿ ಸ್ವಾಧೀನಪಡಿ
ಕೊಳ್ಳುತ್ತೇನೆ.

ಕ್ರೈಸ್ತರ ಎಚ್ಚರಿಕೆಗಾಗಿ ಪೌಲನು ಇಸ್ರಾಯೇಲ್ಯರ
ದೃಷ್ಟಾಂತವನ್ನು ಸೂಚಿಸಿದ್ದು.

ಸಹೋದರರೇ, ಮುಂದಿನ ಸಂಗತಿಯಲ್ಲಿ ನೀವು
ಲಕ್ಷ್ಯವಿಡಬೇಕೆಂದು ನಾನು ಅಪೇಕ್ಷಿಸುತ್ತೇನೆ. ಅದೇ
ನಂದರೆ, ನಮ್ಮ ಪಿತೃಗಳೆಲ್ಲರೂ ಮೇಘದ ನೆರಳಿನ
ದ್ದರು; ಅವರೆಲ್ಲರೂ ಸಮುದ್ರವನ್ನು ದಾಟಿಹೋ
ದರು; ಅವರೆಲ್ಲರೂ ಮೋಶೆಯ ಶಿಷ್ಯರಾಗುವದಕ್ಕಾ
ಮೇಘದಲ್ಲಿಯೂ ಸಮುದ್ರದಲ್ಲಿಯೂ ದೀಕ್ಷಾಸ್ನಾ
ವನ್ನು ಹೊಂದಿದರು; ಅವರೆಲ್ಲರೂ ದೈವಿಕವಾ
ಒಂದೇ ಆಹಾರವನ್ನು ತಿಂದರು; ಅವರೆಲ್ಲ
ದೈವಿಕವಾದ ಒಂದೇ ನೀರನ್ನು ಕುಡಿದರು; ಹೇಗಂದ
ಅವರ ಹಿಂದೆ ಹೋಗುತ್ತಿದ್ದ ದೈವಿಕವಾದ ಬಂ
ಯೊಳಗಿಂದ ಬಂದ ನೀರನ್ನು ಕುಡಿಯುತ್ತಿದ್ದರು;
ಬಂಡೆ ಕ್ರಿಸ್ತನೇ. ಆದರೂ ಅವರೊಳಗೆ ಬಹುಮಂ
ಯ ವಿಷಯದಲ್ಲಿ ದೇವರು ಸಂತೋಷಿಸಲಿಲ್ಲ. ಅವ
ಅಡವಿಯಲ್ಲಿ ಸಂಹರಿಸಲ್ಪಟ್ಟರೆಂದು ಬರೆದದೆಯ
ಅವರು ಕೆಟ್ಟ ವಿಷಯಗಳನ್ನು ಆಶಿಸಿದಂತೆ ನಾ
ಆಶಿಸುವವರಾಗಬಾರದೆಂಬದಕ್ಕಾಗಿ ಈ ಸಂಗತಿಗ
ನಮಗೆ ನಿದರ್ಶನಗಳಾಗಿವೆ. ಅವರಲ್ಲಿ ಕೆಲವರು ವಿ
ಹಾರಾಧಕರಾಗಿದ್ದರು; ಜನರು ಉಣ್ಣುವದಕ
ಕುಡಿಯುವದಕ್ಕೂ ಕೂತುಕೊಂಡರು, ಕುಣಿದಾಡು
ದಕ್ಕೆ ಎದ್ದರು ಎಂದು ಬರೆದದೆಯಲ್ಲಾ; ನೀ
ವಿಗ್ರಹಾರಾಧಕರಾಗಬೇಡಿರಿ. ಅವರಲ್ಲಿ ಕೆಲವ
ಜಾರತ್ವಮಾಡಿ ಒಂದೇ ದಿನದಲ್ಲಿ ಇಪ್ಪತ್ತುಮೂ
ಸಾವಿರ ಮಂದಿ ಸತ್ತರು; ನಾವು ಜಾರತ್ವಮಾಡ
ಇರೋಣ. ಅವರಲ್ಲಿ ಕೆಲವರು ಕರ್ತನನ್ನು ಪ
ಕ್ಷಿಸಿ ಸರ್ಪಗಳಿಂದ ನಾಶವಾದರು; ನಾವು ಪರೀಕ್ಷಿಸ
ಇರೋಣ. ಇದಲ್ಲದೆ ಅವರಲ್ಲಿ ಕೆಲವರು ಗು
ಗುಟ್ಟಿ ಸಂಹಾರಕನ ಕೈಯಿಂದ ನಾಶವಾದರು; ನೀ
ಗುಣುಗುಟ್ಟಬೇಡಿರಿ. ಅವರಿಗೆ ಸಂಭವಿಸಿದ ಈ ಸಂ
ತಿಗಳು ನಿದರ್ಶನರೂಪವಾಗಿವೆ; ಮತ್ತು ಯುಗಾ
ತ್ಯಕ್ಕೆ ಬಂದಿರುವವರಾದ ನಮಗೆ ಬುದ್ಧಿವಾದಗಳಾ
ಬರೆದವೆ. ಆದಕಾರಣ ನಿಂತಿದ್ದೇನೆಂದು ನೆನಸು
ವನು ಬೀಳದಂತೆ ಎಚ್ಚರಿಕೆಯಾಗಿರಲಿ. ಮನುಷ್ಯ
ಸಹಿಸಬಹುದಾದ ಶೋಧನೆಯೇ ಹೊರತು ಬೇರೆ ಯ
ವದೂ ನಿಮಗೆ ಸಂಭವಿಸಲಿಲ್ಲ. ದೇವರು ನಂಬ
ಸ್ಥನು; ನಿಮ್ಮ ಶಕ್ತಿಯನ್ನು ಮೀರುವ ಶೋಧ
ಯನ್ನು ನಿಮಗೆ ಬರಗೊಡಿಸದೆ ನೀವು ಅದನ್ನು ಸಹಿ
ವದಕ್ಕೆ ಶಕ್ತರಾಗುವಂತೆ ಶೋಧನೆಯಾಗುತ್ತ

ತಪ್ಪಿಸಿಕೊಳ್ಳುವ ಮಾರ್ಗವನ್ನು ಸಿದ್ಧಮಾಡು
ವನು.

ಕ್ರಿಸ್ತಸೇವೆಗೂ ವಿಗ್ರಹಾರಾಧನೆಗೂ ಸಂಸರ್ಗವೇನೂ ಇರಕೂಡ
ದೆಂಬುವ ಬೋಧೆ.

ಆದದರಿಂದ ಪ್ರಿಯ ಸಹೋದರರೇ, ವಿಗ್ರಹಾರಾ
ಧನೆಯ ಗೊಡವೆಯನ್ನು ಸಂಪೂರ್ಣವಾಗಿ ತೊರೆದು
ಬಿಡಿರಿ. ನೀವು ವಿವೇಕಿಗಳೆಂದು ಇದನ್ನು ಹೇಳುತ್ತೇನೆ;
ನಾನು ಹೇಳುವದನ್ನು ನೀವೇ ಯೋಚಿಸಿರಿ. ನಾವು
ದೇವಸ್ತೋತ್ರಮಾಡಿ ಪಾತ್ರೆಯಲ್ಲಿ ಪಾನಮಾಡುವದು
ಕ್ರಿಸ್ತನ ರಕ್ತದಲ್ಲಿ ಪಾಲುಗಾರರಾಗಿದ್ದೇವೆಂಬದನ್ನು
ಸೂಚಿಸುತ್ತದಲ್ಲವೇ. ನಾವು ರೊಟ್ಟಿಯನ್ನು ಮುರಿದು
ತಿನ್ನುವದು ಕ್ರಿಸ್ತನ ದೇಹದಲ್ಲಿ ಪಾಲುಗಾರರಾಗಿ
ದ್ದೇವೆಂಬದನ್ನು ಸೂಚಿಸುತ್ತದಲ್ಲವೇ. ರೊಟ್ಟಿಯು
ಒಂದೇಯಾಗಿರುವದರಿಂದ ಅನೇಕರಾಗಿರುವ ನಾವು
ಒಂದೇ ದೇಹದಂತಿದ್ದೇವೆ; ಯಾಕಂದರೆ ನಾವೆಲ್ಲರೂ
ಆ ಒಂದೇ ರೊಟ್ಟಿಯಲ್ಲಿ ಪಾಲುತಕ್ಕೊಂಡು ತಿನ್ನುತ್ತೇವೆ.
ವಂಶಕ್ರಮದಿಂದ ಇಸ್ರಾಯೇಲ್ಯರಾಗಿರುವವರನ್ನು
ಯೋಚಿಸಿರಿ. ಯಜ್ಞಮಾಡಿದ್ದನ್ನು ತಿನ್ನುವವರು
ಯಜ್ಞವೇದಿಯೊಡನೆ ಭಾಗಿಗಳಾಗದ್ದಾರಲ್ಲವೇ. ಹೀಗೆ
ಹೇಳುವದರಿಂದ ಏನು ಹೇಳಿದ ಹಾಗಾಯಿತು? ವಿಗ್ರ
ಹಕ್ಕೆ ನೈವೇದ್ಯಮಾಡಿದ ಪದಾರ್ಥವು 1)ವಾಸ್ತವವೆಂದು
ಅಥವಾ ವಿಗ್ರಹವು 1)ವಾಸ್ತವವೆಂದು ನನ್ನ ಅಭಿಪ್ರಾ
ಯವೋ? ಅಲ್ಲ. ಆದರೆ ಅನ್ಯಜನರು ತಾವು ಅರ್ಪಿ
ಸುವ ಬಲಿಗಳನ್ನು ದೇವರಿಗಲ್ಲ ದೆವ್ವಗಳಿಗೆ ಅರ್ಪಿ
ಸುತ್ತಾರೆಂದು ನನ್ನ ಅಭಿಪ್ರಾಯವು. ನೀವು ದೆವ್ವಗ
ಳೊಡನೆ ಭಾಗಿಗಳಾಗಿರಬೇಕೆಂಬದು ನನ್ನ ಇಷ್ಟವಲ್ಲ.
ನೀವು ಕರ್ತನ ಪಾತ್ರೆ ಮತ್ತು ದೆವ್ವಗಳ ಪಾತ್ರೆ ಇವು
ಗಳೊಳಗೆ ಒಂದರಲ್ಲಿಯೇ ಹೊರತು ಎರಡರಲ್ಲಿಯೂ
ಕುಡಿಯಲಾರಿರಿ; ಕರ್ತನ ಪಂಕ್ತಿ ಮತ್ತು ದೆವ್ವಗಳ
ಪಂಕ್ತಿ ಇವುಗಳೊಳಗೆ ಒಂದರಲ್ಲಿಯೇ ಹೊರತು ಎರಡ
ರಲ್ಲಿಯೂ ಊಟಮಾಡಲಾರಿರಿ. ಕರ್ತನನ್ನು ರೇಗಿಸಬೇ
ಕೆಂದಿದ್ದೇವೋ? ಆತನಿಗಿಂತಲೂ ನಾವು ಬಲಿಷ್ಠರೇನು?

ವಿಗ್ರಹಕ್ಕೆ ಅರ್ಪಿತವಾದದ್ದನ್ನು ಉಣ್ಣಬಹುದೋ ಬಾರದೋ
ಎಂಬುವ ವಿಚಾರದಲ್ಲಿ ಪರರ ಹಿತವನ್ನು ಲಕ್ಷಿಸುವದೇ
ಮುಖ್ಯವಾದದ್ದು.

ಎಲ್ಲಾ ಕಾರ್ಯಗಳನ್ನು ಮಾಡುವದಕ್ಕೆ ಸ್ವಾ
ತಂತ್ರ್ಯವುಂಟು, ಆದರೆ ಎಲ್ಲವೂ ವಿಹಿತವಾಗಿರುವದಿಲ್ಲ.
ಎಲ್ಲಾ ಕಾರ್ಯಗಳನ್ನು ಮಾಡುವದಕ್ಕೆ ಸ್ವಾತಂತ್ರ್ಯ
ವುಂಟು, ಆದರೆ ಎಲ್ಲವೂ ಭಕ್ತಿಯನ್ನು ಬೆಳಿಸುವದಿಲ್ಲ.
ಪ್ರತಿಯೊಬ್ಬನು ತನ್ನ ಹಿತವನ್ನು ಚಿಂತಿಸದೆ ಪರಹಿತ
ವನ್ನು ಚಿಂತಿಸಲಿ. ಕಟುಕರ ಅಂಗಡಿಯಲ್ಲಿ ಮಾರು
ವಂಥದು ಏನಿದ್ದರೂ ಅದನ್ನು ಮನಸ್ಸಿನಲ್ಲಿ ಸಂಶಯ
ಹುಟ್ಟಿಸುವ ವಿಚಾರಣೆಮಾಡದೆ ತಿನ್ನಿರಿ. ಭೂಮಿಯೂ
ಅದರಲ್ಲಿರುವ ಸಮಸ್ತವೂ ಕರ್ತನದಾಗಿದೆಯಲ್ಲವೇ.
ಕ್ರಿಸ್ತನನ್ನು ನಂಬದವರಲ್ಲಿ ಒಬ್ಬನು ನಿಮ್ಮನ್ನು ಊಟ
ಕ್ಕೆ ಕರೆಯುವಾಗ ಹೋಗುವದಕ್ಕೆ ನಿಮಗಿಷ್ಟವಿದ್ದರೆ
ನಿಮಗೇನು ಬಡಿಸಿದರೂ ಅದನ್ನು ಮನಸ್ಸಿನಲ್ಲಿ ಸಂಶ
ಯಹುಟ್ಟಿಸುವ ವಿಚಾರಣೆಮಾಡದೆ ತಿನ್ನಿರಿ. ಆದರೆ 28
ಒಬ್ಬನು ನಿಮಗೆ—ಇದು ವಿಗ್ರಹಾಲಯದಲ್ಲಿ ಬಲಿ
ಕೊಟ್ಟದ್ದು ಎಂದು ಹೇಳಿದರೆ ಈ ಸಂಗತಿಯನ್ನು ತಿಳಿ
ಸಿದವನ ನಿಮಿತ್ತವಾಗಿಯೂ ಮನಸ್ಸಿನಲ್ಲಿ ಸಂಶಯಕ್ಕೆ
ಸ್ಥಳಕೊಡಬಾರದೆಂಬ ಕಾರಣದಿಂದಲೂ ತಿನ್ನಬೇಡಿರಿ.
ಅದು ನಿನ್ನ ಮನಸ್ಸಿನ ಸಂಶಯವಲ್ಲ, ತಿಳಿಸಿದವನ 29
ಮನಸ್ಸಿನಲ್ಲಿರುವ ಸಂಶಯವೇ. ಮತ್ತೊಬ್ಬನ ಮನ
ಸ್ಸಿನಲ್ಲಿರುವ ಸಂಶಯದಿಂದ ನನ್ನ ಸ್ವಾತಂತ್ರ್ಯಕ್ಕೆ
ಯಾಕೆ ತೀರ್ಪಾಗಬೇಕು? ನಾನು ಕೃತಜ್ಞತೆಯೊಡನೆ 30
ಊಟಮಾಡಿ ದೇವರನ್ನು ಸ್ತುತಿಸಿದ ಮೇಲೆ ಆ ಪದಾ
ರ್ಥಗಳ ನಿಮಿತ್ತ ನನಗೆ ಯಾಕೆ ದೂಷಣೆಯಾಗಬೇಕು?
ಹೀಗಿರಲಾಗಿ ನೀವು ಉಂಡರೂ ಕುಡಿದರೂ ಇನ್ನೇನು 31
ಮಾಡಿದರೂ ಎಲ್ಲವನ್ನೂ ದೇವರ ಘನತೆಗಾಗಿ ಮಾ
ಡಿರಿ. ಯೆಹೂದ್ಯರಿಗಾಗಲಿ ಗ್ರೀಕರಿಗಾಗಲಿ ದೇವರ 32
ಸಭೆಗಾಗಲಿ ವಿಘ್ನವಾಗಬೇಡಿರಿ. ನಾನಂತೂ ಸ್ವಪ್ರಯೋ 33
ಜನಕ್ಕಾಗಿ ಚಿಂತಿಸದೆ ಮನುಷ್ಯರೆಲ್ಲರೂ ರಕ್ಷಣೆಹೊಂದ
ಬೇಕೆಂದು ಅವರ ಪ್ರಯೋಜನಕ್ಕಾಗಿ ಚಿಂತಿಸಿ ಎಲ್ಲ
ರನ್ನೂ ಎಲ್ಲಾ ವಿಷಯಗಳಲ್ಲಿ ಮೆಚ್ಚಿಸುವವನಾಗಿದ್ದೇನೆ.
ನಾನು ಕ್ರಿಸ್ತನನ್ನು ಅನುಸರಿಸುವಂತೆಯೇ ನೀವು **11**
ನನ್ನನ್ನು ಅನುಸರಿಸುವವರಾಗಿರಿ.

ಸ್ತ್ರೀಯರು ಮುಸುಕಿಲ್ಲದೆ ಸಭೆಯಲ್ಲಿ ದೇವಾರಾಧನೆ
ಮಾಡುವದು ಯುಕ್ತವಲ್ಲ.

ನೀವು ಎಲ್ಲಾದರಲ್ಲಿಯೂ ನನ್ನನ್ನು ಜ್ಞಾಪಕಮಾಡಿ 2
ಕೊಂಡು ನಾನು ನಿಮಗೆ ತಿಳಿಸಿಕೊಟ್ಟ ಕಟ್ಟಳೆಗಳನ್ನು
ಅನುಸರಿಸಿ ನಡಿಯುತ್ತೀರೆಂದು ನಿಮ್ಮನ್ನು ಹೊಗಳು
ತ್ತೇನೆ. ಆದರೂ ಒಂದು ಸಂಗತಿಯನ್ನು ನೀವು ತಿಳಿ 3
ಯಬೇಕೆಂದು ನನ್ನ ಇಷ್ಟ; ಅದೇನಂದರೆ ಪ್ರತಿ ಪುರು
ಷನಿಗೂ ಕ್ರಿಸ್ತನು ತಲೆ, ಸ್ತ್ರೀಗೆ ಪುರುಷನು ತಲೆ,
ಕ್ರಿಸ್ತನಿಗೆ ದೇವರು ತಲೆ ಆಗಿದ್ದಾನೆ. ತಲೆಯನ್ನು 4
ಮುಚ್ಚಿಕೊಂಡು ಪ್ರಾರ್ಥನೆಯನ್ನಾಗಲಿ ಪ್ರವಾದನೆ
ಯನ್ನಾಗಲಿ ಮಾಡುವ ಪುರುಷನು ತನ್ನ ತಲೆಯನ್ನು
ಅವಮಾನಪಡಿಸುತ್ತಾನೆ. ತಲೆಯ ಮೇಲೆ ಮುಸುಕು 5
ಹಾಕಿಕೊಳ್ಳದೆ ಪ್ರಾರ್ಥನೆಯನ್ನಾಗಲಿ ಪ್ರವಾದನೆ
ಯನ್ನಾಗಲಿ ಮಾಡುವ ಸ್ತ್ರೀಯು ತನ್ನ ತಲೆಯನ್ನು
ಅವಮಾನಪಡಿಸುತ್ತಾಳೆ. ಸ್ತ್ರೀಯು ಮುಸುಕಿಲ್ಲದಿರು
ವದೂ ತಲೆಬೋಳಿಸಿಕೊಂಡಿರುವದೂ ಒಂದೇ. ಸ್ತ್ರೀ 6
ಯು ಮುಸುಕುಹಾಕಿಕೊಳ್ಳದಿದ್ದರೆ ಆಕೆಯು ಕೂದ
ಲನ್ನು ತೆಗಿಸಿಬಿಡಬೇಕಷ್ಟೆ. ಆದರೆ ಕೂದಲನ್ನು ಕತ್ತ
ರಿಸಿಕೊಳ್ಳುವದಾಗಲಿ ತಲೆಬೋಳಿಸಿಕೊಳ್ಳುವದಾಗಲಿ
ಸ್ತ್ರೀಗೆ ಅವಮಾನಕರವಾಗಿದ್ದರೆ ಆಕೆಯು ಮುಸು
ಕನ್ನು ಹಾಕಿಕೊಳ್ಳಲಿ. ಪುರುಷನು ದೇವರ ಪ್ರತಿ 7
ರೂಪವೂ ಪ್ರಭಾವವೂ ಆಗಿರುವದರಿಂದ ತಲೆಯನ್ನು
ಮುಚ್ಚಿಕೊಳ್ಳಕೂಡದು; ಸ್ತ್ರೀಯಾದರೋ ಪುರುಷನ ಪ್ರ
ಭಾವವಾಗಿದ್ದಾಳೆ. ಪುರುಷನು ಸ್ತ್ರೀಯಿಂದ ಉತ್ಪತ್ತಿ 8
ಯಾಗಲಿಲ್ಲ; ಸ್ತ್ರೀಯು ಪುರುಷನಿಂದ ಉತ್ಪತ್ತಿಯಾ
ದಳು. ಇದಲ್ಲದೆ ಪುರುಷನು ಸ್ತ್ರೀನಿಮಿತ್ತವಾಗಿ ನಿ 9

1) ಅಥವಾ, ವಿಶೇಷ.

ವರ್ಮಾಣವಾಗಲಿಲ್ಲ; ಸ್ತ್ರೀಯು ಪುರುಷನ ನಿಮಿತ್ತ
10 ವಾಗಿ ನಿರ್ಮಾಣವಾದಳು. ಹೀಗಿರುವದರಿಂದ [1])ದೂತ
ರ ನಿಮಿತ್ತವಾಗಿ ಸ್ತ್ರೀಯು ಪುರುಷನ ಅಧಿಕಾರ ಸೂಚಿ
ಸುವ ಮುಸುಕನ್ನು ತಲೆಯ ಮೇಲೆ ಹಾಕಿಕೊಂಡಿರ
11 ಬೇಕು. ಆದರೂ ಕರ್ತನ ಸಂಬಂಧದಲ್ಲಿ ಪುರುಷ
ರಿಲ್ಲದೆ ಸ್ತ್ರೀಯರೂ ಸ್ತ್ರೀಯರಿಲ್ಲದೆ ಪುರುಷರೂ ಸಂಪೂ
12 ರ್ಣರಲ್ಲ. ಸ್ತ್ರೀಯು ಪುರುಷನಿಂದ ಉತ್ಪತ್ತಿಯಾದಳು;
ಹಾಗೆಯೇ ಪುರುಷನು ಸ್ತ್ರೀಮೂಲಕವಾಗಿ ಹುಟ್ಟು
ತ್ತಾನೆ; ಸಮಸ್ತಕ್ಕೂ ದೇವರೇ ಮೂಲಕಾರಣನು.
13 ನಿಮ್ಮೊಳಗೆ ನೀವೇ ಯೋಚಿಸಿ ತೀರ್ಮಾನಿಸಿಕೊಳ್ಳಿರಿ.
ಸ್ತ್ರೀಯು ಮುಸುಕುಹಾಕಿಕೊಳ್ಳದೆ ದೇವರಿಗೆ ಪ್ರಾರ್ಥ
14 ನೆಮಾಡುವದು ಯುಕ್ತವೋ? ಪುರುಷನು ಕೂದಲು
ಬೆಳಸಿಕೊಂಡರೆ ಅದು ಅವನಿಗೆ ಅವಮಾನಕರವಾಗಿದೆ
15 ಯೆಂದೂ ಸ್ತ್ರೀಯು ಬೆಳಸಿಕೊಂಡರೆ ಕೂದಲು ಅವ
ಳಿಗೆ ಮುಸುಕಿಗೆ ಬದಲಾಗಿ ಕೊಡಲ್ಪಟ್ಟಿರುವದರಿಂದ
ಅದು ಅವಳಿಗೆ ಗೌರವವಾಗಿದೆಯೆಂದೂ ನಿಮಗೆ ಸ್ವಭಾ
16 ವಸಿದ್ಧವಾಗಿ ತಿಳಿಯುತ್ತದಲ್ಲವೋ? ಒಬ್ಬನು ವಾಗ್ವಾ
ದಪ್ರಿಯನಾಗಿ ಕಾಣಿಸಿಕೊಂಡರೆ ಇಂಥ ಪದ್ಧತಿ ನಮ್ಮ
ಲ್ಲಿಲ್ಲ, ಮತ್ತು ದೇವರ ಸಭೆಗಳಲ್ಲಿಯೂ ಇಲ್ಲ ಎಂದು
ತಿಳುಕೊಳ್ಳಲಿ.

ಕರ್ತನ ಭೋಜನವನ್ನು ಕ್ರಮತಪ್ಪಿ ಆಚರಿಸಿದ್ದನ್ನು
ಕುರಿತದ್ದು.

17 ನಾನು ಹೀಗೆ ನಿಮಗೆ ಅಪ್ಪಣೆಕೊಡುವಲ್ಲಿ ನಿಮ್ಮ
ನ್ನು ಹೊಗಳುವದಿಲ್ಲ; ಯಾಕಂದರೆ ನೀವು ಕೂಡಿ
ಬರುವದರಿಂದ ಕೇಡಾಗುತ್ತದೆಯೇ ಹೊರತು ಮೇಲಾ
18 ಗುವದಿಲ್ಲ. ಹೇಗಂದರೆ ಮೊದಲನೇದು ನೀವು ಸಭೆ
ಯಾಗಿ ಕೂಡಿಬರುವಾಗ ನಿಮ್ಮಲ್ಲಿ ಭೇದಗಳು
ಉಂಟಾಗುತ್ತವೆಂದು ಕೇಳುತ್ತೇನೆ; ಮತ್ತು ಇದು ನಿಜ
19 ವೆಂದು ಸ್ವಲ್ಪಮಟ್ಟಿಗೆ ನಂಬುತ್ತೇನೆ. ನಿಮ್ಮಲ್ಲಿ ಇಂಥಿಂ
ಥವರು ಯೋಗ್ಯರೆಂದು ಕಾಣಬರುವಂತ ಭಿನ್ನಾಭಿ
20 ಪ್ರಾಯಗಳೂ ಇರುವದು ಅವಶ್ಯವೇ. ಪರಂತು ನೀವೆ
ಲ್ಲರು ಕೂಡಿಬರುವಾಗ ನೀವು ಮಾಡುವ ಭೋಜನವು
21 ಕರ್ತನ ಭೋಜನವಲ್ಲ. ಭೋಜನವಾಗುವಲ್ಲಿ ಪ್ರತಿ
ಯೊಬ್ಬನು ತಾನು ತಂದದ್ದನ್ನು ಮತ್ತೊಬ್ಬರಿಗಿಂತ
ಮುಂದಾಗಿ ಊಟಮಾಡುತ್ತಾನೆ; ಹೀಗೆ ಒಬ್ಬನು ಹಸಿ
ದಿರುತ್ತಾನೆ, ಮತ್ತೊಬ್ಬನು ಕುಡಿದು ಮತ್ತನಾಗಿರು
22 ತ್ತಾನೆ. ಏನು, ಉಣ್ಣುವದಕ್ಕೂ ಕುಡಿಯುವದಕ್ಕೂ
ಮನೆಗಳಿಲ್ಲದೆ ಇದ್ದೀರಾ? ಅಥವಾ ದೇವರ ಸಭೆಯನ್ನು
ಅಸಡ್ಡೆಮಾಡಿ [2])ಏನೂ ಇಲ್ಲದವರನ್ನು ನಾಚಿಕೆಪಡಿ
ಸುತ್ತೀರಾ? ನಾನು ನಿಮಗೇನು ಹೇಳಲಿ? ನಿಮ್ಮನ್ನು
ಹೊಗಳಲೋ? ಈ ವಿಷಯದಲ್ಲಿ ಹೊಗಳುವದಿಲ್ಲ.
23 ನಾನು ನಿಮಗೆ ತಿಳಿಸಿಕೊಟ್ಟ ಉಪದೇಶವನ್ನು ಕ
ರ್ತನಿಂದ ಹೊಂದಿದೆನು. ಅದೇನಂದರೆ—ಕರ್ತನಾದ
ಯೇಸು ತಾನು ಹಿಡಿದು ಕೊಡಲ್ಪಟ್ಟ ರಾತ್ರಿಯಲ್ಲಿ
ರೊಟ್ಟಿಯನ್ನು ತೆಗೆದುಕೊಂಡು ದೇವರ ಸ್ತೋತ್ರಮಾಡಿ

ಮುರಿದು—ಇದು [3])ನಿಮಗೋಸ್ಕರವಾಗಿರುವ ನನ
ದೇಹ; ನನ್ನನ್ನು ನೆನಸಿಕೊಳ್ಳುವದಕ್ಕೋಸ್ಕರ [4])ಹೀ
ಮಾಡಿರಿ ಅಂದನು. ಊಟವಾದ ಮೇಲೆ ಆತನು ಅದೆ
ರೀತಿಯಾಗಿ ಪಾತ್ರೆಯನ್ನು ತೆಗೆದುಕೊಂಡು — [5])
ಪಾತ್ರೆಯು ನನ್ನ ರಕ್ತದಿಂದ ಸ್ಥಾಪಿತವಾಗುವ ಹೊ
ಒಡಂಬಡಿಕೆಯನ್ನು ಸೂಚಿಸುತ್ತದೆ; ನೀವು ಇದರಲ್ಲಿ
ಪಾನಮಾಡುವಾಗೆಲ್ಲಾ ನನ್ನನ್ನು ನೆನಸಿಕೊಳ್ಳುವ
ಕ್ಕೋಸ್ಕರ ಪಾನಮಾಡಿರಿ ಅಂದನು. ನೀವು ಈ ರೊಟ್ಟಿ
ಯನ್ನು ತಿಂದು ಈ ಪಾತ್ರೆಯಲ್ಲಿ ಪಾನಮಾಡುವಷ್ಟು
ಸಾರಿ ಕರ್ತನ ಮರಣವನ್ನು ಆತನು ಬರುವ ತನ
ಪ್ರಸಿದ್ಧಿಪಡಿಸುತ್ತೀರಿ. ಹೀಗಿರುವದರಿಂದ ಯಾವನಾ
ರೂ ಅಯೋಗ್ಯವಾಗಿ ಕರ್ತನ ರೊಟ್ಟಿಯನ್ನು ತಿಂದ
ಇಲ್ಲವೆ ಆತನ ಪಾತ್ರೆಯಲ್ಲಿ ಪಾನಮಾಡಿದರೆ ಅವನ
ಕರ್ತನ ದೇಹಕ್ಕೂ ರಕ್ತಕ್ಕೂ ದ್ರೋಹಮಾಡಿದ
ನಾಗಿರುವನು. ಪ್ರತಿಮನುಷ್ಯನು ತನ್ನನ್ನು ಪರೀಕ್ಷಿ
ಕೊಂಡವನಾಗಿ ಆ ರೊಟ್ಟಿಯಲ್ಲಿ ತಕ್ಕೊಂಡು ತಿನ್ನಲಿ
ಆ ಪಾತ್ರೆಯಲ್ಲಿ ಕುಡಿಯಲಿ. ಯಾಕಂದರೆ ಕರ್ತ
ದೇಹವೆಂದು ವಿವೇಚಿಸದೆ ತಿಂದು ಕುಡಿಯುವವನ
ಹಾಗೆ ತಿಂದು ಕುಡಿಯುವದರಿಂದ ನ್ಯಾಯತೀರ್ಪಿಗೊ
ಗಾಗುವನು. ಈ ಕಾರಣದಿಂದಲೇ ನಿಮ್ಮಲ್ಲಿ ಬಹ
ಮಂದಿ ಬಲಹೀನರೂ ರೋಗಿಗಳೂ ಆಗಿದ್ದಾರೆ, ಮತ್ತು
ಅನೇಕರು ಸಾಯುತ್ತಾರೆ. ನಮ್ಮನ್ನು ನಾವೇ ವಿಚಾ
ರಿಸಿಕೊಂಡರೆ ನ್ಯಾಯವಿಚಾರಣೆಗೊಳಗಾಗುವದಿಲ್ಲ
ಆದರೆ ನಾವು ಕರ್ತನ ನ್ಯಾಯವಿಚಾರಣೆಗೆ ಒಳಗಾಗಿ
ಲಾಗಿ ಆತನು—ಇವರಿಗೆ ಲೋಕದವರ ಸಂಗಡ ಅ
ರಾಧಿಗಳೆಂಬ ನಿರ್ಣಯವಾಗಬಾರದೆಂದು ನಮ್ಮನ್ನು
ಶಿಕ್ಷಿಸುತ್ತಾನೆ. ಆದಕಾರಣ ನನ್ನ ಸಹೋದರರೇ, ಈ
ಭೋಜನವನ್ನು ಮಾಡುವದಕ್ಕೆ ಕೂಡಿಬರುವಾಗ ಒಬ್ಬ
ರನ್ನೊಬ್ಬರು ಕಾದುಕೊಳ್ಳಿರಿ. ಒಬ್ಬನು ಹಸಿದ
ಅವನು ಮನೆಯಲ್ಲೇ ಊಟಮಾಡಲಿ; ನೀವು ಕೂ
ಬಂದದ್ದು ನ್ಯಾಯತೀರ್ಪಿಗೊಳಗಾಗುವದಕ್ಕೆ ಕಾರಣ
ವಾಗಬಾರದು. ಮಿಕ್ಕಾದ ಸಂಗತಿಗಳನ್ನು ನಾನ
ಬಂದಾಗ ಕ್ರಮಪಡಿಸುತ್ತೇನೆ.

ಪವಿತ್ರಾತ್ಮದಿಂದುಂಟಾಗುವ ವರಗಳನ್ನು ಕುರಿತದ್ದು.
(12. 1—14. 40.)
ಪವಿತ್ರಾತ್ಮದಿಂದುಂಟಾಗುವ ವರಗಳು ಅನೇಕವಾಗಿದ್ದರೂ ಅವೆಲ
ಸಭೆಯ ಹಿತಕ್ಕೋಸ್ಕರ ಕೊಡಲ್ಪಟ್ಟವೆ ಎಂಬದು.

ಸಹೋದರರೇ, ಪವಿತ್ರಾತ್ಮದಿಂದುಂಟಾಗುವ
ವರಗಳನ್ನು ಕುರಿತು ನಿಮಗೆ ತಿಳಿಯದಿರಬಾರದೆಂದು
ಅಪೇಕ್ಷಿಸುತ್ತೇನೆ. ನೀವು ಅಜ್ಞಾನಿಗಳಾಗಿದ್ದಾಗ
ನಿಮಗೆ ಪ್ರೇರಣೆಯಾದ ಹಾಗೆ ಮೂಕವಿಗ್ರಹಗಳ
ಬಳಿಗೆ ಹೋಗುತ್ತಿದ್ದಿರೆಂದು ಬಲ್ಲಿರಿ. ಹೀಗಿರುವದರಿಂದ
ನಾನು ನಿಮಗೆ ತಿಳಿಸುವದನ್ನು ಕೇಳಿರಿ; ದೇವರಾತ್ಮ
ಪ್ರೇರಣೆಯಿಂದ ಮಾತಾಡುವ ಯಾವ ಮನುಷ್ಯನ
ದರೂ ಯೇಸುವನ್ನು ಶಾಪಗ್ರಸ್ತನೆಂದು ಹೇಳುವದಿಲ್ಲ

[1]) ಅಥವಾ, ದೇವದೂತರು ನೋಡುತ್ತಾರೆಂದು. [2]) ಅಥವಾ, ಮನೆಯಿಲ್ಲದವರನ್ನು. [3]) ಅಥವಾ, ನಿಮಗೋಸ್ಕರ ಮು
ಲ್ಪಡುವ. [4]) ಅಥವಾ, ಮುರಿದು ತಿನ್ನಿರಿ. [5]) ಅಥವಾ, ಪಾತ್ರೆಯಲ್ಲಿರುವದು.

ಮತ್ತು ಪವಿತ್ರಾತ್ಮನ ಪ್ರೇರಣೆಯಿಂದಲೇ ಹೊರತು
ಯಾವ ಮನುಷ್ಯನಾದರೂ ಯೇಸುವನ್ನು ಕರ್ತನೆಂದು
ಹೇಳಲಾರನು.
ವರಗಳಲ್ಲಿ ಬೇರೆ ಬೇರೆ ವಿಧಗಳುಂಟು, ದೇವ
ರಾತ್ಮನು ಒಬ್ಬನೇ; ಸೇವೆಗಳಲ್ಲಿ ಬೇರೆ ಬೇರೆ ವಿಧ
ಗಳುಂಟು, ಕರ್ತನು ಒಬ್ಬನೇ; ಕಾರ್ಯಗಳಲ್ಲಿ ಬೇರೆ
ಬೇರೆ ವಿಧಗಳುಂಟು, ಸರ್ವರಲ್ಲಿಯೂ ಸರ್ವ ಕಾರ್ಯ
ಗಳನ್ನು ಸಾಧಿಸುವ ದೇವರು ಒಬ್ಬನೇ. ಆದರೆ
ಪ್ರತಿಯೊಬ್ಬನಲ್ಲಿ ತೋರಿಬರುವ ದೇವರಾತ್ಮನ ವರ
ಗಳು ಸರ್ವರ ಪ್ರಯೋಜನಾರ್ಥವಾಗಿ ಕೊಡಲ್ಪಟ್ಟವೆ.
ಒಬ್ಬನಿಗೆ ದೇವರಾತ್ಮನ ಮೂಲಕ ಜ್ಞಾನವಾಕ್ಯವು,
ಒಬ್ಬನಿಗೆ ಆ ಆತ್ಮನಿಗೆ ಅನುಗುಣವಾಗಿ ವಿದ್ಯಾವಾಕ್ಯವು,
ಒಬ್ಬನಿಗೆ ಆ ಆತ್ಮನಿಂದಲೇ ನಂಬಿಕೆಯು, ಒಬ್ಬನಿಗೆ ಆ
ಒಬ್ಬ ಆತ್ಮನಿಂದಲೇ ನಾನಾ ರೋಗಗಳನ್ನು ವಾಸಿಮಾ
ಡುವ ವರವು, ಒಬ್ಬನಿಗೆ ಮಹತ್ತುಗಳನ್ನು ಮಾಡುವ
ವರವು, ಒಬ್ಬನಿಗೆ ಪ್ರವಾದನೆಯ ವರವು, ಒಬ್ಬನಿಗೆ
ಸತ್ಯಾಸತ್ಯಾತ್ಮಗಳನ್ನು ವಿವೇಚಿಸುವ ವರವು, ಒಬ್ಬ
ನಿಗೆ ವಿವಿಧ ವಾಣಿಗಳನ್ನಾಡುವ ವರವು, ಒಬ್ಬನಿಗೆ
ವಾಣಿಗಳ ಅರ್ಥವನ್ನು ಹೇಳುವ ವರವು ಕೊಡಲ್ಪಡು
ತ್ತವೆ. ಈ ವರಗಳನ್ನೆಲ್ಲಾ ಆ ಒಬ್ಬ ಆತ್ಮನೇ ತನ್ನ ಚಿತ್ತಕ್ಕೆ
ಬಂದ ಹಾಗೆ ಒಬ್ಬೊಬ್ಬನಿಗೆ ಹಂಚಿಕೊಟ್ಟು ನಡಿಸುತ್ತಾನೆ.
ಹೇಗೆ ದೇಹವು ಒಂದಾಗಿದ್ದರೂ ಅದಕ್ಕಿರುವ
ಅಂಗಗಳು ಅನೇಕವಾಗಿವೆಯೋ, ಹೇಗೆ ದೇಹದ ಅಂಗ
ಗಳೆಲ್ಲವು ಅನೇಕವಾಗಿದ್ದು ಒಂದೇ ದೇಹವಾಗಿರು
ವದೋ, ಹಾಗೆಯೇ ಕ್ರಿಸ್ತನು. ಯೆಹೂದ್ಯರಾ
ಗಲಿ ಗ್ರೀಕರಾಗಲಿ ದಾಸರಾಗಲಿ ಸ್ವತಂತ್ರರಾಗಲಿ
ನಾವೆಲ್ಲರು ಒಂದೇ ದೇಹವಾಗುವದಕ್ಕಾಗಿ ಒಂದೇ
ಆತ್ಮದಲ್ಲಿ ದೀಕ್ಷಾಸ್ನಾನಮಾಡಿಸಿಕೊಂಡೆವು; ಒಂದೇ
ಆತ್ಮ ನಮ್ಮೆಲ್ಲರಿಗೂ ಪಾನವಾಗಿ ಕೊಡಲ್ಪಟ್ಟಿತು.
ದೇಹವು ಒಂದೇ ಅಂಗವಲ್ಲ, ಅನೇಕ ಅಂಗಗಳುಳ್ಳದ್ದಾ
ಗಿದೆ. ಕಾಲು—ನಾನು ಕೈಯಲ್ಲದ ಕಾರಣ ದೇಹಕ್ಕೆ
ಸೇರಿದ್ದಲ್ಲವೆಂದು ಹೇಳಿದರೂ ಅದು ದೇಹಕ್ಕೆ ಸೇರದೆ
ಇರುವದೋ? ಕಿವಿ—ನಾನು ಕಣ್ಣಲ್ಲದ ಕಾರಣ
ನಾನು ದೇಹಕ್ಕೆ ಸೇರಿದ್ದಲ್ಲವೆಂದು ಹೇಳಿದರೂ ಅದು
ದೇಹಕ್ಕೆ ಸೇರದೆ ಇರುವದೋ? ದೇಹವೆಲ್ಲಾ ಕಣ್ಣಾ
ದರೆ ಕಿವಿಯೆಲ್ಲಿ? ಅದೆಲ್ಲಾ ಕಿವಿಯಾದರೆ ಮೂಗೆಲ್ಲಿ?
ಆದರೆ ದೇವರು ಆ ಅಂಗಗಳಲ್ಲಿ ಪ್ರತಿಯೊಂದನ್ನು
ತನಗೆ ಸರಿಯಾಗಿ ತೋಚಿದ ಪ್ರಕಾರ ದೇಹದೊಳಗೆ
ಇಟ್ಟಿದ್ದಾನೆ. ಅವೆಲ್ಲವು ಒಂದೇ ಅಂಗವಾಗಿದ್ದರೆ
ದೇಹವೆಲ್ಲಿರುವದು? ಆದರೆ ಅಂಗಗಳೇನೋ ಅನೇಕ,
ದೇಹವು ಒಂದೇ. ಕಣ್ಣು ಕೈಗೆ—ನೀನು ನನಗೆ
ಅವಶ್ಯವಿಲ್ಲವೆಂದೂ, ತಲೆಯು ಕಾಲುಗಳಿಗೆ—ನೀವು
ನನಗೆ ಅವಶ್ಯವಿಲ್ಲವೆಂದೂ ಹೇಳುವದಕ್ಕಾಗುವದಿಲ್ಲ.
ದೇಹದಲ್ಲಿ ಅಲ್ಪಬಲವುಳ್ಳವುಗಳಾಗಿ ಕಾಣುವ ಅಂಗ
ಗಳನ್ನು ಅತ್ಯವಶ್ಯವೆಂದು ತಿಳಿಯಬೇಕಲ್ಲವೋ? ಮತ್ತು
ನಾವು ದೇಹದಲ್ಲಿ ಅಲ್ಪಮಾನವುಳ್ಳವುಗಳೆಂದೆಣಿಸುವ
ಭಾಗಗಳಿಗೆ ಉಡಿಗೆಯಿಂದ ಹೆಚ್ಚಾದ ಮಾನವನ್ನು
ಕೊಡುವದುಂಟಲ್ಲಾ; ಹೀಗೆ ಅಂದವಿಲ್ಲದ ಅಂಗಗಳಿಗೆ
25 ಹೆಚ್ಚಾದ ಅಂದವುಂಟಾಗುತ್ತದೆ. ಅಂದವುಳ್ಳ ಅಂಗ
ಗಳಿಗೆ ಏನೂ ಅವಶ್ಯವಿಲ್ಲ. ದೇಹದಲ್ಲಿ ಭೇದನೇನೂ
ಇರದೆ ಅಂಗಗಳು ಒಂದಕ್ಕೊಂದರ ಹಿತವನ್ನು ಚಿಂತಿ
ಸುವ ಹಾಗೆ ದೇವರು ಕೊರತೆಯುಳ್ಳದ್ದಕ್ಕೆ ಹೆಚ್ಚಾದ
ಮಾನವನ್ನು ಕೊಟ್ಟು ದೇಹವನ್ನು ಹದವಾಗಿ ಕೂಡಿಸಿ
ದ್ದಾನೆ. ಒಂದು ಅಂಗಕ್ಕೆ ನೋವಾದರೆ ಎಲ್ಲಾ ಅಂಗಗಳಿ 26
ಗೂ ನೋವಾಗುತ್ತದೆ; ಒಂದು ಅಂಗಕ್ಕೆ ಮರ್ಯಾದೆ
ಬಂದರೆ ಎಲ್ಲಾ ಅಂಗಗಳಿಗೂ ಸಂತೋಷವಾಗುತ್ತದೆ.
ನೀವು ಕ್ರಿಸ್ತನ ದೇಹವು, ಮತ್ತು ಒಬ್ಬೊಬ್ಬರಾಗಿ 27
ಅದಕ್ಕೆ ಅಂಗಗಳಾಗಿದ್ದೀರಿ. ದೇವರು ತನ್ನ ಸಭೆ 28
ಯಲ್ಲಿ ಮೊದಲನೇದಾಗಿ ಅಪೊಸ್ತಲರನ್ನು, ಎರಡನೇ
ದಾಗಿ ಪ್ರವಾದಿಗಳನ್ನು, ಮೂರನೇದಾಗಿ ಉಪದೇಶ
ಕರನ್ನು ಇಟ್ಟಿದ್ದಾನೆ; ಆ ಮೇಲೆ ಮಹತ್ಕಾರ್ಯ
ಮಾಡುವ ಶಕ್ತಿಯನ್ನೂ ನಾನಾ ರೋಗಗಳನ್ನು
ವಾಸಿಮಾಡುವ ವರವನ್ನೂ ಪರಸಹಾಯಮಾಡುವ
ಗುಣವನ್ನೂ ಕಾರ್ಯಗಳನ್ನು ನಿರ್ವಹಿಸುವ ಜ್ಞಾನ
ವನ್ನೂ ವಿವಿಧ ವಾಣಿಗಳನ್ನಾಡುವ ವರವನ್ನೂ ಅವರವ
ರಿಗೆ ಕೊಟ್ಟಿದ್ದಾನೆ. ಎಲ್ಲರೂ ಅಪೊಸ್ತಲರೋ? 29
ಎಲ್ಲರೂ ಪ್ರವಾದಿಗಳೋ? ಎಲ್ಲರೂ ಉಪದೇಶಕರೋ?
ಎಲ್ಲರೂ ಮಹತ್ಕಾರ್ಯಗಳನ್ನು ಮಾಡುವವರೋ?
ರೋಗವಾಸಿಮಾಡುವ ವರಗಳು ಎಲ್ಲರಿಗೂ ಉಂಟೋ? 30
ಎಲ್ಲರೂ ವಾಣಿಗಳನ್ನಾಡುವರೋ? ವಾಣಿಗಳ ಅರ್ಥ
ವನ್ನು ಹೇಳುವದಕ್ಕೆ ಎಲ್ಲರಿಗೂ ಶಕ್ತಿಯುಂಟೋ?
ಇವುಗಳಲ್ಲಿ ಶ್ರೇಷ್ಠ ವರಗಳನ್ನು ಆಸಕ್ತಿಯಿಂದ ಅಪೇ
ಕ್ಷಿಸಿರಿ. ಇನ್ನೂ ಉತ್ಕೃಷ್ಟವಾದ ಮಾರ್ಗವನ್ನು 31
ನಿಮಗೆ ತೋರಿಸುತ್ತೇನೆ.

### ಪ್ರೀತಿಯ ಶ್ರೇಷ್ಠತೆ.

13 ನಾನು ಮನುಷ್ಯರ ಭಾಷೆಗಳನ್ನೂ ದೇವದೂತರ
ಭಾಷೆಗಳನ್ನೂ ಆಡುವವನಾದರೂ ಪ್ರೀತಿಯಿಲ್ಲದವ
ನಾಗಿದ್ದರೆ ನಾದಕೊಡುವ ಕಂಚೂ ಗಣಗಣಿಸುವ ತಾಳ
ವೂ ಆಗಿದ್ದೇನೆ. ನನಗೆ ಪ್ರವಾದನವರವಿದ್ದರೂ 2
ಎಲ್ಲಾ ರಹಸ್ಯಗಳೂ ಸಕಲ ವಿಧವಾದ ವಿದ್ಯೆಯೂ ತಿಳಿ
ದರೂ, ಬೆಟ್ಟಗಳನ್ನು ತೆಗೆದಿಡುವದಕ್ಕೆ ಬೇಕಾದಷ್ಟು
ನಂಬಿಕೆಯಿದ್ದರೂ ನಾನು ಪ್ರೀತಿಯಿಲ್ಲದವನಾಗಿದ್ದರೆ
ಏನೂ ಅಲ್ಲದವನಾಗಿದ್ದೇನೆ. ನನಗಿರುವದೆಲ್ಲವನ್ನು 3
ಅನ್ನದಾನಮಾಡಿದರೂ, ನನ್ನ ದೇಹವನ್ನು ಸುಡುವದಕ್ಕೆ
ಒಪ್ಪಿಸಿದರೂ ಪ್ರೀತಿಯು ನನಗಿಲ್ಲವಿದ್ದರೆ ನನಗೇನೂ
ಪ್ರಯೋಜನವಾಗುವದಿಲ್ಲ.
ಪ್ರೀತಿ ಬಹು ತಾಳ್ಮೆಯುಳ್ಳದ್ದು, ಪ್ರೀತಿ ದಯೆ 4
ತೋರಿಸುವದು. ಪ್ರೀತಿಯು ಹೊಟ್ಟೆಕಿಚ್ಚುಪಡುವ
ದಿಲ್ಲ, ಹೊಗಳಿಕೊಳ್ಳುವದಿಲ್ಲ, ಉಬ್ಬಿಕೊಳ್ಳುವದಿಲ್ಲ;
ಮರ್ಯಾದೆಗೆಟ್ಟು ನಡೆಯುವದಿಲ್ಲ, ಸ್ವಪ್ರಯೋಜನ 5
ವನ್ನು ಚಿಂತಿಸುವದಿಲ್ಲ, ಸಿಟ್ಟುಗೊಳ್ಳುವದಿಲ್ಲ, ಅಪಕಾ
ರವನ್ನು ಮನಸ್ಸಿನಲ್ಲಿ ಇಟ್ಟುಕೊಳ್ಳುವದಿಲ್ಲ; ಅನ್ಯಾ 6
ಯವನ್ನು ನೋಡಿ ಸಂತೋಷಪಡದೆ ಸತ್ಯಕ್ಕೆ ಜಯವಾ
ಗುವಲ್ಲಿ ಸಂತೋಷಪಡುತ್ತದೆ; ಎಲ್ಲವನ್ನೂ ಅಡಗಿಸಿ 7
ಕೊಳ್ಳುತ್ತದೆ, ಎಲ್ಲವನ್ನೂ ನಂಬುತ್ತದೆ, ಎಲ್ಲವನ್ನೂ
ನಿರೀಕ್ಷಿಸುತ್ತದೆ, ಎಲ್ಲವನ್ನೂ ಸಹಿಸಿಕೊಳ್ಳುತ್ತದೆ.
ಪ್ರೀತಿಯು ಎಂದಿಗೂ ಬಿದ್ದುಹೋಗುವದಿಲ್ಲ; ಪ್ರವಾ 8
ದನೆಗಳಾದರೋ ಇಲ್ಲದಂತಾಗುವವು; ವಾಣಿಗಳೋ

ನಿಂತುಹೋಗುವವು; ವಿದ್ಯೆಯೋ ಇಲ್ಲದಂತಾಗುವದು.
9 ಅಪೂರ್ಣವಾಗಿ ತಿಳುಕೊಳ್ಳುತ್ತೇವೆ, ಅಪೂರ್ಣವಾಗಿ
10 ಪ್ರವಾದಿಸುತ್ತೇವೆ. ಆದರೆ ಸಂಪೂರ್ಣವಾದದ್ದು ಬಂದಾ
11 ಗ ಅಪೂರ್ಣವಾದದ್ದು ಇಲ್ಲದಂತಾಗುವದು. ನಾನು
ಬಾಲಕನಾಗಿದ್ದಾಗ ಬಾಲಕನ ಮಾತುಗಳನ್ನಾಡಿದೆನು,
ಬಾಲಕನ ಸುಖದುಃಖಗಳನ್ನು ಅನುಭವಿಸಿದೆನು, ಬಾಲ
ಕನ ಆಲೋಚನೆಗಳನ್ನು ಮಾಡಿಕೊಂಡೆನು. ಪ್ರಾಯಸ್ಥ
ನಾದ ಮೇಲೆ ಬಾಲ್ಯದವುಗಳನ್ನು ಬಿಟ್ಟುಬಿಟ್ಟೆನು.
12 ಈಗ ಕಂಚಿನ ದರ್ಪಣದಲ್ಲಿ ಕಾಣಿಸುವಂತೆ [ದೇವರ
ಮುಖವು] ನಮಗೆ ಮೊಬ್ಬಾಗಿ ಕಾಣಿಸುತ್ತದೆ; ಆಗ
ಮುಖಾಮುಖಿಯಾಗಿ ಆತನನ್ನು ನೋಡುವೆವು. ಈಗ
ಸ್ವಲ್ಪಮಾತ್ರ ನನಗೆ ತಿಳಿದದೆ; ಆಗ ದೇವರು
ನನ್ನನ್ನು ಸಂಪೂರ್ಣವಾಗಿ ತಿಳುಕೊಂಡಂತೆ ನಾನು
13 ಸಂಪೂರ್ಣವಾಗಿ ತಿಳುಕೊಳ್ಳುವೆನು. ಹೀಗಿರುವದರಿಂದ
ನಂಬಿಕೆ ನಿರೀಕ್ಷೆ ಪ್ರೀತಿ ಈ ಮೂರೇ ನಿಲ್ಲುತ್ತವೆ;
ಇವುಗಳಲ್ಲಿ ದೊಡ್ಡದು ಪ್ರೀತಿಯೇ.

ವಾಣಿಯನ್ನಾಡುವ ವರಕ್ಕಿಂತ ಪ್ರವಾದಿಸುವ ವರವೇ
ವಿಶೇಷವಾದದ್ದು.

**14** ಪ್ರೀತಿಯನ್ನು ಅಭ್ಯಾಸಮಾಡಿಕೊಳ್ಳಿರಿ. ಆದ
ರೂ ಪವಿತ್ರಾತ್ಮನಿಂದುಂಟಾಗುವ ವರಗಳನ್ನು, ಅವುಗ
ಳೊಳಗೆ ವಿಶೇಷವಾಗಿ ಪ್ರವಾದಿಸುವ ವರವನ್ನೇ ಆಸಕ್ತಿ
2 ಯಿಂದ ಅಪೇಕ್ಷಿಸಿರಿ. ವಾಣಿಯನ್ನಾಡುವವನು ದೇ
ವರ ಸಂಗಡ ಮಾತಾಡುತ್ತಾನೆ ಹೊರತು ಮನುಷ್ಯರ
ಸಂಗಡ ಆಡುವದಿಲ್ಲ. ಅವನು ಆತ್ಮಪ್ರೇರಿತನಾಗಿ ರಹ
ಸ್ಯಾರ್ಥಗಳನ್ನು ನುಡಿಯುತ್ತಿದ್ದರೂ ಯಾರೂ ತಿಳುಕೊ
3 ಳ್ಳುವದಿಲ್ಲ. ಪ್ರವಾದಿಸುವವನಾದರೋ ಮನುಷ್ಯರ
ಸಂಗಡ ಮಾತಾಡುವವನಾಗಿ ಅವರಿಗೆ ಭಕ್ತಿವೃದ್ಧಿಯ
ನ್ನೂ ಪ್ರೋತ್ಸಾಹವನ್ನೂ ಸಂತೈಸುವಿಕೆಯನ್ನೂ ಉಂಟು
4 ಮಾಡುತ್ತಾನೆ. ವಾಣಿಯನ್ನಾಡುವವನು ತನಗೆ ಮಾತ್ರ
ಭಕ್ತಿವೃದ್ಧಿಯನ್ನುಂಟುಮಾಡುತ್ತಾನೆ, ಪ್ರವಾದಿಸುವವ
5 ನು ಸಭೆಗೆ ಭಕ್ತಿವೃದ್ಧಿಯನ್ನುಂಟುಮಾಡುತ್ತಾನೆ. ನೀವೆ
ಲ್ಲರೂ ವಾಣಿಗಳನ್ನಾಡಬೇಕೆಂದು ನಾನು ಅಪೇಕ್ಷಿಸಿ
ದರೂ ಅದಕ್ಕಿಂತಲೂ ನೀವು ಪ್ರವಾದಿಸಬೇಕೆಂಬದೇ
ನನ್ನಿಷ್ಟ. ವಾಣಿಗಳನ್ನಾಡುವವನು ಸಭೆಗೆ ಭಕ್ತಿವೃದ್ಧಿ
ಯಾಗುವದಕ್ಕಾಗಿ ಆ ವಾಣಿಯ ಅರ್ಥವನ್ನು ಹೇಳದೆ
ಹೋದರೆ ಅವನಿಗಿಂತ ಪ್ರವಾದಿಸುವವನು ಶ್ರೇಷ್ಠ.
6 ಹೀಗಿರುವದರಿಂದ ಸಹೋದರರೇ, ನಾನು ನಿಮ್ಮ ಬಳಿಗೆ
ಬಂದು ದೇವರು ತಿಳಿಸಿದ್ದನ್ನು ಪ್ರಕಟಿಸದೆ ಜ್ಞಾನವಾಕ್ಯವ
ನ್ನಾಡದೆ ಪ್ರವಾದನೆಯನ್ನು ಹೇಳದೆ ಉಪದೇಶಮಾಡದೆ
ವಾಣಿಗಳನ್ನು ಮಾತ್ರ ಆಡುವವನಾಗಿದ್ದರೆ ನನ್ನಿಂದ
7 ನಿಮಗೇನು ಪ್ರಯೋಜನವಾದೀತು? ಕೊಳಲು ವೀಣೆ
ಮೊದಲಾದ ಅಚೇತನವಾದ್ಯಗಳು ಸ್ವರಗಳಲ್ಲಿ ಯಾವ
ಭೇದವನ್ನೂ ತೋರಿಸದಿದ್ದರೆ ಊದಿದ್ದು ಅಥವಾ
ಬಾರಿಸಿದ್ದು ಇಂಥದೇ ಎಂದು ಹೇಗೆ ತಿಳಿಯುವದು?
8 ತುತೂರಿಯು ಗೊತ್ತಿಲ್ಲದ ಶಬ್ದವನ್ನು ಕೊಟ್ಟರೆ ಯಾರು
9 ಯುದ್ಧಕ್ಕೆ ಸಿದ್ಧಮಾಡಿಕೊಳ್ಳುವರು? ಹಾಗೆಯೇ
ನೀವೂ ತಿಳಿಯಬಹುದಾದ ಭಾಷೆಯನ್ನೂ ಬಾಯಿಂದ
ಆಡದೆಹೋದರೆ ನಿಮ್ಮ ಮಾತಿನ ಅರ್ಥವನ್ನು ಹೇಗೆ

ತಿಳಿಯುವದು? ನೀವು ಗಾಳಿಯ ಸಂಗಡ ಮಾತಾ
ಹಾಗಿರುವದಷ್ಟೆ. ಲೋಕದಲ್ಲಿ ಎಷ್ಟು ವಿಧವಾದ ಭಾ
ಗಳಿದ್ದರೂ ಅವುಗಳಲ್ಲಿ ಒಂದಾದರೂ ಅರ್ಥವಿಲ್ಲ
ಗಿರುವದಿಲ್ಲ. ಭಾಷೆಯ ಅರ್ಥವು ನನಗೆ ತಿಳಿಯದಿ
ಮಾತಾಡುವವನಿಗೆ ನಾನು ಅನ್ಯದೇಶದವನಂತಿರುವೆ
ಮಾತಾಡುವವನು ನನಗೆ ಅನ್ಯದೇಶದವನಂತಿರುವ
ಹಾಗೆಯೇ ನೀವೂ ಆತ್ಮಪ್ರೇರಿತವಾದ ನುಡಿಗಳನ್ನಾ
ವದಕ್ಕೆ ಅಪೇಕ್ಷಿಸುವವರಾಗಿರುವದರಿಂದ ಸಭೆಗೆ ಭ
ವೃದ್ಧಿ ಉಂಟಾಗುವ ಹಾಗೆ ಅದಕ್ಕಿಂತಲೂ ಹೆಚ
ದ್ದನ್ನು ಮಾಡುವದಕ್ಕೆ ಪ್ರಯತ್ನಿಸಿರಿ. ಆದದರಿ
ವಾಣಿಯನ್ನಾಡುವವನು ತನಗೆ ಅದರ ಅರ್ಥವ
ಹೇಳುವ ಶಕ್ತಿಯೂ ಉಂಟಾಗಬೇಕೆಂದು ದೇವರ
ಪ್ರಾರ್ಥಿಸಲಿ. ಯಾಕಂದರೆ ನಾನು ವಾಣಿಯ
ಡುತ್ತಾ ದೇವರನ್ನು ಪ್ರಾರ್ಥಿಸಿದರೆ ನನ್ನಾತ್ಮವು ಪ್ರಾ
ಸುವದೇ ಹೊರತು ನನ್ನ ಬುದ್ಧಿ ನಿಷ್ಫಲವಾಗಿರುವ
ಹಾಗಾದರೇನು? ನಾನು ಆತ್ಮದಿಂದ ಪ್ರಾರ್ಥಿಸುವೆ
ಬುದ್ಧಿಯಿಂದಲೂ ಪ್ರಾರ್ಥಿಸುವೆನು; ಆತ್ಮದಿ
ಹಾಡುವೆನು, ಬುದ್ಧಿಯಿಂದಲೂ ಹಾಡುವೆನು. ನೀ
ಆತ್ಮದಿಂದ ಮಾತ್ರ ದೇವರ ಸ್ತೋತ್ರಮಾಡಿದರೆ
ವರವನ್ನು ಹೊಂದದಿರುವ ಸಭೆಯವನಿಗೆ ನೀ
ಹೇಳಿದ್ದು ತಿಳಿಯದೆ ಇರುವದರಿಂದ ನೀನು ಮಾಡ
ಕೃತಜ್ಞತಾಸ್ತುತಿಗೆ ಅವನು ಆಮೆನ್ ಎಂದು ಹ
ಹೇಳಾನು? ನೀನಂತೂ ಚೆನ್ನಾಗಿ ಕೃತಜ್ಞತಾಸ್ತು
ಮಾಡುತ್ತೀ ಹೌದು, ಆದರೆ ಬೇರೊಬ್ಬನು ಭಕ್ತಿವೃ
ಹೊಂದುವದಿಲ್ಲ. ನಾನು ನಿಮ್ಮೆಲ್ಲರಿಗಿಂತಲೂ ಹೆಚ್ಚ
ವಾಣಿಗಳನ್ನಾಡುತ್ತೇನೆಂದು ದೇವರನ್ನು ಕೊಂಡಾ
ತ್ತೇನೆ. ಆದರೂ ಸಭೆಯಲ್ಲಿ ವಾಣಿಯಿಂದ ಹತ್ತುಸಾ
ಮಾತುಗಳನ್ನಾಡುವದಕ್ಕಿಂತ ನನ್ನ ಬುದ್ಧಿಯಿಂದ ಐ
ಮಾತುಗಳನ್ನಾಡಿ ಇತರರಿಗೆ ಉಪದೇಶಮಾಡುವ
ನನಗೆ ಇಷ್ಟವಾದದ್ದು. ಸಹೋದರರೇ, ಬುದ್ಧಿ
ವಿಷಯದಲ್ಲಿ ಬಾಲಕರಾಗಿರಬೇಡಿರಿ; ಕೆಟ್ಟತನದ
ಯದಲ್ಲಿ ಶಿಶುಗಳಾಗಿಯೇ ಇದ್ದು ಬುದ್ಧಿಯ
ಯದಲ್ಲಿ ಪ್ರಾಯಸ್ಥರಾಗಿರಬೇಕು.
ಅನ್ಯಭಾಷೆಯವರ ಮೂಲಕವಾಗಿಯೂ
ದೇಶಸ್ಥರ ನಾಲಿಗೆಯಿಂದಲೂ ನಾನು ಈ ಜನರ ಸಂ
ಮಾತಾಡುವೆನು; ಆದರೂ ಅವರು ನನ್ನ ಮಾತಿಗೆ
ಕೊಡುವದಿಲ್ಲವೆಂದು ಕರ್ತನು ಹೇಳುತ್ತಾನೆಂಬದ
ಧರ್ಮಶಾಸ್ತ್ರದಲ್ಲಿ ಬರೆದದೆ. ಆದದರಿಂದ ವಾಣಿ
ನ್ನಾಡುವದು ನಂಬದವರಿಗೆ ಸೂಚನೆಗಾಗಿದೆ ಹೊ
ನಂಬುವವರಿಗೆ ಸೂಚನೆಯಲ್ಲವೆಂದು ನಾವು ತಿಳು
ಳ್ಳಬೇಕು. ಆದರೆ ಪ್ರವಾದನೆಯು ನಂಬದವರಿಗೆ
ಸ್ಕರವಲ್ಲ ನಂಬುವವರಿಗೋಸ್ಕರವಾಗಿದೆ. ಹೀಗಿ
ವಲ್ಲಿ ಸಭೆಯೆಲ್ಲಾ ಒಂದೇ ಸ್ಥಳದಲ್ಲಿ ಕೂಡಿಬಂದ
ಎಲ್ಲರೂ ವಾಣಿಗಳನ್ನಾಡಿದರೆ ಈ ವರವನ್ನು ಹೊಂ
ರುವ ಸಭೆಯವರು ಅಥವಾ ಕ್ರಿಸ್ತನಂಬಿಕೆಯಿಲ್ಲ
ವರು ಒಳಗೆ ಬಂದು ನೋಡಿ—ನಿಮಗೆ ಹುಚ್ಚು
ದದೆ ಎಂದು ಹೇಳುವದಿಲ್ಲವೋ? ಆದರೆ ನೀವೆಲ್ಲ
ಪ್ರವಾದಿಸುತ್ತಿರಲು ಕ್ರಿಸ್ತನಂಬಿಕೆಯಿಲ್ಲದವನಾಗಲಿ
ವರವಿಲ್ಲದವನಾಗಲಿ ಒಳಗೆ ಬಂದರೆ ಅವನು ಎ
ಮಾತನ್ನು ಕೇಳಿ ತಾನು ಪಾಪಿಯೆಂಬ ಅರುಹ

ಹೊಂದುವನು, ಎಲ್ಲರ ಮಾತಿನಿಂದ ಪರಿಶೋಧಿತನಾಗು
ವನು, ಅವನ ಹೃದಯದ ರಹಸ್ಯಗಳು ಬೈಲಾಗು
ವವು; ಮತ್ತು ಅಡ್ಡಬಿದ್ದು ದೇವರನ್ನು ಆರಾಧಿಸಿ—
ದೇವರು ನಿಜವಾಗಿ ನಿಮ್ಮಲ್ಲಿದ್ದಾನೆಂಬದನ್ನು ಪ್ರಚುರ
ಪಡಿಸುವನು.

ಸಭೆಯಲ್ಲಿ ಎಲ್ಲವೂ ಮರ್ಯಾದೆಯಿಂದ ನಡೆಯ
ಬೇಕೆಂಬುವ ಬೋಧೆ.

ಹಾಗಾದರೇನು, ಸಹೋದರರೇ? ನೀವು ಕೂಡಿ
ಬಂದಿರುವಾಗ ಒಬ್ಬನು ಹಾಡುವದೂ, ಒಬ್ಬನು ಉಪ
ದೇಶಮಾಡುವದೂ, ಒಬ್ಬನು ತನಗೆ ಪ್ರಕಟವಾದದ್ದನ್ನು
ತಿಳಿಸುವದೂ, ಒಬ್ಬನು ವಾಣಿಯನ್ನಾಡುವದೂ, ಒಬ್ಬ
ನು ಅದರ ಅರ್ಥವನ್ನು ಹೇಳುವದೂ ಉಂಟಷ್ಟೆ. ನೀವು
ಏನು ನಡಿಸಿದರೂ ಭಕ್ತಿವೃದ್ಧಿಗಾಗಿಯೇ ನಡಿಸಿರಿ. ವಾ
ಣಿಯನ್ನಾಡುವದಾದರೆ ಇಬ್ಬರು ಅಥವಾ ಅವಶ್ಯಕವಿದ್ದರೆ
ಮೂವರಿಗಿಂತ ಹೆಚ್ಚಿಲ್ಲದೆ ಒಬ್ಬೊಬ್ಬರಾಗಿ ಮಾತಾಡ
ಬೇಕು; ಮತ್ತು ಒಬ್ಬನೇ ಅರ್ಥವನ್ನು ಹೇಳಬೇಕು.
ಅರ್ಥವನ್ನು ಹೇಳುವವನಿಲ್ಲದಿದ್ದರೆ ವಾಣಿಯನ್ನಾಡುವ
ವನು ಸಭೆಯಲ್ಲಿ ಸುಮ್ಮಗಿರಲಿ; ತನ್ನೊಂದಿಗೆಯೂ ದೇವ
ರೊಂದಿಗೆಯೂ ಮಾತಾಡಿಕೊಳ್ಳಲಿ. ಪ್ರವಾದಿಗಳು
ಇಬ್ಬರಾಗಲಿ ಮೂವರಾಗಲಿ ಮಾತಾಡಲಿ, ಮಿಕ್ಕಾದ
ವರು ಕೇಳಿ ವಿವೇಚನೆಮಾಡಲಿ. ಕೂತಿರುವ
ಮತ್ತೊಬ್ಬನಿಗೆ ಪ್ರಕಟನೆ ಉಂಟಾದರೆ ಮೊದಲಿನವನು
ಸುಮ್ಮಗಾಗಲಿ. ನೀವೆಲ್ಲರು ಒಬ್ಬೊಬ್ಬರಾಗಿ ಪ್ರವಾ
ದಿಸುವದಕ್ಕೆ ಅಡ್ಡಿಯಿಲ್ಲ; ಹೀಗೆ ಮಾಡಿದರೆ ಎಲ್ಲರೂ
ಕಲಿತುಕೊಳ್ಳುವರು, ಎಲ್ಲರೂ ಎಚ್ಚರಿಕೆಹೊಂದುವರು.
ಪ್ರವಾದಿಗಳ ಆತ್ಮಗಳು ಪ್ರವಾದಿಗಳ ಸ್ವಾಧೀನದಲ್ಲಿ
ಅವೆ. ದೇವರು ಸಮಾಧಾನಕ್ಕೆ ಕಾರಣನೇ ಹೊರತು
ಗಲಿಬಿಲಿಗೆ ಕಾರಣನಲ್ಲ.

ದೇವಜನರ ಎಲ್ಲಾ ಸಭೆಗಳ ಮರ್ಯಾದೆಯ
ಪ್ರಕಾರ ಸ್ತ್ರೀಯರು ಸಭೆಯ ಕೂಟಗಳಲ್ಲಿ ಸುಮ್ಮ
ಗಿರಬೇಕು; ಮಾತಾಡುವದಕ್ಕೆ ಅವರಿಗೆ ಅಪ್ಪಣೆಯಿಲ್ಲ;
ಅವರು ಅಧೀನದಲ್ಲಿರಬೇಕು; ಧರ್ಮಶಾಸ್ತ್ರದಲ್ಲಿ
ಯೂ ಹೀಗೆ ಹೇಳಿಯದೆಯಲ್ಲಾ. ಅವರು ಏನಾ
ದರೂ ತಿಳುಕೊಳ್ಳುವದಕ್ಕೆ ಅಪೇಕ್ಷಿಸಿದರೆ ಮನೆ
ಯಲ್ಲಿ ತಮ್ಮ ಗಂಡಂದಿರನ್ನು ಕೇಳಲಿ. ಸ್ತ್ರೀಯರು ಸಭೆ
ಯಲ್ಲಿ ಮಾತಾಡುವದು ನಾಚಿಗೆಗೆಟ್ಟ ಕೆಲಸವಾಗಿದೆ.

ಏನು, ದೇವರ ವಾಕ್ಯವು ನಿಮ್ಮಿಂದಲೇ ಹೊರಟಿ
ತೋ? ನಿಮಗೆ ಮಾತ್ರವೇ ಬಂತೋ? ಯಾವನಾ
ದರೂ ತನ್ನನ್ನು ಪ್ರವಾದಿಯೆಂದಾಗಲಿ ದೇವರಾತ್ಮನಿಂದ
ನಡಿಸಲ್ಪಡುವವನೆಂದಾಗಲಿ ಭಾವಿಸಿಕೊಂಡರೆ ನಾನು
ನಿಮಗೆ ಬರೆದಿರುವ ಸಂಗತಿಗಳು ಕರ್ತನ ವಿಧಿಯೇ
ಎಂದು ಚೆನ್ನಾಗಿ ತಿಳುಕೊಳ್ಳಲಿ. ಯಾವನಾದರೂ ತನಗೆ
ಇದು ಗೊತ್ತಿಲ್ಲವೆಂದರೆ ಅವನು ಗೊತ್ತಿಗೆ ಬಾರದ
ವನು.

ಆದಕಾರಣ ನನ್ನ ಸಹೋದರರೇ, ಪ್ರವಾದಿಸು
ವದಕ್ಕೆ ಆಸಕ್ತಿಯಿಂದ ಅಪೇಕ್ಷಿಸಿರಿ, ಮತ್ತು ವಾಣಿಯ
ನ್ನಾಡುವದಕ್ಕೆ ಬೇಡವೆನ್ನಬಾರದು. ಆದರೆ ಎಲ್ಲವೂ
ಮರ್ಯಾದೆಯಿಂದಲೂ ಕ್ರಮದಿಂದಲೂ ನಡೆಯಲಿ.

ಸತ್ತವರು ಜೀವಿತರಾಗಿ ಎದ್ದುಬರುವದನ್ನು ಕುರಿತದ್ದು.
(15. 1—58.)
ಕ್ರಿಸ್ತನು ಎದ್ದುಬಂದನೆಂಬದಕ್ಕೆ ಸಾಕ್ಷಿಗಳು.

15 ಸಹೋದರರೇ, ನಾನು ನಿಮಗೆ ತಿಳಿಸಿದ ಸುವಾರ್ತೆ
ಯನ್ನು ನಿಮ್ಮ ನೆನಪಿಗೆ ತರುತ್ತೇನೆ; ನೀವು ಅದ
ನ್ನು ಸ್ವೀಕರಿಸಿದಿರಿ, ಅದರಲ್ಲಿ ನಿಂತಿದ್ದೀರಿ. ನಾನು 2
ಯಾವ ಸಂಗತಿಯನ್ನು ಹೇಳಿ ನಿಮಗೆ ಸುವಾರ್ತೆಯ
ನ್ನು ತಿಳಿಸಿದೆನೋ ನೀವು ಅದನ್ನು ಘಟ್ಟಿಯಾಗಿ
ಹಿಡುಕೊಂಡರೆ ಮತ್ತು ನಿಮ್ಮ ನಂಬಿಕೆಯು ನಿರಾ
ಧಾರವಾಗದ ಪಕ್ಷಕ್ಕೆ ಆ ಸುವಾರ್ತೆಯಿಂದ ನಿಮಗೆ
ರಕ್ಷಣೆಯಾಗುತ್ತದೆ. ನಾನು ನಿಮಗೆ ತಿಳಿಸಿದ ಮೊದ 3
ಲನೆಯ ಸಂಗತಿಗಳೊಳಗೆ ಒಂದು ಸಂಗತಿಯನ್ನು
ನಿಮಗೆ ತಿಳಿಸಿಕೊಟ್ಟೆನು. ಅದು ನಾನು ಸಹ ಕಲಿ
ತುಕೊಂಡದ್ದೇ. ಅದೇನಂದರೆ ಶಾಸ್ತ್ರದಲ್ಲಿ ಮುಂತಿ
ಳಿಸಿರುವ ಪ್ರಕಾರ ಕ್ರಿಸ್ತನು ನಮ್ಮ ಪಾಪಗಳ ನಿವಾ
ರಣೆಗಾಗಿ ಸತ್ತನು; ಹೂಣಲ್ಪಟ್ಟನು; ಶಾಸ್ತ್ರದ 4
ಪ್ರಕಾರವೇ ಮೂರನೆಯ ದಿನದಲ್ಲಿ ಎಬ್ಬಿಸಲ್ಪಟ್ಟನು.
ಕೇಫನಿಗೂ ಆ ಮೇಲೆ ಹನ್ನೆರಡು ಮಂದಿ ಅಪೊ 5
ಸ್ತಲರಿಗೂ ಕಾಣಿಸಿಕೊಂಡನು. ತರುವಾಯ ಒಂದೇ 6
ಸಮಯದಲ್ಲಿ ಐನೂರು ಮಂದಿಗಿಂತ ಹೆಚ್ಚು ಸಹೋದ
ರರಿಗೆ ಕಾಣಿಸಿಕೊಂಡನು. ಇವರಲ್ಲಿ ಹೆಚ್ಚು ಜನರು
ಇಂದಿನ ವರೆಗೂ ಇದ್ದಾರೆ. ಕೆಲವರು ನಿದ್ರೆಹೋಗಿ
ದ್ದಾರೆ. ತರುವಾಯ ಆತನು ಯಾಕೋಬನಿಗೂ ಆ 7
ಮೇಲೆ ಅಪೊಸ್ತಲರೆಲ್ಲರಿಗೂ ಕಾಣಿಸಿಕೊಂಡನು.
ಕಟ್ಟಕಡೆಗೆ ದಿನತುಂಬದೆ ಹುಟ್ಟಿದವನಂತಿರುವ ನನ 8
ಗೂ ಕಾಣಿಸಿಕೊಂಡನು. ನಾನಂತೂ ಅಪೊಸ್ತಲ 9
ರಲ್ಲಿ ಕನಿಷ್ಠನಷ್ಟೆ; ನಾನು ದೇವರ ಸಭೆಯನ್ನು
ಹಿಂಸೆಪಡಿಸಿದ್ದರಿಂದ ಅಪೊಸ್ತಲನೆನಿಸಿಕೊಳ್ಳುವದಕ್ಕೆ
ಯೋಗ್ಯನಲ್ಲ. ಆದರೆ ನಾನು ಎಂಥವನಾಗಿದ್ದೇನೋ 10
ದೇವರ ಕೃಪೆಯಿಂದಲೇ ಅಂಥವನಾಗಿದ್ದೇನೆ. ನನಗುಂ
ಟಾದ ಆತನ ಕೃಪೆಯು ನಿಷ್ಫಲವಾಗಲಿಲ್ಲ; ನಾನು
ಅವರೆಲ್ಲರಿಗಿಂತಲೂ ಹೆಚ್ಚಾಗಿ ಪ್ರಯಾಸಪಟ್ಟೆನು.
ಆದರೆ ಪ್ರಯಾಸಪಟ್ಟವನು ನಾನಲ್ಲ, ನನ್ನೊಂದಿಗಿ
ರುವ ದೇವರ ಕೃಪೆಯೇ. ಹಾಗಾದರೆ ನಾನಾದರೇನು 11
ಅವರಾದರೇನು, ಆ ಸಂಗತಿಗಳನ್ನೇ ಸಾರುತ್ತೇವೆ;
ಅವುಗಳನ್ನು ನೀವು ನಂಬಿದಿರಿ.

ಕ್ರಿಸ್ತನು ಜೀವಿತನಾಗಿ ಎದ್ದುಬಂದದ್ದರಿಂದ ಆತನ ಭಕ್ತರೂ
ಎದ್ದುಬರುವರು.

ಕ್ರಿಸ್ತನು ಸತ್ತವರೊಳಗಿಂದ ಎಬ್ಬಿಸಲ್ಪಟ್ಟನೆಂದು 12
ಸಾರೋಣವಾಗುತ್ತಿರುವಲ್ಲಿ ನಿಮ್ಮೊಳಗೆ ಕೆಲವರು—
ಸತ್ತವರಿಗೆ ಪುನರುತ್ಥಾನವೇ ಇಲ್ಲವೆಂದು ಹೇಳುವದು
ಹೇಗೆ? ಸತ್ತವರಿಗೆ ಪುನರುತ್ಥಾನವಿಲ್ಲವೆಂಬದು ನಿಜವಾ 13
ಗಿದ್ದರೆ ಕ್ರಿಸ್ತನಾದರೂ ಎದ್ದುಬರಲಿಲ್ಲ; ಕ್ರಿಸ್ತನು ಎದ್ದು 14
ಬರಲಿಲ್ಲವಾದರೆ ನಮ್ಮ ಪ್ರಸಂಗವು ಹುರುಳಿಲ್ಲದ್ದು,
ಮತ್ತು ನಿಮ್ಮ ನಂಬಿಕೆಯೂ ಹುರುಳಿಲ್ಲದ್ದು. ಇದ 15
ಲ್ಲದೆ ಸತ್ತವರು ಎದ್ದುಬರುವದಿಲ್ಲವೆಂಬದು ನಿಜವಾ

ಗಿದ್ದ ಪಕ್ಷದಲ್ಲಿ ದೇವರು ಕ್ರಿಸ್ತನನ್ನು ಎಬ್ಬಿಸಲೇ ಇಲ್ಲ;
ಎಬ್ಬಿಸಿದನೆಂದು ಸಾಕ್ಷಿಕೊಟ್ಟ ನಾವು ದೇವರ ವಿಷ
ಯವಾಗಿ ಸುಳ್ಳುಸಾಕ್ಷಿ ಹೇಳಿದವರಾಗಿ ಕಂಡುಬಂದೆವು.
16 ಸತ್ತವರು ಎದ್ದುಬರುವದಿಲ್ಲವಾದರೆ ಕ್ರಿಸ್ತನೂ ಎದ್ದು
17 ಬರಲಿಲ್ಲ. ಕ್ರಿಸ್ತನು ಎದ್ದುಬರಲಿಲ್ಲವಾದರೆ ನಿಮ್ಮ
ನಂಬಿಕೆಯು ನಿಷ್ಪ್ರಯೋಜನವಾಗಿದೆ, ನೀವು ಇನ್ನೂ
18 ನಿಮ್ಮ ಪಾಪಗಳಲ್ಲಿಯೇ ಇದ್ದೀರಿ. ಇದು ಮಾತ್ರ
ವಲ್ಲದೆ ಕ್ರಿಸ್ತನವರಾಗಿ ನಿದ್ರೆಹೋದವರು ನಾಶವಾದರು.
19 ಈ ಜೀವಮಾನಕಾಲದ ಪೂರ್ತಿಗೆ ನಾವು ಕ್ರಿಸ್ತನಲ್ಲಿ
ನಿರೀಕ್ಷೆಯಿಟ್ಟುಕೊಂಡದ್ದೇ ಹೊರತು ಮತ್ತೇನೂ ಇಲ್ಲ
ದಿದ್ದರೆ ಎಲ್ಲಾ ಮನುಷ್ಯರಲ್ಲಿಯೂ ನಿರ್ಭಾಗ್ಯರೇ ಸರಿ.
20 ಆದರೆ ಕ್ರಿಸ್ತನು ಸತ್ತವರೊಳಗಿಂದ ಎದ್ದುಬಂದೇ
ಇದ್ದಾನೆ; ನಿದ್ರೆಹೋದವರಲ್ಲಿ ಪ್ರಥಮಫಲವಾದನು.
21 ಮನುಷ್ಯನ ಮೂಲಕ ಮರಣವು ಉಂಟಾದ ಕಾರಣ
ಮನುಷ್ಯನ ಮೂಲಕ ಸತ್ತವರಿಗೆ ಪುನರುತ್ಥಾನ
22 ವುಂಟಾಗುವದು. ಯಾವ ಪ್ರಕಾರ ಆದಾಮನ
ಸಂಬಂಧದಿಂದ ಎಲ್ಲರೂ ಸಾಯುವವರಾದರೋ ಅದೇ
ಪ್ರಕಾರ ಕ್ರಿಸ್ತನ ಸಂಬಂಧದಿಂದ ಎಲ್ಲರೂ ಜೀವಿತರಾ
23 ಗುವರು. ಆದರೆ ಪ್ರತಿಯೊಬ್ಬನು ತನ್ನ ತನ್ನ ತರಗತಿ
ಯಲ್ಲಿರುವನು. ಕ್ರಿಸ್ತನು ಪ್ರಥಮಫಲ; ತರುವಾಯ
ಕ್ರಿಸ್ತನ ಪ್ರತ್ಯಕ್ಷತೆಯಲ್ಲಿ ಆತನವರು ಎದ್ದುಬರು
24 ವರು. ಆ ಮೇಲೆ ಆತನು ಬೇರೆ ಎಲ್ಲಾ ಧೊರೆತನ
ವನ್ನೂ ಎಲ್ಲಾ ಅಧಿಕಾರವನ್ನೂ ಬಲವನ್ನೂ ನಿವೃತ್ತಿ
ಮಾಡಿ ತಂದೆಯಾಗಿರುವ ದೇವರಿಗೆ ರಾಜ್ಯವನ್ನು ಒಪ್ಪಿಸಿ
25 ಕೊಡುವಾಗ ಸಮಾಪ್ತಿ. ಯಾಕಂದರೆ ತಾನು
ಎಲ್ಲಾ ವಿರೋಧಿಗಳನ್ನು ತನ್ನ ಪಾದಗಳ ಕೆಳಗೆ ಹಾಕಿ
ಕೊಳ್ಳುವ ತನಕ ರಾಜ್ಯವನ್ನಾಳುವದು ಅವಶ್ಯ.
26 ಮರಣವು ಕಡೇ ಶತ್ರುವಾಗಿ ನಿವೃತ್ತಿಯಾಗುವದು.
27 ದೇವರು ಸಮಸ್ತವನ್ನೂ ಆತನ ಪಾದಗಳ ಕೆಳಗೆ
ಹಾಕಿ ಆತನಿಗೆ ಅಧೀನಮಾಡಿದ್ದಾನೆಂಬದಾಗಿ ಹೇಳಿಯ
ದೆಯಲ್ಲಾ. ಸಮಸ್ತವೂ ಆತನಿಗೆ ಅಧೀನಮಾಡಲ್ಪ
ಟ್ಟಿದೆ ಎಂದು ಹೇಳುವಾಗ ಸಮಸ್ತವನ್ನು ಅಧೀನ
ಮಾಡಿ ಕೊಟ್ಟಾತನು ಅದರಲ್ಲಿ ಸೇರಲಿಲ್ಲವೆಂಬದು
28 ಸ್ಪಷ್ಟವಾಗಿದೆ. ಸಮಸ್ತವೂ ಆತನಿಗೆ ಅಧೀನವಾದ
ಮೇಲೆ ಮಗನು ಸಮಸ್ತವನ್ನೂ ತನಗೆ ಅಧೀನಮಾಡಿ
ಕೊಟ್ಟಾತನಿಗೆ ತಾನೇ ಅಧೀನನಾಗುವನು; ಹೀಗೆ
ದೇವರು ಸಮಸ್ತರಲ್ಲಿಯೂ ಸಮಸ್ತವೂ ಆಗು
ವನು.
29 ಸತ್ತವರಿಗೆ ಪುನರುತ್ಥಾನವಿಲ್ಲವಾದರೆ ಸತ್ತವರಿಗೋ
ಸ್ಕರ ದೀಕ್ಷಾಸ್ನಾನ ಮಾಡಿಸಿಕೊಳ್ಳುವವರು ಏನು
ಮಾಡುವರು? ಸತ್ತವರು ಎದ್ದುಬರುವದೇ ಇಲ್ಲವೆಂ
ಬದು ನಿಜವಾಗಿದ್ದರೆ ಯಾಕೆ ಅವರಿಗೋಸ್ಕರ ದೀಕ್ಷಾ
30 ಸ್ನಾನ ಮಾಡಿಸಿಕೊಳ್ಳುತ್ತಾರೆ? ನಾವು ಸಹ ಪ್ರತಿ
ಗಳಿಗೆಯಲ್ಲಿಯೂ ಯಾಕೆ ಜೀವದ ಭಯದಿಂದಿದ್ದೇವೆ?
31 ಸಹೋದರರೇ, ನಮ್ಮ ಕರ್ತನಾದ ಕ್ರಿಸ್ತ ಯೇಸುವಿ
ನಲ್ಲಿ ನಿಮ್ಮನ್ನು ಕುರಿತು ನನಗಿರುವ ಹೆಚ್ಚಳದ
ಮೇಲೆ ಆಣೆ ಇಟ್ಟು ನಾನು ದಿನಾಲು ಸಾಯುತ್ತಲಿ
32 ದ್ದೇನೆ ಎಂದು ಹೇಳುತ್ತೇನೆ. ನಾನು ಎಫೆಸದಲ್ಲಿ
ಮೃಗಗಳೊಂದಿಗೆ ಯುದ್ಧಮಾಡಿದ್ದು ಕೇವಲ ಮಾನು
ಷಾಭಿಪ್ರಾಯದಿಂದಾದರೆ ನನಗೇನು ಪ್ರಯೋಜನ?

ಸತ್ತವರು ಎದ್ದುಬರುವದಿಲ್ಲವಾದರೆ—ತಿನ್ನೋ
ಕುಡಿಯೋಣ, ನಾಳೆ ಸಾಯುತ್ತೇವಲ್ಲಾ. ಮೋ
ಹೋಗಬೇಡಿರಿ; ದುಸ್ಸಹವಾಸವು ಸದಾಚಾರವ
ಕೆಡಿಸುತ್ತದೆ. ಇಂಥ ಅಮಲಿನಿಂದೆಚ್ಚತ್ತು ನ
ವಂತರಾಗಿರಿ, ಪಾಪವನ್ನು ಬಿಟ್ಟುಬಿಡಿರಿ. ಕೆಲವ
ದೇವರ ವಿಷಯದಲ್ಲಿ ಜ್ಞಾನವೇ ಇಲ್ಲ; ನಿಮ
ನಾಚಿಕೆಹುಟ್ಟಬೇಕೆಂದು ಇದನ್ನು ಹೇಳುತ್ತೇನೆ.

ಸತ್ತವರು ಯಾವ ಸ್ಥಿತಿಯಲ್ಲಿ ಎದ್ದುಬರುವರೆಂಬದನ್ನು
ಕುರಿತದ್ದು.

ಸತ್ತವರು ಹೇಗೆ ಎಬ್ಬಿಸಲ್ಪಡುತ್ತಾರೆ, ಎಂಥ ದೇ
ದಿಂದ ಬರುತ್ತಾರೆ ಎಂದು ಒಬ್ಬನು ಕೇಳಾನು. ಮೂಢ
ನೀನು; ನೀನು ಬಿತ್ತುವ ಬೀಜವು ಸಾಯದಿದ್ದ
ಜೀವಿತವಾಗುವದಿಲ್ಲ, ನೋಡು; ಒಂದು ವೇಳೆ ಗೋ
ಯನ್ನಾಗಲಿ ಬೇರೆ ಯಾವದೋ ಬೀಜವನ್ನಾಗಲಿ ಬಿ
ವಾಗ ಬರೀ ಕಾಳನ್ನೇ ಹೊರತು ಮುಂದೆ ಆಗಬೇಕ
ದೇಹವನ್ನು ಬಿತ್ತುವದಿಲ್ಲ. ಆದರೆ ದೇವರು ತನ್ನ ಇ
ದಂತೆ ಅದಕ್ಕೆ ದೇಹವನ್ನು ಕೊಡುತ್ತಾನೆ. ಒಂದೊಂ
ಬೀಜಕ್ಕೆ ಅದರದರ ದೇಹವನ್ನು ಕೊಡುತ್ತಾನೆ. ಎ
ಶರೀರಗಳು ಒಂದೇ ವಿಧವಾದವುಗಳಲ್ಲ; ಮನುಷ್
ಶರೀರ ಬೇರೆ, ಪಶುಗಳ ಶರೀರ ಬೇರೆ, ಪಕ್ಷಿಗಳ ಶರೀ
ಬೇರೆ, ಮೀನುಗಳದು ಬೇರೆ. ಇದಲ್ಲದೆ ಪರಲೋಕ
ದೇಹಗಳುಂಟು, ಭೂಲೋಕದ ದೇಹಗಳುಂಟು, ಆ
ಪರಲೋಕದ ದೇಹಗಳ ಮಹಿಮೆ ಬೇರೆ, ಭೂಲೋಕ
ದೇಹಗಳ ಮಹಿಮೆ ಬೇರೆ. ಸೂರ್ಯನ ಮಹಿ
ಒಂದು ವಿಧ, ಚಂದ್ರನ ಮಹಿಮೆ ಮತ್ತೊಂದು ವಿ
ನಕ್ಷತ್ರಗಳ ಮಹಿಮೆ ಇನ್ನೊಂದು ವಿಧ. ಮಹಿ
ಯಲ್ಲಿ ಒಂದು ನಕ್ಷತ್ರಕ್ಕೂ ಇನ್ನೊಂದು ನಕ್ಷತ್ರಕ
ಹೆಚ್ಚು ಕಡಿಮೆಯುಂಟಷ್ಟೆ.
ಸತ್ತವರಿಗಾಗುವ ಪುನರುತ್ಥಾನವು ಅದೇ ಪ್ರಕ
ವಾಗಿರುವದು. ದೇಹವು ಲಯಾವಸ್ಥೆಯಲ್ಲಿ ಬಿತ್ತ
ಡುತ್ತದೆ, ನಿರ್ಲಯಾವಸ್ಥೆಯಲ್ಲಿ ಎದ್ದುಬರುವದ
ಹೀನಾವಸ್ಥೆಯಲ್ಲಿ ಬಿತ್ತಲ್ಪಡುತ್ತದೆ, ಮಹಿಮೆಯ
ಎದ್ದುಬರುವದು; ನಿರ್ಬಲಾವಸ್ಥೆಯಲ್ಲಿ ಬಿತ್ತಲ್ಪ
ತ್ತದೆ, ಬಲಾವಸ್ಥೆಯಲ್ಲಿ ಎದ್ದುಬರುವದು; ಪ್ರಾಕ
ದೇಹವಾಗಿ ಬಿತ್ತಲ್ಪಡುತ್ತದೆ, ಆತ್ಮಿಕದೇಹವಾಗಿ ಎದ
ಬರುವದು. ಪ್ರಾಕೃತದೇಹವಿರುವದಾದರೆ ಆತ್ಮಿ
ದೇಹವೂ ಇರುವದು. ಮೊದಲನೆಯ ಮನುಷ್ಯನಾ
ಆದಾಮನು ಬದುಕುವ ಪ್ರಾಣಿಯಾದನೆಂದು ಬರೆದ
ಯಲ್ಲಾ. ಕಡೇ ಆದಾಮನೋ ಬದುಕಿಸು
ಆತ್ಮನು. ಆತ್ಮಿಕವಾದದ್ದು ಮೊದಲನೇದಲ್ಲ, ಪ್ರಾಕ
ವಾದದ್ದು ಮೊದಲನೇದು; ಆ ಮೇಲೆ ಆತ್ಮಿಕವಾದದ
ಮೊದಲನೆಯ ಮನುಷ್ಯನು ಭೂಮಿಯೊಳಗಿಂ
ಉತ್ಪನ್ನನಾಗಿ ಮಣ್ಣಿಗೆ ಸಂಬಂಧಪಟ್ಟವನು; ಎರ
ನೆಯ ಮನುಷ್ಯನು ಪರಲೋಕದಿಂದ ಬಂದವನ
ಮಣ್ಣಿನಿಂದ ಹುಟ್ಟಿದವನು ಎಂಥವನೋ ಮಣ್ಣಿ
ಸಂಬಂಧಪಟ್ಟವರೂ ಅಂಥವರೇ; ಪರಲೋಕದಿಂ
ಬಂದಾತನು ಎಂಥವನೋ ಪರಲೋಕಸಂಬಂಧ ಪ
ವರೂ ಅಂಥವರೇ. ನಾವು ಮಣ್ಣಿನಿಂದ ಹುಟ್ಟಿದವ

ಸಾರೂಪ್ಯವನ್ನು ಧರಿಸಿಕೊಂಡಿರುವ ಪ್ರಕಾರ ಪರ
ಲೋಕದಿಂದ ಬಂದಾತನ ಸಾರೂಪ್ಯವನ್ನೂ ಧರಿಸಿಕೊಳ್ಳ
ಬೇಕು.

ಸಹೋದರರೇ, ನಾನು ಹೇಳುವದೇನಂದರೆ—ರಕ್ತ
ಮಾಂಸವು ದೇವರ ರಾಜ್ಯಕ್ಕೆ ಬಾಧ್ಯವಾಗಲಾರದು;
ಲಯವಾಗುವ ವಸ್ತು ನಿರ್ಲಯಪದವಿಗೆ ಬಾಧ್ಯವಾಗು
ವದಿಲ್ಲ. ಕೇಳಿರಿ, ಇದು ವರೆಗೆ ಗುಪ್ತವಾಗಿದ್ದ ಸಂಗತಿ
ಯನ್ನು ನಿಮಗೆ ತಿಳಿಸುತ್ತೇನೆ—ನಾವೆಲ್ಲರೂ ನಿದ್ರೆ
ಹೋಗುವದಿಲ್ಲ; ಆದರೆ ಕಡೇ ತುತೂರಿಯ ಧ್ವನಿಯಾ
ಗುವಾಗ ನಾವೆಲ್ಲರು ಒಂದು ಕ್ಷಣದಲ್ಲೇ ರೆಪ್ಪೆಬಡಿಯು
ವಷ್ಟರೊಳಗಾಗಿ ಮಾರ್ಪಡುವೆವು. ತುತೂರಿಯು
ಊದಲಾಗಿ ಸತ್ತವರು ನಿರ್ಲಯರಾಗಿ ಎಬ್ಬಿಸಲ್ಪಡು
ವರು, ನಾವು ಮಾರ್ಪಡುವೆವು. ಲಯವಾಗುವ ಈ ದೇ
ಹವು ನಿರ್ಲಯತ್ವವನ್ನು ಧರಿಸಿಕೊಳ್ಳುವದೂ ಮರ
ಣಾಧೀನವಾಗಿರುವ ಈ ದೇಹವು ಅಮರತ್ವವನ್ನು ಧರಿಸಿ
ಕೊಳ್ಳುವದೂ ಅವಶ್ಯ. ಲಯವಾಗುವ ಈ ದೇಹವು
ನಿರ್ಲಯತ್ವವನ್ನು ಧರಿಸಿಕೊಂಡಾಗ ಮರಣಾಧೀನವಾ
ಗಿರುವ ಈ ದೇಹವು ಅಮರತ್ವವನ್ನು ಧರಿಸಿಕೊಂಡಾಗ
ಬರೆದಿರುವ ಮಾತು ನೆರವೇರುವದು. ಆ ಮಾತು
ಏನಂದರೆ—ಮರಣವು ನುಂಗಿಯೇ ಹೋಯಿತು,
ಜಯವಾಯಿತು ಎಂಬದೇ. ಮರಣವೇ, ನಿನ್ನ
ಜಯವೆಲ್ಲಿ? ಮರಣವೇ, ನಿನ್ನ ವಿಷದ ಕೊಂಡಿ ಎಲ್ಲಿ?
ಮರಣದ ಕೊಂಡಿ ಪಾಪವೇ; ಮತ್ತು ಪಾಪದ ಬಲಕ್ಕೆ
ಆಧಾರವು ಧರ್ಮಶಾಸ್ತ್ರವೇ. ಆದರೆ ದೇವರು ನಮ್ಮ
ಕರ್ತನಾದ ಯೇಸು ಕ್ರಿಸ್ತನ ಮೂಲಕ ನಮಗೆ ಜಯ
ವನ್ನು ಕೊಟ್ಟಿದ್ದಾನೆ; ಆತನಿಗೆ ಸ್ತೋತ್ರ.

ಆದದರಿಂದ ನನ್ನ ಪ್ರಿಯ ಸಹೋದರರೇ, ಸ್ಥಿರ
ಚಿತ್ತರಾಗಿಯೂ ನಿಶ್ಚಲರಾಗಿಯೂ ಇರ್ರಿ. ನೀವು
ಕರ್ತನ ಸೇವೆಯಲ್ಲಿ ಪಡುವ ಪ್ರಯಾಸವು ನಿಷ್ಫಲ
ವಾಗುವದಿಲ್ಲವೆಂದು ತಿಳಿದು ಕರ್ತನ ಕೆಲಸವನ್ನು
ಯಾವಾಗಲೂ ಅತ್ಯಾಸಕ್ತಿಯಿಂದ ಮಾಡುವವರಾಗಿರಿ.

ಯೆರೂಸಲೇಮಿನಲ್ಲಿದ್ದ ಬಡಕ್ರೈಸ್ತರಿಗೋಸ್ಕರ ಧರ್ಮದ ಹಣ
ಕೂಡಿಸುವದನ್ನು ಕುರಿತದ್ದು.

6 ದೇವಜನರಿಗೋಸ್ಕರ ಹಣ ವಸೂಲುಮಾಡು
ವದನ್ನು ಕುರಿತು ನಾನು ಹೇಳುವದೇನಂದರೆ, ಗಲಾ
ತ್ಯದ ಸಭೆಗಳಿಗೆ ನಾನು ಹೇಳಿಕೊಟ್ಟ ಕ್ರಮದಂತೆ ನೀವೂ
ಮಾಡಿರಿ. ನಾನು ಬಂದಾಗ ಹಣ ವಸೂಲುಮಾಡ
ಬೇಕಾದ ಅವಶ್ಯವಾಗದಂತೆ ನಿಮ್ಮಲ್ಲಿ ಪ್ರತಿಯೊಬ್ಬನು
ತನಗೆ ಬಂದ ಸಂಪಾದನೆಯ ಮೇರೆಗೆ ವಾರವಾರದ
ಮೊದಲನೆಯ ದಿನದಲ್ಲಿ ಗಂಟುಮಾಡಿ ತನ್ನ ಮನೆಯ
ಲ್ಲಿಟ್ಟುಕೊಂಡಿರಬೇಕು. ನಾನು ಬಂದ ಮೇಲೆ 1)ನೀವು
ಯಾರನ್ನು ಯೋಗ್ಯರೆಂದು ಸೂಚಿಸುವಿರೋ ಅವರನ್ನು
ಯೆರೂಸಲೇಮಿಗೆ ನಿಮ್ಮ ಉಪಕಾರದ್ರವ್ಯವನ್ನು ತೆಗೆದು
ಕೊಂಡು ಹೋಗುವದಕ್ಕೆ ಪತ್ರಗಳನ್ನು ಕೊಟ್ಟು ಕಳು
ಹಿಸುವೆನು. ನಾನು ಸಹ ಹೋಗುವದು ಯುಕ್ತವಾಗಿ
ತೋರಿದರೆ ಅವರು ನನ್ನ ಜೊತೆಯಲ್ಲಿ ಬರಬಹುದು.
ನಾನು ಹಾದುಹೋಗಬೇಕೆಂದಿರುವ ಮಕೆದೋನ್ಯ 5
ಸೀಮೆಯನ್ನು ದಾಟಿದ ಮೇಲೆ ನಿಮ್ಮ ಬಳಿಗೆ ಬಂದು
ನಿಮ್ಮ ಬಳಿಯಲ್ಲೇ ಇಳುಕೊಳ್ಳುವೆನು. ನಿಮ್ಮಲ್ಲಿ 6
ಹಿಮಕಾಲವನ್ನಾದರೂ ಕಳೆದೇನು; ಮತ್ತು ನಾನು
ಹೋಗಬೇಕಾದ ಸ್ಥಳಕ್ಕೆ ನೀವು ನನ್ನನ್ನು ಸಾಗಕಳು
ಹಿಸಬೇಕು. ಈ ಸಮಯದಲ್ಲಿ ಹೋಗುಹೋಗುತ್ತಾ 7
ನಿಮ್ಮನ್ನು ನೋಡುವದಕ್ಕೆ ನನಗೆ ಇಷ್ಟವಿಲ್ಲ; ಕರ್ತನ
ಅಪ್ಪಣೆಯಾದರೆ ನಿಮ್ಮ ಬಳಿಯಲ್ಲಿ ಕೆಲವು ಕಾಲ ಇರು
ವೆನೆಂದು ನಿರೀಕ್ಷಿಸುತ್ತೇನೆ. ಪಂಚಾಶತ್ತಮ ದಿನದ 8
ಹಬ್ಬದ ತನಕ ಎಫೆಸದಲ್ಲಿರುವೆನು; ಯಾಕಂದರೆ ಕಾ 9
ರ್ಯಕ್ಕೆ ಅನುಕೂಲವಾದ ಮಹಾಸಂದರ್ಭವು ನನ
ಗುಂಟು, ಮತ್ತು ವಿರೋಧಿಗಳು ಬಹಳ ಮಂದಿ
ಇದ್ದಾರೆ.

ವಂದನೆಗಳೂ ಆಶೀರ್ವಚನವೂ.

ತಿಮೊಥೆಯನು ಬಂದರೆ ಅವನು ನಿಮ್ಮ ಬಳಿ 10
ಯಲ್ಲಿ ಭಯವಿಲ್ಲದೆ ಇರುವಂತೆ ನೋಡಿಕೊಳ್ಳಿರಿ;
ನನ್ನ ಹಾಗೆಯೇ ಕರ್ತನ ಕೆಲಸವನ್ನು ನಡಿಸುತ್ತಾನೆ;
ಆದದರಿಂದ ಯಾರೂ ಅವನನ್ನು ಹೀನೈಸಬಾರದು. 11
ಮತ್ತು ಅವನು ನನ್ನ ಬಳಿಗೆ ಬರುವಂತೆ ಅವನನ್ನು
ಸಮಾಧಾನದಿಂದ ಸಾಗಕಳುಹಿಸಿರಿ; ಅವನು ಸಹೋದರ
ರೊಂದಿಗೆ ಬರುವದನ್ನು ಎದುರುನೋಡುತ್ತಾ ಇದ್ದೇವೆ.
ಸಹೋದರನಾದ ಅಪೊಲ್ಲೋಸನ ಸಂಗತಿಯೇ 12
ನಂದರೆ ಸಹೋದರರೊಂದಿಗೆ ನಿಮ್ಮ ಬಳಿಗೆ ಹೋಗಬೇ
ಕೆಂದು ಅವನನ್ನು ಬಹಳವಾಗಿ ಬೇಡಿಕೊಂಡೆನು. ಈಗ
ಬರುವದಕ್ಕೆ ಅವನಿಗೆ ಸ್ವಲ್ಪವೂ ಮನಸ್ಸಿರಲಿಲ್ಲ. ಒಳ್ಳೇ
ಸಮಯ ಸಿಕ್ಕಿದಾಗ ಬರುವನು.

ಎಚ್ಚರವಾಗಿರಿ, ಕ್ರಿಸ್ತನಂಬಿಕೆಯಲ್ಲಿ ದೃಢವಾಗಿ 13
ನಿಲ್ಲಿರಿ. ಶೂರರಾಗಿರಿ, ಬಲಗೊಳ್ಳಿರಿ. ನೀವು 14
ಮಾಡುವದನ್ನೆಲ್ಲಾ ಪ್ರೀತಿಯಿಂದ ಮಾಡಿರಿ.

ಸ್ತೆಫನನ ಮನೆಯವರು ಅಖಾಯದಲ್ಲಿನ ಪ್ರಥಮ 15
ಫಲವೆಂದೂ ಅವರು ದೇವಜನರಿಗೆ ಸೇವೆಮಾಡುವದ
ಕ್ಕಾಗಿ ಕೈಹಾಕಿದರೆಂದೂ ನೀವು ಬಲ್ಲಿರಷ್ಟೆ. ಸಹೋದ 16
ರರೇ, ನೀವು ಇಂಥವರಿಗೂ ಕೆಲಸದಲ್ಲಿ ಸಹಾಯಮಾ
ಡುತ್ತಾ ಪ್ರಯಾಸಪಡುತ್ತಾ ಇರುವವರೆಲ್ಲರಿಗೂ ಒಳ
ಗಾಗಬೇಕೆಂದು ನಿಮ್ಮನ್ನು ಬೇಡಿಕೊಳ್ಳುತ್ತೇನೆ. ಸ್ತೆಫ 17
ನನೂ ಫೊರ್ತುನಾತನೂ ಅಖಾಯಿಕನೂ ಬಂದದರಿಂದ
ನನಗೆ ಸಂತೋಷವಾಯಿತು. ನೀವು ಇಲ್ಲದ್ದರಿಂದ
ನನಗುಂಟಾದ ಕೊರತೆಯನ್ನು ಅವರು ನೀಗಿದರು;
ಅವರು ನನ್ನ ಆತ್ಮವನ್ನೂ ನಿಮ್ಮ ಆತ್ಮಗಳನ್ನೂ ಉಪ 18
ಶಮನಮಾಡಿದರು. ಇಂಥವರನ್ನು ಸನ್ಮಾನಿಸಿರಿ.

ಆಸ್ಯಸೀಮೆಯ ಸಭೆಗಳವರು ನಿಮಗೆ ವಂದನೆ 19
ಹೇಳುತ್ತಾರೆ. ಅಕ್ವಿಲನೂ ಪ್ರಿಸ್ಕಳೂ ತಮ್ಮ ಮನೆ
ಯಲ್ಲಿ ಕೂಡುವ ಸಭೆಯವರೊಂದಿಗೆ ಕರ್ತನ ಹೆಸರಿ
ನಲ್ಲಿ ಅನೇಕ ವಂದನೆಗಳನ್ನು ಹೇಳುತ್ತಾರೆ. ಸಹೋದರ 20

1) ಅಥವಾ, ನೀವು ಪತ್ರದ ಮೂಲಕ ಯಾರನ್ನು ಯೋಗ್ಯರೆಂದು ಸೂಚಿಸುವಿರೋ, ಅವರನ್ನು ತೆಗೆದುಕೊಂಡು ಹೋಗುವದಕ್ಕೆ ಕಳು
ಹಿಸುವೆನು.

ರೆಲ್ಲರು ನಿಮ್ಮನ್ನು ವಂದಿಸುತ್ತಾರೆ. ಪವಿತ್ರವಾದ
ಮುದ್ದಿಟ್ಟು ಒಬ್ಬರನ್ನೊಬ್ಬರು ವಂದಿಸಿರಿ.
21 ಪೌಲನೆಂಬ ನಾನು ಸ್ವಂತ ಕೈಯಿಂದ ವಂದನೆ
22 ಯನ್ನು ಬರೆದಿದ್ದೇನೆ. ಯಾವನಾದರೂ ಕರ್ತನನ್ನು
ಪ್ರೀತಿಸದಿದ್ದರೆ ಅವನು ಶಾಪಗ್ರಸ್ತನಾಗಲಿ. ಕರ್ತ
ಬರುತ್ತಾನೆ. ಕರ್ತನಾದ ಯೇಸು ಕ್ರಿಸ್ತನ ಕೃಪೆ
ನಿಮ್ಮೊಂದಿಗಿರಲಿ. ಕ್ರಿಸ್ತ ಯೇಸುವಿನಲ್ಲಿ ನಿಮ್ಮ
ಮೇಲೆ ನನ್ನ ಪ್ರೀತಿ.

---

# THE SECOND EPISTLE OF SAINT PAUL TO T

# CORINTHIANS

# ಪೌಲನು ಕೊರಿಂಥದವರಿಗೆ ಬರೆದ ಎರಡನೆಯ ಪತ್ರಿಕೆ

ಒಕ್ಕಣೆ

1 ದೇವರ ಚಿತ್ತಾನುಸಾರ ಕ್ರಿಸ್ತ ಯೇಸುವಿನ ಅಪೊ
ಸ್ತಲನಾದ ಪೌಲನೂ ಸಹೋದರನಾದ ತಿಮೊಥೆಯನೂ
ಕೊರಿಂಥದಲ್ಲಿರುವ ದೇವರ ಸಭೆಯವರಿಗೂ ಅಖಾಯ
ಸೀಮೆಯಲ್ಲೆಲ್ಲಾ ಇರುವ ದೇವಜನರೆಲ್ಲರಿಗೂ ಬರೆ
2 ಯುವದೇನಂದರೆ—ನಮ್ಮ ತಂದೆಯಾದ ದೇವರಿಂ
ದಲೂ ಕರ್ತನಾದ ಯೇಸು ಕ್ರಿಸ್ತನಿಂದಲೂ ನಿಮಗೆ
ಕೃಪೆಯೂ ಶಾಂತಿಯೂ ಆಗಲಿ.

ಪೌಲನು ತನಗೆ ಉಂಟಾದ ಆದರಣೆಯಿಂದ ಅನೇಕರಿಗೆ
ಉಪಯೋಗ ಉಂಟಾಗುವದೆಂದು ಹೇಳಿದ್ದು.

3 ನಮ್ಮ ಕರ್ತನಾದ ಯೇಸು ಕ್ರಿಸ್ತನ ದೇವರೂ
ತಂದೆಯೂ ಆಗಿರುವಾತನಿಗೆ ಸ್ತೋತ್ರವಾಗಲಿ; ಆತನು
ಕನಿಕರವುಳ್ಳ ತಂದೆಯೂ ಸಕಲವಿಧವಾಗಿ ಸಂತೈ
4 ಸುವ ದೇವರೂ ಆಗಿದ್ದು ನಮಗೆ ಸಂಭವಿಸುವ ಎಲ್ಲಾ
ಸಂಕಟಗಳಲ್ಲಿ ನಮ್ಮನ್ನು ಸಂತೈಸುತ್ತಾನೆ; ಹೀಗೆ
ದೇವರಿಂದ ನಮಗಾಗುವ ಆದರಣೆಯ ಮೂಲಕ
ನಾವು ನಾನಾ ವಿಧವಾದ ಸಂಕಟಗಳಲ್ಲಿ ಬಿದ್ದಿರುವವ
5 ರನ್ನು ಸಂತೈಸುವದಕ್ಕೆ ಶಕ್ತರಾಗುತ್ತೇವೆ. ಯಾಕಂ
ದರೆ ಕ್ರಿಸ್ತನ ನಿಮಿತ್ತ ನಮಗೆ ಬಾಧೆಗಳು ಹೇಗೆ
ಹೇರಳವಾಗಿ ಉಂಟಾಗುತ್ತವೆಯೋ ಹಾಗೆಯೇ ಆದರಣೆ
ಯು ಕೂಡ ಕ್ರಿಸ್ತನ ಮೂಲಕ ಹೇರಳವಾಗಿ ಉಂಟಾ
6 ಗುತ್ತದೆ. ನಮಗೆ ಸಂಕಟಬರುತ್ತದೋ ಅದರಿಂದ
ನಿಮಗೆ ಧೈರ್ಯವೂ ರಕ್ಷಣೆಯೂ ಉಂಟಾಗುತ್ತದೆ;
ನಮಗೆ ಸಂಕಟ ಪರಿಹಾರವಾಗುತ್ತದೋ ಅದರಿಂದ
ನಿಮಗೆ ಆದರಣೆ ಆಗುತ್ತದೆ. ನಾವು ಅನುಭವಿಸು
ವಂಥ ಬಾಧೆಗಳನ್ನು ನೀವೂ ತಾಳ್ಮೆಯಿಂದ ಸಹಿಸಿಕೊ
ಳ್ಳುವಂತೆ ಅದು ನಿಮ್ಮನ್ನು ಧೈರ್ಯಗೊಳಿಸುತ್ತದೆ.
7 ನೀವು ಬಾಧೆಗಳಲ್ಲಿ ನಮ್ಮೊಂದಿಗೆ ಪಾಲುಗಾರರಾಗಿ
ರುವ ಪ್ರಕಾರ ಆದರಣೆಯಲ್ಲಿಯೂ ಪಾಲುಗಾರರಾಗಿ
ದ್ದೀರೆಂದು ನಮಗೆ ತಿಳಿದಿರುವದರಿಂದ ನಿಮ್ಮ ವಿಷಯ
ದಲ್ಲಿ ನಮಗಿರುವ ನಿರೀಕ್ಷೆಯು ದೃಢವಾಗಿದೆ.

ಸಹೋದರರೇ, ಆಸ್ಯ ಸೀಮೆಯಲ್ಲಿ ನ
ಸಂಭವಿಸಿದ ಸಂಕಟವನ್ನು ಕುರಿತು ವಿಚಾರಿಸುತ್ತೀ
ಅದರಲ್ಲಿ ನಾವು ಬಲವನ್ನು ಮೀರಿದಂಥ ಅತ್ಯಧಿಕ
ಭಾರದಿಂದ ಕುಗ್ಗಿಹೋಗಿ ಜೀವವುಳಿಯುವ ಮ
ವನ್ನು ಕಾಣದವರಾದೆವೆಂಬದನ್ನು ನೀವು ತಿಳಿಯ
ಕೆಂದು ಅಪೇಕ್ಷಿಸುತ್ತೇನೆ. ಮರಣವಾಗುತ್ತದೆಂಬ
ಯವು ನಮ್ಮೊಳಗೆ ಉಂಟಾಯಿತು; ನಾವು ನ
ಮೇಲೆ ಭರವಸವಿಟ್ಟುಕೊಳ್ಳದೆ ಸತ್ತವರನ್ನು
ಸುವ ದೇವರ ಮೇಲೆಯೇ ಭರವಸವಿಡುವವರಾ
ಕೆಂದು ಹೀಗಾಯಿತು. ಆತನು ನಮ್ಮನ್ನು ಎಂಥ
ಭಯಂಕರಮರಣದಿಂದ ತಪ್ಪಿಸಿದನು, ಮುಂದೆಯ
ತಪ್ಪಿಸುವನು. ನೀವು ನಮಗೋಸ್ಕರ ಪ್ರಾರ್ಥ
ಮಾಡುವವರಾಗಿ ಸಹಕಾರಿಗಳಾಗಿರುವದರಿಂದ ಆ
ಇನ್ನು ಮೇಲೆಯೂ ತಪ್ಪಿಸುವನೆಂದು ಆತನಲ್ಲಿ ನಿರ
ಯಿಟ್ಟವರಾಗಿದ್ದೇವೆ. ಹೀಗೆ ಅನೇಕರ ವಿಜ್ಞಾ
ಗಳಿಂದ ನಮಗೆ ದೊರಕುವ ಉಪಕಾರಕ್ಕಾಗಿ ನ
ನಿಮಿತ್ತ ಅನೇಕರಿಂದ ದೇವರಿಗೆ ಕೃತಜ್ಞತಾಸ್ತುತಿ
ಟಾಗುವದು.

ನಾವು ಕೇವಲ ಮಾನುಷಜ್ಞಾನವನ್ನು ಬಳ
ದೇವರ ಕೃಪೆಯನ್ನು ಆಶ್ರಯಿಸಿ ಆತನಿಂದಾಗುವ
ತ್ರತ್ವವೂ ನಿಷ್ಕಪಟತ್ವವೂ ಉಳ್ಳವರಾಗಿ ಈ ಲೋ
ದಲ್ಲಿ ಮುಖ್ಯವಾಗಿ ನಿಮ್ಮ ವಿಷಯದಲ್ಲಿ ನಡಕೊ
ವೆಂದು ನಮ್ಮ ಮನಸ್ಸು ನಮಗೆ ಸಾಕ್ಷಿಹೇಳುತ್ತ
ಇದೇ ನಮಗಿರುವ ಉಲ್ಲಾಸ. ನೀವು ನಮ್ಮ ಪ
ಗಳಲ್ಲಿ ಓದಿ ಒಪ್ಪಿಕೊಂಡ ಸಂಗತಿಗಳನ್ನೇ ಅಲ್ಲದೆ
ಯಾವದನ್ನೂ ನಾವು ನಿಮಗೆ ಬರೆಯಲಿಲ್ಲ. ನ
ನಿಮಗೆ ಉಲ್ಲಾಸಕಾರಣವಾಗಿದ್ದೇವೆಂಬದನ್ನು ನಿ
ಸ್ವಲ್ಪ ಮಟ್ಟಿಗೆ ಒಪ್ಪಿಕೊಂಡಂತೆಯೇ ಕಡೇ ತ
ಒಪ್ಪಿಕೊಳ್ಳುವಿರೆಂದು ನಿರೀಕ್ಷಿಸುತ್ತೇನೆ. ಹಾಗೆ
ನೀವೂ ನಮ್ಮ ಕರ್ತನಾದ ಯೇಸುವಿನ ಪ್ರತ್ಯ
ಯಲ್ಲಿ ನಮಗೆ ಉಲ್ಲಾಸಕಾರಣವಾಗುವಿರಿ ಎ
ನಿರೀಕ್ಷಿಸುತ್ತೇನೆ.

ಪೌಲನು ತಾನು ಕೊರಿಂಥ ಪಟ್ಟಣಕ್ಕೆ ಬಾರದಿದ್ದದ್ದಕ್ಕೆ ಕಾರಣವನ್ನು ತಿಳಿಸಿ ಅಲ್ಲಿನ ಸಭೆಯವರು ಬಹಿಷ್ಕಾರ ಹೊಂದಿದವನನ್ನು ತಿರಿಗಿ ಸೇರಿಸಿಕೊಳ್ಳಬೇಕೆಂದು ಬುದ್ಧಿ ಹೇಳಿದ್ದು.

ನಾನು ಇಂಥ ಭರವಸವುಳ್ಳವನಾಗಿದ್ದು ನಿಮಗೆ
ರಡು ಸಾರಿ ನಮ್ಮ ಮೂಲಕ ಕೃಪಾವರ ಉಂಟಾ
ಬೇಕೆಂದು ಯೋಚಿಸಿದ್ದೆನು. ಮೊದಲು ನಿಮ್ಮ
ಳಿಗೆ ಬಂದು ನಿಮ್ಮ ಮಾರ್ಗವಾಗಿ ಮಕೆದೋನ್ಯಕ್ಕೆ
ೋಗಿ ಆ ಮೇಲೆ ಮಕೆದೋನ್ಯವನ್ನು ಬಿಟ್ಟು ತಿರಿಗಿ
ಮ್ಮ ಬಳಿಗೆ ಬಂದು ನಿಮ್ಮಿಂದ ಯೂದಾಯಕ್ಕೆ ಸಾಗ
ಳುಹಿಸಲ್ಪಡಬೇಕೆಂದು ಯೋಚಿಸಿದ್ದೆನು. ಇದನ್ನು
ೋಚಿಸಿದಾಗ ಚಪಲಚಿತ್ತನಾಗಿದ್ದೆನೋ? ನಾನು
ೋಚಿಸುವದನ್ನು ಕೇವಲ ಮಾನುಷಬುದ್ಧಿಯಿಂದ
ೋಚಿಸಿ ಹೌದು ಹೌದು ಅಂದ ಮೇಲೆ ಅಲ್ಲ ಅಲ್ಲ
ನ್ನುವವನಾಗಿದ್ದೇನೋ? ನಂಬಿಗಸ್ತನಾಗಿರುವ ದೇವ
ಾಣೆ, ನಾವು ನಿಮಗೆ ಹೇಳುವ ಮಾತು ಒಂದು
ಾರಿ ಹೌದೆಂದು ಒಂದು ಸಾರಿ ಅಲ್ಲವೆಂದು ಇರುವ
ಲ್ಲ. ನಾವು ಅಂದರೆ ನಾನೂ ಸಿಲ್ವಾನನೂ ತಿಮೊಥೆ
ಯನೂ ನಿಮ್ಮಲ್ಲಿ ಪ್ರಸಿದ್ಧಿಪಡಿಸಿದ ದೇವರ ಮಗನಾದ
ೇಸು ಕ್ರಿಸ್ತನು ಹೌದೆಂತಲೂ ಅಲ್ಲವೆಂತಲೂ ಎರಡು
್ರಕಾರವಾಗಿರಲಿಲ್ಲ; ಆತನಲ್ಲಿ ಹೌದೆಂಬದೇ ನೆಲೆ
ೊಂಡಿದೆ. ನಿಶ್ಚಯವಾಗಿ ದೇವರ ವಾಗ್ದಾನಗಳು
ಷ್ಟಿದ್ದರೂ ಕ್ರಿಸ್ತನಲ್ಲೇ ದೃಢವಾಗುತ್ತವೆ. ಆದಕಾರಣ
ೇವರ ಪ್ರಭಾವವು ಪ್ರಕಾಶವಾಗುವದಕ್ಕೋಸ್ಕರ
ಾತನ ಮೂಲಕವಾಗಿ ನಾವು ಆಮೆನ್ ಎಂದು ಹೇಳು
ೇವೆ. ನಮ್ಮನ್ನು ಅಭಿಷೇಕಿಸಿ 1)ಕ್ರಿಸ್ತನ ಅನ್ಯೋನ್ಯ
ಯಲ್ಲಿ ಸೇರಿಸಿ ನಮ್ಮನ್ನು ನಿಮ್ಮೊಂದಿಗೆ ಸ್ಥಿರಪಡಿಸುವ
ನು ದೇವರೇ; ಆತನು ನಮ್ಮ ಮೇಲೆ ಮುದ್ರೆ
ಾಕಿ ನಮ್ಮ ಹೃದಯಗಳಲ್ಲಿ ಪವಿತ್ರಾತ್ಮನನ್ನು ಸಂಚ
ಾರವಾಗಿ ಅನುಗ್ರಹಿಸಿದ್ದಾನೆ.
ನಿಮ್ಮ ಮೇಲೆ ಕನಿಕರವಿದ್ದದರಿಂದಲೇ ನಾನು
ೊರಿಂಥಕ್ಕೆ ಬರಬೇಕೆಂಬ ಅಭಿಪ್ರಾಯವನ್ನು ಬಿಟ್ಟು
ಟ್ಟೆನೆಂದು ನನ್ನ ಜೀವಪಾಣೆ ಹೇಳುತ್ತೇನೆ; ಅದಕ್ಕೆ
ೇವರೇ ಸಾಕ್ಷಿಯಾಗಿರಲಿ. ನಾವು ನಂಬಿಕೆಯ ವಿಷ
ಯದಲ್ಲಿಯೂ ನಿಮ್ಮ ಮೇಲೆ ದೊರೆತನಮಾಡುವ
ರೆಂದು ನನ್ನ ತಾತ್ಪರ್ಯವಲ್ಲ; ನಿಮ್ಮ ಸಂತೋಷಕ್ಕೆ
ಾವು ಸಹಾಯಕರಾಗಿದ್ದೇವೆ; ನಂಬಿಕೆಯ ವಿಷಯ
ವಲ್ಲಿ ದೃಢನಿಂತಿದ್ದೀರಿ. ಆದರೆ ನಾನು ತಿರಿಗಿ ನಿಮ್ಮ
ಳಿಗೆ 2)ದುಃಖದಿಂದ ಬರುವದಿಲ್ಲವೆಂದು ನನ್ನಲ್ಲಿ
ೇರ್ಮಾನಿಸಿಕೊಂಡೆನು. ನಾನು ನಿಮ್ಮನ್ನು ದುಃಖ
ಡಿಸಿದರೆ ನನ್ನನ್ನು ಆನಂದಪಡಿಸುವದಕ್ಕೆ ಯಾರಿ
್ದಾರೆ? ನನ್ನಿಂದ ದುಃಖಹೊಂದಿದವರೇ ಹೊರತು
ೇರೆ ಯಾರೂ ಇಲ್ಲವಲ್ಲಾ. ಆದಕಾರಣ ನಾನು
ಂಡಾಗ ನನ್ನನ್ನು ಸಂತೋಷಪಡಿಸತಕ್ಕವರಿಂದ ದುಃಖ
ೊಂದಬಾರದೆಂದು ಯೋಚಿಸಿ ಆ ಸಂಗತಿಯನ್ನು
ತ್ರಿಕೆಯ ಮೂಲಕವೇ ತಿಳಿಸಿದೆನು. ನನ್ನ ಸಂತೋ
ಷವು ನಿಮ್ಮೆಲ್ಲರ ಸಂತೋಷವೇ ಎಂದು ತಿಳಿದು ನಿಮ್ಮೆ
ಲ್ಲರ ವಿಷಯದಲ್ಲೂ ನನಗೆ ಭರವಸವಿತ್ತು. ನಿಮಗೆ 4
ದುಃಖವಾಗಬೇಕೆಂತಲ್ಲ, ನಿಮ್ಮ ಮೇಲೆ ನನಗಿರುವ ಅಧಿ
ಕವಾದ ಪ್ರೀತಿಯನ್ನು ನೀವು ತಿಳುಕೊಳ್ಳಬೇಕೆಂತಲೇ
ನಾನು ಬಹಳ ಕಣ್ಣೀರು ಬಿಡುತ್ತಾ ಹೃದಯದ
ಬಹುಸಂಕಟದಿಂದಲೂ ವ್ಯಾಕುಲದಿಂದಲೂ ನಿಮಗೆ ಬರೆ
ದೆನು.
ದುಃಖವನ್ನು ಉಂಟುಮಾಡಿರುವವನೊಬ್ಬನು 5
ನಿಮ್ಮಲ್ಲಿ ಇದ್ದರೂ ಅವನು ನನ್ನನ್ನು ಮಾತ್ರ ದುಃಖ
ಪಡಿಸದೆ ನಿಮ್ಮಲ್ಲಿ ಬಹುಜನರನ್ನೂ ದುಃಖಪಡಿಸಿದ್ದಾನೆ;
ಆ ದುಃಖವು ಎಲ್ಲರಲ್ಲಿಯೂ ಉಂಟಾಯಿತೆಂದು ನಾನು
ಹೇಳುವದಿಲ್ಲ. ಇಂಥವನಿಗೆ ನಿಮ್ಮಲ್ಲಿ ಹೆಚ್ಚಾದ ಜನ 6
ರಿಂದುಂಟಾದ ಆ ಶಿಕ್ಷೆಯೇ ಸಾಕು. ಇನ್ನೂ 7
ಅವನನ್ನು ಶಿಕ್ಷಿಸದೆ ಮನ್ನಿಸಿರಿ, ಸಂತೈಸಿರಿ; ಇಲ್ಲವಾದರೆ
ಅವನು ಅಧಿಕವಾದ ದುಃಖದಲ್ಲಿ ಮುಳುಗಿಹೋ
ದಾನು. ಅದದರಿಂದ ಅವನಿಗೆ ನಿಮ್ಮ ಪ್ರೀತಿಯನ್ನು 8
ನಿಶ್ಚಯಪಡಿಸಬೇಕೆಂದು ನಿಮ್ಮನ್ನು ಬೇಡಿಕೊಳ್ಳುತ್ತೇನೆ.
ಸರ್ವವಿಷಯದಲ್ಲೂ ನೀವು ವಿಧೇಯರಾಗಿದ್ದೀರೋ 9
ಏನೋ ನಿಮ್ಮ ಗುಣವನ್ನು ಪರೀಕ್ಷಿಸಿ ತಿಳುಕೊಳ್ಳಬೇ
ಕೆಂಬುವ ಉದ್ದೇಶದಿಂದಲೇ ಮೊದಲು ಬರೆದೆನು.
ನೀವು ಯಾರಿಗೆ ಯಾವದನ್ನು ಮನ್ನಿಸುತ್ತೀರೋ ನಾನು 10
ಸಹ ಮನ್ನಿಸುತ್ತೇನೆ. ನಾನು ಯಾವದನ್ನಾದರೂ
ಮನ್ನಿಸಿದ್ದರೆ ಕ್ರಿಸ್ತನ ಸನ್ನಿಧಾನದಲ್ಲಿ ನಿಮ್ಮ ನಿಮಿತ್ತ
ವೇ ಮನ್ನಿಸಿದೆನು. ಸೈತಾನನು ನಮ್ಮನ್ನು ವಂಚಿಸಿ 11
ನಷ್ಟಪಡಿಸಬಾರದು; ಅವನ ಯೋಚನೆಗಳನ್ನು ನಾವು
ಅರಿಯದವರಲ್ಲವಲ್ಲಾ.

ಸುವಾರ್ತಾಸೇವೆಯ ಶ್ರೇಷ್ಠತೆಯನ್ನು ಕುರಿತದ್ದು.

ಕ್ರಿಸ್ತನ ಸುವಾರ್ತೆಯನ್ನು ಸಾರುವದಕ್ಕಾಗಿ 12
ನಾನು ತ್ರೋವಕ್ಕೆ ಬರಲು ಕರ್ತನ ಕೃಪೆಯಿಂದ
ನನಗೆ ಒಳ್ಳೇ ಸಂದರ್ಭ ಉಂಟಾಯಿತು. ಆದರೂ 13
ನನ್ನ ಸಹೋದರನಾದ ತೀತನು ನನಗೆ ಸಿಕ್ಕಲಿಲ್ಲವಾದ
ಕಾರಣ ನನ್ನ ಆತ್ಮಕ್ಕೆ ಉಪಶಮನವಿಲ್ಲದೆ ಅಲ್ಲಿದ್ದ
ವರಿಂದ ಕಳುಹಿಸಿಕೊಂಡವನಾಗಿ ಹೊರಟು ಮಕೆದೋ
ನ್ಯಕ್ಕೆ ಬಂದೆನು.
ಕ್ರಿಸ್ತನ ಅನ್ಯೋನ್ಯತೆಯಲ್ಲಿ ನಮ್ಮನ್ನು ಯಾವಾ 14
ಗಲೂ ಜಯೋತ್ಸವದೊಡನೆ ಮೆರಸುತ್ತಾ ಆತನ ವಿಷ
ಯವಾದ ಜ್ಞಾನವೆಂಬ ಸುವಾಸನೆಯನ್ನು ನಮ್ಮ
ಮೂಲಕ ಎಲ್ಲಾ ಸ್ಥಳಗಳಲ್ಲಿ ವ್ಯಾಪನಗೊಳಿಸುತ್ತಾ
ಬರುವ ದೇವರಿಗೆ ಸ್ತೋತ್ರವು. ರಕ್ಷಣಾಮಾರ್ಗದಲ್ಲಿ 15
ರುವವರಲ್ಲಿಯೂ ನಾಶನಮಾರ್ಗದಲ್ಲಿರುವವರಲ್ಲಿ
ಯೂ ನಾವು ದೇವರ ಮುಂದೆ ಕ್ರಿಸ್ತನ ಪರಿಮಳವಾಗಿ
ದ್ದೇವೆ. ನಾವು ನಾಶನಮಾರ್ಗದಲ್ಲಿರುವವರಿಗೆ 16
ಮರಣದಿಂದ ಹುಟ್ಟಿ ಮರಣವನ್ನು ಹುಟ್ಟಿಸುವ ವಾಸನೆ
ಯಾಗಿಯೂ ರಕ್ಷಣಾಮಾರ್ಗದಲ್ಲಿರುವವರಿಗೆ ಜೀವ
ದಿಂದ ಹುಟ್ಟಿ ಜೀವವನ್ನು ಹುಟ್ಟಿಸುವ ವಾಸನೆಯಾಗಿ
ಯೂ ಇದ್ದೇವೆ. ಇಂಥ ಕಾರ್ಯಗಳಿಗೆ ಯಾರು

1) ಅಥವಾ, ಅಭಿಷಿಕ್ತನ. 2) ಅಥವಾ. ದುಃಖಪಡಿಸುವವನಾಗಿ.

17 ಯೋಗ್ಯರು? ಆದರೆ ನಾವು ದೇವರ ವಾಕ್ಯವನ್ನು
ಕಲಬೆರಿಕೆಮಾಡುವವರಾದ ಹೆಚ್ಚು ಪಾಲಿನ ಜನರ ಹಾಗಿ
ರದೆ ನಿಷ್ಕಪಟಿಗಳಾಗಿ ದೇವರಿಂದ ಉಪದೇಶಹೊಂದಿದ
ವರಿಗೆ ತಕ್ಕ ಹಾಗೆ ಕ್ರಿಸ್ತನ ಅನ್ಯೋನ್ಯತೆಯಲ್ಲಿದ್ದು
ಕೊಂಡು ದೇವರ ಸಮಕ್ಷಮದಲ್ಲಿಯೇ ಮಾತಾಡು
ತ್ತೇವೆ.

3 ನಾವೇ ನಮ್ಮನ್ನು ತಿರಿಗಿ ಹೊಗಳಿಕೊಳ್ಳುವದಕ್ಕೆ
ಪ್ರಾರಂಭಿಸುತ್ತೇವೋ ; ಇಲ್ಲವೆ ಕೆಲವರಿಗೆ ಬೇಕಾಗಿ
ರುವ ಪ್ರಕಾರ ನಿಮಗೆ ತೋರಿಸತಕ್ಕ ಯೋಗ್ಯತಾಪತ್ರ
ಗಳು ನಮಗೆ ಅಗತ್ಯವೋ? ಅಥವಾ ಅಂಥ ಪತ್ರ
2 ಗಳನ್ನು ನಿಮ್ಮಿಂದ ಪಡಕೊಳ್ಳಬೇಕೋ? ನೀವೇ
ನಮ್ಮ ಯೋಗ್ಯತಾಪತ್ರ; ಅದು ನಮ್ಮ ಹೃದಯಗ
ಳಲ್ಲೇ ಬರೆದದೆ; ಆ ಪತ್ರವನ್ನು ಎಲ್ಲರೂ ಬಲ್ಲರು,
3 ಎಲ್ಲರೂ ಓದುತ್ತಾರೆ. ಕ್ರಿಸ್ತನು ನಮ್ಮ ಕೈಯಿಂದ
ಬರಸಿಕೊಟ್ಟ ಪತ್ರವಾಗಿದ್ದೀರೆಂಬದು ಪ್ರತ್ಯಕ್ಷವಾಗಿಯೇ
ಇದೆ; ಅದು ಮಸಿಯಿಂದ ಬರೆದದ್ದಲ್ಲ, ಜೀವವುಳ್ಳ
ದೇವರ ಆತ್ಮನಿಂದಲೇ ಬರೆದದ್ದು; ಕಲ್ಲಿನ ಮೇಲೆ
ಯಲ್ಲ, ಮನುಷ್ಯಹೃದಯಗಳೆಂಬ ಹಲಿಗೆಗಳ ಮೇಲೆ
4 ಬರೆದದ್ದು. ಇಂಥ ಭರವಸವು ಕ್ರಿಸ್ತನ ಮೂಲಕವೇ
5 ದೇವರ ಮುಂದೆ ನಮಗುಂಟು. ನಮ್ಮಿಂದಲೇ
ಏನಾದರೂ ಉಂಟಾಯಿತೆಂದು ತೀರ್ಮಾನಿಸಿಕೊಳ್ಳುವ
ದಕ್ಕೆ ನಮ್ಮಷ್ಟಕ್ಕೆ ನಾವೇ ಸಮರ್ಥರೆಂತಲ್ಲ; ನಮಗಿ
6 ರುವ ಸಾಮರ್ಥ್ಯವು ದೇವರಿಂದಲೇ ಬಂದದ್ದು ; ಆತನು
ಹೊಸ ಒಡಂಬಡಿಕೆಗೆ ಸೇವಕರಾಗಿರುವ ಸಾಮ
ರ್ಥ್ಯವನ್ನು ನಮಗೆ ಅನುಗ್ರಹಿಸಿದ್ದಾನೆ. ಈ ಒಡಂಬ
ಡಿಕೆಯು ಲಿಖಿತರೂಪವಾದದ್ದಾಗಿರದೆ 1)ದೇವರಾತ್ಮ
ಸಂಬಂಧವಾದದ್ದು ಆಗಿದೆ. ಲಿಖಿತರೂಪವಾದ ಒಡಂ
ಬಡಿಕೆಯು ಮರಣವನ್ನುಂಟುಮಾಡುತ್ತದೆ; ದೇವ
ರಾತ್ಮಸಂಬಂಧವಾದದ್ದು ಜೀವವನ್ನುಂಟುಮಾಡುತ್ತದೆ.
7 ಮರಣವಿಧಿಸುವ ನಿಯಮದ ಸೇವೆಯು ಕಲ್ಲಿನ
ಮೇಲೆ ಲಿಖಿತವಾದ ಅಕ್ಷರಗಳಲ್ಲಿ ಆಧಾರಗೊಂಡಿದ್ದ
ರೂ ಪ್ರಭಾವದಿಂದ ಕೂಡಿದ್ದಾಗಿತ್ತು. ಆ ಪ್ರಭಾವ
ದಿಂದ ಮೋಶೆಯ ಮುಖಕ್ಕೆ ಬಂದ ಪ್ರಕಾಶವು ಕುಂದಿ
ಹೋಗುವಂಥದಾಗಿದ್ದರೂ ಅದರ ನಿಮಿತ್ತ ಇಸ್ರಾ
ಯೇಲ್ಯರು ಅವನ ಮುಖವನ್ನು ನೋಡಲಾರದೆ ಇದ್ದ
8 ರು. ಹೀಗಿದ್ದ ಮೇಲೆ 2)ದೇವರಾತ್ಮಸಂಬಂಧವಾದ
ಸೇವೆಯು ಎಷ್ಟೋ ಹೆಚ್ಚಾಗಿ ಪ್ರಭಾವವುಳ್ಳದ್ದಾಗಿರ
9 ಬೇಕು. ಅಪರಾಧನಿರ್ಣಯಕ್ಕೆ ಸಾಧನವಾಗಿರುವ
ಸೇವೆಯು ಪ್ರಭಾವದಿಂದಿರಲಾಗಿ ನೀತಿಗೆ ಸಾಧನವಾಗಿ
ರುವ ಸೇವೆಯು ಎಷ್ಟೋ ಅಧಿಕವಾದ ಪ್ರಭಾವವುಳ್ಳ
10 ದ್ದಾಗಿರಬೇಕು. ಅಧಿಕವಾದ ಪ್ರಭಾವವುಳ್ಳದ್ದು ಬಂದ
ದರಿಂದ ಮೊದಲಿದ್ದ ಪ್ರಭಾವವು ಅದರ ಬಳಿಯಲ್ಲಿ
11 ಪ್ರಭಾವವಿಲ್ಲದ್ದಾಯಿತು. ಇಲ್ಲದೆಹೋಗುವಂಥದು
ಪ್ರಭಾವವುಳ್ಳದ್ದಾಗಿದ್ದರೆ ಶಾಶ್ವತವಾಗಿ ಇರುವಂಥದು
ಬಹು ಹೆಚ್ಚಾಗಿ ಪ್ರಭಾವವುಳ್ಳದ್ದಾಗಿರಬೇಕಲ್ಲವೇ.
12 ಆದದರಿಂದ ನಾವು ಇಂಥ ಭರವಸವುಳ್ಳವರಾಗಿದ್ದು
13 ಧಾರಾಳವಾಗಿ ಮಾತಾಡುತ್ತೇವೆ. ನಾವು ಮೋಶೆಯಂತೆ
ಮಾಡುವದಿಲ್ಲ, ಗತಿಸಿಹೋಗುವಂಥದರ ಅಂತ್ಯವ
ಇಸ್ರಾಯೇಲ್ಯರು ಕಣ್ಣಿಟ್ಟುನೋಡಬಾರದೆಂದು
ನು ತನ್ನ ಮುಖದ ಮೇಲೆ ಮುಸುಕುಹಾಕಿಕೊ
ತ್ತಿದ್ದನು. ಆದರೆ ಅವರ ಬುದ್ಧಿ ಮಂದವಾಯಿ
ಈ ದಿನದ ವರೆಗೂ ಹಳೇ ಒಡಂಬಡಿಕೆಯು ಪಾ
ಯಣವಾಗುವಾಗ ಅದು ಕ್ರಿಸ್ತನಲ್ಲಿ ಗತಿಸಿಹೋಗ
ದೆಂಬದು ಅವರಿಗೆ ಪ್ರಕಟವಾಗದೆ ಇರುವದರಿಂದ ಆ
ಮುಸುಕು ಎತ್ತಲ್ಪಡದೆ ಇರುತ್ತದೆ. ಈ ದಿನದ
ಗೂ ಮೋಶೆಯ ಗ್ರಂಥಪಾರಾಯಣವು ಆಗುವಾಗೇ
ಮುಸುಕು ಅವರ ಹೃದಯದ ಮೇಲೆ ಇರುತ್ತ
ಅವರ ಹೃದಯವು ಕರ್ತನ ಕಡೆಗೆ ತಿರುಗಿಕೊಂ
ಗಲೇ ಆ ಮುಸುಕು ತೆಗೆಯಲ್ಪಡುವದು. ಆ ಕ
ನು ದೇವರಾತ್ಮನೇ; ಕರ್ತನ ಆತ್ಮನು ಯಾರಲ್ಲಿ
ನೋ ಅವರಿಗೆ ಬಿಡುಗಡೆ ಉಂಟು. ನಾವೆಲ್ಲರೂ ಮು
ಕುತೆಗೆದಿರುವ ಮುಖದಿಂದ ಕರ್ತನ ಪ್ರಭಾವವ
ದರ್ಪಣದಲ್ಲಿ ಕಾಣಿಸುತ್ತದೋ ಎಂಬಂತೆ 3)ದೃಷ್ಟಿ
ವವರಾಗಿದ್ದು ಪ್ರಭಾವದಿಂದ ಅಧಿಕಪ್ರಭಾವಕ್ಕೆ ಹೋ
ತ್ತಾ ಆ ಪ್ರಭಾವದ ಸಾರೂಪ್ಯವುಳ್ಳವರೇ ಆಗುತ್ತೇ
ಇದು ದೇವರಾತ್ಮನಾಗಿರುವ ಕರ್ತನ ಕೆಲಸಕ್ಕನುಸ
ವಾದದ್ದೇ.

ಸುವಾರ್ತಾಸೇವೆಯಲ್ಲಿ ಎಂಥ ಕಷ್ಟಗಳು ಸಂಭವಿಸಿದರೂ
ದೇವರ ಸೇವಕರು ಧೈರ್ಯಗೆಡದೆ ಅದನ್ನು ನಡಿಸುವರು
ಎಂಬದು.

ಆದದರಿಂದ ನಾವು ದೇವರ ಕರುಣೆಯಿಂದ
ಸೇವೆಯನ್ನು ಹೊಂದಿದವರಾಗಿರಲಾಗಿ ಧೈರ್ಯಗೆ
ಹಿಂದೆಗೆಯುವದಿಲ್ಲ. ನಾಚಿಕೆಯನ್ನು ಹುಟ್ಟಿಸ
ಗುಪ್ತಕಾರ್ಯಗಳನ್ನು ನಾವು ಬಿಟ್ಟುಬಿಟ್ಟು ತಂತ್ರದ
ನಡೆಯದೆ ದೇವರ ವಾಕ್ಯವನ್ನು ಕೆಡಿಸದೆ ಸತ್ಯವ
ಪರಿಷ್ಕಾರವಾಗಿ ಬೋಧಿಸುತ್ತಾ ನಾವು ಸಜ್ಜನರೆಂ
ಪ್ರತಿಮನುಷ್ಯನ ಮನಸ್ಸು ದೇವರ ಮುಂದೆ ಒ
ಬೇಕಾದ ರೀತಿಯಲ್ಲಿ ನಡೆಯುತ್ತೇವೆ. ನಾವು
ರುವ ಸುವಾರ್ತೆಯು ಕೆಲವರಿಗೆ ಮರೆಯಾಗಿರ
ದಾದರೆ ನಾಶನಮಾರ್ಗದಲ್ಲಿರುವವರಿಗೇ ಮರೆಯ
ಗಿರುವದು. ಇವರಲ್ಲಿ ದೇವರ ಪ್ರತಿರೂಪವಾ
ರುವ ಕ್ರಿಸ್ತನ ಪ್ರಭಾವವನ್ನು ತೋರಿಸುವ ಸು
ರ್ತೆಯ ಪ್ರಕಾಶವು ಉದಯವಾಗಬಾರದೆಂದು
ಪ್ರಪಂಚದ ದೇವರು ನಂಬಿಕೆಯಿಲ್ಲದವರ ಮನಸ್ಸ
ಮಂಕುಮಾಡಿದನು. ನಮ್ಮನ್ನೇ ಪ್ರಸಿದ್ಧಿಪಡಿಸಿಕೊಳ್ಳ
ನಮ್ಮನ್ನು ಯೇಸುವಿನ ನಿಮಿತ್ತ ನಿಮ್ಮ ದಾಸರೆಂತ
ಕ್ರಿಸ್ತೇಸುವನ್ನೇ ಕರ್ತನೆಂತಲೂ ಪ್ರಸಿದ್ಧಿಪಡಿಸುತ್ತೇ
ಯಾಕಂದರೆ ಕತ್ತಲೆಯೊಳಗಿಂದ ಬೆಳಕುಹೊಳೆಯ
ಎಂದು ಹೇಳಿದ ದೇವರು ತಾನೇ ಯೇಸು ಕ್ರಿಸ್ತ
ಮುಖದಲ್ಲಿ ತೋರುವ ದೇವಪ್ರಭಾವಜ್ಞಾನವೆ
ಪ್ರಕಾಶವು ಅನೇಕರಿಗೆ ಉಂಟಾಗುವದಕ್ಕಾಗಿ ನ
ಹೃದಯಗಳಲ್ಲಿ ಹೊಳೆದನು.

1) ಅಥವಾ, ಆತ್ಮೀಯವಾದದ್ದು. 2) ಅಥವಾ, ಆತ್ಮೀಯವಾದ. 3) ಅಥವಾ, ದೃಷ್ಟಿಸುವವರಾಗಿದ್ದು ರೂಪಾಂತರವಾಗಿ
ಸಾರೂಪ್ಯವುಳ್ಳವರಾಗುತ್ತೇವೆ. ದೇವರಾತ್ಮನಾಗಿರುವ ಕರ್ತನ ಯತ್ನದ ಮೂಲಕ ಆತನ ಪ್ರಭಾವದಿಂದ ನಮಗೆ ಪ್ರಭಾವವಾಗುತ್ತದೆ.

ಬಲಾಧಿಕ್ಯವು ದೇವರದೇ ಹೊರತು ನಮ್ಮೊಳ
ಂದ ಬಂದದ್ದಲ್ಲವೆಂದು ತೋರುವದಕ್ಕಾಗಿ ಈ ನಿಕ್ಷೇ
ರವು ಮಣ್ಣಿನ ಘಟಗಳಲ್ಲಿ ನಮಗುಂಟು. ಸರ್ವ
ಥದಲ್ಲಿಯೂ ನಮಗೆ ಇಕ್ಕಟ್ಟು ಇದ್ದರೂ ನಾವು
ತಿ ಸಂಕಟಪಡುವವರಲ್ಲ; ನಾವು ದಿಕ್ಕುಕಾಣದವ
ರಾಗಿದ್ದರೂ ಕೇವಲ ದೆಸೆಗೆಟ್ಟವರಲ್ಲ; ಹಿಂಸೆಪಡುವ
ರರಾಗಿದ್ದರೂ ಕೈಬಿಡಲ್ಪಟ್ಟವರಲ್ಲ; ಕೆಡವಲ್ಪಟ್ಟವರಾಗಿ
ದ್ದರೂ ಪ್ರಾಣನಷ್ಟಪಡುವವರಲ್ಲ; ಯೇಸುವಿನ ಜೀ
ವವು ನಮ್ಮ ದೇಹದಲ್ಲಿ ಉಂಟೆಂದು ತೋರಿಬರುವದ
ಕ್ಕಾಗಿ ಯೇಸುವಿನ ಮರಣಾವಸ್ಥೆಯನ್ನು ನಾವು
ಯಾವಾಗಲೂ ದೇಹದಲ್ಲಿ ಅನುಭವಿಸುತ್ತಾ ತಿರುಗಾ
ಡುತ್ತೇವೆ. ಯೇಸುವಿನ ಜೀವವು ನಮ್ಮ ಮರ್ತ್ಯಶರೀರ
ದಲ್ಲಿ ಉಂಟೆಂದು ತೋರಿಬರುವದಕ್ಕಾಗಿ ಬದುಕಿರುವ
ನಾವು ಯೇಸುವಿನ ನಿಮಿತ್ತ ಯಾವಾಗಲೂ ಮರಣಕ್ಕೆ
ಒಪ್ಪಿಸಲ್ಪಡುತ್ತಾ ಇದ್ದೇವೆ. ಹೀಗೆ ನಮ್ಮಲ್ಲಿ ಮರ
ಣವು ಪ್ರವರ್ತಿಸುತ್ತದೆ; ಆದರೆ ನಿಮ್ಮಲ್ಲಿ ಜೀವವು ಪ್ರವ
ರ್ತಿಸುತ್ತದೆ.
ಹೀಗಿದ್ದರೂ — ನಂಬಿದೆನು, ಆದದರಿಂದ ಮಾತಾ
ಡಿದೆನು ಎಂಬ ಶಾಸ್ತ್ರೋಕ್ತಿಯಲ್ಲಿ ಕಾಣುವ ನಂಬಿಕೆಯ
ಭಾವವನ್ನೇ ಹೊಂದಿ ನಾವೂ ನಂಬಿದವರು, ಆದದರಿಂದ
ಮಾತಾಡುತ್ತೇವೆ. ಕರ್ತನಾದ ಯೇಸುವನ್ನು ಎಬ್ಬಿಸಿ
ದಾತನು ನಮ್ಮನ್ನು ಸಹ ಯೇಸುವಿನೊಂದಿಗೆ ಎಬ್ಬಿಸಿ
ನಿಮ್ಮ ಜೊತೆಯಲ್ಲಿ ತನ್ನ ಮುಂದೆ ನಿಲ್ಲಿಸುವನೆಂದು
ತಿಳಿದವರಾಗಿದ್ದೇವೆ. ಆ ಬಾಧೆಗಳೆಲ್ಲಾ ನಿಮ್ಮ ಹಿತಕ್ಕಾ
ಗಿಯೇ ನಮಗೆ ಸಂಭವಿಸುತ್ತವೆ. ಅವುಗಳಲ್ಲಿ ಅಧಿಕ
ವಾಗಿ ದೊರಕುವ ದೈವಕೃಪೆಯು ಬಹುಜನರೊಳಗೆ
ಕೃತಜ್ಞತೆಯನ್ನು ಹುಟ್ಟಿಸುವದರಿಂದ ದೇವರಿಗೆ ಹೆಚ್ಚಾ
ದ ಸ್ತೋತ್ರವನ್ನು ಉಂಟುಮಾಡುವದು.

ಪರಲೋಕಭಾಗ್ಯವನ್ನು ಆಲೋಚಿಸುವಾಗ ಕ್ರಿಸ್ತನಲ್ಲಿರುವವರಿಗೆ
ಧೈರ್ಯವಾಗುತ್ತದೆ ಎಂಬದು.

ಆದದರಿಂದ ನಾವು ಧೈರ್ಯಗೆಡುವದಿಲ್ಲ. ನಮ್ಮ
ದೇಹವು ನಾಶವಾಗುತ್ತಾ ಇದ್ದರೂ ನಮ್ಮ ಅಂತರ್ಯ
ವು ದಿನೇದಿನೇ ಹೊಸದಾಗುತ್ತಾ ಬರುತ್ತದೆ. ಹೇಗಂದರೆ
ಕ್ಷಣಮಾತ್ರವಿರುವ ನಮ್ಮ ಹಗುರವಾದ ಸಂಕಟವು
ಅತ್ಯಂತಾಧಿಕವಾದ ಪ್ರತಿಫಲವನ್ನು ಉಂಟುಮಾಡಿ ನ
ಮಗೆ ನಿರಂತರವಾಗಿರುವ ಗೌರವವಾದ ಪ್ರಭಾವವನ್ನು
ದೊರಕಿಸುತ್ತದೆ. ನಾವು ಕಾಣುವಂಥದನ್ನು ಲಕ್ಷಿಸದೆ
ಕಾಣದಿರುವಂಥದನ್ನು ಲಕ್ಷಿಸುವವರಾಗಿದ್ದೇವೆ. ಕಾಣು
ವಂಥದು ಸ್ವಲ್ಪಕಾಲ ಮಾತ್ರ ಇರುವದು; ಕಾಣದಿರು
ವಂಥದು ಸದಾಕಾಲವೂ ಇರುವದು. ಭೂಮಿಯ
ಮೇಲಿರುವ ನಮ್ಮ ಮನೆಯು ಅಂದರೆ ನಮ್ಮ ದೇಹ
ವೆಂಬ ಗುಡಾರವು ಕಿತ್ತುಹಾಕಲ್ಪಟ್ಟರೂ ದೇವರಿಂದುಂ
ಟಾದ ಒಂದು ಕಟ್ಟಡವು ಪರಲೋಕದಲ್ಲಿ ನಮಗುಂ
ಟೆಂದು ಬಲ್ಲೆವು. ಅದು ಕೈಯಿಂದ ಕಟ್ಟಿದ ಮನೆ
ಯಾಗಿರದೆ ನಿತ್ಯವಾಗಿರುವಂಥದಾಗಿದೆ. ನಾವು ಈಗಿನ
ದೇಹದಲ್ಲಿರುವ ವರೆಗೂ ನರಳುತ್ತೇವೆ. ಪರಲೋಕ
ದಿಂದ ದೊರಕುವ ನಮ್ಮ ನಿವಾಸವನ್ನು ನಾವು ದೇಹದ
ಮೇಲೆ ಧರಿಸಿಕೊಳ್ಳಬೇಕೆಂದು ಅಪೇಕ್ಷಿಸುತ್ತೇವೆ, ಅಂ 3
ದರೆ ಆ ದಿನದಲ್ಲಿ ನಾವು ಇನ್ನೂ 1)ದೇಹದಲ್ಲಿಯೇ
ಇದ್ದರೆ ಆ ನಿವಾಸವನ್ನು ದೇಹದ ಮೇಲೆಯೇ ಧರಿಸಿ
ಕೊಳ್ಳುವೆವು. ಈ ಗುಡಾರದಲ್ಲಿರುವವರಾದ ನಾವು 4
ಭಾರಹೊತ್ತುಕೊಂಡವರಾಗಿ ನರಳುತ್ತೇವೆ; ಇದು ಕಳ
ಚಿಹೋಗಬೇಕೆಂಬದು ನಮ್ಮ ಇಷ್ಟವಲ್ಲ; ಮರ್ತ್ಯ
ವಾದದ್ದು ನುಂಗಿಹೋಗಿ ಜೀವವೊಂದೇ ಉಳಿಯುವಂತೆ
ಈ ಗುಡಾರದ ಮೇಲೆ ಆ ನಿವಾಸವನ್ನು ಧರಿಸಿಕೊಳ್ಳ
ಬೇಕೆಂಬದೇ ನಮ್ಮ ಇಷ್ಟ. ಆ ಸ್ಥಿತಿಗಾಗಿ ನಮ್ಮನ್ನು 5
ಸಿದ್ಧಮಾಡಿರುವವನು ದೇವರೇ; ಆತನು ಪವಿತ್ರಾತ್ಮ
ನನ್ನು ಸಂಚಕಾರವಾಗಿ ಅನುಗ್ರಹಿಸಿದ್ದಾನೆ.
ಹೀಗಿರುವದರಿಂದ ನಾವು ಯಾವಾಗಲೂ ಧೈರ್ಯ 6
ವುಳ್ಳವರಾಗಿದ್ದೇವೆ. ನಾವು ನೋಡುವವರಾಗಿ ನಡೆ 7
ಯದೆ ನಂಬುವವರಾಗಿಯೇ ನಡೆಯುತ್ತೇವಾದದ
ರಿಂದ ದೇಹದಲ್ಲಿ ವಾಸಿಸುವ ವರೆಗೂ ಕರ್ತನಿಗೆ
ದೂರದಲ್ಲಿರುವ ಪ್ರವಾಸಿಗಳಾಗಿದ್ದೇವೆಂಬದನ್ನು ಬಲ್ಲೆ
ವು. ಇದನ್ನು ಆಲೋಚಿಸಿ ನಾವು ಧೈರ್ಯವುಳ್ಳವ 8
ರಾಗಿದ್ದು ದೇಹವನ್ನು ಬಿಟ್ಟು ಕರ್ತನ ಬಳಿಯಲ್ಲಿರು
ವದೇ ಉತ್ತಮವೆಂದು ಎಣಿಸುತ್ತೇವೆ. ಆದದರಿಂದ 9
ನಾವು ದೇಹವೆಂಬ ಮನೆಯಲ್ಲಿದ್ದರೂ ಸರಿಯೇ,
ಅದನ್ನು ಬಿಟ್ಟಿದ್ದರೂ ಸರಿಯೇ, ಕರ್ತನಿಗೆ ಮೆಚ್ಚುವವ
ರಾಗಿರಬೇಕೆಂಬದೇ ನಮ್ಮ ಗುರಿಯಾಗಿದೆ. ಯಾಕಂ 10
ದರೆ ಪ್ರತಿಯೊಬ್ಬನು ತನ್ನ ದೇಹದ ಮೂಲಕ ನಡಿಸಿದ
ಒಳ್ಳೇದಕ್ಕಾಗಲಿ ಕೆಟ್ಟದ್ದಕ್ಕಾಗಲಿ ಸರಿಯಾಗಿ ಪ್ರತಿಫಲ
ವನ್ನು ಹೊಂದುವದಕ್ಕೋಸ್ಕರ ನಾವೆಲ್ಲರೂ ಕ್ರಿಸ್ತನ
ನ್ಯಾಯಾಸನದ ಮುಂದೆ ಯಥಾಸ್ಥಿತಿಯಲ್ಲಿ ಕಾಣಿಸಿ
ಕೊಳ್ಳಬೇಕು.

ಅಪೊಸ್ತಲರು ಕ್ರಿಸ್ತನ ಪ್ರೀತಿಯಿಂದ ಪ್ರೇರಣೆಹೊಂದಿ
ಸಮಾಧಾನ ವಾಕ್ಯವನ್ನು ಹೇಳುವ ರಾಯಭಾರಿಗಳಾಗಿ
ಎಲ್ಲಾ ಸಂಗತಿಗಳಲ್ಲಿ ತಮ್ಮನ್ನು ದೇವರ ಸೇವಕರೆಂದು
ತೋರಿಸಿಕೊಂಡದ್ದು.

ಕರ್ತನ ಭಯವು ನಮಗಿರುವದರಿಂದ ನಾವು 11
ಮನುಷ್ಯರನ್ನು ಒಡಂಬಡಿಸುತ್ತೇವೆ. ನಾವು ಯಥಾರ್ಥ
ರೆಂಬದು ದೇವರಿಗೆ ಗೊತ್ತುಂಟು; ನಿಮ್ಮ ಮನಸ್ಸಿಗೆ
ಕೂಡ ಗೊತ್ತಾಗಿದೆ ಎಂದು ನಂಬಿಕೊಂಡಿದ್ದೇನೆ.
ನಾವು ನಮ್ಮನ್ನು ತಿರಿಗಿ ನಿಮ್ಮ ಮುಂದೆ ಹೊಗಳಿಕೊ 12
ಳ್ಳುವದಿಲ್ಲ; ಆದರೆ ಯಾರು ಹೃದಯದ ವಿಷಯದಲ್ಲಿ
ಹಿಗ್ಗದೆ ತೋರಿಕೆಯ ವಿಷಯದಲ್ಲಿ ಮಾತ್ರ ಹಿಗ್ಗುತ್ತಾ
ರೋ ಅವರಿಗೆ ಪ್ರತ್ಯುತ್ತರ ಹೇಳುವದಕ್ಕೆ ನಿಮಗೆ ಆಧಾರ
ವಿರಬೇಕೆಂದು ನಮ್ಮ ವಿಷಯದಲ್ಲಿ ಹಿಗ್ಗುವದಕ್ಕೆ ನಿಮ
ಗೆ ಆಸ್ಪದಕೊಡುತ್ತೇವೆ. ನಮಗೆ ಬುದ್ಧಿಪರವಶವಾ 13
ಗಿದ್ದರೆ ಅದು ದೇವರ ಮಹಿಮೆಗಾಗಿಯೇ ಅದೆ; ನಮಗೆ
ಸ್ವಸ್ಥಬುದ್ಧಿ ಇದ್ದರೆ ಅದು ನಿಮ್ಮ ಪ್ರಯೋಜನಕ್ಕಾಗಿ
ಅದೆ. ಕ್ರಿಸ್ತನ ಪ್ರೀತಿಯು ನಮಗೆ ಬಲಾತ್ಕಾರಮಾಡು 14
ತ್ತದೆ; ಎಲ್ಲರಿಗೋಸ್ಕರ ಒಬ್ಬನು ಸತ್ತದ್ದರಿಂದ

1) ಮೂಲ: ನಿರ್ವಾಣರಾಗದಿದ್ದರೆ.

ಎಲ್ಲರೂ ಸತ್ತಂತಾಯಿತೆಂದು ನಿಶ್ಚಯಿಸಿಕೊಂಡೆವು.
15 ಜೀವಿಸುವವರು ಇನ್ನು ಮೇಲೆ ತಮಗಾಗಿ ಜೀವಿ
ಸದೆ ತಮಗೋಸ್ಕರ ಸತ್ತು ಎದ್ದು ಬಂದಾತನಿಗಾಗಿ
ಜೀವಿಸಬೇಕೆಂತಲೇ ಆತನು ಎಲ್ಲರಿಗೋಸ್ಕರ ಸತ್ತನು.
16 ಹೀಗಿರಲಾಗಿ ಇಂದಿನಿಂದ ನಾವು ಯಾರನ್ನೂ
ಶರೀರಸಂಬಂಧವಾಗಿ ಅರಿತುಕೊಳ್ಳುವದಿಲ್ಲ; ಕ್ರಿಸ್ತ
ನನ್ನು ಕೂಡ ನಾವು ಶರೀರಸಂಬಂಧವಾಗಿ ತಿಳಿದಿದ್ದರೂ
ಇನ್ನು ಮುಂದೆ ಆತನನ್ನು ಹಾಗೆ ತಿಳುಕೊಳ್ಳುವ
17 ದಿಲ್ಲ. ಹೀಗಿರಲಾಗಿ ಯಾವನಾದರೂ ಕ್ರಿಸ್ತನಲ್ಲಿದ್ದರೆ
ಅವನು ನೂತನಸೃಷ್ಟಿಯಾದನು. ಇಗೋ, ಪೂರ್ವ
18 ಸ್ಥಿತಿ ಹೋಗಿ ಎಲ್ಲಾ ನೂತನವಾಯಿತು. ಇದೆಲ್ಲಾ
ದೇವರಿಂದಲೇ ಉಂಟಾದದ್ದು. ಆತನು ಕ್ರಿಸ್ತನ
ಮೂಲಕ ನಮ್ಮನ್ನು ತನಗೆ ಸಮಾಧಾನಪಡಿಸಿಕೊಂಡು
ಸಮಾಧಾನವಿಷಯವಾದ ಸೇವೆಯನ್ನು ನಮಗೆ ಅನು
19 ಗ್ರಹಿಸಿದ್ದಾನೆ; ಆ ಸಮಾಧಾನವಾಕ್ಯವೇನಂದರೆ ದೇವ
ರು ಮನುಷ್ಯರ ಅಪರಾಧಗಳನ್ನು ಅವರ ಲೆಕ್ಕಕ್ಕೆ
ಹಾಕದೆ ಲೋಕವನ್ನು ಕ್ರಿಸ್ತನಲ್ಲಿ ತನಗೆ ಸಮಾಧಾನ
ಪಡಿಸಿಕೊಳ್ಳುತ್ತಿದ್ದನೆಂಬದೇ. ಅದನ್ನು ಸಾರುವ ಸೇವೆಗೆ
ನಮ್ಮನ್ನು ನೇಮಿಸಿದ್ದಾನೆ.
20 ನಾವು ಕ್ರಿಸ್ತನ ರಾಯಭಾರಿಗಳಾಗಿದ್ದೇವೆ. ದೇ
ವರೇ ನಮ್ಮ ಮೂಲಕ ಬುದ್ಧಿ ಹೇಳುವ ಹಾಗಾಯಿತು.
ದೇವರೊಂದಿಗೆ ಸಮಾಧಾನವಾಗಿರೆಂದು ಕ್ರಿಸ್ತನ ಹೆಸರಿ
21 ನಲ್ಲಿ ನಿಮ್ಮನ್ನು ಬೇಡಿಕೊಳ್ಳುತ್ತೇವೆ. ನಾವು ಆತ
ನಲ್ಲಿ ದೇವರಿಗೆ ಸಮರ್ಪಕರಾದ ನೀತಿಸ್ವರೂಪಿಗಳಾಗು
ವಂತೆ ದೇವರು ಪಾಪಜ್ಞಾನವಿಲ್ಲದ ಆತನನ್ನು
ನಮಗೋಸ್ಕರ ಪಾಪಸ್ವರೂಪಿಯಾಗ ಮಾಡಿದನು.
6 ನಾವು ಆತನೊಂದಿಗೆ ಕೆಲಸನಡಿಸುವವರಾಗಿದ್ದು—
ನೀವು ಹೊಂದಿದ ದೇವರ ಕೃಪೆಯನ್ನು ವ್ಯರ್ಥಮಾಡಿ
ಕೊಳ್ಳಬೇಡಿರೆಂದು ಎಚ್ಚರಿಸುತ್ತೇವೆ.
2 ಪ್ರಸನ್ನತೆಯಕಾಲದಲ್ಲಿ ನಿನ್ನ ಮನವೆಯನ್ನು
ಕೇಳಿದೆನು,
ರಕ್ಷಣೆಯ ದಿನದಲ್ಲಿ ನಿನಗೆ ಸಹಾಯಮಾಡಿ
ದೆನು
ಎಂದು ದೇವರು ಹೇಳುತ್ತಾನಲ್ಲಾ. ಈಗಲೇ ಆ
ಸುಪ್ರಸನ್ನತೆಯಕಾಲ; ಇದೇ ಆ ರಕ್ಷಣೆಯ ದಿನ.
3-4 ನಿಂದೆಗೆ ಅವಕಾಶಕೊಡದೆ ಎಲ್ಲಾ ಸಂಗತಿಗಳಲ್ಲಿ
ದೇವರ ಸೇವಕರೆಂದು ನಮ್ಮನ್ನು ಸಮ್ಮತರಾಗ ಮಾಡಿ
ಕೊಳ್ಳುತ್ತೇವೆ. ನಾವು ಸಂಕಟಗಳಲ್ಲಿಯೂ ಕೊರ
ತೆಗಳಲ್ಲಿಯೂ ಇಕ್ಕಟ್ಟುಗಳಲ್ಲಿಯೂ ಪೆಟ್ಟುಗಳಲ್ಲಿ
5 ಯೂ ಸೆರೆಮನೆಗಳಲ್ಲಿಯೂ ಕಲಹಗಳಲ್ಲಿಯೂ
ಕಷ್ಟವಾದ ಕೆಲಸಗಳಲ್ಲಿಯೂ ನಿದ್ದೆಗೇಡುಗಳಲ್ಲಿಯೂ
ಉಪವಾಸಗಳಲ್ಲಿಯೂ ಬಹು ತಾಳ್ಮೆಯನ್ನು ತೋರಿಸು
6 ತ್ತೇವೆ. ಶುದ್ಧಮನಸ್ಸು ಜ್ಞಾನ ದೀರ್ಘಶಾಂತಿ
7 ದಯೆ ಪವಿತ್ರಾತ್ಮ ಕಪಟವಿಲ್ಲದ ಪ್ರೀತಿ ಸತ್ಯ
ವಾಕ್ಯ ದೇವರ ಮಹತ್ವ ಇವುಗಳಿಂದ ಕೂಡಿದವರಾಗಿ
ದ್ದೇವೆ. ಎಡಬಲಗೈಗಳಲ್ಲಿ ನೀತಿಯೆಂಬ ಆಯುಧಗ
8 ಳನ್ನು ಧರಿಸಿಕೊಂಡವರೂ ಮಾನ ಅವಮಾನ ಕೀರ್ತಿ
ಅಪಕೀರ್ತಿಗಳನ್ನು ಹೊಂದಿದವರೂ ಆಗಿದ್ದೇವೆ. ಮೋಸ
9 ಗಾರರೆನಿಸಿಕೊಂಡರೂ ಸತ್ಯವಂತರೂ, ಅಜ್ಞಾತರೆನಿಸಿ
ಕೊಂಡರೂ ವಿಜ್ಞಾತರೂ, ಸಾಯುವವರಾಗಿ ತೋರಿ

ದರೂ ಬದುಕುವವರೂ ಆಗಿದ್ದೇವೆ. ಶಿಕ್ಷೆಹೊಂದು
ರಾಗಿದ್ದರೂ ಕೊಲ್ಲಲ್ಪಡದವರೂ, ದುಃಖಪಡು
ರಾಗಿದ್ದರೂ ಯಾವಾಗಲೂ ಸಂತೋಷಪಡುವವ
ಬಡವರಾಗಿದ್ದರೂ ಅನೇಕರಿಗೆ ಐಶ್ವರ್ಯವನ್ನು
ಮಾಡುವವರೂ, ಏನೂ ಇಲ್ಲದವರಾಗಿದ್ದರೂ ಎ
ಇದ್ದವರೂ ಆಗಿದ್ದೇವೆ.

ಕೊರಿಂಥದವರು ಒಳ್ಳೇ ಮಕ್ಕಳಂತೆ ತನ್ನನ್ನು ಪ್ರೀತಿಸಬೇಕೆಂ
ಪೌಲನು ಕೇಳಿಕೊಂಡದ್ದು.

ಕೊರಿಂಥದವರೇ, ನಾವು ನಿಮ್ಮೊಡನೆ ಧಾರಾಳವ
ಮಾತಾಡುತ್ತಾ ಇದ್ದೇವೆ; ನಮ್ಮ ಹೃದಯವು ನಿ
ವಿಷಯದಲ್ಲಿ ವಿಶಾಲವಾಯಿತು. ನಿಮ್ಮ ಮೇಲಿರ
ನಮ್ಮ ಪ್ರೀತಿ ಸಂಕೋಚವಾದದ್ದಲ್ಲ; ನಿಮ್ಮ ಪ್ರೀತಿ
ಸಂಕೋಚವಾದದ್ದು. ನಿಮ್ಮ ವಿಷಯದಲ್ಲಿ ನ
ಹೃದಯವು ವಿಶಾಲವಾಗಿರುವದರಿಂದ ನಮ್ಮ ವಿಷ
ದಲ್ಲಿ ನಿಮ್ಮ ಹೃದಯವನ್ನೂ ವಿಶಾಲಮಾಡಿಕೊಳ್ಳಿ
ನೀವು ನನ್ನ ಮಕ್ಕಳೆಂದು ಭಾವಿಸಿ ಹೀಗೆ ಹೇಳುತ್ತೇ

ಕ್ರೈಸ್ತರು ಅನ್ಯಜನಗಳ ಸಂಸರ್ಗದಿಂದ ಕೆಡಬಾರದು.

ನೀವು ಕ್ರಿಸ್ತನಂಬಿಕೆಯಿಲ್ಲದವರೊಂದಿಗೆ ಸ
ಇಜ್ಜೋಡಾಗಬೇಡಿರಿ. ಧರ್ಮಕ್ಕೂ ಅಧರ್ಮಕ
ಜೊತೆಯೇನು? ಬೆಳಕಿಗೂ ಕತ್ತಲೆಗೂ ಐ
ವೇನು? ಕ್ರಿಸ್ತನಿಗೂ ಸೈತಾನನಿಗೂ ಒಡನ
ವೇನು? ನಂಬುವವನಿಗೂ ನಂಬದೆ ಇರುವವನಿ
ಪಾಲುಗಾರಿಕೆ ಏನು? ದೇವರ ಮಂದಿರಕ್ಕೂ ವಿಗ್ರ
ಗಳಿಗೂ ಒಪ್ಪಿಗೆ ಏನು? ನಾವು ಜೀವಸ್ವರೂಪನ
ದೇವರ ಮಂದಿರವಾಗಿದ್ದೇವಲ್ಲಾ. ಇದರ ಸಂಬಂಧವ
ದೇವರು—
ನಾನು ಅವರಲ್ಲಿ ವಾಸಿಸುತ್ತಾ ತಿರುಗಾ
ವೆನು,
ನಾನು ಅವರಿಗೆ ದೇವರಾಗಿರುವೆನು, ಅ
ನನಗೆ ಪ್ರಜೆಯಾಗಿರುವರು
ಎಂದು ಹೇಳಿದ್ದಾನೆ. ಆದದರಿಂದ
ಅನ್ಯಜನರ ಮಧ್ಯದಲ್ಲಿಂದ ಹೊರಟು ಬಂ
ಪ್ರತ್ಯೇಕವಾಗಿರಿ;
ಅಶುದ್ಧವಾದ ಯಾವದನ್ನೂ ಮುಟ್ಟದಿರಿ ಎಂ
ಕರ್ತನು ಹೇಳುತ್ತಾನೆ.
ಇದಲ್ಲದೆ—
ನಾನು ನಿಮ್ಮನ್ನು ಸೇರಿಸಿಕೊಂಡು ನಿವ
ತಂದೆಯಾಗಿರುವೆನು;
ನೀವು ನನಗೆ ಕುಮಾರ ಕುಮಾರಿಯರು ಆಗಿ
ವಿರೆಂದು
ಸರ್ವಶಕ್ತನಾದ ಕರ್ತನು ಹೇಳುತ್ತಾನೆ.
ಪ್ರಿಯರೇ, ಈ ವಾಗ್ದಾನಗಳು ನಮಗಿರುವದರಿ
ನಾವು ಶರೀರಾತ್ಮಗಳ ಕಲ್ಮಶವನ್ನು ತೊಲ
ನಮ್ಮನ್ನು ಶುಚಿಮಾಡಿಕೊಂಡು ದೇವರ ಭಯದಿ
ಕೂಡಿದವರಾಗಿ ಪವಿತ್ರತ್ವವನ್ನು ಸಿದ್ಧಿಗೆ ತರುವದ
ಪ್ರಯತ್ನಿಸೋಣ.

ಪೌಲನು ತಾನು ಮೊದಲು ಬರೆದ ಪತ್ರಿಕೆಯಿಂದ ಒಳ್ಳೇ ಫಲವಾಯಿತೆಂದು ಸಂತೋಷಪಟ್ಟದ್ದು.

ನಿಮ್ಮ ಹೃದಯಗಳಲ್ಲಿ ನಮಗೆ ಸ್ಥಳಕೊಡಿರಿ; ನಾವು ನಿಮ್ಮಲ್ಲಿ ಯಾರಿಗೂ ಅನ್ಯಾಯಮಾಡಲಿಲ್ಲ, ಯಾರನ್ನೂ ಕೆಡಿಸಲಿಲ್ಲ, ಯಾರನ್ನೂ ವಂಚಿಸಲಿಲ್ಲ. ನಿಮ್ಮ ಮೇಲೆ ತಪ್ಪುಹೊರಿಸಬೇಕೆಂದು ನಾನು ಇದನ್ನು ಹೇಳುವದಿಲ್ಲ. ಕೂಡಾ ಸಾಯುವದಕ್ಕೂ ಕೂಡಾ ಬದುಕುವದಕ್ಕೂ ನೀವು ನಮ್ಮ ಹೃದಯದಲ್ಲಿದ್ದೀರೆಂದು ಮೊದಲೇ ಹೇಳಿದ್ದೇನಲ್ಲಾ. ನಿಮ್ಮಲ್ಲಿ ನನಗೆ ಬಹಳ ಭರವಸ ಉಂಟು; ನಿಮ್ಮ ವಿಷಯದಲ್ಲಿ ನನ್ನ ಉತ್ಸಾಹ ಬಹಳ; ಪರಿಪೂರ್ಣ ಆದರಣೆ ನನಗಾಯಿತು; ನಮಗಾಗುವ ಎಲ್ಲಾ ಸಂಕಟಗಳಲ್ಲಿ ಅತ್ಯಧಿಕವಾದ ಸಂತೋಷದಿಂದ ತುಂಬಿದ್ದೇನೆ.

ನಾವು ಮಕೆದೋನ್ಯಕ್ಕೆ ಬಂದಾಗ ನಮ್ಮ ಮನಸ್ಸಿಗೆ ಏನೂ ಉಪಶಮನವಾಗಲಿಲ್ಲ, ಎಲ್ಲಾ ವಿಷಯಗಳಲ್ಲಿಯೂ ನಮಗೆ ಸಂಕಟವಿತ್ತು; ಹೊರಗೆ ಕಲಹ, ಒಳಗೆ ಭಯ. ಆದರೆ ದೀನಾವಸ್ಥೆಯಲ್ಲಿರುವವರನ್ನು ಸಂತೈಸುವ ದೇವರು ತೀತನ ಬರುವಿಕೆಯಿಂದ ನಮ್ಮನ್ನು ಸಂತೈಸಿದನು. ಅವನ ಬರುವಿಕೆಯಿಂದ ಮಾತ್ರವಲ್ಲದೆ ಅವನು ತಾನು ನಿಮ್ಮಲ್ಲಿ ಬಹಳ ಆದರಣೆಯನ್ನು ಹೊಂದಿದೆನೆಂದು ಹೇಳಿದ್ದರಿಂದಲೂ ನಮ್ಮನ್ನು ಸಂತೈಸಿದನು. ಅವನು ನಿಮ್ಮ ಹಂಬಲ, ನಿಮ್ಮ ಗೋಳಾಟ, ನನ್ನ ವಿಷಯವಾದ ನಿಮ್ಮ ಆಸಕ್ತಿ ಇವುಗಳನ್ನು ನಮಗೆ ತಿಳಿಸಿದಾಗ ನಾನು ಹೆಚ್ಚಾಗಿ ಸಂತೋಷಪಟ್ಟೆನು.

ನಾನು ಬರೆದ ಪತ್ರಿಕೆಯು ನಿಮ್ಮನ್ನು ದುಃಖಪಡಿಸಿದ್ದರೂ ನನಗೆ ಪಶ್ಚಾತ್ತಾಪವಿಲ್ಲ. ಅದು ನಿಮ್ಮನ್ನು ಒಂದು ಗಳಿಗೆ ಹೊತ್ತಾದರೂ ದುಃಖಪಡಿಸಿತೆಂದು ನಾನು ಮೊದಲು ಪಶ್ಚಾತ್ತಾಪಡುತ್ತಿದ್ದರೂ ಈಗ ಸಂತೋಷಪಡುತ್ತೇನೆ. ನಿಮಗೆ ದುಃಖವಾಯಿತೆಂದು ನಾನು ಸಂತೋಷಪಡದೆ ನೀವು ದುಃಖಪಟ್ಟು ಬೇರೆ ಮನಸ್ಸನ್ನು ಹೊಂದಿದ್ದಕ್ಕಾಗಿ ಸಂತೋಷಪಡುತ್ತೇನೆ. ನೀವು ದೇವರ ಚಿತ್ತಾನುಸಾರವಾಗಿ ದುಃಖಿಸಿದ್ದರಿಂದ ನಮ್ಮಿಂದ ಯಾವದರಲ್ಲಿಯೂ ನಷ್ಟಪಡಲಿಲ್ಲವಲ್ಲಾ. ದೇವರ ಚಿತ್ತಾನುಸಾರವಾಗಿರುವ ದುಃಖವು ಮಾನಸಾಂತರವನ್ನುಂಟುಮಾಡಿ ರಕ್ಷಣೆಗೆ ಕಾರಣವಾಗಿದೆ; ಆ ಮಾನಸಾಂತರದಲ್ಲಿ ಪಶ್ಚಾತ್ತಾಪಕ್ಕೆ ಆಸ್ಪದವಿಲ್ಲ: ಆದರೆ ಲೋಕದವರಿಗಿರುವಂಥ ದುಃಖವು ಮರಣವನ್ನುಂಟುಮಾಡುತ್ತದೆ. ನೀವು ದೇವರ ಚಿತ್ತಾನುಸಾರವಾಗಿ ಪಟ್ಟ ದುಃಖವು ನಿಮಗೆ ಎಂಥ ತವಕವನ್ನು ಉಂಟುಮಾಡಿತು ನೋಡಿರಿ. ನೀವು ನಿರ್ದೋಷಿಗಳೆಂದು ಸ್ಥಾಪಿಸುವದಕ್ಕೆ ಎಷ್ಟೋ ಪ್ರಯಾಸಪಟ್ಟಿರಿ, ಎಷ್ಟೋ ಮನೋವ್ಯಥೆಯನ್ನು ಅನುಭವಿಸಿದಿರಿ; ಎಂಥ ಭಯವನ್ನು ಎಂಥ ಹಂಬಲವನ್ನು ತೋರಿಸಿದಿರಿ; ಮಾನಸಾಸಿಗಾಗಿ ಎಷ್ಟೋ ರೋಷಪಟ್ಟು ಶಿಕ್ಷೆಮಾಡಿದಿರಿ. ನೀವು ಆ ಕಾರ್ಯಕ್ಕೆ ಸೇರಿದವರಲ್ಲವೆಂಬದನ್ನು ಎಲ್ಲಾ ವಿಧದಲ್ಲಿಯೂ ತೋರಿಸಿದಿರಿ. ನಾನು ನಿಮಗೆ ಬರೆದಾಗ ಅನ್ಯಾಯಮಾಡಿದವನಿಗೆ ದಂಡನೆಯೂ ಅನ್ಯಾಯಹೊಂದಿದವನಿಗೆ ನ್ಯಾಯವೂ ಆಗಬೇಕೆಂಬುವ ಕಾರಣದಿಂದ ಬರೆಯಲಿಲ್ಲ; ನಮಗೋಸ್ಕರ ನಿಮಗಿರುವ ಆಸಕ್ತಿಯು ದೇವರ ಮುಂದೆ ನಿಮಗೆ ವ್ಯಕ್ತವಾಗಬೇಕೆಂಬುವ ಉದ್ದೇಶದಿಂದಲೇ ಬರೆದೆನು.

ಆದಕಾರಣ ನಮ್ಮ ಮನಸ್ಸಿಗೆ ಆದರಣೆ ಉಂಟಾ 13
ಯಿತು. ಅಷ್ಟು ಮಾತ್ರವೇ ಅಲ್ಲ, ತೀತನ ಮನಸ್ಸಿಗೆ
ನಿಮ್ಮೆಲ್ಲರಿಂದ ಉಪಶಮನವಾದಕಾರಣ ನಾವು ಅವನ
ಸಂತೋಷವನ್ನು ನೋಡಿ ಮತ್ತೂ ಹೆಚ್ಚಾಗಿ ಸಂತೋಷ
ಪಟ್ಟೆವು. ಯಾಕಂದರೆ ನಾನು ಅವನ ಮುಂದೆ ನಿಮ್ಮ 14
ನ್ನು ಹೊಗಳಿದ್ದರಲ್ಲಿ ನಾಚಿಕೆಪಡಬೇಕಾಗಿ ಬರಲಿಲ್ಲ.
ನಾವು ನಿಮಗೆ ಹೇಳಿದ ಎಲ್ಲಾ ಮಾತುಗಳು ಹೇಗೆ
ಸತ್ಯವಾಗಿದ್ದವೋ ಹಾಗೆ ನಾವು ತೀತನ ಮುಂದೆ
ಆಡಿದ ಹೊಗಳಿಕೆಯ ಮಾತುಗಳೂ ಸತ್ಯವೆಂದು
ಕಂಡುಬಂದವು. ನೀವು ಮನೋಭೀತಿಯಿಂದ ನಡುಗು 15
ವವರಾಗಿ ಅವನನ್ನು ಸೇರಿಸಿಕೊಂಡದ್ದರಲ್ಲಿ ನಿಮ್ಮೆ
ಲ್ಲರ ವಿಧೇಯತೆಯು ತೋರಿಬಂತು. ಅವನು ಅದನ್ನು
ಜ್ಞಾಪಕಮಾಡಿಕೊಳ್ಳುವಾಗ ನಿಮ್ಮ ಮೇಲೆ ಅವನ
ಕನಿಕರವು ಹೆಚ್ಚಾಗಿದೆ. ಸರ್ವವಿಷಯದಲ್ಲೂ ನಿಮ್ಮನ್ನು 16
ಕುರಿತು ನನಗೆ ಭರವಸವಿರುವದರಿಂದ ಸಂತೋಷ
ಪಡುತ್ತೇನೆ.

## ಯೆರೂಸಲೇಮಿನ ಬಡ ಕ್ರೈಸ್ತರಿಗಾಗಿ ಹಣಸಹಾಯ ಮಾಡುವದರ ವಿಷಯ.

(8. 1—9. 15.)

ಪೌಲನು ಮಕೆದೋನ್ಯದ ಸಭೆಗಳವರ ಔದಾರ್ಯವನ್ನು ಕುರಿತು ಹೇಳಿ ಕೊರಿಂಥದವರಲ್ಲಿಯೂ ಔದಾರ್ಯವನ್ನು ಹುಟ್ಟಿಸುವದಕ್ಕೆ ಪ್ರಯತ್ನಿಸಿದ್ದು.

ಸಹೋದರರೇ, ಮಕೆದೋನ್ಯದ ಸಭೆಗಳಲ್ಲಿ ದೇವರ 8
ಕೃಪೆಯು ತೋರಿದ ಬಗೆಯನ್ನು ನಿಮಗೆ ತಿಳಿಸುತ್ತೇವೆ.
ಆ ಸಭೆಗಳವರು ಬಹಳ ಹಿಂಸೆ ತಾಳುವವರಾದರೂ 2
ಮತ್ತು ವಿಪರೀತವಾದ ಬಡತನದಲ್ಲಿದ್ದರೂ ಬಹು
ಆನಂದದಿಂದ ತುಂಬಿದವರಾಗಿ ಅತ್ಯಂತ ಔದಾರ್ಯ
ವುಳ್ಳವರಾದರು. ಅವರು ಶಕ್ತ್ಯನುಸಾರವಾಗಿ ಮಾತ್ರ 3
ಕೊಡದೆ ಶಕ್ತಿಯನ್ನು ಮೀರಿ ತಮ್ಮಷ್ಟಕ್ಕೆ ತಾವೇ
ಕೊಟ್ಟರು; ಇದಕ್ಕೆ ನಾನು ಸಾಕ್ಷಿ. ದೇವಜನರಿಗೆ 4
ಸಹಾಯಮಾಡುವ ಕೆಲಸದಲ್ಲಿ ತಾವು ಪಾಲುಗಾರರಾ
ಗುವಂತೆ ಅಪ್ಪಣೆಯಾಗಬೇಕೆಂದು ನಮ್ಮನ್ನು ಬಹಳ
ವಾಗಿ ಬೇಡಿಕೊಂಡರು. ನಾವು ನೆನಸಿದ್ದ ಪ್ರಕಾರವಾಗಿ 5
ಅವರು ಕೊಡದೆ ಮೊದಲು ತಮ್ಮನ್ನೇ ಕರ್ತನಿಗೆ ಒಪ್ಪಿಸಿ
ಕೊಟ್ಟರು; ಅನಂತರ ದೇವರ ಚಿತ್ತಾನುಸಾರವಾಗಿ
ನಮಗೂ ತಮ್ಮನ್ನು ಒಪ್ಪಿಸಿದರು. ಹೀಗಿರಲಾಗಿ ಈ 6
ಧರ್ಮಕಾರ್ಯವನ್ನು ಮಾಡುವದಕ್ಕೆ ಮೊದಲು ನಿಮ್ಮ
ನ್ನು ಪ್ರೇರೇಪಿಸಿದ ತೀತನು ತಿರಿಗಿ ನಿಮ್ಮ ಬಳಿಗೆ
ಬಂದು ಅದನ್ನು ತೀರಿಸಬೇಕೆಂದು ನಾವು ಅವನನ್ನು
ಕೇಳಿಕೊಂಡಿದ್ದೇವೆ. ನೀವು ದೇವರ ಮೇಲಣ ನಂಬಿಕೆ 7
ವಾಕ್ಚಾತುರ್ಯ ಜ್ಞಾನ ಸಕಲವಿಧವಾದ ಆಸಕ್ತಿ ನಮ್ಮ
ಪ್ರೇರಣೆಯಿಂದ ನಿಮ್ಮಲ್ಲಿ ಹುಟ್ಟಿದ ಪ್ರೀತಿ ಇವೇ
ಮೊದಲಾದ ಎಲ್ಲಾ ವಿಷಯಗಳಲ್ಲಿ ಹೇಗೆ ಸಮೃದ್ಧರಾ

ಗಿದ್ದೀರೋ ಹಾಗೆಯೇ ಈ ಧರ್ಮಕಾರ್ಯದಲ್ಲಿಯೂ
ಸಮೃದ್ಧರಾಗಿರಿ.
8 ಇದನ್ನು ಆಜ್ಞಾರೂಪವಾಗಿ ಹೇಳದೆ ಇತರರ ಆಸ
ಕ್ತಿಯನ್ನು ತೋರಿಸಿಕೊಟ್ಟು ನಿಮ್ಮ ಪ್ರೀತಿಯೂ ಯ
ಥಾರ್ಥವಾದದ್ದೆಂಬದನ್ನು ಪರೀಕ್ಷೆಯಿಂದ ತಿಳಿದುಕೊ
9 ಳ್ಳಬೇಕೆಂದು ಹೇಳುತ್ತೇನೆ. ನಮ್ಮ ಕರ್ತನಾದ ಯೇಸು
ಕ್ರಿಸ್ತನ ಕೃಪೆಯು ನಿಮಗೆ ಗೊತ್ತಾಗಿದೆಯಲ್ಲಾ;
ಆತನು ಐಶ್ವರ್ಯವಂತನಾಗಿದ್ದು ತಾನು ಬಡತನ
ದಲ್ಲಿ ಸೇರುವದರಿಂದ ನೀವು ಐಶ್ವರ್ಯವಂತರಾಗಬೇ
10 ಕೆಂದು ನಿಮಗೋಸ್ಕರ ಬಡವನಾದನು. ಈ ಧರ್ಮ
ಕಾರ್ಯವನ್ನು ಕುರಿತು ನನ್ನ ಅಭಿಪ್ರಾಯವನ್ನು ತಿಳಿಸು
ತ್ತೇನೆ; ಈ ಕಾರ್ಯವನ್ನು ಒಂದು ವರುಷದ ಹಿಂದೆ
ನಡಿಸುವದಕ್ಕೆ ತೊಡಗುವದರಲ್ಲಿಯೂ ನಡಿಸಬೇಕೆಂದು
ಮನಸ್ಸುಮಾಡುವದರಲ್ಲಿಯೂ ನೀವು ಅವರಿಗಿಂತ
ಮೊದಲಿನವರಾದದರಿಂದ ನಮಗೆ ಅಷ್ಟು ಮಾತ್ರ
11 ಹೇಳುವದು ವಿಹಿತವಾಗಿದೆ. ಈ ಕಾರ್ಯವನ್ನು
ಪ್ರಾರಂಭಿಸುವದಕ್ಕೆ ಹೇಗೆ ನಿಮ್ಮಲ್ಲಿ ಸಿದ್ಧಮನಸ್ಸು
ಇತ್ತೋ ಹಾಗೆಯೇ ನಿಮ್ಮ ನಿಮ್ಮ ಶಕ್ತ್ಯನುಸಾರವಾಗಿ
12 ನೆರವೇರಿಸಿರಿ. ಒಬ್ಬನು ಕೊಡುವದಕ್ಕೆ ಮನಸ್ಸುಳ್ಳ
ವನಾಗಿರುವಲ್ಲಿ ಅವನು ತನ್ನಲ್ಲಿ ಇರುವದಕ್ಕೆ ಅನು
ಸಾರವಾಗಿ ಕೊಟ್ಟರೆ ಅದು ಸಮರ್ಪಕವಾಗಿರುವದು;
ಅವನಿಗೆ ಇಲ್ಲದ್ದನ್ನು ದೇವರು ಕೇಳಿಕೊಳ್ಳುವದಿಲ್ಲ.
13 ಇತರರಿಗೆ ಕಷ್ಟಪರಿಹಾರವೂ ನಿಮಗೆ ಕಷ್ಟವೂ ಉಂಟಾಗ
14 ಬೇಕೆಂಬದು ನನ್ನ ತಾತ್ಪರ್ಯವಲ್ಲ; ಸಮಾನತ್ವವಿರ
ಬೇಕೆಂಬದೇ ನನ್ನ ತಾತ್ಪರ್ಯ. ಸದ್ಯಕ್ಕೆ ನಿಮ್ಮ
ಸಮೃದ್ಧಿಯು ಅವರ ಕೊರತೆಯನ್ನು ನೀಗಿಸುತ್ತದೆ.
ಮುಂದೆ ಅವರ ಸಮೃದ್ಧಿಯು ನಿಮ್ಮ ಕೊರತೆಯನ್ನು
ನೀಗಿಸುವದು; ಹೀಗೆ ಸಮಾನತ್ವವುಂಟಾಗುವದು.
15 ಬಹಳ ಕೂಡಿಸಿದವನಿಗೆ ಏನೂ ಹೆಚ್ಚಾಗಲಿಲ್ಲ,
ಸ್ವಲ್ಪವಾಗಿ ಕೂಡಿಸಿದವನಿಗೆ ಏನೂ ಕಡಿಮೆಯಾಗ
ಲಿಲ್ಲ ಎಂದು ಶಾಸ್ತ್ರದಲ್ಲಿ ಬರೆದಿರುವ ಪ್ರಕಾರವಾಗು
ವದು.

ಧರ್ಮದ್ರವ್ಯವನ್ನು ಕೂಡಿಸುವದಕ್ಕೆ ಪೌಲನು ಯೋಗ್ಯರಾದ
ಕೆಲವು ಪುರುಷರನ್ನು ಕೊರಿಂಥಕ್ಕೆ ಕಳುಹಿಸಿದ್ದು.

16 ನಿಮ್ಮ ವಿಷಯವಾಗಿ ನನಗಿರುವ ಹಿತಚಿಂತನೆಯನ್ನು
ದೇವರು ತೀತನ ಹೃದಯದಲ್ಲಿಯೂ ಹುಟ್ಟಿಸಿದ್ದಕ್ಕಾಗಿ
17 ಆತನಿಗೆ ಸ್ತೋತ್ರವಾಗಲಿ. ಅವನು ನಿಮ್ಮ ಬಳಿಗೆ
ಹೋಗಬೇಕೆಂದು ನಾವು ಕೇಳಿಕೊಂಡಾಗ ಅವನು
ಒಪ್ಪಿದ್ದಲ್ಲದೆ ಅತ್ಯಾಸಕ್ತನಾಗಿದ್ದು ತನ್ನಷ್ಟಕ್ಕೆ ತಾನೇ
18 ನಿಮ್ಮ ಬಳಿಗೆ ಬರುವದಕ್ಕೆ ಹೊರಟಿದ್ದಾನೆ. ಅವನ
ಜೊತೆಯಲ್ಲಿ ಮತ್ತೊಬ್ಬ ಸಹೋದರನನ್ನು ಕಳುಹಿಸಿ
ದ್ದೇವೆ; ಈ ಸಹೋದರನು ಸುವಾರ್ತಾಸೇವೆಯಲ್ಲಿ
ಎಲ್ಲಾ ಸಭೆಗಳೊಳಗೆ ಕೀರ್ತಿಪಡಕೊಂಡವನಾಗಿದ್ದಾನೆ.
19 ಇದು ಮಾತ್ರವಲ್ಲದೆ ನಾವು ನಡಿಸುವ ಈ ಧರ್ಮ
ಕಾರ್ಯಸಂಬಂಧವಾಗಿ ಸಭೆಗಳವರು ಈತನನ್ನು
ನಮ್ಮ ಸಂಗಡ ಪ್ರಯಾಣಮಾಡುವಂತೆ ಗೊತ್ತುಮಾಡಿ
ದ್ದಾರೆ. ಅವರು ಹೀಗೆ ಮಾಡಿದ್ದರಿಂದ ಕರ್ತನಿಗೆ ಘನ
20 ವೂ ನಮ್ಮಲ್ಲಿ ಸಿದ್ಧಮನಸ್ಸೂ ಉಂಟಾಗುವದು. ನಾವು
ಪಾರುಪತ್ಯಮಾಡುವ ಈ ದ್ರವ್ಯಸಂಚಯದ ವಿಷಯ
ದಲ್ಲಿ ಒಬ್ಬರೂ ನಮ್ಮ ಮೇಲೆ ತಪ್ಪುಹೊರಿಸುವದಕ್ಕೆ
ಆಸ್ಪದವಿರಬಾರದು. ಯಾಕಂದರೆ ಕರ್ತನ ದೃಷ್ಟಿ
ಯಲ್ಲಿ ಮಾತ್ರವಲ್ಲದೆ ಮನುಷ್ಯರ ದೃಷ್ಟಿಯಲ್ಲಿಯೂ
ಗೌರವವಾದದ್ದನ್ನು ಯೋಚನೆಗೆ ತಂದುಕೊಳ್ಳುವವ
ರಾಗಿದ್ದೇವೆ. ಇವರಿಬ್ಬರ ಸಂಗಡ ನಮ್ಮ ಸಹೋದರ
ರಲ್ಲಿ ಮತ್ತೊಬ್ಬನನ್ನು ಕಳುಹಿಸಿದ್ದೇವೆ; ನಾವು ಅನೇಕ
ಸಮಯಗಳಲ್ಲಿಯೂ ಅನೇಕಕಾರ್ಯಗಳಲ್ಲಿಯೂ
ಅವನನ್ನು ಪರೀಕ್ಷಿಸಿ ಆಸಕ್ತನೆಂದು ತಿಳುಕೊಂಡಿದ್ದೇವೆ;
ಈಗಲಾದರೋ ಅವನು ನಿಮ್ಮಲ್ಲಿಟ್ಟಿರುವ ವಿಶೇಷ ಭರ
ವಸದಿಂದ ಇನ್ನೂ ಬಹು ಹೆಚ್ಚಾಗಿ ಆಸಕ್ತಿಯುಳ್ಳವ
ನಾಗಿದ್ದಾನೆ. ತೀತನನ್ನು ಕುರಿತು ಕೇಳುತ್ತೀರೋ,
ಅವನು ನನ್ನ ಪಾಲುಗಾರನೂ ನಿಮ್ಮ ಪ್ರಯೋಜನ
ಕ್ಕಾಗಿ ನನಗೆ ಸಹಕಾರಿಯೂ ಆಗಿದ್ದಾನೆ; ಆ ಸಹೋ
ದರರನ್ನು ಕುರಿತು ಕೇಳುತ್ತೀರೋ, ಅವರು ಸಭೆಗಳಿಂದ
ಕಳುಹಿಸಲ್ಪಟ್ಟವರೂ ಕ್ರಿಸ್ತನ ಮಹಿಮೆಯನ್ನು ಪ್ರಕಾಶ
ಪಡಿಸುವವರೂ ಆಗಿದ್ದಾರೆ. ಆದಕಾರಣ ನಿಮ್ಮ ಪ್ರೀತಿ
ಯು ಯಥಾರ್ಥವಾದದ್ದೆಂಬದನ್ನೂ ನಿಮ್ಮನ್ನು ನಾವು
ಹೊಗಳಿದ್ದು ನ್ಯಾಯವೆಂಬದನ್ನೂ ಇವರಿಗೂ ಸಭೆಗಳಿ
ಗೂ ತೋರಿಸಿಕೊಡಿರಿ.

ದೇವಜನರಿಗೋಸ್ಕರ ನಡೆಯುವ ಸಹಾಯಕಾ
ರ್ಯವನ್ನು ಕುರಿತು ನಿಮಗೆ ಬರೆಯುವದಕ್ಕೆ ಅವಶ್ಯ
ವಿಲ್ಲ. ನಿಮ್ಮ ಮನಸ್ಸು ಸಿದ್ಧವಾಗಿದೆ ಎಂಬದು ನನಗೆ
ಗೊತ್ತುಂಟು. ಒಂದು ವರುಷದ ಹಿಂದೆ ಅಖಾಯದ
ವರು ಸಹಾಯಮಾಡುವದಕ್ಕೆ ಸಿದ್ಧವಾಗಿದ್ದರೆಂದು
ಮಕೆದೋನ್ಯದವರ ಮುಂದೆ ನಿಮ್ಮನ್ನು ಹೊಗಳು
ತ್ತಾ ಇದ್ದೇನೆ. ಮತ್ತು ನಿಮ್ಮ ಆಸಕ್ತಿಯು ಅವರಲ್ಲಿ
ಬಹುಜನರನ್ನು ಪ್ರೇರೇಪಿಸಿತು. ಆದರೂ ನಾವು
ನಿಮ್ಮನ್ನು ಹೊಗಳಿದ್ದು ನಿರಾಧಾರವಾಗದೆ ನಾನು
ಹೇಳಿದ ಪ್ರಕಾರವೇ ನೀವು ಸಿದ್ಧವಾಗಿರಬೇಕೆಂದು
ಆ ಸಹೋದರರನ್ನು ಕಳುಹಿಸಿದ್ದೇನೆ. ಸಿದ್ಧವಾಗದಿ
ದ್ದರೆ ಒಂದು ವೇಳೆ ಮಕೆದೋನ್ಯದವರಲ್ಲಿ ಯಾ
ರಾದರೂ ನನ್ನ ಸಂಗಡ ಬಂದು ನೀವು ಸಿದ್ಧವಾಗಲಿಲ್ಲ
ವೆಂಬದನ್ನು ಕಾಣುವಾಗ ನಮಗೆ ಇಂಥ ಭರವಸವಿದ್ದ
ದ್ದಕ್ಕೆ ನಾವು ನಾಚಿಕೆಪಡಬೇಕಾದೀತು; ನಿಮಗೂ
ನಾಚಿಕೆಯಾಗುವದೆಂದು ನಾವು ಬೇರೆ ಹೇಳಬೇಕೇ.
ಹೀಗಿರಲಾಗಿ ಈ ಸಹೋದರರು ಮುಂದಾಗಿ ನಿಮ್ಮ
ಬಳಿಗೆ ಬಂದು ಕೊಡುತ್ತೇವೆಂದು ನೀವು ಮೊದಲು
ಹೇಳಿದ ಧರ್ಮದ್ರವ್ಯವನ್ನು ಸಿದ್ಧಪಡಿಸಬೇಕೆಂಬದಾಗಿ
ಇವರನ್ನು ಬೇಡಿಕೊಳ್ಳುವದು ಅವಶ್ಯವೆಂದು ನನಗೆ
ತೋಚಿತು. ಹೀಗೆ ಆ ಹಣವು ಸುಲಿಗೆಯಂತೆ
ಬಾರದೆ ಧರ್ಮಾರ್ಥವಾಗಿಯೇ ಸಿದ್ಧವಾಗುವದು.

ಪೌಲನು ಕೊರಿಂಥದ ಸಭೆಯವರನ್ನು ಉದಾರವಾಗಿ
ಕೊಡುವದಕ್ಕೆ ಪ್ರೇರೇಪಿಸುವದು.

ಆದರೆ ಸ್ವಲ್ಪವಾಗಿ ಬಿತ್ತುವವನು ಪೈರನ್ನು ಸ್ವಲ್ಪ
ವಾಗಿ ಕೊಯ್ಯುವನು; ಹೆಚ್ಚಾಗಿ ಬಿತ್ತುವವನು ಹೆಚ್ಚಾಗಿ
ಕೊಯ್ಯುವನು ಎಂದು ತಿಳುಕೊಳ್ಳಿರಿ. ಪ್ರತಿಯೊ
ಬ್ಬನು ತನ್ನ ತನ್ನ ಹೃದಯದಲ್ಲಿ ನಿರ್ಣಯಿಸಿಕೊಂಡ

ಪ್ರಕಾರ ಕೊಡಲಿ; ದುಃಖದಿಂದಾಗಲಿ ಬಲಾತ್ಕಾರ
ದಿಂದಾಗಲಿ ಯಾರೂ ಕೊಡಬಾರದು; ಯಾಕಂದರೆ
ಸಂತೋಷವಾಗಿ ಕೊಡುವವನ ಮೇಲೆ ದೇವರಿಗೆ
8 ಪ್ರೀತಿಯುಂಟು. ದೇವರು ಸಕಲವಿಧವಾದ ದಾನ
ಗಳನ್ನು ನಿಮಗೆ ಧಾರಾಳವಾಗಿ ಅನುಗ್ರಹಿಸುವದಕ್ಕೆ
ಶಕ್ತನಾದ್ದರಿಂದ ನೀವು ಯಾವಾಗಲೂ ಎಲ್ಲಾ ವಿಷಯ
ಗಳಲ್ಲಿ ಪರಿಪೂರ್ಣತೆಯುಳ್ಳವರಾಗಿ ಸಕಲಸತ್ಕಾರ್ಯ
9 ಗಳನ್ನು ಹೇರಳವಾಗಿ ಮಾಡುವವರಾಗಿರಬೇಕು. ಉಪ
ಕಾರಿಯ ವಿಷಯದಲ್ಲಿ —

ಅವನು ಬಡವರಿಗೆ ಧಾರಾಳವಾಗಿ ಕೊಟ್ಟನು;
ಅವನ ನೀತಿಯ ಫಲವು ಸದಾಕಾಲವೂ ಇರು
ವದು

10 ಎಂದು ಶಾಸ್ತ್ರದಲ್ಲಿ ಬರೆದದೆಯಲ್ಲಾ. ಬಿತ್ತುವವನಿಗೆ
ಬೀಜವನ್ನೂ ಉಣ್ಣುವವನಿಗೆ ಆಹಾರವನ್ನೂ ಕೊ
ಡುವಾತನು ನಿಮಗೂ 1)ಬಿತ್ತುವದಕ್ಕೆ ಬೀಜವನ್ನು
ಕೊಟ್ಟು ಹೆಚ್ಚಿಸಿ ನಿಮ್ಮ ಧರ್ಮಕಾರ್ಯಗಳಿಂದಾಗುವ
11 ಫಲಗಳನ್ನು ವೃದ್ಧಿಪಡಿಸುವನು. ಹೀಗೆ ನೀವು ಎಲ್ಲಾ
ವಿಷಯಗಳಲ್ಲಿ ಐಶ್ವರ್ಯವಂತರಾಗಿದ್ದು ಉದಾರ
ವಾಗಿ ಕೊಡ ಶಕ್ತರಾಗುವಿರಿ; ಇದಲ್ಲದೆ ನಿಮ್ಮ ದಾನ
ಗಳು ನಮ್ಮ ಕೈಯಿಂದ ಮತ್ತೊಬ್ಬರಿಗೆ ಸೇರಿದಾಗ
ದೇವರಿಗೆ ಕೃತಜ್ಞತಾಸ್ತುತಿಯನ್ನುಂಟುಮಾಡುವದು.
12 ಹೇಗಂದರೆ ನೀವು ನಡಿಸುವ ಈ ಧರ್ಮಕಾರ್ಯವು
ದೇವಜನರ ಕೊರತೆಗಳನ್ನು ನೀಗುವದು ಮಾತ್ರವ
ಲ್ಲದೆ ಅನೇಕರಿಂದ ದೇವರಿಗೆ ಕೃತಜ್ಞತಾಸ್ತುತಿಯನ್ನು
13 ಹುಟ್ಟಿಸುವದು. ಈ ಸಹಾಯದಿಂದ ತೋರಿಬಂದ
ನಿಮ್ಮ ಯೋಗ್ಯಭಾವವನ್ನು ಅವರು ನೋಡುವಾಗ
ನೀವು ಮಾಡಿದ್ದ ಪ್ರತಿಜ್ಞೆಗೆ ಸರಿಯಾಗಿ ಕ್ರಿಸ್ತನ
ಸುವಾರ್ತೆಯನ್ನು ಅನುಸರಿಸಿದ್ದರಿಂದಲೂ ತಮಗೂ
ಎಲ್ಲರಿಗೂ ನೀವು ಉದಾರವಾಗಿ ಸಹಾಯಮಾಡಿದ್ದ
14 ರಿಂದಲೂ ದೇವರನ್ನು ಕೊಂಡಾಡುವರು. ಇದಲ್ಲದೆ
ನಿಮಗೋಸ್ಕರ ವಿಜ್ಞಾಪನೆಮಾಡಿ ದೇವರ ಅತಿಶಯ
ವಾದ ಕೃಪೆಯು ನಿಮ್ಮಲ್ಲಿ ಇರುವದರಿಂದ ನಿಮ್ಮ ಪರಿ
15 ಚಿತಿಮಾಡಬೇಕೆಂದು ಕೋರುವರು. ವರ್ಣಿಸಲ
ಶಕ್ಯವಾದ ದೇವರ ವರಕ್ಕಾಗಿ ಆತನಿಗೆ ಸ್ತೋತ್ರ.

### ತನಗೆ ಅಧಿಕಾರವಿಲ್ಲವೆಂದು ವಿರೋಧಿಗಳು ಹೇಳಿದ ಮಾತಿಗೆ ಪೌಲನು ಕೊಡುವ ಉತ್ತರ.

(10. 1 – 13. 10.)

ತನಗೆ ಅಧಿಕಾರ ಉಂಟೆಂಬದನ್ನೂ ಅದು ಎಂಥ ಅಧಿಕಾರವೆಂಬದನ್ನೂ ಕೊರಿಂಥಕ್ಕೆ ಬಂದಾಗ ತೋರಿಸುವೆನೆಂದು ಪೌಲನು ಖಂಡಿತವಾಗಿ ಹೇಳುವದು.

10 ಪೌಲನು ನಮ್ಮೆದುರಿನಲ್ಲಿರುವಾಗ ದೀನನಾಗಿ
ನಡಕೊಳ್ಳುವವನೂ ದೂರದಲ್ಲಿರುವಾಗ ನಮ್ಮನ್ನು
ಕುರಿತು ದಿಟ್ಟತನತೋರಿಸುವವನೂ ಆಗಿದ್ದಾನೆ ಎಂದು
ಹೇಳುವವರು ನಿಮ್ಮಲ್ಲಿದ್ದಾರಲ್ಲಾ. ಆ ಪೌಲನೆಂಬ
ನಾನು ಕ್ರಿಸ್ತನ ಶಾಂತಮನಸ್ಸನ್ನೂ ಸಾತ್ವಿಕತ್ವವ
ನ್ನೂ ನೆನಪಿಗೆ ತಂದುಕೊಂಡು ನಿಮಗೆ ಖಂಡಿತವಾಗಿ
ಹೇಳುವದೇನಂದರೆ ಯಾರು ನಮ್ಮನ್ನು ಲೋಕಾನು 2
ಸಾರಿಗಳೆಂದು ಎಣಿಸುತ್ತಾರೋ ಅವರಿಗೆ ದಿಟ್ಟವಾದ
ಧೈರ್ಯವನ್ನು ತೋರಿಸಬೇಕೆಂದು ಯೋಚಿಸುತ್ತಾ
ಇದ್ದೇನೆ. ನಾವು ನಿಮ್ಮಲ್ಲಿಗೆ ಬಂದಿರುವಾಗ ಅಂಥ
ದಿಟ್ಟತನವನ್ನು ತೋರಿಸುವದಕ್ಕೆ ಅವಕಾಶ ಉಂಟಾಗ
ಬಾರದೆಂದು ನಿಮ್ಮನ್ನು ಬೇಡಿಕೊಳ್ಳುತ್ತೇನೆ. ನಾವು 3
ಲೋಕದಲ್ಲಿದ್ದರೂ ಲೋಕಾನುಸಾರವಾಗಿ ಯುದ್ಧ
ಮಾಡುವವರಲ್ಲ. ನಾವು ಉಪಯೋಗಿಸುವ ಆಯು 4
ಧಗಳು ಲೋಕಸಂಬಂಧವಾದ ಆಯುಧಗಳಲ್ಲ; ಅವು
ದೇವರ ಎಣಿಕೆಯಲ್ಲಿ ಬಲವಾಗಿದ್ದು ಕೋಟೆಗಳನ್ನು
ಕೆಡವಿಹಾಕುವಂಥವುಗಳಾಗಿವೆ. ನಾವು ವಿತರ್ಕಗಳ 5
ನ್ನೂ ದೇವಜ್ಞಾನವನ್ನು ವಿರೋಧಿಸುವದಕ್ಕೆ ಏರಿಸಲ್ಪ
ಟ್ಟಿರುವ ಉನ್ನತವಾದ ಎಲ್ಲಾ ಕೊತ್ತಲಗಳನ್ನೂ
ಕೆಡವಿಹಾಕಿ ಎಲ್ಲಾ ಯೋಚನೆಗಳನ್ನು ಕ್ರಿಸ್ತನಿಗೆ
ವಿಧೇಯವಾಗುವಂತೆ ಸೆರೆಹಿಡಿದು ನಿಮ್ಮ ವಿಧೇಯ 6
ತ್ವವು ಪರಿಪೂರ್ಣವಾದ ಮೇಲೆ ಎಲ್ಲಾ ಅವಿಧೇಯ
ತ್ವಕ್ಕೆ ಶಿಕ್ಷೆ ಮಾಡುವದಕ್ಕೆ ಸಿದ್ಧರಾಗಿದ್ದೇವೆ.
ನೀವು ಮುಖದ ಮುಂದೆ ಇರುವಂಥದನ್ನು ನೋ 7
ಡಿರಿ. ಯಾವನಾದರೂ ತನ್ನನ್ನು ಕ್ರಿಸ್ತನವನೆಂದು
ನಂಬಿಕೊಂಡರೆ ಅವನು ತಿರಿಗಿ ಆಲೋಚನೆಮಾಡಿ
ಕೊಂಡು ತಾನು ಹೇಗೆ ಕ್ರಿಸ್ತನವನೋ ಹಾಗೆ
ನಾವೂ ಕ್ರಿಸ್ತನವರೆಂದು ತಿಳುಕೊಳ್ಳಲಿ. ನಮಗಿ 8
ರುವ ಅಧಿಕಾರವನ್ನು ಕುರಿತು ನಾವು ಒಂದು ವೇಳೆ
ಹೆಚ್ಚಾಗಿ ಹೊಗಳಿಕೊಂಡರೂ ಹಾಗೆ ಹೊಗಳಿಕೊಳ್ಳು
ವದರಲ್ಲಿ ನಾಚಿಕೆಪಡುವದಕ್ಕೆ ಕಾರಣವಾಗುವದಿಲ್ಲ.
ಆದರೆ ನಿಮ್ಮನ್ನು ಕೆಡವಿಹಾಕುವದಕ್ಕಲ್ಲ ಕಟ್ಟುವದ
ಕ್ಕಾಗಿಯೇ ಕರ್ತನು ಈ ಅಧಿಕಾರವನ್ನು ನಮಗೆ
ಕೊಟ್ಟನು. ಪತ್ರಿಕೆಗಳಿಂದ ನಿಮ್ಮನ್ನು ಹೆದರಿಸುವವ 9
ನಾಗಿ ಕಾಣಿಸಿಕೊಳ್ಳುವದಕ್ಕೆ ನನಗೆ ಮನಸ್ಸಿಲ್ಲ. ಅವ 10
ನಿಂದ ಬಂದ ಪತ್ರಿಕೆಗಳು ಗೌರವವಾದವುಗಳೂ ಬಲ
ವುಳ್ಳವುಗಳೂ ಆಗಿವೆ; ಅವನು ಸಾಕ್ಷಾತ್ತಾಗಿ ಬಂದರೆ
ಅವನು ನಿರ್ಬಲನು, ಅವನ ಮಾತು ಗಣನೆಗೆ ಬಾರ
ದ್ದು ಅನ್ನುತ್ತಾರೆ. ಅಂಥವರು—ನಾವು ದೂರದಲ್ಲಿರು 11
ವಾಗ ಪತ್ರಿಕೆಗಳ ಮೂಲಕ ಮಾತಿನಲ್ಲಿ ಎಂಥವರಾಗಿ
ದ್ದೇವೋ ಹತ್ತಿರದಲ್ಲಿರುವಾಗ ಕಾರ್ಯದಲ್ಲಿಯೂ
ಅಂಥವರಾಗಿಯೇ ಇದ್ದೇವೆಂದು ತಿಳುಕೊಳ್ಳಲಿ.

ಮತ್ತೊಬ್ಬರು ಸುವಾರ್ತೆ ಸಾರಿದ ಕಡೆಯಲ್ಲಿ ತಾನು ಸಾರುವವನಲ್ಲವೆಂದು ಪೌಲನು ಹೇಳುವದು.

ತಮ್ಮನ್ನು ತಾವೇ ಹೊಗಳಿಕೊಳ್ಳುವ ಕೆಲವರಲ್ಲಿ 12
ನಮ್ಮನ್ನು ಸೇರಿಸಿಕೊಳ್ಳುವದಕ್ಕಾಗಲಿ ಅವರಿಗೆ ಹೋಲಿ
ಸಿಕೊಳ್ಳುವದಕ್ಕಾಗಲಿ ನಮಗೆ ಧೈರ್ಯಸಾಲದು; ಅವ
ರಂತೂ ತಮ್ಮ ತಮ್ಮೊಳಗೆ ತಮ್ಮನ್ನು ಅಳತೆಮಾಡಿ
ಕೊಂಡು ತಮತಮಗೆ ಹೋಲಿಸಿಕೊಂಡು ವಿವೇಕ

1) ಅಂದರೆ, ದಾನಮಾಡುವದಕ್ಕೆ ಬೇಕಾದದ್ದನ್ನು.

13 ವಿಲ್ಲದವರಾಗಿದ್ದಾರೆ. ನಾವಾದರೋ ಮೇರೆದಪ್ಪಿ ಹೊ
ಗಳಿಕೊಳ್ಳದೆ ದೇವರು ನಮಗೆ ನೇಮಿಸಿದಂಥ ಮೇರೆ
ಯೊಳಗಿದ್ದು ಹೊಗಳಿಕೊಳ್ಳುತ್ತೇವೆ. ಈ ಮೇರೆ
ಯೊಳಗಿದ್ದು ನಿಮ್ಮ ಪರ್ಯಂತರಕ್ಕೂ ಬಂದಿದ್ದೇವೆ.
14 ನಾವು ಕ್ರಿಸ್ತನ ಸುವಾರ್ತೆಯನ್ನು ಸಾರುತ್ತಾ ಇತರರಿ
ಗಿಂತ ಮೊದಲು ನಿಮ್ಮ ಬಳಿಗೆ ಬಂದದರಿಂದ ನಿಮ್ಮ
ಮೇಲೆ ಅಧಿಕಾರವಿಲ್ಲದವರಂತೆ ಮೇರೆಯನ್ನು ಅತಿಕ್ರ
15 ಮಿಸಿದವರಲ್ಲ. ನಾವು ಮೇರೆದಪ್ಪಿ ಮತ್ತೊಬ್ಬರ ಪ್ರ
ಯಾಸಧ ಫಲಗಳನ್ನು ತಕ್ಕೊಂಡು ಇವು ನಮ್ಮವು
ಎಂದು ಹಿಗ್ಗುವವರಲ್ಲ; ಆದರೆ ನಿಮ್ಮ ನಂಬಿಕೆಯು
ಹೆಚ್ಚಿದ ಹಾಗೆಲ್ಲಾ ನಿಮ್ಮ ಮೂಲಕ ನಮ್ಮ ಮೇರೆ
16 ಯೊಳಗೆ ಇನ್ನೂ ಅಭಿವೃದ್ಧಿಹೊಂದಿ ನಿಮಗೆ ಆಚೆ
ಇರುವ ಸೀಮೆಗಳಲ್ಲಿ ಸುವಾರ್ತೆಯನ್ನು ಸಾರುವೆವೆಂಬ
ನಿರೀಕ್ಷೆ ನಮಗುಂಟು. ಮತ್ತೊಬ್ಬರ ಮೇರೆಯಲ್ಲಿ
ಸಿದ್ಧವಾಗಿ ನಮಗೆ ಸಿಕ್ಕಿದ ಫಲವನ್ನು ಕುರಿತು ನಾವು
17 ಹೆಚ್ಚಳಪಡುವದಿಲ್ಲ. ಹೆಚ್ಚಳಪಡುವವನು ಕರ್ತ
18 ನಲ್ಲಿಯೇ ಹೆಚ್ಚಳಪಡಲಿ. ತನ್ನನ್ನು ತಾನೇ ಹೊಗ
ಳಿಕೊಳ್ಳುವವನು ಯೋಗ್ಯನಲ್ಲ; ಕರ್ತನು ಯಾರ
ನ್ನು ಹೊಗಳುತ್ತಾನೋ ಅವನೇ ಯೋಗ್ಯನು.

ತಾನು ಸಾರಿದ ಕ್ರಿಸ್ತನನ್ನು ಕೊರಿಂಥದವರು ಬಿಟ್ಟು ಬೇರೊಂದು ಬೋಧನೆಗೆ ಕಿವಿಗೊಡಬಾರದೆಂದು ಪೌಲನು ಹೇಳುವದು.

11 ನಾನು ನನ್ನನ್ನು ಹೊಗಳಿಕೊಳ್ಳುವದರಲ್ಲಿ ಸ್ವಲ್ಪ
ಬುದ್ಧಿಹೀನತೆಯಿಂದ ಮಾತಾಡುತ್ತೇನೆ; ನೀವು ಅದ
ನ್ನು ಸಹಿಸಿಕೊಳ್ಳುತ್ತೀರೇನೋ. ನನ್ನನ್ನು ಸಹಿಸಿಕೊ
2 ಳ್ಳಬೇಕೆಂದು ನಿಮ್ಮನ್ನು ಬೇಡಿಕೊಳ್ಳುತ್ತೇನೆ. ಯಾ
ಕಂದರೆ ದೇವರಲ್ಲಿರುವಂಥ ಚಿಂತೆಯಿಂದಲೇ ನಾನು
ನಿಮ್ಮ ವಿಷಯದಲ್ಲಿ ಚಿಂತಿಸುತ್ತೇನೆ. ನಿಮ್ಮನ್ನು ಕ್ರಿಸ್ತ
ನೆಂಬ ಒಬ್ಬನೇ ಪುರುಷನಿಗೆ ಶುದ್ಧಕನ್ಯೆಯಾಗಿ ಒಪ್ಪಿ
ಸಬೇಕೆಂದು ನಿಮ್ಮನ್ನು ಆತನಿಗೆ ನಿಶ್ಚಯಮಾಡಿದ
3 ನಲ್ಲಾ. ಆದರೆ ಹೇಗೆ ಹವ್ವಳು ಸರ್ಪದ ಕುಯು
ಕ್ತಿಗೆ ಒಳಬಿದ್ದು ಮೋಸಹೋದಳೋ ಹಾಗೆಯೇ ನಿಮ್ಮ
ಮನಸ್ಸು ಕ್ರಿಸ್ತನ ವಿಷಯದಲ್ಲಿರಬೇಕಾದ ಯಥಾರ್ಥ
ತ್ವವನ್ನೂ ಪಾತಿವ್ರತ್ಯವನ್ನೂ ಬಿಟ್ಟು ಕೆಟ್ಟುಹೋದೀ
4 ತೆಂದು ನನಗೆ ಭಯವುಂಟು. ಯಾಕಂದರೆ ನಾವು
ಪ್ರಸಿದ್ಧಿಪಡಿಸದಿದ್ದ ಮತ್ತೊಬ್ಬ ಯೇಸುವನ್ನು ನಿಮ್ಮ
ಬಳಿಗೆ ಬರುವವರು ಪ್ರಕಟಿಸುವಾಗಲೂ ನೀವು
ಹೊಂದದೆ ಇದ್ದ ಬೇರೆ ವಿಧವಾದ ಆತ್ಮಪ್ರೇರಣೆಯನ್ನು
ಹೊಂದುವಾಗಲೂ ಅವಲಂಬಿಸದೆಯಿದ್ದ ಬೇರೊಂದು
ಸುವಾರ್ತೆಯನ್ನು ಕೇಳುವಾಗಲೂ ನೀವು ಸಹಿಸಿಕೊ
5 ಳ್ಳುತ್ತಿರುವದು ಬಹು ಆಶ್ಚರ್ಯ. ಅತಿಶ್ರೇಷ್ಠರಾದ
ಅಪೊಸ್ತಲರು ಅನ್ನಿಸಿಕೊಳ್ಳುವ ಅವರಿಗಿಂತ ನಾನು
ಒಂದರಲ್ಲಾದರೂ ಕಡಿಮೆಯಾದವನಲ್ಲವೆಂದು ಎಣಿಸು
6 ತ್ತೇನೆ. ನಾನು ವಾಕ್ಚಾತುರ್ಯದಲ್ಲಿ ನಿಪುಣನಲ್ಲ
ದಿದ್ದರೂ ಜ್ಞಾನದಲ್ಲಿ ನಿಪುಣನಾಗಿದ್ದೇನೆ; ಇದನ್ನು
ಎಲ್ಲಾ ಕಾರ್ಯಗಳಲ್ಲಿ ಎಲ್ಲರ ಮುಂದೆ ನಿಮ್ಮ
ಪ್ರಯೋಜನಕ್ಕಾಗಿ ತೋರ್ಪಡಿಸಿದ್ದೇವೆ.

ತಾನು ಕೊರಿಂಥದ ಸಭೆಯಿಂದ ಹಣಸಹಾಯ ತೆಗೆದುಕೊಳ್ಳ
ಹೋದದ್ದು ದೋಷವೆಣಿಸಕೂಡದೆಂದು ಪೌಲನು ಹೇಳುವದ

ಏನು, ನೀವು ಅಭಿವೃದ್ಧಿಹೊಂದಬೇಕೆಂದು ನನ್ನನ
ನಾನೇ ತಗ್ಗಿಸಿಕೊಂಡು ದೇವರ ಸುವಾರ್ತೆಯನ
ನಿಮಗೆ ಉಚಿತಾರ್ಥವಾಗಿ ಸಾರಿದ್ದು ಪಾಪಕೃತ್ಯವೋ
ನಿಮ್ಮ ಸೇವೆಮಾಡುವದಕ್ಕೋಸ್ಕರ ನಾನು ಇತರ ಸ
ಗಳಿಂದ ಸಂಬಳ ತೆಗೆದುಕೊಂಡು ಅವುಗಳನ್ನು ಸುಲ
ಕೊಂಡೆನು. ನಾನು ನಿಮ್ಮಲ್ಲಿದ್ದಾಗ ಖರ್ಚಿಗೆ ಏನ
ಇಲ್ಲದ ಸಮಯದಲ್ಲಿ ಯಾರ ಮೇಲೆಯೂ ಭಾ
ಹಾಕಲಿಲ್ಲ; ಮಕೆದೋನ್ಯದಿಂದ ಬಂದ ಸಹೋದರ
ನನಗೆ ಬೇಕಾದದ್ದೆಲ್ಲವನ್ನೂ ಕೊಟ್ಟರು. ನಾ
ನಿಮಗೆ ಯಾವದರಲ್ಲಿಯೂ ಭಾರವಾಗಿರಬಾರದೆಂ
ನೋಡಿಕೊಳ್ಳುತ್ತಿದ್ದೆನು, ಇನ್ನು ಮೇಲೆಯೂ ನೋ
ಕೊಳ್ಳುವೆನು. ಈ ನನ್ನ ಹೊಗಳಿಕೆಯನ್ನು ಅಖ
ಯದ ಪ್ರಾಂತ್ಯಗಳಲ್ಲಿ ಒಬ್ಬರೂ ನಿಲ್ಲಿಸಲಾರರೆಂ
ಕ್ರಿಸ್ತನ ಮುಂದೆ ಸತ್ಯವಾಗಿ ಹೇಳುತ್ತೇನೆ. ಯಾ
ನಿಮ್ಮಿಂದ ಏನೂ ತೆಗೆದುಕೊಳ್ಳುವದಿಲ್ಲ? ನಿಮ
ಮೇಲೆ ಪ್ರೀತಿ ಇಲ್ಲದ್ದರಿಂದಲೋ? ದೇವರೇ ಬಲ್ಲ
ನನ್ನನ್ನು ನಿಂದಿಸುವದಕ್ಕೆ ಆಸ್ಪದವನ್ನು ಹುಡುಕ
ವವರಿಗೆ ಯಾವ ಆಸ್ಪದವೂ ಸಿಕ್ಕದಂತೆ ನಾನು ಮಾಡ
ವದನ್ನು ಇನ್ನು ಮುಂದೆಯೂ ಮಾಡುವೆನು. ಅವರ
ಯಾವದರಲ್ಲಿ ಹಿಗ್ಗುತ್ತಾರೋ ಅದರಲ್ಲಿ ನಮ್ಮಂತೆಯೆ
ನಡೆಯುವವರಾಗಿ ಕಂಡುಬರಲಿ. ಆದರೆ ಅಂಥವ
ಸುಳ್ಳು ಅಪೊಸ್ತಲರೂ ಮೋಸಗಾರರಾದ ಕೆಲ
ದವರೂ ಕ್ರಿಸ್ತನ ಅಪೊಸ್ತಲರಾಗಿ ಕಾಣಿಸುವದಕ
ವೇಷಹಾಕಿಕೊಳ್ಳುವವರೂ ಆಗಿದ್ದಾರೆ. ಇದೇನೂ
ಶ್ಚರ್ಯವಲ್ಲ; ಸೈತಾನನು ತಾನೇ ಪ್ರಕಾಶರೂಪವು
ದೇವದೂತನ ವೇಷವನ್ನು ಹಾಕಿಕೊಳ್ಳುವಾಗ ಅವ
ಸೇವಕರು ಸಹ ನೀತಿಗೆ ಸೇವಕರಾಗಿ ಕಾಣಿಸುವದಕ
ವೇಷಹಾಕಿಕೊಳ್ಳುವದು ದೊಡ್ಡದಲ್ಲ. ಅವರ ಅಂತ
ವಸ್ಥೆಯು ಅವರ ಕೃತ್ಯಗಳಿಗೆ ತಕ್ಕ ಹಾಗೆಯೇ ಆಗ
ವದು.

ತಾನು ಕ್ರಿಸ್ತನ ಸೇವೆಯಲ್ಲಿ ಪಟ್ಟ ಶ್ರಮೆಯೂ ಕ್ರಿಸ್ತನಿಂದ ಹೊಂದಿದ ದರ್ಶನಗಳೂ ಬಹು ಹೆಚ್ಚೆಂದು ಪೌಲನು ಹೇಳುವದು.

ನನ್ನನ್ನು ಬುದ್ಧಿಹೀನನೆಂತ ಯಾರೂ ನೆನಸಬಾ
ದೆಂದು ತಿರಿಗಿ ಹೇಳುತ್ತೇನೆ; ಹಾಗೆ ನೆನಸಿದರೂ ನನ್ನನ
ಬುದ್ಧಿಹೀನನಾಗಿಯಾದರೂ ಸೇರಿಸಿಕೊಳ್ಳಿರಿ; ಯಾಕ
ದರೆ ನಾನು ಸಹ ಅಲ್ಪಸ್ವಲ್ಪ ಹೊಗಳಿಕೊಳ್ಳಬೇಕೆಂ
ದ್ದೇನೆ. ನಾನು ಈಗ ಆಡುವ ಮಾತುಗಳನ್ನು ಕರ್ತ
ನನ್ನು ಅನುಸರಿಸುವವನಾಗಿ ಆಡದೆ ಭರವಸದಿಂದ ತನ
ನ್ನು ಹೊಗಳಿಕೊಳ್ಳುವ ಬುದ್ಧಿಹೀನನಂತೆ ಆಡುತ್ತೇನ
ಅನೇಕರು ಲೋಕಸಂಬಂಧವಾದ ಕಾರ್ಯಗಳಲ್ಲ
ಹೊಗಳಿಕೊಳ್ಳುವದರಿಂದ ನಾನೂ ಹೊಗಳಿಕೊಳ್ಳ
ತ್ತೇನೆ. ನೀವು ಬುದ್ಧಿವಂತರಾಗಿದ್ದು ಬುದ್ಧಿಹೀನ
ರನ್ನು ಸಂತೋಷದಿಂದ ಸಹಿಸಿಕೊಳ್ಳುತ್ತೀರಲ್ಲಾ. ಒಬ್ಬ

ನು ನಿಮ್ಮನ್ನು ತನಗೆ ವಶಮಾಡಿಕೊಂಡರೂ ಒಬ್ಬನು
ನಿಮ್ಮನ್ನು ನುಂಗಿಬಿಟ್ಟರೂ ಒಬ್ಬನು ನಿಮ್ಮನ್ನು ಮರ
ಳುಗೊಳಿಸಿ ಹಿಡಿದರೂ ಒಬ್ಬನು ತನ್ನನ್ನು ಹೆಚ್ಚಿಸಿ
ಕೊಂಡರೂ ಒಬ್ಬನು ನಿಮ್ಮ ಮುಖದ ಮೇಲೆ ಹೊಡೆ
ದರೂ ಸಹಿಸಿಕೊಳ್ಳುತ್ತೀರಲ್ಲಾ.
ನಾವು ಬಲವಿಲ್ಲದವರಾಗಿದ್ದೆವೆಂಬಂತೆ ಇದನ್ನು
ನನ್ನ ಅವಮಾನಕ್ಕೆ ಹೇಳಿದ್ದರೂ ಯಾವ ಆಧಾರ
ದಿಂದ ಯಾವನಾದರೂ ಧೈರ್ಯವಾಗಿ ನಡಕೊಳ್ಳು
ತ್ತಾನೋ, ಅದರಿಂದಲೇ ನಾನೂ ಧೈರ್ಯವುಳ್ಳವನಾಗಿ
2 ದ್ದೇನೆ. ಇದನ್ನು ಬುದ್ಧಿಹೀನತೆಯಿಂದ ಹೇಳುತ್ತೇನೆ.
ಅವರು ಇಬ್ರಿಯರೋ ನಾನೂ ಇಬ್ರಿಯನು; ಅವ
ರು ಇಸ್ರಾಯೇಲ್ಯರೋ ನಾನೂ ಇಸ್ರಾಯೇಲ್ಯನು;
ಅವರು ಅಬ್ರಹಾಮನ ವಂಶದವರೋ ನಾನೂ ಅದೇ
3 ವಂಶದವನು; ಅವರು ಕ್ರಿಸ್ತನ ಸೇವಕರೋ ಅವ
ರಿಗಿಂತ ನಾನು ಹೆಚ್ಚಾಗಿ ಸೇವೆಮಾಡುವವನಾಗಿದ್ದೇನೆ.
ಬುದ್ಧಿಸ್ವಾಧೀನವಿಲ್ಲದವನಾಗಿ ಮಾತಾಡುತ್ತೇನೆ. ಆತ
ನ ಸೇವೆಯಲ್ಲಿ ಅವರಿಗಿಂತ ಹೆಚ್ಚಾಗಿ ಪ್ರಯಾಸಪಟ್ಟೆ
ನು, ಹೆಚ್ಚಾಗಿ ಸೆರೆಮನೆಗಳೊಳಗೆ ಬಿದ್ದೆನು;
ಮಿತಿಮೀರಿ ಪೆಟ್ಟುಗಳನ್ನು ತಿಂದೆನು, ಅನೇಕ
4 ಸಾರಿ ಮರಣದ ಬಾಯೊಳಗೆ ಸಿಕ್ಕಿಕೊಂಡೆನು. ಐದು
ಸಾರಿ ಯೆಹೂದ್ಯರಿಂದ ನನಗೆ ಒಂದು ಕಡಿಮೆ ನಾ
5 ಲ್ವತ್ತು ಏಟುಗಳು ಬಿದ್ದವು; ಮೂರು ಸಾರಿ ಸರ
ಕಾರದವರು ಚಡಿಗಳಿಂದ ನನ್ನನ್ನು ಹೊಡಿಸಿದರು;
ಒಂದು ಸಾರಿ ಜನರು ನನ್ನನ್ನು ಕೊಲ್ಲುವದಕ್ಕೆ ಕಲ್ಲೆ
ಸೆದರು; ಮೂರು ಸಾರಿ ನಾನಿದ್ದ ಹಡಗವು ಒಡೆದು
ಹೋಯಿತು; ಒಂದು ರಾತ್ರಿ ಒಂದು ಹಗಲು ಸಮು
6 ದ್ರದ ನೀರಿನಲ್ಲಿ ಕಳೆದೆನು. ಆತನ ಸೇವೆಯಲ್ಲಿ ಎಷ್ಟೋ
ಪ್ರಯಾಣಗಳನ್ನು ಮಾಡಿದೆನು; ನದಿಗಳ ಅಪಾಯ
ಗಳೂ ಕಳ್ಳರ ಅಪಾಯಗಳೂ ಸ್ವಂತಜನರಿಂದ ಅಪಾ
ಯಗಳೂ ಅನ್ಯಜನರಿಂದ ಅಪಾಯಗಳೂ ಪಟ್ಟಣ
ದಲ್ಲಿ ಅಪಾಯಗಳೂ ಕಾಡಿನಲ್ಲಿ ಅಪಾಯಗಳೂ ಸಮು
ದ್ರದಲ್ಲಿ ಅಪಾಯಗಳೂ ಸುಳ್ಳುಸಹೋದರರೊಳಗೆ ಇರು
7 ವಾಗ ಅಪಾಯಗಳೂ ನನಗೆ ಸಂಭವಿಸಿದವು. ಪ್ರಯಾ
ಸಪರಿಶ್ರಮಗಳಿಂದ ಕೆಲಸನಡಿಸಿ ಅನೇಕ ಸಾರಿ ನಿದ್ದೆ
ಗೆಟ್ಟು ಹಸಿವೆ ಬಾಯಾರಿಕೆಗಳನ್ನು ಪಟ್ಟು ಅನೇಕ ಸಾರಿ
ಉಪವಾಸವಾಗಿಯೂ ಚಳಿಯಲ್ಲಿಯೂ ವಸ್ತ್ರವಿಲ್ಲದೆ
8 ಯೂ ಇದ್ದು ಆತನನ್ನು ಸೇವಿಸಿದ್ದೇನೆ. ಇನ್ನೂ ಬೇರೆ
ಸಂಗತಿಗಳಲ್ಲದೆ ಎಲ್ಲಾ ಸಭೆಗಳ ವಿಷಯವಾದ ಚಿಂ
9 ತೆಯು ದಿನದಿನ ನನ್ನನ್ನು ಪೀಡಿಸುತ್ತದೆ. ಯಾವ
ನಾದರೂ ಬಲವಿಲ್ಲದವನಾದರೆ ನಾನು ಅವನೊಂದಿಗೆ
ಬಲವಿಲ್ಲದವನಾಗದೆ ಇರುವೆನೋ? ಯಾವನಾದರೂ
ಪಾಪದಲ್ಲಿ ಸಿಕ್ಕಿಕೊಂಡರೆ ನಾನು ತಾಪಪಡುವದಿ
ಲ್ಲವೋ?
0 ನಾನು ಹೊಗಳಿಕೊಳ್ಳಬೇಕಾದರೆ ನನ್ನ ಬಲಹೀನ
ತೆಯನ್ನು ತೋರ್ಪಡಿಸುವ ವಿಷಯಗಳಲ್ಲಿ ಹೊಗಳಿ
1 ಕೊಳ್ಳುವೆನು. ನಾನು ಸುಳ್ಳಾಡುವದಿಲ್ಲವೆಂದು ಕರ್ತ
ನಾದ ಯೇಸುವಿನ ತಂದೆಯೂ ನಿರಂತರ ಸ್ತುತಿ
2 ಹೊಂದತಕ್ಕವನೂ ಆಗಿರುವ ದೇವರೇ ಬಲ್ಲನು. ದಮ
ಸ್ಕದಲ್ಲಿ ಅರಸನಾದ ಅರೇತನ ಅಧೀನದಲ್ಲಿದ್ದ ಅಧಿಪತಿ
ಯು ನನ್ನನ್ನು ಹಿಡಿಯಬೇಕೆಂದು ದಮಸ್ಕದವರ
ಪಟ್ಟಣವನ್ನು ಕಾಯುತ್ತಿರಲು ನಾನು ಒಂದು ಕಲ್ಲಿ 33
ಯಲ್ಲಿ ಕೂತು ಗೋಡೆಯಲ್ಲಿದ್ದ ಕಿಟಿಕಿಯೊಳಗಿಂದ
ಇಳಿಸಲ್ಪಟ್ಟು ಅವನ ಕೈಯಿಂದ ತಪ್ಪಿಸಿಕೊಂಡೆನು.

12

ಹೊಗಳಿಕೊಳ್ಳುವದು ವಿಹಿತವಲ್ಲದಿದ್ದರೂ ಅದು
ನನಗೆ ಅವಶ್ಯವಾಗಿದೆ. ಆದದರಿಂದ ಕರ್ತನು ನನಗೆ
ದಯಪಾಲಿಸಿದ ದರ್ಶನಗಳನ್ನು ಕುರಿತೂ ತಿಳಿಯ
ಪಡಿಸಿದ ರಹಸ್ಯಗಳನ್ನು ಕುರಿತೂ ಹೇಳುತ್ತೇನೆ.
ಕ್ರಿಸ್ತನಲ್ಲಿದ್ದ ಒಬ್ಬ ಮನುಷ್ಯನನ್ನು ಬಲ್ಲೆನು, 2
ಅವನು ಹದಿನಾಲ್ಕು ವರುಷಗಳ ಹಿಂದೆ ಮೂರನೆಯ
ಆಕಾಶದ ಪರಿಯಂತರಕ್ಕೂ ಒಯ್ಯಲ್ಪಟ್ಟನು. ಅವನು
ದೇಹಸಹಿತನಾಗಿ ಒಯ್ಯಲ್ಪಟ್ಟನೋ ದೇಹರಹಿತನಾಗಿ
ಒಯ್ಯಲ್ಪಟ್ಟನೋ ನಾನರಿಯೆ, ದೇವರೇ ಬಲ್ಲನು.
ಅಂಥ ಮನುಷ್ಯನು ಪರದೈಸಕ್ಕೆ ಒಯ್ಯಲ್ಪಟ್ಟು 3-4
ಮನುಷ್ಯರು ನುಡಿಯಲಶಕ್ಯವಾದ ಹೇಳಬಾರದ ಮಾ
ತುಗಳನ್ನು ಕೇಳಿದನೆಂದು ಬಲ್ಲೆನು; ಆ ಸಮಯದಲ್ಲಿ
ಅವನು ದೇಹಸಹಿತನಾಗಿದ್ದನೋ ದೇಹರಹಿತನಾಗಿದ್ದ
ನೋ ನಾನರಿಯೆ, ದೇವರೇ ಬಲ್ಲನು. ಅಂಥವನನ್ನು 5
ಕುರಿತು ಹೆಚ್ಚಳಪಡುವೆನು, ನನ್ನನ್ನು ಕುರಿತಾದರೋ
ನನ್ನ ನಿರ್ಬಲಾವಸ್ಥೆಗಳಲ್ಲಿಯೇ ಹೊರತು ಬೇರೆ
ಹೆಚ್ಚಳಪಡುವದಿಲ್ಲ. ಹೊಗಳಿಕೊಳ್ಳುವದಕ್ಕೆ ನನಗೆ 6
ಒಂದು ವೇಳೆ ಮನಸ್ಸಿದ್ದರೂ ಹಾಗೆ ಹೊಗಳಿಕೊಳ್ಳುವ
ದರಲ್ಲಿ ನಾನು ಬುದ್ಧಿಹೀನನಾಗುವದಿಲ್ಲ, ಯಾಕಂ
ದರೆ ಸತ್ಯವನ್ನೇ ಹೇಳುತ್ತಿರುವೆನು. ಆದರೂ ಯಾವನೂ
ನನ್ನಲ್ಲಿ ಕಾಣುವದಕ್ಕಿಂತಲೂ ನನ್ನಿಂದ ಕೇಳುವದ
ಕ್ಕಿಂತಲೂ ಹೆಚ್ಚಾಗಿ ನನ್ನನ್ನು ಕುರಿತು ಎಣಿಸಬಾರದು.
ಈ ಕಾರಣದಿಂದಲೂ ನನಗೆ ತಿಳಿಸಲ್ಪಟ್ಟ ರಹಸ್ಯಗಳು 7
ಬಹು ವಿಶೇಷವಾಗಿರುವದರಿಂದಲೂ ನಾನು ಹೊಗಳಿ
ಕೊಳ್ಳದೆ ಸುಮ್ಮನಿರುತ್ತೇನೆ. ನಾನು ನನ್ನನ್ನು ಅತಿ
ಶಯವಾಗಿ ಹೆಚ್ಚಿಸಿಕೊಳ್ಳಬಾರದೆಂದು ಒಂದು 1)ಶೂಲ
ನನ್ನ ಶರೀರದಲ್ಲಿ ನಾಟಿದೆಯೋ ಎಂಬಂತೆ ನನ್ನನ್ನು
ಗುದ್ದುವದಕ್ಕೆ ಸೈತಾನನ ದೂತರಲ್ಲಿ ಒಬ್ಬನು ನನ್ನ
ಬಳಿಗೆ ಕಳುಹಿಸಲ್ಪಟ್ಟನು; ನಾನು ಅತಿಶಯವಾಗಿ
ಹೆಚ್ಚಿಸಿಕೊಳ್ಳಬಾರದೆಂತಲೇ ಇದಾಯಿತು. ಈ ಪೀಡೆ 8
ಯ ವಿಷಯದಲ್ಲಿ ಅದು ನನ್ನನ್ನು ಬಿಟ್ಟುಹೋಗಬೇ
ಕೆಂದು ಮೂರು ಸಾರಿ ಕರ್ತನನ್ನು ಬೇಡಿಕೊಂಡೆನು.
ಆದಕ್ಕಾತನು—ನನ್ನ ಕೃಪೆಯೇ ನಿನಗೆ ಸಾಕು; 9
ಬಲಹೀನತೆಯಲ್ಲಿಯೇ ಬಲವು ಪೂರ್ಣಸಾಧಕವಾ
ಗುತ್ತದೆ ಎಂದು ನನಗೆ ಹೇಳಿದ್ದಾನೆ. ಹೀಗಿರಲಾಗಿ
ಕ್ರಿಸ್ತನ ಬಲವು ನನ್ನಲ್ಲಿ ನೆಲಸಿಕೊಂಡಿರಬೇಕೆಂದು ನನ
ಗುಂಟಾಗುವ ನಿರ್ಬಲಾವಸ್ಥೆಗಳ ವಿಷಯದಲ್ಲಿಯೇ
ಬಹುಸಂತೋಷವಾಗಿ ಹೆಚ್ಚಳಪಡುವೆನು. ಆದದರಿಂದ 10
ಕ್ರಿಸ್ತನ ನಿಮಿತ್ತ ನನಗೆ ನಿರ್ಬಲಾವಸ್ಥೆಯೂ ತಿರ
ಸ್ಕಾರವೂ ಕೊರತೆಯೂ ಹಿಂಸೆಯೂ ಇಕ್ಕಟ್ಟೂ ಸಂಭ
ವಿಸಿದಾಗ ಸಂತುಷ್ಟನಾಗಿದ್ದೇನೆ. ನಾನು ಯಾವಾಗ
ನಿರ್ಬಲನಾಗಿದ್ದೇನೋ ಆವಾಗಲೇ ಬಲವುಳ್ಳವನಾಗಿ
ದ್ದೇನೆ.

1) ಅಥವಾ, ಮುಳ್ಳು.

ಪೌಲನು ತನ್ನ ಪ್ರತಿವಾದವನ್ನು ಮುಗಿಸಿ ತಾನು ಕೊರಿಂಥಕ್ಕೆ ಬಂದು ಎಲ್ಲವನ್ನು ಕ್ರಮಪಡಿಸುವೆನೆಂದು ಹೇಳುವದು.

11 ನಾನು ಹೀಗೆ ಬರೆದು ಬುದ್ಧಿಹೀನನಾದೆನು;
ಅದಕ್ಕೆ ನೀವೇ ನನ್ನನ್ನು ಬಲವಂತಮಾಡಿದಿರಿ. ನಿಮ್ಮಿಂದ
ಲೇ ನನಗೆ ಹೊಗಳಿಕೆಯು ಉಂಟಾಗಬೇಕಾಗಿತ್ತು;
ಯಾಕಂದರೆ ನಾನು ಕೇವಲ ಅಲ್ಪನಾದರೂ ಅತಿ
ಶ್ರೇಷ್ಠರಾದ ಅಪೊಸ್ತಲರು ಅನ್ನಿಸಿಕೊಳ್ಳುವ ಆ ಜನರಿ
ಗಿಂತ ಒಂದರಲ್ಲಿಯಾದರೂ ಕಡಿಮೆಯಾಗಲಿಲ್ಲ.
12 ನಾನು ಹಿಂಸೆಯನ್ನು ಸ್ಥಿರಚಿತ್ತದಿಂದ ತಾಳಿಕೊಳ್ಳು
ವದರಲ್ಲಿಯೂ ಸೂಚಕಕಾರ್ಯಗಳನ್ನೂ ಅದ್ಭುತಗ
ಳನ್ನೂ ಮಹತ್ಕಾರ್ಯಗಳನ್ನೂ ನಡಿಸಿದ್ದರಲ್ಲಿಯೂ
ಅಪೊಸ್ತಲನಿಗೆ ಇರತಕ್ಕ ಲಕ್ಷಣಗಳು ನಿಮ್ಮ ಮಧ್ಯ
ದಲ್ಲಿ ತೋರಿದವು.
13 ನನ್ನನ್ನು ಸಂರಕ್ಷಿಸುವ ಭಾರವನ್ನು ನಾನು
ನಿಮ್ಮ ಮೇಲೆ ಹಾಕಲಿಲ್ಲವೆಂಬುವ ಒಂದೇ ವಿಷಯ
ದಲ್ಲಿ ಹೊರತು ಇನ್ನಾವ ವಿಷಯದಲ್ಲಿಯೂ ನಿಮ್ಮನ್ನು
ಮಿಕ್ಕಾದ ಸಭೆಗಳವರಿಗಿಂತ ಕಡಿಮೆಮಾಡಲಿಲ್ಲವಲ್ಲಾ.
ನಾನು ಮಾಡಿದ ಈ ಅನ್ಯಾಯವನ್ನು ಕ್ಷಮಿಸಿರಿ.
14 ಇಗೋ, ನಾನು ನಿಮ್ಮ ಬಳಿಗೆ ಬರುವದಕ್ಕೆ ಸಿದ್ಧವಾಗಿ
ರುವದು ಇದು ಮೂರನೆಯ ಸಾರಿ; ಮತ್ತು ನಿಮಗೆ
ಭಾರವಾಗಿರುವದಿಲ್ಲ; ನಾನು ನಿಮ್ಮ ಸೊತ್ತನ್ನು ಆಶಿ
ಸದೆ ನಿಮ್ಮನ್ನೇ ಆಶಿಸುತ್ತೇನೆ. ಮಕ್ಕಳು ತಂದೆತಾಯಿ
ಗಳಿಗೋಸ್ಕರ ದ್ರವ್ಯವನ್ನು ಕೂಡಿಸಿಡುವದು ಧರ್ಮ
ವಲ್ಲ, ತಂದೆತಾಯಿಗಳು ಮಕ್ಕಳಿಗೋಸ್ಕರ ಕೂಡಿಸಿ
15 ಡುವದೇ ಧರ್ಮ. ನಾನಂತೂ ನನಗಿರುವದನ್ನು
ನಿಮ್ಮ ಆತ್ಮಸಂರಕ್ಷಣೆಗೋಸ್ಕರ ಅತಿಸಂತೋಷದಿಂದ
ವೆಚ್ಚಮಾಡುತ್ತೇನೆ, ನನ್ನನ್ನೇ ವೆಚ್ಚಮಾಡಿಕೊಳ್ಳುತ್ತೇನೆ.
ನಾನು ನಿಮ್ಮನ್ನು ಹೆಚ್ಚಾಗಿ ಪ್ರೀತಿಸಿದರೆ ನೀವು ನನ್ನನ್ನು
ಕಡಿಮೆಯಾಗಿ ಪ್ರೀತಿಸುತ್ತೀರೋ?
16 ಒಂದು ವೇಳೆ ನೀವು—ಅದಿರಲಿ, ತಾನು ನಮಗೆ
ಭಾರವಾಗದೆ ಹೋದರೂ ಯುಕ್ತಿಯುಳ್ಳವನಾಗಿದ್ದು
ನಮ್ಮನ್ನು ಉಪಾಯದಿಂದ ಸುಲುಕೊಂಡನೆಂದು ಹೇ
17 ಳೀರಿ. ನಾನು ನಿಮ್ಮ ಬಳಿಗೆ ಕಳುಹಿಸಿದವರಲ್ಲಿ ಯಾ
ವನ ಮೂಲಕವಾಗಿಯಾಗಲಿ ನಿಮ್ಮನ್ನು ವಂಚಿಸಿ ಏನಾ
18 ದರೂ ತೆಗೆದುಕೊಂಡೆನೋ? ನಿಮ್ಮ ಬಳಿಗೆ ಹೋಗುವ
ದಕ್ಕೆ ನಾನು ತೀತನನ್ನು ಬೇಡಿಕೊಂಡು ಅವನ ಜೊತೆ
ಯಲ್ಲಿ ಆ ಸಹೋದರನನ್ನು ಕಳುಹಿಸಿಕೊಟ್ಟೆನಷ್ಟೆ.
ತೀತನು ನಿಮ್ಮನ್ನು ವಂಚಿಸಿ ಏನಾದರೂ ತೆಗೆದು
ಕೊಂಡನೋ; ನಾವಿಬ್ಬರೂ ಒಬ್ಬ ಆತ್ಮನಿಂದಲೇ
ಪ್ರೇರಿತರಾಗಿ ಒಂದೇ ಹೆಜ್ಜೆಜಾಡಿನಲ್ಲಿ ನಡೆಯಲಿ
ಲ್ಲವೋ?
19 ನಾವು ಇಷ್ಟು ಹೊತ್ತು ನಿಮ್ಮ ಮುಂದೆ ಪ್ರತಿವಾದ
ಮಾಡುವವರೆಂದು ನೆನಸುತ್ತೀರೋ? ನಿಮ್ಮ ಮುಂದೆ
ಯಲ್ಲ, ದೇವರ ಸನ್ನಿಧಾನದಲ್ಲಿಯೇ ನಾವು ಕ್ರಿಸ್ತನ
ಲ್ಲಿದ್ದು ಮಾತಾಡುವವರಾಗಿದ್ದೇವೆ. ಪ್ರಿಯರೇ, ನಾವು
ಮಾತಾಡುವದೆಲ್ಲಾ ನಿಮ್ಮ ಭಕ್ತಿವೃದ್ಧಿಗೋಸ್ಕರವೇ
20 ಆಗಿದೆ. ನಾನು ಬಂದಾಗ ಒಂದು ವೇಳೆ ನೀವು ನನ್ನ
ಇಷ್ಟದ ಪ್ರಕಾರ ಇರುವದಿಲ್ಲವೇನೋ, ನಾನು ನಿಮ್ಮ

ಇಷ್ಟದ ಪ್ರಕಾರ ತೋರುವದಿಲ್ಲವೇನೋ, ಒಂದು
ನಿಮ್ಮಲ್ಲಿ ಜಗಳ ಹೊಟ್ಟೆಕಿಚ್ಚು ದ್ವೇಷ ಸ್ವಾರ್ಥಬ
ಚಾಡಿಹೇಳುವದು ಕಿವಿಯೂದುವದು ಉಬ್ಬಿಕೊ
ವದು ಕಲಹ ಎಬ್ಬಿಸುವದು ಇವುಗಳು ಕಾಣ
ವದೋ ಏನೋ ನನಗೆ ಸಂಶಯ ಉಂಟು. ನಾ
ತಿರಿಗಿ ಬಂದಾಗ ನನ್ನ ದೇವರು ನಿಮ್ಮ ವಿಷಯ
ನನ್ನನ್ನು ನಾಚಿಕೆಗೆ ಗುರಿಮಾಡಾನೆಂತಲೂ, ಪೂ
ದಲ್ಲಿ ಬಂಡುತನ ಹಾದರತನ ಪೋಕರಿತನಗಳ
ನಡಿಸಿ ಪಶ್ಚಾತ್ತಾಪಪಡದಿರುವ ಅನೇಕರ ವಿಷಯವಾ
ನಾನು ದುಃಖಪಡಬೇಕಾದೀತೆಂತಲೂ ನನಗೆ ಭ
ಉಂಟು.
ನಾನು ನಿಮ್ಮ ಬಳಿಗೆ ಬರುವದು ಇದು ಮೂರ
ನೆಯ ಸಾರಿ. ಇಬ್ಬರು ಮೂವರು ಸಾಕ್ಷಿಗಳ
ಬಾಯಿಂದ ಪ್ರತಿಯೊಂದು ಸಂಗತಿ ಸ್ಥಾಪಿತವಾಗಬೇ
ನಾನು ಎರಡನೆಯ ಸಾರಿ ನಿಮ್ಮಲ್ಲಿದ್ದಾಗ—ತಿ
ಬಂದರೆ ನಿಮ್ಮನ್ನು ಶಿಕ್ಷಿಸದೆ ಬಿಡುವದಿಲ್ಲವೆಂದು ಹ
ಹೇಳಿದೆನೋ ಹಾಗೆಯೇ ಈಗಲೂ ನಿಮಗೆ ದೂ
ಲ್ಲಿದ್ದು ಪೂರ್ವಪಾಪಕೃತ್ಯಗಳನ್ನು ಇನ್ನೂ ನ
ತ್ತಿರುವವರಿಗೂ ಮಿಕ್ಕಾದವರೆಲ್ಲರಿಗೂ ಹೇಳುತ್ತೇ
ಕ್ರಿಸ್ತನು ನನ್ನಲ್ಲಿ ಮಾತಾಡುತ್ತಾನೆಂಬದಕ್ಕೆ ನಿ
ಬೇಕಾದ ಪ್ರಮಾಣವು ಆಗ ತೋರಿಬರುವದು. ಆತ
ನಿಮ್ಮನ್ನು ಕುರಿತು ನಿರ್ಬಲನಾಗಿರದೆ ಬಲವ
ಕೆಲಸಗಳನ್ನು ನಿಮ್ಮಲ್ಲಿ ನಡಿಸುವವನಾಗಿದ್ದಾ
ಆತನು ಬಲಹೀನಾವಸ್ಥೆಯಲ್ಲಿದ್ದದರಿಂದ ಶಿಲು
ಹಾಕಲ್ಪಟ್ಟನು ನಿಜ; ಆದರೂ ದೇವರ ಬಲದಿ
ಬದುಕುತ್ತಾನೆ. ನಾವು ಸಹ ಆತನ ಬಲಹೀ
ವಸ್ಥೆಯಲ್ಲಿ ಪಾಲುಗಾರರಾಗಿದ್ದೇವೆ; ಆದರೂ
ನೊಂದಿಗೆ ದೇವರ ಬಲದಿಂದ ಬದುಕುವವರಾಗಿದ್ದೇ
ಇದು ನಿಮಗೆ ತೋರಿಬರುವದು.
ಕ್ರಿಸ್ತನಂಬಿಕೆಯಲ್ಲಿ ಇದ್ದೀರೋ ಇಲ್ಲವೋ ಎಂ
ನಿಮ್ಮನ್ನು ನೀವೇ ಪರೀಕ್ಷಿಸಿಕೊಳ್ಳಿರಿ, ನಿಮ್ಮನ್ನು
ಶೋಧಿಸಿಕೊಳ್ಳಿರಿ. ಏನು, ಯೇಸು ಕ್ರಿಸ್ತ
ನಿಮ್ಮಲ್ಲಿದ್ದಾನೆಂಬದು ನಿಮ್ಮನ್ನು ಕುರಿತು ನಿಮ
ಚೆನ್ನಾಗಿ ತಿಳಿಯುವದಿಲ್ಲವೋ? ಆತನು ನಿಮ್ಮಲ್ಲಿ
ದ್ದರೆ ನೀವು ಅಯೋಗ್ಯರೇ. ನಾವಂತೂ ಅಯೋ
ರಲ್ಲವೆಂದು ನಿಮಗೆ ಗೊತ್ತಾಗುವದೆಂಬದಾಗಿ ನಿರೀ
ಸುತ್ತೇನೆ. ನೀವು ಕೆಟ್ಟದ್ದೇನೂ ಮಾಡಬಾರದೆಂ
ನಾವು ದೇವರನ್ನು ಪ್ರಾರ್ಥಿಸುತ್ತೇವೆ; ಇದರಲ್ಲಿ ನಾ
ಯೋಗ್ಯರಾಗಿ ತೋರಿಬರಬೇಕೆಂಬದು ನಮ್ಮ ಉದ್ದೇ
ವಲ್ಲ; ನಾವು ಅಯೋಗ್ಯರೆನಿಸಿಕೊಂಡರೂ ನೀವು ಒ
ದನ್ನು ಮಾಡುವವರಾಗಬೇಕೆಂಬದೇ ನಮ್ಮ ಉದ್ದೇ
ಸತ್ಯಕ್ಕೆ ವಿರುದ್ಧವಾಗಿ ನಾವೇನೂ ಮಾಡಲಾರೆವು; ಸ
ಭಿವೃದ್ಧಿಗೋಸ್ಕರವೇ ಸಮಸ್ತವನ್ನು ಮಾಡುತ್ತೇ
ನಾವು ಬಲಹೀನರಾಗಿದ್ದರೂ ನೀವು ಬಲಿಷ್ಠರಾಗಿ
ಪಕ್ಷಕ್ಕೆ ಸಂತೋಷವಾಗಿದ್ದೇವೆ. ಇದಲ್ಲದೆ ನಿ
ಪೂರ್ಣಕ್ರಮಕ್ಕೆ ಬರಬೇಕೆಂದು ಪ್ರಾರ್ಥಿಸುತ್ತೇವೆ.
ಕ್ಕಾಗಿಯೇ ನಾನು ನಿಮ್ಮಲ್ಲಿ ಇಲ್ಲದಿರುವಾಗ ಈ
ತುಗಳನ್ನು ಬರೆದಿದ್ದೇನೆ. ನಿಮ್ಮನ್ನು ಕೆಡವಿಹಾಕ
ದಕ್ಕಲ್ಲ, ಕಟ್ಟುವದಕ್ಕಾಗಿ ಕರ್ತನು ನನಗೆ ಕೊ

ರುವ ಅಧಿಕಾರವ ಪ್ರಯೋಗದಲ್ಲಿ ನಿಮ್ಮ ಬಳಿಗೆ
ಬಂದಾಗ ಕಾಠಿಣ್ಯವನ್ನು ತೋರಿಸುವದಕ್ಕೆ ಅವಕಾಶ
ವಿರಬಾರದೆಂದು ಅಪೇಕ್ಷಿಸುತ್ತೇನೆ.

ಕಡೇ ಮಾತುಗಳು.

ಕಡೇ ಮಾತೇನಂದರೆ ಸಹೋದರರೇ [1])ಸಂತೋಷ
ಪಡಿರಿ, ಕ್ರಮಪಡಿಸಿಕೊಳ್ಳಿರಿ; ಧೈರ್ಯವುಳ್ಳವರಾಗಿರಿ,
ಒಂದೇ ಮನಸ್ಸುಳ್ಳವರಾಗಿರಿ, ಸಮಾಧಾನದಿಂದಿರಿ;
ಆಗ ಪ್ರೀತಿಯನ್ನೂ ಶಾಂತಿಯನ್ನೂ ಕೊಡುವ
ದೇವರು ನಿಮ್ಮ ಸಂಗಡ ಇರುವನು. ಪವಿತ್ರವಾದ 12
ಮುದ್ದಿಟ್ಟು ಒಬ್ಬರನ್ನೊಬ್ಬರು ವಂದಿಸಿರಿ.
ದೇವಜನರೆಲ್ಲರೂ ನಿಮಗೆ ವಂದನೆ ಹೇಳುತ್ತಾರೆ. 13
ನಮ್ಮ ಕರ್ತನಾದ ಯೇಸು ಕ್ರಿಸ್ತನ ಕೃಪೆಯೂ 14
ದೇವರ ಪ್ರೀತಿಯೂ ಪವಿತ್ರಾತ್ಮನ ಅನ್ಯೋನ್ಯತೆಯೂ
ನಿಮ್ಮೆಲ್ಲರ ಸಂಗಡವಿರಲಿ.

# THE EPISTLE OF SAINT PAUL TO THE GALATIANS

## ಪೌಲನು ಗಲಾತ್ಯದವರಿಗೆ ಒರೆದ ಪತ್ರಿಕೆ

ವಂದನೆಯೂ ದೇವರ ಸ್ತೋತ್ರವೂ.

ಮನುಷ್ಯರ ಕಡೆಯಿಂದಾಗಲಿ ಮನುಷ್ಯನ ಮು
ಖಾಂತರದಿಂದಾಗಲಿ ಅಪೊಸ್ತಲನಾಗಿರದೆ ಯೇಸು
ಕ್ರಿಸ್ತನ ಮುಖಾಂತರವೂ ಆತನನ್ನು ಸತ್ತವರೊಳ
ಗಿಂದ ಎಬ್ಬಿಸಿದ ತಂದೆಯಾದ ದೇವರಿಂದಲೂ ಅಪೊಸ್ತ
ಲೋದ್ಯೋಗವನ್ನು ಹೊಂದಿದ ಪೌಲನೆಂಬ ನಾನೂ
ನನ್ನ ಜೊತೆಯಲ್ಲಿರುವ ಎಲ್ಲಾ ಸಹೋದರರೂ ಗಲಾ
ತ್ಯದಲ್ಲಿರುವ ಸಭೆಗಳಿಗೆ ಬರೆಯುವದೇನಂದರೆ—
ತಂದೆಯಾದ ದೇವರಿಂದಲೂ ನಮ್ಮ ಕರ್ತನಾದ
ಯೇಸು ಕ್ರಿಸ್ತನಿಂದಲೂ ನಿಮಗೆ ಕೃಪೆಯೂ ಶಾಂತಿ
ಯೂ ಆಗಲಿ. ಈತನು ನಮ್ಮನ್ನು ಕೆಟ್ಟದ್ದಾಗಿರುವ
ಈಗಿನ ಪ್ರಪಂಚದೊಳಗಿಂದ ಬಿಡಿಸಬೇಕೆಂದು ನಮ್ಮ
ತಂದೆಯಾದ ದೇವರ ಚಿತ್ತಕ್ಕೆ ಅನುಸಾರವಾಗಿ ನಮ್ಮ
ಪಾಪಗಳ ದೆಸೆಯಿಂದ ತನ್ನನ್ನು ಮರಣಕ್ಕೆ ಒಪ್ಪಿಸಿ
ದನು. ದೇವರಿಗೆ ಯುಗಯುಗಾಂತರಗಳಲ್ಲಿಯೂ
ಸ್ತೋತ್ರ. ಆಮೆನ್.

ಗಲಾತ್ಯ ಸಭೆಯವರು ಕ್ರಿಸ್ತನ ಸುವಾರ್ತೆಯ ನಿಜಬೋಧನೆಯನ್ನು
ಬಿಟ್ಟು ಭ್ರಷ್ಟರಾಗುವ ವಿಷಯವು.

ಕ್ರಿಸ್ತನ ಕೃಪೆಯಿಂದ ನಿಮ್ಮನ್ನು ಕರೆದಾತನನ್ನು
ನೀವು ಇಷ್ಟು ಬೇಗನೆ ಬಿಟ್ಟು ಬೇರೆ ಸುವಾರ್ತೆಯನ್ನು
ಹಿಡಿದಿರುವದಕ್ಕೆ ಆಶ್ಚರ್ಯಪಡುತ್ತೇನೆ. ಅದು
ಸುವಾರ್ತೆಯೇ ಅಲ್ಲ, ಆದರೆ ಕೆಲವರು ನಿಮ್ಮಲ್ಲಿ
ಭೇದವನ್ನು ಹುಟ್ಟಿಸುತ್ತಾ ಕ್ರಿಸ್ತನ ಸುವಾರ್ತೆಯನ್ನು
ಮಾರ್ಪಡಿಸುವದಕ್ಕೆ ಅಪೇಕ್ಷಿಸುತ್ತಾ ಇದ್ದಾರೆ. ಆದರೂ
ನಾವು ನಿಮಗೆ ಸಾರಿದ ಸುವಾರ್ತೆಗೆ ವಿರುದ್ಧವಾದದ್ದನ್ನು
ನಾವೇ ಆಗಲಿ ಪರಲೋಕದಿಂದ ಬಂದ ದೇವದೂ
ತನೇ ಆಗಲಿ ನಿಮಗೆ ಸಾರಿದರೆ ಶಾಪಗ್ರಸ್ತನಾಗಲಿ.
ನೀವು ಸ್ವೀಕರಿಸಿದ ಸುವಾರ್ತೆಗೆ ವಿರುದ್ಧವಾದದ್ದನ್ನು 9
ಯಾವನಾದರೂ ನಿಮಗೆ ಸಾರಿದರೆ ಅವನು ಶಾಪ
ಗ್ರಸ್ತನಾಗಲಿ ಎಂದು ನಾವು ಮೊದಲು ಹೇಳಿದ್ದಂತೆ
ಯೇ ಈಗಲೂ ನಾನು ತಿರಿಗಿ ಹೇಳುತ್ತೇನೆ. ನಾನೀಗ 10
ಯಾರನ್ನು ಒಲಿಸಿಕೊಳ್ಳುತ್ತಾ ಇದ್ದೇನೆ? ಮನುಷ್ಯ
ರನ್ನೋ? ದೇವರನ್ನೋ? ನಾನು ಮನುಷ್ಯರನ್ನು
ಮೆಚ್ಚಿಸುವದಕ್ಕೆ ಪ್ರಯತ್ನಿಸುತ್ತಾ ಇದ್ದೇನೋ? ಇನ್ನೂ
ಮನುಷ್ಯರನ್ನು ಮೆಚ್ಚಿಸುವವನಾಗಿದ್ದರೆ ನಾನು ಕ್ರಿಸ್ತನ
ದಾಸನಲ್ಲ.

ಪೌಲನು ಸಾರಿದ ಸುವಾರ್ತೆಯು ದೇವರಿಂದ ಬಂದದ್ದೇ
ಹೊರತು ಮನುಷ್ಯರಿಂದ ಬಂದದ್ದಲ್ಲ.

ಸಹೋದರರೇ, ನಾನು ಸಾರಿದ ಸುವಾರ್ತೆಯಂತೂ 11
ಮನುಷ್ಯ ಕಲ್ಪನೆಯಲ್ಲವೆಂದು ನಿಮಗೆ ತಿಳಿಯಪಡಿಸು
ತ್ತೇನೆ. ನಾನು ಅದನ್ನು ಮನುಷ್ಯನಿಂದ ಹೊಂದ 12
ಲಿಲ್ಲ, ನನಗೆ ಯಾರೂ ಉಪದೇಶಿಸಲಿಲ್ಲ, ಯೇಸು
ಕ್ರಿಸ್ತನೇ ಅದನ್ನು ನನಗೆ ಪ್ರಕಟಿಸಿದನು.
ಹಿಂದೆ ನಾನು ಯೆಹೂದ್ಯಮತದಲ್ಲಿದ್ದಾಗ ನನ್ನ 13
ನಡತೆ ಎಂಥದೆಂದು ನೀವು ಕೇಳಿದ್ದೀರಷ್ಟೆ. ನಾನು
ದೇವರ ಸಭೆಯನ್ನು ಅತ್ಯಂತವಾಗಿ ಹಿಂಸೆಪಡಿಸಿ ಹಾಳು
ಮಾಡುತ್ತಿದ್ದೆನು. ಇದಲ್ಲದೆ ನಾನು ನನ್ನ ಪಿತೃಗಳಿಂದ 14
ಬಂದ ಸಂಪ್ರದಾಯಗಳಲ್ಲಿ ಬಹು ಅಭಿಮಾನವುಳ್ಳವ
ನಾಗಿ ನನ್ನ ಜನರೊಳಗೆ ಸಮಪ್ರಾಯದವರಾದ ಅನೇ
ಕರಿಗಿಂತ ಯೆಹೂದ್ಯ ಮತಾಚಾರದಲ್ಲಿ ಆಸಕ್ತನಾಗಿ
ದ್ದೆನು.
ಆದರೆ ನಾನು ತಾಯಿಯ ಗರ್ಭದಲ್ಲಿದ್ದಾಗಲೇ 15
ನನ್ನನ್ನು ಪ್ರತ್ಯೇಕಿಸಿ ತನ್ನ ಕೃಪೆಯಿಂದ ಕರೆದ ದೇವ

1) ಅಥವಾ, ನಿಮಗೆ ಕ್ಷೇಮವಾಗಲಿ.

16 ರು ತನ್ನ ಮಗನನ್ನು ನಾನು ಅನ್ಯಜನರಲ್ಲಿ ಪ್ರಸಿದ್ಧಿ
ಪಡಿಸುವವನಾಗಬೇಕೆಂದು ಆತನನ್ನು ನನ್ನೊಳಗೆ ಪ್ರಕ
ಟಿಸುವದಕ್ಕೆ ಇಚ್ಛೈಸಿದಾಗಲೇ ನಾನು ಮನುಷ್ಯರ
17 ಆಲೋಚನೆಯನ್ನು ವಿಚಾರಿಸದೆ ಯೆರೂಸಲೇಮಿಗೆ
ನನಗಿಂತ ಮುಂಚೆ ಅಪೊಸ್ತಲರಾಗಿದ್ದವರ ಬಳಿಗೂ
ಹೋಗದೆ ಅರಬಸ್ಥಾನಕ್ಕೆ ಹೋಗಿ ತಿರಿಗಿ ದಮಸ್ಕಕ್ಕೆ
ಬಂದೆನು.

18 ಮೂರು ವರುಷಗಳಾದ ಮೇಲೆ ಕೇಫನ ಪರಿಚ
ತಿಯನ್ನು ಮಾಡಿಕೊಳ್ಳಬೇಕೆಂದು ಯೆರೂಸಲೇಮಿಗೆ
ಹೋಗಿ ಅವನ ಬಳಿಯಲ್ಲಿ ಹದಿನೈದು ದಿವಸ ಇದ್ದೆನು.
19 ಕರ್ತನ ತಮ್ಮನಾದ ಯಾಕೋಬನನ್ನಲ್ಲದೆ ಅಪೊಸ್ತ
20 ಲರಲ್ಲಿ ಬೇರೆ ಯಾರನ್ನೂ ಕಾಣಲಿಲ್ಲ. ನಾನು ನಿಮಗೆ
ಬರೆಯುವ ಸಂಗತಿಗಳು ಸುಳ್ಳಲ್ಲವೆಂಬದಕ್ಕೆ ಇಗೋ
21 ದೇವರೇ ಸಾಕ್ಷಿ. ಆ ಮೇಲೆ ಸಿರಿಯ ಮತ್ತು ಕಿಲಿ
22 ಕ್ಯ ಪ್ರಾಂತ್ಯಗಳಿಗೆ ಹೋದೆನು. ಆದರೆ ಕ್ರಿಸ್ತನಲ್ಲಿರುವ
ಯೂದಾಯದ ಸಭೆಗಳಿಗೆ ನನ್ನ ಗುರುತಿರಲಿಲ್ಲ.
23 ಪೂರ್ವದಲ್ಲಿ ನಮ್ಮನ್ನು ಹಿಂಸೆಪಡಿಸಿದವನು ತಾನು
ಹಾಳುಮಾಡುತ್ತಿದ್ದ ಮತವನ್ನು ಈಗ ಪ್ರಸಿದ್ಧಿಪಡಿಸು
24 ತ್ತಾನೆಂಬ ಸುದ್ದಿಯನ್ನು ಮಾತ್ರ ಅವರು ಕೇಳಿ ನನ್ನ
ದೆಸೆಯಿಂದ ದೇವರನ್ನು ಕೊಂಡಾಡಿದರು.

2 ಹದಿನಾಲ್ಕು ವರುಷಗಳಾದ ಮೇಲೆ ನಾನು ತೀತ
ನನ್ನು ಕರೆದುಕೊಂಡು ಬಾರ್ನಬನ ಜೊತೆಯಲ್ಲಿ ತಿರಿಗಿ
2 ಯೆರೂಸಲೇಮಿಗೆ ಹೋದೆನು. ದೈವಪ್ರೇರಣೆಗನುಸಾ
ರವಾಗಿ ಹೋದೆನು. ಅನ್ಯಜನರಲ್ಲಿ ನಾನು ಸಾರುವ
ಸುವಾರ್ತೆಯು ಏನೆಂಬದನ್ನು ಅಲ್ಲಿದ್ದವರಿಗೆ ತಿಳಿಸಿ
ದೆನು. ಆದರೆ ನಾನು 1)ಪಡುತ್ತಿರುವ ಪ್ರಯಾಸವಾ
ಗಲಿ ಪಟ್ಟ ಪ್ರಯಾಸವಾಗಲಿ ನಿಷ್ಫಲವಾಗಬಾರದೆಂದು
3 ಮಾನಿಷ್ಠರಿಗೆ ಏಕಾಂತದಲ್ಲಿ ತಿಳಿಸಿದೆನು. ನನ್ನ
ಜೊತೆಯಲ್ಲಿದ್ದ ತೀತನು ಗ್ರೀಕನಾಗಿದ್ದರೂ 2)ಅವನಿಗೆ
ಸುನ್ನತಿಯಾಗಬೇಕೆಂದು ಯಾರೂ ಬಲಾತ್ಕಾರಮಾಡ
4 ಲಿಲ್ಲ. ಸಭೆಗೆ ಕಳ್ಳತನದಿಂದ ಸೇರಿಕೊಂಡ ಸುಳ್ಳು
ಸಹೋದರರು ಅಲ್ಲಿ ಇದ್ದದರಿಂದ ಬಲಾತ್ಕಾರನಡೆದೀ
ತೆಂಬ ಭಯವಿತ್ತು. ಅವರು ನಮ್ಮನ್ನೂ ದಾಸತ್ವ
ದೊಳಗೆ ಸಿಕ್ಕಿಸಬೇಕೆಂದು ಕ್ರಿಸ್ತ ಯೇಸುವಿನಲ್ಲಿ
ನಮಗೆ ದೊರಕಿರುವ ಸ್ವಾತಂತ್ರ್ಯವನ್ನು ಗೂಢವಾಗಿ
5 ವಿಚಾರಿಸುವದಕ್ಕೆ ಮರಸಿಕೊಂಡು ಬಂದವರು. ಸುವಾ
ರ್ತೆಯ ಸತ್ಯಾರ್ಥವು ನಿಮ್ಮಲ್ಲಿ ಸ್ಥಿರವಾಗಿರಬೇಕೆಂದು
ನಾವು ಅವರಿಗೆ ವಶವಾಗುವದಕ್ಕೆ ಒಂದು ಗಳಿಗೆ ಹೊ
6 ತ್ತಾದರೂ ಸಮ್ಮತಿಪಡಲಿಲ್ಲ. ಆದರೆ ಮಾನಿಷ್ಠರೆನಿ
ಸಿಕೊಂಡವರಿಂದ ನನಗೇನೂ ದೊರೆಯಲಿಲ್ಲ. ಅವರು
ಹಿಂದಿನ ಕಾಲದಲ್ಲಿ ಎಂಥವರಾಗಿದ್ದರೋ ನನಗೆ ಲಕ್ಷ್ಯ
ವಿಲ್ಲ. ದೇವರು ಮುಖದಾಕ್ಷಿಣ್ಯಮಾಡುವವನಲ್ಲ.
ಮಾನಿಷ್ಠರೆನಿಸಿಕೊಂಡವರು ನನ್ನ ಮಾತಿಗೆ ಒಪ್ಪಿದರೇ
7 ಹೊರತು ನನಗೇನೂ ಕಲಿಸಲಿಲ್ಲ. ಸುನ್ನತಿಯಾದ
ವರಲ್ಲಿ ಅಪೊಸ್ತಲತನವನ್ನು ನಡಿಸುವದಕ್ಕೋಸ್ಕರ
ಪೇತ್ರನನ್ನು ಪ್ರೇರಿಸಿದಾತನು ಅನ್ಯಜನರಲ್ಲಿ ಅದನ್ನು
8 ನಡಿಸುವದಕ್ಕೆ ನನ್ನನ್ನೂ ಪ್ರೇರಿಸಿದ್ದನು. ಸುನ್ನತಿಯಾ
ದವರಿಗೆ ಸುವಾರ್ತೆಯನ್ನು ಸಾರುವ ಕೆಲಸವು ಹೇಗೆ

ಪೇತ್ರನಿಗೆ ಕೊಡಲ್ಪಟ್ಟಿತೋ ಹಾಗೆಯೇ ಸುನ
ಯಿಲ್ಲದವರಿಗೆ ಅದನ್ನು ಸಾರುವ ಕೆಲಸವು ನ
ಕೊಟ್ಟಿರುವದನ್ನು ಸಭಾಸ್ತಂಭಗಳೆಂದು ಹೆಸ
ಗೊಂಡಿರುವ ಯಾಕೋಬ ಕೇಫ ಯೋಹಾನರು ಕಂ
ದೇವರು ನನಗೆ ದಯಪಾಲಿಸಿರುವ ವರವನ್ನು ತಿ
ಕೊಂಡು ಐಕ್ಯವನ್ನು ತೋರಿಸುವದಕ್ಕಾಗಿ ನನ
ಬಾರ್ನಬನಿಗೂ ಬಲಗೈ ಕೊಟ್ಟು—ನೀವು ಅನ್ಯಜ
ಬಳಿಗೆ ಹೋಗಿರಿ, ನಾವು ಸುನ್ನತಿಯವರ ಬಳಿಗೆ ಹ
ಗುತ್ತೇವೆ ಅಂದರು. ಆದರೆ ನೀವು ನಮ್ಮಲ್ಲಿರುವ ಬ
ವರನ್ನು ಜ್ಞಾಪಕಮಾಡಿಕೊಳ್ಳಬೇಕೆಂಬ ಒಂದೇ ಸಂ
ಯನ್ನು ಬೇಡಿಕೊಂಡರು; ಇದನ್ನು ಮಾಡುವ
ರಲ್ಲಿ ನಾನೂ ಆಸಕ್ತನಾಗಿದ್ದೆನು.

ಪೌಲನು ತಾನು ಅಂತಿಯೋಕ್ಯದಲ್ಲಿ ಪೇತ್ರನನ್ನು ಖಂಡಿಸಿ
ಸಂಗತಿಯನ್ನು ತಕ್ಕೊಂಡು ಕ್ರಿಸ್ತನನ್ನು ನಂಬಿರುವವರಿಗೆ
ಮೋಶೆಯ ಧರ್ಮಶಾಸ್ತ್ರಾಚಾರಗಳು ಅವಶ್ಯವಿಲ್ಲವೆಂದು
ಪ್ರಸ್ತಾಪಿಸಿದ್ದು.

ಕೇಫನು ಅಂತಿಯೋಕ್ಯಕ್ಕೆ ಬಂದಾಗ ಅವ
ದೋಷಿಯಾಗಿ ಕಾಣಿಸಿಕೊಂಡದರಿಂದ ನಾನು ಅ
ನನ್ನು ಮುಖಾಮುಖಿಯಾಗಿ ಎದುರಿಸಿದೆನು. ಯ
ಕಂದರೆ ಯಾಕೋಬನ ಕಡೆಯಿಂದ ಕೆಲವರು ಬರು
ದಕ್ಕೆ ಮುಂಚೆ ಅವನು ಅನ್ಯಜನರ ಸಂಗಡ ಊ
ಮಾಡುತ್ತಿದ್ದನು; ಅವರು ಬಂದ ಮೇಲೆ ಸುನ್ನತಿ
ವರಾದ ಅವರಿಗೆ ಅವನು ಭಯಪಟ್ಟು ಅನ್ಯಜನರನ
ಬಿಟ್ಟು ತನ್ನನ್ನು ಪ್ರತ್ಯೇಕಿಸಿಕೊಂಡನು. ಇದಲ್ಲ
ಮಿಕ್ಕಾದ ಯೆಹೂದ್ಯರೂ ಅವನೊಂದಿಗೆ ಸೇರಿ ಹಾ
ಯೇ ಕಪಟಮಾಡಿದರು; ಹೀಗೆ ಬಾರ್ನಬನೂ ಅ
ಕಪಟದ ಸೆಳವಿಗೆ ಬಿದ್ದನು. ಅವರು ಸುವಾರ್ತೆ
ಸತ್ಯಾರ್ಥದ ಪ್ರಕಾರ ನೆಟ್ಟಗೆ ನಡೆಯುವದಿಲ್ಲವೆಂ
ನಾನು ಕಂಡಾಗ ಎಲ್ಲರ ಮುಂದೆ ಕೇಫನಿಗೆ ಹೇಳಿ
ನಂದರೆ—ನೀನು ಯೆಹೂದ್ಯನಾಗಿದ್ದು ಯೆಹೂ
ರಂತೆ ನಡೆಯದೆ ಅನ್ಯಜನರಂತೆ ನಡೆದ ಮೇಲೆ ಅನ್
ನರಿಗೆ—ನೀವು ಯೆಹೂದ್ಯರ ಪದ್ಧತಿಗಳನ್ನು ಅನುಸ
ಬೇಕೆಂದು ನೀನು ಬಲಾತ್ಕಾರಮಾಡುವದು ಹೇಗ
ನಾವಂತೂ ಹುಟ್ಟುಯೆಹೂದ್ಯರು, ಪಾಪಿಗಳೆನಿಸಿಕೊಂ
ಅನ್ಯಜನರಲ್ಲ; ಆದರೂ ಯಾವನಾದರೂ ಯೇ
ಕ್ರಿಸ್ತನ ಮೇಲಣ ನಂಬಿಕೆಯಿಂದಲೇ ಹೊರತು ನೇ
ನಿಷ್ಠೆಗಳನ್ನನುಸರಿಸಿ ನೀತಿವಂತನೆಂದು ನಿರ್ಣಯಿಸ
ಡುವದಿಲ್ಲವೆಂಬದು ನಮಗೆ ತಿಳಿದಿರುವದರಿಂದ ನಾ
ಸಹ ನೇಮನಿಷ್ಠೆಗಳನ್ನು ಬಿಟ್ಟು ಕ್ರಿಸ್ತನ ಮೇಲ
ನಂಬಿಕೆಯಿಂದಲೇ ನೀತಿವಂತರೆಂದು ನಿರ್ಣಯಿಸಲ್ಪ
ವದಕ್ಕಾಗಿ ಕ್ರಿಸ್ತ ಯೇಸುವಿನಲ್ಲಿ ನಂಬಿಕೆಯಿಟ್ಟೆ
ಯಾಕಂದರೆ ಯಾವನಾದರೂ ನೇಮನಿಷ್ಠೆಗಳನ್ನ
ಸರಿಸಿ ನೀತಿವಂತನೆಂದು ನಿರ್ಣಯಿಸಲ್ಪಡುವದಿ
ಆದರೆ ನಾವು ಕ್ರಿಸ್ತನ ಆಶ್ರಯದಲ್ಲಿ ನೀತಿವಂತರೆಂ
ನಿರ್ಣಯ ಹೊಂದುವದಕ್ಕೆ ಪ್ರಯತ್ನಿಸುತ್ತಿರುವಾ
ನಾವೂ ಪಾಪಿಗಳಾಗಿ ತೋರಿಬಂದರೆ ಕ್ರಿಸ್ತನು ಪಾಪ

1) ಮೂಲ: ಓಡುತ್ತಿರುವದು ಅಥವಾ ಓಡಿದ್ದು.
2) ಅಥವಾ, ಅವನಿಗೆ ಸುನ್ನತಿಯಾಗಬೇಕೆಂಬದಕ್ಕೆ ನಾನು ಒಳಪಡಲಿ

ಸಹಾಯಕನೆಂದು ಹೇಳಬೇಕೇನು? ಎಂದಿಗೂ ಹೇಳ
18 ಬಾರದು. ನಾನು ಕೆಡವಿದ್ದನ್ನೇ ತಿರಿಗಿ ಕಟ್ಟಿದರೆ ನನ್ನ
ನ್ನು ನಾನೇ ಅಪರಾಧಿ ಎಂದು ತೋರಿಸಿಕೊಳ್ಳುತ್ತೇ
19 ನಲ್ಲಾ. ನಾನಂತೂ ದೇವರಿಗಾಗಿ ಜೀವಿಸುವದಕ್ಕೋ
ಸ್ಕರ [1]ಧರ್ಮಪ್ರಮಾಣದ ಮೂಲಕವಾಗಿ ಧರ್ಮ
20 ಪ್ರಮಾಣದ ಪಾಲಿಗೆ ಸತ್ತೆನು. ಕ್ರಿಸ್ತನೊಂದಿಗೆ ಶಿಲು
ಬೆಗೆ ಹಾಕಿಸಿಕೊಂಡವನಾಗಿದ್ದೇನೆ; ಇನ್ನು ಜೀವಿಸುವ
ವನು ನಾನಲ್ಲ, ಕ್ರಿಸ್ತನು ನನ್ನಲ್ಲಿ ಜೀವಿಸುತ್ತಾನೆ;
ಈಗ ಶರೀರದಲ್ಲಿರುವ ನಾನು ಜೀವಿಸುವದು ಹೇಗಂದ
ರೆ ದೇವಕುಮಾರನ ಮೇಲಣ ನಂಬಿಕೆಯಲ್ಲಿಯೇ.
ಆತನು ನನ್ನನ್ನು ಪ್ರೀತಿಸಿ ನನಗೋಸ್ಕರ ತನ್ನನ್ನು
21 ಒಪ್ಪಿಸಿಬಿಟ್ಟನು. ನಾನು ದೇವರ ಕೃಪೆಯನ್ನು ನಿರ
ರ್ಥಕಮಾಡುವದಿಲ್ಲ. ಕರ್ಮಮಾರ್ಗದಿಂದ ನೀತಿ
ಯುಂಟಾಗುವದಾದರೆ ಕ್ರಿಸ್ತನು ಮರಣವನ್ನು ಹೊಂ
ದಿದ್ದಕ್ಕೆ ಕಾರಣವೇ ಇಲ್ಲ.

ನೇಮನಿಷ್ಠೆಗಳಿಂದಲ್ಲ ನಂಬಿಕೆಯಿಂದಲೇ ನೀತಿವಂತರಾಗುತ್ತೇ
ವೆಂಬದಕ್ಕೆ ಪ್ರಮಾಣ.

3 ಎಲೈ ಬುದ್ಧಿಯಿಲ್ಲದ ಗಲಾತ್ಯದವರೇ, ಯಾರು
ನಿಮ್ಮನ್ನು ಮರಳುಗೊಳಿಸಿದರು? ಯೇಸು ಕ್ರಿಸ್ತನು
ಶಿಲುಬೆಗೆ ಹಾಕಿಸಿಕೊಂಡವನಾಗಿ ನಿಮ್ಮ ಕಣ್ಣೆದುರಿ
2 ನಲ್ಲಿ ವರ್ಣಿಸಲ್ಪಟ್ಟನಲ್ಲವೇ. ಒಂದು ಸಂಗತಿಯನ್ನು
ಮಾತ್ರ ನಿಮ್ಮಿಂದ ತಿಳುಕೊಳ್ಳಬೇಕೆಂದಿದ್ದೇನೆ. ನೀವು
ದೇವರಾತ್ಮನನ್ನು ಹೊಂದಿದ್ದು ನೇಮನಿಷ್ಠೆಗಳನ್ನು ಅನು
3 ಸರಿಸಿದ್ದರಿಂದಲೋ ಕೇಳಿ ನಂಬಿದ್ದರಿಂದಲೋ? ಇಷ್ಟು
ಬುದ್ಧಿಯಿಲ್ಲದವರಾಗಿದ್ದೀರಾ? ದೇವರಾತ್ಮಾನುಸಾರ
ವಾಗಿ ಪ್ರಾರಂಭಿಸಿ ಈಗ ಬಹಿರಾಚಾರಗಳಿಂದ ಸಿದ್ಧಿಗೆ
4 ಬರಬೇಕೆಂದಿದ್ದೀರಾ? ನೀವು ಅಷ್ಟು ಬಾಧೆಗಳನ್ನು ಅನು
ಭವಿಸಿದ್ದು ವ್ಯರ್ಥವೋ? ವ್ಯರ್ಥವೇ ಎಂದು ಹೇಳ
5 ಬೇಕೇನು? ದೇವರು ತನ್ನ ಆತ್ಮನನ್ನು ನಿಮಗೆ
ಹೇರಳವಾಗಿ ಕೊಟ್ಟು ನಿಮ್ಮಲ್ಲಿ ಮಹತ್ಕಾರ್ಯಗ
ಳನ್ನು ನಡಿಸುತ್ತಾ ಬಂದದ್ದು ಯಾತರಿಂದಾಯಿತು?
ನೀವು ನೇಮನಿಷ್ಠೆಗಳನ್ನನುಸರಿಸಿದ್ದರಿಂದಲೋ? ಕೇಳಿ
6 ನಂಬಿದ್ದರಿಂದಲೋ? ನಂಬಿದ್ದರಿಂದಲೇ. ಅಬ್ರಹಾ
ಮನು ದೇವರನ್ನು ನಂಬಿದನು, ಆ ನಂಬಿಕೆ ಅವನ
ಲೆಕ್ಕಕ್ಕೆ ನೀತಿಯೆಂದು ಎಣಿಸಲ್ಪಟ್ಟಿತು ಎಂಬದಾಗಿ
7 ಬರೆದದೆಯಲ್ಲಾ. ಆದದರಿಂದ ನಂಬುವವರೇ ಅಬ್ರ
8 ಹಾಮನ ಮಕ್ಕಳೆಂದು ತಿಳಿದುಕೊಳ್ಳಿರಿ. ದೇವರು
ಅನ್ಯಜನರನ್ನು ನಂಬಿಕೆಯ ನಿಮಿತ್ತವಾಗಿಯೇ ನೀತಿ
ವಂತರೆಂದು ನಿರ್ಣಯಿಸುವನೆಂಬದಾಗಿ ಶಾಸ್ತ್ರವು ಮೊ
ದಲೇ ಕಂಡು ಅಬ್ರಹಾಮನಿಗೆ—ನಿನ್ನ ಮೂಲಕ
ಎಲ್ಲಾ ಜನಾಂಗಗಳವರಿಗೆ ಆಶೀರ್ವಾದವುಂಟಾಗುವ
ದೆಂಬ ಶುಭವರ್ತಮಾನವನ್ನು ಮುಂಚಿತವಾಗಿಯೇ
9 ತಿಳಿಸಿತು. ಹೀಗಿರಲಾಗಿ ನಂಬುವವರು ನಂಬಿಕೆಯಿಟ್ಟ
ಅಬ್ರಹಾಮನೊಂದಿಗೆ ಸೌಭಾಗ್ಯವನ್ನು ಹೊಂದುವರು.
10 ನೇಮನಿಷ್ಠೆಗಳನ್ನು ಆಧಾರಮಾಡಿಕೊಳ್ಳುವವರೆಲ್ಲರೂ
ಶಾಪಾಧೀನರಾಗಿದ್ದಾರೆ. ಹೇಗಂದರೆ, ಧರ್ಮಗ್ರಂಥ
ದೊಳಗೆ ಬರೆದಿರುವವುಗಳನ್ನೆಲ್ಲಾ ನಿತ್ಯವೂ ಕೈಕೊಳ್ಳ
ದಿರುವ ಪ್ರತಿಯೊಬ್ಬನು ಶಾಪಗ್ರಸ್ತನೆಂದು ಶಾಸ್ತ್ರ
ದಲ್ಲಿ ಬರೆದದೆ. ಇದಲ್ಲದೆ ಕರ್ಮಮಾರ್ಗದಿಂದ 11
ಯಾವನೂ ದೇವರ ಸನ್ನಿಧಿಯಲ್ಲಿ ನೀತಿವಂತನಾಗುವ
ದಿಲ್ಲವೆಂಬದು ಸ್ಪಷ್ಟವಾಗಿದೆ. ಯಾಕಂದರೆ ನೀತಿ
ವಂತನು ನಂಬಿಕೆಯಿಂದಲೇ ಬದುಕುವನೆಂದು ಬರೆ
ದದೆ. ಆದರೆ ಕರ್ಮಮಾರ್ಗಕ್ಕೆ ನಂಬಿಕೆಯು ಆಧಾರ 12
ವಲ್ಲ, ಅದರ ನೇಮಗಳನ್ನು ಆಚರಿಸಿದವನೇ ಅವು
ಗಳ ಮೂಲಕ ಬದುಕುವನು ಎಂದು ಬರೆದದೆ. ಅಬ್ರ 13
ಹಾಮನಿಗೆ ಉಂಟಾದ ಆಶೀರ್ವಾದವು ಕ್ರಿಸ್ತ ಯೇಸು 14
ವಿನಲ್ಲಿ ಅನ್ಯಜನರಿಗೆ ಉಂಟಾಗುವಂತೆಯೂ ದೇವರು
ವಾಗ್ದಾನಮಾಡಿದ ಆತ್ಮನು ನಮಗೆ ನಂಬಿಕೆಯ
ಮೂಲಕ ದೊರಕುವಂತೆಯೂ ಕ್ರಿಸ್ತನು ನಮ್ಮ ನಿಮಿತ್ತ
ಶಾಪವಾಗಿ ಧರ್ಮಶಾಸ್ತ್ರದಲ್ಲಿ ಹೇಳಿರುವ ಶಾಪದೊಳ
ಗಿಂದ ನಮ್ಮನ್ನು ಬಿಡಿಸಿದನು. ಮರಕ್ಕೆ ತೂಗಹಾಕ
ಲ್ಪಟ್ಟ ಪ್ರತಿಯೊಬ್ಬನು ಶಾಪಗ್ರಸ್ತನು ಎಂದು ಶಾಸ್ತ್ರ
ದಲ್ಲಿ ಬರೆದದೆಯಲ್ಲಾ.

ಸಹೋದರರೇ, ಲೋಕದ ವ್ಯವಹಾರವನ್ನು ಹಿಡಿ 15
ದು ಮಾತಾಡುತ್ತೇನೆ. ಸ್ಥಿರಪಡಿಸಿದ ಒಂದು ಒಡಂ
ಬಡಿಕೆಯು ಕೇವಲ ಮನುಷ್ಯನದಾಗಿದ್ದರೂ ಅದನ್ನು
ಯಾರೂ ರದ್ದುಮಾಡುವದಿಲ್ಲ, ಅದಕ್ಕೆ ಹೆಚ್ಚು ಮಾತು
ಗಳನ್ನು ಕೂಡಿಸುವದಿಲ್ಲ. ಒಳ್ಳೇದು, ದೇವರು ಅಬ್ರ 16
ಹಾಮನಿಗೂ ಅವನ ಸಂತತಿಗೂ ವಾಗ್ದಾನಗಳನ್ನು
ಮಾಡಿದನು. ಆತನು ನಿನ್ನ ಸಂತತಿಗಳಿಗೆ ಎಂದು ಹೇಳಿ
ಅನೇಕರನ್ನು ಸೂಚಿಸದೆ ನಿನ್ನ ಸಂತತಿಗೆ ಎಂದು ಹೇಳಿ
ಒಬ್ಬನನ್ನೇ ಸೂಚಿಸುತ್ತಾನೆ. ಆ ಒಬ್ಬನು ಕ್ರಿಸ್ತನೇ.
ನನ್ನ ತಾತ್ಪರ್ಯವೇನಂದರೆ, ದೇವರು ಮೊದಲು ಸ್ಥಿರ 17
ಪಡಿಸಿದ ಒಡಂಬಡಿಕೆಯನ್ನು ನಾನೂರ ಮೂವತ್ತು
ವರುಷಗಳ ಮೇಲೆ ಬಂದ ಧರ್ಮಶಾಸ್ತ್ರವು ರದ್ದು
ಮಾಡಿ ಆ ವಾಗ್ದಾನವನ್ನು ವ್ಯರ್ಥಮಾಡುವದಿಲ್ಲ. ಆ 18
ಬಾಧ್ಯತೆಯು ಕರ್ಮಮಾರ್ಗದಿಂದ ದೊರೆಯುವದಾ
ದರೆ ಅದು ಇನ್ನು ವಾಗ್ದಾನದಿಂದ ದೊರೆಯುವದಲ್ಲ
ವೆಂದಾಯಿತು; ಆದರೆ ದೇವರು ಅದನ್ನು ಅಬ್ರಹಾ
ಮನಿಗೆ ವಾಗ್ದಾನದ ಮೂಲಕವಾಗಿಯೇ ದಯಪಾಲಿಸಿ
ದ್ದಾನೆ.

ನಂಬಿಕೆಯು ಸಾಕಾಗಿದ್ದರೆ ಮೋಶೆಯ ಧರ್ಮಶಾಸ್ತ್ರವು
ಯಾಕೆ?

ಹಾಗಾದರೆ ಮೋಶೆಯ ಧರ್ಮಶಾಸ್ತ್ರವು ಯಾತಕ್ಕೆ? 19
ವಾಗ್ದಾನದಲ್ಲಿ ಸೂಚಿತನಾದವನು ಹುಟ್ಟಿ ಬರುವ
ತನಕ ದೇವರು ಇಂಥಿಂಥದು ಅಪರಾಧವೆಂದು ತೋ
ರಿಸುವದಕ್ಕಾಗಿ ಅದನ್ನು ವಾಗ್ದಾನದ ತರುವಾಯ
ನೇಮಿಸಿ ದೇವದೂತರ ಮುಖಾಂತರ ಒಬ್ಬ ಮಧ್ಯ
ಸ್ಥನ ಕೈಯಲ್ಲಿ ಕೊಟ್ಟನು. ಒಂದೇ ಪಕ್ಷವಿದ್ದರೆ 20

1) ಅಥವಾ, ನಿಯಮಗಳ.

ಮಧ್ಯಸ್ಥನು ಬೇಕಿಲ್ಲ, ದೇವರಾದರೋ ಒಬ್ಬನೇ.
21 ಹಾಗಾದರೆ ಧರ್ಮಶಾಸ್ತ್ರವು ದೇವರ ವಾಗ್ದಾನಗಳಿಗೆ
ವಿರುದ್ಧವೋ? ಹಾಗೆ ಎಂದಿಗೂ ತಿಳುಕೊಳ್ಳಬಾರದು.
ಬದುಕಿಸುವದಕ್ಕೆ ಶಕ್ತವಾಗಿರುವ ಧರ್ಮಶಾಸ್ತ್ರವು
ಕೊಡಲ್ಪಟ್ಟಿದ್ದರೆ ಸಂದೇಹವಿಲ್ಲದೆ ಕರ್ಮಮಾರ್ಗದಿಂದ
22 ಲೇ ನೀತಿಯುಂಟಾಗುತ್ತಿತ್ತು. ಹಾಗಾದರೆ ಯೇಸು
ಕ್ರಿಸ್ತನಲ್ಲಿ ನಂಬಿಕೆಯಿಡುವದರಿಂದ ಉಂಟಾಗುವ ಆ
ವಾಗ್ದಾನದ ಫಲವು ನಂಬುವವರಿಗೇ ಕೊಡಲ್ಪಡಬೇ
ಕೆಂದು ಶಾಸ್ತ್ರವು ಸಮಸ್ತವನ್ನು ಪಾಪಕ್ಕೊಳಗಾಗಿದೆ
ಯೆಂದು ತೀರ್ಮಾನಿಸಿತು.
23 ಕ್ರಿಸ್ತನಂಬಿಕೆಯು ಕಾಲ ಬರುವದಕ್ಕೆ ಮೊದಲು
ನಾವು ಮುಂದಕ್ಕೆ ಪ್ರಕಟವಾಗಬೇಕಾಗಿದ್ದ ಆ ನಂಬಿ
ಕೆಗೆ ವಶವಾಗುವದಕ್ಕಾಗಿ 1)ಧರ್ಮಶಾಸ್ತ್ರದ ಕೈಕೆಳಗೆ
24 ಕಾವಲಲ್ಲಿ ಮುಚ್ಚಲ್ಪಟ್ಟಿದ್ದೆವು. ಹೀಗಿರಲಾಗಿ ಧರ್ಮ
ಶಾಸ್ತ್ರವು 2)ನಮ್ಮನ್ನು ಕಾಯುವ ಆಳಿನಂತಾಗಿದೆ;
ನಾವು ನಂಬಿಕೆಯಿಂದ ನೀತಿವಂತರೆಂಬ ನಿರ್ಣಯ
ವನ್ನು 3)ಹೊಂದುವದಕ್ಕಾಗಿ ಕ್ರಿಸ್ತನಲ್ಲಿಗೆ ಸೇರುವ
25 ತನಕ ಅದು ನಮ್ಮನ್ನು ಕಾಯುತ್ತದೆ. ಆದರೆ ಕ್ರಿಸ್ತ
ನಂಬಿಕೆಯು ಬಂದಿರಲಾಗಿ ನಾವಿನ್ನು ಕಾಯುವವನ
26 ಕೈಕೆಳಗಿರುವವರಲ್ಲ. ನೀವೆಲ್ಲರು ಕ್ರಿಸ್ತ ಯೇಸುವಿ
ನಲ್ಲಿಟ್ಟಿರುವ ನಂಬಿಕೆಯ ಮೂಲಕ ದೇವರ ಪುತ್ರರಾಗಿ
27 ದ್ದೀರಿ. ಹೇಗಂದರೆ ಕ್ರಿಸ್ತನಲ್ಲಿ ಸೇರುವದಕ್ಕೆ ದೀಕ್ಷಾ
ಸ್ನಾನಮಾಡಿಸಿಕೊಂಡಿರುವ ನೀವೆಲ್ಲರು ಕ್ರಿಸ್ತನನ್ನು
28 ಧರಿಸಿಕೊಂಡಿರಿ. ನೀವೆಲ್ಲರು ಕ್ರಿಸ್ತ ಯೇಸುವಿನಲ್ಲಿ
ಒಂದೇ ಆಗಿರುವದರಿಂದ ಯೆಹೂದ್ಯನು ಗ್ರೀಕನು
ಎಂದೂ, ಆಳು ಒಡೆಯ ಎಂದೂ, ಗಂಡು ಹೆಣ್ಣು
29 ಎಂದೂ ಭೇದವಿಲ್ಲ. ನೀವು ಕ್ರಿಸ್ತನವರಾಗಿದ್ದರೆ
ಅಬ್ರಹಾಮನ ಸಂತತಿಯವರೂ ವಾಗ್ದಾನಕ್ಕನುಸಾರ
ವಾಗಿ ಬಾಧ್ಯರೂ ಆಗಿದ್ದೀರಿ.

4 ಆದರೆ ನಾನು ಹೇಳುವದೇನಂದರೆ ಬಾಧ್ಯನು
ತಾನು ಆಸ್ತಿಗೆಲ್ಲಾ ಧನಿಯಾಗಿದ್ದರೂ ಬಾಲಕನಾಗಿ
ರುವ ತನಕ ದಾಸನಂತೆ ಇರುವನೇ ಹೊರತು ಬೇರೆ
2 ಯಿಲ್ಲ. ತಂದೆಯು ನೇಮಿಸಿದ ದಿನದ ವರೆಗೂ ಪಾಲ
ಕರ ಮತ್ತು ಮನೆವಾರ್ತೆಯವರ ಕೈಕೆಳಗಿರುವನು.
3 ಹಾಗೆಯೇ ನಾವು ಸಹ ಬಾಲಕರಾಗಿದ್ದಾಗ ಲೋಕ
4-5 ದವರ ಬಾಲಬೋಧೆಗೆ ಅಧೀನರಾಗಿದ್ದೆವು. ಆದರೆ
ಕಾಲವು ಪರಿಪೂರ್ಣವಾದಾಗ ದೇವರು ತನ್ನ ಮಗ
ನನ್ನು ಕಳುಹಿಸಿಕೊಟ್ಟನು. 4)ಧರ್ಮಶಾಸ್ತ್ರಾಧೀನ
ರಾದವರನ್ನು ವಿಮೋಚಿಸಬೇಕೆಂತಲೂ ಪುತ್ರರ ಪದವಿ
ಯನ್ನು ನಮಗೆ ದೊರಕಿಸಬೇಕೆಂತಲೂ ಆತನು ಸ್ತ್ರೀ
ಯಲ್ಲಿ ಹುಟ್ಟಿದವನಾಗಿಯೂ ಧರ್ಮಶಾಸ್ತ್ರಾಧೀನ
6 ನಾಗಿಯೂ ಬಂದನು. ನೀವು ಪುತ್ರರಾಗಿರುವದರಿಂದ
ದೇವರು ಅಪ್ಪಾ ತಂದೆಯೇ ಎಂದು ಕೂಗುವ ತನ್ನ
ಮಗನ ಆತ್ಮನನ್ನು ನಮ್ಮ ಹೃದಯಗಳಲ್ಲಿ ಕಳುಹಿಸಿ
7 ಕೊಟ್ಟನು. ಹೀಗಿರುವಲ್ಲಿ ಇನ್ನು ನೀನು ದಾಸನಲ್ಲ,
ಮಗನಾಗಿದ್ದೀ. ಮಗನೆಂದ ಮೇಲೆ ದೇವರ ಮೂಲಕ
ಬಾಧ್ಯನೂ ಆಗಿದ್ದೀ.

ನಂಬಿಕೆಯ ಮೂಲಕ ನೇಮನಿಷ್ಠೆಗಳ ಅಧಿಕಾರದಿಂದ
ಸ್ವಾತಂತ್ರ್ಯವನ್ನು ಹೊಂದಿರುವವರು ತಿರಿಗಿ ಅವುಗಳಿಗೆ
ಅಧೀನರಾಗುವದು ತಕ್ಕದ್ದಲ್ಲ.

ಪೂರ್ವಕಾಲದಲ್ಲಿ ನೀವು ದೇವರ ಜ್ಞಾನವಿಲ್ಲ
ರಾಗಿ ದೇವರಲ್ಲದವುಗಳಿಗೆ ಅಧೀನರಾಗಿದ್ದಿರಿ.
ಲಾದರೋ ನೀವು ದೇವರನ್ನು ತಿಳುಕೊಂಡಿದ್ದೀರಿ;
ಯಾಗಿ ಹೇಳಬೇಕಾದರೆ ದೇವರು ನಿಮ್ಮನ್ನು
ಕೊಂಡಿದ್ದಾನೆ. ಹೀಗಿರಲಾಗಿ ನೀವು ಕೆಲಸಕ್ಕೆ ಬಾ
ದರಿದ್ರಬಾಲಬೋಧೆಗೆ ಮತ್ತೂ ಅಧೀನರಾಗಬೇಕೆ
ಅಪೇಕ್ಷಿಸಿ ಪುನಃ ಅದಕ್ಕೆ ತಿರುಗಿಕೊಳ್ಳುವ
ಹೇಗೆ? ನೀವು ಆಯಾ ದಿನಗಳನ್ನೂ ಮಾಸಗಳನ
ಉತ್ಸವಕಾಲಗಳನ್ನೂ ಸಂವತ್ಸರಗಳನ್ನೂ ನಿಷ್ಠೆಯಿ
ಆಚರಿಸುತ್ತೀರಿ. ನಾನು ನಿಮಗೋಸ್ಕರ ಪ್ರಯ
ಪಟ್ಟದ್ದು ನಿಷ್ಫಲವಾಯಿತೋ ಏನೋ ಎಂದು ನಿ
ವಿಷಯದಲ್ಲಿ ಭಯಪಡುತ್ತೇನೆ.

ಸಹೋದರರೇ, ನಾನು ನಿಮ್ಮ ಹಾಗೆ ಆದದ್ದರಿ
ನೀವು ನನ್ನ ಹಾಗೆ ಆಗಬೇಕೆಂದು ನಿಮ್ಮನ್ನು ಬೇ
ಕೊಳ್ಳುತ್ತೇನೆ. ನೀವು ನನಗೇನೂ ಅನ್ಯಾಯಮಾ
ಲಿಲ್ಲ. ನನ್ನ ಶರೀರಕ್ಕೆ ಅಸೌಖ್ಯವಿದ್ದದರಿಂದ ನಾ
ನಿಮ್ಮಲ್ಲಿದ್ದು ಮೊದಲನೆಯ ಸರ್ತಿ ನಿಮಗೆ ಸುವಾ
ಸಾರಿದ್ದನ್ನು ನೀವು ಬಲ್ಲಿರಿ. ನನ್ನ ಶರೀರದಲ್ಲಿ ನಿ
ಬೇಸರಿಕೆಗೆ ಆಸ್ಪದವಾದದ್ದನ್ನು ನೀವು ಹೀನೈಸಲಿ
ಓಕರಿಸಲಿಲ್ಲ; ನನ್ನನ್ನು ದೇವದೂತನಂತೆ ಕ್ರಿ
ಯೇಸುವಿನಂತೆ ಸೇರಿಸಿಕೊಂಡಿರಿ. ಆಗ ನಮಗೆ ಶು
ವಾಯಿತೆಂದು ನೀವು ಅಂದುಕೊಂಡಿರಲ್ಲಾ; ಆ ಶುಭ
ಎಲ್ಲಿ ಹೋಯಿತು? ಸಾಧ್ಯವಾಗಿದ್ದರೆ ನಿಮ್ಮ ಕ
ಗಳನ್ನಾದರೂ ಕಿತ್ತು ನನಗೆ ಕೊಡುತ್ತಿದ್ದಿರೆಂದು ನಿ
ನ್ನು ಕುರಿತು ಸಾಕ್ಷಿಹೇಳುತ್ತೇನೆ. ಹೀಗಿರಲಾಗಿ ನಾ
ನಿಮಗೆ ಸತ್ಯವನ್ನು ಹೇಳುವದರಿಂದ ನಿಮಗೆ ಶತ್ರು
ಗಿದ್ದೇನೋ? ಅವರು ನಿಮ್ಮನ್ನು ಮೆಚ್ಚಿಸುವದ
ಆಸಕ್ತರಾಗಿದ್ದಾರೆ; ಆದರೆ ಒಳ್ಳೇ ಅಭಿಪ್ರಾಯದಿ
ಅಂಥವರಾಗಿರದೆ ನೀವು ತಮ್ಮನ್ನೇ ಮೆಚ್ಚಿಸುವವರ
ಬೇಕೆಂದು ನಿಮ್ಮನ್ನು ಅಗಲಿಸುವದಕ್ಕೆ ಅಪೇಕ್ಷಿ
ತ್ತಾರೆ. ನಾನು ನಿಮ್ಮ ಸಂಗಡ ಇರುವಾಗ ಮಾ
ವಲ್ಲದೆ ಯಾವಾಗಲೂ ಒಳ್ಳೇ ವಿಷಯದಲ್ಲಿ ನಿ
ಮೆಚ್ಚಿಸಿಕೊಳ್ಳುವದು ಒಳ್ಳೇದೇ. ನನ್ನ ಪ್ರಿಯವ
ಮಕ್ಕಳೇ, ಕ್ರಿಸ್ತನ ಸಾರೂಪ್ಯವು ನಿಮ್ಮಲ್ಲಿ ಉಂ
ಗುವ ತನಕ ನಿಮಗೋಸ್ಕರ ತಿರಿಗಿ ಪ್ರಸವವೇ
ಪಡುತ್ತೇನೆ. ನಿಮ್ಮ ವಿಷಯದಲ್ಲಿ ಏನು ಮಾಡಬೇಕೆ
ನನಗೆ ತಿಳಿಯದು. ನಾನು ಈಗಲೂ ನಿಮ್ಮಲ್ಲಿ
ಬೇರೆ ರೀತಿಯಿಂದ ಮಾತಾಡುವದಕ್ಕೆ ಎಷ್ಟೋ
ಪಡುತ್ತೇನೆ.

ಧರ್ಮಶಾಸ್ತ್ರಾಧೀನರಾಗುವದಕ್ಕೆ ಮನಸ್ಸುಳ್ಳವ
ಧರ್ಮಶಾಸ್ತ್ರಕ್ಕೆ ಕಿವಿಗೊಡುವದಿಲ್ಲವೋ? ನನಗೆ ಹ
ರಿ. ಅದರಲ್ಲಿ ಬರೆದಿರುವದೇನಂದರೆ, ಅಬ್ರಹಾಮ

1) ಅಥವಾ, ನೇಮನಿಷ್ಠೆಗಳ. 2) ಅಥವಾ, ಹುಡುಗನನ್ನು ಉಪಾಧ್ಯಾಯನ ಬಳಿಗೆ ಕರಕೊಂಡು ಹೋಗುವ ಆಳ
3) ಅಥವಾ, ಹೊಂದುವದಕ್ಕಾಗಿ ಅದು ನಮ್ಮನ್ನು ಕ್ರಿಸ್ತನ ಬಳಿಗೆ ಕರತರುತ್ತದೆ. 4) ಅಥವಾ, ನೇಮನಿಷ್ಠೆಗಳಿಗೆ ಅಧೀನರಾದವರ

ಇಬ್ಬರು ಮಕ್ಕಳಿದ್ದರು; ಒಬ್ಬನು ತೊತ್ತಿನಿಂದ
ಹುಟ್ಟಿದವನು, ಒಬ್ಬನು ಧರ್ಮಪತ್ನಿಯಿಂದ ಹುಟ್ಟಿ
23 ದವನು. ತೊತ್ತಿನ ಮಗನು ಸ್ವಾಭಾವಿಕವಾಗಿ
ಹುಟ್ಟಿದನು. ಧರ್ಮಪತ್ನಿಯ ಮಗನೋ ವಾಗ್ದಾ
24 ನದ ಫಲವಾಗಿ ಹುಟ್ಟಿದನು. ಈ ಸಂಗತಿಗಳು ಉಪ
ಮಾನವಾಗಿವೆ; ಹೇಗಂದರೆ, ಆ ಇಬ್ಬರು ಸ್ತ್ರೀಯರು
ಎರಡು ಒಡಂಬಡಿಕೆಗಳೇ. ಒಂದು ಒಡಂಬಡಿಕೆ
ಸೀನಾಯಿ ಪರ್ವತದಿಂದ ಉತ್ಪನ್ನವಾಗಿ ದಾಸತ್ವ
ದಲ್ಲಿರಬೇಕಾದ ಮಕ್ಕಳನ್ನು ಹೆರುವಂಥದು; ಅದೇ
25 ಹಾಗರ್. ಹಾಗರ್ ಅಂದರೆ ಅರಬಸ್ಥಾನದಲ್ಲಿರುವ
ಸೀನಾಯಿ ಪರ್ವತ. ಅವಳು ಈಗಿನ ಯೆರೂಸಲೇಮ್
ಎಂಬವಳಿಗೆ ಸರಿಬೀಳುತ್ತಾಳೆ; ಹೇಗಂದರೆ, ಈಕೆ ತನ್ನ
26 ಮಕ್ಕಳ ಸಹಿತ ದಾಸತ್ವದಲ್ಲಿದ್ದಾಳೆ. ಆದರೆ ಮೇಲಣ
ಯೆರೂಸಲೇಮ್ ಎಂಬವಳು ಸ್ವತಂತ್ರಳು, ಇವಳೇ
ನಮಗೆ ತಾಯಿ.

27 ಹೆರದ ಬಂಜೆಯೇ, ಆನಂದವಾಗಿರು,
ಪ್ರಸವವೇದನೆಯಿಲ್ಲದವಳೇ, ಸ್ವರವೆತ್ತಿ ಕೂಗು;
ಗಂಡನುಳ್ಳವಳಿಗಿಂತ ಗಂಡಬಿಟ್ಟವಳಿಗೆ ಮಕ್ಕಳು
ಹೆಚ್ಚು

28 ಎಂದು ಬರೆದದೆಯಲ್ಲಾ. ಸಹೋದರರೇ, ನಾವು
ಇಸಾಕನಂತೆ ವಾಗ್ದಾನದ ಫಲವಾಗಿ ಹುಟ್ಟಿದ ಮಕ್ಕ
29 ಳಾಗಿದ್ದೇವೆ. ಆದರೆ ಪೂರ್ವದಲ್ಲಿ ಸ್ವಾಭಾವಿಕವಾಗಿ
ಹುಟ್ಟಿದವನು ದೇವರಾತ್ಮಬಲದಿಂದ ಹುಟ್ಟಿದವನನ್ನು
30 ಹಿಂಸೆಪಡಿಸಿದಂತೆಯೇ ಈಗಲೂ ಅದೆ. ಆದರೂ
ಶಾಸ್ತ್ರವು ಏನು ಹೇಳುತ್ತದೆ? ದಾಸಿಯನ್ನೂ ಅವಳ
ಮಗನನ್ನೂ ಹೊರಗೆ ಹಾಕು; ದಾಸಿಯ ಮಗನು
ಧರ್ಮಪತ್ನಿಯ ಮಗನೊಂದಿಗೆ ಎಷ್ಟು ಮಾತ್ರಕ್ಕೂ
31 ಬಾಧ್ಯನಾಗಬಾರದೆಂದು ಹೇಳುತ್ತದೆ. ಸಹೋದರರೇ,
ನಾವು ದಾಸಿಯ ಮಕ್ಕಳಲ್ಲ, ಆ ಧರ್ಮಪತ್ನಿಯ
ಮಕ್ಕಳೇ ಎಂದು ತಿಳುಕೊಳ್ಳಿರಿ.

5 ಕ್ರಿಸ್ತನು ನಮ್ಮನ್ನು ಸ್ವತಂತ್ರದಲ್ಲಿರಿಸಬೇಕೆಂದು
ನಮಗೆ ಬಿಡುಗಡೆಮಾಡಿದನು. ಆದರಲ್ಲಿ ಸ್ಥಿರವಾಗಿ
ನಿಲ್ಲಿರಿ; ದಾಸತ್ವದ ನೊಗದಲ್ಲಿ ತಿರಿಗಿ ಸಿಕ್ಕಿಕೊಳ್ಳ
ಬೇಡಿರಿ.

2 ನೋಡಿರಿ, ಪೌಲನೆಂಬ ನಾನು ನಿಮಗೆ ಒಂದನ್ನು
ಹೇಳುತ್ತೇನೆ—ನೀವು ಸುನ್ನತಿಮಾಡಿಸಿಕೊಂಡರೆ ಕ್ರಿಸ್ತ
3 ನಿಂದ ನಿಮಗೆ ಏನೂ ಪ್ರಯೋಜನವಿಲ್ಲ. ಸುನ್ನತಿ
ಮಾಡಿಸಿಕೊಳ್ಳುವ ಪ್ರತಿಯೊಬ್ಬನಿಗೆ—ನೀನು ಧರ್ಮ
ಶಾಸ್ತ್ರದಲ್ಲಿ ಹೇಳಿರುವದನ್ನೆಲ್ಲಾ ಮಾಡುವ ಹಂಗಿ
ನಲ್ಲಿದ್ದೀ ಎಂದು ತಿರಿಗಿ ಪ್ರಮಾಣವಾಗಿ ಹೇಳುತ್ತೇನೆ.
4 ನಿಮ್ಮಲ್ಲಿ ಯಾರಾರು ಕರ್ಮಗಳಿಂದ ನೀತಿವಂತ
ರಾಗಬೇಕೆಂದಿರುತ್ತಾರೋ ಅವರು ಕ್ರಿಸ್ತನಿಂದ ಅಗಲಿ
ಹೋದರು. ಕೃಪಾಶ್ರಯದೊಳಗಿಂದ ಬಿದ್ದುಹೋದರು.
5 ನಾವೋ ದೇವರಾತ್ಮನ ಮೂಲಕ ನಂಬಿಕೆಯಿಂದ ನೀತಿ
ವಂತರಾಗುತ್ತೇವೆಂಬುವ ನಿರೀಕ್ಷೆ ಸಫಲವಾಗುವ
6 ದೆಂದು ಎದುರುನೋಡುತ್ತೇವೆ. ಕ್ರಿಸ್ತ ಯೇಸುವಿನಲ್ಲಿ
ರುವವರಿಗೆ ಸುನ್ನತಿಯಾದರೂ ಪ್ರಯೋಜನವಿಲ್ಲ,
ಆಗದಿದ್ದರೂ ಪ್ರಯೋಜನವಿಲ್ಲ. ಪ್ರೀತಿಯಿಂದ
ಕೆಲಸನಡಿಸುವ ನಂಬಿಕೆಯಿಂದಲೇ ಪ್ರಯೋಜನವಾ
7 ಗಿದೆ. ಚೆನ್ನಾಗಿ ಓಡುತ್ತಾ ಇದ್ದಿರಿ; ನೀವು ಸತ್ಯವನ್ನು
ಅನುವರ್ತಿಸದಂತೆ ಯಾರು ನಿಮ್ಮನ್ನು ತಡೆದರು? ಈ 8
ಬೋಧನೆಯು ನಿಮ್ಮನ್ನು ಕರೆದಾತನಿಂದ ಹುಟ್ಟಿದ್ದಲ್ಲ.
ಸ್ವಲ್ಪ ಹುಳಿಯಿಂದ ಕಣಿಕವೆಲ್ಲಾ ಹುಳಿಯಾಗುವದು. 9
ನನಗಂತೂ ನೀವು ಬೇರೆ ಅಭಿಪ್ರಾಯವನ್ನು ಹಿಡಿಯುವ 10
ದಿಲ್ಲವೆಂದು ಕರ್ತನಲ್ಲಿ ನಿಮ್ಮನ್ನು ಕುರಿತು ಭರವಸ
ಉಂಟು. ನಿಮ್ಮಲ್ಲಿ ಭೇದವನ್ನು ಹುಟ್ಟಿಸುವವನು
ಯಾವನಾದರೂ ಸರಿಯೇ ಬರುವ ದಂಡನೆಯನ್ನು ಅನು
ಭವಿಸುವನು. ನಾನಾದರೆ ಸಹೋದರರೇ, ಸುನ್ನತಿ 11
ಯಾಗಬೇಕೆಂದು ಇನ್ನೂ ಸಾರುವವನಾಗಿದ್ದರೆ ಇನ್ನು
ನನಗೆ ಹಿಂಸೆಯಾಗುವದು ಯಾಕೆ? ಆ ಪಕ್ಷದಲ್ಲಿ
ಶಿಲುಬೆಯ ದೆಸೆಯಿಂದ ಉಂಟಾದ ಆಕ್ಷೇಪವು ಹೋಯಿ
ತಲ್ಲಾ? ನಿಮ್ಮನ್ನು ಕಳವಳಪಡಿಸುವವರು ಅಂಗ 12
ಚ್ಛೇದನೆಯನ್ನಾದರೂ ಮಾಡಿಕೊಂಡರೆ ವಾಸಿ.

ನೇಮನಿಷ್ಠೆಗಳ ಅಧಿಕಾರವನ್ನು ತಪ್ಪಿಸಿ ಬಿಡುಗಡೆಯನ್ನು
ಹೊಂದಿದವರು ಮನಸ್ಸುಬಂದಂತೆ ನಡೆಯದೆ ಪವಿತ್ರಾತ್ಮನಿಗೆ
ಅನುಗುಣವಾಗಿ ಯೋಗ್ಯರಾಗಿ ನಡೆಯುವರು.

ಸಹೋದರರೇ, ನೀವು ಸ್ವತಂತ್ರರಾಗಿರಬೇಕೆಂದು 13
ದೇವರು ನಿಮ್ಮನ್ನು ಕರೆದನು. ಆದರೆ ನಿಮಗಿರುವ
ಸ್ವಾತಂತ್ರ್ಯವನ್ನು ಶರೀರಾಧೀನಸ್ವಭಾವಕ್ಕೆ ಆಸ್ಪದ
ವಾಗಿ ಬಳಸದೆ ಪ್ರೀತಿಯಿಂದ ಒಬ್ಬರಿಗೊಬ್ಬರು ಸೇವೆ
ಮಾಡಿರಿ. ನಿನ್ನ ನೆರೆಯವನನ್ನು ನಿನ್ನಂತೆಯೇ ಪ್ರೀ 14
ತಿಸು ಎಂಬ ಒಂದೇ ಮಾತಿನಲ್ಲಿ ಧರ್ಮಶಾಸ್ತ್ರವೆಲ್ಲಾ
ಅಡಕವಾಗಿದೆ. ಆದರೆ ನೀವು ಒಬ್ಬರನ್ನೊಬ್ಬರು ಕಚ್ಚಿ 15
ಹರಕೊಂಡು ನುಂಗುವವರಾದರೆ ಒಬ್ಬರಿಂದೊಬ್ಬರು
ನಾಶವಾದೀರಿ, ನೋಡಿರಿ.

ನಾನು ಹೇಳುವದೇನಂದರೆ ಪವಿತ್ರಾತ್ಮನನ್ನು 16
ಅನುಸರಿಸಿ ನಡೆದುಕೊಳ್ಳಿರಿ; ಆಗ ನೀವು ಶರೀರ
ಭಾವದ ಅಭಿಲಾಷೆಗಳನ್ನು ಎಷ್ಟು ಮಾತ್ರಕ್ಕೂ ನೆರವೇ
ರಿಸುವದಿಲ್ಲ. ಯಾಕಂದರೆ ಶರೀರಭಾವವು ಅಭಿ 17
ಲಾಷಿಸುವದು ಆತ್ಮನಿಗೆ ವಿರುದ್ಧವಾಗಿದೆ, ಆತ್ಮನು ಅಭಿ
ಲಾಷಿಸುವದು ಶರೀರಭಾವಕ್ಕೆ ವಿರುದ್ಧವಾಗಿದೆ.
ನೀವು ಮಾಡಲಿಚ್ಛಿಸುವದನ್ನು ಮಾಡದಂತೆ ಇವು
ಒಂದಕ್ಕೊಂದು ಹೋರಾಡುತ್ತವೆ. ಆದರೆ ನೀವು 18
ಆತ್ಮನಿಂದ ನಡಿಸಿಕೊಳ್ಳುವವರಾದರೆ ನೇಮನಿಷ್ಠೆಗ
ಳಿಗೆ ಅಧೀನರಲ್ಲ. ಶರೀರಭಾವದ ಕರ್ಮಗಳು 19
ಪ್ರಸಿದ್ಧವಾಗಿಯೇ ಅವೆ; ಯಾವವಂದರೆ—ಜಾರತ್ವ
ಬಂಡುತನ ನಾಚಿಕೆಗೇಡಿತನ ವಿಗ್ರಹಾರಾಧನೆ ಮಾಟ
ಹಗೆತನ ಜಗಳ ಹೊಟ್ಟೇಕಿಚ್ಚು ಸಿಟ್ಟು ಕಕ್ಷಭೇದ 20
ಭಿನ್ನಮತ ಮತ್ಸರ ಕುಡಿಕತನ ದುಂದೌತನ ಇಂಥ
ವುಗಳೇ. ಇವುಗಳ ವಿಷಯದಲ್ಲಿ—ಇಂಥ ಕಾರ್ಯ 21
ಗಳನ್ನು ನಡಿಸುವವರು ದೇವರ ರಾಜ್ಯಕ್ಕೆ ಬಾಧ್ಯರಾ
ಗುವದಿಲ್ಲವೆಂದು ನಾನು ಹಿಂದೆ ಹೇಳಿದಂತೆಯೇ ಈಗ
ಲೂ ನಿಮ್ಮನ್ನು ಎಚ್ಚರಿಸುತ್ತೇನೆ. ಆದರೆ ದೇವ 22
ರಾತ್ಮನಿಂದ ಉಂಟಾಗುವ ಫಲವೇನಂದರೆ—ಪ್ರೀತಿ
ಸಂತೋಷ ಸಮಾಧಾನ ದೀರ್ಘಶಾಂತಿ ದಯೆ ಉಪ
ಕಾರ ನಂಬಿಕೆ ಸಾಧುತ್ವ ಶಮೆದಮೆ ಇಂಥವುಗಳೇ.
ಇಂಥವುಗಳನ್ನು ಯಾವ ಧರ್ಮಶಾಸ್ತ್ರವೂ ಆಕ್ಷೇಪಿ 23
ಸುವದಿಲ್ಲ. ಕ್ರಿಸ್ತಯೇಸುವಿನವರು ತಮ್ಮ ಶರೀರ 24

ಭಾವವನ್ನು ಅದರ ವಿಷಯಾಭಿಲಾಷೆ ಸ್ವೇಚ್ಛಾಭಿಲಾಷೆ
ಸಹಿತ ಶಿಲುಬೆಗೆ ಹಾಕಿದವರು.

ಕ್ರೈಸ್ತರು ಪವಿತ್ರಾತ್ಮಪ್ರೇರಿತರಾಗಿ ನಡೆಯಬೇಕಾದ ರೀತಿಯ
ವಿಷಯದಲ್ಲಿ ಕೆಲವು ಬುದ್ಧಿಮಾತುಗಳು.

25 ನಾವು ಆತ್ಮನಿಂದ ಜೀವಿಸುತ್ತಿರಲಾಗಿ ಆತ್ಮನನ್ನ
26 ನುಸರಿಸಿ ನಡೆಯೋಣ. ಅಹಂಕಾರಿಗಳೂ ಒಬ್ಬರ
ನ್ನೊಬ್ಬರು ಕೆಣಕುವವರೂ ಒಬ್ಬರ ಮೇಲೊಬ್ಬರು
ಮತ್ಸರವುಳ್ಳವರೂ ಆಗದೆ ಇರೋಣ.

6 ಸಹೋದರರೇ, ನಿಮ್ಮಲ್ಲಿ ಯಾರಾದರೂ ಯಾವ
ದೋ ಒಂದು ದೋಷದಲ್ಲಿ ಸಿಕ್ಕಿದರೆ ಅಂಥವನನ್ನು
ಆತ್ಮನಿಂದ ನಡಿಸಿಕೊಳ್ಳುವ ನೀವು ಶಾಂತಭಾವದಿಂದ
ತಿದ್ದಿ ಸರಿಮಾಡಿರಿ. ನೀನಾದರೂ ದುಷ್ಪ್ರೇರಣೆಗೆ
ಒಳಗಾಗದಂತೆ ನಿನ್ನ ವಿಷಯದಲ್ಲಿ ಎಚ್ಚರಿಕೆಯಾಗಿರು.
2 ಒಬ್ಬರು ಮತ್ತೊಬ್ಬರ ಭಾರವನ್ನು ಹೊತ್ತುಕೊಳ್ಳಲಿ;
ಹೀಗೆ ಕ್ರಿಸ್ತನ 1)ನಿಯಮವನ್ನು ನೆರವೇರಿಸಿರಿ.
3 ಯಾವನಾದರೂ ಅಲ್ಪನಾಗಿದ್ದು ತಾನು ದೊಡ್ಡವ
ನೆಂದು ಭಾವಿಸಿಕೊಂಡರೆ ತನ್ನನ್ನು ತಾನೇ ಮೋಸಗೊಳಿ
4 ಸಿದವನಾಗಿದ್ದಾನೆ. ಪ್ರತಿಯೊಬ್ಬನು ತಾನು ಮಾ
ಡಿದ ಕೆಲಸವನ್ನು ಪರಿಶೋಧಿಸಲಿ; ಆಗ ಅವನು ತನ್ನ
ನಿಮಿತ್ತದಿಂದ ಹೆಚ್ಚಳಪಡುವದಕ್ಕೆ ಆಸ್ಪದವಾಗುವದೇ
5 ಹೊರತು ಮತ್ತೊಬ್ಬರ ನಿಮಿತ್ತದಿಂದಾಗುವದಿಲ್ಲ.
ಯಾಕಂದರೆ ಪ್ರತಿಯೊಬ್ಬನು ಸ್ವಂತ ಹೊರೆಯನ್ನು
ಹೊತ್ತುಕೊಳ್ಳಬೇಕು.
6 ದೇವರ ವಾಕ್ಯದಲ್ಲಿ ಉಪದೇಶಹೊಂದುವವನು
ಉಪದೇಶಮಾಡುವವನಿಗೆ ತನಗಿರುವ ಎಲ್ಲಾ ಒಳ್ಳೆಯ
7 ವುಗಳಲ್ಲಿ ಪಾಲುಕೊಡಲಿ. ಮೋಸಹೋಗಬೇಡಿರಿ;
2)ದೇವರು ತಿರಸ್ಕಾರ ಸಹಿಸುವವನಲ್ಲ. ಮನು
ಷ್ಯನು ತಾನು ಏನು ಬಿತ್ತುತ್ತಾನೋ ಅದನ್ನೇ ಕೊಯ್ಯ
8 ಬೇಕು. ತನ್ನ 3)ಶರೀರಭಾವವನ್ನು ಕುರಿತು ಬಿತ್ತು
ವವನು ಆ ಭಾವದಿಂದ ನಾಶನವನ್ನು ಕೊಯ್ಯು
ವನು. 4)ಆತ್ಮನನ್ನು ಕುರಿತು ಬಿತ್ತುವವನು ಆತ್ಮ
9 ನಿಂದ ನಿತ್ಯಜೀವವನ್ನು ಕೊಯ್ಯುವನು. ಒಳ್ಳೇ

ದನ್ನು ಮಾಡುವದರಲ್ಲಿ ಬೇಸರಗೊಳ್ಳದೆ ಇರೋ
ಯಾಕಂದರೆ ಮನಗುಂದದಿದ್ದರೆ ತಕ್ಕ ಸಮಯದ
ಬೆಳೆಯನ್ನು ಕೊಯ್ಯುವೆವು. ಆದದರಿಂದ ಸಮ
ವಿರಲಾಗಿ ಎಲ್ಲರಿಗೆ ಒಳ್ಳೇದನ್ನು ಮಾಡೋಣ; ಮು
ವಾಗಿ ಒಂದೇ ಮನೆಯವರಂತಿರುವ ಕ್ರಿಸ್ತನಂ
ಯುಳ್ಳವರಿಗೆ ಮಾಡೋಣ.

ಕಡೇ ಮಾತುಗಳು; ಪೌಲನ ಸ್ವಂತ ಕೈಯಿಂದ ಬರೆದವುಗ

ಇಗೋ, ಸ್ವಂತ ಕೈಯಿಂದ ಎಂಥಾ ದೊಡ್ಡ ಅಕ್ಷ
ಗಳಲ್ಲಿ ನಿಮಗೆ ಬರೆಯುತ್ತಾ ಇದ್ದೇನೆ. ಬಹಿರಾಚ
ಗಳಿಂದ ಮಾನಪಡೆಯಬೇಕೆಂದಿರುವವರು ಸುನ್ನತಿಮ
ಡಿಸಿಕೊಳ್ಳಿರಿ ಎಂಬದಾಗಿ ನಿಮ್ಮನ್ನು ಬಲಾತ್ಕರಿಸುತ್ತಾ
ತಮಗೆ ಕ್ರಿಸ್ತನ ಶಿಲುಬೆಯ ದೆಸೆಯಿಂದ ಹಿ
ಯಾಗಬಾರದೆಂಬದೊಂದೇ ಅವರ ಉದ್ದೇಶ. ಸುನ್ನ
ಮಾಡಿಸಿಕೊಳ್ಳುವ ತಾವಾದರೂ ಧರ್ಮಶಾಸ್ತ್ರವ
ಕೈಕೊಂಡು ನಡೆಯುವದಿಲ್ಲ. ಅವರು ನಿಮ್ಮ ಶರೀ
ವಿಷಯದಲ್ಲಿ ಹೆಚ್ಚಳಪಡುವದಕ್ಕಾಗಿ ನಿಮಗೆ ಸುನ್ನ
ಯಾಗಬೇಕೆಂದು ಅಪೇಕ್ಷಿಸುತ್ತಾರೆ. ನನಗಾದರೆ
ನಮ್ಮ ಕರ್ತನಾದ ಯೇಸು ಕ್ರಿಸ್ತನ ಶಿಲುಬೆಯ ವಿ
ಯದಲ್ಲಿ ಹೊರತು ಹೆಚ್ಚಳಪಡುವದು ಬೇಡವೇ ಬೇ
5)ಆತನ ಮೂಲಕ ಲೋಕವು ಶಿಲುಬೆಗೆ ಹಾಕಿ
ಕೊಂಡು ನನ್ನ ಪಾಲಿಗೆ ಸತ್ತಿತು, ನಾನು ಶಿಲುಬ
ಹಾಕಿಸಿಕೊಂಡು ಲೋಕದ ಪಾಲಿಗೆ ಸತ್ತೆನು. ಸು
ತಿಯಾಗುವದರಲ್ಲಿ ಏನೂ ಇಲ್ಲ, ಸುನ್ನತಿಯಾಗ
ಇರುವದರಲ್ಲಿಯೂ ಏನೂ ಇಲ್ಲ; ಹೊಸ ಸೃ
ಯೇ ಬೇಕು. ಈ ಸೂತ್ರಕ್ಕೆ ಸರಿಯಾಗಿ ನಡೆಯು
ವರೆಲ್ಲರಿಗೆ ಅಂದರೆ ದೇವರ ಇಸ್ರಾಯೇಲ್ಯರಿಗೆ ಶಾ
ಯೂ ಕರುಣೆಯೂ ಆಗಲಿ.

ಇನ್ನು ಮೇಲೆ ಯಾರೂ ನನ್ನನ್ನು ತೊಂದರೆ ಪಡಿ
ಬಾರದು, ನನ್ನ ದೇಹದಲ್ಲಿ ಯೇಸುವಿನ ಮುದ್ರೆಗ
ಹಾಕಿರುತ್ತವಲ್ಲಾ.

ಸಹೋದರರೇ, ನಮ್ಮ ಕರ್ತನಾದ ಯೇಸು ಕ್ರಿ
ನ ಕೃಪೆಯು ನಿಮ್ಮ ಆತ್ಮದೊಂದಿಗಿರಲಿ. ಆಮೆನ

1) ಅಥವಾ, ಧರ್ಮಶಾಸ್ತ್ರವನ್ನು. 2) ಅಥವಾ, ವಂಚನೆಗೆ ಒಳಗಾಗಲಾರನು. 3) ಅಥವಾ, ಶರೀರಭಾ
4) ಅಥವಾ, ಆತ್ಮದಲ್ಲಿ. 5) ಅಥವಾ, ಆ ಶಿಲುಬೆಯ ಮೂಲಕ.

# THE EPISTLE OF SAINT PAUL TO THE

# EPHESIANS

---

## ಪೌಲನು ಎಫೆಸದವರಿಗೆ ಬರೆದ ಪತ್ರಿಕೆ

---

ಒಕ್ಕಣೆ.

ದೇವರ ಚಿತ್ತಾನುಸಾರವಾಗಿ ಕ್ರಿಸ್ತ ಯೇಸುವಿನ
ಅಪೊಸ್ತಲನಾದ ಪೌಲನು 1)ಎಫೆಸದಲ್ಲಿರುವ ದೇವ
ಜನರಿಗೂ ಕ್ರಿಸ್ತ ಯೇಸುವಿನಲ್ಲಿ ನಂಬಿಕೆಯಿಟ್ಟಿರು
2 ವವರಿಗೂ ಬರೆಯುವದೇನಂದರೆ—ನಮ್ಮ ತಂದೆ
ಯಾದ ದೇವರಿಂದಲೂ ಕರ್ತನಾದ ಯೇಸು ಕ್ರಿಸ್ತ
ನಿಂದಲೂ ನಿಮಗೆ ಕೃಪೆಯೂ ಶಾಂತಿಯೂ ಆಗಲಿ.

ದೇವರು ಕ್ರಿಸ್ತನಲ್ಲಿ ಅನುಗ್ರಹಿಸಿದ ಆತ್ಮೀಯ ವರಗಳಿಗಾಗಿ
ಪೌಲನು ಮಾಡುವ ಸ್ತೋತ್ರ.

3 ನಮ್ಮ ಕರ್ತನಾದ ಯೇಸು ಕ್ರಿಸ್ತನ ದೇವರೂ
ತಂದೆಯೂ ಆಗಿರುವಾತನಿಗೆ ಸ್ತೋತ್ರ. ಆತನು ಪರ
ಲೋಕದಲ್ಲಿನ ಸಕಲ ಆತ್ಮೀಯವರಗಳನ್ನು ನಮಗೆ
4 ಕ್ರಿಸ್ತ ಯೇಸುವಿನಲ್ಲಿ ಅನುಗ್ರಹಿಸಿದ್ದಾನೆ. ಹೇಗಂ
ದರೆ ನಾವು ಪ್ರೀತಿಯಲ್ಲಿ ನಡೆದು ಆತನ ಸನ್ನಿಧಿಯಲ್ಲಿ
ಪರಿಶುದ್ಧರೂ ದೋಷವಿಲ್ಲದವರೂ ಆಗಿರಬೇಕೆಂದು
ನಮ್ಮನ್ನು ಜಗದುತ್ಪತ್ತಿಗೆ ಮುಂಚೆ ಕ್ರಿಸ್ತನಲ್ಲಿ
6 ಆರಿಸಿಕೊಂಡನು. ಆತನು ತನ್ನ ಕೃಪೆಯನ್ನು
ಪ್ರಖ್ಯಾತಿಗೆ ತರಬೇಕೆಂದು ನಮ್ಮನ್ನು ಯೇಸು
ಕ್ರಿಸ್ತನ ಮೂಲಕ ತನ್ನ ಪುತ್ರರನ್ನಾಗಿ ಸ್ವೀಕರಿಸುವ
ದಕ್ಕೆ ದಯಾಪೂರ್ವಕವಾದ ತನ್ನ ಚಿತ್ತಾನುಸಾರ
ವಾಗಿ ಮೊದಲೇ ಸಂಕಲ್ಪಮಾಡಿದ್ದನು. ಈ ಕೃಪಾದಾ
ನವು ಆತನ ಪ್ರಿಯನಲ್ಲಿಯೇ ನಮಗೆ ದೊರೆಯಿತು.
7 ಈತನು ನಮಗೋಸ್ಕರ ತನ್ನ ರಕ್ತವನ್ನು ಸುರಿಸಿದ್ದ
ರಿಂದ ನಮ್ಮ ಅಪರಾಧಗಳು ಪರಿಹಾರವಾಗಿ ನಮಗೆ
ಬಿಡುಗಡೆಯಾಯಿತು. ಇದು ದೇವರ ಕೃಪಾತಿ
8 ಶಯವೇ. ಆತನು ರಹಸ್ಯವಾದ ತನ್ನ ಸಂಕಲ್ಪ
ವನ್ನು ನಮಗೆ ತಿಳಿಯಪಡಿಸುವದರ ಮೂಲಕ ವಿಶೇಷ
ವಾದ ಜ್ಞಾನವನ್ನೂ ಬುದ್ಧಿಯನ್ನೂ ಕೊಟ್ಟು ಆ
ಕೃಪೆಯನ್ನು ಇನ್ನೂ ಹೆಚ್ಚಾಗಿ ನಮಗೆ ತೋರಿಸಿದ್ದಾನೆ.
10 ತಾನು ಕಾಲವು ಪರಿಪೂರ್ಣವಾದಾಗ ನಿರ್ವಹಿಸ
ಬೇಕಾದ ಒಂದು ಕೃಪೆಯುಳ್ಳ ಸಂಕಲ್ಪವನ್ನು ಆತನು
ಕ್ರಿಸ್ತನಲ್ಲಿ ಮೊದಲೇ ನಿಷ್ಕರ್ಷೆಮಾಡಿಕೊಂಡಿದ್ದನು.
ಅದೇನಂದರೆ ಭೂಪರಲೋಕಗಳಲ್ಲಿ ಇರುವ ಸಮಸ್ತ
ವನ್ನೂ ಕ್ರಿಸ್ತನಲ್ಲಿ ಒಂದಾಗಿ ಕೂಡಿಸಬೇಕೆಂಬದೇ.
ಕ್ರಿಸ್ತನಲ್ಲಿಯೇ ಸಮಸ್ತವು ಒಂದಾಗುವದು. ಇದ 11-12
ಲ್ಲದೆ ಆತನಲ್ಲಿ 2)ನಾವು ದೇವರ ಸ್ವಕೀಯ ಪ್ರಜೆಯಾ
ದೆವು. ಬರಬೇಕಾದ ಕ್ರಿಸ್ತನನ್ನು ಎದುರುನೋಡು
ತ್ತಿದ್ದ ನಾವು ತನ್ನ ಮಹಿಮೆಯನ್ನು ಪ್ರಖ್ಯಾತಿಪಡಿಸ
ಬೇಕೆಂದು ಸಮಸ್ತಕಾರ್ಯಗಳನ್ನು ತನ್ನ ಇಷ್ಟದಂತೆ
ನಡಿಸುವ ದೇವರು ತನ್ನ ಸಂಕಲ್ಪದ ಮೇರೆಗೆ ನಮ್ಮ
ನ್ನು ಆದಿಯಲ್ಲಿಯೇ ಆರಿಸಿಕೊಂಡನು. ನಿಮ್ಮ ರಕ್ಷ 13
ಣೆಯ ವಿಷಯವಾದ ಸುವಾರ್ತೆಯೆಂಬ ಸತ್ಯವಾಕ್ಯ
ವನ್ನು ಕೇಳಿ ಕ್ರಿಸ್ತನಲ್ಲಿ ನಂಬಿಕೆಯಿಟ್ಟವರಾದ ನೀವು
ಸಹ ವಾಗ್ದಾನಮಾಡಲ್ಪಟ್ಟ ಪವಿತ್ರಾತ್ಮನೆಂಬ ಮುದ್ರೆ
ಯನ್ನು ಹೊಂದಿದಿರಿ. 3)ದೇವರು ಸಂಪಾದಿಸಿ 14
ಕೊಂಡ ಜನರಿಗೆ ವಿಮೋಚನೆಯಾಗುವದೆಂಬದಕ್ಕೆ
ಪವಿತ್ರಾತ್ಮನು ನಮ್ಮ ಬಾಧ್ಯತೆಗೆ ಸಂಚಕಾರವಾಗಿ
ದ್ದಾನೆ. ಆ ವಿಮೋಚನೆಯು ದೇವರ ಮಹಿಮೆಗೆ
ಎಷ್ಟೋ ಪ್ರಖ್ಯಾತಿಯನ್ನು ಉಂಟುಮಾಡುವದು.

ದೇವಜನರ ಮಹಾಪದವಿಯ ವಿಷಯದಲ್ಲಿ ದೇವರು
ಸಭೆಯವರಿಗೆ ಹೆಚ್ಚಾದ ಜ್ಞಾನವನ್ನು ದಯಪಾಲಿಸಬೇಕೆಂದು
ಪೌಲನು ಮಾಡುವ ಪ್ರಾರ್ಥನೆ.

ಹೀಗಿರಲಾಗಿ ಕರ್ತನಾದ ಯೇಸುವಿನಲ್ಲಿ ನೀವು 15
ಇಟ್ಟಿರುವ ನಂಬಿಕೆಯನ್ನು ಕುರಿತೂ ದೇವಜನರೆಲ್ಲರಿಗೆ
ನೀವು ತೋರಿಸುವ ಪ್ರೀತಿಯನ್ನು ಕುರಿತೂ ಕೇಳಿ
ನಾನು ನಿಮ್ಮ ನಿಮಿತ್ತವಾಗಿ ಎಡೆಬಿಡದೆ ದೇವರಿಗೆ
ಸ್ತೋತ್ರಮಾಡುತ್ತೇನೆ. ನನ್ನ ಪ್ರಾರ್ಥನೆಗಳಲ್ಲಿ ನಿಮ 16
ಗೋಸ್ಕರ ವಿಜ್ಞಾಪನೆಮಾಡಿ—ನಮ್ಮ ಕರ್ತನಾದ 17
ಯೇಸು ಕ್ರಿಸ್ತನ ದೇವರೂ ಪ್ರಭಾವಸ್ವರೂಪನಾದ
ತಂದೆಯೂ ಆಗಿರುವಾತನು ತನ್ನ ವಿಷಯವಾಗಿ
ತಿಳುವಳಿಕೆಯನ್ನು ಕೊಟ್ಟು ಇದುವರೆಗೆ ಗುಪ್ತವಾ
ಗಿದ್ದ ಸತ್ಯಾರ್ಥಗಳನ್ನು ತಿಳುಕೊಳ್ಳುವ ಜ್ಞಾನವುಳ್ಳ
ಆತ್ಮವನ್ನು ನಿಮಗೆ ದಯಪಾಲಿಸಬೇಕೆಂದು ಪ್ರಾರ್ಥಿಸು
ತ್ತೇನೆ. ಆತನು ನಿಮ್ಮ ಮನೋನೇತ್ರಗಳನ್ನು ಬೆಳ 18
ಗಿಸಿ ಆತನಿಂದ ಕರಿಸಿಕೊಂಡವರು ನಿರೀಕ್ಷಿಸುವ
ಪದವಿ ಎಂಥದೆಂಬದನ್ನೂ ದೇವಜನರೆಂಬ ಆತನ
ಸ್ವಾಸ್ಥ್ಯದ ಮಹಿಮಾತಿಶಯವು ಎಂಥದೆಂಬದನ್ನೂ
ನಂಬುವವರಾದ ನಮ್ಮಲ್ಲಿ ಆತನು ಸಾಧಿಸುವ ಪರಾ 19
ಕ್ರಮವು ಎಷ್ಟು ಅತಿಶಯವಾದದ್ದೆಂಬದನ್ನೂ ನೀವು

---

1) ಕೆಲವು ಪ್ರತಿಗಳಲ್ಲಿ ಎಫೆಸದಲ್ಲಿರುವ ಎಂಬ ಮಾತು ಇಲ್ಲ. 2) ಅಥವಾ, ನಮಗಿರುವ ಬಾಧ್ಯತೆಯನ್ನು ಹೊಂದಿದೆವು. 3) ಕೆಲವು ಪ್ರತಿಗಳಲ್ಲಿ—ಪವಿತ್ರಾತ್ಮನರವು ನಮ್ಮ ಬಾಧ್ಯತೆಗೆ ಸಂಚಕಾರವಾಗಿದೆ ಎಂದು ಬರೆದಿದೆ.

20 ತಿಳುಕೊಳ್ಳುವಂತೆ ಅನುಗ್ರಹಿಸಲಿ. ಆತನ ಬಲಾತಿ
ಶಯವು ಎಷ್ಟು ಮಹತ್ತಾದದ್ದೆಂಬದು ಕ್ರಿಸ್ತನಲ್ಲಿ
ತೋರಿಬಂದಿದೆ. ಹೇಗಂದರೆ ಆತನು ಸತ್ತಿದ್ದ ಕ್ರಿಸ್ತ
21 ನನ್ನು ಬದುಕಿಸಿ ಪರಲೋಕದೊಳಗೆ ಸಕಲ ರಾಜತ್ವ
ಅಧಿಕಾರ ಮಹತ್ವ ಪ್ರಭುತ್ವಾದಿಗಳ ಮೇಲೆಯೂ ಈ
ಲೋಕದಲ್ಲಿ ಮಾತ್ರವಲ್ಲದೆ ಬರುವ ಲೋಕದಲ್ಲಿ ಸಹ
ಹೆಸರುಗೊಂಡವರೆಲ್ಲರ ಮೇಲೆಯೂ ತನ್ನ ಬಲಗಡೆ
22 ಯಲ್ಲಿ ಕೂಡ್ರಿಸಿಕೊಂಡನು. ಆತನು ಸಮಸ್ತವನ್ನೂ
ಕ್ರಿಸ್ತನ ಪಾದಗಳ ಕೆಳಗೆ ಹಾಕಿದನು. ಇದಲ್ಲದೆ ಆತ
ನನ್ನು ಎಲ್ಲಾದರ ಮೇಲೆ ಇರಿಸಿ ಸಭೆಗೆ ಶಿರಸ್ಸಾಗಿ
23 ನೇಮಿಸಿದನು. ಸಭೆಯು ಆತನ ದೇಹವಾಗಿದೆ;
1)ಎಲ್ಲವನ್ನೂ ಎಲ್ಲಾ ಸಂಬಂಧದಲ್ಲಿ ವ್ಯಾಪಿಸುವಾತ
ನಿಂದ ಅದು ಪರಿಪೂರ್ಣತೆಯುಳ್ಳದ್ದಾಗಿದೆ.

ದೇವರು ಪಾಪಾತ್ಮರನ್ನು ರಕ್ಷಿಸಿ ಕ್ರಿಸ್ತನ ಜೀವದಲ್ಲಿ
ಪಾಲುಗಾರರನ್ನಾಗಿ ಮಾಡಿದ್ದಕ್ಕೆ ಆತನ ಕೃಪೆಯೇ ಕಾರಣ.

**2** ಆತನು ಅಪರಾಧಗಳ ಮತ್ತು ಪಾಪಗಳ ದೆಸೆ
ಯಿಂದ ಸತ್ತವರಾಗಿದ್ದ ನಿಮ್ಮನ್ನು ಸಹ ಬದುಕಿಸಿ
2 ದನು. ನೀವು ಪೂರ್ವದಲ್ಲಿ ಅಪರಾಧಗಳನ್ನೂ
ಪಾಪಗಳನ್ನೂ ಮಾಡುವವರಾಗಿದ್ದು ಇಹಲೋಕಾಚಾ
ರಕ್ಕೆ ಅನುಸಾರವಾಗಿ ನಡೆದುಕೊಂಡಿರಿ; ವಾಯು
ಮಂಡಲದಲ್ಲಿ ಅಧಿಕಾರನಡಿಸುವ ಅಧಿಪತಿಗೆ, ಅಂದರೆ
ನಂಬಲೊಲ್ಲದವರನ್ನು ಅವಿಧೇಯತೆಗೆ ಈಗ ಪ್ರೇರೇಪಿ
ಸುವ ಆತ್ಮನಿಗೆ ಅನುಸಾರವಾಗಿ ನಡೆದುಕೊಂಡಿರಿ.
3 ನಾವೆಲ್ಲರೂ ಪೂರ್ವದಲ್ಲಿ ಅವಿಧೇಯರಾಗಿದ್ದು ಶರೀ
ರಭಾವದ ಆಶೆಗಳಿಗೆ ಅಧೀನರಾಗಿ ಶರೀರಕ್ಕೂ ಮನಸ್ಸಿ
ಗೂ ಸಂಬಂಧಪಟ್ಟ ಇಚ್ಛೆಗಳನ್ನು ನೆರವೇರಿಸುತ್ತಾ
ನಡೆದು ಮಿಕ್ಕಾದವರಂತೆ ಸ್ವಭಾವಸಿದ್ಧವಾಗಿ ದೇವರ
4 ಕೋಪಕ್ಕೆ ಗುರಿಯಾಗಿದ್ದೆವು. ಆದರೆ ಕರುಣಾ
ನಿಧಿಯಾಗಿರುವ ದೇವರು ನಮ್ಮ ಮೇಲೆ ಮಹಾ
5 ಪ್ರೀತಿಯನ್ನಿಟ್ಟು ಅಪರಾಧಗಳ ದೆಸೆಯಿಂದ ಸತ್ತವ
ರಾಗಿದ್ದ ನಮ್ಮನ್ನು ಕ್ರಿಸ್ತನೊಂದಿಗೆ ಬದುಕಿಸಿದನು.
(ಕೃಪೆಯಿಂದಲೇ ರಕ್ಷಣೆಹೊಂದಿದವರಾಗಿದ್ದೀರಿ.)
6 ಬದುಕಿಸಿದ್ದಲ್ಲದೆ ತಾನು ಕ್ರಿಸ್ತ ಯೇಸುವಿನಲ್ಲಿ
ನಮಗೆ ಮಾಡುವ ಉಪಕಾರದ ಮೂಲಕ ತನ್ನ
7 ಅಪಾರವಾದ ಕೃಪಾತಿಶಯವನ್ನು ಮುಂದಣ ಯುಗ
ಗಳಲ್ಲಿ ತೋರಿಸಬೇಕೆಂದು ಕ್ರಿಸ್ತ ಯೇಸುವಿನಲ್ಲಿರುವ
ನಮ್ಮನ್ನು ಆತನೊಂದಿಗೆ ಎಬ್ಬಿಸಿ ಪರಲೋಕದಲ್ಲಿ
8 ಆತನೊಂದಿಗೆ ಕೂಡ್ರಿಸಿದ್ದಾನೆ. ನಂಬಿಕೆಯ ಮೂಲಕ
ಕೃಪೆಯಿಂದಲೇ ರಕ್ಷಣೆಹೊಂದಿದವರಾಗಿದ್ದೀರಿ. ಆ
ರಕ್ಷಣೆಯು ನಿಮ್ಮಿಂದುಂಟಾದದ್ದಲ್ಲ, ಅದು ದೇವರ
9 ವರವೇ. ಅದು ಪುಣ್ಯಕ್ರಿಯೆಗಳಿಂದ ಉಂಟಾದದ್ದಲ್ಲ;
ಆದದರಿಂದ ಹೊಗಳಿಕೊಳ್ಳುವದಕ್ಕೆ ಯಾರಿಗೂ
10 ಆಸ್ಪದವಿಲ್ಲ. ನಾವು ಆತನ ನಿರ್ಮಾಣ; ಸತ್ಕಾ
ರ್ಯಗಳನ್ನು ಮಾಡುವದಕ್ಕಾಗಿಯೇ ಕ್ರಿಸ್ತ ಯೇಸುವಿ
ನಲ್ಲಿ ಸೃಷ್ಟಿಸಲ್ಪಟ್ಟೆವು. ನಾವು ಸತ್ಕಾರ್ಯಗಳನ್ನು
ನಡಿಸುವವರಾಗಿ ಬದುಕಬೇಕೆಂದು ದೇವರು ನ
ನ್ನು ಮೊದಲೇ ನೇಮಿಸಿದನು.

ಯೆಹೂದ್ಯರಿಗೆ ಉಂಟಾದ ಎಲ್ಲಾ ವಾಗ್ದಾನಗಳಲ್ಲಿ
ಅನ್ಯಜನಗಳು ಕ್ರಿಸ್ತನ ಮುಖಾಂತರ ಸಮಭಾಗಿಗಳಾದರೆಂ
ಬೋಧನೆ. (ಕೊಲೊ. 1, 21—29.)

ನೀವು ಜನ್ಮದಿಂದ ಅನ್ಯಜನರಾಗಿದ್ದೀರಿ; ಶರೀರದ
ಕೈಯಿಂದ ಸುನ್ನತಿಮಾಡಿಸಿಕೊಂಡು ಸುನ್ನತಿಯ
ನಿಸಿಕೊಳ್ಳುವವರು ನಿಮ್ಮನ್ನು ಸುನ್ನತಿಯಿಲ್ಲದವರೆಂ
ಹೇಳುತ್ತಾರೆ. ನೀವು ಪೂರ್ವಕಾಲದಲ್ಲಿ ಕ್ರಿಸ್ತನ
ಸೇರದವರಾಗಿದ್ದು ಇಸ್ರಾಯೇಲ್ಯ ಹಕ್ಕಿನಲ್ಲಿ
ಲಿಲ್ಲದವರೂ [ಅಬ್ರಹಾಮನಿಗೆ ಉಂಟಾದ] ವಾ
ನಕ್ಕೆ ಸಂಬಂಧವಾದ ಒಡಂಬಡಿಕೆಗಳಲ್ಲಿ ಸೇರದವ
ಈ ಲೋಕದಲ್ಲಿ ಯಾವ ನಿರೀಕ್ಷೆಯಿಲ್ಲದವ
ದೇವರನ್ನರಿಯದವರೂ ಆಗಿದ್ದಿರೆಂದು ಜ್ಞಾಪಕಮ
ಕೊಳ್ಳಿರಿ. ಈಗಲಾದರೋ ಮೊದಲು ದೂರವಾಗಿ
ನೀವು ಕ್ರಿಸ್ತ ಯೇಸುವನ್ನು ಸೇರಿದವರಾಗಿದ್ದು ಆ
ರಕ್ತದ ಮೂಲಕ ಸಮೀಪಸ್ಥರಾದಿರಿ. ನಿಮ್ಮನ
ನಮ್ಮನ್ನೂ ಒಂದುಮಾಡಿದವನಾದ ಆತನೇ ನವ
ಸಮಾಧಾನಕರ್ತೃವಾಗಿದ್ದಾನೆ. ಆತನು ತನ್ನ ಶರಿ
ವನ್ನು ಸಮರ್ಪಿಸಿದ್ದರಲ್ಲಿ ವಿಧಿರೂಪವಾದ ಆಜ್ಞೆಗಳು
ಧರ್ಮಶಾಸ್ತ್ರವನ್ನು ತೆಗೆದುಹಾಕಿ ಇದ್ದ ದ್ವೇಷವನ
ಮುಗಿಸಿ ನಮ್ಮನ್ನು ಅಗಲಿಸಿದ ಅಡ್ಡಗೋಡೆಯನ
ಕೆಡವಿಹಾಕಿದನು. ಆತನು ಸಮಾಧಾನಮಾಡುವ
ನಾಗಿ ಉಭಯರನ್ನೂ ತನ್ನಲ್ಲಿ ಒಬ್ಬ ನೂತನಪುರು
ನನ್ನಾಗಿ ನಿರ್ಮಿಸಿದ್ದಾನೆ; ಇದ್ದ ದ್ವೇಷವನ್ನು ತ
ಶಿಲುಬೆಯ ಮೇಲೆ ಕೊಂದು ಆ ಶಿಲುಬೆ
ಮೂಲಕ ಉಭಯರನ್ನೂ ಒಂದೇ ದೇಹದಂತಾಗ ಮಾ
ದೇವರೊಂದಿಗೆ ಸಮಾಧಾನಪಡಿಸಿದ್ದಾನೆ. ಇದಲ್ಲ
ಆತನು ಬಂದು ದೂರವಾಗಿದ್ದ ನಿಮಗೂ 2)ಸಮಾ
ನವನ್ನು ಮತ್ತು ಸಮೀಪವಾಗಿದ್ದವರಿಗೂ 2)ಸಮ
ಧಾನವನ್ನು ಸಾರಿದನು. ಆತನ ಮೂಲಕ ನಾ
ನೀವೂ ಒಬ್ಬ ಆತ್ಮನನ್ನೇ ಹೊಂದಿದವರಾಗಿ ತ
ಯ ಬಳಿಗೆ ಪ್ರವೇಶಿಸುವದಕ್ಕೆ ಮಾರ್ಗವಾಯಿತ
ಹೀಗಿರಲಾಗಿ ನೀವು ಇನ್ನು ಮೇಲೆ ಪರದೇಶದವ
ಅನ್ಯರೂ ಆಗಿರದೆ ದೇವಜನರೊಂದಿಗೆ ಒಂದೇ ಸಂಸ
ನದವರೂ ದೇವರ ಮನೆಯವರೂ ಆಗಿದ್ದೀ
ಅಪೊಸ್ತಲರೂ ಪ್ರವಾದಿಗಳೂ 3)ಎಂಬ ಅಸ್ತಿ
ರದ ಮೇಲೆ ನೀವು ಮಂದಿರನೋಪಾದಿಯಲ್ಲಿ ಕ
ಲ್ಪಟ್ಟಿದ್ದೀರಿ. ಯೇಸು ಕ್ರಿಸ್ತನೇ ಮುಖ್ಯವಾ
ಮೂಲೆಗಲ್ಲು; ಆತನಲ್ಲಿ ಕಟ್ಟಡದ ಎಲ್ಲಾ ಭಾ
ಗಳು ಒಂದಕ್ಕೊಂದು ಹೊಂದಿಕೆಯಾಗಿ ಕಟ್ಟಡ
ವೃದ್ಧಿಯಾಗುತ್ತಾ ಕರ್ತನಲ್ಲಿ ಪರಿಶುದ್ಧ ದೇ
ಲಯವಾಗುತ್ತದೆ. ಆತನಲ್ಲಿ ನೀವು ಸಹ ಪವಿತ್ರಾತ್
ಮೂಲಕವಾಗಿ ದೇವರಿಗೆ ನಿವಾಸಸ್ಥಾನವಾಗುವ
ಕ್ಕಾಗಿ ನಮ್ಮ ಸಂಗಡ ಕಟ್ಟಲ್ಪಡುತ್ತಾ ಇದ್ದೀರಿ.

1) ಅಥವಾ, ಅದು ಆತನನ್ನು ಪರಿಪೂರ್ಣ ಮಾಡುತ್ತದೆ; ಮತ್ತು ಆತನ ಧೊರೆತನವು ಅದರ ಎಲ್ಲಾ ಭಾಗಗಳಲ್ಲಿ ಪರಿಪೂರ್ಣ
2) ಅಥವಾ, ಸುಕ್ಷೇಮವನ್ನು; ಅಥವಾ, ಶುಭವಾರ್ತೆಯನ್ನು. 3) ಅಥವಾ, ಹಾಕಿದ.

ಪೌಲನು ತಾನು ಹೊಂದಿಕೊಂಡ ಸತ್ಯಾರ್ಥವನ್ನು ಪ್ರಕಟಿಸುವದಕ್ಕೆ ನೇಮಕವಾದವನೂ ಅದರ ನಿಮಿತ್ತವೇ ಸೆರೆಬಿದ್ದವನೂ ಆಗಿದ್ದೇನೆಂದು ಹೇಳಿ ಅನ್ಯಜನರಾದ ಕ್ರೈಸ್ತರಿಗೋಸ್ಕರ ಪ್ರಾರ್ಥನೆ ಮಾಡಿದ್ದು.

3 ಹೀಗಿರುವದರಿಂದ ಅನ್ಯಜನರಾಗಿರುವ ನಿಮ್ಮ
ನಿಮಿತ್ತ ಕ್ರಿಸ್ತ ಯೇಸುವಿನ ಸೆರೆಯವನಾದ ಪೌಲ
ನೆಂಬ ನಾನು ನಿಮಗೋಸ್ಕರ ಪ್ರಾರ್ಥಿಸುತ್ತೇನೆ.
2-3 ನಿಮಗೋಸ್ಕರ ನಿರ್ವಹಿಸುವದಕ್ಕಾಗಿ ದೇವರು
ನನಗೆ ಕೃಪೆಯಾಗಿ ಕೊಟ್ಟ ಕೆಲಸವನ್ನೂ ಇದು
ವರೆಗೆ ಗುಪ್ತವಾಗಿದ್ದ ಒಂದು ಸಂಗತಿ ದೈವಪ್ರಕಟನೆ
ಯಿಂದ ನನಗೆ ತಿಳಿಸಲ್ಪಟ್ಟಿತೆಂಬದನ್ನೂ ನೀವು ಕೇಳಿದ್ದೀ
ರಲ್ಲಾ. ಅದನ್ನು ಕುರಿತು ನಾನು ಹಿಂದೆ ಸಂಕ್ಷೇಪ
4 ವಾಗಿ ಬರೆದಿದ್ದೇನೆ; ಬರೆದದ್ದನ್ನು ನೀವು ಓದಿನೋಡಿ
ದರೆ ಕ್ರಿಸ್ತನ ವಿಷಯವಾದ ಮರ್ಮವನ್ನು ಕುರಿತು
ನನಗಿರುವ ಗ್ರಹಿಕೆಯನ್ನು ನೀವು ತಿಳುಕೊಳ್ಳ
5 ಬಹುದು. ಆ ಮರ್ಮವು ಈ ಕಾಲದಲ್ಲಿ ದೇವರ ಪರಿ
ಶುದ್ಧ ಅಪೊಸ್ತಲರಿಗೂ ಪ್ರವಾದಿಗಳಿಗೂ ಪವಿತ್ರಾತ್ಮ
ನಿಂದ ತಿಳಿಸಲ್ಪಟ್ಟಂತೆ ಬೇರೆ ಕಾಲಗಳಲ್ಲಿದ್ದ ಜನರಿಗೆ
6 ತಿಳಿಸಲ್ಪಡಲಿಲ್ಲ. ಅದು ಯಾವದಂದರೆ, ಅನ್ಯಜನರು
ಸುವಾರ್ತೆಯ ಮೂಲಕ ಕ್ರಿಸ್ತ ಯೇಸುವಿನಲ್ಲಿರುವವ
ರಾಗಿ ಯೆಹೂದ್ಯರೊಂದಿಗೆ ಬಾಧ್ಯರೂ ಒಂದೇ
ದೇಹದೊಳಗಣ ಅಂಗಗಳೂ ಅಬ್ರಹಾಮನಿಗುಂಟಾದ
ವಾಗ್ದಾನದಲ್ಲಿ ಪಾಲುಗಾರರೂ ಆಗಿದ್ದಾರೆಂಬದೇ.
7 ದೇವರು ತನ್ನ ಶಕ್ತಿಯ ಪ್ರಯೋಗದಲ್ಲಿ ನನಗೆ
ಉಚಿತಾರ್ಥವಾಗಿ ಅನುಗ್ರಹಿಸಿದ ಕೆಲಸವನ್ನನುಸರಿಸಿ
-9 ನಾನು ಈ ಸುವಾರ್ತೆಗೆ ಸೇವಕನಾದೆನು. ನಾನು
ಕ್ರಿಸ್ತನ ಅಪ್ರಮೇಯವಾದ ಐಶ್ವರ್ಯದ ವಿಷಯ
ವಾದ ಶುಭಸಮಾಚಾರವನ್ನು ಅನ್ಯಜನರಿಗೆ ಪ್ರಸಿದ್ಧಿ
ಪಡಿಸುವ ಹಾಗೆಯೂ ಸಮಸ್ತವನ್ನು ಸೃಷ್ಟಿಸಿದ
ದೇವರಲ್ಲಿ ಆದಿಯಿಂದ ಮರೆಯಾಗಿದ್ದ ಮರ್ಮವು
ಪ್ರಕಟವಾಗುವ ವಿಧ ಎಂಥದೆಂದು ತಿಳಿಸುವ ಹಾಗೆಯೂ
ದೇವಜನರೊಳಗೆ ಅತ್ಯಲ್ಪನಾದ ನನಗೆ ಅನುಗ್ರಹ
0-11 ಸೋಣವಾಯಿತು. ದೇವರು ನಮ್ಮ ಕರ್ತನಾದ
ಕ್ರಿಸ್ತ ಯೇಸುವಿನಲ್ಲಿ ಅನಾದಿಕಾಲದಿಂದ ಮಾಡಿದ
ಸಂಕಲ್ಪದ ಮೇರೆಗೆ ತನ್ನ ನಾನಾ ವಿಧವಾದ ಜ್ಞಾನವು
ಪರಲೋಕದಲ್ಲಿ ರಾಜತ್ವಗಳಿಗೂ ಅಧಿಕಾರಗಳಿಗೂ
ಈಗ ಕ್ರೈಸ್ತ ಸಭೆಯ ಮೂಲಕ ಗೊತ್ತಾಗಬೇಕೆಂಬದನ್ನು
2 ಉದ್ದೇಶಿಸಿದ್ದನು. ದೇವರ ಸಾನ್ನಿಧ್ಯ ಸೇರುವದಕ್ಕೆ
ನಮಗಿರುವ ಭರವಸವುಳ್ಳ ಧೈರ್ಯವು ಕ್ರಿಸ್ತನಲ್ಲಿ
ಇಟ್ಟಿರುವ ನಂಬಿಕೆಯ ಮೂಲಕ ಆತನಲ್ಲಿಯೇ ನಮಗೆ
3 ಉಂಟಾಯಿತು. ಆದದರಿಂದ ನಿಮ್ಮ ನಿಮಿತ್ತ ನನಗೆ
ಉಂಟಾದ ಕಷ್ಟಗಳನ್ನು ನೋಡಿ ನೀವು ಧೈರ್ಯಗೆಡ
ಬಾರದೆಂದು ನಿಮ್ಮನ್ನು ಬೇಡಿಕೊಳ್ಳುತ್ತೇನೆ. ಈ
ಕಷ್ಟಗಳು ನಿಮಗೆ ಘನವನ್ನು ಉಂಟುಮಾಡುತ್ತವಷ್ಟೆ.
4-15 ಹೀಗಿರಲಾಗಿ 1)ಯಾವ ತಂದೆಯಿಂದ ಭೂಪರ
ಲೋಕಗಳಲ್ಲಿರುವ ಪ್ರತಿ ಜನವೂ ಹೆಸರು ತೆಗೆದುಕೊ
ಳ್ಳುತ್ತದೋ ಆ ತಂದೆಯ ಮುಂದೆ ನಾನು ಮೊಣಕಾಲೂ
ರಿಕೊಂಡು—ನೀವು ದೇವರಾತ್ಮನ ಮೂಲಕ ಅಂತರ್ಯ 16
ದಲ್ಲಿ ವಿಶೇಷಬಲ ಹೊಂದಿದವರಾಗುವ ಹಾಗೆಯೂ
ಕ್ರಿಸ್ತನು ನಿಮ್ಮ ನಂಬಿಕೆಯ ಮೂಲಕ ನಿಮ್ಮ ಹೃದ 17
ಯಗಳಲ್ಲಿ ವಾಸಮಾಡುವ ಹಾಗೆಯೂ ಆತನು ತನ್ನ
ಮಹಿಮಾತಿಶಯದ ಪ್ರಕಾರ ಅನುಗ್ರಹಿಸಲಿ; ನೀವು 18
ದೇವರ ಪ್ರೀತಿಯಲ್ಲಿ ನೆಲೆಗೊಂಡು ನಿಂತು 2)ಅದರ
ಅಗಲ ಉದ್ದ ಎತ್ತರ ಆಳ ಎಷ್ಟೆಂಬದನ್ನು ದೇವಜನ
ರೆಲ್ಲರೊಂದಿಗೆ ಗ್ರಹಿಸಲೂ ಜ್ಞಾನಕ್ಕೆ ಮೀರುವ ಕ್ರಿಸ್ತನ 19
ಪ್ರೀತಿಯನ್ನು ತಿಳುಕೊಳ್ಳಲೂ ಪೂರ್ಣಶಕ್ತರಾಗಿದ್ದು
ದೇವರ ಸಂಪೂರ್ಣತೆಯ ಮಟ್ಟಿಗೂ ಪರಿಪೂರ್ಣರಾ
ಗುವ ಹಾಗೆ ನಿಮಗೆ ದಯಪಾಲಿಸಲಿ ಎಂದು ಆತನನ್ನು
ಬೇಡಿಕೊಳ್ಳುತ್ತೇನೆ.
ನಮ್ಮಲ್ಲಿ ಕಾರ್ಯಸಾಧಿಸುವ ತನ್ನ ಶಕ್ತಿಯ 20
ಪ್ರಕಾರ ನಾವು ಬೇಡುವದಕ್ಕಿಂತಲೂ ಯೋಚಿಸುವ
ದಕ್ಕಿಂತಲೂ ಅತ್ಯಧಿಕವಾದದ್ದನ್ನು ಮಾಡಲು ಶಕ್ತ 21
ನಾದ ದೇವರಿಗೆ ಸಭೆಯಲ್ಲಿಯೂ ಕ್ರಿಸ್ತ ಯೇಸು
ವಿನಲ್ಲಿಯೂ ತಲತಲಾಂತರಕ್ಕೂ ಯುಗಯುಗಾಂತ
ರಕ್ಕೂ ಸ್ತೋತ್ರ. ಆಮೆನ್.

ಸಭೆಯವರಿಗೆ ನಾನಾ ವರಗಳಿದ್ದರೂ ಎಲ್ಲರು ಐಕ್ಯವಾಗಿರಬೇಕು.

ನೀವು ದೇವರಿಂದ ಕರೆಯಲ್ಪಟ್ಟವರಾದ ಕಾರಣ 4
ಯೋಗ್ಯರಾಗಿ ನಡೆದುಕೊಳ್ಳಬೇಕೆಂದು ಕರ್ತನ
ಸೇವೆಯಲ್ಲಿ ಸೆರೆಯವನಾದ ನಾನು ನಿಮ್ಮನ್ನು ಪ್ರ
ಬೋಧಿಸುತ್ತೇನೆ. ನೀವು ಪೂರ್ಣ ವಿನಯ ಸಾತ್ವಿಕ 2
ತ್ವಗಳಿಂದಲೂ ದೀರ್ಘಶಾಂತಿಯಿಂದಲೂ ಕೂಡಿದವ
ರಾಗಿ ಪ್ರೀತಿಯಿಂದ ಒಬ್ಬರನ್ನೊಬ್ಬರು ಸಹಿಸಿಕೊ 3
ಳ್ಳಿರಿ. ಸಮಾಧಾನವೆಂಬ ಬಂಧನದಿಂದ ಕಟ್ಟಲ್ಪಟ್ಟ
ವರಾಗಿದ್ದು ಪವಿತ್ರಾತ್ಮನಿಂದುಂಟಾಗುವ ಐಕ್ಯವನ್ನು
ಕಾಪಾಡಿಕೊಳ್ಳುವದಕ್ಕೆ ಆಸಕ್ತರಾಗಿರಿ. ನೀವೆಲ್ಲರೂ 4
ಒಂದೇ ದೇಹಕ್ಕೆ ಸೇರಿದವರು, ಒಬ್ಬನೇ ಆತ್ಮ
ನನ್ನು ಹೊಂದಿದವರು, ಒಂದೇ ಪದವಿಯನ್ನು ನಿರೀ 5
ಕ್ಷಿಸುವದಕ್ಕೆ ಕರೆಯಲ್ಪಟ್ಟವರು; ನಿಮ್ಮೆಲ್ಲರಿಗೂ
ಕರ್ತನು ಒಬ್ಬನೇ, ಭರವಸವು ಒಂದೇ, ಸ್ನಾನ
ದೀಕ್ಷೆ ಒಂದೇ. ಎಲ್ಲರಿಗೂ ತಂದೆಯಾಗಿರುವ ದೇವ 6
ರು ಒಬ್ಬನೇ; ಆತನು ಎಲ್ಲರ ಮೇಲಿರುವವನೂ
ಎಲ್ಲರ ಮುಖಾಂತರ ಕಾರ್ಯ ನಡಿಸುವವನೂ ಎಲ್ಲ
ರಲ್ಲಿ ವಾಸಿಸುವವನೂ ಆಗಿದ್ದಾನೆ.
ಆದರೆ ಕ್ರಿಸ್ತನು ನಮ್ಮಲ್ಲಿ ಒಬ್ಬೊಬ್ಬನಿಗೆ ಅನು 7
ಗ್ರಹಿಸಿದ ಪ್ರಕಾರವೇ ಅವನವನಿಗೆ ಕೃಪಾವರವು ದೊರ
ಕಿದೆ. ಆದದರಿಂದ— 8

ಆತನು ಉನ್ನತಸ್ಥಾನಕ್ಕೆ ಏರಿದಾಗ
ತಾನು ಜಯಿಸಿದ್ದ ಬಹುಜನರನ್ನು ಸೆರೆಹಿಡು
  ಕೊಂಡು ಹೋಗಿ
ಮನುಷ್ಯರಿಗೆ ದಾನಗಳನ್ನು ಮಾಡಿದನು

1) ಅಥವಾ, ಪ್ರತಿ ಜನವೂ ತನ್ನ ಮೂಲಜನಕನಿಂದ ಹೆಸರು ತೆಗೆದುಕೊಳ್ಳುತ್ತದಷ್ಟೆ; ಯಾವಾತನು ದೇವಜನರಾದ ನಮಗೆ ಮೂಲ ನಕನಾಗಿದ್ದಾನೋ. 2) ಅಥವಾ, ಆ ಸತ್ಯಾರ್ಥದ.

9 ಎಂಬದಾಗಿ ಪ್ರವಾದಿಯು ಹೇಳುತ್ತಾನೆ. (ಏರಿಹೋ
ದನೆಂದು ಹೇಳಿದ್ದರಲ್ಲಿ ಭೂಮಿಯ ಅಧೋಭಾಗಕ್ಕೆ
10 ಇಳಿದಿದ್ದನೆಂತಲೂ ಹೇಳಿದ ಹಾಗಾಯಿತಲ್ಲಾ. ಇಳಿದು
ಬಂದವನು ಮೇಲಣ ಎಲ್ಲಾ ಲೋಕಗಳಿಗಿಂತ ಉನ್ನ
ತವಾಗಿ ಏರಿಹೋದವನೇ. ಆದದರಿಂದ ಸಮಸ್ತ
11 ಲೋಕಗಳನ್ನು ತುಂಬಿದವನಾದನು.) ಆತನು ಕೆಲ
ವರನ್ನು ಅಪೊಸ್ತಲರನ್ನಾಗಿಯೂ ಕೆಲವರನ್ನು ಪ್ರವಾದಿ
ಗಳನ್ನಾಗಿಯೂ ಕೆಲವರನ್ನು ಸೌವಾರ್ತಿಕರನ್ನಾಗಿ
ಯೂ ಕೆಲವರನ್ನು ಸಭಾಪಾಲಕರನ್ನಾಗಿಯೂ ಉಪ
13 ದೇಶಿಗಳನ್ನಾಗಿಯೂ ಅನುಗ್ರಹಿಸಿದನು. ನಾವೆಲ್ಲರು
ನಂಬಿಕೆಯಿಂದಲೂ ದೇವಕುಮಾರನ ವಿಷಯವಾದ
ಜ್ಞಾನದಿಂದಲೂ ಉಂಟಾಗುವ ಐಕ್ಯವನ್ನು ಹೊಂದಿ
ಪ್ರವೀಣತೆಗೆ ಬಂದವರಾಗಿ ಕ್ರಿಸ್ತನ ಪರಿಪೂರ್ಣತೆ
12 ಯೆಂಬ ಪ್ರಮಾಣವನ್ನು ಮುಟ್ಟುವ ತನಕ ದೇವ
ಜನರನ್ನು ಯೋಗ್ಯಸ್ಥಿತಿಗೆ ತರುವ ಕೆಲಸಕ್ಕೋಸ್ಕರವೂ
ಸಭೆಯ ಸೇವೆಗೋಸ್ಕರವೂ ಕ್ರಿಸ್ತನ ದೇಹವು ಅಭಿವೃ
ದ್ಧಿಯಾಗುವದಕ್ಕೋಸ್ಕರವೂ ಆತನು ಇವರನ್ನು ಅನು
14 ಗ್ರಹಿಸಿದನು. ನಾವು ಇನ್ನು ಮೇಲೆ ಕೂಸುಗಳಾಗಿರ
ಬಾರದು; ದುರ್ಜನರ ವಂಚನೆಗೂ ದುರ್ಬೋಧಕರ
ಕುಯುಕ್ತಿಗೂ ಒಳಬಿದ್ದು ನಾನಾ ಉಪದೇಶಗಳೆಂಬ
ಕಂಗೆಟ್ಟು ಗಾಳಿಯಿಂದ ಅತ್ತಿತ್ತ ನೂಕಿಸಿಕೊಂಡು
15 ಹೋಗುವವರ ಹಾಗಿರಬಾರದು. ಪ್ರೀತಿಯಿಂದ ಸತ್ಯ
ವನ್ನನುಸರಿಸುತ್ತಾ ಬೆಳೆದು ಎಲ್ಲಾ ವಿಷಯಗಳಲ್ಲಿ
ಯೂ ಕ್ರಿಸ್ತನ ಐಕ್ಯವನ್ನು ಹೊಂದುತ್ತಾ ಬರಬೇಕು.
16 ಆತನೇ ಶಿರಸ್ಸು; ದೇಹವೆಲ್ಲಾ ಆತನ ಧೊರೆತನದ
ಲ್ಲಿದ್ದು ತನ್ನಲ್ಲಿರುವ ಎಲ್ಲಾ ನರಗಳಿಂದ ಬಿಗಿಯಾಗಿ
ಜೋಡಿಸಲ್ಪಟ್ಟು ಪ್ರತಿ ಅಂಗದಿಂದ ಅದರದರ ಶಕ್ತಿಯ
ಪ್ರಕಾರ ಸಹಾಯಹೊಂದಿ ಪ್ರೀತಿಯಿಂದ ಐಕ್ಯವಾಗಿ
ದ್ದು ಕ್ಷೇಮಾಭಿವೃದ್ಧಿಯನ್ನು ಹೊಂದುತ್ತದೆ.

ದೇವರಿಂದ ಕರಿಸಿಕೊಂಡವರು ಅಜ್ಞಾನಿಗಳ ದುರ್ನಡತೆಯನ್ನು
ಬಿಟ್ಟುಬಿಟ್ಟು ಯೋಗ್ಯರಾಗಿ ನಡೆಯಬೇಕು.
(ಕೊಲೊ. 3. 5—17.)

17 ಆದದರಿಂದ ಅನ್ಯಜನರು ನಡೆದುಕೊಳ್ಳುವ ಪ್ರ
ಕಾರ ನೀವು ಇನ್ನು ಮೇಲೆ ನಡೆದುಕೊಳ್ಳಬಾರದೆಂದು
ಕರ್ತನಲ್ಲಿರುವವನಾಗಿ ನಿಮಗೆ ಖಂಡಿತವಾಗಿ ಹೇಳು
18 ತ್ತೇನೆ. ಅವರು ನಿಷ್ಪ್ರಯೋಜನವಾದ ಬುದ್ಧಿಯು
ಳ್ಳವರಾಗಿ ನಡೆದುಕೊಳ್ಳುತ್ತಾರೆ; ಅವರ ಮನಸ್ಸು
ಮೊಬ್ಬಾಗಿ ಹೋಗಿದೆ, ಅವರು ತಮ್ಮ ಹೃದಯದ
ಕಾಠಿಣ್ಯದ ನಿಮಿತ್ತದಿಂದಲೂ ತಮ್ಮಲ್ಲಿರುವ ಅಜ್ಞಾನದ
ನಿಮಿತ್ತದಿಂದಲೂ ದೇವರಿಂದಾಗುವ ಜೀವಕ್ಕೆ ಅನ್ಯ
19 ರಾಗಿದ್ದಾರೆ. ಅವರು ತಮ್ಮ ದುಸ್ಥಿತಿಗಾಗಿ ಸ್ವಲ್ಪವೂ
ಚಿಂತಿಸದೆ ತಮ್ಮನ್ನು ಬಂಡುತನಕ್ಕೆ ಒಪ್ಪಿಸಿಕೊಟ್ಟು
ಎಲ್ಲಾ ವಿಧವಾದ ಅಶುದ್ಧಕೃತ್ಯಗಳನ್ನು ಅತ್ಯಾಶೆಯಿಂದ
20 ನಡಿಸುವವರಾಗಿದ್ದಾರೆ. ನೀವಾದರೋ [1]ಕ್ರಿಸ್ತನ
21 ಧರ್ಮವನ್ನು ಅಂಥದೆಂದು ಕಲಿತುಕೊಳ್ಳಲಿಲ್ಲ. ಆತ
ನನ್ನೇ ಕೇಳಿದಿರಲ್ಲಾ, ಆತನಲ್ಲಿಯೇ ಉಪದೇಶವನ್ನು

ಹೊಂದಿದಿರಲ್ಲಾ. ಯೇಸುವಿನಲ್ಲಿರುವ ಸತ್ಯೋಪದೆ
ವು ಯಾವದಂದರೆ—ನೀವು ನಿಮ್ಮ ಹಿಂದಿನ ನ
ಯನ್ನು ಅನುಸರಿಸದೆ ಪೂರ್ವಸ್ವಭಾವವನ್ನು ತೆಗೆ
ಹಾಕಿಬಿಡಬೇಕು; ಅದು ಮೋಸಕರವಾದ ದುರಾ
ಳಿಂದ ಕೆಟ್ಟುಹೋಗುವಂಥದು. ನೀವು ನಿಮ್ಮ ಅ
ರ್ಯದಲ್ಲಿ ಹೊಸಬರಾಗಿ ನೂತನಸ್ವಭಾವವ
ಧರಿಸಿಕೊಳ್ಳಿರಿ. ಆ ಸ್ವಭಾವವು ದೇವರ ಹೋಲಿಕೆ
ಮೇರೆಗೆ ಸತ್ಯಾನುಗುಣವಾದ ನೀತಿಯುಳ್ಳದ್ದಾ
ಯೂ ದೇವಭಯವುಳ್ಳದ್ದಾಗಿಯೂ ನಿರ್ಮಿಸಲ್ಪಟ್ಟಿ
ಆದಕಾರಣ ಸುಳ್ಳಾಡುವದನ್ನು ಬಿಟ್ಟುಬಿ
ಪ್ರತಿಯೊಬ್ಬನು ತನ್ನ ನೆರೆಯವನ ಸಂಗಡ ಸತ್ಯವ
ಆಡಲಿ; ಯಾಕಂದರೆ ನಾವು ಒಬ್ಬರಿಗೊಬ್ಬರು ಅ
ಗಳಾಗಿದ್ದೇವಲ್ಲಾ. ಕೋಪಮಾಡಬೇಕಾದರೂ ಪ
ಮಾಡಬೇಡಿರಿ; ಸೂರ್ಯನು ಮುಳುಗುವದಕ್ಕ
ಮುಂಚೆ ನಿಮ್ಮ ಸಿಟ್ಟು ತೀರಲಿ; ಸೈತಾನನಿಗೆ ಅ
ಕಾಶಕೊಡಬೇಡಿರಿ. ಕಳವು ಮಾಡುವವನು ಇನ
ಮೇಲೆ ಕಳವುಮಾಡದೆ ಕೈಯಿಂದ ಯಾವದೊಂ
ಒಳ್ಳೇ ಉದ್ಯೋಗವನ್ನು ಮಾಡಿ ದುಡಿಯಲಿ;
ಕಷ್ಟದಲ್ಲಿರುವವರಿಗೆ ಕೊಡುವದಕ್ಕೆ ಅವನಿಂದಾಗ
ದು. ನಿಮ್ಮ ಬಾಯೊಳಗಿಂದ ಯಾವ ಕೆಟ್ಟ ಮಾ
ಹೊರಡಬಾರದು; ಭಕ್ತಿಯನ್ನು ವೃದ್ಧಿಮಾಡುವ
ಕಾಲೋಚಿತವಾದ ಮಾತು ಇದ್ದರೆ ಕೇಳುವ
ಹಿತಕ್ಕಾಗಿ ಅದನ್ನು ಆಡಿರಿ. ದೇವರ ಪವಿತ್ರಾತ್ಮನ
ದುಃಖಪಡಿಸ ಬೇಡಿರಿ; ಆತನಲ್ಲಿಯೇ ವಿಮೋಚನೆ
ದಿನಕ್ಕಾಗಿ ಮುದ್ರೆಹೊಂದಿದ್ದೀರಲ್ಲಾ. ಎ
ದ್ವೇಷ ಕೋಪ ಕ್ರೋಧ ಕಲಹ ದೂಷಣೆ ಇವುಗಳನ
ಸಕಲ ವಿಧವಾದ ದುಷ್ಟತನವನ್ನೂ ನಿಮ್ಮಿಂದ ದ
ಮಾಡಿರಿ. ಒಬ್ಬರಿಗೊಬ್ಬರು ಉಪಕಾರಿಗಳಾಗಿಯ
ಕರುಣೆಯುಳ್ಳವರಾಗಿಯೂ ಕ್ಷಮಿಸುವವರಾಗಿಯ
ಇರ್ರಿ. ದೇವರು ನಿಮಗೆ ಕ್ರಿಸ್ತನಲ್ಲಿ ಕ್ಷಮಿಸಿ
ನಲ್ಲಾ; ಆದದರಿಂದ ದೇವರ ಪ್ರಿಯರಾದ ಮಕ್ಕಳ
ತಕ್ಕ ಹಾಗೆ ಆತನನ್ನು ಅನುಸರಿಸುವವರಾಗಿ
ಕ್ರಿಸ್ತನು ನಿಮ್ಮನ್ನು ಪ್ರೀತಿಸಿ ನಮ್ಮೆಲ್ಲರಿಗೋಸ
ತನ್ನನ್ನೇ ದೇವರಿಗೆ ಸುಗಂಧವಾಸನೆಯಾದ ಕಾ
ಯಾಗಿಯೂ ಯಜ್ಞವಾಗಿಯೂ ಸಮರ್ಪಿಸಿಕೊ
ಪ್ರಕಾರ ನೀವೂ ಪ್ರೀತಿಯಲ್ಲಿ ನಡೆದುಕೊಳ್ಳಿರಿ.
ಜಾರತ್ವ ಯಾವ ವಿಧವಾದ ಬಂಡುತನ ದ್ರವ್
ಇವುಗಳ ಸುದ್ದಿಯಾದರೂ ನಿಮ್ಮಲ್ಲಿ ಇರಬಾರದ
ಇವುಗಳಿಗೆ ದೂರವಾಗಿರುವದೇ ದೇವಜನರಿಗೆ ಯೋ
ವಾದದ್ದು. ಹೊಲಸು ಮಾತು ಹುಚ್ಚು ಮಾ
ಕುಚೋದ್ಯ ಮಾತು ಇವು ಬೇಡ, ಅಯುಕ್ತವಾಗಿ
ಇವುಗಳನ್ನು ಬಿಟ್ಟು ದೇವರಿಗೆ ಉಪಕಾರಸ್ತುತಿವ
ಡುವದು ಉತ್ತಮ. ಜಾರರು ದುರಾಚಾರಿಗ
ವಿಗ್ರಹಾರಾಧಕರಂತಿರುವ ಲೋಭಿಗಳು ಇವರ
ಒಬ್ಬರಿಗಾದರೂ ಕ್ರಿಸ್ತನ ಮತ್ತು ದೇವರ ರಾಜ್ಯದ
ಬಾಧ್ಯತೆ ಇಲ್ಲವೇ ಇಲ್ಲವೆಂದು ನೀವು ಚೆನ್ನಾಗಿ ಬಲ್ಲಿ
ಲ್ಲವೇ. ಹುರುಳಿಲ್ಲದ ಮಾತುಗಳನ್ನಾಡುವವರಿ
ಕಿವಿಗೊಟ್ಟು ಮೋಸಹೋಗಬೇಡಿರಿ; ಅಂಥ ಕೃ

1) ಮೂಲ, ಕ್ರಿಸ್ತನನ್ನು.

ಗಳ ನಿಮಿತ್ತದಿಂದ ದೇವರ ಕೋಪವು ಆತನಿಗೆ ಅವಿಧೇ
ಯರಾಗಿರುವವರ ಮೇಲೆ ಬರುತ್ತದೆ. ನೀವು ಅವರೊಂ
ದಿಗೆ ಪಾಲುಗಾರರಾಗಿರಬೇಡಿರಿ.
ನೀವು ಹಿಂದಿನ ಕಾಲದಲ್ಲಿ ಕತ್ತಲೆಯಾಗಿದ್ದಿರಿ,
ಆದರೆ ಈಗ ನೀವು ಕ್ರಿಸ್ತನಲ್ಲಿದ್ದು ಬೆಳಕಾಗಿದ್ದೀರಿ.
ಬೆಳಕಿನವರಂತೆ ನಡೆದುಕೊಳ್ಳಿರಿ. ಬೆಳಕಿನ ಫಲವು
ಉಪಕಾರದಲ್ಲಿಯೂ ನೀತಿಯಲ್ಲಿಯೂ ಸತ್ಯದಲ್ಲಿ
ಯೂ ಕಾಣಿಸಿಕೊಳ್ಳುತ್ತದೆ. ಕರ್ತನಿಗೆ ಮೆಚ್ಚಿಗೆಯಾ
ದದ್ದು ಏನೆಂಬದನ್ನು ಪರಿಶೋಧಿಸಿ ತಿಳುಕೊಳ್ಳಿರಿ.
ಕತ್ತಲೆಗೆ ಸಂಬಂಧವಾದ ಕೃತ್ಯಗಳಿಂದ ಯಾವ
ಪ್ರಯೋಜನವೂ ಬರಲಾರದು; ಅವುಗಳಲ್ಲಿ ಪಾಲು
ಗಾರರಾಗಿರದೆ ಅವುಗಳನ್ನು ಬೈಲಿಗೆ ತಂದು ಖಂಡಿಸಿರಿ.
ಆ ಜನರು ರಹಸ್ಯವಾಗಿ ನಡಿಸುವ ಕೆಲಸಗಳನ್ನು
ಕುರಿತು ಮಾತಾಡುವದಾದರೂ ನಾಚಿಕೆಗೆ ಕಾರಣವಾ
ಗಿದೆ. ಬೆಳಕಿನಿಂದ ಎಲ್ಲಾ ಕೃತ್ಯಗಳ ನಿಜಗುಣ
ತೋರಿಬರುತ್ತದೆ; ಅದರಿಂದ ಕೆಟ್ಟದ್ದು ಕೆಟ್ಟದ್ದೇ ಎಂದು
ಕಾಣಿಸುವದು. 1)ಪ್ರಕಟವಾಗಿರುವದೆಲ್ಲಾ ಬೆಳಕಿಗೆ
ಸಂಬಂಧವಾದದ್ದು. ಆದದರಿಂದ—

ನಿದ್ರೆ ಮಾಡುವವನೇ, ಎಚ್ಚರವಾಗು!
ಸತ್ತವರನ್ನು ಬಿಟ್ಟು ಏಳು!
ಕ್ರಿಸ್ತನು ನಿನಗೆ ಪ್ರಕಾಶ ಕೊಡುವನು

ಎಂದು ಹೇಳಿಯದೆ.
ಆದಕಾರಣ ನೀವು ನಡಕೊಳ್ಳುವ ರೀತಿಯನ್ನು
ಕುರಿತು ಚೆನ್ನಾಗಿ ನೋಡಿಕೊಳ್ಳಿರಿ. ಜ್ಞಾನವಿಲ್ಲದವ
ರಾಗಿರದೆ ಜ್ಞಾನವಂತರಾಗಿರ್ರಿ. ಈ ದಿನಗಳು ಕೆಟ್ಟವು
ಗಳಾಗಿವೆ; ಆದದರಿಂದ ಕಾಲವನ್ನು ಸುಮ್ಮನೆ ಕಳ
ಕೊಳ್ಳದೆ ಅದನ್ನು ಬೆಲೆಯುಳ್ಳದ್ದೆಂದು ಉಪಯೋಗಿಸಿ
ಕೊಳ್ಳಿರಿ. ಮತ್ತು ಬುದ್ಧಿಹೀನರಾಗಿ ನಡೆಯದೆ
ಕರ್ತನ ಚಿತ್ತವೇನೆಂಬದನ್ನು ವಿಚಾರಿಸಿ ತಿಳಿದವ
ರಾಗಿರ್ರಿ. ಮದ್ಯಪಾನ ಮಾಡಿ ಮತ್ತರಾಗಬೇಡಿರಿ;
ಅದರಿಂದ ಪಟಿಂಗತನವು ಹುಟ್ಟುತ್ತದೆ. ಆದರೆ
ಪವಿತ್ರಾತ್ಮಭರಿತರಾಗಿದ್ದು ಕೀರ್ತನೆಗಳಿಂದಲೂ ಆತ್ಮ
ಸಂಬಂಧವಾದ ಪದಗಳಿಂದಲೂ ಒಬ್ಬರಿಗೊಬ್ಬರು
ಮಾತಾಡಿಕೊಳ್ಳುತ್ತಾ ನಿಮ್ಮ ಹೃದಯಗಳಲ್ಲಿ ಕರ್ತ
ನಿಗೆ ಗಾನಮಾಡುತ್ತಾ ಕೀರ್ತನೆ ಹಾಡುತ್ತಾ ಯಾವಾ
ಗಲೂ ಎಲ್ಲಾ ಕಾರ್ಯಗಳಿಗೋಸ್ಕರ ನಮ್ಮ ಕರ್ತ
ನಾದ ಯೇಸು ಕ್ರಿಸ್ತನ ಹೆಸರಿನಲ್ಲಿ ತಂದೆಯಾದ ದೇವ
ರಿಗೆ ಸ್ತೋತ್ರ ಮಾಡುತ್ತಾ ಕ್ರಿಸ್ತನಿಗೆ ಭಯಪಡುವವ
ರಾಗಿದ್ದು ಒಬ್ಬರಿಗೊಬ್ಬರು ವಿನಯವುಳ್ಳವರಾಗಿ
ನಡೆದುಕೊಳ್ಳಿರಿ.

ಗಂಡಹೆಂಡತಿಯರೂ ತಂದೆಗಳೂ ಮಕ್ಕಳೂ ಯಜಮಾನರೂ
ದಾಸರೂ ನಡೆಯಬೇಕಾದ ರೀತಿ.
(ಕೊಲೊ. 3. 18—4. 1.)

ಸ್ತ್ರೀಯರೇ, ನೀವು ಕರ್ತನಿಗೆ ಹೇಗೋ ಹಾಗೆ
ಯೇ ನಿಮ್ಮನಿಮ್ಮ ಗಂಡಂದಿರಿಗೆ ಅಧೀನರಾಗಿರ್ರಿ.
ಕ್ರಿಸ್ತನು ಸಭೆಗೆ ತಲೆಯಾಗಿರುವ ಪ್ರಕಾರವೇ
ಗಂಡನು ಹೆಂಡತಿಗೆ ತಲೆಯಾಗಿದ್ದಾನೆ. ಕ್ರಿಸ್ತ
ನೋ ಸಭೆಯೆಂಬ ದೇಹಕ್ಕೆ ರಕ್ಷಕನಾಗಿದ್ದಾನೆ. ಅದಿ 24
ರಲಿ; ಸಭೆಯು ಕ್ರಿಸ್ತನಿಗೆ ಹೇಗೆ ಅಧೀನವಾಗಿದೆಯೋ
ಹಾಗೆಯೇ ಸ್ತ್ರೀಯರು ತಮ್ಮತಮ್ಮ ಗಂಡಂದಿರಿಗೆ ಎಲ್ಲಾ
ವಿಷಯಗಳಲ್ಲಿ ಅಧೀನರಾಗಿರಬೇಕು.
ಪುರುಷರೇ, ಕ್ರಿಸ್ತನು ಸಭೆಯನ್ನು ಪ್ರೀತಿಸಿದ ಪ್ರಕಾ 25
ರವೇ ನಿಮ್ಮನಿಮ್ಮ ಹೆಂಡತಿಯರನ್ನು ಪ್ರೀತಿಸಿರಿ. 26
ಆತನು ಅದನ್ನು ಪ್ರತಿಷ್ಠೆಪಡಿಸುವದಕ್ಕಾಗಿ ತನ್ನನ್ನು
ಒಪ್ಪಿಸಿಕೊಟ್ಟನು. ಅದನ್ನು ಕಳಂಕ ಸುಕ್ಕು ಮುಂ 27
ತಾದ್ದೊಂದೂ ಇಲ್ಲದ ಕನ್ನಿಕೆಯೋ ಎಂಬಂತೆ ಪರಿಶು
ದ್ಧವೂ ನಿರ್ದೋಷವೂ ಮಹಿಮೆಯುಳ್ಳದ್ದೂ ಆಗಿ
ರುವ ಸಭೆಯನ್ನಾಗಿ ತನ್ನೆದುರಿನಲ್ಲಿ ನಿಲ್ಲಿಸಿಕೊಳ್ಳಬೇ
ಕೆಂದು ವಾಕ್ಯೋಪದೇಶ ಸಹಿತವಾದ ಜಲ
ಸ್ನಾನವನ್ನು ಮಾಡಿಸಿ ಶುದ್ಧಮಾಡಿದನು. ಹಾಗೆಯೇ 28
ಪುರುಷರು ಸಹ ಸ್ವಂತ ಶರೀರವನ್ನು ಪ್ರೀತಿಸಿಕೊ
ಳ್ಳುವ ಪ್ರಕಾರವೇ ತಮ್ಮ ಹೆಂಡತಿಯರನ್ನು ಪ್ರೀತಿಸುವ
ಹಂಗಿನವರಾಗಿದ್ದಾರೆ. ತನ್ನ ಹೆಂಡತಿಯನ್ನು ಪ್ರೀತಿ
ಸುವವನು ತನ್ನನ್ನೇ ಪ್ರೀತಿಸಿಕೊಳ್ಳುವವನಾಗಿದ್ದಾನೆ.
ಯಾರೂ ಎಂದೂ ಸ್ವಶರೀರವನ್ನು ಹಗೆಮಾಡಿದ್ದಿಲ್ಲ; 29
ಎಲ್ಲರೂ ತಮ್ಮ ಶರೀರಗಳನ್ನು ಪೋಷಿಸಿ ಸಂರಕ್ಷಿಸು
ತ್ತಾರೆ. ಯಾವ ದೇಹಕ್ಕೆ ನಾವು ಅಂಗಗಳಾಗಿ 30
ದ್ದೇವೋ ಸಭೆಯೆಂಬ ಆ ದೇಹವನ್ನು ಕ್ರಿಸ್ತನು ಹಾಗೆ
ಯೇ ಪೋಷಿಸಿ ಸಂರಕ್ಷಿಸುತ್ತಾನಲ್ಲಾ. ಇದರ ನಿಮಿತ್ತ 31
ದಿಂದ ಪುರುಷನು ತಂದೆತಾಯಿಗಳನ್ನು ಬಿಟ್ಟು ತನ್ನ
ಹೆಂಡತಿಯನ್ನು ಸೇರಿಕೊಳ್ಳುವನು; ಅವರಿಬ್ಬರೂ
ಒಂದೇ ಶರೀರವಾಗಿರುವರು ಎಂದು ಬರೆದದೆ. ನಾನು 32
ಕ್ರಿಸ್ತನಿಗೂ ಸಭೆಗೂ ಇರುವ ಸಂಬಂಧವನ್ನು ಕುರಿತು
ಮಾತಾಡುತ್ತಾ ಇದ್ದೇನೆ; ಇದು ವರೆಗೆ ಗುಪ್ತವಾ
ಗಿದ್ದ ಈ ಸತ್ಯಾರ್ಥವು ಬಹು ಗಂಭೀರವಾದದ್ದು. ಅದಿ 33
ರಲಿ; ನಿಮ್ಮಲ್ಲಿ ಪ್ರತಿ ಪುರುಷನು ತನ್ನನ್ನು ಪ್ರೀತಿ
ಸಿಕೊಳ್ಳುವಂತೆಯೇ ತನ್ನ ಹೆಂಡತಿಯನ್ನೂ ಪ್ರೀತಿಸ
ಬೇಕು; ಪ್ರತಿ ಹೆಂಡತಿಯು ತನ್ನ ಗಂಡನಿಗೆ ಭಯ
ಭಕ್ತಿಯಿಂದ ನಡೆದುಕೊಳ್ಳಬೇಕು.
ಮಕ್ಕಳೇ, ನೀವು ಕರ್ತನಲ್ಲಿರುವವರಿಗೆ ತಕ್ಕ 6
ಹಾಗೆ ನಿಮ್ಮ ತಂದೆತಾಯಿಗಳ ಮಾತನ್ನು ಕೇಳಬೇಕು;
ಇದು ಧರ್ಮ. ವಾಗ್ದಾನಸಹಿತವಾದ ಮೊದಲನೆಯ 2
ಆಜ್ಞೆಯನ್ನು ಕೇಳಿರಿ—ನಿನ್ನ ತಂದೆತಾಯಿಗಳನ್ನೂ
ಸನ್ಮಾನಿಸಬೇಕು; ಸನ್ಮಾನಿಸಿದರೆ ನಿನಗೆ ಮೇಲಾಗು 3
ವದು, ನೀನು ಭೂಮಿಯ ಮೇಲೆ ಬಹುಕಾಲ ಬದು
ಕುವಿ.
ತಂದೆಗಳೇ, ನಿಮ್ಮ ಮಕ್ಕಳಿಗೆ ಕೋಪವನ್ನೆಬ್ಬಿ 4
ಸದೆ ಕರ್ತನಿಗೆ ಮೆಚ್ಚಿಗೆಯಾಗಿರುವ ಬಾಲಶಿಕ್ಷೆಯನ್ನೂ
ಬಾಲೋಪದೇಶವನ್ನೂ ಮಾಡುತ್ತಾ ಅವರನ್ನೂ ಸಾಕಿ
ಸಲಹಿರಿ.
2)ದಾಸತ್ವದಲ್ಲಿರುವವರೇ, ಈ ಲೋಕದಲ್ಲಿ ನಿಮಗೆ 5
ಯಜಮಾನರಾಗಿರುವವರಿಗೆ ಕ್ರಿಸ್ತನಿಗೆಂದು ಮನೋ
ಭೀತಿಯಿಂದ ನಡುಗುವವರಾಗಿಯೂ ಸರಳಹೃದಯ
ರಾಗಿಯೂ ವಿಧೇಯರಾಗಿರ್ರಿ. ಮನುಷ್ಯರನ್ನು 6

1) ಅಥವಾ, ಪ್ರಕಟಮಾಡುವಂಥದ್ದೆಲ್ಲಾ ಬೆಳಕೇ.
2) ಅಥವಾ, ಗುಲಾಮರೇ, ದಾಸರೇ.

ಮೆಚ್ಚಿಸುವವರು ಮಾಡುವ ಪ್ರಕಾರ ಯಜಮಾನರು
ನೋಡುತ್ತಿರುವಾಗ ಮಾತ್ರ ಸೇವೆಮಾಡದೆ ಕ್ರಿಸ್ತನ
ದಾಸರಿಗೆ ತಕ್ಕ ಹಾಗೆ ದೇವರ ಚಿತ್ತವನ್ನು ಮನಃಪೂ
7 ರ್ವಕವಾಗಿ ನಡಿಸಿರಿ. ಮನುಷ್ಯರಿಗೋಸ್ಕರವಲ್ಲ, ಕರ್ತ
ನಿಗೋಸ್ಕರ ಸೇವೆಮಾಡುತ್ತೇವೆಂದು ಚಿತ್ತಪೂರ್ವಕ
8 ವಾಗಿ ಸೇವೆಮಾಡಿರಿ. ಯಾಕಂದರೆ ಒಬ್ಬನು ದಾಸ
ನಾಗಲಿ ಸ್ವತಂತ್ರನಾಗಲಿ ತಾನು ಯಾವ ಸತ್ಕಾರ್ಯ
ವನ್ನು ಮಾಡುತ್ತಾನೋ ಅದರ ಪ್ರತಿಫಲವನ್ನು ಕರ್ತ
ನಿಂದ ಹೊಂದುವನೆಂಬದನ್ನು ನೀವು ತಿಳಿದವರಾಗಿಯೇ
ಇದ್ದೀರಿ.
9 ಯಜಮಾನರೇ, ನಿಮ್ಮ ಕೈಕೆಳಗಿರುವ ದಾಸರ ವಿಷ
ಯದಲ್ಲಿ ಅದೇ ರೀತಿಯಾಗಿ ನಡೆಯಿರಿ. ಪರಲೋಕ
ದಲ್ಲಿ ನಿಮಗೂ ಅವರಿಗೂ ಯಜಮಾನನಾಗಿರುವಾ
ತನು ಇದ್ದಾನೆಂತಲೂ ಆತನಲ್ಲಿ ಪಕ್ಷಪಾತವಿಲ್ಲವೆಂತ
ಲೂ ತಿಳಿದು ನಿಮ್ಮ ದಾಸರನ್ನು ಬೆದರಿಸುವ ಪದ್ಧತಿ
ಯನ್ನು ಬಿಟ್ಟುಬಿಡಿರಿ.

### ಕ್ರೈಸ್ತರು ನಡಿಸುವ ಯುದ್ಧದಲ್ಲಿ ದೇವರು ಕೊಡುವ ಸರ್ವಾಯುಧಗಳು ಅವಶ್ಯವಾಗಿವೆ.

10 ಕಡೇ ಮಾತೇನಂದರೆ, ನೀವು ಕರ್ತನನ್ನೂ
ಆತನ ಅತ್ಯಧಿಕವಾದ ಶಕ್ತಿಯನ್ನೂ ಆಶ್ರಯಿಸಿ
11 ಕೊಂಡವರಾಗಿ ಬಲಗೊಳ್ಳಿರಿ. ಸೈತಾನನ ತಂತ್ರೋಪಾ
ಯಗಳನ್ನು ನೀವು ಎದುರಿಸಿ ನಿಲ್ಲುವದಕ್ಕೆ ಶಕ್ತರಾಗು
ವಂತೆ ದೇವರು ದಯಪಾಲಿಸುವ ಸರ್ವಾಯುಧಗ
12 ಳನ್ನು ಧರಿಸಿಕೊಳ್ಳಿರಿ. ನಾವು ಹೋರಾಡುವದು
ಮನುಷ್ಯಮಾತ್ರದವರ ಸಂಗಡವಲ್ಲ; ರಾಜತ್ವಗಳ
ಮೇಲೆಯೂ ಅಧಿಕಾರಗಳ ಮೇಲೆಯೂ ಈ ಅಂಧ
ಕಾರದ ಲೋಕಾಧಿಪತಿಗಳ ಮೇಲೆಯೂ ಆಕಾಶ
ಮಂಡಲದಲ್ಲಿರುವ ದುರಾತ್ಮಗಳ ಸೇನೆಯ ಮೇಲೆಯೂ
13 ನಾವು ಹೋರಾಡುವವರಾಗಿದ್ದೇವೆ. ಆದದರಿಂದ ಕಠಿನ
ಯುದ್ಧವು ನಡೆಯುವ ದಿವಸದಲ್ಲಿ ಆ ವೈರಿಗಳನ್ನು
ಎದುರಿಸುವದಕ್ಕೂ ಮಾಡಬೇಕಾದದ್ದೆಲ್ಲವನ್ನು ಮಾಡಿ
ಜಯಶಾಲಿಗಳಾಗಿ ನಿಲ್ಲುವದಕ್ಕೂ ಶಕ್ತರಾಗುವಂತೆ
ದೇವರು ದಯಪಾಲಿಸುವ ಸರ್ವಾಯುಧಗಳನ್ನು ತೆಗೆ
14 ದುಕೊಳ್ಳಿರಿ. ಸತ್ಯವೆಂಬ ನಡುಕಟ್ಟನ್ನು ಕಟ್ಟಿ
ಕೊಂಡು ನೀತಿಯೆಂಬ ವಜ್ರಕವಚವನ್ನು ಧರಿಸಿ

ಕೊಂಡು ಸಮಾಧಾನದ ವಿಷಯವಾದ ಸುವಾತ
ಯನ್ನು ತಿಳಿಸುವದರಲ್ಲಿ ಸಿದ್ಧವಾದ ಮನಸ್ಸೆಂಬ ಕ
ಗಳನ್ನು ಮೆಟ್ಟಿಕೊಂಡು ನಿಲ್ಲಿರಿ. ಮತ್ತು ನಂಬಿ
ಯೆಂಬ ಗುರಾಣಿಯನ್ನು ಹಿಡುಕೊಳ್ಳಿರಿ; ಅದರಿ
ನೀವು ಕೆಡುಕನ ಅಗ್ನಿಬಾಣಗಳನ್ನೆಲ್ಲಾ ಆರಿಸುವದ
ಶಕ್ತರಾಗುವಿರಿ. ಇದಲ್ಲದೆ ರಕ್ಷಣೆಯೆಂಬ
ಸ್ತ್ರಾಣವನ್ನು ಇಟ್ಟುಕೊಂಡು ಪವಿತ್ರಾತ್ಮನು ಕ
ಡುವ ದೇವರ ವಾಕ್ಯವೆಂಬ ಕತ್ತಿಯನ್ನು ಹಿಡಿಯಿ
ನೀವು ಪವಿತ್ರಾತ್ಮಪ್ರೇರಿತರಾಗಿ ಎಲ್ಲಾ ಸಮ
ಗಳಲ್ಲಿ ಸಕಲವಿಧವಾದ ಪ್ರಾರ್ಥನೆಯಿಂದಲೂ ವಿಜ
ಪನೆಯಿಂದಲೂ ದೇವರನ್ನು ಪ್ರಾರ್ಥಿಸಿರಿ. ಇ
ರಲ್ಲಿ ಪೂರ್ಣ ಸ್ಥಿರಚಿತ್ತರಾಗಿದ್ದು ದೇವಜನರೆಲ್ಲರ ವಿ
ಯದಲ್ಲಿ ವಿಜ್ಞಾಪನೆಮಾಡುತ್ತಾ ಎಚ್ಚರವಾಗಿ
ನನಗೋಸ್ಕರ ಸಹ ಪ್ರಾರ್ಥನೆ ಮಾಡಿರಿ. ನಾ
ಬಾಯಿ ತೆರೆಯುವಾಗ ಪೂರ್ವಕಾಲದಲ್ಲಿ ಗುಪ್ತ
ಗಿದ್ದ ಸುವಾರ್ತಾಸತ್ಯಾರ್ಥವನ್ನು ಭಯವಿಲ್ಲದೆ ತಿ
ಸುವದಕ್ಕೆ ಬೇಕಾದ ಮಾತನ್ನು ದೇವರು ನನ
ಅನುಗ್ರಹಿಸಬೇಕೆಂದು ಪ್ರಾರ್ಥಿಸಿರಿ. ಆ ಸತ್ಯಾರ್ಥ
ನಿಮಿತ್ತವೇ ರಾಯಭಾರಿಯಾದ ನಾನು ಬೇಡಿಯ
ಬಿದ್ದಿದ್ದೇನಲ್ಲಾ. ಅದರ ವಿಷಯದಲ್ಲಿ ಧೈರ್ಯವಾ
ಮಾತಾಡುವ ಹಂಗಿನಲ್ಲಿದ್ದೇನೆ; ಹಾಗೆಯೇ ನಾ
ಮಾತಾಡಬೇಕೆಂದು ನನಗೋಸ್ಕರ ಬೇಡಿಕೊಳ್ಳಿರಿ.

### ಕಡೇ ಮಾತುಗಳು.

ನನ್ನ ಸಂಗತಿಗಳು ನಿಮಗೆ ಸಹ ಗೊತ್ತಾಗು
ಹಾಗೆ ಪ್ರಿಯ ಸಹೋದರನೂ ಕರ್ತನಲ್ಲಿ ನಂಬಿಗ
ನಾದ ಸೇವಕನೂ ಆಗಿರುವ ತುಖಿಕನು ನಿಮ
ಎಲ್ಲವನ್ನೂ ತಿಳಿಸುವನು. ನೀವು ನಮ್ಮ ಸಮಾಚಾ
ವನ್ನು ತಿಳುಕೊಳ್ಳುವ ಹಾಗೆಯೂ ಅವನು ನಿಮ್ಮ ಹೃ
ಯಗಳನ್ನು ಸಂತೈಸುವ ಹಾಗೆಯೂ ಅವನನ್ನು ನಿಮ
ಬಳಿಗೆ ಕಳುಹಿಸಿದ್ದೇನೆ.
ತಂದೆಯಾದ ದೇವರಿಂದಲೂ ಕರ್ತನಾದ ಯೇಸ
ಕ್ರಿಸ್ತನಿಂದಲೂ ಶಾಂತಿಯೂ ನಂಬಿಕೆಯಿಂದ ಕೂಡಿ
ಪ್ರೀತಿಯೂ ಸಹೋದರರಿಗೆ ಆಗಲಿ. ನಮ್ಮ ಕರ್ತನಾ
ಯೇಸು ಕ್ರಿಸ್ತನನ್ನು ನಿರಂತರವಾದ ಪ್ರೀತಿಯಿ
ಪ್ರೀತಿಸುವವರೆಲ್ಲರ ಮೇಲೆ ದೇವರ ಕೃಪೆಯು ಇರ

# THE EPISTLE OF SAINT PAUL TO THE PHILIPPIANS

## ಪೌಲನು ಫಿಲಿಪ್ಪಿಯವರಿಗೆ ಬರೆದ ಪತ್ರಿಕೆ

---

ಒಕ್ಕಣೆ.

ಕ್ರಿಸ್ತ ಯೇಸುವಿನ ದಾಸರಾದ ಪೌಲ ತಿಮೊಥೆಯರು
ಫಿಲಿಪ್ಪಿಯಲ್ಲಿ ಕ್ರಿಸ್ತ ಯೇಸುವಿನ ಮೂಲಕ ದೇವ
ಜನರಾಗಿರುವವರೆಲ್ಲರಿಗೂ ಅವರಲ್ಲಿರುವ ಸಭಾಧ್ಯಕ್ಷ
ರಿಗೂ ಸಭಾಸೇವಕರಿಗೂ ಬರೆಯುವದೇನಂದರೆ—
ನಮ್ಮ ತಂದೆಯಾದ ದೇವರಿಂದಲೂ ಕರ್ತನಾದ
ಯೇಸು ಕ್ರಿಸ್ತನಿಂದಲೂ ನಿಮಗೆ ಕೃಪೆಯೂ ಶಾಂತಿ
ಯೂ ಆಗಲಿ.

ಪೌಲನು ಫಿಲಿಪ್ಪಿಯ ಸಭೆಯವರಿಗೋಸ್ಕರ ದೇವರಿಗೆ
ಮಾಡಿದ ಕೃತಜ್ಞತಾಸ್ತುತಿ ಪ್ರಾರ್ಥನೆಗಳು.

ನಾನು ನಿಮಗೋಸ್ಕರ ದೇವರನ್ನು ಬೇಡಿಕೊಳ್ಳು
ವ ಎಲ್ಲಾ ಸಮಯಗಳಲ್ಲಿಯೂ ಸಂತೋಷದಿಂದಲೇ
ಬೇಡುವವನಾಗಿದ್ದೇನೆ. ನಾನು ನಿಮ್ಮನ್ನು ನೆನಸಿ
ಕೊಳ್ಳುವಾಗೆಲ್ಲಾ ನೀವು ಮೊದಲಿನಿಂದ ಇಂದಿನ ವರೆ
ಗೂ ಸುವಾರ್ತಾಪ್ರಚಾರದಲ್ಲಿ ಸಹಕಾರಿಗಳಾಗಿದ್ದೀ
ರೆಂದು ನನ್ನ ದೇವರಿಗೆ ಕೃತಜ್ಞತಾಸ್ತುತಿ ಮಾಡು
ತ್ತೇನೆ. ಈ ಒಳ್ಳೇ ಕೆಲಸವನ್ನು ನಿಮ್ಮಲ್ಲಿ ಪ್ರಾರಂಭಿಸಿ
ದಾತನು ಅದನ್ನು ನಡಿಸಿಕೊಂಡು ಯೇಸು ಕ್ರಿಸ್ತನು
ಬರುವ ದಿನದೊಳಗಾಗಿ ಸಿದ್ಧಿಗೆ ತರುವನೆಂದು ನನಗೆ
ಭರವಸವುಂಟು. ನಿಮ್ಮೆಲ್ಲರ ವಿಷಯದಲ್ಲಿ ಈ ಅಭಿ
ಪ್ರಾಯವುಳ್ಳವನಾಗಿರುವದು ನ್ಯಾಯವಾಗಿದೆ; ನಾನು
ಬೇಡಿಬಿದ್ದಿರುವಾಗಲೂ ಸುವಾರ್ತೆಯ ವಿಷಯದಲ್ಲಿ
ಉತ್ತರ ಹೇಳಿ ಸ್ಥಾಪಿಸುವಾಗಲೂ ನೀವೆಲ್ಲರೂ ನನ್ನೊಂ
ದಿಗೆ ದೇವರ ಕೃಪೆಯಲ್ಲಿ ಪಾಲುಗಾರರಾಗಿದ್ದೀರೆಂದು
ನಿಮ್ಮನ್ನು ನನ್ನ ಹೃದಯದಲ್ಲಿಟ್ಟುಕೊಂಡಿದ್ದೇನೆ.
ಕ್ರಿಸ್ತ ಯೇಸುವಿಗಿರುವಂಥ ಕನಿಕರದಿಂದ ನಿಮ್ಮೆಲ್ಲ
ರಿಗೋಸ್ಕರ ಎಷ್ಟೋ ಹಂಬಲಿಸುತ್ತೇನೆ; ಇದಕ್ಕೆ
ದೇವರೇ ನನ್ನ ಸಾಕ್ಷಿ. ಮತ್ತು ನಾನು ದೇವರನ್ನು
ಪ್ರಾರ್ಥಿಸಿ—ನಿಮ್ಮ ಪ್ರೀತಿಯು ಹೆಚ್ಚುತ್ತಾ ಹೆಚ್ಚು
ತ್ತಾ ಪೂರ್ಣ ಜ್ಞಾನವಿವೇಕಗಳಿಂದ ಕೂಡಿ ಉತ್ತ
ಮ ಕಾರ್ಯಗಳು ಯಾವವೆಂದು ನೀವು ವಿವೇಚಿಸುವ
ವರಾಗಬೇಕೆಂತಲೂ ಕ್ರಿಸ್ತನು ಬರುವ ದಿನದಲ್ಲಿ ನೀವು
ಸರಳರಾಗಿಯೂ ನಿರ್ಮಲರಾಗಿಯೂ ಯೇಸು ಕ್ರಿಸ್ತ
ನ ಮೂಲಕವಾಗಿರುವ ಸುನೀತಿಯೆಂಬ ಫಲದಿಂದ
ತುಂಬಿದವರಾಗಿಯೂ ಕಾಣಿಸಿಕೊಂಡು ದೇವರಿಗೆ ಘನ
ತೆಯನ್ನೂ ಸ್ತೋತ್ರವನ್ನೂ ತರಬೇಕೆಂತಲೂ ಬೇಡಿ
ಕೊಳ್ಳುತ್ತೇನೆ.

ಪೌಲನು ರೋಮಾಪುರಿಯಲ್ಲಿ ಸೆರೆಯವನಾಗಿದ್ದು ತನ್ನ
ಸ್ಥಿತಿಯನ್ನೂ ಕೋರಿಕೆಯನ್ನೂ ಕುರಿತು ಹೇಳಿದ್ದು.

ಸಹೋದರರೇ, ನನಗೆ ಸಂಭವಿಸಿರುವದು ಸುವಾರ್ತೆ 12
ಯ ಪ್ರಸಾರಣೆಗೇ ಸಹಾಯವಾಯಿತೆಂದು ನೀವು ತಿಳಿ
ಯಬೇಕೆಂಬದಾಗಿ ಅಪೇಕ್ಷಿಸುತ್ತೇನೆ. ಹೇಗಂದರೆ 13
ನನ್ನ ಬೇಡಿಗಳು ಕ್ರಿಸ್ತನ ನಿಮಿತ್ತವೇ ಎಂದು ಅರ
ಮನೆಯ ಪಹರೆಯವರೆಲ್ಲರಿಗೂ ಮಿಕ್ಕಾದವರೆಲ್ಲರಿಗೂ
ಪ್ರಸಿದ್ಧವಾಯಿತು. ಇದಲ್ಲದೆ ಸಹೋದರರಲ್ಲಿ ಬಹಳ 14
ಜನರು ನನ್ನ ಬೇಡಿಗಳಿಂದಲೇ ಕರ್ತನಲ್ಲಿ ಭರವಸವುಳ್ಳ
ವರಾಗಿ ದೇವರ ವಾಕ್ಯವನ್ನು ನಿರ್ಭಯದಿಂದ ಹೇಳು
ವದಕ್ಕೆ ಇನ್ನೂ ವಿಶೇಷ ಧೈರ್ಯ ಹೊಂದಿದ್ದಾರೆ.
ಕೆಲವರು ಹೊಟ್ಟೆಕಿಚ್ಚುಪಟ್ಟು ಭೇದ ಹುಟ್ಟಿಸಬೇ 15
ಕೆಂಬ ಭಾವನೆಯಿಂದ ಬೇರೆ ಕೆಲವರು ಒಳ್ಳೇ ಭಾವ
ದಿಂದ ಕ್ರಿಸ್ತನನ್ನು ಪ್ರಚುರಪಡಿಸುತ್ತಾರೆ. ಇವರಂತೂ 16
ನಾನು ಸುವಾರ್ತೆಯ ವಿಷಯದಲ್ಲಿ ಉತ್ತರ ಹೇಳು
ವದಕ್ಕೆ ಇಲ್ಲಿ ಬಿದ್ದಿರುತ್ತೇನೆಂದು ತಿಳಿದು ಪ್ರೀತಿಯಿಂದ
ಪ್ರಸಿದ್ಧಿಪಡಿಸುತ್ತಾರೆ. ಆ ಬೇರೆ ತರದವರಾದರೋ 17
ನಾನು ಬೇಡಿಬಿದ್ದಿರುವಾಗಲೂ ನನಗೆ ಸಂಕಟವನ್ನು
ಎಬ್ಬಿಸಬೇಕೆಂದು ಯೋಚಿಸಿ ಕ್ರಿಸ್ತನನ್ನು ಯಥಾರ್ಥ
ವಾಗಿ ಪ್ರಸಿದ್ಧಿಪಡಿಸದೆ ಕಕ್ಷಿಭಾವದಿಂದ ಪ್ರಸಿದ್ಧಿಪಡಿ
ಸುತ್ತಾರೆ. ಹೇಗಾದರೇನು? ಯಾವ ರೀತಿಯಿಂದಾ 18
ದರೂ ಕಪಟದಿಂದಾಗಲಿ ಸತ್ಯದಿಂದಾಗಲಿ ಕ್ರಿಸ್ತನನ್ನು
ಪ್ರಸಿದ್ಧಿಪಡಿಸುವದುಂಟು; ಇದಕ್ಕೆ ಸಂತೋಷಿಸುತ್ತೇನೆ,
ಮುಂದೆಯೂ ಸಂತೋಷಿಸುವೆನು. ಯಾಕಂದರೆ ನನಗೆ 19
ಸಂಭವಿಸಿರುವದು ನೀವು ದೇವರಿಗೆ ಮಾಡುವ
ವಿಜ್ಞಾಪನೆಯಿಂದಲೂ ಕ್ರಿಸ್ತನು ಹೇರಳವಾಗಿ ದಯ
ಪಾಲಿಸುವ ಆತ್ಮನ ಸಹಾಯದಿಂದಲೂ ನನ್ನ ಪರಮ
ಹಿತಕ್ಕೆ ಅನುಕೂಲಿಸುವದೆಂದು ಬಲ್ಲೆನು. ಹೇಗಂ 20
ದರೆ ನಾನು ಯಾವ ವಿಷಯದಲ್ಲಾದರೂ ನಾಚಿಕೆ
ಪಡದೆ ಎಂದಿನಂತೆ ಈಗಲೂ ಸಹ ತುಂಬಾ ಧೈರ್ಯ
ದಿಂದಿರುವದರಿಂದ ಬದುಕಿದರೂ ಸರಿಯೇ ಸತ್ತರೂ
ಸರಿಯೇ ನನ್ನ ದೇಹದ ಮೂಲಕ ಕ್ರಿಸ್ತನಿಗೆ ಮಹಿ
ಮೆಯುಂಟಾಗಬೇಕೆಂದು ನನಗೆ ಬಹಳ ಅಭಿಲಾಷೆ
ಯದೆ; ಹಾಗೆಂಯೇ ಆಗುವದೆಂದು ಭರವಸವುಂಟು.

21 [1]ನನಗಂತೂ ಬದುಕುವದಂದರೆ ಕ್ರಿಸ್ತನೇ, ಸಾಯು
22 ವದು ಲಾಭವೇ. ಶರೀರದಲ್ಲಿಯೇ ಬದುಕಬೇಕಾದಲ್ಲಿ
ಕೆಲಸಮಾಡಿ ಫಲಹೊಂದಲು ನನಗೆ ಅನುಕೂಲವಾಗು
ವದು. ಹೀಗಿರಲಾಗಿ ನಾನು ಯಾವದನ್ನಾರಿಸಿಕೊಳ್ಳ
23 ಬೇಕೋ ನನಗೆ ತೋರದು. ಈ ಎರಡರ ನಡುವೆ
ಸಿಕ್ಕಿಕೊಂಡಿದ್ದೇನೆ; ಇಲ್ಲಿಂದ ಹೋಗಿಬಿಟ್ಟು ಕ್ರಿಸ್ತನ
ಜೊತೆಯಲ್ಲಿರಬೇಕೆಂಬದೇ ನನ್ನ ಅಭಿಲಾಷೆ, ಅದು
24 ಉತ್ತಮೋತ್ತಮ; ಆದರೆ ನಾನಿನ್ನೂ ಶರೀರದಲ್ಲಿ ವಾಸ
ಮಾಡಿಕೊಂಡಿರುವದೇ ನಿಮಗೋಸ್ಕರ ಬಹು ಅವಶ್ಯ
25 ವಾದದ್ದು. ಆದದರಿಂದ ನಿಮಗೆ ಕ್ರಿಸ್ತನಂಬಿಕೆಯಲ್ಲಿ
ಅಭಿವೃದ್ಧಿಯೂ ಆನಂದವೂ ಉಂಟಾಗುವದಕ್ಕೋ
ಸ್ಕರ ನಾನು ಜೀವದಿಂದುಳಿದು ನಿಮ್ಮೆಲ್ಲರ ಬಳಿಯಲ್ಲಿ
26 ರುವೆನೆಂದು ದೃಢವಾಗಿ ನಂಬಿದ್ದೇನೆ. ಹೀಗೆ ನಾನು
ತಿರಿಗಿ ನಿಮ್ಮಲ್ಲಿಗೆ ಬರುವದರಿಂದ ನೀವು ಕ್ರಿಸ್ತ ಯೇ
ಸುವಿನ ವಿಷಯವಾಗಿ ಉತ್ಸಾಹಪಡುವದಕ್ಕೆ ನನ್ನಿಂದ
ಅಧಿಕವಾದ ಆಸ್ಪದವಿರುವದು.

### ಕ್ರೈಸ್ತರು ಸುವಾರ್ತೆಗೆ ಯೋಗ್ಯರಾಗಿ ನಡೆದುಕೊಳ್ಳಬೇಕೆಂಬ ಬೋಧೆ.

27 ಹೇಗೂ ಕ್ರಿಸ್ತನ ಸುವಾರ್ತೆಗೆ ಯೋಗ್ಯರಾಗಿ ನಡೆ
ದುಕೊಳ್ಳಿರಿ. ಆಗ ನಾನು ಬಂದು ನಿಮ್ಮನ್ನು ನೋಡಿ
ದರೂ ಸರಿಯೇ, ದೂರದಲ್ಲಿದ್ದು ನಿಮ್ಮ ಸುದ್ದಿಯನ್ನು
ಕೇಳಿದರೂ ಸರಿಯೇ, ನೀವು ನಿಮ್ಮ ವಿರೋಧಿಗಳಿಗೆ
ಯಾವ ವಿಷಯದಲ್ಲಾದರೂ ಹೆದರದೆ ಒಂದೇ ಆತ್ಮ
ದಲ್ಲಿ ದೃಢವಾಗಿ ನಿಂತು ಸುವಾರ್ತೆಯಲ್ಲಿಟ್ಟ ನಂಬಿಕೆ
ಗೋಸ್ಕರ ಐಕಮತ್ಯದಿಂದ ಹೋರಾಡುವವರಾಗಿದ್ದೀ
28 ರೆಂದು ನಾನು ತಿಳಿದುಕೊಳ್ಳುವೆನು. ನೀವು ಹೀಗಿರು
ವದು ವಿರೋಧಿಗಳ ನಾಶನಕ್ಕೂ ನಿಮ್ಮ ರಕ್ಷಣೆಗೂ
29 ದೇವರಿಂದಾದ ಪ್ರಮಾಣವಾಗಿದೆ. ಹೇಗಂದರೆ ಕ್ರಿಸ್ತನ
ಮೇಲೆ ನಂಬಿಕೆಯಿಡುವದೂ ಆತನಿಗೋಸ್ಕರ ಬಾಧೆ
ಯನ್ನನುಭವಿಸುವದೂ ನಿಮಗೆ ಅನುಗ್ರಹವಾಗಿ ದೊರೆ
30 ಯಿತು. ಹೀಗೆ ನೀವು ನನ್ನಲ್ಲಿ ಕಂಡಂಥ ಮತ್ತು
ಈಗ ನನ್ನಲ್ಲಿರುವದಾಗಿ ಕೇಳುವಂಥ ಅದೇ ಹೋರಾ
ಟವು ನಿಮಗುಂಟು.

2 ಕ್ರಿಸ್ತನಿಂದ ಉತ್ತೇಜನ, ಪ್ರೀತಿಯ ಪ್ರೇರಣೆ, ಪವಿ
ತ್ರಾತ್ಮನ ಅನ್ಯೋನ್ಯತೆ, ಕಾರುಣ್ಯದಯಾರಸಗಳು
2 ಉಂಟಾಗುವವಾದರೆ ಐಕಮತ್ಯವುಳ್ಳವರಾಗಿದ್ದು ನನ್ನ
ಸಂತೋಷವನ್ನು ಪರಿಪೂರ್ಣಮಾಡಿರಿ. ನಿಮ್ಮೆಲ್ಲ
ರಲ್ಲಿ ಒಂದೇ ಪ್ರೀತಿಯಿರಲಿ; ಅನ್ಯೋನ್ಯಭಾವವುಳ್ಳ
ವರೂ ಒಂದೇ ಗುರಿಯಿಟ್ಟುಕೊಂಡವರೂ ಆಗಿರ್ರಿ.
3 ಪಕ್ಷಪಾತದಿಂದಾಗಲಿ ಒಣಹೆಮ್ಮೆಯಿಂದಾಗಲಿ ಯಾ
ವದನ್ನೂ ಮಾಡದೆ ಪ್ರತಿಯೊಬ್ಬನು ದೀನಭಾವ
ದಿಂದ ಮತ್ತೊಬ್ಬರನ್ನು ತನಗಿಂತಲೂ ಶ್ರೇಷ್ಠ
4 ರೆಂದು ಎಣಿಸಲಿ. ನಿಮ್ಮಲ್ಲಿ ಪ್ರತಿಯೊಬ್ಬನು ಸ್ವಹಿತ
ವನ್ನು ಮಾತ್ರ ನೋಡದೆ ಪರಹಿತವನ್ನು ಸಹ ನೋಡಲಿ.
5 ಕ್ರಿಸ್ತ ಯೇಸುವಿನಲ್ಲಿದ್ದಂಥ ಮನಸ್ಸು ನಿಮ್ಮಲ್ಲಿ
6 ಯೂ ಇರಲಿ. ಆತನು ದೇವಸ್ವರೂಪನಾಗಿದ್ದರೂ

ದೇವರಿಗೆ ಸರಿಸಮಾನನಾಗಿರುವದೆಂಬ ಅಮ
ಪದವಿಯನ್ನು ಬಿಡಲೊಲ್ಲೆನು ಎಂದೆಣಿಸದೆ ತನ್ನ
ಬರಿದು ಮಾಡಿಕೊಂಡು ದಾಸನ ರೂಪವನ್ನು ಧ
ಕೊಂಡು ಮನುಷ್ಯರಿಗೆ ಸದೃಶನಾದನು.
ಆತನು ಆಕಾರದಲ್ಲಿ ಮನುಷ್ಯನಾಗಿ ಕಾಣಿಸಿಕೊ
ಡ್ಡಾಗ ತನ್ನನ್ನು ತಗ್ಗಿಸಿಕೊಂಡು ಮರಣವ
ಅಂದರೆ ಶಿಲುಬೆಯ ಮರಣವನ್ನಾದರೂ ಹೊ
ವಷ್ಟು ವಿಧೇಯನಾದನು. ಈ ಕಾರಣದಿಂದ
ರು ಆತನನ್ನು ಅತ್ಯುನ್ನತ ಸ್ಥಾನಕ್ಕೆ ಏರಿಸಿ ಎ
ಹೆಸರುಗಳಿಗಿಂತ ಶ್ರೇಷ್ಠವಾದ ಹೆಸರನ್ನು ಆತನಿಗೆ ದ
ಪಾಲಿಸಿದ್ದಾನೆ. ಆದದರಿಂದ ಸ್ವರ್ಗ ಮರ್ತ್ಯ ಪಾತ
ಗಳಲ್ಲಿರುವವರೆಲ್ಲರೂ ಯೇಸುವಿನ ಹೆಸರಿನಲ್ಲಿ
ಬಿದ್ದು ಯೇಸು ಕ್ರಿಸ್ತನನ್ನು ಒಡೆಯನೆಂದು ಪ್ರ
ಮಾಡಿ ತಂದೆಯಾದ ದೇವರಿಗೆ ಘನವನ್ನು
ಸುವರು.
ಹೀಗಿರುವಲ್ಲಿ ನನ್ನ ಪ್ರಿಯರೇ, ನೀವು
ಮಾತನ್ನು ಯಾವಾಗಲೂ ಕೇಳಿದಂತೆ ಈಗಲೂ ಕೇ
ನಾನು ನಿಮ್ಮಲ್ಲಿರುವಾಗ ಮಾತ್ರವಲ್ಲದೆ ನಾನಿಲ್ಲ
ವಾಗಲೂ ಬಹು ಹೆಚ್ಚಾಗಿ ಮನೋಭೀತಿಯಿಂದ
ಗುವವರಾಗಿ ನಿಮ್ಮ ನಿಮ್ಮ ರಕ್ಷಣೆಯನ್ನು ಸಾ
ಕೊಳ್ಳಿರಿ. ಯಾಕಂದರೆ ದೇವರೇ ತನ್ನ ಸು
ವನ್ನು ನೆರವೇರಿಸಬೇಕೆಂದು ನಿಮ್ಮಲ್ಲಿ ಉದ್ದೇಶವ
ಪ್ರಯತ್ನವನ್ನೂ ಉಂಟುಮಾಡುವವನಾಗಿದ್ದಾನೆ.
ಣುಗುಟ್ಟದೆಯೂ ವಿವಾದವಿಲ್ಲದೆಯೂ ಎಲ್ಲವ
ಮಾಡಿರಿ. ಹೀಗೆ ನೀವು ನಿರ್ದೋಷಿಗಳೂ ಯಥಾ
ಮನಸ್ಸುಳ್ಳವರೂ ಆಗಿದ್ದು ವಕ್ರಬುದ್ಧಿಯ
ಮೂರ್ಖ ಜಾತಿಯ ಮಧ್ಯದಲ್ಲಿ ದೇವರ ನಿಷ್ಕ
ರಾದ ಮಕ್ಕಳಾಗಿರುವಿರಿ. ಇವರೊಳಗೆ ನೀವು ಸ
ರಿಗೂ ಜೀವದಾಯಕ ವಾಕ್ಯವನ್ನು ತೋರಿಸಿಕೊ
ವವರಾಗಿದ್ದು ಲೋಕದೊಳಗೆ ಹೊಳೆಯುವ ಜ
ತಿರ್ಮಂಡಲಗಳಂತೆ ಕಾಣಿಸುವವರಾಗಿದ್ದೀರ
ನೀವು ಹೀಗೆ ನಡೆದರೆ ನಾನು ಕೆಲಸ ಸಾಧಿಸಿ
ವ್ಯರ್ಥವಲ್ಲ, ನಾನು ಪ್ರಯಾಸ ಪಟ್ಟದ್ದೂ ವ್ಯರ್ಥ
ಎಂಬ ಉತ್ಸಾಹವು ಕ್ರಿಸ್ತನ ದಿನದಲ್ಲಿ ನ
ಉಂಟಾಗುವದು. ನಿಮ್ಮ ನಂಬಿಕೆಯೆಂಬ ಯ
ವನ್ನು ದೇವರಿಗರ್ಪಿಸುವ ಸೇವೆಯಲ್ಲಿ ನಾನೇ ಪ
ದ್ರವ್ಯವಾಗಿ ಅರ್ಪಿತವಾಗಬೇಕಾದರೂ ನನಗೆ ಸಂತೋ
ನಿಮ್ಮೆಲ್ಲರ ಕೂಡ ಸಂತೋಷ. ಹಾಗೆಯೇ ನೀ
ಸಂತೋಷಿಸಿರಿ, ನನ್ನೊಂದಿಗೆ ಸಂತೋಷಿಸಿರಿ.

### ಪೌಲನು ಎಪಫ್ರೊದೀತನನ್ನು ಫಿಲಿಪ್ಪಿಯವರಿಗೆ ಕಳುಹಿ ತಿಮೊಥೆಯನನ್ನು ಮುಂದೆ ಕಳುಹಿಸುತ್ತೇನೆಂದು ಹೇಳಿದ್ದು

ಆದರೆ ಕರ್ತನಾದ ಯೇಸುವಿನ ಚಿತ್ತವಾದರೆ ನಾ
ತಿಮೊಥೆಯನನ್ನು ಬೇಗನೆ ನಿಮ್ಮ ಬಳಿಗೆ ಕಳು
ಬೇಕೆಂದು ನಿರೀಕ್ಷಿಸುತ್ತೇನೆ. ಅವನ ಮುಖಾ
ನಿಮ್ಮ ಸಂಗತಿಗಳನ್ನು ತಿಳಿದು ನಾನೂ ಧೈರ್ಯ ತ
ಕೊಂಡೇನು. ಅವನ ಹಾಗೆ ನಿಮ್ಮ ಕಾರ್ಯಗಳ

1) ಅಥವಾ, ನಾನಂತೂ ಬದುಕಿದರೆ ಕ್ರಿಸ್ತನಿಗೋಸ್ಕರ ಬದುಕುತ್ತೇನೆ, ಸತ್ತರೆ ನನಗೆ ಲಾಭವಾಗುತ್ತೆ.

ಕುರಿತು ಯಥಾರ್ಥವಾಗಿ ಚಿಂತಿಸುವವರು ನನ್ನ ಬಳಿ
ಯಲ್ಲಿ ಬೇರೆ ಯಾರೂ ಇಲ್ಲ. ಎಲ್ಲರೂ ಸ್ವಕಾರ್ಯ
ಗಳ ಮೇಲೆ ಮನಸ್ಸಿಡುತ್ತಾರೆಯೇ ಹೊರತು ಯೇಸು
ಕ್ರಿಸ್ತನ ಕಾರ್ಯಗಳ ಮೇಲೆ ಮನಸ್ಸಿಡುವದಿಲ್ಲ. ತಿಮೊ
ಥೆಯನ ಗುಣವನ್ನು ನೀವು ನೋಡಿ ತಿಳುಕೊಂಡಿದ್ದೀರಿ;
ಮಗನು ತಂದೆಗೆ ಹೇಗೋ ಹಾಗೆಯೇ ಅವನು
ನನ್ನ ಜೊತೆಯಲ್ಲಿ ಸುವಾರ್ತಾಪ್ರಚಾರಕ್ಕಾಗಿ ಕಷ್ಟ
ಪಟ್ಟು ಕೆಲಸನಡಿಸಿದನೆಂಬದು ನಿಮಗೆ ಗೊತ್ತುಂಟು.
ಆದದರಿಂದ ನನ್ನ ಸಂಗತಿಯು ಹೇಗಾಗುವದೋ
ಅದನ್ನು ತಿಳಿದ ಕೂಡಲೆ ಅವನನ್ನೇ ಕಳುಹಿಸುವದಕ್ಕೆ
ನಿರೀಕ್ಷಿಸುತ್ತೇನೆ. ಇದಲ್ಲದೆ ನಾನು ಸಹ ಬೇಗನೆ
ಬರುವೆನೆಂದು ಕರ್ತನಲ್ಲಿ ದೃಢವಾಗಿ ನಂಬಿದ್ದೇನೆ.
ನನ್ನ ಕೊರತೆಯನ್ನು ನೀಗುವದಕ್ಕೆ ನೀವು ಕಳು
ಹಿಸಿದಂಥ, ನನ್ನ ಸಹೋದರನೂ ಜೊತೆಕೆಲಸದವನೂ
ಸಹಭಟನೂ ಆಗಿರುವಂಥ ಎಪಫ್ರೊದೀತನನ್ನು ನಿಮ್ಮ
ಬಳಿಗೆ ಕಳುಹಿಸುವದು ಅವಶ್ಯವೆಂದು ನೆನಸಿದ್ದೇನೆ.
ಅವನು ನಿಮ್ಮೆಲ್ಲರನ್ನು ಕುರಿತು ಹಂಬಲಿಸುತ್ತಿದ್ದನು,
ಮತ್ತು ತಾನು ಅಸ್ವಸ್ಥನಾಗಿದ್ದ ವರ್ತಮಾನವನ್ನು
ನೀವು ಕೇಳಿದ್ದರಿಂದ ವ್ಯಸನಪಟ್ಟನು. ಅವನು ರೋಗ
ದಲ್ಲಿ ಬಿದ್ದು ಸಾಯುವ ಹಾಗಿದ್ದನೆಂಬದು ನಿಜವೇ,
ಆದರೆ ದೇವರು ಅವನನ್ನು ಕರುಣಿಸಿದನು; ಅವನನ್ನು
ಮಾತ್ರವಲ್ಲದೆ ನನಗೆ ದುಃಖದ ಮೇಲೆ ದುಃಖ ಬಾರ
ದಂತೆ ನನ್ನನ್ನೂ ಕರುಣಿಸಿದನು. ಆದದರಿಂದ ನೀವು
ಅವನನ್ನು ನೋಡಿ ತಿರಿಗಿ ಸಂತೋಷಪಡಬೇಕೆಂತಲೂ
ನನಗೆ ಕೂಡ ದುಃಖ ಕಡಿಮೆಯಾಗಬೇಕೆಂತಲೂ ನಾನು
ಅವನನ್ನು ಹೆಚ್ಚಾದ ಅವಸರದಿಂದ ಕಳುಹಿಸಿದ್ದೇನೆ.
30 ಹೀಗಿರಲಾಗಿ ನೀವೇ ನನಗೆ ಮಾಡಬೇಕೆಂದಿರುವ
ಉಪಚಾರದಲ್ಲಿ ಕಡಿಮೆಯಾದದ್ದನ್ನು ಪೂರ್ತಿಮಾಡು
ವದಕ್ಕಾಗಿ ಅವನು ಜೀವದ ಆಶೆಯನ್ನು ಲಕ್ಷ್ಯ
ಮಾಡದೆ ಕ್ರಿಸ್ತನ ಕೆಲಸದ ನಿಮಿತ್ತ ಸಾಯುವ ಹಾಗಿದ್ದ
ನೆಂದು ನೀವು ತಿಳಿದು ಅವನನ್ನು ಪೂರ್ಣ ಸಂತೋಷ
ದಿಂದ ಕರ್ತನ ಹೆಸರಿನಲ್ಲಿ ಸೇರಿಸಿಕೊಳ್ಳಿರಿ. ಅಂಥವ
ರನ್ನು ಮಾನ್ಯರೆಂದೆಣಿಸಿರಿ.

ಸುಳ್ಳುಬೋಧಕರ ವಿಷಯದಲ್ಲಿ ಎಚ್ಚರಿಕೆಯಾಗಿರಬೇಕೆಂದು
ಪೌಲನು ಬೋಧಿಸಿ ತನ್ನ ಅನುಭವವನ್ನೂ ಗುರಿಯನ್ನೂ
ದೃಷ್ಟಾಂತವಾಗಿ ತಿಳಿಸಿದ್ದು.

ಕಡೇ ಮಾತೇನಂದರೆ ನನ್ನ ಸಹೋದರರೇ, ಕರ್ತ
ನಲ್ಲಿ ಸಂತೋಷಪಡಿರಿ. ಮೊದಲು ತಿಳಿಸಿದ ಮಾತು
ಗಳನ್ನು ತಿರಿಗಿ ನಿಮಗೆ ಬರೆಯುವದರಲ್ಲಿ ನನಗೇನೂ
ಬೇಸರವಿಲ್ಲ; ನಿಮ್ಮನ್ನಾದರೋ ಅದು ದೃಢಮಾಡು
ವದು. ಆ ನಾಯಿಗಳಿಗೆ ಎಚ್ಚರಿಕೆಯಾಗಿರಿ;
ದುರ್ಮನಸ್ಸಿನಿಂದ ಕೆಲಸಮಾಡುವವರಿಗೆ ಎಚ್ಚರಿಕೆಯಾ
ಗಿರಿ. ಸುನ್ನತಿಯೆಂದು ಹೇಳಿಕೊಂಡು ಅಂಗಚ್ಛೇದನ
ಮಾಡುವವರಿಗೆ ಎಚ್ಚರಿಕೆಯಾಗಿರಿ. ನಿಜವಾದ ಸುನ್ನತಿ
ಯವರು ಯಾರಂದರೆ—ದೇವರಾತ್ಮನಿಂದ ಪ್ರೇರಿತ
ರಾಗಿ ಆರಾಧಿಸುವವರೂ ಕ್ರಿಸ್ತ ಯೇಸುವಿನಲ್ಲಿ ಹರ್ಷ
ಗೊಳ್ಳುವವರೂ ಶರೀರಸಂಬಂಧವಾದವುಗಳಲ್ಲಿ ಭರ
ವಸವಿಲ್ಲದವರೂ ಆಗಿರುವ ನಾವೇ. ನಾನಾದರೋ
ಶರೀರಸಂಬಂಧವಾದವುಗಳಲ್ಲಿಯೂ ಭರವಸವಿಟ್ಟರೂ
ಇಡಬಹುದು. ಬೇರೆ ಯಾವನಾದರೂ ಶರೀರಸಂಬಂಧ
ವಾದವುಗಳಲ್ಲಿ ಭರವಸವಿಡಬಹುದೆಂದು ಯೋಚಿಸುವ
ದಾದರೆ ನಾನು ಅವನಿಗಿಂತಲೂ ಹೆಚ್ಚಾಗಿ ಹಾಗೆ
ಯೋಚಿಸಬಹುದು. ಹುಟ್ಟಿದ ಎಂಟನೆಯ ದಿನದಲ್ಲಿ 5
ನನಗೆ ಸುನ್ನತಿಯಾಯಿತು; ನಾನು ಇಸ್ರಾಯೇಲ್
ವಂಶದವನು, ಬೆನ್ಯಾಮೀನನ ಕುಲದವನು, ಇಬ್ರಿ
ಯರಿಂದ ಹುಟ್ಟಿದ ಇಬ್ರಿಯನು; ನೇಮನಿಷ್ಠೆಗಳನ್ನು
ನೋಡಿದರೆ ನಾನು ಫರಿಸಾಯನು, ಮತಾಸಕ್ತಿ 6
ಯನ್ನು ನೋಡಿದರೆ ನಾನು ಕ್ರೈಸ್ತಸಭೆಯ ಹಿಂಸಕನು,
ಧರ್ಮಶಾಸ್ತ್ರದಲ್ಲಿ ಹೇಳಿರುವ ನೀತಿಯನ್ನು ನೋಡಿ
ದರೆ ನಾನು ನಿರ್ದೋಷಿ. ಆದರೆ ನನಗೆ ಲಾಭ 7
ವಾಗಿದ್ದಂಥವುಗಳನ್ನು ಕ್ರಿಸ್ತನ ನಿಮಿತ್ತ ನಷ್ಟವೆಂದೆ
ಣಿಸಿದ್ದೇನೆ. ಇಷ್ಟೇ ಅಲ್ಲದೆ, ನನ್ನ ಕರ್ತನಾದ 8
ಕ್ರಿಸ್ತ ಯೇಸುವನ್ನರಿಯುವದೇ ಅತಿಶ್ರೇಷ್ಠವಾದದ್ದೆಂದು
ತಿಳಿದು ನಾನು ಎಲ್ಲವನ್ನು ನಷ್ಟವೆಂದೆಣಿಸುತ್ತೇನೆ.
ಆತನ ನಿಮಿತ್ತ ನಾನು ಎಲ್ಲವನ್ನೂ ಕಳಕೊಂಡು
ಅದನ್ನು ಕಸವೆಂದೆಣಿಸುತ್ತೇನೆ. ಇದರಲ್ಲಿ ನನ್ನ ಉದ್ದೇ 9
ಶವೇನಂದರೆ—ನಾನು ಕ್ರಿಸ್ತನನ್ನು ಸಂಪಾದಿಸಿಕೊಂಡು
ನೇಮನಿಷ್ಠೆಗಳ ಫಲವಾಗಿರುವ ಸ್ವನೀತಿಯನ್ನಾಶ್ರ
ಯಿಸದೆ ಕ್ರಿಸ್ತನನ್ನು ನಂಬುವದರಿಂದ ದೊರಕು
ವಂಥ ಅಂದರೆ ಕ್ರಿಸ್ತನ ಮೇಲಣ ನಂಬಿಕೆಯ ಆಧಾರ
ದಿಂದ ದೇವರು ಕೊಡುವಂಥ ನೀತಿಯನ್ನೇ ಹೊಂದಿ
ಕ್ರಿಸ್ತನಲ್ಲಿರುವವನಾಗಿ ಕಾಣಿಸಿಕೊಳ್ಳಬೇಕೆಂಬದೇ.
ಆತನನ್ನೂ ಆತನ ಪುನರುತ್ಥಾನದಲ್ಲಿರುವ ಶಕ್ತಿ 10
ಯನ್ನೂ ಆತನ ಬಾಧೆಗಳಲ್ಲಿ ಪಾಲುಗಾರನಾಗಿರುವ
ಪದವಿಯನ್ನೂ ತಿಳುಕೊಂಡು ಆತನ ಮರಣದ ವಿಷ
ಯದಲ್ಲಿ ಆತನಿಗೆ ಸರೂಪನಾಗಬೇಕೆಂಬದೇ ನನ್ನ
ಕುತೂಹಲವಾಗಿದೆ. ಹೀಗಾದರೆ ಸತ್ತವರಲ್ಲಿ ಕೆಲವ 11
ರಿಗೆ ಆಗುವ ಪುನರುತ್ಥಾನವು ನನಗೆ ಒದಗಿಬಂದೀತು.
ಇಷ್ಟರೊಳಗೆ ನಾನು ಬಿರುದನ್ನು ಪಡಕೊಂಡು ಸಿದ್ಧಿಗೆ 12
ಬಂದವನೆಂದು ಹೇಳುವದಿಲ್ಲ; ನಾನು ಯಾವದನ್ನು
ಹೊಂದುವದಕ್ಕಾಗಿ ಕ್ರಿಸ್ತ ಯೇಸು ನನ್ನನ್ನು ಹಿಡಿದು
ಕೊಂಡನೋ ಅದನ್ನು ಹಿಡಿದುಕೊಳ್ಳುವದಕ್ಕೋಸ್ಕರ
ಓಡುತ್ತಾ ಇದ್ದೇನೆ. ಸಹೋದರರೇ, ನಾನಂತೂ ಹಿಡಿದು 13
ಕೊಂಡವನೆಂದು ನನ್ನನ್ನು ಈ ವರೆಗೂ ಎಣಿಸಿಕೊಳ್ಳುವ
ದಿಲ್ಲ; ಆದರೆ ಒಂದು, ನಾನು ಹಿಂದಿನ ಸಂಗತಿ
ಗಳನ್ನು ಮರೆತುಬಿಟ್ಟು ಮುಂದಿನವುಗಳನ್ನು ಹಿಡಿಯು
ವದಕ್ಕೆ ಎದೆಬೊಗ್ಗಿದವನಾಗಿ ದೇವರು ಕ್ರಿಸ್ತನ ಮೂಲ 14
ಕವಾಗಿ ನಮ್ಮನ್ನು ಮೇಲಕ್ಕೆ ಕರೆದು ನಮ್ಮ ಮುಂದೆ
ಇಟ್ಟಿರುವ ಬಿರುದನ್ನು ಗುರಿಮಾಡಿಕೊಂಡು ಓಡು
ತ್ತಾ ಇದ್ದೇನೆ. ನಮ್ಮಲ್ಲಿ ಪ್ರವೀಣರಾದವರು ಇದೇ 15
ಅಭಿಪ್ರಾಯವುಳ್ಳವರಾಗಿರೋಣ. ಯಾವದಾದರೂ
ಒಂದು ವಿಷಯದಲ್ಲಿ ನೀವು ಬೇರೆ ಅಭಿಪ್ರಾಯವುಳ್ಳವ
ರಾಗಿದ್ದರೆ ಅದನ್ನೂ ದೇವರು ನಿಮಗೆ ತೋರಿಸಿಕೊಡು
ವನು. ಆದರೆ ನಾವು ಯಾವ ಸೂತ್ರವನ್ನನುಸರಿಸಿ ಇಲ್ಲಿ 16
ಯ ವರೆಗೆ ಬಂದೆವೋ ಅದನ್ನೇ ಅನುಸರಿಸಿ ನಡೆಯೋಣ.
ಸಹೋದರರೇ, ನೀವೆಲ್ಲರು ನನ್ನನ್ನು ಅನುಸರಿಸು 17
ವವರಾಗಿರಿ; ಮತ್ತು ನಾವು ನಿಮಗೆ ತೋರಿಸಿದ ಮಾದ
ರಿಯ ಪ್ರಕಾರ ನಡೆದುಕೊಳ್ಳುವವರನ್ನು ಲಕ್ಷ್ಯಕ್ಕೆ

18 ತಂದುಕೊಳ್ಳಿರಿ. ಯಾಕಂದರೆ ಅನೇಕರು ಕ್ರಿಸ್ತನ
ಶಿಲುಬೆಗೆ ವಿರೋಧಿಗಳಾಗಿ ನಡೆಯುತ್ತಾರೆ; ಅವರ
ವಿಷಯದಲ್ಲಿ ನಿಮಗೆ ಎಷ್ಟೋ ಸಾರಿ ಹೇಳಿದೆನು, ಈಗ
19 ಲೂ ಅಳುತ್ತಾ ಹೇಳುತ್ತೇನೆ. ನಾಶನವೇ ಅವರ
ಅಂತ್ಯಾವಸ್ಥೆ, ಹೊಟ್ಟೆಯೇ ಅವರ ದೇವರು, ನಾಚಿ
ಕೆಕೆಲಸಗಳಲ್ಲಿಯೇ ಅವರ ಗೌರವವು, ಅವರು
ಪ್ರಪಂಚದ ಕಾರ್ಯಗಳ ಮೇಲೆ ಮನಸ್ಸಿಡುವವರು.
20 ನಾವಾದರೋ ಪರಲೋಕಸಂಸ್ಥಾನದವರು; ಕರ್ತ
ನಾದ ಯೇಸು ಕ್ರಿಸ್ತನು ಅಲ್ಲಿಂದಲೇ ರಕ್ಷಕನಾಗಿ ಬರು
21 ವದನ್ನು ಎದುರುನೋಡುತ್ತಾ ಇದ್ದೇವೆ. ಆತನು
ಎಲ್ಲವನ್ನೂ ತನಗೆ ಅಧೀನಮಾಡಿಕೊಳ್ಳಲಾಗುವ
ಪರಾಕ್ರಮವನ್ನು ಸಾಧಿಸಿ ದೀನಾವಸ್ಥೆಯುಳ್ಳ ನಮ್ಮ
ದೇಹವನ್ನು ರೂಪಾಂತರಪಡಿಸಿ ಪ್ರಭಾವವುಳ್ಳ ತನ್ನ
ದೇಹದ ಸಾರೂಪ್ಯವಾಗುವಂತೆ ಮಾಡುವನು.

4 ಹೀಗಿರಲಾಗಿ ಪ್ರಿಯರೂ ಇಷ್ಟರೂ ಆದ ನನ್ನ
ಸಹೋದರರೇ, ನನಗೆ ಸಂತೋಷವೂ ಜಯಮಾಲೆ
ಯೂ ಆಗಿರುವವರೇ, ನಾನು ಹೇಳಿದಂತೆ ಕರ್ತನಲ್ಲಿ
ದೃಢವಾಗಿ ನಿಲ್ಲಿರಿ, ಪ್ರಿಯರೇ.

ಇಬ್ಬರು ಕ್ರೈಸ್ತ ಸಹೋದರಿಗಳಲ್ಲಿ ಇದ್ದ ಮನಸ್ತಾಪವನ್ನು
ಕುರಿತದ್ದು.

2 ಕರ್ತನಲ್ಲಿ ಒಂದೇ ಮನಸ್ಸುಳ್ಳವರಾಗಿರ್ರಿಯೆಂದು
ಯುವೊದ್ಯಳನ್ನೂ ಸಂತುಕೆಯನ್ನೂ ಪ್ರಬೋಧಿಸು
3 ತ್ತೇನೆ. ಸತ್ಯ ಸಯುಜನೇ, ಅವರಿಗೆ ಸಹಾಯಕನಾಗಿರ
ಬೇಕೆಂದು ನಿನ್ನನ್ನೂ ಕೇಳಿಕೊಳ್ಳುತ್ತೇನೆ. ಅವರು
ಕ್ಲೇಮೆನ್ಸ್ ಮುಂತಾದ ನನ್ನ ಜೊತೆಕೆಲಸದವರ ಸಹಿತ
ವಾಗಿ ನನ್ನ ಕೂಡ ಸುವಾರ್ತೆಗೋಸ್ಕರ ಪ್ರಯಾಸಪಟ್ಟ
ವರು. ಅವರವರ ಹೆಸರುಗಳು ಜೀವಬಾಧ್ಯರ ಪಟ್ಟಿ
ಯಲ್ಲಿ ಬರೆದವೆ.

ಕ್ರೈಸ್ತರಲ್ಲಿ ತೋರತಕ್ಕ ಸದ್ಗುಣಗಳು.

4 ಯಾವಾಗಲೂ ಕರ್ತನಲ್ಲಿ ಸಂತೋಷಿಸಿರಿ;
5 ಸಂತೋಷಪಡಿರಿ ಎಂದು ತಿರಿಗಿ ಹೇಳುತ್ತೇನೆ. ನಿಮ್ಮ
ಸೈರಣೆಯು ಎಲ್ಲಾ ಮನುಷ್ಯರಿಗೆ ಗೊತ್ತಾಗಲಿ; ಕರ್ತ
6 ನು ಹತ್ತಿರವಾಗಿದ್ದಾನೆ. ಯಾವ ಸಂಬಂಧವಾಗಿಯೂ
ಚಿಂತೆಮಾಡದೆ ಸರ್ವವಿಷಯದಲ್ಲಿ ದೇವರ ಮುಂದೆ
ಕೃತಜ್ಞತಾಸ್ತುತಿಯನ್ನೂ ಪ್ರಾರ್ಥನೆವಿಜ್ಞಾಪನೆಗಳನ್ನೂ
ಮಾಡುತ್ತಾ ನಿಮಗೆ ಬೇಕಾದದ್ದನ್ನು ತಿಳಿಯಪಡಿಸಿರಿ.
7 ಆಗ ಎಲ್ಲಾ ಗ್ರಹಿಕೆಯನ್ನು ಮಿಾರುವ ದೇವಶಾಂತಿ
ಯು ನಿಮ್ಮ ಹೃದಯಗಳನ್ನೂ ಯೋಚನೆಗಳನ್ನೂ
ಕ್ರಿಸ್ತ ಯೇಸುವಿನಲ್ಲಿ ಕಾಯುವದು.
8 ಕಡೇ ಮಾತೇನಂದರೆ, ಸಹೋದರರೇ, ಯಾವಾವದು
ಸತ್ಯವೂ ಮಾನ್ಯವೂ ನ್ಯಾಯವೂ ಶುದ್ಧವೂ ಪ್ರೀತಿಕರ
ವೂ ಮನೋಹರವೂ ಆಗಿದೆಯೋ, ಯಾವದು ಸದ್ಗುಣ
ವಾಗಿದೆಯೋ, ಯಾವದು ಕೀರ್ತಿಗೆ ಯೋಗ್ಯವೋ,
9 ಅವೆಲ್ಲವುಗಳನ್ನೂ ಲಕ್ಷ್ಯಕ್ಕೆ ತಂದುಕೊಳ್ಳಿರಿ. ನೀವು
ಯಾವದನ್ನು ನನ್ನಿಂದ ಕಲಿತು ಹೊಂದಿದಿರೋ, ಮತ್ತು
ಯಾವದನ್ನು ನನ್ನಲ್ಲಿ ಕೇಳಿ ಕಂಡಿರೋ ಅದನ್ನೇ
ಮಾಡುತ್ತಾ ಬನ್ನಿರಿ. ಹೀಗೆ ಮಾಡಿದರೆ ಶಾಂತಿ
ದಾಯಕನಾದ ದೇವರು ನಿಮ್ಮೊಂದಿಗಿರುವನು.

ಫಿಲಿಪ್ಪಿ ಸಭೆಯವರು ಪೌಲನಿಗೆ ತೋರಿಸಿದ
ಔದಾರ್ಯವನ್ನು ಕುರಿತದ್ದು.

ನನ್ನ ವಿಷಯವಾದ ನಿಮ್ಮ ಯೋಚನೆಯ
ಬಳ್ಳಿಯು ಇಷ್ಟು ದಿವಸಗಳಾದ ಮೇಲೆ ಪುನಃ ಚಿ
ದ್ದಕ್ಕೆ ನಾನು ಕರ್ತನ ನಿಮಿತ್ತ ಬಹಳವಾಗಿ ಸಂತೋ
ಪಡುತ್ತೇನೆ. ಇಂಥ ಯೋಚನೆ ನಿಮ್ಮಲ್ಲಿ ನಿಜವ
ಇರುತ್ತಿದ್ದರೂ ಇದು ವರೆಗೆ ಅದರ ಪ್ರಕಾರ ಮಾ
ದಕ್ಕೆ ಸಂದರ್ಭಸಿಕ್ಕಲಿಲ್ಲವೇನೋ. ಕೊರತೆಯಲ್ಲಿ
ನೆಂದು ಸೂಚಿಸುವದಕ್ಕೆ ನಾನು ಇದನ್ನು ಹೇಳುವದಿ
ನಾನಂತೂ ಇದ್ದ ಸ್ಥಿತಿಯಲ್ಲಿಯೇ ಸಂತುಷ್ಟನಾ
ವದನ್ನು ಕಲಿತುಕೊಂಡಿದ್ದೇನೆ. ಬಡವನಾಗಿರ
ಬಲ್ಲೆನು, ಸಮೃದ್ಧಿಯುಳ್ಳವನಾಗಿರಲೂ ಬಲ್ಲೆ
ನಾನು ತೃಪ್ತನಾಗಿದ್ದರೂ ಹಸಿದವನಾಗಿದ್ದರೂ, ಸ
ದ್ಧಿಯುಳ್ಳವನಾದರೂ ಕೊರತೆಯುಳ್ಳವನಾದ
ಯಾವ ತರದ ಸ್ಥಿತಿಯಲ್ಲಿರುವವನಾದರೂ ಅ
ಗುಟ್ಟು ನನಗೆ ತಿಳಿದದೆ. ನನ್ನನ್ನು ಬಲಪಡಿಸು
ತನಲ್ಲಿದ್ದುಕೊಂಡು ಎಲ್ಲಕ್ಕೂ ಶಕ್ತನಾಗಿದ್ದೇನೆ.
ದ್ದರೂ ನೀವು ನನ್ನ ಸಂಕಟದಲ್ಲಿ ಪಾಲುಗಾರ
ದ್ದದ್ದು ಒಳ್ಳೇದಾಯಿತು. ಇದಲ್ಲದೆ ಫಿಲಿಪ್ಪಿ
ವರೇ, ನಾನು ಮೊದಲು ನಿಮ್ಮಲ್ಲಿ ಸುವಾರ್ತೆಯ
ಸಾರಿ ಮಕೆದೋನ್ಯದಿಂದ ಹೊರಟುಹೋದಾಗ
ಡುವ ಕೊಳ್ಳುವ ವಿಷಯದಲ್ಲಿ ನಿಮ್ಮ ಹೊರತು
ಯಾವ ಸಭೆಗೂ ನನಗೂ ಸಂಬಂಧವಿರಲಿಲ್ಲವೆ
ನೀವೂ ಬಲ್ಲಿರಿ. ನಾನು ಥೆಸಲೊನೀಕದಲ್ಲಿದ್ದಾಗ
ನೀವು ಒಂದೆರಡು ಸಾರಿ ನನ್ನ ಕೊರತೆಯನ್ನು ನೀ
ವದಕ್ಕೆ ಕೊಟ್ಟುಕಳುಹಿಸಿದಿರಲ್ಲಾ. ನಾನು ನಿಮ್ಮ
ದಾನವನ್ನು ಅಪೇಕ್ಷಿಸುವದಿಲ್ಲ; ನಿಮ್ಮ ಆ
ಆದಾಯವಾಗುವಂಥ ಪ್ರೀತಿಫಲವನ್ನೇ ಅಪೇಕ್ಷಿ
ತ್ತೇನೆ. ಬೇಕಾದದ್ದೆಲ್ಲಾ ನನಗುಂಟು, ಸಮೃದ್ಧಿ
ಯಿತು. ಎಪಫ್ರೊದೀತನ ಕೈಯಿಂದ ನೀವು ಕೊ
ಕಳುಹಿಸಿದ್ದು ನನಗೆ ತಲಪಲಾಗಿ ನಾನು ತುಂಬಿತು
ದವನಾಗಿದ್ದೇನೆ. ಅದು ದೇವರಿಗೆ ಮೆಚ್ಚಿಕೆ
ದದ್ದು, ಸುಗಂಧವಾಸನೆಯೇ, ಇಷ್ಟಯಜ್ಞ
ನನ್ನ ದೇವರು ಕ್ರಿಸ್ತ ಯೇಸುವಿನ ಮೂಲಕ
ಪ್ರಭಾವದ ಐಶ್ವರ್ಯಕ್ಕೆ ತಕ್ಕ ಹಾಗೆ ನಿಮ್ಮ
ಯೊಂದು ಕೊರತೆಯನ್ನು ನೀಗಿಸುವನು. ನ
ತಂದೆಯಾದ ದೇವರಿಗೆ ಯುಗಯುಗಾಂತರಗ
ಯೂ ಪ್ರಭಾವ. ಆಮೆನ್.

ವಂದನೆಗಳು.

ದೇವಜನರಲ್ಲಿ ಪ್ರತಿಯೊಬ್ಬನಿಗೆ ಜೊತೆಕ್ರೈಸ್ತನಿಗೆ
ನನ್ನ ವಂದನೆಯನ್ನು ಹೇಳಿರಿ. ನನ್ನ ಜೊತೆಯ
ರುವ ಸಹೋದರರು ನಿಮ್ಮನ್ನು ವಂದಿಸುತ್ತಾ
ಇಲ್ಲಿರುವ ದೇವಜನರು ನಿಮ್ಮನ್ನು ವಂದಿಸುತ್ತಾ
ಚಕ್ರವರ್ತಿಯ ಅರಮನೆಗೆ ಸೇರಿದವರು ವಿಶೇಷವ
ವಂದನೆಗಳನ್ನು ಹೇಳುತ್ತಾರೆ.
ಕರ್ತನಾದ ಯೇಸು ಕ್ರಿಸ್ತನ ಕೃಪೆಯು ನಿ
ಆತ್ಮದೊಂದಿಗೆ ಇರಲಿ.

# THE EPISTLE OF SAINT PAUL TO THE
# COLOSSIANS

## ಪೌಲನು ಕೊಲೊಸ್ಸೆಯವರಿಗೆ ಒರೆದ ಪತ್ರಿಕೆ

### ಒಕ್ಕಣೆ.

1 ದೇವರ ಚಿತ್ತಾನುಸಾರವಾಗಿ ಕ್ರಿಸ್ತ ಯೇಸುವಿನ
ಅಪೊಸ್ತಲನಾದ ಪೌಲನೂ ಸಹೋದರನಾದ ತಿಮೊ
2 ಥೆಯನೂ ಕೊಲೊಸ್ಸೆಯಲ್ಲಿರುವ ದೇವಜನರಿಗೆ ಅಂ
ದರೆ ಕ್ರಿಸ್ತನಲ್ಲಿರುವ [1]ನಂಬಿಗಸ್ತರಾದ ಸಹೋದರ
ರಿಗೆ ಬರೆಯುವದೇನಂದರೆ—ನಮ್ಮ ತಂದೆಯಾದ ದೇವ
ರಿಂದ ನಿಮಗೆ ಕೃಪೆಯೂ ಶಾಂತಿಯೂ ಆಗಲಿ.

### ಪೌಲನು ಕೊಲೊಸ್ಸೆಯ ಸಭೆಯವರ ವಿಷಯದಲ್ಲಿ ದೇವರಿಗೆ ಮಾಡುವ ಕೃತಜ್ಞತಾಸ್ತುತಿಯೂ ಪ್ರಾರ್ಥನೆಯೂ.

3-5 ಕ್ರಿಸ್ತ ಯೇಸುವಿನಲ್ಲಿ ನೀವು ಇಟ್ಟ ನಂಬಿಕೆಯ
ವಿಷಯವಾಗಿಯೂ ದೇವಜನರ ಮೇಲಿರುವ ನಿಮ್ಮ
ಪ್ರೀತಿಯ ವಿಷಯವಾಗಿಯೂ ನಾವು ಕೇಳಿ ಪರ
ಲೋಕದಲ್ಲಿ ನಿಮಗೋಸ್ಕರ ಸಿದ್ಧವಾಗಿರುವ ಮಹಾ
ಪದವಿಯನ್ನು ನೆನಸುತ್ತಾ ನಾವು ಪ್ರಾರ್ಥನೆಮಾಡು
ವಾಗೆಲ್ಲಾ ನಿಮ್ಮ ನಿಮಿತ್ತವಾಗಿ ನಮ್ಮ ಕರ್ತನಾದ
ಯೇಸು ಕ್ರಿಸ್ತನ ತಂದೆಯಾಗಿರುವ ದೇವರಿಗೆ ಸ್ತೋತ್ರ
ಮಾಡುತ್ತೇವೆ. ನೀವು ಆ ಪದವಿಯನ್ನು ಕುರಿತು
ನಿಮ್ಮ ಬಳಿಗೆ ಬಂದಿರುವ ಸುವಾರ್ತೆಯ ಸತ್ಯವಾಕ್ಯ
6 ದಿಂದ ಮೊದಲೇ ಕೇಳಿದಿರಿ. ನೀವು ದೇವರ ಕೃಪೆ
ಯನ್ನು ಕುರಿತು ಸತ್ಯಾರ್ಥವನ್ನು ಕೇಳಿ ತಿಳುಕೊಂಡ
ದಿವಸದಿಂದ ಆ ಸುವಾರ್ತೆಯು ನಿಮ್ಮಲ್ಲಿ ಫಲ
ಕೊಟ್ಟು ವೃದ್ಧಿಯಾಗುತ್ತಾ ಬಂದ ಪ್ರಕಾರ ಲೋಕ
ದಲ್ಲೆಲ್ಲಾ ಹಬ್ಬಿ ಫಲಕೊಟ್ಟು ವೃದ್ಧಿಯಾಗುತ್ತಾ ಬರು
7 ತ್ತದೆ. ನಮ್ಮ ಪ್ರಿಯ ಜೊತೆಯ ದಾಸನಾದ ಎಪ
ಫ್ರಸಿಂದ ಆ ಸತ್ಯೋಪದೇಶವನ್ನು ಕಲಿತುಕೊಂಡಿರಿ.
ಅವನು ನಿಮಗೋಸ್ಕರ ಕ್ರಿಸ್ತನ ನಂಬಿಗಸ್ತನಾದ ಸೇವ
8 ಕನು. ಪವಿತ್ರಾತ್ಮಪ್ರೇರಿತವಾದ ನಿಮ್ಮ ಪ್ರೀತಿಯ
ವಿಷಯದಲ್ಲಿ ನನಗೆ ತಿಳಿಸಿದವನು ಅವನೇ.
9 ಆದಕಾರಣ ನಾವು ನಿಮ್ಮ ಸುದ್ದಿಯನ್ನು ಕೇಳಿದ
ದಿವಸದಿಂದ ನಿಮಗೋಸ್ಕರ ಪ್ರಾರ್ಥಿಸುವದನ್ನು ಬಿಡದೆ
ನೀವು ಸಕಲ ಆತ್ಮೀಯ ಜ್ಞಾನವನ್ನೂ ಗ್ರಹಿಕೆಯನ್ನೂ
10 ಹೊಂದಿ ಕರ್ತನ ಚಿತ್ತದ ವಿಷಯವಾದ ತಿಳುವಳಿಕೆ
ಯಿಂದ ತುಂಬಿಕೊಂಡು ಆತನಿಗೆ ಯೋಗ್ಯರಾಗಿ ನಡೆದು
ಎಲ್ಲಾ ವಿಧದಲ್ಲಿ ಆತನನ್ನು ಸಂತೋಷಪಡಿಸುವವ
ರಾಗಿರಬೇಕೆಂತಲೂ ನೀವು ಸಕಲಸತ್ಕಾರ್ಯವೆಂಬ
ಫಲವನ್ನು ಕೊಡುತ್ತಾ ದೇವಜ್ಞಾನದಿಂದ ಅಭಿವೃದ್ಧಿ
ಯಾಗುತ್ತಿರಬೇಕೆಂತಲೂ ಆತನ ಮಹಿಮಶಕ್ತಿಯ 11
ಪ್ರಕಾರ ಪರಿಪೂರ್ಣಬಲಹೊಂದಿ ಬಲಿಷ್ಠರಾಗಿ ಆನಂದ
ಪೂರ್ವಕವಾದ ತಾಳ್ಮೆಯನ್ನೂ ದೀರ್ಘಶಾಂತಿಯನ್ನೂ
ಯಾವಾಗಲೂ ತೋರಿಸುವವರಾಗಿರಬೇಕೆಂತಲೂ ಬೆಳ 12
ಕಿನ ರಾಜ್ಯದೊಳಗೆ ದೇವಜನರ ಬಾಧ್ಯತೆಯಲ್ಲಿ ಪಾಲು
ಗಾರರಾಗುವದಕ್ಕೆ ನಿಮ್ಮನ್ನು ಯೋಗ್ಯರನ್ನಾಗಿ ಮಾ
ಡಿದ ತಂದೆಗೆ ಕೃತಜ್ಞತಾಸ್ತುತಿ ಮಾಡುವವರಾಗಿರಬೇ
ಕೆಂತಲೂ ದೇವರನ್ನು ಬೇಡಿಕೊಳ್ಳುತ್ತೇನೆ.

### ಕ್ರಿಸ್ತನು ಸರ್ವಸೃಷ್ಟಿಗೆ ಉತ್ಕೃಷ್ಟಸ್ಥಾನದಲ್ಲಿದ್ದಾನೆಂಬುವ ಬೋಧೆ.

ದೇವರು ನಮ್ಮನ್ನು ಅಂಧಕಾರದ ಧೊರೆತನ 13
ದಿಂದ ಬಿಡಿಸಿ ತನ್ನ ಪ್ರಿಯ ಕುಮಾರನ ರಾಜ್ಯ
ದೊಳಗೆ ಸೇರಿಸಿದನು. ಆ ಕುಮಾರನಲ್ಲಿ ನಮ್ಮ 14
ಪಾಪಗಳು ಪರಿಹಾರವಾಗಿ ನಮಗೆ ಬಿಡುಗಡೆಯಾ
ಯಿತು. ಆತನು ಅದೃಶ್ಯನಾದ ದೇವರ ಪ್ರತಿ 15
ರೂಪನೂ ಸೃಷ್ಟಿಗೆಲ್ಲಾ ಜ್ಯೇಷ್ಠಪುತ್ರನ ಸ್ಥಾನಹೊಂದಿ
ದವನೂ ಆಗಿದ್ದಾನೆ. ಭೂಪರಲೋಕಗಳಲ್ಲಿರುವ 16
ದೃಶ್ಯಾದೃಶ್ಯವಾದವುಗಳೆಲ್ಲವೂ ಸಿಂಹಾಸನಗಳಾಗಲಿ
ಪ್ರಭುತ್ವಗಳಾಗಲಿ ಧೊರೆತನಗಳಾಗಲಿ ಅಧಿಕಾರಗಳಾ
ಗಲಿ ಆತನಲ್ಲಿ ಸೃಷ್ಟಿಸಲ್ಪಟ್ಟವು. ಸರ್ವವು ಆತನ
ಮುಖಾಂತರವಾಗಿಯೂ ಆತನಿಗೋಸ್ಕರವಾಗಿಯೂ
ಸೃಷ್ಟಿಸಲ್ಪಟ್ಟಿತು. ಆತನು ಎಲ್ಲಕ್ಕೂ ಮೊದಲು 17
ಇದ್ದವನು; ಆತನು ಸಮಸ್ತಕ್ಕೂ ಆಧಾರಭೂತನು.
ಸಭೆಯೆಂಬ ದೇಹಕ್ಕೆ ಆತನು ಶಿರಸ್ಸು; ಆತನು ಆದಿ 18
ಸಂಭೂತನು. ಎಲ್ಲಾದರಲ್ಲಿ ಪ್ರಮುಖನಾಗುವಂತೆ
ಸತ್ತವರೊಳಗಿಂದ ಮೊದಲು ಎದ್ದುಬಂದವನು ಆತ
ನೇ. ತಂದೆಯಾದ ದೇವರು ಆತನಲ್ಲಿ ತನ್ನ ಸರ್ವ 19
ಸಂಪೂರ್ಣತೆಯು ವಾಸವಾಗಿರಬೇಕೆಂತಲೂ ಆತನು 20
ಶಿಲುಬೆಯ ಮೇಲೆ ಸುರಿಸಿದ ರಕ್ತದಿಂದ ತಾನು
ಸಮಾಧಾನವನ್ನು ಉಂಟುಮಾಡಿ ಭೂಪರಲೋಕಗಳ
ಲ್ಲಿರುವ ಸಮಸ್ತವನ್ನೂ ಆತನ ಮೂಲಕ ತನಗೆ
ಸಂಧಾನಪಡಿಸಿಕೊಳ್ಳಬೇಕೆಂತಲೂ ನಿಷ್ಕರ್ಷೆಮಾಡಿ
ದನು.

1) ಅಥವಾ, ನಂಬುವವರಾದ.

ಕ್ರಿಸ್ತನಲ್ಲಿ ಎಲ್ಲಾ ಜನಾಂಗದವರು ಯೆಹೂದ್ಯರೊಂದಿಗೆ ಸಮಭಾಗಿಗಳಾಗಿದ್ದಾರೆಂಬದು.

(ಎಫೆಸ 2. 1—22.)

21 ಇದಲ್ಲದೆ ನೀವು ಹಿಂದಿನ ಕಾಲದಲ್ಲಿ ಅನ್ಯರೂ
ದುಷ್ಕೃತ್ಯಗಳನ್ನು ಮಾಡುವವರಾಗಿ ದ್ವೇಷಮನಸ್ಸು
22 ಳ್ಳವರೂ ಆಗಿದ್ದರೂ ಆತನು ನಿಮ್ಮನ್ನು ಸಹ ತನ್ನ
ಕುಮಾರನ ಸ್ಥೂಲದೇಹದಲ್ಲಿ ಉಂಟಾದ ಮರಣದ
ಮೂಲಕ ಈಗ ಸಂಧಾನಪಡಿಸಿಕೊಂಡಿದ್ದಾನೆ; ಮತ್ತು
ನಿಮ್ಮನ್ನು ಪರಿಶುದ್ಧರನ್ನಾಗಿಯೂ ನಿರ್ದೋಷಿಗಳನ್ನಾ
ಗಿಯೂ ನಿರಪರಾಧಿಗಳನ್ನಾಗಿಯೂ ತನ್ನ ಸನ್ನಿಧಿ
23 ಯಲ್ಲಿ ನಿಲ್ಲಿಸಬೇಕೆಂದಿದ್ದಾನೆ. ನೀವು ಕೇಳಿದಂಥ
ಆಕಾಶದ ಕೆಳಗಿರುವ ಸರ್ವಸೃಷ್ಟಿಗೆ ಸಾರಲ್ಪಟ್ಟಂಥ
ಸುವಾರ್ತೆಯಿಂದ ಉಂಟಾದ ನಿರೀಕ್ಷೆಯನ್ನು ಬಿಟ್ಟು
ತೊಲಗಿಹೋಗದೆ ಅಸ್ತಿವಾರದ ಮೇಲೆ ನಿಂತು ಸ್ಥಿರ
ವಾಗಿದ್ದು ನಂಬಿಕೆಯಲ್ಲಿ ನೆಲೆಗೊಂಡಿರುವದಾದರೆ ಆ
ಪದವಿ ನಿಮಗೆ ಪ್ರಾಪ್ತವಾಗುವದು.
24 ಪೌಲನೆಂಬ ನಾನು ಈ ಸುವಾರ್ತೆಗೆ ಸೇವಕನಾ
ದೆನು. ನಾನು ಈಗ ನಿಮಗೋಸ್ಕರ ಅನುಭವಿಸುತ್ತಿ
ರುವ ಬಾಧೆಗಳಲ್ಲಿ ಸಂತೋಷಪಟ್ಟು ಕ್ರಿಸ್ತನ ಸಂಕಟ
ಗಳೊಳಗೆ ಇನ್ನೂ ಉಳಿದದ್ದನ್ನು ಸಭೆಯೆಂಬ ಆತನ
ದೇಹಕ್ಕೋಸ್ಕರ ನನ್ನ ಶರೀರದಲ್ಲಿ ಅನುಭವಿಸಿ
25 ತೀರಿಸುತ್ತೇನೆ. ನಾನು ಸಭೆಗೆ ಸೇವಕನಾದೆನು.
ದೇವರು ತನ್ನ ವಾಕ್ಯವನ್ನು ಸಂಪೂರ್ಣವಾಗಿ ತಿಳಿ
ಸುವ ಕೆಲಸವನ್ನು ನಿಮ್ಮ ಪ್ರಯೋಜನಕ್ಕೋಸ್ಕರ
26 ನನಗೆ ದಯಪಾಲಿಸಿದನು. ಆ ವಾಕ್ಯವು ಹಿಂದಿನ
ಯುಗಗಳಿಂದಲೂ ತಲತಲಾಂತರಗಳಿಂದಲೂ ಮರೆಯಾ
ಗಿತ್ತು; ಈಗಿನ ಕಾಲದಲ್ಲಿ ದೇವಜನರಿಗೆ ತಿಳಿಸಲ್ಪ
27 ಟ್ಟಿದೆ. ಅನ್ಯಜನಗಳ ವಿಷಯವಾದ ಈ ಮರ್ಮದ
ಮಹಿಮಾತಿಶಯವು ಎಷ್ಟೆಂಬದನ್ನು ದೇವರು ತನ್ನ
ಜನರಿಗೆ ತಿಳಿಸಲಿಕ್ಕೆ ಮನಸ್ಸುಮಾಡಿಕೊಂಡನು. ಈ
ಮರ್ಮವು ಏನಂದರೆ ಕ್ರಿಸ್ತನು ನಿಮ್ಮಲ್ಲಿದ್ದು ಪ್ರಭಾ
28 ವದ ನಿರೀಕ್ಷೆಗೆ ಆಧಾರಭೂತನಾಗಿರುವದೇ. ನಾವು
ಆತನನ್ನು ಪ್ರಸಿದ್ಧಿಪಡಿಸುವವರಾಗಿ ಸಕಲರಿಗೂ ಬುದ್ಧಿ
ಹೇಳುತ್ತಾ ಸರ್ವರಿಗೂ ಪೂರ್ಣಜ್ಞಾನವನ್ನು ಉಪ
ದೇಶಿಸುತ್ತಾ ದೇವರ ಮುಂದೆ ಎಲ್ಲರನ್ನು ಕ್ರಿಸ್ತನಲ್ಲಿ
ಪ್ರವೀಣರನ್ನಾಗಿ ನಿಲ್ಲಿಸುವದಕ್ಕೆ ಪ್ರಯತ್ನಿಸುತ್ತಿದ್ದೇವೆ.
29 ನನ್ನಲ್ಲಿ ಕಾರ್ಯಸಾಧಿಸುವ ದೇವರ ಬಲವನ್ನು
ಪ್ರಯೋಗಮಾಡಿ ಇದಕ್ಕೋಸ್ಕರವೇ ಹೋರಾಡುತ್ತೇನೆ,
ಪ್ರಯಾಸಪಡುತ್ತೇನೆ.

ಸುಳ್ಳುಬೋಧಕರಿಗೆ ಕಿವಿಗೊಡಬಾರದೆಂದು ಎಚ್ಚರಿಕೆ.

2 ನಿಮಗೋಸ್ಕರವೂ ಲವೊದಿಕೀಯದವರಿಗೋಸ್ಕರ
ವೂ ನನ್ನನ್ನು ಕಣ್ಣಾರೆ ಕಾಣದಿರುವವರೆಲ್ಲರಿಗೋಸ್ಕರ
ವೂ ನನಗೆ ಬಹಳ ಹೋರಾಟ ಉಂಟೆಂಬದು ನಿಮಗೆ
2-3 ತಿಳಿದಿರಬೇಕೆಂದು ಅಪೇಕ್ಷಿಸುತ್ತೇನೆ. ಹೇಗಂದರೆ
ನೀವೆಲ್ಲರು ಪ್ರೀತಿಯಿಂದ ಹೊಂದಿಕೆಯಾಗಿದ್ದು ಬುದ್ಧಿ
ಪೂರ್ವಕ ನಿಶ್ಚಯವೆಂಬ ಭಾಗ್ಯವನ್ನು ಪಡೆದು ದೇ
ವರು ತಿಳಿಸಿರುವ ಮರ್ಮವನ್ನು ಅಂದರೆ ತನ್ನಲ್ಲೇ
ಜ್ಞಾನವಿದ್ಯಾಸಂಬಂಧವಾದ ನಿಕ್ಷೇಪಗಳನ್ನೆಲ್ಲಾ ಅಡ
ಗಿಸಿಕೊಂಡಿರುವ ಕ್ರಿಸ್ತನನ್ನು ತಿಳುಕೊಂಡವರಾಗಿ ಹೃದ
ಯದಲ್ಲಿ ದೃಢವಾಗಿರಬೇಕೆಂಬ ಕುತೂಹಲವು ನನ
ಗುಂಟು. ಯಾರಾದರೂ ರಂಜನೆಯಾದ ಮಾತುಗ
ಳಿಂದ ನಿಮ್ಮನ್ನು ಮೋಸಗೊಳಿಸಿಯಾರೆಂಬ ಭಯ ನನ
ಗಿರುವದರಿಂದ ಇದನ್ನು ಹೇಳಿದ್ದೇನೆ. ನಾನು ಶರೀರ
ದಿಂದ ನಿಮ್ಮ ಬಳಿಯಲ್ಲಿ ಇಲ್ಲದಿದ್ದರೂ ಆತ್ಮದಿಂದ
ನಿಮ್ಮೊಂದಿಗಿದ್ದು ನೀವು ಕ್ರಮವಾಗಿ ನಡೆಯುವದ
ನ್ನೂ ಕ್ರಿಸ್ತನಂಬಿಕೆಯಲ್ಲಿ ದೃಢವಾಗಿ ನಿಂತಿರುವದ
ನ್ನೂ ನೋಡಿ ಸಂತೋಷಪಡುತ್ತೇನೆ. ಆದದರಿಂದ
ನೀವು ಕರ್ತನಾದ ಯೇಸುವೆಂಬ ಕ್ರಿಸ್ತನನ್ನು ಅಂಗೀ
ಕರಿಸಿದಂತೆಯೇ ಆತನಲ್ಲಿದ್ದವರಾಗಿ ನಡೆದುಕೊಳ್ಳಿರಿ.
ಆತನಲ್ಲಿ ಬೇರೂರಿಕೊಂಡು ಭಕ್ತಿವೃದ್ಧಿಯನ್ನು
ಹೊಂದಿ ನಿಮಗೆ ಬೋಧಿಸಲ್ಪಟ್ಟ ಉಪದೇಶದ ಪ್ರಕಾ
ರವೇ ಕ್ರಿಸ್ತನಂಬಿಕೆಯಲ್ಲಿ ನೆಲೆಗೊಂಡು ದೇವರಿಗೆ
ಹೆಚ್ಚೆಚ್ಚಾಗಿ ಸ್ತೋತ್ರಮಾಡುವವರಾಗಿರಿ.
ಕ್ರಿಸ್ತನನ್ನು ಅನುಸರಿಸದೆ ಮನುಷ್ಯರ ಸಂಪ್ರ
ದಾಯಗಳನ್ನೂ ಪ್ರಾಪಂಚಿಕಬಾಲಬೋಧೆಯನ್ನೂ
ಅನುಸರಿಸುವವರು ನಿಮ್ಮಲ್ಲಿ ಬಂದು ಮೋಸವಾದ
ನಿರರ್ಥಕ ತತ್ವಜ್ಞಾನಬೋಧನೆಯಿಂದ ನಿಮ್ಮ ಮನ
ಸ್ಸನ್ನು ಕೆಡಿಸಿ ನಿಮ್ಮನ್ನು ವಶಮಾಡಿಕೊಂಡಾರು,
ಎಚ್ಚರಿಕೆಯಾಗಿರ್ರಿ. ಕ್ರಿಸ್ತನಲ್ಲಿಯೇ ದೇವರ ಸರ್ವ
ಸಂಪೂರ್ಣತೆಯು ಅವತರಿಸಿ ವಾಸಮಾಡುತ್ತದೆ, ಮತ್ತು 1
ನೀವು ಆತನಲ್ಲಿದ್ದುಕೊಂಡೇ ಪರಿಪೂರ್ಣತೆಯನ್ನು
ಹೊಂದಿದವರಾಗಿದ್ದೀರಿ. ಆತನು ಎಲ್ಲಾ ಧೊರೆತನ 1
ಗಳಿಗೂ ಅಧಿಕಾರಗಳಿಗೂ ಶಿರಸ್ಸು. ನೀವು ಆತನಲ್ಲಿ
ಸುನ್ನತಿಯನ್ನೂ ಹೊಂದಿದಿರಿ; ಈ ಸುನ್ನತಿಯು
ಕೈಯಿಂದ ಮಾಡಿದ್ದಲ್ಲ, ಇದು ಪಾಪಾಧೀನಸ್ವಭಾವ
ವನ್ನು ವಿಸರ್ಜಿಸುವದೇ; ಇದೇ ಕ್ರಿಸ್ತೀಯ ಸುನ್ನತಿ;
ನೀವು ದೀಕ್ಷಾಸ್ನಾನದಲ್ಲಿ ಕ್ರಿಸ್ತನೊಂದಿಗೆ ಹೂಣಲ್ಪ 1
ಟ್ಟದ್ದರಿಂದಲೇ ಆ ಸುನ್ನತಿಯನ್ನು ಹೊಂದಿದಿರಿ. ಇದ
ಲ್ಲದೆ ಆತನನ್ನು ಸತ್ತವರೊಳಗಿಂದ ಎಬ್ಬಿಸಿದ ದೇವರ
ಸಾಮರ್ಥ್ಯದಲ್ಲಿ ನಂಬಿಕೆಯಿಡುವದರ ಮೂಲಕ ಅದ
ರಲ್ಲಿ ಆತನ ಕೂಡ ಎದ್ದು ಬಂದಿರಿ. ಅಪರಾಧಗಳನ್ನು 1
ಮಾಡುವದರಿಂದಲೂ ಸುನ್ನತಿಯಿಲ್ಲದ ಶರೀರಭಾವ
ದಿಂದಲೂ ಸತ್ತವರಾಗಿದ್ದ ನಿಮ್ಮನ್ನು ಸಹ ದೇವ
ರು ಕ್ರಿಸ್ತನೊಂದಿಗೆ ಬದುಕಿಸಿದ್ದಾನೆ. ಆತನು ನಮ್ಮ 1
ಅಪರಾಧಗಳನ್ನೆಲ್ಲಾ ಕ್ಷಮಿಸಿ ನಮ್ಮ ಮೇಲೆ ದೋಷಾ
ರೋಪಣೆಮಾಡಿದಂಥ ಆಜ್ಞಾರೂಪವಾಗಿದ್ದಂಥ ಪತ್ರ
ವನ್ನು ಕೆಡಿಸಿ ಅದನ್ನು ಶಿಲುಬೆಗೆ ಜಡಿದು ಇಲ್ಲದಂತಾಗ
ಮಾಡಿದನು. ಆತನು ಧೊರೆತನಗಳನ್ನೂ ಅಧಿಕಾರಗ 1
ಳನ್ನೂ 1)ನಿರಾಯುಧರನ್ನಾಗಿ ಮಾಡಿ ಜಯೋ
ತ್ಸವಮಾಡುತ್ತಾನೋ ಎಂಬಂತೆ 2)ಶಿಲುಬೆಯ ಮೇಲೆ
ಅವುಗಳನ್ನು ಜಯಿಸಲಟ್ಟವುಗಳನ್ನಾಗಿ ಮೆರಸುತ್ತಾ
ತೋರಿಸಿದನು.

1) ಅಥವಾ, ತೆಗೆದಿಟ್ಟು. 2) ಅಥವಾ, ಕ್ರಿಸ್ತನಲ್ಲಿ.

6 ಹೀಗಿರುವದರಿಂದ ತಿಂದು ಕುಡಿಯುವ ವಿಷಯ
ದಲ್ಲಿಯೂ ಹಬ್ಬ ಅಮಾವಾಸ್ಯೆ ಸಬ್ಬತು ಎಂಬಿವುಗಳ
ವಿಷಯದಲ್ಲಿಯೂ ನಿಮ್ಮನ್ನು ದೋಷಿಗಳೆಂದು ಯಾ
7 ರೂ ಎಣಿಸಬಾರದು. ಇವು ಮುಂದೆ ಬರಬೇಕಾಗಿದ್ದ
ಕಾರ್ಯಗಳ ಛಾಯೆಯಾಗಿವೆ; ಇವುಗಳ ನಿಜಸ್ವರೂ
8-19 ಪವು ಕ್ರಿಸ್ತನೇ. ಕೆಲವರು ಅತಿವಿನಯದಲ್ಲಿಯೂ
ದೇವದೂತರ ಪೂಜೆಯಲ್ಲಿಯೂ ಆಸಕ್ತರಾಗಿದ್ದಾರೆ,
ತಮಗೆ ದರ್ಶನಗಳಾದವೆಂದು ಕೊಚ್ಚಿಕೊಳ್ಳುತ್ತಾರೆ,
ಮತ್ತು ಪ್ರಾಪಂಚಿಕ ಬುದ್ಧಿಯಿಂದ ನಿರಾಧಾರವಾಗಿ
ಉಬ್ಬಿಕೊಂಡಿದ್ದಾರೆ, ಆದರೆ ಕ್ರಿಸ್ತನೆಂಬ ಶಿರಸ್ಸಿನ
ಹೊಂದಿಕೆಯನ್ನು ಬಿಟ್ಟವರಾಗಿದ್ದಾರೆ. ಇಂಥವರು ನಿಮ
ಗೆ ದೊರಕಿರುವ ಬಿರುದನ್ನು ಅಪಹರಿಸುವದಕ್ಕೆ ಅವ
ಕಾಶಕೊಡಬೇಡಿರಿ. ಆ ಶಿರಸ್ಸಿನಿಂದಲೇ ದೇಹವೆಲ್ಲಾ
ಕೀಲುನರಗಳ ಮೂಲಕ ಬೇಕಾದ ಸಹಾಯವನ್ನು
ಹೊಂದಿ ಒಂದಾಗಿ ಕೂಡಿಸಲ್ಪಟ್ಟು ದೇವರು ಕೊಡುವ
ವೃದ್ಧಿಯಿಂದ ಅಭಿವೃದ್ಧಿಯಾಗುತ್ತಾ ಬರುತ್ತದೆ.
0 ಪ್ರಾಪಂಚಿಕಬಾಲಬೋಧೆಯ ಪಾಲಿಗೆ ನೀವು
ಕ್ರಿಸ್ತನೊಂದಿಗೆ ಸತ್ತವರಾಗಿದ್ದ ಮೇಲೆ ಇನ್ನೂ ಪ್ರಾ
ಪಂಚಿಕರಾಗಿ ಬದುಕುವವರಂತೆ ಮನುಷ್ಯಕಲ್ಪಿತ ಆಜ್ಞೆ
1-22 ಗಳನ್ನೂ ಉಪದೇಶಗಳನ್ನೂ ಅನುಸರಿಸಿ—ಇದ
ನ್ನು ಹಿಡಿಯಬೇಡ, ಇದನ್ನು ರುಚಿನೋಡಬೇಡ,
ಅದನ್ನು ಮುಟ್ಟಬೇಡ ಎನ್ನುವ ನಿಬಂಧನೆಗಳಿಗೆ ನಿಮ್ಮ
ನ್ನು ಒಳಗಾಗಮಾಡಿಕೊಳ್ಳುವದೇಕೆ? ಆ ಪದಾರ್ಥಗ
3 ಳೆಲ್ಲವೂ ಬಳಸುವದರಲ್ಲಿ ನಾಶವಾಗುತ್ತವೆ. ಅಂಥ
ಉಪದೇಶಗಳು ಸ್ವಕಲ್ಪಿತಾಚಾರವನ್ನೂ ಅತಿವಿನಯ
ವನ್ನೂ ದೇಹದಂಡನೆಯನ್ನೂ ಬೋಧಿಸುತ್ತಾ ಹೆಸರಿಗೆ
ಮಾತ್ರ ಜ್ಞಾನವೆನಿಸಿಕೊಳ್ಳುತ್ತವೆಯಲ್ಲದೆ ಶಾರೀರಿಕ
ಇಚ್ಛೆಗಳನ್ನು ನಿಗ್ರಹಿಸುವದರಲ್ಲಿ ಯಾವ ಪ್ರಯೋ
ಜನಕ್ಕೂ ಬರುವದಿಲ್ಲ.

ಅಜ್ಞಾನಿಗಳ ದುರ್ನಡತೆಯನ್ನು ಬಿಟ್ಟುಬಿಟ್ಟು ಯೋಗ್ಯರಾಗಿ
ನಡೆಯಬೇಕೆಂಬ ಬೋಧೆ. (ಎಫೆಸ 4. 17—6. 9.)

3 ಆದಕಾರಣ ನೀವು ಕ್ರಿಸ್ತನೊಂದಿಗೆ ಎಬ್ಬಿಸ
ಲ್ಪಟ್ಟಿರುವದರಿಂದ ಮೇಲಿರುವವುಗಳನ್ನೇ ಹುಡುಕಿರಿ;
ಅಲ್ಲಿ ಕ್ರಿಸ್ತನು ದೇವರ ಬಲಗಡೆಯಲ್ಲಿ ಆಸನಾರೂಢ
2 ನಾಗಿದ್ದಾನೆ. ಮೇಲಿರುವಂಥವುಗಳ ಮೇಲೆ ಮನ
ಸ್ಸಿಡಿರಿ, ಭೂಸಂಬಂಧವಾದವುಗಳ ಮೇಲೆ ಇಡಬೇಡಿರಿ.
3 ಯಾಕಂದರೆ ನೀವು ಸತ್ತಿರಲ್ಲಾ. ನಿಮ್ಮ ಜೀವವು
4 ಕ್ರಿಸ್ತನೊಂದಿಗೆ ದೇವರಲ್ಲಿ ಮರೆಯಾಗಿಟ್ಟದೆ. ನಮಗೆ
ಜೀವವಾಗಿರುವ ಕ್ರಿಸ್ತನು ಪ್ರತ್ಯಕ್ಷನಾಗುವಾಗ ನೀವು
ಸಹ ಆತನ ಜೊತೆಯಲ್ಲಿ ಪ್ರಭಾವದಿಂದ ಕೂಡಿದವ
ರಾಗಿ ಪ್ರತ್ಯಕ್ಷರಾಗುವಿರಿ.
5 ಆದದರಿಂದ ನಿಮ್ಮಲ್ಲಿರುವ ಭೂಸಂಬಂಧವಾದ
1)ಭಾವಗಳನ್ನು ಸಾಯಿಸಿರಿ. ಜಾರತ್ವ ಬಂಡು
ತನ ಕಾಮಾಭಿಲಾಷೆ ದುರಾಶೆ ವಿಗ್ರಹಾರಾಧನೆಗೆ
ಸಮವಾಗಿರುವ ಲೋಭ ಇವುಗಳನ್ನು ವಿಸರ್ಜಿಸಿಬಿಡಿರಿ;
6 2)ಇವುಗಳ ನಿಮಿತ್ತ ದೇವರ ಕೋಪವು ಉಂಟಾಗು
ತ್ತದೆ. ಪೂರ್ವದಲ್ಲಿ ನೀವು ಸಹ ಈ ದುರ್ಭಾವಗಳ 7
ಅಧೀನದಲ್ಲಿದ್ದು ಈ ಕೆಲಸಗಳನ್ನು ನಡಿಸುತ್ತಿದ್ದಿರಿ.
ಈಗಲಾದರೋ ಕ್ರೋಧ ಕೋಪ ಮತ್ಸರ ದೂಷಣೆ 8
ಬಾಯಿಂದ ಹೊರಡುವ ದುರ್ಭಾಷೆ ಇವುಗಳನ್ನು
ವಿಸರ್ಜಿಸಿಬಿಡಿರಿ. ಒಬ್ಬರಿಗೊಬ್ಬರು ಸುಳ್ಳಾಡಬೇ 9
ಡಿರಿ; ನೀವು ಪೂರ್ವಸ್ವಭಾವವನ್ನು ಅದರ ಕೃತ್ಯಗಳ
ಕೂಡ ತೆಗೆದಿಟ್ಟು ನೂತನಸ್ವಭಾವವನ್ನು ಧರಿಸಿ
ಕೊಂಡಿದ್ದೀರಲ್ಲವೇ. ಈ ಸ್ವಭಾವವು ಅದನ್ನು 10
ಸೃಷ್ಟಿಸಿದಾತನ ಹೋಲಿಕೆಯ ಮೇರೆಗೆ ದಿನೇದಿನೇ ನೂತ
ನವಾಗುತ್ತಾ ಪೂರ್ಣಜ್ಞಾನವನ್ನು ಉಂಟುಮಾಡುತ್ತದೆ.
ಇದನ್ನು ಧರಿಸಿಕೊಂಡಿರುವದರಲ್ಲಿ ಗ್ರೀಕನು ಯೆ 11
ಹೂದ್ಯನು ಎಂಬ ಭೇದವಿಲ್ಲ; ಸುನ್ನತಿಮಾಡಿಸಿ
ಕೊಂಡವರು ಸುನ್ನತಿಮಾಡಿಸಿಕೊಳ್ಳದವರು ಎಂಬ
ಭೇದವಿಲ್ಲ; ಮ್ಲೇಚ್ಛ ಹೂಣ ಎಂಬ ಹೆಸರುಗಳಿಲ್ಲ;
ಆಳು ಒಡೆಯ ಎಂಬ ಭೇದವಿಲ್ಲ. ಆದರೆ ಕ್ರಿಸ್ತನೇ
ಸಮಸ್ತರಲ್ಲಿಯೂ ಸಮಸ್ತವೂ ಆಗಿರುವನು.
ಹೀಗಿರಲಾಗಿ ನೀವು ದೇವರಿಂದ ಆರಿಸಿಕೊಂಡ 12
ವರೂ ಪ್ರತಿಷ್ಠಿತರೂ ಪ್ರಿಯರೂ ಆಗಿರುವದರಿಂದ
ಕನಿಕರ ದಯೆ ದೀನಭಾವ ಸಾತ್ವಿಕತ್ವ ದೀರ್ಘ
ಶಾಂತಿ ಎಂಬ ಸದ್ಗುಣಗಳನ್ನು ಧರಿಸಿಕೊಳ್ಳಿರಿ.
ಮತ್ತೊಬ್ಬನ ಮೇಲೆ ತಪ್ಪುಹೊರಿಸುವದಕ್ಕೆ ಕಾರಣ 13
ವಿದ್ದರೂ ತಪ್ಪುಹೊರಿಸದೆ ಒಬ್ಬರಿಗೊಬ್ಬರು ಸೈರಿಸಿ
ಕೊಂಡು ಕ್ಷಮಿಸಿರಿ. ಕರ್ತನು ನಿಮ್ಮನ್ನು
ಕ್ಷಮಿಸಿದಂತೆಯೇ ನೀವೂ ಕ್ಷಮಿಸಿರಿ. ಇದೆಲ್ಲಾದರ 14
ಮೇಲೆ ಪ್ರೀತಿಯನ್ನು ಧರಿಸಿಕೊಳ್ಳಿರಿ; ಅದು ಸಮಸ್ತ
ವನ್ನು ಸಂಪೂರ್ಣಮಾಡುವ ಬಂಧವಾಗಿದೆ. ಕ್ರಿಸ್ತ 15
ನಿಂದಾದ ಸಮಾಧಾನವು ನಿಮ್ಮ ಹೃದಯಗಳಲ್ಲಿ ಯಜ
ಮಾನನಂತಿದ್ದು ತೀರ್ಪುಹೇಳಲಿ; ನೀವು ಒಂದೇ
ದೇಹಕ್ಕೆ ಸೇರಿದವರಾದದರಿಂದ ಸಮಾಧಾನದಿಂದಿರುವ
ದಕ್ಕಾಗಿ ಕರೆಯಲ್ಪಟ್ಟಿರಿ. ಇದಲ್ಲದೆ ಕೃತಜ್ಞತೆಯುಳ್ಳ
ವರಾಗಿರ್ರಿ. ಕ್ರಿಸ್ತನ ವಾಕ್ಯವು ನಿಮ್ಮಲ್ಲಿ ಸಮೃದ್ಧಿ 16
ಯಾಗಿ ವಾಸಿಸಲಿ; ಸಕಲಜ್ಞಾನದಿಂದ ಕೂಡಿದವರಾಗಿ
ಒಬ್ಬರಿಗೊಬ್ಬರು ಉಪದೇಶಮಾಡಿಕೊಳ್ಳಿರಿ, ಬುದ್ಧಿ
ಹೇಳಿಕೊಳ್ಳಿರಿ; ಕರ್ತನ ಕೃಪೆಯನ್ನು ನೆನಸಿಕೊಳ್ಳು
ವವರಾಗಿ ಕೀರ್ತನೆಗಳಿಂದಲೂ ಸಂಗೀತಗಳಿಂದಲೂ
ಆತ್ಮಸಂಬಂಧವಾದ ಹಾಡುಗಳಿಂದಲೂ ನಿಮ್ಮ ಹೃದಯ
ಗಳಲ್ಲಿ ದೇವರಿಗೆ ಗಾನಮಾಡಿರಿ. ನೀವು ನುಡಿಯಿಂದಾ 17
ಗಲಿ ನಡೆಯಿಂದಾಗಲಿ ಏನು ಮಾಡಿದರೂ ಅದೆಲ್ಲ
ವನ್ನೂ ಕರ್ತನಾದ ಯೇಸುವಿನ ಹೆಸರಿನಲ್ಲಿಯೇ
ಮಾಡಿರಿ. ಆತನ ಮೂಲಕ ತಂದೆಯಾದ ದೇವರಿಗೆ
ಕೃತಜ್ಞತಾಸ್ತುತಿಯನ್ನು ಸಲ್ಲಿಸಿರಿ.
ಸ್ತ್ರೀಯರೇ, ನಿಮ್ಮ ಗಂಡಂದಿರಿಗೆ ಅಧೀನರಾಗಿರಿ; 18
ಇದು ಕರ್ತನಲ್ಲಿರುವವರಿಗೆ ಯೋಗ್ಯವಾಗಿದೆ. ಪುರು 19
ಷರೇ, ನಿಮ್ಮ ಹೆಂಡತಿಯರನ್ನು ಪ್ರೀತಿಸಿರಿ, ಅವರಿಗೆ
ನಿಷ್ಠುರವಾಗಿರಬೇಡಿರಿ. ಮಕ್ಕಳೇ, ಎಲ್ಲಾ ವಿಷಯ 20
ಗಳಲ್ಲಿ ನಿಮ್ಮ ತಂದೆತಾಯಿಗಳ ಮಾತನ್ನು ಕೇಳಿರಿ;
ಇದು ಕರ್ತನ ದೃಷ್ಟಿಯಲ್ಲಿ ಮೆಚ್ಚಿಕೆಯಾಗಿದೆ. ತಂದೆ 21
ಗಳೇ, ನಿಮ್ಮ ಮಕ್ಕಳನ್ನು ಕೆಣಕಿ ಅವರಿಗೆ ಮನಗುಂದಿ

1) ಮೂಲ: ಅಂಗಗಳನ್ನು. 2) ಪಾಠಾಂತರ: ದೇವರ ಕೋಪವು ಆತನಿಗೆ ಅವಿಧೇಯರಾಗಿರುವವರ ಮೇಲೆ ಉಂಟಾಗುತ್ತದೆ.

22 ಸಬೇಡಿರಿ. ದಾಸತ್ವದಲ್ಲಿರುವವರೇ, ಈ ಲೋಕದಲ್ಲಿನ
ನಿಮ್ಮ ಯಜಮಾನರಿಗೆ ಎಲ್ಲಾ ವಿಷಯಗಳಲ್ಲಿ ವಿಧೇಯ
ರಾಗಿರಿ; ಮನುಷ್ಯರನ್ನು ಮೆಚ್ಚಿಸುವವರು ಮಾಡುವ
ಪ್ರಕಾರ ನಿಮ್ಮ ಯಜಮಾನರು ನೋಡುತ್ತಿರುವಾಗ
ಮಾತ್ರ ಸೇವೆಮಾಡದೆ ಕರ್ತನಿಗೆ ಭಯಪಡುವವರಾಗಿ
23 ಸರಳಮನಸ್ಸಿನಿಂದ ಕೆಲಸಮಾಡಿರಿ. ನೀವು ಯಾವ
ಕೆಲಸವನ್ನು ಮಾಡಿದರೂ ಅದನ್ನು ಮನುಷ್ಯರಿಗೋಸ್ಕರ
ವೆಂದು ಮಾಡದೆ ಕರ್ತನಿಗೋಸ್ಕರವೇ ಎಂದು
24 ಮನಃಪೂರ್ವಕವಾಗಿ ಮಾಡಿರಿ; ಕರ್ತನಿಂದ ಪರ
ಲೋಕ ಬಾಧ್ಯತೆಯೆಂಬ ಪ್ರತಿಫಲವನ್ನು ಹೊಂದುವೆ
ವೆಂದು ತಿಳಿದಿದ್ದೀರಲ್ಲಾ, ನೀವು ಕರ್ತನಾದ ಕ್ರಿಸ್ತ
25 ನಿಗೇ ದಾಸರಾಗಿದ್ದೀರಿ. ಅನ್ಯಾಯಮಾಡುವವನು
ತಾನು ಮಾಡಿದ ಅನ್ಯಾಯಕ್ಕೆ ತಕ್ಕ ಪ್ರತಿಫಲವನ್ನು
ಹೊಂದುವನಷ್ಟೆ; ಪಕ್ಷಪಾತವಿರುವದಿಲ್ಲ. ಯಜಮಾ
4 ನರೇ, ಪರಲೋಕದಲ್ಲಿ ನಿಮಗೂ ಯಜಮಾನನೊಬ್ಬ
ನಿದ್ದಾನೆಂದು ತಿಳಿದು ನಿಮ್ಮ ದಾಸರಿಗೆ ನ್ಯಾಯವಾದ
ದ್ದನ್ನೂ ಸರಿಯಾದದ್ದನ್ನೂ ಮಾಡಿರಿ.
2 ಪ್ರಾರ್ಥನೆಯನ್ನು ತಪ್ಪದೆ ಮಾಡುವವರಾಗಿ ಅದ
ರಲ್ಲಿ ಎಚ್ಚರವಾಗಿದ್ದು ದೇವರಿಗೆ ಕೃತಜ್ಞತಾಸ್ತುತಿಮಾ
3-4 ಡಿರಿ. ಇದಲ್ಲದೆ ನಮಗೋಸ್ಕರವೂ ಪ್ರಾರ್ಥನೆಮಾಡಿ
ರಿ. ಕ್ರಿಸ್ತನ ವಿಷಯದಲ್ಲಿ ದೇವರು ತಿಳಿಯಪಡಿಸಿದ
ಸತ್ಯಾರ್ಥವನ್ನು ಪ್ರಸಂಗಿಸುವದಕ್ಕೆ ಆತನು ಅನುಕೂಲ
ವಾದ ಸಂದರ್ಭವನ್ನು ನಮಗೆ ದಯಪಾಲಿಸಿ ನಾನು
ಅದನ್ನು ಹೇಳಬೇಕಾದ ರೀತಿಯಲ್ಲಿ ತಿಳಿಸುವಂತೆ ಅನು
ಗ್ರಹಮಾಡಬೇಕೆಂದು ಬೇಡಿಕೊಳ್ಳಿರಿ; ಆ ಸತ್ಯಾರ್ಥದ
5 ನಿಮಿತ್ತವೇ ನಾನು ಸೆರೆಯಲ್ಲಿದ್ದೇನಲ್ಲಾ. ಸಮಯ
ವನ್ನು ಸುಮ್ಮನೆ ಕಳಕೊಳ್ಳದೆ ಅದನ್ನು ಬೆಲೆಯುಳ್ಳ
ದ್ದೆಂದು ಉಪಯೋಗಿಸಿ ಹೊರಗಿನವರ ಮುಂದೆ
6 ಜ್ಞಾನವುಳ್ಳವರಾಗಿ ನಡೆದುಕೊಳ್ಳಿರಿ. ನಿಮ್ಮ ಸಂಭಾ
ಷಣೆ ಯಾವಾಗಲೂ ಇಂಪಾಗಿಯೂ 1)ರಸವತ್ತಾಗಿಯೂ
ಇರಲಿ; ಹೀಗೆ ನೀವು ಯಾರಾರಿಗೆ ಯಾವಾವ ರೀತಿ
ಯಲ್ಲಿ ಉತ್ತರಹೇಳಬೇಕೋ ಅದನ್ನು ತಿಳುಕೊಳ್ಳು
ವಿರಿ.

ವಂದನೆಗಳೂ ಕಡೇ ಮಾತುಗಳೂ.

7 ಪ್ರಿಯ ಸಹೋದರನೂ ನಂಬಿಗಸ್ತನಾದ ಸೇವ
ಕನೂ ಕರ್ತನಲ್ಲಿ ಜೊತೆಯ ದಾಸನೂ ಆಗಿರುವ ತುಖಿ
ಕನು ನನ್ನ ಸಂಗತಿಗಳನ್ನೆಲ್ಲಾ ನಿಮಗೆ ತಿಳಿಸುವನು.
ನೀವು ನನ್ನ ಸಮಾಚಾರವನ್ನು ತಿಳುಕೊಳ್ಳುವ ಹಾಗೆ
ಯೂ ಅವನು ನಿಮ್ಮ ಹೃದಯಗಳನ್ನು ಸಂತೈಸುವ
ಹಾಗೆಯೂ ಅವನನ್ನು ನಂಬಿಗಸ್ತನಾದ ಪ್ರಿಯ ಸ
ಹೋದರನಾಗಿರುವ ನಿಮ್ಮ ಊರಿನ ಒನೇಸಿಮನ
ಜೊತೆಯಲ್ಲಿ ಕಳುಹಿಸಿದ್ದೇನೆ. ಅವರು ಇಲ್ಲಿ ನಡೆಯು
ವ ಸಂಗತಿಗಳನ್ನೆಲ್ಲಾ ನಿಮಗೆ ತಿಳಿಸುವರು.
ನನ್ನ ಜೊತೆಸೆರೆಯವನಾದ ಅರಿಸ್ತಾರ್ಕನೂ
ಬಾರ್ನಬನಿಗೆ ದಾಯಾದನಾಗಿರುವ ಮಾರ್ಕನೂ
ನಿಮಗೆ ವಂದನೆಹೇಳುತ್ತಾರೆ. ಮಾರ್ಕನನ್ನು ಕುರಿತು
ಅಪ್ಪಣೆಗಳನ್ನು ಹೊಂದಿದಿರಲ್ಲಾ; ಅವನು ನಿಮ್ಮ ಬಳಿಗೆ
ಬಂದರೆ ಅವನನ್ನು ಸೇರಿಸಿಕೊಳ್ಳಿರಿ. ಯೂಸ್ತನೆನಿಸಿ
ಕೊಳ್ಳುವ ಯೇಸು ಸಹ ನಿಮಗೆ ವಂದನೆಹೇಳುತ್ತಾನೆ.
ಸುನ್ನತಿಯವರೊಳಗೆ ಇವರು ಮಾತ್ರವೇ ದೇವರ
ರಾಜ್ಯಾಭಿವೃದ್ಧಿಗಾಗಿ ನನ್ನ ಜೊತೆಗೆಲಸದವರಾಗಿದ್ದಾರೆ;
ಇವರಿಂದ ನನಗೆ ಉಪಶಮನ ಉಂಟಾಯಿತು. ಕ್ರಿಸ್ತ
ಯೇಸುವಿನ ದಾಸನಾಗಿರುವ ನಿಮ್ಮ ಊರಿನ ಎಪ
ಫ್ರನು ನಿಮಗೆ ವಂದನೆಹೇಳುತ್ತಾನೆ; ಇವನು ಪ್ರಾರ್ಥ
ನೆಮಾಡುವಾಗಲೆಲ್ಲಾ ನಿಮಗೋಸ್ಕರ ಹೋರಾಡಿ ನೀವು
ಪ್ರವೀಣರಾಗಿಯೂ ಎಲ್ಲಾ ವಿಷಯಗಳಲ್ಲಿ ದೇವರ
ಚಿತ್ತವನ್ನು ಕುರಿತು ಪೂರ್ಣನಿಶ್ಚಯವುಳ್ಳವರಾಗಿಯೂ
ನಿಂತಿರಬೇಕೆಂದು ವಿಜ್ಞಾಪನೆಮಾಡುತ್ತಾನೆ. ಇವನು
ನಿಮಗೋಸ್ಕರವೂ ಲವೊದಿಕೀಯದವರಿಗೋಸ್ಕರವೂ
ಹಿರಿಯಾಪೊಲಿಯವರಿಗೋಸ್ಕರವೂ ಬಹಳ ಪ್ರಯಾಸ
ಪಡುತ್ತಾನೆಂದು ಸಾಕ್ಷಿಹೇಳುತ್ತೇನೆ. ಪ್ರಿಯ ವೈದ್ಯ
ನಾಗಿರುವ ಲೂಕನು ಮತ್ತು ದೇಮನು ನಿಮಗೆ
ವಂದನೆಹೇಳುತ್ತಾರೆ. ಲವೊದಿಕೀಯದಲ್ಲಿರುವ ಸಹೋ
ದರರಿಗೂ 2)ನುಂಫಳಿಗೂ ಆಕೆಯ ಮನೆಯಲ್ಲಿ
ಕೂಡುವ ಸಭೆಯವರಿಗೂ ವಂದನೆಹೇಳಿರಿ.
ನಿಮ್ಮಲ್ಲಿ ಈ ಪತ್ರಿಕೆಯನ್ನು ಓದಿಸಿಕೊಂಡ ತರು
ವಾಯ ಲವೊದಿಕೀಯದವರ ಸಭೆಯಲ್ಲಿಯೂ ಓದಿ
ಸಿರಿ; ಮತ್ತು ನಾನು ಬರೆದ ಪತ್ರಿಕೆಯನ್ನು ಲವೊದಿಕೀ
ಯದಿಂದ ತರಿಸಿ ನೀವೂ ಓದಿಸಿಕೊಳ್ಳಿರಿ. ಅರ್ಖಿಪ್ಪ
ನಿಗೆ—ನೀನು ಕರ್ತನಿಂದ ಹೊಂದಿರುವ ಸೇವೆಯನ್ನು
ನೆರವೇರಿಸುವದಕ್ಕೆ ಎಚ್ಚರವಾಗಿರಬೇಕೆಂದು ಹೇಳಿರಿ.
ಇದು ಪೌಲನೆಂಬ ನಾನು ಸ್ವಂತ ಕೈಯಿಂದ ಬರೆ
ದ ವಂದನೆ. ನಾನು ಸೆರೆಯಲ್ಲಿದ್ದೇನೆಂಬದನ್ನು ಜ್ಞಾ
ಪಕಮಾಡಿಕೊಳ್ಳಿರಿ. ಕೃಪೆಯು ನಿಮ್ಮೊಂದಿಗಿರಲಿ.

---

1) ಮೂಲ: ಉಪ್ಪಾಗಿಯೂ. 2) ಕೆಲವು ಪ್ರತಿಗಳಲ್ಲಿ—ನುಂಫನಿಗೂ ಅವರ ಎಂದು ಬರೆದಿದೆ.

## THE FIRST EPISTLE OF SAINT PAUL TO THE

# THESSALONIANS

## ಪೌಲನು ಥೆಸಲೊನೀಕದವರಿಗೆ ಬರೆದ ಮೊದಲನೆಯ ಪತ್ರಿಕೆ

### ಒಕ್ಕಣೆ.

1 ತಂದೆಯಾದ ದೇವರಲ್ಲಿಯೂ ಕರ್ತನಾದ ಯೇಸು
ಕ್ರಿಸ್ತನಲ್ಲಿಯೂ ಇರುವ ಥೆಸಲೊನೀಕದವರ ಸಭೆಗೆ
ಪೌಲ ಸಿಲ್ವಾನ ತಿಮೊಥೆಯ ಎಂಬ ನಾವು ಬರೆಯುವ
ದೇನಂದರೆ—ನಿಮಗೆ ಕೃಪೆಯೂ ಶಾಂತಿಯೂ
ಆಗಲಿ.

### ಪೌಲನು ಥೆಸಲೊನೀಕದವರಲ್ಲಿ ಕಾಣಬಂದ ಸದ್ಗುಣಗಳಿಗಾಗಿ ದೇವರಿಗೆ ಮಾಡಿದ ಕೃತಜ್ಞತಾಸ್ತುತಿ.

2-3 ನಾವು ನಂಬಿಕೆಯ ಫಲವಾದ ನಿಮ್ಮ ಕೆಲಸ
ವನ್ನೂ ಪ್ರೀತಿಪೂರ್ವಕವಾದ ನಿಮ್ಮ ಪ್ರಯಾಸವನ್ನೂ
ನಮ್ಮ ಕರ್ತನಾದ ಯೇಸು ಕ್ರಿಸ್ತನ ಮೇಲಣ ನಿರೀ
ಕ್ಷೆಯಿಂದುಂಟಾದ ನಿಮ್ಮ ಸೈರಣೆಯನ್ನೂ ನಮ್ಮ ತಂದೆ
ಯಾದ ದೇವರ ಮುಂದೆ ಎಡೆಬಿಡದೆ ಜ್ಞಾಪಕಮಾಡಿ
ಕೊಂಡು ನಮ್ಮ ಪ್ರಾರ್ಥನೆಗಳಲ್ಲಿ ನಿಮಗೋಸ್ಕರ
ವಿಜ್ಞಾಪನೆಮಾಡುವಾಗ ನಿಮ್ಮೆಲ್ಲರ ವಿಷಯದಲ್ಲಿ
ದೇವರಿಗೆ ಯಾವಾಗಲೂ ಕೃತಜ್ಞತಾಸ್ತುತಿ ಸಲ್ಲಿಸು
4 ತ್ತೇವೆ. ದೇವರು ಪ್ರೀತಿಸಿದ ಸಹೋದರರೇ, ಆತ
5 ನು ನಿಮ್ಮನ್ನು ಆದುಕೊಂಡನೆಂಬದನ್ನೂ ನಾವು ಸಾರಿದ
ಸುವಾರ್ತೆಯು ನಿಮ್ಮಲ್ಲಿ ಬರೀ ಮಾತಾಗಿ ಬಾ
ರದೆ ಶಕ್ತಿಯೊಡನೆಯೂ ಪವಿತ್ರಾತ್ಮದೊಡನೆಯೂ
1)ಬಹು ನಿಶ್ಚಯದೊಡನೆಯೂ ಬಂತೆಂಬದನ್ನೂ ಬ
ಲ್ಲೆವು. ನಾವು ನಿಮ್ಮಲ್ಲಿದ್ದು ನಿಮಗೋಸ್ಕರ ಎಂಥ
6 ವರಾಗಿ ವರ್ತಿಸಿದೆವೆಂಬದನ್ನು ನೀನೂ ಬಲ್ಲಿರಿ. ಇದ
ಲ್ಲದೆ ನೀವು ಬಹಳ ಹಿಂಸೆಯನ್ನು ಅನುಭವಿಸಬೇ
ಕಾಗಿದ್ದರೂ ಪವಿತ್ರಾತ್ಮನಿಂದುಂಟಾದ ಆನಂದ
ದೊಡನೆ ದೇವರ ವಾಕ್ಯವನ್ನು ಅಂಗೀಕರಿಸಿ ನಮ್ಮ
ನ್ನೂ ಕರ್ತನಾದ ಯೇಸುವನ್ನೂ ಅನುಸರಿಸುವವರಾ
7 ದಿರಿ. ಹೀಗೆ ಮಕೆದೋನ್ಯದಲ್ಲಿಯೂ ಅಖಾಯದಲ್ಲಿ
ಯೂ ಕ್ರಿಸ್ತನನ್ನು ನಂಬುವವರೆಲ್ಲರಿಗೆ ಮಾದರಿಯಾ
8 ದಿರಿ. ಕರ್ತನ ವಾಕ್ಯವು ನಿಮ್ಮಿಂದಲೇ ಮಕೆದೋನ್ಯ
ದಲ್ಲಿಯೂ ಅಖಾಯದಲ್ಲಿಯೂ ಘೋಷಿತವಾದದ್ದ
ಲ್ಲದೆ ದೇವರ ಮೇಲೆ ನೀವು ಇಟ್ಟಿರುವ ನಂಬಿಕೆಯು
ಎಲ್ಲಾ ಸ್ಥಳಗಳಲ್ಲಿಯೂ ಪ್ರಸಿದ್ಧವಾಯಿತು; ಆದದ
ರಿಂದ ಆ ವಿಷಯದಲ್ಲಿ ನಾವು ಏನೂ ಹೇಳಬೇಕಾದ
ದ್ದಿಲ್ಲ. ನಾವು ನಿಮ್ಮಲ್ಲಿಗೆ ಬಂದಾಗ ನೀವು ಎಂಥ 9
ಮನಸ್ಸಿನಿಂದ ನಮ್ಮ ಬೋಧನೆಯನ್ನು ಕೇಳಿದಿರೋ
ಅದನ್ನು ಕುರಿತು ಅಲ್ಲಿಯ ಜನರು ತಾವೇ ಹೇಳು
ತ್ತಾರೆ. ಅದು ಮಾತ್ರವಲ್ಲದೆ ನೀವು ವಿಗ್ರಹಗಳನ್ನು
ಬಿಟ್ಟುಬಿಟ್ಟು ದೇವರ ಕಡೆಗೆ ತಿರುಗಿಕೊಂಡು ಜೀವವುಳ್ಳ
ಸತ್ಯದೇವರನ್ನು ಸೇವಿಸುವವರಾದಿರೆಂತಲೂ ಆತನು 10
ಸತ್ತವರೊಳಗಿಂದ ಎಬ್ಬಿಸಿದಂಥ ಆಕಾಶದೊಳಗಿಂದ
ಬರುವಂಥ ಆತನ ಕುಮಾರನನ್ನು ಎದುರುನೋಡುವ
ವರಾದಿರೆಂತಲೂ ತಿಳಿಸುತ್ತಾರೆ. ಈ ಯೇಸುವು ಮುಂದೆ
ಬರುವ ದೈವಕೋಪದಿಂದ ನಮ್ಮನ್ನು ತಪ್ಪಿಸುವಾತನು.

### ಪೌಲನು ಥೆಸಲೊನೀಕದವರಲ್ಲಿ ನಡಕೊಂಡ ರೀತಿಯ ವಿವರಣೆ.

ಸಹೋದರರೇ, 2)ನಾವು ಸುಮ್ಮಸುಮ್ಮಗೆ ನಿಮ್ಮ 2
ಲ್ಲಿಗೆ ಬರಲಿಲ್ಲವೆಂಬದನ್ನೂ ನಿಮಗೆ ತಿಳಿದಿರುವ ಪ್ರಕಾ
ರ ನಮಗೆ ಫಿಲಿಪ್ಪಿ ಪಟ್ಟಣದಲ್ಲಿ ಹಿಂಸೆಯೂ ಅವ 2
ಮಾನವೂ ಮೊದಲು ಸಂಭವಿಸಿದರೂ ನಾವು ನಮ್ಮ
ದೇವರ ಮೂಲಕ ಧೈರ್ಯಗೊಂಡು ಬಹು ವಿರೋಧ
ವನ್ನು ಅನುಭವಿಸುವವರಾಗಿ ನಿಮಗೆ ದೇವರ ಸುವಾ
ರ್ತೆಯನ್ನು ತಿಳಿಸಿದೆವೆಂಬದನ್ನೂ ನೀವೇ ಬಲ್ಲಿರಿ.
ಯಾಕಂದರೆ ನಮ್ಮ ಬೋಧನೆಯು ಅಬದ್ಧವಲ್ಲ, 3
ಅಶುದ್ಧವಲ್ಲ, ಮೋಸವಲ್ಲ; ದೇವರು ನಮ್ಮನ್ನು
ಯೋಗ್ಯರೆಂದೆಣಿಸಿ ಸುವಾರ್ತೆಯನ್ನು ನಮ್ಮ ವಶಕ್ಕೆ 4
ಒಪ್ಪಿಸಿದನಲ್ಲಾ ಎಂದು ಯೋಚಿಸುವವರಾಗಿ ಮನು
ಷ್ಯರನ್ನು ಮೆಚ್ಚಿಸಬೇಕೆನ್ನದೆ ಹೃದಯವನ್ನು ಪರಿ
ಶೋಧಿಸುವ ದೇವರನ್ನೇ ಮೆಚ್ಚಿಸಬೇಕೆಂದು ಮಾ
ತಾಡುತ್ತೇವೆ. ನಿಮಗೆ ತಿಳಿದಿರುವ ಪ್ರಕಾರ ನಾವು 5
ಎಂದಿಗೂ ಮುಖಸ್ತುತಿಯನ್ನು ಮಾಡುವವರಾಗಿ ಕಾ
ಣಬಂದಿಲ್ಲ, ಮತ್ತು ದ್ರವ್ಯಾಶೆಯನ್ನು ಮರೆಮಾಡು
ವದಕ್ಕಾಗಿ ವೇಷವನ್ನು ಹಾಕಿಕೊಂಡವರಾಗಿಲ್ಲ; ಇ
ದಕ್ಕೆ ದೇವರೇ ಸಾಕ್ಷಿ. ಇದಲ್ಲದೆ ನಾವು ಕ್ರಿಸ್ತನ 6
ಅಪೊಸ್ತಲರಾಗಿರುವದರಿಂದ 3)ನಮಗೆ ಗೌರವವನ್ನು
ಕೊಡಬೇಕೆಂದು ಹೇಳಬಹುದಾಗಿದ್ದರೂ ಮನುಷ್ಯ
ರಿಂದ ಬರುವ ಮಾನವನ್ನು ನಿಮ್ಮಿಂದಾಗಲಿ ಇತರ
ರಿಂದಾಗಲಿ ಹೊಂದಲಪೇಕ್ಷಿಸುವವರಾಗಿಲ್ಲ. ತಾಯಿ 7

---

1) ಅಥವಾ, ಸಿದ್ಧಿಪೂರ್ವಕವಾಗಿಯೂ. 2) ಅಥವಾ, ನಾವು ನಿಮ್ಮಲ್ಲಿ ಬಂದದ್ದು ವ್ಯರ್ಥವಾಗಲಿಲ್ಲವೆಂತಲೂ. 3) ಅಥವಾ, ನಮ್ಮನ್ನು ಸಂರಕ್ಷಿಸುವ ಭಾರವನ್ನು ನಿಮ್ಮ ಮೇಲೆ ಹಾಕಬಹುದಾಗಿದ್ದರೂ.

ಯು ತನ್ನ ಮಕ್ಕಳನ್ನು ಪೋಷಿಸುತ್ತಾಳೋ ಎಂಬಂತೆ
ನಾವು ನಿಮ್ಮ ಮಧ್ಯದಲ್ಲಿ ವಾತ್ಸಲ್ಯದಿಂದ ನಡಕೊಂಡಿ
8 ದ್ದೆವು. ನೀವು ನಮಗೆ ಅತಿಪ್ರಿಯರಾದ ಕಾರಣ ನಾವು
ನಿಮ್ಮಲ್ಲಿ ಮಮತೆಯುಳ್ಳವರಾಗಿ ದೇವರ ಸುವಾರ್ತೆ
ಯನ್ನು ಹೇಳುವದಕ್ಕೆ ಮಾತ್ರವಲ್ಲದೆ ನಿಮಗೋಸ್ಕರ
ಪ್ರಾಣವನ್ನೇ ಕೊಡುವದಕ್ಕೆ ಸಂತೋಷಿಸುವವರಾದೆವು.
9 ಸಹೋದರರೇ, ನಾವು ನಿಮ್ಮಲ್ಲಿ ಯಾರ ಮೇಲೆಯೂ
ಭಾರಹಾಕಬಾರದೆಂದು ಹಗಲಿರುಳು ದುಡಿದು ಜೀವನ
ಮಾಡಿಕೊಳ್ಳುತ್ತಾ ದೇವರ ಸುವಾರ್ತೆಯನ್ನು ನಿಮಗೆ
ಸಾರಿದೆವು; ಆ ನಮ್ಮ ಕಷ್ಟವೂ ಪ್ರಯಾಸವೂ ನಿಮ್ಮ
10 ನೆನಪಿನಲ್ಲಿರುವದಷ್ಟೆ. ನಂಬುವವರಾದ ನಿಮ್ಮ ವಿಷಯ
ದಲ್ಲಿ ನಾವು ಎಷ್ಟೋ ಶುದ್ಧರಾಗಿಯೂ ನೀತಿವಂತ
ರಾಗಿಯೂ ನಿರ್ದೋಷಿಗಳಾಗಿಯೂ ನಡೆದುಕೊಂಡೆ
ವೆಂಬದಕ್ಕೆ ನೀವು ಸಾಕ್ಷಿಗಳು, ದೇವರೂ ಸಾಕ್ಷಿ.
11 ತಂದೆಯು ತನ್ನ ಮಕ್ಕಳಿಗೆ ಹೇಗೋ ಹಾಗೆಯೇ
ನಾವು ನಿಮ್ಮಲ್ಲಿ ಪ್ರತಿಯೊಬ್ಬನಿಗೆ ಬುದ್ಧಿಹೇಳುತ್ತಾ
12 ಧೈರ್ಯಪಡಿಸುತ್ತಾ ತನ್ನ ರಾಜ್ಯಪ್ರಭಾವಗಳಲ್ಲಿ ಪಾಲು
ಗಾರರಾಗುವದಕ್ಕೆ ಕರೆಯುವ ದೇವರಿಗೆ ಯೋಗ್ಯ
ರಾಗಿ ನೀವು ನಡೆಯಬೇಕೆಂದು ಖಂಡಿತವಾಗಿ ಹೇಳು
ತ್ತಾ ಇದ್ದೆವೆಂಬದು ನಿಮಗೇ ತಿಳಿದದೆ.

ಕ್ರೈಸ್ತಸಭೆಯವರಿಗೆ ಉಂಟಾದ ಹಿಂಸೆಯನ್ನೂ ಯೆಹೂದ್ಯರ ವಿರೋಧವನ್ನೂ ಕುರಿತದ್ದು.

13 ಹೀಗಿರಲಾಗಿ ನೀವು ದೇವರ ವಾಕ್ಯವನ್ನು ನಮ್ಮಿಂದ
ಕೇಳಿದಾಗ ಅದನ್ನು ಮನುಷ್ಯರ ವಾಕ್ಯವೆಂದೆಣಿಸದೆ
ದೇವರ ವಾಕ್ಯವೆಂದೇ ತಿಳಿದು ಅಂಗೀಕರಿಸಿದ್ದಕ್ಕಾಗಿ
ನಾವಂತೂ ಎಡೆಬಿಡದೆ ದೇವರಿಗೆ ಕೃತಜ್ಞತಾಸ್ತುತಿ
ಮಾಡುತ್ತೇವೆ. ಅದು ನಿಜವಾಗಿ ದೇವರ ವಾಕ್ಯವೇ;
ಅದು ನಂಬುವವರಾದ ನಿಮ್ಮೊಳಗೆ ಬಲವಾಗಿ ಕೆಲಸ
14 ನಡಿಸುತ್ತದೆ. ಹೌದು, ಸಹೋದರರೇ, ನೀವು ಯೂ
ದಾಯದಲ್ಲಿ ಕ್ರಿಸ್ತ ಯೇಸುವಿನಲ್ಲಿರುವ ದೇವರ ಸಭೆ
ಗಳನ್ನು ಅನುಸರಿಸುವವರಾದಿರಿ. ಅವರು ಯೆಹೂ
ದ್ಯರಿಂದ ಅನುಭವಿಸಿದಂಥ ಕಷ್ಟಗಳನ್ನು ನೀವೂ
15 ನಿಮ್ಮ ಸ್ವದೇಶದವರಿಂದ ಅನುಭವಿಸಿದಿರಿ. ಆ
ಯೆಹೂದ್ಯರು ಕರ್ತನಾದ ಯೇಸುವನ್ನೂ ಪ್ರವಾದಿ
ಗಳನ್ನೂ ಕೊಂದರು, ನಮ್ಮನ್ನೂ ಅಟ್ಟಿಬಿಟ್ಟರು; ಅವರು
ದೇವರನ್ನು ಮೆಚ್ಚಿಸುವವರಲ್ಲ, ಎಲ್ಲಾ ಮನುಷ್ಯರಿಗೂ
16 ವಿರೋಧಿಗಳಾಗಿದ್ದಾರೆ; ಅನ್ಯಜನರಿಗೆ ರಕ್ಷಣೆಯಾಗು
ವಂತೆ ಸುವಾರ್ತೆಯನ್ನು ಹೇಳುವ ನಮಗೆ ಅಡ್ಡಿಮಾಡು
ತ್ತಾರೆ; ಹೀಗೆ ತಮ್ಮ ಪಾಪಕೃತ್ಯಗಳನ್ನು ಎಲ್ಲಾ ಕಾಲ
ಗಳಲ್ಲಿಯೂ ಪರಿಪೂರ್ಣಮಾಡುವದಕ್ಕೆ ಹೋಗುತ್ತಾರೆ.
ಆದರೆ ದೇವರ ಕೋಪವು ಅವರ ಮೇಲೆ ಸಂಪೂರ್ಣ
ವಾಗುತ್ತಾ ಬಂತು.

ಪೌಲನು ಥೆಸಲೊನೀಕದವರನ್ನು ನೋಡುವದಕ್ಕೆ ಆಶೆಪಟ್ಟು ತಿಮೊಥೆಯನನ್ನು ಅವರ ಬಳಿಗೆ ಕಳುಹಿಸಿದ್ದು.

17 ಸಹೋದರರೇ, ನಾವಂತೂ ದೇಹದಲ್ಲಿ ಮಾತ್ರ
ನಿಮ್ಮನ್ನು ಸ್ವಲ್ಪಕಾಲ ಅಗಲಿದರೂ ಹೃದಯದಲ್ಲಿ
ಅಗಲದೆ ನಿಮ್ಮ ಮುಖವನ್ನು ನೋಡುವದಕ್ಕೆ ಅತ್ಯಾ
ಶೆಯಿಂದ ಬಹಳ ಪ್ರಯತ್ನಮಾಡಿದೆವು. ಯಾಕಂದರೆ 1
ನಿಮ್ಮ ಬಳಿಗೆ ಬರುವದಕ್ಕೆ ನಮಗೆ ಮನಸ್ಸಿತ್ತು;
ಹೇಗೂ ಪೌಲನೆಂಬ ನಾನು ಒಂದೆರಡು ಸಾರಿ ಬರುವ
ದಕ್ಕಿದ್ದೆನು; ಆದರೆ ಸೈತಾನನು ನಮಗೆ ಅಭ್ಯಂತರ
ಮಾಡಿದನು. ನಮ್ಮ ಕರ್ತನಾದ ಯೇಸು ಪ್ರತ್ಯಕ್ಷ 1
ನಾಗುವಾಗ ಆತನ ಮುಂದೆ ನಮ್ಮ ಭರವಸವೂ ನಮ್ಮ
ಸಂತೋಷವೂ ನಾವು ಹೊಗಳಿಕೊಳ್ಳುವ ಜಯಮಾಲೆ
ಯೂ ಯಾರು? ನೀವೇ ಅಲ್ಲವೇ. ನಿಜವಾಗಿ ನೀವೇ 2
ನಮ್ಮ ಗೌರವವೂ ಸಂತೋಷವೂ ಆಗಿದ್ದೀರಿ.

ಆದದರಿಂದ ಇನ್ನು ತಡೆಯಲಾರದೆ ನಾವು ಅಥೇನೆ 3
ಯಲ್ಲಿ ಒಬ್ಬೊಂಟಿಗರಾಗಿಯೇ ಇರುವದು ಒಳ್ಳೇದೆಂದು
ಯೋಚಿಸಿ ನಿಮ್ಮ ಮೇಲೆ ಬಂದಿರುವ ಸಂಕಟಗಳಲ್ಲಿ
ಒಬ್ಬರೂ ಚಂಚಲರಾಗದಂತೆ ನಿಮ್ಮನ್ನು ದೃಢಪಡಿಸುವ
ದಕ್ಕೂ ನಿಮ್ಮ ನಂಬಿಕೆಯ ವೃದ್ಧಿಗಾಗಿ ಪ್ರಬೋಧಿಸುವ
ದಕ್ಕೂ ನಮ್ಮ ಸಹೋದರನೂ ಕ್ರಿಸ್ತನ ಸುವಾರ್ತೆಯ
ಉದ್ಯೋಗದಲ್ಲಿ ದೇವರ ಸೇವಕನೂ ಆಗಿರುವ ತಿಮೊ
ಥೆಯನನ್ನು ನಿಮ್ಮ ಬಳಿಗೆ ಕಳುಹಿಸಿದೆವು. ಸಂಕಟ
ಗಳನ್ನು ಅನುಭವಿಸುವದಕ್ಕಾಗಿ ನಾವು ನೇಮಿಸಲ್ಪಟ್ಟವ
ರೆಂದು ನೀವೇ ಬಲ್ಲಿರಷ್ಟೆ. ನಾವು ನಿಮ್ಮ ಬಳಿಯ
ಲ್ಲಿದ್ದಾಗ ಸಂಕಟವನ್ನು ಅನುಭವಿಸಲೇ ಬೇಕೆಂದು
ಮುಂದಾಗಿ ಹೇಳಿದೆವಲ್ಲಾ; ಅದರಂತೆ ಆಯಿತು,
ನಿಮ್ಮ ಅನುಭವಕ್ಕೂ ಬಂತು. ಆದದರಿಂದ ನಾನು
ಇನ್ನು ತಡೆಯಲಾರದೆ ಒಂದು ವೇಳೆ ಶೋಧಕನು
ನಿಮ್ಮನ್ನು ಶೋಧಿಸಿದ್ದರಿಂದ ನಮ್ಮ ಪ್ರಯಾಸವು
ವ್ಯರ್ಥವಾಯಿತೋ ಏನೋ ಎಂದು ನಿಮ್ಮ ನಂಬಿ
ಕೆಯ ವಿಷಯದಲ್ಲಿ ತಿಳುಕೊಳ್ಳುವದಕ್ಕೆ ಅವನನ್ನು
ಕಳುಹಿಸಿದೆನು. ಆದರೆ ತಿಮೊಥೆಯನು ಈಗಲೇ
ನಮ್ಮ ಬಳಿಗೆ ಬಂದು ನಿಮ್ಮ ವಿಶ್ವಾಸ ಪ್ರೀತಿಗಳ
ವಿಷಯವಾಗಿ ಶುಭವರ್ತಮಾನವನ್ನು ಹೇಳಿ ನೀವು
ನಮ್ಮನ್ನು ಯಾವಾಗಲೂ ಚೆನ್ನಾಗಿ ಜ್ಞಾಪಕಮಾಡಿ
ಕೊಂಡು ನಾವು ನಿಮ್ಮನ್ನು ಹೇಗೋ ಹಾಗೆಯೇ
ನೀವೂ ನಮ್ಮನ್ನು ನೋಡುವದಕ್ಕೆ ಅಪೇಕ್ಷಿಸುತ್ತೀರೆಂಬ
ದನ್ನು ತಿಳಿಸಿದ್ದಾನೆ. ಸಹೋದರರೇ, ಇದನ್ನು ಕೇಳಿ
ನಮ್ಮ ಎಲ್ಲಾ ಕೊರತೆಯಲ್ಲಿಯೂ ಸಂಕಟದಲ್ಲಿಯೂ
ನಿಮ್ಮ ನಂಬಿಕೆಯ ಮೂಲಕ ನಮಗೆ ಆದರಣೆಯಾ
ಯಿತು. ನೀವು ಕರ್ತನಲ್ಲಿ ದೃಢವಾಗಿ ನಿಂತಿದ್ದರೆ
ನಮಗೆ ಜೀವಕಳೆ. ನಿಮ್ಮ ನಿಮಿತ್ತ ನಮ್ಮ ದೇವರ
ಮುಂದೆ ನಮಗಿರುವ ಎಲ್ಲಾ ಸಂತೋಷಕ್ಕಾಗಿ ದೇವ
ರಿಗೆ ತಕ್ಕಷ್ಟು ಸ್ತೋತ್ರಮಾಡುವದು ನಮ್ಮಿಂದ ಹೇಗಾ
ದೀತು? ನಿಮ್ಮ ಮುಖವನ್ನು ನೋಡುವದಕ್ಕೂ 1
ನಿಮ್ಮ ನಂಬಿಕೆಯ ಕೊರತೆಗಳನ್ನು ನೀಗುವದಕ್ಕೂ
ನಮಗೆ ಅನುಕೂಲವಾಗಬೇಕೆಂದು ನಾವು ಹಗ
ಲಿರುಳು ದೇವರನ್ನು ಅತ್ಯಂತವಾಗಿ ಬೇಡುವವರಾಗಿ
ದ್ದೇವೆ. ನಮ್ಮ ತಂದೆಯಾದ ದೇವರೂ ನಮ್ಮ ಕರ್ತ 1
ನಾದ ಯೇಸುವೂ ನಮಗೆ ನಿಮ್ಮ ಬಳಿಗೆ ಬರುವದಕ್ಕೆ
ಮಾರ್ಗವನ್ನು ಸರಾಗಮಾಡಲಿ.
ನಿಮ್ಮಲ್ಲಿ ನಮ್ಮ ಪ್ರೀತಿಯು ಹೇಗೋ ಹಾಗೆಯೇ 1
ನಿಮ್ಮ ಪ್ರೀತಿಯೂ ಒಬ್ಬರೊಬ್ಬರ ಮೇಲೆಯೂ ಎಲ್ಲಾ
ಮನುಷ್ಯರ ಮೇಲೆಯೂ ಅಭಿವೃದ್ಧಿಹೊಂದಿ ಅತ್ಯಧಿಕ

13 ವಾಗುವಂತೆ ಕರ್ತನು ಅನುಗ್ರಹಿಸಲಿ. ನಮ್ಮ ಕರ್ತ
ನಾದ ಯೇಸು ನಿಮ್ಮ ಹೃದಯಗಳನ್ನು ದೃಢಪಡಿಸಿ
ತನ್ನ ಎಲ್ಲಾ ಪರಿಶುದ್ಧ ಪರಿವಾರ ಸಮೇತ ಪ್ರತ್ಯ
ಕ್ಷನಾದಾಗ ತಂದೆಯಾದ ದೇವರ ಸಮುಕ್ಷಮದಲ್ಲಿ
ನೀವು ಪರಿಶುದ್ಧರೂ ನಿರ್ದೋಷಿಗಳೂ ಆಗಿರುವಂತೆ
ಮಾಡಲಿ.

### ಕ್ರೈಸ್ತರಿಗೆ ಇರತಕ್ಕ ನಡಾವಳಿಯನ್ನು ಕುರಿತದ್ದು.

4 ಕಡೇ ಮಾತೇನಂದರೆ, ಸಹೋದರರೇ, ನಾವು ಕರ್ತ
ನಾದ ಯೇಸುವಿನ ಅಧಿಕಾರದಿಂದ ನಿಮಗೆ ಕೊಟ್ಟ
2 ಆಜ್ಞೆಗಳನ್ನು ತಿಳಿದಿದ್ದೀರಷ್ಟೆ. ನೀವು ಹೇಗೆ ನಡೆದು
ದೇವರನ್ನು ಮೆಚ್ಚಿಸಬೇಕೋ ಅದನ್ನು ನಮ್ಮಿಂದ
ಕಲಿತುಕೊಂಡು ಅದರಂತೆ ನಡೆಯುತ್ತಲೇ ಇದ್ದೀರಿ.
ನೀವು ಹಾಗೆಯೇ ಇನ್ನೂ ಹೆಚ್ಚಾಗಿ ನಡೆಯಬೇಕೆಂದು
ನಿಮ್ಮನ್ನು ಬೇಡಿಕೊಂಡು ಯೇಸು ಕರ್ತನಲ್ಲಿ ಪ್ರಬೋ
3 ಧಿಸುತ್ತೇವೆ. ದೇವರ ಚಿತ್ತವೇನಂದರೆ ನೀವು ಶುದ್ಧ
ರಾಗಿರಬೇಕೆಂಬದೇ. ಆದದರಿಂದ ಹಾದರಕ್ಕೆ ದೂರ
4-5 ವಾಗಿರಬೇಕು. ದೇವರನ್ನರಿಯದ ಅನ್ಯಜನಗಳಂತೆ
ಕಾಮಾಭಿಲಾಷೆಗೆ ಒಳಪಡದೆ ನಿಮ್ಮಲ್ಲಿ ಪ್ರತಿಯೊ
ಬ್ಬನು ಪವಿತ್ರವಾದ ಮನಸ್ಸಿನಿಂದಲೂ ಘನತೆಯಿಂ
ದಲೂ 1)ಧರ್ಮಪತ್ನಿಯನ್ನು ಸಂಪಾದಿಸಿಕೊಳ್ಳಲು
6 ತಿಳಿಯಬೇಕು. ಈ ವಿಷಯದಲ್ಲಿ ಯಾರೂ ತನ್ನ
ಸಹೋದರನನ್ನು ವಂಚಿಸಿ ಕೇಡುಮಾಡಬಾರದು. ನಾವು
ಮುಂಚೆ ತಿಳಿಸಿ ನಿಮಗೆ ಖಂಡಿತವಾಗಿ ಹೇಳಿದ ಪ್ರಕಾರ
ಇವೆಲ್ಲವುಗಳ ವಿಷಯದಲ್ಲಿ ಕರ್ತನು ಮುಯ್ಯಿಗೆ
7 ಮುಯ್ಯಿ ತೀರಿಸುವವನಾಗಿದ್ದಾನೆ. ದೇವರು ನಮ್ಮನ್ನು
ಬಂಡತನಕ್ಕೆ ಕರೆಯದೆ ಶುದ್ಧರಾಗಿರುವದಕ್ಕೆ ಕರೆ
8 ದನು. ಹೀಗಿರಲು ಈ ಮಾತನ್ನು ತಾತ್ಸಾರಮಾಡು
ವವನು ಮನುಷ್ಯನನ್ನು ತಿರಸ್ಕರಿಸುವದು ಮಾತ್ರವಲ್ಲದೆ
ಪವಿತ್ರಾತ್ಮವರವನ್ನು ನಿಮಗೆ ದಯಪಾಲಿಸುವ ದೇವ
ರನ್ನೂ ತಿರಸ್ಕರಿಸುತ್ತಾನೆ.
9 ಸಹೋದರಸ್ನೇಹವಿಷಯದಲ್ಲಿ ನಿಮಗೆ ಬರೆಯು
ವದು ಅವಶ್ಯವಿಲ್ಲ; ಒಬ್ಬರನ್ನೊಬ್ಬರು ಪ್ರೀತಿಸ
ಬೇಕೆಂಬ ಉಪದೇಶವನ್ನು ನೀವೇ ದೇವರಿಂದ ಹೊಂದಿ
ದವರಾಗಿದ್ದು ಸಮಸ್ತ ಮಕೆದೋನ್ಯದಲ್ಲಿರುವ
ಸಹೋದರರನ್ನೆಲ್ಲಾ ಪ್ರೀತಿಸುವವರಾಗಿಯೇ ಇದ್ದೀರಿ.
10 ಆದರೂ ಸಹೋದರರೇ, ನೀವು ಪ್ರೀತಿಯಲ್ಲಿ ಇನ್ನೂ
ಹೆಚ್ಚುತ್ತಾ ಬರಬೇಕೆಂದು ನಿಮ್ಮನ್ನು ಪ್ರಬೋಧಿಸು
11 ತ್ತೇವೆ. ಇದಲ್ಲದೆ ನಾನು ನಿಮಗೆ ಆಜ್ಞೆಕೊಟ್ಟ ಪ್ರಕಾರ
ನೀವು ಮತ್ತೊಬ್ಬರ ಕಾರ್ಯದಲ್ಲಿ ತಲೆಹಾಕದೆ
ಸುಮ್ಮಗಿದ್ದು ಸ್ವಂತ ಕಾರ್ಯವನ್ನೇ ನಡಿಸಿ
ಕೊಂಡು ಕೈಯಾರೆ ಕೆಲಸಮಾಡುವದೇ ಮಾನವೆಂದೆ
12 ಣಿಸಿರಿ. ಹೀಗಿದ್ದರೆ ನೀವು ಹೊರಗಿನವರ ಎದುರಿ
ನಲ್ಲಿ ಸಜ್ಜನರಾಗಿ ನಡೆದುಕೊಳ್ಳುವಿರಿ, ಮತ್ತು ನಿಮಗೆ
ಯಾವದಕ್ಕೂ ಕೊರತೆಯಿರುವದಿಲ್ಲ.

### ಯೇಸುಕರ್ತನು ಪ್ರತ್ಯಕ್ಷನಾಗುವದಕ್ಕೆ ಮುಂಚಿತವಾಗಿ ಸಾಯುವ ಭಕ್ತರನ್ನು ಕುರಿತದ್ದು.

ಸಹೋದರರೇ, ನಿದ್ರೆಹೋಗುವವರ ಗತಿ ಏನೆಂದು 13
ನೀವು ತಿಳಿಯದೆ ಇದ್ದು ನಿರೀಕ್ಷೆಯಿಲ್ಲದವರಾದ
ಇತರರಂತೆ ದುಃಖಿಸುವದು ನಮ್ಮ ಮನಸ್ಸಿಗೆ ಒಪ್ಪು
ವದಿಲ್ಲ. ಯೇಸು ಸತ್ತು ಜೀವಿತನಾಗಿ ಎದ್ದನೆಂದು 14
ನಾವು ನಂಬಿದ ಮೇಲೆ ಅದರಂತೆ 2)ಯೇಸುವಿನಲ್ಲಿದ್ದು
ಕೊಂಡು ನಿದ್ರೆಹೋಗುವವರನ್ನು ಸಹ ದೇವರು ಆತ
ನೊಡನೆ ಕರೆದುಕೊಂಡು ಬರುವನೆಂದು ನಂಬಬೇ
ಕಲ್ಲವೇ. ನಾವು ಕರ್ತನ ಮಾತಿನ ಆಧಾರದಿಂದ ನಿಮಗೆ 15
ಹೇಳುವದೇನಂದರೆ ಕರ್ತನು ಪ್ರತ್ಯಕ್ಷನಾಗುವವರೆಗೂ
ಜೀವದಿಂದುಳಿದಿರುವ ನಾವು ನಿದ್ರೆಹೋದವರಿಗಿಂತ
ಮುಂದಾಗುವದೇ ಇಲ್ಲ. ಕರ್ತನು ತಾನೇ ಆಜ್ಞಾಘೋ 16
ಷದೊಡನೆಯೂ ಪ್ರಧಾನದೂತನ ಶಬ್ದದೊಡನೆಯೂ
ದೇವರ ತುತೂರಿಧ್ವನಿಯೊಡನೆಯೂ ಆಕಾಶದಿಂದ
ಇಳಿದುಬರುವನು; ಆಗ ಕ್ರಿಸ್ತನಲ್ಲಿರುವ ಸತ್ತವರು
ಮೊದಲು ಎದ್ದುಬರುವರು. ಆ ಮೇಲೆ ಜೀವದಿಂದು 17
ಳಿದಿರುವ ನಾವು ಅಂತರಿಕ್ಷದಲ್ಲಿ ಕರ್ತನನ್ನು ಎದುರು
ಗೊಳ್ಳುವದಕ್ಕಾಗಿ ಅವರ ಸಂಗಡಲೇ ಮೇಘವಾಹನ
ರಾಗಿ ಫಕ್ಕನೆ ಒಯ್ಯಲ್ಪಡುವೆವು; ಹೀಗಾಗಿ ನಾವು
ಸದಾಕಾಲವೂ ಕರ್ತನ ಜೊತೆಯಲ್ಲಿರುವೆವು. ಆದಕಾ 18
ರಣ ಈ ಮಾತುಗಳಿಂದ ಒಬ್ಬರನ್ನೊಬ್ಬರು ಸಂತೈಸಿರಿ.
ಸಹೋದರರೇ, ಈ ಸಂಗತಿಗಳು ನಡೆಯಬೇ 5
ಕಾದ ಕಾಲಗಳನ್ನೂ ಗಳಿಗೆಗಳನ್ನೂ ಕುರಿತು ನಿಮಗೆ
ಬರೆಯುವದು ಅವಶ್ಯವಿಲ್ಲ. ರಾತ್ರಿಕಾಲದಲ್ಲಿ ಕಳ್ಳ 2
ನು ಹೇಗೆ ಬರುತ್ತಾನೋ ಹಾಗೆಯೇ ಕರ್ತನ ದಿನವು
ಬರುವದೆಂದು ನೀವೇ ಚೆನ್ನಾಗಿ ತಿಳಿದಿದ್ದೀರಲ್ಲಾ. ಸಮಾ 3
ಧಾನವಾಗಿಯೂ ನಿರ್ಭಯವಾಗಿಯೂ ಇರುತ್ತೇವೆಂದು
ಜನರು ಹೇಳುತ್ತಿರುವಾಗಲೇ ಅವರ ಮೇಲೆ ನಾಶ
ನವು ಗರ್ಭಿಣಿಗೆ ಪ್ರಸವವೇದನೆಬರುವ ಪ್ರಕಾರ ಬರು
ವದು; ಅವರು ಹೇಗೂ ತಪ್ಪಿಸಿಕೊಳ್ಳಲಾರರು. ಆದರೆ 4
ಸಹೋದರರೇ, 3)ಆ ದಿನವು ಕಳ್ಳನಂತೆ ನಿಮ್ಮ ಮೇಲೆ
ಬರತಕ್ಕದ್ದಲ್ಲ; ನೀವು ಕತ್ತಲೆಯಲ್ಲಿರುವವರಲ್ಲ.
ನೀವೆಲ್ಲರು ಬೆಳಕಿನವರೂ ಹಗಲಿನವರೂ ಆಗಿದ್ದೀ 5
ರಷ್ಟೆ; ನಾವು ರಾತ್ರಿಯವರೂ ಅಲ್ಲ, ಕತ್ತಲೆಯವರೂ
ಅಲ್ಲ. ಆದಕಾರಣ ನಾವು ಇತರರಂತೆ ನಿದ್ದೆಮಾ 6
ಡದೆ ಎಚ್ಚರವಾಗಿರೋಣ, ಸ್ವಸ್ಥಚಿತ್ತರಾಗಿರೋಣ.
ನಿದ್ದೆಮಾಡುವವರು ರಾತ್ರಿಯಲ್ಲಿ ನಿದ್ದೆಮಾಡು 7
ತ್ತಾರೆ, ಅಮಲೇರುವವರು ರಾತ್ರಿಯಲ್ಲಿ ಅಮಲೇ
ರುತ್ತಾರಷ್ಟೆ. ನಾವಾದರೋ ಹಗಲಿನವರಾಗಿರಲಾಗಿ 8
ವಿಶ್ವಾಸಪ್ರೀತಿಗಳೆಂಬ ವಜ್ರಕವಚವನ್ನೂ ರಕ್ಷಣೆಯ
ನಿರೀಕ್ಷೆಯೆಂಬ ಶಿರಸ್ತ್ರಾಣವನ್ನೂ ಧರಿಸಿಕೊಂಡು ಸ್ವಸ್ಥ
ಚಿತ್ತರಾಗಿರೋಣ. ಯಾಕಂದರೆ ದೇವರು ನಮ್ಮನ್ನು 9
ತನ್ನ ಕೋಪಕ್ಕೆ ಗುರಿಯಾಗಬೇಕೆಂದು ನೇಮಿಸದೆ

---

1) ಅಥವಾ, ಸ್ವಂತ ಘಟವನ್ನು ಸ್ವಾಧೀನದಲ್ಲಿ ಇಟ್ಟುಕೊಂಡಿರಲು. 2) ಅಥವಾ, ದೇವರು ನಿದ್ರೆಹೋದವರನ್ನು ಸಹ ಯೇಸುವಿನ ಮೂಲಕವಾಗಿ ತರಕೊಡನು. 3) ಕೆಲವು ಪ್ರತಿಗಳಲ್ಲಿ—ಕಳ್ಳರ ಮೇಲೆ ಹಗಲಿನ ಬೆಳಕು ಫಕ್ಕನೆ ಬಂತೋ ಎಂಬಂತೆ ಆ ದಿನವು ಎಂದು ಬರೆದದೆ.

ನಾವು ನಮ್ಮ ಕರ್ತನಾದ ಯೇಸು ಕ್ರಿಸ್ತನ ಮೂಲಕ
ವಾಗಿ ರಕ್ಷಣೆಯನ್ನು ಸಂಪಾದಿಸಿಕೊಳ್ಳಬೇಕೆಂದು
10 ನೇಮಿಸಿದನು. ನಾವು 1)ಎಚ್ಚರವಾಗಿದ್ದರೂ ಸರಿಯೇ
ನಿದ್ರೆಯಲ್ಲಿದ್ದರೂ ಸರಿಯೇ, ತನ್ನ ಜೊತೆಯಲ್ಲಿಯೇ
ಜೀವಿಸಬೇಕೆಂದು ಆತನು ನಮಗೋಸ್ಕರ ಸತ್ತನು.
11 ಆದದರಿಂದ ನೀವು ಈಗ ಮಾಡುತ್ತಿರುವ ಪ್ರಕಾರವೇ
ಒಬ್ಬರನ್ನೊಬ್ಬರು ಸಂತೈಸಿಕೊಳ್ಳುತ್ತಾ ಒಬ್ಬರ ಭಕ್ತಿ
ಯನ್ನೊಬ್ಬರು ವೃದ್ಧಿಪಡಿಸುತ್ತಾ ಇರ್ರಿ.

ಕ್ರೈಸ್ತರು ಅನುಸರಿಸತಕ್ಕ ಕೆಲವು ಸೂತ್ರಗಳು.

12 ಸಹೋದರರೇ, ಯಾರು ನಿಮ್ಮಲ್ಲಿ ಪ್ರಯಾಸಪಟ್ಟು
ಕರ್ತನ ಕಾರ್ಯಗಳಲ್ಲಿ ನಿಮ್ಮ ಮೇಲೆ ಮುಖ್ಯಸ್ಥ
13 ರಾಗಿದ್ದು ನಿಮಗೆ ಬುದ್ಧಿಹೇಳುತ್ತಾರೋ ಅವರನ್ನು
ಲಕ್ಷಿಸಿ ಅವರ ಕೆಲಸದ ನಿಮಿತ್ತ ಅವರನ್ನು ಪ್ರೀತಿ
ಯಿಂದ ಬಹಳವಾಗಿ ಸನ್ಮಾನಮಾಡಬೇಕೆಂದು ನಿಮ್ಮ
ನ್ನು ಬೇಡಿಕೊಳ್ಳುತ್ತೇವೆ. ನಿಮ್ಮ ನಿಮ್ಮೊಳಗೆ ಸಮಾ
ಧಾನವಾಗಿರಿ.
14 ಸಹೋದರರೇ, ಅಕ್ರಮವಾಗಿ ನಡೆಯುವವರಿಗೆ
ಬುದ್ಧಿಹೇಳಿರಿ, ಮನಗುಂದಿದವರನ್ನು ಧೈರ್ಯಪಡಿ
ಸಿರಿ, ಬಲಹೀನರಿಗೆ ಆಧಾರವಾಗಿರಿ, ಎಲ್ಲರಲ್ಲಿಯೂ
ದೀರ್ಘಶಾಂತರಾಗಿರಿ ಎಂದು ನಿಮ್ಮನ್ನು ಪ್ರಬೋಧಿಸು
15 ತ್ತೇವೆ. ಯಾರೂ ಅಪಕಾರಕ್ಕೆ ಅಪಕಾರಮಾಡ
ದಂತೆ ನೋಡಿಕೊಳ್ಳಿರಿ; ಯಾವಾಗಲೂ ನೀವು
ಒಬ್ಬರಿಗೊಬ್ಬರು ಹಿತವನ್ನು ಮಾಡಿಕೊಂಡಿರುವದಲ್ಲದೆ
ಎಲ್ಲರಿಗೂ ಹಿತವನ್ನು ಮಾಡುವವರಾಗಿರಿ.

ಯಾವಾಗಲೂ ಸಂತೋಷಿಸಿರಿ; ಎಡೆಬಿಡದೆ 16, 1
ಪ್ರಾರ್ಥನೆಮಾಡಿರಿ; ಎಲ್ಲಾದರಲ್ಲಿಯೂ ಕೃತಜ್ಞ 1
ತಾಸ್ತುತಿಮಾಡಿರಿ; ಇದೇ ನಿಮ್ಮ ವಿಷಯವಾಗಿ
ಕ್ರಿಸ್ತ ಯೇಸುವಿನಲ್ಲಿ ತೋರಿಬಂದ ದೇವರ ಚಿತ್ತ.
ಪವಿತ್ರಾತ್ಮವನ್ನು ನಂದಿಸಬೇಡಿರಿ; ಪ್ರವಾದನೆ 19, 2
ಗಳನ್ನು ಹೀನೈಸಬೇಡಿರಿ; ಆದರೆ ಎಲ್ಲವನ್ನೂ ಪರಿ 2
ಶೋಧಿಸಿ ಒಳ್ಳೇದನ್ನೇ ಭದ್ರವಾಗಿ ಹಿಡಿದುಕೊಳ್ಳಿರಿ;
ಸಕಲವಿಧವಾದ ಕೆಟ್ಟತನಕ್ಕೆ ದೂರವಾಗಿರಿ. 2

ಸಮಾಪ್ತಿವಾಕ್ಯಗಳು.

ಶಾಂತಿದಾಯಕನಾದ ದೇವರು ತಾನೇ ನಿಮ್ಮ 2
ನ್ನು ಪರಿಪೂರ್ಣವಾಗಿ ಪವಿತ್ರಮಾಡಲಿ. ನಮ್ಮ ಕರ್ತ
ನಾದ ಯೇಸು ಕ್ರಿಸ್ತನು ಪ್ರತ್ಯಕ್ಷನಾದಾಗ ನಿಮ್ಮ
ಆತ್ಮಪ್ರಾಣಶರೀರಗಳು ದೋಷವಿಲ್ಲದೆ ಸಂಪೂರ್ಣ
ವಾಗಿ ಕಾಣಿಸುವಂತೆ ಕಾಪಾಡಲ್ಪಡಲಿ. ನಿಮ್ಮನ್ನು 2
ಕರೆಯುವವನು ನಂಬಿಗಸ್ತನು, ಆತನು ತನ್ನ
ಕಾರ್ಯವನ್ನು ಸಾಧಿಸುವನು.
ಸಹೋದರರೇ, ನಮಗೋಸ್ಕರ ಪ್ರಾರ್ಥನೆ 2
ಮಾಡಿರಿ. ಪವಿತ್ರವಾದ ಮುದ್ದಿಟ್ಟು ಸಹೋದರರೆಲ್ಲ 2
ರನ್ನೂ ವಂದಿಸಿರಿ. ಈ ಪತ್ರಿಕೆಯನ್ನು ಸಹೋದರ 2
ರೆಲ್ಲರಿಗೂ ಓದಿ ಹೇಳಬೇಕೆಂದು ನಿಮಗೆ ಕರ್ತನ
ಆಣೆ ಇಡುತ್ತೇನೆ.
ನಮ್ಮ ಕರ್ತನಾದ ಯೇಸು ಕ್ರಿಸ್ತನ ಕೃಪೆಯು 2
ನಿಮ್ಮೊಂದಿಗಿರಲಿ.

---

THE SECOND EPISTLE OF SAINT PAUL TO THE

# THESSALONIANS

## ಪೌಲನು ಥೆಸಲೊನೀಕದವರಿಗೆ ಬರೆದ ಎರಡನೆಯ ಪತ್ರಿಕೆ

ಒಕ್ಕಣೆ.

1 ನಮ್ಮ ತಂದೆಯಾದ ದೇವರಲ್ಲಿಯೂ ಕರ್ತನಾದ
ಯೇಸು ಕ್ರಿಸ್ತನಲ್ಲಿಯೂ ಇರುವ ಥೆಸಲೊನೀಕದವರ
ಸಭೆಗೆ ಪೌಲ ಸಿಲ್ವಾನ ತಿಮೊಥೆಯ ಎಂಬ ನಾವು ಬರೆ
2 ಯುವದೇನಂದರೆ—ತಂದೆಯಾದ ದೇವರಿಂದಲೂ ಕರ್ತ
ನಾದ ಯೇಸು ಕ್ರಿಸ್ತನಿಂದಲೂ ನಿಮಗೆ ಕೃಪೆಯೂ
ಶಾಂತಿಯೂ ಆಗಲಿ.

ದೇವರಿಗೆ ಕೃತಜ್ಞತಾಸ್ತುತಿ.

ಸಹೋದರರೇ, ನಾವು ಯಾವಾಗಲೂ ನಿಮ್ಮ
ವಿಷಯದಲ್ಲಿ ದೇವರಿಗೆ ಕೃತಜ್ಞತಾಸ್ತುತಿಮಾಡುವದಕ್ಕೆ
ಬದ್ಧರಾಗಿದ್ದೇವೆ. ಹಾಗೆ ಮಾಡುವದು ಯೋಗ್ಯ;
ಯಾಕಂದರೆ ನಿಮ್ಮ ನಂಬಿಕೆಯು ಬಹಳ ಅಭಿವೃದ್ಧಿ
ಹೊಂದುತ್ತಾ ಬರುತ್ತದೆ, ಪರಸ್ಪರವಾದ ಪ್ರೀತಿ ನಿಮ್ಮೆ
ಲ್ಲರಲ್ಲಿಯೂ ಹೆಚ್ಚುತ್ತಾ ಬರುತ್ತದೆ. ಹೀಗಿರುವದ
ರಿಂದ ನಿಮಗೆ ಬಂದಿರುವ ಎಲ್ಲಾ ಹಿಂಸೆಗಳಲ್ಲಿಯೂ

---

1) ಅಂದರೆ, ಜೀವದಿಂದಿದ್ದರೂ ಸತ್ತಿದ್ದರೂ.

ನೀವು ಅನುಭವಿಸುತ್ತಿರುವ ಸಂಕಟಗಳಲ್ಲಿಯೂ ತೋರಿ
ಬಂದ ನಿಮ್ಮ ತಾಳ್ಮೆ ನಂಬಿಕೆಗಳನ್ನು ನೆನಸಿ ನಿಮ್ಮ
ವಿಷಯವಾಗಿ ಹೆಚ್ಚಳಪಟ್ಟು ದೇವರ ಸಭೆಗಳೊಳಗೆ
ನಾವೇ ಮಾತಾಡುತ್ತೇವೆ.

ಕರ್ತನಾದ ಯೇಸು ಪ್ರತ್ಯಕ್ಷನಾದಾಗ ಆತನಿಗೋಸ್ಕರ
ಹಿಂಸೆಪಟ್ಟವರಿಗೆ ಉಪಶಾಂತಿಯೂ ವೈರಿಗಳಿಗೆ ದಂಡನೆಯೂ
ಉಂಟಾಗುವ ಭರವಸ.

5 ದೇವರು ನ್ಯಾಯವಾದ ತೀರ್ಪು ಮಾಡುತ್ತಾನೆಂಬ
ದಕ್ಕೆ ನಿಮ್ಮ ತಾಳ್ಮೆಯು ಸ್ಪಷ್ಟವಾದ ನಿದರ್ಶನವಾಗಿದೆ.
ಯಾವ ದೇವರಾಜ್ಯಕ್ಕೋಸ್ಕರ ನೀವು ಕಷ್ಟವನ್ನನು
ಭವಿಸುತ್ತೀರೋ ಅದಕ್ಕೆ ನೀವು ಯೋಗ್ಯರಾಗಬೇಕೆಂ
6 ಬದೇ ದೇವರ ಅಭಿಪ್ರಾಯ. ನಿಮ್ಮನ್ನು ಸಂಕಟಪಡಿ
ಸುವವರಿಗೆ ಪ್ರತಿಯಾಗಿ ಸಂಕಟವನ್ನೂ ಸಂಕಟಪಡುವ
ವರಾದ ನಿಮಗೆ ನಮ್ಮೊಡನೆ ಉಪಶಮನವನ್ನೂ
ಕೊಡುವದು ದೇವರ ಎಣಿಕೆಯಲ್ಲಿ ನ್ಯಾಯವಾಗಿದೆ
7 ಯಷ್ಟೆ. ಯಾವಾಗ ಕೊಡುವನಂದರೆ ಯೇಸುಕರ್ತನು
ತನ್ನ ಶಕ್ತಿಯನ್ನು ತೋರ್ಪಡಿಸುವ ದೇವದೂತರಿಂದ
ಕೂಡಿದವನಾಗಿ ಉರಿಯುವ ಬೆಂಕಿಯಲ್ಲಿ ಆಕಾಶ
ದಿಂದ ಪ್ರತ್ಯಕ್ಷನಾಗುವ ಕಾಲದಲ್ಲಿ ಅದನ್ನು ಕೊಡು
8 ವನು. ಆಗ ನಮ್ಮ ಕರ್ತನಾದ ಯೇಸುವು ದೇವ
ರನ್ನರಿಯದವರಿಗೂ ತನ್ನ ಸುವಾರ್ತೆಗೆ ಒಳಪಡದವ
9-10 ರಿಗೂ ಪ್ರತೀಕಾರವನ್ನು ಸಲ್ಲಿಸುವನು. ಆ
ದಿನದಲ್ಲಿ ಆತನು ತನ್ನ ಪವಿತ್ರರ ಮೂಲಕ ಪ್ರಭಾವ
ಹೊಂದುವವನಾಗಿಯೂ ನಾವು ನಿಮಗೆ ಹೇಳಿದ ಸಾಕ್ಷಿ
ಯನ್ನು ನಂಬಿದವರೆಲ್ಲರ ಮೂಲಕ ತನ್ನ ವಿಷಯ
ದಲ್ಲಿ ಆಶ್ಚರ್ಯ ಹುಟ್ಟಿಸುವವನಾಗಿಯೂ ಬರು
ವಾಗ ಅಂಥವರು ಕರ್ತನ ಸಮ್ಮುಖಕ್ಕೂ ಆತನ ಪರಾ
ಕ್ರಮದ ವೈಭವಕ್ಕೂ ದೂರವಾಗಿ ನಿತ್ಯನಾಶನವೆಂಬ
1 ದಂಡನೆಯನ್ನು ಅನುಭವಿಸುವರು. ಆ ದಿನವನ್ನು
ನಾವು ಎದುರುನೋಡುತ್ತಾ ನಿಮಗೋಸ್ಕರ ಯಾ
ವಾಗಲೂ ಪ್ರಾರ್ಥನೆಮಾಡಿ—ನಮ್ಮ ದೇವರು ನಿಮ್ಮ
ನ್ನು ಕರೆದದ್ದಕ್ಕೆ ತಾನೇ ನಿಮ್ಮನ್ನು ಯೋಗ್ಯರೆಂದು
ಎಣಿಸಬೇಕೆಂತಲೂ ಸತ್ಕ್ರಿಯೆಗಳಲ್ಲಿ ಸಂತೋಷಿಸುವ
ನಿಮ್ಮ ಸಕಲ ಆಲೋಚನೆಯನ್ನೂ ನಂಬಿಕೆಯ ಫಲ
ವಾದ ನಿಮ್ಮ ಕೆಲಸವನ್ನೂ ಶಕ್ತಿಪೂರ್ವಕವಾಗಿ ಸಿದ್ಧಿಗೆ
2 ತರಬೇಕೆಂತಲೂ ಬೇಡಿಕೊಳ್ಳುತ್ತೇವೆ. ಹೀಗಾದರೆ
ನಮ್ಮ ದೇವರ ಮತ್ತು ಕರ್ತನಾದ ಯೇಸು ಕ್ರಿಸ್ತನ
ಕೃಪೆಯಿಂದ ನಿಮ್ಮ ಮೂಲಕ ನಮ್ಮ ಕರ್ತನಾದ
ಯೇಸುವಿನ ಹೆಸರಿಗೆ ಮಹಿಮೆ ಉಂಟಾಗುವದು;
ಆತನ ಮೂಲಕ ನಿಮಗೂ ಮಹಿಮೆ ಉಂಟಾಗುವದು.

ಕರ್ತನಾದ ಯೇಸು ಪ್ರತ್ಯಕ್ಷನಾಗುವದಕ್ಕೆ ಮುಂಚಿತವಾಗಿ
ಅನೇಕ ಸಂಗತಿಗಳು ನಡೆಯಬೇಕು.

2 ಸಹೋದರರೇ, ನಮ್ಮ ಕರ್ತನಾದ ಯೇಸು
ಕ್ರಿಸ್ತನ ಪ್ರತ್ಯಕ್ಷತೆಯ ವಿಷಯವಾಗಿಯೂ ನಾವು
ಆತನ ಬಳಿಯಲ್ಲಿ ಕೂಡಿಕೊಳ್ಳುವದರ ವಿಷಯವಾಗಿ
ಯೂ ನಿಮ್ಮನ್ನು ಬೇಡಿಕೊಳ್ಳುವದೇನಂದರೆ—ಕರ್ತನ 2
ದಿನವು ಈಗಲೇ ಹತ್ತಿರವಾಯಿತೆಂಬದಾಗಿ ದೇವ
ರಾತ್ಮಪ್ರೇರಿತವಾದ ನುಡಿ ಇದೆ ಎಂದಾಗಲಿ ಪೌಲನು
ಹಾಗೆ ಹೇಳಿದನೆಂದಾಗಲಿ ಪೌಲನು ಹಾಗೆ ಬರೆದನೆಂ
ದಾಗಲಿ ಯಾರಾದರೂ ಹೇಳಿದರೂ ನೀವು ಬೇಗನೆ
ಬುದ್ಧಿಗೆಟ್ಟು ಚಂಚಲರಾಗಿ ಕಳವಳಪಡಬೇಡಿರಿ. ಯಾ 3
ರೂ ಯಾವ ವಿಧದಲ್ಲಿಯೂ ನಿಮ್ಮನ್ನು ಮೋಸಗೊಳಿಸ
ದಂತೆ ನೋಡಿಕೊಳ್ಳಿರಿ; ಯಾಕಂದರೆ ಮೊದಲು
ಮತಭ್ರಷ್ಟತೆಯು ಉಂಟಾಗಿ ಅಧರ್ಮಸ್ವರೂಪನು
ಬೈಲಿಗೆ ಬಂದ ಹೊರತು ಆ ದಿನವು ಬರುವದಿಲ್ಲ.
ಯಾವದು ದೇವರೆನಿಸಿಕೊಳ್ಳುತ್ತದೋ ಯಾವದು 4
ಪೂಜೆ ಹೊಂದುತ್ತದೋ ಅದನ್ನೆಲ್ಲಾ ನಾಶನಕ್ಕೆ
ಅಧೀನನಾದ ಆ ಪುರುಷನು ಎದುರಿಸಿ ಅದಕ್ಕಿಂತ
ಮೇಲಾಗಿ ತನ್ನನ್ನು ತಾನೇ ಹೆಚ್ಚಿಸಿಕೊಂಡು ತಾನು
ದೇವರೆಂದು ಹೇಳಿಕೊಂಡು ದೇವರ ಗರ್ಭಗುಡಿಯಲ್ಲೇ
ಕೂತುಕೊಳ್ಳುತ್ತಾನೆ. ನಾನು ನಿಮ್ಮ ಸಂಗಡ ಇದ್ದಾಗ 5
ಈ ಸಂಗತಿಗಳನ್ನು ಹೇಳಿದ್ದು ಜ್ಞಾಪಕವಿಲ್ಲವೋ? ಇದ 6
ಲ್ಲದೆ ಆ ಮನುಷ್ಯನು ನೇಮಕವಾದ ಸಮಯದಲ್ಲೇ
ಹೊರತು ಬೈಲಿಗೆ ಬರುವದಕ್ಕೆ ಏನು ಅಡ್ಡಿಮಾಡು
ತ್ತದೋ ಅದು ನಿಮಗೆ ತಿಳಿದೇ ಇದೆ. ಅಧರ್ಮವು 7
ಈಗಲೂ ಗುಪ್ತವಾಗಿ ತನ್ನ ಕಾರ್ಯವನ್ನು ಸಾಧಿಸು
ತ್ತದೆ; ಆದರೆ ಇದು ವರೆಗೆ ಅಡ್ಡಿಮಾಡುವವನು ತೆಗೆ
ದುಬಿಡಲ್ಪಡುವ ತನಕ ಅದು ಗುಪ್ತವಾಗಿಯೇ ಇರು
ವದು. ಅವನು ತೆಗೆದುಬಿಡಲ್ಪಟ್ಟ ಕೂಡಲೆ ಆ ಅಧ 8
ರ್ಮಸ್ವರೂಪನು ಕಾಣಬರುವನು; ಅವನನ್ನು ಯೇಸು
ಕರ್ತನು ತನ್ನ ಬಾಯ ಉಸುರಿನಿಂದ ಕೊಲ್ಲು
ವನು, ತನ್ನ ಪ್ರತ್ಯಕ್ಷತೆಯ ಪ್ರಕಾಶದಿಂದ ಸಂಹರಿಸು
ವನು. ಆ ಅಧರ್ಮಸ್ವರೂಪನ ಪ್ರತ್ಯಕ್ಷತೆಯು ಸೈತಾ 9
ನನ ಮಾಟಕ್ಕನುಗುಣವಾಗಿರುವದು. ಅದು ಮೋಸ
ಗೊಳಿಸುವ ಸಕಲವಿಧವಾದ ಮಹತ್ಕಾರ್ಯ ಸೂಚ
ಕಕಾರ್ಯ ಅದ್ಭುತಕಾರ್ಯ ಇವುಗಳಿಂದಲೂ ದುರ್ನೀ
ತಿಯ ಎಲ್ಲಾ ವಂಚನೆಯಿಂದಲೂ ಕೂಡಿ ನಾಶನ
ಮಾರ್ಗದಲ್ಲಿರುವವರಿಗೋಸ್ಕರ ಸಂಭವಿಸುವದು.
ಅವರು ಸತ್ಯದ ಮೇಲೆ ಪ್ರೀತಿಯನ್ನಿಡದ ಕಾರಣದಿಂದ 10
ರಕ್ಷಣೆಯನ್ನು ಹೊಂದದೆ ನಾಶವಾಗುತ್ತಾರೆ. ಅದೇ 11
ಕಾರಣದಿಂದ ದೇವರು ಅಸತ್ಯನಡಿಸುವ ಭ್ರಮೆ
ಯನ್ನು ಅವರಲ್ಲಿಗೆ ಕಳುಹಿಸಿ ಆ ಸುಳ್ಳನ್ನು ನಂಬು
ವದಕ್ಕೆ ಅವರನ್ನು ಬಿಡುತ್ತಾನೆ. ಸತ್ಯವನ್ನು ನಂಬದೆ 12
ಅನೀತಿಯಲ್ಲಿ ಆನಂದಪಡುವವರೆಲ್ಲರೂ ಈ ಪ್ರಕಾರ
ನ್ಯಾಯತೀರ್ಪಿಗೆ ಒಳಗಾಗುವರು.

ಪೌಲನು ಥೆಸಲೊನೀಕದವರಿಗಾಗಿ ಮಾಡುವ
ಕೃತಜ್ಞತಾಸ್ತುತಿಯೂ ವಿಜ್ಞಾಪನೆಯೂ.

ಕರ್ತನಿಗೆ ಪ್ರಿಯರಾಗಿರುವ ಸಹೋದರರೇ, 13
ನೀವು ಪವಿತ್ರಾತ್ಮನಿಂದ ಶುದ್ಧೀಕರಿಸಲ್ಪಟ್ಟವರಾಗಿ
ಸತ್ಯದ ಮೇಲೆ ನಂಬಿಕೆಯನ್ನಿಟ್ಟು ರಕ್ಷಣೆಯನ್ನು
ಪಡೆಯುವದಕ್ಕಾಗಿ ದೇವರು ನಿಮ್ಮನ್ನು 1)ಆದಿಯಿಂದ

1) ಕೆಲವು ಪ್ರತಿಗಳಲ್ಲಿ—ಪ್ರಥಮಫಲವಾಗಿ ಎಂದು ಬರೆದದೆ.

ಆರಿಸಿಕೊಂಡದರಿಂದ ನಾವು ನಿಮ್ಮ ವಿಷಯದಲ್ಲಿ
ಯಾವಾಗಲೂ ದೇವರಿಗೆ ಕೃತಜ್ಞತಾಸ್ತುತಿಮಾಡುವ
14 ದಕ್ಕೆ ಬದ್ಧರಾಗಿದ್ದೇವೆ. ನೀವು ಹೀಗೆ ರಕ್ಷಿಸಲ್ಪಟ್ಟು
ನಮ್ಮ ಕರ್ತನಾದ ಯೇಸು ಕ್ರಿಸ್ತನ ಪ್ರಭಾವವನ್ನು
ಸಂಪಾದಿಸಿಕೊಳ್ಳಬೇಕೆಂದು ದೇವರು ನಮ್ಮ ಸುವಾರ್ತೆ
15 ಯ ಮೂಲಕವಾಗಿ ನಿಮ್ಮನ್ನು ಕರೆದನು. ಹೀಗಿರುವ
ದರಿಂದ ಸಹೋದರರೇ, ದೃಢವಾಗಿ ನಿಲ್ಲಿರಿ. ನಾವು
ಮಾತಿನಿಂದಾಗಲಿ ಪತ್ರಿಕೆಯಿಂದಾಗಲಿ ನಿಮಗೆ ತಿಳಿಸಿದ
ಬೋಧನೆಗಳನ್ನು ನೀವು ಭದ್ರವಾಗಿ ಹಿಡಿದುಕೊಂಡಿರ್ರಿ.
16 ಮತ್ತು ನಮ್ಮನ್ನು ಪ್ರೀತಿಸಿ ನಮಗೆ ನಿತ್ಯವಾದ ಆದ
ರಣೆಯನ್ನೂ ಉತ್ತಮವಾದ ನಿರೀಕ್ಷೆಯನ್ನೂ ಕೃಪೆ
ಯಿಂದ ಅನುಗ್ರಹಿಸಿದ ನಮ್ಮ ತಂದೆಯಾದ ದೇವರೂ
ನಮ್ಮ ಕರ್ತನಾದ ಯೇಸು ಕ್ರಿಸ್ತನೂ ನಿಮ್ಮ ಹೃದಯ
17 ಗಳನ್ನು ಸಂತೈಸಿ ಸಕಲ ಸತ್ಕಾರ್ಯದಲ್ಲಿಯೂ
ಸದ್ವಾಕ್ಯದಲ್ಲಿಯೂ ದೃಢಪಡಿಸಲಿ.

3 ಕಡೇ ಮಾತೇನಂದರೆ, ಸಹೋದರರೇ, ನಮಗೋ
ಸ್ಕರ ಪ್ರಾರ್ಥನೆಮಾಡಿರಿ. ಕರ್ತನ ವಾಕ್ಯವು ನಿಮ್ಮಲ್ಲಿ
ಹಬ್ಬಿದ ಪ್ರಕಾರ ಎಲ್ಲೆಲ್ಲಿಯೂ ಬೇಗನೆ ಹಬ್ಬಿ
2 ಪ್ರಖ್ಯಾತಿಹೊಂದುವ ಹಾಗೆಯೂ ದೇವರು ನಮ್ಮ
ನ್ನು ಮೂರ್ಖರಾದ ದುಷ್ಟಜನರ ಕೈಯಿಂದ ತಪ್ಪಿಸುವ
ಹಾಗೆಯೂ ಪ್ರಾರ್ಥಿಸಿರಿ; ಎಲ್ಲರಲ್ಲಿ ಕ್ರಿಸ್ತನಂಬಿಕೆ
3 ಯಿಲ್ಲವಲ್ಲಾ. ಆದರೆ ಕರ್ತನು ನಂಬಿಗಸ್ತನು;
ಆತನು ನಿಮ್ಮನ್ನು ದೃಢಪಡಿಸಿ ನೀವು ಕೆಡುಕನ
4 ಕೈಗೆ ಸಿಕ್ಕದಂತೆ ಕಾಪಾಡುವನು. ನಾವು ಆಜ್ಞಾಪಿ
ಸುವ ಪ್ರಕಾರ ನೀವು ಮಾಡುತ್ತೀರೆಂತಲೂ ಮುಂದೆ
ಯೂ ಮಾಡುವಿರೆಂತಲೂ ನಿಮ್ಮ ವಿಷಯದಲ್ಲಿ ಕರ್ತನ
5 ಮೂಲಕವಾಗಿ ನಮಗೆ ಭರವಸವುಂಟು. ದೇವರ
ಪ್ರೀತಿಯಲ್ಲಿಯೂ 1)ಕ್ರಿಸ್ತನ ತಾಳ್ಮೆಯಲ್ಲಿಯೂ ಸೇರು
ವಂತೆ ಕರ್ತನೇ ನಿಮ್ಮನ್ನು ನಡಿಸಲಿ.

### ಕ್ರೈಸ್ತರು ಕ್ರಮವಾಗಿ ನಡೆದು ಕೆಲಸಮಾಡಿ ಉಪಜೀವನವನ್ನು ಮಾಡಿಕೊಳ್ಳಬೇಕೆಂಬುವ ಬೋಧೆ.

6 ಸಹೋದರರೇ, ನಮ್ಮಿಂದ ಹೊಂದಿದ ಬೋಧನೆ
ಯನ್ನು ಅನುಸರಿಸದೆ ಅಕ್ರಮವಾಗಿ ನಡೆಯುವ
ಪ್ರತಿ ಸಹೋದರನಿಗೆ ನೀವು ದೂರವಾಗಿರಬೇ
ಕೆಂದು ನಮ್ಮ ಕರ್ತನಾದ ಯೇಸು ಕ್ರಿಸ್ತನ ಹೆಸರಿ
ನಲ್ಲಿ ನಿಮಗೆ ಆಜ್ಞಾಪಿಸುತ್ತೇವೆ. ನೀವು ನಮ್ಮನ್ನು
ಅನುಸರಿಸಿ ಹೇಗೆ ನಡೆಯಬೇಕೆಂದು ನೀವೇ ಬಲ್ಲಿರಿ;
ನಾವು ನಿಮ್ಮಲ್ಲಿ ಅಕ್ರಮವಾಗಿ ನಡೆಯಲಿಲ್ಲ;
ನಾವು ಹಣಕೊಡದೆ ಯಾರ ಬಳಿಯಲ್ಲಿಯೂ ಊಟ
ಮಾಡಲಿಲ್ಲ; ನಿಮ್ಮಲ್ಲಿ ಒಬ್ಬರಿಗೂ ಭಾರವಾಗಬಾರ
ದೆಂದು ಹಗಲಿರುಳು ಕಷ್ಟದಿಂದಲೂ ಪ್ರಯಾಸದಿಂದಲೂ
ದುಡಿದು ಜೀವನಮಾಡಿಕೊಂಡೆವು. ನಿಮ್ಮಿಂದ ಪೋ
ಷಣೆ ಹೊಂದುವದಕ್ಕೆ ನಮಗೆ ಹಕ್ಕಿಲ್ಲವೆಂದು ಹಾಗೆ
ಮಾಡಲಿಲ್ಲ, ನೀವು ನಮ್ಮನ್ನು ಅನುಸರಿಸುವದಕ್ಕಾಗಿ
ನಿಮಗೆ ಮಾದರಿಯಾಗಿರೋಣವೆಂದೇ ಮಾಡಿದೆವು.
ಇದಲ್ಲದೆ ನಾವು ನಿಮ್ಮ ಸಂಗಡ ಇದ್ದಾಗ—ಕೆಲಸ
ಮಾಡಲೊಲ್ಲದವನು ಊಟಮಾಡಬಾರದೆಂದು ನಿಮಗೆ
ಆಜ್ಞಾಪಿಸಿದೆವಷ್ಟೆ. ಆದರೆ ನಿಮ್ಮಲ್ಲಿ ಕೆಲವರು ಯಾವ
ಕೆಲಸವನ್ನೂ ಮಾಡದೆ ಇತರರ ಕೆಲಸದಲ್ಲಿ ಮಾತ್ರ
ತಲೆಹಾಕಿ ಅಕ್ರಮವಾಗಿ ನಡೆಯುತ್ತಾರೆಂದು ವರ್ತ
ಮಾನಕೇಳಿದ್ದೇವೆ. ಇಂಥವರು ತಮ್ಮ ಕೆಲಸವನ್ನು
ನೋಡುತ್ತಾ ತಾವೇ ಸಂಪಾದಿಸಿದ್ದನ್ನು ಊಟಮಾಡ
ಬೇಕೆಂದು ಕರ್ತನಾದ ಯೇಸುಕ್ರಿಸ್ತನಲ್ಲಿ ನಾವು ಆಜ್ಞಾ
ಪಿಸಿ ಪ್ರಬೋಧಿಸುತ್ತೇವೆ. ಸಹೋದರರೇ, ನೀವಾ
ದರೋ ಒಳ್ಳೇದನ್ನು ಮಾಡುವದರಲ್ಲಿ ಬೇಸರಗೊಳ್ಳ
ಬೇಡಿರಿ. ಈ ಪತ್ರಿಕೆಯ ಮೂಲಕವಾಗಿ ಹೇಳಿರುವ
ನಮ್ಮ ಮಾತಿಗೆ ಯಾವನಾದರೂ ಒಳಗಾಗದಿದ್ದರೆ ಅವ
ನನ್ನು ಗುರುತು ಇಟ್ಟುಕೊಂಡು ಅವನಿಗೆ ನಾಚಿಕೆಯಾ
ಗುವಂತೆ ಅವನ ಸಹವಾಸದಲ್ಲಿ ಸೇರಬೇಡಿರಿ. ಆದರೂ
ಅವನನ್ನು ವೈರಿಯೆಂದು ಎಣಿಸದೆ ಸಹೋದರನೆಂದು
ಎಣಿಸಿಕೊಂಡು ಬುದ್ಧಿಹೇಳಿರಿ.

### ಸಮಾಪ್ತಿವಾಕ್ಯಗಳು.

ಶಾಂತಿದಾಯಕನಾದ ಕರ್ತನು ತಾನೇ ಸದಾ ಕಾಲದಲ್ಲಿಯೂ ಸಕಲವಿಧದಲ್ಲಿಯೂ ನಿಮಗೆ ಶಾಂತಿಯನ್ನು ದಯಪಾಲಿಸಲಿ. ಕರ್ತನು ನಿಮ್ಮೆಲ್ಲರೊಂದಿಗೆ ಇರಲಿ.

ಪೌಲನೆಂಬ ನಾನು ಸ್ವಂತ ಕೈಯಿಂದ ವಂದನೆಯನ್ನು ಬರೆದಿದ್ದೇನೆ; ಎಲ್ಲಾ ಪತ್ರಿಕೆಗಳಲ್ಲಿಯೂ ಇದೇ ಗುರುತು; ಹೀಗೆಯೇ ನನ್ನ ಕೈಬರಹ.

ನಮ್ಮ ಕರ್ತನಾದ ಯೇಸು ಕ್ರಿಸ್ತನ ಕೃಪೆಯು ನಿಮ್ಮೆಲ್ಲರ ಸಂಗಡವಿರಲಿ.

---

1) ಅಥವಾ, ಕ್ರಿಸ್ತನನ್ನು ಎದುರುನೋಡುವ.

# THE FIRST EPISTLE OF SAINT PAUL TO
# TIMOTHY

## ಪೌಲನು ತಿಮೊಥೆಯನಿಗೆ ಬರೆದ ಮೊದಲನೆಯ ಪತ್ರಿಕೆ

### ಒಕ್ಕಣೆ.

ನಮ್ಮ ರಕ್ಷಕನಾದ ದೇವರಿಂದಲೂ ನಮ್ಮ ನಿರೀ
ಕ್ಷೆಗೆ ಆಧಾರನಾಗಿರುವ ಕ್ರಿಸ್ತ ಯೇಸುವಿನಿಂದಲೂ
ನೇಮಿಸಲ್ಪಟ್ಟ ಕ್ರಿಸ್ತ ಯೇಸುವಿನ ಅಪೊಸ್ತಲನಾದ
2 ಪೌಲನು ನಂಬಿಕೆಯ ವಿಷಯದಲ್ಲಿ ನಿಜಕುಮಾರ
ನಾಗಿರುವ ತಿಮೊಥೆಯನಿಗೆ ಬರೆಯುವದೇನಂದರೆ—
ತಂದೆಯಾದ ದೇವರಿಂದಲೂ ನಮ್ಮ ಕರ್ತನಾದ ಕ್ರಿಸ್ತ
ಯೇಸುವಿನಿಂದಲೂ ನಿನಗೆ ಕೃಪೆಯೂ ಕರುಣೆಯೂ
ಶಾಂತಿಯೂ ಆಗಲಿ.

ತಿಮೊಥೆಯನು ಎಫೆಸದಲ್ಲಿದ್ದುಕೊಂಡು ಸುಳ್ಳುಬೋಧಕರನ್ನು
ಎದುರಿಸಿ ಸ್ವಸ್ಥಬೋಧೆಯನ್ನು ಸ್ಥಾಪಿಸಬೇಕೆಂದು ಆಜ್ಞಾಪನೆ.

3 ನಾನು ಮಕೆದೋನ್ಯಕ್ಕೆ ಹೋಗುತ್ತಿದ್ದಾಗ ನೀನು
ಎಫೆಸದಲ್ಲೇ ಇದ್ದುಕೊಂಡು ಅಲ್ಲಿರುವ ಕೆಲವರಿಗೆ—
ನೀವು ಬೇರೆ ಉಪದೇಶವನ್ನು ಮಾಡಬಾರದೆಂತಲೂ
4 ಕಲ್ಪನಾಕಥೆಗಳಿಗೂ ಕೊನೆಮೊದಲಿಲ್ಲದ ವಂಶಾವಳಿ
ಗಳಿಗೂ ಲಕ್ಷ್ಯಕೊಡಬಾರದೆಂತಲೂ ಆಜ್ಞಾಪಿಸಬೇ
ಕೆಂಬದಾಗಿ ನಿನಗೆ ಖಂಡಿತವಾಗಿ ಹೇಳಿದ ಪ್ರಕಾರ
ಈಗಲೂ ಹೇಳುತ್ತೇನೆ. ಅಂಥ ಕಥೆಗಳೂ ವಂಶಾವಳಿ
ಗಳೂ ವಿವಾದಕ್ಕೆ ಆಸ್ಪದವಾಗಿವೆಯೇ ಹೊರತು
1)ದೇವರು ನಿರ್ವಹಿಸುವ ಕೆಲಸಕ್ಕೆ ಅನುಕೂಲವಾ
ಗಿಲ್ಲ; ಇದರಲ್ಲಿ ನಂಬಿಕೆಯೇ ಮುಖ್ಯವಾದದ್ದು.
5 ಶುದ್ಧಹೃದಯ ಒಳ್ಳೇಮನಸ್ಸಾಕ್ಷಿ ನಿಷ್ಕಪಟವಾದ
ನಂಬಿಕೆ ಎಂಬಿವುಗಳಿಂದ ಹುಟ್ಟಿದ ಪ್ರೀತಿಯೇ
6 ದೇವವಾಕ್ಯೋಪದೇಶದ ಗುರಿಯಾಗಿದೆ. ಕೆಲವರು ಈ
ಗುರಿ ತಪ್ಪಿ ವ್ಯರ್ಥವಾದ ವಿಚಾರಗಳಿಗೆ ತಿರುಗಿಕೊಂಡಿ
7 ದ್ದಾರೆ; ಅವರು ಧರ್ಮೋಪದೇಶಕರಾಗಿರಬೇಕೆಂದಿದ್ದ
ರೂ ತಾವು ಹೇಳುವದಾಗಲಿ ತಾವು ದೃಢವಾಗಿ ಮಾ
ತಾಡುವ ವಿಷಯವಾಗಲಿ ಇಂಥದೆಂದು ತಿಳಿಯದವರಾ
8 ಗಿದ್ದಾರೆ. ಧರ್ಮಶಾಸ್ತ್ರವು ಒಳ್ಳೇದೆಂದು ಬಲ್ಲೆವು;
9-10 ಆದರೆ ಅದನ್ನು ಅದರ ಉದ್ದೇಶಕ್ಕೆ ತಕ್ಕ ಹಾಗೆ
ಉಪಯೋಗಿಸಬೇಕು; ಅಂದರೆ ಅದು ಅಧರ್ಮಿಗಳು,
ಅವಿಧೇಯರು, ಭಕ್ತಿಹೀನರು, ಪಾಪಿಷ್ಠರು, ದೇವ
ಭಕ್ತಿಯಿಲ್ಲದವರು, ಪ್ರಾಪಂಚಿಕರು, ತಂದೆತಾಯಿಗಳ
ನ್ನು ಹೊಡೆಯುವವರು, ನರಹತ್ಯಮಾಡುವವರು,
ಜಾರರು, ಪುರುಷಗಾಮಿಗಳು, ನರಚೋರರು, ಸುಳ್ಳು
ಗಾರರು, ಅಬದ್ಧಪ್ರಮಾಣಿಕರು, ಸ್ವಸ್ಥಬೋಧನೆಗೆ
ಪ್ರತಿಕೂಲವಾಗಿ ಬೇರೆ ಏನಾದರೂ ಇದ್ದರೆ ಅದನ್ನು
ಮಾಡುವವರು, ಈ ಮೊದಲಾದ ಅನೀತಿವಂತರಿಗಾಗಿ
ನೇಮಕವಾಗಿದೆಯೇ ಹೊರತು ನೀತಿವಂತರಿಗೆ ನೇಮಕ
ವಾಗಿಲ್ಲವೆಂದು ತಿಳಿದು ಉಪಯೋಗಿಸಬೇಕು. ಈ 11
ಬೋಧೆ ಭಾಗ್ಯವಂತನಾದ ದೇವರ ಮಹಿಮೆಯನ್ನು
ಪ್ರದರ್ಶಿಸುವ ಸುವಾರ್ತೆಗೆ ಅನುಸಾರವಾಗಿದೆ.

ಈ ಸುವಾರ್ತೆಯ ಸೇವೆಯು ನನಗೆ ಕೊಡಲ್ಪ 12-13
ಟ್ಟಿತು. ನನಗೆ ಬಲವನ್ನು ದಯಪಾಲಿಸಿದವನು ನಮ್ಮ
ಕರ್ತನಾದ ಯೇಸು ಕ್ರಿಸ್ತನೇ. ಮೊದಲು ದೂಷಕನೂ
ಹಿಂಸಕನೂ ಬಲಾತ್ಕಾರಿಯೂ ಆಗಿದ್ದ ನನ್ನನ್ನು
ಆತನು ನಂಬಿಗಸ್ತನೆಂದು ಎಣಿಸಿ ತನ್ನ ಸೇವೆಗೆ
ನೇಮಿಸಿಕೊಂಡದ್ದಕ್ಕಾಗಿ ನಾನು ಆತನಿಗೆ ಸ್ತೋತ್ರ
ಸಲ್ಲಿಸುತ್ತೇನೆ. ನಾನು ಅವಿಶ್ವಾಸಿಯಾಗಿ ತಿಳಿಯದೆ
ಹಾಗೆ ಮಾಡಿದ್ದರಿಂದ ನನ್ನ ಮೇಲೆ ಕರುಣೆ
ಉಂಟಾಯಿತು; ನಮ್ಮ ಕರ್ತನ ಕೃಪೆಯು ಅತ್ಯ 14
ಧಿಕವಾಗಿದ್ದು ಕ್ರಿಸ್ತ ಯೇಸುವಿನಲ್ಲಿರುವ ನಂಬಿಕೆ
ಯನ್ನೂ ಪ್ರೀತಿಯನ್ನೂ ನನ್ನಲ್ಲಿ ಉಂಟುಮಾಡಿತು.
ಕ್ರಿಸ್ತ ಯೇಸು ಪಾಪಿಗಳನ್ನು ರಕ್ಷಿಸುವದಕ್ಕೋಸ್ಕರ 15
ಈ ಲೋಕಕ್ಕೆ ಬಂದನು ಎಂಬ ವಾಕ್ಯವು ನಂಬತಕ್ಕ
ದ್ದಾಗಿಯೂ ಸರ್ವಾಂಗೀಕಾರಕ್ಕೆ ಯೋಗ್ಯವಾದದ್ದಾಗಿ
ಯೂ ಅದೆ; ಆ ಪಾಪಿಗಳಲ್ಲಿ ನಾನೇ ಮುಖ್ಯನು.
ಆದರೆ ಇನ್ನು ಮುಂದೆ ನಿತ್ಯಜೀವಕ್ಕಾಗಿ ತನ್ನ ಮೇಲೆ 16
ನಂಬಿಕೆಯಿಡುವವರಿಗೆ ತನ್ನ ದೀರ್ಘಶಾಂತಿಯ ದೃ
ಷ್ಟಾಂತವಿರಬೇಕೆಂದು ಕ್ರಿಸ್ತ ಯೇಸು ಮುಖ್ಯಪಾಪಿ
ಯಾದ ನನ್ನನ್ನು ಕರುಣಿಸಿ ನನ್ನಲ್ಲಿ ತನ್ನ ಪೂರ್ಣ
ದೀರ್ಘಶಾಂತಿಯನ್ನು ತೋರ್ಪಡಿಸಿದನು. ಸರ್ವ 17
ಯುಗಗಳ ಅರಸನೂ ನಿರ್ಲಯನೂ ಅದೃಶ್ಯನೂ
ಆಗಿರುವ ಏಕದೇವರಿಗೆ ಯುಗಯುಗಾಂತರಗಳಲ್ಲಿ
ಯೂ ಮಾನಪ್ರಭಾವಗಳಿರಲಿ. ಆಮೆನ್.

ಮಗನಾದ ತಿಮೊಥೆಯನೇ, 2)ನಿನ್ನ ವಿಷಯದಲ್ಲಿ 18
ಮುಂಚೆ ಉಂಟಾದ ಪ್ರವಾದನೆಗಳನ್ನು ನಾನು ನೆನಸಿ—

---

1) ಅಥವಾ, ದೇವನಂಬಿಕೆಯಲ್ಲಿ ಆಧಾರಗೊಂಡಿರುವ ದೇವರ ಸೇವೆಗೆ ಅನುಕೂಲವಾಗಿಲ್ಲ.

2) ಅಥವಾ, ನಿನ್ನ ವಿಷಯದಲ್ಲಿ ಮುಂಚೆ ಉಂಟಾದ ಪ್ರವಾದನೆಗಳಿಂದ ನೀನು ಧೈರ್ಯಗೊಂಡು ಈ ಒಳ್ಳೇ ಯುದ್ಧವನ್ನು ನಡಿಸಬೇಕೆಂದು ನಾನು ಆ ಪ್ರವಾದನೆಗಳನ್ನು ನೆನಸಿ ಈ ಆಜ್ಞಾಪನೆಯನ್ನು ನಿನಗೆ ಒಪ್ಪಿಸಿಕೊಟ್ಟಿದ್ದೇನೆ.

ನೀನು ಅವುಗಳಿಂದ ಧೈರ್ಯಗೊಂಡು ಕ್ರಿಸ್ತರ ದಿವ್ಯ
ಯುದ್ಧವನ್ನು ನಡಿಸಬೇಕೆಂದು ನಿನಗೆ ಆಜ್ಞಾಪನೆಮಾಡು
19 ತ್ತೇನೆ. ನಂಬಿಕೆಯನ್ನೂ ಒಳ್ಳೇ ಮನಸ್ಸಾಕ್ಷಿಯನ್ನೂ
ಬಿಡದೆ ಹಿಡುಕೋ. ಕೆಲವರು ಮನಸ್ಸಿನ ಒಳ್ಳೇ
ಸಾಕ್ಷಿಯನ್ನು ತಳ್ಳಿಬಿಟ್ಟು ಕ್ರಿಸ್ತನಂಬಿಕೆಯ ವಿಷಯ
ದಲ್ಲಿ ಹಡಗು ಒಡೆದು ನಷ್ಟಪಟ್ಟವರಂತೆ ಇದ್ದಾರೆ;
ಹುಮೆನಾಯನೂ ಅಲೆಕ್ಸಾಂದರನೂ ಇಂಥವರೇ;
20 ಇವರು ದೇವದೂಷಣೆಮಾಡಬಾರದೆಂಬದನ್ನು ಕಲಿತು
ಕೊಳ್ಳುವಂತೆ ಇವರನ್ನು ಸೈತಾನನಿಗೆ ಒಪ್ಪಿಸಿ
ಕೊಟ್ಟೆನು.

ಸಭೆಯವರು ಕೂಡುವಾಗ ಸರ್ವಜನಗಳಿಗಾಗಿ ಪ್ರಾರ್ಥಿಸಿ
ಸ್ತ್ರೀಪುರುಷರು ಭಕ್ತಿಪೂರ್ವಕವಾಗಿ ದೇವಾರಾಧನೆಯನ್ನು
ನಡಿಸಬೇಕು.

**2** ಎಲ್ಲಾದಕ್ಕಿಂತ ಮೊದಲು ಮನುಷ್ಯರೆಲ್ಲರಿಗೋಸ್ಕರ
ದೇವರಿಗೆ ವಿಜ್ಞಾಪನೆಗಳನ್ನೂ ಪ್ರಾರ್ಥನೆಗಳನ್ನೂ ಮನವೆ
ಗಳನ್ನೂ ಕೃತಜ್ಞತಾಸ್ತುತಿಗಳನ್ನೂ ಮಾಡಬೇಕೆಂದು
2 ಬೋಧಿಸುತ್ತೇನೆ. ನಮಗೆ ಸುಖಸಮಾಧಾನಗಳು
ಉಂಟಾಗಿ ನಾವು ಪೂರ್ಣಭಕ್ತಿಯಿಂದಲೂ ಗೌರವದಿಂದ
ಲೂ ಕಾಲಕ್ಷೇಪಮಾಡುವಂತೆ ಅರಸುಗಳಿಗಾಗಿಯೂ
ಎಲ್ಲಾ ಅಧಿಕಾರಿಗಳಿಗಾಗಿಯೂ ವಿಜ್ಞಾಪನೆಗಳನ್ನು
3 ಮಾಡಬೇಕು. ಹಾಗೆ ಮಾಡುವದು ನಮ್ಮ ರಕ್ಷಕ
ನಾದ ದೇವರ ಸನ್ನಿಧಿಯಲ್ಲಿ ಮೆಚ್ಚಿಕೆಯಾಗಿಯೂ
4 ಯೋಗ್ಯವಾಗಿಯೂ ಅದೆ. ಎಲ್ಲಾ ಮನುಷ್ಯರು
ರಕ್ಷಣೆಯನ್ನು ಹೊಂದಿ ಸತ್ಯದ ಜ್ಞಾನಕ್ಕೆ ಸೇರಬೇಕೆಂಬ
5 ದು ಆತನ ಚಿತ್ತವಾಗಿದೆ. ಏಕಂದರೆ ದೇವರು
ಒಬ್ಬನೇ; ದೇವರಿಗೂ ಮನುಷ್ಯರಿಗೂ ಮಧ್ಯಸ್ಥನು
ಒಬ್ಬನೇ; ಆತನು ಮನುಷ್ಯನಾಗಿರುವ ಕ್ರಿಸ್ತ ಯೇಸು
6 ವೇ; ಆತನು ಎಲ್ಲರ ವಿಮೋಚನಾರ್ಥವಾಗಿ ತನ್ನನ್ನು
ಒಪ್ಪಿಸಿಬಿಟ್ಟನು. ಇದೇ ತಕ್ಕ ಸಮಯಗಳಲ್ಲಿ ಹೇಳ
7 ಬೇಕಾದ ಸಾಕ್ಷಿಯು. ಆ ಸಾಕ್ಷಿಯನ್ನು ಪ್ರಸಿದ್ಧಿಪಡಿ
ಸುವದಕ್ಕಾಗಿಯೇ ನಾನು ಸಾರುವವನಾಗಿಯೂ
ಅಪೊಸ್ತಲನಾಗಿಯೂ ನಂಬಿಕೆಯಿಂದಲೂ ಸತ್ಯದಿಂದಲೂ
ಅನ್ಯಜನರಿಗೆ ಬೋಧಿಸುವವನಾಗಿಯೂ ನೇಮಿಸಲ್ಪ
ಟ್ಟೆನು. ನಾನು ಇಂಥವನೆಂಬದು ಸುಳ್ಳಲ್ಲ, ಸತ್ಯವೇ.
8 ಹೀಗಿರಲಾಗಿ ಪುರುಷರು ಎಲ್ಲಾ ಸ್ಥಳಗಳಲ್ಲಿ
ಕೋಪವೂ ವಾಗ್ವಾದವೂ ಇಲ್ಲದವರಾಗಿ ಭಕ್ತಿಪೂರ್ವಕ
ವಾಗಿಯೇ ಕೈಗಳನ್ನೆತ್ತಿ ಪ್ರಾರ್ಥಿಸಬೇಕೆಂದು ಅಪೇಕ್ಷಿ
9 ಸುತ್ತೇನೆ. ಹಾಗೆಯೇ ಸ್ತ್ರೀಯರು ಮಾನಸ್ಥೆಯ
ರಾಗಿಯೂ ಡಂಭವಿಲ್ಲದವರಾಗಿಯೂ ಇದ್ದು ಮರ್ಯಾ
ದೆಗೆ ತಕ್ಕ ಉಡುಪನ್ನುಟ್ಟುಕೊಳ್ಳಬೇಕೆಂದು ಅಪೇಕ್ಷಿ
10 ಸುತ್ತೇನೆ. ಅವರು ಜಡೆ ಚಿನ್ನ ಮುತ್ತು ಬೆಲೆಯುಳ್ಳ
ವಸ್ತ್ರ ಮುಂತಾದವುಗಳಿಂದ ತಮ್ಮನ್ನು ಅಲಂಕರಿಸಿ
ಕೊಳ್ಳದೆ ದೇವಭಕ್ತೆಯರೆನಿಸಿಕೊಳ್ಳುವ ಸ್ತ್ರೀಯರಿಗೆ
ಯುಕ್ತವಾಗಿರುವ ಪ್ರಕಾರ ಸತ್ಕ್ರಿಯೆಗಳಿಂದಲೇ ಅಲಂಕ
11 ರಿಸಿಕೊಳ್ಳಬೇಕು. ಸ್ತ್ರೀಯರು ಮೌನವಾಗಿದ್ದು
ಪೂರ್ಣವಿಧೇಯರಾಗಿ ಉಪದೇಶವನ್ನು ಕೇಳಬೇಕು.
ಉಪದೇಶಮಾಡುವದಕ್ಕಾಗಲಿ ಪುರುಷರ ಮೇಲೆ ಅಧಿ
ಕಾರ ನಡಿಸುವದಕ್ಕಾಗಲಿ ಸ್ತ್ರೀಯರಿಗೆ ನಾನು ಅಪ್ಪಣೆ
ಕೊಡುವದಿಲ್ಲ; ಅವರು ಮೌನವಾಗಿರಬೇಕು. ಮೊದ
ಲು ನಿರ್ಮಿತನಾದವನು ಆದಾಮನಲ್ಲವೇ, ಆ
ಮೇಲೆ ಹವ್ವಳು; ಇದಲ್ಲದೆ ಆದಾಮನು ವಂಚನೆಗೆ
ಒಳಬೀಳಲಿಲ್ಲ, ಸ್ತ್ರೀಯು ವಂಚನೆಗೆ ಒಳಬಿದ್ದು
ಅಪರಾಧಿಯಾದಳು. ಆದರೂ ಸ್ತ್ರೀಯರು ಮಾನಸ್ಥೆ
ಯರಾಗಿ ನಂಬಿಕೆಯಲ್ಲಿಯೂ ಪ್ರೀತಿಯಲ್ಲಿಯೂ ಪರಿ
ಶುದ್ಧತೆಯಲ್ಲಿಯೂ ನೆಲೆಗೊಂಡಿದ್ದರೆ ಮಕ್ಕಳನ್ನು
ಹೆರುವದರಲ್ಲಿ ರಕ್ಷಣೆಹೊಂದುವರು.

ಸಭಾಧ್ಯಕ್ಷರೂ ಸಭಾಸೇವಕರೂ ಯೋಗ್ಯರಾಗಿರಬೇಕು.

ಸಭಾಧ್ಯಕ್ಷನ ಉದ್ಯೋಗವನ್ನು ಪಡಕೊಳ್ಳಬೇ
ಕೆಂದಿರುವವನು ಒಳ್ಳೇ ಕೆಲಸವನ್ನು ಅಪೇಕ್ಷಿಸುವವ
ನಾಗಿದ್ದಾನೆಂಬ ಮಾತು ನಂಬತಕ್ಕದ್ದಾಗಿದೆ. ಸಭಾ
ಧ್ಯಕ್ಷನು ದೋಷಾರೋಪಣೆಯಿಲ್ಲದವನೂ ಏಕಪತ್ನಿ
ಯುಳ್ಳವನೂ ಮದ್ಯಾಸಕ್ತಿಯಿಲ್ಲದವನೂ ಜಿತೇಂದ್ರಿ
ಯನೂ ಮಾನಸ್ಥನೂ ಅತಿಥಿಸತ್ಕಾರಮಾಡುವವನೂ
ಬೋಧಿಸುವದರಲ್ಲಿ ಪ್ರವೀಣನೂ ಆಗಿರಬೇಕು.
ಅವನು ಕುಡಿದು ಜಗಳವಾಡುವವನೂ ಹೊಡೆದಾಡು
ವವನೂ ಆಗಿರಬಾರದು; ಸಾತ್ವಿಕನೂ ಕುತರ್ಕ
ಮಾಡದವನೂ ದ್ರವ್ಯಾಶೆಯಿಲ್ಲದವನೂ ಆಗಿರ
ಬೇಕು. ಪೂರ್ಣಗೌರವದಿಂದ ತನ್ನ ಮಕ್ಕಳನ್ನು ಅಧೀ
ನದಲ್ಲಿಟ್ಟುಕೊಂಡು ಸ್ವಂತ ಮನೆಯವರನ್ನು ಚೆನ್ನಾಗಿ
ಆಳುವವನಾಗಿರಬೇಕು. ಸ್ವಂತ ಮನೆಯವರನ್ನು ಆಳು
ವದಕ್ಕೆ ತಿಳಿಯದವನು ದೇವರ ಸಭೆಯನ್ನು ಹೇಗೆ
ಪರಾಮರಿಸುವನು ? ಅವನು ಹೊಸದಾಗಿ ಸಭೆಯಲ್ಲಿ
ಸೇರಿದವನಾಗಿರಬಾರದು; ಅಂಥವನಾದರೆ ಉಬ್ಬಿಕೊಂ
ಡು ಸೈತಾನನಿಗೆ ಪ್ರಾಪ್ತವಾದ ಶಿಕ್ಷಾವಿಧಿಗೆ ಒಳಗಾ
ದಾನು. ಇದಲ್ಲದೆ ಅವನು ಹೊರಗಣವರಿಂದ
ಒಳ್ಳೆಯವನೆನಿಸಿಕೊಂಡಿರಬೇಕು; ಇಲ್ಲದಿದ್ದರೆ ನಿಂದೆಗೆ
ಗುರಿಯಾಗುವನು, ಮತ್ತು ಸೈತಾನನ ಉರ್ಲ
ನೊಳಗೆ ಸಿಕ್ಕಿಬಿದ್ದಾನು.
ಅದೇ ರೀತಿಯಾಗಿ ಸಭಾಸೇವಕರು ಗೌರವ
ವುಳ್ಳವರಾಗಿರಬೇಕು. ಅವರು ಎರಡು ಮಾತಿನವರೂ
ಮದ್ಯನಿರತರೂ ನೀಚಲಾಭವನ್ನು ಅಪೇಕ್ಷಿಸು
ವವರೂ ಆಗಿರದೆ ನಂಬಿದವರಿಗೆ ಪ್ರಕಟವಾಗಿರುವ
ಸತ್ಯಾರ್ಥವನ್ನು ಶುದ್ಧಮನಸ್ಸಾಕ್ಷಿಯಿಂದ ಕೈಕೊ
ಳ್ಳುವವರಾಗಿರಬೇಕು. ಇದಲ್ಲದೆ ಅವರು ಮೊದಲು
ಪರೀಕ್ಷಿಸಲ್ಪಡಬೇಕು; ತರುವಾಯ ಅವರ ಮೇಲೆ ಯಾ
ರೂ ತಪ್ಪುಹೊರಿಸದಿದ್ದರೆ ಸಭಾಸೇವಕರ ಉದ್ಯೋಗ
ವನ್ನು ನಡಿಸಲಿ. ಹಾಗೆಯೇ [1]ಸಭಾಸೇವಕಿಯರಾದ
ಸ್ತ್ರೀಯರೂ ಗೌರವವುಳ್ಳವರಾಗಿರಬೇಕು; ಚಾಡಿಹೇ
ಳುವವರಾಗಿರದೆ ಮದ್ಯಾಸಕ್ತಿಯಿಲ್ಲದವರಾಗಿಯೂ
ಎಲ್ಲಾ ವಿಷಯಗಳಲ್ಲಿ ನಂಬಿಗಸ್ತರಾಗಿಯೂ ಇರಬೇಕು.
ಸಭಾಸೇವಕರು ಏಕಪತ್ನಿಯುಳ್ಳವರೂ ತಮ್ಮ ಮ
ಕ್ಕಳನ್ನೂ ಮನೆಯವರನ್ನೂ ಚೆನ್ನಾಗಿ ಆಳುವವರೂ

1) ಅಥವಾ, ಅವರ ಹೆಂಡತಿಯರು.

13 ಆಗಿರಬೇಕು. ಸಭಾಸೇವಕರಾಗಿ ಚೆನ್ನಾಗಿ ಕೆಲಸ
ಮಾಡಿದವರು ತಮಗೆ ಒಳ್ಳೇ ಪದವಿಯನ್ನೂ ಕ್ರಿಸ್ತ
ಯೇಸುವಿನಲ್ಲಿರುವ ನಂಬಿಕೆಯ ಸಂಬಂಧವಾಗಿ ಬಹು
ಧೈರ್ಯವನ್ನೂ ಸಂಪಾದಿಸಿಕೊಳ್ಳುತ್ತಾರೆ.
14 ಬೇಗನೆ ನಿನ್ನ ಬಳಿಗೆ ಬರುವೆನೆಂದು ನನಗೆ ನಿರೀಕ್ಷೆ
15 ಯುಂಟು; ಆದರೆ ಒಂದು ವೇಳೆ ನಾನು ತಡಮಾಡಿ
ದರೂ ದೇವರ ಮನೆಯಲ್ಲಿ ಅಂದರೆ ಜೀವಸ್ವರೂಪ
ನಾದ ದೇವರ ಸಭೆಯಲ್ಲಿ ನಡೆದುಕೊಳ್ಳಬೇಕಾದ
ರೀತಿಯು ನಿನಗೆ ಗೊತ್ತಾಗಬೇಕೆಂದು ಈ ಸಂಗತಿಗಳ
ನ್ನು ಬರೆದಿದ್ದೇನೆ. 1)ಆ ಸಭೆಯು ಸತ್ಯಕ್ಕೆ ಸ್ತಂಭವೂ
ಆಧಾರವೂ ಆಗಿದೆ.

ಸದ್ಧರ್ಮವನ್ನು ಕೆಡಿಸುವವರು ಬರುತ್ತಾರಾದದರಿಂದ
ತಿಮೊಥೆಯನು ಎಚ್ಚರಿಕೆಯಾಗಿದ್ದು ಸದ್ಭಕ್ತನಾಗುವದಕ್ಕಾಗಿ
ಬಹು ಪ್ರಯಾಸಪಡಬೇಕೆಂದು ಬೋಧೆ.

16 ದೇವಭಕ್ತಿಗೆ ಆಧಾರವಾಗಿರುವ ಸತ್ಯಾರ್ಥವು ಗಂಭೀ
ರವಾದದ್ದೆಂಬದಕ್ಕೆ ನಾವೆಲ್ಲರೂ ಒಪ್ಪಿಕೊಳ್ಳುತ್ತೇವೆ;
ಅದೇನಂದರೆ—

ಕ್ರಿಸ್ತನು ಶರೀರಧಾರಿಯಾಗಿ ಪ್ರತ್ಯಕ್ಷನಾದನು;
ಆತ್ಮಸಂಬಂಧವಾಗಿ 2)ಕ್ರಿಸ್ತನೇ ಎಂದು ಸ್ಥಾಪಿ
ಸಲ್ಪಟ್ಟನು;
3)ದೇವದೂತರಿಗೆ ಕಾಣಿಸಿಕೊಂಡನು;
ಅನ್ಯಜನರಲ್ಲಿ ಪ್ರಸಿದ್ಧಿಮಾಡಲ್ಪಟ್ಟನು;
ಲೋಕದಲ್ಲಿ ನಂಬಲ್ಪಟ್ಟನು;
ಪ್ರಭಾವಸ್ಥಾನದಲ್ಲಿ ಸೇರಿಸಲ್ಪಟ್ಟನು.

4 ಆದರೂ ಮುಂದಣ ದಿನಗಳಲ್ಲಿ ಕೆಲವರು
ವಂಚಿಸುವ ಆತ್ಮಗಳ ನುಡಿಗಳಿಗೂ ದೆವ್ವಗಳ ಬೋ
ಧನೆಗಳಿಗೂ ಲಕ್ಷ್ಯಕೊಟ್ಟು ಕ್ರಿಸ್ತನಂಬಿಕೆಯಿಂದ ಭ್ರಷ್ಟ
ರಾಗುವರೆಂದು ದೇವರಾತ್ಮನು ಸ್ಪಷ್ಟವಾಗಿ ಹೇಳು
2 ತ್ತಾನೆ. ಸುಳ್ಳುಬೋಧಕರು ಬಂದು ಸ್ವಂತ ಮನಸ್ಸಿ
ನಲ್ಲಿ ಅಪರಾಧಿಗಳೆಂಬ ಬರೆಯುಳ್ಳವರಾದರೂ ತಾವು
3 ನೀತಿವಂತರೆಂದು ತೋರ್ಪಡಿಸಿಕೊಂಡು ಅವರನ್ನು ಮ
ರುಳುಗೊಳಿಸಿ ಮದುವೆಯಾಗಬಾರದೆಂತಲೂ ಇಂ
ಥಿಂಥ ಆಹಾರವನ್ನು ತಿನ್ನಬಾರದೆಂತಲೂ ಹೇಳುವರು.
ಆದರೆ ಯಾರು ನಂಬುವವರಾಗಿದ್ದು ಸತ್ಯವನ್ನು ಗ್ರಹಿ
ಸಿದ್ದಾರೋ ಅವರು ಕೃತಜ್ಞತಾಸ್ತುತಿಮಾಡಿ ತಿನ್ನು
ವದಕ್ಕೋಸ್ಕರ ದೇವರು ಸಕಲವಿಧವಾದ ಆಹಾರ
4 ವನ್ನೂ ಉಂಟುಮಾಡಿದನು. ಆತನು ಉಂಟುಮಾಡಿ
ದ್ದೆಲ್ಲವೂ ಒಳ್ಳೇದೇ; ದೇವರ ಸ್ತೋತ್ರಮಾಡಿ ತೆಗೆದು
ಕೊಳ್ಳುವ ಪಕ್ಷಕ್ಕೆ ಯಾವದನ್ನೂ ನಿಷಿದ್ಧವೆಂದು
5 ಹೇಳತಕ್ಕದ್ದಲ್ಲ; ದೇವರ ವಾಕ್ಯವನ್ನು ಹೇಳಿ ಪ್ರಾರ್ಥಿ
ಸುವದರಿಂದ ಅದು ಪವಿತ್ರವಾಗುತ್ತದಲ್ಲಾ.
6 ಈ ಸಂಗತಿಗಳನ್ನು ಸಹೋದರರಿಗೆ ತಿಳಿಸಿದರೆ
ನೀನು ಅನುಸರಿಸಿರುವ ಕ್ರಿಸ್ತ ನಂಬಿಕೆಯ ಮತ್ತು
ಸುಬೋಧನೆಯ ವಾಕ್ಯಗಳಲ್ಲಿ ಅಭ್ಯಾಸಹೊಂದುವವ
ನಾಗಿ ಕ್ರಿಸ್ತ ಯೇಸುವಿನ ಒಳ್ಳೇ ಸೇವಕನಾಗಿರುವಿ.
ಅಜ್ಜೀಕಥೆಗಳಂತಿರುವ ಕೇವಲ ಪ್ರಾಪಂಚಿಕವಾದ ಆ 7
ಕಥೆಗಳನ್ನು ತಳ್ಳಿಬಿಟ್ಟು ನೀನು ದೇವಭಕ್ತಿಯ ವಿಷಯ
ದಲ್ಲಿ ಸಾಧನೆಮಾಡಿಕೋ. 4)ದೇಹಸಾಧನೆಯು 8
ಸ್ವಲ್ಪಮಟ್ಟಿಗೆ ಪ್ರಯೋಜನವಾಗಿದೆ, ಭಕ್ತಿಯಾದ
ರೋ ಎಲ್ಲಾ ವಿಧದಲ್ಲಿ ಪ್ರಯೋಜನವಾದದ್ದು; ಅ
ದಕ್ಕೆ ಇಹಪರಗಳಲ್ಲಿಯೂ ಜೀವವಾಗ್ದಾನ ಉಂಟು.
ಈ ವಾಕ್ಯವು ನಂಬತಕ್ಕದ್ದಾಗಿಯೂ ಸರ್ವಾಂಗೀ 9
ಕಾರಕ್ಕೆ ಯೋಗ್ಯವಾದದ್ದಾಗಿಯೂ ಅದೆ. ಇದಕ್ಕಾಗಿ 10
ನಾವು ಕಷ್ಟಪಡುತ್ತೇವೆ, ಹೋರಾಡುತ್ತೇವೆ, ಯಾಕಂ
ದರೆ ಎಲ್ಲಾ ಮನುಷ್ಯರಿಗೂ, ವಿಶೇಷವಾಗಿ ನಂಬುವ
ವರಿಗೆ, ರಕ್ಷಕನಾಗಿರುವ ಜೀವವುಳ್ಳ ದೇವರ ಮೇಲೆ
ನಾವು ನಿರೀಕ್ಷೆಯನ್ನಿಟ್ಟುಕೊಂಡಿದ್ದೇವೆ.
ಈ ಸಂಗತಿಗಳನ್ನು ಆಜ್ಞಾಪಿಸಬೇಕು ಮತ್ತು 11
ಬೋಧಿಸಬೇಕು. ಯೌವನಸ್ಥನೆಂದು ನಿನ್ನನ್ನು 12
ಅಸಡ್ಡೆಮಾಡುವದಕ್ಕೆ ಯಾರಿಗೂ ಅವಕಾಶಕೊಡದೆ
ನಂಬುವವರಿಗೆ ನಡೆ ನುಡಿ ಪ್ರೀತಿ ನಂಬಿಕೆ ಶುದ್ಧತ್ವ
ಇವುಗಳ ವಿಷಯದಲ್ಲಿ ನೀನೇ ಮಾದರಿಯಾಗಿರು.
ನಾನು ಬರುವ ತನಕ ವೇದಪಾರಾಯಣವನ್ನೂ ಪ್ರಸಂಗ 13
ವನ್ನೂ ಉಪದೇಶವನ್ನೂ ಮಾಡುವದರಲ್ಲಿ ಆಸಕ್ತ
ನಾಗಿರು. ನಿನ್ನಲ್ಲಿರುವ ವರವನ್ನು ಅಲಕ್ಷ್ಯಮಾಡ 14
ಬೇಡ; ಸಭೆಯ ಹಿರಿಯರು ಪ್ರವಾದನೆಯ ಸಹಿ
ತವಾಗಿ ನಿನ್ನ ಮೇಲೆ ಹಸ್ತಗಳನ್ನಿಟ್ಟಾಗ ಅದು ನಿನಗೆ
ಕೊಡಲ್ಪಟ್ಟಿತಲ್ಲಾ. ಈ ಕಾರ್ಯಗಳನ್ನು ಸಾಧಿಸಿ 15
ಕೊಳ್ಳುವದರಲ್ಲಿ ಆಸಕ್ತನಾಗಿರು. ಇದರಿಂದ ನಿನ್ನ ಅಭಿ
ವೃದ್ಧಿಯು ಎಲ್ಲರಿಗೂ ಪ್ರಸಿದ್ಧವಾಗುವದು. ನಿನ್ನ 16
ವಿಷಯದಲ್ಲಿಯೂ ನಿನ್ನ ಉಪದೇಶದ ವಿಷಯದಲ್ಲಿ
ಯೂ ಎಚ್ಚರಿಕೆಯಾಗಿರು. ನೀನು ಈ ಕಾರ್ಯಗಳಲ್ಲಿ
ನಿರತನಾಗಿರು; ಹೀಗಿರುವದರಿಂದ ನಿನ್ನನ್ನೂ ನಿನ್ನ
ಉಪದೇಶ ಕೇಳುವವರನ್ನೂ ರಕ್ಷಿಸುವಿ.

ತಿಮೊಥೆಯನು ಸಭೆಯವರೊಳಗೆ ಆಯಾ ತರದವರ
ವಿಷಯದಲ್ಲಿ ನಡೆಯಬೇಕಾದ ರೀತಿ; ವಿಧವೆಯರ
ಸಂಬಂಧವಾದ ಕ್ರಮಗಳು.

ವೃದ್ಧನನ್ನು ಗದರಿಸದೆ ತಂದೆಯೆಂದು ಭಾವಿಸಿ 5
ಬುದ್ಧಿಹೇಳು. ಯೌವನಸ್ಥರನ್ನು ಅಣ್ಣತಮ್ಮಂದಿರೆಂದೂ
ವೃದ್ಧಸ್ತ್ರೀಯರನ್ನು ತಾಯಿಗಳೆಂದೂ ಯೌವನಸ್ತ್ರೀಯ 2
ರನ್ನು ಪೂರ್ಣಶುದ್ಧಭಾವದಿಂದ ಅಕ್ಕತಂಗಿಯರೆಂದೂ
ಎಣಿಸಿ ಅವರವರಿಗೆ ಬುದ್ಧಿಹೇಳು.
ದಿಕ್ಕಿಲ್ಲದ ವಿಧವೆಯರನ್ನು ಸಂರಕ್ಷಿಸು. ಆದರೆ 3-4
ಒಬ್ಬ ವಿಧವೆಗೆ ಮಕ್ಕಳಾಗಲಿ ಮೊಮ್ಮಕ್ಕಳಾಗಲಿ ಇದ್ದ
ರೆ ಅವರೇ ಮೊದಲು ತಮ್ಮ ಮನೆಯವರಿಗೆ ಭಕ್ತಿ
ತೋರಿಸುವದಕ್ಕೂ ತಂದೆತಾಯಿಗಳಿಗೆ ಪ್ರತ್ಯುಪಕಾರ
ಮಾಡುವದಕ್ಕೂ ಕಲಿತುಕೊಳ್ಳಲಿ; ಇದು ದೇವರ
ದೃಷ್ಟಿಯಲ್ಲಿ ಮೆಚ್ಚಿಕೆಯಾದದ್ದು. ದಿಕ್ಕಿಲ್ಲದೆ ಒಬ್ಬೊಂ 5
ಟಿಗಳಾಗಿರುವ ವಿಧವೆಯು ದೇವರ ಮೇಲೆ ನಿರೀಕ್ಷೆಯ
ನ್ನಿಟ್ಟು ಹಗಲಿರುಳು ವಿಜ್ಞಾಪನೆಗಳಲ್ಲಿಯೂ ಪ್ರಾ

1) ಅಥವಾ, ಆ ಸಭೆಯಲ್ಲಿ ನೀನು ಸತ್ಯಕ್ಕೆ ಸ್ತಂಭವೂ, ಆಧಾರವೂ. 2) ಅಥವಾ, ನೀತಿವಂತನೆಂದು. 3) ಅಥವಾ, ದೂತರಿಗೆ.
4) ಅಥವಾ, ದೇಹದಂಡನೆ.

6 ರ್ಥನೆಗಳಲ್ಲಿಯೂ ನೆಲೆಗೊಂಡಿರುವಳು. ಆದರೆ ಭೋಗಿ
ಯಾಗಿರುವ ವಿಧವೆಯು ಬದುಕಿರುವಾಗಲೂ ಸತ್ತ
7 ವಳೇ. ವಿಧವೆಯರು ನಿಂದೆಗೆ ಗುರಿಯಾಗದಂತೆ ಈ
8 ಆಜ್ಞೆಗಳನ್ನು ಮಾಡು. ಯಾವನಾದರೂ ಸ್ವಂತ ಜನ
ರನ್ನು ವಿಶೇಷವಾಗಿ ತನ್ನ ಮನೆಯವರನ್ನು ಸಂರಕ್ಷಿ
ಸದೆಹೋದರೆ ಅವನು ಕ್ರಿಸ್ತನಂಬಿಕೆಯನ್ನು ತಿರಸ್ಕರಿ
ಸಿದವನೂ ನಂಬದವನಿಗಿಂತ ಕಡೆಯಾದವನೂ ಆಗಿ
9 ದ್ದಾನೆ. ವಯಸ್ಸಿನಲ್ಲಿ ಅರುವತ್ತಕ್ಕೆ ಕಡಿಮೆಯಿಲ್ಲದ
ವಿಧವೆಯನ್ನು ವಿಧವೆಯರ ಪಟ್ಟಿಯಲ್ಲಿ ಸೇರಿಸಬಹು
ದು; ಅಂಥವಳಾದರೂ ಒಬ್ಬ ಗಂಡನಿಗೆ ಮಾತ್ರ ಹೆಂಡ
10 ತಿಯಾಗಿದ್ದವಳೂ ಸತ್ಕ್ರಿಯೆಗಳನ್ನು ಮಾಡುವವಳೆಂದು
ಹೆಸರುಗೊಂಡವಳೂ ಆಗಿರಬೇಕು; ಅಂದರೆ ಮಕ್ಕಳ
ನ್ನು ಸಾಕಿದವಳಾಗಲಿ ಅತಿಥಿಸತ್ಕಾರವನ್ನು ಮಾಡಿದ
ವಳಾಗಲಿ 1)ದೇವಜನರಿಗೆ ಉಪಚಾರಮಾಡಿದವಳಾ
ಗಲಿ ಸಂಕಟದಲ್ಲಿ ಬಿದ್ದವರಿಗೆ ಸಹಾಯಮಾಡಿದವಳಾ
ಗಲಿ ಎಲ್ಲಾ ಸತ್ಕಾರ್ಯಗಳಲ್ಲಿ ಆಸಕ್ತಿಯುಳ್ಳವಳಾ
11 ಗಲಿ ಆಗಿರಬೇಕು. ಪ್ರಾಯದ ವಿಧವೆಯರನ್ನು ಪಟ್ಟಿ
ಯಲ್ಲಿ ಸೇರಿಸಬೇಡ; ಅವರು ಮದಿಸಿ ಕ್ರಿಸ್ತನಿಗೆ ಒಳ
ಗಾಗಲೊಲ್ಲದೆ ಮದುವೆಮಾಡಿಕೊಳ್ಳಬೇಕೆಂದು ಇಷ್ಟ
12 ಪಟ್ಟಾರು. ಅಂಥವರು ತಾವು ಮೊದಲು ಕೊಟ್ಟ ಭರವ
13 ಸಕ್ಕೆ ತಪ್ಪಿದರೆಂಬ ಅವಮಾನಕ್ಕೊಳಗಾಗಿದ್ದಾರೆ. ಇದ
ಲ್ಲದೆ ಅವರು ಮನೆಮನೆಗೆ ತಿರುಗಾಡುತ್ತಾ ಮೈಗಳ್ಳ
ತನವನ್ನು ಕಲಿಯುತ್ತಾರೆ; ಮೈಗಳ್ಳರಾಗುವದಲ್ಲದೆ
ಹರಟೆಮಾತಾಡುವವರೂ ಇತರರ ಕೆಲಸದಲ್ಲಿ ಕೈ
ಹಾಕುವವರೂ ಆಗಿ ಆಡಬಾರದ ಮಾತುಗಳನ್ನಾಡು
14 ತ್ತಾರೆ. ಆದದರಿಂದ ಪ್ರಾಯದ ವಿಧವೆಯರು ಮದು
ವೆಮಾಡಿಕೊಂಡು ಮಕ್ಕಳನ್ನು ಹೆತ್ತು ಮನೆಯ ಯಜ
ಮಾನಿಯರಾಗಿರುವದು ನನಗೆ ಒಳ್ಳೇದಾಗಿ ತೋಚು
ತ್ತದೆ; ಹಾಗೆ ಮಾಡುವದರಿಂದ ವಿರೋಧಿಗಳ ನಿಂದೆಗೆ
15 ಆಸ್ಪದಕೊಡದೆ ಇರುವರು. ಇಷ್ಟರೊಳಗೆ ಕೆಲವರು
ದಾರಿಬಿಟ್ಟು ಸೈತಾನನನ್ನು ಹಿಂಬಾಲಿಸಿದ್ದಾರೆ. ನಂಬು
16 ವವಳಾದ ಸ್ತ್ರೀಯ ಅಧೀನದಲ್ಲಿ ವಿಧವೆಯರಿದ್ದರೆ
ಆಕೆಯೇ ಅವರನ್ನು ಸಂರಕ್ಷಿಸಲಿ. ಸಭೆಯು ದಿಕ್ಕಿ
ಲ್ಲದ ವಿಧವೆಯರಿಗೆ ಸಹಾಯಮಾಡಬೇಕಾಗಿರುವದ
ರಿಂದ ಆಕೆಯು ಆ ಭಾರವನ್ನು ಅದರ ಮೇಲೆ ಹಾಕ
ಬಾರದು.

### ಹಿರಿಯರ ವಿಷಯದಲ್ಲಿ ನಡೆಯಬೇಕಾದ ರೀತಿ.

17 ಚೆನ್ನಾಗಿ ಅಧಿಕಾರ ನಡಿಸುವ ಸಭೆಯ ಹಿರಿಯ
ರನ್ನು, ಅವರೊಳಗೆ ವಿಶೇಷವಾಗಿ ಪ್ರಸಂಗದಲ್ಲಿಯೂ
ಉಪದೇಶದಲ್ಲಿಯೂ ಕಷ್ಟಪಡುವವರನ್ನು ಇಮ್ಮಡಿ
ಯಾದ ಮಾನಕ್ಕೆ ಯೋಗ್ಯರೆಂದು ಎಣಿಸಬೇಕು.
18 ಕಣತುಳಿಯುವ ಎತ್ತಿನ ಬಾಯಿ ಕಟ್ಟಬಾರದೆಂತಲೂ
ಆಳು ತನ್ನ ಕೂಲಿಗೆ ಯೋಗ್ಯನಾಗಿದ್ದಾನೆಂತಲೂ
19 ಶಾಸ್ತ್ರದಲ್ಲಿ ಹೇಳಿದೆಯಲ್ಲಾ. ಸಭೆಯ ಹಿರಿಯನ
ಮೇಲೆ ಯಾರಾದರೂ ದೂರುಹೇಳಿದರೆ ಇಬ್ಬರು
ಮೂವರು ಸಾಕ್ಷಿಗಳಿದ್ದ ಹೊರತಾಗಿ ಅದನ್ನು ಮನ
ಸ್ಸಿಗೆ ತೆಗೆದುಕೊಳ್ಳಬೇಡ. ಪಾಪದಲ್ಲಿ ನಡೆಯುವವರನ್ನು ಎಲ್ಲರ ಮುಂದೆಯೇ ಗದರಿಸು; ಇವರಿಂದ ಮಿಕ್ಕಾದವರಿಗೂ ಭಯವುಂಟಾಗುವುದು. ನೀನು ವಿಚಾರಿಸುವದಕ್ಕೆ ಮೊದಲೇ ತಪ್ಪುಹೊರಿಸದೆಯೂ ಪಕ್ಷಪಾತದಿಂದ ಏನೂ ಮಾಡದೆಯೂ ನಾನು ಹೇಳಿರುವ ಮಾತುಗಳ ಪ್ರಕಾರವೇ ನಡೆಯಬೇಕೆಂದು ದೇವರ ಮುಂದೆಯೂ ಕ್ರಿಸ್ತ ಯೇಸುವಿನ ಮುಂದೆಯೂ ಆಯಲ್ಪಟ್ಟಿರುವ ದೇವದೂತರ ಮುಂದೆಯೂ ಖಂಡಿತವಾಗಿ ಹೇಳುತ್ತೇನೆ. ಅವಸರದಿಂದ ಯಾರ ತಲೆಯ ಮೇಲೆಯಾದರೂ 2)ಹಸ್ತವನ್ನಿಟ್ಟು ಸಭೆಯ ಉದ್ಯೋಗಕ್ಕೆ ನೇಮಿಸಬೇಡ. ಹಾಗೆ ನೇಮಿಸಿದರೆ ಮತ್ತೊಬ್ಬರು ಮಾಡಿದ ಪಾಪದಲ್ಲಿ ನೀನು ಪಾಲುಗಾರನೆಂದು ತೋರಿಬಂದೀತು; ನೀನು ಶುದ್ಧನಾಗಿರುವ ಹಾಗೆ ನೋಡಿಕೋ. ಇನ್ನು ಮೇಲೆ ನೀರನ್ನು ಮಾತ್ರ ಕುಡಿಯುವವನಾಗಿರದೆ ನಿನ್ನ ಅಜೀರ್ಣದ ಮತ್ತು ನಿನಗೆ ಆಗಾಗ್ಗೆ ಉಂಟಾಗುವ ಅಸ್ವಸ್ಥತೆಯ ಪರಿಹಾರಕ್ಕಾಗಿ ದ್ರಾಕ್ಷಾರಸವನ್ನು ಸ್ವಲ್ಪವಾಗಿ ತೆಗೆದುಕೋ. ಕೆಲವರ ಪಾಪಕೃತ್ಯಗಳು ಪ್ರಸಿದ್ಧವಾಗಿದ್ದು ಅವರು ಇಂಥವರೆಂದು ಮೊದಲೇ ತಿಳಿಯಪಡಿಸುತ್ತವೆ; ಬೇರೆ ಕೆಲವರ ಪಾಪಕೃತ್ಯಗಳು ಮರೆಯಾಗಿದ್ದು ತರುವಾಯ ತಿಳಿದುಬರುತ್ತವೆ. ಹಾಗೆಯೇ ಕೆಲವರ ಸತ್ಕ್ರಿಯೆಗಳು ಪ್ರಸಿದ್ಧವಾಗಿವೆ, ಬೇರೆ ಕೆಲವರ ಸತ್ಕ್ರಿಯೆಗಳು ಅಪ್ರಸಿದ್ಧವಾಗಿದ್ದರೂ ಮರೆಯಾಗಿರಲಾರವು.

### ದಾಸರಾಗಿ ಮತ್ತೊಬ್ಬರ ಅಧೀನದಲ್ಲಿರುವ ಕ್ರೈಸ್ತರ ಧರ್ಮ.

ದಾಸರಾಗಿ ಮತ್ತೊಬ್ಬರ ಅಧೀನದಲ್ಲಿರುವವರು ತಮ್ಮ ಯಜಮಾನರನ್ನು ಎಲ್ಲಾ ಮಾನಕ್ಕೂ ಯೋಗ್ಯರೆಂದೆಣಿಸಲಿ; ಇಲ್ಲದಿದ್ದರೆ ದೇವರ ನಾಮಕ್ಕೂ ನಾವು ಹೊಂದಿರುವ ಉಪದೇಶಕ್ಕೂ ನಿಂದೆ ಉಂಟಾದೀತು. ಯಾರಿಗಾದರೂ ಕ್ರಿಸ್ತನನ್ನು ನಂಬುವವರಾದ ಯಜಮಾನರಿದ್ದರೆ ಅವರು ಆ ಯಜಮಾನರನ್ನು ಸಹೋದರರೆಂದು ಉದಾಸೀನಮಾಡದೆ ತಮ್ಮ ಸೇವೆಯ ಫಲವನ್ನು ಹೊಂದುವವರು ನಂಬುವವರೂ ಪ್ರಿಯರೂ ಆಗಿದ್ದಾರೆಂದು ತಿಳಿದು ಅವರಿಗೆ ಹೆಚ್ಚಾದ ಸಂತೋಷದಿಂದಲೇ ಸೇವೆಮಾಡಬೇಕು. ಈ ಉಪದೇಶವನ್ನು ಮಾಡಿ ಅವರನ್ನು ಎಚ್ಚರಿಸು.

### ತಿಮೊಥೆಯನು ತಪ್ಪಾದ ಬೋಧನೆಗೂ ಹಣದಾಸೆಗೂ ದೂರವಾಗಿದ್ದು ಸದ್ಧರ್ಮವನ್ನು ಅನುಸರಿಸುವವನೂ ಬೋಧಿಸುವವನೂ ಆಗಿರಬೇಕೆಂದು ಖಂಡಿತವಾದ ಎಚ್ಚರಿಕೆಯು.

ಯಾವನಾದರೂ ಬೇರೆ ವಿಧವಾದ ಉಪದೇಶವನ್ನು ಮಾಡಿ ನಮ್ಮ ಕರ್ತನಾದ ಯೇಸು ಕ್ರಿಸ್ತನ ಸ್ವಸ್ಥವಾದ ಮಾತುಗಳಿಗೂ ಭಕ್ತ್ಯನುಸಾರವಾದ ಉಪದೇಶಕ್ಕೂ ಸಮ್ಮತಿಸದೆ ಹೋದರೆ ಅವನು ಒಂದನ್ನೂ ತಿಳಿಯದೆ ಕುತರ್ಕ ವಾಗ್ವಾದಗಳನ್ನು ಮಾಡುವ ಭ್ರಾಂತಿಯಲ್ಲಿದ್ದು ಮದದಿಂದ ಕಣ್ಣುಗಾಣ

1) ಮೂಲ: ದೇವಜನರ ಕಾಲುಗಳನ್ನು ತೊಳೆದವಳಾಗಲಿ.

2) ಮೂಲ: ಹಸ್ತವನ್ನಿಡ ಬೇಡ.

ದವನಾಗಿದ್ದಾನೆ. ಇವುಗಳಿಂದ ಹೊಟ್ಟೇಕಿಚ್ಚು ಜಗಳ
ದೂಷಣೆ ದುಸ್ಸಂಶಯ ಇವುಗಳು ಉಂಟಾಗುತ್ತವೆ.
5 ಇದಲ್ಲದೆ ಬುದ್ಧಿಗೆಟ್ಟು ಸತ್ಯವಿಹೀನರಾಗಿದ್ದು ದೇವ
ಭಕ್ತಿಯನ್ನು ಲಾಭಸಾಧನವೆಂದೆಣಿಸುವ ಈ ಮನುಷ್ಯ
ರಲ್ಲಿ ನಿತ್ಯವಾದ ಕಚ್ಚಾಟಗಳು ಉಂಟಾಗುತ್ತವೆ.
6 ಸಂತುಷ್ಟಿಸಹಿತವಾದ ಭಕ್ತಿಯು ದೊಡ್ಡ ಲಾಭವೇ
7 ಸರಿ. ನಾವು ಲೋಕದೊಳಕ್ಕೆ ಏನೂ ತಕ್ಕೊಂಡು
ಬರಲಿಲ್ಲವಷ್ಟೆ; ಅದರೊಳಗಿಂದ ಏನೂ ತಕ್ಕೊಂಡು
8 ಹೋಗಲಾರೆವು. ನಮಗೆ ಅನ್ನವಸ್ತ್ರಗಳಿದ್ದರೆ ಸಾಕು;
9 ಐಶ್ವರ್ಯವಂತರಾಗಬೇಕೆಂದು ಮನಸ್ಸುಮಾಡುವ
ವರು ದುಷ್ಪ್ರೇರಣೆಯೆಂಬ ಉರ್ಲಿನಲ್ಲಿ ಸಿಕ್ಕಿಕೊಂಡು
ಬುದ್ಧಿವಿರುದ್ಧವಾಗಿಯೂ ಹಾನಿಕರವಾಗಿಯೂ ಇರುವ
ಅನೇಕ ಆಶೆಗಳಲ್ಲಿ ಬೀಳುತ್ತಾರೆ. ಇಂಥ ಆಶೆಗಳು
ಮನುಷ್ಯರನ್ನು ಸಂಹಾರನಾಶನಗಳಲ್ಲಿ ಮುಳುಗಿಸು
10 ತ್ತವೆ. ಹಣದಾಸೆಯು ಸಕಲವಿಧವಾದ ಕೆಟ್ಟತನಕ್ಕೆ
ಮೂಲವಾಗಿದೆ. ಕೆಲವರು ಅದಕ್ಕಾಗಿ ಆತುರಪಟ್ಟು
ಅದರಿಂದ ಕ್ರಿಸ್ತನಂಬಿಕೆಯನ್ನು ಬಿಟ್ಟು ಅಲೆದಾಡಿ
ಅನೇಕ ವೇದನೆಗಳಿಂದ ತಮ್ಮನ್ನು ತಿವಿಸಿಕೊಳ್ಳುತ್ತಾರೆ.
11 ಎಲೈ, ದೇವರ ಮನುಷ್ಯನೇ, ನೀನಾದರೋ
ಇವುಗಳಿಗೆ ದೂರವಾಗಿರು; ನೀತಿ ಭಕ್ತಿ ನಂಬಿಕೆ
ಪ್ರೀತಿ ಸ್ಥಿರಚಿತ್ತ ಸಾತ್ವಿಕತ್ವ ಇವುಗಳನ್ನು ಸಂಪಾದಿಸು
12 ವದಕ್ಕೆ ಪ್ರಯಾಸಪಡು. ಕ್ರಿಸ್ತನಂಬಿಕೆಯುಳ್ಳವರು
ಮಾಡತಕ್ಕ ಶ್ರೇಷ್ಠ ಹೋರಾಟವನ್ನು ಮಾಡು,
ನಿತ್ಯಜೀವವನ್ನು ಹಿಡಿದುಕೋ; ಅದಕ್ಕಾಗಿ ದೇವ
ರು ನಿನ್ನನ್ನು ಕರೆದನು, ಮತ್ತು ನೀನು ಅನೇಕಸಾಕ್ಷಿ
ಗಳ ಮುಂದೆ ಒಳ್ಳೇ ಪ್ರತಿಜ್ಞೆಯನ್ನು ಮಾಡಿದಿಯಲ್ಲಾ.
13 ಸರ್ವ ಸೃಷ್ಟಿಗೆ ಜೀವಾಧಾರಕನಾದ ದೇವರ ಮುಂದೆ
ಯೂ ಪೊಂತ್ಯ ಪಿಲಾತನ 1)ಕಾಲದಲ್ಲಿ ಶ್ರೇಷ್ಠಪ್ರತಿ
ಜ್ಞೆಯನ್ನು ತಾನೇ ಸಾಕ್ಷಿಯಾಗಿದ್ದು ಸ್ಥಾಪಿಸಿದ ಕ್ರಿಸ್ತ
ಯೇಸುವಿನ ಮುಂದೆಯೂ ನಾನು ನಿನಗೆ ಖಂಡಿತವಾಗಿ
ಹೇಳುವದೇನಂದರೆ—ನಮ್ಮ ಕರ್ತನಾದ ಯೇಸು ಕ್ರಿಸ್ತ 14
ನು ಪ್ರತ್ಯಕ್ಷನಾಗುವ ತನಕ ನೀನು ಸುವಾರ್ತೆಯ
ವಿಧಿಯನ್ನು ನಿಷ್ಕಳಂಕವಾಗಿಯೂ ನಿಂದಾರಹಿತವಾಗಿ
ಯೂ ಕಾಪಾಡಬೇಕು. ಭಾಗ್ಯವಂತನಾದ ಏಕಾಧಿ 15
ಪತಿಯು ತನ್ನ ಕ್ಲುಪ್ತ ಸಮಯದಲ್ಲೇ ಆತನನ್ನು
ಪ್ರತ್ಯಕ್ಷಪಡಿಸುವನು. ಆ ಏಕಾಧಿಪತಿಯು ರಾಜಾಧಿ
ರಾಜನೂ ಕರ್ತರ ಕರ್ತನೂ ತಾನೊಬ್ಬನೇ ಅಮ 16
ರತ್ವವುಳ್ಳವನೂ ಅಗಮ್ಯವಾದ ಬೆಳಕಿನಲ್ಲಿ ವಾಸಮಾಡು
ವವನೂ ಆಗಿದ್ದಾನೆ; ಮನುಷ್ಯರಲ್ಲಿ ಯಾರೂ ಆತ
ನನ್ನು ಕಾಣಲಿಲ್ಲ, ಯಾರೂ ಕಾಣಲಾರರು; ಆತನಿಗೆ
ಮಾನವೂ ನಿತ್ಯಾಧಿಪತ್ಯವೂ ಇರಲಿ. ಆಮೆನ್.
ಇಹಲೋಕವಿಷಯದಲ್ಲಿ ಐಶ್ವರ್ಯವುಳ್ಳವರು 17
ಅಹಂಕಾರಿಗಳಾಗಿರದೆ ಅಸ್ಥಿರವಾದ ಐಶ್ವರ್ಯದ
ಮೇಲೆ ನಿರೀಕ್ಷೆಯನ್ನಿಡದೆ ನಮ್ಮ ಅನುಭೋಗ
ಕ್ಕೋಸ್ಕರ ನಮಗೆ ಎಲ್ಲವನ್ನೂ ಹೇರಳವಾಗಿ ದಯ
ಪಾಲಿಸುವ ದೇವರ ಮೇಲೆ ನಿರೀಕ್ಷೆಯನ್ನಿಡಬೇ 18-19
ಕೆಂತಲೂ ವಾಸ್ತವವಾದ ಜೀವವನ್ನು ಹೊಂದುವದ
ಕ್ಕೋಸ್ಕರ ಅವರು ಒಳ್ಳೇದನ್ನು ಮಾಡುವವರೂ
ಸತ್ಕಾರ್ಯಗಳಲ್ಲಿ ಐಶ್ವರ್ಯವಂತರೂ ದಾನಧರ್ಮ
ಗಳನ್ನು ಮಾಡುವವರೂ ಪರೋಪಕಾರಮಾಡುವವ
ರೂ ಆಗಿದ್ದು ಮುಂದಿನ ಕಾಲಕ್ಕೆ ಒಳ್ಳೇ ಅಸ್ತಿವಾರ
ವಾಗುವಂಥವುಗಳನ್ನು ತಮಗೆ ಕೂಡಿಸಿಟ್ಟುಕೊಳ್ಳ
ಬೇಕೆಂತಲೂ ಅವರಿಗೆ ಆಜ್ಞಾಪಿಸು.
ಎಲೈ ತಿಮೊಥೆಯನೇ, ಜ್ಞಾನೋಪದೇಶವೆಂದು 20
ಸುಳ್ಳಾಗಿ ಹೇಳಿಕೊಳ್ಳುವ ಬೋಧನೆಗೆ ಸಂಬಂಧಪಟ್ಟ
ಪ್ರಾಪಂಚಿಕವಾದ ಆ ಹರಟೆಮಾತುಗಳಿಗೂ ವಿವಾದ
ಗಳಿಗೂ ನೀನು ದೂರವಾಗಿದ್ದು ನಿನ್ನ ವಶಕ್ಕೆ
ಕೊಟ್ಟಿರುವದನ್ನೇ ಕಾಪಾಡು. ಕೆಲವರು ಆ ಸುಳ್ಳಾದ 21
ಜ್ಞಾನವನ್ನು ಅವಲಂಬಿಸಿ ಕ್ರಿಸ್ತನಂಬಿಕೆಯಿಂದ ಭ್ರಷ್ಟ
ರಾದರು. ಕೃಪೆಯು ನಿಮ್ಮೊಂದಿಗಿರಲಿ.

# THE SECOND EPISTLE OF SAINT PAUL TO

# TIMOTHY

## ಪೌಲನು ತಿಮೊಥೆಯನಿಗೆ ಬರೆದ ಎರಡನೆಯ ಪತ್ರಿಕೆ

ಒಕ್ಕಣೆ.

1 ಕ್ರಿಸ್ತ ಯೇಸುವಿನಲ್ಲಿರುವ ಜೀವವಾಗ್ದಾನವನ್ನು
ತಿಳಿಯಪಡಿಸುವದಕ್ಕೋಸ್ಕರ ದೇವರ ಚಿತ್ತಾನು
ಸಾರವಾಗಿ ಕ್ರಿಸ್ತ ಯೇಸುವಿನ ಅಪೊಸ್ತಲನಾದ
ಪೌಲನು ತನ್ನ ಪ್ರಿಯ ಕುಮಾರನಾದ ತಿಮೊಥೆಯ 2
ನಿಗೆ ಬರೆಯುವದೇನಂದರೆ—ತಂದೆಯಾದ ದೇವರಿಂದ
ಲೂ ನಮ್ಮ ಕರ್ತನಾದ ಕ್ರಿಸ್ತ ಯೇಸುವಿನಿಂದಲೂ
ನಿನಗೆ ಕೃಪೆಯೂ ಕರುಣೆಯೂ ಶಾಂತಿಯೂ ಆಗಲಿ.

1) ಅಥವಾ, ಎದುರಿನಲ್ಲಿ.

ತಿಮೊಥೆಯನು ಸುವಾರ್ತಾಸೇವೆಯಲ್ಲಿ ನಂಬಿಗಸ್ತನಾಗಿರಬೇಕೆಂದು ಬೋಧನೆ.

3 ನಾನು ಹಗಲಿರುಳು ನನ್ನ ಪ್ರಾರ್ಥನೆಗಳಲ್ಲಿ
ನಿನ್ನನ್ನು ತಪ್ಪದೆ ಜ್ಞಾಪಿಸಿಕೊಳ್ಳುತ್ತೇನೆ. ಇದಲ್ಲದೆ
ನಾನು ಪೂರ್ವಿಕರ ಭಕ್ತಿಮಾರ್ಗವನ್ನೇ ಅನುಸರಿಸಿ
ಒಳ್ಳೇ ಮನಸ್ಸಾಕ್ಷಿಯುಳ್ಳವನಾಗಿ ಆರಾಧಿಸುವ
ದೇವರಿಗೆ ನಿನ್ನ ವಿಷಯವಾಗಿ ಸ್ತೋತ್ರಸಲ್ಲಿಸುತ್ತೇನೆ.
4 ನಾನು ನಿನ್ನ ಕಣ್ಣೀರುಗಳನ್ನು ನೆನಪಿಗೆ ತಂದು
ನಿನ್ನನ್ನು ನೋಡಿ ಸಂತೋಷಭರಿತನಾಗಬೇಕೆಂದು
5 ಅಪೇಕ್ಷಿಸುತ್ತೇನೆ. ನಿನ್ನಲ್ಲಿರುವ ನಿಷ್ಕಪಟವಾದ
ನಂಬಿಕೆಯು ನನ್ನ ನೆನಪಿಗೆ ಬಂತು. ಆ ನಂಬಿಕೆಯು
ನಿನ್ನ ಅಜ್ಜಿಯಾದ ಲೋವಿಯಲ್ಲಿಯೂ ನಿನ್ನ ತಾಯಿ
ಯಾದ ಯೂನೀಕೆಯಲ್ಲಿಯೂ ವಾಸವಾಗಿತ್ತು; ಹಾಗೆ
ಯೇ ನಿನ್ನಲ್ಲಿಯೂ ವಾಸವಾಗಿದೆ ಎಂದು ದೃಢವಾಗಿ
ನಂಬಿದ್ದೇನೆ.
6 ಆದಕಾರಣ ನಾನು ನಿನ್ನ ತಲೆಯ ಮೇಲೆ ಹಸ್ತವ
ನ್ನಿಟ್ಟದರ ಮೂಲಕ ನಿನಗೆ ದೊರಕಿದ ದೇವರ
ಕೃಪಾವರವು ಪ್ರಜ್ವಲಿಸುವಂತೆ ಮಾಡಬೇಕೆಂದು ನಿನಗೆ
7 ಜ್ಞಾಪಕಕೊಡುತ್ತೇನೆ. ದೇವರು ನಮಗೆ ಕೊಟ್ಟಿರುವ
ಆತ್ಮವು ಬಲ ಪ್ರೀತಿ ಶಿಕ್ಷಣಗಳ ಆತ್ಮವೇ ಹೊರತು
8 ಹೇಡಿತನದ ಆತ್ಮವಲ್ಲ. ಆದದರಿಂದ ನೀನು ನಮ್ಮ
ಕರ್ತನನ್ನು ಕುರಿತು ಹೇಳುವ ಸಾಕ್ಷಿಯ ವಿಷಯ
ದಲ್ಲಾಗಲಿ ಆತನ ಸೆರೆಯವನಾದ ನನ್ನ ವಿಷಯದ
ಲ್ಲಾಗಲಿ ನಾಚಿಕೆಪಡದೆ ದೇವರ ಬಲವನ್ನು ಆಶ್ರ
ಯಿಸಿ ನನ್ನೊಂದಿಗೆ ಸುವಾರ್ತೆಗೋಸ್ಕರ ಶ್ರಮೆಯ
9 ನ್ನನುಭವಿಸು. ಆತನು ನಮ್ಮಲ್ಲಿ ಸುಕೃತ್ಯಗಳನ್ನು
ನೋಡಿದ್ದರಿಂದಲ್ಲ, ತನ್ನ ಸಂಕಲ್ಪವನ್ನು ಅನುಸರಿಸಿ
ಕೃಪೆಯಿಂದಲೇ ನಮ್ಮನ್ನು ರಕ್ಷಿಸಿ ಪರಿಶುದ್ಧರಾಗು
10 ವದಕ್ಕೆ ಕರೆದನು. ಆತನು ಅನಾದಿಕಾಲದಲ್ಲಿ ಆ
ಕೃಪೆಯನ್ನು ಕ್ರಿಸ್ತ ಯೇಸುವಿನಲ್ಲಿ ನಮಗೆ ಅನುಗ್ರ
ಹಿಸಿ ಈಗ ನಮ್ಮ ರಕ್ಷಕನಾದ ಕ್ರಿಸ್ತ ಯೇಸುವಿನ
ಪ್ರತ್ಯಕ್ಷತೆಯ ಮೂಲಕ ಅದನ್ನು ಪ್ರಕಾಶಪಡಿ
ಸಿದ್ದಾನೆ. ಈತನು ಮರಣವನ್ನು ನಿವೃತ್ತಿಮಾಡಿ
ಸುವಾರ್ತೆಯ ಮೂಲಕ ಜೀವವನ್ನೂ ನಿರ್ಲಯತ್ವ
11 ವನ್ನೂ ಪ್ರಕಾಶಗೊಳಿಸಿದನು. ಆ ಸುವಾರ್ತಾಭಿವೃದ್ಧಿ
ಗೋಸ್ಕರ ನಾನು ಸಾರುವವನಾಗಿಯೂ ಅಪೊಸ್ತಲ
ನಾಗಿಯೂ ಉಪದೇಶಕನಾಗಿಯೂ ನೇಮಿಸಲ್ಪಟ್ಟೆನು.
12 ಇದರ ನಿಮಿತ್ತದಿಂದಲೇ ಈ ಶ್ರಮೆಗಳನ್ನು ಅನುಭ
ವಿಸುತ್ತಾ ಇದ್ದೇನೆ; ಆದರೂ ನಾನು ನಾಚಿಕೆಪಡುವ
ದಿಲ್ಲ; ನಾನು ನಂಬಿರುವಾತನನ್ನು ಬಲ್ಲೆನು.
1)ಆತನು ನನ್ನ ವಶದಲ್ಲಿಟ್ಟಿರುವದನ್ನು ಆತನು
ಆ ದಿನಕ್ಕಾಗಿ ಕಾಪಾಡುವದಕ್ಕೆ ಶಕ್ತನಾಗಿದ್ದಾ
13 ನೆಂದು ದೃಢವಾಗಿ ನಂಬಿದ್ದೇನೆ. ನೀನು ಕ್ರಿಸ್ತ
ಯೇಸುವಿನಲ್ಲಿ ನಂಬಿಕೆಯೂ ಪ್ರೀತಿಯೂ ಉಳ್ಳವ
ನಾಗಿ ನನ್ನಿಂದ ಕೇಳಿದ ಸ್ವಸ್ಥಬೋಧನಾವಾಕ್ಯಗ
ಳನ್ನು ಮಾದರಿಮಾಡಿಕೊಂಡು ಅನುಸರಿಸು. ನಿನ್ನ
ವಶಕ್ಕೆ ಕೊಡಲ್ಪಟ್ಟಿರುವದನ್ನು ಶ್ರೇಷ್ಠವೆಂದು ತಿಳಿದು
ನಮ್ಮಲ್ಲಿ ವಾಸವಾಗಿರುವ ಪವಿತ್ರಾತ್ಮನ ಮೂಲಕ
ಕಾಪಾಡು.
ಆಸ್ಯಸೀಮೆಯಲ್ಲಿರುವವರೆಲ್ಲರೂ ನನ್ನನ್ನು ಕೈ
ಬಿಟ್ಟರೆಂಬದನ್ನು ನೀನು ಬಲ್ಲೆ; ಅವರಲ್ಲಿ ಫುಗೇಲನೂ
ಹೆರ್ಮೊಗೇನನೂ ಸೇರಿದ್ದಾರೆ. ಒನೇಸಿಫೊರನ ಮನೆ
ಯವರಿಗೆ ಕರ್ತನು ಕರುಣೆಯನ್ನು ತೋರಿಸಲಿ;
ಅವನು ಅನೇಕಾವರ್ತಿ ನನ್ನನ್ನು ಆದರಿಸಿದನು;
ನನ್ನ ಬೇಡಿಗಳಿಗೆ ನಾಚಿಕೆಪಡದೆ ರೋಮಾಪುರಕ್ಕೆ
ಬಂದ ಕೂಡಲೆ ಬಹು ವಿಚಾರಣೆಯಿಂದ ನನ್ನನ್ನು
ಹುಡುಕಿ ಕಂಡುಕೊಂಡನು. ಅವನು ಆ ದಿನದಲ್ಲಿ
ಕರ್ತನಿಂದ ಕರುಣೆಯನ್ನು ಹೊಂದುವಂತೆ ಕರ್ತನು
ಅವನಿಗೆ ದಯಪಾಲಿಸಲಿ. ಎಫೆಸದಲ್ಲಿಯೂ ಎಷ್ಟೋ
ಉಪಚಾರಮಾಡಿದನೆಂಬದು ನಿನಗೆ ಚೆನ್ನಾಗಿ ಗೊತ್ತಿದೆ.
ನನ್ನ ಮಗನೇ, ನೀನು ಕ್ರಿಸ್ತ ಯೇಸುವಿನಲ್ಲಿ
ರುವ ಕೃಪೆಯಿಂದ ಬಲಹೊಂದಿದವನಾಗು. ನೀನು 2
ನನ್ನಿಂದ ಅನೇಕಸಾಕ್ಷಿಗಳ ಮುಂದೆ ಕೇಳಿದ ಉಪ
ದೇಶವನ್ನು ಇತರರಿಗೆ ಬೋಧಿಸ ಶಕ್ತರಾದ ನಂಬಿ
ಗಸ್ತ ಮನುಷ್ಯರಿಗೆ ಒಪ್ಪಿಸಿಕೊಡು. ಕ್ರಿಸ್ತ ಯೇಸು
ವಿನ ಒಳ್ಳೇ ಸೈನಿಕನಂತೆ ನನ್ನೊಂದಿಗೆ ಶ್ರಮೆಯನ್ನನುಭ
ವಿಸು. ಯುದ್ಧಕ್ಕೆ ಹೋಗುವ ಸೈನಿಕನು ಲೋಕ
ವ್ಯವಹಾರದಲ್ಲಿ ಸಿಕ್ಕಿಕೊಳ್ಳದೆ ತನ್ನನ್ನು ಸೈನ್ಯದಲ್ಲಿ
ಸೇರಿಸಿಕೊಂಡವನನ್ನು ಮೆಚ್ಚಿಸುವದಕ್ಕೆ ಪ್ರಯಾಸ
ಪಡುತ್ತಿರುವನಲ್ಲವೇ. ಇದಲ್ಲದೆ ಯಾವನಾದರೂ
ರಂಗಸ್ಥಳದಲ್ಲಿ ಎದುರಾಳಿನೊಡನೆ ಹೋರಾಡುವಾಗ
ನಿಯಮದ ಪ್ರಕಾರ ಹೋರಾಡದಿದ್ದರೆ ಅವನಿಗೆ
ಜಯಮಾಲೆಯು ದೊರಕುವದಿಲ್ಲ. ವ್ಯವಸಾ
ಯದ ಹುಟ್ಟುವಳಿಯಲ್ಲಿ ಮೊದಲನೆಯ ಪಾಲು ಕಷ್ಟ
ಮಾಡಿದವನಿಗೆ ದೊರೆಯುತ್ತದೆ. ನಾನು ಹೇಳುವ
ದನ್ನು ಯೋಚಿಸು; ಕರ್ತನು ಎಲ್ಲಾದರಲ್ಲೂ ನಿನಗೆ
ವಿವೇಕವನ್ನು ದಯಪಾಲಿಸುವನು. 2)ಸತ್ತವರೊಳ
ಗಿಂದ ಎಬ್ಬಿಸಲ್ಪಟ್ಟವನೂ ದಾವೀದನ ವಂಶದವನೂ
ಆಗಿರುವ ಯೇಸು ಕ್ರಿಸ್ತನನ್ನು ಜ್ಞಾಪಕಮಾಡಿ
ಕೋ; ಇದೇ ನಾನು ಸಾರುವ ಸುವಾರ್ತೆ. ಇದ
ರಲ್ಲಿ ನಾನು ಕಷ್ಟವನ್ನನುಭವಿಸಿ ದುಷ್ಕರ್ಮಿ
ಯಂತೆ ಸಂಕೋಲೆಯಿಂದ ಕಟ್ಟಲ್ಪಟ್ಟವನಾಗಿದ್ದೇನೆ;
ಆದರೆ ದೇವರ ವಾಕ್ಯಕ್ಕೆ ಬಂಧನವಿಲ್ಲ. ಆದ
ಕಾರಣ ದೇವರಾರಿಸಿಕೊಂಡವರು ನನ್ನ ಕೂಡ ಕ್ರಿಸ್ತ
ಯೇಸುವಿನಲ್ಲಿರುವ ರಕ್ಷಣೆಯನ್ನು ನಿತ್ಯಪ್ರಭಾವ
ಸಹಿತವಾಗಿ ಹೊಂದಬೇಕೆಂದು ನಾನು ಅವರಿಗೋ
ಸ್ಕರ ಎಲ್ಲವನ್ನೂ ತಾಳಿಕೊಳ್ಳುತ್ತೇನೆ. ಈ ಮಾತು
ನಂಬತಕ್ಕದ್ದಾಗಿದೆ, ಏನಂದರೆ—ನಾವು ಆತನೊಡನೆ
ಸತ್ತಿದ್ದರೆ ಆತನೊಡನೆ ಜೀವಿಸುವೆವು; ಸಹಿಸಿಕೊ
ಳ್ಳುವವರಾಗಿದ್ದರೆ ಆತನೊಡನೆ ಆಳುವೆವು; ನಾವು
ಯೇಸುವಿನವರಲ್ಲವೆಂದು ಹೇಳಿದರೆ ಆತನು ನಮ್ಮ
ನ್ನು ತನ್ನವರಲ್ಲವೆಂದು ಹೇಳುವನು. ನಾವು ಅಪನಂಬಿ

1) ಅಥವಾ, ನಾನು ಆತನ. 2) ಅಥವಾ, ದಾವೀದನ ವಂಶದವನಾದ ಯೇಸು ಕ್ರಿಸ್ತನು ಸತ್ತವರೊಳಗಿಂದ ಎಬ್ಬಿಸಲ್ಪಟ್ಟವನೆಂದನ್ನು ಜ್ಞಾಪಕಮಾಡಿಕೋ.

ಗಸ್ತರಾಗಿದ್ದರೂ ಆತನು ನಂಬಿಗಸ್ತನಾಗಿಯೇ ಇರು
ವನು; ತನ್ನ ಸ್ವಭಾವಕ್ಕೆ ವಿರುದ್ಧವಾಗಿ ಏನೂ
ಮಾಡಲಾರನು.

ದುರ್ಮಾರ್ಗತನವೂ ದುರ್ಬೋಧನೆಯೂ ಪ್ರಬಲ
ವಾಗಿರುವದರಿಂದ ತಿಮೊಥೆಯನು ಬಹು ಎಚ್ಚರಿಕೆಯುಳ್ಳವ
ನಾಗಿರಬೇಕೆಂದು ಬೋಧನೆ.

14 ಈ ಸಂಗತಿಗಳನ್ನು ಸಭೆಯವರ ಜ್ಞಾಪಕಕ್ಕೆ ತರ
ಬೇಕು. ಕೇಳುವವರಿಗೆ ಕೇಡನ್ನುಂಟುಮಾಡುವದೇ
ಹೊರತು ಯಾವ ಪ್ರಯೋಜನಕ್ಕೂ ಬಾರದ
ವಾಗ್ವಾದಗಳನ್ನು ಮಾಡಬಾರದೆಂದು ಅವರಿಗೆ
15 ದೇವರ ಸನ್ನಿಧಿಯಲ್ಲಿ ಖಂಡಿತವಾಗಿ ಹೇಳು. ನೀನು
ದೇವರ ದೃಷ್ಟಿಗೆ ಯೋಗ್ಯನಾಗಿ ಕಾಣಿಸಿಕೊಳ್ಳುವದಕ್ಕೆ
ಪ್ರಯಾಸಪಡು. ಅವಮಾನಕ್ಕೆ ಗುರಿಯಾಗದ ಕೆಲಸ
ದವನೂ ಸತ್ಯವಾಕ್ಯವನ್ನು ಸರಿಯಾಗಿ ಉಪದೇಶಿಸು
16 ವವನೂ ಆಗಿರು. ಪ್ರಾಪಂಚಿಕವಾದ ಆ ಹರಟೆ
ಮಾತುಗಳಿಗೆ ದೂರವಾಗಿರು; ಅವುಗಳಿಗೆ ಮನಸ್ಸು
17 ಕೊಡುವವರು ಹೆಚ್ಚೆಚ್ಚಾಗಿ ಭಕ್ತಿಹೀನರಾಗುವರು. ಅ
ವರ ಮಾತು ಕೊಳಕು ಹುಣ್ಣಿನಂತೆ ಹರಡಿಕೊಳ್ಳುವದು.
ಅವರಲ್ಲಿ ಹುಮೆನಾಯನೂ ಫಿಲೇತನೂ ಇದ್ದಾರೆ;
18 ಅವರು ಪುನರುತ್ಥಾನವು ಆಗಿಹೋಯಿತೆಂದು ಹೇಳು
ತ್ತಾ ಸತ್ಯಭ್ರಷ್ಟರಾಗಿ ಕೆಲವರ ನಂಬಿಕೆಯನ್ನು ಕೆಡಿಸು
19 ವವರಾಗಿದ್ದಾರೆ. ಆದರೂ ದೇವರ ಸ್ಥಿರವಾದ ಅಸ್ತಿ
ವಾರವು ನಿಲ್ಲುತ್ತದೆ. ಅದರ ಮೇಲೆ—ತನ್ನವರು ಯಾ
ರಾರೆಂಬದನ್ನು ಕರ್ತನು ತಿಳಿದಿದ್ದಾನೆಂತಲೂ ಕರ್ತನ
ನಾಮವನ್ನು ಹೇಳಿಕೊಳ್ಳುವವರೆಲ್ಲರು ದುರ್ಮಾರ್ಗತ
20 ನವನ್ನು ಬಿಟ್ಟುಬಿಡಬೇಕೆಂತಲೂ ಲಿಪಿಯುಂಟು. ದೊ
ಡ್ಡ ಮನೆಯಲ್ಲಿ ಬೆಳ್ಳಿಬಂಗಾರದ ಪಾತ್ರೆಗಳಲ್ಲದೆ ಮರದ
ಪಾತ್ರೆಗಳೂ ಮಣ್ಣಿನ ಪಾತ್ರೆಗಳೂ ಇರುತ್ತವೆ; ಅವುಗ
ಳಲ್ಲಿ ಕೆಲವು ಉತ್ತಮವಾದ ಬಳಿಕೆಗೂ ಕೆಲವು ಹೀನ
21 ವಾದ ಬಳಿಕೆಗೂ ಬರುತ್ತವೆ. ಹೀಗಿರಲಾಗಿ ಒಬ್ಬ
ನು ಹೀನ ನಡತೆಯುಳ್ಳವರ ಸಹವಾಸವನ್ನು ಬಿಟ್ಟು
ತನ್ನನ್ನು ಶುದ್ಧಮಾಡಿಕೊಂಡರೆ ಅವನು ಉತ್ತಮವಾದ
ಬಳಿಕೆಗೆ ಯೋಗ್ಯನಾಗಿರುವನು; ಅವನು ದೇವರ
ಸೇವೆಗೆ ಪ್ರತಿಷ್ಠಿತನಾಗಿಯೂ ಯಜಮಾನನಿಗೆ ಉಪ
ಯುಕ್ತನಾಗಿಯೂ ಸಕಲಸತ್ಕ್ರಿಯೆಗಳನ್ನು ಮಾಡು
ವದಕ್ಕೆ ಸಿದ್ಧನಾಗಿಯೂ ಇರುವನು.
22 ನೀನು ಯೌವನದ ಇಚ್ಛೆಗಳಿಗೆ ದೂರವಾಗಿರು;
ನೀತಿ ವಿಶ್ವಾಸ ಪ್ರೀತಿಗಳನ್ನು ಸಂಪಾದಿಸುವದಕ್ಕೂ
ಶುದ್ಧಹೃದಯವುಳ್ಳವರಾಗಿ ಕರ್ತನನ್ನು ಬೇಡಿಕೊಳ್ಳು
ವವರ ಸಂಗಡ ಸಮಾಧಾನದಿಂದಿರುವದಕ್ಕೂ ಪ್ರಯಾಸ
23 ಪಡು. ಮೂಢರ ಬುದ್ಧಿಯಿಲ್ಲದ ವಿಚಾರಗಳು
ಜಗಳಗಳಿಗೆ ಕಾರಣವಾಗಿವೆ ಎಂದು ತಿಳಿದು ಅವುಗಳ
24 ಗೊಡವೆಗೆ ಹೋಗಬೇಡ. ಕರ್ತನ ದಾಸನು
ಜಗಳವಾಡದೆ ಎಲ್ಲರ ವಿಷಯದಲ್ಲಿ ಸಾಧುವೂ
ಬೋಧಿಸುವದರಲ್ಲಿ ಪ್ರವೀಣನೂ ಕೇಡನ್ನು ಸಹಿಸಿ
ಕೊಳ್ಳುವವನೂ ಎದುರಿಸುವವರನ್ನು ನಿಧಾನದಿಂದ 25
ತಿದ್ದುವವನೂ ಆಗಿರಬೇಕು. ಒಂದು ವೇಳೆ ದೇವ
ರು ಆ ಎದುರಿಸುವವರ ಮನಸ್ಸನ್ನು ತನ್ನ ಕಡೆಗೆ
ತಿರುಗಿಸಿ ಸತ್ಯದ ಜ್ಞಾನವನ್ನು ಅವರಿಗೆ ಕೊಟ್ಟಾನು.
1)ಸೈತಾನನ ಉರ್ಲಿಗೆ ಬಿದ್ದವರಾದ ಇವರು ಒಂದು 26
ವೇಳೆ ತಪ್ಪಿಸಿಕೊಂಡು ದೇವರ ಚಿತ್ತವನ್ನು ಅನುಸರಿಸುವ
ದಕ್ಕೆ ಸ್ವಸ್ಥಚಿತ್ತರಾದಾರು.
ಆದರೆ ಕಡೇ ದಿವಸಗಳಲ್ಲಿ ಕಠಿನಕಾಲಗಳು ಬರು 3
ವವೆಂಬದನ್ನು ತಿಳಿದುಕೋ. ಮನುಷ್ಯರು ಸ್ವಾ 2
ರ್ಥಚಿಂತಕರೂ ಹಣದಾಸೆಯವರೂ ಬಡಾಯಿ
ಕೊಚ್ಚುವವರೂ ಅಹಂಕಾರಿಗಳೂ ದೂಷಕರೂ
ತಂದೆತಾಯಿಗಳಿಗೆ ಅವಿಧೇಯರೂ ಉಪಕಾರನೆನಸದ
ವರೂ ದೇವಭಯವಿಲ್ಲದವರೂ ಮಮತೆಯಿಲ್ಲದ 3
ವರೂ ಸಮಾಧಾನವಾಗದವರೂ ಚಾಡಿಹೇಳುವವರೂ
ದಮೆಯಿಲ್ಲದವರೂ ಉಗ್ರತೆಯುಳ್ಳವರೂ ಒಳ್ಳೇ
ದನ್ನು ಪ್ರೀತಿಸದವರೂ ದ್ರೋಹಿಗಳೂ ದುಡುಕಿನವ 4
ರೂ ಉಬ್ಬಿಕೊಂಡವರೂ ದೇವರನ್ನು ಪ್ರೀತಿಸದೆ
ಭೋಗಗಳನ್ನೇ ಪ್ರೀತಿಸುವವರೂ ಭಕ್ತಿಯ ವೇಷವಿದ್ದು 5
ಅದರ ಬಲವನ್ನು ಬೇಡವೆನ್ನುವವರೂ ಆಗಿರುವರು;
ಇಂಥವರ ಸಹವಾಸವನ್ನೂ ಮಾಡದಿರು. ಮನೆ 6
ಗಳಲ್ಲಿ ನುಸುಳಿ ಪಾಪಗಳಿಂದ ತುಂಬಿದವರೂ ನಾನಾ
ವಿಧವಾದ ಇಚ್ಛೆಗಳಿಂದ ಪ್ರೇರಿತರೂ ಆಗಿರುವ ಅವಿವೇ
ಕಿಗಳಾದ ಸ್ತ್ರೀಯರನ್ನು ವಶಮಾಡಿಕೊಳ್ಳುವವರು ಇವ
ರೊಳಗೆ ಸೇರಿದವರೇ. ಆ ಸ್ತ್ರೀಯರು ಯಾವಾಗಲೂ 7
ಉಪದೇಶ ಕೇಳುತ್ತಿದ್ದರೂ ಸತ್ಯದ ಪರಿಜ್ಞಾನವನ್ನು
ಹೊಂದಲಾರದವರು. ಯನ್ನ ಯಂಬ್ರ ಎಂಬವರು 8
ಮೋಶೆಯನ್ನು ವಿರೋಧಿಸಿದಂತೆಯೇ ಆ ಮನುಷ್ಯರು
ಸಹ ಸತ್ಯವನ್ನು ವಿರೋಧಿಸುತ್ತಾರೆ; ಬುದ್ಧಿಗೆಟ್ಟವರೂ
ಕ್ರಿಸ್ತನಂಬಿಕೆಯಿಂದ ಭ್ರಷ್ಟರೂ ಆಗಿದ್ದಾರೆ. ಆದರೆ 9
ಅವರ ಪ್ರಯತ್ನವು ಇನ್ನು ಸಾಗುವದಿಲ್ಲ; ಆ
ಯನ್ನ ಯಂಬ್ರರ ಮೂರ್ಖತನವು ಎಲ್ಲರಿಗೂ ಪರಿ
ಷ್ಕಾರವಾಗಿ ತಿಳಿದುಬಂದ ಪ್ರಕಾರ ಇವರದೂ ತಿಳಿದು
ಬರುವದು. ನೀನಾದರೋ ನನ್ನನ್ನು ಅನುಸರಿಸು 10
ವವನಾಗಿದ್ದು ನನ್ನ ಬೋಧನೆ ನಡತೆ ಉದ್ದೇಶ ನಂಬಿಕೆ
ದೀರ್ಘಶಾಂತಿ ಪ್ರೀತಿ ಸೈರಣೆ ಇವುಗಳನ್ನೂ ಅಂತಿ 11
ಯೋಕ್ಯ ಇಕೋನ್ಯ ಲುಸ್ತ್ರ ಎಂಬ ಪಟ್ಟಣಗ
ಳಲ್ಲಿ ನನಗೆ ಸಂಭವಿಸಿದ ಹಿಂಸೆಗಳನ್ನೂ ಕಷ್ಟಾನು
ಭವಗಳನ್ನೂ ತಿಳಿದವನಾಗಿದ್ದೀ. ನಾನು ಎಂಥೆಂಥ
ಹಿಂಸೆಗಳನ್ನು ಸಹಿಸಿಕೊಂಡೆನು; ಅವೆಲ್ಲವುಗಳೊಳ
ಗಿಂದ ಕರ್ತನು ನನ್ನನ್ನು ಬಿಡಿಸಿದನು. ಕ್ರಿಸ್ತ 12
ಯೇಸುವಿನಲ್ಲಿ ಸದ್ಭಕ್ತರಾಗಿ ಜೀವಿಸುವದಕ್ಕೆ ಮನಸ್ಸು
ಮಾಡುವವರೆಲ್ಲರೂ ಹಿಂಸೆಗೊಳಗಾಗುವರು. ಆದರೆ 13
ದುಷ್ಟರೂ ವಂಚಕರೂ ಇತರರನ್ನು ಮೋಸಮಾಡುತ್ತಾ
ತಾವೇ ಮೋಸಹೋಗುತ್ತಾ ಹೆಚ್ಚಾದ ಕೆಟ್ಟತನಕ್ಕೆ
ಹೋಗುವರು. ನೀನಾದರೋ ಕಲಿತು ದೃಢವಾಗಿ 14

1) ಅಥವಾ, ಸೈತಾನನ ಉರ್ಲಿಗೆ ಬಿದ್ದು ಅವನ ಚಿತ್ತಕ್ಕೆ ಒಳಗಾಗಿರುವ ಇವರು ಒಂದು ವೇಳೆ ತಪ್ಪಿಸಿಕೊಂಡು ಸ್ವಸ್ಥಚಿತ್ತಕ್ಕೆ ಬಂದಾರು. ಅಥವಾ, ಇವರು ದೇವರ ಚಿತ್ತಕ್ಕೆ ಒಳಗಾಗುವಂತೆ ಕರ್ತನ ದಾಸನಿಂದ ಹಿಡಿಯಲ್ಪಟ್ಟವರಾಗಿ ಸ್ವಸ್ಥಚಿತ್ತಕ್ಕೆ ಬಂದು ಸೈತಾನನ ಉರ್ಲಿನಿಂದ ತಪ್ಪಿಸಿಕೊಂಡಾರು.

ನಂಬಿದ ಬೋಧನೆಗಳಲ್ಲಿ ನೆಲೆಯಾಗಿರು. ಕಲಿಸಿಕೊ
ಟ್ಟವರು ಯಾರೆಂಬದನ್ನು ಆಲೋಚಿಸು. ಚಿಕ್ಕಂದಿ
ನಿಂದಲೂ ನಿನಗೆ ಪರಿಶುದ್ಧಗ್ರಂಥಗಳ ಪರಿಚಯ
15 ವಾಯಿತಲ್ಲಾ. ಆ ಗ್ರಂಥಗಳು ಕ್ರಿಸ್ತ ಯೇಸುವಿನಲ್ಲಿ
ರುವ ನಂಬಿಕೆಯ ಮೂಲಕ ರಕ್ಷಣೆಹೊಂದಿಸುವ
16 ಜ್ಞಾನವನ್ನು ಕೊಡುವದಕ್ಕೆ ಶಕ್ತವಾಗಿವೆ. 1)ದೈವ
ಪ್ರೇರಿತವಾದ ಪ್ರತಿಯೊಂದು ಶಾಸ್ತ್ರವು ಉಪದೇಶ
ಕ್ಕೂ ಖಂಡನೆಗೂ ತಿದ್ದುಪಾಟಿಗೂ ನೀತಿಶಿಕ್ಷೆಗೂ ಉಪ
17 ಯುಕ್ತವಾಗಿದೆ. ಅದರಿಂದ ದೇವರ ಮನುಷ್ಯನು
ಪ್ರವೀಣನಾಗಿ ಸಕಲಸತ್ಕಾರ್ಯಕ್ಕೆ ಸನ್ನದ್ಧನಾಗು
ವನು.

ತನಗೆ ಮರಣಕಾಲ ಸಮೀಪವಾದದರಿಂದ ಪೌಲನು ತಿಮೊಥೆಯನನ್ನು ಖಂಡಿತವಾಗಿ ಎಚ್ಚರಿಸಿ ಸುವಾರ್ತೆಯ ಕೆಲಸವನ್ನು ಅತಿ ಜಾಗರೂಕತೆಯಿಂದ ನಡಿಸಬೇಕೆಂದು ಬೋಧಿಸಿದ್ದು.

4 ದೇವರ ಮುಂದೆ ಮತ್ತು ಜೀವಿಸುವವರಿಗೂ ಸತ್ತ
ವರಿಗೂ ನ್ಯಾಯತೀರಿಸುವದಕ್ಕೆ ಬರುವ ಕ್ರಿಸ್ತ ಯೇಸು
ವಿನ ಮುಂದೆ ಆತನ ಪ್ರತ್ಯಕ್ಷತೆಯ ಮೇಲೆಯೂ
ಆತನ ರಾಜ್ಯದ ಮೇಲೆಯೂ ಆಣೆಯಿಟ್ಟು ನಾನು ನಿನ
2 ಗೆ ಖಂಡಿತವಾಗಿ ಹೇಳುವದೇನಂದರೆ—ದೇವರ ವಾಕ್ಯ
ವನ್ನು ಸಾರು, ಅನುಕೂಲವಾದ ಕಾಲದಲ್ಲಿಯೂ ಅನು
ಕೂಲವಿಲ್ಲದ ಕಾಲದಲ್ಲಿಯೂ ಅದರಲ್ಲಿ ಆಸಕ್ತನಾಗಿ
ರು; ಪೂರ್ಣದೀರ್ಘಶಾಂತಿಯಿಂದ ಉಪದೇಶಿಸುತ್ತಾ
3 ಖಂಡಿಸು, ಗದರಿಸು, ಎಚ್ಚರಿಸು. ಯಾಕಂದರೆ ಜನ
ರು ಸ್ವಸ್ಥಬೋಧನೆಯನ್ನು ಸಹಿಸಲಾರದ ಕಾಲವು
ಬರುತ್ತದೆ; ಅದರಲ್ಲಿ ಅವರು ತೀಟೇ ಕಿವಿಗಳುಳ್ಳವ
ರಾಗಿ ತಮ್ಮ ದುರಾಶೆಗಳಿಗೆ ಅನುಕೂಲರಾದ ಅನೇಕ
4 ಉಪದೇಶಕರನ್ನು ಇಟ್ಟುಕೊಳ್ಳುವರು. ಅವರು ಸತ್ಯ
ಬೋಧನೆಗೆ ಕಿವಿಗೊಡದೆ ಕಲ್ಪನಾಕಥೆಗಳನ್ನು ಕೇಳು
5 ವದಕ್ಕೆ ಹೋಗುವರು. ಆದರೆ ನೀನು ಎಲ್ಲಾ ವಿಷಯ
ಗಳಲ್ಲಿ ಸ್ವಸ್ಥಚಿತ್ತನಾಗಿರು, ಶ್ರಮೆಯನ್ನು ತಾಳಿ
ಕೋ, ಸೌವಾರ್ತಿಕನ ಕೆಲಸವನ್ನು ಮಾಡು, ನಿನಗೆ
ನೇಮಿಸಿರುವ ಸೇವೆಯನ್ನು ಲೋಪವಿಲ್ಲದೆ ನಡಿಸು.
6 ಯಾಕಂದರೆ ನಾನಂತೂ ಈಗಲೇ ಪಾನದ್ರವ್ಯವಾಗಿ
ಅರ್ಪಿತನಾಗುತ್ತಾ ಇದ್ದೇನೆ; ನಾನು ಹೊರಟು
ಹೋಗಬೇಕಾದ ಸಮಯವು ಸಮೀಪಕ್ಕೆ ಬಂದದೆ.
7 ಶ್ರೇಷ್ಠ ಹೋರಾಟವನ್ನು ಮಾಡಿದ್ದೇನೆ, ನನ್ನ
ಓಟವನ್ನು ಕಡೆಗಾಣಿಸಿದ್ದೇನೆ, ಕ್ರಿಸ್ತನಂಬಿಕೆಯನ್ನು
8 ಕಾಪಾಡಿಕೊಂಡಿದ್ದೇನೆ; 2)ನೀತಿವಂತರಿಗೆ ದೊರಕುವ
ಜಯಮಾಲೆಯು ಮುಂದೆ ನನಗೆ ಸಿದ್ಧವಾಗಿದೆ; ಅದ
ನ್ನು ನೀತಿಯುಳ್ಳ ನ್ಯಾಯಾಧಿಪತಿಯಾಗಿರುವ ಕರ್ತ
ನು ಆ ದಿನದಲ್ಲಿ ನನಗೆ ಕೊಡುವನು; ನನಗೆ ಮಾ
ತ್ರವಲ್ಲದೆ ತನ್ನ ಪ್ರತ್ಯಕ್ಷತೆಯನ್ನು ಪ್ರೀತಿಸುವವರೆಲ್ಲ
ರಿಗೂ ಕೊಡುವನು.

ಪೌಲನು ತನ್ನ ಸಮಾಚಾರವನ್ನು ತಿಳಿಸಿ ಆಯಾ ಜನರಿಗೆ ಹೇಳಿದ ವಂದನೆಗಳು.

ನನ್ನ ಬಳಿಗೆ ಬೇಗ ಬರುವದಕ್ಕೆ ಪ್ರಯತ್ನಮಾ
ಡು; ಯಾಕಂದರೆ ದೇಮನು ಇಹಲೋಕವನ್ನು
ಪ್ರೀತಿಸಿ ನನ್ನನ್ನು ಬಿಟ್ಟು ಥೆಸಲೊನೀಕಕ್ಕೆ ಹೋ
ದನು; ಕ್ರೆಸ್ಕನು ಗಲಾತ್ಯಕ್ಕೂ ತೀತನು ದಲ್ಮಾತ್ಯ
ಕ್ಕೂ ಹೋದರು; ಲೂಕನು ಮಾತ್ರ ನನ್ನ ಜೊತೆಯ
ಲ್ಲಿದ್ದಾನೆ. ಮಾರ್ಕನನ್ನು ಸಂಗಡ ಕರಕೊಂಡು ಬಾ,
ಅವನು ನನಗೆ ಸೇವೆಗಾಗಿ ಉಪಯುಕ್ತನಾಗಿದ್ದಾನೆ.
ತುಖಿಕನನ್ನು ಎಫೆಸಕ್ಕೆ ಕಳುಹಿಸಿದೆನು. ತ್ರೋ 12
ವದಲ್ಲಿ ನಾನು ಕರ್ಪನ ಬಳಿಯಲ್ಲಿ ಬಿಟ್ಟುಬಂದ ಮೇ
ಲಂಗಿಯನ್ನೂ ಪುಸ್ತಕಗಳನ್ನೂ ಮುಖ್ಯವಾಗಿ ಚರ್ಮದ
ಕಾಗದಗಳನ್ನೂ ನೀನು ಬರುವಾಗ ತೆಗೆದುಕೊಂಡು ಬಾ.
ಕಂಚುಗಾರನಾದ ಅಲೆಕ್ಸಾಂದ್ರನು ನನಗೆ ಬಹಳ
ಕೇಡುಮಾಡಿದನು; ಕರ್ತನು ಅವನ ಕೃತ್ಯಗಳಿಗೆ
ಸರಿಯಾಗಿ ಅವನಿಗೆ ಪ್ರತಿಫಲವನ್ನು ಕೊಡುವನು.
ನೀನು ಸಹ ಅವನ ವಿಷಯದಲ್ಲಿ ಎಚ್ಚರಿಕೆಯಾಗಿರು;
ಅವನು ನಮ್ಮ ಮಾತುಗಳನ್ನು ಬಹಳವಾಗಿ ಎದುರಿಸಿ
ದನು. ನಾನು ಮೊದಲನೆಯ ಸಾರಿ ಪ್ರತಿವಾದಮಾಡಿ
ದಾಗ ಯಾರೂ ನನ್ನ ಕಡೆ ಆಗಲಿಲ್ಲ; ಎಲ್ಲರೂ ನನ್ನ
ನ್ನು ಕೈಬಿಟ್ಟರು; ಇದು ಅವರ ಲೆಕ್ಕಕ್ಕೆ ಸೇರಿಸಲ್ಪ
ಡದೆ ಇರಲಿ. ಆದರೆ ಕರ್ತನು ನನ್ನ ಬಳಿಯಲ್ಲಿ
ನಿಂತು ನನ್ನನ್ನು ಬಲಪಡಿಸಿ ನನ್ನ ಮೂಲಕ ಸುವಾ
ರ್ತೆಯು ಸಂಪೂರ್ಣವಾಗಿ ಸಾರಲ್ಪಡುವಂತೆಯೂ ಅನ್ಯ
ಜನರೆಲ್ಲರೂ ಅದನ್ನು ಕೇಳುವಂತೆಯೂ ಮಾಡಿದನು;
ಇದಲ್ಲದೆ ಆತನು ನನ್ನನ್ನು 3)ಸಿಂಹದ ಬಾಯೊಳ
ಗಿಂದ ತಪ್ಪಿಸಿದನು. ನಾನು ಯಾವ ದುಷ್ಕೃತ್ಯವನ್ನೂ
ಮಾಡದಂತೆ ಕರ್ತನು ನನ್ನನ್ನು ಕಾಪಾಡಿ ತನ್ನ ಬಳಿಗೆ
ಪರಲೋಕರಾಜ್ಯಕ್ಕೆ ಸೇರಿಸುವನು. ಯುಗಯುಗಾಂ
ತರಗಳಲ್ಲಿಯೂ ಆತನಿಗೆ ಸ್ತೋತ್ರ. ಆಮೆನ್.
ಪ್ರಿಸ್ಕಳಿಗೂ ಅಕ್ವಿಲ್ಲನಿಗೂ ಒನೇಸಿಫೊರನ ಮನೆ
ಯವರಿಗೂ ವಂದನೆಹೇಳು. ಎರಸ್ತನು ಕೊರಿಂಥ
ದಲ್ಲಿ ನಿಂತನು. ತ್ರೊಫಿಮನು ಅಸೌಖ್ಯವಾಗಿದ್ದದ
ರಿಂದ ಅವನನ್ನು ಮಿಲೇತದಲ್ಲಿ ಬಿಟ್ಟೆನು. ಚಳಿ
ಗಾಲಕ್ಕೆ ಮುಂಚೆಯೇ ಬರುವದಕ್ಕೆ ಪ್ರಯತ್ನಮಾಡು.
ಯುಬೂಲನೂ ಪೂದೆಯನೂ ಲೀನನೂ ಕ್ಲೌದ್ಯಳೂ
ಉಳಿದ ಸಹೋದರರೆಲ್ಲರೂ ನಿನಗೆ ವಂದನೆಹೇಳಿದ್ದಾರೆ.
ಕರ್ತನು ನಿನ್ನ ಆತ್ಮದ ಸಂಗಡ ಇರಲಿ.
ಕೃಪೆಯು ನಿಮ್ಮೊಂದಿಗಿರಲಿ.

---

1) ಅಥವಾ, ಪ್ರತಿಯೊಂದು ಶಾಸ್ತ್ರವು ದೈವಪ್ರೇರಿತವಾಗಿ ಉಪದೇಶಕ್ಕೂ . . . 2) ಮೂಲ: ನೀತಿಯೆಂಬ. 3) ಅಥ
ನಾನು ಸಿಂಹದ ಬಾಯಿಗೆ ಬೀಳದಂತೆ ಕಾಯಲ್ಪಟ್ಟೆನು.

# THE EPISTLE OF SAINT PAUL TO
# TITUS

## ಪೌಲನು ತೀತನಿಗೆ ಬರೆದ ಪತ್ರಿಕೆ

ಒಕ್ಕಣೆ.

1 1-4 ದೇವರ ದಾಸನೂ ಯೇಸು ಕ್ರಿಸ್ತನ ಅಪೊಸ್ತ
ಲನೂ ಆಗಿರುವ ಪೌಲನು ನಮ್ಮೆಲ್ಲರಿಗೆ ಹುದುವಾಗಿ
ರುವ ನಂಬಿಕೆಯ ಸಂಬಂಧದಲ್ಲಿ ನನ್ನ ನಿಜಕುಮಾರ
ನಾದ ತೀತನಿಗೆ ಬರೆಯುವದೇನಂದರೆ—ತಂದೆಯಾದ
ದೇವರಿಂದಲೂ ನಮ್ಮ ರಕ್ಷಕನಾದ ಕ್ರಿಸ್ತ ಯೇಸುವಿ
ನಿಂದಲೂ ನಿನಗೆ ಕೃಪೆಯೂ ಶಾಂತಿಯೂ ಆಗಲಿ. ದೇವ
ರಾದುಕೊಂಡವರ ನಂಬಿಕೆಯೂ ಭಕ್ತಿಯನ್ನುಂಟುಮಾ
ಡುವ ಸತ್ಯದ ಪರಿಜ್ಞಾನವೂ ವೃದ್ಧಿಯಾಗುವದಕ್ಕೋ
ಸ್ಕರವೇ ಅಪೊಸ್ತಲನಾಗಿದ್ದೇನೆ. ಆ ನಂಬಿಕೆಗೂ ಸತ್ಯದ
ಪರಿಜ್ಞಾನಕ್ಕೂ ನಿತ್ಯಜೀವದ ನಿರೀಕ್ಷೆಯೇ ಆಧಾರ
ವಾಗಿದೆ. ಸುಳ್ಳಾಡದ ದೇವರು ಆ ನಿತ್ಯಜೀವವನ್ನು
ಕೊಡುತ್ತೇನೆಂದು ಅನಾದಿಕಾಲದಲ್ಲಿ ವಾಗ್ದಾನಮಾಡಿ
ತನ್ನ ಕ್ಲುಪ್ತ ಸಮಯದಲ್ಲಿ ವಾಗ್ದಾನ ನೆರವೇರಿಸಿ
ಪ್ರಸಂಗದ ಮೂಲಕ ಪ್ರಕಟಿಸಿದನು. ಆ ಪ್ರಸಂಗೋ
ದ್ಯೋಗವು ನಮ್ಮ ರಕ್ಷಕನಾದ ದೇವರ ಅಪ್ಪಣೆಯ
ಪ್ರಕಾರ ನನಗೆ ಒಪ್ಪಿಸಲ್ಪಟ್ಟದೆ.

ಸಭೆಯ ಹಿರಿಯರಲ್ಲಿ ಇರಬೇಕಾದ ಲಕ್ಷಣಗಳು.

5 ನೀನು ಕ್ರೇತದ್ವೀಪದಲ್ಲಿ ಇನ್ನೂ ಕ್ರಮಕ್ಕೆ ಬಾರ
ದಿರುವ ಕಾರ್ಯಗಳನ್ನು ಕ್ರಮಪಡಿಸಿ ಪಟ್ಟಣಪಟ್ಟ
ಣಗಳಲ್ಲೂ ಸಭೆಯ ಹಿರಿಯರನ್ನು ನೇಮಿಸಬೇಕೆಂದು
ನಾನು ನಿನಗೆ ಅಪ್ಪಣೆಕೊಟ್ಟು ನಿನ್ನನ್ನು ಅಲ್ಲೇ ಬಿಟ್ಟು
6 ಬಂದೆನಲ್ಲಾ. ಸಭೆಯ ಹಿರಿಯನು ನಿಂದಾರಹಿತನೂ
ಏಕಪತ್ನಿಯುಳ್ಳವನೂ ಆಗಿರಬೇಕು. ಅವನ ಮಕ್ಕಳು
ಕರ್ತನನ್ನು ನಂಬಿದವರಾಗಿರಬೇಕು; ಅವರು ದುರ್ಮಾ
ರ್ಗಸ್ಥರೆನಿಸಿಕೊಂಡವರಾಗಲಿ ಅಧಿಕಾರಕ್ಕೆ ಒಳಗಾಗದ
7 ವರಾಗಲಿ ಆಗಿರಬಾರದು. ಯಾಕಂದರೆ ಸಭಾಧ್ಯಕ್ಷನು
ದೇವರ ಮನೆವಾರ್ತೆಯವನಾಗಿರುವದರಿಂದ ನಿಂದಾರಹಿ
ತನಾಗಿರಬೇಕು; ಅವನು ಸ್ವೇಚ್ಛಾಪರನಾದರೂ ಮುಂ
ಗೋಪಿಯಾದರೂ ಕುಡಿದು ಜಗಳಮಾಡುವವನಾದರೂ
ಹೊಡೆದಾಡುವವನಾದರೂ ನೀಚಲಾಭವನ್ನು ಅಪೇ
8 ಕ್ಷಿಸುವವನಾದರೂ ಆಗಿರದೆ ಅತಿಥಿಸತ್ಕಾರಮಾಡು
ವವನೂ ಒಳ್ಳೇದನ್ನು ಪ್ರೀತಿಸುವವನೂ ಸ್ವಸ್ಥಚಿತ್ತನೂ
ನ್ಯಾಯವಂತನೂ ದೇವಭಕ್ತನೂ ಜಿತೇಂದ್ರಿಯನೂ
9 ಆಗಿದ್ದು ತಾನು ಸ್ವಸ್ಥಬೋಧನೆಯಿಂದ ಜನರನ್ನು
ಎಚ್ಚರಿಸುವದಕ್ಕೂ ಎದುರಿಸುವವರ ಬಾಯಿಕಟ್ಟುವದ
ಕ್ಕೂ ಶಕ್ತನಾಗಿರುವಂತೆ ಕ್ರಿಸ್ತಬೋಧಾನುಸಾರವಾದ
ನಂಬತಕ್ಕ ವಾಕ್ಯವನ್ನು ದೃಢವಾಗಿ ಹಿಡಿದುಕೊಂಡವ
ನಾಗಿರಬೇಕು.

ಅಧಿಕಾರಕ್ಕೆ ಒಳಗಾಗದವರ ವಿಷಯದಲ್ಲಿ ತೀತನು ಮಾಡ
ಬೇಕಾದದ್ದು.

ಅನೇಕರು ಬರೀ ಮಾತಿನವರಾಗಿಯೂ ಮೋಸ 10
ಗಾರರಾಗಿಯೂ ಇದ್ದು ಅಧಿಕಾರಕ್ಕೆ ಒಳಗಾಗದವ
ರಾಗಿದ್ದಾರೆ; ಅವರೊಳಗೆ ಹೆಚ್ಚು ಜನರು ಸುನ್ನತಿಯ
ವರು. ಅವರು ನೀಚಲಾಭವನ್ನು ಹೊಂದುವದ 11
ಕ್ಕಾಗಿ ಮಾಡಬಾರದ ಉಪದೇಶವನ್ನು ಮಾಡಿ ಕು
ಟುಂಬಕುಟುಂಬಗಳನ್ನೇ ಹಾಳುಮಾಡುತ್ತಾರಾದದರಿಂ
ದ ಅವರ ಬಾಯಿ ಮುಚ್ಚಿಸಬೇಕಾಗಿದೆ. ಕ್ರೇತದವರು 12
ಯಾವಾಗಲೂ ಸುಳ್ಳುಗಾರರೂ ದುಷ್ಟಮೃಗಗಳೂ
ಸೋಮಾರಿಗಳಾದ ಹೊಟ್ಟೇಬಾಕರೂ ಆಗಿದ್ದಾರೆಂದು
ಅವರಲ್ಲಿಯೇ ಹುಟ್ಟಿದ ಒಬ್ಬ ಪ್ರವಾದಿಯು ಹೇಳಿ
ದನು. ಈ ಸಾಕ್ಷಿಯು ನಿಜವೇ. ಆದಕಾರಣ ಅವ 13-14
ರು ಯೆಹೂದ್ಯರ ಕಲ್ಪನಾಕಥೆಗಳಿಗೂ ಸತ್ಯಭ್ರಷ್ಟ
ರಾದ ಮನುಷ್ಯರ ವಿಧಿಗಳಿಗೂ ಲಕ್ಷ್ಯಕೊಡದೆ ಕ್ರಿಸ್ತ
ನಂಬಿಕೆಯಲ್ಲಿ ಸ್ವಸ್ಥಚಿತ್ತರಾಗಿರುವಂತೆ ಅವರನ್ನು
ಕಠಿಣವಾಗಿ ಖಂಡಿಸು. ಶುದ್ಧರಿಗೆ ಎಲ್ಲವೂ ಶುದ್ಧವೇ; 15
ಆದರೆ ಮಲಿನವಾದವರಿಗೂ ನಂಬಿಕೆಯಿಲ್ಲದವರಿಗೂ
ಯಾವದೂ ಶುದ್ಧವಲ್ಲ; ಅವರ ಬುದ್ಧಿಯೂ ಮನ
ಸ್ಸಾಕ್ಷಿಯೂ ಎರಡೂ ಮಲಿನವಾಗಿವೆ. ಅವರು ತಾವು
ದೇವರನ್ನು ಅರಿತವರೆಂದು ಹೇಳಿಕೊಳ್ಳುತ್ತಾರೆ; ಆದರೆ 16
ಅವರು ಅಸಹ್ಯರೂ ಅವಿಧೇಯರೂ ಸತ್ಕಾರ್ಯಗಳಿ
ಗೆಲ್ಲಾ ಅಪ್ರಯೋಜಕರೂ ಆಗಿರುವದರಿಂದ ದೇವ
ರನ್ನು ಅರಿಯೆವೆಂದು ತಮ್ಮ ಕಾರ್ಯಗಳಿಂದಲೇ ಹೇಳಿ
ದಂತಾಯಿತು.

ವೃದ್ಧರೂ ಪ್ರಾಯಸ್ಥರೂ ಸ್ತ್ರೀಪುರುಷರೂ ಎಲ್ಲರೂ
ಸುನಡತೆಯುಳ್ಳವರಾಗಿರಬೇಕೆಂಬದೇ ಕ್ರೈಸ್ತ ಸದ್ಧರ್ಮದ ಬೋಧನೆ.

ನೀನಾದರೋ ಸ್ವಸ್ಥಬೋಧನೆಗೆ ಅನುಗುಣವಾಗಿ 2
ಉಪದೇಶಮಾಡು. ಹೇಗಂದರೆ ವೃದ್ಧರು ಮದ್ಯಾ 2
ಸಕ್ತಿಯಿಲ್ಲದವರೂ ಗೌರವವುಳ್ಳವರೂ ಜಿತೇಂದ್ರಿಯರೂ
ನಂಬಿಕೆ ಪ್ರೀತಿ ತಾಳ್ಮೆ ಇವುಗಳಲ್ಲಿ ಸ್ವಸ್ಥರೂ ಆಗಿರಬೇ
ಕೆಂದು ಬೋಧಿಸು. ಹಾಗೆಯೇ ವೃದ್ಧಸ್ತ್ರೀಯರು
ಚಾಡಿಹೇಳುವವರೂ ಮದ್ಯಕ್ಕೆ ಗುಲಾಮರೂ ಆಗ

3 ರದೆ ದೇವಭಕ್ತೆಯರಿಗೆ ಯೋಗ್ಯವಾದ ನಡತೆಯುಳ್ಳ
ವರೂ ಸದ್ಬೋಧನೆ ಹೇಳುವವರೂ ಆಗಿರಬೇಕೆಂದು
4 ಬೋಧಿಸು. ಇದಲ್ಲದೆ ಅವರು ಪ್ರಾಯದ ಸ್ತ್ರೀಯ
ರಿಗೆ—ನಿಮ್ಮ ಮೂಲಕ ದೇವರ ವಾಕ್ಯಕ್ಕೆ ದೂಷಣೆ
ಯಾಗದಂತೆ ನೀವು ಗಂಡಂದಿರನ್ನೂ ಮಕ್ಕಳನ್ನೂ
ಪ್ರೀತಿಸುವವರೂ ದಮೆಯುಳ್ಳವರೂ ಪತಿವ್ರತೆಯರೂ
5 ಮನೆಯಲ್ಲೇ ಕೆಲಸಮಾಡುವವರೂ ಸುಶೀಲೆಯರೂ
ನಿಮ್ಮ ಗಂಡಂದಿರಿಗೆ ಅಧೀನರೂ ಆಗಿರಬೇಕೆಂದು
6 ಬುದ್ಧಿಕಲಿಸುವ ಹಾಗೆ ಬೋಧಿಸು. ಹಾಗೆಯೇ
ಎಲ್ಲಾ ವಿಷಯುಗಳಲ್ಲೂ ಜಿತೇಂದ್ರಿಯರಾಗಿರಬೇ
7 ಕೆಂದು ನೀನು ಯೌವನಸ್ಥರನ್ನು ಎಚ್ಚರಿಸು. ಸತ್ಕಾ
ರ್ಯಮಾಡುವದರಲ್ಲಿ ನೀನೇ ಮಾದರಿಯಾಗಿರು.
ನೀನು ಮಾಡುವ ಉಪದೇಶದಲ್ಲಿ ಯಥಾರ್ಥ
ತ್ವವೂ ಗೌರವವೂ ಆಕ್ಷೇಪಣೆಗೆ ಆಸ್ಪದವಿಲ್ಲದಂಥ
8 ಸ್ವಸ್ಥಬುದ್ಧಿಯೂ ಇರಬೇಕು; ಆಗ ನಮ್ಮನ್ನು
ಎದುರಿಸುವವರು ನಮ್ಮ ವಿಷಯದಲ್ಲಿ ಕೆಟ್ಟದ್ದೇನೂ
ಹೇಳುವದಕ್ಕೆ ಅವಕಾಶವಿಲ್ಲದೆ ನಾಚಿಕೊಳ್ಳುವರು.
9 ದಾಸರು ಎಲ್ಲಾದರಲ್ಲಿ ತಮ್ಮ ಯಜಮಾನರಿಗೆ ಅಧೀ
ನರಾಗಿದ್ದು ಅವರನ್ನು ಮೆಚ್ಚಿಸುವದಕ್ಕೆ ಪ್ರಯಾಸ
10 ಪಡುತ್ತಾ ಎದುರುಮಾತನ್ನಾಡದೆ ಯಾವದನ್ನೂ ಕದ್ದಿ
ಟ್ಟುಕೊಳ್ಳದೆ ಪೂರಾ ನಂಬಿಗಸ್ತರೆಂದು ಹೆಸರುಹೊಂದಿ
ನಮ್ಮ ರಕ್ಷಕನಾದ ದೇವರ ಉಪದೇಶಕ್ಕೆ ಎಲ್ಲಾ
ವಿಷಯುಗಳಲ್ಲಿ ಅಲಂಕಾರವಾಗಿರಬೇಕೆಂದು ಬೋಧಿ
11 ಸು. ಯಾಕಂದರೆ ಎಲ್ಲಾ ಮನುಷ್ಯರಿಗೆ ರಕ್ಷಣೆಯ
ನ್ನುಂಟುಮಾಡುವ ದೇವರ ಕೃಪೆಯು ಪ್ರತ್ಯಕ್ಷವಾ
12-13 ಯಿತು; ನಾವು ಭಕ್ತಿಹೀನತೆಯನ್ನೂ ಲೋಕದ
ಆಶೆಗಳನ್ನೂ ವಿಸರ್ಜಿಸಿ ಭಾಗ್ಯಕರವಾದ ನಿರೀಕ್ಷೆ
ಯನ್ನು ಅಂದರೆ ಮಹಾದೇವರ ಮತ್ತು ನಮ್ಮ ರಕ್ಷಕ
ನಾದ ಯೇಸು ಕ್ರಿಸ್ತನ ಪ್ರಭಾವದ ಪ್ರತ್ಯಕ್ಷತೆಯನ್ನು
ಎದುರುನೋಡುತ್ತಾ ಇಹಲೋಕದಲ್ಲಿ ಸ್ವಸ್ಥಚಿತ್ತರಾಗಿ
ಯೂ ನೀತಿವಂತರಾಗಿಯೂ ಭಕ್ತಿಯುಳ್ಳವರಾಗಿಯೂ
ಬದುಕಬೇಕೆಂದು ಅದು ನಮಗೆ ಬೋಧಿಸುತ್ತದೆ.
14 ಆತನು ನಮ್ಮನ್ನು ಸಕಲ ಅಧರ್ಮದಿಂದ ವಿಮೋಚಿ
ಸುವದಕ್ಕೂ ಸತ್ಕ್ರಿಯೆಗಳಲ್ಲಿ ಆಸಕ್ತರಾದ ಸ್ವಕೀಯ
ಜನರನ್ನು ತನಗಾಗಿ ಪರಿಶುದ್ಧಮಾಡುವದಕ್ಕೂ ನಮು
ಗೋಸ್ಕರ ತನ್ನನ್ನು ಒಪ್ಪಿಸಿಕೊಟ್ಟನು.
15 ಈ ಕಾರ್ಯಗಳ ವಿಷಯದಲ್ಲಿ ಬೋಧಿಸುತ್ತಾ ಎಚ್ಚ
ರಿಸುತ್ತಾ ಪೂರ್ಣ ಅಧಿಕಾರದಿಂದ ಖಂಡಿಸುತ್ತಾ ಇರು.
ಯಾರೂ ನಿನ್ನನ್ನು ತಿರಸ್ಕರಿಸದ ಹಾಗೆ ನೋಡಿಕೋ.

3 ಅಧಿಪತಿಗಳಿಗೂ ಅಧಿಕಾರಿಗಳಿಗೂ ಅಧೀನರಾಗಿ
ವಿಧೇಯರಾಗಿರಬೇಕೆಂತಲೂ ಸಕಲಸತ್ಕಾರ್ಯಗಳನ್ನು
2 ಮಾಡುವದಕ್ಕೆ ಸಿದ್ಧರಾಗಿರಬೇಕೆಂತಲೂ, ಯಾರನ್ನೂ
ದೂಷಿಸದೆ ಕುತರ್ಕಮಾಡದೆ ಎಲ್ಲಾ ಮನುಷ್ಯರಿಗೆ
ಪೂರ್ಣಸಾಧುಗುಣವನ್ನು ತೋರಿಸುತ್ತಾ ಸಾತ್ವಿಕರಾ
3 ಗಿರಬೇಕೆಂತಲೂ ಅವರಿಗೆ ಜ್ಞಾಪಕಕೊಡು. ನಾವು
ಸಹ ಮೊದಲು ಅವಿವೇಕಿಗಳೂ ಅವಿಧೇಯರೂ ಮೋಸ
ಹೋದವರೂ ನಾನಾ ವಿಧವಾದ ದುರಾಶೆಗಳಿಗೆ ಮತ್ತು
ಭೋಗಗಳಿಗೆ ಅಧೀನರೂ ಕೆಟ್ಟತನ ಹೊಟ್ಟೇಕಿಚ್ಚುಗಳಲ್ಲಿ
ಕಾಲಕಳೆಯುವವರೂ ಅಸಹ್ಯರೂ ಒಬ್ಬರನ್ನೊಬ್ಬರು
ಹಗೆಮಾಡುವವರೂ ಆಗಿದ್ದೆವು. ಆದರೆ ನಮ್ಮ ರಕ್ಷಕ
ನಾದ ದೇವರ ದಯೆಯೂ ಜನೋಪಕಾರವೂ ಪ್ರತ್ಯ
ಕ್ಷವಾದಾಗ ನಾವು ಮಾಡಿದ ಪುಣ್ಯಕ್ರಿಯೆಗಳ ನಿಮಿತ್ತ
ದಿಂದಲ್ಲ ಆತನ ಕರುಣೆಯಲ್ಲಿಯೇ ಪುನರ್ಜನ್ಮವನ್ನು
ಸೂಚಿಸುವ ಸ್ನಾನದ ಮೂಲಕವಾಗಿಯೂ ಪವಿ
ತ್ರಾತ್ಮನು ನಮ್ಮಲ್ಲಿ ನೂತನಸ್ವಭಾವವನ್ನು ಉಂಟು
ಮಾಡುವದರ ಮೂಲಕವಾಗಿಯೂ ಆತನು ನಮ್ಮನ್ನು
ರಕ್ಷಿಸಿದನು. ನಾವು ನಮ್ಮ ರಕ್ಷಕನಾದ ಯೇಸು
ಕ್ರಿಸ್ತನ ಕೃಪೆಯಿಂದ ನೀತಿವಂತರೆಂದು ನಿರ್ಣಯಿಸ
ಲ್ಪಟ್ಟು ನಿತ್ಯಜೀವದ ನಿರೀಕ್ಷೆಯನ್ನು ಪಡೆದು ಅದಕ್ಕೆ
ಬಾಧ್ಯರಾಗುವಂತೆ ದೇವರು ಆತನ ಮೂಲಕ ಪವಿ
ತ್ರಾತ್ಮವನ್ನು ನಮ್ಮ ಮೇಲೆ ಸಮೃದ್ಧಿಯಾಗಿ ಸುರಿಸಿ
ದನು. ಇದು ನಂಬತಕ್ಕ ಮಾತಾಗಿದೆ; ದೇವರಲ್ಲಿ
ನಂಬಿಕೆ ಇಟ್ಟಿರುವವರು ಸತ್ಕ್ರಿಯೆಗಳನ್ನು ಮಾಡುವದ
ರಲ್ಲಿ ಜಾಗರೂಕರಾಗಿರುವಂತೆ ನೀನು ಈ ಎಲ್ಲಾ
ಮಾತುಗಳನ್ನು ದೃಢವಾಗಿ ಹೇಳಬೇಕೆಂದು ಅಪೇಕ್ಷಿಸು
ತ್ತೇನೆ. ಇವು ಉತ್ತಮವೂ ಮನುಷ್ಯರಿಗೆ ಪ್ರಯೋಜ
ನಕರವೂ ಆಗಿವೆ. ಆದರೆ ಬುದ್ಧಿಯಿಲ್ಲದ ವಿತರ್ಕ
ಗಳಿಗೂ ವಂಶಾವಳಿಗಳಿಗೂ ಜಗಳಗಳಿಗೂ ಧರ್ಮ
ಶಾಸ್ತ್ರದ ವಿಷಯವಾದ ವಾಗ್ವಾದಗಳಿಗೂ ದೂರವಾ
ಗಿರು; ಅವು ನಿಷ್ಪ್ರಯೋಜನವೂ ವ್ಯರ್ಥವೂ ಆಗಿವೆ.
ಸಭೆಯಲ್ಲಿ ಭೇದಹುಟ್ಟಿಸುವ ಮನುಷ್ಯನನ್ನು ಎರಡು
ಸಾರಿ ಬುದ್ಧಿಹೇಳಿದ ಮೇಲೆ ಬಿಟ್ಟುಬಿಡು; ಅಂಥವನು
ಸನ್ಮಾರ್ಗತಪ್ಪಿದವನೂ ಪಾಪಮಾಡುವವನೂ ಆಗಿ
ದ್ದಾನೆ; ತಾನು ಶಿಕ್ಷಾಪಾತ್ರನೆಂದು ಅವನ ಮನಸ್ಸೇ
ನಿರ್ಣಯಿಸುವದು.

ಕಡೇ ಮಾತುಗಳು.

ನಾನು ನಿಕೊಪೊಲಿಯಲ್ಲಿ ಚಳಿಗಾಲವನ್ನು ಕಳೆಯ
ಬೇಕೆಂದು ನಿಶ್ಚಯಿಸಿಕೊಂಡದರಿಂದ ಅರ್ತೆಮನನ್ನಾ
ಗಲಿ ತುಖಿಕನನ್ನಾಗಲಿ ನಿನ್ನ ಬಳಿಗೆ ಕಳುಹಿಸಿದ
ಕೂಡಲೆ ಅಲ್ಲಿಗೆ ನನ್ನ ಹತ್ತಿರ ಬರುವದಕ್ಕೆ ಪ್ರಯತ್ನ
ಮಾಡು. ನ್ಯಾಯಶಾಸ್ತ್ರಿ ಜೇನನನ್ನೂ ಅಪೊಲ್ಲೋಸ
ನನ್ನೂ ಜಾಗ್ರತೆಯಾಗಿ ಸಾಗಕಳುಹಿಸು; ಅವರಿಗೇನೂ
ಕೊರತೆಯಾಗಬಾರದು. ನಮ್ಮ ಜನರು ಸತ್ಕ್ರಿಯಾ
ಹೀನರಾಗದಂತೆ ಅವರೂ ಸಹೋದರರಿಗೆ ಬೇಕಾದದ್ದನ್ನು
ಕೊಡುವವರಾಗಿ ಪರೋಪಕಾರವನ್ನು ಕಲಿತುಕೊಳ್ಳಲಿ.

ನನ್ನೊಂದಿಗಿರುವವರೆಲ್ಲರೂ ನಿನಗೆ ವಂದನೆಹೇಳು
ತ್ತಾರೆ. ಕ್ರಿಸ್ತನನ್ನು ನಂಬುವವರಾಗಿ ನಮ್ಮನ್ನು ಪ್ರೀತಿ
ಸುವವರಿಗೆ ವಂದನೆಹೇಳು.

ಕೃಪೆಯು ನಿಮ್ಮೆಲ್ಲರೊಂದಿಗೆ ಇರಲಿ.

# THE EPISTLE OF SAINT PAUL TO
# PHILEMON

## ಪೌಲನು ಫಿಲೆಮೋನನಿಗೆ ಬರೆದ ಪತ್ರಿಕೆ

ಒಕ್ಕಣೆ.

1 ಕ್ರಿಸ್ತ ಯೇಸುವಿನ ಸೆರೆಯವನಾಗಿರುವ ಪೌಲನೂ
ಸಹೋದರನಾದ ತಿಮೊಥೆಯನೂ ನಮಗೆ ಪ್ರಿಯನೂ
ಜೊತೆಗೆಲಸದವನೂ ಆಗಿರುವ ಫಿಲೆಮೋನನೆಂಬ ನಿನಗೂ
2 ಸಹೋದರಿಯಾದ ಅಪ್ಫಿಯಳಿಗೂ ನಮ್ಮ ಸಹಭಟನಾದ
ಅರ್ಖಿಪ್ಪನಿಗೂ ನಿನ್ನ ಮನೆಯಲ್ಲಿ ಕೂಡುವ ಸಭೆ
3 ಯವರಿಗೂ ಬರೆಯುವದೇನಂದರೆ—ನಮ್ಮ ತಂದೆ
ಯಾದ ದೇವರಿಂದಲೂ ಕರ್ತನಾದ ಯೇಸು ಕ್ರಿಸ್ತ
ನಿಂದಲೂ ನಿಮಗೆ ಕೃಪೆಯೂ ಶಾಂತಿಯೂ ಆಗಲಿ.

ಫಿಲೆಮೋನನ ಸದ್ಗುಣಗಳ ನಿಮಿತ್ತ ಪೌಲನು ದೇವರಿಗೆ ಮಾಡುವ ಸ್ತೋತ್ರ.

5 ಕರ್ತನಾದ ಯೇಸುವಿನ ಮೇಲೆ ನೀನು ಇಟ್ಟಿರುವ
ನಂಬಿಕೆಯನ್ನು ಕುರಿತೂ ದೇವಜನರೆಲ್ಲರ ಮೇಲಿರುವ
4 ನಿನ್ನ ಪ್ರೀತಿಯನ್ನು ಕುರಿತೂ ಕೇಳಿದ್ದರಿಂದ ನಾನು
ಪ್ರಾರ್ಥನೆಮಾಡುವಾಗೆಲ್ಲಾ ದೇವರಿಗೆ ಯಾವಾಗಲೂ
ಸ್ತೋತ್ರವನ್ನು ಸಲ್ಲಿಸಿ ನಿನಗೋಸ್ಕರ ವಿಜ್ಞಾಪನೆಮಾಡು
6 ತ್ತೇನೆ. ಕ್ರಿಸ್ತನಲ್ಲಿ ನಮಗೆ ದೊರಕಿರುವ ಎಲ್ಲಾ
ಸುವರಗಳನ್ನು ಕುರಿತು ನೀನು ತಿಳುವಳಿಕೆಯನ್ನು
ಹೊಂದುತ್ತಿರುವಲ್ಲಿ 1)ಕ್ರಿಸ್ತನಂಬಿಕೆಯಲ್ಲಿರುವ ನಿನ್ನ
ಅನ್ಯೋನ್ಯತೆಯು ಕ್ರಿಸ್ತನಿಗೆ ಹೆಚ್ಚಾದ ಮಹಿಮೆಯನ್ನು
7 ಉಂಟುಮಾಡಬೇಕೆಂದು ಪ್ರಾರ್ಥಿಸುತ್ತೇನೆ. ಸಹೋದ
ರನೇ, ನಿನ್ನ ಮೂಲಕ ದೇವಜನರ ಹೃದಯಗಳಿಗೆ
ಪ್ರೋತ್ಸಾಹ ಉಂಟಾದದರಿಂದ ನಿನ್ನ ಪ್ರೀತಿಯ ನಿಮಿತ್ತ
ನನಗೆ ಬಹಳ ಸಂತೋಷವೂ ಆದರಣೆಯೂ ಉಂಟಾ
ದವು.

ಓಡಿಹೋದ ಒನೇಸಿಮನೆಂಬ ದಾಸನನ್ನು ಕ್ಷಮಿಸಿ ಸೇರಿಸಿಕೊಳ್ಳಬೇಕೆಂದು ವಿಜ್ಞಾಪನೆ.

8 ಆದಕಾರಣ ನಿನಗೆ ಯುಕ್ತವಾದದ್ದನ್ನು ಆಜ್ಞಾಪಿಸು
ವದಕ್ಕೆ ನನಗೆ ಕ್ರಿಸ್ತನಲ್ಲಿ ಪೂರಾ ಅಧಿಕಾರವಿದ್ದರೂ
9 ಹಾಗೆ ಆಜ್ಞಾಪಿಸದೆ 2)ಮುದುಕನೂ ಈಗ ಕ್ರಿಸ್ತ
ಯೇಸುವಿನ ನಿಮಿತ್ತ ಸೆರೆಯವನೂ ಆಗಿರುವ ಈ
ಪೌಲನೆಂಬ ನಾನು ಪ್ರೀತಿಯ ನಿಮಿತ್ತ ನಿನ್ನನ್ನು ಬೇಡಿ
ಕೊಳ್ಳುತ್ತೇನೆ. ನಾನು ಸೆರೆಯಲ್ಲಿ ಪಡೆದಿರುವ ನನ್ನ 10
ಮಗನಾದ ಒನೇಸಿಮನ ವಿಷಯದಲ್ಲಿ ನಿನ್ನನ್ನು
ಬೇಡಿಕೊಳ್ಳುತ್ತೇನೆ. ಅವನು ಮೊದಲು ನಿನಗೆ ಅಪ್ರ 11
ಯೋಜಕನಾಗಿದ್ದನು, ಈಗ ನಿನಗೂ ನನಗೂ ಪ್ರಯೋ
ಜಕನಾಗಿದ್ದಾನೆ. ಅವನು ನನಗೆ ಪ್ರಾಣದಂತಿದ್ದರೂ 12
ಅವನನ್ನು ನಿನ್ನ ಬಳಿಗೆ ಹಿಂದಕ್ಕೆ ಕಳುಹಿಸಿಕೊಟ್ಟಿದ್ದೇನೆ.
ನಾನು ಸುವಾರ್ತೆಯ ನಿಮಿತ್ತ ಸೆರೆಯಲ್ಲಿರಲಾಗಿ 13
ನಿನಗೆ ಬದಲಾಗಿ ಅವನು ನನಗೆ ಉಪಚಾರಮಾಡುವಂತೆ
ಅವನನ್ನು ನನ್ನ ಬಳಿಯಲ್ಲೇ ಇಟ್ಟುಕೊಳ್ಳಬೇಕೆಂದು
ಯೋಚಿಸಿದ್ದೆನು. ಆದರೆ ನಿನ್ನ ಉಪಕಾರವು ಬಲಾ 14
ತ್ಕಾರದಿಂದಾಗದೆ ಮನಃಪೂರ್ವಕವಾಗಿಯೇ ಇರಬೇ
ಕೆಂದು ಯೋಚಿಸಿ ನಿನ್ನ ಸಮ್ಮತಿಯಿಲ್ಲದೆ ಏನು ಮಾಡು
ವದಕ್ಕೂ ನನಗೆ ಇಷ್ಟವಿರಲಿಲ್ಲ. ಅವನು ಸ್ವಲ್ಪ ಕಾಲ 15
ನಿನ್ನಿಂದ ಅಗಲಿಸಲ್ಪಟ್ಟದ್ದು ನಿರಂತರವೂ ನಿನ್ನವನಾಗ
ಬೇಕೆಂಬದಕ್ಕೋಸ್ಕರವೋ ಏನೋ. ಇನ್ನು ಮೇಲೆ 16
ಅವನು ದಾಸನಾಗದೆ ದಾಸನಿಗಿಂತ ಉತ್ತಮನಾಗಿ ಪ್ರಿಯ
ಸಹೋದರನಂತಾಗಬೇಕು. ಅವನು ನನಗೆ ಬಹಳ
ಪ್ರಿಯನಾಗಿರುವಲ್ಲಿ ನಿನಗೆ ಲೋಕಸಂಬಂಧದಲ್ಲಿಯೂ
ಕರ್ತನ ಸಂಬಂಧದಲ್ಲಿಯೂ ಇನ್ನೂ ಎಷ್ಟೋ ಪ್ರಿಯ
ನಾಗಿರುವನು. ಹಾಗಾದರೆ ನೀನು ನನ್ನನ್ನು ಜೊತೆ 17
ಗಾರನೆಂದು ಎಣಿಸಿದರೆ ನನ್ನನ್ನು ಸೇರಿಸಿಕೊಳ್ಳುವ
ಪ್ರಕಾರವೇ ಅವನನ್ನು ಸೇರಿಸಿಕೋ. ಅವನಿಂದ 18
ನೀನು ಏನಾದರೂ ನಷ್ಟಪಟ್ಟಿದ್ದರೆ ಅಥವಾ ಅವನು
ಸಾಲವೇನಾದರೂ ತೀರಿಸಬೇಕಾಗಿದ್ದರೆ ಅದನ್ನು ನನ್ನ
ಲೆಕ್ಕಕ್ಕೆ ಹಾಕು; ನಾನೇ ಕೊಟ್ಟು ತೀರಿಸುತ್ತೇನೆಂದು 19
ಪೌಲನೆಂಬ ನಾನು ಸ್ವಂತ ಕೈಯಿಂದ ಬರೆದಿದ್ದೇನೆ.
ನಿನ್ನ ಆತ್ಮದ ವಿಷಯದಲ್ಲಿ ನೀನೇ ನನ್ನ ಸಾಲದಲ್ಲಿದ್ದೀ
ಎಂದು ನಾನು ಬೇರೆ ಹೇಳಬೇಕೇ. ಹೌದು, ಸಹೋ 20
ದರನೇ, ಕರ್ತನಲ್ಲಿ ನಿನ್ನಿಂದ ನನಗೆ ಪ್ರಯೋಜನವಾ
ಗುವ ಹಾಗೆ ಮಾಡು; ಕ್ರಿಸ್ತನಲ್ಲಿ ನನ್ನ ಹೃದಯ
ವನ್ನು ಸಂತೋಷಪಡಿಸು. ನನ್ನ ಮಾತನ್ನು ಕೇಳುವಿ 21
ಎಂಬ ಭರವಸವುಳ್ಳವನಾಗಿ ಈ ಪತ್ರಿಕೆಯನ್ನು ನಿನಗೆ
ಬರೆದಿದ್ದೇನೆ. ನಾನು ಹೇಳಿದ್ದಕ್ಕಿಂತಲೂ ಹೆಚ್ಚಾಗಿ
ಮಾಡುವಿಯೆಂದು ನನಗೆ ಗೊತ್ತುಂಟು.

---

1) ಅಥವಾ, ನಿನ್ನ ನಂಬಿಕೆಯಿಂದ ಉಂಟಾಗುವ ಪರೋಪಕಾರಭಾವವು. 2) ಅಥವಾ, ರಾಯಭಾರಿಯೂ.

ಕಡೇ ಮಾತುಗಳೂ ವಂದನೆಗಳೂ.

22 ಇದಲ್ಲದೆ ದೇವರು ನಿನ್ನ ಪ್ರಾರ್ಥನೆಗಳನ್ನು
ಕೇಳಿ ನನ್ನನ್ನು ನಿಮ್ಮ ಬಳಿಗೆ ಬರುವದಕ್ಕೆ ಅನುಗ್ರಹಿ
ಸುವನೆಂದು ನನಗೆ ನಿರೀಕ್ಷೆ ಉಂಟು. ಆದಕಾರಣ
ನನಗೋಸ್ಕರ ಇಳುಕೊಳ್ಳುವ ಸ್ಥಳವನ್ನು ಸಿದ್ಧಮಾಡು.

ಕ್ರಿಸ್ತ ಯೇಸುವಿನ ನಿಮಿತ್ತವಾಗಿ ನನ್ನ ಜೊತೆ
ಸೆರೆಯವನಾದ ಎಪಫ್ರನೂ ನನ್ನ ಸಹಕಾರಿಗಳಾದ
ಮಾರ್ಕ ಅರಿಸ್ತಾರ್ಕ ದೇಮ ಲೂಕರೂ ನಿನ್ನನ್ನು
ವಂದಿಸುತ್ತಾರೆ.

ನಮ್ಮ ಕರ್ತನಾದ ಯೇಸು ಕ್ರಿಸ್ತನ ಕೃಪೆಯು
ನಿಮ್ಮ ಆತ್ಮದೊಂದಿಗಿರಲಿ.

---

# THE EPISTLE TO THE

# HEBREWS

## ಇಬ್ರಿಯರಿಗೆ ಬರೆದ ಪತ್ರಿಕೆ

ಪತ್ರಿಕೆಯ ಪ್ರಸ್ತಾಪವು.

1 ಪುರಾತನಕಾಲದಲ್ಲಿ ನಮ್ಮ ಪಿತೃಗಳ ಸಂಗಡ ಪ್ರವಾ
ದಿಗಳ ಬಾಯಿಂದ ಭಾಗಭಾಗವಾಗಿಯೂ ವಿಧವಿಧ
2 ವಾಗಿಯೂ ಮಾತಾಡಿದ ದೇವರು ಈ ಅಂತ್ಯದಿನಗಳಲ್ಲಿ
ನಮ್ಮ ಸಂಗಡ ಮಗನ ಮುಖಾಂತರ ಮಾತಾಡಿ
ದ್ದಾನೆ. ಈತನನ್ನು ಎಲ್ಲಕ್ಕೂ ಬಾಧ್ಯನನ್ನಾಗಿ ನೇಮಿ
ಸಿದನು, ಈತನ ಮೂಲಕವೇ 1)ಜಗತ್ತನ್ನು ಉಂಟು
3 ಮಾಡಿದನು. ಈತನು ದೇವರ ಪ್ರಭಾವದ ಪ್ರಕಾ
ಶವೂ ಆತನ ತತ್ವದ ಮೂರ್ತಿಯೂ ತನ್ನ ಶಕ್ತಿಯ
ವಾಕ್ಯದಿಂದ ಸಮಸ್ತಕ್ಕೆ ಆಧಾರವೂ ಆಗಿದ್ದು ಪಾಪ
ವಿಶುದ್ಧಿಮಾಡಿದ ಮೇಲೆ ಉನ್ನತಲೋಕದೊಳಗೆ
ಮಹತ್ವವುಳ್ಳ ದೇವರ ಬಲಗಡೆಯಲ್ಲಿ ಆಸನಾರೂಢ
ನಾದನು.

ಯೇಸು ದೇವರ ಮಗನಾಗಿದ್ದು ದೇವದೂತರಿಗಿಂತಲೂ
ಶ್ರೇಷ್ಠನು.

4 ಈತನು ದೇವದೂತರಿಗಿಂತಲೂ ಉತ್ತಮನಾದನು;
ಅವರಿಗಿಂತ ಶ್ರೇಷ್ಠವಾದ ಹೆಸರನ್ನು ಹೊಂದಿದನಲ್ಲಾ;
ಹೇಗಂದರೆ—
5 ನನಗೆ ನೀನು ಮಗನು; ನಾನೇ ಈಹೊತ್ತು
ನಿನ್ನನ್ನು ಪಡೆದಿದ್ದೇನೆ
ಎಂತಲೂ
ನಾನು ಅವನಿಗೆ ತಂದೆಯಾಗಿರುವೆನು; ಅವ
ನು ನನಗೆ ಮಗನಾಗಿರುವನು
ಎಂತಲೂ ದೇವರು ತನ್ನ ದೂತರೊಳಗೆ ಯಾವನಿಗಾ
6 ದರೂ ಎಂದಾದರೂ ಹೇಳಿದ್ದುಂಟೋ? 2)ಇದಲ್ಲದೆ
ಆತನು ತನ್ನ ಚೊಚ್ಚಲಮಗನನ್ನು ಭೂಲೋಕದೊಳಗೆ
ತಿರಿಗಿ ಬರಮಾಡುವಾಗ
ದೇವರ ದೂತರೆಲ್ಲರೂ ಆತನಿಗೆ ಅಡ್ಡಬೀಳಲಿ
ಎಂದು ಹೇಳುತ್ತಾನೆ. ದೂತರ ವಿಷಯದಲ್ಲಿ ಹೇಳುವ
ದೇನಂದರೆ—
ದೇವರು ತನ್ನ ದೂತರನ್ನು ಗಾಳಿಗಳನ್ನಾ
ಗಿಯೂ
ತನ್ನ ಸೇವಕರನ್ನು ಅಗ್ನಿಜ್ವಾಲೆಯನ್ನಾಗಿಯೂ
ಮಾಡುತ್ತಾನೆ ಎಂಬದು.
ಮಗನ ವಿಷಯದಲ್ಲಿಯಾದರೋ—
ದೇವರೇ, ನಿನ್ನ ಸಿಂಹಾಸನವು ಯುಗಯು
ಗಾಂತರಗಳಲ್ಲಿಯೂ ಇರುವದು;
ನ್ಯಾಯದಂಡವೇ ನಿನ್ನ ರಾಜದಂಡವಾಗಿದೆ;
ನೀನು ಧರ್ಮವನ್ನು ಪ್ರೀತಿಸಿದಿ, ಅಧರ್ಮ
ವನ್ನು ದ್ವೇಷಿಸಿದಿ;
ಆದದರಿಂದ ದೇವರು, ನಿನ್ನ ದೇವರೇ, ನಿನ್ನನ್ನು
ನಿನ್ನ ಜೊತೆಗಾರರಿಗಿಂತ ಉನ್ನತಸ್ಥಾನಕ್ಕೆ
ಏರಿಸಿ ಪರಮಾನಂದತೈಲದಿಂದ ಅಭಿಷೇಕಿಸಿ
ದ್ದಾನೆ
ಎಂತಲೂ
ಕರ್ತನೇ, ಆದಿಯಲ್ಲಿ ನೀನು ಭೂಮಿಗೆ ಅಸ್ತಿ
ವಾರವನ್ನು ಹಾಕಿದಿ,
ಗಗನಮಂಡಲವು ನಿನ್ನ ಕೈಕೆಲಸವಾಗಿದೆ;
ಅವು ನಾಶವಾಗುವವು, ಆದರೆ ನೀನು ಶಾಶ್ವತ
ವಾಗಿರುತ್ತೀ;
ಅವೆಲ್ಲವೂ ವಸ್ತ್ರದಂತೆ ಹಳೇವಾಗುವವು,
ಅವುಗಳನ್ನು ಮೇಲಂಗಿಯಂತೆಯೂ ವಸ್ತ್ರದಂತೆ
ಯೂ ಮಡಿಸುತ್ತೀ,

---

1) ಮೂಲ: ಯುಗಗಳನ್ನು. 2) ಅಥವಾ, ಹಾಗೆ ಹೇಳದೆ ಆತನು ತನ್ನ ಚೊಚ್ಚಲಮಗನನ್ನು ಭೂಲೋಕದೊಳಗೆ ಬರಮಾಡುವಾ

ಮತ್ತು ಅವು ಮಾರ್ಪಡುವವು;
ನೀನಾದರೋ ಏಕರೀತಿಯಾಗಿದ್ದೀ.
ನಿನ್ನ ವರುಷಗಳು ಮುಗಿದುಹೋಗುವದಿಲ್ಲ
13 ಎಂತಲೂ ಹೇಳುತ್ತಾನೆ. ಆದರೆ ದೇವದೂತರಲ್ಲಿ ಯಾ
ವನ ವಿಷಯದಲ್ಲಿಯಾದರೂ—
ನಾನು ನಿನ್ನ ವಿರೋಧಿಗಳನ್ನು ನಿನಗೆ ಪಾದ
ಪೀಠವಾಗ ಮಾಡುವ ತನಕ
ನನ್ನ ಬಲಗಡೆಯಲ್ಲಿ ಕೂತುಕೊಂಡಿರು
14 ಎಂಬದಾಗಿ ಎಂದಾದರೂ ಹೇಳಿದ್ದಾನೋ? ಇವರೆಲ್ಲರು
ರಕ್ಷಣೆಯನ್ನು ಬಾಧ್ಯವಾಗಿ ಹೊಂದಬೇಕಾಗಿರುವ
ವರ ಸೇವೆಗೋಸ್ಕರ ಕಳುಹಿಸಲ್ಪಡುವ ಊಳಿಗದ
ಆತ್ಮಗಳಲ್ಲವೋ?

2 ಆದದರಿಂದ ನಾವು ಕೇಳಿದ ಸಂಗತಿಗಳಿಗೆ 1)ತಪ್ಪಿ
ಹೋದೇವೆಂದು ಭಯಪಟ್ಟು ಅವುಗಳಿಗೆ ಹೆಚ್ಚಾಗಿ
2 ಲಕ್ಷ್ಯಕೊಡುವವರಾಗಿರಬೇಕು. ಯಾಕಂದರೆ ದೇವ
ದೂತರ ಮೂಲಕ ಹೇಳಲ್ಪಟ್ಟ ವಾಕ್ಯವು ಸ್ಥಿರವಾಗಿದ್ದು
ಅದನ್ನು ಮೀರಿ ಮಾಡಿದ ಪ್ರತಿಯೊಂದು ತಪ್ಪಿಗೂ
ಅವಿಧೇಯತ್ವಕ್ಕೂ ನ್ಯಾಯವಾದ ಪ್ರತಿಫಲವುಂಟಾದ
3 ಮೇಲೆ [ನಮ್ಮ ಮುಂದಿಟ್ಟಿರುವ] ಈ ಅತ್ಯಂತವಿಶೇಷ
ರಕ್ಷಣೆಯನ್ನು ನಾವು ಅಲಕ್ಷ್ಯಮಾಡಿದರೆ ತಪ್ಪಿಸಿ
ಕೊಳ್ಳುವದು ಹೇಗೆ? ಇದು ಕರ್ತನಿಂದ ಮೊದಲು
ಹೇಳಲ್ಪಟ್ಟಿತು; ಆತನಿಂದ ಕೇಳಿದವರು ಇದನ್ನು
4 ನಮಗೆ ಸ್ಥಿರಪಡಿಸಿದರು; ಮತ್ತು ದೇವರು ಅವರ ಕೈ
ಯಿಂದ ಸೂಚಕಕಾರ್ಯಗಳನ್ನೂ ಅದ್ಭುತಕಾರ್ಯ
ಗಳನ್ನೂ ನಾನಾ ವಿಧವಾದ ಮಹತ್ಕಾರ್ಯಗಳನ್ನೂ
ನಡಿಸಿ ಪವಿತ್ರಾತ್ಮವರಗಳನ್ನು ತನ್ನ ಚಿತ್ತಾನುಸಾರ
ವಾಗಿ ಅವರಿಗೆ ಅನುಗ್ರಹಿಸಿ ಅವರ ಮಾತಿಗೆ ಸಾಕ್ಷಿ
ಕೊಡುತ್ತಿದ್ದನು.2)

### ಯೇಸು ಸ್ವಲ್ಪಕಾಲ ದೇವದೂತರಿಗಿಂತ ಕಡಿಮೆಯಾದದ್ದಕ್ಕೆ ಕಾರಣ.

5 ನಾವು ಪ್ರಸ್ತಾಪಿಸುವ ಮುಂದಣ ಸಾಮ್ರಾಜ್ಯವನ್ನು
ಆತನು ದೇವದೂತರಿಗೆ ಅಧೀನಮಾಡಲಿಲ್ಲವಲ್ಲಾ.
6 ಶಾಸ್ತ್ರದ ಒಂದು ಭಾಗದಲ್ಲಿ—
ಮನುಷ್ಯನು ಎಷ್ಟು ಮಾತ್ರದವನು; ಅವನ
ನ್ನು ನೀನು ಯಾಕೆ ನೆನಸಬೇಕು?
ಮಾನವನು ಎಷ್ಟರವನು; ಅವನಲ್ಲಿ ಯಾಕೆ
ಲಕ್ಷ್ಯವಿಡಬೇಕು?
7 ಅವನನ್ನು ದೇವದೂತರಿಗಿಂತ 3)ಸ್ವಲ್ಪವೇ ಕಡಿ
ಮೆಯಾಗಿ ಮಾಡಿದಿಯಲ್ಲಾ;
ಪ್ರಭಾವವನ್ನೂ ಮಾನವನ್ನೂ ಅವನಿಗೆ ಕಿರೀಟ
ವಾಗಿ ಇಟ್ಟೆ4);
8 ಎಲ್ಲವನ್ನೂ ಅವನ ಪಾದಗಳ ಕೆಳಗೆ ಹಾಕಿ ಅವ
ನಿಗೆ ಅಧೀನಮಾಡಿದ್ದೀಯಲ್ಲವೇ

ಎಂದು ಸ್ಪಷ್ಟವಾಗಿ ಹೇಳಿದನು. ಆತನು ಎಲ್ಲವನ್ನೂ
ಮನುಷ್ಯನಿಗೆ ಅಧೀನಮಾಡಿದನೆಂಬದರಲ್ಲಿ ಅವನಿಗೆ
ಒಂದನ್ನಾದರೂ ಅಧೀನಮಾಡದೆ ಬಿಡಲಿಲ್ಲವೆಂದು ಹೇ
ಳಿದ ಹಾಗಾಯಿತು; ಆದರೆ ಎಲ್ಲವೂ ಅವನಿಗೆ ಅಧೀ
ನವಾಗಿರುವದನ್ನು ನಾವು ಇನ್ನೂ ಕಾಣುವದಿಲ್ಲ. ಆದ 9
ರೂ ದೇವದೂತರಿಗಿಂತ ಸ್ವಲ್ಪ ಕಡಿಮೆಯಾಗಿ ಮಾಡ
ಲ್ಪಟ್ಟ ಒಬ್ಬಾತನು, ಅಂದರೆ ಯೇಸುವು, ಪ್ರಭಾವ
ವನ್ನೂ ಮಾನವನ್ನೂ ಕಿರೀಟವಾಗಿ ಹೊಂದಿರುವದನ್ನು
ನಾವು ನೋಡುತ್ತೇವೆ. ಮೃತಪಟ್ಟದ್ದರಿಂದಲೇ ಮಾನ
ಪ್ರಭಾವಗಳನ್ನು ಹೊಂದಿದನು. ಆತನು ದೇವರ ಕೃಪೆ
ಯಿಂದ ಎಲ್ಲರಿಗೋಸ್ಕರ ಮರಣವನ್ನು ಅನುಭವಿಸಲೇ
ಬೇಕಾಗಿತ್ತು.
ಸಮಸ್ತವು ಯಾವನಿಗೋಸ್ಕರವೂ ಯಾವನಿಂದ 10
ಲೂ ಉಂಟಾಯಿತೋ ಆತನು ಬಹು ಮಂದಿ ಪುತ್ರ
ರನ್ನು ಪ್ರಭಾವಕ್ಕೆ ಸೇರಿಸುವಲ್ಲಿ ಅವರ 5)ರಕ್ಷಣಾ
ಕರ್ತನನ್ನು ಬಾಧೆಗಳ ಮೂಲಕ ಸಿದ್ಧಿಗೆ ತರುವದು
ಆತನಿಗೆ ಯುಕ್ತವಾಗಿತ್ತು. ಯಾಕಂದರೆ ಪವಿತ್ರ 11
ಮಾಡುವಾತನಿಗೂ ಪವಿತ್ರರಾಗುವವರೆಲ್ಲರಿಗೂ ಒಬ್ಬ
ನೇ ತಂದೆ ಇದ್ದಾನೆ. ಈ ಕಾರಣದಿಂದ ಪವಿತ್ರ
ಮಾಡುವಾತನು ಪವಿತ್ರರಾಗುವವರನ್ನು ಸಹೋದರ
ರೆನ್ನುವದಕ್ಕೆ ನಾಚಿಕೆಪಡದೆ—
ನಿನ್ನ ನಾಮಮಹಿಮೆಯನ್ನು ನನ್ನ ಸಹೋದರ 12
ರಿಗೆ ತಿಳಿಸುವೆನು;
ಸಭಾಮಧ್ಯದಲ್ಲಿ ನಿನಗೆ ಸ್ತುತಿಪದಗಳನ್ನು
ಹಾಡುವೆನು
ಎಂತಲೂ
ನಾನೂ ದೇವರ ಮೇಲೆ ಭರವಸವಿಟ್ಟವನಾಗಿ 13
ರುವೆನು
ಎಂತಲೂ
ಇಗೋ, ನಾನೂ ದೇವರು ನನಗೆ ದಯಪಾಲಿ
ಸಿರುವ ಮಕ್ಕಳೂ ಇದ್ದೇವೆ
ಎಂತಲೂ ಹೇಳುತ್ತಾನೆ. ಇದಲ್ಲದೆ ಮಕ್ಕಳು ರಕ್ತ 14
ಮಾಂಸಧಾರಿಗಳಾಗಿರುವದರಿಂದ ಆತನೂ ಅವರಂತೆ
ಯೇ ಆದನು. ತನ್ನ ಮರಣದಿಂದಲೇ ಮರಣಾಧಿ
ಕಾರಿಯನ್ನು ಅಂದರೆ ಸೈತಾನನನ್ನು ಅಡಗಿಸಿಬಿಡುವ
ದಕ್ಕೂ, ಮರಣಭಯದ ದೆಸೆಯಿಂದ ತಮ್ಮ ಜೀವ 15
ಮಾನದಲ್ಲೆಲ್ಲಾ ದಾಸತ್ವದೊಳಗಿದ್ದವರನ್ನು ಬಿಡಿಸು
ವದಕ್ಕೂ ಅವರಂತೆ ರಕ್ತಮಾಂಸಧಾರಿಯಾದನು. ಆತ 16
ನು ದೇವದೂತರನ್ನು ಹಿಡಿದವನೆಂದು ಬರೆದಿಲ್ಲ; ಅಬ್ರ
ಹಾಮನ ಸಂತತಿಯನ್ನು ಕೈಹಿಡಿದಿದ್ದಾನಷ್ಟೆ. ಆದದ 17
ರಿಂದ ಆತನು ಎಲ್ಲಾ ವಿಷಯಗಳಲ್ಲಿ ತನ್ನ ಸಹೋದರ
ರಿಗೆ ಸಮಾನನಾಗಬೇಕಾಗಿ ಬಂತು. ಹೀಗೆ ಆತನು
ಜನರ ಪಾಪಗಳನ್ನು ನಿವಾರಣಮಾಡುವದಕ್ಕಾಗಿ ದೇವರ
ಕಾರ್ಯಗಳಲ್ಲಿ ಕರುಣೆಯೂ ನಂಬಿಕೆಯೂ ಉಳ್ಳ
ಮಹಾಯಾಜಕನಾದನು. ತಾನೇ ಶೋಧಿಸಲ್ಪಟ್ಟು 18

1) ಅಥವಾ, ಪ್ರವಾಹವು ನಮ್ಮನ್ನು ಬಡುಕೊಂಡು ಹೋಯಿತೋ ಎಂಬಂತೆ ತಪ್ಪಿಹೋದೇವೆಂದು. 2) ಅಥವಾ, ಆತನನ್ನು ಕೇಳಿದವರು ಇದನ್ನು ನಮಗೆ ತಿಳಿಸಲು ದೇವರು . . . ಅನುಗ್ರಹಿಸಿ ಅವರ ಮಾತಿಗೆ ಸಾಕ್ಷಿಕೊಟ್ಟು ಸ್ಥಿರಪಡಿಸಿದನು. 3) ಅಥವಾ, ಸ್ವಲ್ಪ ಕಾಲದ ವರೆಗೆ. 4) ಕೆಲವು ಪ್ರತಿಗಳಲ್ಲಿ—ನೀನು ಮಾಡಿದ ಕೆಲಸಗಳ ಮೇಲೆ ಅವನನ್ನು ಅಧಿಕಾರಿಯಾಗಿ ಇರಿಸಿದಿ ಎಂದು ಹೆಚ್ಚು ಮಾತುಂಟು. 5) ಅಥವಾ, ರಕ್ಷಕನ ನಾಯಕನನ್ನು.

ಬಾಧೆಯನ್ನು ಅನುಭವಿಸಿರುವದರಿಂದ ಶೋಧಿಸಲ್ಪಡು
ವವರಿಗೆ ಸಹಾಯಮಾಡುವದಕ್ಕೆ ಶಕ್ತನಾಗಿದ್ದಾನೆ.

ಮೋಶೆಗಿಂತ ಯೇಸು ಶ್ರೇಷ್ಠನು.

3 ಆದದರಿಂದ ದೇವಜನರಾದ ಸಹೋದರರೇ, ಪರ
ಲೋಕಸ್ವಾಸ್ಥ್ಯಕ್ಕಾಗಿ ನನ್ನೊಂದಿಗೆ ಕರೆಯಲ್ಪಟ್ಟ
ವರೇ, ನಾವು ಪ್ರತಿಜ್ಞೆಮಾಡಿ ಒಪ್ಪಿಕೊಂಡಿರುವ ದೇವ
ಪ್ರೇಷಿತನೂ ಮಹಾಯಾಜಕನೂ ಆಗಿರುವ ಯೇಸು
ವನ್ನು ಲಕ್ಷ್ಯವಿಟ್ಟು ಯೋಚಿಸಿರಿ.
2 ಮೋಶೆಯು ದೇವರ ಮನೆಯಲ್ಲೆಲ್ಲಾ ನಂಬಿಗಸ್ತ
ನಾಗಿದ್ದಂತೆಯೇ ಯೇಸುವೂ ತನ್ನನ್ನು ನೇಮಿಸಿದಾತ
3 ನಿಗೆ ನಂಬಿಗಸ್ತನಾಗಿದ್ದಾನೆ. ಮನೆಗಿಂತ ಮನೆಕಟ್ಟಿ
ದವನಿಗೆ ಹೆಚ್ಚಾದ ಮಾನವಿರುವದರಿಂದ ಮೋಶೆಗಿಂತ
ಯೇಸುವು ಹೆಚ್ಚಾದ ಮಾನಕ್ಕೆ ಯೋಗ್ಯನೆಂದೆಣಿಸಲ್ಪಟ್ಟಿ
4 ದ್ದಾನೆ. ಪ್ರತಿ ಮನೆಯನ್ನು ಯಾರೋ ಒಬ್ಬನು ಕಟ್ಟಿ
ರುವನು; ಸಮಸ್ತವನ್ನು ಕಟ್ಟಿದಾತನು ದೇವರೇ.
5 ಮೋಶೆಯು ಸೇವಕನಾಗಿ ದೇವರ ಮನೆಯಲ್ಲೆ
ಲ್ಲಾ ನಂಬಿಗಸ್ತನಾಗಿದ್ದನು; ಅವನು ಮುಂದೆ ಪ್ರಕಟ
ವಾಗಬೇಕಾಗಿದ್ದ ಸಂಗತಿಗಳಿಗೆ ಸಾಕ್ಷಿಯಾಗಿದ್ದನು.
6 ಕ್ರಿಸ್ತನಾದರೋ ಮಗನಾಗಿ ದೇವರ ಮನೆಯ ಮೇಲೆ
ಅಧಿಕಾರಿಯಾಗಿದ್ದಾನೆ; ನಾವು ನಮ್ಮ ಧೈರ್ಯವನ್ನೂ
ನಮ್ಮ ನಿರೀಕ್ಷೆಯಿಂದುಂಟಾಗುವ ಉತ್ಸಾಹವನ್ನೂ
ಕಡೇ ತನಕ ದೃಢವಾಗಿ ಹಿಡುಕೊಂಡವರಾದರೆ ನಾವೇ
ದೇವರ ಮನೆಯವರು.

ದೇವರು ವಾಗ್ದಾನಮಾಡಿದ ವಿಶ್ರಾಂತಿಯನ್ನು ನಾವು
ಹೊಂದಬೇಕಾದರೆ ನಾವು ನಂಬದವರಾಗಿರದೆ ಸ್ಥಿರಚಿತ್ತ
ದಿಂದಿರುವದು ಅಗತ್ಯ.

7 ಆದದರಿಂದ ಪವಿತ್ರಾತ್ಮನು ಹೇಳುವ ಪ್ರಕಾರ—
ನೀವು ಈಹೊತ್ತು ದೇವರ ಶಬ್ದಕ್ಕೆ ಕಿವಿಗೊಟ್ಟರೆ
8 ನಿಮ್ಮ ಹಿರಿಯರು ದೇವರ ಕೋಪವನ್ನೆಬ್ಬಿ
ಸಿದ ಸ್ಥಳದಲ್ಲಿ
ಅರಣ್ಯದೊಳಗೆ ದೇವರನ್ನು ಪರೀಕ್ಷಿಸಿದ ದಿನ
ದಲ್ಲಿ, ಮಾಡಿದಂತೆ
ನಿಮ್ಮ ಹೃದಯಗಳನ್ನು ಕಠಿನಮಾಡಿಕೊಳ್ಳ
ಬೇಡಿರಿ.
9 ಅವರು ಅರಣ್ಯದಲ್ಲಿ ನನ್ನನ್ನು ಪರೀಕ್ಷಿಸಿ
ಶೋಧಿಸಿ
ನಾಲ್ವತ್ತು ವರುಷ ನಾನು ನಡಿಸುತ್ತಿದ್ದ
ಕೃತ್ಯಗಳನ್ನು ನೋಡಿದರು.
10 ಆದದರಿಂದ ನಾನು ಆ ಸಂತತಿಯವರ ಮೇಲೆ
ಬಹಳವಾಗಿ ಕೋಪಿಸಿಕೊಂಡು—
ಅವರು ಯಾವಾಗಲೂ ಹೃದಯದಲ್ಲಿ ತಪ್ಪಿ
ಹೋಗುವವರು ಎಂದು ಹೇಳಿದೆನು.
ಆದರೆ ಅವರು ನನ್ನ ಮಾರ್ಗವನ್ನು ತಿಳುಕೊಳ್ಳ
ಲಿಲ್ಲ.

ಹೀಗಿರಲು ಇವರು ನನ್ನ ವಿಶ್ರಾಂತಿಯಲ್ಲಿ ಸೇರು
ವದೇ ಇಲ್ಲವೆಂದು
ಕೋಪಗೊಂಡು ಪ್ರಮಾಣಮಾಡಿದೆನು.
ಸಹೋದರರೇ, ನೋಡಿಕೊಳ್ಳಿರಿ, ಜೀವಸ್ವರೂಪ
ನಾದ ದೇವರನ್ನು ಬಿಟ್ಟುಹೋಗುವ ಅಪನಂಬಿಕೆಯುಳ್ಳ
ಕೆಟ್ಟ ಹೃದಯವು ನಿಮ್ಮೊಳಗೆ ಯಾವನಲ್ಲಿಯೂ ಇರ
ಬಾರದು. ನಿಮ್ಮಲ್ಲಿ ಒಬ್ಬರಾದರೂ ಪಾಪದಿಂದ
ಮೋಸಹೋಗಿ ಕಠಿನರಾಗದಂತೆ ಈಹೊತ್ತು ಎಂಬ
ಕಾಲವು ಇರುವ ತನಕ ಪ್ರತಿನಿತ್ಯವೂ ಒಬ್ಬರನ್ನೊ
ಬ್ಬರು ಎಚ್ಚರಿಸಿರಿ. ಮೊದಲಿಂದಿರುವ ಭರವಸವನ್ನು
ಅಂತ್ಯದ ವರೆಗೂ ದೃಢವಾಗಿ ಹಿಡುಕೊಳ್ಳುವ ಪಕ್ಷಕ್ಕೆ
[1]ಕ್ರಿಸ್ತನಲ್ಲಿ ಪಾಲುಗಾರರಾಗಿದ್ದೇವಲ್ಲಾ!
ನೀವು ಈಹೊತ್ತು ದೇವರ ಶಬ್ದಕ್ಕೆ ಕಿವಿ
ಗೊಟ್ಟರೆ,
ನಿಮ್ಮ ಹಿರಿಯರು ದೇವರ ಕೋಪವನ್ನೆಬ್ಬಿಸಿದ
ಸ್ಥಳದಲ್ಲಿ ಮಾಡಿದಂತೆ
ನಿಮ್ಮ ಹೃದಯಗಳನ್ನು ಕಠಿನಮಾಡಿಕೊಳ್ಳ
ಬೇಡಿರಿ
ಎಂಬದರಲ್ಲಿ ಕೇಳಿ ಕೋಪವನ್ನೆಬ್ಬಿಸಿದವರು ಯಾರು?
ಮೋಶೆಯ ಕೈಕೆಳಗಿದ್ದು ಐಗುಪ್ತದೊಳಗಿಂದ ಹೊ
ರಟುಬಂದವರೆಲ್ಲರೂ ಅಲ್ಲವೇ. ಮತ್ತು ನಾಲ್ವತ್ತು
ವರುಷ ಆತನು ಯಾರ ಮೇಲೆ ಬಹಳವಾಗಿ ಕೋಪಿಸಿ
ಕೊಂಡನು? ಪಾಪಮಾಡಿದವರ ಮೇಲೆ ಅಲ್ಲವೇ.
ಅವರ ಶವಗಳು ಅರಣ್ಯದಲ್ಲಿ ಬಿದ್ದವಲ್ಲಾ. ನನ್ನ
ವಿಶ್ರಾಂತಿಯಲ್ಲಿ ನೀವು ಸೇರುವದೇ ಇಲ್ಲವೆಂದು
ಯಾರನ್ನು ಕುರಿತು ಪ್ರಮಾಣಮಾಡಿದನು? ಅವಿಧೇಯ
ರನ್ನು ಕುರಿತಲ್ಲವೇ. ಅವರು ಸೇರಲಾರದೆ ಹೋದದ್ದು
ಅಪನಂಬಿಕೆಯಿಂದಲೇ ಎಂದು ತಿಳಿದುಕೊಳ್ಳುತ್ತೇವೆ.
ಹೀಗಿರಲಾಗಿ ದೇವರ ವಿಶ್ರಾಂತಿಯಲ್ಲಿ ಸೇರಬಹು
ದೆಂಬ ವಾಗ್ದಾನವು ಇನ್ನೂ ಇರುವಲ್ಲಿ ನಿಮ್ಮೊಳಗೆ
ಯಾವನಾದರೂ ಆ ವಾಗ್ದಾನದ ಫಲವನ್ನು ಹೊಂ
ದದೆ ತಪ್ಪುವವನಾದಾನೋ ಎಂದು ನಾವು ಭಯಪ
ಡೋಣ. ಅವರಿಗೆ ಶುಭವರ್ತಮಾನವು ಸಾರೋಣ
ವಾದಂತೆಯೇ ನಮಗೂ ಸಾರೋಣವಾಯಿತು; ಆದರೆ
ಆ ಕಾಲದಲ್ಲಿ ಕೇಳಿದವರು ನಂಬದೆಹೋದ ಕಾರಣ
ಆ ವಾಕ್ಯದಿಂದ ಅವರಿಗೆ ಪ್ರಯೋಜನವಾಗಲಿಲ್ಲ.
ದೇವರ ಕೆಲಸಗಳು ಲೋಕಾದಿಯಿಂದ ಮುಗಿದು
ಹೋಗಿ [ಆತನ ವಿಶ್ರಾಂತಿಯು ಸಿದ್ಧವಾಗಿದ್ದರೂ]
ಆತನು—
ನನ್ನ ವಿಶ್ರಾಂತಿಯಲ್ಲಿ ಇವರು ಸೇರುವದೇ
ಇಲ್ಲವೆಂದು
ಕೋಪಗೊಂಡು ಪ್ರಮಾಣಮಾಡಿದೆನು
ಎಂಬದಾಗಿ ಹೇಳಿದನಷ್ಟೆ. ನಂಬಿರುವ ನಾವಾದರೋ
ಆ ವಿಶ್ರಾಂತಿಯಲ್ಲಿ ಸೇರುತ್ತಲೇ ಇದ್ದೇವೆ. ಒಂದು
ಸ್ಥಳದಲ್ಲಿ ಏಳನೆಯ ದಿವಸವನ್ನು ಕುರಿತು—ದೇವ
ರು ತನ್ನ ಸೃಷ್ಟಿಕಾರ್ಯಗಳನ್ನೆಲ್ಲಾ ಮುಗಿಸಿಬಿಟ್ಟು
ಏಳನೆಯ ದಿನದಲ್ಲಿ ವಿಶ್ರಮಿಸಿಕೊಂಡನೆಂದು ಬರೆದದೆ.
ಆದರೆ ಈ ಸ್ಥಳದಲ್ಲಿ—ಇವರು ನನ್ನ ವಿಶ್ರಾಂತಿ

1) ಅಥವಾ, ನಮ್ಮ ಹಿರಿಯರು ಎದುರುನೋಡುತ್ತಿದ್ದ ಕ್ರಿಸ್ತನಲ್ಲಿ.

6 ಯಲ್ಲಿ ಸೇರುವದೇ ಇಲ್ಲವೆಂದು ಹೇಳಿದ್ದಾನೆ. ಹೀಗಿರ
ಲಾಗಿ ಆ ವಿಶ್ರಾಂತಿಯಲ್ಲಿ ಕೆಲವರು ಸೇರಬೇಕೆಂಬುವ
ಮಾತು ಇನ್ನೂ ಇರುವದರಿಂದಲೂ ಮೊದಲು ಶುಭ
ವರ್ತಮಾನವನ್ನು ಕೇಳಿದವರು ಅವಿಧೇಯರಾದ
7 ಕಾರಣ ಅದರಲ್ಲಿ ಸೇರದೆಹೋದದ್ದರಿಂದಲೂ ಬಹು
ಕಾಲ ಹೋದನಂತರ ಆತನು ದಾವೀದನ ಬಾಯಿಂದ
ಮಾತಾಡಿ ಈಹೊತ್ತೇ ಎಂದು ಒಂದಾನೊಂದು ದಿವಸ
ವನ್ನು ಗೊತ್ತುಮಾಡುತ್ತಾನೆ; ಹೇಗಂದರೆ—

ನೀವು ಈಹೊತ್ತು ದೇವರ ಶಬ್ದಕ್ಕೆ ಕಿವಿಗೊಟ್ಟರೆ
ನಿಮ್ಮ ಹೃದಯಗಳನ್ನು ಕಠಿನಮಾಡಿಕೊಳ್ಳ
ಬೇಡಿರಿ

ಎಂದು ಮೇಲ್ಕಂಡ ವಚನದಲ್ಲಿ ಹೇಳುತ್ತಾನಷ್ಟೆ.
8 ಯೆಹೋಶುವನು ಅವರನ್ನು ಆ ವಿಶ್ರಾಂತಿಯಲ್ಲಿ
ಸೇರಿಸಿದ್ದಾದರೆ ತರುವಾಯ ಮತ್ತೊಂದು ದಿವಸವನ್ನು
9 ಕುರಿತು ಹೇಳೋಣವಾಗುತ್ತಿರಲಿಲ್ಲ. ಆದದರಿಂದ
ದೇವರ ಜನರು ಅನುಭವಿಸುವದಕ್ಕಿರುವ ಸಬ್ಬತೆಂಬ
10 ವಿಶ್ರಾಂತಿಯು ಇನ್ನೂ ಉಂಟು. ಹೇಗಂದರೆ ದೇವರು
ತನ್ನ ಕೆಲಸಗಳನ್ನು ಮುಗಿಸಿ ಹೇಗೆ ವಿಶ್ರಮಿಸಿಕೊಂ
ಡನೋ ಹಾಗೆಯೇ ಆತನ ವಿಶ್ರಾಂತಿಯಲ್ಲಿ ಸೇರಿರು
ವವನು ಸಹ ತನ್ನ ಕೆಲಸಗಳನ್ನು ಮುಗಿಸಿ ವಿಶ್ರಮಿಸಿ
11 ಕೊಂಡಿದ್ದಾನೆ. ಆದದರಿಂದ ನಾವು ಆ ವಿಶ್ರಾಂತಿ
ಯಲ್ಲಿ ಸೇರುವದಕ್ಕೆ ಪ್ರಯಾಸಪಡೋಣ; ನಮ್ಮಲ್ಲಿ
ಒಬ್ಬರಾದರೂ ಅವರ ಅವಿಧೇಯತ್ವವನ್ನು ಅನುಸರಿಸು
12 ವವರಾಗಬಾರದು. ಯಾಕಂದರೆ ದೇವರ ವಾಕ್ಯವು
ಸಜೀವವಾದದ್ದು, ಕಾರ್ಯಸಾಧಕವಾದದ್ದು, ಯಾವ
ಇಬ್ಬಾಯಿ ಕತ್ತಿಗಿಂತಲೂ ಹದವಾದದ್ದು, ಪ್ರಾಣ
ಆತ್ಮಗಳನ್ನೂ ಕೀಲುಮಜ್ಜೆಗಳನ್ನೂ ವಿಭಾಗಿಸುವಷ್ಟು
ಮಟ್ಟಿಗೂ ತೂರಿಹೋಗುವಂಥದು, ಹೃದಯದ
ಆಲೋಚನೆಗಳನ್ನೂ ಉದ್ದೇಶಗಳನ್ನೂ ವಿವೇಚಿಸುವಂ
13 ಥದು ಆಗಿದೆ. ನಾವು ಯಾವಾತನಿಗೆ ಲೆಕ್ಕ ಒಪ್ಪಿಸ
ಬೇಕಾಗಿದೆಯೋ ಆತನ ದೃಷ್ಟಿಗೆ ಸಮಸ್ತವೂ ಮುಚ್ಚು
ಮರೆಯಿಲ್ಲದ್ದಾಗಿಯೂ ಬೈಲಾದದ್ದಾಗಿಯೂ ಅದೆ.
ಆತನ ಸನ್ನಿಧಿಯಲ್ಲಿ ಅಗೋಚರವಾಗಿರುವ ಸೃಷ್ಟಿಯು
ಒಂದೂ ಇಲ್ಲ.

ಶ್ರೇಷ್ಠ ಮಹಾಯಾಜಕನ ಸುಲಕ್ಷಣಗಳು ಯೇಸುವಿನಲ್ಲಿ ಉಂಟೆಂಬದು.

14 ಆಕಾಶಮಂಡಲಗಳನ್ನು ದಾಟಿಹೋದ ದೇವ
ಕುಮಾರನಾದ ಯೇಸುವೆಂಬ ಶ್ರೇಷ್ಠ ಮಹಾಯಾ
ಜಕನು ನಮಗಿರುವದರಿಂದ ನಾವು ಮಾಡಿರುವ
15 ಪ್ರತಿಜ್ಞೆಯನ್ನು ಬಿಡದೆ ಹಿಡಿಯೋಣ. ಯಾಕಂದರೆ
ನಮಗಿರುವ ಮಹಾಯಾಜಕನು ನಮ್ಮ ನಿರ್ಬಲಾ
ವಸ್ಥೆಯನ್ನು ಕುರಿತು ಅನುತಾಪವಿಲ್ಲದವನಲ್ಲ; ಆತ
ನು ಸರ್ವ ವಿಷಯಗಳಲ್ಲಿ ನಮ್ಮ ಹಾಗೆ ಶೋಧನೆಗೆ
ಗುರಿಯಾದನು, ಪಾಪ ಮಾತ್ರ ಮಾಡಲಿಲ್ಲ.
16 ಆದದರಿಂದ ನಾವು ಕರುಣೆಯನ್ನು ಹೊಂದುವಂತೆ
ಯೂ ಆತನ ದಯೆಯಿಂದ ಸಮಯೋಚಿತವಾದ
ಸಹಾಯವು ನಮಗೆ ದೊರೆಯುವಂತೆಯೂ ಧೈರ್ಯ
ದಿಂದ ಕೃಪಾಸನದ ಮುಂದೆ ಬರೋಣ.

5 ಪ್ರತಿಯೊಬ್ಬ ಮಹಾಯಾಜಕನು ಮನುಷ್ಯರೊಳ
ಗಿಂದ ಆರಿಸಲ್ಪಟ್ಟವನಾಗಿದ್ದು ಮನುಷ್ಯರಿಗೋಸ್ಕರ
ದೇವರ ಕಾರ್ಯಗಳನ್ನು ಜರಗಿಸುವದಕ್ಕಾಗಿ
ನೇಮಿಸಲ್ಪಡುತ್ತಾನಲ್ಲಾ. ಅವನು ಅವರಿಗೋಸ್ಕರ
ಕಾಣಿಕೆಗಳನ್ನೂ ಪಾಪನಿವಾರಣಕ್ಕಾಗಿ ಯಜ್ಞಗಳ
ನ್ನೂ ಸಮರ್ಪಿಸಬೇಕು. ತಾನೂ ಬಲಹೀನನಾ 2
ಗಿರುವದರಿಂದ ಅವನು ಜ್ಞಾನವಿಲ್ಲದವರನ್ನೂ ಮಾರ್ಗ
ತಪ್ಪಿ ನಡೆಯುವವರನ್ನೂ ತಾಳ್ಮೆಯಿಂದ ಸಹಿಸಿ
ಕೊಳ್ಳುವದಕ್ಕೆ ಶಕ್ತನಾಗಿರುವನು. ಆ ಬಲಹೀನತೆಯ 3
ಕಾರಣದಿಂದ ಅವನು ಜನರಿಗೋಸ್ಕರ ಹೇಗೋ
ಹಾಗೆಯೇ ತನಗೋಸ್ಕರವೂ ಪಾಪನಿವಾರಣಾರ್ಥವಾಗಿ
ಯಜ್ಞಗಳನ್ನು ಮಾಡಬೇಕಾದವನಾಗಿದ್ದಾನೆ. ಇದ 4
ಲ್ಲದೆ ಯಾವನೂ ತನ್ನಷ್ಟಕ್ಕೆ ತಾನೇ ಈ ಗೌರವ
ವನ್ನು ವಹಿಸಿಕೊಳ್ಳದೆ ದೇವರಿಂದ ನೇಮಿಸಲ್ಪಟ್ಟು ವಹಿ
ಸಿಕೊಳ್ಳುತ್ತಾನೆ; ಆರೋನನು ಸಹ ದೇವರಿಂದಲೇ
ನೇಮಿಸಲ್ಪಟ್ಟು ಆ ಗೌರವವನ್ನು ವಹಿಸಿಕೊಂಡನಲ್ಲಾ.
ಹಾಗೆಯೇ ಕ್ರಿಸ್ತನು ಸಹ ತನ್ನನ್ನು ಘನಪಡಿಸಿ 5
ಕೊಂಡು ತನ್ನನ್ನು ತಾನೇ ಮಹಾಯಾಜಕನನ್ನಾಗಿ
ಮಾಡಿಕೊಳ್ಳಲಿಲ್ಲ; ಆದರೆ—

ನನಗೆ ನೀನು ಮಗನು; ನಾನೇ ಈಹೊತ್ತು
ನಿನ್ನನ್ನು ಪಡೆದಿದ್ದೇನೆ

ಎಂದು ಹೇಳಿದಾತನೇ ಈ ಗೌರವವನ್ನು ಆತನಿಗೆ ಕೊ 6
ಟ್ಟನು. ಆತನು ಇನ್ನೊಂದು ಸ್ಥಳದಲ್ಲಿ—

ನೀನು ಸದಾಕಾಲವೂ ಮೆಲ್ಕಿಜೆದೇಕನ ತರ
ಹದ ಯಾಜಕನು

ಎಂದು ಹೇಳುತ್ತಾನೆ. ಕ್ರಿಸ್ತನು ತಾನು ಭೂಲೋಕ 7
ದಲ್ಲಿದ್ದಾಗ ಮರಣಕ್ಕೆ ತಪ್ಪಿಸಿ ಕಾಪಾಡ ಶಕ್ತನಾಗಿ
ರುವಾತನಿಗೆ ಬಲವಾಗಿ ಕೂಗುತ್ತಾ ಕಣ್ಣೀರನ್ನು
ಸುರಿಸುತ್ತಾ ಪ್ರಾರ್ಥನೆ ವಿಜ್ಞಾಪನೆಗಳನ್ನು 1)ಸಮ
ರ್ಪಿಸಿ ದೇವರ ಮೇಲಣ ಭಯಭಕ್ತಿಯ ನಿಮಿತ್ತ
ಕೇಳಲ್ಪಟ್ಟನು. ಹೀಗೆ ಆತನು ಮಗನಾಗಿದ್ದರೂ 8
ಅನುಭವಿಸಿದ ಬಾಧೆಗಳಿಂದಲೇ ವಿಧೇಯತೆಯನ್ನು
ಕಲಿತುಕೊಂಡನು. ಇದಲ್ಲದೆ ಆತನು ಸಿದ್ಧಿಗೆ 9-10
ಬಂದು ದೇವರಿಂದ ಮೆಲ್ಕಿಜೆದೇಕನ ತರಹದ ಮಹಾ
ಯಾಜಕನೆನಿಸಿಕೊಂಡವನಾಗಿ ತನಗೆ ವಿಧೇಯರಾಗಿರು
ವವರೆಲ್ಲರಿಗೂ ನಿರಂತರವಾದ ರಕ್ಷಣೆಗೆ ಕಾರಣ
ನಾದನು.

ವೃದ್ಧಿಯಾಗದಿರುವ ಕ್ರೈಸ್ತರಿಗೆ ಎಚ್ಚರಿಕೆ.

ಈ ವಿಷಯದಲ್ಲಿ ನಾವು ಹೇಳಬೇಕಾದ ಮಾತು 11
ಬಹಳ ಉಂಟು, ಆದರೆ ನಿಮ್ಮ ಕಿವಿಗಳು ಮಂದವಾದದ
ರಿಂದ ಅದನ್ನು ವಿವರಿಸುವದು ಕಷ್ಟವಾಗಿದೆ. ಕಾಲ 12
ವನ್ನು ನೋಡಿದರೆ ನೀವು ಇಷ್ಟರೊಳಗೆ ಬೋಧಕರಾ
ಗಿರಬೇಕಾಗಿದ್ದರೂ ಒಬ್ಬನು ನಿಮಗೆ ದೈವೋಕ್ತಿಗಳ
ಮೂಲಪಾಠಗಳನ್ನು ತಿರಿಗಿ ಕಲಿಸಿಕೊಡಬೇಕಾಗಿದೆ;

1) ಅಥವಾ, ಸಮರ್ಪಿಸಿ ಕೇಳಲ್ಪಟ್ಟು ಭಯದಿಂದ ಬಿಡುಗಡೆಹೊಂದಿದನು.

ನೀವು ಹಾಲು ಕುಡಿಯತಕ್ಕವರೇ ಹೊರತು ಗಟ್ಟಿ
13 ಯಾದ ಆಹಾರವನ್ನು ತಿನ್ನತಕ್ಕವರಲ್ಲ. ಹಾಲು
ಬೇಕಾದವನು ಕೂಸಿನಂತಿದ್ದು ನೀತಿವಾಕ್ಯದಲ್ಲಿ ಅನು
14 ಭವವಿಲ್ಲದವನಾಗಿದ್ದಾನೆ. ಗಟ್ಟಿಯಾದ ಆಹಾರವು
ಪ್ರಾಯಸ್ಥರಿಗೋಸ್ಕರ ಅಂದರೆ ಜ್ಞಾನೇಂದ್ರಿಯಗ
ಳನ್ನು ಸಾಧನೆಯಿಂದ ಶಿಕ್ಷಿಸಿಕೊಂಡು ಇದು ಒಳ್ಳೇದು
ಅದು ಕೆಟ್ಟದ್ದು ಎಂಬ ಭೇದವನ್ನು ತಿಳಿದವರಿ
ಗೋಸ್ಕರವಾಗಿದೆ.

6 ಆದದರಿಂದ ನಿರ್ಜೀವಕರ್ಮಗಳ ಮೇಲಣ ನಂಬಿ
ಕೆಯನ್ನು ಬಿಟ್ಟುಬಿಟ್ಟು ದೇವರಲ್ಲಿಯೇ ನಂಬಿಕೆಯಿ
2 ಡಬೇಕಾದದ್ದು, ಸ್ನಾನ ಹಸ್ತಾರ್ಪಣಗಳ ವಿಷಯ
ವಾದ ಉಪದೇಶ, ಸತ್ತವರಿಗೆ ಪುನರುತ್ಥಾನವೂ
ನಿತ್ಯವಾದ ನ್ಯಾಯತೀರ್ಪೂ ಉಂಟೆಂಬದು ಇವುಗ
ಳನ್ನು ಪದೇಪದೇ ಅಸ್ತಿವಾರವಾಗಿ ಹಾಕದೆ ಕ್ರಿಸ್ತನ
ವಿಷಯವಾದ ಪ್ರಥಮಬೋಧನೆಯನ್ನು ಕುರಿತು
ಇನ್ನೂ ಮಾತಾಡದೆ ಪೂರ್ಣವಾದ ತಿಳುವಳಿಕೆಗೆ ಸಾ
3 ಗುತ್ತಾ ಹೋಗೋಣ. ಮತ್ತು ದೇವರ ಚಿತ್ತವಾದರೆ
ಹೀಗೆ ಸಾಗುತ್ತಾ ಹೋಗುವೆವು.
4 ಒಂದು ಸಾರಿ ಜ್ಞಾನಪ್ರಕಾಶದಲ್ಲಿ ಸೇರಿ ಪರ
ಲೋಕದಿಂದಾದ ದಾನದ ಅನುಭವವನ್ನು ಹೊಂದಿ
5 ಪವಿತ್ರಾತ್ಮವರದಲ್ಲಿ ಪಾಲುಗಾರರಾಗಿ ದೇವರ ವಾ
ಕ್ಯದ ಶ್ರೇಷ್ಠತೆಯನ್ನೂ ಮುಂದಣ ಯುಗದ ಮಹತ್ವ
6 ವನ್ನೂ ಅನುಭವಿಸಿದವರು ಭ್ರಷ್ಟರಾದರೆ ಅವರಲ್ಲಿ
ತಿರಿಗಿ ಮಾನಸಾಂತರವನ್ನು ಹುಟ್ಟಿಸುವದು ಅಸಾಧ್ಯ;
ಯಾಕಂದರೆ ಅವರು ತಮ್ಮ ಪಾಲಿಗೆ ದೇವರ ಮಗ
ನನ್ನು ಪುನಃ ಶಿಲುಬೆಗೆ ಹಾಕುವವರೂ ಆತನನ್ನು
ಎಲ್ಲರ ಮುಂದೆ ಅವಮಾನಪಡಿಸುವವರೂ ಆಗಿದ್ದಾರೆ.
7 ಭೂಮಿಯು ತನ್ನ ಮೇಲೆ ಅನೇಕಾವರ್ತಿ ಸುರಿಯುವ
ಮಳೆಯನ್ನು ಹೀರಿಕೊಂಡು ಅದು ಯಾರ ನಿಮಿತ್ತ
ವಾಗಿ ವ್ಯವಸಾಯಮಾಡಲ್ಪಡುತ್ತದೋ ಅವರಿಗೆ ಅನು
ಕೂಲವಾದ ಬೆಳೆಯನ್ನು ಕೊಟ್ಟರೆ ದೇವರ ಆಶೀರ್ವಾದ
8 ವನ್ನು ಹೊಂದುತ್ತದೆ; ಆದರೆ ಅದು ಮುಳ್ಳುಗಿಡಗ
ಳನ್ನೂ ಕಳೆಗಳನ್ನೂ ಬೆಳಸಿದರೆ ಅಯೋಗ್ಯವೆನಿಸಿ
ಕೊಂಡು ಶಾಪಕ್ಕೆ ಗುರಿಯಾಗುತ್ತದೆ, ಅದರ ಅಂತ್ಯ
ವು ಸುಡಲ್ಪಡುವದೇ.
9 ಆದರೆ ಪ್ರಿಯರೇ, ಈ ರೀತಿಯಾಗಿ ನಾವು ಮಾತಾಡಿ
ದರೂ ನೀವು ಇದಕ್ಕಿಂತ ಉತ್ತಮವಾಗಿಯೂ ರಕ್ಷಣ
ಕರವಾಗಿಯೂ ಇರುವ ಸ್ಥಿತಿಯಲ್ಲಿದ್ದೀರೆಂದು ದೃಢ
10 ವಾಗಿ ನಂಬಿದ್ದೇನೆ. ನೀವು ದೇವಜನರಿಗೆ ಉಪಚಾರ
ಮಾಡಿದಿರಿ, ಇನ್ನೂ ಮಾಡುತ್ತಾ ಇದ್ದೀರಿ. ಈ ಕೆಲಸ
ವನ್ನೂ ಇದರಲ್ಲಿ ನೀವು ದೇವರ ನಾಮದ ವಿಷಯವಾಗಿ
ತೋರಿಸಿದ ಪ್ರೀತಿಯನ್ನೂ ಆತನು ಮರೆಯುವ
ದಕ್ಕೆ ಅನ್ಯಾಯಸ್ಥನಲ್ಲ.

ದೇವರ ವಾಗ್ದಾನಗಳು ಎಷ್ಟು ಮಾತ್ರಕ್ಕೂ ತಪ್ಪುವದಿಲ್ಲವೆಂಬದು.

11 ನೀವು ಉಪಚಾರಮಾಡುವದರಲ್ಲಿ ಯಾವ ಆಸಕ್ತಿ
ಯನ್ನು ತೋರಿಸಿದ್ದೀರೋ ನಿಮ್ಮ ನಿರೀಕ್ಷೆ ದೃಢ
ಮಾಡಿಕೊಂಡು ಕಡೇ ತನಕ ಹಿಡಿಯುವದರಲ್ಲಿಯೂ
ನಿಮ್ಮಲ್ಲಿ ಪ್ರತಿಯೊಬ್ಬರು ಅದೇ ಆಸಕ್ತಿಯನ್ನು ತೋರಿ
ಸಬೇಕೆಂದು ಅಪೇಕ್ಷಿಸುತ್ತೇವೆ. ನೀವು ಮಂದಮತಿಗ
ಳಾಗಿರದೆ ಯಾರು ವಾಗ್ದಾನಗಳನ್ನು ನಂಬಿ ಅವುಗಳ
ಫಲಕ್ಕೋಸ್ಕರ ಬಹು ದಿವಸಗಳ ವರೆಗೂ ಕಾದಿದ್ದು
ಆ ಫಲವನ್ನು ಹೊಂದುತ್ತಾರೋ ಅವರನ್ನು ಅನುಸರಿಸು
ವವರಾಗಬೇಕೆಂದು ಕೋರುತ್ತೇನೆ. ದೇವರು
ಅಬ್ರಹಾಮನಿಗೆ ವಾಗ್ದಾನಮಾಡಿದಾಗ ತನಗಿಂತ ಹೆಚ್ಚಿ
ನವನ ಆಣೆಯಿಡುವದಕ್ಕಾಗದೆ ಇದ್ದದರಿಂದ ತನ್ನಾ
ಣೆಯಿಟ್ಟು — ನಿಜವಾಗಿ ನಿನ್ನನ್ನು ಆಶೀರ್ವದಿಸೇ ಆಶೀ
ರ್ವದಿಸುವೆನು, ನಿನ್ನನ್ನು ಹೆಚ್ಚಿಸೇ ಹೆಚ್ಚಿಸುವೆನು
ಎಂದು ಹೇಳಿದನಷ್ಟೆ. ಆ ವಾಗ್ದಾನದ ಫಲಕ್ಕೋ
ಸ್ಕರ ಅಬ್ರಹಾಮನು ಬಹು ದಿವಸ ಕಾದುಕೊಂ
ಡಿದ್ದು ಆ ಫಲವನ್ನು ದೇವರು ಹೇಳಿದ ಹಾಗೆಯೇ
ಹೊಂದಿದನು. ಮನುಷ್ಯರು ತಮಗಿಂತ ಹೆಚ್ಚಿನವನ
ಆಣೆಯಿಡುತ್ತಾರಷ್ಟೆ; ಮಾತಿಗೆ ಆಣೆಯಿಟ್ಟು ಸ್ಥಿರ
ಪಡಿಸಿದ ಮೇಲೆ ಅವರೊಳಗೆ ವಿವಾದವೇನೂ ಇರುವ
ದಿಲ್ಲ. ಹಾಗೆಯೇ ದೇವರು ತನ್ನ ಸಂಕಲ್ಪವು ನಿಶ್ಚಲ
ವಾದದ್ದೆಂಬದನ್ನು ವಾಗ್ದಾನದ ಫಲಕ್ಕೆ ಬಾಧ್ಯರಾಗು
ವವರಿಗೆ ಬಹು ಸ್ಪಷ್ಟವಾಗಿ ತೋರಿಸಬೇಕೆಂದು ಆಣೆ
ಯಿಟ್ಟು ತನ್ನ ಮಾತನ್ನು ಸ್ಥಿರಪಡಿಸಿದನು. ಆಶ್ರಯ 1
ವನ್ನು ಹೊಂದಬೇಕೆಂದು ಓಡಿಬಂದು ನಮ್ಮ ಮುಂದೆ
ಇಟ್ಟಿರುವ ನಿರೀಕ್ಷೆಯನ್ನು ಹಿಡುಕೊಂಡವರಾದ ನಮಗೆ
ಎರಡು ನಿಶ್ಚಲವಾದ ಆಧಾರಗಳು ಇರುವ ಕಾರಣ ಬಲ
ವಾದ ಧೈರ್ಯವುಂಟಾಯಿತು. ಈ ಆಧಾರಗಳನ್ನು 1
ಕೊಟ್ಟದ್ದರಲ್ಲಿ ದೇವರು ಸುಳ್ಳಾಡಿರಲಾರನು. ಆ ನಿರೀ
ಕ್ಷೆಯು ನಮ್ಮ ಪ್ರಾಣಕ್ಕೆ ಲಂಗರದ ಹಾಗಿದ್ದು ಭರವ
ಸಕ್ಕೆ ಯೋಗ್ಯವಾದದ್ದೂ ಸ್ಥಿರವಾದದ್ದೂ ಆಗಿದೆ.
ಅದು ತೆರೆಯೊಳಗಣ ದೇವಸಾನ್ನಿಧ್ಯವನ್ನು ಪ್ರವೇ
ಶಿಸುವಂಥದು. ಯೇಸು ಸದಾಕಾಲವೂ ಮೆಲ್ಕಿಜೆ 2
ದೇಕನ ತರಹದ ಮಹಾಯಾಜಕನಾಗಿದ್ದು ನಮಗೋ
ಸ್ಕರ ಮುಂದಾಗಿ ಹೋಗಿ ಆ ಸಾನ್ನಿಧ್ಯವನ್ನು ಪ್ರವೇ
ಶಿಸಿದ್ದಾನೆ.

ಯೇಸು ಮೆಲ್ಕಿಜೆದೇಕನ ತರಹದ ಯಾಜಕನಾಗಿದ್ದು ಲೇವಿಕ
ಯಾಜಕರಿಗಿಂತ ಉತ್ತಮನು.

ಈ ಮೆಲ್ಕಿಜೆದೇಕನು ಸಾಲೇಮಿನ ಅರಸನೂ
ಪರಾತ್ಪರನಾದ ದೇವರ ಯಾಜಕನೂ ಆಗಿದ್ದನು;
ರಾಜರನ್ನು ಹೊಡೆದು ಹಿಂತಿರುಗಿ ಬರುತ್ತಿದ್ದ ಅಬ್ರಹಾ
ಮನನ್ನು ಎದುರುಗೊಂಡು ಅವನನ್ನು ಆಶೀರ್ವದಿಸಿ
ದನು; ಅವನಿಗೆ ಅಬ್ರಹಾಮನು ತಾನು ಜಯಿಸಿ
ಕೊಂಡು ಬಂದಿದ್ದ ಎಲ್ಲಾ ವಸ್ತುಗಳಲ್ಲಿ ಹತ್ತನೆಯ
ಒಂದು ಭಾಗವನ್ನು ಕೊಟ್ಟನು. ಅವನ ಹೆಸರಿನ
ಅರ್ಥವು ನೀತಿರಾಜ ಎಂಬದು; ಇದಲ್ಲದೆ ಅವನು ಸಾಲೇ
ಮಿನರಾಜ ಅಂದರೆ ಸಮಾಧಾನರಾಜ; ಅವನಿಗೆ ತಂದೆ
ಯೂ ತಾಯಿಯೂ ವಂಶಾವಳಿಯೂ ಇಲ್ಲ, [1]ಜನ್ಮದ
ಆರಂಭವೂ ಆಯುಷ್ಯದ ಅಂತ್ಯವೂ ಇಲ್ಲ. ಅವನು

1) ಅಥವಾ: ಅವನು ಹುಟ್ಟಿದ್ದಾಗಲಿ ಕಾಲವಾಗಿಹೋದದ್ದಾಗಲಿ ಬರೆದಿಲ್ಲ.

ದೇವರ ಮಗನಿಗೆ ಸಮಾನಮಾಡಲ್ಪಟ್ಟಿದ್ದಾನೆ. ಅವ
ನು ನಿರಂತರವಾಗಿ ಯಾಜಕನಾಗಿರುವವನು.
4 ಈ ಮನುಷ್ಯನು ಎಷ್ಟು ದೊಡ್ಡವನೆಂದು ಆಲೋಚಿ
ಸಿರಿ. ನಮ್ಮ ಮೂಲಪಿತೃವಾದ ಅಬ್ರಹಾಮನು
ತಾನು ಸುಲುಕೊಂಡು ಬಂದ ಶ್ರೇಷ್ಠವಸ್ತುಗಳಲ್ಲಿ ಹತ್ತ
ನೆಯ ಒಂದು ಭಾಗವನ್ನು ಅವನಿಗೆ ಕೊಟ್ಟನಲ್ಲಾ.
5 ಲೇವಿಯ ಕುಲದವರಲ್ಲಿ ಯಾಜಕೋದ್ಯೋಗವನ್ನು
ಹೊಂದುವವರು ಜನರಿಂದ ಅಂದರೆ ಅಬ್ರಹಾಮನ ವಂಶ
ಸ್ಥರಾಗಿರುವ ತಮ್ಮ ಸಹೋದರರಿಂದಲೇ ದಶಮಭಾಗ
ಗಳನ್ನು ತೆಗೆದುಕೊಳ್ಳುವದಕ್ಕೆ ಧರ್ಮಶಾಸ್ತ್ರದಲ್ಲಿ
6 ಅಪ್ಪಣೆ ಉಂಟು. ಆದರೆ ಅವರ ವಂಶಾವಳಿಗೆ ಸೇರದೆ
ಇರುವ ಮೆಲ್ಕಿಜೆದೇಕನು ಅಬ್ರಹಾಮನಿಂದಲೇ ದಶಮ
ಭಾಗಗಳನ್ನು ತಕ್ಕೊಂಡದ್ದಲ್ಲದೆ ದೇವರಿಂದ ವಾಗ್ದಾ
ನಗಳನ್ನು ಹೊಂದಿದವನಾದ ಅವನಿಗೆ ಆಶೀರ್ವಾದ
7 ಕೊಟ್ಟನು. ಆಶೀರ್ವಾದ ಹೊಂದುವವನಿಗಿಂತ ಆಶೀ
ರ್ವದಿಸುವವನು ದೊಡ್ಡವನು ಎಂಬದು ವಿವಾದವಿಲ್ಲದ
8 ಮಾತಷ್ಟೆ. ಇದಲ್ಲದೆ ಲೇವಿಯರ ಕ್ರಮವನ್ನು ನೋ
ಡಿದರೆ ಸಾಯತಕ್ಕ ಮನುಷ್ಯರು ದಶಮಭಾಗಗಳನ್ನು
ತಕ್ಕೊಳ್ಳುತ್ತಾರೆ; ಆದರೆ ಮೆಲ್ಕಿಜೆದೇಕನ ಕ್ರಮವನ್ನು
ನೋಡಿದರೆ ಜೀವಿಸುತ್ತಿದ್ದಾನೆಂದು ಸಾಕ್ಷಿಹೊಂದಿರು
9 ವವನು ತಕ್ಕೊಳ್ಳುತ್ತಾನೆ. ಇದು ಮಾತ್ರವಲ್ಲದೆ
ದಶಮಭಾಗಗಳನ್ನು ತಕ್ಕೊಳ್ಳುವ ಲೇವಿಯೂ ಕೂಡ
ಅಬ್ರಹಾಮನ ಮೂಲಕ ದಶಮಭಾಗಗಳನ್ನು ಕೊಟ್ಟ
10 ಹಾಗಾಯಿತೆಂದು ಹೇಳಬಹುದು; ಹೇಗಂದರೆ ಮೆಲ್ಕಿ
ಜೆದೇಕನು ಲೇವಿಯ ಮೂಲಪುರುಷನನ್ನು ಎದುರು
ಗೊಂಡಾಗ ಲೇವಿಯು ತತ್ಸರೂಪವಾಗಿ ಇವನೊಳಗೆ
ಇದ್ದನು.
11 ಇಸ್ರಾಯೇಲ್ಯರಿಗೆ ಉಂಟಾದ ಧರ್ಮಶಾಸ್ತ್ರವು
ಲೇವಿಕ ಯಾಜಕತ್ವದ ಮೇಲೆಯೇ ಆಧಾರಗೊಂಡಿದೆ
ಯಷ್ಟೆ. ಆ ಯಾಜಕತ್ವದಿಂದ ಸಂಪೂರ್ಣ ಸಿದ್ಧಿ
ಉಂಟಾಗಿದ್ದರೆ ಆರೋನನ ತರಹದವನಾಗಿರದೆ ಮೆಲ್ಕಿಜೆ
ದೇಕನ ತರಹದ ಬೇರೊಬ್ಬ ಯಾಜಕನು ಬರುವದಕ್ಕೆ
12 ಅವಶ್ಯವೇನಿತ್ತು? ಯಾಜಕತ್ವವು ಬೇರೆಯಾದರೆ ಧರ್ಮ
13 ಶಾಸ್ತ್ರವು ಕೂಡ ಬೇರೆಯಾಗುವದು ಅಗತ್ಯ. ಮೇ
ಲ್ಕಂಡ ಮಾತು ಯಾವಾತನ ವಿಷಯದಲ್ಲಿ ಹೇಳಿದೆ
ಯೋ ಆತನು ಬೇರೊಂದು ಕುಲದಲ್ಲಿ ಹುಟ್ಟಿದವನು;
ಆ ಕುಲದವರಲ್ಲಿ ಒಬ್ಬರೂ ಯಜ್ಞವೇದಿಯ ಬಳಿಯಲ್ಲಿ
14 ಸೇವೆಮಾಡಿದ್ದಿಲ್ಲ. ನಮ್ಮ ಕರ್ತನು ಯೆಹೂದ
ಕುಲದಲ್ಲಿ ಜನಿಸಿದವನೆಂಬದು ಪ್ರಸಿದ್ಧವಾಗಿದೆಯಷ್ಟೆ;
ಈ ಕುಲದ ವಿಷಯದಲ್ಲಿ ಮೋಶೆಯು ಯಾಜಕರ
ಸಂಬಂಧವಾಗಿ ಒಂದು ಮಾತನ್ನಾದರೂ ಹೇಳಲಿಲ್ಲ.
15-16 ಇದಲ್ಲದೆ ಬೇರೊಬ್ಬ ಯಾಜಕನು ಶರೀರಧರ್ಮವಿಷ
ಯವಾದ ನಿಯಮದ ಪ್ರಕಾರವಾಗಿರದೆ ಮೆಲ್ಕಿಜೆದೇ
ಕನ ಸಾದೃಶ್ಯದಲ್ಲಿ ನಿರ್ಲಯವಾದ ಜೀವದ ಶಕ್ತಿಯು
ಳ್ಳವನಾಗಿದ್ದು ಬರಬೇಕಾದದರಿಂದ ನಮ್ಮ ಸಿದ್ಧಾಂತ
17 ಮತ್ತೂ ಸ್ಪಷ್ಟವಾಯಿತು. ಆತನ ವಿಷಯದಲ್ಲಿ—
ನೀನು ಸದಾಕಾಲವೂ ಮೆಲ್ಕಿಜೆದೇಕನ ತರಹದ
ಯಾಜಕನಾಗಿದ್ದೀ ಎಂದು ಹೇಳಿಯದೆಯಲ್ಲಾ.
ಧರ್ಮಶಾಸ್ತ್ರವು ಯಾವದನ್ನೂ ಸಿದ್ಧಿಗೆ ತಾರದೆ 18-19
ಇರುವದರಿಂದ ಮೊದಲಿದ್ದ ನಿಯಮವು ನಿರ್ಬಲವಾಗಿ
ಯೂ ನಿಷ್ಪ್ರಯೋಜಕವಾಗಿಯೂ ಇದ್ದು ರದ್ದಾಗಿ
ಹೋಯಿತು. ಅದಕ್ಕೆ ಬದಲಾಗಿ ಉತ್ತಮವಾಗಿ
ರುವ ಒಂದು ನಿರೀಕ್ಷಾಧಾರವು ಪ್ರಾಬಲ್ಯಕ್ಕೆ ಬಂತು.
ಈ ನಿರೀಕ್ಷಾಧಾರವು ನಮ್ಮನ್ನು ದೇವರ ಸನ್ನಿಧಿಗೆ
ಸೇರಿಸುವಂಥದು.
ಇದಲ್ಲದೆ ಲೇವಿಯರು ಆಣೆಯಿಲ್ಲದೆ ಯಾಜಕ 20-21
ರಾದರು; ಆತನಾದರೋ ಆಣೆಯೊಡನೆ ಯಾಜಕನಾಗಿ
ಮಾಡಲ್ಪಟ್ಟನು. ದೇವರು ಆತನಿಗೆ—

ನೀನು ಸದಾಕಾಲವೂ ಯಾಜಕನಾಗಿದ್ದೀ ಎಂದು
ಕರ್ತನೆಂಬ ನಾನು ಆಣೆಯಿಟ್ಟು ನುಡಿದೆನು;
ಪಶ್ಚಾತ್ತಾಪಪಡುವದಿಲ್ಲ

ಎಂಬದಾಗಿ ಹೇಳಿದನಲ್ಲಾ. ಯೇಸು ಆಣೆಯೊಡನೆಯೇ 22
ಯಾಜಕನಾದದರಿಂದ ಎಷ್ಟೋ ಶ್ರೇಷ್ಠವಾದ ಒಡಂಬ
ಡಿಕೆಗೆ ಹೊಣೆಗಾರನಾದನು.
ಲೇವಿಯರು ಶಾಶ್ವತವಾಗಿ ಉದ್ಯೋಗನಡಿಸುವದಕ್ಕೆ 23
ಮರಣವು ಅಡ್ಡಿಯಾದದರಿಂದ ಅವರಲ್ಲಿ ಯಾಜಕರಾ
ದವರು ಅನೇಕರು; ಆತನಾದರೋ ಸದಾಕಾಲವಿರು 24
ವದರಿಂದ ಆತನ ಯಾಜಕತ್ವವು ಮತ್ತೊಬ್ಬರಿಗೆ ಹೋಗು
ವಂಥದಲ್ಲ. ಆದಕಾರಣ ಆತನು ತನ್ನ ಮೂಲಕ 25
ದೇವರ ಬಳಿಗೆ ಬರುವವರನ್ನು ಸಂಪೂರ್ಣವಾಗಿ ರಕ್ಷಿ
ಸುವದಕ್ಕೆ ಶಕ್ತನಾಗಿದ್ದಾನೆ; ಅವರಿಗೋಸ್ಕರ ವಿಜ್ಞಾ
ಪನೆಮಾಡುವದಕ್ಕೆ ಯಾವಾಗಲೂ ಬದುಕುವವನಾಗಿ
ದ್ದಾನೆ.
ಇಂಥವನೇ ನಮಗೆ ಬೇಕಾದ ಮಹಾಯಾಜಕನು. 26
ಈತನು ಪರಿಶುದ್ಧನೂ ನಿರ್ದೋಷಿಯೂ ನಿಷ್ಕಳಂಕನೂ
ಪಾಪಿಗಳಲ್ಲಿ ಸೇರದೆ ಪ್ರತ್ಯೇಕವಾಗಿರುವವನೂ ಆಕಾಶ
ಮಂಡಲಗಳಿಗಿಂತ ಉನ್ನತದಲ್ಲಿರುವವನೂ ಆಗಿರುವ
ನು. ಮೊದಲು ತಮ್ಮ ಪಾಪಪರಿಹಾರಕ್ಕಾಗಿ ಆ ಮೇಲೆ 27
ಜನರ ಪಾಪಪರಿಹಾರಕ್ಕಾಗಿ ಸಮರ್ಪಣೆಮಾಡುವ ಲೇ
ವಿಕ ಮಹಾಯಾಜಕರಂತೆ ಈತನು ಪ್ರತಿನಿತ್ಯವೂ ಸಮ
ರ್ಪಿಸಬೇಕಾದ ಅವಶ್ಯವಿಲ್ಲ. ಈತನು ತನ್ನನ್ನೇ ಸಮ
ರ್ಪಿಸಿಕೊಂಡು ಒಂದೇ ಸಾರಿ ಆ ಕೆಲಸವನ್ನು ಮಾಡಿ
ಮುಗಿಸಿದನು. ಧರ್ಮಶಾಸ್ತ್ರವು ನಿರ್ಬಲರಾದ ಮನು 28
ಷ್ಯರನ್ನು ಮಹಾಯಾಜಕರನ್ನಾಗಿ ನೇಮಿಸುತ್ತದೆ; ಆ
ದರೆ ಧರ್ಮಶಾಸ್ತ್ರದ ತರುವಾಯ ಆಣೆಯೊಡನೆ ಉಂಟಾ
ದ ವಾಕ್ಯವು ಸದಾಕಾಲಕ್ಕೂ ಸರ್ವಸಂಪೂರ್ಣನಾಗಿ
ರುವ ಮಗನನ್ನೇ ನೇಮಿಸುತ್ತದೆ.

ಲೇವಿಕರ ಯಾಜಕತ್ವವು ಮುಂದೆ ಬರಬೇಕಾದದ್ದನ್ನು
ಸೂಚಿಸುವ ಛಾಯೆಯಾಗಿರುವದರಿಂದ ತಾತ್ಕಾಲಿಕವಾದದ್ದು;
ಯೇಸುವಿನ ಯಾಜಕತ್ವವು ಶಾಶ್ವತವಾದದ್ದು.

8 ನಾವು ಈಗ ಹೇಳುವ ಸಂಗತಿಗಳಲ್ಲಿ ಮುಖ್ಯವಾದ
1)ಮಾತೇನಂದರೆ— ಪರಲೋಕದೊಳಗೆ ಮಹತ್ವವುಳ್ಳ

1) ಅಥವಾ, ಮಾತೇನಂದರೆ— ಇಂಥ ಮಹಾಯಾಜಕನೇ ನಮಗಿದ್ದಾನೆ; ಈತನು ಪರಲೋಕದೊಳಗೆ . . . . ಬಲಪಾರ್ಶ್ವದಲ್ಲಿ ಕೂತಿದ್ದು ಪವಿತ್ರಸ್ಥಾನದಲ್ಲಿ . . . .

ದೇವರ ಸಿಂಹಾಸನದ ಬಲಗಡೆಯಲ್ಲಿ ಆಸನಾರೂಢ
2 ನಾದಂಥ ಮಹಾಯಾಜಕನು ನಮಗಿದ್ದಾನೆ. ಈತನು
ಪವಿತ್ರಸ್ಥಾನದಲ್ಲಿ ಅಂದರೆ ಮನುಷ್ಯನು ಹಾಕದೆ ಕರ್ತ
ನೇ ಹಾಕಿದ ನಿಜವಾದ ದೇವದರ್ಶನಗುಡಾರದಲ್ಲಿ
ಯಾಜಕೋದ್ಯೋಗ ನಡಿಸುವವನಾಗಿದ್ದಾನೆ.
3 ಪ್ರತಿಯೊಬ್ಬ ಮಹಾಯಾಜಕನು ಕಾಣಿಕೆಗಳ
ನ್ನೂ ಯಜ್ಞಗಳನ್ನೂ ಸಮರ್ಪಿಸುವದಕ್ಕೆ ನೇಮಕ
ವಾಗಿರುತ್ತಾನಷ್ಟೆ; ಆದದರಿಂದ ಸಮರ್ಪಿಸುವದಕ್ಕೆ
ಈ ಮಹಾಯಾಜಕನಿಗೂ ಏನಾದರೂ ಇರಬೇಕು.
4 ಈತನು ಇನ್ನೂ ಭೂಮಿಯ ಮೇಲೆ ಇದ್ದದ್ದೇ ಆದರೆ
ಯಾಜಕನಾಗಿರುತ್ತಿರಲಿಲ್ಲ; ಯಾಕಂದರೆ ಧರ್ಮನಿಯ
ಮದ ಪ್ರಕಾರ ಕಾಣಿಕೆಗಳನ್ನು ಸಮರ್ಪಿಸುವವರು
5 ಇದ್ದೇ ಇರುತ್ತಾರೆ; ಅವರು ಪರಲೋಕದಲ್ಲಿರುವ
ದೇವಾಲಯದ ಪ್ರತಿರೂಪವೂ ಛಾಯೆಯೂ ಆಗಿ
ರುವ ಆಲಯದಲ್ಲಿ ಯಾಜಕತ್ವವನ್ನು ನಡಿಸುವವರು.
ಮೋಶೆಯು ದೇವದರ್ಶನಗುಡಾರವನ್ನು ಮಾಡುವದ
ಕ್ಕಿದ್ದಾಗ ಬೆಟ್ಟದಲ್ಲಿ ನಾನು ನಿನಗೆ ತೋರಿಸಿದ
ಮಾದರಿಯ ಪ್ರಕಾರವೇ ಎಲ್ಲವನ್ನು ಮಾಡಿಸಬೇಕು
ಎಂಬ ದೈವೋಕ್ತಿಯು ಅವನಿಗೆ ಉಂಟಾಯಿತಲ್ಲಾ.
6 ಆದರೆ ಯೇಸು ಅದಕ್ಕಿಂತ ಶ್ರೇಷ್ಠವಾದ ಯಾಜ
ಕೋದ್ಯೋಗವನ್ನು ಹೊಂದಿದವನಾಗಿದ್ದಾನೆ; ಉತ್ತಮ
ವಾಗ್ದಾನಗಳ ಮೇಲೆ ಸ್ಥಾಪಿತವಾದ ಉತ್ತಮವಾದ
ಒಡಂಬಡಿಕೆಗೆ ಮಧ್ಯಸ್ಥನಾಗಿದ್ದಾನೆ.
7 ಆ ಮೊದಲನೆಯ ಒಡಂಬಡಿಕೆಯು ದೋಷ
ವಿಲ್ಲದ್ದಾಗಿದ್ದರೆ ಎರಡನೆಯ ಒಡಂಬಡಿಕೆಗೆ ಅವಕಾಶ
8 ವು ಇರುತ್ತಿರಲಿಲ್ಲ. ಆದರೆ ದೇವರು ಆ ಒಡಂಬಡಿಕೆಗೆ
ಸೇರಿದವರ ಮೇಲೆ ತಪ್ಪು ಹೊರಿಸಿ ಹೀಗೆಂದನು—

ಇಗೋ, ನಾನು ಇಸ್ರಾಯೇಲ್‌ವಂಶದವ
ರೊಂದಿಗೂ ಯೆಹೂದವಂಶದವರೊಂದಿಗೂ
ಹೊಸದಾಗಿರುವ ಒಂದು ಒಡಂಬಡಿಕೆಯ
ನ್ನು ಮಾಡಿಕೊಳ್ಳುವ ದಿನಗಳು ಬರುವವು
ಎಂದು ಕರ್ತನು ಹೇಳುತ್ತಾನೆ;
9 ಈ ಒಡಂಬಡಿಕೆಯು ನಾನು ಇವರ ಪಿತೃಗಳ
ನ್ನು ಕೈಹಿಡಿದು ಐಗುಪ್ತದೇಶದೊಳಗಿಂದ
ಕರಕೊಂಡು ಬಂದ ಕಾಲದಲ್ಲಿ ಅವರ ಸಂಗಡ
ಮಾಡಿಕೊಂಡ ಒಡಂಬಡಿಕೆಯಂಥದಲ್ಲ;
ಅವರು ನನ್ನ ಒಡಂಬಡಿಕೆಯಲ್ಲಿ ಸ್ಥಿರವಾಗಿ
ನಿಲ್ಲಲಿಲ್ಲವಾದದರಿಂದ ನಾನು ಅವರ ಚಿಂತೆ
ಯನ್ನು ಬಿಟ್ಟೆನೆಂದು ಕರ್ತನು ಹೇಳುತ್ತಾನೆ.
10 ಆ ದಿನಗಳು ಬಂದ ಮೇಲೆ ನಾನು ಇಸ್ರಾ
ಯೇಲ್‌ವಂಶದವರೊಂದಿಗೆ ಮಾಡಿಕೊಳ್ಳುವ
ಒಡಂಬಡಿಕೆಯು ಹೀಗಿರುವದು—
ನನ್ನ ಆಜ್ಞೆಗಳನ್ನು ಅವರ ಮನಸ್ಸಿನಲ್ಲಿ ಇಡು
ವೆನು,
ಅವರ ಹೃದಯದ ಮೇಲೆ ಅವುಗಳನ್ನು ಬರೆ
ಯುವೆನು;
ನಾನು ಅವರಿಗೆ ದೇವರಾಗಿರುವೆನು,
ಅವರು ನನಗೆ ಪ್ರಜೆಯಾಗಿರುವರು;
11 ಒಂದೇ ಊರಿನವರೂ ಅಣ್ಣತಮ್ಮಂದಿರೂ ಒಬ್ಬ
ರಿಗೊಬ್ಬರು—

ಕರ್ತನ ಜ್ಞಾನವನ್ನು ಪಡೆಯಿರಿ ಎಂದು ಬೋಧಿ
ಸಬೇಕಾಗಿರುವದಿಲ್ಲ;
ಚಿಕ್ಕವರು ಮೊದಲುಗೊಂಡು ದೊಡ್ಡವರ
ತನಕ ಎಲ್ಲರೂ ನನ್ನ ಜ್ಞಾನವನ್ನು ಪಡೆದಿರು
ವರು;
ನಾನು ಅವರ ದುಷ್ಕೃತ್ಯಗಳ ವಿಷಯವಾಗಿ
ಕ್ಷಮೆಯುಳ್ಳವನಾಗಿರುವೆನು,
ಅವರ ಪಾಪಗಳನ್ನು ನನ್ನ ನೆನಪಿಗೆ ಎಂದಿಗೂ
ತರುವದಿಲ್ಲ
ಎಂದು ಕರ್ತನು ನುಡಿಯುತ್ತಾನೆ.
ಇಲ್ಲಿ ಹೊಸ ಒಡಂಬಡಿಕೆಯೆಂದು ಹೇಳಿದ್ದರಲ್ಲಿ ಮೊದ
ಲಿದ್ದದ್ದನ್ನು ಹಳೇದಾಗಿ ಮಾಡಿದ್ದಾನೆ. ಆದರೆ ಹಳೇ
ದಾಗುತ್ತಾ ಮುದಿಯಾಗುವಂಥದಕ್ಕೆ ಅಂತ್ಯವು ಸಮೀ
ಪವಾಗಿದೆ.

ಹೀಗಿದ್ದರೂ ಮೊದಲನೆಯ ಒಡಂಬಡಿಕೆಯಲ್ಲಿ ದೇ
ವಾರಾಧನೆಯ ನಿಯಮಗಳಿದ್ದವು; ಮತ್ತು ದೇವಾ
ಲಯವಿತ್ತು, ಅದು ಇಹಲೋಕಸಂಬಂಧವಾದದ್ದು.
ಅಂದರೆ ಒಂದು ಗುಡಾರವು ಕಟ್ಟಲ್ಪಟ್ಟಿತು; ಅದರ
ಮೊದಲನೆಯ ಭಾಗದಲ್ಲಿ ದೀಪಸ್ತಂಭ, ಮೇಜು,
ಸಮರ್ಪಿಸಿದ ರೊಟ್ಟಿ ಇವುಗಳಿದ್ದವು; ಅದಕ್ಕೆ ಪವಿ
ತ್ರಸ್ಥಾನ ಎಂದು ಹೆಸರು. ಎರಡನೆಯ ತೆರೆಯ
ಆಚೆಯಲ್ಲಿ ಅತಿಪವಿತ್ರಸ್ಥಾನವೆನಿಸಿಕೊಳ್ಳುವ ಇನ್ನೊಂ
ದು ಭಾಗವಿತ್ತು; ಅದರಲ್ಲಿ ಚಿನ್ನದ ಧೂಪಾರತಿ,
ಒಳಗೂ ಹೊರಗೂ ಚಿನ್ನದ ತಗಡನ್ನು ಮಡಾಯಿಸಿದ್ದ
ಒಡಂಬಡಿಕೆಯ ಮಂಜೂಷ ಇವುಗಳಿದ್ದವು; ಆ
ಮಂಜೂಷದೊಳಗೆ ಮನ್ನಾ ಇಟ್ಟಿದ್ದ ಚಿನ್ನದ ಪಾತ್ರೆ
ಯೂ ಆರೋನನ ಚಿಗುರಿದ ಕೋಲೂ ಒಡಂಬ
ಡಿಕೆ ಬರೆದಿದ್ದ ಕಲ್ಲಿನ ಹಲಿಗೆಗಳೂ ಇದ್ದವು; ಅದರ
ಮೇಲೆ ದೇವರ ಪ್ರಭಾವವನ್ನು ಸೂಚಿಸುವ ಕೆರೂಬಿ
ಗಳು ಕೃಪಾಸನವನ್ನು ಆಚ್ಛಾದಿಸಿಕೊಂಡಿದ್ದವು.
ಸದ್ಯಕ್ಕೆ ಈ ವಿಷಯಗಳನ್ನು ಒಂದೊಂದಾಗಿ ವಿವರಿಸುವ
ದಕ್ಕೆ ಆಗುವದಿಲ್ಲ.

ಇವುಗಳು ಹೀಗೆ ಸಿದ್ಧಮಾಡಲ್ಪಟ್ಟ ಮೇಲೆ ಯಾಜ
ಕರು ಯಾವಾಗಲೂ ಗುಡಾರದ ಮುಂದಣ ಭಾಗ
ದೊಳಗೆ ಹೋಗಿ ದೇವಾರಾಧನೆಯನ್ನು ನಡಿಸುತ್ತಾರೆ.
ಆದರೆ ಎರಡನೆಯ ಭಾಗದೊಳಗೆ ಮಹಾಯಾಜಕ
ನೊಬ್ಬನೇ ವರುಷಕ್ಕೆ ಒಂದೇ ಸಾರಿ ಹೋಗುತ್ತಾನೆ,
ಅವನು ರಕ್ತವನ್ನು ತಕ್ಕೊಳ್ಳದೆ ಹೋಗುವದಿಲ್ಲ; ಆ
ರಕ್ತವನ್ನು ತನಗೋಸ್ಕರವೂ ಜನರ ತಪ್ಪುಗಳಿಗೋಸ್ಕ
ರವೂ ಸಮರ್ಪಿಸುತ್ತಾನೆ. ಈ ಏರ್ಪಾಟಿನಿಂದ ಗುಡಾರ
ದಲ್ಲಿ ಮುಂದಣ ಭಾಗವು ಇರುವ ತನಕ ದೇವರ
ಸಮಕ್ಷಮಕ್ಕೆ ಹೋಗುವ ಮಾರ್ಗವು ಇದು ವರೆಗೂ
ಪ್ರಕಟವಾಗಲಿಲ್ಲವೆಂಬದನ್ನು ಪವಿತ್ರಾತ್ಮನು ವ್ಯಕ್ತಪಡಿ
ಸುತ್ತಾನೆ. ಆ ಗುಡಾರವು ಈಗಿನ ಕಾಲದವರಿಗೋಸ್ಕರ
ಒಂದು ಒಳಗಣ ಅರ್ಥವನ್ನು ಸೂಚಿಸುತ್ತದೆ; ಏನಂದರೆ
ಅದರ ಕ್ರಮದ ಮೇರೆಗೆ ಸಮರ್ಪಣೆಯಾಗುವ ಕಾಣಿಕೆ
ಗಳೂ ಯಜ್ಞಗಳೂ ದೇವಾರಾಧನೆ ಮಾಡುವವ
ರನ್ನು ಮನಸ್ಸಾಕ್ಷಿಯು ಒಪ್ಪುವಂತೆ ಸಿದ್ಧಿಗೆ ತರಲಾರದೆ
ಅನ್ನಪಾನಾದಿಗಳೂ ವಿವಿಧ ಸ್ನಾನಗಳೂ ಸಹಿತ
ವಾಗಿ ದೇಹಕ್ಕೆ ಮಾತ್ರ ಸಂಬಂಧಪಟ್ಟ ನಿಯಮಗಳಾ

ಗಿದ್ದು ತಿದ್ದುಪಾಟಿನ ಕಾಲದ ವರೆಗೆ ಮಾತ್ರ ನೇಮಕ
ವಾದವು ಎಂಬದು.
11 ಆದರೆ ಕ್ರಿಸ್ತನು 1)ಈಗ ದೊರೆತಿರುವ ಮೇಲುಗಳ
ನ್ನು ಕುರಿತು ಮಹಾಯಾಜಕನಾಗಿ ಬಂದು ಕೈ
ಯಿಂದ ಕಟ್ಟಲ್ಪಡದಂಥ ಅಂದರೆ ಈ ಸೃಷ್ಟಿಗೆ ಸಂಬಂಧ
ಪಡದಂಥ ಘನವಾಗಿಯೂ ಉತ್ಕೃಷ್ಟವಾಗಿಯೂ
ಇರುವ ಗುಡಾರದಲ್ಲಿ ಸೇವೆಯನ್ನು ಮಾಡುವವನಾಗಿ
12 ಹೋತಗಳ ಮತ್ತು ಹೋರಿಕರಗಳ ರಕ್ತವನ್ನು ತೆಗೆ
ದುಕೊಳ್ಳದೆ ಸ್ವಂತ ರಕ್ತವನ್ನೇ ತೆಗೆದುಕೊಂಡು
ನಮಗೋಸ್ಕರ ನಿತ್ಯವಿಮೋಚನೆಯನ್ನು ಸಂಪಾದಿಸಿ
ಕೊಂಡವನಾಗಿ ಒಂದೇ ಸಾರಿ ದೇವರ ಸನ್ನಿಧಾನಕ್ಕೆ
13 ಪ್ರವೇಶಿಸಿದನು. ಹೋತ ಹೋರಿಗಳ ರಕ್ತವೂ
ಹೊಲೆಯಾದವರ ಮೇಲೆ ಚೆಲ್ಲುವ ಕಡಸಿನ ಬೂದಿ
ಯೂ ಶರೀರದ ಹೊಲೆಯನ್ನು ಹೋಗಲಾಡಿಸಿ ಪವಿತ್ರ
14 ಮಾಡುವದಾದರೆ ನಿತ್ಯಾತ್ಮನಿಂದ ತನ್ನನ್ನು ತಾನೇ
ನಿರ್ದೋಷಿಯನ್ನಾಗಿ ದೇವರಿಗೆ ಸಮರ್ಪಿಸಿಕೊಂಡ
ಕ್ರಿಸ್ತನ ರಕ್ತವು ಎಷ್ಟೋ ಹೆಚ್ಚಾಗಿ 2)ನಮ್ಮನ್ನು
ನಿರ್ಜೀವಕರ್ಮಗಳಿಂದ ಬಿಡಿಸಿ ನಾವು ಜೀವವುಳ್ಳ
ದೇವರನ್ನು ಆರಾಧಿಸುವವರಾಗುವಂತೆ ನಮ್ಮ ಮನ
ಸ್ಸನ್ನು ಶುದ್ಧೀಕರಿಸುವದಲ್ಲವೇ.
15 ಮತ್ತು ಈ ಕಾರಣದಿಂದ ಆತನು ಒಂದು ಹೊಸ
ಒಡಂಬಡಿಕೆಗೆ ಮಧ್ಯಸ್ಥನಾಗಿದ್ದಾನೆ. ಮೊದಲನೆಯ
ಒಡಂಬಡಿಕೆಯ ಕಾಲದಲ್ಲಿ ನಡೆದ ಅಕ್ರಮಗಳ ಪರಿ
ಹಾರಕ್ಕಾಗಿ ಆತನು ಮರಣವನ್ನು ಅನುಭವಿಸಿದ್ದ
ರಿಂದ ದೇವರಿಂದ ಕರೆಯಿಸಿಕೊಂಡವರು ವಾಗ್ದಾನ
ವಾಗಿದ್ದ ನಿತ್ಯಬಾಧ್ಯತೆಯನ್ನು ಹೊಂದುವದಕ್ಕೆ ಆತನ
16 ಮೂಲಕ ಮಾರ್ಗವಾಯಿತು. 3)ಮರಣಶಾಸನವು
ಇರುವಲ್ಲಿ ಅದನ್ನು ಬರೆಯಿಸಿದವನ ಮರಣವು ಪ್ರಸಿದ್ಧ
17 ವಾಗಿರಬೇಕಷ್ಟೆ. ಮರಣಶಾಸನವು ಮರಣವಾದ
ಮೇಲೆ ನಡೆಯುವದೇ ಹೊರತು ಬರೆಯಿಸಿದವನು
ಜೀವದಿಂದಿರುವಾಗ ಎಂದಿಗೂ ಸಲ್ಲುವದಿಲ್ಲ.
18 ಹೀಗಿರಲಾಗಿ ಮೊದಲನೆಯ ಒಡಂಬಡಿಕೆಯಾದರೂ
19 ರಕ್ತವಿಲ್ಲದೆ ಸ್ಥಾಪಿತವಾಗಲಿಲ್ಲ. ಮೋಶೆಯು ದೇವರ
ವಿಧಿಗಳನ್ನೆಲ್ಲಾ ಧರ್ಮಶಾಸ್ತ್ರದ ಪ್ರಕಾರ ಜನರೆಲ್ಲರಿಗೆ
ಹೇಳಿದ ಮೇಲೆ ನೀರು, ಕೆಂಪು ಉಣ್ಣೆ, ಹಿಸ್ಸೋ
ಪುಕಡ್ಡಿ ಇವುಗಳೊಂದಿಗೆ ಹೋರಿಕರಗಳ ಮತ್ತು
20 ಹೋತಗಳ ರಕ್ತವನ್ನು ತೆಗೆದುಕೊಂಡು—ಇದು
ದೇವರು ನಿಮಗೋಸ್ಕರ ವಿಧಿಸಿದ ಒಡಂಬಡಿಕೆಯನ್ನು
ಸ್ಥಿರಪಡಿಸುವ ರಕ್ತವಾಗಿದೆ ಎಂದು ಹೇಳಿ ಅದನ್ನು
ಗ್ರಂಥದ ಮೇಲೆಯೂ ಎಲ್ಲಾ ಜನರ ಮೇಲೆಯೂ
21 ಪ್ರೋಕ್ಷಿಸಿದನು. ಇದಲ್ಲದೆ ಗುಡಾರದ ಮೇಲೆಯೂ
ದೇವರ ಸೇವೆಗೆ ಬೇಕಾಗಿರುವ ಎಲ್ಲಾ ಉಪಕರಣಗಳ
ಮೇಲೆಯೂ ಅದೇ ರೀತಿಯಾಗಿ ರಕ್ತವನ್ನು ಪ್ರೋಕ್ಷಿಸಿ
22 ದನು. ಧರ್ಮಶಾಸ್ತ್ರದ ಪ್ರಕಾರ ಸ್ವಲ್ಪಕಡಿಮೆ ಎಲ್ಲಾ
ವಸ್ತುಗಳು ರಕ್ತದಿಂದಲೇ ಶುದ್ಧೀಕರಿಸಲ್ಪಡುವವು;
ರಕ್ತಧಾರೆಯಿಲ್ಲದೆ ಪಾಪಪರಿಹಾರ ಉಂಟಾಗುವ
ದಿಲ್ಲ.
ಪರಲೋಕವಸ್ತುಗಳಿಗೆ ಪ್ರತಿರೂಪವಾಗಿರುವ ವಸ್ತು 23
ಗಳ ಶುದ್ಧೀಕರಣಕ್ಕಾಗಿ ಇಂಥಾ ಯಜ್ಞಗಳು
ಅವಶ್ಯವಾದರೂ ಸಾಕ್ಷಾತ್ ಪರಲೋಕದವುಗಳಿಗೆ
ಇವುಗಳಿಗಿಂತ ಉತ್ತಮವಾದ ಯಜ್ಞಗಳು ಬೇಕು.
ಯಾಕಂದರೆ ಕ್ರಿಸ್ತನು ನಿಜವಾದ ದೇವಾಲಯಕ್ಕೆ 24
ಅನುರೂಪಮಾತ್ರವಾದದ್ದಾಗಿಯೂ ಕೈಯಿಂದ ಕಟ್ಟಿ
ದ್ದಾಗಿಯೂ ಇರುವ ಆಲಯದಲ್ಲಿ ಪ್ರವೇಶಿಸದೆ ದೇವರ
ಸಮ್ಮುಖದಲ್ಲಿ ನಮಗೋಸ್ಕರ ಈಗ ಕಾಣಿಸಿಕೊಳ್ಳು
ವದಕ್ಕೆ ಪರಲೋಕದಲ್ಲಿಯೇ ಪ್ರವೇಶಿಸಿದನು. ಇದ 25
ಲ್ಲದೆ ಮಹಾಯಾಜಕನು ವರುಷ ವರುಷವೂ ಅನ್ಯ
ರಕ್ತವನ್ನು ತೆಗೆದುಕೊಂಡು ಪವಿತ್ರಾಲಯದಲ್ಲಿ ಪ್ರವೇ
ಶಿಸುವ ಪ್ರಕಾರ ಆತನು ತನ್ನನ್ನು ಅನೇಕ ಸಾರಿ
ಸಮರ್ಪಿಸುವದಕ್ಕೆ ಪರಲೋಕದಲ್ಲಿ ಪ್ರವೇಶಿಸಲಿಲ್ಲ;
ಹಾಗೆ ಸಮರ್ಪಿಸಬೇಕಾಗಿದ್ದ ಪಕ್ಷದಲ್ಲಿ ಆತನು 26
ಲೋಕಾದಿಯಿಂದ ಎಷ್ಟೋ ಸಾರಿ ಬಾಧೆಪಟ್ಟು ಸಾಯ
ಬೇಕಾಗಿತ್ತು. ಆದರೆ ಒಂದೇ ಸಾರಿ ಯುಗಗಳ
ಸಮಾಪ್ತಿಯಲ್ಲೇ ಆತನು ಪಾಪನಿವಾರಣೆಮಾಡಬೇ
ಕೆಂಬ ಉದ್ದೇಶದಿಂದ ತನ್ನನ್ನು ಯಜ್ಞಮಾಡಿಕೊಳ್ಳು
ವವನಾಗಿ ಪ್ರತ್ಯಕ್ಷನಾದನು. ಒಂದೇ ಸಾರಿ ಸಾಯುವ 27
ದೂ ಆ ಮೇಲೆ ನ್ಯಾಯತೀರ್ಪೂ ಮನುಷ್ಯರಿಗೆ ಹೇಗೆ
ನೇಮಕವಾಗಿದೆಯೋ ಹಾಗೆಯೇ ಕ್ರಿಸ್ತನು ಸಹ ಬಹು
ಜನರ ಪಾಪಗಳನ್ನು ಹೊತ್ತುಕೊಳ್ಳುವದಕ್ಕೋಸ್ಕರ
ಒಂದೇ ಸಾರಿ ಸಮರ್ಪಿತನಾದನು, ಮತ್ತು ತನ್ನನ್ನು
ನಿರೀಕ್ಷಿಸಿಕೊಂಡಿರುವವರಿಗೆ ರಕ್ಷಣೆಯನ್ನುಂಟುಮಾ
ಡುವದಕ್ಕೋಸ್ಕರ ಪಾಪಸಂಬಂಧವಿಲ್ಲದವನಾಗಿ ಎರ
ಡನೆಯ ಸಾರಿ ಕಾಣಿಸಿಕೊಳ್ಳುವನು.

ಲೇವಿಯರ ಕೊನೆಯಿಲ್ಲದ ಯಜ್ಞಗಳು ಸಾರ್ಥಕವಾಗುವದಿಲ್ಲ;
ಯೇಸುವಿನ ಒಂದೇ ಯಜ್ಞವು ಸದಾಕಾಲವೂ ಸಾರ್ಥಕವಾದದ್ದು.

10 ಧರ್ಮಶಾಸ್ತ್ರದಲ್ಲಿ ಮುಂದೆ ಬರಬೇಕಾಗಿದ್ದ
ಮೇಲುಗಳ ಛಾಯೆಯೇ ಹೊರತು ಅವುಗಳ ನಿಜ
ಸ್ವರೂಪವಲ್ಲವಾದದರಿಂದ ಆ ಧರ್ಮಶಾಸ್ತ್ರವು ವರುಷ
ವರುಷಕ್ಕೆ ಪದೇ ಪದೇ ಅರ್ಪಿತವಾಗುವ ಒಂದೇ ವಿಧ
ವಾದ ಯಜ್ಞಗಳನ್ನು ಅರ್ಪಿಸಿ ದೇವರ ಸಮೀಪಕ್ಕೆ ಬರು
ವವರನ್ನು ಎಂದಿಗೂ ಸಿದ್ಧಿಗೆ ತರಲಾರದು. ತಂದಿದ್ದ 2
ಪಕ್ಷದಲ್ಲಿ ಆ ಯಜ್ಞಸಮರ್ಪಣೆಯು ನಿಂತುಹೋಗು
ತ್ತಿತ್ತಲ್ಲಾ. ಯಾಕಂದರೆ ದೇವಾರಾಧನೆಮಾಡುವವರು
ಒಂದೇ ಸಾರಿ ಶುದ್ಧೀಕರಿಸಲ್ಪಟ್ಟ ಮೇಲೆ ಅವರಿಗೆ ಪಾಪ
ವುಂಟೆಂದು ಅವರ ಮನಸ್ಸು ಇನ್ನೂ ಸಾಕ್ಷಿಕೊಡುವದು
ಹೇಗೆ? ಆದರೆ ಆ ಯಜ್ಞಗಳಿಂದ ಪ್ರತಿವರುಷದಲ್ಲಿ 3
ಯೂ ಪಾಪಗಳ ಜ್ಞಾಪಕವಾಗುವದುಂಟು; ಹೋರಿ 4
ಗಳ ಮತ್ತು ಹೋತಗಳ ರಕ್ತದಿಂದ ಪಾಪಗಳು ಪರಿ

1) ಕೆಲವು ಪ್ರತಿಗಳಲ್ಲಿ—ಮುಂದೆ ದೊರೆಯಬೇಕಾಗಿದ್ದ ಎಂದು ಬರೆದದೆ. 2) ಕೆಲವು ಪ್ರತಿಗಳಲ್ಲಿ—ನಿಮ್ಮನ್ನು . . . . ನೀವು . . . . ನಿಮ್ಮ ಎಂದು ಬರೆದದೆ. 3) ಅಥವಾ, ಒಡಂಬಡಿಕೆಯಿರುವಲ್ಲಿ ಅದನ್ನು ನಿಶ್ಚಯಪಡಿಸುವ ಪಶುವಿನ ಮರಣವು ಪ್ರಸಿದ್ಧವಾಗಿರಬೇಕಷ್ಟೆ. ಪಶುವಿನ ಮರಣವಾದ ಮೇಲೆ ಒಡಂಬಡಿಕೆಯು ದೃಢವಾಗುವದೇ ಹೊರತು ನಿಶ್ಚಯಪಡಿಸುವ ಆ ಪಶು ಜೀವದಿಂದಿರುವಾಗ ಆ ಒಡಂಬಡಿಕೆ ಎಂದಿಗೂ ಪ್ರಯೋಜನಕ್ಕೆ ಬರುವದಿಲ್ಲ.

5 ಹಾರವಾಗುವದು ಅಸಾಧ್ಯವಾಗಿದೆಯಲ್ಲಾ. ಆದದ
ರಿಂದ ಕ್ರಿಸ್ತನು ಭೂಲೋಕದೊಳಗೆ ಬರುವಾಗ—
[ದೇವರೇ,] ಯಜ್ಞನೈವೇದ್ಯಗಳು ನಿನಗೆ ಇಷ್ಟ
ವಾಗಿರಲಿಲ್ಲ,
ನನಗೆ ದೇಹವನ್ನು ಸಿದ್ಧಮಾಡಿಕೊಟ್ಟೆ;
6 ಸರ್ವಾಂಗಹೋಮಗಳಲ್ಲಿಯೂ ದೋಷಪರಿಹಾ
ರಕಯಜ್ಞಗಳಲ್ಲಿಯೂ ನೀನು ಸಂತೋಷ
ಪಡಲಿಲ್ಲ;
7 ಆಗ ನಾನು—ಇಗೋ, ದೇವರೇ, ನಿನ್ನ ಚಿತ್ತ
ವನ್ನು ನೆರವೇರಿಸುವದಕ್ಕೆ ಬಂದಿದ್ದೇನೆ.
ಗ್ರಂಥದ ಸುರುಳಿಯಲ್ಲಿ ನನ್ನನ್ನು ಕುರಿತು
ಬರೆದದೆ ಎಂದು ಹೇಳಿದೆನು
8 ಅನ್ನುತ್ತಾನೆ. ಧರ್ಮಶಾಸ್ತ್ರದ ಪ್ರಕಾರ ಸಮರ್ಪಣೆ
ಯಾಗುತ್ತಾ ಬರುವ ಯಜ್ಞನೈವೇದ್ಯಗಳೂ ಸರ್ವಾಂಗ
ಹೋಮಗಳೂ ದೋಷಪರಿಹಾರಕಯಜ್ಞಗಳೂ ನಿನಗೆ
ಇಷ್ಟವಾಗಿರಲಿಲ್ಲ, ನೀನು ಅವುಗಳಲ್ಲಿ ಸಂತೋಷಪಡು
ವದಿಲ್ಲ ಎಂದು ಮೇಲೆ ಹೇಳಿದ ತರುವಾಯ—
9 ಇಗೋ, ನಿನ್ನ ಚಿತ್ತವನ್ನು ನೆರವೇರಿಸುವದಕ್ಕೆ ಬಂದಿ
ದ್ದೇನೆ ಎಂದು ಹೇಳಿದ್ದಾನೆ. ಆತನು ಎರಡನೆಯದನ್ನು
ಸ್ಥಾಪಿಸುವದಕ್ಕಾಗಿ ಮೊದಲನೆಯದನ್ನು ತೆಗೆದುಬಿಡು
10 ತ್ತಾನೆ. ಯೇಸು ಕ್ರಿಸ್ತನು ಒಂದೇ ಸಾರಿ ದೇಹ
ಸಮರ್ಪಣೆಮಾಡಿ ದೇವರ ಚಿತ್ತವನ್ನು ನೆರವೇರಿಸಿದದ
ರಿಂದಲೇ ನಾವು ಶುದ್ಧರಾದೆವು.
11 ಇದಲ್ಲದೆ ಆ ಯಾಜಕರೆಲ್ಲರು ದಿನಾಲು ಸೇವೆ
ಮಾಡುತ್ತಾ ಎಂದಿಗೂ ಪಾಪನಿವಾರಣೆ ಮಾಡಲಾರ
ದಂಥ ಒಂದೇ ವಿಧವಾದ ಯಜ್ಞಗಳನ್ನು ಪದೇ ಪದೇ
12 ಸಮರ್ಪಿಸುತ್ತಾ ನಿಂತುಕೊಂಡಿರುವರು. ಆದರೆ ಈ
ಯಾಜಕನು ಪಾಪನಿವಾರಣೆಗೋಸ್ಕರ ನಿರಂತರವಾಗಿ
ನಿಲ್ಲುವ ಒಂದೇ ಯಜ್ಞವನ್ನು ಸಮರ್ಪಿಸಿ ದೇವರ
13 ಬಲಗಡೆಯಲ್ಲಿ ಕೂತುಕೊಂಡನು. ಅಂದಿನಿಂದ ತನ್ನ
ವಿರೋಧಿಗಳು ತನ್ನ ಪಾದಪೀಠವಾಗಿ ಹಾಕಲ್ಪಡುವ
14 ತನಕ ಆತನು ಕಾದಿರುವನು. ಪವಿತ್ರರಾಗುತ್ತಿರುವವ
ರನ್ನು ಒಂದೇ ಸಮರ್ಪಣೆಯಿಂದ ನಿರಂತರವಾಗಿ
15 ಸಿದ್ಧಿಗೆ ತಂದಿದ್ದಾನಷ್ಟೆ. ಪವಿತ್ರಾತ್ಮನು ಸಹ ನಮಗೆ
ಸಾಕ್ಷಿಕೊಡುವವನಾಗಿ—
16 ಆ ದಿನಗಳು ಬಂದ ಮೇಲೆ ನಾನು ಅವರ
ಸಂಗಡ ಮಾಡಿಕೊಳ್ಳುವ ಒಡಂಬಡಿಕೆಯು
ಹೀಗಿರುವದು—
ನನ್ನ ಆಜ್ಞೆಗಳನ್ನು ಅವರ ಹೃದಯದಲ್ಲಿ ಇಡು
ವೆನು,
ಅವರ ಮನಸ್ಸಿನ ಮೇಲೆ ಅವುಗಳನ್ನು ಬರೆ
ಯುವೆನು
ಎಂದು ಕರ್ತನು ನುಡಿಯುತ್ತಾನೆ
ಎಂಬದಾಗಿ ಹೇಳಿದ ಮೇಲೆ ಇನ್ನು—
17 ಅವರ ಪಾಪಗಳನ್ನೂ ಅವರ ದುಷ್ಕೃತ್ಯಗಳ
ನ್ನೂ ನನ್ನ ನೆನಪಿಗೆ ಎಂದಿಗೂ ತರುವದಿಲ್ಲ
18 ಎಂದು ಹೇಳುತ್ತಾನೆ. ಪಾಪಗಳು ಪರಿಹಾರವಾದಲ್ಲಿ
ಇನ್ನೂ ಅವುಗಳ ವಿಷಯದಲ್ಲಿ ಸಮರ್ಪಣೆಮಾಡುವದು
ಅವಶ್ಯವಿಲ್ಲ.

ಯೇಸುವಿನ ಮೂಲಕ ದೇವಸನ್ನಿಧಾನವನ್ನು ಯೋಗ್ಯರಾಗಿ ಸೇರೋಣ; ಆತನ ಯಜ್ಞವನ್ನು ಬೇಡವೆಂದರೆ ಬೇರೊಂದಿಲ್ಲ; ನಾವು ಹಿಂಸೆತಾಳಬೇಕಾದರೂ ಹಿಂಜರಿಯಬಾರದು ಎಂದು ಬೋಧೆ.

ಹೀಗಿರುವಲ್ಲಿ ಸಹೋದರರೇ, ಯೇಸು ನಮ 19
ಗೋಸ್ಕರ ಪ್ರತಿಷ್ಠಿಸಿದ ಜೀವವುಳ್ಳ ಹೊಸ ದಾರಿ
ಯಲ್ಲಿ ಆತನ ರಕ್ತದ ಮೂಲಕ ಆತನ ಶರೀರವೆಂಬ
ತೆರೆಯ ಮುಖಾಂತರ ದೇವರ ಸಮಕ್ಷಮದಲ್ಲಿ
ಪ್ರವೇಶಿಸುವದಕ್ಕೆ ನಮಗೆ ಧೈರ್ಯವುಂಟಾಯಿತು.
ದೇವರ ಮನೆಯ ಮೇಲೆ ಅಧಿಕಾರಿಯಾಗಿರುವ ಶ್ರೇಷ್ಠ
ನಾದ ಯಾಜಕನು ನಮಗಿದ್ದಾನೆ. ಆದಕಾರಣ ನೀನ
ಪರಾಧಿಯೆಂದು ನಮ್ಮ ಮನಸ್ಸು ನಮಗೆ ಸಾಕ್ಷಿಹೇಳ
ದಂತೆ ನಾವು ಹೃದಯವನ್ನು ಪ್ರೋಕ್ಷಿಸಿಕೊಂಡು ದೇ
ಹವನ್ನು ತಿಳಿನೀರಿನಿಂದ ತೊಳೆದುಕೊಂಡು ಪರಿಪೂರ್ಣ
ವಾದ ನಂಬಿಕೆಯುಳ್ಳವರಾಗಿಯೂ ಯಥಾರ್ಥಹೃದ
ಯವುಳ್ಳವರಾಗಿಯೂ ದೇವರ ಬಳಿಗೆ ಬರೋಣ. ನಮ್ಮ
ನಿರೀಕ್ಷೆಯನ್ನು ಕುರಿತು ನಾವು ಮಾಡಿದ ಪ್ರತಿಜ್ಞೆ
ಯನ್ನು ನಿಶ್ಚಂಚಲವಾಗಿ ಪರಿಗ್ರಹಿಸೋಣ; ವಾಗ್ದಾನ
ಮಾಡಿದಾತನು ನಂಬಿಗಸ್ತನು. ನಾವು ಪರಸ್ಪರ ಹಿತ
ಚಿಂತಕರಾಗಿದ್ದು ಪ್ರೀತಿಸುತ್ತಿರಬೇಕೆಂತಲೂ ಸತ್ಕಾ
ರ್ಯಮಾಡಬೇಕೆಂತಲೂ ಒಬ್ಬರನ್ನೊಬ್ಬರು ಪ್ರೇರೇ
ಪಿಸೋಣ. ಸಭೆಯಾಗಿ ಕೂಡಿಕೊಳ್ಳುವದನ್ನು ಕೆಲ
ವರು ರೂಢಿಯಾಗಿ ಬಿಟ್ಟಿರುವ ಪ್ರಕಾರ ನಾವು ಬಿಟ್ಟು
ಬಿಡದೆ ಒಬ್ಬರನ್ನೊಬ್ಬರು ಎಚ್ಚರಿಸೋಣ. ಕರ್ತನ
ಪ್ರತ್ಯಕ್ಷತೆಯ ದಿನವು ಸಮೀಪಿಸುತ್ತಾ ಬರುತ್ತದೆ ಎಂದು
ನೀವು ನೋಡುವದರಿಂದ ಇದನ್ನು ಮತ್ತಷ್ಟು ಮಾಡಿರಿ.
ಯಾಕಂದರೆ ಸತ್ಯದ ಪರಿಜ್ಞಾನವನ್ನು ನಾವು
ಹೊಂದಿದ ಮೇಲೆ ಬೇಕೆಂದು ಪಾಪಮಾಡಿದರೆ
ಪಾಪಪರಿಹಾರಕ್ಕಾಗಿ ಇನ್ನಾವ ಯಜ್ಞವೂ ಇರುವ
ದಿಲ್ಲ; ಅತ್ಯಂತ ಭಯದಿಂದ ಎದುರುನೋಡತಕ್ಕ
ನ್ಯಾಯತೀರ್ಪೂ ದೇವರ ವಿರೋಧಿಗಳನ್ನು ದಹಿಸುವ
ತೀಕ್ಷ್ಣವಾದ ಅಗ್ನಿಯೂ ಇವೇ ನಮ್ಮ ಮುಂದೆ
ಇರುವವು. ಮೋಶೆಯ ವಿಧಿಗಳನ್ನು ಅಸಡ್ಡೆಮಾಡಿ
ದವನಿಗೆ ಇಬ್ಬರು ಇಲ್ಲವೆ ಮೂವರು ಸಾಕ್ಷಿಗಳ
ಮಾತಿನ ಮೇಲೆ ಕನಿಕರವಿಲ್ಲದೆ ಮರಣದಂಡನೆ ಆಗುತ್ತ
ದಷ್ಟೆ. ಯಾವನು ದೇವಕುಮಾರನನ್ನು ತುಳಿದು
ಒಡಂಬಡಿಕೆಯನ್ನು ಸ್ಥಿರಪಡಿಸಿದಂಥ ತನ್ನನ್ನು
ಪವಿತ್ರಮಾಡಿದಂಥ ರಕ್ತವನ್ನು 1)ಅಶುದ್ಧವೆಂದೆಣಿಸಿ
2)ದೇವರ ಕೃಪಾವರವಾಗಿರುವ ಆತ್ಮನನ್ನು ತಿರ
ಸ್ಕಾರಮಾಡಿದ್ದಾನೋ ಅವನು ಇನ್ನೂ ಎಷ್ಟೋ ಕ್ರೂರ
ವಾದ ದಂಡನೆಗೆ ಪಾತ್ರನಾಗಬೇಕೆಂಬದನ್ನು ಯೋಚ
ಸಿರಿ. ಮುಯ್ಯಿಗೆ ಮುಯ್ಯಿ ತೀರಿಸುವದು ನನ್ನ
ಕೆಲಸ, ನಾನೇ ಪ್ರತಿಫಲವನ್ನು ಕೊಡುವೆನೆಂದು ಹೇಳಿ
ದಾತನನ್ನು ಬಲ್ಲೆವು; ಇದಲ್ಲದೆ ಕರ್ತನು ತನ್ನ

1) ಮೂಲ: ಸಾಧಾರಣವೆಂದೆಣಿಸಿ. 2) ಮೂಲ: ಕೃಪೆಯ ಆತ್ಮನನ್ನು.

ಜನರ ನ್ಯಾಯವನ್ನು ವಿಚಾರಿಸುವನೆಂತಲೂ ಹೇಳಿ
31 ಯದೆ. ಜೀವಸ್ವರೂಪನಾದ ದೇವರ ಕೈಯಲ್ಲಿ ಸಿಕ್ಕಿ
ಬೀಳುವದು ಭಯಂಕರವಾದದ್ದು.
32 ಹೀಗಿರಲಾಗಿ ನೀವು ಜ್ಞಾನಪ್ರಕಾಶದಲ್ಲಿ ಸೇರಿ
ಕಷ್ಟಾನುಭವವೆಂಬ ಬಲು ಹೋರಾಟವನ್ನು ಸಹಿಸಿ
ಕೊಂಡ ಹಿಂದಿನ ದಿನಗಳನ್ನು ನೆನಪಿಗೆ ತಂದುಕೊಳ್ಳಿರಿ;
33 ಕೆಲವು ಸಾರಿ ನೀವು ನಿಂದೆಗಳನ್ನೂ ಸಂಕಟಗಳನ್ನೂ
ಅನುಭವಿಸಿ ಹಾಸ್ಯಕ್ಕೆ ಗುರಿಯಾದಿರಿ; ಕೆಲವು
ಸಾರಿ ಅಂಥವುಗಳನ್ನು ಅನುಭವಿಸಿದವರಲ್ಲಿ ಸೇರಿದವ
34 ರಾಗಿದ್ದು ಕಷ್ಟಾನುಭವಿಗಳಾದಿರಿ. ಬೇಡಿಗಳನ್ನು
ಹಾಕಿಸಿಕೊಂಡವರ ಕಷ್ಟವನ್ನು ನೋಡಿ ಅವರ ಸಂಗಡ
ನೀವು ದುಃಖಪಟ್ಟದ್ದಲ್ಲದೆ ನಮಗೆ ಉತ್ತಮವಾಗಿ
ಯೂ ಸ್ಥಿರವಾಗಿಯೂ ಇರುವ ಆಸ್ತಿಯುಂಟೆಂದು
ಚೆನ್ನಾಗಿ ಅರಿತುಕೊಂಡು ನಿಮ್ಮ ಸೊತ್ತನ್ನು ಸುಲು
35 ಕೊಳ್ಳುವವರಿಗೆ ಸಂತೋಷದಿಂದ ಬಿಟ್ಟಿರಿ. ಹಾಗಾ
ದರೆ ನಿಮ್ಮ ಧೈರ್ಯವನ್ನು ಬಿಟ್ಟುಬಿಡಬೇಡಿರಿ; ಅದಕ್ಕೆ
36 ಮಹಾ ಪ್ರತಿಫಲ ಉಂಟು. ದೇವರ ಚಿತ್ತವನ್ನು
ನೆರವೇರಿಸಿ ವಾಗ್ದಾನದ ಫಲವನ್ನು ಹೊಂದಬೇಕಾದರೆ
ನಿಮಗೆ ತಾಳ್ಮೆ ಬೇಕು.

37 ಬರುವಾತನು ಇನ್ನು ಸ್ವಲ್ಪಕಾಲದಲ್ಲಿ ಬರು
ವನು, ತಡಮಾಡುವದಿಲ್ಲ;
38 ಆದರೆ ನನ್ನವನಾಗಿರುವ ನೀತಿವಂತನು ನಂಬಿ
ಕೆಯಿಂದಲೇ ಬದುಕುವನು;
ಅವನು ಹಿಂದೆಗೆದರೆ ಅವನಲ್ಲಿ ನನಗೆ ಸಂತೋಷ
ವಿರುವದಿಲ್ಲ

39 ಎಂದು ಬರೆದದೆ. ನಾವಾದರೋ ಹಿಂದೆಗೆದವರಾಗಿ
ನಾಶವಾಗುವವರಲ್ಲ, ನಂಬುವವರಾಗಿ ಪ್ರಾಣರಕ್ಷಣೆ
ಯನ್ನು ಹೊಂದುವವರಾಗಿದ್ದೇವೆ.

ನಂಬಿಕೆಯ ಮಹತ್ವಕ್ಕೆ ದೃಷ್ಟಾಂತಗಳು.

11 ನಂಬಿಕೆಯೋ ನಾವು [1]ನಿರೀಕ್ಷಿಸುವವುಗಳ ವಿಷ
ಯವಾಗಿ ಭರವಸದಿಂದಿರುವದೂ ಕಣ್ಣಿಗೆ ಕಾಣದವು
2 ಗಳನ್ನು ನಿಜವೆಂದು ತಿಳುಕೊಳ್ಳುವದೂ ಆಗಿದೆ. ನಮ್ಮ
ಪೂರ್ವಿಕರು ನಂಬಿಕೆಯುಳ್ಳವರಾಗಿದ್ದದರಿಂದಲೇ ಒಳ್ಳೇ
3 ಹೆಸರನ್ನು ಹೊಂದಿದರು. ಲೋಕಗಳು ದೇವರ
ಮಾತಿನಿಂದ ನಿರ್ಮಿತವಾದವೆಂದು ನಂಬಿಕೆಯಿಂದಲೇ
ನಾವು ತಿಳಿದುಕೊಂಡು ಕಾಣಿಸುವ ಈ ಜಗತ್ತು ದೃಶ್ಯ
ವಸ್ತುಗಳಿಂದ ಉಂಟಾಗಲಿಲ್ಲವೆಂದು ಗ್ರಹಿಸುತ್ತೇವೆ.
4 ನಂಬಿಕೆಯಿಂದಲೇ ಹೇಬೆಲನು ಕಾಯಿನನ ಯಜ್ಞ
ಕ್ಕಿಂತ ಶ್ರೇಷ್ಠವಾದ ಯಜ್ಞವನ್ನು ದೇವರಿಗೆ ಸಮರ್ಪಿ
ಸಿದನು. ಅದರ ಮೂಲಕ ತಾನು ನೀತಿವಂತನೆಂದು
ಸಾಕ್ಷಿಹೊಂದಿದನು; ದೇವರು ಅವನ ಕಾಣಿಕೆಗಳನ್ನು
ಅಂಗೀಕಾರಮಾಡಿದ್ದೇ ಆ ಸಾಕ್ಷಿ. ಅವನು ಸತ್ತಿ
ದ್ದರೂ ಅವನ ನಂಬಿಕೆಯ ಮೂಲಕ ಇನ್ನೂ ಮಾತಾ
ಡುತ್ತಾನೆ.
5 ಹನೋಕನು ಮರಣವನ್ನು ಅನುಭವಿಸದೆ ಒಯ್ಯ
ಲ್ಪಟ್ಟದ್ದು ನಂಬಿಕೆಯಿಂದಲೇ; ಅವನನ್ನು ದೇವರು
ತೆಗೆದುಕೊಂಡುಹೋದದರಿಂದ ಅವನು ಯಾರಿಗೂ
ಸಿಕ್ಕಲಿಲ್ಲ; ಅವನು ಒಯ್ಯಲ್ಪಡುವದಕ್ಕಿಂತ ಮೊದಲು
ದೇವರಿಗೆ ಮೆಚ್ಚಿಕೆಯಾದವನಾಗಿದ್ದನೆಂದು ಸಾಕ್ಷಿ
ಉಂಟು. ಆದರೆ ನಂಬಿಕೆಯಿಲ್ಲದೆ ದೇವರನ್ನು ಮೆಚ್ಚಿ 6
ಸುವದು ಅಸಾಧ್ಯ; ದೇವರ ಬಳಿಗೆ ಬರುವವನು
ದೇವರು ಇದ್ದಾನೆ, ಮತ್ತು ತನ್ನನ್ನು ಹುಡುಕುವವ
ರಿಗೆ ಪ್ರತಿಫಲವನ್ನು ಕೊಡುತ್ತಾನೆ ಎಂದು ನಂಬುವದು
ಅವಶ್ಯ.
ನಂಬಿಕೆಯಿಂದಲೇ ನೋಹನು ಅದು ವರೆಗೆ ಕಾಣ 7
ದಿದ್ದ ಸಂಗತಿಗಳ ವಿಷಯವಾಗಿ ದೈವೋಕ್ತಿಯನ್ನು
ಹೊಂದಿ ಭಯಭಕ್ತಿಯುಳ್ಳವನಾಗಿ ತನ್ನ ಮನೆಯವರ
ಸಂರಕ್ಷಣೆಗೋಸ್ಕರ ನಾವೆಯನ್ನು ಕಟ್ಟಿ ಸಿದ್ಧಮಾಡಿ
ದನು. ಅದರಿಂದ ಅವನು ಲೋಕದವರನ್ನು ದಂಡನೆಗೆ
ಪಾತ್ರರೆಂದು ನಿರ್ಣಯಿಸಿಕೊಂಡು ನಂಬಿಕೆಯ ಫಲ
ವಾದ ನೀತಿಗೆ ಬಾಧ್ಯನಾದನು.
ನಂಬಿಕೆಯಿಂದಲೇ ಅಬ್ರಹಾಮನು ಕರೆಯಲ್ಪಟ್ಟ 8
ಕೂಡಲೆ ಕರೆದಾತನ ಮಾತನ್ನು ಕೇಳಿ ತಾನು ಬಾಧ್ಯ
ವಾಗಿ ಹೊಂದಬೇಕಾಗಿದ್ದ ಸ್ಥಳಕ್ಕೆ ಹೊರಟುಹೋ
ದನು; ತಾನು ಹೋಗಬೇಕಾದ ಸ್ಥಳವು ಯಾವದೆಂದು
ತಿಳಿಯದೆ ಹೊರಟನು. ನಂಬಿಕೆಯಿಂದಲೇ ಅವನು 9
ವಾಗ್ದತ್ತದೇಶಕ್ಕೆ ಬಂದಾಗ ಅಲ್ಲಿ ಅನ್ಯದೇಶದಲ್ಲಿ ಇದ್ದ
ವನಂತೆ ಡೇರೆಗಳಲ್ಲಿ ಇದ್ದುಕೊಂಡು ಪ್ರವಾಸಿಯಾಗಿ
ಬದುಕಿದನು. ಅದೇ ವಾಗ್ದಾನಕ್ಕೆ ಸಹಬಾಧ್ಯರಾಗಿದ್ದ
ಇಸಾಕನೂ ಯಾಕೋಬನೂ ಅವನಂತೆಯೇ ಡೇರೆಗ
ಳಲ್ಲಿ ವಾಸಿಸಿದರು. ಯಾಕಂದರೆ ಅವನು ಶಾಶ್ವತ 10
ವಾದ ಅಸ್ತಿವಾರಗಳುಳ್ಳ ಪಟ್ಟಣವನ್ನು ಅಂದರೆ ದೇವ
ರು ಸಂಕಲ್ಪಿಸಿ ನಿರ್ಮಿಸಿದ ಪಟ್ಟಣವನ್ನು ಎದುರು
ನೋಡುತ್ತಿದ್ದನು.
ಇದಲ್ಲದೆ ಸಾರಳು ವಾಗ್ದಾನಮಾಡಿದಾತನನ್ನು 11
ನಂಬತಕ್ಕವನೆಂದೆಣಿಸಿ ತಾನು ಪ್ರಾಯಮೀರಿದವಳಾ
ಗಿದ್ದರೂ ನಂಬಿಕೆಯಿಂದಲೇ ಗರ್ಭವತಿಯಾಗುವದಕ್ಕೆ
ಶಕ್ತಿಯನ್ನು ಹೊಂದಿದಳು. ಆದದರಿಂದ ಮೃತ 12
ಪ್ರಾಯನಾಗಿದ್ದ ಒಬ್ಬನಿಂದ ಆಕಾಶದ ನಕ್ಷತ್ರಗಳಂತೆ
ಯೂ ಸಮುದ್ರತೀರದಲ್ಲಿರುವ ಉಸುಬಿನಂತೆಯೂ
ಅಸಂಖ್ಯವಾಗಿ ಮಕ್ಕಳು ಹುಟ್ಟಿದರು.
ಇವರೆಲ್ಲರು ವಾಗ್ದಾನದ ಫಲಗಳನ್ನು ಹೊಂದದೆ 13
ಅವುಗಳನ್ನು ದೂರದಿಂದ ನೋಡಿ ಉಲ್ಲಾಸದೊಡನೆ
ವಂದಿಸಿ ನಂಬಿಕೆಯುಳ್ಳವರಾಗಿ ಮೃತರಾದರು. ತಾವು
ಭೂಮಿಯ ಮೇಲೆ ಪರದೇಶದವರೂ ಪ್ರವಾಸಿಗಳೂ
ಆಗಿದ್ದೇವೆಂದು ಒಪ್ಪಿಕೊಂಡರು. ಇಂಥ ಮಾತುಗಳ 14
ನ್ನಾಡುವವರು ತಾವು ಸ್ವದೇಶವನ್ನು ಹುಡುಕುವವ
ರೆಂಬರ್ಥವನ್ನು ವ್ಯಕ್ತಪಡಿಸುತ್ತಾರೆ. ತಾವು ಹೊರಟು 15
ಬಂದಿದ್ದ ದೇಶದ ಮೇಲೆ ಮನಸ್ಸಿಟ್ಟವರಾಗಿದ್ದರೆ
ತಿರಿಗಿ ಅಲ್ಲಿಗೆ ಹೋಗುವದಕ್ಕೆ ಅವರಿಗೆ ಯಾವಾಗಲೂ
ಅವಕಾಶವಿತ್ತು. ಆದರೆ ಅವರು ಪರಲೋಕವೆಂಬ 16
ಉತ್ತಮದೇಶವನ್ನು ಹಾರೈಸುವವರು. ಆದದರಿಂದ
ದೇವರು ಅವರ ದೇವರೆನಿಸಿಕೊಳ್ಳುವದಕ್ಕೆ ನಾಚಿಕೊ
ಳ್ಳದೆ ಅವರಿಗೋಸ್ಕರ ಪಟ್ಟಣವನ್ನು ಸಿದ್ಧಮಾಡಿದ್ದಾನೆ.

1) ಅಥವಾ, ನಿರೀಕ್ಷಿಸುವವುಗಳ ಆಧಾರವೂ, ಕಣ್ಣಿಗೆ ಕಾಣದ ಇರುವವುಗಳ ಪ್ರಮಾಣವೂ ಆಗಿದೆ.

17-18 ಅಬ್ರಹಾಮನು ಪರಿಶೋಧಿತನಾಗಿ ನಂಬಿಕೆ
ಯಿಂದಲೇ ಇಸಾಕನನ್ನು ಸಮರ್ಪಿಸಿದನು. ಇಸಾ
ಕನು ಅವನ ಏಕಪುತ್ರನಾಗಿದ್ದರೂ ಮತ್ತು ಇಸಾಕ
ನಿಂದ ಹುಟ್ಟುವವರೇ ನಿನ್ನ ಸಂತತಿ ಅನ್ನಿಸಿಕೊಳ್ಳುವ
ರೆಂದು ದೇವರು ಅವನಿಗೆ ಹೇಳಿದ್ದರೂ ಆ ವಾಗ್ದಾನ
ಗಳನ್ನು ಹೊಂದಿದ ಅವನು ಆ ಒಬ್ಬನೇ ಮಗನನ್ನು
19 ಸಮರ್ಪಿಸುವದಕ್ಕಿದ್ದನು. ತನ್ನ ಮಗನು ಸತ್ತರೂ
ದೇವರು ಅವನನ್ನು ಬದುಕಿಸ ಸಮರ್ಥನಾಗಿದ್ದಾ
ನೆಂದು ತಿಳುಕೊಂಡನು. ಮತ್ತು [1]ಸತ್ತವರೊಳಗಿಂದಲೇ
ಜೀವಿತನಾಗಿ ಬಂದವನಂತೆ ಅವನನ್ನು ಹೊಂದಿದನು.
20 ನಂಬಿಕೆಯಿಂದಲೇ ಇಸಾಕನು ಯಾಕೋಬನ
ನ್ನೂ ಏಸಾವನನ್ನೂ ಆಶೀರ್ವದಿಸಿದಾಗ ಮುಂದೆ ಸಂಭ
21 ವಿಸಬೇಕಾದ ಸಂಗತಿಗಳನ್ನು ಸೂಚಿಸಿದನು. ಯಾ
ಕೋಬನು ತಾನು ಸಾಯುತ್ತಿರುವಾಗ ನಂಬಿಕೆಯಿಂ
ದಲೇ ಯೋಸೇಫನ ಮಕ್ಕಳಿಬ್ಬರನ್ನು ಆಶೀರ್ವದಿಸಿ
ದನು; ತನ್ನ ಕೋಲಿನ ಮೇಲೆ ಬಾಗಿಕೊಂಡು ದೇವ
22 ರಿಗೆ ನಮಸ್ಕಾರಮಾಡಿದನು. ಯೋಸೇಫನು ತೀರಿ
ಹೋಗುವಾಗ ಇಸ್ರಾಯೇಲ್ಯರು ಐಗುಪ್ತದೇಶದಿಂದ
ಹೊರಡುವದನ್ನು ಕುರಿತು ನಂಬಿಕೆಯಿಂದಲೇ ಮಾತಾಡಿ
ತನ್ನ ಶವವನ್ನು ತಕ್ಕೊಂಡು ಹೋಗುವ ವಿಷಯದಲ್ಲಿ
ಅಪ್ಪಣೆಕೊಟ್ಟನು.
23 ಮೋಶೆ ಹುಟ್ಟಿದಾಗ ಅವನ ತಂದೆತಾಯಿಗಳು
ಕೂಸು ಸುಂದರವಾಗಿದೆ ಎಂದು ನೋಡಿ ಅರಸನ
ಅಪ್ಪಣೆಗೆ ಭಯಪಡದೆ ನಂಬಿಕೆಯಿಂದಲೇ ಅವನನ್ನು
24 ಮೂರು ತಿಂಗಳು ಬಚ್ಚಿಟ್ಟರು. ಮೋಶೆಯು ದೊಡ್ಡವ
ನಾದ ಮೇಲೆ ಫರೋಹನ ಕುಮಾರ್ತೆಯ ಮಗನೆ
ನಿಸಿಕೊಳ್ಳುವದು ಬೇಡವೆಂದದ್ದು ನಂಬಿಕೆಯಿಂದಲೇ.
25 ಸ್ವಲ್ಪ ಕಾಲ ಪಾಪಭೋಗಗಳನ್ನನುಭವಿಸುವದಕ್ಕಿಂತ
ದೇವರ ಜನರೊಂದಿಗೆ ಕಷ್ಟವನ್ನನುಭವಿಸುವದೇ
26 ಒಳ್ಳೇದೆಂದು ತೀರ್ಮಾನಿಸಿಕೊಂಡನು. ಐಗುಪ್ತ
ದೇಶದ ಸರ್ವೈಶ್ವರ್ಯಕ್ಕಿಂತಲೂ ಕ್ರಿಸ್ತನ ನಿಮಿತ್ತ
ವಾಗಿ ಉಂಟಾಗುವ ನಿಂದೆಯೇ ಶ್ರೇಷ್ಠಭಾಗ್ಯವೆಂದೆಣಿಸಿ
ಕೊಂಡನು; ಯಾಕಂದರೆ ಬರುವ ಪ್ರತಿಫಲದ ಮೇಲೆ
27 ಕಣ್ಣಿಟ್ಟಿದ್ದನು. ಅವನು ಅರಸನ ರೌದ್ರಕ್ಕೆ ಭಯ
ಪಡದೆ ಐಗುಪ್ತದೇಶವನ್ನು ಬಿಟ್ಟುಹೋದದ್ದು ನಂಬಿಕೆ
ಯಿಂದಲೇ. ಅವನು ಅದೃಶ್ಯನಾಗಿರುವಾತನನ್ನು
ದೃಷ್ಟಿಸುವವನೋ ಎಂಬಂತೆ ದೃಢಚಿತ್ತನಾಗಿದ್ದನು.
28 ಚೊಚ್ಚಲಮಕ್ಕಳನ್ನು ಸಂಹರಿಸುವವನು ಇಸ್ರಾಯೇಲ್ಯ
ರನ್ನು ಮುಟ್ಟದಂತೆ ಅವನು ಪಸ್ಕವೆಂಬ ಊಟವನ್ನೂ
ರಕ್ತಪ್ರೋಕ್ಷಣಾಚಾರವನ್ನೂ ನೇಮಿಸಿದ್ದು ನಂಬಿಕೆ
ಯಿಂದಲೇ.
29 ನಂಬಿಕೆಯಿಂದಲೇ ಇಸ್ರಾಯೇಲ್ಯರು ಕೆಂಪು ಸಮು
ದ್ರವನ್ನು ಒಣಭೂಮಿಯನ್ನು ದಾಟುವಂತೆ ದಾಟಿ
ದರು; ಐಗುಪ್ತದೇಶದವರು ಅದನ್ನು ದಾಟುವದಕ್ಕೆ
30 ಅವರು ಪ್ರಯತ್ನಿಸಿ ಮುಳುಗಿಹೋದರು. ನಂಬಿಕೆ
ಯಿಂದಲೇ ಏಳು ದಿವಸಗಳ ತನಕ ಎರಿಕೋ ಪಟ್ಟಣದ
31 ಗೋಡೆಗಳನ್ನು ಸುತ್ತಿದ ಮೇಲೆ ಅವು ಬಿದ್ದವು. ನಂಬಿಕೆ
ಯಿಂದಲೇ ರಹಾಬಳೆಂಬ ಸೂಳೆಯು ಗೂಢಚಾರರನ್ನು
ಸಮಾಧಾನವಾಗಿ ಸೇರಿಸಿಕೊಂಡು ನಂಬದವರೊಂದಿಗೆ
ನಾಶವಾಗಲಿಲ್ಲ.

ಇನ್ನೂ ಏನು ಹೇಳಬೇಕು? ಗಿಡಿಯೋನ್ ಬಾರಾಕ್ ಸಂಸೋನ್ ಎಫ್ತ ದಾವೀದ್ ಸಮುವೇಲ್ ಎಂಬವರ ವೃತ್ತಾಂತವನ್ನೂ ಪ್ರವಾದಿಗಳ ವೃತ್ತಾಂತವನ್ನೂ ವಿವರವಾಗಿ ಹೇಳಬೇಕಾದರೆ ನನಗೆ ಸಮಯ ಸಾಲದು. ನಂಬಿಕೆಯ ಮೂಲಕ ಅವರು ರಾಜ್ಯಗಳನ್ನು ಸ್ವಾಧೀನಮಾಡಿಕೊಂಡರು; ನೀತಿಯನ್ನು ನಡಿಸಿದರು; ವಾಗ್ದಾನಗಳನ್ನು ಪಡಕೊಂಡರು; ಸಿಂಹಗಳ ಬಾಯಿ ಕಟ್ಟಿದರು; ಬೆಂಕಿಯ ಬಲವನ್ನು ಆರಿಸಿದರು; ಕತ್ತಿಯ ಬಾಯಿಗೆ ತಪ್ಪಿಸಿಕೊಂಡರು; ನಿರ್ಬಲರಾಗಿದ್ದು ಬಲಿಷ್ಠರಾದರು; ಯುದ್ಧದಲ್ಲಿ ಪರಾಕ್ರಮಶಾಲಿಗಳಾದರು; ಪರರ ದಂಡುಗಳನ್ನು ಓಡಿಸಿಬಿಟ್ಟರು. ಸ್ತ್ರೀಯರು ಸತ್ತುಹೋಗಿದ್ದ ತಮ್ಮವರನ್ನು ಪುನರುತ್ಥಾನದಿಂದ ತಿರಿಗಿ ಹೊಂದಿದರು. ಕೆಲವರು ತಾವು ಯಾತನೆಯ ಯಂತ್ರಕ್ಕೆ ಕಟ್ಟಲ್ಪಟ್ಟಾಗ ಶ್ರೇಷ್ಠಪುನರುತ್ಥಾನವನ್ನು ಹೊಂದುವದಕ್ಕೋಸ್ಕರ ಬಿಡುಗಡೆ ಬೇಡವೆಂದು ಹೇಳಿ ಮುರಿಸಿಕೊಂಡು ಸತ್ತರು. ಬೇರೆ ಕೆಲವರು ಅಪಹಾಸ್ಯ ಕೊರಡೆಯ ಪೆಟ್ಟು ಬೇಡಿ ಸೆರೆಮನೆ ಇವುಗಳನ್ನು ಅನುಭವಿಸಿದರು. ಕೆಲವರನ್ನು ಜನರು ಕಲ್ಲೆಸೆದು ಕೊಂದರು; ಕೆಲವರನ್ನು ಗರಗಸದಿಂದ ಕೊಯ್ದು ಕೊಂದರು. ದೇವದ್ರೋಹಿಗಳಾಗಿ ಪ್ರಾಣವನ್ನು ಉಳಿಸಿಕೊಳ್ಳಿರೆಂದು ಕೆಲವರನ್ನು ಪ್ರೇರೇಪಿಸಿದರು; ಕೆಲವರನ್ನು ಕತ್ತಿಯಿಂದ ಕೊಂದರು. ಕೆಲವರು ಕೊರತೆ ಹಿಂಸೆ ಬಾಧೆ ಇವುಗಳನ್ನು ಅನುಭವಿಸುವವರಾಗಿದ್ದು ಕುರಿ ಮೇಕೆಗಳ ಚರ್ಮಗಳನ್ನು ಉಟ್ಟುಕೊಂಡವರಾಗಿ ತಿರುಗಾಡಿದರು. ಇಂಥವರಿಗೆ ಈ ಲೋಕವು ಯೋಗ್ಯಸ್ಥಳವಲ್ಲ; ಅವರು ತಮ್ಮ ದೇಶದ ಕಾಡು ಬೆಟ್ಟ ಗವಿ ಕುಣಿಗಳಲ್ಲಿ ಅಲೆಯುವವರಾಗಿದ್ದರು.

ಇವರೆಲ್ಲರೂ ನಂಬಿಕೆಯ ಮೂಲಕ ಒಳ್ಳೇ ಹೆಸರನ್ನು ಸಂಪಾದಿಸಿಕೊಂಡಿದ್ದರೂ ವಾಗ್ದಾನದ ಫಲವನ್ನು ಹೊಂದಲಿಲ್ಲ; ದೇವರು ನಮಗೋಸ್ಕರ ಶ್ರೇಷ್ಠವಾದ ಭಾಗ್ಯವನ್ನು ಏರ್ಪಡಿಸಿ ನಾವಿಲ್ಲದೆ ಅವರು ಸಿದ್ಧಿಗೆ ಬರಬಾರದೆಂದು ಸಂಕಲ್ಪಿಸಿದನು.

ನಮಗೆ ಸಂಭವಿಸುವ ಕಷ್ಟಗಳನ್ನು ತಂದೆಯ ಶಿಕ್ಷಣವೆಂದು
ತಿಳಿದು ನಾವು ಸಹಿಸಿಕೊಂಡು ಪರಲೋಕ ಮಾರ್ಗದಲ್ಲಿ
ಸ್ಥಿರಚಿತ್ತದಿಂದ ನಡೆಯಬೇಕು.

ಆದಕಾರಣ ಇಷ್ಟುಮಂದಿ ಸಾಕ್ಷಿಯವರು ಮೇಘ 1
ದೋಪಾದಿಯಲ್ಲಿ ನಮ್ಮ ಸುತ್ತಲು ಇರುವದ
ರಿಂದ ನಮಗೆ ಅಭ್ಯಂತರ ಮಾಡುವ ಎಲ್ಲಾ ಭಾರ
ವನ್ನೂ ಹತ್ತಿಕೊಳ್ಳುವ ಪಾಪವನ್ನೂ ನಾವು ಸಹ
ತೆಗೆದಿಟ್ಟು ನಂಬಿಕೆಯನ್ನು ಹುಟ್ಟಿಸುವವನೂ ಪೂರೈ
ಸುವವನೂ ಆಗಿರುವ ಯೇಸುವಿನ ಮೇಲೆ ದೃಷ್ಟಿ
ಯಿಟ್ಟು ನಮಗೆ ನೇಮಕವಾದ ಓಟವನ್ನು ಸ್ಥಿರ
ಚಿತ್ತದಿಂದ ಓಡೋಣ. ಆತನು ತನ್ನ ಮುಂದೆ ಇಟ್ಟಿದ್ದ
ಸಂತೋಷಕ್ಕೋಸ್ಕರ ಅವಮಾನವನ್ನು ಅಲಕ್ಷ್ಯಮಾಡಿ

1) ಮೂಲ: ಸತ್ತವರೊಳಗಿಂದ ಸಾಮ್ಯರೂಪವಾಗಿ ಅವನನ್ನು ಹೊಂದಿದನು.

ಶಿಲುಬೆಯ ಮರಣವನ್ನು ಸಹಿಸಿಕೊಂಡು ದೇವರ ಸಿಂಹಾ
ಸನದ ಬಲಗಡೆಯಲ್ಲಿ ಆಸನಾರೂಢನಾಗಿದ್ದಾನೆ.
3 ನೀವು ಮನಗುಂದಿದವರಾಗಿ ಬೇಸರಗೊಳ್ಳದಂತೆ ಆತ
ನನ್ನು ಆಲೋಚಿಸಿರಿ. 1)ಆತನು ಪಾಪಿಗಳಿಂದ ಎಷ್ಟೋ
4 ವಿರೋಧವನ್ನು ಸಹಿಸಿಕೊಂಡನು. ನೀವು ಪಾಪಕ್ಕೆ
ವಿರೋಧವಾಗಿ ಹೋರಾಡುವದರಲ್ಲಿ ಪ್ರಾಣಾಪಾಯದ
5 ತನಕ ಇನ್ನೂ ಅದನ್ನು ಎದುರಿಸಲಿಲ್ಲ. ಮಕ್ಕಳಿಗೆ
ಹೇಳುವಂತೆ ನಿಮಗೆ ಹೇಳಿದ ಎಚ್ಚರಿಕೆಯ ಮಾತನ್ನು
ಮರೆತುಬಿಟ್ಟಿದ್ದೀರೋ? ಏನಂದರೆ—

ಮಗನೇ, ಕರ್ತನ ಶಿಕ್ಷೆಯನ್ನು ತಾತ್ಸಾರ ಮಾಡಬೇಡ;
ಆತನು ನಿನ್ನನ್ನು ಗದರಿಸುವಾಗ ಬೇಸರಗೊಳ್ಳಬೇಡ;
6 ಕರ್ತನು ತಾನು ಪ್ರೀತಿಸುವವನನ್ನೇ ಶಿಕ್ಷಿಸುತ್ತಾನೆ;
ತಾನು ಸೇರಿಸಿಕೊಳ್ಳುವ ಪ್ರತಿಯೊಬ್ಬ ಮಗನನ್ನು ಹೊಡೆಯುತ್ತಾನೆ ಎಂಬದು.

7 ನೀವು ಶಿಕ್ಷಿತರಾಗುವದಕ್ಕಾಗಿಯೇ ನಿಮಗೆ ಶಿಕ್ಷೆಯಾ
ಗುತ್ತದೆಂದು ತಿಳಿದು ಅದನ್ನು ಸಹಿಸಿಕೊಳ್ಳಿರಿ;
ದೇವರು ನಿಮ್ಮನ್ನು ಮಕ್ಕಳೆಂದು ನಡಿಸುತ್ತಾನೆ.
8 ತಂದೆಯಿಂದ ಶಿಕ್ಷೆ ಹೊಂದದ ಮಗನೆಲ್ಲಿ? ಮಕ್ಕಳೆ
ಲ್ಲರೂ ಹೊಂದುವ ಶಿಕ್ಷೆಯು ನಿಮಗುಂಟಾಗದಿದ್ದರೆ
ನೀವು ಹಾದರದಿಂದ ಹುಟ್ಟಿದವರೇ ಹೊರತು ಪುತ್ರರಲ್ಲ.
9 ಇದು ಮಾತ್ರವಲ್ಲದೆ ನಮ್ಮನ್ನು ಶಿಕ್ಷಿಸಿದಂಥ ಶರೀರ
ಸಂಬಂಧವಾದ ತಂದೆಗಳನ್ನು ಸನ್ಮಾನಿಸಿದೆವಷ್ಟೆ; ನಮ್ಮ
ಆತ್ಮಗಳಿಗೆ ತಂದೆಯಾಗಿರುವಾತನಿಗೆ ನಾವು ಇನ್ನೂ
10 ಹೆಚ್ಚಾಗಿ ಒಳಪಟ್ಟು ಜೀವಿಸಬೇಕಲ್ಲವೇ. ಆ ತಂದೆ
ಗಳು ಕೆಲವು ದಿವಸಗಳ ಪ್ರಯೋಜನವನ್ನು ಲಕ್ಷ್ಯಕ್ಕೆ
ತೆಗೆದುಕೊಂಡು 2)ತಮ್ಮ ಮನಸ್ಸಿಗೆ ತೋರಿದಂತೆ
ನಮ್ಮನ್ನು ಶಿಕ್ಷಿಸಿದರು; ಆತನಾದರೋ ನಾವು
ತನ್ನ ಪರಿಶುದ್ಧತೆಯಲ್ಲಿ ಪಾಲುಗಾರರಾಗಬೇಕೆಂದು
11 ನಮ್ಮ ಹಿತಕ್ಕಾಗಿಯೇ ಶಿಕ್ಷಿಸುತ್ತಾನೆ. ಯಾವ ಶಿಕ್ಷೆ
ಯಾದರೂ ತತ್ಕಾಲಕ್ಕೆ ಸಂತೋಷಕರವಾಗಿ ತೋ
ಚದೆ ದುಃಖಕರವಾಗಿ ತೋಚುತ್ತದೆ; ಆದರೂ ತರು
ವಾಯ ಅದು ಶಿಕ್ಷೆ ಹೊಂದಿದವರಿಗೆ ನೀತಿಯೆಂಬ
ಫಲವನ್ನು ಕೊಟ್ಟು ಮನಸ್ಸಿಗೆ ಸಮಾಧಾನವನ್ನು
12 ಉಂಟುಮಾಡುತ್ತದೆ. ಆದದರಿಂದ ಜೋಲುಬಿದ್ದ
ಕೈಗಳನ್ನೂ ನಡುಗುವ ಮೊಣಕಾಲುಗಳನ್ನೂ ಸುದಾ
13 ರಿಸಿಕೊಳ್ಳಿರಿ; ನಿಮ್ಮ ಕಾಲುಗಳಿಂದ ನೆಟ್ಟಗೆ ಮುಂದೆ
ನಡೆಯಿರಿ. ಹೀಗೆ ಮಾಡಿದರೆ ಕುಂಟಕಾಲು ಉಳುಕ
ಹೋಗದೆ ವಾಸಿಯಾಗುವದು.

ಕ್ರೈಸ್ತ ಸಭೆಯೊಳಗೆ ಯಾವ ವಿಧವಾದ ಅವಭಕ್ತಿಯೂ ಇರಬಾರದೆಂದು ಎಚ್ಚರಿಕೆ.

14 ಎಲ್ಲರ ಸಂಗಡ ಸಮಾಧಾನದಿಂದಿರುವದಕ್ಕೂ
ಪರಿಶುದ್ಧತೆಯನ್ನು ಹೊಂದುವದಕ್ಕೂ ಪ್ರಯತ್ನಮಾ
ಡಿರಿ; ಪರಿಶುದ್ಧತೆಯಿಲ್ಲದೆ ಯಾವನೂ ಕರ್ತನನ್ನು 15
ಕಾಣುವದಿಲ್ಲ. ನಿಮ್ಮಲ್ಲಿ ಯಾವನಾದರೂ ದೇವರ
ಕೃಪೆಗೆ ತಪ್ಪಿ ಹಿಂಜರಿಯದಂತೆ ಯಾವ ವಿಷವುಳ್ಳ
ಬೇರೂ ನಿಮ್ಮಲ್ಲಿ ಚಿಗುರಿ ಅಸಮಾಧಾನವನ್ನು ಹುಟ್ಟಿಸಿ
ಸಭೆಯವರನ್ನು ಕೆಡಿಸದಂತೆ ಯಾವ ಜಾರನಾಗಲಿ 16
ಏಸಾವನಂಥ ಪ್ರಾಪಂಚಿಕನಾಗಲಿ ನಿಮ್ಮಲ್ಲಿ ಇರದಂತೆ
ಜಾಗ್ರತೆಯಿಂದ ನೋಡಿಕೊಳ್ಳಿರಿ. ಆ ಏಸಾವನು
ಒಂದೇ ಒಂದು ಊಟಕ್ಕೋಸ್ಕರ ತನ್ನ ಚೊಚ್ಚಲತನದ
ಹಕ್ಕನ್ನು ಕೊಟ್ಟುಬಿಟ್ಟನು; ಅನಂತರದಲ್ಲಿ ತನ್ನ 17
ತಂದೆಯ ಆಶೀರ್ವಾದವನ್ನು ಬಾಧ್ಯವಾಗಿ ಹೊಂದಬೇ
ಕೆಂದು ಕಣ್ಣೀರು ಸುರಿಸುತ್ತಾ ಬೇಡಿಕೊಂಡರೂ, ನಡೆ
ದದ್ದನ್ನು ಇಲ್ಲದ ಹಾಗೆ ಮಾಡುವದಕ್ಕೆ 3)ಮಾರ್ಗವಿ
ಲ್ಲದೆ ನಿರಾಕರಿಸಲ್ಪಟ್ಟನೆಂದು ಬಲ್ಲಿರಿ.

ಧರ್ಮಶಾಸ್ತ್ರವು ಭೂಸಂಬಂಧವಾದದ್ದೂ ಭಯಹುಟ್ಟಿಸುವಂಥದೂ ಆಗಿದೆ; ಸುವಾರ್ತೆಯು ನಿರಂತರವಾಗಿಯೂ ಉತ್ಸಾಹ ಹುಟ್ಟಿಸುವಂಥದಾಗಿಯೂ ಇದೆ ಎಂಬದು.

ನೀವು ಮುಟ್ಟುವದಕ್ಕೆ ಸಾಧ್ಯವಾದಂಥ ಮತ್ತು 18
ಬೆಂಕಿಹತ್ತಿದಂಥ ಬೆಟ್ಟಕ್ಕೂ ಮೋಡದ ಮೊಬ್ಬಿಗೂ ಕತ್ತ
ಲೆಗೂ ಬಿರುಗಾಳಿಗೂ ತುತೂರಿಯ ಧ್ವನಿಗೂ ಮಾ
ತುಗಳ ಶಬ್ದಕ್ಕೂ ಬಂದವರಲ್ಲ. ಆ ಶಬ್ದವನ್ನು ಕೇಳಿ 19
ದವರು ತಮಗೆ ಇನ್ನು ಒಂದು ಮಾತನ್ನಾದರೂ
ಹೇಳಬಾರದೆಂದು ಬೇಡಿಕೊಂಡರು; ಯಾಕಂದರೆ— 20
ಒಂದು ಮೃಗವಾದರೂ ಬೆಟ್ಟಕ್ಕೆ ಮುಟ್ಟಿದರೆ ಅದ
ನ್ನು ಕಲ್ಲೆಸೆದು ಕೊಲ್ಲಬೇಕೆಂಬ ವಿಧಿಯನ್ನು ತಾಳಲಾ
ರದೆ ಇದ್ದರು. ಇದಲ್ಲದೆ ಅಲ್ಲಿ ತೋರಿದ್ದು ಅಷ್ಟು 21
ಭಯಂಕರವಾಗಿದ್ದದರಿಂದ ಮೋಶೆಯು— ನನಗೆ
ಬಹು ಭಯವಾಗುತ್ತದೆ, ನಡುಗುತ್ತೇನೆ ಎಂದು ಹೇಳಿ
ದನು. ಆದರೆ ನೀವು ಚೀಯೋನ್ ಪರ್ವತಕ್ಕೂ 22
ಜೀವಸ್ವರೂಪನಾದ ದೇವರ ಪಟ್ಟಣವಾಗಿರುವ ಪರ
ಲೋಕದ ಯೆರೂಸಲೇಮಿಗೂ ಉತ್ಸವಸಂಘದಲ್ಲಿ
ಕೂಡಿರುವ ಕೋಟ್ಯನುಕೋಟಿ ದೇವದೂತರ ಬಳಿಗೂ
ಪರಲೋಕದಲ್ಲಿ ಹೆಸರು ಬರಸಿಕೊಂಡಿರುವ ಚೊ 23
ಚ್ಚಲಮಕ್ಕಳ ಸಭೆಗೂ ಎಲ್ಲರಿಗೆ ನ್ಯಾಯಾಧಿಪತಿ
ಯಾಗಿರುವ ದೇವರ ಬಳಿಗೂ ಸಿದ್ಧಿಗೆ ಬಂದಿರುವ ನೀತಿ
ವಂತರ ಆತ್ಮಗಳ ಬಳಿಗೂ ಹೊಸ ಒಡಂಬಡಿಕೆಗೆ 24
ಮಧ್ಯಸ್ಥನಾಗಿರುವ ಯೇಸುವಿನ ಬಳಿಗೂ ಹೇಬೆಲನ
ರಕ್ತಕ್ಕಿಂತ ಹಿತಕರವಾಗಿ ಮಾತಾಡುವ ಪ್ರೋಕ್ಷಣ
ರಕ್ತದ ಬಳಿಗೂ ಬಂದಿದ್ದೀರಿ. ನೀವು ಮಾತಾಡುತ್ತಿರು 25
ವಾತನ ಮಾತನ್ನು ಕೇಳಲೊಲ್ಲೆವೆಂದು ಹೇಳಬಾರದು.
ಭೂಮಿಯ ಮೇಲೆ ದೈವೋಕ್ತಿಗಳನ್ನಾಡಿದವನಿಗೆ
ಕಿವಿಗೊಡ ಮನಸ್ಸಿಲ್ಲದೆ ಇದ್ದ ಇಸ್ರಾಯೇಲ್ಯರು ದಂಡ
ನೆಗೆ ತಪ್ಪಿಸಿಕೊಳ್ಳದಿದ್ದರೆ ಪರಲೋಕದಿಂದ ಮಾತಾಡು
ವವನಿಗೆ ನಾವು ಕಿವಿಗೊಡ ಮನಸ್ಸಿಲ್ಲದೆ ತೊಲಗಿದರೆ
ಹೇಗೆ ತಪ್ಪಿಸಿಕೊಂಡೇವು? ಆತನ ಧ್ವನಿಯು ಆ 26
ಕಾಲದಲ್ಲಿ ಭೂಮಿಯನ್ನು ಕದಲಿಸಿತು; ಈಗಲಾದರೋ

1) ಕೆಲವು ಪ್ರತಿಗಳಲ್ಲಿ—ಪಾಪಿಗಳು ತಮ್ಮ ಸ್ವಂತ ಹಾನಿಗೆ ಮಾಡಿದ ವಿರೋಧವನ್ನು ಎಷ್ಟಾಗಿ ಸಹಿಸಿಕೊಂಡನು ಎಂದು ಬರೆದದೆ.
2) ಅಥವಾ, ಕೆಲವು ದಿವಸಗಳ ತನಕ. 3) ಅಥವಾ, ಮಾನಸಾಂತರಕ್ಕೆ.

ಆತನು—ಇನ್ನೊಂದೇ ಸಾರಿ ನಾನು ಭೂಮಿಯನ್ನು
ಮಾತ್ರವಲ್ಲದೆ ಪರಲೋಕವನ್ನೂ ನಡುಗಿಸುವೆನೆಂದು
27 ವಾಗ್ದಾನಮಾಡಿದ್ದಾನೆ. ಇನ್ನೊಂದೇ ಸಾರಿ ಎಂಬೀ
ಮಾತನ್ನು ಯೋಚಿಸಿದರೆ ಕದಲಿಸಿರುವ ವಸ್ತುಗಳು
ನಿರ್ಮಿತವಾದವುಗಳಾದದರಿಂದ ತೆಗೆದುಹಾಕಲ್ಪಡಬೇ
ಕೆಂಬದು ಸ್ಪಷ್ಟವಾಗುತ್ತದೆ; ಆಗ ಕದಲಿಸದೆ
28 ಇರುವ ವಸ್ತುಗಳು ಸ್ಥಿರವಾಗಿ ನಿಲ್ಲುವವು. ಆದಕಾ
ರಣ ಯಾರೂ ಕದಲಿಸಲಾರದ ರಾಜ್ಯವನ್ನು ಹೊಂ
ದುವವರಾದ ನಾವು 1)ಕೃತಜ್ಞತೆಯುಳ್ಳವರಾಗಿದ್ದು
ಆತನಿಗೆ ಸಮರ್ಪಕವಾದ ಆರಾಧನೆಯನ್ನು ಭಕ್ತಿಯಿಂ
29 ದಲೂ ಭಯದಿಂದಲೂ ಮಾಡೋಣ; ಯಾಕಂದರೆ
ನಮ್ಮ ದೇವರು ದಹಿಸುವ ಅಗ್ನಿಯಾಗಿದ್ದಾನೆ.

ಯೇಸುವಿನ ಶಿಷ್ಯರು ಸುನಡತೆಯುಳ್ಳವರಾಗಿರಬೇಕೆಂಬದು.

13 2 ಸಹೋದರಸ್ನೇಹವು ನೆಲೆಯಾಗಿರಲಿ. ಅತಿಥಿ
ಸತ್ಕಾರಮಾಡುವದನ್ನು ಮರೆಯಬೇಡಿರಿ; ಅದ
ನ್ನು ಮಾಡುವಲ್ಲಿ ಕೆಲವರು ತಿಳಿಯದೆ ದೇವ
3 ದೂತರನ್ನೂ ಸತ್ಕರಿಸಿದ್ದಾರೆ. ಸೆರೆಯವರ ಸಂಗಡ
ನೀವೂ ಜೊತೆಸೆರೆಯವರೆಂದು ಭಾವಿಸಿಕೊಂಡು ಅವ
ರನ್ನು ಜ್ಞಾಪಕಮಾಡಿಕೊಳ್ಳಿರಿ. 2)ನಿಮಗೂ ಅನ್ಯಾ
ಯಸಂಭವಿಸೀತೆಂದು ತಿಳಿದು ಅನ್ಯಾಯಅನುಭವಿ
ಸುವವರನ್ನು ನೆನಸಿರಿ. ದಾಂಪತ್ಯವು ಮಾನ್ಯವಾದ
4 ದ್ದೆಂದು ಎಲ್ಲರೂ ಎಣಿಸಬೇಕು; ಗಂಡಹೆಂಡರ 3)ಸಂ
ಬಂಧವು ನಿಷ್ಕಳಂಕವಾಗಿರಬೇಕು. ಜಾರರಿಗೂ ವ್ಯಭಿ
ಚಾರಿಗಳಿಗೂ ದೇವರು ನ್ಯಾಯತೀರಿಸುವನೆಂದು ತಿಳು
5 ಕೊಳ್ಳಿರಿ. ದ್ರವ್ಯಾಶೆಯಿಲ್ಲದವರಾಗಿರಿ; ನಿಮಗಿರುವವು
ಗಳಲ್ಲಿ ತೃಪ್ತರಾಗಿರಿ; ನಾನು ನಿನ್ನನ್ನು ಎಂದಿಗೂ
ಕೈಬಿಡುವದಿಲ್ಲ, ಎಂದಿಗೂ ತೊರೆಯುವದಿಲ್ಲವೆಂದು
6 ದೇವರು ತಾನೇ ಹೇಳಿದ್ದಾನೆ. ಆದದರಿಂದ—
ಕರ್ತನು ನನ್ನ ಸಹಾಯಕನು, ಭಯಪಡೆನು,
ಮನುಷ್ಯನು ನನಗೆ ಏನು ಮಾಡಾನು?
ಎಂದು ನಾವು ಧೈರ್ಯವಾಗಿ ಹೇಳಬಲ್ಲೆವು.
7 ನಿಮಗೆ ದೇವರ ವಾಕ್ಯವನ್ನು ತಿಳಿಸಿದ ನಿಮ್ಮ
ಸಭಾನಾಯಕರನ್ನು ಜ್ಞಾಪಕಮಾಡಿಕೊಳ್ಳಿರಿ; ಅವರು
ಯಾವ ರೀತಿಯಿಂದ ನಡೆದುಕೊಂಡು ಪ್ರಾಣಬಿಟ್ಟ
ರೆಂಬದನ್ನು ಆಲೋಚಿಸಿರಿ; ಅವರ ನಂಬಿಕೆಯನ್ನು
8 ಅನುಸರಿಸಿರಿ. ಯೇಸು ಕ್ರಿಸ್ತನು ನಿನ್ನೆ ಇದ್ದ ಹಾಗೆ
ಈಹೊತ್ತೂ ಇದ್ದಾನೆ, ನಿರಂತರವೂ ಹಾಗೆಯೇ ಇರು
9 ವನು. ನಾನಾವಿಧವಾದ ಅನ್ಯೋಪದೇಶಗಳ ಸೆಳ
ವಿಗೆ ಸಿಕ್ಕಬೇಡಿರಿ. ದೇವರ ಕೃಪೆಯನ್ನು ಆತುಕೊಂಡು
ಮನಸ್ಸನ್ನು ದೃಢಮಾಡಿಕೊಳ್ಳುವದು ಉತ್ತಮವೇ;
ಭೋಜನಪದಾರ್ಥಗಳನ್ನು ವಿಶೇಷಿಸುವದರಿಂದ ಅದು
ಆಗುವದಿಲ್ಲ. ಭೋಜನಪದಾರ್ಥಗಳನ್ನು ವಿಶೇಷಿಸಿ
ನಡೆದವರು ಏನೂ ಪ್ರಯೋಜನ ಹೊಂದಲಿಲ್ಲ.

ನಮಗೊಂದು ಯಜ್ಞವೇದಿ ಉಂಟು, ಈ ವೇದಿಯ
ಪದಾರ್ಥಗಳನ್ನು ತಿನ್ನುವದಕ್ಕೆ ಯೆಹೂದ್ಯರ ಗುಡಾರ
ದಲ್ಲಿ ಸೇವೆಯನ್ನು ನಡಿಸುವವರಿಗೆ ಹಕ್ಕಿಲ್ಲ. ಮಹಾ
ಯಾಜಕನು ದೋಷಪರಿಹಾರಕಯಜ್ಞದ ಪಶುಗಳ
ರಕ್ತವನ್ನು ತೆಗೆದುಕೊಂಡು ಪವಿತ್ರಸ್ಥಾನದೊಳಗೆ
ಹೋಗಲು ಆ ಪಶುಗಳ ದೇಹಗಳು ಪಾಳೆಯದ
ಆಚೆ ಸುಡಲ್ಪಡುತ್ತವಲ್ಲಾ. ಅದರಂತೆ ಯೇಸು ಕೂಡ
ಸ್ವಂತ ರಕ್ತದಿಂದ ತನ್ನ ಜನರನ್ನು ಪವಿತ್ರಪಡಿಸುವದ
ಕ್ಕೋಸ್ಕರ ಪಟ್ಟಣದ ಹೊರಗೆ ಸತ್ತನು. ಆದದ
ರಿಂದ ನಾವು ಆತನ ನಿಮಿತ್ತ ಉಂಟಾಗುವ ನಿಂದೆ
ಯನ್ನು ತಾಳಿಕೊಳ್ಳುವವರಾಗಿ ಪಾಳೆಯದ ಆಚೆ ಆತನ
ಬಳಿಗೆ ಹೊರಟುಹೋಗೋಣ. ಯಾಕಂದರೆ ಇಹ
ದಲ್ಲಿ ಶಾಶ್ವತವಾದ ಪಟ್ಟಣವು ನಮಗಿಲ್ಲ; ಇನ್ನು
ಮುಂದೆ ಆಗುವ ಪಟ್ಟಣವನ್ನು ಹಾರೈಸುತ್ತಾ ಇದ್ದೇವೆ.
ಆದದರಿಂದ ಆತನ ಮೂಲಕವಾಗಿಯೇ ದೇವರಿಗೆ
ಸ್ತೋತ್ರಯಜ್ಞವನ್ನು ಎಡೆಬಿಡದೆ ಸಮರ್ಪಿಸೋಣ.
ಆತನು ಕರ್ತನೆಂದು ಬಾಯಿಂದ ಪ್ರತಿಜ್ಞೆಮಾಡು
ವದೇ ನಾವು ಅರ್ಪಿಸುವ ಯಜ್ಞವಾಗಿದೆ. ಇದಲ್ಲದೆ
ಪರೋಪಕಾರವನ್ನೂ ಧರ್ಮಮಾಡುವದನ್ನೂ ಮರೆ
ಯಬೇಡಿರಿ; ಇವೇ ದೇವರಿಗೆ ಸಮರ್ಪಕವಾದ
ಯಜ್ಞಗಳು.
ನಿಮ್ಮ ಸಭಾನಾಯಕರ ಮಾತನ್ನು ಕೇಳಿರಿ, ಅವ
ರಿಗೆ ಅಧೀನರಾಗಿರಿ. ಅವರು ಲೆಕ್ಕ ಒಪ್ಪಿಸಬೇಕಾದ
ವರಾಗಿ ನಿಮ್ಮ ಆತ್ಮಗಳನ್ನು ಕಾಯುವವರಾಗಿದ್ದಾರೆ.
ಅವರು ವ್ಯಸನಪಡದೆ ಸಂತೋಷದಿಂದ ಇದನ್ನು
ಮಾಡುವಂತೆ ನೋಡಿರಿ; ಅವರು ವ್ಯಸನದಿಂದಿರುವದು
ನಿಮಗೆ ಪ್ರಯೋಜನಕರವಾದದ್ದಲ್ಲ.

ಕಡೇ ಮಾತುಗಳು.

ನಮಗೋಸ್ಕರ ಪ್ರಾರ್ಥಿಸಿರಿ. ನಾವು ಎಲ್ಲಾ ವಿಷ
ಯಗಳಲ್ಲಿ ಸಜ್ಜನರಾಗಿ ನಡೆದುಕೊಳ್ಳಬೇಕೆಂದು ಅಪೇ
ಕ್ಷಿಸುವವರಾಗಿದ್ದು ನಮ್ಮ ಮನಸ್ಸಿನಿಂದ ಒಳ್ಳೇ ಸಾಕ್ಷಿ
ಹೊಂದಿದ್ದೇವೆಂದು ನಿಶ್ಚಯಿಸಿಕೊಂಡಿದ್ದೇವೆ. ನಮ
ಗೋಸ್ಕರ ಪ್ರಾರ್ಥನೆಮಾಡಬೇಕೆಂದು ನಿಮ್ಮನ್ನು ಬಹು
ವಿಶೇಷವಾಗಿ ಬೇಡಿಕೊಳ್ಳುತ್ತೇನೆ, ಯಾಕಂದರೆ ನಿಮ್ಮ
ಪ್ರಾರ್ಥನೆಗಳ ಮೂಲಕ ನಾನು ಅತಿ ಶೀಘ್ರವಾಗಿ
ನಿಮ್ಮ ಬಳಿಗೆ ತಿರಿಗಿ ಬಂದೇನು.
4)ಶಾಶ್ವತವಾದ ಒಡಂಬಡಿಕೆಯನ್ನು ನಿಶ್ಚಯ
ಪಡಿಸುವದಕ್ಕಾಗಿ ತನ್ನ ರಕ್ತವನ್ನು ಸುರಿಸಿಕೊಂಡು
5)ಸಭೆಯೆಂಬ ಹಿಂಡಿಗೆ ಮಹಾಪಾಲಕನಾಗಿರುವ ನಮ್ಮ
ಕರ್ತನಾದ ಯೇಸುವನ್ನು ಸತ್ತವರೊಳಗಿಂದ ಬರ
ಮಾಡಿದ ಶಾಂತಿದಾಯಕನಾದ ದೇವರು, ನೀವು ತನ್ನ
ಚಿತ್ತವನ್ನು ನೆರವೇರಿಸುವ ಹಾಗೆ ಸಕಲಸತ್ಕಾರ್ಯ
ಗಳಿಗೆ ಬೇಕಾದ ಅನುಕೂಲತೆಯನ್ನು ನಿಮಗೆ ಅನುಗ್ರ

1) ಅಥವಾ, ದೇವರ ಕೃಪೆಯನ್ನು ಹಿಡುಕೊಂಡು. 2) ಮೂಲ: ನೀವೂ ದೇಹದಲ್ಲಿದ್ದೀರೆಂದು. 3) ಮೂಲ: ಹಾಸಿಗೆಯ
4) ಅಥವಾ, ಕುರಿಗಳ ದೊಡ್ಡ ಕುರುಬನಾಗಿರುವ ನಮ್ಮ ಕರ್ತನಾದ ಯೇಸುವನ್ನು ನಿತ್ಯವಾದ ಒಡಂಬಡಿಕೆಯನ್ನು ನಿಶ್ಚಯಪಡಿಸಿದ ರಕ್ತ
ನಿಮಿತ್ತ ಸತ್ತವರೊಳಗಿಂದ ಬರಮಾಡಿದ . . . 5) ಮೂಲ: ಕುರಿಗಳ ದೊಡ್ಡ ಕುರುಬನಾಗಿರುವ.

ಹಿಸಲಿ. ಆತನು ಯೇಸು ಕ್ರಿಸ್ತನ ಮೂಲಕ ತನಗೆ
ಸಮರ್ಪಕವಾದದ್ದನ್ನು 1)ನಮ್ಮಲ್ಲಿ ನಡಿಸಲಿ. ಯುಗ
ಯುಗಾಂತರಗಳಲ್ಲಿಯೂ ಆತನಿಗೆ ಸ್ತೋತ್ರ. ಆಮೆನ್.
22 ಸಹೋದರರೇ, ಈ ಎಚ್ಚರಿಕೆಯ ಮಾತನ್ನು ಸಹಿಸಿ
ಕೊಳ್ಳಬೇಕೆಂದು ನಿಮ್ಮನ್ನು ಬೇಡಿಕೊಳ್ಳುತ್ತೇನೆ;
ನಿಮಗೆ ಸಂಕ್ಷೇಪವಾಗಿ ಬರೆದಿದ್ದೇನೆ.
23 ನಮ್ಮ ಸಹೋದರನಾದ ತಿಮೊಥೆಯನಿಗೆ ಬಿಡು
ಗಡೆಯಾಯಿತೆಂಬದು ನಿಮಗೆ ತಿಳಿದಿರಲಿ. ಅವನು
ಬೇಗ ಬಂದರೆ ನಾನೂ ಅವನೊಂದಿಗೆ ಬಂದು ನಿಮ್ಮ
ನ್ನು ಕಾಣುವೆನು.
ನಿಮ್ಮ ಸಭಾನಾಯಕರೆಲ್ಲರಿಗೂ ದೇವಜನರೆಲ್ಲ 24
ರಿಗೂ ವಂದನೆಹೇಳಿರಿ. ಇತಾಲ್ಯ ದೇಶದಿಂದ ಬಂದ
ವರು ನಿಮಗೆ ವಂದನೆಹೇಳುತ್ತಾರೆ.
ಕೃಪೆಯು ನಿಮ್ಮೆಲ್ಲರೊಂದಿಗೆ ಇರಲಿ. 25

# THE EPISTLE OF SAINT
# JAMES
# ಯಾಕೋಬನು ಬರೆದ ಪತ್ರಿಕೆ

ಕಷ್ಟವನ್ನೂ ದುಷ್ಪ್ರೇರಣೆಗಳನ್ನೂ ಕುರಿತದ್ದು.

1 ದೇವರಿಗೂ ಕರ್ತನಾದ ಯೇಸು ಕ್ರಿಸ್ತನಿಗೂ ದಾಸ
ನಾಗಿರುವ ಯಾಕೋಬನು ಅನ್ಯದೇಶಗಳಲ್ಲಿ ಚದ
ರಿರುವ [ಇಸ್ರಾಯೇಲ್] ಹನ್ನೆರಡು ಕುಲದವರಿಗೆ
ಬರೆಯುವದು. ನಿಮಗೆ ಶುಭವಾಗಲಿ.
2-3 ನನ್ನ ಸಹೋದರರೇ, ನಿಮ್ಮ ನಂಬಿಕೆಗೆ ಆಗುವ
ಪರಿಶೋಧನೆಯು ತಾಳ್ಮೆಯನ್ನುಂಟುಮಾಡುತ್ತದೆಂದು
ತಿಳಿದು ನೀವು ನಾನಾವಿಧವಾದ ಕಷ್ಟಗಳಲ್ಲಿ ಬಿದ್ದಿರು
ವಾಗ ಅದನ್ನು ಕೇವಲ ಆನಂದಕರವಾದದ್ದೆಂದು
4 ಎಣಿಸಿರಿ. ಆ ತಾಳ್ಮೆಯು ಸಿದ್ಧಿಗೆ ಬರಲಿ; ಆಗ
ನೀವು ಶಿಕ್ಷಿತರೂ ಸರ್ವಸುಗುಣವುಳ್ಳವರೂ ಏನೂ
ಕಡಿಮೆಯಿಲ್ಲದವರೂ ಆಗಿರುವಿರಿ.
5 ನಿಮ್ಮಲ್ಲಿ ಯಾವನಿಗಾದರೂ ಜ್ಞಾನ ಕಡಿಮೆ
ಯಾಗಿದ್ದರೆ ಅವನು ದೇವರನ್ನು ಕೇಳಿಕೊಳ್ಳಲಿ,
ಅದು ಅವನಿಗೆ ದೊರಕುವದು; ದೇವರು ಹಂಗಿಸದೆ
ಎಲ್ಲರಿಗೂ ಉದಾರ ಮನಸ್ಸಿನಿಂದ ಕೊಡುವವನಾಗಿ
6 ದ್ದಾನೆ. ಸ್ವಲ್ಪವೂ ಸಂದೇಹಪಡದೆ ನಂಬಿಕೆ
ಯಿಟ್ಟು ಕೇಳಿಕೊಳ್ಳಬೇಕು. ಸಂದೇಹಪಡುವವನೋ
ಗಾಳಿಯಿಂದ ಬಡಿಯಲ್ಪಟ್ಟ ಸಮುದ್ರದ ತೆರೆಯಂತೆ
7 ಅಲೆಯುತ್ತಿರುವನು. ಆ ಮನುಷ್ಯನು ತಾನು ಕರ್ತ
ನಿಂದ ಏನಾದರೂ ಹೊಂದುವೆನೆಂದು ಭಾವಿಸದೆ ಇರಲಿ;
8 ಅವನು ಎರಡು ಮನಸ್ಸುಳ್ಳವನೂ ತನ್ನ ನಡತೆಯ
ಲ್ಲೆಲ್ಲಾ ಚಂಚಲನೂ ಆಗಿದ್ದಾನೆ.
9 ಹೀನಸ್ಥಿತಿಯಲ್ಲಿರುವ ಸಹೋದರನು ತಾನು ಉತ್ತ
10 ಮಸ್ಥಿತಿಗೆ ಬಂದೆನೆಂದು ಉಲ್ಲಾಸಪಡಲಿ; ಐಶ್ವರ್ಯ
ವಂತನಾದ ಸಹೋದರನು ತಾನು ಹೀನಸ್ಥಿತಿಗೆ ಬಂದೆ
ನೆಂದು ಉಲ್ಲಾಸಪಡಲಿ. ಯಾಕಂದರೆ ಐಶ್ವರ್ಯ
ವಂತನು ಹುಲ್ಲಿನ ಹೂವಿನಂತೆ ಗತಿಸಿಹೋಗುವನು.
11 ಸೂರ್ಯನು ಉದಯಿಸಿ ಉಷ್ಣವಾದ ಗಾಳಿ ಬೀಸಿ
ಹುಲ್ಲನ್ನು ಬಾಡಿಸಲು ಆ ಹುಲ್ಲಿನ ಹೂವು ಉದುರಿ
ಅದರ ರೂಪದ ಸೊಗಸು ಕೆಡುವದಷ್ಟೆ. ಹೀಗೆಯೇ
ಐಶ್ವರ್ಯವಂತನು ತನ್ನ ವ್ಯವಹಾರಗಳಲ್ಲಿಯೇ ಕುಂದಿ
ಹೋಗುವನು.
ಕಷ್ಟವನ್ನು ಸಹಿಸಿಕೊಳ್ಳುವವನು ಧನ್ಯನು; 12
ಅವನು ಪರಿಶೋಧಿತನಾದ ಮೇಲೆ ಜೀವವೆಂಬ ಜಯ
ಮಾಲೆಯನ್ನು ಹೊಂದುವನು; ಸ್ವಾಮಿಯು ತನ್ನನ್ನು
ಪ್ರೀತಿಸುವವರಿಗೆ ಇದನ್ನು ವಾಗ್ದಾನಮಾಡಿದ್ದಾನೆ.
ಯಾವನಾದರೂ ಪಾಪಮಾಡುವದಕ್ಕೆ ಪ್ರೇರೇಪಿಸಲ್ಪ 13
ಡುವಾಗ— ಈ ಪ್ರೇರಣೆಯು ನನಗೆ ದೇವರಿಂದ ಉಂಟಾ
ಯಿತೆಂದು ಹೇಳಬಾರದು. ದೇವರು ಕೆಟ್ಟದ್ದಕ್ಕೇನೂ
ಸಂಬಂಧಪಟ್ಟವನಲ್ಲ; ಆತನು ಯಾರನ್ನೂ ಪಾಪಕ್ಕೆ
ಪ್ರೇರೇಪಿಸುವದಿಲ್ಲ. ಆದರೆ ಪ್ರತಿಯೊಬ್ಬನೂ ತನ್ನಲ್ಲಿ 14
ರುವ ಆಶಾಪಾಶದಿಂದ ಎಳೆಯಲ್ಪಟ್ಟು ಮರುಳುಗೊಂಡ
ವನಾಗಿ ಪ್ರೇರೇಪಿಸಲ್ಪಡುತ್ತಾನೆ. ಆ ಮೇಲೆ ಆಶೆಯು 15
ಬಸುರಾಗಿ ಪಾಪವನ್ನು ಹೆರುತ್ತದೆ; ಪಾಪವು ತುಂಬಾ
ಬೆಳೆದು ಮರಣವನ್ನು ಹಡೆಯುತ್ತದೆ.
ನನ್ನ ಪ್ರಿಯ ಸಹೋದರರೇ, ಮೋಸಹೋಗಬೇಡಿರಿ. 16
ಎಲ್ಲಾ ಒಳ್ಳೇ ದಾನಗಳೂ ಕುಂದಿಲ್ಲದ ಎಲ್ಲಾ ವರ 17
ಗಳೂ ಮೇಲಣಿಂದ ಸಕಲವಿಧವಾದ ಬೆಳಕಿಗೂ
ಮೂಲಕಾರಣನಾದವನಿಂದ ಇಳಿದುಬರುತ್ತವೆ. ಆತ
ನಲ್ಲಿ ಚಂಚಲತ್ವವೇನೂ ಇಲ್ಲ, 2)ವ್ಯತ್ಯಾಸದ ಸೂಚನೆ
ಯೂ ಇಲ್ಲ. ಆತನು ತನ್ನ ಸುಚಿತ್ತದ ಪ್ರಕಾರ ಸತ್ಯ 18
ಬೋಧನೆಯ ವಾಕ್ಯದಿಂದ ನಮ್ಮನ್ನು ಹುಟ್ಟಿಸಲಾಗಿ
ನಾವು ಆತನ ಸೃಷ್ಟಿಗಳಲ್ಲಿ ಪ್ರಥಮಫಲದಂತಾದೆವು.

ದೇವರ ವಾಕ್ಯವನ್ನು ಕೇಳಿ ಅದನ್ನು ಅನುಸರಿಸುವದರ ವಿಷಯವು.

ನನ್ನ ಪ್ರಿಯ ಸಹೋದರರೇ, ನೀವು ಬಲ್ಲವರು. 19
ಆದರೆ ಪ್ರತಿಯೊಬ್ಬನು ಕಿವಿಗೊಡುವದರಲ್ಲಿ ತೀವ್ರ

1) ಕೆಲವು ಪ್ರತಿಗಳಲ್ಲಿ—ನಿಮ್ಮೊಳಗೆ ಎಂದು ಬರೆದದೆ.

2) ಅಥವಾ, ಗ್ರಹಣದಂತಿರುವ ನೆರಳೂ.

ವಾಗಿಯೂ ಮಾತಾಡುವದರಲ್ಲಿ ನಿಧಾನವಾಗಿಯೂ
ಇರಲಿ. ಕೋಪಿಸುವದರಲ್ಲಿಯೂ ನಿಧಾನವಾಗಿ
20 ರಲಿ; ಮನುಷ್ಯನ ಕೋಪವು ದೇವರಿಗೆ ಮೆಚ್ಚಿಕೆಯಾ
21 ಗಿರುವ ನೀತಿಗೆ ಅನುಕೂಲವಾಗುವದಿಲ್ಲ. ಆದಕಾರಣ
ಎಲ್ಲಾ ನೀಚತನವನ್ನೂ ಎಲ್ಲಾ ದುಷ್ಟತನವನ್ನೂ
ತೆಗೆದುಹಾಕಿ ಮನಸ್ಸಿನೊಳಗೆ ಬೇರೂರಿರುವ ವಾಕ್ಯಕ್ಕೆ
ನಮ್ರತೆಯಿಂದ ಎಡೆಗೊಡಿರಿ; ಅದು ನಿಮ್ಮ ಆತ್ಮ
ಗಳನ್ನು ರಕ್ಷಿಸುವದಕ್ಕೆ ಸಾಮರ್ಥ್ಯವುಳ್ಳದ್ದಾಗಿದೆ.
22 ವಾಕ್ಯದ ಪ್ರಕಾರ ನಡೆಯುವವರಾಗಿರಿ; ಅದನ್ನು
ಕೇಳುವವರು ಮಾತ್ರವೇ ಆಗಿದ್ದು ನಿಮ್ಮನ್ನು ನೀವೇ
23 ಮೋಸಗೊಳಿಸಬೇಡಿರಿ. ಯಾವನಾದರೂ ವಾಕ್ಯ
ವನ್ನು ಕೇಳುವವನಾದರೂ ಅದರ ಪ್ರಕಾರ ನಡೆಯದಿ
ದ್ದರೆ ಅವನು ಕನ್ನಡಿಯಲ್ಲಿ ತನ್ನ ಹುಟ್ಟುಮುಖ
24 ವನ್ನು ನೋಡಿದ ಮನುಷ್ಯನಂತಿರುವನು; ಇವನು
ತನ್ನನ್ನು ನೋಡಿಕೊಂಡು ಹೋಗಿ ತಾನು ಹೀಗಿದ್ದೇ
25 ನೆಂಬದನ್ನು ಆ ಕ್ಷಣವೇ ಮರೆತುಬಿಡುವನು. ಆದರೆ
1)ಬಿಡುಗಡೆಯನ್ನುಂಟುಮಾಡುವ ಸರ್ವೋತ್ತಮ
ಧರ್ಮಪ್ರಮಾಣವನ್ನು ಲಕ್ಷ್ಯಕೊಟ್ಟು ನೋಡಿ ಇನ್ನೂ
ನೋಡುತ್ತಲೇ ಇರುವವನು ವಾಕ್ಯವನ್ನು ಕೇಳಿ ಮರೆತು
ಹೋಗುವವನಾಗಿರದೆ ಅದರ ಪ್ರಕಾರ ನಡೆಯುವ
ವನಾಗಿದ್ದು ತನ್ನ ನಡತೆಯಿಂದ ಧನ್ಯನಾಗುವನು.
26 ಸದ್ಭಕ್ತನೆಂದೆಣಿಕೊಳ್ಳುವ ಯಾವನಾದರೂ ತನ್ನ
ನಾಲಿಗೆಗೆ ಕಡಿವಾಣವನ್ನು ಹಾಕದೆ ತನ್ನ ಹೃದಯ
ವನ್ನು ಮೋಸಗೊಳಿಸುವವನಾದರೆ ಅವನ ಭಕ್ತಿ ನಿಷ್ಪ್ರ
27 ಯೋಜನವಾಗಿದೆ. ಸಂಕಟದಲ್ಲಿ ಬಿದ್ದ ದಿಕ್ಕಿಲ್ಲದ
ವರನ್ನೂ ವಿಧವೆಯರನ್ನೂ ಪರಾಮರಿಸಿ ತನಗೆ ಪ್ರಪಂ
ಚದ ದೋಷವು ಹತ್ತದಂತೆ ನೋಡಿಕೊಂಡಿರುವದೇ ತಂದೆ
ಯಾದ ದೇವರ ಸನ್ನಿಧಾನದಲ್ಲಿ ಶುದ್ಧವೂ ನಿರ್ಮಲವೂ
ಆಗಿರುವ ಭಕ್ತಿ.

### ಪಕ್ಷಪಾತವನ್ನು ಕುರಿತದ್ದು.

**2** ನನ್ನ ಸಹೋದರರೇ, ಪ್ರಭಾವವುಳ್ಳ ನಮ್ಮ ಕರ್ತ
ನಾದ ಯೇಸು ಕ್ರಿಸ್ತನಲ್ಲಿ ನಂಬಿಕೆಯಿಟ್ಟವರಾದ
2 ನೀವು ಪಕ್ಷಪಾತಿಗಳಾಗಿರಬಾರದು. ಹೇಗಂದರೆ ಒಬ್ಬ
ಮನುಷ್ಯನು ಚಿನ್ನದ ಉಂಗುರವನ್ನೂ ಶೋಭಾಯ
ಮಾನವಾದ ವಸ್ತ್ರಗಳನ್ನೂ ಹಾಕಿಕೊಂಡು ನಿಮ್ಮ ಸಭಾ
ಮಂದಿರದೊಳಗೆ ಬರಲು ಮತ್ತು ಒಬ್ಬ ಬಡಮನು
3 ಷ್ಯನು ಹೀನವಾದ ಬಟ್ಟೆ ಹಾಕಿಕೊಂಡು ಬರಲು ನೀವು
ಶೋಭಾಯಮಾನವಾದ ವಸ್ತ್ರಗಳನ್ನು ಧರಿಸಿಕೊಂಡಿ
ರುವವನನ್ನು ಮರ್ಯಾದೆಯಿಂದ ನೋಡಿ ಅವನಿಗೆ—
ನೀವು ಇಲ್ಲಿ ಈ ಸುಖಾಸನದ ಮೇಲೆ ಕೂತುಕೊಳ್ಳಿರಿ
ಎಂತಲೂ ಆ ಬಡಮನುಷ್ಯನಿಗೆ—ನೀನು ಅಲ್ಲಿ ನಿಂತು
ಕೋ, ಇಲ್ಲವೆ ನನ್ನ ಕಾಲ್ಮಣೆಯ ಹತ್ತಿರ ನೆಲದ
4 ಮೇಲೆ ಕೂತುಕೋ ಎಂತಲೂ ಹೇಳಿದರೆ ನೀವು ನಿಮ್ಮ
ಲ್ಲಿ ಭೇದಮಾಡುವವರಾಗಿ ಅನ್ಯಾಯವಾದ ತೀರ್ಪ
5 ನ್ನು ಮಾಡುವವರಾದಿರಲ್ಲಾ. ನನ್ನ ಪ್ರಿಯ ಸಹೋ
ದರರೇ, ಕೇಳಿರಿ, ದೇವರು ಲೌಕಿಕ ವಿಷಯದಲ್ಲಿ
ಬಡವರಾಗಿರುವವರನ್ನು ಆದುಕೊಂಡು ಅವರು
ನಂಬಿಕೆಯಲ್ಲಿ ಐಶ್ವರ್ಯವಂತರಾಗಿಯೂ ತನ್ನನ್ನು
ಪ್ರೀತಿಸುವವರಿಗೆ ತಾನು ವಾಗ್ದಾನಮಾಡಿದ
ರಾಜ್ಯಕ್ಕೆ ಬಾಧ್ಯರಾಗಿಯೂ ಇರಬೇಕೆಂದು ನೇಮಿಸಲಿ
ಲ್ಲವೋ? ನೀವಾದರೋ ಬಡವರನ್ನು ಅವಮಾನ
ಪಡಿಸಿದ್ದೀರಿ. ನಿಮ್ಮನ್ನು ಬಾಧಿಸಿ ನ್ಯಾಯಸ್ಥಾನಕ್ಕೆ
ಎಳೆದುಕೊಂಡುಹೋಗುವವರು ಐಶ್ವರ್ಯವಂತರಲ್ಲ
ವೋ? ನೀವು ಕರೆಸಿಕೊಳ್ಳುವ ಶ್ರೇಷ್ಠವಾದ ನಾಮ
ವನ್ನು ದೂಷಿಸುವವರು ಅವರಲ್ಲವೋ? ಆದರೂ
ಶಾಸ್ತ್ರಕ್ಕೆ ಸರಿಯಾಗಿ ನಿನ್ನ ನೆರೆಯವನನ್ನು ನಿನ್ನಂತೆ
ಯೇ ಪ್ರೀತಿಸಬೇಕೆಂಬ ರಾಜಾಜ್ಞೆಯನ್ನು ನೀವು ನೆರ
ವೇರಿಸುತ್ತಿದ್ದರೆ ನೀವು ಒಳ್ಳೇದನ್ನು ಮಾಡುವವರು.
ಅದನ್ನು ಬಿಟ್ಟು ಪಕ್ಷಪಾತ ತೋರಿಸುವವರಾಗಿದ್ದರೆ
ನೀವು ಪಾಪಮಾಡುವವರಾಗಿದ್ದು ಅಪರಾಧಿಗಳೆಂದು
ಧರ್ಮಶಾಸ್ತ್ರದಿಂದ ತೀರ್ಮಾನಿಸಲ್ಪಡುತ್ತೀರಿ. ಯಾಕಂ
ದರೆ ಯಾವನಾದರೂ ಧರ್ಮಶಾಸ್ತ್ರವನ್ನೆಲ್ಲಾ ಕೈ
ಕೊಂಡು ನಡೆದು ಒಂದೇ ಒಂದರಲ್ಲಿ ತಪ್ಪಿದರೆ ಅವನು
ಎಲ್ಲಾ ವಿಷಯದಲ್ಲಿಯೂ ಅಪರಾಧಿಯಾಗುತ್ತಾನೆ.
ವ್ಯಭಿಚಾರಮಾಡಬಾರದೆಂದು ಹೇಳಿದವನೇ ನರಹತ್ಯ
ಮಾಡಬಾರದೆಂತಲೂ ಹೇಳಿದನು. ಆದಕಾರಣ
ನೀನು ವ್ಯಭಿಚಾರಮಾಡದೆ ಇದ್ದರೂ ನರಹತ್ಯಮಾಡಿ
ದರೆ ಧರ್ಮಪ್ರಮಾಣವನ್ನು ಮೀರಿದವನಾದಿ. ನೀವು
1)ಬಿಡುಗಡೆಯನ್ನುಂಟುಮಾಡುವ ಧರ್ಮಪ್ರಮಾಣದ
ಪ್ರಕಾರ ತೀರ್ಮಾನವನ್ನು ಹೊಂದತಕ್ಕವರೆಂದು ಮಾ
ತಾಡಿರಿ, ನಡೆಯಿರಿ. ಕರುಣೆತೋರಿಸದೆ ಇರುವವನಿಗೆ
ನ್ಯಾಯತೀರ್ಮಾನದಲ್ಲಿ ಕರುಣೆಯು ತೋರಿಸಲ್ಪಡುವ
ದಿಲ್ಲ. ಕರುಣೆಯು ನ್ಯಾಯತೀರ್ಮಾನವನ್ನು ಗೆದ್ದು
ಹಿಗ್ಗುತ್ತದೆ.

### ನಂಬಿಕೆ ಮಾತ್ರವೇ ಸಾಲದು, ನಡತೆಯೂ ಬೇಕೆಂಬ ಬೋಧೆ.

ನನ್ನ ಸಹೋದರರೇ, ಒಬ್ಬನು ತನಗೆ ನಂಬಿಕೆ
ಯುಂಟೆಂದು ಹೇಳಿಕೊಂಡು ತಕ್ಕ ಕ್ರಿಯೆಗಳಿಲ್ಲದವ
ನಾಗಿದ್ದರೆ ಪ್ರಯೋಜನವೇನು? ಅಂಥ ನಂಬಿಕೆಯು
ಇವನನ್ನು ರಕ್ಷಿಸುವದೋ? ಒಬ್ಬ ಸಹೋದರನಿಗೆ
ಇಲ್ಲವೆ ಒಬ್ಬ ಸಹೋದರಿಗೆ ಬಟ್ಟೆಯೂ ಆ ದಿನದ
ಆಹಾರವೂ ಇಲ್ಲದೆ ಇರುವಾಗ ನಿಮ್ಮಲ್ಲಿ ಒಬ್ಬನು ಅವ
ರಿಗೆ ದೇಹಕ್ಕೆ ಬೇಕಾದದ್ದನ್ನು ಕೊಡದೆ—ಸಮಾಧಾನ
ದಿಂದ ಹೋಗಿರಿ, ಬೆಂಕಿಕಾಯಿಸಿಕೊಳ್ಳಿ, ಹೊಟ್ಟೆತುಂಬಿಸಿ
ಕೊಳ್ಳಿ ಎಂದು ಬರೀ ಮಾತು ಹೇಳಿದರೆ ಪ್ರಯೋಜ
ನವೇನು? ಹಾಗೆಯೇ ಕ್ರಿಯೆಗಳಿಲ್ಲದಿದ್ದರೆ ನಂಬಿಕೆ
ಯು ತನ್ನಲ್ಲಿ ಜೀವವಿಲ್ಲದ್ದು. ಹೀಗಲ್ಲವಾದರೆ ಒಬ್ಬ
ಮನುಷ್ಯನು—ನಿನಗೆ ನಂಬಿಕೆಯುಂಟು, ನನಗೆ ಕ್ರಿಯೆ
ಗಳುಂಟು, ನಾನು ನನ್ನ ಕ್ರಿಯೆಗಳ ಮುಖಾಂತರ
ನನ್ನ ನಂಬಿಕೆಯನ್ನು ನಿನಗೆ ತೋರಿಸುತ್ತೇನೆ; ನೀನು
ಕ್ರಿಯೆಗಳಿಲ್ಲದೆ ನಿನ್ನ ನಂಬಿಕೆಯನ್ನು ನನಗೆ ತೋರಿಸು

1) ಅಥವಾ: ಬಿಡುಗಡೆಯಾದವರಿಗೆ ಇರುವ.

19 ನೋಡೋಣ ಎಂದು ಹೇಳುವನಲ್ಲವೇ. ದೇವರು
ಒಬ್ಬನೇ ಎಂದು ನೀನು ನಂಬುವವನು. ಹಾಗೆ ನಂಬು
ವದು ಒಳ್ಳೇದು. ದೆವ್ವಗಳು ಕೂಡ ಹಾಗೆಯೇ
20 ನಂಬಿ ಹೆದರಿ ನಡುಗುತ್ತವೆ. ಅಪ್ರಯೋಜಕನೇ, ಕ್ರಿಯೆ
ಗಳಿಲ್ಲದ ನಂಬಿಕೆಯು ವ್ಯರ್ಥವಾಗಿದೆ ಎಂಬದಕ್ಕೆ
21 ದೃಷ್ಟಾಂತ ಬೇಕೋ? ನಮ್ಮ ಪಿತೃವಾದ ಅಬ್ರಹಾಮನು
ಇಸಾಕನೆಂಬ ತನ್ನ ಮಗನನ್ನು ಯಜ್ಞವೇದಿಯ ಮೇಲೆ
ಅರ್ಪಿಸಿದಾಗ ನೀತಿವಂತನೆಂಬ ನಿರ್ಣಯವನ್ನು
22 ಹೊಂದಿದ್ದು ಕ್ರಿಯೆಗಳಿಂದಲ್ಲವೇ. ಅವನ ನಂಬಿಕೆಯು
ಕ್ರಿಯೆಗಳೊಂದಿಗೆ ಪ್ರವರ್ತಿಸಿ ಆ ಕ್ರಿಯೆಗ
ಳಿಂದಲೇ ಸಿದ್ಧಿಗೆ ಬಂತೆಂಬದು ಕಾಣಬರುತ್ತದಲ್ಲಾ.
23 ಅಬ್ರಹಾಮನು ದೇವರನ್ನು ನಂಬಿದನು; ಆ
ನಂಬಿಕೆ ಅವನ ಲೆಕ್ಕಕ್ಕೆ ನೀತಿಯೆಂದು ಎಣಿಸಲ್ಪ
ಟ್ಟಿತು ಎಂಬ ಶಾಸ್ತ್ರದ ಮಾತು ಹೀಗೆ ನೆರವೇರಿತು,
ಮತ್ತು ದೇವರ ಸ್ನೇಹಿತನೆಂಬ ಹೆಸರು ಅವನಿಗೆ
24 ಉಂಟಾಯಿತು. ಮನುಷ್ಯನು ಕ್ರಿಯೆಗಳಿಂದ ನೀತಿ
ವಂತನೆಂದು ನಿರ್ಣಯಿಸಲ್ಪಡುತ್ತಾನೇ ಹೊರತು ಬರೀ
25 ನಂಬಿಕೆಯಿಂದಲ್ಲವೆಂದು ನೋಡುತ್ತೀರಿ. ಅದೇ ರೀತಿ
ಯಾಗಿ ಸೂಳೆಯಾದ ರಹಾಬಳು ಗೂಢಚಾರರನ್ನು
ತನ್ನ ಮನೆಯಲ್ಲಿ ಸೇರಿಸಿಕೊಂಡು ಬೇರೆ ದಾರಿ
ಯಿಂದ ಅವರನ್ನು ಕಳುಹಿಸಿದ್ದರಲ್ಲಿ ಕ್ರಿಯೆಗಳಿಂದಲೇ
ನೀತಿವಂತಳೆಂಬ ನಿರ್ಣಯವನ್ನು ಹೊಂದಿದಳಲ್ಲವೇ.
26 ಆತ್ಮವಿಲ್ಲದ ದೇಹವು ಸತ್ತದ್ದಾಗಿರುವ ಪ್ರಕಾರವೇ
ಕ್ರಿಯೆಗಳಿಲ್ಲದ ನಂಬಿಕೆಯೂ ಸತ್ತದ್ದೇ.

### ನಾಲಿಗೆಯನ್ನು ಬಿಗಿಹಿಡಿಯುವದರ ವಿಷಯವು.

3 ನನ್ನ ಸಹೋದರರೇ, ಬೋಧಕರಾದ ನಮಗೆ
ಕಠಿನವಾದ ತೀರ್ಪು ಆಗುವದೆಂದು ತಿಳಿದುಕೊಂಡು
2 ಬಹುಮಂದಿ ಬೋಧಕರಾಗಬೇಡಿರಿ. ಅನೇಕ ವಿಷ
ಯಗಳಲ್ಲಿ ನಾವೆಲ್ಲರೂ ತಪ್ಪುವದುಂಟು. ಒಬ್ಬನು
ಮಾತಿನಲ್ಲಿ ತಪ್ಪದಿದ್ದರೆ ಅವನು ಶಿಕ್ಷಿತನೂ ತನ್ನ
ದೇಹವನ್ನೆಲ್ಲಾ ಸ್ವಾಧೀನಪಡಿಸಿಕೊಳ್ಳುವದಕ್ಕೆ ಸಮ
3 ರ್ಥನೂ ಆಗಿದ್ದಾನೆ. ನಾವು ಕುದುರೆಗಳನ್ನು ಸ್ವಾಧೀನ
ಮಾಡಿಕೊಳ್ಳಬೇಕೆಂದಿರುವಾಗ ಅವುಗಳ ಬಾಯಿಗೆ
ಕಡಿವಾಣಹಾಕುತ್ತೇವಲ್ಲಾ; ಆಗ ಅವುಗಳ ದೇಹವ
4 ನ್ನೆಲ್ಲಾ ತಿರುಗಿಸುವದಕ್ಕೆ ಆಗುತ್ತದೆ. ಹಡಗುಗಳನ್ನು
ನೋಡಿರಿ. ಅವು ಬಹು ದೊಡ್ಡವು, ಬಲವಾದ ಗಾಳಿ
ಯಿಂದ ಬಡಿಸಿಕೊಂಡು ಹೋಗುತ್ತವೆ. ಆದರೂ
ನಡಿಸುವವನು ಬಹು ಸಣ್ಣ ಚುಕಾಣಿಯಿಂದ ಅವುಗ
ಳನ್ನು ತನ್ನ ಮನಸ್ಸಿಗೆ ಬಂದ ಕಡೆಗೆ ತಿರುಗಿಸುತ್ತಾನೆ.
5 ಹಾಗೆಯೇ ನಾಲಿಗೆಯು ಕೂಡ ಚಿಕ್ಕ ಅಂಗವಾಗಿದ್ದ
ರೂ ದೊಡ್ಡ ಕಾರ್ಯಗಳನ್ನು ಕೊಚ್ಚಿಕೊಳ್ಳುತ್ತದೆ.
6 ಎಷ್ಟು ಕೊಂಚ ಕಿಚ್ಚು ಎಷ್ಟು ದೊಡ್ಡ ಕಾಡನ್ನು ಉರಿ
ಸುತ್ತದೆ ನೋಡಿರಿ. ನಾಲಿಗೆಯೂ ಕಿಚ್ಚೇ. ನಾಲಿ
ಗೆಯು ಅಧರ್ಮಲೋಕರೂಪವಾಗಿ ನಮ್ಮ ಅಂಗಗಳ
ನಡುವೆ ಇಟ್ಟದೆ. ಅದು ದೇಹವನ್ನೆಲ್ಲಾ ಕೆಡಿಸು
ತ್ತದೆ. ತಾನೇ ನರಕದಿಂದ ಬೆಂಕಿಹತ್ತಿಸಿಕೊಳ್ಳುತ್ತಾ
ಪ್ರಪಂಚವೆಂಬ ಚಕ್ರಕ್ಕೆ ಬೆಂಕಿಹಚ್ಚುತ್ತದೆ. ನರಜಾತಿ 7
ಯು ಸಕಲಜಾತಿಯ ಮೃಗ ಪಕ್ಷಿ ಕ್ರಿಮಿ ಜಲಚರಗ
ಳನ್ನೂ ಹತೋಟಿಗೆ ತರುವದುಂಟು ಮತ್ತು ತಂದ
ದ್ದುಂಟು. ಆದರೆ ನಾಲಿಗೆಯನ್ನು ಯಾವ ಮಾನ 8
ವನೂ ಹತೋಟಿಗೆ ತರಲಾರನು. ಅದು ಸುಮ್ಮನಿರ
ಲಾರದ ಕೆಡುಕಾಗಿದೆ; ಮರಣಕರವಾದ ವಿಷದಿಂದ
ತುಂಬಿ ಇದೆ. ನಾಲಿಗೆಯಿಂದ ತಂದೆಯಾದ ಕರ್ತ 9
ನನ್ನು ಕೊಂಡಾಡುತ್ತೇವೆ; ಅದರಿಂದಲೇ ದೇವರ
ಹೋಲಿಕೆಗೆ ಸರಿಯಾಗಿ ಉಂಟುಮಾಡಲ್ಪಟ್ಟ ಮನುಷ್ಯ
ರನ್ನು ಶಪಿಸುತ್ತೇವೆ. ಅದೇ ಬಾಯಿಂದ ಸ್ತುತಿ ಶಾಪ 10
ಎರಡೂ ಬರುತ್ತವೆ. ನನ್ನ ಸಹೋದರರೇ, ಹೀಗಿರು
ವದು ಯೋಗ್ಯವಲ್ಲ. ಊಟೆಯ ಒಂದೇ ಬಾಯಿಂದ 11
ಸಿಹಿನೀರು ಕಹಿನೀರು ಎರಡೂ ಹೊರಡುವದುಂಟೇ?
ನನ್ನ ಸಹೋದರರೇ, ಅಂಜೂರದ ಮರವು ಎಣ್ಣೇಮರದ 12
ಕಾಯಿ ಬಿಡುವದೋ? ದ್ರಾಕ್ಷೇ ಬಳ್ಳಿಯಲ್ಲಿ ಅಂಜೂ
ರದ ಹಣ್ಣಾಗುವದೋ? ಹಾಗೆಯೇ ಉಪ್ಪುನೀರಿನ
ಬಾವಿಯಿಂದ ಸಿಹಿನೀರು ಬರುವದಿಲ್ಲ.

### ನಿಜವಾದ ಜ್ಞಾನದ ಲಕ್ಷಣಗಳು.

ನಿಮ್ಮಲ್ಲಿ ಜ್ಞಾನಿಯೂ ಬುದ್ಧಿವಂತನೂ ಯಾರು? 13
ಅಂಥವನು ಯೋಗ್ಯವಾಗಿ ನಡೆದುಕೊಂಡು ಜ್ಞಾನದ
ಲಕ್ಷಣವಾಗಿರುವ ಶಾಂತಗುಣದಿಂದ ಅದರ ಫಲ
ವನ್ನು ತೋರಿಸಲಿ. ಆದರೆ ತೀಕ್ಷ್ಣವಾದ ಮತ್ಸ 14
ರವೂ ಪಕ್ಷಭೇದವೂ ನಿಮ್ಮ ಹೃದಯದೊಳಗೆ ಇರು
ವಲ್ಲಿ ನೀವು ಸತ್ಯಕ್ಕೆ ವಿರೋಧವಾಗಿ ಸುಳ್ಳಾಡಿ ಹೊಗಳಿ
ಕೊಳ್ಳಬೇಡಿರಿ. ಅದು ಮೇಲಣಿಂದ ಬಂದ ಜ್ಞಾನ 15
ವಲ್ಲ; ಅದು ಭೂಸಂಬಂಧವಾದದ್ದು, ಪ್ರಾಕೃತ
ಭಾವವಾದದ್ದು, ದೆವ್ವಗಳಿಗೆ ಸಂಬಂಧಪಟ್ಟದ್ದು.
ಮತ್ಸರವೂ ಪಕ್ಷಭೇದವೂ ಇರುವ ಕಡೆ ಗಲಿಬಿಲಿಯೂ 16
ಸಕಲವಿಧ ನೀಚಕೃತ್ಯಗಳೂ ಇರುವವು. ಆದರೆ 17
ಮೇಲಣಿಂದ ಬರುವ ಜ್ಞಾನವು ಮೊದಲು ಪರಿಶುದ್ಧ
ವಾದದ್ದು, ಆ ಮೇಲೆ ಸಮಾಧಾನಕರವಾದದ್ದು. ವಿನ
ಯವುಳ್ಳದ್ದು, ಸಂತೋಷವಾಗಿ ಒಪ್ಪಿಕೊಳ್ಳುವಂಥದು,
ಕರುಣೆ ಮುಂತಾದ ಒಳ್ಳೇ ಫಲಗಳಿಂದ ತುಂಬಿರು
ವಂಥದು ಆಗಿದೆ; ಅದರಲ್ಲಿ ಚಂಚಲವೂ ಕಪಟವೂ
ಇಲ್ಲ. ಸಮಾಧಾನಪಡಿಸುವವರು ಸಮಾಧಾನವೆಂಬ 18
ಬೀಜವನ್ನು ಬಿತ್ತಿ ನೀತಿಯೆಂಬ ಫಲವನ್ನು ಕೊಯ್ಯು
ವರು.

### ಜಗಳಗಂಟಿಗತನ ಪ್ರಾಪಂಚಿಕಬುದ್ಧಿ ಇವುಗಳ ವಿಷಯವಾದ ಎಚ್ಚರಿಕೆ.

ನಿಮ್ಮಲ್ಲಿ ಯುದ್ಧಗಳೂ ಕಾದಾಟಗಳೂ ಎಲ್ಲಿಂದ 4
ಹುಟ್ಟುತ್ತವೆ? ನಿಮ್ಮ ಇಂದ್ರಿಯಗಳಲ್ಲಿ 1)ಹೋರಾ
ಡುವ ಭೋಗಾಶೆಗಳಿಂದಲೇ ಅಲ್ಲವೇ. ನೀವು ಆಶಿಸಿ 2
ದರೂ ಹೊಂದದೆ ಇದ್ದೀರಿ. ನೀವು ಕೊಲೆಗಾರರಾಗು
ವಷ್ಟು ಹೊಟ್ಟೆಕಿಚ್ಚು ಪಟ್ಟಾದರೂ ಸಂಪಾದಿಸಲಾರದೆ

1) ಅಥವಾ: ದಂಡೆಳೆದಿರುವ.

ಇದ್ದೀರಿ; ನೀವು ಕಾದಾಡುತ್ತೀರಿ, ಯುದ್ಧಮಾಡು
ತ್ತೀರಿ. ನೀವು ದೇವರನ್ನು ಬೇಡಿಕೊಳ್ಳದ ಕಾರಣ
3 ನಿಮಗೇನೂ ದೊರೆಯಲಿಲ್ಲ. ನೀವು ಬೇಡಿದರೂ
ಬೇಡಿದ್ದನ್ನು ನಿಮ್ಮ ಭೋಗಗಳಿಗಾಗಿ ಉಪಯೋಗಿಸ
ಬೇಕೆಂಬ ದುರಭಿಪ್ರಾಯಪಟ್ಟು ಬೇಡಿಕೊಳ್ಳುವದ
4 ರಿಂದ ನಿಮಗೆ ದೊರೆಯುವದಿಲ್ಲ. ವ್ಯಭಿಚಾರಿಗಳು
ನೀವು; ಇಹಲೋಕಸ್ನೇಹವು ದೇವವೈರವೆಂದು ನಿಮಗೆ
ತಿಳಿಯದೋ? ಲೋಕಕ್ಕೆ ಸ್ನೇಹಿತನಾಗಬೇಕೆಂದಿರು
ವವನು ತನ್ನನ್ನು ದೇವರಿಗೆ ವಿರೋಧಿಯನ್ನಾಗಿ ಮಾಡಿ
5 ಕೊಳ್ಳುತ್ತಾನೆ. ದೇವರು ನಮ್ಮಲ್ಲಿ ಇರಿಸಿರುವ
ಪವಿತ್ರಾತ್ಮನು ಅಭಿಮಾನತಾಪದಿಂದ ನಮಗೋಸ್ಕರ
ಹಂಬಲಿಸುತ್ತಾನೆ ಎಂಬ ಶಾಸ್ತ್ರೋಕ್ತಿ ಬರೀ ಮಾತೆಂದು
6 ಭಾವಿಸುತ್ತೀರೋ? ಆತನು ನಮ್ಮ ಮೇಲೆ ಅತಿ
ಶಯವಾದ ಕೃಪೆಯನ್ನು ಇಡುತ್ತಾನೆ. ಆದದರಿಂದ—
ದೇವರು ಅಹಂಕಾರಿಗಳನ್ನು ಎದುರಿಸುತ್ತಾನೆ, ದೀನರಿ
ಗಾದರೋ ಕೃಪೆಯನ್ನು ಅನುಗ್ರಹಿಸುತ್ತಾನೆ ಎಂದು
7 ಶಾಸ್ತ್ರವು ಹೇಳುತ್ತದೆ. ಹೀಗಿರಲಾಗಿ ದೇವರಿಗೆ ಒಳ
ಗಾಗಿರಿ. ಸೈತಾನನನ್ನು ಎದುರಿಸಿರಿ, ಅವನು ನಿಮ್ಮ
8 ನ್ನು ಬಿಟ್ಟು ಓಡಿಹೋಗುವನು. ದೇವರ ಸಮೀ
ಪಕ್ಕೆ ಬನ್ನಿರಿ, ಆಗ ಆತನು ನಿಮ್ಮ ಸಮೀಪಕ್ಕೆ ಬರು
ವನು. ಪಾಪಿಗಳೇ, ನಿಮ್ಮ ಕೈಗಳನ್ನು ಶುಚಿಮಾಡಿ
ಕೊಳ್ಳಿರಿ; ಎರಡು ಮನಸ್ಸುಳ್ಳವರೇ, ನಿಮ್ಮ ಹೃದ
9 ಯಗಳನ್ನು ನಿರ್ಮಲಮಾಡಿಕೊಳ್ಳಿರಿ. ದುಃಖಿಸಿರಿ,
ಗೋಳಾಡಿರಿ, ಕಣ್ಣೀರಿಡಿರಿ; ನಗುವದನ್ನು ಬಿಟ್ಟು ಗೋ
ಳಾಡಿರಿ; ಸಂತೋಷವನ್ನು ಬಿಟ್ಟು ಮನಗುಂದಿದವರಾ
10 ಗಿರಿ. ಕರ್ತನ ಮುಂದೆ ನಿಮ್ಮನ್ನು ತಗ್ಗಿಸಿಕೊಳ್ಳಿರಿ;
ಆಗಲಾತನು ನಿಮ್ಮನ್ನು ಮೇಲಕ್ಕೆ ತರುವನು.
11 ಸಹೋದರರೇ, ಒಬ್ಬರನ್ನೊಬ್ಬರು ನಿಂದಿಸಬೇಡಿರಿ.
ಯಾವನಾದರೂ ತನ್ನ ಸಹೋದರನನ್ನು ನಿಂದಿಸಿ
ದರೆ ಅಥವಾ ತನ್ನ ಸಹೋದರನ ವಿಷಯವಾಗಿ
ತೀರ್ಪುಮಾಡಿದರೆ ಅವನು ಧರ್ಮಶಾಸ್ತ್ರವನ್ನು
ನಿಂದಿಸಿ ಧರ್ಮಶಾಸ್ತ್ರದ ವಿಷಯದಲ್ಲಿ ತೀರ್ಪುಮಾಡಿದ
ಹಾಗಾಗುವದು. ಆದರೆ ನೀನು ಧರ್ಮಶಾಸ್ತ್ರದ ವಿಷ
ಯದಲ್ಲಿ ತೀರ್ಪುಮಾಡಿದರೆ ನೀನು ನ್ಯಾಯಾಧಿಪತಿ
ಯೆನಿಸಿಕೊಳ್ಳುವಿಯೋ ಹೊರತು ಅದನ್ನು ಅನುಸರಿಸು
12 ವವನಲ್ಲ. ನ್ಯಾಯವನ್ನು ವಿಧಿಸಿದ ನ್ಯಾಯಾಧಿಪತಿ
ಒಬ್ಬನೇ; ಆತನೇ ಉಳಿಸುವದಕ್ಕೂ ನಾಶಮಾಡುವ
ದಕ್ಕೂ ಶಕ್ತನು. ಹೀಗಿರುವಾಗ ನಿನ್ನ ನೆರೆಯವನ
ವಿಷಯದಲ್ಲಿ ತೀರ್ಪುಮಾಡುವದಕ್ಕೆ ನೀನು ಯಾರು?
13 ಈಹೊತ್ತು ಇಲ್ಲವೆ ನಾಳೆ ನಾವು ಇಂಥ ಪಟ್ಟ
ಣಕ್ಕೆ ಹೋಗಿ ಅಲ್ಲಿ ಒಂದು ವರುಷವಿದ್ದು ವ್ಯಾಪಾರ
ವನ್ನು ಮಾಡಿ ಲಾಭವನ್ನು ಸಂಪಾದಿಸುತ್ತೇವೆ ಅನ್ನು
ವವರೇ ಕೇಳಿರಿ. ನಾಳೆ ಏನಾಗುವದೋ ನಿಮಗೆ ತಿಳಿ
14 ಯದು. ನಿಮ್ಮ ಜೀವಮಾನವು ಎಂಥದು? ನೀವು
ಸ್ವಲ್ಪ ಹೊತ್ತು ಕಾಣಿಸಿಕೊಂಡು ಆ ಮೇಲೆ ಕಾಣದೆ
15 ಹೋಗುವ ಹಬೆಯಂತಿರುತ್ತೀರಿ. ಆದದರಿಂದ ನೀವು
ಅಂಥ ಮಾತನ್ನು ಬಿಟ್ಟು ದೇವರ ಚಿತ್ತವಾದರೆ ನಾವು
ಬದುಕಿ ಈ ಕೆಲಸವನ್ನಾಗಲಿ ಆ ಕೆಲಸವನ್ನಾಗಲಿ ಮಾ
16 ಡುವೆವು ಎಂದು ಹೇಳಬೇಕು. ಹೀಗೆ ಹೇಳದೆ ನೀವು
ಅಹಂಭಾವದಿಂದ ಹೊಗಳಿಕೊಳ್ಳುತ್ತೀರಿ. ಅಂಥ
ಹೊಗಳಿಕೆಯೆಲ್ಲಾ ಕೆಟ್ಟದ್ದೇ. ಹೀಗಿರುವದರಿಂದ
ಒಳ್ಳೇದನ್ನು ಮಾಡಬೇಕೆಂದು ತಿಳಿದು ಅದನ್ನು ಮಾ
ಡದೆ ಇರುವವನು ಪಾಪಕ್ಕೊಳಗಾಗಿದ್ದಾನೆ.

ಐಶ್ವರ್ಯವಂತರು ಮಾಡುವ ಬಲಾತ್ಕಾರದ ಖಂಡನೆ.

ಧನಿಕರೇ, ಕೇಳಿರಿ; ನಿಮಗೆ ಬರುವ ದುರ್ದಶೆಗ
ಳಿಗಾಗಿ ಕಣ್ಣೀರಿಡಿರಿ, ಗೋಳಾಡಿರಿ. ನಿಮ್ಮ ಧನವು 2
ನಾಶವಾಗಿದೆ, ನಿಮ್ಮ ಬಟ್ಟೆಗಳಿಗೆ ನುಸಿಹಿಡಿದಿದೆ.
ನಿಮ್ಮ ಚಿನ್ನ ಬೆಳ್ಳಿಗಳು ಮಣ್ಣುಹಿಡಿದವೆ; ಆ ಮಣ್ಣೇ
ನಿಮಗೆ ಸಾಕ್ಷಿಯಾಗಿದ್ದು ಬೆಂಕಿಯಂತೆ ನಿಮ್ಮ ಮಾಂಸ
ವನ್ನು ನುಂಗಿಬಿಡುವದು. ಅಂತ್ಯದಿವಸಗಳು ಬಂದ
ರೂ ದ್ರವ್ಯವನ್ನು ಕೂಡಿಸಿ ಇಟ್ಟುಕೊಂಡಿದ್ದೀರಿ.
ನಿಮ್ಮ ಹೊಲಗಳನ್ನು ಕೊಯಿದವರ ಕೂಲಿಯನ್ನು
ನೀವು ಅನ್ಯಾಯವಾಗಿ ಹಿಡಿದುಕೊಂಡಿದ್ದೀರಿ. ಅಗೋ,
ಆ ಕೂಲಿ ನಿಮ್ಮ ಮೇಲೆ ಕೂಗಿಕೊಳ್ಳುತ್ತದೆ; ಮತ್ತು
ಕೊಯಿದವರ ಕೂಗು ಸಕಲಸೇನಾಧಿಪತಿಯಾ
ಗಿರುವ ಕರ್ತನ ಕಿವಿಗಳಲ್ಲಿ ಬಿದ್ದಿದೆ. ಭೂಲೋಕ
ದಲ್ಲಿ ನೀವು ಅತಿಭೋಗಿಗಳಾಗಿ ಬದುಕಿ ಮನಸ್ಸು
ಬಂದಂತೆ ನಡಕೊಂಡಿದ್ದೀರಿ. ವಧೆಯ ದಿವಸ ಬಂದರೂ
ನಿಮ್ಮನ್ನು ಕೊಬ್ಬಿಸಿಕೊಂಡಿದ್ದೀರಿ. ನೀತಿವಂತನಿಗೆ
ಮರಣದಂಡನೆಯನ್ನು ವಿಧಿಸಿ ಅವನನ್ನು ಕೊಂದು
ಹಾಕಿದ್ದೀರಿ; ಅವನು ನಿಮ್ಮನ್ನು ಎದುರಾಯಿಸುವವ
ನಲ್ಲ.

ಹಿಂಸೆಪಡುವ ಕ್ರೈಸ್ತರಿಗೆ ಪ್ರೋತ್ಸಾಹವು.

ಸಹೋದರರೇ, ಕರ್ತನು ಪ್ರತ್ಯಕ್ಷನಾಗುವ ತನಕ
ದೀರ್ಘಶಾಂತಿಯಿಂದಿರಿ. ವ್ಯವಸಾಯಗಾರನನ್ನು ನೋ
ಡಿರಿ; ಅವನು ಭೂಮಿಯ ಬೆಲೆಯುಳ್ಳ ಫಲಕ್ಕಾಗಿ ಕಾದಿ
ದ್ದು ಮುಂಗಾರು ಹಿಂಗಾರು ಮಳೆಗಳು ಬರುವ ತನಕ
ದೀರ್ಘಶಾಂತಿಯಿಂದಿರುವನು. ನೀವೂ ದೀರ್ಘಶಾಂತಿ
ಯಿಂದಿರಿ; ನಿಮ್ಮ ಹೃದಯಗಳನ್ನು ದೃಢಪಡಿಸಿ
ಕೊಳ್ಳಿರಿ, ಕರ್ತನ ಪ್ರತ್ಯಕ್ಷತೆಯು ಹತ್ತಿರವಾಯಿತು.
ಸಹೋದರರೇ, ನೀವು ಒಬ್ಬರ ಮೇಲೊಬ್ಬರು ಗುಣು
ಗುಟ್ಟಬೇಡಿರಿ; ನ್ಯಾಯವಿಚಾರಣೆಗೆ ಗುರಿಯಾದೀರಿ.
ಅಗೋ, ನ್ಯಾಯಾಧಿಪತಿಯು ಬಾಗಲಿನ ಹತ್ತಿರದಲ್ಲೇ
ನಿಂತಿದ್ದಾನೆ. ಬಾಧೆಯನ್ನು ತಾಳ್ಮೆಯಿಂದ ಸಹಿಸಿಕೊ 1
ಳ್ಳುವ ವಿಷಯದಲ್ಲಿ ಕರ್ತನ ಹೆಸರಿನಿಂದ ಮಾತಾ
ಡಿದ ಪ್ರವಾದಿಗಳನ್ನೇ ಮಾದರಿಮಾಡಿಕೊಳ್ಳಿರಿ. ತಾಳಿ 1
ಕೊಂಡಿರುವವರನ್ನು ಧನ್ಯರೆಂದು ಹೇಳುತ್ತೇವಲ್ಲವೇ.
ನೀವು ಯೋಬನಲ್ಲಿದ್ದ ತಾಳ್ಮೆಯ ವಿಷಯವಾಗಿ
ಕೇಳಿ ಕರ್ತನು ಅವನಿಗೆ ಅಂತ್ಯದಲ್ಲಿ ಮಾಡಿದ್ದನ್ನು
ನೋಡಿ ಕರ್ತನು ಕರುಣಾಸಾಗರನೂ ದಯಾಳುವೂ
ಆಗಿದ್ದಾನೆಂದು ತಿಳಿದಿದ್ದೀರಷ್ಟೆ.

ಬೇರೆ ಬೇರೆ ವಿಷಯಗಳನ್ನು ಕುರಿತದ್ದು.

ಮುಖ್ಯವಾಗಿ, ನನ್ನ ಸಹೋದರರೇ, ಆಣೆ ಇಡ 1
ಲೇ ಬೇಡಿರಿ; ಆಕಾಶದ ಮೇಲಾಗಲಿ ಭೂಮಿಯ
ಮೇಲಾಗಲಿ ಇನ್ನಾತರ ಮೇಲಾಗಲಿ ಆಣೆ ಇಡಬೇಡಿರಿ.

ಹೌದೆಂದು ಹೇಳಬೇಕಾದರೆ ಹೌದೆನ್ನಿರಿ, ಅಲ್ಲವೆನ್ನ
ಬೇಕಾದರೆ ಅಲ್ಲವೆನ್ನಿರಿ; ಹೀಗಾದರೆ ನೀವು ನ್ಯಾಯ
ವಿಚಾರಣೆಗೆ ಗುರಿಯಾಗುವದಿಲ್ಲ.
13 ನಿಮ್ಮಲ್ಲಿ ಬಾಧೆಪಡುವವನು ಇದ್ದಾನೋ? ಅವನು
ದೇವರನ್ನು ಪ್ರಾರ್ಥಿಸಲಿ. ನಿಮ್ಮಲ್ಲಿ ಸಂತೋಷಪಡು
14 ವವನಿದ್ದಾನೋ? ಅವನು ಕೀರ್ತನೆಹಾಡಲಿ. ನಿಮ್ಮಲ್ಲಿ
ಅಸ್ವಸ್ಥನಾಗಿರುವವನು ಇದ್ದಾನೋ? ಅವನು ಸಭೆಯ
ಹಿರಿಯರನ್ನು ಕರೇಕಳುಹಿಸಲಿ; ಅವರು ಕರ್ತನ
ಹೆಸರಿನಿಂದ ಅವನಿಗೆ ಎಣ್ಣೆಹಚ್ಚಿ ಅವನಿಗೋಸ್ಕರ
15 ದೇವರನ್ನು ಪ್ರಾರ್ಥಿಸಲಿ. ನಂಬಿಕೆಯಿಂದ ಮಾಡಿದ
ಪ್ರಾರ್ಥನೆಯು ರೋಗಿಯನ್ನು ರಕ್ಷಿಸುವದು; ಕರ್ತನು
ಅವನನ್ನು ಎಬ್ಬಿಸುವನು; ಮತ್ತು ಪಾಪಮಾಡಿದವ
16 ನಾಗಿದ್ದರೆ ಅದು ಪರಿಹಾರವಾಗುವದು. ಹೀಗಿರಲು
ನೀವು ಸ್ವಸ್ಥವಾಗಬೇಕಾದರೆ ನಿಮ್ಮ ಪಾಪಗಳನ್ನು
ಒಬ್ಬರಿಗೊಬ್ಬರು ಅರಿಕೆ ಮಾಡಿ ಒಬ್ಬರಿಗೋಸ್ಕರ
ಒಬ್ಬರು ದೇವರನ್ನು ಪ್ರಾರ್ಥಿಸಿರಿ; ನೀತಿವಂತನ
ಅತ್ಯಾಸಕ್ತಿಯುಳ್ಳ ವಿಜ್ಞಾಪನೆಯು ಬಹು ಬಲವಾಗಿದೆ.
ಎಲೀಯನು ನಮ್ಮಂಥ ಸ್ವಭಾವವುಳ್ಳವನಾಗಿದ್ದನು; 17
ಅವನು ಮಳೆಬರಬಾರದೆಂದು ಬಹಳವಾಗಿ ಪ್ರಾರ್ಥಿ
ಸಲು ಮೂರು ವರುಷ ಆರು ತಿಂಗಳ ವರೆಗೂ ಮಳೆ
ಬೀಳಲಿಲ್ಲ. ತಿರಿಗಿ ಅವನು ಪ್ರಾರ್ಥನೆಮಾಡಲು 18
ಆಕಾಶವು ಮಳೆಗರೆಯಿತು, ಭೂಮಿಯು ಬೆಳೆಯಿತು.
ನನ್ನ ಸಹೋದರರೇ, ನಿಮ್ಮಲ್ಲಿ ಒಬ್ಬನು ಸತ್ಯ 19
ಮಾರ್ಗವನ್ನು ತಪ್ಪಿಹೋಗಿರಲಾಗಿ ಮತ್ತೊಬ್ಬನು
ಅವನನ್ನು ಸನ್ಮಾರ್ಗಕ್ಕೆ ತಂದರೆ—ಒಬ್ಬ ಪಾಪಿಯನ್ನು 20
ತಪ್ಪಾದ ಮಾರ್ಗದಿಂದ ತಿರುಗಿಸಿದವನು ಅವನ
ಪ್ರಾಣವನ್ನು ಮರಣಕ್ಕೆ ತಪ್ಪಿಸಿ ಬಹುಪಾಪಗಳನ್ನು
ಮುಚ್ಚಿದವನಾದನೆಂದು ತಿಳುಕೊಳ್ಳಿರಿ.

---

# THE FIRST EPISTLE OF SAINT PETER

# ಪೇತ್ರನು ಬರೆದ ಮೊದಲನೆಯ ಪತ್ರಿಕೆ

ಒಕ್ಕಣೆ.

1 ಯೇಸು ಕ್ರಿಸ್ತನ ಅಪೊಸ್ತಲನಾದ ಪೇತ್ರನು ಪೊಂತ
ಗಲಾತ್ಯ ಕಪ್ಪದೋಕ್ಯ ಆಸ್ಯ ಬಿಥೂನ್ಯ ಎಂಬ ಸೀಮೆಗ
ಳಲ್ಲಿ ಚದರಿರುವಂಥ ಪ್ರವಾಸಿಗಳಾದ ದೇವಜನರಿಗೆ
2 ಅಂದರೆ ಪವಿತ್ರಾತ್ಮನಿಂದ ಪ್ರತಿಷ್ಠಿಸಲ್ಪಟ್ಟವರಾಗಿ
ದೇವರಿಗೆ ವಿಧೇಯರಾಗುವದಕ್ಕೂ ಯೇಸು ಕ್ರಿಸ್ತನ
ರಕ್ತದಿಂದ ಪ್ರೋಕ್ಷಿತರಾಗುವದಕ್ಕೂ ತಂದೆಯಾದ
ದೇವರ ಭವಿಷ್ಯದ್ ಜ್ಞಾನಾನುಸಾರವಾಗಿ ಆರಿಸಿಕೊಳ್ಳ
ಲ್ಪಟ್ಟವರಿಗೆ ಬರೆಯುವದೇನಂದರೆ—ನಿಮಗೆ ಕೃಪೆಯೂ
ಶಾಂತಿಯೂ ಹೆಚ್ಚೆಚ್ಚಾಗಿ ದೊರೆಯಲಿ.

ಕ್ರೈಸ್ತರಿಗೆ ಇರುವ ಉತ್ಕೃಷ್ಟವಾದ ನಿರೀಕ್ಷೆಯನ್ನು
ಕುರಿತದ್ದು.

3 ನಮ್ಮ ಕರ್ತನಾದ ಯೇಸು ಕ್ರಿಸ್ತನ ತಂದೆಯೂ
ದೇವರೂ ಆಗಿರುವಾತನಿಗೆ ಸ್ತೋತ್ರವಾಗಲಿ. ಆತನು
ಯೇಸು ಕ್ರಿಸ್ತನನ್ನು ಸತ್ತವರೊಳಗಿಂದ ಎಬ್ಬಿಸಿದ್ದರಲ್ಲಿ
ತನ್ನ ಮಹಾ ಕರುಣಾನುಸಾರವಾಗಿ 1) ನಮ್ಮನ್ನು
ತಿರಿಗಿ ಜೀವಿಸುವಂತೆ ಮಾಡಿ ಜೀವಕರವಾದ ನಿರೀಕ್ಷೆ
4 ಯನ್ನು ನಮ್ಮಲ್ಲಿ ಹುಟ್ಟಿಸಿ ನಮ್ಮನ್ನು ಲಯ ಕಳಂಕ
ಕ್ಷಯಗಳಿಲ್ಲದ ಬಾಧ್ಯತೆಯನ್ನು ಎದುರುನೋಡು
ವವರನ್ನಾಗಿ ಮಾಡಿದನು. ಆ ಬಾಧ್ಯತೆಯು ನಿಮ
ಗೋಸ್ಕರ ಪರಲೋಕದಲ್ಲಿ ಇಟ್ಟಿರುವದು. ಅಂತ್ಯ 5
ಕಾಲದಲ್ಲಿ ಪ್ರತ್ಯಕ್ಷವಾಗುವದಕ್ಕೆ ಸಿದ್ಧವಾಗಿರುವ
ರಕ್ಷಣೆಯು ನಂಬುವವರಾದ ನಿಮಗೆ ದೊರೆಯ
ಬೇಕೆಂದು ದೇವರು ನಿಮ್ಮನ್ನು ತನ್ನ ಬಲದಿಂದ ಕಾಯು
ತ್ತಾನೆ. ನೀವು ಸದ್ಯಕ್ಕೆ ಸ್ವಲ್ಪಕಾಲ ದೇವರ ಚಿತ್ತಾನು 6
ಸಾರ ನಾನಾ ಕಷ್ಟಗಳಲ್ಲಿದ್ದು ದುಃಖಿಸುವವರಾಗಿ
ದ್ದರೂ ಆ ಪದವಿಯನ್ನು ಆಲೋಚಿಸಿ ಹರ್ಷಿಸುವವ
ರಾಗಿದ್ದೀರಿ. ಭಂಗಾರವು ನಾಶವಾಗುವಂಥದಾಗಿದ್ದರೂ 7
ಅದನ್ನು ಬೆಂಕಿಯಲ್ಲಿ ಪುಟಾಹಾಕಿ ಶೋಧಿಸುವ
ದುಂಟಷ್ಟೆ. ಭಂಗಾರಕ್ಕಿಂತ ಅಮೂಲ್ಯವಾಗಿರುವ ನಿಮ್ಮ
ನಂಬಿಕೆಯು ಈ ಕಷ್ಟಗಳಿಂದ ಶೋಧಿತವಾಗಿ
ಯೇಸು ಕ್ರಿಸ್ತನು ಪ್ರತ್ಯಕ್ಷನಾಗುವಾಗ ನಿಮಗೆ
ಕೀರ್ತಿ ಪ್ರಭಾವ ಮಾನಗಳನ್ನು ಉಂಟುಮಾಡುವದು.
ನೀವು ಆತನನ್ನು ಕಣ್ಣಾರೆ ನೋಡಲಿಲ್ಲವಾದರೂ 8-9
ಆತನನ್ನು ಪ್ರೀತಿಸುತ್ತೀರಿ. ನೀವು ಈಗ ಆತನನ್ನು
ಕಾಣದಿದ್ದರೂ ಆತನಲ್ಲಿ ನಂಬಿಕೆಯಿಟ್ಟು ನಿಮ್ಮ ನಂಬಿ
ಕೆಯ ಅಂತ್ಯಫಲವಾಗಿರುವ ಆತ್ಮರಕ್ಷಣೆಯನ್ನು
ಹೊಂದುವವರಾಗಿ ಹೇಳಲಶಕ್ಯವಾದಂಥ ಪ್ರಭಾವವುಳ್ಳ
ಸಂತೋಷದಿಂದ ಹರ್ಷಿಸುತ್ತೀರಿ.
ದೇವರು ನಿಮಗೆ ತೋರಿಸಿರುವ ಕೃಪೆಯನ್ನು ಕುರಿ 10
ತು ಮುಂತಿಳಿಸಿದ ಪ್ರವಾದಿಗಳು ಈ ರಕ್ಷಣೆಯ ವಿಷ

1) ಅಥವಾ, ನಮಗೆ ಪುನರ್ಜನ್ಮವನ್ನು ಅನುಗ್ರಹಿಸಿ.

ಯದಲ್ಲಿ ಸೂಕ್ಷ್ಮವಾಗಿ ವಿಚಾರಿಸಿ ಪರಿಶೋಧನೆಮಾಡಿ
11 ದರು. ತಮ್ಮಲ್ಲಿದ್ದ ಕ್ರಿಸ್ತನ ಆತ್ಮನು ಕ್ರಿಸ್ತನಿಗೆ
ಬರಬೇಕಾದ ಬಾಧೆಗಳನ್ನೂ ಅವುಗಳ ತರುವಾಯ
ಉಂಟಾಗುವ ಪ್ರಭಾವವನ್ನೂ ಮುಂದಾಗಿ ತಿಳಿಸಿದಾಗ
ಆತನು ಯಾವ ಕಾಲವನ್ನು ಇಲ್ಲವೆ ಎಂಥ ಕಾಲ
ವನ್ನು ಸೂಚಿಸುವನೆಂಬದನ್ನು ಅವರು ಪರಿಶೋಧನೆ
12 ಮಾಡಿದರು. ಈ ಸಂಗತಿಗಳನ್ನು ಮುಂತಿಳಿಸುವದರಲ್ಲಿ
ತಮಗೋಸ್ಕರವಲ್ಲ ನಿಮಗೋಸ್ಕರವೇ ಸೇವೆಮಾಡು
ವವರಾಗಿದ್ದರೆಂಬದು ಅವರಿಗೆ ಪ್ರಕಟವಾಯಿತು.
ಅವರು ಮುಂದಾಗಿ ಹೇಳಿದ ಸಂಗತಿಗಳೇ ಈಗ ಸಂಭವಿ
ಸಿದವು ಎಂಬ ವರ್ತಮಾನವು ಪರಲೋಕದಿಂದ ಕಳು
ಹಿಸಲ್ಪಟ್ಟ ಪವಿತ್ರಾತ್ಮನ ಬಲದಿಂದ ನಿಮಗೆ ಸುವಾರ್ತೆ
ಯನ್ನು ಸಾರಿದವರ ಮೂಲಕ ನಿಮಗೆ ಪ್ರಸಿದ್ಧಿಮಾಡ
ಲ್ಪಟ್ಟಿದೆ. ದೇವದೂತರಿಗೂ ಈ ಸಂಗತಿಗಳನ್ನು
ಲಕ್ಷ್ಯವಿಟ್ಟು ನೋಡಬೇಕೆಂಬ ಅಪೇಕ್ಷೆ ಉಂಟು.

ಕ್ರೈಸ್ತರು ತಮಗುಂಟಾದ ಘನವಾದ ಸ್ಥಿತಿಯನ್ನೂ ಪರಲೋಕ ನಿರೀಕ್ಷೆಯನ್ನೂ ಲಕ್ಷಿಸಿ ಯೋಗ್ಯರಾಗಿ ನಡೆಯಬೇಕೆಂಬ ಬೋಧನೆ.

13 ಆದದರಿಂದ ನೀವು ಮನಸ್ಸಿನ ನಡುವನ್ನು ಕಟ್ಟಿ
ಕೊಂಡು ಸ್ವಸ್ಥಚಿತ್ತರಾಗಿದ್ದು ಯೇಸು ಕ್ರಿಸ್ತನು
ಪ್ರತ್ಯಕ್ಷನಾಗುವಾಗ ನಿಮಗೆ ದೊರಕುವ ಭಾಗ್ಯದ
ಮೇಲೆ ನಿಮ್ಮ ನಿರೀಕ್ಷೆಯನ್ನು ಸಂಪೂರ್ಣವಾಗಿ ಇಡಿರಿ.
14 ನೀವು ಮುಂಚೆ ಅಜ್ಞಾನಿಗಳಾಗಿದ್ದಾಗ ನಿಮಗಿದ್ದ
ದುರಾಶೆಗಳನ್ನು ಅನುಸರಿಸಿ ನಡೆಯುವವರಾಗಿರದೆ
15 ನಿಮ್ಮನ್ನು ಕರೆದಾತನು ಪರಿಶುದ್ಧನಾಗಿರುವ ಪ್ರಕಾ
ರವೇ ನೀವೂ ವಿಧೇಯರಿಗೆ ತಕ್ಕಂತೆ ನಿಮ್ಮ ಎಲ್ಲಾ ನಡ
16 ವಳಿಕೆಯಲ್ಲಿ ಪರಿಶುದ್ಧರಾಗಿರಿ. ನಾನು ಪರಿಶುದ್ಧ
ನಾಗಿರುವದರಿಂದ ನೀವೂ ಪರಿಶುದ್ಧರಾಗಿರಬೇಕು
ಎಂದು ಬರೆದದೆಯಲ್ಲಾ.
17 ಪ್ರತಿಯೊಬ್ಬನ ಕೆಲಸವನ್ನು ನೋಡಿ ಪಕ್ಷಪಾತ
ವಿಲ್ಲದೆ ತೀರ್ಪುಮಾಡುವಾತನನ್ನು ನೀವು ತಂದೆ
ಯೆಂದು ಕರೆಯುವವರಾಗಿರಲಾಗಿ ಈ ಲೋಕದಲ್ಲಿ
ನಿಮ್ಮ ಪ್ರವಾಸಕಾಲವನ್ನು ಭಯಭಕ್ತಿಯುಳ್ಳವರಾಗಿ
18 ಕಳೆಯಿರಿ. ನಿಮ್ಮ ಹಿರಿಯರು ಕಲಿಸಿಕೊಟ್ಟ ವ್ಯರ್ಥ
ವಾದ ನಡವಳಿಕೆಯಿಂದ ನಿಮಗೆ ಬಿಡುಗಡೆಯಾ
ದದ್ದು ಬೆಳ್ಳಿ ಭಂಗಾರ ಮೊದಲಾದ ನಶಿಸಿಹೋಗುವ
19 ವಸ್ತುಗಳಿಂದಲ್ಲ, ಪೂರ್ಣಾಂಗವಾದ ನಿಷ್ಕಳಂಕ ಯಜ್ಞ
ದ ಕುರಿಯ ರಕ್ತದಿಂದಲೋ ಎಂಬಂತೆ ಕ್ರಿಸ್ತನ
ಅಮೂಲ್ಯವಾದ ರಕ್ತದಿಂದಲೇ ಎಂದು ಬಲ್ಲಿರಲ್ಲವೇ.
20 ಆತನು ಜಗದುತ್ಪತ್ತಿಗೆ ಮೊದಲೇ ಗೊತ್ತುಮಾಡಲ್ಪಟ್ಟು
21 ಅಂತ್ಯಕಾಲದಲ್ಲಿ ನಿಮಗಾಗಿ ಪ್ರತ್ಯಕ್ಷನಾದನು. ಆತ
ನನ್ನು ಸತ್ತವರೊಳಗಿಂದ ಎಬ್ಬಿಸಿ ಆತನಿಗೆ ಪ್ರಭಾವ
ವನ್ನು ಕೊಟ್ಟ ದೇವರಲ್ಲಿ ನೀವು ಆತನ ಮೂಲಕ
ನಂಬಿಕೆಯಿಟ್ಟವರಾದಿರಷ್ಟೆ. ಹೀಗಿರಲಾಗಿ ನಿಮ್ಮ
ನಂಬಿಕೆಯೂ ನಿರೀಕ್ಷೆಯೂ ದೇವರಲ್ಲಿಯೇ ನೆಲೆ
ಗೊಂಡವೆ.
22 ನೀವು ಸತ್ಯೋಪದೇಶಕ್ಕೆ ವಿಧೇಯರಾಗಿದ್ದು ನಿಮ್ಮ
ಆತ್ಮಗಳನ್ನು ಶುದ್ಧಮಾಡಿಕೊಂಡದ್ದರಿಂದ ನಿಷ್ಕಪಟ
ವಾದ ಸಹೋದರಸ್ನೇಹವುಳ್ಳವರಾಗಿರತಕ್ಕದ್ದು. ಹೀಗಿ
ರಲಾಗಿ ಒಬ್ಬರನ್ನೊಬ್ಬರು ಹೃದಯಪೂರ್ವಕವಾಗಿಯೂ
ಯಥಾರ್ಥವಾಗಿಯೂ ಪ್ರೀತಿಸಿರಿ. ನೀವು ಪುನರ್ಜನ್ಮ
ಹೊಂದಿದವರಾಗಿದ್ದೀರಲ್ಲಾ; ಆ ಜನ್ಮವು ನಾಶವಾ
ಗುವ ಬೀಜದಿಂದ ಉಂಟಾದದ್ದಲ್ಲ, ನಾಶವಾಗದ ಬೀಜ
ದಿಂದಲೇ ಉಂಟಾದದ್ದು. ಅದು ದೇವರ ಸದಾಜೀವ
ವುಳ್ಳ ವಾಕ್ಯದ ಮೂಲಕವಾಗಿ ಉಂಟಾಯಿತು.

ನರಜಾತಿಯೆಲ್ಲಾ ಹುಲ್ಲಿನ ಹಾಗಿದೆ,
ಅದರ ಪ್ರಭಾವವೆಲ್ಲಾ ಹುಲ್ಲಿನ ಹೂವಿನಂತದೆ.
ಹುಲ್ಲು ಒಣಗಿಹೋಗುವದು, ಹೂವು ಉದುರಿ
ಹೋಗುವದು;
ಕರ್ತನ ಮಾತೋ ಸದಾಕಾಲವೂ ಇರುವದು

ಎಂದು ಹೇಳಿದೆಯಷ್ಟೆ. ಆ ಮಾತು ಯಾವದಂದರೆ
ನಿಮಗೆ ಸಾರಲ್ಪಟ್ಟ ಸುವಾರ್ತಾವಾಕ್ಯವೇ.

ಆದಕಾರಣ ಎಲ್ಲಾ ಕೆಟ್ಟತನವನ್ನೂ ಎಲ್ಲಾ
ವಂಚನೆಯನ್ನೂ ಕಪಟವನ್ನೂ ಹೊಟ್ಟೆಕಿಚ್ಚನ್ನೂ ಎಲ್ಲಾ
ತರದ ನಿಂದೆಯನ್ನೂ ವಿಸರ್ಜಿಸಿ ಹಸುಮಕ್ಕಳಂತೆ
ಪಾರಮಾರ್ಥಿಕವಾದ ಶುದ್ಧ ಹಾಲನ್ನು ಬಯಸಿರಿ;
ಅದರಿಂದ ಬೆಳೆಯುತ್ತಾ ರಕ್ಷಣೆಯನ್ನು ಹೊಂದುವಿರಿ;
ಕರ್ತನು ದಯಾಳುವೆಂದು ನೀವು ಅನುಭವದಿಂದ
ತಿಳಿದುಕೊಂಡಿದ್ದೀರಲ್ಲವೋ ? ನೀವು ಜೀವವುಳ್ಳ ಕಲ್ಲಾ
ಗಿರುವ ಆತನನ್ನು ಸೇರಿಕೊಂಡಿದ್ದೀರಿ. ಆ ಕಲ್ಲನ್ನು
ಮನುಷ್ಯರು ನಿರಾಕರಿಸಿದರೂ ದೇವರು ಅದನ್ನು ಆಯ
ಲ್ಪಟ್ಟದ್ದೂ ಮಾನ್ಯವಾದದ್ದೂ ಎಂದು ಎಣಿಸಿದನು.
ನೀವು ಸಹ ಜೀವವುಳ್ಳ ಕಲ್ಲುಗಳಾಗಿದ್ದು ಆತ್ಮ
ಸಂಬಂಧವಾದ ಮಂದಿರವಾಗಲಿಕ್ಕೆ ಕಟ್ಟಲ್ಪಡುತ್ತಾ
ಇದ್ದೀರಿ, ಮತ್ತು ಯೇಸು ಕ್ರಿಸ್ತನ ಮೂಲಕ ದೇವ
ರಿಗೆ ಸಮರ್ಪಕವಾದ ಆತ್ಮೀಯಯಜ್ಞಗಳನ್ನು
ಸಮರ್ಪಿಸುವದಕ್ಕೆ ಪವಿತ್ರ ಯಾಜಕವರ್ಗದವರಾಗಿ
ದ್ದೀರಿ.

ಇಗೋ, ಚೀಯೋನಿನಲ್ಲಿ ಮೂಲೆಗಲ್ಲನ್ನು
ಇಡುತ್ತೇನೆ;
ಅದು ಆಯಲ್ಪಟ್ಟದ್ದು, ಮಾನ್ಯವಾದದ್ದು;
ಅದರ ಮೇಲೆ ನಂಬಿಕೆಯಿಡುವವನು ಆಶಾ
ಭಂಗಪಡುವದೇ ಇಲ್ಲ

ಎಂದು ಶಾಸ್ತ್ರದಲ್ಲಿ ಬರೆದದೆ. ಆದದರಿಂದ ನಂಬುವ
ವರಾದ ನಿಮಗೇ ಈ ಮಾನವುಂಟು. ನಂಬದೆಯಿರು
ವವರಿಗೋ —

ಮನೆಕಟ್ಟುವವರು ಬೇಡವೆಂದು ಬಿಟ್ಟ ಕಲ್ಲೇ
ಮುಖ್ಯವಾದ ಮೂಲೆಗಲ್ಲಾಯಿತು

ಎಂತಲೂ

ಅದು ಎಡವುವ ಕಲ್ಲು ಮುಗ್ಗರಿಸುವ ಬಂಡೆ

ಎಂತಲೂ ಬರೆದಿರುವ ಮಾತು ಸರಿಬೀಳುತ್ತದೆ. ಅವರು
ದೇವರ ವಾಕ್ಯವನ್ನು ನಂಬಲೊಲ್ಲದೆ ಇರುವದರಿಂದ
ಆ ಕಲ್ಲನ್ನು ಎಡವಿ ಬೀಳುತ್ತಾರೆ; ಅದಕ್ಕಾಗಿಯೇ
ಅವರು ನೇಮಕವಾದರು. ನೀವಾದರೋ ನಿಮ್ಮ
ನ್ನು ಕತ್ತಲೆಯೊಳಗಿಂದ ಕರೆದು ತನ್ನ ಆಶ್ಚರ್ಯ
ಕರವಾದ ಬೆಳಕಿನಲ್ಲಿ ಸೇರಿಸಿದಾತನ ಗುಣಾತಿಶಯಗ
ಳನ್ನು ಪ್ರಚಾರಮಾಡುವವರಾಗುವಂತೆ ದೇವರಾದು
ಕೊಂಡ ಜನಾಂಗವೂ ರಾಜವಂಶಸ್ಥರಾದ ಯಾಜ

ಕರೂ ಮಿಾಸಲಾದ ಜನವೂ ದೇವರ ಸ್ವಕೀಯ
10 ಪ್ರಜೆಯೂ ಆಗಿದ್ದೀರಿ. ಮೊದಲು ನೀವು ಪ್ರಜೆ
ಯಾಗಿರಲಿಲ್ಲ, ಈಗ ದೇವರ ಪ್ರಜೆಯಾಗಿದ್ದೀರಿ; ಮೊ
ದಲು ವಾತ್ಸಲ್ಯಹೊಂದಿರಲಿಲ್ಲ, ಈಗ ವಾತ್ಸಲ್ಯಹೊಂದಿದ
ವರಾಗಿದ್ದೀರಿ.

ಪ್ರಜೆಗಳೂ ಸೇವಕರೂ ಗಂಡಹೆಂಡರೂ ನಡೆಯಬೇಕಾದ ರೀತಿ.

11 ಪ್ರಿಯರೇ, ಪ್ರವಾಸಿಗಳೂ ಪರದೇಶಸ್ಥರೂ ಆಗಿ
ರುವ ನೀವು ನಿಮ್ಮ ಆತ್ಮದ ಮೇಲೆ ಯುದ್ಧಮಾಡುವ
ಶಾರೀರಿಕ ಅಭಿಲಾಷೆಗಳಿಗೆ ದೂರವಾಗಿರಬೇಕೆಂದು
12 ನಿಮ್ಮನ್ನು ಎಚ್ಚರಿಸುತ್ತೇನೆ. ನಿಮ್ಮ ನಡವಳಿಕೆಯು
ಅನ್ಯಜನರ ಮಧ್ಯದಲ್ಲಿ ಯೋಗ್ಯವಾಗಿರಲಿ; ಆಗ
ಅವರು ಯಾವ ವಿಷಯದಲ್ಲಿ ನಿಮ್ಮನ್ನು ಅಕ್ರಮ
ಗಾರರೆಂದು ನಿಂದಿಸುತ್ತಾರೋ ಆ ವಿಷಯದಲ್ಲಿಯೇ
ನಿಮ್ಮ ಸತ್ಕ್ರಿಯೆಗಳನ್ನು ಕಣ್ಣಾರೆ ಕಂಡು 1)ವಿಚಾ
ರಣೆಯ ದಿನದಲ್ಲಿ ದೇವರನ್ನು ಕೊಂಡಾಡುವರು.
13 ಮನುಷ್ಯರು ನೇಮಿಸಿರುವ ಯಾವ ಅಧಿಕಾರ
14 ಕ್ಕಾದರೂ ಕರ್ತನ ನಿಮಿತ್ತ ಅಧೀನರಾಗಿರಿ. ಅರ
ಸನು ಸರ್ವಾಧಿಕಾರಿ ಎಂತಲೂ ಬೇರೆ ಅಧಿಪತಿಗಳು
ಕೆಟ್ಟ ನಡತೆಯುಳ್ಳವರನ್ನು ದಂಡಿಸುವದಕ್ಕೂ ಒಳ್ಳೇ
ನಡತೆಯುಳ್ಳವರನ್ನು ಪ್ರೋತ್ಸಾಹಪಡಿಸುವದಕ್ಕೂ ಅರ
ಸನಿಂದ ಕಳುಹಿಸಲ್ಪಟ್ಟವರೆಂತಲೂ ತಿಳಿದು ಅವರಿಗೆ
15 ಅಧೀನರಾಗಿರಿ. ತಿಳಿಯದೆ ಮಾತಾಡುವ ಮೂಢ
ಜನರ ಬಾಯನ್ನು ನೀವು ಒಳ್ಳೇ ನಡತೆಯಿಂದ ಕಟ್ಟ
16 ಬೇಕೆಂಬದೇ ದೇವರ ಚಿತ್ತ. ಸ್ವತಂತ್ರರಂತೆ ನಡೆದು
ಕೊಳ್ಳಿರಿ; ಆದರೆ ಕೆಟ್ಟತನವನ್ನು ಮರೆಮಾಜುವದಕ್ಕೆ
ನಿಮ್ಮ ಸ್ವಾತಂತ್ರ್ಯವನ್ನು ಉಪಯೋಗಿಸಬೇಡಿರಿ;
17 ನೀವು ದೇವರ ದಾಸರಾಗಿದ್ದೀರಲ್ಲಾ. ಎಲ್ಲರನ್ನೂ
ಸನ್ಮಾನಿಸಿರಿ. ಸಹೋದರರನ್ನು ಪ್ರೀತಿಸಿರಿ. ದೇವರಿಗೆ
ಭಯಪಡಿರಿ. ಅರಸನನ್ನು ಸನ್ಮಾನಿಸಿರಿ.
18 ಸೇವಕರೇ, ನಿಮ್ಮ ಯಜಮಾನರಿಗೆ ಪೂರ್ಣ
ಭಯದಿಂದ ಅಧೀನರಾಗಿರಿ. ಒಳ್ಳೆಯವರೂ ಸಾತ್ವಿ
ಕರೂ ಆಗಿರುವವರಿಗೆ ಮಾತ್ರವಲ್ಲದೆ ವಕ್ರಬುದ್ಧಿಯು
19 ಳ್ಳವರಿಗೂ ವಿಧೇಯರಾಗಿರಿ. ಒಬ್ಬನು ಅನ್ಯಾಯ
ವಾಗಿ ಬಾಧೆಪಡುವವನಾಗಿದ್ದು ದೇವರು ನೋಡುತ್ತಾ
ನೆಂದು ಅರಿತು ಆ ಕಷ್ಟವನ್ನು ಸಹಿಸಿಕೊಂಡರೆ ಅದು
20 ಶ್ಲಾಘ್ಯವಾಗಿದೆ. ತಪ್ಪುಮಾಡಿ ಗುದ್ದು ತಿನ್ನುವದರಲ್ಲಿ
ನೀವು ತಾಳ್ಮೆಯಿಂದಿದ್ದರೆ ಅದರಿಂದೇನು ಕೀರ್ತಿ?
ಆದರೆ ಒಳ್ಳೇದನ್ನು ಮಾಡಿ ಬಾಧೆಪಡುವದರಲ್ಲಿ
ನೀವು ತಾಳ್ಮೆಯಿಂದಿದ್ದರೆ ಅದು ದೇವರ ಮುಂದೆ
21 ಶ್ಲಾಘ್ಯವಾಗಿದೆ. ಇದಕ್ಕಾಗಿಯೇ ನೀವು ಕರೆಯ
ಲ್ಪಟ್ಟಿರಿ; ಕ್ರಿಸ್ತನು ಸಹ ನಿಮಗೋಸ್ಕರ ಬಾಧೆ
ಯನ್ನನುಭವಿಸಿ ನೀವು ತನ್ನ ಹೆಜ್ಜೆಯ ಜಾಡಿನಲ್ಲಿ
ನಡೆಯಬೇಕೆಂದು ಮಾದರಿಯನ್ನು ತೋರಿಸಿ ಹೋ
22 ದನು. ಆತನು ಯಾವ ಪಾಪವನ್ನೂ ಮಾಡಲಿಲ್ಲ,
ಆತನ ಬಾಯಲ್ಲಿ ಯಾವ ವಂಚನೆಯೂ ಸಿಕ್ಕಲಿಲ್ಲ;
ಬೈಯುವವರನ್ನು ಆತನು ಪ್ರತಿಯಾಗಿ ಬೈಯಲಿಲ್ಲ; 23
ಆತನು ಬಾಧೆಯನ್ನನುಭವಿಸಿದಾಗ ಯಾರನ್ನೂ ಬೆದ
ರಿಸದೆ ನ್ಯಾಯವಾಗಿ ತೀರ್ಪುಮಾಡುವಾತನಿಗೆ ತನ್ನ
ಕಾರ್ಯವನ್ನು ಒಪ್ಪಿಸಿದನು. ನಾವು ಪಾಪದ 24
ಪಾಲಿಗೆ ಸತ್ತು ನೀತಿವಂತರಾಗಿ ಜೀವಿಸುವಂತೆ
ಆತನು ನಮ್ಮ ಪಾಪಗಳನ್ನು ತಾನೇ ತನ್ನ ದೇಹ
ದಲ್ಲಿ ಹೊತ್ತುಕೊಂಡು ಮರಣದ ಕಂಬವನ್ನು ಏರಿ
ದನು; ಆತನ ಬಾಸುಂಡೆಗಳಿಂದ ನಿಮಗೆ ಗುಣವಾ
ಯಿತು. ನೀವು ಕುರಿಗಳಂತೆ ದಾರಿತಪ್ಪಿ ತೊಳಲು 25
ವವರಾಗಿದ್ದಿರಿ, ಆದರೆ ಈಗ ನೀವು ತಿರುಗಿಕೊಂಡು
ನಿಮ್ಮ ಆತ್ಮಗಳನ್ನು ಕಾಯುವ ಕುರುಬನೂ ಅಧ್ಯ
ಕ್ಷನೂ ಆಗಿರುವಾತನ ಬಳಿಗೆ ಬಂದಿದ್ದೀರಿ.

3 ಅದೇ ರೀತಿಯಾಗಿ ಸ್ತ್ರೀಯರೇ, ನಿಮ್ಮ ಗಂಡಂದಿ
ರಿಗೆ ಅಧೀನರಾಗಿರಿ. ಅವರಲ್ಲಿ ಕೆಲವರು ದೇವರ 2
ವಾಕ್ಯಕ್ಕೆ ಅವಿಧೇಯರಾಗಿದ್ದರೂ ನೀವು ನಿರ್ಮಲರಾ
ಗಿಯೂ ಭಯಭರಿತರಾಗಿಯೂ ನಡೆದುಕೊಳ್ಳುವದನ್ನು
ಅವರು ನೋಡಿ ವಾಕ್ಯೋಪದೇಶವಿಲ್ಲದೆ ತಮ್ಮ
ಹೆಂಡತಿಯರಾದ ನಿಮ್ಮ ನಡತೆಯಿಂದಲೇ ಸನ್ಮಾರ್ಗಕ್ಕೆ
ಬಂದಾರು. ಜಡೆಹೆಣೆದುಕೊಳ್ಳುವದು ಚಿನ್ನದ ಒಡವೆ 3
ಗಳನ್ನು ಇಟ್ಟುಕೊಳ್ಳುವದು ವಸ್ತ್ರಗಳನ್ನು ಧರಿಸಿ
ಕೊಳ್ಳುವದು ಈ ಮೊದಲಾದ ಹೊರಗಣ ಶೃಂಗಾರವೇ
ನಿಮ್ಮ ಅಲಂಕಾರವಾಗಿರಬಾರದು. ಸಾತ್ವಿಕವಾದ 4
ಶಾಂತಮನಸ್ಸು ಎಂಬ ಒಳಗಣ ಭೂಷಣವೇ ನಿಮ್ಮ
ಅಲಂಕಾರವಾಗಿರಲಿ. ಇದು ಶಾಶ್ವತವಾದದ್ದೂ ದೇವರ
ದೃಷ್ಟಿಗೆ ಬಹು ಬೆಲೆಯುಳ್ಳದ್ದೂ ಆಗಿದೆ. ಪೂರ್ವ 5
ಕಾಲದಲ್ಲಿ ದೇವರ ಮೇಲೆ ನಿರೀಕ್ಷೆಯಿಟ್ಟ ಭಕ್ತೆಯ
ರಾದ ಸ್ತ್ರೀಯರು ಸಹ ಹೀಗೆಯೇ ತಮ್ಮನ್ನು ಅಲಂಕ
ರಿಸಿಕೊಂಡರು. ಅವರು ತಮ್ಮ ತಮ್ಮ ಗಂಡಂದಿರಿಗೆ
2)ಅಧೀನರಾಗಿದ್ದು ಯಾವ ಭೀತಿಗೂ ಗಾಬರಿಪಡದೆ
ಒಳ್ಳೇದನ್ನೇ ಮಾಡುವವರಾಗಿದ್ದರು. ಸಾರಳು ಹಾಗೆ 6
ಯೇ ಅಬ್ರಹಾಮನಿಗೆ ವಿಧೇಯಳಾಗಿದ್ದು ಅವನನ್ನು
ಯಜಮಾನ ಎಂದು ಕರೆದಳು ಎಂದು ಬರೆದದೆ.
ನೀವು ಸಾರಳ ಕುಮಾರ್ತೆಗಳಾಗಿದ್ದೀರಲ್ಲಾ.
ಅದೇ ರೀತಿಯಾಗಿ ಪುರುಷರೇ, ಸ್ತ್ರೀಯು ಪುರುಷ 7
ನಿಗಿಂತ ಬಲಹೀನಳೆಂಬದನ್ನು ಜ್ಞಾಪಕಮಾಡಿಕೊಂಡು
ನಿಮ್ಮ ಹೆಂಡತಿಯರ ಸಂಗಡ ವಿವೇಕದಿಂದ ಒಗತನಮಾ
ಡಿರಿ. ಅವರು ಜೀವವರಕ್ಕೆ ನಿಮ್ಮೊಂದಿಗೆ ಬಾಧ್ಯರಾಗಿ
ದ್ದಾರೆಂದು ತಿಳಿದು ಅವರಿಗೆ ಮಾನವನ್ನು ಸಲ್ಲಿಸಿರಿ.
ಹೀಗೆ ನಡೆದರೆ ನಿಮ್ಮ ಪ್ರಾರ್ಥನೆಗಳಿಗೆ ಅಡ್ಡಿಯಿರುವ
ದಿಲ್ಲ.

ಕ್ರೈಸ್ತರೊಳಗೆ ಪರಸ್ಪರ ಪ್ರೀತಿಯೂ ಹಿಂಸೆಯ ಕಾಲದಲ್ಲಿ
ಶಾಂತಮನಸ್ಸೂ ಇರಬೇಕಾದದ್ದು.

ಕಡೆಗೆ ನೀವೆಲ್ಲರೂ ಏಕಮನಸ್ಸುಳ್ಳವರಾಗಿರಿ; 8
ಪರರ ಸುಖದುಃಖಗಳಲ್ಲಿ ಸೇರುವವರಾಗಿರಿ; ಅಣ್ಣ
ತಮ್ಮಂದಿರಂತೆ ಒಬ್ಬರನ್ನೊಬ್ಬರು ಪ್ರೀತಿಸಿರಿ; ಕರುಣೆ

1) ಅಥವಾ, ದೇವರು ದರ್ಶನಕೊಡುವ ದಿನದಲ್ಲಿ. 2) ಅಥವಾ, ಅಧೀನರಾಗಿದ್ದರು. ಸಾರಳು ಹಾಗೆಯೇ . . . ಕರೆದಳು. ನೀವು ಒಳ್ಳೇದನ್ನು ಮಾಡುವವರಾಗಿ ಯಾವ ಭೀತಿಗೂ ಗಾಬರಿಪಡದೆ ಇದ್ದರೆ ನೀವು ಸಾರಳ ಕುಮಾರ್ತೆಯರೇ.

9 ಯೂ ದೀನಭಾವವೂ ಉಳ್ಳವರಾಗಿರಿ. ಅಪಕಾರಕ್ಕೆ
ಅಪಕಾರವನ್ನು ನಿಂದೆಗೆ ನಿಂದೆಯನ್ನು ಮಾಡದೆ ಆಶೀ
ರ್ವದಿಸಿರಿ. ಇದಕ್ಕಾಗಿ ದೇವರು ನಿಮ್ಮನ್ನು ಕರೆದ
ನಲ್ಲಾ; ಹೀಗೆ ಮಾಡುವದಾದರೆ ನೀವು ಆಶೀರ್ವಾದ
ವನ್ನು ಬಾಧ್ಯವಾಗಿ ಹೊಂದುವಿರಿ.

10 ಜೀವದಲ್ಲಿ ಸಂತೋಷಪಟ್ಟು
ಸುದಿನಗಳನ್ನು ನೋಡುವದಕ್ಕೆ ಇಷ್ಟವುಳ್ಳವನು
ಕೆಟ್ಟದ್ದನ್ನು ನುಡಿಯದಂತೆ ತನ್ನ ನಾಲಿಗೆ
ಯನ್ನೂ
ವಂಚನೆಯ ಮಾತುಗಳನ್ನಾಡದಂತೆ ತುಟಿಗಳ
ನ್ನೂ ಬಿಗಿಹಿಡಿಯಲಿ.
11 ಅವನು ಕೆಟ್ಟದ್ದನ್ನು ಬಿಟ್ಟು ಒಳ್ಳೇದನ್ನು
ಮಾಡಲಿ;
ಸಮಾಧಾನವನ್ನು ಹಾರೈಸಿ ಅದಕ್ಕೋಸ್ಕರ
ಪ್ರಯತ್ನಪಡಲಿ.
12 ಯಾಕಂದರೆ ಕರ್ತನು ನೀತಿವಂತರನ್ನು ಕಟಾಕ್ಷಿ
ಸುತ್ತಾನೆ,
ಆತನು ಅವರ ವಿಜ್ಞಾಪನೆಗಳಿಗೆ ಕಿವಿಗೊಡು
ತ್ತಾನೆ.
ಕೆಡುಕರಿಗೋ ಕರ್ತನು ಕೋಪದ ಮುಖವುಳ್ಳ
ವನಾಗಿರುತ್ತಾನೆ
ಎಂದು ಬರೆದದೆ.

13 ನೀವು ಒಳ್ಳೇದನ್ನೇ ಮಾಡುವದರಲ್ಲಿ ಆಸಕ್ತರಾಗಿ
ದ್ದರೆ ನಿಮಗೆ ಕೇಡು ಮಾಡುವವರು ಯಾರಿದ್ದಾರೆ?
14 ಒಂದು ವೇಳೆ ನೀತಿಯ ನಿಮಿತ್ತವೇ ಬಾಧೆಪಟ್ಟರೆ
15 ನೀವು ಧನ್ಯರೇ. 1)ಅವರ ಬೆದರಿಸುವಿಕೆಗೆ ಹೆದರದೆ
ಕಳವಳಪಡದೆ ಕ್ರಿಸ್ತನನ್ನು ಕರ್ತನೆಂದು ನಿಮ್ಮ
ಹೃದಯಗಳಲ್ಲಿ ಪ್ರತಿಷ್ಠೆಪಡಿಸಿರಿ. ನಿಮ್ಮಲ್ಲಿರುವ ನಿರೀ
ಕ್ಷೆಗೆ ಆಧಾರವೇನೆಂದು ಕೇಳುವವರೆಲ್ಲರಿಗೆ ಉತ್ತರ
ಹೇಳುವದಕ್ಕೆ ಯಾವಾಗಲೂ ಸಿದ್ಧವಾಗಿರಿ; ಆದರೆ
ಅದನ್ನು ಸಾತ್ವಿಕತ್ವದಿಂದಲೂ ಮನೋಭೀತಿಯಿಂದ
16 ಲೂ ಹೇಳಿರಿ. ಒಳ್ಳೇ ಮನಸ್ಸಾಕ್ಷಿಯುಳ್ಳವರಾಗಿರಿ;
ಆಗ ಕ್ರಿಸ್ತನಲ್ಲಿರುವ ನಿಮ್ಮ ಒಳ್ಳೇ ನಡವಳಿಕೆ
ಯನ್ನು ಕುರಿತು ಬೈಯುವವರು ನಿಮ್ಮನ್ನು ನಿಂದಿಸು
17 ವದಕ್ಕೆ ನಾಚಿಕೆಪಡುವರು. ಕೆಟ್ಟ ನಡತೆಯುಳ್ಳವರಾಗಿ
ಬಾಧೆಪಡುವದಕ್ಕಿಂತ ಒಳ್ಳೇ ನಡತೆಯುಳ್ಳವರಾಗಿ
ಯೇ ದೇವರ ಚಿತ್ತವಿದ್ದರೆ ಬಾಧೆಪಡುವದು ಲೇಸು.
18 ಕ್ರಿಸ್ತನು ಸಹ ನೀತಿವಂತನಾಗಿದ್ದು ಅನೀತಿವಂತರಿಗೋ
ಸ್ಕರ ಪ್ರಾಣಕೊಟ್ಟು ನಮ್ಮನ್ನು ದೇವರ ಬಳಿಗೆ
ಸೇರಿಸುವದಕ್ಕಾಗಿ ಒಂದೇ ಸಾರಿ ಪಾಪನಿವಾರಣಕ್ಕೋ
ಸ್ಕರ ಬಾಧೆಪಟ್ಟು ಸತ್ತನು.

ಆತನು ಶರೀರಸಂಬಂಧದಲ್ಲಿ ಕೊಲ್ಲಲ್ಪಟ್ಟನು,
ಆತ್ಮಸಂಬಂಧದಲ್ಲಿ ತಿರಿಗಿ ಬದುಕುವವನಾದನು.
19 2)ಇದಲ್ಲದೆ ಆತನು ಆತ್ಮರೂಪನಾಗಿ ಸೆರೆಯಲ್ಲಿದ್ದ
20 ಆತ್ಮಗಳ ಬಳಿಗೆ, ಅಂದರೆ ಪೂರ್ವಕಾಲದಲ್ಲಿ ನೋಹ
ನು ನಾವೆಯನ್ನು ಕಟ್ಟಿಸುತ್ತಿರಲು ದೇವರು ದೀರ್ಘ
ಶಾಂತಿಯಿಂದ ಕಾದಿದ್ದಾಗ ಆತನಿಗೆ ಅವಿಧೇಯರಾಗಿದ್ದ
ವರ ಬಳಿಗೆ ಹೋಗಿ ಸುವಾರ್ತೆಯನ್ನು ಸಾರಿದನು. ಆ
ನಾವೆಯೊಳಗೆ ಕೆಲವರು ಅಂದರೆ ಎಂಟೇ ಜನರು ಸೇರಿ
ನೀರಿನ ಮೂಲಕ ರಕ್ಷಣೆಹೊಂದಿದರು. ಆ ನೀರಿಗೆ
ಅನುರೂಪವಾದ ದೀಕ್ಷಾಸ್ನಾನವು ಯೇಸು ಕ್ರಿಸ್ತನ
ಪುನರುತ್ಥಾನದ ಮೂಲಕ ಈಗ ನಮ್ಮನ್ನು ರಕ್ಷಿಸು
ತ್ತದೆ; ಅದು ಮೈಕೊಳೆಯನ್ನು ಹೋಗಲಾಡಿಸುವಂಥ
ದಲ್ಲ, 3)ಒಳ್ಳೇ ಮನಸ್ಸಾಕ್ಷಿ ಬೇಕೆಂದು ದೇವರಿಗೆ
ವಿಜ್ಞಾಪಿಸಿಕೊಳ್ಳುವಂಥದೇ. ಆತನು ಪರಲೋಕಕ್ಕೆ
ಹೋಗಿ ದೇವರ ಬಲಗಡೆಯಲ್ಲಿದ್ದಾನೆ; ದೇವದೂತ
ರೂ ಅಧಿಕಾರಿಗಳೂ ಮಹತ್ವಗಳೂ ಆತನ ಸ್ವಾಧೀನ
ವಾಗಿವೆ.

ಕ್ರೈಸ್ತರು ಅಜ್ಞಾನಿಗಳ ದುಷ್ಕೃತ್ಯಗಳನ್ನು ವಿಸರ್ಜಿಸಿಬಿಟ್ಟು ಬರುವ ನ್ಯಾಯವಿಚಾರಣೆಯನ್ನು ಎದುರುನೋಡುತ್ತಾ ಭಯಭಕ್ತಿಯಿಂದ ನಡೆಯಬೇಕು.

ಕ್ರಿಸ್ತನು ಶರೀರದಲ್ಲಿ ಬಾಧೆಪಟ್ಟದ್ದರಿಂದ ನೀವು
ಸಹ ಆತನಿಗಿದ್ದ ಭಾವವನ್ನೇ ಹಿಡಿದುಕೊಳ್ಳಿರಿ.
ಯಾಕಂದರೆ ಶರೀರದಲ್ಲಿ ಬಾಧೆಪಟ್ಟವನು ಪಾಪದ
ವಶದಿಂದ ತಪ್ಪಿಸಿಕೊಂಡವನಾಗಿ ಉಳಿದಿರುವ ತನ್ನ
ಜೀವಮಾನಕಾಲದಲ್ಲಿ ಇನ್ನೂ ಮನುಷ್ಯರ ಅಭಿ
ಲಾಷೆಗಳ ಪ್ರಕಾರ ಬದುಕದೆ ದೇವರ ಚಿತ್ತದ
ಪ್ರಕಾರ ಬದುಕುವದಕ್ಕೆ ಪ್ರಯತ್ನಮಾಡುವನು.
ನೀವು ಬಂಡುತನ ದುರಾಶೆ ಕುಡಿಕತನ ದುಂದೌತನ
ಮದ್ಯಪಾನಗೋಷ್ಠಿ ಅಸಹ್ಯವಾದ ವಿಗ್ರಹಾರಾಧನೆ ಈ
ಮೊದಲಾದವುಗಳನ್ನು ನಡಿಸುವದರಲ್ಲಿಯೂ ಅನ್ಯ
ಜನರಿಗೆ ಇಷ್ಟವಾದ ದುಷ್ಕೃತ್ಯಗಳನ್ನು ಮಾಡುವದ
ರಲ್ಲಿಯೂ ಕಳೆದುಹೋದ ಕಾಲವೇ ಸಾಕು. ತಾವು
ಮಾಡುವ ಅಪರಿಮಿತವಾದ ಪಟಿಂಗತನದಲ್ಲಿ ನೀವು
ಸೇರದೆ ಇದ್ದದ್ದಕ್ಕೆ ಅವರು ಆಶ್ಚರ್ಯಪಟ್ಟು ನಿಮ್ಮ
ನ್ನು ದೂಷಿಸುತ್ತಾರೆ. ಅವರು ಬದುಕುವವರಿಗೂ
ಸತ್ತವರಿಗೂ ನ್ಯಾಯತೀರಿಸುವದಕ್ಕೆ ಸಿದ್ಧವಾಗಿರುವಾತ
ನಿಗೆ ಉತ್ತರಕೊಡಬೇಕು. ಸತ್ತಿರುವವರು ಮನುಷ್ಯ
ಜಾತಿಗೆ ಬರುವ ಮರಣವೆಂಬ ತೀರ್ಪನ್ನು ಶರೀರಿಗಳಾ
ಗಿದ್ದಾಗ ಹೊಂದಿದರು; 4)ಅವರು ಆತ್ಮಸಂಬಂಧವಾಗಿ
ದೇವರ ಜೀವದಲ್ಲಿ ಪಾಲುಗಾರರಾಗುವಂತೆ ಅವರಿಗೂ
ಸುವಾರ್ತೆಯು ತಿಳಿಸಲ್ಪಟ್ಟಿತು.

ಎಲ್ಲವುಗಳ ಅಂತ್ಯವು ಹತ್ತಿರವಾಗಿದೆ; ಆದದರಿಂದ
ನೀವು ಜಿತೇಂದ್ರಿಯರಾಗಿಯೂ ಪ್ರಾರ್ಥನೆಗೆ ಸಿದ್ಧವಾ
ಗಿರುವಂತೆ ಸ್ವಸ್ಥಚಿತ್ತರಾಗಿಯೂ ಇರ್ರಿ. ಮೊಟ್ಟ
ಮೊದಲು ನಿಮ್ಮನಿಮ್ಮೊಳಗೆ ಯಥಾರ್ಥವಾದ ಪ್ರೀತಿ
ಯಿರಲಿ; ಪ್ರೀತಿಯು ಬಹು ಪಾಪಗಳನ್ನು ಮುಚ್ಚು
ತ್ತದೆ. ಗುಣುಗುಟ್ಟದೆ ಒಬ್ಬರಿಗೊಬ್ಬರು ಅತಿಥಿ
ಸತ್ಕಾರಮಾಡಿರಿ. ನೀವೆಲ್ಲರು ದೇವರ ವಿವಿಧ ಕೃಪೆಯ 1
ವಿಷಯದಲ್ಲಿ ಒಳ್ಳೇ ಮನೆವಾರ್ತೆಯವರಾಗಿದ್ದು

1) ಅಥವಾ, ಅವರು ಯಾವದಕ್ಕೆ ಹೆದರುತ್ತಾರೋ ನೀವು ಅದಕ್ಕೆ ಹೆದರದೆ. 2) ಅಥವಾ, ಇದಲ್ಲದೆ ಸೆರೆಯಲ್ಲಿರುವ ಆತ್ಮಗ
ಪೂರ್ವದಲ್ಲಿ ನಂಬದೆ ಇದ್ದಾಗ, ಅಂದರೆ ನೋಹನು . . . ಕಾದಿದ್ದಾಗ ಆತನು ಆತ್ಮಸ್ವರೂಪನಾಗಿಯೇ ಅವುಗಳ ಬಳಿಗೆ ಹೋ
3) ಅಥವಾ, ಒಳ್ಳೇ ಮನಸ್ಸಾಕ್ಷಿಯಿಂದ. 4) ಅಥವಾ, ಶರೀರವನ್ನು ಬಿಟ್ಟವರಾಗಿ.

ಪ್ರತಿಯೊಬ್ಬನು ತಾನು ಹೊಂದಿದ ಕೃಪಾವರವನ್ನು
11 ಎಲ್ಲರ ಸೇವೆಯಲ್ಲಿ ಉಪಯೋಗಿಸಲಿ. ಒಬ್ಬನು ಬೋ
ಧಿಸುವವನಾದರೆ ದೈವೋಕ್ತಿಗಳನ್ನು ನುಡಿಯುವವ
ನಾಗಿ ಬೋಧಿಸಲಿ. ಒಬ್ಬನು ಸಭೆಯ ಸೇವೆ ಮಾಡು
ವವನಾದರೆ ದೇವರಿಂದ ಶಕ್ತಿಯನ್ನು ಹೊಂದಿದವನಾಗಿ
ಮಾಡಲಿ. ಇದರಿಂದ ಎಲ್ಲಾದರಲ್ಲಿ ಯೇಸು ಕ್ರಿಸ್ತನ
ಮೂಲಕ ದೇವರಿಗೆ ಸ್ತೋತ್ರ ಉಂಟಾಗುವದು.
ಯೇಸು ಕ್ರಿಸ್ತನಿಗೆ ಆಧಿಪತ್ಯವೂ ಘನವೂ ಯುಗ
ಯುಗಾಂತರಗಳಲ್ಲಿಯೂ ಇರುವವು. ಆಮೆನ್.
12 ಪ್ರಿಯರೇ, ನೀವು ಪರಿಶೋಧನೆಗಾಗಿ ಪುಟಕ್ಕೆ ಹಾಕ
ಲ್ಪಟ್ಟದ್ದಕ್ಕೆ ಆಶ್ಚರ್ಯಪಡಬೇಡಿರಿ; ವಿಪರೀತವಾದ
13 ಸಂಗತಿ ಸಂಭವಿಸಿತೆಂದು ಯೋಚಿಸಬೇಡಿರಿ. ಆದರೆ
ನೀವು ಎಷ್ಟರ ಮಟ್ಟಿಗೂ ಕ್ರಿಸ್ತನ ಬಾಧೆಗಳಲ್ಲಿ
ಪಾಲುಗಾರರಾಗಿದ್ದೀರೋ ಅಷ್ಟರ ಮಟ್ಟಿಗೆ ಸಂತೋಷ
ವುಳ್ಳವರಾಗಿರ್ರಿ; ಆತನ ಮಹಿಮೆಯ ಪ್ರತ್ಯಕ್ಷತೆ
ಯಲ್ಲಿಯೂ ನೀವು ಸಂತೋಷಪಟ್ಟು ಉಲ್ಲಾಸಗೊಳ್ಳು
14 ವಿರಿ. ನೀವು ಕ್ರಿಸ್ತನ ಹೆಸರಿನ ನಿಮಿತ್ತ ನಿಂದೆಗೆ
ಗುರಿಯಾದರೆ ಧನ್ಯರೇ; ತೇಜೋಮಯವಾದ ಆತ್ಮ
ನಾಗಿರುವ ದೇವರಾತ್ಮನು ನಿಮ್ಮಲ್ಲಿ ನೆಲೆಗೊಂಡಿದ್ದಾ
15 ನಲ್ಲಾ. ನಿಮ್ಮಲ್ಲಿ ಯಾವನಾದರೂ ಕೊಲೆಗಾರನು
ಕಳ್ಳನು ದುಷ್ಟನು ಪರಕಾರ್ಯಗಳಲ್ಲಿ 1)ತಲೆಹಾಕು
16 ವವನು ಆಗಿದ್ದು ಶಿಕ್ಷಾಪಾತ್ರನಾಗಬಾರದು. ಆದರೆ
ಕ್ರೈಸ್ತನಾಗಿ ಬಾಧೆಪಟ್ಟರೆ ಅವನು ನಾಚಿಕೆಪಡದೆ ಆ
ಹೆಸರಿನಿಂದಲೇ ದೇವರನ್ನು ಘನಪಡಿಸಲಿ.
17 ನ್ಯಾಯವಿಚಾರಣೆಯ ಸಮಯ ಬಂದದೆ; ಆ
ವಿಚಾರಣೆಯು ದೇವರ ಮನೆಯಲ್ಲಿಯೇ ಪ್ರಾರಂಭ
ವಾಯಿತಲ್ಲಾ. ಅದು ನಮ್ಮಲ್ಲಿ ಪ್ರಾರಂಭವಾಗಲು
ದೇವರ ಸುವಾರ್ತೆಯನ್ನು ನಂಬಲೊಲ್ಲದವರ ಗತಿ
18 ಏನಾಗಬಹುದು? ನೀತಿವಂತನೇ ರಕ್ಷಣೆಹೊಂದು
ವದು ಕಷ್ಟವಾದರೆ ಭಕ್ತಿಹೀನನೂ ಪಾಪಿಷ್ಠನೂ ನಿಲ್ಲು
19 ವದು ಹೇಗೆ? ಹೀಗಿರಲಾಗಿ ದೇವರ ಚಿತ್ತಾನುಸಾರ
ಬಾಧೆಪಡುವವರು ಒಳ್ಳೇದನ್ನು ಮಾಡುವವರಾಗಿದ್ದು
ತಮ್ಮ ಆತ್ಮಗಳನ್ನು ನಂಬಿಗಸ್ತನಾದ ಸೃಷ್ಟಿಕರ್ತನಿಗೆ
ಒಪ್ಪಿಸಲಿ.

ಸಭೆಯ ಹಿರಿಯರಿಗೂ ಸಭೆಯವರೆಲ್ಲರಿಗೂ ಪ್ರಬೋಧನೆ.

5 ಸಭೆಯ ಹಿರಿಯರೇ, ಜೊತೆಹಿರಿಯವನಾದ ನಾನು
ಕ್ರಿಸ್ತನ ಬಾಧೆಗಳನ್ನು ಕಣ್ಣಾರೆ ಕಂಡವನೂ ಇನ್ನು
ಮುಂದೆ ಪ್ರತ್ಯಕ್ಷವಾಗುವ ಪ್ರಭಾವದಲ್ಲಿ ಪಾಲುಗಾರ
ನೂ ಆಗಿದ್ದು ನಿಮ್ಮನ್ನು ಎಚ್ಚರಿಸಿ ಹೇಳುವದೇನಂದರೆ—
2 ನಿಮ್ಮಲ್ಲಿರುವ ದೇವರ ಮಂದೆಯನ್ನು ಕಾಯಿರಿ.
ಬಲಾತ್ಕಾರದಿಂದಲ್ಲ ದೇವರ ಚಿತ್ತದ ಪ್ರಕಾರ ಇಷ್ಟ
ಪೂರ್ವಕವಾಗಿಯೂ, ನೀಚವಾದ ದ್ರವ್ಯಾಶೆಯಿಂದಲ್ಲ
ಸಿದ್ಧಮನಸ್ಸಿನಿಂದಲೂ, ಮೇಲ್ವಿಚಾರಣೆಮಾಡಿರಿ. ದೇವ 3
ರು ನಿಮ್ಮ ವಶದಲ್ಲಿಟ್ಟಿರುವ ಸಭೆಗಳ ಮೇಲೆ ದೊರೆ
ತನಮಾಡುವವರಂತೆ ನಡೆಯದೆ ಮಂದೆಗೆ ಮಾದರಿ
ಯಾಗಿಯೇ ನಡೆದುಕೊಳ್ಳಿರಿ. ಹಿರೀ ಕುರುಬನು 4
ಪ್ರತ್ಯಕ್ಷನಾಗುವಾಗ ನೀವು ದೇವಪ್ರಭಾವವೆಂಬ
ಎಂದಿಗೂ ಬಾಡದ ಜಯಮಾಲೆಯನ್ನು ಹೊಂದು
ವಿರಿ. ಯೌವನಸ್ಥರೇ, ಅದೇ ರೀತಿಯಾಗಿ ಹಿರಿಯರಿಗೆ 5
ಅಧೀನರಾಗಿರಿ.
ನೀವೆಲ್ಲರೂ ದೀನಮನಸ್ಸೆಂಬ ವಸ್ತ್ರದಿಂದ ಸೊಂಟಾ
ಕಟ್ಟಿಕೊಂಡು ಒಬ್ಬರಿಗೊಬ್ಬರು ಸೇವೆಮಾಡಿರಿ. ದೇವರು
ಅಹಂಕಾರಿಗಳನ್ನು ಎದುರಿಸುತ್ತಾನೆ, ದೀನರಿಗಾದರೋ
ಕೃಪೆಯನ್ನು ಅನುಗ್ರಹಿಸುತ್ತಾನೆ. ಹೀಗಿರುವದ
ರಿಂದ ದೇವರ ತ್ರಾಣವುಳ್ಳ ಹಸ್ತದ ಕೆಳಗೆ ನಿಮ್ಮನ್ನು 6
ತಗ್ಗಿಸಿಕೊಳ್ಳಿರಿ; ಆತನು ತಕ್ಕ ಕಾಲದಲ್ಲಿ ನಿಮ್ಮನ್ನು
ಮೇಲಕ್ಕೆ ತರುವನು. ನಿಮ್ಮ ಚಿಂತೆಯನ್ನೆಲ್ಲಾ 7
ಆತನ ಮೇಲೆ ಹಾಕಿರಿ, ಆತನು ನಿಮಗೋಸ್ಕರ ಚಿಂತಿ
ಸುತ್ತಾನೆ. ಸ್ವಸ್ಥಚಿತ್ತರಾಗಿರಿ, ಎಚ್ಚರವಾಗಿರಿ; ನಿಮ್ಮ 8
ವಿರೋಧಿಯಾಗಿರುವ ಸೈತಾನನು ಗರ್ಜಿಸುವ ಸಿಂಹ
ದೋಪಾದಿಯಲ್ಲಿ ಯಾರನ್ನು ನುಂಗಲಿ ಎಂದು
ಹುಡುಕುತ್ತಾ ತಿರುಗುತ್ತಾನೆ. ನೀವು ನಂಬಿಕೆಯಲ್ಲಿ 9
ದೃಢವಾಗಿದ್ದು ಅವನನ್ನು ಎದುರಿಸಿರಿ; ಲೋಕದಲ್ಲಿ
ರುವ ನಿಮ್ಮ ಸಹೋದರರೂ ಅಂಥ ಬಾಧೆಗಳನ್ನೇ ಅನು
ಭವಿಸುತ್ತಿದ್ದಾರೆಂದು ನಿಮಗೆ ತಿಳಿದದೆಯಲ್ಲಾ. ಕ್ರಿಸ್ತ 10
ನಲ್ಲಿ ನಿಮ್ಮನ್ನು ತನ್ನ ನಿತ್ಯಪ್ರಭಾವಕ್ಕೆ ಕರೆದ ಕೃಪಾ
ಪೂರ್ಣನಾದ ದೇವರು ತಾನೇ ನೀವು ಸ್ವಲ್ಪಕಾಲ
ಬಾಧೆಪಟ್ಟ ಮೇಲೆ ನಿಮ್ಮನ್ನು ಯೋಗ್ಯಸ್ಥಿತಿಗೆ ತಂದು
ನೆಲೆಗೊಳಿಸಿ ಬಲಪಡಿಸುವನು. ಆತನಿಗೆ ಆಧಿಪತ್ಯವು 11
ಯುಗಯುಗಾಂತರಗಳಲ್ಲಿಯೂ ಇರಲಿ. ಆಮೆನ್.

ಕಡೇ ಮಾತುಗಳು.

ನಿಮ್ಮನ್ನು ಎಚ್ಚರಿಸುವದಕ್ಕೂ ಇದೇ ದೇವರ ನಿಜ 12
ವಾದ ಕೃಪೆ ಎಂದು ಸಾಕ್ಷಿ ಹೇಳುವದಕ್ಕೂ ನಾನು
ಸಂಕ್ಷೇಪವಾಗಿ ಬರೆದು ನಂಬಿಗಸ್ತನಾದ ಸಹೋದರ
ನೆಂದು ನಾನು ಎಣಿಸುವ ಸಿಲ್ವಾನನ ಕೈಯಲ್ಲಿ ಇದನ್ನು
ಕಳುಹಿಸಿದ್ದೇನೆ. ಈ ನಿಜವಾದ ಕೃಪೆಯಲ್ಲಿ ನಿಲ್ಲಿರಿ.
ದೇವರು ನಿಮ್ಮೊಂದಿಗೆ ಆರಿಸಿಕೊಂಡಂಥ ಬಾಬೆಲಿನಲ್ಲಿ 13
ರುವ ಸಭೆಯು ನಿಮಗೆ ವಂದನೆಹೇಳುತ್ತದೆ. ನನ್ನ 14
ಮಗನಾದ ಮಾರ್ಕನು ಸಹ ವಂದನೆಹೇಳುತ್ತಾನೆ.
ಪ್ರೀತಿಯಿಂದ ಮುದ್ದಿಟ್ಟು ಒಬ್ಬರನ್ನೊಬ್ಬರು ವಂದಿ
ಸಿರಿ.
ಕ್ರಿಸ್ತನಲ್ಲಿರುವ ನಿಮ್ಮೆಲ್ಲರಿಗೆ ಶಾಂತಿಯಿರಲಿ.

1) ಅಥವಾ, ನಿಕೃಷ್ಟ ಕಾರ್ಯಗಳನ್ನು ನಡಿಸುವವನು.

# THE SECOND EPISTLE OF SAINT

# PETER

## ಪೇತ್ರನು ಬರೆದ ಎರಡನೆಯ ಪತ್ರಿಕೆ

### ಒಕ್ಕಣೆ.

1 ಯೇಸು ಕ್ರಿಸ್ತನ ದಾಸನೂ ಅಪೊಸ್ತಲನೂ ಆಗಿರುವ
ಸಿಮೆಯೋನ ಪೇತ್ರನು ನಮ್ಮ ದೇವರ ಮತ್ತು ರಕ್ಷ
ಕನಾದ ಯೇಸು ಕ್ರಿಸ್ತನ ನೀತಿಯಿಂದ ನಮ್ಮೊಂದಿಗೆ
ಅಮೂಲ್ಯವಾದ ನಂಬಿಕೆಯನ್ನು ಹೊಂದಿದವರಿಗೆ ಬರೆ
2 ಯುವದೇನಂದರೆ— ದೇವರ ವಿಷಯವಾಗಿಯೂ ನಮ್ಮ
ಕರ್ತನಾದ ಯೇಸುವಿನ ವಿಷಯವಾಗಿಯೂ ಪರಿ
ಜ್ಞಾನವು ನಿಮಗೆ ಉಂಟಾಗುವದರಲ್ಲಿ ಕೃಪೆಯೂ
ಶಾಂತಿಯೂ ನಿಮಗೆ ಹೆಚ್ಚೆಚ್ಚಾಗಿ ದೊರೆಯಲಿ.

### ಭಕ್ತಿವೃದ್ಧಿಗೆ ಅನುಕೂಲವಾದ ಪ್ರೇರಣೆಗಳು.

3 ನಮ್ಮನ್ನು ತನ್ನ ಪ್ರಭಾವದಿಂದಲೂ ಗುಣಾತಿಶಯ
ದಿಂದಲೂ ಕರೆದ ದೇವರ ವಿಷಯವಾಗಿ ಯೇಸು
ವಿನ ದಿವ್ಯ ಶಕ್ತಿಯು ನಮಗೆ ಪರಿಜ್ಞಾನವನ್ನು ಕೊಟ್ಟ
ದ್ದರಲ್ಲಿ ಜೀವಕ್ಕೂ ಭಕ್ತಿಗೂ ಬೇಕಾದದ್ದೆಲ್ಲವು ದೊರೆ
4 ಯಿತೆಂದು ಬಲ್ಲೆವಷ್ಟೆ. ನೀವು ಲೋಕದಲ್ಲಿ ದುರಾಶೆ
ಯಿಂದುಂಟಾದ ಕೆಟ್ಟತನಕ್ಕೆ ತಪ್ಪಿಸಿಕೊಂಡು ದೈವ
ಸ್ವಭಾವದಲ್ಲಿ ಪಾಲನ್ನು ಹೊಂದುವವರಾಗಬೇಕೆಂಬ
ಉದ್ದೇಶದಿಂದ ದೇವರು ತನ್ನ ಪ್ರಭಾವಗುಣಾತಿಶಯ
ಗಳಿಂದ ಅಮೂಲ್ಯವಾಗಿಯೂ ಉತ್ಕೃಷ್ಟವಾಗಿಯೂ
ಇರುವ ವಾಗ್ದಾನಗಳನ್ನು ನಮಗೆ ದಯಪಾಲಿಸಿದ್ದಾನೆ.
5 ಈ ಕಾರಣದಿಂದಲೇ ನೀವು ಪೂರ್ಣಾಸಕ್ತಿಯುಳ್ಳವರಾಗಿ
ನಿಮಗಿರುವ ನಂಬಿಕೆಗೆ ಸದ್ಗುಣವನ್ನೂ ಸದ್ಗುಣಕ್ಕೆ
6 ಜ್ಞಾನವನ್ನೂ ಜ್ಞಾನಕ್ಕೆ ದಮೆಯನ್ನೂ ದಮೆಗೆ
7 ತಾಳ್ಮೆಯನ್ನೂ ತಾಳ್ಮೆಗೆ ಭಕ್ತಿಯನ್ನೂ ಭಕ್ತಿಗೆ
ಸಹೋದರಸ್ನೇಹವನ್ನೂ ಸಹೋದರಸ್ನೇಹಕ್ಕೆ ಪ್ರೀತಿ
8 ಯನ್ನೂ ಕೂಡಿಸಿರಿ. ಇವು ನಿಮ್ಮಲ್ಲಿದ್ದು ಹೆಚ್ಚುತ್ತಾ
ಬಂದರೆ ನಮ್ಮ ಕರ್ತನಾದ ಯೇಸು ಕ್ರಿಸ್ತನ ಸಂಬಂಧ
ವಾದ ಪರಿಜ್ಞಾನವನ್ನು ಹೊಂದುವ ವಿಷಯದಲ್ಲಿ
ನಿಮ್ಮನ್ನು ಆಲಸ್ಯಗಾರರೂ ನಿಷ್ಫಲರೂ ಆಗದಂತೆ
9 ಮಾಡುತ್ತವೆ. ಇವುಗಳಿಲ್ಲದವನು ಕುರುಡನಾಗಿ
ದ್ದಾನೆ; ಅವನು ದೂರದೃಷ್ಟಿಯಿಲ್ಲದವನಾಗಿದ್ದು ತನ್ನ
ಹಿಂದಣ ಪಾಪಗಳು ಪರಿಹಾರವಾಗಿ ತಾನು ಶುದ್ಧನಾ
10 ದದ್ದನ್ನು ಮರೆತುಬಿಟ್ಟಿದ್ದಾನೆ. ಆದದರಿಂದ ಸಹೋ
ದರರೇ, ದೇವರು ನಿಮ್ಮನ್ನು ಕರೆದದ್ದನ್ನೂ ಆದು
ಕೊಂಡದ್ದನ್ನೂ ದೃಢಪಡಿಸಿಕೊಳ್ಳುವದಕ್ಕೆ ಮತ್ತಷ್ಟು
ಪ್ರಯಾಸಪಡಿರಿ. ಹೀಗೆ ನೀವು ಮಾಡಿದರೆ ಎಂದಿಗೂ
ಎಡಹುವದಿಲ್ಲ. ಮತ್ತು ನಮ್ಮ ಕರ್ತನೂ ರಕ್ಷಕನೂ
ಆಗಿರುವ ಯೇಸು ಕ್ರಿಸ್ತನ ನಿತ್ಯರಾಜ್ಯದಲ್ಲಿ ಪ್ರವೇ
ಶಿಸುವ ಹಾಗೆ ದೇವರು ನಿಮಗೆ ಧಾರಾಳವಾಗಿ ಅನು
ಗ್ರಹಿಸುವನು.

### ಕರ್ತನಾದ ಯೇಸು ಕ್ರಿಸ್ತನ ಪ್ರತ್ಯಕ್ಷತೆಯನ್ನು ಎದುರುನೋಡು ವದಕ್ಕೆ ದೃಢವಾದ ಆಧಾರ ಉಂಟು.

ಆದದರಿಂದ ನೀವು ಈ ಸಂಗತಿಗಳನ್ನು ತಿಳಿದವರಾಗಿ
ನಿಮಗೆ ದೊರಕಿರುವ ಸತ್ಯದಲ್ಲಿ ಸ್ಥಿರವಾಗಿದ್ದರೂ
ಅವುಗಳನ್ನು ನಿಮಗೆ ಜ್ಞಾಪಕಕೊಡುವದಕ್ಕೆ ನಾನು
ಯಾವಾಗಲೂ ಸಿದ್ಧವಾಗಿರುವೆನು. ನಾನು ನನ್ನ
ದೇಹವೆಂಬ ಗುಡಾರದಲ್ಲಿರುವ ತನಕ ನಿಮ್ಮನ್ನು
ಜ್ಞಾಪಕಪಡಿಸಿ ಪ್ರೇರಿಸುವದು ಯುಕ್ತವೆಂದೆಣಿಸಿದ್ದೇನೆ.
ಯಾಕಂದರೆ ನಮ್ಮ ಕರ್ತನಾದ ಯೇಸು ಕ್ರಿಸ್ತನು
ನನಗೆ ತಿಳಿಸಿದ ಪ್ರಕಾರ ಈ ಗುಡಾರವನ್ನು ಕಿತ್ತು
ಹಾಕುವ ಕಾಲ ಬೇಗನೇ ಬರುತ್ತದೆಂದು ಬಲ್ಲೆನು.
ನೀವು ನನ್ನ ಮರಣಾನಂತರದಲ್ಲಿ ಇವುಗಳನ್ನು ಯಾವಾ
ಗಲೂ ಜ್ಞಾಪಕಮಾಡಿಕೊಳ್ಳುವದು ಸಾಧ್ಯವಾಗುವಂತೆ
ಪ್ರಯಾಸಪಡುವೆನು.

ನಮ್ಮ ಕರ್ತನಾದ ಯೇಸು ಕ್ರಿಸ್ತನ ಶಕ್ತಿಯನ್ನೂ
ಪ್ರತ್ಯಕ್ಷತೆಯನ್ನೂ ನಿಮಗೆ ತಿಳಿಯಪಡಿಸಿದ್ದರಲ್ಲಿ
ಚಮತ್ಕಾರದಿಂದ ಕಲ್ಪಿಸಿದ ಕಥೆಗಳನ್ನು ನಾವು ಅನು
ಸರಿಸುವವರಾಗಿರಲಿಲ್ಲ. ಆತನ ಮಹತ್ತನ್ನು ಕಣ್ಣಾರೆ
ಕಂಡವರಾಗಿಯೇ ತಿಳಿಯಪಡಿಸಿದೆವು. ಈತನು
ಪ್ರಿಯನಾಗಿರುವ ನನ್ನ ಮಗನು, ಈತನನ್ನು ಮೆಚ್ಚಿ
ದ್ದೇನೆ ಎಂಬಂಥ ವಾಣಿಯು ಸರ್ವೋತ್ಕೃಷ್ಟಪ್ರಭಾವ
ದಿಂದ ಆತನಿಗೆ ಉಂಟಾದದ್ದರಲ್ಲಿ ಆತನು ತಂದೆಯಾದ
ದೇವರಿಂದ ಘನಮಾನಗಳನ್ನು ಹೊಂದಿದನಲ್ಲವೇ.
ನಾವು ಪರಿಶುದ್ಧಪರ್ವತದ ಮೇಲೆ ಆತನ ಸಂಗಡ
ಇದ್ದಾಗ ಆಕಾಶದಿಂದ ಬಂದ ಆ ವಾಣಿಯನ್ನು ನಾವೇ
ಕೇಳಿದೆವು.

ಇದಲ್ಲದೆ ಪ್ರವಾದನವಾಕ್ಯವು ನಮಗೆ ಮತ್ತೂ
ದೃಢವಾಗಿದೆ. ನಿಮ್ಮ ಹೃದಯದೊಳಗೆ 1)ಬೆಳ್ಳಿಯು
ಮೂಡಿ ಅರುಣೋದಯವಾಗುವ ಪರ್ಯಂತರ ಅದ

---

1) ಅಥವಾ, ಸೂರ್ಯನು, ದಿವಾಕರನು.

ನ್ನು ಕತ್ತಲೆಯಾದ ಸ್ಥಳದಲ್ಲಿ ಪ್ರಕಾಶಿಸುವ ದೀಪವೆಂದೆ
20 ಣಿಸಿ ಅದಕ್ಕೆ ಲಕ್ಷ್ಯಕೊಡುವದೇ ಒಳ್ಳೇದು. ಶಾಸ್ತ್ರ
ದಲ್ಲಿರುವ ಯಾವ ಪ್ರವಾದನವಾಕ್ಯವೂ ಕೇವಲ ಮಾ
ನುಷಬುದ್ಧಿಯಿಂದ ವಿವರಿಸತಕ್ಕಂಥದಲ್ಲವೆಂಬದನ್ನು
21 ಮುಖ್ಯವಾಗಿ ತಿಳಿದುಕೊಳ್ಳಿರಿ. ಯಾಕಂದರೆ ಯಾವ
ಪ್ರವಾದನೆಯೂ ಎಂದೂ ಮನುಷ್ಯರ ಚಿತ್ತದಿಂದ
ಉಂಟಾಗಲಿಲ್ಲ; ಮನುಷ್ಯರು ಪವಿತ್ರಾತ್ಮಪ್ರೇರಿತರಾಗಿ
ದೇವರಿಂದ ಹೊಂದಿದ್ದನ್ನೇ ಮಾತಾಡಿದರು.

ದುರ್ಮಾರ್ಗತನವನ್ನು ಬೋಧಿಸುವವರ ವಿಷಯದಲ್ಲಿ
ಎಚ್ಚರಿಕೆ. (ಯೂದ 1—19.)

2 ಆದರೆ ಇಸ್ರಾಯೇಲ್ ಜನರಲ್ಲಿ ಸುಳ್ಳುಪ್ರವಾದಿ
ಗಳೂ ಎದ್ದರಲ್ಲಾ; ಅದೇ ಪ್ರಕಾರ ನಿಮ್ಮಲ್ಲಿಯೂ
ಸುಳ್ಳುಬೋಧಕರು ಇರುವರು. ಅವರು ನಾಶಕರ
ವಾದ ಮತಭೇದಗಳನ್ನು ಕಳ್ಳತನದಿಂದ ಹುಟ್ಟಿಸು
ವವರೂ ತಮ್ಮನ್ನು ಕೊಂಡುಕೊಂಡ ಒಡೆಯನನ್ನು
ಕೂಡ ತಾವು ಅರಿಯೆವು ಎಂದು ಹೇಳುವವರೂ
ಆಗಿದ್ದು ಫಕ್ಕನೆ ತಮ್ಮ ಮೇಲೆ ನಾಶವನ್ನು ಬರಮಾಡಿ
2 ಕೊಳ್ಳುವರು. ಅವರ ನಿರ್ಲಜ್ಜಾಕೃತ್ಯಗಳನ್ನು ಅನೇ
ಕರು ಅನುಸರಿಸುವರು; ಅವರ ನಿಮಿತ್ತ ಸತ್ಯಮಾರ್ಗ
3 ಕ್ಕೆ ದೂಷಣೆ ಉಂಟಾಗುವದು. ಅವರು ದ್ರವ್ಯಾಶೆ
ಯುಳ್ಳವರಾಗಿ ಕಲ್ಪನೆಯ ಮಾತುಗಳನ್ನು ಹೇಳು
ತ್ತಾ ನಿಮ್ಮಿಂದ ಲಾಭವನ್ನು ಸಂಪಾದಿಸಬೇಕೆಂದಿರು
ವರು.
ಲೋಕಾದಿಯಿಂದ ಅಂಥವರಿಗೆ ದಂಡನೆಯ
ತೀರ್ಪು ತಪ್ಪದೆ ಬರುತ್ತಿರುವದು, ಅವರ ನಾಶವು ತೂಕ
4 ಡಿಸುವದಿಲ್ಲ. ಹೇಗಂದರೆ ದೇವದೂತರು ಪಾಪ
ಮಾಡಿದಾಗ ದೇವರು ಅವರನ್ನು ಸುಮ್ಮನೆ ಬಿಡದೆ
ನರಕಕ್ಕೆ ದೊಬ್ಬಿ ನ್ಯಾಯತೀರ್ಪನ್ನು ಹೊಂದು
ವದಕ್ಕೆ ಇಡಲ್ಪಟ್ಟವರಾಗಿರಬೇಕೆಂದು ಕತ್ತಲೇ
5 ಗುಂಡಿಗಳಿಗೆ ಒಪ್ಪಿಸಿದನು. ಆತನು ಭಕ್ತಿಹೀನರಾದ
ಪುರಾತನರ ಲೋಕವನ್ನು ಸುಮ್ಮನೆ ಬಿಡದೆ ಅವರ
ಮೇಲೆ ಜಲಪ್ರಲಯವನ್ನು ಬರಮಾಡಿದನು; ಆದರೆ
ಸುನೀತಿಯನ್ನು ಸಾರುವವನಾಗಿದ್ದ ನೋಹನನ್ನೂ
ಅವನೊಂದಿಗೆ ಬೇರೆ ಏಳು ಮಂದಿಯನ್ನೂ ಉಳಿಸಿ
6 ದನು. ಅತನು ಸೊದೋಮಗೊಮೋರ ಪಟ್ಟಣಗ
ಳನ್ನು ಸುಟ್ಟು ಬೂದಿಮಾಡಿ ಮುಂದೆ ಭಕ್ತಿಹೀನ
ರಾಗಿ ಬದುಕುವವರ ಗತಿ ಇಂಥದೆಂದು ಸೂಚಿಸುವದ
7 ಕ್ಕಾಗಿ ಅವುಗಳಿಗೆ ನಾಶನವನ್ನು ವಿಧಿಸಿದನು. ಆದರೆ
ಆ ಅಧರ್ಮಿಗಳ ನಾಚಿಕೆಗೆಟ್ಟ ನಡತೆಗೆ ವೇದನೆಗೊಂ
ಡಿದ್ದ ನೀತಿವಂತನಾದ ಲೋಟನನ್ನು ತಪ್ಪಿಸಿದನು.
8 ಆ ನೀತಿವಂತನು ಅವರ ನಡುವೆ ಇದ್ದುಕೊಂಡು ಅವರ
ಅನ್ಯಾಯಕೃತ್ಯಗಳನ್ನು ನೋಡುತ್ತಾ ಕೇಳುತ್ತಾ ಅವು
ಗಳ ನಿಮಿತ್ತ ದಿನೇ ದಿನೇ ತನ್ನ ನೀತಿಯುಳ್ಳ ಆತ್ಮ
9 ದಲ್ಲಿ ಬಹಳವಾಗಿ ಕರಕರೆಗೊಂಡನು. ಕರ್ತನು
ಭಕ್ತರನ್ನು ಕಷ್ಟಗಳೊಳಗಿಂದ ತಪ್ಪಿಸುವದಕ್ಕೂ
ದುರ್ಮಾರ್ಗಿಗಳನ್ನು ನ್ಯಾಯತೀರ್ಪಿನ ದಿನದ ತನಕ
ಶಿಕ್ಷಾನುಭವದಲ್ಲಿ ಇಡುವದಕ್ಕೂ ಬಲ್ಲವನಾಗಿದ್ದಾನೆ.
ಮುಖ್ಯವಾಗಿ ಬಂಡುತನವನ್ನು ಆಶಿಸಿ ಶರೀರಭಾವಾ 10
ನುಸಾರ ನಡೆದು ಪ್ರಭುತ್ವತಿರಸ್ಕಾರ ಮಾಡುವವ
ರನ್ನು ಹೀಗೆ ಶಿಕ್ಷಿಸುವನು.
ಇವರು ಯಾರಿಗೂ ಹೆದರದೆ ಸ್ವೇಚ್ಛಾಪರರಾಗಿದ್ದು
ಮಹಾಪದವಿಯುವರನ್ನು ನಿರ್ಭಯವಾಗಿ ದೂಷಿಸು
ತ್ತಾರೆ. ದೇವದೂತರು ಬಲದಲ್ಲಿಯೂ ಮಹತ್ತಿನ 11
ಲ್ಲಿಯೂ ಶ್ರೇಷ್ಠರಾಗಿದ್ದರೂ ಕರ್ತನ ಮುಂದೆ ಮಹಾ
ಪದವಿಯುವರ ಮೇಲೆ ದೂಷಣಾಭಿಪ್ರಾಯವನ್ನು
ಹೇಳುವದಿಲ್ಲವಲ್ಲಾ. ಆದರೆ ಸ್ವಾಭಾವಿಕವಾಗಿ 12
ಬೇಟೆಗೂ ಕೊಲೆಗೂ ಹುಟ್ಟಿರುವ ವಿವೇಕಶೂನ್ಯ
ಪಶುಗಳಂತಿರುವ ಈ ದುರ್ಮಾರ್ಗಿಗಳು ತಮಗೆ ತಿಳಿ
ಯದವುಗಳ ವಿಷಯವಾಗಿ ದೂಷಣೆಹೇಳುವವರಾಗಿ
ದ್ದಾರೆ. ಇವರು ತಮ್ಮ ಕೆಟ್ಟತನದಿಂದ ತಾವೇ ಕೆಟ್ಟು
ಹೋಗಿ ತಮ್ಮ ದುಷ್ಪ್ರವರ್ತನೆಗೆ ಸರಿಯಾದ ದುಷ್ಫಲ
ವನ್ನು ಹೊಂದುವರು. [1]ದುಂದುಗಾರಿಕೆಯಲ್ಲಿ ಹಗ 13
ಲನ್ನು ಕಳೆಯುವದೇ ಸುಖವೆಂದೆಣಿಸುತ್ತಾರೆ. ಇವರು
ನಿಮ್ಮ ಸಂಗಡ ಸೇರಿ ಔತಣಮಾಡುತ್ತಿರುವಾಗ ವಂಚ
ಕರಾಗಿದ್ದು [2]ಉಂಡು ಕುಡಿದು ಕಳಂಕಕ್ಕೂ ಅವಮಾ
ನಕ್ಕೂ ಕಾರಣರಾಗಿದ್ದಾರೆ. ಇವರು ಜಾರತ್ವದಿಂದ 14
ತುಂಬಿದ ಮತ್ತು ಪಾಪವನ್ನು ಬಿಡಲೊಲ್ಲದ ಕಣ್ಣು
ಳ್ಳವರೂ ಚಪಲಚಿತ್ತರನ್ನು ಮರುಳುಗೊಳಿಸುವವರೂ
ಲೋಭದಲ್ಲಿ ತೇರ್ಗಡೆಹೊಂದಿದ ಮನಸ್ಸುಳ್ಳವರೂ
ಶಾಪಕ್ಕೆ ಪಾತ್ರರೂ ಆಗಿದ್ದಾರೆ. ಇವರು ನೀಟಾದ 15
ಮಾರ್ಗವನ್ನು ಬಿಟ್ಟು ಬೆಯೋರನ ಮಗನಾದ ಬಿಳಾ
ಮನ ಮಾರ್ಗವನ್ನು ಹಿಡಿದು ತಪ್ಪಿಹೋಗಿದ್ದಾರೆ. ಈ
ಬಿಳಾಮನು ಅಧರ್ಮದಿಂದ ದೊರಕುವ ದ್ರವ್ಯವನ್ನು
ಪ್ರೀತಿಸಿದನು; ಆದರೆ ಅವನ ಅಕ್ರಮಕ್ಕೆ ಖಂಡನೆಯಾ 16
ಯಿತು; ಮೂಕ ಪಶುವು ಮನುಷ್ಯಸ್ವರದಿಂದ ಮಾ
ತಾಡಿ ಆ ಪ್ರವಾದಿಯ ಹುಚ್ಚುತನಕ್ಕೆ ಅಡ್ಡಿಮಾಡಿತು.
ಇವರು ನೀರಿಲ್ಲದ ಬಾವಿಗಳೂ ಬಿರುಗಾಳಿಯಿಂದ 17
ಬಡಿಸಿಕೊಂಡು ಹಾರಿಹೋಗುವ ಮಂಜೂ ಆಗಿದ್ದಾರೆ;
ಇಂಥವರ ಪಾಲಿಗೆ ಕಾರ್ಗತ್ತಲೆ ಇಟ್ಟಿರುವದು.
ತಪ್ಪಾದ ಮಾರ್ಗದಲ್ಲಿ ನಡೆಯುವವರ ಸಹವಾಸದಿಂದ 18
ಹೊಸದಾಗಿ ತಪ್ಪಿಸಿಕೊಂಡವರ ಸಂಗಡ ಇವರು
ಹುರುಳಿಲ್ಲದ ದೊಡ್ಡ ದೊಡ್ಡ ಮಾತುಗಳನ್ನಾಡಿ
ಬಂಡುಬಂಡಾದ ದುರಾಶೆಗಳನ್ನು ಹುಟ್ಟಿಸಿ ಅವರನ್ನು
ಮರುಳುಗೊಳಿಸುತ್ತಾರೆ. ಸ್ವಾತಂತ್ರ್ಯಕೊಡುತ್ತೇವೆಂದು 19
ಅವರಿಗೆ ವಾಗ್ದಾನಮಾಡುತ್ತಾರೆ; ಆದರೆ ತಾವೇ
ಕೆಟ್ಟತನದ ದಾಸತ್ವದೊಳಗಿದ್ದಾರೆ. ಒಬ್ಬನು ಯಾವ
ದಕ್ಕೆ ಸೋತುಹೋಗಿರುವನೋ ಅದರ ದಾಸತ್ವ
ದೊಳಗಿರುವನಷ್ಟೆ.
ಕರ್ತನೂ ರಕ್ಷಕನೂ ಆಗಿರುವ ಯೇಸು ಕ್ರಿಸ್ತನ 20
ವಿಷಯವಾದ ಜ್ಞಾನ ಹೊಂದಿ ಲೋಕದ ಮಲಿನತ್ವಗ
ಳಿಗೆ ತಪ್ಪಿಸಿಕೊಂಡವರು ತಿರಿಗಿ ಅವುಗಳಲ್ಲಿ ಸಿಕ್ಕಿ
ಕೊಂಡು ಸೋತುಹೋದರೆ ಅವರ ಅಂತ್ಯಸ್ಥಿತಿಯು
ಮೊದಲಿಗಿಂತ ಕೆಟ್ಟದ್ದಾಗಿದೆ. ಅವರು ನೀತಿಮಾರ್ಗ 21
ವನ್ನು ತಿಳಿದು ತಮಗೆ ಕೊಡಲ್ಪಟ್ಟ ಪರಿಶುದ್ಧ ಆಜ್ಞೆ

1) ಅಥವಾ, ತಾತ್ಕಾಲಿಕ ಭೋಗಾನುಭವವನ್ನೇ. 2) ಕೆಲವು ಪ್ರತಿಗಳಲ್ಲಿ—ಪ್ರೇಮಭೋಜನಗಳಲ್ಲಿ ಎಂದು ಬರೆದದೆ.

ಯಿಂದ ತೊಲಗಿಹೋಗುವದಕ್ಕಿಂತ ಆ ಮಾರ್ಗವನ್ನು
22 ತಿಳಿಯದಿದ್ದರೆ ಮೇಲಾಗಿತ್ತು. ನಾಯಿ ತಾನು ಕಕ್ಕಿ
ದ್ದನ್ನು ನೆಕ್ಕುವದಕ್ಕೆ ತಿರುಗಿಕೊಂಡಿತು ಮತ್ತು ತೊಳೆದ
ಹಂದಿ ಕೆಸರಿನಲ್ಲಿ ಹೊರಳುವದಕ್ಕೆ ಹೋಯಿತು ಎಂಬ
ನಿಜವಾದ ಗಾದೆಗೆ ಸರಿಯಾಗಿ ನಡೆದಿದ್ದಾರೆ.

ದೇವರ ದಿನವು ತಡಮಾಡಿದರೂ ಅದು ಬರುವದು ನಿಶ್ಚಯ.

3 ಪ್ರಿಯರೇ, ನಿಮಗೀಗ ಬರೆಯುವದು ಎರಡನೆಯ
2 ಪತ್ರಿಕೆ. ಪರಿಶುದ್ಧ ಪ್ರವಾದಿಗಳು ಪೂರ್ವದಲ್ಲಿ
ಹೇಳಿದ ಮಾತುಗಳನ್ನೂ ಕರ್ತನಾದ ರಕ್ಷಕನು
ನಿಮ್ಮ ಅಪೊಸ್ತಲರ ಮೂಲಕ ಕೊಟ್ಟ ಅಪ್ಪಣೆಯನ್ನೂ
ನೀವು ಜ್ಞಾಪಕಮಾಡಿಕೊಳ್ಳಬೇಕೆಂದು ಈ ಎರಡು
ಪತ್ರಿಕೆಗಳಲ್ಲಿಯೂ ಜ್ಞಾಪಕಕೊಟ್ಟು ನಿಮ್ಮ ಸರಳ
ಮನಸ್ಸನ್ನು ಪ್ರೇರಿಸಿದ್ದೇನೆ.
3 ಕಡೇ ದಿವಸಗಳಲ್ಲಿ ತಮ್ಮ ದುರಾಶೆಗಳ ಪ್ರಕಾರ
ನಡೆಯುವ ಕುಚೋದ್ಯಗಾರರು ಬಂದು ಕುಚೋದ್ಯ
4 ಮಾಡುತ್ತಾ—ಆತನ ಪ್ರತ್ಯಕ್ಷತೆಯ ವಿಷಯವಾದ
ವಾಗ್ದಾನವು ಏನಾಯಿತು? ನಮ್ಮ ಪಿತೃಗಳು
ನಿದ್ರೆಹೊಂದಿದ ದಿನ ಮೊದಲುಗೊಂಡು ಸಮಸ್ತವೂ
ಲೋಕಾದಿಯಿಂದಿದ್ದ ಹಾಗೆಯೇ ಇರುತ್ತದಲ್ಲಾ ಎಂದು
ಹೇಳುವರೆಂಬದಾಗಿ ನೀವು ಮೊದಲು ತಿಳುಕೊಳ್ಳಬೇಕು.
5 ಹೀಗೆ ಮಾತಾಡುವವರು ಒಂದು ಸಂಗತಿಯನ್ನು ತಿಳಿ
ದರೂ ಬೇಕೆಂದು ಮರೆತುಬಿಡುತ್ತಾರೆ; ಅದೇನಂದರೆ—
ಪೂರ್ವಕಾಲದಲ್ಲಿದ್ದ ಭೂಮ್ಯಾಕಾಶಗಳು ದೇವರ
ವಾಕ್ಯದ ಮೂಲಕ ನೀರಿನಿಂದ ಉಂಟಾಗಿ ನೀರಿ
6 ನಿಂದ ಆಧಾರಗೊಂಡಿರುವಲ್ಲಿ ಆ ನೀರುಗಳಿಂದಲೇ
ಆ ಕಾಲದಲ್ಲಿದ್ದ ಲೋಕವು ಜಲಪ್ರಲಯದಲ್ಲಿ ನಾಶ
7 ವಾಯಿತು. ಆದರೆ ಈಗಿರುವ ಭೂಮ್ಯಾಕಾಶಗಳು
ಅದೇ ವಾಕ್ಯದ ಬಲದಿಂದ ಬೆಂಕಿಯ ಮೂಲಕ ನಾಶ
ವಾಗುವದಕ್ಕೆ ಇಡಲ್ಪಟ್ಟಿವೆ; ಮತ್ತು ಭಕ್ತಿಹೀನರ
ಶಿಕ್ಷಾವಿಧಿಯೂ ನಾಶವೂ ಉಂಟಾಗುವ ದಿನಕ್ಕಾಗಿ ಆ
ಬೆಂಕಿ ಸಿದ್ಧವಾಗಿದೆ.
8 ಪ್ರಿಯರೇ, ಕರ್ತನ ಎಣಿಕೆಯಲ್ಲಿ ಒಂದು ದಿನವು
ಸಾವಿರ ವರುಷಗಳಂತೆಯೂ ಸಾವಿರ ವರುಷಗಳು
ಒಂದು ದಿನದಂತೆಯೂ ಅವೆ ಎಂಬದನ್ನು ಮಾತ್ರ ಮರೆ
9 ಯಬೇಡಿರಿ. ಕರ್ತನು ತನ್ನ ವಾಗ್ದಾನವನ್ನು ನೆರ
ವೇರಿಸುವದಕ್ಕೆ ತಡಮಾಡುತ್ತಾನೆಂಬದಾಗಿ ಕೆಲವರು
ಅರ್ಥಮಾಡಿಕೊಳ್ಳುವ ಪ್ರಕಾರ ಆತನು ತಡಮಾಡು
ವವನಲ್ಲ. ಯಾವನಾದರೂ ನಾಶವಾಗುವದರಲ್ಲಿ
ಆತನು ಇಷ್ಟಪಡದೆ ಎಲ್ಲರೂ ತನ್ನ ಕಡೆಗೆ ತಿರುಗಿ
ಕೊಳ್ಳಬೇಕೆಂದು ಅಪೇಕ್ಷಿಸುವವನಾಗಿದ್ದು ನಿಮ್ಮ ವಿಷ
10 ಯದಲ್ಲಿ ದೀರ್ಘಶಾಂತಿಯುಳ್ಳವನಾಗಿದ್ದಾನೆ. ಆದ
ರೂ ಕರ್ತನ ದಿನವು ಕಳ್ಳನು ಬರುವಂತೆ ಬರುತ್ತದೆ.
ಆ ದಿನದಲ್ಲಿ ಆಕಾಶಮಂಡಲವು ಮಹಾಘೋಷ
ದಿಂದ ಇಲ್ಲದೆ ಹೋಗುವದು, [1]ಸೂರ್ಯ ಚಂದ್ರ ನಕ್ಷ
ತ್ರಗಳು ಉರಿದು ಲಯವಾಗಿ ಹೋಗುವವು. [2]ಭೂಮಿ
ಯೂ ಅದರಲ್ಲಿರುವ ಕೆಲಸಗಳೂ ಸುಟ್ಟುಹೋಗುವವು.

ಲೋಕಾಂತ್ಯವನ್ನು ಎದುರುನೋಡುತ್ತಾ ಪರಿಶುದ್ಧರಾಗಿ
ನಡೆಯಿರಿ ಎಂಬ ಬೋಧನೆ.

ಇವೆಲ್ಲವುಗಳು ಹೀಗೆ ಲಯವಾಗಿ ಹೋಗುವದ 11-
ರಿಂದ ನೀವು ದೇವರ ದಿನದ ಪ್ರತ್ಯಕ್ಷತೆಯನ್ನು ಎದುರು
ನೋಡುತ್ತಾ [3]ಹಾರೈಸುತ್ತಾ ಎಷ್ಟೋ ಪರಿಶುದ್ಧ
ವಾದ ನಡವಳಿಕೆಯೂ ಭಕ್ತಿಯೂ ಉಳ್ಳವರಾಗಿರಬೇ
ಕಲ್ಲಾ; ಆ ದಿನದಲ್ಲಿ ಆಕಾಶಮಂಡಲವು ಬೆಂಕಿ ಹತ್ತಿ
ಲಯವಾಗಿ ಹೋಗುವದು, [1]ಸೂರ್ಯ ಚಂದ್ರ ನಕ್ಷ
ತ್ರಗಳು ಉರಿದು ಕರಗಿಹೋಗುವವು. ಆದರೆ ನಾವು 1
ದೇವರ ವಾಗ್ದಾನವನ್ನು ನಂಬಿ ನೂತನಾಕಾಶ
ಮಂಡಲವನ್ನೂ ನೂತನಭೂಮಂಡಲವನ್ನೂ ಎದುರು
ನೋಡುತ್ತಾ ಇದ್ದೇವೆ; ಅವುಗಳಲ್ಲಿ ನೀತಿಯು ವಾಸ
ವಾಗಿರುವದು.
ಆದಕಾರಣ ಪ್ರಿಯರೇ, ನೀವು ಇವುಗಳನ್ನು 1
ಎದುರುನೋಡುವವರಾಗಿರುವದರಿಂದ ಶಾಂತರಾಗಿದ್ದು
ಆತನೆದುರಿನಲ್ಲಿ ನಿರ್ಮಲರಾಗಿಯೂ ನಿರ್ದೋಷಿಗ
ಳಾಗಿಯೂ ಕಾಣಿಸಿಕೊಳ್ಳುವದಕ್ಕೆ ಪ್ರಯಾಸಪಡಿರಿ.
ನಮ್ಮ ಕರ್ತನ ದೀರ್ಘಶಾಂತಿಯು ನಮ್ಮ ರಕ್ಷಣಾ 1
ರ್ಥವಾಗಿ ಅದೆ ಎಂದು ಎಣಿಸಿಕೊಳ್ಳಿರಿ. ಇದೇ ಅಭಿ
ಪ್ರಾಯಕ್ಕೆ ಸರಿಯಾಗಿ ನಮ್ಮ ಪ್ರಿಯ ಸಹೋದರ
ನಾದ ಪೌಲನು ಸಹ ತನಗೆ ಅನುಗ್ರಹಿಸಿರುವ ಜ್ಞಾ
ನದ ಪ್ರಕಾರ ನಿಮಗೆ ಬರೆದನು. ಅವನು ತನ್ನ 1
ಎಲ್ಲಾ ಪತ್ರಿಕೆಗಳಲ್ಲಿಯೂ ಈ ವಿಷಯಗಳನ್ನು
ಕುರಿತು ಬರೆಯುವಾಗ ಹೀಗೆ ಬೋಧಿಸಿದ್ದಾನೆ. ಆ
ಪತ್ರಿಕೆಗಳಲ್ಲಿರುವ ಕೆಲವು ಮಾತುಗಳು ತಿಳಿಯುವ
ದಕ್ಕೆ ಕಷ್ಟವಾಗಿವೆ. ವಿದ್ಯಾಹೀನರೂ ಚಪಲಚಿತ್ತರೂ
ಹೇಗೆ ನಮಗಿರುವ ಮಿಕ್ಕಾದ ಗ್ರಂಥಗಳಿಗೆ ತಪ್ಪಾದ
ಅರ್ಥಮಾಡಿಕೊಂಡಿದ್ದಾರೋ ಹಾಗೆಯೇ ಇವುಗಳಿಗೂ
ತಪ್ಪಾದ ಅರ್ಥ ಮಾಡಿಕೊಂಡು ತಮಗೆ ನಾಶವ
ನ್ನುಂಟುಮಾಡಿಕೊಳ್ಳುತ್ತಾರೆ. ಆದಕಾರಣ ಪ್ರಿಯರೇ, 1
ನೀವು ಈ ಸಂಗತಿಗಳನ್ನು ಮುಂದಾಗಿ ತಿಳಿದುಕೊಂಡಿ
ರುವದರಿಂದ ಅಧರ್ಮಿಗಳ ಭ್ರಾಂತಿಯ ಸೆಳವಿಗೆ ಸಿಕ್ಕಿ
ಕೊಂಡು ನಿಮ್ಮ ಸ್ಥಿರಮನಸ್ಸನ್ನು ಬಿಟ್ಟು ಭ್ರಷ್ಟರಾಗ
ದಂತೆ ಎಚ್ಚರಿಕೆಯಾಗಿರಿ. ನೀವು ಕೃಪೆಯಲ್ಲಿಯೂ 1
ನಮ್ಮ ಕರ್ತನೂ ರಕ್ಷಕನೂ ಆಗಿರುವ ಯೇಸು ಕ್ರಿಸ್ತನ
ವಿಷಯವಾದ ಜ್ಞಾನದಲ್ಲಿಯೂ ಅಭಿವೃದ್ಧಿಯನ್ನು
ಹೊಂದುತ್ತಾ ಇರ್ರಿ. ಆತನಿಗೆ ಈಗಲೂ ಸದಾಕಾಲ
ವೂ ಸ್ತೋತ್ರ. ಆಮೆನ್.

---

1) ಅಥವಾ, ಪಂಚಭೂತಗಳು. 2) ಕೆಲವು ಪ್ರತಿಗಳಲ್ಲಿ—ಭೂಮಿಯೂ ಅದರಲ್ಲಿರುವ ಕೆಲಸಗಳೂ ಕಾಣುವವೇ? ಎಂದು ಬ
ದದೆ. 3) ಅಥವಾ, ಬೇಗ ಬರುವಂತೆ ಪ್ರಯತ್ನಿಸುತ್ತಾ.

# THE FIRST EPISTLE OF SAINT

# JOHN

## ಯೋಹಾನನು ಬರೆದ ಮೊದಲನೆಯ ಪತ್ರಿಕೆ

ಯೇಸು ಕ್ರಿಸ್ತನಲ್ಲಿ ಪ್ರಕಟವಾದ ನಿತ್ಯಜೀವದಿಂದ ದೇವರ
ಸಂಗಡಲೂ ಜೊತೆಯ ಭಕ್ತರ ಸಂಗಡಲೂ ಅನ್ಯೋನ್ಯತೆ
ಉಂಟಾಗುತ್ತೆ.

1 ನಾವು ನಿಮಗೆ ಪ್ರಸಿದ್ಧಿಪಡಿಸುವ ಜೀವವಾಕ್ಯವು
ಆದಿಯಿಂದ ಇದ್ದದ್ದು. ನಾವು ಆದನ್ನು ಕಿವಿಯಾರೆ
ಕೇಳಿ ಕಣ್ಣಾರೆ ಕಂಡು ಮನಸ್ಸಿಟ್ಟು ನೋಡಿ ಕೈ
2 ಯಿಂದ ಮುಟ್ಟಿದ್ದೇವೆ. ಆ ಜೀವವು ಪ್ರತ್ಯಕ್ಷವಾ
ಯಿತು; ತಂದೆಯ ಬಳಿಯಲ್ಲಿದ್ದು ನಮಗೆ ಪ್ರತ್ಯಕ್ಷ
ವಾದಂಥ ಆ ನಿತ್ಯಜೀವವನ್ನು ನಾವು ಕಂಡು ಅದನ್ನು
ಕುರಿತು ಸಾಕ್ಷಿ ಹೇಳಿ ಅದನ್ನು ನಿಮಗೆ ಪ್ರಸಿದ್ಧಿ
3 ಪಡಿಸುತ್ತೇವೆ. ನಾವು ಕಂಡು ಕೇಳಿದ್ದು ನಿಮಗೂ
ಗೊತ್ತಾಗಿ ನಮಗಿರುವ ಅನ್ಯೋನ್ಯತೆಯಲ್ಲಿ ನೀವೂ
ಸೇರಬೇಕೆಂದು ಅದನ್ನು ನಿಮಗೆ ಪ್ರಸಿದ್ಧಿಪಡಿಸುತ್ತೇವೆ.
ನಮಗಿರುವ ಅನ್ಯೋನ್ಯತೆಯು ತಂದೆಯ ಸಂಗಡಲೂ
ಆತನ ಮಗನಾದ ಯೇಸು ಕ್ರಿಸ್ತನ ಸಂಗಡಲೂ ಇರು
4 ವಂಥದು. 1)ನಮ್ಮುಭಯತರ ಸಂತೋಷವು ಪರಿ
ಪೂರ್ಣವಾಗಬೇಕೆಂದು ನಾವು ಈ ಮಾತುಗಳನ್ನು
ಬರೆಯುತ್ತೇವೆ.

ದೇವರಲ್ಲಿ ಕತ್ತಲೆಯಿಲ್ಲದ ಕಾರಣ ನಾವು ಪಾಪವನ್ನು
ಮರೆಮಾಜದೆ ಅದನ್ನು ಒಪ್ಪಿಕೊಂಡು ಪಾಪಪರಿಹಾರವನ್ನು
ಪಡೆಯಬೇಕು.

5 ನಾವು ಆತನಿಂದ ಕೇಳಿ ನಿಮಗೆ ತಿಳಿಸುವ ವಾರ್ತೆ
ಯಾವದಂದರೆ ದೇವರು ಬೆಳಕಾಗಿದ್ದಾನೆ; ಮತ್ತು
ಆತನಲ್ಲಿ ಎಷ್ಟು ಮಾತ್ರವೂ ಕತ್ತಲೆಯಿಲ್ಲ ಎಂಬದೇ.
6 ನಾವು ದೇವರ ಸಂಗಡ ಅನ್ಯೋನ್ಯತೆಯುಳ್ಳವರಾಗಿ
ದ್ದೇವೆಂದು ಹೇಳಿ ಕತ್ತಲೆಯಲ್ಲಿ ನಡೆದರೆ ಸುಳ್ಳಾಡುವವ
7 ರಾಗಿದ್ದೇವೆ, ಸತ್ಯವನ್ನನುಸರಿಸುವವರಲ್ಲ. ಆದರೆ
ಆತನು ಬೆಳಕಿನಲ್ಲಿರುವಂತೆಯೇ ನಾವು ಬೆಳಕಿ
ನಲ್ಲಿ ನಡೆದರೆ ನಾವು ಒಬ್ಬರ ಸಂಗಡಲೊಬ್ಬರು ಅನ್ಯೋ
ನ್ಯತೆಯಲ್ಲಿದ್ದೇವೆ, ಮತ್ತು ಆತನ ಮಗನಾದ ಯೇಸು
ವಿನ ರಕ್ತವು ಸಕಲಪಾಪವನ್ನು ನಿವಾರಣಮಾಡಿ
8 ನಮ್ಮನ್ನು ಶುದ್ಧಿಮಾಡುತ್ತದೆ. ನಮ್ಮಲ್ಲಿ ಪಾಪವಿಲ್ಲ
ವೆಂದು ನಾವು ಹೇಳಿದರೆ ನಮ್ಮನ್ನು ನಾವೇ ಮೋಸ
ಪಡಿಸಿಕೊಳ್ಳುತ್ತೇವೆ, ಮತ್ತು ಸತ್ಯವೆಂಬದು ನಮ್ಮ
ಲ್ಲಿಲ್ಲ. ನಮ್ಮ ಪಾಪಗಳನ್ನು ಒಪ್ಪಿಕೊಂಡು ಅರಿಕೆ 9
ಮಾಡಿದರೆ ಆತನು ನಂಬಿಗಸ್ತನೂ ನೀತಿವಂತನೂ
ಆಗಿರುವದರಿಂದ ನಮ್ಮ ಪಾಪಗಳನ್ನು ಕ್ಷಮಿಸಿಬಿಟ್ಟು
ಸಕಲ ಅನೀತಿಯನ್ನು ಪರಿಹರಿಸಿ ನಮ್ಮನ್ನು ಶುದ್ಧಿ
ಮಾಡುವನು. ನಾವು ಪಾಪಮಾಡಲಿಲ್ಲವೆಂದು ಹೇಳಿ 10
ದರೆ ಆತನನ್ನು ಸುಳ್ಳುಗಾರನನ್ನಾಗಿ ಮಾಡುತ್ತೇವೆ,
ಮತ್ತು ಆತನ ವಾಕ್ಯವು ನಮ್ಮಲ್ಲಿ ಇಲ್ಲ.

ನನ್ನ ಪ್ರಿಯರಾದ ಮಕ್ಕಳೇ, ನೀವು ಪಾಪಮಾಡ 2
ದಂತೆ ಈ ಮಾತುಗಳನ್ನು ನಿಮಗೆ ಬರೆಯುತ್ತೇನೆ.
ಯಾವನಾದರೂ ಪಾಪಮಾಡಿದರೆ ತಂದೆಯ ಬಳಿ
ಯಲ್ಲಿ ನೀತಿವಂತನಾದ ಯೇಸು ಕ್ರಿಸ್ತನೆಂಬ ಸಹಾ
ಯಕನು ನಮಗಿದ್ದಾನೆ. ಆತನು ನಮ್ಮ ಪಾಪಗಳನ್ನು 2
2)ನಿವಾರಣಮಾಡುವ ಯಜ್ಞವಾಗಿದ್ದಾನೆ; ನಮ್ಮ
ಪಾಪಗಳನ್ನು ಮಾತ್ರವಲ್ಲದೆ, ಸಮಸ್ತ ಲೋಕದ
ಪಾಪಗಳನ್ನು ಸಹ ನಿವಾರಣಮಾಡುತ್ತಾನೆ.

ಕ್ರಿಸ್ತನ ಆಜ್ಞೆಗಳನ್ನು ಕೈಕೊಳ್ಳುವವರೇ ಆತನನ್ನರಿತವರು.

ನಾವು ಆತನ ಆಜ್ಞೆಗಳನ್ನು ಕೈಕೊಂಡು ನಡೆ 3
ದರೆ ಅದರಿಂದಲೇ ಆತನನ್ನು ಬಲ್ಲವರಾಗಿದ್ದೇವೆಂದು
ತಿಳುಕೊಳ್ಳುತ್ತೇವೆ. ಆತನನ್ನು ಬಲ್ಲೆನೆಂದು ಹೇಳಿ 4
ಆತನ ಆಜ್ಞೆಗಳನ್ನು ಕೈಕೊಳ್ಳದೆ ನಡೆಯುವವನು
ಸುಳ್ಳುಗಾರನಾಗಿದ್ದಾನೆ; ಸತ್ಯವೆಂಬದು ಅವನಲ್ಲಿ
ಇಲ್ಲ. ಯಾವನಾದರೂ ಆತನ ವಾಕ್ಯವನ್ನು ಕೈಕೊಂಡು 5
ನಡೆದರೆ ಅವನಲ್ಲಿ ನಿಜವಾಗಿ 3)ದೇವರ ಮೇಲಣ
ಪ್ರೀತಿಯು ಪರಿಪೂರ್ಣವಾಗಿದೆ. ಇದರಿಂದಲೇ ಆತ
ನಲ್ಲಿದ್ದೇವೆಂಬದನ್ನು ತಿಳುಕೊಳ್ಳುತ್ತೇವೆ. ಆತನಲ್ಲಿ ನೆಲೆ 6
ಗೊಂಡವನಾಗಿದ್ದೇನೆಂದು ಹೇಳುವವನು ಕ್ರಿಸ್ತನು ನಡೆ
ದಂತೆಯೇ ತಾನೂ ನಡೆಯುವದಕ್ಕೆ ಬದ್ಧನಾಗಿದ್ದಾನೆ.

ಕತ್ತಲೆಯನ್ನು ಬಿಟ್ಟು ಬೆಳಕಿಗೆ ಸೇರಿದವರಲ್ಲಿ
ಪ್ರೀತಿಸ್ವಭಾವವೇ ಅವಶ್ಯ.

ಪ್ರಿಯರೇ, ನಾನು ನಿಮಗೆ ಬರೆಯುವದು ಹೊಸ 7
ಅಪ್ಪಣೆಯಲ್ಲ, ಮೊದಲಿಂದಲೂ ನಿಮಗಿದ್ದ ಹಳೆಯ
ಅಪ್ಪಣೆಯಾಗಿದೆ; ಈ ಹಳೆಯ ಅಪ್ಪಣೆಯು ನೀವು
ಕೇಳಿದ ವಾಕ್ಯವೇ. ಆದರೂ ನಾನು ನಿಮಗೆ ಬರೆ 8

1) ಮೂಲ: ನಮ್ಮ; ಕೆಲವು ಪ್ರತಿಗಳಲ್ಲಿ—ನಿಮ್ಮ ಎಂದು ಬರೆದದೆ.
2) ಅಥವಾ: ನಿವಾರಣಮಾಡುವವನಾಗಿದ್ದಾನೆ.
3) ಅಥವಾ, ದೇವರ ಪ್ರೀತಿಯು.

ಯುವದು ಹೊಸ ಅಪ್ಪಣೆಯೇ; ಇದು ಆತನಲ್ಲಿಯೂ
ನಿಮ್ಮಲ್ಲಿಯೂ ಸತ್ಯವಾಗಿದೆ; ಹೇಗಂದರೆ ಕತ್ತಲೆಯು
ಕಳೆದುಹೋಗುತ್ತದೆ, ನಿಜವಾದ ಬೆಳಕು ಈಗ ಪ್ರಕಾ
9 ಶಿಸುತ್ತಲಿದೆ. ಬೆಳಕಿನಲ್ಲಿದ್ದೇನೆಂದು ಹೇಳಿಕೊಂಡು
ತನ್ನ ಸಹೋದರನನ್ನು 1)ದ್ವೇಷಿಸುವವನು ಈ ವರೆಗೂ
10 ಕತ್ತಲೆಯಲ್ಲಿದ್ದಾನೆ. ತನ್ನ ಸಹೋದರನನ್ನು ಪ್ರೀತಿಸು
ವವನು ಬೆಳಕಿನಲ್ಲಿ ನೆಲೆಗೊಂಡಿದ್ದಾನೆ, ಮತ್ತು ಅವ
11 ನಲ್ಲಿ ವಿಘ್ನಕರವಾದದ್ದು ಏನೂ ಇಲ್ಲ. ತನ್ನ ಸಹೋ
ದರನನ್ನು ದ್ವೇಷಿಸುವವನು ಕತ್ತಲೆಯಲ್ಲಿದ್ದಾನೆ, ಕತ್ತ
ಲೆಯಲ್ಲಿ ನಡೆದುಕೊಳ್ಳುತ್ತಾನೆ. ಕತ್ತಲೆಯು ಅವನ
ಕಣ್ಣುಗಳನ್ನು ಕಾಣದ ಹಾಗೆ ಮಾಡಿದ್ದರಿಂದ ತಾನು
ಎಲ್ಲಿಗೆ ಹೋಗುತ್ತಾನೋ ಅವನಿಗೆ ತಿಳಿಯದು.

ಈ ಪತ್ರಿಕೆಯನ್ನು ಸಭೆಯವರೆಲ್ಲರಿಗೋಸ್ಕರ ಬರೆದದ್ದಕ್ಕೆ ಕಾರಣ.

12 ಪ್ರಿಯರಾದ ಮಕ್ಕಳೇ, ಕ್ರಿಸ್ತನ ಹೆಸರಿನ ನಿಮಿತ್ತ
ನಿಮ್ಮ ಪಾಪಗಳು ಕ್ಷಮಿಸಲ್ಪಟ್ಟಿರುವದರಿಂದ ನಿಮಗೆ
13 ಬರೆಯುತ್ತೇನೆ. ತಂದೆಗಳೇ, ಆದಿಯಿಂದಿರುವಾತ
ನನ್ನು ನೀವು ಬಲ್ಲವರಾಗಿರುವದರಿಂದ ನಿಮಗೆ ಬರೆಯು
ತ್ತೇನೆ. ಯೌವನಸ್ಥರೇ, ನೀವು ಕೆಡುಕನನ್ನು ಜಯಿ
ಸಿರುವದರಿಂದ ನಿಮಗೆ ಬರೆಯುತ್ತೇನೆ.
ಮಕ್ಕಳಿರಾ, ನೀವು ತಂದೆಯನ್ನು ಬಲ್ಲವರಾಗಿರು
14 ವದರಿಂದ ನಿಮಗೆ ಬರೆದಿದ್ದೇನೆ. ತಂದೆಗಳೇ, ಆದಿ
ಯಿಂದಿರುವಾತನನ್ನು ನೀವು ಬಲ್ಲವರಾಗಿರುವದರಿಂದ
ನಿಮಗೆ ಬರೆದಿದ್ದೇನೆ. ಯೌವನಸ್ಥರೇ, ನೀವು ಶಕ್ತ
ರಾಗಿರುವದರಿಂದಲೂ ದೇವರ ವಾಕ್ಯವು ನಿಮ್ಮಲ್ಲಿ ನೆಲೆ
ಗೊಂಡಿರುವದರಿಂದಲೂ ನೀವು ಕೆಡುಕನನ್ನು ಜಯಿ
ಸಿರುವದರಿಂದಲೂ ನಿಮಗೆ ಬರೆದಿದ್ದೇನೆ.

ದೇವರನ್ನು ಪ್ರೀತಿಸುವವರು ಲೋಕವನ್ನು ಪ್ರೀತಿಸಬಾರದು.

15 ಲೋಕವನ್ನಾಗಲಿ ಲೋಕದಲ್ಲಿರುವವುಗಳನ್ನಾಗಲಿ
ಪ್ರೀತಿಸಬೇಡಿರಿ. ಯಾವನಾದರೂ ಲೋಕವನ್ನು
ಪ್ರೀತಿಸಿದರೆ ತಂದೆಯ ಮೇಲಣ ಪ್ರೀತಿಯು ಅವನ
16 ಲ್ಲಿಲ್ಲ. ಲೋಕದಲ್ಲಿರುವ ಶರೀರದಾಶೆ ಕಣ್ಣಿನಾಶೆ
ಬದುಕುಬಾಳಿನ ಡಂಬ ಈ ಮೊದಲಾದವುಗಳೆಲ್ಲವು
ತಂದೆಯಿಂದ ಹುಟ್ಟದೆ ಲೋಕದಿಂದ ಹುಟ್ಟಿದವುಗಳಾ
17 ಗಿವೆ. ಲೋಕವೂ ಅದರ ಆಶೆಯೂ ಗತಿಸಿಹೋಗು
ತ್ತವೆ; ಆದರೆ ದೇವರ ಚಿತ್ತವನ್ನು ನೆರವೇರಿಸುವವನು
ಎಂದೆಂದಿಗೂ ಇರುವನು.

ಕ್ರಿಸ್ತವಿರೋಧಿಗಳಾದ ದುರ್ಬೋಧಕರ ವಿಷಯದಲ್ಲಿ ಎಚ್ಚರಿಕೆ.

18 ಮಕ್ಕಳಿರಾ, ಇದು ಕಡೇ ಗಳಿಗೆಯಾಗಿದೆ; 2)ಕ್ರಿಸ್ತ
ವಿರೋಧಿ ಬರುತ್ತಾನೆಂದು ನೀವು ಕೇಳಿದ್ದೀರಷ್ಟೆ;
ಈಗಲೂ ಕ್ರಿಸ್ತವಿರೋಧಿಗಳು ಬಹುಮಂದಿ ಎದ್ದಿ
ದ್ದಾರೆ; ಇದರಿಂದ ಇದು ಕಡೇ ಗಳಿಗೆಯಾಗಿದೆ
ಎಂದು ತಿಳುಕೊಳ್ಳುತ್ತೇವೆ. ಅವರು ನಮ್ಮನ್ನು 1
ಬಿಟ್ಟು ಹೊರಟುಹೋದರು, ಆದರೆ ಅವರು ನಮ್ಮವ
ರಾಗಿರಲಿಲ್ಲ. ಅವರು ನಮ್ಮವರಾಗಿದ್ದರೆ ನಮ್ಮ
ಜೊತೆಯಲ್ಲೇ ಇರುತ್ತಿದ್ದರು, ಆದರೆ ಅವರು ನಮ್ಮನ್ನು
ಬಿಟ್ಟುಹೋದದರಿಂದ ಕ್ರೈಸ್ತರೆನಿಸಿಕೊಳ್ಳುವವರೆಲ್ಲರೂ
ನಮ್ಮವರಲ್ಲವೆಂಬದು ಸ್ಪಷ್ಟವಾಗಿ ತೋರಬಂತು.
ನೀವು ಪವಿತ್ರನಾಗಿರುವಾತನಿಂದ ಅಭಿಷೇಕವನ್ನು 2
ಹೊಂದಿದವರಾಗಿದ್ದು 3)ಎಲ್ಲರೂ ತಿಳಿದವರಾಗಿದ್ದೀರಿ.
ನೀವು ಸತ್ಯವನ್ನು ತಿಳಿಯದವರೆಂಬ ಭಾವನೆಯಿಂದಲ್ಲ, 2
ನೀವು ಅದನ್ನು ತಿಳಿದಿರುವದರಿಂದಲೂ ಯಾವ ಸುಳ್ಳೂ
ಸತ್ಯದಿಂದ ಹುಟ್ಟಿ ಬರುವದಿಲ್ಲವೆಂಬದನ್ನು ನೀವು ತಿಳಿ
ದವರಾಗಿರುವದರಿಂದಲೂ ನಿಮಗೆ ಬರೆದೆನು.
ಯೇಸುವು ಕ್ರಿಸ್ತನಲ್ಲ ಎನ್ನುವವನು ಸುಳ್ಳುಗಾರ 2
ನಲ್ಲವಾದರೆ ಸುಳ್ಳುಗಾರನು ಬೇರೆ ಎಲ್ಲಿದ್ದಾನೆ?
ಯಾವನಾದರೂ ತಾನು ತಂದೆಯನ್ನೂ ಮಗನನ್ನೂ
ಅರಿಯೆನು ಎಂದು ಹೇಳಿದರೆ ಅವನೇ ಕ್ರಿಸ್ತವಿರೋಧಿ.
ತಾನು ದೇವರ ಮಗನಿಗೆ ಸೇರಿದವನಲ್ಲವೆನ್ನುವವನು 2
ತಂದೆಗೆ ಸೇರಿದವನಲ್ಲ; ತಾನು ಮಗನಿಗೆ ಸೇರಿದವ
ನೆಂದು ಒಪ್ಪಿಕೊಳ್ಳುವವನು ತಂದೆಗೂ ಸೇರಿದವನಾಗಿ
ದ್ದಾನೆ. ನೀವಂತೂ ಯಾವ ಬೋಧನೆಯನ್ನು ಮೊದ 2
ಲಿನಿಂದ ಕೇಳಿದ್ದೀರೋ ಅದು ನಿಮ್ಮಲ್ಲಿ ನೆಲೆಗೊಂಡಿ
ರಲಿ. ಮೊದಲಿನಿಂದ ನೀವು ಕೇಳಿದ ಬೋಧನೆಯು
ನಿಮ್ಮಲ್ಲಿ ನೆಲೆಗೊಂಡಿದ್ದರೆ ನೀವು ಸಹ ಮಗನಲ್ಲಿಯೂ
ತಂದೆಯಲ್ಲಿಯೂ ನೆಲೆಗೊಂಡಿರುತ್ತೀರಿ. ಕ್ರಿಸ್ತನು 2
ತಾನು ಕೊಡುತ್ತೇನೆಂದು ನಮಗೆ ವಾಗ್ದಾನಮಾಡಿದ್ದು
ನಿತ್ಯಜೀವವು.
ನಿಮ್ಮನ್ನು ಸನ್ಮಾರ್ಗದಿಂದ ತಪ್ಪಿಸಬೇಕೆಂದಿರುವ 2
ವರ ವಿಷಯವಾಗಿ ಈ ಸಂಗತಿಗಳನ್ನು ನಿಮಗೆ ಬರೆದಿ
ದ್ದೇನೆ. ಆದರೆ ಆತನಿಂದ ನೀವು ಹೊಂದಿದ ಅಭಿ 2
ಷೇಕವು ನಿಮ್ಮಲ್ಲಿ ನೆಲೆಗೊಂಡಿರುವದರಿಂದ ಯಾವ
ನಾದರೂ ನಿಮಗೆ ಉಪದೇಶ ಮಾಡುವದು ಅವಶ್ಯ
ವಿಲ್ಲ. ಆತನು ಮಾಡಿದ ಅಭಿಷೇಕವು ಎಲ್ಲಾ ವಿಷಯ
ಗಳಲ್ಲಿ ನಿಮಗೆ ಉಪದೇಶಮಾಡುವಂಥದಾಗಿದ್ದು
ಸತ್ಯವಾಗಿದೆ, ಸುಳ್ಳಲ್ಲ. ಅದು ನಿಮಗೆ ಉಪದೇಶ
ಮಾಡಿದ ಪ್ರಕಾರ ಆತನಲ್ಲಿ ನೆಲೆಗೊಂಡಿರ್ರಿ. ಪ್ರಿಯ 2
ರಾದ ಮಕ್ಕಳೇ, ಆತನು ಪ್ರತ್ಯಕ್ಷನಾಗುವಾಗ ನಾವು
ಆತನ ಆಗಮನದಲ್ಲಿ ಆತನ ಮುಂದೆ ನಿಲ್ಲಲು
ನಾಚಿಕೆಪಡದೆ ಧೈರ್ಯದಿಂದಿರುವಂತೆ ಆತನಲ್ಲಿ ನೆಲೆ
ಗೊಂಡಿರೋಣ. ಆತನು ನೀತಿವಂತನಾಗಿದ್ದಾನೆಂಬದು 2
ನಿಮಗೆ ಗೊತ್ತಾಗಿದ್ದರೆ ನೀತಿಯನ್ನು ಅನುಸರಿಸುವ
ಪ್ರತಿಯೊಬ್ಬನು ಆತನಿಂದ ಹುಟ್ಟಿದವನಾಗಿದ್ದಾನೆಂದು
ನೀವು ತಿಳಿದಿದ್ದೀರಿ.

ದೇವರ ಮಕ್ಕಳನ್ನೂ ಸೈತಾನನ ಮಕ್ಕಳನ್ನೂ ಕುರಿತದ್ದು.

ದೇವರ ಮಕ್ಕಳೆಂಬ ಹೆಸರನ್ನು ನಮಗೆ ಕೊಡು 3
ವದರಲ್ಲಿ ತಂದೆಯು ಎಂಥಾ ಪ್ರೀತಿಯನ್ನು ನಮ್ಮ

1) ಅಥವಾ, ಅಲಕ್ಷ್ಯಮಾಡುವವನು. 2) ಅಥವಾ, ಅಂತಿಕ್ರಿಸ್ತನೆಂಬುವವನು. 3) ಕೆಲವು ಪ್ರತಿಗಳಲ್ಲಿ—ಎಲ್ಲವನ್ನೂ ತಿಳಿದವರಾಗಿದ್ದೀರಿ ಎಂದು ಬರೆದದೆ.

ಮೇಲೆ ಇಟ್ಟಿದ್ದಾನೆ ನೋಡಿರಿ; ನಾವು ಆತನ ಮಕ್ಕ
ಳಾಗಿದ್ದೇವೆ. ಈ ಕಾರಣದಿಂದ ಲೋಕವು ನಮ್ಮನ್ನು
ತಿಳಿದುಕೊಳ್ಳುವದಿಲ್ಲ, ಅದು ಆತನನ್ನು ತಿಳಿದು
2 ಕೊಳ್ಳಲಿಲ್ಲವಲ್ಲಾ. ಪ್ರಿಯರೇ, ಈಗ ದೇವರ ಮಕ್ಕ
ಳಾಗಿದ್ದೇವೆ; ಮುಂದೆ ನಾವು ಏನಾಗುವೆವೋ ಅದು
ಇನ್ನು ಪ್ರತ್ಯಕ್ಷವಾಗಲಿಲ್ಲ. 1)ಕ್ರಿಸ್ತನು ಪ್ರತ್ಯಕ್ಷ
ನಾದರೆ ನಾವು 2)ಆತನ ಹಾಗಿರುವೆವೆಂದು ಬಲ್ಲೆವು;
ಯಾಕಂದರೆ ಆತನಿರುವ ಪ್ರಕಾರವೇ ಆತನನ್ನು
3 ನೋಡುವೆವು. ಆತನ ಮೇಲೆ ಈ ನಿರೀಕ್ಷೆಯನ್ನು
ಇಟ್ಟಿರುವ ಪ್ರತಿಯೊಬ್ಬನು ಕ್ರಿಸ್ತನು ಶುದ್ಧನಾಗಿರು
ವಂತೆಯೇ ತನ್ನನ್ನು ಶುದ್ಧಮಾಡಿಕೊಳ್ಳುತ್ತಾನೆ.
4 ಪಾಪಮಾಡುವ ಪ್ರತಿಯೊಬ್ಬನು ಅಧರ್ಮವನ್ನು
ಮಾಡುವವನಾಗಿದ್ದಾನೆ; ಪಾಪವು ಅಧರ್ಮವೇ.
5 ಪಾಪಗಳನ್ನು ಹೋಗಲಾಡಿಸುವದಕ್ಕಾಗಿ ಕ್ರಿಸ್ತ
ನು ಪ್ರತ್ಯಕ್ಷನಾದನೆಂಬದು ನಿಮಗೆ ಗೊತ್ತಾಗಿದೆ;
6 ಆತನಲ್ಲಿ ಪಾಪವಿಲ್ಲ. ಆತನಲ್ಲಿ ನೆಲೆಗೊಂಡಿರುವ
ವನು ಪಾಪಮಾಡನು; ಪಾಪಮಾಡುವವನು ಆತ
7 ನನ್ನು ಕಂಡವನೂ ಅಲ್ಲ, ತಿಳಿದವನೂ ಅಲ್ಲ. ಪ್ರಿಯ
ರಾದ ಮಕ್ಕಳೇ, ನಿಮ್ಮನ್ನು ಸನ್ಮಾರ್ಗದಿಂದ ತಪ್ಪಿ
ಸುವದಕ್ಕೆ ಯಾರಿಗೂ ಅವಕಾಶಕೊಡಬೇಡಿರಿ. ಕ್ರಿಸ್ತ
ನು ಹೇಗೆ ನೀತಿವಂತನಾಗಿದ್ದಾನೋ ಹಾಗೆಯೇ ನೀತಿ
8 ಯನ್ನನುಸರಿಸುವವನು ನೀತಿವಂತನಾಗಿದ್ದಾನೆ. ಪಾಪ
ಮಾಡುವವನು ಸೈತಾನನಿಂದ ಹುಟ್ಟಿದವನಾಗಿದ್ದಾನೆ;
ಆದಿಯಿಂದಲೂ ಸೈತಾನನು ಪಾಪಮಾಡುವವನಾಗಿ
ದ್ದಾನಲ್ಲಾ. ಸೈತಾನನ ಕೆಲಸಗಳನ್ನು ಲಯಮಾಡು
ವದಕ್ಕೋಸ್ಕರವೇ ದೇವಕುಮಾರನು ಪ್ರತ್ಯಕ್ಷನಾದನು.
9 ದೇವರಿಂದ ಹುಟ್ಟಿದವನು ಪಾಪಮಾಡನು;
ದೇವರ ಜೀವವು ಅವನಲ್ಲಿ ನೆಲೆಗೊಂಡದೆ. ಅವನು
ದೇವರಿಂದ ಹುಟ್ಟಿದ ಕಾರಣ ಪಾಪಮಾಡುವವನಾಗಿರ
10 ಲಾರನು. ಇವರು ದೇವರ ಮಕ್ಕಳೆಂಬದೂ ಅವರು
ಸೈತಾನನ ಮಕ್ಕಳೆಂಬದೂ ಇದರಿಂದ ವ್ಯಕ್ತವಾಗು
ತ್ತದೆ. ನೀತಿಯನ್ನು ಅನುಸರಿಸದವನೂ ತನ್ನ ಸಹೋ
ದರನನ್ನು ಪ್ರೀತಿಸದವನೂ ದೇವರಿಂದ ಹುಟ್ಟಿದ
11 ವರಲ್ಲ. ನಾವು ಒಬ್ಬರನ್ನೊಬ್ಬರು ಪ್ರೀತಿಸಬೇಕೆಂ
ಬದೇ ನೀವು ಮೊದಲಿನಿಂದಲೂ ಕೇಳಿದ ವಾಕ್ಯವಾ
12 ಗಿದೆ. ಕೆಡುಕನಿಂದ ಹುಟ್ಟಿ ತನ್ನ ತಮ್ಮನನ್ನು ಕೊಂದು
ಹಾಕಿದ ಕಾಯಿನನಂತೆ ನಾವು ಇರಬಾರದು. ಯಾವ
ಕಾರಣದಿಂದ ಅವನನ್ನು ಕೊಂದುಹಾಕಿದನು? ತನ್ನ
ಕೃತ್ಯಗಳು ಕೆಟ್ಟವುಗಳೂ ತನ್ನ ತಮ್ಮನ ಕೃತ್ಯಗಳು
ನೀತಿಗೆ ಸರಿಯಾದವುಗಳೂ ಆಗಿದ್ದದರಿಂದಲೇ.

ನಿತ್ಯಜೀವದಲ್ಲಿ ಸೇರಿರುವವರಿಗೆ ಪರರ ಪ್ರೀತಿಯಿರುವದು.

13 ಸಹೋದರರೇ, ಲೋಕವು ನಿಮ್ಮನ್ನು ದ್ವೇಷಿಸಿ
14 ದರೆ ಆಶ್ಚರ್ಯಪಡಬೇಡಿರಿ. ನಾವಂತೂ ಕ್ರೈಸ್ತಸಹೋದ
ರರನ್ನು ಪ್ರೀತಿಸುವವರಾಗಿರುವದರಿಂದ ಮರಣ
ದಿಂದ ಪಾರಾಗಿ ಜೀವದಲ್ಲಿ ಸೇರಿದ್ದೇವೆಂಬದು ನಮಗೆ
ಗೊತ್ತಾಗಿದೆ. ಪ್ರೀತಿಸದೆ ಇರುವವನು ಮರಣದಲ್ಲೇ
ಇದ್ದಾನೆ. ತನ್ನ ಸಹೋದರನನ್ನು ದ್ವೇಷಿಸುವವನು 15
ಕೊಲೆಗಾರನಾಗಿದ್ದಾನೆ, ಮತ್ತು ಯಾವ ಕೊಲೆ
ಗಾರನಲ್ಲಿಯೂ ನಿತ್ಯಜೀವವು ಇರುವದಿಲ್ಲವೆಂಬದು
ನಿಮಗೆ ಗೊತ್ತಾಗಿದೆ.
ಕ್ರಿಸ್ತನು ನಮಗೋಸ್ಕರ ತನ್ನ ಪ್ರಾಣವನ್ನು 16
ಕೊಟ್ಟದರಲ್ಲಿಯೇ ಪ್ರೀತಿ ಇಂಥದೆಂದು ನಮಗೆ ತಿಳಿದು
ಬಂದದೆ. ನಾವು ಸಹ ಸಹೋದರರಿಗೋಸ್ಕರ
ನಮ್ಮ ಪ್ರಾಣಗಳನ್ನು ಕೊಡುವ ಹಂಗಿನಲ್ಲಿದ್ದೇವೆ.
ಈ ಲೋಕದ ಸಂಪತ್ತುಳ್ಳ ಯಾವನಾದರೂ ಕೊರತೆ 17
ಯಲ್ಲಿ ಬಿದ್ದಿರುವ ತನ್ನ ಸಹೋದರನನ್ನು ನೋಡಿ
ಕರುಣಿಸದೆ ಬಿಟ್ಟರೆ ದೇವರ ಪ್ರೀತಿಯು ಅವನಲ್ಲಿ
ನೆಲೆಗೊಂಡಿರುವದುಂಟೇ? ಪ್ರಿಯರಾದ ಮಕ್ಕಳೇ, 18
ನಾವು ಬರೀಮಾತಿನಿಂದಾಗಲಿ ಬಾಯುಪಚಾರದಿಂದಾ
ಗಲಿ ಪ್ರೀತಿಸುವವರಾಗಿರಬಾರದು; ನಿಮ್ಮ ಪ್ರೀತಿಯು
ಕೃತ್ಯದಲ್ಲಿಯೂ ಸತ್ಯದಲ್ಲಿಯೂ ತೋರಬೇಕು.

ಯೇಸುವಿನಲ್ಲಿ ನಂಬಿಕೆಯಿಟ್ಟು ಪ್ರೀತಿಯಲ್ಲಿ ನಡೆದರೆ
ಮನಸ್ಸಮಾಧಾನವು ಉಂಟಾಗುವದಲ್ಲದೆ ನಾವು ಮಾಡುವ
ಪ್ರಾರ್ಥನೆ ಸಫಲವಾಗುವದು.

ನಾವು ಸತ್ಯಕ್ಕೆ ಸೇರಿದವರೆಂಬದು ಇದರಿಂದಲೇ 19
ನಮಗೆ ತಿಳಿಯುತ್ತದೆ. ಮತ್ತು ನಮ್ಮ ಹೃದಯವು 20
ಯಾವ ವಿಷಯದಲ್ಲಿಯಾದರೂ ನಮ್ಮನ್ನು ದೋಷಿಗ
ಳೆಂದು ನಿರ್ಣಯಿಸಿದರೂ ದೇವರು ನಮ್ಮ ಹೃದಯ
ಕ್ಕಿಂತ ದೊಡ್ಡವನಾಗಿದ್ದು ಎಲ್ಲವನ್ನೂ ಬಲ್ಲವನಾಗಿ
ದ್ದಾನೆಂದು ನಾವು ತಿಳಿದು ದೇವರ ಸಮಕ್ಷಮದಲ್ಲಿ
ನಮ್ಮ ಹೃದಯವನ್ನು ಸಮಾಧಾನಪಡಿಸುವೆವು. ಪ್ರಿ 21
ಯರೇ, ನಮ್ಮ ಹೃದಯವು ನಮ್ಮನ್ನು ದೋಷಿಗ
ಳೆಂದು ನಿರ್ಣಯಿಸದಿದ್ದರೆ ನಮಗೆ ದೇವರ ವಿಷಯ
ದಲ್ಲಿ ಧೈರ್ಯವುಂಟು. ಮತ್ತು ನಾವು ಆತನ ಆಜ್ಞೆಗ 22
ಳನ್ನು ಕೈಕೊಂಡು ಆತನ ಎಣಿಕೆಯಲ್ಲಿ ಮೆಚ್ಚಿಕೆ
ಯಾದ ಕಾರ್ಯಗಳನ್ನು ಮಾಡುವವರಾಗಿರುವದ
ರಿಂದ ಏನು ಬೇಡಿಕೊಂಡರೂ ಆತನಿಂದ ಹೊಂದು
ವೆವು. ದೇವರ ಆಜ್ಞೆ ಯಾವದಂದರೆ ನಾವು ಆತನ 23
ಮಗನಾದ ಯೇಸು ಕ್ರಿಸ್ತನ ಹೆಸರನ್ನು ನಂಬಿ ಕ್ರಿಸ್ತ
ನು ನಮಗೆ ಅಪ್ಪಣೆಕೊಟ್ಟ ಪ್ರಕಾರ ಒಬ್ಬರನ್ನೊಬ್ಬರು
ಪ್ರೀತಿಸಬೇಕೆಂಬದೇ. ಆತನ ಆಜ್ಞೆಗಳನ್ನು ಕೈಕೊಂಡು 24
ನಡೆಯುವವನು ಆತನಲ್ಲಿ ನೆಲೆಗೊಂಡಿರುತ್ತಾನೆ,
ಆತನು ಇವನಲ್ಲಿ ನೆಲೆಗೊಂಡಿರುತ್ತಾನೆ. ನಮ್ಮಲ್ಲಿ ನೆಲೆ
ಗೊಂಡಿದ್ದಾನೆಂದು ಆತನು ನಮಗೆ ಅನುಗ್ರಹಿಸಿದ
ಆತ್ಮನಿಂದಲೇ ಬಲ್ಲೆವು.

ಆತ್ಮಪ್ರೇರಿತ ನುಡಿಗಳು ಸತ್ಯವೋ ಅಸತ್ಯವೋ ಎಂದು
ತಿಳಿದುಕೊಳ್ಳುವದಕ್ಕಾಗಿ ಅವುಗಳನ್ನು ಪರೀಕ್ಷಿಸಬೇಕು.

**4** ಪ್ರಿಯರೇ, ಅನೇಕ ಮಂದಿ ಸುಳ್ಳುಪ್ರವಾದಿ
ಗಳು ಲೋಕದೊಳಗೆ ಬಂದಿರುವದರಿಂದ ನೀವು
3)ಆತ್ಮದ ಎಲ್ಲಾ ನುಡಿಗಳನ್ನು ನಂಬದೆ ಆಯಾ

1) ಮೂಲ: ಆತನು, ಅಥವಾ, ಅದು. 2) ಅಥವಾ, ದೇವರ. 3) ಮೂಲ: ಎಲ್ಲಾ ಆತ್ಮಗಳನ್ನು.

ನುಡಿಗಳು ದೇವರಿಂದ ಪ್ರೇರಿತವಾದವುಗಳೋ ಅಲ್ಲವೋ
2 ಎಂದು ಅವುಗಳನ್ನು ಪರೀಕ್ಷಿಸಬೇಕು. ಪ್ರೇರಿಸು
ವಂಥವನು ದೇವರ ಆತ್ಮನೇ ಎಂದು ತಿಳುಕೊಳ್ಳುವ
ದಕ್ಕೆ ಲಕ್ಷಣವೇನಂದರೆ—ಮನುಷ್ಯನಾಗಿ ಬಂದ
ಯೇಸು ಕ್ರಿಸ್ತನನ್ನು ಒಪ್ಪಿಕೊಳ್ಳುವ ಆತ್ಮವು ದೇವ
3 ರಿಂದ ಪ್ರೇರಿತವಾದದ್ದು. ಯೇಸುವನ್ನು 1)ಒಪ್ಪದೆ
ಇರುವ ಆತ್ಮವು ದೇವರಿಂದ ಪ್ರೇರಿತವಾದದ್ದಲ್ಲ; ಅದು
ಕ್ರಿಸ್ತವಿರೋಧಿಯ ಆತ್ಮವಾಗಿದೆ. ಅದು ಬರುವದೆಂಬ
ದನ್ನು ನೀವು ಕೇಳಿದ್ದೀರಲ್ಲಾ; ಈಗಲೂ ಲೋಕ
ದಲ್ಲಿ ಅದೆ.
4 ಪ್ರಿಯರಾದ ಮಕ್ಕಳೇ, ನೀವಂತೂ ದೇವರಿಂದ
ಹುಟ್ಟಿದವರಾಗಿದ್ದೀರಿ; ಮತ್ತು ಲೋಕದಲ್ಲಿರುವವ
ನಿಗಿಂತ ನಿಮ್ಮಲ್ಲಿರುವಾತನು ಹೆಚ್ಚಿನವನಾಗಿರುವದರಿಂದ
ನೀವು ಆ ಸುಳ್ಳು ಪ್ರವಾದಿಗಳನ್ನು ಜಯಿಸಿದ್ದೀರಿ.
5 ಅವರು ಲೋಕದಿಂದ ಹುಟ್ಟಿದವರಾಗಿದ್ದಾರೆ; ಈ
ಕಾರಣದಿಂದ ಅವರು ಲೋಕಪ್ರೇರಿತರಾಗಿ ಮಾತಾಡು
ತ್ತಾರೆ, ಮತ್ತು ಲೋಕದವರು ಅವರ ಮಾತನ್ನು
6 ಕೇಳುತ್ತಾರೆ. ನಾವಂತೂ ದೇವರಿಂದ ಹುಟ್ಟಿದವ
ರಾಗಿದ್ದೇವೆ; ದೇವರನ್ನು ಬಲ್ಲವನು ನಮ್ಮ ಮಾತನ್ನು
ಕೇಳುತ್ತಾನೆ; ದೇವರಿಂದ ಹುಟ್ಟದವನು ನಮ್ಮ ಮಾ
ತನ್ನು ಕೇಳುವದಿಲ್ಲ. ಇದು ಸತ್ಯವನ್ನು ಬೋಧಿ
ಸುವ ಆತ್ಮ, ಅದು ಸುಳ್ಳನ್ನು ಬೋಧಿಸುವ ಆತ್ಮ
ಎಂದು ಇದರಿಂದಲೇ ತಿಳುಕೊಳ್ಳುತ್ತೇವೆ.

### ದೇವರಿಂದ ಹುಟ್ಟಿದವರಲ್ಲಿ ಪ್ರೀತಿಸ್ವಭಾವವೇ ವಿಶೇಷ.

7 ಪ್ರಿಯರೇ, ನಾವು ಒಬ್ಬರನ್ನೊಬ್ಬರು ಪ್ರೀತಿ
ಸೋಣ. ಪ್ರೀತಿಯು ದೇವರಿಂದಾಗಿದೆ, ಮತ್ತು ಪ್ರೀತಿ
ಮಾಡುವ ಪ್ರತಿಯೊಬ್ಬನು ದೇವರಿಂದ ಹುಟ್ಟಿದವನೂ
8 ದೇವರನ್ನು ಬಲ್ಲವನೂ ಆಗಿದ್ದಾನೆ. ಪ್ರೀತಿಯಿಲ್ಲ
ದವನು ದೇವರನ್ನು ಬಲ್ಲವನಲ್ಲ; ಯಾಕಂದರೆ
9 ದೇವರು ಪ್ರೀತಿಸ್ವರೂಪಿಯು. ದೇವರು ತನ್ನ
ಒಬ್ಬನೇ ಮಗನನ್ನು ನಾವು ಆತನ ಮೂಲಕ ಜೀವಿಸು
ವದಕ್ಕಾಗಿ ಲೋಕಕ್ಕೆ ಕಳುಹಿಸಿಕೊಟ್ಟದರಲ್ಲಿಯೇ
ದೇವರ ಪ್ರೀತಿಯು ನಮ್ಮಲ್ಲಿ ಪ್ರತ್ಯಕ್ಷವಾಗಿದೆ.
10 ನಾವು ದೇವರನ್ನು ಪ್ರೀತಿಸಿದ್ದರಲ್ಲಿಯಲ್ಲ, ಆತನು
ನಮ್ಮನ್ನು ಪ್ರೀತಿಸಿ ನಮ್ಮ ಪಾಪನಿವಾರಣಾರ್ಥ
ವಾಗಿ ತನ್ನ ಮಗನನ್ನು ಕಳುಹಿಸಿಕೊಟ್ಟದರಲ್ಲಿಯೇ
ಪ್ರೀತಿಯ ನಿಜ ಗುಣವು ತೋರಿಬರುತ್ತದೆ.
11 ಪ್ರಿಯರೇ, ದೇವರು ನಮ್ಮನ್ನು ಹೀಗೆ ಪ್ರೀತಿಸಿದ
ಮೇಲೆ ನಾವು ಒಬ್ಬರನ್ನೊಬ್ಬರು ಪ್ರೀತಿಸುವ ಹಂಗಿನಲ್ಲಿ
12 ದ್ದೇವೆ. ದೇವರನ್ನು ಯಾರೂ ಎಂದೂ ನೋಡಿಲ್ಲ;
ನಾವು ಒಬ್ಬರನ್ನೊಬ್ಬರು ಪ್ರೀತಿಸಿದರೆ ದೇವರು ನಮ್ಮಲ್ಲಿ
ನೆಲೆಗೊಂಡಿದ್ದಾನೆ, ಮತ್ತು 2)ಆತನಿಂದಾಗುವ ಪ್ರೀತಿ
13 ಯು ನಮ್ಮಲ್ಲಿ ಸಿದ್ಧಿಗೆ ಬರುತ್ತದೆ. ದೇವರು ನಮ
ಗೆ ತನ್ನ ಆತ್ಮದಲ್ಲಿ ಪಾಲನ್ನು ಅನುಗ್ರಹಿಸಿದ್ದರಿಂ
ದಲೇ ನಾವು ಆತನಲ್ಲಿ ನೆಲೆಗೊಂಡಿದ್ದೇವೆಂತಲೂ ಆತ
ನು ನಮ್ಮಲ್ಲಿ ನೆಲೆಗೊಂಡಿದ್ದಾನೆಂತಲೂ ತಿಳಿದುಕೊಳ್ಳು
ತ್ತೇವೆ. ತಂದೆಯು ತನ್ನ ಮಗನನ್ನು ಲೋಕರಕ್ಷಕ 14
ನನ್ನಾಗಿ ಕಳುಹಿಸಿಕೊಟ್ಟಿರುವದನ್ನು ನಾವು ನೋಡಿ
ದ್ದೇವೆ, ಅದರ ವಿಷಯದಲ್ಲಿ ಸಾಕ್ಷಿಹೇಳುತ್ತೇವೆ.
ಯೇಸು ದೇವರ ಮಗನಾಗಿದ್ದಾನೆಂದು ಯಾವನು 15
ಒಪ್ಪಿಕೊಂಡು ಹೇಳುತ್ತಾನೋ ಅವನಲ್ಲಿ ದೇವರು ನೆಲೆ
ಗೊಂಡಿದ್ದಾನೆ, ಅವನು ದೇವರಲ್ಲಿ ನೆಲೆಗೊಂಡಿದ್ದಾನೆ.
ದೇವರು ನಮ್ಮಲ್ಲಿಟ್ಟಿರುವ ಪ್ರೀತಿಯನ್ನು ನಾವು ತಿಳಿ 16
ದುಕೊಂಡಿದ್ದೇವೆ ಅದನ್ನು ನಂಬಿದ್ದೇವೆ.
ದೇವರು ಪ್ರೀತಿಸ್ವರೂಪಿ; ಪ್ರೀತಿಯಲ್ಲಿ ನೆಲೆ
ಗೊಂಡಿರುವವನು ದೇವರಲ್ಲಿ ನೆಲೆಗೊಂಡಿದ್ದಾನೆ, ದೇವ
ರು ಅವನಲ್ಲಿ ನೆಲೆಗೊಂಡಿದ್ದಾನೆ. 3)ನ್ಯಾಯತೀರ್ಪಿನ 17
ದಿನದಲ್ಲಿ ನಮಗಿರುವ ಧೈರ್ಯದಲ್ಲಿಯೇ ಆತನ
ಪ್ರೀತಿಯು ನಮ್ಮೊಳಗೆ ಸಿದ್ಧಿಗೆ ಬಂತು. ಯಾಕಂದರೆ
ಕ್ರಿಸ್ತನು ಎಂಥವನಾಗಿದ್ದಾನೋ ನಾವು ಅಂಥವರಾಗಿ
ಯೇ ಈ ಲೋಕದಲ್ಲಿದ್ದೇವೆ. ಪ್ರೀತಿಯು ಇರುವಲ್ಲಿ 18
ಹೆದರಿಕೆಯಿಲ್ಲ. ಹೆದರಿಕೆಯು ಯಾತನೆಯನ್ನು
ಹೊಂದುತ್ತಾ ಇರುವದು; ಪೂರ್ಣಪ್ರೀತಿಯು ಹೆದರಿಕೆ
ಯನ್ನು ಹೊರಡಿಸಿಬಿಡುತ್ತದೆ. ಹೆದರುವವನು ಪ್ರೀತಿ
ಯಲ್ಲಿ ಸಿದ್ಧಿಗೆ ಬಂದವನಲ್ಲ. ದೇವರು ಮೊದಲು 19
ನಮ್ಮನ್ನು ಪ್ರೀತಿಸಿದ್ದರಿಂದ ನಾವು 4)ಪ್ರೀತಿಸುತ್ತೇವೆ.
ಒಬ್ಬನು ತಾನು ದೇವರನ್ನು ಪ್ರೀತಿಸುತ್ತೇನೆಂದು 20
ಹೇಳಿ ತನ್ನ ಸಹೋದರನನ್ನು ದ್ವೇಷಿಸಿದರೆ ಅವನು
ಸುಳ್ಳುಗಾರನಾಗಿದ್ದಾನೆ. ತಾನು ಕಂಡಿರುವ ತನ್ನ
ಸಹೋದರನನ್ನು ಪ್ರೀತಿಸದವನು ತಾನು ಕಾಣ
ದಿರುವ ದೇವರನ್ನು ಪ್ರೀತಿಸಲಾರನು. ದೇವರನ್ನು 21
ಪ್ರೀತಿಸುವವನು ತನ್ನ ಸಹೋದರನನ್ನೂ ಪ್ರೀತಿಸ
ಬೇಕೆಂಬ ಆಜ್ಞೆಯನ್ನು ನಾವು ಆತನಿಂದ ಹೊಂದಿ
ದ್ದೇವೆ.

### ಕ್ರಿಸ್ತನಲ್ಲಿ ನಂಬಿಕೆಯಿಟ್ಟವರು ಲೋಕವನ್ನು ಜಯಿಸುತ್ತಾರೆ.

ಯೇಸುವು ಕ್ರಿಸ್ತನೆಂದು ನಂಬುವ ಪ್ರತಿಯೊಬ್ಬ 5
ನು ದೇವರಿಂದ ಹುಟ್ಟಿದವನಾಗಿದ್ದಾನೆ. ಯಾವನು
ಹುಟ್ಟಿಸಿದ ತಂದೆಯನ್ನು ಪ್ರೀತಿಸುತ್ತಾನೋ ಅವನು
ತಂದೆಯಿಂದ ಹುಟ್ಟಿದವರೆಲ್ಲರನ್ನೂ ಪ್ರೀತಿಸುತ್ತಾನೆ,
ನಾವು ದೇವರ ಮಕ್ಕಳನ್ನು ಪ್ರೀತಿಸುತ್ತೇವೆಂಬದನ್ನು 2
ದೇವರನ್ನು ಪ್ರೀತಿಸಿ ಆತನ ಆಜ್ಞೆಗಳನ್ನು ಅನುಸರಿಸು
ವದರಿಂದಲೇ ತಿಳಿದುಕೊಳ್ಳುತ್ತೇವೆ. ದೇವರ ಮೇಲಣ 3
ಪ್ರೀತಿ ಏನಂದರೆ ಆತನ ಆಜ್ಞೆಗಳನ್ನು ಕೈಕೊಂಡು ನಡೆ
ಯುವದೇ. ಆತನ ಆಜ್ಞೆಗಳು ಭಾರವಾದವುಗಳಲ್ಲ.
ಯಾಕಂದರೆ ದೇವರಿಂದ ಹುಟ್ಟಿರುವಂಥದೆಲ್ಲವು 4
ಲೋಕವನ್ನು ಜಯಿಸುತ್ತದೆ. ಲೋಕವನ್ನು ಜಯಿಸಿ
ದಂಥದು ನಮ್ಮ ನಂಬಿಕೆಯೇ. ಯೇಸುವು ದೇವರ 5
ಮಗನೆಂದು ನಂಬಿದವರೇ ಅಲ್ಲದೆ ಲೋಕವನ್ನು ಜಯಿ
ಸುವವರು ಇನ್ನಾರಿದ್ದಾರೆ?

---

1) ಕೆಲವು ಪ್ರತಿಗಳಲ್ಲಿ—ತಳ್ಳಿಬಿಡುವ ಎಂದು ಬರೆದದೆ. 2) ಮೂಲ: ಆತನ ಪ್ರೀತಿ. 3) ಅಥವಾ, (ಇದರಿಂದಲೇ ಆತನ ಪ್ರೀತಿಯು ನಮ್ಮೊಳಗೆ ಸಿದ್ಧಿಗೆ ಬಂತು;) ನ್ಯಾಯತೀರ್ಪಿನ ದಿನದಲ್ಲಿ ನಮಗೆ ಧೈರ್ಯವಿರುವಂತೆ. 4) ಅಥವಾ, ಪ್ರೀತಿಸೋಣ.

ಕ್ರಿಸ್ತನ ಮುಖಾಂತರ ನಿತ್ಯಜೀವ ದೊರೆಯುತ್ತದೆಂಬದಕ್ಕೆ ಸಾಕ್ಷಿಗಳು.

6 ಈತನು, ಅಂದರೆ ಯೇಸು ಕ್ರಿಸ್ತನು, ನೀರಿನಿಂದ
ಲೂ ರಕ್ತದಿಂದಲೂ ಸಾಕ್ಷಿ ಹೊಂದಿದವನು. ನೀರಿನಿಂದ
ಮಾತ್ರವಲ್ಲ, ನೀರಿನಿಂದಲೂ ರಕ್ತದಿಂದಲೂ ಸಾಕ್ಷಿ
7 ಹೊಂದಿದವನಾಗಿದ್ದಾನೆ. ಇದಲ್ಲದೆ ಆತ್ಮನು ಸಾಕ್ಷಿ
ಕೊಡುವವನಾಗಿದ್ದಾನೆ; ಆತ್ಮನು ಸತ್ಯಸ್ವರೂಪನೇ.
8 ಆತ್ಮ ನೀರು ರಕ್ತ ಎಂಬ ಮೂರು ಸಾಕ್ಷಿಗಳುಂಟು;
ಈ ಮೂರು ಒಂದೇ ಅಭಿಪ್ರಾಯವಾಗಿ ಸಾಕ್ಷಿಹೇಳು
9 ತ್ತವೆ. ನಾವು ಮನುಷ್ಯರ ಸಾಕ್ಷಿಯನ್ನು ತೆಗೆದು
ಕೊಳ್ಳುತ್ತೇವಲ್ಲಾ; ದೇವರ ಸಾಕ್ಷಿಯು ಅದಕ್ಕಿಂತ
ವಿಶೇಷವಾಗಿದೆ. ದೇವರು ಕೊಟ್ಟ ಸಾಕ್ಷಿ ಏನಂದರೆ
ಆತನು ತನ್ನ ಮಗನ ವಿಷಯದಲ್ಲಿ ಹೇಳಿದ್ದೇ.
10 ದೇವರ ಮಗನಲ್ಲಿ ನಂಬಿಕೆ ಇಟ್ಟವನು ಆ ಸಾಕ್ಷಿ
ಯನ್ನು ತನ್ನಲ್ಲೇ ಹೊಂದಿದ್ದಾನೆ. ದೇವರನ್ನು
ನಂಬದವನು ಆತನನ್ನು ಸುಳ್ಳುಗಾರನನ್ನಾಗಿ ಮಾಡಿ
ದ್ದಾನೆ; ಹೇಗಂದರೆ ದೇವರು ತನ್ನ ಮಗನ ವಿಷಯ
ವಾಗಿ ಹೇಳಿರುವ ಸಾಕ್ಷಿಯಲ್ಲಿ ಅವನು ನಂಬಿಕೆಯಿಡ
11 ಲಿಲ್ಲ. ಆ ಸಾಕ್ಷಿ ಯಾವದಂದರೆ ದೇವರು ನಮಗೆ
ನಿತ್ಯಜೀವವನ್ನು ಅನುಗ್ರಹಿಸಿದನು, ಆ ಜೀವವು
12 ಆತನ ಮಗನಲ್ಲಿ ಅದೆ ಎಂಬದೇ. ಯಾವನು
ದೇವರ ಮಗನನ್ನು ಅಂಗೀಕರಿಸಿದ್ದಾನೋ ಅವನಿಗೆ ಆ
ಜೀವ ಉಂಟು; ಯಾವನು ದೇವರ ಮಗನನ್ನು ಅಂಗೀ
ಕರಿಸಲಿಲ್ಲವೋ ಅವನಿಗೆ ಆ ಜೀವವಿಲ್ಲ.

ದೇವಕುಮಾರನಲ್ಲಿ ನಂಬಿಕೆಯಿಟ್ಟವರಿಗೆ ದೃಢನಿಶ್ಚಯ ವಿರುವದು.

13 ದೇವರ ಮಗನ ಹೆಸರಿನಲ್ಲಿ ನಂಬಿಕೆಯಿಟ್ಟಿರು
ವವರಾದ ನಿಮ್ಮಲ್ಲಿ ನಿತ್ಯಜೀವ ಉಂಟೆಂದು ನಿಮಗೆ
ಗೊತ್ತಾಗುವಂತೆ ಈ ಮಾತುಗಳನ್ನು ಬರೆದಿದ್ದೇನೆ.
ಮತ್ತು ನಾವು ದೇವರ ಚಿತ್ತಾನುಸಾರವಾಗಿ ಏನಾ 14
ದರೂ ಬೇಡಿಕೊಂಡರೆ ಆತನು ನಮ್ಮ ವಿಜ್ಞಾಪನೆಯನ್ನು
ಕೇಳುತ್ತಾನೆಂಬ ಧೈರ್ಯವು ಆತನ ವಿಷಯವಾಗಿ
ನಮಗುಂಟು. ನಾವು ಏನು ಬೇಡಿಕೊಂಡರೂ ಆತನು 15
ನಮ್ಮ ವಿಜ್ಞಾಪನೆಯನ್ನು ಕೇಳುತ್ತಾನೆಂಬದು ನಮಗೆ
ಗೊತ್ತಾಗಿದ್ದರೆ ನಾವು ಬೇಡಿದವುಗಳು ಆತನಿಂದ
ನಮಗೆ ದೊರೆತವೆಂಬದೂ ನಮಗೆ ಗೊತ್ತಾಗಿದೆ.
ಯಾವನಾದರೂ ತನ್ನ ಸಹೋದರನು ಮರಣಕರ 16
ವಲ್ಲದ ಪಾಪಮಾಡುವದನ್ನು ಕಂಡರೆ ಅವನು ದೇವ
ರನ್ನು ಬೇಡಿಕೊಳ್ಳಲಿ; ಆಗ ದೇವರು ಮರಣಕರ
ವಲ್ಲದ ಪಾಪಮಾಡುವವರಿಗೆ ಜೀವವನ್ನು ದಯಪಾಲಿ
ಸುವನು. ಮರಣಕರವಾದ ಪಾಪವುಂಟು; ಈ ಪಾಪದ
ವಿಷಯವಾಗಿ ಬೇಡಿಕೊಳ್ಳಬೇಕೆಂದು ನಾನು ಹೇಳುವ
ದಿಲ್ಲ. ನೀತಿಗೆ ವಿರುದ್ಧವಾದದ್ದೆಲ್ಲಾ ಪಾಪವಾಗಿದೆ; 17
ಆದರೂ ಮರಣಕರವಲ್ಲದ ಪಾಪವುಂಟು.

ದೇವರಿಂದ ಹುಟ್ಟಿರುವವನು ಪಾಪಮಾಡುವವ 18
ನಲ್ಲವೆಂಬದು ನಮಗೆ ಗೊತ್ತದೆ. 1)ದೇವರಿಂದ ಹುಟ್ಟಿ
ದಾತನು ಅವನನ್ನು ಕಾಪಾಡುವನು; ಕೆಡುಕನು
ಅವನನ್ನು ಹಿಡಿಯುವದಿಲ್ಲ. ನಾವು ದೇವರಿಂದ ಹುಟ್ಟಿ 19
ದವರೆಂದೂ ಲೋಕವೆಲ್ಲವು ಕೆಡುಕನ ವಶದಲ್ಲಿ
ಬಿದ್ದಿದೆ ಎಂದೂ ನಮಗೆ ಗೊತ್ತದೆ. ದೇವರ ಮಗನು 20
ಬಂದು ನಾವು ಸತ್ಯವಾಗಿರುವಾತನನ್ನು ಅರಿತುಕೊಳ್ಳುವ
ಹಾಗೆ ನಮಗೆ ವಿವೇಕವನ್ನು ಕೊಟ್ಟಿದ್ದಾನೆಂಬದು
ನಮಗೆ ಗೊತ್ತದೆ. ಮತ್ತು ನಾವು ದೇವರ ಮಗನಾದ
ಯೇಸು ಕ್ರಿಸ್ತನಲ್ಲಿ ಇರುವವರಾಗಿ ಸತ್ಯವಾಗಿರುವಾತ
ನಲ್ಲಿದ್ದೇವೆ. ಆತನು ಸತ್ಯದೇವರೂ ನಿತ್ಯಜೀವವೂ
ಆಗಿದ್ದಾನೆ.

ಪ್ರಿಯರಾದ ಮಕ್ಕಳೇ, ವಿಗ್ರಹಗಳಿಗೆ ದೂರ 21
ವಾಗಿರುವಂತೆ ನಿಮ್ಮನ್ನು ಕಾಪಾಡಿಕೊಳ್ಳಿರಿ.

# THE SECOND EPISTLE OF SAINT
# JOHN

## ಯೋಹಾನನು ಬರೆದ ಎರಡನೆಯ ಪತ್ರಿಕೆ

ದುರ್ಬೋಧಕರ ವಿಷಯದಲಿ ಎಚ್ಚರಿಕೆ.

1-2 ಸಭೆಯ ಹಿರಿಯನು ದೇವರಾದುಕೊಂಡವರಾದ
2)ಅಮ್ಮನವರಿಗೂ ಆಕೆಯ ಮಕ್ಕಳಿಗೂ ಬರೆಯುವ
ದೇನಂದರೆ—ನಮ್ಮಲ್ಲಿ ನೆಲೆಗೊಂಡಿರುವಂಥ ಮತ್ತು
ಸದಾಕಾಲವೂ ನಮ್ಮೊಂದಿಗಿರುವಂಥ ಸತ್ಯದ ನಿಮಿತ್ತ
ನಾನು ನಿಮ್ಮನ್ನು ಸತ್ಯವಾಗಿ ಪ್ರೀತಿಸುತ್ತೇನೆ; ನಾನು
ಮಾತ್ರವಲ್ಲದೆ ಸತ್ಯವನ್ನು ತಿಳಿದಿರುವವರೆಲ್ಲರೂ

1) ಅಂದರೆ ಯೇಸು ಕ್ರಿಸ್ತನು. ಆದರೆ ಕೆಲವು ಪ್ರತಿಗಳಲ್ಲಿ—ದೇವರಿಂದ ಹುಟ್ಟಿದವನು ತನ್ನನ್ನು ಕಾಪಾಡಿಕೊಳ್ಳುವನು ಎಂದು ಬರೆದದೆ.
2) ಕೆಲವರು ಸಭೆಗೆ ಎಂದು ಅರ್ಥ ಮಾಡಿಕೊಳ್ಳುತ್ತಾರೆ.

3 ನಿಮ್ಮನ್ನು ಪ್ರೀತಿಸುತ್ತಾರೆ. ತಂದೆಯಾದ ದೇವರಿಂದ
ಲೂ ಆ ತಂದೆಯ ಮಗನಾದ ಯೇಸು ಕ್ರಿಸ್ತನಿಂದಲೂ
ಕೃಪೆಯೂ ಕರುಣೆಯೂ ಶಾಂತಿಯೂ ಸತ್ಯಪೂರ್ವಕವಾ
ಗಿಯೂ ಪ್ರೀತಿಪೂರ್ವಕವಾಗಿಯೂ ನಮ್ಮೊಂದಿಗಿರುವವು.
4 ನಿನ್ನ ಮಕ್ಕಳಲ್ಲಿ ಕೆಲವರು ತಂದೆಯಿಂದ ನಮ
ಗುಂಟಾದ ಆಜ್ಞಾನುಸಾರ ಸತ್ಯವಂತರಾಗಿ ನಡೆಯು
ವದನ್ನು ಕಂಡು ಬಹಳ ಸಂತೋಷವುಳ್ಳವನಾದೆನು.
5 ಅಮ್ಮನವರೇ, ನಾನು ಹೊಸ ಆಜ್ಞೆಯನ್ನು ನಿಮಗೆ
ಬರೆಯದೆ ಮೊದಲಿಂದಲೂ ನಮಗೆ ಬಂದ ಆಜ್ಞೆಯನ್ನು
ಬರೆಯುವವನಾಗಿ—ನಾವು ಒಬ್ಬರನ್ನೊಬ್ಬರು ಪ್ರೀತಿ
ಸುವವರಾಗಿರೋಣ ಎಂದು ನಿನ್ನನ್ನು ಕೇಳಿಕೊಳ್ಳು
6 ತ್ತೇನೆ. ದೇವರ ಆಜ್ಞೆಗಳನ್ನು ಅನುಸರಿಸಿ ನಡೆಯು
ವದೇ ಪ್ರೀತಿ; ಪ್ರೀತಿಯಲ್ಲಿ ನಡೆಯಬೇಕೆಂಬದೇ
ನೀವು ಮೊದಲಿಂದಲೂ ಕೇಳಿದ ಅಪ್ಪಣೆಯಾಗಿದೆ.
7 ಮನುಷ್ಯನಾಗಿ 1)ಬಂದಿರುವ ಯೇಸು ಕ್ರಿಸ್ತನನ್ನು
ಒಪ್ಪದೆ ಇರುವ ಮೋಸಗಾರರು ಅನೇಕ ಮಂದಿ
ಹೊರಟು ಲೋಕದೊಳಗೆ ಹೋಗಿದ್ದಾರೆ. ಯೇಸು
ವನ್ನು ಒಪ್ಪದವನು ಮೋಸಗಾರನೂ ಕ್ರಿಸ್ತವಿರೋಧಿ
8 ಯೂ ಆಗಿದ್ದಾನೆ. ನಾವು ಪ್ರಯಾಸಪಟ್ಟು ಮಾಡಿ
ದವುಗಳನ್ನು ನೀವು ಕಳಕೊಳ್ಳದೆ ಪೂರ್ಣಫಲ
ವನ್ನು ಹೊಂದುವಂತೆ ಜಾಗರೂಕರಾಗಿರಿ. ಕ್ರಿಸ್ತನ
ಉಪದೇಶದಲ್ಲಿ ನೆಲೆಗೊಳ್ಳದೆ ಅದನ್ನು ಅತಿಕ್ರಮಿಸಿ
ಮುಂದಕ್ಕೆ ಹೋಗುವವನಿಗೆ ದೇವರ ಅನ್ಯೋನ್ಯತೆ
ಯಿಲ್ಲ. ಆ ಉಪದೇಶದಲ್ಲಿ ನೆಲೆಗೊಂಡಿರುವವನಿಗೆ
ತಂದೆಯ ಮತ್ತು ಮಗನ ಅನ್ಯೋನ್ಯತೆ ಉಂಟು.
ಈ ಉಪದೇಶಕ್ಕೆ ಒಪ್ಪದಿರುವ ಯಾವನಾದರೂ ನಿಮ್ಮ 1
ಬಳಿಗೆ ಬಂದರೆ ಅವನನ್ನು ಮನೆಯೊಳಗೆ ಸೇರಿಸಿ
ಕೊಳ್ಳಬೇಡಿರಿ, ಅವನಿಗೆ ಶುಭವಾಗಲಿ ಎಂದು ಹೇಳ
ಬೇಡಿರಿ. ಅವನಿಗೆ ಶುಭವಾಗಲಿ ಎಂದು ಹೇಳುವವನು 1
ಅವನ ದುಷ್ಕೃತ್ಯಗಳಲ್ಲಿ ಪಾಲುಗಾರನಾಗುತ್ತಾನೆ.
ನಿಮಗೆ ಬರೆಯುವದಕ್ಕೆ ನನಗೆ ಅನೇಕ ಸಂಗತಿ 1
ಗಳಿದ್ದರೂ ಅವುಗಳನ್ನು ಮಸಿಯಿಂದ ಕಾಗದದ ಮೇಲೆ
ಬರೆದು ತಿಳಿಸುವದಕ್ಕೆ ನನಗೆ ಮನಸ್ಸಿಲ್ಲ. ನಾನು
ನಿಮ್ಮ ಬಳಿಗೆ ಬಂದು ನಿಮ್ಮ ಸಂಗಡ ಮುಖಾಮುಖಿ
ಯಾಗಿ ಮಾತಾಡುವೆನೆಂದು ನಿರೀಕ್ಷಿಸುತ್ತೇನೆ. ಆಗ 1
ನಿಮ್ಮ ಸಂತೋಷವು ಪರಿಪೂರ್ಣವಾಗುವದು. ದೇವ
ರಾದುಕೊಂಡವಳಾದ ನಿನ್ನ ಸಹೋದರಿಯ ಮಕ್ಕಳು
ನಿನಗೆ ವಂದನೆಹೇಳುತ್ತಾರೆ.

---

# THE THIRD EPISTLE OF SAINT
# JOHN

# ಯೋಹಾನನು ಬರೆದ ಮೂರನೆಯ ಪತ್ರಿಕೆ

ಗಾಯನ ಮತ್ತು ದೇಮೇತ್ರಿಯ ಶ್ಲಾಘೆಯೂ, ದಿಯೊತ್ರೇಫನ ಖಂಡನೆಯೂ.

1 ಸಭೆಯ ಹಿರಿಯನು ತಾನು ಸತ್ಯವಾಗಿ ಪ್ರೀತಿಸುವ
ಪ್ರಿಯ ಗಾಯನಿಗೆ ಬರೆಯುವದೇನಂದರೆ—
2 ಪ್ರಿಯನೇ, ನೀನು ಆತ್ಮವಿಷಯದಲ್ಲಿ ಅಭಿವೃದ್ಧಿ
ಹೊಂದಿರುವ ಪ್ರಕಾರ ಎಲ್ಲಾ ವಿಷಯಗಳಲ್ಲಿಯೂ ಅಭಿ
ವೃದ್ಧಿ ಹೊಂದಿ ಸುಕ್ಷೇಮವಾಗಿರಬೇಕೆಂದು ಪ್ರಾರ್ಥಿಸು
3 ತ್ತೇನೆ. ಸಹೋದರರು ಆಗಾಗ್ಗೆ ನನ್ನ ಬಳಿಗೆ ಬಂದು ನಿನ್ನ
ಲ್ಲಿರುವ ಸತ್ಯವನ್ನು ಕುರಿತು ತಿಳಿಸಿ ನೀನು ಸತ್ಯವಂತ
ನಾಗಿ ನಡೆಯುವವನು ಎಂದು ಹೇಳುವಾಗ ನಾನು
4 ಬಹಳ ಸಂತೋಷಪಡುತ್ತೇನೆ. ನನ್ನ ಮಕ್ಕಳು ಸತ್ಯ
ವನ್ನನುಸರಿಸಿ ನಡೆಯುವವರಾಗಿದ್ದಾರೆಂದು ಕೇಳುವದ
ಕ್ಕಿಂತ ಹೆಚ್ಚಾದ ಸಂತೋಷವು ನನಗಿಲ್ಲ.
5 ಪ್ರಿಯನೇ, ಪರಿಚಯವಿಲ್ಲದವರಾದ ಸಹೋದರ
ರಿಗೂ ನೀನು ಸತ್ಕಾರವನ್ನು ಮಾಡುವದರಲ್ಲಿ ನಂಬು
6 ವವನಿಗೆ ಯೋಗ್ಯನಾಗಿ ನಡೆಯುತ್ತೀ. ಅವರು ಸಭೆಯ
ಮುಂದೆ ನಿನ್ನ ಪ್ರೀತಿಗೆ ಸಾಕ್ಷಿಹೇಳಿದರು. ಅವರನ್ನು
ನೀನು ದೇವರ ಸೇವಕರಿಗೆ ಯೋಗ್ಯವಾದ ರೀತಿಯಿಂದ
ಸಾಗ ಕಳುಹಿಸಿದರೆ ಚೆನ್ನಾಗಿರುವದು. ಯಾಕಂದರೆ
ಅವರು ಕ್ರಿಸ್ತನ ಹೆಸರನ್ನು ಪ್ರಸಿದ್ಧಿಪಡಿಸುವದಕ್ಕೋ
ಸ್ಕರ ಹೊರಟುಹೋಗಿದ್ದಾರೆ ಮತ್ತು ಅನ್ಯಜನಗಳಿಂದ
ಏನೂ ತೆಗೆದುಕೊಳ್ಳುವವರಲ್ಲ. ಆದದರಿಂದ ನಾವು
ಸತ್ಯಕ್ಕೆ ಸಹಕಾರಿಗಳಾಗುವಂತೆ ಅಂಥವರನ್ನು ಸೇರಿಸಿ
ಕೊಳ್ಳುವ ಹಂಗಿನಲ್ಲಿದ್ದೇವೆ.
ಸಭೆಗೆ ಕೆಲವು ಮಾತುಗಳನ್ನು ಬರೆದಿದ್ದೆನು; ಆದರೆ
ಸಭೆಯವರಲ್ಲಿ ಪ್ರಮುಖನಾಗಬೇಕೆಂದಿರುವ ದಿಯೊ
ತ್ರೇಫನು ನಮ್ಮ ಮಾತನ್ನು ಅಂಗೀಕರಿಸುವದಿಲ್ಲ.
ಆದಕಾರಣ ನಾನು ಬಂದರೆ ಅವನು ಮಾಡುವ ಕೃತ್ಯ 1
ಗಳ ವಿಷಯದಲ್ಲಿ ಎಲ್ಲರಿಗೂ ನೆನಪುಕೊಡುವೆನು.
ಅವನು ಹರಟೆಕೊಚ್ಚುವವನಾಗಿ ನಮ್ಮ ವಿಷಯದಲ್ಲಿ
ಕೆಟ್ಟಕೆಟ್ಟ ಮಾತುಗಳನ್ನಾಡುತ್ತಾನೆ. ಇವೂ ಸಾಲದೆ
ತಾನು ಸಹೋದರರನ್ನು ಸೇರಿಸಿಕೊಳ್ಳಬೇಕೆಂದಿರುವವ
ರಿಗೆ ಅಡ್ಡಿಮಾಡಿ ಅವರನ್ನು ಸಭೆಯೊಳಗಿಂದ ಬಹಿಷ್ಕರಿ
ಸುತ್ತಾನೆ. ಪ್ರಿಯನೇ, ನೀನು ಕೆಟ್ಟ ನಡತೆಯನ್ನು 1
ಅನುಸರಿಸದೆ ಒಳ್ಳೇ ನಡತೆಯನ್ನು ಅನುಸರಿಸು;

---

1) ಮೂಲ: ಬರುವ.

ಒಳ್ಳೇದನ್ನು ಮಾಡುವವನು ದೇವರಿಂದ ಹುಟ್ಟಿದವ
ನಾಗಿದ್ದಾನೆ. ಕೆಟ್ಟದ್ದನ್ನು ಮಾಡುವವನು ದೇವರನ್ನು
12 ಕಂಡವನಲ್ಲ. ದೇಮೇತ್ರಿಯನು ಸಂಭಾವಿತನೆಂದು ಎಲ್ಲ
ರಿಂದಲೂ ಸಾಕ್ಷಾತ್ ಸತ್ಯದಿಂದಲೂ ಸಾಕ್ಷಿಹೊಂದಿ
ದ್ದಾನೆ. ನಾವು ಸಹ ಅವನ ವಿಷಯದಲ್ಲಿ ಸಾಕ್ಷಿಹೇಳು
ವವರಾಗಿದ್ದೇವೆ; ನಮ್ಮ ಸಾಕ್ಷಿ ಸತ್ಯವಾದದ್ದೆಂದು
ನೀನು ಬಲ್ಲೆ.

ನಿನಗೆ ಬರೆಯತಕ್ಕ ಅನೇಕ ಸಂಗತಿಗಳಿದ್ದವು, 13
ಆದರೆ ಮಸಿ ಲೇಖಣಿಗಳನ್ನು ತೆಗೆದುಕೊಂಡು ಬರೆಯು
ವದಕ್ಕೆ ನನಗಿಷ್ಟವಿಲ್ಲ. ಬೇಗನೆ ನಿನ್ನನ್ನು ನೋಡು 14
ವೆನೆಂದು ನಿರೀಕ್ಷಿಸುತ್ತೇನೆ; ಆಗ ಮುಖಾಮುಖಿ
ಯಾಗಿ ಮಾತಾಡುವೆವು. ನಿನಗೆ ಶಾಂತಿ ಇರಲಿ.
ಸ್ನೇಹಿತರು ನಿನಗೆ ವಂದನೆಹೇಳುತ್ತಾರೆ. ಸ್ನೇಹಿತರನ್ನು
ಹೆಸರ್ಹೆಸರಾಗಿ ವಂದಿಸು.

---

# THE EPISTLE OF

# JUDE

## ಯೂದನು ಬರೆದ ಪತ್ರಿಕೆ

### ಒಕ್ಕಣೆ.

1 ಯೇಸು ಕ್ರಿಸ್ತನ ದಾಸನೂ ಯಾಕೋಬನ ತಮ್ಮ
ನೂ ಆಗಿರುವ ಯೂದನು ತಂದೆಯಾದ ದೇವರಲ್ಲಿ
ಪ್ರಿಯರಾದವರೂ ಯೇಸು ಕ್ರಿಸ್ತನಿಗಾಗಿ ಕಾಯಲ್ಪ
ಟ್ಟವರೂ ಆಗಿರುವವರಿಗೆ ಬರೆಯುವದೇನಂದರೆ—
2 ದೇವರಿಂದ ಕರೆಯಲ್ಪಟ್ಟ ನಿಮಗೆ ಕರುಣೆಯೂ
ಶಾಂತಿಯೂ ಪ್ರೀತಿಯೂ ಹೆಚ್ಚಾಗಲಿ.

### ಸಭೆಯೊಳಗೆ ಕಳ್ಳತನದಿಂದ ಸೇರಿದ್ದ ದುರ್ಮಾರ್ಗಿಗಳ ವಿಷಯದಲ್ಲಿ ಎಚ್ಚರಿಕೆ. (೨ ಪೇತ್ರ 2. 1—22.)

3 ಪ್ರಿಯರೇ, ನಮಗೆ ಹುದುವಾಗಿರುವ ರಕ್ಷಣೆಯ
ವಿಷಯದಲ್ಲಿ ನಿಮಗೆ ಬರೆಯುವದಕ್ಕೆ ಪೂರ್ಣಾಸಕ್ತಿ
ಯಿಂದ ಪ್ರಯತ್ನಮಾಡುತ್ತಿದ್ದಾಗ ದೇವಜನರಿಗೆ
ಶಾಶ್ವತವಾಗಿರುವಂತೆ ಒಂದೇ ಸಾರಿ ಒಪ್ಪಿಸಲ್ಪಟ್ಟ ನಂಬಿ
ಕೆಯನ್ನು ಕಾಪಾಡಿಕೊಳ್ಳುವದಕ್ಕೆ ನೀವು ಹೋರಾಡ
ಬೇಕೆಂದು ಎಚ್ಚರಿಸಿ ಬರೆಯುವದು ಅವಶ್ಯವೆಂದು
4 ತೋಚಿತು. ಯಾಕಂದರೆ ಭಕ್ತಿಹೀನರೂ ನಮ್ಮ ದೇವರ
ಕೃಪೆಯನ್ನು ನೆವಮಾಡಿಕೊಂಡು ನಾಚಿಕೆಗೆಟ್ಟ ಕೃತ್ಯ
ಗಳನ್ನು ನಡಿಸುವವರೂ ನಮ್ಮ ಒಬ್ಬನೇ ಒಡೆಯನೂ
ಕರ್ತನೂ ಆಗಿರುವ ಯೇಸು ಕ್ರಿಸ್ತನನ್ನು ಅರಿಯದ
ವರೂ ಆಗಿರುವ ಕೆಲವು ಜನರು ಸಭೆಯಲ್ಲಿ ಕಳ್ಳತನ
ದಿಂದ ಹೊಕ್ಕಿದ್ದಾರೆ; ಅವರಿಗೆ ಈ ದಂಡನೆಯಾಗ
ಬೇಕೆಂದು ಪೂರ್ವದಲ್ಲೇ ಅವರ ವಿಷಯವಾಗಿ ಬರೆದದೆ.
5 ನೀವು ಸಮಸ್ತವನ್ನು ಮೊದಲೇ ತಿಳಿದವರಾಗಿದ್ದರೂ
ನಾನು ಮುಂದಣ ಕೆಲವು ಸಂಗತಿಗಳನ್ನು ನಿಮ್ಮ
ಜ್ಞಾಪಕಕ್ಕೆ ತರಬೇಕೆಂದು ಅಪೇಕ್ಷಿಸುತ್ತೇನೆ. ಅವು
ಯಾವವಂದರೆ— ಕರ್ತನು ತನ್ನ ಪ್ರಜೆಯನ್ನು ಐಗುಪ್ತ
ದೇಶದೊಳಗಿಂದ ಬಿಡಿಸಿದ ತರುವಾಯ ಅವರೊಳಗೆ
ನಂಬದೆಹೋದವರನ್ನು ನಾಶಮಾಡಿದನು. ತಮ್ಮ 6
1)ದೊರೆತನವನ್ನು ಕಾಪಾಡದೆ ತಮಗೆ ತಕ್ಕ ವಾಸ
ಸ್ಥಾನವನ್ನು ಬಿಟ್ಟ ದೇವದೂತರಿಗೆ ದೇವರು ನಿತ್ಯ
ವಾದ ಬೇಡಿಗಳನ್ನು ಹಾಕಿ ಮಹಾ ದಿನದಲ್ಲಿ ಆಗುವ
ದಂಡನೆಯ ತೀರ್ಪಿಗಾಗಿ ಅವರನ್ನು ಕತ್ತಲೆಯೊಳಗೆ
ಇಟ್ಟಿದ್ದಾನೆ. ಸೊದೋಮ ಗೊಮೋರ ಪಟ್ಟಣಗಳ 7
ವರೂ ಅವುಗಳ ಸುತ್ತುಮುತ್ತಣ ಪಟ್ಟಣಗಳವರೂ
ಆ ದೂತರಂತೆ ನಡೆದುಕೊಂಡು ತಮ್ಮನ್ನು ಜಾರತ್ವಕ್ಕೆ
ಒಪ್ಪಿಸಿಬಿಟ್ಟು ಸ್ವಭಾವವಿರುದ್ಧವಾದ ಭೋಗವನ್ನನು
ಸರಿಸಿದ್ದರಿಂದ ಅವರು ನಿತ್ಯವಾದ ಅಗ್ನಿಯಲ್ಲಿ ದಂಡನೆ
ಯನ್ನು ಅನುಭವಿಸುತ್ತಾ [ದುರ್ಮಾರ್ಗಿಗಳಿಗೆ ಆಗುವ
ದುರ್ಗತಿಗೆ] ಉದಾಹರಣೆಯಾಗಿ ಇಡಲ್ಪಟ್ಟಿದ್ದಾರೆ.
ಹೀಗಿದ್ದರೂ ಈ ಜನರು ಸ್ವಪ್ನಾವಸ್ಥೆಯಲ್ಲಿರುವವರಂತೆ 8
ಅದೇ ರೀತಿಯಾಗಿ ಶರೀರವನ್ನು ಮಲಿನಮಾಡಿಕೊಳ್ಳು
ತ್ತಾರೆ. ಪ್ರಭುತ್ವವನ್ನು ಅಸಡ್ಡೆಮಾಡುತ್ತಾರೆ, ಮಹಾ
ಪದವಿಯವರನ್ನು ದೂಷಿಸುತ್ತಾರೆ. ಆದರೆ ಪ್ರಧಾನ 9
ದೇವದೂತನಾದ ಮೀಕಾಯೇಲನು ಮೋಶೆಯ
ಶವದ ವಿಷಯದಲ್ಲಿ ಸೈತಾನನೊಂದಿಗೆ ವ್ಯಾಜ್ಯವಾಡಿ
ವಾಗ್ವಾದಮಾಡಿದಾಗ ಅವನು ಸೈತಾನನ ಮೇಲೆ
ದೂಷಣಾಭಿಪ್ರಾಯವನ್ನು ಹೇಳುವದಕ್ಕೆ ಧೈರ್ಯಗೊ
ಳ್ಳದೆ— ಕರ್ತನು ನಿನ್ನನ್ನು ಖಂಡಿಸಲಿ ಅಂದನು.
ಆದರೆ ಈ ಜನರು ತಮಗೆ ಗೊತ್ತಿಲ್ಲದ ಎಲ್ಲವನ್ನೂ 10
ದೂಷಿಸುತ್ತಾರೆ, ಮತ್ತು ತಾವು ವಿವೇಕಶೂನ್ಯಪಶುಗಳಂ
ತೆ ಸ್ವಾಭಾವಿಕವಾಗಿ ಯಾವವುಗಳನ್ನು ತಿಳಿದುಕೊಳು
ತ್ತಾರೋ ಅವುಗಳಲ್ಲಿ ತಮ್ಮನ್ನು ಕೆಡಿಸಿಕೊಳ್ಳುತ್ತಾರೆ.
ಅವರ ಗತಿಯನ್ನು ಏನು ಹೇಳಲಿ; ಇವರು ಕಾಯಿ 11
ನನ ಮಾರ್ಗವನ್ನು ಹಿಡಿದವರೂ ದ್ರವ್ಯಸಂಪಾದನೆ
ಗೋಸ್ಕರ ಬಿಳಾಮನ ಭ್ರಾಂತಿಯಲ್ಲಿ ಪೂರ್ಣವಾಗಿ

1) ಅಥವಾ, ಆಡಿಸ್ಥಿತಿಯನ್ನು.

ಮುಣುಗಿದವರೂ ಕೋರಹನಂತೆ ಎದುರುಮಾತು
ಗಳನ್ನಾಡಿ ನಾಶವಾಗಿಹೋಗತಕ್ಕವರೂ ಆಗಿದ್ದಾರೆ.
12 ಇವರು ಸಮುದ್ರದೊಳಗಿರುವ ಗುಪ್ತವಾದ ಬಂಡೆಗ
ಳಂತಿದ್ದು[1]) ನಿಮ್ಮ ಪ್ರೇಮಭೋಜನಗಳಲ್ಲಿ ಸೇರಿ
ತಿಂದು ಕುಡಿಯುತ್ತಾರೆ; ನಿರ್ಭಯವಾಗಿ ಸ್ವಂತ
ಹೊಟ್ಟೆಯನ್ನೇ ನೋಡಿಕೊಳ್ಳುವ ಕುರುಬರಾಗಿದ್ದಾರೆ.
ಇವರು ಗಾಳಿಯಿಂದ ಹೊಡಸಿಕೊಂಡು ಹೋಗುವ
ನೀರಿಲ್ಲದ ಮೇಘಗಳೂ, ಎಲೆಗಳುದುರಿ ಹಣ್ಣು
ಬಿಡದೆ ಒಣಗಿಹೋಗಿ ಬೇರು ಸಹಿತ ಕಿತ್ತುಬಿದ್ದ
13 ಮರಗಳೂ, ಸ್ವಂತ ಅವಮಾನವೆಂಬ ನೊರೆಯನ್ನು
ಕಾರುವ ಸಮುದ್ರದಹುಚ್ಚು ತೆರೆಗಳೂ ಆಗಿದ್ದಾರೆ.
ಅಲೆಯುವ ನಕ್ಷತ್ರಗಳಾದ ಇವರ ಪಾಲಿಗೆ ಕಾರ್ಗತ್ತ
ಲೆಯು ಸದಾಕಾಲ ಇಟ್ಟಿರುವದು.
14 ಇಂಥವರ ವಿಷಯದಲ್ಲೇ ಆದಾಮನಿಗೆ ಏಳ
ನೆಯ ತಲೆಯವನಾದ ಹನೋಕನು—ಇಗೋ
ಕರ್ತನು ಲಕ್ಷಾಂತರ ಪರಿಶುದ್ಧದೂತರನ್ನು ಕೂಡಿ
15 ಕೊಂಡು ಎಲ್ಲರಿಗೆ ನ್ಯಾಯತೀರಿಸುವದಕ್ಕೂ ಭಕ್ತಿ
ಹೀನರೆಲ್ಲರು ಮಾಡಿದ ಭಕ್ತಿಯಿಲ್ಲದ ಎಲ್ಲಾ ಕೃತ್ಯ
ಗಳ ವಿಷಯವಾಗಿ ಮತ್ತು ಭಕ್ತಿಯಿಲ್ಲದ ಪಾಪಿಷ್ಠರು
ತನ್ನ ಮೇಲೆ ಹೇಳಿದ ಎಲ್ಲಾ ಕಠಿನವಾದ ಮಾತುಗಳ
ವಿಷಯವಾಗಿ ಅವರನ್ನು ಖಂಡಿಸುವದಕ್ಕೂ ಬಂದನು
16 ಎಂಬಧಾಗಿ ಪ್ರವಾದಿಸಿದನು. ಇವರು ಗುಣುಗುಟ್ಟು
ವವರೂ ತಮ್ಮ ಗತಿಯನ್ನು ನಿಂದಿಸುವವರೂ ತಮ್ಮ
ದುರಾಶೆಗಳನ್ನನುಸರಿಸಿ, ನಡೆಯುವವರೂ ಆಗಿದ್ದಾರೆ.
ಇವರ ಬಾಯಿಂದ ದೊಡ್ಡ ದೊಡ್ಡ ಮಾತುಗಳು
ಬರುತ್ತವೆ. ಇವರು ಸ್ವಪ್ರಯೋಜನಕ್ಕಾಗಿ ಮುಖ
ಸ್ತುತಿ ಮಾಡುತ್ತಾರೆ.

ಪ್ರಿಯರೇ, ನೀವಾದರೋ ನಮ್ಮ ಕರ್ತನಾದ 1
ಯೇಸು ಕ್ರಿಸ್ತನ ಅಪೊಸ್ತಲರು ಮೊದಲು ಹೇಳಿದ
ಮಾತುಗಳನ್ನು ಜ್ಞಾಪಕಮಾಡಿಕೊಳ್ಳಿರಿ. ಭಕ್ತಿಗೆ 1
ವಿರುದ್ಧವಾದ ತಮ್ಮ ಆಶೆಗಳನ್ನು ಅನುಸರಿಸಿ ನಡೆ
ಯುವ ಕುಚೋದ್ಯಗಾರರು ಅಂತ್ಯಕಾಲದಲ್ಲಿ ಇರುವ
ರೆಂದು ಅವರು ನಿಮಗೆ ಹೇಳಿದರಲ್ಲಾ. ಇವರು ಭೇದ 1
ಗಳನ್ನು ಉಂಟುಮಾಡುವವರೂ ಪ್ರಾಕೃತಮನುಷ್ಯ
ರೂ ದೇವರಾತ್ಮವಿಲ್ಲದವರೂ ಆಗಿದ್ದಾರೆ. ಪ್ರಿಯರೇ, 20
ನೀವಾದರೋ ನಿಮಗಿರುವ ಅತಿಪರಿಶುದ್ಧವಾದ ಕ್ರಿಸ್ತ
ನಂಬಿಕೆಯನ್ನು ಆಧಾರಮಾಡಿಕೊಂಡು ಭಕ್ತಿಯಲ್ಲಿ
ಅಭಿವೃದ್ಧಿಯನ್ನು ಹೊಂದುತ್ತಾ ಪವಿತ್ರಾತ್ಮಪ್ರೇರಿತ
ರಾಗಿ ಪ್ರಾರ್ಥನೆಮಾಡುತ್ತಾ ನಿತ್ಯಜೀವಕ್ಕಾಗಿ ನಮ್ಮ 2
ಕರ್ತನಾದ ಯೇಸು ಕ್ರಿಸ್ತನ ಕರುಣೆಯನ್ನು ಎದುರು
ನೋಡುತ್ತಾ ನಿಮ್ಮನ್ನು ದೇವರ ಪ್ರೀತಿಯಲ್ಲಿ ಕಾಪಾಡಿ
ಕೊಳ್ಳಿರಿ. ಸಂದೇಹಪಡುವ ಕೆಲವರಿಗೆ ಕರುಣೆಯನ್ನು 2
ತೋರಿಸಿರಿ; ಅವರನ್ನು ಬೆಂಕಿಯ ಬಾಯೊಳಗಿಂದ ಎಳ 23
ಕೊಂಡು ರಕ್ಷಿಸಿರಿ. ಕೆಲವರನ್ನು ಭಯಯುಕ್ತರಾಗಿ
ಕರುಣಿಸಿರಿ; ಹೊಲಸು ನಡತೆಯಿಂದ ಮೈಲಿಗೆಯಾದ
ಅವರ ಅಂಗಿಯನ್ನೂ ಅಸಹ್ಯಿಸಿರಿ.
ಎಡವಿಬೀಳದಂತೆ ನಿಮ್ಮನ್ನು ಕಾಪಾಡುವದಕ್ಕೂ 24
ತನ್ನ ಪ್ರಭಾವದ ಸಮಕ್ಷಮದಲ್ಲಿ ನಿಮ್ಮನ್ನು
ನಿರ್ದೋಷಿಗಳನ್ನಾಗಿ ಹರ್ಷದೊಡನೆ ನಿಲ್ಲಿಸುವದಕ್ಕೂ
ಶಕ್ತನಾಗಿರುವ ನಮ್ಮ ರಕ್ಷಕನಾದ ಒಬ್ಬನೇ ದೇವ 25
ರಿಗೆ ನಮ್ಮ ಕರ್ತನಾದ ಯೇಸು ಕ್ರಿಸ್ತನ ಮೂಲಕ
ಪ್ರಭಾವ ಮಹತ್ವ ಆಧಿಪತ್ಯ ಅಧಿಕಾರಗಳು ಎಲ್ಲಾ
ಕಾಲಕ್ಕಿಂತ ಮೊದಲೂ [ಇದ್ದ ಹಾಗೆ] ಈಗಲೂ
ಯಾವಾಗಲೂ ಇರಲಿ. ಆಮೆನ್.

# THE REVELATION

## OF SAINT JOHN

## ಯೋಹಾನನು ಬರೆದ ಪ್ರಕಟನೆ

ಪೀಠಿಕೆ.

1 ಯೇಸು ಕ್ರಿಸ್ತನ ಪ್ರಕಟನೆಯು. ಆತನು ಬೇಗನೆ
ಸಂಭವಿಸಬೇಕಾಗಿರುವ ಸಂಗತಿಗಳನ್ನು ತನ್ನ ದಾಸರಿಗೆ
ತೋರಿಸುವದಕ್ಕಾಗಿ ದೇವರಿಂದ ಈ ಪ್ರಕಟನೆಯನ್ನು
ಹೊಂದಿದನು; ಇದಲ್ಲದೆ ಆತನು ತನ್ನ ದೂತನನ್ನು
ಕಳುಹಿಸಿ ಅವನ ಮೂಲಕ ಆ ಸಂಗತಿಗಳನ್ನು ತನ್ನ
ದಾಸನಾದ ಯೋಹಾನನಿಗೆ ಸೂಚಿಸಿದನು. ಯೋಹಾ 2
ನನು ತಾನು ಕಂಡದ್ದನ್ನೆಲ್ಲಾ ತಿಳಿಸುವವನಾಗಿ ದೇವರ
ವಾಕ್ಯದ ವಿಷಯವಾಗಿಯೂ [2])ಯೇಸು ಕ್ರಿಸ್ತನು
ಹೇಳಿದ ಸಾಕ್ಷಿಯ ವಿಷಯವಾಗಿಯೂ ಸಾಕ್ಷಿ
ಕೊಟ್ಟನು. ಈ ಪ್ರವಾದನವಾಕ್ಯಗಳನ್ನು ಓದುವಂಥ 3
ವನೂ ಕೇಳುವಂಥವರೂ ಈ ಪ್ರವಾದನೆಯಲ್ಲಿ ಬರೆದಿ
ರುವ ಮಾತುಗಳನ್ನು ಕೈಕೊಂಡು ನಡೆಯುವಂಥವರೂ

1) ಅಥವಾ, ಕಳಂಕಕ್ಕೆ ಕಾರಣರಾಗಿದ್ದು.    2) ಅಥವಾ, ಯೇಸು ಕ್ರಿಸ್ತನ ವಿಷಯವಾದ.

ಧನ್ಯರು. ಅವು ನೆರವೇರುವ ಸಮಯವು ಸಮೀಪ
ವಾಗಿದೆ.

### 1. ಆಸ್ಯಸೀಮೆಯ ಏಳು ಸಭೆಗಳಿಗೆ ಯೋಹಾನನು ಬರೆದ ಪತ್ರಿಕೆ.

4 ಆಸ್ಯಸೀಮೆಯಲ್ಲಿರುವ ಏಳು ಸಭೆಗಳಿಗೆ ಯೋಹಾ
ನನು ಬರೆಯುವದೇನಂದರೆ—ವರ್ತಮಾನ ಭೂತ
5 ಭವಿಷ್ಯತ್ಕಾಲಗಳಲ್ಲಿರುವಾತನಿಂದ ಮತ್ತು ಆತನ
ಸಿಂಹಾಸನದ ಮುಂದಿರುವ ಏಳು ಆತ್ಮಗಳಿಂದ ಮತ್ತು
ನಂಬತಕ್ಕ ಸಾಕ್ಷಿಯೂ ಸತ್ತವರೊಳಗಿಂದ ಮೊದಲು
1)ಎದ್ದು ಬಂದವನೂ ಭೂರಾಜರ ಒಡೆಯನೂ ಆಗಿ
ರುವ ಯೇಸು ಕ್ರಿಸ್ತನಿಂದ ನಿಮಗೆ ಕೃಪೆಯೂ
ಶಾಂತಿಯೂ ಆಗಲಿ.
ನಮ್ಮನ್ನು ಪ್ರೀತಿಸುವವನೂ ತನ್ನ ರಕ್ತದ
ಮೂಲಕ ನಮ್ಮನ್ನು ಪಾಪಗಳಿಂದ ಬಿಡಿಸಿದವನೂ
6 ನಮ್ಮನ್ನು ರಾಜ್ಯವನ್ನಾಗಿಯೂ ತನ್ನ ತಂದೆಯಾದ
ದೇವರಿಗೆ ಯಾಜಕರನ್ನಾಗಿಯೂ ಮಾಡಿದವ
ನೂ ಆಗಿರುವಾತನಿಗೆ ಯುಗಯುಗಾಂತರಗಳಲ್ಲಿ
7 ಯೂ ಘನ ಮಹತ್ವಗಳಿರಲಿ. ಆಮೆನ್. ಇಗೋ
ಮೇಘಗಳೊಂದಿಗೆ ಬರುತ್ತಾನೆ; ಎಲ್ಲರ ಕಣ್ಣು
ಗಳು ಆತನನ್ನು ಕಾಣುವವು; ಆತನನ್ನು ಇರಿದ
ವರು ಸಹ ಕಾಣುವರು; ಭೂಮಿಯಲ್ಲಿರುವ ಎಲ್ಲಾ
ಕುಲದವರು ಆತನನ್ನು ನೋಡಿ ಎದೆಬಡುಕೊಳ್ಳು
ವರು. ಹೌದು, ಹಾಗೆಯೇ ಆಗುವದು. ಆಮೆನ್.
8 ನಾನು ಆದಿಯೂ ಅಂತವೂ ವರ್ತಮಾನ ಭೂತ
ಭವಿಷ್ಯತ್ಕಾಲಗಳಲ್ಲಿರುವವನೂ ಸರ್ವಶಕ್ತನೂ ಆಗಿ
ದ್ದೇನೆ ಎಂದು ದೇವರಾದ ಕರ್ತನು ಹೇಳುತ್ತಾನೆ.
9 ನಿಮ್ಮ ಸಹೋದರನೂ ಯೇಸುವಿನ ನಿಮಿತ್ತ ಹಿಂಸೆ
ಯಲ್ಲಿಯೂ ರಾಜ್ಯದಲ್ಲಿಯೂ ತಾಳ್ಮೆಯಲ್ಲಿಯೂ
ನಿಮ್ಮೊಂದಿಗೆ ಪಾಲುಗಾರನೂ ಆಗಿರುವ ಯೋಹಾನ
ನೆಂಬ ನಾನು ದೇವರ ವಾಕ್ಯಕ್ಕೋಸ್ಕರವೂ ಯೇಸು
ವಿನ ವಿಷಯವಾದ ಸಾಕ್ಷಿಗೋಸ್ಕರವೂ ಪತ್ಮೊಸ್
10 ದ್ವೀಪದಲ್ಲಿದ್ದೆನು. ನಾನು ಕರ್ತನ ದಿನದಲ್ಲಿ ದೇವ
ರಾತ್ಮವಶನಾಗಿ ನನ್ನ ಹಿಂದುಗಡೆ ತುತೂರಿಯ
ಶಬ್ದದಂತಿರುವ ಮಹಾ ಶಬ್ದವನ್ನು ಕೇಳಿದೆನು.
11 ಅದು—ನೀನು ನೋಡುವದನ್ನು ಪುಸ್ತಕದಲ್ಲಿ ಬರೆದು
ಎಫೆಸ, ಸ್ಮುರ್ನ, ಪೆರ್ಗಮ, ಥುವತೈರ, ಸಾರ್ದಿಸ್,
ಫಿಲದೆಲ್ಫಿಯ, ಲವೊದಿಕೀಯ ಎಂಬೀ ಏಳು ಪಟ್ಟಣ
ಗಳ ಸಭೆಗಳಿಗೆ ಕಳುಹಿಸಬೇಕೆಂದು ನುಡಿಯಿತು.
12 ನನ್ನ ಸಂಗಡ ಮಾತಾಡುತ್ತಿದ್ದ ಶಬ್ದವು ಯಾರದೆಂದು
13 ನೋಡುವದಕ್ಕೆ ಹಿಂದಕ್ಕೆ ತಿರುಗಿದೆನು. ತಿರುಗಿದಾಗ
ಏಳು ಚಿನ್ನದ ದೀಪಸ್ತಂಭಗಳನ್ನೂ ಆ ದೀಪಸ್ತಂಭ
ಗಳ ಮಧ್ಯದಲ್ಲಿ ಮನುಷ್ಯಕುಮಾರನಂತೆ ಇರುವ
ವನನ್ನೂ ಕಂಡೆನು. ಆತನು ನಿಲುವಂಗಿಯನ್ನು
ತೊಟ್ಟು ಚಿನ್ನದ ಪಟ್ಟಿಯನ್ನು ಎದೆಗೆ ಕಟ್ಟಿಕೊಂಡಿ
14 ದ್ದನು. ಆತನ ತಲೆಯ ಕೂದಲು ಬಿಳೀ ಉಣ್ಣೆ
ಯಂತೆಯೂ ಹಿಮದಂತೆಯೂ ಬೆಳ್ಳಗಿತ್ತು. ಆತನ
ಕಣ್ಣುಗಳು ಬೆಂಕಿಯ ಉರಿಯಂತೆಯೂ ಆತನ 15
ಪಾದಗಳು ಕುಲುಮೆಯಲ್ಲಿ ಕಾಯಿಸಿದ ತಾಮ್ರದಂತೆ
ಯೂ ಆತನ ಧ್ವನಿಯು ಜಲಪ್ರವಾಹದ ಘೋಷ
ದಂತೆಯೂ ಇದ್ದವು. ಆತನ ಬಲಗೈಯಲ್ಲಿ 16
ಏಳು ನಕ್ಷತ್ರಗಳಿದ್ದವು; ಆತನ ಬಾಯೊಳಗಿಂದ
ಹದವಾದ ಇಬ್ಬಾಯಿ ಕತ್ತಿಯು ಹೊರಡುತ್ತಿತ್ತು.
ಆತನ ಮುಖವು ಮಧ್ಯಾಹ್ನದಲ್ಲಿ ಪ್ರಕಾಶಿಸುವ
ಸೂರ್ಯನಂತಿತ್ತು. ನಾನು ಆತನನ್ನು ಕಂಡಾಗ 17
ಸತ್ತವನ ಹಾಗೆ ಆತನ ಪಾದಗಳ ಮುಂದೆ ಬಿದ್ದೆನು.
ಆತನು ತನ್ನ ಬಲಗೈಯನ್ನು ನನ್ನ ಮೇಲಿಟ್ಟು—
ಹೆದರಬೇಡ, ನಾನು ಮೊದಲನೆಯವನೂ ಕಡೆಯ
ವನೂ ಸದಾ ಜೀವಿಸುವವನೂ ಆಗಿದ್ದೇನೆ. ಸತ್ತವ 18
ನಾದೆನು, ಮತ್ತು ಇಗೋ ಯುಗಯುಗಾಂತರಗಳಲ್ಲಿ
ಯೂ ಬದುಕುವವನಾಗಿದ್ದೇನೆ; ಮರಣದ ಮತ್ತು
ಪಾತಾಳದ ಬೀಗದಕೈಗಳು ನನ್ನಲ್ಲಿ ಅವೆ. ಆದದರಿಂದ 19
ನೀನು ಕಂಡವುಗಳನ್ನೂ ಈಗ ನಡೆಯುತ್ತಿರುವವು
ಗಳನ್ನೂ ಮುಂದೆ ಆಗಬೇಕಾದವುಗಳನ್ನೂ ಬರೆ. ನನ್ನ 20
ಬಲಗೈಯಲ್ಲಿ ನೀನು ಕಂಡ ಏಳು ನಕ್ಷತ್ರಗಳು ಮತ್ತು
ಏಳು ಚಿನ್ನದ ದೀಪಸ್ತಂಭಗಳ ಗೂಢಾರ್ಥವನ್ನು ವಿವರಿ
ಸುತ್ತೇನೆ—ಆ ಏಳು ನಕ್ಷತ್ರಗಳು ಅಂದರೆ ಆ ಏಳು
ಸಭೆಗಳ ದೂತರು; ಆ ಏಳು ದೀಪಸ್ತಂಭಗಳು ಅಂದ
ರೆ ಆ ಏಳು ಸಭೆಗಳು.

### ಕರ್ತನಾದ ಯೇಸು ಏಳು ಸಭೆಗಳ ದೂತರಿಗೆ ಬರಸಿದ ಪತ್ರಿಕೆಗಳು.

2 ಎಫೆಸದಲ್ಲಿರುವ ಸಭೆಯ ದೂತನಿಗೆ ಬರೆ—
ಏಳು ನಕ್ಷತ್ರಗಳನ್ನು ಬಲಗೈಯಲ್ಲಿ ಹಿಡುಕೊಂಡು
ಏಳು ಚಿನ್ನದ ದೀಪಸ್ತಂಭಗಳ ಮಧ್ಯದಲ್ಲಿ ತಿರು
ಗಾಡುವಾತನು ಹೇಳುವದೇನಂದರೆ—ನಿನ್ನ ಕೃತ್ಯ 2
ಗಳನ್ನೂ ಪ್ರಯಾಸವನ್ನೂ ತಾಳ್ಮೆಯನ್ನೂ ಬಲ್ಲೆನು;
ನೀನು ದುಷ್ಟರನ್ನು ಸಹಿಸಲಾರಿ; ಅಪೊಸ್ತಲರಲ್ಲ
ದಿದ್ದರೂ ತಮ್ಮನ್ನು ಅಪೊಸ್ತಲರೆಂದು ಹೇಳಿಕೊಳ್ಳು
ವವರನ್ನು ನೀನು ಪರೀಕ್ಷಿಸಿ ಅವರನ್ನು ಸುಳ್ಳುಗಾರ
ರೆಂದು ಕಂಡುಕೊಂಡಿ; ನೀನು ತಾಳ್ಮೆಯುಳ್ಳವನಾಗಿ 3
ನನ್ನ ಹೆಸರಿನ ನಿಮಿತ್ತ ಬಾಧೆಯನ್ನು ಸೈರಿಸಿಕೊಂಡು
ಬೇಸರಗೊಳ್ಳಲಿಲ್ಲ; ಇದನ್ನೆಲ್ಲಾ ಬಲ್ಲೆನು. ಆದರೆ 4
ಮೊದಲು ನಿನಗಿದ್ದ ಪ್ರೀತಿಯನ್ನು ನೀನು ಬಿಟ್ಟು
ಬಿಟ್ಟಿದ್ದೀಯೆಂದು ನಾನು ನಿನ್ನ ಮೇಲೆ ತಪ್ಪುಹೊರಿಸ
ಬೇಕಾಗುತ್ತದೆ. ಆದದರಿಂದ ನೀನು ಎಲ್ಲಿಂದ ಬಿದ್ದಿ 5
ದ್ದೀಯೋ ಅದನ್ನು ನಿನ್ನ ನೆನಪಿಗೆ ತಂದುಕೊಂಡು
ದೇವರ ಕಡೆಗೆ ತಿರುಗಿಕೋ. ನೀನು ಮೊದಲು
ಮಾಡುತ್ತಿದ್ದ ಕೃತ್ಯಗಳನ್ನು ಮಾಡು. ನೀನು ದೇವರ
ಕಡೆಗೆ ತಿರುಗಿಕೊಳ್ಳದೆ ಹೋದರೆ ನಾನು ಬಂದು
ನಿನ್ನ ದೀಪಸ್ತಂಭವನ್ನು ಅದರ ಸ್ಥಳದಿಂದ ತೆಗೆದುಹಾ
ಕುವೆನು. ಆದರೆ ನಿನ್ನಲ್ಲಿ ಒಳ್ಳೇದು ಒಂದುಂಟು, ಅದೇ 6
ನಂದರೆ—ನಾನು ದ್ವೇಷಿಸುವ ನಿಕೊಲಾಯಿತರ ಕೃತ್ಯ
ಗಳನ್ನು ನೀನು ಸಹ ದ್ವೇಷಿಸುತ್ತೀ. ದೇವರಾತ್ಮನು 7

1) ಮೂಲ: ಹುಟ್ಟಿಬಂದವನೂ.

ಸಭೆಗಳಿಗೆ ಹೇಳುವದನ್ನು ಕಿವಿಯುಳ್ಳವನು ಕೇಳಲಿ. ಯಾವನು ಜಯಹೊಂದುತ್ತಾನೋ ಅವನಿಗೆ ದೇವರ ಪರದೈಸಿನಲ್ಲಿರುವ 1)ಜೀವದಾಯಕ ವೃಕ್ಷದ ಹಣ್ಣನ್ನು ತಿನ್ನುವದಕ್ಕೆ ಕೊಡುವೆನು.

8 ಸ್ಮುರ್ನದಲ್ಲಿರುವ ಸಭೆಯ ದೂತನಿಗೆ ಬರೆ—
9 ಸತ್ತವನಾಗಿದ್ದು ಜೀವಿತನಾಗಿ ಬಂದ ಆದ್ಯಂತನು
ಹೇಳುವದೇನಂದರೆ—ನಾನು ನಿನ್ನ ಸಂಕಟವನ್ನೂ ನಿನ್ನ
ಬಡತನವನ್ನೂ ಬಲ್ಲೆನು; ಆದರೂ ನೀನು ಐಶ್ವರ್ಯ
ವಂತನೇ. ಇದಲ್ಲದೆ ತಮ್ಮನ್ನು ಯೆಹೂದ್ಯರೆಂದು
ಹೇಳಿಕೊಳ್ಳುವವರು ನಿನ್ನ ವಿಷಯವಾಗಿ ದೂಷಿಸು
ವದನ್ನು ಬಲ್ಲೆನು; ಅವರು ಯೆಹೂದ್ಯರಲ್ಲ, ಸೈತಾ
10 ನನ ಸಮಾಜದವರಾಗಿದ್ದಾರೆ. ನಿನಗೆ ಸಂಭವಿಸುವದ
ಕ್ಕಿರುವ ಬಾಧೆಗಳಿಗೆ ಹೆದರಬೇಡ. ಇಗೋ ನೀವು
ದುಷ್ಪ್ರೇರಣೆಗೆ ಒಳಗಾಗುವಂತೆ ಸೈತಾನನು ನಿಮ್ಮಲ್ಲಿ
ಕೆಲವರನ್ನು ಸೆರೆಮನೆಯೊಳಗೆ ಹಾಕುವದಕ್ಕಿದ್ದಾನೆ;
ಮತ್ತು ಹತ್ತು ದಿವಸಗಳ ತನಕ ನಿಮಗೆ ಸಂಕಟವಿರು
ವದು. ನೀನು ಸಾಯಬೇಕಾದರೂ ನಂಬಿಗಸ್ತನಾಗಿ
ರು; ನಾನು ನಿನಗೆ ಜೀವವೆಂಬ ಜಯಮಾಲೆಯನ್ನು
11 ಕೊಡುವೆನು. ದೇವರಾತ್ಮನು ಸಭೆಗಳಿಗೆ ಹೇಳುವ
ದನ್ನು ಕಿವಿಯುಳ್ಳವನು ಕೇಳಲಿ. ಜಯಹೊಂದುವವ
ನಿಗೆ ಎರಡನೆಯ ಮರಣದಿಂದ ಕೇಡಾಗುವದೇ ಇಲ್ಲ.

12 ಪೆರ್ಗಮದಲ್ಲಿರುವ ಸಭೆಯ ದೂತನಿಗೆ ಬರೆ—
13 ಹದವಾದ ಇಬ್ಬಾಯಿಕತ್ತಿಯನ್ನು ಹಿಡಿದಾತನು
ಹೇಳುವದೇನಂದರೆ—ನೀನು ವಾಸಮಾಡುವ ಸ್ಥಳ
ವನ್ನು ಬಲ್ಲೆನು; ಅದು ಸೈತಾನನ ಸಿಂಹಾಸನವಿರುವ
ಸ್ಥಳವಾಗಿದೆ. ನೀನು ನನ್ನ ಹೆಸರನ್ನು ಬಿಡದೇ ಹಿಡು
ಕೊಂಡಿದ್ದೀ; ನೀನು ಇರುವ ಸೈತಾನನ ನಿವಾಸ
ದಲ್ಲಿ ನನಗೆ ನಂಬಿಗಸ್ತನೂ ಸಾಕ್ಷಿಯೂ ಆದ ಅಂತಿ
ಪನು ಕೊಲ್ಲಲ್ಪಟ್ಟ ದಿನಗಳಲ್ಲಿಯಾದರೂ ನನ್ನ
ಲ್ಲಿಟ್ಟಿರುವ ನಂಬಿಕೆಯನ್ನು ನೀನು ಮರೆಮಾಡಲಿಲ್ಲ.
14 ಆದರೂ ಕೆಲವು ವಿಷಯಗಳಲ್ಲಿ ನಿನ್ನ ಮೇಲೆ ತಪ್ಪು
ಹೊರಿಸಬೇಕಾಗುತ್ತದೆ; ವಿಗ್ರಹಕ್ಕೆ ನೈವೇದ್ಯಮಾಡಿದ
ಪದಾರ್ಥಗಳನ್ನು ತಿನ್ನುವದರಲ್ಲಿಯೂ ಜಾರತ್ವ
ಮಾಡುವದರಲ್ಲಿಯೂ ಇಸ್ರಾಯೇಲ್ಯರು ಮುಗ್ಗುರಿಸಿ
ಬೀಳಬೇಕೆಂದು ಬಿಳಾಮನು ಬಾಲಾಕನಿಗೆ ಹೇಳಿದ
ದುರ್ಬೋಧನೆಯನ್ನು ಅವಲಂಬಿಸಿರುವವರು ನಿನ್ನಲ್ಲಿ
15 ದ್ದಾರೆ. ಹಾಗೆಯೇ ನಿಕೊಲಾಯಿತರ ಬೋಧನೆ
ಯನ್ನು ಅವಲಂಬಿಸಿರುವವರೂ ನಿಮ್ಮಲ್ಲಿದ್ದಾರೆ.
16 ಆದದರಿಂದ ದೇವರ ಕಡೆಗೆ ತಿರುಗಿಕೋ, ತಿರುಗಿಕೊಳ್ಳ
ದಿದ್ದರೆ ನಾನು ಬೇಗನೆ ನಿನ್ನ ಬಳಿಗೆ ಬಂದು ನನ್ನ
ಬಾಯ ಕತ್ತಿಯಿಂದ ಅವರ ಮೇಲೆ ಯುದ್ಧಮಾಡು
17 ವೆನು. ದೇವರಾತ್ಮನು ಸಭೆಗಳಿಗೆ ಹೇಳುವದನ್ನು
ಕಿವಿಯುಳ್ಳವನು ಕೇಳಲಿ. ಯಾವನು ಜಯಹೊಂದು
ತ್ತಾನೋ ಅವನಿಗೆ ಬಚ್ಚಿಟ್ಟಿರುವ ಮನ್ನವೆಂಬ ಆಹಾರ
ವನ್ನು ಕೊಡುವೆನು; ಇದಲ್ಲದೆ ಅವನಿಗೆ ಬಿಳೀ
ಕಲ್ಲನ್ನೂ ಆ ಕಲ್ಲಿನ ಮೇಲೆ ಕೆತ್ತಿದ ಹೊಸ ಹೆಸ
ರನ್ನೂ ಕೊಡುವೆನು; ಆ ಹೆಸರನ್ನು ಹೊಂದಿದವನಿಗೇ
ಹೊರತು ಅದು ಇನ್ನಾರಿಗೂ ತಿಳಿಯದು.

ಥುವತ್ತೈರದಲ್ಲಿರುವ ಸಭೆಯ ದೂತನಿಗೆ ಬರೆ—
ಬೆಂಕಿಯ ಉರಿಯಂತಿರುವ ಕಣ್ಣುಗಳೂ ತಾಮ್ರ
ದಂತಿರುವ ಪಾದಗಳೂ ಉಳ್ಳ ದೇವಕುಮಾರನು ಹೇಳು
ವದೇನಂದರೆ—ನಿನ್ನ ಕೃತ್ಯಗಳನ್ನೂ ನಿನ್ನ ಪ್ರೀತಿಯ
ನ್ನೂ ನಂಬಿಕೆಯನ್ನೂ ಪರೋಪಕಾರವನ್ನೂ ತಾಳ್ಮೆ
ಯನ್ನೂ ಬಲ್ಲೆನು; ಇದಲ್ಲದೆ ನಿನ್ನ ಕಡೇ ಕೃತ್ಯಗಳು
ನಿನ್ನ ಮೊದಲಿನ ಕೃತ್ಯಗಳಿಗಿಂತ ಹೆಚ್ಚಾದವುಗಳೆಂದು
ಬಲ್ಲೆನು. ಆದರೆ ನಿನ್ನ ಮೇಲೆ ಒಂದು ತಪ್ಪುಹೊರಿಸ 2
ಬೇಕಾಗುತ್ತದೆ; ಅದೇನಂದರೆ 2)ಯೆಜೆಬೇಲೆಂಬ ಆ
ಹೆಂಗಸು ತನ್ನನ್ನು ಪ್ರವಾದಿನಿಯೆಂದು ಹೇಳಿಕೊಂಡು
ಜಾರತ್ವಮಾಡಬಹುದೆಂದೂ ವಿಗ್ರಹಗಳಿಗೆ ನೈವೇದ್ಯ
ಮಾಡಿದ ಪದಾರ್ಥಗಳನ್ನು ತಿನ್ನಬಹುದೆಂದೂ ನನ್ನ
ದಾಸರಿಗೆ ಬೋಧಿಸುತ್ತಾ ಅವರನ್ನು ತಪ್ಪಾದ ಮಾರ್ಗ
ದಲ್ಲಿ ಸೇರಿಸುತ್ತಿರುವಲ್ಲಿ ನೀನು ಅವಳನ್ನು ತಡೆಯದೆ
ಬಿಟ್ಟಿರುವದೇ. ದೇವರ ಕಡೆಗೆ ತಿರುಗಿಕೊಳ್ಳುವದಕ್ಕೆ 2
ನಾನು ಅವಳಿಗೆ ಸಮಯವನ್ನು ಕೊಟ್ಟೆನು; ಆದರೆ
ದೇವರ ಕಡೆಗೆ ತಿರುಗಿಕೊಂಡು ತನ್ನ ಜಾರತ್ವವನ್ನು ಬಿಟ್ಟು
ಬಿಡುವದಕ್ಕೆ ಅವಳಿಗೆ ಇಷ್ಟವಿಲ್ಲ. ಇಗೋ, ಅವಳು ಹಾಸಿ 2
ಗೆಯ ಮೇಲೆ ಬಿದ್ದುಕೊಂಡಿರುವಂತೆ ಮಾಡುವೆನು,
ಮತ್ತು ಅವಳೊಂದಿಗೆ ವ್ಯಭಿಚಾರಮಾಡುವವರು ತಮ್ಮ
ಮನಸ್ಸನ್ನು ದೇವರ ಕಡೆಗೆ ತಿರುಗಿಸಿಕೊಂಡು ಅವಳ
ಕೃತ್ಯಗಳನ್ನು ಬಿಟ್ಟುಬಿಡದೆ ಹೋದರೆ ಮಹಾ ಸಂಕಟ
ದಲ್ಲಿ ಬೀಳುವಂತೆ ಮಾಡುವೆನು. 3)ಅವಳ ಮಕ್ಕಳನ್ನು 2
ಕೊಂದೇ ಕೊಲ್ಲುವೆನು; ಆಗ ನಾನು ಮನುಷ್ಯರ
ಅಂತರಿಂದ್ರಿಯವನ್ನೂ ಹೃದಯವನ್ನೂ ಪರೀಕ್ಷಿಸು
ವವನಾಗಿದ್ದೇನೆಂಬದು ಎಲ್ಲಾ ಸಭೆಗಳಿಗೆ ಗೊತ್ತಾಗು
ವದು. ನಿಮ್ಮಲ್ಲಿ ಪ್ರತಿಯೊಬ್ಬನಿಗೆ ಅವನವನ ಕೃತ್ಯ
ಗಳಿಗೆ ತಕ್ಕ ಹಾಗೆ ಪ್ರತಿಫಲ ಕೊಡುವೆನು. ಆದರೆ 2
ಥುವತ್ತೈರದಲ್ಲಿರುವ ಉಳಿದವರಿಗೆ, ಅಂದರೆ ಅಗಾಧ
ಬೋಧೆಯೆಂದು ಹೇಳಿಸಿಕೊಂಡಿರುವ ಸೈತಾನನಿಂದ
ಪ್ರೇರಿತವಾದ ದುರ್ಬೋಧನೆಯನ್ನು ನಿಮ್ಮಲ್ಲಿ ಯಾ
ರಾರು ತಿಳಿಯದೆಯೂ ಅವಲಂಬಿಸದೆಯೂ ಇರುತ್ತಾ
ರೋ ಅವರಿಗೆ ಹೇಳುವದೇನಂದರೆ—ನಿಮಗಿರುವದನ್ನು 2
ನಾನು ಬರುವ ತನಕ ಬಿಗಿಯಾಗಿ ಹಿಡುಕೊಂಡಿರ
ಬೇಕೆಂಬ ಅಪ್ಪಣೆಯನ್ನೇ ಹೊರತು ಮತ್ತೊಂದು
ಭಾರವನ್ನು ನಿಮ್ಮ ಮೇಲೆ ಹಾಕುವದಿಲ್ಲವೆಂಬದೇ.
ಯಾವನು ಜಯಶಾಲಿಯಾಗಿದ್ದು ನನಗೆ ಮೆಚ್ಚಿಕೆ 2
ಯಾದ ಕೃತ್ಯಗಳನ್ನು ಕಡೇ ವರೆಗೂ ನಡಿಸುತ್ತಾ
ನೋ ಅವನಿಗೆ ನಾನು ನನ್ನ ತಂದೆಯಿಂದ ಹೊಂದಿದ
ಅಧಿಕಾರದಂತೆ ಜನಾಂಗಗಳ ಮೇಲೆ ಅಧಿಕಾರವನ್ನು
ಕೊಡುವೆನು. ಅವನು ಕಬ್ಬಿಣದ ಕೋಲಿನಿಂದ 2
ಅವರನ್ನು ಆಳುವನು; ಮಣ್ಣಿನ ಮಡಿಕೆಗಳು ಒಡೆ
ಯುವಂತೆ ಅವರ ಬಲ ಮುರಿದುಹೋಗುವದು.

---

1) ಅಂದರೆ, ಆನಂದವನ. 2) ಕೆಲವು ಪ್ರತಿಗಳಲ್ಲಿ—ನಿನ್ನ ಹೆಂಡತಿಯು ಎಂದು ಬರೆದದೆ. 3) ಅಥವಾ, ಅವಳನ್ನು ಹಿಂಬಲಿಸಿದವರನ್ನು.

28 ಇದಲ್ಲದೆ ಉದಯಸೂಚಕನಕ್ಷತ್ರವನ್ನು ಅವನಿಗೆ
29 ಕೊಡುವೆನು. ದೇವರಾತ್ಮನು ಸಭೆಗಳಿಗೆ ಹೇಳುವ
ದನ್ನು ಕಿವಿಯುಳ್ಳವನು ಕೇಳಲಿ.

3 ಸಾರ್ದಿಸಿನಲ್ಲಿರುವ ಸಭೆಯ ದೂತನಿಗೆ ಬರೆ—
ದೇವರ ಏಳು ಆತ್ಮಗಳೂ ಏಳು ನಕ್ಷತ್ರಗಳೂ
ಉಳ್ಳಾತನು ಹೇಳುವದೇನಂದರೆ—ನಿನ್ನ ಕೃತ್ಯಗಳನ್ನು
ಬಲ್ಲೆನು; ಜೀವಿಸುವವನು ಎಂದು ಹೆಸರು ನಿನಗಿ
ದ್ದರೂ ಸತ್ತವನಾಗಿದ್ದೀ ಎಂಬದನ್ನು ಬಲ್ಲೆನು.
2 ಎಚ್ಚರವಾಗಿರು; ಸಾಯುವ ಹಾಗಿದ್ದ ಉಳಿದವುಗಳನ್ನು
ದೃಢಪಡಿಸು. ನನ್ನ ದೇವರ ಮುಂದೆ ನಿನ್ನ ಕೃತ್ಯಗ
ಳಲ್ಲಿ ಒಂದಾದರೂ ಸಂಪೂರ್ಣವಾದದ್ದೆಂದು ನಾನು
3 ಕಾಣಲಿಲ್ಲ. ಆದದರಿಂದ ನೀನು ಹೊಂದಿದ ಉಪದೇಶ
ವನ್ನೂ ಅದನ್ನು ಕೇಳಿದ ರೀತಿಯನ್ನೂ ನೆನಪಿಗೆ ತಂದು
ಕೊಂಡು ಅದನ್ನು ಕಾಪಾಡಿಕೋ, ಮತ್ತು ದೇವರ
ಕಡೆಗೆ ತಿರುಗಿಕೋ. ನೀನು ಎಚ್ಚರವಾಗಿಲ್ಲದಿದ್ದರೆ
ಕಳ್ಳನು ಬರುವಂತೆ ಬರುವೆನು; ನಾನು ಯಾವ ಗಳಿಗೆ
ಯಲ್ಲಿ ನಿನ್ನ ಮೇಲೆ ಬರುವೆನೋ ಅದು ನಿನಗೆ ತಿಳಿ
4 ಯುವದೇ ಇಲ್ಲ. ಆದರೂ ತಮ್ಮ ವಸ್ತ್ರಗಳನ್ನು
ಮೈಲಿಗೆ ಮಾಡಿಕೊಳ್ಳದಿರುವ ಸ್ವಲ್ಪ ಜನರು ಸಾರ್ದಿಸಿ
ನೊಳಗೆ ನಿನ್ನಲ್ಲಿದ್ದಾರೆ; ಅವರು ಯೋಗ್ಯರಾಗಿರುವ
ದರಿಂದ ಶುಭ್ರವಸ್ತ್ರಗಳನ್ನು ಧರಿಸಿಕೊಂಡು ನನ್ನ
5 ಜೊತೆಯಲ್ಲಿ ನಡೆಯುವರು. ಜಯಶಾಲಿಗೆ ಹೀಗೆ
ಶುಭ್ರವಸ್ತ್ರಗಳನ್ನು ಹೊದಿಸುವರು. ಜೀವಬಾಧ್ಯರ
ಪಟ್ಟಿಯಿಂದ ಅವನ ಹೆಸರನ್ನು ನಾನು ಅಳಿಸಿಬಿಡದೆ
ಅವನು ನನ್ನವನೆಂದು ನನ್ನ ತಂದೆಯ ಮುಂದೆಯೂ
6 ಆತನ ದೂತರ ಮುಂದೆಯೂ ಒಪ್ಪುವೆನು. ದೇವ
ರಾತ್ಮನು ಸಭೆಗಳಿಗೆ ಹೇಳುವದನ್ನು ಕಿವಿಯುಳ್ಳವನು
ಕೇಳಲಿ.

7 ಫಿಲದೆಲ್ಫಿಯದಲ್ಲಿರುವ ಸಭೆಯ ದೂತನಿಗೆ ಬರೆ—
ಪರಿಶುದ್ಧನೂ ಸತ್ಯವಂತನೂ ದಾವೀದನ ಬೀಗದ
ಕೈಯುಳ್ಳವನೂ ಯಾರೂ ಮುಚ್ಚಕೂಡದಂತೆ
ತೆರೆಯುವವನೂ ಯಾರೂ ತೆರೆಯದಂತೆ ಮುಚ್ಚು
ವವನೂ ಆಗಿರುವಾತನು ಹೇಳುವದೇನಂದರೆ—
8 ನಿನ್ನ ಕೃತ್ಯಗಳನ್ನು ಬಲ್ಲೆನು; ನಿನಗಿರುವ ಶಕ್ತಿ ಕೊಂಚ
ವಾಗಿದ್ದರೂ ನೀನು ನನಗೆ ಸೇರಿದವನಲ್ಲವೆಂದು
ಹೇಳದೆ ನನ್ನ ವಾಕ್ಯವನ್ನು ಕಾಪಾಡಿದ್ದರಿಂದ ಇಗೋ,
ನಿನ್ನೆದುರಿನಲ್ಲಿ ಒಂದು ಬಾಗಿಲನ್ನು ತೆರೆದಿಟ್ಟಿದ್ದೇನೆ;
9 ಯಾರೂ ಅದನ್ನು ಮುಚ್ಚಲಾರರು. ನಾನು ನಿನಗೆ
ಅನುಗ್ರಹಿಸುವದೇನಂದರೆ ತಾವು ಯೆಹೂದ್ಯರೆಂದು
ಸುಳ್ಳಾಗಿ ಕೊಚ್ಚಿಕೊಳ್ಳುವ ಸೈತಾನನ ಸಮಾಜದವ
ರಲ್ಲಿ ಕೆಲವರು ಬಂದು ನಿನ್ನ ಪಾದಗಳ ಮುಂದೆ
ಬೀಳುವಂತೆಯೂ ನಿನ್ನನ್ನು ನಾನು ಪ್ರೀತಿಸಿದ್ದನ್ನು
10 ತಿಳುಕೊಳ್ಳುವಂತೆಯೂ ಮಾಡುವೆನು. ನೀನು ನನ್ನ
ಸಹನವಾಕ್ಯವನ್ನು ಕಾಪಾಡಿದ್ದರಿಂದ ಭೂನಿವಾಸಿ
ಗಳನ್ನು ಪರೀಕ್ಷಿಸುವದಕ್ಕಾಗಿ ಲೋಕದ ಮೇಲೆಲ್ಲಾ
ಬರುವದಕ್ಕಿರುವ ಶೋಧನೆಯ ಸಮಯದಲ್ಲಿ ನಿನ್ನನ್ನು
ತಪ್ಪಿಸಿ ಕಾಪಾಡುವೆನು. ಬೇಗನೇ ಬರುತ್ತೇನೆ; 11
ನಿನಗಿರುವದನ್ನು ಹಿಡಿದುಕೊಂಡಿರು; ನಿನ್ನ ಜಯ
ಮಾಲೆಯನ್ನು ಯಾರೂ ಅಪಹರಿಸಬಾರದು. ಯಾ 12
ವನು ಜಯಹೊಂದುತ್ತಾನೋ ಅವನನ್ನು ನನ್ನ ದೇವರ
ಆಲಯದಲ್ಲಿ ಸ್ತಂಭವಾಗಿ ನಿಲ್ಲಿಸುವೆನು; ಅವನು
ಇನ್ನು ಮುಂದೆ ಅದರೊಳಗಿಂದ ಹೋಗುವದೇ ಇಲ್ಲ.
ಇದಲ್ಲದೆ ನನ್ನ ದೇವರ ಹೆಸರನ್ನೂ ನನ್ನ ದೇವರ
ಬಳಿಯಿಂದ ಪರಲೋಕದೊಳಗಿಂದ ಇಳಿದುಬರುವ
ಹೊಸ ಯೆರೂಸಲೇಮ್ ಪಟ್ಟಣವೆಂಬ ನನ್ನ ದೇವರ
ಪಟ್ಟಣದ ಹೆಸರನ್ನೂ ನನ್ನ ಹೊಸ ಹೆಸರನ್ನೂ ಅವನ
ಮೇಲೆ ಬರೆಯುವೆನು. ದೇವರಾತ್ಮನು ಸಭೆಗಳಿಗೆ 13
ಹೇಳುವದನ್ನು ಕಿವಿಯುಳ್ಳವನು ಕೇಳಲಿ.

ಲವೊದಿಕೀಯದಲ್ಲಿರುವ ಸಭೆಯ ದೂತನಿಗೆ ಬರೆ— 14
[1]ಆಮೆನ್ ಎಂಬಾತನು ಅಂದರೆ ನಂಬತಕ್ಕ
ಸತ್ಯಸಾಕ್ಷಿಯೂ ದೇವರ ಸೃಷ್ಟಿಗೆ ಮೂಲನೂ ಆಗಿ
ರುವಾತನು ಹೇಳುವದೇನಂದರೆ—ನಿನ್ನ ಕೃತ್ಯಗಳನ್ನು 15
ಬಲ್ಲೆನು; ನೀನು ತಣ್ಣಗೂ ಅಲ್ಲ, ಬೆಚ್ಚಗೂ ಅಲ್ಲ;
ನೀನು ತಣ್ಣಗಾಗಲಿ ಬೆಚ್ಚಗಾಗಲಿ ಇದ್ದರೆ ಒಳ್ಳೇ
ದಾಗಿತ್ತು. ನೀನು ಬೆಚ್ಚಗೂ ಇಲ್ಲದೆ ತಣ್ಣಗೂ ಇಲ್ಲದೆ 16
ಉಗುರುಬೆಚ್ಚಗಿರುವದರಿಂದ ನಿನ್ನನ್ನು ನನ್ನ ಬಾಯೊಳ
ಗಿಂದ ಕಾರುವೆನು. ನೀನು ನಿನ್ನ ವಿಷಯದಲ್ಲಿ— 17
ನಾನು ಐಶ್ವರ್ಯವಂತನು, ಸಂಪನ್ನನು, ಒಂದರಲ್ಲಿ
ಯೂ ಕೊರತೆಯಿಲ್ಲದವನು ಎಂದು ಹೇಳಿಕೊಳ್ಳುತ್ತೀ;
ಆದರೆ ನೀನು ಕೇವಲ ದುರವಸ್ಥೆಯಲ್ಲಿ ಬಿದ್ದಿರುವಂಥ
ವನು, ದೌರ್ಭಾಗ್ಯನು, ದರಿದ್ರನು, ಕುರುಡನು, ಬಟ್ಟೆ
ಯಿಲ್ಲದವನು ಆಗಿರುವದನ್ನು ತಿಳಿಯದೆ ಇದ್ದೀ. ನೀನು 18
ಐಶ್ವರ್ಯವಂತನಾಗುವಂತೆ ಬೆಂಕಿಯಲ್ಲಿ ಪುಟಾಹಾಕಿದ
ಚಿನ್ನವನ್ನೂ, ಲಜ್ಜಾಸ್ಪದವಾದ ನಿನ್ನ ಬೆತ್ತಲೆತನ
ಕಾಣಿಸದಂತೆ ಹೊದ್ದುಕೊಳ್ಳುವದಕ್ಕಾಗಿ ಬಿಳೀ ವಸ್ತ್ರ
ಗಳನ್ನೂ, ಕಣ್ಣುಕಾಣುವಂತೆ ನಿನ್ನ ಕಣ್ಣುಗಳಿಗೆ
ಹಚ್ಚುವದಕ್ಕಾಗಿ ಅಂಜನವನ್ನೂ ನನ್ನಿಂದ ಕೊಂಡು
ಕೊಳ್ಳಬೇಕೆಂದು ನಿನಗೆ ಬುದ್ಧಿಹೇಳುತ್ತೇನೆ. ನಾನು 19
ಯಾರಾರನ್ನು ಪ್ರೀತಿಸುತ್ತೇನೋ ಅವರನ್ನು ಗದರಿಸು
ತ್ತೇನೆ ಮತ್ತು ಶಿಕ್ಷಿಸುತ್ತೇನೆ. ಆದದರಿಂದ ನೀನು
ಆಸಕ್ತನಾಗಿರು; ದೇವರ ಕಡೆಗೆ ತಿರುಗಿಕೋ. ಇಗೋ, 20
ಬಾಗಿಲಲ್ಲಿ ನಿಂತುಕೊಂಡು ತಟ್ಟುತ್ತಾ ಇದ್ದೇನೆ; ಯಾ
ವನಾದರೂ ನನ್ನ ಶಬ್ದವನ್ನು ಕೇಳಿ ಬಾಗಿಲನ್ನು ತೆರೆ
ದರೆ ನಾನು ಒಳಗೆ ಬಂದು ಅವನ ಸಂಗಡ ಊಟ
ಮಾಡುವೆನು, ಅವನು ನನ್ನ ಸಂಗಡ ಊಟಮಾಡು
ವನು. ನಾನು ಜಯಹೊಂದಿ ನನ್ನ ತಂದೆಯೊ 21
ಡನೆ ಸಿಂಹಾಸನದಲ್ಲಿ ಕೂತುಕೊಂಡೆನು; ಹಾಗೆಯೇ
ಜಯಹೊಂದುವವನನ್ನು ನನ್ನೊಡನೆ ಸಿಂಹಾಸನ
ದಲ್ಲಿ ಕೂತುಕೊಳ್ಳುವಂತೆ ಮಾಡುವೆನು. ದೇವ 22
ರಾತ್ಮನು ಸಭೆಗಳಿಗೆ ಹೇಳುವದನ್ನು ಕಿವಿಯುಳ್ಳವನು
ಕೇಳಲಿ.

---

1) ಅಥವಾ, ಸತ್ಯವಂತನು.

II. ಪರಲೋಕದಲ್ಲಿರುವ ದೇವರ ಸಾನ್ನಿಧ್ಯವನ್ನು ಕುರಿತದ್ದು.

4 ಇವುಗಳಾದ ಮೇಲೆ ನಾನು ನೋಡಿದಾಗ ಪರಲೋಕ
ದಲ್ಲಿ ತೆರೆದಿದ್ದ ಬಾಗಿಲು ಕಾಣಿಸಿತು; ಮತ್ತು ನನ್ನ
ಸಂಗಡ ತುತೂರಿಯು ಮಾತಾಡುತ್ತದೋ ಎಂಬಂತೆ
ನಾನು ಮೊದಲು ಕೇಳಿದ್ದ ವಾಣಿಯು ಕೇಳಿಸಿತು.
ಇಲ್ಲಿಗೆ ಏರಿಬಾ, ಮುಂದೆ ಆಗಬೇಕಾದವು
ಗಳನ್ನು ನಿನಗೆ ತೋರಿಸುವೆನು ಎಂದು ಹೇಳಿತು.
2 ಕೂಡಲೆ ದೇವರಾತ್ಮವಶನಾದೆನು. ಆಗ ಇಗೋ,
ಪರಲೋಕದಲ್ಲಿ ಒಂದು ಸಿಂಹಾಸನವಿತ್ತು; ಸಿಂಹಾ
3 ಸನದ ಮೇಲೆ ಒಬ್ಬನು ಕೂತಿದ್ದನು. ಕೂತಿದ್ದವನು
ಕಣ್ಣಿಗೆ [1]ಸೂರ್ಯಕಾಂತ ಪದ್ಮರಾಗ ಮಣಿಗಳಂತೆ
ಕಾಣುತ್ತಿದ್ದನು. ಸಿಂಹಾಸನದ ಸುತ್ತಲು ಪಚ್ಚೆಯಂತೆ
4 ತೋರುತ್ತಿದ್ದ ಮುಗಿಲುಬಿಲ್ಲು ಇತ್ತು. ಇದಲ್ಲದೆ
ಸಿಂಹಾಸನದ ಸುತ್ತಲು ಇಪ್ಪತ್ತುನಾಲ್ಕು ಸಿಂಹಾಸನ
ಗಳಿದ್ದವು; ಆ ಸಿಂಹಾಸನಗಳ ಮೇಲೆ ಶುಭ್ರವಸ್ತ್ರ
ಧರಿಸಿಕೊಂಡಿದ್ದ ಇಪ್ಪತ್ತುನಾಲ್ಕು ಮಂದಿ ಹಿರಿಯರು
ಕೂತಿದ್ದರು; ಅವರ ತಲೆಗಳ ಮೇಲೆ ಚಿನ್ನದ ಕಿರೀ
5 ಟಗಳಿದ್ದವು. ಸಿಂಹಾಸನದೊಳಗಿಂದ ಮಿಂಚುಗಳೂ
ವಾಣಿಗಳೂ ಗುಡುಗುಗಳೂ ಹೊರಡುತ್ತವೆ. ಅದರ
ಮುಂದೆ ದೇವರ ಏಳು ಆತ್ಮಗಳನ್ನು ಸೂಚಿಸುವ
6 ಏಳು ದೀಪಗಳು ಉರಿಯುತ್ತಿದ್ದವು. ಇದಲ್ಲದೆ
ಸಿಂಹಾಸನದ ಮುಂದೆ ಸ್ಫಟಿಕಕ್ಕೆ ಸಮಾನವಾದ
ಗಾಜಿನ ಸಮುದ್ರವಿದ್ದ ಹಾಗೆ ತೋಚಿತು. ಸಿಂಹಾ
ಸನದ ಮಧ್ಯದಲ್ಲಿ ಅದರ ನಾಲ್ಕು ಕಡೆಗಳಲ್ಲಿ ನಾಲ್ಕು
ಜೀವಿಗಳಿದ್ದವು; ಅವುಗಳಿಗೆ ಹಿಂದೆ ಮುಂದೆ ತುಂಬಾ
7 ಕಣ್ಣುಗಳಿದ್ದವು. ಮೊದಲನೆಯ ಜೀವಿಯು ಸಿಂಹ
ದಂತಿತ್ತು; ಎರಡನೆಯ ಜೀವಿಯು ಹೋರಿಯಂತಿತ್ತು;
ಮೂರನೆಯ ಜೀವಿಯ ಮುಖವು ಮನುಷ್ಯನ ಮುಖ
ದಂತಿತ್ತು; ನಾಲ್ಕನೆಯ ಜೀವಿಯು ಹಾರುವ ಗರುಡ
8 ಪಕ್ಷಿಯಂತಿತ್ತು. ಆ ನಾಲ್ಕು ಜೀವಿಗಳೊಳಗೆ
ಒಂದೊಂದಕ್ಕೆ ಆರಾರು ರೆಕ್ಕೆಗಳಿದ್ದವು; ಆ ಜೀವಿ
ಗಳಿಗೆ ಸುತ್ತಲೂ ಒಳಗೂ ತುಂಬಾ ಕಣ್ಣುಗಳಿದ್ದವು.
ಆ ಜೀವಿಗಳು ಹಗಲಿರುಳು ವಿಶ್ರಮಿಸಿಕೊಳ್ಳದೆ—

ದೇವರಾದ ಕರ್ತನು ಪರಿಶುದ್ಧನು ಪರಿಶು
ದ್ಧನು ಪರಿಶುದ್ಧನು;
ಆತನು ಸರ್ವಶಕ್ತನು, ವರ್ತಮಾನ ಭೂತ
ಭವಿಷ್ಯತ್ಕಾಲಗಳಲ್ಲಿರುವಂಥವನು

9 ಎಂದು ಹೇಳುತ್ತವೆ. ಯುಗಯುಗಾಂತರಗಳಲ್ಲಿಯೂ
ಜೀವಿಸುವವನಾಗಿ ಸಿಂಹಾಸನದ ಮೇಲೆ ಕೂತಿರುವಾತ
ನಿಗೆ ಆ ನಾಲ್ಕು ಜೀವಿಗಳು ಪ್ರಭಾವ ಮಾನ ಕೃತಜ್ಞ
10 ತಾಸ್ತುತಿಗಳನ್ನು ಸಲ್ಲಿಸುವಾಗ್ಗೆ ಆ ಇಪ್ಪತ್ತುನಾಲ್ಕು
ಮಂದಿ ಹಿರಿಯರು ಸಿಂಹಾಸನದ ಮೇಲೆ ಕೂತಾತನ
ಪಾದಕ್ಕೆ ಬಿದ್ದು ತಮ್ಮ ಕಿರೀಟಗಳನ್ನು ಸಿಂಹಾಸನದ
ಮುಂದೆ ಹಾಕಿ—

11 ಕರ್ತನೇ, ನಮ್ಮ ದೇವರೇ,
ನೀನು ಪ್ರಭಾವ ಮಾನ ಬಲಗಳನ್ನು ಹೊಂದು
ವದಕ್ಕೆ ಯೋಗ್ಯನಾಗಿದ್ದೀ;
ಸಮಸ್ತವನ್ನು ಸೃಷ್ಟಿಸಿದಾತನು ನೀನೇ;
ಎಲ್ಲವು ನಿನ್ನ ಚಿತ್ತದಿಂದಲೇ ಇದ್ದವು, ನಿನ್ನ
ಚಿತ್ತದಿಂದಲೇ ನಿರ್ಮಿತವಾದವು

ಎಂದು ಹೇಳುತ್ತಾ ಯುಗಯುಗಾಂತರಗಳಲ್ಲಿಯೂ
ಜೀವಿಸುವಾತನನ್ನು ಆರಾಧಿಸುತ್ತಾರೆ.

III. ಸುರುಳಿಯ ಏಳು ಮುದ್ರೆಗಳನ್ನು ಕುರಿತದ್ದು.

5 ಸಿಂಹಾಸನದ ಮೇಲೆ ಕುಳಿತಿದ್ದಾತನ ಬಲಗೈಯಲ್ಲಿ
ಒಂದು ಸುರುಳಿಯನ್ನು ಕಂಡೆನು; ಅದರ ಎರಡು
ಪಕ್ಕೆಗಳಲ್ಲಿಯೂ ಬರೆದಿತ್ತು; ಅದು ಏಳು ಮುದ್ರೆ
ಗಳಿಂದ ಮುದ್ರಿತವಾಗಿತ್ತು. ಇದಲ್ಲದೆ ಬಲಿಷ್ಠ
ನಾದ ಒಬ್ಬ ದೇವದೂತನು—ಈ ಸುರುಳಿಯನ್ನು
ಬಿಚ್ಚುವದಕ್ಕೂ ಇದರ ಮುದ್ರೆಗಳನ್ನು ಒಡೆಯುವ
ದಕ್ಕೂ ಯಾವನು ಯೋಗ್ಯನು ಎಂದು ಮಹಾ ಶಬ್ದ
ದಿಂದ ಸಾರುವದನ್ನು ಕಂಡೆನು. ಆ ಸುರುಳಿಯನ್ನು
ಬಿಚ್ಚುವದಕ್ಕಾದರೂ ಅದರೊಳಗೆ ನೋಡುವದಕ್ಕಾ
ದರೂ ಪರಲೋಕದಲ್ಲಿಯಾಗಲಿ ಭೂಮಿಯಲ್ಲಿಯಾ
ಗಲಿ ಭೂಮಿಯ ಕೆಳಗಾಗಲಿ ಯಾವನಿಗೂ ಶಕ್ತಿಯಿರ
ಲಿಲ್ಲ. ಆಗ ಸುರುಳಿಯನ್ನು ಬಿಚ್ಚುವದಕ್ಕಾಗಲಿ
ಅದರಲ್ಲಿ ನೋಡುವದಕ್ಕಾಗಲಿ ಯೋಗ್ಯನಾದವನು
ಒಬ್ಬನೂ ಸಿಕ್ಕಲಿಲ್ಲವಾದ ಕಾರಣ ನಾನು ಬಹಳವಾಗಿ
ಅಳುತ್ತಿರಲು ಹಿರಿಯರಲ್ಲಿ ಒಬ್ಬನು ನನಗೆ—ಅಳ
ಬೇಡ; ಅಗೋ ಯೂದಾ ಕುಲದಲ್ಲಿ ಜನಿಸಿದ
[2]ಸಿಂಹವೂ ದಾವೀದನ ಅಂಕುರದವನೂ ಆಗಿರು
ವಾತನು ಜಯಹೊಂದಿದನು; ಆತನು ಆ ಸುರುಳಿ
ಯನ್ನೂ ಅದರ ಏಳು ಮುದ್ರೆಗಳನ್ನೂ ಬಿಚ್ಚುವನು
ಎಂದು ಹೇಳಿದನು. ಸಿಂಹಾಸನವೂ ನಾಲ್ಕು ಜೀವಿ
ಗಳೂ ಇದ್ದ ಸ್ಥಳಕ್ಕೂ ಹಿರಿಯರು ಇದ್ದ ಸ್ಥಳಕ್ಕೂ
ಮಧ್ಯದಲ್ಲಿ ಒಂದು [3]ಕುರಿ ಕೊಯ್ಯಲ್ಪಟ್ಟದ್ದಾಗಿ ನಿಂತಿ
ರುವದನ್ನು ಕಂಡೆನು. ಅದಕ್ಕೆ ಏಳು ಕೊಂಬುಗಳೂ
ಏಳು ಕಣ್ಣುಗಳೂ ಇದ್ದವು; ಅವು ಏನಂದರೆ ಭೂ
ಮಿಯ ಮೇಲೆಲ್ಲಾ ಕಳುಹಿಸಲ್ಪಟ್ಟಿರುವ ದೇವರ
ಏಳು ಆತ್ಮಗಳು. ಈತನು ಮುಂದೆ ಬಂದು ಸಿಂಹಾ
ಸನದ ಮೇಲೆ ಕೂತಿದ್ದಾತನ ಬಲಗೈಯೊಳಗಿಂದ ಆ
ಸುರುಳಿಯನ್ನು ತೆಗೆದುಕೊಂಡನು. ತೆಗೆದುಕೊಂಡಾಗ
ಆ ನಾಲ್ಕು ಜೀವಿಗಳೂ ಇಪ್ಪತ್ತುನಾಲ್ಕು ಮಂದಿ ಹಿರಿ
ಯರೂ ಯಜ್ಞದ ಕುರಿಯಾದಾತನ ಪಾದಕ್ಕೆ ಬಿದ್ದ
ರು. ಹಿರಿಯರ ಕೈಗಳಲ್ಲಿ ವೀಣೆಗಳೂ, ದೇವಜನರ
ಪ್ರಾರ್ಥನೆಗಳೆಂಬ ಧೂಪದಿಂದ ತುಂಬಿದ್ದ ಚಿನ್ನದ
ಧೂಪಾರತಿಗಳೂ ಇದ್ದವು. ಅವರು ಹೊಸ ಹಾಡನ್ನು
ಹಾಡುತ್ತಾ—

ನೀನು ಸುರುಳಿಯನ್ನು ತೆಗೆದುಕೊಂಡು ಅದರ
ಮುದ್ರೆಗಳನ್ನು ಒಡೆಯುವದಕ್ಕೆ ಯೋ
ಗ್ಯನೇ;
ನೀನು ಯಜ್ಞಾರ್ಪಿತನಾಗಿ ನಿನ್ನ ರಕ್ತದಿಂದ

1) ಅಥವಾ, ವಜ್ರ. 2) ಅಥವಾ, ಸಿಂಹಪ್ರಾಯನೂ. 3) ಅಥವಾ, ಕುರಿಮರಿ; ಎಲ್ಲಾ ಸ್ಥಳಗಳಲ್ಲಿಯೂ ಹಾಗೆಯೇ.

ಸಕಲ ಕುಲ ಭಾಷೆ ಪ್ರಜೆ ಜನಾಂಗಗಳ
ವರಿಂದ ಮನುಷ್ಯರನ್ನು ದೇವರಿಗಾಗಿ
ಕೊಂಡುಕೊಂಡಿ;
10 ಅವರನ್ನು ನಮ್ಮ ದೇವರಿಗೋಸ್ಕರ ರಾಜ್ಯವನ್ನಾ
ಗಿಯೂ ಯಾಜಕರನ್ನಾಗಿಯೂ ಮಾಡಿದಿ;
ಅವರು ಭೂಮಿಯ ಮೇಲೆ ಆಳುವರು
11 ಎಂದು ಹೇಳಿದರು. ಇದಲ್ಲದೆ ಸಿಂಹಾಸನವು ಜೀವಿ
ಗಳು ಹಿರಿಯರು ಇವರ ಸುತ್ತಲು ಬಹು ಮಂದಿ ದೇವ
ದೂತರನ್ನು ಕಂಡೆನು; ಅವರ ಸಂಖ್ಯೆಯು ಕೋ
ಟ್ಯಾನುಕೋಟಿಯಾಗಿಯೂ ಲಕ್ಷೋಪಲಕ್ಷವಾಗಿಯೂ
12 ಇತ್ತು. ಅವರ ಸ್ವರವು ನನಗೆ ಕೇಳಿಸಿತು; ಅವರು
ಮಹಾಶಬ್ದದಿಂದ—
ವಧಿತನಾದ ಕುರಿಯಾದಾತನು
ಬಲ ಐಶ್ವರ್ಯ ಜ್ಞಾನ ಸಾಮರ್ಥ್ಯ ಮಾನ
ಪ್ರಭಾವ ಸ್ತೋತ್ರಗಳನ್ನು ಹೊಂದುವದಕ್ಕೆ
ಯೋಗ್ಯನು
13 ಎಂದು ಹೇಳಿದರು. ಇದಲ್ಲದೆ ಆಕಾಶದಲ್ಲಿಯೂ
ಭೂಮಿಯ ಮೇಲೆಯೂ ಭೂಮಿಯ ಕೆಳಗೆಯೂ
ಸಮುದ್ರದ ಮೇಲೆಯೂ ಇರುವ ಎಲ್ಲಾ ಸೃಷ್ಟಿಗಳು
ಅಂದರೆ ಭೂವ್ಯಾಕಾಶಸಮುದ್ರಗಳೊಳಗೆ ಇರುವ
ದೆಲ್ಲವೂ—
ಸಿಂಹಾಸನಾಸೀನನಿಗೂ ಯಜ್ಞದ ಕುರಿಯಾದಾ
ತನಿಗೂ
ಸ್ತೋತ್ರ ಮಾನ ಪ್ರಭಾವ ಆಧಿಪತ್ಯಗಳು ಯುಗ
ಯುಗಾಂತರಗಳಲ್ಲಿಯೂ ಇರಲಿ
14 ಎಂದು ಹೇಳುವದನ್ನು ಕೇಳಿದೆನು. ಆಗ ನಾಲ್ಕು ಜೀವಿ
ಗಳು ಆಮೆನ್ ಅಂದವು; ಮತ್ತು ಹಿರಿಯರು ಅಡ್ಡ
ಬಿದ್ದು ನಮಸ್ಕಾರಮಾಡಿದರು.

ಮೊದಲ ನಾಲ್ಕು ಮುದ್ರೆಗಳನ್ನು ಒಡೆಯಲು ಯುದ್ಧ
ಕ್ಷಾಮ ಕೊಲೆ ಇವುಗಳ ಗುರುತುಗಳು ಕಾಣಿಸಿದ್ದು.

6 ಯಜ್ಞದ ಕುರಿಯಾದಾತನು ಆ ಏಳು ಮುದ್ರೆಗ
ಳಲ್ಲಿ ಒಂದು ಮುದ್ರೆಯನ್ನು ಒಡೆಯುವಾಗ ನಾನು
ನೋಡಿದೆನು. ಮತ್ತು ಆ ನಾಲ್ಕು ಜೀವಿಗಳಲ್ಲಿ
ಒಂದು ಜೀವಿಯು—[1]ಬಾ ಎಂದು ಗುಡುಗಿನಂತಿ
2 ದ್ದ ಸ್ವರದಿಂದ ಹೇಳುವದನ್ನು ಕೇಳಿದೆನು. ಆಗ
ಇಗೋ, ಒಂದು ಬಿಳಿ ಕುದುರೆ ಕಾಣಿಸಿತು; ಅದರ
ಮೇಲೆ ಕೂತಿದ್ದವನ ಕೈಯಲ್ಲಿ ಬಿಲ್ಲು ಇತ್ತು; ಅವ
ನಿಗೆ ಜಯಮಾಲೆ ಕೊಡಲ್ಪಟ್ಟಿತು; ಅವನು ಜಯಿಸು
ತ್ತಿರುವವನಾಗಿ ಜಯಿಸುವದಕ್ಕೋಸ್ಕರ ಹೊರಟನು.
3 ಆತನು ಎರಡನೆಯ ಮುದ್ರೆಯನ್ನು ಒಡೆದಾಗ
ಎರಡನೆಯ ಜೀವಿಯು—ಬಾ ಅನ್ನುವದನ್ನು ಕೇಳಿ
4 ದೆನು. ಆಗ ಮತ್ತೊಂದು ಕುದುರೆಯು ಹೊರಟು
ಬಂತು; ಅದು ಕೆಂಪು ಕುದುರೆ. ಅದರ ಮೇಲೆ
ಕೂತಿದ್ದವನಿಗೆ ಭೂಮಿಯಿಂದ ಸಮಾಧಾನವನ್ನು
ತೆಗೆದುಬಿಡುವದಕ್ಕೂ ಮನುಷ್ಯರು ಒಬ್ಬರನ್ನೊಬ್ಬರು
ಕೊಲ್ಲುವವರಾಗುವಂತೆ ಮಾಡುವದಕ್ಕೂ ಅಧಿಕಾ
ರವು ಕೊಡಲ್ಪಟ್ಟಿತು; ಅವನಿಗೆ ದೊಡ್ಡ ಕತ್ತಿಯು ಕೊಡ
ಲ್ಪಟ್ಟಿತು.
ಆತನು ಮೂರನೆಯ ಮುದ್ರೆಯನ್ನು ಒಡೆದಾಗ 5
ಮೂರನೆಯ ಜೀವಿಯು—ಬಾ ಅನ್ನುವದನ್ನು ಕೇಳಿ
ದೆನು. ಆಗ ಇಗೋ, ಕಪ್ಪು ಕುದುರೆಯು
ಕಾಣಿಸಿತು; ಅದರ ಮೇಲೆ ಕೂತಿದ್ದವನ ಕೈಯಲ್ಲಿ
ತ್ರಾಸು ಇತ್ತು. ಆ ಮೇಲೆ ನಾಲ್ಕು ಜೀವಿಗಳ ಮಧ್ಯ 6
ದಿಂದ ಒಬ್ಬನ ಧ್ವನಿಯು ಹೊರಟ ಹಾಗೆ ಕೇಳಿದೆನು.
ಅದು—ರೂಪಾಯಿಗೆ ಒಂದು ಸೇರು ಗೋಧಿ;
ರೂಪಾಯಿಗೆ ಮೂರು ಸೇರು ಜವೆಗೋಧಿ; ಎಣ್ಣೆ
ಯನ್ನೂ ದ್ರಾಕ್ಷಾರಸವನ್ನೂ ಕೆಡಿಸಬೇಡ ಎಂದು
ಹೇಳಿತು.
ಆತನು ನಾಲ್ಕನೆಯ ಮುದ್ರೆಯನ್ನು ಒಡೆದಾಗ 7
ನಾಲ್ಕನೆಯ ಜೀವಿಯು—ಬಾ ಅನ್ನುವ ಶಬ್ದ
ವನ್ನು ಕೇಳಿದೆನು. ಆಗ ಇಗೋ, ಬೂದಿಬಣ್ಣದ 8
ಕುದುರೆಯು ಕಾಣಿಸಿತು. ಅದರ ಮೇಲೆ ಕೂತಿದ್ದ
ವನ ಹೆಸರು ಮೃತ್ಯುವು; ಅವನ ಹಿಂದೆ ಪಾತಾಳವೆಂಬ
ವನು ಬಂದನು. ಅವರಿಗೆ ಭೂಮಿಯ ಕಾಲುಭಾಗ
ದಲ್ಲಿ ಕತ್ತಿಯಿಂದಲೂ ಬರದಿಂದಲೂ ಅಂಟುರೋಗ
ದಿಂದಲೂ ಕಾಡುಮೃಗಗಳಿಂದಲೂ ಕೊಲ್ಲುವದಕ್ಕೆ
ಅಧಿಕಾರವು ಕೊಡಲ್ಪಟ್ಟಿತು.

ಐದನೆಯ ಮುದ್ರೆಯನ್ನು ಒಡೆದದ್ದು; ರಕ್ತಸಾಕ್ಷಿಗಳ ಆತ್ಮಗಳು
ದೇವರ ಶತ್ರುಗಳಿಗೆ ಪ್ರತಿದಂಡನೆಯಾಗಬೇಕೆಂದು
ಮೊರೆಯಿಟ್ಟದ್ದು.

ಆತನು ಐದನೆಯ ಮುದ್ರೆಯನ್ನು ಒಡೆದಾಗ 9
ದೇವರ ವಾಕ್ಯದ ನಿಮಿತ್ತವಾಗಿಯೂ ತಾವು
ಹೇಳಿದ ಸಾಕ್ಷಿಯ ನಿಮಿತ್ತವಾಗಿಯೂ ಹತವಾದ
ವರ ಆತ್ಮಗಳು ಯಜ್ಞವೇದಿಯ ಕೆಳಗಿರುವದನ್ನು
ಕಂಡೆನು. ಅವರು—ಒಡೆಯನೇ, ಪರಿಶುದ್ಧನೂ 10
ಸತ್ಯವಂತನೂ ಆಗಿರುವಾತನೇ, ಭೂನಿವಾಸಿಗಳು
ನಮ್ಮನ್ನು ಕೊಂದದ್ದಕ್ಕಾಗಿ ನೀನು ಎಷ್ಟು ಕಾಲದ
ವರೆಗೂ ನ್ಯಾಯವಿಚಾರಿಸದೆಯೂ ಪ್ರತಿದಂಡನೆ ಮಾಡ
ದೆಯೂ ಇರುವಿ? ಎಂದು ಮಹಾ ಶಬ್ದದಿಂದ
ಕೂಗಿದರು. ಅವರಲ್ಲಿ ಒಬ್ಬೊಬ್ಬನಿಗೆ ಒಂದೊಂದು 11
ಬಿಳಿ ನಿಲುವಂಗಿಯು ಕೊಡಲ್ಪಟ್ಟಿತು. ಇದಲ್ಲದೆ—
ನಿಮ್ಮ ಹಾಗೆ ಕೊಲೆಯಾಗಬೇಕಾಗಿರುವ ನಿಮ್ಮ
ಸಹೋದರರ ಮತ್ತು ನಿಮ್ಮ ಜೊತೆದಾಸರ ಸಂಖ್ಯೆ
ಯೂ ಪೂರ್ಣವಾಗುವ ತನಕ ಇನ್ನೂ ಸ್ವಲ್ಪ
ಕಾಲ ವಿಶ್ರಮಿಸಿಕೊಂಡಿರಬೇಕೆಂದು ಅವರಿಗೆ ಉತ್ತರ
ವಾಯಿತು.

ಆರನೆಯ ಮುದ್ರೆಯನ್ನು ಒಡೆದದ್ದು; ಮನುಷ್ಯರು ದೇವರ
ಕೋಪದಿಂದ ತಪ್ಪಿಸಿಕೊಳ್ಳಬೇಕೆಂದು ಓಡಿಹೋದದ್ದು.

ಆತನು ಆರನೆಯ ಮುದ್ರೆ ಒಡೆಯುವದನ್ನು 12
ಕಂಡೆನು. ಒಡೆದಾಗ ಮಹಾಭೂಕಂಪ ಉಂಟಾ

1) ಅಥವಾ, ಹೊರಟು ಬಾ.

ಯಿತು; ಸೂರ್ಯನು ಕರೀಕಂಬಳಿಯಂತೆ ಕಪ್ಪಾ
13 ದನು; ಪೂರ್ಣಚಂದ್ರನು ರಕ್ತದಂತಾದನು; ಅತ್ತೀ
ಮರವು ಬಿರುಗಾಳಿಯಿಂದ ಅಲ್ಲಾಡಿಸಲ್ಪಟ್ಟು ತನ್ನ
ಕಾಯಿಗಳನ್ನು ಉದುರಿಸುವ ಪ್ರಕಾರ ಆಕಾಶದ
14 ನಕ್ಷತ್ರಗಳು ಭೂಮಿಗೆ ಬಿದ್ದವು. ಆಕಾಶವು ಸುರು
ಳಿಯ ಹಾಗೆ ಸುತ್ತಲ್ಪಟ್ಟು ಹೋಗಿಬಿಟ್ಟಿತು; ಎಲ್ಲಾ
ಬೆಟ್ಟಗಳೂ ದ್ವೀಪಗಳೂ ತಮ್ಮ ತಮ್ಮ ಸ್ಥಳಗಳಿಂದ
15 ಚಲಿಸಿದವು. ಇದಲ್ಲದೆ ಭೂರಾಜರೂ ಪ್ರಭುಗಳೂ
ಸಹಸ್ರಾಧಿಪತಿಗಳೂ ಐಶ್ವರ್ಯವಂತರೂ ಪರಾಕ್ರಮ
ಶಾಲಿಗಳೂ ಎಲ್ಲಾ ದಾಸರೂ ಸ್ವತಂತ್ರರೂ ಬೆಟ್ಟಗಳ
ಗವಿಗಳಿಗೂ ಬಂಡೆಗಳ ಸಂದುಗಳಿಗೂ ಓಡಿಹೋಗಿ
16 ತಮ್ಮನ್ನು ಮರೆಮಾಡಿಕೊಂಡು ಬೆಟ್ಟಗಳಿಗೂ ಬಂಡೆ
ಗಳಿಗೂ—ನಮ್ಮ ಮೇಲೆ ಬೀಳಿರಿ, ಸಿಂಹಾಸನದ ಮೇಲೆ
ಕೂತಿರುವಾತನ ಮುಖಕ್ಕೂ ಯಜ್ಞದ ಕುರಿಯಾದಾ
17 ತನ ಕೋಪಕ್ಕೂ ನಮ್ಮನ್ನು ಮರೆಮಾಡಿರಿ; ಅವರ
ಕೋಪವು ಕಾಣಿಸುವ ಮಹಾ ದಿನ ಬಂದದೆ; ಅದರ
ಮುಂದೆ ನಿಲ್ಲುವದಕ್ಕೆ ಯಾರು ಶಕ್ತರು ಎಂದು
ಹೇಳಿದರು.

ರಕ್ಷಣೆಯನ್ನು ಹೊಂದಿದ ಯೆಹೂದ್ಯರನ್ನೂ ಅನ್ಯಜನರನ್ನೂ ಕುರಿತದ್ದು.

7 ಇದಾದ ಮೇಲೆ ನಾಲ್ಕು ಮಂದಿ ದೇವದೂತರು
ಭೂಮಿಯ ನಾಲ್ಕು ದಿಕ್ಕುಗಳಲ್ಲಿ ನಿಂತುಕೊಂಡು
ಭೂಮಿಯ ಮೇಲಾಗಲಿ ಸಮುದ್ರದ ಮೇಲಾಗಲಿ
ಯಾವ ಮರದ ಮೇಲಾಗಲಿ ಗಾಳಿಬೀಸದಂತೆ ಭೂಮಿ
ಯ ಚತುರ್ದಿಕ್ಕುಗಳ ಗಾಳಿಗಳನ್ನು ಹಿಡಿದಿರುವದನ್ನು
2 ಕಂಡೆನು. ಇದಲ್ಲದೆ ಮತ್ತೊಬ್ಬ ದೇವದೂತನು ಜೀವ
ಸ್ವರೂಪನಾದ ದೇವರ ಮುದ್ರೆಯನ್ನು ಹಿಡುಕೊಂಡು
ಮೂಡಣದಿಕ್ಕಿನಿಂದ ಏರಿಬರುವದನ್ನು ಕಂಡೆನು. ಅವ
ನು ಭೂಮಿಯನ್ನೂ ಸಮುದ್ರವನ್ನೂ ಕೆಡಿಸುವದಕ್ಕೆ
ಅಧಿಕಾರಹೊಂದಿದ ಆ ನಾಲ್ಕು ಮಂದಿ ದೇವದೂತ
3 ರಿಗೆ—ನಾವು ನಮ್ಮ ದೇವರ ದಾಸರಿಗೆ ಹಣೆಯ ಮೇಲೆ
ಮುದ್ರೆ ಒತ್ತುವತನಕ ಭೂಮಿಯನ್ನಾಗಲಿ ಸಮುದ್ರ
ವನ್ನಾಗಲಿ ಮರಗಳನ್ನಾಗಲಿ ಕೆಡಿಸಬೇಡಿರಿ ಎಂದು
4 ಮಹಾ ಶಬ್ದದಿಂದ ಕೂಗಿ ಹೇಳಿದನು. ಮುದ್ರೆ
ಒತ್ತಿಸಿಕೊಂಡವರ ಸಂಖ್ಯೆಯು ಪ್ರಸಿದ್ಧವಾದಾಗ
ನಾನು ಕೇಳಿದೆನು. ಇಸ್ರಾಯೇಲ್ಯರ ಪ್ರತಿಯೊಂದು
ಕುಲಕ್ಕೆ ಸೇರಿದವರು ಒತ್ತಿಸಿಕೊಂಡರು. ಅವರ ಸಂಖ್ಯೆ
ಒಂದು ಲಕ್ಷ ನಾಲ್ವತ್ತುನಾಲ್ಕು ಸಾವಿರ ಮಂದಿ.
5 ಯೂದನ ಕುಲದವರಲ್ಲಿ ಮುದ್ರೆಹಾಕಿಸಿಕೊಂ
ಡವರು ಹನ್ನೆರಡು ಸಾವಿರ,
ರೂಬೇನನ ಕುಲದವರಲ್ಲಿ ಹನ್ನೆರಡು ಸಾವಿರ,
ಗಾಡನ ಕುಲದವರಲ್ಲಿ ಹನ್ನೆರಡು ಸಾವಿರ,
6 ಅಷೇರನ ಕುಲದವರಲ್ಲಿ ಹನ್ನೆರಡು ಸಾವಿರ,
ನೆಫ್ತಲೀಮನ ಕುಲದವರಲ್ಲಿ ಹನ್ನೆರಡು ಸಾವಿರ,
ಮನಾಸ್ಸೆಯ ಕುಲದವರಲ್ಲಿ ಹನ್ನೆರಡು ಸಾವಿರ,
ಸಿಮೆಯೋನನ ಕುಲದವರಲ್ಲಿ ಹನ್ನೆರಡು ಸಾವಿರ,
ಲೇವಿಯ ಕುಲದವರಲ್ಲಿ ಹನ್ನೆರಡು ಸಾವಿರ,
ಇಸ್ಸಕಾರನ ಕುಲದವರಲ್ಲಿ ಹನ್ನೆರಡು ಸಾವಿರ,
ಜೆಬುಲೋನನ ಕುಲದವರಲ್ಲಿ ಹನ್ನೆರಡು ಸಾವಿರ,
ಯೋಸೇಫನ ಕುಲದವರಲ್ಲಿ ಹನ್ನೆರಡು ಸಾವಿರ,
ಬೆನ್ಯಾಮೀನನ ಕುಲದವರಲ್ಲಿ ಮುದ್ರೆಹಾಕಿಸಿ
ಕೊಂಡವರು ಹನ್ನೆರಡು ಸಾವಿರ ಮಂದಿ
ಇದ್ದರು.

ಇವುಗಳಾದ ಮೇಲೆ ಇಗೋ, ಯಾರಿಂದಲೂ ಎಣಿಸ
ಲಾಗದಂಥ ಮಹಾ ಸಮೂಹವು ಸಿಂಹಾಸನದ ಮುಂ
ದೆಯೂ ಯಜ್ಞದ ಕುರಿಯಾದಾತನ ಮುಂದೆಯೂ
ನಿಂತಿರುವದನ್ನು ಕಂಡೆನು. ಅವರು ಸಕಲ ಜನಾಂಗ
ಕುಲ ಪ್ರಜೆಗಳವರೂ ಸಕಲಭಾಷೆಗಳನ್ನಾಡುವವರೂ
ಆಗಿದ್ದರು. ಅವರು ಬಿಳೀ ನಿಲುವಂಗಿಗಳನ್ನು ತೊಟ್ಟು
ಕೊಂಡು ತಮ್ಮ ಕೈಗಳಲ್ಲಿ ಖರ್ಜೂರದ ಗರಿಗಳನ್ನು
ಹಿಡಿದುಕೊಂಡಿದ್ದರು. ಅವರು—

ಸಿಂಹಾಸನಾಸೀನನಾಗಿರುವ ನಮ್ಮ ದೇವರಿಗೂ
ಯಜ್ಞದ ಕುರಿಯಾದಾತನಿಗೂ
[1])ನಮಗೆ ರಕ್ಷಣೆಯುಂಟಾದದ್ದಕ್ಕಾಗಿ ಸ್ತೋತ್ರ

ಎಂದು ಮಹಾ ಶಬ್ದದಿಂದ ಕೂಗಿದರು. ಅಷ್ಟರಲ್ಲಿ ದೇವ
ದೂತರೆಲ್ಲರೂ ಸಿಂಹಾಸನವು ಹಿರಿಯರು ನಾಲ್ಕು
ಜೀವಿಗಳು ಇವುಗಳ ಸುತ್ತಲು ನಿಂತುಕೊಂಡಿದ್ದರು.
ಅವರು ಸಿಂಹಾಸನದ ಮುಂದೆ ಅಡ್ಡಬಿದ್ದು—

[2])ಆಮೆನ್.
ಸ್ತೋತ್ರವೂ ಪ್ರಭಾವವೂ ಜ್ಞಾನವೂ ಕೃತಜ್ಞತಾ
ಸ್ತುತಿಯೂ ಮಾನವೂ ಬಲವೂ ಶಕ್ತಿಯೂ
ನಮ್ಮ ದೇವರಿಗೆ ಯುಗಯುಗಾಂತರಗಳ
ಲ್ಲಿಯೂ ಇರಲಿ, ಆಮೆನ್

ಎಂದು ಹೇಳುತ್ತಾ ದೇವರನ್ನು ಆರಾಧಿಸಿದರು. ಇದನ್ನು
ನೋಡಿ ಹಿರಿಯರಲ್ಲಿ ಒಬ್ಬನು—ಬಿಳೀ ನಿಲುವಂಗಿಗಳ
ನ್ನು ತೊಟ್ಟುಕೊಂಡಿರುವವರಾದ ಇವರು ಯಾರು?
ಎಲ್ಲಿಂದ ಬಂದರು ಎಂದು ನನ್ನನ್ನು ಕೇಳಲು—ಅಯ್ಯಾ,
ನೀನೇ ಬಲ್ಲೆ ಅಂದೆನು. ಅವನು ನನಗೆ—ಇವರು
ಆ ಮಹಾ ಹಿಂಸೆಯನ್ನು ಅನುಭವಿಸಿ ಬಂದವರು;
ಯಜ್ಞದ ಕುರಿಯಾದಾತನ ರಕ್ತದಲ್ಲಿ ತಮ್ಮ ನಿಲು
ವಂಗಿಗಳನ್ನು ತೊಳೆದು ಶುಭ್ರಮಾಡಿದ್ದಾರೆ. ಈ
ಕಾರಣದಿಂದ ಅವರು ದೇವರ ಸಿಂಹಾಸನದ ಮುಂದೆ
ಇದ್ದುಕೊಂಡು ಆತನ ಆಲಯದಲ್ಲಿ ಹಗಲಿರುಳು
ಆತನ ಸೇವೆಮಾಡುತ್ತಾ ಇದ್ದಾರೆ; ಸಿಂಹಾಸನದಲ್ಲಿ
ಕೂತಿರುವಾತನು ಗುಡಾರದಂತೆ ಅವರನ್ನು ಆವರಿ
ಸುವನು. ಇನ್ನು ಮೇಲೆ ಅವರಿಗೆ ಹಸಿವೆ ಇಲ್ಲ,
ಬಾಯಾರಿಕೆ ಇಲ್ಲ; ಅವರಿಗೆ ಬಿಸಿಲಾದರೂ ಯಾವ
ಝಳವಾದರೂ ಬಡಿಯುವದಿಲ್ಲ; ಸಿಂಹಾಸನದ ಮಧ್ಯ
ದಲ್ಲಿರುವ ಯಜ್ಞದ ಕುರಿಯಾದಾತನು ಅವರಿಗೆ
ಕುರುಬನಂತಿದ್ದು ಜೀವಜಲದ ಒರತೆಗಳ ಬಳಿಗೆ
ನಡಿಸುತ್ತಾನೆ. ದೇವರು ಅವರ ಕಣ್ಣೀರನ್ನೆಲ್ಲಾ
ಒರಸಿಬಿಡುವನು ಎಂದು ಹೇಳಿದನು.

1) ಅಥವಾ, ಯಜ್ಞದ ಕುರಿಯಾದಾತನಿಗೂ ಜಯವಾಗಲಿ.

2) ಅಂದರೆ, ತಥಾಸ್ತು, ಹಾಗೆಯೇ ಆಗಲಿ.

ಏಳನೆಯ ಮುದ್ರೆಯನ್ನು ಒಡೆಯಲು ನಿಶ್ಶಬ್ದವಾದದ್ದು;
ತುತೂರಿಗಳನ್ನು ಹಿಡಿದುಕೊಂಡ ಏಳು ಮಂದಿ ದೇವದೂತರು
ಮುಂದೆ ಬಂದದ್ದು. ದೇವಜನರ ಪ್ರಾರ್ಥನೆಗಳು ದೇವರ
ಸನ್ನಿಧಿಗೆ ಏರಿಬಂದದ್ದು.

8 ಆತನು ಏಳನೆಯ ಮುದ್ರೆಯನ್ನು ಒಡೆದಾಗ
ಸುಮಾರು ಅರ್ಧಗಂಟೇ ಹೊತ್ತಿನ ವರೆಗೂ ಪರಲೋ
2 ಕವು ನಿಶ್ಶಬ್ದವಾಯಿತು. ಆಗ ದೇವರ ಸನ್ನಿಧಿಯಲ್ಲಿ
ನಿಂತಿರುವ ಏಳು ಮಂದಿ ದೇವದೂತರನ್ನು ಕಂಡೆನು;
ಅವರಿಗೆ ಏಳು ತುತೂರಿಗಳು ಕೊಡಲ್ಪಟ್ಟವು.
3 ಆ ಮೇಲೆ ಮತ್ತೊಬ್ಬ ದೇವದೂತನು ಬಂದು
ಯಜ್ಞವೇದಿಯ ಬಳಿಯಲ್ಲಿ ನಿಂತನು; ಅವನ ಕೈಯಲ್ಲಿ
ಚಿನ್ನದ ಧೂಪಾರತಿ ಇತ್ತು. ಸಿಂಹಾಸನದ ಮುಂದಣ
ಚಿನ್ನದ ಧೂಪವೇದಿಯ ಮೇಲೆ ದೇವಜನರೆಲ್ಲರ
ಪ್ರಾರ್ಥನೆಗಳ ಜೊತೆಯಲ್ಲಿ ಸಮರ್ಪಿಸುವದಕ್ಕಾಗಿ
4 ಅವನಿಗೆ ಬಹಳ ಧೂಪ ಕೊಡಲ್ಪಟ್ಟಿತು. ಆಗ ಧೂಪದ
ಹೊಗೆಯು ದೇವದೂತನ ಕೈಯೊಳಗಿಂದ ಹೊರಟು
ದೇವಜನರ ಪ್ರಾರ್ಥನೆಗಳೊಂದಿಗೆ ಕೂಡಿ ದೇವರ
5 ಸನ್ನಿಧಿಗೆ ಏರಿಹೋಯಿತು. ತರುವಾಯ ಆ ದೇವ
ದೂತನು ಧೂಪಾರತಿಯನ್ನು ತೆಗೆದುಕೊಂಡು ಯಜ್ಞ
ವೇದಿಯ ಮೇಲಿದ್ದ ಕೆಂಡಗಳಿಂದ ತುಂಬಿಸಿ ಭೂಮಿಗೆ
ಬಿಸಾಡಿದನು. ಆಗ ಗುಡುಗುಗಳೂ ವಾಣಿಗಳೂ
ಮಿಂಚುಗಳೂ ಭೂಕಂಪವೂ ಉಂಟಾದವು.

IV. ಏಳು ತುತೂರಿಗಳನ್ನು ಕುರಿತದ್ದು.
ನಾಲ್ಕು ತುತೂರಿಗಳು ಊದಲಾಗಿ ಆನೆಕಲ್ಲು, ರಕ್ತ,
ಮಾಚಿಪತ್ರೆವಿಷ, ಕತ್ತಲು ಎಂಬ ಉಪದ್ರವಗಳು
ಸಂಭವಿಸಿದ್ದು.

6 ಏಳು ತುತೂರಿಗಳನ್ನು ಹಿಡಿದಿದ್ದ ಏಳು ಮಂದಿ ದೇವ
ದೂತರು ತುತೂರಿಗಳನ್ನೂದುವದಕ್ಕೆ ಸಿದ್ಧಮಾಡಿ
ಕೊಂಡರು.
7 ಮೊದಲನೆಯ ದೇವದೂತನು ತುತೂರಿಯನ್ನೂದಿ
ದಾಗ ರಕ್ತದಲ್ಲಿ ಕಲಸಿದ್ದ ಆನೆಕಲ್ಲಿನ ಮಳೆಯೂ
ಬೆಂಕಿಯೂ ಭೂಮಿಗೆ ಸುರಿಸಲ್ಪಟ್ಟವು; ಭೂಮಿಯೊಳಗೆ
ಮೂರರಲ್ಲಿ ಒಂದು ಭಾಗ ಸುಟ್ಟುಹೋಯಿತು;
ಮರಗಳೊಳಗೆ ಮೂರರಲ್ಲಿ ಒಂದು ಭಾಗ ಸುಟ್ಟು
ಹೋಯಿತು; ಹಸುರು ಹುಲ್ಲೆಲ್ಲಾ ಸುಟ್ಟುಹೋಯಿತು.
8 ಎರಡನೆಯ ದೇವದೂತನು ತುತೂರಿಯನ್ನೂದಿ
ದಾಗ ಬೆಂಕಿಹತ್ತಿ ಉರಿಯುವ ದೊಡ್ಡ ಬೆಟ್ಟವೋ
ಎಂಬಂತಿರುವ ಒಂದು ವಸ್ತು ಸಮುದ್ರದಲ್ಲಿ ಹಾಕ
ಲ್ಪಟ್ಟಿತು. ಆಗ ಸಮುದ್ರದೊಳಗೆ ಮೂರರಲ್ಲಿ ಒಂದು
9 ಭಾಗ ರಕ್ತವಾಯಿತು; ಸಮುದ್ರಜೀವಿಗಳೊಳಗೆ
ಮೂರರಲ್ಲಿ ಒಂದು ಭಾಗ ಸತ್ತುಹೋಯಿತು; ಹಡ
ಗುಗಳೊಳಗೆ ಮೂರರಲ್ಲಿ ಒಂದು ಭಾಗ ನಾಶವಾ
ಯಿತು.
10 ಮೂರನೆಯ ದೇವದೂತನು ತುತೂರಿಯನ್ನೂದಿ
ದಾಗ ಪಂಜಿನಂತೆ ಉರಿಯುವ ಒಂದು ದೊಡ್ಡ
ನಕ್ಷತ್ರವು ಆಕಾಶದಿಂದ ಬಿತ್ತು. ಅದು ನದಿಗಳೊಳಗೆ
ಮೂರರಲ್ಲಿ ಒಂದು ಭಾಗದ ಮೇಲೆಯೂ ನೀರಿನ
ಒರತೆಗಳ ಮೇಲೆಯೂ ಬಿತ್ತು. ಆ ನಕ್ಷತ್ರಕ್ಕೆ ಮಾಚಿ 11
ಪತ್ರೆ ಎಂದು ಹೆಸರು. ನೀರಿನೊಳಗೆ ಮೂರರಲ್ಲಿ ಒಂದು
ಭಾಗ ಮಾಚಿಪತ್ರೆಯಂತೆ ಕಹಿಯಾಯಿತು. ಆ
ನೀರು ವಿಷವಾದದ್ದರಿಂದ ಮನುಷ್ಯರಲ್ಲಿ ಅನೇಕರು
ಸತ್ತರು.
ನಾಲ್ಕನೆಯ ದೇವದೂತನು ತುತೂರಿಯನ್ನೂದಿ 12
ದಾಗ ಸೂರ್ಯ ಚಂದ್ರ ನಕ್ಷತ್ರಗಳೊಳಗೆ ಮೂರರಲ್ಲಿ
ಒಂದು ಭಾಗವು ಬಡಿಯಲ್ಪಟ್ಟು ಕತ್ತಲಾಯಿತು.
ಆದದರಿಂದ ಹಗಲಿನೊಳಗೆ ಮೂರರಲ್ಲಿ ಒಂದು ಭಾಗ
ವು ಪ್ರಕಾಶವಿಲ್ಲದೆ ಇತ್ತು. ರಾತ್ರಿಯು ಹಾಗೆಯೇ
ಆಯಿತು.

ಐದನೆಯ ತುತೂರಿ ಊದಿದ್ದು.
ಮೊದಲನೆಯ ವಿಪತ್ತು; ಮಿಡಿತೆಗಳು ಅಧೋಲೋಕದಿಂದ
ಭೂಮಿಯ ಮೇಲೆ ಬಂದದ್ದು.

ಆ ಮೇಲೆ ನಾನು ನೋಡಲಾಗಿ ಇಗೋ, ಒಂದೇ 13
ಗರುಡಪಕ್ಷಿಯು ಆಕಾಶಮಧ್ಯದಲ್ಲಿ ಹಾರಾಡುತ್ತಿತ್ತು.
ಅದು—ಅಯ್ಯೋ, ಅಯ್ಯೋ, ಅಯ್ಯೋ, ಊದಬೇ
ಕಾಗಿರುವ ಮೂವರು ದೇವದೂತರ ಮಿಕ್ಕಾದ ತುತೂ
ರಿಯ ಧ್ವನಿಗಳು ಉಂಟಾಗುವಾಗ ಭೂನಿವಾಸಿಗಳಿಗೆ
ಎಂಥಾ ವಿಪತ್ತುಗಳು ಸಂಭವಿಸುವವು ಎಂದು ಮಹಾ
ಶಬ್ದದಿಂದ ಹೇಳುವದನ್ನು ಕೇಳಿದೆನು.

ಐದನೆಯ ದೇವದೂತನು ತುತೂರಿಯನ್ನೂದಿದಾಗ 9
ಆಕಾಶದಿಂದ ಭೂಮಿಗೆ ಬಿದ್ದ [1])ಒಂದು ನಕ್ಷತ್ರವನ್ನು
ಕಂಡೆನು. ಅವನಿಗೆ ಅಧೋಲೋಕಕ್ಕೆ ಹೋಗುವ
ಕೂಪದ ಬೀಗದಕೈ ಕೊಡಲ್ಪಟ್ಟಿತು. ಅವನು ಅಧೋ 2
ಲೋಕದ ಕೂಪವನ್ನು ತೆರೆಯಲು ಕೂಪದಿಂದ ಬಂದ
ಹೊಗೆ ದೊಡ್ಡ ಕುಲುಮೆಯ ಹೊಗೆಯಂತೆ ಏರಿತು;
ಕೂಪದ ಹೊಗೆಯಿಂದ ಸೂರ್ಯನೂ ಆಕಾಶವೂ
ಕತ್ತಲಾದವು. ಹೊಗೆಯೊಳಗಿಂದ ಮಿಡಿತೆಗಳು 3
ಭೂಮಿಯ ಮೇಲೆ ಹೊರಟುಬಂದವು. ಭೂಮಿಯಲ್ಲಿ
ರುವ ಚೇಳುಗಳಿಗೆ ಸಾಮರ್ಥ್ಯವಿರುವ ಪ್ರಕಾರ ಅವು
ಗಳಿಗೆ ಸಾಮರ್ಥ್ಯಕೊಡಲ್ಪಟ್ಟಿತು. ಭೂಮಿಯ 4
ಮೇಲಿರುವ ಹುಲ್ಲನ್ನಾಗಲಿ ಯಾವ ಪಲ್ಯವನ್ನಾಗಲಿ
ಮರವನ್ನಾಗಲಿ ಕೆಡಿಸದೆ ಹಣೆಯ ಮೇಲೆ ದೇವರ
ಮುದ್ರೆಯಿಲ್ಲದವರಾದ ಮನುಷ್ಯರನ್ನು ಮಾತ್ರ ಕೆಡಿಸ
ಬಹುದೆಂದು ಅವುಗಳಿಗೆ ಅಪ್ಪಣೆಯಾಯಿತು. ಇವ 5
ರನ್ನು ಕೊಲ್ಲದೆ ಐದು ತಿಂಗಳುಗಳ ವರೆಗೂ ಪೀಡಿ
ಸುವದಕ್ಕೆ ಅಪ್ಪಣೆಯಾಯಿತು. ಅವರಿಗುಂಟಾದ
ಪೀಡೆಯು ಚೇಳು ಮನುಷ್ಯನನ್ನು ಹೊಡೆಯುವದ
ರಿಂದುಂಟಾಗುವ ಪೀಡೆಗೆ ಸಮಾನವಾಗಿತ್ತು. ಆ ಕಾಲ 6
ದಲ್ಲಿ ಮನುಷ್ಯರು ಮರಣವನ್ನು ಬಯಸುವರು,
ಆದರೆ ಅದು ಪ್ರಾಪ್ತವಾಗುವದಿಲ್ಲ; ಸಾಯಬೇಕೆಂದು

1) ಅಥವಾ, ನಕ್ಷತ್ರಪ್ರಾಯನೊಬ್ಬನನ್ನು.

ಕೋರುವರು, ಆದರೆ ಮೃತ್ಯುವು ಅವರ ಬಳಿಯಿಂದ
7 ಓಡಿಹೋಗುವದು. ಆ ಮಿಡಿತೆಗಳ ರೂಪವು ಯುದ್ಧ
ಕ್ಕೆ ಸನ್ನದ್ಧವಾಗಿರುವ ಕುದುರೆಗಳ ರೂಪದಂತೆ ಇತ್ತು;
ಅವುಗಳ ತಲೆಯ ಮೇಲೆ ಚಿನ್ನದ ಕಿರೀಟಗಳಂತೆ
ಏನೋ ಇದ್ದವು; ಅವುಗಳ ಮುಖಗಳು ಮನುಷ್ಯರ
8 ಮುಖಗಳ ಹಾಗೆ ಇದ್ದವು. ಸ್ತ್ರೀಯರ ಕೂದಲಿನಂತಿರುವ
ಕೂದಲು ಅವುಗಳಿಗೆ ಇತ್ತು; ಅವುಗಳ ಹಲ್ಲುಗಳು
9 ಸಿಂಹದ ಹಲ್ಲುಗಳ ಹಾಗಿದ್ದವು. ಅವುಗಳಿಗೆ ಉಕ್ಕಿನ
ಕವಚಗಳಂತಿದ್ದ ಕವಚಗಳು ಇದ್ದವು; ಅವುಗಳ
ರೆಕ್ಕೆಗಳ ಶಬ್ದವು ಯುದ್ಧಕ್ಕೆ ಓಡುವ ರಥಾಶ್ವಗಳ
10 ಶಬ್ದದ ಹಾಗೆ ಇತ್ತು. ಚೇಳಿಗಿರುವಂತೆ ಅವುಗಳಿಗೆ
ಬಾಲಗಳೂ ಕೊಂಡಿಗಳೂ ಉಂಟು; ಮನುಷ್ಯರನ್ನು
ಐದು ತಿಂಗಳುಗಳ ವರೆಗೂ ಪೀಡಿಸುವ ಸಾಮರ್ಥ್ಯವು
11 ಅವುಗಳ ಬಾಲಗಳಲ್ಲಿಯೇ ಇರುವದು. ಅಧೋ
ಲೋಕದ ಅಧಿಕಾರಿಯಾದ ದೂತನು ಅವುಗಳನ್ನಾಳುವ
ಅರಸನು; ಅವನಿಗೆ ಇಬ್ರಿಯ ಭಾಷೆಯಲ್ಲಿ ಅಬ
ದ್ದೋನನೆಂತಲೂ ಗ್ರೀಕ್ ಭಾಷೆಯಲ್ಲಿ [1]ಅಪೊಲ್ಲು
ವೋನನೆಂತಲೂ ಹೆಸರುಂಟು.
12 ಮೊದಲನೆಯ ವಿಪತ್ತು ಕಳೆದುಹೋಯಿತು;
ಇಗೋ, ಇನ್ನೂ ಎರಡು ವಿಪತ್ತುಗಳು ಬರಬೇಕು.

ಆರನೆಯ ತುತೂರಿ ಊದಿದ್ದು.
ಎರಡನೆಯ ವಿಪತ್ತು; ಭಯಂಕರವಾದ ರಾಹುತರು
ಯೂಫ್ರೇಟೀಸ್ ನದಿಯ ಕಡೆಯಿಂದ ಬಂದದ್ದು.

13 ಆರನೆಯ ದೇವದೂತನು ತುತೂರಿಯನ್ನೂದಿದಾಗ
ದೇವರ ಸಮ್ಮುಖದಲ್ಲಿರುವ ಚಿನ್ನದ ವೇದಿಯ
[2]ಕೊಂಬುಗಳಿಂದ ಹೊರಟ ಒಂದೇ ಧ್ವನಿಯನ್ನು
14 ಕೇಳಿದೆನು. ಅದು ತುತೂರಿಯನ್ನು ಹಿಡಿದಿದ್ದ ಆರ
ನೆಯ ದೇವದೂತನಿಗೆ—ಯೂಫ್ರೇಟೀಸ್ ಎಂಬ
ಮಹಾ ನದಿಯ ಬಳಿಯಲ್ಲಿ ಕಟ್ಟಿರುವ ನಾಲ್ಕು
ಮಂದಿ ದೇವದೂತರನ್ನು ಬಿಚ್ಚಿಬಿಡು ಎಂದು ಹೇಳಿತು.
15 ಆಗ ಮನುಷ್ಯರೊಳಗೆ ಮೂರರಲ್ಲಿ ಒಂದು ಭಾಗದ
ಜನರನ್ನು ಸಂಹಾರಮಾಡುವದಕ್ಕಾಗಿ ಅದೇ ವರುಷ
ಅದೇ ತಿಂಗಳು ದಿನ ತಾಸಿಗೆ ಸಿದ್ಧವಾಗಿದ್ದ ಆ ನಾಲ್ಕು
16 ಮಂದಿ ದೇವದೂತರನ್ನು ಬಿಚ್ಚಿಬಿಟ್ಟರು; ಕುದುರೇ
ದಂಡಿನವರ ಸಂಖ್ಯೆಯು ಇಪ್ಪತ್ತುಕೋಟಿ ಎಂದು
17 ನನಗೆ ಕೇಳಿಸಿತು. ನಾನು ದರ್ಶನದಲ್ಲಿ ಕಂಡ
ಕುದುರೆಗಳ ಮತ್ತು ಸವಾರರ ವಿವರಣೆ ಹೇಗಂದರೆ—
ಸವಾರರ ಕವಚಗಳ ಬಣ್ಣವು ಬೆಂಕಿ ಹೊಗೆ ಗಂಧಕ
ಇವುಗಳ ಬಣ್ಣದ ಹಾಗಿತ್ತು. ಕುದುರೆಗಳ ತಲೆಗಳು
ಸಿಂಹಗಳ ತಲೆಗಳಂತಿದ್ದವು; ಅವುಗಳ ಬಾಯಿಂದ
ಬೆಂಕಿ ಹೊಗೆ ಗಂಧಕ ಇವುಗಳು ಹೊರಡುತ್ತಿದ್ದವು.
18 ಅವುಗಳ ಬಾಯಿಂದ ಹೊರಟ ಆ ಬೆಂಕಿ ಹೊಗೆ ಗಂಧಕ
ಎಂಬ ಮೂರು ಉಪದ್ರವಗಳಿಂದ ಮನುಷ್ಯರಲ್ಲಿ
19 ಮೂರನೆಯ ಭಾಗವು ಹತವಾಯಿತು. ಆ ಕುದುರೆ
ಗಳ ಸಾಮರ್ಥ್ಯವು ಅವುಗಳ ಬಾಯಲ್ಲಿಯೂ ಬಾಲ
ಗಳಲ್ಲಿಯೂ ಇತ್ತು. ಅವುಗಳ ಬಾಲಗಳು ತಲೆ
ಗಳುಳ್ಳವುಗಳಾಗಿ ಸರ್ಪಗಳ ಹಾಗೆ ಇದ್ದವು. ಅವು
ಗಳಿಂದ ಕೇಡನ್ನುಂಟುಮಾಡುತ್ತವೆ. ಉಪದ್ರವಗಳಿಂದ
ಸಾಯದೆ ಉಳಿದ ಜನರು ತಾವೇ ಮಾಡಿಕೊಂಡ
ವಿಗ್ರಹಗಳನ್ನು ಬಿಟ್ಟು ದೇವರ ಕಡೆಗೆ ತಿರುಗಲಿಲ್ಲ;
ಅವರು ದೆವ್ವಗಳ ಪೂಜೆಯನ್ನೂ ಬಂಗಾರ ಬೆಳ್ಳಿ
ತಾಮ್ರ ಕಲ್ಲು ಮರ ಇವೇ ಮುಂತಾದವುಗಳಿಂದ
ಮಾಡಲ್ಪಟ್ಟು ನೋಡಲಾರದೆ ಕೇಳಲಾರದೆ ನಡೆಯ
ಲಾರದೆ ಇರುವ ವಿಗ್ರಹಗಳ ಪೂಜೆಯನ್ನೂ ಬಿಡಲಿಲ್ಲ.
ಇದಲ್ಲದೆ ತಾವು ನಡಿಸುತ್ತಿದ್ದ ಕೊಲೆ ಮಾಟ ಜಾರತ್ವ
ಕಳ್ಳತನ ಇವುಗಳೊಳಗೆ ಒಂದನ್ನೂ ಬಿಟ್ಟು ಮಾನ
ಸಾಂತರಮಾಡಿಕೊಳ್ಳಲಿಲ್ಲ.

ಬಲಿಷ್ಠನಾದ ದೇವದೂತನು ಕೈಯಲ್ಲಿ ಚಿಕ್ಕ ಸುರುಳಿಯನ್ನು
ಹಿಡಿದುಕೊಂಡು—ಇನ್ನೂ ಸಾವಕಾಶವಿಲ್ಲದೆ ದೇವರ ಗೂಢ
ಸಂಕಲ್ಪವು ನೆರವೇರುವದೆಂದು ಪ್ರಕಟಿಸಿದ್ದು.

ತರುವಾಯ ಬಲಿಷ್ಠನಾದ ಮತ್ತೊಬ್ಬ ದೇವದೂ 1
ತನು ಪರಲೋಕದಿಂದ ಇಳಿದುಬರುವದನ್ನು ಕಂಡೆ
ನು. ಅವನು ಮೇಘವನ್ನು ಧರಿಸಿಕೊಂಡಿದ್ದನು;
ಅವನ ತಲೆಯ ಮೇಲೆ ಮುಗಿಲುಬಿಲ್ಲು ಇತ್ತು;
ಅವನ ಮುಖವು ಸೂರ್ಯನೋಪಾದಿಯಲ್ಲಿತ್ತು;
ಅವನ ಪಾದಗಳು ಬೆಂಕಿಯ ಕಂಬಗಳಂತಿದ್ದವು;
ಅವನ ಕೈಯಲ್ಲಿ ಬಿಚ್ಚಿದ್ದ ಒಂದು ಚಿಕ್ಕ ಸುರುಳಿ
ಇತ್ತು; ಅವನು ಬಲಗಾಲನ್ನು ಸಮುದ್ರದ ಮೇಲೆ
ಯೂ ಎಡಗಾಲನ್ನು ಭೂಮಿಯ ಮೇಲೆಯೂ ಇಟ್ಟು
ಸಿಂಹವು ಗರ್ಜಿಸುವ ಪ್ರಕಾರ ಮಹಾ ಶಬ್ದದಿಂದ
ಕೂಗಿದನು. ಕೂಗಿದಾಗ ಏಳು ಗುಡುಗುಗಳು
ಒಂದೊಂದಾಗಿ ಧ್ವನಿಕೊಟ್ಟವು. ಆ ಏಳು ಗುಡುಗು
ಗಳು ನುಡಿದಾಗ ನಾನು ಬರೆಯಬೇಕೆಂದಿದ್ದೆನು.
ಆದರೆ—ಆ ಏಳು ಗುಡುಗುಗಳು ನುಡಿದದ್ದನ್ನು ನೀನು
ಬರೆಯದೆ [3]ಗುಪ್ತವಾಗಿಡು ಎಂದು ಹೇಳುವ ಆಕಾಶ
ವಾಣಿಯನ್ನು ಕೇಳಿದೆನು. ಅನಂತರ ಸಮುದ್ರದ
ಮೇಲೆಯೂ ಭೂಮಿಯ ಮೇಲೆಯೂ ನಿಂತಿರುವವ
ನಾಗಿ ನನಗೆ ಕಾಣಿಸಿದ ದೇವದೂತನು ತನ್ನ ಬಲ
ಗೈಯನ್ನು ಪರಲೋಕದ ಕಡೆಗೆ ಎತ್ತಿ ಪರಲೋಕ
ವನ್ನೂ ಅದರಲ್ಲಿರುವ ಸಮಸ್ತವನ್ನೂ ಭೂಮಿಯನ್ನೂ
ಅದರಲ್ಲಿರುವ ಸಮಸ್ತವನ್ನೂ ಸಮುದ್ರವನ್ನೂ ಅದರಲ್ಲಿ
ರುವ ಸಮಸ್ತವನ್ನೂ ಸೃಷ್ಟಿಸಿ ಯುಗಯುಗಾಂತರಗ
ಳಲ್ಲಿಯೂ ಜೀವಿಸುವಾತನ ಮೇಲೆ ಆಣೆಯಿಟ್ಟು—
ಇನ್ನು ಸಾವಕಾಶವಿರುವದಿಲ್ಲ; ಏಳನೆಯ ದೇವ
ದೂತನು ಶಬ್ದಮಾಡುವ ದಿನಗಳಲ್ಲಿ ಅಂದರೆ ಅವನು
ತುತೂರಿಯನ್ನು ಊದುವದಕ್ಕಿರುವ ಸಮಯದಲ್ಲಿ
ದೇವರು ಇದುವರೆಗೆ ಗುಪ್ತವಾಗಿಟ್ಟಿದ್ದ ಸಂಕಲ್ಪವನ್ನು
ತನ್ನ ದಾಸರಾದ ಪ್ರವಾದಿಗಳಿಗೆ ಶುಭವರ್ತಮಾನ
ವಾಗಿ ತಿಳಿಸಿದ್ದ ಪ್ರಕಾರ ನೆರವೇರಿಸುವನು ಎಂದು
ಹೇಳಿದನು. ಅನಂತರ ಪರಲೋಕದಿಂದ ನನಗೆ ಕೇಳಿ

1) ಅಂದರೆ, ನಾಶ ಮಾಡುವವನು, ಸಂಹಾರಕನು. 2) ಪಾಠಾಂತರ: ನಾಲ್ಕು ಕೊಂಬುಗಳಿಂದ. 3) ಮೂಲ: ಅವುಗ
ಮುದ್ರೆಹಾಕು.

ಸಿದ್ದ ಶಬ್ದವು ತಿರಿಗಿ ನನ್ನೊಂದಿಗೆ ಮಾತಾಡಿ—ನೀನು
ಹೋಗಿ ಸಮುದ್ರದ ಮೇಲೆಯೂ ಭೂಮಿಯ ಮೇಲೆ
ಯೂ ನಿಂತುಕೊಂಡಿರುವ ದೂತನ ಕೈಯಲ್ಲಿರುವ ಆ
ಬಿಚ್ಚಿದ ಸುರುಳಿಯನ್ನು ತೆಗೆದುಕೋ ಎಂದು ಹೇಳಿತು.
9 ನಾನು ಆ ದೂತನ ಬಳಿಗೆ ಹೋಗಿ—ಆ ಚಿಕ್ಕ ಸುರುಳಿ
ಯನ್ನು ನನಗೆ ಕೊಡು ಎಂದು ಕೇಳಲು ಅವನು
ನನಗೆ—ನೀನು ಇದನ್ನು ತೆಗೆದುಕೊಂಡು ತಿಂದು
ಬಿಡು, ಇದು ನಿನ್ನ ಹೊಟ್ಟೆಯನ್ನು ಕಹಿಯಾಗುವಂತೆ
ಮಾಡುವದು, ಆದರೆ ನಿನ್ನ ಬಾಯಲ್ಲಿ ಜೇನಿನಂತೆ ಸಿಹಿ
10 ಯಾಗಿರುವದು ಎಂದು ಹೇಳಿದನು. ಆಗ ನಾನು ಆ
ಚಿಕ್ಕ ಸುರುಳಿಯನ್ನು ಆ ದೂತನ ಕೈಯಿಂದ ತೆಗೆದು
ಕೊಂಡು ತಿಂದುಬಿಟ್ಟೆನು. ಅದು ನನ್ನ ಬಾಯಲ್ಲಿ ಜೇನಿ
ನಂತೆ ಸಿಹಿಯಾಗಿತ್ತು; ಅದನ್ನು ತಿಂದ ಮೇಲೆ ನನ್ನ
11 ಹೊಟ್ಟೆಯು ಕಹಿಯಾಯಿತು. ಆ ಮೇಲೆ—ಇನ್ನೂ
ನೀನು ಅನೇಕವಾಗಿರುವ ಪ್ರಜೆ ಜನ ಭಾಷೆ ರಾಜ ಇವರ
ವಿಷಯದಲ್ಲಿ ಪ್ರವಾದನೆ ಹೇಳಬೇಕೆಂದು ನನಗೆ ತಿಳಿ
ಸಲ್ಪಟ್ಟಿತು.

ದೇವರ ಆಲಯವನ್ನು ಅಳೆದದ್ದನ್ನೂ ದೇವರ ಇಬ್ಬರು ಸಾಕ್ಷಿಗಳನ್ನೂ ಕುರಿತದ್ದು.

11 ತರುವಾಯ ದಂಡದಂತಿದ್ದ ಒಂದು ಅಳತೇ
ಕೋಲು ನನ್ನ ಕೈಗೆ ಕೊಡಲ್ಪಟ್ಟಿತು. ಮತ್ತು
ಒಂದು ವಾಣಿ ಉಂಟಾಯಿತು; ಅದು ನನಗೆ ಹೇಳಿದ್ದೇ
ನಂದರೆ—ನೀನೆದ್ದು ದೇವರ ಆಲಯವನ್ನೂ ಯಜ್ಞ
ವೇದಿಯನ್ನೂ ಅಳತೆಮಾಡಿ ಆಲಯದಲ್ಲಿ ಆರಾಧನೆ
2 ಮಾಡುವವರನ್ನು ಲೆಕ್ಕಿಸು. ಆಲಯಕ್ಕೆ ಹೊರಗಿ
ರುವ ಅಂಗಳವನ್ನು ಅಳೆಯದೆ ಬಿಟ್ಟುಬಿಡು; ಅದು
ಅನ್ಯಜನರಿಗಾಗಿ ಬಿಟ್ಟದೆ; ಅವರು ಪರಿಶುದ್ಧಪಟ್ಟಣ
ವನ್ನು ನಾಲ್ವತ್ತೆರಡು ತಿಂಗಳು ತುಳಿದಾಡುವರು.
3 ಇದಲ್ಲದೆ ನನ್ನ ಇಬ್ಬರು ಸಾಕ್ಷಿಗಳು ಗೋಣೀ
ತಟ್ಟುಗಳನ್ನು ಹೊದ್ದುಕೊಂಡು ಸಾವಿರದ ಇನ್ನೂರ
ಅರುವತ್ತು ದಿನಗಳ ತನಕ ಪ್ರವಾದಿಸುವ ಹಾಗೆ
4 ಮಾಡುವೆನು. ಭೂಲೋಕದ ಒಡೆಯನ ಮುಂದೆ
ನಿಂತಿರುವ ಎರಡು ಎಣ್ಣೆಯ ಮರಗಳೂ ಎರಡು
5 ದೀಪಸ್ತಂಭಗಳೂ ಇವರೇ. ಇವರಿಗೆ ಯಾವನಾದರೂ
ಕೇಡನ್ನುಂಟುಮಾಡಬೇಕೆಂದಿದ್ದರೆ ಇವರ ಬಾಯೊಳ
ಗಿಂದ ಬೆಂಕಿ ಹೊರಟು ಇವರ ಶತ್ರುಗಳನ್ನು ದಹಿಸಿ
ಬಿಡುವದು; ಇವರಿಗೆ ಯಾವನಾದರೂ ಕೇಡನ್ನು
ಉಂಟುಮಾಡಬೇಕೆಂದಿದ್ದರೆ ಅವನಿಗೆ ಆ ರೀತಿ
6 ಯಾಗಿ ಕೊಲೆಯಾಗಬೇಕು. ತಾವು ಪ್ರವಾದಿಸುವ
ದಿನಗಳಲ್ಲಿ ಮಳೆಬೀಳದಂತೆ ಆಕಾಶವನ್ನು ಮುಚ್ಚುವ
ಅಧಿಕಾರ ಇವರಿಗೆ ಉಂಟು. ಇದಲ್ಲದೆ ಜನರಿಗೆ ಇಷ್ಟ
ಬಂದಾಗೆಲ್ಲಾ ನೀರು ರಕ್ತವಾಗುವಂತೆ ಮಾಡುವ
ದಕ್ಕೂ ಸಕಲ ವಿಧವಾದ ಉಪದ್ರವಗಳಿಂದ ಭೂಮಿ
7 ಯನ್ನು ಪೀಡಿಸುವದಕ್ಕೂ ಅಧಿಕಾರವುಂಟು. ಇವರು
ತಮ್ಮ ಸಾಕ್ಷಿಯನ್ನು ಹೇಳಿ ಮುಗಿಸಿದನಂತರ
ಅಧೋಲೋಕದಿಂದ ಬರುವ ಮೃಗವು ಇವರ
ಮೇಲೆ ಯುದ್ಧಮಾಡಿ ಇವರನ್ನು ಜಯಿಸಿ ಕೊಲ್ಲು
ವದು. ಈ ಸಾಕ್ಷಿಗಳ ಶವಗಳು ಮಹಾ ಪಟ್ಟಣದ 8
ಬೀದಿಯಲ್ಲಿ ಬಿದ್ದಿರುವವು. ಆ ಪಟ್ಟಣಕ್ಕೆ ಗೂಢಾರ್ಥ
ವಾಗಿ ಸೊದೋಮ್ ಎಂತಲೂ ಐಗುಪ್ತ ಎಂತ
ಲೂ ಹೆಸರುಗಳುಂಟು; ಇವರ ಒಡೆಯನು ಸಹ
ಅಲ್ಲಿಯೇ ಶಿಲುಬೆಗೆ ಹಾಕಲ್ಪಟ್ಟನು. ಸಕಲ ಪ್ರಜೆ 9
ಕುಲ ಭಾಷೆ ಜನಾಂಗಗಳಿಗೆ ಸೇರಿದವರು ಈ ಸಾಕ್ಷಿಗಳ
ಶವಗಳನ್ನು ಮೂರುವರೆ ದಿನಗಳ ವರೆಗೂ ನೋಡುತ್ತಾ
ಇರುವರು; ಅವುಗಳನ್ನು ಸಮಾಧಿಯಲ್ಲಿ ಇಡಗೊಡಿ
ಸುವದಿಲ್ಲ. ಈ ಇಬ್ಬರು ಪ್ರವಾದಿಗಳು ಭೂನಿ 10
ವಾಸಿಗಳನ್ನು ಪೀಡಿಸಿದ್ದರಿಂದ ಇವರು ಸತ್ತದ್ದಕ್ಕೆ
ಭೂನಿವಾಸಿಗಳು ಸಂತೋಷಿಸಿ ಸಂಭ್ರಮಗೊಂಡು
ಒಬ್ಬರಿಗೊಬ್ಬರು ಉಡುಗೆರೆಗಳನ್ನು ಕಳುಹಿಸುವರು.
ಮೂರುವರೆ ದಿನಗಳಾದ ಮೇಲೆ ದೇವರಿಂದ 11
ಜೀವಾತ್ಮ ಬಂದು ಆ ಶವಗಳಲ್ಲಿ ಹೊಗಲು ಅವು
ಕಾಲೂರಿ ನಿಂತವು. ಅವರನ್ನು ನೋಡಿದವರಿಗೆ ಮಹಾ
ಭಯವು ಹಿಡಿಯಿತು. ಆ ಮೇಲೆ ಅವರಿಗೆ—ಇಲ್ಲಿ 12
ಮೇಲಕ್ಕೆ ಬನ್ನಿರಿ ಎಂದು ಆಕಾಶದ ಮಹಾ ವಾಣಿಯು
ಹೇಳಿತು. ಅದನ್ನು ಅವರು ಕೇಳಿ ಮೇಘವಿಮಾ
ನದಲ್ಲಿ ಪರಲೋಕಕ್ಕೆ ಏರಿಹೋದರು; ಅವರ ಶತ್ರು
ಗಳು ಅವರನ್ನು ನೋಡುತ್ತಾ ಇದ್ದರು. ಅದೇ ಗಳಿಗೆ 13
ಯಲ್ಲಿ ಮಹಾ ಭೂಕಂಪವುಂಟಾಗಿ ಆ ಪಟ್ಟಣದ
ಹತ್ತರಲ್ಲೊಂದಂಶವು ಬಿದ್ದುಹೋಯಿತು; ಆ ಭೂಕಂಪ
ದಿಂದ ಏಳುಸಾವಿರ ಮಂದಿ ಸತ್ತುಹೋದರು. ಉಳಿದ
ವರು ಭಯಗ್ರಸ್ತರಾಗಿ ಪರಲೋಕ ದೇವರನ್ನು
ಘನಪಡಿಸಿದರು.
ಎರಡನೆಯ ವಿಪತ್ತು ಕಳೆದುಹೋಯಿತು; ಇಗೋ, 14
ಮೂರನೆಯ ವಿಪತ್ತು ಬೇಗನೆ ಬರುತ್ತದೆ.

ಏಳನೆಯ ತುತೂರಿ ಊದಿದ್ದು; ದೇವರು ನ್ಯಾಯತೀರ್ಪನ್ನು ಮಾಡುವ ಕಾಲ ಹತ್ತಿರ ಬಂದದ್ದಕ್ಕಾಗಿ ಪರಲೋಕದಲ್ಲಿ ಆತನಿಗೆ ಸ್ತೋತ್ರ ಉಂಟಾದದ್ದು.

ಏಳನೆಯ ದೇವದೂತನು ತುತೂರಿಯನ್ನೂದಿ 15
ದನು. ಆಗ ಪರಲೋಕದಲ್ಲಿ ಮಹಾ ಶಬ್ದಗ
ಳುಂಟಾಗಿ—
ಲೋಕದ ರಾಜ್ಯಾಧಿಕಾರವು ನಮ್ಮ ಕರ್ತನಿಗೂ
ಆತನು ಅಭಿಷೇಕಿಸಿದವನಿಗೂ ಉಂಟಾಯಿತು;
ಆತನು ಯುಗಯುಗಾಂತರಗಳಲ್ಲಿಯೂ ರಾಜ್ಯ
ವನ್ನಾಳುವನು
ಎಂದು ಹೇಳಿದವು. ತರುವಾಯ ದೇವರ ಸಮಕ್ಷ 16
ಮದಲ್ಲಿ ತಮ್ಮ ತಮ್ಮ ಸಿಂಹಾಸನಗಳ ಮೇಲೆ ಕೂತಿ
ರುವ ಇಪ್ಪತ್ತುನಾಲ್ಕು ಮಂದಿ ಹಿರಿಯರು ಆತನಿಗೆ
ಅಡ್ಡಬಿದ್ದು—
ಕರ್ತನೇ, ಸರ್ವಶಕ್ತನಾದ ದೇವರೇ, [1]ಸದಾ 17
ಇರುವಾತನೇ,
ನೀನು ನಿನ್ನ ಮಹಾ ಅಧಿಕಾರವನ್ನು ವಹಿಸಿ
ಕೊಂಡು ಆಳಿದ್ದರಿಂದ

1) ಮೂಲ: ಇರುತ್ತಿರುವಾತನೇ, ಇದ್ದಾತನೇ.

ನಿನಗೆ ಕೃತಜ್ಞತಾಸ್ತುತಿಗಳನ್ನು ಸಲ್ಲಿಸುತ್ತೇವೆ.
18 ಜನಾಂಗಗಳು ಕೋಪಿಸಿಕೊಂಡವು, ನಿನ್ನ ಕೋಪವೂ ಪ್ರಕಟವಾಯಿತು.
ಸತ್ತನವರು ತೀರ್ಪುಹೊಂದುವ ಸಮಯ ಬಂದದೆ;
ನೀನು ನಿನ್ನ ದಾಸರಾದ ಪ್ರವಾದಿಗಳಿಗೂ ದೇವ ಜನರಿಗೂ
ನಿನ್ನ ನಾಮಕ್ಕೆ ಭಯಪಡುವ ದೊಡ್ಡವರಿಗೂ ಚಿಕ್ಕವರಿಗೂ ಪ್ರತಿಫಲವನ್ನು ಕೊಟ್ಟು
ಲೋಕನಾಶಕರನ್ನು ನಾಶಮಾಡುವಿ
ಎಂದು ಆತನನ್ನು ಆರಾಧಿಸಿದರು.
19 ಆಗ ಪರಲೋಕದಲ್ಲಿರುವ ದೇವಾಲಯವು ತೆರೆಯಿತು; ಆತನ ಆಲಯದಲ್ಲಿ ಆತನ ಒಡಂಬಡಿಕೆಯ ಮಂಜೂಷವು ಕಾಣಿಸಿತು; ಇದಲ್ಲದೆ ಮಿಂಚುಗಳೂ ವಾಣಿಗಳೂ ಗುಡುಗುಗಳೂ ಭೂಕಂಪವೂ ದೊಡ್ಡ ಆನೆಕಲ್ಲಿನ ಮಳೆಯೂ ಉಂಟಾದವು.

V. ಘಟಸರ್ಪವನ್ನೂ ಎರಡು ಮೃಗಗಳನ್ನೂ ಕುರಿತದ್ದು.
ಘಟಸರ್ಪವು ತೇಜೋಮಯವಾದ ಸ್ತ್ರೀಯ ಕೂಸನ್ನು ನುಂಗುವದಕ್ಕೆ ಪ್ರಯತ್ನಿಸಿದ್ದು.

12 ಪರಲೋಕದಲ್ಲಿ ಒಂದು ಮಹಾ ಲಕ್ಷಣವು ಕಾಣಿಸಿತು. ಅದೇನಂದರೆ, ಸೂರ್ಯನನ್ನು ಧರಿಸಿಕೊಂಡಿದ್ದ ಒಬ್ಬ ಸ್ತ್ರೀಯಿದ್ದಳು; ಆಕೆಯ ಕಾಲುಗಳ ಕೆಳಗೆ ಚಂದ್ರನಿದ್ದನು. ಆಕೆಯ ತಲೆಯ ಮೇಲೆ ಹನ್ನೆರಡು ನಕ್ಷತ್ರಗಳುಳ್ಳ ಒಂದು ಕಿರೀಟವಿತ್ತು;
2 ಆಕೆಯು ಗರ್ಭಿಣಿಯಾಗಿದ್ದು ಪ್ರಸವವೇದನೆಯಿಂದ
3 ಸಂಕಟಪಡುತ್ತಾ ಕೂಗುತ್ತಿದ್ದಳು. ಪರಲೋಕದಲ್ಲಿ ಮತ್ತೊಂದು ಲಕ್ಷಣವು ಕಾಣಿಸಿತು. ಅದೇನಂದರೆ ಕೆಂಪಾದ ಮಹಾ ಘಟಸರ್ಪವಿತ್ತು; ಅದಕ್ಕೆ ಏಳು ತಲೆಗಳೂ ಹತ್ತು ಕೊಂಬುಗಳೂ ಇದ್ದವು; ಅದರ
4 ತಲೆಗಳ ಮೇಲೆ ಏಳು ಮಕುಟಗಳಿದ್ದವು. ಅದರ ಬಾಲವು ಆಕಾಶದಲ್ಲಿರುವ ನಕ್ಷತ್ರಗಳೊಳಗೆ ಮೂರರಲ್ಲೊಂದು ಭಾಗವನ್ನು ಎಳೆದು ಭೂಮಿಗೆ ಹಾಕಿತು. ಹೆರುತ್ತಿದ್ದ ಆ ಸ್ತ್ರೀಯು ಹೆತ್ತ ಕೂಡಲೆ ಆಕೆಯ ಮಗುವನ್ನು ನುಂಗಿಬಿಡಬೇಕೆಂದು ಆ ಘಟಸರ್ಪವು
5 ಅಲ್ಲೇ ಕಾದುಕೊಂಡಿತ್ತು. ಆಕೆ ಜನಾಂಗಗಳನ್ನು ಕಬ್ಬಿಣದ ಕೋಲಿನಿಂದ ಆಳಬೇಕಾದ ಒಂದು ಗಂಡು ಮಗುವನ್ನು ಹೆತ್ತಳು; ಆ ಕೂಸು ಫಕ್ಕನೆ ದೇವರ ಬಳಿಗೂ ಆತನ ಸಿಂಹಾಸನದ ಬಳಿಗೂ ಎತ್ತಲ್ಪಟ್ಟಿತು.
6 ಆ ಸ್ತ್ರೀಯು ಅರಣ್ಯಕ್ಕೆ ಓಡಿಹೋದಳು; ಅಲ್ಲಿ ಆಕೆಗೆ ಸಾವಿರದ ಇನ್ನೂರ ಅರುವತ್ತು ದಿನಗಳ ವರೆಗೆ ಪೋಷಣೆಯಾಗಬೇಕೆಂದು ದೇವರು ಸ್ಥಳವನ್ನು ಸಿದ್ಧಮಾಡಿದ್ದನು.

ಸೈತಾನನೆಂಬ ಘಟಸರ್ಪವು ಪರಲೋಕದಿಂದ ದೊಬ್ಬಲ್ಪಟ್ಟದ್ದು.

7 ಪರಲೋಕದಲ್ಲಿ ಯುದ್ಧ ನಡೆಯಿತು. ಮೀಕಾಯೇಲನೂ ಅವನ ದೂತರೂ ಘಟಸರ್ಪನ ಮೇಲೆ ಯುದ್ಧಮಾಡುವದಕ್ಕೆ ಹೊರಟರು. ಘಟಸರ್ಪನೂ ಅವನ ದೂತರೂ ಯುದ್ಧಮಾಡಿ ಸೋತುಹೋದರು, ಮತ್ತು ಪರಲೋಕದೊಳಗೆ ಅವರಿಗೆ ಸ್ಥಾನವು ತಪ್ಪಿಹೋಯಿತು. ಭೂಲೋಕದವರನ್ನೆಲ್ಲಾ ಮರುಳುಗೊಳಿಸುವ ಆ ಮಹಾ ಘಟಸರ್ಪನು ಅಂದರೆ ಪಿಶಾಚನೆಂತಲೂ ಸೈತಾನನೆಂತಲೂ ಹೆಸರುಳ್ಳ ಪುರಾತನ ಸರ್ಪವು ದೊಬ್ಬಲ್ಪಟ್ಟು ಭೂಮಿಗೆ ಬಿದ್ದನು; ಅವನ ದೂತರೂ ಅವನೊಂದಿಗೆ ದೊಬ್ಬಲ್ಪಟ್ಟರು. ಆಗ ಪರಲೋಕದಲ್ಲಿ ಮಹಾ ಶಬ್ದವನ್ನು ಕೇಳಿದೆನು, ಅದು—

ಈಗ [1]ಜಯವೂ ಶಕ್ತಿಯೂ ರಾಜ್ಯವೂ ನಮ್ಮ ದೇವರಿಗೆ ಉಂಟಾಯಿತು;
ಆತನು ಅಭಿಷೇಕಿಸಿದವನ ಅಧಿಕಾರವು ಈಗ ಸ್ಥಾಪಿತವಾಯಿತು;
ಹಗಲಿರುಳು ನಮ್ಮ ಸಹೋದರರ ಮೇಲೆ ನಮ್ಮ ದೇವರ ಮುಂದೆ
ದೂರು ಹೇಳಿದ ದೂರುಗಾರನು ದೊಬ್ಬಲ್ಪಟ್ಟಿದ್ದಾನೆ.
ಅವರು ಪ್ರಾಣದ ಮೇಲಣ ಪ್ರೀತಿಯನ್ನು ತೊರೆದು ಮರಣಕ್ಕೆ ಹಿಂತೆಗೆಯದೆ
ಯಜ್ಞದ ಕುರಿಯಾದಾತನ ರಕ್ತದ ಬಲದಿಂದಲೂ ತಮ್ಮ ವಾಕ್ಯದ ಬಲದಿಂದಲೂ
ಅವನನ್ನು ಜಯಿಸಿದರು.
ಪರಲೋಕವೇ, ಅದರಲ್ಲಿ ವಾಸಮಾಡುವವರೇ, ಹರ್ಷಗೊಳ್ಳಿರಿ.
ಭೂಮಿಯೇ, ಸಮುದ್ರವೇ, ನಿಮ್ಮ ದುರ್ಗತಿಯನ್ನು ಏನು ಹೇಳಲಿ;
ಸೈತಾನನು ತನಗಿರುವ ಕಾಲವು ಸ್ವಲ್ಪವೆಂದು ತಿಳಿದು
ಮಹಾ ರೌದ್ರವುಳ್ಳವನಾಗಿ ನಿಮ್ಮ ಕಡೆಗೆ ಇಳಿದುಬಂದಿದ್ದಾನೆ
ಎಂಬದಾಗಿ ಹೇಳಿತು.

ಘಟಸರ್ಪವು ಆ ತೇಜೋಮಯವಾದ ಸ್ತ್ರೀಯನ್ನು ಹಿಂಸಿಸಿದ್ದು.

ಘಟಸರ್ಪನು ತಾನು ದೊಬ್ಬಲ್ಪಟ್ಟು ಭೂಮಿಗೆ ಬಿದ್ದಿರುವದನ್ನು ಕಂಡು ಗಂಡು ಮಗುವನ್ನು ಹೆತ್ತ ಸ್ತ್ರೀಯನ್ನು ಹಿಂಸಿಸುವದಕ್ಕೆ ಅಟ್ಟಿಕೊಂಡು ಹೋದನು. ಆ ಸ್ತ್ರೀಯು ಅರಣ್ಯದಲ್ಲಿದ್ದ ತನ್ನ ಸ್ಥಳಕ್ಕೆ ಹಾರಿಹೋಗುವದಕ್ಕಾಗಿ ಆಕೆಗೆ ದೊಡ್ಡ ಗರುಡಪಕ್ಷಿಯ ಎರಡು ರೆಕ್ಕೆಗಳು ಕೊಡಲ್ಪಟ್ಟವು. ಅಲ್ಲಿ [2]ಒಂದು ಕಾಲ, ಎರಡು ಕಾಲ, ಅರ್ಧಕಾಲ ಸರ್ಪನ ಮುಖಕ್ಕೆ ಮರೆಯಾಗಿ ಪೋಷಣೆಹೊಂದುತ್ತಾಳೆ. ಆ ಸರ್ಪನು ಸ್ತ್ರೀಯನ್ನು ಬಡಿಸಿಕೊಂಡು ಹೋಗಬೇಕೆಂದು ಆಕೆಯ ಹಿಂದೆ ತನ್ನ ಬಾಯೊಳಗಿಂದ ನೀರನ್ನು ನದಿಯಂತೆ ಬಿಟ್ಟನು. ಆದರೆ ಭೂಮಿಯು ಆ ಸ್ತ್ರೀಯ ಸಹಾಯಕ್ಕೆ ಬಂದು ಬಾಯಿ ತೆರೆದು ಘಟಸರ್ಪನು ತನ್ನ ಬಾಯೊಳಗಿಂದ ಬಿಟ್ಟ ನದಿಯನ್ನು ಕುಡಿದುಬಿಟ್ಟಿತು.

---

1) ಅಥವಾ, ರಕ್ಷಣೆಯೂ. 2) ಅಂದರೆ ಮೂರುವರೆ ವರುಷ. ಮೂಲ: ಕಾಲ ಮತ್ತು ಕಾಲಗಳು ಮತ್ತು ಅರ್ಧ ಕಾಲ.

17 ಆಗ ಘಟಸರ್ಪನು ಸ್ತ್ರೀಯ ಮೇಲೆ ಕೋಪಿಸಿಕೊಂಡು
ಆಕೆಯ ಸಂತಾನದವರಲ್ಲಿ ಉಳಿದವರ ಮೇಲೆ ಅಂದರೆ
ದೇವರ ಆಜ್ಞೆಗಳನ್ನು ಕೈಕೊಂಡು ನಡೆದು ಯೇಸು
ವಿನ ವಿಷಯವಾದ ಸಾಕ್ಷಿಯನ್ನು ಹೇಳಿರುವವರ
13 ಮೇಲೆ ಯುದ್ಧಮಾಡುವದಕ್ಕೆ ಹೊರಟು ಸಮು
ದ್ರತೀರದ ಮರಳಿನ ಮೇಲೆ ನಿಂತನು.

ಸಮುದ್ರದೊಳಗಿಂದ ಬಂದ ಆಶ್ಚರ್ಯಕರವಾದ ಮೃಗವನ್ನು ಕುರಿತದ್ದು.

ಸಮುದ್ರದಿಂದ ಮೃಗವು ಏರಿಬರುವದನ್ನು
ಕಂಡೆನು. ಅದಕ್ಕೆ ಏಳು ತಲೆಗಳೂ ಹತ್ತು ಕೊಂಬು
ಗಳೂ ಕೊಂಬುಗಳ ಮೇಲೆ ಹತ್ತು ಮಕುಟಗಳೂ
ತಲೆಗಳ ಮೇಲೆ ದೇವದೂಷಣನಾಮಗಳೂ ಇದ್ದವು.
2 ನಾನು ಕಂಡ ಮೃಗವು ಚಿರತೆಯಂತಿತ್ತು; ಅದರ
ಕಾಲುಗಳು ಕರಡಿಯ ಕಾಲುಗಳಂತೆಯೂ ಅದರ
ಬಾಯಿ ಸಿಂಹದ ಬಾಯಂತೆಯೂ ಇದ್ದವು. ಅದಕ್ಕೆ
ಘಟಸರ್ಪನು ಶಕ್ತಿಯನ್ನೂ ಸಿಂಹಾಸನವನ್ನೂ ಮಹಾ
3 ಅಧಿಕಾರವನ್ನೂ ಕೊಟ್ಟನು. ಅದರ ತಲೆಗಳಲ್ಲಿ
ಒಂದು ತಲೆ ಗಾಯಹೊಂದಿ ಸಾಯುವ ಹಾಗಿರುವ
ದನ್ನು ಕಂಡೆನು. ಆ ಮರಣಕರವಾದ ಗಾಯವು
ವಾಸಿಯಾಯಿತು; ಭೂಲೋಕದವರೆಲ್ಲರು ಆ ಮೃಗ
4 ವನ್ನು ನೋಡುತ್ತಾ ಆಶ್ಚರ್ಯಪಟ್ಟರು; ಘಟಸರ್ಪನು
ಆ ಮೃಗಕ್ಕೆ ಅಧಿಕಾರವನ್ನು ಕೊಟ್ಟವನಾದ್ದರಿಂದ
ಅವರು ಆ ಘಟಸರ್ಪನಿಗೆ ನಮಸ್ಕಾರಮಾಡುವವರಾ
ದರು. ಇದಲ್ಲದೆ ಆ ಮೃಗಕ್ಕೂ ನಮಸ್ಕಾರ ಮಾಡಿ—
ಈ ಮೃಗಕ್ಕೆ ಸಮಾನರು ಯಾರು? ಇದರ ಮೇಲೆ
ಯುದ್ಧಮಾಡುವದಕ್ಕೆ ಯಾರು ಶಕ್ತರು? ಅಂದರು.
5 ಬಡಾಯಿಮಾತುಗಳನ್ನೂ ದೂಷಣೆಯ ಮಾತುಗಳನ್ನೂ
ಆಡುವ ಬಾಯಿ ಅದಕ್ಕೆ ಕೊಡಲ್ಪಟ್ಟಿತು. ಮತ್ತು
ನಾಲ್ವತ್ತೆರಡು ತಿಂಗಳ ಪರ್ಯಂತರ ತನ್ನ ಕಾರ್ಯ
ಗಳನ್ನು ನಡಿಸುವ ಅಧಿಕಾರವೂ ಅದಕ್ಕೆ ಕೊಡಲ್ಪ
6 ಟ್ಟಿತು. ಅದು ಬಾಯಿತೆರೆದು ದೇವರನ್ನು ದೂಷಿ
ಸಿದ್ದಲ್ಲದೆ ಆತನ ನಾಮವನ್ನೂ ಆತನ ನಿವಾಸವನ್ನೂ
7 ಪರಲೋಕನಿವಾಸಿಗಳನ್ನೂ ದೂಷಿಸಿತು. 1)ಇದಲ್ಲದೆ
ದೇವಜನರ ಮೇಲೆ ಯುದ್ಧಮಾಡಿ ಅವರನ್ನು ಜಯಿ
ಸುವದಕ್ಕೆ ಅದಕ್ಕೆ ಅಧಿಕಾರ ಕೊಡಲ್ಪಟ್ಟಿತು. ಮತ್ತು
ಸಕಲ ಕುಲ ಪ್ರಜೆ ಭಾಷೆ ಜನಾಂಗಗಳ ಮೇಲೆ ಅವಕ್ಕೆ
8 ಅಧಿಕಾರವು ಕೊಡಲ್ಪಟ್ಟಿತು. ಜಗದುತ್ಪತ್ತಿಗೆ ಮೊದಲೇ
ಕೊಯ್ಯಲ್ಪಟ್ಟ ಕುರಿಯಾದಾತನ ಬಳಿಯಲ್ಲಿರುವ
ಜೀವಬಾಧ್ಯರ ಪಟ್ಟಿಯಲ್ಲಿ ಯಾರಾರ ಹೆಸರುಗಳು
ಬರೆದಿರುವದಿಲ್ಲವೋ ಆ ಭೂನಿವಾಸಿಗಳೆಲ್ಲರೂ ಅದಕ್ಕೆ
9 10 ನಮಸ್ಕಾರಮಾಡುವರು. ಕಿವಿಯುಳ್ಳವನು ಕೇಳಲಿ.
ಸೆರೆಹಿಡಿಯುವವನು ತಾನೇ ಸೆರೆಗೆ ಹೋಗುವನು;
ಕತ್ತಿಯಿಂದ ಕೊಲ್ಲುವವನು ಕತ್ತಿಯಿಂದಲೇ ಸಾಯ
ಬೇಕು. ಇದರಲ್ಲಿ ದೇವಜನರ ತಾಳ್ಮೆಯೂ ನಂಬಿ
ಕೆಯೂ ತೋರಿಬರುತ್ತದೆ.

ಭೂಮಿಯೊಳಗಿಂದ ಬಂದ ಸುಳ್ಳುಪ್ರವಾದಿಯೆಂಬ ಮೃಗವನ್ನು ಕುರಿತದ್ದು.

2)ಮತ್ತೊಂದು ಮೃಗವು ಭೂಮಿಯೊಳಗಿಂದ 11
ಬರುವದನ್ನು ಕಂಡೆನು. ಇದಕ್ಕೆ 3)ಟಗರಿಗಿರುವಂತೆ
ಎರಡು ಕೊಂಬುಗಳಿದ್ದವು; ಘಟಸರ್ಪದಂತೆ ಮಾತಾ
ಡಿತು. ಈ ಮೃಗವು ಮೊದಲನೆಯ ಮೃಗದ ಅಧಿ 12
ಕಾರವನ್ನೆಲ್ಲಾ ಅದರ ಸನ್ನಿಧಿಯಲ್ಲೇ ನಡಿಸುತ್ತದೆ.
ಇದು ಮರಣಕರವಾದ ಗಾಯ ವಾಸಿಯಾದ ಮೊದ
ಲನೆಯ ಮೃಗಕ್ಕೆ ಭೂಲೋಕವೂ ಭೂನಿವಾಸಿಗಳೂ
ನಮಸ್ಕರಿಸುವಂತೆ ಮಾಡುವಂಥದಾಗಿದೆ. ಇದು 13
ಮಹತ್ತಾದ ಸೂಚಕಕಾರ್ಯಗಳನ್ನು ನಡಿಸುತ್ತದೆ;
ಜನರ ಮುಂದೆ ಬೆಂಕಿಯು ಆಕಾಶದಿಂದ ಭೂಮಿಗೆ
ಇಳಿದುಬರುವಂತೆಯಾದರೂ ಮಾಡುವದು. ಆ ಮೊದ 14
ಲನೆಯ ಮೃಗದ ಸನ್ನಿಧಿಯಲ್ಲಿ ಮಹತ್ಕಾರ್ಯಗ
ಳನ್ನು ಮಾಡುವ ಅಧಿಕಾರವಿರುವದರಿಂದ ಭೂನಿವಾಸಿ
ಳನ್ನು ಮರುಳುಗೊಳಿಸುತ್ತದೆ; ಅವರಿಗೆ—ಕತ್ತಿಯಿಂದ
ಗಾಯಹೊಂದಿ ಸಾಯದೆ ಬದುಕಿದ ಮೃಗದ ಘನ
ಕ್ಕಾಗಿ ವಿಗ್ರಹವನ್ನು ಮಾಡಿಸಿಕೊಳ್ಳಬೇಕೆಂದು ಬೋಧಿ
ಸುತ್ತದೆ. ಇದಲ್ಲದೆ ಆ ಮೃಗದ ವಿಗ್ರಹಕ್ಕೆ ಜೀವ 15
ಕೊಡುವ ಸಾಮರ್ಥ್ಯವು ಇದಕ್ಕೆ ದೊರೆಯಿತು. ಆ
ಮೃಗದ ವಿಗ್ರಹವು ಮಾತಾಡುವದು; ತನಗೆ ನಮಸ್ಕರಿಸ
ದವರೆಲ್ಲರಿಗೂ ಮರಣದಂಡನೆ ಆಗುವಂತೆ ಮಾಡು
ವದು. ಈ ಎರಡನೆಯ ಮೃಗವು—ದೊಡ್ಡವರು 16
ಚಿಕ್ಕವರು ಐಶ್ವರ್ಯವಂತರು ಬಡವರು ಸ್ವತಂತ್ರರು
ದಾಸರು ಎಲ್ಲರೂ ತಮ್ಮ ತಮ್ಮ ಬಲಗೈಯ ಮೇಲಾ
ಗಲಿ ಹಣೆಯ ಮೇಲಾಗಲಿ ಗುರುತು ಹೊಂದಬೇ
ಕೆಂತಲೂ ಆ ಗುರುತು ಯಾರಿಗಿಲ್ಲವೋ ಅವರು ಕ್ರಯ 17
ವಿಕ್ರಯಗಳನ್ನು ನಡಿಸಕೂಡದೆಂತಲೂ ಆಜ್ಞೆಮಾಡು
ತ್ತದೆ. ಆ ಗುರುತು ಯಾವದಂದರೆ ಮೊದಲನೆಯ
ಮೃಗದ ಹೆಸರು ಅಥವಾ ಅದರ ಹೆಸರನ್ನು ಸೂಚಿಸುವ
ಅಂಕೆ.
ಇದರಲ್ಲಿ ಜ್ಞಾನವು ಅಡಕವಾಗಿದೆ. ಬುದ್ಧಿವಂತನು 18
ಆ ಮೃಗದ ಅಂಕೆಯನ್ನು ಎಣಿಸಲಿ; ಅದು ಒಬ್ಬ
ಮನುಷ್ಯನನ್ನು ಸೂಚಿಸುವ ಅಂಕೆಯಾಗಿದೆ; ಅದರ
ಅಂಕೆಯು 4)ಆರುನೂರು ಅರುವತ್ತಾರು.

VI. ರಕ್ಷಣೆಹೊಂದಿದವರ ಉತ್ಸವಗೀತೆ, ನಾಲ್ಕು ಪ್ರಕಟನೆಗಳು, ಭೂಲೋಕದ ಸುಗ್ಗೀಕಾಲ, ಇವುಗಳನ್ನು ಕುರಿತದ್ದು.

1. ರಕ್ಷಣೆಹೊಂದಿದವರ ಉತ್ಸವಗೀತವನ್ನು ಕುರಿತದ್ದು.

ನಾನು ನೋಡಲಾಗಿ ಯಜ್ಞದ ಕುರಿಯಾದಾತನು 14
ಚೀಯೋನ್ ಪರ್ವತದ ಮೇಲೆ ನಿಂತಿರುವದನ್ನು
ಕಂಡೆನು. ಆತನ ಜೊತೆಯಲ್ಲಿ ಒಂದು ಲಕ್ಷ ನಾಲ್ವ
ತ್ತುನಾಲ್ಕು ಸಾವಿರ ಮಂದಿ ಇದ್ದರು; ಅವರವರ

1) ಕೆಲವು ಪ್ರತಿಗಳಲ್ಲಿ ಈ ವಾಕ್ಯವು ಇಲ್ಲ. 2) ಅಂದರೆ, ಸುಳ್ಳುಪ್ರವಾದಿ 3) ಮೂಲ: ಕುರಿಮರಿಗಿರುವಂತೆ.
4) ಕೆಲವು ಪ್ರತಿಗಳಲ್ಲಿ—ಆರುನೂರ ಹದಿನಾರು ಎಂದು ಬರೆದದೆ.

ಹಣೆಯ ಮೇಲೆ ಆತನ ಹೆಸರೂ ಆತನ ತಂದೆಯ
2 ಹೆಸರೂ ಬರೆಯಲ್ಪಟ್ಟಿದ್ದವು. ಇದಲ್ಲದೆ ಪರಲೋಕದ
ಕಡೆಯಿಂದ ಜಲಪ್ರವಾಹದ ಘೋಷದಂತೆಯೂ ದೊಡ್ಡ
ಗುಡುಗಿನ ಶಬ್ದದಂತೆಯೂ ಇದ್ದ ಶಬ್ದವನ್ನು ಕೇಳಿ
ದೆನು. ನಾನು ಕೇಳಿದ ಆ ಶಬ್ದವು ವೀಣೆಗಳನ್ನು
ನುಡಿಸಿಕೊಂಡು ಹಾಡುತ್ತಿರುವ ವೀಣೆಗಾರರ ಶಬ್ದ
3 ದಂತಿತ್ತು. ಅವರು ಸಿಂಹಾಸನದ ಮುಂದೆಯೂ ಆ
ನಾಲ್ಕು ಜೀವಿಗಳ ಮತ್ತು ಹಿರಿಯರ ಮುಂದೆಯೂ
ಹೊಸ ಹಾಡನ್ನು ಹಾಡಿದರು. ಭೂಲೋಕದೊಳ
ಗಿಂದ ಕೊಂಡುಕೊಳ್ಳಲ್ಪಟ್ಟ ಆ ಲಕ್ಷದ ನಾಲ್ವತ್ತು
ನಾಲ್ಕು ಸಾವಿರ ಜನರೇ ಹೊರತು ಬೇರೆ ಯಾರೂ ಆ
4 ಹಾಡನ್ನು ಕಲಿಯಲಾರರು. ಸ್ತ್ರೀ ಸಹವಾಸದಿಂದ
ಮಲಿನರಾಗದವರು ಇವರೇ; ಇವರು ಕನ್ಯೆಯರಂತೆ
ನಿಷ್ಕಳಂಕರು. ಯಜ್ಞದ ಕುರಿಯಾದಾತನು ಎಲ್ಲಿ
ಹೋದರೂ ಇವರು ಆತನ ಹಿಂದೆ ಹೋಗುವರು.
ಇವರು ಮನುಷ್ಯರೊಳಗಿಂದ ಸ್ವಕೀಯ ಜನರಾಗಿ
ಕೊಂಡುಕೊಳ್ಳಲ್ಪಟ್ಟು ದೇವರಿಗೂ ಯಜ್ಞದ ಕುರಿ
5 ಯಾದಾತನಿಗೂ ಪ್ರಥಮಫಲದಂತಾದರು. ಇವರ
ಬಾಯಲ್ಲಿ ಸುಳ್ಳುಸಿಕ್ಕಲಿಲ್ಲ; ಇವರು ನಿರ್ದೋಷಿ
ಗಳಾಗಿದ್ದಾರೆ.

### ೨. ನಾಲ್ಕು ಪ್ರಕಟನೆಗಳು.

6 ಮತ್ತೊಬ್ಬ ದೇವದೂತನು ಆಕಾಶಮಧ್ಯದಲ್ಲಿ
ಹಾರಿಹೋಗುವದನ್ನು ಕಂಡೆನು. ಭೂನಿವಾಸಿಗಳಾಗಿ
ರುವ ಸಕಲ ಜನಾಂಗ ಕುಲ ಪ್ರಜೆಗಳವರಿಗೂ ಸಕಲ
ಭಾಷೆಗಳನ್ನಾಡುವವರಿಗೂ ಸಾರಿಹೇಳುವದಕ್ಕೆ ನಿತ್ಯ
7 ವಾದ ಶುಭವರ್ತಮಾನವು ಅವನಲ್ಲಿತ್ತು. ಅವನು—
ನೀವೆಲ್ಲರು ದೇವರಿಗೆ ಭಯಪಟ್ಟು ಆತನನ್ನು ಘನಪಡಿ
ಸಿರಿ, ಆತನು ನ್ಯಾಯತೀರ್ಪುಮಾಡುವ ಗಳಿಗೆಯು
ಬಂದಿದೆ. ಭೂಲೋಕ ಪರಲೋಕಗಳನ್ನೂ ಸಮುದ್ರ
ವನ್ನೂ ನೀರಿನ ಬುಗ್ಗೆಗಳನ್ನೂ ಉಂಟುಮಾಡಿದಾತ
ನಿಗೆ ನಮಸ್ಕಾರಮಾಡಿರಿ ಎಂದು ಮಹಾ ಶಬ್ದದಿಂದ
ಹೇಳಿದನು.
8 ಅವನ ಹಿಂದೆ ಎರಡನೆಯವನಾದ ಒಬ್ಬ ದೇವದೂ
ತನು ಬಂದು—ಬಿದ್ದಳು, ಬಿದ್ದಳು, ಬಾಬೆಲೆಂಬ
ಮಹಾ ನಗರಿಯು ಬಿದ್ದಳು. ಆಕೆಯು ಸಕಲ
ಜನಾಂಗಗಳಿಗೆ 1)ತನ್ನ ಅತಿ ಜಾರತ್ವವೆಂಬ ದ್ರಾಕ್ಷಾ
ರಸವನ್ನು ಕುಡಿಸಿದಳು ಎಂದು ಹೇಳಿದನು.
9 ಅವನ ಹಿಂದೆ ಮೂರನೆಯವನಾದ ಒಬ್ಬ ದೇವದೂ
ತನು ಬಂದು—ಯಾವನಾದರೂ ಮೊದಲನೆಯ
ಮೃಗಕ್ಕೂ ಅದರ ವಿಗ್ರಹಕ್ಕೂ ನಮಸ್ಕಾರಮಾಡಿ
ತನ್ನ ಹಣೆಯ ಮೇಲಾಗಲಿ ಕೈಯ ಮೇಲಾಗಲಿ
10 ಗುರುತುಹಾಕಿಸಿಕೊಂಡರೆ ಅವನು ಸಹ ದೇವರ
ಕೋಪವೆಂಬ ಪಾತ್ರೆಯಲ್ಲಿ ಏನೂ ಬೆರಸದೆ ಹಾಕಿದ
ದೇವರ ರೌದ್ರವೆಂಬ ದ್ರಾಕ್ಷಾರಸವನ್ನು ಕುಡಿಯು
ವನು; ಪರಿಶುದ್ಧದೇವದೂತರ ಮುಂದೆಯೂ ಯಜ್ಞದ
ಕುರಿಯಾದಾತನ ಮುಂದೆಯೂ ಬೆಂಕಿಯಿಂದಲೂ
ಗಂಧಕದಿಂದಲೂ ಯಾತನೆಪಡುವನು. ಅಂಥವರ
ಯಾತನೆಯ ಹೊಗೆಯು ಯುಗಯುಗಾಂತರಗಳಲ್ಲಿ
ಯೂ ಏರುತ್ತಾ ಹೋಗುತ್ತದೆ; ಮೃಗಕ್ಕೆ ಮತ್ತು
ಅದರ ವಿಗ್ರಹಕ್ಕೆ ನಮಸ್ಕಾರಮಾಡುವವರೂ ಅದರ
ಹೆಸರನ್ನು ಸೂಚಿಸುವ ಗುರುತನ್ನು ಹಾಕಿಸಿಕೊಂಡಿರು
ವವರೆಲ್ಲರೂ ಹಗಲಿರುಳು ಉಪಶಮನವಿಲ್ಲದೆ ಯಾ
ತನೆಪಡುವರು ಎಂದು ಮಹಾ ಶಬ್ದದಿಂದ ಹೇಳಿ
ದನು. ಇದರಲ್ಲಿ ದೇವರ ಆಜ್ಞೆಗಳನ್ನೂ ಯೇಸು
ವಿನ ಮೇಲಣ ನಂಬಿಕೆಯನ್ನೂ ಕೈಕೊಂಡು ನಡ
ಯುತ್ತಿರುವ ದೇವಜನರ ತಾಳ್ಮೆಯು ತೋರಿಬರು
ತ್ತದೆ.
ಪರಲೋಕದಿಂದ ಒಂದು ಶಬ್ದವು ನನಗೆ ಕೇಳಿಸಿತು.
ಅದು—ಇಂದಿನಿಂದ ಕರ್ತನ ಭಕ್ತರಾಗಿ ಸಾಯು
ವವರು ಧನ್ಯರು ಎಂಬದಾಗಿ ಬರೆ ಎಂದು ನನಗೆ
ಹೇಳಿತು. ಅದಕ್ಕೆ ಆತ್ಮನು—ಹೌದು, ಅವರು
ಧನ್ಯರೇ; ಅವರ ಕಷ್ಟ ತೀರಿತು, ಅವರಿಗೆ ವಿಶ್ರಾಂತಿ
ಯಾಗುವದು; ಅವರ ಸುಕೃತ್ಯಗಳು ಅವರೊಡನೆ
ಬರುವವು ಎಂದು ಹೇಳುತ್ತಾನೆ.

### ೩. ಭೂಲೋಕದ ಸುಗ್ಗೀಕಾಲವನ್ನು ಕುರಿತದ್ದು.

ನಾನು ನೋಡಲಾಗಿ ಇಗೋ, ಪ್ರಕಾಶಮಾನವಾದ
ಒಂದು ಮೇಘವು ನನಗೆ ಕಾಣಿಸಿತು. ಆ ಮೇಘದ
ಮೇಲೆ ಮನುಷ್ಯಕುಮಾರನಂತಿದ್ದವನೊಬ್ಬನು ಕೂ
ತಿರುವದನ್ನು ಕಂಡೆನು. ಆತನ ತಲೆಯ ಮೇಲೆ
ಚಿನ್ನದ ಕಿರೀಟವೂ ಆತನ ಕೈಯಲ್ಲಿ ಹದವಾದ
ಕುಡುಗೋಲೂ ಇದ್ದವು. ಆಗ ದೂತನಾದ ಮತ್ತೊ
ಬ್ಬನು ದೇವಾಲಯದೊಳಗಿಂದ ಬಂದು ಮೇಘದ
ಮೇಲೆ ಕುಳಿತಿದ್ದಾತನಿಗೆ—ಭೂಮಿಯ ಪೈರು ಮಾಗಿ
ಒಣಗಿದೆ; ಕೊಯ್ಯುವ ಕಾಲ ಬಂತು; ನಿನ್ನ
ಕುಡುಗೋಲನ್ನು ಹಾಕಿ ಕೊಯ್ಯಿ ಎಂದು ಮಹಾ ಶಬ್ದ
ದಿಂದ ಕೂಗಿದನು. ಮೇಘದ ಮೇಲೆ ಕುಳಿತಿದ್ದಾತನು
ತನ್ನ ಕುಡುಗೋಲನ್ನು ಹಾಕಿ ಭೂಮಿಯ ಪೈರನ್ನು
ಕೊಯಿದನು; ಭೂಮಿಯ ಪೈರು ಕೊಯ್ಯಲ್ಪಟ್ಟಿತು.
ಮತ್ತೊಬ್ಬ ದೂತನು ಪರಲೋಕದಲ್ಲಿರುವ ದೇವಾ
ಲಯದೊಳಗಿಂದ ಬಂದನು. ಅವನಲ್ಲಿ ಸಹ ಹದ
ವಾದ ಕುಡುಗೋಲು ಇತ್ತು. ತರುವಾಯ ಬೆಂಕಿಗೆ
ಅಧಿಕಾರಿಯಾದ ಇನ್ನೊಬ್ಬ ದೂತನು ಯಜ್ಞವೇದಿಯ
ಬಳಿಯಿಂದ ಬಂದು ಆ ಹದವಾದ ಕುಡುಗೋಲಿನವ
ನಿಗೆ—ನಿನ್ನ ಹದವಾದ ಕುಡುಗೋಲನ್ನು ಹಾಕಿ
ಭೂಮಿಯ ದ್ರಾಕ್ಷೇಗೊಂಚಲುಗಳನ್ನು ಕೊಯ್ಯಿ;
ಅದರ ಹಣ್ಣುಗಳು ಪೂರಾ ಮಾಗಿವೆ ಎಂದು ಮಹಾ
ಶಬ್ದದಿಂದ ಕೂಗಿದನು. ಆಗ ಆ ದೂತನು ತನ್ನ
ಕುಡುಗೋಲನ್ನು ಭೂಮಿಗೆ ಹಾಕಿ ಭೂಮಿಯ
ದ್ರಾಕ್ಷೇಬಳ್ಳಿಯ ಹಣ್ಣನ್ನು ಕೊಯಿದು ದೇವರ
ರೌದ್ರವೆಂಬ ದೊಡ್ಡ ತೊಟ್ಟಿಯಲ್ಲಿ ಹಾಕಿದನು.
ಅದನ್ನು ಪಟ್ಟಣದ ಹೊರಗೆ ಆ ತೊಟ್ಟಿಯಲ್ಲಿ ತುಳಿ
ದರು. ಆ ತೊಟ್ಟಿಯೊಳಗಿಂದ ರಕ್ತವು ಹೊರಟು

1) ಅಥವಾ, ಜಾರತ್ವದಿಂದಾಗುವ ದೇವರ ರೌದ್ರವೆಂಬ.

ಕುದುರೆಗಳ ಕಡಿವಾಣಗಳನ್ನು ಮುಟ್ಟುವಷ್ಟು ಆಳ
ವಾಗಿ 1)ಇನ್ನೂರು ಮೈಲಿ ದೂರ ಹರಿಯಿತು.

### VII. ಏಳು ಉಪದ್ರವಗಳನ್ನು ಕುರಿತದ್ದು.

15 ಪರಲೋಕದಲ್ಲಿ ಆಶ್ಚರ್ಯಕರವಾದ ಮ
ತ್ತೊಂದು ಮಹಾ ಲಕ್ಷಣವು ನನಗೆ ಕಾಣಿಸಿತು.
ಏಳು ಮಂದಿ ದೇವದೂತರ ಕೈಯಲ್ಲಿ ಏಳು ಉಪ
ದ್ರವಗಳಿದ್ದವು; ಇವು ಕಡೇ ಉಪದ್ರವಗಳು; ಇವುಗ
ಳಲ್ಲಿ ದೇವರ ರೌದ್ರವು ಮುಗಿದಿರುವದು.

#### ಮೃಗದ ಮೇಲೆ ಜಯಹೊಂದಿದವರ ಗೀತ.

2 ಬೆಂಕಿ ಬೆರೆದ ಗಾಜಿನ ಸಮುದ್ರವೋ ಎಂಬಂತೆ
ಏನೋ ಒಂದು ನನಗೆ ಕಾಣಿಸಿತು. ಆಗ ಮೃಗದ
ವಿಗ್ರಹಕ್ಕೆ ನಮಸ್ಕರಿಸದೆಯೂ ಅದರ ಹೆಸರಿನ ಅಂಕೆ
ಯನ್ನು ಮುದ್ರೆಹಾಕಿಸಿಕೊಳ್ಳದೆಯೂ ಅದರ
ಮೇಲೆ ಜಯಹೊಂದಿದವರು ದೇವರ ಸೇವಾರ್ಥ
ವಾದ ವೀಣೆಗಳನ್ನು ಕೈಯಲ್ಲಿ ಹಿಡುಕೊಂಡು ಗಾಜಿನ
3 ಸಮುದ್ರದ ಬಳಿಯಲ್ಲಿ ನಿಂತು ದೇವರ ದಾಸನಾದ
ಮೋಶೆಯ ಹಾಡನ್ನೂ ಯಜ್ಞದ ಕುರಿಯಾದಾತನ
ಹಾಡನ್ನು ಹಾಡುತ್ತಾ—
ದೇವರಾದ ಕರ್ತನೇ, ಸರ್ವಶಕ್ತನೇ,
ನಿನ್ನ ಕೃತ್ಯಗಳು ಮಹತ್ತಾದವುಗಳೂ ಆಶ್ಚ
ರ್ಯಕರವಾದವುಗಳೂ ಆಗಿವೆ.
2)ಸರ್ವಜನಾಂಗಗಳ ಅರಸನೇ, ನಿನ್ನ ಮಾ
ರ್ಗಗಳು ನ್ಯಾಯವೂ ಸತ್ಯವೂ ಆಗಿವೆ;
4 ಕರ್ತನೇ, ನಿನ್ನ ನಾಮಕ್ಕೆ ಭಯಪಡದವರೂ
ಅದನ್ನು ಘನವಾದದ್ದೆಂದು ಒಪ್ಪಿಕೊಳ್ಳದವರೂ
ಯಾರಾದರೂ ಇದ್ದಾರೇ?
ನೀನೊಬ್ಬನೇ ಪರಿಶುದ್ಧನು;
ನಿನ್ನ ನೀತಿಯುಳ್ಳ ಕೃತ್ಯಗಳು ಪ್ರಕಾಶಕ್ಕೆ ಬಂದ
ದರಿಂದ
ಎಲ್ಲಾ ಜನಾಂಗಗಳು ಬಂದು ನಿನ್ನ ಸನ್ನಿಧಾ
ನದಲ್ಲಿ ನಮಸ್ಕಾರಮಾಡುವರು
ಎಂದು ಹೇಳಿದರು.

#### ಏಳು ಉಪದ್ರವಗಳು ದೇವವಿರೋಧಿಗಳಿಗೆ ಉಂಟಾದದ್ದು.

5 ಇದಾದ ಮೇಲೆ ನಾನು ನೋಡಿದಾಗ ಪರಲೋ
ಕದಲ್ಲಿರುವ ದೇವದರ್ಶನಗುಡಾರದ ಪವಿತ್ರಸ್ಥಾನವು
6 ತೆರೆಯಿತು; ಅದರೊಳಗಿಂದ ಏಳು ಉಪದ್ರವಗಳನ್ನು
ಕೈಯಲ್ಲಿ ಹಿಡಿದಿರುವ ಆ ಏಳು ಮಂದಿ ದೇವದೂತರು
ಬಂದರು; ಅವರು ಪ್ರಕಾಶವೂ ನಿರ್ಮಲವೂ ಆದ
ನಾರುಮಡಿಯನ್ನು ಧರಿಸಿಕೊಂಡಿದ್ದರು; ತಮ್ಮ ಎದೆ
ಗಳಿಗೆ ಚಿನ್ನದ ಪಟ್ಟಿಯನ್ನು ಕಟ್ಟಿಕೊಂಡಿದ್ದರು.
7 ನಾಲ್ಕು ಜೀವಿಗಳಲ್ಲಿ ಒಂದು ಈ ಏಳು ಮಂದಿ ದೇವ
ದೂತರಿಗೆ ಯುಗಯುಗಾಂತರಗಳಲ್ಲಿಯೂ ಜೀವಿಸು
ವಾತನಾದ ದೇವರ ರೌದ್ರದಿಂದ ತುಂಬಿದ್ದ ಏಳು
ಚಿನ್ನದ ಪಾತ್ರೆಗಳನ್ನು ಕೊಟ್ಟಿತು. ದೇವರ ತೇಜ 8
ಸ್ಸಾನ್ನಿಧ್ಯದಿಂದಲೂ ಆತನ ಶಕ್ತಿಯಿಂದಲೂ ಉಂಟಾದ
ಹೊಗೆಯಿಂದ ಪವಿತ್ರಸ್ಥಾನವು ತುಂಬಿದ ಕಾರಣ ಆ
ಏಳು ಮಂದಿ ದೇವದೂತರ ಕೈಯಲ್ಲಿದ್ದ ಏಳು ಉಪ
ದ್ರವಗಳು ತೀರುವ ತನಕ ಆ ಪವಿತ್ರಸ್ಥಾನದೊಳಗೆ
ಪ್ರವೇಶಿಸುವದಕ್ಕೆ ಯಾರಿಂದಲೂ ಆಗಲಿಲ್ಲ.

ಆಗ ಪವಿತ್ರಸ್ಥಾನದಿಂದ ಬಂದ ಮಹಾ ಶಬ್ದ 16
ವನ್ನು ಕೇಳಿದೆನು. ಅದು ಆ ಏಳು ಮಂದಿ ದೇವ
ದೂತರಿಗೆ— ನೀವು ಹೋಗಿ ಆ ಏಳು ಪಾತ್ರೆಗಳಲ್ಲಿ
ರುವ ದೇವರ ರೌದ್ರವನ್ನು ಭೂಮಿಯ ಮೇಲೆ
ಹೊಯ್ಯಿರಿ ಎಂದು ಹೇಳಿತು.
ಆಗ ಮೊದಲನೆಯವನು ಹೊರಟು ತನ್ನ ಪಾತ್ರೆ 2
ಯಲ್ಲಿದ್ದದ್ದನ್ನು ಭೂಮಿಗೆ ಹೊಯಿದನು; ಕೂಡಲೇ
ಮೊದಲನೆಯ ಮೃಗದ ಗುರುತನ್ನು ಹೊಂದಿ ಅದರ
ವಿಗ್ರಹಕ್ಕೆ ನಮಸ್ಕಾರಮಾಡುವ ಮನುಷ್ಯರ ಮೈ
ಮೇಲೆ ಕೆಟ್ಟ ಉರಿಹುಣ್ಣು ಎದ್ದಿತು.
ಎರಡನೆಯವನು ತನ್ನ ಪಾತ್ರೆಯಲ್ಲಿದ್ದದ್ದನ್ನು 3
ಸಮುದ್ರದ ಮೇಲೆ ಹೊಯಿದನು. ಅದರ ನೀರು
ಸತ್ತವನ ರಕ್ತದ ಹಾಗಾಯಿತು; ಮತ್ತು ಸಮುದ್ರ
ದಲ್ಲಿದ್ದ ಜೀವಜಂತುಗಳೆಲ್ಲವು ಸತ್ತುಹೋದವು.
ಮೂರನೆಯವನು ತನ್ನ ಪಾತ್ರೆಯಲ್ಲಿದ್ದದ್ದನ್ನು 4
ನದಿಗಳ ಮೇಲೆಯೂ ನೀರಿನ ಬುಗ್ಗೆಗಳ ಮೇಲೆಯೂ
ಹೊಯಿದನು; ಅವುಗಳ ನೀರು ರಕ್ತವಾಯಿತು.
ಆ ಮೇಲೆ ಜಲಾಧಿಪತಿಯಾದ ದೂತನು— 5
ಸದಾ ಇರುವಾತನೇ, ಪರಿಶುದ್ಧನೇ,
ನೀನು ಹೀಗೆ ತೀರ್ಪುಮಾಡಿದ್ದರಲ್ಲಿ ನೀತಿ
ಸ್ವರೂಪನಾಗಿದ್ದೀ.
ಅವರು ದೇವಜನರ ಮತ್ತು ಪ್ರವಾದಿಗಳ 6
ರಕ್ತವನ್ನು ಸುರಿಸಿದರು;
ನೀನು ಅವರಿಗೆ ರಕ್ತವನ್ನೇ ಕುಡಿಯುವದಕ್ಕೆ
ಕೊಟ್ಟಿದ್ದೀ;
ಇದಕ್ಕೆ ಅವರು ಪಾತ್ರರು
ಎಂದು ಹೇಳುವದನ್ನು ಕೇಳಿದೆನು. ಆ ಮೇಲೆ ಯಜ್ಞವೇ 7
ದಿಯು ಮಾತಾಡುತ್ತಾ—ದೇವರಾದ ಕರ್ತನೇ, ಸರ್ವ
ಶಕ್ತನೇ, ನಿನ್ನ ನ್ಯಾಯತೀರ್ಪುಗಳು ಸತ್ಯವೂ ನ್ಯಾಯವೂ
ಆಗಿವೆ ನಿಜ ಎಂದು ಹೇಳುವದನ್ನು ಕೇಳಿದೆನು.
ನಾಲ್ಕನೆಯವನು ತನ್ನ ಪಾತ್ರೆಯಲ್ಲಿದ್ದದ್ದನ್ನು 8
ಸೂರ್ಯನ ಮೇಲೆ ಹೊಯಿದನು; ಆಗ ಸೂರ್ಯನಿಗೆ
ಕಡುಬಿಸಿಲಿನಿಂದ ಮನುಷ್ಯರನ್ನು ಕಂದಿಸುವ ಶಕ್ತಿಯು
ಕೊಡಲ್ಪಟ್ಟಿತು. ಮನುಷ್ಯರು ಬಲವಾದ ಕಾವಿನಿಂದ 9
ಕಂದಿಹೋದರೂ ಅವರು ದೇವರನ್ನು ಘನಪಡಿಸುವ
ಹಾಗೆ ಮಾನಸಾಂತರಮಾಡಿಕೊಳ್ಳದೆ ಈ ಉಪದ್ರವ
ಗಳ ಮೇಲೆ ಅಧಿಕಾರವುಳ್ಳ ದೇವರ ನಾಮವನ್ನು
ದೂಷಿಸಿದರು.
ಐದನೆಯವನು ತನ್ನ ಪಾತ್ರೆಯಲ್ಲಿದ್ದದ್ದನ್ನು ಮೊದ 10
ಲನೆಯ ಮೃಗದ ಸಿಂಹಾಸನದ ಮೇಲ ಹೊಯ್ಯಲು
ಅದರ ರಾಜ್ಯವು ಕತ್ತಲಾಯಿತು. ಜನರು ತಮಗಾದ

1) ಮೂಲ: ಸಾವಿರದ ಆರುನೂರು ಸ್ತಾದ್ಯ. 2) ಕೆಲವು ಪ್ರತಿಗಳಲ್ಲಿ—ಸರ್ವಯುಗಗಳ ಎಂದು ಬರೆದದೆ.

ಕಷ್ಟದ ದೆಸೆಯಿಂದ ತಮ್ಮ ನಾಲಿಗೆಗಳನ್ನು ಕಚ್ಚಿಕೊಂಡು
11 ತಮ್ಮ ಕೃತ್ಯಗಳ ವಿಷಯದಲ್ಲಿ ಮಾನಸಾಂತರಮಾಡಿ
ಕೊಳ್ಳದೆ ತಮ್ಮ ಕಷ್ಟಗಳ ದೆಸೆಯಿಂದಲೂ ಹುಣ್ಣುಗಳ
ದೆಸೆಯಿಂದಲೂ ಪರಲೋಕದೇವರನ್ನು ದೂಷಿಸಿದರು.
12 ಆರನೆಯವನು ತನ್ನ ಪಾತ್ರೆಯಲ್ಲಿದ್ದದ್ದನ್ನು
ಯೂಫ್ರೇಟೀಸ್ ಎಂಬ ಮಹಾ ನದಿಯ ಮೇಲೆ
ಹೊಯ್ಯಲು ಅದರ ನೀರು ಇಂಗಿಹೋಯಿತು;
ಇದರಿಂದ ಮೂಡಣ ದಿಕ್ಕಿನಿಂದ ಬರುವ ರಾಜರಿಗೆ
13 ಮಾರ್ಗವು ಸಿದ್ಧವಾಯಿತು. ಮತ್ತು ಘಟಸರ್ಪ
ಮೃಗ ಸುಳ್ಳುಪ್ರವಾದಿ ಇವರ ಬಾಯಿಗಳಿಂದ
ಕಪ್ಪೆಗಳಂತಿದ್ದ ಮೂರು ಅಶುದ್ಧಾತ್ಮಗಳು ಬರು
14 ವದನ್ನು ಕಂಡೆನು. ಇವು ಮಹತ್ಕಾರ್ಯಗಳನ್ನು
ಮಾಡುವ ದೆವ್ವಗಳು; ಭೂಲೋಕದಲ್ಲೆಲ್ಲಿಯೂ
ಇರುವ ರಾಜರ ಬಳಿಗೆ ಹೋಗಿ ಸರ್ವಶಕ್ತನಾದ
ದೇವರ ಮಹಾ ದಿನದಲ್ಲಾಗುವ ಯುದ್ಧಕ್ಕೆ
15 ಅವರನ್ನು ಕೂಡಿಸುವವು. (ಇಗೋ, ಕಳ್ಳನು
ಬರುವಂತೆ ಬರುತ್ತೇನೆ; ತಾನು ನಿರ್ವಾಣನಾಗಿ ತಿರು
ಗಾಡಿ ಅವಮಾನಕ್ಕೆ ಗುರಿಯಾದೇನೆಂದು ಎಚ್ಚರ
ವಾಗಿದ್ದು ತನ್ನ ವಸ್ತ್ರಗಳನ್ನು ಕಾಪಾಡಿಕೊಳ್ಳುವವನು
16 ಧನ್ಯನು.) ಆ ದೆವ್ವಗಳು ಭೂರಾಜರನ್ನು ಇಬ್ರಿಯ
ಭಾಷೆಯಲ್ಲಿ 1)ಹರ್ಮಗೆದೋನ್ ಎಂಬ ಹೆಸರುಳ್ಳ
ಸ್ಥಳಕ್ಕೆ ಕೂಡಿಸಿದವು.
17 ಏಳನೆಯವನು ತನ್ನ ಪಾತ್ರೆಯಲ್ಲಿದ್ದದ್ದನ್ನು ವಾ
ಯುಮಂಡಲದ ಮೇಲೆ ಹೊಯ್ಯಲು ದೇವಾಲಯ
ದಲ್ಲಿರುವ ಸಿಂಹಾಸನದ ಕಡೆಯಿಂದ ಮಹಾ ಶಬ್ದವು
18 ಉಂಟಾಗಿ—ಆಯಿತು ಎಂದು ಹೇಳಿತು. ಆಗ
ಮಿಂಚುಗಳೂ ವಾಣಿಗಳೂ ಗುಡುಗುಗಳೂ ಉಂಟಾ
ದವು; ಇದಲ್ಲದೆ ಮಹಾ ಭೂಕಂಪವಾಯಿತು;
ಮನುಷ್ಯರು ಭೂಮಿಯ ಮೇಲೆ ಇದ್ದಂದಿನಿಂದ ಅಂಥ
19 ದೊಡ್ಡ ಭೂಕಂಪವಾಗಲಿಲ್ಲ. ಮಹಾ ಪಟ್ಟಣವು
ಮೂರು ಭಾಗವಾಯಿತು; ಜನಾಂಗಗಳ ಪಟ್ಟಣಗಳು
ಬಿದ್ದವು. ಇದಲ್ಲದೆ ದೇವರು ದೊಡ್ಡ ಬಾಬೆಲನ್ನು
ಜ್ಞಾಪಿಸಿಕೊಂಡು ತನ್ನ ಉಗ್ರಕೋಪವೆಂಬ ದ್ರಾಕ್ಷಾ
ರಸದಪಾತ್ರೆಯನ್ನು ಅವಳಿಗೆ ಕುಡಿಯ ಕೊಟ್ಟನು.
20 ಆಗ ದ್ವೀಪಗಳೆಲ್ಲಾ ಓಡಿಹೋದವು; ಬೆಟ್ಟಗಳು
21 ಸಿಕ್ಕದೆ ಹೋದವು. ಮತ್ತು ಆಕಾಶದಿಂದ ಮನುಷ್ಯರ
ಮೇಲೆ ದೊಡ್ಡ ಆನೇಕಲ್ಲಿನ ಮಳೆ ಸುರಿಯಿತು;
ಒಂದೊಂದು ಕಲ್ಲು ಹೆಚ್ಚುಕಡಿಮೆ 2)ನಾಲ್ಕು ಮಣ
ತೂಕವಾಗಿತ್ತು. ಆ ಆನೇಕಲ್ಲಿನ ಮಳೆಯ ಕಾಟವು
ಬಹಳ ಹೆಚ್ಚಾಗಿದ್ದದರಿಂದ ಆ ಮಳೆಯಲ್ಲಿ ಸಿಕ್ಕಿಕೊಂಡ
ಮನುಷ್ಯರು ದೇವರನ್ನು ದೂಷಿಸಿದರು.

VIII. ಕ್ರಿಸ್ತವಿರೋಧಿಗಳ ನಾಶವನ್ನು ಕುರಿತದ್ದು.

1. ಬಾಬೆಲೆಂಬ ಜಾರಸ್ತ್ರೀಯ ನಾಶವು.

17 ಏಳು ಪಾತ್ರೆಗಳನ್ನು ಹಿಡಿದಿದ್ದ ಏಳು ಮಂದಿ
ದೇವದೂತರಲ್ಲಿ ಒಬ್ಬನು ಬಂದು ನನ್ನ ಸಂಗಡ
ಮಾತಾಡಿ—ಬಾ, ಬಹಳ ನೀರುಗಳ ಮೇಲೆ ವಾಸಿ
ಸಿರುವ ಮಹಾ ಜಾರಸ್ತ್ರೀಗೆ ಬರುವ ದಂಡನೆಯನ್ನು
ನಿನಗೆ ತೋರಿಸುತ್ತೇನೆ; 3)ಅವಳೊಂದಿಗೆ ಭೂರಾಜರು
4)ಜಾರತ್ವ ಮಾಡಿದರು, ಮತ್ತು ಭೂನಿವಾಸಿಗಳು
ಅವಳ ಜಾರತ್ವವೆಂಬ ದ್ರಾಕ್ಷಾರಸವನ್ನು ಕುಡಿದು
ಮತ್ತರಾದರು ಎಂದು ಹೇಳಿದನು. ಆಗ ಅವನು
ದೇವರಾತ್ಮವಶನಾದ ನನ್ನನ್ನು ಎತ್ತಿಕೊಂಡು ಅಡ
ವಿಗೆ ಹೋದನು. ಅಲ್ಲಿ ನಾನು ರಕ್ತವರ್ಣದ ಮೃಗದ
ಮೇಲೆ ಕೂತಿದ್ದ ಒಬ್ಬ ಸ್ತ್ರೀಯನ್ನು ಕಂಡೆನು, ಆ
ಮೃಗದ ಮೈಮೇಲೆಲ್ಲಾ ದೇವದೂಷಣೆಯ ಹೆಸರು
ಗಳು ತುಂಬಿದ್ದವು. ಅದಕ್ಕೆ ಏಳು ತಲೆಗಳೂ ಹತ್ತು
ಕೊಂಬುಗಳೂ ಇದ್ದವು. ಆ ಸ್ತ್ರೀಯು ಧೂಮ್ರ
ವರ್ಣದ ವಸ್ತ್ರಗಳನ್ನೂ ರಕ್ತಾಂಬರವನ್ನೂ ಧರಿಸಿ
ಕೊಂಡು ಚಿನ್ನ ರತ್ನ ಮುತ್ತು ಇವುಗಳಿಂದ ಅಲಂಕರಿಸಿ
ಕೊಂಡಿದ್ದಳು; ಅವಳ ಕೈಯಲ್ಲಿ ಒಂದು ಚಿನ್ನದ
ಬಟ್ಟಲು ಇತ್ತು; ಅದು ಅಸಹ್ಯವಾದವುಗಳಿಂದ ಅಂದರೆ
ಅವಳ ಜಾರತ್ವಸಂಬಂಧವಾದ ಅಶುದ್ಧ ವಸ್ತುಗಳಿಂದ
ತುಂಬಿತ್ತು. ಅವಳ ಹಣೆಯ ಮೇಲೆ—

ಬಾಬೆಲೆಂಬ ಮಹಾ ನಗರಿ,
ಭೂಮಿಯಲ್ಲಿರುವ ಜಾರಸ್ತ್ರೀಯರಿಗೂ ಅಸಹ್ಯ
ವಾದ ಕಾರ್ಯಗಳಿಗೂ ತಾಯಿ

ಎಂದು ಗೂಢಾರ್ಥವುಳ್ಳ ಹೆಸರು ಬರೆದಿತ್ತು. ಆ
ಸ್ತ್ರೀಯು ದೇವಜನರ ರಕ್ತವನ್ನೂ ಯೇಸುವಿಗೋಸ್ಕರ
ಸಾಕ್ಷಿಕೊಟ್ಟು ಹತರಾದವರ ರಕ್ತವನ್ನೂ ಕುಡಿದು
ಮತ್ತಳಾಗಿರುವದನ್ನು ಕಂಡೆನು. ನಾನು ಅವಳನ್ನು
ನೋಡಿ ಅತ್ಯಾಶ್ಚರ್ಯಪಟ್ಟೆನು. ಆಗ ಆ ದೇವದೂತನು
ನನಗೆ ಹೇಳಿದ್ದು—ನೀನೇಕೆ ಆಶ್ಚರ್ಯಪಟ್ಟೆ? ಆ ಸ್ತ್ರೀ
ಯಿಂದಲೂ ಅವಳ ವಾಹನವಾಗಿದ್ದ ಏಳು ತಲೆಗಳೂ
ಹತ್ತು ಕೊಂಬುಗಳೂ ಉಳ್ಳ ಮೃಗದಿಂದಲೂ ಸೂಚಿತ
ವಾದ ಗೂಢಾರ್ಥವನ್ನು ನಾನು ನಿನಗೆ ವಿವರಿಸು
ತ್ತೇನೆ. ನೀನು ಕಂಡ ಈ ಮೃಗವು ಮೊದಲು ಇತ್ತು.
ಈಗ ಇಲ್ಲ, ಮತ್ತು ಅಧೋಲೋಕದಿಂದ ಏರಿ
ಬಂದು ನಾಶಕ್ಕೆ ಹೋಗುವದು. ಭೂನಿವಾಸಿಗಳೊಳಗೆ
ಯಾರಾರ ಹೆಸರುಗಳು ಲೋಕಾದಿಯಿಂದ ಜೀವಬಾ
ಧ್ಯರ ಪಟ್ಟಿಯಲ್ಲಿ ಬರೆದಿರುವದಿಲ್ಲವೋ ಅವರು ಈ
ಮೃಗವನ್ನು ನೋಡಿ ಇದು ಮೊದಲು ಇತ್ತು, ಈಗ
ಇಲ್ಲ, ಇನ್ನು ಮೇಲೆ ಬರುವದು ಎಂದು ತಿಳಿದು ಆಶ್ಚ
ರ್ಯಪಡುವರು. ಇದು ಬುದ್ಧಿವಂತನಿಗೆ ಮಾತ್ರ ಗೊ
ತ್ತಾಗುವದು. ಆ ಏಳು ತಲೆಗಳು ಆ ಸ್ತ್ರೀ ಕೂತುಕೊಂಡಿ
ರುವ ಏಳು ಬೆಟ್ಟಗಳೇ; 5)ಇದಲ್ಲದೆ ಅವು ಏಳು
ಮಂದಿ ಅರಸುಗಳನ್ನು ಸೂಚಿಸುತ್ತವೆ; ಅವರಲ್ಲಿ ಐದು
ಮಂದಿ ಬಿದ್ದುಹೋಗಿದ್ದಾರೆ, ಒಬ್ಬನು ಇದ್ದಾನೆ, ಮತ್ತೊ
ಬ್ಬನು ಇನ್ನೂ ಬಂದಿಲ್ಲ. ಬಂದ ಮೇಲೆ ಅವನು ಸ್ವಲ್ಪ
ಕಾಲ ಇರಬೇಕು. ಮೊದಲಿದ್ದು ಈಗ ಇಲ್ಲದಿರುವ ಆ
ಮೃಗವು ತಾನೇ ಎಂಟನೆಯ ಅರಸು; ಅವನು ಆ ಏಳು
ಮಂದಿ ಅರಸುಗಳಿಗೆ ಸೇರಿದವನು; ನಾಶಕ್ಕೆ ಹೋಗು
ವನು. ನೀನು ಕಂಡ ಆ ಹತ್ತು ಕೊಂಬುಗಳು

1) ಅಂದರೆ, ಮೆಗಿದ್ದೋ ಬೆಟ್ಟ. 2) ಮೂಲ: ಒಂದು ತಲಾಂತು. 3) ಅಥವಾ, ಅವಳ ದುಷ್ಕಾರ್ಯವನ್ನು ನೊ
4) ಅಂದರೆ, ದೇವದ್ರೋಹ. 5) ಅಥವಾ, ಇದಲ್ಲದೆ ಏಳು ಮಂದಿ ಅರಸುಗಳಿದ್ದಾರೆ.

ಅಂದರೆ ರಾಜ್ಯವನ್ನು ಇನ್ನೂ ಹೊಂದದಿರುವ ಹತ್ತು
ಮಂದಿ ಅರಸುಗಳು. ಅವರು ಒಂದು ಗಳಿಗೆಯ
ವರೆಗೆ ರಾಜರಂತೆ ಆಳುವ ಅಧಿಕಾರವನ್ನು ಮೃಗ
13 ದೊಂದಿಗೆ ಹೊಂದುತ್ತಾರೆ. ಅವರು ಒಂದೇ ಅಭಿ
ಪ್ರಾಯವುಳ್ಳವರಾಗಿದ್ದು ತಮ್ಮ ಶಕ್ತಿಯನ್ನೂ ಅಧಿ
14 ಕಾರವನ್ನೂ ಮೃಗಕ್ಕೆ ಕೊಡುತ್ತಾರೆ. ಅವರು
ಯಜ್ಞದ ಕುರಿಯಾದಾತನ ಮೇಲೆ ಯುದ್ಧಮಾಡು
ವರು, ಆದರೆ ಆತನು ಕರ್ತರ ಕರ್ತನೂ ರಾಜಾಧಿ
ರಾಜನೂ ಆಗಿರುವದರಿಂದ ಅವರನ್ನು ಜಯಿಸು
ವನು; ಮತ್ತು ದೇವರು ಕರೆದವರೂ ದೇವರಾದು
ಕೊಂಡವರೂ ನಂಬಿಗಸ್ತರೂ ಆಗಿರುವ ಆತನ ಕಡೆ
ಯವರು ಆ ಜಯದಲ್ಲಿ ಪಾಲುಗಾರರಾಗುವರು.
15 ಇನ್ನೂ ಆ ದೇವದೂತನು ನನಗೆ ಹೇಳಿದ್ದು—
ಆ ಜಾರಸ್ತ್ರೀಯು ವಾಸಿಸಿರುವ ನೀರುಗಳನ್ನು ಕಂಡಿ
ಯಲ್ಲ? ಅವು ಪ್ರಜೆ ಸಮೂಹ ಜನ ಭಾಷೆಗಳನ್ನು
16 ಸೂಚಿಸುತ್ತವೆ. ಇದಲ್ಲದೆ ಹತ್ತು ಕೊಂಬುಗಳನ್ನೂ
ಮೃಗವನ್ನೂ ಕಂಡಿಯಲ್ಲ? ಇವುಗಳಿಂದ ಸೂಚಿತರಾ
ದವರು ಆ ಜಾರಸ್ತ್ರೀಯನ್ನು ದ್ವೇಷಿಸಿ ಅವಳನ್ನು ಗತಿ
ಗೆಟ್ಟವಳನ್ನಾಗಿಯೂ ಬಟ್ಟೆಯಿಲ್ಲದವಳನ್ನಾಗಿಯೂ
ಮಾಡಿ ಅವಳ ಮಾಂಸವನ್ನು ತಿಂದು ಅವಳನ್ನು
17 ಬೆಂಕಿಯಿಂದ ಸುಟ್ಟುಬಿಡುವರು. ಯಾಕಂದರೆ ಅವರು
ದೇವರ ಅಭಿಪ್ರಾಯವನ್ನು ನೆರವೇರಿಸುವದಕ್ಕೂ ಒಂದೇ
ಅಭಿಪ್ರಾಯವುಳ್ಳವರಾಗಿದ್ದು ತಮ್ಮ ರಾಜ್ಯವನ್ನು
ಮೃಗಕ್ಕೆ ಕೊಡುವದಕ್ಕೂ ದೇವರು ತನ್ನ ವಚನವು
ನೆರವೇರುವ ತನಕ ಅವರ ಹೃದಯಗಳನ್ನು ಪ್ರೇರಿಸಿ
18 ದನು. ನೀನು ಕಂಡ ಆ ಸ್ತ್ರೀಯು ಭೂರಾಜರ ಮೇಲೆ
ಅಧಿಕಾರ ಹೊಂದಿರುವ ಮಹಾ ನಗರಿಯೇ.

ಬಾಬೆಲ್ ಪಟ್ಟಣದ ನಾಶದಿಂದ ಮನುಷ್ಯರೊಳಗೆ ಉಂಟಾದ ಗೋಳಾಟವನ್ನು ಕುರಿತದ್ದು.

**18** ಇದಾದ ಮೇಲೆ ಮಹಾ ಅಧಿಕಾರವುಳ್ಳ
ಮತ್ತೊಬ್ಬ ದೇವದೂತನು ಪರಲೋಕದಿಂದ ಇಳಿ
ಯುವದನ್ನು ಕಂಡೆನು; ಅವನ ಪ್ರಭಾವದಿಂದ
2 ಭೂಮಿಗೆ ಪ್ರಕಾಶವುಂಟಾಯಿತು. ಅವನು ಗಟ್ಟಿ
ಯಾದ ಶಬ್ದದಿಂದ ಕೂಗುತ್ತಾ—
ಬಿದ್ದಳು, ಬಿದ್ದಳು, ಬಾಬೆಲೆಂಬ ಮಹಾ ನಗ
ರಿಯು ಬಿದ್ದಳು;
ದೆವ್ವಗಳ ವಾಸಸ್ಥಾನವೂ ಅಶುದ್ಧಾತ್ಮಗಳ ಆಶ್ರ
ಯವೂ
ಅಪವಿತ್ರವಾಗಿಯೂ ಅಸಹ್ಯವಾಗಿಯೂ ಇರುವ
ಸಕಲ ವಿಧವಾದ ಪಕ್ಷಿಗಳ ಆಶ್ರಯವೂ
ಆದಳು.
3 ಎಲ್ಲಾ ಜನಾಂಗಗಳು ಅವಳ ಅತಿಜಾರತ್ವವೆಂಬ
ದ್ರಾಕ್ಷಾರಸವನ್ನು ಕುಡಿದರು;
1)ಅವಳೊಂದಿಗೆ ಭೂರಾಜರು ಜಾರತ್ವಮಾಡಿ
ದರು;
ಅವಳು ಸುಖಭೋಗಿನಿಯಾಗಿದ್ದದರಿಂದ ಭೂ
ಲೋಕದ ವರ್ತಕರು ಐಶ್ವರ್ಯವಂತ
ರಾದರು
ಎಂದು ಹೇಳಿದನು.
ಪರಲೋಕದಿಂದ ಬಂದ ಮತ್ತೊಂದು ಶಬ್ದವನ್ನು 4
ಕೇಳಿದೆನು; ಅದು ಹೇಳಿದ್ದೇನಂದರೆ—ನನ್ನ ಪ್ರಜೆಗಳೇ,
ಅವಳನ್ನು ಬಿಟ್ಟುಬನ್ನಿರಿ; ನೀವು ಅವಳ ಪಾಪಗಳಲ್ಲಿ
ಪಾಲುಗಾರರಾಗಬಾರದು; ಅವಳಿಗಾಗುವ ಉಪದ್ರವ
ಗಳಿಗೆ ಗುರಿಯಾಗಬಾರದು. ಅವಳ ಪಾಪಗಳು ಒಂದ 5
ರ ಮೇಲೊಂದು ಸೇರಿ ಆಕಾಶದ ಪರ್ಯಂತರಕ್ಕೂ
ಬೆಳೆದವೆ. ದೇವರು ಅವಳ ಅನ್ಯಾಯಗಳನ್ನು
ಜ್ಞಾಪಿಸಿಕೊಂಡನು. ಇತರರಿಗೆ ಅವಳು ಮಾಡಿದ 6
ಪ್ರಕಾರ ಅವಳಿಗೆ ಮಾಡಿರಿ; ಅವಳ ಕೃತ್ಯಗಳಿಗೆ ಸರಿ
ಯಾಗಿ ಅವಳಿಗೆ ಎರಡಷ್ಟು ಕೊಡಿರಿ; ಅವಳು ಕಲ
ಸಿದ ಪಾತ್ರೆಯಲ್ಲಿ ಅವಳಿಗೆ ಎರಡಷ್ಟು ಕಲಸಿಕೊಡಿರಿ.
ಅವಳು ಎಷ್ಟು ಮಟ್ಟಿಗೆ ತನ್ನನ್ನು ಘನಪಡಿಸಿಕೊಂಡು 7
ಭೋಗಿನಿಯಾಗಿದ್ದಾಳೋ ಅಷ್ಟು ಮಟ್ಟಿಗೆ ಅವಳಿಗೆ
ಯಾತನೆಯನ್ನೂ ದುಃಖವನ್ನೂ ಕೊಡಿರಿ. ಅವಳು
ತನ್ನ ಹೃದಯದಲ್ಲಿ—ನಾನು ರಾಣಿಯಾಗಿ ಕೂತು
ಕೊಂಡಿದ್ದೇನೆ, ನಾನು ವಿಧವೆಯಲ್ಲ, ದುಃಖವನ್ನು
ಕಾಣುವದೇ ಇಲ್ಲ ಎಂದು ಹೇಳಿಕೊಳ್ಳುವದರಿಂದ ಅವ 8
ಳಿಗೆ ಕೊಲೆ ದುಃಖ ಕ್ಷಾಮ ಎಂಬೀ ಉಪದ್ರವಗಳು
ಒಂದೇ ದಿನದಲ್ಲಿ ಸಂಭವಿಸುವವು; ಅವಳು ಬೆಂಕಿ
ಯಿಂದ ಸುಟ್ಟುಹೋಗುವಳು; ಅವಳಿಗೆ ದಂಡನೆ
ಯನ್ನು ವಿಧಿಸಿದ ದೇವರಾಗಿರುವ ಕರ್ತನು ಬಲಿಷ್ಠ
ನಾಗಿದ್ದಾನೆ. ಅವಳೊಂದಿಗೆ ಜಾರತ್ವಮಾಡಿ ಭೋಗಿ 9
ಗಳಾಗಿ ಬದುಕಿದ ಭೂರಾಜರು ಅವಳ ದಹನದಿಂದೇ
ರುವ ಹೊಗೆಯನ್ನು ನೋಡುವಾಗ ಅವಳ ಯಾತ
ನೆಯ ದೆಸೆಯಿಂದ ಭಯಪಟ್ಟು ದೂರದಲ್ಲಿ ನಿಂತು
ಗೋಳಾಡುತ್ತಾ ಎದೆ ಬಡುಕೊಳ್ಳುತ್ತಾ—ಅಯ್ಯೋ, 10
ಅಯ್ಯೋ, ಮಹಾ ಪಟ್ಟಣವೇ, ಬಾಬೆಲೇ, ಬಲಿಷ್ಠ
ವಾದ ನಗರಿಯೇ, ನಿನಗೆ ವಿಧಿಸಲ್ಪಟ್ಟ ದಂಡನೆಯು
ಒಂದೇ ಗಳಿಗೆಯಲ್ಲಿ ಬಂತಲ್ಲಾ ಎಂದು ಹೇಳುವರು.
ಇದಲ್ಲದೆ ಭೂಲೋಕದ ವರ್ತಕರು ಅವಳ ನಿಮಿತ್ತ 11
ವಾಗಿ ಅತ್ತು ಗೋಳಾಡುತ್ತಾ—ನಮ್ಮ ಹಡಗುಗಳ
ಸರಕುಗಳನ್ನು ಕೊಂಡುಕೊಳ್ಳುವವರು ಇನ್ನು ಇಲ್ಲ
ವಲ್ಲಾ. ಚಿನ್ನ, ಬೆಳ್ಳಿ, ರತ್ನ, ಮುತ್ತು, ನಯವಾದ 12
ನಾರುಮಡಿ, ಧೂಮ್ರವರ್ಣದ ವಸ್ತ್ರ, ರೇಶಿಮೆ, ರಕ್ತಾಂಬ
ರ, ಸಕಲ ವಿಧವಾದ ಅಗಿಲುಮರ, ಸಕಲ ವಿಧವಾದ
ಜಂತದ ಸಾಮಾನು, ಬಹು ಬೆಲೆಯುಳ್ಳ ಮರ, ತಾಮ್ರ,
ಕಬ್ಬಿಣ, ಚಂದ್ರಕಾಂತ ಶಿಲೆ ಇವುಗಳಿಂದ ಮಾಡಿದ
ಸಕಲ ವಿಧವಾದ ಪಾತ್ರೆ, ಲವಂಗಚೆಕ್ಕೆ, ರಕ್ತಬಾಳ,
ಧೂಪ, ಸುಗಂಧತೈಲ, ಸಾಂಬ್ರಾಣಿ, ದ್ರಾಕ್ಷಾರಸ, 13
ಎಣ್ಣೆ, ನಯವಾದ ಹಿಟ್ಟು, ಗೋಧಿ, ದನ, ಕುರಿ,
ಕುದುರೆ, ರಥ, ಗುಲಾಮ, ಮಾನುಷಪ್ರಾಣ ಇವೇ
ಮೊದಲಾದ ನಮ್ಮ ಸರಕುಗಳನ್ನು ಕೊಂಡುಕೊಳ್ಳು
ವವರು ಯಾರೂ ಇಲ್ಲವಲ್ಲಾ ಎಂದು ಹೇಳಿಕೊಳ್ಳುತ್ತಾ
ದುಃಖಿಸುವರು. ಬಾಬೆಲೇ, ನಿನ್ನ ಜೀವವು ಅಪೇಕ್ಷಿಸಿದ 14
ಹಣ್ಣುಹಂಪಲಗಳು ನಿನ್ನನ್ನು ಬಿಟ್ಟುಹೋದವು; ಸೊಗ

1) ಅಥವಾ, ಅವಳ ದುಶ್ಚರ್ಯವನ್ನು ನೋಡಿ.

ಸಾಗಿಯೂ ಶೋಭಾಯಮಾನವಾಗಿಯೂ ಇರುವ
ದೆಲ್ಲವೂ ನಾಶವಾಗಿ ನಿನ್ನನ್ನು ಬಿಟ್ಟುಬಿಟ್ಟವು. ಅವು
15 ಇನ್ನು ಮೇಲೆ ಜನರಿಗೆ ಸಿಕ್ಕುವದೇ ಇಲ್ಲ. ಆ
ಸರಕುಗಳನ್ನು ಮಾರಿ ಅವಳಿಂದ ಐಶ್ವರ್ಯವಂತರಾದ
ವರ್ತಕರು ಅವಳ ಯಾತನೆಯನ್ನು ನೋಡಿ ಭಯ
ಪಟ್ಟು ದೂರದಲ್ಲಿ ನಿಂತು ಗೋಳಾಡುತ್ತಾ ದುಃಖಿ
16 ಸುತ್ತಾ—ಅಯ್ಯೋ, ಅಯ್ಯೋ, ನಯವಾದ ನಾರು
ಮಡಿಯನ್ನೂ ಧೂಮ್ರವರ್ಣದ ವಸ್ತ್ರಗಳನ್ನೂ ರಕ್ತಾಂಬ
ರವನ್ನೂ ಧರಿಸಿಕೊಂಡು ಚಿನ್ನ ರತ್ನ ಮುತ್ತು ಇವು
ಗಳಿಂದ ತನ್ನನ್ನು ಅಲಂಕರಿಸಿಕೊಂಡಿದ್ದ ಈ ಮಹಾ
17 ಪಟ್ಟಣಕ್ಕೆ ಏನು ದುರ್ಗತಿ ಸಂಭವಿಸಿತು. ಅಷ್ಟು ಐಶ್ವ
ರ್ಯವು ಒಂದೇ ಗಳಿಗೆಯಲ್ಲಿ ನಾಶವಾಯಿತಲ್ಲಾ
ಎಂದು ಹಂಬಲಿಸುವರು. ಇದಲ್ಲದೆ ಹಡಗುಗಳ
ಯಜಮಾನರೂ ಸಮುದ್ರಪ್ರಯಾಣಮಾಡುವವರೂ
ನಾವಿಕರೂ ಸಮುದ್ರದ ಮೇಲೆ ಕೆಲಸವನ್ನು ನಡಿಸಿ
18 ಜೀವನಮಾಡುವವರೆಲ್ಲರೂ ದೂರದಲ್ಲಿ ನಿಂತು ಅವಳ
ದಹನದಿಂದೇರುವ ಹೊಗೆಯನ್ನು ನೋಡುತ್ತಾ—ಈ
ಮಹಾ ಪಟ್ಟಣಕ್ಕೆ ಸಮಾನವಾದದ್ದು ಯಾವದು
19 ಎಂದು ಕೂಗಿ ಹೇಳಿದರು. ಆಗ ಅವರು ತಮ್ಮ ತಲೆ
ಗಳ ಮೇಲೆ ಮಣ್ಣನ್ನು ಹೊಯಿದುಕೊಂಡು ಅಳುತ್ತಾ
ಗೋಳಾಡುತ್ತಾ—ಅಯ್ಯೋ, ಅಯ್ಯೋ, ಸಮುದ್ರದ
ಮೇಲೆ ಹಡಗುಳ್ಳವರೆಲ್ಲರನ್ನು ತನ್ನ ಅಮೂಲ್ಯ
ದ್ರವ್ಯಗಳಿಂದ ಐಶ್ವರ್ಯವಂತರನ್ನಾಗಿ ಮಾಡಿದ ಈ
ಮಹಾ ಪಟ್ಟಣಕ್ಕೆ ಎಂಥಾ ಗತಿ ಬಂತು; ಇವಳು
ಒಂದೇ ಗಳಿಗೆಯಲ್ಲಿ ಹಾಳಾದಳಲ್ಲಾ ಎಂದು ಕೂಗಿ
20 ಹೇಳಿದರು. ಪರಲೋಕವೇ, ಆನಂದಪಡು; ದೇವ
ಜನರೇ, ಅಪೊಸ್ತಲರೇ, ಪ್ರವಾದಿಗಳೇ, ಇವಳು ನಿಮಗೆ
ಅನ್ಯಾಯಮಾಡಿದ್ದಕ್ಕಾಗಿ ದೇವರು ಇವಳಿಗೆ ಪ್ರತಿ
ದಂಡನೆಯನ್ನು ಮಾಡಿದ್ದರಿಂದ ಆನಂದಪಡಿರಿ ಎಂದು
ಆ ಶಬ್ದ ಹೇಳಿತು.
21 ಆಗ ಬಲಿಷ್ಠನಾದ ಒಬ್ಬ ದೇವದೂತನು ದೊಡ್ಡ
ಬೀಸುವ ಕಲ್ಲಿನಂತಿರುವ ಒಂದು ಕಲ್ಲನ್ನು ಎತ್ತಿ
ಸಮುದ್ರದೊಳಗೆ ಹಾಕಿ—ಮಹಾ ಪಟ್ಟಣವಾದ
ಬಾಬೆಲು ಹೀಗೆಯೇ ದಢದಢನೆ ಕೆಡವಲ್ಪಟ್ಟು ಇನ್ನೆಂದಿ
22 ಗೂ ಕಾಣಿಸುವದಿಲ್ಲ. ಬಾಬೆಲೇ, ನಿನ್ನಲ್ಲಿ ವೀಣೆ
ಗಾರರೂ ವಾದ್ಯಗಾರರೂ ಕೊಳಲೂದುವವರೂ ತುತೂ
ರಿಯವರೂ ಮಾಡುವ ಧ್ವನಿಯು ಇನ್ನೆಂದಿಗೂ ಕೇಳಿ
ಸುವದಿಲ್ಲ. ಯಾವ ವಿಧವಾದ ಕೈಗಾರಿಕೆಯನ್ನು
ಮಾಡುವವರು ನಿನ್ನಲ್ಲಿ ಇನ್ನೆಂದಿಗೂ ಸಿಕ್ಕುವದಿಲ್ಲ.
ಬೀಸುವ ಕಲ್ಲಿನ ಶಬ್ದವು ನಿನ್ನಲ್ಲಿ ಇನ್ನೆಂದಿಗೂ ಕೇಳಿ
23 ಸುವದಿಲ್ಲ. ದೀಪದ ಬೆಳಕು ನಿನ್ನಲ್ಲಿ ಇನ್ನೆಂದಿಗೂ
ಕಾಣಿಸುವದಿಲ್ಲ. ವಧೂವರರ ಸ್ವರವು ನಿನ್ನಲ್ಲಿ
ಇನ್ನೆಂದಿಗೂ ಕೇಳಿಸುವದಿಲ್ಲ. ನಿನ್ನ ವರ್ತಕರು
ಭೂಮಿಯ ಪ್ರಭುಗಳಾಗಿದ್ದರಲ್ಲವೇ. ನಿನ್ನ ಮಾಟ
24 ದಿಂದ ಎಲ್ಲಾ ಜನಾಂಗದವರು ಮರುಳಾದರು. ಪ್ರವಾ
ದಿಗಳ ರಕ್ತವೂ ದೇವಜನರ ರಕ್ತವೂ ಭೂಮಿಯ ಮೇಲೆ
ಕೊಲ್ಲಲ್ಪಟ್ಟವರೆಲ್ಲರ ರಕ್ತವೂ 1)ನಿನ್ನಲ್ಲಿ ಸಿಕ್ಕಿತು
ಎಂದು ಹೇಳಿದನು.

ಬಾಬೆಲ್ ಪಟ್ಟಣವು ಬಿದ್ದದ್ದಕ್ಕೆ ಪರಲೋಕದಲ್ಲಿ ಉಂಟಾದ ಹರ್ಷವನ್ನು ಕುರಿತದ್ದು.

ಇದಾದ ಮೇಲೆ ಪರಲೋಕದಲ್ಲಿ ದೊಡ್ಡ 1
ಗುಂಪಿನ ಮಹಾ ಶಬ್ದವೋ ಎಂಬಂತೆ ಒಂದು ಶಬ್ದ
ವನ್ನು ಕೇಳಿದೆನು. ಅವರು—

೨)ಹಲ್ಲೆಲೂಯಾ.
೩)ಜಯವೂ ಪ್ರಭಾವವೂ ಶಕ್ತಿಯೂ ನಮ್ಮ
ದೇವರಲ್ಲಿ ಉಂಟು;
ಆತನ ನ್ಯಾಯತೀರ್ಪುಗಳು ಸತ್ಯವೂ ನ್ಯಾಯ
ವೂ ಆಗಿವೆ,
ತನ್ನ ಜಾರತ್ವದಿಂದ ಭೂಲೋಕವನ್ನು ಕೆಡಿಸು
ತ್ತಿದ್ದ
ಆ ಮಹಾ ಜಾರಸ್ತ್ರೀಗೆ ಆತನು ನ್ಯಾಯ
ತೀರಿಸಿ
ಅವಳು ಆತನ ಸೇವಕರನ್ನು ಕೊಂದದ್ದಕ್ಕಾಗಿ
ಅವಳಿಗೆ ಪ್ರತಿದಂಡನೆಯನ್ನು ಮಾಡಿದ್ದಾನೆ

ಎಂದು ಹೇಳಿ ಎರಡನೆಯ ಸಾರಿ—ಹಲ್ಲೆಲೂಯಾ
ಎಂದು ಆರ್ಭಟಿಸಿ—

ಅವಳ ದಹನದಿಂದುಂಟಾದ ಹೊಗೆಯು
ಯುಗಯುಗಾಂತರಗಳಲ್ಲಿಯೂ ಏರಿಹೋ
ಗುತ್ತದೆ

ಎಂದು ಹೇಳಿದರು. ಆಗ ಇಪ್ಪತ್ತುನಾಲ್ಕು ಮಂದಿ ಹಿರಿ
ಯರೂ ಆ ನಾಲ್ಕು ಜೀವಿಗಳೂ ಅಡ್ಡಬಿದ್ದು ಸಿಂಹಾಸ
ನದ ಮೇಲೆ ಕೂತಿರುವ ದೇವರಿಗೆ ನಮಸ್ಕಾರಮಾಡಿ—
ಆಮೆನ್; ಹಲ್ಲೆಲೂಯಾ, ಅಂದರು.

ಸಭೆಯೆಂಬ ಕನ್ಯೆಯನ್ನೂ ರಾಜಾಧಿರಾಜರನ್ನೂ ಕುರಿತದ್ದು.

ಆ ಮೇಲೆ ಸಿಂಹಾಸನದ ಕಡೆಯಿಂದ ಬಂದ ಒಂದು
ಶಬ್ದವು—

ದೇವರ ದಾಸರೆಲ್ಲರೇ, ದೇವರಿಗೆ ಭಯಪಡುವ
ಹಿರಿಕಿರಿಯರೇ,
ನಮ್ಮ ದೇವರನ್ನು ಕೊಂಡಾಡಿರಿ

ಎಂದು ಹೇಳಿತು. ತರುವಾಯ ಜನರ ದೊಡ್ಡ
ಗುಂಪಿನ ಶಬ್ದದಂತೆಯೂ ಜಲಪ್ರವಾಹಘೋಷದಂತೆ
ಯೂ ಗಟ್ಟಿಯಾದ ಗುಡುಗಿನ ಶಬ್ದದಂತೆಯೂ ಇದ್ದ
ಒಂದು ಶಬ್ದವನ್ನು ಕೇಳಿದೆನು. ಅದು—

ಹಲ್ಲೆಲೂಯಾ;
ಸರ್ವಶಕ್ತನಾಗಿರುವ ನಮ್ಮ ದೇವರಾದ ಕರ್ತನು
ಆಳುತ್ತಾನೆ;
ಯಜ್ಞದ ಕುರಿಯಾದಾತನ ವಿವಾಹಕಾಲವು
ಬಂತು;
ಆತನಿಗೆ ವಿವಾಹವಾಗುವ ಕನ್ಯೆ ತನ್ನನ್ನು
ಸಿದ್ಧಮಾಡಿಕೊಂಡಿದ್ದಾಳೆ;
ಸಂತೋಷಪಡೋಣ, ಹರ್ಷಗೊಳ್ಳೋಣ, ಆತ
ನನ್ನು ಘನಪಡಿಸೋಣ

1) ಮೂಲ: ಅವಳಲ್ಲಿ. 2) ಅಂದರೆ, ಕರ್ತನನ್ನು ಸ್ತುತಿಸಿರಿ, 3) ಅಥವಾ, ರಕ್ಷಣೆಯೂ.

8 ಎಂದು ಹೇಳಿತು. ಪ್ರಕಾಶಮಾನವೂ ನಿರ್ಮಲವೂ
ಆದ ನಯವಾದ ನಾರುಮಡಿಯನ್ನು ಧರಿಸಿಕೊಳ್ಳುವ
ದಕ್ಕೆ ಆಕೆಗೆ ಅನುಗ್ರಹಿಸೋಣವಾಗಿತ್ತು. ಆ ನಾರು
9 ಮಡಿ ಅಂದರೆ ದೇವಜನರ ಸತ್ಕಾರ್ಯಗಳೇ. ಇದ
ಲ್ಲದೆ ಅವನು ನನ್ನ ಸಂಗಡ ಮಾತಾಡುತ್ತಾ—ಯ
ಜ್ಞದ ಕುರಿಯಾದಾತನ ವಿವಾಹದ ಔತಣಕ್ಕೆ ಕರಸಿ
ಕೊಂಡವರು ಧನ್ಯರು ಎಂಬದಾಗಿ ಬರೆ ಎಂದು ನನಗೆ
ಹೇಳಿ—ಈ ಮಾತುಗಳು ದೇವರ ಸತ್ಯವಚನಗಳಾ
10 ಗಿವೆ, ಅಂದನು. ಆಗ ನಾನು ಅವನಿಗೆ ನಮಸ್ಕಾರ
ಮಾಡಬೇಕೆಂದು ಅವನ ಪಾದಗಳ ಮುಂದೆ ಬೀಳಲು
ಅವನು—ಮಾಡಬೇಡ ನೋಡು, ನಾನು ನಿನಗೂ
ಯೇಸುವಿನ ವಿಷಯವಾದ ಸಾಕ್ಷಿಯನ್ನು ಹೇಳಿರುವ
ನಿನ್ನ ಸಹೋದರರಿಗೂ ಜೊತೆಯ ದಾಸನಾಗಿದ್ದೇನೆ;
ದೇವರಿಗೇ 1)ನಮಸ್ಕಾರಮಾಡು ಅಂದನು. ಯೇಸು
ವಿನ ವಿಷಯವಾದ ಸಾಕ್ಷಿಯು ಪ್ರವಾದನೆಯ ಆತ್ಮವೇ.
11 ಪರಲೋಕವು ತೆರೆದಿರುವದನ್ನು ನಾನು ಕಂಡೆನು.
ಆಗ ಇಗೋ, ಬಿಳೀ ಕುದುರೆಯು ನನಗೆ ಕಾಣಿ
ಸಿತು; ಅದರ ಮೇಲೆ ಕೂತಿದ್ದವನಿಗೆ ನಂಬಿಗಸ್ತ
ನೂ ಸತ್ಯವಂತನೂ ಎಂದು ಹೆಸರು. ಆತನು ನೀತಿ
ಯಿಂದ ನ್ಯಾಯವಿಚಾರಿಸುತ್ತಾನೆ, ನೀತಿಯಿಂದ ಯುದ್ಧ
12 ಮಾಡುತ್ತಾನೆ; ಆತನ ಕಣ್ಣುಗಳು ಬೆಂಕಿಯ
ಉರಿಯಂತಿವೆ; ಆತನ ತಲೆಯ ಮೇಲೆ ಅನೇಕ
ಮಕುಟಗಳುಂಟು; ಆತನಿಗೆ ಒಂದು ಹೆಸರು ಬರೆದು
ಕೊಟ್ಟಿದೆ, ಅದು ಆತನಿಗೇ ಹೊರತು ಮತ್ತಾ
13 ರಿಗೂ ತಿಳಿಯದು. ಆತನು ರಕ್ತಪ್ರೋಕ್ಷಿತವಾದ
ವಸ್ತ್ರವನ್ನು ಧರಿಸಿಕೊಂಡಿದ್ದನು. ಆತನಿಗೆ ದೇವರ
14 ವಾಕ್ಯವೆಂದು ಹೆಸರು. ಪರಲೋಕದಲ್ಲಿರುವ ಸೈನ್ಯದ
ವರು ಶುಭ್ರವಾಗಿಯೂ ನಿರ್ಮಲವಾಗಿಯೂ ಇರುವ
ನಯವಾದ ನಾರುಮಡಿಯನ್ನು ಧರಿಸಿಕೊಂಡು ಬಿಳೀ
ಕುದುರೆಗಳ ಮೇಲೆ ಹತ್ತಿದವರಾಗಿ ಆತನ ಹಿಂದೆ ಬರು
15 ತ್ತಿದ್ದರು. ಜನಾಂಗಗಳನ್ನು ಹೊಡೆಯುವದಕ್ಕಾಗಿ
ಹದವಾದ ಕತ್ತಿಯು ಆತನ ಬಾಯಿಂದ ಬರುತ್ತದೆ.
ಆತನು ಅವರನ್ನು ಕಬ್ಬಿಣದ ಕೋಲಿನಿಂದ ಆಳು
ವನು. ಆತನು ಸರ್ವಶಕ್ತನಾದ ದೇವರ ಉಗ್ರ
ಕೋಪವೆಂಬ ದ್ರಾಕ್ಷೆಯ ತೊಟ್ಟಿಯಲ್ಲಿರುವದನ್ನು
16 ತುಳಿಯುತ್ತಾನೆ. ಆತನ ತೊಡೆಯ ಮೇಲಣ ವಸ್ತ್ರ
ದಲ್ಲಿ—

ರಾಜಾಧಿರಾಜನೂ ಕರ್ತರ ಕರ್ತನೂ

ಎಂಬ ಹೆಸರು ಬರೆದದೆ.

2. ಮೊದಲನೆಯ ಮೃಗವೂ ಸುಳ್ಳುಪ್ರವಾದಿಯೂ ನಾಶವಾದದ್ದು.

17 ಆ ಮೇಲೆ ಒಬ್ಬ ದೇವದೂತನು ಸೂರ್ಯನಲ್ಲಿ
ನಿಂತಿರುವದನ್ನು ಕಂಡೆನು. ಅವನು ಮಹಾ ಶಬ್ದದಿಂದ
ಕೂಗುತ್ತಾ ಆಕಾಶದಲ್ಲಿ ಹಾರಾಡುವ ಎಲ್ಲಾ ಪಕ್ಷಿ
ಗಳಿಗೆ—ಬನ್ನಿರಿ, ದೇವರು ಮಾಡಿಸುವ ಮಹಾ ಭೋ
18 ಜನಕ್ಕೆ ಕೂಡಿಬನ್ನಿರಿ, ರಾಜರ ಮಾಂಸವನ್ನೂ ಸಹಸ್ರಾ
ಧಿಪತಿಗಳ ಮಾಂಸವನ್ನೂ ಪರಾಕ್ರಮಶಾಲಿಗಳ ಮಾಂಸ
ವನ್ನೂ ಕುದುರೆಗಳ ಮಾಂಸವನ್ನೂ ರಾಹುತರ ಮಾಂಸ
ವನ್ನೂ, ಸ್ವತಂತ್ರರೂ ದಾಸರೂ ದೊಡ್ಡವರೂ ಚಿಕ್ಕವ
ರೂ ಇವರೆಲ್ಲರ ಮಾಂಸವನ್ನೂ ತಿನ್ನುವದಕ್ಕೆ ಬನ್ನಿರಿ
ಎಂದು ಹೇಳಿದನು.
ತರುವಾಯ ಆ ಮೊದಲನೆಯ ಮೃಗವೂ ಭೂ 19
ರಾಜರೂ ಅವರ ಸೈನ್ಯಗಳವರೂ ಆ ಕುದುರೆಯ ಮೇಲೆ
ಕೂತಿದ್ದವನ ಮೇಲೆಯೂ ಆತನ ಸೈನ್ಯದ ಮೇಲೆ
ಯೂ ಯುದ್ಧಮಾಡುವದಕ್ಕಾಗಿ ಕೂಡಿಬಂದಿರುವ
ದನ್ನು ಕಂಡೆನು. ಆಗ ಮೃಗವು ಸೆರೆಸಿಕ್ಕಿತು; ಇದಲ್ಲದೆ 20
ಮೃಗದ ಮುಂದೆ ಮಹತ್ಕಾರ್ಯಗಳನ್ನು ಮಾಡಿ
ಮೃಗದ ಗುರುತು ಹಾಕಿಸಿಕೊಂಡವರನ್ನೂ ಆದರ
ವಿಗ್ರಹಕ್ಕೆ ನಮಸ್ಕರಿಸಿದವರನ್ನೂ ಮರುಳುಗೊಳಿಸಿದ
ಆ ಸುಳ್ಳುಪ್ರವಾದಿಯೂ ಅದರ ಜೊತೆಯಲ್ಲಿ ಸೆರೆಸಿಕ್ಕಿ
ದನು. ಇವರಿಬ್ಬರೂ ಜೀವಸಹಿತವಾಗಿ ಗಂಧಕದಿಂದ
ಉರಿಯುವ ಬೆಂಕಿಯ ಕೆರೆಯಲ್ಲಿ ಹಾಕಲ್ಪಟ್ಟರು;
ಮಿಕ್ಕಾದವರು ಆ ಕುದುರೆಯ ಮೇಲೆ ಕೂತಿದ್ದವನ 21
ಬಾಯಿಂದ ಬಂದ ಕತ್ತಿಯಿಂದ ಹತರಾದರು; ಮತ್ತು
ಹಕ್ಕಿಗಳೆಲ್ಲಾ ಅವರ ಮಾಂಸವನ್ನು ಹೊಟ್ಟೆತುಂಬಾ
ತಿಂದವು.

3. ಸೈತಾನನು ನಾಶವಾದದ್ದು.

ಆಗ ಒಬ್ಬ ದೇವದೂತನು ಅಧೋಲೋಕದ 20
ಬೀಗದ ಕೈಯನ್ನೂ ದೊಡ್ಡ ಸರಪಣಿಯನ್ನೂ
ಕೈಯಲ್ಲಿ ಹಿಡಿದುಕೊಂಡು ಪರಲೋಕದಿಂದ ಇಳಿದು
ಬರುವದನ್ನು ಕಂಡೆನು. ಅವನು ಪಿಶಾಚನೂ ಸೈತಾ 2
ನನೂ ಆಗಿರುವ ಪುರಾತನಸರ್ಪನೆಂಬ ಘಟಸರ್ಪ
ನನ್ನು ಹಿಡಿದು ಸಾವಿರ ವರುಷ ಬಂಧನದಲ್ಲಿಟ್ಟನು.
ಆ ಸಾವಿರ ವರುಷ ತೀರುವ ತನಕ ಸೈತಾನನು ಇನ್ನೂ 3
ಜನಗಳನ್ನು ಮರುಳುಗೊಳಿಸದ ಹಾಗೆ ದೇವದೂತನು
ಅವನನ್ನು ಅಧೋಲೋಕದಲ್ಲಿ ದೊಬ್ಬಿ ಬಾಗಿಲು
ಮುಚ್ಚಿ ಅದಕ್ಕೆ ಮುದ್ರೆಹಾಕಿದನು. ಆ ಸಾವಿರ
ವರುಷಗಳಾದ ಮೇಲೆ ಅವನಿಗೆ ಸ್ವಲ್ಪಕಾಲ ಬಿಡುಗಡೆ
ಯಾಗಬೇಕು.
ತರುವಾಯ ಸಿಂಹಾಸನಗಳನ್ನು ಕಂಡೆನು. ಅವು 4
ಗಳ ಮೇಲೆ ಜನರು ಕೂತಿದ್ದರು;—ನ್ಯಾಯ ತೀರಿ
ಸುವ ಅಧಿಕಾರವು ಅವರಿಗೆ ಕೊಡಲ್ಪಟ್ಟಿತು. ಇದ
ಲ್ಲದೆ ಯೇಸುವಿನ ವಿಷಯವಾದ ಸಾಕ್ಷಿಯ ನಿಮಿತ್ತ
ವಾಗಿಯೂ ದೇವರ ವಾಕ್ಯದ ನಿಮಿತ್ತವಾಗಿಯೂ
ತಲೆಹೊಯಿಸಿಕೊಂಡವರ ಆತ್ಮಗಳನ್ನೂ ಮೃಗಕ್ಕೂ
ಆದರ ವಿಗ್ರಹಕ್ಕೂ ನಮಸ್ಕರಿಸದೆ ತಮ್ಮ ಹಣೆಯ
ಮೇಲೆ ಮತ್ತು ಕೈಯ ಮೇಲೆ ಗುರುತುಹಾಕಿಸಿಕೊ
ಳ್ಳದೆ ಇರುವವರನ್ನೂ ಕಂಡೆನು. ಅವರು ಜೀವಿತರಾ
ಗಿದ್ದು ಎದ್ದು ಸಾವಿರ ವರುಷ ಕ್ರಿಸ್ತನೊಂದಿಗೆ ಆಳಿ
ದರು. ಮಿಕ್ಕ ಸತ್ತವರು ಆ ಸಾವಿರ ವರುಷ ತೀರುವ 5
ತನಕ ಜೀವಿತರಾಗಿ ಏಳಲಿಲ್ಲ. ಇದೇ ಪ್ರಥಮ ಪುನರು

1) ಅಥವಾ, ನಮಸ್ಕಾರಮಾಡು; ಯೇಸುವಿನ ವಿಷಯವಾದ ಸಾಕ್ಷಿಯನ್ನು ಹೇಳಿಸುವ ಆತ್ಮನು ಪ್ರವಾದನೆಯನ್ನು ಹೇಳಿಸುವ ಆತ್ಮನೇ ಅಂದನು.

6 ತ್ಥಾನವು. ಪ್ರಥಮ ಪುನರುತ್ಥಾನದಲ್ಲಿ ಸೇರಿರು
ವವನು ಧನ್ಯನೂ ಪರಿಶುದ್ಧನೂ ಆಗಿದ್ದಾನೆ. ಇಂಥ
ವರ ಮೇಲೆ ಎರಡನೆಯ ಮರಣಕ್ಕೆ ಅಧಿಕಾರವಿಲ್ಲ;
ಆದರೆ ಅವರು ದೇವರಿಗೂ ಕ್ರಿಸ್ತನಿಗೂ ಯಾಜಕ
ರಾಗಿ ಕ್ರಿಸ್ತನೊಂದಿಗೆ ಆ ಸಾವಿರ ವರುಷ ಆಳುವರು.
7 ಆ ಸಾವಿರ ವರುಷಗಳು ತೀರಿದ ಮೇಲೆ ಸೈತಾನ
8 ನಿಗೆ ಸೆರೆಯಿಂದ ಬಿಡುಗಡೆಯಾಗುವದು. ಅವನು
ಹೊರಗೆ ಬಂದು ಭೂಮಿಯ ನಾಲ್ಕು ದಿಕ್ಕುಗಳಲ್ಲಿರುವ
ಗೋಗ್ ಮಾಗೋಗ್ ಎಂಬ ಜನಾಂಗಗಳನ್ನು
ಮರುಳುಗೊಳಿಸಿ ಅವರನ್ನು ಯುದ್ಧಕ್ಕೆ ಕೂಡಿಸು
ವನು; ಅವರ ಸಂಖ್ಯೆಯು ಸಮುದ್ರದ ಮರಳಿನಷ್ಟಿ
9 ರುವದು. ಅವರು ದೇಶದಲ್ಲೆಲ್ಲಾ ಹರಡಿಕೊಂಡು
ದೇವಜನರ ದಂಡಿಗೂ ನಮ್ಮ ಪ್ರಿಯ ಪಟ್ಟಣಕ್ಕೂ
ಮುತ್ತಿಗೆಹಾಕಿದರು. ಆಗ ಪರಲೋಕದಿಂದ ಬೆಂಕಿ
10 ಇಳಿದುಬಂದು ಅವರನ್ನು ದಹಿಸಿಬಿಟ್ಟಿತು. ಇದಲ್ಲದೆ
ಅವರನ್ನು ಮರುಳುಗೊಳಿಸಿದ ಸೈತಾನನು ಬೆಂಕಿ
ಗಂಧಕಗಳುರಿಯುವ ಕೆರೆಯಲ್ಲಿ ದೊಬ್ಬಲ್ಪಟ್ಟನು.
ಅಲ್ಲಿ ಮೃಗವೂ ಸುಳ್ಳುಪ್ರವಾದಿಯೂ ಕೂಡ ಇದ್ದಾರೆ;
ಅವರು ಹಗಲಿರುಳು ಯುಗಯುಗಾಂತರಗಳಲ್ಲಿ
ಯೂ ಯಾತನೆಪಡುತ್ತಿರುವರು.

4. ಸತ್ತವರ ಪುನರುತ್ಥಾನವನ್ನೂ ಕಡೇ ನ್ಯಾಯತೀರ್ಪನ್ನೂ ಕುರಿತದ್ದು. ಮೃತ್ಯುವೂ ಪಾತಾಳವೂ ನಾಶವಾದದ್ದು.

11 ಆ ಮೇಲೆ ಬೆಳ್ಳಗಿರುವ ಮಹಾ ಸಿಂಹಾಸನವನ್ನೂ
ಅದರ ಮೇಲೆ ಕೂತಿದ್ದಾತನನ್ನೂ ಕಂಡೆನು. ಆತ
ನೆದುರಿನಿಂದ ಭೂವ್ಯೋಮಾಕಾಶಗಳು ಓಡಿಹೋಗಿ ಇನ್ನು
12 ಕಾಣಿಸದ ಹಾಗಾದವು. ಇದಲ್ಲದೆ ಸತ್ತವರಾದ ದೊಡ್ಡ
ವರೂ ಚಿಕ್ಕವರೂ ಸಿಂಹಾಸನದ ಮುಂದೆ ನಿಂತಿರುವ
ದನ್ನು ಕಂಡೆನು. ಆಗ ಪುಸ್ತಕಗಳು ತೆರೆಯಲ್ಪಟ್ಟವು;
ಮತ್ತು ಜೀವಬಾಧ್ಯರ ಪಟ್ಟಿ ಎಂಬ ಇನ್ನೊಂದು
ಪುಸ್ತಕವು ತೆರೆಯಲ್ಪಟ್ಟಿತು; ಆ ಪುಸ್ತಕಗಳಲ್ಲಿ ಬರೆ
ದಿದ್ದ ಸಂಗತಿಗಳ ಆಧಾರದಿಂದ ಅವರವರ ಕೃತ್ಯಗಳ
13 ಪ್ರಕಾರ ಸತ್ತವರಿಗೆ ನ್ಯಾಯತೀರ್ಪಾಯಿತು. ಸಮು
ದ್ರವು ತನ್ನೊಳಗಿದ್ದ ಸತ್ತವರನ್ನು ಒಪ್ಪಿಸಿತು; ಮೃತ್ಯು
ವೂ ಪಾತಾಳವೂ ತಮ್ಮ ವಶದಲ್ಲಿದ್ದ ಸತ್ತವರನ್ನು
ಒಪ್ಪಿಸಿದವು. ಅವರಲ್ಲಿ ಪ್ರತಿಯೊಬ್ಬನಿಗೆ ಅವನವನ
14 ಕೃತ್ಯಗಳ ಪ್ರಕಾರ ನ್ಯಾಯತೀರ್ಪಾಯಿತು. ಆ ಮೇಲೆ
ಮೃತ್ಯುವೂ ಪಾತಾಳವೂ ಬೆಂಕಿಯ ಕೆರೆಗೆ ದೊಬ್ಬ
ಲ್ಪಟ್ಟವು; ಆ ಬೆಂಕಿಯ ಕೆರೆಯೇ ಎರಡನೆಯ ಮರ
15 ಣವು. ಯಾವನ ಹೆಸರು ಜೀವಬಾಧ್ಯರ ಪಟ್ಟಿಯಲ್ಲಿ
ಬರೆದದ್ದಾಗಿ ಕಾಣಲಿಲ್ಲವೋ ಅವನು ಬೆಂಕಿಯ ಕೆರೆಗೆ
ದೊಬ್ಬಲ್ಪಟ್ಟನು.

IX. ನೂತನ ಭೂವ್ಯೋಮಾಕಾಶಗಳನ್ನು ಕುರಿತದ್ದು.

21 ತರುವಾಯ ನೂತನಾಕಾಶಮಂಡಲವನ್ನೂ ನೂ
ತನಭೂಮಂಡಲವನ್ನೂ ಕಂಡೆನು. ಮೊದಲಿದ್ದ
ಆಕಾಶಮಂಡಲವೂ ಮೊದಲಿದ್ದ ಭೂಮಂಡಲವೂ
ಇಲ್ಲದೆ ಹೋದವು; ಇನ್ನು ಸಮುದ್ರವೂ ಇಲ್ಲ.
ಇದಲ್ಲದೆ ಪರಿಶುದ್ಧ ಪಟ್ಟಣವಾದ ಹೊಸ ಯೆರೂ
ಸಲೇಮು ಪರಲೋಕದಿಂದ ದೇವರ ಬಳಿಯಿಂದ
ಇಳಿದುಬರುವದನ್ನು ಕಂಡೆನು; ಅದು ತನ್ನ ಗಂಡನಿ
ಗೋಸ್ಕರ ಅಲಂಕೃತಳಾದ ಮದಲಗಿತ್ತಿಯಂತೆ ಶೃಂಗ
ರಿಸಲ್ಪಟ್ಟಿತ್ತು. ಇದಲ್ಲದೆ ಸಿಂಹಾಸನದೊಳಗಿಂದ
ಬಂದ ಮಹಾ ಶಬ್ದವು ನನಗೆ ಕೇಳಿಸಿತು. ಅದು—

ಇಗೋ, ದೇವರ ನಿವಾಸವು ಮನುಷ್ಯರಲ್ಲಿ
ಅದೆ;
ಆತನು ಅವರೊಡನೆ ವಾಸಮಾಡುವನು,
ಅವರು ಆತನಿಗೆ ಪ್ರಜೆಗಳಾಗಿರುವರು;
ದೇವರು ತಾನೇ ಅವರ ಸಂಗಡ ಇರುವನು,
ಅವರ ಕಣ್ಣೀರನ್ನೆಲ್ಲಾ ಒರಸಿಬಿಡುವನು.
ಇನ್ನು ಮರಣವಿರುವದಿಲ್ಲ,
ಇನ್ನು ದುಃಖವಾಗಲಿ ಗೋಳಾಟವಾಗಲಿ ಕಷ್ಟ
ವಾಗಲಿ ಇರುವದಿಲ್ಲ;
ಮೊದಲಿದ್ದದ್ದೆಲ್ಲಾ ಇಲ್ಲದೆ ಹೋಯಿತು

ಎಂದು ಹೇಳಿತು. ಆಗ ಸಿಂಹಾಸನದ ಮೇಲೆ ಕೂತಿ
ದ್ದವನು—

ಇಗೋ, ಎಲ್ಲವನ್ನು ಹೊಸದುಮಾಡುತ್ತೇನೆ

ಅಂದನು. ಮತ್ತು 1)ಒಬ್ಬನು ನನಗೆ—ಇದನ್ನು ಬರೆ;
ಈ ಮಾತುಗಳು ನಂಬತಕ್ಕವುಗಳೂ ಸತ್ಯವಾದವುಗಳೂ
ಆಗಿವೆ ಎಂದು ಹೇಳಿದನು. ಆಗ ಸಿಂಹಾಸನದ ಮೇಲೆ
ಕೂತಿದ್ದವನು—

ಎಲ್ಲಾ ನೆರವೇರಿತು;
ನಾನು ಆದಿಯೂ ಅಂತವೂ ಪ್ರಾರಂಭವೂ
ಸಮಾಪ್ತಿಯೂ ಆಗಿದ್ದೇನೆ.
ದಾಹವುಳ್ಳವನಿಗೆ ಜೀವಜಲದ ಬುಗ್ಗೆಯಲ್ಲಿ
ಕ್ರಯವಿಲ್ಲದೆ ಕುಡಿಯುವದಕ್ಕೆ ಕೊಡು
ವೆನು.
ಜಯಹೊಂದುವವನು ಇವುಗಳಿಗೆ ಬಾಧ್ಯ
ನಾಗುವನು;
ನಾನು ಅವನಿಗೆ ದೇವರಾಗಿರುವೆನು, ಅವನು
ನನಗೆ ಮಗನಾಗಿರುವನು.
ಆದರೆ ಹೇಡಿಗಳು, ನಂಬಿಕೆಯಿಲ್ಲದವರು,
ಅಸಹ್ಯವಾದದ್ದರಲ್ಲಿ ಸೇರಿದವರು, ಕೊಲೆಗಾ
ರರು, ಜಾರರು,
ಮಾಟಗಾರರು, ವಿಗ್ರಹಾರಾಧಕರು, ಎಲ್ಲಾ
ಸುಳ್ಳುಗಾರರು
ಇವರಿಗೆ ಸಿಕ್ಕುವ ಪಾಲು ಬೆಂಕಿ ಗಂಧಕ
ಗಳುರಿಯುವ ಕೆರೆಯೇ;
ಅದು ಎರಡನೆಯ ಮರಣವು

ಎಂದು ನನಗೆ ಹೇಳಿದನು.

ಹೊಸ ಯೆರೂಸಲೇಮನ್ನು ಕುರಿತದ್ದು.

ಕಡೇ ಏಳು ಉಪದ್ರವಗಳಿಂದ ತುಂಬಿದ ಏಳು
ಪಾತ್ರೆಗಳನ್ನು ಹಿಡಿದಿದ್ದ ಏಳು ಮಂದಿ ದೇವದೂತರಲ್ಲಿ

1) ಅಥವಾ, ಆತನು.

ಒಬ್ಬನು ಬಂದು ನನ್ನ ಸಂಗಡ ಮಾತಾಡುತ್ತಾ—ಬಾ,
ಯಜ್ಞದ ಕುರಿಯಾದಾತನಿಗೆ ಹೆಂಡತಿಯಾಗತಕ್ಕ
ಮದಲಗಿತ್ತಿಯನ್ನು ನಿನಗೆ ತೋರಿಸುವೆನು ಎಂದು
10-11 ಹೇಳಿ ದೇವರಾತ್ಮವಶನಾದ ನನ್ನನ್ನು ಎತ್ತರವಾದ
ದೊಡ್ಡ ಬೆಟ್ಟಕ್ಕೆ ಎತ್ತಿಕೊಂಡು ಹೋಗಿ ಯೆರೂಸ
ಲೇಮೆಂಬ ಪರಿಶುದ್ಧ ಪಟ್ಟಣವು ದೇವರ ತೇಜಸ್ಸುಳ್ಳ
ದ್ದಾಗಿ ಪರಲೋಕದೊಳಗಿಂದ ದೇವರ ಕಡೆಯಿಂದ
ಇಳಿದುಬರುವದನ್ನು ನನಗೆ ತೋರಿಸಿದನು. ಪಟ್ಟ
ಣದ ಪ್ರಕಾಶವು ಅಮೂಲ್ಯರತ್ನದ ಪ್ರಕಾಶಕ್ಕೆ ಸಮಾನ
ವಾಗಿತ್ತು, ಥಳಥಳಿಸುವ ವಜ್ರವೋ ಎಂಬಂತೆ ಕಾಣಿ
12 ಸಿತು. ಆ ಪಟ್ಟಣಕ್ಕೆ ಎತ್ತರವಾದ ದೊಡ್ಡ ಪ್ರಾಕಾರ
ವಿತ್ತು; ಅದಕ್ಕೆ ಹನ್ನೆರಡು ಹೆಬ್ಬಾಗಿಲುಗಳಿದ್ದವು;
ಆ ಬಾಗಿಲುಗಳ ಬಳಿಯಲ್ಲಿ ಹನ್ನೆರಡು ಮಂದಿ ದೇವ
ದೂತರಿದ್ದರು; ಅವುಗಳ ಮೇಲೆ ಇಸ್ರಾಯೇಲ್ಯರ ಹನ್ನೆ
13 ರಡು ಕುಲಗಳ ಹೆಸರುಗಳು ಬರೆದಿದ್ದವು. ಪೂರ್ವ
ದಿಕ್ಕಿನಲ್ಲಿ ಮೂರು ಬಾಗಿಲುಗಳು, ಉತ್ತರದಿಕ್ಕಿನಲ್ಲಿ
ಮೂರು ಬಾಗಿಲುಗಳು, ದಕ್ಷಿಣದಿಕ್ಕಿನಲ್ಲಿ ಮೂರು
ಬಾಗಿಲುಗಳು, ಪಶ್ಚಿಮದಿಕ್ಕಿನಲ್ಲಿ ಮೂರು ಬಾಗಿಲು
14 ಗಳು ಇದ್ದವು. ಪಟ್ಟಣದ ಪ್ರಾಕಾರಕ್ಕೆ ಹನ್ನೆರಡು
ಅಸ್ತಿವಾರಗಳಿದ್ದವು; ಅವುಗಳ ಮೇಲೆ ಯಜ್ಞದ ಕುರಿ
ಯಾದಾತನ ಹನ್ನೆರಡು ಮಂದಿ ಅಪೊಸ್ತಲರ ಹೆಸರು
15 ಗಳಿದ್ದವು. ನನ್ನ ಸಂಗಡ ಮಾತಾಡುತ್ತಿದ್ದವನು ಆ
ಪಟ್ಟಣವನ್ನೂ ಅದರ ಬಾಗಿಲುಗಳನ್ನೂ ಅದರ ಪ್ರಾಕಾ
ರವನ್ನೂ ಅಳತೆಮಾಡುವದಕ್ಕಾಗಿ ತನ್ನ ಕೈಯಲ್ಲಿ
16 ಚಿನ್ನದ ಅಳತೇಕೋಲನ್ನು ಹಿಡಿದಿದ್ದನು. ಪಟ್ಟಣವು
ಚಚ್ಚೌಕವಾಗಿದೆ; ಅದರ ಉದ್ದವು ಅದರ ಅಗಲದಷ್ಟಿದೆ.
ಅವನು ಆ ಪಟ್ಟಣವನ್ನು ಕೋಲಿನಿಂದ ಅಳತೆಮಾಡಿ
ದನು; ಅಳತೆಯು [1]ಹನ್ನೆರಡು ನೂರು ಮೈಲಿ
ಆಯಿತು. ಅದರ ಉದ್ದವೂ ಅಗಲವೂ ಎತ್ತರವೂ
17 ಸಮವಾಗಿವೆ. ಅದರ ಪ್ರಾಕಾರವನ್ನೂ ಅಳತೆಮಾಡಿ
ದನು; ಅದು ನೂರನಾಲ್ವತ್ತುನಾಲ್ಕು ಮೊಳವಾಯಿತು;
ಈ ಲೆಕ್ಕದಲ್ಲಿ ಮನುಷ್ಯನ ಮೊಳ ಅಂದರೆ ದೇವದೂತನ
18 ಮೊಳ. ಆ ಪ್ರಾಕಾರವು [2]ಸೂರ್ಯಕಾಂತಶಿಲೆ
ಯಿಂದ ಕಟ್ಟಲ್ಪಟ್ಟಿತ್ತು. ಪಟ್ಟಣವು ಶುದ್ಧ ಗಾಜಿ
19 ನಂತಿರುವ ಸೋಸಿದ ಭಂಗಾರವೇ. ಪಟ್ಟಣದ ಪ್ರಾಕಾ
ರದ ಅಸ್ತಿವಾರಗಳು ಸಕಲ ವಿಧವಾದ ರತ್ನಗಳಿಂದ
ಅಲಂಕೃತವಾಗಿದ್ದವು. ಮೊದಲನೆಯ ಅಸ್ತಿವಾರವು
ವಜ್ರ, ಎರಡನೇದು ವೈಡೂರ್ಯ, ಮೂರನೇದು ಪಚ್ಚೆ,
20 ನಾಲ್ಕನೇದು ಪದ್ಮರಾಗ, ಐದನೇದು ಗೋಮೇಧಿಕ,
ಆರನೇದು ಮಾಣಿಕ್ಯ, ಏಳನೇದು ಪೀತರತ್ನ, ಎಂಟ
ನೇದು ಬೆರುಲ್ಲ, ಒಂಭತ್ತನೇದು ಪುಷ್ಯರಾಗ, ಹತ್ತ
ನೇದು ಗರುಡಪಚ್ಚೆ, ಹನ್ನೊಂದನೇದು ಇಂದ್ರನೀಲ,
21 ಹನ್ನೆರಡನೇದು ನೀಲಸ್ಫಟಿಕ. ಹನ್ನೆರಡು ಹೆಬ್ಬಾಗಿಲು
ಗಳು ಹನ್ನೆರಡು ಮುತ್ತುಗಳಾಗಿದ್ದವು; ಒಂದೊಂದು
ಬಾಗಿಲು ಒಂದೊಂದು ಮುತ್ತಿನಿಂದ ಮಾಡಲ್ಪಟ್ಟಿತ್ತು.
ಪಟ್ಟಣದ ಬೀದಿಯು ಸ್ವಚ್ಛವಾದ ಗಾಜಿನಂತಿರುವ
22 ಸೋಸಿದ ಭಂಗಾರವಾಗಿತ್ತು. ಪಟ್ಟಣದಲ್ಲಿ ನಾನು
ದೇವಾಲಯವನ್ನು ಕಾಣಲಿಲ್ಲ; ಯಾಕಂದರೆ ಸರ್ವ
ಶಕ್ತನಾದ ದೇವರಾಗಿರುವ ಕರ್ತನೂ ಯಜ್ಞದ ಕುರಿ
ಯಾದಾತನೂ ಅದರ ದೇವಾಲಯವಾಗಿದ್ದಾರೆ. ಪಟ್ಟ 23
ಣಕ್ಕೆ ಬೆಳಕನ್ನು ಕೊಡುವದಕ್ಕಾಗಿ ಸೂರ್ಯನಾಗಲಿ
ಚಂದ್ರನಾಗಲಿ ಬೇಕಾಗಿಲ್ಲ. ಅದಕ್ಕೆ ದೇವರ ಪ್ರಭಾ
ವವೇ ಬೆಳಕನ್ನು ಕೊಟ್ಟಿತು; ಯಜ್ಞದ ಕುರಿಯಾ
ದಾತನೇ ಅದರ ದೀಪವು. ಅದರ ಬೆಳಕಿನಿಂದ ಸರ್ವ 24
ಜನಾಂಗದವರು ಸಂಚಾರಮಾಡುವರು; ಭೂರಾಜರು
ತಮ್ಮ ವೈಭವವನ್ನು ಅಲ್ಲಿಗೆ ತರುವರು. ಅದರ 25
ಬಾಗಿಲುಗಳನ್ನು ಹಗಲಿನಲ್ಲಿ ಮುಚ್ಚುವದೇ ಇಲ್ಲ;
ರಾತ್ರಿಯಂತೂ ಅಲ್ಲಿಲ್ಲ. ಜನಾಂಗಗಳ ವೈಭವವೂ 26
ಘನವೂ ಅಲ್ಲಿಗೆ ಬರುವವು. ಅದರಲ್ಲಿ ಹೊಲೆಯಾದ 27
ದ್ದೊಂದೂ ಸೇರುವದಿಲ್ಲ, ಅಸಹ್ಯವಾದದ್ದನ್ನೂ ಸುಳ್ಳಾ
ದದ್ದನ್ನೂ ನಡಿಸುವವನು ಸೇರುವದಿಲ್ಲ; ಯಜ್ಞದ
ಕುರಿಯಾದಾತನ ಜೀವಬಾಧ್ಯರ ಪಟ್ಟಿಯಲ್ಲಿ ಯಾರಾರ
ಹೆಸರುಗಳು ಬರೆದವೆಯೋ ಅವರು ಮಾತ್ರ ಸೇರು
ವರು.

22

ಆ ಮೇಲೆ ಅವನು ಸ್ಫಟಿಕದಂತೆ ಪ್ರಕಾಶಮಾನ
ವಾಗಿದ್ದ ಜೀವಜಲದ ನದಿಯನ್ನು ನನಗೆ ತೋರಿ
ಸಿದನು. ಅದು ದೇವರ ಮತ್ತು ಯಜ್ಞದ ಕುರಿಯಾ
ದಾತನ ಸಿಂಹಾಸನದಿಂದ ಹೊರಟು ಪಟ್ಟಣದ ಬೀದಿಯ
ಮಧ್ಯದಲ್ಲಿ ಹರಿಯುತ್ತಿತ್ತು. ಆ ನದಿಯ ಉಭಯ 2
ಪಾರ್ಶ್ವಗಳಲ್ಲಿ ಜೀವವೃಕ್ಷವಿತ್ತು; ಅದು ತಿಂಗಳು
ತಿಂಗಳಿಗೆ ಫಲವನ್ನು ಫಲಿಸುತ್ತಾ [3]ಹನ್ನೆರಡು ತರದ
ಫಲಗಳನ್ನು ಕೊಡುತ್ತದೆ. ಆ ಮರದ ಎಲೆಗಳು
ಜನಾಂಗದವರನ್ನು ವಾಸಿಮಾಡುವದಕ್ಕೆ ಪ್ರಯೋಜನ
ವಾಗಿವೆ. ಇನ್ನು ಶಾಪಗ್ರಸ್ತವಾದದ್ದು ಒಂದೂ 3
ಇರುವದಿಲ್ಲ. ಆ ಪಟ್ಟಣದಲ್ಲಿ ದೇವರ ಮತ್ತು
ಯಜ್ಞದ ಕುರಿಯಾದಾತನ ಸಿಂಹಾಸನವಿರುವದು.
ಆತನ ದಾಸರು ಆತನಿಗೆ ಯಾಜಕಸೇವೆ ಮಾಡು 4
ವರು; ಅವರಿಗೆ ಆತನ ಮುಖದರ್ಶನವಾಗುವದು;
ಅವರ ಹಣೆಗಳ ಮೇಲೆ ಆತನ ಹೆಸರು ಇರುವದು.
ಇನ್ನು ರಾತ್ರಿ ಇರುವದಿಲ್ಲ; ಅವರಿಗೆ ದೀಪದ 5
ಬೆಳಕೂ ಸೂರ್ಯನ ಬೆಳಕೂ ಬೇಕಾಗುವದಿಲ್ಲ;
ದೇವರಾದ ಕರ್ತನೇ ಅವರಿಗೆ ಬೆಳಕನ್ನು ಕೊಡು
ವನು; ಅವರು ಯುಗಯುಗಾಂತರಗಳಲ್ಲಿಯೂ
ಆಳುವರು.

ಅಂತ್ಯೋಕ್ತಿಗಳು.

ಆ ಮೇಲೆ ಅವನು ನನಗೆ—ಈ ಮಾತುಗಳು 6
ನಂಬತಕ್ಕವುಗಳೂ ಸತ್ಯವಾದವುಗಳೂ ಆಗಿವೆ; ಪ್ರವಾದಿ
ಗಳ ಆತ್ಮಗಳನ್ನು ಪ್ರೇರೇಪಿಸುವ ದೇವರಾದ ಕರ್ತನು
ಬೇಗನೆ ಸಂಭವಿಸಬೇಕಾಗಿರುವ ಸಂಗತಿಗಳನ್ನು ತನ್ನ
ದಾಸರಿಗೆ ತಿಳಿಯಪಡಿಸುವದಕ್ಕಾಗಿ ತನ್ನ ದೂತ
ನನ್ನು ಕಳುಹಿಸಿಕೊಟ್ಟನು. ಇಗೋ, ಬೇಗನೆ 7
ಬರುತ್ತೇನೆ. ಈ ಪುಸ್ತಕದಲ್ಲಿ ಬರೆದಿರುವ ಪ್ರವಾದ

1) ಮೂಲ: ಹನ್ನೆರಡು ಸಾವಿರ ಸ್ತಾದ್ಯ. 2) ಅಥವಾ, ವಜ್ರದಿಂದ. 3) ಅಥವಾ, ಹನ್ನೆರಡು ಸಾರಿ ಬಿಡುತ್ತದೆ.

ನೆಯ ಮಾತುಗಳನ್ನು ಕೈಕೊಂಡು ನಡೆಯುವವನು
ಧನ್ಯನು ಎಂದು ಹೇಳಿದನು.
8 ಈ ಸಂಗತಿಗಳನ್ನು ಕೇಳಿ ಕಂಡವನು ಯೋಹಾನ
ನೆಂಬ ನಾನೇ. ನಾನು ಕೇಳಿ ಕಂಡಾಗ ಈ ಸಂಗತಿ
ಗಳನ್ನು ನನಗೆ ತೋರಿಸಿದ ದೇವದೂತನಿಗೆ ನಮ
ಸ್ಕಾರಮಾಡಬೇಕೆಂದು ಅವನ ಪಾದಕ್ಕೆ ಬಿದ್ದೆನು.
9 ಅವನು ನನಗೆ—ಮಾಡಬೇಡ ನೋಡು; ನಾನು
ನಿನಗೂ ಪ್ರವಾದಿಗಳಾಗಿರುವ ನಿನ್ನ ಸಹೋದರರಿಗೂ
ಈ ಪುಸ್ತಕದಲ್ಲಿ ಬರೆದಿರುವ ಮಾತುಗಳನ್ನು ಕೈ
ಕೊಂಡು ನಡೆಯುವವರಿಗೂ ಜೊತೆಯ ದಾಸನಾಗಿ
ದ್ದೇನೆ; ದೇವರಿಗೇ ನಮಸ್ಕಾರಮಾಡು ಎಂದು ಹೇಳಿ
ದನು.
10 ಇದಲ್ಲದೆ ಅವನು ನನಗೆ—ಈ ಪುಸ್ತಕದಲ್ಲಿರುವ
1)ಪ್ರವಾದನಾವಾಕ್ಯಗಳನ್ನು ಗುಪ್ತವಾಗಿಡಬೇಡ; ಇವು
11 ನೆರವೇರುವ ಸಮಯವು ಸಮೀಪವಾಗಿದೆ. ಅನ್ಯಾ
ಯಮಾಡುವವನು ಇನ್ನೂ ಅನ್ಯಾಯಮಾಡಲಿ; ಮೈ
ಲಿಗೆಯಾದವನು ತನ್ನನ್ನು ಇನ್ನೂ ಮೈಲಿಗೆಮಾಡಿ
ಕೊಳ್ಳಲಿ; ನೀತಿವಂತನು ಇನ್ನೂ ನೀತಿಯನ್ನು ಅನುಸರಿ
ಸಲಿ; ಪವಿತ್ರನು ತನ್ನನ್ನು ಇನ್ನೂ ಪವಿತ್ರಮಾಡಿಕೊಳ್ಳ
12 ಲಿ. ಇಗೋ, ಬೇಗ ಬರುತ್ತೇನೆ; ನಾನು ಪ್ರತಿಯೊಬ್ಬ
ನಿಗೆ ಅವನವನ ನಡತೆಯ ಪ್ರಕಾರ ಕೊಡತಕ್ಕ ಪ್ರತಿ
13 ಫಲವು ನನ್ನ ಕೈಯಲ್ಲಿ ಅದೆ. ನಾನೇ ಆದಿಯೂ
ಅಂತವೂ ಮೊದಲನೆಯವನೂ ಕಡೆಯವನೂ ಪ್ರಾ
14 ರಂಭವೂ ಸಮಾಪ್ತಿಯೂ ಆಗಿದ್ದೇನೆ. ತಮ್ಮ ನಿಲು
ವಂಗಿಗಳನ್ನು ತೊಳಕೊಂಡವರು ಧನ್ಯರು; ಅವರಿಗೆ
ಜೀವವೃಕ್ಷದ ಹಕ್ಕು ಇರುವದು; ಅವರು ಬಾಗಿಲು
15 ಗಳಿಂದ ಆ ಪಟ್ಟಣದೊಳಕ್ಕೆ ಸೇರುವರು. ನಾಯಿಗ
ಳಂತಿರುವವರೂ ಮಾಟಗಾರರೂ ಜಾರರೂ ಕೊಲೆಗಾ
ರರೂ ವಿಗ್ರಹಾರಾಧಕರೂ ಸುಳ್ಳಾದದ್ದನ್ನು ಪ್ರೀ
ನಡಿಸುವವರೆಲ್ಲರೂ ಹೊರಗಿರುವರು ಎಂದು ಹೇಳಿದ

ಯೇಸುವೆಂಬ ನಾನು ನನ್ನ ಸಭೆಗಳ ಪ್ರಯೋ
ನಾರ್ಥವಾಗಿ ಈ ಸಂಗತಿಗಳ ವಿಷಯದಲ್ಲಿ ನಿಮ
ಸಾಕ್ಷಿಹೇಳುವದಕ್ಕೋಸ್ಕರ ನನ್ನ ದೂತನನ್ನು ಕ
ಳುಹಿಸಿಕೊಟ್ಟೆನು. ನಾನು ದಾವೀದವಂಶವೆಂಬ ಬುಡದಿ
ಹುಟ್ಟಿದ ಚಿಗುರೂ ಅವನ ಸಂತತಿಯೂ ಉದ
ಸೂಚಕವಾದ ಪ್ರಕಾಶವುಳ್ಳ ನಕ್ಷತ್ರವೂ ಆಗಿದ್ದೇ
ಆತ್ಮನೂ ಮದಲಗಿತ್ತಿಯೂ—ಬಾ ಅನ್ನುತ್ತಾ
ಕೇಳುವವನು—ಬಾ ಅನ್ನಲಿ. ಬಾಯಾರಿದವನು ಬರ
ಇಷ್ಟವುಳ್ಳವನು ಜೀವಜಲವನ್ನು ಕ್ರಯವಿಲ್ಲದೆ ತೆಗೆ
ಕೊಳ್ಳಲಿ.
ಈ ಪುಸ್ತಕದ ಪ್ರವಾದನಾವಾಕ್ಯಗಳನ್ನು ಕೇಳು
ಪ್ರತಿಯೊಬ್ಬನಿಗೆ ನಾನು ಹೇಳುವ ಸಾಕ್ಷಿ ಏನಂದರೆ
ಇವುಗಳಿಗೆ ಯಾವನಾದರೂ ಹೆಚ್ಚು ಮಾತುಗಳನ
ತಂದುಹಾಕಿದರೆ ದೇವರು ಅವನ ಮೇಲೆ ಈ ಪುಸ್ತ
ದಲ್ಲಿ ಬರೆದಿರುವ ಉಪದ್ರವಗಳನ್ನು ತಂದುಹಾ
ವನು. ಯಾವನಾದರೂ ಈ ಪ್ರವಾದನಾಪುಸ್ತಕದ
ರುವ ಮಾತುಗಳಲ್ಲಿ ಒಂದನ್ನಾದರೂ ತೆಗೆದುಬಿಟ್ಟ
ಈ ಪುಸ್ತಕದಲ್ಲಿ ಬರೆದಿರುವ ಪರಿಶುದ್ಧ ಪಟ್ಟಣದ
ಯೂ ಜೀವವೃಕ್ಷದಲ್ಲಿಯೂ ಅವನಿಗಿರುವ ಪಾಲನ
ದೇವರು ತೆಗೆದುಬಿಡುವನು.
ಈ ವಿಷಯಗಳಲ್ಲಿ ಸಾಕ್ಷಿಹೇಳುವವನು—ನಿಜವಾ
ಬೇಗ ಬರುತ್ತೇನೆ ಎಂದು ಹೇಳುತ್ತಾನೆ. ಹಾಗೆಯೆ
ಆಗಲಿ; ಕರ್ತನಾದ ಯೇಸುವೇ, ಬಾ.
ಕರ್ತನಾದ ಯೇಸುವಿನ ಕೃಪೆಯು ಎಲ್ಲರೊಂದಿ
ಇರಲಿ.

1) ಮೂಲ: ವಾಕ್ಯಗಳಿಗೆ ಮುದ್ರೆ ಹಾಕಬೇಡ.

ಸಮಾಪ್ತಿ

